**ಬಿಸುಟು$_2$** 'ಬಿಸುಡು' ಪರಾ.

**ಬಿಸುಟ್ಟು** 'ಬಿಸುಡು' ಪರಾ.

**ಬಿಸುಡಿಸು** (ಕ್ರಿ). ೧.ಎಸೆಯುವಂತೆ ಮಾಡು ; ಒಗೆಸು : ಕೋಪದಿಂ ಬಂದ ಮದನನ ಬಿಲ್ಲ ಬಿ[ಸುಡಿಸಿದ] ಭಾಪುರೇ (ಸಿದ್ಧರಾ. ೪ ಸೂಚನೆ); ನ್ನನೆಯುಂಬಂ ಕಂತುವಿಂದಂ ಬಿಸುಡಿಸಿ (ಪುಷ್ಪ. ೨-೨೬). ೨. ಬಿಟ್ಟು ಬಿಡುವಂತೆ ಮಾಡು : ಎಂದು ನುಡಿದು ಬಿಸುಡಿಸಿದಂ ಮತ್ತೊರ್ವಂ ತನ ಗೆರಡಱಿಯದೊಲ್ದ ನಲ್ಲಳಂ (ಶಂಕಥಾ. ೪-೯೨ ಪ). [ಬಿಸುಡು + — ಇಸು$_3$]

**ಬಿಸುಡು** (ಕ್ರಿ). ಬಿಸುಟು$_2$, ಬಿಸುಟ್ಟು(ಭೂತರೂಪ). ಬಿಸುಟ್ಟಿ(ವರ್ತಕೃ). ೧. (ದೂರಕ್ಕೆ) ಎಸೆ ; ಒಗೆ ; ಚೆಲ್ಲು : ಕೊಲ್ಲೆಂ ಬಿಸುಡಾಯುಧಮಂ ಪುಲ್ಲಂ ಕರ್ಚೆ ಪುತ್ತಂ (ಕಬಿರಾ. ೩-೦೪೪) ; ಆ ಬಾಲೆ ಕಾಯ್ದು ಪುಡಿಯೊಳಗೆ ಬಿಸುಟ್ಟೆಳವಾಱಿಯಂತೆ . . . ಮುಮ್ಮಲಮಱುಗುತಿರ್ದಳ್ (ಶಂಕಥಾ. ೩-೦೦ ಪ); ಮುನಿಜನನಿವಾಸದೊಳೀತನನುಯ್ದು ಬಿಸುಟ್ಟುದು (ಕಾವುಂಪು. ೬೪); ಮಧುಮಾಸದಗ್ನಿಯಲಿ ಚಿಂತೆ ಬೆಸನೆಂಬ ಚಳಿಬೆಂತೆಯುನು ಬಿಸುಡು (ಉಮರ. ೯೩-೭). ೨. ತೊರೆ; ತ್ಯಜಿಸು; ಬಿಡು : ತನ್ದೆಯು ತಾಯ್ವಿರಾ ಸನ್ತಾನಮು(ಂ)ನುಳಿದು ಬಿಸುಟೋಂ (ಶಾಇ. XI-i, ೦೦-೬; 965); ಸವಣದ ಧರ್ಮಮಂ ನಮಗೆ ಕೊಳಲಾಗ ಬಿಸುಡು (ವಡ್ಡಾರಾ. ೦೩-೨೦); ಸಮುರಾಕರಮಂ ಬಿಸುಟ್ಟು ಕಮಲಾಕರಮಂ ಪೊಕ್ಕಲವೊ ಮರುಳೆ ಬರ್ದು ಕಲ್ಪಗೆವಾ (ಗದಾಯು. ೭-೦೨): ಧರೆಗೆ ಹೊಱೆಯಾದೆನ್ನ ತನುವನುಯಿರದೆ ಬಿಸುಡುವ ತೆಱನ ಕೃಪೆ ಮಾಡು (ಕುವ್ಯಾಭಾ. ಓಂಇ. ೨೭-೩೩) ; ಬೋಯಿಗಳು ಪಲ್ಲಕ್ಕಿಯನ್ನು ಬಿಸುಟು ಓಡಿಹೋದಾಗ ಮತ್ತೊಂದು ವಿಪತ್ತಿಗೆ ಕಾರಣ ವಾಯಿತೆಂದು ತಿಳಿದಳು (ದೇಶೀಕಾ. ೩೩). ೩. ತೆಗೆದು ಹಾಕು ; ಕಳಚು : ಮಾಯೆಯು ಮೇಲ್ಮುಸುಕನು ಬಿಸುಡೆ (ಬಸೀಗೀ. ೬-೩). [ದೇ.॥ ತಮಿ. ವಿಚಿಱು; ತುಳು. ಬೀಜಾಡು, ಬೀಜಾವು; ತೆಲು. ವಿಸರು,ವಿಸುರು]

**ಬಿಸುಡುಗಾರ್ತಿ** (ನಾ). ೧. ಗಂಡನನ್ನು ಬಿಟ್ಟವಳು; ಪತಿಯನ್ನು ತ್ಯಜಿಸಿದವಳು : ಇರೆ ರವಿಯೇಬಱೊಳ್ ಬಿಸುಡುಗಾರ್ತಿಯೆನಿಕ್ಕುಂ (ಶಾಕಶ. ೨೨-೦೩). ೨. ನಡತೆಗೆಟ್ಟವಳು; ವೇಶ್ಯೆ : ಸೂಳೆ ವಿಧವೆ ಬಿಸುಡು ಗಾರ್ತಿ ಕನ್ನೆಯೆಂಬಿವರೊಳ್ (ಶತ್ರ್ವಶ್ರ. ೨೮೦); ಇತ್ವರಿಯೆಂಬಳು ಬಿಸುಡು ಗಾರ್ತಿ (ಕಶಾರ. ೩೦೬).

[ಬಿಸುಡು + — ಕಾಱ + — ತಿ$_1$ (< — ಇತ್ತಿ)]

**ಬಿಸುದೊಱೆ** (ನಾ). ಬಿಸಿನೀರಿನ ನದಿ : ಬಾಂದೊಱೆ ಬಿಸುದೊಱೆ ಯಾದುದು ಕಾಲವಶಮದೇನಾಗಿಸದೋ (ಜಗಶ. ೦೭-೬೬).

[ಬಿಸು$_2$ (< ಬಿಸಿದು) + ತೊಱೆ$_2$]

**ಬಿಸುನೀರ್, ಬೆನ್ನೀರ್, ಬೆನ್ನೀರು** (ನಾ). = ಬಿಸಿನೀರ್ : "ಬಿಸುನೀರ್ ಬೆನ್ನೀರ್" (ಕರ್ಣಾಶಿ. ೬); ಅರಾತಿಪಾರ್ಥಿವರ ಕಾಂತಾನೇತ್ರ ನೀರೇಜದೊಳ್ ಬಿಸುನೀರಂ . . . ಪುಟ್ಟಿಸುವಂ ತನ್ನೃಪನಂದನಂ (ಲೀಲಾವ. ೦-೯೮) ; ಈ ಕೂಸಿನ ಮೆಯ್ಯ ಮಾಸಂ ತೊಳೆಯೆ ಬಿಸುನೀರ್ಗಾಪಾಯುಮಂ ನೆನೆಯಲ್ (ದಶಕು. ೨-೬೪ ಪ). **ಬೆನ್ನೀರ್ :** ಪಗೆವರ ಬೇರೊಳ್ ಬೆನ್ನೀರಂ ಪೊಯ್ದು ನಿನಗೆ ಮಾಟ್ಪೆಂ ಧರೆಯಂ (ಶಂಕಥಾ. ೮-೩೪) ; ಮುನ್ನೀರ್ ಬೆನ್ನೀರನೆ ಬೆರಸಲಣ್ಣ ಕಣ್ಣೀರೊಳವೆ (ಶಂರಾವಾ. ೯-೯೨) ; ಮಿತ್ರಂ ಬಿಸಿಲಂ ಹಿಳಿಯಲ್ ಬೆನ್ನೀರೊಸರ್ವಂತಿರ್ದುದು ಮರೀಚಿಕಾಜಲ ಮೆತ್ತಂ (ಗಂಶ. ೯-೧೮). **ಬೆನ್ನೀರು :** ಒಡಿದು ಪೊನ್ನಂಡೆಗಳ ತೀವಿದರೊಡನೆ ಬೆನ್ನೀರೆರೆವುಲಕ್ಷ್ಮಿದರ್ಬಿಡಗಿಯರು ನಳಿತೋಳ (ಪಾಗಶ. ೩-೬) ; ಕುನ್ನಿಗಳ ಬುಡಕೆ ಬೆನ್ನೀರೆರೆಯದಿರೆ ನಾನು ಕೆಮ್ಮನೀ ಕೊಡಲಿವೊತ್ತವನೇನು (ಕಕಾರ. ೬೨). [ಬಿಸು$_2$ (< ಬಿಸಿದು) + ನೀರ್]

**ಬಿಸುನುಡಿ** (ನಾ). ಕಠಿಣವಾದ ಮಾತು : ಆ ವನಿತೆ ಬಿಸುನುಡಿಗಳಿಂ ಗೂಢ ಪಾದರಾಗಿರಿಯೆಂದಳು (ಬಕೋಪು. ೦೩-೯). [ಬಿಸು$_2$ (< ಬಿಸಿದು) + ನುಡಿ$_2$]

**ಬಿಸುನೆತ್ತರ್** (ನಾ). = ಬಿಸಿನೆತ್ತರು : ಬಿಸುನೆತ್ತರ್ ನೆಣನಡಗೆಲ್ವು ಸಮಸ್ತಂ ಸುರಿಯೆ ಕೈಗೆ ತೊವಲುಱಿಯಲ್ (ಶಂಕಥಾ. ೮-೭೭) ; ಭೀಷ್ಮರ ಬಿಸುನೆತ್ತರಂ ಕುಡಿವೊಡಿನ್ನುಮೊಳು (ಗದಾಯು. ೪-೪೨) ; ಕಿಂಕರಯೂಥಮಾಗ್ಗಿ ತಗ್ಗಿರೆ ಬಿಸುನೆತ್ತರುಣ್ಣೆ ಪರಿಯುತ್ತಿರೆ (ಎಕ. VIII, ಸಾಗರ. ೦೦೯-೨೬ : 1042).

[ಬಿಸು$_2$ (< ಬಿಸಿದು) + ನೆತ್ತರ್]

**ಬಿಸುಪು,** ಬಿಸುಪ್ಪು (ನಾ). ೧. ತಾಪ ; ಕಾವು ; ಉಷ್ಣತೆ: ಬಿಸಿಲೆಸಕ ದಿಂದೆ ಕೊರಗಿದ ದೆಸೆವೆಣ್ಗಳ ಬಿಸುಪನಾಱಿಪಂತಿರೆ ಗಿಳಿಗಳ್ ಪಸುರೆಱಕೆ ಯೆಂಬ ಬಾಟಿಯ ಪೊಸಬಿಜ್ಜಣಿಗೆಗಳಿನೆಸಗಿಪುವು ತಣ್ಣೆಲರಂ (ಕಾದಂಪೂ. ೦೩೦); ಬಿಸುಪಮರ್ದ ನೊಸಲ ಕಣ್ಣಿಂ . . . ನೋಟ್ಟಿರನಂಜಿಸೆ (ಕಬ್ಬಿಗಾ. ೨೩೩) ; ಚೆನ್ನೇಸಱ ಬಿಂಬಂ ಬಿಸುಪನುಳಿದು (ಜಯುಕಾ. ೩-೬೬). ೨. ಮೈಯ ಕಾಖವೇರುವಿಕೆ: ಜ್ವರ : ಬೆಳ್ಳಿ ಬಿಸುಪಿಂದ ಮಗು ಳೊಮ್ಮೆ ಮಲಗಲ್ (ಕಾಲೂರ. ೦೩೮-೩೩೦). ೩. (ಅಲಂ) ವಿರಹ ತಾಪ : ಮನದ ಮೆಯ್ಯ ಸಂತಾಪದೊಳ್ ಬಿಸುಸುಯ್ದು ಬಿಸುಪಿನೊಳ ನಿತುಮಂ ಗೆಲ್ದು ಕೆಂದಳಿರ್ಗಾಸು ಸೇಕದ ತೊವಲ್ಗಣೆಯಾಯ್ತು (ಶಂಕಥಾ. ೩-೬ ಪ). **Δ ಬಿಸುಪ್ಪು :** ೧. ಕೇದಗೆವೂಮಂ ಚಾದಗೆ ಬಾಯಂ ಬಿಡೆ ಬಿಡುತಿರೆ ಬಿಡುವನಿ ಕಡುವಿಸಿಲಿಂ ಸೋದು ಬಿಸುಪ್ಪಂ ಚಾದಿಯು ಕಂಪಂ . . . ಎಲರ್ಬಂದುದು (ಅರ್ಜನೀ. ೪-೦೨೭) : ನೆಲೆವೆರ್ಚಿದ ಪೂಗೊಳಂ ಬಿಸುಪ್ಪೆಸಗದ ನುಣ್ಬಿಸಿಲ್ (ಎಕ. VII, ಶಿಕಾ. ೦೯೭-೪೦; 1181); ವಿರಹ ವಿಮ್ಮಡಿಸೆ ಸುಯ್ ಮೂಪಡಿಸೆ ಮೈ ಬಿಸುಪ್ಪಿರದೆ ನಾಲ್ಮಡಿಸೆ ಕಿಡಿಕಿಡಿಯಾಗಿ (ಶಬಪು. ೪೬-೧೦). [ಬಿಸು$_2$ (<ಬಿಸಿದು) + — ಪು$_2$]

**ಬಿಸುಪುಗಿಡಿಸು** (ಕ್ರಿ). ತೀಕ್ಷ್ಣತೆಯನ್ನು ಹೋಗಲಾಡಿಸು ; ಶಾಖ ವನ್ನು ಕುಗ್ಗಿಸು : ಧರಣೇಶನ ಚಿತ್ತದ ಶಾಂತರಸಂ ನೆಲೆವೆರ್ಚೆ ಬಿಸುಪು ಗಿಡಿಸಿತ್ತಕ್ಕುಂ ಖರಕಿರಣಂಗಳಂ (ಪುಣ್ಯಪು. ೦೦-೩).

[ಬಿಸುಪು + ಕಿಡಿಸು (< ಕೆಡಿಸು$_1$)]

**ಬಿಸುಪೇರು** 'ಬಿಸುಪೇಱು' ನೋ.

**ಬಿಸುಪೇಱು,** ಬಿಸುಪೇರು (ಕ್ರಿ). ೧. ತಾಪವು ಹೆಚ್ಚಾಗು: ಕಾವೇರು : ಸಪ್ತಾಬ್ಧಿವೇಳಾಲತಾಂಗಂ ಬಿಸುಪೇಱಿತ್ತಭ್ರಗಂಗಾಬ್ಜನಿ ಮುಗಿದುದದೇಂ ರೌದ್ರಮೋ ಶೈಲದಾಹಂ (ಜಗಶ. ೮-೩೩) ; ಕೋಡಿ ಬಾಡಿ ಸುರುಳ್ದುರುಳ್ದು . . . ಬಿಸುಪೇಱಿ ಕಳೆಗುಂದಿ (ಗಂಶ. ೪-೦೦೮ಪ); ಪೆಱತೊಂದು ನೆಪದೊಳು ಬಿಸುಪೇಱಿದ ಕೋಪದುಱಿಬಿನಿಂದೊದಱುವ ಪತಿಗೆ . . . ಪೆಱದೆಗೆವುದು (ಹರಿಬ. ೩-೨೭). **ಬಿಸುಪೇರು :** ೨. ಜ್ವರವು ಹೆಚ್ಚಾಗು ; ಮೈಯ ತಾಪವೇರು : ಬೆಳ್ಳಿ ಬಂದಳ್ ಮನೆಗೆ ಬಿಸುಪೇರಿ (ಕಾಲೂರ. ೦೨೩-೨೮೧).

[ ಬಿಸುಪು + ಏಱು$_1$ (< ಏಱ್$_1$) ]

**ಬಿಸುಬೂರಿಗೆ** 'ಬೀಸುಂಬೂರಿಗೆ' ನೋ.

**ಬಿಸುರ್,** ಬಿಸುರು (ಕ್ರಿ). ೧. ತಾಪಗೊಳ್ಳು ; ಸಂಕಟಪಡು : ಹಾ ಮಲ್ಲಣಿಯೆನುತ್ತಿರದೆ ಕಳವಳಿಸಿ ಸುಡಿಯಲ್ಕೇಳ್ದು ಮನದನ್ನನುಲಿ ಯೆಂದು ತಿಳಿದು ಬಿಸುತರ್ದ (ಕುಮಾಪು. ೩-೦೦೩). **ಬಿಸುರು :** ೨. (?): ಸಂದ ದ್ರವ್ಯವ ಮತ್ತ ಉಲ್ಲಂಘಿಸಿ ಇರುತ್ತ ಮತ್ತ ಮಿಶ್ರದಿಂದ ದ್ರವ್ಯಂಗಳು ಬಿಸುರಿ ಬಂದು ಸೋಂಕಲಿಕೆ ಮತ್ತಿರಿಸಬಹುದೇ (ಸರ್ಪಪ. ೦೦೮-೬೦೨). [ < ಬಿಸು$_2$ ]

**ಬಿಸುರಕ್ತ** (ನಾ). = ಬಿಸಿನೆತ್ತರು : ಸುರಿವ ಬಿಸುರಕ್ತದಿಂದಾ ಜನಜಾಲ ವೈದಿತು ದೆಸೆದೆಸೆಗೆ (ಕಂಪರಿ. ೦೦-೩೦). [ ಬಿಸು$_2$ (< ಬಿಸಿದು) + ರಕ್ತ ]

**ಬಿಸುರು** 'ಬಿಸುರ್' ನೋ.

**Δ ಬಿಸುಪ್ಪು** 'ಬಿಸುಪು' ನೋ.

**ಬಿಸುವಳಿ** (ನಾ). (ಮೃಗಗಳ ಹಿಂಡು) ಸೇರುವ ಜಾಗ (?) : ನೆಲನಂ ನಿಱುಗೆಯುಂ ನಡೆವೊಂದು ಪದಮುಮಂ ಸೋವಳಿ ಮೋವಳಿ ಬಿಸುವಳಿಯುಂ

ಬಲವಂ ಶಕುನಮನೊಳ್ಕೊತ್ತುಪಾಯಪಿಯುಂ ಪಿಡಿವಂದು (ಶಂಶಾ. ೩-೪೬) ; "ಬಿಸುವಳಿಯುಂ — ಒಟ್ಟಾಗುವಿಕೆಯನ್ನು" (ಶಂಶಂ. ೦೯೬).

[ಬಿಸು$_1$ + — ವಳಿ$_3$]

**ಬಿಸುವಾತು** (ನಾ). ಕಾವೇರಿದ ಮಾತು ; ಆವೇಶದ ನುಡಿ : ಪಸಿದು ಬಳಲಿ ಪರದೇಸಿ ಬಾಯ್ಬಿಡೆ ಕಂಡಸಮಯುವೆಂದಬ್ಬರಿಸದೆ ಬಿಸುವಾತಿನೊಳು ಬೇಯಿಸದಿದ್ದ ಮಾತ್ರವನೊಸದೀವುದೊಳ್ಪಾತಿನೊಳು (ಹರಿ. ೪-೩೩).

[ಬಿಸು$_2$ (< ಬಿಸಿದು) + ಮಾತು$_1$]

**ಬಿಸುವಿಸಿಲ್**, ಬಿಸುವಿಸಿಲು, ಬೆಂಬಿಸಿಲ್ (ನಾ). = ಬಿಸಿವಿಸಿಲ್ : ದೆಸೆವೆಣ್ಗಳ್ ಬಿಸುವಿಸಿಲಿಂ ಬಸವಳಿದುಃಪೆಂದು ಸುಯ್ದು ಬಿಸುಸುಯ್ಕೆಲರೆಂಬೆ ಸಕವನೊಡರ್ಚೆ ಬೀಸಿದುದು (ರಾಜಶೇ. ೩-೩೨). **ಬಿಸುವಿಸಿಲು** : ಬಸವಳಿದು ಬಿಸುವಿಸಿಲ ಪರಿಯಿಂದೆ ನೆರೆ ನೊಂದು . . . ಮರಿದುಂಬಿಯು ಬಳಿಸಾರೆ (ಕೆಂಕಾ. ೨-೦೩). **ಬೆಂಬಿಸಿಲ್** : ಅವ್ಯಯೀಭಾವಕ್ಕೆ—ಅಂಗಯ್ . . . ಬೆಂಬಿಸಿಲ್, ಬೆಂಗೊಡಂ (ಶಮದ. ೦೬೩ ಪ್ರಯೋ).

[ಬಿಸು$_2$ (<ಬಿಸಿದು) + ಬಿಸಿಲ್]

**ಬಿಸುವಿಸಿಲು** 'ಬಿಸುವಿಸಿಲ್' ನೋ.

**ಬಿಸುವುಡಿ** (ನಾ). ಕಾದ ಮರಳು : ಕೊಳ್ಳಿಗಳಂ ಬಿಡದೋವದೆ ಬೀಸುವ ಬಳ್ಳಿಗೆಡೆದು ಬಿಸುವುಡಿಯಂ ಸೂಸುವ . . . ಮರುಳ ನೆರವಿಗಿನಿಸಪ್ಪಡ ಮಗಿಯದೆ (ಪರ್ವಪು. ೦೩-೨೦ ರಗಳೆ) ; ಜನವೆಲ್ಲಂ ನೋಡೆ ಚೌವಟ್ಟದ ಬಿಸುವುಡಿಯೊಳ್ ಬಿಟ್ಟು ಸಾವಂತುಟಾಯ್ತೇ (ಕಾವ್ಯಾವ. ೩೬೪).

[ಬಿಸು$_2$ (<ಬಿಸಿದು) + ಪುಡಿ]

**ಬಿಸುವೂರಿಗೆ** 'ಬೀಸಂಬೂರಿಗೆ' ನೋ.

**ಬಿಸುಸುಯ್$_1$**, ಬಿಸುಸುಯ್ಯು (ಕ್ರಿ). (ದುಃಖ, ಕೋಪ, ಆಯಾಸ ಮುಂತಾದಂವುಗಳಿಂದ) ಬಿಸಿಯುಂಸಿರನ್ನು ಬಿಡಂ : ಮನದ ಮೆಯ್ಯ ಸಂತಾಪದೊಳ್ ಬಿಸುಸುಯ್ದು ಬಿಸುಪಿನೊಳನಿತುಮಂ ಗೆಲ್ದು (ಶಂಶಾ. ೩-೬ ಪ) ; ಸತ್ತ ಭೂಪರ ಪೆಂಡಿರ್ ಬಿಸುಸುಯ್ಕೆ (ಎಕ. VIII, ಸಾಗರ. ೦೦೯-೩೩; 1042) ; ಹೇಳಿ ಫಲವಿನ್ನೇನೆನುತ ಬಿಸುಸುಯ್ದನಾ ಪಾರ್ಥ (ಕುವ್ಯಾಕ. ೦೬-೨೮). **ಬಿಸುಸುಯ್ಯು** : ಕಣ್ಬನಿಯೊಸರುತ್ತಿರಲೆ ನಲ್ಲಳೆ ಹಾಯೆನುತುಂ ಬಿಸುಸುಯ್ಯುತೆ (ಶಮಕಾ. ೨-೨೩); ಮುನಿಮುಖ್ಯಂ . . . ಬಿಸಿಲಿನೊಳು ಬೆಂದುಱೆ ಬೆಮರುತ ಬಿಸುಸುಯ್ಯುತ್ತಂದು ನಿಂದನು ಮರದ ನೆಳಲೊಳು (ಹರಿ. ೨-೩೨). [ಬಿಸು$_2$ (<ಬಿಸಿದು) + ಸುಯ್$_1$]

**ಬಿಸುಸುಯ್$_2$** (ನಾ). (ದುಃಖ, ಕೋಪ, ಆಯಾಸ ಮುಂತಾದುವುಗಳಿಂದ ಬಿಡುವ) ಬಿಸಿಯಾದ ಉಸಿರು : ನೀಳ್ದ ಪೊಗೆಯುಂ ಕಿಡಿಯುಂ ಬಿಸುಸುಯ್ಯ ಗಾಳಿಯೊಳ್ ತೊಡರ್ದು (ಆದಿಪು. ೨-೪೦) ; ಅವಳ . . . ಬಿಸುಸುಯ್ಕೆಲರಿಂ ಗಱಿ ಸೀದು ಸೌರಭಕ್ಕೆಱಗಿದಳಿಗಳುರುಳುತ್ತಿರೆ (ಪರ್ವಪು. ೪-೯೯) ; ವಿರಹಿಗಳ ಬಿಸುಸುಯ್ಯ ಕಿಚ್ಚಟ್ಟಿ ತನ್ನೆರ್ದೆ ಪೊತ್ತಿ ಪೊಗೆವ ಪರಿಯೋ . . . ಎನಲ್ ಹರಿಣಾಂಕನುದರದ ಕಲಂಕಮೊಪ್ಪಿದುದು (ಪದ್ಮರಾ. ೮-೬೩).

[ಬಿಸು$_2$ (<ಬಿಸಿದು) + ಸುಯ್$_2$]

**ಬಿಸುಸುಯಿಲ್**, ಬಿಸುಸುಯಿಲು (ನಾ). =ಬಿಸುಸುಯ್$_2$: ಬಿಸುನೆತ್ತರ್, ಬಿಸುಸುಯಿಲ್ (ಶಾಕಾಶೂ. ೦೯೬ ಉದಾ). **ಬಿಸುಸುಯಿಲು** : ಅರಸ ನೆಱೆ ಬಿಸುಸುಯಿಲ ಸುಯಿವುತ ಪುರಕೆ ತೆರಳದೆಯಿರಲಿಕೆ (ಶಂಶಪ. ೨೬-೦೩) ; ಸುಮಂತ್ರನು . . . ಸಾರಿದನಕ್ಷಿಯುಗಳದ ವಾರಿಗಳ ಬೀಳಿಕೆಯ ಬಿಸುಸುಯಿಲಿ[ಕಾಕಾಂ. ಸುಯ್ಲಿ]ನ ಮಹೀಪತಿಯ (ತೊರರಾ. ೨-೩-೩).

[ಬಿಸು$_2$ (<ಬಿಸಿದು) + ಸುಯಿಲ್]

**ಬಿಸುಸುಯಿಲು** 'ಬಿಸುಸಂಯಿಲ್' ನೋ.

**ಬಿಸುಸುಯ್ಯು** 'ಬಿಸುಸಂಯ್$_1$' ನೋ.

**ಬಿಸುಸುಯ್ಲು** (ನಾ). = ಬಿಸುಸುಯ್$_2$ : ಜಯವಹುದೆ ನಿರ್ವೇದದಲಿ ನಿರ್ಭಯವಹುದೆ ಬಿಸುಸುಯ್ಲಿನಲಿ (ಕುವ್ಯಾಸ. ೦೬-೬) ; ರಾಗವಡಗಿದ ಮನದ ಬಿಸುಸುಯ್ಲ ಸೂಟಿಗಿಂಬಾಗಿರ್ದ ನಾಸಿಕದ ಬಿಗಿದ ಬೆಱಗಿನ ಚಿಂತೆಗಾಗರಂ ತಾನಾಗಿ (ಕಬಪು. ೬-೨೪).

[ಬಿಸು$_2$ (<ಬಿಸಿದು) + ಸುಯ್ಲು (<ಸುಯ್ಕಲ್)]

**ಬಿಸುಹೂರಿಗೆ** 'ಬೀಸಂಬೂರಿಗೆ' ನೋ.

**ಬಿಸುಳಿಗೆ** 'ಬೆಸಳಿಗೆ' ನೋ.

**ಬಿಸುಟ್ಬ** 'ಬಿಸುಡು' ಪರಾ.

**ಬಿಸೂರಿಗೆ** 'ಬೀಸಂಬೂರಿಗೆ' ನೋ.

**ಬಿಸೆಯಸತ್ತಿ** (ನಾ). ಒಬ್ಬಾತನ ಹೆಸರು : ಸ್ವಸ್ತಿಶ್ರೀ ಬಿಸೆಯಸತ್ತಿಕುಮಾರ ವಸುನ್ಧಪತಿತನಯ ಪಟುಕ್ಕಣ್ಣಸತ್ತಿಯಾ ಪುತ್ರನತಿಪ್ರಸಿದ್ಧಘನನಿರ್ಮಲ ಮಾಗುತ (ಎಕ. XVI, ಕಾಪುಗ. ೦೨-೦ ; ಸು. 754). [?]

**ಬಿಸ್ಕತ್ತು**, ಬಿಸ್ಕೀಟು, ಬಿಸ್ಕೆಟ್ಟು (ನಾ). ಗೋಧಿ ಮೊದಲಾದ ಧಾನ್ಯಗಳ ಹಿಟ್ಟಿಗೆ ಹುದುಗು ಹಾಕದೆ. ತೆಳ್ಳನೆಯ ಸಣ್ಣ ಬಿಲ್ಲೆಗಳ ಆಕಾರದಲ್ಲಿ ತಯಾರಿಸಿದ, ಹಗುರವಾಗಿ ಇರುವ ಒಂದು ಬಗೆಯ ತಿನಿಸು : ಸುಶೀಲೆಯೇನು ಚಿಕ್ಕಗೂನೆ ಬಿಸ್ಕತ್ತು ತಿನ್ನೋಕೆ ? (ಐಪಹಂ. ೨೨೬) ; ಸ್ನೇಹವಾಕ್ಯದ ಜೊತೆಗೆ ಚಹ ಬಿಸ್ಕತ್ತುಗಳು ಮಾತ್ರ ಸಿಗುತ್ತಿದ್ದವು (ಬಾಪಕ. ೪ ಕಥಾಮಾಲ). **ಬಿಸ್ಕೀಟು** : ಎದುರಿಗಿದ್ದ ಬಿಸ್ಕೀಟುಗಳನ್ನು ಒಂದೊಂದಾಗಿ ಬಾಯಿಗೆ ಹಾಕಿಕೊಳ್ಳುವುದೂ . . . ನಡೆದಿತ್ತು (ರಕ್ತಗೋ. ೩) ; ಚಹ ಬಂತು, ಬಿಸ್ಕೀಟಗೂ ಹೇಳಿದ್ದಾಯಿತು (ಕಂದುಱ. ೬೬). **ಬಿಸ್ಕೆಟ್ಟು** : ಅವರು ಕಾಫಿ, ಬಿಸ್ಕೆಟ್ಟು ಕೊಟ್ಟರು (ರೂಪ).

[←ಇಂ. Bisoult]

**ಬಿಸ್ಕೀಟು** 'ಬಿಸ್ಕತ್ತು' ನೋ.

**ಬಿಸ್ಕೆಟ್ಟು** 'ಬಿಸ್ಕತ್ತು' ನೋ.

**ಬಿಸ್ಮಿಲ್ಲಾ** (ನಾ). ಮುಸಲ್ಮಾನರು ಕಾರ್ಯಾರಂಭದಲ್ಲಿ ಹೇಳುವ 'ದೇವರ ಹೆಸರಿನಲ್ಲಿ' ಎಂಬರ್ಥದ ಮಾತು : ಬಿಸ್ಮಿಲ್ಲಾ ಹೇಳಲಿಕ್ಕ ದಿಕ್ಕಿಲ್ಲದಾಯಿತ (ಶ್ರೀಮುಖ. ೦೦೬). [←ಅರ. ಹಿಂ. ಬಿಸ್ಮಿಲ್ಲಾಹ್ ; ಮರಾ. ಬಿಸ್ಮಿಲ್ಲಾ]

**ಬಿಳಚಿ** (ನಾ). ಒಂದು ಬಗೆಯ ಸಸ್ಯ : ಹೆತ್ತರಾಣಿಕೆ, ನಲ್ಲ, ಹೆದ್ದರಣೆ, ಬಿಳಚಿ, ತೆರಣಿ, ಕಕೋರ್ಲ (ವೃಕ್ಷಿಗ. ೬೩-೦೨೬೯).

[ದೇ.॥ ತಮಿ. ಪಿಳಿಚ್ಚಿಲ್, ಪಿಲಿಞ್ಚಿ, ಪುಳಿಚ್ಚಿಲ್]

**ಬಿಳಲ್** 'ಬೀಟಿಲ್' ನೋ.

**ಬಿಳಲು** 'ಬೀಟಿಲ್' ನೋ.

**ಬಿಳಲುಬಿಡು** 'ಬೀಟಿಲ್ಬಿಡು' ನೋ.

**ಬಿಳಲ್ವರಿ** 'ಬೀಟಿಲ್ವರಿ' ನೋ.

**ಬಿಳವೃತ್ತಿ** 'ಬೀಟಿವೃತ್ತಿ' ನೋ.

**ಬಿಳಸ** (ನಾ). ಒನಪು; ಒಯ್ಯಾರ : "ಬಿಳಸ (ವಿಳಸ) — ವಿಲಾಸ=ಶೃಂಗಾರ ಚೇಷ್ಟೆ, ಒಯ್ಯಾರ" (ತದ್ಭಕೋ. ೩೦); ವಿಲಾಸ–ಬಿಳಸ ; ಬಂಧೂಕ-ಬಂದುಗೆ (ಶಬ್ದಾಮ. ೦೬೦ ಪ್ರಯೋ). [<ಸಂ. ವಿಲಾಸ]

**ಬಿಳಿ$_1$** (ಕ್ರಿ). ಮುಗಿ : ತೀರು : ಮಳೆಗಾಲ ಬಿಳಿದ ಮೇಲೆ ಅವರಿಗೆ ರಜೆ ಉಂಟಂತೆ (ಸ್ವಶ್ಕಪೂ. ೯೬). [? ತೆಲು. ವೆಲಿಯು=ಮಳೆಯು ನಿಲ್ಲು]

**ಬಿಳಿ$_2$** (ನಾ). ೧. ಬಿಳುಪು; ಶ್ವೇತವರ್ಣ : ಬಿಳಿಯ ತಾವರೆಯೆಸಟ್ರೊಳ್ ಪಾಡಿದ ಬೆಳ್ಗೊಡೆ ರಯ್ಯಮಾಗೆ (ಶಂಶಾ. ೦೩-೦೦೯); ಜಳಜಭವನೊಲಿದು ಕನ್ನೆಯ ತಳಕಂ ತಂದೀಯೆ ವಾರಿಜಂಗಳ ಕೆಂಪಂ ಬಿಳಿಯ ಸರಸಿರುಹ ಮಾದುವು (ಧರ್ಮಾಮೃ. ೩-೦೩೪) ; ಬಿಳಿಯ ಚೌರಿಗಳೆಸೆಯೆ (ಕುವ್ಯಾದ್ರೋ. ೦೬-೩೦). (ಗು). ೨. ಬಿಳುಪಾದ; ಶ್ವೇತವರ್ಣದ : 'ಬಿಳಿಕಂಚು ವಾಳ', 'ಬಿಳಿಗಣಗಲು' ಪರಾ. [ದೇ.॥ ತಮಿ. ವೆಳ್; ಮಲ. ವೆಳಿ; ತುಳು. ಬಿಳಿ; ತೆಲು. ವೆಲಿ; ಪರ್ಜಿ. ವಿಲ್]

**ಬಿಳಿಅಕ್ಕಬುಹುಲ್ಲು** (ನಾ). ಒಂದು ಬಗೆಯ ಸಸ್ಯ : (ವೃ.ಶಿ. ೩೦–೩೮೬). [ಬಿಳಿ₂ + ಅಕ್ಕಬು + ಹುಲ್ಲು (< ಪುಲ್)]

**ಬಿಳಿಅಗಿಲು** (ನಾ). ಒಂದು ಬಗೆಯ ಮರ : ಬಿಳೀಬುಡ್ಲಿಗೆ, ಬಿಳೀ ದೇವದಾರು, ಬಿಳೀಅಗಿಲು (ವೃ.ಶಿ. ೩೨–೬೦೯). [ಬಿಳಿ₂ + ಅಗಿಲು (< ಅಗಿಲ್)]

**ಬಿಳಿಅಭ್ರಾಂಗ** (ನಾ). ಒಂದು ಬಗೆಯ ಸಸ್ಯ : (ವೃ.ಶಿ. ೯೧–೬೦೩). [ಬಿಳಿ₂ + ಅಭ್ರಾಂಗ₀]

**ಬಿಳಿಉಪ್ಪಿ** (ನಾ). ಒಂದು ಬಗೆಯ ಔಷಧೀಸಸ್ಯ : ಬಿಳಿಕೊಮ್ಮೆ, ಬಿಳಿಉಪ್ಪಿಎಲೆ, ಆಡುಸೋಗೆ, ಹಾಲುಕೊರಟಗೆ, ಕುಪ್ಪಿಎಲೆ, ಮಂಗರವಳ್ಳಿ . . . ಚೊರ್ಣಿಸಿ (ಸಕವ. ಶಂ. ೪೪೩) : ಬಿಳೀಉಪ್ಪಿಗಿಡ, ಎಸಗಳೆ, ಎಗಚಿ (ವೃ.ಶಿ. ೦೦–೦೬೬). [ಬಿಳಿ₂ + ಉಪ್ಪಿ]

**ಬಿಳಿಉಪ್ಪುನೇರಳೆ** (ನಾ). ಒಂದು ಬಗೆಯ ಉಪ್ಪುನೇರಳೆ : ಬಿಳೀ ಉಪ್ಪುನೇರಳೆ, ಹಿಪ್ಪಲಿನೇರಳೆ (ವೃ.ಶಿ. ೩೩–೦೯೯೯). [ಬಿಳಿ₂ + ಉಪ್ಪುನೇರಳೆ]

**ಬಿಳಿಊರ್** (ನಾ). ಒಂದು ಊರಿನ ಹೆಸರು : ಪೆದ್ದೊಱೆಗೆರೆಯ ಬಿಳಿಊರ್ಪ್ಪನ್ನಿರ್ಪ್ಪಳ್ಳಿಯುಮಂ. . . ಕೊಟ್ಟರ್ (ಇಆ. VI, ೦೦೩–೪; 887). [ಬಿಳಿ₂ + ಊರ್]

**ಬಿಳಿಎಕ್ಕೆ** 'ಬಿಳಿಯೆಕ್ಕೆ' ನೋ.

**ಬಿಳಿಂಬಿ**, ಬಿಂಬಲಿ, ಬಿಂಬ್ಲಿ, ಬಿಳ್ಳಂಬಿ (ನಾ). ೧. ಒಂದು ಬಗೆಯ ಹಣ್ಣಿನ ಮರ ಮತ್ತು ಅದರ ಹುಳಿಹಣ್ಣು ; ⊳ ಈ ಹಣ್ಣಿನ ರಸ ವನ್ನು ಚರ್ಮರೋಗಕ್ಕೆ ಔಷಧವನ್ನಾಗಿ ಬಳಸುತ್ತಾರೆ : "ಬಿಲಿಂಬಿ ಮರ, ಬಿಳಿಂಬಿ. ಬಿಂಬ್ಲಿ" (ಸಕ್ಕ.ಶಿ. ೦೬). **ಬಿಂಬಲಿ : ೨.** ಒಂದು ಬಗೆಯ ಮರ : ಕಿಡಕಿಯ ಹೊರಗಿನ ಬಿಂಬಲೀಮರದ ಮೇಲೆ ಕಾಗೆಯೊಂದು ಎಡೆ ಬಿಡದೇ ಕಾವ್‌ಗುಡುತ್ತಿತ್ತು (ಮೂರುದಾ. ೯೩). **ಬಿಂಬ್ಲಿ : ೧.** ಬಿಳಿಂಬಿ, ಬಿಂಬ್ಲಿ (ವೃ.ಶಿ. ೦೦–೦೬೩). **ಬಿಳ್ಳಂಬಿ : ೨.** ಬಿಳ್ಳಂಬಿ (ಲಾಲಿ). —ಇದು ಬಹಳ ಯೆತ್ತರವಾಗಿ ಬೆಳೆಯದಿದ್ದರೂ ಇದರ ಟೊಂಗೆಗಳು ಗಡುತರವಾಗಿ ದೂರ ದೂರ ಹಬ್ಬುತ್ತವೆ . . . ಇದನ್ನು ಇಮಾರತಿಗೆ ಬಹಳ ಉಪಯೋಗಿ ಸುವರು (ಕಡಾಗ. ೯೩).

[ದೇ.॥ ತಮಿ. ಪಿಲಿವ್ವಿ ; ತುಳು. ಬಿಲಿಂಬಿ. ಬಿಂಬಲಿ. ಬಿಂಬಿಲಿ. ಬಿಂಬುಲಿ ; ತೆಲು. ಬಿಲಿಂಬಿ]

**ಬಿಳಿಕ** (ನಾ). ಬೆಳ್ಳಗಿರುವವನು ; ಬಿಳಿಯ : ಕರಿದುಂಟೀತಂಗೆ ಈತನೊಳ್ ಮೇಣ್ ಕರಿಕಂ ಏವಂ ಬಿಳಿಕಂ (ಕಹ್ಮಾಸು. ೪೦೩ ಪ್ರಯೋ). [ಬಿಳಿ₂ + — ಕ₃]

**ಬಿಳಿಕಂಚುವಾಳ** (ನಾ). ಬಿಳಿಯ ಹೂವುಗಳನ್ನು ಬಿಡುವ ಒಂದು ಬಗೆಯ ಕಂಚುವಾಳದ ಮರ : ಬಿಳೀಕಂಚುವಾಳ, ಬಿಳೀಮಂದಾರ (ವೃ.ಶಿ. ೦೨–೨೦೬). [ಬಿಳಿ₂ + ಕಂಚುವಾಳ]

**ಬಿಳಿಕಕ್ಕೊರಲೆ** (ನಾ). ಒಂದು ಬಗೆಯ ಸಸ್ಯ : ಬಿಳಿಕಕ್ಕೊರಲೆ ಅರುಣ ರಿವು ಸುರಸುರಿಕೆ (ಅಕಶಿ. ೧೦–೦೦). [ಬಿಳಿ₂ + ಕಕ್ಕೊರಲೆ]

**ಬಿಳಿಕಣಗಲು** 'ಬಿಳಿಗಣಗಲು' ನೋ.

**ಬಿಳಿಕಣಗಿಲ** 'ಬಿಳಿಗಣಗಲು' ನೋ.

**ಬಿಳಿಕಲ್ಲು** (ನಾ). ೧. ಬಿಳುಪಾದ ಕಲ್ಲು. ೨. ಬಿಳಿಯ ಹರಳು : ನಮಗೇಕಪ್ಪಾ ಅಂತಹ ಓಲೆ. ಅದೆಲ್ಲಾ ನಿಮ್ಮಂತಹ ಹಣವಂತರಿಗೆ ! ನಮ್ಮಂತಹ ಬಡವರಿಗೆ ಬಿಳಿಕಲ್ಲಿನದೇ (ಆರಹೂ. ೯೦). [ಬಿಳಿ₂ + ಕಲ್ಲು (< ಕಲ್₃)]

**ಬಿಳಿಕಸ** (ನಾ). ಒಂದು ಬಗೆಯ ಹುಲ್ಲು : ಬೇರುಮಾರಿಗಿಡ, ಬಿಳಿಕಸ (ವೃ.ಶಿ. ೬೨–೦೯೬೯). [ಬಿಳಿ₂ + ಕಸ]

**ಬಿಳಿಕಾಕಮುಷ್ಟಿ** (ನಾ). ಒಂದು ಬಗೆಯ ಸಸ್ಯ : ಬಿಳೀಕಾಕಮುಷ್ಟಿ, ಪೆಲ್ಲೆ, ತೆಲ್ಲಕಾಕಮುಷ್ಟಿ (ವೃ.ಶಿ. ೦೯–೩೩೪). [ಬಿಳಿ₂ + ಕಾಕಮುಷ್ಟಿ₁]

**ಬಿಳಿಕಾರೆಮುಳ್ಳು** (ನಾ). ಒಂದು ಬಗೆಯ ಮುಳ್ಳಿನ ಗಿಡ : ಬಿಳೀಕಾರೆ ಮುಳ್ಳು, ಸಣ್ಣಕಾರೆ (ವೃ.ಶಿ. ೬೩–೦೩೩೬). [ಬಿಳಿ₂ + ಕಾರೆಮುಳ್ಳು]

**ಬಿಳಿಕಿ** (ನಾ.) ಬೆಳ್ಳಗಿರುವವಳು : ಕರಿಕಿ, ಬಿಳಿಕಿ, ಮುದುಕಿ (ಕಹ್ಮಾಸು. ೦೯೯ ಪ್ರಯೋ). [ಬಿಳಿಕ + — ಇ₂]

**ಬಿಳಿಕುಂತಾಳು** (ನಾ). ಒಂದು ಬಗೆಯ ಸಸ್ಯ : (ವೃ.ಶಿ. ೩೩–೬೬೬). [ಬಿಳಿ₂ + ಕುಂತಾಳು₀ (< ಕುಂತಳ₂)]

**ಬಿಳಿಕೆಸವು** (ನಾ). ಕೆಸವಿನಲ್ಲಿ ಒಂದು ಬಗೆ ; ಬಿಳಿಯ ಬಣ್ಣದ ಕೆಸವು : ಬಿಳಿಕೆಸವು, ಕರಿಕೆಸವು . . . ಹೊಸಅಕ್ಕಿಅನ್ನ ಇವು ಜ್ವರದವರಿಗೆ ಅಪಥ್ಯ (ವೈದ್ಯಸಾ. I. ೩೬). [ಬಿಳಿ₂ + ಕೆಸವು]

**ಬಿಳಿಕೇಪಲ** (ನಾ). ಒಂದು ಬಗೆಯ ಸಸ್ಯ : (ವೃ.ಶಿ. ೪೬–೯೨೬). [ಬಿಳಿ₂ + ಕೇಪಲ]

**ಬಿಳಿಕೊಗ್ಗಿ** (ನಾ). ಒಂದು ಬಗೆಯ ಸಸ್ಯ : ಬಿಳಿಕೊಗ್ಗಿಬೇರಂ ಆಲದ ಹಾಲಿನಿಂದ ಅರೆದು (ಕಾಮುಶಾ. ೨೬೪). [ಬಿಳಿ₂ + ಕೊಗ್ಗಿ (< ಕೊಗ್ಗಿ₁)]

**ಬಿಳಿಕೊಮ್ಮೆ** (ನಾ). ಒಂದು ಬಗೆಯ ಔಷಧೀಸಸ್ಯ : ಕಿರೀಪುಳಪ . . . ಬಿಳಿಕೊಮ್ಮೆ (ವೃ.ಶಿ. ೬–೦೨೬) ; ಜೀರಿಗೆ ಬೇಲದ ಹಗಿನು ಬಿಳಿಕೊಮ್ಮೆ . . . ನುಗ್ಗೆಹೂವು ಇಷ್ಟು ತೂಕಗೊಂಡು (ಕಾಮುಶಾ. ೨೬೪). [ಬಿಳಿ₂ + ಕೊಮ್ಮೆ₂]

**ಬಿಳಿಗಣಗಲು**, ಬಿಳಿಕಣಗಲು, ಬಿಳಿಕಣಗಿಲ (ನಾ). ಬಿಳಿಯ ಹೂವು ಗಳನ್ನು ಬಿಡುವ ಒಂದು ಬಗೆಯ ಕಣಗಿಲು : ಕಾಡುಜನಗಲು, ಬಿಳಿಗಣಗಲು, ಗಿಡ್ಡ (ವೃ.ಶಿ. ೬೯–೦೬೦೪). **ಬಿಳಿಕಣಗಲು :** (ವೃ.ಶಿ. ೩೬–೦೦೨೪). **ಬಿಳಿಕಣಗಿಲ :** ಚೆಲಿಸೋಂಕಿಗೆ ಬಿಳಿಕಣಗಿಲ ಹೂತೊಲು . . . ಮನವಲರಲಿ ಕನ್ನಡ ಮನೆಮನೆಗೆ (ಅರಳು. ೨೬೬–೭). [ಬಿಳಿ₂ + ಕಣಗಲು (< ಕಣಗಿಲ್₁)]

**ಬಿಳಿಗಣಜಲು** (ನಾ). ಒಂದು ಬಗೆಯ ಔಷಧೀಸಸ್ಯ : ಬೇವಿನ ಸೊಪ್ಪು, ಬಿಳಿಗಣಜಲ ಬೇರು, ಮಾವಿನ ಬೀಜ ಇವನು ಹಾಲಿಂದ ಅರೆದು (ವೈದ್ಯಸಾ. II, ೨೩೦). [ಬಿಳಿ₂ + ಗಣಜಲು₀ (< ಗಣಜಲೆ₁)]

**ಬಿಳಿಗಣಜೆ** (ನಾ). ಒಂದು ಬಗೆಯ ಔಷಧೀಸಸ್ಯ : ಬಿಳಿಗಣಜೆ, ಜೀರಿಗೆ ಸಹ ಹಳೇನೀರಿನಲ್ಲರೆದು ಕದಡಿ ಕುಡಿಯೆ ಮೂರು ದಿನಕ್ಕೆ ದಾಹಜ್ವರ ಬಿಡುವುದು (ಸಕವ. ೬೬). [ಬಿಳಿ₂ + ಗಣಜೆ₁]

**ಬಿಳಿಗರಿಕೆ** 'ಬಿಳಿಗಱಿಕೆ' ನೋ.

**ಬಿಳಿಗಱಿಕೆ**, ಬಿಳಿಗರಿಕೆ (ನಾ). ಬಿಳಿಯ ಬಣ್ಣದ ಹುಲ್ಲು : "ಚಂಡ— ಇಲಿವಾಲ, ಬಿಳಿಗಱಿಕೆ" (ಓಕಧಿ. ೩೩). **ಬಿಳಿಗರಿಕೆ :** ಬಿಳಿಗರಿಕೆಯನ್ನು ಔಷಧಿಗೆ ಬಳಸುತ್ತಾರೆ (ಊಹ). [ಬಿಳಿ₂ + ಕಱಿಕೆ (< ಕಱುಂಕೆ)]

**ಬಿಳಿಗಾರ**, ಬಿಳುಗಾರ (ನಾ). ಒಂದು ಬಗೆಯ ಖನಿಜಲವಣ ; ಟಂಕಣ : "ಟಂಕಣ—ಬಿಳಿಗಾರ" (ಅಕಶಿ. ೦೦–೩); ಅಗುಣೇರುಸವುಂ ಬಿಳಿಗಾರಮುಂ ತನ್ನ ಪಂಚಮಲಸಹಿತ ಸುಣ್ಣದೊಳಗಿಕ್ಕೆ ಸ್ಥಿರವಕ್ಕುಂ (ಕಾಮುಶಾ. ೨೬೨); ೧ಸೇರು ಬಿಸಿನೀರಿನಲ್ಲಿ ೧ತೊಲ ಬಿಳಿಗಾರ ಮತ್ತು ೧ತೊಲ ಪಟಿಕವನ್ನು ಪುಡಿಮಾಡಿ ಹಾಕಿ . . . ನಾಲಗೆಯನ್ನು ಪದೇಪದೇ ತೊಳೆಯುವುದು (ಗ್ರಾಪಶು. ೦೩೩). **ಬಿಳುಗಾರ :** ಸೈಂಧವಲವಣ, ಬಿಳುಗಾರ, ಅಳಲೆಕಾಯಿ . . . ಅರೆದು ಸೇವಿಸಲು ಶ್ಲೇಷ್ಮಜ್ವರ ಬಿಡುವುದು (ಸಕವ. ೬೬); ಬೆಸುಗೆಯುಲಿ ಬಿಳುಗಾರ ವಸುವಿನಲಿ ಬೆರೆವಂತೆ ಕುಶಲಮನವಾತ್ಮಿಸಮರಸದಲಿರುತಿಹುದು (ಶಕ್ತಿಶ. ೯೦–೩). 'ಬೆಳುಗಾರ' ಪಠಾ. [ಬಿಳಿ₂ + ಕಾರ₂]

**ಬಿಳಿಗುಗ್ಗಲ** (ನಾ). ಒಂದು ಬಗೆಯ ಮರ: ಧೂಪದ ಮರ, ಸಾಲುಧೂಪ, ಬಿಳೀಗುಗ್ಗಲ . . . ಉಗುಳುಧೂಪ (ವೃ.ಶಿಗ. ೬೬-೧೩೬೬). [ಬಿಳಿ$_2$ + ಗುಗ್ಗಲ$_0$ (< ಗುಗ್ಗಿಳ)]

**ಬಿಳಿಗುರುಗಂಜಿ** 'ಬಿಳಿಗುರುಗುಂಜಿ' ನೋ.

**ಬಿಳಿಗುರುಗುಂಜಿ, ಬಿಳಿಗುರುಗಂಜಿ** (ನಾ). ಬಿಳಿಯ ಬಣ್ಣದ ಗುಲಗಂಜಿ: ಬಿಳಿಗುರುಗುಂಜಿ, ಬಿಳಿಸಟ್ಟುಗದ ರಸದಲ್ಲಿ ಮರ್ದಿಸಿ . . . ಹೊಕ್ಕುಳು ತಪ್ಪಿಸಿ ಕೆಳಗೆ ಲೇಪವಂ ಮಾಡೆ ಮೂತ್ರ ಬಿಡುವುದು (ವೈ.ಶಿ. ೬೦). **ಬಿಳಿಗುರುಗಂಜಿ**: ಬಿಳಿಗುರುಗಂಜಿಬೇರನ್ನು ಆದಿವಾರ ಮೌನದಿಂ ತಂದು ಕಿವಿಗೆ ಕಟ್ಟುವುದು (ಕಳವೈ. ೧೨೦). [ಬಿಳಿ$_2$ + ಗುರುಗುಂಜಿ]

**ಬಿಳಿಗುಳ್ಳ** (ನಾ). ಒಂದು ಬಗೆಯ ಗುಳ್ಳ: (ವೃ.ಶಿಗ. ೬೦-೧೪೪೨). [ಬಿಳಿ$_2$ + ಗುಳ್ಳ]

**ಬಿಳಿಗೆಂಪು** (ನಾ). ಬಿಳಿ ಮತ್ತು ಕೆಂಪುಬಣ್ಣಗಳ ಮಿಶ್ರವರ್ಣ: ಪಾಟಲ: "ಪಾಟಲ — ಬಿಳಿಗೆಂಪು" (ಗಂಗಾಮ. ೨೦೪) [ಬಿಳಿ$_2$ + ಕೆಂಪು$_1$]

**ಬಿಳಿಗೆಂಪುಕೇಪಲ** (ನಾ). ಒಂದು ಬಗೆಯ ಸಸ್ಯ: ಪಾಟಲವರ್ಣದ ಕೇಪಲ: (ವೃ.ಶಿಗ. ೪೭-೯೨೬). [ಬಿಳಿಗೆಂಪು + ಕೇಪಲ]

**ಬಿಳಿಚ** (ನಾ). ಒಂದು ಬಗೆಯ ಮೀನು: ಬಿಳಿಚ ಚಿಪ್ಪಲು ಮಲಗು ಹೆಮ್ಮಲಗು . . . ಹೊಳೆವಳಿಯ ಮೀನ್ಗಳಂ ತವಿಸುತಿಹ ಬೇಡರಂ ನೋಡಿದಂ ಭೂಪಾಲನು (ಹಕಲ. ೩-೪೬). [<ಬಿಳಿ$_2$]

**ಬಿಳಿಚಗತೆ** (ನಾ). ಒಂದು ಬಗೆಯ ಚಗಚೆಗಿಡ: ಬಿಳಿಚಗತೆಸೊಪ್ಪು, ಮೆಣಸು, ಬೆಳ್ಳುಳ್ಳಿಬೇಳೆ. ಇವಂ ಅರೆದು ಕಿವಿಗೆ ಬಿಡೆ ಮೇಲ್ವಾಗುರು ತೀರ್ಗುಂ (ವೈ.ಶಿ. ೬೩). [ಬಿಳಿ$_2$ + ಚಗತೆ (< ಚಗಚೆ)]

**ಬಿಳಿಚಳ್ಳಿ** (ನಾ). ಒಂದು ಬಗೆಯ ಚಳ್ಳಿಮರ: ಹಾಡಗ, ಬಿಳೀಚಳ್ಳಿ, ಗವುಡಿ (ವೃ.ಶಿಗ. ೨೪-೪೩೧). [ಬಿಳಿ$_2$ + ಚಳ್ಳಿ (<ಸೆಳ್ಳಿ)]

**ಬಿಳಿಚಿಕ್ಕನಗಿಡ** (ನಾ). ಒಂದು ಬಗೆಯ ಗಿಡ: (೬). [ಬಿಳಿ$_2$ + ಚಿಕ್ಕ? + ಗಿಡ (<ಗಿಡು)]

**ಬಿಳಿಚಿತ್ರಮೂಲ** (ನಾ). ಒಂದು ಬಗೆಯ ಸಸ್ಯ: (ವೃ.ಶಿಗ. ೬೩-೧೨೬೪). [ಬಿಳಿ$_2$ + ಚಿತ್ರಮೂಲ]

**ಬಿಳಿಚು** (ಕ್ರಿ). ಕಾಂತಿಯನ್ನು ಕಳೆದುಕೊಂಡು ಬೆಳ್ಳಗಾಗು: ಮೆಯ್ ಬಿಳಿಚಿ ಬೆವರ್ಪೊ (ಕೂಹಾದ. ೩೩-೨೪).
**ಬಿಳಿಚಿಕೊಳ್ಳು** = ಕಾಂತಿಯನ್ನು ಕಳೆದುಕೊಂಡು ಬೆಳ್ಳಗಾಗು: ಮೋರೆ ಹೀಗೇಕೆ ಬಿಳಿಚಿಕೊಂಡಿದೆ (ಅದೋಲ. ೯೦): ಅವಳ ಮುಖ ಬಿಳಿಚಿ ಕೊಂಡಿತ್ತು (ಅಶ್ರಮ. ೯೦). **ಬಿಳಿಚಿ ಹೋಗು** = ಬಿಳಿಚಿಕೊಳ್ಳು: ಸುಯೋಧನನು ವ್ಯಥೆಯಿಂದ ಬಡವಾಗಿ ರಕ್ತ ಕಳೆದುಕೊಂಡು ಬಿಳಿಚಿ ಹೋಗಿದ್ದಾನೆ (ವ್ಯಾಸಶಿ. ೦೦೪). [ಬಿಳಿ$_2$ + — ಚು$_1$]

**ಬಿಳಿಜಂಬುಹುಲ್ಲು** (ನಾ). ಒಂದು ಬಗೆಯ ಹುಲ್ಲು: (ವೃ.ಶಿಗ. ೪೮-೯೪೮). [ಬಿಳಿ$_2$ + ಜಂಬುಹುಲ್ಲು]

**ಬಿಳಿಜಾಲ** (ನಾ). ಸೌತೆಜಾತಿಗೆ ಸೇರಿದ ಒಂದು ಬಗೆಯ ಬಳ್ಳಿ: ಸೈದಿಲೆವಸಳು ಸಹದೇವಿಯುಂ ಬಿಳಿಜಾಲ ಮಾಗಳಬೇರಂ ಇವೆಲ್ಲವಂ ಚೂರ್ಣವಂ ಮಾಡಿ (ಕಾಮಶಾ. ೨೬೩). [ಬಿಳಿ$_2$ + ಜಾಲ$_1$]

**ಬಿಳಿಜಾಲಿ** (ನಾ). ಒಂದು ಬಗೆಯ ಬಳ್ಳಿ: ಬಿಳೀಜಾಲಿ, ತೊಪ್ಪಾಲೆ, ಸಾರಾಯಿಬೇಲ, ತುಂಬೆಮರ (ವೃ.ಶಿಗ. ೧-೦೬). [ಬಿಳಿ$_2$ + ಜಾಲಿ$_2$]

**ಬಿಳಿಜೇರಿಗೆ** (ನಾ). ಒಂದು ಬಗೆಯ ಜೀರಿಗೆ: "ಕಣಾಹ — ಬಿಳಿಜೇರಿಗೆ" (೬ಕಂ. ೨೦). [ಬಿಳಿ$_2$ + ಜೇರಿಗೆ]

**ಬಿಳಿಜೋಳ** (ನಾ). ಬಿಳಿಯ ಬಣ್ಣದ ಜೋಳ: ಗೌರಿಹುಣ್ಣಿವೆ ಹಾಲ್ಗುಡಿದು ಬಿಳಿಜೋಳ ಧ್ವಜವನ್ನೆತ್ತಿತು (ಸಂಕು. ೦೩-೧೦). [ಬಿಳಿ$_2$ + ಜೋಳ]

**ಬಿಳಿಡಾಮರ್** (ನಾ). ಒಂದು ಬಗೆಯ ಸಸ್ಯ: ಧೂಪದ ಮರ . . . ಬಿಳೀಡಾಮರ್, ಹಾಗಡಮರ, ಉಗುಳುಧೂಪ (ವೃ.ಶಿಗ. ೬೬-೦೩೬೬). [ಬಿಳಿ$_2$ + ಡಾಮರ್$_0$]

**ಬಿಳಿತಾವರೆ** 'ಬಿಳಿದಾವರೆ' ನೋ.

**ಬಿಳಿತಾಳೆ** 'ಬಿಳಿದಾಳೆ' ನೋ.

**ಬಿಳಿತಿಗಡೆ** (ನಾ). ಒಂದು ಬಗೆಯ ಸಸ್ಯ: "ಶರಭಃ — ಬಿಳಿತಿಗಡೆ" (೬ಕಧ. ೧೩೯). [ಬಿಳಿ$_2$ + ತಿಗಡೆ$_2$]

**ಬಿಳಿದಾವರೆ, ಬಿಳಿತಾವರೆ** (ನಾ). ಬಿಳಿಯ ಬಣ್ಣದ ತಾವರೆ: ಬಿಳಿದಾವರೆಯನ್ನು ಸುತ್ತುವರೆದ ದುಂಬಿಗಳ ಹಿಂಡಿನಂತಿತ್ತು ಶಿವನ ಕಂಠ (ಕಾಕಗ. ೬೯); ಕೈಯಲ್ಲಿ ಒಂದು ಬಿಳಿದಾವರೆಯನ್ನು ಹಿಡಿದು ಹಂಸವನ್ನು ತನ್ನ ಹತ್ತಿರ ಕರೆಯುವವಳು (ಇಬದು. ೦೩). **ಬಿಳಿತಾವರೆ**: "ಪುಷ್ಪಗಂಧಿ — ಬಿಳಿತಾವರೆ. ಕಲ್ಲಶ್ರಿ" (೬ಕಧ. ೧೦೦). [ಬಿಳಿ$_2$ + ತಾವರೆ (< ತಾಮರೆ)]

**ಬಿಳಿದಾಸವಾಳ** (ನಾ). ಬಿಳಿಬಣ್ಣದ ಹೂವುಗಳನ್ನು ಬಿಡುವ ದಾಸವಾಳ: ಹಾಲು ಮತ್ತು ಸಕ್ಕರೆಯ ಜೊತೆಗೆ ಬಿಳಿದಾಸವಾಳದ ದಳಗಳ ಅಥವಾ ಬೇರಿನ ರಸವನ್ನು ಸೇರಿಸಿ ಕುಡಿಯುವುದರಿಂದ ಮೇಹರೋಗಗಳು ವಾಸಿಯಾಗುವುವು (ಕಶಕೋ. IX, ೩೬೩). [ಬಿಳಿ$_2$ + ದಾಸವಾಳ (< ದಾಸವಣ)]

**ಬಿಳಿದಾಳೆ, ಬಿಳಿತಾಳೆ** (ನಾ). ಒಂದು ಬಗೆಯ ತಾಳೆಮರ: ಬಿಳಿದಾಳೆ . . . ಕೈತಾಳೆ (ವೃ.ಶಿಗ. ೬೨-೦೪೬೩). **ಬಿಳಿತಾಳೆ**: ಬಿಳಿಪೋಕು. ಬೂದಿತಾಳೆ. ಪುಳಕೆ. ಬಿಳಿತಾಳೆ, ತೆಲ್ಲಪುನಿ (ವೃ.ಶಿಗ. ೩೯-೬೬೩). [ಬಿಳಿ$_2$ + ತಾಳೆ$_1$ (<ತಾಟಿ)]

**ಬಿಳಿದು** (ನಾ). ೧. ಬಿಳಿಯ ಬಣ್ಣ: ಶ್ವೇತವರ್ಣ: "ಗೌರಃ, ಶ್ವೇತಃ . . . ಪಾಂಡರಃ — ಈ ೧೨ ಬಿಳಿದು" (ಹಲಾಯು. ೦೨೦-೪೬): ಎಱೆಯೆ ಸಿತಪ್ರಯುತಾಸವಮಂ ಪೊಯ್ಗಿರ್ಮೆಯ ಪಾಲಂ ದಾಸಿವಣದ ಪೂ ಬಿಳಿದಕ್ಕುಂ (ಲೋಕೋಪ. ೬-೩೦): ಕವಿಗಳ್ ಕರಿದೆಂದೊಡೆ ಕರಿದವರ್ಗಳ್ ಬಿಳಿದೆಂದೊಡೆ ಬಿಳಿದೇಕವರನುಜಿದೆ ಕಿಡುವರ್ ಕೆಲಬರ್ (ಲೀಲಾವ. ೧-೯): ಸುರಪತಿಯ ಹಯವಹುದು ಬಿಳಿದೋ ಕರಿದೊ ಹೇಳ್ ಅಕ್ಕ (ಸಂಭಪ. ೩-೪೩). ೨. ಬೆಳ್ಳಗಿರುವ ಬಟ್ಟೆ; ಶುಭ್ರವಸನ: ಮಡಿಯ ಕೂಲಿಯ ಬೇಡ ಹೋದರೆ ಬಿಳಿದು ಹಱಿದು ಎನ್ನ ಮೇಲೆ ಬಿಸಾಟನು (ಮುಮಪಾ. ೨೯-೪೨): ಉಟ್ಟ ಬಿಳಿದು ಬೆಳ್ದಿಂಗಳಂ ಬೀಱೆ (ಗಿಂಕ. ೨-೦೦೩ ವ). ೩. ವಾಸಿಯಾಗದಿರುವ ಗಾಯದಲ್ಲಿ ಬೆಳ್ಳಗೆ ಕಾಣುವ ಭಾಗ: ಉಗಸಿ . . . ಹಾಲನ್ನು ಬೆಂದ ಹುಣ್ಣಿನ ಬಿಳಿದಿಗೆ ತೊಡೆದರೆ ಬಿಳಿದು ಹೋಗಿ ಚೆನ್ನಾಗುವದು (ವೈ.ಶಿ. ೩). ೪. =ಬಿಳುಪು ೩: ಜೂಜಕ್ಕಿ ಸಮೂಲವನ್ನು ಮಜ್ಜಿಗೆಯಲ್ಲಿ ತೆಗೆದುಕೊಳ್ಳೆ ಬಿಳಿದು ಹೋಗುವುದು ಮಾಣ್ಗುಂ (ವೈ.ಶಿ. ೪).

**ಬಿಳಿಯ** = ೧. ಬಿಳುಪಾದ ದೇಹವುಳ್ಳವನು. ೨. ಯುರೋಪು ದೇಶದವನು: ಕರಿಯರದೋ ಬಿಳಿಯರದೊ ಯಾರದಾದರೆ ಏನು? ಸಾಮ್ರಾಜ್ಯವಾಪಗಂ ಸುಲಿಗೆ ರೈತರಿಗೆ! (ಕೋಗಿರ. ೦೩-೦). **ಬಿಳಿಯಳ್** = ೧. ಬಿಳುಪಾದ ದೇಹವುಳ್ಳವಳು. ೨. ತಿಳಿಗೇಡಿ; ದಡ್ಡ: ☞ ಇಲ್ಲಿ 'ಬೆಳ್' ಎಂಬ ಶಬ್ದಕ್ಕೆ ಇರುವ ಅರ್ಥಗಳಲ್ಲಿ ಒಂದನ್ನು ಕವಿಯು ಉಪಯೋಗಿಸಿರಬಹುದು. ೧, ೨: ಶ್ರುತಮೂರ್ತಿಯಾಗಿಯುಂ ರುಚಿರತನು ಕರಂ ಬಿಳಿಯಳಾಗಿಯುಂ ಚತುರವಚೋನ್ವಿತೆ . . . ವಾಗ್ದೇವಿ ಕೂರ್ತು ಮಾಟ್ಕೆಮಗಱಿವಂ (ಶಾಶತಿ. ೧೦-೨).
[ದೇ.॥ ತಮಿ. ವೆಳಿತು; ತುಳು. ಬೊಳ್ದು, ಬೊಲ್ದು: ಗದಬ, ಎಲಿದ್]

**ಬಿಳಿದೇವದಾರು** (ನಾ). ಒಂದು ಬಗೆಯ ದೇವದಾರುವೃಕ್ಷ: ಬಿಳೀಬುಡ್ಲಿಗೆ, ಬಿಳೀದೇವದಾರು, ಬಿಳೀಅಗಿಲು (ವೃ.ಶಿಗ. ೬೨-೬೦೯). [ಬಿಳಿ$_2$ + ದೇವದಾರು]

**ಬಿಳಿದೊಡ್ಡಕಾಚಿಹುಲ್ಲು** (ನಾ). ಒಂದು ಬಗೆಯ ಹುಲ್ಲು : ಕಾಸಿಹುಲ್ಲು . . . ಬಿಳೀದೊಡ್ಡಕಾಚಿಹುಲ್ಲು (ವೃ ಶಿ೧. ೨೬-೫೦೬).

[ಬಿಳಿ$_2$ + ದೊಡ್ಡ + ಕಾಚಿಹುಲ್ಲು]

**ಬಿಳಿನೀರು** (ನಾ). (ಆಲಂ) ಹೆಂಡ ; ಮದ್ಯ : ಅಗ್ರೋದಕದಿ ನಿರ್ಮಲವಾಗಿ ಪೂಜೆಯ ಮಾಡೆಂದರೆ ಬಿಳಿನೀರ ಕುಡಿದು ಬತ್ತಲೆ ಬೇವು ಉಟ್ಟು ಹುಳಿ ಮೂಲಂಗೀರುಳ್ಳಿ ತಿಂಬುವನೆ ಖೋಡಿ (ತ್ರಿರಂಧ. ೨-೩೮-೩).

[ಬಿಳಿ$_2$ + ನೀರು$_1$ (< ನೀರ್)]

**ಬಿಳಿಪಾದ್ರಿ** (ನಾ). ಒಂದು ಬಗೆಯ ಹೂವಿನ ಮರ : ಬಿಳಿಪಾದ್ರಿ, ಹುದೆ, ಬಿಲ್ಲ, ಹುವ್ವುಲವೆ, ಹುಲವೆ (ವೃ ಶಿ೧. ೬೨-೧೯೬೬).

[ಬಿಳಿ$_2$ + ಪಾದ್ರಿ$_0$ (< ಪಾದರಿ$_2$)]

**ಬಿಳಿಪೊಳಿಕು** (ನಾ). ಒಂದು ಬಗೆಯ ಸಸ್ಯ : ಬಿಳಿಪೊಳಿಕು, ಬೂದಿತಾಳೆ, ಪುಳಿಕೆ, ಬಿಳಿತಾಳೆ, ತೆಲ್ಲಪುನಿ (ವೃ ಶಿ೧. ೫೯-೬೬೩). [ಬಿಳಿ$_2$ + ಪೊಳಿಕು$_0$]

**ಬಿಳಿಬಂಟ** (ನಾ). ಸುಗ್ಗಿಯ ಕಣದಲ್ಲಿ ಪೂಜಿಸುವ ಒಂದು ಸಾಂಕೇತಿಕ ದೇವರು : ಶರಣ ಮಡಿವಾಳಾದ ಕರಿಬಂಟ ಕಣದಾಗ ಹರಳಾದ ಕಣಕ ಬಿಳಿಬಂಟ ಪ್ರಭುಲಿಂಗ ಗುರುಬುದ್ಧಿವಂತ ಲಿಂಗಾದ (ಕವ್ನಜಾ. ೧೩೩). P “ ‘ವೀರಘಂಟೆಯ ಮಡಿವಾಳ’ನಿಗೆ ಒಕ್ಕಲಿಗನು ‘ಕರಿಬಂಟ’ ನೆಂದೂ ಮತ್ತು ಪಾವನಭಕ್ತಿಯುಳ್ಳ ಮಹಾಶರಣ ಹರಳಯ್ಯನಿಗೆ ‘ಬಿಳಿಬಂಟ’ ನೆಂದೂ ಕರೆದಿರುವನು ” (ಕವ್ನಜಾ. ೧೩೩).

[ಬಿಳಿ$_2$ + ಬಂಟ$_1$]

**ಬಿಳಿಬರಲು** (ನಾ). ಒಂದು ಬಗೆಯ ಸಸ್ಯ : ಬಿಳೀಬೂರುಗ, ಬಿಳೀಬರಲು (ವೃ ಶಿ೧. ೫೪-೬೬೦). [ಬಿಳಿ$_2$ + ಬರಲು$_?$]

**ಬಿಳಿಬಸುರಿ** (ನಾ). ಬಸರಿಮರಗಳಲ್ಲಿ ಒಂದು ಬಗೆ : ಬಿಳಿಬಸುರಿ, ಬೋವಿಯ ಮರ (ವೃ ಶಿ೧. ೫೭-೬೩೦). [ಬಿಳಿ$_2$ + ಬಸುರಿ$_2$ (< ಬಸರಿ)]

**ಬಿಳಿಬಾಳ** (ನಾ). ಬಿಳಿಯ ಬಣ್ಣದ ಲಾಮಂಚ : “ಉಶೀರ, ಲಾಮಜ್ಜಕ, ಲಾಮಂಚ, ಬಿಳಿಬಾಳ” (ಸಾಚರಾ. ೯). [ಬಿಳಿ$_2$ + ಬಾಳ$_2$]

**ಬಿಳಿಬೀಟಿ** (ನಾ). ಒಂದು ಬಗೆಯ ಬೀಟೆಮರ : ಹಸುರುಗನ್ನಿ, ಬೆಲಗ, ಬಿಳೀಬೀಟಿ, ಬೆಟ್ಟದ ಹಸುರುಗೋಣಿ (ವೃ ಶಿ೧. ೨೮-೫೯೬).

[ಬಿಳಿ$_2$ + ಬೀಟೆ$_2$]

**ಬಿಳಿಬುಡ್ಲಿಗೆ** (ನಾ). ಒಂದು ಬಗೆಯ ಸಸ್ಯ : ಬಿಳೀಬುಡ್ಲಿಗೆ, ಬಿಳಿದೇವದಾರು, ಬಿಳೀಅಗಿಲು (ವೃ ಶಿ೧. ೫೨-೬೦೯). [ಬಿಳಿ$_2$ + ಬುಡ್ಲಿಗೆ$_?$]

**ಬಿಳಿಬೂರುಗ** (ನಾ). ಒಂದು ಬಗೆಯ ಅರಳೆಗಿಡ : ಬಿಳೀಬೂರುಗ, ಬಿಳೀಬರಲು (ವೃ ಶಿ೧. ೫೪-೬೬೦). [ಬಿಳಿ$_2$ + ಬೂರುಗ$_1$ (< ಬೂರ)]

**ಬಿಳಿಬೆಂಡುಗಿಡ** (ನಾ). ಒಂದು ಬಗೆಯ ಸಸ್ಯ : (ವೃ ಶಿ೧. ೬೨-೦೨೬೮).

[ಬಿಳಿ$_2$ + ಬೆಂಡು$_?$ + ಗಿಡ (< ಗಿಡು)]

**ಬಿಳಿಭೂತಾಳೆ** (ನಾ). ಒಂದು ಬಗೆಯ ಭೂತಾಳೆ : ಬಿಳಿಭೂತಾಳೆ, ಮದ್ದಲೆ (ವೃ ಶಿ೧. ೬೮-೦೩೯೪). [ಬಿಳಿ$_2$ + ಭೂತಾಳೆ]

**ಬಿಳಿಮಂದಾರ** (ನಾ). ಒಂದು ಬಗೆಯ ಸಸ್ಯ : ಬಿಳೀಕಂಚುವಾಳ, ಬಿಳೀಮಂದಾರ (ವೃ ಶಿ೧. ೦೨-೨೦೬). [ಬಿಳಿ$_2$ + ಮಂದಾರ]

**ಬಿಳಿಮತ್ತಿ** (ನಾ). ಒಂದು ಬಗೆಯ ಮತ್ತಿಮರ : ಬಿಳಿಮತ್ತಿ, ತೊರಮತ್ತಿ, ಹೊಳೆಮತ್ತಿ (ವೃ ಶಿ೧. ೬೪-೦೫೦೦) ; ಬಿಳಿಮತ್ತಿ . . . ಮೆಕ್ಕಲುಮಣ್ಣಿನ ಭೂಮಿಗಳಲ್ಲಿ ಬಲುಸಮೃದ್ಧವಾಗಿ ಬೆಳೆಯುತ್ತದೆ (ಕಬಿಕೋ. XII, ೧೯೬).

[ಬಿಳಿ$_2$ + ಮತ್ತಿ$_1$ (< ಮಟ್ಟಿ$_1$)]

**ಬಿಳಿಮೀನು** (ನಾ). ಒಂದು ಬಗೆಯ ಮೀನು : ಬಿಳಿಮೀನು ದೊಡ್ಡ ಗಾತ್ರದ್ದು . . . ಉದರಭಾಗ ಬಿಳಿ. ಅಂಚುಗಳು ಮಾತ್ರ ಕೆಂಪು (ಕಬಿಕೋ. XII, ೧೯೬). [ಬಿಳಿ$_2$ + ಮೀನು$_2$ (< ಮೀನ್$_2$)]

**ಬಿಳಿಮೆಣಸು** (ನಾ). ಒಂದು ಬಗೆಯ ಮೆಣಸು ; ಬಿಳಿಬಣ್ಣದ ಮೆಣಸು : ಬಿಳಿಮೆಣಸನ್ನು ಔಷಧಿಗೆ ಉಪಯೋಗಿಸುತ್ತಾರೆ (ರೂಢಿ).

[ಬಿಳಿ$_2$ + ಮೆಣಸು (< ಮೆಣಸು)]

**ಬಿಳಿಮೆಯ್ಯ** (ನಾ). ೧. ಬಿಳುಪಾದ ದೇಹವುಳ್ಳವನು. ೨. ಲಕ್ಷ್ಮಣ : ಬಿಳಿಮೆಯ್ಯನೆಳ್ಚತ್ತು ಹೊರಗೆ ಹೋಗಿರೆ. ನೀಲಿಮೆಯ್ಯನಂ ಕನವರಿಸಿದನ್ (ಶ್ರೀರಾಮಪು. ೨೬೩-೨೬೪). [ಬಿಳಿ$_2$ + ಮೆಯ್$_2$ + — ಅ$_7$]

**ಬಿಳಿಯಂಬು** (ನಾ). ಒಂದು ಬಗೆಯ ಬಾಣ : ಪೊಯಿಸಿ ಇಱಿದೊಡೆ ತನ್ನಂ ಪಲವುಂ ಬಿಳಿಯಂಬುಂ ಜಟ್ಟಿಗೆಗಳುಂ ಬಸಮಾಱಿದಿನ ಕೊಳಿ ತಾಂ ಸತ್ತು (ಎಕ. XI, ಹಳ್ಳಿ. ೮-೪ ; ಸು. 810 ?) ; ಬಾಣದ ಹಲವಾರು ಪ್ರಭೇದಗಳ ಹೆಸರುಗಳು ಶಾಸನಗಳಲ್ಲಿ ದೊರೆಯುತ್ತವೆ–ಬಿಳಿಯಂಬು, ಕೋಲಂಬು, ಸಿಂಗಲಂಬು ಇತ್ಯಾದಿ . . . ಬಿಳಿಯಂಬು ಎಂಬುದು ಪ್ರತಿಷ್ಠಿತವ್ಯಕ್ತಿಗಳು ಬಳಸುತ್ತಿದ್ದ ಹೊಳಪಿನ ಬಾಣವಿರಬಹುದೆ ? (ಕಶಾಅ. ೨೬೩).

**ಬಿಳಿಯಂಬನಾತ** = ಒಂದು ಬಿರುದು : ಮಹಾಸಮಸ್ತತುರಗವೆ[ಡೆ]ಜ್ಜ ಬಿಳಿಯಂಬನಾತನಾಹವಸೂದ್ರಕಂ ವಿದ್ವಿಷ್ಟಮಾತ್ರ್ಯಂಡಪ್ರಿಯಗಾಳ್ಳ ಚಾಳುಕ್ಯವಂಶೋದ್ಭವಂ (ಸೌಇಇ. IX — i, ೬೪-೪ ; 944).

[ಬಿಳಿ$_{2?}$ + ಅಂಬು$_2$]

**ಬಿಳಿಯಕ್ಷತೆ** (ನಾ). ಪಿತೃಕಾರ್ಯಗಳಲ್ಲಿ ಪೂಜೆಗೆ ಬಳಸುವ ನೆನಸಿದ ಅಕ್ಕಿ ; ಅರಸಿನ ಅಥವಾ ಕುಂಕುಮಗಳನ್ನು ಹಚ್ಚದಿರುವ ಅಕ್ಕಿ : (ಕ). [ಬಿಳಿ$_2$ + ಅಕ್ಷತೆ]

**ಬಿಳಿಯತ್ತಿ** (ನಾ). ಒಂದು ಬಗೆಯ ಅತ್ತಿಮರ : ಚಿಲ್ಲ ಬೆಲ್ಲವತ್ತದ ಬಿಳಿಯತ್ತಿಯಿಪ್ಪೆಯ ಮರಂಗಳ ಕೊಂಬುಗಳ್ . . . ಪರ್ಬಿರೆ (ಅರಾಪ. ೩-೨೨) ; ಅಂಕೋಲೆ ಬಿಳಿಯತ್ತಿ . . . ಮುತ್ತುಗ ಮೊದಲಾದ ಮರಗಳ ಬಳಗದಿಂದದು ಕಣ್ಗೆಸೆದುದು (ಕುರಾಸಾಂ. ೪-೬). [ಬಿಳಿ$_2$ + ಅತ್ತಿ$_1$]

**ಬಿಳಿಯರಳೆ** (ನಾ). ಬೆಳ್ಳನೆಯ ಹತ್ತಿ : ಬಿಳಿಯರಳೆಯಂತೆ ಗಂಗಾಜಳದಂತೆ . . . ಪವಿತ್ರಮತ್ತಿಮಬ್ಬೆಯ ಚರಿತಂ (ಅಜಿಪು ೦೨-೬). [ಬಿಳಿ$_2$ + ಅರಳೆ$_1$]

**ಬಿಳಿಯವರೆ** (ನಾ). ಅವರೆಯಲ್ಲಿ ಒಂದು ಬಗೆ ; ಬೆಳ್ಳಗಿರುವ ಅವರೆ : “ಮಾಧ್ವೀಕಃ-ಬಿಳಿಯವರೆ” (೬ಶಧ. ೦೨೪). [ಬಿಳಿ$_2$ + ಅವರೆ$_1$]

**ಬಿಳಿಯಾಚಾರಿ** (ನಾ). ಒಬ್ಬಾತನ ಹೆಸರು : ಇಲ್ಲಿಯ ಬೆಸಮಕ್ಕಳಾರೆನ್ದೊಡೆ . . . ಬಿಳಿಯಾಚಾರಿಯುಂ ಕುಬಾಚಾರಿಯುಂ (ಎಕ. III, ತಂಜನ. ೦೩೯-೯ ; 915?). [ಬಿಳಿ$_?$ + ಆಚಾರಿ]

**ಬಿಳಿಯಾನೆ** (ನಾ). ೧. ಬೆಳ್ಳಗಿರುವ ಆನೆ : ಇಂದ್ರನ ಐರಾವತ ಬಿಳಿಯಾನೆ ಎಂದು ಹೇಳುತ್ತಾರೆ (ರೂಢಿ). ೨. ಒಂದು ಬಗೆಯ ಮೀನು : ಹೆಮ್ಮಲಗು ಬಿಳಿಯಾನೆ . . . ಗಿಱಿಲುಗಳೆಂಬ ಹೊಳೆವಳಿಯ ಮೀನ್ಗಳಂ ತವಿಸುತಿಹ ಬೇಡರಂ ನೋಡಿದಂ ಭೂಪಾಲನು (ಹಕಕಾ. ೫-೪೬). ೩. (ಆಲಂ) ಹೆಚ್ಚು ಬೆಲೆಯುಳ್ಳುದು; ದುಬಾರಿ; ತುಟ್ಟಿ : ಆ ಇಲಾಖೆ ಸರ್ಕಾರಕ್ಕೆ ಬಿಳಿಯಾನೆಯಾಗಿಬಿಟ್ಟಿದೆ (ರೂಢಿ). [ಬಿಳಿ$_2$ + ಆನೆ$_1$]

**ಬಿಳಿಯಾಬಲ್**, ಬಿಳಿಯಾಬಲು (ನಾ). ಬಿಳಿಬಣ್ಣದ ತಾವರೆ : “ಶ್ವೇತಪರ್ಣಂ — ಬಿಳಿಯಾಬಲ್” (೬ಶಧ. ೦೬೦). **ಬಿಳಿಯಾಬಲು** : “ಕದಂಬಕಃ.–ಮತ್ತಿ. ಅತ್ತಿ. ಬಿಳಿಯಾಬಲು” (೬ಶಧ. ೨೫)

[ಬಿಳಿ$_2$ + ಆಬಲ್ (< ಆವಲ್$_1$)]

**ಬಿಳಿಯಾಬಲು** ‘ಬಿಳಿಯಾಬಲ್’ ನೋ.

**ಬಿಳಿಯಾಲಿ** (ನಾ). ಕಣ್ಣುಗುಡ್ಡೆಯ ಬಿಳುಪಾದ ಭಾಗ : ಕಾಡಿಗೆಯೊಳ್ ಕೂಡಿ ಬಿಳಿಯಾಲಿಯಿಂ ಕರಿಯಾಲಿಯಿಂದಮೆಯಿಂ ಕಣ್ಣೊಪ್ಪುವಂತೆ (ಧರ್ಮಾಮೃ. ೦೨ ೫) ; ಚಕ್ಷುವಿಂಗೆ ಕರಿಯಾಲಿ ಬಿಳಿಯಾಲಿ ಇವೊಳಗಣುಪಕರಣಂ ಎವೆ ಹೊಟ್ಟೆಯೆಂಬಿವು ಬಾಹ್ಯೋಪಕರಣಂ (ಶಸಾರ ೯೩).

[ಬಿಳಿ$_2$ + ಆಲಿ$_2$]

ಉಳ್ಳಿ (ನಾ). ಒಂದು ಬಗೆಯ ಗಡ್ಡೆ : ಬೆಳ್ಳುಳ್ಳಿ : "ಮಿಶ್ರಗಂಧಃ ಳ್ಳಿ. ಬಿಳಿಯುಳ್ಳಿ (ಬೆಳ್ಳುಳ್ಳಿ)" (೬೩೦. ೦೨೫). [ಬಿಳಿ₂ + ಉಳ್ಳಿ₁]
ಕ್ಕೆ, ಬಿಳಿಎಕ್ಕೆ (ನಾ). ಎಕ್ಕೆಯಲ್ಲಿ ಒಂದು ಬಗೆ : "ಶ್ವೇತಾರ್ಕಃ– ಯೆಕ್ಕೆ" (೬೩೦. ೧೬೦). **ಬಿಳಿಎಕ್ಕೆ :** ಸ್ತ್ರೀನಾಮವುಮಂ ಬರೆದು ಎಕ್ಕೆಯ ಕಟ್ಟಿಗೆಯ ಕಂಡದಿಂ ಕಾಸಲು ವಶಮಪ್ಪಳು (ಕಾಮಶಾ. ೨೬೨). [ಬಿಳಿ₂ + ಎಕ್ಕೆ₂]
ಲಚಿ (ನಾ). ಏಲಚಿಯಲ್ಲಿ ಒಂದು ಬಗೆ : "ಸರ್ಪಗಿಡ– ಯೆಲಚಿ" (೬೩೦. ೦೬೪). [ಬಿಳಿ₂ + ಏಲಚಿ]
ಲವ (ನಾ). ಎಲವದಲ್ಲಿ ಒಂದು ಬಗೆ ; ಬಿಳಿಯ ಬೂರುಗದ ರ : "ಶುಕ್ಲಲೋಹಿತಃ – ಬಿಳಿಯೆಲವ" (೬೩೦. ೦೬೯). [ಬಿಳಿ₂ + ಎಲವ]
ಕ್ಕಸಿ (ನಾ). ಒಂದು ಬಗೆಯ ಸಸ್ಯ : ಬಿಳಿರಕ್ಕಸಿಯ ಗೆಡ್ಡೆಯ ನಾಳದ ದು ಕುಡಿಯೆ ನಿರ್ವಿಷ (ಏವೈಹಿ. ೯೩). 'ಬಲರಕ್ಕಸಿ' ಪರಾ. [ಬಿಳಿ₂ + ಎಲವ]
(ನಾ). ಒಂದು ಬಗೆಯ ಭೂಮಿ : ಕುಂದೇಶ್ವರದೇವರಿಗೆ . . . ರ ಮೆಕ್ಕೆ ಚ ೧ ವುೂ ೧ ಊಳೂರಳ ಗಡಿಂ (ಕಾಇಇ. IX-ii. ೪೪೬-೩೩; ) : ಹೆಬಾರರ ಹೊಸಗದೆಯ ಒತ್ತಿನ ಬಿಳಿರ ನಾವು ಗೋರಿಸಿದ ವಾಕಿಗದೆ ಂ (ಎಕ. VI. ಮೂಡಗೆ. ೩೯-೨೯; 1561 ?).
[?./ತುಳು. ಬೊಳಿರ್=ಒಂದು ಬಗೆಯ ಪೊದರು]
'ಬೀಳಿಲ್' ನೋ.
'ಬೀಳಿಲ್' ನೋ.
ೊದ್ದುಗ (ನಾ). ಒಂದು ಬಗೆಯ ಮರ : ಬಿಳಿಯ ಬಣ್ಣದ ೀಧ್ರಕ : ಶ್ರೀಗಂಧ ಬೆಲ್ಲವತ್ತ ಬಿಳೀಲೊದ್ದುಗ ಕೆಂಪುಲೊದ್ದುಗ . ಮೊದಲಾದ ಪುಷ್ಪಫಲಭರಿತವಾದ ವೃಕ್ಷಗಳನ್ನು (ಕೃವಾಕ. ೨೨೯). [ಬಿಳಿ₂ + ಲೊದ್ದುಗ₁]
ಪಿಗೆ (ನಾ). ಬಿಳಿಬಣ್ಣದ ಹೂವುಗಳನ್ನು ಬಿಡುವ ಸಂಪಗೆಯ ದು ಬಗೆ : ಆ ಮರದಲ್ಲಿ ಎಲೆಗಳು ಕಾಣದಷ್ಟು ಬಿಳಿಸಂಪಿಗೆ ಅರಳಿವೆ ). 'ಕೆಂಡಸಂಪಿಗೆ' ಪರಾ. [ಬಿಳಿ₂ + ಸಂಪಿಗೆ (<ಸಂಪಗೆ)]
ಟ್ಟುಗ (ನಾ). ಒಂದು ಬಗೆಯ ಸಸ್ಯ : ಬಿಳಿಗುರುಗುಂಜಿ. ಬಿಳಿ ್ಟುಗದ ರಸದಲ್ಲಿ ಮರ್ದಿಸಿ . . . ಹೊಕ್ಕುಳು ತಪ್ಪಿಸಿ ಕೆಳಗೆ ಲೇಪವಂ ಡೆ ಮೂತ್ರ ಬಿಡುವುದು (ಏವೈಹಿ. ೬೦). [ಬಿಳಿ₂ + ಸಟ್ಟುಗ₁]
ಳಿ (ನಾ). ಒಂದು ಬಗೆಯ ಸಸ್ಯ: ಕಾಕಸರಳಿ. ಬಿಳಿಸರಳಿ. ಅಕ್ಕಸರಳಿ ಶಿ. ೩೦–೬೦೫) [ಬಿಳಿ₂ + ಸರಳಿ₁]
ಮೆಹುಲ್ಲು (ನಾ). ಒಂದು ಬಗೆಯ ಹುಲ್ಲು: (ವೈಶಿ. ೫೯–೦೦೯೦). [ಬಿಳಿ₂ + ಸಾಮೆಹುಲ್ಲು]
ಸುವೆ, ಬಿಳಿಸಾಸುವೆ (ನಾ). ಒಂದು ಬಗೆಯ ಸಾಸುವೆ : ್ಥಾರ್ಥ : (ವೈಶಿ. ೦೯–೨೯೭). **ಬಿಳಿಸಾಸುವೆ :** ಬಿಳಿಸಾಸುವೆ ಕೆಂಪಿನ ಳೆಹುವ್ವ ತುಪ್ಪ ಸಹಿತ ತಿಲಕಮಿಡಲು ತ್ರೈಲೋಕ್ಯವಶವಪ್ಪುದು ಶಾ. ೨೬೨). [ಬಿಳಿ₂ + ಸಾಸಿವೆ]
ಸುವೆ 'ಬಿಳಿಸಾಸಿವೆ' ನೋ.
ರೆ (ನಾ). ೧. ಬಿಳಿಯ ಬಣ್ಣದ ಸೀರೆ : ಅವಳು ಹೆಚ್ಚಾಗಿ ಬಿಳಿ ಯನ್ನೇ ಉಡುತ್ತಾಳೆ(ರೂಢಿ). ೨. ಹೆಂಗಸಿನ ಒಂದು ಬಗೆಯ ್ಯರೋಗ ; ಶ್ವೇತಪ್ರದರ ; ಬಿಳಿಸೆರಗು : ಜಂಬೂಘೃತ . . . ಯದಲ್ಲಿ ಗ ೨ ತೂಕವಂ ತುಪ್ಪದಲ್ಲಿ ಕಲಸಿಕೊಡಲು ರಕ್ತಪಿತ್ತ.

**ಬಿಳಿಸುರಿಮುಳ್ಳು** (ನಾ). ಒಂದು ಬಗೆಯ ಸಸ್ಯ : ಬೊಮ್ಮರಲು. ಬಿಳಿ ಸುರಿಮುಳ್ಳು. ಸಣ್ಣಗುರಕಿ (ವೈಶಿ. ೬೯–೦೬೩೦). [ಬಿಳಿ₂ + ಸುರಿಮುಳ್ಳು]
**ಬಿಳಿಸೂಲಿ** (ನಾ). ಒಂದು ಬಗೆಯ ಸಸ್ಯ : ಸೊಪ್ಪುಗಳು : – ಅಗಸೆ, ಬಿಳಿ ಸೂಲಿ. ಅಕವಿ. ಗೊರಬಿ (ಪವ್ಯಾಪ. ೨೩೬). [ಬಿಳಿ₂ + ಸೂಲಿ₂]
**ಬಿಳಿಸೆರಗು** (ನಾ). =ಬಿಳಿಸೀರೆ ೨ : ಗರ್ಭಿಣಿಯ ಬಿಳಿಸೆರಗಿಗೆ . . . ನೆಗ್ಗಿಲ ಮುಳ್ಳಿನ ವಸ್ತ್ರಗಾಳಿತ ಚೂರ್ಣ ಅರ್ಧತೊಲೆಗೆ ಕಲ್ಲುಸಕ್ಕರೆ ಮತ್ತು ತುಪ್ಪ ಒಂದೊಂದು ತೊಳೆ ಕೂಡಿಸಿ ಬೆಳಗ್ಗೆ ಮತ್ತು ಸಂಜೆ ನೆಕ್ಕುವುದು (ಮಿಸವು. ೯೯). [ಬಿಳಿ₂ + ಸೆರಗು₁ (<ಸೆಱಂಗು)]
**ಬಿಳಿಸೊಂಡೆ** (ನಾ). ಸೊಂಡೆಯಲ್ಲಿ ಒಂದು ಬಗೆ : ಬಿಳುಪಾದ ಸೊಂಡೆ : ಬಿಳಿಸೊಂಡೆ ಸೊಪ್ಪಿನ ರಸವನ್ನು ಯಳ್ಳೆಣ್ಣೆ ಬೆರಸಿ ಮೂರುದಿನ ಕುಡಿಯ ಕೊಡಲು ಮೂಷಿಕವಿಷಹರ (ಏಶಚ. ೨೦–೩). [ಬಿಳಿ₂ + ಸೊಂಡೆ₁(<ಸುಂಡೆ₁)]
**ಬಿಳಿಹಂಬು** (ನಾ). ಒಂದು ಬಗೆಯ ಬಳ್ಳಿ : ಕಾಡುದ್ರಾಕ್ಷಿ. ಬಿಳಿಹಂಬು (ವೈಶಿ. ೫–೦೦೪). [ಬಿಳಿ₂ + ಹಂಬು₂ (<ಪರಪ್ಪು₂)]
**ಬಿಳಿಹರಳು** (ನಾ). ಒಂದು ಬಗೆಯ ಹರಳುಗಿಡ : ಬಿಳಿಹರಳೆಲೆ. ಅಮರದವೆಳ್ಳಿ . . . ಹಿಪ್ಪಲಿ ಪ್ರತಿಪಾಕವಿಟ್ಟು ಸೇವಿಸಿದರೆ ವಾತಜ್ವರಂ ತೀರ್ಗುಂ (ಸಕವೈ. ೬೪). [ಬಿಳಿ₂ + ಹರಳು (<ಪರಲ್)]
**ಬಿಳಿಹರಿವೆ** (ನಾ). ಒಂದು ಬಗೆಯ ಹರಿವೆ : ಕೊತ್ತುಂಬರಿ. ಕೊಡಸಿಗೆಬೇರು, ಬಿಳಿಹರಿವೆಬೇರು . . . ಕಷಾಯ ಕಾಯಿಸಿ ಕೊಡಲು ವಾತಜ್ವರಂ ಮಾಣ್ಗುಂ (ಸಕವೈ. ೬೫). [ಬಿಳಿ₂ + ಹರಿವೆ₂(<ಹಱುಹೆ)]
**ಬಿಳಿಹಿಂಡಿಸೊಪ್ಪು** (ನಾ). ಒಂದು ಬಗೆಯ ಸಸ್ಯ : (ವೈಶಿ. ೩ ೪೪). [ಬಿಳಿ₂ + ಹಿಂಡಿಸೊಪ್ಪು (< ಪಿಂಡಿಸೊಪ್ಪು)]
**ಬಿಳಿಹುಲಿ** 'ಬಿಳಿಹೂಲಿ' ನೋ.
**ಬಿಳಿಹುಲುಗಿಲು** (ನಾ). ಒಂದು ಬಗೆಯ ಹೊಂಗೆಮರ : ಬಿಳಿ ಹುಲುಗಿಲ ಬೇರು. ಬಿಳಿಯ ಲೊಕ್ಕಿಯ ಬೇರು . . . ಇವಂ ಹುಳಿಯೆಲೆ ಯಲ್ಲಿ ಅರೆದು ಪೂಸಲು ಬಿಳಿಯ ಕುಷ್ಠ ಮಾಣ್ಗುಂ (ಏವೈಹಿ. ೬೦). [ಬಿಳಿ₂ + ಹುಲುಗಿಲು₀ (<ಪುಲಿಗಿಲ್)]
**ಬಿಳಿಹೂರಿ** (ನಾ). ಒಂದು ಬಗೆಯ ಮರ : ಹೊಂಗೆತೊಕ್ಕು. ತಪಸಿ ತೊಕ್ಕು . . . ಬಿಳಿಹೂರಿತೊಕ್ಕು – ಇವು ಪ್ರತ್ಯೇಕ ೩೦ ಪಲ . . . ಪಾಕವ ಮಾಡಿ (ಸಕವೈ. ೩೩೯). [ಬಿಳಿ₂ + ಹೂರಿ₀]
**ಬಿಳಿಹೂಲಿ, ಬಿಳಿಹುಲಿ** (ನಾ). ಒಂದು ಬಗೆಯ ಹೂಲಿಗಿಡ : ಬಿಳಿಹೂಲಿಯ ಕೊನರು, ವಡವಾರದ ಕೊನರು . . . ಕೊಡಲು ಬಹುಮೂತ್ರಂ ನಿಲ್ಲುವುದು (ಸಕವೈ. ೩೯೫). **ಬಿಳಿಹುಲಿ :** ಬಿಳಿಹುಲಿ ಚಿಗುರು ಒಂದು ಪಿಡಿ . . . ಕಂಚುವಾಳದ ಹೂವು ಒಂದನ್ನೂ ಅರೆದು ಸೇರಿಸಿ . . . ಕೊಟ್ಟರೆ ಬಹುಮೂತ್ರ ನಿಲ್ಲುವುದು (ಸಕವೈ. ಕರಿ. ೩೦೨). [ಬಿಳಿ₂ + ಹೂಲಿ₁ (< ಪೂಲಿ₁)]
**ಬಿಳುಗ** (ನಾ). ಒಂದು ಬಗೆಯ ಮರ : ಬಿಳುಗದ ಮರದ ಹೊಲದ ಪಡುವ ತೆವರ ಅರೇ ಬಿಳಿಯ ಮೂಡಮುಖನೆ (ಎಕ. III. ತಿರುಮ. ೬೩–೮೫೦; 1748). [?]
**ಬಿಳುಗಾರ** 'ಬಿಳಿಗಾರ' ನೋ.
**ಬಿಳುಪು, ಬಿಳ್ಪು** (ನಾ). ೧. ಬಿಳಿಯ ಬಣ್ಣ : ಹಸಿಯ ತೂಂಡೆಯ ಬೇರ ಕಟ್ಟಿ ತೊಳಸಿದೊಡೆ ಬಿಳು[ಕಾಣಂ.ಳಿ]ಪಹುದು (ಸೂಪಶಾ. ೨–೩). ೨. ಚರ್ಮವು ಬೆಳ್ಳಗಾಗುವ ಒಂದು ಬಗೆಯ ರೋಗ ; ತೊನ್ನು : ಗಂಧಕ, ಇಲ್ಲಣ, ಅರಿಸಿನ, ಸೈಂಧವ, ಕಹಿಹೀರೇಬೀಜ ಇವಿಷ್ಟನೂ ಸಮಾಂಶವಾಗಿ ಚೂರ್ಣಿಸಿ ಬೆಣ್ಣೆಯಲ್ಲಿ ಕಲಸಿ ಬಿಳಿಯ ಕುಷ್ಠಕೆ

ಪ್ರದರರೋಗವುಳ್ಳ ಹೆಂಗಸಿನ ಜನನಾಂಗದಿಂದ ಸ್ರವಿಸುವ ಬಿಳಿಯ ದ್ರವ : ಬಿಳುಪು ಸೋರುವುದು ; ಬಿಳಿಸೆರಗು (Leucorrhoea. ೩೦೪೩). ಬಿಳ್ಪು : ೧. ಇಂದ್ರಜನೊಳ್ಳಿರೆ ಬಿಳ್ಪಿನೊಳು . . . ಪುಳ್ಳಿನೊಳಜುರ್ನಾಖ್ಯಪಾಕ್ಯಂ (ಮಂಗರಾ. ೧೯೬-೯೯). [ಬಿಳಿ$_2$ + — ಪು$_2$]

**ಬಿಳುಪುಗಟ್ಟು** (ಕ್ರಿ). ಬಿಳಿಚಿಕೊಳ್ಳು : ಬೆಳ್ಳಗಾಗು : ಅವಳ . . . ಮುಖ ಮಾತ್ರ ಭಯದಿಂದ ಬಿಳುಪುಗಟ್ಟಿತ್ತು (ದೂರಸ. ೨೨೦).
[ಬಿಳುಪು + ಕಟ್ಟು$_1$]

**ಬಿಳುಪೇರು** 'ಬಿಳುಪೇಱು' ನೋ.

**ಬಿಳುಪೇಱು**, ಬಿಳುಪೇರು (ಕ್ರಿ). ೧. ಬಿಳಿಯ ಬಣ್ಣವಾಗು : ನರೆ : ಕಣ್ಣವೆ ಬಿಳುಪೇಱೆ ಕಪ್ಪು ಪತ್ತಿಸಿ . . . ಹುಣ್ಣುನಲೆಯ ಸೀರೆಯಲಿ ಮಾಜಿಸಿಹ ಮುದಿಪಣ್ಯಾಂಗನೆಯುರೊಪ್ಪಿದರು (ಕಂಪರಿ. ೬-೧೯೨). **ಬಿಳುಪೇರು:** ೨. ಬಿಳಿಚಿಕೊಳ್ಳು : ನಿಸ್ತೇಜವಾಗು : ಅಂಬಾಲಿಕಗೂ ಅವನನ್ನು ಕಂಡಾಗ ಕಳವಳದಿಂದ ಮುಖ ಬಿಳುಪೇರಿಬಿಟ್ಟಿತು (ಪಪಭಾ. ೬).
[ಬಿಳುಪು + ಪಱು$_1$ (< ಪಱ್$_1$)]

**ಬಿಳುಮಲ್ಲಿಗೆ** (ನಾ). ಒಂದು ಬಗೆಯ ಬತ್ತ : ಸೋಮಶಾಲಿಯ ಬಿಳುಮಲ್ಲಿಗೆ ಕೆಂಬೂತಿ ಹೇಮವರ್ಣದ . . . ಪುಷ್ಪಮಂಜರಿಯ ಸನಾಮದ ತೆನೆಗಳೊಪ್ಪಿಹವು (ಕಂಪರಿ. ೩-೬೯). [?]

**ಬಿಳುವ** (ನಾ). ಹಲಸಿನಲ್ಲಿ ಒಂದು ಬಗೆ : ಹಲಸಿನ ಹಣ್ಣಿನ ಮಹಾಗಾತ್ರವನ್ನು ನೋಡಿ ಅಜ್ಜೀಸಾಬು ಕೇಳಿದನು "ಬಿಳುವನೋ ? ಬಕ್ಕೆಯೋ ?" (ಮುಳಿಮ. ೯೩೦). [?]

**ಬಿಳಿಯ** 'ಪೀಳಿಯ' ನೋ.

**ಬಿಳ್ಕೆ** 'ಬಿಱ್ಕೆ' ನೋ.

**ಬಿಳ್ತು** 'ಬಿಱ್ತು' ನೋ.

**ಬಿಳ್ಪು** 'ಬಿಳುಪು' ನೋ.

**ಬಿಳ್ಳ** (ನಾ). ಒಂದು ವಂಶದ ಹೆಸರು (?) : ಬಿಳ್ಳರ ಪೋಚರಸರುಂ ಅಳ್ವನ್ದು ಈ ಸಾಸನ ಸಿವಜಿಗ್ಗೆ ಬಿಟ್ಟು (ಎಕ. VII. ಶಿಕಾ. ೯೬-೨೯; ೪15).
[?]

**ಬಿಳ್ಳಂಬಿ** 'ಬಿಳಿಂಬಿ' ನೋ.

**ಬಿಱ್$_1$** 'ಬಿಱು$_2$' ನೋ.

**ಬಿಱ್$_2$** (ನಾ). (?) : ಅಬ್ಬರಕ್ಕೆ ಬಸಿಱುಬ್ಬರಿಸೆ ಬಿಱಿಯಂ ಕೊಂಡು ಬಿಱುವರಿವ ಬೀಱುಗರುಮಂ . . . ಕಂಡು (ಲೀಲಾವ. ೩-೦೦೯ ವ). [?]

**ಬಿಱ್ಗೆಂಡ** (ನಾ). ದಪ್ಪವಾದ ಕೆಂಡ : ಅರಲೆಯೊಡ್ಡಿನ ಮೇಲೆಱೆದು ಕಱೆವ ಬಲುಬಿಱ್ಗೆಂಡದ ಮಳೆಯಾಯ್ತು (ಶೇಖಸಂ. ೭೯-೬೩).
[ಬಿಱ್$_1$(<ಬೆಟ್ಟಿತು) + ಕೆಂಡ]

**ಬಿಱ್ನೋಟ** 'ಬಿಱುನೋಟ' ನೋ.

**ಬಿಱ್ಪಿಡಿ** (ಕ್ರಿ). ದೃಢವಾಗಿ ಹಿಡಿ : ಬಲವಾಗಿ ಹಿಡಿ : ಅಹಂಕಾರ ತೋಱಿದಂತೆ ಬಿಱ್ಪಿಡಿದಲೆವುತ್ತಿಪ್ಪುದಮ್ಮ (ಶಿವಗೀ. ೦೬೦-೭೯೯ ವಚನ).
[ಬಿಱ್$_1$ (< ಬೆಟ್ಟಿತು) + ಪಿಡಿ$_1$]

**ಬಿಱ್ಬಿಗಿ** (ಕ್ರಿ). ದೃಢವಾಗಿ ಬಿಗಿ ; ಬಲವಾದ ಕಟ್ಟುಹಾಕು : ಎಂಟು ತೊಡಕಿನ ನೇಣಿನಲಿ ಬಿಱ್ಬಿಗಿದರಮ್ಮ (ಶಿವಗೀ. ೦೩೬-೭೯೯ ವಚನ).
[ಬಿಱ್$_1$ (< ಬೆಟ್ಟಿತು) + ಬಿಗಿ$_1$]

**ಬಿಱ್ಬಿಱನೆ** 'ಬಿಱುಬಿಱನೆ' ನೋ.

**ಬಿಱ್ಸು** 'ಬಿಱುಸು' ನೋ.

**ಬಿಱು$_1$** 'ಬೆಱ್' ನೋ.

**ಬಿಱು$_2$**, ಬಿರಿ$_3$, ಬಿರು$_1$, ಬಿಱ್$_1$, ಬೆಟ್ಟು$_4$ (ಸಪೂರೂ). 'ಬೆಟ್ಟಿತು' ಎಂಬ ನಾಮಂಪದಕ್ಕೆ ಸಮಾಸಗಳಲ್ಲಿ ಬರುವ ಆದೇಶರೂಪ : "ಬಿಱುವೆಂದು ಬೆಟ್ಟಿತು" (ಶಶಾ. ೬೨-೩೯೬) : "ಬಿಱುವೆಂಬುದು ಬೆಟ್ಟಿತರ್ಕ" (ಶಮುದ. ೦೬೯). 'ಬಿಱುಗತ್ತಲೆ'. 'ಬಿಱುಬಿಮ್ಮು' ಪರಾ. ಬಿರಿ$_3$ : 'ಬಿರಿಗಲ್ಲು' ಪರಾ. ಬಿರು$_1$ : "ಬಿರುವೆನೆ ಕಠಿಣವಾಕ್ಯಂ" (ಶಬ. ೬೯). 'ಬಿರುಗಣ್ಣು' ಪರಾ. ಬಿಱ್$_1$: 'ಬಿಱ್ಗೆಂಡ' ಪರಾ. ಬೆಟ್ಟು$_4$: 'ಬೆಟ್ಟುಬ್ಬಸ', 'ಬೆಟ್ಟುವೊಲೆ' ಪರಾ. [< ಬೆಟ್ಟಿತು]

**ಬಿಱು$_3$**, ಬಿರು$_2$ (ಸಪೂರೂ). 'ಬಿಱುಸು' ಎಂಬ ನಾಮಪದಕ್ಕೆ ಸಮಾಸಗಳಲ್ಲಿ ಬರುವ ಆದೇಶರೂಪ : 'ಬಿಱುಕೆರಳ್', 'ಬಿಱುಗಾಳಿ' ಪರಾ. ಬಿರು$_2$ : 'ಬಿರುಗಾಮರ್ಳೆ'. 'ಬಿರುಗೂದಲು' ಪರಾ.
[< ಬಿಱುಸು]

**ಬಿಱುಕೆರಳ್** (ಕ್ರಿ). ತೀವ್ರವಾಗಿ ಕೋಪಗೊಳ್ಳು: ಆ ತೆಱನ ಬಿಱುಕೆರಳ್ದು ಱುಬು ಟೈಫೋನ ಎರ್ದೆಯಿಂದೆ ಕೊಟ್ಟುದಿದು ಉಕರ್ಜಿವುದು. (ಶ್ರೀರಾ. ೨೦-೯೨೬). [ಬಿಱು$_3$ (< ಬಿಱುಸು) + ಕೆರಳ್ (<ಕೆಳರ್)]

**ಬಿಱುಗತ್ತಲೆ**, ಬಿರುಗತ್ತಲು (ನಾ). ಗಾಢವಾದ ಕತ್ತಲೆ : ಕಗ್ಗತ್ತಲೆ : ಹಾಲಿಯ ಹುಲ್ಲಿಯ ನೇಹ ಬಿಱುಗತ್ತಲೆಯ ಬೆಳಗಿಸ ಪ್ರೈತ್ರಿ . . . ಇರ್ದುದು ಬಸದೊಳಾ ಮುನಿಯ (ಕೂರಲಾ. ೦-೫-೯೩). **ಬಿರುಗತ್ತಲು :** ಅಸಿತರೊಳೆ ಬಿರುಗತ್ತಲೊಂದು ಬಾನೆಲ್ಲವ ಬಾಸಣಿಸಿ (ಗೂಲ್ಕಾ. ೦೦೨-೩೦೫). [ಬಿಱು$_2$(ಬೆಟ್ಟಿತು) + ಕತ್ತಲೆ$_1$ (<ಕಱ್ತಲೆ)]

**ಬಿಱುಗಲ್**, ಬಿರಿಗಲ್ಲು. ಬಿಱುಗಲ್ಲು (ನಾ). ದಪ್ಪವಾದ ಕಲ್ಲು : ಕಲಿಪಾರ್ಥಂ ಧನುವಿಂದೆ ಪೊಯ್ದಂ . . . ಮಹಾಬಲಸಾಂಖ್ಯಂ ಬಿಱುಗಲಿಂದೆ ಬಿಡದಿಟ್ಟಂ (ಪ್ರಕಬಿ. ೯-೦೦೬). **ಬಿರಿಗಲ್ಲು :** ಕರೆಸಿದರು ಹುಡಿಗಲ್ಲು ಸಿಡುಗಲ್ಲು ಬಡಿಗಲ್ಲು . . . ಬಿರಿಗಲ್ಲುಗಳನು (ಪಪಶೋ. ೩೩-೩೩) ; ಗುಡ್ಡದ ಬಿರಿಗಲ್ಲ ಹುಡುಹುಡುಕುತ ಬಂದ ಧರಗೆ ಶಿವಲಿಂಗಪೂಜೆಗೆ ಕೊರೆದ (ಬಸಗೀ. ೯೩). **ಬಿಱುಗಲ್ಲು :** ಹೇಱುವ ಬಿಱುಗಲ್ಲು ಬಳದಡಿ ವರಶಕ್ತಿ ಪಾಱುಂಬಳೆ ಶೂಲದಿಂದೆ ಪಱುಗಾಣಿಸಿ . . . ಗಾಱುಮಾಡಿದರು (ವೋಹಕ. ೩೯-೨೩). [ಬಿಱು$_2$ (< ಬೆಟ್ಟಿತು) + ಕಲ್$_3$]

**ಬಿಱುಗಲ್ಲು** 'ಬಿಱುಗಲ್' ನೋ.

**ಬಿಱುಗಹಳೆ** (ನಾ). ಜೋರಾಗಿ ಸದ್ದು ಮಾಡುವ ಕಹಳೆ : ಬಹಳಶಂಖಧ್ವನಿಗುಡಲು ಬಿಱುಗಹಳೆಗಳು ಪರಸಮಯಕಾನನದಹನವೆನುತಂ ಮೊಱೆಯಲು (ಏಕಪು. ೫೦-೦೬). [ಬಿಱು$_3$ (< ಬಿಱುಸು) + ಕಹಳೆ]

**ಬಿಱುಗಾಣ್ಕೆ** (ನಾ). ಕ್ರೂರವಾದ ನೋಟ ; ಘೋರದೃಶ್ಯ : ಸಾಲ್ದುಮಿ ಬಿಱುಗಾಣ್ಕೆ. ಮುಚ್ಚಿಂ. ಮುಚ್ಚಿಂ (ಅಶ್ವಕಾ. ೯೦-೬೯೦).
[ಬಿಱು$_2$ (<ಬೆಟ್ಟಿತು) + ಕಾಣ್ಕೆ]

**ಬಿಱುಗಾಳಿ**, ಬಿರುಗಾಳಿ (ನಾ). ಬಿರುಸಾಗಿ ಬೀಸುವ ಗಾಳಿ ; ಚಂಡಮಾರುತ : ಬಿಱುಗಾಳಿ ದೂಳಿಗಳನಾಗಿಸಿ ಬಾಧಿಸಿದತ್ತು ತಪ್ಪಳಂ (ವರ್ಧಪು. ೦೫-೩೯); ಬಂದೊಂದು ಬಿಱುಗಾಳಿ ಬೀಸಿತ್ತು (ಅಂರ. ದೇ. ೦೬೬-೦೬) ; ಜಡಿವ ತುಂತುರ್ವನಿಗಳನು ಬಿಱುಗಾಳಿ ಮೊಗೆವವೊಲನಿತು ಸೆಲ್ಲಿಹ ಶರವಳೆಯ ಗದೆಯಿಂದ ಘಟ್ಟಿಸಿದ (ಕುವ್ಯಾಗ. ೦-೫೫). **ಬಿರುಗಾಳಿ :** ನಿನ್ನನೀ ನಿನ್ನ ಪಡೆವೆರಸಿ ಬಿರುಗಾಳಿ ತರಗೆಲೆಯನೊದೆದಟ್ಟುವಂತೆಬ್ಬಿ (ಶಶಾಂಗ. ೬೯-೨೦೬೯); ಬಿರುಗಾಳಿ ನೌಕೆಯನ್ನು ಎಳೆದೊಯ್ಯುವಂತೆ ವಿಷಯಗಳು ಮಾನವಬುದ್ಧಿಯನ್ನು ಎಳೆದೊಯ್ಯುತ್ತವೆ (ಧರ್ಮಶಾ. ೦೩೦).
[ಬಿಱು$_3$ (< ಬಿಱುಸು) + ಗಾಳಿ$_1$]

**ಬಿಱುಗಿಡಿ** (ನಾ). ಉಗ್ರವಾದ ಕಿಡಿ : ಅಳವಿಗೊಟ್ಟುದು ಮತ್ತೆ ಕೌರವಬಲಪಯೋನಿಧಿ ವೈರಿಬಡಬನ ಬಿಲು ಸರಳು ಬಿಱುಗಿಡಿಯಲೌಕಿತು ಚಾತುರಂಗದಲಿ (ಕುಮ್ಯಾದ್ರೋ. ೬-೩). [ಬಿಱು$_2$ (<ಬೆಟ್ಟಿತು) + ಕಿಡಿ]

**ಬಿಱುಗುಟ್ಟು**, ಬಿರುಗುಟ್ಟು (ಕ್ರಿ). ಬಿರುಸಾಗಿ ಮೊರೆ ; ಜೋರಾಗಿ ಶಬ್ದ ಮಾಡು : ಬಿಱುಗುಟ್ಟುತಾ ಬಾಣ ಪೋಗಿ ಮಾಗಧನಿದ್ದ

ಹೊಱಗಣೋಲಗದ ಶಾಲೆಯೊಳು ನಿಱಿಸಿದ ಕಂಭಕ ತೊಟ್ಟನೆ ನೆಟ್ಟಿತು (ಶಠಕ. ೨೪-೩೯). **ಬಿರುಗುಟ್ಟು :** ತೊಟ್ಟು ಪಾಗಿದ ಫಲನಿಚಯು ಬಿರುಗುಟ್ಟುವನಿಲೋದ್ಧತಿಗುದುರುವೋಲ್ . . . ಯಾದವವೀರರಲ್ಲಿ ತಟ್ಟನುರುಳಿದರನಿಲಜನ ಗದೆಯುಟ್ಟುಳಿಗೆ (ಕೋಗಯು. ೨೪-೨೭).

[ಬಿಱು$_3$ (<ಬಿಱುಸು) + ಕುಟ್ಟು$_1$]

**ಬಿಱುಗೊಳ್** (ಕ್ರಿ). ಒರಟಾಗಿ ವರ್ತಿಸು ; ಅಂಕೆಗೆ ಒಳಗಾಗದಿರು : ಈ ತುರಂಗಮಾ ಕುದುರೆಯುಂ ಕಾಣುತುಂ ಧ್ವನಿಗೈದು . . . ಮಾಣಿಕ್ಯ ಮುಕ್ತಾಳಿಗಳ ಭೂಷಣಂಗಳಂ ಪಱಿದಿಕ್ಕಿ ಬಿಱುಗೊಂಡವು (ಜೈಮಿಭಾ. ೨೫-೮).

[ಬಿಱು$_3$ (<ಬಿಱುಸು) + ಕೊಳ್$_1$ (<ಕೊಳ್$_1$)]

**ಬಿಱುಗೋಲ್**, ಬಿಱುಗೋಲು (ನಾ). ತೀಕ್ಷ್ಣವಾದ ಬಾಣ : ಘನ ಮೇಘಾಳಿ ಸುರಿದವೊ ಮಳೆಯನೆನೆ ಬಿಱುಗೋಲ ಸೈವಳೆಗಱಿದರುಭಯದ ಜೋದರವಗಡಿಸಿ (ಕುವ್ಯಾಶೀ. ೪-೯೪). **ಬಿಱುಗೋಲು :** ತೋರಹತ್ತದಲಿ ಬೀಱಿದ ಬಿಱುಗೋಲುಗಳೆಂಬ ನಟ್ಟೆಯನೂಱಿದನೀಗ್ಯೆಗಡೆಗೆ (ತೋಹಕ. ೩೯-೯೭). [ಬಿಱು$_3$ (<ಬಿಱುಸು) + ಕೋಲ್$_1$]

**ಬಿಱುಗೋಲು** 'ಬಿಱುಗೋಲ್' ನೋ.

**ಬಿಱುದನಿ,** ಬಿರುದನಿ (ನಾ). ಬಿರುಸಾದ ಧ್ವನಿ ; ಕರ್ಕಶಸ್ವರ : ಉರುಗಂಭೀರಭೇರಿಯು ಬಿಱುದನಿಗಳುಬ್ಬರಿಸಿದವು (ಕುವ್ಯಾದ್ರೋ. ೦೪-೩೭); ಬಿಱುದನಿಯ ಬೊಬ್ಬೆಗಳ ಲಗ್ಗೆಯ ಹಱಿಯನೊಡೆಬಡಿದು (ಕೂರಾ. ೬-೦೦-೦೫). **ಬಿರುದನಿ :** ಪಾಮರಿಯ ಬಿರುದನಿಗೆ ಕೈಪರೆಗೆ ಬಾಯ್ಬುರೆಗೆ ಕಲ್ಗವಣೆಗೊಂಧಿನಿತು ಪೆಳರಿ (ತತ್ಕಾಂಗ. ೫೩-೦೪೫೦).

[ಬಿಱು$_3$ (< ಬಿಱುಸು) + ದನಿ$_1$]

**ಬಿಱುದೇಗು** (ಕ್ರಿ). ರಭಸವಾಗಿ ತೇಗು : ಧಾರುಣೀಶರು ಮಡಿದರೊಂದೇ ಸಾರಿಗೆಯುಲ್ಲೆನೂಱು . . . ಮಾರಿ ಬಿಱುದೇಗಿದಳು (ಕುವ್ಯಾದ್ರೋ. ೦೮-೫೦). [ಬಿಱು$_3$ (<ಬಿಱುಸು) + ತೇಗು$_1$]

**ಬಿಱುನಗು** (ಕ್ರಿ). ಜೋರಾಗಿ ನಗು ; ಅಟ್ಟಹಾಸ ಮಾಡು : ರಾಜ ವಿನೋದಂ ಬಿಱುನಕ್ಕು ನಕ್ಕು ಕುಕಿಲುತ್ತುಂ (ರಸರ. ೨-೯೮).

[ಬಿಱು$_3$ (<ಬಿಱುಸು) + ನಗು$_1$]

**ಬಿಱುನಗೆ,** ಬಿರುನಗೆ (ನಾ). ಜೋರಾದ ನಗು ; ಅಟ್ಟಹಾಸ : ಕೇಳಿ ಕೆದಱಿದ ಬಿಱು[ಪಾಠಾಂ. ಕಡು]ನಗೆಯುಲಡಬೀಳುತೇಳುತ . . . ಸೂಳುನಗೆ ಬೆಳುನಗೆಯುಲಡಿಗಡಿಗಾಳುಮುಳುಗುಬ್ಬಸದಲಿದ್ದು (ಕುವ್ಯಾಕ. ೬೦೨. ೨-೯೫); ಅರೆನಗೆಯು ಬಿಱುನಗೆಯು ನಗೆಗಳ ಹೊರಳಿಗಳಲಡಬಿದ್ದು (ಕೂರಾ. ೦-೦೫-೮). **ಬಿರುನಗೆ :** ಆತನ ಉಚ್ಛ್ವೇಷವನ್ನು ಹಾರಿಸಿ ಬಿಸುಟು ತಿರಸ್ಕೃತಿಯು ಬಿರುನಗೆಯುನ್ನು ಬೆಳಗಿ (ಬರುಗಂ. ೩೨-೪).

[ಬಿಱು$_3$ (<ಬಿಱುಸು) + ನಗೆ]

**ಬಿಱುನಡೆ** (ನಾ). ರಭಸವಾದ ನಡಗೆ ; ಬಿರುಸಾದ ನಡೆ : ಪರಿಕಿಸದೆ ನಡೆವ ಬಿಱುನಡೆಯ ಪದಹತಿಗಳಿವ ಪಲತೆಱದ ಜೀವಿಗಳಿಗೆ ಪಿಮೋಕ್ಷಂ ದೊರೆವುದು (ಬಸಪು. ೩೪-೩೭). [ಬಿಱು$_3$ (<ಬಿಱುಸು) + ನಡೆ$_2$]

**ಬಿಱುನಾಲಿಗೆ** (ನಾ). ಕಟುವಾದ ಮಾತುಗಳನ್ನಾಡುವ ನಾಲಗೆ : ಪೌರ ಜನ ಜಾಳಿಸುವ ಕಂಬನಿಗಳಲಿ ಬಿಱುನಾಲಿಗೆಯು ಬೈಗುಳಲಿ ಮುನಿಯುನು ಕೀಳುನುಡಿಯುಲಿ ಜಱಿವುತಿರ್ದುದು (ಕೂರಾ. ೦-೯-೪೩).

[ಬಿಱು$_3$ (<ಬಿಱುಸು) + ನಾಲಿಗೆ (<ನಾಲಗೆ)]

**ಬಿಱುನುಡಿ,** ಬಿರುನುಡಿ (ನಾ). ಕಠಿಣವಾದ ಮಾತು ; ಚುಚ್ಚುಮಾತು; ಕಟಕಿ : ಎಲ್ಲಾ ಮದವ ಸೇವಿಸುತ್ತ ಅಱಿಯದ ಮದವನೊಂದು ನುಡಿದಡೆ ಬಿಱುನುಡಿಯೆಂದೆಂಬರು (ಕಳಪ. III, ೩೪೫-೬೪೯) ; ಶಲ್ಯನ ಬಿಱುನುಡಿಗೆ ಬೆಚ್ಚದೆ . . . ಬಿನ್ನವಿಸಿದನು (ಕುವ್ಯಾಕ. ೫-೦೮) ; ಹೀನಪಮಾನವರ ಬಿಱುನುಡಿಗೆ ತತ್ವದ ಜ್ಞಾನಿಯುಂಜುವನೆ (ಸರ್ವಜ್ಞ. ೩೮೩). **ಬಿರುನುಡಿ :** ಪದಮುಖಿಯು . . . ಮಾರುತಾತ್ಮಜನ ಬೆದರಿಸಿದಳೇನೆಂಬೆ ಕಾಮರ್ಗಲ ಬರಸಿಡಿಲ ಪೋಲ್ವ ಬಿರುನುಡಿಗಳಿಂದ (ಪಂಕಾರಾ. ೫-೩-೫) ; ತನ್ನನು ಹೊಗಳನು ಹೆರರನು ತೆಗಳನು ಆಡನು ಬಿರುನುಡಿಗಳನು . . . ಕರುಣನು ಸಭ್ಯನಾದವನು (ಇಂಪಾಕ. ೬೭-೨೪). [ಬಿಱು$_3$ (<ಬಿಱುಸು) + ನುಡಿ$_2$]

**ಬಿಱುನುಡಿಗೇಳ್** (ಕ್ರಿ). ಬಿರುಸಾದ ಮಾತನ್ನು ಕೇಳು ; ಕಠೋರವಾದ ನುಡಿಯನ್ನು ಆಲಿಸು : ಬಂದಳು ಭಾಮಿನಿ ರನ್ನೆ ನಿನ್ನೊಳಗೇನೆಂದಳು ಬಿಱುನುಡಿಗೇಳ್ದು (ಮೋಹತ. ೦೦-೩೩). [ಬಿಱುನುಡಿ + ಕೇಳ್]

**ಬಿಱುನೋಟ,** ಬಿರುನೋಟ, ಬಿಱಿನೋಟ (ನಾ). ಬಿರುಸಾದ ನೋಟ ; ತೀಕ್ಷ್ಣವಾದ ದೃಷ್ಟಿ : ಬೆಳುನೋಟವಾದಾಗ ಬಿಱುನೋಟವಾದಾಗ . . . ಓರೆನೋಟವಾದಾಗ (ಶಠಕ. ೦೦-೩೦); ಹಾಲು ಇಲ್ಲದ ಊಟ ಬಾಲೆಯರ ಬಿಱುನೋಟ . . . ಕಂಗಳನ ಕೋಲು ಕಳೆದಂತೆ (ಸರ್ವಜ್ಞ. ೦೫೩೭). **ಬಿರುನೋಟ :** ತನ್ನ ಗೆಡ್ಡೆಗಣ್ಣುಗಳಿಂದ ಬಿರುನೋಟವನ್ನು ಬೀರುತ್ತ . . . ಮುಂದೆ ಬಂದನು (ವಕಣ. ೩೮); ಅವನು ನನ್ನ ಕಡೆಗೊಮ್ಮೆ ಬಿರುನೋಟ ಬೀರಿದ (ಅಲಹೂ. ೫೭). **ಬಿಱಿನೋಟ :** ಕಿಱಿನೋಟ ವಿಟನಿಂಗೆ ಅರೆನೋಟ ವಿದೂಷಕಗೆ . . . ಪೀಠಮರ್ದನಗೆ ಬಿಱಿನೋಟ (ಸರ್ವಜ್ಞ. ೦೬೩೨).

[ಬಿಱು$_3$ (< ಬಿಱುಸು) + ನೋಟ]

**ಬಿಱುಬ,** ಬಿರುಬ (ನಾ). ಕಠಿಣಮನಸ್ಸಿನವನು ; ಕ್ರೂರಿ : ಅಱಿವು ಸಂಪನ್ನರಲ್ಲಿ ಇದಿರೆಡೆಯುಡಗಬೇಕಲ್ಲದೆ ಬಱಿ ಕಾಯುದ ದರುಶನ ಬಿಱುಬರಲ್ಲಿ ಉಂಟೇ ನೆಱಿಯಱಿವಿನ ಹೊಲಬು (ಸರ್ವವ. ೫೭-೩೦೦) ; ಇಂದುಧರನು ವೋಲಗದಿ ಕುಳ್ಳಿರೆ ಗಿರಿನಂದನೆ ಸಹಿತ ಸಂತಸದಿ ನಂದೀಶನು ಬರೆ ಬಿಱುಬ ಗಣೇಶನು ನಿಂದಿಸಿ ನಿಲಿಸೆ ಬಾಗಿಲಲಿ (ಬಸಕ ೦-೨೭). **ಬಿರುಬ :** ಎಲ್ಲರು ಭಯಭಕ್ತಿ ಜಂಗಮದಾಸೋಹಿಗಳಲ್ಲದೆ ಬಿರುಬರಲ್ಲಿಲ್ಲ (ಮಾದೇಶಾಂ. ೦-೩೭).

[ಬಿಱುಬು + — ಅ$_7$]

**ಬಿಱುಬಿದ್ದ** (ನಾ). ಬಿರುಸಾದ ಏಟಿನಿಂದಾದ ವ್ರಣ ; ದೊಡ್ಡಗಾಯ : ಬೆಟ್ಟಿತರ್ಕೆ ಬಿಱು ಎಂದು . . . ಆದೇಶಮಕ್ಕುಂ . . . ಬಿಱುವೊಯಲ್, ಬಿಱುಬಿದ್ದಂ (ಶಮತ. ೦೮೪ ವೃಯೋ). [ಬಿಱು$_2$ (< ಬೆಟ್ಟಿತು) + ಬಿದ್ದ$_2$]

**ಬಿಱುಬಿದ್ದಂಬೋಗು** (ಕ್ರಿ). ದೊಡ್ಡಗಾಯವನ್ನು ಹೊಂದು ; ತೀವ್ರವಾದ ವ್ರಣವನ್ನು ಹೊಂದು : ಪೊಯ್ದು ಪೊಯ್ದಂಗಯ್ಯುಂ ಮೊಗಮುಂ ಮುಸುಂಬು ಬಿಱುಬಿದ್ದಂಬೋಗೆ ವೀರಂಗೆ ದೋರ್ಭಂಗಂ ಮಾಡಿದಂ (ಪಂಪಾಪು. ೮-೨೯). [ಬಿಱುಬಿದ್ದ + ಪೋಗು$_1$(<ಪೋ$_1$)]

**ಬಿಱುಬಿಮ್ಮು** (ನಾ). ಅಧಿಕವಾದ ಗರ್ವ.—ಅಹಂಕಾರ : ಉಪ್ಪರದ ಕೈಮನವ ಕಬಳಿಸಿ ತೆಱಹು ಬಿಱುಬಿಮ್ಮಿನಲಿ ಬಗಿದುದು ತೆಗೆದಬ್ಬರ ಘಾಯಘಾತಿಗಳು (ಕುವ್ಯಾಗ. ೬-೨೯). [ಬಿಱು$_2$ (<ಬೆಟ್ಟಿತು)+ಬಿಮ್ಮು$_1$]

**ಬಿಱುಬಿಸಿಲು** 'ಬಿಱುವಿಸಿಲ್' ನೋ.

**ಬಿಱುಬಿಱನೆ,** ಬಿಱಿಬಿಱನೆ (ಅ). ಬಿರುಸಾಗಿ; ತೀಕ್ಷ್ಣವಾಗಿ : ಬಿಱುಬಿಱನೆ ಕಂಗಳಂ ಬಿಟ್ಟು ಪಲ್ಲಂ ಕಿರಿದುವುಱುಗಿಸುತೆ ಮೊಗಮುಂ . . . ಭೃಂಗಿ . . . ಎಸೆದಿರ್ದನು (ತಂಪು. ೨-೨೭). **ಬಿಱಿಬಿಱನೆ :** ಬಿಱಿಬಿಱನೆ ಕಣ್ಬಿಡುತ ಬಿಂಕದಲಿ ಲಂಕೆಯನು ಸುರಸುರನೆ ಬಾಲದಲಿ ಸುಟ್ಟು ರಣಧಿಟ್ಟು (ಪಾರಿಕೀ. ೨೮-೨). [<ಬಿಱುಸು + — ಅನೆ$_1$]

**ಬಿಱುಬು,** ಬಿರುಬು, ಬಿಱುಹು(ನಾ). ೧. ಬಿರುಸು; ತೀಕ್ಷ್ಣತೆ; ಉಗ್ರತೆ : "ಬಿಱುಬುಂ ತಾಂ ಬೆಟ್ಟಿತಕ್ಕು" (ಶಬ್ದಮ. ೨೨೨) ; ಮುನಿಯ ಕೋಪದ ಕಿಚ್ಚಿನುಬ್ಬರದ ಬಿಱುಬನಱಿದು (ಹಕಾ. ೬-೦೯) ; ಅಂಟಿನಂದದ ಸ್ನೇಹ ಬಿಱುಬಿನಂದದ ಕೋಪವುಂಟಾದವರನು ಕೆತ್ತುವುದು (ಶಠಕ. ೬೮-೩೪). ೨. ರಭಸ ; ತೀವ್ರತೆ : ಬಿಱುಬಿಂದಂ ಬೀಸೆ ಗದೆಯ ಗಾಳಿಯು ಕೋಟಱಿಚ್ಚಱಿಸಿದುದು ಭೀಮನಂ (ಗದಾಯು. ೬-೩೨) ; ಆ ಪಡೆಯ ಱಿಱುಬಂ

**ಬಿಱುಹೊಯ್ಲು** 'ಬಿಜ್ಜೊಣ್ಣೆಯಲ್' ನೋ.

**ಬಿಱ್ಱನೆ**, ಬಿರ್‍ರನೆ (ಅ). ಬಲವಾಗಿ ; ಬಿರುಸಾಗಿ : ಮತ್ಸ್ಯಮಕರಸಿಂಹವ್ಯಾಘ್ರಾದಿಪತಾಕಾನೀಕದೊಳಂ ದೆಸೆಗೆ ಬೆಸೆದು ಬಿಱ್ಱನೆ ಬಿಗುವ ಪೊಸಸಿರಿವಂತನಂತೆ (ಶಾಂತಿಪು. ೧೦-೨೦ ವ): ಸಜ್ಜನೆ ಹಱಿತಂದು ಬಿಜ್ಜನೆ ಕಲ್ಲಿಲಿಡುವುದಿದಾವ ಪೂಜೆಯೊಳಗು (ವಚನ. I, ೩೬೦). **ಬಿರ್‍ರನೆ** : ಸಲ್ಲದು . . . ಸಿಡಿಲ್ಗೆ ಸಾಟಿಯೆನೆ ಬಿರ್‍ರನೆ ಬೀಳ್ವ ಭವ್ಯಚ್ಛೀಮುಖಂ (ಕಾಕಂಠ. ೫-೦೦); ಬಿರ್‍ರನೇ ಬೀಸುವ ಬಿರುಗಾಳಿಯು ಗಿಡವನ್ನು ಬೇರುಸಹಿತ ಕಿತ್ತು ಹಾಕುವಂತೆ, ಕಾಮದೇವನು . . . ಕೊಲ್ಲುವನು (ಬ್ರಹ್ಮಪೀ. ೦೨೬).

[< ಬಿಱುಸು + – ಅನೆ₁]

**ಬಿಟಲ್** 'ಬೀಟಿಲ್' ನೋ.

**ಬಿಟಲು** 'ಬೀಟಿಲ್' ನೋ.

**ಬಿಟವೃತ್ತಿ** 'ಬೀಟಿವೃತ್ತಿ' ನೋ.

**ಬಿಟಾದೆ** (ನಾ). ಒಂದು ಸ್ಥಳದ ಹೆಸರು (?) : ಆವಜಿಗ್ಗ ವಂಶೋತ್ಪತ್ತಿಯಾಗೆ ದಾಯಗೊಟ್ಟುದು ಮದೆಗೂಟುಮ್ಬುಟಾದೆಯು (ಎಕ. X, ಶ್ರೀನಿವಾ. ೬-೦೦; ಸು. 780). [?]

**ಬಿಟಿಲ್** 'ಬೀಳಿಲ್' ನೋ.

**ಬಿಟ್ಕ**, **ಬಿಕ್ಕ₁**, **ಬಿಳ್ಕ** (ನಾ). ೧. ಒಂದು ಬಗೆಯ ಕಾಡುಮರ ಮತ್ತು ಅದರ ಹಣ್ಣು : "ಬಿಟ್ಕ=ಒಂದು ಮರಂ" (ಶಮದ. ಶಂ. ೦); "ಬಿಟ್ಕಿಯೆನಲೊಂದು ವೃಕ್ಷಂ" (ಸಂಕೀವ. ೬); ಬೇರಂ ಬಿಟ್ಕಿಯನೆ ತಿಂದ ದೆವಸದೊಳಟ್ಕಾಡಿದ ಬೇರಮಿಗಳೇಂ ಪೊಸತಾಯ್ತೋ (ಶಂಕಭಾ. ೦೨-೦೭೮); ಏಕಾಕಿ(ನಿ)ಯಾಗಿ ವನವಂ ಪೊಕ್ಕು ಬೇರಂ ಬಿಟ್ಕಿಯುಮಂ ತಿಂದಿರಲ್ (ಜೀಬಪು. ೦೯-೧೨೭ ವ). **ಬಿಕ್ಕ₁** : ೧. ಸಿರಿಸಂ ಸೀರೆ ಬೆಳಲ್ಲವಂಗಮೆಲವಂ ಬಳ್ಳಾಲೆರಂ ಬಿಕ್ಕ (ಕಾವ್ಯಸಾ. ೦೦೯೦ ಕೂದ್ರಕ); ಬಿಕ್ಕಯಂ ಬೇರುಮನುಂಡಡವಿಯೊಳಗಿರ್ಪ ಮುನಿಗಳ ನಡೆವಳಿಯೆತ್ತೆತ್ತ ಯುವತಿಜನದನುರಾಗಂ (ಕಾದಂಪೂ. ೬೧೮) ; ವನದಲಿ ಬೇವು ಬಿಕ್ಕಯನಱಿಸಿ ತೊಳಲಿದು ಸಾಲದೇ ಹದಿಮೂಱು ವತ್ಸರದಿ (ಕುವ್ಯಾವಿ. ೯-೯೦). ೨. ಒಂದು ಬಗೆಯ ಮರ ಮತ್ತು ಅದರ ಹಣ್ಣು; ಸೀಬೆ : ತುಮಕೂರಿನ ಸುತ್ತಮುತ್ತಲಲ್ಲಿ ಸೀಬೆಹಣ್ಣಿಗೆ ಬಿಕ್ಕಿ ಎನ್ನುತ್ತಾರೆ (ರೂಢಿ). **ಬಿಳ್ಕ** : ೧. ಬಿಳ್ಕ ಮುಳ್ತುಗ . . . ಹೊನ್ನೆಯ ತರುಗಳ್ (ಹರಿವ್ಯಾರ. ೯-೬೮) ; ನೆಲೆಯಿಲ್ಲದಲೆದಲೆದು ಬೇರು ಬಿಳ್ಕಯನುಂಡು . . . ಬಳಲುವರ್ ನಾವು ಲೋಗರೆ ದಿಟಂ ! (ಚಕ್ರಾಂಗ. ೦೩-೩೫೦).

**ಬಿಟ್ತು**, **ಬಿತ್ತ**, **ಬಿತ್ತು₂**, **ಬಿಳ್ತು** (ನಾ). ೧. ಬಿತ್ತನೆಗೆ ಉಪಯೋಗಿಸುವ ಕಾಳು ; ಬೀಜ : ಕೆಲವುದಿವಸಕ್ಕು ಬಿಟ್ತು ಪತತ್ರಿಗೋತ್ರಕ್ಕಪವೃತ್ತು ಮೂಡುವಂತೆ ಮೂಡುವುದುಂ (ಶಂತಕಂ. ೨೬೯-೭). ೨. ದಾಳಿಂಬೆ ಮುಂತಾದ ಹಣ್ಣುಗಳೊಳಗೆ ಇರುವ, ತಿನ್ನಬಹುದಾದ ಕಾಳು : ಅಂಬುಜಲೋಚನೆಯ ಪಲ್ಗಳಂ ಪೊಸರಸದಾಳಿಂಬದ ಬಿಟ್ತುಗಳೆನುತುಂ ಚುಂಬಿಸಲಾರ್ಕೆಮದೊಂದು ಮಂಜುಳಕೀರಂ (ಅದ್ಯಟಿ. ೦೦-೫೨); ಬಂಡಿನಲ್ಲರ್ಪುಡಿಯಿಂ ಪೊರೆದ ಪರಮೆವಱಿಯುಂ ಕೋಶದೆಳಬಿಟ್ತುಗೆತ್ತು ಕರ್ದುಂಕಲೆಂದವ್ವಳಿಪ ಬಾಲಹಂಸಂಗಳಿಂ . . . ಸೊಗಯಿಸಿದತ್ತು (ರಾಮಾಶ್ವ. ೫೨-೨೮). **ಬಿತ್ತ**: ೧. ಬದಿರಡಿಯ ಗದ್ದೆ ಅಂತು ನಾಗಂಡುಗದಲೂ ಬಿತ್ತ ಬಿತ್ತುವ ಹತ್ತುಮೂಡೆ ಗದ್ದೆಗೆ (ಶಾಇಇ. IX–ii, ೯೦೫–೦೫; 1372); ಕಾಮನ ಬಿಲ್ಲಿನ ಬಿತ್ತವ ಬಿತ್ತಿ ಬೆಳೆಯಾದಂತಿದೆ ಹೂದೋಟ (ಕೋಗಿಲೆ. ೭೭-೭). **ಬಿತ್ತು₂**: ೧. ಸತ್ಯದ ಬಿತ್ತು ಹುರಿದುದು (ಕುವ್ಯಾಅ. ೨೦-೬೯) ; ಚಿತ್ರಜಕೀರ್ತಿಲತೆಯ ಬಿತ್ತುಗಳವೊಲು ಚಿತ್ರಕಾನಂದವನೀವ ಒತ್ತಿದ ಮುಗುಳುಮಲ್ಲಿಗೆಯ ವಂಗಡವೆಸೆವತ್ತು (ಕುರಾಸಾಂ. ೩-೦೨). ೨. ರಸದಾಡಿಮದ ಬಿತ್ತುಮಂ ಪೊಸಮುತ್ತುಮಂ ಮುಕ್ಕುಳಿಸಿದಂತಪ್ಪ . . . ದಂತಪಂಕ್ತಿಗಳ್ (ಶಂಕಭಾ. ೨-೩೯ )ವ; ಗಿಳಿಗಳ ಗೂಡಿಂದುದಿರ್ವ ದಾಳಿಂಬದ ಬಿತ್ತುಗಳೆನೊಸರ್ವ ತನಿರಸದೇಪದೊಳಂ (ಶಾಂಪು. ೯೬). **ಬಿಳ್ತು** : ೧. ಸಾಮರ್ಥ್ಯದ ಬಿಳ್ತಿನಂತೆ ಸೌಂದರ್ಯದಂಕುರದಂತೆ . . . ಗಿರಿಜಾತೆ . . . ಬಳೆಯುತಿರ್ದಳ್ (ಗಿರಿಕ. ೩-೬೯ ವ): ಪುರ್ಬೆನಿಪ ಗೊಬ್ಬುರವಂ ತಳಿದಲ್ಲಿ ಚೆಲ್ಲಿ ತಾರಗೆಗಳೆನಿಪ್ಪ ಬಿಳ್ತುಗಳಂ . . . ಸುಧಾಮರೀಚಿಜಳಮಂ ಸುರಿದಂ ಸಲೆ ಕಾಲಪಾಮರಂ (ರಾಜಶೇ. ೧೧-೬೮).

[< ಬಿತ್ತು₁. /ತಮಿ. ಮಲ. ವಿತ್ತು; ತುಳು. ಬಿತ್ತ್; ಕೊಡ. ಬಿತ್ತೀ: ತೆಲು. ವಿತ್ತು ; ಕೋತ. ವಿತ್; ತೊದ. ಪೀತ್; ಗದಬ. ವೀತ್]

**ಬಿಟ್ದು₁** ' ಬೀಟ್₁ ' ಪರಾ.

**ಬಿಟ್ದು₂** ' ಬಿರ್ದು₂' ನೋ.

**ಬಿಟ್ಮಣ್ಣು** (ನಾ). ಒಂದು ಬಗೆಯ ತೆರಿಗೆ (?) : ಪಾರ್ವನ ಮಣ್ಗಲ್ಲಿ ಕೊಡಿತೆ ಕಾಯ ಬಿಟ್ಮಣ್ಣುಂ ಅರಸಣ್ಣುಂ ಅಯ್ದೊನ್ದಿ ಒತ್ತೆ ಮಣ್ಣತ್ತು ಪಾದಂತ್ತೆತ್ತುನ್ನೊರ ಬಿಟ್ಟುಂ ಪರಿಯಾರವಾನ್ (ಎಕ. XIV. ತಿರುಮ. ೨೫೩-೭; ಸು. 800). [?]

**ಬೀ**, **ಬೀಗಂ₁**, **ಬೀಯು** (ಕ್ರಿ). ಬೀತ (ಭೂತಕೃ), ಬೀತು (ಭೂತನ್ಯೂ) ೧. ಮುಗಿ;ಕೊನೆಗಾಣು; ತೀರು; ಕಳೆ: "ಬೀತುದೆನಲ್ ಮುಗಿದಿರ್ದುದು" (ಭಾರಿಪ. ೨೯); ಬೀತು ಬರೆ ಮಳೆಗಾಲ . . . ಶೀತಋತುವಂಕುರಿಸೆ (ಸಮ್ಯಕ್ತ್ವ. ೦-೩೦) ; ಬೀತುದು ಮಳೆಗಾಲ ಜಲ ನೆಲೆಗೊಂಡುದು (ಮೋಹತ. ೯-೪೨). ೨. ನಾಶವಾಗು ; ಅಳಿ; ಧ್ವಂಸಗೊಳ್ಳು : ಬೀತುದಿಂದ್ರನ ಬಲುಹು ವಿಗಡನ ವೀತಿಹೋತ್ರನ ವಿಲಗ ತಿದ್ದಿ ವಿಧೂತರಿಪುಬಲ ಬಂದನು (ಕುವ್ಯಾಸ. ೦-೨) ; ನ್ಯಾಯಮುನುಟಿಯದನ್ಯೆಸಿರಿ ಬೀಯದೆ ಬೇಡಿದ ಸುಖಂಗಳಂ ಬೀಱಿಯಪಂಗಾಯುಷ್ಯಂತೆಂಬರಮುನಪಾಯಾಶ್ರಯಮಕ್ಕುಮವನ ಸಂತಾನಕ್ಕಂ (ನೀತಿಮಂ. II, ೬೨). ೩. ಇಲ್ಲವಾಗು ; ಮರೆಯಾಗು ; ಮಾಯವಾಗು : ದಯೆ ದಾಂಟಿ ನೀತಿ ಬೀತು . . . ಕೆಡಿಸದೆ ಮಾಣೆನೆಂದು ಗರ್ಜಿಸುವ ಕೌಶಿಕನ ಹೂಂಕಾರದಿಂದೊಗೆದರಿಬ್ಬರು ಸತಿಯರು (ಹಕಾ. ೭-೦); ಘಾಸಿಯಾದೆನು ಮಗನ ಮೇಲಿನ್ನಾಸೆ ಬೀತುದು (ಕುವ್ಯಾದ್ರೋ. ೧-೬); ಆಸೆ ಬೀತುದೆನ್ನುವ ಜಂಭದ ಸಂನ್ಯಾಸಿ ಇತ್ತ ಬರದಿರೆ ಲೇಸು (ನವರಾ. V. ೩೦). ೪. ಮರಣಹೊಂದು ; ಸಾಯು : " ಬೀ—ಅಪಸಾನೇ " (ಶಮದಾ). ೫. ಆರು ; ನಂದು : ಹೊಗೆ ಸುತ್ತಿ ಸುಳಿಯುತಿರೆ ಅದರಾಳದೊಳಗೆಲ್ಲೊ ಬೀತ ಕಿಡಿಯೊಲು ಹೂತ ಮಾಸು ನೆನಪು (ನಡಬಂ. ೪೨-೬). ೬. ನಿವಾರಣೆಯಾಗು ; ಪರಿಹಾರವಾಗು : ನಿನ್ನವಗೆ ತಿಳಿದುದು ಸೊಕ್ಕು ಚಿತ್ತದ ಬವಣೆ ಬೀತುದು (ಕುವ್ಯಾಕ. ೨೦-೦); ಲೇಸು ಮಾಡಿದಿರೆನ್ನ ಚಿತ್ತಕ್ಲೇಶ ಬೀತುದು ನಾನು ಬದುಕಿದೆ (ಕೌಶಿಕಾ. ೪೩-೨೯). ೭. (ಮರಗಿಡಗಳಲ್ಲಿ ಹಣ್ಣು, ಹೂವು ಮೊದಲಾದುವು ಬಿಡುವುದು) ನಿಂತುಹೋಗು ; ಕೊನೆಗೊಳ್ಳು: ಆವಲರುಂ ಪಣ್ಣುಂ ಬೀತೋವವು ಗಡ ಬೀಯುವಲ್ಲಿ ಮಲ್ಲಿಗೆಗಳುಮಿಮ್ಮಾವುಗಳುಮೆಂದೊಡಿಂ ಪೆಱತಾವುದು ಸಂಸಾರಸಾರಸರ್ವಸ್ವಫಲಂ (ಶಂಕಭಾ. ೦-೫೫); ಅಂತತಿಪ್ರಬಲಮಾದ ಘನಸಮಯಮತಿಕ್ರಮಿಸೆ ಮೊಲ್ಲೆಯ ಪೂಗುಡಿ ಪಲ್ಲಟಿಸೆಯುಂ ಗಿರಿಮಲ್ಲಿಗೆ ಬೀತು ಬಿನ್ನನಾಗೆಯುಂ (ಶಂರ್ಚಮಾ. ೭-೦೬೩ ವ); ಪಣ್ ಎಂದುಂ ಬೀಯದ ಫಲವೃಕ್ಷಂಗಳಿತ್ತಂ ತುಱುಗಿ ಬೆಳೆದಿರೆ (ರಾಮಾಶ್ವ. ೯೩-೦೨). ೮. ಬಿಗಿಯನ್ನು ಕಳೆದುಕೊಳ್ಳು ; ಸಡಿಲವಾಗು : ಹಗೆಯ ಕಟ್ಟಲು ಕೊಟ್ಟ ಭಾಷೆಯ ಬಿಗುಹು ಬೀತುದು (ಕುವ್ಯಾದ್ರೋ. ೯-೫). ೯. ಬಡವಾಗು ; ಕೃಶವಾಗು ; ಕ್ಷೀಣಿಸು : '' ತವೆದುದು ತೀರ್ದುದು ಬೀತುದು ಸವೆದುದೆನಲ್ ಕ್ಷಯಮನ್ನೈದಿತೆಂದಱಿಗೆ ಬುಧರ್ " (ಭಾರಿಪ. ೯೨); ಸವೆದುದೀ ವನವಿಲ್ಲಿ ಫಲ ಮೃಗನಿವಹ ಬೀತುದು (ಕುವ್ಯಾಅ. ೦೯-೩) ; ಜಾತರೂಪಾಂಗದ ಸುಕೋಮಲ ಬೀತ ತನು ಬಾಲಕಿಯರೊಡಲು ಪರೀತಧೂಳೀಧೂಸರಿತದಿಂ ಕಂದಿ ಕರಕಾಗೆ (ತಿಮ್ಮಸ್ತ್ರೀ. ೨ ೨೦).

೧೦. ಬಾಡು : ಒಣಗು : "ಬೀತುದೆನೆ ಬೀಡಾದುದಕ್ಕು ಬೀಕಲುಮಕ್ಕು" (ಶಬ್ದಮಂ. ೨೩) ; ಬೀತು ಪಸುರೇಱಿರ್ದ ಕುಂದಲತೆ ಪುಷ್ಪಮಂ ನಿಷ್ಪಂದಿಸೆ ಸೊಗಯಿಸಳೆ ಮಧುಪನಿಕರಕ್ಕೆ (ಶಾಂತಿಪು. ೭-೧೩೮ ವ) ; ಬಱಸಂದು ಗುರುಜನಂಗಳ ಪೞಯರ ಮಂತ್ರಿಗಳ ನೃಪರ ಕುವರರ ಮೊತ್ತಂ ಕಱಪಲ್ಕೆ ಪೋಗೆ ವಿಭುವಂ ಪೊಱಲನುಕರಿಸಿದುದು ಬೀತ ನಂದನವನಮಂ (ಪುಷ್ಪಪು. ೧೩-೮೮) ; ಬೀತ ತರು ಶುಕನಿಕರಕೀವುದೆ ಊತಣವ (ಕುಮಾವ್ಯಾಆ. ೧೬-೩೬). ೧೧. ಕುಂದು : ಕುಗ್ಗು : ಕಡಮೆಯಾಗು : ಬೀಯದಟ್ಟೆ ಱೊಳಂ ಪಾಸಿಗೆ ನಾಂಬ ಮುಂಬವಮುಳುಂಬಂ ಕೂಟದೊಳ್ ನಲ್ಲರಾ (ತಂದ್ರಪು. ೯-೬೮) : ಸೊಗಸು ಬೀಯದು ರಮಣವಿಲ್ಲದ ಬೆಗಡು ನೋಯದು ಕ್ಷತ್ರಧರ್ಮದ ತಗಹು ಸಾಯದು ನಿನಗೆ (ಕುಮಾವ್ಯಾಸ. ೧೪-೨) ; ತನುವಿನ ಬಿಗುಹು ಬಿಟ್ಟುದು ಬೀತುದಗ್ಗದ ಸತ್ವ (ತೊರವೆ. ೫-೧-೩೦). ೧೨. ಸೋಲು : ಹಿಮ್ಮೆಟ್ಟು : ಎನ್ನೆವರಂ ಶ್ರೀರಾಮಂ ತಾನೆ ಮೆಯ್ವೋಱಿಂ ಬಾರನನ್ನೆವರಂ ವಾಜಿಯುಂ ಸಾಜದಿಂದೀಯೆಂ ಬೀಯೆಂ (ರಾಮಾಶ್ವ. ೧೪೨-೨೭). ೧೩. ದಣಿ : ಆಯಾಸಗೊಳ್ಳು : ಅವನಿಯೊಳು ನಿಪತಿತಪ್ರಸವಜಾತ ವಾಸನನಾಗೆ ಕುಳ್ಳಿರ್ದಾತು ಬಿಡೆ ನಿಡುಸುಯಿಲುಗಳು ತಾ ಬೀತುದೆಯು ನೀವೃತ್ತ ಸಂಬಿಯು ಮೊಗವನೀಕ್ಷಿಸುತ (ಬಸವಪು. ೨೬-೪೨) : ಈಕ್ಷಣಯುಗಳ ಬೀಯದು ನೋಡಿ ಪಾರ್ಥನ ಮಾತ ಸವಿಸವಿದು ತೆಗೆದು ನಿಲ್ಲದು ಕರ್ಣಯುಗ (ಕುಮಾವ್ಯಾಆ. ೦೨-೬೨). ಬೀಗು₁ : ೩. ಬೀಗೆ ಕುಂತಳತಮಂ ಸಾಗೆ ಚೆಂದುಟಿಗೆಂಪು ಮೇಗೆ ಸೌಖ್ಯೋದಯದ ಬೆಳಗ ಪಸರಿಸಿ ನಿತ್ಯನಾಗೆಸೆವ ಪಂಪಾವಿರೂಪಾಕ್ಷಸೂರ್ಯನಾನಂದವಂ ನಮಗೀಯಲಿ (ತಿಬಪು. ೧-೨). ೧೪. ತಾಗಿ ಮರಳದ ಬಸವ ಬೀಗಿ ಬೆದಱದ ಬಸವ (ಬಸರ. ೯-೮೯) ; ಭೋಗಿಭೂಷಣನರಸಿ ಮಾಡಿದಳ್ ತಪವನು . . . ಮೇಗೊಗುವ ಶೀತ ಶಿಖಿವಾರಿಧಾರೆಗೆ ಮನಂ ಬೀಗದೆ (ತಿಬಪು. ೩೬-೪); ತಾಗಿ ದಂದುಗಗೊಂಡನನು ಸಾಲ್ವನಂಗೈಸಿ ಬೀಗಿದಂ ಕರ್ಣಜಂ (ಜೈಮಿಭಾ. ೨೨-೪೦) ; ಜಂಬುಕನೊದರಿ ತಾಗಿದರಳುಕಿ ಗಜ ಬೀಗುವುದೆ (ಅಂಬಿಶಾ. ೬-೪೦). ಬೀಯು : ೯. ಬೀತ ನರಪೇತುಗಳಿರಾ! ಬಾತಂಥ ಪ್ರೇತಗಳಿರಾ! (ಗಂ. ೫೦-೯).

[ದೇ.॥ ತಮಿ. ವೀ. ವೀಕ್ಕು : ತೆಲು. ವೀಗು]

ಬೀಂಟೆ 'ಬೀಟ್ಟೆ₁' ನೋ.

ಬೀಕಲ್, ಬೀಕಲು (ನಾ). ೧. ಕೊನೆ; ಅಂತ್ಯ : ಆ ಕುಠಾರನನೇಳನೆಯ ದಿನ ಬೀಕಲಾಗದ ಮುನ್ನ ತಕ್ಷಕನೌಕಿ ಕೊಲಲಿ (ಭಾಗ. ೧-೧೩-೧೨). ೨. ಅಳಿವು : ನಾಶ : ಬೀಕಲಾದುವು ತನ್ನ ಕರ್ಮಾನೀಕ (ಭಾಗ. ೧-೧೧-೬೨). ಬೀಕಲು : ೧. ಎಷ್ಟು ಮಕ್ಕಳನ್ನು ತೂಗಿದೆಯೋ ಈ ತೊಟ್ಟಿಲು . . . ಆ ತೊಟ್ಟಿಲಿಗೆ ಬಿದ್ದ ಮಗು ಯಾವುದೂ ಬೀಕಲಾಗಿಲ್ಲ (ಪಡಲಾ. II, ೧೧೧೯). ೩. ಒಣಗಿದುದು ; ಶುಷ್ಕವಾದುದು : "ಬೀತುದೆನೆ ಬೀಡಾದುದಕ್ಕು ಬೀಕಲುಮಕ್ಕು" (ಶಬ್ದಮಂ. ೨೩). ೪. (ಕಾಳು. ಧಾನ್ಯ ಮುಂತಾದುವುಗಳಲ್ಲಿ) ಆಯ್ದ ನಂತರ ಉಳಿಯುವ ಭಾಗ : "ಆರಿಸಿಕೊಂಡು ಉಳಿದದ್ದು" (ಜಾನಕೋ. ೨೩). ೫. "ಫಲಪುಷ್ಪಗಳು ಮೊದಲು ಸಮೃದ್ಧಿಯಾಗಿ ಆಗಿ ಕೊನೆಗೆ ಕಡಿಮೆಯಾದುದು" (ಕೃಷಣ್ಣ). ೬. ಪೊಳ್ಳಾದ ಕಾಳು; ಜಳ್ಳು : ಬಿತ್ತಿದ ಬೆಳೆಯಲ್ಲಿ ಬೀಕಲು ಹೊರಡುವದು (ರಕ್ತರ್ಧ. ೩೦೨). ೭. ಅಲ್ಪ : ತುಚ್ಛ : ಏಕೆ ಕೆಣಕಿದೆ ಕರ್ಣ ಬೂತಿನ ಬೀಕಲಿನ ಬದಗಿಯನು (ಕುಮಾವ್ಯಾಸ. ೧೫-೧೪) : ಚಿಕ್ಕ ಬೀಕಲಿದು. ಮಿಕ್ಕದೊಗ್ಗದದು. ಭೂಮಿಯು ಬರಿಯ ಸ್ಮಶಾನ (ಜವನಾ. ೩೧). (ಗು). ೮. ವ್ಯರ್ಥವಾದ ; ಅಪ್ರಯೋಜಕವಾದ : ಆಂಗ್ಲಕಾವ್ಯಮಾಲೆಯ . . . ಅಭ್ಯಾಸ ಫಲದಿಂದ ಈ ಗೀತಗಳು ಬಂದಿರುವದರಿಂದ ಇಲ್ಲಿ ಬೀಕಲು ಫಲ ಒಂದೂ ಇಲ್ಲ (ವಿಜಾಮಂ. ೧೨೦).  [ಬೀ + – ಕಲ್₄]

ಬೀಕಲು 'ಬೀಕಲ್' ನೋ.

ಬೀಗ₁, ಬಿಯಗ₁, ಬಿಯ್ಯಗ₁, ಬೀಯಗ₁, ಬೀಯ್ಯಗ₁ (ನಾ). (ಬಾಗಿಲು, ಪೆಟ್ಟಿಗೆ ಮುಂತಾದುವುಗಳನ್ನು) ಭದ್ರಪಡಿಸಲು ಹಾಕುವ ಒಂದು ಬಗೆಯ ಲೋಹದ ಸಾಧನ : ಕೀಲಿ : ಆವಾವ ಸ್ಥಲಂಗಳನಾಧರಿಸಿ ನಡೆವಲ್ಲಿ ಘಟವೇ ಬೀಗವಾಗಿ ಎಸಳೇ ಆತ್ಮನಾಗಿ ಅಱಿವೇ ಕೈಯಾಗಿ ಸ್ವಸ್ಥ ಘಟಕ್ಕೆ ಸ್ವಸ್ಥ ಕೈಗಳಿಂದ ಸಿಕ್ಕು ಹರಿವುದಲ್ಲದೆ ಮತ್ತೊಂದು ಕೈಯಿಕ್ಕಿ ತುಡುಕಿದಡೆ ಬಿಟ್ಟುದುಂಟೇ ಆ ಸಿಕ್ಕು (ಮೋಳಿವಚ. ೯-೩೦); ಪುಷ್ಯರಾಗದ ಬೀಗಗಳಿಂದ ಕೂಡಿರುವ ನಾಲ್ಕು ವಾಗಿಲುಗಳಿರುವುವು (ಸೌಗಂಧಿ. ೧೧೫-೧೨). ಬಿಯಗ₁ : ಉತ್ತರದ್ವಾರದ ಬಾಗಿಲ ಬಿಯಗವ ತೆಗೆದಲ್ಲಿ ನಾದಮೂರುತಿಯಪ್ಪ ಪ್ರಸಾದವ ಕಂಡೆ (ಅದಪ. ೨೪-೬೯). ಬಿಯ್ಯಗ₁ : "ಗೃಹಬಂಧನಂ ಬಿಯ್ಯಗ" (ಮಂಗರಾ. ೫೭-೪) : ಒಂಬತ್ತು ಬಾಗಿಲ ಬಿಯ್ಯಗವಿಕ್ಕಿಹವು (ಅವಚಂ. ೨೨೨-೧೧೧೮) ; ಪೆವಾರ್ಗಿಲಂ ತಾಗೆ ಒಂದು ಬಿಯ್ಯಗವಿಕ್ಕಿ ಚಿಕ್ಕುಟುಂ ನುಸುಳಲ್ವಾರದಂತಾಗಿ ಬಿಗಿಯೆ ಕೆತ್ತಿದ ಕರ್ಬುನದ ಪಡಿಗಳಂ ಕಂಡು (ಅರ್ಧನೇ. ೬-೪೪ ವ). ಬೀಯಗ₁ : ಬಂಡಿಯನು ಚಾವಡಿಯ ಮುಂದಿರಿಸಿ ಬೀಯಗದ ಕೊಂಡಿಯಂ ಕಳಚಿ (ಸಿದ್ಧರಾ. ೯-೧೪): ತರಣಿ ತೆಗೆದನು ತಾವರೆಯ ಬಾಗಿಲಿನ ಬೀಯಗವ (ಕುಮಾವ್ಯಾವಿ. ೩-೬೩). ಬೀಯ್ಯಗ₁ : ಆಕೆಯ ಓವರಿಯ ಬೀಯ್ಯಗವನೊಡೆದು . . . ಒಳ ನುಗ್ಗುತ್ತಿದ್ದುದು ಆವ ಪುರುಷಾರ್ಥಕ್ಕೋಸ್ಕರವಾಗಿ (ಪಟ್ಟಿಅ. ೧೨೫-೭).

ಬೀಗದ ಕೆಯ್, ಬೀಗದ ಕೈ, ಬೀಯಗದ ಕಯ್ಯ=ಬೀಗವನ್ನು ತೆರೆಯುವ ಸಾಧನ : ಕೀಲಿಕೈ : ಪೆಟ್ಟಿಗೆ ಕದ್ದ ಕಳ್ಳ ಬೀಗದ ಕೆಯ್ಗೆ ಬಂದಾನೇ ? (ಗಾದೆ) : ಇಂಥ ಹೆಂಡತಿಯಿದ್ದರೆ, ದುಡ್ಡಿನ ಪೆಟ್ಟಿಗೆಯ ಬೀಗದ ಕೈಯನ್ನೂ ಕೊಡಬಹುದು (ಮರಮ. ೧೩೨) ; ಖಡ್ಗವ ಪಿಡಿದು ಜಡಿದು . . . ಮುಕ್ತಿಯ ಮಹಾಕವಾಟದ ಬೀಯಗದ ಕಯ್ಯೊ ಎನ ಲಮೃತಮತಿ ಕೊರಲ್ಗಮರಿಸುತ್ತ (ಭಾವಜಂ. ೯ ೪೨).

[ದೇ.॥ ತಮಿ. ಪೀಕಮ್. ವೀಕಮ್ ; ಮಲ. ವೀಕಮ್ : ತುಳು. ಕೊಡ. ಬೀಗ ; ತೆಲು. ಬೀಗಮು]

ಬೀಗ₂ 'ಬಿಯಗ₂' ನೋ.

ಬೀಗತನ 'ಬಿಯಗತನ' ನೋ.

ಬೀಗತಿ 'ಬೀಗಿತ್ತಿ' ನೋ.

ಬೀಗದಮರ (ನಾ). ಒಂದು ಬಗೆಯ ಮರ : ಬೀಗದ ಮರ. ಗುಡ್ಡದ-ರೆಂಬೆ, ಕ್ಯಾಸತ್ತೆ, ರಾಹುಬೀಜ (ವೈಶಿಗ. ೩೩-೬೩೮). [ಬೀಗ₁ + ಮರ₁]

ಬೀಗಮುದ್ರೆ, ಬೀಯ್ಯಗಮುದ್ರೆ (ನಾ). ೧. ಬೀಗ ; ಕೀಲಿ : ಬೀಗ ಮುದ್ರೆಗಳಿಲ್ಲದೂರಿಗೆ ಬಾಗಿಲುಗಳೊಂಭತ್ತು (ಹಂಶಾ. ೮೬); ಬಲಿದ ಕವಾಟದ ಬೀಗಮುದ್ರೆ ತಾಂ ಬಲಿದಂತೆಯಿಹುದು (ನವವೋ. ೧೧-೪೬) ; ಅದರ ಮೇಲಿಂದ ಕಂಸನ ಎದೆಯಷ್ಟೇ ಅಗಲವೂ ದಪ್ಪವೂ ಕಠಿಣವೂ ಆದ ಬೀಗಮುದ್ರೆಯು (ವಾಣಾಕ. ೪೨). ೨. ಬಾಗಿಲಿಗೆ ಕೀಲಿಯನ್ನು ಹಾಕಿ ಅರಗಿನಿಂದ ಮುದ್ರೆಹಾಕುವುದು, — ಭದ್ರಪಡಿಸುವುದು : ಸದ್ದಡಗಿತು ವೇಳೆ ಗಂಟೆ ಸಾರಿತು ಬೀಗಮುದ್ರೆಗಳಾಗಿಯದೆ ಬಾಗಿಲಿಗೆ (ಪುರಂದ. ೩-೧೩೧-೩) ; ಏಸು ದಿನವಾಯಿತೊ ಬೀಗಮುದ್ರೆಯ ಮಾಡಿ (ವಿಡಾಕ. ೫೬-೧) ; ಬೀಗಮುದ್ರೆ : ಕಾರ್ಮಿಕವಿವಾದ ಬಗೆಹರಿಯದ ಕಾಲದಲ್ಲಿ, ಕಾರ್ಖಾನೆಯ ಆಡಳಿತಮಂಡಳಿ ಕೈಗೊಳ್ಳುವ ಒಂದು ಕ್ರಮ (ಕವಿಕೋ. XII, ೧೪೭). ೩. (ಬಾಗಿಲಿನ) ಬೀಗಕ್ಕೆ ಹಾಕಿರುವ ಮುದ್ರೆ,— ಮೊಹರು : (ಕ). ೪. ಬೀಗ ಹಾಕಿ ಅದರ ಮೇಲೆ ಮೊಹರಿನಿಂದ ಮುದ್ರೆಯೊತ್ತುವ ಅಧಿಕಾರ : ಈಗ ಸಧ್ಯಾ ಕೋಟೆಬಾಗಿಲು ಬೀಗಮುದ್ರೆ ನಿನ್ನ ವಶದಲ್ಲಿಯಿರಲಿ (ಜೈದರ. ೨೭). ಬೀಯ್ಯಗಮುದ್ರೆ : ೨. ಈ ಬಾಗಿಲ್ಗೆ ಬೀಯ್ಯಗಮುದ್ರೆ ಮಾಡಿ, ನೀನೂ ನಿನ್ನವರೂ ಹೊರಗೆ ಕಾವಲ್ಗಾಡುತ್ತಿರಿ (ಪಟ್ಟಿಅ. ೧೪೬-೨). [ಬೀಗ₁ + ಮುದ್ರೆ]

**ಬೀಗಳೆ** (ಕ್ರಿ). ತಿರಸ್ಕರಿಸು ; ಹೀಯಾಳಿಸು : ತನ್ನನ್ನು ಭಕ್ತನಲ್ಲವೆಂದು ಬೀಗಳೆಯುವ ಇವನಾರು ! (ಕರತ. ೩೦); ಈ ಆಂದೋಲನವನ್ನು ವಹಾಬೀ ಆಂದೋಲನವೆಂದು ಬ್ರಿಟಿಷರು ಬೀಗಳೆದರು (ಕಕ್ಕಸ್ವಾ. ೫೮೯).

[ಬೀ + ಕಳೆ$_1$]

**ಬೀಗಿತಿ** 'ಬೀಗಿತ್ತಿ' ನೋ.

**ಬೀಗಿತ್ತಿ**, ಬೀಗತಿ, ಬೀಗಿತಿ, ಬೀಯಗಿತ್ತಿ (ನಾ). ವಧುವಿನ ತಾಯಿ ಮತ್ತು ವರನ ತಾಯಿ — ಇವರಿಬ್ಬರ ನಡುವೆ ಮದುವೆಯ ಸಂಬಂಧದಿಂದ ಉಂಟಾಗುವ ಪರಸ್ಪರಸಂಬಂಧಸೂಚಕಪದ : ಸುಮಿತ್ರ ಕೇಳ್ದು ತನ್ನ ಬೀಗಿತ್ತಿ[ಪಾಠಾಂ. ತಿ] ದೇವಿಲೆಯಲ್ಲಿಗೆ ಪೋಗಿ ಇಂತೆಂದಳ್ (ಪುಣ್ಯಾಸ್ರ. ೪-೦೫ ಪ) ; ಇವರು ನಿಮ್ಮ ಬೀಗಿತ್ತಿಯಲ್ಲವೆ! (ದೇವೀಜಾ.೬). **ಬೀಗತಿ :** ಹೆಣ್ಣಿನ ಕಡೆಯವರು ಗಂಡಿನ ಕಡೆಯವರು, ಬೀಗ ಬೀಗತಿಯರು (ಸುವಸಂ. ೩೦) ; ಸ್ವತಃ ಪುರೋತಿಯೇ . . . ಮುಂದೆ ಸವತಿಯಾಗುವವಳನ್ನು ಸಿಂಗರಿಸಿದಂಥ ನೋಟ, ಅವಳ ಬೀಗತಿಯ ಎಲ್ಲ ಅನುಮಾನಗಳನ್ನೂ ಹೋಗಲಾಡಿಸಿದವು (ಮುಕಮು. ೦೦೩). **ಬೀಗಿತಿ :** ದಂಪತಿಗಳು ಹಿಮಗಿರಿಗೆ ತೆರಳಿ ಅಲ್ಲಿ ಒಟ್ಟಿಗಿದ್ದ ಬೀಗಿತಿಯರಾದ ಗೌರೀ ಸರಸ್ವತಿಯರಿಗೆ ನಮಸ್ಕರಿಸಿದರು (ಶಾರದ. ೪೪೯). **ಬೀಯಗಿತ್ತಿ :** ಒಂದಿರುಳ್ ಕಾರ್ಯಮಂ ಸಮಕಟ್ಟಿ ತನ್ನ ಬೀಯಗಿತ್ತಿಗಾ ವೃತ್ತಾಂತಮನೆಲ್ಲಮಂ ಪೇಟ್ದು (ಪುಣ್ಯಾಸ್ರ. ೩-೫೨ ಪ). [ಬೀಗ$_2$ (<ಬಿಯಗ$_2$) + — ಇತ್ತಿ]

**ಬೀಗು$_1$** 'ಬೀ' ನೋ.

**ಬೀಗು$_2$** (ಕ್ರಿ). ೧. ದಷ್ಟಪುಷ್ಟವಾಗು ; ತುಂಬಿಕೊಂಡಿರು : "ಬೀಗು – ಹರ್ಷಭಾವೇ, ಸ್ಥೌಲ್ಯೇ ಚ (ಉಬ್ಬು)" (ಶಮಧಾ) ; ಅಂಗಜಸನ್ನಿಭಂ ತಲೆಯನೇಕೆಗೆ ತೂಗಿದನೆಂದೊಡಕ್ಕ ಕೇಳಂಗನೆ ನಿನ್ನ ಬೀಗಿ ಬಿಗಿದಿರ್ದ ಕುಚದ್ವಯಮಧ್ಯದಲ್ಲಿ ತಾಂ ಪಿಂಗದೆ ನಟ್ಟ ದಿಟ್ಟಿಯನವಂ ಕಿಬಿಲೆಂದನು ಗೆಯ್ದು ತೂಗಿದಂ (ಆದಿಪು. ೦೨-೦೩); ಬೀಗಿ ಬೆನ್ನಿಂ ಬಿರಿವನ್ನಂ ಕೊರ್ವಿ ಮುಂಗಾಲ್ ಗಡಿಯೆನೆ ಕಡ್ಪುಗೆಚ್ಚಲ್ ಪೊದಟ್ಟಿಂದು ವತ್ಸೋತ್ಕರಮೆಲ್ಲಂ ಬಾಲವಂಬಂ ಕಚಿಯೆ . . . ಮಾಹಿಷೀಸಂತತಿ ವಿಪಿನಭವಂ ಕಣ್ಗಗು ರ್ವಾಯ್ತು ಕಾರೊಳ್ (ಚಂದ್ರಪು.೪-೪೮). ೨. ಉಬ್ಬು; ಊದಿಕೊಳ್ಳು : "ಬಾತುದೆನಲ್ ಬೀಗಿ [ಪಾಠಾಂ. ಬಿಗಿದಿ]ರ್ದುದು" (ಧಾರಿಸಿ. ೨೯) ; ಕುಟಿಲಾ ನೀಲಾಳಕಂಗಳ್ ನಿಮಿರ್ದಿರೆ ಬೆಳರ್ವಾಯ್ ನಾಡೆಯುಂ ಬೀಗೆ ರೋಷೋತ್ಕಟದೇಹಂ ರಾಗದಿಂ ಪಿಳ್ಳನೆ ಪಿಟಿದವೊಲಿಂಬಾಗೆ . . . ನಿಂದಿರ್ದ ಳೊರ್ವಳ್ (ಕಾವ್ಯಾವ. ೮೦೨) ; ಬೀಗಿ ಬಿಗಿದವು ಕೊರಳ ಸೆರೆಗಳು (ಜೈಭಾಗ. ೯-೨೦-೦೨) ; ತನಿಯಡಗನಡಸಿ ತಿಂದು ಬಸುಱು ನೆಱೆ ಬೀಗೆ ಡಜ್ಜನೆ ತೇಗಿ (ಸಾಳ್ವಭಾ. ೨೫-೨೩). ೩. (ಸಂತೋಷ ಅಥವಾ ಅಭಿಮಾನದಿಂದ ಹೃದಯವು) ಉತ್ಸಾಹಗೊಳ್ಳು : "ಬೀಗು – ಹರ್ಷಭಾವೇ, ಸ್ಥೌಲ್ಯೇ ಚ (ಉಬ್ಬು)" (ಶಮಧಾ); ರತರಾಗದುರುಳಿವೊಲಾಗೆ ಕರಂ ಬೀಗಿ ಬಾಯ್ಗಳಂ ಜುಂಬಿಸಿದರ್ (ಕಾವ್ಯಸಾ. ೬೭೭ ಚಂದ್ರ೪); ನನೆಗಳರಳದ ಮುನ್ನ ಮನವರಳ್ದು ಪೊಂಗುತಂ ನನೆ ಬಿರಿವುದಕ್ಕೆ ಬಿತ್ತಂ ಬೀಗಿ ಬಿರಿವುತಂ (ಪುಷ್ಪರ. ೦೦-೧); ಓಹಿಲದೇವಂ ಕೊಬ್ಬುತ್ತುಬ್ಬುತ್ತಂ ಬಿಬ್ಬನೆ ಬೀಗಿ . . . ಶಂಕರನಳ್ಕಱ ಪೂಜೆಗೆ ಸಲ್ವಂ (ಉದ್ಭಟದೇ. ೩-೪೩). ೪. ಹೆಚ್ಚಾಗು ; ಅಧಿಕವಾಗು : ಬೀಗಿ ಸುಗ್ಗಿಯ ಬಿಸಿಲ್ ನೆಲೆಗೆಡಿಸೆ ನೆಳಲಂ (ಕಾಲಿಚರ. ೦೩೭-೨೯೨). ೫. ಸೊಂಪಾಗು ; ಸಮೃದ್ಧಿಯಾಗು ; ಹುಲುಸಾಗು : ಬೆಳೆದು ಬೀಗಿ ತಮ್ಮಿಂ ತಾವೆ ಬಿಗಿದು ಬಿರಿವಟ್ಟು ಸುರಿವ ದಾಳಿಂಬದ ಪಣ್ಗಳ ತನಿರಸದ ಪನಿವೊನಲೆ ಪರಿನೀರಾಗೆ (ಶಂಕಕಂ. ೦೦೭-೦೪); ಪಣ್ಣಾಗುತೆ ಕಾಯ್ಗಳ್ ಪೊಱಮಡೆ ಬೀಗುತ್ತುಂ ಬೆಳೆದುವಲ್ಲಿ ಕದಳೀಷಂಡಂ (ಗಿರಿಕ. ೨-೫೦); ನಸುದೋರೆ ದೋರೆವಣ್ ಕಳಿತೆಸೆವಚ್ಚಪಣ್ಣಿಡಿದು ಬೀಗಿದ ಬೀಸ್ಗೊನೆಯಾಂತು . . . ಬಗೆಗೊಂಡುದು ಶೈಲನಂದನಂ (ಕಬಕಂ. ೦-೫೦).

೬. ಅಹಂಕಾರ ಪಡು ; ಸೊಕ್ಕು ; ಮೆರೆ : ಪೊಂಗಿ ಕಡಂಗಿ ಬೀರದೊಳೆ ಬೀಗುವ ನಿನ್ನಣುಗಾಳೆ ನೋಡೆ . . . ಕೋಡಗಗಟ್ಟುಗಟ್ಟಿ ಚಿತ್ರಾಂಗದನುಯ್ಯೆ (ಪಂಪಭಾ. ೯-೫೪); ಹಾರುವನ ವಧೆ ಸುಡಲಿ ಪಾತಕವೆಂದು ಬಿಟ್ಟರೆ ಬೀಗಿ ಬೆಱತೆಯಲ (ಜೈಭಾಗ. ೯-೦೪-೩೨) ; ಸೊರ್ಕಿಸುರ್ಕಿಂ ಬೀಗಿರ್ಪಯ್ (ರಾಮಾಶ್ವ. ೨-೯). ೭. ಸೆಟೆದುಕೊಳ್ಳು ; ಬಿಗಿದುಕೊಳ್ಳು ; ಪೆಡಸಾಗು : ಬಟಲ್ವಿನಂ ಬಡಿದು ಗೋವುಗಳಿಂತಿರೆ ಪೇಱೆ ದುಃಖಮಂ ಪೀಱೆ ಬಿಗುತರ್ಪ ಬೀಗಿ ನಡುವೆನ್ನೊಡೆದಿರ್ಬಗಿಯಾಗಿ ಪೋಟ್ದು (ಸುಕುಮಾ. ೫-೦೭) ; ಮಿಗೆ ಬೀಗಿ ಬಾಗಿರ್ದಿಭಘಟಾವಳಿಯ ಸೆಡೆದ ಕಾಲ್ಗಳ ಕುದುರೆಗಳ . . . ಕಂಡು (ಕೊರಡಾ. ೩-೯-೪).

**ಬೀಗಿ ಬೆಳೆ** = ೧. ಸೊಂಪಾಗಿ ಬೆಳೆ ; ಹುಲುಸಾಗಿ ಬೆಳೆ : ಬೆಡಂಗುವೆತ್ತು ನೆಱೆ ಬೀಗಿ ಬೆಳೆದವು ಮಗಮಗಿಪ ಗಂಧಶಾಲಿವನಂಗಳ್ (ಸುಕುಮಾ. ೯-೫೨) ; ಬೀಗಿ ಬೆಳೆದ ಗೊನೆವಾಳೆಯಂತೆ ಬಾಗಿಕೊಂಡಿದ್ದಡೆ ಬೇಡಿದ ಪದವಿಯನೀವ ಕೂಡಲಸಂಗಮದೇವ (ಬಸವ. ೦೮೯). ೨. ಉನ್ನತಿಯನ್ನು ಹೊಂದು ; ಅಭಿವೃದ್ಧಿಗೆ ಬರು : ಭಾವಪುಷ್ಪಂಗಳಲ್ಲಿ ಪೂಜೆಯಂ ಮಾಡಿ ಬೀಗಿ ಬೆಳೆವುತ್ತಿಪ್ಪ[ಪಾಠಾಂ. ಬೆಳಗುತ್ತಿಪ್ಪ] ಶರಣಂಗೆ ಮತ್ತೆ ಅನುಭಾವದ ಸುಖ ಸವಿದೋಱುವುದೇ (ಛಸವ. ೩೭-೨೯). ೩. ಚೆನ್ನಾಗಿ ಅರಳು : "ಬೀಗಿ ಬೆಳೆದುದನು ಕವಿಗಳ್ ಬೀಗದಿ ತಾನುಳ್ಳಲರ್ದುದೆಂಬರ್" (ಕವಿಕಂ. ೨೭೦).

[ದೇ. ‖ ತಮಿ. ವೀಙ್ಕು, ವೀಕ್ಕು ; ಮಲ. ವಿಙ್ಙು, ವೀಕ್ಕು ; ತೆಲು. ವಿಕ್ಕು, ವೀಗು]

**ಬೀಚ** (ನಾ). ಒಬ್ಬಾತನ ಹೆಸರು : ಆತನ ಮಗಂ ಬೀಚಂಗು ಕಲ್ಕಟಿನಾಡ ನೆಟ್ಟೂರ ಕಲ್ನಟುಗೊಟ್ಟರ್ (ಎಕ. V. ಕಪ್ನರಾ. ೨೬೨-೦೯ ; 971). [?]

**ಬೀಚು** (ನಾ). ಸಮುದ್ರದ ದಡ ; ಕಡಲಿನ ತೀರ : ಶಾಂತಿಯನ್ನು ಕಳೆದುಕೊಂಡು ಎಸರು ಕುದಿವ ವೀಚಿಗೆ ಎರಡು ಕಡೆಗೆ ಬೀಚಿಗೆ (ಸೂರ್ಯಕಾ. ೪೦-೭); ಬೀಚಿನಲ್ಲಿ ಮರಳಿನ ಹಾಸಿಗೆಯಲ್ಲಿ ಅನೇಕ ಜನ ವಿಶ್ರಮಿಸಿರುವರು (ಹೂಅರ. ೧೫). [← ಇಂ. Beach]

**ಬೀಜ** (ನಾ). ೧. ಸಂತಾನೋತ್ಪತ್ತಿ ಶಕ್ತಿಯುಳ್ಳ ಮತ್ತು ತನ್ನಂಥದೇ ಜೀವದ್ರವ್ಯವನ್ನು ಬೆಳೆಸಿ ವೃದ್ಧಿಮಾಡುವ ಸತ್ವವುಳ್ಳ ವಸ್ತು ; ಬಿತ್ತ : ಭಕ್ತಿಯೆಂಬ ಪೃಥ್ವಿಯ ಮೇಲೆ ಗುರುವೆಂಬ ಬೀಜವಂಕುರಿಸಿ ಲಿಂಗವೆಂಬ ಎಲೆಯಾಯಿತ್ತು (ಬಸವ. ೫೨೭); ಧರೆ ಬೀಜಂಗಳ ನುಂಗೆ ಬೇಲಿ ಹೊಲನೆಲ್ಲಂ ಮೇದೊಡಂ . . . ಹರ ಕೊಲ್ಲಲ್ ಪರ ಕಾಯ್ವನೇ (ಸೋಮೇಶ. ೨೯). ೨. ದಾಳಿಂಬೆ ಮೊದಲಾದ ಹಣ್ಣುಗಳೊಳಗೆ ಇರುವ ಕಾಳು : ಕುಂಕುಮಂಬೊರೆದ ಕರ್ಪುರವಳುಕಂ ಕೆದಱಿದಂತಿರ್ದ ದಾಡಿಮಬೀಜ ರಾಜಿಯೊಳಂ . . . ಅತಿರಮಣೀಯಮಾಗಿ (ಮಲ್ಲಿಪು. ೨-೩೩); ಆ ದಾಡಿಮದ್ರುಮದೊಳ್ ಬಿಡೆ ಸವಿಯಲ್ ಬೀಜಮನುಗಿವೆಡೆಯೊಳ್ ಚಂಚೂಪುಟಂಗಳಂ ಬಿಡದೆಂತುಂ ತೊಡರ್ದೊಡೆ (ಕುಸುಮಾ. ೯-೨೩). ೩. ಮೂಲ ; ಉತ್ಪತ್ತಿಸ್ಥಾನ : ಕಮಲಜನ ಚಾತುರ್ಯಬೀಜಮೋ . . . ಎನಲ್ ಪುಷ್ಪಕಂ ಕಣ್ಗೆಸೆದುದು (ಪಂಕಾರಾ. ೫-೪-೩); ಅಜ್ಞಾನವೇ ದುಃಖಹೇತುವಾದ ಸಂಸಾರದ ಬೀಜ (ಶಾರದ. ೦೨೨). ೪. ಕಾರಣ ; ಹೇತು : "ಹೇತು ನಿದಾನಂ ಬೀಜಂ" (ವಸ್ತುಕೋ. ೦೩೧-೮೦); ಜಿನಮತದೊಳ್ ಸಮ್ಯಗ್ದರ್ಶನಮುಳ್ಳೊಡೆ ಸಾಲ್ದೊಡದುವೆ ಬೀಜಂ ಗಡ ನೆಟ್ಟನೆ ಮೋಕ್ಷಸುಖಕೆ (ಅಜಪು. ೦೦-೧೩). ೫. ವೀರ್ಯ ; ರೇತಸ್ಸು : "ಶುಕ್ಲಂ, ವೀರ್ಯಂ. ಬಲಂ, ಬೀಜಂ, ಇಂದ್ರಿಯಂ, ರೇತಃ — ಈ ೬ ಇಂದ್ರಿಯಂ" (ಹಲಾಯು. ೧೦೫-೦೭); ಬೀಜವೆಂದರೆ ಶುಕ್ಲ ಶೋಣಿತಗಳು (ಶಾರದ. ೫೪). ೬. ಅಂಡ ; ವೃಷಣ : ಹೋರಿಯ ಬೀಜವನ್ನು ಹಿಡಮಾಡಿ ಎತ್ತುಗಳಾಗಿ ಮಾರ್ಪಡಿಸಿ ಉಳುಮೆಗೆ ಬಳಸುತ್ತಾರೆ (ರೂಢಿ). ೭. ಸಂತಾನ ;

ಹೆಸರು ; ವೀರಭದ್ರ : "ಜನ್ನವಗೆಯುಂ, ಎಂಟಡಿವರಿಜಂ, ಬೀರಂ . . . ಈ ೫ ವೀರಭದ್ರುಂಗೆ ಪೆಸರ್" (ಕಕಾ. ೪೭-೭) ; ಉರಿಗಣ್ಣ ನೊಗೆದ ಬೀರಂಬೆರಸೊಪವಿದ ನಂಜುರೂಪುವೆತ್ತವೊಲೇನಚ್ಚರಿಯುಂ ಪುಟ್ಟಿಸಿದರೊ ಬಂದೆರಡುಂ ಕೆಲದಲ್ಲಿ ನಿಂದ ಬೀರ ಗಣೇಸರ್ (ಕಬ್ಬಿಕಾ. ೧೬೦) ; ಭೈರವ ಬೊಮ್ಮರಕ್ಕಸ ಕಾಳ ಜಟ್ಟಿಗ ಬೀರ ಬೇತಾಳರಾರೊಳರು ಬೀರತ್ತ ಯುಳ್ಳವರ್ಗಳು ನಿನ್ನಸುಗಾವೊಡಾರಾದರುಮಡ್ಡ ಬರಲಿ (ತ್ರಿಪಾಂ. ೯-೫೯). ೪. ಈಶ್ವರ : ತುಳುವದಲ್ಲಿ ಜೈನಧರ್ಮಾವಲಂಬಿಗಳೂ ಈ ಭೂತಾರಾಧ ನೆಯ ಕಟ್ಟಿಗೆ ಒಳಪಡಬೇಕಾಯಿತು. ರಕ್ತೇಶ್ವರಿಯೂ (ಲೆಕ್ಕೆಸಿರಿ), ಈಶ್ವರನೂ (ಬೀರ) ತುಳುವದ ಪ್ರಧಾನದೈವತಗಳು (ತುಳುನಾ. ೨೫೪). ೫. ಒಬ್ಬಾತನ ಹೆಸರು : ಆತನ ಮಗ ಬೀರನೆಂಬೋನು ಗಾದಿಂಗಾಯಿಂಗನುಮಾ ಕಲ್ಲನಿಱಿಸಿದ (ಎಕ. VIII, ಸೊರಬ. ೨೦೭-೯ ; 903) ; ಮಾರಸಂದ್ರ ಕೆಯ ಕೊಟ × ಗಳವೆಯ ಬೀರ ಕೊಟ (ಎಕ. II (R), ೭೨-೨ ; ಸು. 1150).

**ಬೀರದೇೞ್ಗೆ, ಬೀರದೇಳ್ಗೆ** = ಪೌರುಷದ ಏಳಿಗೆ, – ಅಭಿವೃದ್ಧಿ : ಚಾಗದ ನೆಗೞ್ತೆಯೊಳ್ ಬೀರದೇೞ್ಗೆಯೊಳ್ ನೆಗೞ್ದ ಮಗಂ (ಶಂಶಪ. ೧-೪೨) ; ಕಂತುಗೆ ಪೂಜಾರ್ಥಮಿದೆಂದು ಸುಯ್ಗೆಱಗುವುನ್ಮತ್ತಾಳಿಯಿಂ ಬೀರದೇೞ್ಗೆಗಳಂ ಪಾಡಿಸುತುಂ ಜಯಧ್ವಜಮನೆತ್ತಿರ್ಪಂತಿರ್ದ ಮಾಲೆಗಳುಂ ತೋಳ್ಗೆಳುಮೊಪ್ಪೆ ಕಣ್ಗೊಳಿಸುತಿರ್ಕುಂ ಪುಷ್ಪಲಾವೀಜನಂ (ಜಗಂ. ೯-೧೧೩); ಭುಜಾಸಿಯೊಳೊಪ್ಪಿರೆ ಬೀರದೇಳ್ಗೆಯೊಳ್ (ಸೌಇಇ. IX-i, ೧೧೨-೧೧ ; 1046) ; ಚೋಳನೆ ಪೇಳನೆ ಬೀರದೇಳ್ಗೆಯುಂ (ಕಇಅ. ೨-೨-೩೩ ; 1058). **ಬೀರರ ಬಂಟ** = ಪರಾಕ್ರಮಿಗಳಲ್ಲಿ ಪರಾಕ್ರಮಿಯಾದವನು ; ವೀರರ ವೀರ ; ಒಂದು ಬಿರುದು : × ಟುಂಬಕುಲಾನ್ತಕ ಬೀರರ ಬಣ್ಟ ಪರಿಕರ ನಕಿಗಂ (ಎಕ. II (R), ೪೯-೧; ಸು. 10ನೆಯ ಶತ). **ಬೀರರ ಬೀರ** = ಬೀರರ ಬಂಟ : ಶ್ರೀಗೆ ವಿಜಯಕ್ಕೆ . . . ಪೆಂಪಿಂಗಿನಿತಕ್ಕಾಗರಮಿದೆನ್ದು ಕನ್ದುಕದಾಗಮದೊಳೆ ನೆಗೞ್ಗಮಲ್ತೆ ಬೀರರ ಬೀರ (ಎಕ. II, ೧೩೩-೭೭: 982); ಚತುರ್ಬಲಂಗಳೆ ಮೆಯ್ಗಳೊಳ್ ಬಗಿದಸುಂಗೊಳೆ ಸುಯ್ದು ಕೆತ್ತುವ ಪುಣ್ಣ ಬಾಯ್ಗಳೆ ಬೀರಮಂ ಪೊಗೞ್ವ ಬಾಯ್ಗಳೆನಿಪ್ಪವಣ್ಗೆನ ಪೆಂಪು ಬೀರರ ಬೀರನಾ (ಕಾವ್ಯಾವ. ೩೫). **ಬೀರೇ ದೇವರು** = ವೀರಭದ್ರ : ಆದೇನು ಜಾತಿ ಹೆಣ್ಣಪ್ಪ ಇದು. ಮಸಾಣದ ಬೀರೇದೇವರನ ಮಾದೇವಪ್ಪನ ಮಾಡೋ ಜಾತಿ (ಮಲ್ಲ. ೧೨) ; ಮಾರವ್ವನಿಗೆ ಗಂಡನಿಲ್ಲ, ಬೀರೇದೇವರಿಗೆ ಹೆಂಡತಿಯಿಲ್ಲ (ಗಾದೆ). [< ಸಂ. ವೀರ]

**ಬೀರಕಡಗ** (ನಾ). ಶೌರ್ಯದ ಗುರುತಿಗಾಗಿ ಧರಿಸುವ ಕೈಬಳೆ ; ವೀರ ಕಂಕಣ: ಬರೆವ ಕೆಯ್ಯು ಗಂಡುಗೆಡದೆ ಬೀರಕಡಗ ತೊಟ್ಟಿತು (ಗಂ. ೪೨-೧೩). [ಬೀರ + ಕಡಗ$_1$]

**ಬೀರಕಲ್** 'ಬೀರಗಲ್ಲು' ನೋ.

**ಬೀರಕ್ಕ** (ನಾ). ಒಬ್ಬಾಕೆಯ ಹೆಸರು : ಬೀರಕ್ಕನ ಮಗಂ ಎಱೆಕಳಿಂಗಂ (ಮ್ಯಆಂ. ೧೯೪೪, ೧೧-೧ ; ಸು. ೨ನೆಯ ಶತ). [ಬೀರ + ಅಕ್ಕ$_1$]

**ಬೀರಕ್ಕಿ** (ನಾ). (ವಿವಾಹಕಾಲದಲ್ಲಿ ವಧೂವರರಿಗೆ) ಮಂತ್ರಪೂರ್ವಕ ವಾಗಿ ತಳಿಯುವ ಅರಸಿನ ಅಥವಾ ಕುಂಕುಮದಲ್ಲಿ ಕಲಸಿದ ಅಕ್ಕಿ; ಮಂತ್ರಾಕ್ಷತೆ : (ಎಸಮ್ಮ. II, ೨೯). [ಬೀರು (< ಬೀಱು$_1$) + ಅಕ್ಕಿ$_1$]

**ಬೀರಗಂಗ** (ನಾ). ಒಬ್ಬಾತನ ಹೆಸರು : ಗಂಗವಾಡಿಯ ತಿಗುಳರ ಬೆಂಕೊಣ್ಡು ಬೀರಗಂಗಂಗೆ ನಿವಿಱ್ಚಿ ಕೊಟ್ಟಂ (ಎಕ. II (R), ೫೬೦-೩೯; 10ನೆಯ ಶತ). [ಬೀರ + ಗಂಗ]

**ಬೀರಗಚ್ಚೆ** (ನಾ). ವೀರರು ಹಾಕಿಕೊಳ್ಳುವ ಒಂದು ಬಗೆಯ ಕಚ್ಚೆ ; ವೀರಗಚ್ಚೆ ; ᴘ ಮಲ್ಲಯುದ್ಧ ಮುಂತಾದ ಕಾಳಗಸಮಯದಲ್ಲಿ ಧರಿಸುವ, ಚಲನವಲನಕ್ಕೆ ಅಡ್ಡಿಯಾಗದಂತೆ ಉಡುಪನ್ನು ಬಿಗಿ ಗೊಳಿಸುವ ಕಚ್ಚೆ : ವಸುಧೇಶನ ಕಣ್ಗೆನಸುಂ ಮಿಸುಗುವ ಪೊಸಮಸಿಯ ಪೊನ್ನ ಕೂರಂಕುಸವಾಳಿಸಿ ಬರಿಯ ಬೀರಗಚ್ಚೆಯೊಳೆಸೆದುದು ಕಾರ್ಮುಗಿಲ ಕೆಲದ ಕುಡುಮಿಂಚಿನವೊಲ್ (ಚಂದ್ರಪು. ೯-೯೦) ; ಪಂಚವಣ್ಣದ ಪಟ್ಟೆಯ ಬಿರುದಿನ ಬೀರಗಚ್ಚೆಗಟ್ಟಿರ್ದ ಓರಿಯ ನೇಜೆಯಮನೋಜೆಯಿಂದೆತ್ತಿ ಓಡಿದು ಸಮರಸಮಯಸಮುಚಿತನೈಪಥ್ಯಂಬಡೆದಬ್ಬರಿಸಿ ಬೊಬ್ಬೆಗೊಟ್ಟೇಱೆ (ರಾಜಶೇ. ೬-೧೧ ವ). [ಬೀರ + ಕಚ್ಚೆ]

**ಬೀರಗನಸು** (ನಾ). ವೀರೋಚಿತವಾದ ಕಲ್ಪನೆ : ತನ್ನ ಮಕ್ಕಳ ಬೀರಗನಸುಗಳುಬ್ಬುತಿರೆ ನಸುನಗುವಳು (ಹೂಂಗಳು. ೯ ೦೯). [ಬೀರ + ಕನಸು]

**ಬೀರಗಲು** 'ಬೀರಗಲ್ಲು' ನೋ.

**ಬೀರಗಲ್ಲು, ಬೀರಕಲ್, ಬೀರಗಲು** (ನಾ). (ಮಡಿದ) ವೀರನ ಸ್ಮಾರಕ ವಾಗಿ ನೆಡುವ ಕಲ್ಲು ; (ಸತ್ತ) ವೀರನ ನೆನಪಿಗಾಗಿ ನೆಡುವ ಕಲ್ಲು ; ವೀರಗಲ್ಲು ; ವೀರಶಾಸನ : ತುಱುವಂ ಮಗುಳ್ಚಿ ಸುರಲೋಕಪ್ರಾಪ್ತ ವಾದರು ಇ ಬೀರಗಲ್ಲ ಮಾಡಿಸಿದವನು ಪದು × × × (ಎಕ. XVI. ಚಿಕ್ಕನಾ. ೬೦-೬; 1124) ; ಚೆಂನೋಜ ಮಾಡಿದ ಬೀರಗಲ್ಲು (ಮ್ಯಆಂ. ೧೯೩೨. ೭-೧೭ ; 1289). **ಬೀರಕಲ್** : ಇ[ವ]ನ ತಮ್ಮ ಗಾವುಣ್ಡ ಸುವಿಲಂ ಬಿರಕಲ್ಲ ನಿಱಿಸ್ಸಿದ (ಎಕ. IV, ಹೆಗ್ಗಡ. ೭೩-೩೨; 1007 ?). **ಬೀರಗಲು** : ಅಂಕೋಜನು ದೇವಲೋಕಕ್ಕೆ ಸಲಬೇಕೆಂದು . . . ಪ್ರತಿಷ್ಠೆಯ ಮಾಡಿದ ಬೀರಗಲು (ಮ್ಯಆಂ. ೧೯೪೪. ೧-೭; 1286); ಆ ಬೀರಗಲಿಗೆ ಪೂಜೆ ಪುರಸ್ಕಾ × × × ತೊ ಗೊಡಗೆಯಾಗಿ . . . ಉದಕಧಾರಾಪೂರ್ವಕವ್ಮಾಡಿ ಕೊಟ್ಟ ಗದ್ದೆ (ಎಕ. XVI, ಚಿಕ್ಕನಾ. ೭೯ ೧೧ ; ?). [ಬೀರ + ಕಲ್ಲು (<ಕಲ್$_3$)]

**ಬೀರಗಾಸೆ** (ನಾ). = ಬೀರಗಚ್ಚೆ : ಮೆಟ್ಟಿದ ಬಣ್ಣವಾವುಗೆಯ ಸಿಂಗರದುಟ್ಟ ಬೀರಗಾಸೆಯುಂದದ . . . ನಡೆವೊಂದು ಗಾಡಿಯ ಪುಷ್ಕಲಂ (ರಾಮಾಶ್ವ. ೪೯-೧೭). [ಬೀರ + ಕಾಸೆ$_1$]

**ಬೀರಗುಡಿ** (ನಾ). ಮೊರಸುಒಕ್ಕಲು ಪಂಗಡದವರು ವಿವಾಹಕಾಲದಲ್ಲಿ ಜರುಗಿಸುವ ಒಂದು ವಿಧಿ ; ᴘ ಕೆಲವು ಮನೆತನಗಳಲ್ಲಿ ವಿವಾಹ ಕಾಲದಲ್ಲಿ ವರ ಮತ್ತು ಆತನ ಕಡೆಯವರು ಮೂರು ದಾರಿಗಳು ಕೂಡುವ ಜಾಗಕ್ಕೆ ಮಧ್ಯರಾತ್ರಿ ಹೋಗಿ, ಬೇಯಿಸಿದ ಆಹಾರ ವನ್ನು ಮನುಷ್ಯಾಕಾರದ ಚಿತ್ರಕ್ಕೆ ಅರ್ಪಿಸಿದ ನಂತರ ಯಾವ ಸದ್ದುಗದ್ದಲವಿಲ್ಲದೆ ಮತ್ತು ಹಿಂದಕ್ಕೆ ತಿರುಗಿ ನೋಡದೆ ಮನೆಗೆ ಮರಳುತ್ತಾರೆ. ಇದು ಯಾವುದಾದರೂ ಹಾನಿಕರವಾದ ಭೂತ ಪಿಶಾಚಿಗಳ ಶಾಂತಿಗಾಗಿ ಉದ್ದೇಶಿತವಾಗಿರುತ್ತದೆ (ಎಸಮ್ಮ. XV, ೦೫). [?]

**ಬೀರಗೂಳ್** (ನಾ). ಯುದ್ಧದಲ್ಲಿ ಸತ್ತ ವೀರರ ಸಂಸ್ಸಾರದ ಪೋಷಣೆ ಗಾಗಿ ರಾಜ, ಸಾಮಂತ ಅಥವಾ ಊರಿನವರು ಉಂಬಳಿ ಅಥವಾ ದತ್ತಿಯನ್ನು ಬಿಟ್ಟು ಕೊಡುತ್ತಿದ್ದ ಒಂದು ವಿಧಿ : ಬೈಚೇನಾಯಕನು ಬೀರಗೂಳ ಮಾಡಿ ಕಲ್ಲ ನಿಲಿಸಿದ (ಎಕ. VIII, ಸೊರಬ. ೭೯-೧೧ ; 1147). [ಬೀರ + ಕೂಳ್ (< ಕೂೞ್$_1$)]

**ಬೀರಗೂಳೆತ್ತು** (ಕ್ರಿ). ಯುದ್ಧದಲ್ಲಿ ಸತ್ತ ವೀರನ ಸಂಸಾರದ ನಿರ್ವಹಣೆಗೆ ರಾಜ, ಸಾಮಂತ ಅಥವಾ ಊರಿನ ಜನರು, ದತ್ತಿ ಯನ್ನು ಬಿಟ್ಟು ಕೊಡು : ಹೆಲ್ಲಬ್ಬೆಯಿಡದ ಕೆಱೆಯಂ ಕಟ್ಟಿಸಿ ಪರೋಕ್ಷ ವಿನೆಯಂಗಳಂ ಮಾಡಿ ಬೀರಗೂಳೆತ್ತಿ ಕಲ್ಲ ನಿಱಿಸಿದಳು (ಎಕ. VIII, ಸೊರಬ. ೪೭೯-೯ ; 1112); ಕೇತಯನಾಯಕ ವೀರಭಟಂಗೆ ಬೀರಗೂಳೆತ್ತಿ ಕಲ್ಲ ನಿರಿಸಿ ಕೃತಾರ್ಥನಾದ (ಎಕ. VIII, ಸೊರಬ. ೫೨೫ ; 1152). [ಬೀರಗೂಳ್ + ಎತ್ತು$_1$]

**ಬೀರಜೇಗಟೆ** (ನಾ). ಯುದ್ಧದಲ್ಲಿ ಉಪಯೋಗಿಸುತ್ತಿದ್ದ ಜಾಗಟೆ : ಬೀರಜೇಗಟೆ[ಶಾಸಂ. ಜೇಘಂಟೆ, ಜಾಗಟೆ]ಯ ಬೆನ್ನ ಚಮರದ . . .

ಪದಾತಿವ್ಯೂಹದಿಂ (ರಾಜಶೇ. ೬-೦೧ ಪ).. [ಬೀರ+ಜೇಗಟೆ (<ಜೇಗಂಟೆ]

**ಬೀರಡವುಡೆ,** ಬೀರಡೌಡೆ (ನಾ). ಯುದ್ಧದಲ್ಲಿ ಉಪಯೋಗಿಸುತ್ತಿದ್ದ ಒಂದು ಬಗೆಯ ಚರ್ಮವಾದ್ಯ; ವೀರಡಿಂಡಿಮ: ಪೊಡೆವ ಬೀರಡವುಡೆ [ಪಾಠಾಂ. ಡೌಡೆ]ಯ ಪಿಂಗಾಲೊಳ್ಳೆಲ್ಲ ಭಾರಿ ಸಂಕಲೆಯ . . . ಗಂಧ ಸಿಂಧುರಸಂದೋಹದಿಂ (ರಾಜಶೇ. ೬-೦೦ ಪ). **ಬೀರಡೌಡೆ** : ತಂಬಟದ ಪಟಹದ ಬೀರಡೌಡೆಯ . . . ಕಹಳೆಗಳ ರವಕಸುರಾರಿ ನಗುತಿರ್ದ (ಅಕ್ರೂ.ಚ. ೬-೩೯). [ಬೀರ + ಡವುಡೆ₁]

**ಬೀರಡಿ** (ನಾ). ಒಬ್ಬಾತನ ಹೆಸರು : ಆನೆಸಾಸಲಾ ಬೀರಡಿಗಳು ಮಾರಡಿಗಳುಂ . . . ಇ ಪೊಲನಂ ನಡೆಯಿಸಿದೋರ್ (ಎಕ. XVI, ಗುಬ್ಬಿ. ೭೩-೫೬; 733). [ಬೀರ + ಅಡಿ₁]

**ಬೀರಡೌಡೆ** 'ಬೀರಡವುಡೆ' ನೋ.

**ಬೀರಣ₁** 'ವೀರಣ₁' ನೋ.

**ಬೀರಣ₂** (ನಾ). ಒಬ್ಬಾತನ ಹೆಸರು : ಹುಲಿಯ ಜಂಗುಳಿ ಬೀರಣನ ಮಗ ಮೂಪಡಿ (ಎಕ. VIII. ಸೊರಬ. ೪೬-೫; 1018 ?). [ಬೀರ + <ಅಣ್ಣ₁]

**ಬೀರಣವಜೆ** (ನಾ). ಒಂದು ಬಗೆಯ ಚರ್ಮವಾದ್ಯ : ಹತ್ತು ಚಂಬಕವಜೆ ಹತ್ತು ಬೊಂಬುಳಿಜುಂಚೆ ಹತ್ತು ಬೀರಣವಜೆ (ಶಬರಶಂ. ೪೦-೬೭). [ಬೀರಣ₁ (<ವೀರಣ₁) + ಪಜೆ₁]

**ಬೀರಣಿಗ** (ನಾ). (?) : ಅವರಿಗೆ ಆರು ಸಹಾಯವಾದಾರು ಅವರಿತ್ತಂಡವನೂ ಕೊಂದವನೇ ಬೀರಣಿಗ ಹಾಕಿದಗೆ ಮಂಗಳ ಜವಳಿ ಅವರಿತ್ತಂಡವು ನಾಡು ನಖರ ಪರಿವಾರಕೆ ಹೊರಗು (ಎಕ. V, ಬೇಲೂರು. ೭೩-೦೨೯; 1382). [?]

**ಬೀರಣೆ** (ನಾ). ಅಧಿಕಾರಸೂಚಕವಾದ ಆಸ್ಥಾನದ ಉಡುಪು (?) : ಕುಪ್ಪಸದ ಬೀರಣೆಯ ಬಿನ್ನಣದ ಹಸ[ನಿ]ಗಂ ಟೊಪ್ಪಿಗೆಯ ಹೊಜೆವೇಷದಿಹಪರದ ಲೆಕ್ಕಿಗಂ (ಬಸವ. ೫-೩೯); ಹೊಳೆವ ನವ್ಯಾಭರಣವೆಲ್ಲವಂ ನೆಜೆ ತೆಗೆದು ಪಳಿಯ ಬೀರಣೆ ಕುಪ್ಪಸಂಗಳಂ ಮಿಗೆ ಕಳೆದು (ಶೀಲರ. ಹ. ೩೦೦-೪). [?]

**ಬೀರಣೆಗಾವುಂಡ** (ನಾ). ಒಬ್ಬಾತನ ಹೆಸರು : ಮಾಗರ ಬೀರಣೆಗಾವುಣ್ಣಾರ ಮಗಂ ಬಸವಯ್ಯಂಗೆ ಪಲ್ಲವಾದಿತ್ಯ ನೊಳಂಬಗಾವುಣ್ಣನೆಂದು ಪೆಸರಂ ದಯಗೆಯ್ದು (ಮೈಎಂ. ೦೯೩೨, ೪೯-೦೦; ಸು. 960). [ಬೀರಣೆ₂ + ಗಾವುಂಡ (<ಗಾಮುಂಡ)]

**ಬೀರತಣಿ** (ನಾ). ಮಡಿದ ವೀರನ ಆತ್ಮಶಾಂತಿಗಾಗಿ ನೀಡುವ ತರ್ಪಣ: ಬಟ್ಟೆಯ ಕಣ್ಣೊಳು[ಳ್] ಕಲ್ಲನಿಟ್ಟವರೆಲೆ ಬೀರತಣಿಯನಿತ್ತುಂ ಮೂಡರ್ (ಶಮಚ. ೦೨-೩). [ಬೀರ + ತಣಿ₃]

**ಬೀರತೆ** (ನಾ). ಶೌರ್ಯ; ಕಲಿತನ : ಭೈರವ ಬೊಮ್ಮರಕ್ಕಸ ಕಾಳ ಜಟ್ಟಿಗ ಬೀರ ಬೇತಾಳರಾರೊಳರು ಬೀರತೆಯುಳ್ಳವರ್ಗಳು ನಿನ್ನಸುಗಾವೊಡಾರಾದರುಮಡ್ಡ ಬರಲಿ (ಶ್ರೀಪಾ. ೬-೩೯). [ಬೀರ + -ತೆ₃]

**ಬೀರದೇವ,** ಬೀರೆದೇವ (ನಾ). ೧. ಒಬ್ಬಾತನ ಹೆಸರು : ಶ್ರೀಮನ್ಮಹಾಮಂಡಲೇಸ್ವರ ಕುಮಾರ ಬೀರದೇವನೊಡನೆ ಚಾಲುಕ್ಯ ವಿಕ್ರಮದ ೧೯ನೆಯ ಯುವಸಂವತ್ಸರದ ಮಾಘಸುದ್ಧ ಪಂಚಮಿ ಆದಿತ್ಯ ವಾರದಂದು ಪರಲೋಕಪ್ರಾಪ್ತನಾಗುತ್ತಮಿರೆ (ಎಕ. VIII, ಸಾಗರ. ೬೦-೨೯; 1096). **ಬೀರೆದೇವ** : ೨. ಒಬ್ಬ ದೇವತೆಯ ಹೆಸರು; ವೀರಭದ್ರ : (೬). [ಬೀರ + ದೇವ]

**ಬೀರನೊಳಂಬ** (ನಾ). ನೊಳಂಬವಂಶದ ಒಬ್ಬ ರಾಜನ ಹೆಸರು : ಶ್ರೀಮನ್ನೊಳಂಬಾಧಿರಾಜ ಅಯ್ಯಪದೇವನ ಮಗ ಅಣ್ಣಿಗ ಬೀರನೊಳಮ್ಬ (ಎಕ. X, ಗೌರಿಬಿ. ೪-೩; ಸು. 920); ಶ್ರೀಪ್ರಿಥಿವೀವಲ್ಲಭ ಪಲ್ಲವಕುಲತಿಲಕ ಶ್ರೀಮತ್ ಅಯ್ಯಪದೇವನ ಮಗಂ ಬೀರನೊಳಮ್ಬಂ (ಎಕ. X, ಕೋಲಾರ. ೫೭-೪; ಸು. 925). [ಬೀರ + ನೊಳಂಬ]

**ಬೀರಪೆರ್ಮನಡಿ** (ನಾ). ಗಂಗವಂಶದ ಒಬ್ಬ ರಾಜನ ಹೆಸರು : ನೀತಿಮಾರ್ಗದೇವರ್ಪ್ಪ ಪೆರ್ಮ್ಮನಡಿಯ ಮಗ ಶ್ರೀಮತ್ಸತ್ಯವಾಕ್ಯ ಬೀರಪೆರ್ಮ್ಮನಡಿಯು ಗೊಟ್ಟ ಕಲ್ನಾಟು (ಎಕ. V, ಅರಕ. ೬೦-೪; 920). [ಬೀರ + ಪೆರ್ಮನಡಿ (<ಪೆರ್ಮಾನಡಿ)]

**ಬೀರಬೊಬ್ಬೆ** (ನಾ). ಪೌರುಷಸೂಚಕವಾದ ಗರ್ಜನೆ,– ಬೊಬ್ಬೆ : ಬೀರಬೊಬ್ಬೆ. ವಿಜಯಯಾತ್ರೆ ಮತ್ತೆ ಮತ್ತೆ ಗುಡುಗಲಿ (ಗಂ. ೪೩-೦೦). [ಬೀರ + ಬೊಬ್ಬೆ₂]

**ಬೀರಮಂಡಿ** (ನಾ). ವೀರನು ಮಂಡಿಯೂರಿ ಕುಳಿತುಕೊಳ್ಳುವ ಒಂದು ಭಂಗಿ; ವೀರನು ಬಾಣಪ್ರಯೋಗ ಮಾಡಲು ಮಂಡಿಯೂರುವ ಒಂದು ಭಂಗಿ; ವೀರಮಂಡಿ : ' ಬೀರಮಂಡಿಯೂರು ' ಪರಾ. [ಬೀರ + ಮಂಡಿ₂]

**ಬೀರಮಂಡಿಯೂರು** (ಕ್ರಿ). ವೀರಮಂಡಿ ಹಾಕು; ಮೊಣಕಾಲನ್ನು ಊರಿ ಕುಳಿತುಕೊಳ್ಳು : ಬೀರಮಂಡಿಯೂರಿ ಯುವರಾಜನಿಗೆ ಪ್ರೇಮಾಲಿಂಗನವಿತ್ತು (ಚಬ್ಬ. ೦೯-೦೬). [ಬೀರಮಂಡಿ + ಊರು₁ (<ಊಱು₁)]

**ಬೀರಮದ್ದಳೆ** ' ಬೀರವದ್ದಳೆ ' ನೋ.

**ಬೀರಮ್ಮ** (ನಾ). ಒಬ್ಬಾತನ ಹೆಸರು : ಬೇಡರ ಬೀರಮ್ಮನ ಪರಿಯೊಳ್ . . . ಪೆ ×× ಱಿದು ಸರ್ಗ್ಗಕೆ ಸನ್ದನ್ (ಎಕ. V, ಹಾಸನ. ೨೪-೩; 985); ಮಲೆಯಂ ಕೊಟ್ಟುತ್ತು ಬೀರಮ್ಮನ ಕುಲಮನಿತುಂ ದಾಸಿಪತ್ರಕ್ಕೆ ನಿಂದರ್ (ಕಇಇ. XX, ೪೯-೨೪; 1076?). [ಬೀರ + ಅಮ್ಮ₁]

**ಬೀರಯ್ಯ** (ನಾ). ೧. ಒಂದು ಕ್ಷುದ್ರದೇವತೆಯ ಹೆಸರು : ಮಾರಯ್ಯ ಬೀರಯ್ಯ . . . ಕೇತಯ್ಯಗಳೆಂಬ ನೂಱು ಮಡಕೆಗೆ ನಮ್ಮ ಕೂಡಲ ಸಂಗಮದೇವ ಶರಣೆಂಬುದೊಂದು ದಡಿ ಸಾಲದೆ (ಬಸವ. ೫೫೭). ೨. ಒಬ್ಬಾತನ ಹೆಸರು : ಬರದೊಂ ಬೀರಯ್ಯ (ಎಕ. IV, ಹೆಗ್ಗ.ಡ. ೦೦೬-೦೪; ಸು. 930). [ಬೀರ + ಅಯ್ಯ₁]

**ಬೀರರವ** (ನಾ). = ಬೀರಬೊಬ್ಬೆ : ತೆಗೆಯ ಬೀರರವ[ದೆ] ಮೇಲೆ ಪರಿವ ಮದಗಜಂಗಳಿಂ ಚಳತ್ತುರಂಗಮಂಗಳಿಂ (ಶಂಕರ. ೦-೫೯ ರಗಳೆ). [ಬೀರ + ರವ]

**ಬೀರರಸ** (ನಾ). ಒಬ್ಬಾತನ ಹೆಸರು : ಬೀರರಸನ ಮಗ ಬೊಂಮರಸನ ಪೆಂಪೆಂತೆಂದಡೆ (ಎಕ. VIII, ಸಾಗರ. ೩೦-೯; 1000 ?). [ಬೀರ + ಅರಸ₁]

**ಬೀರವಟ್ಟ** (ನಾ). ೧. ಮುಖ್ಯಸೇನಾಪತಿಯ ಪಟ್ಟ,–ಪದವಿ; ಸೈನ್ಯದ ನಾಯಕತ್ವ; ವೀರಪಟ್ಟ : ಬೀರವಟ್ಟಮನಾನಿರೆ ನೀನೀ ಸೂತಸುತಂಗೆಡೆಗೊಂಡು ಕೈವಾರದಿಂದೊಸದಿತ್ತೊಡಮೇನಾಯ್ತು (ಶಂಕರ. ೦೨-೪೩); ಬೀರವಟ್ಟಕ್ಕೆ ಮೆಚ್ಚಿಡೆ ಬೀರಾಂಗನೆ ಸೇಸೆಗೊಂಡ ಪಡೆಯಂ ಕೈಸನ್ನೆಗೆಯ್ದುದ್ಧತಂ ನಡೆಯಲ್ವೇಚಿಲ್ದೊಡೆ (ಶಾಂತಿಪು. ೩-೦೦೬). ೨. ಮುಖ್ಯಸೇನಾಪತಿಯ ಪದವಿಯನ್ನು ಸೂಚಿಸುವ (ಹಣೆಗೆ ಕಟ್ಟುವ) ಸಣ್ಣ ಪಟ್ಟಿ : ಜೋಲ್ದ ಪೂರ್ವಸೆತ್ತಿ ಕಟ್ಟಿದ ಲಲಾಟಪಟ್ಟದೊಳಟ್ಟಳಮೊಪ್ಪುವ ಬೀರವಟ್ಟಮುಮುಸದಳಮೆಸೆಯೆ (ಶಂಕರ. ೮೦-೫೨ ವ). [ಬೀರ + ಪಟ್ಟ₂]

**ಬೀರವಣ** (ನಾ). ೧. ಸೈನಿಕರ ಜೀವನನಿರ್ವಹಣೆಗಾಗಿ ಪ್ರಜೆಗಳು ಕೊಡುತ್ತಿದ್ದ ತೆರಿಗೆ : ಕಿಸುಕಾಡೇಪ್ಪತ್ತಱೊಳಂ ಸಾರಿಗೆ ಬೀರವಣಸಹಿತಂ ಸುಂಕಂ ಪರಿಹಾರಂ (ಎಇ. XV, ೬೯-೨೪; 1050); ಬೀರವಣ ಕೊಡತಿವಣ . . . ಆಚಂದ್ರಾರ್ಕ್ಕತಾರಂಬರಂ ಸಲ್ಗೆ (ಮೈಎಂ. ೦೯೩೨, ೦೬-೩೦; 1069); ೨. ಊರಿನ ಜನರು ವೀರನೊಬ್ಬನ ಶೌರ್ಯವನ್ನು ಮೆಚ್ಚಿ ಅವನಿಗೆ ಕೊಡುತ್ತಿದ್ದ ಹಣ : ಶಿವಲಿಂಗಮಹಾಮಹಿಮಂಗೆ ನಾಗವಾಡಂ ತನಗೀವ ಬೀರವಣ ದತ್ತಮನಾವಗಮಿತ್ತನತ್ಥಿಯಿಂ (ಕೊಲ್ಲಾಪ. ೬-೬೦; 1147). [ಬೀರ + ಪಣ₃]

**ಬೀರವಣಿಗ** (ನಾ). ವರ್ತಕರ ಒಂದು ಪಂಗಡ ಮತ್ತು ಆ ಪಂಗಡಕ್ಕೆ ಸೇರಿದವನು ; ವೀರಬಣಂಜುಧರ್ಮ ಮತ್ತು ಆ ಧರ್ಮಕ್ಕೆ ಸೇರಿದವನು : ಬೀರರುಂ ಬೀರವಣಿಗರುಂ ಗವುಂಡರುಂ . . . ಅಪ್ಪ ಶ್ರೀಮದಯ್ಯಾವ್ವರ್ಗರ ವಿಖ್ಯಾತಿಯೆನ್ತೆಂದಡೆ (ಸೌಇಇ. IX–i, ೦೦೬–೫೫; 1057); ಸೆಟ್ಟಿಗುತ್ತರುಂ ಗಾವುಣ್ಡರುಂ ಗಾವುಣ್ಡಸ್ವಾಮಿಗಳುಂ ಬೀರರುಂ ಬಿ(ಬೀ)ರವಣಿಗರುಂ (ಎಇ. XIX, ೩೩–೨೦ ; 1135).

[< ಸಂ. ವೀರವಣಿಜ್]

**ಬೀರವದ್ದಳೆ**, ಬೀರಮದ್ದಳೆ (ನಾ). ಯುದ್ಧಕಾಲದಲ್ಲಿ ಉಪಯೋಗಿಸುವ ಒಂದು ವಾದ್ಯ : ರಣವಾದ್ಯ : ತಂತಮ್ಮ ಮೊನೆಯ ನಾಯಕರ ಬಿರುದಿನ ಬೀರವದ್ದಳೆಯ ಪದಿರ ಪಱೆಯ ಕಹಳೆಯ ಕಳಕಳಂ ಕಿವಿ ಶಬ್ದಂಗಿಡೆ ದಿವಮನೆಯ್ದೆ (ಶಂರಾಷಾ. ೦೩–೩೪ ವ). **ಬೀರಮದ್ದಳೆ:** ಕೋಕಿಲಾರವಮದು ಬೀರಮದ್ದಳೆಯ ನಿಸ್ವನಮಾಗಿರೆ (ತಂದ್ರಕ. ೬–೪೨).

[ಬೀರ + ಮದ್ದಳೆ$_1$ (<ಮದ್ದಲೆ$_1$)]

**ಬೀರವರ್ತಿ** (ನಾ). ವೀರವೃತ್ತಿಯ ವ್ಯಕ್ತಿ; ಸೈನಿಕ : ಜಗಮನದಿರ್ಪ ಲಾರ್ಪ ಬಿರುದಾಂತ ಬಲಂಗಳನೆತ್ತಿ ನುಂಗಿ ಮತ್ತುಗುಱದ ಬೀರವರ್ತಿ ನಿಕರಂಗಳ ಬಾಟಿಮ್ಗೊದಲಾದ ಚಾಗದೋಲಗದ ವಿಡಂಬಡಂಬರಕೆ ಕಣ್ಣೆಲೆಯಾದ ವಿಲಾಸವೊಪ್ಪೆ ಗದ್ದುಗೆಯೊಳಗಿರ್ದುದಗ್ಗಳಿಕೆಯುಗ್ಗದ ಪಾರ್ಥಿವ ಪುತ್ರಸಾರ್ಥಕಂ (ಆದಿಪು. ೨–೨೬). [< ಸಂ. ವೀರವರ್ತಿನ್]

**ಬೀರವಸದನ** (ನಾ). ವೀರೋಚಿತವಾದ ಅಲಂಕಾರ.— ಪ್ರಸಾಧನ : "ಬೀರವಸದನ — ವೀರಪ್ರಸಾಧನ = (ವೀರೋಚಿತ ಆಭರಣ, ಅಲಂಕಾರ)" (ಶಬ್ದಕೋ. ೩೦). 'ಬೀರವಸದನಂಗೆಯ್' ಪರಾ. [ಬೀರ + ಪಸದನ]

**ಬೀರವಸದನಂಗೆಯ್** (ಕ್ರಿ). ವೀರೋಚಿತವಾದ ವೇಷಭೂಷಣಗಳನ್ನು ಧರಿಸು : ಕಣ್ಗಂಬಾಗಿರೆ ಬೀರವಸದನಂಗೆಯ್ದು . . . ಪೊಱಮಟ್ಟಂ (ಕಬ್ಬಿಗ. ೦೯೬). [ಬೀರವಸದನ + ಕೆಯ್$_1$]

**ಬೀರವಱೆ** (ನಾ). ವೀರೋಚಿತವಾದ ಒಂದು ವಾದ್ಯ,— ಹರೆ ; ಒಂದು ಬಗೆಯ ರಣವಾದ್ಯ,— ತಮಟೆ : ಬಾಜಿಸುವ ಬೀರವಱೆಯ ಪೊಡವ ಡಕ್ಕೆಯ ಓಡಿದ ಬಿರುದಿನ ಕಾಳೆಯ ಬಿಲ್ಲುಲಿಯ ಸಡಗರಮೆಲ್ಲಾ ದೆಸೆಗಳಂ ಕಿವುಂಡುವಡಿಸೆ (ಕಬ್ಬಿಗ. ೨೫೦); ನಾನಾ ಬೀರವಱೆಗಳ ರಭಸದಲಿ ರಂಜಿಸಿದುದಾ ದುರ್ಗ (ಕೊರಣ. ೬–೬–೦೫). [ಬೀರ + ಪಱೆ$_1$]

**ಬೀರಪುರ** (ನಾ). ಒಂದು ಊರಿನ ಹೆಸರು : ನಾಲ್ಕು ಮತ್ತರ್ಕ್ಕೆಯ ಬಿಡುವುದೊಕ್ಕೆ ಬೀರಪುರಮುಂ ಬಿದಿವ್ರಳ್ಳಿಯುಮನೊನ್ದೊ ಅಗ್ರಹಾರಂ ಮಾಡಿ (ಎಕ. XI, ಹಿರಿದು. ೫೦–೦೬ ; 968). [ಬೀರ + ಪುರ$_2$]

**ಬೀರಸಂಕಲೆ** (ನಾ). ವೀರನು (ಬಿರುದಿನ ಸಂಕೇತವಾಗಿ) ಧರಿಸುವ ಕಾಲ ಬಳೆ ; ವೀರಶೃಂಖಲೆ ; ತೊಡರು : ಪೊನ್ನ ಬೀರಸಂಕಲೆಯ ತೊಳಪ್ಪ ಕನ್ನಡಿಯ ಚೆನ್ನಡಿಯಡ್ಡಣವೆಡ್ಡವಾಗೆ (ಕಬ್ಬಿಗ. ೨೬೨).

[ಬೀರ + ಸಂಕಲೆ$_1$]

**ಬೀರಸಗ್ಗ** (ನಾ). ಕಾಳಗದಲ್ಲಿ ವೀರೋಚಿತವಾದ ಮರಣವನ್ನು ಪಡೆದ ವೀರನಿಗೆ ದೊರಕುವುದೆಂದು ಭಾವಿಸಲಾದ ಸ್ವರ್ಗ ; ವೀರಸ್ವರ್ಗ : 'ಬೀರಸಗ್ಗಂಬಡೆ' ಪರಾ. [ಬೀರ + ಸಗ್ಗ]

**ಬೀರಸಗ್ಗಂಬಡೆ** (ಕ್ರಿ). ವೀರಸ್ವರ್ಗವನ್ನು ಹೊಂದು,—ಪಡೆ : ಚೋಬಿಗಣ್ಣಾರ್ ಆಟ್ದನ ಮುನ್ದೆ ಪೞಿದು ಬೀರಸಗ್ಗಂಬಡೆದಂ (ಪ್ಶಕಂ. ೦೯೨೬, ೩೨–೩ ; 1056). [ಬೀರಸಗ್ಗ + ಪಡೆ$_1$]

**ಬೀರಸಾಂತರ** (ನಾ). ಸಾಂತರವಂಶದ ಒಬ್ಬ ರಾಜನ ಹೆಸರು : ಸಾನ್ತಳಿಗೆಯ ಬೀರಸಾನ್ತರನ ಮೇಲೆ ನಡೆವಯ್ವುತ್ತು ನಾಡೊಳಗಣ ಬಲ್ಲಾಗಡೊಳ್ಪಿಟ್ಟಟ್ಟಿನ್ದು (ಎಕ. VIII, ತೀರ್ಥ. ೪೬೬–೦೫ ; 991).

[ಬೀರ + ಸಾಂತರ]

**ಬೀರಸೆಟ್ಟಿ** (ನಾ). ವ್ಯಾಪಾರಿಗಳ ಒಂದು ವರ್ಗ : ಊರಿಗೆಯ್ದಿದ ಮಾರಿ ಬೀರಸೆಟ್ಟಿಯ ಹೊಯ್ದು ದಾರಿಕಾಱರ ಗಾದೆಯಂತೆ (ಶರತ. ೪೨–೪೪).

[ಬೀರ + ಸೆಟ್ಟಿ]

**ಬೀರಸೇನಸಿದ್ಧಾಂತ** (ನಾ). ಒಬ್ಬಾತನ ಹೆಸರು : ಶ್ರೀ ಬೆಳ್ಗೊಳನಿವಾಸಿಗಳಪ್ಪ ಶ್ರೀ ಬೀರಸೇನಸಿದ್ಧಾನ್ತದೇವರವರ ಶಿಷ್ಯರ್ (ಎಕ. I, ೯೯–೯; 978). [ಬೀರ + ಸೇನ$_2$ + ಸಿದ್ಧಾಂತ]

**ಬೀರಸೇಸೆ** (ನಾ). (ಯುದ್ಧ ಮುಂತಾದ ಸಂದರ್ಭಗಳಲ್ಲಿ) ವೀರನ ತಲೆಯ ಮೇಲೆ ತಳಿಯುವ ಅಕ್ಷತೆ ; ವೀರಸೇಸೆ : ನೊಸಲ ಕಣ್ಣ ಮಾದೇವನ ಮಿಸುಪ ನೊಸಲೊಳ್ ಬೀರಸೇಸೆಯನಿಟ್ಟು (ರಾಜಶೇ. ೧೩೦–೦೫). [ಬೀರ + ಸೇಸೆ$_1$]

**ಬೀರಾಳ್** (ನಾ). ಶೂರನಾದ ಸೈನಿಕ : ಇಂತಿಂತು ಬೀರಾಳ್ಗಳಲ್ಲಿಲ್ಲಿ ನಗೆ ನುಡಿಯುತಿರೆ (ಚಿತ್ರಾಂಗ. ೬೬–೨೦೩೧): ಲೆಕ್ಕಕ್ಕೆ ಮಿಗಿಲ್ ಬೀರಾಳ್ಗಳಂ ತಿಂದೆ (ಶ್ರೀರಾಮಾ. ೬೪೩–೨೫೪). [ಬೀರ + ಆಳ್$_3$]

**ಬೀರಿಸು** 'ಬೀಱಿಸು' ನೋ.

**ಬೀರು$_1$** 'ಬೀಱು$_1$' ನೋ.

**ಬೀರು$_2$**, ಬೀರ್$_2$ (ನಾ). ಒಂದು ಬಗೆಯ ಮದ್ಯ : ಇನ್ನೂ ಸೊಲ್ಪ ಬೀರು ಬೇಕು (ಅಭಿಮಾ. ೬೬). **ಬೀರ್$_2$** : ನಾಲ್ಕು ಜನ ಸ್ನೇಹಿತರು ಕುಳಿತು ಸಂಜೆ ಬೀರ್ ಕುಡಿಯುವುದಕ್ಕೆ ಸೊಗಸಾದ ಸ್ಥಳ (ಯೋಧಪ್ರ. ೨೫); ಆಧುನಿಕ ನಿರನುಭವಿ ಯುವಕರಂತೆ ಬೀರ್ ಕುಡಿದು ನೋಡಿದ (ಪ್ರಕೃ. ೫೯). [← ಇಂ. Beer]

**ಬೀರು$_3$** (ನಾ). ಬಾಗಿಲುಳ್ಳ ನಿಲುಪೆಟ್ಟಿಗೆ : ಕಪಾಟು : ಅಲಮಾರು : ಒಂದು ಬೀರುವನ್ನು ಮುರಿದು ಹಾಕಲಾಗಿತ್ತು (ನಾಪೋರಿ. ೧೨೬): ಬಟ್ಟೆಗಳು ಗಾಜಿನ ಬೀರುವನ್ನು ಸೇರಿದ್ದುವು (ಮುನಿಶಾ. ೨೨); ಚಂದ್ರಯ್ಯಗೌಡರು ತಮ್ಮ ಬೀರುವಿನ ಪಕ್ಕದಲ್ಲಿ . . . ಮಂಡಿಸಿ ಎಲ್ಲರೊಡನೆಯೂ ಸಂಭಾಷಣೆ ನಡಸುತ್ತಿದ್ದರು (ಕಾನೂರು. ೬೯).

[ ← ಇಂ. Bureau. / ತಮಿ. ಪೀರೋ ; ತೆಲು. ಬೀರುವಾ, ಬೀರುವ]

**ಬೀರುಗಲ್** (ನಾ). ತೂರಿ ಬರುವ ಕಲ್ಲು : ಎಸೆದ ಕಲ್ಲು : ಎತ್ತ ತಿರುಗಲುಮಿಲ್ಲದಮ್ಮೋರ್ ಬೀರುಗಲ್ಗಳ್ . . . ನೆರನಿರಿಯೆ, ತೊಪ್ಪ ತೊಪ್ಪನೆ ಕುಪ್ಪೆಯೊಟ್ಟಿದರ್ (ಚಾರಸಿ. ೦೬–೪೦೦).

[ಬೀರು$_1$ (<ಬೀಱು$_1$) + ಕಲ್$_3$]

**ಬೀರೆದೇವ** 'ಬೀರದೇವ' ನೋ.

**ಬೀರ್ವಗ್ಗ** 'ಬೀಱುವಗ್ಗ' ನೋ.

**ಬೀರ್ವು** (ನಾ). ಕಟ್ಟು; ಕಟ್ಟಳೆ (?): ಪರ್ವ ನಾಲ್ಕರೊಳಾವುದಾನೊಂದು ಪರ್ವವ ಪೂರ್ವಗೊಂಡುಪವಾಸವಿಹೆನು ಸರ್ವಥಾ ಯಮವಲ್ಲ ನಿಯಮ ಮತ್ತದರೊಂದು ಬೀರ್ವು ತಿಂಗಳಿಗೊಂದು ದಿವಸ (ಶರತ. ೦೯–೯೯).

[ ? ]

**ಬೀವ** 'ಬೀವು' ನೋ.

**ಬೀವು**, ಬೀಹು (ನಾ). ೧. ಬೆನ್ನುಹುರಿ : ಬೆನ್ನ ಬೀವಂ[ಶಾಸಂ. ಮಂ] ತೆಗೆವ ಬೇಶಾಳರುಮಂ . . . ಕಂಡು (ಗದಾಯು. ೫–೩ ವ); ಬಿಗಿದ ಬೆನ್ನ ಬೀವುಂ ತೆಗೆದ ಬಸಿಱುಂ . . . ನಾಲ್ಕುಂ ತಳಮಂ ತೋಱುತ್ತುಂ ಸರಳಿಸಿ ಪಾಯ್ದು ಪೋಪ ಪೊಳ್ಳೆವಂಧಿಯುಂ ಕಂಡು (ಲೀಲಾವ. ೬–೦೬ ವ); ಸಂದ ನೇಪಾಳನ ಬೆನ್ನ ಬೀವನಿರದೆತ್ತಿ (ಎಇ. XV, ೩೨೦-೨೨; 1172). ೨. ನರ ; ಸ್ನಾಯು : ಕೀವಿನ ನೆತ್ತರ ತಿಪ್ಪೆ ಬೀವಿನಿಂದಂ ಬಿಗಿದಿರ್ದ ಪರ್ಣಿಣದ ಖಂಡದ ಮಾಂಸದ ತಾಣವಲ್ಲವೇ (ಧರ್ಮಾಮೃ. ೫–೨೬) ; ಹಲವೆಲುವಿನೆಕ್ಕಗಳ ಬಿಗಿದು ಬೀವಂ ನೆಯ್ದು ನುಲಿಯ ಹಂದೊಗಲ ಹಾಸಿನೊಳು ಮಂಚಂ ಜಡಿಯೆ (ಹಕಾ. ೦೦–೩೦). ೩.

ಹುರಿ ; ಹಗ್ಗ; ರಜ್ಜು : ಬೀವಂ ಮಿಳಿಯುಮಂ ಮಾಱಿ ಕೊಳಲಾರ್ಪಡೆ ಬಾ (ಶಂಹಂ. ೯-೭೯ ಪ); ತನ್ನ ಕೊರಲಸರ್ವಾಭರಣಮಂ ಬೀವಂ ಮಾಡಿ ಕುಮಾರಿಯ ಕೆಯ್ಯೊಳ್ ಕೊಟ್ಟು ... ಆ ಕುಮಾರಿಯಂ ಕಱುಪುವುದುಮವಾಕೆ ಬೀವಂ ಮಾಱುತ್ತುಂ ಬರೆ (ಸುಕುಮಾ. ೬-೩೦ ಪ); ರಂಜಿಪ ಬೆರಕೆವರಲ ಚಿಬ್ಬಲೊಳಗೆ ಹೊಸ ಹೊನ್ನ ಸರಿಗೆಯ ಬೀವುಗಳನು ತುಂಬಿ (ಪೇವಿಸಂ. ೨೦-೨೭). ೪. ತಂತೀವಾದ್ಯಗಳಲ್ಲಿ ಉಪಯೋಗಿಸುವ ಸರಿಗೆ.— ತಂತಿ : "ಪಿಟೀಲು, ಮೊ. ವಾದ್ಯಗಳ ಹುರಿ ; ಬೀವು ; ತಂತಿ" (chord· ಇಂಕಶ). **ಬೀಹು :** ೨. ಬಲ್ಲಿಂದ ಬೀಹಿನ ಹಗಱು ಮುಱಿವವೋಲು ಕಲ್ಲಿಂದ ಕಾಲ್ತುಂಡಿಸುವೊಲು ಬಲ್ಲಿತಪ್ಪಾ ಕೊಲೆಯಿಂ ಕೊಂದರಾ ವಿಗಮಿಲ್ಲಿಂ ನಿಲ್ಲವೆಂಬಂತೆ (ಪೇವಿಸಂ. ೨-೫೨).

**ಬೀವು ಮಾಡು** = ಹಗ್ಗವನ್ನಾಗಿ ಮಾಡು ; ಹುರಿಯನ್ನಾಗಿಸು : ತನ್ನೆಸೆವ ರತ್ನಮಾಲೆಯನುನ್ನತನಂತೆಸೆಯೆ ಬೀವು ಮಾಡಿ ಬಱಿಕ್ಕಾ ಕನ್ನೆಯ ಕಯ್ಯೊಳ್ ಕೊಟ್ಟು (ಪೇವಿಪು. ೬-೫೭).

**ಬೀವುಗಾರ್ತಿ** (ನಾ). ಹಗ್ಗವನ್ನು ಮಾರುವವಳು : ಬೀವ ಕೊಳ್ಳಿರೆ ಯೆಂದು ವೀಣಾರಾವದಿಂ ಪೊಳಲಂಗಡಿಯೊಳಾ ಬೀವುಗಾರ್ತಿ [ಪಾಠಾಂ. ತಿ] ಬರಲ್ಕೆ (ಸಾಳ್ವಭಾ. ೩೦-೨೮). [ಬೀವು + —ಕಾಱ + —ತಿ$_1$ (< —ಇತ್ತಿ)]

**ಬೀವುಗಿತಿ** (ನಾ). = ಬೀವುಗಾರ್ತಿ : ಬೀವುಗಿತಿ ನಿನಗೇತಱಿಂದಾಯಿತ್ತಾ ವಿಭವವೆನೆ ಬೀವ ಮಾಱಿದೊಡೀ ವಿಭವವಾಯ್ತೆಂದವಳ ಸಖಿ ನುಡಿಯೆ (ಸಾಳ್ವಭಾ. ೩೦-೨೯). [ಬೀವು + — ಗಿತಿ$_0$ (< — ಗಿತ್ತಿ)]

**ಬೀವುಗೊಳ್** (ಕ್ರಿ). ಹಗ್ಗವನ್ನು ಕೊಂಡುಕೊಳ್ಳು : ಬಂದಂಗನೆ ಬೀವುಗೊಳ್ಳೆನುತುಂ ಪೊಕ್ಕಾ ಪುರೀವೀಥಿಯೊಳ್ ನಿರಹಂಕಾರದಿನೆಟ್ಟಿರುತ್ತಿರೆ (ಪೇವಿಪು. ೬-೫೮); ಪೋಗಿ ಪೊಱಲಂ ಜಳಜಾನನೆ ಬೀವುಗೊಳ್ಳೆನುತಂ ಪೊಕ್ಕಳ್ (ಶಂಹಂ. ೯-೭೦). [ಬೀವು + ಕೊಳ್$_1$]

**ಬೀವೋಜ** (ನಾ). ಒಬ್ಬಾತನ ಹೆಸರು : ಅಭಿಮಾನುಗಳೆಂಬ ಗೊಗ್ಗಿ ತನ್ನ ಮನ್ನೆಯ × × ಬೀವೋಜಂಗೆ ಬಿಟ್ಟಂ (ಎಕ. XI, ಮೊಳಕಾ. ೨೭-೯ : 962). [ಬೀವ (< ಬೀವು) + ಓಜ$_1$ (< ಒವಜ್ಝ)]

**ಬೀಸ**, ಬೀಸು$_3$ (ನಾ). ೧. ಒಂದು ಸಂಖ್ಯೆ ; ಇಪ್ಪತ್ತು : "ಬೀಸಿಗೆ (ಬೀಸ) — ವಿಂಶತ್ = ಇಪ್ಪತ್ತು" (ತದ್ಭಕೋ. ೩೨). ೨. ಇಪ್ಪತ್ತರಲ್ಲಿ ಒಂದು ಭಾಗ. ೩. (?) : ಭಂಗಾರವಂ ಮಾಣಿಕದಲ್ಲಿ ದೇವರಂಗ ಭೋಗಕ್ಕೆಯಾಚಂದ್ರಾರ್ಕರ್ × × ನಡವಂತಾಗಿ ನೂಱಕ್ಕೆ ಬೀಸವಂ ಬಿಟ್ಟರ್ ಮತ್ತಂ ಚೈತ್ರಾರೋಪಣಕ್ಕೆ ವರ್ಷಂಪ್ರತಿ ಬೀಸಕ್ಕೆ ಭಾಗವೊಂದು ಬಿಟ್ಟರ್ (ಸೌಇಇ· XV, ೧೪೫-೫೨; 1179). **ಬೀಸು$_3$ :** ೧. 'ಉತ್ತಮ ಬೀಸು' ಪರಾ. 'ವೀಸ' ಹೋ.

[← ಹಿಂ. ಮರಾ. ಬೀಸ್./ಪ್ರಾ. ವೀಸ್./ಸಂ. ವಿಂಶತಿ]

**ಬೀಸಗೆ**, ಬಿಸಿಗೆ, ಬೀಸಿಗೆ$_2$ (ನಾ). ೧. ಇಪ್ಪತ್ತುಪಲದ ಪ್ರಮಾಣ: ಬೀಸಗೆವೊಂದಕ್ಕಾ ಪೆರೆ ಲೇಸಾಗಿಹ ಗಂಧ ಪಂಚಭಾರದ ಸುಂಕಂ ಅರಸನೊಲಿದೀವ ಪಡಿಯಂ ಭರದಿಂ ತೊಂಭತ್ತು ಭಾರಕೇನುಂ ಬಕರ್ಣಂ (ವ್ಯವಹಾ. ೨೯-೧೫); ೧ ಬೀಸಗೆ— ೨೦ ಪಲ (ಕಣಾಅ. ೩೯೫). **ಬಿಸಿಗೆ :** ೧. ವಿಂಶತಿ ಪಲಂ ಬಿಸಿಗೆ (ಪಸಾರ. ೯೪); ಬಿಸಿಗೆ ಪಂದ ಕೊಪರಲೆ ಸಾಗಿಹ ಗಂಧ ಪಂಚ ಭಾರದ ಸುಂಕಂ (ಭಾಸ್ಕರ. ೩೪-೪). **ಬೀಸಿಗೆ$_2$ :** ೧. "ಪಲಮಕ್ಕವಿಪ್ಪತ್ತೆನಲ್ಕೆ ಬೀಸಿಗೆಯುದಕ್ಕುಂ" (ಹುಂಗರಾ. ೦೦೪-೦೦); ಭಂಡಿಯ ಕರುಸೆಯ ಮುಳವೆಗೆರಡು ಬೀಸಿಗೆ (ಎಇ. XIX, ೩೩-೨೮ ; 1135) ; ದಶದ್ವಯಪಲದಿಂ ನಿಲ್ಕುಂ ಬೀಸಿಗೆ (ವ್ಯವಹಾ. ೪-೨೫). ೨. (ಅರುವತ್ತುಸಂವತ್ಸರಗಳನ್ನು ಮೂರುಭಾಗಗಳನ್ನಾಗಿ ವಿಂಗಡಿಸಿದ) ಇಪ್ಪತ್ತುವರ್ಷಗಳ ಅವಧಿ : ಮೊದಲುತ್ತಮಬೀಸಿಗೆಯಿಂದಜ್ಝದಯಿಸುಗುಂ ನಾಲ್ಕು ಯುಗಮುವುಂ ಪ್ರಭವಾದ್ಯ(ಬ್ದ)ಂ (ಜಟ್ಟಿಪು. ೭-೫); ಕ್ರಮದಿಂದುತ್ತಮಂ ಬೀಸಿಗೆ ಮಧ್ಯಮಂ ಬೀಸಿಗೆ ಕನಿಷ್ಠಂ ಬೀಸಿಗೆಗಳೆನಿಸಿ ಇಪ್ಪತ್ತಿಪ್ಪತ್ತು ವರುಷಂಗಳಿಂದೊಪ್ಪುತ್ತನು ಭೂತಫಲಮಾಗಿಕರ್ಣಂ (ಪಿವೇಕ. ೩೨೦). ೩. ಒಂದು ಸಂಖ್ಯೆ; ಇಪ್ಪತ್ತು : "ಬೀಸಿಗೆ (ಬೀಸ) —ವಿಂಶತ್ = ಇಪ್ಪತ್ತು" (ತದ್ಭಕೋ. ೩೨).

[ಬೀಸ + —ಗೆ]

**ಬೀಸಣಿ** 'ಬೀಸಣಿಗೆ' ನೋ.

**ಬೀಸಣಿಕೆ** 'ಬೀಸಣಿಗೆ' ನೋ.

**ಬೀಸಣಿಗೆ**, ಬೀಸಣಿ, ಬೀಸಣಿಕೆ (ನಾ). ಗಾಳಿ ಬೀಸಿಕೊಳ್ಳಲು (ಓಲೆಗರಿ, ಬಿದಿರು ಮುಂತಾದುವುಗಳಿಂದ) ತಯಾರಿಸಿದ ಒಂದು ಸಾಧನ ; ವ್ಯಜನ : "ವ್ಯಜನಂ. ತಾಲವೃಂತಕಂ — ಈ ೨ ಬೀಸಣಿಗೆ" (ಹಲಾಯು. ೫೨-೧೫೫); ಬೀಸಣಿಗೆ ಗಿಂಡಿ ಹಡಪಂ ಮಣಿ ಕಾಳಾಂಜಿಯನಾಂತಸೆದರ್ . . . ಸತಿಯರ್ (ಉದ್ಭಟ. ೨-೯) ; ಝಳವ ಝೋಂಪಿಸಿ ಬೀಸಿದವು ತಂಬೆಲರ ಬೀಸಣಿಗೆಗಳು (ಕುವ್ಯಾಅ. ೦೨-೧೫). **ಬೀಸಣಿ :** ಕರದ ಬೀಸಣಿಕೊಡೆಯ ಭಸಿತದಾಧಾರ ಜಪಸರವಾಂತು (ಸೋಅಪು. ೦೨-೯). **ಬೀಸಣಿಕೆ :** ಚಂದಸದಿಂದ ಪೆಟ್ಟಿಗೆ ಕರಡಿಗೆ ಬೀಸಣಿಕೆ ಮುಂತಾದವುಗಳನ್ನು ಮಾಡುತ್ತಾರೆ (ಮುಂಜಯು. ೩-೭೮); ಕೂಸು ಇದ್ದ ಘನಿಗೆ ಬೀಸಣಿಕೆ ಯಾತಕ ಕೂಸು ಕಂದಯ್ಯ ಒಳ ಹೊರಗ ಆಡಿದರ ಬೀಸಣಿಕೆಗಾಳಿ ಸುಳಿದಾವ (ಗರತಿ. ೯೯). 'ಬಿಜ್ಜಣಿಗೆ' ಪರಾ.

**ಬೀಸಣಿಗೆಯ ಊಳಿಗ** = ಬೀಸಣಿಗೆಯನ್ನು ಹಿಡಿದು ಗಾಳಿ ಬೀಸುವ ಸೇವೆ : ಅರಮನೆಯಲ್ಲಿ ಸಮುಖದೊಳು ನಿತ್ಯಕಟ್ಟಳೆಯಲ್ಲಿ ನಡೆಯುವ ಊಳಿಗಗಳು — ಸಂಚಿಯ ಊಳಿಗ . . . ತೂಗುನೀರಿನ ಊಳಿಗ, ಬೀಸಣಿಗೆಯ ಊಳಿಗ (ಮುಹಾವಂ. I, ೪೩).

[< ಬೀಸು$_1$. / ತಮಿ. ವಿಚಿಱಿ; ಮಲ. ವೀಶೇರಿ, ವಿಶಱಿ; ತುಳು. ಬೀಸಣಿಗೆ, ಬೀಸನಿಗೆ ; ತೆಲು. ವೀವನ. / ಸಂ. ವ್ಯಜನ]

**ಬೀಸಣಿಗೆಮರ** (ನಾ). ಬೀಸಣಿಗೆಯಾಕಾರದ ಎಲೆಗಳನ್ನು ಹೊಂದಿರುವ ಒಂದು ಬಗೆಯ ಮರ : ಶ್ರೀತಾಳೆ, ಕೊಡೆಮರ, ಸೀಗೋ. ಬೀಸಣಿಗೆಮರ, ಓಲೆಗರಿಮರ (ವ್ಯಾಶಿಗ. ೨೫-೪೫೮). [ಬೀಸಣಿಗೆ + ಮರ$_1$]

**ಬೀಸನೆ** (ಅ). ವೇಗವಾಗಿ ; ಶೀಘ್ರವಾಗಿ : ಅಲ್ಲಿಂದ ಬೀಸನೆ ಹೆಜ್ಜೆ ಹಾಕಿ ಹೊರಟಾಗ . . . ಕೇಳಿಸಿತು (ಮೂಕಜ್ಜಿ. ೩೭).

ಬೀಸಬೀಸನೆ (ದ್ವಿರುಕ್ತಿ) : ಬನ್ನಿ, ಬೀಸಬೀಸನೆ ಹೋಗುವ (ಮೂಕಜ್ಜಿ. ೫೯). [ಬೀಸು$_1$ + —ಅನೆ$_1$]

**ಬೀಸರ**, ಬೀಸರು (ನಾ). ೧. ವ್ಯರ್ಥವಾದುದು ; ನಿರರ್ಥಕವಾದುದು; ನಿಷ್ಪ್ರಯೋಜಕವಾದುದು: ತಡಿಯೊಳ್ ಪೊಳೆವ ತಮ್ಮ ನೆಟಲನಟಲ್ದೋವದ ನಲ್ಲಳಿಂದು ಲಲ್ಲೆಯ್ಸಿ ನೋಟ್ಟಿ ಜಕ್ಕವಕ್ಕಿಗಳಾಸೆಯಂ ಬೀಸರಂ ಮಾಡಿಯುಂ . . . ಸಾಯಂತನಸಮಯಸವಿಾರಣಂ ಸೌಖ್ಯಸಾರಸರ್ವಸ್ವಮೆನಿಸಿರ್ದಾಸಲ್ (ಚಂದ್ರಪು. ೬-೪ ಪ) ; ಪರಿಮಳದ ಮಯಮೆನಿಪ ಸಕಲದ್ರವ್ಯಂಗಳಂ ಪರಮಗೆಂತರ್ಪಿಸುವೆನವು ಬೀಸರಂಗಳಂ (ದೀಕ್ಷಾಬೋ. ೯೯-೫೪) ; ಬಿನ್ನು ಬೀಸರವಹುದೆ ನಿಮ್ಮಯ ಸೊಮ್ಮಿನವರಿಗೆ (ಕುವ್ಯಾಪಿ. ೬-೫೩) ; ಬೀಸರವಿದೆಂದು ಜೀವವಂ ಪರಮೇಶ್ವರಂಗರ್ಪಿಸುತ್ತಂ (ಬಸವಪು. ೭-೦೭-೨೫). ೨. ನಾಶ ; ಹಾಳು ; ಕೇಡು : ಆಸುರವಾದುದು ಬೀಸರವಾಯಿತು (ಅವತಂ. ೦೨೦-೫೪೯) ; ಕೇಳು ನಿನ್ನಾತನ ವಿನೋದದ ಖೂಳ ಬೋಳೆಯ ತನದಲೊದಗಿದ ಬಾಳಿಕೆಯ ಬೀಸರವನೆಂದನು ಸಂಜಯನು (ಕುವ್ಯಾಕ. ೦-೦೭) ; ಮೇದಿನೀಪರಿಯಟಣ ಪುಣ್ಯಫಲೋದಯಕೆ ಪಡಿಯುಂಟೆ ಬೀಸರವಿಲ್ಲ ಹಿತಗೆಂದ (ಪಿಭಾಗ. ೯-೭-೧೫). ೩. ಅಹಿತವಾದುದು ; ಕೆಟ್ಟುದು ; ನಿಂದೆ : ಕೂಸಂ ಕೊಟ್ಟಪೆನೆಂಬೀ ದೂಸಱ ನೀವಿಂತು ವಜ್ಜಗೆಯ್ಯುತ್ತೆನ್ನಂ ಬೀಸರವಾನೆ ನುಡಿ[ಪಾಠಾಂ. ಮಾಡ್ತ]ದಪಿರಿ (ಶಂಶಹಂ. ೨೭-೩); ಕುರುಪತಿ ಬೀಸರವಂ ನುಡಿಯದೊಳ್ಳಿತಂ ನುಡಿದಪನೇ (ಗಾವ್ಯಾಗ.

೩೯೬). 'ಬೀಸರನುಡಿ' ಪರಾ. ೪. ಕಷ್ಟ ; ಆಪತ್ತು : ಆ ಸುಯೋಧನ ಸುತರ ಸರಳ ವಿಳಾಸವನು ಖಂಡಿಸಿದನವದಿರ ಬೀಸರಕೆ ಬಂದಡ್ಡಬೀಳುವ ಭಟರ ಕೆಡೆಯೆಚ್ಚ (ಕುಮಾ.ದ್ರೋ. ೫-೬೫); ಬೀಸರಕೆ ಬೆದಱುವ ವಧೂಜನ ದಾಸಱಡಗಲು . . . ನಗುತಿಂತೆಂದನಸುರಾರಾತಿ ಕರುಣದಲಿ (ಶಿಭಾಗ. ೧೦-೧೬-೫೨). ೫. ಕೊರತೆ ; ಲೋಪ ; ಕುಂದು : ಬೇಸಱವಖಿಳವೇದಂಗಳುಚ್ಚರಿಪ ವಿಘ್ನೇಶನ ಪಡೆದ ಮಾತೃಕೆಯ ಭಾಸುರಜಿಹ್ವೆಯೊಳ್ ಪೊಱಮಟ್ಟು ವಚನಕೆ ಬೀಸರವಿಲ್ಲೆಂದಳವಳು (ಮೋಹತ. ೨೫-೩೦). ೬. ಅಂತ್ಯ ; ಕೊನೆ; ಮುಕ್ತಾಯ : ಕಡುಪಿನಿಂದೆರಗಿದಂ ಬೇಡಬೇಡೆಂಬವರ ಕಡೆಗಣಿಸಿ ನುಡಿಗಳ್ಗೆ ಬೀಸರಂ ಬರೆದಂ (ಕಾಂಚೀರ. ೧೭೦-೩೮೦). ೭. ಮಲಿನತೆ ; ಅಶುದ್ಧತೆ ; ಮೈಲಿಗೆ : ಸಂಸಾರವೆಂಬ ಶ್ವಾನನಟ್ಟಿ ಮಾಸಲ ಬೀಸರ ಮಾಡಿದಿರಯ್ಯಾ (ಬಸವ. ೫೦೭) ; ಮನ ಬೀಸರವಾದೊಡೆ ಪ್ರಾಣ ಪಲ್ಲಟವಹುದವ್ವ (ಮಹಾದೇ. ೭. ೪೩-೯೬) ; ಮರುತನ ಸಂಗದಿಂದ ಪರಿಮಳ ಬೀಸರವಾಯಿತ್ತು (ಲಿಂಗಲೀ. ೩೭೫-೨). ೮. ಚೆಲ್ಲಾಪಿಲ್ಲಿ ; ಅಸ್ತವ್ಯಸ್ತ : ಕಡುಗೊಯ್ಯಲಾದ ಕೆಯ್ಯಂತೆ ತೆನೆ ಮುಱಿದು ಬೀಸರವಾದ ರಾಶಿಯಂತೆ ಪುಲಿವೊಗಂಗೆಟ್ಟು (ಅನಂಪು. ೧೦-೯೩ ವ) ; ಭಾಸುರನಾಗನಾಥನ ಫಣಾಮಣಿರುಕ್ಸ್ವಯಮುರ್ಬಿ ಧಾತ್ರಿ ಮೇಣ್ಬೀಸರಮಾಗಲಲ್ಲಿ ಪೊಱಪೊಣ್ಮ ಮಡಲ್ತು ವಿಜೃಂಭಿಪಂತೆ ತೋರ್ಪಿ ಸರಸೀಡ್ಯಸನ್ನಿಧಿಯೊಳ್ (ಉದ್ಯ ಟಿ. ೦-೪೬). ೯. ಕೆದರುವಿಕೆ ; ಕಲಸುವಿಕೆ : ಪೂಸಿದ ಕುಂಕುಮಮೆನಸುಂ ಬೀಸರವಾಗಿರದು (ಬಂಹಂ. ೩-೧೮). ೧೦. ಛಿದ್ರ ; ಭಿನ್ನ ; ಭಂಗ : ತನ್ನಿಷ್ಟಲಿಂಗ ಭಿನ್ನಮಾದಾಗೆ . . . ದೋಷಹರ ಬಸವ ಶಂಕರದೇವರಾ ಲಿಂಗ ಬೀಸರಾಗಲಿ ತಮ್ಮ ತನುವಂ ನಿರಾಕರಿಸಿ ಶೇಷಧರನಂಘ್ರಿಯಂ ಪೊರ್ದಿ ಸುಖಿಯಾದರ್ (ಗುರುಚಾ. ೧೬-೨೬). ೧೧. ಅಳ್ಳಕ ; ಸಡಿಲ : ಬೀಸರವಾಗದಪ್ಪ . . . ಮಾಸಲಂತಿರೆ ಮನವಿರ್ಪುದು (ಅರ್ಥಪಂ. ೯-೯೬). ಬೀಸರು: ೧೨. ಕಪಟ ; ವಂಚನೆ ; ಮೋಸ : ಲೋಕದಲ್ಲಿ ಬಿನ್ನಾಣದಿಂ ಬೀಸರಿಲ್ಲದ ಭಾವಶುದ್ಧಿಯಿಂದೊಲಿದು ನಲಿದೊಲವಿನಿಂದ ಸ್ಥಾಣುವಿಗೆ ನೀರೆಱೆದು . . . ಮುನಿಸಂಕುಲಂ ಕೇಣಮಿಲ್ಲದೆ ತದ್ವನಾಂತರದೊಳಿರ್ದುದು (ಸಂಧಿವಾ ೨-೨೦).
[ಬೀ + ?./ ತೆಲು. ವೀಸರ]

**ಬೀಸರಂಬೊಂದು** (ಕ್ರಿ). ಮಲಿನವಾಗು : ಇವಳ ಕಡೆಗಣ್ಣ ನುಣ್ಗದಿರ್ಗಣೆಯನೆಚ್ಚಪಂ ಕಾಮದೇವಂ . . . ಬೀಸರಂಬೊಂದಿತ್ತು ಮನದೆಸಕಂ (ಅರಾಕ. ೨-೫-೭). [ಬೀಸರ + ಪೊಂದು$_1$ (< ಪೊರ್ದು)]

**ಬೀಸರಂಬೊಗಿಸು** (ಕ್ರಿ). ಮಲಿನಗೊಳಿಸು : ಏಕಭಾಂಡವಾದುದ ಕಂಡುಣದೆ . . . ಆ ಸಯುದಾನಗಳ ತೆಗೆದವಂ ಬಳಸದೆ ಬಳಸಿ ಬೀಸರಂಬೊಗಿಸಿದೊಂದಱೊಳಚಳದಿಂದೆಯೊಂದಿತೆನ್ನದೆಯುಂಡು (ಸಿದ್ಧೇಪು. ೨೩-೧೦೨).
[ಬೀಸರಂಬೊಗು + — ಇಸು$_3$]

**ಬೀಸರಂಬೊಗು, ಬೀಸರಂಹೊಗು** (ಕ್ರಿ). ೧. ಕೆಡು ; ಕೆಟ್ಟುಹೋಗು : ಮುಖದೊಳ್ಗಾನಮಂ ಕೆಯ್ಯೊಳಭಿನಯಮಂ ದೃಷ್ಟಿಯೊಳ್ ರಸಮಂ ಪದತಳದೊಳ್ ತಾಳಮಂ ಬೀಸರಂಬೊಗಲೀಯದೆ ಸೆಱೆವಿಡಿದು (ರಾಜಶೇ. ೫-೧೯ ವ). ೨. ಕಡಮೆಯಾಗು ; ಕುಗ್ಗು ; ಕುಂದು : ವಾಸವಂ ಬೀಸರಂಬೊಗದ ಸಡಗರದಿಂದೀಸಿಕೊಂಡು ಲೇಸಾಗಿ ವಾಸನೆವಡೆದ ದೇವಾಂಗವಾಸಮಂ ತನ್ನಯ ಪರ್ಯಂಕಾಸನಬಂಧದೊಳ್ ಪಾಸಿ ಮೆಲ್ಲನಲ್ಲಿ ಕುಳ್ಳಿರಿಸುವುದುಂ (ಜಾರಪು. ೭-೯೫ ವ). ೩. ಮುಗಿ ; ತೀರು ; ಕೊನೆಗಾಣು : ಬಿರ್ಚುವಲೆ ಬಳ್ಳಿವಲೆ ಗೋರಿವಲೆ ಖಂಡವಲೆಗಳೆಂಬಿವಂ ಬೀಸರಂಬೊ[ಪಾಠಾಂ. ಬು]ಗದೆ ಬಿರ್ಚಿ ಬೀಸಿದಾಗಳ್ (ರಾಜಶೇ. ೫-೧೦೪ ವ). ೪. ಅಶುದ್ಧವಾಗು ; ಮಾಲಿನ್ಯವನ್ನು ಹೊಂದು : 'ಬೀಸರಂಬೊಗಿಸು' ಪರಾ. **ಬೀಸರುಹೊಗು** : ೩. ಮುರಹರನಾಣೆಘೋಷಣೆಯಲಿ ಜವಿ ಬೀಸರುಹೊ[ಪಾಠಾಂ ಹೋ]ಗದಂತೆ ನೀನಿರ್ದು ಕರೆಯಲಟ್ಟಿದರೆ ದ್ವಾರಕಿಗೆಯ್ದುವುದು (ಮೋಹತ. ೦೩-೦೨) ; "ಜವಿಬೀಸರು = ಕೂದಲಷ್ಟು ಪಾಲುಮಾರಿಕೆ" (ಮೋಹತ. ೦೩-೦೨ ಅಡಿಟಿ). [ಬೀಸರ + ಪೊಗು]

**ಬೀಸರಂಬೋಗು, ಬೀಸರಂವೋಗು, ಬೀಸರವೋಗು** (ಕ್ರಿ). ೧. ವ್ಯರ್ಥವಾಗು ; ನಿರರ್ಥಕವಾಗು : ತೊಡರಂ ದೇಸೆಗೆ ಕಾಲೊಳಿಕ್ಕಿ ಪಡೆದ ರ್ಥಂ ಬೀಸರಂಬೋಗದಂತೊಡಲಂ ರಕ್ಷಿಸಿ (ಎಕ. V. ಚೀಂರಾ. ೧೦೨-೪೬ ; 1220) ; ಅಲರ ಬಿಜ್ಜಣಿಗೆಯಿಂ ಬೀಸೆ ಬೀಸರಂಬೋದಂತೆ ಹಸನಂ ಹಸಂಗೆಡೆ (ರಾಜಶೇ. ೭-೯೨ ವ). ೨. ನಾಶವಾಗು ; ಹಾಳಾಗು : ಬೀಸರಂಬೋದುದಿನ್ನೇನು ವಂಶದ ಫಲಂ (ಇಹರ. ದೇ. ೩೬-೨೨). ೩. ಮುಗಿ ; ಕೊನೆಗಾಣು : (ಕ). **ಬೀಸರಂವೋಗು** : ೪. ವಿಚಲಿತವಾಗು ; ವಿಕ್ಷಿಪ್ತವಾಗು : ಕುಕಿಲ್ವ ಪಡಿಯಱವಕ್ಕಿಗಳುಗ್ಗಡಣೆಗೆ ಬೀಸರಂವೋಗದೆ ... ಪದ್ಮಕಿಂಜಲ್ಕದೊಳ್ ಸ್ವಸ್ತಿಕಂ ಬರೆವ ಹಂಸಗಾಮಿನಿಯರುಂ (ನಾಗಕು. ೩೦-೩೬ ವ). **ಬೀಸರವೋಗು** : ೧. ಹಿಡಿದುದ ಬಿಡಸು ಬಿಟ್ಟು ಱಚ್ಚೆಯ ಬಳಸಿ ಮುಂದಣಡಿಗೆ ಬೀಸರವೋಗಿ ಬಳಲುವನಲ್ಲ (ಶಿವಗೀ. ೨೭-೧೦೭) ; ಮಾಸರ ಗಂಡನೆಂದೆಂಬ ಬಿರುದಿನ ವಿಲಾಸದ ಸಡೆ ನಮಗಿನ್ನು ಬೀಸರವೋಗದೆಂದೆಣಿಕೆಯನಾ ನೃಪ ಸೂಸಿ ಬಿಟ್ಟನು ಮನದೊಳಗೆ (ಕುಂಚಾಸಾಂ. ೮-೯೭). ೨. ದಿನ ವೃಥಾ ಹೋಗದೆ ಯೌವನ ಬೀಸರವೋಗದ ಮುನ್ನ ಪಿನಾಕಿಯ ತಂದು ನೆರಹೆನ್ನವ್ವಾ (ಸರ್ವವ. ೯೩-೫೦೪): ವಿತತಲಕ್ಷಣಾಮೃ ಮುಂತಾದ ನೈವೇದ್ಯಸಂತತಿಯದೀಶಂಗೆ ಹಿತವಲ್ಲೆಂದು ನೆನೆದು ನಿಶ್ಚಿತದೆ ಬೀಸರವೋಗದಮಳತರಸಾರ ಜೀವಾತ್ಮಾರ್ಪಿತಂಗೆಯ್ಯುತೆ (ಸಿದ್ಧೇಪು. ೨೦-೩೫). ೫. ಮೋಸಹೋಗು ; ವಂಚಿತವಾಗು : ಈಶ್ವರ ನುಡಿದ ನುಡಿಯನಱಿದೆವೆಂದು ಬೀಸರವೋದರಣ್ಣಗಳಿಲ್ಲ (ಅವಶಂ. ೨೫-೧೦೪). ೬. ಮಲಿನವಾಗು ; ಮಾಸಲಳಿ; ಮಾಲಿನ್ಯವನ್ನು ಹೊಂದು : ತನು ಮಾಸಲು ಮನವೆಲ್ಲ ಮಾಸಲು ಶಿವನ ಈ ಮಾಸಲು ಬೀಸರವೋಗದಂತಿದ್ದರೆ ಆತನೆ ಜಗದೀಶ ಕಾಣಾ (ದೇವಾವ. ೫೦-೧೦೧) ; ಲಿಂಗದಲ್ಲಿ ಮಱೆದು ಮಚ್ಚಿರ್ದ ಮನವು ಹೊಱಗೆ ಬೀಸರವೋಗದೆ (ಮಹಾದೇ. ೪. ೧೨೩-೨೪೮); ಬೀಸರವೋಗದ ಮುನ್ನ ಮಾಸಲಾಗಿ ಅರ್ಪಿಸಬಲ್ಲಡೆ ಕೂಡಿಕೊಂಡಿಪ್ಪ ನಮ್ಮ ಕೂಡಲ ಚನ್ನಸಂಗಮದೇವನು (ಚನ್ನವ.ಕ. ೪೨೦-೮೯೪). ೭. ಭಂಗವಾಗು ; ಮುರಿ : ತನ್ನಲ್ಲಿ ತಾನು ನಿಶ್ಚಯವಾಗಿ ಭಾಷೆ ಬೀಸರವೋಗದೆಯಿಪ್ಪ ಇರವು ಕೂಡಲಸಂಗಮದೇವರಲ್ಲಿ ನಮ್ಮ ಮಹದೇವಿಯಕ್ಕಂಗಾಯಿತ್ತು (ಬಸವ. ೪. ೧೨೮೫).
[ಬೀಸರ + ಪೋಗು$_1$ (<ಪೋ$_1$)]

**ಬೀಸರಂವೋಗು** 'ಬೀಸರಂಬೋಗು' ನೋ.

**ಬೀಸರನುಡಿ** (ನಾ). ಮೂದಲಿಕೆಯ ಮಾತು ; ನಿಂದೆ : ಹರ ಶಂಕರ ಪಕ್ಷದಿನೀ ದೊರೆ ಪೊಸಬೆಯನಂಟಕೊಂಡು ಬೀಸರನುಡಿಯಂ ಸೊರಹಿ ಕೆಡೆನುಡಿವುತೆನ್ನಂ ಜಱಿದಪನೀ ನಿಂದೆ ನಿನ್ನದೇ ಶಶಿಮೌಳೀ (ಹಾಲಾಸ್ಯ ೩-೦೨-೨೪). [ಬೀಸರ + ನುಡಿ$_2$]

**ಬೀಸರವೋಗು** 'ಬೀಸರಂಬೋಗು' ನೋ.

**ಬೀಸರಿಗ** (ನಾ). ನಾಶಮಾಡುವವನು ; ಕೇಡುಂಟು ಮಾಡುವವನು : ಲೇಸು ಮಾಡಿದೆ ಭುವನಭವನದ ಬೀಸರಿಗನಸುಗೊಂಡು ನಿಜಪದದಾಸವರ್ಗವನುದ್ಧರಿಸಿದೆ (ಶಿಭಾಗ. ೩-೯-೪೦). [ಬೀಸರ + — ಇಗ]

**ಬೀಸರಿಸು** (ಕ್ರಿ). ೧. ನಾಶ ಮಾಡು : ಸುತ್ತ ಕೆದರಿದ ಹಿಳುಕನೋಸರಿಸಿ ಬೀಸರಿಸಿ . . . ಬಿತ್ತಿದನು ಹಿಳುಕನಂಗಾಂಗದೊಳು (ಜಸಮು. ೩೬-೬೨). ೨. ಭಂಗವಾಗು : ಭಾಸುರಬಾಹ್ಯಸಾಮಗ್ರಿಯೊಳ್ಮನಿ ಧ್ಯಾನ ಬೀಸರಿಸದೆ ನಿಂದನೊಳಗೆ (ಭರತ. ೭೭-೯). ೩. ಬಿಡು ; ತ್ಯಜಿಸು ; ತೊರೆ : ಮೋಸದೊಳಿರ್ದವ ನಾನಲ್ಪದವನಿನ್ನು ಬೀಸರಿಸುವೆನು ನೋಡೆಂದ (ಭರತ. ೪೦-೭). [ಬೀಸರ + — ಇಸು$_3$]

**ಬೀಸರು** 'ಬೀಸರ' ನೋ.

**ಬೀಸರುಹೊಗು** 'ಬೀಸರಂಬೊಗು' ನೋ.

**ಬೀಸಲು** (ನಾ). ೧. ಬೀಸುವಿಕೆ ; ಬೀಸುವುದು : ಕಟಂಜನದ ಮಿಂಚುಂ ಗಂಬಿಯುನ್ನೊದೆದು ನೀಡುಂಗಯ್ಗಳ ಬೀಸಲಿಂದ ತೇಲ್ದು ಹೋಗಿ (ಚಿತ್ಮ. ೧೦೯-೦೫). 'ತೋಳ್ವೀಸಲು' ಪರಾ. ೨. ವಿಸ್ತಾರವಾದುದು ; ವಿಶಾಲವಾದುದು : 'ಬೀಸಲುಮನ' ಪರಾ.
[ಬೀಸು$_1$ + – ಅಲು (< – ಅಲ್$_2$) ]

**ಬೀಸಲುಮನ** (ನಾ). ವಿಶಾಲವಾದ ಮನಸ್ಸು : ಬೀಸಲುಮನದಲ್ಲಿ ಉತ್ಸಾಹ ಜೀವಾಳ ಈಸಲು ಬಿದ್ದಿತು ರಾಮರಾಮಾ (ಸೂರ್ಯಪಾ. ೮೫-೬). [ಬೀಸಲು + ಮನ]

**ಬೀಸಾಕು**, ಬಿಸಾಕು (ಕ್ರಿ). ಎಸೆ; ಒಗೆ : ಅವನು ಪಾತ್ರೆ ಬೀಸಾಕಬಹುದು (ಶಾರತಿ. ೬೫). **ಬಿಸಾಕು** : ಯಾರೋ ಉಂಡು ಬಿಸಾಕಿದ ಎಂಜಲೆಲೆಯನ್ನು ಹೆಕ್ಕಿ ನೆಕ್ಕುತ್ತಿದ್ದರು (ಮುಂಗಾಮು. ೧೯); ನನ್ನ ಕಡೆ ಯಾರೂ ಒಂದು ರೊಟ್ಟಿಯ ತುಂಡನ್ನೂ ಕೂಡ ಬಿಸಾಕುವುದಿಲ್ಲ (ಕಮಳ. ೦೦೩).
[ಬೀಸು$_1$ + ಹಾಕು (<ಪಾಯ್ಕು$_1$)]

**ಬೀಸಾಟು** 'ಬೀಸಾಡು' ಪರಾ.

**ಬೀಸಾಡು**, ಬಿಸಾಡು (ಕ್ರಿ). ಬಿಸಾಟು, ಬೀಸಾಟು (ಭೂತನ್ಯೂ). ೧. (ದೂರಕ್ಕೆ) ಒಗೆ ; ಎಸೆ ; ಬಿಸುಡು : "ಬೀಸಾಡು (ಬೀಸು + ಆಡು) ಕರವಿಮೋಚನೇ" (ಶಮಧಾ); ಲೇಸುಲೇಸೆನುತೆ ಪೆಟ್ಟಿಗೆಯನೀಕ್ಷಿಸು ತಂದು ಬೀಸಾಟನೆತ್ತಿ ಹೊಱಯಿಂಕೆ (ತಿರುರ. ದೀ. ೦೩-೬); ಅವಳು . . . ಅವನಿಯಲಿ ಬೀಸಾಟು ಪದಕವ ಬೆಪರಿ ಬಳಲುತ ಬಸುಱ ಹೊಯ್ದಳು (ಕೌತಿಠಾ. ೩-೩೨). ೨. ತೊರೆ ; ತ್ಯಜಿಸು : ಒಳಹೊಱಗೊಂದಾಗದವರಿಗೆ ಅಳಿಯಾಸೆದೋಱ ಬೀಸಾಡುವನವರ ಜಗದೀಶ ಕೂಡಲಸಂಗಮದೇವ (ಬಸವ. ೯೬). **ಬಿಸಾಡು** : ೧. ಮಡಿಯ ಕೂಲಿಯ ಬೇಡ ಹೋದರೆ ಬಿಳಿದು ಹಱದು ಎನ್ನ ಮೇಲೆ ಬಿಸಾಟನು (ಮಡಿವಾ. ೨೯-೪೨): ಸತ್ತಡೆಳದು ಬಿಸಾಡುವರು (ಎಕ. X (೩), ಚನ್ನಪ. ೧೬೩-೦೩ ; 1300) ; ಮೈಮೇಲಿನ ಬಟ್ಟೆಗಳಿಗೆ ಬೆಂಕಿ ಹತ್ತಿದರೆ, ಆ ಕ್ಷಣವೇ ಅದನ್ನು ಮೈಮೇಲಿಂದ ತೆಗೆದು ದೂರ ಬಿಸಾಡಬೇಕು (ಮುಂಬಯು. ೪-೬೦). ೨. ಸುಡಲಿನ್ನು ಸಂಸಾರಭೋಗವಿನ್ನೇಕೆಂದು ಬಿಡುವಲ್ಲಿ ಬಿಸಾಡಿದನೊ (ಅಂಜತ. ೦೪-೦೩೬). [ಬೀಸು$_1$ + ಆಡು$_1$]

**ಬೀಸಿಕೆ**, ಬೀಸಿಗೆ$_1$ (ನಾ). ೧. ಎಸೆಯುವಿಕೆ ; ಬೀಸುವಿಕೆ : ಗಿರಿಯ ಶಿಖರದ ಹೊಯ್ಲಿನಲಿ ಹೆಮ್ಮರನ ಬೀಸಿಕೆಗಳಲಿ . . . ಹೊದೆಸಿದುದು ನೆಲದುಪ್ಪರದ ರುಧಿರದಲಡಗಿದುದು ನಭವಿವರ ಸಮರದಲಿ (ತೊರಾ. ೬-೦೩-೩೩). **ಬೀಸಿಗೆ$_1$** : ೨. ಅಡುವಿಕೆ ; ಹೊಡೆತ ; ಪೆಟ್ಟು : ಹಱಗೊರಳ ತೋಳಿನ ಬೀಸಿಗೆ [ಶಾಣಾಂ. ಕೆ]ಯ ಬಿಱಸಿನಲಿ ಹೊರಳಿತು ಮುಂಡವಾ ಖಳನ (ತೊರಾ. ೩-೬-೨೬) ; ಅಸುರಾರಿ ಮಹಾಸ್ತ್ರನಿಕರದ ಬೀಸಿಗೆಯ ಬಿಱುವಳೆಯನದ ಹೊಱಬೀಸಿದುದು ಸುರರಸ್ತ್ರಶಸ್ತ್ರಾವಳಿಯ ಬಿಱುಘಾಳಿ (ಖಠಾಗ. ೬-೦೦-೦೬). ೩. ವ್ಯಾಪ್ತಿ ; ಹರಹು : ನೇಸಱನು ಮುಸುಕಿತು ವಿಮಾನದ ಬೀಸಿಗೆಯ ಬಹುರತ್ನಕಾಂತಿಗಳು (ಖಠಾಗ ೪-೦೦-೩೦). [ಬೀಸು$_1$ + – ಇಕೆ]

**ಬೀಸಿಗೆ$_1$** 'ಬೀಸಿಕೆ' ನೋ.

**ಬೀಸಿಗೆ$_2$** 'ಬೀಸಗೆ' ನೋ.

**ಬೀಸಿಸು** (ಕ್ರಿ). ದೀಪ ಮುಂತಾದುವನ್ನು ಗಾಳಿಯೂದಿ ಆರಿಸು,— ನಂದಿಸು : ಒಂದು ದಿನ ಫಲುಗುಣನ ಭೋಜನದಂದವನು ತಾವಱ ಯಲಿಕೆಯರವಿಂದವದನೆಯ ಕೈಯ ದೀಪವನಿರುಳು ಬೀಸಿಸಿದ (ಗಂಭಪ. ೦೬-೦೦೬). [ಬೀಸು$_1$ + – ಇಸು$_3$]

**ಬೀಸು$_1$** (ಕ್ರಿ). ೧. (ವೇಗವಾಗಿ) ಎಸೆ : ಒಗೆ ; ಬಿಸುಡು : ದೈತ್ಯನಂ ಪಿಡಿದು ಮೃಣಾಳನಾಳಮನೆ ಸೀಳ್ವವೊಲೊರ್ಮೆಯೆ ಸೀಳ್ದು ಬೀಸಿದಂ (ಪಂಪಭಾ. ೩-೦೩) ; ಕಾಲನವುಂಕೆ ಪತ್ತಿ ಪಿಡಿದೋಘದೆ ಭೋರನೆ ಬೀಸಿ ಕಂಭದೊಳ್ ಲೀಲೆಯಿನಟ್ಟಿ ಮೋದಿಸೆನೆ (ಧರ್ಮಾಮೃ. ೯-೦೫೧). ೨. (ಪ್ರಾಣಿ, ಪಕ್ಷಿ ಮುಂತಾದುವುಗಳನ್ನು ಹಿಡಿಯುವುದಕ್ಕಾಗಿ ಬಲೆ, ಬಟ್ಟೆ ಇತ್ಯಾದಿಗಳನ್ನು) ಎಸೆದು ಹರಡು, – ಹರವು : ನಾಳೆ ಬಂದು ಜಾಲಮಂ ಬೀಸಿ ಮತ್ಸ್ಯಂಗಳಂ ಪಿಡಿವಂ (ಪಂಚತಂ. ೧೫೩-೨೦); ಬಲೆಯನೊಂದಂ ಗಳಿಸಿ ನಿಚ್ಚಂ ಬಲೆಯನುದಕದೊಳೆತ್ತಿ ಬೀಸಲು (ಬಸಪು. ೨೬-೨೦); ಸಿಲುಕುವುವು ಮೃಗಪಕ್ಷಿ ಹೂಡಿದ ಬಲೆಗಳಲಿ ಕಾಡಾನೆ ಬೀಸಿದ ಬಲೆಯ ಕೊಂಬುದೆ (ಕುವ್ಯಾಕ. ೦೩-೦೪). ೩. (ಮಾಯೆ, ಗಾರುಡಿ, ಪರಿಮಳ ಮುಂತಾದುವುಗಳನ್ನು) ಪಸರಿಸು ; ಆವರಿಸುವಂತೆ ಮಾಡು : ಮಾಯಮನೆ ಬೀಸಿ ಪೆಱರನುಪಾಯದೆ ಠಕ್ಕಿಕ್ಕಿ (ಧರ್ಮಾಮೃ. ೧-೦೦೨) ; ಕಾಡೊಡೆಯನಂ ಸೋನು ಸೊಕ್ಕಿನ ಧೂಪಮಂ ಬೀಸು (ಹಪಕಾ. ೫-೨೯); ಮೋಹನದ ಮದ್ದುಗಳ ಮಾಯೆಯ ಬೀಸುವುದು ಸೂಸುವುದು ಸೊಗಸುಗಳ (ಕುವ್ಯಾಅ. ೦೩-೨). ೪. ಚಾಚು ; ನೀಡು: ಸುತ್ತಲುಂ ಭೀಮಭೀಷಣ ಕುಟಿಲಜಟಿಲವಿನ್ಯಾಸದಿಂ ಶಾಖಾಮಹಾಶಾಖೆಗಳ ಬೀಸಿ, ಸ್ವಚ್ಛಂದದಿಂ ಬೆಳೆದಿರ್ದವಲ್ಲಿ ಭೂಜೇಶಕುಲಕೀರ್ತಿಗಳ್ ಲಕ್ಷೋಪಲಕ್ಷವಾಗಿ (ಶತ್ರ್ಯಂಗ. ೩-೬೦). ೫. (ಬೀಸಣಿಗೆ ಮುಂತಾದುವುಗಳಿಂದ) ಗಾಳಿಯನ್ನು ಹಾಕು : ಎಳಮೈಂದವಾಱಯೆಲೆಯ ಬಿಜ್ಜಣಿಗೆಗಳಿಂ ಬೀಸಲ್ವೇಱ್ದು (ಪಂಪಭಾ. ೫-೬ ವ) ; ಬಬಿಲ್ವರ ಮೊಗದೊಳ್ ನೀರಂ ತಳಿದು ಬೀಸಿ ಚೇತರಿಸಿದಾಗಳ್ (ಧರ್ಮಾಮೃ. ೦೦-೫೬); ಚಂಚತ್ತಾಳವೃಂತಂಗಳಿಂ ತಾಂ ನೀಹಾರಮಯೂಖಬಿಂಬಮುಖಿಯರ್ ಬೀಸುತ್ತೆ ಕಣ್ಗೊಪ್ಪಿದರ್ (ಉದ್ಭಟ. ೭-೪೨). ೬. ತೀಡು; ಸುಳಿ : ಮೊಕ್ಕಳಂ ಬೀಸುವ ಗಾಳಿ ಚಾಮರದ ಗಾಳಿಯೆನಲ್ (ಪಂಪಭಾ. ೭-೨೯): ಸುಳಿದು ಬೀಸುವ ಗಾಳಿ ಉರಿಯಾಯಿತ್ತವ್ವ (ಮಹಾದೇ. ಬ. ೪೩-೧೦೦); ಆಳಾಪಿಸಿದರು ಕೇಳುವ ಜನರೆದೆಗೆ ತಂಗಾಳಿ ಬೀಸಿದ ತೆಱನಾಗೆ (ಭರತ. ೦-೬೨). ೭. ರಭಸವಾಗಿ ಚಲಿಸು ; ವೇಗವಾದ ಚಲನೆಯನ್ನು ಹೊಂದು : ವಿಳಯಾನಿಳಂ ಬೀಸೆ ಮಸಗಿದ ಜಲನಿಧಿಯ ಕಲ್ಲೋಲದಂತೆ (ಶಾಂತಿಪು. ೪-೭ ವ) ; ಪೊಡೆವ ಸಿಡಿಲಿಂ ಮಿಂಚಿಂ ಭೋರೆಂದು ಬೀಸುವ ಗಾಳಿಯಿಂ (ಧರ್ಮಾಮೃ. ೨-೨೨೯): ಬೀಸುವ ಬಿಱು ಗಾಳಿ ಬೀಸಬಾರದು ಬೀಸದಿರಬಾರದು (ಸಕವ. II. ೬೫೦-೦೯೪೮) ; ಅತಿ ನಿರ್ಭರದೊಳನಿಲಂ ಬೀಸಿದನು ಕೆಂಧೂಳಿ ನೆಗೆಯಿತ್ತು (ಬಸಪು. ೬೦-೦೧). ೮. (ದೊಣ್ಣೆ, ಕತ್ತಿ, ಗದೆ ಮುಂತಾದ ಆಯುಧಗಳನ್ನು ವೇಗವಾಗಿ) ಆಡಿಸು ; ತಿರುಗಿಸು ; ಝಳಪಿಸು : ಕಾಲದಂಡಮಂ ಪೋಲ್ವ ತನ್ನ ಗದಾದಂಡಮಂ ಕೊಂಡು ತಿರುಪಿ ಬೀಸುತ್ತುಂ ಬರ್ಪ ಭೀಮಸೇನನಂ (ಪಂಪಭಾ. ೦೨-೦೬೦ ವ) ; ಗದೆಯಂ ಬೀಸುವ ಬೆಡಂಗು ರಂಜಿಸಿತು ಭೀಮ ದುರ್ಯೋಧನರಾ (ಗದಾಯು. ೬-೮) ; ಬೀಸಲ್ ಗಜೆಗಳನವರಂದಾ ಸಕಳ ಧರಿತ್ರಿ ತಿಗುರಿಯಂತಿರೆ ತಿರಿದತ್ತು (ನೇಮಿಪು. ೦೨-೦೯೬). ೯. (ಸೊಂಡಿಲು, ಕೈ ಮುಂತಾದುವುಗಳನ್ನು ತೂಗು ; ಅಲುಗಾಡಿಸು : ಘನಸಾರ ಸರಲಚಂದನವನಮೃದುಪಲ್ಲವಮನಗ್ರಹಸ್ತದೆ ಕೊಂಡೊಯ್ಯನೆ ಬೀಸೆ ಚೆಲ್ವುವಡೆದುದು ಜಿನಂಗೆ ಚಾಮರಮನಿಕ್ಕುವಂತಮರಗಜಂ (ಆದಿಪು. ೭-೬೨); ಲಲಿತಾಂಗಿ ಮೆಲ್ಲಮೆಲ್ಲನೆ ನಳಿತೋಳಂ ಬೀಸೆ (ಕಾದಂಪೂ. ೫೦೬) ; ಓಸರಿಸಿ ಬರ್ಚಿ ಪಕ್ಕಮನೋಸರಿಸದೆ ಮುನಿಗಳಿರ್ಪ ಹೋಮಸ್ಥಳದೊಳ್ ಭಾಸುರ ದಿನಂತುಮಿಂತುಂ ಬೀಸುತ್ತೆಳ್ಚಱಸಿ ಕುಡುವುದಾ ಶಿಖಿ ಶಿಖಿಯಂ (ಗಂಕ. ೧-೬೬). ೧೦. (ಯುದ್ಧವನ್ನು ಆರಂಭಿಸಲು ಚಾಮರ, ದೀವಟಿಗೆ ಅಥವಾ ಕೈಯನ್ನು) ಅಲುಗಾಡಿಸಿ ಸೂಚನೆ ಕೊಡು: ಆಗಳೆರಡುಂ ಪಡೆಯೊಡೆಯರ್ ಕಾದುವ ಪೊಟ್ಟಱದು ಕಡುಮುಳಿದು ಕೈಯ ಕುಂಚಮಂ

ಬೇಗಬೇಗಂ ಬೀಸಲು (ಕವ್ಯಕಾ. ೨೬೪) ; ನೆಗಹಿ ಬೀಸುವ ಚಾರಿಗಳ ಸನ್ನೆಗೆ ಚತುರ್ಬಲವೆಲ್ಲ ದ್ರೋಣನ ದೃಗುಪಥಕೆ ತೋಱಿದರು (ಕುವ್ಯಾದ್ರೋ. ೯-೦೭) ; ಬೀಸಿದರು ಚಾರಿಗಳ ಬಲವಾರಾಶಿ ಮಸಗಿತು (ಕವ್ಯಾಕ. ೦೩-೬). 'ಕೆಯ್ವೀಸು' ಪರಾ. ೧೧. (ಕತ್ತಿ, ಈಟಿ ಮುಂತಾದುವನ್ನು) ಗುರಿಯಿಟ್ಟು ಪ್ರಯೋಗಿಸು : ಅವರ ಸಮನ್ತಂ ಶ್ರೀಮುತ್ತರ ಅತಿರಥಗಣ್ಡ ಪೊಸವೆಣ್ಣೆರಟ್ಟಿ ಬೀಸಿ ತಪ್ಪದೊನ್ (ಎಕ. XV, ಅರಸೀ. ೨೦೫-೪ ; ಸು. ೬೪೦). ೧೨. ಅಲುಗಾಡು ; ಅಲ್ಲಾಡು ; ಅತ್ತಿತ್ತ ಚಲಿಸು : ಬಿಡೆ ಬಿಡಿಸುವಂತೆ ನೃಪರೊಳ್ನುಡಿಯಂ ಬೀಸುವುದು ಚಾಮರಾವಳಿ (ಕಾದಂಪೂ. ೫೫೭); ಬೀಸುತಿರ್ಪ ತಾಳವೃಂತಮಾಸೆ ಯಾಗದಿರೆ (ಅಜಿಪು. ೨-೯). ೧೩. ತಿರುಗಿಸು; ಹೊರಳಿಸು; ಸುತ್ತಿಸು : ಸುತ್ತಿರ್ದುದು ಜಂಬೂದ್ವೀಪಮಂ ವಾರಿಧಿ ಕಮಯುರಮಂ ಬೀಸಿದಂತಾಗೆ ಚೆಲ್ವಿಂ (ಧರ್ಮಾಮೃ. ೧-೬೫); ಕೈವಾರಮಂ ಬೀಸಿದಂತೆ ಬಟ್ಟಿತ್ತಾಗಿ ತೋರ್ಪುದು ಸೊನ್ನೆ (ಕಮುದ. ೦೭ ವೃತ್ತಿ). ೧೪. ಚೆಲ್ಲು; ಎರಚು : ವಾಸವನಪೂರ್ವನಾಟ್ಯವಿಳಾಸದೆ ತಾಂ ಭ್ರಮರಿಗುಡುವುದುಂ ನೇತ್ರಸಹಸ್ರಾಸಿತರುಚಿ ಕರ್ನೆಯ್ದಿಲ ಬಾಸಿಗಮಂ ಬೀಸಿದಂತುಟಾದುದು ಸಭೆಯೊಳ್ (ಅಜಿಪು. ೫-೦೫) ; ಒಗೆದಂಭೋಧರಕ್ಕಮಳಮರ್ತ್ಯಪತಿ ಬೀಸುತ್ತಿರ್ಪ ಮುಕ್ತಾಪರತ್ರೆಗಳೋ . . . ಪೇಟಿನ ಮಿಂಚುಗಳ್ ನಿಮಿರ್ದುವಾ ಜೀಮೂತಯೂಥಾಗ್ರದೊಳ್ (ಕುಸುಮಾ. ೬-೧೫). ೧೫. ಸೂಸು; ಬೀರು : ದ್ವಾರಕಾಪುರದೊಳು ಬೇಸರಾಗಿಹರೆಲ್ಲ ಜನಗಳಿಗೆ ಹರುಷಮಂ ಬೀಸಿ ಬಹೆ ನಾನು (ತುರಂಗ. ೮೦-೦೩) ; ರಾಯರು . . . ಬಲಪ್ರಯೋಗದಿಂದ ಮುಗುಳುನಗೆಯನ್ನು ಬೀಸಿ, ಕೈಲಿದ್ದ ದೊಣ್ಣೆಯ ಸಹಾಯದಿಂದ ವೇದಿಕೆಯನ್ನು ಹತ್ತಿ, ಮೇಜನ್ನು ಬಿಗಿಯಾಗಿ ಹಿಡಿದುಕೊಂಡು ನಿಂತರು (ರಾಯುಕ. ೪೪). ೧೬. ಸೆಳೆ ; ಸೆಣೆ ; ಕುಕ್ಕು ; ಅಪ್ಪಳಿಸು : ಜವನ ಬಾರಿಯೊಳಿಕ್ಕುವೆನೆಂದು ಪರ್ವೆ ಭೋರ್ಭೋರೆನೆ ಬೀಸೆ ತದ್ವದನಗಹ್ವರದಿಂ ಬಿಸುನೆತ್ತರುಣ್ಮೆ (ಹಂಪಭಾ. ೩-೩೦) ; ಕಾಸಿ ಕಮ್ಮಾಱನಾದ ಬೀಸಿ ಮಡಿವಾಳನಾದ (ಬಸವ. ೫೯೧) ; ಸೆಳೆವ ಸೇದುವ ಬೀಸುವೊಗೆವ ಕುಸುಕುವ . . . ಖಳರ ಕಳಕಳದ ಕೋಳಾಹಳದೊಳಾ ರೌರವಂ ಭಯಂಕರವಾದುದು (ಸಿದ್ಧರಾ. ೬-೨೯); ಕುದಿಸಿ ಉದಕದೊಳಲುಬಿ ಬೀಸುತೊಗೆದು ಪರಡಿ ತಗೆತಗೆದು ಘಳಿಗೆಯನೊದಗಿಪುದು ಮೈಲಿಗೆ ಮಡಿಗಳೆಹುದಕ್ಕು (ಬಸಪು. ೩೭-೪೭). ೧೭. ರಭಸದಿಂದ ಮುಂದುವರಿ; ನುಗ್ಗು : ಮಸಗಿ ಬೀಸುವ ಕಂಸನಾನೆಯನಸು ಬಡಿದ ಗಡ (ಕುವ್ಯಾಸ. ೦೦-೦೭). ೧೮. ನುಗ್ಗಿಸು ; ಎರಗುವಂತೆ ಮಾಡು : ಆನೆಗಳ ತುಡುಕಿ ಹಯಾವಳಿಯ ಬಿಸಿದರು ರಥಿಕರು ಹಾಯ್ಸಿದರು ರಥವ (ಕುವ್ಯಾಕ. ೨-೦೫). ೧೯. ನಿವಾರಿಸು ; ಪರಿಹರಿಸು ; ಅಟ್ಟು ; ಓಡಿಸು : ಕುಮುದಾವತಂಸ ಮಧುಪಂಗಳುಮಂ ಕರದಿಂದೆ ಹಿಂಗೆ ಬೀಸುವ . . . ಬೇವಸಮನಾವರಿಸಿರ್ದಳ್ (ಕಾದಂಊ. ೨೯೦) ; ಅಳಿಯ ಮುತ್ತಿಗೆಗಳನು ಬೀಸದೆ ನೆಲಕೆ ಕಿವಿಯನು ಜೋಲುಬಿಡುವುದು ಬಲುಕಣೆಯ ಹಿಡಿಹಿಂಗೆ ಲಾಗಿಸುತಿರ್ದುದಾ ದಂತಿ (ಕುವ್ಯಾದ್ರೋ. ೩-೩೭). ೨೦. ಹಾರಾಡಿಸು ; ಹಾರಿಸು : ಅಂತು ರಿಪುಕುರಂಗಕಂಠೀರವನ ಕೆಯ್ಕೊಳ್ ವೈಕರ್ತನಂ ಸಾಯಲೊಡಂ ಮೇಲುದಂ ಬೀಸಿ ಬೊಬ್ಬಿಱಿದಾರ್ವ ಪಾಂಡವಪತಾಕಿನಿಯೊಳ್ (ಹಂಪಭಾ. ೦೨-೨೦೭ ವ) ; ಮುಱಿದು ಬಹ ನಿಜಸೇನೆಗಭಯದ ಸೆಱಗ ಬೀಸುತ ಭೀಮಸೇನನ ತಱುಬಿ ನಿಂದನು ಭೀಷ್ಮ (ಕುವ್ಯಾಭೀ. ೬-೫). ೨೧. ಹೊಂದಿಸು; ಅಳವಡಿಸು : ಗಜಕೆ ಗುಳವನು ಬೀಸಿ ವಾಜಿವ್ರಜವ ಹಲ್ಲಣಿಸಿದರು (ಕುವ್ಯಾಕ. ೨-೪). ೨೨. (ಬೀಸುವ ಕಲ್ಲು ಮೊದಲಾದುವನ್ನು ತಿರುಗಿಸಿ ರಾಗಿ, ಜೋಳ ಮುಂತಾದ ಧಾನ್ಯಗಳನ್ನು) ಅರೆ; ಪುಡಿಮಾಡು: ಗೋಪವನಿತೆಯರು ಕುಟ್ಟುತ್ತ ಬೀಸುತ್ತ ತಾ ಪೊಗಳುತಿಪ್ಪ ನಾಮ (ಪುರಂದ. ೨-೨೦೪-೩); ಇಡಿ ಗೋಧಿಯನ್ನು ಬೇಕಾದಂತೆ ಬೀಸಿ ಹಿಟ್ಟು ತಯಾರಿಸಿಕೊಳ್ಳುವುದು ಒಳ್ಳೆಯದು (ಅದುಗೆ. ೬೩).

**ಬೀಸಹೆಜ್ಜೆ ಹಾಕು** = ವೇಗವಾಗಿ ನಡೆ : ಹೆಂಡತಿಗೆ ಬೈದು ದಂಬ ಬೀಸಹೆಜ್ಜೆ ಹಾಕುತ್ತ ಹೊರಟನು (ದಂಬಡಾ. ೪೦). **ಬೀಸಿ ಒಗೆ** = ವೇಗವಾಗಿ ಎಸೆ : ರಭಸದಿಂದ ಬಿಸುಡು : ಆ ಹಿಮಾಲಯದಿಂದ ನಿನ್ನನ್ನು ಬೀಸಿ ಒಗೆದರೆ ಇಲ್ಲಿಗೆ ? (ಪಲಮು. ೦೦-೦೫). **ಬೀಸಿಕೊಳು, ಬೀಸಿಕೊಳ್ಳು** = ೧. (ಬೀಸಣಿಗೆ ಮುಂತಾದುವುಗಳಿಂದ) ಗಾಳಿ ಹಾಕಿಕೊಳ್ಳು ; ಗಾಳಿ ಬರುವಂತೆ ಮಾಡಿಕೊಳ್ಳು : ಪೊಂಬಾಳೆಯ ಬಿಜ್ಜಣಿಗೆಯಿಂ ಮೆಲ್ಲಮೆಲ್ಲನೆ ಬೀಸಿಕೊಳುತ್ತಂ (ಪಂಬಿರ. ೦೨-೪೯); ಅಂದು ಅವನು ದಿನವಿಡೀ ಆಂಗ್ಲರಮಣಿಯು ಬೀಸಣಿಕೆ ಬೀಸಿಕೊಳ್ಳುವದನ್ನು ನೋಡಿದನು (ಇಹ್ಪಕ. ೩೭೦). ೨. (ಬೀಸಣಿಕೆ ಮುಂತಾದುವುಗಳನ್ನು) ಆಡಿಸು : (ಬೀಸಣಿಗೆ ಮುಂತಾದುವುಗಳಿಂದ) ಗಾಳಿ ಹಾಕು : ದೇವಸ್ಥಾನದಲ್ಲಿ ಚಾಮರ ಬೀಸಿಕೊಂಡು ಇರುವ ಹೆಣ್ಣು ನನ್ನನ್ನು ಹಾಗೆ ಅವಮಾನಿಸುವುದೇ ? (ದೇವಹಂ. ೦೫೪). ೩. ಹಾರಾಡಿಸು ; ಹಾರಿಸು : ಅವಳು ಸೆರಗು ಬೀಸಿಕೊಂಡು ಹೋಗುತ್ತಿದ್ದಾಳೆ (ರೂಢಿ). **ಬೀಸಿಡು** = ಬೀಸಿ ಒಗೆ : ಗದೆಯಂ ಬೀಸಿಟ್ಟೊಡಾ ಮಾಗಧನೃಪನ ರಥಂ ನುರ್ಗೆ (ದಶಕು. ೨-೨೭). **ಬೀಸಿ ಪೊಯ್** = ರಭಸವಾಗಿ ಹೊಡೆ, ಬಡಿ: ಮೂಳೆಯಂ ದಬ್ಬುಕದಿಂದೆ ನುಗ್ಗುನುಱಿಯಪ್ಪಿನೆಗಂ ಬಿಡೆ ಬೀಸಿ ಪೊಯ್ದು . . . ಕೊಲ್ವ ಕೊಲೆಯಂ ಹರಿಣೇಕ್ಷಣೆ ಕಂಡು (ಸುಕುಮಾ. ೬-೬) ; ಬಡಗಿಯಂತೆ ಕೆತ್ತುವರ್ ಅಗಸನಂತೆ ಬೀಸಿ ಪೊಯ್ವರ್ (ಧರ್ಮಾಮೃ. ೩-೬೩). **ಬೀಸಿ ಬಿಸುಡು** = ಬೀಸಿ ಒಗೆ : ಬೀಸಿ ಬಿಸುಟವು ಪಾಯ್ದಳವ . . . ಬಲವಾರಾಸಿಯಲಿ ತಾಯ್ಕಳಲ ಮೊಗೆದವು ಭೀಷ್ಮನಂಬುಗಳು (ಕುವ್ಯಾಭೀ. ೯-೦೦) ; ಬೀಸಿ ಬಿಸುಟ ಮದೇಭ ಮಾರುತಪಾಶದಲಿ ಸಿಲುಕಿದವು (ತೊರರಾ. ೬-೩೨-೦೨). **ಬೀಸುವ ಕಲ್ಲು, ಬೀಸೂ ಕಲ್ಲು, ಬೀಸೋ ಕಲ್ಲು** = (ರಾಗಿ, ಅಕ್ಕಿ, ಮೊದಲಾದ) ಧಾನ್ಯಗಳನ್ನು ಹಿಟ್ಟು ಮಾಡಲು ಬಳಸುವ ಕಲ್ಲಿನ ಸಾಧನ ; ರಾಗಿಕಲ್ಲು ; ಘರಟ್ಟ : "ಬೀಸುವ ಕಲ್ಲು ಪೆಸರು ಸಂಘಟಯೆನಿಕ್ಕು" (ಮಂಗರಾ. ೬೧-೦೯) ; ಬೀಸುವ ಕಲ್ಲಿನ ಮುಂದೆ ಕುಳಿತು ನೀಲವ್ವ ಆ ಕಾಳು ಬೀಸುತ್ತಿದ್ದಳು (ಬರಹಾ. ೦೦೬); ಬಿಕ್ಕಿ ಬಿಕ್ಕಿ ಅತ್ತರೆ ಬೀಸುವ ಕಲ್ಲು ತಿರುಗೀತೇ ? (ಗಾದೆ) ; ಗಂಗಾಳ ಚರಿಗಿ ಮಂಗಳಸೂತ್ರಾ ತಕ್ಕೊಂಡು ಹೋದರೋ ಬೀಸೂಕಲ್ಲಾ ಎಲ್ಲಾ ತಗೊಂಡರೊ ಸಿಕ್ಕಷ್ಟು (ಶ್ರೀಂಧ. ೬೬) ; ಈಸೋ ಕಾಯನೆ ಬಿಟ್ಟು ಬೀಸೋ ಕಲ್ಲನೆ ಕಟ್ಟಿ ಈಸುವ ತೆಱದಿ ಈ ಭೂಸುರರಾ ದ್ರವ್ಯ (ಪುರಂದ. ೦-೦೯-೨) ; ರಾಗಿ ಬೀಸೋ ಕಲ್ಲೆ ರನ್ನ ಮುತ್ತಿನ ಕಲ್ಲೆ ಅಣ್ಣನ ಮನೆಯ ಸಿರಿಗಲ್ಲೆ (ಜಾನೆಕ. ೩). **ಬೀಸುವ ದೊಣ್ಣೆ** = (ಆಲಂ) ಅಪಾಯ ; ಆಪತ್ತು: ಬೀಸುವ ದೊಣ್ಣೆ ತಪ್ಪಿದರೆ ಸಾವಿರ ವರ್ಷ ಆಯುಸ್ಸು (ಗಾದೆ). **ಬೀಸುವಾತ** = ಗಾಳಿ ಬೀಸಲು ಕಾರಣನಾದವನು ; ವಾಯು : ಬೀಸುವಾತನು ಬೀಯವಹನಾಕಾಶದಲಿ ಭೂತಾದಿಯೊಳಗಾಕಾಶವಡಗಿದಡಡಗುವನು ವರಯೋಗಿಯದಱೊಳಗೆ (ಶಿಭಾಗ. ೨-೦-೪೭).

[ದೇ.॥ ತಮಿ. ವೀಚು; ಮಲ. ವೀಜು, ವೀಯು, ವೀಶು ; ತುಳು. ಬೀಜ್, ಬೀಜು, ಬೀಪು, ಬೀಸ್, ಬೀಸು ; ಕೊಡ. ಬೀಜ್ ; ತೆಲು. ವೀಚು; ಕೋತ. ವೀಚ್; ತೊದ. ಪೀಸ್; ಕುಇ. ವೀಂಜ. /ಸಂ. ವೀಜ್]

**ಬೀಸು$_{2}$** (ನಾ). ೧. ಬೀಸುವಿಕೆ ; ಝಳಪಿಸುವುದು ; ತೂಗುವಿಕೆ (+). ೨. ಸಂಚಾರ ; ನಡೆ ; ಓಟ : ತಿಳಿಗಾಳಿ ತೀಟದಲಿ . . . ಬಿರುಗಾಳಿ ಬೀಸಿನಲಿ ಬರುವ ಮಾರುತಿಯೆ (ಪಸೀಗೀ. ೪೪-೪). ೩. ವಿಸ್ತಾರ ; ಹರಹು : ಕನಕಪತ್ರಮನಲ್ಲಿ ಕಂಡು ಬೀಸುಂ ಬಱಿಯು

ವಿಲ್ಲದೆ ನಿಬಿಡಮಾಗಿ ಬರೆದಿರ್ದಕ್ಕರಂಗಳಂ ಅನುಮಾನಿಸಿ ತಾನೆ ನೋಡಿ (ಅರ್ಥಶಾ. ೬-೭೦ ಪ) ; ಕಾಲುವೆ ಮೇಲೆ ಗೇರವುರನ ಕಟ್ಟಿ ಬೀಸುವೊಳತಾಗಿ ಗಡಿಯುಂಕನಹಳ್ಳೀ ಮೇರೆಯು ಸುಂಕದವರ ಕಟ್ಟೆ (ಎಕ. VII, ಶಿವಮೊ. ೬೫-೦೦೦ ; 1527) ; ಪ್ರತಿಯೊಂದು ವಾಕ್ಯದ ಬೀಸು ಬಿರುಸುಗಳು ಜೋರು ಜಾರುಗಳು . . . ಪ್ರತಿಕೃತಿಯಲ್ಲೂ ಮೂಡಬೇಕು (ಸಾಹಿಕ್ರ. XI, ಕೃಶಾ.ಪಪ). ೪. ವಿಶಾಲವಾದುದು ; ವಿಸ್ತಾರವಾದುದು : ಬೀಸಾದ ಬಲೆಯೊಳಗೆ ಕಾಸಿಮಿಾಸೆಯ ಮೃಗವು ತಾ ಸೋತು ಬಿದ್ದು (ವ್ಯಲಾರ. ೯೩-೯೫) ; ಇಲ್ಲಿಯ ಸಭಾಮಂಟಪದ ಬೀಸಾದ ಕಂಭಗಳ ಮೇಲಿನ ಕೆತ್ತನೆಯ ಕೆಲಸವು ಅದ್ಭುತವಾದುದು (ಕಬಿಂಶ. ೯೫); ಆ ಗಾಳಿ ಜತಿಗೆ, ನೀ ಗೂಳಿ ಹಾಂಗ ಅಡ್ಡಾಡ್ಯಡಿ ಹೇಳು ಏಸು ? ಮುಸುಗುಡುತ ಹೊರಟಿ ಬಯಲಾಗ—ನನ್ನ ಮುಗುದಾಣ ಭಾಳ ಬೀಸು (ಹೃದಸ. ೦೬-೦೮). ೫. ಉದ್ದ ; ಲಂಬ : ಮೊದಲೇ ಬೀಸಾದ ಕೆಂಪಾದ ಆಳು, ಮತ್ತೇನು ಕೇಳುವದು ? (ಹೂದಸಿ. ೨೬). 'ಬೀಸುಗಾಲು' ಪರಾ. ೬. ಹೊರವು ; ಸೊಂಪು : ಬೀಸಾಗಿ ಬೆಳೆದು ನಿಂತ ಬಾಳೆಯ ನಿಲುವು (ಜೀವರಂ. ೨೫) ; ತನ್ನ ಆಕಳ ಹಾಲು ಕುಡಿಯದ ಹೋರಿಯು ಸದೃಢವೂ ಆಗುವುದಿಲ್ಲ ಮತ್ತು ಬೀಸಾಗಿಯೂ ಬೆಳೆಯುವುದಿಲ್ಲ (ಗೋಗ್ರಾಸ. ೬೬).

ಬಿಚ್ಚುಬೀಸು = ಸ್ವೇಚ್ಛೆ ; ಸ್ವಚ್ಛಂದತೆ : ನಮ್ಮ ಅಪೂರ್ವನು . . . ಬಿಚ್ಚುಬೀಸಾಗಿ ತಿರುಗುವ ಈ ಬಾಲಿಕೆಯನ್ನು ನಾಲ್ಕಾರು ಬಾರಿ ನೋಡಿದ್ದಾನೆ (ಇಶೃಕ. ೫೬). [ < ಬೀಸು$_1$. /ತಮಿ. ವೀಚ್ಚು ]

**ಬೀಸು₃** 'ಬೀಸ' ನೋ.

**ಬೀಸುಂಬಲೆ**, ಬೀಸುಬಲೆ, ಬೀಸುವಲೆ (ನಾ). (ಪ್ರಾಣಿ, ಪಕ್ಷಿ, ಮುಂತಾದುವುಗಳನ್ನು ಹಿಡಿಯಲು, ಎಸೆದು ಹರಡುವ) ಒಂದು ಬಗೆಯ ಬಲೆ : ಅಖಿಳಮೃಗಪಟಳಮಂ ಪಿಡಿಯಲೊಡರಿಸಿ ಸಮೆದ ಶಮನ ಶಬರನ ಬೀಸುಂಬಲೆಯ ಪಾಸಮೆನಿಸಿ (ಪರ್ಶಪು. ೦೦-೫ ಪ). **ಬೀಸುಬಲೆ :** ಬೀಸುಬಲೆಯಲಿ ಹುಲಿಯ ಹಿಡಿಯಬಲ್ಲಾ (ಮಹಾಗೀ. ೫೯-೯). **ಬೀಸುವಲೆ :** ಹಾಸುವಲೆ ಬೀಸುವಲೆ . . . ಮುಂದಸಿನವಲೆಯ ಹೊಜೆಗಳ ಬೇಡವಡೆ ನೆರೆದುದು (ಹಕಶಾ. ೫-೬); ಬೀಸುವಲೆ ತಳಿಯ ಮರದ ಗೊಂದಣದ ಸಂವರಣೆಯಿಂದಾ ಕೋಂಟೆ ಕಣ್ಗೊಪ್ಪಿತು (ಸವ್ಯಕಾ. ೬-೨೬). [ಬೀಸು$_1$ + ಬಲೆ$_1$ ]

**ಬೀಸುಂಬೂರಿಗೆ**, ಬಿಸುಬೂರಿಗೆ, ಬಿಸುವೂರಿಗೆ, ಬಿಸುಹೂರಿಗೆ, ಬಿಸೂರಿಗೆ, ಬೀಸುರಿಗೆ, ಬೀಸುಹೂರಿಗೆ, ಬೀಸೂರಿಗೆ (ನಾ). (ಎಣ್ಣೆ ಸವರಿ ಹೆಂಚಿನ ಮೇಲೆ ಬೇಯಿಸಿ ಮಾಡುವ) ಅಗಲವಾಗಿರುವ ಒಂದು ಬಗೆಯ ಸಿಹಿ ಭಕ್ಷ್ಯ : ದೇವ ಬೀಸುಂಬೂರಿಗೆಯನೊಮ್ಮೆ ಸವಿಯುಯ್ಯ (ಜಕರ. ೬-೦೨೬). **ಬಿಸುಬೂರಿಗೆ:** ಬಿಸುಬೂರಿಗೆಯುಂ ಪಲವಂ ನಲವಿನಿಂದವಂ ಬಡ್ಡಿಸಿದರ್ (ಶಾಂತೀಶ್ವ. ೦೫-೬೦). **ಬಿಸುವೂರಿಗೆ :** ಅಲ್ಲಿ ಬಿಸುವೂರಿಗೆ [ಪಾಠಾಂ. ಬಿಸುಪ ಹೂರಿಗೆ] ಗಾರಿಗೆಗಳಾಗೆ ತನಿವಾಲ ಸಣ್ಣ ಸೇವಗೆಯ ಪಾಯಸಮಾಗೆ (ಕೊಮ್ಮರ. ಹ. ೩೯೫-೦೫). **ಬಿಸುಹೂರಿಗೆ :** ಹೂರಿಗೆಯ ಮಂಡಿಗೆಯ ಘನಬಿಸುಹೂರಿಗೆಯ[ಪಾಠಾಂ. ಚಕ್ಕುಲಿ ಗಾರಿಗೆಯ] . . . ಸಂವರಣೆ ಸವನಿಸಲೀ ಕ್ಷಣದಲೆಂದ (ಶಿಭಾಗ. ೦೦-೨೨-೦೮). **ಬಿಸೂರಿಗೆ :** ಚಕ್ಕುಲಿ ಬಿಸೂರಿಗೆಯತಿರಸ (ಜ್ಞಾಪಶ. ೩೬-೦೨೦). **ಬೀಸುರಿಗೆ :** ಕರಜಿಗೆ ಕಾಯತಿರಸ ಮನೋಹರದುಂಡೆ ತರಗು ಚಕ್ಕುಲಿ ಬೀಸುರಿಗೆಯ (ಜ್ಞಾನಶ. ೨-೦೩೬) ; ಹೊನ್ನ ಹರಿವಾಣದಲಿ ಬಡಿಸಿದರೆಣ್ಣೂರಿಗೆ ಬೀಸುರಿಗೆ ಮಂಡಿಗೆ . . . ಕ್ಷೀರ ಸಕ್ಕರೆಯ (ಸುದಾಮ. ೯-೦೬). **ಬೀಸುಹೂರಿಗೆ :** ಬೀಸುಹೂರಿಗೆ ತಣಿಂಗಳ್ಳುಂಡೆ . . . ಪೂಸಣವಾದಿ ಭಕ್ಷ್ಯಚಯಮಂ ತಂದಿಕ್ಕಿದರ್ ಕಾಂತೆಯರ್ (ಧರ್ಮಾಶ. ೨-೫೬). **ಬೀಸೂರಿಗೆ :** ಗಾರಿಗೆ ಲಡ್ಡುಗೆ ಬೀಸೂರಿಗೆ . . . ಮುಖಭಕ್ಷ್ಯಂಗಳಗೊಪ್ಪುವ ಖರ್ಜೂರಂ ಕದಳಿ ಸಾರಫ್ಯತಂ ಮಧುಸಕ್ಕರೆಗಳ ಸಾರಂಗಳ ಸುಳಿವಾಳೆಯ ದೊನ್ನೆಯೊಳಾರ್ಯೆ ದೆಜಿದರ್ಸವಿಗಾತಿಯರ್ (ಮದೇಶ ೦೯-೫೬). [ಬೀಸು$_2$ + ಪೂರಿಗೆ]

**ಬೀಸುಗಂಡೆಯ** (ನಾ). ತೂಗುವಂತೆ ಕಟ್ಟಿದ ಕತ್ತಿ,—ಖಡ್ಗ : ಕಟ್ಟಿದ ಕೊಂಬುಗತ್ತಿಯ ಸುಂಡಿಲೊಳಗಳವಟ್ಟಿದ ಬೀಸುಗಂಡೆಯದ ಕಟ್ಟಿರಕದ ಚಿತ್ರಪಟಗಳಿಂ ರಾಯನ ಪಟ್ಟದಾನೆಗಳ್ಪೈದಿದುವು (ಕಂಪಪ. ೩-೯೩); [ಬೀಸು$_1$ + ಕಂಡೆಯ$_1$ (<ಖಂಡೆಯ$_2$)]

**ಬೀಸುಗಣ್ಣೆ** (ನಾ). (ಮೃಗಪಕ್ಷಿಗಳನ್ನು ಹಿಡಿಯಲು ಉಪಯೋಗಿಸುವ) ಎಸೆಯುವ ಹಗ್ಗ : ಬೀಸುಗಣ್ಣೆ ಗುಗ್ಗುರಿಯರಳು . . . ಕತ್ತಿ ಬಡಿಕೋಲ್ ಕಲ್ಲಿ ಹಿಡಿದ ಹುಲಿ ಶರಭ ಭೇರುಂಡ ಸಿಂಹ ಪ್ರಕರವೆರಸಿ ಬೇಡರು ನೆರೆದರು (ಹಕಶಾ ೫-೯) ; ತಡಿಕೆಗಳೆ ಬೀಸುಗಣ್ಣೆ ಹಿಡಿಯೆರಳೆ . . . ಪರಿಪರಿಯ ಹಕ್ಕಿವೆರಸಡವಿಗಂತಕರಂತೆ ನಡೆವ ಶಬರರ ಕಂಡನು (ಸೋಮಶ. ೩-೪). [ಬೀಸು$_1$ + ಕಣ್ಣೆ]

**ಬೀಸುಗಲ್** (ನಾ). ಕವಣೆಯಲ್ಲಿಟ್ಟು ಎಸೆಯುವ ಕಲ್ಲು ; ಕವಣೆಕಲ್ಲು : ನಸುಬಾಗಿ ಬೀಸುಗಲ್ಗಳನಿಡುತಿರ್ಪ ಪಾಮರಿಯರೊಪ್ಪುವರಾ ಕಳಮ ಪ್ರದೇಶದೊಳ್ (ದಶಕು. ೦-೨೯). [ಬೀಸು$_1$ + ಕಲ್$_3$]

**ಬೀಸುಗವಣೆ** (ನಾ). ರಭಸವಾಗಿ ಎಸೆದ ಕವಣೆ : ಒಡನೆ ನೂಕಿತು ತೋಕುವಂಬಿನ ತಡೆಪ ಶೂಲವ ಹೊಯ್ವ ಖಡುಗದ ಬಿಡುವ ಚಕ್ರದ ಬೀಸುಗವಣೆಯ[ಪಾಠಾಂ. ಬೀಸುಗಣೆಯಲಿ] ಬಹಳ ಭಟನಿಕರ (ತೊರರಾ. ೫-೬-೦೦). [ಬೀಸು$_1$ + ಕವಣೆ$_1$]

**ಬೀಸುಗಾಲು** (ನಾ). ೧. ಉದ್ದವಾದ ಕಾಲು ; ನೀಳವಾದ ಕಾಲು : ಚಂಡಿ ಚಾಮುಂಡಿಯರ್ ನರಶಿರಗಳೊಂದರ್ಬುದವ ಹರಡಿ ಧ್ರುವದಿಂದ ಧ್ರುವಬರಂ ಬೀಸುಗಾಲಿಂದೊದೆದು ಕ್ರೀಡಿಸುವ ಕೆಂಗಾಲ (ಪಪ್ಪಗ. ೦೨-೦). ೨. ದೊಡ್ಡ ಹೆಜ್ಜೆ ; ದಾಪುಗಾಲು : ಆತ ಓಡುತ್ತಿದ್ದಾನೆ ; ಇವರು ಅವನ ಹಿಂದೆ ಬೀಸುಗಾಲು ಹಾಕುತ್ತಿದ್ದಾರೆ (ಜಾರುದಾ. ೨೨೬). [ಬೀಸು$_2$ + ಕಾಲು$_1$ (<ಕಾಲ್$_1$)]

**ಬೀಸುಗೆಯ್**, ಬೀಸುಗೈ (ನಾ). ೧. ನೇಲುವ ಕೈ ; ಜೋಲುಗೈ : ಬೀಸುಗೆಯ್ಗಳ[ಪಾಠಾಂ. ಗೈಗಳ] ಡೊಂಕುಗಾಲುಗಳ . . . ತೋರ ಕಾರೊಡಲ ಕುಱುಬಂ (ಬಸಪು. ೨೦-೦೦). **ಬೀಸುಗೈ :** ೨. ಯುದ್ಧದ ಆರಂಭವನ್ನು ಸೂಚಿಸುವ ಸಲುವಾಗಿ ಅಲುಗಾಡಿಸುವ ಕೈ : ರಾಯರಿಬ್ಬರ ಬೀಸುಗೈಗಳ ಸನ್ನೆ ಸಮವಾಗೆ . . . ಬೆರಸಿದುದುಭಯಬಲ ಬಲುಖತಿಯ ಬಿಂಕದಲಿ (ಕುವ್ಯಾಶ. ೨-೦೩). [ಬೀಸು$_1$ + ಕಯ್$_2$]

**ಬೀಸುಗೈ** 'ಬೀಸುಗೆಯ್' ನೋ.

**ಬೀಸುಗೊಳ್ಳಿ** (ನಾ). ಅತ್ತಿತ್ತ ಅಲುಗಾಡಿಸುತ್ತಿರುವ ಕೊಳ್ಳಿ,—ದೊಂದಿ: ಮುಂದೆ ಪಾರ್ಥನ ಬೀಸುಗೊಳ್ಳಿಗಳಿಂದ ತಮದಾವಳಿ ಮುಱಿಯೆ . . . ಅನಿಬರಟವೀವೃಂದದಲಿ ಬರುತಿರ್ದರಿರುಳು (ಕುವ್ಯಾಶ. ೦೦-೨೬). [ಬೀಸು$_1$ + ಕೊಳ್ಳಿ$_1$]

**ಬೀಸುಗೋಲು** (ನಾ). "ಒಂದು ಬಗೆಯ ಬೇಟೆಯ ಕೋಲು" (ಅಭ್ಯಲೂ. ಕೋಶ) : ಬೀಸುಗೋಲಿನ ಸಾಳ್ವ ಕರದ ಮೋಸದಿ ಮೃಗಪಕ್ಷಿ ಹಿಡಿವ ಬಲೆಗಳಿಂದ ಲೇಸಾಗಿ ನಡೆದರೊಗ್ಗಿನಲಿ (ಅಭ್ಯಲೂ. ೩-೨೮). [ಬೀಸು$_1$ + ಕೋಲು$_1$ (<ಕೋಲ್$_1$)]

**ಬೀಸುದೋಳ್** (ನಾ). ೧. ಜೋತು ಬಿದ್ದಿರುವ ತೋಳು ; ನೇಲುವ ತೋಳು : ಸಡೆದೇಳ್ವ ಬೀಸುದೋಳ್ಸಿರೆ ನೆಗೆದಿರ್ಪ ಗೋಣ್ (ವೃಷಭ. ೦೦-೬೦). ೨. ಅತ್ತಿತ್ತ ತೂಗಾಡುವ ಕೈ,—ಚಲಿಸುವ ಕೈ : ಗಳಗಳನೆ ನಡೆವಾಗ ಬೀಸುದೋ[ಪಾಠಾಂ. ತೋ]ಳಿಂ ರಕ್ತವಿಳಿದು ಬೆರಳ್ಗಳು ಬಾತು ಮಿಡಿದೊಡೆವುತಂ (ಸೋಮಶ. ೩-೫೩). [ಬೀಸು$_1$ + ತೋಳ್]

**ಬೀಸುಬಲೆ** 'ಬೀಸುಂಬಲೆ' ನೋ.

**ಬೀಸುರಿಗೆ** 'ಬೀಸುಂಬೂರಿಗೆ' ನೋ.

**ಬೀಸುವಲೆ** 'ಬೀಸುಂಬಲೆ' ನೋ.

**ಬೀಸುವಿಟ್ಟು** (ನಾ). (ಬೀಸುವ ಕಲ್ಲಿನಲ್ಲಿ) ಪುಡಿ ಮಾಡಿದ ಹಿಟ್ಟು: ತೆಂಗಾಯನರದಿಕ್ಕಿ ಕಡಲೆಯ ಬೀಸುವಿಟ್ಟನಲ್ಪವನಿಕ್ಕಿ ಕಲಸಿ (ಸೂಶಾ. ೯-೬೭). [ಬೀಸು$_1$ + ಪಿಟ್ಟು]

**ಬೀಸುಹೂರಿಗೆ** 'ಬೀಸುಂಬೂರಿಗೆ' ನೋ.

**ಬೀಸೂರಿಗೆ** 'ಬೀಸುಂಬೂರಿಗೆ' ನೋ.

**ಬೀಹಳಿ** (ನಾ). : (?) [ಬೀ]ಹಳಿಯರೆನಿಬರಾದಡಂ ಮೆಯಲು ವಿ ೧೦ (ಕ್ತಾಇ. XV. ೩೯-೦೦; 1148) ; ಹಾಡುವ ಮೊಖರಿಗಂ ಬೀಹಳಿ ಯಿರ್ವ್ವರ್ಗ್ಗಂ ಎರೆ ಮತ್ತ ೧೬ (ಕ್ತಾಇ. XX. ೩೦೦-೩; 12ನೆಯ ಶತ). [?]

**ಬೀಹು** 'ಬೀವು' ನೋ.

**ಬೀಳ್$_1$** 'ಬೀೞ್$_1$' ನೋ.

**ಬೀಳ್$_2$** 'ಬೀಡು$_2$' ನೋ.

**ಬೀಳ್$_3$** 'ಬೀಡು$_3$' ನೋ.

**ಬೀಳಲ್** 'ಬೀೞಿಲ್' ನೋ.

**ಬೀಳಲು** 'ಬೀೞಿಲ್' ನೋ.

**ಬೀಳಲುಪಲ್ಲು** (ನಾ). ಅಲ್ಲಾಡುತ್ತಿರುವ ಹಲ್ಲು ; ಬೀಳುವ ಹಲ್ಲು : ಬೀಳಲುಪಲ್ಲು ಪತ್ತಿದ ಗಲ್ಲದ ನೆಱೆ ವೃದ್ಧನಡಿಯಿಟ್ಟನೊಲಿದು (ಜಸಂಸ೦. ೦೩-೩೦). [ಬೀಳಲು (<ಬೀೞಿಲ್) + ಪಲ್ಲು (<ಪಲ್)]

**ಬೀಳಲುಬಿಡು** 'ಬೀೞಿಲ್ಬಿಡು' ನೋ.

**ಬೀಳಲುವರಿ** 'ಬೀೞಿಲ್ವರಿ' ನೋ.

**ಬೀಳವೃತ್ತಿ** 'ಬೀೞವೃತ್ತಿ' ನೋ.

**ಬೀಳಾನುವರ್ತಿ** (ನಾ). = ಬೀಳಾನುವೃತ್ತಿ : ಶ್ರೀಮನ್ಮಹಾಮಣ್ಡಳೇಶ್ವರಂ ಜೋಯಿಮಯ್ಯರಸರ್ ಸಿಂದವಾಡಿಸಾಸಿರಮಂ ಬೀಳಾನುವರ್ತಿಯಿಂ ತ್ರಭೋಗಾಭ್ಯಂತರಸುದ್ಧಿಯಿನಾಳ್ದು ಸುಖದಿನರಸುಗೆಯ್ಯೆ (ಕ್ತಾಇ. IX-i, ೦೯೩-೦೭; 1079). [ಪ ಇದು 'ಬೀಳಾನುವೃತ್ತಿ'ಯ ಅಪಲಿಖಿತ]

**ಬೀಳಾನುವೃತ್ತಿ** (ನಾ). ಮಾಂಡಲಿಕ ಅಥವಾ ತುಂಡರಸನು ಸ್ವಾಮಿ ಭಕ್ತಿಯಿಂದ ಸೇವೆ ಸಲ್ಲಿಸಿದ ಸಲುವಾಗಿ, ಅಧಿರಾಜನಿಂದ ಪಡೆಯುವ ವಿಶೇಷವಾದ ಪದವಿ, ಅಧಿಕಾರ ಮುಂತಾದುವು : ಸೋಮೇಶ್ವರ ದೇವರ್ಬೆಳ್ವೊಲಮೂನೂಱುಂ ಪುರಿಗೆಱೆಮೂನೂಱುಮಂ ಬೀಳಾನು ವೃತ್ತಿಯಿನಾಳುತಂ ಸುಖದಿನಿರೆ (ಕ್ತಾಇ. XI-i, ೮೯-೮; 1049); ಶ್ರೀಮನ್ಮ ಹಾಮಣ್ಡಳೇಶ್ವರಂ ಲೋಕರಸನಬಲು ಮೂನೂಱುಮಿಱಿಸಿ ಮೂನೂ ಱುಮಂ ಬೀಳಾನುವೃತ್ತಿಯಿಂ ರಾಜ್ಯಂಗೆಯ್ಯುತಮಿರಲು (ಕ್ತಾಇ. ೯-೩- ೨೯೯; 1062) ; ಚಾಳುಕ್ಯಚಕ್ರವರ್ತಿ ತ್ರೈಲೋಕ್ಯಮಲ್ಲದೇವನ ಮಗ ಸೋಮೇ ಶ್ವರನು 'ಬೀಳಾನುವೃತ್ತಿ'ಯಿಂದ ಆಳುತ್ತಿದ್ದಂತೆ ಒಂದು ಶಾಸನದಿಂದ ತಿಳಿದು ಬರುತ್ತದೆ (ಕಶಾಅ. ೩೯೦). 'ಕುಮಾರವೃತ್ತಿ', 'ಬೀೞವೃತ್ತಿ' ಪರಾ. [ಬೀಳ್$_1$ ( < ಬೀೞ್$_1$) + ಅನುವೃತ್ತಿ]

**ಬೀಳಾಸೆ** (ನಾ). ತುಚ್ಛವಾದ ಆಸೆ; ಕೀಳಾದ ಅಪೇಕ್ಷೆ : ಆವ ಬೀಳಾಸೆಯಿಂದಾದಾವ ಶಾಪಕ್ಕೊ . . . ನಮ್ಮ ತಾಯ್ನುಡಿ ತನಗಾದ ನಾಡಿನೊಳೆ ತಾನಮಂಗಳೆಯೆನಿಸಿ . . . ಬನ್ನಪಡುತಿರಲು (ಗಕೇಕ. ೯೦-೩). [ಬೀಳ್$_3$ ( < ಬೀಡು$_3$) + ಆಸೆ$_1$]

**ಬೀಳಿಕೆ** (ನಾ). ೧. ಬೀಳುವಿಕೆ ; ಪತನ : ಅದೇ ಪ್ರಕಾರ ಈ ಏಳು ಬೀಳಿಯು ಹೆಣಕ್ಕೆ ಕೂಡ ಇರುತ್ತದೆ (ಮುಂಬಯಿ. ೬-೨೨೦). ೨. ಸುರಿ ಯುವುದು ; ಸುರಿತ ; ಸುಮಂತ್ರನು ಶೂನ್ಯಹರುಷದಲಿ . . . ಸಾರಿದ ನಕ್ಷಿಯುಗಳದ ವಾರಿಗಳ ಬೀಳಿಕೆಯ [ಪಾಠಾಂ. ಬಳಲಿಕೆಯ] ಬಿಸುಸುಯ್ಲಿನ ಮಹೀಪತಿಯ (ತೊರರಾ. ೨-೩-೩). [ಬೀಳ್$_1$ (< ಬೀೞ್$_1$) + -ಇಕೆ]

**ಬೀಳಿಕ್ಕು** (ಕ್ರಿ). ಕೆಳಗೆ ಬೀಳುವಂತೆ ಮಾಡು ; ಬೀಳಿಸು : ಹೋಗಿ ದೇಶಂಗಳಲಿ ತಿರಿದುದ ಬಾಗಿಲಲಿ ಬೀಳಿಕ್ಕುವಂತಿರೆ ಯೋಗಗತಿಗೀಡೇ ಐದಿಳಿವರು ಮೃತ್ಯುವಿನ ಮುಖಕೆ (ತಿಭಾಗ. ೧೦-೯೩-೩೪). [ಬೀಳ್$_1$ ( < ಬೀೞ್$_1$ ) + ಇಕ್ಕು]

**ಬೀಳಿಚು** 'ಬೀಳ್ಚು' ನೋ.

**ಬೀಳಿಲ್**, ಬಿಣಿಲು, ಬಿಳಿಲ್, ಬಿಳಿಲು, ಬೀೞಿಲ್, ಬೀಳಿಲು (ನಾ). ೧. ಆಲ ಮುಂತಾದ ಮರಗಳ ಕೊಂಬೆಗಳಿಂದ ಕೆಳಮುಖವಾಗಿ ಇಳಿ ಬಿದ್ದ ಬೇರು,—ಜಟೆ : ಘಳಿಲನೆ ಬೀಳಿಲ್ವಿಡಿದಡರ್ದು ನಿಡುಗೊಂಬಿ ನೆಲೆದುಱುಗಲ ಪೊದಱ ಪೊರೆಯೊಳ್ ಮೆಯ್ಗರೆದಿರ್ದ ಗಂಧರ್ವಸೌಂದರಿ ನೆಲೆವಡೆದಕ್ಷೀಣರೂಪಯಕ್ಷಿಣಿಯಂತಿಸೆಯೆ ಮಿಸುಪ ವಟವಿಟಪಿಯಿಂ (ಶಬಸಂ. ೩-೩೫ ವ). **ಬಿಣಿಲು** : ೧. ಒಣಗಿದ ಮರ ಚಿಗಿತು ಬಿಣಿ[ಪಾಠಾಂ. ಳಿ]ಲು ಬಿಡುವುದ ಕಂಡೆ (ಸರ್ವಜ್ಞ. ೨೦೬೦). **ಬಿಳಿಲ್** : ೨. ಬೀಳಲನ್ನು ಹೊಂದಿ ರುವ ಆಲದ ಜಾತಿಯ ಮರ : ಬಿಳಿಲ್ಬದರಿ ಸಾಲಮಾ ಹೊನ್ನೆ ಚೆನ್ನಂಗಿ ಮೊದಲಾದ ವೃಕ್ಷಂಗಳಿಂ ವನಮೆಸೆದುದು (ಕಿಪು. ೩೩-೦೮). **ಬಿಳಿಲು** : ೧. ಆಲದ ಬಿಳಿಲಂ ಮೇಕೆಯ ಹಾಲಲ್ಲಿ ಅರೆದು . . . ೩ ದಿನ ಕೊಳ್ಳಲು ವೀರ್ಯವರ್ಧನಂ (ಎವೈಪಿ. ೬೨) ; ಉರ್ವರೆಗೆ ಇಳಿದ ಬಿಳಿಲಿನ ಹರಹಿನಲಿ ಕಂಗೊಳಿಸುತಿಹ ವಟವೃಕ್ಷ ತಂಪಿನ ನೆಳಲ ವಳಯದಿ ಸೆಳೆದುವಾಯ್ದರು (ಅಂದಕಾ. ೩-೪). ೨. ಬಿಳಿಲರಳಿಯೆರಂ ಕಕ್ಕೆ . . . ತಱೆಯದಿಂದೊಪ್ಪು ತಿರ್ದತ್ತರಣ್ಯಂ (ಗಂಕ. ೦-೬೨) ; ಬಿಳಿಲಾಲ ಬೇಲ ಹೆಬ್ಬೇವು. . . ಮೊದಲಾದ ಮರಗಳ ಬಳಗದಿಂದದು ಕಣ್ಗೆಸೆದುದು (ಕುರಾಸಾಂ. ೯-೬). **ಬೀೞಿಲ್** : ೧. "ಶಿಫೆ ಜಟೆಯೆನೆ ಬೀೞಿಲಕ್ಕು" (ಮಂಗರಾ. ೩೨-೯) ; ಸೈಂಧವದಿಂದರೆದಾಲದ ಬೀೞಿಲನಳಿವೆರಸಿ ಕುಡಿದಂದು ಮಾಣ್ಬವತಿಸಾರಂ ಕೆಡುಗುಂ (ಕರ್ನಾಕಾ. ೯-೦೩). ೨. ಬೀೞಿಲ್ಬಿಲ್ಮತ್ತ . . . ಕಿಕ್ಕಮ್ಮರಂ ಎಂಬೀ ಮರದುಱುಗಲಿಱುಂಬಿನಿಂದತಿಗಹನಮೆನಿಪ ಗಹನಾಂತರದೊಳಗೆ (ಶಾರ್ಙ್ಗ. ೦೨-೩೮). **ಬೀಳಿಲು** : ೧. ಸ್ಮರನಿಧಿಯೆಡೆಗೆಯ್ದುವ ನವಮೋಹನ ತರುವಿನಸಿಯ ಬೀಳಿಲ ತೆಜದಿಂ ಬಂಧುರವಮಾದುವು ಕರಯುಗವಂ (ಜಯುಕಾ. ೩-೩೬). [ಬೀಳ್$_1$ (<ಬೀೞ್$_1$) + -ಇಲ್$_3$]

**ಬೀಳಿಲು** 'ಬೀಳಿಲ್' ನೋ.

**ಬೀಳಿಲುಬಿಡು** (ಕ್ರಿ). ಮರದ ಕೊಂಬೆಗಳಿಂದ ಜಟೆಯು ಕೆಳ ಮುಖವಾಗಿ ಬೆಳೆ : ಪುರುಷನಾವನು ಬಂದಡಾಲದ ಮರನು ಬೀಳಿಲು ಬಿಡುವುದಾತನು ವರನು ತರುಣಿಗೆ ತಪ್ಪದಪ್ಪನು (ಶಿಪಿಕ. ೩-೫೦). 'ಬೀೞಿಲ್ಬಿಡು' ಪರಾ. [ಬೀಳಿಲು (<ಬೀಳಿಲ್) + ಬಿಡು$_1$]

**ಬೀಳಿಸು** 'ಬೀೞಿಸು' ನೋ.

**ಬೀಳು$_1$** 'ಬೀೞ್$_1$' ನೋ.

**ಬೀಳು$_2$** 'ಬೀೞ್$_2$' ನೋ.

**ಬೀಳು$_3$** 'ಬೀಡು$_2$' ನೋ.

**ಬೀಳು$_4$** 'ಬೀಡು$_3$' ನೋ.

**ಬೀಳು$_5$** 'ಬೀೞ್$_4$' ನೋ.

**ಬೀಳುಕಟ್ಟೆ** (ನಾ). ನೀರು ಜಲಪಾತವಾಗಿ ಬೀಳುವಂತೆ ಮಾಡುವ ಒಂದು ಬಗೆಯ ಕಟ್ಟೆ : ಆದರೆ ಬೀಳುಕಟ್ಟೆಯನ್ನು ಕಟ್ಟಿದ ಕಡೆ ದೋಣಿಗಳ ದಾರಿಯನ್ನು ಪಾತದಿಂದ ಬೇರೆಯಾಗಿ ಇಡಬೇಕಾಗುತ್ತದೆ (ಶಿಂಪ್ರಾ. ೩೮೩). [ಬೀಳು$_1$ (< ಬೀೞ್$_1$) + ಕಟ್ಟೆ$_1$]

**ಬೀಳುಕೊಡು** 'ಬೀಳ್ಕೊಡು' ನೋ.

**ಬೀಳುಕೊಳ್** 'ಬೀಡುಗೊಳ್' ನೋ.

**ಬೀಳುಗ** (ನಾ). ಕೆಡೆಯುವವನು : "ಪತನ್, ಪತತಿಃ, ಪತಕಃ—ಈ ೩ ಬೀಳುಗಂ" (ಶಾಶಕ್ಕ. ೦೯೬). [ಬೀಳು$_1$ (<ಬೀೞ್$_1$)+ -ಗ$_3$]

**ಬೀಳುಗತ್ತಲೆ** (ನಾ). ಗಾಢವಾದ ಅಂಧಕಾರ : ಹೊಳಚೆಯು ಅಮುಗಯ್ಯ ಧೂಳ ಬೆಂಜೆಗೆ ಸೇರಿ ಮಾಳದೊಳು ಬಿಟ್ಟ ಬೀಡಾರ ಬೆಳತನಕ ಬೀಳ್ಗತ್ತಲೆಯು ಬೆಳಕಾಗಿ (ಕನ್ನಶಾ. ೩೦೫).
[ಬೀಳು$_1$ (< ಬೀಟ್$_1$) + ಕತ್ತಲೆ$_1$ (< ಕಟ್ಟಲೆ) ]

**ಬೀಳುಗಳೆ** (ಕ್ರಿ). ಹೀನಾಯ ಮಾಡು; ಹೀಗಳೆ : ಪೆಣ್ಣು ಪೆಣ್ಣೆಂದೇತಕೆ ಬೀಳುಗಳೆವರು ಕಣ್ಣು ಕಾಣದ ಗಾವಿಲರು (ಹರಿ. ೫-೬) ; ನಾಡನ್ನು ಕಾಡೆಂದು ಬೀಳುಗಳೆವರೆ ಬೀಡ ಕಟ್ಟಿ ಪಟ್ಟಣವನ್ನು ಆಳಬೇಕು (ಅರಸು. ೧೦೨-೫) ; ಮನುಷ್ಯನ ಮನಸ್ಸು ಮಿಕ್ಕವನ್ನೆಲ್ಲ ಬೀಳುಗಳೆಯುವುದು (ಕುಹಾಪ. ೩೦). [ಬೀಳು$_4$ (< ಬೀಡು$_3$) + ಕಳೆ$_1$]

**ಬೀಳುಗುಂಡಿ** (ನಾ). ಉರುಳಿಸಲು ಮಾಡಿರುವ ಹಳ್ಳ; ಬೀಳಿಸಲು ನಿರ್ಮಿಸಿದ ಕಂದಕ : ಶಕುನಿಯೂ . . . ದುಶ್ಶಾಸನನೂ ಕೋಲು ಜೇನಿಗಾಗಿ ಮರದ ತುದಿಗೆ ಹತ್ತಿ ಬಿಟ್ಟು ಅಲ್ಲಿ ಜೋಲಾಡುತ್ತಿದ್ದಾರೆ. ಕೆಳಗೆ ಭೀಮನ ಕೋಪವೆಂಬ ಬೀಳುಗುಂಡಿ ಅವರುಗಳ ನಾಶಕ್ಕಾಗಿ ಬಾಯಿ ತೆರೆದು ಕಾದಿರುವುದು ಅವರುಗಳಿಗೆ ತಿಳಿಯಲಿಲ್ಲವಲ್ಲಾ ! (ವ್ಯಾಸಭಿ. ೧೯೨).
[ಬೀಳು$_1$ (< ಬೀಟ್$_1$) + ಗುಂಡಿ$_2$]

**ಬೀಳುಗುಂಡು** 'ಬೀಟ್ಗುಂಡು' ನೋ.

**ಬೀಳುಗುವರ** (ನಾ). ಅಯೋಗ್ಯನಾದ ತರುಣ, —ಯುವಕ : ಬಾಳಿ ಬದುಕಿ ತಣಿವಿಲ್ಲದ ತಮ್ಮಂತೆ ಬಾಳಲೆಳಸುವ ಬಾಲಕಿಯ ಬೀಳುಗುವರನಿಗೆ ಬೆಲೆಗೈದರೆಂಬುದ ಕೇಳಿ ಕಿವಿಯ ಮುಚ್ಚುವುದು (ಹರಿ. ೫-೦೯).
[ಬೀಳು$_4$ (< ಬೀಡು$_3$) + ಕುವರ$_2$]

**ಬೀಳುಗೆಡವು** (ಕ್ರಿ). ಭೂಮಿಯನ್ನು ಸಾಗುವಳಿ ಮಾಡದಿರು ; ಜಮೀನನ್ನು ಹಾಳುಗೆಡವು : ಅವನು ಕಳ್ಳಭಟ್ಟಿ ಮಾರುವ ಕಸುಬಿಗೆ ಕೈಹಾಕಿ ಗದ್ದೆಗಳನ್ನೆಲ್ಲ ಬೀಳುಗೆಡವಿದ (ರೂಪ).
[ಬೀಳು$_4$ (< ಬೀಡು$_3$) + ಕೆಡವು (< ಕೆಡಪು)]

**ಬೀಳುಗೊಡು** 'ಬೀಳ್ಕೊಡು' ನೋ.

**ಬೀಳುಗೊಳ್** 'ಬೀಡುಗೊಳ್' ನೋ.

**ಬೀಳುಗೊಳಿಸು$_1$** (ಕ್ರಿ). ನಿವಾರಿಸು ; ಪರಿಹರಿಸು : ಉಸುರುಬ್ಬಸದ ದುಸ್ಥಿತಿಯ ಬೀಳುಗೊಳಿಸುವೆನು (ಚಿಕಾಗ. ೯-೬-೩೭).
[ಬೀಳುಗೊಳ್ (< ಬೀಡುಗೊಳ್) + — ಇಸು$_3$]

**ಬೀಳುಗೊಳಿಸು$_2$** (ಕ್ರಿ). ನಿರರ್ಥಕಗೊಳಿಸು ; ನಿಷ್ಪ್ರಯೋಜಕವನ್ನಾಗಿ ಮಾಡು : ನಾವು ಈ ಶಕ್ತಿಯನ್ನು ಬೀಳುಗೊಳಿಸಿರುವೆವು, ಕೀಳುಗೊಳಿಸಿರುವೆವು (ಚಿಕಾಮುಂ. ೬೩). [ಬೀಳು$_4$ (< ಬೀಡು$_3$) + ಕೊಳ್$_1$ + — ಇಸು$_3$]

**ಬೀಳುಡಿಗೆ** (ನಾ). (ಇನ್ನೊಬ್ಬರು ಉಟ್ಟು) ಕಳಚಿದ ಬಟ್ಟೆ : ಅವನಾದರೇನು ಶಿವಮಹಾದೇವನ ನೆನೆವವನ ಬಾಯ ತಂಬುಲ ಮೆಲುವೆ ಬೀಳುಡಿಗೆ [ಪಾಠಾಂ. ಡೆ]ಯ ಹೊದೆವೆ (ಬಸವ. ೯೬೩) ; ತನ್ನ ನಿರ್ಮಲವ ಕೊಟ್ಟನೆನಗೆ ಆ ತೊಟ್ಟ ಬೀಳುಡಿಗೆಯ ಹೊದೆದುಕೊಂಡೆನಾಗಿ ಆ ಮಡಿವಳ ಮಾಚಿತಂದೆಯ ಕೃಪೆಯಿಂದ ಆನು ಬದುಕಿದೆನಯ್ಯಾ (ಬಸಹ. ೦೦೬-೩೦೬) ; ನಮ್ಮ ಕಲಿದೇವನ ಶರಣರ ಬೀಳುಡಿಗೆಯ ತೊಳೆವ ಲೆಂಕನ ಬಡತನವ ನೋಡು (ಶೂರಸೂ. I, ೩೯೯).
[ಬೀಳ್$_1$ (< ಬೀಟ್$_1$) + ಉಡಿಗೆ$_1$ (< ಉಡುಗೆ)]

**ಬೀಳುಡೆ** 'ಬೀಟುಡೆ' ನೋ.

**ಬೀಳುದಂಡ** (ನಾ). ಬೀಳುಭೂಮಿಯ ಮೇಲೆ ಹಾಕುವ ತೆರಿಗೆ : ಆಲನೆಯು ಅನ್ಯ ಬೀಳುದಂಡ ಬೊಗಾರದಣ್ಣ ಅಪೂರ್ವ್ವಾಯ ಏನು ಬಂದಡು ಕಂಚುಗಾಣ ಮರ್ಯ್ಯಾದಿಯಲಿ ಧಾರೆಯನೆಱದು ಆ ಪಂಚಾಳರಡಸುವ ಧರ್ಮಕ್ಕೆ ಸಲುವುದು (ಎಕ. IX (S), ಕಾಪಕಾ. ೯೨-೩೦ ; ಸು. 1300).
[ಬೀಳು$_4$ (< ಬೀಡು$_3$) + ದಂಡ]

**ಬೀಳುನುಡಿ$_1$** (ಕ್ರಿ). ಹೀಯಾಳಿಕೆಯ ಮಾತನ್ನು ಆಡು ; ನಿಂದಿಸು ; ಜರೆ: ಹಾಳುಹರಟೆ ಬಿಟ್ಟು ಹೊತ್ತುಕಳೆವುದೆ ಹಬ್ಬ . . . ಬೀಳುನುಡಿವರ ಬಿಟ್ಟುಕೊಡುವುದೆ ಹಬ್ಬ (ಜಗದಾ. ೦೫೦). [ಬೀಳು$_4$ (< ಬೀಡು$_3$) + ನುಡಿ$_1$]

**ಬೀಳುನುಡಿ$_2$** (ನಾ). ವ್ಯರ್ಥವಾದ ಮಾತು ; ನಿರರ್ಥಕವಾದ ನುಡಿ : ಬೀಳುನುಡಿಯ ಬಿಡು ಮುನಿಪ (ಹರಿಶಾಂ. ೧-೦೭).
[ ಬೀಳು$_4$ (< ಬೀಡು$_3$) + ನುಡಿ$_2$ ]

**ಬೀಳುಬಾವಿ** (ನಾ). ಹಾಳುಬಿದ್ದ ಬಾವಿ ; ನಿರುಪಯುಕ್ತವಾದ ಬಾವಿ : ಎದುರಿಗಿದ್ದ ಬೀಳುಬಾವಿ ತನ್ನ ಶಾಂತವಕ್ಷಃಸ್ಥಲದಲ್ಲಿ ಆಕಾಶದ ಸಕಲ ಸಂಪತ್ತನ್ನೂ ತುಂಬಿಕೊಂಡು ನಗುವಂತಿತ್ತು (ಶಾಪಿಕ. ೯೨).
[ಬೀಳು$_4$ ( < ಬೀಡು$_3$) + ಬಾವಿ]

**ಬೀಳುಬಿಡು** 'ಬೀಡುಬಿಡು$_3$' ನೋ.

**ಬೀಳುಬುಟ್ಟಿ** (ನಾ). ಒಂದು ಬಗೆಯ ಬಳ್ಳಿಯಿಂದ ಹೆಣೆದ ಕುಕ್ಕೆ : ಅದನ್ನು ಒಂದು ಬೀಳುಬುಟ್ಟಿಯಲ್ಲಿ ತುಂಬಿಸಿ ಒಕ್ಕಲು ಲಿಂಗನ ತಲೆಯ ಮೇಲಿಟ್ಟು . . ಕಳುಹಿಸಿ ಕೊಟ್ಟ (ದೇವಹಂ. ೧೯೬).
[ಬೀಳ್$_5$ (< ಬೀಟ್$_4$) + ಬುಟ್ಟಿ (< ಪುಟ್ಟಿ$_1$)]

**ಬೀಳುಭೂಮಿ** (ನಾ). ಸಾಗುವಳಿ ಮಾಡದ ನೆಲ, — ಜಮೀನು : ಬೀಳುಭೂಮಿಯನ್ನು ಹೊಸದಾಗಿ ಸಾಗುವಳಿಮಾಡೋಣ (ಗಂಗಾಮ. ೬. ೦೨೬).
[ಬೀಳು$_4$ (< ಬೀಡು$_3$) + ಭೂಮಿ]

**ಬೀಳುಮಾತು** (ನಾ). = ಬೀಳುನುಡಿ$_2$ : ಬೀ[ಪಾಠಾಂ. ಕೀ]ಳುಮಾತುಗಳೇಕೆ ನಿನಗಿದು . . . ನಳನೃಪಗೆಯೆರಡೆಣಿಸುವುದೆ (ನಳಚ. ೯-೦೦) ; ಭಾಳಲೋಚನನ ಸರ್ಪಾಭರಣವಮಂ ನೀನು ಹರಿಯ ಪರಿಯಂಕವೆಂಬ ಬೀಳುಮಾತನು ಸಭಾಪತಿ ಸಭ್ಯರುಗಳು ಮಿಗೆ ಕೇಳಿ ಛೀ ತೆಗೆಯೆಂಬ ತೆಱದಿ (ಏಕೋತ್ತ. ೦೩-೫). [ ಬೀಳು$_4$ (< ಬೀಡು$_3$) + ಮಾತು$_1$ ]

**ಬೀಳುವಲೆ** (ನಾ). (ಮೃಗ, ಪಕ್ಷಿಗಳು ಸಿಕ್ಕಿಕೊಳ್ಳುವ) ಒಂದು ಬಗೆಯ ಬಲೆ,—ಜಾಲ : ಬೀಳುವಲೆ ಜವಳಿವಲೆ . . . ಸಗಾಢವಲೆಗಳ ಹೊಱಗೆಳೋಳಿಯಿಂ ಪೊತ್ತು ನಡೆತಂದುದು ಪುಳಿಂದರೂಪದಲಿ ಭೂತಗಣಂಗಳು (ಸೌಂದರ್ಯ. ೦೬-೩೯) ; ಬೀಳುವಲೆ ಕಣ್ಣಿವಲೆ ಸಿಡಿಲುವಲೆ . . . ಮರೆವಲೆಗಳಿಳ್ದಿರ್ದಾವಾ ಶಬರರಲ್ಲಿ (ಸಿದ್ಧೇಶ್ವ. ೮-೬).
[ ಬೀಳು$_1$ (< ಬೀಟ್$_1$) + ಬಲೆ$_1$ ]

**ಬೀಳುವಳ್ಳಿ** (ನಾ). ಹಾಳು ಬಿದ್ದ ಗ್ರಾಮ ; ನಿರ್ಜನವಾದ ಹಳ್ಳಿ : ನಗರ ಪಟ್ಟಣ ಖೇಡ ಖರ್ವಡ ಪುರ ಗ್ರಾಮಗಳೆಂಬ ನಾನಾಪೆಸರಾಂತು ಸೊಗಯಿಸುತಿಪ್ಪವಾ ದೇಶದಿ ಬೀಳುವಳ್ಳಿಗಳಿಲ್ಲ (ಪೋಹಚ. ೨-೦೬).
[ಬೀಳು$_4$ (< ಬೀಡು$_3$) + ಪಳ್ಳಿ$_1$]

**ಬೀಳುವೆಣ** (ನಾ). ಬಿದ್ದಿರುವ ಹೆಣದಂತಿರುವವನು : ಬಾಳುವೆಣನ ಬೀಳುವೆ [ಪಾಠಾಂ. ಬೀಳ್ವೆ]ಣನ ಸಂಸಾರವೇನವನ (ಬಸವ. ೦೫೭).
[ ಬೀಳು$_1$ (< ಬೀಟ್$_1$) + ಪೆಣ ]

**ಬೀಳುವೃತ್ತಿ** (ನಾ). = ಬೀಳಾನುವೃತ್ತಿ : ಶ್ರೀಮತ್ಕುಂದ್ದಮರಸಬ್ಬನವಾ[ಸಿ]ಪನ್ನಿಚ್ಚಾ[ಸಿ]ರಮುಂ ಸುಖಸಂಕಥಾವಿನೋದದಿಂ ಬೀಳುವೃತ್ತಿಯಿನಾಳುತ್ತುಮಿರೆ (ಕಇ. II, ೬-೦೨ ; 1030). [< ಬೀಟವೃತ್ತಿ]

**ಬೀಳ್ಕೆ** 'ಬೀಟ್ಕೆ' ನೋ.

**ಬೀಳ್ಕೊಡಿಗೆ** 'ಬೀಳ್ಕೊಡುಗೆ' ನೋ.

**ಬೀಳ್ಕೊಡಿಸು** (ಕ್ರಿ). ೧. ಕಳುಹಿಸು ; ಹೋಗಲು ಅನುವು ಮಾಡು : ಮಕುಟವರ್ಧನರಂ ಕಾಣಿಸುತಂ ಬಂದ ಚಾರರಂ ಬೀಳ್ಕೊಡಿಸುತಂ ಸುಖದೊಳಿಪ್ಪಲ್ಲಿ (ಬಿಸರ. ೬-೩೫) ; ಇಳೆಯಾಣ್ಮನ ಮನದಿಂಗಿತವಱಿತು ಹೊಂಬೆಳ ವಿಡಿದಬ್ಜನೇತ್ರೆಯರು ಎಳವೆಣ್ಣುಗಳ ಚಿತ್ತೈಸೆಂದು ಸತಿಯರ ನಿಳಯಕೆ ಬೀಳ್ಕೊಡಿಸಿದರು (ಪೋಹಚ. ೨೨-೦೫). ೨. ನಿವಾರಿಸು ; ಪರಿಹರಿಸು :

ನಿಜಶ್ರೀಪದವ ತೋಱಿಸಬೇಕು ವನವಾಸದ ಪರಿಕ್ಲೇಶಾನುಸಂತಾಪವನು ಬೀಳ್ಕೊಡಿಸಿ (ಕುವ್ಯಾ.ವಿ. ೧೧-೩೬). [ಬೀಳ್ಕೊಡು + — ಇಸು₃]

**ಬೀಳ್ಕೊಡು**, ಬೀಳುಕೊಡು, ಬೀಳುಗೊಡು, ಬೀಳ್ಗುಡು (ಕ್ರಿ). ೧. (ಅತಿಥಿ, ಬಂಧು, ಗೆಳೆಯ ಮುಂತಾದವರನ್ನು) ಕಳುಹಿಸಿಕೊಡು ; ಹೋಗಲು ಬಿಟ್ಟು ಕೊಡು : ಮೃಡಂ ರಕ್ಷಿಸುವೆನೆನುತ್ತ ವಿನಯೋಕ್ತಿಯಿಂದ ಬೀಳ್ಕೊಡೆ (ಶಬ್ದರಾ. ೬-೧೦೬) ; ಭದ್ರದೇಹದ ಭಟನ ಬೀಳ್ಕೊಡೆ ರುದ್ರರೂಪದ ದೈತ್ಯ ಬಂದನು ರಾಮನಿದ್ದೆಡೆಗೆ (ಕೌಶಿರಾ. ೩೯-೨೮) ; ಮತ್ತ ಗಜಗಮನೆಯರ ಬೀಳ್ಕೊಟ್ಟನು ಮಹೀಪಾಲ (ಕೊರರಾ. ೧-೫-೩೪). ೨. ಬಿಡು ; ತ್ಯಜಿಸು : ಮಾನನಿಧಿ ಸಾವಿತ್ರಿಯೌಪಾಖ್ಯಾನವನು ಕೇಳಿದನು ಚಿತ್ತಗ್ಲಾನಿಯನು ಬೀಳ್ಕೊಟ್ಟನು (ಕುವ್ಯಾ.ಅ. ೨೩-೩). ೩. ತಲುಪುವಂತೆ ಮಾಡು ; ತಲುಪಿಸು : ಬಿರಯಿತಿಯಾಕೆಗೆ ಬೀಳ್ಕೊಡಿದನು ತೂಗಲಿ ಗುಗಿಗೆ ಗರಿಯಂ ! (ಗಿಶಿಂ. ೩೬-೧೨). **ಬೀಳುಕೊಡು** : ೧. ನೀ ಹೋಗೆಂದು ಗುಣದಲಿ ಬೀಳುಕೊಟ್ಟನು ದ್ರೋಣನರ್ಜುನನ (ಕುವ್ಯಾದ್ರೋ. ೯-೫೦) ; ದೇಶಾಂತರ ದ್ವೀಪಾಂತರಂಗಳಿಂ ಬಂದ ಜನವ ಕಾರುಣ್ಯದಿಂದ ಮನ್ನಿಸಿ ಬೀಳುಕೊಟ್ಟು ತಿರುವಾರೂರೊಳೊಪ್ಪುತಿರ್ದಂ ಸೌಂದರಾಧಿಪಂ (ಸೌಂದಪು. ೧೧-೪೦) ; ಬೀಳುಕೊಡಿ ನಿಮ್ಮರಸರಿಗೆ ತಾ ಹೇಳಲೇನದ ಹೇಳಿ (ಕೊರರಾ. ೫-೩-೧೦೨). ೨. ಕೇಳು ಮಾಯಾಮಲವ ಜಾಳಿಸುವ ಪರಿಗಳಂ ಬೀಳುಕೊಡು ಕುಲವೆಂಬ ಕಾಳ್ಗರುಳ್ತನಗಳಂ (ದೀಕ್ಷಾಬೋ. ೪೨-೬೩೨) ; ಗುರು ಬೀಳುಕೊಟ್ಟನು ದೇಹವನು (ಕುವ್ಯಾದ್ರೋ. ೦೯-೧) ; ಯೋಗಿಸಮೂಹ ನಗದೇ ಮನುಜಭಾವವ ಬೀಳುಕೊಡಿ (ಕೌಶಿರಾ. ೪೩-೪೮). ೪. ಇಲ್ಲವಾಗಿಸು ; ಮರೆಯಾಗಿಸು ; ಅಡಗಿಸು : ನಿಮ್ಮ ಭೃತ್ಯನ ಭಾವ ಬೆಚ್ಚಿತು ವಿಶ್ವರೂಪವ ಬೀಳುಕೊಡಿ (ಕುವ್ಯಾಉ. ೩-೬೪). **ಬೀಳುಗೊಡು** : ೧. ನಿಮ್ಮಯ ಕರುಣವೇ ಸಾಮ್ರಾಜ್ಯ ನಮ್ಮನು ಬೀಳುಗೊಡಿರಿ (ಕುವ್ಯಾಸ. ೦೨-೫೨) ; ಏಳುದಿನದಲಿ ಮುಗಿದುದಾ ಮಖಶಾಲೆ ದಕ್ಷಿಣೆಗೊಟ್ಟು ವಿಪ್ರರ ಬೀಳುಗೊಟ್ಟನು (ಕೌಶಿರಾ. ೧-೯೫). **ಬೀಳ್ಗುಡು** : ೧. ಹಸ್ತಸೂಚನದಿಂದ ಬೀಳ್ಗುಡುವನು (ಚಿತ್ರಅ. ೧೧೧-೬).
[ಬೀಳ್₂ (< ಬೀಡ್ಸು₂) + ಕೊಡು₁]

**ಬೀಳ್ಕೊಡುಗೆ**, ಬೀಳ್ಕೊಡಿಗೆ (ನಾ). ಒಬ್ಬರನ್ನೊಬ್ಬರು ಅಗಲುವಾಗ ಒಪ್ಪಿಗೆ ತೆಗೆದುಕೊಳ್ಳುವುದು ಅಥವಾ ಕೊಡುವುದು : ನಮ್ಮ ಕಚೇರಿಯಲ್ಲಿ ನಿವೃತ್ತರಾದ ಅಧಿಕಾರಿಯೊಬ್ಬರಿಗೆ ಬೀಳ್ಕೊಡುಗೆ ಸಮಾರಂಭ ಇಟ್ಟುಕೊಂಡಿದ್ದೇವೆ (ರೂಪ). **ಬೀಳ್ಕೊಡಿಗೆ** : ಅವನು ಪರಸ್ಪರ ಬೀಳ್ಕೊಡಿಗೆಯಲ್ಲಿ ಮಗ್ನವಾಗಿದ್ದ ಜನರನ್ನು ನೋಡುತ್ತಿದ್ದನು (ಪುಸರು. ೨೪೩) ; ಹಿತವಚನವನ್ನು, ಆ ಬೀಳ್ಕೊಡಿಗೆ ಸಮಾರಂಭದ ಮುಖ್ಯ ಕಾರ್ಯಕ್ರಮವಾಗಿ ನುಡಿದರು (ರೂಶಸಂ. ೨೦). [ಬೀಳ್ಕೊಡು + — ಗೆ]

**ಬೀಳ್ಕೊಳ್** 'ಬೀಡುಗೊಳ್' ನೋ.

**ಬೀಳ್ಕೊಳಿಸು** 'ಬೀಟ್ಕೊಳಿಸು' ನೋ.

**ಬೀಳ್ಕೊಳು** 'ಬೀಡುಗೊಳ್' ನೋ.

**ಬೀಳ್ಕೊಳ್ಳು** 'ಬೀಡುಗೊಳ್' ನೋ.

**ಬೀಳ್ಗುಡು** 'ಬೀಳ್ಕೊಡು' ನೋ.

**ಬೀಳ್ಗೆಡಹು** (ಕ್ರಿ). ಬೀಳುವಂತೆ ಕೆಡಹು ; ಬೀಳಿಸು : ರಿಪುಗಳ ಕಾಲ್ಗೆಡಹಿ ಬೀಳ್ಗೆಡಹಿ ಸೈನ್ಯವ ನಾಲ್ಕಡೆಗೆ ಪಾರಿಸಿದಡೆ (ಅಸಂರಾ. ೦-೦೩-೬).
[ಬೀಳ್₁ (< ಬೀಟ್₁) + ಕೆಡಹು (< ಕೆಡಪು)]

**ಬೀಳ್ಗೆಡೆ** (ಕ್ರಿ). ಹಾಳಾಗು ; ಹಾಳುಬೀಳು : ಜಲಮಿಂಗಿ ಪೋದ ತಂಗೊಳಗಳನಾಗ ಬೀಳ್ಗೆಡೆದ ತೋಂಟಗಳಿಂ . . . ಅಪಾರವಕ್ಷಿ ಮೃಗಸಂಕುಲಮಿಲ್ಲದ ಕಾನನಂಗಳಿಂ (ಶಂಪ್ರಭು. ೦೨-೯೬).
[ಬೀಳ್₂ (< ಬೀಡ್ಸು₂) + ಕೆಡೆ₁]

**ಬೀಳ್ಚು**, ಬೀಳಿಚು (ಕ್ರಿ). ೧. ಉರುಳಿಸು : ಕೆಡಹು : ನಿನ್ನನುಜನವಗಡಿಸೆ ಕೆಡೆಯೆಚ್ಚು ಬೀಳ್ಚಿದಂ (ಜೈಮಿಭಾ. ೨೦-೩೪). **ಬೀಳಿಚು** : ೨. ಸಾಯಿಸು ; ಕೊಲ್ಲು : ಮೊರೆಮೊರೆದು ಹೂಂಕರಿಸಿ ಮಾವ್ತರು . . . ಬೀಳಿಚಿದುವಿರದುರ್ಬಿದವನಾಭೀಳಸರಪಳಿಯಿಂದ ನಿವಿಷಕೆ ಕಾಲನಾಲಯ ತುಂಬಿ ತುಳುಕಿಸಲಾಡೆ ಗಜನಿವಹ (ಕೋಗಡು. ೨೦-೧೪) ; ಕಾಲಾಳಿನಲಿ ಖತಿಯಿಂದ ದೈತ್ಯನು ಬೀಳಿಚಿದನೈನೂರುಲಕ್ಷವ (ಕೋಗಡು. ೨೩-೬೫).
[ಬೀಳ್₁ (< ಬೀಟ್₁) + — ಚು₁]

**ಬೀಳ್ದಲೆ** (ನಾ). ಉರುಳುವ ತಲೆ ; ಕೆಳಗೆ ಬೀಳುವ ಶಿರ : ದೇವರೊಳ್ ಪೆರ್ಡಲೆವೆತ್ತು ವಿರಾಜಿಸಿರ್ಪನಾ ತಲೆಯದು ಸಾಟಿ ನಿನ್ನ ತಲೆಗನ್ನರ ಬೀಳ್ದಲೆ ಸಾಟಿಯಕ್ಕುಮೇ (ವೃಶಪಿ. ೨೬-೬೨).
[ಬೀಳ್₁ (< ಬೀಟ್₁) + ತಲೆ₁]

**ಬೀಳ್ದಿಸೆ** 'ಬೀಟ್ದಿಸೆ' ನೋ.

**ಬೀಳ್ದೋಳು** (ನಾ). ಎತ್ತಲಾಗದ ತೋಳು ; ಬಿದ್ದುಹೋಗಿರುವ ತೋಳು : ಸುರಪತಿಗೆ ಬೀಳ್ದೋಳು ಮಿಗೆ ದಂತಶೂಲೆ ಪೂಷಂಗೆ ಯಮಜಂಗೆ ಮತ್ತುರುತರಶಿರೋವೇದನೆ (ಲಶಿತಂ. ೩೯-೬೨).
[ಬೀಳ್₁ (< ಬೀಟ್₁) + ತೋಳು (< ತೋಳ್)]

**ಬೀಳ್ನೆಲ** 'ಬೀಟ್ನೆಲ' ನೋ.

**ಬೀಳ್ಮನೆ** 'ಬೀಱುಮನೆ' ನೋ.

**ಬೀಱ್** 'ಬೀಱು₁' ನೋ.

**ಬೀಱಿಕೆ** (ನಾ). ೧. ಹೊರಸೂಸುವುದು ; ಹೊರಹೊಮ್ಮಿಸುವಿಕೆ : ತಲೆದೂಗಿ ನಸುನಗೆದೋಱಿಕೆಯ ನಯನಾಗ್ರದುಗ್ರದ ಬೀಱಿಕೆಯುಲೀ ಮಾತನಾಡಿದನಾ ಪ್ರಹಸ್ತಂಗೆ (ಕೊರರಾ. ೫-೬-೩೨). ೨. ಅರ್ಪಿಸುವುದು ; ಅರ್ಪಣೆ : ಮೂಱಿಕೊಳಗೊಲಿದದಱಲರ್ಚಿಸೆ ಮೂಱುಮುಡಿಫಲವಹುದು ಯಜ್ಞದ ಬೀಱಿಕೆಯುಲಾ ದ್ವಿಜರು ಭಕ್ತಿಯುಲರ್ಚಿಸುವರೊಲಿದು (ಶಿಭಾಗ ೦೦-೩೩-೦೪). [ಬೀಱು₁ + — ಇಕೆ]

**ಬೀಱಿಸು**, ಬೀರಿಸು (ಕ್ರಿ). ೧. ಅತ್ತಿಂದಿತ್ತ ತೂಗಿಸು ; ಒಲೆದಾಡಿಸು : ಬಳಿಕ ಮಿಕ್ಕಿನ ಕಾಕುದೈತ್ಯರ ಬಳಗಕಳವೇ ಹರಿಯ ನಾಮವ ಹುಳುಕುನಂಜಿನ ಹರಿಯ ನಾಮದ ಘೋಷದಾರ್ಭಟಕೆ ತಲೆಯ ಬೀಱಿಸಿಕೊಂಡು ಬಳಲಿಯೆ ಕಳವಳಿಸೆ ಸ್ವಾತಂತ್ರ್ಯಮಹಿಮನ ಬಳಕೆಗದು ಯೋಗ್ಯವೇ (ಸಂಕಿಕ. ೬-೨೦). **ಬೀರಿಸು** : ೨. ಎಸೆಯುವಂತೆ ಮಾಡು ; ತೂರುವಂತೆ ಮಾಡು : ಕೆಲವು ಪುಂಡರು ಚಿಕ್ಕ ಹುಡುಗರ ಕೈಯಲ್ಲಿ ಬಸ್ಸಿಗೆ ಕಲ್ಲು ಬೀರಿಸುತ್ತಿದ್ದಾರೆ (ರೂಪ). ೩. ಹಂಚಿಸು ; ವಿತರಣೆ ಮಾಡಿಸು : ಅವಳು ತನ್ನ ಚಿಕ್ಕ ಮಗಳ ಕೈಯಲ್ಲಿ ಎಳ್ಳು ಬೀರಿಸುತ್ತಿದ್ದಾಳೆ (ರೂಪ). ೪. ಬದಲಾಯಿಸಿಕೊಳ್ಳು ; ವಿನಿಮಯ ಮಾಡು : ರತುನ ಬೆಲೆಗೆ ಹಾಕಿ ಪಲ್ಯವ ಕೊಂಬಂತೆಗತಿಗೆ ಸಾಧನವಾದ ನಿನ್ನ ನಾಮಂಗಳು ಕ್ಷಿತಿಯೊಳು ಶಾರೆ ತೌಡಿಗೆಬೀರಿಸಲು ಅನುಚಿತಕರ್ಮಗಳಲ್ಲ ಉಚಿತಹವೆಂದು ನಗುತ ಕಾಲ ಕಳೆವೆನೊ (ಏದಾಕೃ. ೪೦-೪).
[ಬೀಱು₁ + — ಇಸು₃]

**ಬೀಱು₁**, ಬೀರ್₁, ಬೀರು₁, ಬೀಱ್ (ಕ್ರಿ). ೧. (ಕಲ್ಲು, ಬಾಣ, ಕೋಲು ಮುಂತಾದುವುಗಳನ್ನು) ಒಗೆ ; ತೂರು ; ಎಸೆ : ಸಮರ್ಥನಲ್ಲಾ ಬಿಡುಗಣೆಯ ಬೀಱುವರೆ ಕಟಕಾಚಾರ್ಯನೆಂದೆನುತ (ಕುವ್ಯಾದ್ರೋ. ೬-೦೪) ; ಹುಚ್ಚು ಹಿಡಿಯಿತು ಎನಗೆ . . . ಕಡುದುಷ್ಟರನ್ನು ಕಂಡು ನಾನು ಕಲ್ಲು ಕಲ್ಲು ಬೀಱುವಂಥ (ಪುರಂದ. ೩-೨೯-೨); ನಾಲ್ಕೈದು ಬಾಣಂಗಳಂ ಬೀಱಿದಂ ಬಭ್ರುವಾಹನನ ಮೇಲೆ (ಜೈಮಿಭಾ. ೨೨-೦೫). ೨. (ಬಲೆ ಮುಂತಾದುವುಗಳನ್ನು) ಬೀಸು : ಮಾಯಾಪಾಶಮಂ ಬೀಱುತಿರ್ಪ ಸತಿಯರ ಭಾವಮಂ ಕಂಡನು (ಸೋಚುತ. ೨-೨೩). ೩. ಕಟ್ಟಿ ಹಾಕು ;

ಬಂಧಿಸು : ಚಲ್ಲಗಣ್ಣಡೆಯ ಕುಡಿವೆಳಗೆಂಬುರುಳ್ಗಣ್ಣಿಯಲ್ಲಿ ಪಥಿಕಮನೋಮೃಗವನೆಯ್ದೆ ಬೀಱಿ ತಂದಿಲ್ಲಿ ತಡೆವರಿವಳ್ದಿರೇಂ ವ್ಯಾಧವಧುಗಳೋ ಮೇಣ್ ಪ್ರಪಾವಧುಗಳೋಯೆನೆ (ಶಬ್ದಮ. ೮-೯). 'ಬೀಱುಗಣ್ಣಿಕೆ' ಪರಾ. ೪. ಎರಚು; ಚೆಲ್ಲು : ಮುಳಿದೆಚ್ಚಾಗಳ್ ಮಹೋಗ್ರಪ್ರಳಯಶಿಖಿಶಿಖಾನೀಕಮಂ ವಿಸ್ಫುಲಿಂಗಂಗಳುಮಂ ಬೀಱುತ್ತುಂ . . . ಬಂದು ಕೊಂಡಾಗಳೆ ಗಗನತಳಂ ಪಾಯ್ದು ಕೆನ್ನೆತ್ತರಿಂದುಚ್ಚಳಿಸುತ್ತಿರ್ಪನ್ನೆಗಂ ಬಿಟ್ಟುದು ಭರದೆ ಸಿಡಿಲ್ದತ್ತ ಕಣ್ಗೋತ್ತಮಾಂಗಂ (ಶಂಕಶಾ. ೦೨-೨೦೩); ಬಿರಿಮುಗುಳನು ಮಿಗೆ ಬೀಱಿದರು ಸರಿಮಿಗಿಲೆನೆ ಸಿರಿಯರಸನೊಳರಸಿಯರು (ಗೀತಗೋ. ೯-೧೬). ೫. ಸುರಿಸು; ಕರೆ ; ವರ್ಷಿಸು : ಉಪನಿಷತ್ಸಂಕುಳವಚೋಭಿಪ್ರಾಯಪೀಯೂಷವನು ಬೀಱಿದರೆ ಖಳರಿಗತಿ ದರ್ಪಜ್ವರಪ್ರಜ್ವಲಿತರಿಗೆ ಸೊಗಸುವುದೆ (ಕುವ್ಯಾಸ. ೯-೬೩); ಬೀಱಿದರಂಬುಗಳ ಮಳೆಯ (ಕುವ್ಯಾದ್ರೋ. ೫-೨೩). ೬. ಎರಗು ; ಮೇಲೆ ಬೀಳು : ಪೇಱಿದರ್ ಭಯರಸಮನೊಡನೆ ಬಾಯಾಱಿದರ್ ಬೀಱಿದರ್ ಸಿಡಿಲಂತೆ ಕೌತುಕಂದೋಱಿದರ್ ಮಾಱಿದರ್ ಮೃಗಳಂ ದನುಜರುಂ ಮರುಳ್ಗಳುಂ (ಶಬಪು. ೩೨-೩೮). ೭. (ಸ್ವಸಂತೋಷದಿಂದ) ಕೊಡು; ನೀಡು : "ಬೀಱು—ಸ್ವೇಚ್ಛಾಪ್ರದಾನೇ (ಇಷ್ಟ ಬಂದಂತೆ ಕೊಡು) " (ಶಮದ) ; ಜನಪತಿಗೆ (ಯೊ)ಸಗೆಯುಂ ಪುರಜನಮೆಲ್ಲಂ ಬೀಱುತಿರ್ಪರ್ (ಕವಿರಾ. ೦-೯೬); ಅಱಿತೈ ಗೋನಾಳಿ ಫಲುಗುಣ ತೋಱು ನಿನ್ನಱಿತವನು ಸಲಿಲವ ಬೀಱು ಬೇಗದಿನೆನಲು (ಕುವ್ಯಾಭೀ. ೧೦-೨೬); ಸೇರಿದೆ ನಿನ್ನನ್ನು ಕೋಱಿದ ವರಗಳ ಬೀಱುವೆನೆಂದು ವಿಚಾರ ಬಿಡಿಸೋ ಎನ್ನ (ಪುರಂದ. ೦-೦೬೬-೦). ೮. ಹಂಚು ; ವಿತರಣೆ ಮಾಡು : ಪುರಾಂಗನಾನಿಕರಕ್ಕೆ ಮಣಿಮಯಭಾಜನಂಗಳೊಳ್ ತೆಕ್ಕನೆ ತೀವಿದ ಪಂಚರತ್ನದ [ಕೇಸರಿ]ಯ ಕತ್ತುರಿಯ ಕೊಳತದ ಕಪ್ಪುರದ ಪಳಿಕಿನ ಬಾಯಿನಂಗಳಂ ಬೀಱಿ (ಆದಿಪು. ೪-೩೪ ವ); ನರಪರಿವೃಢನಾ ರತ್ನೋತ್ಕರಮೆಲ್ಲಮನಂದು ತನ್ನ ಪರಿಜನಕ್ಕಂ ತತ್ಪುರಜನಕಮರ್ಥಿಜನಕಂ ಪರಿವಿಡಿಯಿಂ ಬೀಱಿ ಸುಖದಿನಿರಲ್ (ನೇಮಿಪು. ೨-೫೦); ಅಕ್ಷರಜ್ಞಾನಮುಂಟದನ್ನೈದೆ ಮಾಱುವೆಂ ತ್ರ್ಯಕ್ಷನಣುಗರ್ಗಾದ ಹೊಂಗಳಂ ಬೀಱುವೆಂ (ಬಸರ. ೫-೧೨). ೯. ಹರಡು; ವ್ಯಾಪಿಸು; ಪಸರಿಸು : ಬೀಱುವ ಸೌರಭದಿಂಪಿನಿಂದೆ ಕಂಪಿನ ಕರುವಾದ ಕೇದಗೆಯ ಮಂಟಪಮೊಪ್ಪುವುದೆತ್ತ ನೋಱಿಪ್ಪೊಡಂ (ಕುಸುಮಾ. ೦-೦೦೨); ಗಾಯಕರು ತಾಳಂಗಳನುಗುಡೆ ಗೇಯರಸದ ಲಹರಿಗಳು ದೆಸೆದೆಸೆಗೆ ಬೀಱುತಿರೆ (ಬಸಪು. ೨೬-೯) ; ಬಳಿಕ ನಿನ್ನಯ ಘರಸುದರ್ಶನ ಸುಳಿವುದೋಱಿಲು ಕೋಟಿಸೂರ್ಯರ ಬೆಳಗು ಬೀಱಿಲು (ಕುವ್ಯಾಅ. ೦೬-೨೮). ೧೦. ಹಬ್ಬುವಂತೆ ಮಾಡು ; ಹರಡುವಂತೆ ಮಾಡು : ಬಾಲಾತಪಂ ಸುತ್ತಲುಂ ಕಂಪಿನ ಸೊಂಪಂ ಬೀಱಿ (ಕಾದಂಪೂ. ೩೫೪); ಪಗಲುಂ ಬೆಳ್ದಿಂಗಳಂ ಬೀಱುವ ಸೊದೆವೆಳಗು ತಾಳ್ದು ನೀಳ್ಪಿಂದಮೆತ್ತಂ ಮುಗಿಲಂ ಪೊತ್ತಿರ್ಪ ಕೂಟಪ್ರಕರದಿಂ (ತಂದ್ರಪು. ೩-೮೨). ೧೧. ಸಾರು ; ಘೋಷಿಸು : ಕಳುಪಿ ಕೊಟ್ಟುದೇಶಮಂ ದೇಶದೊಳು ಸಾಱಿ ತಿಳಿವಡಿದು ಸುಕುಮಾರವೈವಾಹಮಂ ಬೀಱಿ (ಸಂಬರ. ೫-೮) ; ನಿಬ್ಬರದ ಬಿರುದನು ಬೀಱುತಿರ್ಪವು ಗೌಱುಗಹಳೆಗಳು (ಕುಜ್ಞಾಕ. ೮-೦೪). ೧೨. ಹೊರಸೂಸು; ಹೊರಹೊಮ್ಮಿಸು : ವೃತ್ತೋತ್ತುಂಗಸ್ತನೆಯರ್ ಶ್ರಮಮುತ್ತುಮದೇಂ ಸುರಭಿಗಂಧಮಂ ಬೀಱಿದರೋ (ಆದಿಪು. ೦೦-೭೦); ಸರಸಿಜಾಯುತದಂದವನು ಮೋಹರಿಸಿ ಮುಂಚುವ ಪರಿಮಳವನಂದರಸಿ ಬೀಱುತ ಬಂದು ಹೊಕ್ಕಳು ರಾಜಮಂದಿರವ (ಕುವ್ಯಾವಿ. ೦-೨೮); ಕಾಂತಿಯ ಬೀಱಿದವು ಭುಜಲತೆಗಳಭಿನವಗರ್ಭದೇಳ್ಗೆಯಲಿ (ತೊರರಾ. ೦-೮-೨). ೧೩. ತೋರಿಸು ; ಪ್ರಕಟಗೊಳಿಸು ; ಪ್ರದರ್ಶಿಸು : ಮಾ[ಱೊ]ಡ್ಡುದಲ್ ಸಾಲದೆನ್ನೀ ಬಾಣಾವಾಸಕ್ಕೆನುತುಮಳೆಷಂ ಬೀಱುತುಂ ಬಲ್ಗಜಾಣಂ ದ್ರೋಣಂ ನಿಂದಂ ಮಸಗಿ ತಿರುವುತ್ತೂಂದು ಕೂರಂಬನಾಗಳ್ (ಶಂಪಭಾ. ೦೦-೫೬) ; ಎಲ್ಲಾ ರತ್ನಂಗಳುಮನೊಳಕೊಂಡೊಳ್ಪನ ಘೋಧಿ ಲೋಕಕ್ಕೆಲ್ಲಂ ಬೀಱಲ್ ಪೊಱಗೆ ಕಸೆವಂ ನಿಚ್ಚಮಿಡಾಡಾಡುತಿರ್ಕುಂ (ಕಾವ್ಯಾವ. ೨೫೨); ಸುರಭಿ ಪಾಲ್ರಲೇಯತೋಯಂಗಳಂ ಯುವಪಾಂಥರ್ಗೆಱಿವಲ್ಲಿ ತಮ್ಮ ಲಲಿತಾಂಗೋಪಾಂಗಶೃಂಗಾರಗೌರವಮಂ ಬೀಱುವರೆಂಬ ದೂಱನೆಸಗುತ್ತಿರ್ಪರ್ ಪ್ರಪಾಕಾಂತೆಯರ್ (ಪುಷ್ಪಪು. ೨-೨೨) : ಸೇರಿದ ಹೊಲವನ್ನು ಪೋರುವ ಮಗನನ್ನು ಚಾರು ಮೈನೆಱಿದ ಮಗಳನ್ನು ಪರರಲ್ಲಿ ಬೀಱುವವನೆಗ್ಗ (ಸರ್ವಜ್ಞ. ೦೫೨೬). ೧೪. ಮೆರೆ ; ಕಂಗೊಳಿಸು : ಬೀಱುತಿಹ ಫಲರಸದೊಳಿಪ್ಪ ನವರುಚಿಯಂತೆ ವಾರಣದ ಮಸ್ತಕದ ಮುತ್ತಿನಂತೆ (ಶಿವಗೀ. ೩-೨). ೧೫. ತೂಗು ; ಒಲೆದಾಡು: 'ಬೀಱಿಸು' ಪರಾ.

**ಬೀರ್**₁ : ೩. 'ಬೀರ್ವಗ್ಗ' ಪರಾ. ೪. 'ಬೀರ್ಚು' ಪರಾ. ೧೩. ಅತುಲಸೊಗಸಂ ಬೀರ್ವ ವಿಟನಂತೆ ಮುಂಬರಿದು ತಂಬೆಲರು ತೀಡಿತಾಗ (ಪಂಕಾರಾ. ೫-೬-೩೨). **ಬೀರು**₁ : ೧. ಕಳ್ಳರು ಹಿಂದುಗಡೆಯಿಂದ ಕವಣೆಗಲ್ಲನ್ನು ಬೀರುತಾ ಬಂದರು (ಶಿಶಿಶಂ. XI, ೯); ಹುಡುಗರು ಬಸ್ಸಿಗೆ ಕಲ್ಲು ಬೀರುತ್ತಿದ್ದಾರೆ (ರೂಢಿ). ೩. ನಾಯಿಮರಿಯ ಕುತ್ತಿಗೆಗೆ ಜೋರಾಗಿ ಹಗ್ಗ ಬೀರಬೇಡ (ರೂಢಿ). ೮. ಅವಳು ಎಳ್ಳನ್ನು ಬೀರುವುದಕ್ಕೆ ಬಂದಿದ್ದಾಳೆ (ರೂಢಿ). ೧೨. ಬಾಗುವೆ ಬಳುಕುವೆ ಬಳೆಗಳನೆಣಿಸುವೆ ಕಳ್ಳನೋಟವ ಬೀರುತಿರುವೆ (ಇಂಜಾಕ. ೮೯-೩೫); ನಾರಾಚದೇರಿಗಾರದೆ ಸೋಗೆ ನರಳು ದನಿಯಂ ಬೀರಿ ಚೀರಿಡೆ (ಕಣ್ಮಂಗ. ೫೪-೦೪೩೯) ; ಹೀಗೆ ಮಾಡಿದರೆ ಅದು ಪಭಜನೆ ಹೊಂದಿ ಕೆಟ್ಟವಾಸನೆಯನ್ನು ಬೀರುತ್ತದೆ (ಗೃಹವಿ. ೫೦). ೧೩. ಹರಿ ವಿರಂಚಿಗಳಾನಲಾರದ ಭರಿತಕಾರ್ಯವನಿಳೆಯೊಳುದಿಸಿದ ನರನು ತಾ ನಿರ್ವಹಿಪನೆಂದೇ ನಯವ ಬೀರಿದರಿ (ಕೋಗಯ. ೮-೦೪). ೧೪. ಕೃಷ್ಣಮೇಘಸದೃಶವೇಣಿ ತೂರಿ ಬೀರಿ ಬರುವಳು! (ಶಾಂತಜ. ೦೦-೪). ೧೬. ಉಂಟಾಗಿಸು ; ಉಂಟುಮಾಡು : ಚಲುವಿಕೆಯದೋರಿ ಮಾಯಾಭ್ರಮೆಯ ಬೀರಿದುದು (ಅನಂರಾ. ೩-೪-೪೩); ಹಾಡಿ ಮುದವನು ಹೀರಿ, ಜನಕೆ ಹರುಷವ ಬೀರಿ ತೇಲು ಮುಂದೆ (ಶಾಂತಜ. ೪೫-೦೯); ನೀತಿ ಮತ್ತು ಧರ್ಮದ ಪ್ರಭಾವವನ್ನು ಜನರ ಮೇಲೆ ಬೀರಲು ಯತ್ನಿಸುವನು (ತತ್ವಶಾ. ೬೦೬). **ಬೀಱ್** : ೧. ಱಕಾರಕ್ಕೆ—ಏಱ್, ಬೀಱ್, ಬಸಿಱ್ (ಶಮದ. ೫೮ ಪ್ರಯೋ). ೭. ಅರ್ಕಚಂದ್ರಾಗ್ನಿಲೋಚನನನಳವಳಿಸುವೆಂ ಬೀಱರ್ಗಳೆಗಕೆ ಮೀಱೆಯುವನು (ಶಬಪು. ೪೩-೫೩). ೯. ದೆಸೆದೆಸೆಗೆ ಬೀರ್ವ ತನಿಗಂಪಿನಿಂ ತಂಪಿನಿಂ . . . ಕೊಳಂ ಕಣ್ಗೆಸೆದುದು (ಕೃವಿಭಾ. ೦೫-೯). ೧೨. ಕಂತುತನಯಂಗೆ ಪೂರ್ವದಿಗಂಗನೆ ತಂದು ತೋರ್ವ ಮಾಣಿಕದ ಕನ್ನಡಿಯೆನೆ ಕಾಂತಿಯ ಬೀರ್ವ ಭಾಸ್ಕರ ಮೂಡಿದನು (ಮೋಹತ. ೩೨-೧೬).

**ಬೀರಿಕೊಳ್ಳು** = ಬಿಗಿದುಕೊಳ್ಳು ; ಬಲವಾಗಿ ಕಟ್ಟಿಕೊಳ್ಳು : ನಡುಪಟ್ಟಿಯನ್ನು (ಬೆಲ್ಟ್) ಬಿಗಿಯಾಗಿ ಬೀರಿಕೊಂಡರೆ ಹಸಿವು ತೋರುವುದಿಲ್ಲ (ಕೊವಶ್ವ. ೨೬).

[ದೇ.॥ ತಮಿ. ವೀಱು; ತುಳು. ಬೀರು; ಕೋತ. ವೀರ್]

**ಬೀಱು**₂ (ನಾ). ೧. ಬಿಗಿದು ಕಟ್ಟುವ ಕುಣಿಕೆ,– ಗಂಟು : 'ಬೀಱುಗೊಳ್' ಪರಾ. ೨. ಚಂಚಲವಾಗಿರುವುದು : ಬಲಿದೊಡಕುಗಳು ಕರ್ಮಮಾರ್ಗಂಗಳ ಮೊಳೆಗಳುಗ್ರಂಗಳಾಶಾವಳಯಿತಂಗಳು ಜಾಱುಗಳು ಬೀಱುಗಳು (ಬಸಪು. ೪೦-೫೭). [<ಬೀಱು₁]

**ಬೀಱುಗುಂಡು** (ನಾ). (ಯುದ್ಧ ನಡೆಯುವ ಸಮಯದಲ್ಲಿ) ತೂರಿ ಬರುವ ದೊಡ್ಡ ಕಲ್ಲು ; ಎಸೆಯುವ ದೊಡ್ಡಕಲ್ಲು : ಬೀಳ್ವ ಕವಣೆಗಲ್ಗಳ ಬೀಱುಗುಂಡುಗಳ ಘಾತಿಯಿಂ ಬಸವಳಿದು ಬೀಳುತಿರ್ದರ್ ಕೆಲಬರು (ಶಬಪು. ೪೨-೨೬). [ಬೀಱು₁ + ಗುಂಡು]

**ಬೀಱುಗುಣಿಕೆ** (ನಾ). ಬಿಗಿದು ಕಟ್ಟುವ ಕುಣಿಕೆ : ಬಂಧಿಸುವ ಗಂಟು : ವಾರುವಗಳ ಡಾವಣೆ ನೇಣ್ಗಳ ಬಲುಬೀಱುಗುಣಿಕೆಗಳ ಪಱಿದು ಕೇರಿಕೇರಿಯೊಳು ತಮ್ಮಿಚ್ಚೆಯೊಳಗೆ ಸಲೆ ತಾಱುಮಾಱಾಗಿಯೋಡಿದುವು (ಕಂಪಾ. ೧೩-೯೦). [ಬೀಱು$_1$ + ಕುಣಿಕೆ$_2$ (< ಕುಳಿಕೆ$_1$)]

**ಬೀಱುಗೊಳ್** (ಕ್ರಿ). ಕುಣಿಕೆಗೆ ಸಿಗುವಂತೆ ಮಾಡು ; ಬಂಧಿಸು : ಹಣವೇನು ಬಾತೆ ನಿನ್ನಯ ಗುಣವೆಂಬುದು ಮಣಿದಾರವಾಗೆನ್ನ ಮನವ ಕ್ಷಣದಲಿ ಬೀಱುಗೊಂಡುದು (ಕಂಪಾ. ೬-೧೬೯).

[ಬೀಱು$_2$ + ಕೊಳ್$_1$]

**ಬೀಱುವಗ್ಗ, ಬೀರ್ವಗ್ಗ** (ನಾ). ಕುಣಿಕೆಯಿರುವ ಹಗ್ಗ,—ಪಾಶ : ಪಾವಿನ ಪೇಳಿಗೆ ಗಾಣದ ಸಿಡಿಗಳು ಓಪದೆ ಬೀಱುವಗ್ಗಗಳು ತೀವಿ ಪಣಿಯ ನೂಂಕುವ ಕಪಟಚಿಗಳಿಂ ಭಾವಿಸೆ ಕೌತುಕಮಾಯ್ತು . . . ಬಲದೊಳಗೆ (ಅಪಂಕ. ೧೯-೯೯). **ಬೀರ್ವಗ್ಗ** : ಮೇಣಮುನೆಱಿದು ತನುಗಳಂ ಕಾಸಿದರ್ ಬೀರ್ವಗ್ಗಮಂ ಹಾಯ್ಕಿ ಸೇದಿದರ್ ಮುರುಳ್ಗಳಗಳಂ ತೂಂತರು (ಜಿಬಿಪು. ೯೨-೩೬). [ಬೀಱು$_1$+ಪಗ್ಗ]

**ಬೀೞ್$_1$, ಬೀಳ್$_1$, ಬೀಳು$_1$, ಬೀೞು$_1$, ವೀಳ್, ವೀೞ್** (ಕ್ರಿ). ಬಿದ್ದ$_1$, ಬಿರ್ದ, ಬಿೞ್ದ (ಭೂತಕೃ). ಬಿದ್ದು$_1$, ಬಿರ್ದು$_1$, ಬಿೞ್ದು$_1$ (ಭೂತನ್ಯೂ). ೧. ಕೆಳಕ್ಕೆ ಕೆಡೆ,—ಕುಸಿ ; ಪತನ ಹೊಂದು : ತಾನುಂ . . . ಕಣೆಪಂಜರದೊಳೆಱಗಿ ಭೀಷ್ಮನ್ನಿೞ್ದನ್ತೆ ನೆಲ ಮುಟ್ಟದೆ ಬೀೞ್ದೋನಾನ್ (ಎಕ. VIII. ಸೊರಬ. ೦೦-೯ ; ಸು. 800); ಅನಿಬರ ಬಿಲ್ಗಳುಂ ಮುಱಿದು ದವರ್ಗಳನಿಬರುಂ ಪೆಱಗಣ್ಗುರುಳ್ದು ಬೀೞ್ದೊಡೆ (ವಡ್ಡಾರಾ. ೯೬-೯) ; ಬಿೞ್ದುದು ಭರದೆ ಸಿಡಿಲ್ದತ್ತ ಕಣೋರ್ೇತ್ತಮಾಂಗಂ (ಪಂಪಭಾ. ೦೨-೨೦೩) ; ಜೇರಿಗೆಯೊಕ್ಕಲ್ಗಣೆಯಾಗಿ ಬಿೞ್ದ ಭಟರಿಂ ಬಿೞ್ದಶ್ವದಿಂ ಬಿೞ್ದ ದಂತಿಗಳಿಂದಂ ಜವನುಂಡು ಕಾಱಿದವೊಲಾಯ್ತುತ್ತಂ ಕುರುಕ್ಷೇತ್ರದೊಳ್ (ಗದಾಯು. ೩-೨). ೨. ನಮಸ್ಕಾರಮಾಡು ; ಮಣಿ : ಕಡೆದಿರ್ದುದು ಷಣ್ಣವತಿ ಸಹಸ್ರಾಂಗನಾಳಿ ನೃಪನಡಿಮೊದಲೊಳ್ ಬಿರ್ದು ನಿನಗೆ ಚತುರ್ದಶರತ್ನಂ ಜನೇಶ ಬೆಸಕೆಯ್ದುಮುಮರರೆಲ್ಲಂ ಬೆಸನೇನೆನುತಿರ್ಪರ್ (ಆಪು. ೦೦-೩೫) ; ☞ ಇಲ್ಲಿ 'ಬಿರ್ದು' ಎಂಬುದು ೩೪ ಮತ್ತು ೩೫ನೆಯ ಪದ್ಯಗಳ ನಡುವೆ ವಚನಭಾಗವಾಗಿ ಬರಬೇಕಿತ್ತು ; ಅದು ಮಡುವಿಂ ಪೊಱಮಟ್ಟು ಬಂದೊಂದೊಂದಱ ಕಾಲ ಮೇಲೆ ಬಿರ್ದಾನಂದಾಶ್ರುಗಳನಿಕ್ಕಿ (ಪಂಪಶಂ. ೩೦೦-೦೩). ೩. (ಹೂವು, ಕಿಡಿ ಮುಂತಾದಂವು) ಉದುರು : ಮಲಯಾನಿಳನೆಸಕದಿನುದಿರ್ವಲರ್ಗಳ ಮಕರಂದಮಾಲೆಗಳ ಪರೆದತ್ತಂ ನೆಲದೊಳ್ ಬಿೞ್ದುಂ ಪಡೆದುದು ವಿಲೋಚನಾಂಬುಗಳನಗ್ಗಳಂ ವಿರಹಿಗಳಾ (ಕಬಿರಾ. ೩-೦೩೬) ; ಭೋಂಕನೊಗೆತರ್ಪ ಮಹೋರಗನೆಯ್ದೆ ಪಲ್ಗಳರ್ದೊಡೆ ಕಿಡಿವೀೞ್ ನೆತ್ತರೊಱ್ದುರ್ಚುಗೆ ಕೊಂಡುದು ತತ್ತಪಸ್ವಿಯಂ (ಆದಿಪು. ೨-೯೦); ಮಾತಂಗಕುಂಭದಿಂ ರಣಭೂತಲದೊಳ್ ಬಿೞ್ದುವೊಡನೆ ಮೌಕ್ತಿಕ ಮಣಿಗಳ್ (ಪಂಪಾಪು. ೦೩-೬೬). ೪. (ಸಿಡಿಲು, ಬಾಣ, ಕಲ್ಲು ಇತ್ಯಾದಿ) ಎರಗು; ಹಾಯು; ಬಡಿ : [ಸಿ]ಡಿಲ್ ಬೀೞ್ ಮರಂ ಮುಱಿಯೆ (ಶಾಂತಿಪು. ೯-೦೦೬); ಕುಮಾರನನೆತ್ತಿಕೊಂಡು ಮಾಣದೆ ಗಗನಕ್ಕೆ ಮತ್ತೊಗೆದನುರ್ವಿಗೆ ಬಿೞ್ದ ಸಿಡಿಲ್ ಸಿಡಿಲ್ವವೋಲ್ (ಚಂದ್ರಪ್ರ. ೫-೫). ೫. ಇಳಿ : ಕೆಳಮಟ್ಟಕ್ಕೆ ಬರು ; ಶಾಪದಿಂದಕಟ ತಿರ್ಯಗ್ಜಾತಿಯೊಳ್ಬೀೞ್ದನೇ (ಕಾದಂಬ. ೬೦೪). ೬. ಅಸ್ತಮಿಸು ; ಮುಳುಗು : ಬಟ್ಟು ಬೀೞುವೊಲೊಟ್ಟನೆ ನೊಂದು ಬೀೞ್ವಡೆಯ× ×(ಎಕ. II, ೦೩೯-೦೬; ಸು. 940). ೭. ಜಾರು : ಅಂಬರ ದೊಳಾಡುವ ಪರ್ದಿನ ಬಾಯಿಂದಂ ಬಿರ್ದು ಬರ್ದುಂಕಿದೊಂದು ಪೆಣ್ಣಲಿಯಂ ಕಂಡು (ಪಂಪಶಂ. ೨೫೬-೭); ನಿತ್ತರಿಸದೆ ಬಲ್ದೊಱೆಯೊಳ್ ಮತ್ತನಿಸದೆ ಬಿರ್ದೊಡಣ್ಣ ಸಹವಾಸಿಯೆ ಬಂದೆತ್ತುವುದು (ರಪಾರ್ಶ್ವ. ೦-೦೨೫). ೮. ದುಮುಕು ; ಜಿಗಿ : ಬಡಗ ರೆಕ್ಕಕದದುಬದಗಾಯ್ವೆಟ್ಟದಿಂ ಬಿೞ್ದ ಕೊಲ್ಲಿಯಟ(? ಉ) × × × (ಎಕ. XVIII, ೩೬೯-೨೭ ; 8ನೆಯ ಶತ): ಬೇಡನೋಂದು ಪುಲಿ ತನ್ನನಟ್ಟವರೆ ಪ್ರಾಣಭಯದಿಂ ದೆಸೆಗಾಣದೆ ಪುರಾಣಕೂಪದೊಳ್ ಬಿರ್ದಂ ಆ ಪುಲಿಯುಂ ಕೋಪಾಂಧನಪ್ಪುದಱಿಂದಲ್ಲಿಯೆ ಬಿರ್ದುದು (ಪಂಪಶಂ. ೦೦೯-೦೬); ಬೆದಱಿ ಪುಲಿ ಬಾವಿಯೊಳ್ ಬಿರ್ದುದನಱಿದೊಡೆ ಗುಂಡುಗೊಂಡು [ಕೊಂದಿ]ಕ್ಕುಗುಂ (ಸುಕುಮಾ. ೭-೩೬); ಪರ್ವತವೇಱಿ ಬಿದ್ದರಂತೆ ನಿರ್ಜೀವನಾಗಿ (ರಪಾರ್ಶ್ವ. ೦-೦೬೯). ೯. (ಭೂಮಿ. ಕಟ್ಟಡ ಇತ್ಯಾದಿ) ಕುಸಿ: ಜರಿ : ಪಡೆಯ ಪೊಱಗಿದು ಶೇಷಂ ಪೆಡೆಗಳನುಡುಗುವುದುಮೆಳೆ ಬೊದಿಲ್ಲನೆ ಬಿೞ್ದತ್ತಡಿಗಿಡೆ ಕೂರ್ಮನ ಬೆನ್ನಂ ದೊಡೆದು ಸಿಡಿಲ್ದೊಡನೆ ನುಚ್ಚುನೂಱಪ್ಪಿನೆಗಂ (ಪಂಪಭಾ. ೧೦-೬೦); ಭುವನವ್ರಾತಂ ನಿರಾಧಾರದೊಳಡಕಿರಲುಂ ಬೀೞ್ಗುಮೆಂದಂದು ಕಂಜೋದ್ಭವಂ . . . ಸ್ಥೈತಿಟ್ಟ ವಿಭಾಸ್ವತ್ಕಾಂಚನಸ್ತಂಭಮಿದೆನೆ (ಸುಕುಮಾ. ೦-೨೫). ೧೦. ಬಳಲು ; ಆಯಾಸಹೊಂದು : ಪದೆದಾಂ ನೋಡಿದೆನಾತನಿರ್ದ ದೆಸೆಯಂ ನಟ್ಟಾಲಿ ಬೀೞ್ವನ್ನೆಗಂ (ಕಾದಂಪೂ. ೭೯೯) ; ನೋಡಿದ ಳಬ್ಜಾನನೆ ನಿನ್ನ ಚಿತ್ರಪಟಮಂ ನಟ್ಟಾಲಿ ಬೀೞ್ವನ್ನೆಗಂ (ರಕಕು. ೦೦-೫೨). ೧೧. ಮರಣ ಹೊಂದು ; ಸಾಯು : ನಾಡನೊರೊಳ್ರಣವಿಕ್ರಮ ನಾನ್ಮೆಱೆತಿಯುಡಿಗಾಳ್ಪೆಟ್ಟತ್ತು ಸಿಂಘಗೆ ಕೊಳ್ಗೊಳದುಳ್ವೀೞ್ ಎಱಿದು ಗೆಲ್ದು ಅಲ್ಲಿ ಮಹಾಜನಮಾನ್ಕರೆದು ನಿಗಳ ಬಾೞ್ವನ್ತು ಜೀವಿತು ಬೇಡಿಕೊಳ್ಳಿಮೆನ್ದೊಡೆ (ಸೌಇಇ. IX-i, ೯೬-೩ ; ಸು. 4ನೆಯ ಶತ) ; ಅಪ್ಪಬಲಮನ್ನ ಎಱಿದು ಬೀೞ್ದ × × (ಎಕ. IX. ಬೆಂಗಳೂ. ೩೬-೪ ; ಸು. 750) ; ಅಗ್ಗಳಾ ಅರಸರಾ ಬೆಸಸಿದೊಡೆ ಬೆಸನ ಪೆತ್ತುರ್ಬಿ ಬಲಮಾನ್ತಾಳ್ದಿ ಎಱಿದು ಬೀೞ್ದರ್ (ಎಕ. X (8), ಬಾಗೇಪ. ೯೬-೮ ; ಸು. 820). ೧೨. (ಆಹಾರ ಮುಂತಾದುವು) ಹಳಸು ; ನೀರು ಬಿಟ್ಟುಕೊಳ್ಳು : "ಬಿೞ್ದುದು—ಪಟಿಸಿದುದು. ಸತ್ತುದು. ಕೈ ಜೋಲ್ದುದು" (ಕಮದ. ಶಂ. ೦) : "ಬಿೞ್ದದೆನೆ ಪಟಿಸಿದುದು ಸತ್ತುದುಂ ಕೈಯಿಂದೆ ಜಾದುರ್ದಕ್ಕು" (ಶಂಸೇವ. ೦೬). 'ಬೀೞಂಬಲಿ' ಪರಾ. ೧೩. ಚೆಲ್ಲಾಪಿಲ್ಲಿಯಾಗು ; ಚೆದರು ; "ಪಡಲಿಟ್ಟುದೆನಲು ಬಿರ್ದುದು" (ಕವಿಕಂ. ೨೨೩). ೧೪. (ಪೆಚ್ಚ, ಬೆಲೆ ಇತ್ಯಾದಿ) ಉಂಟಾಗು ; ತಗಲು : ತಮಗೆ ಸುಂಕ್ಕಂ(ಕಂ) ಬೀೞ್ದಲ್ಲಿ ಒನ್ದು ಪೇಱಗೆ (ಇಆ. VIII, ೨೮೬-೩; 732). ೧೫. ಸಿಕ್ಕಿ ಹಾಕಿಕೊಳ್ಳು ; ಸಿಲುಕು : ಚಂಡಾಲರ ಕಯ್ಯೊಳ್ಬೀೞ್ವ ತೋಲ್ಪಂಜರದ ಪಡಿಕೆಯೊಳ್ನಿಲ್ವ ದುರ್ವಾರದುಃಖೋತ್ಕರಮೆಲ್ಲಂ ನೋಡಲೆನ್ನಿಂದ್ರಿಯ ನಿವಹದ ದೋಷಂ ದಲ್ (ಕಾದಂಬ. ೬೫೨); ಪೇರಾನೆಯ ಬಾರಿಗೆ ಬಿರ್ದ ಶ್ವಾನನ ತೆಱದಂತೆ ಬಾಧೆಗೊಳಗಾಗಿರ್ಪ್ಪೈ (ರಪಾರ್ಶ್ವ. ೬-೧೩೦) ; ನಿಚ್ಚಮಾ ವೇದವಚನಕೆಂತುಂ ಸಿಲ್ಕದಣ್ಣ ನೀನೇ ವಿಚಿತ್ರಮಿದಲ್ತೆ ತೊಡರಿ ಬೀೞ್ದ ಕೈಕೆಯೊರೆದ ಬಿಱುನುಡಿಯೊಂದಕೆ (ಶ್ರೀರಾಪ. ೪-೨೯). ೧೬. ಧಾರೆಯಾಗು ; ಸುರಿ : ನೇರ್ಪಲ್ಲಿ ಕೆನ್ನೆತ್ತರುಂ ಬಿರಿಖಂಡಂಗಳೆ ಬೀೞಲುಣ್ಬ ಮನದೊಂದಣ್ಮೆಟ್ಟಳಂ ಪೊಣ್ಮೆ ಬೀರರಸಕ್ಕಾಗರಮಾಯ್ತು ನೋಡೆ ಕವಚಂಗೊಂಡಂದಮಾ ಕರ್ಣನಾ (ಪಂಪಭಾ. ೯-೬೩). ೧೭. ನ್ಯೂನವಾಗು ; ಕೊರತೆಯಾಗು; ಅಪೂರ್ಣವಾಗು : 'ಬೀೞಕ್ಕರ' ಪರಾ. **ಬೀಳ್$_1$** : ೧. ಇನ್ತೀ ಧರ್ಮ್ಮಮಂನಳಿದವರು . . . ನರಕಕ್ಕೆ ಬೀಳ್ವರು (ಕಇ. II, ೦೦-೨೯; 1080); ಗಿರಿಯ ಶಿರದಲಿ ಹೂತ ಕಕ್ಕೆಯ ಮರ ಮುಱಿದು ಬೀಳ್ವಂತೆ (ಕುಮಾದ್ರೋ. ೩-೬೬). ೨. ದಂಡವತ್ಪ್ರಣತೆಯಿಂ ಮುನ್ನಂ ಮನಂ ಬಿಳ್ದ (ಶಿರುಶ. ದೇ. ೦೦-೪); ಹರಹರ ನಮಃಶಿವಾಯೆಂದು ಬಿರ್ದಂ ನೋಡ (ಅಂಶ. ದೇ. ೦೬೩-೨೫). ೩. ಜೇರಿಗೆ ಬೆಲ್ಲಂ ಸಡಿಲ್ದು ಕಂಪಸದೆ ಬಿಳ್ದ ಪಗಜೆಯ ಪದದೊಳ್ (ಗಂಕ. ೦೦-೯೨) ; ಕಂಬನಿವೊಂದೆರಡು ಬೀಳ್ತಿರ್ದಡಂ (ಬಸಪು. ೯೪-೨೯). ೭. ಕೈಯಾಯುಧಂ ಬೀಳ್ವುದಂ ಕಣನಂ ಲುಬ್ಧಕನಂ . . . ಕನಸೊಳ್ ಕಾಣಲು ಬಾರದೈ (ಸೋಮೇಶ. ೬೦). ೧೧. ಸಂತರಾಗಲಸಂತ

ರಾಗಲಿಯಂತಕಾಲದಲವರು ಬೀಳ್ವರು ಮಂತ್ರಗಳು ತಾವಿರವು ಜ್ಯೋತಿಯ ಸಾಕ್ಷಿಯಿಲ್ಲದಿರೆ (ಸಂಭಶ. ೪-೦೫). ೧೭. ಬೀಳ್ವ ಲೋಳೆಯ ಬಿಗಿದ ಗಲ್ಲಗಳ ಅಂಗವಿಚ್ಛಾಯೆಯ . . . ನಾರ್ವ ಬಾತೊಡಲ (ಬಸಪು. ೪೬-೫೭). ೧೮. ಸೋತುಹೋಗು ; ಸೋಲು : ಸಂಕಿಲಿನಾಚಿಯರ ನೋಟದೊಡನೆ ತನ್ನ ನೋಟಂ ಘಳಿಲನೆ ಸಂದಿಸೆ ಹಳಿಲನೆ ಮನಂಬಿದ್ದು೯ (ನಂಬಿರ. ೦೨-೫೨); ಬೀಳ್ದುದು ಮತ್ತಂ ಪಾಂಡ್ಯನ ಬಾಳ್ದ ಬಲಂ (ಹಾಲಾಸ್ಯ. ೩-೩-೨೭). ೧೯. ಆಕ್ರಮಿಸು ; ಧಾಳಿ ಮಾಡು : ಬಾಳೆಯುಮಕ್ಕೆ ಸೋದಿಯ ಮೇಲೆ ದಂಡಂ ಬೀಳ ವೇಳಲೇಱಿ ಬಂದು ಪರಿಗೆಯ ಬಯಲಲಿ ಬೀಡಂ ಬಿಟ್ಟು (ಪ್ಯಾಅಂ. ೦೯೨೯, ೭೩-೩ ; 1216). ಬೀಳು$_1$ : ೧. ಬಿದ್ದವು ತೋಳ ಗಾಳಿಗೆ ತರುಕದಂಬಕವವಳ ಗಮನದಲಿ (ತೊರಾ. ೦-೦೦-೭). ೨. ಬಿರಿ ಮುಗುಳಂದದಿ ಎನ್ನ ಹೃದಯ ನಿಮ್ಮ ಶ್ರೀಚರಣದ ಮೇಲೆ ಬಿದ್ದರಳುಗೆ (ಬಸವ. ೪೮೭); ನರನ ನುಡಿಯನು ಹೊಳ್ಳುಗಳೆವರೆ ಚರಣದಲಿ ಬೀಳುವೆವು (ಕುವ್ಯಾದ್ರೋ. ೯-೫೪) ; ನರಹರಿಯ ಪಾದಕೆ ನಾ ಬೀಳಲಿಲ್ಲ (ಪುರಂದ. ೦-೦೭೭-೦೨). ೩. ಬೀಳುವುದು ತಾ ಮತ್ಸ್ಯವಾಲದಿ ಜಾಳಿಸಿದ ಜಲವೀಗ ಭೂಮಿಗೆ (ಸಂಭಶ. ೪-೨೯) ; ದೇವರ ದಯದಿಂದ ಎಲ್ಲಿಯೂ ಕಿಡಿ ಬೀಳಲಿಲ್ಲ (ಮುಂಬಯಿ. ೪-೭೩). ೪. ಬೀಳುವಂಬಿನ ಹೊಯ್ಲು ಖಡ್ಗದ ತೂಳು ಮಾನೆಯ ತೂಕಿ ತಾಗುವ . . . ಧಾಳಾಧೂಳಿ ಮಸಗಿತು (ಕುವ್ಯಾಕ. ೧೦-೯) ; ನಿಡಿಗಲ್ಲು . . . ಬಟುಗಲ್ಲು ಬೀಳೆ ತುಡುಕಿದ ವಜ್ರಮಾರ್ಗಣದಿಂದ ಶ್ರೀಕೃಷ್ಣ ಹುಡಿಯೇಳಲೆಚ್ಚು ಹಾಱಿಸಿದ (ಮೋಹತ. ೪೦-೭೩). ೫. ಅಧಿಕವಹ ಕೋಪದಲಿ ಬೀಳುವರು ಅಧಮತೆಯಲಿ (ಶಿಭಾಗ. ೦೦-೯-೨೫) ; ಬೆಲೆ ಏರು ತ್ತಿರುವ ಅಥವಾ ಬೀಳುತ್ತಿರುವ ಸೂಚನೆಯನ್ನು ಅನುಸರಿಸಿ . . . ಚಲಾವಣೆಗೆ ತರಬಹುದು (ಹಣಶ್ರ. ೦೯). ೮. ಕೂಡಲಸಂಗನ ಶರಣರೊಡನೆ ಮಱೆದು ಸರಸವಾಡಿದರೆ ಸುಣ್ಣದ ಕಲ್ಲ ಮಡಿಲಲ್ಲಿ ಕಟ್ಟಿಕೊಂಡು ಮಡುವ ಬಿದ್ದಂತೆ (ಬಸವ. ೭೭೦ ಅ) ; ಬರುತ ಮೇರುವನೇಱಿ ಬೀಳಲು ಧರಣಿ ಹತ್ತಿಯ ಶಯನದಂದದಿ ವರಮುನಿಗೆ ತಾನಾಗಿ (ಸಂಭಶ. ೨೫-೨೪); ಕಾಳ ಕೂಟದ ಮಡುವಿನೊಳು ಮುಳುಗುವೆನೊ ಬೆಟ್ಟವನೇಱಿ ಬೀಳುವೆನೊ (ವಳಶ. ೫-೨೩) : ತಾನು ಬಾವಿಗೆ ಬೀಳುವುದನ್ನು ಸಹಾ ಬಿಡದೆ ಹೇಳಿದಳು (ಶಿಂದೆನಿ. ೦೦೦). ೯. ಹಿತ್ತಲ ಗೋಡೆಯು ಬೀಳಲಿ (ಪುರಂದ. ೩-೨೦-೨). ೧೧. ಉಮೆಯ ನಲ್ಲನು ವಿಷವನುಂಡು ಭ್ರಮಿಸಿ ಬಿದ್ದ ಬಳಿಕ್ಕ ಕಾವಡೆ ನಿಮಗೆ ಶಕ್ಯವೆ (ಬಸಪು. ೧೩-೭) ; ಬೀಳು ಬೀಳಭಿಮನ್ಯುವಿನ ವಧೆ ಬಾಳಲೀವುದೆ ನಿನ್ನನೆನುತುಬ್ಬಾಳುತನದಲಿ ಪಾರ್ಥ ಬೊಬ್ಬಿಡೆ (ಕುವ್ಯಾದ್ರೋ. ೦೪-೪೦) ; ಹುಟ್ಟಿದೆನು ಶ್ರೀಹಂಪೆಯಲ್ಲಿ ಬಾಳುವೆನು ಇಲ್ಲಿ ಬೀಳುವುದೂ ಇಲ್ಲಿಯೇ (ತುಂಗಭ. ೯). ೧೪. ದೂರದೂರದ ಸ್ಥಲಗಳಿಗೆ ಪತ್ರ ಕಳುಹಿಸಬೇಕಾದರೆ ಅರ್ಧ ರೂಪಾಯಿ, ಮುಕ್ಕಾಲು ರೂಪಾಯಿ, ಒಂದು ರೂಪಾಯಿಯ ತನಕ ಬೀಳುವದು (ಮುಂಬಯಿ. ೬. ೪-೮೭) ; ಈ ಸೀರೆಗೆ ಎಷ್ಟು ಬಿತ್ತು ? (ರೂಢಿ). ೧೫. ಕೆಸಱಲ್ಲಿ ಬಿದ್ದ ಪಶುವಿನಂತಾನು ದೆಸದೆಸೆಗೆ ಬಾಯ ಬಿಡುತ್ತಿದ್ದೇನಯ್ಯಾ (ಬಸವ. ೫೨) ; ಕಾಲನುದ್ದಂಡೋಗ್ರದಂಡಕರಾಳಬಾಧೆಗೆ ಬಿದ್ದೆಯಲ್ಲಾ (ಬಸಪು. ೪೯-೦೦) ; ಬಿದ್ದನಬಲಾಜನದ ಬಲೆಯೊಳಗೊದ್ದುಕೊಳುತ ಮುನೀಂದ್ರನಂಗಜನುದ್ಧರುಟುತನಕಾರು ಸರಿ ಸುರನರ ಭುಜಂಗರಲಿ (ತೊರಾ. ೦-೫-೫೭). ೧೭. ತನುಪರಿಚ್ಯುತವೀರ್ಯ ಬೀಳಲ್ಕೆ ಕನಕಕಳಸದೊಳಿರಿಸಲು (ಸಂಭಶ. ೦೭-೭೯). ೨೦. ಒದಗು; ಸಂಭವಿಸು; ಬರು : ಸೂರ್ಯನು ಇಲ್ಲದಿದ್ದರೆ ಎಲ್ಲಾ ಕಡೆಯಲ್ಲಿಯೂ ಚಳಿ ಬೀಳುತ್ತಿತ್ತು (ಮುಂಬಯಿ. ೬. ೨-೨೮). ೨೧. ಜೋಲು ; ನೇಲು : ಬಿದ್ದ ಮೊಲೆಯ್ಗೆ ಱವಿಕೆಯೊಳೇಱಿಸಿ ಕಟ್ಟಿ (ಕಂಪಶಿ. ೭೦-೪೩) ; ಬಲೆಯು ಹಱಿದರೆ ಹೊಲ್ಲ ಮೊಲೆಯು ಬಿದ್ದರೆ ಹೊಲ್ಲ (ಸರ್ವಜ್ಞ. ೭೦೮). ೨೨. ಸೇರು ; ಕೂಡು : ನಿನ್ನ ಪಾಲಿಗೆ ಬಿದ್ದೆನೊ ಪರಮಕೃಪಾಳೋ (ಪುರಂದ. ೨-೦೮೪ ಪಲ್ಲವಿ) ; ಉತ್ತರದಲ್ಲಿ ಆರ್ಕ್‌ಟಿಕ್ ಸಾಗರಕ್ಕೆ ಬೀಳುವ ನದಿಗಳು (ಭೂಗೋಳ. ೨೫). ೨೩. ಗುರಿ ತಗುಲು ; ಗುರಿ ತಾಕು.—ಮುಟ್ಟು : ಎಚ್ಚತ್ತು ಮಗುಳೆ ನೋಡಿದೊಡೆ ಮನ್ಮಥ ಬೀಳಲೆಚ್ಚನು ದೈತ್ಯೇಶನೊಡಲ ಎಚ್ಚೆಱು ಪಲ್ಲಟವಾಗಿರೆ ಕಣ್ದೆಱೆದೆಚ್ಚತ್ತು ರತಿಯು ನಿಟ್ಟಿಸಿದ (ಮೋಹತ. ೦೦-೦೨). ಬೀಟು$_1$ : ೧. ಇಂತಖಿಳ ದಿಶಾಚಕ್ರದೊಳ್ತೆಕ್ಕನೆ ತೀವಿ ಕೊರ್ವಿ ಪರ್ವಿದತುಳಧ್ವಾಂತದೊಳಲ್ಲಿಗಲ್ಲಿಗೆ ಬೀಟುತ್ತಾಂ ಮೆಲ್ಲನೆ ಬರೆವರೆ (ಉದ್ಭಟ. ೫-೦೩ ವ). ೭. ಬೀಟುವಿನಂ ಕಣ್ಣುಳ್ಕೆ ನಿರಾಳಂಬನವಾಗೆ ಮನದ ಮೋಹಸ್ತಂಭಂ ಬೀಟೆ . . . ನಭಸ್ಥಲದೊಳಾದುದುಳ್ಕಾಪಾತಂ (ಅಜಪು. ೭-೪೭). ವೀಳ್ : ೧೯. ನೀಂ ಗಡಿಯೊಳ್ ಭಗದಿಂ ವೀಳೆ ಪಾಂಚಾಳ ಬೀಡಂ ನಡೆಸಂದಾದ್ರೀಸಪ್ಪೋಗಗ್ಗಣಿಸೆನುತೆ ಬೆಸಂಬೇಳರ್ . . . ವೇತ್ರಹಸ್ತರು (ಎಕ. VII, ಶಿಪಮೊ. ೫-೦೫; 1218). ವೀಟಿರ್ : ೧೧. ಸ್ವಸ್ತಿಶ್ರೀ ಅಜ್ಜವರ್ಮ ಕಾಸರೂರ್ ಆಳೆ × × × ಪಣ್ಣನೂರ್ದ್‌ರ್ × × ಕೀರ್ತಣ್ಣನ್ ಗಡ್ಡಿಪುರದುಳ್ ದುಗ್ಗಮಾರಪ್ಪಡೆಯು × × × ಎಱಿದ ವಿಟೆರ್ದೋರ್ (ಎಕ. IX, ದೇಪವ. ೭೪-೭; ಸು. 780). ☞ ಈ ಧಾತುವು ಅನೇಕ ಶಬ್ದಗಳ ಮುಂದೆ ಸೇರಿ ಬೇರೆ ಬೇರೆ ಅರ್ಥಗಳನ್ನು ಕೊಡುತ್ತದೆ. ಉದಾ :—ಉಪವಾಸ ಬೀಳು, ಏಟು ಬೀಳು, ಕಣ್ಣಿಗೆ ಬೀಳು, ಕಳ್ಳ ಬೀಳಂ, ಕಾಲಿಗೆ ಬೀಳು, ಕಿವಿಗೆ ಬೀಳು, ಜಾರಿ ಬೀಳು, ತಿರುಗಿ ಬೀಳು, ತೂತು ಬೀಳು, ಬೀದಿಗೆ ಬೀಳು ಇತ್ಯಾದಿ.

ಬಿದ್ದಂಬರಿ = ಬೀಳುವಂತೆ ಓಡು : ಪೋಗೆಂಬ ಬಾಯೆಂಬ ಬಿದ್ದಂಬರಿಯೆಂಬೋವೋವೊ ಕೂ ಕೂಗು . . . ಪುರದೊಳ್ಪೊಣ್ಮಿತ್ತು (ಶಂರಾಪೂ. ೪-೦೦೦) ; ಬಯಲೊಳ್ ಬೀದಿವರಿದುಂ ಬಟ್ಟೆಯೊಳ್ ಬಿದ್ದಂಬರಿದುಂ (ಪರ್ಶಿ. ೭-೩೨ ವ). ಬಿದ್ದಂಬೀಟಿರ್ = ವೇಗವಾಗಿ ಬೀಳು : ಬಿದ್ದಂಬೀಟ್ವಿ ಕೊಂತಕ್ಕೆ ಸುತ್ತುವ ಪಾಶಕ್ಕೆ . . . ನಾಂಟುವ ಗೇಣ್ಗೆಂಬಿನ ಮಾದುದದ್ಭುತಮಾದಶ್ವವ್ಯೂಹದುಗ್ರಾಹವಂ (ಶಂದ್ರಪು. ೦೦-೮೦). ಬಿದ್ದ ನಾಲಿಗೆ = ಸೇದಿ ಹೋದ ನಾಲಿಗೆ : ಕೋಷ್ಠ. ಮಧುಕ . . . ಕುಂಕುಮ ಇವಂ ನೀರಿಂದ ತೇದು, ನಾಲಿಗೆ ತೊಡೆಯಲು ಬಿದ್ದ ನಾಲಿಗೆ ಬಕ್ಕು (ಏಪ್ಯಶಿ. ೭೫). ಬಿದ್ದ ಬೀಳು = ವಿಶೇಷವಾಗಿ, ನಡೆದಾಡುವ ಮಕ್ಕಳಿಗೆ ಭೇದಿಯಾಗುತ್ತಿದ್ದರೆ, ನಡೆದಾಡುವಾಗ ಕೆಟ್ಟ ಸ್ಥಳದಲ್ಲಿ ಬಿದ್ದು ಉಂಟಾದ ಖಾಯಿಲೆಯೆಂದು, ಅದರ ಪರಿಹಾರರೂಪವಾಗಿ ಮಾಡುವ ಒಂದು ಸಾಂಪ್ರದಾಯಿಕ ವಿಧಿ; ☞ ಕುಂಕುಮ ಕಲಸಿದ ಅನ್ನ ಒಂದು ಉಂಡೆ. ಅರಿಸಿನ ಕಲಸಿದ ಅನ್ನ ಒಂದು ಉಂಡೆ. ಇಜ್ಜಲು ಪುಡಿಯನ್ನು ಕಲಸಿದ ಅನ್ನ ಒಂದು ಉಂಡೆ – ಹೀಗೆ ಮೂರು ಬಗೆಯ ಅನ್ನದ ಉಂಡೆಗಳನ್ನು ಮಗುವಿಗೆ ನಿವಾಳಿಸಿ ನೆಲದಲ್ಲಿ ಅಗೆದ ಗುಳಿಯಲ್ಲಿ ಹುಗಿದಿಟ್ಟು ಮತ್ತೆ ಒಂದು ಚೊಂಬು ನೀರನ್ನು ಮಗುವಿಗೆ ನಿವಾಳಿಸಿ ಅದರ ಮೇಲೆ ಚೆಲ್ಲಿ, ಮೂರು ಸಾರಿ ಆ ಗುಳಿಯನ್ನು ದಾಟಿಸುತ್ತಾರೆ : ಮಗುವಿಗೆ ಏಕೋ ತುಂಬಾ ಭೇದಿಯಾಗುತ್ತಿದೆ. ಬಿದ್ದ ಬೀಳು ಮಾಡಿಸಬೇಕು (ರೂಢಿ). ಬಿದ್ದ ಮೋರೆ = ಅವಮಾನದಿಂದ ಜೋತು ಬಿದ್ದ ಮುಖ : ಇಳಿ ಬಿದ್ದ ಮುಖ : ಗದ್ದಿಗೆಯ ಬಳಿ ಕೆಡವಿದರು . . . ಬಿದ್ದ ಮೋರೆಯ, ನಿದ್ದೆಗಣ್ಣಿನ ಒದ್ದೆ ಕೂದಲ ದೊಂಬನಾ (ಕುಪು. ೪೦-೨೯). ಬಿದ್ದು ಸಾಯು = (ಅಲಂ)ಬಹಳ ಇಷ್ಟಪಡು : ಸುಭಗೆಯನ್ನು ಕಂಡರೆ ಗಂಗಾಸಾನಿ ಬಿದ್ದು ಸಾಯುವಳು (ಗಂಗಾಸಾ. ೨೫). ಬೀಳಗೆಡಹಿಸು = ನೆಲಕ್ಕೆ ಬೀಳುವಂತೆ ಮಾಡು; ನೆಲಕ್ಕುರುಳಿಸು : ಸೋಲ ಮಿಗಲೊಳಸರಿವ ಬಿರುದರ ಬೀಳಗೆಡಹಿಸಿ . . . ಪಾರ್ಥನಿದಿರಾದ (ಕುವ್ಯಾಶೀ. ೬-೦೩). ಬೀಳಲಿಡು = ಕೆಳಗೆ ಕೆಡವು ; ಬೀಳಿಸು : ಎಲಲೆ ಕೋಡಗ ಕೊಲುತಲದೆ ಕಪಿ ಬಲೆಯ್ಲು ಬೀಸಿರೋ ಬೀಳಗೆಡಹಿರೊ

ತೊಲಗದಿರಿರೋ ಕವಿಯೆನುತ . . . ತಱುಬಿದರು (ತೊರಾ. ೩-೪-೨೦): ತುರಗಗಳನು ಬೀಳಗೆಡಹಿ ಬೆಟ್ಟುಸ ಚಾಮ ದುರಗಲಿ ಮೆಱೆದ ಸಾಹಸವ (ಕಂಸಪ. ೩-೬೦). ಬೀಳಜಡಿ=ಬೀಳುವಂತೆ ಹೊಡೆ.–ಬಡಿ : ಹಾಲ ಹಸುಳೆಯನಿಂತು ಭಂಗಿಸಿ ಬೀಳ ಜಡಿ [ಪಾಠಾಂ. ಹೊಯ್ದು]ದಡವಿಯನು ಹೊಗಿಸುವ ಕಾಳು[ಮೂಳಿ]ಯನೇನನೆಂಬೆನು ಸುರುಚಿಯೆಂಬವಳ (ಹಿಭಾಗ. ೪-೬೯-೩೯). ಬೀಳಬಡಿ=ಬೀಳಜಡಿ : ಆಳ ಹೆದಱಿಸಿ ನುಡಿವ ನಾಯ್ಗಳ ಬೀಳ ಬಡಿ (ಕುವ್ಯಾದ್ರೋ. ೨-೬೯). ಬೀಳಲಿಕ್ಕು = ನೆಲಕ್ಕುರುಳುವಂತೆ ಬಾಣ ಪ್ರಯೋಗ ಮಾಡು : ಸೊಂಡಿಲೊಳ್ ಕೊನೆವೆತ್ತ ಮದಹಸ್ತಿಗಳ ಕಚ್ಚಿ ಕೊಂಡಿರ್ದ ಕೇಸರಿಗಳನು ತುಂಡದೊಳೆರಡು ಕಾಲ್ಗಳೊಳೆರಡಾಂತ ಭೇರುಂಡನ ಬೀಳಲಿಕ್ಕಿದನು (ಮೋಹತ. ೧೯-೩೬). ಬೀಳಲಿಡು = ನೆಲಕ್ಕುರುಳಿಸು : ಬೀಳಿಸು: ಕೀಲ ಕಳೆವರು ರವಿಯ ಬಂಡಿಯ ಬೀಳಲಿಡುವರು ಚಂದ್ರಬಿಂಬವ (ಸಂಭಕ. ೭-೧೮). ಬೀಳಲಿಱು = ಕೆಡೆಯುವಂತೆ ಹೊಡೆ.–ಚೆಚ್ಚು : ಭಾಳಾಕ್ಷನ ರೂಹು ನಿನಗೇಕೆನುತ ನಾರಿಕೇಳಫಲವ ಕಟ್ಟಿ ತೂಗಿ ಬೀಳಲಿಱಿದು ಕೊಲುವಂತೆ ತೆಂಗಿನ ಕಾಯ ಹೋಳ ಮಾಡಿದರು ಜೂಧಿನಲಿ (ಮೋಹತ. ೨೦-೨೨) ; ಅಗೆ ತಳವುಟ್ಟಿ ಕೋಟೆಯ ದ್ವಾರಗಳ ಮಾಡಿ ಹೊಗುವಡ್ಡಲಾದರಿಭಟರ ಮಿಗೆ ಬೀಳಲಿಱು (ಕಂಸಪ. ೧೪-೬). ಬೀಳ ಹೊಡೆ=ಬೀಳ ಜಡಿ : ಕಾಲ ಕೆರಹುಗಳಂ ತೆಗೆಯದಿಂತಿರ್ದಡೆಲೊ ನಿನ್ನ ಬೀಳ ಹೊಡೆವೆನು (ಬಸಪು. ೯೯-೧೧). ಬೀಳ ಹೊಯ್=ಬೀಳ ಜಡಿ : ಬೀಳ ಹೊಯ್ ಹೊಯ್ ಬಿಡೆಯದಲಿ (ಕುವ್ಯಾಕ. ೧೨-೧೩) ; ಪೌಂಡ್ರಕ ಸೃಗಾಲನ ಬೀಳ ಹೊಯ್ದನು (ಹಿಭಾಗ. ೩-೨-೩೬). ಬಿಟ್ಟಿರ್, ಬಿರ್ದಿರ್, ಬಿದ್ದಿರು=೧. ಬೀಳು ; ಕೆಡೆ : ಸರೋವರದಿಂ ಪೊಱಮಟ್ಟೊಂದೆರಡಡಿಯನಿಡುತೆ ಗತಪ್ರಾಣನಾಗಿ ಬಿಟ್ಟಿರ್ದಂ (ಶಂಶಭಾ. ೬-೩೯) ; ವರರತ್ನಂ ಪೇಲೊಳ್ ಬಿದ್ದಿರೆಯದು ಪೊಲ್ಲೆಂದು ಬಿಸುಡಲಪ್ಪುದೆ (ಧರ್ಮಾಮೃ. ೪-೧೭೦). ೨. ಇರು ; ನೆಲಸು : ಆ ಮಾರ್ಗಂಬಿಡಿದು ಬಿಟ್ಟಿರ್ದ ಸರಸಸರಸಿಜಶಾಲೂರಶಕಲಶೈವಾಲಂಗಳೊಳಡಿಯಿಡುತ್ತುಂ (ಲೀಲಾವ. ೭-೭೦ ವ) ; ಆ ಕೋಂಟೆಯೊಳಗೆ ಮೂಱುಂ ಲೋಕಂ ಬಿರ್ದಿರ್ದುದಕ್ಕುಮೆಂಬಳವಿಗೆ ಮಂದೇಕ ದ್ವಿ ತ್ರಿ ಚತುಶ್ಶಾಲಾಕೀರ್ಣಂ ಪುರವರಂ ಕರಂ ಸೊಗಯಿಸುಗುಂ (ಶಾಂತಿಪು. ೯-೧೯೭) ; ಕೂಳಿಗೆ ಬಿದ್ದಿರುವ ಬೋಳಿಗೆ ನಿನಗಿಷ್ಟು ಗಯ್ಯಾಳಿತನವೇಕೆ (ಪುರಂದ. ೩-೫೦ ಪಲ್ಲವಿ). ೪. ಮರಣ ಹೊಂದಿ ಉರುಳು ; ಸತ್ತು ಬೀಳು : ತಾರಪರ್ವತದ ತಟ್ಟಿಲೊಳ್ ಬಿಟ್ಟಿರ್ದ ಗಂಡನಗಮಂ ಪೋಲ್ತಿರ್ದ ಗೋಪತಿಯಂ ಮೃಗಾಧಿಪತಿ ನೋಡಿ (ಶಂಶಶಂ. ೧೬೦-೬) ; ವಿದ್ಯೆ ಕಲಿಸದ ತಂದೆ ಬುದ್ಧಿ ಹೇಳದ ಗುರುವು ಬಿದ್ದಿರಲು ಬಂದು ನೋಡದ ತಾಯಿಯು ಶುದ್ಧ ವೈರಿಗಳು (ಸರ್ವಜ್ಞ. ೧೫೦೨).

[ದೇ.॥ ತಮಿ. ವಿಟು, ವೀಟ್ ; ಮಲ. ವೀಟು ; ತುಳು. ಬೂಳು ; ಕೊಡ. ಬೂಳ್ ; ತೆಲು. ಬಿದ್ದು]

**ಬೀಟ್$_2$** ‘ಬೀಡು$_2$’ ನೋ.

**ಬೀಟ್$_3$** ‘ಬೀಡು$_3$’ ನೋ.

**ಬೀಟ್$_4$**, ಬೀಳು$_5$ (ನಾ). (ಬುಟ್ಟಿ ಹೆಣೆಯಲು, ಮನೆಯ ಜಂತೆಗಳನ್ನು ಜೋಡಿಸಲು ಬಳಸುವ) ಒಂದು ಬಗೆಯ ಬಳ್ಳಿ : ಲೋಕದೆ ಲೋಗರ್ ಕಾಡ ಬೀಟಂ ತಂದು ಊರ ಮರನೊತ್ತಿಗಿಡುವರುಂಟು (ರಾಮಾಕ್ಷ. ೬೬-೨). ಬೀಳು$_5$ : ಅಲ್ಲೇ ಇದ್ದ ಬೀಳೊಂದನ್ನು ಕಿತ್ತು ಸುಬ್ಬನ ಎರಡು ಕೈಗಳನ್ನು ಬೆನ್ನಿನ ಕಡೆಗೆ ತಿರುಗಿಸಿ ಹಿಂದುಗಡೆ ಬಲವಾಗಿ ಕಟ್ಟಿಹಾಕಿದ (ಅನಾಥೆ. ೧೪೫) ; ಎರಡನ್ನು ಜೋಡಿಸಲು ಹುರಿಹಗ್ಗವನ್ನೂ ಉಪಯೋಗಿಸಿರಲಿಲ್ಲ. ಕಾಡಿನಲ್ಲಿ ದೊರೆವ ಬೀಳುಗಳನ್ನೇ ಬಿಗಿದಿದ್ದರು (ಜಾಗ. ೩೯). ‘ಬೀಳುಬುಟ್ಟಿ’ ಪರಾ.

[?./ ತಮಿ. ವೀಟಿ=ಒಂದು ಬಗೆಯ ಸಸ್ಯ]

**ಬೀಟಂಬಲಿ** (ನಾ). ಹಳಸಿದ ಅಂಬಲಿ : ಬೀಟಂಬಲಿಯೊಳ್ ಕಲಸಿದ ಜೋಳದ ಪುರಿಗೂಟನಿಕ್ಕಿಮೊಡಲಿಡಿಯದವೋಲ್ ಕೇಳೆಲಗೆಯಿದಂ ಮಱದಡೆ ಮೇಳಿಸುಗುಂ ನಿನಗೆ ಕಾಷ್ಠದಂಡದ ಘಾಯಂ (ಪುಣ್ಯಾಸ್ರ. ೯-೭).

[ಬೀಟ್$_1$ + ಅಂಬಲಿ$_1$]

**ಬೀಟಕ್ಕರ** (ನಾ). [ವ್ಯಾಕ] ಸ್ವರಾಕ್ಷರವನ್ನು ಬಿಟ್ಟಿರುವ ಅರ್ಧಾಕ್ಷರ ; ವ್ಯಂಜನಾಕ್ಷರ : “ಬೀಟಕ್ಕರಮೆಂದು ವ್ಯಂಜನಂ” (ಶಶಸಾ. ೫೭-೨೩೭) ; ವ್ಯವಹರಿಪುದೆತ್ವವಿಧಿ ಬಲ್ಲವರಿಂ ಮೇಲೆಂದು ಪೇಟ್ವ ಬೀಟಕ್ಕರಕಂ (ಶಮುದ. ೧೨೦); ಜೀವಾಕ್ಷರಗಳನ್ನು ಕೂಡಿಸದಿರುವುವು ‘ನಿರ್ಜೀವಾಕ್ಷರಗಳು’. ಇವನ್ನು ಅರ್ಧಾಕ್ಷರಗಳು–ಅಥವಾ ಬೀಟಕ್ಕರಗಳು–ಎನ್ನುತ್ತಾರೆ (ಸಂಕೋಶ. ೧೫).

[ಬೀಟ್$_1$ + ಅಕ್ಕರ$_2$]

**ಬೀಟಲ್**, ಬಿಳಲ್, ಬಿಳಲು, ಬಿಟಿಲ್, ಬಿಟಿಲು, ಬೀಳಲ್, ಬೀಳಲು (ನಾ). ೧. ಆಲ ಮುಂತಾದ ಮರಗಳ ಕೊಂಬೆಗಳಿಂದ ಕೆಳಮುಖವಾಗಿ ಇಳಿಬಿದ್ದ ಬೇರು, –ಜಟೆ : “ಜಟಾ, ಶಿಫಾ – ಈ ೨ ಮರದ ಬೀಟಲ್” (ಹಲಾಯು. ೩೦-೨೯); ತೇಜದ ಬೀಟಲನನುಕರಿಪುವಾದುವೊಗೆ ದುರಿವುರಿಗಳ್ (ಶಂಶಕಾ. ೧-೩೫); ಬಿಸುಗದಿರ್ಗಳಂತಿರ್ದ ಬೀಟಲ್ಗಳೊಳಂ (ಲೀಲಾವ. ೮-೪೦ ವ). ಬಿಳಲ್ : ೧. ‘ಬಿಳಲ್ವರಿ’ ಪರಾ. ಬಿಳಲು : ೧. ಆಲದ ಮರನ ಬಿಳಲ ಪಿಡಿಕೊಂಡು ಶಿವಯೋಗನಿಜಸಮಾಧಿಯಲಿ ನಿಂದು (ಚೆಬಪು. ೬೩-೩೭) ; ಚಪ್ಪರಕ್ಕೆ ಕುಚ್ಚುಗಳನ್ನು ಕಟ್ಟಿದಂತೆ ಆಲದ ಬಿಳಲುಗಳು ತೂಗುತ್ತಿದ್ದವು (ಪಂಕಪ್ಪ. ೧೨೨). ಬಿಟಿಲ್: ೧. ಆಲದ ಬಿಟಲಂತೆ ನೆಲಕ್ಕೆಱಗದೆ (ಧರ್ಮಾಮೃ. ೫-೯೯); ಮುನೀಶಂ ಬೇರೂಱಿದ ಬಿಟಿಲ ತೆಱದೆ ಮರವೊದಲಿರ್ದಂ (ರಸರ. ೨-೧೨೩). ೨. ಬಿಳಲನ್ನು ಬಿಡುವ ಆಲದ ಜಾತಿಯ ಮರ : ಬಿಳಿಯ ಸಾಸಿವೆ ಬಜೆ ಬಿಟಲಿನ ಬೀಜಮೆಂಬಿವಂ ಸರಿಗೊಂಡಂತಜಮೂತ್ರದೊಳರೆದೆಚ್ಚುಗೆ (ಲೋಕೋಶ. ೯-೧೯೬). ಬಿಟಿಲು : ೧. “ಶಿಫಾ, ಜಟಾ– ಈ ೨ ಬಿಟಿಲು” (ನಾಚಿರಾ ೧೧೫); ಮಿಂಚಿನಂಚಿವೆರಸು ಕಾರ್ಮುಗಿಲ ಬಿಟಿಲು ಕಾಲೂಱಿದಂತೆ ಮೇಲೆ ಮೆಱೆಯೆಯುಂ (ಅವಂಪು. ೨-೨೯ ವ). ಬೀಳಲ್ : ೧. ಗಿರಿಶಿಖರಂ ಮುಖಂ ಮರದೊಳೊಪ್ಪುವ ಬೀಳಲೆ ತಜ್ಜಟಾಳಿ (ಗಿಂಕ. ೧-೫೧); ಮಿಸುಪ ಬೀಳಲ್ಗಳಂ ಡೋಳಂಗಳಂ ಮಾಡಿಯುಸವಸದಿಯಾಡುತಿರ್ಪಕ್ಕೆಲರ್ (ಅರಾಶ. ೫-೭-೫೨). ಬೀಳಲು : ೧. ಬೀಳಲೋ ಬ್ರಹ್ಮಾಂಡತರುವಿನ ನಾಳದಂಡವೋ ನಾಕನಳಿನದ . . . ಎನಲೆಸೆದುದಮಲಪದ (ಹಿಭಾಗ. ೬-೧೬-೨೫); ಈ ಬೆಟ್ಟದ ಮೆಯ್ಯಲ್ಲಷ್ಟೆ ಮನುಷ್ಯನ ಕೈಗೆ ಸಿಗದ ಹೊದರು, ಬೀಳಲನ್ನು ನಾನು ಕಂಡದ್ದು (ಅಪೂಶ. ೩೩). ೨. ಕಿಕ್ಕಿಱಿದ ಮಾವು ಮೊದಲನಿಕರ ಬೀಳಲಿಬ್ಬೇಡೆ (ರುಕ್ಮಾಂಗ. ೧೦-೩). ೩. (ಮನೆ ಕಟ್ಟಲು ಅಥವಾ ಬುಟ್ಟಿ ಹೆಣೆಯಲು ಉಪಯೋಗಿಸುವ) ಒಂದು ಬಗೆಯ ಬಳ್ಳಿ : ಬೀಳಲುಗಳಿಂದ ಒಂದು ಡೋಲಿಯನ್ನು ಮಾಡಿ ದೊಡ್ಡನನ್ನು ಮಲಗಿಸಿ ಕೆಲವರು ತಲೆಗೊಟ್ಟು ಹೊತ್ತು ಮುಂದೆ ನಡೆದರು (ಕಾಊರ. ೭ ಕಥಾಸಾರ); ತಿಮ್ಮ ಬೇಟೆಯ ನೆಪದಿಂದಲೋ, ಬೀಳಲು ತರುವ ನೆಪದಿಂದಲೋ . . . ಅಲೆದಾಡುತ್ತಲಿರುವ (ಕುಂಡಕೂ. ೨೫೬). ೪. ಬೀಳುವುದು ; ಕಳಚುವುದು : ‘ಬೀಳಲುಪಲ್ಲು’ ಪರಾ.

[ಬೀಟ್$_1$+ –ಅಲ್$_2$./ ತಮಿ. ವಿಟಲ್; ತೆಲು. ಬಿಲ್ಲು, ಬಿಳ್ಲು]

**ಬೀಟಲ್ಗಡಿ$^3$** (ಕ್ರಿ). ಮರದ ಕೊಂಬೆಗಳಿಂದ ಹೊರಟ ಜಟೆಯು ಧಾರೆಯಂತೆ ಕೆಳಕ್ಕೆ ಇಳಿಬೀಳು,–ಬೆಳೆ : ನಿಮಿರ್ದೊಳ್ಪಂಬೆತ್ತು ಬೀಟಲ್ಗಡಿದ ಜಡೆಗಳಿಂ ನೀಳ್ದು ಚೆಲ್ವಾದ ಶಾಖಾಸಮುದಾಯಂ ಪತ್ತುತೋಳ್ಗಳ್ ಮಿಸುಗುವ ತನಿವಣ್ಗೊಂಪು ಭಾಳಾಕ್ಷಿಯಾಗಲ್ ಕ್ರಮದಿಂದಂ ತಾಂಡವಾಡಂಬರಮನೆಸಗುವೀಶಂಬೊಲೊಪ್ಪಿರ್ದುದು . . . ವಟತರು ಪತ್ರಪ್ರವಾಳಪ್ರಸಿದ್ಧಂ (ದಶಕು. ೧೧-೩). [ಬೀಟಲ್ + ಕಡಿ$^3_1$]

**ಬೀಟಿಲ್ಬಿಡು**, ಬಿಳಲುಬಿಡು, ಬೀಳಲುಬಿಡು (ಕ್ರಿ). ಮರದ ಕೊಂಬೆಗಳಿಂದ ಜಟೆಯು ಕೆಳಮುಖವಾಗಿ ಇಳಿಬೀಳು,–ಬೆಳೆ : ಈ ಗಿರಿಯ ದಕ್ಷಿಣೋತ್ತರಭಾಗಂಗಳೊಳಮರಪುರಮೆ ಬೀಟಿಲ್ಬಿಟ್ಟಂತಾಗಿರ್ದಂಬರಚರಪುರಭಾಗಮೆ ಪರಭಾಗಮೆನಿಪ್ಪುವುದ್ಯಾನಂಗಳ್ (ಶಾಂತಿಪು. ೨-೮೯). **ಬಿಳಲುಬಿಡು :** ಇಲ್ಲಿ ಒಂದು ತರಹ ಮರ ಬೆಳೆಯುತ್ತದೆ. ಇದು ಅನೇಕ ಬಿಳಲುಬಿಡುತ್ತದೆ (ಕೃಪಾಇ. I, ೩೮). **ಬೀಳಲುಬಿಡು :** ಆಲ ಬೀ[ಪಾಠಾಂ. ಬಿ]ಳಲು ಬಿಟ್ಟು ಜಡೆಗಟ್ಟಿಕೊಂಡಿರ್ದರೇನು (ಸಮಾವ. ೪-೦೨).
[ಬೀಟಿಲ್ + ಬಿಡು$_1$]

**ಬೀಟಲ್ವರಿ, ಬಿಳಲ್ವರಿ**, ಬೀಳಲುವರಿ (ಕ್ರಿ). ೧. = ಬೀಟಿಲ್ಬಿಡು : ಭುಜಸಹಸ್ರಂಗಳೊಳ್ಕೈದುವಂ ಸಾಸಿರಮಂ ಕೈಕೊಂಡು ಬೀಟಲ್ವರಿವ ಗಿರಿಯೆನಲ್ಬಂದು ದೈತ್ಯೇಂದ್ರನೆಂದಂ (ಜಗಂ. ೦೮-೩೦) ; ಸೂಟಂ ಕುಡೆದೋರ್ಮಾಲೆಗೆ ಕೀಲಿಸಿದ ನವೋರುಮಾಲೆ ಸುರತರುಣಿಯದೇನಾಳಂಗೊಂಡಳೊ ಬಯಲೊಳ್ ಬೀಟಲ್ವರಿದಂಗಭವನ ಜಂಗಮಲತೆಯಂ (ಅಪಂಪು. ೦೪-೬೪). ೨. ಮರದ ಕೊಂಬೆಯಿಂದ ಹೊರಟ ಜಟೆಯ ಹಾಗೆ ಹಬ್ಬು, –ವ್ಯಾಪಿಸು : ಪರಿವೃದ್ಧಿವೆತ್ತು ಬೀಟಲ್ವರಿದುದುರಸ್ಸ್ಥಳದೊಳೀ ಮುನೀಂದ್ರನ ಹೃದಯಸ್ಫುರಡಮಳಸತ್ವಮೆನೆ ಮುನಿವರನ್ಗೊಳ್ ಯಜ್ಞೋಪವೀತತತಿ ಸೊಗಯಿಸುಗುಂ (ಜಗೂ. ೦೦-೮); ಅಗಲದೆ ನೆಲಸಿದ ಲಕ್ಷ್ಮಿಯ ನಗೆಗಣ್ಗಳ ಬೆಳಗು ಬೀಟಲ್ವರಿದತ್ತಗಲ್ಬುರದೊಳೆಂಬ ತೆಱದಿಂ ಸೊಗಯಿಸಿದುದು ವಿಮಳತರಳತಾರಾಹಾರಂ (ಶಂತ್ರಪು. ೬-೩೮). **ಬಿಳಲ್ವರಿ :** ೧. ತರುಕುಳಂ ಶಿವನ ರೂಪಂ ಬಯಸಿ ಬೆಳೆದವು ಸಿರಾಕುಳಂ ಹರನ ಜೆಡೆಯಂ ಕಂಡು ಬಿಳಲ್ವರಿದವಿಂತಿಲ್ಲಿ[ಪಾಠಾಂ. ಬಿಳಲು ವರಿದವಿಲ್ಲಿ] (ಪಂಬಿಶ. ೯-೨೬). **ಬೀಳಲುವರಿ :** ೨. ನರ ಉಬ್ಬೆ ಮೆಯ್ಯೊಳಗೆ ಬೀಳಲುವರಿಯುಲಂತೆ [ಪಾಠಾಂ. ಬೀಳಲ್ವರಿಯುತ್ತಂತೆ] (ಬಿಂದೋಶ. ಹ. ೩೦೩-೦೨).
[ಬೀಟಲ್ + ವರಿ$_2$]

**ಬೀಟಿವೃತ್ತಿ**, ಬಿಳವೃತ್ತಿ, ಬಿಟಿವೃತ್ತಿ, ಬೀಳವೃತ್ತಿ (ನಾ). = ಬೀಳಾನುವೃತ್ತಿ : ಮುನ್ನಿಂ ಕನ್ನರದೇವನಾಳ್ದ × × × ಱುಮಂ ಬೀಟಿವೃತ್ತಿಯಿಂದಾಳುತ್ತಮಿರೆ (ಸೌಇಇ. IX-i, ೯೩-೨೨; 1038); ಒಂದು ವಂಶದ ರಾಜನ ಆಶ್ರಯದಲ್ಲಿ ಅದೇ ವಂಶದ ಇತರರು ಅಧೀನರಾಗಿ ಆಳುತ್ತಿದ್ದ ವಿಷಯವನ್ನು ಬೀಟಿವೃತ್ತಿಯು ಸೂಚಿಸಬಹುದು. 'ಅಚಲವೃತ್ತಿ', 'ಅಣುಗವೃತ್ತಿ' ಮತ್ತು 'ಬೀಟಿವೃತ್ತಿ' ಗಳಲ್ಲಿ ಯಾವುವು ಸಮಾನಾರ್ಥಕ ಪದಗಳೋ, ಅವುಗಳ ನಿರ್ದಿಷ್ಟವಾದ ಅರ್ಥವೇನೋ ಸ್ಪಷ್ಟವಾಗಿ ಗೊತ್ತಾಗುವುದಿಲ್ಲ (ಕಶಾಅ. ೩೪೦). **ಬಿಳವೃತ್ತಿ :** ಸಾಸ್ತ್ಯಳಿಗೆಸಾಸಿರಮುಮಂ ಬಿಳವೃತ್ತಿಯಿಂ ತ್ರಿಭೋಗಾಭ್ಯಂತರಸಿದ್ಧಿಯಿನ್ದಮಾಳುತಮಿರೆ (ಎಕ. VII, ಶಿಕಾ. ೩೦-೦೦; 1031). P ಇದು 'ಬೀಳವೃತ್ತಿ' ಎಂಬುದರ ಅಪಲಿಖಿತವಿರಬಹುದು. **ಬಿಟಿವೃತ್ತಿ :** ಆರಂಭಲ್ಲವನ್ ಇದುಳೆಯ ಬಿಟಿವೃತ್ತಿ ಆಳುತ್ತಿರೆ (ಎಕ. XIV; ಶಾಗವಾ. ೦೩೭-೬; 900); ಶ್ರೀಮತ್ ಪನ್ಚಯ್ಯಂ ಕದಂಬಳಿಗೆಸಾಯಿರಮುಮಂ . . . ಬಿಟಿವೃತ್ತಿಯೊಳಾಳುತ್ತಿರೆ (ಎಕ. XI, ಚಿತ್ರದು. ೩೦-೦೦; 968). P ಇದು 'ಬೀಟಿವೃತ್ತಿ'ಯೆಂಬುದರ ಅಪಲಿಖಿತವಿರಬಹುದು. **ಬೀಳವೃತ್ತಿ :** ಶ್ರೀಮತ್ತಡವಳ್ಳ ತ್ಯೆಲಪಯ್ಯಂ ಮಾಸವಾಡಿ ನೂಱನಾಲ್ವತ್ತುಮಂ ಬೀಳವೃತ್ತಿಯಿನಾಳುತ್ತುಮಿರೆ (ಸೌಇಇ. XI-i, ೩೨-೩೬; 1007). 'ಬೀಳಂವೃತ್ತಿ' ಪಠಾ. [< ಬೀಳಾನುವೃತ್ತಿ]

**ಬೀಟಿಸು**, ಬೀಳಿಸು (ಕ್ರಿ). ೧. ಕೆಡೆಯುವಂತೆ ಮಾಡು ; ಕೆಡವು ; ಉರುಳಿಸು : ಮದನನ ಪೂಜೆಗೆಯ್ದುಪಳ ನಲ್ಲನನಾಗಿಸುವಂತೆ ಮಾಡುವೆಂ . . . ಸಮಾನಮಹ ನೋಪನೆ ಕಾಣಿಸುತ್ತೀಕೆಗೊಪ್ಪುವಾ ಪದದೊಳೆ ತಂದು ಬೀಟಿಸುವೆನಾನವಳೀಟಿಗ್ಗಿಯ ಬಲ್ಲೆನಾವಗಂ (ಪುಳ್ಪಾ. ೦೩-೦೬೦). **ಬೀಳಿಸು :** ೧. ದುರಾತ್ಮಕರೆನ್ನಿಸೆಳೆದೊಯ್ದು ಬೀಳಿಸುವರಗ್ನಿಯುರಿ (ಕುವ್ಯಾಪಿ. ೩-೯೯) ; ಆನೆಯನ್ನು ಕಪ್ಪಕ್ಕೆ ಬೀಳಿಸಬೇಕೆಂದು ಹಳ ತೋಟು ಕೊಂಡಿದ್ದ (ಕಂಗಾಳ. ೨೪೪). ೨. ಸುರಿಸು ; ಕರೆ : ದೇವಿಯರು ಕೆಲ್ದ ಕರಾಳವಚನವನದಱಿನ್ನನು ಬೀಳುಕೊಡೆ ಬರಪ್ಪಾಯ್ತಸುತ ಬೀಳಿಸಿದ ನಶ್ರುಗಳ (ತೊರಂ. ೩-೦೦-೫). ೩. ಅನುಭವಿಸುವಂತೆ ಮಾಡು : ಕುಮಾರನು ಚಿಕ್ಕವನು. ತಾಯಿ-ತಂದೆಗಳನ್ನು ಸರ್ವಥಾ ಕ್ಲೇಶಬೀಳಿಸುತ್ತಾನೆ (ಉಕ್ಷಸ್ಸ. ೪-೦೫). ೪. ನಾಶಮಾಡು : ಚೋಳನ ದರ್ಪ್ಪವಂ ಮುಱಿಯಲಾಂಧ್ರನನಂಡಲೆಯಲ್ಕಳಿಂಗನಂ ಬೀಳಿಸಲ್ . . . ಪಾಣ್ಡ್ಯಭೂಪಾಳನೆ ಸಾಲ್ಕುಂ (ಎಕ. XI, ದಾವಣ. ೩-೦೯ ; 1121). ೫. ಸಾಯಿಸು : ಪುರುದಂಣ್ದ[ಲ್ಗೊಲ್ಲೆ]ಯರ ಮಗಳ್ ಕಾಳಬ್ಬೆ × × × ಯ್ದು ಬೀಳಿಸಿ ಕಲ್ಲು ನಿಱಿಸಿದೋರ್ (ಸೌಇಇ. XI-i, ೨೪-೦೪ ; 897).
[ಬೀಟು$_1$ + –ಇಸು$_3$]

**ಬೀಟು$_1$** 'ಬೀಟ್$_1$' ನೋ.

**ಬೀಟು$_2$**, ಬೀಳು$_3$ (ನಾ). ೧. ಬೀಳುವಿಕೆ ; ಪತನ : "ಪತನ ಖಿಲ ಕ್ಷೇತ್ರದೊಳ್ ಬೀಟು" (ಕಬ್ಬಿಪಂ. ೦೦೬). **ಬೀಳು$_2$ :** ೨. ಬಿದ್ದಿರುವಂಥದು : ಕವನಗಳ್, ಬಿಳಿಕಾಗದದ ಮೇಲೆ ಬರಿ ಮಸಿಯ ಬೀಳಲ್ತೆ ? (ಅಗ್ನಿಹಂ. ೩೯). ೩. (ಪ್ರಾಣಿಗಳ) ಹೆಣ ; ಶವ : ಅಲ್ಲಿ ಗುರ್ರು ಪೂಜಿಸಿದ ಆ ಸಮಾಧಿಗೆ ಸಲ್ಲುತಿಹ ಎಲ್ಲ ಮರ್ಯಾದೆ ಇಲ್ಲಿ ಕತ್ತೆಯ ಬೀಳಿಗಾಗುತಿದೆ (ನಶರಾ. ೨-೩೦) ; ಹುಲಿಯೋ ಕಿರುಬನೋ ಒಂದೆಡೆಯಲ್ಲಿ ಬೀಳ ತಿನ್ನುತಾ, ಇನ್ನೊಂದೆಡೆಯಲ್ಲಿ ಗರ್ಜಿಸುತಾ ಮಲಗಿರುವವು (ಕತೂಟಿ. ೩).

ಬೀಳಿಂ ಮುನ್ನಿಱಿವಂ = ತಾನು ಸಾಯುವ ಮುಂದೆ ಶತ್ರುಗಳನ್ನು ಇರಿಯುವವನು ; ಒಂದು ಬಿರುದು : ಬೀಳಿಂ ಮುಂನ್ನಿಱಿವಂ ವನಗಜಸೂಜಿಕಾಜಿ [ಸು]ಜನಾಧಾರಂ . . . ಶ್ರೀಮತಂ [ಗೊ]ಲ್ಲಿಮಯ್ಯಂ (ಕಇ. II, ೬-೦೯; 1030). **ಬೀಳೀಳು** = ಇಳಿತ ಮತ್ತು ಏರುವಿಕೆ; ಉಬ್ಬರವಿಳಿತ ; ಏಳುಬೀಳು : ಉಸಿರ ಬೀಳೇಳಿನಲಿ ಜೊಂಕೆ ಪ್ರಾಣಗತಿ (ಉಧನ್ನರಿ. ೩-೦೨) ; ಬೀಳೇಳುಗಳಿಗನುಪೊ ಗೆಯ್ಮೆಯೋ ದೂಸರೇಂ ಪೇಳಿಮನೆಗೆಯ್ಮೆಯಂ ಪೊಲ ತೂಗುತ್ತೊರೆಗಂ (ಶಾಂತಿರ. ೩೮-೯೪).
[< ಬೀಟ್$_1$]

**ಬೀಟುಂದಾಣ** 'ಬೀಡುಂದಾಣ' ನೋ.

**ಬೀಟುಡೆ**, ಬೀಳುಡೆ (ನಾ). (ಇನ್ನೊಬ್ಬರು ಉಟ್ಟು) ಕಳಚಿದ ವಸ್ತ್ರ ; ಬೀಳುಡಿಗೆ: ಪೆಱರ್ ಮಿಂದ ನೀರ್ . . . ಬೀಟುಡೆ ಬಾಯ ತಂಬುಲ ಮಿವಸ್ಪೃಶ್ಯಂಗಳೇಸಲ್ಲವೇ (ಶಂರಾಪು. ೯-೦೮೦); ಸೀರೆಗಳಂ ಕಂಸದೇವನುಡುಗುಮೆಂದಾತನ ಬೀಟುಡೆಯವರುಮುಡುಗುಮಲ್ಲದೆಡೆಯ ಕಡೆಯ ಬಡವರುಡಬಾರದೆನೆ (ಅರ್ಜನೇ. ೯-೭೬ ಪ); ತಳಿರ್ಗಳ್ ಬೀಟುಡೆ ಹಸ್ತಪಾವತಳರಾಗ ಶ್ರೀಗೆ ಕಣ್ಗೊಳ್ವ ಕಣ್ಗಳ ನಿರ್ಮಾಲ್ಯದ ಮಾಲೆ ಕೈರವವನಂ . . . ಎನೆ ಬಣ್ಣಿಸಲ್ಪವಣ ರೂಪು ಭೂಪನರ್ಧಾಂಗಿಯಾ (ಅಪಂಪು. ೨-೦೬). **ಬೀಳುಡೆ :** ಬೀಳುಡೆ ಸೀರೆ ಪ್ಯೈಲಗೆಯೊ ಪೇಳೀ ಪಾಣ್ಡ್ಯಭೂಪಾಳನ (ಎಕ. XI, ದಾವಣ. ೦೬೮-೦೫; 1148?); ಕಣ್ಣಪ್ಪನಂ ತಂದು ಗಣಪದವಿಯಂ ಕೊಟ್ಟು ಬಣ್ಣಬಣ್ಣಗೆಯ ಪೊಸ ಬೀಳುಡೆಗಳಂ ಕೊಟ್ಟು (ಕಣ್ಣರ. ದೇ. ೦೩೦-೦೪); ದೇವಯಿನಗೀ ಬೀಳುಡೆಯನೀವುದು (ಕದ್ಯರಾ. ೪-೬೩); ಆಕನ ಬಾಯ ತಂಬುಲ ಬೀಳುಡೆಯ ಬಲದಿಂದ ಬದುಕುವವು (ಕುವ್ಯಾಗ. ೦೦-೩೩).
[ಬೀಟ್$_1$ + ಉಡೆ$_2$]

**ಬೀಟುಮನೆ**, ಬೀಳ್ವನೆ (ನಾ). ಹೀನಸ್ಥಿತಿಗೆ ಇಳಿದಿರುವ ಮನೆ; ನಾಶವಾದ ಮನೆ : ಕಿಱುದೋಟಂ ಕಡೆವಳ್ಳಿ ಬೀಟುಮನೆ . . . ಬಱಿಗೈ ಸುಱಿದಂತೆಲ್ಲೆ (ಸೋಮೇಶ. ೦೬). **ಬೀಳ್ವನೆ :** ಬಾಳಕನ ನಗೆನುಡಿಯು ಮಾಳಿಗೆಯು ಮುಱಿದಂತೆ ಬಾಳು ಉಳ್ಳವರ ಬಿಱುನುಡಿಯುಬೀಳ್ವನೆಯು ಏಳಿಗಾದಂತೆ (ಸರ್ವಜ್ಞ. ೦೩೪೯). [ಬೀಟು$_1$ (< ಬೀಟ್$_1$) + ಮನೆ]

**ಬೀಟ್ಕೆ, ಬೀಳ್ಕೆ** (ನಾ). ೧. ಬೀಳುವಿಕೆ ; ಪತನ : ಬಿಟ್ಟಿಪರ್ ಬಲ್ಲ ನೆಜ್ಜಿ **ಜಾಣರುವರ್ ನಾಣ್ಗೆಟ್ಟು ಬೀಟ್ಕೆಯನ್** (ಅಂತಿಗೂ. ೯೬-೯೬೨). **ಬೀಳ್ಕೆ:** ೧. "ಪತ್ಯಂ, ಪಾತ್ಯಂ, ಪತನಂ, ಪತನೀಯಂ, ಈ ೪ ಬೀಳ್ಕೆ" (ಕಾಶಕ್ಕ. ೦೯೮). ೨. (ಮೇಲಿನಿಂದ ಕೆಳಕ್ಕೆ) ಕೆಡೆದ ವಸ್ತು ; ಬಿದ್ದ ಪದಾರ್ಥ : ನೋಳ್ಪೆಮೆಲ್ಲಿರ್ಪುದಾ ಬೀಳ್ಕೆ ! (ಶ್ರೀರಾಮ. ೨೯೯-೨೬೨).

[ಬೀಟ್$_1$ + –ಕೆ]

**ಬೀಟ್ಕೊಳ್** 'ಬೀಡುಗೊಳ್' ನೋ.

**ಬೀಟ್ಕೊಳಿಸು, ಬೀಳ್ಕೊಳಿಸು** (ಕ್ರಿ). ಹೋಗಲು ಅನುವು ಮಾಡು ; **ಹೊರಡಲು ನಿರೂಪ ಕೊಡು:** ಜನಕಂ ಬೀಟ್ಕೊಳಿಸಿದನೆನ್ನನುಜನನೊಡಗೊಂಡು ಬಂದಪೆಂ ಚಿಚ್ಚರದಿಂ (ಕಾದಂಬ. ೯೯೩); ದಿವಿಜರಾಜನಂ ಯಥಾಯೋಗ್ಯದಾನಸನ್ಮಾನದಿಂ ಬೀಟ್ಕೊಳಿಸಿ ಕಳಿಪಿ (ಜಗವಿ. ೦೦-೮೯ ವ). **ಬೀಳ್ಕೊಳಿಸು :** ಪೇರೋಲಗಂಗೊಟ್ಟು ಬಳಿಕೆಲ್ಲರಂ ಬೀಳ್ಕೊಳಿಸಿ ಪರಿಮಿತಂಗೆಯ್ದು (ಶಬ್ದರಾ.೪-೨೨) ; ಅಲಘುವಿರಹವಿಮೋಹಜಲಪರಿಲುಳಿತ ನಯನರನಪ್ಪಿ ಹಳಿ ಬೀಳ್ಕೊಳಿಸಿ ಮರಳಿದು ಬಂದು ಹೊಕ್ಕನು ದ್ವಾರಕಾಪುರವ (ಕಭಾಗ. ೦೦-೩೬-೩೨).

[ಬೀಟ್ಕೊಳ್ (< ಬೀಡುಗೊಳ್) + –ಇಸು$_3$]

**ಬೀಟ್ಗುಂಡು, ಬೀಳುಗುಂಡು** (ನಾ). ಬಂದರಿನಲ್ಲಿ ಹಡಗನ್ನು ನಿಲ್ಲಿಸಲು ಹಡಗಿನ ಪಕ್ಕದಲ್ಲಿ ಇಳಿಬಿಡುವ ಭಾರವಾದ ಕಬ್ಬಿಣದ ಸಾಧನ, –ಗುಂಡಂ ; ಲಂಗರಂ ; "ಹಡಗು ನಿಲ್ಲಿಸುವುದಕ್ಕಾಗಿ ನೀರಿನಲ್ಲಿ ಇಳಿಬಿಟ್ಟ ಗುಂಡು" (ಪ್ರಭಣ್ಣ) : ಅಂತು ಬೀಟ್ಗುಂಡಿಕ್ಕಿದ [ಪಾಠಾಂ. ಬೀಗುಂಡಿಕ್ಕಿದ, ಬಿಣ್ಗುಂಡಿಕ್ಕಿದ] ಬಹಿತ್ರದಂತೆ ಅಲ್ಲಿಂ ತಳರದೆ ನಿಂದ ತನ್ನ ರಥಮಂ ಕಂಡು (ಆದಿಪು. ೧೨-೬೩ ವ). **ಬೀಳುಗುಂಡು :** ಅವರು ಮಲಬಾರ್ ತೀರಕ್ಕೆ ಬಂದು ಸೇರಿ ಬೀಳುಗುಂಡನ್ನು ಇಳಿಸಿ ತಂಗಿದ ರಾತ್ರಿಯೇ, ಕಡಲ್ಗಳ್ಳರು ಬಂದು ಮೇಲೆ ಬಿದ್ದರು (ಭಾರತೀ. ೦೦೬). 'ಬಿಣ್ಗುಂಡು' ಪಠಾ.

[ಬೀಟ್$_1$ + ಗುಂಡು]

**ಬೀಟ್ಗೊಂಬು** (ನಾ). ಜೋಲುತ್ತಿರುವ ಕೊಂಬೆ : ಕುಬ್ಜಾಮ್ರಕುಜದ ಬೀಟ್ಗೊಂಬಿನ ಪಸುರೆಲೆಯ ಕುಸುಂಕುಜಿನೊಳಗೆ ರಸಾಯನದ ಕುಪ್ಪಿಗೆಯಂತೆ ತೋರ್ಪ ತನಿವಣ್ಣಂ ತಿಣಿಯಲೊಡನೆ (ಅರ್ಜುನೀ. ೩-೮೦ ವ).

[ಬೀಟ್$_1$ + ಕೊಂಬು$_1$]

**ಬೀಟ್ಜೊಂಪ** (ನಾ). ಇಳಿಬಿದ್ದಿರುವ ಗೊಂಚಲು : ನಾನಾ ಲತಾಮಂಟಪದೊಳೆಸೆವ ಬೀಟ್ಜೊಂಪದೊಳ್ . . . ವಿನಾಸುಮಂ ಕಟ್ಟುದನಜಿಸುವ ಪೋರ್ ಕೂಡೆ ನೋಡುತ್ತಮಿರ್ದಂ (ಕಾದಂಬ. ೯೯೯).

[ಬೀಟ್$_1$ + ಜೊಂಪ$_1$]

**ಬೀಟ್ಟಿರ್** (ಕ್ರಿ). ೧. (ಮೇಲಿನಿಂದ ಕೆಳಕ್ಕೆ) ಕೆಡೆ ; ಪತನ ಹೊಂದು : ಮೊದಲಿಂ ಕಿಟ್ಟು ಕುಳಾಚಳಪ್ರತತಿಗಳ್ ಪೋಲ್ವಂತೆ ದಾಘಾತವಾತದಿನಾಕಾಶಮನೆಯ್ದಿ ಕೂಳ್ದಿ ಕವಿತಂದಂಭೋಧಿಯೊಳ್ ಸೂಟು ಸೂಟದೆ ಬೀಟ್ಟಿಂದಾವು (ಶಾಂತಿಪು. ೦೩-೯೩); ಪುಷ್ಪಕದಿಂ ಧರಣಿಗೆ ಬೀಟ್ಟಿರ್ಪುದನಾ ಹರಿಣೇಕ್ಷಣೆ ಸೀತೆ ಕಂಡಳೆರಡಂ ಕನಸಂ (ಶಾಂತಾಪು. ೦೫-೬೩) ; ನೀಡಿದುಪ್ಪರಪೊಯ್ಲಿಂ ಪೊಡವಿಗೆ ಬೀಟ್ಟಿರೆ ತಲೆ (ಕಬ್ಬಿಗ. ೨೬೩). ೨. ಉರುಳು ; ಬೀಳು : ಕುಳಿಶ್ಯಳದಂತೆ ಕರಿಗಳ್ ಬೀಟ್ಟಿಂಮುಪುಗಾಳಿಯೊಳ್ (ಶಂಖಾ. ೦೦-೬೬) : ಮೂರ್ಛೆವೋಗಿ ಬೀಟ್ಟಿರಲಿರವೆತ್ತಿಕೊಂಡಿಟ್ಟಿವರ್ ಧರಣೀಪತಿಯಂ ತುರಂಗದಿಂ (ಕಾದಂಬ. ೯೩೭) ; ತೋರಮೆಣಗಳ್ ಬೀಟ್ಟಿಂದುಪುಗಾಳಿಯೊಳ್ (ಶಾಂತಾಪು. ೦೩-೩೮). ೩. (ಕಿಡಿ ಮೊದಲಾದುವು) ಉದುರು : ಕೇಸರಿ ಸೂಸೆ ತನ್ನ ಮೊಗದಿಂ ಕಿಡಿ ಬೀಟ್ಟಿರೆ ತನ್ನ ಕಣ್ಗಳಿಂ (ಶಾಂತಾಪು. ೦೦-೦೦೭). ೪. ಕಳಚಿ ಬೀಳು; ನುಣುಚಿಕೊಂಡು ಬೀಳು; ಜಾರು: ಮಂಗಯ್ಯಂ ಪಿಡಿದೊತ್ತಿ ಕೈಯ ಕರವಾಳ್ ಬೀಟ್ಟಿರ್ಪಿನಂ . . . ಪೊಯ್ದು (ಶಾಂತಾಪು. ೮-೨೯). ೫. ಧಾರೆಯಾಗು ; ಸುರಿ : ಅನ್ನ ಬಸ್ಸು ಪೊಡಾಯಿನ್ಬೀಟ್ಟಿಸ್ಟ ನೀರಿಟಿವೆ (ಪ್ರಿಂಶಿ. ೦೯೩೬, ೫೩-೨೬ ; ಸು. 850 ?) ; ಈಶಾನಂಗೆ ಸೀಮೆ ನೆಡುಮೊಜಡಿಯಾ ಪುಣುಸೆ ಪುಗರಿಯಾ ಎಡೆಯ ಬೀಟ್ಟಿಸ್ಟ ಪಳ್ಳಮೆ ಅನ್ನ ಬಸ್ಸು ಬಾಳಪಡಿಯೊಳ್ಕೂಡುಗು (ಎಕ. IX(s), ದೇವನಹ. ೦೩೦-೯೯ : 828).

[ಬೀಟ್$_1$ + ತರ್]

**ಬೀಟ್ದಾಣ** 'ಬೀಡುಂದಾಣ' ನೋ.

**ಬೀಟ್ದಸೆ, ಬೀಳ್ದಸೆ** (ನಾ). ಹೀನವಾದ ಸ್ಥಿತಿ ; ಕೀಳಾದ ಸ್ಥಿತಿ : ಸುರನಕ್ಕೆ ನರನಕ್ಕೆ ಅಲ್ಲಿ ತಾನಾರುಂ ನನ್ನದೀ ಬೀಟ್ದಸೆಗೆ ಪಿರ್ಗುಪಿರಲಿಲ್ಲಂ (ಐದ್ವಶ್ರ. ೦೦-೦೯೪). **ಬೀಳ್ದಸೆ :** ಮೇಳದವರೊಂದಿಗೆ ಹೇಳಿಕೊಳ್ಳುವುದರಲ್ಲಿ . . . ಮಾನವ್ಯದ ಬೀಳ್ದಸೆಯನ್ನು ಕುರಿತು ಅಲ್ಲಗಳೆಯುವುದು ಉದ್ದೇಶವಲ್ಲ (ಐದ್ವಶ್ರ. XLii, ಹಾಳಿಕರ ಸಮುಕ್ಷ).

[ಬೀಟ್$_3$ (< ಬೀಡು$_3$) + ದಸೆ$_1$ (< ದಸೆ)]

**ಬೀಟ್ನೆಲ, ಬೀಳ್ನೆಲ** (ನಾ). ಸಾಗುವಳಿ ಮಾಡದ ಭೂಮಿ ; ಹಾಳುಗೆಡವಿದ ನೆಲ ; ಬೀಡುಭೂಮಿ : ತುಱುಪಟ್ಟಿಯ ದಾರಿಯ ಬೀಟ್ನೆಲದದೇನುಮಿಲ್ಲಾ ನಾಡೊಳ್ (ಕುಱಿ ಸು. ೪-೮). **ಬೀಳ್ನೆಲ :** ಕೈಕಾಲ್ಗಳೊಳ್ ಪಡುಕಮುಂ ನಿತ್ರಾಣಮುಂ ಪರ್ಚೆ ಬೀಳ್ನೆಲದ ಮುಮ್ಮ್ಯರಿಗೆ ದಿಂಡುರುಳೆ ಕೆಡೆಪಿದುವು (ಸಂಸಹ. ೨೦-೬).

[ಬೀಟ್$_3$ (< ಬೀಡು$_3$) + ನೆಲ]

**ಬೀಟ್ಪಡಿಸು** (ಕ್ರಿ). ಹಾಳುಮಾಡು ; ಕೆಡಿಸು : ಮುಂತಣರವಿನೊಳ್ಪೋಸಪೋದಂ ; ಪಿಂತಣೋಜೆಯುಂ ಬೀಟ್ಪಡಿಸಿದಂ (ಶಕಮಂ. ೫೮-೦೦).

[ಬೀಟ್$_3$ (< ಬೀಡು$_3$) + ಪಡಿಸು]

**ಬುಂಡೆ** 'ಬುರುಂಡೆ' ನೋ.

**ಬುಂದು, ಬೂಂದು** (ನಾ). ಕಾಫಿಯ ಗಿಡ ಮತ್ತು ಅದರ ಬೀಜ : ನೀಲಗಿರಿಯಲ್ಲಿ ಹುಟ್ಟುವ ಬುಂದು . . . ಚಹಾ ಇವೆರಡೂ ವ್ಯಾಪಾರದಲ್ಲಿ ಬಹಳ ಪ್ರಸಿದ್ಧವಾದವು (ಮುಂಬಯಿ. ೪-೦೩೯) ; ಬುಂದು(ಕಾಫಿ) ಯಾಲಕ್ಕಿ ಕೆಲವು ಕಡೆ ಸ್ವಲ್ಪ ಸ್ವಲ್ಪ ಬೆಳೆಯುವದುಂಟು (ಮುಂಬಭೂ.. ೦೩೦). **ಬೂಂದು :** ಬೂಂದಿನ ಗಿಡಗಳು ತೋಟಗಳಲ್ಲಿ ಯಾವ ಭೂಮಿಗಳಲ್ಲಿ ಯಾದರೂ ಬೆಳೆಯುತ್ತವೆ (ಕೃಷಿಶ್ರ. ೦೯೯) ; **ಕಾಫಿಗಿಡ, ಕಾಫಿಬೀಜ ;** ಬೂಂದುಬೀಜ (coffee. ೩೦೪೩). [← ಮರಾ. ಬುಂದ್, ಬೂಂದ್ ; ಅರ. ಬುನ್. / ಮಲ. ಬುನ್; ತುಳು. ಬುನ್ನು, ಬೂಣು].

**ಬುಂಭುಕ, ಭುಂಭುಕ** (ನಾ). ೧. ಕುಚ್ಚು ಮತ್ತು ಅದರಿಂದ ಮಾಡುವ ಅಲಂಕಾರ : ಬಳಸಿದ ಚೆಂಬೊನ್ನ ಮಾಂಗಾಯ ಗೊಂಚಲ್ಗಳ ಪೊಂದಳಿರ ತೊಂಗಲ್ಗಳ ಸುತ್ತುಗೊಂಡ ಸುರಿಗೆಯ ಮುತ್ತಿನ ಬುಂಭುಕಂಗಳ [ಪಾಠಾಂ. ಜುಂಗುಕಂಗಳ, ಲಂಬಣಂಗಳ] ನಡುವೆ (ಆದಿಪು. ೬-೦೫ ವ) : ಆ ನೆರೆಯ ಚೌಪಳಿಗೆಗಳೊಳನೇಕ ಪ್ರಾಸಾದದ ಮೇಲೆ . . . ಪೊನ್ನ ಮಾಂಗಾಯ ಗೊಂಚಲ್ಗಳುಮಂ ಮುತ್ತಿನ ಬುಂಭುಕಂಗಳುಮನೆಟಲೆ ಕಟ್ಟಿಸಿ (ಶಬರಾ. ೩-೪೦ ವ) ; ಅನ್ನೆಗಂ ಮುನ್ನಮೆ ಸಮೆದ ವಿವಾಹಗೇಹಂ . . . ಮುತ್ತಿನ ಲಂಬಣದ ನೀಲದ ಬುಂಭುಕದ ಮೇಳಾಪಕಮೆಂಬ ಲೋಲಲೋಚನವಿಕಾಸವಿಲಾಸದೊಳಂ . . . ನಲಿದು ನಾಟಕಮಾಡುವಂತಿರ್ದುದು (ಅನಂತ. ೬-೪೦ ವ). **ಭುಂಭುಕ :** ೨. ಅತಿಶಯವಾದುದು; ಅದ್ಭುತವಾದುದು : ಅತಿ ಭುಂಭುಕಮೆನಿಸಿದ ಕೋಷ್ಟ ಕೋಟಿವಿಧದಿಂದೆಸೆಗುಂ (ಎಕ. XIII, ೩೩೦-೩೮; 927); ಭುಜಬಳ ಶಾನ್ತರನೃಪತಿಯ ಭುಜಬಳದಳವು . . . ನಿಜವಿಜಯಮುಮೀ ಲೋಕದೊಳಗೆ ಭುಂಭುಕಮೆನಿಕುಂ (ಎಕ. VIII, ನಗರ. ೩೫-೫೫ ; 1077) ; ಆ ಬೇಗನಪ್ಪಂಭು ಜಗದ್ಭುಂಭುಕವೆನೆ ರಿಪುವಂ ಚಕ್ರದಿಂ ಕೃಷ್ಣನಿಟ್ಟಂ (ಜಗವಿ. ೦೮-೬೩). ೩. ಅದ್ಭುತ ವ್ಯಕ್ತಿ : ಕೀರ್ತ್ಯಂಗನೆ ಶುಭ್ರಚ್ಛಾಯೆಯಾದಳ್ . . . ಮಜ್ಜನಮಂ ಪ್ರೋವನಾಪ[ಗಾವಾರಿಯೊ]ಳೆನೆ ಪಿರಿದುಂ

ಭುಂಭುಕಂ ಸಾಹಸಾಂಕಂ (ಗದಾಯು. ೧೦-೧೦) ; ಸ[ನ್ನೂರು]ಗುರ ಮಹೋಸುರ್ಬ್ಬರ್ಜಗದ್ವಾಂಭುಕರ್ (ಶಾಸ. XI-ii. ೦೮೦-೦೩; 1094); ಸಕಳೋರ್ವಿಸ್ಸ್ತ್ರುತವಿಪ್ಪ ಧರ್ವ್ಮವಿನಿದಂ ಕಾವಂ ಚಿರಿತ್ಸರ್ಯಭುಂಭುಕ ನಕ್ಕುಂ (ಎಕ. VII, ಶಿಕಾ. ೯೭-೩೦ ; 1112). (ಗು). ೪. ಅದ್ಭುತ ವಾದ ; ಆಶ್ಚರ್ಯಕರವಾದ : ಭಾಸುರಯಶಃಶ್ರೀಭಾಸಿಭೂಭೂತ ಭುಂಭುಕವಾಗ್ಮಿಪ್ರವರಂ (ಸುಕುಮಾ. ೨-೩೮).

[ದೇ. ?./ ಪ್ರಾ. ಬುಂಬುಅ=ಗುಂಫಿ, ಸಮೂಹ]

**ಬುಕಣಿ**, ಬುಕಣೆ (ನಾ). ಪುಡಿ; ಚೂರ್ಣ: ಕನಡಿ ಒಡದಿಲ್ಲಾ, ಬುಕಣಿ ಆಗಿಲ್ಲಾ (೦೫೪. II. ೩೦). **ಬುಕಣೆ :** ತಾಮ್ರದ ಬುಕಣೆ ಮಾಡಬೇಕು. ಅದನ್ನು ಮಜ್ಜಿಗೆಯಲ್ಲಿ ೪-೫ ದಿವಸಗಳು ನೆನೆ ಇಡಬೇಕು (ಶಿಕ್ಷ. ೪೦).

[←ಹಿಂ. ಬುಕನೀ; ಮರಾ. ಬುಕಣೀ]

**ಬುಕಣೆ** 'ಬುಕಣಿ' ನೋ.

**ಬುಕಂಟು** 'ಬೂಜುಂ$_1$' ನೋ.

**ಬುಕ್ಕ$_1$** (ನಾ). ವ್ಯವಸಾಯದ ಒಂದು ಉಪಕರಣ ; ಬೀಜವನ್ನು ಬಿತ್ತಲು ಉಪಯೋಗಿಸುವ ಬಿದಿರಿನ ನಳಿಕೆಗೆ ಅಳವಡಿಸಿರುವ ಬಟ್ಟಲು : ಸದ್ದೆ ಬಟ್ಟಲು : ಬೆಳೆಯನ್ನು ತೆಗೆದುಕೊಂಡ ನಂತರ ಆ ಹೊಲ ದಲ್ಲಿ ಮಡಿಕೆ ಹೊಡಿ ಆ ಮಡಿಕೆಗೆ ಬುಕ್ಕಾ ಕಟ್ಟಿ ಕಡಲೆಯನ್ನು ಬಿತ್ತ ಬೇಕು (ಕೃಷಿಶ. ೩೬): ಬೀಜಗಳನ್ನು ಕೂರಿಗೆ ಹಿಂದೆ ಬುಕ್ಕಾ ಕಟ್ಟಿ ನಾಲ್ಕು ಬೆರಳಿಗೊಂದು ಬೀಜ ಬೀಳುವಂತೆ ಬಿತ್ತಬೇಕು (ಕೃಷಿಶ. ೬೯).

**ಬುಕ್ಕ$_2$** (ನಾ). ೧. ಎದೆ ; ಹೃದಯ : "ಬುಕ್ಕಮೆಂದೆನಲಗ್ರಮಾಂಸ ಮೆಂದೆನಲು ಬಹ ಬಿಕ್ಕಕ್ಕ" (ಮಂಗರಾ. ೦೦೭-೭); ಕಬಳಿತವಲ್ಲೂರಂ ಗಿಳಿತ ಬುಕ್ಕಮಾ ಪೀತರಕ್ತಮೋಂ ತಿಂದುದೂ ಹಸ್ತ ಬೃಹಸ್ಪತ್ತಿಷ್ಠಂ ತಾಯ ಬಾಯ ಮಾಂಸವನೆ ತೋಡಿ ರಾಕ್ಷಸಲೋಕಂ (ಅರ್ಜುನಿ. ೩-೪೧). ೨. ಮೇಕೆ ; ಗಂಡಾಡು. [ಸಂ.]

**ಬುಕ್ಕಚ್ಚಿ** (ನಾ). ಮಕ್ಕಳ ಭಾಷೆಯಲ್ಲಿ ಎರೆಯುವುದಕ್ಕೆ ಬಳಸುವ ಒಂದು ಅನುಕರಣ ಶಬ್ದ : ಮಣ್ಣಾಟ ಬೇಡಪ್ಪೊ ಬುಕ್ಕಚ್ಚಿ ಮಾಡಬೇಕು ಅಣ್ಣಯ್ಯ ಬಾರೆಂದು ಎತ್ತಿಕೊಂಡು ಎಣ್ಣೆ ಒತ್ತಿ ಬೇಗ ಎಚಿಂದಳು ಗೋಪ್ಯಮ್ಮ (ಪುರಂದ. ೨-೨೦೦-೧).

**ಬುಕ್ಕಿ** 'ಬುರುಕ$_2$' ನೋ.

**ಬುಕ್ಕಿಟ್ಟು** 'ಬುಕ್ಕಿಹಿಟ್ಟು' ನೋ.

**ಬುಕ್ಕಿಹಿಟ್ಟು**, ಬುಕ್ಕಿಟ್ಟು (ನಾ). ೧. ಉತ್ಸವ, ಹಬ್ಬ ಮುಂತಾದ ಸಮಾರಂಭಗಳಲ್ಲಿ ಉಪಯೋಗಿಸುವ ಒಂದು ಬಗೆಯ ಸುವಾಸನೆಯ ಹಿಟ್ಟು.—ಪುಡಿ: "ಚರ್ಣ, ಚರ್ಜಿಕ್ಕಂ, ಸ್ಥಾನಕ ೬-೩ . . . ಮೃಗಜಪ್ಪುವ ಗಂಧಪುಡಿ, ಉದ್ವರ್ತನ ಚೂರ್ಣ, ಬುಕ್ಕಿಹಿಟ್ಟು" (ಸಿದ್ಧಾಂತ. ೨೦೬); ಸುರಗಿ ಹೂವಿನ ಮಾಲೆ, ಬುಕ್ಕಿಟ್ಟು, ಥೇಡೆಯ ಉಂಡೆಗಳನ್ನೂ ಒಟ್ಟಿದ ಗಂಟನ್ನು ದಾಸರ ಕೈಯಲ್ಲಿಟ್ಟು ಅದೃಶ್ಯನಾದನು (ಕಥಾ. ೩೦೩). **ಬುಕ್ಕಿಟ್ಟು :** ೧. ಅಗರ ವಾಲಿರು . . . ಊದಿನ ಕಡ್ಡಿ, ಬುಕ್ಕಿಟ್ಟು ಮುಂತಾದ ಸುಗಂಧದ್ರವ್ಯ ಗಳನ್ನೂ ಮಾಡಿ ಮಾರುವುದೇ ಇವರ ಮುಖ್ಯ ಹೋರೆಯು (ಕಜಾಗ. ೦೦೦): ಅಗರು ಚಂದನಗಂಧ ಅರಿಸಿನ ಬುಕ್ಕಿಟ್ಟು . . . ಮೃಗನಾಭಿ ತರಿಸಿಟ್ಟರಬಲೆಯರಾಗ (ಶ್ರೀಕೃಪಾ. ೩೦) ; ಬುಕ್ಕಿಟ್ಟು ಊದಿನ ಕಡ್ಡಿಗಳ ವಾಸನೆ ಇಡಿಗಿತ್ತು (ವೃತ. ೬). ೨. ಒಂದು ಬಗೆಯ ಹಲ್ಲುಪುಡಿ : ಸ್ವಲ್ಪ ಬುಕ್ಕಿಟ್ಟು ಕೊಡು, ಹಲ್ಲುಜ್ಜಿಕೊಳ್ಳಬೇಕು (ಜೂತಿ).

[ಬುಕ್ಕಿ (<ಬುರುಕ$_2$) + ಹಿಟ್ಟು (<ಪಿಟ್ಟು)]

**ಬುಕ್ಕು** (ನಾ). ೧. ಪುಸ್ತಕ; ಹೊತ್ತಿಗೆ : ಕೈಯು ಕಾವ ಬಳಿಕ ಅವರ ಮೇಲೆ ಒಂದು ಬುಕ್ಕು ಹಿಡಿದರೆ, ಆ ಬುಕ್ಕು ಬಿಸಿಲಿನಿಂದ ಬರುವ ಶಕೆಗೆ ಅಡ್ಡಾಗುತ್ತದೆ (ಕುಂಚಿಪು. ೬.೬೬) : ಇದೀಗ ತಪ್ಪು ಹಿರಿಯ ಮಗಳು ಮಾಲ್ಕಿ ಪರೀಕ್ಷೆ ಪಾಸಾದ ಮೇಲೆ ಇಂಗ್ಲೀಷ್ 'ಎರಡು ಬುಕ್ಕು' ಕಲಿಸಲು ಧಾರವಾಡಕ್ಕೇ ಮನೆ ಮಾಡಿರುವುದಾಗಿಯೂ ಹೇಳಿದನು (ಗಂಶಾಶು. ೬). ೨. ಕಂದಾಯದ ನೋಂದಣಿ ಪುಸ್ತಕ : (ಕಸಂಗ್ರ. ೦೫೨).

[← ಇಂ. Book]

**ಬುಕ್ಕೆ** (ನಾ). ಎದೆ ; ಹೃದಯ ; ಗುಂಡಿಗೆ. [ಸಂ. ಬುಕ್ಕಾ]

**ಬುಗಟು** 'ಬುಗುಟು$_1$' ನೋ.

**ಬುಗಟೆ** 'ಬುಗುಟು$_1$' ನೋ.

**ಬುಗಡಿ** 'ಬುಗುಡಿ' ನೋ.

**ಬುಗಬುಗನೆ** (ಅ). ಒಂದು ಅನುಕರಣಾವ್ಯಯ : ನೀರು ಒರತೆಯಿಂದ ಬುಗಬುಗನೆ ಮೇಲೆ ಬರುತ್ತಿತ್ತು (ರೂಢಿ).

[ಬುಗಬುಗ$_0$ + —ಅನೆ$_1$]

**ಬುಗರಿ** 'ಬುಗರಿ' ನೋ.

**ಬುಗಿಯೂರ್** (ನಾ). ಒಂದು ಊರಿನ ಹೆಸರು : ಅನಕನ್ನಡೆಯ ಬಡಿದು ಸುರಾಂಗನೆಯೊಳ್ ನೆರೆದನಾತಗೆ ಕೊಟ್ಟ ಕಲ್ಲ × × × ನಿಲಿವ ಬುಗಿ ಯೂರ ಪಾಟು (ಎಕ. X, ಶ್ರೀನಿವಾ. ೬೮-೬; ಸು. ೩೦). [ಬುಗಿ$_0$+ಊರ್]

**ಬುಗಿಲ್**, 'ಬುಗಿಲು (ನಾ). ೧. ಒಂದು ಅನುಕರಣ ಶಬ್ದ : 'ಬುಗಿಲನೆ', 'ಬುಗಿಲೆನ್' ಪರಾ. **ಬುಗಿಲು:** ೨. "ಚಿಂತೆ, ವೇದನೆ" (ಕಾಪಕೋ. ೨೩).

**ಬುಗಿಲನೆ** (ಅ). ಒಂದು ಅನುಕರಣಾವ್ಯಯ : ಒಲೆ ಬುಗಿಲನೆ ಹತ್ತಿ ಕೊಂಡಿತು (ರೂಢಿ). [ಬುಗಿಲ್ + —ಅನೆ$_1$]

**ಬುಗಿಲು** 'ಬುಗಿಲ್' ನೋ.

**ಬುಗಿಲೆನ್** (ಕ್ರಿ). ಬುಗಿಲ್ ಎಂದು ಶಬ್ದಮಾಡು : ಮುಕ್ಕಣ್ಣನೆನಿಪ ಶಂಕರದಾಸಿಮಯ್ಯ ಸಿಟ್ಟಿಕ್ಕಿ ಕಿಡಿಗಣ್ಣ ಬಿಡಲನಲ ಬುಗಿಲೆನುತ ಬರೆ (ಗುರುಪಾ. ೮-೩೮).

**ಬುಬ್ಬುಗಿಲೆನ್** (ದ್ವಿರುಕ್ತಿ) : ಬುಬ್ಬು[ಕಾಸಾಂ. ಬುಗ್ಗ]ಗಿಲೆನಲೀಕ್ಷಣ ಬಾಯ್ಗಳಿನೊಗೆವರುಣಜಳಂಗಳೀಯಿ ಕಣ್ಣ ತಿ ಭ ಯ ಮಂ (ಪಂಪಾಶ. ೧೨-೨೩). [ಬುಗಿಲ್ + ಎನ್$_1$]

**ಬುಗುಂಟು** 'ಬುಗುಟು$_1$' ನೋ.

**ಬುಗುಂಟುಪೋಗು** (ಕ್ರಿ). ಬಾವು ಬರು; ಬೊಬ್ಬೆಯುಂಟಾಗು : ಅಬಿಚಟ್ಟಿಂ ತಲೆ ಬುಗುಂಟುಪೋದುದೊಜ ನಾಟ್ಟುಡಿದಂತೆ (ರಶಾಶ್ವ. ೬ ೨೬). [ಬುಗುಂಟು (< ಬುಗುಟು$_1$) + ಪೋಗು$_1$(< ಪೋ$_1$)]

**ಬುಗುಟಿ** 'ಬುಗುಟು$_1$' ನೋ.

**ಬುಗುಟು$_1$**, ಬುಗಟು, ಬುಗಟೆ, ಬುಗುಂಟು, ಬುಗುಟಿ, ಬುಗುಟೆ, ಬುಗುಂತು (ನಾ). ೧. ಉಬ್ಬಿಕೊಂಡಿರುವುದು; ಊದಿಕೊಂಡಿರು ವುದು: ಉಬ್ಬು: ಒಪ್ಪಿದ ಕರ್ಪುಸಿವಾ ಬೃಹತ್ಕುಚಂ ಬುಗುಟೊದವಿರ್ದ ನಾಭಿ . . . ವಲಿವುಂ ಕರಂ ಕೆಲವುಮಪ್ಪು ಗುರಾಗೆ ಗಜಾಳಿ ನಿಂದಿತಂ (ಶಬ್ದಮ.೩೬. ೦೦-೬೨). ೨. ಪೆಟ್ಟಿನಿಂದ ತಲೆ ಅಥವಾ ಮೈಮೇಲೆ ಉಂಟಾಗುವ ಊತ, —ಬೋರೆ; ಗುಬಟು: ಕದಜಿದ ತಲೆಯ ತೊಸೆವ ನಡೆವ ಬುಗುಟಿನ ಕರಸ್ಥಲದ . . . ಎಡಬಲದ ಬದಿಯ ತಟ್ಟಿನ ಮುಳ್ಳುದಜುಹಿನ ಕಂಬಳ ಸೀಳು ಒಂದು ನೋಡುವ ಜನರು ಬೆಜಗಾಗೆ (ಬಸವ. ೩೨-೦೪೯); ನೆಗೆದ ಬುಗುಟದೆ ಹಣೆಯಲಿ (ಕುಮಾ. ೦೨-೩೦); ಹೋ ತಲೆಬುಗುಟು ನೋವುತಿದೆ (ರಾಶಕ. ೦೫.೬೬). **ಬುಗಟು :** ೨. ಆಗ ದುರ್ಯೋಧನನು . . . ಮುಂದಕ್ಕೆ ಸಾಗಲು, ಗೋಡೆಯನ್ನು ಹಾದು ತಲೆಗೆ ಬುಗಟು ಎಬ್ಬಿಸಿಕೊಂಡು ಕಣ್ಣಲ್ಲಿ ಕತ್ತಲುಗೂಡಿಸಿದ್ದರಿಂದ ನೆಲಕ್ಕೆ ಕುಳಿತನು (ಮಹಾಶ. ೬೬). **ಬುಗಟೆ :** ೨. ತಲೆಗೆ ಭಾರಿ ಭಾರಿ ಬುಗಟೆಗಳು ಬಂದಿದ್ದವು (ಅ.ಕ. ೦೦). **ಬುಗುಂಟು :** ೨. 'ಬುಗುಂಟುಪೋಗು' ಪರಾ. **ಬುಗುಟಿ :** ೨. ಎರಡು ಮೋಟಕರಂಗಳಿಂ ನಿಮಿರದೊಳು

ಅಯ್ಯನ ಶಿರವನು . . . ಕುಟ್ಟುತಿರೆ ತಲೆ ಒಡೆದು ಬುಗುಟಿಗಳೆದ್ದೊಡೆದು ನೆತ್ತರು ಬಿಡದೆ ಜೋರನೆ ಸುರಿಯೆ (ಶಿಶೃ. ೩೮-೨೮). ಬುಗುಟೆ: ೨. ಹಣೆಗೆ ಹೊಸ್ತಿಲ ಬಡಿದದ್ದರ ಪರಿಣಾಮವಾಗಿ ಬುಗುಟೆಯೆದ್ದಿದೆ (ಮುಗಿವು. ೦೩೭): ಅದು ಅವನ ಹಣೆಗೆ ಬುಗುಟೆಯನ್ನೇ ಎಬ್ಬಿಸಿತು (ರಂಗರೂ. ೫೭).

**ಬುಗುಡು:** ೧. ತುಂಡಿಲ, ತುಂಡಿಭ=ಹೊಕ್ಕುಳುಬುಗುಡುಳ್ಳವನು (ಶಾಶಿಕ. ೪). 'ಗುಬುಟು' ಪರಾ. [ ದೇ.॥ ತೆಲು. ಬುಗಡ, ಬೊಗಡ]

**ಬುಗುಟ್ಟು** 'ಬೂಜು₁' ನೋ.

**ಬುಗುಟೆ** 'ಬುಗುಟ್ಟು₁' ನೋ.

**ಬುಗುಡ** (ನಾ). ಬೊಜ್ಜುಹೊಟ್ಟೆಯವನು ; ಡೊಳ್ಳುಹೊಟ್ಟೆಯವನು : "ಬುಗುಡಂ ತುಂದಿಳಂ" (ವಸ್ತುಕೋ. ೬೩-೪೮); "ತುಂದಿಯೆಂಬವಂ ಬ[ಬು]ಗುಡಂ" (ಪಠಾಯು. ೧೦೦-೯೫೭).

[ಬುಗುಡು (<ಬುಗುಟ್ಟು₁) + –ಅ₇]

**ಬುಗುಡಿ, ಬುಗಡಿ, ಬುಗುಡೆ** (ನಾ). ೧. (ಕಿವಿಯಲ್ಲಿ ಧರಿಸುವ) ಒಂದು ಬಗೆಯ ಆಭರಣ : ಮುತ್ತಿನ ಮೂಗುತಿ ಕೆತ್ತಿದ ವಾಲೆಯು ಇತ್ತರಾ ಬುಗುಡಿ . . . ಮುತ್ತಿನ ಹಾರವು ರತ್ನದ ಪದಕಾ ಅರ್ತಿಲಿ ನಾರಿಯಾ ಕುತ್ತಿಗೆಗ್ಹಾಕುತ (ಪಾರಿಕೀ. ೬೫-೧೭); ಕಡಗ ಪಟ್ಟಿಯು ಡಾಬು ಬುಗುಡಿ ಗೀರ್ಬಳ್ಹೆಸರಿಗೆ ಚಿಂತಾಕ ಸರವಣೆಗಳ ಜಡಜಾಕ್ಷಿಯರ್ ಧರಿಸಿ (ಸಿದ್ಧಶಾ. ೯-೦೨); ನೆಗಡಿಯಂತಹ ಬೇನೆಯಿಲ್ಲ, ಬುಗುಡಿಯಂತಹ ಒಡವೆಯಿಲ್ಲ(ಗಾದೆ). ೨. ಮಂಚದ ಕೀಲುಗಳನ್ನು ಜೋಡಿಸಲು ಅಳವಡಿಸುವುದಕ್ಕಾಗಿ ಉಪಯೋಗಿಸುವ, ತಲೆಯ ಮೇಲೆ ಗುಬುಟು ಇರುವ ಮೊಳೆ ; ಗುಬುಟುಮೊಳೆ : ಇಂದ್ರನೀಲದ ಕಾಲು ವಜ್ರದ ಬುಗುಡಿಗಳಿಂದ ಹೇಮದಿ ವಿರಚಿಸಿದ ಚಂದದ ಹಲಗೆಯಿಂ ಹೊಳೆವ ಮಂಚವನವನಂದು ಸಾರ್ದನು ರಾಗದಲಿ (ಶೀಮಂಶಾ. ೨-೭೦). ೩. ಔಷಧಕ್ಕೆ ಉಪಯೋಗವಾಗುವ ಬುಗುಡಿಯಾಕಾರದ ಹೂವು ಬಿಡುವ ಒಂದು ಬಗೆಯ ಮರ : ಕಗ್ಗೊಜಲೆ ಬುಗುಡಿ ಮಿಟಿಲೆಯ ನುಗ್ಗಿಯ ಪತ್ರಂಗಳೊಡನೆ ಮಾರಿಚದ ಚೂರ್ಣಂ ಅಗ್ಗಳಮೊಂದಿರೆ ನಸ್ಯದೊಳೆಗ್ಗಿಲ್ಲದೆ ವಿಷಹರಂ ವಲಂ ಪ್ರತ್ಯೇಕಂ (ಖಪುದ. ೬-೮೨); ಕುರುಟಿಗೆಸೊಪ್ಪು, ಬುಗುಡಿಯ ಸೊಪ್ಪು ಇವೆರಡನು ನಿಂಬೇಹಣ್ಣಿನ ರಸದಿಂದರೆದು ಒಡಿಯ ಕೊಡಲು ಸರಿಯ ಹಲ್ಲು ತಾಗಿದ ವಿಷ ಶಮನವಹುದು (ವೈದ್ಯಸಾ. I. ೩೦೭); ಬುಗುಡಿ ಮರದ ಕಾಲುವೆ ಸುಕ್ಷೇತ್ರದಲ್ಲು ಲಿಂಗಮುದ್ರೇ ಸ್ಥಾಪ್ಯವ ಮಾಡಿಸಿ ಕೊಟ್ಟ ಗದ್ದೆ (ಎಕ. XII. ಪಾವುಗ. ೬೦-೨೫; 1663). **ಬುಗಡಿ :** ೧. "ಕರ್ಣಿಕಾ_ ತಾಳಪತ್ರಂ ೨ ಕಿವಿಗಿಟ್ಟುಕೊಳ್ಳುವ ವಾಲೆ, ಸರಪಣಿ, ಬುಗಡಿ ಮುಂತಾದದ್ದು" (ಸಿದ್ಧಾಂತಿ. ೧೯೯); ಹೊಸ್ಸೂವು ಗಾತ್ರಮುತ್ತಿನ ಬುಗಡಿ ಗರುವೆ ಕರ್ಣದಲಿಟ್ಟು . . . ಮುದ್ದು ಸುರಿವುತಲಿ (ಶ್ರೀಕೃಶಾ. ೧೧). **ಬುಗುಡೆ :** ೨. ಹುಣ್ಣಿಗೆ ಮದ್ದು : – ಅಡಿಕೆ, ಕಾಚು, ಈಶ್ವರಿ, ಬುಗುಡೆ ಬೇರು, ಅಕ್ಕಿಯ ರಸದಲ್ಲಿ ಮರ್ದಿಸಿ ಪೂಸುವುದು (ವೈಪ. ೦೭೦).

**ಬುಗುಡಿಅಂಚು, ಬುಗಡಿಯಂಚು**=ಬುಗುಡಿಯ ಆಕಾರದ ಚಿತ್ರ ಬರುವಂತೆ ನೆಯ್ದಿರುವ ಅಂಚು : ಪಾರೋತಿಗಾಗಿ ಬಿಳಿಯಂಚಿನ ಎರಡು ಪಾಲ್ಕಾಟು ಸೀರೆಗಳು, ಲಚ್ಚನಿಗೆ ಬುಗುಡಿ ಅಂಚಿನ ಬಚ್ಚಕಾನೆ ಇಷ್ಟನ್ನು ಕೊಂಡರು (ಮರಳು. ೦೯೮); ಆಕೆ ಬುಗಡಿಯಂಚಿನ ಸೀರೆ ಉಟ್ಟಿದ್ದಳು (ಅದೇ). [ದೇ.॥ ತಮಿ. ಪುಕಂಟಿ, ಪುಕಿಟಿ, ಪೂಟಿ, ಪೊಕಿಟ; ತುಳು. ಬುಗುಡಿ; ತೆಲು. ಬುಗಡ, ಬೊಗಡ./ ಮರಾ. ಬುಗಡೀ]

**ಬುಗುಡಿಗೆ** (ನಾ). ಒಂದು ಬಗೆಯ ಮರ : "ಶ್ರೋತ್ರಾಂಗೀ–ಬುಗುಡಿಗೆ" (೬೫೦. ೦೬೨). [<ಬುಗುಡಿ]

**ಬುಗುಡು** 'ಬುಗುಟ್ಟು₁' ನೋ.

**ಬುಗುಡೆ** 'ಬುಗುಡಿ' ನೋ.

**ಬುಗುರಿ** 'ಬವರಿ' ನೋ.

**ಬುಗುರಿಮೊಲೆ** 'ಬೊಗರಿಮೊಲೆ' ನೋ.

**ಬುಗ್ಗನೆ** (ಅ). ಒಂದು ಅನುಕರಣಾವ್ಯಯ; ಕೂಡಲೆ ; ಬೇಗನೆ: ಹೆಗ್ಗಡ್ಡದೊಳ್ಳಿಂದ ಪೆಟಲ ಮದ್ದಂ ಸುಡಲ್ಕಾಗಿ ಗಿಡಿಯಿಂದಳಿದ ಹೆಗ್ಗನಂತಂಗಜಂ ಬುಗ್ಗಿಯಾದಂ ಬುಗ್ಗನುರಿದು (ಮಾದೇಶೃ. ೦೨-೦೮).

[ಬುಗ್$_0$ + –ಅನೆ$_1$]

**ಬುಗ್ಗಿ** (ನಾ). ಬೂದಿ; ಭಸ್ಮ : ವೆಗ್ಗಳದ ಭಾಗ್ಯಗಳಿಗೇಲಿ ಪೋಪಾಗ ಬುಗ್ಗಿ [ಪಾಠಾಂ. ಗ್ಗೆ]ಯ ಹೊಯ್ಕೊಂಡು ಹೋದ್ಯಲ್ಲೊ ಪ್ರಾಣಿ (ತ್ರಿಶಂಕು. ೦-೬೨_೨); ಹೆಗ್ಗಡ್ಡದೊಳ್ಳಿಂದ ಪೆಟಲ ಮದ್ದಂ ಸುಡಲ್ಕಾಗಿ ಗಿಡಿಯಿಂದಳಿದ ಹೆಗ್ಗನಂತಂಗಜಂ ಬುಗ್ಗಿಯಾದಂ ಬುಗ್ಗನುರಿದು (ಮಾದೇಶೃ. ೦೨-೦೮). [ ದೇ.॥ ತೆಲು. ಕೋಲಾ. ಬುಗ್ಗಿ ; ಗದಬ. ಬುಗ್ಗ = ಭೂಮಿ ]

**ಬುಗ್ಗೆ** (ನಾ). ೧. ನೀರು ಉಕ್ಕುವಿಕೆ. ೨. ನೀರು ಉಕ್ಕುವ ಸ್ಥಳ: ಚಿಲುಮೆ ; ಒರತೆ : ನೆಲದೊಳಗಿಂದ ಹೊರಹುವ ನೀರಿನ ಬುಗ್ಗೆಯುಂಟೆಂದು ವ್ಯಕ್ತವಾಗುತ್ತದೆ (ಮಂಬಾಯ. ೬-೦೬೮) ; ನೀರಿಲ್ಲದ ಬಾಯಾರಿ ಪೈಲುಗಟ್ಟಲೆ ಮರಳುಗಾಡಿನಲ್ಲಿ ಓಡುವವನಿಗೆ ದೂರದಲ್ಲಿ ನೀರಿನ ಬುಗ್ಗೆಯನ್ನು ಕಂಡರೆ ಹೇಗಿರುತ್ತೆ ? (ಕೃತಾಕ. ೫೨): ಸೀಳು, ಒಡೆ, ಬಾಳ್ವಂಡೆಯಿಂ; ಬುಗ್ಗೆಯುಕ್ಕುವೊಲ್ ಮೂಡಿ ನಿಲ್ ಕಣ್ಮುಂದೆ, ಕಿಳ್ತೆಸೆದು ಒಲ್ಲಸದ ಈ ವೇಷವಂ (ಶ್ರೀರಾಹವ. ೨೯೯-೯೭).

[ ದೇ.॥ ತಮಿ. ಪುಕ್ಕೈ, ಪೊಯ್ಕೈ ; ತೆಲು. ಬುಗ್ಗ ]

**ಬುಚಡ, ಬುಚಡೆ** (ನಾ.) ಸ್ತ್ರೀಯರ ಕೇಶರಚನೆಯಲ್ಲಿ ಒಂದು ಪ್ರಕಾರ; ತಲೆಯ ಕೂದಲನ್ನು ಒಟ್ಟಿಗೆ ಸೇರಿಸಿ ಹಾಕಿರುವ ಗಂಟು : ಎಣೆಗಂಟು : ಆ ಬುಚಡ, ಜೈತಲ, ಸೀರೆ, ಸೆರಗು, ರಂಭೆ ಅಂತ ತಿಳಕೊಂಡಾಳ ನಮ್ಮವ್ವ ! (ಸಮಾಜ. ೨೭); ಅಡುಗೆಮನೆಯಲ್ಲಿ ಇನ್ನೂ ಅರದೆ ಇದ್ದ ತನ್ನ ಕೂದಲಿನ ಬುಚಡ ಕಟ್ಟುತ್ತ ಪತ್ನಲೆಯು ಕುಳಿತಿದ್ದಳು (ಅಪ್ಪುವ. ೦). **ಬುಚಡೆ :** ಅವಳು ತನ್ನ ನೀಲಾಳಕಗಳನ್ನು ಚೆನ್ನಾಗಿ ಬಾಚಿ, ಚಮತ್ಕಾರವಾಗಿ ಕಾಣುವಂಥ 'ಬುಚಡೆ' ಯನ್ನು ಕಟ್ಟಿದ್ದಳು (ತೋಳಮ. ೨೩೪). [ ←ಮರಾ. ಬುಚಡ. ಬುಚಾಡ ]

**ಬುಚಡೆ** 'ಬುಚಡ' ನೋ.

**ಬುಜಗೇಸ್ವರ** (ನಾ). ಸರ್ಪಗಳ ಒಡೆಯ ; ಭುಜಗೇಶ್ವರ : ಶ್ರೀ ಬುಜಗೇಸ್ವರದೇವರಿಗೆ ಯೆರಡು ನಂದಾದೀವಿಗೆ ಮೂಜು ಹೊತ್ತಿನ ಉಪಾರಕುಂ × × × ಗೆ × × ಭೂಮಿ (ಎಕ. IV (R). ಚಾಮುಂ. ೯೭-೯ ; 16ನೆಯ ಶತ). [ < ಸಂ. ಭುಜಗೇಶ್ವರ ]

**ಬುಜರೂಕ** (ನಾ). ತಿಳಿದವನು ; ಅನುಭವಿ : ಹಿರಿಯ : ನಮ್ಮಲ್ಲಿ ವೃದ್ಧ ರಹೀಮನಂಥ ' ಬುಜರೂಕ ' ರಾದ ಜನರು ಕೆಲಕೆಲವು ಪ್ರಸಂಗಗಳಲ್ಲಿ ತಮ್ಮ ಗಿಡಮೂಲಿಕೆಗಳ ಜ್ಞಾನದಿಂದ ಎಷ್ಟೋ ಜೀವಿಗಳನ್ನು ಉಳಿಸಿದ್ದು ಪ್ರಸಿದ್ಧವಿದೆ (ಶ್ರೀಮೂ. ೭೬).

[ ←ಮರಾ. ಬುಜರೂಕ್, ಬುಜರೂಗ್, ಬುಜುರುಕ್, ಬುಜರುಗ್; ಹಿಂ. ಬುಜುರ್ಗ್ = ಹಿರಿಯ, ಪೂರ್ವಿಕ ; ಪಾರ. ಬುಝುರ್ಗ್ ]

**ಬುಜ್ಜಣೆ** 'ಬುದ್ದಲಿ' ನೋ.

**ಬುಜ್ಜಣಿಗೆ** 'ಬುದ್ದಲಿಕೆ' ನೋ.

**ಬುಜ್ಜಯಿಸು, ಬುಜ್ಜವಿಸು** (ಕ್ರಿ). ಉಬ್ಬಿಸು : ಪುಸಲಾಯಿಸು : ತುಂಬುರಾದಿಗಳೆಡೆವೊಕ್ಕು ಇರ್ದರುಮಂ ಬೇಜಿ ಬೇಜಿ ನಿಲಿಸಿ ಶಿವಮಾರನಂ ಬುಜ್ಜಯಿಸಿ ಕೈಮುಗಿದು (ಶಂಪುರ. ೬-೧೩೭) ; ನಿನ್ನ ಸಡಿಲದ ತಕ್ಕೆ ಸಗ್ಗದ ಸುಖಕ್ಕೆ ಕೈಯನ್ನುತಂ ವಿಟನೊರ್ವನೆಸೆವ ರತಿಯೊಳ್ ಸತಿಯಂ ಬುಜ್ಜಯಿಸಿ ನೆರೆವುತಿರ್ದಂ (ಕುಶಲು. ೯-೫೦). **ಬುಜ್ಜವಿಸು :** ಬಜ್ಜವಿದು ತಾನೆಂದು ಬಸವಂ ಬುಜ್ಜವಿಸಿ [ಪಾಠಾಂ. ಬುಜ್ಜಯಿಸಿ, ಭುಜ್ಜವಿಸಿ]

ಪೇಳಲ್ಕೆ ರಾಯುಂ ಲಜ್ಜೆಯುಂ ನಾಚಿಕೆಯುಮುಳಿದಾಗಲಿ ಎನುತ ಬಂದು (ಚಕಪು. ೨೨-೩೮); ಬಾಳೆಮಿಾನ್ಗಣ್ಣಬಳೆ ಮುಳಿಯದಿರು ನೀನೆನುತ್ತಾಳ ಗೊಳುತುಂ ಚದುರನಂಗನೆಯು ಬುಜ್ಜವಿಸಿ ಮೇಳವಂ ಮಾಡುತಿರೆ (ಭಾಪಪಂ. ೬-೨೮). [←ತೆಲು. ಬುಜ್ಜಗಿಂಚು, ಬುಜ್ಜಿಗಿಂಚು]

**ಬುಜ್ಜವಿಸು** 'ಬಂಜ್ಜಯಿಸು' ನೋ.

**ಬುಟೆ** (ನಾ). ಎತ್ತಿನ ಗಾಡಿಗಳಿಗೆ ಹಾಕಿರುವ ಹಲಗೆ : ಯಾವ ಗಾಡಿಗ ತೋಳು ಇಲ್ಲ. ಯಾವುದರ ಬುಟೆವು ಮುರಿದುಹೋಗಿದೆ. . .ಎಂದು ಅದನ್ನೂ ಗಟ್ಟಿಸಾಗಿ ಕೂಡಿಸಿದನು (ಬೆಳ್ಳಾ. ೦೬೬). [← ಮರಾ. ಬುಟೀ]

**ಬುಟೇದಾರಿ** 'ಬೂಟಾದಾರಿ' ನೋ.

**ಬುಟ್ಟ** 'ಬೂಟಾ' ನೋ.

**ಬುಟ್ಟಲ** (ನಾ). ಬುಟ್ಟಿ ಮುಂತಾದುವುಗಳನ್ನು ಮಾಡುವವನು: ಬುಟ್ಟಲರು, ಅಂದರೆ ಬುಟ್ಟಿಗಳನ್ನು ಮಾಡುವವರು (ಕನಾಗ. ೨೨೨).
[ಬುಟ್ಟ (<ಪುಟ್ಟ$_1$) + – ಅಲ್$_2$ + – ಅ$_7$]

**ಬುಟ್ಟಾ** 'ಬೂಟಾ' ನೋ.

**ಬುಟ್ಟ** 'ಪುಟ್ಟ$_1$' ನೋ.

**ಬುಟ್ಟಗರಗೆಲೆ** (ನಾ). ಒಂದು ಬಗೆಯ ಸಸ್ಯ: ಸಣ್ಣುಡಿಪ್ಪೆ, ಬುಟ್ಟಗರಗೆಲೆ (ವೈ ಶಿಗ. ೪೦-೮೦೦). [ಬುಟ್ಟ$_?$+ಗರಗು$_1$ (<ಗರುಗ)+ಎಲೆ$_1$]

**ಬುಟ್ಟಯುಡಿಪ್ಪೆ** (ನಾ). ಒಂದು ಬಗೆಯ ಸಸ್ಯ: ಫಾಲ್ಸ, ತಡಸಲಿ, ಬುಟ್ಟಯುಡಿಪ್ಪೆ, ಜವಣ (ವೈ ಶಿಗ. ೪೦-೮೦೬). [ ? ]

**ಬುಟ್ಟೆದಾರ** 'ಬೂಟಾದಾರಿ' ನೋ.

**ಬುಟ್ಟೆದಾರಿ** 'ಬೂಟಾದಾರಿ' ನೋ.

**ಬುಟ್ಟೇದಾರಿ** 'ಬೂಟಾದಾರಿ' ನೋ.

**ಬುಡ** (ನಾ). ೧. ಮರದ ಕಾಂಡದ ಅಡಿಭಾಗ; ಬೊಡ್ಡೆ : ತೊಟ್ಟು ಬಿಟ್ಟು ಹಣ್ಣಿಂಗೆ ಮತ್ತಾ ಬುಡದಾಸೆಯೇಕೆ (ಸಕಪ. I. ೪೬೩-೮೬); ಅನಿಲಜನು. . .ಬಳಲಿ ಬೆವರುತ ಬಳಿಕ ಬಂದಾ ಮರದ ಬುಡವನು ಹಿಡಿದು ಕುಳ್ಳಿದನು (ತಂಕಶ. ೦೬-೦೩); ಸಿಡಿದು ಹಾಱಿದ ಹಸ್ತಮುಖಬೆಗೆ ಬುಡ [ಶಾತಾಂ. ಗಿಡು] ಸಹಿತ ಬಲುಮರ ಧರಾತಳಕುಡಿದು ಬಿದ್ದವು (ಕೂರಣಾ. ೧-೮೦-೦೪). ೨. ಅಡಿಭಾಗ; ತಳಭಾಗ; ಮೂಲ: ಸಕಲ ಸ್ಥಾವರ ಚರ ಘಟ ಬುಡಾದಿಗಳೆಲ್ಲಕ್ಕೆ ಪೃಥ್ವಿಯಿಂದವೇ ಜನನ (ಮೋಕ್ಷಪು. ೨೬೪-೩೯); ನನ್ನ ಬುಡಕ್ಕೆ ನಾನೇ ಕೊಡ್ಲಿಯನ್ನು ಹಾಕಿದಂತಾಯಿತು! (ದೇವಿಚ. ೩೯). ೩. ವಂಶ; ಮನೆತನ: ಬ್ರಾ ಭೂಮಿಯು ಸಿಂಗಾಪುರದ ಗಿರಿಭಟ್ಟರ ಬುಡದವರಿಗೆ ನಡದು ಬಂತು (ಪ್ರೈಆ. ೦೯೨೯, ೦೬-೦೦೬; 1402). ೪. ಹತ್ತಿರ; ಸಮೀಪ: ಒಡೆದು ಕೆಡಿಸಿದೆ ಪಾಪಿ ನೀನು ನಿನ್ನಯ ಸವತಿ ಬುಡದಿಯ್ನೈನೂರು ಸಂವತ್ಸರಂ ದಾಸಿಯಾಗೆಡೆಬಿಡದೆಯಿರುಯೆಂದು ಶಾಪವಂ ಕೊಟ್ಟ ನರುಣನು (ತುರಂಗ. ೩-೦೩).

**ಬುಡಕ್ಕೆ ನೀರು ತಿದ್ದು**=ಸಮೂಲ ನಾಶಮಾಡು: ಅವನು ಬುಡಕ್ಕೆ ನೀರು ತಿದ್ದಿದ (ಕೂಡ). **ಬುಡನಾಶ** = ಬೇರುಸಹಿತವಾಗಿ ಆಗುವ ನಾಶ ; ಸಂಪೂರ್ಣನಾಶ : ದುರ್ಯೋಧನನೊಬ್ಬನ ಅಕೃತ್ಯದಿಂದ ಕ್ಷತ್ರಿಯರು ಬುಡನಾಶವನ್ನೈದುತಲಿಧಾರೆ (ಕೃಪಾಟೀ. ೦೬೦). **ಬುಡ ಭದ್ರವಿರು**=ಗಟ್ಟಿಯಾದ ತಳಹದಿ ಇರು.–ಆಧಾರವಿರು : ಭಾರತದ ಅಸಂಖ್ಯಾತ ಯುವತರಂತೆ ನನಗೆ ಬುಡ ಭದ್ರವಿಲ್ಲ (ಹೊಸತ್ತ. ೨೪೮). **ಬುಡಮುಟ್ಟ, ಬುಡಮುಟ್ಟ**=೧. ತಳದ ವರೆಗೂ; ಕೆಳಭಾಗದ ವರೆಗೂ: ಕಾಮುನುಯೆರಗಿ ಒಡನೆಯೆರ್ದೆಯ ಕ್ರೂರದಾರೆಯು ಕಠಾರಿಯುಂ ಬುಡ ಮುಟ್ಟ ಶಿವಿಯಲು (ಪಪಮೋ. ೦೨-೮೦). ೨. ಸಂಪೂರ್ಣವಾಗಿ: ಬಡ ತನದ ಬುಡಮುಟ್ಟ ಕೀಳ ಬನ್ನಿ (ಕೋಗಿರಿ. ೨೮-೨); ದೇವಾಲಯಗಳನ್ನೆಲ್ಲಾ ಬುಡಮುಟ್ಟ ಕಿತ್ತೊಗೆಯಬೇಕು (ದೌಂಕ. ೩೪). **ಬುಡ ಮೇಲಾಗು**= ಅಡಿ ಮೇಲಾಗು ; ತಲೆ ಕೆಳಗಾಗು : ಭುಜದ ಸೋಂಕಿಗೆ ಭೂಭೂಜ ವ್ರಜವು ಬುಡ ಮೇಲಾದವು (ಕೂರಣಾ. ೩-೮-೪೪); ಮನೆಯೇ ಬುಡ ಮೇಲಾದಂತೆ ಅವಳಿಗೆ ಭಾಸವಾಯಿತು (ಹಳ್ಳಿಹಾ. ೦೦೬). **ಬುಡ ಮೇಲು**= ಅಡಿಮೇಲು ; ತಲೆಕೆಳಗು : ಕೆಟ್ಟಿಲ್ಲ ಧರ್ಮ ಹುಟ್ಟಿಲ್ಲ ಧರ್ಮಂತ ಬುದಿಲ್ಲ ದೇವರೂ ಇರಲಿ ಬುಡ ಮೇಲು! (ಅರಳು. ೩೪೪-೦೨). **ಬುಡಮೇಲು ಮಾಡು** = ಅಡಿಮೇಲು ಮಾಡು ; ತಲೆಕೆಳಗು ಮಾಡು : ದಾನವರು ಆಧುನಿಕರಾಜಕೀಯತಂತ್ರದಂತೆ ಅವರ ನಾಟಕಪ್ರಯೋಗಗಳನ್ನು ಬುಡಮೇಲು ಮಾಡಿದರು (ಶ್ರಬಂಧ. ೦೩); ಲಾರ್ಡ್ ಕೇನ್ಸ್‌ರ ಪ್ರತಿಪಾದನೆ . . . ವೈಯಕ್ತಿಕಸ್ವಾತಂತ್ರ್ಯತತ್ತ್ವವನ್ನು ಬುಡಮೇಲು ಮಾಡಿತು (ಅವಿಕೋ. I. ೯೦೪).

[ದೇ. ॥ ತುಳು. ಬುಡ, ಬುಡೊ; ತೆಲು. ಬುಡ. / ಸಂ. ಬುಧ್ನ]

**ಬುಡಕಟ್ಟು** (ನಾ). ೧. ಸಸ್ಯಗಳ ಬುಡದ ಸುತ್ತಲೂ ಹಾಕುವ ಮಣ್ಣಿನ ರಾಶಿ : ಜೋಶಿಯವರು, ತೆಂಗಿನ ಮರದ ಬುಡಕಟ್ಟನ್ನು ಸರಿ ಮಾಡಲು ಕೈಯಲ್ಲಿ ಹಿಡಿದ ಕುಠಾರಿಯ ಕಾವಿನ ಮೇಲೆ ತಮ್ಮ ಸೊಂಟವನ್ನು ಆನಿಸಿ . . . ಕೇಳಿದರು (ಮೂರುಜಾ. ೩೦). ೨. ಮೂಲ; ಉತ್ಪತ್ತಿಸ್ಥಾನ: ತಮಿಳು ಮಾತ್ರ ಮೂಲತಃ, ಅದೇ ಬುಡಕಟ್ಟಿನದಾದರೂ ತನ್ನ ವ್ಯಾಕರಣವನ್ನು ಪ್ರತ್ಯೇಕವಾಗಿ ನಿರ್ಮಿಸಿಕೊಂಡಂತೆ ವರ್ಣಮಾಲೆಯನ್ನೂ ಪ್ರತ್ಯೇಕವಾಗಿಯೇ ನಿರ್ಮಿಸಿಕೊಂಡಿತು (ಭಾಶಾಶಾ. ೦೦೨). ೩. ಅಡಿಪಾಯ ; ತಳಹದಿ ; ಬುನಾದಿ : ಇಂಥ ವ್ಯಕ್ತಿಗಳು, ಇಂಥ ಮನೆತನಗಳು ಹೆಚ್ಚು ಹೆಚ್ಚು ಆದಂತೆ ಸಮಾಜದ ಬುಡಕಟ್ಟು ಭದ್ರವಾಗುತ್ತದೆ (ಕಂಜಕಂ. ೮ ಮುನ್ನುಡಿ); ನಮ್ಮ ಸಮಾಜದ ಬುಡಕಟ್ಟು ಅದಿರುತ್ತಿರುವುದರಿಂದ ಆದರ ಮೇಲೆ ನಾವು ನಿಲ್ಲಿಸಬೇಕೆಂದಿರುವ ಸ್ವರಾಜ್ಯಮಂದಿರವು ಸುಸ್ಥಿರವಾಗಿ ಎಂದೂ ತಾಳಿ ಬಾಳಲಾರದು (ಹುಕ್ಷಕ್ರ. ೦೩). ೪. ವಂಶ; ಕುಲ; ಮನೆತನ : ಈತನು ಅರೇಬಿಯದ ಕುರಾಯಿಷ್ ಬುಡಕಟ್ಟಿಗೆ ಸೇರಿದವನು(ಇಸ್ಲಾಂಸಂ. ೦); ಇದರ ಜೊತೆಗೆ ನಾನಾ ಬುಡಕಟ್ಟಿನ ಜನರ ಸಂಪ್ರದಾಯಗಳೂ ದೇಶಾಚಾರಗಳೂ ಸೇರಿಕೊಂಡುವು (ಖಂಕಮ. ೪೩೮) ; ಒಂದು ದೇಶದಲ್ಲಿ ಬೇರೆ ಬೇರೆ ಬುಡಕಟ್ಟುಗಳ ಜನರು ಒಟ್ಟುಗೂಡುವುದರಿಂದ . . . ರಾಷ್ಟ್ರಶೀಲವು ಒಟ್ಟಿನ ಮೇಲೆ ಮಾರ್ಪಡುತ್ತದೆ (ಶ್ರಿದಾಶಿ. ೦೩). [ಬುಡ + ಕಟ್ಟು$_2$]

**ಬುಡಕ್ಕನೆ** (ಅ). ಒಂದು ಅನುಕರಣಾವ್ಯಯ : ಆ ಭಾಗದಲ್ಲಿ ಒಳಗಡೆ ನೆಲವು ಮೃದುವಾಗಿರುವುದೆಂದು . . . ಬುಡಕ್ಕನೆ ಅಲ್ಲಿ ಧುಮುಕಿದನು (ಕಾಡರುಹ. ೬೦). [ಬುಡಕ್$_0$ + – ಅನೆ$_1$]

**ಬುಡಬುಡಕೆ** ಬುಡುಬುಡಿಕೆ' ನೋ.

**ಬುಡಬುಡಿಕೆ** 'ಬುಡುಬುಡಿಕೆ' ನೋ.

**ಬುಡಮೆ** 'ಬುಡುಮೆ' ನೋ.

**ಬುಡಪಳತಿ** (ನಾ). ಅಳಿಯಸಂತಾನದ ನಿಯಮವನ್ನು ಪಾಲಿಸುತ್ತಿರುವ ವಿಧವೆ: (ಕಸಂಗ್ರಾ. ೦೬೬).

[?./ತುಳು. ಬುಡೆದಿ, ಬುಡೆತ್ತಿ, ಬೊಡೆದಿ, ಬೊಡೆತ್ತಿ=ಹೆಂಡತಿ ; ಬುಡದಾರೆ = ವಿಧವೆಗೆ ಮಾಡುವ ಮರುಮದುವೆ, ಮರುಮದುವೆಯಾದವಳು]

**ಬುಡಿಗೆ** 'ಪುಡಿಕೆ' ನೋ.

**ಬುಡು** (ನಾ). ಒಂದು ಅನುಕರಣಾ ಶಬ್ದ: ಬಲಗೈಯ ಹತ್ತಿರ ಆಗಾಗ್ಗೆ "ಬುಡು, ಬುಡು" ಎಂದು ಬಾರಿಸುವ ಚಿಕ್ಕ 'ಡಮರುವಾದ್ಯ' ಟೊಂಕಕ್ಕೆ ನೆ ತಾಡುತ್ತಿತ್ತು (ಹಂಸ. ೩).

ಬುಡುಬುಡು (ದ್ವಿರುಕ್ತಿ) : ಮರುದಿನ ಬುಡುಬುಡಿಗನೊಬ್ಬ 'ಬುಡುಬುಡು' ಎಂದು ತನ್ನ ದುಡಿಯನ್ನು ನುಡಿಸುತ್ತ ಸುಂದರಪುರದಲ್ಲಿ ಕಾಣಿಸಿಕೊಂಡನು (ಕರ್ಣಬಿ. ೬೦).

**ಬುಡುಕೆ** ‘ ಪ್ರಡಿಕೆ ’ ನೋ.

**ಬುಡುಜಾಗನಗಡ್ಡೆ** (ನಾ). ಔಷಧಕ್ಕಾಗಿ ಉಪಯೋಗಿಸುವ ಒಂದು ಬಗೆಯ ಗಡ್ಡೆ ಮತ್ತು ಭೂಮಿಯಿಂದ ಸ್ವಲ್ಪ ಮಾತ್ರವೇ ಮೇಲಿದ್ದು ಸದಾ ಹೂವು ಬಿಡುವ ಅದರ ಬಳ್ಳಿ: (ಕ).
[< ಬುಡ$_2$ + < ಜಾಗಗೆಡ್ಡೆ]

**ಬುಡುಬುಡಿಕ** (ನಾ). ಬುಡುಬುಡಿಕೆಯನ್ನು ಬಾರಿಸುವವನು : ಈ ವಿಚಿತ್ರವೇಷದ ಆ ವ್ಯಕ್ತಿ ಬುಡುಬುಡಿಕನೆಂಬುದನ್ನು ನಮ್ಮ ವಾಚಕರಿಗೆ ಬಿಚ್ಚಿಹೇಳುವ ಅವಶ್ಯಕತೆಯಿಲ್ಲ (ಹಂಸ. ೪). ‘ ಬುಡುಬುಡಿಗ ’ ಪರಾ.
[ಬುಡುಬುಡಿಕೆ + — ಅ$_7$]

**ಬುಡುಬುಡಿಕೆ,** ಬುಡಬುಡಕೆ, ಬುಡಬುಡಿಕೆ, ಬುಡುಬುಡುಕೆ (ನಾ). ೧. ಡಮರುಗದಂತಹ ಒಂದು ಬಗೆಯ ಚಿಕ್ಕ ವಾದ್ಯ : ‘ ಜನತೆ ಜನತಾ ’ ಎಂದು ಬುಡುಬುಡಿಕೆ ಬಾರಿಸುತ್ತ ದೇಶದ ಭವಿಷ್ಯವನು ಸಾರಬಲ್ಲ (ಪರಿಮು. ೩೮-೧೧) : ಗ್ರಾಮೀಣರಿಗೆ ಬುಡುಬುಡಿಕೆಯವನು ನುಡಿಯುವ ಶಕುನದ ಬಗ್ಗೆ ಅಪಾರವಾದ ನಂಬಿಕೆ (ಕಜಕ. ೧೩೧). ೨. ಸುಳ್ಳು : ಅಸತ್ಯ : (ಕ). ೩. (ಆಲಂ) ಸತ್ವವಿಲ್ಲದುದು ; ಚೈತನ್ಯರಹಿತವಾದುದು ; ಹುರುಳಿಲ್ಲದುದು : ಬರಿಯ ಬುಡುಬುಡಿಕೆಯಂಥ ಯಶಸ್ಸನ್ನು ಕಟ್ಟಿಕೊಂಡು ಏನು ಮಾಡಬೇಕು (ಬಂಕಿಮ. ೧೦೨). **ಬುಡಬುಡಕೆ :** (ಕ). **ಬುಡಬುಡಿಕೆ :** ೧. ಡಮರುಃ, ಮಡ್ಡುಃ, ಡಿಂಡಿಮಃ, ಝರ್ಝರಃ, ಮರ್ದಳಃ, ಪಣವಃ—೬ ವಾದ್ಯಪ್ರಭೇದಾಃ—ಈ ೬ ಶಬ್ದಗಳೂ ಕ್ರಮವಾಗಿ ಬುಡಬುಡಿಕೆ, ಡಕ್ಕೆ, ಡಿಮುಕಿ, ಝಾಯಿ, ಮದ್ದಳೆ ಗೋಮುಖಾದಿ ವಾದ್ಯಗಳೂ ಉಂಟು (ಸಿದ್ಧಾಂತ. ೫೯) : ಬುಡಬುಡಿಕೆ—ಸಣ್ಣ ಡಮರು (ಪಾಪಕೋ. ೨೩). ೩. ಕೀರ್ತಿ—ಅಪಕೀರ್ತಿಗಳು ನನಗೆ ಬುಡಬುಡಿಕೆಯಂತೆ ಎಂದೆನ್ನಿಸುತ್ತದೆ (ಸ್ತ್ರೀ. ೪೪೪). **ಬುಡುಬುಡುಕೆ :** ೪. ಒಂದೇಸಮನೆ ಮಾತನಾಡುವಿಕೆ ; ಗಳಹುವಿಕೆ : ತಂಬೂರಿ ಇಲ್ಲದೆ ಹೋದರೆ ನನ್ನ ಪೀಕಲಾಟದ ಬುಡುಬುಡುಕೆ ಹೇಗೆ ನಡೆಯಬೇಕು ? (ಕೃಪಾಕ. ೧೭). [←ತೆಲು. ಬುಡುಬುಡುಕ್ಕ, ಡುಬುಡಕ್ಕ]

**ಬುಡುಬುಡಿಗ** (ನಾ). = ಬುಡುಬುಡಿಕ : ಮರುದಿನ ಬುಡುಬುಡಿಗನೊಬ್ಬ ‘ಬುಡುಬುಡು’ ಎಂದು ತನ್ನ ದುಡಿಯನ್ನು ನುಡಿಸುತ್ತ ಸುಂದರಪುರದಲ್ಲಿ ಕಾಣಿಸಿಕೊಂಡನು (ಕರ್ಣಾ. ೮೧). [< ಬುಡುಬುಡಿಕ]

**ಬುಡುಬುಡಿಸು** (ಕ್ರಿ). ಬುಳುಬುಳು ಎಂಬ ಶಬ್ದ ಮಾಡು : ಎಜಗಿದಶನಿಘಾತಮುಷ್ಟಿಯ ಬಿಜಬಿನಲಿ ಬುಡುಬುಡಿಸಿ ನೆತ್ತರಿನೆಜತೆ ಹಾಯ್ದುದು ವದನದಲಿ ನಾಸಿಕದ ನಾಳದಲಿ (ಕೊರಾ. ೫-೫-೩೪) : ಬುಡುಬುಡು [ಡಿ] ಪೇಜಿನಿಂದಮರೆಗರ್ಚಿದ ನಾಲಗೆ ಬಿಟ್ಟ ದಿಟ್ಟಿಗಳ ನಡುಗುವ ಮೆಯ್ . . . ಕಡೆವಾಯುಲೋಳೆವೆರಸುಬ್ಬಸದಿಂದೊಳಜುತ್ತೆ ಜೀವಮಂ ಬಿಡುವ ಮಹಾಮೃಗಂ ವರುಣಮಂ ಪಿಡಿವಿತ್ತುದು ತದ್ವನಾಂತದೊಳ್ (ಕೃಪೂ. ೨೭-೬೫) ; ನಾಸಿಕದಲ್ಲಿ ಬುಡುಬುಡಿಸಿದುದು ಶೋಣಿತ ಚಿಮ್ಮಿ ಭೂತಳಕೆ (ಕಂಬಕ. ೨೨.೫೦). ‘ಬುದುಬುದಿಸು’ ಪರಾ.
[< ಬುಡು + —ಇಸು$_3$]

**ಬುಡುಬುಡುಕೆ** ‘ಬುಡುಬುಡಿಕೆ’ ನೋ.

**ಬುಡುಮೆ,** ಬುಡಮೆ (ನಾ). ಸೌತೆಯ ಜಾತಿಗೆ ಸೇರಿದ ಒಂದು ಬಗೆಯ ಬಳ್ಳಿ ಮತ್ತು ಅದರ ಕಾಯಿ : ಕೆಕ್ಕರಿಕೆ ; ಹಾಲ್ಮೆಕ್ಕೆ : “ಚಿತ್ರಾ, ಗವಾಕ್ಷೀ, ಗೋತುಂಬಾ—೩ ಹಮ್ಮೆಕ್ಕೆ ಹೆಸರು. ಆಂಧ್ರರೀ ಶಬ್ದಗಳಿಗೆ ಪಿಲ್ಲಪಾಪರಕಾಯೆಂತಲೂ ಬುಡುಮೆಕಾಯಿಯೆಂತಲೂ ಹೇಳುವರು” (ಸಿದ್ಧಾಂತ. ೦೪೮) ; ಬದನೆಯ ಹೋಳಿಯ, ಬುಡುಮೆಯ ಪಲ್ಯ, ಸಾಮೆಯಕ್ಕಿಯನ್ನ, ನವಣೆಯ ಪಾಯಸ : ಉಂಡರು ಏನ ? ಅರಸುತನದ ಕನ್ನ (ರಾಮನ. ೨೫-೫). **ಬುಡಮೆ :** ಸೌತೆಕಾಯಿ. ಬುಡಮೆ ಕಾಯಿ (ವ್ಯಶಿ. ೨೬-೪೮೮) : ಬುಡಮೆಕಾಯಿ, ಹಾಲ್ಮೆಕ್ಕೆಬಳ್ಳಿ (ವ್ಯಶಿ. ೨೬-೪೮೯). [←ತೆಲು. ಬುಡಮು, ಬುಡ್ಡುಮು]

**ಬುಡ್ಡಗ** (ನಾ). ಒಂದು ಕ್ಷುದ್ರದೇವತೆಯ ಹೆಸರು : ಎಲ್ಲರು ದಾಟುವ ಹೊಸ್ತಲು ಬುಡ್ಡಗನು ಕಲ್ಲು ಮೂರರಿಂದ ತೋಟದ ಹೆಬ್ಬಯ್ಯಾ . . . ಎಲ್ಲ ನಾನಾಕದಾ ಕಳ್ಳದೇವತೆಗಳ ನಿಲ್ಲದೆ ಒಲಿಸಿದರು (ಬಕಾಸು. ೫೮-೨).
[ಬುಡ್ಡ ? + —ಗ$_3$]

ಬುಡ್ಡಿ ‘ಬುರುಡೆ’ ನೋ.

**ಬುಡ್ಡೆ** (ನಾ). ಒಂದು ಬಗೆಯ ಗಿಡ: “ಕರಿಬೀಜದ ಬುಡ್ಡೇಗಿಡ” (ಸಸ್ಯ. ೪೦). ‘ಕಾಡುಬುಡ್ಡೆ’ ಪರಾ. [←ತೆಲು. ಬೊಡ್ಡ]

**ಬುಡ್ಡೆಜಾಲಿ** (ನಾ). ಒಂದು ಬಗೆಯ ಜಾಲಿಗಿಡ : ಬುಡ್ಡೆಜಾಲಿ, ಕೊಡೆಮುಳ್ಳುಜಾಲಿ, ಹೊಡೆಜಾಲಿ (ವ್ಯಶಿ. ೨-೧೮).
[ಬುಡ್ಡೆ + ಜಾಲಿ$_1$./ ತೆಲು. ಬುಡಜಾಲ]

**ಬುತ್ತಿ** (ನಾ). ೧. ಪ್ರಯಾಣಕಾಲಕ್ಕಾಗಿ ಕಟ್ಟಿ ಸಿದ್ಧಪಡಿಸಿದ ಮೊಸರನ್ನ, ರೊಟ್ಟಿ, ಕಲಸನ್ನ ಮೊದಲಾದ ಆಹಾರ : ಪಾಥೇಯ : ತಾಂ ಜರೆಯ ಗೊತ್ತು . . . ಜೀವದ ಸಜೀವನೆ ಜವನೆಂಜಲಿಸಿದ ಬುತ್ತಿ ತನುವೆನಿಪ್ಪುದು ಪುಸಿಯೇ (ಶಂಪ್ರಶ. ೦೦-೦೦೦); ಬಿಡದೆ ಬುತ್ತಿಯನೊಂದು ಕೈಯಲಿ ಹಿಡಿದು ಬಂದನು ದೈತ್ಯನಲ್ಲಿಗೆ ಭೀಮ ಬೇಗದಲಿ (ಸಂಭಶ. ೨೩-೬೬); ಬುತ್ತಿಯನ್ನವನಾರೋಗಿಸಿಯೂ ತೊಜೆಯೊತ್ತಿನ ಬಸಕೆ ನಡೆದರು (ಭರತ. ೬೩-೭೩) : ನಾಯಿ ತಲೆ ಮೇಲಣ ಬುತ್ತಿಯ ಹಾಗೆ (ಗಾದೆ). ೨. ಕೂಡಿಟ್ಟುದು ; ಸಂಚಿತವಾದುದು ; ಸಂಗ್ರಹ : ಕೊಟ್ಟದ್ದು ಕಟ್ಟಿತೆನಬೇಡ ಮುಂದಕ್ಕೆ ಕಟ್ಟಿಹುದು ಬುತ್ತಿ (ಸರ್ವಜ್ಞ. ೬೦೭) ; ಸಗ್ಗದವರಿಗನೇಕ ಪುಣ್ಯದ ಬುತ್ತಿ ತೀರಲು ನೂಕುವರು ಭೂತಳಕೆ (ಅರ್ಜ್ಞವಿ. ೨೦-೨೨). ೩. ಚಿಣ್ಣೆ ಕೋಲಾಟ, ಚೆಂಡಾಟ ಮೊದಲಾದ ಆಟಗಳಲ್ಲಿ ಹಾರಿ ಬಂದ ಚಿಣ್ಣೆ, ಚೆಂಡು ಮೊದಲಾದುವನ್ನು ಹಿಡಿಯುವುದು: ಆಯ್ಕಾಳನಿಗೆ ಬುತ್ತಿ ಕೊಟ್ಟು ಆಟವನ್ನು ಕಳೆದುಕೊಂಡನು (ಕಳಸು. ೧೮). ‘ಬುತ್ತಿ ಹಿಡಿ’ ಪರಾ. ೪. (ಆಲಂ) ಸ್ಮರಣೆ ; ನೆನಪು : ಬಾಳಿನ ಅನುಭವದ ಬುತ್ತಿಯನ್ನು ಅವನ ಮನಸ್ಸು ಬಿಚ್ಚಿ ನೋಡುತ್ತಿದೆ (ಮಗಮಾ. ೯೦).

**ಬುತ್ತಿಗಂಟು** = ೧. ಪರವೂರಿಗೆ ಪ್ರಯಾಣ ಹೊರಟಾಗ ಕಟ್ಟಿಕೊಂಡು ಹೋಗುವ ಆಹಾರದ ಗಂಟು,—ಕಟ್ಟು. ೨. (ಆಲಂ) ಅನುಭವಿಸಬೇಕಾದುದು : ಎಷ್ಟು ಜನರ ವಿರೋಧವನ್ನು ಬುತ್ತಿಗಂಟಾಗಿ ಕಟ್ಟಿಕೊಳ್ಳಬೇಕು (ಜನಪಾ. ೩೦). **ಬುತ್ತಿಯ ಚಿಕ್ಕ** = ಅನ್ನದ ಚೀಲ : ಬುತ್ತಿಯ ಚಿಕ್ಕವನ್ನೂ ಸೋರೆಬುರುಡೆಯನ್ನೂ ತಕೊಂಡು ಅಡವಿಯಲ್ಲಿ ಹಸುಗಳನ್ನು ಕಾಯುತಲಿದ್ದರು (ಕೃಬಾಕ. ೭೯). **ಬುತ್ತಿಯನ್ನು ಕಟ್ಟು, ಬುತ್ತಿಕಟ್ಟು** = ೧. ಪ್ರಯಾಣಕ್ಕೆ ಸಿದ್ಧವಾಗು : ಹಾಗಾದರಿನ್ನೇನು ? ಬುತ್ತಿಯನ್ನು ಕಟ್ಟು ; ಈಗ ನಿನಗೆ ತಪೋವನವೂ ಉಪವನವಾಯಿತಂದೂ ಹಿಸುಪೆನು (ಶಾಕುಂತ. ೨೬-೫). ೨. ಪ್ರಯಾಣದಲ್ಲಿ ಬೇಕಾಗುವ ಆಹಾರವನ್ನು ಕಟ್ಟಿಕೊಳ್ಳು : ಅಮ್ಮಾ, ನಾನು ಊರಿಗೆ ಹೋಗಬೇಕಾಗಿದೆ ಬುತ್ತಿಕಟ್ಟಿ ಕೊಡು (ರೂಢಿ). [< ಸಂ. ಭುಕ್ತಿ ]

**ಬುತ್ತಿಗೊಡು** (ಕ್ರಿ). ಎಡೆ ಮಾಡು ; ನೈವೇದ್ಯ ಮಾಡು : ಪೊಸತಿಲ ಮೇಲಸೊಕ್ಕಿಜದು ವಿಸಸಲ ತುಮ್ಮಿಲನಟ್ಟು ಬಾಗಿಲರ್ಚಿಸಿ ಜಿಗುರಿಕ್ಕಿ ಚಟ್ಟಿಜಿದು ಕಂಬದೊಳಿಂಬಿನೆ ಬುತ್ತಿಗೊಟ್ಟು ಪೂಜಿಸಿ (ಶಬರ. ೪೭೫).
[ ಬುತ್ತಿ + ಕೊಡು$_1$ ]

**ಬುತ್ತಿಚಿಗುರು** (ನಾ). (ಮೈಸೂರಿನಲ್ಲಿ ಸಿಗುವ) ತುಂಬಾ ರುಚಿಕರವಾದ ಚಿಗುರು ವೀಳೆಯದೆಲೆ : ಮೈಸೂರಿನಲ್ಲಿ ಬುತ್ತಿಚಿಗುರು ತುಂಬಾ ಪ್ರಸಿದ್ಧಿ (ರೂಢಿ). [ ಬುತ್ತಿ ? + ಚಿಗುರು$_2$ (< ಚಿಗುರ್$_2$)]

**ಬುತ್ತಿಯಿಡು** (ಕ್ರಿ). = ಬುತ್ತಿಗೊಡು : ತಲಪಜ್ಞಾಘಾತದಿಂ ಮರ್ದಿಸಿ

ರಜಕನನಾತ್ಮಪ್ರವೇಶಕ್ಕಿದೇ ಮಂಗಲಮೆಂಬಂತಾ ಪುರದ್ವಾರದೊಳವನಡಗಿ ಬುತ್ತಿಯಿಟ್ಟಿಲ್ಲಿನಿಂ ಪೂವಲಿಗೆಯ್ದು . . . ಪೊಕ್ಕಂ ದನುಜನ ಪೊಟಲಂ ಸಾಗ್ರಜನ್ಮಂ ಮುಕುಂದಂ (ಜಗಪ. ೬-೦೦). [ಬುತ್ತಿ + ಇಡು$_1$]

**ಬುತ್ತಿರೊಟ್ಟಿ** (ನಾ). ೧. ಪ್ರಯಾಣಕಾಲಕ್ಕೆಂದು ಕಟ್ಟಿದ ರೊಟ್ಟಿ : ಹಳ್ಳಿ ದಿಳ್ಳಿಯವರೆಗೆ ನೂರುದಾರಿಯು ಸವೆದು ಎಲ್ಲರಿಗು ಹಂಚೋಣ ಬುತ್ತಿ–ರೊಟ್ಟಿ (ಕಿಂಮು. ೦೯-೦೮) ; ನಿಮ್ಮಂತಹ ವೀರರನ್ನು ಬುತ್ತಿ ರೊಟ್ಟಿಯನ್ನು ತಿನ್ನುವುದಕ್ಕೆ ಬಿಡದೆ ಕಟ್ಟಿಹಾಕಿದರೆ (ದೇಶೀಬಾ. ೬೨). ೨. (ಉಕ) ಸುಮಾರು ಐದು ಅಥವಾ ಏಳನೆಯ ತಿಂಗಳಿನಲ್ಲಿ ಗರ್ಭಿಣಿಸ್ತ್ರೀಗೆ ನಡೆಸುವ ಒಂದು ಉತ್ಸವಸಮಾರಂಭ ಮತ್ತು ಅಂದು ಊರ ಜನರಿಗೆಲ್ಲ ಊಟಕ್ಕೆ ಏರ್ಪಡಿಸುವ ಒಂದು ವಿಧಿ: ಆದರ ಜೊತೆಗೇನೇ ಚೊಚ್ಚಿಲ ಬಸುರಿಗೆ ಮಾಡಬೇಕಾದ ಬುತ್ತಿರೊಟ್ಟಿಯ ಚಿಂತೆ ಅವನಿಗೆ ಹತ್ತಿತು (ಅಚೋಳ. ೬೮).

[ಬುತ್ತಿ + ರೊಟ್ಟಿ]

**ಬುತ್ತಿಹಿಡಿ** (ಕ್ರಿ). ಚಿಣ್ಣಿಕೋಲಾಟ, ಚೆಂಡಾಟ ಮುಂತಾದ ಆಟವಲ್ಲಿ ತೂರಿ ಬಂದ ಚಿಣ್ಣಿ, ಚೆಂಡು ಮೊದಲಾದುವುಗಳನ್ನು ಹಿಡಿ : ಅಶೋಕನ ಗುಂಪಿನ ರಂಗನು ಗೆರೆಯ ಹತ್ತಿರ ನಿಂತು ಚೆಂಡು ಎಸೆದನು . . . ಶಂಕರನು ಬುತ್ತಿಹಿಡಿದನು (ಕಶಕ. ೪-೪೮); ಮೂರನೇ ಏಟಿನಲ್ಲಿ ರಾಮಚಂದ್ರ ಬುತ್ತಿಹಿಡಿದನು (ಳಳಹು. ೦೮).

[ಬುತ್ತಿ + ಹಿಡಿ$_1$ (< ಪಿಡಿ$_1$)]

**ಬುದಿಂಗನೆ** (ಅ). ಒಂದು ಅನುಕರಣಾವ್ಯಯ : ಕಾಳತಲ್ಲಿಂದ ಅವನು ಬುದಿಂಗನೆ ಎದ್ದು ನಿಂತ (ಶಶಕ. ೦೫) ; ಈಕೆ ಹಾದಿ ನೋಡಿದಳು. ಬುದಿಂಗನೆದ್ದು ಬಾಗಲಿಗೆ ಬಂದಳು (ಶಿಣಕ. ೩೯). [? + –ಅನೆ$_1$]

**ಬುದಿಲ್** (ನಾ). ಒಂದು ಅನುಕರಣ ಶಬ್ದ : 'ಬುದಿಲೆನ್' ಪರಾ.

**ಬುದಿಲನೆ** (ಅ). ಒಂದು ಅನುಕರಣಾವ್ಯಯ : ಬುದಿಲನೊಗೆವಾನಂದ ಜಲವರಿವ ಜಲಕಣ್ಣೊಳೊದಗೆ . . . ಶ್ರೀಪದದ ಕಿಂಕರಭಾವದಿಂದ ಕಿನ್ನರಿಯು ಬ್ರಹ್ಮಯ್ಯ ನುತಿಸುತಿರ್ದನು (ಹುಕೀಪು. ೨೯-೬). [ಬುದಿಲ್ + –ಅನೆ$_1$]

**ಬುದಿಲೆನ್** (ಕ್ರಿ). ಬುದಿಲ್ ಎಂದು ಶಬ್ದಮಾಡು : ಬುದಿಲೆನೆ ತೋಜೆಯುಂ ಪಾಯ್ದು ಮಾತಂಗ ಕಳಭಮಂ ಪಿಡಿದು . . . ತನ್ನ ಮಠಕ್ಕೆ ತಂದು (ಧರ್ಮಾಪು. ೦೨-೦೨೮) ; ಸಜ್ಜೆಂಬ ಘರಿಲೆಂಬ ಗಿಟಿಲೆಂಬ ಬುದಿ [ಪಾಠಾಂ. ಘುರಿ]ಲೆಂಬ ಭೋರೆಂಬ ಕೂರಸಿಗಳುರವಣೆಯ ದನಿಯುಡುಸುತಂ ಪುಟ್ಟೆ (ಇಹರ. ದೇ. ೪೦-೨೩).

ಬುದಿಲ್ಬುದಿಲೆನ್ (ದ್ವಿರುಕ್ತಿ) : ದೊಪ್ಪುಧಡಲೆಂಬ ಬುದಿಲ್‌ಬುದಿ ಲೆಂಬ ಸಂಭ್ರಮಂ ನೆರೆದು . . . ನೆಟಿಲ್ ಪಟಿಲ್ ಗರಿಗರಿಲೆಂಬ ನಿಷ್ಠುರ ರವಂ ದಿಗೆ ತಳ್ತುಜಿದತ್ತು ಯುದ್ಧದೊಳ್ (ಗದಾ. ೬-೬೫).

[ಬುದಿಲ್ + ಎನ್$_1$]

**ಬುದುಬುದ** (ನಾ). ನೀರ ಮೇಲಿನ ಗುಳ್ಳೆ ; ಬುದ್ಬುದ : ಬಸವನ ನುಡಿ ಶಿಲಾಶಾಸನವು ತಪ್ಪದ ನುಡಿಗಳಲ್ಲದೆ ಮಿಕ್ಕಿನಂತೆ ಕೆಡುತ್ತ ಹುಟ್ಟುತಿಹ ಕಡಲ ತೆರೆಗಳೆ ಬುದುಬುದು[ಪಾಠಾಂ. ಬುದ್ಬುದಂ]ಗಳೆ . . . ಗಾಳಿಯ ಮಿಂಚುಗಳೆ ಚಂದ್ರಮನೇ (ಬಸಪು. ೩೬-೨೫) ; ಜಲಸಮುದ್ರದ ಬುದು ಬುದಂ[ಪಾಠಾಂ. ಬುದ್ಬುದಂ]ಗಳೊ ಶಿಳಿಯಲರಿದೆನೆ ಹರಿಗೆ ಮುಸುಕಿತು ಬಿಳಿಯ ಚೌರಿಗಳುಲಿವ ಘಂಟೆಯ ಬಿರುದಿನುಬ್ಬಟೆಯ ತಲಪಟದೊಳಾಂಕಿದರು (ಕುಮ್ಮಶಿ. ೪-೨೬) ; ಮಗನೆ ಕಲ್ಪಾಂತದ ಮಹಾಂಬುಧಿಯುಗ್ರವೀಚೀಭುಜದ ಭಂಗದಲಿ ಬುದುಬುದ[ಪಾಠಾಂ. ಬುದಬುದಂ]ಗಳು ತೋಜಿ ಕೆಡುವಂದದಲಿ ತಾನಿದರಾಗುಹೋಗಿನ ಹದನನಜಿಯೆನು (ಹರಿಗ. ೨-೨-೩೬).

[<ಸಂ. ಬುದ್ಬುದ]

**ಬುದುಬುದಿಸು** (ಕ್ರಿ). ಗುಳ್ಳೆಯ ಹಾಗೆ ಊದಿಕೊಳ್ಳು,—ಊದು : ಪಿಜಾಗಳು ಬುದುಬುದಿಸಿ ರಕುತವ ಕಾರಿ ಕಾಳಿಜ ಬಿಂಡ ಸೆಣ ಜಗಿದೋಜಿ . . . ಪೂರಾಯ ಘಾಯದ ತಾರುಥಟ್ಟಿನ ಹೆಣನ ಮೆದೆ ಹೇರಾಳ ರಂಜಿಸಿತು (ಕುಮ್ಮದ್ರೋ. ೦೦-೬). 'ಬುಡುಬುಡಿಸು' ಪರಾ.

[ಬುದುಬುದ + –ಇಸು$_3$]

**ಬುದ್ದಣಿ** 'ಬುದ್ದಲಿ' ನೋ.

**ಬುದ್ದಣಿಗೆ** 'ಬುದ್ದಲಿಕೆ' ನೋ.

**ಬುದ್ದಲಿ**. ಬುಜ್ಜಣಿ, ಬುದ್ದಣಿ, ಬುದ್ಲಿ (ನಾ). ಎಣ್ಣೆ, ತುಪ್ಪ, ನೀರು ಮೊದಲಾದ ದ್ರವಪದಾರ್ಥಗಳನ್ನು ತುಂಬಿಡುವ ಚರ್ಮದ ಚೀಲ ; ಪಕ್ಕಲೆ : ಬುದ್ದಲಿ[ಪಾಠಾಂ. ಣಿ] ಹಾಡೆ ಪಕ್ಕಲೆ ಕಂಬಿಗಳ ಕೊಡನ ಧಾರೆಗಳ ಘೃತ ತೈಲ ಬಸೆಗಳ ಸಾರ ಕಟ್ಟಿತು (ಕೊರಟಾ. ೩-೬-೪) ; ಹೆದ್ದನಿ ಬುಡನಾಶ ಉದ್ದ ಗುಡ್ಡವು ತಂದ ಬುದ್ದಲಿ ನಡು ದೊಡ್ಡ ಕುಕ್ಷಿ ಮುದ್ದ ಕುರೂಪಿಗಳ್ಬುದ್ಧಿಯೊಳಧಿಕರಲ್ಲಿದ್ದ ವೈಶ್ಯರ ಕೇರಿಗಳ ಮುಂದೆ ನೋಡುತ ಬರಲು (ಕದಾ. ೩-೦೦೪) ; ತಾಲ್ಲೂಕಿನ ಪ್ರತಿ ಕುಲಕರಣಿಯೂ ಒಂದೊಂದು ಬುದ್ದಲಿ (ಕುದುರೆಯ ಮೇಲೆ ಹೇರುವ ಚರ್ಮದ ಹುಟಿ) ತುಪ್ಪವನ್ನು ತಂದುಕೊಡಬೇಕೆಂಬ ಕಟ್ಟಲೆಯಾಯಿತು (ಕಶಿ. ೩೬೪). ಬುಜ್ಜಣಿ : 'ಪೊಂಬುಜ್ಜಣಿ' ಪರಾ. ಬುದ್ದಣಿ : ಮೇಲಿನ 'ಬುದ್ದಲಿ' ಉಲ್ಲೇಖದ 'ತೊರಟಾ' ಪ್ರಯೋಗದ ಪಾಠಾಂತರ ವನ್ನು ನೋಡಿ. ಬುದ್ಲಿ : ಹರಳೆಣ್ಣೆ ಚೆಣ್ಣಗಾಸಿದ ತುಪ್ಪ ಗೊಪ್ಪರಿ ಯೆಣ್ಣೆಗಳ ಬುದ್ಲಿಗಳ ತಿಂಥಿಣಿಯನ್ನು ನಿಸ್ಪೃಡೆ ಬಿರಿಯ ಕೊಡಿಪೆನು ಕೂಳ ಕೂಲಿಯನು (ಅರ್ಜಾವಿ. ೬-೩೧).

[←ಹಿಂ. ಬುದಲಾ ; ಮರಾ. ಬುದಲಾ, ಬುದಲೀ, ಬುಧಲಾ./ತುಳು. ಬುದ್ದಲಿ, ಬುದ್‌ಲೆ, ಬುದಲಿ, ಬುದುಲೆ, ಬುದ್ದೊಲಿ]

**ಬುದ್ದಲಿಕೆ**, ಬುಜ್ಜಣಿಗೆ, ಬುದ್ದಣಿಗೆ (ನಾ). ೧.=ಬುದ್ದಲಿ : "ಚರ್ಮ ಘರ್ಘರಮೆನಲು ಬುದ್ದಲಿಕೆ[ಪಾಠಾಂ. ಬುದ್ದಳಿಗೆ,ಬುಧಳಿಗೆ] ನಾಮಮಕ್ಕುಂ" (ಮಂಗರಾ. ೬೩-೨೬) ; ಎಣ್ಣೆಯ ದೊಡ್ಡ ದೊಡ್ಡ ಬುದ್ದಲಿಕೆಗಳ ಮರೆಯಲ್ಲಿ ಕುಳಿತುಕೊಂಡೆ (ಮೇಧಿಮು. ೦೬೦). ಬುಜ್ಜಣಿಗೆ : ೧. ಸ್ತನವೆ ಬುಜ್ಜಣಿಗೆ [ಪಾಠಾಂ. ಬಿಜ್ಜಣಿಗೆ, ಬುದ್ದಲಿಕೆ] ಮೈ ಲಾವಣ್ಯರಸತೈಲ ಪವಡಾಕ್ಷಿಯುರ ತೋಳೆ ದಂಡ ಘನಕಾಂತಿವೆತ್ತ ಮಾಣಿಕ್ಯದುಂಗುರವೆರಲ್ಮಿನುಗಿನ ಸೊಡರೊಪ್ಪಿದುವು (ಪೋಹಿತ ೦೫-೮). ೨. (ಮದುವೆಯಲ್ಲಿ ವಧುವಿಗೆ ಕೊಡ ಬೇಕಾದ ಮಂಗಳಕರ ವಸ್ತುಗಳನ್ನು ತುಂಬಿರುವ) ಮುಚ್ಚಳದಿಂದ ಕೂಡಿದ ಬಿದಿರಿನ ಬುಟ್ಟಿ : ಸಜ್ಜೆಯ ಮನೆಗಳೊಳಗೆ ಚಿಕ್ಕಮಯವಾದ ಗುಜ್ಜರಿಗಾಲ ಮಂಚಗಳು ಬಿಜ್ಜಣಿಗೆಗಳೆಲೆಯಿಹ ಬುಜ್ಜಣಿಗೆಗಳ್ಬಜ್ಜಾಯ ವಿರುತಿಹವು (ಅಂಶತ. ೩-೦೨೪) : ಮೂರುಂಡೆ ತಮಟ, ಒಂದು ಚಿಪ್ಪು ಹಣ್ಣು, ತೆಂಗಿನಕಾಯಿ, ತಾಲಿ, ಹರಿಗಡಗ—ಇವು ಬುಜ್ಜಣಿಗೆಯಲಿ ತುಂಬ ಬೇಕಾದ ಸಾಮಾನುಗಳು (ಕಪ್ಪೂರು. ೮೦). ಬುದ್ದಣಿಗೆ : ೧. ಕೃತ್ತಿ—ಸ್ನೇಹಪಾತ್ರ, ೯ುತು=ತೊಗಲ ಬುದ್ದಣಿಗೆ (ಪಾಶಂ. ೪). [<ಬುದ್ದಲಿ]

**ಬುದ್ದಿ** (ನಾ). ೧. ತಿಳಿವಳಿಕೆ ; ಜ್ಞಾನ ; ಅರಿವು : ಉದ್ದವಾಗಿ ಬೆಳೆದವನಿಗೆ ಬುದ್ದಿ ಕಡಿಮೆ (ಗಾದೆ). ೨. ಜ್ಞಾನಿಗಳನ್ನು, ಹಿರಿಯರನ್ನು, ಪೂಜ್ಯರನ್ನು ಸಂಬೋಧಿಸುವಾಗ ಬಳಸುವ ಗೌರವಸೂಚಕವಾದ ಪದ,—ಶಬ್ದ : P ಮೈಸೂರಿನ ಅರಸುಮನೆತನದವರಲ್ಲಿ ಸಿರಿವಂತರನ್ನು ಸೇವಕರೂ ಮತ್ತು ಹಿರಿಯರನ್ನು ಕಿರಿಯರೂ ಸಂಬೋಧಿಸುತ್ತಿದ್ದ ರೀತಿಯಿದು. ಆ ಬಳಿಕ ಕಿರಿಯರು ಹಿರಿಯರನ್ನು, ಕೆಳಮಟ್ಟದವರು ಒಡೆಯರನ್ನು ಕರೆಯಲು ಇದು ಎಲ್ಲಾ ಸನ್ನಿವೇಶಗಳಲ್ಲೂ ಅನ್ವಯವಾಯಿತು. ಇದರ ಅವಶೇಷವೇ ಈಗಲೂ ಅಲ್ಲಲ್ಲಿ ಕಂಡು ಬರುವುದು : ಬುದ್ದಿಯವರು ಮರೆಗಬಾರದು, ಸಂಕಟ ಪಡಬಾರದು (ಸಂಗಸೋ. ೦೩೩-೨೦) ; ಅರಮನೆಯ ಮೆಟ್ಟಿಲಿನಿಂದ

ತ್ತದೆ (ಶಿಲ್ಪಾ. ೩೨೪); ಕೆಲಕಾಲ ತೇವದ ಬೆಚ್ಚನೆಯ ಗಾಳಿಯಲ್ಲಿರಿಸಲ್ಪಟ್ಟ ವಸ್ತುಗಳ ಮೇಲೆ ಉಂಟಾಗುವ ಹತ್ತಿ, ತುಪ್ಪಟದ ನವಿರೆಳೆಗಳಂತೆ ಕಟ್ಟುವ ಒಂದು ಬಗೆಯ ಬೂಷ್ಟು ಅಲ್ಲಿ ಉಂಟಾಗಿತ್ತು (ವಿಜ್ಞಾ.ವಿ. ೦೪೬); ಬೂಷ್ಟುಗಳಿಂದಲೂ ಅಣಬೆಗಳಿಂದಲೂ ಆವೃತವಾದ ಪ್ರದೇಶ (ಹಸುಹೊ. ೦೬೬). **ಬೂಸರು :** ೧. ಮಾಡದಲ್ಲಿ ಇಂದು ಹಳಸಿದ ಅನ್ನ, ಬೂಸರು ಬಂದ ರೊಟ್ಟಿಯ ಚೂರುಗಳು ರಾಶಿಯಾಗಿ ಬಿದ್ದಿವೆ (ಹೊಲಮ. ೨೨೫). **ಬೂಸಲು :** (ಗು). ೨. (ಅಲಂ) ನಿಷ್ಪ್ರಯೋಜಕವಾದ ; ಕೆಲಸಕ್ಕೆ ಬಾರದ : ಆ ಬಡಕಲು ಬೂಸಲು ದೇವತೆಯನ್ನು ನೋಡಿ ಅವನ ಆಶೆ ಕಮರಿಗೆ ತಲೆಕೆಳಗಾಗಿ ಉರುಳಿ ಹೋಯಿತು ! (ಮಲೆಮ. ೯೩೯).

[ದೇ.॥ ತಮಿ. ಪೂಞ್ಚು ; ಮಲ. ಪೂಕ್ಕ, ಪೂಪ್ಪು; ತುಳು. ಬೂಜು, ಬೂಚು, ಬೂಚಿ ; ತೆಲು. ಬೂಂಜು, ಬೂಜು, ಬೂಜು./ಮರಾ. ಬುರಸಾ, ಬುರಸೀ, ಬುರಶೀ]

**ಬೂಜು₂** 'ಬುರುಜು' ನೋ.

**ಬೂಜುಗಟ್ಟು,** ಬುರುಸುಗಟ್ಟು (ಕ್ರಿ). ಬೂಷ್ಟುಹಿಡಿ : ಬೂಜು ಗಟ್ಟಿದ ಪದಾರ್ಥಗಳನ್ನು ಉಪಯೋಗಿಸುವುದರಿಂದ ಬಾಯಿಲೆಗಳಿಗೆ ಹಾದಿ ಮಾಡಿಕೊಟ್ಟಂತಾಗುತ್ತದೆ (ರೂಢಿ). **ಬುರುಸುಗಟ್ಟು :** ಬೂಟು ಚಪ್ಪಲು ಮಾತದಲ್ಲಿಯೆ ಬುರುಸುಗಟ್ಟಿವೆ ಘಂಡಿಗೆ (ನೆಂಮು. ೦೨-೨೩); ಅಲ್ಲು ಬಲೆಯು ಒಟ್ಟಿತ್ತು ಜೇಡಹುಳುವಿನ ಕೃತಿಗೆ ಬುರುಸುಗಟ್ಟಿತ್ತು (ಗಂಗಾಶ. ೩೦-೨) ; ಬುರುಸುಗಟ್ಟಿರಬಹುದು ಒಳಗಡೆಗೆ ಪುಪ್ಪುಸ (ಅರರೋ. ೫೪).

[ಬೂಜು₁ + ಕಟ್ಟು₁]

**ಬೂಟ₁** (ನಾ). ೧. ಮೋಸ; ಕಪಟ : ಹುಡುಗೀನ ಪುಟ್ಟಪ್ಪಾಜೀಗೆ ಜೊತೆ ಯಾಗಿರಲೀ ಅಂತಲ್ಲವೆ ಕರದದ್ದು? ಇದರಲ್ಲಿ ಬೂಟ ಇಲ್ಲವಲ್ಲ (ಜಕರಾ. ೦೬೩). ೨. ವೇಷ; ನಟನೆ; ಸೋಗು : ಅಲೆವೆಲರಿಗೆ ತಲೆಯೊಲೆಯುವ ನಿಲುವು ಚೆಂದ ಇದೆಸಗುವ ಸೂರ್ಯನ ಬೂಟ (ಕೆರುವು. ೬-೪); ನಾನೂ ನಿಮ್ಮಂತೆಂದಾ ವೈರಿ ನೇಹವ ತೋರಿ ಜತೆಯಂ ಸೇರಿ ಆಟದಿ ಬೆರತು ಬೂಟಕೆ ಸೋತು (ಗೋಕುಶಿ. ೦೫-೨೪). 'ಬೂಟಗಾರ' ಪರಾ.

[ದೇ.॥ ತುಳು. ಬೂಟಿ, ಬೂಟು; ತೆಲು. ಬೂಟ]

**ಬೂಟ₂** 'ಬೂಟಾ' ನೋ.

**ಬೂಟಕ** (ನಾ). ೧. ವೇಷ; ನಟನೆ; ಸೋಗು : ಕೋಟಿಯೊಂದಕೆ ಸಲ್ಲದೊಂದುಕೋಟಿಗೆ ವಿಂಗಿಲು ನೋಟಕರ ಸಾಫಲ್ಯಮಕ್ಕುದಲೆ ನಿಜಸಂಗ ಬೂಟಕದ ಸಂಗ ಬಿಡು ನಿನ್ನೊಳಿರುತಿರೆ ಮಣಿಯು ಖೇಟಗತಿ (ಅಪಶಂ. ೨೮೨-೦೨೯೩) ; ನೀಟುಗಾತಿಂಯರೊಲುಮೆ ಬೂಟಕವೆಂದು ತಿಳಿಯಿರೊ (ಪುಕಂದ. ೨-೦೬-೦). ೨. ಸುಳ್ಳು; ಅಸತ್ಯ : ಸಾಟಿಯಿಲ್ಲದ ಶಂಖಚಕ್ರವು ಚತುರಹಸ್ತದಲಿರಲು ಕಂಡೆನು ಬೂಟಕದ ಮಾತಲ್ಲ ಕೇಳಿರೊ ಭೂರಿದೈವದ ರಮಣನಂಘ್ರಿಯು (ಪುಕಂದ. ೦-೦೧೯-೧); ಜನಕ ನೀಯೆನಗರಸ ನೃಪರುಷಿ ಮನುಜನೇ ಪರಮಾರ್ಥ ಪುಣ್ಯಶರೀರಿ ಬೂಟಕವೆ (ಅಂದಶಾ. ೯೮-೩೬). ೩. ತೋರಿಕೆಯ ವೇಷವನ್ನು ಧರಿಸಿದವನು; ಸೋಗುಹಾಕುವವನು : ಅಯ್ಯಾ ನಾಟಕನಲ್ಲ ಬೂಟಕನಲ್ಲ ಶೀಲಿಗನಲ್ಲ (ವಚಶಾ. I. ೦-೩); ಪುಣ್ಯತೀರ್ಥಗಳಲ್ಲಿ ಪರಿಗ್ರಹವಂ ತೆಗೆದುಕೊಂಬುವನಲ್ಲಾ ಬೂಟಕನಲ್ಲಾ ಮೃದುಮನವುಳ್ಳವನು (ಕಾಶೀಮ. ೯೫೬-೨); ಪಡಿಯ ಬಾಟಕ ನಲ್ಲ ಒಡನೆ ಬೂಟಕನಲ್ಲ (ಪ್ರಭುಲಿ. ೦೩೦-೫). (ಗು). ೪. ತೋರಿಕೆಯ; ನಟನೆಯ ; ಸೋಗಿನ : ದತ್ತನು, ಆ ಬೂಟಕ ಜಂಗಮನಂ ಕರೆಸಿ ಕೊಂಡು ಕಳುಹಿಸುವುದಕ್ಕೆ ಪೋಗುವಾಗ್ಗೆ (ಪುರಾಶಿ. ೬೦).

[ದೇ.॥ ತಮಿ. ಪೂಟ್ಟಕ, ಪೂಟ್ಟಕ್ಕ ; ತುಳು. ಬೂಟಕ, ಬೂಟಂಗ; ತೆಲು. ಬೂಟಕ]

**ಬೂಟಕತನ** (ನಾ). ತೋರಿಕೆಯ ನಡವಳಿಕೆ; ಡಂಭಾಚಾರ; ಬೂಟಾಟಿಕೆ: ಅವರಾಟವನಜೀಯದೆ ಬೂಟಕತನದಿಂದ ದಿಮ್ಮಿಸಾಲೆ (ಕಾಲಸಂ. ೬೮-೪); ಗೂಟನಾಮವ ಹೊಡೆದು . . . ನಾ ಧರೆಯೊಳಗೆ ಬರಲೆನ್ನ ಬೂಟಕತನ ನೋಡಿ ಭುವಿಸದಿರಿ ಜನರೆ (ಪುರಂದ. ೪-೦೬೫-೦); ಬೂಟಕತನ ಮಾಡಿದರೆ ಕಾಟಕತನ ತಪ್ಪೀತೇ? (ಗಾದೆ). [ಬೂಟಕ + -ತನ]

**ಬೂಟಕಮಾತು** (ನಾ). ಸೋಗಿನ ಮಾತು; ನಟನೆಯ ಮಾತು: ಕೊಡದೆ ಬೂಟಕಮಾತಿನಲಿ ಮನ್ಮಥಕೇಳಿಗೊತನೈದುವ ಬೋಸರಿಗನ ನಡೆ ನಾಳೆ ಕರೆವೆನೆಂದೆಬ್ಬಿಸಿ ಪೊನ್ನೀವ ಕಡುದಾತನ ಕರೆ ಬಂಗಳೆ (ಕಂಶಾ. ೬-೦೯೬).

[ಬೂಟಕ + ಮಾತು₁]

**ಬೂಟಗಾರ** (ನಾ). =ಬೂಟಕ ೩ : ಆಟಗಾರನು ಅತ್ತ ಪ್ರಭುವಿಗೆ ಬೂಟಗಾರ ಬಸವನು ಪಾಟಿಗೆಟ್ಟನು ಪರಮಭಕ್ತಿ ಸಘಟ ವಿಚಾರಿ (ಕರಲಿ. ೩೯೫ ೦).

[ಬೂಟ₁ + -ಗಾರ (< - ಕಾರ)]

**ಬೂಟಾ,** ಬುಟ್ಟ, ಬುಟ್ಟಾ, ಬೂಟ₂ (ನಾ). ರೇಷ್ಮೆಬಟ್ಟೆಯ ಮೇಲೆ ಹಾಕುವ ಜರಿಯ ಅಥವಾ ರೇಷ್ಮೆನೂಲಿನ ಬೇರೆ ಬೇರೆ ಆಕಾರದ ಕಸೂತಿ: ಫಲತಾಂಬೂಲದ ಚೀಲ ಕೊಡುತ್ತಿದ್ದಾಕೆ ನೀಲಿಯ ಬೂಟಾ ಹೂವಿನ ಬನಾರಸ್‌ಸೀರೆ ಉಟ್ಟಿದ್ದರು (ಹಂದಿನ. ೬) ; ಹಕೀಂನು ಯಾವತ್ತೋ ಒಂದುದಿನ ಬೂಟಾಪೇಟ ಕಟ್ಟಬೇಕು ಅಂತ ಹೇಳಿ ಕೊಂಡಿದ್ದ ಆಹವಾಲು ಆವೊತ್ತು ಫಲವಾಯಿತು (ಮಲ್ಲಿ. ೩೪). **ಬುಟ್ಟ :** ಕಡುನೀಲಿವರ್ಣದ ಸೀರೆಯಲ್ಲಿ ನಕ್ಷತ್ರಗಳಂತಿರುವ ಬುಟ್ಟಗಳು ಎದ್ದು ಕಾಣುತ್ತವೆ (ರೂಢಿ). **ಬುಟ್ಟಾ :** ಮದುವೆಯ ಹುಡುಗಿಗೆ ಬುಟ್ಟಾ ಇರುವ ಸೀರೆಯನ್ನು ಉಡಿಸಿದ್ದರು (ರೂಢಿ). **ಬೂಟ₂:** ಬೂಟ ಇರುವ ಸೀರೆಗೆ ಬೆಲೆ ಹೆಚ್ಚು (ರೂಢಿ).

**ಬೂಟಾಸೀರೆ, ಬುಟ್ಟಾಸೀರೆ** = ಕಲಾಪತ್ತಿನ ಹೂವುಗಳ ಚಿತ್ರದಿಂದ ಕೂಡಿದ ಸೀರೆ : ಅವರ ಅಂಗಡಿಯಲ್ಲಿ ಬೂಟಾಸೀರೆಗಳೇ ಹೆಚ್ಚಾಗಿದ್ದುವು (ರೂಢಿ); ಮಗಳ ಮದುವೆಗೆಂದು ನಾನು ಎರಡು ಬುಟ್ಟಾಸೀರೆಗಳನ್ನು ಕೊಂಡು ತಂದೆ (ರೂಢಿ).

[←ಪಾರ. ಬೋತಾ; ಹಿಂ. ಬೂಟಾ, ಬೂಟೀ, ಬುಟ; ಮರಾ. ಬೂಟ, ಬುಟ, ಬುಟಾ, ಬುಟೀ, ಬುಟ್ಟೀ]

**ಬೂಟಾಟ,** ಬೂತಾಟ₁ (ನಾ). ೧. ಬೂಟಾಟಿಕೆ; ನಟನೆ; ತೋರಿಕೆ; ಮಾತುಗಾರಿಕೆಯ ಬೂಟಾಟದಿಂ ಬಡಪಾರ್ವರೇತೆರದಿ ಸೋಲಿಸದೆ ಶಂಭು ಭಟ್ಟನ ಕೂಡೆ ಖ್ಯಾತವಾದವ ಮಾಡಿ ಜೈಸಿದಡೆ ವಿದ್ವಾಂಸನಲ್ಲದೊಡೆ ಗಾಂಪನೀತಂ (ಚಕುವು. ೪-೦೯-೨೩); ಇಂಟರ್‌ವ್ಯೂ ಎಲ್ಲಾ ಬರೀ ಬೂಟಾಟ ಅಂತ ಹೇಳ್ತಿದಾನೆ (ಅಡಶಾ. ೩೫). **ಬೂತಾಟ₁ :** ೧. ಬಜಾದೆಯುಂ ಬೂತಾಟವಿನ್ನೇಕೆ ಮಾಣೆನು ಬನ್ನಕೈಡೆಯಾದೆನೀ ವಿಹಗನಿಂ (ಕಾದಂಊ. ೬೨); ನಿಂ ನಿನ್ನ ಮುನ್ನಿನ ಕೂಸಾಟವನೆಲ್ಲಿಯುಂ ಬಿಸುಡೆ ನಿನ್ನಂ ಸೈತಿಡಲ್ಬಾರ ದಿನ್ನಿನಿಸಂ ಮಾಡದೆ ಮಾಡಿದಂತಿರಲ್ವೋ ಇನ್ನೇಕೆ ಬೂತಾಟವೋಪನೆ (ಕೃಂಗಾರ. ೦-೫೨) ; ಕೈಯ ಹೊಯ್ಯುತಾಟವೇತಕೆ ಧರ್ಮನಂದನನಾಟ ಪೊಳ್ಳಿತು (ಕುವ್ಯಾಸ. ೦೩-೯೬). ೨. ತಂಟೆ; ಗೋಜು: ಋಷಿಯಲ್ಲ ಋಷಿಗೇಕಾಯುಧಂಗಳ ಗೊಡವೆ ನಮಗೇಕದಟ ಬೂತಾಟ (ಕುವ್ಯಾಆ. ೫-೨೦).

[ಬೂಟ₁ + ಆಟ]

**ಬೂಟಾಟಂಗೊಡು** (ಕ್ರಿ). ಬೂಟಾಟಿಕೆ ಮಾಡು ; ಸೋಗು ಹಾಕು : ತಾಂ ಬೂಟಾಟಂಗೊಡಿ ವಜ್ರ ಪ್ರಕಟಿತ ಓಹುಮಾನಂಗಳಿಂವರ್ಗಾಂ ವಿಟಾಬಾದಾ ನೂತ್ನಹಾರಂಗಳನೊಸೆದು ಕುಡುತ್ತಂ (ಹಾಲಾಸ್ಯ. ೦-೦೫-೨೩).

[ಬೂಟಾಟ + ಕೊಡು₁]

**ಬೂಟಾಟಿಕೆ,** ಬೂತಾಟಿಕೆ (ನಾ). ತೋರಿಕೆಯ ಪ್ರದರ್ಶನ; ಸೋಗು; ನಟನೆ : ಎಲ್ಲರೂ ಮಾಡುತ್ತಿರುವುದು ಬೂಟಾಟಿಕೆಯ ಬೈಲಾಟ (ಐರಹಾ. ೦೬೬); ದೇವರ ಹೆಸರಿನಲ್ಲಿ ಉಪವಾಸ ಮಾಡಿದರೆ ಅದೂ ಬೂಟಾಟಿಕೆಯೆ?

(ಅಜಾಖಿ. ೫೭). **ಬೂತಾಟಿಕೆ** : ಹಸಿವುಳ್ಳನ್ನಕ್ಕರ ವ್ಯಾಪಾರ ಬಿಡದು . . . ಮಾತುಳ್ಳನ್ನಕ್ಕರ ಬೂತಾಟಿಕೆ ಬಿಡದು (ಅವಚಂ. ೨೦೫-೯೨೪); ನೀವ್ ಹಣೆಯೊಳೋತು ಬೊಟ್ಟನಿತು ಬೂದಿಯನಿಟ್ಟ ಬಳಿಕವಿಾ ಬೂತಾಟಿಕೆ ಯೊಳೊಡೆಯರೊಡೆಯರೆಂದ್ಯೆದುತಿರ್ಪಿರಿ(ಸಿದ್ಧೇಶ್ವ. ೨೦-೧೨).

[ಬೂಟಾಟ + – ಇಕೆ]

**ಬೂಟಾದಾರಿ, ಬುಟೇದಾರಿ, ಬುಟ್ಟೆದಾರ, ಬುಟ್ಟೆದಾರಿ, ಬುಟ್ಟೇದಾರಿ, ಬೂಟೆದಾರಿ** (ಗು). ಬುಟ್ಟಾ ಕೆಲಸದಿಂದ ಕೂಡಿದ; ಬುಟ್ಟೆಗಳುಳ್ಳ : ಅವನ ತಲೆಯ ಮೇಲಿದ್ದ ಬೂಟಾದಾರಿ ರುಮಾಲು, ಕೈಯಲ್ಲಿದ್ದ ಚಿನ್ನದ ಚೈನು, ಉಂಗುರಗಳನ್ನು ಕಂಡು ವೇಣು ಗೌರವವಾಗಿ ಮಾತನಾಡಿಸಿದ (ಶಾಯುಶ. ೫೭). **ಬುಟೇದಾರಿ** : ಬುಟೇದಾರಿ ಪಚ್ಚಡ ಮದುಮಗನಿಗಲ್ಲದೆ ಮುದಿಮುದುಕನಿಗೆ ಒಪ್ಪೀತೇ? (ಗಾದೆ). **ಬುಟ್ಟೆದಾರ** : ಇಲ್ಲಿ ಬುಟ್ಟೆದಾರ ವಸ್ತ್ರಗಳೂ ಜಿನುಗು ನಾರುಬಟ್ಟೆಗಳೂ ಆಗುತ್ತವೆ (ಗ್ರಾಟಿಬ್ರ. ೬೩). **ಬುಟ್ಟೆದಾರಿ** : ಸೂರ್ಯಪೀಠದ ಮುಖ ಮೇಲೆ ಹಾಸಿಗೆಗಳು ರತ್ನ ಹುವ್ವುಗಳೆ ಬುಟ್ಟೆದಾರಿ ಜರತಾರಿ ಹುವ್ವುಗಳೆ (ಕೃಕಂದ. ೫-೬೯-೫). **ಬುಟ್ಟೇದಾರಿ** : ಕಾಂಚೆಯಿಂದಲೂ ಬುಟ್ಟೇದಾರಿ ಬಟ್ಟೆಗಳನ್ನು ಕೊಂಡುಕೊಳ್ಳುವಾಗ ಅಷ್ಟಾನಂದವಾಗಲಿಲ್ಲ (ಕಾರಪೀ. ೧೯೬). **ಬೂಟೆದಾರಿ** : ವಲ್ಲಿ ಉತ್ತಮವಾದ್ದು, ಕಲಾಪತ್ತು, ಬೂಟೆದಾರೀದು (ಸುಪುಶ. ೬೭).

[← ಹಿಂ. ಬೂಟೆದಾರ್; ಮರಾ. ಬುಟಾದಾರ್, ಬುಟೇದಾರ್]

**ಬೂಟು** (ನಾ). ಹರಡಿನ ಮೇಲಕ್ಕೆ ಬಂದು ಪಾದವನ್ನು ಪೂರ್ತಿಯಾಗಿ ಮುಚ್ಚುವಂತೆ, ಒರಟುಬಟ್ಟೆ ಅಥವಾ ಚರ್ಮದಿಂದ ಮಾಡಿದ ಪಾದರಕ್ಷೆ; ಮೋಜ : ಅಂದೇ ಹೊಸ ಬೂಟು ಧರಿಸಿದ್ದೆ (ಕೆಂದುಟಿ. ೭೫) ; ಬೂಟು ಚಪ್ಪಲು ಮಾಡದಲ್ಲಿಯೆ ಬುರುಸುಗಟ್ಟಿವೆ ಥಂಡಿಗೆ (ವಿಲವಯ. ೦೨-೨೩).

[←ಇಂ. Boot]

**ಬೂಟೆದಾರಿ** 'ಬೂಟಾದಾರಿ' ನೋ.

**ಬೂಡು** (ನಾ). ಮನೆ; ನೆಲೆ ; ಆಶ್ರಯ : ಕಾಡನು ಕಡಿದಾ ಹಾಡಿಯ ಮಾಡಿದ ಬೂಡನು ಕಟ್ಟಿದ ಕರಿಪ್ಯದ (ಕಾಕೋಟಿ. ೩೬).

[←ತುಳು. ಬೂಡು]

**ಬೂತ** 'ಬೂತು$_2$' ನೋ.

**ಬೂತಗನ್ನಡಿ** (ನಾ). ವಸ್ತುವು ಇರುವುದಕ್ಕಿಂತ ದೊಡ್ಡದನ್ನಾಗಿ ಮಾಡಿ ತೋರಿಸುವ ಕನ್ನಡಿ ; ರಾವುಗನ್ನಡಿ : (*).

[ಬೂತ (<ಬೂತು$_2$) + ಕನ್ನಡಿ$_1$]

**ಬೂತಟ್ಟು** (ಕ್ರಿ). ೧. ಅವಮಾನಗೊಳಿಸುವುದಕ್ಕಾಗಿ ದೂತನನ್ನು ಅಟ್ಟು ; ಕುಚೋದ್ಯಕ್ಕಾಗಿ ದೂತನನ್ನು ಕಳುಹಿಸು : ಇಂದ್ರಂ ಮೃಗೇಂದ್ರನಂತೆ ಗರ್ಜಿಸಿ ಚತುರಂಗಬಲಸಮೇತಂ ಪೊಱಮಟ್ಟು ಬೂತಟ್ಟಿ ದೊಡುಪೇಂದ್ರನುಂ . . . ಬಂದು ತಾಗುವುದುಂ (ಶಾಂತಿಪು. ೬-೮೦ವ) ; ಘೋರಾಂಧಕಾರಂ ಬಟ್ಟ ಕಲದಿಂದಮೇಬೂತಟ್ಟಿದುದೆನೆ ದಿನಕರಂಗೆ ತತ್ಕಾನನದೊಳ್ ಮುಟ್ಟಿದುದಜಗರಮುಖದಿಂ ಪುಟ್ಟಿದ ವಿಷವಹ್ನಿ ಯುಗುಟ್ಟ ಕರ್ಬೊಗೆ ಮುಗಿಲಂ (ರಾಮಾವ. ೬-೨೪) ; ಜವನೆರ್ದೆಯಂ ಮೆಟ್ಟುವೀಶಂಗೆ ಬೂ[ಪಾಠಾಂ. ದೂ]ತಟ್ಟುವಗುರ್ವಂ ತೋಱಿದಪ್ಪಂ (ಶಗಪ. ೦೩-೩೬). ೨. (ಅಲಂ) ಸ್ಪರ್ಧೆಗೆ ಆಹ್ವಾನಿಸು ; ಹುರುಡಿಸು : ಮನೋಜವಕ್ಕೆ ಬೂತಟ್ಟುವ ತಕ್ಕು ಮಿಕ್ಕು ಬರೆ ಬಂದುವು ಪೊಂಬುಲಿದೋಲ ಪಲ್ಲಣಂಗಟ್ಟಿದ ಪಟ್ಟಸಾಹಣದ ವಾಜಿಗಳಂದು ಜಯೋತ್ಸವಾಜಿಗಳ್ (ಮಲ್ಲಪು. ೯-೪). [ಬೂತು$_1$ + ಅಟ್ಟು$_2$]

**ಬೂತರಸ** (ನಾ). ಒಬ್ಬಾತನ ಹೆಸರು : ಬೂತರಸ ಯುವರಾಜಪಥದುಳ್ ನಿನ್ದು ಕೊಙ್ಗಳ್ನಾಡು ಪೊನಾಡದುನಾಳುತಿರ್ದು (ಎಕ. III (R), ಪಂಜಿನ. ೩೯೫-೫ ; 870) ; ಸತ್ಯವಾಕ್ಯಪೆರ್ಮ್ಮನಡಿಗಳ ಪೃಥುವೀರಾಜ್ಯಂಗೆಯ ಬೂತರಸ ತೊಱಿಕಾರಟ್ಟಿಯು ಪದಿಯುಳಿಯು ನೆಲೆಗೂರು ಮೊಗಪೆ ಅಳಿಯುವು ಬಿಚ್ಚಿ (ಎಕ. III (R), ಗುಂಡ್ಲುಪೇ. ೫೭-೩ ; ೯ನೆಯ ಶತ).

[ಬೂತ$_?$ + ಅರಸ$_1$]

**ಬೂತಾಟ$_1$** 'ಬೂಟಾಟ' ನೋ.

**ಬೂತಾಟ$_2$** (ನಾ). ೧. ಪಿಶಾಚಿಯ ಆಟ ; ದೆವ್ವದ ಕುಣಿತ : ಅಂತಾಕಿಗಳ್ ತೂಗಿ ತೊನೆವ ತೊನೆಪಂಗಳುಮಂ ಪುರಸರಿಗೆವಿಡಿದು ಬಿಲ್ವಿಡಿದಾಡುವ ಬೂತಾಟಂಗಳುಮಂ ನೋಡಿ (ಶಂಶಭಾ. ೪-೯೦ ವ). ೨. ಸ್ವೇಚ್ಛಾಚಾರ : ಜಾಗು ಕೌರವಬಲದವರ ಬೂತಾಟವಾಯಿತೆ ನಮ್ಮ ಘಟ್ಟನಲಿ (ಕುವ್ಯಾದ್ರೋ. ೦೯-೨೭). [ಬೂತು$_2$ + ಆಟ]

**ಬೂತಾಟಿಕೆ** 'ಬೂಟಾಟಿಕೆ' ನೋ.

**ಬೂತಾಳೆ** (ನಾ). ಗದ್ದೆ, ಹೊಲಗಳ ಸುತ್ತ ಬೇಲಿಯಂತೆ ಬೆಳೆಸುವ, ತಾಳೆಜಾತಿಗೆ ಸೇರಿದ ಒಂದು ಬಗೆಯ ಸಸ್ಯ : ಊರಿನ ಸುತ್ತಲೂ ಕಳ್ಳಿ ಬೂತಾಳೆಗಳ ಬಲವಾದ ಬೇಲಿಗಳಿದ್ದವು (ಹುಬ್ಬಹ. ೦).

[<ಸಂ. ಭೂತಾಲ]

**ಬೂತಿಕ್ಕು** (ಕ್ರಿ). ಕುಚೋದ್ಯ ಮಾಡು; ಅಪಹಾಸ್ಯ ಮಾಡು : ಆರುಹತರೆಲ್ಲ ಬೂತಿಕ್ಕಿ ನಗುತಿರೆ ಕಂಡು (ಸೋಮುತ. ೪-೨೪).

[ಬೂತು$_1$ + ಇಕ್ಕು]

**ಬೂತು$_1$** (ನಾ). ೧. ಕುಚೋದ್ಯ ; ಕುಚೇಷ್ಟೆ : 'ಬೂತಟ್ಟು', 'ಬೂತಿಕ್ಕು' ಪರಾ. ೨. ಸೋಗು ; ನಟನೆ : 'ಬೂತುಗ' ಪರಾ. ೩. ನಾಚಿಕೆಗೆಟ್ಟ ಮಾತು : ಅಶ್ಲೀಲವಾದ ಮಾತು : 'ಬೂತುಗೆಡೆ' ಪರಾ. ೪. ನಾಚಿಕೆಗೆಟ್ಟ ವ್ಯಕ್ತಿ ; ಭಂಡ : ಅಲ್ಪವ್ಯಕ್ತಿ : "ಬೂತುಗಳಿನೆ ಬಂಡರೆಂದು ತಿಳಿಗೆ" (ಭಾರತಿ. ೨೯) ; ಈ ಬೂತು ಪಗೆಯೊಳೊಡಂಬಟ್ಟು ಬಂದನಾಗಲ್ವೇಟ್ಟುಂ (ಶಂಶಚಂ. ೨೪೦-೪) ; ಜಾತಿಸೂಳೆಗೆ ರಣಭೀತನ ಪುಸಿನುಡಿವಾತನ . . . ಬದಗನ ಬೂತಿನ ಮಾತು ದಿಟವಲ್ಲು (ರಾಜಾವ. ೨-೩೪) ; ಏಕೆ ಕೆಣಕಿದೆ ಕರ್ಣ ಬೂತಿನ ಬೀಕಲಿನ ಬದಗಿಯನು (ಕುವ್ಯಾಸ. ೦೫-೦೪). ೫. ಮೋಸಗಾರ ; ವಂಚಕ : ಒಂದು ದಿವಸಮೊರ್ವ ಬೂತಿಂಗೆ ದ್ರವ್ಯಮಂ ಕೊಟ್ಟೊಡಂಬಡಿಸಿ . . . ಕಟ್ಟಿದ ಬಚ್ಚಿಕ್ಕಿ ಬರ್ಪೊನನ್ನೆಗಮಾ ಬೂತುಮಾ ಪ್ರಸ್ತಾವದೊಳ್ ಪೋಗಿ ಮಹಾದೇವಿಯ ವಂಚಮನೇಱಿರ್ದ್ದಗಳ್ (ವಡ್ಡಾರಾ. ೦೭೭-೦೭) ; ಕೃತಕರುಧಿರಮಪ್ಪುದ ನಱದೀ ಬೂತೆನ್ನಂ ಬಂಚಿಸಿದನೆಂದು ನೆಱಿಯದ ನರಕಾಯುಷ್ಯಮಂ ನೆಱಪುವನೆಂಬಂತೆ ಮುಳಿದು (ಆದಿಪು. ೨-೦೪ವ) ; ಬೂತಿನ ಪೊಗೞ್ತೆಯಂತೆ . . . ಸೌಂತೆಯ ತೋಂಟದಂತೆ ಕಡೆಯೊಳ್ ಪೇಸುಪಥಮುಮಶೋಭೆಯು ಮಾಗದೆ ಪೋಗದು (ಧರ್ಮಾಮೃ. ೭-೦೨೨). ೬. ಸಾಮಾನ್ಯನಾದವನು ; ನಾಡಾಡಿ : ನೆರೆದ ಬೂತುಗಳ ಕೋಳಾಹಳರವಂಗಳಿಂ . . . ಕರಮೆ ಕಣ್ಗೆಸೆದುದು ನರೇಂದ್ರಭವನಾಂಗಣಂ (ಅಜಿಪು. ೪-೭ ರಗಳೆ). ೭. (ದಾನಪಾತ್ರನಾದ) ದೀನ ; ದರಿದ್ರ : ದ್ರುಪದನ ಪೊೞಲೊಳ್ ಪಾಂಡವರ್ ಚಾಗಕ್ಕೆ ಬೂತುಂ ಭೋಗಕ್ಕೆ ಪೊಟ್ಟುಂ ನೆಱೆಯದೆನಿಸಿ ಸುಖಸಂಕಥಾ ವಿನೋದದಿಂ ರಾಜ್ಯಂಗೆಯ್ಯುತ್ತಿರ್ಪನ್ನೆಗಂ (ಶಂಶಭಾ. ೪-೦ ವ). ೮. ಕೈಯಲ್ಲಿ ಆಗದವನು ; ಹೇಡಿ : ಭೀತಿ ಮನದಲಿ ಪೌರುಷಾಂಗದ ಮಾತು ಮುಖದಲಿ ಮುರಿವು ಕಾಲಲಿ ಬೂತುಗಳು ಕುರುವೀರರೆನುತಿದಿರಾದುದರಿಸೇನೆ (ಕುವ್ಯಾದ್ರೋ. ೦೫-೨೫) ; ಸೂತಸುತ ದಳಪತಿಯೆ ಘಡ ಮುಯ್ಯಾಂತರೇ ಮುಂಬಿಗರು ಬಿರುದಿನ ಬೂತುಗಳ ಬೊಬ್ಬಾಟ ಬಿಡದೇ ಕಂಡು ಕಾಣರಲ (ಕುವ್ಯಾಕ. ೨-೮). ೯. ಕೆಲಸಕ್ಕೆ ಬಾರದವನು ; ನಿಷ್ಪ್ರಯೋಜಕ : ಇಹಕಂ ಪರಕಂ ಪೆಱಗಾದ ಬೂತಾದೆಂ (ರಾಮಾಶ್ವ. ೦೦೫-೦). ಬೂತನಟ್ಟು = ಬೂತಟ್ಟು ೧ : ಅರ್ಜುನಂ ಕರ್ಣನಲ್ಲಿಗೆ ನಾಳೆ

. . . ತಾನುಮಾನುಂ ಕಾದುವಮೆಂಬುದಂ ಪೇೞ್ದು ಬನ್ನಿಮೆಂದು ಬೂತ ನಟ್ಟಿದೊಡೆ (ಶಂಶಂ. ೧೨-೩೧ ವ). [ದೇ.॥ ತೆಲು. ಬೂತು]

**ಬೂತು₂**, ಬೂತ (ನಾ). ೧. ದೆವ್ವ ; ಪಿಶಾಚಿ ; ಭೂತ : ಕೂಡಿ ನಿನ್ನೊಡನೆ ಭೋಗಿಸಲೀಯದೆ ಕಮ್ಮಸೆನ್ನನುಬ್ಬಂತಕನೆಂಬ ಬೂತನೆಲೆ ಮಾಣಿಸಲಾಗದೆ ಪೇೞ್ (ಅದಿಪು. ೩-೫) ; ಈ ಬೂತೆನ್ನ ಸರಂಗೇಳ್ದೊಡಲ್ಲದೆ ಪೊಱಮಡುವನಲ್ಲನಿವಂಗಾನೆ ಸಾಲ್ವೆಂ (ಗದಾಯು. ೭-೯ ವ); ಅಕಟಾ ಬೂತುಗಳ ಕೈಬಾಯ್ಗೆ ಬಂದ್ಯೆ ತಂದೆ ಕುರುರಾಯ (ಕುವ್ಯಾಗ. ೫-೧೫). **ಬೂತ** : ೧. ಕೆಲಕೆ ಕಾದಿಹ ಬೂತ ಪ್ರೇತವು ಹಲವು ಜಟ್ಟಿಗ ಮಾಣಿಭದ್ರರು (ಕೌಶಿಚ. ೩೮-೨೩) : ಕನಸು ಬೂತವಾಯಿತು, ಮನಸು ನಾನೇ ಆದೆ (ಪಚಿವಾ. I, ೪೩೫). ೨. (ಅಲಂ) ದೊಡ್ಡದುಂ ; ಗಾತ್ರವಾದುದುಂ : ' ಬೂತಗನ್ನಡಿ ' ಪರಾ.

**ಬೂತಾಗು** = ಪ್ರೇತವಾಗು ; ಹೆಣವಾಗು : ತಾಗಿದ ಬೇಗದೊಳೆ ಶಿರೋಭಾಗಮನಿಪು ನಡೆ ಕಡಂಗುವುದ್ಭಟನಂ ಬೂ[ಪಾಠಾಂ. ಭೂ]ತಾಗಿರೆ ಕೆಡೆದುಂ ತಲೆಕೆೞಗಾಗಿ ಪರಾಜಯಮುಮನಱಿಪುವಂತಿರಿಬಲದೊಳ್ (ಪರ್ವಪು. ೪-೩೬). [ <ಸಂ. ಭೂತ ]

**ಬೂತು₃** (ನಾ). ೧. ಸರ್ಕಾರಕ್ಕೆ ಸಂಬಂಧಿಸಿದ ಡೈರಿಯಂ ಹಾಲು, ಮೊಸರಂ ಮುಂತಾದುವನ್ನು ಮಾರುವ ಸ್ಥಳ : ಏಳು ಗಂಟೆಯಾದರೂ ಬೂತಿಗೆ ಇನ್ನೂ ಹಾಲು ಬಂದಿಲ್ಲ (ರೂಢಿ). ೨. (ಸಾರ್ವಜನಿಕ ಸಂಸ್ಥೆ ಮೊದಲಾದ ಸದಸ್ಯರ) ಚುನಾವಣೆಯಲ್ಲಿ ಮತ ಚಲಾಯಿಸಲು ಗೊತ್ತುಪಡಿಸುವ ಸಾರ್ವಜನಿಕ ಸ್ಥಳ : ಈ ಶಾಲೆಯನ್ನು ಚುನಾವಣೆಯ ಬೂತು ಮಾಡಿದ್ದಾರೆ (ರೂಢಿ). [← ಇಂ. Booth]

**ಬೂತುಗ** (ನಾ) ೧. ಸೋಗುಗಾರ : ಮಾತುಗಂ, ಬೂತುಗಂ, ಕಂತೆಗಂ (ಶಮದ. ೨೦೦ ಪ್ರಯೋ). ೨. ಒಬ್ಬಾತನ ಹೆಸರು : ಶ್ರೀಮಂತ್ ಬೂತುಗ ಎಱೆಯಪ್ಪ ಪೆರ್ಮ್ಮಾಡಿ ಪಟ್ಟಬ್ಗಟ್ಟುವನ್ನು (ಎಕ. VII, ಶಿವಮೊ. ೯೬-೧೩; ಸು. 915); ಬೂತುಗನಜ್ಜಕಾಱ ಶ್ರೀಮತ್ ಮನಾಲರಜ್ಗೆ ಅಸುಪರದೊಳ್ ಮೆಚ್ಚಿ ಬೇಡಿಕೊಳ್ಳೆನ್ನೊಡೆ (ಎಕ. III. ಮಂಡ್ಯ. ೪೦-೯ ; 950).

[ ಬೂತು₁ + — ಗ₂ ]

**ಬೂತುಗಿ** (ನಾ). ಸೋಗು ಹಾಕುವವಳು : ಮಾತುಗಿ, ಮಾತುಗಿತಿ, ಬೂತುಗಿ, ಬೂತುಗಿತಿ (ಶಬ್ದಮ. ೦೯೩ ಪ್ರಯೋ). [ ಬೂತುಗ + — ಇ₂ ]

**ಬೂತುಗೆಡೆ** (ಕ್ರಿ). ತುಚ್ಛವಾದ ಮಾತನ್ನಾಡು ; ಕೆಟ್ಟ ಮಾತನ್ನಾಡು : ಬೂತುಗೆಡೆವನೊಳೆಂಬೆನೇ ಮಱುಮಾತನೆಲೆ ಗಾಂಗೇಯ (ಕುವ್ಯಾಗ. ೦೫-೧೦); ಕಾತರಿಸಿ ವಿಷಮಾತುರರು ನೆಱೆ ಬೂತುಗೆಡೆದರೆ ಗರುವರಾದವರಾತು ಮಾಱುತ್ತರವ ಕೊಡುವರೆ (ತೊರರಾ. ೩-೪-೨೨). [ಬೂತು₁ + ಕೆಡೆ₂]

**ಬೂತುಗೆಯ್** (ಕ್ರಿ). = ಬೂತಿಕ್ಕು : ಅಯ್ಯೋ ಇದೇಕೆ ಹರಿಯಣ್ಣಂಗೆ ಬಲ್ಮರುಳ್ ಮೊಯ್ಯನಾವರಿಸಿತೆನೆ ತದ್ದೂಷಕರ್ ಬೂತುಗೆಯ್ವುತಂ ಗಹಗಹಿಸುತಿರೆ (ಶವ್ಯಾ. ೫-೦೦). [ಬೂತು₁ + ಕೆಯ್₁]

**ಬೂತುಗೊಳ್** (ಕ್ರಿ). ಪಿಶಾಚಿ ಹಿಡಿ ; ಭೂತ ಮೆಟ್ಟಿಕೊಳ್ಳು : ನೆಟ್ಟನೆ ಬೂತುಗೊಳ್ವ ತೆಱದಿಂ ದಶಕಂಧರನಾಡಿ ಪಾಡಿ ನಾಣ್ಗೆಟ್ಟಿರೆ ಕೊಂಡನಲ್ಲದೆ ಬರಂಗಳನೀಶ್ವರನಲ್ಲಿ ಪೇೞಿಮಾಪ್ನೊಟ್ಟಜೆಯುಂದೆ ಕೊಂಡಂ (ಶಂಪಶಾ. ೯-೫೩). [ಬೂತು₂ + ಕೊಳ್₁]

**ಬೂತುತನ** (ನಾ). ಸೋಗು ; ನಟನೆ ; ಬಿಯ್ಯಾರ : ಬದೆದುಗಿದಲ್ಲದೇಂ ಪಿಡಿವಳೇ ಸೆಱಗಂ ನೆಱೆ ಪ್ರಾಣ ತಾಣಮುಂ ಬೆದಕದೆ ಸ್ವೈತೆ ಸೋಂಕುವಳೆ ಬೂತುತನಂ ಪೆಱಗಾಗೆ ಮಾತುಗಟ್ಟಿದಪಳೆ (೮ಲಾಪ. ೨-೦೦).

[ಬೂತು₁ + — ತನ]

**ಬೂತುತಪ** (ನಾ). ಸೋಗಿನ ತಪಸ್ಸು : ವನರುಹಗರ್ಭನೆಂಬವನ ಮುನ್ನಿನ ಗೆಯ್ದ ತಪಂ ತಿಲೋತ್ತಮಾಂಗನೆಯಿಸದಂತುಟಾದುದೆನೆ ಮತ್ತಿನ ಬೂತುತಪಂಗಳೆಮ್ಮ ಪೂರ್ವಿನ ಕಡೆಯೊಂದು ಪರ್ವಿನೊಳೆ ತೀರ್ವುವು (ಶಂಪಶಾ. ೬-೮೦). [ಬೂತು₁ + ತಪ₃]

**ಬೂತುವಣಿಗ** (ನಾ). = ಬೂತುಗ ೧ : ಬೂತುಗಂ, ಬೂತುವಣಿಗಂ (ಶಬ್ದಮ. ೪೦೫ ಪ್ರಯೋ). [ ಬೂತು₁ + — ವಣಿಗ₂ ]

**ಬೂತೇಶ್ವರ**, ಬೂತೇಸ್ವರ (ನಾ). ಶಿವನ ದೇವಾಲಯವಿರುವ ಒಂದು ಸ್ಥಳದ ಹೆಸರು : ಶ್ರೀಮದ್ಗಂಗ್ಗಂ ಬೂತೇಶ್ವರಕೆ ಪಡುವಣ ತೊರೆವಳ್ಳಿಯ ಬಾಸಂಬಾಳ್ಳಿಯೂರ ಮುಂನ್ದಣ ಕೆಱೆಯೊಳೆ ಸಾಬ್ಬಿರ್ನಮಸ್ಯಮುಂ ದೇವಭೋಗಂ ಬಿಟ್ಟಂ (ಎಕ. III, ಮೈಸೂರು. ೩೬-೦೪ ; ಸು. ೨೨೦ ?). **ಬೂತೇಸ್ವರ** : ಶ್ರೀಮತ್‌ಗೊಗ್ಗಿ ಬೂತೇಸ್ವರಕ್ಕರಡಗೋಡುಪಳ್ಳಿಯ ದೇವಭೋಗಂ ಬಿಟ್ಟಂ (ಎಕ. III, ಮೈಸೂರು. ೩೬-೩ ; ಸು. ೨೨೦ ?).

[ <ಭೂತೇಶ್ವರ ]

**ಬೂತೇಸ್ವರ** 'ಬೂತೇಶ್ವರ' ನೋ.

**ಬೂದ** 'ಬೂದಿ' ನೋ.

**ಬೂದಗುಂಬಳ** 'ಬೂದಿಗುಂಬಳ' ನೋ.

**ಬೂದಗೂಟು** (ನಾ). ಒಂದು ಊರಿನ ಹೆಸರು (?) : ಬಾಳುಗುಳಿಯ ಮಹಾಜನ ಅಯ್ವದಿಂಬರುಂ ಉಭಯಸಮ್ಮತದೊಳಿಟ್ಟು ಬಳಿಯರ ಬಾದಮ್ಮಗೆ ಬೂದಗೂಟಿನಿತ್ತೊರ್ (ಸೌಇಇ. IX-i. ೫೯-೯; 10ನೆಯ ಶತ); ಅರಸರ ಮೆಚ್ಚಿಸಿ ಬೂದಗೂಟಂ ಬಿಡಿಸುವೊಸಕ್ಕುಮೆಂದೊಡವ ಬಿಡಿಸಿದೊಡೆ (ಎಇ. XI, ೬-೦೨ ; 10ನೆಯ ಶತ). [ ? ]

**ಬೂದವೇಱು** (ಕ್ರಿ). ಬೂದಿಬಣ್ಣವನ್ನು ಹೊಂದು : ಊದಾಬಣ್ಣಕ್ಕೆ ತಿರುಗು : ಅದು ಮೊದಲೊಂಬುಗಳಿನಿೞಿದಿಳೆಯೊಳ್ ಬಿಟ್ಟು ಬೇರೂಱಿ ಬೆಳೆದ ಬೀಬಿಲ್ಗಳೊಂದೊಂದನೊತ್ತಿ ಪತ್ತಿ ಸುತ್ತಿ. . .ಕಪಲ್ತು ಕೊರ್ಬಿ ಬೂದವೇಱಿ ಬೆಳೆದು ಬೆಳಗಾಯ ಬಣ್ಣವಾಗಿ (೮ಲಾವ. ೯-೪೦ ವ).

[ ಬೂದ (<ಬೂದಿ) + ಏಱು₁ (<ಏಱ್₁) ]

**ಬೂದಿ**, ಬೂದ, ಬೂದು(ನಾ). ೧. ಯಾವುದಾದರೊಂದು ವಸ್ತುವನ್ನು ಬೆಂಕಿಯು ಪೂರ್ಣವಾಗಿ ಸುಟ್ಟು ಉಳಿಸುವ ಭಾಗ : ಒಲೆಯ ಬೂದಿಯು ಬಿಲಿಯಲು ಬೇಡ ಒಲಿದಂತೆ ಹೂಸಿಕೊಂಡಿಪ್ಪುದು (ಬಸವ. ೦೧೪) ; ವಾದಿಗಳಾಚಾರಿಯನಾಗಿ ಪರನೊಳು ಕಾದಿ ಬೂದಿಯನೆಯ್ದಿದೆಯಾ (ಪೋಹಶ. ೯-೨೦). ೨. ಗೋವಿನ ಸಗಣಿಯನ್ನು ಒಣಗಿಸಿ, ತುಷಾಗ್ನಿಯಲ್ಲಿ ಸುಟ್ಟು ಸಂಸ್ಕರಿಸಿದ ಪುಡಿ ; ವಿಭೂತಿ ; ಭಸ್ಮ : "ಬೂದಿಯುಂ ಭೂತಿಯುಕ್ಕು" (ಶಬ್ದಮಂ. ೧೩) ; ಬೂದಿ ಜಡೆ ಲಕ್ಕಣಂ ತಪಕಾದುವೆರಟಿರ್ದ್ದಣೆ ಶರಾಸನಂ ಕವಚಮಿವೆಂತಾದುವೊ ಮುತ್ತುಂ ಮೆಟಬಸುಂ ಕೋದಂತುಟೆ ನಿನ್ನ ತಪದ ಪಾಂಗೆಂತು ಗಡಾ (ಶಂಪಶಾ. ೬-೯೨); ಜಸಮೆ ತನಗೆ ಮೆಯ್ಸಿರಿಯೆಂಬುದನಱಿಪುವಂತೆ ಪೂಸಿದ ಬೂದಿಯೊಳಂ . . . ಚೆಲ್ವನಾಂತು (ಶಬ್ದಶಾ. ೦೬೭) ; ಬೊಕ್ಕಣದ ಬೂದಿಯನುಃಫೆನುತೂದಿ ಮೂಗಿನೊಳ್ ಪೊಕ್ಕೊಡೆ ಸೀಂತು . . . ಪುರ್ಬಿಕ್ಕುವ ಮರ್ಕಟಂ ನಗದ ತಾಪಸರಂ ನಗಿಸಿತ್ತರಣ್ಯದೊಳ್ (ಕಾವ್ಯಸಾ. ೦೦೦೮). ೩. ಊದಾಬಣ್ಣ : 'ಬೂದಿಗುಂಬಳ' ಪರಾ. **ಬೂದ** : ೩. 'ಬೂದವೇಱು' ಪರಾ. ೪. ಊದಾಬಣ್ಣವುಳ್ಳುದು : ತಮ್ಮೊಳು ತಾವುಪೊಪ್ಪಿ ಆ ಕುದುರೆ ಬೂದನುಯೆಂದು ಕದುರ್ವೆಂದಳು (ಕಾಶೀಪು. ೨೫೩-೫). **ಬೂದು** : ೩. 'ಬೂದುಂಗುಂಬಳ' ಪರಾ.

**ಬೂದಿ ಮಾಡು** = ಸುಡು ; ದಹಿಸು : ಇದು ಕೈಲಾಸಂ ಭವಾನೀಧವನ ನೆಲೆ ಮನೋಜಾತನಂ ಬೂದಿ ಮಾಡಿ[ತ್ತಿ]ದೞೊಳ್ (ಶಂಪಶಾ. ೭-೭೪) ; ಅವನ ಕೋಪಾಗ್ನಿಯ ಲೋಪಿಸಿ ಬೂದಿಮಾಡುವೆನು (ಧರಣ. ೨೩-೭೪). **ಬೂದಿ ಮುಚ್ಚಿದ ಕೆಂಡ** = ಮೇಲೆ ಬೂದಿ ಮುಚ್ಚಿಕೊಂಡಿದ್ದು ಒಳಗೊಳಗೇ ಉರಿಯುತ್ತಿರುವ ಕೆಂಡ ; ಅಂತರಂಗದಲ್ಲಿ

ತಾಪವನ್ನು ಹೊಂದಿರುವಿಕೆ: ಆದೊಡಂ ಲೌಕಿಕರ ಮತಂ ತಾನಾಗಿ ಸಂತತಂ ಬೂದಿಮುಚ್ಚಿದ ಕೆಂಡದಂತಾಗಿ ಅಂಕಕಾಱಂ ತಾನದಾಗಿ (ಶಬಸಾ. ೨೦೭-೪೪); ಬೂದಿ ಮುಚ್ಚಿದ ಕೆಂಡದಂತೆ ಮುದುರಿ ಕೂತವಳನ್ನು ರಂಗ ನಿಷ್ಠುರದೃಷ್ಟಿಯಿಂದ ನೋಡಿದ (ಶ್ರಕ್ಷ. ೫೦). **ಬೂದಿಹುಣ್ಣಿಮೆ**, **ಬೂದಿಹುಣ್ಣವೆ** = (ಶಿವನು ಮನ್ಮಥನನ್ನು ಸುಟ್ಟ ಸಂಕೇತವಾಗಿ) ಫಾಲ್ಗುಣಮಾಸದ ಹುಣ್ಣಿಮೆಯಂದು ಆಚರಿಸುವ ಹಬ್ಬ : ಕಾಮನನ್ನು ಸುಟ್ಟನಂತರ ಆ ಬೂದಿಯನ್ನು ಮೈಗೆ ಹಚ್ಚಿಕೊಳ್ಳುವುದು, ಬಣ್ಣದ ನೀರಿನಿಂದ ಓಕುಳಿಯಾಡುವುದು, ಹಾಡುವುದು ಈ ಹುಣ್ಣಿಮೆಯ ಮುಖ್ಯ ಆಚರಣೆಗಳು ; "ಹೋಳಿಹುಣ್ಣಿಮೆ" (ಶ್ರಶಬ್ದ); (೪). [ < ಸಂ. ಭೂತಿ ]

**ಬೂದಿಕಟ್ಟೆ** (ನಾ). ಸುಡುಗಾಡು ; ಸ್ಮಶಾನ : ಇನ್ನೂ ನನಗೆ ಬೂದಿ ಕಟ್ಟೆಗೆ ಹೋಗುವ ಕಾಲ ಬರಲಿಲ್ಲ (ಶುಕಶ. ೨೬). [ ಬೂದಿ+ಕಟ್ಟೆ$_{1}$ ]

**ಬೂದಿಕುಂಬಳ** 'ಬೂದಿಗುಂಬಳ' ನೋ.

**ಬೂದಿಗ** (ನಾ). ೧. ವಿಭೂತಿಯನ್ನು ಧರಿಸಿದವನು : ಪಾರ್ವನ ಪುತ್ರನಂ ಕಿಡಿಪ ನಂಟುಗಳ್ಗಿನ ತಿಱಿದಿ ಬೂದಿಗರ ಪತ್ರಿ ಬಿಡದಾತಂ ಪರಬ್ರಹ್ಮವೇ (ಬಸವಪು. ೧೬-೩). ೨. ಶಿವ ; ಪರಮಾತ್ಮ : ಅಂದಿವಳಿ ದೊರ್ಡಾ ಬೂದಿಗ ನೊಸಲ ಕಣ್ಣಿಂದ ಕೀಳೆನ್ನ ಸುಡುವನೆ (ಶುಶಾಸಂ. ೦೭-೯೮). ೩. ಒಬ್ಬಾತನ ಹೆಸರು : ಪೊಲುಕೇಶಿಯ ಬೂದಿಗನ ಕಾಳೆಗದೊಳ್ ಪೊಲುಕೇಸಿಯೊಡತಿಹದು ಕೊಕಾಳಿನ ಕೊನ್ದು ಸತ್ತ (ಎಕ. III, ಮೈಸೂರು. ೪೪-೭ ; ಸು. ೨೨೦ ?). [ ಬೂದಿ + —ಗ$_{2}$ ]

**ಬೂದಿಗುಂಬಳ**, ಬೂದಗುಂಬಳ, ಬೂದಿಕುಂಬಳ, ಬೂದುಗುಂಬಳ (ನಾ). ತರಕಾರಿಯಾಗಿ ಬಳಸುವ, ಕುಂಬಳಜಾತಿಗೆ ಸೇರಿದ ಒಂದು ಬಗೆಯ ಬಳ್ಳಿ ಮತ್ತು ಅದರ ದೊಡ್ಡ ಗಾತ್ರದ ಊದಾ ಬಣ್ಣದ ಕಾಯಿ : ಬೂದಿಗುಂಬಳದ ಕಾಯಂಗಡಿಯೊಳಿಟ್ಟಿರಲು ಮೇದಿನಿಪ ಕಂಡು ಬಿಸವಯ್ಯಯಿದು ಭಕ್ತನೇ ಸಾಡಿರದಿ ನೋಡೆಂದು ಪೇಳೆ (ಗುರುಚಾ. ೬-೨೯); ಕಳ್ಳಂಗಡಲೆ . . . ರಾಸ್ನೆ, ಬೂದಿಗುಂಬಳದ ಬೇರು, ಇವಂ ಸಮಭಾಗ ಕಷಾಯು ಕಾಸಿ ಕೊಡಲು ಸನ್ನಿಪಾತಜ್ವರ ಗುಣಮಕ್ಕುಂ (ಸಕವೈ. ೦೭೭) ; ಬೂದಿಗುಂಬಳ ಬಳ್ಳಿಗಾಧಾರವೆಂದು, ಮೊನೆಯಾದ ಮುಳ್ಗಳ ನೀಡಿ ಬೆಳೆವ ಪೊದೆಯಂತೆ (ಕುಂತಿ. ೪೩-೬). **ಬೂದಗುಂಬಳ** : ಹೊಂಗೆಬೀಜ, ಬೂದಗುಂಬಳ, ತಿಗಡೆ, ಮತ್ತಿ, ಕಫಿಪಡುವಲ, ಬಿನುರು, ಇವಂ ಸಮತೂಕ ಹಾಕಿ ಕಷಾಯ ಕಾಯಿಸಿಕೊಟ್ಟಲ್ಲಿ ಶೀತಜ್ವರ, ವಿಷಮಜ್ವರ, ದೋಷಜ್ವರವೂ ಸಹ ಮಾಣ್ಗುಂ (ಸಕವೈ. ೭೮). **ಬೂದಿಕುಂಬಳ** : ಬೂದಿಕುಂಬಳ :—ಈ ಬೀಜವಂ ಹಾಲಲ್ಲಿ ಅರೆದು ಬೆಲ್ಲ ಸಹ ಕುಡಿಯಲು ಋತುವಾಗುವಳು (ಶಿವ್ಯಶಿ. ೬). **ಬೂದುಗುಂಬಳ** : ನಮಗೆ ಹುರಿದ ಬೂದುಗುಂಬಳದ ಬಿತ್ತವನ್ನು ಕೊಟ್ಟವರ ; ನಾವು ನೋಡದೆ ಬಿತ್ತಿದ್ದು ತಪ್ಪು (ಹುಬ್ಬಹ. ೦೬೩). [ ಬೂದಿ + ಕುಂಬಳ ]

**ಬೂದಿಬಡಕ** 'ಬೂದಿಬಡಿಕ' ನೋ.

**ಬೂದಿಬಡಿಕ**, ಬೂದಿಬಡಕ, ಬೂದಿಬಡುಕ (ನಾ). ೧. ವಿಭೂತಿಯನ್ನು ಬಳಿದುಕೊಂಡಿರುವವನು ; ಭಸ್ಮವನ್ನು ಲೇಪಿಸಿಕೊಂಡಿರುವವನು. ೨. ಶಿವ ; ಪರಮಾತ್ಮ : ಬೂದಿಬಡಿಕನ ಮೆಯ್ಗೆ ಬಾವನ್ನಮಂ ತಿವಿದುರ್ (ಬಸವಸ್ತ್ರ. ೧೩೦-೦೩). **ಬೂದಿಬಡಕ** : ೨. ಉಸುರ್ದರೇ ಹರಿಯುಜಾದ್ಯರ್ ನಮ್ಮ ದೂಱನಾ ಮಸಣಗಾಹಿಗೆ ಬೂದಿ ಬಡಕನಾ ಮೊರೆಯನಾಲಿಸಿದನೇ (ಕಂಬಿ. ೪೭-೦೯) ; ಬಿನುಗುವೇಷವ ತಾಳ್ದ ಬೂದಿ ಬಡಕನಿಗೆ ವನಿತೆಯಾಗುವರೆ ಬಾಲೆ (ಯುಗಕ. ೦೮). **ಬೂದಿ ಬಡುಕ** : ೧. ಬೂದಿಬಡು[ಶಾಕಾಂ. ಡ]ಕರ ಮಾತನೆ ನಂಬಿ ಸನ್ಮಾರ್ಗವೀಧಿಯ ಮಾಣವ ನೀನುಳಿದು (ಗೊಮ್ಮಟ. ೭-೪೪) ; ಮಸಣದೊಳ್ಭೂತಪ್ರೇತಪಿಶಾಚಿಗಳೊಡನೆ ವಿರೂಪಾಕ್ಷನೆನಿಸಿಕೊಂಡು ಕುಣಿಯುತ್ತಿರ್ಪ ಬೂದಿಬಡುಕ ಶಿವನಂ ಶೈವರ್ಬಗೆಗೆ ಬಂದಂತೆ ಬಣ್ಣಿಪರ್ (ಅರ್ಹಾವ. ೨೮-೨೯ ವ). [ ಬೂದಿ + —ಬಡಿಕ$_{2}$ ]

**ಬೂದಿಬಡುಕ** ' ಬೂದಿಬಡಿಕ ' ನೋ.

**ಬೂದಿಬಾಳೆ**, ಬೂದುಬಾಳೆ (ನಾ). ಒಂದು ಬಗೆಯ ಬಾಳೆಯ ಗಿಡ ಮತ್ತು ಅದರ ಹಣ್ಣು : ಬದನೆಯ ಕಾಯ ಬೂದಿಬಾ[ಶಾಕಾಂ. ದಾ]ಳೆಯ ಹೂವ ಉನ್ನತಿಕೆವಡೆದ ಕಗ್ಗುಂಬಳದ ಕಾಯನಡಹೇಳಿ (ಸೂಪಶಾ. ೫-೫೨); ಬೂದಿಬಾಳೇಹಣ್ಣು . . . ಅಗಸೇಮರದ ಒಳನಾರು ತಳಿಗೆ ಹಾಕಿ ಕಿವಿಚಲು, ಒಳ್ಳೆಯ ಎಳನೀರ ಹಾಗೆ ಬಿಡುವುದು (ಶಿವ್ಯಶಿ. ೭೦); ಬಾಳೆಯ ಕುಲದಲ್ಲಿ ಗುಜರಾಥಿ, ರಸಬಾಳೆ . . . ಬೂದಿಬಾಳೆ, ಸೊನ್ನಿಬಾಳೆ, ಏಣು ಬಾಳೆ ಎಂದು ಈ ಪ್ರಕಾರ ಹಲವು ವಿಧವಾದ ಬಾಳೆಯ ಕುಲಗಳುಂಟು (ಕೃಷಿಶಾ. ೦೫೬). **ಬೂದುಬಾಳೆ** : ಹಾದೀಕಲ್ಲಿಗೆ ತೇದ ಗಂಧಾವನಿಕ್ಕಿ ಬೂದುಬಾಳೆಹಣ್ಣ ಸುಲಿದಿಕ್ಕಿ ವಳಗೀರೋ ಬಾಲೆ ಬಂದಕ್ಕೀ ತೋಳಸ್ಯಾಳೋ (ಹುಬ್ಬಹ. ೫೦). [ ಬೂದಿ + ಬಾಳೆ$_{1}$ (<ಬಾಟಿ$^{3}$) ]

**ಬೂದಿಬುಕ್ಕ** (ನಾ). ಮೈಗೆಲ್ಲಾ ಬೂದಿ ಹತ್ತಿರುವಂತಹುದು : ಬೂದಿ ಬುಕ್ಕಗಳಾಗಿದ್ದ ಆವನ ಮನೆಯ ನಾಯಿಗಳೂ ರಂಗ ಪುಟ್ಟರ ಮನೆಯ ನಾಯಿಗಳೂ . . . ಕೂಗತೊಡಗಿದ್ದುವು (ಶುಕಶು. ೦೪). [ ಬೂದಿ + ಬುಕ್ಕ$_{0}$ ]

**ಬೂದಿಬುಧವಾರ** (ನಾ). "ಕ್ರೈಸ್ತರ ಉಪವಾಸ ವ್ರತದಿನಗಳ ಮೊದಲನೆಯ ದಿನ (ಆ ದಿನ ಪಶ್ಚಾತ್ತಾಪಿಗಳ ತಲೆಯ ಮೇಲೆ ಬೂದಿಯನ್ನೆರಚುವ ಪದ್ಧತಿ ರೋಮನ್‌ಕ್ಯಾತೊಲಿಕರಲ್ಲಿದೆ)" (Ash-Wednesday. ಇಂಕಶ). [ ಬೂದಿ + ಬುಧವಾರ ]

**ಬೂದಿಮೆಯ್ಯ** (ನಾ). ಮೈಗೆ ಭಸ್ಮವನ್ನು ಬಳಿದುಕೊಂಡಿರುವ ಶಿವ : "ಎಲುಗೈಯ ಬೂದಿಮೆಯ್ಯಂ . . . ಜತ್ತುಗದಲೆಯನೆನೆ ಸತ್ಯವೀಂದ್ರರ್ ಸಲೆ ಪೇಟ್ವರ್ ಸ್ಮರಹರಂಗೆ ನಾಮವಿದೆನುತುಂ" (ಕಟಕ. ೦೮). [ ಬೂದಿ + ಮೆಯ್$_{2}$ + —ಅ$_{7}$ ]

**ಬೂದಿವೂಸು** (ಕ್ರಿ). ವಿಭೂತಿಯನ್ನು ಧರಿಸು : ನಾಗಶರ್ಮಂ ಬೂದಿ ವೂಸಿದ ತಪೋಧನನಂತೆಯುಂ . . . ಅಳಿಗಣ್ಣರಂತೆ ಮಿಳುಮಿಳನೆ ನೋಡುತ್ತುಂ ಮಠದಿಂ ಪೊಱಮಟ್ಟು ನಿಂದ ಛಾಂದಸಬ್ರಾಹ್ಮಣನಂ ಕಂಡು (ಕಂಶಕಂ. ೦೬೭-೦೭). [ಬೂದಿ+ಪೂಸು$_{1}$]

**ಬೂದು** 'ಬೂದಿ' ನೋ.

**ಬೂದುಗುಂಬಳ** 'ಬೂದಿಗುಂಬಳ' ನೋ.

**ಬೂದುಬಾಳೆ** 'ಬೂದಿಬಾಳೆ' ನೋ.

**ಬೂಪಳ** (ನಾ). ಬೂಟಾಟಿಕೆ; ನಟನೆ : 'ಬೂಪಳಗಾತಿ' ಪರಾ. [?]

**ಬೂಪಳಗಾತಿ** (ನಾ). ಸೋಗಲಾಡಿ; ಮಿಟುಕಲಾಡಿ : ಬೂಪಳಗಾತಿ . . . ಏನೂ ಅರೀದ ಬಾಯಿ ಹಂಗೆ ಅಳ್ತಾ ಕುಂತವ್ಳೆ ಇಲ್ಲಿ (ಸರ್ಪಮಂ. ೨೦೦). [ ಬೂಪಳ + —ಗಾತಿ$_{8}$ ]

**ಬೂಮ**, ಬುವ್ವ, ಬೂವ (ನಾ). ೧. ಮದುವೆಯ ದಿನದಂದು ವಧೂವರರೂ ಎರಡು ಕಡೆಯ ಬೀಗರೂ ಒಂದೇ ಪಂಕ್ತಿಯಲ್ಲಿ ಕುಳಿತು ಮಾಡುವ ಮೃಷ್ಟಾನ್ನದ ಊಟ : ಮದುವೆಯಂದು ವಧೂವರರು ಬೂಮ ಮಾಡುವಾಗ, ಅಳಿಯ ತನ್ನ ಎಂಜಲುಕೈಯಿಂದಲೇ ಅತ್ತೆಯ ಕೈ ಹಿಡಿದು ಆಕೆಯ ಗಂಡನ ಹೆಸರು ಹೇಳಿಸುವ ಪದ್ಧತಿಯಿದೆ (ರೂಢಿ). **ಬುವ್ವ** : ೧. (ಎಸಮ್ಮ. III, ೯). ೨. (ಮಕ್ಕಳ ಭಾಷೆಯಲ್ಲಿ) ಅನ್ನ : ಬುವ್ವ ಬೇಕೆಂದು ಮಗು ಕಾಡುತ್ತಿತ್ತು (ರೂಢಿ). **ಬೂವ** : ೧. ಇರೆ ತಂದು ಮುಂದಿಟ್ಟರಂದು ಬೂವವನಲ್ಲಿ ಘರಸ ಕಂಡಲ್ಲದಿನ್ನೆನಗೂಟವಿಲ್ಲಲ್ಲಿ ಎನುತ ನಡೆತಂದಳಾಮುದದಿಂದ ಶಿವನೆಡೆಗೆ (ಶಿವಸಂ. ೨೬೯-೦೦೩); ತದನಂತರಂ

ಬೂವಮಾನರ್ಚಿಸಿದಿಂ ಬಜಿಯುಮರೆಸನನರಲಸಜ್ಜೆವನೆಯೊಳಿರಿಸಿ (ಲೀಲಾವ. ೦೩-೪ ವ) ; ಬೂವಕ್ಕವಸರಮಾಗಲ್ ಪಾವನತರಮಾದುದೊಂದು ಮಣಿಭಾಜನವುಂ ಪೀವರಮುಂ ತಂದಿರಿಸೆ ವಧೂವರರೊಂದಾಗಿ ಕುಳ್ಳಿದರ್ ಮುದದಿಂದಂ (ಬಾರತ. ೦೦-೦೬೨).

**ಬುವ್ವದ ಪೂಜೆ** = ವಧೂವರರಿಗೆ ಸಿದ್ಧಪಡಿಸುವ ಭೋಜನ ಸಾಮಗ್ರಿಗಳಿಗೆ ಮಾಡುವ ಪೂಜೆ ಮತ್ತು ಅನಂತರದ ಊಟದ ಸಮಾರಂಭ : (ಎಸಪ್ಕ. XVII. ೦೪). **ಬುವ್ವದ ಪೆಟ್ಟಿಗೆ** = ವಧೂವರರಿಗೆ ಕೊಡಬೇಕಾದ ಉಣಿಸು ಮುಂತಾದುವುಗಳನ್ನೊಳಗೊಂಡಿರುವ ಪೆಟ್ಟಿಗೆ : ವಸ್ತ್ರಗಾರಪೆಟ್ಟಿಗೆ ಬುವ್ವದ ಪೆಟ್ಟಿಗೆ ಅಡ್ಡಪೆಟ್ಟಿಗೆ ಇವುಗಳ ಮೆರವಣಿಗೆ ಆಗುತ್ತದೆ. ಈ ಪೆಟ್ಟಿಗೆಯಲ್ಲಿ ಗಂಡಿನ ಕಡೆಯವರು ಹೆಣ್ಣಿಗೆ ಕೊಡಬೇಕಾದ ಎಲ್ಲಾ ಉಡುಗೆರೆಗಳನ್ನೂ ಇಟ್ಟಿರುತ್ತಾರೆ (ಹಳ್ಳಿಜಾ. ೬೦). [< ಸಂ. ಭೂಮನ್./ತಮಿ. ಪೂವ; ತೆಲು. ಬುವ್ವಮು./ಮರಾ. ಭೂವು]

**ಬೂರ**, ಬೂರಗ, ಬೂರಗೆ, ಬೂರಲ, ಬೂರವ, ಬೂರುಗ, ಬೂರುಗೆ (ನಾ). ಒಂದು ಬಗೆಯ ಮರ ಮತ್ತು ಅದರ ಅರಳೆ; ದೂದಿ ; **ಶಾಲ್ಮಲಿ** : ಎನ್ನ ಭಕ್ತಿ ಎಲವದ ಕಾಯ ಫಲದಂತೆ ನೋಡಯ್ಯಾ ಹೊಱಗೆ ಹೆಂಪು ಒಳಗೆ ಬೂರವಯ್ಯ (ವಚಸಂ. ೩೦೪-೪೦); ವೀರತಪಸ್ವಿ ನಿಂದನಿರುಳುಂ ಪಗಲುಂ ಹಿಮಪುಂಜಮುಂಗದೊಳ್ ಬೂರಮನೊಟ್ಟಿದಂತಲೆಯೆ . . . ಬೆಳ್ಳವಾಸದೊಳ್ (ಅನುಪ್ರ. ೪-೨೦); ಆರಯ್ಯೆ ಲಘು ವಪ್ಪುದಾ ಹುಲ್ಲು ಹುಲ್ಲಿಂದ ಬೂರವತಿಲಘುವಲಾ ಬೂರದಿಂ ಲಘುವಪ್ಪ ರಾರೆನಲು ಯಾಚಕನೆನಲ್ಕೆ (ಏಕ್ಕಿ ಪು. ೪-೨೫-೨೫). 'ಕೆಂಬೂರ' ಪರಾ. **ಬೂರಗ** : ಬೂರಗದ ಮರದ ಹುರುವನ್ನೂ ಅರಿಸಿನ ನೀಲೀಬೀಜ ತ್ರಿಫಲಂಗಳನ್ನೂ ಚೂರ್ಣವಂ ಮಾಡಿ ಮದ್ಯವೆರಸಿ ಹತ್ತಿಯ ಗಿಡಕ್ಕೆ ಲೇಪನಂಗೈದು (ಸಾಗಂ೨. ೪೩೬-೦೬); ಬೂರಗದ ಮರದ ಕೆಳಗೆ ವಿಶ್ರಮಿಸಿ ಕೊಳ್ಳುತ್ತ . . . ಈ ಸುಪುತ್ರನನ್ನು ಹಡೆವಳು (ಚಕ್ರೋತಿ. ೦) ; ನೆಳಲು ಬೂರಗಕಿಲ್ಲ ಕೂಳಿಗೆ ನೀತಿಯಿಲ್ಲ (ಗಾದೆ). **ಬೂರಗೆ** : 'ಬೂರಗೆಬಂಕೆ' ಪರಾ. **ಬೂರಲ** : ಪ್ರಯೋಜನವಲ್ಲದ ಬೂರಲದ ಮರದ ಹೂವ ನೋಡಿ ಗಿಡಗಳ ಸಮೂಹ ಮುಂದಕ್ಕೆಯ್ದದೆ (ಪಚಶಾ. I, ೨೦೬-೩ ಅರ್ಥ) ; ನಮ್ಮ ಉಪಾಧ್ಯಾಯರು ನನ್ನನ್ನು ಬೂರಲದ ಹೂವಿಗೂ ಸೊಟ್ಟ ಸೋರೆ ಗುಂಬಳಕಾಯಿಗೂ ಹೋಲಿಸಿ ಉಪಹಾಸ ಮಾಡುತ್ತಿದ್ದರು (ಇಶ್ರ್ಯ. ೪೪೬). **ಬೂರವ** : ಎಲವದ ಬೂರವನೊರಳೊಳ್ ತುಳಿದಡೆ ತದ್ವರ್ಣ ಬಿಡದ ತೆಜದಿಂ (ಪಪ್ಪಜಾ. ೫-೦೦೬). **ಬೂರುಗ$_1$**: "ಪಿಚ್ಛಿಲಾ . . . ಶಾಲ್ಮಲೀ—ಇ ಬೂರುಗದ ಗಿಡ, ಚಕ್ಕಮುಕ್ಕೀ ಹತ್ತೀಗಿಡ, ಬೆಂಡುಹತ್ತೀಗಿಡ, ಎಲವದ ಮರ" (ಸಿದ್ಧಾಂತಿ. ೦೨೨) ; ಜಗದೊಳಗೆ ಲಘು ಶಾಷ್ಪಮದಱಿಂ ಲಘು ತೃಣಂ ತೃಣದಿಂದೆ ಲಘು ನೆಱೆ ಲಘು ಶಿರೋಜ ಶಿರೋಜದಿಂ ಲಘು ಬೂರುಗ (ಶಂಕರಾ. ೭-೨೨) ; ಬೂರುಗದ ಚಕ್ಕೆ, ಬೂರುಗದ ಎಲೆ ಇವುಗಳನ್ನು ನೀರಿನಲ್ಲಿ ಬೇಯಿಸಿ . . . ಏಲಕ್ಕಿ ಪ್ರತಿಪಾಕವಿಕ್ಕಿ ಅರೆದು ಕೊಡಲು ಛಳಿಜ್ವರ ಬಿಡುವುದು (ಸಕಪ್ಪ. ೭೪) ; ಬೂರುಗದ ಮರ ಗಿಣಿ ಕಾದ ಹಾಗೆ (ಗಾದೆ). **ಬೂರುಗೆ** : 'ಬೂರುಗೆಬಂಕೆ' ಪರಾ.

**ಬೂರದ ಹಾಸು** = ದೂದಿಮರದ ಅರಳೆಯಿಂದ ಮಾಡಿದ ಹಾಸುಗೆ : ಸುಡುವ ಬೆಂಕಿಯ ತುದಿಯ ಮೊನೆಯಲ್ಲಿ ಒಂದರಗಿಣಿ ಮಣಿಮಾಡದ ಮನೆಯಲ್ಲಿ ಬೂರದ ಹಾಸು ಹಾಕಿ ನೀರಿನ ಮಂಚದ ಮೇಲೆ ನಾರಿಯರೆಲ್ಲರು . . . ಮಲಗಿರಲಾಗಿ (ಪೋಲೀಪಾ. ೨೬೦-೬೦೦). **ಬೂರಲ ಅರಳೆ**, **ಬೂರುಗದ ಅರಳೆ** = ದೂದಿಮರದ ಅರಳೆ,—ಹತ್ತಿ : ಬೂರಲ ಅರಳೆಯ ಮಿದುವಾದ ದಿಂಬಿಗೆ ಮೊಲಕನ್ನು ಆಸರೆಯಾಗಿರಿಸಿ ಮಲಗಿದ್ದ (ಹಂದುಟ. ೮೦) : ಅವರ ಮಹಾಕೃತಿಗಳು ಬೂರುಗದ ಅರಳೆಯಂತೆ ಹಗುರವಾಗಿಲ್ಲ, ವಜ್ರದಂತೆ ಘನವಾಗಿವೆ (ಶಾಪಗೀ. ೩೦). **ಬೂರುಗದ ಹತ್ತಿ** = ಬೂರಲ ಅರಳೆ : ಬೂರುಗದ ಹತ್ತಿಯ ಮೃದುವಾದ ಹಾಸುಗೆಯ ಮೇಲೆ ಮಲಗಿದ ಕೂಡಲೆ ನಿದ್ರೆ ಹತ್ತಿತು (ಕೂಶ).

[ದೇ.॥ ತಮಿ. ಪೂಲ್, ಪೂಲಾ, ಪೂಳೈ ; ಮಲ. ಪೂಲ ; ತುಳು. ಬೂರಿಗ್, ಬೂರುಗ, ಬೋರ ; ತೆಲು. ಬೂರಗ, ಬೂರುಗ, ಬೂರುಗು, ಬೂರುವು ; ಪರ್ಜಿ. ಬೂರು]

**ಬೂರಗ** 'ಬೂರ' ನೋ.

**ಬೂರಗಬಂಕ** 'ಬೂರಗೆಬಂಕೆ' ನೋ.

**ಬೂರಗೆ** 'ಬೂರ' ನೋ.

**ಬೂರಗೆಬಂಕೆ**, ಬೂರಗಬಂಕ, ಬೂರುಗಬಂಕ, ಬೂರುಗೆಬಂಕೆ (ನಾ). ಎಲವದ ಮೇಣ ; ದೂದೀಮರದ ಹಗಿಸು : "ಪಿಚ್ಛಾ, ಶಾಲ್ಮಲೀ. ವೇಷ್ಟಃ — ಇ ಬೂರಗೆಬಂಕೆ ಹೆಸರು ; ಎಲವದ ಮ್ಯಾಣ" (ಸಿದ್ಧಾಂತಿ. ೦೨೩). **ಬೂರಗಬಂಕ** : "ಪಿಚ್ಛಾ—ಗಂಜಿ, ಬೂರಗಬಂಕ" (ಸಿದ್ಧಾಂತಿ. ೪೪೫). **ಬೂರುಗಬಂಕ** : (+). **ಬೂರುಗೆಬಂಕೆ** : (+).

[ಬೂರಗೆ (< ಬೂರ) + ಬಂಕೆ$_1$]

**ಬೂರಣ**, ಬೂರಣೆ (ನಾ). ಯಾವುದಾದರೂ ವಸ್ತುವಿಗೆ ಹುಳುಹಿಡಿದು ಜೊಳ್ಳಾದುದು : ನಾಂದುಪನಡಿಗಟ್ಟಂ ಪುಟು ತಿಂದುವಸವೆಯೊತ್ತಿ ಬೆಂದುವಂ ಬೂರಣಮು(ದಿ)ಂ ಕಂದಿದುವಂ ಮೊಳೆವೋದುವನೆಂದುಂ ಕಟ್ಟಲ್ಕೆವೇಡ ಖಾ(ಬಾ)ಣದಿಗಳಂ (ಅಕ್ಕಶಾ. ೭-೫೬). **ಬೂರಣೆ** : ಬೂರಣೆಯಾದ ಕಡಲೆಯ ತಿಂದರೆ ನಾಚುವ ನೀರ ಕುಡಿದರೆ ನಾಚುವ ಕವಳವ ಕೊಂಡರೆ (ಅಕ್ಕಪೀ. ೩೭-೭). 'ಬೂರಬೂರಿ$_2$' ಪರಾ. [?]

**ಬೂರಲ** 'ಬೂರ' ನೋ.

**ಬೂರವ** 'ಬೂರ' ನೋ.

**ಬೂರವಟ್ಟಿಗೆ** (ನಾ). ಮೇಲೆ ಹೊದ್ದುಕೊಳ್ಳುವ ವಸ್ತ್ರ : "ಬೂರವಟ್ಟಿಗೆ ಬೃಹತಿಕಾಸಂಜ್ಞಕಂ" (ವಸ್ತುಕೋ. ೭೮-೨೦). [< ಸಂ. ಬೃಹತಿಕಾ ?]

**ಬೂರವಡ** (ನಾ). ದೂದಿಮರದ ಹತ್ತಿಯಿಂದ ಮಾಡಿದ ಬಟ್ಟೆ : ಅಂಬುಜನೇತ್ರೆಯರ್ಕಳ ಘನಸ್ತನದೊತ್ತು ನಿತಂಬದೊತ್ತು . . . ಬಿಂಕಂಬಡೆದಿರ್ದ ತೆಳ್ಗದಪಿನೊತ್ತು ವಿಟರ್ ನೆಱೆ ಕಾವುವಲ್ಲದೀ ಕಂಬಳಿ ದಟ್ಟಿ ಬೂರವಡವೆಂಬಿವು ಕಾವುವೆ ಶೀತಕಾಲಮಂ (ಸೂಕ್ತಿಸು. ೦೦-೨೬೦).

[ಬೂರ + ಪಡ$_4$]

**ಬೂರಾ** (ನಾ). ನಯವಾದ ಒಂದು ಬಗೆಯ ಬಿಳಿಸಕ್ಕರೆ : ಈ ಸ್ಥಳದಲ್ಲಿ ಬೂರಾಸಕ್ಕರೆ ತಯಾರಿಸುತ್ತಿದ್ದರು (ಕೃವಾಇ. I, ೪೦೨) ; ಹನ್ನೆರಡುದಿನಗಳೂ ಬೂರಾಸಕ್ಕರೆ, ಹೂ, ಗಂಧವನ್ನು ಹೊತ್ತು, ಭಕ್ತಿಯಿಂದ ಬಾಬಯ್ಯನ ವಿಗ್ರಹದ ಮುಂದೆ ನಿಂತು ಪ್ರಾರ್ಥಿಸುತ್ತಿದ್ದಳು (ಮಗಮೂಂ. ೧).

[← ಹಿಂ. ಬೂರಾ, ಭೂರಾ]

**ಬೂರುಗ$_1$** 'ಬೂರ' ನೋ.

**ಬೂರುಗ$_2$** 'ಬುರುಗು$_2$' ನೋ.

**ಬೂರುಗಬಂಕ** 'ಬೂರಗೆಬಂಕೆ' ನೋ.

**ಬೂರುಗೆ** 'ಬೂರ' ನೋ.

**ಬೂರುಗೆಬಂಕೆ** 'ಬೂರಗೆಬಂಕೆ' ನೋ.

**ಬೂರುಡೆ** (ನಾ). ಒಂದು ಬಗೆಯ ಮರ : ಭೂತಾಳಿ ಬೂರುಡೆ ಮಿಟ್ಟಲಿಯ ದಿಂಡ ಪಾತಂಗ ಮುಗುಳಿಯ ಮರನು . . . ಅಲ್ಲಿಹವು (ಶಿಜಗಂ. ೦-೫೫). [?]

**ಬೂರ್ಜವಾ** 'ಬೂರ್ಜ್ವಾ' ನೋ.

**ಬೂರ್ಜ್ವಾ**, ಬೂರ್ಜವಾ (ನಾ). ೧. ಮಧ್ಯಮ ವರ್ಗದ ಜನತೆ ಮತ್ತು ಆ ವರ್ಗಕ್ಕೆ ಸೇರಿದವನು : ನಮ್ಮ ದೇಶದ ಎಲ್ಲ ಪಡವಳಿಕೆಗಳೂ

ಬೂರ್ಜ್ವಾ ಮಟ್ಟವನ್ನು ಮೀರಿಹೋಗಿಲ್ಲ (ಲೂಹಿ). **ಬೂರ್ಜ್ವಾ :** (ಗು). ೨. ಮಧ್ಯಮ ತರಗತಿಯ : ಈ ಬೂರ್ಜ್ವಾ ಗವರ್ನ್‌ಮೆಂಟು ಹೋಗಲೇಬೇಕು (ಹಮ್ಮಂದ. ೦೩). [←ಇಂ. Bourgeois]

**ಬೂರ್ನೀಸು** 'ಬುರ್ನೀಸ್' ನೋ.

**ಬೂಲ, ಬೂಲು** (ನಾ). ೧. ಶರೀರ; ದೇಹ ; ಮೈ : ನಿನ್ನ ಈ ಕರೀ ಬೂಲಕ್ಕೆ ಯಾಕೋ ಈ ಬಿಳಿಬಟ್ಟೆ? (ಶುಲಿಪು. ೯೯). **ಬೂಲು :** ೨. (ಕರಾ) ನಡು ; ಸೊಂಟ. [ ?. / ತೆಲು. ಬೂಲ=ಮರದ ಕಾಂಡದ ಮಧ್ಯದ ನಿಸ್ಸಾರವಾದ ಭಾಗ]

**ಬೂಲು** 'ಬೂಲ' ನೋ.

**ಬೂವ** 'ಬೂವು' ನೋ.

**ಬೂವಗಾವುಂಡ** (ನಾ). ಒಬ್ಬಾತನ ಹೆಸರು : ಇನಿತು ಮಣ್ಣ ಬಿಡಿಸಿದ ಪ್ರಭುಗಳಂಕನಾವು ಬೂವಗಾವುಂಡ ಪಡಲಬ್ಬೆ ಪಡುದೆಯ್ಯ (ಎಕ. V. ಅರಕ. ೨೯-೦೬; ಸು. ೯೦೦). [ಬೂವ,+ಗಾವುಂಡ (<ಗಾವುಂಡ)]

**ಬೂವಯ್ಯ** (ನಾ). ಒಬ್ಬಾತನ ಹೆಸರು : ಮಂಚಿತ್ತಿಯುರ ಬೂವಯ್ಯನ ಮಗಂ ಬದಿಯಾಯ್ತು ತುಱುವನ್ನಿಕ್ಕಿಸಿ ಕಾದಿ ಸತ್ತು (ಎಕ. II. ೩೯೯-೮; ೫೫೪೯); ಪತ್ತುಗದ್ಯಾಣ ಪೊನ್ನುಂ . . . ಭತ್ತಮುಮಂ ಎಲ್ಲಾ ಕಾಲಕ್ಕಂ ಸಾಸನವಾಗೆ ಬಿಟ್ಟರ್ ಬೂವಯ್ಯನಕ್ಕರಂ (ಎಕ. I(R), ೯೭-೦೦; ೧೭ನೆಯ ಶತ).

[ಬೂವ, + ಅಯ್ಯ$_{3}$]

**ಬೂವಿ, ಬುವಿ** (ನಾ). ಧರಣಿ ; ಭೂಮಿ : "ಎಳೆ, ಪೊಡವಿ, ತಿರೆ, ಧರೆ, ರನ್ನವಸುಬಿಳ್, ಬೂವಿ, ಬುವಿ—ಈ ೭ ಭೂಮಿ" (ಕನಕಾ. ೫೫-೨೦೦); ಮಕಾರಕ್ಕೆ ವಕಾರಂ . . . ಭೂಮಿ—ಬೂವಿ (ಶಮದ. ೨೬೩ ಪ್ರಯೋ): ಬೂವಿಯೊಳುಱ ನೀನೆ ಸಕಲಮಾನ್ಯೆ ಸುಕನ್ನೆ (ಹಾಲಾಸ್ಯ. ೨-೫-೯೦); ನಿನ್ನನ್ನರಂ ಬೂವಿ ಬಿದಿಸ್ನುವೇಕೆ ನುಂಗಳೊ ?(ಸಂಸಹ. ೨೯-೦). **ಬುವಿ:** "ಧರೆಗಂ ತಾಂ ಬೂವಿಯುಂ ಬುವಿಯುಮೆಂದೆನುತ್ತಂ" (ಕವಿಕಂ. ೯೭); ಯುವತಿಜನಸಂಸ್ಪರ್ಶತನುವೀ ಬುವಿಗೆ ಬಯಸಿತೆ ಹಾಯೆನುತ ಜನನಿವಹ ಸೆಱ ಮಱುಗಿತ್ತು ತದ್ರಾಜ್ಯಾವಸಾನದಲಿ (ಜೈಮಿ. ೫-೫); ಬುವಿಯಲ್ಲಿ ಕುಸುಮದೊಳ್ ಲಿಂಗದಾಕೃತಿ ತಾಳ್ದು ಶವೆ ಮೆಱವುತಿರ್ಪುದೀ ಕರವೀರ ಪುಷ್ಪವೃಕ್ಷವು (ಶ್ರೀಶಾ. ೩-೩೯); ಇಳಿಯೆ ನೀವು ಅಳಿಯೆ ನೋವು ಬುವಿಗೆ ದಿವಿಯು ತನ್ನ! (ಅನಿಕೇ. ೨೦-೬). [<ಸಂ. ಭೂಮಿ]

**ಬೂವು** (ನಾ). (?): ತಂಬುಲಿಗರೊಳ್ಗಣ ೧ ತಳ್ಳಿಗರೊಳ್ಗಣ ೧ ಜಗತಿಯ ಬೂವುಗಳೊಳ್ಗಣ ೧ ಅವರೊಕ್ಕಲೊಳ್ಗೀಸ ೧೦ (ಎಕ. VII. ಶಿಕಾ. ೯೯-೩೨; 1094). [ ? ]

**ಬೂಷಲು** 'ಬೂಜು$_{1}$' ನೋ.

**ಬೂಷ್ಟು** 'ಬೂಜು$_{1}$' ನೋ.

**ಬೂಸ, ಬೂಸಿ** (ನಾ) ೧. (ದನಕರುಗಳು ಕುಡಿಯುವ ಕಲಗಚ್ಚಿನೊಡನೆ ಮಿಶ್ರ ಮಾಡುವ) ಧಾನ್ಯದ ಹೊಟ್ಟು; ತವುಡು; ಉಮ್ಮಿ : ಹೇರಿ ಕೊಪ್ಪ ಜಿನಿಸು ವಿದಳ ಬೂಸ ಅಕ್ಕಿ ಭತ್ತ ರಾಗಿ ಉಪ್ಪು ಬೆಲ್ಲ ಎಣ್ಣೆ ತುಪ್ಪ ಮುನ್ನಾದ ಜಿನಿಸುಗಳನೂ ಕಾಲಕಾಲಂ ಪ್ರತಿಯಲ್ಲೂ ಹೇರಿ ತನ್ದು ಕೊಣ್ಡು (ಎಕ. VIII. ತೀರ್ಥಹ. ೯೨-೨೦ : 1642) : ಇಲ್ಲಿಯ ಪೇಟೆಯಲ್ಲಿ ಬೂಸದ ವ್ಯಾಪಾರವಾದರೂ ತಕ್ಕಮಟ್ಟಿಗೆ ನಡೆಯುತ್ತದೆ (ಮುಂಬಯಿ. ೯-೦೯೩). ೨. ದಿನಸಿ ; ಧಾನ್ಯ ; ಕಿರಾಣಿ : (?). ೩. (ಅಲಂ) ಸತ್ವವಿಲ್ಲದುದು ; ಹುರುಳಿಲ್ಲದುದು ; ನಿಷ್ಪ್ರಯೋಜಕವಾದುದು : ಈ ಬರವಣಿಗೆ ತೀರಾ ಬೂಸ ಎನಿಸಿತು (ಲೂಹಿ). **ಬೂಸಿ :** ೪. ತಥ್ಯವಿಲ್ಲದುದು ; ಸತ್ಯದೂರವಾದುದು ; ಜಳ್ಳು : ನೀನು ಹೇಳಿದ್ದೆಲ್ಲಾ ಬರೀ ಬೂಸಿ (ಲೂಹಿ).

[←ಹಿಂ. ಭೂಸಾ, ಭೂಸೀ; ಮರಾ. ಭುಂಶೀ, ಭುಂಸಾ. ಭೂಂಸ್. ಭೂಸ್; ಬಂಗಾಲಿ. ಭೂಶಿ; ಗುಜ. ಭುಸೋ, ಭುಸ; ಪಂಜಾಬಿ, ಭೂಸ್./ ಸಂ. ಬುಷ, ಬುಸ./ತೆಲು. ಬೂಸ]

**ಬೂಷಣ** (ನಾ). ಅಲಂಕಾರ; ಭೂಷಣ: ಈಗಳ್ ರಾವಣನ ಬಲದೊಳ್ ಮಲೆನಾಡಿಗರ ಪಂಡೊಂದುಱಿದುದು ಇವರ್ಗಾಳ್ಪಲಕಿರ್ದಂತೆ ಕೈದುಗಳುಂ ಬೂಷಣಂಗಳುಮಿಲ್ಲಂ (ಅದ್ಭುತ. ೯೬-೨೭). [< ಸಂ. ಭೂಷಣ]

**ಬೂಸರು** 'ಬೂಜು$_{1}$' ನೋ.

**ಬೂಸಲು** 'ಬೂಜು$_{1}$' ನೋ.

**ಬೂಸಿ** 'ಬೂಸ' ನೋ.

**ಬೃಂದ** (ನಾ). ೧. ಗುಂಪು ; ಸಮೂಹ : "ನಿಕುರುಂಬಂ ನಿವಹಂ ವ್ರಜಂ ಸಮುದಯಂ ಬೃಂದಂ ಚಯಂ . . . ಸಮೂಹಂ ವ್ರಾತಮೇಕಾರ್ಥಕಂ" (ವಸ್ತುಕೋ. ೦೦೨-೨೭) ; ಅದೆಂತುಚಿತವಾಕ್ಯವಾತ್ಮಗುಣಬೃಂದವಿಂತೀ ಜಗಕ್ಕದೆಂತು ನಯನೋತ್ಸವಂ ಸತತವಾಕ್ಯಮಂತಾಗೆ ಯತ್ನದಿಂ ನಿಜಶರೀರಮಂ ನಿಲಿಸವೇಬ್ಬುದೀ ದೇವಿಯರ್ (ಕಾದಂಬ. ೯೦೫) : ಅರಿ ಭೂಪಾಳಕಿ(ಕಿ)ರೀಟತಾಟಿತಪದಂ ಸಪ್ತಾಬ್ಧಿಸನ್ಮುದ್ರಿತೋರ್ವರೆಗೊಪ್ಪಂ ಪತಿ ಸಂದ ವಂದಿ ಬುಧಬೃಂದಕ್ಕೊಂದುವೊಂದಂದದಿಂ ಪಿರಿದೀವಂ (ಎಇ. XXVIII. ೩೯-೦೦; 1032). 'ಬೃಂದಗಾನ' ಪರಾ. ೨. ರಾಶಿ ; ಒಟ್ಟಿಲು. [ಸಂ.]

**ಬೃಂದಗಾನ** (ನಾ). ಸಾಮೂಹಿಕವಾಗಿ ಹಾಡುವ ಹಾಡು: ವೃಂದಗಾನ: ಅವರ ಸಂಗೀತ ಬೃಂದಗಾನರೂಪದಲ್ಲೇ ಪ್ರಗತಿಹೊಂದಿದೆ (ಸಂಗೀತಂ. ೦೮೭). [ಸಂ.]

**ಬೃಂದಾರಕ** (ಗು). ೧. ದೇವಲೋಕಕ್ಕೆ ಸೇರಿದ; ಸ್ವರ್ಗದ : ಮರ್ತ್ಯದಿಂ ಸ್ವರ್ಗಕ್ಕೆ ಕೊಂಡೊಯ್ಯುವೊಂದು ಬೃಂದಾರಕವಿಮಾನವೆನೆ ಚಿತೆ ಹೊಡಿ ನಿಂದುದು ವಸಧಿವೇಲೆಯಲಿ (ಚನ್ನಬಂಗ. ೮೯-೨೮೩೭). (ನಾ). ೨. ದೇವತೆ; ಅಮರ ; ಸುರ : "ಋಭುಗಳುಂ . . . ಅಮರ್ತ್ಯ ಬೃಂದಾರಕ ಸುಪರ್ವ ನಾಕಸದನರ್ . . . ವಿಬುಧರ್ಗೆ ನಾಮಂ" (ಬುಂಗರಾ. ೩-೮); ಬೃಂದಾರಕರೋರೊರ್ವರ್ಗೊಂದುಕನತ್ಕಳಶನಿಕರಮಂ ಕೆಯ್ಗೆಯ್ಯೊಳ್ ತಂದೀವ ಕೊಳ್ವ ಸಂಭ್ರಮದಂದಂ ಪೋಲ್ತತ್ತು ಕಂದುಕಕ್ರೀಡಿತಮಂ (ಚಂದ್ರಪ್ರ. ೦೨-೦೨೯); ಸ್ವೈರಾಶ್ಮದಿಂದುದ್ಭವಿಸಿ ತೋರ್ಪವೋಲಾಶಾಮರೀಚಿ ತಾಂ, ಬೃಂದಾರಕಂ ವೈದೋರ್ದನೊರ್ವನ್ (ಶ್ರೀರಾಮಾ. ೨೬೬-೭೮). [ಸಂ.]

**ಬೃಂದಾರಕತರು** (ನಾ). ದೇವಲೋಕದ ಮರ ; ಕಲ್ಪವೃಕ್ಷ : ತೀರ ಮಹೀರುಹನಿಕರಂ ನೀರೊಳ್ಪ್ರತಿಬಿಂಬಿಸಿದೊಡೆ ಪೋಲ್ತುದು ತತ್ಕಾಸಾರಂ ಬೃಂದಾರಕತರುವಾರಮನೊಳಕೊಂಡು ಪೆಂಪುವಡೆದಂಬುಧಿಯಂ (ರಾಜಶೇ. ೨-೭೫). [ಸಂ.]

**ಬೃಂದಾರಕಮುನಿ** (ನಾ). ದೇವತೆಗಳ ಮುನಿ; ದೇವರ್ಷಿ; ನಾರದ: ಬೃಂದಾರಕಮುನಿ ಭಗವತ್ಪದಸಾರಜ್ಞಾನಿಗಳೊಳಗ್ರಗಣ್ಯ ನೀನೇ (ಹೂದತಂ. ೬-೦೦). [ಸಂ.]

**ಬೃಂದಾವನ** (ನಾ). ೧. ಗೋಕುಲದ ಬಳಿಯ ಒಂದು ಪವಿತ್ರಕ್ಷೇತ್ರ; P ವಿಷ್ಣುಭಕ್ತನಾದ ಕೇದಾರರಾಜನ ಮಗಳಾದ 'ಬೃ(ವೃಂ)ದೆ' ಎಂಬುವವಳು ಲಕ್ಷ್ಮಿಯ ಅಂಶದಿಂದ ಜನಿಸಿ, ದುರ್ವಾಸಮಹರ್ಷಿಯಿಂದ ವಿಷ್ಣುಮಂತ್ರವನ್ನು ಪಡೆದು, ವಿರಕ್ತಳಾಗಿ ಅರುವತ್ತು ಸಹಸ್ರವರ್ಷಗಳ ಕಾಲ ಅರಣ್ಯದಲ್ಲಿ ತಪಸ್ಸನ್ನಾಚರಿಸಿ, ಪ್ರಸನ್ನನಾದ ಶ್ರೀಕೃಷ್ಣನೇ ತನಗೆ ಪತಿಯಾಗಬೇಕೆಂದು ವರವನ್ನು ಕೇಳಿದಂದರಿಂದ ಅವಳ ಅಪೇಕ್ಷೆಯಂತೆ ಕೃಷ್ಣನು ಬಹಳ ಕಾಲ ಅರಣ್ಯದಲ್ಲಿ ಅವಳೊಂದಿಗೆ ಸುಖವಾಗಿದ್ದನೆಂದೂ, ಅವಳಿದ್ದ ವನಕ್ಕೆ 'ಬೃಂ(ವೃಂ)ದಾವನ' ಎಂದು ಹೆಸರಾಯಿತೆಂದೂ ಪುರಾಣಕಥೆಯಿದೆ : ಈ ವರನುಂ ನೀನುಂ ನಾನಾವಿಧ ನವಕುಸುಮಶಯ್ಯೆಯೊಳ್ ರಮಿಯಿಸು

ಬೃಂದಾವನದೊಳಂಪ್ರವನಪರಿಭಾವಿಯೊಳಗಲದೆ ಸುಗಂಧಪಾಟಳಗಂಧಿ (ಶಾಂತಿಪು. ೩-೦೩೦); ಯಾದವರಾಯ ಬೃಂದಾವನದೊಳು ವೇಣುನಾದವ ಮಾಡುತಿರೆ (ಕನಕ. ೨೦೦ ಕಲ್ಲ): ಬೃಂದಾವನದೆದೆಯ ವಿಡಿದು ಬಂತು ಕೊಳಲ ಮೆಲ್ಲುಲಿ (ಪಂಚಮು. ೩೯-೦೭). ೨. ಪೂಜೆಗಾಗಿ ತುಳಸಿಯ ಗಿಡವನ್ನು ಕಟ್ಟೆಕಟ್ಟಿ ಬೆಳೆಸುವ ಸ್ಥಳ: ತುಳಸೀಕಟ್ಟೆ: ಮಾಡೋದು ಅನಾಚಾರ, ಮನೇ ಮುಂದೆ ಬೃಂದಾವನ (ಗಾದೆ). ೩. ವೈಷ್ಣವ ಸಂನ್ಯಾಸಿಗಳ ಸಮಾಧಿಸ್ಥಳ: ಭಾರತೀಯ ಯತಿಗಳ ಇತಿಹಾಸದಲ್ಲಿ ಸಶರೀರರಾಗಿ ಬೃಂದಾವನಪ್ರವೇಶ ಮಾಡಿದವರಲ್ಲಿ ವಾದಿರಾಜರು ಮೊದಲನೆಯವರು (ಕಥಾ. ೦೭೧). [ಸಂ.]

**ಬೃಂದಾವನಸ್ಥ** (ನಾ). ಸಮಾಧಿಯಲ್ಲಿ ನೆಲಸಿದವನು ; ಬೃಂದಾವನಸ್ಥರಾದ ಮೇಲೂ ಅಂದಿನಿಂದ ಇಂದಿನವರೆಗೆ . . . ಇಷ್ಟಾರ್ಥಗಳನ್ನು ಕೊಡುತ್ತಿರುವವರು ವಾದಿರಾಜರು (ಕಥಾ. ೦೭೧). [ಸಂ.]

**ಬೃಂದಾವನಿ** (ನಾ). [ಸಂಗೀತ] ಒಂದು ರಾಗದ ಹೆಸರು: ಬೃಂದಾವನಿಯು . . . ಸದಾಕಾಲದಲ್ಲಿಯೂ ಹಾಡುವಂತಹದು (ತತುಕ್ರ. ೦೩೮).

[ಸಂ. ಬೃಂದಾವನೀ ?]

**ಬೃಂದಿಗ** (ನಾ). (ಬಂಧುಗಳ) ಗುಂಪಿನಲ್ಲಿರುವವನು; ಕುಟುಂಬಿ : ಉಡುರಾಜಂ . . . ನೆಲಸೆ ವಿತ್ತಸ್ಥಾನದೊಳ್ ವಿತ್ತಮುಂ ಪಡೆಗುಂ ಬೃಂದಿಗನಕ್ಕುಂ (ಜಾತಕ. ೦೮-೭). [ಬೃಂದ + —ಇಗ]

**ಬೃಂದಿಷ್ಠ** (ನಾ). ೧. ಅತಿಶಯವಾದ ಮನೋಹರತೆಯನ್ನುಳ್ಳದ್ದು : "ಬಹಳ ಮನೋಹರವಾದುದು ಬೃಂದಿಷ್ಠವು ಎಂದರ್ಥವಾಗುತ್ತದೆ" (ಸಿದ್ಧಾಂತಿ. ೩೩೩). ೨. ಅತ್ಯಂತ ಶ್ರೇಷ್ಠನಾದವನು : ಕಷ್ಟ ಭ್ರಷ್ಟ ಕನಿಷ್ಟ ದಕ್ಷವಿಳಸನ್ಮೂಯಿಷ್ಠಬೃಂದಿಷ್ಠ ನಾದಿಷ್ಠೋತ್ಕೃಷ್ಟಸಿಜೇಷ್ಟದಾಧ್ವರಹರಂ . . . ರಕ್ಷಿಕ್ಕೆ ವೀರೇಶ್ವರಂ (ಪಂಚಾಶ. ೧-೭). [ಸಂ.]

**ಬೃಂದೆ** (ನಾ). ೧. ತುಳಸಿಯ ಗಿಡ. ೨ = ಬೃಂದಾವನ ೧ : ಎರಡು ಎಲುಬಿನ ಗೂಡು, ಒಂದಾದೊಡನೆ ನೋಡು, ಹಿಂದಿನಾ ಸುಡುಗಾಡು ಬೃಂದೆಯಾಯ್ತು (ಪಾಂಚಜ. ೭೪-೧೭). ೩. ಕಾಲನೇಮಿಯೆಂಬ ರಾಕ್ಷಸನ ಮಗಳು ; ಜಲಂಧರ ರಾಕ್ಷಸನ ಹೆಂಡತಿ: ೪. ವಿಷ್ಣುಭಕ್ತನಾದ ಕೇದಾರರಾಜನ ಮಗಳು. ೫. ರಾಧೆಯ ಹದಿನಾರು ಹೆಸರುಗಳಲ್ಲಿ ಒಂದು. [ಸಂ. ಬೃಂದಾ]

**ಬೃಂಹಿತ** (ನಾ). ಆನೆಯ ಘೀಳು : "ಬೃಂಹಿತಮುದು ವಾರಣ ಶಬ್ದಿತಂ" (ಶಬ್ದಕೋ. ೬೦-೩೭): ಆ ವಿಜಯಪ್ರಯಾಣಭೇರೀನಿನಾದಸಂಭೋಭಾರಗಂಭೀರಾಂಭೋಧರಸ್ತನಿತ ಬಹಳಸ್ನಿಗ್ಧಂಗಳಪ್ಪ ಮದಸ್ತಂಬೇರಮ ಬೃಂಹಿತಂಗಳಿಂದಂ . . . ಸಂದಣಿಸಿ (ಆದಿಪು. ೦೩-೪೨ ವ) ; ಕೀರ ಮುಗಿಲ ಮೊಳಗಂ ಮಸುಳಿಸಿ ಘೂರ್ಣಿತ್ತು ಬೃಂಹಿತಂ ಕಾನನದೊಳ್ (ಪಂಚಾಪರಾ. ೦೦-೦೫೭) : ಒಂದು ಕಡೆಯಲಿ ತಪಿಗಳಬ್ಬರ ಒಂದು ಕಡೆಯಲಿ ರಥದ ಚೀತ್ಕೃತಿ ಕರಿಯ ಬೃಂಹಿತವು (ಕೌರವಾ. ೨೫-೦೦). [ಸಂ.]

**ಬೃಂಹಿತಂಗೆಯ್** (ಕ್ರಿ). ಘೀಂಕಾರ ಮಾಡು: ಘೀಳಿಡು : ದಿಕ್ಕುಂಭಿಗಳಿತ್ತ ಬೃಂಹಿತಂಗೆಯ್ಯುಂಗಡಿಗಳನಾಣೆದು ಪೊಯ್ಯು ಮಾಮಸಕಂ ಮಸಗಿ ಕೋಲಾಹಲಮನೆಸಗಿ . . . ಮೆಟ್ಟಿ ಸಿಳ್ಳ ಕಟ್ಟುಬ್ಬಟೆಯ ದುಷ್ಟಜಂಗಳಂ (ರಾಜಶೇ. ೬-೨೦ ವ). [ಬೃಂಹಿತ + ಕೆಯ್$_1$]

**ಬೃಂಹಿತಧ್ವನಿ** (ನಾ). ಆನೆಯು ಘೀಳಿಡುವ ಶಬ್ದ : ಮದಗಜಬೃಂಹಿತಧ್ವನಿ ತುರಂಗಮ ಹೇಷಿತಘೋಷ[ಮಾ]ದಮೊಮ್ಮೊದಲೆ ಪಯೋಧಿಮಂಥನಮಹಾರವಮಂ ಗೆಲೆ (ಪಂಚಪಾ. ೩-೩೮); ರಣವಾಜಿಮಂಕಿಗಳ ಹೇಷಾರವಂಗಳಿಂ ಬೃಂಹಿತಧ್ವನಿಗಳಿಂ . . . ರಣಶಿಬಿರಮೆಸದತ್ತು (ಶಶ್ರಾಂಗ. ೦೮-೪೭೩). [ಸಂ.]

**ಬೃಂಹಿತೆ** (ನಾ). = ಬೃಂಹಿತ : ಕರಿಯ ಬೃಂಹಿತ ಕೇಳಿ ಮದದಿಕ್ಕರಿಗಳಜಡಿದವು (ಕೌರವಾ. ೪೦-೯). [ಸಂ. ಬೃಂಹಿತ]

**ಬೃಂಹಿಸು** (ಕ್ರಿ). = ಬೃಂಹಿತಂಗೆಯ್: ಸಿಂಹನಾದಕೆ ಸೆಡೆವತ್ತಿತ್ತ ಕದಲುತ ಬೃಂಹಿಸುವಾನೆಯೊಡ್ಡಿನೊಳು ಸಿಂಹಪರಾಕ್ರಮನಿದಿರೆದ್ದು ಕಂಡನು (ಭರತ. ೨೨-೨೮). [ (ಸಂ. ಬೃಂಹಣ) + — ಇಸು$_3$ ]

**ಬೃಗ** 'ಭಿಕರ್ಣ$_2$' ನೋ.

**ಬೃಸಿ** (ನಾ). ಯೋಗಿಗಳ ಆಸನ: "ವ್ರತಿಗಳ ಆಸನವು ಬ್ರಿಸಿ (ಬೃಸಿ) ಯೆಂಬುದು" (ಹರಿವಂ. ೭೮-೨೫೭) : ಈ ವಿಧದಿ ರಘುವರನ ತಪನವಂಶೋತ್ತಮನ ಪ್ರೀತಿಯಿಂ ಸಂಗ್ರಹಿಸಿ ಬೃಸಿಯ ಮಧ್ಯದಿ ಮಂಡಿಸಿ (ಪಂಪಾರಾ. ೦-೦೩-೩೪). [ಸಂ. ಬೃಸೀ]

**ಬೃಹಂದಳೆ** (ನಾ). ಪಾಂಡವರ ಒಂದು ವರ್ಷ ಅಜ್ಞಾತವಾಸದ ಕಾಲದಲ್ಲಿ ವಿರಾಟರಾಜನ ಆಸ್ಥಾನದಲ್ಲಿ ನಾಟ್ಯಾಚಾರ್ಯನಾಗಿ ನಪುಂಸಕ ವೇಷದಲ್ಲಿದ್ದ ಅರ್ಜುನನ ಹೆಸರು : ರಂಭೆ . . . ಒಂಪಬ್ಬದೊಳೆ ಬೃಹಂದಳೆಯಾಗೆಂದು ಮುನಿದು ಶಾಪವನಿತ್ತಳ್ (ಪಂಪಭಾ. ೮-೨೯); ಕೇಳಿರೆ ಕಂಕಭಟ್ಟನೆ ಯುಧಿಷ್ಠಿರಂ . . . ಬಾಳೆಯುರಂ ದಲಾಡಿವ ಬೃಹಂದಳೆ ಫಲ್ಗುಣಂ (ಪಂಪಭಾ. ೯-೭). [< ಸಂ. ಬೃಹನ್ನಲಾ]

**ಬೃಹಚ್ಚರಣ** (ನಾ). ದೊಡ್ಡದಾದ ಪಾದವುಳ್ಳವನು : ಬೃಹಚ್ಚರಣಂ ಸ್ಥೂಲಾಂಗಂ ಸೂಕರವದನಂ ಕರ್ಕಟಾದಿಮದ್ರೇಕ್ಕಾಣಂ (ಜಾತಕ. ೦೯-೦೦).

[ಸಂ.]

**ಬೃಹತಿ** (ನಾ). ೧. ಅಧಿಕವಾದುದು : ಹೆಚ್ಚಾದುದು. ೨. ದೊಡ್ಡದಾದ ವೀಣೆ. ೩. ನಾರದನ ವೀಣೆ. ೪. ಹೆಗ್ಗುಳ್ಳದ ಗಿಡ : "ಗುಳ್ಳಂ ಬೃಹತಿಯಕ್ಕುಂ" (ಶಬ್ದಗರಾ. ೩೯-೨೯). ೫. ಶಲ್ಯ ; ಉತ್ತರೀಯ : "ಬೃಹತೀ, ೧ ಬಾಮಗುಳ್ಳದ ಗಿಡ, ಪಾದ ೧ಕ್ಕೆ ೯ ಅಕ್ಷರಗಳುಳ್ಳ ಛಂದಸ್ಸು, ಅಧಿಕವಾದ್ದು, ಉತ್ತರೀಯ" (ಸಿದ್ಧಾಂತಿ. ೩೯೩). ೬. ಮಾತಂ; ನುಡಿ. ೭. ವೇದ. ೮. [ಛಂದ] ಪ್ರತಿಯೊಂದು ಪಾದದಲ್ಲಿ ಒಂಬತ್ತು ಅಕ್ಷರಗಳಿರುವ ಒಂದು ಸಮವೃತ್ತ : ಇಪ್ಪತ್ತಾರು ಬಗೆಯ ಅಕ್ಷರಛಂದಸ್ಸಿನಲ್ಲಿ ಒಂಬತ್ತನೆಯದು: ಉಕ್ತೆ ಅತ್ಯುಕ್ತೆ ಮಧ್ಯೆ ಪ್ರತಿಷ್ಠೆ ಸುಪ್ರತಿಷ್ಠೆ ಗಾಯತ್ರಿ ಉಷ್ಣಿಕ್ ಅನುಷ್ಟುಪ್ ಬೃಹತಿ . . . ಉತ್ಕೃತಿ—ಎಂದಿಪ್ಪತ್ತಾರು ಛಂದಂಗಳಕ್ಕುಂ (ಛಂದೋಂಬು. ೦-೪೭) ೯. [ತತ್ತ್ವಶಾ] ಪರಮಾತ್ಮ ; ಪರಬ್ರಹ್ಮ : ಆದ್ಯಂತ ೭೨ ಸಾವಿರ ನಾಡಿಗತ ದೇವತೆಗಳಲ್ಲಿಯೂ ನಾಡಿಗಳಲ್ಲಿಯೂ ತಚ್ಛಬ್ದವಾಚ್ಯನಾಗಿದ್ದುದರಿಂದ ಬೃಹತೀ ಎಂಬ ನಾಮವು ಶ್ರೀಪರಮಾತ್ಮನಿಗೆ ಪ್ರಾಪ್ತವಾದುದು (ಹಕಾರ. ೪-೩ ತಾತ್ಪರ್ಯ). [ಸಂ. ಬೃಹತೀ]

**ಬೃಹತಿಕೆ** (ನಾ). ಹೊದೆಯುವ ವಸ್ತ್ರ; ಶಲ್ಯ; ಉತ್ತರೀಯ : "ವೈಕಕ್ಷ್ಯಂ. ಉತ್ತರಾಸಂಗಃ. ಬೃಹತಿಕಾ—ಈ ೩ ಉತ್ತರಾಸಂಗಂ" (ಹಲಾಯು. ೭೮-೨೫೭). [ಸಂ. ಬೃಹತಿಕಾ]

**ಬೃಹತೀಫಲ, ಬೃಹತೀಫಳ** (ನಾ). ಹೆಗ್ಗುಳ್ಳದ ಕಾಯಿ: ಕೂರ್ಮನೆರ್ದೆಯೊಡೆದು ಬೃಹತೀಫಲಮನು ಪಚ್ಚೆದಂತಾದುದು (ಕಬ್ಬಿ. ೪೪-೨೦). ಬೃಹತೀಫಳ: ಸ್ವಯಂಪತಿತ ಸಾರವತ್ಫಳಬೀಜಮಂ ಕೊಂಡು . . . ಬೃಹತೀತ(ಫ)ಳ ಕ್ಷಾರವಾರಿಯೊಳ್ ಪುದಿದುಕೊಂಡು ಧೂಪಿಸಿ ವಿಳಂಗದಿಂ ತಾಪ್ಪದಿಂ (ಕೂಟಕೋಶ. ೬-೭). [ಸಂ.]

**ಬೃಹತೀಫಳ** 'ಬೃಹತೀಫಲ' ನೋ.

**ಬೃಹತ್ಕಥೆ** (ನಾ). ೧. ದೊಡ್ಡ ಕಥೆ : ಈ ಮುಖ್ಯವಾದ ಆಖ್ಯಾನವೇ ಅನೇಕ ಉಪಾಖ್ಯಾನಗಳನ್ನೊಳಗೊಂಡು ಒಂದು ಬೃಹತ್ಕಥೆಯಾಗಿದೆ (ಭಾರತ. ೦೦೦). ೨. ಸಂಸ್ಕೃತದಲ್ಲಿ ಗುಣಾಢ್ಯನೆಂಬ ಕವಿಯಿಂದ ರಚಿತವಾದ ಒಂದು ಕೃತಿ : ಬೃಹತ್ಕಥೆಯ ಆಧಾರದ ಮೇಲೆ ಬರೆದುವು —ಸ್ವಪ್ನವಾಸವದತ್ತ, ಪ್ರತಿಜ್ಞಾಯೌಗಂಧರಾಯಣ, (ಬಹುಶಃ) ಅವಿಮಾರಕ, ಚಾರುದತ್ತ (ಸಂಭಾಟ. ೭೩). [ಸಂ. ಬೃಹತ್ಕಥಾ]

**ಬೃಹತ್ಕರಿಸು** (ಕ್ರಿ). ದೊಡ್ಡದಾಗಿ ಮಾಡು : ಮ್ಯಾಕ್‌ಡೂಗಲ್ಲನು ಹೇಳುವಂತೆ ಮಿದುಳನ್ನು ಬೃಹತ್ಕರಿಸಿ . . . ಆಧುನಿಕಯಂತ್ರಗಳ ಸಮೇತ ಇಟ್ಟು (ಮುಕ್ತ. ೨೩). [(ಸಂ. ಬೃಹತ್ಕರಣ) + –ಇಸು]

**ಬೃಹತ್ತು** (ಗು). ೧. ದೊಡ್ಡದಾದ ; ಗಾತ್ರವಾದ : ಗುರುಗಾತ್ರ ಭವ್ಯದಿಂ ಪರ್ವತಸಹೋದರತೆಯಾಂತುದು ವಿಯಚ್ಚುಂಬಿಭೈರವಬೃಹತ್ತರುವರಂ (ಶ್ರೀರಾಮಾ. ೫೫೬–೬೬೨). (ನಾ). ೨. ದೊಡ್ಡದಾದುದು; ಹಿರಿದಾದುದು: "ಬೃಹತ್, ಉರು, ಗುರು, ವಿಸ್ತೀರ್ಣಂ . . . ಭದ್ರಂ, ವರಿಷ್ಠಂ — ಈ ೧೨ ಹಿರಿದು" (ಹಲಾಯು. ೦೦೬–೦೯); ಮಹದಾದಿಗಣಕ್ಕೆ ನಪುಂಸಕಲಿಂಗದಲ್ಲಿ ಪ್ರಥಮೈಕವಚನದ ಮೇಲೆ ದ್ವಿತ್ವದಿಂ ಉತ್ವಮಕ್ಕುಂ ಮಹತ್ತು, ಬೃಹತ್ತು, ಪ್ರಾಕ್ಕು, ಅವಾಕ್ಕು, ಸಮ್ಯಕ್ಕು...ಎಂಬಂತೆ (ಶಬ್ದ. ೯೬ ಅ೨೬). ೩. ವಿಶಾಲವಾದುದು; ವಿಸ್ತಾರವಾದುದು. ೪. ಅಧಿಕವಾದುದು; ಹೆಚ್ಚಾದುದು. ೫. ಬಲವಾದುದು; ಶಕ್ತಿಯುತವಾದುದು. ೬. ಒತ್ತಾದುದು ; ಸಾಂದ್ರವಾದುದು. ೭. ಪೂರ್ಣವಾಗಿ ಬೆಳೆದುದು. ೮. (ಶಬ್ದದಂತೆ) ಜೋರಾದುದು.
[ಸಂ. ಬೃಹತ್]

**ಬೃಹತ್ಸಂಹಿತೆ** (ನಾ). ಜ್ಯೋತಿಶ್ಶಾಸ್ತ್ರಕ್ಕೆ ಸಂಬಂಧಿಸಿದ ವರಾಹಮಿಹಿರನ ಒಂದು ಕೃತಿ : ಸ್ತ್ರೀಯರ ವಿಷಯದಲ್ಲಿ ಬಹುಉದಾರವಾದ ಭಾವನೆಯನ್ನು ವ್ಯಕ್ತಪಡಿಸಿರುವವರಲ್ಲಿ ಬೃಹತ್ಸಂಹಿತೆಯ ಕರ್ತೃ ವರಾಹಮಿಹಿರನು ಅಗ್ರೇಸರನು (ಕಣಾ. ೯೨೭). [ಸಂ. ಬೃಹತ್ಸಂಹಿತಾ]

**ಬೃಹದಾಕಾರ** (ನಾ). ದೊಡ್ಡ ಆಕಾರ; ಹಿರಿಯ ಗಾತ್ರ : ಬೃಹದಾಕಾರ ಉಳ್ಳವೂ . . . ಹಾಸಿನ ಮೇಲೆ ಹೊರಳಾಡುವುವೂ ಕಂಪಿಸುವುವೂ ಆದ ಪಗಡೆದಾಳಗಳು ನನ್ನನ್ನು ಸಂತೋಷಗೊಳಿಸುತ್ತವೆ (ಮುಕ್ತಾರ. ೩೦೩) : ಹಲವಾರು ಪ್ರಶ್ನೆಗಳ ಮಾಲೆ ಒಮ್ಮೆಲೆ ಕಾಣಿಸಿಕೊಂಡು ಈ ಸಮಸ್ಯೆಯ ಬೃಹದಾಕಾರವನ್ನೂ ಜಟಿಲತೆಯನ್ನೂ ತೋರಿಸುತ್ತದೆ (ದ್ರಾವಿಶಿ. ೨೦).
[ಸಂ.]

**ಬೃಹದಾರಣ್ಯಕ** (ನಾ). ದಶೋಪನಿಷತ್ತುಗಳಲ್ಲಿ ಒಂದು; ಶತಪಥ ಬ್ರಾಹ್ಮಣದ ಕಡೆಯ ಆರು ಪ್ರಪಾಠಕಗಳೆಂಬ ಭಾಗಗಳನ್ನೊಳಗೊಂಡ, ಯಜುರ್ವೇದದ ಕಾಣ್ವಶಾಖೆಗೆ ಸಂಬಂಧಿಸಿದ ಉಪನಿಷತ್ತು : ಬೃಹದಾರಣ್ಯಕದಲ್ಲಿ ಯಾಜ್ಞವಲ್ಕ್ಯನಿಗೂ ಗಾರ್ಗಿಗೂ ನಡೆದ ಚರ್ಚೆ ಪ್ರಸಿದ್ಧವಾದುದು (ಕಣಾ. ೨೩೯) ; ಯಜುರ್ವೇದದ ಕಾಣ್ವ ಶಾಖೆಯ ಶತಪಥಬ್ರಾಹ್ಮಣದ ಕಡೆಯ ಕೆಲವು ಅಧ್ಯಾಯಗಳೇ ಬೃಹದಾರಣ್ಯಕ (ಭಾರತ. ೩೮). 'ತೈತ್ತಿರೀಯ' ಪರಾ. [ಸಂ.]

**ಬೃಹದ್ಗ್ರಂಥ** (ನಾ). ದೊಡ್ಡ ಕೃತಿ,—ಹೊತ್ತಗೆ : ಎರಡು ಮೂರು ವರುಷಗಳ ಕೆಳಗೆ ಹೊರಬಂದ ಭದ್ರಿರಾಜು ಕೃಷ್ಣಮೂರ್ತಿಯವರು ಬರೆದ ತೆಲುಗುಭಾಷೆಯ ಮೂಲ ಧಾತುಗಳು ಎಂಬ ಬೃಹದ್ಗ್ರಂಥ ಅಮೂಲ್ಯ ಕಾಣಿಕೆ (ದ್ರಾವಿಶಿ. ೨). [ಸಂ.]

**ಬೃಹದ್ಭಾಗ್ಯ** (ನಾ). ಅತಿಶಯವಾದ ಐಶ್ವರ್ಯ : ಧರ್ಮಂ ವಿಶ್ರುತಸಶ್ರುತಾತಿಶಯಮಂ ಧರ್ಮಂ ಬೃಹದ್ಭಾಗ್ಯಮಂ . . . ಧರ್ಮಂ ಧಾರ್ಮಿಕನಪ್ಪವಂಗೆ ಕುಡುಗುಂ ನಿರ್ವಾಣಕಲ್ಯಾಣಮಂ (ಸುಕುಮಾ. ೬-೪೨). [ಸಂ.]

**ಬೃಹದ್ಭಾನು** (ನಾ). ೧. ಬೆಂಕಿ; ಅಗ್ನಿ : "ಸಪ್ತಾರ್ಚಿಃ, ಬಹುಲಃ . . . ಬೃಹದ್ಭಾನುಃ, ಆಶ್ರಯಾಶಃ . . . ಹುತಾಶನಃ—ಈ ೪೦ ಕಿಚ್ಚಿನ ಪೆಸರ್" (ಹಲಾಯು. ೧೨–೬೨); ಮಹಾತೇಜನಾಗಿರ್ಪುದರಿಂದ ಬೃಹದ್ಭಾನುವೆಂದು ಹೆಸರು (ಭಾರತಂ. ೪೩). ೨. ಸೂರ್ಯ. ೩. ವಿಷ್ಣುವಿನ ಹೆಸರು. ೪. ಹರಳುಗಿಡ. [ಸಂ.]

**ಬೃಹದ್ರಥ** (ನಾ). ೧. ದೊಡ್ಡ ರಥ : ರಥದಿಂದಂ ಮುಂಚೆ ಮನೋರಥಂ ಮನೋರಥದಿನೆತ್ತಲದು ಮುಂಚೆ ಬೃಹದ್ರಥದಿಂತು ಭರತರಾಜನ ರಥದ ಮನೋರಥದ ಬೇಗಮೊದವಿದುದಾಗಳ್ (ಆದಿಪು. ೦೨-೮೦). ೨. ಇಂದ್ರ. ೩. ಮಹಾಭಾರತದಲ್ಲಿ ಬರುವ ಒಬ್ಬ ರಾಜನ ಹೆಸರು; ಜರಾಸಂಧನ ತಂದೆ. ೪. ಶಕ್ತಿಶಾಲಿಯಾದ ನಾಯಕ. ೫. ಸಾಮವೇದದ ಒಂದು ಭಾಗ. [ಸಂ.]

**ಬೃಹನ್ನಡೆ** (ನಾ). =ಬೃಹಂದಳೆ : ನಾನು ಕಿವಿಗಳಲ್ಲಿ ಕುಂಡಲಗಳನ್ನಿಟ್ಟು ಜಡೆ ಹೆಣೆದುಕೊಂಡು ಬೃಹನ್ನಡೆಯೆಂಬ ಹೆಸರಿನಿಂದ ರಾಜನ ಅಂತಃಪುರದ ಜನರಿಗೆ ಕಥೆಹೇಳುತ್ತ ಗೀತನೃತ್ಯಗಳನ್ನು ಹೇಳಿಕೊಡುತ್ತ ಕಾಲ ಕಳೆಯುತ್ತೇನೆ (ವಕಥಾ. ೦೬೩). [ಸಂ. ಬೃಹನ್ನಡ]

**ಬೃಹನ್ನಳೆ** (ನಾ). =ಬೃಹಂದಳೆ : ಹಿಂದುಗಳೆಯದೆ ಕರೆಸು ನಮ್ಮ ಬೃಹನ್ನಳೆಯನು (ಕುಮ್ಯಾಭಿ. ೫-೩೦).
[ಸಂ. ಬೃಹನ್ನಲ, ಬೃಹನ್ನಲಾ]

**ಬೃಹವಾರ** (ನಾ). ಬೃಹಸ್ಪತಿವಾರ ; ಗುರುವಾರ : [ಶ್ರೀ][ಮು] ಚ್ಚಾಳುಕ್ಯವಿಕ್ರಮ[ವ]ರ್ಷದ ೨೬ನೆಯ ವಿಷ[ಸಂ]ವತ್ಸರದ ಕಾರ್ತ್ತಿಕ ಸು ೮ ಬೃಹವಾರದಂದು (ಶಾಂದೇಶ್. ೦೨_೬ ; 1101).
[<ಸಂ. ಬೃಹಸ್ಪತಿವಾರ]

**ಬೃಹಸ್ಪತಿ** (ನಾ). ೧. ಅಂಗಿರಸನ ಮಗ; ದೇವತೆಗಳ ಗುರು; ವಾಚಸ್ಪತಿ: "ವಾಚಸ್ಪತಿಃ, ಆಂಗಿರಸಃ, ಬೃಹಸ್ಪತಿಃ, ಗುರುಃ···ಚಿತ್ರಶಿಖಂಡಿಪ್ರಸೂತಿಃ (ಕಥ್ಯತೇ)—ಈ ೮ ಬೃಹಸ್ಪತಿಯ ಪೆಸರ್" (ಹಲಾಯು. ೯-೪೭) ; ಭಾರತೀಯಪುರಾಣಗಳಲ್ಲಿ ಬೃಹಸ್ಪತಿಯೇ ಸಕಲದೇವತೆಗಳಿಗೂ ಪುರೋಹಿತನೆಂದು ಹೇಳಿದೆ (ಜ್ಯೋತಿರ್. ೦೨೯). ೨. ಮೂವತ್ತಾರು ಜನ ಸ್ಮೃತಿಕಾರರಲ್ಲಿ ಒಬ್ಬಾತನ ಹೆಸರು ; "ಸ್ಮೃತಿಕಾರರು—೩೬ : ಮನು, ವಿಷ್ಣು, ಯಮ, ದಕ್ಷ, ಅಂಗಿರಸ್ಸು, ಅತ್ರಿ, ಬೃಹಸ್ಪತಿ, ಆಪಸ್ತಂಬ, ಉಶನಸ್ಸು, ಕಾತ್ಯಾಯನ, ಪರಾಶರ, ವಸಿಷ್ಠ, ವ್ಯಾಸ, ಸಂವರ್ತ, ಹಾರೀತ, ಗೋತಮ, ಪ್ರಚೇತ, ಶಂಕ, ಲಿಖಿತ, ಯಾಜ್ಞವಲ್ಕ್ಯ, ಕಾಶ್ಯಪ, ಶಾತಾತಪ, ಲೋಮಶ, ಜಮದಗ್ನಿ, ಪ್ರಜಾಪತಿ, ವಿಶ್ವಾಮಿತ್ರ, ಪೈಠೀನಸೀ, ಬೌಧಾಯನ, ಪಿತಾಮಹ, ಛಾಗಲೇಯ, ಜಾವಾಲೀ, ಮರೀಚಿ, ಚ್ಯವನ, ಭೃಗು, ಋಷ್ಯಶೃಂಗ, ನಾರದ" (ಶ್ರೀವತ್ಸ. ೫೦೩) : ಬೃಹಸ್ಪತಿಯ ಅಭಿಪ್ರಾಯಗಳೂ ಯಾಜ್ಞವಲ್ಕ್ಯನ ಅಭಿಪ್ರಾಯಗಳನ್ನೇ ಬಹುಮಟ್ಟಿಗೆ ಹೋಲುತ್ತವೆ (ಕಣಾ. ೦೪). ೩. [ಜ್ಯೋತಿ] ಸೌರವ್ಯೂಹದಲ್ಲಿಯ ಅತಿದೊಡ್ಡ ಗ್ರಹ ; ಗುರುಗ್ರಹ : ಬೃಹಸ್ಪತಿಯು ಅತಿವೇಗದೊಡನೆ ತನ್ನ ಸುತ್ತಲೂ ತಾನೇ ಹತ್ತು ಗಂಟೆಗಳಿಗೆ ಕಡಿಮೆಯಾದ ಕಾಲದಲ್ಲಿ ತಿರುಗುತ್ತದೆ (ಜ್ಯೋತಿರ್. ೦೩೦). ೪. [ಸಂಗೀತ] ಒಂದು ರಾಗದ ಹೆಸರು : ಕೌಶಿಕೆ, ವೇಳಾವಳಿ . . . ಬೃಹಸ್ಪತಿ . . . ಶಯಸೋವರಿಯೆಂಬ ಮೂವತ್ತುನಾಲ್ಕು ಭಾಷಾಂಗದಿಂದಾದ ರಾಗಂಗಳು (ಶಿವೇಶ. ೦೬೯). [ಸಂ.]

**ಬೃಹಸ್ಪತಿಮತ** (ನಾ). ಬೃಹಸ್ಪತಿಯ ಮತ ; ಚಾರ್ವಾಕ ಮತ ; ನಿರೀಶ್ವರವಾದ: ಬೃಹಸ್ಪತಿಮತಾನುಸಾರಿಯಪ್ಪ ಮಹಾಮತಿ ನುಡಿದು (ಆದಿಪು. ೨-೯ ವ); ಆ ನೆವದಿಂದಂ ಶ್ರಾವಕಮಾನಿಗಳನನೇಕವಿಧದಿನುಪಜೀವಿಪರಜ್ಞಾನಿಗಳ ಬುದ್ಧಿಪೌರುಷಹೀನಮಜೇವಿಕೃತಂ ಬೃಹಸ್ಪತಿಮತದೊಳ್ (ಶಾಂತಿಪು. ೯-೦೩೦). 'ಲೋಕಾಯತಿಕ ಮತ' ಪರಾ. [ಸಂ.]

**ಬೃಹಸ್ಪತಿವಾರ** (ನಾ). ಬೃಹಸ್ಪತಿಯು ಅಧಿಪತಿಯಾಗಿರುವ, ವಾರದ ಐದನೆಯ ದಿನ ; ಗುರುವಾರ : ಪ್ರತಿ ಬೃಹಸ್ಪತಿವಾರ ಹುಣಸೂರಿನಲ್ಲಿ ವಿಶೇಷದಿನ (ಸರ್ವಮಂ. ೩೯). [ಸಂ.]

**ಬೆ** (ನಾ). [ಗಣಿತ] ಎರಡು ಎಂಬ ಸಂಖ್ಯೆಯ ಸಂಕೇತ : ಬೆ, ಬೆನ್ನಿ, ಯಮ, ನಯನ . . . ದಂಪತಿ ಇಂತಿನಿತುಂ ೨ಕ್ಕೆ ಪೆಸರು" (ವೃವಹಾ. ೦೦-೧೦). [ ? ]

**ಬೆಂ₁** 'ಬೆನ್' ನೋ.

**ಬೆಂ₂** 'ಬಿಸು₂' ನೋ.

**ಬೆಂಕಟ್ಟು** (ನಾ). ಕಟ್ಟಡದ ಸೂರಿನ ಮೇಲುತುದಿ: ಎರಡೂ ಕಡೆಯ ಹೆಂಚುಗಳ ಹಂದರಗಳು (ಪಾರುಗಳು) ಕೂಡುವ ಭಾಗ : ಹಂಚು ಹೊಚ್ಚಿ ಬೆಂಕಟ್ಟಿನ ಮೇಲೆ ತಲೆಹಂಚು ಹಾಕುತ್ತಾರೆ (ಮುಂಬಯಿ. ೪-೦೦೮).
[ಬೆಂ₁ (<ಬೆನ್) + ಕಟ್ಟು₂]

**ಬೆಂಕಿ** 'ಬೆಂಕೆ' ನೋ.

**ಬೆಂಕಿಕಡ್ಡಿ** (ನಾ). ಗೀರಿದರೆ ಉರಿ ಬರುವಂತೆ, ತುದಿಯಲ್ಲಿ ರಂಜಕಾಂಶವನ್ನು ಮೆತ್ತಿರುವ ಕಡ್ಡಿ; ದೀಪದ ಕಡ್ಡಿ : ಬೆಂಕಿಕಡ್ಡಿ : ಒರಟು ಮೈಮೇಲೆ ತುಸು ಒತ್ತಡ ಹೇರಿ ಉಜ್ಜಿದಾಗ ಸುಲಭವಾಗಿ ಬೆಂಕಿ ಹೊತ್ತುವ ರಾಸಾಯನಿಕ ಲೇಪಿತ ತುದಿಯುಳ್ಳ ಮರದ ಕಡ್ಡಿ (ಕವಿಕೋ. XII, ೦೯೪).
[ಬೆಂಕಿ (<ಬೆಂಕೆ) + ಕಡ್ಡಿ]

**ಬೆಂಕಿಗಣ್ಣು** 'ಬೆಂಕೆಗಣ್' ನೋ.

**ಬೆಂಕಿಗೆಳೆಯ** (ನಾ). ಬೆಂಕಿಯ ಸ್ನೇಹಿತ; ಅಗ್ನಿಸಖ ; ವಾಯು: ಬೆಂಕಿಗೆಳೆಯನ ಸುತಂ ತನ್ನಿಷ್ಟಲಿಂಗದಿರವಂ ಕಾಣದಂಗದೊಳು ಸಾವೊಡುಪ್ಪುಗಿಸೆ (ರಾಶಿಶ. ೬-೬೨). [ಬೆಂಕಿ (<ಬೆಂಕೆ) +ಗೆಳೆಯ (<ಕೆಳೆಯ)]

**ಬೆಂಕಿಪಟ್ಟಣ** 'ಬೆಂಕಿಪೊಟ್ಟಣ' ನೋ.

**ಬೆಂಕಿಪೆಟ್ಟಿಗೆ** (ನಾ). ಬೆಂಕಿಕಡ್ಡಿಗಳಿರುವ ಪೊಟ್ಟಣ ; ಬೆಂಕಿಪೊಟ್ಟಣ; ಕಡ್ಡಿಪೆಟ್ಟಿಗೆ : ಅವರು ದೀಪಹಚ್ಚಲು ಬೆಂಕಿಪೆಟ್ಟಿಗೆ ತಂದರು (ರೂಢಿ).
[ಬೆಂಕಿ (<ಬೆಂಕೆ) + ಪೆಟ್ಟಿಗೆ]

**ಬೆಂಕಿಪೊಟ್ಟಣ**, ಬೆಂಕಿಪಟ್ಟಣ (ನಾ). =ಬೆಂಕಿಪೆಟ್ಟಿಗೆ : ಸಮಯಕ್ಕೆ ಅಂತ ಮೋಂಬತ್ತಿ, ಬೆಂಕಿಪೊಟ್ಟಣ ಎರಡನ್ನೂ ಇರಿಸಿರುವರು (ತೆಂಗೂರಿ. ೦೪೦); ಬೆಂಕಿಪೊಟ್ಟಣದ ಕಾರ್ಖಾನೆಯೊಂದು ವಿಶೇಷಲಾಭ ಹೊಂದುತ್ತಿದ್ದರೂ ಕೆಲಸಗಾತಿಯರಿಗೆ ಬಹಳ ಕಡಿಮೆ ಸಂಬಳ ಕೊಡುತ್ತಿತ್ತು (ಸ್ವಾತಿರ. ೯೭). **ಬೆಂಕಿಪಟ್ಟಣ** : ಕಿಸೆಯಲ್ಲಿ ಬೀಡಿಕಟ್ಟು ಬೆಂಕಿಪಟ್ಟಣ ಬೇರೆ ಇರಬಹುದೊ ಏನೋ! (ಕೃಷ್ಣ. ೨೫). [ಬೆಂಕಿ (<ಬೆಂಕೆ)+ಪೊಟ್ಟಣ (<ಪೊಟ್ಟಳ)]

**ಬೆಂಕೆ**, ಬೆಂಕಿ (ನಾ), ೧. ಉರಿ ; ಕಿಚ್ಚು; ಅಗ್ನಿ : "ನಿದಾಘಃ, ಘರ್ಮಃ— ಈ ೨ ಬೆಂಕಿಯ ಪೆಸರ್" (ಹಲಾಯು. ೬-೪೦); ಭಟಾರರ್ . . . ಜ್ಯೇಷ್ಠಮಾಸದ ಬಿಸಿಲುಂ ರ್ಝಳಪುಂ ಬೆಂಕೆಯುಂ ಕಿಚ್ಚುಮಂ ಸೈರಿಸಿ . . . ಮೋಕ್ಷಕ್ಕೆ ಪೋದರ್ (ವಡ್ಡಾರಾ. ೦೦೪-೦೭); ಕವಿದಳುರ್ವ ಬೆಂಕೆಯೊ[ಳಾ]ಡಿಸಿದರ್ ಮೊಗಮನಮರಸುಂದರಿಯರ್ಕಳ್ (ಶಂಶರಾ. ೦೨-೦೫೬); ಸುರಸಿಂಧುವಂ ತಳೆದ ಶಂಭು ನಿಜಾಕ್ಷಿಯ ಬೆಂಕೆ ಸೋಂಕದಿರ್ದೊಡೆ ... ಎಂತು ನಿತ್ತರಿಪರೆಂಬನಿತಾದುದು ಮಾಘಡಂಬರಂ (ಕೃಕ್ಷಶ್ರ. ೬-೫೨). ೨. ಉಷ್ಣ; ತಾಪ : ತಪ್ತಶಿಲಾಂತಶಿಲಾತಳಂ ಸಿಡಿಲ್ಬಂದೊಡೆದತ್ತಿದೇಂ ಬಿಸಿಕೋಟೆದ ಬೆಂಕೆ ಮೃಗಾಂಕವಕ್ತ್ರೆಯಾ (ಶಂಶರಾ. ೫-೭); ಮುಖೇಂದುಬಿಗುರ್ತಿರೆ ಸುಯ್ಯ ಬೆಂಕೆಯುಂ ನಿಡುಪಮುಳುಂಬಮಪ್ಪಿನೆಗಂ ... ಪಲವಾಡಿದರಂದಜಿತಾಂಗನಾಜನಂ (ಅಜಪು. ೬-೦೨೦); ಮುಯ್ಯ ಬಿಸುಪಿಂ ಸುಯ್ಯಲತ ಬೆಂಕೆಯಿಂ ವನಂ ಕೊರಗುತ್ತಮಿರೆ (ಶಂಬರ. ೦೨-೦೦೯). **ಬೆಂಕಿ** : ೧. ಗಜದ ದಂತದಂತೆ ಬೆಂಕಿಯುಷ್ಣದಂತೆ ... ಪಂಚಪಾದೋಷ್ಟಿಗಳೊಳಪ್ಪ ಪತ್ತುಗೆವೆರಸು (ಧರ್ಮಾಮೃ. ೫-೦೨೫); ವಾದ್ಯಮಂ ಬಾಳಿಸಿ ಜಾರುವಂ ಬಿಸಿಲೊಳಿಕ್ಕುವ ಬೆಂಕಿಜೊಳೊಡ್ಡಿ ಕಾಸಿಕೊಂಡಾಳಿಸಿ ಸಂದುಕೋಲ ನಾಡಿಗಟ್ಟುವ . . . ಶಬರರ್ಕಳಿಸೊಪ್ಪಿದುದೊಂದು ಪಕ್ಕಣಂ (ಕಾಸುಬಶಾ. ೦೦-೦೯೬); ಅಂಕುರವಡೆದ ಪೂಗಿಡುವೃಕ್ಷ ಲತೆವೇರ್ಗೆ ಬೆಂಕಿಯು ಹರಿಹಿದಂತಾಯ್ತು (ಪೋಹಶ. ೨೯-೨೦). ೨. ಕೊಳನಂ ಪುಗಿಸೆ ಮೆಯ್ಯಬೆಂಕಿಯಿಂ ಚುಯ್ಯೆಂದು ನೊರೆಗಟ್ಟಿ ಬಿಸಿಯ ತೆರೆ ತಾಮರ್ಗಟ್ಟಿ . . . ಕಾದ ನೀರ್ ಕಾಯಮಂ ಸುಡೆ (ಗಂಚ. ೪-೦೦೯ ಪ).

**ಬೆಂಕಿ ಉಗುಳು**= (ಆಲಂ) ಅತಿಯಾದ ಕೋಪವನ್ನು ತೋರು; ಬಹಳ ಕ್ರೋಧವನ್ನು ಸೂಚಿಸು : ಶಾನಭಾಗರು, ಶಾನಭಾಗರ ಮನೆಯವರು ಎಂದರೆ ಇಷ್ಟೊಂದು ಬೆಂಕಿ ಉಗುಳುತ್ತಾನಲ್ಲ ಮಾತಿನಲ್ಲಿ? (ಘೂರುಬಾ. ೬೮). **ಬೆಂಕಿ ಕಾರು**=೧. ಬೆಂಕಿಯನ್ನು ಉಗುಳು,— ಹೊರಹಾಕು : ಅಗ್ನಿಪರ್ವತ ಬೆಂಕಿಕಾರಿ ನೂರಾರು ಜನರು ಸತ್ತರು (ರೂಢಿ). ೨. (ಆಲಂ) ತಾಪವನ್ನು ಹೆಚ್ಚುಮಾಡು : ಹುಡುಕಿದರು ಕಂದ ಸಿಗದಲ್ಲ ಎಂಬ ಸುದ್ದಿ ಕಿಡಿಕಿಡಿ ಬೆಂಕಿ ಕಾರಿತ್ತು (ಸಿದ್ಧಕ್ಷ. ೪-೯೯). ೩. ಬಹಳ ಕೋಪವನ್ನು ತೋರು; ಸಿಟ್ಟಿಗೇಳು : ತಪ್ಪು ಮಾಡಿದ ಹುಡುಗರ ಮೇಲೆ ಮಾಸ್ತರರು ಬೆಂಕಿಕಾರಿದರು (ರೂಢಿ). **ಬೆಂಕಿಕೋಳಿ**= ಪಕ್ಷಿ ಜಾತಿಯಲ್ಲಿ ಅತಿ ದೊಡ್ಡದಾದ ಕೋಳಿ; ಉಷ್ಟ್ರಪಕ್ಷಿ ; P ಈ ಪಕ್ಷಿಯು ಬೆಂಕಿಯನ್ನು ನುಂಗಬಲ್ಲದೆಂಬ ನಂಬಿಕೆ ಪ್ರಚಾರದಲ್ಲಿದೆ : "ಉಷ್ಟ್ರಪಕ್ಷಿ ... ಬೆಂಕಿಕೋಳಿ" (Ostrich. ಇಂಕಶ). **ಬೆಂಕಿ ತೋರಿಸು** = ಬೆಂಕಿಯನ್ನು ಹಚ್ಚು; ಅಗ್ನಿಸ್ಪರ್ಶ ಮಾಡಿಸು : ಫಿರಂಗಿಯ ಮದ್ದಿಗೆ ಬೆಂಕಿತೋರಿಸಿದ ಸಮಯವನ್ನೂ ಅದರ ಆಸ್ಫೋಟನೆಯು ಕೇಳಿಬಂದ ಸಮಯವನ್ನೂ . . . ಪರಿಶೀಲಿಸಿ ಶಬ್ದದ ವೇಗವನ್ನು ಗಣಿತ ಮಾಡಿದರು (ಭೌತವಿ. ೦೪೦). **ಬೆಂಕಿ ಬೀಳು**=ಬೆಂಕಿ ತಗಲು ; ಅಗ್ನಿಸ್ಪರ್ಶವಾಗು : ಹುಲ್ಲುಮೆದೆಗೆ ಬೆಂಕಿಬಿದ್ದು ಸುಟ್ಟುಹೋಯಿತು (ರೂಢಿ). **ಬೆಂಕಿ ಹಚ್ಚಿಸು**=ಉರಿಯನ್ನು ಉಂಟುಮಾಡು : ಬೆಂಕಿಹಚ್ಚಿಸುತಿನ್ನು ನೀರಿಗೋಡಾಡುವಿರೆ? (ಹಶ್ವರ. ೪೦-೬೦). **ಬೆಂಕಿ ಹಚ್ಚು**=ಬೆಂಕಿ ಹಚ್ಚಿಸು : ಕಾಜಿ ಬೆಂಕಿಹಚ್ಚಲು ಹೈಗೈ ಮಾಡಲಿಲ್ಲ (ಕೂತಕಾ. ೩೩). **ಬೆಂಕಿಹತ್ತು**= ಉರಿತಗಲು; ಹತ್ತಿಕೊಳ್ಳು : ಗಡ್ಡಕ್ಕೆ ಬೆಂಕಿಹತ್ತಿದಾಗ ಬಾವಿ ತೋಡಲು ಹೊರಟರು (ಗಾದೆ). **ಬೆಂಕಿ ಹಾಕು**=ಬೆಂಕಿ ಹಚ್ಚಿಸು : ಅವರ ಮನೆಗೆ ಬೆಂಕಿ ಹಾಕಿ ಉರಿಸಿಬಿಡುತ್ತೇನೆ (ಆರ್ಯಕ. ೨೬).
[ದೇ.॥ ತಮಿ. ವೆಕ್ಕೈ; ಮಲ. ತೆಲು. ವೆಕ್ಕ ; ತುಳು. ಬೇಂಕಿ]

**ಬೆಂಕೆಗಣ್**, ಬೆಂಕಿಗಣ್ಣು (ನಾ). ಜ್ವಾಲೆಯನ್ನು ಸೂಸುವ ಕಣ್ಣು; ಅಗ್ನಿಯನ್ನು ಕಾರುವ ನೇತ್ರ : ಈಶನ ಬೆಂಕೆಗಣ್ಣ ಬಾಧವನೆನೆ ಶಾಂ ಮರ್ದಿಸಿದನಪ್ರತಿಮಮಲ್ಲರೆನಿಪ್ಪ ಮಲ್ಲರಂ (ಜಗಪಿ. ೬-೭೩); ಆ ದಾವಾಗ್ನಿ ಬೆಂಕೆಗಣ್ಗಳೆನೆ ಸಿಡಿದೇಳ್ವ ಕೆಂಗಿಡಿಗಳಿಂ ಸೂಸಿಧುದು ತೋರ ಕಾರೆಯ ಕೆಂಡಧಾರೆಯಂ (ಶ್ರೀರಾಮಪಾ. ೦೨೩-೩೨೨). **ಬೆಂಕಿಗಣ್ಣು** : ಕೈ ಪಂಜುಗಳನೆ ಬೆಂಕಿಗಣ್ಣು ನಂಜೊಜಿವಾಯ ಗೋದಣೆವಲ್ಲ ಭೂತಗಳ್ ಮಂಜುಳವೆನೆ ನೆಗಹಿದುವು (ಪೋಹಶ. ೨೯-೦೦). [ಬೆಂಕೆ + ಕಣ್]

**ಬೆಂಕೆವೆಟ್ಟು** (ನಾ). ಕುದಿಯುತ್ತಿರುವ ಲಾವಾರಸವನ್ನು ಉಗುಳುವ ಬೆಟ್ಟ ; ಅಗ್ನಿಪರ್ವತ : ಬೆಂಕೆವೆಟ್ಟುಗಳೋಕರಿಸಿದುವು ಭಯಂಕರ ಯುಗಾಂತಕದಾವಾಗ್ನಿಯಂ (ಶ್ರೀರಾಮಾ. ೬೦೩-೦೯೬).
[ ಬೆಂಕೆ + ಬೆಟ್ಟು₂ (< ಬೆಟ್ಟ) ]

**ಬೆಂಕೊಳ್** 'ಬೆಂಗೊಳ್' ನೋ.

**ಬೆಂಕೊಳಿಸು** (ಕ್ರಿ). ೧. ಹಿಂಬಾಲಿಸುವಂತೆ ಮಾಡು; ಅನುಸರಿಸುವಂತೆ ಮಾಡು : ಹರಣಮಂ ಕೂಡಿಕೊಂಡಿರ್ಪನಂ ತಳ್ತಿರದಾತ್ಮಪ್ರಾಣಮಂ ಬೆಂಕೊಳಿಸಿ ಬೆರಸಿದೈ (ವೃಕವಿ. ೨೪-೫೦). ೨. ಬೆನ್ನು ತೋರಿಸುವಂತೆ ಮಾಡು : ಓಡಿಹೋಗುವಂತೆ ಮಾಡು : 'ಆಹವದೊಳು . . . ಸಾಹಸದಿಂ ಪಡಲ್ವಿಡಿಸಿ ಬೆಂಕೊಳಿಸಿದ ಸೋಹಿಲ್ಲದಂತೆಂಟುಮೇಳಿ (ಗೂಮ್ಮಕ. ೭-೦೦೨). [ಬೆಂಕೊಳ್ (< ಬೆಂಗೊಳ್) + —ಇಸು₃]

**ಬೆಂಕೊಳು** 'ಬೆಂಗೊಳ್' ನೋ.

**ಬೆಂಗಟೆ** (ನಾ). ಮನೆಯ ಮೇಲೆ ಹೆಂಚು ಹೊದಿಸಲು ಸಿದ್ಧಪಡಿಸಿದ ಬಿದಿರಿನ ತಡಿಕೆ : ಕಾಣಿಸುತ್ತಿದೆ ಬಿಡಾರದ ಬೆಂಗಟೆಯಿಂದ ನೇತಾಡುತ್ತಿದ್ದ ಪಿಚೆಣನ ನಿಶ್ಚಲ ಕೃತ-ಕಳೇವರ ! (ಮಲೆಮ. ೯೫೬). [ ? ]

**ಬೆಂಗಡೆ$_1$** (ನಾ). ೧. ಬೆನ್ನಿನ ಭಾಗ ; ಹಿಂಭಾಗ : ಹಿಂಬದಿ : ಹೊಂಗೆಜ್ಜೆ ಬಿಡಯುವಿಲ್ಲದ ಹೊನ್ನಂಡೆಗಾತಿಯರು ಬೆಂಗಡೆಯ ಸಾರಿದರು ರುಕ್ಮಿಣಿಯ (ನೇಮಿಚ. ೧೪-೬೦). ೨. ಹಿನ್ನೆಲೆ : ಆಡುವ ಮಾತಿನ ಬೆಂಗಡೆಯಲ್ಲಿ ಏನೋ ಅಪೂರ್ವರಹಸ್ಯ ಹುದುಗಿದೆ (೬೦ಚರ. ೨೮೫). ೩. (?). ರನ್ನನ ಪೆರ್ಪೊಡರ್ಗಳೋಳಗಳಳವಟ್ಟು ಬಿತ್ತರಿಪ ಮುತ್ತಿನ ಬೆಂಗಡೆಗಳ್ ಪೊದಟ್ಟು ಶೋಭೆಗೆ ನೆಲೆಯಾಗಿ ಕಂಗೊಳಿಪುದು (ಕಾಂತೀಶ್ಯ. ೩-೦೨೦).

[ಬೆಂ$_1$ (<ಬೆನ್) + ಕಡೆ$_3$]

**ಬೆಂಗಡೆ$_2$** (ನಾ). ದೋಣಿಯನ್ನು ನಡೆಸುವ ಹುಟ್ಟು : "ಅರಿತ್ರಂ, ಕೇನಿಪಾತಕಃ – ನಾವೆನಡೆಸುವ ಹುಟ್ಟಿನ ಹೆಸರು. ಬೆಂಗಡೆಂದು ಎಂಬರು" (ಶಾಶರ. ೦೦೦). [ಬೆಂ$_1$ (<ಬೆನ್) + ಗಡೆ$_1$ (<ಗಟ್ಟೆ)]

**ಬೆಂಗದನಾಥ** (ನಾ). ಒಬ್ಬಾತನ ಹೆಸರು : ಸತ್ಯಶೌಚಶೀಲಾಚಾರಸಮ್ಪನ್ನ ಬೆಙ್ಗದನಾಥ ಶ್ರೀಮ[ತ್] ಪೊಮ್ಮಲ್ಲಪೊಡೆಯರ್ (ಎಶಿ. X, ಕೋಲಾರ. ೬೯-೯ ; 890). [< ಸಂ. ವೇಂಕಟನಾಥ]

**ಬೆಂಗದಿರ್** 'ಬಿಸುಗದಿರ್' ನೋ.

**ಬೆಂಗದಿರ** 'ಬಿಸುಗದಿರ' ನೋ.

**ಬೆಂಗದಿರು** 'ಬಿಸುಗದಿರ್' ನೋ.

**ಬೆಂಗದಿರುಗಲ್** (ನಾ). ಸೂರ್ಯಕಾಂತ ಶಿಲೆ : ಸರಸಿಜಾಳಿಯೊಳು ನೋಟಂ ಪತಿವಿರೋಧಕರೊಳುಜ್ ಚಿಂತೆ ಪಾಂಸುಲಾಪಂಕ್ತಿಯೊಳ್ ಸುಯ್ಯೆಂಗದಿರುಗಲ್ಲೊಳಂ ತಾಪ ವಿಕಳತೆಯುಲೂಕದೊಳ್ (ಪಂಪಭಾ. ೨೨-೯೬). [ಬೆಂಗದಿರು (<ಬಿಸುಗದಿರ್) + ಕಲ್$_3$]

**ಬೆಂಗರೆ** (ನಾ). (ಕರಾ) (ಬಿಳಿಯ ಮರಳಿನ) ಕಡಲಿನ ಕರೆ ; ಸಮುದ್ರದ ದಂಡೆ : ಹೊಳೆಯಿಂದಂ ಬಡಗಲು ಬೆಂಗರೆಯಿಂದಂ ಮೂಡಲು (ಶಾಸಂ. ೦೯೩೦, ಉಪಾಟಿ. ೩೬೦-೦೯ ; 1396); ಬೆಂಗರೆಯ ಮೇಲೆ, ಕಡಲುಗಾಳಿಗೆ ಮೈಯೊಡ್ಡಿ, ನಡೆಯುವುದು ಸಣ್ಣ ಆಟವಲ್ಲ (ಪ.ರಪು. ೩): ಬೆಂಗರೆ ಮನೋಹರವಾಗಿ ತೋರುತ್ತಿತ್ತು (ಹೊಸಕ್ಕೆ. ೬೨). [←ತುಳು. ಬೆಂಗರೆ. ಬೆಂಗ್ರು]

**ಬೆಂಗಲ್** 'ಬಿಸುಗಲ್' ನೋ.

**ಬೆಂಗಲ** (ನಾ). ಸುಟ್ಟ ಮಡಕೆ ; ಬೆಂದ ಮಡಕೆ : ಬೆಂಗಲ, ಬೆಂಗದಿರ್; ಬೆಂಬೊಳಲೆ, ಬೆನ್ನೀರ್ (ಶಮದ. ಪ. ೦೯೩ ಪ್ರಯೋ).

[ಬೆಂ$_2$ (<ಬಿಸಿದು) + ಕಲ$_1$]

**ಬೆಂಗಲ್ಲಿ** 'ಬೆನ್ನಲ್ಲಿ' ನೋ.

**ಬೆಂಗಳೂರು** 'ಬೆಂಗುಳೂರ್' ನೋ.

**ಬೆಂಗಜ್** (ನಾ). ಬೆನ್ನಿನಲ್ಲಿ ನಾಟಿರುವ ಬಾಣ : ನಃಶಂಕುಪದ್ಧನಾಯು ತಮವನೀಶ ಕಂತುವಿಸೆ ನಟ್ಟು ತುಱುಂಗಿದ ಬಾಣಜಾಲದೀ ಕ್ಷಿತಿಗೊಱಗಿತ್ತು ಬೆಂಗಜ್‌ಗಳುಣ್ಮಿದ ಕೂರ್ಮಸಮಾಜಮೆಂಬಿನಂ (ಕುಸುಮಾ. ೦೧-೬೦).

[ಬೆಂ$_1$ (<ಬೆನ್) + ಗಜ್ ]

**ಬೆಂಗಾಡು**, ಬೆಗ್ಗಾಡು, ಬೆಳ್ಕಾಡು (ನಾ). ೧. ಸುಟ್ಟುಹೋದ ಕಾಡು : ಅಗ್ನಿಸ್ಪರ್ಶವಾದ ಅರಣ್ಯ : ಕಾಳ್ಕಿಚ್ಚಿನಿಂದ ಆ ಪ್ರದೇಶವೆಲ್ಲ ಬೆಂಗಾಡಾಗಿದೆ (ಬಳಕೆ). ೨. ಬೆಳೆ ಬೆಳೆಯದ ಪ್ರದೇಶ: ಬರಡುಭೂಮಿ: ಸುಮಾರು ಇಪ್ಪತ್ತು ಮೂವತ್ತು ಹಳ್ಳಿ ಬೆಂಗಾಡು ಸುಂಟೀಕೊಪ್ಪಾಗಿದೆ (ಹುಟ್ಟಿಹ. ೦೬೦) : ಐದು ವರ್ಷಗಳೊಳಗೆ ೧೫ ಚದರಮೈಲಿ ವಿಸ್ತೀರ್ಣ ಬೆಂಗಾಡಾಗಿ ಬೀಳುಬಿದ್ದಿತು (ಹಸುಹೊ. ೨೨). **ಬೆಗ್ಗಾಡು** ೨. ಬೆಗ್ಗಾಡು ಮೊರಡಿಯಲ್ಲಿ ಹಸುರೆರಚುವೆ ನೂರುಹೊಂಗೆಯ ನೆಳಲ ತಂಪನೀವೆ (ದ್ರಾಕ್ಷಿರಾ. ೦೦-೦). **ಬೆಳ್ಕಾಡು**. ೩. ಹೆಣವನ್ನು ಸುಡುವ ಜಾಗ ; ಶ್ಮಶಾನ : ಆಕೆಯಂ ಬೆಳ್ಕಾಡೊಳ್ ಮಸಣದೊಳ್ ಕೊಂಡುಪೋಗಿಕ್ಕಿಂ (ಶಬ್ದಾರ. ೦೦೨-೩). [ಬೆಂ$_2$ (<ಬಿಸಿದು) + ಕಾಡು$_2$]

**ಬೆಂಗಾಣ್** (ಕ್ರಿ). (ಇತರರು ತನ್ನ) ಬೆನ್ನನ್ನು ನೋಡು ; ಓಡಿಹೋಗುವುದನ್ನು ಕಾಣು : ಪಚ್ಚವಡು ಬೆಂಗಾಣದ ನಿಚ್ಚಟಗಲಿ ಮನಹ ದಿಟ್ಟ ದೇವಂ (ಎಶಿ. XII, ತಿಪ್ಟೂ. ೨೯-೦೯ ; 1149). [ಬೆಂ$_1$ (<ಬೆನ್) + ಕಾಣ್]

**ಬೆಂಗಾಣಿಸು** (ಕ್ರಿ). ಬೆನ್ನನ್ನು ತೋರಿಸು ; ಹಿಮ್ಮೆಟ್ಟು ; ಓಡು : ಕಾಣುತ ಬೇಡರ ಪಡೆ ಹೆದೆವಿಲ್ಲಿಗೆ ಬಾಣವ ಹೂಡಿ ಬೊಬ್ಬಿಱಿದು ಹೂಣಿಸಿ ಕವಿದಸೆಯಲು ಮಥನನು ಬೆಂಗಾಣಿಸಿ ಮರಳಿದ ಪುರಿಗೆ (ಜನಮೇಜ. ೮-೨೯).

[ಬೆಂ$_1$ (<ಬೆನ್) + ಕಾಣಿಸು]

**ಬೆಂಗಾಪು**, ಬೆಂಗಾಹು (ನಾ). ಬೆನ್ನಿನ ಹಿಂದೆ ಇದ್ದು ಕಾಯುವುದು ; ಬೆಂಗಾವಲು ; ಅಂಗರಕ್ಷಣೆ : ಆ ಕುದುರೆಯ ಬೆಂಗಾಪಿನ ದಕ್ಕಡಪ ಗಂಡುಗಲಿಗಳ ಗಂಡು ರಾಘವಾವರಜನೆನ್ನನಿಂತು ಪೇೞ್ದಿಟ್ಟಿದಂ (ರಾಮಾಶ್ವ. ೦೯೨-೦೬) ; ಬೆಳ್ಳಿಯ ಕಟ್ಟಿನ ನೇಜೆಯುದವರು (ಭರ್ಜಿಯ ಸೈನ್ಯ) ಬೆಂಗಾಪಿನವರಿಗಾಗಿ ಬರುತ್ತಿದ್ದರು (ಕರ್ಣಾಜ. ೦೩೯). **ಬೆಂಗಾಹು** : ಸೈಂಧವನ ಬೆಂಗಾಹಿನ ಭಟರು ಭಾರಣೆಯಲೊದಗಿದರು (ಕುಮಾ೯. ೨೨-೩೦).

[ಬೆಂ$_1$ (<ಬೆನ್) + ಕಾಪು]

**ಬೆಂಗಾರ್** (ನಾ). ಕಾರ್ಗಾಲದ ಅನಂತರದ ಸಮಯ : ಅಂಗಯ್ಯಂಗಯರ್ . . . ಬೆಂಗಾರ್ ಬೆಂಬಿಸಿಲಿವ ನ್ನಯಾಭಾವಾಪ್ಪಂ (ಶಮದ. ಪ. ೧೬೬ ಅಡಿ). [ಬೆಂ$_1$ (<ಬೆನ್) + ಕಾರ್$_2$]

**ಬೆಂಗಾರಿಸು** (ಕ್ರಿ). ಸುಡು ; ತಾಪಗೊಳಿಸು : ಅಡಗಿದಳು ಕಡುಮೋಪಮನವನು ಹಿಡಿದು ಬೆಂಗಾರಿಸುತ ಕಾಂತೆಯ ನುಡಿಯ ಬಂಧನವಾಗಿ (ಜಪಪು. ೨೮-೩೩). [ಬೆಂ$_2$ (<ಬಿಸಿದು) + ಗಾರಿಸು]

**ಬೆಂಗಾಲ್** (ನಾ). ಕಾಲಿನ ಹಿಂಭಾಗ : ಹೆಜ್ಜೆಯ ಹಿಂಭಾಗ : ಅಸ್ಯಯಾಭಾವಕ್ಕೆ . . . ಬೆಂಬಿಸಿಲ್, ಬೆಂಗಾಲ್, ಬಯ್ಗಿರುಳ್ (ಶಮದ.ಪ. ೦೬೬ ಪ್ರಯೋ). [ಬೆಂ$_1$ (<ಬೆನ್) + ಕಾಲ್$_1$]

**ಬೆಂಗಾವಲ್**, ಬೆಂಗಾವಲು, ಬೆನ್ನುಗಾವಲು (ನಾ). = ಬೆಂಗಾಪು : ಜನ್ನಗುದುರೆ ಬೆಂಗಾವಲ್ಗೆ ಸೈನ್ಯಸಾಗರ ಸಹಿತ . . . ಪೊರಮಟ್ಟು (ಶಬ್ದಾಂಗ. ೬೦-೧೯೪). **ಬೆಂಗಾವಲು** : ಬೆಂಗಾವಲಾಗಿರ್ದ ಪಟುಭಟನಿರ್ಮಿಸಿದ ತುರಂಗಯುಗಮಂ ಕಾಣದೈತಂದು (ಕೃಬಾಠಾ. ೨೮-೬) ; ಪಸ್ತು ಒಡವೆ ಆ ಕುಟುಂಬದ ಬೆಂಗಾವಲಿಗೆ ನಿಂತವು (ಅಶ್ವತ್ಥ. ೯೩). **ಬೆನ್ನುಗಾವಲು** : ರಣೋತ್ಸಾಹವುಳ್ಳ ಅರ್ಜುನನೂ ಮಹಾಬಲನಾದ ಭೀಮಸೇನನೂ ಬೆನ್ನುಗಾವಲಾಗಿರಲು (ಕೃಪಾಲ. ೨೨೯).

[ಬೆಂ$_1$ (<ಬೆನ್) + ಕಾವಲ್$_1$]

**ಬೆಂಗಾವಲು** 'ಬೆಂಗಾವಲ್' ನೋ.

**ಬೆಂಗಾಹು** 'ಬೆಂಗಾಪು' ನೋ.

**ಬೆಂಗಾಳು** (ನಾ). ಬಿಸಿಯಾದ ಕಾಳು : ಒಂದು ಹಿಡಿ ಜೀರಿಗೆಯನ್ನು ನಸುಗೆಂಪಾಗಿ ಹುರಿದು ಬೆಂಗಾಳಾಗುವ ಹಾಗೆ ನೀರ ತಳಿವು (ಸಕಪ್ಪ. ೦೨೦).

[ಬೆಂ$_2$ (<ಬಿಸಿದು) + ಕಾಳು$_2$ (<ಕಾಟ್$_2$)]

**ಬೆಂಗಿ** 'ವೆಂಗಿ$_2$' ನೋ.

**ಬೆಂಗಿಮಂಡಳ** (ನಾ). ಒಂದು ದೇಶದ ಹೆಸರು ; ವೆಂಗಿನಾಡು : ಆ ಮಳಯಾಚಳ ಹಿಮಗಿರಿಸೀಮಾಪನಿತಳ[ಕೆ] ಬೆಂಗಿಮಂಡಳದೊಳ್ ಚಿಲ್ತಾವಗಮೆ ತನಗದೊಂದೂರ್ ನಾಮದೊಳಂ ವೆಂಗಿಪೞು (ಶಂಕಥಾ. ೦೯-೪೦).

[ಬೆಂಗಿ (<ವೆಂಗಿ$_2$) + ಮಂಡಳ (=ಮಂಡಲ)]

**ಬೆಂಗುಡಗಿ** (ನಾ). ಗೊಂದಲ ; ಗಜಿಬಿಜಿ : ಏನು ಸಬಾನೋ ಸಬಾ. ಪಕ್ತ ಬೈಗೋಳು — ಬಡದಾಟ — ಬೆಂಗುಡಗಿ ! (ನಾಟಾಂ. ೯೩). [ ? ]

**ಬೆಂಗುಡು** 'ಬೆಂಗೊಡು' ನೋ.

**ಬೆಂಗುಳೂರ್**, ಬೆಂಗಳೂರು (ನಾ). ಒಂದು ಊರಿನ ಹೆಸರು : P ಕರ್ನಾಟಕದ ಈಗಿನ ರಾಜಧಾನಿ : ಶ್ರೀಮತ್ ನಾಗತರಸ ಮನೆವಗತಿ

ಪೆರ್ಗ್ಗೊಣಸೆಟ್ಟಿ ಬೆಂಗುಳೂರ ಕಾಳೆಗದೊಳಿಳ್ಕಾಗತರನ ವಗಂ ಬಟ್ಟಣಪತಿ ಸತ್ತಂ (ಎಕ. IX (s), ಬೆಂಗಳೂ. ೦೮೨-೪ ; ಸು. 850). **ಬೆಂಗಳೂರು :** ಬಳಲಾಪುರ ಬೆಂಗಳೂರು ಕೋಳಾಲದಿಳೆಯಾಣ್ಮ ರುಜಿ ಕಂಗೆಟ್ಟು ತಳತಂತ್ರುವ ನೀಗಿ ತಮ್ಮಯ ಪುರಗಳ್ಗೆ ತಳುವದೆ ಸರಿದರು (ಕಂಹಂ. ೩-೯೨) ; ಭಗವನ್ತ ಗಿರಿ ಗೋಸಾವಿ ಬೆಂಗಳೂರು ವಳಗಡಿ ಬೇಗೂರುತಾಲ್ಲೂಕು ಪೈಕಿ ತಾವರೇಕೆರೆಗ್ರಾಮಕ್ಕೆ ಪೂರ್ವದಿಕ್ಕಿನಲ್ಲಿಯಿರುವ ಧರ್ಮ್ಮದೀಕ್ಷಿತರ ಛಟವಮಾನ್ಯದ ಹೊಲ ಖ ೧-೦-೦ (ಎಕ. IX, ಬೆಂಗಳೂ. ೩-೬ ; 1855).

[? + ಊರ್]

**ಬೆಂಗೂಸು** (ನಾ). ಬೆನ್ನಿನ ಬಾಗು,—ಡೂಗಂ : ವಿಂಗೆ ಕಾಸಿ ತಿರ್ದಿದಂತೆ ಪೊಲಗಲದ ಬೆಂಗೂಸುಮಳಿಯೆ ಸಸಿನಂದಳೆದಾ ಜಗತೀಪತಿಯುಂಗಂ ಪೊಗರುಗೆ ಸೌಂದರ್ಯಮನೆ ತಾಳ್ದು ಕಂಗೊಳಿಸಲೊಡಂ (ಕೃಶಂ. ೩೪-೯೫).

[ಬೆಂ$_1$ (<ಬೆನ್) + ಕೂಸು$_2$ (<ಕೂನ್$_2$)]

**ಬೆಂಗೆಡಿಸು** (ಕ್ರಿ). ಹಿಂದಕ್ಕೆ ಓಡಲು ಅವಕಾಶವಿಲ್ಲದಂತೆ ಮಾಡು : ಅಹಿತರ್ಕಳು ಅಚ್ಚರಿಯೊಳೊಡನೊಡನೆ ಕಂಗೆಡಿಸಿ ಬೆಂಗೆಡಿಸಿ ಕೊಟ್ಟಿ ಕೊಯ್ದು (ತಂಪು. ೯೯-೪). [ಬೆಂ$_1$ (<ಬೆನ್) + ಕೆಡಿಸು$_1$]

**ಬೆಂಗೊಡತಿ** (ನಾ). ಬೆನ್ನಿನಲ್ಲಿ ಧರಿಸಿರುವ ಕೊಡತಿ : ನಡೆಮುದಲ್ಲಿಂ ಮೇಲೆ ನೆಲ ದಡದಡಿಸಲಾನೆಗಳಂಕುಶದ ಬೆಂಗೊಡತಿಗಳ ಬಲುಪೊಯ್ಲ ಬೊಬ್ಬೆಯು . . . ಕಳಕಳಿಕೆ ಕೂಗಿತೆ (ಕೊರಟಾ. ೫-೬-೦೦).

[ಬೆಂ$_1$ (<ಬೆನ್) + ಕೊಡತಿ (<ಕೊಡಂತಿ)]

**ಬೆಂಗೊಡು**, ಬೆಂಗುಡು, ಬೆನ್ನುಕೊಡು (ಕ್ರಿ). ೧. (ಯುದ್ಧದಲ್ಲಿ ಶತ್ರುಗಳಿಗೆ) ಬೆನ್ನುತೋರಿಸು ; ಸೋತು ಓಡು : "ಅಕ್ಕುಳಿಸಿತೆಂದುಂ . . . ಬೆಂಗೊಟ್ಟುದೆಂದುಂ . . . ಪಾರಗೆಯ್ದೆಂದುಂ—ಈ ೧೩ ಅಪ ಸರಣಕ್ಕೆ ಪೆಸರ್" (ಶಶಾ. ೭೨-೭೪೯) ; ಕಾಮನ್ನಪಾಳನೋಡಿದನವಂ ಬೆಂಗೊಟ್ಟು ಕಾಳ್ವಟ್ಟೆಯಿಂ (ಎಇ. XX, ೦೨-೨೭ ; 1167); ಮುನಿವರ್ಗೆ ಬೆಂಗೊಡದ ದೆಸೆಯೊಳತಿಲೋಭಿ ದುರ್ಜನರ ಮಾತಂ ಕೇಳದೆಡೆಯೊಳತಿ ಮೂರ್ಖ (ಹಕಾ. ೨-೦೭) ; ನಡುಗಿ ಸಂಗರಭೀತಿಯಲಿ ಬೆಂಗೊಡುವ ನಾಯಕವಾಡಿಗಳ ವಂಗಡವ ನೋಡುತ ಮುಟಿಯ ಚಕ್ರವ ತೆಗೆದನಸುರಾರಿ (ಕುವ್ಯಾರಿಪ್ರ. ೦೪-೯೫). ೨. (ಬೆನ್ನನ್ನು ನೀಡಿ) ಆಧಾರವಾಗು ; ಆಶ್ರಯವಾಗು : ವೃಂದಾರಕರಾದಿಯಾದ ರಾಕ್ಷಸರಾಜರೊಂದಾಗಿ ಸೂದೆ ಗಡಲ್ಗದೆಯ ಮಂದರಗಿರಿ ಮುಳುಗಿದಡೆ ಕಚ್ಛಪರೂಪಿನಿಂದ ಬೆಂಗೊಟ್ಟಾತನೀತ (ಪೋಕಶ. ೩೬-೨೩). **ಬೆಂಗುಡು :** ೧. ಪೊಳೆವಿಂದುಗಳ್ಕೆ ಬೆಂಗುಡೆ ಮೊಳೆದುವು ಬೆನ್ನಿಂದಮೆರ್ದೆಗೆ ಕದಿರ್ದುಂಬಗಲೆನಲ್ ತೊಳಗಿದುವು ಮದನಶಿಖಿ ವಿಷ್ವಳತ್ಪೃದಯನ್ಯಸ್ತಹಸ್ತನಖದೀಧಿತಿಗಳ್ (ಕಾವಂಪು. ೯೦೬) ; ಕೋಡೇಜಂಗೆ ಮಾಜಾನೆಗಳ್ ರಣದೊಳ್ ಬಂಗುಡೆ ಜೋದರೆಚ್ಚ ಪಲವುಂ ನಾರಾಚದೇಜಂಗೆ ಬಲ್ಲಣೆಗಳ್ ಬೆಂಗುಡೆ (ಕಂಠಾಮಾ. ೦೩-೯೦). **ಬೆನ್ನು ಕೊಡು :** ೧. ಅವರು ಬೆನ್ನುಕೊಡಲಾಗಿ ಬೆನ್ನಟ್ಟಿ ಪೊಸಕೋಟೆಪೇಟೆ ವಳಗೂ ಪೊಕ್ಕು ಕಡದು ಬಹುಜನಕ್ಕೆ ಜಖಂ ಮಾಡಿ . . . ಬೆಂಗಳೂರಿಗೆ ಬಂದು ದಾಖಲಾದರು (ಹೈದರ. ೪೦). [ಬೆಂ$_1$ (<ಬೆನ್) + ಕೊಡು$_1$]

**ಬೆಂಗೊಳ್**, ಬೆಂಕೊಳ್, ಬೆಂಕೊಳು, ಬೆಂಗೊಳಂ (ಕ್ರಿ). ಬೆನ್ನಟ್ಟು ; ಹಿಂಬಾಲಿಸು ; ಅನುಸರಿಸು : "ಬೆಂಗೊಳ್—ಅನುಧಾವನೇ (ಬೆನ್ನಟ್ಟು)" (ಶಮದ) ; ಬೆಳ್ಳಿರಲೆಯುಂ ಬೆಂಗೊಂಬಂತೆ ತಗುಳ್ದು (ವರ್ಧಮಾ. ೪-೨೫೨). **ಬೆಂಕೊಳ್ :** ಆ ಅರಸು ಬನ್ದು ಎಳಬ್ಬೆನಾಯ ಮುಟ್ಟಿಪೋಗೆ ಬೆಂಕೊಣ್ಡು ಕೈಳಕ್ಕಾಟ್ಟಿಯೊ ಕಾದಿ ಸತ್ತಂ (ಎಕ. XV, ಅರಸೀ. ೨೦೫-೮ ; 890) ; ನಿನ್ನನುಬುಗಿಸಲುಮಾಜಿಯೊಳೆನ್ನಂ ಬೆಂಕೊಂಡು ಕಾದಲು ಬಂದೀಗಳ್ . . . ಬೀರರ್ ಬೆನ್ನಿತ್ತುದನಿನಿಸು ನೋಡ (ಕಂಶಟಾ. ೩-೭೩) ; ಕ್ರೂರ ಮೃಗಂಗಳವಂ ಕಂಡು ಬೆಂಕೊಂಡು (ಕಂಪಶಂ. ೨೬೦-೭). **ಬೆಂಕೊಳು :** ಕೆಲರು ಹೂಗೊಂಚಲಿನ ತುಂಬಿಯ ಬಳಗವನು ಬೆಂಕೊಂಡರು (ಕುವ್ಯಾಆ. ೦೯-೪) ; ಬಿತ್ತರದೊಳೊತ್ತರಿಸಿ ಹರಗಣಂ ಸುರಗಣವ ಬೆಂಕೊಂಡುದು (ಕಬಪು. ೩೦-೯೩). **ಬೆಂಗೊಳು :** ಹಲವು ಪರಿಯಲಿ ಬೇಡಿ ಬೆಂಗೊಳುವ ಹದನಿಲ್ಲ ಮನಸಿನೊಂದೇ ಪೂಜೆ ನಿನ್ನ ಸೇವನೆಗೆ (ಕಬಕಾ. ೦೦೦-೭).

**ಬೆಂಕೊಳ್ವನ ಕೋಲ್** = ಭೂಮಿಯನ್ನು ಅಳೆಯುವ ಒಂದು ಬಗೆಯ ಕೋಲು,—ಗಳೆ : ಸಿ[ರಿ]ಗಳಬ್ಬೆ[ಯಾ] ಕೆಜಿಯಿಂ ಪಡುವಲು ಬೆಂಕೊಳ್ವನ ಕೋಲಲು ಬಿಟ್ಟ ಕೆಯಿ ಮತ್ತರು ಹತ್ತು ಎಇ (XXVII. ೩೩-೫೦ ; 1114) ; ಮೂಡಲು ಹದಿಮೂಜು ಗೇಣ ಬೆಂಕೊಳ್ವನ ಕೋಲ ಮತ್ತರು ನೂಜು (ಕಇ. II, ೦೨-೪೫ ; 1114).

[ಬೆಂ$_1$ (<ಬೆನ್) + ಕೊಳ್$_1$]

**ಬೆಂಗೊಳು** 'ಬೆಂಗೊಳ್' ನೋ.

**ಬೆಂಗೋಡೆ** (ನಾ). ಹಿಂಬದಿಯ ಗೋಡೆ : ಹಿಂಭಾಗದ ಭಿತ್ತಿ : ಗಗನದೊಳಗೆ ಬಂದು ನೃಪನ ಬೆಂಗೋಡೆಯೊಳಗಣಾದಿಜಿನಬಿಂಬಕ್ಕಿದಿರ ಗಗನಪುರುಷ ಸಿದ್ಧಬಿಂಬಗಳಿಗೆ ಕೈಯ ಮುಗಿದಿಳಿದರು ಗವಾಕದೊಳು (ಭರತ. ೦೩-೧೯೦). [ಬೆಂ$_1$ (<ಬೆನ್) + ಗೋಡೆ]

**ಬೆಂಗೋಲು** (ನಾ). ಬೆನ್ನಿಗೆ ಹೊಡೆಯಲು ಎತ್ತಿರುವ ಕೋಲು : ಜಗದ ಜಂಗುಳಿಗೆ ಬೆಂಗೋಲನೆತ್ತಿ ಕಾಡಿತ್ತು ಮಾಯೆ (ಶುಹಾರೇ. ಬ. ೧೬-೨೬). [ಬೆಂ$_1$ (<ಬೆನ್) + ಕೋಲು$_1$ (< ಕೋಲ್$_1$)]

**ಬೆಂಚ** 'ಬೆಂಚಿ' ನೋ.

**ಬೆಂಚಗ** (ನಾ). ಒಂದು ಬಗೆಯ ಪಕ್ಷಿ : ಬೆಳುವ ಬೆಂಚ [ಪಾಠಾಂ. ಚೆ]ಗ . . . ಮಡಗೊಳಲೆ ಮುಖ್ಯವಿಹಂಗವಿವೆ ವೈದೇಹಿ ನೋಡು (ತೊರರಾ. ೩-೦-೩೩).

[ ? ]

**ಬೆಂಚಿಯಹಂಬು** (ನಾ). ಒಂದು ಬಗೆಯ ಬಳ್ಳಿ : ಬಾಗಿಲಲ್ಲಿ ಕಟ್ಟಿದ್ದ ತೊತ್ತಿಂದು ಬಲುಗೋಡಗಕ್ಕೆ ಬಾಯ ಅಣಲಿನ ಸಂಚದ ಕೂಳು ಉಡಿಯೊಳ ಗಳ ಬೆಂಚಿ [ಪಾಠಾಂ. ಚೆ]ಯ ಹಂಬು ಹಂಬಿನೊಳಗಳ ಬಹುಧಾನ್ಯದ ತೆನೆ (ಮಹಮಗುಂ. ೪. ೨೬೮-೦೦೦೭). [ ? + ಹಂಬು$_2$ (<ಪರಪು$_2$) ]

**ಬೆಂಚು** (ನಾ). ೧. (ಸಾಮಾನ್ಯವಾಗಿ ಶಾಲೆಗಳಲ್ಲಿ ವಿದ್ಯಾರ್ಥಿಗಳು ಕೂರಲು ಇರುವ) ಸ್ವಲ್ಪ ಎತ್ತರದ ಕಾಲಿರುವ ಉದ್ದವಾದ ಮಣೆ : ದೊಡ್ಡಸೇರ್‌ಜಿ ತಬೇಲಿ ಮಧ್ಯ ಬೆಂಚು ಹಾಕಿಸಿ ಕೂತ (ಕಂಗಾಲಿ. ೯೩) ; ಸಾಕಾದಷ್ಟು ಬೆಂಚುಗಳಿರಲಿಲ್ಲ, ಹಲಗೆಗಳಿರಲಿಲ್ಲ (ರಂಗಳ. ೩೫). ೨. ಒಬ್ಬರಿಗಿಂತ ಹೆಚ್ಚಾಗಿ ನ್ಯಾಯಾಧೀಶರಿರುವ ನ್ಯಾಯಾಸ್ಥಾನ ಮತ್ತು ಇಂತಹ ನ್ಯಾಯಾಸ್ಥಾನದಲ್ಲಿ ಕೂರಲು ಅರ್ಹನಾದ ವ್ಯಕ್ತಿ,— ನ್ಯಾಯಾಧಿಪತಿ : ದಾವೆಗಳನ್ನು ವಿಚಾರಿಸುವ ಬಗ್ಗೆ ಏರ್ಪಟ್ಟ ಬೆಂಚುಗಳಲ್ಲಿ ಕೂತುಕೊಳ್ಳಲು ಅರ್ಹರಾದ ಜನರ ಪಟ್ಟಿಯಲ್ಲಿ . . . ಹೆಸರುಗಳು ಸೇರಿರತಕ್ಕದ್ದು (ಗ್ರಾಮಾಳ. ೦೦).

[← ಇಂ. Bench]

**ಬೆಂಚಿ**, ಬೆಂಚ (ನಾ). ಸಣ್ಣಹೊಂಡ ; ಚಿಕ್ಕ ಜಲಾಶಯ ; ಕುಂಟೆ : "ನಿಪಾನಂ, ಉದಪಾನಂ, ವಾಪೀ, ಆಹಾವಃ—ಈ ೪ ಬೆಂಚಿ" (ಹಲಾಯು. ೦೦೩-೬೨) ; ಪೂಗೊಳಂ ತಾಸಿರೆಯುಂ ಬಕನಿಕರಲುಳಿತಕಲುಷೋದಕ ವಿರಳದೊಳಂಚಿ ಬೆಂಚಿಯೊಳ್ ವಸಿಯಿಕುಮೋ (ಕಾವ್ಯಾಶ. ೭೦೩) ; ಅಂಚಿ ಗಳಿಲ್ಲದ ಬೆಂಚಿ ಬೇಟವಿಲ್ಲದ ಬೆಳೆವೆಣ್ಗಳಿಲ್ಲ ಪೆಸರಿಲ್ಲದ ಮಾನಸರಿಲ್ಲ ದೆಲ್ಲಿಯುಂ (ಕನ್ನಿಕಾ. ೨೭) ; ಅರಸಂಚೆಗಳ ಸಂಚಯಂ ಬೆಂಚೆಗಳೊಳು ಸಂಚರಿಸಲು ವಿನೋದದಿಂ (ಸೌಂದಪು. ೦೦-೨). **ಬೆಂಚ :** ಬೆಲೆಯ ಚಿನ್ನಿಗ ಬಲ್ಲ ನೆಲೆಯನಂಬಿಗ ಬಲ್ಲ ಮಲೆಯ ಬೆಂಚದಿಂದಜಿವಂತೆ ಸೂಳೆ ನೆಜಿ ಪೊಲಬನಜಿದಿಹಳು (ಸರ್ವಜ್ಞ. ೦೯೦೩).

[ದೇ.॥ ತೆಲು. ಪೆಂಚ]

**ಬೆಂಜನ** (ನಾ). ೧. ನಂಜಿಕೊಳ್ಳುವ ಪದಾರ್ಥ; ಬಾಡಿಸಿಕೊಳ್ಳುವ ವಸ್ತು: ನಂಚಿಕೆ : ಬಾಡುಂ ಬೆಂಜನಮುಂ ಕೂಟಂ ರುಚಿಮಾಡುವನಿತಲ್ಲದೆ ತಾಂ ಬೇಱೆ ತಣಿಪಲ್ನೆಱಿಗುಮೆ (ಶಬ್ದಸಂ. ೩೭-೮). ೨. [ವ್ಯಾಕ] ಸ್ವರಗಳ ಸಹಾಯವಿಲ್ಲದೆ ಸ್ವತಂತ್ರವಾಗಿ ಉಚ್ಚರಿಸಲಾಗದ ವರ್ಣ; ವ್ಯಂಜನ : ಯತ್ವಲೋಪಕ್ಕೆ . . . ವ್ಯಂಜನ–ಬೆಂಜನ (ಶಮದ. ೨೫೧ ಪ್ರಯೋ). [< ಸಂ. ವ್ಯಂಜನ]

**ಬೆಂಜನಂಗೆಯ್** (ಕ್ರಿ). ಬಾಡಿಸಿಕೊಳ್ಳುವ ಪದಾರ್ಥವನ್ನು ತಯಾರಿಸು; ವ್ಯಂಜನಪದಾರ್ಥವನ್ನು ಸಿದ್ಧಪಡಿಸು : ಆತನ ಮನೆಯೊಳರ್ಚಿತಂಗೆಯ್ದ ಸಮಯದೊಳು ನೂತನದಲಾಬೂಫಲದೆ ಬೆಂಜನಂಗೆಯ್ದು ಸಾಶಿತಯದಿಂ ನೀಡಲು (ಸಿದ್ಧ.ಪು. ೧೧-೪೪). [ಬೆಂಜನ + ಕೆಯ್₁]

**ಬೆಂಡ** (ನಾ). ಒಂದು ಮನೆತನದ ಹೆಸರು (?) : ತುಱುವ ಮೊಱುಕ ಕೆರ್ಗ್ಗಳೆ ಬೆಣ್ಣರ ಮಾಕಿ ಕಾದಿ ಇಕ್ಕಿಸಿ ಸತ್ತು ಸಗ್ಗಸ್ಥನಾದಂ (ಎಕ. X (8), ಮುಳಬಾ. ೩೦೭-೨ ; 950). [?]

**ಬೆಂಡಾಡು** (ಕ್ರಿ). ಬೆಂಡಿನಂತೆ ಹಗುರವಾಗಿ ಚಲಿಸು,—ತೇಲು : ಬೆಳ್ದಿಂಗಳೆಂಬ ಪಾಲ್ಗಡಲೊಳ್ ಬೆಂಡಾಡುವ ಚಕೋರಂಗಳಂ ನೋಡುತ್ತಾಂ ಮೆಲ್ಲಮೆಲ್ಲನೆ ಬರೆವರೆ (ಉದ್ಭಟ. ೩-೧೩ ವ). [ಬೆಂಡು + ಆಡು₁]

**ಬೆಂಡಿಗ,** ಬೆಂಡುಗ, ಬೆಂಡುಳಿಗೆ (ನಾ). ಒಂದು ಬಗೆಯ ಮರ : ಹಳ್ಳದ ಪಡುವಣಾತ್ತಿನ ಬೆಂಡಿಗದ ತಾಳಿಗೆ ತೆಂಕಣ ನೈಋತ್ಯದ ನಡುವೆ ನೆಟ್ಟ ಕಲ್ಲು (ಎಕ. XIV. ಮೈಸೂರು. ೧೦೪-೩೮೭ ; 1674). **ಬೆಂಡುಗ** : ಕಡವೆ ಬೆಂಡುಗ ಕಾವಮರ ಕಂಬಾಳವು ಎಡವಿಡದಿಹ ಪುತ್ರಜೀವಿ . . . ಎಸೆದಿಹವು (ಮಾರ್ಕಂಡೇ. ೧-೩೪) ; ಬೆಂಡುಗೆ, ಬೆಂಡುಳಿಗೆ (ವ್ಯಾಕ. ೬೯-೧೪೦೨). **ಬೆಂಡುಳಿಗೆ** : ಬೆಂಡುಗ, ಬೆಂಡುಳಿಗೆ, ನಾಯಿಕುಳಿ, ಬೋಂಡು ಳಿಕೆಹುಲ್ಲು (ಸಸ್ಯಶಿ. ೦೦೮). 'ಬಿಂಡಿಗ' ಹೋ. [ ? ]

**ಬೆಂಡು** (ನಾ). ೧. (ಜೋಳ ಮುಂತಾದುವುಗಳ) ದಂಟಿನ ಹಗುರವಾದ ಒಳಭಾಗ : ಕಾಲಲಿ ಕಟ್ಟಿದ ಗುಂಡು ಕೊರಳಲಿ ಕಟ್ಟಿದ ಬೆಂಡು ತೇಲಲೀಯದು ಗುಂಡು ಮುಳುಗಲೀಯದು ಬೆಂಡು (ಬಸವ.ಪ. ೧೦೭-೩೩೦); ಬೆಂಡಿರದೆ ಮುಳುಗಿದರು ಗುಂಡೆದ್ದು ತೇಲಿದರು . . . ಸಾಲಿಗನು ಕೊಂಡದ್ದು ಕೊಡನು (ಸರ್ವಜ್ಞ. ೧೩೯೭). ೨. ತಿರುಳಿಲ್ಲದಂದು; ಸತ್ತ್ವವಿಲ್ಲದುದು; ಜಡವಾದುದಂ: ಈ ಕಜ್ಜದೊಳ್ನೀಂ ತೊಡರ್ದು ಮರುಳೆ ಬೆಂಡಾಗದಿರ್ (ಗದಾಯು. ೯-೧೩); ಬೆಂಡಾಗೆ ಮನಂ ಮೌನಂಗೊಂಡಿರೆ ವಲ್ಲಭನ ಮನವನಱಿವಾಗ್ರಹದಿಂ ಮಂಡೋದರಿ ಮಾಣದೆ ಬೆಸಗೊಂಡಳ್ (ಶಂರಾಮಾ. ೯-೧೩೭); ತಪನನುಷ್ಣತೆಯಿಂದ ತನುಲತೆ ಬೆಂಡಾಗಿ ಲಪನಾಂಭೋರುಹ ಕೊರಗಿ ಅಪರಾಹ್ಣಕಾಲದಿ ರತಿ ಶಂಬರಾಸುರನುಪವನವನು ಪೊಕ್ಕಳಂದು (ಪೋಹಶ. ೯-೩೯). ೩. (ಜೋಳದ ದಿಂಡಿನಾಕಾರದ) ಒಂದು ಬಗೆಯ ಸಿಹಿತಿಂಡಿ : ಅವರು ಮಂಡಕ್ಕಿ . . . ಬೆಂಡು, ಬತ್ತಾಸು ಕೊಂಡುಕೊಂಡರು (ಳಪಬ. ೩-೨೩); ಕರ್ಮಿಣ್‌ಸಾಬರು . . . ಮಿಠಾಯಿ, ಬತ್ತಾಸು, ಬೆಂಡು ಮೊದಲಾದ . . . ಪದಾರ್ಥಗಳನ್ನು ಮಾರಾಟಕ್ಕೆ ತರುತ್ತಿದ್ದರು (ಮಳಿಮ. ೪೩೭).

**ಬೆಂಡು ಬೆಱಗಾಗು, ಬೆಂಡು ಬೆರಗಾಗು**=ಸತ್ತ್ವಹೀನವಾಗುವಷ್ಟು ಆಶ್ಚರ್ಯಪಡು ; ನಿಬ್ಬೆರಗಾಗು ; ಮಿಡಿವಿಲ್ಲೊಳೆಚ್ಚೊಡೆಡೆಯೊಳ್ ಪುಂಡ್ರೇಕ್ಷುವಂ ತಾಗೆ ಗಂಟೊಡೆದತ್ತಂ ರಸಮೆಚ್ಚು ಪಾಯೆ ಪಥಿಕರ್ ಪೊಕ್ಕೀಂಟುತುಂ ಕೈಯ ಬಾಯೆಡೆಯೊಳ್ಪಾಯ್ದುಗೆ ಕಂಡು ಬೆಂಡುಬೆಱಗಪ್ಪರ್ ಪಾಮರೀವಕ್ತ್ರಮಂ (ಅನಂಪು. ೧-೫೦); ಬಂದವರು:—(ಬೆಂಡು ಬೆರಗಾಗಿ ಬಣ್ಣಗೆಟ್ಟು ಬಾಗಿಲೆಡೆಯಲ್ಲಿ ಒಗ್ಗಾಗಿ ನಿಂತು ನಿರೀಕ್ಷಿಸುತ್ತಿರುವರು) (ಮಂತ್ರಶ. ೬೪-೩).

[ದೇ.॥ ತಮಿ. ವೆಣ್ಟು; ತುಳು. ಬೆಂಡ್, ಬೆಂಡು, ಬೊಂಡು; ತೆಲು. ಬೆಂಡು]

**ಬೆಂಡುಖರ್ಜೂರ** (ನಾ). (ಸಾಮಾನ್ಯವಾಗಿ ಮರುಭೂಮಿ ಪ್ರದೇಶಗಳಿಂದ ಪಿಂಡಿಗಳಲ್ಲಿ ಆಮದಾಗಿ ಬರುವ) ಒಂದು ಬಗೆಯ ಖರ್ಜೂರ : ಅವರ ಮನೆಯವರು ಜಾತ್ರೆಯಿಂದ ಬೆಂಡುಖರ್ಜೂರವನ್ನು ತಂದಿದ್ದಾರೆ (ಕೂಡಿ). [< ಸಂ. ಪಿಂಡಖರ್ಜೂರ]

**ಬೆಂಡುಗ** 'ಬೆಂಡಿಗ' ನೋ.

**ಬೆಂಡುಗರೆ** (ಕ್ರಿ). ಬೆಂಡಿನಂತಾಗು; ಸತ್ವವನ್ನು ಕಳೆದುಕೊಳ್ಳು; ನಿಸ್ಸತ್ತ್ವಗೊಳ್ಳು : ಮದನುದ್ದಂಡದೇವಿಯೊ . . . ಪುಂಡರೀಕಾಂಬಕಿಯೊ ಯಿಾಚಲು ಗಂಡರಾರೆಂದೀಕ್ಷದಲಿ ಕಣ್ಬೆಂಡುಗರೆದೊರಗಿದರು ನೃಪಸುತರರ್ಧಮೂರ್ಛೆಯಲಿ (ಜರಾಮಾ. ೨೦೭-೩೩); ಚಿಂತೆಯಿಂದ ನನ್ನ ಹೃದಯವು ಬೆಂಡುಗರೆದಿದೆ (ಶ್ರೀರಾಶ. ೧೧). [ಬೆಂಡು + ಕರೆ₂ (< ಕಱಿ₁)]

**ಬೆಂಡುಗಳೆ** (ಕ್ರಿ). ಬೆಂಡಿನಂತೆ ಸತ್ತ್ವಹೀನವನ್ನಾಗಿ ಮಾಡು,–ನಿಸ್ಸತ್ತ್ವಗೊಳಿಸು : ಕಂಡ ಕಡೆಗೆ ನಡೆನಡೆದಳುಕದೆ ಕಾಲುಗಂಡ ಕರಾಳವೆಣ್ಣುಗಳ ಅಂಡಲೆದವರೊಳು ಬಳೆದೊಳ್ನೀಹವ ಬೆಂಡುಗಳೆದು ಬಿಡಿಸುವುದು (ಹರಿಭ. ೮-೯೭). [ಬೆಂಡು + ಕಳೆ₁]

**ಬೆಂಡುನೆಗೆ** (ಕ್ರಿ). =ಬೆಂಡುಗರೆ : ಆ ರಮಣಿ ಕೃತಕಶೋಕಾಸಾರದ ಪೊನಲೊಳಗೆ ಬೆಂಡುನೆಗೆದಿರ್ದಮದೇಂ ರಾರಾಜಿಸಲಾರ್ತಳೊ ತಿಳಿನೀರೊಳಗಣ ಚಂದ್ರಕಲೆಯ ನೆಬಲೆಂಬಿನೆಗಂ (ಶಂರಾಮಾ. ೯-೩೭); ಕುಮುದ ಕೇಸರದ ರಜದೊಳರ್ದ ಚರಣಚಯವಂ ಕೀಟಲಾಜದೆ ಪಟವಂಡಿನೊಳ್ಬೆಂಡುನೆಗೆದು ಪೊರಳ್ದು ನರಳ್ದು ಮೊರೆವ ಮಱಿದುಂಬಿಗಳ ಗಱಿಯಂ ಗಿಜ್ಜನೆ ತೆಗೆದು ನೆಗಪಿಯುಂ (ಲೀಲಾವ. ೩-೨೦ ವ). ೨. ಬೆಂಡಿನಂತೆ ಹಗುರವಾಗಿ ತೇಲು : ಪ್ರಧಾನಿ ಹರಿಯಾತಂ ಪೋಗುತಮೊಂದು ಸರಸಿಯೊಳ್ ಶಿಲೆಯತುಳಂ ನೀರೊಳಗೆ ಬೆಂಡುನೆಗೆದಿರೆ ಕಂಡಂ (ಧರ್ಮಶ. ೩-೩). [ಬೆಂಡು + ನೆಗೆ₁]

**ಬೆಂಡುಮಗುಚ್** (ಕ್ರಿ). (ನೀರಿನಲ್ಲಿ) ಬೆಂಡಿನಂತೆ ಅಡಿಮೇಲಾಗು; ಬೋರಲಾಗು : ಮುಡಿಯ ಪೂವಿನ ರಜದಿಂ ವಾಸಿಸಿದ ನೀರ ಕವಡಿಂ ದಾಸವದೊಳ್ ಸೊರ್ಕಿ ಬೆಂಡುಮಗುಚ್ದುವು ಮಿಾಂಗಳ್ (ಶಂಶಭಾ. ೩-೬೩). [ಬೆಂಡು + ಮಗುಚ್]

**ಬೆಂಡುಮಾರ** 'ಬೆಂಡುವರ' ನೋ.

**ಬೆಂಡುಮರಲ್** (ಕ್ರಿ). ಸತ್ತ್ವವನ್ನು ಕಳೆದುಕೊಳ್ಳು ; ಜಡತ್ವವನ್ನು ಹೊಂದು : ನಿಷಾದಿತಿಯೆಂಬ ಬೇಡಿತಿಗಮಯ್ವರ್ ಮಗಂದಿರ್ಗಮುಣಲಿಕ್ಕಿದೊಡೆ ತಣಿಯುಂಡು ಬೆಂಡುಮರಲ್ದು ಮಱಸುಂದಿದರ್ (ಶಂಶಭಾ. ೩-೪ ವ). [ಬೆಂಡು + ಮರಲ್₁]

**ಬೆಂಡುವರ,** ಬೆಂಡುಮರ (ನಾ). ಪೊಳ್ಳಾದ ಮರ: ಹಗುರವಾದ ಮರ : ಗುಂಡಿಗೆಗೊಡ ಕೊಪ್ಪರಿಗೆ ಡೋಣಿ ಪಱಿಗೋಲು ಬೆಂಡುವರಗಳನು ತರಿಸಿ ಮಂಡಲಪತಿ ಸುತರೊಡನೆಳ್ತರಲು (ಕುಮಾರಾಮ. ೨೭-೧೦೦). **ಬೆಂಡುಮರ** : ನರಸಿಂಹನ ಮೈಯಿಂದ ಬೆವರು ಬಸಿದು ಶರೀರ ಬೆಂಡುಮರದಂತಾಯಿತು (ಮಗವಾಂ. ೮೯). [ಬೆಂಡು + ಮರ₁]

**ಬೆಂಡುಪಾಱಿಸು** (ಕ್ರಿ). ಬೆಂಡಿನಂತೆ ಹಾರಿಸು ; ನಿಸ್ಸತ್ತ್ವಗೊಳಿಸು: ತಿಱಿಕಲ್ಲಾಡುವೆನೋ ಕುಲಾದ್ರಿಚಯಮಂ . . . ಮೇರುವಂ ಪೆಱತೇನೂದಿಯೆ ಬೆಂಡುಪಾಱಿಸುವೆನೋ ಬ್ರಹ್ಮಾಂಡವಂ ಪೋಟಿಸೆನೋ (ಜಗವಿ. ೭-೩೩). [ಬೆಂಡು + ಪಾಱಿಸು]

**ಬೆಂಡುವೋಗು** (ಕ್ರಿ). ಬೆಂಡಿನಂತೆ ಹಗುರವಾಗು; ನಿಸ್ಸತ್ತ್ವಗೊಳ್ಳು: ಬೆಂಡುವೋದುವೋ ಬಂಡೆ ಎನೆ ಮಹದ್ಬಾರದಾ ಪ್ರಾಕ್‌ಶಿಲಾಶಕಲದಂಗಳಂ ತಬ್ಬಿ ಪಿಡಿದಲುಗಿ ಕಿತ್ತು ಪೊತ್ತೆತ್ತಿದರು (ಶ್ರೀರಾಮಾ. ೩೯೦-೧೯೭). [ಬೆಂಡು + ಪೋಗು₁ (< ಪೋ₁)]

**ಬೆಂಡುಳಿಗೆ** 'ಬೆಂಡಿಗ' ನೋ.

**ಬೆಂಡೆ** (ನಾ). ಒಂದು ಬಗೆಯ ಗಿಡ ಮತ್ತು ತರಕಾರಿಯಾಗಿ ಬಳಸುವ ಅದರ ಕಾಯಿ : " ಲೋಮಿಕೆಯೆನಲ್ ಬೆಂಡೆ " (ಮುಂಗರಾ. ೧೫-೪೭) ; ಹಸಿಯಲ್ಲಮಂ ಹಾಕಿ ಬೆಂಡೆಯ ಬೇರಿನಿಂದ ತಿರುಹಿ ಕದಡಿ ಪನ್ನೀರ ಸೇವಂತಿಗೆಯ ಹೂವಿಕ್ಕಿ (ಸೂಶಶಾ. ೨-೨೫) ; ಇತರ ತರಕಾರಿಗಳ ಜೊತೆಯಲ್ಲಿ ಬೆಂಡೆಕಾಯಿ ಬೆಳೆಸಿದರೆ ಮಿಶ್ರಬೆಳೆಯಿಟ್ಟಂತಾಗಿ ಬಗೆಬಗೆಯ ತರಕಾರಿ ಸಿಗುವುದು (ತರಜ. ೦೬).

[ ದೇ.॥ ತಮಿ. ವೆಣ್ಟೈ, ವಣ್ಟೈ ; ಮಲ. ವೆಣ್ಡ ; ತುಳು. ಬೆಂಡೆ ; ತೆಲು. ಬೆಂಡ. / ಸಂ. ಭಿಂಡ, ಭಿಂಡಕ, ಭಿಂಡಾ, ಭೇಂಡಾ, ಭೇಂಡೀ, ಹಿಂ. ಭಿಂಡೀ ; ಮರಾ. ಭೇಂಡೀ ]

**ಬೆಂಡೇರು** (ಕ್ರಿ). ಸತ್ತ್ವವನ್ನು ಕಳೆದುಕೊಳ್ಳು ; ದುರ್ಬಲವಾಗು : ಆ ಬಗೆಯ ಕಂಡು ಪರಿ ಮೊಗ್ಗಿದನು ಹರನೆದೆ ಬೆಂಡೇರಿತು (ಪಾಗಸ. ೨೦-೦).

[ ಬೆಂಡು + ಏರು$_1$ (< ಏಱ್$_1$) ]

**ಬೆಂಡೇಳ್** ' ಬೆಂಡೇೞ್ ' ನೋ.

**ಬೆಂಡೇಳು** ' ಬೆಂಡೇೞ್ ' ನೋ.

**ಬೆಂಡೇೞ್**, ಬೆಂಡೇಳ್, ಬೆಂಡೇಳು (ಕ್ರಿ). ೧. (ನೀರಿನಲ್ಲಿ) ಬೆಂಡಿನಂತೆ ಹಗುರವಾಗಿ ಚಲಿಸು ; ತೇಲು : " ಬೆಂಡೇೞ್ವುದೆಂದುಂ ತೇಂಕೆಂದುಂ ತೇಲ್ವುದು " (ಕಶಾ. ೭೧-೬೨೩). ೨. ಸತ್ತ್ವಹೀನವಾಗು : ದುರ್ಬಲವಾಗು : ಜಡವಾಗು : ಎನಸುಂ ವಿಮಾನೇಕ್ಷಣಂ ಸೋಲದ ರಸದೊದವಿಂ ಸೊರ್ಕಿ ಬೆಂಡೇೞ್ವಿನಂ . . . ಅನುನಯದಿಂದಾಕೆಯೊಳ್ ಕೂಡಿದಪ್ಪೆಂ (ಆದಂಉ. ೫೨೩) ; ಪೊಯ್ವುತ್ತಬ್ಧಿಯಂಭೋರವವೊಗೆಯೆ ಪಳಂಚಿತ್ತು ನಕ್ಷತ್ರಮಾರ್ಗಾಂತರಮಂ ಬೆಂಡೇೞ್ವಿನಂ ಪೋಗೊದೆದುದು ದಿವಮಂ . . . ರಾಮಕೃಷ್ಣಪ್ರಬಳತರಭುಜಾಸ್ಫಾಲನಾಭೀಳನಾದಂ (ಜಗ. ೬-೬೨) : ಪ್ರಸೂನಾಂಬಕಂಗಳ್ ಸಲೆ ಬೆಂಡೇೞಲ್ . . . ಸಲವಿಂದಂ ಕೂಡಿದಂ ತನ್ನನವನಿತೆಯೊಳಾತ್ಮೀಯಕಾಂತಂ ವಸಂತಂ (ಕೇಸುವಶಾ. ೫-೨೯). **ಬೆಂಡೇಳ್** : ೨. ತಿಳಿನೀರನೀಂಟಿ ನೆಳಲೊಳ್ ಪಟ್ಟಿರ್ದ ಬೆಂಡೇಳ್ವಲೋಳೆ ಪಿಂಡಿಲ್ಗಟ್ಟಿ ಮೇವಂ ಮುಗುಳ್ಚಿ . . . ಕಾಳರಕ್ಕಸರಂಪಿರ್ದ ಕಾಳ್ಕೋಣಂಗಳಿಂ (ಗಂಳ. ೦-೦೨೮ ಪ) ; ರಕುತದ ಕಡಲೊಳಗೆ ಬೆಂಡೆದ್ದು ನೆಗೆದುದು ಕೋಟಿಪಾಯದಳ (ಕುಮ್ಯಾದ್ರೋ. ೬-೯೮) ; ಆರ ಸಂತೈಕೆಗುಂ ಮಳ್ಗಲಾರದತಿಸಂತಾಪದಿಂದೆ ಬೆಂಡೇಳ್ವನಂ, ಭರತನಂ, ಬಂದೆಳ್ಚರಿಸಿದತ್ತು ಗುರುವಸಿಷ್ಠನ ವಾಣಿ (ಶ್ರೀರಾಮಾ. ೦೦೭-೦೯೭). **ಬೆಂಡೇಳು** : ೨. ವನಚರಶ್ರೇಣಿ ಬೆಂಡೆದ್ದು ತೇಲಿದುವು (ಪೋಹಶ. ೦೯-೯೫) ; ಆ ತೆರೆನೊರೆಗಳ ನೆಲೆಯಲ್ಲಿ ಮೂಲೋಕವೇ ಮುಳುಗಿ ಬೆಂಡೇಳುಹುದು (ಮುಂಗಾಳು. ೨).

[ ಬೆಂಡು + ಏೞ್$_1$ ]

**ಬೆಂಡೇೞಿಸು** (ಕ್ರಿ). ಬೆಂಡಾಗುವಂತೆ ಮಾಡು ; ನಿಸ್ಸತ್ತ್ವಗೊಳ್ಳುವಂತೆ ಮಾಡು : ಬಿಮ್ಮನೆ ಬಿಗುಪೇಱೆ ಮೀಱಿ ಪೊಣ್ಮುವ ಮೊಲೆಗಳ್ ಪಿಮ್ಮೊಸೆದೋರ್ಪನೆಗಂ ಮನದುಮ್ಮಹದಿಂ ಬಿಗಿದು ಬಿಗಿದು ಬೆಂಡೇೞಿಪನೋ (ತಕಬ. ೬-೨೦೯). [ ಬೆಂಡೇೞ್ + —ಇಸು$_3$ ]

**ಬೆಂಡೋಲೆ** (ನಾ). ಒಂದು ಬಗೆಯ ಕಿವಿಯ ಆಭರಣ ; ಓಲೆ ; P ಹಿಂದಿನ ಕಾಲದಲ್ಲಿ ಕಿವಿಗೆ ಬೆಂಡನ್ನೇ ಓಲೆಯಂತೆ ಧರಿಸುತ್ತಿದ್ದರು : ಬೆಂಡೋಲೆ ಮುಂಜುಹು ಮಾಗಾಯಿತ್ . . . ಗೋಂಡೆಯದುಡಿದಾರಂ ಭೂಮಂಡಲಪತಿಯಾತ್ಮಜಂಗೆ ರಂಜಿಸುತಿರ್ಕುಂ (ವಶಕು. ೨-೬೩) ; ಮಾಂಗಾಯಿ ಬಂದಿ ಬೆಂಡೋಲೆ ಸಿಂಗಾರವಾಗಿ ಮತ್ತಾ ಬಾಲಕೇಶವ ನಂಗಣದೊಳಗಾಡುತಿರಲು (ಕೇಬುಕಂ. ೦೫-೮೩). [ ಬೆಂಡು + ಓಲೆ ]

**ಬೆಂತರ**, ವೆಂತರ (ನಾ). ಭೂತ ; ಪಿಶಾಚಿ : ಎನಿಸುಕಾಲ ನಿಮ್ಮ ಪೂಜಿಸಿ ಏವೆನಯ್ಯಾ ಮನದಲಿ ದೃಢವಿಲ್ಲದನ್ನಕ್ಕ ನಿಧಾನವ ಕಾಯ್ದಿರ್ದ ಬೆಂತರನಂತೆ ಆದೆನಿ ವಿಧಿಯೆನಗಾಯಿತ್ತು (ಬಸವ. ೯೯) ; ಕರಮೆಸೆಯೆ ಸಮೆದು ಬಂದುದು ಚರಣಾಯುಧಯುದಟ ಚಿತ್ರಪರಿಶೋಭೆಗೆ ಬೆಂತರನೊಂದಾಶ್ರೈಸಿದುದು (ಯಕೋಕ. ೩-೨೪) ; ಬೆಂತರ ದೈವಮೆಂಬವವು ಮಹಿಲದಿಂದೊಂದೊಂದು ಕೆಲಸಕೆ ವಿಹಿತವಾಗಲು (ಬಸಕು. ೩೩-೩೦). **ವೆಂತರ** ; ನರ್ತಕಿಯರಾಟಗಳ ನೋಡಲು ಮುತ್ತುತಿಹ ವೆಂತರರ ಜಡಿಕೈದತ್ತ ತೊಲಗಿಸಿ (ಕಾಳ್ಯಶಾ. ೩೩-೩೭) : ಹಿಂದೆ ಕುಳಿಕನ ದಿನದಿ ಹಾವರದಿಂದ ರುದ್ರನ ಲಿಂಗಭೇದನವೊದುದಾಧರಿಸಿರ್ದ ವೆಂತರನಾಗಿ ಪೂಜೆಯನು ನಿಂದು ತಾನೇ ಲಿಂಗನಾಗಿಹೆನೆಂದುದಾ ದಿನದಿಂದ (ಬಜ್ಞಕು. ೬೨-೩೯) ; ಸುರರು ವೆಂತರಜ್ಯೋತಿರೇಂದ್ರರು ಉರಗ ವಿದ್ಯಾಧರರು ಸುರಕುಜಧರವು ಫಲಪುಂಜದಲಿ ಕಾಲತ್ರಯವು ಪೂಜಿಪರು (ಬಾಗಕ. ೦-೦೦೪). [ < ಸಂ. ವ್ಯಂತರ ]

**ಬೆಂತರಬಲ್ಲಹ** (ನಾ). ಪಿಶಾಚಿಗಳ ಒಡೆಯ ; ಭೂತನಾಥ ; ಶಿವ : ಪಲಗಣ್ಣಂ . . . ಬೆಂತರಬಲ್ಲಹನುಜ್ಜ್ವಲಿಸುವ ಜೋಯಿಸರಾಣ್ಮಂ ವಿಗದರಸಂ ಮೊದಲಾಗಿ ಸಲೆ ಸೊಗಯಿಸುವ ಶತೇಂದ್ರರ್ . . . ಜಿನಪನ ಗಂಧಕುಟಿಯೊಳೆಡಗಿಱಿದಿಪುದು (ಜಯಶಾ. ೦೬-೩೯).

[ ಬೆಂತರ + ಬಲ್ಲಹ$_1$ ]

**ಬೆಂತರಿ** (ನಾ). ಹೆಣ್ಣುಭೂತ : ಪಿಶಾಚಿನಿ : ತತ್ಪುರುಷಮ್ಮಾಲಿ ಮಡಿದು ಬೆಂತರಿಯಾಗುವದಿಯಿಸಿ ಕಾಳವೆಸರನಾಂತು ಕರಂ ಪಿಂತಣ ಭವದನೆನೆದಿಯಿತ್ತು (ಜಯಶಾ. ೨೦-೪೨). [ ಬೆಂತರ + —ಇ$_2$ ]

**ಬೆಂದ** ' ಬೇ$_1$ ' ಪರಾ.

**ಬೆಂದಗುಳ್** (ಕ್ರಿ). ಬೆನ್ನಟ್ಟು ; ಓಡಿಸಿಕೊಂಡು ಹೋಗು : ಅಂದವು ದಟಲೆಯೆ ಮನಸಿಜನಂದಮನಳವಿಗಳೆದು ಕೇಸರಿಯುಳವಂ ಬೆಂದಗುಳೆ ವಜ್ರಬಾಹು ಪುರಂದರರ್ (ಕಂರಾವಶಾ. ೦-೦೩೭) ; ಚಾರುದತ್ತಂ ಚಾಪಹಸ್ತನಾಗಿ ಭೋರೆಂದಿಸಲವಂದಿರಂ ಬೆಂದಗುಳ್ವು ತಾನಂದು ಮಗುಳ್ದಂತೆ ಪೋಗೆ (ನೇಮಿಕು. ೪-೭೦ ವ). [ ಬೆಂ$_1$ (< ಬೆನ್) + ತಗುಳ್$_1$ ]

**ಬೆಂದವಾಡಿ** (ನಾ). ಒಂದು ನಾಡಿನ ಹೆಸರು : ದೇವಜ್ಜಿಯ ಪೆಚ್ಚಿ ಬೆಂದವಾಡಿಯ ಸೋಮಶಿವರಂ ಬರಿಸಕ್ಕೆ ಸಿವಸ್ಥಾನಕ್ಕೆ ಮುನ್ನ ಕೊಟ್ಟ ಭೂಮಿ (ಎಕ. III (R), ಗುಂಡ್ಲುಪೇ. ೮೨-೬ ; 995). [ ? + ಪಾಡಿ$_2$ ]

**ಬೆಂದಿ** (ನಾ). (?) : ಮಱಮಾತ್ತೆರ್ಗೊಳ್ಳನ್ ಬೆನ್ದಿಯುಂ ಕಳಚುಮಾಱಿಡಿಯುಮಾಗಳಿದನೆ ಕಾದಿ ತನ್ನಾಳ್ದಾತ ಸಯೆ ಬಾಚಿನ್ (ಶಾಇಇ. XI—i, ೦೦-೭ ; 865). [ ? ]

**ಬೆಂದು** ' ಬೇ$_1$ ' ಪರಾ.

**ಬೆಂದೊಗಲ್** ' ಬೆಂದೊವಲ್ ' ನೋ.

**ಬೆಂದೊವಲ್**, ಬೆಂದೊಗಲ್ (ನಾ). ಬೆನ್ನಿನ ಚರ್ಮ : ಮೃಗಕುಳಮಾಸೆಗೆಯ್ದು ಮೃಗತೃಷ್ಣಿಕೆಯಂ ಜಳಮೆಂದು ತೃಷ್ಣೆಯಿಂ ಪಗಲಿಱವನ್ನೆಗಂ ಪರಿದು ಗಂಟಲುರಂಬರಮಾಱಿ ಬೆಂದೊವಲ್ ತೆಗಳೆಗೆ ಬೀೞೆ . . . ನಡೆಗೆಟ್ಟುವು ತೃಷ್ಣೆಯಿನಾರೋ ಬೇಯದರ್ (ಕಂರಾವಶಾ. ೭-೯೩) ; ತೊಡರ್ದೊಡರಾತಿ ಭೂಭುಜರ ಬೆಂದೊವಲಂ ಪೆಡಮಂಡೆಗೆತ್ತಿ ಕೂಗಿಡಸದೆ . . . ಮಾಣ್ಬನೆ ಸಮರದೊಳ್ (ಎಕ. XI, ದಾವಣ. ೩೫-೨೭ ; 1160) ; ಪಂದಲೆ, ಬೆಂದೊವಲ್ (ಶಬ್ದಾನು. ೮೦ ಪ್ರಯೋ). **ಬೆಂದೊಗಲ್** : ಬೆಂದೊಗಲ್ ಪೊರೆವೊರೆಯೆರ್ದ ಸಾಯದ ಮೃಗವ್ರಜಮಿಲ್ಲ . . . ಆ ನಿದಾಘದೊಳ್ (ಸೂಕ್ತಿಸು ೦೭-೯೫). [ ಬೆಂ$_1$ (< ಬೆನ್) + ತೊವಲ್$_3$ (< ತೋಲ್$_1$) ]

**ಬೆಂಪೂರ್**, ಬೆಂಪೂರು (ನಾ). ಒಂದು ಊರಿನ ಹೆಸರು : ಎಱೆಯಪಂ ಮೆಚ್ಚಿ ಇರುಗಜ್ಗೆ ನಾಗತ್ತರವಟ್ಟಂಗಟ್ಟಿ ಬೆಂಪೂರ್ಪನ್ನೆರಡುಮಂ . . . ಇತ್ತನ್ (ಎಕ. IX, ಬೆಂಗಳೂ. ೮೩-೫ ; ಸು. 890). **ಬೆಂಪೂರು** : ಬೆಮ್ಬೂರು ತೊವಗೂರು . . . ಪರವೂರು ಕೂಡಲೆ ಇನಿತುಮಂ ಪೊಲಮೇರೆ ಸಹಿತ ವಿತ್ತನ್ (ಎಕ. IX, ಬೆಂಗಳೂ. ೮೩-೬ ; ಸು. 890). [ ? + ಊರ್ ]

**ಬೆಂಪೂರು** ' ಬೆಂಪೂರ್ ' ನೋ.

**ಬೆಂಬಂಪಾಟಿ೯** (ನಾ). ಒಂದು ಊರಿನ ಹೆಸರು (?): ಉತ್ತರತಃ ಬೆಮ್ಬ ಮ್ಬಾಟಿ೯ ವೃಣಸೆವಟ್ಟ ಸಹಿತಂ ಪಲ್ಲವತಟಾಕಮಿತಿಗ್ರಾಮಸ್ಯ ನಾಮಧೇಯಂ ಕೃತ್ವಾ (ಎಕ. III. ಮಂಡ್ಯ. ೦೦೩-೩೬ ; 713). [ ? + ಪಾಟಿ೯]

**ಬೆಂಬಡಿಗೆ** (ನಾ). ಬೆನ್ನಿಗೆ ಬಾರಿಸುವ ಕೋಲು, – ಬಡಿಗೆ : ಬಡದೆಮ್ಮ ಕಂಡ ಜೀವರ ಭವವ್ರಜದ ಬೆಂಬಡಿಗೆ . . . ದುರಿತವನುರುಹಿ ಸುಡುವ ಕಿಚ್ಚೆಂದೆನಿಪ ತುಂಗಭದ್ರಾನದಿಯನವನೀಶ ನೋಡು (ಹತಕ. ೩-೬೪) : ಸಂಶಯಪಿಶಾಚಕ್ಕೆ ಬೆಂಬಡಿಗೆಯಾಗಿ ಐತನ ಮನಸ್ಸು ಪ್ರಫುಲ್ಲಿತವಾಯಿತು (ಮಲೆಮ. ೨೦೦). [ಬೆಂ$_1$ (< ಬೆನ್) + ಬಡಿಗೆ$_1$]

**ಬೆಂಬಡೆ** (ನಾ). (?): ನಡಸುವ ದತ್ತಿ ಪತ್ತಿಯ ಹೇಱು ೧೦ ಕೆ ಪಣ ೧ ಕೊಂಡಲ್ಲಿ ಹತ್ತಿ ಪಲ ೫ ಬೆಂಬಡೆಯ ಮಳವೆ ೧೦ ಕೆ ಪಣ ೧ (ಎಕ. IX (೮). ದೊಡ್ಡಬ. ೩೦–೩೪ ; ಸು. 1250). [ ? ]

**ಬೆಂಬತ್ತಳಿಕೆ** (ನಾ). ಬೆನ್ನಿಗೆ ಕಟ್ಟಿಕೊಳ್ಳುವ ಬಾಣದ ಕೋಶ: ತೂಣೀರ : ಕಳಚಿದನು ಸೀಸಕವ ಬೆಂಬತ್ತಳಿಕೆಯನು ಪಜ್ಜಾಂಗಿ ಮೊಚ್ಚೆಯ ಬಿಲುಸರಳನಿಳುಹಿದನು ರಥದಲಿ ದೈತ್ಯರಿಪು ಸಹಿತ (ಕುಮಾ.ಶ. ೦೬-೪). [ಬೆಂ$_1$ (< ಬೆನ್) + ಬತ್ತಳಿಕೆ (< ಪತ್ತಳಿಕೆ$_1$) ]

**ಬೆಂಬತ್ತು**, ಬೆನ್ನುಹತ್ತು (ಕ್ರಿ). ೧. ಹಿಂಬಾಲಿಸು ; ಅನುಸರಿಸು : ಮನವೇ ಕೂಡಲ ಸಂಗಮ ದೇವರ ಬಿಡದೆ ಬೆಂಬತ್ತು (ಬಸವ. ೨೬೬). ೨. ಓಡಿಸಿಕೊಂಡು ಹೋಗು ; ಬೆನ್ನಟ್ಟು : ಬಡವಂ ಬೆಂಬತ್ತೆ ಮೇಪಂ ಮಱೆದು . . . ನಿಂದಿರ್ದುದೋರೊಂದೆಡೆಯೊಳ್ ತಾಱಿಲ್ಗೆಳೊತ್ತಂಬಿಡಿದು ಮ್ಯಗಮ್ಯಗೀವ್ಯಂದಮೋರಂದದಿಂದಂ (ಕಂದ್ರ.ಶ. ೪-೪೬) ; ದುಶ್ಶಳೆಯೈದೆತನ ಬಯಲಾಯ್ತೆನುತ ಬೆಂಬತ್ತಿದರು ಖಳನ (ಕುಮಾ.ಶ. ೨೨-೨೩). **ಬೆನ್ನುಹತ್ತು**: ೧. ಆಕಾಶ, ಪಾತಾಳ, ಎರಡರಲ್ಲೂ ಇಲ್ಲ ತಾಳ ಮೇಳ ಭೂಗೋಳಕ್ಕೆ ಬೆನ್ನುಹತ್ತಿಹುದು ಬೇತಾಳ (ನರಮು. ೦೩-೬) ; ಆ ಕೊರಗು ಒಂದೆರಡು ದಿನಗಳವಲ್ಲ, ವರ್ಷಗಳವಲ್ಲ ಆತನ ಬದುಕಿಗೇ ಬೆನ್ನುಹತ್ತಿದ ಮಹಾಭೂತ ವದು (ಶಕೆಕ. ೦೦೦). [ಬೆಂ$_1$ (< ಬೆನ್) + ಪತ್ತು$_1$]

**ಬೆಂಬದಿ** (ನಾ). ಹಿಂಭಾಗ ; ಹಿಂಬದಿ : ವದದ ಘಟ್ಟನೆಯಿಂದ ಶಿಖರಗಳು ದುರಿದುವು ತರುಕೋಟಿಗಳು ಬೆಂಬದಿಯೊಳಗಿರಿದವಬುಧಿ ಇಬ್ಬಗೆಯಾಯ್ತು (ಅನಂರಾ. ೪-೩-೨೬). [ಬೆಂ$_1$ (< ಬೆನ್) + ಬದಿ$_1$]

**ಬೆಂಬರಂ** (ಅ). ಬೆನ್ನಿನ ವರೆಗೆ ; ಮುಡಿಯಿಂ ಬೆಂಬರಮೊಯ್ದು ಸೀಳ್ದ ಶಬಸಂ ಘಾತಂಗಳಂಗುಷ್ಠದಿಂ ತೊಡೆಯಂ ತಾಱಿಸಮೊಯ್ದು ಪೋಟ್ಟ ಪೆಣಗಳ್ . . . ಕರಂ ಭೀಕರಂ (೦ಿಲಾಪ. ೬-೬). [ಬೆಂ$_1$ (< ಬೆನ್) + – ಬರಂ (< – ವರಂ)]

**ಬೆಂಬರಿ** (ಕ್ರಿ). ೧. = ಬೆಂಬತ್ತು ೧: ಈ ಮರ್ತ್ಯದೇಹದಿ ದಿವಿಜಪತಿಯೋ ಮೇಣ್ ಜಯಂತನೊ ಇವನೆನುತ ಬೆಂಬಳಿ [ರಿ] ದು ಕಾಷ್ಠಾಂಗಾರ ಬೆಱಗಾದ (ಜೀವಂಧ. ೦೩-೦೮). ೨. = ಬೆಂಬತ್ತು ೨ : ಕುಮಾರನಾ ಮದದಾನೆಯನು ಬೆಂಬರಿದು ಮಿಗೆ ಸರದೋಱೆ ಕೇಳುತದು . . . ಘೋರಸೆ ಬಿಟ್ಟ ಕಣು ಬಿಗುವೊಗದಿನಿದಿರಾಯ್ತು (ಸಾಳ್ವಭಾ. ೦೬-೦೩). ೩. ಓಂಜರಿ ; ಹಿಮ್ಮೆಟ್ಟು : ಸೂಕರನಾ ಕರಿಗಂಜಿ ಪೊಕ್ಕು ಬೆಂಬರಿವರಿವಂತು ಪೆರ್ಬಿದಿರನೆತ್ತಿದೊಡಂತದು ತವಗೆ ಮೋಘಮಂ (ಸೂಕ್ತಿಸು. ೩-೬೪). [ಬೆಂ$_1$ (< ಬೆನ್) + ಪರಿ$_2$]

**ಬೆಂಬಲ**, ಬೆನ್ನುಬಲ (ನಾ). ೧. ಹಿಂದಿರುವ ಸೈನ್ಯ: ಹಿಂದೆ ಬರುವ ಪಡೆ : ಮುಲಯಮಾರುತನ ಬೆಂಬಲಮುಮಂ ಚೈತ್ರಮಿತ್ರನ ಮುಂಬಲ ಮುಮಂ . . . ದರ್ಪಕನ ದರ್ಪಂಬೆರಸಟಕುಳಿಗೊಂಡು ಗಂಡೇಱಿದ ಗಂಡ ಗಾಡಿ ರೂಢಿವಡೆಯೆ (ಅನಂತ. ೬-೨೨ ವ) ; ನೀ ಮುಂದಲೆಯ ಹಿಡಿದೆಳ ಕೊಂಡು ಬಾ ಬೆಂಬಲದಿ ಬಂದಿದಿರಾಗಿ ಕಾಳಗಗೊಟ್ಟು ಮಾರಾಂತು (ದೇವೀಮ. ೬-೨). ೨. (ಅಲಂ) ಸಹಾಯ ; ಆಸರೆ ; ನೆರವು : ಪಲವುಂ ಜನ್ಮದೊಳಾದ ನಿನ್ನ ಕೆಳೆಯಂ ಬಂದಪ್ಪನಾತಂಗೆ ಬೆಂಬಲಮಿನ್ನೀಂ ನಿನಗಾತಂ (ಶಬ್ದಮ. ೪-೩೩) ; ತಂಗಾಳಿಯುಂ ತಿಂಗಳುಂ ಬನಮುಂ ಬೆಂಬಲವಾಗಿ ತೀರ್ಚವೆ ಗಡಂ ಕೊಂಡುಗ್ಗಿಯಂ ಸುಗ್ಗಿಯೊಳ್ (ಅತಪು. ೬-೨೮) ; ಬೆಂಬಲಕೆ ತಾನೆಂದು ಬಯಲ ವಿಡಂಬದಲಿ ಕಾಳಗವ ಮಸೆದರೆ ನಂಬಿ ಕಟ್ಟಿರಿ ಕೃಷ್ಣನನು (ಕುಮಾ.ಭೀ. ೦-೩೪). **ಬೆನ್ನುಬಲ** : ೨. ಬೆನ್ನುಬಲವಾಗಿ ಹರಿಯು ದ್ದರೆ ಸರ್ವ ತನ್ನಿಂದ ತಾನೇವೆ ಪ್ರಾಪ್ತವಾಗುವುವು (ಹರಿಕಸು. ೬೮-೪). [ಬೆಂ$_1$ ( < ಬೆನ್) + ಬಲ್$_3$]

**ಬೆಂಬಲಂಬಾಯ್** (ಕ್ರಿ). ಸಹಾಯಕ್ಕೆ ಹೋಗು ; ನೆರವಿಗೆ ಧಾವಿಸು : ಪಾಂಚಾಳರಾಜತನೂಜೆಯ ಮಾತಿಂಗೆ ಬೆಂಬಲಂಬಾಯ್ವಂತೆ ಭೀಮಸೇನ ನಿಂತೆಂದಂ (ಪಂಪಭಾ. ೬-೩೭ ವ). [ಬೆಂಬಲ + ಪಾಯ್$_1$]

**ಬೆಂಬಲಿ** (ಕ್ರಿ). (ಸ್ಥಿತಿಯನ್ನು ಅನುಸರಿಸಿ) ಹೆಚ್ಚಾಗಿಸು : ವೃದ್ಧಿ ಯಾಗಿಸು: ಘೋರಸೆ ಬಸಿಱುಬ್ಬೆ ಕರಂ ಪೂರಿಸುಗುಮಪಾನವಾಯು ಜಠರ ಮಾನದಸಂತಾಪಮ್ಮುಂ ಕಡೆಗಣ್ಣಿಂ ನೀರಂ ಬೆಂಬಲಿದು ತೋರ್ಪೊಡಂ ಮರಣಭಯಂ (ಅಶ್ವಶಾ. ೬-೩೪). [ಬೆಂ$_1$ (< ಬೆನ್) + ಬಲಿ$_1$ (< ಬಲ್$_2$)]

**ಬೆಂಬಲಿಗ** (ನಾ). ಸಹಾಯ ಮಾಡುವವನು : ನೆರವಿಗೆ ಬರು ವವನು : ಅವನು ಆರಾಧಕನ ಹೃದಯದಲ್ಲಿ ನಿಂತು ಮಿತ್ರನಂತೆ ಬೆಂಬಲಿಗನಾಗಿ ಮುಕ್ತಿಪಥಕ್ಕೆ ಕರೆದೊಯ್ಯುತ್ತಾನೆ (ಶಾರದ. ೨೯೩); ಬೆಂಬಲಿಗರ ಬಲವಿಲ್ಲದೆ ಮುನ್ನುಗ್ಗಿ ಮುಖಭಂಗಪಡಿಸಿಕೊಳ್ಳಬೇಕೇಕೆ ? (ಶಾಶಂ. ೯೯). [ಬೆಂಬಲ + – ಇಗ]

**ಬೆಂಬಲಿಸು** (ಕ್ರಿ). ೧. ಸಹಕರಿಸು; ಒತ್ತಾಸೆ ನೀಡು : ಸನ್ನದ್ಧನಾಂ ಧರ್ಮಯುದ್ಧಕೊಡೆಯಾ ! ಬೆಂಬಲಿಸು ನನ್ನನೊಡೆಯಾ ! (ಗೀತಾಂ. ೬೨.-೩೬). ೨. ಅನುಮೋದಿಸು: ಸಭೆಯಲ್ಲಿ ಸೇರಿದವರೆಲ್ಲರೂ ಅವನ ಮಾತನ್ನು ಬೆಂಬಲಿಸಿದರು (ರೂಢಿ). [ಬೆಂಬಲ + – ಇಸು$_3$]

**ಬೆಂಬಳಿ** 'ಬೆಂಬೞಿ' ನೋ.

**ಬೆಂಬಳಿಗೊಳ್** 'ಬೆಂಬೞಿಗೊಳ್' ನೋ.

**ಬೆಂಬಳಿವಿಡಿ** 'ಬೆಂಬೞಿವಿಡಿ' ನೋ.

**ಬೆಂಬಳಿಸು** (ಕ್ರಿ). ೧. = ಬೆಂಬತ್ತು ೧ : ಮಾತಾಡುವ ಅವಶ್ಯಕವಿಲ್ಲದೆ ಕಪಾಲಕುಂಡಲೆಯು ಬೆಂಬಳಿಸಿ ಬರುವುದರಲ್ಲಿ ಅದು ವ್ಯಕ್ತವಾಗುವುದು (ಕಪಾಕುಂ. ೩೪). ೨. = ಬೆಂಬತ್ತು ೨ : ಕುರುಡನು ಕಂಡನು ಕಿವುಡನು ಕೇಳಿದನು ಕುಂಟನು ಬೆಂಬಳಿಸಿದನಯ್ಯ (ಪರಶ. ೩). [ಬೆಂಬಳಿ (<ಬೆಂಬೞಿ) + – ಸು$_1$]

**ಬೆಂಬೞಿ**, ಬೆಂಬಳಿ (ನಾ). ೧. ಬೆನ್ನಿನ ಭಾಗ ; ಹಿಂಬದಿ; ಹಿಂದು : ಮುಹೂರ್ತಮಾತ್ರದೊಳ್ ಗಡ ಪದಿನೈದುಯೋಜನಮನೊರ್ವನೆ ಸಂಧಿಸಿ ಪೋದನೆಂದು ಪೇರಡವಿಯೊಳಾ ತುರಂಗಪದನರ್ಕಳ ಬೆಂಬೞಿಯಂ ಮಹೀಭುಜಂ (ಕಾವಂಪೂ. ೬೨೦); ಗಱಿವೞಿಯ ಪಾವಿನಂತೆ ಬೆಂಬೞಿಯಂ ಪ್ರಗುಳ್ದು ಪರಿತರೆ (ಸುಕುಮಾರ ೬-೩೩ ವ); ಆದೊಂದು ಕಂತುಕದ ಬೆಂಬೞಿ ಯೊಳ್ ಪೊಳೆವಾಡೆ ಕಣ್ಬೊಣರ್ ಸುಲಲಿತ ಸೆಂಡನಾಡಿ ಮುಱುಗಾಡಿಸಿದಳ್ ಪರಿಯಂ ಸುಖಾಬ್ಧಿಯೊಳ್ (ಜಗನ್ನಾ. ೩-೦೯). ೨. ಬೆನ್ನ ಹಿಂದೆಯೇ ಬರುವುದು ; ಹಿಂಬಾಲಿಸುವುದು ; ಅನುಸರಣೆ : "ಬೆಂಬೞಿ—ಹಿಂದೆ ಬರ್ಪುದು" (ಕಮುದ. ಶಂ. ೧); ಅತೀವಘೋರತಪದಿಂ ಯತಿಗಳ್ ಮಿಗೆ ಕಾಣದಿರ್ಪ ವಿಟ್ಠಲನನಂತರೀಕ್ಷಿಸಿ ನಿಜೇಚ್ಛೆಗೆ ಬೆಂಬೞಿಯಾಗಿ ತಂವ ನಿಶ್ಚಳಮತಿ ಪುಂಡರೀಕಮುನಿ ತೀರದೊಳಿರ್ದಂ (ವಟಕು. ೦೪-೬). **ಬೆಂಬಳಿ** : ೧. ಆತ ಬಿಟ್ಟುವ ಬಿಡುವೆನು ಅವನ ಬೆಂಬಳಿಯ ಸಲುವೆನು (ಸಿದ್ಧವ. ೪. ೧೯೮-೬೨೯); ಸರಳುಗಳ ಬಳಿಸರಳು ಬೆಂಬಳಿಸರಳ ಹಿಂದಣ ಸರಳುಗಳ ಪಡಿಸರಳ ಸಾರದ ಸೋನೆ ಸದೆದುದು ವೈರಿವಾಹಿನಿಯ (ಕುಮಾ.ಶ. ೨-೩೮). [ಬೆಂ$_1$ (< ಬೆನ್) + ಬೞಿ$_3$]

**ಬೆಂಬೞಿಗೊಳ್**, ಬೆಂಬಳಿಗೊಳ್ (ಕ್ರಿ). = ಬೆಂಬತ್ತು ೧: ಬಾಳ

ಮರಾಳಮಂ ಬೞಸಿ ಬೆಂಬೞಿಗೊಂಡೆಡೆಯಾಡುತುಂ (ಪುಷ್ಪ. ೩-೯೬). **ಬೆಂಬೞಿಗೊಳ್ :** ಆತಂಗೆ ಮುನ್ನಿತ್ತ ನಂಬುಗೆಯು ಬೆಂಬೞಿಗೊಂಡು ಪೋಗಿ ಮರ್ತ್ಯದೊಳ್ ತೊತ್ತುಗೊಂಡು . . . ಬರ್ಪಂ (ಶಂಬರ. ೬-೫); ತುಂಬಿ ಪುಳುವಂ ಪಿಡಿದೊಯ್ವುದೊ ತಾನೆ ಪೋದುದೋ ಬೆಂಬೞಿಗೊಂಡು (ಕಕ. ೪೦). [ಬೆಂಬೞಿ + ಕೊಳ್$_1$]

**ಬೆಂಬಟ್ಟಿವಿಡಿ, ಬೆಂಬೞಿವಿಡಿ** (ಕ್ರಿ). ೧. = ಬೆಂಬತ್ತು ೧ : ದೇವಿಯರ್ ಬೆಸಸಿದಂತೆ ಗೆಯ್ವೆನೆಂದಾ ಕಾಂತೆಯ ಬೆಂಬಟ್ಟಿವಿಡಿದು ನಡೆವ ಶಿಷ್ಯನಂತೆ ಪೋಗೆವೋಗೆ (ಕಾದಂಪೂ. ೬೪೦); ಎನಿತಾನುಮಱಸಿ ಕಾಣದೆ ಬೆಂಬಟ್ಟಿವಿಡಿದೊಂದನುಮಾನದಿಂ ಸಹೇತುಕವನದೆಡೆಗೆ ಮಗುಳ್ದು ಬಂದನಾ ವಿಜಯನೃಪಂ (ಅಶಂಪು. ೦೦-೫೯). **ಬೆಂಬೞಿವಿಡಿ :** ೧. ಮಧುರ ತಲೆಗೇೞ ಅರ್ಥ ನೀಗಾಡಿ ಆ ಕಱುವಿನ ಬೆಂಬೞಿವಿಡಿದು ಭವ ಹರಿಯಿತ್ತು (ಬಸವರಾಜದೇ. ಬ. ೫೬-೦೪೦); ನೆಳಲಂತೆ ಬೆಂಬೞಿವಿಡಿದು ಬಡಲಿನಂತೊಳಗು ದೋಱದೆ ಮಿಂಚಿನಂತೆ ಸುೞಿದು ಸಾಮುದ್ರಿಕನಂತರ್ಥರೇಖೆಯ ತಿಳಿವುದು (ಅಂಕ. ೩-೦೫೪). ೨. ಬೆನ್ನಿನ ಮಾರ್ಗವನ್ನು ಹಿಡಿ; ಹಿಂಭಾಗವನ್ನು ಅನುಸರಿಸು : ಬೆಳೆದು ಕವಲೊಡೆದು ನೀಳ್ದ ಪ್ರವಾಳಜಾಳದಂತೆ ಬೆಂಬೞಿವಿಡಿದಿಳಿದ ಕೆಂಜೆಡೆಗಳಿಂ (ಬಸವ. ೪-೦೦). [ಬೆಂಬೞಿ + ಪಿಡಿ$_1$]

**ಬೆಂಬಾಯ್** (ಕ್ರಿ). ಬೆನ್ನೇರು; ಸವಾರಿ ಮಾಡು : ದಂತಮಂ ಮೆಟ್ಟಿ ಬೆಂಬಾಯ್ದು ತನ್ನಧಿಕಕರಣದಿಂ ಕರಿಮದವನುಡುಗಿಸಿದ ಕುವರನಂ ಖಚರನೊರ್ವಂ . . . ಜಿನಗೃಹದಲ್ಲಿ ತಂದಿರಿಸಿ ಪೋದಂ (ಜ್ಞಾನಚಂ. ೦-೬೫). [ಬೆಂ$_1$ (< ಬೆನ್) + ಪಾಯ್$_1$]

**ಬೆಂಬಾಲಿಸು** (ಕ್ರಿ). ಹಿಂದೆ ಇದ್ದು ರಕ್ಷಿಸು; ಬೆಂಗಾವಲಾಗಿದ್ದು ಕಾಪಾಡು : ತನ್ನಿಷ್ಟದಾದರ್ಶವಂ ಪೂಜಿಸೋಲೈಸಿ ಬೆಂಬಾಲಿಪುದೊ ಲಕ್ಷ್ಮಣನ ಧರ್ಮವಾತ್ಸಲ್ಯ ತಾಂ (ಶ್ರೀರಾಮಾ. ೦೨೬-೬೪). [ಬೆಂ$_1$ (< ಬೆನ್) + ಪಾಲಿಸು]

**ಬೆಂಬಿಡಿ** (ಕ್ರಿ). = ಬೆಂಬತ್ತು ೧ : ಕುಡುಗುರುಳೆಂಬ ತಂಬೆಲರ ಬೆಂಬಿಡಿದಿಂ ಪೊಸವೇಟವೆಂಬ ಚೆಲ್ವಿಡಿದೆಳಮಾಮರಂ (ಆದಿಪು. ೦೨-೨೯); ಮನದ ಪಿಂತಣೆ ಧೈರ್ಯಂ ನಡೆಗೊಂಡುದು ಧೈರ್ಯದ ಬೆಂಬಿಡಿದೊರ್ವಳ ಜೀವ ಮಿರದೆ ಪೋದತ್ತಾಗಳ್ (ಜಗದ. ೫-೯೯); ಮೋಹನ ಕಲಾಪ್ರೌಢೆಯರ ಗಡಣ ಬೆಂಬಿಡಿವ ಬರುತಿರ್ದುದಂತಾ ಪರವೆಯೊಡನೆ (ಸೌಂದರಪು. ೬-೪೬). [ಬೆಂ$_1$ (< ಬೆನ್) + ಪಿಡಿ$_1$]

**ಬೆಂಬಿಡು** (ಕ್ರಿ). ಬೆನ್ನು ಬಿಟ್ಟುಹೋಗು; ಅನುಸರಿಸದಿರು ; ಹಿಂಬಾಲಿಸದಿರು : ಮುಳಿದು ಮನಃಪ್ರಿಯಂ ಪೆಱಗುಗೆಯ್ದೊಡೆ ಬೆಂಬಿಡದಪ್ಪಿಕೊಂಡ ನಲ್ಲಳ ಮೊಲೆಯೊತ್ತಿನೊಳ್ . . . ಪೋದುದು ಕೋಪವೋಪನಾ (ಆದಿಪು. ೦೨-೦೨ ಆವೃ); ಬೆಂದ ಸಂಸಾರ ಬೆಂಬಿಡದೆ ಕಾಡುತ್ತಿರುವುದಯ (ಮುಹಾದೇ. ಬ. ೦೪-೦೬); ಹಿಂದೆ ಮಾಡಿದ ಕರ್ಮವೆಂದಿಗೂ ಬೆಂಬಿಡದು (ಸರ್ವಜ್ಞ. ೮೬೯). [ಬೆಂ$_1$ (< ಬೆನ್) + ಬಿಡು$_1$]

**ಬೆಂಬಿತ್ತಿಲ್** (ನಾ). ಹಿಂಭಾಗದ ಹಿತ್ತಿಲು; ಹಿಂದಿನ ಹಿತ್ತಿಲು : ಬೆಂಬಿತ್ತಿಲ ತೋಟ ಹಳುವಾದುದು (ಮೋಹಕ. ೪-೫೩). [ಬೆಂ$_1$ (< ಬೆನ್) + ಪಿತ್ತಿಲ್ (< ಪಿಂತಿಲ್)]

**ಬೆಂಬಿಸಿಲ್** 'ಬಿಸುವಿಸಿಲ್' ನೋ.

**ಬೆಂಬೀವು** (ನಾ). ಬೆನ್ನಿನ ನರ, — ಹುರಿ : ಮಿದುಳಿನ ನಡುವಿನ ಕೆಳಗೆ ಬೆಂಬೀವು ತಲೆಕಚ್ಚಿಯಲ್ಲಿ ಮೊಂಡುಮುದ್ದೆಯಾಗಿರುವುದು (ಜೀವಕೋ. I. ೦೪). [ಬೆಂ$_1$ (< ಬೆನ್) + ಬೀವು]

**ಬೆಂಬೀಳ್** 'ಬೆಂಬೀೞ್' ನೋ.

**ಬೆಂಬೀಳು** 'ಬೆಂಬೀೞ್' ನೋ.

**ಬೆಂಬೀೞ್, ಬೆಂಬೀಳ್, ಬೆಂಬೀಳು, ಬೆನ್ನುಬೀಳು** (ಕ್ರಿ). ೧. ಬೆನ್ನಮೇಲೆ ಬೀಳು ; ಅಂಗಾತನಾಗು ; ಮುಖಮೇಲುಮಾಡಿ ಬೀಳು : ಅದಱಿಂ ಸಿಂಧುತನೂಭವಂ ವಿಜಯನೊಳ್ ಮಾರ್ಕೊಂಡಣಂ ಕಾದಲಾಱದೆ ಬೆಂಬಿೞ್ದೊಡೆ ಕಾದಲೆಂದು ಬೆಸನಂ ಪೂಣ್ದಂ ಗಡಂ ದ್ರೋಣಂ (ಪಂಪಭಾ. ೦೦-೫೫). ೨. ಬೆನ್ನಿಂದ ಹೊರಕ್ಕೆ ಬರು,— ಹೊರಬೀಳು : ನಲ್ಲಂಬೀದಿಸೆ ಪುಷ್ಪಬಾಣನೆರ್ದೆಯಂ ಬೆಂಬಿೞ್ದು ಬೆಳ್ಗಾಗಿ . . . ಮೆಯ್ಯೆಲ್ಲಂ ದಿಟ್ಟಿಗಳಾದೊಡಿಂದ್ರನೆನಿಸಲ್ಕಾರ್ತಂ ಮಹೇಂದ್ರಾಂತಕಂ (ಕಾವ್ಯಸಾ. ೫೫೦ ಪೂರ್ವ). ೩. ದೈನ್ಯದಿಂದ ಹಿಂಬಾಲಿಸು; ಶರಣಾಗತನಾಗು : ತೋರಜಿಕೆಯಾಳ್ಗಳ್ ಬಳ್ಕಿ ಬೆಂಬೀೞೆ . . . ಬಂದುಪೋಪೊದಲೊಳ್ ಮಾವಿನ ಬಳ್ಳಿ ಮಲ್ಲಿಗೆಯ ಕೋಲೆತ್ತಿತ್ತಲುಂ ಕಾವನಾ (ಕಬ್ಬಿಗ. ೩೦೪). ೪. ಹಿಂದೆ ಬೀಳು ; ಹಿಂಜರಿ ; ಓಡು ; ಪಲಾಯನ ಮಾಡು : ನಿಚ್ಚಂ ಬೆಂಬಿರ್ದು ಚಿಂತಿಸಿ ದುಃಖದೊಳ್ ಪಿರಿದುಮಪರಿಂ ಕಣ್ಗೆಟ್ಟಂ ಭಟ್ಟಂ ನಿಕೃಷ್ಟರ ದೂಸಱಿಂ (ಸುಕುಮಾ. ೨-೯); ದನುಜಂ . . . ನೆಟ್ಟನೆ ಚಿಂತಾಗಿರಿ ಮೇಲೆ ಬೀೞೆ ಪಿರಿದುಂ ಬೆಂಬಿೞ್ದು ಬಂದೆಯ್ದಿ ಪೊಕ್ಕು ನಿಜಾವಾಸವಂ (ಜಗದ. ೩-೨೯); ಪುಲಿಯುಂ ಭೀಕರರೂಪದಾ ಮಱಿಗಳುಂ ಬೆಂಬಿರ್ದು ಬೇಗಂ ಭಯಾಕುಲದಿಂ ಕಬ್ಬಿನ ಬಿಲ್ಲುಮಯ್ದುವರಲಂಬಾಗಿರ್ದವೇಂ ಚೋದ್ಯಮೋ (ಬಂಹ. ೯-೪೫). ೫. (ಆಲಂ) ಕೆಡುಕನ್ನು ಮಾಡಲು ಸಮಯವನ್ನು ಕಾಯು,— ಹೊಂಚುಹಾಕು : ಕರಂ ಬೆಂಬಿೞ್ದು ದುರ್ಯೋಕ್ತಿಯಿಂದದಯಂ ಧರ್ಮಜನಿಕ್ಕಿದಂ ಗುರುವಂ (ಪಂಪಭಾ. ೦೨-೩೫). ೬. ತಳಮಳಗೊಳ್ಳು; ದುಃಖಿಸು : ನಚ್ಚುಗೆಟ್ಟು ಬಡವನಂತೆ ಬೆಂಬಿರ್ದು ದೆಸೆಗೆಟ್ಟರಂತೆ ಚಿಂತಿಸಿ (ಧರ್ಮಾಮೃ. ೦-೦೬೯). **ಬೆಂಬೀಳ್ :** ೧. ಬಾಡಿದ ಲತೆಯಂತೆ ಬೆಂಬಿದ್ದು ಪಟ್ಟಿರಲು (ತಿರುತ. ದೇ. ೬-೦೯). ೪. ಹೆಱೆಮೆಟ್ಟಿ ನಡುಗಿ ಬೆಂಬಿರ್ದನಾ ಪಾತಕಂ (ಸೌಂದರ. ದೇ. ೬೪-೦೬); ನಂಬದಿರು . . . ಸಂಗರವೆಂಬ ಮಾತಿಗೆ ಹಂಬಲಿಸಿ ಬೆಂಬೀಳ್ವ ಬಾಹಿರರ (ಕುಮಾವ್ಯಾ. ೮-೪೨). **ಬೆಂಬೀಳು:** ೪. ದುರಿತಪಂಚೇಂದ್ರಿಯಂಗಳ ಬೞಿವಿಡಿದು ಭೂತಶರೀರದೊಳು ಬಿದ್ದು ಬೆಂಬೀಳುವನಲ್ಲ (ಶಿವಗೀ. ೨೬-೦೦೮); ವಿದುರ ಬೆಂಬೀಳದಿರು ಬಿಂಕದ ಹದನ ಬಲ್ಲೆನು ಭೀಮಪಾರ್ಥರ ಮುದವ ಬಯಸುವೆ (ಕುಮಾವ್ಯಾ. ೧೨-೬೯); ಅಜ್ಞಾನಿಗಳು ದಿಟ ಪರಿಭವಿಸಿದರೆ ತತ್ತ್ವವಿದ್ಯಾಪರಿಣತರು ಬೆಂಬೀಳಲರಿವರೆ (ಶಿಕಾಗ. ೫-೬-೩೭). ೬. ಪರರಿಂದು ಮಿಕ್ಕು ಬಾಳಲ್ ಬಯಸಿ ಕುದಿದು ಬೇಳಾಗಿ ಬೆಂಬೀಳುತಿರ್ದುಂ . . . ಗಾಸಿಯಾದಪ್ಪಂ (ರಣ್ನಕ. ೦೦). **ಬೆನ್ನುಬೀಳು :** ೩. ನೀನು ಬಹುಶಃ ಎಣಿಸಿಕೊಂಡಿದ್ದಿರಬಹುದು . . . ನಾನೂ ಆ ಬೀದಿಯ ನಾಯಿಗಳಂತೆ ನಿನ್ನ ಬೆನ್ನುಬೀಳುತ್ತೇನೆಂದು (ಹುಚ್ಚು. ೦೧); ನಿಮ್ಮ ವಿದ್ಯೆ ಅಪಾರವಾದುದು ಎಂತಲೇ ಜನ ನಿಮ್ಮ ಬೆನ್ನುಬಿದ್ದಿದ್ದಾರೆ (ಗಾಳಿಗು. ೦೩). ೭. (ತನ್ನ) ಬಳಿಕ ಜನಿಸು ; ಒಡಹುಟ್ಟು : ಸೃಷ್ಟಿಯಾದಿಮಾಯೆಯೆನ್ನ ಬೆನ್ನುಬಿದ್ದ ತಂಗಿಯು (ಕಯುಜ. ೦೦). [ಬೆಂ$_1$ (< ಬೆನ್) + ಬೀೞ್$_1$]

**ಬೆಂಬುಡಿಕೆ** (ನಾ). ಸಂಡಾಪ ಧೂಳು (?) : ಬಡಪಸು ನಸು ಸೋಂಕಲ್ಕಣಂ ವಿಶ್ವನಂದೀ ಕೆಡೆದೈ ಚೌವಟ್ಟದಿಂ ಬೆಂಬುಡಿಕೆಯೊಳ್ (ಶಾಂತೀಶ್ವ. ೭-೩೫). [ಬೆಂ$_2$ (< ಬಿಸಿದು) + ಪುಡಿಕೆ ?]

**ಬೆಂಬುಯ್ಯಲ್** (ನಾ). ಅಟ್ಟಿಸಿಕೊಂಡು ಹೋಗಿ ಮಾಡುವ ಕಾಳಗ; ಮೇಲೆ ಬಿದ್ದು ಮಾಡುವ ಯುದ್ಧ : ಹರಿವಿಂದ್ರಿಯಾದಿಗಳ ಬೆಂಬುಯ್ಯಲಂ ಪೋಪನುರವಣಿಪ ವಿಷಯಾದಿಗಳ ಬೇಂಟೆಯುಂ ಪೋಪ (ಸೌಂದರ. ದೇ. ೫೮-೦೯). [ಬೆಂ$_1$ (< ಬೆನ್) + ಪುಯ್ಯಲ್ (< ಪೊಯಲ್)]

**ಬೆಂಬೂದಿ** (ನಾ). ಬಿಸಿಯಾಗಿರುವ ಬೂದಿ; ಬೆಚ್ಚಗಿರುವ ಬೂದಿ : ಬೆನ್ನೀರ್, ಬೆಂಬೂದಿ, ಪಂದಲೆ (ಶಬ್ದಾಭ. ೦೪೫ ಉದಾ). [ಬೆಂ$_2$ (< ಬಿಸಿದು) + ಬೂದಿ]

**ಬೆಂಬೂರಿ** (ನಾ). ಒಂದು ಬಗೆಯ ಊದುವ ವಾದ್ಯವಿಶೇಷ :

ಕೊಂಬು ಕೊಳಲು ಚಿನ್ನ ಬೆಂಬೂರಿ ಹೆಗ್ಗಾಳೆ ಅಂಬಿನಾ ಹೊರೆ ಪೆಟಲಾಳು . . . ನಡೆಯಿತು ಪುರಕ್ಕಾಗಿ (ಗುಂಡುಸು. ೯). 'ಬಂರುಗು$_2$' ಹೋ. [ ? ]

**ಬೆಂಬೆಟ್ಟ** (ನಾ). ಕುದಿಯುತ್ತಿರುವ ಲಾವಾರಸವನ್ನು ಉಗುಳುವ ಬೆಟ್ಟ ; ಅಗ್ನಿಪರ್ವತ : ಸಂಜೆಯ ಓಲಗದಾಗ ಪ್ರೇಕ್ಷಕರಿಗೆ . . . ಸ್ತ್ರೀಪ್ರಪಂಚದ ಈರ್ಷ್ಯಾಸೂಯೆಗಳೆಂಬ ಬೆಂಬೆಟ್ಟಗಳನ್ನೂ . . . ಚಿತ್ರ ವಿಚಿತ್ರ ಪುಷ್ಪಮಾಲೆಗಳನ್ನೂ ಧರಯಿಸಿ ಆಳುತಿದ್ದ . . . ನಾಯಿಕೆಯಾಗಿದ್ದೆನು (ಮಂತ್ರಶ. ೨೮-೨೩). [(ಬೆಂ$_2$ <ಬಿಸಿದು)+ಬೆಟ್ಟ]

**ಬೆಂಬೊಳಲೆ** (ನಾ). ( ? ): ಚಕಾರಕ್ಕೆ ಮಕಾರ—ಬೆಂಗದಿರ್, ಬೆಂಬೊಳಲೆ, ಬೆನ್ನೀರ್ (ಶಮದ. ೧೮೨ ವೃಯೋ). [ಬೆಂ$_2$ (<ಬಿಸಿದು) + ಪೊಳಲೆ ? ]

**ಬೆಕ್ಕಟ** (ನಾ). ಆಶ್ಚರ್ಯ ; ವಿಸ್ಮಯಂ : ಬೆಕ್ಕಟದಿ ನೋಡುವಿರಿ ನಿಮಗೇನಕ್ಕರವು ಅದರಲ್ಲಿ ಹೀನವು ಬಕ್ಕು (ಜನಭಾ. ೨೦-೬೩); ದನುಜೇಂದ್ರ ಬೆಕ್ಕಟದಿ ನೋಡ್ತನಗು ಪಂಜರಪಕ್ಕಿ ದನುಜರನೆಲ್ಲರನು ಹಾರಿಕ್ಕಿದೆಳೆಯುವನಲ್ಲವೆನುತಸುರೇಂದ್ರ ಖತಿಗೊಂಡ (ಜಗಾವಾ. ೦೨೦-೫೩). 'ಬೆಕ್ಕಟಗರೆ' ಪರಾ. [<ಬೆಕ್ಕಸ?]

**ಬೆಕ್ಕಟಗರೆ** (ಕ್ರಿ). ಆಶ್ಚರ್ಯಪಡು ; ಬೆರಗಾಗು : ಬೆಕ್ಕಟಗರೆವರೇನಂಗೇಶ ಸಾಧ್ಯಕೆ ಬರದು ನಡೆನಡೆಯೆಂದು ನಕ್ಕರು ಆಳರನ್ನೆಯರು (ಜನಭಾ. ೨೦-೨೭). [ಬೆಕ್ಕಟ+ಕರೆ$_2$ (<ಕಱೆ$^3{}_1$) ]

**ಬೆಕ್ಕತ್ತು** (ನಾ). ಬೆನ್ನು ಮತ್ತು ಕತ್ತು ಸೇರುವ ಸ್ಥಳ ; ಕುತ್ತಿಗೆಯ ಹಿಂಭಾಗ : ಕಾವಿಯೊಳಗೆ ಅವಿತಿದ್ದ ಖಡ್ಗ ಹೊರಗೆ ಬಂತು. ಬೆಕ್ಕತ್ತಿಗೆ, ಬೆನ್ನಿಗೆ ಏಟುಬಿದ್ದು ಗಾಯಗಳಾದುವು (ತುಂಗಭ. ೦೦೫). 'ಹೆಕ್ಕತ್ತು' ಪರಾ. [<ಬೆನ್+ಕತ್ತು$_3$ (<ಕಬ್ಬು)]

**ಬೆಕ್ಕನೆ** (ಅ). ಒಂದು ಅನುಕರಣಾವ್ಯಯ : ನರನ ನೇಹದ ನಚ್ಚಿ ಬೆಕ್ಕನೆ ಬೆರತೆ ಪಗೆಯವನೆಂಬುದನು ನೀನರಿಯೆ (ಆಪಂರಾ. ೫-೯-೯). [ಬೆಕ್$_0$ + –ಅನೆ$_1$]

**ಬೆಕ್ಕರಿಸು** (ಕ್ರಿ). ೧. ಮೇಕೆಯಂತೆ ಧ್ವನಿಮಾಡು.—ಕೂಗು : "ಬೆಕ್ಕರಿಸು—ಅಜಧ್ವನೌ" (ಶಮದಾ); ತಾಂ ಪುರುಷನೆಂದಾಗಳೇ ಬೆಕ್ಕರಿಸುತ್ತಿಲ್ಲತ್ತು ದಲ್ದಕ್ಷನೆನುತಲವನಂ ತನ್ನವೊಲ್ಮಾಡಿ ತೋರ್ದಾ ಮರುಳಾಟಕ್ಕೊಲ್ದುಮಾ ಗೌರವಮೆನಿಸುತ್ತಿರ್ದೆ ನೀಂ ವೀರಭದ್ರಾ (ವೀರಶ. ೦೦೦). ೨. ಅಹಂಕಾರಪಡು ; ಗರ್ವಿಸು ; ಬೀಗು : ಜಂಕರಿಸಂ ಕಾತರಿಸಂ ಮೂಂಕರಿಸಂ ಬೆಕ್ಕಸಂಬಡಂ ಬೆಕ್ಕರಿಸಂ (ಅಜಪು. ೫-೮೯) ; ಆರಱಿಪಂ ಮೆಱೆದಪರಿನ್ನಾರಾರ್ ಸೌಭಾಗ್ಯಗರ್ವದಿಂ ಬೆಕ್ಕರಿಪರ್ ಮಾತಂ ಮುನಿವವರೆರ್ದೆಯೊಳ್ ಕೂರಂಬಂ ತೆಗೆಯದೇಕೆ ಕಡೆಗಣಿಸಿರ್ಪಂ (ಲೀಲಾವ. ೯-೨೪). [ಬೆಕ್ಕರ್$_0$ + –ಇಸು$_3$]

**ಬೆಕ್ಕಸ** (ನಾ). ಆಶ್ಚರ್ಯ ; ಬೆರಗು ; ವಿಸ್ಮಯಂ : "ಬೆಕ್ಕಸಮಂ ದಾಶ್ಚರ್ಯಂ" (ಕಶಗಾ. ೫೮-೨೮೯) ; ಕರ್ಣಾದಿಗಳ್ ಕಂಡು ಬೆಕ್ಕಸಮಾಗಿರ್ದನಂ . . . ಮಾನಂ ಸಮಂತೆಚ್ಚು ಮೆಚ್ಚಿಸಿದಂ ದೇವರುಮಂ ಧನುರ್ಧರರುಮಂ ವಿದ್ವಿಷ್ಟವಿದ್ರಾವಣಂ (ಪಂಪಭಾ. ೩-೬೩); ಪೊಸ್ಕು ಬೆಕ್ಕಸ ಮಿರೆ ದೇವರುಂ ದಿವಿಜಲೋಕದೊಳರ್ವಿಸೆ (ನೇಮಿಪು. ೦೨-೨೩೬) ; ಬೆಕ್ಕಸದಿ ನೋಡುತಿರ್ದಳ್ ತರಳೆ (ಚತ್ರಾಂಗ. ೬-೦೬೯). 'ಬೆಱಗು' ಪರಾ. [ದೇ.॥ ತುಳು. ಬೆಕ್ಕಸ್, ಬೆಕ್ಕಸು]

**ಬೆಕ್ಕಸಂಗೊಳ್**, ಬೆಕ್ಕಸಗೊಳ್ (ಕ್ರಿ). ಆಶ್ಚರ್ಯಪಡು ; ಬೆರಗಾಗು ; ವಿಸ್ಮಯಂಹೊಂದು : ಇಂತಿಂತು ಬೀರಾಳ್ಗಳಿಲ್ಲಲ್ಲಿ ನಗೆ ನುಡಿಯುತಿರೆ ಬೆಕ್ಕಸಂಗೊಂಡಿಂದ್ರಜಂ ಪಕ್ಕದಲ್ಲಿರ್ದನಂ ಪ್ರದ್ಯುಮ್ನನಂ ಕುರಿತು (ಚತ್ರಾಂಗ. ೬೮-೨೦೩೩). **ಬೆಕ್ಕಸಗೊಳ್** : ನೋವಿನಿಂದಲುಗಾಡದಾದೆ ಬೆಕ್ಕಸಗೊಂಡು (ಕೋಗಿಲೆ. ೯-೬೯). [ಬೆಕ್ಕಸ+ಕೊಳ್$_1$]

**ಬೆಕ್ಕಸಂಬಡು**, ಬೆಕ್ಕಸಬಡು, ಬೆಕ್ಕಸವಡು (ಕ್ರಿ).=ಬೆಕ್ಕಸಂಗೊಳ್ : "ಬೆಕ್ಕಸಂಬಡು—ವಿಸ್ಮಯೇ" (ಶಮದಾ) ; ಬಗೆಯನುಱೆ ಸೆಱೆವಿಡಿದ ವಿದ್ಯಾಧರವಿಳಾಸಕ್ಕಂ ಬೆಕ್ಕಸಂಬಟ್ಟು (ಆದಿಪು. ೨-೯೦ ವ) ; ಲಕ್ಕಸಂಖ್ಯೆಯ ಪೊನ್ನ ರಾಶಿಗಳುಕ್ಕುತಿರೆ ಬಿಜ್ಜಳಿಸು ನೋಡುತ ಬೆಕ್ಕಸಂಬಟ್ಟು (ಬಸಪು. ೫-೬೦). **ಬೆಕ್ಕಸಬಡು** : ಜನವು ಬೆಕ್ಕಸಬಟ್ಟು ಬೆದಱಿದುದು (ಶಾಳ್ಭಾ. ೩೦-೫೯) ; ಮೂಱು ಪೊಡವಿಯುಪ್ಪಗಲದ ಹಂಸ ಬಡಮ್ಮೆಯೊಳಿರ್ದುದ ನೆನೆದು ಬೆಕ್ಕಸಬಟ್ಟ ಬೆಡಗೋಯೆಂದೆನೆ ನೃಪನೆಸೆದ (ಶಠಷ. ೩-೨೨). **ಬೆಕ್ಕಸವಡು** : ಮಕ್ಕಳು ಪುಟ್ಟಿದ ಪದದೊಳು ಬೆಕ್ಕಸವಟ್ಟಿರ್ದ ಮರ್ತ್ಯರಂ ಕಂಡಾಗಳ್ ಚೆಕ್ಕನೆಯವರ ಹೃದಯದೊಳಿರ್ದಕ್ಕಜಮಂ ಕಳೆದು ಕೀರ್ತಿಯಂ ಪ್ರಕಟಿಸಿದಂ (ಶುಕಾಸ್ರ. ೦೦-೦೦) ; ಅದೆ ಅದೆ ಬಂದಂ ಜಯಜಾಯಾಪತಿಯದಟರ ದೇವನೆನುತ ತಂತಮ್ಮೊಳ್ ಬೆದರ್ದರ್ ಬೆಕ್ಕಸವಟ್ಟರ್ . . . ಪರನೃಪಬಲದವರು (ಜಯಕಾ. ೬-೨) ; ನಾರಾಯಣನಖಿಲಜಗತ್ಕಾರಣಂ . . . ಮನುಜಾಕಾರಮನಾಂತಿರ್ಕುಮಕ್ಕ ಬೆಕ್ಕಸವಡದಿರ್ (ಜಕಬಿ. ೬-೨೩೫). [ ಬೆಕ್ಕಸ + ಪಡು$_1$ ]

**ಬೆಕ್ಕಸಂಬೆರಗು** ' ಬೆಕ್ಕಸಂಬೆಱಗು ' ನೋ.

**ಬೆಕ್ಕಸಂಬೆರೆ** (ಕ್ರಿ).=ಬೆಕ್ಕಸಂಗೊಳ್ : ಇದು . . . ಬೆಕ್ಕಸಂಬೆಱೆ[ರೆ]ಯದಿಕ್ಕೆಯುಂ ಸಾಸಮಿಲ್ಲದ ದೇಶಮುಂ . . . ಎನಿಸುಗುಂ (ಜಳವಂ. ೦೩೬-೬). [ ಬೆಕ್ಕಸ + ಬೆರೆ$_1$ ]

**ಬೆಕ್ಕಸಂಬೆಱಗು**, ಬೆಕ್ಕಸಂಬೆರಗು, ಬೆಕ್ಕಸಬೆರಗು, ಬೆಕ್ಕಸಬೆಱಗು (ನಾ). ಅತ್ಯಾಶ್ಚರ್ಯ; ನಿಬ್ಬೆರಗು ; ಮಹಾವಿಸ್ಮಯ : ಒಕ್ಕಲಿಗರ್ ಸಾಕ್ಷಿಯಿಲ್ಲದೆ ಸಾಲಂಗೊಟ್ಟರಂತೆ [ಬೆಕ್ಕಸಂ]ಬೆಱಗಾಗೆ (ಧರ್ಮಾಮೃ. ೨-೬೯); ಬೆಕ್ಕಸಂಬೆಱಗಾಗಿ ಭೈರವನಕ್ಕ ತಾನಿವಳಾಗಬೇಕೆನುತಿಕ್ಕಿಲನನಾರೈವುತಂಜುತ ನೋಡಿದನು ಹನುಮ (ತೊರರಾ. ೫-೨-೩೨) ; ದೆಸೆದೆಸೆಗಳಂ ಕೆಕ್ಕರಿಸಿ ನೋಡುತ್ತೆ ಸೈಪರಿದು ಬರುತಿರಲ್ ದಿಕ್ಕುದಿಕ್ಕಿನೊಳಿರ್ಪ ರಕ್ಕಸರ್ ಕಾಣುತ್ತೆ ಬೆಕ್ಕಸಂಬೆಱಗಾದರು (ಜಿಬಪು. ೯೯-೯). **ಬೆಕ್ಕಸಂಬೆರಗು** : ಗಯ ಪುರೆಹೊಕ್ಕನೆಂದೇ ಕೈವಿಡಿದು ಹರಿ ಕೇಳ ಕಳುಹಿದರೆ ಚಿಕ್ಕಮಾತುಗಳಾಡೆ ಚಕ್ರಿಕೆ ಬೆಕ್ಕಸಂಬೆರಗಾಗಿಯಗ್ರಜನೆಕ್ಕತುಳದಲಿ ತಿಳಿದು ಬಾಯೆನೆ ಬಂದೆ ನಿಮ್ಮೆಡೆಗೆ (ಕೋಗಯ. ೦೯-೩೯). **ಬೆಕ್ಕಸಬೆರಗು** : ಭಾಗಮ್ಮ ಬೆಕ್ಕಸ ಬೆರಗಾಗಿ ಕೇಳಿದಳು (ರಂಗರೋ. ೩೬) ; ಮಹಾಮಾಯೆ ಕ್ಷಣಕಾಲ ಬೆಕ್ಕಸ ಬೆರಗಾಗಿ ನಿಂತಳು (ಶಾಣಿಅ. ೦೦೩). **ಬೆಕ್ಕಸಬೆಱಗು** : ಹೇಳದಿರು ಮಿಕ್ಕಿಂದ್ರಗಿಂದ್ರರ ತೋಳ ಸತ್ವವನರಸ ಕೇಳಿವನೊಳಿಗವ ಹೇಳಿದರೆ ಬೆಕ್ಕಸಬೆಱಗು ನಿಮಗೆ (ತೊರರಾ. ೬-೨೭-೦೦); ಇಕ್ಕೇರಿಯ ಭೂಪ ತುರುಕರ ದಾಳಿಗೆ ಬೆಕ್ಕಸಬೆಱಗಾಗುತಾಗ ಹೊಕ್ಕನು ಮಲೆಯನು (ಕಂಪಬ. ೦೦-೫). [ ಬೆಕ್ಕಸ + ಬೆಱಗು$_1$ ]

**ಬೆಕ್ಕಸಗೊಳ್** ' ಬೆಕ್ಕಸಂಗೊಳ್ ' ನೋ.

**ಬೆಕ್ಕಸಬಡು** ' ಬೆಕ್ಕಸಂಬಡು ' ನೋ.

**ಬೆಕ್ಕಸಬೆರಗು** ' ಬೆಕ್ಕಸಂಬೆಱಗು ' ನೋ.

**ಬೆಕ್ಕಸಬೆಱಗು** ' ಬೆಕ್ಕಸಂಬೆಱಗು ' ನೋ.

**ಬೆಕ್ಕಸಮುಱು** (ಕ್ರಿ). = ಬೆಕ್ಕಸಂಗೊಳ್: ಕೌರವ್ಯರಂ ತಿಂದ ರಕ್ಕಸನೋ ಈತನೊ ಭೀಮಸೇನನೆನುತುಂ ಗಾಂಧಾರಿ ಬಳ್ಕುತ್ತೆ ಬೆಕ್ಕಸಮುತ್ತಳ್ ಬರೆ ಕಂಡು ಪಾಂಡವಬಲಪ್ರಾಕಾರನಾಕಾರಮಂ (ಗದಾಯು. ೬-೩೩) ; ತನ್ನಂಗಿಯ ಸಾಹಸಕ್ಕೆ ಬೆಕ್ಕಸಮುತ್ತಿರ್ದಂ (ನೇಮಿಪು. ೬-೩೨ ವ) ; ಕನ್ನಡಗಬ್ಬ ಮನೊಲ್ದು ಕೋವಿದರ್ ಬೆಕ್ಕಸಮುತ್ತು ಮಚ್ಚಿ ಪೊಗಳುತ್ತಿರೆ (ಶಬಶಂ. ೫-೬೨). [ ಬೆಕ್ಕಸ + ಉಱು ]

**ಬೆಕ್ಕಸವಡು** ' ಬೆಕ್ಕಸಂಬಡು ' ನೋ.

**ಬೆಕ್ಕು** ' ಬೆಕ್ಕುರ್' ನೋ.

**ಬೆಕ್ಕುಗಣ್ಣು** (ನಾ). (ಬೆಕ್ಕಿನ ಕಣ್ಣಿನಂತೆ) ಬಣ್ಣವುಳ್ಳ ಕಣ್ಣು: ಅಕ್ಕುಳಿಸಿದ ಹೊಟ್ಟೆ ಬೆಕ್ಕುಗಣ್ಣಿನ ಮೋಟ್ ಅಕ್ಕುಳಿಯು ತುಂಬ ಕಡುಗೋಪಿ ಪುರುಷನು ಚಿತ್ರಿನಿಗೆ ಮೇಳ (ಸರ್ವಜ್ಞ. ೦೬೬೪) ; ಕಣ್ಣುಗುಡ್ಡೆಯ ಕರಿಯ ಭಾಗ ಬೂದುಬಣ್ಣವಾಗಿರುವ ಕಣ್ಣು, ಬೂದುಗಣ್ಣು, ಬೆಕ್ಕುಗಣ್ಣು (Grey-eye. ೩೦೪೨). [ಬೆಕ್ಕು (< ಬೆರ್ಕ್ಕ) + ಕಣ್ಣು (< ಕಣ್)]

**ಬೆಕ್ಕುಮಾಳಿಗೆ** 'ಬೆಳಕುಮಾಳಿಗೆ' ನೋ.

**ಬೆಗಡಿಸು** (ಕ್ರಿ). ಹೆದರಿಸು; ಭಯಪಡಿಸು; ಅಂಜಿಸು: ಬೆಗಡಿಸಿ ತತ್ವವಿದರ ನಿಷ್ಠುರದಿಂ (ಹೋರಾಂ. ೨-೨೨). [ಬೆಗಡು$_1$ + —ಇಸು$_3$]

**ಬೆಗಡು$_1$, ಬೆಗಳ್$_1$, ಬೆಗಟ್$_1$** (ಕ್ರಿ). ೧. ಆಶ್ಚರ್ಯಪಡು; ಬೆರಗುಗೊಳ್ಳು; ವಿಸ್ಮಯವನ್ನು ಹೊಂದು: (೪). ೨. ಅಂಜು; ಅಳುಕು; ಬೆದರು: ಹರಿ ಬೇಡೆ ಕವಚವಂ ನೀನಿರದಿತ್ತು ಕೊಂತಿ ಬೇಡೆ ಬೆಗಡದೆ ಕೊಟ್ಟೈ ಹುರಿಗಣೆಯುಂ (ಗದಾಯು. ೫-೨೪). **ಬೆಗಳ್$_1$**: ೨. ಖಳರಳವಂ ಕಳಲ್ಚ(ಲ್ಚಿ) ನೆಱೆ ಕಳ್ಳರ ಕೊಳ್ಳಿಯ ಬಾಧೆಯ[೦] ಬಿ(ಬೆ)ಗಳ್ದಳಱೆ ತೆರಳ್ಚಿ . . . ನಿರ್ಮ್ಮಳತರಕೀರ್ತ್ತಿಯುಂ ಪಡೆವಳ್ (ಕಇ. IV. ೧-೫೪ ; 1204). **ಬೆಗಟ್$_1$**: ೨. ಬರೆಪದ ಜೀವಚಿತ್ರಮುಮ ನೀಕ್ಷಿಸಿ . . . ಬೆಗಟ್ಟ ಕಣ್ಗಳಿಂ ಬರೆತೆಗೆದಂ ನೃಪಂ ತನಗೆ ತಾಂ ಗಡ ಲಜ್ಜಿಸಿ (ಲೀಲಾವ. ೩-೬೪); ಕನಲ್ದೊನಲ್ದು ಬೆಗಟುತ್ತು ಬೆಗಟ್ವಿಂಗೆ ಮತ್ತ [ಮಂತೆ ಸಾರಿರ್ದು] . . . ವಿಪ್ರಳಾಪಂಗೆಯ್ಯುತ್ತಂ (ಶಂಹಂ. ೦೪-೯೩). **ಬೆಗಟ್ಟಂ**=ಹೆದರಿದವನು; ಭಯಪಟ್ಟವನು: "ಬೆಗಟ್ಟನೆ ಭೀತಿಯುಕ್ತನೊಳ್" (ಶಬ್ದಾಶಿ. ೨೨).

[ದೇ.॥ ತುಳು. ಬೆಗಡು; ತೆಲು. ಬೆಗಡು, ಬೆಗ್ಗಡು, ಬೆಗ್ಗಿಲು]

**ಬೆಗಡು$_2$, ಬೆಗಳ್$_2$, ಬೆಗಟ್$_2$** (ನಾ). ೧. ಆಶ್ಚರ್ಯ; ಬೆರಗು; ವಿಸ್ಮಯ: ಬೆಗಡು ಮುಸುಕಿದ ಮುಖದ . . . ಹುಯ್ಯಲುಗಾಱ ಬಹಳೋಲಗಕೆ ಬಂದನು (ಕುಮಾರ. ೩-೬). ೨. ಭಯ; ಅಂಜಿಕೆ; ಅಳುಕು: "ಬೆಗಡು=ಭಯಮುಂ" (ಶಮದ. ಶಂ. ೨); ಇವರ ಲೀಲಾಲಾಸ್ಯದಲಿ ನೆಲೆಯ ಕಾಣದೆಯೆ ನನ್ನ ಮತಿ ಬೆಗಡಾಗಿ ತೊಳಲುತಿಹುದು (ಒಲುಮೆ. ೨೯-೦೬). 'ಬೆಗಡುಗೊಳ್' ಪರಾ. **ಬೆಗಳ್$_2$**: ೨. 'ಬೆಗಳ್ಗೊಳಿಸು' ಪರಾ. **ಬೆಗಟ್$_2$**: ೧. "ಬಕ್ಕುಡ ಬಿಗುರ್ವಗುರ್ವು ಬೆಬ್ಬಳ ಬೆಗಟ್ ತಲ್ಲಣಂ ತಳವೆಳಗು ಮಲ್ಲಟಿಯೆನಲ್ಕೆ ಬೆಱಗಪ್ಪ ಭಾವಂ" (ಶಬ್ದಸ್ಮೃ. ೪೦). ೨. ಕನಲ್ದೊನಲ್ದು ಬೆಗಟುತ್ತು ಬೆಗಟ್ ವಿಂಗೆ ಮತ್ತ [ಮಂತೆ ಸಾರಿರ್ದು] . . . ವಿಪ್ರಳಾಪಂಗೆಯ್ಯುತ್ತಂ (ಶಂಹಂ. ೦೪-೯೩).

[ <ಬೆಗಡು$_1$. / ತೆಲು. ವೆಗಟು ]

**ಬೆಗಡುಗೊಳ್**, ಬೆಗಡುಂಗೊಳು, ಬೆಗಡುಗೊಳ್ಳು, ಬೆಗಟ್ಗೊಳ್ (ಕ್ರಿ). ೧. ಅಚ್ಚರಿಪಡು; ಬೆರಗುಗೊಳ್ಳು; ವಿಸ್ಮಯಪಡು: ನೆಗೆದು ರಿಪೌರ್ವಾನಳನುರ್ಬುಗಳಿನಲಂ ನೆಗೆದುಮಹಿಮಹಿಮಕರಬಿಂಬಂ ಅಂತವಂ ಕಂಡು ಬೆರ್ಚಿ ಬೆಗಡುಗೊಂಡ ಭೋಗಭೂಮಿಜರಂ . . . ಸಂತಯಿಸಿದಂ (ಆದಿಪು. ೬-೫೨ ವ). ೨. ಅಂಜು; ಭಯಪಡು; ಹೆದರು: ಆಗಳದಂ ಕಂಡುತ್ತರನೊತ್ತರಮೊತ್ತಿದಂತೆ ಬೆರ್ಚಿ ಬೆಗಡುಗೊಂಡು (ಪಂಪಭಾ. ೮-೯೯ ವ); ನಿದ್ರೆ ತಿಳಿದು ಕಣ್ದೆಱೆವ ಕಿಲಬಿಲಸಂ ನೋಡಿ ಬೆಚ್ಚಿ ಬೆಗಡುಗೊಂಡು ಅನುಶಾಪವೇಱಿ (ಜಿಕರ. ೯-೨೫); ಮಗನ ಮಾತಿಗೆ ಬೆಗಡುಗೊಂಡನು . . . ಬೆದಱಿದನಸುರ (ಸಂಭಶ. ೬-೩೭). **ಬೆಗಡುಗೊಳು**: ೨. ತೆಗೆಯೆ ಬೆನ್ನಿಂದಲಗುರಕ್ಕಿ ಮೂಡಿರೆ ಕಂಡು ಬೆಗಡುಗೊಳುತೆಲ್ಲರುಂ ಮಱುಗಿ ಮುಮ್ಮುಳಿಗೊಂಡು (ಸೌಂದ. ದೇ. ೩೭-೦೫); ನಗರದೊಳು ದಶಮುಖನ ಕಾಣುತ ಬೆಗಡುಗೊಳುತಲಿ (ಉತ್ತ. ಕ. ೦೯-೨೮); ಬೆಗಡುಗೊಳು ವಡು ತಡವುಮಾಡದೆ ವಿಗಡನನು ಕೊಲುತ್ತೈದು ಬೇಗನೆ (ಕೃ. ಕರ್ಣಾ. ೨-೯೨). **ಬೆಗಡುಗೊಳ್ಳು**: ೧. ರತ್ನಾಜಿಯಂಥ ಸುರಲೋಕಸುಂದರಿಯೇ ಅವನನ್ನು ನೋಡಿದಾಗ ಬೆಗಡುಗೊಳ್ಳುತ್ತಾಳೆ (ಸೀತಾಂತ. ೧೦೦); ಅಷ್ಟು ಆರ್ಭಟ, ಅಷ್ಟು ಗದ್ದಲ, ಅಷ್ಟು ಉಪಚಾರದಿಂದ ಕೋಣನಾದರೂ ಬೆಗಡುಗೊಳ್ಳದೆ ಇರಬಹುದೆ (ಸನ್ಮ. ಕ. VI. ೦೦). **ಬೆಗಟ್ಗೊಳ್**: ೨. ಅಂತು ಸತ್ವಭಾವಂಗಗ್ಗಳಮಾದ ವಿರಹಪರಿತಾಪಮಂ ಕಂಡು ಬೆಗಟ್ಗೊಂಡು . . . ಇಂತೆಂದಳ್ (ಜಗನ್ನಾ. ೧೦-೨೦ ವ).

[ಬೆಗಡು$_2$ + ಕೊಳ್$_1$]

**ಬೆಗಡುಗೊಳಿಸು**, ಬೆಗಳ್ಗೊಳಿಸು (ಕ್ರಿ). ೧. ಭಯಪಡಿಸು; ಹೆದರಿಸು; ಅಂಜುವಂತೆ ಮಾಡು: ನೆತ್ತಿಯ ಬಗಿದು ಕೊರಂಕುಶದಲಾನೆಯ ಬೆಗಡುಗೊಳಿಸಲು ಬೀದಿವರಿದುದು ಸುಭಟರೆದೆಯೊಡೆಯೆ (ಕುಮಾ. ದ್ರೋ. ೩-೦೩): ಮಗಳ ಮನ ವಿಗಡಿಸಿತು ನಾಲ್ವರು ಬೆಗಡುಗೊಳಿಸಿದರು (ವಿಕ. ೩-೬೩). ೨. (ಆಲಂ) ಭ್ರಮೆಗೊಳಿಸು: ನೋಟದಿಂದದೆಗೆ ಪುಟ್ಟಿಪರು ತಳ್ಗೆಂಡವ ಬೇಟದಿಂ ಬೆಗಡುಗೊಳಿಪರು . . . ಕುಲಟಾಜನ (ಕುರಾನಾಂ. ೩೦-೬೦). **ಬೆಗಳ್ಗೊಳಿಸು**: ೧. ಮಹಾದಂತಿಗಳಂ ಬೆಗಳ್ಗೊಳಿಪ ಸಿಂಹಕೆ ಲಕ್ಷ್ಯಮೆ ಪುಲ್ಮಿಗಂ (ರಾಜಶೇ. ೩-೦೩೦).

[ಬೆಗಡುಗೊಳ್ + — ಇಸು$_3$]

**ಬೆಗಡುಗೊಳು** 'ಬೆಗಡುಗೊಳ್' ನೋ.

**ಬೆಗಡುಗೊಳ್ಳು** 'ಬೆಗಡುಗೊಳ್' ನೋ.

**ಬೆಗಡುವಡಿಸು** (ಕ್ರಿ). =ಬೆಗಡುಗೊಳಿಸು ೧: ರಾಜರಾಜಂ ಜೈತ್ರಯಾತ್ರೆಯೊಳ್ . . . ತಗಡೂರಂ ಬೆಗಡುವಡಿಸಿ ತಾಯೂರಂ ಬಾಯ್ವಿಡಿಸಿ . . . ಮಂಡಲಾಧಿಪತ್ಯದೊಳಿರೆ (ಶಕರಾ. ೨-೨೯). [ಬೆಗಡು$_2$+ಪಡಿಸು]

**ಬೆಗಡೊಂದು** (ಕ್ರಿ). = ಬೆಗಡುಗೊಳ್ ೨: ಲಲನೆಯಂಜುಲಿಸಲಿಲದಿಂ ಚಪ್ಪಳಿಸುತಂ ಬೆನ್ನೊಳು ಶಿರಸಿನೊಳ್ ಜಲವನೊತ್ತುವಳಾತ್ಮಜಗೆ ಬೆಗಡೊಂದದಂತೋವಿ (ಜಕವ. ೦೫-೯) ; ಭ್ರಮೆಯಿಂದ ಬೆಗಡೊಂದಿ ಬಲ್ಪುಡುಗಿ ಬೇಗಂ ಹಮ್ಮುದಂಬೋದುದೆಯ್ದೆ ಮದೇಭಾಶ್ವನರಾದಿ ಜೀವನಿವಹಂ (ನ್ಯಕಾ. ೦೬-೪೭) ; ಇವಳ ವಿವಾಹವಿಷಯವಾಗಿ ಎಷ್ಟೋ ಬೆಗಡೊಂದುತ್ತಿದ್ದೇನೆ. ಆ ಬೆಗಡೆಲ್ಲವೂ ತೀರಿಹೋಗುತ್ತಿದೆ (ಅಭ್ಯೇಶ್ರ. ೩೭).

[ಬೆಗಡು$_2$ + ಒಂದು$_1$]

**ಬೆಗಸಿಲ್** 'ಬೆಲಗಸೆ' ನೋ.

**ಬೆಗಸಿಲೆ** 'ಬೆಲಗಸೆ' ನೋ.

**ಬೆಗಳ್$_1$** 'ಬೆಗಡು$_1$' ನೋ.

**ಬೆಗಳ್$_2$** 'ಬೆಗಡು$_2$' ನೋ.

**ಬೆಗಳ್ಗೊಳಿಸು** 'ಬೆಗಡುಗೊಳಿಸು' ನೋ.

**ಬೆಗಟ್$_1$** 'ಬೆಗಡು$_1$' ನೋ.

**ಬೆಗಟ್$_2$** 'ಬೆಗಡು$_2$' ನೋ.

**ಬೆಗಟ್ಗಡೆ** (ಕ್ರಿ). =ಬೆಗಡುಗೊಳ್ ೨: ಪೊಗರ್ವೇಱಿಗಾಗಿ ಮೊಗಂ ಬೆಗಟ್ಗಡೆದೊತಂ ಮೆಯ್ಯುಂ ಮರಂ ಬರ್ದೊಡಂ ಬಿಗುರುತ್ತೇನಳವೊಂದಿನಿಂಥ ಳಪಚಾರಂ ಬರ್ಪುದೆಂದಾರ್ಪಿನಿಂ (ಶಕಪ. ೬-೨೫೦).

[ ಬೆಗಟ್$_2$ (< ಬೆಗಡು$_2$) + ಕೆಡೆ$_1$ ]

**ಬೆಗಟ್ಗೊಳ್** 'ಬೆಗಡುಗೊಳ್' ನೋ.

**ಬೆಗಟ್ಟು** (ನಾ). ಆಶ್ಚರ್ಯ; ಬೆರಗು; ವಿಸ್ಮಯ: "ಬೆಗಟ್ಟು ಬೆಗಡಾಯ್ತು" (ಶಂಕೇವ. ೨೧); ಅಂತಾ ಪುರದಹಿತರ್ಗೆ ಬೆಗಟ್ಟನೀಯುತ್ತ ಗಟಿಸಿದಿರ್ಕುಂ (ಅದ್ಭುಶಿ. ೦-೯೩).

[ ಬೆಗಟ್$_2$ (< ಬೆಗಡು$_2$) + — ಪ್ಪು ]

**ಬೆಗುಸೆ** (ನಾ). ಒಂದು ಬಗೆಯ ಮರ: ಬೇವು ಬೆಲ್ಲವತ್ತ ಆರಳಿ ಅಲ ಬೆಗುಸೆಸೊಪ್ಪುಗಳಂ ನೀರೊಳು ಹಾಕಿಶಿಶುವಿಂಗೆ ಮಿಯಲೆಱೆವುದು (ಬಾಲಗ್ರ. ೦೩೦-೦೯). [ ? ]

**ಬೆಗ್ಗಾಡು** ' ಬೆಂಗಾಡು ' ನೋ.

**ಬೆಚ್ಚ$_1$** ' ಬಿಸು$_1$ ' ಪರಾ.

**ಬೆಚ್ಚ$_2$** ' ಬಿಸು$_2$ ' ನೋ.

**ಬೆಚ್ಚಂಬಿಲ** (ನಾ). ಬಿಸಿಯಾದ ಗಂಜಿ ; ಬೆಚ್ಚಗಿರುವ ಅಂಬಲಿ : ನಡನಡನೆ ನಡುಗಿ ಬೆಚ್ಚಂಬಿಲಮುಮಂ ಪೊಯ್ದು ಮಿಡಮಿಡನೆ ಮಿಡುಕೆ ಪೊಕ್ಕುಳ ಬಳ್ಳಿಯಂ ಕೊಯ್ದು (ಹಿಂಡೋಕ. ಹ. ೩೦೦-೨೩) ; ಬೆಚ್ಚಂಬಿಲವ ಕುಡುಗೋಲ ಕಪ್ಪಡವನರಳೆಯಂ ತೈಲವಂ ತಾ (ಸಿದ್ಧರಾ. ೨-೨).

[ ಬೆಚ್ಚ$_2$ (< ಬಿಸಿದು) + ಅಂಬಿಲ (< ಅಂಬಲಿ$_1$) ]

**ಬೆಚ್ಚಗುಳಿ** (ನಾ). ಬಿಸಿಯಾದ ಅಗುಳು ; ಬೆಚ್ಚಗಿರುವ ಅನ್ನ : ಕಬ್ಬಾನೆ, ಬೆಚ್ಚಗುಳಿ (ಶಬ್ದಾಸು. ೩೯೩ ಪ್ರಯೋ).

[ ಬೆಚ್ಚ$_2$ (< ಬಿಸಿದು) + ಅಗುಳಿ$_4$ ]

**ಬೆಚ್ಚಗೆ** (ಅ). ಬಿಸಿಯಾಗಿ ; ಶಾಖವಾಗಿ : ಮೊಗಂ ಮೊಗದತ್ತ ಸಾರ್ಚಿ ಬೆಚ್ಚಗೆ ನಿಡುಸುಯ್ದು ನಲ್ಲಳ ಮುಖಾಂಬುಜಸೌರಭದೊಳ್ ಪೊದಟ್ದು (ಸುಕುಮಾ. ೯-೦೦೬) ; ಬೆಲೆವೆಣ್ಣುಗಳ್ಬಂದು ಪಾದಗಳಾ ಬಣ್ಣಿಸಿ ಹಿಡಿವಾಗ ಬೆಚ್ಚಗಿದ್ದುವು ಹಸ್ತ ತಣ್ಣಗಿದ್ದುವು ಚರಣಗಳು (ಶರತ. ೦೨-೦೩೦) ; ಮೈಯನ್ನು ಯಾವಾಗಲೂ ಬೆಚ್ಚಗೆ ಇಡಬೇಕು (ಮುಂಬಯಿ. ೯-೨೩).

[ ಬೆಚ್ಚ$_2$ (< ಬಿಸಿದು) + -ಅಗೆ$_3$ ]

**ಬೆಚ್ಚನೆ** (ಅ). = ಬೆಚ್ಚಗೆ : ನೀರೊಳ್ ಮುಳುಗಿದರಂತುಮ್ಮನೆ ಬೆಮರುತ್ತುಮ್ಮಳಿಕೆವಂದು ಬೆಚ್ಚನೆ ಸುಯ್ದೊಡೆ (ಸುಕುಮಾ. ೯-೬೯ ವ) ; ಕಿರಾತಂ ಬೇಸತ್ತು ಬೆಚ್ಚನೆ ಸುಯ್ದು ಬದಿಯಂ ಬಯ್ದು ತನ್ನ ಮನೆಗೆ ಮಗುಟ್ದಂ (ಸುಕುಮಾ. ೨೯೦-೦೬) ; ಬಟ್ಟಮೊಲೆಯಿಟ್ಟೆಡೆಯೊತ್ತನೆ ಪತ್ತೆಸಾರ್ದು ಬೆಚ್ಚನೆ ಬಿಗಿದಪ್ಪಿಕೊಂಡು (ಜಾರತ್ಪ. ೯-೬೯).

[ಬೆಚ್ಚ$_2$ (< ಬಿಸಿದು) + -ಅನೆ$_1$ ]

**ಬೆಚ್ಚರ$_1$**, ಬೆಚ್ಚಳ, ಬೆಜ್ಜರ (ನಾ). ೧. ಸುತ್ತುವಿಕೆ; ಭ್ರಮಣ : ಬೇಡೊಡೆಯಾ ಬೇಕೆಂಬುವ ತುಂಬಿಯು ಬೆಚ್ಚರಂ, ನೀಡೊಡೆಯಾ ಸಾಕೆಂಬುವ ತಾಪರೆಯೆಚ್ಚರಂ (ಗಿರಿಜಾ. ೯೦-೦೯೦). **ಬೆಚ್ಚಳ** : ೨. ದಿಗ್ಭ್ರಮೆ ; ತಬ್ಬಿಬ್ಬು : ಬಿಚ್ಚಟಿ, ಪುಚ್ಚಟಿ, ಬೆಚ್ಚಳ (ಶಬ್ದಾಸು. ೩೩೯ ಪ್ರಯೋ). ' ಬೆಚ್ಚಳಿಸು ' ಪರಾ. **ಬೆಜ್ಜರ**: ೩. ಹೆದರಿಕೆ ; ಭಯ ; ಅಂಜಿಕೆ : ನರಕದೊಳು ಹುಟ್ಟಿಸಿ ಓರಿದು ನಿರ್ಜಾಡಿಸುವುದು ಕರ್ಮಂ ಭವಭವಕ್ಕೆಂಬ ಬೆಜ್ಜರವುಮಂ ನೋಡದಂತಿರ್ಪುದವಗಂಗಜನ ಗೊಡ್ಡುವೈಸಲ್ಲದೆ (ಸಮ್ಯಕ್ತ್ವ. ೩-೨೩) ; ಪುಸಿ ನುಸುಳು ವೈರಮುಟ್ಟುಳಿ ತೋಹು ಬೆದಱು ಬೆಜ್ಜರ ಕಷ್ಟ ನಿಷ್ಠುರಂ . . . . ಮೊಳೆದೋಱುವು (ತ್ರೈಮಾ. ೨-೩) ; ಬೆಜ್ಜ ಗಜ್ಜುಂಗೆಯ್ವನೀ ನಿನ್ನ ಬೆಜ್ಜರಕೆ (ಶ್ರೀರಾಮಾ. ೯೩೦-೦೬೦).

**ಬೆಚ್ಚರಾಗು** = ಸುತ್ತು ; ತಿರುಗು : ವಾಯುಸದಂತೆ ನೋಡು ಬಕದಂತಿರೆ ಮೆಲ್ಲನೆ ಮೆಟ್ಟು ಕಚ್ಛಪೋಪಾಯದೆಡುಗಿ ನಿಲ್ ಭ್ರಮರಿಯೊಳ್ ಭ್ರಮಿಯಂತಿರೆ ಬೆಚ್ಚರಾಗು (ಕಾವ್ಯಾವ. ೯೦೨). **ಬೆಜ್ಜರಬೀಳು** = ಅಂಜು ; ಹೆದರು : ಆ ಶಬ್ದವನ್ನು ಕೇಳಿದವರೆಲ್ಲರೂ ಬೆಜ್ಜರಬಿದ್ದು ಹೊರಗೆ ಬಂದು ಅಪೂರ್ವವಾದ ಆ ನೋಟವನ್ನು ನೋಡಿ ತಾವೂ ಭ್ರಾಂತಿಗೊಂಡು (ಐತ್ಯಾಪ. I, ೦೬೦).

**ಬೆಚ್ಚರ$_2$** (ನಾ). ೧. ಶೀಘ್ರತೆ ; ತ್ವರಿತತೆ : ' ಬೆಚ್ಚರಿಕೆ ' ಪರಾ. ೨. ಎಚ್ಚರಿಕೆ ; ಜಾಗರೂಕತೆ : ಬೆಚ್ಚರದಿಂ ಘಟನೆಗೆದವೊಲಚ್ಚಿಗೆ ಸೊಬಗಿತ್ತು ದಪುರ್ದ ಕೆಂದೆಸೆಗೊಂಚಲ್ (ಉದ್ಭಟ. ೩-೦೮) ; ನಿದ್ದೆ ಹೋಗದಿರೆಚ್ಚರ ; ಸೂರೆ ಹೋದೀತೆಲ್ಲ ; ನೀನೇ ಸೆರೆಗೆ ಸಿಕ್ಕೀ ಬೆಚ್ಚರ ! (ಮುಳ್ಕಂ. ೬೯ ೯). 'ಬೆಚ್ಚರ' ಪರಾ. [ < ಬೆಚ್ಚರ ]

**ಬೆಚ್ಚರಂ** (ಅ). ಬೇಗನೆ ; ಶೀಘ್ರವಾಗಿ : " ಬೆಚ್ಚರಂ ಗಬಗಬನೆ ಬೆಚ್ಚರಂ . . . ಶೀಘ್ರಾರ್ಥಮಕ್ಕುಂ " (ಕಬ್ಬಿಗ. ೯೯) ; ಆ ಮಹಾದೇವಿಯರುದರದೊಳಂ ಬರ್ಪ ಲೋಕೇಶನಂ ಬೆಚ್ಚರಮಾ ವಿಶ್ವೇಶನಂ ಪೇಟ್ವುದು ಮೊಸೆದಱುದಿಂಗಳ್ವರಂ (ಶಾಂತಿಪು. ೯-೦೬೨) ; ಬೆಚ್ಚರಮುದ್ಭಟನೃಪ ನಾರ್ದೆಚ್ಚಂಬುಗಳ್ . . . ಪರಿದೆಣ್ದೆಸೆಗಂ ಮುಚ್ಚಿ ಮುಸುಂಕಿದುವು (ಉದ್ಭಟ. ೪-೯೦). ' ಬೆಚ್ಚರಂ ' ಪರಾ. [ < ಬೆಚ್ಚರಂ ]

**ಬೆಚ್ಚರಿಕೆ** (ನಾ). ೧. ಶೀಘ್ರತೆ ; ತ್ವರಿತತೆ : ಜಾಳಾಂಧ್ರಗೈದಾಗ ಖತಿಮಸಗಿ ಕೈಗೈದಪೆವು ಜಯಸಿರಿಯನೆನುತೊರ್ವರೊರ್ವರೆಚ್ಚರೇ ಬೆಚ್ಚರಿಕೆಯಿಂದ (ಪಂಪಭಾ. ೬-೯೪-೨೦). ೨. ಚಪ್ಪರಿಸುವುದು ; ತಟ್ಟುವುದು : ಅದೂ ಸ್ವಾಭಾವಿಕವಾಗಿ ತೇಜಾದ ಕುದುರೆಯೋ. ಸ್ವಲ್ಪ ಬೆಚ್ಚರಿಕೆ ಮಾತ್ರ ಆಗಾಗ್ಗೆ ಬೇಕಾಗಿತ್ತು (ಸಂಗಾಳ್ಯ. ೩೬). [ ಬೆಚ್ಚರ$_2$ + - ಇಕೆ ]

**ಬೆಚ್ಚರು** (ಕ್ರಿ). ಬೆಚ್ಚು ; ಬೆದರು ; ಹೆದರು : ಅಪಚರಿಸಿದೆನೋ ಅತಿಥಿದೇವನಂ ಎಂದು ಬೆಚ್ಚರುತ ನಾನೊಳಪೋಗಿ ನೋಡುವೊಡೆಲ್ಲವು ಸಜ್ಜಿತವಾಗಿ ಹಬ್ಬದೂಟಿರೆ (ಗಹೇಶ. ೦೨-೩೦೩).

**ಬೆಚ್ಚಲ್** (ನಾ). ಬೆದರುಗೊಂಬೆ ; ಬೆಚ್ಚು : ರಕ್ಕಸರ್ ಕಳನ ಕಳಮೆಯ ಪೊಲದ ರಕ್ಷಣೆಗೆ ಮುಂದೊಡ್ಡಿಕೊಂಡು ನುಗ್ಗುತ್ತಿರ್ಪ ಈ ತೃಣದ ಬೆಚ್ಚಲ್ಗಳಿಕಿ ಪಲಾಯನಪಟುಗಳಾಗುವಿರ ಮೂಢಮೃಗಪಕ್ಷಿಗಳವೋಲ್! (ಶ್ರೀರಾಮಾ. ೬೮೪-೦೬೮). [ಬೆಚ್ಚು$_1$ (< ಬೆರ್ಚು$_1$) + -ಅಲ್$_2$]

**ಬೆಚ್ಚಳ** 'ಬೆಚ್ಚರ$_1$' ನೋ.

**ಬೆಚ್ಚಳಿಸು**, ಬೆಜ್ಜರಿಸು (ಕ್ರಿ). ೧. ದಿಕ್ಕು ತೋರದಂತಾಗು ; ದಿಗ್ಭ್ರಮೆಗೊಳ್ಳು : "ಬೆಚ್ಚಳಿಸು—ವಿಮೋಹೇ (ದಿಕ್ಕುತೋರದಂತಾಗು)"(ಶಮದಾ); ದಿಕ್ಪಾಳಕಂ ಬೆಚ್ಚಳಿಸೆ ಕುಣಿದನಾನಂದದಿಂ ದೇವರಾಜು (ಶರಭಮಾ. ೦೨-೩೩); ಕಳ್ಳನಿವಂ ಕಡುಧೂರ್ತನೆಂದು ಶಂಕಿಸಿ ಭಯದಿಂದೆ ಬೆಚ್ಚಳಿಸಿ ಮಾನಿಸರಂ ಮೊದಲಾಗೆ ಪೊರ್ದಿ (ರಮಣೀಯ. ೬-೯೦). **ಬೆಜ್ಜರಿಸು** : ೨. ಅಂಜಿಸು ; ಹೆದರಿಸು ; ಭಯಪಡಿಸು : ರಂಭಾದಿ ಪಣ್ಯಾಂಗನಾವರವಾಟಿಯಂ ಪೊಕ್ಕು ಸತಿಯರಂ ಬೆಜ್ಜರಿಸಿ ನೆಱೆ ನಗಿಪುವಾ ಗೋತ್ರದಾನೆಗಳ್ (ಸಂದಿಮಾ. ೦೦-೦೩) ; ನಿರ್ಜರರ ಸುದತಿಯರ ಗರ್ಜಿಸುತೆ ಘನರವದಿ ಬೆಜ್ಜರಿಸಿ ಮತ್ತೆಯರನುಳಿದು ತೆರಳು (ಕವೀಶ. ೨೩-೮೨).

[ಬೆಚ್ಚಳ (< ಬೆಚ್ಚರ$_1$) + -ಇಸು$_3$]

**ಬೆಚ್ಚಿಡು** (ಕ್ರಿ). ಬೆದರುಬೊಂಬೆಯನ್ನು ನಿಲ್ಲಿಸು ; ಬೆಚ್ಚು ನಿಲ್ಲಿಸು : ದಂಡೀಯ ಮುಂಡಾಸ ಚೆಂಡೂವಿನ ತುರಾಯಿ ದುಂದೀನ ದೊರೆ ಮಲಸಜ್ಜ ಬರುವಾಗ ಬೆಚ್ಚಿಟ್ಟಾರ ಬಾಳಿಬನದಾಗ (ಜೋಳಗಿ. ೨೦೮).

[ಬೆಚ್ಚು$_2$ (< ಬೆರ್ಚು$_2$) + ಇಡು$_1$]

**ಬೆಚ್ಚಿಸು** 'ಬೆರ್ಚಿಸು' ನೋ.

**ಬೆಚ್ಚು$_1$** 'ಬೆರ್ಚು$_1$' ನೋ.

**ಬೆಚ್ಚು$_2$** 'ಬೆರ್ಚು$_2$' ನೋ.

**ಬೆಚ್ಚು$_3$** 'ಬಿಸು$_2$' ನೋ.

**ಬೆಚ್ಚುಗೊರಳು** (ನಾ). (?): ಸಣ್ಣಗಳ ನುಣ್ಗೊರಳು ಸವಿಗಳ ಬಣ್ಣಗಳವೋ ಕಂಬುಕಂಠವೋ ಬೆಣ್ಣೆಗಳವೊ ಬೆಚ್ಚುಗೊರಳಿನ ಚೆಲುವೊ ಸವಿಗಳವೊ (ಜರಾಮಾ. ೦೬-೩೦). [? + ಕೊರಳು (< ಕೊರಲ್)]

**ಬೆಚ್ಚುನೀರ್**, ಬೆಚ್ಚುನೀರು (ನಾ). ಮಗುವು ಹುಟ್ಟಿದಾಗ ಅಥವಾ ಹೆದರಿಕೊಂಡಾಗ ಹೆದರಿಕೆಯನ್ನು ಹೋಗಿಸಲು ಮುಖದ ಮೇಲೆ ಎರಚುವ (ಮಂತ್ರದ) ನೀರು : ಮದದ ನೀರೊಳೆ ಲೋಕವಾರ್ತೆಗೆ ಬೆಚ್ಚುನೀರ್ದಳಿವು . . . ಮದದಂತಿದಾತದೊಳೆ ಕಟ್ಟಿದ ತೊಟ್ಟಿಲಿಂ ನಯದಿಂದಮೋಱಿಸೆ ಬಾಳಕಾಲದೊಳೆ ತೊಟ್ಟಿಲಿಗಂ ಗಜಪ್ರಿಯನಪ್ಪುದು ಸಲೆ ತೋಱಿದಂ (ಸುಕುಮಾ. ೦-೯೩) ; ಮಱೆಯದೆ ಬೆಚ್ಚುನೀರೆಱೆದು ತೊಟ್ಟಿಲೊಳಿಟ್ಟು . . . ತನಿವೆರ್ಚುವ ಸೈಪೆನಗೆಂದು ಸಾರ್ಗುಮೋ (ಚಂದ್ರಪ್ರ. ೩-೯೩) ; ತರುಣಿಗೆ ಬೆಚ್ಚುನೀರ್ಗಳೆಱೆದರು ಸರಸಿರುಹಲಲಿತನೇತ್ರೆಯರು

(ಶ್ರೀಚಾಂ. ೨-೭೯). **ಬೆಚ್ಚುನೀರು :** ಮಣಿದಟ್ಟೆಯೊಳು ಮಗುವಿಟ್ಟು ಮಾಕೆ ಸಹಿತಂ ಬೆಚ್ಚುನೀರೆಚಿದೋತು ಲಿಂಗವ ಧರಿಸಿ ಶಿಶುವಿಗೆ (ಜಾವೆಕೆ. ೦೩-೦೬); ಬೆಚ್ಚುನೀರೆಂದರೆ, ಮಕ್ಕಳ ಮೇಲೆ ಪರಿಣಮಿಸಬಹುದಾದ ಲೋಕದ ದೃಷ್ಟಿಬಾಧೆ ಪಿಶಾಚಿಪೀಡೆ ವಚನದೋಷಗಳನ್ನು ಬೆಚ್ಚಿಸಿ ಹೋಗಾಡಿಸಲೆಂದು . . . ಎರಚುವ ಅದೊಂದು ಮಂತ್ರಪೂರಿತವಾದ ಬೇಳಂಬದ ನೀರು(ಹಾಡೋಣ. ೯೭). [ಬೆಚ್ಚು₂ (<ಬೆರ್ಚು₂)+ನೀರ್]

**ಬೆಚ್ಚುನೀರು** 'ಬೆಚ್ಚುನೀರ್' ನೋ.

**ಬೆಚ್ಚುರಿ** 'ಬೆನ್ನುರಿ' ನೋ.

**ಬೆಚ್ಚೋಡು** 'ಬೆನ್ನೋಡು' ನೋ.

**ಬೆಜಯಿತ್ತ** 'ಬಿಜಯಿತ' ನೋ.

**ಬೆಜಲು** 'ಬೆದ್ದಲ್' ನೋ.

**ಬೆಜ್ಜ₁** (ನಾ). ರೋಗದ ಮೂಲವನ್ನು ತಿಳಿದು ಚಿಕಿತ್ಸೆ ಮಾಡುವವನು; ವೈದ್ಯ : "ಬೆಜ್ಜನೆಂದು ವೈದ್ಯಂ" (ಶಶಸಾ. ೬೦-೩೫೦); ತನ್ನಿಚ್ಚೆಯಿಂದೆ ಕಜ್ಜಂಬೇಟ್ಟಂ ಶಜಿಸಲಿಸಲಾಜನಾರ್ತನ ತೆಜನಱಿಯದೆ ಮರ್ದುವೇಟ್ದ ಬೆಜ್ಜನ ತೆಱದಿಂ (ಶವಿಚಾ. ೩-೦೫೨) ; ನೊಂದ ತಮ್ಮಣುಗಾಳ್ಗಳ ಕೊಂಡಾಟ ದಾನೆಗಳ ನಚ್ಚಿನ ಕುದುರೆಗಳ ಪುಣ್ಗಳನುಡಿಯಲುಮೋವಲುಂ ಮರ್ದು ಬೆಜ್ಜರುಮನಟ್ಟುತ್ತುಂ (ಶಂಕಕಾ. ೦೦-೨ ಪ); ಹಿತವಿದಹಿತವೆಂದು ತಿಳಿಯದ ಶಿಶುವ್ಯಾಧಿಗಿತರವ ಮಾಳ್ಪ ಬೆಜ್ಜನೊಲು ಮತಿಹೀನನೆಮಗೆ ಸಂಸಾರ ದಾವಾಯಕೆ ನೀಂ ಹಿತವೈದ್ಯ ವೀರಜಿನೇಂದ್ರ (ವರ್ಧಕ. ೦೨-೦೦೦).

[<ಪ್ರಾ. ವೆಜ್ಜ-/ಸಂ. ವೈದ್ಯ]

**ಬೆಜ್ಜ₂** 'ಬಿಜ್ಜ₂' ನೋ.

**ಬೆಜ್ಜಂಗೆಯ್** (ಕ್ರಿ). ವೈದ್ಯನ ಕೆಲಸವನ್ನು ಮಾಡು ; ಚಿಕಿತ್ಸೆ ಮಾಡು : ಒಡವಿದನಿತು ಧನಮುಮಂ ಕೊಟ್ಟು ಬೆಜ್ಜಂಗೆಯ್ಯುದು (ವೃಕಶಿ. ೦೦-೨೫ ಪ).

[ಬೆಜ್ಜ₁+ಕೆಯ್₁]

**ಬೆಜ್ಜಗಜ್ಜ** (ನಾ). ವೈದ್ಯನ ಕೆಲಸ ; ಚಿಕಿತ್ಸೆ : ಬೆಜ್ಜಗಜ್ಜಂಗೆಯ್ವನೀ ನಿನ್ನ ಬೆಜ್ಜರಿಕೆ (ಶ್ರೀಚಾಪಾ. ೯೫೦-೦೬೦). [ಬೆಜ್ಜ₁+ಕಜ್ಜ₁]

**ಬೆಜ್ಜತನ** (ನಾ). ವೈದ್ಯನ ಕೆಲಸವನ್ನು ಮಾಡುವಿಕೆ; ಚಿಕಿತ್ಸೆ ಮಾಡುವಿಕೆ: ಕೋಶಮುಮಂ ಬೆಜ್ಜತನದೆಡೆಯುಮಂ ಪೆಱತುಜ್ಜುಗಮಂ ಕೂರ್ತು ವಧುಗೆ ಕೊಟ್ಟಂ ಕೆಟ್ಟಂ (ಸೂಕ್ತಿಸು. ೮-೦೦೬; ಜುದಶಿ. ೬-೫೯ ನೋ).

[ಬೆಜ್ಜ₁+_ತನ]

**ಬೆಜ್ಜರ** 'ಬೆಚ್ಚರ₁' ನೋ.

**ಬೆಜ್ಜರವಡು** (ಕ್ರಿ). ಅಂಜು ; ಹೆದರು ; ಭಯಪಡು : ಇಷ್ಟು ಮಾತಿಗೆ ಬೆದರಿ ಬೆಜ್ಜರವಟ್ಟು ಬೇಗದಿ ಬಂದು ಹುತ್ತದ ಹೊಟ್ಟೆಯಲಿ ಹೊಗುತ (ಅಶ್ವಾರಾ. ೦೩-೩೯). [ಬೆಜ್ಜರ (< ಬೆಚ್ಚರ₁) + ಪಡು₁]

**ಬೆಜ್ಜರವಡೆ** (ಕ್ರಿ). ಹೆದರಿಕೆಯನ್ನು ಹೊಂದು ; ಭಯಪಡು : ಬಿದಿರೂ ದ್ದೂರೆ . . . ಇದಿರೊಳ್ಪಿಂತೆಡಬಲದೊಳಮಿದೆ ಚಿಕದೇವೇಂದ್ರನೆಂದು ಬೆಜ್ಜರವಡೆವಂ (ಅಶ್ವಶ್ರೀ. ೯೩-೯); ಗರ್ಜನೆಯಾಕಾಶವಮಂಡಲ ತುಂಬಿತು ದಿಗ್ಪಾಲವೆಲ್ಲವ ವ್ಯಾಪಿಸಿತು ಬೆಜ್ಜರವಡೆದನು ಕಂಸನು (ಕೃಸಶಾ. ೬೦-೫).

[ಬೆಜ್ಜರ (< ಬೆಚ್ಚರ₁) + ಪಡೆ₁]

**ಬೆಜ್ಜರಿಕೆ** (ನಾ). ಹೆದರಿಕೆ ; ಭಯ ; ಅಂಜಿಕೆ : ಹೆಜ್ಜೆ ಹೆಜ್ಜೆಗೆ ಶತಾಸಂತ ತಪ್ಪುಗಳನ್ನು ಬೆಜ್ಜರಿಕೆಯಿಲ್ಲದಲೆ ಆರ್ಜಿಸಿದೆನೊ (ಕೋಕ್ಷದೀ. ೦೫-೦).

[ಬೆಜ್ಜರ (< ಬೆಚ್ಚರ₁) + _ಇಕೆ]

**ಬೆಜ್ಜರಿಸು** 'ಬೆಚ್ಚರಿಸು' ನೋ.

**ಬೆಜ್ಜಲು₁, ಬೆಜ್ಜಿಲು** (ನಾ). ಒಂದು ಬಗೆಯ ಮರ : "ಪಾಂಡುರಃ – ಲೊಕ್ಕಿ, ಕೊಡಸಿಗೆ, ಅತ್ತಿ, ಬೆಜ್ಜಲು" (೬ಕಧಿ. ೯೧) ; ತುಪ್ಪವ ತೊಡದು ಕರಿಯೊಳಗಪ್ಪುದ ಬಿಡು ಚಿನಧಾರೆ ಬೆಜ್ಜಲು ಆಡಿನವೊಪ್ಪುತ ಹಿಕ್ಕೆಯು ಕರಿಯಂ ತಪ್ಪದೆ ಬಿಡು ಬೆನ್ನು ಪುಣ್ಣು ಬೇಗಂ ತೀರ್ಗು (ಅಶ್ವವೈ. ೦೩-೫೩); ಸಂಪಗೆ ಬೆಜ್ಜಲು ಬೆಳವ ಬದಿರ್ವೇವರಿಟಣ . . . ಸಸಿ ನೇಸಲುವೆಳಗಿಗೆ ವೆಜ್ಜ ಗೊಡದೆ ಬೆಳೆದಿರಲು (ಶಬಯಶಾ. ೦೫-೨೪). **ಬೆಜ್ಜಿಲು :** "ಶಕಟಾಕ್ಷಃ— ಬೆಜ್ಜಲು" (೬ಕಧಿ. ೦೬೦) ; ಹಾಲೆ ಹಲಸು ಅತ್ತಿ ಬೇಲ ಬೆಜ್ಜಿಲು . . . ಆಲದ ಮರಗಳ ಸಾಲೆಸೆದಿಹವು ಅಲ್ಲಲ್ಲಿ (ಶಶದೇಶಾಂ. ೦-೫೦).

**ಬೆಜ್ಜಲು₂** 'ಬೆದ್ದಲ್' ನೋ.

**ಬೆಜ್ಜಿಲು** 'ಬೆಜ್ಜಲು₁' ನೋ.

**ಬೆಜ್ಜು** (ನಾ). ಚಿಕಿತ್ಸೆ ಮಾಡುವಿಕೆ ; ವೈದ್ಯ : "ಬೆಜ್ಜೆಂದು ವೈದ್ಯಂ" (ಕಬ್ಬಿಗೈ. ೬೫) ; ದುರ್ಬಲಂಗಂ ಅಸಹಾಯಂಗಂ ಪ್ರತಿಕೂಲಂ ಗೆಯ್ದನಪ್ಪವಂಗವಮಾವ ಕಜ್ಜಮುಂ ಬೆಜ್ಜಿಯಿಲ್ಲದ[ ಬೆಜ್ಜಿಲ್ಲದ] [ಶಾಶಾಂ. ಬಿಜ್ಜಲ್ಲದ] ಬೇನೆಯಂತೆ ತೀರಲರಿಯದು (ಶಂತಕಂ. ೦೭-೦) ; ಬೆಜ್ಜುಂ ಕಜ್ಜಮುಮಾಯುಗೆ ನೆರಮಲ್ಲದೆ ಸಾವು ಬಾರಿಸಲ್ ನೆಱೆಗುಮೆ (ಶೀವಶಂ. ೩೬-೦೯) ; ಬೇನೆಯು ಬೆಜ್ಜಿಲ್ಲದುಬ್ಬವಡೊಲ್ಲದರೊಳರೇ (ಉಪಾರ. ೯೩-೨೫೭).

[ಬೆಜ್ಜ₁+ —ಉ₄]

**ಬೆಜ್ಜುಗೆಯ್** (ಕ್ರಿ). ಚಿಕಿತ್ಸೆಮಾಡು ; ವೈದ್ಯಮಾಡು : ಸಾಧ್ಯಮಸಾಧ್ಯ ಮೆಂಬೆರಡಱೊಳಂ ಅಸಾಧ್ಯಮಂ ಬಿಸುಟ್ಟು ಸಾಧ್ಯಮಂ ಕೆಯ್ಕೊಂಡು ಬೆಜ್ಜುಗೆಯ್ಕೆ ಕುತ್ತಂ ಪೋಕುಂ (ಶೀವಶಂ. ೦೬೦-೬). [ಬೆಜ್ಜು + ಕೆಯ್₁]

**ಬೆಜ್ಜುವಡೆ** (ಕ್ರಿ). ಚಿಕಿತ್ಸೆಯನ್ನು ಪಡೆ ; ವೈದ್ಯವನ್ನು ಹೊಂದು : ಕುತ್ತವಡೆದಂ ಬೆಜ್ಜುವಡೆದು ಕೈಪೆಗಂಜಿ ಮರ್ದಂ ಕುಡಿಯದೊಡಂ . . . ಆತನ ಕುತ್ತಮುಮಿವಾತನ ಕರ್ಮಮುಂ ಪತ್ತುವಿಡದು (ಶೀವಶಂ. ೫೦-೦೦).

[ಬೆಜ್ಜು + ಪಡೆ₁]

**ಬೆಜ್ಜುವೇಟ್** (ಕ್ರಿ). ಚಿಕಿತ್ಸೆಯನ್ನು ಹೇಳು ; ವೈದ್ಯ ಮಾಡು : ಕುತ್ತ ಮುಳ್ಳವಂ ಮರ್ದುವಡೆದವಕ್ರಿಯೆಯೊಳ್ ನೆಗಟ್ಗೊಡಂ ಕರ್ಮಮುಳ್ಳಂ ಮನುಷ್ಯಭವಂಬಡೆದು ಧರ್ಮಮಂ ಮಱೆದು ನೆಗಟ್ಗೊಡಂ ಬೆಜ್ಜು ವೇಟಲ್ ಬಲ್ಲವರುಂ ಧರ್ಮಂಬೇಟಲ್ ಬಲ್ಲವರುಮಂಗೆಯ್ವರ್ (ಶೀವಶಂ. ೬೨-೦೯). [ಬೆಜ್ಜು + ಪೇಟ್]

**ಬೆಜ್ಜೆಗೆಯ್** (ಕ್ರಿ). (?) : ಚಂಡಭುಜಗರ್ವದಿಂದಂ ಗಂಡಂ ಮುಂದಿಟ್ಟು ಬೆಜ್ಜೆಗೆಯ್ದೆನ್ನರುಮಂ ಪೆಂಡಿರನೀಗೆಂದಟ್ಟಿದ ತೊಂಡಂ ಮಗ್ನಾವ ಕಥೆಯೊಳಂ ಕೇಳ್ದಱಿಯೆಂ (ವರ್ಧಮಾ. ೯-೦೯). [? + ಕೆಯ್₁]

**ಬೆಟ್** (ನಾ). ಒಂದು ಅನುಕರಣ ಶಬ್ದ : ಉಪನ್ಯಾಸದ ವಿನ್ಯಾಸಂ ಬಲಂ ಬೆತ್ತೆಸೆಯೆ ನೃಪಸಭಾಮಧ್ಯದೊಳ್ ಪೆರ್ಚಿ ವಾಗ್ಗುಂಫದೊಳಾಗಳ್ ಬೆಟ್ಟನಲ್ಪಿಟ್ಟನಲೆಡೆಗುಡದಾಶ್ಚರ್ಯಮುಂ ತಾಳ್ದಿ ನಿಂದಂ(ಸುಕುಸೂ. ೨-೦೫).

**ಬೆಟ್ಟ, ಬೆಟ್ಟು₂, ವೆಟ್ಟ** (ನಾ). ೧. ಸುತ್ತುಮುತ್ತಿನ ಭೂಮಿಯ ಮೇಲೆ ಎತ್ತರವಾಗಿರುವ ಪ್ರದೇಶ ; ಗಿರಿ ; ಮಲೆ : "ಧರ ಮದ್ರಿಃಕುಧರಮದಹಾರ್ಯಂ ನಗಂ . . . ಗೋತ್ರಮೆನಲು ಬೆಟ್ಟಕ್ಕೆ ನಾಮಂ" (ಮಂಗರಾ. ೨೯-೦) ; ಅನ್ನೆ ಬನ್ದು ಬೆಟ್ಟದಾ ಮೂಡಾಯಲ್ (ಮೈಶಿಂ. ೦೯೩೬. ೬೩-೨೯ ; 550); ಬೆಟ್ಟದ ಮೇಗಣಿಂ ಪಾಯ್ವುರ್ವ ನಿರ್ಝರ ಶೀಕರಂಗಳಿಂ ಮೆಯ್ಗಾಪ್ಯಾಯನಮಾಗಿ (ಪಶ್ಚಾರಾ. ೦೦೮-೫) ; ಬಿಡವಟ್ಟು ಬೆಟ್ಟದೊಳ್ ಪೋಗಿ ತೊಬಿಲ್ದು . . . ಮಾದಲಾರ್ತನಿಲ್ಲಾಗಳೆ ಕೋಪಮಂ ನಿನಗೆ ಸಂಚಿತಶೌರ್ಯಧನಂ ಧನಂಜಯಂ (ಶಂಕಶಾ. ೬-೯೭) ; ಬೆಟ್ಟದ ಮೇಲೊಂದು ಮನೆಯ ಮಾಡಿ ಮೃಗಂಗಳಿಗಂಜಿದೊಡೆಂತಯ್ಯ (ಮಹಾದೇ. ಬಿ. ೪೫-೦೦೬) ; ಬೆಟ್ಟಕ್ಕೆ ಕಲ್ಲು ಹೊತ್ತ ಹಾಗೆ (ಗಾದೆ). ೨. (ಅಲಂ) ಕಷ್ಟಸಾಧ್ಯವಾದುದು ; ದುಸ್ತರವಾದುದು : ಮಡೆಯಂಗುತ್ತಮವಿದ್ಧೆ ಬೆಟ್ಟ ಕುರುಡಂಗಂ ಮಾರ್ಗವೇ ಬೆಟ್ಟ ಕೇಳ್ ಬಡವಂ ಗೆಲ್ಲರ ವೈರ ಬೆಟ್ಟ (ಸೋಮೇಶ. ೬೫). **ಬೆಟ್ಟು₂:** ೧. "ಅಚಳಃ... ಅದ್ರಿಃ, ಕುಧ್ರಃ— ಈ ೧೧ ಬೆಟ್ಟು" (ಶಬ್ದಮ. ೨೭-೦೦) ; ಕರವುಚ್ಚಮುಪ್ಪ

ಬೆಟ್ಟುಗಳ ತಟಂಗಳಿಂ ಸುರಿವ ನಿರ್ಝರವುಂ (ಶಂಖ. ೦-೦೨೪) ; ಬೆಟ್ಟು ಗಳ್ಮಾರ್ದನಿಗುಡೆ (ಕಾದಂಪೂ. ೦೬೦). ವೆಟ್ಟ : ೧. ಶ್ರೀಮೂಸೇನರ್ಪರವು ಪ್ರಭಾವ ರಿಷಿಯರ್ಕಟ್ಟವಿಟ್ಟನಾ ಪೆಟ್ಟದುಳ್ ಶ್ರೀಸಜ್ಜಣಿಗಳ್ ವೇಟ್ಟಿ ಸಿದ್ಧಸವಾಯನ್ನಪ್ಪಾದೆ ನೋನ್ತು (ಎಕ. II, ೨೬-೦ ; ಸು. 700).

**ಬೆಟ್ಟತಟ್ಟೆಯ**=ಬಿರುಸಾದ ತಡೆ ; ಕಠಿಣವಾದ ಅಡ್ಡಿ (?) : ಅಶುಭಸ್ಯ ಕಾಲಹರಣ ಎಂದು ದಿನವುಂ ನೂಂಕುವಂದವೈಸೆ ನಿನ್ನದೊಂದು ಪುಯಿಂಬವನ ಬೆಟ್ಟತಟ್ಟೆಯ[ಪಾಠಾಂ. ಬೆಟ್ಟತಟ್ಟೆಯು] ಮಾತಿಗೆಂದನೆಲೆ ನೃಪತಿ ನಾನಾವ ತೆಱದಿಂ ವಿಚಾರಿಸಲವರ್ಸಿಕ್ಕಿತಿಲ್ಲಾ ಎನೆ (ಸಪ್ತಕಾ. ೨-೪೦).

**ಬೆಟ್ಟದ ನೆಲ್ಲಿಕಾಯ್, ಬೆಟ್ಟದ ನೆಲ್ಲಿಕಾಯಿ** = ಬೆಟ್ಟದಲ್ಲಿ ಬಿಡುವ ನೆಲ್ಲಿ ಕಾಯಿ ; ಒಂದು ಬಗೆಯ ಆಮಲಕ : ಗಟ್ಟದುಪ್ಪು ಬೆಟ್ಟದ ನೆಲ್ಲಿ ಕಾಯ್ಗೆ ಸುಪ್ರಯೋಗಿಸಿದಂತೆ ಸುಗುಣಾನಿರುದ್ಧಗೆ ಕಪ್ಪುರಗಂಧಿ ಸೇರಿದಳು (ಮೋಹತ. ೪೦-೪೫) ; ಬೆಟ್ಟದ ನೆಲ್ಲಿಕಾಯಿ ಸಮುದ್ರದ ಉಪ್ಪು ಎತ್ತಣಂದೆತ್ತ ಸಂಬಂಧವಯ್ಯ (ಅಪಶಂ. ೦೫-೫೯) ; ಘಟ್ಟದ ಉಪ್ಪು, ಬೆಟ್ಟದ ನೆಲ್ಲಿಕಾಯಿ (ಗಾದೆ). [ದೇ.೫ ತಮಿ. ಎಟವುನ್, ಪಣ್ಪು ; ಕೊಡ. ಬೆಟ್ಟ ; ಬ್ರಾಹುಈ. ಬಟ್, ಬುಟ್]

**ಬೆಟ್ಟಕುಂಬಳ** (ನಾ). ಒಂದು ಬಗೆಯ ಕುಂಬಳ : "ಕೂಷ್ಮಾಂಡಕಃ . . . . ನೆಲಕುಂಬಳ, ಬೆಟ್ಟಕುಂಬಳ, ಕಿರಿಕುಂಬಳ—೬ ಜಾತಿಗಳಿಗೂ ಹೆಸರು ಗಳು" (ಸಿದ್ಧಾಂತಿ. ೦೪೮). [ಬೆಟ್ಟ+ಕುಂಬಳ]

**ಬೆಟ್ಟಗೆದಲು, ಬೆಟ್ಟಗೆದ್ದಲು** (ನಾ). ಒಂದು ಬಗೆಯ ಪ್ರಾಣಿ : "ಪುಚ್ಛಲೋಮಶಃ—ಬೆಟ್ಟಗೆದಲು" (೬ಕಂ. ೦೬೦). **ಬೆಟ್ಟಗೆದ್ದಲು :** "ಬಿಲೇಶಯಃ—ಎಯ್ಯಮೃಗ, ಬೆಟ್ಟಗೆದ್ದಲು, ಸರ್ಪ"(೬ಕಧಿ. ೦೦೮). [?]

**ಬೆಟ್ಟಗೆದ್ದಲು** 'ಬೆಟ್ಟಗೆದಲು' ನೋ.

**ಬೆಟ್ಟಗೊರಜಲು** (ನಾ). ಒಂದು ಬಗೆಯ ಸಸ್ಯ : ಜಾಜಿಚಕ್ಕೆ, ಬೆಟ್ಟ ಗೊರಜಲು, ಹಿರೇಮದ್ದು . . . ಪ್ರಯೋಗಿಸಲು ಶ್ವಾಸಕಾಸಗಳು, ಉದರ ರೋಗಗಳು . . . ಗುಣ ಹೊಂದುವುವು (ಸಕವೈ. ಕಂ. ೪೩೮).

[ಬೆಟ್ಟ + ಗೊರಜಲು ₁]

**ಬೆಟ್ಟಗೋಂಟೆ** (ನಾ). ದುರ್ಗತ್ರಯಗಳಲ್ಲಿ ಒಂದು ; ಬೆಟ್ಟದ ಮೇಲಿರುವ ಕೋಟೆ ; ಗಿರಿದುರ್ಗ : ಈ 'ದುರ್ಗತ್ರಯ'ವನ್ನು 'ಬೆಟ್ಟಗೋಂಟೆ', 'ಕಡಲ್‌ಗೋಂಟೆ', 'ಪೆಳುಗೋಂಟೆ' ಅಥವಾ 'ನೆಲಕೋಟೆ' ಎಂದು ಹೇಳು ವರು (ಶಬ್ದಾರ್ಥ. ೪). [ಬೆಟ್ಟ + ಕೋಂಟೆ]

**ಬೆಟ್ಟಜೆ** (ನಾ). ಪರ್ವತರಾಜನ ಮಗಳು ; ಪಾರ್ವತಿ ; ಗಿರಿಜೆ : 'ಬೆಟ್ಟಜೆಪತಿ' ಪರಾ. [ಬೆಟ್ಟ+—ಜೆ₀. / P ಇಲ್ಲಿ 'ಗಿರಿಜಾ' ಎಂಬ ಶಬ್ದದಂತೆ ಸಂಸ್ಕೃತದ 'ಜಾ' ಪ್ರತ್ಯಯ ಸೇರಿದೆ]

**ಬೆಟ್ಟಜೆಪತಿ** (ನಾ). ಪಾರ್ವತಿಯ ಗಂಡ ; ಈಶ್ವರ ; ಗಿರಿಜಾಪತಿ : ಎಲೆ ಮಱಿಯ ನೀರ ಸುಟ್ಟ ಬೂದಿಯಿಂದಂ ಪೂಜಿಸಿ ಸಿದ್ಧಿಗಳ ಗುದ್ದಾಟ ಕ್ಕೊಳಗಾದವರ ಕಡೆಮೆಟ್ಟಿ ಬಿಟ್ಟಿಪ್ಪನೆ ಬೆಟ್ಟಜೆಪತಿ (ಸಿದ್ಧಪ. ೪೦-೫೪೦).

[ಬೆಟ್ಟಜೆ + ಪತಿ₂]

**ಬೆಟ್ಟಣುಗಿ** (ನಾ).=ಬೆಟ್ಟಜೆ : ಬೆಟ್ಟಣುಗಿಯುಗ್ಗಳದ ಪೂಜೆ . . . ತಾರಕ ನಲಿವ ಮೊಱೆ ಕೂಡಿ ಮುಪ್ಪುರಿಯೊಳ್‌ಶನಂ ನೋಂಕೆ (೬೬ಕೃಷ್ಣ. ೨-೪-೨೮); ಬೆಟ್ಟಣುಗಿಯಂಘ್ರಿಯುಗಳಾ ಬಿಸರುಹಂಗಳಿಗೆ ನೊಸಲ್ ಸಾರ್ಚಿ ವಂದಿಸಲು (ಪಪಹೋ. ೨೯-೪೪). [ಬೆಟ್ಟ + ಅಣುಗಿ (<ಅಣುಂಗಿ)]

**ಬೆಟ್ಟಣುಗಿಯೆಱೆಯ** (ನಾ).=ಬೆಟ್ಟಜೆಪತಿ : ತುಂಬಿದೆಳಜವ್ವನದ ಬೆಟ್ಟಣು ಗಿಯೆಱೆಯ ಪೊರೆ ನಂಬಿದೆಂ ಭೋಗವುಲ್ಲ (ತೀರಮ. ೮-೬೧).

[ಬೆಟ್ಟಣುಗಿ + ಎಱೆಯ]

**ಬೆಟ್ಟದಾವರೆ** (ನಾ). ಒಂದು ಬಗೆಯ ಹೂವು ; ಕೊಸಗು : "ಕೊಸ ಗೆಂದುಂ ಬೆಟ್ಟದಾವರೆಯೆಂದುಂ ಕರ್ಣಿಕಾರಂ" (ಶಬ್ದಮ. ೫೦-೬೦) ; ಬೆಟ್ಟ ದಾವ[ಪಾಠಾಂ. ಮ]ರೆಯ ಹೂವಂ ತಂದು ನೆಳಲೊಳೊಣಗಿಟ್ಟು ಚೂರ್ಣಂ ಮಾಡಿಕೊಂಡು (ಸೂಶಶಾ. ೨-೨೦) ; ಬಟ್ಟಜವ್ವನೆಯೊರ್ವಳಡಿಯಿಟ್ಟು ಕಾಣ್ಕೆಗೆ ಬೆಟ್ಟದಾವರೆಯ ತಂದಿತ್ತು (ಭರತ. ೫-೩೫).

[ಬೆಟ್ಟ + ತಾವರೆ (<ತಾಮರೆ)]

**ಬೆಟ್ಟದುದಿ** (ನಾ). ಗಿರಿಯ ಶಿಖರ : ಬೆಟ್ಟದುದಿಗಳನಡರಿ ಕಂಡರು . . . ನಡೆದು ಬಹ ಪಾರ್ಥನ ಪತಾಕಿನಿಯನು (ಜೈಮಿಭಾ. ೦೬-೩೨). [ಬೆಟ್ಟ+ತುದಿ]

**ಬೆಟ್ಟನೆ** (ಅ). ೧. ಬಿರುಸಾಗಿ ; ಒರಟಾಗಿ : ಅಱಿದಂ ನೆಟ್ಟನೆ ಬೆಟ್ಟ ನಿಂತು ನುಡಿವೈ ನೀಂ ಕಂದ ಪೋಗೆಂದೆ ಕೆಟ್ಟಱಿದತ್ತಾಗದೆ ಸೋಮವಂಶಂ (ಕಂಶಭಾ. ೪-೮೬) ; ಎನ್ನ ಮಗಳ್ಗಾದ ಸುತರ್ ನಿನಗೆ ಕಿಂಕರರಕ್ಕುಮೆಂದು ಬೆಟ್ಟನೆ ನುಡಿಯೆ (ನೇಮಿಪು. ೩-೨೬ ವ). ೨. ರಭಸವಾಗಿ ; ವೇಗವಾಗಿ : 'ಬೆಟ್ಟನೆಪೋಗು' ಪರಾ.

**ಬೆಟ್ಟವೆಟ್ಟನೆ** (ದ್ವಿರುಕ್ತಿ) : ಪಲವಂ ಪ್ರಲಾಪಿಸುತ್ತುಂ . . . ಅಡಿ ಗಡಿಗೆ ಕಾಲ ಮೇಲೆ ಬೀೞ್ವುದುಮುವಂ ಬೆಟ್ಟವೆಟ್ಟನಿಂತೆಂದಂ (ಕಾದಂಪೂ.೬೪೩); ದಲಕಂಠನುದಂಚಿತಕಂಠನಾಗಿ ಬಿಟ್ಟಟ್ಟದೆ ಬೆಟ್ಟವೆಟ್ಟನುಸಿರ್ದಟ್ಟಿದೊಡಿರ್ದ ಪುದಲ್ತೆ ಕಾಳೆಗಂ (ಕಂಠಾಪೂ. ೦೦-೨೩).

[ಬೆಟ್ಟು₄ (<ಬೆಟ್ಟಿತು) +—ಅನೆ₁]

**ಬೆಟ್ಟನೆಲ್ಲಿ** (ನಾ). ಬೆಟ್ಟದಲ್ಲಿ ಬಿಡುವ ನೆಲ್ಲಿಕಾಯಿ ; ಒಂದು ಬಗೆಯ ಆಮಲಕ : ಬಾಳೆಹೂವು . . . ಪುಳ್ಳಂಪುರಚಿಯ ಸೊಪ್ಪು, ಬೆಟ್ಟನೆಲ್ಲೀ ಸೊಪ್ಪು, ಈ ಸೊಪ್ಪುಗಳನ್ನು ಒಂದು ಮಡಕೆಯಲ್ಲಿ ತುಂಬಿ. . .ಪುಟವಿಕ್ಕಿ ತೆಗೆದು ಆ ಸೊಪ್ಪುಗಳ ರಸವ ಹಿಂಡಿಕೊಂಡು ಜೇನುತುಪ್ಪವೆರಸಿ ಕುಡಿಯ ಕೊಡೆ ಶಿಶುಗಳಿಗೆ ಸರ್ವಾತಿಸಾರ ಹರ (ವೈದ್ಯಸಾ. I, ೪೬೯).

[ಬೆಟ್ಟ + ನೆಲ್ಲಿ]

**ಬೆಟ್ಟನೆಪೋಗು** (ಕ್ರಿ). ರಭಸವಾಗಿ ಹೋಗು ; ವೇಗವಾಗಿ ಸಾಗು : ತೊಟ್ಟನೆ ಬೆಳ್ಕುತ್ತ ಬೆಟ್ಟನೆಪೋಗಿ ತನ್ನ ಕೆಯ್ಯಂ ಬೇಗಮುಡುಗಿಕೊಂಡು ಇದು ನಿಮಗೆನಿತು ಪೈತ್ತಿಕಜ್ವರಮಾದೊಡಮಿಂತೆನಲಕ್ಕುಮೆ ಎನೆ (ಜಂಹಂ. ೮-೫೯ ವ). [ಬೆಟ್ಟನೆ+ಪೋಗು₁ (<ಪೋ₁)]

**ಬೆಟ್ಟಬೂರುಗ** (ನಾ). ಬೂರುಗದಲ್ಲಿ ಒಂದು ಬಗೆ : "ರೋಚನಃ, ಕೂಟಶಾಲ್ಮಲೀ–೨ ಕೆಚ್ಚನೆ ಎಲವದ ಪೆಸರು, ಬೆಟ್ಟಬೂರುಗ, ಕೆಂಪು ಬೂರುಗ" (ಸಿದ್ಧಾಂತಿ. ೮೨೩) [ಬೆಟ್ಟ + ಬೂರುಗ₁ (<ಬೂರ)]

**ಬೆಟ್ಟಬೇಸಗೆ** 'ಬೇಸಗೆ' ಪರಾ.

**ಬೆಟ್ಟಮಲ್ಲಿಗೆ** (ನಾ). ಮಲ್ಲಿಗೆಯಲ್ಲಿ ಒಂದು ಬಗೆ; ಗಿರಿಮಲ್ಲಿಗೆ ; ಕೊಡಸಿಗೆ : "ಕುಟಜಃ, ಶಕ್ರಃ, ವತ್ಸಕಃ, ಗಿರಿಮಲ್ಲಿಕಾ—ಕೊಡಸಿನ ಹೆಸರುಗಳು, ಬೆಟ್ಟಮಲ್ಲಿಗೆ ವಿಶೇಷಗಳು" (ಸಿದ್ಧಾಂತಿ. ೦೨೬); ಬೆಟ್ಟಮಲ್ಲಿಗೆಯ ಹೊಚ್ಚಹೂವಿನೊಡ ಕಾಲ ನೀರ ನೀಡಿ (ಮೇಘದೂ. ೨-೪) ; ಬೆಟ್ಟಮಲ್ಲಿಗೆ ಗಿಡ ಹೂವಿನಿಂದ ಮುಚ್ಚಿಹೋಗಿದೆ (ಸಿಬಂಧ. II, ೦೬೪).

[ ಬೆಟ್ಟ + ಮಲ್ಲಿಗೆ ]

**ಬೆಟ್ಟವಕ್ಕಿ** (ನಾ). ಮಲೆಯಲ್ಲಿ ವಾಸಿಸುವ ಹಕ್ಕಿ : ಮುತ್ತು ಪುಟ್ಟುವ ಕಣಿ ಬೆಟ್ಟವಕ್ಕಿಗಳ ಗೂಡೆಳನೇಸಱ ತೊಟ್ಟಿಲ್ . . . ಮಹಾರ್ಣವಂ (ಸೂಕ್ತಿಸು. ೨-೩೮). [ಬೆಟ್ಟ + ಪಕ್ಕಿ]

**ಬೆಟ್ಟವಗೆಯ, ಬೆಟ್ಟುವಗೆಯ** (ನಾ). ಮಲೆಯ ಶತ್ರು ; ಇಂದ್ರ : "ಬೆಟ್ಟವಗೆಯನೆನಲ್ಕೆ . . . ಅಮರೇಂದ್ರನಭಿಧಾನಮಕ್ಕು" (ಶಬ್ದ. ೬೨). **ಬೆಟ್ಟುವಗೆಯ :** "ಬರ್ದಿಲುಣ್ಮ . . . ಸಾಸಿರಗಣ್ಣ ಬೆಟ್ಟುವಗೆಯನೆನಲ್ಕೆ ಸುರಪತಿ ನಾಮಮಕ್ಕು" (ಶಬ್ದಮಂ. ೦೦); ಬೆಟ್ಟುವಗೆಯಂ ಪಗೆಯಿನಿಟ್ಟ ಕುಳಿಸದ ಕಡಿಖಂಡದಂತೊಪ್ಪುವಚ್ಚವಳಿಕನ ಗಂಡಶೈಲದಿಂ (ರಾಮಾಶ್ವ. ೬೨-೨೩). 'ಅದ್ರಿಶತ್ರು' ಪರಾ. [ಬೆಟ್ಟ+ಪಗೆಯ]

**ಬೆಟ್ಟವಳಿ** (ನಾ). ಮಲೆಯ ಹತ್ತಿರ, —ಸಮೀಪ : ಕೆಡೆದ ಕರಿಗಳ

ಬೆಟ್ಟವಳಿಯ ಗುಂಡುಗಳೊಳಗೆ ಮಡಿದ ಕುದುರೆಗಳ ಪೊಡೆಗಲ್ಲ ಪೊಳಿಗಳೊಳಗೆ . . . ಬಿಡದೆ ರುಧಿರಪ್ರವಾಹಂ ಪರಿಯೆ (ಕೃಕಾಚ. ೨೨-೨೬).

[ ಬೆಟ್ಟ + ಬಳ್ಳಿ₃ (<ಬಟಿ³₃) ]

**ಬೆಟ್ಟವಾಟಿ³** (ನಾ). ಒಂದು ಬಗೆಯ ಬಾಳೆ: "ಗುರುರಂಭಾ—ಬೆಟ್ಟವಾಟಿ³" (೬ಕಂ. ೯೯). [ಬೆಟ್ಟ + ಬಾಟಿ³]

**ಬೆಟ್ಟವೇಸಗೆ** 'ಬೇಸಗೆ' ಪರಾ.

**ಬೆಟ್ಟಸಱು** (ನಾ). ಪರ್ವತದ ಕಲ್ಲು; ಬಂಡೆ: ಏಕೆ ನಾನ್ ಈಗಳುಂ ನನ್ನನೀ ಬೆಟ್ಟಸಱುಯತ್ತಣಿನ್ ತೂಳ್ದೆಸೆಮಕೊಳಬಾರದಯ್ (ಐತ್ಯಕ್ರ. ೩೯-೬೩೮). [ ಬೆಟ್ಟ + ಸಱು₁ ]

**ಬೆಟ್ಟಸಾಲು** (ನಾ). ಪರ್ವತಗಳ ಪಂಕ್ತಿ; ಪರ್ವತಶ್ರೇಣಿ: ಈ ಬೆಟ್ಟಸಾಲು ಉತ್ತರಕ್ಕೆ ಹಬ್ಬಿ ಭೋಟಾನಾಗಪುರ ಪ್ರಸ್ಥಭೂಮಿಗೆ ಹೋಗುತ್ತವೆ (ಕೂಂಶ. ೩೫೬). [ ಬೆಟ್ಟ + ಸಾಲು₂ ( < ಸಾಲ್₃ ) ]

**ಬೆಟ್ಟಸೀಮೆ** (ನಾ). ಪರ್ವತಪ್ರದೇಶ; ಮಲೆನಾಡು: ಪೂರ್ವಘಟ್ಟಗಳ ಬೆಟ್ಟಸೀಮೆಯ ಕಾಡುಪ್ರದೇಶ (ಕೂಂಶ. ೩೩೮). [ ಬೆಟ್ಟ + ಸೀಮೆ ]

**ಬೆಟ್ಟ₁** 'ಭೇಟಿ' ನೋ.

**ಬೆಟ್ಟ₂** (ನಾ). (?) : ಗಗನವಾರಣಗಳುನ್ಮದದೊಗುವಿಗೆಯೊ . . . ಸೊಗಸಿನಲಿ ಜಾರಾಕದಂಬಕೆ ಜಗದ ಕಂಗಳಿಗಿಟ್ಟ ಬೆಟ್ಟವೊ ಹಗಲು ಘಟ್ಟಿಸಿ ಬಿಟ್ಟ ಮಸಿಯೋ ಎನಿಸಿತಧಿಕತಮ (ತಿಪ್ಪುಕೃ. ೬-೯೬); "ಕಾಡಿಗೆ" (ತಿಪ್ಪುಕೃ. ೬೩೮). [?]

**ಬೆಟ್ಟಿತು, ಬೆಟ್ಟಿತ್ತು** (ನಾ). ೧. ಬಿರುಸಾದುದು; ಗಟ್ಟಿಯಾದುದು: "ಬಿಱುವೆಂದು ಬೆಟ್ಟಿತು" (ಶಶಾ. ೬೮-೩೯೬); ಬೆಟ್ಟಿತಿದು ನಾಡೆಯುಂ ಮಣಿಕುಟ್ಟಿಮತಳಂ (ಕಾದಂಪೂ. ೯೩); ಕಲ್ಲಿನ್ನಲ್ ಮುಳ್ಳಿನ್ನಲ್ ಪಲ್ಲಿತ್ರಿದು ಬೆಟ್ಟಿತೆನ್ನಲ್ (ಗಂಶ. ೩-೦೦೦). ೨. ಕಠಿಣವಾದುದು; ಕಠೋರವಾದುದು: ತನಿನೋಟವಂ ನೋಡಿ ಬೆಟ್ಟಿತೆಂದಂಜುತಂ ನೆನೆದುಂ ಮನಂ ಕಠಿಣಮೆಂದು ಮತ್ತಂಜುತಂ (ರುದ್ರ. ದೇ. ೨೦೯-೦೦); ಮುರಾರಿಯ ಹೃದಯ ಬೆಟ್ಟಿತೆನುತ್ತ ಫಲುಗುಣ ತೂಗಿದನು ಶಿರವ (ಕುಪ್ಯಾಭಾ. ೩-೨೮). ೩. ಗಾತ್ರವಾದುದು; ದಪ್ಪವಾದುದು: ಮಳಲೊಟ್ಟಲಂತೆ ಬೆಟ್ಟಿತಪ್ಪ ಪೊಱವಾಱುಂ (ಅಮ್ಮತ. ೬-೨೨). ೪. ಕರ್ಕಶವಾದುದು: ಸಮಂತು ಡಕಾರಾಶ್ರಿತವಾದ ಜಟಿನಃಮಂಗೀಕೃತ ಪದಲತ್ವಕ್ಕೆ ಬೆಟ್ಟಿತೆನಿಸಿದ ಕುಳನುಂ (ಶಮದ. ೦೮). ೫. ಉಗ್ರವಾದುದು; ಘೋರವಾದುದು: ಸೆಟ್ಟಿ ನೀನೆಮಗೆ ಕೊಟ್ಟ ಮಹಾಪದಕಂ ಕರಂ ಬೆಟ್ಟಿತಪ್ಪ ಘಣೆಯಾದುದು (ಧರ್ಮಶ. ೦೦-೬೮). ೬. ಕಷ್ಟಕರವಾದುದು; ಕ್ಲಿಷ್ಟವಾದುದು: ಕಾಲುಂ ಬಲಿಯುವು ನಡೆಯಲ್ ಬೆಟ್ಟಿತು (ಕಾದಂಪೂ. ೦೯೦); ಅರಸರೋಲಗಂ ಲೇಸು ಕಾಳೆಗಂ ಬೆಟ್ಟಿತೆಂಬಂತೆ (ಧರ್ಮನಾಪ್ಕು. ೯-೨೯); ಇಂದು ನೀನಾ ಪಾಂಡುಪುತ್ರರನಂದಗೆಡಿಸದೆ ಬೆಟ್ಟಿಯಾದೊಡೆ ಮುಂದೆ ಬೆಟ್ಟಿತು ರಾಜಕಾರಿಯವೆಂದನಾ ಶಕುನಿ (ಕುಪ್ಯಾಭಾ. ೬-೨೦). **ಬೆಟ್ಟಿತ್ತು** : ೧. "ಪರುಷಂ, ಅಸ್ನಿಗ್ಧಂ—ಈ ೨ ಬೆಟ್ಟಿತ್ತು" (ಹಲಾಯು. ೦೬೯-೯೮); ಬಿಸಿಮಂ ಬೆಟ್ಟಿತ್ತುಮುಸಿರದೆಂ ಶೀರ್ವಪುದೇ (ಶಂಶಭಾ. ೯-೬೦); ಕಳಾಧರೆ ಮಣಿಮಯಮಪಾದ ಪೀಠಂ ಬೆಟ್ಟಿತ್ತೆಂ ಬಂತಿರಗಲೆ ಸೂಕಿ (ಅರ್ಧನೇ. ೦-೦೦೦ ಪ). 'ಕಡುವೆಟ್ಟಿತ್ತು' ಪರಾ.

**ಬೆಟ್ಟಿತಾಗು, ಬೆಟ್ಟಿತ್ತಾಗು**= ೧. ಬಿರುಸಾಗು; ಕಠಿಣವಾಗು; ಒರಟಾಗು: ಒಳಗಂ ಭೇದಿಸದನ್ನಂ ಚಳಬುದ್ಧಿಗೆ ಪೊಱಗು ಬೆಟ್ಟಿತಾಗಿರ್ಕುಂ . . . ಜಿನವಚನಂ (ಸಮಶ. ೩-೨೬); ಬೆಟ್ಟಿತ್ತಾದ ಪುರುಳಂ ಮೆಲ್ಲುಡಿಯುಂದೊರೆಯೆ ಸೌಕುಮಾರ್ಯಮೆನಿಪುದು (ಅಕ್ಕಶಿ. ೦೬-೬). ೨. ಕರ್ಕಶವಾಗು: ಅವಳ ಬೆಟ್ಟಿತಪ್ಪ ಬಟ್ಟವೊಲೆಯುಟ್ಟಿಡೆಯೊಳ್ ಕೊಟ್ಟನೆ ಸಿಲ್ಕಿದ ಕಣ್ (ಕಲ್ಯಾಕ. ೬೬). ೩. ಬಲವಾಗು; ದೃಢವಾಗು: ಡಕಾರಂ ಪುಟ್ಟುವ ತಾಣಮುಂ ಬೆಟ್ಟಿತ್ತಾಗುಚ್ಚರಿಸೆ ಱಕಂ ಪುಟ್ಟುಗುಂ (ಕಮುದ. ೦೯ ವೃತ್ತಿ). ೪. ತೀಕ್ಷ್ಣವಾಗು; ಉಗ್ರವಾಗು: ಅತಿ ಬೆಟ್ಟಿತ್ತಾದ ಬಾಯ ಕುತ್ತವೆಂದು ಹೊಟ್ಟೆಯಂ ಪೊಸೆದು (ಧರ್ಮಾಪ್ಮ. ೯-೦೬೩). **ಬೆಟ್ಟಿದ**= ಕಠಿಣವಾದ ಮನಸ್ಸುಳ್ಳವನು; ಕ್ರೂರಿ: ಬೆಟ್ಟಿದನಾಗಿ ತಾನೆ ವಿಧಿ ಕೊಂದಪನಾಗಳೆ ಸಾಯದಿರ್ದೊಡಂ (ಕಾದಂಪೂ. ೦೯೬); ದಿಟ್ಟತನದೊಳೆಲ್ಲರ ನಱೆಯಟ್ಟುವ ಬೆಟ್ಟಿದ ಮೋಹಾಸುರನ ಪಟ್ಟಣವೆಲ್ಲವ ಸುಟ್ಟಮರರ ಮೆಟ್ಟಿ ಕಟ್ಟಿಯಾಳದೆ ಮಾಣೆನೆಂದ (ಕ್ರಿಕಶಾಂ. ೯-೦೦೯).

[ದೇ.॥ ತಮಿ. ವೆಟ್ಟಿತು, ವೆಟ್ಟು; ತೆಲು. ಬೆಟ್ಟ, ಬೆಟ್ಟಿದ, ಬೆಟ್ಟು]

**ಬೆಟ್ಟಿತ್ತು** 'ಬೆಟ್ಟಿತು' ನೋ.

**ಬೆಟ್ಟಿಬೆನಕ** (ನಾ). (ಉಕ) (ಮಂಗಾರಿನ ಸಮಯದಲ್ಲಿ ಕಂಡುಬರುವ) ಅನೇಕ ಕಾಲುಗಳುಳ್ಳ, ಮುಟ್ಟಿದರೆ ಮುದುರಿಕೊಳ್ಳುವ, ಒಂದು ಬಗೆಯ ಹುಳು; ಕಪ್ಪರಚಟ್ಟೆ; ಒನಕೆಬಂಡೆಹುಳು: **ಬೆಟ್ಟಿಬೆನಕವು** ಸಮಸ್ಯೆಯಲ್ಲಿ ಸಿಕ್ಕಿಕೊಂಡಿತು (ದೀಕಪ್ಪ. ೬೯). [?]

**ಬೆಟ್ಟಿರ್** (ಕ್ರಿ). ತೀಕ್ಷ್ಣವಾಗಿರು; ಉಗ್ರವಾಗಿರು: ಬೆಟ್ಟಿಹ ಬಿಸಿಲೊಳ್ ಬೆಂಟೆಯ ನಟ್ಟಡವಿಯೊಳಾಡಿ ಬರುತ ಬಳಲಿದ ಬೇಡಂ ತುಟ್ಟಿಸಿ ನೀರಂ ನೆಳಲಂ . . . ನೋಡುತಿರಲ್ (ಪಪ್ಪಶಾ. ೩-೯೮).

[ ಬೆಟ್ಟು₄ (<ಬೆಟ್ಟಿತು) + ಇರ್₁ ]

**ಬೆಟ್ಟಿಸು** (ಕ್ರಿ). ನಾಟಿಸು; ಹೊಡೆಯಿಸು: ಇಱಿಮುಂಜಾದಿಕ್ಕುತ್ತೇ ಕಟ್ಟಿಸೆಯುಂ ಬಱಿಯಿ[ದ್ದೆ]ಸೆಯುಮುಳಿಯೊಳ್ ಬೆಟ್ಟಿಸೆಯುಂ (ಶಂಶಂ. ೦೦-೯ ರಗಳೆ); ಪಿಂತಣ ಮುಂತಣ ಕಾಲ್ಗಳಲ್ಲಿ ಬೆಟ್ಟಿಸಿ ದಸಿಯುಂ (ಹಃಕಾಆತ. ೩-೬೯). [ ಬೆಟ್ಟು₁ + — ಇಸು₃ ]

**ಬೆಟ್ಟು₁** (ಕ್ರಿ). ೧. ಕಡಿ; ಕತ್ತರಿಸು; ಸವರು: 'ಬೆಟ್ಟುಂಗಾಡು', 'ಬೆಟ್ಟುಗತ್ತಿ' ಪರಾ. ೨. (ಕೈ, ದೊಣ್ಣೆ, ಸುತ್ತಿಗೆ ಮುಂತಾದುವುಗಳಿಂದ ಮೊಳೆ, ದಸಿ ಇತ್ಯಾದಿಗಳನ್ನು) ಹೊಡೆ; ಬಡಿ: ವಜ್ರಕೀಟಂಗಳ್ ಕರ್ಣನೆರಡುಂ ತೊಡೆಯುಮನುಳಿಯನೂಱ ಕೊಡಂತಿಯೊಳ್ ಬೆಟ್ಟಿದಂ ತತ್ತಮಿತ್ತಮುಚ್ಚಿ ಪೋಗೆಯುಂ (ಶಂಶಭಾ. ೦-೦೦೯ ಪ); ಧಾತ್ರಂ ಬಲ್ಪಿಂದಳವಡೆ ಬೆಟ್ಟಿದ ಬೆಳ್ಳಿಯ ಮೊಳೆಗಳೆನಲ್ ತೊಳಗಿ ಬೆಳಗಿದುವು ತಾರಗೆಗಳ್ (ಜಗಂ. ೦೬-೯೯); ಒಡೆದ ದೂಹತ್ತಿಗೆಗೆ ಕೀಲ್ಗಳನಡಸಿ ಬೆಟ್ಟಿದ ಗಾಲಿಗಚ್ಚನು ತೊಡಸುತಿರಲು (ಕುಪ್ಯಾಭಾ. ೩-೩೬). ೩. ಇರಿ; ನಾಟುವಂತೆ ಮಾಡು: "ಬೆಟ್ಟು—ಗಾಢಪ್ರವೇಶೇ, ಪರ್ವತೇ ಚ" (ಶಮಂ); ಕಾಯ್ದು ಕಬ್ಬೊಣ್ಣಸೂಜಿಗಳಂ ಬೆರಲ್ಗಳೊಳ್ ಬೆಟ್ಟುವರುಂ (ಅಂಪು. ೩-೯೩ ಪ); ಕೀಲಂ ಬೆಟ್ಟಿರ್ದ ಮರನಂ ಕಂಡು (ಶಂಶಶಂ. ೩೦-೩); ವಂಗಭೂಪನ ಬಾಯೊಳಗೆ ಬೆಟ್ಟಿದನು ಗದೆಯನು (ಕುಪ್ಯಾದ್ರೋ. ೨-೬೨). ೪. ನಾಣ್ಯವನ್ನು ಮುದ್ರಿಸು: ಹೇಮ ರಜತಾದಿ ಕರ್ಷದಿಂ ಬೆಟ್ಟಿದ ನಾಣ್ಯ—ಕಾರ್ಷಾಪಣ, ಕಾರ್ಷಿಕ (ನಾಶಶಾ. ೬). ೫. ತಳ್ಳು; ದಬ್ಬು; ಗರಮಂ ದಾನವರೂಡಿದರ್ ಬಿಗಿದು ಪಾರಾವಾರದೊಳ್ ಬೆಟ್ಟಿದರ್ (ವಿಷ್ಣುಪು. ೦-೩-೨೨೩). 'ಪೆಟ್ಟು₁' ಪರಾ. [ದೇ.॥ ತಮಿ. ಮಲ. ವೆಟ್ಟು; ತುಳು. ಬೆಟ್ಟು; ಕೋತ. ವೆಟ್]

**ಬೆಟ್ಟು₂** 'ಬೆಟ್ಟ' ನೋ.

**ಬೆಟ್ಟು₃** 'ಬೊಟ್ಟು₁' ನೋ.

**ಬೆಟ್ಟು₄** 'ಬಿಱು₂' ನೋ.

**ಬೆಟ್ಟುಂಗಾಡು, ಬೆಟ್ಟುಗಾಡು** (ನಾ). ಕಾಡನ್ನು ಕಡಿದು ಬೇಸಾಯಕ್ಕೆ ಸಿದ್ಧಗೊಳಿಸಿದ ಪ್ರದೇಶ—ಭೂಮಿ: ಬೆಟ್ಟುಂಗಾಡು, ಬೆಟ್ಟುಗಾಡು (ಶಪ್ಯಾಶಂ. ೩೬೯ ಶ್ರಪೋ). **ಬೆಟ್ಟುಗಾಡು** : ಮೇಲಿನ ಪ್ರಯೋಗವನ್ನು ನೋಡಿ. 'ಬೆಟ್ಟುಗದ್ದೆ' ಪರಾ.

[ಬೆಟ್ಟು₁ + ಕಾಡು₁. / ತಮಿ. ವೆಟ್ಟುಕ್ಕಾಟು ]

**ಬೆಟ್ಟುಂಬೊಟಿ³, ಬೆಟ್ಟುವೊಟಿ³** (ನಾ). ಬೆಟ್ಟದ ಮೇಲಿನಿಂದ ಹರಿಯುವ

ಪ್ರವಾಹ,—**ಹೊನಲು** : ಬೆಟ್ಟುಂಬೊಟೆ[3]ಯೆಂಬುದು ಕೃತ್ತಲ್ಲದಲ್ಲಿಯುಂ ಸಂದುದು (ಹುಡ. ಶ. ೦೬೦ ಪ್ರಯೋ). **ಬೆಟ್ಟುವೊಟೆ[3]** : ಬೆಟ್ಟುಂಬೊಟೆ[3], ಬೆಟ್ಟುವೊಟೆ[3] (ಶಾ. ಮು. ೩೭೯ ಪ್ರಯೋ).

[ಬೆಟ್ಟು$_{2}$ (<ಬೆಟ್ಟ) + ಪೊಟೆ[3]]

**ಬೆಟ್ಟುಕಚ್ಚು** 'ಬೊಟ್ಟುಕಚ್ಚು' ನೋ.

**ಬೆಟ್ಟುಗ** (ನಾ). ಒಬ್ಬಾತನ ಹೆಸರು : ಆತನ ತಮ್ಮ ಬೆಟ್ಟುಗ ತುಬು ಗಳೊಳ್ಸತ್ತು (ಎಕ. VII, ಶಿವಮೊ. ೨೨–೫; ೯೬೪). [?]

**ಬೆಟ್ಟುಗತ್ತಿ** (ನಾ). (ಮರ ಮುಂತಾದವನ್ನು) ಕತ್ತರಿಸುವ ಚಾಕು, ಕತ್ತಿ, ಮಚ್ಚು ಮುಂತಾದ ಸಾಧನ,—ಉಪಕರಣ : ಬೆಟ್ಟುಗತ್ತಿಯಿಂದ ಮರದ ಕೊಂಬೆಯನ್ನು ಕಡಿ (ಲೋ).

[ಬೆಟ್ಟು$_{1}$ + ಕತ್ತಿ. / ತಮಿ. ವೆಟ್ಟುಕ್ಕತ್ತಿ]

**ಬೆಟ್ಟುಗದ್ದೆ** (ನಾ). ಮರಗಳನ್ನು ಕಡಿದು ವ್ಯವಸಾಯಕ್ಕೆ ಅಣಿಮಾಡಿದ ಗದ್ದೆ : ಮನೆಗಳ ಸುತ್ತುಮುತ್ತು ಬೆಟ್ಟುಗದ್ದೆಗಳಿರುವುದೂ ಉಂಟು. ಬೆಟ್ಟುಗದ್ದೆಗಳನ್ನು ದಾಟಿದರೆ ಕುರುಚಲುಗಿಡಗಳಿಂದ ತುಂಬಿದ ಗುಡ್ಡಗಳು (ಕಾನೂ. ೪); ಬೈಲುಗದ್ದೆ—ಬೆಟ್ಟುಗದ್ದೆಗಳಿಂದಲೂ ಅಲಂಕೃತವಾಗಿರುವುದು (ಹೊಮಗು. ೩). 'ಬೆಟ್ಟುಂಗಾಡು' ಪರಾ. [ಬೆಟ್ಟು$_{1}$ + ಗದ್ದೆ (<ಗಟ್ಡೆ)]

**ಬೆಟ್ಟುಗಾಡು** 'ಬೆಟ್ಟುಂಗಾಡು' ನೋ.

**ಬೆಟ್ಟುಗೂಂಟ** (ನಾ). ನೆಡುವ ಗೂಟ : ಹೊಸೆಯಿಪ ಬೆತ್ತಗಣ್ಣವಲೆಯುಂ ಸಮಕಟ್ಟುವ ಬೆಟ್ಟುಗೂಂಟವುಂ ಬಸಿವ ಪುಳಿಂದಸಂಕುಳದ ಪೆರ್ಗಣದಿಂದೆಸೆ ದತ್ತು ಪಕ್ಕಣಂ (ಶಂಪ್ರಶ. ೫–೫೪). [ಬೆಟ್ಟು$_{1}$ + ಗೂಂಟ]

**ಬೆಟ್ಟುಬ್ಬಸ** (ನಾ). ತೀವ್ರವಾದ ಸಂಕಟ,—ಸಂತಾಪ : ಬೆಟ್ಟುಬ್ಬಸ ದಿಂದ ಹಾಹಾಕಾರ ಮಾಡುತ್ತ ಸಿಂಹವಿಷ್ಟರದತ್ತಣಿಂ ಧಾವಿಸಿ (ಚಬ್ರಿ. ೦೦೯–೨೯). [ಬೆಟ್ಟು$_{4}$ (<ಬೆಟ್ಟಿತು) + ಉಬ್ಬಸ]

**ಬೆಟ್ಟುಮುರಿ** 'ಬೊಟ್ಟುಮುರಿ' ನೋ.

**ಬೆಟ್ಟುಮೊಲೆ** (ನಾ). ಕರ್ಕಶವಾದ ಮೊಲೆ : ಬಟ್ಟಚಂದಿರಕಾಂತದಾ ಕಾಲಿಟ್ಟು ಮೃಗಮದಕರ್ಪೂರದ ಪುದಿವಿಟ್ಟು ಚಂದನ ತುಂಡುವಿಡಿದರೆವವರ ನಗೆಮೊಗವಾ ನಟ್ಟನಿಂದುವೆಯೆಂದು ಕಲುನೀರಿಟ್ಟು ಬರೆ ಪವಗಾಣ ಗುಡದಿರ ಚಿ[ಬೆ]ಟ್ಟುಮೊಲೆ ಬಳಲುವರನಿಬರ ಪುಟ್ಟವಳ್ತಿಯರು (ಶಾಳ್ಯಶಾ. ೨-೦೩). [ಬೆಟ್ಟು$_{4}$ (<ಬೆಟ್ಟಿತು) + ಮೊಲೆ$_{1}$]

**ಬೆಟ್ಟುಮೊಳೆ** (ನಾ). (ಎರಡು ಹಲಗೆಗಳನ್ನು ಜೋಡಿಸಲು ಉಪ ಯೋಗಿಸುವ) ಬಡಿಯುವ ಆಣಿ : ಬೆಟ್ಟುಮೊಳೆಗಳ ಡಾಣೆಗಳ ಬೆನ್ನಟ್ಟಿ ಮೋದುವ ಮರುಳುತಂಡದ . . . ಬಲು ಬೊಮ್ಮರಕ್ಕಸರಟ್ಟಣೆಯುಲಿವೆ ಸೀವಪೊಲು ಸಂಭ್ರಮಿಸಿತಾ ದುರ್ಗ (ಕೊರಡ. ೬-೭-೦೨).

[ಬೆಟ್ಟು$_{1}$ + ಮೊಳೆ$_{2}$]

**ಬೆಟ್ಟುವಗೆಯ** 'ಬೆಟ್ಟವಗೆಯು' ನೋ.

**ಬೆಟ್ಟುವೊನಲ್** (ನಾ). ಬೆಟ್ಟದ ಮೇಲಿನಿಂದ ಹರಿಯುವ ಪ್ರವಾಹ, —ಹೊನಲು : ಇಳಿತಪ್ಪ ಬೆಟ್ಟುವೊನಲ್ಗಡೆಗೊಗ್ಗಿನಿಂ ಪೋಗಿ ತಿಳಿನೀರ ನೆಂಟಿ (ರೀಶಾ. ೪–೦೬). [ಬೆಟ್ಟು$_{2}$ (<ಬೆಟ್ಟ) + ಪೊನಲ್]

**ಬೆಟ್ಟುವೊಟೆ[3]** 'ಬೆಟ್ಟುಂಬೊಟೆ[3]' ನೋ.

**ಬೆಟ್ಟು**, ಬೆರಟೆ (ನಾ). ೧. ಬಿರುಸಾದುದು ; ಕಠಿಣವಾದುದು : ಬೆಟ್ಟಿಯ ಮಾತ ನುಡಿಯಲು ಭೀಷ್ಮನಿಂತೆಂದನು (ಶೀಬುಸಂ. ೫–೬೩). ೨. ಒರಟುತನ ; ಕಠಿನತೆ ; ಕಾಠಿಣ್ಯ : ಹಿಮವಂತ ತಾನೆಮ್ಮಯ ಬಳಿಗೆ ಸಂತೋಷದಿಂ ಬಂದು ಕಾಣ್ಬನೊ ಬೆಟ್ಟಿಯ ಮುಂತೆ ಕಾಣಿಸಬೇಕೊಯೆಂದ (ಶರಶ. ೩೫–೨೬). 'ಬೆಟ್ಟಿತನ' ಹೋ. ೩. ಕಠಿಣ ವ್ಯಕ್ತಿ : "ಕರ್ಕಶಂ ಕಕ್ಕಡಂ ಕಠಿನಂ ಕಠೋರಂ ಖರಂ ಕರ ಬೆಟ್ಟಿಯುವನಕ್ಕು" (ಮಂಗರಾ. ೬೮–೭); ಲಟ್ಟಿಯರು ಮಿಂಡರ ಬೆಟ್ಟಿಯರು . . . ವಾರಪುರಂಧ್ರಿಯರು (ಐಶಕೃ. ೪೦–೫೬); ಪಂಥದಿಂ ಮಚ್ಚರಿಪ ದಿಟ್ಟಿಯರ್ಬೆ [ಶಾಶಾಂ. ಬೆ]ಟ್ಟಿಯರ್ಗನ್ನೆಯರ್ಬಿನ್ನಣೆಯರು (ಕಶಂ. ೨–೫೮). ೪. ಗಟ್ಟಿಯಾದ, ಹಸನುಗೊಳಿಸದ ಕಡಮೆದರ್ಜೆಯ ಅಡಕೆ; ಕರ್ಚಿಅಡಕೆ : ಶೇಖರಿಸಿದ್ದ ಕದರಡಕೆ ಬರಿಯ ಬೆಟ್ಟಿ, ಗೋಟು ಎಂದು ಕಂಡುಬಂದದ್ದರಿಂದ (ಮರಶು. ೯೩೮); ತೋಟದಲ್ಲಿ ಎಷ್ಟು ಅಡಿಕೆ ಬೆಳೆದಿದೆ, ಬೆಟ್ಟಿಯೆಷ್ಟು—ಹಸ ಎಷ್ಟು (ಹೊಸಕ್ಕಿ. ೨೯೮) : ಬತ್ತ ಮನೆಗೆ ಬಾರದೆ ಹೋದರೂ ಬೆಟ್ಟಿಗೆ ಒಳ್ಳೆಯ ಕ್ರಯ ಇರುವುದರಿಂದ ಬದುಕಿಕೊಂಡಿದ್ದೇವೆ (ಅಳಶ. ೩೭). (ಗು). ೫. ಮಧ್ಯಮದರ್ಜೆಯ; ಕಡಮೆ ದರ್ಜೆಯ : 'ಬೆಟ್ಟಿಚಿನ್ನ' ಪರಾ. **ಬೆರಟೆ** : ೬. ಸಾಧಾರಣ ವಾದುದು ; ಕಡಮೆ ದರ್ಜೆಯದು : ಎಷ್ಟೋ ಕಸ ; ಅದರ ಮರೆಗೆ ಅಲ್ಲಿ ಇಲ್ಲಿ ಇನಿತು ರಸ. ಎಷ್ಟೊ ಒರಟು, ಎಷ್ಟೊ ಬೆರಟೆ ; ನಡುವೆ ಅಲ್ಪ ಸೊಲ್ಪ ಹಸ (ಸುಶೀತ. ೬೦–೩).

**ಬೆಟ್ಟಿ ಮಾಡು**=ಬಲಪ್ರಯೋಗ ಮಾಡು; ಕಠಿಣವಾಗಿ ವರ್ತಿಸು : ನೆಟ್ಟಿಯ ತೆಗೆದೊಮ್ಮೆ ನೋಡಿರ್ಕೆಯೆಂದಾಗ ಜಟ್ಟಿಗಳಿಗೆ ಕೈಯ ನೀಡಿ ಬೆಟ್ಟಿ ಮಾಡದೆ ಕೈಯನವರೊತ್ತಲರಸನ ಬೆಟ್ಟದ್ದುದಿಸು ಸಡಿಲದೆ ನೋವಿ ಗಂಜದರಾಗಮೊತ್ತಿ ತೆಗೆವುದೆಂದು ಭೂವರನುಸುರೆ (ಶರಶ. ೯೯–೦೦೨).

[ದೇ. ॥ ತಮಿ. ವೆಟ್ಟಿ, ವೆಟ್ಟು$_{6}$; ತುಳು. ಬೆಟ್ಟಿ]

**ಬೆಟ್ಟಿಗಾಣಿಸು** (ಕ್ರಿ). ಕಾಠಿಣ್ಯವನ್ನು ತೋರಿಸು : ಬೆಟ್ಟಿಗಾಣಿಸಲೇಕೆ ಹಿಮವಂತದೇವನು ಕಟ್ಟುಗ್ರದವನಲ್ಲ ಸ್ವಾಮಿ (ಶರಶ. ೩೫–೨೭).

[ಬೆಟ್ಟಿ + ಕಾಣಿಸು]

**ಬೆಟ್ಟಿಚಿನ್ನ** (ನಾ). ಕಡಮೆ ದರ್ಜೆಯ ಚಿನ್ನ : ಅಶುದ್ಧವಾದ ಬಂಗಾರ; ಕೀಳುಲೋಹಗಳು ಬೆರೆತ ಚಿನ್ನ : ಬೆಟ್ಟಿಚಿನ್ನವಾದರೆ ಸೆಟ್ಟಿಗೆ ಆಗವೇ ? (ಗಾದೆ). [ಬೆಟ್ಟಿ + ಚಿನ್ನ$_{1}$]

**ಬೆಟ್ಟಿನುಡಿ** (ನಾ). ಕಠಿಣವಾದ ಮಾತು ; ಕಠೋರವಾದ ನುಡಿ : ಅವರಿಗೆ ಕೊಡುವುದಕ್ಕಿಂತ ಮಾತಂಗನೆ ಸವಿನಯದಿಂದೀವೆನೆಂದು ಅವ ರೊಳು ಬೆಟ್ಟಿನುಡಿಯ ನುಡಿದಾ ಭೂಧವನು ಕಳುಹಲವರಯ್ದಿ (ಶೀಬುಸಂ. ೨೦–೨೦). [ಬೆಟ್ಟಿ + ನುಡಿ$_{2}$]

**ಬೆಟ್ಟಿಬಂಗಾರ** (ನಾ). = ಬೆಟ್ಟಿಚಿನ್ನ : ಒರೆ ಹಚ್ಚಿದರೆ ಬರೀ ಬೆಟ್ಟಿ ಬಂಗಾರದ್ಹಾಂಗೆ ಕಾಣ್ತದೆ (ಮರಮು. ೬೬). [ಬೆಟ್ಟಿ + ಬಂಗಾರ]

**ಬೆಟ್ಟೇಱು$_{1}$** (ಕ್ರಿ). ಪರ್ವತವನ್ನು ಹತ್ತು : ತನ್ನೊಲ್ಲದನು ಕರೆದಳ್ ಬೆಟ್ಟೇಱಿ ಮಿಟ್ಟುಗರೆವಂತೀಗಳ್ (ಶಾಂತಿಪು. ೮–೮೨); ಅಸಮುಗ್ರಸರ್ಗಲೆ ಜಾತ್ರೆಯೋಗಿ ಭರದಿಂ ಬೆಟ್ಟೇಱುಯುಂ ಮತ್ತೆ ಪೂಜಿಸುವರ್ (ಸಮುಶ. ೯–೯); ಬೆಟ್ಟೇಱಿ ಮೃತ್ಯುವಂ ಕರೆದುಕೊಂಡಂ ಪಾಪಿ (ಶೀರರ. ೫. ೯೯೫–೨೨). [ಬೆಟ್ಟು$_{2}$ (<ಬೆಟ್ಟ) + ಏಱು$_{1}$ (<ಏಱ್$_{1}$)]

**ಬೆಟ್ಟೇಱು$_{2}$** 'ಬಿಟ್ಟೇಱು' ನೋ.

**ಬೆಡಂಗ**, ಬೆಡಗ$_{1}$ (ನಾ). ೧. ಚೆಲುವ ; ರೂಪವಂತ : ಕನಕಾದಿತ್ಯಂ ಷಡ್ಗುಣಾಳಂಕಾರಂ ×ಟದ ಬೆಡಂಗಂ ನುಡಿದು ತಪ್ಪದಂ (ಶಾಸ. XI–i, ೨೨–೭; 897); ತಳಿರೊಳ್ ನೀನೆ ಬೆಡಂಗನ್ಯೆ ನನೆಗಳೊಳ್ ನೀಂ ನೀಱನ್ಯೆ (ಅದಿಪು. ೦೦–೯೬); ಎನಸುಂ ತಾನೇಂ ಪರಿಚ್ಛೇದಿಯೊ ತವದ ಬೆಡಂಗಂ ಗುಣವ್ರಾತತುಂಗಂ (ಸಮುಶ. ೦–೨೩). **ಬೆಡಗ$_{1}$** : ೨. ಚತುರ ; ನಿಪುಣ : " ಬೆಡಗನೆಂದರೆ ಚದುರಂ " (ಶಾರಶಿ. ೦೦). ೩. ವಿಲಾಸಿ ; ಒನಪು ಗಾರ : (ಕ). [ಬೆಡಂಗು + —ಅ$_{7}$]

**ಬೆಡಂಗಡರ್** (ಕ್ರಿ). ೧. ಚೆಲುವನ್ನು ಹೊಂದು ; ಸುಂದರವಾಗು : ಏಂ ಬೆಡಂಗಡರ್ದರೋ ರುಚಿಮದ್ವಿಚಳಲ್ಲತಾಂಗಿಯರ್ (ಅಪಂಪು. ೬–೨೮). ೨. ಆಶ್ಚರ್ಯಮುಂಟಾಗು ; ಬೆರಗಾಗು : ಹೊಂಗಿ ಶತ್ರುಸಮೇತನಾಗಿ ಬೆಡಂಗಡರಿ ಮಾಹೇಶ್ವರರ ವಸ್ತ್ರಂಗಳು ರಜತಾದ್ರಿಯಂದದಿ ಪೊತ್ತು ನಡೆವುತ್ತ (ಐಶಕೃ. ೨೦–೯). [ಬೆಡಂಗು + ಅಡರ್]

**ಬೆಡಂಗಿ**, ಬೆಡಗಿ (ನಾ). ೧. ಚೆಲುವೆ ; ಸುಂದರಿ : ನಿಡಿಯುಲರ್ಗಣ್ಗಳ ಬೆಡಂಗಿಯರ್ಕಳನರ್ಕಂ ನಡೆ ನೋಡಿ ಪೋಗಲಾಱದೆ ತಡೆಯೆ ಪಗಲ್ ಪಿರಿಯವಪ್ಪುವಾ ಪುರವರದೊಳ್ (ಕಾವ್ಯಸಾ. ೧೬೮ ಕೂಡ್ರಿಸ್) ; ಬೆಳಗುವ ಲಾವಣ್ಯವುಸಿಯೆ ಬಂದರ್ . . . ನಿಡುಗಣ್ಣಳ ಬೆಡಂಗಿಯರ್ ಕೋಮಲೆಯರ್ (ಜಗಿಪ. ೪-೧೨೪). ೨. ಒಯ್ಯಾರಿ ; ಬೆಡಗುಗಾತಿ : ಜಡೆಗಳ ಬೆಡಂಗಿ ಭಸಿತದ ಫಾಲಲೋಚನೆ ರುದ್ರಾಕ್ಷಿಯ ಭದ್ರಾಂಗಿ (ಗಿರಿಶ. ೪-೦೬ ೫); ಬೇಟದ ಬೆಡಂಗಿಯಬೆರ್ಗಟಳಿಯ ಕುಸುಮವುಮಂ . . . ಶಿಱಿದರ್ (ಉದ್ಭಟ. ೯-೫೪). **ಬೆಡಗಿ** : ೧. ಕಡುಬೆಡಗಿ ಮೇಲಲರುದು ಪುಣಾಗನು ಪಿಡಿಯೆ (ವಾಗಿಶ. ೨-೯). ೨. ತರದಿರೋ ರಂಗ ಬೆಡಗಿಯು (ವಾಚಿತ. ೦೫); ಬಂದಿದ್ದ ಹೆಣ್ಣುಗಳ ಪೈಕಿ . . . ಒಬ್ಬಿಬ್ಬರು ಕಾಲೇಜು ಮೆಟ್ಟಲು ಹತ್ತಿದ್ದ ಬೆಡಗಿಯರೂ ಆಗಿದ್ದರು (ಕಾಗಿತ. ೦೯೨). [ಬೆಡಂಗ + –ಇ$_3$]

**ಬೆಡಂಗು**, ಬೆಡಗು$_1$ (ನಾ). ೧. ಅಂದ ; ಸೊಬಗು ; ಸೊಗಸಂ : "ಬೆಡಂಗೆಂದು ಮನೋಹರಂ". (ಶಬ್ದಮ. ೬೪-೪೨೪) ; ಎಮ್ಮ ಕೆಲಂಗಳೊಳ್ ಮೆಱೆಯುಶಿರ್ದಪುವೀ ಶ್ರುತಿಪೂರಕೈರವಂ ತಮ್ಮ ಬೆಡಂಗಂ (ಕಾವ್ಯಸಾ. ೯೬೩ ಕೂಡ್ರಿಸ್) : ಪೊಱಲ ಬೆಡಂಗಂ ಮೆಚ್ಚಿ ಮೆಚ್ಚಿ ನೋಡಿ (ಶಂಕರಾ. ೪-೧೦ ಕಗಳ). ೨. ಒಯ್ಯಾರ; ವಿಲಾಸ; ಒನಪು: ಜವ್ವನದ ವಿಳಾಸದಂದದ ಬೆಡಂಗಿನ ಪೆಂಡಿರ ಪೆಂಡಿರಱಿಯಾ (ಶಂಕರಾ. ೪-೯೫); ಮಧ್ಯಂ ಬೆಡಂಗಿನಿಂ ಬಳ್ಕಿ ಮುಂಡಿ ಪೂಗಳಂ ಕೆದಱಿ (ಚಂದ್ರ. ೫-೧೧). ೩. ಠೀವಿ; ಗತ್ತು : ದಂಡೆಯಂ ನಿಬ್ಬುವ ಕೈ ನಡುಗದೆ ಗದೆಯಂ ಬೀಸುವ ಬೆಡಂಗು ರಂಜಿಸಿತು ಭೀಮ ದುರ್ಯೋಧನರಾ (ಗದಾಯು. ೬-೯); ನುಡಿವ ಬೆಡಂಗು ನೋಡುವ ಪರಾಕ್ರಮ ಮಾಡುವ ಸಾಹಸೋಕ್ತಿ . . . ಬಣ್ಣಿಸಲಳವಲ್ತೆ (ಸೌಶಾ. IX–i, ೨೬೬–೨೪ ; 1183). ೪. ನೈಪುಣ್ಯ ; ಕೌಶಲ್ಯ : ಮೊದಲೊಳ್ ಕಲ್ತೆಗಲ್ಲದೆ ಪದದೊಳ್ ಜಾಣಂ ಬೆಡಂಗು ಮಕ್ಕುಮೆ ಕೃತಿಯೊಳ್ (ಕವಿರಾ. ೦–೪); ಪೊಸ ದೇಸೆಯಂ ಬೆಡಂಗಂ ರಸಘಟ್ಟಿಯನರ್ಥದೃಷ್ಟಿಯಂ ಬಗೆವರೊ ಭಾವಿಸುವರೊ ಸ್ಮಾರಣೆಯಂತಿರೆ ಕಸಮಂ ಪಿಡಿವರ್ ಕೆಲರ್ ಮಹಾಪುರುಷರ್ಕಳ್ (ಆದಿಪು. ೦–೪೦); ಅಸಗನ ದೇಸಿ ಪೊನ್ನನ ಮಹೋನ್ನತಿವೆತ್ತ ಬೆಡಂಗು . . . ಶೋಭಿಸೆ ನೆಲಸಿರ್ಕೆ ಧಾರಿಣಿ ಮನಂಗೊಳೆ ಮತ್ಕೃತಿಯೊಳ್ನಿರಂತರಂ (ಧರ್ಮಾಮೃ. ೦–೩೪). ೫. ಚಮತ್ಕಾರ ; ಚಾತುರ್ಯ : ಬೆಡಂಗು[ಪಾಠಾಂ. ಬೆಡಗು] ಬೇಱೊಂದು ತೆಱಂ ನುಡಿಗನೆ ಮನಕ್ಕೆ ವರೆ ಹಳೆ ನುಡಿದು ಅರ್ಥಮದೊಂದು ತೆಱಂ (ಶಾಂತಿಪು. ೨–೬೪); ಸಂಗರದೊಳೀರೇಳು ಲೋಕದರಸುಗಳ ಸಪ್ತಾಂಗಮಂ ಕೊಂಬ ನಿನ್ನಂ ನುಡಿಯು ತೊಡಕಿನ ಬೆಡಂಗಿನಿಂ ಸೋಲಿಸಿ (ಹಂಶಾ. ೧೧–೦೩). ೬. [ಸಂಗೀತ] ಹಾಡುವ ರೀತಿಯ ಒಂದು ಕ್ರಮ (?): ಭಣಿತೆ ಬೆಡಂಗು ಕಾಕು ಖಚರಂ ಗಮಕಂ . . . ಪೆಲ್ಲಣಿ ಕಳೆಯೆಂಬಿವಂ ಮೆಱೆದು ಬಾಜಿಸಿದಂ ಮುರವೈರಿ ವಾಸಮಂ (ಜಗಪ. ೫-೩). **ಬೆಡಗು$_1$** : ೧. "ಬೆಡಗೆನೆ ರಮ್ಯಂ" (ಕಬಿಕಂ. ೮೪೦) ; ಪೊಡಳ್ದುಗುರ್ ಶುಕ್ರಜದ ಬೆಡಗಿಂಗೆ ಭಂಗಮಂ ಸಂಗೞಿಸೆ (ಕದ್ಯಸಾ. ೩-೨೬); ಬೆಡಗಿನ ತುಂಬು ಜವ್ವನೆ ನಾಲ್ಕುನೀರನ್ ಮಿಂದಳೊಲವಿಂದ (ಸಾಳ್ವಶಾ. ೩-೩೪). ೨. ಅಕಟಕಟಾ ಬೆಡಗು ಬಿನ್ನಾಣವೆಂಬುದೇನೋ (ನಶಪ. ೬೬); ಬಟ್ಟ ಮುಡಿಯ ಬೆಡಗಿನ ಸುಡಿ ನೋಟದ . . . ದಿಟ್ಟೆಯರಿರುತಿಹರಲ್ಲಿ (ಅಂಚಿತ. ೨-೧೧೪) ; ಬಾಳೆಗೆ ಕಡಗು ಸೂಳೆಗೆ ಬೆಡಗು (ಗಾದೆ). ೪. ಶದೀಯಾಸ್ತ್ರಪ್ರಯೋಗದ ಬಲುಹನೀಕ್ಷಿಸೆ ತೆಗೆವ ಬೆಡಗನು ಕಲಿಸ ಪಾಶುಪತಾಸ್ತ್ರವೆನಗಾಯ್ತಲ್ಲಿ ವಶವರ್ತಿ (ಕುಮಾರವ್ಯಾ. ೯-೯). ೫. ಅಡಾದನಾ ಅಜನು ಕೋಡಗಾವನು ಹರಿಯು ನೋಡಿದರೆ ಶಿವನು ನರಿಯಾದನೀ ಬೆಡಗರೂಢಿಯೊಳು ಬಲ್ಲ (ಸರ್ವಜ್ಞ. ೨೩೪); ಒಳ್ಳೆಣ್ಣೆ ತಂದೆನು ಕೈಯಣ್ಣೆಯಾಯಿತು ನಾನೇನು ಮಾಡಲಿ ಮತ್ತೆ ಸೊಸೆಯೆಂದ ಮಾತಿನ ಬೆಡಗರಿವಾಯಿತು ತಲೆದೂಗಿ ಸೈಯೆಂದಳತ್ತೆ (ಅಂಜಾಶ. ೦೨೯-೩೫). ೬. ಚೋದ್ಯ; ಸೋಜಿಗ : ಅಡಿಯಿಲ್ಲದ ನಡುವಿಲ್ಲದ ಮುಡಿಯಿಲ್ಲದ ಬಯಲು ಎಡೆಯಿಲ್ಲದಿಪ್ಪುದು ತಾ ಜಗವನೊಡಗೂಡಿ ಹಿಡಿಯಲು ಬಿಡಲಿಲ್ಲದ ಬೆಡಗು (ಶಿಶಗೀ. ೩೨-೦೪೫): ಸಾವಿರ ಪಡಿಯ ಹೊನ್ನಿನ ತೂಕವಂ ಕಡಿಕಡಿದು ಜಂಗಮಕೆ ಕೊಡುತಿರಲು ವಿಸ್ಮಯವಿದೆನುತಶಿವೆಡಗನಾ ಜಂಗಮವು ಬಸವನ ಎಡೆಗೆ ನಡೆತಂದುಬ್ಬಿಶಾತನ ಮುಂದೆ ಪಸರಿಸುತ . . . ನುತಿಸೆ (ಬಸವು. ೩೦-೨೦). ೮. ವೈಶಿಷ್ಟ್ಯ ; ವಿಶಿಷ್ಟತೆ : ಎಸೆವ ಕರ್ಣಾಟಕದ ಬೆಡಗುಗಳ ಬಲ್ಲ ಸತ್ಕವಿಗಳೊಪ್ಪಿರ್ದರಾ . . . ಮಣಿಮಯದ ಗರ್ಮಗೆಗಳಲ್ಲಿ (ಚಂದ್ರ. ೭-೧೧). ೯. ಜಂಬ ; ದರ್ಪ ; ಸೊಕ್ಕು : ಬಾಳು ವಾಗ ಸಿರಿ ಬರುವಾಗ ತಂದೆ ಕೇಳು ಬೆಡಗು ಬೇಡೆಚ್ಚಱಿಕೆ (ತುರಂಗ. ೦-೨೬೦-೩). ೧೦. ಒಳಗುಟ್ಟು ; ಮರ್ಮ ; ನಿಗೂಢತೆ : ರಹಸ್ಯ : ಬಯಲ ಬಣ್ಣವ ಮಾಡಿ ಸ್ವಯವ ನಿಲವ ಮಾಡಿ ಸುಳಿವಾತನ ಬೆಡಗ ಬಲ್ಲವರಾರೈ ರಾಮನಾಥ (ದೇರಾವ. ೬೪-೮೩೦); ಶಿವಲಿಂಗಭಕ್ತಿಯ ಬೆಡಗನೇಕಾಂತದಲಿ ನಿಮಗೊಡಬಡಿಸಿ ಹೇಳುವೆ (ಪ್ರಭುಲಿಂ. ೦೪-೩೨); ನುಡಿದ ಮಾತ್ರದಲಿರದು ಧರ್ಮದ ಬೆಡಗು (ಕುಮಾರ. ೮೬-೦೩). ೧೧. ಒಗಟಿನ ಮಾತು ; ಚಮತ್ಕಾರದ ನುಡಿ ; ಒಡಪು ; ಹದಿರು : ನುಡಿಯಲ್ಲಿ ಎರಡಿಟ್ಟು ನುಡಿಯನು ಬೆಡಗಿನ ಗಡಣದ ಕುಲವನು ಕಂಡಱಿಯನು (ಶಿಪಗೀ. ೦೨೬-೬೩೨): ಜನಪದದಲ್ಲಿ ಬೆಡಗು ಎಂದಾಗ ಇಂಥ ಗಂಭೀರತೆಗಿಂತ ಹೆಚ್ಚಾಗಿ ಚತುರ ನುಡಿ, ಚಮತ್ಕಾರದ ಮಾತು ಎಂಬ ಅರ್ಥವೇ ಬಹಳ ಮುಖ್ಯವಾಗುತ್ತದೆ (ಕವಿಕೋ. XII, ೨೦೪) ; ಬೆಡಗು:— ಒಳಗುಟ್ಟಿನ ಒಂದು ಮಾತಿನ ರೀತಿ–ಅದಕ್ಕೊಂದು ಅನುಭವ ಸಮುದ್ರವೇ ಆಹಾರ. ಇದು ಒಂದು ರೀತಿಯ ಅಲಂಕಾರಿಕ ಸರಣಿ (ಸಾಹಿಪ. iii, ೮೫೩). ೧೨. ಅಲಂಕಾರ : ಜಲಮಣಿಯ ಬೆಡಗನಿಕ್ಕಬಹುದೆ ಬಯಲ ಬಂಧಿಸಬಹುದೆ (ಕೋಳೂರು. ೧೧೮-೪೬೪). ೧೩. ಥಳುಕು ; ಹೊರಮಿಂಚು : ಉಳುವರ ಗೆಯ್ಮರ ಬೆವರಲ್ ತೊಯ್ಮರ ತವರೂರದು ಬೆಡಗುಗಳಿರದ (ಪಕ್ಷಿ. ೦-೬೨) : ಹೊಸ ಬಾಳಿನ ಬೆಡಗು ಸಾಕು ಬೆಳಕು ಬೇಕು ಹಾಡಿಗೆ (ಅರಳು. ೩೫೦-೧೧).

**ಬೆಡಗಿನ ವಚನ**= ವಚನಕಾರರು ತಮ್ಮ ತಾತ್ತ್ವಿಕ ಅನುಭಾವದ ತಿಳಿವನ್ನು ತಿಳಿಸಲು, ಸೂಕ್ಷ್ಮವಾದ ಎಷ್ಟೋ ವೇಳೆ ಒಗಟಿನಂತಿರುವ ಸಂಕೇತ ದೃಷ್ಟಾಂತ ರೂಪಕಾದಿಗಳನ್ನು ಉಪಯೋಗಿಸಿ ರಚಿಸಿದ ವಚನಪ್ರಕಾರ : ತಾತ್ತ್ವಿಕಚಿಂತನೆಯನ್ನು ಹುರಿಗಟ್ಟಿ ಹೇಳಲು ಅನುಭಾವಿಗಳು ಈ ಪ್ರಕಾರವನ್ನು ಸಶಕ್ತವಾಗಿ ಬಳಸಿಕೊಂಡರು. ಅಲ್ಲಮಪ್ರಭು, ಚನ್ನಬಸವಣ್ಣ ಮುಂತಾದವರು ಅನೇಕ ಬೆಡಗಿನ ವಚನಗಳನ್ನು ಬರೆದಿದ್ದಾರೆ (ಕವಿಕೋ. XII, ೨೦೪) ; ಬೆಡಗಿನ ವಚನಗಳಲ್ಲಿ ಹಲವಾರು ಪ್ರಭೇದಗಳಿವೆ. ವಿರೋಧಾಭಾಸವೇ ಅವೆಲ್ಲಕ್ಕೂ ಜೀವಾಳ (ಅವತಂ. ೦೬ ೩೬೮೪).

[ದೇ.॥ ತಮಿ. ವಿಟಙ್ಕಮ್ ; ಮಲ. ಮೆಡಿಪ್ಪು ; ತುಳು. ಬೆಡಂಗ್, ಬೆಡಗ್ ; ತೆಲು. ಬೆಡಂಗು, ಬೆಡಗು, ಬೆಣಂಗು, ಬೆಳಂಗು]

**ಬೆಡಂಗುಗಂಪು** (ನಾ). ವಿಶಿಷ್ಟವಾದ ಕಂಪು ; ಅಪೂರ್ವವಾದ ಸುಗಂಧ : ಮಲ್ಲಿಕೋತ್ಕರದ ಬೆಡಂಗುಗಂಪು ಮಧುದೂತಿಯ ತಳ್ತನಿಗಂಪು . . . ಬಗೆಗೊಂಡುದು ತದ್ವನದೊಳ್ ನರೇಂದ್ರನಾ (ರಾಜಶೇ. ೧೧-೨೯).

[ಬೆಡಂಗು + ಕಂಪು]

**ಬೆಡಂಗುಗಿಡು** (ಕ್ರಿ). ಅಂದಗೆಡು ; ಚೆಲುವನ್ನು ಕಳೆದುಕೊಳ್ಳು : ನಗೆಗಣ್ ಸೋರ್ವ ಕದುಷ್ಣವಾರಿಚಯದಿಂ ಬಿಂಬಾಧರಂ ಸುಯ್ಯ ಬೆಂಕೆಗಳಿಂ ನಾಡೆ ಬೆಡಂಗುಗೆಟ್ಟಿರವಿದಿಂತೇಕಾರಣಂ (ಶಂಕರಾ. ೪-೩೩).

[ಬೆಡಂಗು + ಕಿಡು (< ಕೆಡು$_1$)]

**ಬೆಡಂಗುವಡೆ** (ಕ್ರಿ). ಅಂದವಾಗು ; ಚೆಲುವನ್ನು ಪಡೆ ; ಸೊಗಸಾಗು : ಇಂತುಟಪ್ಪ ಮೆಯ್ವಣ್ಣಕ್ಕಿಂತೀ ಪೂವಿನೊಳೀ ತುಡುಗೆಯೊಳೀ ಪುಟ್ಟಿಗೆಯೊಳ್ ಬೆಡಂಗುವಡೆದೆಸೆದಿರ್ದಂ (ಶಂಶಪು. ೩-೯೩); ಸೊಡರಂ ಪರ್ಚಿಸಿದಂತಿರೆ ಬೆಡಂಗುವಡೆದೆಸೆವ ಮುನಿಯ ದೇಹದ್ಯುತಿಯಿಂ ಕಡುಗವಿಲಮಾಗಿ ಕಾಂಚನದಡವಿಯುನನುಕರಿಸಿ ತದ್ವನಂ ಸೊಗಯಿಸುಗುಂ (ಕಾದಂಪೂ. ೬೩೯). [ಬೆಡಂಗು + ಪಡೆ$_1$]

**ಬೆಡಂಗುವೆಱು** (ಕ್ರಿ). =ಬೆಡಂಗುವಡೆ : ಊದುವ ತೆಂಬೆಲರಿಂ ಬೆಡಂಗುವೆತ್ತು ( ಎಂ. XIII. ೩೩೦-೨೯; 929); ಭಾಸುರಚಂದ್ರಿಕಾತಿಲಕಮುಂದುವರ ಕಾಂತಿಯುತಂ ಬೆಡಂಗುವೆತ್ತತ್ತಾಗಳ್ (ಅಜಪು. ೬-೩೯). [ಬೆಡಂಗು + ಪೆಱು$_1$]

**ಬೆಡಂಗೊಂದು** (ಕ್ರಿ). =ಬೆಡಂಗುವಡೆ : ಕಂದಮುಂಮುಮಳಿಸವೃತ್ತಮುಮೊಂದೊಂದೆಡೆಗೊಂದು ಜಾತಿ ಜಾ(ಣೆಸೆ)ಯೆ ಬೆಡಂಗೊಂದಿಪಟಿಳೊಳಮರೆ . . . ಬೆದಂಡೆಗಬ್ಬಮುದಕ್ಕುಂ (ಶಂದಾ. ೦-೩೪). [ಬೆಡಂಗು + ಒಂದು$_1$]

**ಬೆಡಗ$_1$** 'ಬೆಡಂಗ' ನೋ.

**ಬೆಡಗ$_2$** 'ಬೆಡಗು$_2$' ನೋ.

**ಬೆಡಗ$_3$** 'ಬೆಡಗು$_3$' ನೋ.

**ಬೆಡಗಿ** 'ಬೆಡಂಗಿ' ನೋ.

**ಬೆಡಗು$_1$** 'ಬೆಡಂಗು' ನೋ.

**ಬೆಡಗು$_2$, ಬೆಡಗ$_2$** (ನಾ). ಚಿಕ್ಕ ಚಿಕ್ಕ ಪೊದೆಗಳನ್ನು ಕತ್ತರಿಸಲು ಉಪಯೋಗಿಸುವ ಕಬ್ಬಿಣದ ಒಂದು ಸಾಧನ : ಕೃಷಿಕರಾದವರು ಹೊಲಕ್ಕೆ ಹೋಗಬೇಕಾದರೆ ತಮ್ಮ ಕೈಯಲ್ಲಿ ಗುದ್ದಲಿಯನ್ನಾಗಲಿ ಬೆಡಗನ್ನಾಗಲಿ ಕೊಡಲಿಯನ್ನಾಗಲಿ . . . ಹಿಡಿದುಕೊಂಡು ಹೋಗಬೇಕಲ್ಲದೆ ಹಾಗೇ ಹೋಗಲಾಗದು (ಕೃಷಿಶ್ರ. ೩೦). **ಬೆಡಗ$_2$** : ಕಬ್ಬಿಣದ ಸಾಮಾನುಗಳಲ್ಲಿ ಮುಚ, ಬಳಿ, ಕುಡ, ಮೊಳೆ, ಕೊಡ್ಲಿ, ಗುದ್ದಲಿ, ಬೆಡಗ, ಬಾಚಿ, ಉಳಿ . . . ಮುಂತಾದ ಯಾವತ್ತು ಸಾಮಾನುಗಳು . . . ಕೈಯಲ್ಲಿ ಅನುವಾಗಿಯೂ ಇರಬೇಕು (ಕೃಷಿಶ್ರ. ೨೦). [←ಮರಾ. ಬೇಡಗ]

**ಬೆಡಗು$_3$, ಬೆಡಗ$_3$** (ನಾ). ಜಾತಿಯೊಳಗಿರುವ ಒಂದು ಉಪವಿಭಾಗ ; ಪಂಗಡ ; ಬಣ ; ವರ್ಗ : "ಜಾತಿ, ಬೆಡಗು, ಬಣ, ಕುಲ, ತಳಿ, ಬಳಿ" (ಕಂಜುಹು. ೮೪) ; ಈ ರೀತಿಯ ಗುಂಪುಗಳಿಗೆ ಬೆಡಗುಗಳೆಂದು ಹೆಸರು (ಜುತಂಪಿ. ೩೨) ; 'ಗುಜ್ಜಲ'ವೆಂಬುದು ಬೇಡರಲ್ಲಿ ಒಂದು ಜಾತಿಯ ಬೆಡಗು. ಗುಜ್ಜಲ ಬೆಡಗಿನ ಹೆಂಗಸನ್ನು ಕಂಪಿಲರಾಯನು ಲಗ್ನವಾಗಬೇಕಾದರೆ ಅವನೂ ಬೇಡಜಾತಿಯವನಾಗಿದ್ದು ಬೇರೊಂದು ಬೆಡಗಿನವನಾಗಿರಬೇಕು (ಕರ್ನಾಸಂ. ೨೩೬). **ಬೆಡಗ$_3$** : ರಡ್ಡೇರಲ್ಲಿ ಎಲ್ಲ ಕೂಡಿ ೩೬ ಬೆಡಗಗಳೆಂದರೆ ಮನೆತನಗಳು ಇಲ್ಲವೆ ಗೋತ್ರಗಳು ಇರುತ್ತವೆ. ಒಂದೇ ಬೆಡಗವರಲ್ಲಿ ಹೆಣ್ಣು ಗಂಡು ಆಗುವುದಿಲ್ಲ (ಕಜಾನಿ. ೦೨೪). [ ? ]

**ಬೆಡಗುಗಾತಿ** (ನಾ). ವಿಲಾಸಿನಿ ; ಬೆಡಗಿ : ಬೆಡಗುಗಾತಿಯರು ಯಿರುವ ಕಡೆ ನಡೆ (ಶಾಗಂ. ೦೯೦-೨೦) ; ಬೆಡಗುಗಾತಿ, ಈ ಯುದ್ಧಕ್ಕೂ ನಿನಗೂ ಏನು ಸಂಬಂಧ ? (ಚಂಡಿ. ೩೬೨). [ಬೆಡಗು$_1$ (< ಬೆಡಂಗು) + –ಕಾತಿ$_1$]

**ಬೆಡಗುಗಾರ** (ನಾ). ೧. ಚೆಲುವ ; ಸುಂದರ. ೨. ವಿಲಾಸಿ ; ವಿಟ : "ವಿಟಃ = ಬೆಡಗುಗಾರಂ" (ಕಾಶಕ. ೦೬).

[ಬೆಡಗು$_1$ (< ಬೆಡಂಗು) + –ಕಾರ$_1$ (< –ಕಾಱ)]

**ಬೆಡಿ** (ನಾ). ೧. ತುಪಾಕಿಯ ಗೋಲಿ , –ಗುಂಡು : ನಾನು ಬೆಡಿ ಹೊಡೆದು ಕಿರುಬನನ್ನು ಉರುಳಿಸಿದುದು ನಿನಗೆ ನೆನಪಿದೆಯಷ್ಟೆ (ಜುಂಪಾ. ೩೬೮). ೨. ಪಟಾಕಿ ; ಗರ್ನಾಲು : 'ಬೆಡಿಕಂಬ' ಪರಾ. [ದೇ.॥ ತವಿ. ವೆಟಿ ; ಮಲ. ವೆಡಿ ; ತುಳು. ಬೆದಿ ; ಕೊಡ. ಬೊಡಿ ]

**ಬೆಡಿಕಂಬ** (ನಾ). ಒಂದು ಬಗೆಯ ಸುಡುಮದ್ದು : ಮುಂಮುಮುಃ ದಿನ ಬೆಡಿಕಂಬ, ಲಂಕಾಪಟ್ಟಣ, ಬಿರುಸು ಬಾಣಗಳನ್ನು ಸುಡಿಸಿ . . . ನೆಲ ನಡುಗಿಸಿಬಿಟ್ಟೆನು (ಮಸವಾ. ೦೬೩). [ ಬೆಡಿ + ಕಂಬ$_1$ (< ಕಂಭ) ]

**ಬೆಣ, ಬೇಣ** (ನಾ). (ಕರಾ) ಸಪಾಟಾದ, ಗಿಡಮರಗಳಿಲ್ಲದ, ಬರಿದಾದ ನೆಲ : ಮರ ಫಲ ಬೆ[ಣ] ಬಳಿರು ಬೆಟು ಬಿಟೆ ಮುಂತಾಗಿ ಸರ್ವಾಂಗೋಡು ಸಹಿತವಾದ ಯಿಂತಿವೆಲಲು (ಕಾ. III-i, ೬೦೯; 1527); ಎರಡು ಮೈಲು ದೂರ ನಡೆದು ಹೋದ ಮೇಲೆ ಒಂದು ಚಿಕ್ಕ ಬೆಣವಿದೆ (ಮೂಕಜ್ಜ. ೩೩) ; ಅಲ್ಲೊಂದು ವಿಶಾಲ ಬೆಣವಿದೆ. ಅವರಲ್ಲಿ ಮಳೆಗಾಲದಲ್ಲಿ ಹುಲ್ಲೂ, ಚಳಿಗಾಲದಲ್ಲಿ ಕರಡವೂ ಬೆಳೆಯುತ್ತವೆ (ಸ್ವಕೃಪೂ. ೦೦). **ಬೇಣ** : ನಮ್ಮ ಬೇಣಮೇನೂ ಬಟ್ಟಬಯಲಿನಲ್ಲಿಲ್ಲ (ಸುಮಸಂ. ೬೩); ಅವನೂ ಮಲ್ಲೇಶ ಮೂರ್ತಿಯರೊಂದಿಗೆ ಹೊಲಗದ್ದೆ ಬಯಲು ಬೇಣಗಳಲ್ಲಿ ವಿಹರಿಸುತ್ತಿದ್ದಾನೆ (ಚಿಲುಮಾ. ೨೦೩). [ ? ]

**ಬೆಣಕಚಂಗೆಡೆ** (ಕ್ರಿ). (?) : ಬೆಣಕಚಂಗೆಡೆವರ ಮಾತಂ ಕೇಳ್ದು ದಾನಾದಿಗಳೊಳಪ್ಪರ್ಥವ್ಯಯಕ್ಕೆ ಮನದೊಳ್ ಮಱುಗಿ ಮಾಡವೇಡ (ರಹರೀತಪ್ಪ. ೬-೨೩೦). [ ? ]

**ಬೆಣಕು** 'ಬೆಳಗು$_2$' ನೋ.

**ಬೆಣಕೇಱು** (ಕ್ರಿ). ಕಾಂತಿಯುಂಟಾಗು ; ಬೆಳಕು ಹೆಚ್ಚಾಗು : ಪಣತಿವಿಡಿದು ಬತ್ತಿಯಿಂದ ತೈಲವನುಂಡು ಬೆಣಕೇಱುವಂತಗ್ನಿದೀಪ (ಶರತ. ೬೬-೦೩೬); ಕರ್ಮಾಂಧಕಾರ ಹರೆವನ್ನೊಲು ಸ್ತುತಿಯಿಂದ ಧರ್ಮದ ಬೆಣಕೇಱಿದಂತೆ (ಪೂಜ್ಯಕ. ೦೫-೭೦). [ ಬೆಣಕು (<ಬೆಳಗು$_2$) + ಏಱು$_1$ (< ಏಱ್$_1$) ]

**ಬೆಣಚಿಕಲ್ಲು** 'ಬೆಣಚುಗಲ್ಲು' ನೋ.

**ಬೆಣಚಿಗಲ್ಲು** 'ಬೆಣಚುಗಲ್ಲು' ನೋ.

**ಬೆಣಚು** (ನಾ). (ಹರಳಿನ ಆಕೃತಿಯಲ್ಲಿರುವ) ಹೊಳಪುಳ್ಳ ಒಂದು ಬಗೆಯ ಬಿಳಿಯ ಬಣ್ಣದ ಕಲ್ಲು : ಅಲೋಹ ಖನಿಜವಾದರೂ . . . ಅನೇಕ ವೇಳೆ ಇವು ಸಹ ಉಪಯೋಗಕ್ಕೆ ಬರುತ್ತವೆ. ಉದಾ : ಫ್ಲೂರೈಟ್ ಬೆಣಚು (ಕ್ವಾರ್ಟ್ಸ್) ವಿರೈಟ್ ಮುಂತಾದವು (ಕಂಕಿತಾ. I, ೨೬೮).

**ಬೆಣಚುಕಲ್ಲು** 'ಬೆಣಚುಗಲ್ಲು' ನೋ.

**ಬೆಣಚುಗಲ್ಲು, ಬೆಣಚಿಕಲ್ಲು, ಬೆಣಚಿಗಲ್ಲು, ಬೆಣಚುಕಲ್ಲು** (ನಾ). = ಬೆಣಚು : ಮೂಡ ಹೆಬ್ಬೇಡ ಬೆಣಚುಗಲ್ಲು (ಎಕ. VII, ಶಿವಪೂ. ೬೯-೦೦೦ ; 1112) ; ಬೆಣಚುಗಲ್ಲಿನ ಹಾಗೆ ಸ್ವಲ್ಪ ಬೆಳ್ಳಗೆ ಇರುತ್ತದೆ (ಪುಂಬಬು. ೩-೯೩) ; ಸಮುದ್ರದ ದಡದಲ್ಲಿ ಬಿದ್ದಿರುವ ಬೆಣಚುಗಲ್ಲುಗಳನ್ನು ಹೋಲುತ್ತದೆ (ಕಂಕಿತಾ. I, ೪೦೦). **ಬೆಣಚಿಕಲ್ಲು** : ಅವನೆದೆಯ ಯಮದೂತರತಿಕಠಿಣಬೇಟಂಗಳೊಳು ಬೆಣಚಿಕಲ್ಲುಗಳೊಳಗೆ ಎಳದು ಶೂಲಗಳಿಂದೆ ತಿವಿದು (ಕೃಷ್ಣಕಾ. ೩೦-೨) ; ಸ್ಫಟಿಕರೂಪದ ಬೆಣಚಿಕಲ್ಲಿಗೆ ಸಂಸ್ಕೃತದಲ್ಲಿ ಕಾಚಮಣಿ ಎಂದೆನ್ನುವರು (ಪುಂಬಬು. ೬-೨೩೮) . **ಬೆಣಚಿಗಲ್ಲು** : ಸಾರತರ ರಂಗವಲ್ಲಿಗಳ. . . ಬೆಣಚಿಗಲ್ಲಿನ ಪಿಷ್ಟದಿಂದಾದೊಡಂ ರಚಿಪುದು (ಶತಪು.೬-೪-೨೪) ; ಕಾಜು . . . ಕಲವು ಕಾಲ ಬೆಣಚಿಗಲ್ಲಿನಿಂದ ಅದನ್ನು ಮಾಡುತ್ತಿದ್ದರು (ಪುಂಬಬು. ೪-೨೨೦). **ಬೆಣಚುಕಲ್ಲು:** ಹೊತ್ತಿಯು ಮರಡಿ ಎಂಬ ಬೆಣಚುಕಲ್ಲು ಮರಡಿಯನ್ನು ಬಲದಲ್ಲಿ ಹಾಯ್ಕಿಕೊಂಡು (ಎಕ. III, ಶ್ರೀರಂಗ. ೦೩೩-೩೯ ; 1453) ; ಬೆಂಕಿ ಹುಟ್ಟಬೇಕಾದರೆ ಬೆಣಚುಕಲ್ಲಿನಲ್ಲಿ ಮಾತ್ರ. ಬೆಣ್ಣೆಗಲ್ಲಿನಲ್ಲಿ ಬೆಂಕಿಯಿದ್ದರೂ ಇಲ್ಲದಂತೆ ವ್ಯರ್ಥ (ರಾಕ್ಕೋದ. ೬೦). [ಬೆಣಚು + ಕಲ್ಲು (<ಕಲ್$_3$)./ತುಳು. ಬೊಳ್ಕಲ್ಲ್]

**ಬೆಣತಿಗೆ** 'ಬೆಳಂತಿಗೆ' ನೋ.

**ಬೆಣಾಯ್ಯ** (ನಾ). ಒಬ್ಬಾತನ ಹೆಸರು : ಪೆರ್ಗ್ಗಡೆ ಬೆಣಾಯ್ಯಂ ಗಜ್ಜಾನೆಯ ಕುಂಭಸ್ಥಳಕ್ಕೆ ಕುದುರೆಯಂ ಪಾಯ್ಸಿ ಸತ್ತೊಡೆ (ಎಕ. XII, ಮಧುಗಿ. ೭೦-೭ ; 920). [? + ಅಯ್ಯ$_1$]

**ಬೆಣೆ** (ನಾ). ಮರದ (ಬೇರೆ ಬೇರೆ ಆಕಾರದ) ಗೂಟ : ಸರ್ವಪರ್ವಂಗಳೆಂಬ ಬೆಣೆಗೀಲನಿಕ್ಕಿ ಹಿಡಿವೃತ್ತಿರ್ದ ಛತ್ರದ ನೆಳಲಿಲ್ಲದಂತೆ ಐಘಟೇಶ್ವರಲಿಂಗಕ್ಕೆ ಬಿಸಿಲು ಮಳೆಗಾಳಿಗೆ ಹೊಱಗಾಗಬೇಕೆಂದು (ಸರ್ವ. ೬೦-೬೨೨) ; ಪೆಟಲ ಗುಂಡಿನ್ನ ಬಲುಬಂಡಿ ಪೆಟಲ ಬೆಣೆಯ ಬಂಡಿ ಪೆಟಲುಪ್ಪಿನ ಬಂಡಿ ಕಟಕದೊಳೆಯ್ದಿದವವಳ (ಕುಮಾರಾ. ೯೦-೯೯) ; ಪೆಱಸಾರದಂತೆಪೋಲ್ ಬೆಣೆಯು ನಮರ್ಚಿ ಪೂಣ್ದಪನಿದೆಂಬಿನಮೇಂ ಬಗೆವಂದುದಿಂದು ಸಂದಣಿಸುತೆ ಗುಂಬದಂಬಟೆವುಯಿಲ್ಪಱಿಯಿಂ ಗಣಿಕಾಪದಂಬಕಂ (ಶಶಿ. ೬-೦೫೨) ; ಪುಟಗಳ ಮಧ್ಯೆ ಮತ್ತು ಅಂಚುಗಳಲ್ಲಿ . . . ಕಟ್ಟಿಗೆ ಮತ್ತು ಲೋಹದ ತೆರಪು ಸಾಮಾಗ್ರಿಗಳನ್ನಿಟ್ಟು ಬೆಣೆಗಳಿಂದ ಬಿಗಿಯಬೇಕು (ಮುದ್ರಣ. ೩೯).

[?./ ಮರಾ. ಬೇಣೆ]

**ಬೆಣ್ಣಗೂರ್** (ನಾ). ಒಂದು ಊರಿನ ಹೆಸರು : ಬೆಣ್ಣಗೂರ ಕವ್ವಲಿ ಬಾಣಾಸಾಮಿ ಮಗನ್ (ಎಕ. X, ಬಾಂಗ್. ೯೫-೪ ; 880).

[ ? + ಊರ್ ]

**ಬೆಣ್ಣತ್ತೂರ್** (ನಾ). ಒಂದು ಊರಿನ ಹೆಸರು : ಎಱೆಯಮ್ಮರಸರಾ ಬೆಣ್ಣತ್ತೂರಾಳ್ಗೆ (ಎಕ. X, ಗೌರಿಬಿ. ೦೩-೬ ; 1000 ?). ‘ಬೆಳತೂರ್’ ಪರಾ. [ ? + ಊರ್ ]

**ಬೆಣ್ಣಮ್ಮ** (ನಾ). ಒಬ್ಬಾತನ ಹೆಸರು : ಬೆಣ್ಣಮ್ಮ ಸೋಮಯಾಜಿಗಳ ಕೊಟ್ಟ ದಾನಂ (ಇಸಿ. VIII, ೨೫೬-೫೯ ; ೧೭ನೆಯ ಶತ). [ ? + ಅಮ್ಮ$_1$]

**ಬೆಣ್ಣೆ** (ನಾ). ೧. ಹಾಲು, ಮೊಸರುಗಳಿಂದ ತೆಗೆದ, ಜಿಡ್ಡಾಗಿರುವ ಬಿಳಿಯಂ ಪದಾರ್ಥ ; ನವನೀತ : “ದಧಿಸಾರಃ, ನವನೀತಃ—ಈ ೨ ಬೆಣ್ಣೆ” (ಹಲಾಯು. ೯೬-೦೦೯) ; ಬಿಸಿಲ ಬೆಣ್ಣೆಯಂತೆ ಕರಗಿ (ಶಾಂತಿಪು. ೬-೯೫ ಪ) ; ಬೆಣ್ಣೆಯಂ ತಿಂದ ಬೆಕ್ಕಿನಂತೆ ಅಱಿಯಲೀಯದೆ (ಶಂಕರಂ. ೯೪-೨೦) ; ಬೆಣ್ಣೆಯ ನೇಮ ಬೆಲ್ಲದ ನೇಮ ಅಂಬಲಿಯ ನೇಮದವನಾರನೂ ಕಾಣೆ (ಬಸವ. ೨೩೨) ; ಒಂದು ಕಣ್ಣಿಗೆ ಬೆಣ್ಣೆ, ಒಂದು ಕಣ್ಣಿಗೆ ಸುಣ್ಣ (ಗಾದೆ). ೨. ಮೃದುವಾದುದು ; ನಯವಾದುದು : ‘ಬೆಣ್ಣೆಕಾಗದ’ ಪರಾ.

**ಬೆಣ್ಣೆಯ ಚಾವಡಿ** = (ಚಿಕ್ಕದೇವರಾಜಒಡೆಯರವರು ಏರ್ಪಡಿಸಿದ್ದ) ಹದಿನೆಂಟು ಬಗೆಯ ಅಧಿಕಾರಸ್ಥಾನಗಳಲ್ಲಿ ಒಂದು : ಬೆಣ್ಣೆಯ ಚಾವಡಿ—ಇದರಲ್ಲಿ ಅರಮನೆಯ ದನಕರು ಎಮ್ಮೆ ಕುರಿ ಮುಂತಾದ ಜೀವರಾಸಿಗಳ ವಿಚಾರಣೆ ಮಾಡಿಕೊಂಡು, ಅದರಲ್ಲಿ ಆದ ಹಾಲು, ಮೊಸರು, ಬೆಣ್ಣೆ ಮುಂತಾದವುಗಳಲ್ಲಿ ಕೆಲವು ಅರಮನೆಗೆ ಪ್ರತಿದಿನವೂ ಬರುವಂತೆಯೂ, ಕೆಲವು ಕರಗಪಡಿಸೂಗುವಂತೆಯೂ ಕಟ್ಟಳೆ ಮಾಡಿಸಿದರು (ಮಹಾವಂ. I, ೦೯೯).

**ಬೆಣ್ಣೆ ಹಚ್ಚು** = (ಆಲಂ) ಒಳ್ಳೆಯ ಮಾತನಾಡಿ ಒಲಿಸಿಕೊಳ್ಳು ; ಅನುನಯಿಸು ; ಪುಸಲಾಯಿಸು : ಇಷ್ಟು ಬೆಣ್ಣೆ ಹಚ್ಚಲಿಕ್ಕೇನ ಇವರಿಗೆ ಬಿಡು (ಅಬೋಳ. ೦೫). [ ಬೆಳ್$_2$ + ನೆಯ್$_2$ /ತಮಿ. ವೆಣ್ಣೆಯ್, ವೆಣ್ಣೈ ; ಮಲ. ವೆಣ್ಣ ; ತುಳು. ಬೆಣ್ಣೆ, ಬೊಣ್ಣೆಯಿ ; ಕೊಡ. ಬೊಣ್ಣೆನೆಯ್ ; ತೆಲು. ವೆನ್ನ ]

**ಬೆಣ್ಣೆಅಕ್ಕಿಹುಲ್ಲು** (ನಾ). ಒಂದು ಬಗೆಯ ಹುಲ್ಲು : ಕಾಡಬರಗುಹುಲ್ಲು, ಬೆಣ್ಣೆಅಕ್ಕಿಹುಲ್ಲು (ವೃಕ್ಷಶಾ. ೦೪-೨೯೫). [ ಬೆಣ್ಣೆ + ಅಕ್ಕಿಹುಲ್ಲು ]

**ಬೆಣ್ಣೆಕಳ್ಳ** ‘ಬೆಣ್ಣೆಗಳ್ಳ’ ನೋ.

**ಬೆಣ್ಣೆಕಾಗದ** (ನಾ). ಮೃದುವಾದ ಕಾಗದ ; ನಯವಾದ ಕಾಗದ : ಬೆಣ್ಣೆಕಾಗದದಲ್ಲಿ ಬರೆಯಲು ಚೆನ್ನಾಗಿರುತ್ತದೆ (ರೂಢಿ). [ಬೆಣ್ಣೆ + ಕಾಗದ]

**ಬೆಣ್ಣೆಗಡುಬು** (ನಾ). ಬೆಣ್ಣೆಯಂನ್ನು ಹಾಕಿ ಮಾಡುವ ಒಂದು ಬಗೆಯ ಕಡುಬು : ತಣ್ಣೀರಿನಿಂದ ತೊಳದಕ್ಕಿಯನು ಹಾಲೊಳಗೆ ಸಣ್ಣನಪ್ಪಂತರೆದು ಕದಡಿಯೊಲೆಯೊಳು ತೊಳಸಿ ಬೆಣ್ಣೆಯಂ ಹಾಕಿಯುಂಡಲಿಗೆವದದೊಳು ಇಳುಹಿ ಹಲ್ಲಿಗಡುಬುಗಳ ಮಾಡಿ ನುಣ್ಣನೆಸೆವಾ ಕಡುಬನೊಲೆಗೆತ್ತಿ ಕಾಯ್ದು ಕುದಿವೆಣ್ಣೆವಾಲೊಳು ಮುಳುಗಲಿಕ್ಕಿ ಬೇಯಿಸಿ ತೆಗೆದು ಬೆಣ್ಣೆಗಡುಬೆಂದು ಹೆಸರಂ ಕೊಟ್ಟು ಸಿರಿಪಚ್ಚೆ ಯಾಲಕ್ಕಿಯುಂ ತಳಿವುದು (ಸೂಪಶಾ. ೦-೬೨). [ ಬೆಣ್ಣೆ + ಕಡುಬು (< ಕಡುಂಬು) ]

**ಬೆಣ್ಣೆಗರಗ$_1$** ‘ಬೆಣ್ಣೆಗರುಗ’ ನೋ.

**ಬೆಣ್ಣೆಗರಗ$_2$** (ನಾ). ಒಂದು ಬಗೆಯ ಪಕ್ಷಿ : ಪೆಣ್ಗಾಗೆ ಬೆಣ್ಣೆಗರಗಂ . . . ಗಿಡುಗಂ ಸಿಂಚಾಮಿನಿತುಂ ಗಮನಾಗಮನದಲ್ಲಿ ತಾಂ ಪುಗೆ ಶುಭವಂ (ಲೋಕೋಪ. ೦೨-೧೯). [ ? ]

**ಬೆಣ್ಣೆಗರುಗ, ಬೆಣ್ಣೆಗರಗ$_1$** (ನಾ). ಒಂದು ಬಗೆಯ ಸಸ್ಯ ; ಗರುಗದಲ್ಲಿ ಒಂದು ಬಗೆ : ಭಗರಕ್ತಂ ಸಡೆವೊಡೆ ಬೆಣ್ಣೆಗರುಗವಂ ನೀರೊಳಕ್ಕದಂ ದುಗ್ಧದೊಳೀಂಟುಗೆ (ಲೋಕೋಪ. ೯-೦೬೬); ಹೊತ್ತರೆ ಪಾಲಂ ಮರುಗಿಸಿಯುತ್ತರಣೆಯ ಬೆಣ್ಣೆಗರುಗವೆರಡರ ಬೇರಂ ಬಿತ್ತರದೊಳಿಕ್ಕಿ ಹೆಪ್ಪಿಟ್ಟಳ್ತಿಯೊಳಂ ಕಡೆಯೆ ಬೆಣ್ಣೆ ಮೂಡಿಯಕ್ಕುಂ (ಗೋವೈದ್ಯ. ೨೦೦-೫೮). **ಬೆಣ್ಣೆಗರಗ$_1$** : “ಹೆತ್ತುತ್ತಿ, ಹೆತ್ತುಟ್ಟಿ . . . ಚಿಟ್ಟರಳು, ಬೆಣ್ಣೆಗರಗ, ಭೇದ” (ಸಸ್ಯಾ. ೦೨೦) ; ಅಮರದವಳ್ಳಿ, ಮೂರೆಲೆಹೊನ್ನೆ . . . ಬೆಣ್ಣೆಗರಗ ಇವಂ ಕಷಾಯವಿಟ್ಟು ಸೇವಿಸಿದರೆ ವಾತಜ್ವರಂ ಕೆಡುಗುಂ (ಸಳವೈ. ೬೫). [ ಬೆಣ್ಣೆ + ಗರುಗ ]

**ಬೆಣ್ಣೆಗಲ್ಲು** (ನಾ). ಮೃದುವಾದ ಕಲ್ಲು ; ಹಿಟ್ಟುಗಲ್ಲು : ಬೆಂಕಿ ಹುಟ್ಟಬೇಕಾದರೆ ಬೆಣಚುಕಲ್ಲಿನಲ್ಲಿ ಮಾತ್ರ. ಬೆಣ್ಣೆಗಲ್ಲಿನಲ್ಲಿ ಬೆಂಕಿ ಇದ್ದರೂ ಇಲ್ಲದಂತೆ ವ್ಯರ್ಥ (ರಾಜ್ಯೋದ. ೬೦). [ ಬೆಣ್ಣೆ + ಕಲ್ಲು (<ಕಲ್$_2$) ]

**ಬೆಣ್ಣೆಗಳವು** (ನಾ). ಬೆಣ್ಣೆಯನ್ನು ಕದಿಯುವಿಕೆ ; ಬೆಣ್ಣೆಯ ಕಳ್ಳತನ : ಬೆಣ್ಣೆಗಳವನು ಮಾಣಿಸುವೆನೀ ಚಿಣ್ಣನನು ಕಟ್ಟಿರಿಸಿ ತುರಾ ಕಣ್ಣಗಳನೆಂದೊಬ್ಬಳೊಬ್ಬಳ ನಡುವನುಱಿ ಬಿಗಿದು (ಭಾಗ. ೦೦-೨೬-೨೮).

[ ಬೆಣ್ಣೆ + ಕಳವು ]

**ಬೆಣ್ಣೆಗಳೆ** (ಕ್ರಿ). ಹಾಲು, ಮೊಸರನ್ನು ಕಡೆದು, ಬೆಣ್ಣೆಯನ್ನು ಹೊರಕ್ಕೆ ತೆಗೆ : ತುಷಾರವನಳೆವ ಶಿಲೆಯೊಳಗೆ ಮುಳುಗುವ ನೀರೊಳು ಬೆಣ್ಣೆಗಳೆವಗ್ಗದ ವೇಶ್ಯಾಮಾತೆಯರನವನೀಶನೀಕ್ಷಿಸಿದ (ಜೈಮಿನಿ. ೦೬-೯೬).

[ ಬೆಣ್ಣೆ + ಕಳೆ$_1$ ]

**ಬೆಣ್ಣೆಗಳ್ಳ, ಬೆಣ್ಣೆಕಳ್ಳ** (ನಾ). ೧. ಬೆಣ್ಣೆಯನ್ನು ಕದಿಯುವವನು. ೨. ಕೃಷ್ಣ : ಬೆಣ್ಣೆಗಳ್ಳನ ಕೊಬ್ಬಿದುದರದೊಳ್ಬೊಚ್ಚಪೊಸ ಸುಣ್ಣಮಂ ಪೊಯ್ದು ನೀರೆಱೆದಂತೆ ಮಾಡಿ . . . ಕಾಳಗದೊಳುಬ್ಬಸವನುಱಿ ಹಣ್ಣೆದಲ್ಲದೆ ಮಾಣೆಂ (ಕೃಭಾ. ೬-೨೯). **ಬೆಣ್ಣೆಕಳ್ಳ** : ೨. ಬೆಣ್ಣೆಕಳ್ಳನ ಮುದ್ದು ಚಿನ್ನ ಕೃಷ್ಣಯ್ಯ (ಪುರಂದ. ೨-೯-೨). [ ಬೆಣ್ಣೆ + ಕಳ್ಳ$_1$ ]

**ಬೆಣ್ಣೆಗಾರಿಗೆ** (ನಾ). ಬೆಣ್ಣೆ ಹಾಕಿ ತಯಾರಿಸುವ ಒಂದು ಬಗೆಯ ಗಾರಿಗೆ : ಅಣ್ಣೆವಾಲೊಳು ಸೊಜ್ಜಿಗೆಯಂ ನನೆಹಿಕ್ಕಿ ಬಳಿಕ ಸಣ್ಣನ[ಪ್ಪ]ಂತೆ ಕಣಿಕವ ಮಾಡಿಯದಱ ಸರಿ ಬೆಣ್ಣೆ ನಸುಗೆನೆಯಿಕ್ಕಿ ಗಾರಿಗೆಯ ಮಾಡಿ ಹೊಸತುಪ್ಪದೊಳು ಬೇಯಿಸಿದೊಡೆ ಬೆಣ್ಣೆಗಾರಿ[ಶಾಕಾಂ. ಯ]ಗೆಯೆಂಬ ಹೆಸರನುಱಿ ಪಡೆವುದು (ಸೂಪಶಾ. ೦-೨೩). [ಬೆಣ್ಣೆ + ಗಾರಿಗೆ$_1$]

**ಬೆಣ್ಣೆಗಾಸು** (ಕ್ರಿ). ಬೆಣ್ಣೆಯನ್ನು ಕಾಯಿಸು ; ತುಪ್ಪ ಮಾಡು : ಬೆಣ್ಣೆಗಾಸಿದಾಮೋದ ಸುಗಂಧಪರಿಮಳಂ ನಾರ್ಪ ತುಪ್ಪಮುಂ . . . ಲಡ್ಡುಗೆ ಮಂಡಗೆ ಮೊದಲಾಗೊಡೆಯ ಪದಿನೆಂಟುತೆಱದ ಭಕ್ಷ್ಯರೂಪಂಗಳುಮಂ . . . ಬಡ್ಡಿಸಿದೊಡೆ (ವಡ್ಡಾರಾ. ೭೪-೦೫). [ಬೆಣ್ಣೆ + ಕಾಸು$_1$]

**ಬೆಣ್ಣೆಗೇಸಿ** (ನಾ). ಒಬ್ಬಾತನ ಹೆಸರು : ಕೇಶವಯ್ಯನುಂ ಪೊಣ್ಣೆಪೋಜರುಂ ಮಧುಕಾಮೋಜರುಂ ಬೆಣ್ಣೆಗೇಸಿಯುಂ (ಎಕ. VI, ಕಳಸ. ೩-೦೦ ; 899).

[ ? ]

**ಬೆಣ್ಣೆತೆಂಗು** (ನಾ). ತೆಂಗಿನಲ್ಲಿ ಒಂದು ಬಗೆ ; ಮೃದುವಾದ ತೆಂಗು : ಬೆಣ್ಣೆತೆಂಗಿನಲ್ಲಿ ಎಣ್ಣೆ ಬಹಳವಿರುತ್ತದೆ (ರೂಢಿ). [ಬೆಣ್ಣೆ + ತೆಂಗು$_2$]

**ಬೆಣ್ಣೆದಲೆಗ** (ನಾ). ಒಂದು ಬಗೆಯ ಪಕ್ಷಿ : ಕೆಲವ ಪಾರಿವ ಗುರುಸಕ್ಕಿ

ಟಟ್ಟಿಭ ಬೆಣ್ಣೆದಲೆಗನು ಕಂಟಕನಲ್ಲಿಹವು (ವಾರ್ಧಕಾ೦. ೧-೬೩). 'ಬೆಣ್ಣೆ ಗರಗ$_2$' ವರಾ. [ ? ]

**ಬೆಣ್ಣೆದಳಗು** (ನಾ). ಬೆಣ್ಣೆ ಹಾಕಿ ತಯಾರಿಸಿದ ಒಂದು ಬಗೆಯ ಭಕ್ಷ್ಯ: ಎಣ್ಣೆವೂರಿಗೆ ಸುಫೇಣಿ ಮುಸುಕೊಡೆ ಬೆಣ್ಣೆದಳಗು ಹಾಲುಂಡೆ ಸಕ್ಕರೆ ಮಂಡಗೆ . . . ಎನಿಪ್ಪವಂ . . . ಪರವೆ ಗಡಣಿಸಿದಳಾಗ (ಕೇರಮ.೧೦–೨೯).

[ಬೆಣ್ಣೆ + ತಳಗು]

**ಬೆಣ್ಣೆಬಳಪ** (ನಾ). (ಕಪ್ಪುಹಲಗೆಯಂ ಮೇಲೆ ಬರೆಯಲು ಉಪಯೋಗಿಸುವ) ಮೃದುವಾದ ಬಳಪ : ಬೆಣ್ಣೆಬಳಪವಿದ್ದರೆ ಚೆನ್ನಾಗಿ ಬರೆಯಬಹುದು (ಕಂಠ). [ಬೆಣ್ಣೆ + ಬಳಪ]

**ಬೆಣ್ಣೆಬಿದುರು** (ನಾ). ಒಂದು ಬಗೆಯ ಸೊಪ್ಪು: "ವಿಶಲ್ಯಾ, ಅಗ್ನಿಶಿಖಾ . . . ಬೆಣ್ಣೆಬಿದುರು ಸೊಪ್ಪು, ಅಗ್ನಿಶಿಖೆ" (ಸಿದ್ಧಾಂತಿ. ೦೯೩).

[←ತೆಲು. ವೆನ್ನವೆದುರು]

**ಬೆಣ್ಣೆಮಾತು** (ನಾ). (ಆಲಂ) (ಪುಸಲಾಯಿಸುವುದಕ್ಕಾಗಿ ಆಡುವ) ಮೃದುವಾದ ಮಾತು ; ನಯವಾದ ನುಡಿ : ಎದುರಿಗೆ ಮಾತ್ರ ಯಾರೂ ಏನೂ ಅನ್ನೋದಿಲ್ಲ—ಬೆಣ್ಣೆಮಾತನ್ನಾಡ್ತಾರೆ (ಬಂದೆಕೆ. ೨೨).

[ಬೆಣ್ಣೆ + ಮಾತು$_1$]

**ಬೆಣ್ಣೆಯೂರ್** (ನಾ). ಒಂದು ಊರಿನ ಹೆಸರು : ಬೆಣ್ಣೆಯೂರ ದೇವಗಣನುಂ ಮಳ್ಳೂರದ ಪೆರ್ಮ್ಮಾಡಿಗಾವುಣ್ಣನುಂ (ಎಕ. VI, ಕಡೂ. ೩-೦೯ : ೧೧೧ ?). [ಬೆಣ್ಣೆ + ಊರ್]

**ಬೆಣ್ಣೆವಿಟ್ಟು** (ನಾ). ಬೆಣ್ಣೆ ಬೆರಸಿದ ಹಿಟ್ಟು : ಆ ಹಲ್ಲೆಯಂ ಸಲೆ ಸುರುಳಿ ಬೆಣ್ಣೆವಿಟ್ಟಂ ತೊಡೆದು ಬೆರಳುದ್ದದೊಳು ಕೊಯ್ದು ಬೆಣ್ಣೆಗಾಸಿದ ತುಪ್ಪದೊಳು ಪಾಕ ಮಾಡೆ ಗುಜ್ಜುರಿವೇಣಿವೆಸರಾದುದು (ಸೂಶಾ. ೧-೯೩).

[ಬೆಣ್ಣೆ + ಪಿಟ್ಟು]

**ಬೆತಿರೇಕ** (ನಾ). ವಿರೋಧ ; ವ್ಯತ್ಯಾಸ : ವ್ಯತಿರೇಕಂ—ಬೆತಿರೇಕಂ, ವ್ಯಥೆ—ಬೆತೆ (ಶಮದ. ಪ. ೨೬೩ ಪ್ರಯೋ) ; ವ್ಯತಿರೇಕ, ಬೆತಿರೇಕ (ಶಬ್ದಾಮ. ೦೬೦ ಪ್ರಯೋ). [< ಸಂ. ವ್ಯತಿರೇಕ]

**ಬೆತೆ**, ವೆತೆ (ನಾ). ೧. ದುಃಖ; ಅಳಲು; ವ್ಯಥೆ : ವ್ಯತಿರೇಕಂ-ಬೆತಿರೇಕಂ, ವ್ಯಥೆ_ಬೆತೆ (ಶಮದ. ಪ. ೨೬೩ ಪ್ರಯೋ) ; ವ್ಯತಿರೇಕ, ಬೆತಿರೇಕ; ವ್ಯಥಾ, ಬೆತೆ (ಶಬ್ದಾಮ. ೦೬೦ ಪ್ರಯೋ) ; ನೇಹಗಡಲ ತರೆಗಳೆದ್ದು ಬೆತೆಯ ಕಿಡಿಯನಳಿಸದಿರಲು ಜೀವಿಲೋಕವುಳಿವುದೆಂತು (ಕಬಿಕಾ. ೦೯-೨). ೨. ನೋವು; ಬೇನೆ: ವಿತತ ಕಷ್ಟವಡಾಗೆ ಹೆರಿಗೆಯ ಬೆತೆಯ ಸೈಸದೆಯವರು (ರಾಷ್ಟ್ರಸಂ. ೯-೨-೦೦೯). **ವೆತೆ** : ಅವಳ ಬಾಟನ್ ಮುತ್ತಿ ಮುಸುಱಿರ್ಪ ಕೇಡುಗಳ ವೆತೆಯನ್, ಅವಳಿಂದಮ ಕೇಳ್ವಂ (ಬದ್ಧಕ್ರ. ೩೩-೭೦೩). [< ಸಂ. ವ್ಯಥಾ]

**ಬೆತೆಗೊಳಿಸು** (ಕ್ರಿ). ದುಃಖಪಡಿಸು; ವ್ಯಥೆಗೊಳಿಸು : ಗತಿರಹಿತರಿರವು ತನ್ನಂ ಬೆತೆಗೊಳಿಸಲ್ಕಾಳಲಾಱದುದ್ಧರಣಾರ್ಥಂ ದ್ರುತಗತಿಯಿನವರ ನೆಲೆಗೇಧೃತವ್ರತಂ ನಡೆವ ಭಂಗಿಯೇನಚ್ಚರಿಯೋ (ಪಶ್ಚಪಂ. ೭-೩೨).

[ಬೆತೆ + ಕೊಳ್$_1$ + —ಇಸು$_3$]

**ಬೆತ್ತ** (ನಾ). ೧. ಬಿದಿರಿನಲ್ಲಿ ಒಂದು ಬಗೆ ; ಸಣ್ಣಬಿದಿರು : ಸತ್ತಿಗೆ ಗಗ್ಗರಂ . . . ಪಾವುಗೆ ಪಂಚಮಸ್ವನಂ ಬೆತ್ತದ ಕೋಲಿವೊಂದಿ ನಿಲೆ ಸಾಧಕಿ ಬತ್ತಲೆ ಬರ್ಪಳೊಪ್ಪಿದಳ್ (ಕಾವ್ಯಸಾ. ೩೩೩ ಬಂದ್ರಕ) ; ಬೆತ್ತ ಬಿದಿರಿಡಿದಡಸಿ ಬೆಳೆವ ಮೆಳೆಗಳ ನಡುವೆ . . . ಏಕೆ ಓಯೆನ್ನೆ ಮಲ್ಲಯ್ಯ ಎಂದತ್ತನು (ಸಿದ್ಧರಾ. ೨-೬೦); ಮುತ್ತಿದವು ಶರವಿಭದ ಮೆಯ್ಯಲಿ ಬೆತ್ತ ಬೆಳೆದದ್ರಿಯವೊಲಿದ್ದುದು ಮತ್ತಗಜ (ಕುಮಾರವ್ಯಾಸ. ೩-೩೯). ೨. (ಬಿದಿರಿನ) ಕೋಲು ; ಸೆಳೆ ; ಛಡಿ : "ಬೆತ್ತ_ವೇತ್ರ=ಕೋಲು" (ಶಬ್ದಕೋ. ೩೨); ದಂಡಿಗೆ ಬೆತ್ತ ಹಿಡಿಯುವುದಕ್ಕೆ ಮಂಡೆ ಮಾಚಿ ನಾಚುತ್ತಿದ್ದೆ (ಪುರಂದ. ೧-೯೩-೨) ; ಚಿತ್ತವರಸಿನ ಕರವ ಬೆತ್ತ ತಾ ಪಣೆದಂತೆ ಕುತ್ತ ಹೋಗುವುದು ಅರಸೊಲಿಯೆ ಮುನಿದರೆ ಕತ್ತು ಹೋಗುವುದು (ಸರ್ವಜ್ಞ. ೬೨೯).

[< ಪ್ರಾ. ವೇತ್ತ, ವಿತ್ತ./ಪಾಲಿ. ವೇತ್ತ./ಸಂ. ವೇತ್ರ]

**ಬೆತ್ತದ ಬಳ್ಳಿ** (ನಾ). ಒಂದು ಬಗೆಯ ಸಸ್ಯ: ಬೆತ್ತದ ಬಳ್ಳಿ, ಹಾವುಬೆತ್ತ, ನಾಗಬೆತ್ತ (ವೃಕ್ಷಶಿ. ೦೩-೨೬೯). [ಬೆತ್ತ + ಬಳ್ಳಿ]

**ಬೆತ್ತಲಿಗ** 'ಬತ್ತಲಿಗ' ನೋ.

**ಬೆತ್ತಲೆ$_1$** 'ಬತ್ತಲೆ$_1$' ನೋ.

**ಬೆತ್ತಲೆ$_2$** 'ಬತ್ತಲೆ$_2$' ನೋ.

**ಬೆತ್ತಲೆಗ** 'ಬತ್ತಲೆಗ' ನೋ.

**ಬೆತ್ತಲೆಗಣ್ಣು** 'ಬತ್ತಲೆಗಣ್ಣು' ನೋ.

**ಬೆತ್ತವರಿಗೆ** (ನಾ). ಬಿದಿರಿನಿಂದ ಮಾಡಿದ ಗುರಾಣಿ : ಹಲಗೆ ಹಕ್ಕರಿಕೆ ಕೊಪ್ಪರಿಕೆ ಬದ್ದರ ಭಂಡಿ ತಳಿ ಬೆ[ಪಾಠಾಂ. ವೆ]ತ್ತವರಿಗೆ ಮಱೆಯೊಳು ಬಿಲುಗಾಜರು ಕಮ್ಮ ಹರಣವೆರಸು ನಿಂದು ಕಲಿರಾಮನ ಕೆಣಕಿದರು (ಕುಮಾರರಾ. ೯೩-೦೦೬). [ಬೆತ್ತ + ವರಿಗೆ]

**ಬೆತ್ತಬೆಟ್ಟಾಗು** (ಕ್ರಿ). (?) : ದ್ರೋಣಾಚಾರ್ಯರ ಶಿಷ್ಯರೆಲ್ಲಂ ಬೆತ್ತಬೆಟ್ಟಾಗೆ ಗೂಡುಗೊಂಡು ನೋಡುತಿರ್ಪುದುಂ (ರಮಾರ್ಕಕ್ಕ. ೦೩-೩೩). [?]

**ಬೆದಂಕು** 'ಬೆದಕು$_1$' ನೋ.

**ಬೆದಂಡೆ** (ನಾ). [ಕಾವ್ಯವಿ] ಕಂದ, ವೃತ್ತಗಳು ಬರುವ ಒಂದು ಬಗೆಯ ಪ್ರಾಚೀನಕಾವ್ಯಪ್ರಕಾರ : "ಬೆದಂಡೆ = ವೈದಂಡಿಕಂ" (ಶಮತ. ಶಂ. ೨) ; ನುಡಿಗೆಲ್ಲಂ ಸಲ್ಲದ ಕನ್ನಡದೊಳ್ ಚತ್ತಾಣಮುಂ ಬೆದಂಡೆಯುಮೆಂದೀಗಡಿನ ನೆಗಟ್ತೆಯ ಕಬ್ಬದೊಳೊಡಂಬಡಂ ಮಾಡಿದರ್ ಪುರಾತನಕವಿಗಳ್ (ಕವಿರಾ. ೧-೩೩); ಕೊಟಿಲ ಬೆದಂಡೆಯ ಪಗರಣದಟಿಗಳ ಪರದೈವ ಮಾಡುವವರ್ಗಳ ಮಾತಿಂಗುಟಿವರ ಪರಜಾತಿಯವರ್ಗಳತುಳಿಗಳ ದೆಸೆಬೋಗಲೀಯಲಾಗದು ಪಥುವಂ (ಶುದತಿ. ೬-೨೯); ಬೀಣೆಯ ಕೊಟಿಲ ಬೆದಂಡೆಯ ಗಾಣರ ಬಱಿವಿಡಿದು ಸುಟಿದು ಕುಂ[ದಿಂ] ಕಥಕಶ್ರೇಣಿಯೊಡನೆಳಸಿ ಬಱಸುವ ನಾಣಲಿಗಳನೀ ಬುಧಾಳಿಯೊಳ್ ಪುಗಿಸುವುದೆ (ಸುಕುಮಾ. ೨-೨೯) ; ದಂಡದ ಬೇಳಂಬಿಗರ ಬೆದಂಡೆಯ ತಳಿಗೆಯ ಮಹೇಂದ್ರಜಾಲಿಗಳ ಮನಂಗೊಂಡೆಸೆವ ನೆಗ[ಟ್ಟೆ]ಯ ತಂಡಂಗಳಿವಾವ ದೆಸೆಯೊಳಂ ಕಡುರಯ್ಯಂ (ಪರ್ಶ್ವಪು. ೦೦-೨೦) ; ಬೆದಂಡೆಯೊಳಾದೊಡಂ ಪಾಡೆಂಬುದಂ . . . ಸೈರಿಸಂ (ಕಬ್ಬಿಗಾ. ೦೯೯) ; ಪಾಡುವರಲ್ಲಿ ಬೆದಂಡೆ ತೊತ್ತಸೆತ್ತಬಿಸುವೆನೆಂದು ಪೋಪ ನೆವಮುಂ ಸಮಕಟ್ಟುವರಲ್ಲಿ ಪಾಣ್ಬೆಯರ್ (ಸೂಕ್ತಿಸು. ೬-೦೩೯). [ ? ]

**ಬೆದಂಡೆಗಬ್ಬ** (ನಾ). =ಬೆದಂಡೆ : ಕಂದಮುಮಮಳಿನ ವೃತ್ತಮುಮೊಂದೊಂದೆಡೆಗೊಂ[ಡು] ಜಾತಿ ಜಾಣೆಸೆಯೆ ಬೆಡಂಗೊಂದಿವೞೊಳವುರೆ ಪೇೞಲ್ ಸುಂದರರೂಪಾ ಬೆದಂಡೆಗಬ್ಬಮದಕ್ಕುಂ (ಕವಿರಾ. ೧-೩೯) ; ಪಾಡುಗಳಿಂದಂ ತಱಿಸಲೆ ಮಾಡಿದುದಂ ಪಾಡುಗಬ್ಬಮೆಂದು ಬುಧರ್ ಕೊಂಡಾಡುವರದಱಿಂದಲ್ ಮೆಲ್ಪಾಡುಂ ರೂಢಿಯ ಬೆದಂಡೆಗಬ್ಬಮುಮಕ್ಕುಂ (ಕಾವ್ಯಾವ. ೯೩೯).

[ ಬೆದಂಡೆ + ಕಬ್ಬ$_1$ ]

**ಬೆದಕಾಟ** (ನಾ). ಹುಡುಕುವುದು ; ಶೋಧನೆ: ಬೆದಕಾಟ ಬದುಕೆಲ್ಲ ; ಚಣಚಣವು ಹೊಸ ಹಸಿವು (ಮಂಕುತಿ. ೨೦೬). [ ಬೆದಕು$_1$ + ಆಟ ]

**ಬೆದಕಿಸು** (ಕ್ರಿ). ಪರಿಶೋಧನೆ ಮಾಡು : ವೀರೇಶ ಶರಣಾಗೆನಲ್ ಪ್ರತ್ಯಕ್ಷನಾಗಿ ನೇತ್ರಾಗ್ನಿಯಿಂ ಬೇಗ ಬೆದಕಿಸಿ ಕೊಟ್ಟು ರಾಗದಿಂ ಜಯರುದ್ರ ದೀಪಗಂಟೆಯ ವೀರಭದ್ರ ಕರುಣಾಸಮುದ್ರ (ಗುರುಬಾ. ೦೦-೨೩).

[ ಬೆದಕು$_1$ + — ಇಸು$_3$ ]

**ಬೆದಕು$_1$**, ಬೆದಂಕು (ಕ್ರಿ). ೧. ಹುಡುಕು ; ಶೋಧಿಸು : "ಬೆದಕು—ಅನ್ವೇಷಣೇ (ಹುಡುಕು)" (ಕಮಧಾ) ; ಸರೋವರಾಂಬುವನಿತಂ ತವೆ ತುಳ್ಕಿ ರಸಾತಳಂಬರಂ ಬೆದಕಿಯುಮೆಂತುಮಪ್ಪಳಿಸಿ ಕೋದಪೆನೇಟ್ಟುದಿದೇಂ

ಸುಯೋಧನಾ (ಶಂಕಭಾ. ೧೩-೮೦); ಬೆದಕದಿರು ಬೆದಕದಿರು ಬೆದಕಿದೊಡೆ ಹುರುಳಿಲ್ಲ (ಬಸವ. ೨೯). ೨. ಆಯು; ಆರಿಸು : ಪಲರುಂ ಚೀಯೆಂಬಿನಂ ಸೂಸಿದೆಂಜಲವುಟ್ಟಗಳನಾವಗಂ ಬೆದಕಿ ತಿಂದು (ಸುಕುಮಾ. ೯-೫೭). ೩. ಎತ್ತು ; ಮೇಲಕ್ಕೆಬ್ಬಿಸು : ಕಲ್ಲ ಬೆದಕದೆ ಕಪ್ಪೆಯು ಸೋಂಕದೆ ಅಲ್ಲಿಯ ಉದಕವ ಕುಡಿಯಬಲ್ಲಡೆ ಅದು ಯೋಗ (ಅಪಸಂ. ೦೨೩-೫೭೦). ೪. ಕೆದಕು; ಕೆದರು : ಎರಡುಕಾಲೊಳ್ ನೆಲನಂ ಬೆದಕುತ್ತುಂ ನಿಲೆ (ಅಶ್ವಶಾ. ೪-೩೦) ; ಬೆಂದುದ ಬೆದಕಿ ನೋಯಿಸಬೇಡ (ಕುಮಾವ್ಯಾ. ೯-೩೦). ೫. ಪರ್ಯಾಲೋಚಿಸು ; ವಿವೇಚಿಸು : ಅವನು ಅವುಗಳ ವೈಶಿಷ್ಟ್ಯವನ್ನು ಕುತೂಹಲದಿಂದ ಬೆದಕತೊಡಗಿದ (ಭಾಗಿತ. ೦೯೯). ಬೆದಂಕು : ೧. ತನ್ನ ನಿಶಿತ ನಾರಾಚಪರಂಪರಾಭಿಘಾತದೊಳ್ ತಗ್ಗಿ ನುಗ್ಗುನುಱಿಯಾಗಿ ಕಿಡೆದ ತೇರಪಲಗೆಗಳೊಳ್ ಮೆಯ್ಗರೆದನ ಗೆತ್ತು ಬೆದಂಕಿ ನೋಡಿಯುಂ (ಗದಾಯು. ೬-೨೮ ವ).

ಬೆದಕಿ ನೋಡು = ಹುಡುಕು ; ಅನ್ವೇಷಣೆ ಮಾಡು ; ಪರಿಶೋಧಿಸು : ರಾಜಮಂದಿರದೊಳು ಬೆದಕಿ ನೋಡಿದಳು ಸರೋಜಾಕ್ಷಿ ತನ್ನ ವಲ್ಲಭನ (ಮೋಹತ. ೯-೩) ; ಮಿಗೆ ಮಡಿದ ವೇತಂಡಂಗಳಂ ನೂಂಕಿ ನೋಡಿ ರಥಸಂದೋಹದಿಡುಕಿನೊಳ್ ಬೆದಕಿ ನೋಡಿ (ಶಂಪು. ೪೦-೨೮) ; ಕುನಿದ ತನ್ನ ಹೃದಯವನ್ನು ಬೆದಕಿ ನೋಡಿದಳು (ಮೂಟಿಬ್ಬ. ೦೦೫).

[ದೇ.॥ ತೆಲು. ವೆದಕು, ವೆತಕು, ವೆನಕು, ವೆದುಕು, ವೆತುಕು ; ಕುರುಖ್. ಬೆದ್ನಾ ; ಮಾಲ್ತೊ. ಬೆದೆ ]

**ಬೆದಕು₂** (ನಾ). ೧. ಕೆರೆತ ; ಗೀರುವಿಕೆ : "ನಖಘಾತದಲ್ಲಿ ಬೆದಕಕ್ಕು" (ಶಬ್ದಕೌಂ. ೬೦). ೨. ಅಪೇಕ್ಷೆಯನ್ನು ಅಧಿಕಮಾಡಿಕೊಳ್ಳುವುದು : ದ್ಯೂತದಲಿ ಮದ್ಯದಲಿ ಘನಕಂಡೂತಿಯಲಿ . . . ದುರ್ನೀತಿಯಲಿ ಪರಸತಿಯರಲಿ ಸಂಪ್ರೀತಿ ಬಲಿವುದು ಬೆದಕ ಬೆದಕಲು ರಾಯ ಕೇಳೆಂದ (ಕುವ್ಯಾಉ. ೪-೯೫). [ < ಬೆದಕು₁ ]

**ಬೆದಗತನ** (ನಾ). ಕಾಮುಕತೆ : ಸುದತಿಯನು ಕಂಡೊಡನೆ ಚಿತ್ತವು ಚದುರದಲ್ಲಿಯ ಸೆಲಸೆ ಖಲಪತಿ ಬೆದಗತನದಿಂದೌಂಕಿ ಧನುವಿಗೆ ಹೆದೆಯನೇರಿಸುವ (ರಾಮಾಸಂ. ೦-೪-೦೮). [ < ಬೆದೆ + —ತನ ]

**ಬೆದಡು** (ನಾ). (?) : ವೇದೋಕ್ತ ವೀರಶೈವ ಸರಣಿಯಂ ದುಷ್ಕೃತ್ಯಮೆಂಬ ಗಿಡು ಬಳ್ಳಿ ಪುಲ್ಮರ ಪೊದಱು ಕಲ್ ಮುಳ್ ಬೆದಡುಗಳೊಂದದ ವೋಲ್ ಸುಸರವುನಾಗಿಸುತೆ (ಚನ್ನರಾ. ೪-೨೭). [ ? ]

**ಬೆದಡೆ** (ನಾ). "ಸಂಬಾಧ, ಗೊಡವೆ" (ರೀಕ್ನ ಕೋ. ಕೋಶ) : ಇದನಱಿದು ಭಜಿಸು ಮದನನ ಮದಹರನ ನೀನು ಕುದಿಯದಿರು ದೈವಗಳ ಬೆದ[ಪಾಠಂ. ಗ]ಡೆಯಂ ಬಿಡು ನೀನು (ರೀಕ್ನ ಕೋ. ೦೦-೮). [ ? ]

**ಬೆದಬೆದ** (ನಾ). ಒಂದು ಅನುಕರಣ ಶಬ್ದ : 'ಬೆದಬೆದನೆ' ಪರಾ.

ಬೆದಬೆದ ಬೇ, ಬೆದಬೆದಂ ಬೇ, ಬೆದವೆದ ಬೇ = ಅತಿಯಾಗಿ ನೋಯು, —ಸಂತಾಪಗೊಳ್ಳು : ಗುಱುಗುವೆಮ್ಮೊಂದು ಪಸಿದಿರ್ದು ಬೆದಬೆದ ಬೆಂದಿನಿಬರ್ ಕಟ್ಟಕೊಳ್ವ ಕಣಿಯೆಂ ಪೇಱಿಂ (ಆದಿಪು. ೯-೪೦) ; ಬೆದಬೆದ ಬೇಯುತ್ತುಂ ತಪದೊಳ್ ನವೆದು (ಶಾಂತಿಪು. ೮-೦೩೦) ; ನಡುವೆ ರೋಗಗಳಾಗೆ ಬೆದಬೆದಂ [ಪಾಠಾಂ. ಬೆದಬೆದನೆ]ಬೆಂದು (ಬಿಂತೋರ. ಹ. ೫೦೨-೬) ; ಬೆದಬೆದಂ ಬೇಯ ಬೇಸತ್ತು (ಕಕ. I, ೪೯-೪೩ ; 1423) ; ಎನಿತಂ ಬೆದಬೆದ ಬೆಂದವಯ್ ಯೆನಿತಂ ಸುಡುಸುಡನೆ ಪುಗುವೆಯ್ ಜೀವನೆ . . . ಎನಿತಂ ಭವಗಹನದೊಳಗೆ ಬಟ್ಟನೆ ಬರ್ಪಯಿತ್ (ಅಪಪು. ೨-೬೨); ಪಾರ್ವಂ ಮಲ್ಲಲನೆ ಮಱುಗಿ . . . ಬೆದವೆದ ಬೆಂದು (ಸುಕುಮಾ. ೨-೦೦).

**ಬೆದಬೆದನೆ** (ಅ). ಒಂದು ಅನುಕರಣಾವ್ಯಯ ; ಅತಿಯಾಗಿ; ಬಹಳವಾಗಿ : ಪೆಮಱು ಸಿರಿಯಾಳಂ ಹೃದಯದಲಿ ಬೆದಬೆದನೆ ಕುದಿವುತ್ತ ಶೋಕಂ ಪದುಳಿಸದೆ ತಲೆವಾಗಿ ಲಜ್ಜಿಸಿಯಳಲುತಿಂತಿರಲು (ಬಸಪು. ೨೨-೬೬) ; ಮದಮತ್ಸರಗಳಿಂದ ಬೆದಬೆದನೆ ಬೆಂದೆನಯ್ಯ (ಸಿದ್ಧೇವ. ೪೫-೦೨೭).

[ಬೆದಬೆದ + — ಅನ್₁]

**ಬೆದರಟ್ಟು** 'ಬೆದಱಟ್ಟು' ನೋ.

**ಬೆದರಿಕೆ** 'ಬೆದಱಿಕೆ' ನೋ.

**ಬೆದರಿಸು** 'ಬೆದಱಿಸು' ನೋ.

**ಬೆದರು₁** 'ಬೆದಱು₁' ನೋ.

**ಬೆದರು₂** 'ಬೆದಱು₂' ನೋ.

**ಬೆದರುಗಣ್ಣು** 'ಬೆದಱುಗಣ್' ನೋ.

**ಬೆದರುನೋಟ** 'ಬೆದಱುನೋಟ' ನೋ.

**ಬೆದರುಬೊಂಬೆ** (ನಾ). = ಬೆದರ್ಗೊಂಬೆ : ಹೊಲದಲ್ಲಿ ಬೆದರುಬೊಂಬೆ ಇಟ್ಟಿದ್ದಾರೆ (ರೂಢಿ). [ಬೆದರು₂ (< ಬೆದಱು₂) + ಬೊಂಬೆ]

**ಬೆದರ್ಕೆ** 'ಬೆದಱಿಕೆ' ನೋ.

**ಬೆದರ್ಗೊಂಬೆ** (ನಾ). ಹೊಲ ಗದ್ದೆಗಳಲ್ಲಿ ಹಕ್ಕಿಗಳನ್ನು ಹೆದರಿಸಲು, ಹುಲ್ಲು ಮೊದಲಾದುವುಗಳಿಂದ ಮಾಡಿ ಇಡುವ ಆಕೃತಿ : ಬೆದರ್ಗೊಂಬೆಯಂ ಕಂಡು ಹೆದರುವ ಮಕ್ಕಳೋಲಂತೆ (ಶ್ರೀರಾಪಟ್ಟಾ. ೬೮೪-೦೬೫).

[< ಬೆದರು₂ + ಗೊಂಬೆ₁]

**ಬೆದರ್ಮಳೆ** (ನಾ). ಹೆದರಿಕೆಯನ್ನು ಹುಟ್ಟಿಸುವ ಮಳೆ ; ಭಾರಿಮಳೆ : ಬೆದರ್ಮಳೆ ಬಿಸಿಲುಮಳೆ ಸರಿಸೋನೆ ಸಿಡಿಲಿನ ಘುಸಣಿವಳೆಯಲಿ ಘಾಸಿಯಾದುದು ಜಗದ ಜನನಿಕರ (ಕೊರಟಾ. ೪-೬-೬).

[< ಬೆದಱು₂ + ಮಳೆ (< ಮೞೆ[3])]

**ಬೆದರ್ವುಲ್ಲೆ** (ನಾ). ಹೆದರಿದ ಜಿಂಕೆ : ಬೆದರ್ವುಲ್ಲೆಯನೇಳಿಪ ಬೆಳತಿಗೆಗಣ್ಣದಿಗೆ ವೆಱೆಯ ಬಿಂಕಂಗಿಡಿವಧರಂ (ಜಯನೃ. ೨-೮). [< ಬೆದಱು₁ + ಪುಲ್ಲೆ₁]

**ಬೆದಲ್** 'ಬೆದ್ದಲ್' ನೋ.

**ಬೆದಲು** 'ಬೆದ್ದಲ್' ನೋ.

**ಬೆದವಟ್ಟೆ** (ನಾ). (?) : ಹಡುಪಣ ಮೇರೆ ಬೆದವಟ್ಟೆಯ ಹೊಲ (ಕಇಅ. ೬೬-೦೨-೫೬ ; 1170). [ ? ]

**ಬೆದಱಟ್ಟು, ಬೆದರಟ್ಟು** (ಕ್ರಿ). ಹೆದರಿಸಿ ಓಡಿಸು ; ಹೆದರಿ ಹೋಗುವಂತೆ ಬೆನ್ನಟ್ಟು : ಬಾಣಮಂ ಪೊಸಮಸೆಯಂಬಿನಿಂ ಕಡಿದು ಕಟ್ತಲೆಯಂ ಬೆದಱಟ್ಟಿ (ಶಂರಾಪು. ೩-೫೪) ; ಸದಾಶಿವನೆಂದರೆ ಬೆಧಱಟ್ಟಿ ಸುಡುವುದು ಮಾಣ್ಬುದೆ (ಬಸವ. ೬೬೦) ; ವನಾಂತರಾಂತರದ ಕಟ್ತಲೆಯಂ ಬೆದಱಟ್ಟುತುಂ (ಜಗಪ. ೦೭-೦೦೦). **ಬೆದರಟ್ಟು** : ಆಗ ಕೊಟ್ಟಡಿಯ ಮೇಲುಭಾಗದಲ್ಲಿದ್ದ ಒಂದು ಕಿಟಕಿಯಿಂದ ಕಷ್ಟಪಟ್ಟು ಒಳಗೆ ನುಗ್ಗುತ್ತಲಿರುವ ಬೆಳಕನ್ನು ಒಳಗಿನ ಕತ್ತಲೆಯು ಬೆದರಟ್ಟುತ್ತಲಿರುವಂತೆ ಅವನಿಗೆ ತೋರಿತು (ರಾಜಾಮು. ೬೮).

[ಬೆದಱು₁ + ಅಟ್ಟು₂]

**ಬೆದಱಾಡಿ** (ನಾ). ಭಯದಿಂದ ಮಾತನಾಡುವವನು ; ಹೆದರಿ ನುಡಿಯುವವನು : ಕಮಲಜ ಜ್ಞಾನದೃಷ್ಟಿಲಿ ನೋಡಿ ತನ್ನವನೆಂದಱಿದು ಬೆದಱಾಡಿಗಳ ಸಂತೈಸಿ ಕಳುಹಾತ (ಕೃಹಾಕ. ೪-೨೨).

[ಬೆದಱು₂ + — ಆಡಿ₁]

**ಬೆದಱಿಕೆ, ಬೆದರಿಕೆ, ಬೆದರ್ಕೆ** (ನಾ). ೧. ಭಯ ; ಭೀತಿ ; ಅಂಜಿಕೆ : ಹರಹಿದನು ಬೆದಱಿಕೆಯನಹುದೋ ಹಿರಿಯನೈ ನೀನಾತ ಸಾಕ್ಷಾತ್ ಪರಮಪುರುಷನು (ಕೊರಟಾ. ೩-೬-೪೭). **ಬೆದರಿಕೆ** : ೧. ಅದಷ್ಟುವಟ್ಟಿಗೆ ಬೆದರಿಕೆ ಯಿಲ್ಲಿಟ್ಟು ಗರತಿಯರ ಗುಣನಡತೆ ಕಲಿಸಿದ್ದರೆ ಹೀಗಾಗುತ್ತಿತ್ತೆ (ಮರಳ. ೮೨). ೨. ಹೆದರಿಸುವಿಕೆ : ದಿಟ್ಟರಾದ ಹುಡುಗರು ಹುಚ್ಚನ ಬೆದರಿಕೆಗೆ ಲಕ್ಷ್ಯ ಕೊಡದೆ . . . ಹುರಿಗಳಿಂದ ಕಟ್ಟಲಾರಂಭಿಸಿದರು (ರಾಬೂ. ೨೨). **ಬೆದರ್ಕೆ** : ೧. ಬಳಿಕ ಮನದೊಳ್ಪೆಳಂಚುವ ಬೆದರ್ಕೆಯಂ ಬಿಟ್ಟು (ಕೈಪಿಡಾ. ೨೬-೦೦).

ಬೆದರಿಕೆ ಹಾಕು = ಹೆದರಿಸು ; ಭಯಪಡಿಸು ; ಅಂಜಿಸು : ಸುಳ್ಳೇ

ಸುಯೋಧನಾ (ಶಂಕಭಾ. ೦೩-೫೦); ಬೆದಕದಿರು ಬೆದಕದಿರು ಬೆದಕಿದೊಡೆ ಹುರುಳಿಲ್ಲ (ಬಸವ. ೨೮). ೨. ಆಯು; ಆರಿಸು : ಪಲರುಂ ಚೇಯೆಂಬಿನಂ ಸೂಸಿದೆಂಬಲವುಟ್ಟಿಳನಾವಗಂ ಬೆದಕಿ ತಿಂದು (ಸುಕುಮಾ. ೪-೫೭). ೩. ಎತ್ತು : ಮೇಲಕ್ಕೆಬ್ಬಿಸು : ಕಲ್ಲ ಬೆದಕದೆ ಕಪ್ಪೆಯು ಸೋಂಕದೆ ಅಲ್ಲಿಯು ಉದಕವ ಕುಡಿಯಬಲ್ಲಡೆ ಅದು ಯೋಗ (ಅವಕಂ. ೦೨೩-೫೬೦). ೪. ಕೆದಕು; ಕೆದರು : ಎರಡುಕಾಲೊಳ್ ನೆಲನಂ ಬೆದಕುತ್ತುಂ ನಿಲೆ (ಅಕ್ಕಚ. ೪-೬೦) ; ಬೆಂದುದ ಬೆದಕಿ ನೋಯಿಸಬೇಡ (ಕುವ್ಯಾಪಿ. ೯-೩೦). ೫. ಪರ್ಯಾಲೋಚಿಸು ; ವಿವೇಚಿಸು : ಅವನು ಅವುಗಳ ವೈಶಿಷ್ಟ್ಯವನ್ನು ಕುತೂಹಲದಿಂದ ಬೆದಕತೊಡಗಿದ (ಡಾಗಿತ. ೦೮೮). ಬೆದಂಕು : ೧. ತನ್ನ ನಿಶಿತ ನಾರಾಚಪರಂಪರಾಭಿಘಾತದೊಳ್ ತಗ್ಗಿ ನುಗ್ಗುನುಱಿಯಾಗಿ ಕೆಡೆದ ತೇರಪಲಗೆಗಳೊಳ್ ಮೆಯ್ಯುಗ್ಗರೆದನೆ ಗೆತ್ತು ಬೆದಂಕಿ ನೋಡಿಯುಂ (ಗದಾಯು. ೬-೨೮ ವ).

ಬೆದಕಿ ನೋಡು = ಹುಡಂಕು ; ಅನ್ವೇಷಣೆ ಮಾಡು ; ಪರಿಶೋಧಿಸು : ರಾಜಮಂದಿರದೊಳು ಬೆದಕಿ ನೋಡಿದಳು ಸರೋಜಾಕ್ಷಿ ತನ್ನ ವಲ್ಲಭನ (ಮೋಹತ. ೯-೩) ; ಮಿಗೆ ಮಡಿದ ಮೇತಂಡಂಗಳಂ ನೂಂಕಿ ನೋಡಿ ರಥಸಂದೋಹದಿಡುಕಿನೊಳ್ ಬೆದಕಿ ನೋಡಿ (ಶಬಪು. ೪೦-೨೮) ; ಸುನಂದ ತನ್ನ ಹೃದಯವನ್ನು ಬೆದಕಿ ನೋಡಿದಳು (ದೂಬಿಟ್ಟ. ೦೦೫).

[ದೇ.॥ ತೆಲು. ವೆದಕು, ವೆತಕು, ವೆನಕು, ವೆದುಕು, ವೆತುಕು; ಕುರುಖ್. ಬೆದ್ನಾ ; ಮಾಲ್ತೊ. ಬೆದೆ ]

**ಬೆದಕು₂** (ನಾ). ೧. ಕೆರೆತ ; ಗೀರುವಿಕೆ : "ನಖಘಾತದಲ್ಲಿ ಬೆದಕಕ್ಕು" (ಶಬ್ದಕುಂ. ೮೦). ೨. ಅಪೇಕ್ಷೆಯನ್ನು ಅಧಿಕಮಾಡಿಕೊಳ್ಳುವುದು : ದ್ಯೂತದಲಿ ಮದ್ಯದಲಿ ಘನಕಂಡೂತಿಯಲಿ . . . ದುರ್ನೀತಿಯಲಿ ಪರಸತಿಯರಲಿ ಸಂಪ್ರೀತಿ ಬಲಿವುದು ಬೆದಕ ಬೆದಕಲು ರಾಯ ಕೇಳೆಂದ (ಕುವ್ಯಾಉ. ೪-೮೫). [ < ಬೆದಕು₁ ]

**ಬೆದಗತನ** (ನಾ). ಕಾಮುಕತೆ : ಸುದತಿಯನು ಕಂಡೊಡನೆ ಚಿತ್ತವು ಚದುರದಲ್ಲಿಯು ನೆಲಸೆ ಖಲಪತಿ ಬೆದಗತನದಿಂದೌಂಕಿ ಧನುವಿಗೆ ಹೆದೆಯನೇರಿಸುವ (ರಾಮಾಸಂ. ೦-೪-೦೮). [ < ಬೆದೆ + —ತನ ]

**ಬೆದಡು** (ನಾ). (?) : ವೇದೋಕ್ತ ವೀರಶೈವ ಸರಣಿಯಂ ದುಷ್ಕೃತ್ಯಮೆಂಬ ಗಿಡು ಬಳ್ಳಿ ಪುಲ್‌ಮರ ಪೊದಱು ಕಲ್ ಮುಳ್ ಬೆದಡುಗಳೊಂದದ ವೋಲ್ ಸುಸರಮನಾಗಿಸುತೆ (ಚನ್ನರಾ. ೪-೨೭). [ ? ]

**ಬೆದಡೆ** (ನಾ). "ಸಂಬಂಧ, ಗೊಡವೆ" (ದೀಕ್ಷಾಶೋ. ಕೋಶ) : ಇದನಱಿದು ಭಜಿಸು ಮದನನ ಮದಹರನ ನೀನು ಕುದಿಯದಿರು ದೈವಗಳ ಬೆದ [ಪಾಠಾಂ. ಗ]ಡೆಯಂ ಬಿಡು ನೀನು (ದೀಕ್ಷಾಶೋ. ೦೦-೮). [ ? ]

**ಬೆದಬೆದ** (ನಾ). ಒಂದು ಅನುಕರಣ ಶಬ್ದ : 'ಬೆದಬೆದನೆ' ಪರಾ.

ಬೆದಬೆದ ಬೇ, ಬೆದಬೆದಂ ಬೇ, ಬೆದಪೆದ ಬೇ = ಅತಿಯಾಗಿ ನೋಯು, —ಸಂತಾಪಗೊಳ್ಳು : ಗುಱುಗುವಿಮ್ಮೆಂದು ಪಸಿದಿರ್ದು ಬೆದಬೆದ ಬೆಂದಿನಿಬರ್ ಕಟ್ಟಿಕೊಳ್ವ ಕಣಿಯೇಂ ಪೇೞಿಂ (ಆದಿಪು. ೯-೪೦); ಬೆದಪೆದ ಬೇಯುತ್ತುಂ ತಪದೊಳ್ ನವೆದು (ಶಾಂತಿಪು. ೬-೦೩೦) ; ನಡುವೆ ರೋಗಗಳಾಗೆ ಬೆದಬೆದಂ [ಪಾಠಾಂ. ಬೆದಬೆದನೆ]ಬೆಂದು (ಬಿಂಡೋರ, ಪ. ೫೦೨-೮) ; ಬೆದಬೆದಂ ಬೇಯ ಬೇಸತ್ತು (ಕಶಿ. I, ೪೯-೪೩ ; 1423) ; ಎನಿತಂ ಬೆದಪೆದ ಬೆಂದಪಯ್ ಯೆನಿತಂ ಸುಡುಸುಡನೆ ಪುಗುವೆಯ್ ಜೀವನೆ . . . ಎನಿತಂ ಭವಗಹನದೊಳಗೆ ಬಟ್ಟೆಸೆ ಬರ್ಪಯ್ (ಅಜಿಪು. ೨-೬೨); ಪಾರ್ವರ್ಂ ಮಲ್ಮಲನೆ ಮಱುಗಿ . . . ಬೆದಪೆದ ಬೆಂದು (ಸುಕುಮಾ. ೨-೦೦).

**ಬೆದಬೆದನೆ** (ಅ). ಒಂದು ಅನುಕರಣಾವ್ಯಯ ; ಅತಿಯಾಗಿ; ಬಹಳವಾಗಿ : ಪೆದಱು ಸಿರಿಯಾಳಂ ಹೃದಯದಲಿ ಬೆದಬೆದನೆ ಕುದಿವುತ್ತ ಶೋಕಂ ಪದುಳಿಸದೆ ತಲೆವಾಗಿ ಲಜ್ಜಿಸಿಯಳಲುತಿಂತಿರಲು (ಬಸಪು. ೨೨-೬೬) : ಮದಮತ್ಸರಗಳಿಂದ ಬೆದಬೆದನೆ ಬೆಂದೆನಯ್ಯ (ಸಿದ್ಧೇಪ. ೪೫-೦೨೭).

[ಬೆದಬೆದ + — ಅನೆ₁]

**ಬೆದರಟ್ಟು** 'ಬೆದಱಟ್ಟು' ನೋ.

**ಬೆದರಿಕೆ** 'ಬೆದಱಿಕೆ' ನೋ.

**ಬೆದರಿಸು** 'ಬೆದಱಿಸು' ನೋ.

**ಬೆದರು₁** 'ಬೆದಱು₁' ನೋ.

**ಬೆದರು₂** 'ಬೆದಱು₂' ನೋ.

**ಬೆದರುಗಣ್ಣು** 'ಬೆದಱುಗಣ್' ನೋ.

**ಬೆದರುನೋಟ** 'ಬೆದಱುನೋಟ' ನೋ.

**ಬೆದರುಬೊಂಬೆ** (ನಾ). = ಬೆದಗೊಂಬೆ : ಹೊಲದಲ್ಲಿ ಬೆದರುಬೊಂಬೆ ಇಟ್ಟಿದ್ದಾರೆ (ರೂಢಿ). [ಬೆದರು₂ (< ಬೆದಱು₂) + ಬೊಂಬೆ]

**ಬೆದರ್ಕೆ** 'ಬೆದಱಿಕೆ' ನೋ.

**ಬೆದರ್ಗೊಂಬೆ** (ನಾ). ಹೊಲ ಗದ್ದೆಗಳಲ್ಲಿ ಹಕ್ಕಿಗಳನ್ನು ಹೆದರಿಸಲು, ಹುಲ್ಲು ಮೊದಲಾದುವುಗಳಿಂದ ಮಾಡಿ ಇಡುವ ಆಕೃತಿ : ಬೆದರ್ಗೊಂಬೆಯಂ ಕಂಡು ಹೆದರುವ ಮಕ್ಕಳೋಲಂತೆ (ಶ್ರೀರಾಪಟಾ. ೬೮೪-೦೬೫).

[< ಬೆದರು₂ + ಗೊಂಬೆ₁]

**ಬೆದರ್ಮಳೆ** (ನಾ). ಹೆದರಿಕೆಯನ್ನು ಹುಟ್ಟಿಸುವ ಮಳೆ ; ಭಾರಿಮಳೆ : ಬೆದರ್ಮಳೆ ಬಿಸಿಲುಮಳೆ ಸರಿಸೋನೆ ಸಿಡಿಲಿನ ಘಸಣಿಮಳೆಯಲಿ ಘಾಸಿಯಾದುದು ಜಗದ ಜನನಿಕರ (ತೊರರಾ. ೪-೬-೬).

[< ಬೆದಱು₂ + ಮಳೆ (< ಮೞೆ)]

**ಬೆದರ್ವುಲ್ಲೆ** (ನಾ). ಹೆದರಿದ ಜಿಂಕೆ : ಬೆದರ್ವುಲ್ಲೆಯನೇಳಿಪ ಬೆಳತಿಗೆಗಣ್ಣಿದಿಗೆ ಮೞಿಯ ಬಿಂಕಂಗೆಡಿಪಧರಂ (ಜಯನೃ. ೨-೮). [< ಬೆದಱು₁ + ಪುಲ್ಲೆ₁]

**ಬೆದಲ್** 'ಬೆದ್ದಲ್' ನೋ.

**ಬೆದಲು** 'ಬೆದ್ದಲ್' ನೋ.

**ಬೆದವಟ್ಟೆ** (ನಾ). (?) : ಹಡುಪಣ ಮೇರೆ ಬೆದವಟ್ಟೆಯು ಹೊಲ (ಕಶಿ. ೭೬-೦೨-೫೬ ; 1170). [ ? ]

**ಬೆದಱಟ್ಟು**, ಬೆದರಟ್ಟು (ಕ್ರಿ). ಹೆದರಿಸಿ ಓಡಿಸು ; ಹೆದರಿ ಹೋಗುವಂತೆ ಬೆನ್ನಟ್ಟು : ಬಾಣವಂ ಪೊಸಮಸೆಯಂಬಿನಿಂ ಕಡಿದು ಕಟ್ಟಲೆಯಂ ಬೆದಱಟ್ಟಿ (ಶಂರಾಮಾ. ೩-೫೪) ; ಸದಾಶಿವನೆಂಡರೆ ಬೆಧಱಟ್ಟೆ ಸುಡುವುದು ಮಾಣ್ಬುದೆ (ಬಸವ. ೬೭೦) ; ವನಾಂತರಾಂತರದ ಕಟ್ಟಲೆಯಂ ಬೆದಱಟ್ಟುತುಂ (ಜಗಿ. ೦೭-೦೦೦). ಬೆದರಟ್ಟು : ಆಗ ಕೊಟ್ಟಡಿಯ ಮೇಲುಭಾಗದಲ್ಲಿದ್ದ ಒಂದು ಕಿಟಕಿಯಿಂದ ಕಷ್ಟಪಟ್ಟು ಒಳಗೆ ನುಗ್ಗುತ್ತಲಿರುವ ಬೆಳಕನ್ನು ಒಳಗಿನ ಕತ್ತಲೆಯು ಬೆದರಟ್ಟುತ್ತಲಿರುವಂತೆ ಅವನಿಗೆ ತೋರಿತು (ರಾಜಾಮು. ೬೮).

[ಬೆದಱು₁ + ಅಟ್ಟು₂]

**ಬೆದಱಾಡಿ** (ನಾ). ಭಯದಿಂದ ಮಾತನಾಡುವವನು ; ಹೆದರಿ ನುಡಿಯುವವನು : ಕಮಲಜ ಜ್ಞಾನದೃಷ್ಟಿಲಿ ನೋಡಿ ತನ್ನವನೆಂದಱಿದು ಬೆದಱಾಡಿಗಳ ಸಂತೈಸಿ ಕಳುಹಾತ (ಕೃಹಾಸ. ೪-೨೨).

[ಬೆದಱು₂ + — ಆಡಿ₁]

**ಬೆದಱಿಕೆ**, ಬೆದರಿಕೆ, ಬೆದರ್ಕೆ (ನಾ). ೧. ಭಯ ; ಭೀತಿ ; ಅಂಜಿಕೆ : ಹರಸಿದನು ಬೆದಱಿಕೆಯನಹುದೋ ಹಿರಿಯನ್ನೆ ನೀನಾತ ಸಾಕ್ಷಾತ್ ಪರಮಪುರುಷನು (ತೊರರಾ. ೩-೭-೪೭). ಬೆದರಿಕೆ : ೧. ಆದಷ್ಟುಮಟ್ಟಿಗೆ ಬೆದರಿಕೆಯಿಲ್ಲಿಟ್ಟು ಗರತಿಯರ ಗುಣನಡತೆ ಕಲಿಸಿದ್ದರೆ ಹೀಗಾಗುತ್ತಿತ್ತೆ (ಮುರಳೀ. ೮೨). ೨. ಹೆದರಿಸುವಿಕೆ : ದಿಟ್ಟರಾದ ಹುಡುಗರು ಹುಚ್ಚನ ಬೆದರಿಕೆಗೆ ಲಕ್ಷ್ಯ ಕೊಡದೆ . . . ಹುರಿಗಳಿಂದ ಕಟ್ಟಲಾರಂಭಿಸಿದರು (ರಾಬಿಜ. ೨೨). ಬೆದರ್ಕೆ : ೧. ಬಳಿಕ ಮನದೊಳ್ಪಳಂಚುವ ಬೆದರ್ಕೆಯಂ ಬಿಟ್ಟು (ಕೈಬಿಡಾ. ೨೬-೦೦).

ಬೆದರಿಕೆ ಹಾಕು = ಹೆದರಿಸು ; ಭಯಪಡಿಸು ; ಅಂಜಿಸು : ಸುಳ್ಳೇ

ಬೆದರಿಕೆ ಹಾಕುವುದರಿಂದಲೂ . . . ಬಹಳ ಹಾನಿಯಾಗುವುದು (ಬುಂಬಯಿ. ೪-೭೩); ಊರಿನ ಗೌಡ ಬಂದು ಬೆದರಿಕೆ ಹಾಕುತ್ತಾನೆ (ಧರ್ಮಸಾ. ೬೪).

[ಬೆದಱು$_2$ + – ಇಕೆ. / ತುಳು. ಬೆದರಿಕೆ]

**ಬೆದಱಿಸು**, ಬೆದರಿಸು (ಕ್ರಿ). ೧. ಭಯಪಡಿಸು ; ಅಂಜಿಸು : ವಾದಿನಗ ವಾದಿಗಜ ಪರವಾದಿತಮಸ್ತಮಮನೊಡೆವ ಬಿಡೆ ಬೆದಱಿಪ ನಿರ್ಭೇದಿಪಡೆ ಗಱಿ ಹರಿ ದಿನಪೋದಯಮೆನಿಸಿದುದು ವಿದ್ಯೆಯೊಂದುರ್ಕವರಾ (ಆದಿಪು.೩-೭೩); ಮುದುಡಿಸುತಂ ಕೈರವಮಂ ಬೆದಱಿಸುತಂ ಕೌಶಿಕಂಗಳಂ . . . ಮೂಡಿದನರ್ಕಂ (ಗಿರಿಜಾ. ೫-೮) ; ಹೇರೊಡಲ ತೋಱಿಸಿ ಬಲವ ಬೆದಱಿಸಲಗ್ಗಳಿಕೆಯಹುದೇ (ಕುಮಾರರಾ. ೦೫-೫೩). ೨. ಬೆದರಿಸು ; ಹಾರಿಸು : ಜಿನ ಮುನಿದಾನಮೆಂಬ ಗಾಳಿಯಿಂ ಲೋಭಮೆಂಬ ಮುಗಿಲಂ ಬೆದಱಿಸದೆ (ಧರ್ಮಾಮೃ. ೭-೯೭) ; ಮಾಗಧನಾಯುಸ್ತಮವಂ ಬೇಗಂ ಬೆದಱಿಪ ಓಮಾಂಶುರುಚಿಗಳವೆನಲಂತಾಗಳೆ ದಶನೇಂದುದ್ಯುತಿಯಾಗಲೆ ಸಭೆಯೊಳಗೆ ಕೃಷ್ಣನವರ್ಗಿಂತೆರದಂ (ನೇಮಿಪು. ೧೧-೧೦೭). **ಬೆದರಿಸು** : ೧. ಘುಡುಘುಡಿಸಿ ಮಾರುತಾತ್ಮಜನ ಬೆದರಿಸಿದಳೇನೆಂಬೆ (ವೆಂಕಾರಾ. ೫-೩-೫) ; ಮತ್ತೊಂದು ತೋಳವು ಬೆದರಿಸುತ್ತಾ ಬೊಗಳುತ್ತಾ ನಿಂತಿತು (ಕಂಗಾಳ್ಮ. ೯೪) ; ಪ್ರತಾಪ ಕುಮಾರಿಯು ನನ್ನ ಮೇಲೆ ಕೈಮಾಡುತ್ತೇನೆಂದು ಬೆದರಿಸಿ ಹೋಗಿದ್ದಾಳೆ (ಆರ್ಯಕೀ. ೨೫). [ಬೆದಱು$_1$ + – ಇಸು$_3$]

**ಬೆದಱು$_1$**, ಬೆದರು$_1$ (ಕ್ರಿ). ೧. ಭಯದ ಸೂಚನೆಯನ್ನು ಕಾಣು,— ತಿಳಿ : "ಬೆದಱು—ವ್ಯಸ್ತೇ" (ಶಬ್ದಾ) ; ಪದ್ದೆಗನ ಕೋಣೆಯು ಗಂಗನ ದೊತ್ತುಮೆಲ್ಲಮಂ ಬೆದಱುವಿನಂ ತೆರಳ್ಚಿ (ಎಕ. II, ೦೩೮-೧೦ ; 940) ; ಪಿಂಗಳಕನಪ್ಪೊಡೆ ಮತ್ತಮಾತಂಗಯೂಥಮಂ ಬೆದಱೆ ಬೆಂಕೊಂಡು ಕೊಲ್ವ ಸಿಂಗಂ (ಪಂತಶಂ. ೦೯೯-೨೦) ; ಬೆಚ್ಚಿ ಬೆದಱುವ ಸೇನೆಗಭಯವ ಹಚ್ಚಿ ಕೊಟ್ಟನು (ಕುಮಾರರಾ. ೩-೪೬). ೨. ಭಯಪಡುವಂತೆ ಮಾಡು ; ಹೆದರಿಸು : ಹರಿಪೋತಮಂ ಬೆದಱುತಂ ಕರಿಪೋತಮುಮುಂಡುಗರ್ಜೆ ಕೇಸರಿಣಿಯು ಕೆಚ್ಚಲಂ ತುಡುಕುತುಂ ಪರಿದತ್ತು (ಪಂಪಭಾ. ೭-೮೦). ೩. ಒಂದ ಕ್ಕೊಂದು ದೂರವಾಗು : ಉಱಿಯ ತೆಱದಿರ್ಕೆಲದೊಳ್ ಮೂಡಿ ಬೆದಱಿರ್ದ ಮೊಲೆಗಳ್ ಮಾಡುಗು ಮನದಟಲನಶುಭಮಂ ದುಃಖಮುಮಂ (ಅಕ್ಕಸ. ೦-೪೦). **ಬೆದರು$_1$** : ೧. ಪೇರಾಳ್ಕೆವರೆ ಪೆತ್ತಣೆ ಸತ್ಯಾಂಕನ್ ಅಟ್ಟುರ್ವ ಭಟನ್ ಬೆದರೆ ಮಹೇಂದ್ರನ್ (ಪ್ರಾಅಂ. ೦೯೨೩, ೭೨-೨; 7ನೆಯ ೮೫); ಬೆದರಿದನಗಸ್ತ್ಯಂ (ವೆಂಕಾರಾ. ೩-೦-೨೩) ; ಕರಮಿರದೆ ಬೆದರುತ್ತೆ ಸಂತಸವ ನಾನುತ್ತೆ (ಮಹಾಭಿ. ೪-೫೩) ; ಮನೆ ಬಿಟ್ಟು ಹೊರಗೆ ಹಣುಕಿ ಹಾವಲು ಬೆದರುತ್ತಿದ್ದಳು (ದೀಶಹ. II, ೦೯೦).

[ದ್ರಾ.॥ ತಮಿ. ವಿತಱು, ವಿತಿರ್, ಪೆತಿರ್; ಮಲ. ವಿತುಕ್ಕು; ತುಳು. ಬೆದರು; ತೆಲು. ಬೆದರು, ಬೆದುರು]

**ಬೆದಱು$_2$**, ಬೆದರು$_2$ (ನಾ). ೧. ಭಯ; ಅಂಜಿಕೆ : ಬೆದಱುಂ [ಕೆದಱುಂ] ಪೆಚುರ್ಗಂ ಕುಂದುಮನಱಿದು (ಪಂಪಭಾ. ೫-೪೩ ಪ) ; ಪದುಳದಿಂದೀ ಮನದ ಬೆದಱು ಮಾಣಿಸು ಸ್ವಾಮಿ (ದೀಕ್ಷಾಬೋ. ೦೦೩-೮); ಬೆದಱು ತವನಿಧಿಯಾಯ್ತು ಪಟುಭಟರೆದೆಗಳಿಬ್ಬಗಿಯಾಯ್ತು (ಕುಮಾರಭೀ. ೦೦-೦೩); ಕನಸು ಕಳವಳ ಬೆದಱು ಭ್ರಮೆ . . . ಸಂತೋಷ ಇನಿತು ಸಂಧಿಸಿದವನಿಪನ ಕಂಡು (ತೊರರಾ. ೩-೦೦-೪೩). ೨. =ಬೆದಗೊರ್ಬೆ : ಕೆಯಿಗೆ ಬೆಚ್ಚು ಬೆದಱು ಕಟ್ಟುವಲ್ಲಿ ಆ ಲೆಪ್ಪಕ್ಕೆ ಇಷ್ಟಲಿಂಗ ರುದ್ರಾಕ್ಷೆ ಭಸಿತ ಪಟ್ಟೆ ಕಟ್ಟೆ ಎನ್ನ ಕೈಯ್ಯ ತಪ್ಪಲಲ್ಲಿ ಕಾಷ್ಠವ ನೆಟ್ಟು ಕಟ್ಟದ ಮತ್ತೆ ವಿಹಂಗಕುಲ ಮೃಗಜಾತಿ ಮುಟ್ಟಲಿಲ್ಲ (ಬಸವ. ೦೭೮). **ಬೆದರು$_2$** : ೧. ಮದಸಖಿತ ದಯವಿರಲು ಬೆದರುಯಿನ್ನೇಕೆ (ಹಮತ. ೩೮); ಬೆದರಂ ಮಾಣ್ದುದು ನಂಬು (ಗಿರಿಜಾ. ೧೨೦-೩೩). ೨. ಹಳ್ಳಿಯ ಹೆಣ್ಣು ಗಂಡುಗಳೂ ನೀಲವ್ವನ ಕಣ್ಣಿಗೆ ಹೊಲದಲ್ಲಿಯ 'ಬೆದರು' ನಂತೆ ಜೀವವಿದ್ದು ಹೆಣವಾದಂತೆ ಆಕೆಗೆ ಭಾಸವಾಯಿತು (ಶರಪಾ. ೦೨೪); ರಾಗವೆಳೆದರೆ ಭಾವದಾವೇಶವಾದರೂ ಮಾತೆಂಬುದೆಂದಿಗೂ ಅರ್ಥರೂಪದ ಬೆದರು (ಅರಳು. ೦೨೦_೩); ಒಕ್ಕಲಿಗರು ತಮ್ಮ ಬೆಳೆಗಳ ರಕ್ಷಣೆಗಾಗಿ ಹೊಲಗಳಲ್ಲಿ 'ಬೆದರು' ಎಂದು ಒಂದು ಕೋಲಿಗೆ ಗಡಿಗೆಯೊಂದನ್ನು ನೇತುಹಾಕಿ ಅದಕ್ಕೆ ಸುಣ್ಣ ಬರೆಯುತ್ತಾರೆ (ಶರ್ಷ. ೦೨). ೩. ಹೆದರಿಸುವಿಕೆ : ಬಡಿಗೆಯ ಬೆದರು ಕಂಡು ಕಣ್ತೆರೆದ ಹಕ್ಕಿ ಹಾರಿ ಹೋಗಬಹುದು ; ಕಣ್ಣು ಮುಚ್ಚಿಕೊಂಡು ಬೆಕ್ಕು ಹೋಗಬಹುದೇ ? (ಶಿರಾಷ. ೦೭೫).

[< ಬೆದಱು$_1$. / ತಮಿ. ವೆತಿರ್, ವಿತಱು; ತುಳು. ಬೆದರ್; ತೆಲು. ಬೆದರು]

**ಬೆದಱುಗಂಟಿ** (ನಾ). ಬೆದರುವ ಹಸು,–ದನ : ಬೆದಗ್ಗಂಟಿ, ಬೆದಱು ಗಂಟಿ (ಕಣ್ಣಾನು. ೬೩ ಕ್ರಿಯೋ). [ಬೆದಱು$_1$ + ಗಂಟಿ$_1$]

**ಬೆದಱುಗಣ್**, ಬೆದರುಗಣ್ಣು, ಬೆದಱುಗಣ್ಣು (ನಾ). ಭಯಭೀತವಾದ ಕಣ್ಣು ; ಅಂಜಿಕೆಯನ್ನು ಸೂಚಿಸುವ ಕಣ್ಣು : ಬೆದಱುಗಂಗಳ ಬಿಟ್ಟ ಮಂಡೆಯ . . . ವರಸುದತಿ ಬಂದಳು ರಾಜಸಭೆಗೆ (ಕುಮಾರಭಾ. ೦೪-೭೦). **ಬೆದರುಗಣ್ಣು** : ಭೂಮಿಸುತೆ ಬೆದರುಗಣ್ಣಂ ನೋಡಿದಳು ಜಲನಿಧಿಯ (ಶ್ರೀರಾಮಪಾ. ೭೯೮-೧೬); ಮಕ್ಕಳು ಅಳುಕಿ ನಿಂತು ಬೆದರುಗಣ್ಣಾಗಿ . . . ನೋಡುತ್ತಿದ್ದರು (ಪುಸರು. ೬). **ಬೆದಱುಗಣ್ಣು** : ಬೆದಱುಗಣ್ಣ ಬೆಳುವನಂತೆ ನಿನ್ನಟಲ್ಗಬೆರ್ವೆ ನಾನ್ (ಅಕ್ಕಸಾ. ೭-೧೩೦).

[ಬೆದಱು$_1$ + ಕಣ್ಣು (< ಕಣ್)]

**ಬೆದಱುಗಣ್ಣು** 'ಬೆದಱುಗಣ್' ನೋ.

**ಬೆದಱುಗಾಗೆ** (ನಾ). ಹೆದರಿದ ಕಾಗೆ : ಬೆದರುಗಾಗೆಯ ನೋಟ ಸಾಳುವ ನೊದೆವು ಮಿಂಗಳ ರ್ಝಳಕೆ ಕೇಸರಿಯದಟು . . . ಒಪ್ಪಿದವವರ ಯುದ್ಧದಲಿ (ಜಾಳ್ಮಭಾ. ೨೨-೭೦). [ಬೆದಱು$_1$ + ಕಾಗೆ]

**ಬೆದಱುನೋಟ**, ಬೆದರುನೋಟ (ನಾ). ೧. ಹೆದರಿಸುವ ನೋಟ : ಕೆದಱುದಲೆ ಕೆಮ್ಮೀಸೆ ಕಿಸುಗಣು ಬೆದಱುನೋಟವು . . . ಖಡೆಯ ಪೊಡೆಯುದೊದವಿನಂ . . . ಬಲವಿಡಿದಿಹರು ಬೀಯದರು (ಜಾಳ್ಮಭಾ. ೫-೬). **ಬೆದರುನೋಟ**: ೨. ಭಯ ತುಂಬಿದ ದೃಷ್ಟಿ : ಬೆದರುನೋಟದ ವಿದ್ಯಾರ್ಥಿಯೊಬ್ಬ ಆ ಮುದುಕನ ಕಡೆಗೆ ದುರುಗುಟ್ಟಿಕೊಂಡು ನೋಡುತ್ತಿದ್ದನು (ಪುಪರು. ೨೩೭). [ಬೆದಱು$_1$ + ನೋಟ]

**ಬೆದಱುಮಾತು** (ನಾ). ಹೆದರಿಕೆಯ ಮಾತು; ಭಯದ ನುಡಿ : ನೆಗಪಿರ್ಝಳಪಿಸಿ ಲುಳಿವಡೆಯುಲಿಳಿಗುಗುಳಿದುದು ಬಲುಗಿಡಿಗಳನು ನಿದ್ರೆಗಳ ನಿಬಿಡಸ್ತನೆಯರೆದ್ದುದು ಬೆದಱುಮಾತಿನಲಿ (ತೊರರಾ. ೫-೨-೮೫).

[ಬೆದಱು$_2$ + ಮಾತು$_1$]

**ಬೆದಿಕೆರೆ** (ನಾ). ಒಂದು ಕೆರೆಯ ಹೆಸರು : ತೆಂಕಾಯ್ತಲೆವೊಜಿಡೆ ಬೆದಿಕೆರೆಏ ಮೊದಳೆಮಡುವೆ (ಪ್ರಾಅಂ. ೦೯೨೭, ೦೦೮-೪೭; 726).

[ ? + ಕೆರೆ$_2$ ( <ಕೆಱೆ$^3$) ]

**ಬೆದಿರೂರ್** (ನಾ). ಒಂದು ಊರಿನ ಹೆಸರು : ಹೊದಳಿವಿಷಯೀ ಬೆದಿರೂರ್ ಮಯಾದತ್ತಮ್ (ಪ್ರಾಅಂ. ೦೯೨೫, ೦೦೫-೩೮: 634).

[ ? + ಊರ್ ]

**ಬೆದೆ** (ನಾ). ೧. ಬೀಜ ಬಿತ್ತುವುದು : ಬಿತ್ತನೆ : (ಇ). ೨. ಬೀಜ ಬಿತ್ತಲು ಯೋಗ್ಯವಾದ, ಮಳೆ ಬಿದ್ದ, ಭೂಮಿಯ ಹದ: ಬೀಜವಿರೆ ಬಿತ್ತರೆ ಪೇಟ್ ಬೆದೆ[ಜಾತಾಂ. ಳೆ]ಯಾದ ಭೂಮಿಯೊಳ್ (ನೇಮಿಪು. ೦೨-೩೦); ಬೆದೆ ಬಂದ ಕಾಲದಲ್ಲಿ ಬೇಲಿಯಲ್ಲಿ ಚಲ್ಲಿದರೂ ಬೆಳೆಯುತ್ತದೆ(ಕೃಷಿಶ್ರ. ೦೬೬); ಬೆದೆಯರಿತು ಹದಮಾಡು ಹೃದಯದ ಹೊಲವನ್ನು (ಜಾವಳೀ. ೦೩-೧); ಬೆದೆ ನೋಡಿ ಬಿತ್ತು, ಹದ ನೋಡಿ ಹರಗು (ಗಾದೆ). ೩. ಬೀಜ ಬಿತ್ತಲು ಯೋಗ್ಯವಾದ ಹದವಿರುವ ಭೂಮಿ; ಬಿತ್ತನೆಗೆ ಹದ

ವಾದ ಭೂಮಿ : ಪನ್ನಿರ್ಕ್ಕಣ್ಡು ಬಿದೆನೆಲ್ಲಮನ್ನಿತ್ತನ್ನು (ಇಇ. V, ೧೩೭–೦೫; ೩೩೪); ಮಣ್ಣೊರ್ಬಿಣ್ಡುಗಂ ಬಿದೆ ಉತ್ತಮ ಕ್ಷೇತ್ರಂ (ಎಕ. IX (S), ಹೆಗಳಿಕ. ೦೫೦–೬೨; 828); ಇರುಕ್ಕುಳದ ಬಿದೆ ಕಾಱಗೌಡಿಯ ಪೋಲಯ್ಯಪೂರ ಬಯಲಲು ಕೊಟ ಗದೆ (ಎಕ. VI, ಕಕ್ಕಮ. ೩೦–೨೭; ?). ೪. ಪಕ್ವತೆ; ಯೋಗ್ಯವಾದ ಸ್ಥಿತಿ : ಆಕಾಶಗಂಗಾತಟಾಕತೇಜಃಪುಂಜದಲ್ಲಿ ಒಳಗಿನ ಬಿದೆಗೆ ಚುಕ್ಕಿ ಹೊಳೆವಂತೆ (ಅರಳು. ೯೮–೯). ೫. ನಸೆ ; ಕಾಮೋದ್ರೇಕ : ಬಿದೆ ಬೇಟದೊಳು ಮೆಯ್ದ್ ಪೆಂಪುಗೊಂಡುರ್ಬಿ (ಗೀತಗೋ. ೩೨–೦); ಬಿದೆ ಯನು ಹೆಚ್ಚಿಸಿ ಬೇಗಾ ಪದಗುವ ಕೊಟಿಕ್ಕಿ ವಳಗಾಗಬೇಡೆಂಬ ಮುದಿ ಸೂಳೆಯರ ನೋಡಿದನು (ಸೌಗಂಕ. ೫–೯೬); ದನ ಸಿಂಗ ಹುಲಿ ಹಕ್ಕಿ ಹಾವು ಮಾನ್‌ಗಳಿಗೆಲ್ಲ ಇನಿಸುಣಿಸು, ಬಿದೆ ಬಿದರು—ಅಷ್ಟೆ ಜೀವಿತವು (ಪುಂಕಲಕ. ೨೦೯).

**ಬಿದೆಬಿದೆಗೊಳಿಸು** = ಕಾಮೋದ್ರೇಕಕ್ಕೊಳಗಾಗುವಂತೆ ಮಾಡು : ಮುದುಕಿಮುದುಕರೊಮ್ಮೆ ಹೊಕ್ಕರಾ ಮನೆಗಳು ಬಿದೆಬಿದೆಗೊಳಿಸಿ ಕಾಡುವುವು (ಭರತ. ೦೫–೩೦). **ಬಿದೆಬಿದೆಗೊಳು**=ಕಾಮೋದ್ರೇಕವನ್ನು ಹೊಂದು : ಬಿದೆಬಿದೆಗೊಳುತಿರ್ದರಬಲೆಯರೆಂದಿಗೆ ಮದುವೆಯಹುದೊ ನಮಗೆಂದು (ಭರತ. ೩೭–೨೯). **ಬಿದೆ ಮಾಡು**=ಹದಗೊಳಿಸು; ಹಸನು ಮಾಡು : ಕರುಧರೆಯಂ ನಿಜೋಗ್ರಗದೆಯೇರ್ಗಳಿನುಬ್ಬ್ರ ಸಮಸ್ತವೈರಿಭೂಪರ ರುಧಿರಾಂಬುವಿಂದೆ ಬಿದೆ ,ಮಾಡಿ . . . ಸಿತ[ಕೀರ್ತಿ]ಯೆಂಬ ಬೆಳೆಸಂ ಬೆಳೆದಂ (ಗದಾಯು. ೦೦–೪); ನಿಮ್ಮ ಹೃದಯವನ್ನು ಬಿದೆ ಮಾಡಿದ್ದೇನೆ (ಗರುಡ. ೦೬). **ಬಿದೆಯಾಗು** = ಕಾಮೋದ್ರೇಕ ಉಂಟಾಗು : ಆಡಿಸ ಬುಟಿಬೊಳ್ ಬಂದುದು ಪೋಂತಿನ ರೂಪಿಂ ಬಳಿಯಿ ಬಿಟ್ಟಿಕ ಮದನೋಸ್ಮತ್ತಂ ಬಿದೆಯಾದ ತಾಯನೇಱಿದುವದರಿಸೋರ್ಕಿದ ಗೂಳಿ ತಾಯನೇಱತ್ತೆಂಬಂದದೆ (ಧುಕೋಶ. ೩–೩೪).[ದೇ.೫ ಮಲ. ವಿದ; ತುಳು. ಬಿತ್ತೆ; ತೆಲು. ವದ]

**ಬಿದೆಕಾಱಿ** 'ಬಿದೆಗಾಱಿ' ನೋ.

**ಬಿದೆಗದ್ದೆ** 'ಬಿದೆಗಟ್ಟಿ' ನೋ.

**ಬಿದೆಗಟ್ಟಿ**, ಬಿದೆಗದ್ದೆ (ನಾ). ಸಾಗುವಳಿ ಮಾಡಲು ಹದವಾದ ಗದ್ದೆ : ಪದಿನಯ್ದು ಕೊಳಗ ಬಿದೆಗಟ್ಟಿ (ಎಕ. III (R), ಹೆಗ್ಗಡ. ೩೮–೦೬ ; 1021); ಕಟಕಟಕ ವಾಣಿಕಾಚಾರಿಗೆ ಐಗುಳಗ ಬಿದೆಗಟ್ಟಿಯು ಬೆಟ್ಟಿಲೆ ಮತ್ತರು ಎರಡು (ಸೌಇಇ. IX-i, ೦೦೨–೨೬ ; 1053). **ಬಿದೆಗದ್ದೆ** : ಶ್ರೀಯುರ ಚಾಮುಣ್ಡಯ್ಯನ ಭೂಮಿಯಲು ಪತ್ತುಕೊಳಗ ಬಿದೆಗದ್ದೆಯುಂ . . . ಈಶಾನ ಈಶ್ವರದಮುಡಿಯಾರ್ಗ್ಗೆ ಕೊಟ್ಟುದು (ಮೈಅಂ. ೦೯೪೬, ೨೮–೦೨ ; 1082); ಧಾರಾಪೂರ್ವ್ವಕಂ ಮಾಡಿ ಬಿಟ್ಟ ಎರಡು ಸಲಗೆಯ ಬಿದೆಗದ್ದೆ (ಮೈಅಂ. ೦೯೪೯, ೯೩–೦೨ ; 1189). [ಬಿದೆ + ಗಟ್ಟಿ]

**ಬಿದೆಗಾತಿ** (ನಾ).=ಬಿದೆಗಾರ್ತಿ ೨ : ತಳವಾಱರಿದೆ ಬಂದರೆಂದು ಕಾತರಿಸಿ ಬಿದೆಗಾತಿಯರನು ಬಿಟ್ಟಗಲುವ ವಿಟರುಗಳೆದೆಗೇಡನೇನ ಬಣ್ಣಿಸುವೆ (ಮೋಹತ. ೦೬–೨೫). [ಬಿದೆ + — ಗಾತಿ$_5$]

**ಬಿದೆಗಾರ್ತಿ** (ನಾ). ೧. ಕಾಮೋದ್ರೇಕವುಳ್ಳವಳು. ೨. ಹಾದರಗಿತ್ತಿ ; ಜಾರೆ : "ಸಿತ್ತಗೆ, ಜೋಡೆ, ಪಾಣ್ಚೆ, ಬಿದೆಗಾರ್ತಿ—ಈ ೪ ಜಾರೆಗೆ ಪೆಸರ್" (ಕಕಾ. ೬೨–೩೩೬). ೩. ನಲ್ಲೆ ; ಪ್ರೇಯಸಿ : ಬೆಳ್ವಟ್ಟೆಯುಂ ಪೊದೆ ದೊಡಲಿಚಂ ತನ್ನ ಬಿದೆಗಾರ್ತಿಯ ಚೋಳಿಯು ಸಿಂಗರಕ್ಕೆಂದು ಸಮೆದು ಬೈತಿಟ್ಟ ಕುಂದಣದ ಗೊಂಡೆಯೆನೆ (ರಾಜಶಕ. ೦೦೦–೨೬).

[ಬಿದೆಗಾಱಿ + — ತಿ$_1$ (< — ಇತ್ತಿ)]

**ಬಿದೆಗಾಲ** (ನಾ). ೧. ಬೀಜ ಬಿತ್ತಲು ಹದವಾದ ಕಾಲ : ನಿನ್ನ ಭೂಮಿಯೊಳ್ ಬೀಜಮಂ ಬಿತ್ತಿದೊಡೆ ಬೆಳೆ ಬಾಳ್ಕೆಗೆ ಕದನಕ್ಕೆದುವ ವೇಳೆ ಯಲ್ಲೆನಲವಂ ಮುಂದೆ ಬಿದೆಗಾಲವುಂಟೆಂದೊಡೆ (ಕೈಪಿಡಿ. ೦೦–೦೯). ೨. ಕಾಮೋದ್ರೇಕವಾದ ಕಾಲ : ಬಿದೆಗಾಲ-ಬಿದೆಯ ಕಾಲವನ್ನು ಬಳ್ಳಿ ಎಚ್ಚರಿಕೆಯಿಂದ ನೋಡಿಕೊಳ್ಳಬೇಕು (ಗೋಗ್ರಾಸ. ೨೩). ಬಿದೆಗಾಲದ ಹದ್ಮೈಸಿಕೆಯೊಳಗೆ ಪೆರ್ಬಯದಂಬಾಸಂರುತಿಯೊಳಗೆ ತನ್ನ ಹೊರಗಿರುವ ಜೀವದ ನೆರವ ಆತ್ಮಸ್ವಾಸ್ಥ್ಯಕೆ ಯಾಚಿಸುತಿರುವ ಪರಿಯಿಲ್ಲ (ಗಣಿತ. ೬೬–೩).

[ಬಿದೆ + ಕಾಲ]

**ಬಿದೆಗಾಱಿ, ಬಿದೆಕಾಱಿ** (ನಾ). ೧. ಕಾಮಾತುರತೆಯುಳ್ಳವನು. ೨. ಕಾಮುಕ ; ವಿಟ : 'ಬಿದೆಗಾರ್ತಿ' ಪರಾ. **ಬಿದೆಕಾಱಿ** : ೧. ಬಿದೆಕಾಱಿ ರೆರ್ದಯಂತೆ ಬೇಯುತಿರ್ದ ಪೆಣಂಗಳಿಂ (ಕಾವ್ಯಸಾ. ೩೨೯ ಶಾರ್ದ್ರ್ಕ).

[ಬಿದೆ + — ಕಾಱಿ]

**ಬಿದೆಗುದಿ** (ನಾ). ಸಂತಾಪ; ಕ್ಲೇಶ ; ಬೇಗುದಿ : ಭವ ನರರ ಬಿದೆ ಗುದಿಗೆ ಪಂಡಗಂಡಸುತನಕೆ (ಕೃಷ್ಣಾಕು. ೨–೨೪). [ಬಿದೆ + ಕುದಿ$_3$]

**ಬಿದೆಗುದಿಗೊಳ್** (ಕ್ರಿ). ಸಂತಾಪಗೊಳ್ಳು; ಕ್ಲೇಶಪಡು : ಭವದ ಬಿದೆ ಗುದಿಗೊಂಬ ಜೀವಜಾಲಂಗಳಿಗೆ ಶಿವವಿಮಾಯಬೇಕೆಂಬುದೇ ಶಂಭುಚಿತ್ತ ದೊಳ್ ಪ್ರಣವವಾಗಿಹುದು (ಚತುಪು. ೬–೭–೦೨೦). [ಬಿದೆಗುದಿ + ಕೊಳ್$_1$]

**ಬಿದೆಗೂಡಿಸು** (ಕ್ರಿ). ಬೀಜ ಬಿತ್ತಲು ಭೂಮಿಯನ್ನು ಹದವಾಗಿಸು : ಅಂಬಿನ ಮಱೆ ರಕ್ತವಾರಿ ಬಿದೆಗೂಡಿಸೆ ಸಾಲಿಡೆ ಪೆರ್ಬಿಣಂ ರಣಾವನಿಕ್ಷಳ ವಿದುರ್ದಂಕುರಿತವಾದವೊಲೊಕ್ಕ ಕರುಳ್ವಿಣಲ್ಗಳಿಂ (ಸಂಭುಖಾ. ೦೩–೯೯).

[ಬಿದೆ + ಕೂಡಿಸು]

**ಬಿದೆಗೂಡು** (ಕ್ರಿ). ಬೀಜ ಬಿತ್ತಲು ಹದವಾಗು,—ಯೋಗ್ಯವಾಗು : ಪಾಯ್ದೊಡೆ ಕೋಡಸೂಱ ನಡೆ ಬಿಟ್ಟ ಮದೇಭದ ದಂತದಿಂ ಭರಂಗೆಯ್ದುಡೆ ಯುಟ್ಟ ಕಾದನರುಣಾಂಬುಗಳಿಂ ಬಿದೆಗೂಡಿ ಶಾಯ್ನೆಲಕ್ಕೆಯ್ದರಲೆಂದು ಬಿತ್ತಿದುದದೊಂದು ಮೃಗಾರಿ ತದುತ್ತಮಾಂಗದಿಂ ಸಯ್ದನೆ ಸೋರ್ವ ಮುತ್ತುಗಳೆ ಬಿತ್ತುಗಳಾಗಿರೆ ತನ್ನ ಬೀರಮಂ (ಕೃಷ್ಣಪು. ೫–೭೭).

[ಬಿದೆ + ಕೂಡು$_1$]

**ಬಿದೆಬಿದೆ** (ನಾ). ಒಂದು ಅನುಕರಣ ಶಬ್ದ.

**ಬಿದೆಬಿದೆ ಬೇ**=ಅತಿಯಾಗಿ ನೋಯು ; ಬಹಳ ಸಂತಾಪ ಪಡು : ಮಗನಿಲ್ಲದರ್ಥಪತಿಯಂತೆ ಬಿದೆಬಿದೆ ಬೇಯುತ್ತುಂ (ಧರ್ಮಾಮೃ. ೦–೦೯೯) ; ಬಿದೆಬಿದೆ ಬೆಂದು ಬಾಯೆಡೆಗಳಂ ಬಸುಱಂ ಬಿಡೆ ಕೊಯ್ದುಕೊಂಡು (ಪುಣ್ಯಾಸ್ರ. ೬–೯೦) ; ನೊಂದು ಮನದಲಿ ಪಾರ್ಥನಾ ಸತಿಯಂದದವನು ಕಾಣುತ್ತ ಬಿದೆಬಿದೆ ಬೆಂದು ಯಮರಾಜನ ಕುಮಾರನ ಮೊಗವ ನೋಡಿದನು (ಕುಮಾರ್ವ್ಯಾ. ೮–೦೭).

**ಬಿದೆಮಣ್** (ನಾ). ಬೀಜ ಬಿತ್ತಲು ಯೋಗ್ಯವಾದ ಹದವಿರುವ ಭೂಮಿ ; ಬಿತ್ತನೆ ನೆಲ : ನಾಲ್ಗಣ್ಡುಗದ ಬಿದೆಮಣ್ಣನ್ ಕಾಣ್ವನ್ನ ಗೋತ್ರದ ದೇವದತ್ತರ್ಗ್ಗೆ ಇತ್ತಾರ್ (ಎಕ. XVI, ಶಾವಗ. ೬೦–೨ ; 754) ; ಶ್ರೀ ಜನ್ನ ಕಲ್ಲ ನಿಜಿಸಿ ಪನ್ನಿರ್ಕ್ಕಣ್ಡುಗ ಬಿದೆಮಣ್ಣೊಟ್ಟಾರ್ (ಮೈಅಂ. ೦೯೯೯, ೬–೩ ; 808) ; ಕುಪ್ಪಂ ಮಣಲಿಯರ್ಕುಳ್ ಅಯ್ದುಗ್ಗಳ ಬಿದೆಮಣ್ಣು ಇದನಿಚ್ಚ ಸುವಗೆ ಸಲ್ಲದು (ಮೈಅಂ. ೦೯೯೬, ೦೫–೨೩ ; 897). [ಬಿದೆ + ಮಣ್]

**ಬಿದೆಮತ್ತಲು** (ನಾ). ಬಿತ್ತನೆಗೆ ಹದವಾಗಿರುವ ಭೂಮಿ : ಕೋಸಿಗರಾ ಜಯಮೆಲ್ಲ ಎಪ್ಪೋನ್ ಗೋಸಾಸಿಮದಾರುಂ ಬಿದೆಮತ್ತಲುಂ ಪದಲ್ದಾ ನವುಂ ಕೊಟ್ಟೋನ್ (ಎಕ. VIII, ತೀರ್ಥ. ೯೦–೩ ; 910).

[ಬಿದೆ+ಮತ್ತಲು (<ಮತ್ತರ್)]

**ಬಿದೆಮೆಟ್ಟೆ** (ನಾ). ಒಂದು ಊರಿನ ಹೆಸರು : ಸಿಮ್ಮನಿಸರ ಕಿಳ್ವಮ್ಮನ್ ಆಣ್ಡುಗಿಯ ರಟ್ಟಿಗನ್ ಬಿದೆಮೆಟ್ಟೆಯಾಳವಮ್ಮಾನ್ ಬಳ್ಳಿಗ್ಗಮಯ ಗಾಮುಣ್ಡನ್ (ಎಕ. VIII, ತೀರ್ಥ. ೦೦–೦೩ ; 800). [ ? ]

**ಬಿದೆಯಾಕಳ್** (ನಾ). ಕಾಮೋದ್ರೇಕಗೊಂಡಿರುವ ಹಸು ; ಬಾರಿ ಬಂದಿರುವ ಆಕಳು : "ಪ್ರಚಂಡಯೆನೆ ಬಿದೆಯಾಕಳ್" (ಪಂಗಣಾ. ೫೩–೩).

[ಬಿದೆ + ಆಕಳ್]

**ಬೆದೆಯಾವು** (ನಾ). = ಬೆದೆಯಾಕಳ್ : "ಆಪಂಡೀ. ಸುರತಾ — ಈ ೨ ಬೆದೆಯಾವು" (ಹಲಾಯು. ೯೫-೦೦೬). [ ಬೆದೆ + ಆವು ]

**ಬೆದೆವಡೆ** (ಕ್ರಿ). ೧. ಬಿತ್ತನೆಗೆ ಯೋಗ್ಯವಾಗು : ನಾಳೆ ಬಿತ್ತುವ ಬೆದೆವಡೆದ ಕೆಯಿ ಹಾಳಹುದು (ಜನಪ. ೬೦-೦೭). ೨. ಉತ್ಸಾಹಗೊಳ್ಳು : ಕೋರೇರು ನೇದಾರೊ ಕೊಡಪಾಕ ನೂತಾರೊ ಪೆಳ್ಳಿಕಡ್ಡಿಲಿ ಬೆದೆವಡೆದು ನೇದಾರೋ ಸ್ವಾಮಿ ರೇಪಯ್ಯ ಖುಷಿ ಕಂತೆ (ಹಳ್ಳಿಹಾ. ೪೬).

[ ಬೆದೆ + ಪಡೆ₁ ]

**ಬೆದೆವಾವು** (ನಾ). ತಳುಕು ಹಾಕಿಕೊಂಡಿರುವ ಹಾವು ; ಎಣೆಹಾವು : ತವಕದಿನಪ್ಪ ತಲ್ಲಣದೆ ಚುಂಬಿಸಿ ನಿಲ್ಲದೆ ಕೂಡಿ ತೋಡಗಲ್ಬುವ ದಿವಸಾವಸಾನ ಸಮಯಕ್ಕೆ ಕನಲ್ದುರಿದೇಟ್ಗೆ ಸಂಜೆ ಪೊತ್ತುವ ತಮವುತ್ತಮಿತ್ತ ಮಳುರ್ದತ್ತಲೆ ಪೊರ್ದಿದ ಪೋಟಿಲೊಳ್ ಮಿಡುಂಕುವ ಬೆದೆವಾವಿ [ಪಾಠಾಂ. ಬೆಣವಾಲಿ, ಬೆಳುಗಾವಿ] ನಂತಗಲಲಾಜಿದಗಲ್ದುವು ಜಕ್ಕವಕ್ಕಿಗಳ್ (ಸೂಕ್ತಿಸು. ೬-೨೮ ; ಚಂಪು. ೭-೭೦ ನೋ). [ ಬೆದೆ + ಪಾವು₁ ]

**ಬೆದೆವೆರಸು** (ಕ್ರಿ). ಕಾಮಾತುರತೆಯಿಂದ ಕೂಡು ; ಕಾಮೋದ್ರೇಕಗೊಳ್ಳು : ಎಡೆವಿಡದೆ ಬೆದೆವೆರಸಿದ ಕುರರಕೂಜಿತಂಗಳಂತೊಗೆದ ಸರಳ ಮೊಟ್ಟಪದೊಳಂ ಕೂಡೆ ವಿಂಧ್ಯಾಟವಿಯೆಲ್ಲಂ ಪ್ರಚಲಿತಮಾದಂತಾಗೆ (ಕಾದಂಪೂ. ೦೬೦). [ ಬೆದೆ + ಬೆರಸು₁ (< ಬೆರೆಯಿಸು) ]

**ಬೆದೆವೋಗು** (ಕ್ರಿ). ಕಾಮೋದ್ರೇಕಗೊಳ್ಳು : ಇರುಳೊಳೇಕಾಂತವಾಗಿರ್ದು ಬೆದೆವೋದ [ಪಾಠಾಂ. ಯಾದ] ಸವಣನಡುಹುಳ್ಳ ಕಂತಿಯುನವಚಿಕೊಂಡು (ಸೋಮಪುರಾ. ೯-೯೫). [ಬೆದೆ + ಪೋಗು₁ (< ಪೋ₁) ]

**ಬೆದ್ದಲ್**, ಬೆಜಲು, ಬೆಜ್ಜಲು₂, ಬೆದಲ್, ಬೆದಲು, ಬೆದ್ದಲು, ಬೆದ್ದಲೆ, ಬೆರ್ದಲೆ, ಬೆಟ್ದಲೆ, ಬೆಟ್ಟ್ದಲೆ (ನಾ). ಮಳೆಯ ನೀರಿನಿಂದ ಮಾತ್ರ ಬೆಳೆ ಬೆಳೆಯುವ ಭೂಮಿ ; ಹೊಲ ; ಕಾಡಾರಂಬ : ಬೀಡಿನ ದಕ್ಷಿಣದ ಕೊಳದೊಳಗೆ ಬೆದ್ದಲ ಕಮ್ಮ ೫೦ (ಕಇ. V. ೦೯-೦೯ ; 1121). **ಬೆಜಲು** : ಬೀಜವರಿ ಖಂಡುಗ ಬೆಜಲು (ಎಕ. IX, ಕನ್ನಕ. ೦೬೯-೧೯ ; 1461). **ಬೆಜ್ಜಲು₂** : ಚತುಃಶೀಮೆವಳಗೆ ವುಳ್ಳ ಗದ್ದೆ ಬೆಜ್ಜಲು ತೋಟ ತುಡಿಕೆ (ಎಕ. IV, ಪಾಕುರಾ. ೨೬೬-೨೯ ; 1397) ; ಗದ್ದೆ ಬೆಜ್ಜಲು ತೋಟ ತುಡಿಕೆ ಕಾಲುವಳಿ (ಕಾಇ. IX–ii, ೭೦೦-೯ ; 1512). **ಬೆದಲ್** : ಅಟಿವವರಾರ್ ಬೆದಲ ಧಾನ್ಯಮಂ ಧರೆ ಸುಖದಿಂದುಟಿವುದು ಕಾರ್ಗಾಲದೊಳು (ಅಭಿಸು. ಶಂ. ೪-೫೭). **ಬೆದಲು** : ಕೆಱೆಯ ಕೆಱಗೆ ಬೆದಲು ಸೂಜು ಕಂಬ (ಎಕ. VI, ಕಡೂರು. ೨-೨೦ ; 1110) ; ಗದ್ದೆ ಬೆದಲು ತೋಟ ತುಡಿಕೆ (ಪ್ರಇಂ. ೦೯೯೬, ೨೯-೦೦ ; 1530). **ಬೆದ್ದಲು** : ಆ ನಾಡು ಸಟು ಕೊಟ್ಟ ಕಲ್ಲುಗಳಿಂದೊಳಗಣ ಬೆದ್ದಲು (ಎಕ. XI, ಚಿತ್ರದು. ೦೨-೨೪ ; 1280) ; ಮುಗುಟಿಯು ಕಟ್ಟೆಯುನು ಗದ್ದೆಯೂ ಬಟಿಯು ಬೆದ್ದಲು ಸಹಿತ . . . ಕೊಟ್ಟರು (ಪ್ರಇಂ. ೦೯೯೦, ೨-೯ ; 1300) ; ಚತುಃಸ್ಸೀಮೆಯೊಳಗಾದ ಗದ್ದೆ ಬೆದ್ದಲು ಕಟ್ಟೆ ಕಾಲುವೆ (ಎಕ. V. ಹಾಸನ. ೪-೦೬ ; 1563). **ಬೆದ್ದಲೆ** : ಒಮ್ಮತ್ತರ್ ಬೆದ್ದಲೆ (ಪ್ರಇಂ. ೦೯೯೪, ೦೧-೫ ; 11ನೆಯ ಶತ) ; ಗಳೆಯ ಮತ್ತರ್ ೩ ಬೆದ್ದಲೆ ಮತ್ತರ್ ೫ (ಎಕ. VII, ಶಿಕಾ. ೨೦-೦೫ ; 1032) ; ಅರೆಯ ಕೆಱೆಯುಮಂ ಆ ಕೆಱೆಯ ಮೂಡಣ ದೆಸೆಯಲು ಖಂಡುಗ ಬೆದ್ದಲೆ (ಎಕ. II, ೦೯೧--೮೯ ; 1130). **ಬೆರ್ದಲೆ** : ಗೊರವಂಗೆ ಬಿಟ್ಟ ಗದ್ದೆ ಕ ೧ ಕೊ ಬೆರ್ದಲೆ ಮತ್ತ ೧ (ಎಕ. XI, ಹೊಳಲ್ಕೆ. ೬೫-೦೮ ; 1051) ; ಧಾರಾಪೂರ್ವಕಂ ಮಾಡಿ ಬಿಟ್ಟ ಬೆರ್ದಲೆ ಮತ್ತ ೫ (ಕಾಇ. XI–i, ೦೦೪-೦೪ ; 1054) ; ಬೆಕ್ಕನ ಕೆಱೆಯ ಬೆರ್ದಲೆಯುಮಂ (ಎಕ. II, ೪೮೯-೪೯ ; 1185). **△ಬೆಟ್ದಲೆ** : ಏರಿಯಿಂ ಮೂಡ ಬೆಟ್ದಲೆ ಮತ್ತರೊನ್ದು (ದೊಂಕಾ. ೦೯೪೫, ೦೫ನೆಪಙ್ಕ್ತಿ. ೨೯-೧೦ ; 991) ; ಬೆಟ್ದಲೆ ಮತ್ತ ೪ (ಎಕ. XI, ದಾವಣ. ೨೦-೨೨೯ ; 1045) ; ದೇ[ಗು]ಲಕ್ಕೆ ಬೆಟ್ದಲೆ ಮತ್ತರು (ಎಕ. VI, ಕಡೂರು. ೦೬೦-೦೬ ; 1063). **△ಬೆಟ್ಟ್ದಲೆ** : ಕಲುಕುಟಿಗ ಮಾಣಿಕಾಚಾರಿಗೆ ಐಗಳಗ ಬೆದೆಗಟ್ಟಿಯು ಬೆಟ್ಟ್ದಲೆ ಮತ್ತರು ಎರಡು (ಕಾಇ. IX–i, ೦೬೨-೨೬ ; 1053) ; ಗಟ್ಟ್ದ ಮತ್ತಲು ೨ ಬೆಟ್ಟ್ದಲೆ ಮತ್ತಲು ೪ (ಎಕ. VII, ಶಿಕಾ. ೨೪-೦೦ ; ?).

**ಬೆದ್ದಲು** 'ಬೆದ್ದಲ್' ನೋ.

**ಬೆದ್ದಲುಕಂದಾಯ** 'ಬೆದ್ದಲುಗಂದಾಯ' ನೋ.

**ಬೆದ್ದಲುಗಂದಾಯ**, ಬೆದ್ದಲುಕಂದಾಯ (ನಾ). ಕುಷ್ಕಿಭೂಮಿಗೆ ವಿಧಿಸುವ ತೆರಿಗೆ,—ಕಂದಾಯ : ಗದ್ದೆಕರ ಬೆದ್ದಲುಗಂದಾಯ ಕಾಡಾರಂಬ ಮನೆದೆರಿಗೆ (ಕಲ್ಪಿಶಾ. ೦೫೫-೬). **ಬೆದ್ದಲುಕಂದಾಯ**: ನಿಬಂಧನೆಯ ಮೇರೆಗೆ ಅರಮನೆಗೆ ಬೆದ್ದಲುಕಂದಾಯವನ್ನು ಕೊಡುವಂತೆಯೂ ನಿಷ್ಕರ್ಷೆ ಮಾಡಿಸಿದರು (ಮಹಾಶಂ. I, ೦೦೯).

[ ಬೆದ್ದಲು (< ಬೆದ್ದಲ್) + ಕಂದಾಯ ]

**ಬೆದ್ದಲುಗಳೆ**, ಬೆದ್ದಲೆಗಳೆ (ನಾ). ಬೆದ್ದಲು ಭೂಮಿಯನ್ನು ಅಳೆಯುವ ಅಳತೆಕೋಲು : ಒಂದು ಶಾಸನದಲ್ಲಿ 'ಗದ್ದೆಗಳೆ' ಮತ್ತು ಬೆದ್ದಲುಗಳೆಗಳನ್ನು ಬೇರೆ ಬೇರೆಯಾಗಿ ಹೇಳಿದೆ (ಕಶಾಅ. ೪೯೪). **ಬೆದ್ದಲೆಗಳೆ** : ತಳವೃತ್ತಿ ಗದ್ದೆಗಳೆಯ ಮತ್ತಲು ಮೂಱು ಬೆದ್ದಲೆಗಳೆಯ ಮತ್ತಲಾಱು (ಎಕ. VII, ಶಿಕಾಪೂ. ೯-೭೦ ; 1122).

[ ಬೆದ್ದಲು (< ಬೆದ್ದಲ್) + ಗಳೆ (< ಗಟ³) ]

**ಬೆದ್ದಲುಪೈರು** (ನಾ). ಹೊಲದ ಬೆಳೆ ; ಕುಷ್ಕಿ ಪೈರು : ನೀರು ಬಾರದ ವರ್ಷ ಆ ಭೂಮಿಯಲ್ಲಿ ಬೆದ್ದಲುಪೈರು ಮಾಡಿಕೊಂಡು, ನಿಬಂಧನೆಯ ಮೇರೆಗೆ ಅರಮನೆಗೆ ಬೆದ್ದಲುಕಂದಾಯವನ್ನು ಕೊಡುವಂತೆಯೂ ನಿಷ್ಕರ್ಷೆ ಮಾಡಿಸಿದರು (ಮಹಾಶಂ. I, ೦೦೯).

[ ಬೆದ್ದಲು (< ಬೆದ್ದಲ್) + ಪೈರು (< ಪಯಿರ್) ]

**ಬೆದ್ದಲುಬೇಸಾಯ** (ನಾ). ಕುಷ್ಕಿ ವ್ಯವಸಾಯ ; ಕಾಡಾರಂಬ : ಇನ್ನು ಆಡೇನಹಳ್ಳಿಯ ವಿಚಾರ. ಅದು ಕುಗ್ರಾಮ. ಎಲ್ಲಾ ಬೆದ್ದಲುಬೇಸಾಯ (ನನ್ನಕರು. ೦೫೦).

[ ಬೆದ್ದಲು (< ಬೆದ್ದಲ್) + ಬೇಸಾಯ (< ಬೆವಸಾಯ) ]

**ಬೆದ್ದಲೆ** 'ಬೆದ್ದಲ್' ನೋ.

**ಬೆದ್ದಲೆಗಳೆ** 'ಬೆದ್ದಲುಗಳೆ' ನೋ.

**ಬೆದ್ದುಗೊಂದೆ** (ನಾ). ಒಂದು ಊರಿನ ಹೆಸರು : ಶ್ರೀವೀರಸೋಮೇಶ್ವರ ರಾಜಾಧಿರಾಜಪರಮೇಶ್ವರ ಬೆದ್ದುಗೊನ್ದೆಯ ಕೆಱೆಯ ಕಟ್ಟಿಪ್ಪನ್ದು (ಕಾಇ. IX–i, ೦೭-೬ ; ೯ನೆಯ ಶತ). [ ? + ಗೊಂದೆ₀ (< ಕುಂದ₃) ]

**ಬೆದ್ದೊಱಗರೆ** (ನಾ). ಒಂದು ಊರಿನ ಹೆಸರು : ಶ್ರೀಮತ್ ರಕ್ಕಸ ಬೆದ್ದೊಱಗರೆಯನಾಳುತ್ತಿರೆ (ಇಇ. VI, ೦೦೨-೮ ; 777 ?). [?]

**ಬೆನ್**, ಬೆಂ₁, ಬೆನು, ಬೆನ್ನು (ನಾ). ೧. ಕುತ್ತಿಗೆಯಿಂದ ಸೊಂಟದ ವರೆಗಿನ ಶರೀರದ ಹಿಂಭಾಗ : "ಪೃಷ್ಠಂ, ಪಶ್ಚಿಮಭಾಗಃ — ಈ ೨ ಬೆನ್" (ಹಲಾಯು. ೭೬-೩೭೯) ; ಪಚ್ಚು ಪರಿಕಲಿಸಿ ಬೆನ್ನಂ ಮುಚ್ಚಿರೆ ಮುಡಿ (ಕಾವ್ಯಸಾ. ೯೬೬ ಸೂಕ್ತ); ದೇವತೆ ನವಿಲ ರೂಪಿನಿಂದೆತ್ತಿಕೊಂಡು ಬೆನ್ನೊಳಿಟ್ಟು . . . ಲತಾಮಂಟಪದೊಳಿರಿಸಿ ಪೋದೊಡೆ (ಶಬ್ದಾಶಾ. ೦೦೮-೯); ಪಡೆಯ ಪೊಱಗಿದು ಶೇಷಂ ಪೆಡೆಗಳನಂತುಗುವುದುವೆಳೆ ಬೊದಿಲ್ಲೆನೆ ಬಿಟ್ದತ್ತಡಿಗಿತೆ ಕೂರ್ಮನ ಬೆನ್ನಂದೊಡೆದು ಸಿಡಿಲ್ದೊಡನೆ ನುಚ್ಚುನೂಱಪ್ಪಿನೆಗಂ (ಕುಶಾ. ೦೦-೭೦). **ಬೆಂ₁** : ೨. ಹಿಂದುಗಡೆ; ಹಿಂಭಾಗ: 'ಬೆಂಗಾಣಿಸು', 'ಬೆಂಗಾವು', 'ಬೆಂಗಾವಲ್' ಪರಾ. **ಬೆನು**: ೧. ಸುರುಳ್ದ ತನು ನಳಿತ ಬೆನು ಜೋಲ್ವಪುರ್ವಿಂದೆಸೆಯೆ (ಇಕಥಾ. ದೇ. ೩೦-೦೬). **ಬೆನ್ನು**: ೧. ಹಲ್ಲು ಹೋಗಿ ಬೆನ್ನು ಬಾಗಿ ಅನ್ಯರಿಗೆ ಹಂಗಾಗದ ಮುನ್ನ . . . ಪೂಜಿಸು ನಮ್ಮ ಕೂಡಲಸಂಗಮದೇವನ (ಬಸವ. ೦೬೦); ಮುಬಿವೆಲ್ಲಾ

ಕಣ್ಣು ಬೆನ್ನೆಲ್ಲಂ ಮುಡಿ ಉರವೆಲ್ಲಂ ಮೊಲೆ (ವಂಬರ. ೪-೫೬); ಎದೆಯ ಲೌಕಿದ ಬಾಣ ಬೆನ್ನಲಿ ತುದಿಮೊನೆಯ ತೋಱುವವು (ಕುಮಾ.ಶ. ೧೦-೫೪). ೨. ಪುಟದ ನಾಲ್ಕು ಪರಿಸರಗಳೂ (ಬೆನ್ನು, ಮೇಲಂಚು, ಮುನ್ನಂಚು ಮತ್ತು ಕೆಳಅಂಚು) ಕ್ರಮವಾಗಿ ಸ್ವಲ್ಪ ಸ್ವಲ್ಪ ವಿಶಾಲವಾಗಿರಬೇಕು (ಮುದ್ರಶ. ೩೯).

**ಬೆಂಗೆವರ್, ಬೆಂಗೆಬರ್**=ಬೆನ್ನನ್ನು ಹತ್ತು : ವಿಜಯಪರ್ವತ ಗಜೇಂದ್ರದ ಬೆಂಗೆವಂದು (ಆದಿಪು. ೧೪-೬ ವ) ; ನಿಜವಿಜಯಸಿಂಧುರದ ಬೆಂಗೆವಂದು (ಅಜಿಪು. ೯-೦೪ ವ); ಪಟ್ಟದಾನೆಯ ಬೆಂಗೆ ಬಂದು (ಕುಮಾ.ಸ್ರ. ೨-೬೨ ವ). **ಬೆಂಗೆವಾಯ್, ಬೆಂಗೆಹಾಯ್**=ಬೆಂಗೆವರ್ : ಮದಾಂಧ ಗಂಧಸಿಂಧುರಮಪ್ಪ ಪಟ್ಟವರ್ಧನದ ಬೆಂಗೆವಾಯ್ದು . . . ಭಯಮಱ ಯದ ಕಲಿ ಸುಯೋಧನಂ ಪೊಱಮಟ್ಟಂ (ಪಂಪಭಾ. ೧೦-೨೬ ವ); ಮಂಗಳವ ನಿಮಗೆಂದು ಹಂಸೆಯ ಬೆಂಗೆಹಾಯ್ದನು ಬಳಿಕ ನಭದೊಳಭಂಗಮುನಿಯಡ ಗಿದನು (ಕುಮಾ.ರ. ೦೮-೩೪). **ಬೆನ್ನಂಪತ್ತಿಸು** = ಹಿಂಬಾಲಿಸು : ಅನುಸರಿಸು : ಚೋಳೋರ್ವ್ವಿಯಂ ನಿಂನಂತಾರೊಳಪೊಕ್ಕು ಸಾಧಿಸಿದ ರಾಪಾಣ್ಡ್ಯದೇಶನಂ ಶೌರ್ಯ್ಯದಿಂ ಬೆಂನಂಪತ್ತಿಸಿ ಸೋವಿದೇವಘಟೆಯುಂ ಕೈಕೊಂಡರ್ (ಎಕ. VII (R), ಶಾಗವು. ೦೬೩-೩೦; 1229). **ಬೆನ್ನಂಪತ್ತು**=**ಬೆನ್ನಿಗೆ ಅಂಟಿಕೊಳ್ಳು**: ಬೇತಾಳನ ಬಸಿಱಂತೆ ಬೆನ್ನಂ ಪತ್ತಿದ ಬಸಿಱುಂ (ಪಂಪಪು. ೬೩-೭) ; ಕುಪ್ಪಸದಂತೆ ಬೆನ್ನಂಪತ್ತಿ ಕೆತ್ತುವರ್ (ರಘುಮು. ೩-೬೩). **ಬೆನ್ನಡಿಹೋಗು** = ಬೆನ್ನಟ್ಟಿ ಹೋಗಂ : ಆ ವಾಲಕಾರ ಜನರು ಕಂಡು ಆ ರಾಜರ ಬೆನ್ನಡಿಹೋಗಿ ಹಿಡಿಯುವಷ್ಟರಲ್ಲಿ (ರಾಜೇಂದ್ರ. ೨೪). **ಬೆನ್ನಾಗು**=೧. ಊರೆಯಾಗು ; ಆಧಾರವಾಗು ; ಆಶ್ರಯ ವಾಗು : ಮದನನ ದಿಗ್ವಿಜಯದೊಳಿಂತಿದೆ ಬೆನ್ನಾಗಿರ್ದುದೆಂಬ ಚೆನ್ನಿಂದೆ ಸೆಗುಂ ಸುದತಿಯ ಸೊಬಗಿನ ಸರ್ವಸ್ವದ ಭಾಗಂಗೊಂಡ ಪೂರ್ವಭಾಗಾ ಭೋಗಂ (ಕುಸ್ವಪು. ೩-೫೭); ತನ್ನ ಸೆಳೆದೊಯ್ಯುವಾಗ ಬೆನ್ನಾಪರ ಕಾಣೆನೋ (ಭರಂದ. ೦-೦೬೬-೩). ೨. ಅಂಗತ್ತನಾಗಿ ಬೀಳು : ಕೈಕಾಲುಱು ತುಂಡಿಸಿ ನೊಂದು ಬೆನ್ನಾದ ದಂಡನಾಥನ ಬಲವನು ಮಗ ಹೊಯ್ಸಳ ಕಂಡನು ಕಲಹಭೂಮಿಯೊಳು (ಕುರಾಶಾಂ. ೦೩-೪೦). **ಬೆನ್ನುಚಪ್ಪರಿಸು**= ಪ್ರೋತ್ಸಾಹಿಸು; ಹುರಿದುಂಬಿಸು; ಬೆನ್ನು ತಟ್ಟು: ಬೆನ್ನು ಚಪ್ಪರಿಸಿದರೆ ಬೆಳತನಕ ಬೇಸೂರು ಹಾಡಬಲ್ಲ (ಪಂಚುಂ. ೨೮-೦೫). **ಬೆನ್ನುತಟ್ಟು**= ಬೆನ್ನುಚಪ್ಪರಿಸಂ : ಅನುವಾದಕಾರ್ಯ ವಿಳಂಬವಾಗದಂತೆ ಲೇಖಕರ ಬೆನ್ನು ತಟ್ಟಿದರು (ರ್ವಪ್ರಾರೋ. XVI, ಸಂಪಾದಕರ ಮಾತು); ಸಂತೋಷದಿಂದ ಓಡಿ ಹೋಗಿ ಅವನ ಬೆನ್ನು ತಟ್ಟುವಂತಾಯಿತು (ಕಾರಿಮ. ೦೬೩). **ಬೆನ್ನು ತಿರುಗಿಸು**=ವಿಮುಖವಾಗಂ : ನೀನು ನನ್ನ ವಿವೇಕದ ಮಾತುಗಳಿಗೆ ಕಿವಿ ಗೊಡದೆ ಹೋದೆ . . . ನನ್ನ ಕಡೆಗೆ ಬೆನ್ನು ತಿರುಗಿಸಿದೆ (ಹೊಸಕ್ಷ. ೦೦). **ಬೆನ್ನುತೋರಿಸು**=ಬೆನ್ನು ತಿರುಗಿಸು : ಅವರು ಯುದ್ಧದಲ್ಲಿ ಶತ್ರುಗಳಿಗೆ ಬೆನ್ನುತೋರಿಸದ ಕಲಿಗಳೂ, ಅಭಿಮಾನಧನರೂ ಆಗಿದ್ದಾರೆ (ಕಪಕು. ೫-೭೪). **ಬೆನ್ನುತೋರು**=ಬೆನ್ನುತಿರುಗಿಸಂ : ಶತ್ರುವಿಗೆ ಬೆನ್ನುತೋರಲಿಲ್ಲ (ಅಹಃ೯ಕ. ೬೯). **ಬೆನ್ನುಹಾಕು**=ಹಿಂದಿರುಗು ; ಮರಳು : ಹರಿದಾಸರು ಜಯಶೀಲರಾಗದೆ ಬೆನ್ನುಹಾಕಿದರು (ಕಾಪಃರ. ೦೯): ವಾಗ್ದೇವಿಯು ಅವನ ಪ್ರಶ್ನೆ ಹಾಳಾಗಲೆಂದು ಬೆನ್ನು ಹಾಕಿ ನಡೆವಳು (ವಾಗ್ದೇಬಿ. ೧೪೦). **ಬೆನ್ನುಹಿಡಿ**=ಅನುಸರಿಸು : ಕೋಶಿಗಳು ಒಂದನ್ನೊಂದು ಬೆನ್ನು ಹಿಡಿಯುತ್ತಿವೆ, ಹೊಡೆದಾಡುತ್ತಿವೆ (ರಕ್ತಕೂ. ೦).

[ದೇ. ತಮಿ. ಪಿನ್, ವೆರಿನ್; ತುಳು. ಬೆರಿ; ಕೊಡ. ಬೆನ್ನೀ; ತೆಲು. ವೆನು, ವೆನ್ನು; ಕೋತ. ಕೋಲಾ. ವೆನ್; ನಾಯ್ಕಿ. ವೆಂಕ]

**ಬೆನಕ, ಬೆನವ** (ನಾ). ೧. ಗಣಪತಿ ; ವಿನಾಯಕ : "ಹೇರಂಬಃ . . . ವಿನಾಯಕಃ, ವಿಘ್ನರಾಜಃ — ಈ ೯ ಬೆನಕನ ಪೆಸರ್" (ಹಲಾಯು. ೪-೧೪); ತಾಂ ತಿರಿವ ಗೊರವಿ ಬೆನಕನುಮಂ ತಿರಿಯಿಪಳೆಂಬ ತೆಱದೆ (ಶಾಂತಿಪು. ೬-೦೩೦); ಸಗಣಿಯ ಬೆನಕಂಗೆ ಸಂಪಗೆಯರಳಲ್ಲಿ ಪೂಜಿಸಿದರೆ ರಂಜನೆಯಲ್ಲದೆ ಅದಱ ಗಂಜಳ ಬಿಡದಣ್ಣ (ಬಸವ. ೪೩). ೨. ಗುಂಡಾದ ಕಲ್ಲು ; ದುಂಡುಶಿಲೆ : "ಬೆನಕ–ಗುಂಡಕಲ್ಲು,ಗಣೇಶ, ಒಂದು ಸಕ್ಕರೆಯ ತಿನಿಸು" (ಜಾನಕೋ. ೨೩); ಹೊಳೆಗಳೊಳಗಿನ ಬೆನಕಗಳು ಹ್ಯಾಗೆ ದುಂಡಾಗಿರುತ್ತವೆ ನೋಡಿರಿ (ಮುಂಬಯಿ. ೪-೦೮೦); ತೀರದ ಬೆನಕಗಳ ಹಾಸಿಗೆಯ ಮೇಲೆ ಮೈಚಾಚಿ ಒರಗಿದಳು (ಅಶ್ವ. ೩). ೩. ಒಂದು ಬಗೆಯ ಸಿಹಿತಿಂಡಿ : ಚೊಕ್ಕಟ ವಾದಂತ ಬೆಂಡು ಬೆನಕ ಬರ್ಫಿ ತುಕ್ಕಡಿ ಕಲ್ಯಾಣಶಾವಿಗಳು (ಕಪಗೀ. ೪೬). **ಬೆನವ** : ೧. ಹಟ್ಟಿಯ ಹೊಱಗೆ ಬೆನವನ ಪೂಜೆಯ ಮಾಡಿ ತಿಪ್ಪೆಯೊಳಗೆ ಬಿಟ್ಟಂತಾಯಿತ್ತು (ತನ್ನವ. ೪. ೦೦೪-೨೩೦); ತ್ರಿಯಂಬಕ ದೇವರ ಹೆಮ್ಮಗನಪ್ಪ ತೊಱೆಗಲ ಬೆನವಂಗೆ ಶರಣೆಂಬೆ (ಸೊಬಸೋ. ೦-೫): ಮದಲು ನೆನೆದವೆ ಸ್ವಾಮಿ ಲಿಂಗನ ಸನುಮತ ಶಿವಗಂಗೆ ಬೆನವನ (ಪಾಶದ. ೭). [< ಸಂ. ವಿನಾಯಕ./ ತುಳು. ಬೆನಕ]

**ಬೆನವ** 'ಬೆನಕ' ನೋ.

**ಬೆನವಯ** (ನಾ). ಒಬ್ಬಾತನ ಹೆಸರು : ಕಾದೊಡೆ ಆತನ ತಮ್ಮಂ ಬೆನವಯ ಸಗ್ಗಿಯಾದಂ (ಮ್ಯಆಂ. ೦೯೨೭, ೬೩-೪; ೨ನೆಯ ಶತ).
[ಬೆನವ (< ಬೆನಕ) + ಅಯ$_1$ (< ಅಯ್ಯ$_{61}$)]

**ಬೆನು** 'ಬೆನ್' ನೋ.

**ಬೆನೆಯಿತವುರ** (ನಾ). ಒಂದು ಊರಿನ ಹೆಸರು : ಬೆಳ್ವೊಲ ವಿಷಯಾಭ್ಯನ್ತರ(ರೇ) ಬೆನೆಯಿತವುರಂ ಅಣ್ಣಿಗೆಱೆ (ಇಆ. VII, ೨೨೦-೨೮; 658). [<ಸಂ. ವಿನಯಾದಿತ್ಯಪುರ]

**ಬೆನ್ಗಲ್ಲಿ, ಬೆಂಗಲ್ಲಿ** (ನಾ). (ಬೇಟೆ ಮುಂತಾದ ಸಂದರ್ಭಗಳಲ್ಲಿ) ಬೆನ್ನಿಗೆ ಕಟ್ಟಿಕೊಳ್ಳುವ ಚೀಲ ; ಬೆನ್ನಿನ ಚೀಲ : ಪವವಿಲ್ ಕೂರಂಬು ಬೆನ್ಗಲ್ಲಿ ಕೆಯ್ಪೊಡೆ ಗಾಳಂ . . . ಬಡಿಕೋಲ್ಗಳೊಪ್ಪೆ ಜವದಿಂದಯ್ತಂದರಾ ಧೀವರರ್ (ಕಬಕಂ. ೩-೨೩). **ಬೆಂಗಲ್ಲಿ** : ಬಡಿಕೋಲು ಜಾಯಿಲಂ . . . ಬೆಂಗಲ್ಲಿ ತೊಡಕುವಲೆ ಕಂಬಿ ತಿತ್ತಿಯು ಸೋರೆಯ ಬುರುಡೆಗಳು ಬಿಲ್ಲು ಗೊಂಚಿಯ ಸರಳ್ಗಳ ಪಿಡಿದು . . . ಬೇಂಟೆಯಾಡುತ್ತಿರ್ದರು (ಕಾಶಿಕ. ೦೭-೬೭). [ಬೆನ್ + ಕಲ್ಲಿ$_1$]

**ಬೆನ್ನಂಟು** (ಕ್ರಿ). ಹಿಂದೆಹೋಗು; ಹಿಂಬಾಲಿಸು ; ಬೆನ್ನುಹತ್ತು : ಲಕ್ಷ್ಮಣದೇವಗಾಣತಿಯಿತ್ತು ನಾಂ ಬೆನ್ನಂಟಿ ಹರಿಣವನು (ಜಾಮಾಸಂ. ೫-೨-೬೨); ಎನ್ನಿಂ ಧಿಕ್ಕೃತೆಯಾಗಿ ತನ್ನ ಜನಮುಂ ಬೆನ್ನಂಟಲುದ್ಯುಕ್ತೆ ಯಪ್ಪನ್ನಂ ನಿಲ್ಲೆಲಗೇ ಎನುತ್ತೆ ಗುರುಶಿಷ್ಯಂ ಕೋಪದಿಂ ಗರ್ಜಿಸಲ್ (ಜಾಕುತ. ೯೫-೧೪೦). [ಬೆನ್ನು (< ಬೆನ್) + ಅಂಟು$_1$]

**ಬೆನ್ನಟ್ಟು** (ಕ್ರಿ). = ಬೆನ್ನಂಟು : "ಬೆನ್ನಟ್ಟಿನಲು ತಗುಳ್ವುದಕ್ಕಂ" (ಶಬ್ದಮ. ೨೩೦); ಕಣ್ಗೆಡೆ ಬೆನ್ನಟ್ಟಿದನಂತು ನಮ್ಮ ಹರಿಗ (ಪಂಪಭಾ. ೦೦-೦೩); ಬೆನ್ನಟ್ಟಿ ಪಾರ್ಥಕುಮಾರ ನದೆದನು ವೈರಿಮೃಗಕುಲವ (ಕುಮಾರಭ್ರಾ. ೫-೭೪). [ಬೆನ್ + ಅಟ್ಟು$_2$]

**ಬೆನ್ನಡಗು** (ನಾ). ಬೆನ್ನಿನ ಮಾಂಸ : ಮುನ್ನ ಮಧುಕೈಟಭರನಾ ಹರಿ ಭಿನ್ನವಿಲ್ಲದೆ ಕೊಲ್ಲಲವದಿರ ಬೆನ್ನಡಗನೇ ನೀರಲೊರಸಲಿಕಾಯ್ತು ಮೇದಿನಿಯು (ಸಂಶಕ. ೫-೨೭). [ಬೆನ್ನು (< ಬೆನ್) + ಅಡಗು$_3$]

**ಬೆನ್ನಡರು** (ಕ್ರಿ). ಬೆನ್ನಿನ ಮೇಲೆ ಹತ್ತು; ಸವಾರಿ ಮಾಡು : ಬಂದನಾಗಸ ವಾರುವದ ಬೆನ್ನಡರಿದಾ ಗಜ ವಿಧಿಯ ವಶದಿಂದ (ಕೃಷ್ಣಾಕಾ. ೬-೦೯). [ಬೆನ್ನು (< ಬೆನ್) + ಅಡರು$_1$ (< ಅಡರ್)]

**ಬೆನ್ನನೆ** (ಅ). ೧. ಹಿಂದುಗಡೆ; ಹಿಂಭಾಗದಲ್ಲಿ : ಗಿಳಿಯ ಬೆನ್ನನೆ ಮೆಲ್ಲನೆ ಗದ್ಗದಸ್ವನಂ ಕಂಚುಕಿ ಬಂದು ಕಂಡನನುರಾಗದಿನಾ ಮನಸಿಜೇಂದ್ರ ಚಂದ್ರನಂ (ಕಾದಂಪೂ. ೬೩); ಹೊನ್ನೆಯ ಮೊಱಡಿಯ ಬೆನ್ನನೆ ಸನ್ನಾ

ಪೂರ್ವದ ಕೂಡಿತ್ತು (ಇಅ. VIII, ೨೦೪-೪೦ ; 10ನೆಯ ಶತ). ೨. ಕೂಡಲೆ; ಹಿಂದೆಯೇ : ಉನ್ನತಗುರುಶ್ರೀಪಾದಮಂ ಮರ್ಚಿ ಬೆನ್ನನೆ ಪೋದಂತಿರೆ ಮೂರ್ಛೆವೋದನರಸಂ ವ್ಯಾಮೋಹಮೇಗೆಯ್ಯದೋ (ಅರ್ಧನೇ. ೨-೪೮).

**ಬೆನ್ನನೆಬರ್, ಬೆನ್ನನೆಬರು** = ಅನುಸರಿಸು; ಹಿಂದೆಯೇ ಬರು : ನೀಮುಮಗಲ್ದೆಯಿನ್ನೆನಗೆ ಪೇೞ್ ಪೞಿರಾರೆನಗಾಸೆ ನಿನ್ನನಿನ್ನಾನುಮಗಲ್ವೆನೇ ಕೆಳೆಯ ಬೆನ್ನನೆ ಬಂದಪೆಂ (ಶಂಶಪ. ೦೩-೩); ಮಿಂಚಿನ ಬೞಿಯ ಮೋೞಗುವೋಲ್ ಬೆನ್ನನೆ ಬಂದಳ್ (ಶಾಂತಿಪು. ೭-೨೮); ಬನಕೆ ಶಂಖನು ಪೋಗುತಿರೆ ಮಿತ್ರನ ಸರವು ಹಱಿದೊಗಲು ತಾಂ ಬೆನ್ನನೆ ಬರುತ ನಿರ್ನಾಮಿಕನು ಬಿಡದಾಯ್ದುಕೊಳುತಿರಲು (ಸಾಳ್ವಭಾ. ೨೦-೭೨).

[ಬೆನ್ + – ಅನೆ$_1$]

**ಬೆನ್ನಲೆ** (ಕ್ರಿ). ಹಿಂಭಾಗದಲ್ಲಿ ತೂಗಾಡು. – ಒಲೆ : ಬಲಿದ ಮುಂಗೈ ತೊಡಿಯ ಬಿರುದಿನೊಳುಲಿವ ಘಂಟೆಯ ಬೆನ್ನಲೆವ ಬತ್ತಳಿಕೆಗಳಲ್ಲೆದಿತ್ತು ಬಲ್ಲಾಳುಭಯಸೇನೆಯುಲಿ (ಕುಮಾ.ಶೀ. ೪-೧೦). [ಬೆನ್ನು (< ಬೆನ್) + ಅಲೆ$_1$]

**ಬೆನ್ನಾನ್** (ಕ್ರಿ). ಬೆನ್ನಿಗೆ ಏರಿಸಿಕೊಳ್ಳು; ಬೆನ್ನಿನಲ್ಲಿ ಹೊರು : ನಿಜವಾಗಿ ತೆರಳಬೇಕಾಯಿತಾದಡೆ ಜೀಯ ಬಿಜಯಾಡಿ ಬೆನ್ನಾಂತುಕೊಂಬೆ (ಮೋಹತ. ೩೭-೩೭). [ಬೆನ್ನು (< ಬೆನ್) + ಆನ್$_1$]

**ಬೆನ್ನಿ** (ನಾ). [ಗಣಿತ] ಎರಡು ಎಂಬ ಸಂಖ್ಯೆಯ ಸಂಕೇತ : "ಬೆ, ಬೆನ್ನಿ, ಯಮ . . . ದಂಪತಿ ಇಂತಿನಿತುಂ ಎರಡಕ್ಕೆ ಹೆಸರು" (ವ್ಯವಹಾ. ೧೦-೧೦). [?]

**ಬೆನ್ನಿಕ್ಕು** (ಕ್ರಿ). ೧. ಬೆನ್ನಿನ ಹಿಂದೆ ಇರುವಂತೆ ಮಾಡು : ತನ್ನ ಬಲಮುಮಂ ಬೆನ್ನಿಕ್ಕಿಕೊಂಡು ನಿಂದಾಗಳ್ (ಅಜಿತ. ೦೪-೭ ವ); ನಿನ್ನಧಿಪನ ಮಂದಿರಕ್ಕೆ ಕೞಿಪುವೆನೊಲವಿಂ ಕನ್ನೆ ನಡೆಯೆಂದು ಸತಿಯುಂ ಬೆನ್ನಿಕ್ಕಿ ಬೞಿಕ್ಕಮೊರ್ಮೊದಲ್ ನಡೆಗೊಂಡೆಂ (ದಶಕು. ೮-೧೧೦). ೨. ಬೆನ್ನು ತೋರಿಸು; ಹಿಮ್ಮೆಟ್ಟು : ಓಡಿದರು ರಿಪುಭಟರು . . . ಬೆನ್ನಿಕ್ಕಿ ಸುರಬಲಕೆ (ಐಕಾಗ. ೭-೧೦-೨೦). ೩. ವಿಮುಖವಾಗು : ಭಾರತವನ್ನು ಬಿಟ್ಟು ಕರ್ನಾಟಕವಿಲ್ಲ ಎಂಬ ಸತ್ಯಕ್ಕೆ ಬೆನ್ನಿಕ್ಕದೆ (ಚತ್ರಸ್ಮ. ೩ ಮುನ್ನುಡಿ).

[ಬೆನ್ + ಇಕ್ಕು]

**ಬೆನ್ನಿಕೆ** (ನಾ). ಒಂದು ಬಗೆಯ ತೆರಿಗೆ : ಆ ಕೆಯ್ಗೆ ಬೆನ್ನಿಕ್ಕೆಯಿಲ್ಲ ಬೆನ್ನಿಕ್ಕೆಯೆಂಬವಂ ಶ್ವಾನ ಗಾರ್ದ್ದಭ ಚಾಣ್ಡಾಳ[ಂ] (ಎಇ. XIX. ೨೦೪-೬; 1037); ಇಪ್ಪತ್ತೆರಡು ಮತ್ತರ್ಕೆಯ್ಗೆ ಬೆನ್ನಿಕೆಯಿಲ್ಲವು (ಕಇ. II, ೧೦-೨೦; 1080). [?]

**ಬೆನ್ನೀ** (ಕ್ರಿ). ೧. ಬೆನ್ನು ತಿರುಗಿಸು ; ಬೆನ್ನು ತೋರಿಸು ; ವಿಮುಖವಾಗು : ದಿವ್ಯಪುರುಷನ ಹಸ್ತಪ್ರಹಾರಮೆಂಬ ಮುದ್ಗರಪೀಡೆಯಿಂ ತ್ರಸ್ತಾಭಿಭೂತನಾಗಿ ಬೆನ್ನಿತ್ತೋಡಿದಂ (ವಡ್ಡಾರಾ. ೩೭-೧). ೨. ಪಲಾಯನ ಮಾಡು ; ಸೋತು ಓಡಿಹೋಗು : ನಿನ್ನ ತಮ್ಮನ ಕೆನ್ನೆತ್ತರ ನೀರ್ದುವಲ್ಲಿ ಭಯದಿಂದಳ್ಕುತ್ತೆ ಬೆನ್ನಿತ್ತುದಂ ನೆನೆ (ಗದಾಯು. ೭-೩೯): ಭೀಮಂಗಂಡ ಸುಯೋಧನಪ್ರಭೃತಿಗಳ್ ಮುನ್ನಾಂತು ಬೆನ್ನಿತ್ತವೋಲ್ (ಎಇ. XI, ಚಿತ್ರದು. ೦೩-೨೨; 1124 ?); ಬೇಡರಸು ಬೆನ್ನೀಯೆ ನೆತ್ತಿಯ ಬೀಡೆ ಬರಿಯಲು ಬಿದ್ದ ಲೌಡೆಗಳೀಡಿಱಿದವರಿಚಾತುರಂಗದ ಚಪಳಚೂಣಿಯುಲಿ (ಕುಮಾ.ಕ. ೧೧-೦೦). [ಬೆನ್ + ಈ$_2$]

**ಬೆನ್ನೀರ್** 'ಬಿಸುನೀರ್' ನೋ.

**ಬೆನ್ನೀರು** 'ಬಿಸುನೀರ್' ನೋ.

**ಬೆನ್ನೀಹ** (ನಾ). ಬೆನ್ನು ತೋರಿಸುವಿಕೆ ; ಓಟ : ಪಲಾಯನ : "ಪೊಱಮಱಿಂದು ಬೆನ್ನೀಹಂ" (ಶಮದ. ಪ. ಶಂ. ೩೭೪). [ಬೆನ್ + ಈಹ$_1$]

**ಬೆನ್ನು** 'ಬೆನ್' ನೋ.

**ಬೆನ್ನುಕಟ್ಟು** (ಕ್ರಿ). ೧. ಹಿಂಬಾಲಿಸು ; ಅನುಸರಿಸು : ಗುಡಿಗೆ ಕರೆಯೋಣವಾಗ ಒಲ್ಲೆ ಅಂತೇಕನಬೇಕೆಂದು ನಾನೂ ಅವನ ಬೆನ್ನುಕಟ್ಟಿದೆ (ಮುಂಗಾಪು. ೬೩). ೨. ಪಕ್ಷವಹಿಸು ; ಬೆಂಬಲವಾಗು ; ಸಮರ್ಥಿಸು : ಆಕೆ ಮಗನ ಬೆನ್ನುಕಟ್ಟಿದಳು (ಶ್ರೀಪಾತ್ರ. ೨೪೭); ನಾನು ಯಾವಾಗಲೂ ನಿರ್ಬಲರ ಬೆನ್ನುಕಟ್ಟುತ್ತೇನೆ (ಜಿನಾಪ್ಮಾ. ೭೪); ನೀನು ಬೆನ್ನುಕಟ್ಟುವ ಬದಿ ಯಾವುದು ? (ಬಾಬಂ. ೭೭). [ಬೆನ್ನು (<ಬೆನ್) + ಕಟ್ಟು$_I$]

**ಬೆನು ಕೊಡು** 'ಬೆಂಗೊಡು' ನೋ.

**ಬೆನ್ನುಗಾವಲು** 'ಬೆಂಗಾವಲ್' ನೋ.

**ಬೆನ್ನುಡಬ್ಬೆ** (ನಾ). ಸೀಳಿರುವ ಬಿದಿರಿನ ಮೇಲು ಭಾಗ: (ಃ).

[ಬೆನ್ನು (<ಬೆನ್) + ಡಬ್ಬೆ$_1$ (<ದಬ್ಬೆ$_1$)]

**ಬೆನ್ನುಫಣಿ** (ನಾ). ಬೆನ್ನಿನಲ್ಲಿ ಏಳುವ ಕುರು : ಶ್ರೀರಂಗರಾಯರಿಗೆ ಬೆನ್ನುಫಣಿ ಎಂಬ ವ್ರಣಜಾಡ್ಯವು ಸಂಭವಿಸಿ ಬದುಕುವುದು ಅಸಾಧ್ಯವೆಂದು ತೋರಿತು (ಮೈಪಾಸ್ಮ. ೦೨೮). [ಬೆನ್ನು (<ಬೆನ್) + ಫಣಿ$_1$]

**ಬೆನ್ನುಬಲ** 'ಬೆಂಬಲ' ನೋ.

**ಬೆನ್ನುಬೀಳು** 'ಬೆಂಬೀೞ್' ನೋ.

**ಬೆನ್ನುಮೂಳೆ** (ನಾ). ೧. ಬೆನ್ನಿನ ಎಲುಬು ; ಕಶೇರು : "ತ್ರಿಕಂ. ಪೃಷ್ಠವಂಶಾಧರೇ, ಬೆನ್ನುಮೂಳೆಗೆ ಬುಡ, ಬೆನ್ನೆಲುವಿನ ಕೆಳಗಡೆ" (ಸಿದ್ಧಾಂತಿ. ೦೯೦). ೨. (ಅಲು) ಆಧಾರ : ಹಳ್ಳಿಗಳೇ ಬೆನ್ನುಮೂಳೆಯಾದ ನಮ್ಮ ರಾಷ್ಟ್ರವು ಪ್ರಗತಿಯಾಗಬೇಕಾದರೆ ಮೊದಲು ಹಳ್ಳಿಗಳು ಪ್ರಗತಿಯನ್ನು ಹೊಂದಬೇಕಲ್ಲವೇ? (ಕನ್ನಜಾ. ೪೦). [ಬೆನ್ನು (<ಬೆನ್) + ಮೂಳೆ$_1$]

**ಬೆನ್ನುರಿ, ಬೆಚ್ಚುರಿ** (ನಾ). ಅತಿ ಬಿಸಿಯಾದ ಉರಿ : ಬೆನ್ನುರಿ, ಬೆಚ್ಚುರಿ (ಶಬ್ದಮ. ೩೪೩ ಪ್ರಯೋ). **ಬೆಚ್ಚುರಿ** : ಮೇಲಿನ ಪ್ರಯೋಗವನ್ನು ನೋಡಿ. [ಬೆಂ$_2$ (< ಬಿಸಿದು) ಉರಿ$_2$]

**ಬೆನ್ನುಹಂಚು** (ನಾ). ಛಾವಣಿಯ ಮೇಲ್ಭಾಗದಲ್ಲಿ ಬೋರಲು ಹಾಕುವ ಹಂಚು : ಸೂರಿಗೆ ಬೆನ್ನುಹಂಚು ಹಾಕಿದ್ದಾರೆ (ರೂಢಿ).

[ಬೆನ್ನು (<ಬೆನ್) + ಹಂಚು$_3$ (<ಪೆಂಚು$_2$)]

**ಬೆನ್ನುಹತ್ತು** 'ಬೆಂಬತ್ತು' ನೋ.

**ಬೆನ್ನುಹುಣ್ಣು** (ನಾ). = ಬೆನ್ನುಫಣಿ : ಶಿರಮಾಲೆಗೆ, ಬೆನ್ನುಹುಣ್ಣಿಗೆ, ಲೊಕ್ಕೆಯ ಹುಣ್ಣಿಗೆ, ದಂತಬೇನೆಗೆ—ಪಚ್ಚೆತುತ್ತ, ಜಾಪಾಳ, ಪಿರಿಬಿಜೆ, ನಿರ್ವಿಷವತ್ಸನಾಭಿ . . . ನುಂಗುವುದು (ಏವೈಐ. ೦೪೪).

[ಬೆನ್ನು (<ಬೆನ್) + ಹುಣ್ಣು (<ಪುಣ್)]

**ಬೆನ್ನುಹುರಿ** (ನಾ). ಬೆನ್ನುಮೂಳೆಯ ಸುತ್ತ ಹರಡಿಕೊಂಡಿರುವ ಹುರಿಯಂತಹ ರಚನೆ : ಈ ಆಟದಿಂದ ಹೆಣ್ಣುಮಕ್ಕಳಿಗೆ ಕಿಪ್ಪೊಟ್ಟೆ, ಯಕೃತ್ತು, ಬೆನ್ನುಹುರಿ ಮೊದಲಾದ ಅಂಗಗಳಿಗೆ ಸಾಕಷ್ಟು ವ್ಯಾಯಾಮ ದೊರೆಯುವುದು (ಕನ್ನಜಾ. ೩೯); ಅಂಗಿ ತೆಗೆಯಲು ಕೈ ಮೇಲೆ ಚಾಚುವಾಗ ಬೆನ್ನುಹುರಿಯಲ್ಲಿ ನೋವಾಯಿತು (ರಕ್ತರೂ. ೪೦).

[ಬೆನ್ನು (< ಬೆನ್) + ಹುರಿ$_3$ (<ಪುರಿ$_3$)]

**ಬೆನ್ನೆತ್ತು** (ನಾ). ಬೆನ್ನಿನ ಮೇಲೆ ನೊಗವನ್ನು ಹೊತ್ತು, ಉಳಲು ಸಿದ್ಧವಾದ ಎತ್ತು : ಕಱಿವ ಹಸುವ ಉಳುವ ಬೆನ್ನೆತ್ತ ಮೊಲೆವುಂಬ ಕಱುವ ಕುಱುಹಸಱಿಯದೆ ಕಾಯಬಹುದೆ (ತುಱುಗಾ. ೩-೩).

[ಬೆನ್ನು (<ಬೆನ್) + ಎತ್ತು$_2$ (<ಎಟ್ಟು$_1$)]

**ಬೆನ್ನೆಲುಬು** 'ಬೆನ್ನೆಲುವು' ನೋ.

**ಬೆನ್ನೆಲುವು, ಬೆನ್ನೆಲುಬು** (ನಾ). ೧. = ಬೆನ್ನುಮೂಳೆ ೧ : "ಕಶೆ.ರುಕಾ—ಪೃಷ್ಠಾಸ್ಥಿ. ಬೆನ್ನೆಲುವಿನ ಹೆಸರು" (ಸಿದ್ಧಾಂತಿ. ೦೬೯); ಬದಿ ಮುಂದಲೆ ಎಡಿದು ಬಾಗಿಸಿ ಕೊಯ್ದುನಾತನ ಕೊರಳನೆಡದಲಿ ಹೊಯ್ದು ಮುರಿದನು ಬರಿಯಲಪ್ಪಳಿಸಿದನು ಬೆನ್ನೆಲುವ (ಕುಮಾ.ದ್ರೋ. ೦೯-೨). **ಬೆನ್ನೆಲುಬು** : ೨.

=ಬೆನ್ನುಮೂಳೆ ೨ : ನಮ್ಮ ದೇಶದಲ್ಲಿ ಒಂದು ಆರ್ಥಿಕ ಸ್ಪರ್ಧೆಯು ಬೆಳೆದು ಬಂದು ರಾಜಕೀಯ ಚಳವಳಿಯ ಬೆನ್ನೆಲುಬಾಗಿ ಬಲಿಯಿತು (ಪ್ರಬಂಧ. ೯೬). [ಬೆನ್ನು (< ಬೆನ್) + ಎಲುವು (<ಎಲ್ವು)]

**ಬೆನ್ನೇರು** 'ಬೆನ್ನೇಱು' ನೋ.

**ಬೆನ್ನೇಱು**, ಬೆನ್ನೇರು (ಕ್ರಿ). ೧. ಬೆನ್ನಿನ ಮೇಲೆ ಹತ್ತು : ಬೆನ್ನೇಱಿದ ಮಗುವಿನಂತೆ (ಧರ್ಮಾಮೃ. ೬-೧೪೭ ಅರಿಶರ್ಧ); ಭೃಂಗಕುಂತಲವನು ಬಾಗಿಸಿ ನಿಖಿಳಗೋಪಾಂಗನೆಯರು ಜಡೆವೆಣೆಯಿ ತುಂಗಸ್ತನವ ಕೊಪ್ಪರಿಗೆಯ ಕಾವ ಭುಜಂಗನವೊಲು ಬೆನ್ನೇಱಿದುವು (ಮೋಹತ. ೦೯-೯೨). **ಬೆನ್ನೇರು** : ೨. ಅನುಸರಿಸು ; ಹಿಂಬಾಲಿಸು : ಭೃಂಗದ ಬೆನ್ನೇರಿ ಬಂತು ಕಲ್ಪನಾ ವಿಲಾಸಾ (ಜಾದರೀ. ೬೯-೦); ಸೊಗದ ವಿಲಾಸೆಯ ಸರಿಯು, ಮಿಗೆ ಮಾನದೈಸಿರಿಯು ಬಗೆದು, ಬೆನ್ನೇರಿ, ಮೈಗೊತ್ತಿ, ಸೊಗ ಮಿರಿ . . . ನಗುತಲಿದೆ (ಕಲಾಕೃ. ೯೨-೭). ೩. (ಅಲಂ) ಅಧಿಕಾರ ಸ್ಥಾಪಿಸು : ಹೀಗೆಯೇ ಸಲುಗೆ ಕೊಟ್ಟರೆ ಈ ಪಾದ್ರಿಯ ಮಗ ಬೆನ್ನೇರಿಯಾನು (ಭುವನರು. ೨೫).
[ಬೆನ್ನು (< ಬೆನ್) + ಏಱು₁ (< ಏಱ್₁)]

**ಬೆನ್ನೋಡು**, ಬೆಚ್ಚೋಡು (ನಾ). ಬಿಸಿಯಾದ ಹೆಂಚು ; ಕಾದ ಓಡು. —ಕಾವಲಿ : ಬೆನ್ನೋಡು, ಬೆಚ್ಚೋಡು (ಶಬ್ದಾನು. ೩೯೩ ಪ್ರಯೋ). **ಬೆಚ್ಚೋಡು** : ಬೆಚ್ಚಡಿ, ಬೆಚ್ಚೋಡು (ಶಾಶಾಶೂ. ೦೯೩ ಉದಾ).
[ಬೆಂ₂ (< ಬಿಸಿದು) + ಓಡು₂]

**ಬೆಪೊೞಡು** (ನಾ). ಒಂದು ಸ್ಥಳದ ಹೆಸರು : ಪುಲ್ವಿಕಿನಾಡುಸಾಸಿರಮು ಬೆಪೊೞಡು ಸಾಸಿರಮು (ಎಶ. X. ಶ್ರೀನಿವಾ. ೫೭-೫ ; 770). [ ? ]

**ಬೆಪ್ಪ** 'ಬೆಳ್ಪ' ನೋ.

**ಬೆಪ್ಪಟ್ಟಿ** (ನಾ). ಒಂದು ಊರಿನ ಹೆಸರು ; P ಧಾರವಾಡ ಜಿಲ್ಲೆಯ ಈಗಿನ ಬ್ಯಾಹಟ್ಟಿ: ಬೆಪ್ಪಟ್ಟಿನಾಮ ಗ್ರಾಮೇ (ಎಇ. IX, ೨೦೯-೭೦ ; 750).
[? + ಪಟ್ಟಿ₁]

**ಬೆಪ್ಪತಕ್ಕಡಿ** 'ಬೆಪ್ಪುತಕ್ಕಡಿ' ನೋ.

**ಬೆಪ್ಪನೆ** (ಅ). ಸುಮ್ಮನೆ ; ತೆಪ್ಪಗೆ : ರಂಗನು ಬೆರಗಾಗಿ ಬೆಪ್ಪನೆ ಕುಳಿತನು (ದಾಸಭು. ೯). [ಬೆಪ್ಪು (< ಬೆಳ್ಪು₂) + —ಅನೆ₁]

**ಬೆಪ್ಪಳ** 'ಬೆಳ್ಪಳ' ನೋ.

**ಬೆಪ್ಪಳಿಸು** 'ಬೆಳ್ಪಳಿಸು' ನೋ.

**ಬೆಪ್ಪಾಲೆ** (ನಾ). ಒಂದು ಬಗೆಯ ಸಸ್ಯ : ಬೆಪ್ಪಾಲೆ, ಕುಡ, ಕೊಡ್ಸೀಗೆ, ಪಾಲೆ, ಕೊಡಮುರ್ಕ (ವೈಕಿನಿ. ೭೬-೦೭೦೩) ; ಮರಗಳು : ಹೆಸವ . . . ಚಿಲ್ಲು, ಪೂವರಸಿ, ಬೆಪ್ಪಾಲೆ, ಹಾಲೆ (ಪವ್ಮಸು. ೨೩೭). [ ? ]

**ಬೆಪ್ಪಿ** (ನಾ). ದಡ್ಡಿ; ತಿಳಿಗೇಡಿಯಾದವಳು : ನೋಡಾಕ ಬೆಪ್ಪಿ ಇದ್ದಾಗ ಇದ್ದೀಯ! ಏನು ಜಾಣಮಾತು ಕಲ್ತು ಬಿಟ್ಟೀಯೆ ನೀನು ? (ಮುಳಿಮ. ೨೬೨).
[ಬೆಪ್ಪ (< ಬೆಳ್ಪ) + — ಇ₂]

**ಬೆಪ್ಪು** 'ಬೆಳ್ಪು₂' ನೋ.

**ಬೆಪ್ಪುತಕ್ಕಡಿ**, ಬೆಪ್ಪತಕ್ಕಡಿ (ನಾ). ಮಂಕ : ದಡ್ಡ; ತಿಳಿಗೇಡಿ : P ವ್ಯಕ್ತಿ, ವಸ್ತು ಮುಂತಾದುವುಗಳ ಬೆಲೆಯನ್ನು ತೂಗಿ ನೋಡುವ ವಿವೇಚನೆಯಿಲ್ಲದವನು : ಅವನೊಬ್ಬ ಬೆಪ್ಪುತಕ್ಕಡಿ (ಭುವನರು. ೩೩೧) ; ಪರವಾಯಿಲ್ಲ. ಅಣ್ಣ ಏನೋ ಬೆಪ್ಪುತಕ್ಕಡಿ ಎಂದು ತಿಳಿದುಕೊಂಡಿದ್ದ (ಪಾಕ್ಕೃ. ೧೫೦) ; ನಾನೇ ತಪ್ಪುತಪ್ಪು ಊಹಿಸಿ ಬೆಪ್ಪುತಕ್ಕಡಿಯಾಗ ಬಾರದು (ಶಾಚಿ. ೭೯). **ಬೆಪ್ಪತಕ್ಕಡಿ** : ನಿಧಾನವೆಂದು ಹೇಳುವೆಯಾ ? ಬೆಪ್ಪತಕ್ಕಡಿ. ಈಗಲೇ ಸಪಾಯ (ಋತುರಾಜ. ೦೨೦).
[ಬೆಪ್ಪು (< ಬೆಳ್ಪು₂) + ತಕ್ಕಡಿ₁]

**ಬೆಪ್ಪುತನ** (ನಾ). ದಡ್ಡತನ ; ತಿಳಿಗೇಡಿತನ ; ಮೌಢ್ಯ : ಮೈಸೂರು ರಸಿಕ ಜೀವಾನರೂ . . . ಪ್ರೋತ್ಸಾಹ ಯಾವ ರೀತಿಯಿಂದ ನಿರೀಕ್ಷಿಸುವುದೂ ಬೆಪ್ಪುತನ (ಬಮ್ಮ. ೯೨); ಇಳವರಸನ ಮುಖದ ನಗೆ ಮಾಯವಾಗಿ ಬೆಪ್ಪುತನ ಮೂಡಿತು (ಹಸುಹೂ. ೩೦೦).
[ಬೆಪ್ಪು (< ಬೆಳ್ಪು₂) + — ತನ]

**ಬೆಬಡೆ** (ನಾ). ಒಂದು ಬಗೆಯ ಸಸ್ಯ: "ಕಂಡೂವೋಷಿ—ಬೆಬಡೆ, ಮಂ(ಜಿ)ಷ್ಠೆ" (ಶಿಶಧಿ. ೨೯) ; ಶಾವಂಚ . . . ಬೆಬಡೆಬೀಜ, ಮರದರಿಸಿನ, ಇವು ಪ್ರತ್ಯೇಕ ೮ ತೂಕ, ಇವೆಲ್ಲವನ್ನು ಹಾಲಲ್ಲಿ ಅರೆದು . . . ಮಂಡೆಗೊತ್ತಲು ಅಸ್ಥಿಯ ಕಟ್ಟೂ ವಾತಪಿತ್ತಶ್ಲೇಷ್ಮದಿಂದಾದ ಮಂಡೆಶೂಲೆಯೆಲ್ಲಾ ಮಾಣ್ಗುಂ (ಬಿವೈಶಿ. ೭೯). [ ? ]

**ಬೆಬ್ಬಕ್ಕಿ** (ನಾ). ಒಂದು ಬಗೆಯ ಹಕ್ಕಿ: "ಜೀವಂಜೀವಃ—ನೌಲುರಕ್ಕೀ, ಬೆಬ್ಬಕ್ಕಿ" (ಸಿದ್ದಾಂತಿ. ೦೭೩). [? + ಪಕ್ಕಿ]

**ಬೆಬ್ಬನೆ** (ಅ). ಅತಿಯಾಗಿ ; ಬಹಳವಾಗಿ : ಅವರಿವರೆನ್ನದೆ ಚರಣಕ್ಕೆಱಗಲು ಅಯ್ಯತನವೇಱಿ ಬೆಬ್ಬನೆ ಬೆಱೆತೆ ನಾನು (ಬಸವ. ೨೫೩): ಬೆಬ್ಬನೆ ಬೆಱೆತು ಬಿಬ್ಬನೆ ಬೀಗಿ ಅಹಂಕಾರಭರಿತನಾಗಿಪ್ಪವನ ಮನೆಯ ಲಿಂಗಸುಮತರು ಹೊಗರು (ದೇವಾವ. ೨೯-೫೦). 'ಬಿಬ್ಬನೆ' ಪರಾ. [? + —ಅನೆ₁]

**ಬೆಬ್ಬರ** (ನಾ). ದಿಗ್ಭ್ರಮೆ ; ದಿಗ್ಭ್ರಾಂತಿ : ಕಾಮರಾನನು ಅಕಸ್ಮಾತ್ತಾಗಿ ಬೆಬ್ಬರದಲ್ಲಿದ್ದ ಹುಮಾಯುನನ ಪಾಳಯದ ಮೇಲೆ ಬಿದ್ದನು (ವೋಪಾದ. ೫೭).

ಬೆಬ್ಬರ ಬೀಳು=ಬೆಚ್ಚಿ ಬೀಳು; ಮೆಟ್ಟಿ ಬೀಳು; ತಲ್ಲಣಿಸು: ಕುಮಾರಯುವನು ರವಷ್ಟು ತೂಕಡಿಸಿ ಬೆಬ್ಬರಬಿದ್ದು ದಿಕ್ಕುಗಳು ನೋಡುತ್ತಾನೆ (ಕಥಾಮಂ. IV, ೯೫) ; ಅಫಜುಲನು ದೂರ ನಿಂತು ಬೆಬ್ಬಳುಗೊಂಡು ಬೆಬ್ಬರಬಿದ್ದಿದ್ದ ಸೈನಿಕರನ್ನು ಸಂಬೋಧಿಸಿ . . . ಹೇಳಿದನು (ಕೋಹಿನೂ. ೦೯). 'ಬೆಳ್ಪಳ' ಪರಾ.

**ಬೆಬ್ಬರಬೆಸೆ** (ಕ್ರಿ). ಬಹಳವಾದ ಅಹಂಕಾರದಿಂದ ಕೂಡಿರು : ಮಾನಕಷಾಯಮೆಂಬುದು ತಮ್ಮಿಂದಗ್ಗಳಮಿಲ್ಲೆಂದು ಬೆಬ್ಬರಬೆಸದಿರ್ಪ(ರ್ಪ)ರಿದೇನಾಶ್ಚರ್ಯಮೋ (ಜೀವಸಂ. ೦೯೫-೨೩ ವ). [ಬೆಬ್ಬರ ? + ಬೆಸೆ₃]

**ಬೆಬ್ಬರಿಸು** (ಕ್ರಿ). ಬೆದರು ; ಗಾಬರಿಯಾಗು : ಕುರಿಗಳನ್ನು ಸದೆಬಡಿವ ದೇತರ ಬಿರುದು ಮದಕೇಸರಿಗೆ ಯಿಾ ಬೆಬ್ಬರಿಪ ದನುಜರ ಕೊಂದಡತಿಶಯವೇನು (ಅನಂರಾ. ೭-೨೦-೨೯) ; ಬೆರೆದಂತೆ ಮೈಮುರಿವ ಬೆಬ್ಬರಿಸಿ ಪಲ್ಗಿರಿವ ಮರದಂತಿರುವನೊಮ್ಮೆ (ವೆಂಕಾರಾ. ೨-೩೫-೨೩). 'ಬೆಳ್ಪಳಿಸು₁' ಪರಾ.
[ಬೆಬ್ಬರ + — ಇಸು₃. / ತೆಲು. ಬೆಬ್ಬರಿಲ್ಲು]

**ಬೆಬ್ಬಳ** 'ಬೆಳ್ಪಳ' ನೋ.

**ಬೆಬ್ಬಳಂಗೊಳ್**, ಬೆಬ್ಬಳಗೊಳ್, ಬೆಬ್ಬಳಗೊಳು, ಬೆಪ್ಪಳಿಗೊಳ್, ಬೆಬ್ಬಳುಗೊಳ್ಳು (ಕ್ರಿ). ೧. ಭಯದಿಂದ ಅಸ್ಥಿರವಾಗು,—ಚಂಚಲವಾಗು ; ಅಧೀರವಾಗು : ಇಾತು ಬೆಬ್ಬಳಂಗೊಂಡು ನಾಮೆಲ್ಲರುಂ . . . ಇವರಂ ಗೆಲ್ವುದೆಮಗರಿದೆಂದೆಣಿಸಿ ನಿಲ್ಲದೆ (ಮರಾಕ. ೨-೯೦ ವ). **ಬೆಬ್ಬಳಗೊಳ್** : ೧. ಕಂಡವರು ಬೆಱಗಾಗಿ ಬೆಬ್ಬಳಗೊಂಡು ನೋಡುತಲಿರ್ದರು (ಪ್ರಭುಲೀ. ೨೨-೩೮). **ಬೆಬ್ಬಳಗೊಳು** : ೧. ಅಬ್ಬರಿಸಿ ಬೊಬ್ಬೆಯಂ ಕೊಟ್ಟೆಬ್ಬಿಸಿದೊಡೆ ಶಾಪಮಿಾಗುಮಿಾತನೆಸುತ್ತಂ ಬೆಬ್ಬಳ[ಪಾಠಾಂ. ಳಿ]ಗೊಳುತುಂ ಬ್ರಹ್ಮನನುಬ್ಬಸಲನುಮಾನಮಂ ಮನಸ್ಸಿಂ ಬಗೆದರ್ (ಧರ್ಮಶ. ೩-೭೯). **ಬೆಬ್ಬಳಗೊಳ್** : ೨. ಭ್ರಮೆ ಹೊಂದು : ಪತಿಯೆಲಿಯೆ ಉಬ್ಬರಿಸದೆ ಕಡುಮಬ್ಬನೊಳಾದ ಬೆಬ್ಬಳಗೊಳ್[ಪಾಠಾಂ. ಳಿಯಾಗ]ದಳೇ ಸಾಧ್ವಿ (ಜಸವ. ೦೦-೭೩). **ಬೆಬ್ಬಳುಗೊಳ್ಳು** : ೧. ಅಫಜುಲನು ದೂರ ನಿಂತು ಬೆಬ್ಬಳುಗೊಂಡು ಬೆಬ್ಬರಬಿದ್ದಿದ್ದ ಸೈನಿಕರನ್ನು ಸಂಬೋಧಿಸಿ . . . ಹೇಳಿದನು (ಕೋಹಿನೂ. ೦೯).
[ಬೆಬ್ಬಳ (<ಬೆಳ್ಪಳ) + ಕೊಳ್₁]

**ಬೆಬ್ಬಳಂಬೋಗು** 'ಬೆಳ್ಪಳಂಬೋಗು' ನೋ.

**ಬೆಬ್ಬಳಗೊಳ್** 'ಬೆಬ್ಬಳಂಗೊಳ್' ನೋ.

**ಬೆಬ್ಬಳಗೊಳಿಸು** (ಕ್ರಿ). ಭಯಪಡಿಸು ; ಅಂಜಿಸು : ಬೊಬ್ಬೆಯಬ್ಬರ ದಿಕ್ಪಾಲಕರನು ಮಿಗೆ ಬೆಬ್ಬಳ [ಪಾಠಾಂ. ಬೊಬ್ಬೆ]ಗೊಳಿಸಿ ದಾನವನ ಕೊಬ್ಬಿದ ಬಲವೆಯ್ತಂದು ಮುತ್ತಿತು ರಾಮನೊಬ್ಬನನಾ ಕಳದೊಳಗೆ (ಕುಂರಾಮಾ. ೯೩-೯೫). [ಬೆಬ್ಬಳಗೊಳ್ (<ಬೆಬ್ಬಳಂಗೊಳ್) + _ ಇಸು$_2$]

**ಬೆಬ್ಬಳಗೊಳು** 'ಬೆಬ್ಬಳಂಗೊಳ್' ನೋ.

**ಬೆಬ್ಬಳವಾತು** (ನಾ). ದಿಗ್ಭ್ರಮೆ ಹಿಡಿಸುವ ಮಾತು: ನಾಮಿಾ ಸಬ್ಬವ ಕಾಜಿನ ಬೆಬ್ಬಳವಾತಿಂಗೆ ಬೆಕ್ಕಸವಡದೇತರ್ಕಾಮೆಕ್ಕತಳಂಗೊಂಬುದು (ಜಕಾ. ೬-೭೭ ವ). [ಬೆಬ್ಬಳ (<ಬೆಳ್ಪಳ) + ಮಾತು$_1$]

**ಬೆಬ್ಬಳವೋಗು** 'ಬೆಳ್ಪಳಂಬೋಗು' ನೋ.

**ಬೆಬ್ಬಳಿ** 'ಬೆಳ್ಪಳ' ನೋ.

**ಬೆಬ್ಬಳಿಗ** (ನಾ). ಹೆದರಿದವನು; ಭಯಪಟ್ಟವನು : 'ಬೆಬ್ಬಳಿಗಿತಿ' ಪರಾ. [ಬೆಬ್ಬಳಿ (<ಬೆಳ್ಪಳ) + _ ಗ$_2$]

**ಬೆಬ್ಬಳಿಗಿತಿ** (ನಾ). ಹೆದರಿದವಳು ; ಗಾಬರಿಗೊಂಡವಳು : ಅವನಿಗೆ ಕಣ್ಣೆತ್ತಲೂ ಆರದ ಬೆಬ್ಬಳಿಗಿತಿಯಾಗಿ, ಅಂತಹ ಸುಸಮಯವನ್ನು ಹಾಳೇರಿಸಿ ವ್ಯರ್ಥಮಾಡಿ ಕಳೆದೆ ! (ಮಂತ್ರಕ. ೩೬-೦೮). [ಬೆಬ್ಬಳಿಗ + _ ಇತಿ$_1$ (<— ಇತ್ತಿ)]

**ಬೆಬ್ಬಳಿಗೊಳ್** 'ಬೆಬ್ಬಳಂಗೊಳ್' ನೋ.

**ಬೆಬ್ಬಳಿತ** (ನಾ). ಅಧೀರನಾದವನು : ಒಬ್ಬಳುಂ ತಲೆಯುಡರ್ದಳೊಬ್ಬಳುಂ ತೊಡೆಯುಡರ್ದು ಕೊಬ್ಬುತ್ತಲಹರೆ ಯಿನ್ನೊಬ್ಬಳಂ ವಡಬಡಿಸಿಯೆಲ್ಲಿಟ್ಟು ಕೊಂಬೆಯೆನಲು ಬೆಬ್ಬಳಿತನಾಗಿ ನಿನಗೊಂದು ಲಂಚವನೀವೆ ತುಬ್ಬಿಸದಿರೀ ಮಾತ ಭಕ್ತರೊಳಗೆಂದೆನುತೆ (ಕೃಶುಪು. ೬-೯೬). [ಬೆಬ್ಬಳಿ (<ಬೆಳ್ಪಳ) + _ ತ$_3$]

**ಬೆಬ್ಬಳಿಯೋಗು** 'ಬೆಳ್ಪಳಂಬೋಗು' ನೋ.

**ಬೆಬ್ಬಳಿವೋಗು** 'ಬೆಳ್ಪಳಂಬೋಗು' ನೋ.

**ಬೆಬ್ಬಳಿಸು** 'ಬೆಳ್ಪಳಿಸು' ನೋ.

**ಬೆಬ್ಬಳು** 'ಬೆಳ್ಪಳ' ನೋ.

**ಬೆಬ್ಬಳುಗೊಳ್ಳು** 'ಬೆಬ್ಬಳಂಗೊಳ್' ನೋ.

**ಬೆಬ್ಬಳೆ** 'ಬೆಳ್ಪಳ' ನೋ.

**ಬೆಬ್ಬಳೆಪೋಗು** 'ಬೆಳ್ಪಳಂಬೋಗು' ನೋ.

**ಬೆಬ್ಬಳೆಯೋಗು** 'ಬೆಳ್ಪಳಂಬೋಗು' ನೋ.

**ಬೆಬ್ಬಳೆವೋಗು** 'ಬೆಳ್ಪಳಂಬೋಗು' ನೋ.

**ಬೆಮರ್$_1$**, ಬೆಮರು$_1$, ಬೆವರು$_1$, ಬೆವೆ (ಕ್ರಿ). ಬೆಮರ್ತು, ಬೆವತು, ಬೆವರ್ತು (ಭೂತಕೃ). ೧. ಚರ್ಮರಂಧ್ರಗಳಿಂದ ಘರ್ಮಜಲ ಹೊರಸೂಸು; ಸ್ವೇದಗೊಳ್ಳು : "ಬೆಮರ್—ಸ್ವೇದಭಾವೇ" (ಶಮಧಾ); ಮಂದೆಯೊ ಪಾವಡರ್ದಂತುಮ್ಮನೆ ಬೆಮರುತ್ತುಮಿರ್ದ ಕರ್ಣನಂ ದುರ್ಯೋಧನಂ ಕಂಡು (ಪಂಪಭಾ. ೨-೬೨ ವ); ಆ ರವಮಂ ನಿರ್ಜಿತಕಂಠೀ ರವರವಮಂ ನಿರಸ್ತಘನರವಮಂ ಕೋಪಾರುಣನೇತ್ರಂ ಕೇಳ್ದಾ ನೀರೊಳ ಗಿರ್ದು ಬೆಮರ್ತನುರಗಪತಾಕಂ (ಗದಾಯು. ೭-೨೨). ೨. ಭಯಪಡು; ಹೆದರು : "ಸೆಡೆವಂ . . . ಬಳ್ಕಿದನೆಂದೆಡೆವಿಡದೆಯೆ ಬೆಮರ್ತನೆನಲ್ಕೊಡ ನೆಯೆ ಭಯಭರಿತನಕ್ಕು" (ಕವಿಕಂ. ೧೦೯). **ಬೆಮರು$_1$** : ೧. ಮೊಗ ಬೆಮರೆ ಶೋಕಿಸುತಂ ಪರಿತಂದು (ಬಸರ. ೯-೯೬); ಗಾಳಿ ಬೆಮರುವುದುಂಟೆ (ಶಿವಾನ್ಯದ್ರೋ. ೪-೪೦); ಬೆಮರುವಂಗ ಕಡುಗೆಂಪು ಪರಿದು ರಾಜಿಸುವಧರಗಳ ಸುರತಶ್ರಾಂತಶ್ರಮದಿಂದಪರಿರ್ವರು ಮೆಱೆದರು (ಶಂಪವ. ೧೦-೫೦); ಜಲದ ಒಳಗಿನ ಕಲ್ಲು ಸಲೆ ಬೆಮರಬಲ್ಲುದೆ (ಸರ್ವಜ್ಞ. ೦೭೭೦). **ಬೆವರು$_1$** : ೧. ಒಮ್ಮೊಮ್ಮೆ ಬೆವರುತ್ತಂ ಆನಂದಜಳಮಂ ಸೂಸುತಂ . . . ಸಂಗನ ಬಸವಂ ಶರಣರ ಸಮಿಾಪಕಿದಿರ್ವಂದು ಹರುಷದಿಂ ಪರಮಸುಖಿಯಾಗಿರ್ದಂ (ಬಸರ. ೬-೦೦೨); ಬೆವತುವು ದಿವ್ಯಲಿಂಗಗಳಳುಕಿ ಪರ್ವತದಂತೆ ಬಿದ್ದುದು ಪೀಠ ಹೊಗೆ ಮಸಗಿ (ಕೌಶಿಂ. ೦೪-೫); ಉರಿಯುವ ಸುಡುಬಿಸಿಲಿಗೆ ಬೆವರುತ್ತ ನಡೆದೆ (ರೂಪಸಂ. ೭). **ಬೆವೆ** : ೧. ಅಂಗೈ ಅಂಗಾಲುಗಳು ಬೆವೆಯುವುದು ಅಂದರೆ ಹಸಿಯಾಗುವುದು (ಬ್ರಹ್ಮಜೀ. ೨೩).

**ಬೆವತು ಹೋಗು** = ೧. ಹೆದರಿಕೆ, ಅವಮಾನಗಳಿಂದ ಬೆವತು ಕೊಳ್ಳು. ೨. (ಬೆವರುವುದರಿಂದ) ಆಯಾಸ ಹೊಂದು: ಬಿಸಿಲ ಝಳಕ್ಕೆ ಮಗು ಬೆವತು ಹೋಗಿದೆ (ರೂಢಿ).

[ದೇ.॥ ತಮಿ. ವೆಯರ್, ವೇರ್, ವಿಯರ್ ; ಮಲ. ವಿಯರ್ ; ತುಳು. ಬೆಗರು, ಬೆಗಪು; ಕೊಡ. ಬೆವರ್]

**ಬೆಮರ್$_2$**, ಬೆಮರು$_2$, ಬೆವರ್, ಬೆವರು$_2$ (ನಾ). ಸ್ವೇದಜಲ; ಘರ್ಮ : ಸುರಿಯೆ ಬೆಮರ್ ಕುರುಳ್ವಿಡಿದು ಮುತ್ತುಗಳಂ ಮಱಿದುಂಬಿ ಕಾಱುವಂತಿರೆ (ಪಂಪಭಾ. ೬-೬೦); ಬೆಮರಿಂ ಮುಳುಗಿದಪೇ ಸಂಭ್ರಮದಿಂ ಬಿಟ್ಟಪ್ಪೆಂ (ಕಾದಂಬ. ೫೭); ಕೆದಱಿದಳಕವಕ್ಕಾಡುವ ಬೆಮರ್ (ಹಪಾ. ೯-೨೯). **ಬೆಮರು$_2$** : ಮೈಯುಲಿ ಸುರಿವ ಬೆಮರಿನ ಚರಣದೆಡಹುಗಳೊತ್ತುಗಲ್ಲುಗಳ (ಶಿವಾತ. ಓಂ೩. ೪-೦೨); ಪಣೆಯೊಳುದಿಸೆ ಬೆಮರಾತನ ರೌದ್ರಕೆ ಮಣಿವಳುಕಿದ ಗುರುನಾಥ (ಜೀವಂಸಾಂ. ೭-೫೦). **ಬೆವರ್** : ಅಂತು ನೋಡಿ ಬೆವರೊಳ್ ಮುಳುಂಗಿ ನಡುಗುತ್ತಂ (ಕಾದಂಬ. ೨೬೮). **ಬೆವರು$_2$** : ಬವರವಾದರೆ ಹರನ ವದನಕೆ ಬೆವರ ತಹೆನು (ಶಿವಾನ್ಯದ್ರೋ. ೪-೫೬); ಮೈ ಮೇಲೆ ಹೊಲಸು ಇದ್ದರೆ ಅದು ರೋಮರಂಧ್ರಗಳ ಬಾಯಿಗೆ ಕೂತು ಬೆವರಿಗೆ ಅಡ್ಡಿಮಾಡುತ್ತದೆ (ಮುಂಬಯಿ. ೪-೨೪); ನಿಮ್ಮ ಕೆನ್ನೆಯ ಬೆವರ ಒರಸಾಳೆ (ಪಾಶವ. ೦೨೭).

**ಬೆವರಾಡು** = ಬೆವರು ಬರು ; ಸ್ವೇದಗೊಳ್ಳು : ತ್ರಿದೋಷದಲ್ಲಿ ಸಾವವನ ನಾಡಿ ಅತಿಶೈತ್ಯವಾಗಿ ತುಪ್ಪದ ತೊಡೆದ ಹಾಗೆ ನಯವಾಗಿ ಬಂಕೆ ಬೆವರಾಡುವದು (ವೈದ್ಯಸಾ. I. ೫). **ಬೆವರಿಳಿಸು** = ೧. ಕಷ್ಟಪಡು; ಶ್ರಮವಹಿಸು : ಬೆವರಿಳಿಸಿ ಸಂಪಾದಿಸಿದ ಹಣ ಕೈಗೆ ಹತ್ತುತ್ತದೆ (ರೂಢಿ). ೨. (ಆಲಂ) ಅವಮಾನ ಮಾಡು; ತೇಜೋವಧೆಗೊಳಿಸು : ಮನೆಗೆ ಬಂದ ಅವನನ್ನು ಬೆವರಿಳಿಸಿ ಕಳಿಸಿದರು (ರೂಢಿ). **ಬೆವರುಸುರಿಸು** = ೧. ಮೈಯಿಂದ ಬೆವರು ಇಳಿಯುವಂತೆ ಮಾಡು. ೨. ಕಷ್ಟಪಡು ; ಶ್ರಮಿಸು : ಬೆವರುಸುರಿಸಿ ತಂದ ಅನ್ನ (ಪಾಪೋಲೀ. ೦೦). **ಬೆವರೂರು** = ಬೆವರಿನಿಂದ ನೆನೆ, — ಒದ್ದೆಯಾಗು : ಬಟ್ಟೆಬರೆಗಳೂ ಹೊರೆಯಾದುವು; ಬೆವರೂರಿತು, ವಾದ್ಯಗಳು ಬೆನ್ನೇರಿದುವು (ಶಾಂಕರ. ೦೩ ಕಥಾಸಾರ). **ಬೆವರೊಡೆ** = ಬೆವರೂರು : ರಾಮಪ್ಪನ ಮುಖ ಬೆವರೊಡೆಯಿತು (ಒಡ್ಡಳ. ೨೦); ಮೈತುಂಬ ಬೆವರೊಡೆದುಹೋಯ್ತು (ಇಷ್ಟಕ. ೨೯೭).

[< ಬೆಮರ್$_1$. / ತಮಿ. ವೆಯರ್, ವೇರ್, ವಿಯರ್ ; ಮಲ. ವಿಯರ್ಪ್ಪು, ವೇರ್; ತುಳು. ಬೆಮರ್, ಬೆಗರ್ ; ಕೊಡ. ಬೆವರಿ]

**ಬೆಮರಾನ್** (ಕ್ರಿ). ಬೆವರನ್ನು ಹೊಂದು : ಮಳಲೊಟ್ಟಲನೇಱಿ ಪಾಱಿ ಗುಪ್ಪೆಯನಾಡಿ ಬಳಲ್ದವಯವ ಬೆಮರಾಂತು ಕೆಳದಿಯ ಕೈಮುಟ್ಟಲು ಸೌಖ್ಯಂಗಳ ತಳೆದುವನೇಕ ಪುಷ್ಪಗಳು (ಚೋಳಪ. ೪-೫೮).

[ಬೆಮರು$_2$ (<ಬೆಮರ್$_2$)+ಆನ್$_1$]

**ಬೆಮರಿಡು**, ಬೆವರಿಡು (ಕ್ರಿ). =ಬೆಮರ್$_1$ ೧ : ಮೋಱೆಗಳು ಬೆಮರಿಡುತ ಹೊಯ್ಲಂ ತೋಱುತ (ಜಕ್ಕ. ೫೨-೦೩); ಜಲಜಮುಖಿ ಬೆಮರಿಡಲು ಕೊರಳಿನ ಲಲಿತ ಮುಕ್ತಾಹಾರವಲ್ಲಾಡಲು ಸೆಱಗನಳವಡಿಸಿ ನಿಂದಳು ಬಳಲಿ ಬಿಸುಸುಯ್ದು (ವಳತ. ೨-೩೪). **ಬೆವರಿಡು** : ಆ ಮಾತು ಕೇಳಿ ನನಗೆ ಬೆವರಿಟ್ಟಿತು (ರೂಢಿ). [ಬೆಮರ್$_2$ + ಇಡು$_1$]

**ಬೆಮರಿಳಿ**, ಬೆವರಿಳಿ (ಕ್ರಿ). ಬೆವರು ಸುರಿ : ಬೆಮರಿಳಿದು ಬಿಸುಸುಯ್ದು ಮುಡಿ ಬಿರ್ಚಿ ಮುನಿಸುರ್ಕಿ (ಪಶ್ಯಾಂಗ. ೫೩-೦೯೫೦). **ಬೆವರಿಳಿ** : ಬರಿಯ

ಉದ್ವೇಗದಿಂದಲೆ ಆಯಾಸಗೊಂಡಂತೆ ಅವನ ಮುಖದ ಮೇಲೆ ಬೆವರಿಳಿಯು ತೊಡಗಿತ್ತು (ಮರಿಮ. ೦೮೩) : ಅವರೆದುರಿಗೆ ನನಗೆ ರೋಮಾಂಚವಾಗಿ ಬೆವರಿಳಿದು ಮಾತೇ ಮರೆತುಹೋಗುವುದು (ಋಜಾತ. ೨೦೩).

[ಬೆಮರ್₂ + ಇೞಿ₁ (<ಇೞಿ)]

**ಬೆಮರ್ಬು₁** 'ಬೆವರ್₁' ನೋ.

**ಬೆಮರ್ಬು₂** 'ಬೆವರ್₂' ನೋ.

**ಬೆಮರ್ಚು** (ಕ್ರಿ). ಬೆವರುವಂತೆ ಮಾಡು; ಬೆವರು ತರಿಸು: "ಬೆಮರ್ಚು—ಸ್ವೇದಕರಣೇ" (ಕಮಂಜ).  [ಬೆಮರ್₁ + —ಚು₁]

**ಬೆಮರ್ವಡೆ** (ಕ್ರಿ). = ಬೆಮರಾನ್ : ಕಕ್ಷಸೊನೆ ಬೆಮರ್ವಡೆದ ಸೊಗಡ ವಾಸಿಸುತ ಬಿಡೆಯುವಿಲ್ಲದ ಕುಚ ಬಿಗುಪೇೞ್ ರುತುಕಾಲವಡೆದ ಪುಷ್ಪಿಣಿಯ ರೊಪ್ಪಿದರು (ಪೋಶತ. ೦೫-೩೨).  [ಬೆಮರ್₂ + ಪಡೆ₁]

**ಬೆಮರ್ವನಿ**, ಬೆವರುಹನಿ (ನಾ). ಬೆವರಿನ ಹನಿ; ಸ್ವೇದಜಲ: ಬೆಮರ್ವನಿ ಕೈವಿಗೆ ಲಜ್ಜಾನಮಿತಾನನೆ . . . ನೋಡಿದಳ್ (ಕಂಠಾಪಶ. ೬-೦೩) ; ನುತರೋಮಾಂಚಂಗಳೇಳಲ್ ಬೆಮರ್ವನಿ ನೆಗೆಯಲ್ ಗದ್ಗದಂ ಪೊಣ್ಮೆ (ರಕ್ಷಾಶ. ೬೪) ; ಅಮರ್ದಪ್ಪಿ ಚುಂಬಿಸಿ ನೆರೆಯೆ ಬೆಮರ್ವನಿ ತೊಟ್ಟಿಟ್ಟು ಸುಯ್ಯೆಲರುಬ್ಬಿತೆಂದಮವು ಕೋೞಿವಿರಾಡಬಹುದೆ (ಶರಶ. ೦೦-೦೬). **ಬೆವರುಹನಿ** : ಓಡಿಬಂದುದರಿಂದ ಅವನ ಹಣೆಯ ಮೇಲೆ ಬೆವರುಹನಿ ಸಾಲುಗಟ್ಟಿದ್ದವು (ಋಜಾ).  [ಬೆಮರ್₂ + ಪನಿ₂]

**ಬೆಮರುಸಾಲೆ**, ಬೆವರುಸಾಲೆ (ನಾ). ಬಿಸಿಲಿನ ಜಳದಿಂದ ಉಂಟಾಗುವ ಒಂದು ಬಗೆಯ ಗುಳ್ಳೆ; ಬೆವರುಗುಳ್ಳೆ : (೬). **ಬೆವರುಸಾಲೆ** : ಬೆವರುಸಾಲೆಯಿಂದ ಮಗುವಿಗೆ ತೊಂದರೆಯಾಗಿದೆ (ಋಜಾ).

[ಬೆಮರ್₂ + ಸಾಲೆ₁]

**ಬೆಮಿಸು** (ಕ್ರಿ). ಭ್ರಾಂತಿಗೊಳ್ಳು; ಭ್ರಮಿಸು : "ಬೆಮಿಸು (ಬೆವಿಸು)—ಭ್ರಮಿಸು" (ಕನ್ನಕೋ. ೩೨) ; ಧುಮುಕಿ ಸರಸಿಜಲದಿ ಸೊಗದಿ ಮಿಂದು ಬೆಮಿಸುವ (ಕೋಪಿಸೂ. ೧೦೨).  [< ಭ್ರಮಿಸು]

**ಬೆಮೆ** (ನಾ). ಭ್ರಾಂತಿ; ಭ್ರಮೆ : "ಬೆಮೆ (ಬೆರ್ಮೆ)—ಭ್ರಮ=ಗಲಿಬಿಲಿ" (ಕನ್ನಕೋ. ೩೨) ; ಸೂಡಿದ ಮುಡಿಯಿಂಪಡಿಗಡಿಗೆ ಸೂಸುವ ಬಿಸುಮಲ್ಲಿಗೆಯ ಕಂಪಿನೊಡವರ್ಪಳಿಗಳ್ಗೆ ನಡೆವಳ್ಳಿಯ ಬೆಮೆಯುಂ ಪುಟ್ಟಿಸಿಯುಂ (ರಾಶಪುಕ್ಷ. ೫೯-೦೦); ಕೆಂದಾವರೆಯ ಕೊಳಂಗಳ್ ಬೆಳ್ದಾವರೆಯ ಕೊಳಂಗಳವೆನುತ್ತೆ ಬೆಮೆವೊಡರಿಸುಗುಂ (ಮರಾಶ. ೩-೨೯) ; ಇಲ್ಲಿ ಯಾವುದಾದರೂ ನಾಡಿನ ಮಹಾರಾಣಿಯವರು ಬೀಡುಬಿಡುವರೆಂದು ನಿಮಗೆ ಯಾರಾದರೂ ಬೆಮೆ ಹುಟ್ಟಿಸಿದರೋ? (ಸಶಿ. ೭೭).  [< ಭ್ರಮೆ]

**ಬೆಮೆಗೊಳ್**, ಬಮೆಗೊಳ್, ಬೆಮೆಗೊಳು (ಕ್ರಿ). ೧. ಭ್ರಾಂತಿಗೊಳ್ಳು; ಭ್ರಮಿಸು : ಮಂಗಳಾಚ್ಯುತನ ಮೂರ್ತಿಯನು ಕಂಗಳಿಂದಲೆ ನೋಡಿ ಬೆಮೆಗೊಂಡು ನವ್ಯಪುಷ್ಪಂಗಳಿಂದಿಟ್ಟರಚ್ಯುತನ (ಮೋಶತ. ೯೨-೭೮) ; ಸುಮಶರಂಗಳು ನಾಂಟೆ ಹೃದಯದೊಳಮುಮ ಕಡುಬೆಮೆಗೊಂಡ ಕಾಮಿತಿಯು ಕಮಲಲೋಚನೆಯೆಡೆಗೆ ಬಂದನು (ರಾಶಸಂ. ೩-೪-೩೩) : ಭೂಮಿ ಬರಿದೋ ಣೆ ಕಣೊ! ತಾಯಿಮುಡಿಲೆಂದೇಕೆ ಬಂದೆ ಬೆಮೆಗೊಂಡಿರುವೆ ? (ಶಾಂಕ್ಷ. ೩೦-೦೭). **ಬಮೆಗೊಳ್** : ೨. ಮರುಳಾಗು; ಮನೋವಿಕಲತೆಯನ್ನು ಹೊಂದು : ಶವರ ಪಿತರ್ ಖಳರಿಕ್ಕಲ್ ಬಮೆಗೊಂಡ ನರಂಗೆ ಮಾಯುಲಿಞಿವುದು ಪಾಲಿಂ (ಜಶುತ. ೦೯-೬೨). **ಬೆಮೆಗೊಳು** : ೧. ಲೋಕವೆಲ್ಲವು ಘಳಿರೆನಲಾಕಾಶ ಕೂಗಲು ಸೂರ್ಯ ಬೆಮೆಗೊಳಲು (ಕೋಸಿಮ. ೦೦-೩೦).  [ಬೆಮೆ + ಕೊಳ್₁]

**ಬೆಮೆಗೊಳು** 'ಬೆಮೆಗೊಳ್' ನೋ.

**ಬೆಮ್ಮರ** (ನಾ). ೧. ಕಟ್ಟಡವ ಮೇಲ್ಛಾವಣಿಯಲ್ಲಿ ಹಾಕುವ ಮುಖ್ಯವಾದ ತೊಲೆ,—ನಡುವಿನ ತೊಲೆ : ನಂಜಿನ ಭೂಮಿಯ ಮೇಲೆ ಸಂದೇಹದ ಕವರ ನೆಟ್ಟು ಮಂಜುಳದ ಮೂಜಿಂಗದ ಮುಂಡಿಗೆಯ ನಟ್ಟು ಸರಂಗದ ಸುಮನದ ಡೊಂಕಜಿತ ಬೆಮ್ಮರನ ಹಾಕಿ (ಸಶವ. I. ೧೩೬-೦೦೯). ೨. (?) : ಕಡಿದೊಣಗಿರ್ದ ಬೆಂದುಡಿದ ಕೊಂಬುಗಳಿಲ್ಲದ ಬಳ್ಳಿ ಸುತ್ತು ಗೊಂಡಡರಿದ ಬೆಮ್ಮರಂಗಳೊಡನೊಂದಿದ . . . ಬಂಜೆ ಕೈಪಮರನೊಂದದ ಬಾಧೆಗಳೊಂದುವಿಲ್ಲದಿರ್ಪಡೆಗಳ (ರೋಕೋಶ. ೦೨-೩೩) ; ಮೂಳೆಯ ಕಂಭಮಿಲ್ಲಿ ನಿಡುಯೆಲ್ವಿನ ಬೆಮ್ಮರನಂತೆ ಪತ್ರಿಕೊಂಡೋಳಿಯ ನೀಳ್ದು ನಿಂದ ಬಜಿಯಲ್ಲಳ್ (ಜೀಪಸಂ. ೦೩೦-೨೨).  [ಬೆನ್ + ಮರ₁]

**ಬೆಮ್ಮಾಡು** (ನಾ). ಹಿಂದಕ್ಕೆ ಬಾಗಿರುವ ಮಾಡು; ಒಪ್ಪಾರು : ಇದೇ ಮನೆ ಎಡಗಡೆಯದು . . . ಬೆಮ್ಮಾಡಿರುವಂಥಾದ್ದು (ರೂಜಶಂ. ೩).

[ಬೆನ್ + ಮಾಡು₂ (< ಮಾಡ₁)]

**ಬೆಮ್ಮಾರಲು** 'ಬೆಳ್ಮಾರಲು' ನೋ.

**ಬೆಯ್** 'ಬೇ₁' ನೋ.

**ಬೆಯ** 'ಬಿಯಂ' ನೋ.

**ಬೆಯ್ವೊಲ** (ನಾ). ಸುಟ್ಟ ನೆಲ; ಬೆಂದ ನೆಲ : ಬಜಿಯನುಬಿಯದೆ ಪರಿಯೆ ಕೆಯ್ವೊಲನುಮಂ ಬೆಯ್ವೊ[ಶಾಶಂ. ಬೆಳ್ವೆ]ಲನುಮಂ ಕಜುಂಬು ಮನಿಜುಂಬುಮಂ ತಾಗುವುಂ ಬಾಗುವುಂ (೬೧೨ಶಾಪ. ೩-೨೦ ಪ).

[ಬೆಯ್ (<ಬೇ₁) + ಪೊಲ]

**ಬೆರಂಜು** (ಕ್ರಿ). ಒಟ್ಟುಗೂಡಿಸು; ಕಲೆಹಾಕು : "ಬೆರಂಜು—ಚಯನೇ (ಒಟ್ಟುಗೂಡು)" (ಕಮಂಜ).  [?]

**ಬೆರಕಿ** 'ಬೆರಕೆ' ನೋ.

**ಬೆರಕೆ**, ಬೆರಕಿ, ಬೆರ್ಕೆ (ನಾ). ೧. ಸೇರಿರುವುದು; ಮಿಶ್ರಣ : ಪ್ರಸಾದನಿಷ್ಠೆ ಬೆರಕೆಯಲ್ಲಿ ಬೀಯವಾಯಿತ್ತು (ಶಶವ. ೮೬೩); ಪರಿಪವಿಯ ರನ್ನದೊಡವಿನ ಬೆರಕೆಯ ಬೆಳಗಡರೆ (ಕಬ್ಬಿಕಾ. ೦೩೬). '**ಕಲಬೆರಕೆ**' ಪರಾ. ೨. ಕೂಟ; ಕೂಡುವುದು : ಬೆರಕೆಗೆ ಪೇಸುವಳ್ ಬೊಜಗರವ್ವರ ನಂಟರೊಳಂಗಹೀನರುಂ ತರುವಲಿ ಗಂಡರುಂ ಮನೆಗೆ ಬಂದೊಡೆ ನಾಣ್ಚುವಳ್ (೬೧೨ಶಾಪ. ೨-೯೧). ೩. ಹೊಂದಾಣಿಕೆ; **ಹೊಂದಿಕೆ**; ಸಾಮರಸ್ಯ : ಬೆರಕೆಯೇ ಬಾಳ ಸವಿ ಬೆರಕೆಯಿಲ್ಲದ ಬಾಳ್ವೆ ಹಿರಿನರಕ ಕೇಳು (ಶಾಗ. ೬೩-೨). **ಬೆರಕಿ** : ೪. (ಉಕ) ಚುರುಕಾದ ವ್ಯಕ್ತಿ; ಚಾಲಾಕಿರುವ ವ್ಯಕ್ತಿ : ಹುಚ್ಚರೇ ಆಗಲಿ . . . 'ಬೆರಕಿ'ಗಳೇ ಆಗಲಿ ಯಾರೇ ಆದರೂ ಶಿಷ್ಯಗಳು ಬೇಕೇ ಬೇಕು (ಶುಂಗಾಶ. ೬) ; ಇವ ಮಾತ್ರ ಬಾಳ ಬೆರಕಿ ಆಕ್ಯಾನು (ರಕ್ತಕೃ. ೦೧). (ಗು). **೫. ಚಾಲಾಕಿ** ನಿಂದ ಕೂಡಿರುವ; ಚುರುಕಾದ: ಬಲೆ ಬೆರಕಿ ಹುಡುಗಿ ಬಾಲಿ (ಮಡ್ಡು ಶ. ೪೩). **ಬೆರ್ಕೆ** : ೪. ಶೀನ್ಯಾ ! ಬೆರ್ಕೆ ! ನಮ್ಮನ್ನು ಕರೆಯದೆ ಶಾಲೆಗೆ ಬಂದೆಯಾ ? (ಬಿಶಾತ. ೬೩). ೫. ಅಲ್ಲದೆ ಬೆರ್ಕೆದೇಸಾಯ ತನ್ನ ಸವಿಮಾತುಗಳ ಮೇಲೆ ತಣ್ಣೀರು ಸುರುವಿ ತಪ್ಪಿಸುವ ಸಂಭವವೂ ಉಂಟು (ಗಂಪತಾಮ. ೨೯೦).  [ಬೆರ್₁ + — ಕೆ./ತುಳು. ಬೆರಕೆ. ಬೆರ್ಕೆ, ಬರಕ./ ಮರಾ. ಬೆರಕಾ, ಬೆರಕೀ]

**ಬೆರಕೆಗಂಪು** (ನಾ). ಬೇರೆ ಬೇರೆ ವಸ್ತುಗಳ ಮಿಶ್ರಣದಿಂದುಂಟಾದ ಸುವಾಸನೆ; ಮಿಶ್ರಗಂಧ : ಅಂಜದೆ ಪೊಕ್ಕು ನಡುನೀರೊಳಾಡುವ ವನದೇವಿಯರ ಸೋರ್ಮುಡಿಯಿಂ ಪರೆವರಲ ಬೆರಕೆಗಂಪಿನ ಪೊಂಪುಳಿಯೊಳ್ (ಕಾದಂಪೂ. ೦೦೭) ; ಪುಗಮಗಿಪ ವ್ಯಾಗಮದದ ಮುಡಿದಕದಂಬ ಪ್ರಸೂನದ ಬೆರಕೆಗಂಪಿಗುರವಣಿಸಿ (೧೧೯. ೨-೦೦೩ ಪ).  [ಬೆರಕೆ + ಕಂಪು]

**ಬೆರಕೆಗೂೞ್** (ನಾ). ಬೇರೆ ಬೇರೆ ಬಗೆಯ ಆಹಾರ; **ಮಿಶ್ರಣವಾದ** ಓಗರ : ನೀವು ಬರಲಕ್ಕೆ ನೆಜಿಯದುದಕ್ಕೆ ಮಿಕ್ಕ ಕಿಬಮೆಯುಕ್ಕಿಯುಂ ಕಲಸಿ ಮಾಡಿದಡುಗೆಯ ಬೆರಕೆಗೂೞನುಂಡ ಕಾರಣವಾ ಅಗುಬ್ಬಿಳಂ ಬಿಸುಟಂ (ಪುಣ್ಯಾಸ್ರ. ೬-೩೪ ಪ).  [ಬೆರಕೆ + ಕೂೞ್₁]

**ಬೆರಕೆಗೆಂಪು** (ನಾ). ವಿಧವಿಧವಾದ ಬಣ್ಣಗಳು ಸೇರಿ ಆಗಿರುವ ಹೊಸ ಬಗೆಯ ಕೆಂಪುಬಣ್ಣ : ನವಮಣಿಸಂತಾನದೊಳಗೆಸೆಯೆ ಬೆರಕೆಗೆಂಪು (ಅಜಿಂಪು. ೧೧-೩೭) ; ಬೆರಕೆಗೆಂಪಿನ ಬಂಡಾರ ವರವನಸತಿಯ ಲಾವಣ್ಯರಸದ ಪೂರದಿಳವಾದುವಲ್ಲಿ ಕಾಸಾರ (ನೇಮಿಸಂ. ೧-೭೩). [ಬೆರಕೆ + ಕೆಂಪು$_1$]

**ಬೆರಕೆಜನ** (ನಾ). ಜಾತಿಸಂಕರವಾದ ವ್ಯಕ್ತಿಗಳ ಸಮೂಹ : ಪರಿದರಿನ್ನೀ ರಾರುಲಕ್ಷವು ಬೆರಕೆಜನರಾಲಯವು ಲೆಕ್ಕನುಸರದಲಿಹವಪನೀಶ ಛತ್ರದ ನೆರಳನಾಶ್ರೈಸಿ (ಐಜ್ಯಪು. ೩೭-೧೫). [ಬೆರಕೆ + ಜನ]

**ಬೆರಕೆವಣ್ಣ** (ನಾ). ಸಂಕೀರ್ಣವಾದ ಬಣ್ಣ ; ಮಿಶ್ರವರ್ಣ : ತಳಿರ ಕಳಿಕೆಯ ಮಿಡಿಯ ಪೂಗುಡಿಯ ಪಣ್ಣ ದೋರೆವಣ್ಣ ಬೆರಕೆವಣ್ಣದೊಳ್ದಳಿರ ಪುದುವಿನಿಂ ಬೆಡಂಗುವಡೆದು . . . ರತ್ನಮಯ ಭೂಷಣಾಂಗತರುಗಳಂತಿರ್ದ ಮಾಕಂದಾನೋಕಹಂಗಳುಂ (ಚಂದ್ರಪ್ರ. ೦-೦೦೫ ವ).

[ಬೆರಕೆ + ಬಣ್ಣ]

**ಬೆರಕೆವರಲು** (ನಾ). ನಾನಾ ವಿಧವಾದ ರತ್ನಗಳ ರಾಶಿ : ವರದರುಶನ ಬೋಧಚಾರಿತ್ರವೆಂಬ ಬಂಧುರಗುಣಮಣಿಭೂಷಣವನು ಉರುಮುದದಿಂ ಕೊಟ್ಟು ತೆಗೆದನು ಮುನ್ನಿನ ಬೆರಕೆವರಲ [ಪಾಠಾಂ. ಬಿರಕೇವಲ]ಭೂಷಣವನು (ಶ್ರೀಪಾಲ. ೦೪-೫೭); ಬೆರಕೆವರಲ ಪೊನ್ನ ನೇವಳ ಪೊಳೆದುದು ತರುಣಿಯ ಕಟಿತಟಾಗ್ರದೊಳ್ (ಭರತ. ೪೦-೫೮). [ಬೆರಕೆ + ಪರಲು$_1$ (< ಪರಲ್)]

**ಬೆರಕೆವರ್ಣ** (ನಾ). = ಬೆರಕೆವಣ್ಣ : "ಸಾರಂಗಃ, ಶಬಳಃ — ಈ ೨ ಬೆರಕೆವರ್ಣಂ" (ಹಲಾಯು. ೦೩೦-೫೦). [ಬೆರಕೆ + ವರ್ಣ]

**ಬೆರಕೆವಾಸಿಗ** (ನಾ). ನಾನಾವಿಧವಾದ ಹೂವುಗಳನ್ನು ಸೇರಿಸಿ ಮಾಡಿದ ಬಾಸಿಗ,—ಮಾಲೆ : ಸುರಯಿಯ ಸುರಹೊನ್ನೆಯಲರ ಬಿರಿಮುಗುಳ ಬೆರಕೆವಾಸಿಗವಂ ತಲೆಸುತ್ತಿ (ಅರ್ಜುನಿ. ೫-೫೫ ವ). [ಬೆರಕೆ + ಬಾಸಿಗ]

**ಬೆರಕೆವೂವು** (ನಾ). ನಾನಾ ಬಗೆಯ ಹೂವು ; ಅನೇಕ ವಿಧವಾದ ಹೂವು : ಅಸಿಯಳೊರ್ವಳು ಪಿಡಿದೆತ್ತಿದ ಸಂಪಗೆಯೆಸಳ ಬಾಸಿಗವಾಗಳ ವಳ ಮಿಸುಪ ಕಣ್ಗದಿರ್ಗಳಿಂ ಬೆರಕೆವೂವಿನ ಪೊಚ್ಚಹೊಸಮಾಲೆಯಂತೆ ಮೆಱೆದುದು (ಕುಸುಮಾಂ. ೨೮-೦೪). [ಬೆರಕೆ + ಪೂವು (< ಪೂ$_2$)]

**ಬೆರಕೆವೆಳಗು** (ನಾ). ಬೇರೆ ಬೇರೆ ಬಗೆಯ ಬೆಳಕು ; ಮಿಶ್ರಕಾಂತಿ : ನವರತ್ನಕೂಟಾಗ್ರದಿನುಣ್ಮುವ ಬೆರಕೆವೆಳಗು . . . ಕಣ್ಗೆಸೆದುದು (ಚಂದ್ರಪ್ರ. ೬-೪೫) ; ಸಕಲಸೌಂದರ್ಯಮನೊಳಕೊಂಡ ಪೋಲ್ಕಟ್ಟಿನ ಬೆರಕೆವೆಳಗು ಮಂಟಪದೊಳಗಂ ಪೊಱಗಂ ತೆಕ್ಕನೆ ತೀವೆ (ಗಿರಿಜಾ. ೧೦-೨೮ ವ); ನಸು ನಗೆಯ ಬೆಳುದಿಂಗಳನು ಪೊಳೆವೆಸಳುಗಂಗಳ ಬಳ್ಳಿಮಿಂಚನು ಮಿಸುಪ ತೊಡಿಗೆಯ ಬೆರಕೆವೆಳಗನು ಪಸರಿಸುತ ಬಂದು (ಶಾಳ್ವಭಾ. ೨೭-೨).

[ಬೆರಕೆ + ಬೆಳಗು$_2$]

**ಬೆರಕೆಸೊಪ್ಪು** (ನಾ). (ಒಟ್ಟಾಗಿಯೆ ಅಡುಗೆಗೆ ಉಪಯೋಗಿಸುವ) ಬೇರೆ ಬೇರೆ ಜಾತಿಗೆ ಸೇರಿದ ಸೊಪ್ಪು : ನೂಲೆಗೆಣಸು ಉಗನಿಕಾಯಿ ಬೆರಕೆಸೊಪ್ಪು ಇತ್ಯಾದಿಗಳನ್ನು ಸಂಗ್ರಹಿಸುವಾಗಲೋ . . . ಆ ಅರಣ್ಯ ಪ್ರದೇಶ ಸುಪರಿಚಿತವಾದದ್ದೆ ಆಗಿತ್ತು (ಮಲೆಮ. ೫೭೬); ಬೆರಕೆಸೊಪ್ಪಿನ ಸಾರು ಚಂದ, ಸೂಳೆ ಮಕ್ಕಳು ಚಂದ (ಗಾದೆ). [ಬೆರಕೆ + ಸೊಪ್ಪು$_2$]

**ಬೆರಗಱಿ** (ಕ್ರಿ). ಉಪಾಯವನ್ನು ತಿಳಿ : ನೊಂದ ಸಿಂಗದ ಮೇಲೆ ಬೆರಗಱಿಯದ ಬೆಳ್ಳಾಳ್ ಪಾಯ್ವಂತೆ ಕಿಚ್ಚು ಬಾಳ್ವೆರಸು ಪಾಯ್ದುದುಂ (ಶಬ್ದಮ. ೦೦-೦೦೬ ವ). [ಬೆರಗು$_3$ + ಅಱಿ$^2$]

**ಬೆರಗು$_1$** (ಕ್ರಿ). ಆಶ್ಚರ್ಯಪಡು ; ವಿಸ್ಮಯಹೊಂದು : ಬೆರಗಾಗು : ಮುನಿಪುಂಗವರು . . . ಬೆರಗಿ ದ್ವಾರದ ಪಾಲಕರು ಋಷಿವರರ ಚರಣಗಳನು ವಂದಿಸಿ ಚರಿಸಿದರು ಗೃಹಮಧ್ಯದೊಳು ಗಿರಿವರಸಿಗರುಹಲ್ಕೆ (ಶಾಂತೀಶ. ೬-೩೪) ; ರಾಜರು ಬೆರಗಿದರು ಲಾವಣ್ಯಲತಿಕೆಯ ರೂಪವನು ಕಂಡು (ರಾಮಾಶ್ವ. ೬-೧೧). [< ಬೆಜಗು. / ತುಳು. ಬೆರಗು]

**ಬೆರಗು$_2$** 'ಬೆಜಗು' ನೋ.

**ಬೆರಗು$_3$** (ನಾ). ೧. ವೇಗ : ಶೀಘ್ರತೆ : (೬). ೨. ಅಧಿಕಪ್ರಸಂಗತನ ; ಧೂರ್ತತೆ : ಬೆರಗಿನಿಂದ ಬೋಳನು ಹೀನವಚನಗಳೆಂಬ ವೇದಮಂತ್ರಗಳಿಂದ ಬಯ್ದು ಇದಕ್ಕೆ ಪ್ರತಿಫಲ ಕೊಡದಿರಲಾರೆನೆಂದು ಹಲ್ಲು ಕಚ್ಚಿದನು (ಕಾಲಜ್ಞ. ೯ ಕಥಾಸಾರ). ೩. ಉಪಾಯ ; ಜಾಲ : ಪಾತಕಿ ಕೊಂದಳ್ ಬೆರಗಿಂ[ಪಾಠಾಂ. ಗರದಿಂ] ಗಂಡನನಾ ಸ್ತ್ರೀಚರಿತಮುದೇಂ ಕಳೆಯಲರಿದು ಪೆಂಡಿರ ಕೃತಕಂ (ಮುಕೋಚ. ೩-೩೦). ೪. ಕೌಶಲ : ಚಾತುರ್ಯ : ಬೆರ[ಪಾಠಾಂ. ಜ]ಗುಗಳಪಸರಾನ್ವಿತಂಗಳು ಬಿಜುಸುಗಳುದಾಸೀನವೃತ್ತಿಗಳಜಿವುಗಳು ಕೇಣಂಗಳಪಹಾಸ್ಯಂಗಳಿಚ್ಛೆಗಳು (ಐಶಪು. ೪೦-೬೦) ; ಬೆರಗು ಜುಂಬಿಸ ಪಷ್ಟ ಸೀತ್ಕೃತವೆಱಕ ಜಾಣ್ನುಡಿ ನೋಟ ಬೇಟವು (ಶಾಳ್ವಭಾ. ೦೭-೨೬). ೫. ವಿವೇಕ : ಒಡನೋಡಿದೊಂದು ಬೆರ[ಪಾಠಾಂ. ಜ]ಗಿಂಗೆ ಕೊಲಲ್ಕೆನಗಾಗದು (ಶಂಕಭಾ. ೨-೫೦) ; "ಉತ್ಸಾಹ" (ಶಂಶದೀ. ೭೬) ; "ಕಾರಣ" (ಶಂಶಭಾ. ಅನುಬಂಧ); "ದಾಕ್ಷಿಣ್ಯ" (ಶಂಶಭಾ. ಕೋಶ).

[ದೇ.॥ ತಮಿ. ವಿರೈವು, ವಿರಕು ; ಮಲ. ವಿರವು ; ಕೊಡ. ಬೆರಿಯ ; ತೆಲು. ವೆರವು, ವೆರುವು]

**ಬೆರಗುಗೊಳ್** 'ಬೆಜಗುಗೊಳ್' ನೋ.

**ಬೆರಗುಗೊಳಿಸು** (ಕ್ರಿ). ಆಶ್ಚರ್ಯಪಡುವಂತೆ ಮಾಡು ; ವಿಸ್ಮಯ ಪಡಿಸು : ವೈದ್ಯರನ್ನೂ ವಿಜ್ಞಾನಿಗಳನ್ನೂ ಬೆರಗುಗೊಳಿಸಿತು (ಹಸುಹೂ. ೨೧೮). [ಬೆರಗು$_2$ (<ಬೆಜಗು) + ಕೊಳ್$_1$ + – ಇಸು$_3$]

**ಬೆರಗುಬಡಿ** (ಕ್ರಿ). ಆಶ್ಚರ್ಯಪಡು ; ವಿಸ್ಮಯಹೊಂದು : (ತುಟಿಗೆ ಕೈವೆರಳಿಟ್ಟು ಬೆರಗುಬಡಿದಂತಾಗಿ) (ಚಂದ್ರಸ. ೫-೦೮) ; ಪೀಂಚಲು ಬೆರಗು ಬಡಿದವಳಂತೆ ಗಂಡನ ಕಣ್ಣನೇ ನೋಡತೊಡಗಿದಳು (ಮಲೆಮ. ೪೮೨).

[ಬೆರಗು$_2$ (< ಬೆಜಗು) + ಬಡಿ$_1$]

**ಬೆರಗುವಡು** 'ಬೆಜಗುವಡು' ನೋ.

**ಬೆರಗುವಾರ್** (ಕ್ರಿ). ಉಪಾಯವನ್ನು ಅಪೇಕ್ಷಿಸು,—ನಿರೀಕ್ಷಿಸು (?) : ಅಳವಿಗೆ ಸಾರ್ದನೇ ಬೆರಗುವಾರ್ದನೆ ಮೆಯ್ವಱಿಯಿಂದೆ ಪೋರ್ದನೇ ತಿಳಿವೊಡದಿಲ್ಲ . . . ಅಪ್ಪಳಿಸಿದನೆತ್ತಿಕೊಂಡು ಧರೆಗಿಕ್ಕಿದಂ . . . ನೆಗಱ್ದಂತಕನಂ ಮುರಾಂತಕಂ (ಜಗನ್ನಾ. ೭-೨೪). [ಬೆರಗು$_3$ + ಪಾರ್$_1$]

**ಬೆರಟು** 'ಬಱಂಟು' ನೋ.

**ಬೆರಟೆ** 'ಬೆಟ್ಟೆ' ನೋ.

**ಬೆರಣಿ** 'ಬಱಟಿ' ನೋ.

**ಬೆರಲ್, ಬೆರಲು, ಬೆರಳ್, ಬೆರಳು** (ನಾ). ೧. ಕೈ ಅಥವಾ ಕಾಲಿನ ಅಂಗುಲಿ ; ಬೆಟ್ಟು : "ಅಂಗುಲೀ, ಕರಶಾಖಾ— ಈ ೨ ಬೆರಲ್" (ಹಲಾಯು. ೬೫-೩೭೨); ನಾನಾಪ್ರಕಾರದ ಕಂಕಣಗಳುಮಂ ತೊಟ್ಟ ಮುಂಗೆಯ್ಯುಂ ಬೆರಲ್ಗಳುಂ . . . ಶುಭಲಕ್ಷಣಾಂಕಿತಮಾಗಿ (ವಡ್ಡಾರಾ. ೦೪೮-೦೮); ಬೆರಲ ಕೊರಲ ಕೂಟಂ ಬೆರಲಂ ಮಿಡಿಯಿಸಿದುದು (ಆದಿಪು. ೯-೦೦೭); ಬೆರಲೆರಲೊರಲ್ಕೊರಲ್ಸರಲ್ . . . ಲಾಂತಮಿದಂ ಗ್ರಾಮ್ಯ ರಜೆಯದುಚ್ಚರಿಸುವರ್ ಕುಳಾಂತಭ್ರಮೆಯಿಂ (ಶಮದ. ೨೮). ೨. ಒಂದು ಬೆರಳಿನ ಅಳತೆ : ಒಂದು ಅಂಗುಲ : ತಾನಾ ಖೇಚರೇಂದ್ರಂಗಮೇಂ ಬೆರಲಿಂದಗ್ಗಳದಿಪ ಕಾವ ಗುಣಮಂ ಪೂಣ್ದೆಂದಭೂಪಾಳಕ (ಎಇ. XXVII, ೭೨-೩೦; 1114). **ಬೆರಲು** : ೧. ಕೊರಲ ಮೂರೇಖೆಯ ಮಣಿವ್ಡೆಡಿಪಳು ಸಣ್ಣ ಬೆರಲ ಕೈರೇಖೆಯುಜ್ಜುವಳು (ಪೋಪಹ. ೦೭-೭೪). **ಬೆರಳ್** : ೧. ವಿರಚಿಸಿ ಸುಕುಮಾರತೆಯುಂ ಪಿರಿದುಂ ಬೆರಳಿಂದಮಂಟಿ ನೋಡಿದನೋ . . . ಎನಲಾ ತರುಣಿಯ ಗಂಭೀರನಾಭಿಮಂಡಲ ಮೆಸೆಗುಂ (ಕಾಮಂಜ. ೦೦); ಎರಡುಂ ಮಡಂಗಳೆಡೆ ನಾಲ್ವೆರಳುಂಗುಷ್ಟಂಗಳೆಡೆಗಳೆರಡಱೆಯೊರ್ಗೇಣಾಗಿರೆ (ಸುಕುಮಚ. ೬-೫೮); ನಿಡುಬೊಟ್ಟೆಸೆಯೆ

ವರ್ಭ ಕರಮತಿಶಯದಿಂ ಬೆರಳೊಳ್ ರಂಜಿಸಿ (ಧರ್ಮಾಮೃ.೦-೯೩). **ಬೆರಳು:** ೧. ಎನ್ನ ಕಾಯುವ ದಂಡಿಗೆಯು ಮಾಡಯ್ಯ . . . ಎನ್ನ ಬೆರಳ ಕಡ್ಡಿಯ ಮಾಡಯ್ಯಾ (ಬಸವ. ೩೦೦); ಕಂಬನಿಯು ಮಿಡಿದಳು ಬೆರಳಿನಲಿ (ವೀಶ. ೩-೦೦); ಬೆರಳು ತೋರಿಸಿದರೆ ಹಸ್ತ ನುಂಗುತ್ತಾನೆ (ಗಾದೆ). ೨. 'ಇಬ್ಬೆರಳು' ಪರಾ. ೩. (ಆಲಂ) ಸಹಾಯ: ಯಾವನೆನ್ನನು ದಿವ್ಯಗತಿಯು ಸೋಪಾನವನು ಜೀವಭಾವದ ಬೆರಳು ಕೊಟ್ಟು ಹತ್ತಿಸಿದನೋ (ಕೃಷ್ಣಾಕು. ೯-೬).

**ಬೆರಲಂ ಮಿಡಿಯಿಸು**= (ಆಲಂ) **ಸೋಜಿಗವನ್ನು ಉಂಟುಮಾಡು:** ಅಚ್ಚರಿಗೊಳಿಸು : ಮಿಡಿವಂ ಬೀಣೆಯನಿವನಿವಳೊಡನೆಸೆವಳ್ ಬೆರಲ ಕೊರಲ ಕೂಟಂ ಬೆರಲಂ ಮಿಡಿಯಿಸಿದುದೆನಿಸಿ (ಆದಿಪು. ೯-೦೦೬); ಬೆರಲಂ ಮಿಡಿಯಿಪ ಪುಲಕಾಂಕುರವಮಂ ಪುಟ್ಟಿಸುವ . . . ಅರಮನೆ ಮಾಳ್ಪುದು ಮಯಂಗತಿವಿಸ್ಮಯಮಂ (ಕಂರಾಪು. ೦-೧೨೯). **ಬೆರಲನಿತು**=ಬೆರಳಿನಷ್ಟು ಅಗಲ : ನಿರುತಿಯು ಕಂಭದಿಂದಮನಿಳಾಸೆಯೊಳಿಕ್ಕುವ ಕಂಭಮುಪ್ಪುದೊರ್ವೆರಲನಿತರ್ಕೆ ತಗ್ಗಿ ತದಜಿಂದೆ ಹರಾಸೆಯೊಳಿರ್ಪ ಕಂಭಮಿರ್ವೆರಲನಿತರ್ಕೆ ಮತ್ತೆ ಕಿಱಿದಪ್ಪುದದರ್ಕೆ ದಲುದ್ದಮುಪ್ಪುದೊರ್ವೆರಲನಿತುಂ ಹವಿರ್ಭುಜನ ಗೊಂಟನ ಕಂಭಮುದೂರ್ಜಿತಪ್ಪುದು (ಲೋಕೋಪ. ೩-೨೮). **ಬೆರಲ ಸೇವಗೆ**= ಕೈಬೆರಳುಗಳಿಂದ **ಹೊಸೆದು ಮಾಡುವ ಸೇವಗೆ :** ವರಡಿ ಗೌವಲಿಯುಪ್ಪಮಣಿ ಸಣ್ಣ ಗೋಧೂಮ ಸರವಳಿಗೆ ದೊಡ್ಡಸೇವಗೆ ಕಮಬುಪುಂಡಲಿಗೆ ಬೆರಲಸೇವಗೆಯಾದಿಯಾಗಿಯಡವಾದ ಕಜ್ಜಾಯಗಳ ತೆಗೆದುಕೊಂಡು (ಸೂಶಾ. ೩-೬). **ಬೆರಳಬದೆಗ**=ಬೆರಳೆತ್ತಿ ತೋರಿಸಿದರೆ ಸೇವೆಗೆ ಸಿದ್ಧವಾಗಿರುವ ಸೇವಕ ; ಕೀಳಾಳು : ಆ ನೃಪಾಲರ ಮಗನೊ ಮೊಮ್ಮನೊ ನೀನವರ ಬಾಂಧವನೊ ಭೃತ್ಯನೊ ಸೂನವಕ್ಷನೊ ಬೆರಳ ಬದೆಗನೊ ಕುರುಳ ಕೋಮಳನೊ (ಕುಬ್ಬಾಸ. ೨-೬೨). **ಬೆರಳು ಕಚ್ಚಿಸು**= (ಆಲಂ) **ಸೋಜಿಗಗೊಳಿಸು;** ಅಚ್ಚರಿಗೊಳಿಸು: ಗರುಡ ಗಂಧರ್ವಕಿನ್ನರ ಕಿಂಪುರುಷರ ಬೆರಳು ಕ[ಶಾಕಾಂ. ಗ]ಚ್ಚಿಸಿ ಪುಲ್ಲುಮಿಡಿಸಿ ಉರಗ ಮಂದಿರವೇಱಿಸಿ ನೀರ ಪೊಗಿಸಿಯೆ ತರುವನೇಱಿಸಿ ಮೇಲ್ಬಿಡುವೆ (ತ್ರಿಶುಗಾಂ. ೬೦-೦೦೮); ಅವನ ಯುಕ್ತಿಗಳು ಬೆರಳು ಕಚ್ಚಿಸುತ್ತಿದ್ದುವು (ಶಂಡೀ. ೩೩). **ಬೆರಳು ಕಚ್ಚು**= (ಆಲಂ) ಅಚ್ಚರಿಗೊಳ್ಳು; **ಸೋಜಿಗಪಡು :** ದಯಾಪಶಿಯ ಪುರುಷಾರ್ಥ, ಎದೆಗಾರಿಕೆಗಳನ್ನು ನೋಡಿ ಜಿಲ್ಲೆಯ ಇನ್ನುಳಿದ ಜಾಗೀರುದಾರರು ಬೆರಳು ಕಚ್ಚುತ್ತಿದರು (ಜಿಬಿಪಾ. ೦೧೩); ಪಾಂಡವರ ಆಗಿನ ದೌಲತ್ತಿಗೆ ಯಾರೂ ಬೆರಳುಕಚ್ಚುವಂತಿತ್ತು (ಸುಕು.ಶುು. ೩).

[ದ್ರಾ.॥ ತಮಿ. ಮಲ. ವಿರಲ್; ತುಳು.ಬೆರೆಲ್, ಬಿರೆಲ್, ಬೆರೆಳ್; ತೆಲು. ಪ್ರೇಲು, ವೇಲು; ಕೋತ. ವೆರ್ಲ್; ತೊದ. ಪೆಳ್]

**ಬೆರಲಚ್ಚು**, ಬೆರಳಚ್ಚು (ನಾ). ೧. ಬೆಟ್ಟನ್ನು ಒತ್ತಿದ ಗುರುತು ; ಅಂಗುಲಿಮುದ್ರೆ : ನಿಜನಿಜಗೊಂಡ ಗುಣಾರ್ಣವನ ತಲೆನವಿರ್ಗಳ್ ಲಾವಣ್ಯರಸಮನಿಡಿದಿಡಿದು ತೀವಿದ ಕಪೋಲಾಸನನ ಬೆರಲಚ್ಚುಗಳನ್ನ ಪಾದುವು(ಕಂಕಥಾ. ೨-೩೯೮); ಬೆರಲಚ್ಚುಗಳಚ್ಚಿಟ್ಟಂತೆ ಕೊಂಕುಗಳ್ ತಲೆನವಿರೊಂದಿ ಮೊದಲಿಸುವಂತೆಪೊಲಿರ್ದುವು ನಮ್ಮ ವೀರಮಂ (ಕಂಕಥಾ. ೬-೩೭). **ಬೆರಳಚ್ಚು :** ೨. ಬೆಟ್ಟುಗಳನ್ನಾಡಿಸಿ ಅಕ್ಷರಗಳನ್ನು ಮೂಡಿಸುವ ಯಂತ್ರ; ಟೈಪ್‌ರೈಟರ್ : ಕನ್ನಡ ಬೆರಳಚ್ಚು ಈಚೆಗೆ ತುಂಬ ಜನಪ್ರಿಯವಾಗಿದೆ (ರೂಢಿ). 'ಬೆರಳಚ್ಚುಯಂತ್ರ' ಪರಾ. ೩. ಬೆರಳಚ್ಚು ಯಂತ್ರದಿಂದ ಮೂಡಿಸಿದ ಅಕ್ಷರ : ಬೆರಳಚ್ಚಿನ ಪ್ರತಿಗಳನ್ನು ಸಿದ್ಧಮಾಡಿಕೊಡು (ರೂಢಿ). [ಬೆರಲ್ + ಅಚ್ಚು$_3$]

**ಬೆರಲಾಡಿಸು** (ಕ್ರಿ). ೧. ಬೆಟ್ಟನ್ನು ಅಲ್ಲಾಡಿಸು. ೨. (ಆಲಂ) ಕಲಕು : ಕೆದಕು : ಹಿಂದಿನ ಜೀವನದ ನೆನಪು ಮೆಲ್ಲನೆ ಅವಳ ಅಂತರಾಳದಲ್ಲಿ ಬೆರಲಾಡಿಸಲಾರಂಭಿಸಿತ್ತು (ಹಾತುಮ. ೯).

[ಬೆರಲು (< ಬೆರಲ್) + ಆಡಿಸು]

**ಬೆರಲು** 'ಬೆರಲ್' ನೋ.

**ಬೆರಲುಂಗುರ**, ಬೆರಳುಂಗುರ (ನಾ). ಬೆಟ್ಟಿನಲ್ಲಿಟ್ಟುಕೊಳ್ಳುವ **ಉಂಗುರ;** ಅಂಗುಳೀಯಕ : ಕೈಯುಂ ನೋಡಿ ಬೆರಲುಂಗುರಮಂ ಕಾಣದೆ ... ಅಂಜಿ ದೆಸೆಗಳಂ ನೋಟ್ಪಿನ್ನೆಗಂ (ಪಮ್ಪಾರಾ. ೩-೬); ತೊಳಪ್ಪ ಬೆರಲುಂಗುರಮಿಂಚರ ಮಿಾವ ನೇವುರಂ (ಕಬ್ಬಿಕಾ. ೩೯೦). **ಬೆರಳುಂಗುರ :** ಘಳಿಭಳಿರೆ ನಿಮ್ಮ ಹೊಳೆವ ಬೆರಳುಂಗುರ ಕಿಣಿಕಿಣಿನಾದ (ಪುರಂದ. ೦-೦೯೦-೦) ; ಕಾಲರಾಯನ ಬೆರಳುಂಗುರದೊಳು ಗಾದೆ ಮಿರುಗುವ ಹೊಸ ಪೊಚ್ಚೆ ಹರಳು (ಇಂಕಾಹ. ೨೨೦-೮೯). [ಬೆರಲ್ + ಉಂಗುರ]

**ಬೆರಲೆತ್ತು**. ಬೆರಳೆತ್ತು (ಕ್ರಿ).(ಆಲಂ) **ಮೇಲ್ಮೆ ಅಥವಾ ಶ್ರೇಷ್ಠತೆಯನ್ನು** ಸಾರು : ದೊರೆವೆತ್ತ ತರ್ಕಶಾಸ್ತ್ರದ ಪರಿಣತಿಗಂ ನೆಗಟ್ದ **ಚಕ್ರವರ್ತಿಯ** ಸಭೆಯೊಳ್ ಬೆರಲೆತ್ತಿದರೆಂದೊಡೆ ವಾದಿರಾಜದೇವರ ಸಮಾನಮಾರೀ **ಧರೆಯೊಳ್** (ಸುಕುಮಾ.. ೦-೩೯); ನನೆಯುಂಬುಗಳ್ಗೆ ಬೆರಲೆತ್ತುವರಲ್ಲಿಯು **ಮಾಲೆ** ಗಾರ್ತಿಯರ್ (ಮಲ್ಲಿಪು. ೨-೩೯) ; ಬೆರಲೆತ್ತುತ್ತೆಯ್ದೆ **ಕೊಂಡಾಡಿದನವನ** ಮಹಾಶೌರ್ಯಮಂ ಪಾಂಡುಪುತ್ರಂ (ಜಬಿಸಂ. ೯-೪೮). **ಬೆರಳೆತ್ತು :** ಸಕಲ ಭೂವಲಯಕೆ ಮೆರೆಸುವಾತನೀ ಪೊಳಲಾಣ್ಮನೊರ್ವನೆ **ಸಭಾಪಟಿಕಿಯೊಳೆಂದು** ಬೆರಳೆತ್ತಿ ತೋಱಿಸುವಂತೆ ನೋಟಕರ **ಕಣ್ಗೆ** ಕಾಣಿಸಿದುವೆಣ್ದೆಸೆಯ ಡಂಕಣೆಯ ಪಳವಿಗೆಗೆಯ್ಗಳು (ಕ್ಷೈಖಿಭಾ. ೦೬-೯). [ಬೆರಲ್ + ಎತ್ತು$_1$]

**ಬೆರಲ್ಮಿಡಿ** (ಕ್ರಿ). ೧. ಬೆರಳುಗಳ ಮೂಲಕ ಅಭಿನಯಿಸು : **ಕರವಿನ್ಯಾಸ** ಮಾಡು : ಸಭೆಯ **ಶೋಭೆಯುಮಂ** ಸಾಮ್ರಾಜ್ಯದುನ್ನತಿಯುಮನೆಡೆ ಬಿಡದೆ ಬೆರಲ್ಮಿಡಿದು ಬಿಚ್ಚಳಿಸಲ್ (ವರ್ಧಪು. ೩-೯ ವ). ೨. (ಆಲಂ) **ಸೋಜಿಗಗೊಳ್ಳು:** ಅಚ್ಚರಿಗೊಳ್ಳು : **ಸೊಡಗರ್ಡಿಯೊಯ್ಯನಾಗೆ ...** ಚಂದ್ರಿಕಾಪ್ರಭೆ ಮೊದಲ್ಗಿಡೆ ನಾಡೆ ವಿತರ್ಕದಿಂ ಬೆರಲ್ಮಿಡಿದು **ಗುಣಾರ್ಣವಂ** ನೆಱೆಯೆ ನಿಟ್ಟಿಸಿದಂ ಬೆಳಗಪ್ಪ ಜಾವಮಂ (ಕಂಕಥಾ. ೯-೦೦೦).

[ಬೆರಲ್ + ಮಿಡಿ$_1$]

**ಬೆರಲ್ಮಿಡಿಸು** (ಕ್ರಿ). (ಆಲಂ) **ಸೋಜಿಗವನ್ನುಂಟುಮಾಡು; ಅಚ್ಚರಿ** ಗೊಳಿಸು : ಮದನನೈದಂಬಿನೊಳುಬ್ಬುವ ಸೌಂದರ್ಯದ **ಕೈಮಿಕ್ಕಿರ** ಕಾಂತೆಯ ಬೆರಲ್ ಬೆರಲ್ಮಿಡಿಸುಗುಂ (ಮಲ್ಲಿಪು. ೩-೬೦).

[ಬೆರಲ್ + ಮಿಡಿಸು (< ಮಿಡಿಯಿಸು)]

**ಬೆರಸು$_1$** 'ಬೆರೆಯಿಸು' ನೋ.

**ಬೆರಸು$_2$** (ನಾ). ೧.ಸಂಬಂಧ; ನಂಟು : ಪರಶಿವನ ಸಲ್ಲೀಲೆವೆರಸಿನಿಂ **ವಿಶ್ವ** ಮಿಪ್ಪಿರವ ಗುರುರಾಯ ಸುಪಿಪೆ ಕಗೊರೆದ (ಮಹಾತ್ಮೆ. ೩ ಸೂಚಕ). **೨.** ಕೂಟ : ರತಿ : ಬೆರಸು ಬೆಲ್ಲಣೆಯಿಕ್ಕೆಯಾಶೆವಾಶೆಯ **ದೇಶ ಚಕ್ಕ** ಮಾಲುಕಿನ ಜಾವಡಿ . . . ಸೈಪುದೋಱುವ ಸೂಳೆಗೇರಿ **ಸೊಗಸಾದುದಲ್ಲಿ** (ಸಂಬಿಪಾ. ೨೩-೦೬). [< ಬೆರಸು$_1$]

**ಬೆರಸಂ$_3$** (ಅ). **ಸಹಿತ;** ಒಡನೆ: **ಸಂಗಡ :** ಗಂಗಮಹಾನಾಯ್ಕಂಗೆ ಪೆರ್ದುದಂಗುಱಿವೆರಸು ಮೂವತ್ತುಗುಳ ಅಯ್ಗಳ ಪಾಟು **ಕೊಟ್ಟೋರ್** (ಎಕ. IX. ಹೊಸಕೋ. ೮೬-೩ ; ಸು.720); ಮಾಣಿಗಳ್ವೆರಸು **ಪೊಱವೊಟ** ಲೊಳ್ ಬಿಟ್ಟಾಡುತ್ತಿರೆ (ಪಮ್ಪಾರಾ. ೩೬-೨೩); ಪರಿಮಿತಪುರೇಂದ್ರಸಮಾಜಂ ಬೆರಸು ರಾಜಭವನಮಂ ಪೊಕ್ಕು (ಆದಿಪು. ೬-೦೦೮ ವ) ; **ಸ್ಥಾಣುವೋಲ್** ನಿಶ್ಚಲತ್ವಂ ಬೆರಸಾದಂ ಸೂರ್ಯಬಿಂಬಕ್ಕಭಿಮುಖನೆನಿಪೀ ಮೌನಿ **ಶಾನಿರ್ವ** ತಾಣಾ (ಶಾಕುಂತ. ೦೦೨-೦೬೯). [< ಬೆರಸು$_1$]

**ಬೆರಳ್** 'ಬೆರಲ್' ನೋ.

**ಬೆರಳಚ್ಚು** 'ಬೆರಲಚ್ಚು' ನೋ.

**ಬೆರಳಚ್ಚುಮಣೆ** (ನಾ). ಬೆರಳಚ್ಚು ಜೋಡಿಸಿರುವ ಮಣೆ; **ಬೆರಳಚ್ಚು** ಯಂತ್ರ : ಬೆರಳೊತ್ತುಮಣೆ, ಬೆರಳಚ್ಚುಮಣೆ, ಬೆರಳುಮಣೆ (Key-board. ಪತ್ರಿಕೆ. ೯೯). [ಬೆರಳಚ್ಚು (< ಬೆರಲಚ್ಚು) + ಮಣೆ$_1$]

**ಬೆರಳಚ್ಚುಯಂತ್ರ** (ನಾ). ಬೆರಳಚ್ಚಿನ ಯಂತ್ರ; ಟೈಪ್‌ರೈಟರ್: ಈಗ ಕನ್ನಡ ಬೆರಳಚ್ಚುಯಂತ್ರಗಳು ಬಹಳ ಬೇಕಾಗಿವೆ (ರಾಶಿ). [ಬೆರಳಚ್ಚು (< ಬೆರಲಚ್ಚು) + ಯಂತ್ರ]

**ಬೆರಳಲುಕ** (ನಾ). ಬೆಟ್ಟನ್ನು ಅಲ್ಲಾಡಿಸುವುದು, -ಅಲುಗಿಸುವುದು: ಧರೆಯೊಳು ನಟ್ಟ ದಿಟ್ಟಿಯಲಚಿತಧರದ ಪೊರಳುವ ತುದಿನಾಲಗೆಯ ಬೆರಳಲುಕದೊಳಾಂದೋಳಿಪ ಮಸ್ತಕದರಳುಗಣ್ಣಬಲೆಯೊಪ್ಪಿದಳು (ಕಂಶಾ. ೯-೦೭೯). [ಬೆರಳು (< ಬೆರಲ್) + ಅಲುಕ]

**ಬೆರಳಾಣತಿ** (ನಾ). ಬೆಟ್ಟನಿಂದ ಮಾಡುವ ಅಪ್ಪಣೆ. -ಆಜ್ಞೆ: ನನ್ನಂತೆ . . . ಎಲ್ಲರೂ ಶಾಂತಲಾದೇವಿಯವರ ಬೆರಳಾಣತಿಯಲ್ಲಿ ನಡೆಯುವುದು ಒಂದು ಗೌರವ ಎಂದುಕೊಂಡಿದ್ದೇವೆ (ಶಪಾ. ೦೯೭). [ಬೆರಳು (< ಬೆರಲ್) + ಆಣತಿ$_3$ (< ಆಣತಿ$_1$)]

**ಬೆರಳಿಚ** (ನಾ). ಬೆಟ್ಟನಲ್ಲಿ ಹುಟ್ಟಿದುದು; ಉಗುರು: ನಖ: ಬೆರಳಿಚದ ಕೊರ್ಮೊನೆಯು ಮಿಡಿವ ಹಿಂಸೆಗೆ ತಂತಿ ತಾಂ ಬೀಣೆಯಿಂಚರವೀಯುವಂತೆ (ಶ್ರೀರಾಪು. ೦೦೦-೩೦೫). [ಬೆರಳು (< ಬೆರಲ್) + -ಇಚ]

**ಬೆರಳಿಡು** (ಕ್ರಿ). (ಅಲಂ) ಗುರುತಿಸು; ನಿರ್ದೇಶಿಸು: ಪ್ರಾಚೀನ ಕನ್ನಡಸಾಹಿತ್ಯದಲ್ಲಿ ನಾಟಕವಿತ್ತೆ ಇಲ್ಲವೇ ಎಂಬ ಚರ್ಚೆಯಲ್ಲಿ ಗದಾಯುದ್ಧ ಮತ್ತು ಹರಿಶ್ಚಂದ್ರಕಾವ್ಯಗಳ ನಾಟಕೀಯತೆಯ ಕಡೆ ಬೆರಳಿಡುವುದು ಸಂಪ್ರದಾಯ (ಕಾವ್ಯಕು. ೨೬ ಅಡಿ); ಸುಂದರಕೃತಿಯೊಳು ಕುಂದಿರು ವೆಡೆಯೊಳೆ ಬೆರಳಿಡುವನು ನೋಡು ಖಳನು (ಇಂಶಾಕ. ೬೭-೨೨). [ಬೆರಳು (< ಬೆರಲ್) + ಇಡು$_1$]

**ಬೆರಳಿಸು** (ಕ್ರಿ). ಬೆಟ್ಟನಿಂದ ಬಾಜಿಸು; ಮೀಟು; ನುಡಿಸು: ಹುರುಳಿನ ಅರಳರಳಿಸಿ ಮಾಲೆ ಮಾಡಿ ಕೊರಳಿಸಿ ಹೃದಯವೀಣೆ ಬೆರಳಿಸಿ (ಅರಳು. ೦೯-೨೦). [ಬೆರಳು (< ಬೆರಲ್) + -ಇಸು$_3$]

**ಬೆರಳು** 'ಬೆರಲ್' ನೋ.

**ಬೆರಳುಂಗುರ** 'ಬೆರಲುಂಗುರ' ನೋ.

**ಬೆರಳುಕಾಪು** (ನಾ). ಕೈಬೆರಳುಗಳಿಗೆ ಅಪಾಯವಾಗದಂತೆ ಹಾಕುವ ಕೈಚೀಲ: ಅರ್ಜುನನು ಚಿನ್ನದ ಕವಚವನ್ನು ತೊಟ್ಟು ಬೆರಳುಕಾಪನ್ನು ಕಟ್ಟಿಕೊಂಡು . . . ಕಾಣಿಸಿಕೊಂಡನು (ಶಕಥಾ. ೨೩). [ಬೆರಳು (< ಬೆರಲ್) + ಕಾಪು]

**ಬೆರಳುಮುರಿ** 'ಬೆರಳ್ಮುರಿ' ನೋ.

**ಬೆರಳೆತ್ತು** 'ಬೆರಲೆತ್ತು' ನೋ.

**ಬೆರಳ್ಮುರಿ**, ಬೆರಳುಮುರಿ (ಕ್ರಿ). (ಬೆಟ್ಟನಿಂದ) ನೆಟಿಕೆ ತೆಗೆ; ಲಟಿಕೆ ಮುರಿ: ಎಲ್ಲ ನಾರಿಯರ್ಕೈದೆ ಕಂಗೆಟ್ಟು ತಾವು ಕಾಣೆಯೆನುತ್ತ ಬೆರಳ್ಮುರಿವುತೆ (ಶಶಪೂ. ೦೦-೯೩). **ಬೆರಳುಮುರಿ**: ಮುದುಕಿಯು ಕಣ್ಣೀರು ಒರೆಸಿಕೊಂಡು ಜಯಂತನ ಮುಖದೆದುರು ಕೈಯಾಡಿಸಿ ಒತ್ತಿಕೊಂಡು ಬೆರಳುಮುರಿದಳು (ಜಯಂತ. ೩೨೫). [ಬೆರಳ್ (< ಬೆರಲ್) + ಮುರಿ$_1$]

**ಬೆರಿಂಕ** (ನಾ). ಒಂದು ಬಗೆಯ ಜಿಂಕೆ: ಪೊದೆ ಪೊದರುಗಳಲಿ ಮೊಲವಾಗಲಿ, ಬೆರಿಂಕವಾಗಲಿ, ನೆಗೆದು ಅದರ ಬೆನ್ನುಹಿಡಿಯಲು ಯತ್ನಿಸುವುದೂ ಉಂಟು (ಜಾಗಿ. ೮೭). [← ತುಳು. ಬರಿಂಕ]

**ಬೆರಿಗಿ** (ನಾ). ಪಟೇಲ ತಾನು ಅಧಿಕಾರಿಗಳ ಸತ್ಕಾರ ಮುಂತಾದುದಕ್ಕೆ ಹೆಚ್ಚಾಗಿ ವ್ಯಯಮಾಡಿದುದನ್ನು ತುಂಬಿಕೊಳ್ಳಲು ರೈತರನ್ನು ಕೇಳಿ ತೆಗೆದುಕೊಳ್ಳುವ ಒಂದು ಬಗೆಯ ತೆರಿಗೆ: ಇವು ಪೂರ್ವಕಾಲದ ತೆರಿಗೆಗಳು: ಮನೆತೆರಿಗೆ, ಹುಲ್ಲುಹಣ. . .ಬೆರಿಗಿ (ಪಟೇಲ ತಾನು ಹೆಚ್ಚಾಗಿ ತೆತ್ತದ್ದನ್ನು ತುಂಬಿಕೊಳ್ಳಲು ರೈತರನ್ನು ಕೇಳಿ ತೆಗೆದುಕೊಂಡದ್ದು) (ಶಬ್ದಪ್ರ. ೨೯೩). [?]

**ಬೆರಿಯ** 'ಬೇರಿ$_1$' ನೋ.

**ಬೆರೆ$_1$** (ಕ್ರಿ). ೧. ಕೂಡು; ಸೇರು; ಮಿಶ್ರವಾಗು: ಕೃತಫಪ್ರೋತ್ಸವ ಮಾಘಶುದ್ಧದಶಮಿಪುಣ್ಯಾಹಯುಕ್ತಂ ಪ್ರಜಾಪತಿಯೋಗಂ ಬೆರೆದಂದು (ಅಶಪು. ೩-೨೨); ಹರಿಚಂದ್ರತೀರ್ಥ ಸಪ್ತತೀರ್ಥವೆಂತೆಂಬ ಹಲವು ತೀರ್ಥಂಗಳ ಬೆರೆದು (ಕಂಪಪು. ೫-೯೦); ಆಹಾರದಲ್ಲಿ ಕಬ್ಬಿಣದ ಅಂಶ ಎಷ್ಟಿದೆಯೆಂಬುದು ಮುಖ್ಯವಲ್ಲ, ರಕ್ತದೊಡನೆ ಎಷ್ಟು ಬೆರೆಯುತ್ತೆಂಬುದು ಮುಖ್ಯ (ಆಹಾರ. ೫೯). ೨. ಸಂಭೋಗಿಸು; ನೆರೆ: ಬೆರೆವಂಗೆ ಭೋಗವೂ ಮೊರೆವಂಗೆ ರಾಗವೂ ಬರೆವಂಗೆ ಓದು ಬರುವಂತೆ ಸಾಧಿಪಗೆ ಬಾರದಿಹುದುಂಟೆ (ಸರ್ವಜ್ಞ. ೦೩೩೦): ಮತ್ತೊಂದು ದಿನ ರಾಯ ಅವಳಲ್ಲಿ ಹೋಗಿ ಬೆರೆದು ಬರುವಾಗ (ಐತಿಹ. ೦೨೨); ಅರೆನಿಮಿಷ ನಿನ್ನೊಡನೆ ಬೆರೆದು ಸುರವಾರಾಂಗನಾಪುರವ ನೆನೆವೆ (ವೆಂಕಾರಾ. ೫-೬-೫೭). ೩. ಲೀನವಾಗು; ಐಕ್ಯವಾಗು: ಉದಾತ್ತಜಸವೇಶ್ವರಾದಿಗಳವಂ ಗ್ರಹಿಸಿ ತದ್‌ವೃತ್ತಿಯಿಂ ವೀರಶೈವಪ್ರತಿಷ್ಠಾಚಾರ್ಯರೆನಿಸಿ ಶಿವನೊಳ್ ಬೆರೆಯರೇ (ಶಬ್ದಸಾ. ೩-೫).

**ಬೆರೆದಾಟ** = ಸಂಭೋಗ; ಕೂಟ; ರತಿಕ್ರೀಡೆ: ಕುರುಬಂಗೆ ಕುಚಿಯಾಸೆ ಮುಚಿಗಳಿಗೆ ಮೊಸೆಯಾಸೆ ಸರುಹರಿಗೆ ಮಳೆಯು ಬರುವಾಸೆ ಸೂಳೆಗೆ ಬೆರೆದಾಟದಾಸೆ (ಸರ್ವಜ್ಞ. ೧೯೦೫).

[ದೇ. ॥ ತಮಿ. ವಿರಚು, ವಿರವು; ಮಲ. ವಿರಕು, ವಿರಕ್ಕು; ತುಳು. ಬಿರಾವು, ಬಿರಸು; ತೆಲು. ಬೆರಯು; ಕುರುಖ್. ಬಿರ್ರ್‌ನಾ; ಮಾಲ್ತೊ. ಬರ್ಗೆ, ಬರ್ಗ್ರೆ]

**ಬೆರೆ$_2$** 'ಬೆಚಿ' ನೋ.

**ಬೆರೆತ** (ನಾ). ಜೋಡಣೆ; ಹೊಂದಾಣಿಕೆ; ಸಂಬಂಧ: ಬಗೆಬಗೆಯ ಬೆರೆತದೊಳು ತರತರದ ರಂಜನೆಯ ಧೀರಾನುಭೂತಿಗಳ ರಸವ ತಳೆದು (ಮುರಿದೀ. ೯೦-೩). [ಬೆರೆ$_1$ + -ತ$_2$]

**ಬೆರೆಯಿಸು, ಬೆರಸು$_1$**, ಬೆರೆಸು, ಬೆಚಿಸು (ಕ್ರಿ). ೧. ಕೂಡಿಸು; ಮಿಶ್ರಮಾಡು: ಶುದ್ಧಮಪ್ಪ ಪೊನ್ನೊಳ್ ದುಷ್ಟರಪ್ಪವರ್ ತಮ್ಮ ಲಾಭದಾಸೆಯಿಂ ಕಿಸುಬೆಳ್ಳಿಯೆಂಬಿವಂ ಬೆರೆಯಿಸಿ ... ಪೊನ್ನೆಂದು ತೋರಿಸುವ ತೆಱದಿಂ (ಧರ್ಮಾಮೃ. ೯-೩೯); ನಿನ್ನ ಜೀವನದಲ್ಲಿ ಈ ಸುಗಂಧವನ್ನು ಯಾರು ಬೆರೆಯಿಸಿದರು (ಕ್ಷಮಾಶಾ. ೬). **ಬೆರಸು$_1$**: ೧. "ಬೆರಸು-ಸಮ್ಮಿಶ್ರೇ" (ಕವಾ); ಆಗಮಕೋವಿದನಿಗದಿತಮಾರ್ಗವಿಧಂ ಬೆರಸಲ್ಕೆ ಮಾಗದೀ ಸಕ್ಕದದೊಳ್ (ಕಬಾ. ೦-೫೦); ಮುತ್ತು ಪವಳಂ ಬೆರಸಿದ ಪೋ[ಲಾಯ್ತು] ಚೆನ್ನತಪಸಿಯ ಕೆಯ್ಯೊಳ್ (ಶಂಖಾ. ೬-೦೦); ತಕ್ಕುದೆ ಬೆರಸಲ್ಕೆ ಘೃತಮುಮಂ ತೈಲಮುಮಂ (ಧರ್ಮಾಮೃ. ೦-೯೩). ೨. ಸೇರು; ಕೂಡು: ಆ ವರ ಚಕ್ರವಾಳಪುರದೊಳ್ ಕಳಭಾಷಿಣಿ ಮುಖ್ಯಮಪ್ಪ ಕಾಂತಾವಳಿಯುತ್ತರಂ ಬೆರಸಿ ತಾನಿರುತಿರ್ದ ಬಳಿಕ್ಕಂ (ಕುಸುಮಾ. ೦೫-೨೯); ಭಜಿಸಿದೈ ಭರ್ಗನನು ಶಾಂಭವಯಜನಸಾರಸಮಾಧಿ ಶಿವಪದರಜವ ಬೆರಸಿತ್ತ (ಕುವ್ಯಾಅ. ೦೦-೨೭). ೩. ಸಂಭೋಗಿಸು; ನೆರೆ: ಪೆಂಡಿರ್ ಪೆಂಡಿರೋದೆಂತು ಬೆರಸುವರಬಲೇ (ಕಂಶಾ. ೦-೭೬); ಅರಸರು ಮುಚಕ್ಕೆ ಬರಿಸಿ ಎನ್ನ ಬೆರಸಿದ ಬಳಿಕ ಆನಂಜುವಳೆ (ಬಸವ. ೬೩೮). ೪. ಐಕ್ಯವಾಗು; ಲೀನವಾಗು; ಸೇರಿಹೋಗು: ಬಿಚ್ಚಿ ಬೇಱಿಲ್ಲ ಬೆರಸಿ ಹೋದಲ್ಲದೆ ದ್ವಂದ್ವರಹಿತ ಸೌರಾಷ್ಟ್ರಸೋಮೇಶ್ವರಾ ನಿಮ್ಮ ಶರಣ (ಆದಯ. ೯೫-೨೩); ದರುಶನದಿಂದಮೃತಾಹಾರವಾಯಿತ್ತು ಬೆರಸಿದಡಿನ್ನೆಂತೊ ಗುಹೇಶ್ವರಾ (ಅವಶಂ. ೦೬೬-೭೫೦); ಮಹಿಮೆಯಱಿದು ಬೆರಸುತಿರ್ಪನೀಶ್ವರಾಂಘ್ರಿಯುಗದ ಭಕ್ತಿಯಿಂದ ಸಂಸೃತಿಗಳನೊದವುಮುಕ್ತಬುಧರು ಪಡೆದು (ಶಾಸಂತ. ೬-೨೩೩ ರಗಳೆ). ೫. ತಾಗು; ಘಟ್ಟಿಸು; ಸೆಣಸು: ಎರಡು ದಳ ಗಂಟಿಕ್ಕಿದುದು ನೆಲ ಬಿರಿಯೆ ಬೆರಸಿತು (ಕುವ್ಯಾಕ. ೯-೨೯); ಅಸುರಕುಲಮಣಿ . . . ಬೊಬ್ಬಿಱಿದು ಬೆರಸಿದು ಖಾತಿಯಿಂ ಪರಬಲವನು (ತರಪು.೩೯-೯)

೬. ಹಬ್ಬು ; ವ್ಯಾಪಿಸು ; ಹರಡು : ಬೀತ ಕೈದುಗಳಖಿಳದೆಳಸಂಘಾತವನು ಬಾಣಾಗ್ನಿ ಬೆರಸಿತು (ಕುಮಾ. ೮೯-೩೯) ; ಹಂದು ಬೆರಸಿತು ಬೇಡಪಡೆ . . . ಅಖಿಳದೆಸೆಗಳಲಿ (ಕೊರಗಾ. ೩-೩-೦೩); ಏನನೆಂಬೆನು ನೃಪತಿ ಕಿಚ್ಚಿನ ಹಾನಿಯನು ಬನದೊಳಗೆ ಬೆರಸಿತು[ಪಾಠಾಂ. ಬೆಲಿಸುತ] ಭಾನುಮಂಡಲವಡಗೆ ಮುಸುಕಿದ ಹೊಗೆಯ ಹೊರಳಿಯಲಿ (ಕಳಕ. ೬-೬). ೭. ಗೊಂದಲಗೊಳಿಸು ; ಗೋಜುಗೊಳಿಸು : ಮುಂದೆ ಪಂಚಾಕ್ಷರಿಯನಕ್ಷರವಾಗಿ ಲಿಖಿಸುತ ಬೆರಸಿ[ಪಾಠಾಂ. ಸು]ಲೆಕ್ಕದ ಸರಿಗೆ ಬಂದಿರಲೋದುವುದನೆಜಿಯು (ಬಸವ. ೩೩-೬೩). ಬೆರೆಸು : ೨. ಪಾಪೋತ್ಕರದೊಳ್ ಬೆರಸಿದ ಜೀವೋತ್ಕರಮುಂ ನಿರ್ವೃತಿಗೆ ನೆಗೆಯಲಾರ್ಕುಮೆ ಬೇಗಂ (ರಪನ್ನಾಮ್ಮ. ೯-೦೨೦); ವ್ಯಸನತೃಷ್ಣೆಯು ಕೀಳುಚಿತ್ತದ ವಿಸುನಿಯೊಳು ಬೆರೆಸಿತು ಸುಬುದ್ಧಿಯ ರಸವು ಹಾಳಾಗಿತು ಹುದಿದ ರಾಗದ್ವೇಷಮ್ಮೆಯಲಿ (ಕುಮ್ಮಾಸ. ೦೩-೯೯). Δ ಬೆಱಸು : ೧. ನೊಳಂಬದಡಿಗ ರಾಚಮಲ್ಲಂ ಮಯಿನ್ದಡಿ ಗುಣ್ಣಗೆ ಗುಳ್ಳ ಎನೆಬರು ಸಮಸ್ತಬಲ ಬೆಱಸಿ ಬಿಟ್ಟೊಡೆ ಗೊಟ್ಟಗೊಟ್ಟು ಯಿಟ್ಟಟಿವಲ್ಲಿ (ಎಇ. XXIV, ೨೬-೮ ; ಕಿ. 885).

[ಬೆರೆ₁ + — ಇಸು₃]

**ಬೆರೆವೊಡಲ್** (ನಾ). ಒಂದುಗೂಡಿದ ಶರೀರ ; ಒಂದ್ಧಾದ ದೇಹ : ಐಕಿಲ್ಗಂಜಿ ನಂಜುಂಡಂ . . . ಪಣೆಯ ನಡುಗಣ್ಣ ಕಿಚ್ಚನುಜ್ಜಳಿಸಿ ಸಜ್ಜನ ಬೆಂಬೂದಿಯ ಮೆಯ್ಗೆ ಪೂಸಿ ದಟ್ಟದೊವಲಂ ಪೊದೆದಗಜೆವೆರಸು ಬೆರೆವೊಡಲೊರ್ದಂ (ರಾಜಶೇಖ. ೦೦೩-೬). [ಬೆರೆ₁ + ಒಡಲ್]

**ಬೆರೆಸು** 'ಬೆರೆಯಿಸು' ನೋ.

**ಬೆರ್ಕೆ** 'ಬೆರಕೆ' ನೋ.

**ಬೆಕ್ಕುರ್,** ಬೆಕ್ಕು (ನಾ). ಸಾಮಾನ್ಯವಾಗಿ ಮುದ್ದಿಗಾಗಿ ಪಳಗಿಸಿ ಸಾಕುವ, ನಾಲ್ಕು ಕಾಲುಗಳುಳ್ಳ ಒಂದು ಮಾಂಸಾಹಾರಿ ಪ್ರಾಣಿ ; ಮಾರ್ಜಾಲ : ಒಯ್ಯನೆ ಪಾಪುಗಳಂಗೆಯ್ದುವರ್... ಬೆಕ್ಕುರ್ಮೊಂತಿಯುಂ ಕಪ್ಪೆಯುಂ ಮುಂಗುರಿಯುಂ ಮೊದಲಾಗೊಡೆಯ ಸ್ಥಲಚರಂಗಳುಂ . . . ಆಗಿ ತಿರಿಕಗತಿಯೊಳ್ ಪುಟ್ಟಿ (ಕಪ್ಪಾರಾ. ೯೭-೬) ; ಬೆಕ್ಕುರ್ಗಳದಿರೊಳಗಾಡಿದೊಡರ್ಕೀದಯಸಮುಯಮಪ್ಪಿನಂ ಪೋಗದೆ ಮಾಣ್ದರ್ಕೆ ಪಗಲರ್ಕೆ ಕಾದಿದೊಡಿರ್ಕಂದಿನ ದೆಪಸಮೊಳ್ಪನಱಿಸುವ ಮನುಜಂ (ಲೋಕೋಪ. ೦೨-೦೩). ಬೆಕ್ಕು : "ಓತುಃ, ಬಿಡಾಳಃ, ಮಾರ್ಜಾರಃ, ವೃಷದಂಶಃ — ಈ ೪ ಬೆಕ್ಕು" (ಹಲಾಯು. ೪೦-೮೩); ಬೆಣ್ಣೆಯುಂ ತಿಂದ ಬೆಕ್ಕಿನಂತೆ ಅಱಿಯಲೀಯದೆ ಮತ್ತೆಯುಟಿದ ಮತ್ಸ್ಯಂಗಳನೀ ತೆಱದೊಳ್ ತಿನುತಿರ್ದ (ಕಂಠಕಂ. ೬೪-೨೦) ; ಗಿಳಿಯೋದಿ ಫಲವೇನು ಬೆಕ್ಕು ಬಹುದ ಹೇಳಲಱಿಯದು (ಬಸವ. ೦೨೩); ಬೆಕ್ಕಿಗೆ ಚೆಲ್ಲಾಟ, ಇಲಿಗೆ ಪ್ರಾಣಸಂಕಟ (ನಾದ).

ಬೆಕ್ಕಿನ ಕಣ್ಣು = ಬೆಕ್ಕಿನ ಕಣ್ಣಿನಂತೆ ಕಂದುಬಣ್ಣವುಳ್ಳ ಕಣ್ಣು : ಆವಳದು ಬೆಕ್ಕಿನ ಕಣ್ಣು (ರೂಢಿ).

[ದೇ.॥ ತಮಿ. ವೆರುಕು ; ಮಲ. ಪೆರುಕು, ವಿರುಕು, ಮೆರುಕು ; ತುಳು. ಬೆರು; ಕೊಡ. ಬೆಕ್ಕೀ; ಕುರುಖ್. ಬೆರ್ಖಾ; ಮಲ್ತೊ. ಬೆರ್ಗೆ]

**ಬೆರ್ಚಪ್ಪ** (ನಾ). ಹೊಲ, ಗದ್ದೆಗಳಲ್ಲಿ ಬೆಳೆಗಾಗಿ ಬರುವ ಹಕ್ಕಿಗಳನ್ನು ಹೆದರಿಸಿ ಓಡಿಸಲು ಹಾಗೂ ಬೆಳೆದ ಬೆಳೆ, ಹೊಸಕಟ್ಟಡ ಮುಂತಾದುವುಗಳ ದೃಷ್ಟಿನಿವಾರಣೆಗಾಗಿ ನಿಲ್ಲಿಸುವ ಹುಲ್ಲು ಮುಂತಾದುವುಗಳಿಂದ ಮಾಡಿದ ಮನುಷ್ಯಾಕಾರದ ಬೊಂಬೆ ಅಥವಾ ಬಣ್ಣಗಳಿಂದ ರಚಿತವಾದ ಮುಖವಾಡ : ನಾನು ಗದ್ದೆಯಲ್ಲಿ ಹುಗ್ಗಿಸುವ ಬೆರ್ಚಪ್ಪನನ್ನು ಮಾಡಿ ನಿಲ್ಲಿಸಿದರೂ ಅದು ಬರುವುದನ್ನು ಬಿಡಲಿಲ್ಲ (ಶತಿವಾ. II, ೦೦೩೮). [ಬೆರ್ಚು₁ + ಅಪ್ಪ₁]

**ಬೆರ್ಚಿಸು,** ಬೆಚ್ಚಿಸು (ಕ್ರಿ). ಹೆದರುವಂತೆ ಮಾಡು; ಭಯಪಡಿಸು : "ಬೆರ್ಚಿಸು — ಭಯೇ" (ಶಮದ) ; ಘನಸ್ತನಿತಮುಂ ಕೇಕಿಸ್ವನಮುಂ ನೀರ ಧಾರೆಯುಂ ಮನಂ ಬೆರ್ಚಿಕರ್ಪಮಿಂತೆತ್ತಂ ಘನಸ್ತನಿ (ಕಬರಾ. ೨-೦೨೦); ತಪೋವನದ ಮುನಿಜನದ ಪರಮಾನುರಾಗಮುಂ ಬೆರ್ಚಿಸಿ ಕಾಮಾನುರಾಗಮುಂ ಬೆರ್ಚಿಸಿ ತದಾಶ್ರಮದೊಳಾಶ್ರಮಕ್ಕೆ ಗುರುವಾಗಿ ಪಾಂಡುರಾಜನಿರ್ಪನ್ನೆಗಂ (ಕಂಠಕಾ. ೦-೦೦೬ ವ); ಭೂಪಾಲನ ಮೇಲೆಕ್ಕಿ ನಡೆದಾತನಂ ಬೆರ್ಚಿಸಿ ಕುಮಾರಿಯರಂ ಪಿಡಿದು ತರ್ಪುದುಂ (ಸುಕುಮಾ. ೩-೦೦೮ ವ). ಬೆಚ್ಚಿಸು : ಕಚ್ಚುವುವೆ ನಿಮ್ಮ ಬಪ್ಪಿನ ಹಲ್ಲುಗಳು ಬೆಚ್ಚಿಸುವುವೆ ನಿಮ್ಮ ಬಚ್ಚಣೆಯ ರೂಹುಗಳು (ಬಸವ. ೩೬೨); ವಿಷದುರಿಯೂರಿ ಬೆಚ್ಚಿಸಿ ಬೆದಱಿಸಿದನತಿಬಲ ವನೇಚರರ (ಕೊರಗಾ. ೬-೩೩-೨೯).

[ಬೆರ್ಚು₁ + — ಇಸು₃]

**ಬೆರ್ಚು₁,** ಬೆಚ್ಚು₁, ಬೆಬ್ಬು (ಕ್ರಿ). ೧. ಹೆದರು ; ಭಯಪಡು : "ಬೆರ್ಚು — ಸಂತ್ರಾಸೇ (ಭಯಪಡು), ತೃಣಪುರುಷೇ ಚ (ದೃಷ್ಟಿಪರಿಹಾರಾರ್ಥವಾಗಿ ಮಾಡಿಡುವ ಬೊಂಬೆ)" (ಶಮದ); ಶಾಪಮನೀಗುವೆಂದೆ ದಿಕ್ಪಕ್ರಮುಮುಂಜಿ ಬೆರ್ಚಿ ಬೆಸಕೆಯ್ವುದು (ಶಬರಾ. ೧೯-೪೩); ಬಂದೆಱಗುವ ಜಿಲ್ಲಿದುಂಬಿಗೆ ಬೆರ್ಚಿ ನಿಂದು ಸೊಲ್ಲಿಪ ಪೂಮಾಲೆಗಾರ್ತಿ (ಮೋಹತ. ೩-೦೭). ಬೆಚ್ಚು₁ : ೧. ಪೆಸರ್ಗಂ ತೇಜಕ್ಕಮೊಂದೋಜೆಗ ಮಹಿತಮಹೀಪಾಳಕರ್ ಬೆಚ್ಚಿ ಬಾಯ್ಕೇಳಿಸಿ (ಆದಿಪು. ೦೯-೦೯೮); ನೊರಜಿನ ಕಳಕಳಕೆ ಕರಿ ಬೆಚ್ಚುವುದೆ (ಕುಮಾಸ. ೮-೪೭): ಬೊಮ್ಮನ ಸದನಕಥಿಮುಖನಾದನಗ್ಗದ ತ್ರಿದಶಪತಿ ಬೆಚ್ಚಿದವು ಪಟ್ಟಣವಾ ದಿಶಾಧಿಪರ (ಕೊರಗಾ. ೬-೩೩-೪೦). ೨. ಅದುರು ; ಕಂಪಿಸು : ಗಂಡುಹುಡುಗರಿಬ್ಬರೂ . . . ಕೋಲಿನಿಂದ ಹೊಡೆದಾಡಿದ್ದರು. ರಾಮುವಿನ ಮೂಗು ಬೆಚ್ಚಿ ರಕ್ತ ಸುರಿಯಿತು (ಶಿಂದಿ. ೩೭). Δಬೆಬ್ಬು : ೧. ಬೇಡರಬ್ಬರಸೆ ಕುಟುಂಬಬ್ಬೆಟಬ್ಬಿ . . . ಧರೆಗೆ ಸನ್ದಂ ಸಿಂಹಭೂಪಾಳಕರ (ಎಕ. VIII, ಸೊರಬ. ೦೮೪-೨೦; 1033).

ಬೆರ್ಚಿಬೀಳು, ಬೆಚ್ಚಿಬೀಳು, ಬೆಚ್ಚುಬೀಳು = ಹೆದರಿಕೆಯಿಂದ ನಡುಗು: ಸಾರ್ದು ಬಂದತ್ತಿದೆ ಭೀಕರಾಕೃತಿಯದಾಂತಿರದೊಂದು ಕೃತಾಂತ ಮೂರ್ತಿಯೆಂದುತ್ತಮರೆಲ್ಲರಳ್ಕಲುಸುರ್ದಂ ಚರನಂದುಱ ಬೆರ್ಚಿ ಬೀಳುತುಂ (ಉದ್ಭಟ. ೪-೬೦) ; ಬೆಚ್ಚಿ ಬಿದ್ದತ್ತಿದ್ದಕ್ಕಿದ್ದಂತೆ ಮಣಿಪುರಂ ಧರೆ ಬಿರಿಯಲಳ್ಳಿರಿಯೆ ಶೋಕಭೇರೀರವಂ (ಜಪ್ತಾಂಗ. ೬೮-೨೪೩೦) ; ಅವನ ಕೆಂಪೆಡೆ ಪೊಳೆಯುವ ಕಣ್ಣು, ಕಂದುಬಣ್ಣದ ಗಡ್ಡ ಮೀಸೆಗಳು ಇವನ್ನೆಲ್ಲ ಕಂಡು ಅವಳು ಬೆಚ್ಚಿ ಬಿದ್ದು ಅವನನ್ನು ನೋಡಲಾರದೆ ಕಣ್ಣು ಮುಚ್ಚಿಕೊಂಡಳು (ವತಶಾ. ೮); ಇದ್ದಕ್ಕಿದ್ದಂತೆಯೇ ಸೈಯದ್ ಬೆಚ್ಚು ಬಿದ್ದ (ಕತ್ತರಿ. ೨೦).

[ದೇ.॥ ತಮಿ. ವೆರುವು; ಮಲ. ವೆರುಳು; ಕೊತ. ಬೊರಡ್, ಬೊರಟ್, ಬೊಟ್; ತೆಲು. ವೆಱಿ, ವೆಱಚು; ಕೋತ. ವರ್ಟ್, ವೆರ್ಣ್]

**ಬೆರ್ಚು₂,** ಬೆಚ್ಚು₂ (ನಾ). ೧. ಹೆದರಿಕೆ ; ಭಯ : ನೋಡುವರೊಳ್ ಮಾನಂ ಬಯಸುವಂತಿರೆ ನಲ್ಮೆ ತುಳುಂಕೆ ಬಿಂಕದಿಂ ನೋಡುವುದೈದೆ ಮಾತನೊಸೆದಾಡುವರೊಳ್ ಬಗೆ ಬೆರ್ಚುದೋಱಿ ಮಾತಾಡುವುದು (ಜಗನ್ನಾ. ೦೬-೦೨೫). ೨. = ಬೆರ್ಚಪ್ಪ: "ಬೆರ್ಚು — ಸಂತ್ರಾಸೇ (ಭಯಪಡು), ತೃಣಪುರುಷೇ ಚ (ದೃಷ್ಟಿ ಪರಿಹಾರಾರ್ಥವಾಗಿ ಮಾಡಿಡುವ ಬೊಂಬೆ)" (ಶಮದ); ಲೋಗರ ಕಣ್ಣಿಂಜಲ್ ತಾಗದಂತು ಬೆರ್ಚನಿಟ್ಟು ಪಕ್ಕಿಗಳಂ ಬೆದರ್ಚಲೊಡರ್ಚಿದ ತೋಂಟಿಗನೊಂದಾಯತಿಯುಂ ಕಂಡನಕ್ಕುಂ ರಾಮುಂ (ರಾಮಾಶ್ವ. ೬೫ ೨೭). ೧, ೨ : ಪಕ್ಕಿಗಳ ನೆರವಿಯೊಳ್ ಬೆರ್ಚು ಶಕ್ಕಿಸುವ ಮಂತ್ರದೊಳೆ ಪೆರ್ಚು (ಬಂಕಂ. ೦-೧೯ ರಗಳೆ). ೩. ಗೊಂಬೆ; ಬೊಂಬೆ : ಮುಂಬಣ ಮಹಾರಾಜರೂ ತನ್ನ ಕಯ್ಯಾಟದ ಬೆರ್ಚು ಮಾತ್ರವಾಗಿರಬೇಕು (ಏನತ. ೩೩-೦೦). ಬೆಚ್ಚು₂ : ೨. ಬೆಚ್ಚಿನ [ಪಾಠಾಂ. ಬೆಚ್ಚನೆ]ಮಡಕೆಯಂತೆ ಬೆಪ್ಪಿಸಿಕೊಂಡಿದ್ದಡೇನಯ್ಯಾ (ಸವಚಪ. ೪. ೫೯೦-೦೬೫೦) ; ಈತ

ಮಧುರಕೆ ಪೊಗ್ಗಿಬಹ ಕೀರಗಳ ಬೆದರಿಸಲಗ್ಗಳದ ಬೆಚ್ಚಪುದು (ಶಸಕಾ. ೩೯-೬೯) : ಬಳ್ಳಿಗಳ ಹಸಿರುವೆಳೆಗಳ ನಡುವೆ ನಿಂತ ಕರಿಮುಸುಡಿಯ ಬೆಚ್ಚಂದು ಇವಳೆಡೆಗೇ ನೋಡುತ್ತಿತ್ತು (ಮೂರುದಾ. ೨೮೩).

[< ಬೆರ್ಚು$_1$./ತಮಿ. ವೆರುಟ್ಟು]

**ಬೆರ್ಚುಗಟ್ಟು** (ಕ್ರಿ). (ಹೊಲ, ಗದ್ದೆಗಳಲ್ಲಿ ಹಕ್ಕಿ ಮೊದಲಾದಂವನ್ನು ಬೆದರಿಸಿ ಓಡಿಸಲು) ಮನುಷ್ಯಾಕೃತಿಯ ಬೊಂಬೆಯನ್ನು ಕಟ್ಟು: ತಾಳತೆಗೆಯೆನಾರ್ಚಿ ನೆತ್ತಿಯ ಗಾಳಂ ಗಗನದೊಳಿಟಲ್ವ ವಾರಿಯ ಬೀರರ್ ಪಾಳಿಯೊಳಸೆದರ್ ಪಾಪದ ಜೋಳದ ಬೆಳಸಿಂಗೆ ಬೆರ್ಚುಗಟ್ಟಿದ ತೆಱದಿಂ (ಯಶೋಧ. ೦-೩೩). [ಬೆರ್ಚು$_2$ + ಕಟ್ಟು$_1$]

**ಬೆರ್ಚುಗಣ್** (ನಾ). ಭಯದಿಂದ ಕೂಡಿದ ದೃಷ್ಟಿ; ಹೆದರಿಕೆಯ ನೋಟ: ನಡನಡನೆ ನಡುಗುತಿರ್ದಾ ಬೆರ್ಚುಗಣ್ಣಬಲೆಯಿಂ ಹುಬ್ಬುಗಂಟಿಕ್ಕಿ ನೋಡಿದನ್ . . . ನಿಶಾಚರೇಂದ್ರಂ (ಶ್ರೀರಾಮಪ. ೨೧೬-೪೯೯).

[ ಬೆರ್ಚು$_2$ + ಕಣ್ ]

**ಬೆರ್ದಲೆ** 'ಬೆದ್ದಲ್' ನೋ.

**ಬೆಲಂಕು**, ಬೆಲಂಗು (ಕ್ರಿ). ೧. ಎಸೆ; ಬಿಸುಡು; ಒಗೆ: "ಚಿ(ಬೆ)ಲಂಕಿದಂ= ಈಡಾಡಿದಂ" (ಕಪಿಮ. ಶಂ. ೨). ೨. (ನದಿ ಮುಂತಾದುವು) ಉಕ್ಕಿ ಹೆಕ್ಕಳಿಯುಂಟಾಗು: ಅಂಗಜರಾಗಸಾಗರಂ ಬತ್ತಿ ಬೆಲಂಕಿ [ಪಾಠಾಂ. ೧] ಪೋಪುದು ಕಣ್ಗೆ ತಮಂ ಕವಿದಪ್ಪುದು . . . ಏಕೆ ಕಾಡಿದಪೆಯೋಪಳಿ ತೋಱು ಮುಖೇಂದುಬಿಂಬಮಂ (ಲೀಲಾವ. ೦೯-೬೬). **ಬೆಲಂಗು:** ೧. ವನೆಯುಂಬಂ . . . ಬಾಟಿಸ್ತೊಂಪದೊಳ್ಸಿಕ್ಕಿ ಕೇತನಮಂ ಮಿಾಂಗೊಳದೊಳ್ ಬೆಲಂಗಿ ಮುನಿಪಾದೋಪಾಂತದೊಳ್ ಸಾಧುವೇಷನಿಷಣ್ಣಂ ರತಿಯಂ ಮರಳ್ಚಿ ಕಳೆದಂ (ಅನಂತ. ೩-೩೦). 'ಬೆಲಂಕು' ಪರಾ. [ ? ]

**ಬೆಲಂಗಯಿಸು** (ಕ್ರಿ). = ಬೆಲಂಕು ೧: ಆ ಮಹಾಮದೇಭಂ . . . ಸಪ್ತಮದಾವಸ್ಥೆಯಿಂದಾದ ಮನದ ಮಂಸಕದಿನಸವಸದೆ . . . ಮಂಕಡದಂಡದಿಂ ಕಟ್ಟಿದ ಲೋಹಚರ್ಮಜಮಪ್ಪ ಮುಟ್ಟುಗಳನಿತುಮಂ ತಕ್ಕೈಸಿ ಬೆಲಂಗಯಿಸಿ ಬಿಸತಂತುವಂ ಪಱಿವಂತೆ ಪಱಿದು (ಶಂಕ್ರಪು. ೬-೧೦೦ ವ).

[ಬೆಲಂಗು (<ಬೆಲಂಕು) + –ಇಸು]

**ಬೆಲಂಗು** 'ಬೆಲಂಕು' ನೋ.

**ಬೆಲಗ** (ನಾ). ಒಂದು ಬಗೆಯ ಸಸ್ಯ: ಹಸುರುಗನ್ನಿ, ಬೆಲಗ, ಬಿಳೀ ಬೀಟೆ, ಬೆಟ್ಟದ ಹಸುರುಗೋಣೆ (ವೃಕ್ಷಶಾ. ೨೮-೩೪೬). [ ? ]

**ಬೆಲಗಸೆ**, ಬೆಗಸಿಲ್, ಬೆಗಸಿಲೆ (ನಾ). ಬೊಗಸೆ; ಸೆರೆ; ಅಂಜಲಿ: ಬೆಲಗಸೆಯಿನಳರ್ಕೆಯೆ ಮೊಗೆಮೊಗೆದು ನೆತ್ತರಂ ಪವನಸುತಂ ನೆತ್ತಿಯೊಳೆಱೆದೆಱೆದು . . . ಜಡೆಗೊಂಡಿರ್ದುದ್ವೃತ್ತಕುಚಯುಗೆಯ ಕೇಶಮನೆತ್ತಂ ಪಸರಿಸಿದಂ (ಕಂಪಶಾ. ೦೨-೦೩೩); ಒಡವುಟ್ಟಿದರಂ ಕೊಂದಪರಡಗಂ ತಿಂದವರ ನೆತ್ತರಂ ಬೆಲಗಸೆಯೊಳ್ ಕುಡಿವೀ ನಿಸ್ತ್ರಿಂಶತೆಯಂ ಹಿಡಿಂಬಿಯಂ ಪೊರ್ದಿ ಕಲ್ತನಾಗನೆ ಭೀಮಂ (ಗದಾಯು. ೩-೨೬); ಬೆಲಗಸೆಯಿಂದವಿಾವ ಘನಸಾರದ ಬಾಯಿನಮೆತ್ತಿ ಪೊನ್ನ ಬಟ್ಟಲೊಳೆಱೆದೀವ ಕುಂಕುಮರಸಂ (ಶಂಭ್ರಪು. ೮-೪೬). **ಬೆಗಸಿಲ್, ಬೆಗಸಿಲೆ:** ಈ ಕವಿಲೆಯ ಕೊಂದು ನೆತ್ತರಂ ಬೆಗಸಿಲೆಯಿಂದಾಕಂಠೋಪ್ಪಂ ಕುಡಿದವನೀ ಕಯ್ಗುರುವಣಮನಳಿವ ಮಾಡಿದ ಮನುಜಂ (ಕರ್ನಾಶಾ. ೧೭-೩೩ ; 1196).

**ಬೆಗಸಿಲ ದಾನಿ** = ಕೈತುಂಬ ದಾನ ಮಾಡುವವನು; ಒಂದು ಬಿರುದು: ಅವರೊಳಗೆ ನೆಗಳ್ದರಸಾಸವಾರಿಮದನೋಗ್ರಮಹೇಶ್ವರನಾವ ಬಿಂಕಣಂ ಬೆಗಸಿಲ ದಾನಿಯಾವ ಕಡುಪಾಗಿತನಂ ಜಗದೊರ್ವ ಗಂಡನಾದಗಣಿತವಿಕ್ರಮೋರ್ಜಿತಗುಣಂ . . . ಮಂಡಲಿಕ ಮಲ್ಲಿದೇವಂ (ಶಾ I, ೨೩-೩೩ ; 1186 ?).

**ಬೆಲಗು** (ನಾ). ಛಾವಣಿಗೆ ಹಾಕುವ ಅಡ್ಡತೊಲೆ: ಮಲೆನಾಡಿನಲ್ಲಿ ಮನೆಯ ಮೇಲೆ ಹಂಚಿನ ತಾಟು ಮಾಡುವರು. ಅದಕ್ಕೆ ಬೆಲಗುಗಳೂ ಎಳೆಗಳೂ ಗಳಗಳೂ . . . ಬೇಕಾಗುತ್ತವೆ (ಮುಂಬಯು. ೪-೦೦೭). 'ತಲೆಬೆಲಗು' ಪರಾ. [← ತೆಲು. ಬೆಣುಗುಲು]

**ಬೆಲವಕ** (ನಾ). ಒಂದು ಬಗೆಯ ಸಸ್ಯ: ಬೆಳವಸಕಾಸ, ಉಡಿವಲ್ಲಿ, ಬೆಲವಕ (ಸಸ್ಯ೩. ೯೯). [ ? ]

**ಬೆಲೂನು** 'ಬಲೂನು' ನೋ.

**ಬೆಲೆ$_1$**, ವೆಲೆ (ನಾ). ೧. (ವಸ್ತುವಿನ) ಕ್ರಯ; ಧಾರಣೆ; ದರ; ಮೌಲ್ಯ: "ಪ್ರಕ್ರಯಃ, ಕ್ಲಿಪ್ತಕಃ—ಈ ೨ ಬೆಲೆ" (ಶಬ್ದಾಮ. ೯೯-೪೦೯); ಆವಱ ಬೆಲೆಯುಂ ಬೆಸಗೊಂಡೊಡೆ ಲಕ್ಷದೀನಾರಂಗಳ್ ಬೆಲೆಯೆಂದು ಪೇೞ್ದೊಡೆ (ವಡ್ಡಾರಾ. ೨೩-೨೪); ನಾಕದ ಘನಲೋಕದಂದದ ಪೊಱಲ್ಗಳನೀ ಪೊಱಲೊಂದು ರಮ್ಯಹರ್ಮ್ಯದ ಬೆಲೆಗಂ ಬರಲ್ ನೆಱೆಯವೆಂಬಿನಂ . . . ಸಮೆದಂ ಪುರಮಂ ಪುರಂದರಂ (ಆದಿಪು. ೬-೯೯); ಬೆಲೆಯಿಂನಕ್ಕುಮೆ ಕೃತಿ ಗಾವಿಲ ಭುವನದ ಭಾಗ್ಯದಿಂದಮಕ್ಕುಂ (ಅರ್ಜನೀ. ೦-೪೩); ಕಾಡ ಕಪಿ ಬಲ್ಲುದೆ ಮಾಣಿಕದ ಬೆಲೆಯ (ಕುರಂದ. ೨-೪೪ ಪಲ್ಲವಿ). ೨. ಸಂಬಳ; ವೇತನ: "ಭೃತಿಃ, ಭೃತ್ಯಾ, ಕರ್ಮಣ್ಯಾ, ವೇತಾ, ಮೂಲ್ಯಂ, ವೇತನಂ—ಈ ೬ ಬೆಲೆ" (ಶಬ್ದಾಮ. ೦೨೦-೪೩); ತೊಟ್ಟಿಸಂತೆ ಪೆಱರ ವಶಮಾಗದೆ ಕೂಲಿಯ ಬಂಟನಂತೆ ಬೆಲೆಯುಂ ಪಾರದೆ (ಧರ್ಮಾಮೃ. ೫-೯೯). ೩. ಮಹತ್ತ್ವ; ಹಿರಿಮೆ: ಪೊಗೞ್ವೆನ್ನಧರದ ಸುಧೆ ತಾನಿದೆ ಬೆಲೆಯಿಲ್ಲರ್ಗೆನುತ್ತೆ ನವಮಧುಗಂಧೂಷದಿನಲರೇಱಿಸಿ ಕೊಯ್ದಲ್ ಸುದತಿಮಣಿಯೊರ್ವಳೆಸೆವ ಬಕುಳದ ಪೂವಂ (ಉದ್ಭಟ. ೯-೩೩); ಸತ್ಯದೇವತೆ ಬಹು ಬೆಲೆಯುವಳವಳನು . . . ರಕ್ಷಿಸಬೇಕು (ಇಂಚಾಪ. ೯೩-೦೩); ಈ ಕಾಗದದ ಬೆಲೆ ನನಗೆಷ್ಟರ ಬಹುದೆಂಬುದನ್ನು ನೀನೇ ಊಹಿಸಿಕೊ (ಅಪಕಂ. ೦). **ವೆಲೆ:** ೧. 'ವೆಲೆಕೊಳ್' ಪರಾ.

**ಬೆಲೆತೆರು** = ದಂಡ ಕೊಡು; ನಷ್ಟವನ್ನು ತುಂಬಿಸು: ಆಕೆಯ ಅವಿವೇಕಕ್ಕೆ ಆಕೆಯೇ ಬೆಲೆ ತೆರಬೇಕು (ಗಂಪಮಾಯ. ೨೯೨).

**ಬೆಲೆ ಬಾಳು**=೧. ಕ್ರಯಕ್ಕೆ ಯೋಗ್ಯವಾಗು; ಧಾರಣೆಗೆ ಅರ್ಹವಾಗು: ಕಳಿಸಿದರೆ ಕಳಿಸು ಬೆಲೆ ಬಾಳುವಂತಹ ಸರಕು ಎಲ್ಲ ಬಂದರುಗಳಿಗೂ ಹಾದು ಬರಲಿ (ಕಂಪಮು. ೦೯-೭); ಉದ್ದವಾದ ನಾರುಗಳಿಂದ . . . ಹೆಚ್ಚು ಬೆಲೆ ಬಾಳುವ ಬಟ್ಟೆಗಳನ್ನು ತಯಾರಿಸುವರು (ಗೃಹಪ. ೬೯). ೨. ಮಾನ್ಯತೆಯನ್ನು ಪಡೆ: ಸಾಧಾರಣಜನತೆಗೆ ರುಚಿಸಲೂ ಬೇಕು, ನಿಜವಾಗಿ ಬೆಲೆಬಾಳುವಂಥದೂ ಆಗಬೇಕು (ಸಂಗೀತ. ಅಮುಖ).

**ಬೆಲೆಬೀಳು**=೧. ಕ್ರಯವು ಕಡಮೆಯಾಗು,—ತಗ್ಗು: ಬೆಲೆಬಿದ್ದ ಸರಕಿನಲ್ಲಿ ಲಾಭವುಂಟೇ ? (ಗಾದೆ). ೨. ಕ್ರಯವನ್ನು ಪಡೆ; ಧಾರಣೆ ಹಿಡಿ: ನೀನು ಮಾಡಿಸಿಕೊಂಡಿರುವ ಈ ಸರಕ್ಕೆ ಎಷ್ಟು ಬೆಲೆಬಿತ್ತು ? (ರೂಢಿ). **ಬೆಲೆ ಮಾಡು**=ಬೆಲೆ ಕಟ್ಟು; ಧಾರಣೆಯನ್ನು ನಿರ್ಧರಿಸು: ದೊರೆಯುಱಿವ ವಸ್ತುಪುರುಷರ್ಪರಿಕಿಸಿ ಬೆಲೆಮಾಡೆ . . . ಅನರ್ಘ ರತ್ನಮಾದಂ ರತ್ನಂ (ಗದಾಯು. ೦-೪೦); ಮಧ್ಯಮನ ತಾವು ಬೆಲೆಮಾಡಿದರು (ಸಂಪಶ. ಶಂ. ೦-೨೩).

[ದೇ.॥ ತಮಿ. ವಿಲೈ; ಮಲ. ವಿಲ; ತುಳು. ಬೆಲೆ, ಬಿಲೆ; ಕೊಡ. ಬೆಲೆ; ತೆಲು. ವೆಲ, ವಿಲುವ; ಕೋತ. ವೆಲ್; ತೊದ. ಪೀಲ್]

**ಬೆಲೆ$_2$** (ನಾ). ಕರ್ನಾಟಕದ ಕೆಲವು ಊರುಗಳ ಹೆಸರಿನ ಕೊನೆಯಲ್ಲಿ ಸೇರುವ ಶಬ್ದ. ಉದಾ: 'ದೊಡ್ಡಬೆಲೆ', 'ಮಂಚನಬೆಲೆ', 'ಸೂಲಬೆಲೆ' ಇತ್ಯಾದಿ. [ <ಬೇಲಿ ? ]

**ಬೆಲೆಕಟ್ಟು** 'ಬೆಲೆಗಟ್ಟು' ನೋ.

**ಬೆಲೆಕೊಡು** 'ಬೆಲೆಗೊಡು' ನೋ.

**ಬೆಲೆಗಟ್ಟು**, ಬೆಲೆಕಟ್ಟು (ಕ್ರಿ). ೧. ಧಾರಣೆಯನ್ನು ನಿರ್ಧರಿಸು; ದರ

ವನ್ನು ಹೇಳು : ಆಣಿಮುತ್ತಿಗೆ ವೆಗ್ಗಳ ಬೆಲೆಗಟ್ಟುವ ವಾಣಿಜರಿರ್ದರಿಕ್ಕಲದಿ (ಚೋಚರಿ. ೩-೨೬). ೨. ಮಹತ್ತ್ವವನ್ನು ನಿರ್ಧರಿಸು; ಅರ್ಹತೆಯನ್ನು ತಿಳಿಯಪಡಿಸು : ಒಲಿದವರೊಲಿದರೆ ಅವನ ಸೌಭಾಗ್ಯಕೆ ಅರುಂಟು ಬೆಲೆಗಟ್ಟುವವರು (ಇಂಚಾಶ. ೩೦-೩೭). **ಬೆಲೆಕಟ್ಟು :** ೧. ಕೆಲವರು ಒಂದು ತುಂಡುಬಟ್ಟೆಯನ್ನು ಮುಟ್ಟಿದ ತಕ್ಷಣವೇ ಅದರ ಸ್ಪರ್ಶದಿಂದ ಅದರ ಯೋಗ್ಯತೆ ಇಷ್ಟೇ ಎಂದು ಬೆಲೆಕಟ್ಟುವರು (ಗೃಹಶಿ. ೭೯). ೨. ಈ ಚೆಲುವಿಗೆ ಬೆಲೆಕಟ್ಟುವುದು ಸಾಧ್ಯವೇ ? (ಯೋಗಪು. ೨೬).
[ ಬೆಲೆ$_1$ + ಕಟ್ಟು$_1$ ]

**ಬೆಲೆಗಾಣು** (ಕ್ರಿ). ಕ್ರಯ ಬರು : ಧಾರಣೆಯು ಸಿಗು : ಚಂದನದ ಕೊರಡು ಇದ್ದ ಹಾಗೆ ಹೆಚ್ಚು ಬೆಲೆಗಾಣುತ್ತದೆ (ಮುಂಬಯಿ. ೬. ೩-೭೯).
[ ಬೆಲೆ$_1$ + ಕಾಣು (< ಕಾಣ್ ) ]

**ಬೆಲೆಗುಡಿಸು** (ಕ್ರಿ). ಕ್ರಯವು ಸಿಗುವಂತೆ ಮಾಡು ; ಧಾರಣೆಯನ್ನು ಕೊಡಿಸು : ವ್ಯಾಧನೊಂದು ಪಕ್ಕಿಯಂ ಪಿಡಿತರೆ ಕರುಣಿಸಿ ಬೇಡಂಗೆ ಬೆಲೆಗುಡಿಸಿ ಬಿಡಿಸಿದೊಡೆ (ಶಂರಾಮಾ. ೬-೩೯ ವ).
[ ಬೆಲೆ$_1$ + ಕುಡಿಸು$_2$ (< ಕೊಡಿಸು) ]

**ಬೆಲೆಗುಡು** 'ಬೆಲೆಗೊಡು' ನೋ.

**ಬೆಲೆಗೆಯ್**, ಬೆಲೆಗೈ (ಕ್ರಿ). ೧. ಧಾರಣೆ ಸಿಗು ; ವಿಕ್ರಯವಾಗು : ಕರ್ಗಲ್ಲೆನಿತು ಬಲ್ಪಾದೊಡಂ ಬೆಲೆಗೆಯ್ಗುಮೇ ರತ್ನಮಾದೊಡೆ ಬೆಲೆಗೆಯ್ಗುಂ (ಧರ್ಮಾಮೃ. ೭-೯೩) . **ಬೆಲೆಗೈ :** ೨. ಮಾರು ; ಕ್ರಯಕ್ಕೆ ಕೊಡು : ತಮ್ಮಂತೆ ಬಾಳಲೆಳಸುವ ಬಾಲಕಿಯ ಬೀಳುಗುವರನಿಗೆ ಬೆಲೆಗೈದರೆಂಬುವ ಕೇಳಿ ಕಿವಿಯ ಮುಚ್ಚುವುದು (ಹರಿಬ. ೩-೦೯).
[ ಬೆಲೆ$_1$ + ಕೆಯ್$_1$ ]

**ಬೆಲೆಗೇಡು** (ನಾ). ಮೌಲ್ಯವಿಲ್ಲದುದು : ಹಿಂದಿನವರ ಅಭಿಪ್ರಾಯವು ಇಂದು ಬೆಲೆಗೇಡಾಗಿದೆ (ಕರ್ನಾಟಿ. X, ಪುಷ್ಪ೩). [ ಬೆಲೆ$_1$ + ಕೇಡು ]

**ಬೆಲೆಗೈ** 'ಬೆಲೆಗೆಯ್' ನೋ.

**ಬೆಲೆಗೊಡು**, ಬೆಲೆಕೊಡು, ಬೆಲೆಗುಡು (ಕ್ರಿ). ೧. ಕ್ರಯವನ್ನು ಕೊಡು ; ಧಾರಣೆಯನ್ನು ತೆರು : ನೋಟ್ಪಂ ಬೆಲೆಗೊಟ್ಟು ತಾರ ಮಧುವಂ ಮಲಯಾನಿಲನಂ ಮನೋಜನಂ ಕೌಮುದಿಯಂ (ಅರ್ಜುನ. ೦-೯೩) ; ಕರದ್ವಯದ ಕಾಂತಿಯ ಮಾಲೆಗಳಂ ಪೊಸಪೂವಿನ ಮಾಲೆಗೆತ್ತು ಬೆಲೆಗೊಟ್ಟು ಕೊಂಡು ನಗಿಸಿದನೊರ್ವಂ (ಗಂಗ. ೨-೮೭). **ಬೆಲೆಕೊಡು :** ೨. ಮಹತ್ತ್ವವನ್ನು ಕೊಡು ; ಪ್ರಾಮುಖ್ಯತೆಯನ್ನು ನೀಡು : ಎಲ್ಲಕ್ಕಿಂತ ಮಿಗಿಲಾಗಿ ಮಾಸ್ಲೋವ ಈ ಜೀವನದೃಷ್ಟಿಗೆ ಬಹಳ ಬೆಲೆಕೊಟ್ಟಿದ್ದಳು (ಪ್ರಸರು. ೦೯೬). **ಬೆಲೆಗುಡು :** ೧. ಕಜ್ಜಿಯದೆ ಪಾಲಂ ಬಯಸುವ ಬೆಲೆಗುಡದೆ ಬಂಡಮಂಬಿಸುವ (ಧರ್ಮಾಮೃ. ೦೨-೨೯) ; ಮನುಜೇಶ್ವರನೊರ್ವಂ ಮನೆಯಂ ಪೊಕ್ಕಸುರಾಗದಿ ನಡೆನೋಡುತ್ತೆನ್ನಯ ಮನಮಂ ತನ್ನ ವಿಲಾಸದ ಬೆಲೆಗುಡು[ಪಾಠಾಂ. ಗೊಳು]ತಮೆ ಮಾಜುಂಗೊಂಡಂ (ಜಗನ್ನಾ. ೯-೨೩).
[ ಬೆಲೆ$_1$ + ಕೊಡು$_1$ ]

**ಬೆಲೆಗೊಳ್**, ಬೆಲೆಗೊಳ್ಳು, ವೆಲೆಕೊಳ್ (ಕ್ರಿ). ೧. (ವಸ್ತುವನ್ನು ಮಾರಿ) ಹಣವನ್ನು ಪಡೆ : ತನ್ನ ಸುಲಿಪಲ್ಲ ಸಾಲ್ಗಳ ತೋರ್ಪ ಮಲ್ಲೆಯ ಸರವಿದೆ ಕೊಳ್ಳೆಂದು ಬೆಲೆಗೊಂಡು ನಿಲ್ಲದವನ ನಾಚಿಸಿದಳು (ಕಂಸವಿ. ೬-೬೯). ೨. ಕೊಂಡುಕೊಳ್ಳು ; ಕ್ರಯಮಾಡು : ಬೆಲೆಗೊಂಡ ತೊತ್ತಲ್ಲ ಬೆಳೆದ ಮನೆಯವನಾಗಿ (ಮೂರುಸಾ. ೦೩೩). ೩. ಬೆಲೆಬಾಳು ; ಅಮೂಲ್ಯವಾಗು : ಉಸಿರು ಪರಿಮಳವಾಗೆ ಬೆಲೆಗೊಂಬ ಹೂವೇಕೆ ರಸವೆ ಸಾಧನವಾಗೆ ಧನವೇಕೆ (ಸಿದ್ಧರಾ. ೩-೦೨). **ಬೆಲೆಗೊಳ್ಳು :** ೨. ರೋಷದಿಂದ ಅವನು ಜಯಮಲ್ಲನ ತಲೆಯನ್ನು ಬೆಲೆಗೊಳ್ಳದೆ ಬಿಡನೆಂದು ಪಂತ ಮಾಡಿ ಅದರಂತೆಯೇ ಅವನನ್ನು ಕೊಂದನು (ಆಮೂಗ್ಗಿ. ೨೯). **ವೆಲೆಕೊಳ್ :** ೨. ಮಟ್ಟುವರುಂ ದೇವೇನ್ದ್ರರು ವೆಲೆಕೊಣ್ಡು ವಾಣಿಗತ್ರೋಟ್ಟಂ ತೆನ್ಕಣ್ಡಮುಂ ವಡಕಣ್ಡಮುಂ ವಿನಿತೀಶ್ವರಕ್ಕಂ ಪೊಯ್ದಾರ್ (ಎಕ. IV (R). ತಾಮರಾ. ೦೯೭-೬ ; ಸು. 750). [ಬೆಲೆ$_1$ + ಕೊಳ್$_1$ ]

**ಬೆಲೆಗೊಳ್ಳು** 'ಬೆಲೆಗೊಳ್' ನೋ.

**ಬೆಲೆಪಟ್ಟಿ** (ನಾ). "ಸಲ್ಲಿಸಿದ ಸಾಮಾನುಗಳ, ಅಥವಾ ಮಾಡಿರುವ ಕೆಲಸದ, ಬೆಲೆ ತೋರಿಸುವ ಪಟ್ಟಿ : ಬೆಲೆಪಟ್ಟಿ" (Bill. ೩೦೪೩).
[ ಬೆಲೆ$_1$ + ಪಟ್ಟಿ$_2$ ]

**ಬೆಲೆಯಮ್ಮ** (ನಾ). ಒಬ್ಬಾತನ ಹೆಸರು : ಈ ಕಲ್ಲ ಸಂದಿಗರ ಕುಳಿ ××× ಮುದ್ದನ್ನಿಜಾಸಿದೋಂ ××× ಬೆಲೆಯಮ್ಮನ ಮಗಂ (ಎಕ. VII, ಶಿಕಾ. ೨೦೯-೩೩ ; 918). [ ಬೆಲೆ$_1$ + ಅಮ್ಮ$_1$ ]

**ಬೆಲೆಯಿಡಿಸು** (ಕ್ರಿ). ಬೆಲೆ ಕಟ್ಟಿಸು ; ಧಾರಣೆ ಮಾಡಿಸು : ಯಶೋಭದ್ರಾಂಬಿಕೆಯುಂ ಕಂಡು ರತ್ನಕಂಬಲಮಂ ನಿಮಿರ್ಚಿ ತೋರ್ಪುದುಮ ಪೂರ್ವವಸ್ತುವಪ್ಪುದನಱಿದು ವಸ್ತುಪುರುಷರಿಂ ಬೆಲೆಯಿಡಿಸಿ . . . ಕೊಂಡಳ್ (ಸುಕುಮಾ. ೦೦-೦೦೭ ವ). [ ಬೆಲೆ$_1$ + ಇಡಿಸು$_1$ ]

**ಬೆಲೆಯಿಡು** (ಕ್ರಿ). ೧. = ಬೆಲೆಗಟ್ಟು ೧ : ಬೆಲೆಯಿಡಲಱಿವೊಡೆ ಮಂಡಲಿ ಬೆಲೆಯಿಡುಗೆಮ (ಆದಿಪು. ೦೩-೩೦); ಬೆಲೆಯಿಡಲೀ ಹಯಕ್ಕೆ ಭುವನತ್ರಯಮುಂ ಬೆಲೆಯಲ್ತು (ಸುಕುಮಾ. ೬-೭೦). ೨. =ಬೆಲೆಗಟ್ಟು ೨: ಬಾಣಾಖ್ಯನಾತ್ಮಜೆ ಕನ್ಯಾರತ್ನಕ್ಕೆ ಬೆಲೆಯಿಡುವರಂಗಾಣೆ (ಪಂಪಭಾ. ೨೯-೪೦).
[ ಬೆಲೆ$_1$ + ಇಡು$_1$ ]

**ಬೆಲೆವಡಿಸು** (ಕ್ರಿ). ಮೌಲ್ಯ ಬರುವಂತೆ ಮಾಡು : ತವೆ ಸ್ವಾತಿಬಿಂದುವಿಂದೊಗೆದ ಮುತ್ತಿಂಗೆ ಶಿಗಮೊಗವಾವುದೆಂದೆಣಿಪರೆ ಅವ ಪರೀಕ್ಷಿಸಿ ರಂಧ್ರಗೈದು ಸರಗೊಳಿಸುತ್ತಲವನು ಬೆಲೆವಡಿಸರೆ (ಪಂಪಭಾ. ೦-೦೬).
[ ಬೆಲೆ$_1$ + ಪಡಿಸು ]

**ಬೆಲೆವಡೆ** (ಕ್ರಿ). ಮಾನ್ಯತೆಯನ್ನು ಪಡೆ ; ಬೆಲೆ ಬಾಳು : ಜಲಬಿಂದು ಶುಕ್ತಿಕೆಯೊಳು ಬೀಳೆ ಮುತ್ತಾಗಿ ಬೆಲೆವಡೆವಂತೆನ್ನ ಬಡನುಡಿ ಬೆಲೆವಡೆಯದೆ ಮಾಣ್ಬುದೆ ನಿಮ್ಮ ಕಿವಿ ಸೋಂಕಲು (ತ್ರಿಪು. ೦.೦೯) ; ಪಲಬಗೆಮಾತುಗಳಿಂದ ಬೆಲೆವಡೆದಿರ್ಪೆನೆಂದೆಣಿಸುವಳಲ್ಲ ನಿನ್ನೊಲವೊಂದನೆ ನಂಬಿಹೆನು (ಹರಿಶ. ೦-೩೩). [ ಬೆಲೆ$_1$ + ಪಡೆ$_1$ ]

**ಬೆಲೆವಣಿ** (ನಾ). ಅಮೂಲ್ಯವಾದ ರತ್ನ ; ಬಹುಬೆಲೆಯ ರತ್ನ : 'ಬೆಲೆವಣಿಗಟ್ಟು' ಪರಾ. [ ಬೆಲೆ$_1$ + ಮಣಿ$_3$ ]

**ಬೆಲೆವಣಿಗಟ್ಟು** (ನಾ). ಅಮೂಲ್ಯವಾದ ರತ್ನದಿಂದ ಮಾಡಿದುದು ; ಅನರ್ಘ್ಯರತ್ನಖಚಿತವಾದುದು : ಬಾಲಕನ ಕಣ್ಗೊಂದು ಬೆಲೆವಣಿಗಟ್ಟಿನ ದೇವಾರಂ ತೋಱೆವರ್ಪುದುಂ . . . ಒಳಪೊಕ್ಕಂ (ರಾಜಶೇ. ೭೬-೨೬). [ ಬೆಲೆವಣಿ + ಕಟ್ಟು$_2$ ]

**ಬೆಲೆವೆಂಡತಿ** (ನಾ). ಹಣಕ್ಕೆ ಸಿಗುವ ಹೆಣ್ಣು ; ಸೂಳೆ ; ಗಣಿಕೆ : ನೆಲಕೆಲ್ಲಮಿಟ್ಟ ಪಡಿಗಂ ನೆಲಕಲ್ಲಂ ಸಮೆದ ಪಚ್ಚವಡಮನೆ ಮಾತ್ರಂ ನೆಲನನಿತ ನಿತಱ ಮಯಿಲಗೆ ಬೆಲ[ಲೆ]ವೆಂಡತಿ ಬಗೆವೊಡಿಂತು ಕಿಸುಗುಳಮುಂಟೇ (ಶಬ್ದಾರ. ೨೯೯). [ ಬೆಲೆ$_1$ + ಪೆಂಡತಿ ( < ಪೆಂಡಿತಿ) ]

**ಬೆಲೆವೆಣ್**, ಬೆಲೆವೆಣ್ಣು(ನಾ). =ಬೆಲೆವೆಂಡತಿ : "ದಾರಿಕೆ ಲಂಜಿಕೆ ಪಣವಧು ವಾರಾಂಗನೆ ಗಣಿಕೆ ವೇಶ್ಯೆಯೆನೆ ಬೆಲೆವೆಣ್" (ಶಬ್ದಕೋ. ೩೩-೭); ಕಡುಪಿಲ್ಲದ ಕುದುರೆ ಗಾಡಿಯಿಲ್ಲದ ಬೆಲೆವೆಣ್ . . . ಮನಕ್ಕೆಡಂಬಡಂ ಮಾಟ್ಕುಮರ್ತಿಯಂ ಮಾಡುಗುಮೇ (ಆದಿಪು. ೭-೯೬) ; ತಳಿರುಯ್ಯಲಾಡುತಂ ಪಾಡುತಂ ನೋಡುತಂ ಬೆಲೆವೆಣ್ಗಳೆಸೆದಿರ್ದರು (ಶಾಂತಿಪು. ೦೦-೪೦). **ಬೆಲೆವೆಣ್ಣು :** ಶನು ಮುಟ್ಟಿ ಮನ ಮುಟ್ಟದೆ ದೂರವಾದರಯ್ಯಾ ಬೆಲೆವೆಣ್ಣನಂತೆ (ಶವ್ಯವ. ೪. ೩೯೭-೮೩೬) ; ಅರ್ಶಿಯಿಂ ಬೆಲೆವೆಣ್ಣು ಬಿಡುವೆಣ್ಣು ಮನೆವೆಣ್ಣು . . . ನಡಯಿಸಿದನು (ಶಮ್ಯಶ. ೦-೩೨) ; ಬೆಲೆವೆಣ್ಣು ಸೂಳೆಹೋದ

ಕೆಂದು ಅತ್ರವನು ಇವನೊಬ್ಬನೆ ಮಹಾನುಭಾವ! (ತುಂಗಶ. ೩೬).
[ಬೆಲ್$_1$ + ವೆಣ್]

**ಬೆಲೆವೆಣ್ಣು** 'ಬೆಲೆವೆಣ್' ನೋ.

**ಬೆಲ್ಲ** (ನಾ). ೧. ಕಬ್ಬಿನ ರಸವನ್ನು ಕಾಯಿಸಿ ತಯಾರಿಸಿದ (ಬೇರೆ ಬೇರೆ ಆಕಾರದ) ಸಿಹಿಯಾದ ಘನಪದಾರ್ಥ; ಗುಡ: ಅರಗು ಮೊದಲಾಗೆ ಘೃತ ಸಜ್ಜರಸಂ ಬೆಲ್ಲಂ ಸಣಂಬಿವೆಂಬಿವಱಿಂ ವಿಸ್ತರಿಸಿ ಸಮೆದ . . . ಅರಗಿನ ಮನೆಯಂ . . . ಪುಗಿಸೆ (ಕಂಶಭಾ. ೩-೩) ; ಹಾಲ ತೊಱೆಗೆ ಬೆಲ್ಲದ ಕೆಸಱು ಸಕ್ಕರೆಯ ಮಳಲು ತವರಾಜದ ನೊರೆತೆರೆಯಂತೆ ಆದ್ಯರ ವಚನ (ಬಸವ. ೨೯೦) : ಹಿಪ್ಪಲಿ, ಬೆಲ್ಲ, ಅಳಿಲೆಕಾಯಿ ಇವನ್ನು ಬಿಸಿನೀರಿನಿಂದ ಅರೆದು ಕುಡಿದರೆ ವಾತಜ್ವರ ಪರಿಹಾರವಾಗುವುದು (ಸಕವೈ. ೬೩). ೨. ಮುತ್ತು; ಚುಂಬನ: ಜಾನಕಿಬಾಯಿಯು . . . ಅವನನ್ನು ಹಿಡಿದೆತ್ತಿಕೊಂಡು ಅವನ ಗಲ್ಲಕ್ಕೂ ಬೆಲ್ಲವನ್ನು ಕೊಟ್ಟರು (ಸಮುಶೀ. ೬೨೯). ೩. (ಅಲಂ) ಸೋಗು; ನಟನೆ; ಕಪಟ: 'ಬೆಲ್ಲಮಾತು,' 'ಬೆಲ್ಲಿಸು' ಪರಾ. ೪. ಹಿತ; ವಿಶ್ವಾಸ: ಬೆಲ್ಲವಾಗಿರಬೇಕು ಬಂಧು ಜನರೊಳಗೆ (ಪುರಂದ. ೦-೬೨-೦).

**ಬೆಲ್ಲತೂಗು** = ತೂಕಡಿಸು; ಜೂಗರಿಸು: ಲಲಿತೆಯಾಗಲೇ ಬೆಲ್ಲ ತೂಗುತ್ತಿದ್ದಳು (ಶಳಮ. ೨೦೯) : ಅರೆನಿದ್ದೆಯಿಂದ ಬೆಲ್ಲತೂಗುತ್ತಿದ್ದ ನಂಟನು ನಕ್ಕನು (ಮರಮ. ೦೦೬). **ಬೆಲ್ಲದ ಉಂಡೆ** = ೧. ಉಂಡೆಯಾಕಾರದ ಬೆಲ್ಲ: ಕೆಲವು ಕಡೆಗಳಲ್ಲಿ ಕಾಫಿಗೆ ಸಕ್ಕರೆಯ ಬದಲು ಬೆಲ್ಲದ ಉಂಡೆಗಳನ್ನು ಉಪಯೋಗಿಸುತ್ತಾರೆ (ರೂಢಿ). ೨. ಆಲೆಮನೆಯಲ್ಲಿ ಮೊದಲನೆಯ ಅಡಿಗೆ ಬಂದಾಗ ಅದನ್ನು ಅಚ್ಚುಗಳಿಗೆ ಸುರಿದು ಮಾಡುವ ಉಂಡೆಯಾಕಾರದ ಬೆಲ್ಲ: ಅವರು ಆಲೆಮನೆಯನ್ನು ನೋಡಲು ಬಂದ ಅತಿಥಿಗಳಿಗೆ ಕೊಪ್ಪರಿಗೆಯಿಂದ ಬಿಸಿಯಾದ ಬೆಲ್ಲದ ಉಂಡೆಗಳನ್ನು ತೆಗೆದು ಹಂಚಿದರು (ರೂಢಿ). **ಬೆಲ್ಲದಚ್ಚು** = ಅಚ್ಚಿನ ಆಕಾರದ ಬೆಲ್ಲ: ಹೊಜಗಣಂ ಬಂದ ಬೆಲ್ಲದ ಭಂಡಿಗೆ ಬೆಲ್ಲದಚ್ಚು ಹದಿನಯ್ದು (ಎಕ. XIII ೨೨-೩೬ ; 1204). **ಬೆಲ್ಲಬೆಲಸ, ಬೆಲ್ಲಬೆಲ್ಲಸ** = ಅತಿಯಾದ ಸಿಹಿಯ ಸೇವನೆಯಿಂದ ಕಟ್ಟರೆಯಾಗುವುದು: ಫೇಡೆ ತಿಂದು ಬಾಯಿ ಬೆಲ್ಲಬೆಲಸ ಆಗಿತ್ತು (ಹೊಸಂಶಾ. ೦೬೮) ; ಅರುಚಿಯೋ ಅಭ್ಯಾಸವಾದ ಬಾಯಿಗೆ ಬೆಲ್ಲವೂ ಬೆಲ್ಲಬೆಲ್ಲಸಾಗಿ ಹತ್ತುವಂತೆ (ಕಿರಾಶ. ೩೩).
[ದೇ.॥ ತಮಿ. ಮಲ. ವೆಲ್ಲಮ್; ತುಳು. ಕೊಡ. ಬೆಲ್ಲ; ತೆಲು. ಬೆಲ್ಲ. ಬೆಲ್ಲಮು, ಬೆಲ್ಲಿ]

**ಬೆಲ್ಲಂಗೋಲ್** (ನಾ). ಸಿಹಿರುಚಿಯುಳ್ಳ, ಕೋಲಿನಂತಿರುವ ಒಂದು ಬಗೆಯ ಸಸ್ಯ; ಕಬ್ಬು.

**ಬೆಲ್ಲಂಗೋಲ್ವಿಲ್ಲ** = ಕಬ್ಬಿನ ಜಲ್ಲೆಯನ್ನು ಬಿಲ್ಲಾಗಿ ಉಳ್ಳವನು; ಮನ್ಮಥ: ಪಲ್ಲಣಿಯ ಬೆಲ್ಲಂಗೋಲ್ವಿಲ್ಲನ ಮಲ್ಲಿಗೆಸರಲ ಜಲ್ಲಣೆಗೆ ತಲ್ಲಣಂಗೊಂಡು (ರಾಮಾಶ್ವ. ೬೩-೩). 'ಕರ್ಬುವಿಲ್ಲ' ಪರಾ. [ಬೆಲ್ಲ + ಕೋಲ್$_1$]

**ಬೆಲ್ಲಗಣಿಕೆ** (ನಾ). ಒಂದು ಬಗೆಯ ಮರ: "ಕಾಕಮಂತಾ, ಕಾಕಮಾಚಿ—ಈ ಎರಡೂ ಬೆಲ್ಲಗಣಿಕೆ" (ಓಕಿ. ೩೦); ಪುಷ್ಯನಕ್ಷತ್ರದಲ್ಲಿ ಬೆಲ್ಲಗಣಿಕೆಯ ಬೇರನು ತಂದು ಹಾಲಲ್ಲಿ ಕನ್ನಿಕೆಯ ಕೈಯಿಂದ ಅರೆಸಿ ಹಸುವಿನ ತುಪ್ಪವೆರಸಿ ಕುಡಿಯ ಕೊಡಿಸಲು ಮಹಾಉತ್ತಮವಾದ ಗರ್ಭ ನಿಲ್ಲುವುದು (ವೈದ್ಯಸ. II, ೯೯). [ಬೆಲ್ಲ + ಕಣಿಕೆ$_4$]

**ಬೆಲ್ಲಗಾರಿಗೆ** (ನಾ). ಬೆಲ್ಲದಿಂದ ತಯಾರಿಸುವ ಒಂದು ಬಗೆಯ ಸಿಹಿಭಕ್ಷ್ಯ: ದೋಸೆಯ ಬಗ್ಗೆ ಬೆಲ್ಲಗಾರಿಗೆಯ ಬಣಬೆ ತಡೆತಡೆಯೆ ಪಾಯಸದ ಕಟ್ಟೆ (ಸಮ್ಮಕೀ. ೭-೨೩). [ಬೆಲ್ಲ + ಗಾರಿಗೆ$_1$]

**ಬೆಲ್ಲಗೂಳು** (ನಾ). ಬೆಲ್ಲವನ್ನು ಸೇರಿಸಿ ಮಾಡಿದ ಆಹಾರಪದಾರ್ಥ: ಗಂಡನಿಕ್ಕಿದ ಪಡಿಯನೊಲ್ಲದೆ ಬೆಲ್ಲ[ಪಾಠಾಂ. ನೆಲ್ಲು]ಗೂಳಿಗಾಸೆ ಮಾಡಿ ನೆರೆಮನೆಗೆ ಹೋಗುವ ಬಲ್ಲಾಳಗಿತ್ತಿಗೆ ಪತಿಭಕ್ತಿ ಅಳವಡುವುದೆ ಅಯ್ಯ (ಶಿವವ. ೨೦-೦೭). [ಬೆಲ್ಲ + ಕೂಳು$_3$ (<ಕೂಟ್$_1$)]

**ಬೆಲ್ಲಗೆಡ್ಡೆ** (ನಾ). ಒಂದು ಬಗೆಯ ಗೆಣಸು: ಇಬ್ಬದಿಯ ಆಡಸೋಗೆ, ನರ್ಮಲೀಗಿಡಗಳ ಬೇಲಿಗಳಿಂದ ಬೆಲ್ಲಗೆಡ್ಡೆಯ ಬಳ್ಳಿಕ ಸುಟ್ಟ ವಾಸನೆ ಮೂಗಿಗೆ ಬಡಿಯಿತು (ಮೂರುದಾ. ೯೦). [ಬೆಲ್ಲ+ಗೆಡ್ಡೆ (<ಗಡ್ಡೆ)]

**ಬೆಲ್ಲಗೊಟ್ಟೆ** (ನಾ). ಒಂದು ಬಗೆಯ ಔಷಧೀಸಸ್ಯ: ತ್ರಿಫಲೆ, ಬೆಲ್ಲಗೊಟ್ಟೆ . . . ಶ್ವೇತಗುಂಜಿ, ಗುರುಗುಂಜಿಯನ್ನು ಕಟ್ಟೆ (ವೈದ್ಯಸಿ. ೯೨).
[ಬೆಲ್ಲ? + ಕೊಟ್ಟೆ$_4$]

**ಬೆಲ್ಲಣೆ** (ನಾ). ಮೋಸ: ವಂಚನೆ; ಸೋಗು: ಲಿಂಗದೊಳು ಲಲ್ಲೆ ಬೆಲ್ಲಣೆ [ಣೆ] ಬೆಲ್ಲ ಗೆಲ್ಲ ಮಹಲಿಂಗದೊಳು ಹದಿರು ಬೆದುರು ಬಿಂಕ ಪಂಕ ಮಾಲಿಂಗದೊಳು ನಯವಿನಯ ಸೈಪುವೈಪುಗಳೈದೆ ಪುಟ್ಟಿ ಮನವುಂಟ್ಟವರ್ಗನು (ಸಂದಿವಾ. ೦೯-೬) ; ಬೆರಸು ಬೆಲ್ಲಣೆಯಿಂಕ್ಕೆಯಾಶೆಪಾಶೆಯ ದೇಶ ಚಕ್ಕ ಮಲುಕಿನ ಚಾಪಡಿ . . . ಸೈಪುದೊ ಜುವ ಸೂಳೆಗೇರಿ ಸೊಗಸಾದುದಲ್ಲಿ (ಸಂದಿವಾ. ೨೩-೦೭). [ಬೆಲ್ಲ + ಅಣೆ$_2$?]

**ಬೆಲ್ಲಪತ್ರೆ** 'ಬೆಲ್ಲವತ್ತ' ನೋ.

**ಬೆಲ್ಲಬಿಲ್ಲ** (ನಾ). ಕಬ್ಬಿನ ಜಲ್ಲೆಯನ್ನು ಬಿಲ್ಲಾಗಿ ಉಳ್ಳವನು; ಮನ್ಮಥ: ಚಲ್ಲೆಗಂಗಳ ನೋಟ ಬೆಲ್ಲಬಿಲ್ಲನ ಸರಳಲ್ಲದುಳಿದ ಪರಿಯಲ್ಲ (ಅಂಜಿತ. ೩-೬೬).
[ಬೆಲ್ಲಬಿಲ್ಲು + –ಅ$_7$]

**ಬೆಲ್ಲಬಿಲ್ಲು** (ನಾ). ಕಬ್ಬಿನ ಜಲ್ಲೆಯ ಬಿಲ್ಲು: 'ಬೆಲ್ಲಬಿಲ್ಲ' ಪರಾ.
[ಬೆಲ್ಲ + ಬಿಲ್ಲು$_1$ (<ಬಿಲ್$_2$)]

**ಬೆಲ್ಲವತ್ತ, ಬಿಲ್ಪತ್ರೆ, ಬಿಲ್ಲವತ್ತೆ, ಬೆಲ್ಲಪತ್ರೆ, ಬೆಲ್ವತ್ತ** (ನಾ). ಒಂದು ಬಗೆಯ ಮರ; ಬಿಲ್ವವೃಕ್ಷ: "ಮಾಲೂರಃ, ಶ್ರೀಫಲಃ, ಬಿಲ್ವ-ಈ ೩ ಬೆಲ್ಲವತ್ತದ ಪೆಸರ್" (ಹಲಾಯು. ೬೨-೪೧); ಉತ್ತರಣೆಯ ಬೆಲ್ಲವತ್ತದ ತೊಳಂಚೆಯ ಪತ್ರಿಯನೊಂದನಿತ್ತು ಚಿಚ್ಚರಮುಮರತ್ನಮಂ ಪಡಯಿಂ (ಸಮಶ. ೬-೦೨) ; ಬೆಲ್ಲವತ್ತ ಕಪಿತ್ಥ . . . ಕರ್ಪೂರಕದಳಿಗಳಲ್ಲಿ ನೋಡಿವೆ ಭೂಮಿಸುತೆ ಭೂಜಾತಸಂತತಿಯ (ತೊರಾ. ೩-೦-೨೯). **ಬಿಲ್ಪತ್ರೆ**: ಶಿವಪೂಜೆಗೆ ಬಿಲ್ಪತ್ರೆ ಸರ್ವಶ್ರೇಷ್ಠ (ರೂಢಿ). **ಬಿಲ್ಲವತ್ತೆ**: ಎತ್ತ ನೋಡಿದಡತ್ತ ಬಿಲ್ಲವತ್ತೆಯ ತರುವೊತ್ತವೆಸೆದಿಪವು (ಮೂದೇಶಾಂ. ೦-೩೨). **ಬೆಲ್ಲಪತ್ರೆ**: ಆ ಸುತನ ಪೋಲಣ ಭಸಿತಮಂ ಬೆಲ್ಲಪತ್ರೆಯನು ಓಸರಿಸದಿಕ್ಕಲಕೆ ನೂಂಕಿ (ಬಸಪು. ೪೮-೨೯). **ಬೆಲ್ವತ್ತ**: ಬಿಕ್ಕೆ ಕಕ್ಕೆಯು ಎಕ್ಕೆ ಲೊಕ್ಕಿ ಬೆಲ್ವತ್ತ [ಪಾಠಾಂ. ಬೆಲ್ಲವತ] ನೆಲ್ಲಿ (ಸಂದಿಮಾ. ೦೯-೦೨).
[<ಸಂ. ಬಿಲ್ವಪತ್ರ./ತುಳು. ಬಿಲ್ಪತ್ರೆ, ಬೆಲ್ಲಪತ್ರೆ]

**ಬೆಲ್ಲಮಾತು** (ನಾ). ಸೋಗಿನ ನುಡಿ; ನಟನೆಯ ಮಾತು: ಎಲ್ಲಿಯಾನುಂ ಬಂದು ಚಲ್ಲಪೊತ್ತಿನ ಬೆಲ್ಲಮಾತುಗಳಂ ಕೈಕೊಂಡು ರಾಜ್ಯಮಂ ಕಿಡಿಸಲ್ವಗೆದೆಯಪ್ಪೊಡವನುಪೇಕ್ಷಿಸಲ್ ಬಾರದು (ಪಂಚತಂ. ೦೦೩-೯) ; (ಬೆಲ್ಲಮಾತಿನಿಂದ) ನಾನು ವೇಶ್ಯೆ (ಮುಂಶ್ರುಕ. ೬೦-೦೩).
[ಬೆಲ್ಲ + ಮಾತು$_1$./ತೆಲು. ಬೆಲಿಮಾಟಲು]

**ಬೆಲ್ಲವುದಿ** (ನಾ). ಒಂದು ಬಗೆಯ ಮರ ಮತ್ತು ಅದರ ಕಾಯಿ: ಬೆಲ್ಲವುದಿ ಬೆಲ್ಲವತ್ತ ಮಾಗುಳಿ ಬಿದಿರ ಕಳಲೆ ಪೊಸತದಾಕಂಬಟೆಯ ಕಾಯ್ಗಳಿಂದ ಸಮೆದೊಪ್ಪುವುಪ್ಪಿನ ಕಾಯ್ಗಳಂ ಮಾಳ್ಪುದು (ಸೂಪಶಾ. ೩-೦೬).
[ ? ]

**ಬೆಲ್ಲಾಟಿ** (ನಾ). ಒಂದು ಬಗೆಯ ಮರ: ಬೆಲ್ಲಾಟಿ—ಎತ್ತರವಾಗಿ ಬೆಳೆಯುತ್ತದೆ. ಇದರ ತೊಪೆಗಳನ್ನು ಇಮಾರತಿಗೆ ಬಹಳ ಹಾಕುವರು (ಕಥಾಗ. ೪೩).
[ ? ]

**ಬೆಲ್ಲಿಸು, ಬೆಳ್ಳಿಸು** (ಕ್ರಿ). (ಮುಖಸ್ತುತಿ ಮಾಡಿ) ವಂಚಿಸು; ಮೋಸಗೊಳಿಸು: ಬೆಲ್ಲಿಸುತೆ ಸವಿನುಡಿಗಳಿಂದ ಮಾಯಗಳೆಸಗಿ ಮೆಲ್ಲಮೆಲ್ಲನೆ ಸಾರಿ

ಬಾಗರೆದು ಬರಿಮಾತಿನಲ್ಲಿ ನೆರೆಯುಲ್ಕೆಳಸಿ ಬಹ ಕಪಟವಿಟರುಗಳ ನಿಷ್ಪಣಬೆ ನುತ್ತವರಿದು (ಶಂಕಣ. ೫-೬-೯೫). **ಬೆಳ್ಳಿಸು :** ಅರಿಯದ ಹುಡುಗೀನ ಬೆಳ್ಳಿಸೋಕೆ ನೋಡಿದೆಯಾ ಸುಂದರಪುರುಷ? (ಜಕರಾ. ೦೬೭).

[ಬೆಲ್ಲ + –ಇಸು₃./ತೆಲು. ಬೆಲ್ಲಿಂಚು]

**ಬೆಲ್ಲುಣಗಿ** 'ಬೆಲ್ಲುಣಿಗೆ' ನೋ.

**ಬೆಲ್ಲುಣಿಗೆ, ಬೆಲ್ಲುಣಗಿ** (ನಾ). ಹಪ್ಪಳ, ಚಪಾತಿ ಮೊದಲಾದುವುಗಳನ್ನು ಲಟ್ಟಿಸುವ ಸಾಧನ; ಲಟ್ಟಣಿಗೆ; ರತ್ನೂಡಿ : "ಬೆಲ್ಲುಣಿಗೆ—ಲಟ್ಟಣಿಗೆ" (ಜಾಕಕೋ. ೨೪). **ಬೆಲ್ಲುಣಗಿ :** ತಾಪಹರನಾಲಯದೆ ಬೆಲ್ಲುಣಗಿಯಂ ಕದ್ದು ಕೊಂಡೊಯ್ದು (ದುರಪು. ೨೬-೯).

[←ಹಿಂ. ಬೇಲನ; ಮರಾ. ಬೇಲಣೇ=ಲಟ್ಟಿಸು]

**ಬೆಲ್ಲೂರ್** (ನಾ). ಒಂದು ಊರಿನ ಹೆಸರು: ತುರಗ ಪ್ರಧಾವನ ನಿಷ್ಪಾದಿತ ಸೀಮಾಭ್ಯಂತರೋ ಬೆಲ್ಲೂರ್‌ನಾಮಗ್ರಾಮಃ (ಎಕ. VI, ಮೂಡಗೆ. ೩೬-೪೯; 749). [ಬೆಲ್ಲ₂ + ಊರ್]

**ಬೆಲ್ವತ್ತ** 'ಬೆಲ್ಲವತ್ತ' ನೋ.

**ಬೆವಕೂಫ್** 'ಬೇಕೂಫ್' ನೋ.

**ಬೆವಟಿಕ್ಕು** (ಕ್ರಿ). ೧. ಪಾತ್ರೆ ಮುರಿತಾದುವಕ್ಕೆ ಬೂದಿಯನ್ನು ಹಾಕಿ ತಿಕ್ಕು : ಹೊಳೆವ ಪೊಂಬೊಗರಿಗೆ ಬೆವಟಿಕ್ಕಿ ಕೈಯಾರ ಬೆಳಗಿದೊಪೊಪ್ಪು ವೆತ್ತಂತೆ ಅಳಲುವ ರತಿಯುರಸ್ಥಳದೆ ಭಸ್ಮಾಂಕಿತ ಕಳಶಕುಚಂಗಳೊಪ್ಪಿದುವು (ಬೋಧಕ. ೬-೨೨). ೨. (ಆಲಂ) ಅನುನಯಿಸು ; ಮರ್ಜಿ ಹಿಡಿ : ಇವನಿಗೇಕಿಷ್ಟು ಬೆವಟಿಕ್ಕಬೇಕು? ಬಂದರೆ ಬರಲಿ. ಬೇಡಾದರೆ ಬಿಡಲಿ (ರೂಢಿ).

[ಬೆವಟು + ಇಕ್ಕು]

**ಬೆವಟು** (ನಾ). ಪಾತ್ರೆ ಮುಂತಾದುವನ್ನು ಬೆಳಗಲು ಉಪಯೋಗಿಸುವ ಬೂದಿ ಮುಂತಾದುವು : 'ಬೆವಟಿಕ್ಕು' ಪರಾ. [ ? ]

**ಬೆವತು** 'ಬೆವರ್₁' ಪರಾ.

**ಬೆವರ್** 'ಬೆವರ್₂' ನೋ.

**ಬೆವರಕ್ಕಿ** (ನಾ). ತನೆಯಿಂದ ತೆಗೆದು, ಸುಟ್ಟ ಕಾಳು ; ಕಾಚಕ್ಕಿ ; ಬೆಳಸು: ಹುಳೋಳೆದಿಂದ ಬೆವರಕ್ಕಿ ಮಾಡಿವೆವು (ರೂಢಿ). [?+ಅಕ್ಕಿ₁]

**ಬೆವರಟ್ಟೆ** (ನಾ). ಕಾಲನ್ನು ಮುಚ್ಚುವ ಪಾದರಕ್ಷೆಯ ಒಳಗೆ ಹಾಕುವ, ಬೆವರನ್ನು ಹೀರುವ ಅಟ್ಟೆ: (೩). [ಬೆವರು₂ (<ಬೆವರ್₂) + ಅಟ್ಟೆ₂]

**ಬೆವರಿಡು** 'ಬೆಮರಿಡು' ನೋ.

**ಬೆವರಿಸು** (ಕ್ರಿ). ೧. ಬೆವರುವಂತೆ ಮಾಡು ; ಸ್ವೇದಗೊಳ್ಳುವಂತೆ ಮಾಡು : ಕಷಾಯ ಲೇಹ್ಯದಿಂದಲೂ ಧೂಮಪಾನ ಅಭ್ಯಂಗನ ಮುಂತಾದುದರಿಂದಲೂ ಬೆವರಿಸುವುದರಿಂದಲೂ ಚಿಕಿತ್ಸೆಯಂ ಪ್ರಯೋಗಿಸುವುದು (ಸಕವ್ಯ. ೨೨೯). ೨. (ಆವಿಯ) ಶಾಖದಿಂದ ನೀರೂರುವಂತೆ ಮಾಡು : ಮಡಕೆಯಲ್ಲಿ ನೀರ ಹನಿಸಿ ಒಲೆಯ ಮೇಲಿತ್ತಿ ಕಾಸಿ, ಆ ಮಡಕೆಯ ಬಾಯಿಗೆ ಪುಟ್ಟ ಪಾವಡೆಯಂ ಕಟ್ಟಿ ಅದರ ಮೇಲೆ . . . ಈ ಚೂರ್ಣವನ್ನಿಟ್ಟು ಮೇಲೆ ಮುಚ್ಚಳ ಮುಚ್ಚಿ ಬೆವರಿಸಿ (ಸಕವ್ಯ. ೨೦೮).

[ಬೆವರು₂ (<ಬೆಮರ್₂) + –ಇಸು₁]

**ಬೆವರಿಳಿ** 'ಬೆಮರಿಳಿ' ನೋ.

**ಬೆವರು₁** 'ಬೆಮರ್₁' ನೋ.

**ಬೆವರು₂** 'ಬೆಮರ್₂' ನೋ.

**ಬೆವರುಗುಳ್ಳೆ** (ನಾ). ಸೆಕೆಯಿಂದ ಮೈಮೇಲೆ ಏಳುವ ಬೊಕ್ಕೆ ; ಸೆಕೆಗುಳ್ಳೆ : ಮಗುವಿನ ಮೈಯಲ್ಲೆಲ್ಲಾ ಬೆವರುಗುಳ್ಳೆ ಆಗಿ ಒದ್ದಾಡುತ್ತಿದೆ (ರೂಢಿ). [ಬೆವರು₂ (<ಬೆಮರ್₂) + ಗುಳ್ಳೆ₁ (<ಗುರುಳೆ)]

**ಬೆವರುಸಾಲೆ** 'ಬೆಮರ್ಸಾಲೆ' ನೋ.

**ಬೆವರುಹನಿ** 'ಬೆಮರ್ವನಿ' ನೋ.

**ಬೆವಸಾಯ, ಬವಸ, ಬವಸಂ, ಬವಸೆ₁, ಬೇಸಾಯ, ಬ್ಯವಸಾಯ** (ನಾ). ೧. ಉತ್ತು, ಬಿತ್ತಿ ಬೆಳೆ ತೆಗೆಯುವುದು ; ಆರಂಬ ; ಒಕ್ಕಲುತನ ; ಕೃಷಿ : ಒಬ್ಬಳೇ ಪೆಂಡತಿ ಮೂವರ್ ಪುತ್ರರ್ ಎರಡಾರ ಬೆವಸಾಯ ಹತ್ತು ಕಜಿಹ (ಶಂತಕಂ. ೬೫-೦೯) ; ಬೆವಸಾಯವನ ಮಾಡಿ ಮಾನೆಯ ಬೀಯಕ್ಕೆ ಬತ್ತವಿಲ್ಲದಿದ್ದರೆ ಆ ಬೆವಸಾಯದ ಘೋರವೇತಕಯ್ಯ (ಅವಶಂ. ೦೬-೬೫) ; ಮಗಧದೇಶದಲ್ಲೊಬ್ಬ ಶೂದ್ರನು ಬೆವಸಾಯಮಂ ಮಾಡಿಕೊಂಡು ಬದುಕುತ್ತಿರಲು (ಶೈರಕೂ. I. ೩೦೩). ೨. ಪ್ರಯತ್ನ; ಪರಿಶ್ರಮ : ಪುಣ್ಯವಿಲ್ಲದೆ ಬೆವಸಾಯದಿಂ ಸಿರಿಯಕ್ಕುಮೆಂಬೆಯಪ್ಪೊಡೆ ನೆತ್ತಿ ತಟಂಟಾಗೆ ಪುಳ್ಳಿಯನಡುಕವ ಬಡವರ್ಗಂ . . . ಸಿರಿಯೇಕಾಗದು (ಧರ್ಮಾಮೃ. ೬-೦೩೩). **ಬವಸ :** ೧. "ಬವಸಂ ವ್ಯವಸಾಯ ನಾಮದೊಳ್" (ಕರ್ಣಾಟ. ೯೨). **ಬವಸು :** ೧. "ಬವಸು=ವ್ಯವಸಾಯಂ" (ಕಪುದ. ಶಂ. ೨) ; "ಬವಸೆಂದು ವ್ಯವಸಾಯಂ" (ಕಕಶ. ೬೬-೯೮೩) ; ಬವಸಿನೊಂದು ಕಜ್ಜಮಂ ತವಿಷಿ ಬೇಸರ್ಗೆ ಕುಡಿಯರ್ . . . ಶ್ರೀರಾಮಲೀಲಾವಿನೋದಮಂ ಪಾಡುತಿರೆಯುಂ (ರಾಜಶೇಖ. ೨೨-೨೦). 'ಬವಸಿಗ' ಪರಾ. ೩. ಸಜ್ಜು ; ಸಿದ್ಧತೆ : ಕವಿದುರ್ಗ್ಗಂ ಚಾತುರಂಗ ಬವಸ ದಳವುಳಂ ಧಾಳಿ ಸೂಳೆಬೆಸಿಪ್ಪಾಹವದೊಳ್ಗಾಳುಕ್ಕರಾಮಂ ಬೆಸಸಿ (ಎಕ. VII, ಶಿಕಾ೦. ೦೩೬-೨೭ ; 1068). **ಬವಸೆ₁ :** ೧ "ಬವಸೆ (ಸು)_ವ್ಯವಸಾಯ" (ಶಬ್ದಕೋ. ೨೯). ೨. ದೇವರ್ ಬರವಿನೊಳಾದಂ ಬವಸೆಯುನೆ ಮಾಟ್ಟುದು (ಅದಂಪಾ. ೩೮೦); ದಾರುಣಸಂಸರಣಮಹೋರ್ವೀರುಹಮಂ ಕೀಟ್ಟ ಬವಸೆಯಿಂದಿರ್ದಪನೀ ಧೀರಂ (ಶಂಶಚ. ೨-೦೬). ೪. ಉದ್ಯೋಗ ; ಕೆಲಸ ; ವೃತ್ತಿ : ಎನಗೆ ಮನೋಭವನೆ ದೇವಂ ಬಸನಮೆ ಬವಸೆ ಬಲವೆ ಕುಲಧನಂ (ಶಂದ್ರಕು. ೬-೯೭ ಪ). **ಬೇಸಾಯ :** ೧. ಫಾಟುನೆಲದೊಳ್ ಬೇಸಾಯ ನೀಚಾಶ್ರಯಂ . . . ಫಲದ ಭ್ರಾಂತಿಯಂ ತೋರ್ಪುದೈ (ಸೋಮೇಶ. ೨೩) ; ಮಾನವರೆಲ್ಲರೂ ಕೂಡಿಯೆ ಬೇಸಾಯ ಸಾಗಿಸತೊಡಗಿದರು (ಕಾಪಾದ. ೬೦). **ಬ್ಯವಸಾಯ:** ೪. ಆತನ ಬ್ಯವಸಾಯ ಬ್ಯವಹಾರವೆನ್ನನೆ ಭಕ್ತಿಯ ಭಂಡ ಮೊದಲ್ ನಿಜಭಕ್ತಿಯೇ ಕೋಟಾನುಕೋಟಿಲಾಭಂ . . . ಕಲಿದೇವಸೆಟ್ಟಿ ನೆಗಳ್ದಂ ಧರೆಯೊಳ್ (ಸೌಇಇ. IX—i, ೨೯೬-೩೯ ; 1176). [<ಸಂ. ವ್ಯವಸಾಯ]

**ಬೆವಸಾಯಂಗೆಯ್, ಬವಸೆಗೆಯ್** (ಕ್ರಿ). ಪ್ರಯತ್ನ ಮಾಡು ; ಶ್ರಮಿಸು : ಬೆವಸಾಯಂಗೆಯುಲಿನ್ನುಮುಂಟೆಡೆ ಕೃಪಾಶ್ವತ್ಥಾಮರುಳ್ಳಂತೆ ಪಾಂಡವರಂ ಗೆಲ್ವುದಸಾಧ್ಯಮಾಯ್ತು (ಶಂಕಣ. ೦೩-೩೦). **ಬವಸೆಗೆಯ್ :** ನಿನ್ನ ಬಡುಗಡೆಯ ಗಟಿಯಿಸಲ್ ಬವಸೆಗೆಯ್ವೆನ್ (ಬಿಧ್ಯಶ್ರ. ೦೬-೩೮೦).

[ಬೆವಸಾಯ + ಕೆಯ್₁]

**ಬೆವಹಾರ, ಬೇಹರ₂, ಬೇಹಾರ, ಬ್ಯವಹಾರ, ಭ್ಯವಹಾರ, ವೆವಹರ, ವೆವಹಾರ** (ನಾ). ೧. ಉದ್ಯೋಗ ; ಕೆಲಸ ; ವೃತ್ತಿ : ನಾನು ಬೆವಹಾರವ ಮಾಡುವೆನಯ್ಯಾ ಲಿಂಗಾರ್ಚನೆಗೆಂದು (ಬಸವ. ೬೦೬) ; ಬಾಲಕರ್ ಬಾಲೆಯರ್ ಕೊಯಿದು ತಿನುತಿರೆ ವುುತ್ತಿ ಆರಂಭದೊಳ್ಕೂಡಿ ಅಲ್ಲಿಯಾಗದೆ ಮಾಟುಗಿ ದೂಜಿಸುತೆ ಬೆ[ಪಾಠಾಂ. ವ್ಯ]ವಹಾರದಲ್ಲಿ ತಿಟ್ಟನೆ ತಿರುಗಿ (ಶಿಂತೋರ. ೨-೩). ೨. ವ್ಯಾಪಾರ ; ಹರದು : ಕರ್ಮವ ಕಳೆದು ನಿರ್ಮಲ ಭಕ್ತಿ ಸುಜ್ಞಾನ ಧರ್ಮವಾರದ ಪೇಟೆಯ ಬೆವಹಾರ . . . ಹಿಂಡುದ್ಯೆವವ ಕಂಡ ಹಿರಿಯ ಪ್ರಭುಸೆಟ್ಟಿಯೊಳು ಕೊಂಡು ಕೊಟ್ಟಾಡುವ ಘನ ಬೆವಹಾರ (ಶಿವಗೀ. ೦೮೯-೯೯೩) ; ಆ ಪುರದೊಳೊರ್ವ ವರನಂ ಸಮುದ್ರಾಂತರದ್ವೀಪಂಗಳೊಳ್ ತನ್ನ ಬೆವಹಾರಕ್ಕೈದಲ್ (ಕಬಕು. ೩೦-೩). ೩. ವ್ಯಾಪಾರದ ವಸ್ತು ; ಸರಕು : ಆಚೆಯ ಧರೆಯ ಬೆವಹಾರವ ತಂದು ಮತ್ತೆ ಈಚೆಯಲ್ಲಿ ಕಡನ ಕೊಡಲಾಗಿ ಕೊಂಡಹ ಸತ್ತ ಕೊಟ್ಟವ ಕಟ್ಟ (ಶೋಶಕೂ. ೨೩೭-೩೦೯). ೪. ನಡತೆ ; ವರ್ತನೆ ; ನಡವಳಿಕೆ : ದಾಯ ನೋಡಿ

ಬೆವಹಾರ ಬೆಸನಗಳಾಯತವು ಬಳಿಕುಂಟೆ ಕೇಳಾ (ಪ್ರಭುಲಿಂ. ೫-೭೦). **ಬೇಹರ್₂** : ೧. ಅಕಾರಕ್ಕೆ ಐತ್ವಂ-ವ್ಯವಹಾರ, ಬೇಹಾರ, ಬೇಹರ (ಶಬ್ದಮ. ೨೭೦ ಪ್ರಯೋ). ೨. ಎನ್ನ ಬೇಹರಕೆ ದೋಸೆಯ ಹೊಯ್ಯುತಿರೆ ಹಚಿಾದವು ನಿನ್ನವೆಂದು ಇರದಾಡುವನಿತಕೆ ಪಚಿಾಯಲವಲ್ಲ ಶಂಕರನುಂಡು ಬಿಟ್ಟಿಯ ಪೋದ (ಶೋಕಶ್ರು. ೩-೪೦). ೪. ಅವಾವ ಹರಕೆಗಳ ಕಾಣಿಕೆಗೆ ಸಂದೆ? ಬೇಹರವನಲ್ಲಿಲ್ಲಿ ಸಲುವಳಿಗೆ ತಂದೆ? (ಗೀತಂ. ೨೯-೭೦). ೫. ಸಂಬಂಧ ; **ಗೊಡವೆ** : ಬೆಟ್ಟ ಕೆರೆ ಬನ ಬಾನು ಬಯಲೆಲ್ಲವೊಂದೀಗ ನನಗಿವಕು ಮುಂದದ ಬೇಹರ ತೀರಿತೀಗ (ಗಣೇಶ. ೨೯-೦೬). **ಬೇಹಾರ** : ೧. ಬೆಳಗಾದುದೇಳು ಬೇಹಾರಕೆಂದೆಂಬ ಕಳವಳವದೇಕೆ (ಸರ್ವಜ್ಞ. ೩೭೨) ; ರಾಜಾಯದೊಳ್ಸಲ್ಲ ಧನಭಾಗದಿಂದರವುನೆಯ ಬೇಹಾರವಂ ಮೊದಲಂತ ನೇಕಸಚಿವರ ಮುಖದಿಂ ನಡೆಯಿಸುತ್ತೆ (ಪುರಾತ. ೪-೭೩ ಪ); ತನ್ನ ತಾಯಿ ಯೊಡನೆ ಗೃಹಕೃತ್ಯದ ಬೇಹಾರ ಸಾಗಿಸಲು ಬಂದಾಗ . . . ಪ್ರಸ್ತಾಪಿಸ ತೊಡಗಿದಳು (ಪುಲಿಪು. ೭೯೦). ೨. ಬಣಂಜಿಗರೆತ್ತುಗಳೊಳು ಬೇಹಾರಕೋ ಸುಗ ಪುರಂದರೆಗಂ ಬೇಜಿಾಕೊಂಡೊಂದು ಘೋರರಣಂಶಾರದೊಳ್ ಪೋಗುತ್ತೆ ಬೀಡ ಬಿಟ್ಟರು (ಸಿದ್ಧೇಶ್ವ. ೨-೨೪); ಆಹಾರವುಳ್ಳಲ್ಲಿ ಬೇಹಾರ ಘನವಕ್ಕು ಆಹಾರದೆೊಳಗನಜಿಾದಿಪ್ಪ ಸೆಟ್ಟಿಗೆ ಬೇಹಾರವಕ್ಕು(ಸರ್ವಜ್ಞ. ೨೬೭); ಬೇಸಾಯ ಬೇಹಾರ, ನೆಯಿಗೆ ಇತ್ಯಾದಿ ಹಲವು ಉದ್ಯಮಗಳನ್ನು ಕೈಗೊಂಡು ಜನರು ಬಾಳುತ್ತಿದ್ದರು (ಭಾಷುಮು. ೬೪). **ಬ್ಯವಹಾರ** : ೨. ಆತನ ಬ್ಯವಸಾಯ ಬ್ಯವಷ್ಟಾರವೆನ್ತೆನೆ ಭಕ್ತಿಯ ಭಂಡ ಮೊದಲ್ ನಿಜಭಕ್ತಿಯಿ ಕೊಟಾನು ಕೋಟಲಾಭಂ ಶಿವಸದ್ಭಕ್ತಿಯು ಬೆಳಸಿ . . . ಕಲಿದೇವಸೆಟ್ಟಿ ನೆಗಳ್ದಂ ಧರೆಯೊಳ್ (ಸೌಇಇ. IX-i, ೨೯೭-೪೦; 1176) ; ಭರತಿಸೆಟ್ಟಿಯ ಮಗ ತೀಕಿಸೆಟ್ಟಿಯುರು ಬ್ಯವಹಾರಮಾರ್ಗ್ಗದಿಂ . . . ಕ್ರಯಸ್ವರೂಪದಿಂ ಧಾರಾಪೂರ್ವ್ವಕವಾಗಿ . . . ಕೊಂಡ ಎರೆ ಮತ್ತರೆರಡು (ಸೌಇಇ. XX, ೦೯೩-೨೦; 1227). **ಭ್ಯವಹಾರ** : ೧. ನಿಂಮ ಕೆಯ್ಯ ಭಯಿರವದೇವರ ಭ್ಯವಹಾರಕ್ಕೆ ಕೊಟ್ಟ ಯಿಪತೆಯಿಂಟು ಮಂದಿ ಸ್ವಾನಿಕರು (ಎಕ. X (S), ಕೋಲಾರ. ೩೪೯-೫: 16ನೆಯ ಶತ). **ವೆವಹರ**: ೨. 'ವೆವಹರಿಸು' ಪರಾ. **ವೆವಹಾರ** : ೧. ನರನೊಂದು ವೆವಹಾರಕೆರಡಾಯುವೆಯ ಲೆಕ್ಕ ಹೊರಗಣ ನುಭೋಗಕೊಂದೊಳನೀತಿಗೊಂದು (ಮಂಕುಕ. ೬೬೪). ೨. ಉದ್ಯೋಗ ವೆವಹಾರ ನೃಪಸೇವೆಯಾಳ್ದರು ಮಧ್ಯರಾತ್ರಿಗೆ ಬರ್ಪನಕ ನಿದ್ದೆಗೆಯ್ದಂತೆ ಮಂದಿರದೊಳು ಹಾದರವಿದ್ದೆಯಂಗನೆಗಳೊಪ್ಪಿದರು (ಪೋಹಿತ. ೦೯-೨೯).

**ಬೇಹಾರವಾಡು**=ವ್ಯಾಪಾರಮಾಡು : ಹಿಡಿದ ಫಲ ದೃಢದಿಂದ ಬಿಡದೆ ಬೇಹಾರವಾಡಿ ಕೊಡುವುದೊಂದು ಲಕ್ಷ ಕೊಂಬುದೊಂದು ಲಾಭ (ಶಿವಗೀ. ೯೧-೯೩೪). 'ಬೇರ್₂' ಪರಾ. [< ಸಂ. ವ್ಯವಹಾರ]

**ಬೆವಹಾರಿ**, ಬೇಹರಿ, ಬೇಹಾರಿ (ನಾ). ವ್ಯಾಪಾರ ಮಾಡುವವನು; ವರ್ತಕ; ಹರದ : ತಂಮ ಪಟ್ಟಣವಾದ ಹೆಂಮುರಗಾಲ ಬೆವಹಾರಿ ಗಂಗರ ಮಾಧವಸೆಟ್ಟಿಯು ಮಗ ಮುಸಣಾಡಿಸೆಟ್ಟಿಗೆ . . . ವರಿಷಕ್ಕೆ ಗ ೧ಬಿ ಬಡಗೆ ಸಿದ್ಧಾಯ ಗ ೧ನೆ ತೆಜುವರು (ಎಕ. III(R), ಪಂಜಪ. ೩೨೯-೦೦; 1291); ಶ್ರೀ ಚಿಕಹರಿಹರರಾಯವೊಡೆಯರ ಮನೆಯ ಬೆವಹಾರಿಗಳು (ಎಕ. IX(S), ಹೊಸಕೋ. ೦೭೭-೩; 1375). **ಬೇಹರಿ** : ವಾಣಿಜವರರಿಗೂ ಕ್ರಯ ವಿಕ್ರಯ ವ್ಯವಹರಣೆಯುಚಿತವದು ತರುಣಿರತ್ನವು ಸಲ್ಲದಾ ಬೇಹರಿಯ ನೀಕ್ಷಣ ಹಿಡಿದು ಬಿಟ್ಟಂಬುರುಹಮುಖಿಯನು ಸೆಳೆಯದಿರೆ ಹಳಿವೆಮಗೆ ಬಹುದಾ (ಜೈಮಿನಿ. ೯-೨೪). **ಬೇಹಾರಿ** : ಹುಸಿಯದ ಬೇಹಾರಿಯ ಇಲ್ಲ ಪಾಪ ಬೇಹಾರಿಯುಪ್ಪುದಜಿಾಂದೆಪ್ಪು ಜಾತಿಧರ್ಮಕ್ಕೆ ಧರ್ಮಬುದ್ಧಿ ಋಧರ್ಮಬುದ್ಧಿಯಾಗಿ ಧನವಂ ಬಂಚಿಸಿಕೊಂಡೆನ್ನ ಮನೆಗುಯ್ಯೆಂ (ಕೋಶಾ. ೦೬೭-೦೦); ಊರ ಹರದರ ಹಾರುವರ ಬೇಹಾರಿಗಳ ಬಲು ಸೂಳೆಯಾದಾಡು ಕೇರಿಕೇರಿಯಲಿ (ಕೃಕರಾ. ೫-೯-೯); ಬಹುಬಗೆ ಲೆಟ್ಟಿ ಸಕ್ಕರೆ ತುಪ್ಪಗಳ ಮೊಟ್ಟೆಗಳನು ಮಾಜುವ ಬೇಹಾರಿಗಳಿಟ್ಟಣಿಸು ತಲೈದಿದರು (ಕಂಪಪು. ೦೧-೪೦). 'ಬೇರಿ₁' ಪರಾ. [<ಸಂ. ವ್ಯವಹಾರಿನ್]

**ಬೆವೆ** 'ಬೆವರ್₁' ನೋ.

**ಬೆಸ₁**, ಬೆಸನ್, ಬೆಸನ₁, ಬೆಸನು, ವೆಸ (ನಾ). ೧. ಕೆಲಸ; **ಕಾರ್ಯ** : ಪಾಂಡವರ್ ಮುನ್ನಮೆ ನಿನ್ನ ಕೆಯ್ಗೆ ವಂದರೆನಗಮಾ ಬೆಸಂ ತಪ್ಪಿದುದು (ಕುಶಿರಾ. ೮-೯೩ ವ): ಬೆಟ್ಟರಂ ಪುಟ್ಟಿಸುವ ಬೆಸಂ ಬಮ್ಮನದು ಸಮುನ್ತವರಂ ರಕ್ಷಿಸುವ ಬೆಸಂ ತನ್ನದು ಗಡ ನಿಸದಂ (ಎಕ. VII, ಶಿಕಾರಿ. ೧೨೩-೨೭; 1158); ನಿನ್ನ ಅಂತಃಸತ್ವಸಾರ ಆಧಾರ! ಉಳಿದೆಲ್ಲವೂ ಬೆಸಕೆ ಬರದ ಸಿಂಗಾರ! (ಧಾರಂಗ. ೩೬-೯). ೨. ಶಿಲ್ಪಿಯ ಕೆಲಸ; ಶಿಲ್ಪ ಕಾರ್ಯ; **ಕಂಡರಣೆ** : ಪರಮೇಶ್ವರಭಟ್ಟರ ಲಿಖಿತಂ ಚನ್ದ್ರಾರ್ಕ್ಕ ಧರಾರ್ಣ್ನಪ[೦] ನಿ[ಲ್ಕೆ] ಇನ್ದಗೋಟಿಯ ಬೆಸು (ಸೌಇಇ. XI-i, ೦೫-೬; 873); ಮಚ್ಚರಿಪ ಬಿತ್ತುದ ರೂವಾರಿ ಮದನಪಮಹೇಶ ಕೇಶವದೇ(ವ) ಮಾಡಿಸಿದ ಬೆಸ (ಎಕ. V, ಬೇಲೂರು. ೩೫-೧; 1120). ೩. **ಅಪ್ಪಣೆ**; **ಆದೇಶ** : ಶ್ರೀಮತ್ ಕೊಜಿಕ್ಕೊಣಿ ಮುತ್ತರಸರಾ ಬೆಸದೆ ಕಾದುವಟ್ಟ ದಣ್ಡಿಜಿಾದು ಕೊಮಳಾಲದುಳ್ ಏಜಿಾದೋರ್ ಸಿಯುವಲ್ಲವರಸ (ಎಕ. IX, ಹೊಸಕೋ. ೨೦-೩; ಸು. 750); ವಿದುರಂ . . . ಧೃತರಾಷ್ಟ್ರನ ಬೆಸದೊಳ್ ಪ ರಣಾವತಕ್ಕೆ ಪೋಗಿ (ಕಂಪಿರಾ. ೩-೬ ವ); ಅಗ್ರಜನಿತ್ತ ಬೆಸದಿಂ ನಡೆದೆನು (ಕುಮ್ರಾ.ರಾ. ೬೦೫. ೭-೦೦೫). 'ಬೆಸಂಬಡೆ' ಪರಾ. ೪. **ಕೇಳಂವುದು**; ವಿಚಾರಿಸಂವುದು: 'ಬೆಸಗೊಳ್' ಪರಾ. **ಬೆಸನ್** : ೧. ಎಸರನಿಡುವ ಅಕ್ಕಿಗರ್ಚುವ ಬೆಸನಂ ಕಿಯ್ಗೆಜಿವ ಕಂಚುಗರ್ಚುವ ಬೆಸನಂ ಬೆಸನಲ್ಲದೆ ಮತ್ಸ್ಯನ ಬಾಣಸಿಗಂಗಾರಿತ್ತರೆಲವೋ ನಿನಗೀ ಬೆಸನಂ (ಗದಾಯು. ೭-೩೭) ; ಈ ಬೆಸನಪ್ಪೊಡೆ ದೂತರ್ಗೆ ಭಟ್ಟರ್ಗೆ ಪರಿಗರ್ಗಲ್ಲದೆ ನೀಂ ಮಾಡಲ್ತಕ್ಕುದಲ್ಲ (ಕಂತಕಂ. ೪೨-೫). ೩. ಬೆಸನೇನೆಂದೊಡೆ ಪೇಟ್ಟಿನೆನ್ನ ಬೆಸನಂ (ಕಂಪಿಭಾ. ೦-೭೮) ; ನಿಮ್ಮನೆಮ್ಮರಸನ ಬೆಸನಿಲ್ಲದೆ ಎಲ್ಲಿಗುಂ ಪೋಗಲೀಯೆಂ (ಅಜಪು. ೬-೦೨೦ ವ); ಏಬೆಸನೆಂದು ತನು ಕರಗಿ ಮನ ಕರಗಿ ನೋಡಿ ಮಾಡುವುದು ಭಕ್ತಿಸ್ಥಲ (ಬಸವ. ೮೬೪). **ಬೆಸನ₁** : ೩. ತನ್ನ ನೊಸಲ ಕಣ್ಣಿಗೆ ಬೆಸನನಿತ್ತರೆ ನಿಲಬಲ್ಲ ಗರುವರನಾರನು ಕಾಣೆ (ಸಿದ್ಧರ. ೩೩-೧೬೭) ; ಕಾಳರಕ್ಕಸ ನಿನ್ನ ಹಿಡಿತರೆ ಬೆಸನ ಕೊಟ್ಟಾಳನಟ್ಟಿದ ನೋಡು ಜೀಯ (ಪೋಹಿತ. ೩೩-೪೦). **ಬೆಸನು** : ೨. ಖಿಣ್ಡಸ್ಪುಟಿತಂ ಮೊದಲಾಗೆಲ್ಲಾ ಬೆಸನುಮಂ ನಡೆಯಿಸುವ ರೂವಾರಿ ಮಂಚೋಜಂಗೆ ಮತ್ತರ್ಪ್ಪನ್ನೆರಡು (ಸೌಇಇ. IX-i, ೦೦೦-೫೫ ; 1045). ೩. ಅವರುಂ ಗುರುಗಳ ಬೆಸನುಮನನೇಕವ್ರತಂಗಳಂ ಕೈಕೊಣ್ಡು ತೀರ್ಥಯಾತ್ರೆಗೆ ಪೋಗುತ್ತುಂ (ಸೌಇಇ. XI-i, ೬೪-೨೩ ; 1028). **ವೆಸ** : ೨. ಈ ದೇಗುಲದ ವೆಸಕ್ಕೆ ಕಲ್ಕುಟಿಗಂ ರೇವೊಜನೊಡೆಯನಾತಂಗೆ ಗಟ್ಟಿ ಮತ್ತ ೧ (ಸೌಇಇ. XX, ೪೯-೩೭; 1076). ೩. ದಂಡನಾಯ[ಕ] ಕೇಸಿ ಮಯ್ಯಂಗಳ ವೆಸದಿಂ ಸಿಂದವಾಡಿಸಾಯಿರದ ಹೆಗ್ಗಡೆ ಮಗಂ ಚೀಯಮ ರಸರಾ ನಾಡಂ ಪ್ರತಿಪಾಳಿಸಿ (ಸೌಇಇ. XI-i, ೨೪೦-೦೪ ; 1143).

**ಬೆಸಕುಡಿಕೆಯ ನೀರೆಚಿ**=**ಕೊಡದಿಂದ** ನೀರು ತುಂಬುವ ಕೆಲಸ ಮಾಡು : ಅತೀಂದ್ರಿಯರೆಲ್ಲರು ಮದನನ ಮನೆಯ ಬೆಸಕುಡಿ[ಕಾಕಾಂ. ಡು] ಕೆಯ ನೀರೆಜಿವುದಕ್ಕೊಳಗಾದರು (ವೀಶೈವಿಂ. ೪. ೬೦-೭). **ಬೆಸದವ**=**ಕೆಲಸದ** ಆಳು ; ಸೇವಕ : ಬೆಸವವಂಗೆ ಅರೆ ಅಳ್ ತೆಜುವೊದು (ವೃಷಾಂ. ೦೯೨೪, ೬೦-೦೦೩ ; 799); ಕಾಪ್ಪಕೂಟನೆಂಬ ಬೆಸದವಂ . . . ಪೊಟಲ್ಗೆ ವರ್ಧನಂ ಕಂಡು (ವಡ್ಡಾರಾ. ೭೭-೨೨) ; ಬೆಸದವರ್ ಬಸಮಲ್ಲದವರಂತಂಜಿ ಉಟೆಯೆ (ಧರ್ಮಾಮೃ. ೨-೬೯). **ಬೆಸದಾಳು**=**ಬೆಸದವ** : ಕಿಜಿಾಯ ಪೊನ್ನಯ್ಯ ಬಲ್ಲಹನ ಬೆಸದಾಳು ಗಜಾಂಕುಸಚೋಟನ ಮೇಗೆ ದಣ್ಡು ಪೋಗಲು (ಸೌಇಇ. IX-i, ೨೫-೭ ; 948). **ಬೆಸನಂ ಪಾರ್**=**ಅಪ್ಪಣೆಗಾಗಿ ಕಾಯು** ; **ಆಜ್ಞೆಯನ್ನು ನಿರೀಕ್ಷಿಸು** : ಬೆಸನಂ ಪಾರ್ವುವು ಮಂತ್ರದೇವತೆಗಳ್

(ಅಂಕ. ೦-೬೯) ; ಬೆಸನಂ ಪಾರ್ದಿರೆ ಭೂಪತಿಪ್ರತತಿಗಳ್ (ನೇಮಿಪು. ೨-೯೬).
[ದೇ.॥ ತಮಿ. ವಿಯವಮ್]

**ಬೆಸ₂** (ನಾ). ಸರಿಸಂಖ್ಯೆಯಲ್ಲದುದು ; ವಿಷಮಸಂಖ್ಯೆ : ಒಂದೆಂದಡೆ ಬೆಸ ಎರಡೆಂದಡೆ ಸರಿ (ಶೃಶೃಂಗ. ೪. ೩೦೦-೬೯) ; ಪೂಡುವ ಕುದುರೆ ಬೆಸಂ ಕೊಂಡೋಡುವ ತೇರ್ಗೊಂದೆ ಗಾಲಿ ಪೊಡೆವಂ ಪೆಟಿವಂ ಕೇಡಿಂಗಲಸಿ ದೊಡಕ್ಕುಮೆ ನೋಡಿರೆ ರವಿ ಕಡೆದನಸ್ತಗಿರಿಮಸ್ತಕದೊಳ್ (ಅರ್ಧನೇ. ೩-೦೯) ; ಋತುಮಾನ ಬೆಸವಾಗಿ ಬಿಗುವಾನ ಹಿರಿದಾಗಿ ಶಾಂತತೆಯ ತಳೆದಿರುವೆಯಾ? (ಅರಳು. ೬೪೪-೯). [<ಸಂ. ವಿಷಮ. / ತಮಿ. ವಿಯವಮ್ ; ತೆಲು. ಬೇಸಿ]

**ಬೆಸಒಕ್ಕಲು** (ನಾ). ಒಂದು ಬಗೆಯ ತೆರಿಗೆ (?) : ಅಡತೆಜಿ ಕುಂಬಾಜು ದೆಜಿ ಬಿನುಗು ಬೆಸಒಕ್ಕಲು ತಗಡೂರ ಸ್ಥಳಕ್ಕೆ ಸಲುವ ಸುಂಕ (ವ್ಯಾಅಂ. ೦೯೯೬, ೦೬-೨೦ ; ?). [?]

**ಬೆಸಂಗೆಯ್**, ಬೆಸಕೆಯ್, ಬೆಸಕ್ಕೆ, ಬೆಸಗೆಯ್, ಬೆಸಗ್ಗೆ (ಕ್ರಿ). ೧. ಕಂಡರಿಸು ; ಕೆತ್ತು : ಇವಪ್ಪುರೆದೊ ಚೋರಯ್ಯನ ಪೆರ್ಗ್ಗಡೆ ಪೊನ್ನಯ್ಯ ಕಲ್ಲಪ್ಪೆಸಂಗೆಯೊ ದಗ್ಗಾಚಾರಿ (ಶಾಇ. IX-i, ೨೦-೦೨ ; ೪ನೆಯ ಶ). **ಬೆಸಕೆಯ್ :** ೨. ಹೇಳಿದ ಕಾರ್ಯವನ್ನು ನಿರ್ವಹಿಸು ; ಸೇವೆಮಾಡು : "ಪರಿವಸ್ಯಾ . . . ಆರಾಧನಃ, ಉಪಚಾರಃ— ಈ ೧೧ ಬೆಸಕೆಯ್ವುದರ್ಕೆ ಪೆಸರ್" (ಶಬ್ದಾಮ. ೨೦-೦೨೯) ; ಪುಣ್ಯಕ್ಷಯದೊಳ್ ತನ್ನ ವಿದ್ಯೆಗಳುಂ ತನಗೆ ಬೆಸಕೆಯ್ಯದಿರೆ (ಅಂಪು. ೨-೦೯ ವ) ; ದುರ್ಯೋಧನ ನಾಳ್ಗೆ ನೆಲನಂ ಆತಂಗುಟಿದ ನಾಲ್ವರ್ಬೆಸಕೆಯ್ದು ಬಾಟ್ವರ್ (ಗದಾಯು. ೬-೬೦ ವ) ; ಮುನಿಗೆ ಬೆಸಕೆಯ್ಯುತಿರಿಯೆಂದರಸನೆಲ್ಲರ್ಗೆ ಕೈಮುಗಿದನು (ಹರಿಶ. ೯-೨೦). ೩. ಅಂಕೆಗೆ ಬರು: ಬೆಸಕೆಯ್ದುತ್ತು ಸಮುದ್ರಮುದ್ರಿತ ಧರಾಚಕ್ರಂ (ಶಂಶಭಾ. ೦-೦೦೦) ; ಕುವಾರನಾಡು ತಳಕಾಡುಗಳೆಂಬಿವು ಕಯ್ಗೆ ಸಾರ್ದುವತ್ತಡಿಯಿಡೆ ಮುಂಚಿ ಕಂಚಿ ಬೆಸಕೆಯ್ದುದು ವಿಷ್ಣುನೃಪಂ ಕೃಪಾಣಮುಂ ಜಡಿಯುದೆ ಮುಂನೆ ಕೊಂಗನೃಪರಿತ್ರಿಭಂಗಳನೇಂ ಪ್ರತಾಪಿಯೋ (ಎಕ. V. ಬೇಲೂರು. ೦೨೪-೨೦ ; 1133). **ಬೆಸಕ್ಕೆ :** ೨. ಪಗಲ್ ಬೈಗಿರುಳೆನ್ನದೆ ಸಲೆ ಬೆಸಕೈಗುಂ ಮುನಿಗಳ್ಗೆ ನಗದ ಮರ್ಕಟನಿಕರಂ (ಗಂಧ. ೦-೬೩) ; ಉಳಿದ ವರ್ಣತ್ರಯಕೆ ಬೆಸಕೈಪಳತೆಯಲಿ ಶೂದ್ರನು ಕೃತಾರ್ಥನು (ಕುವ್ಯಾಪ. ೬-೦೭) ; ಅಹಿತರೇನಂಜುವರೆ ನಿರ್ಧನನಹ ನೃಪನಯನುಚರರು ಬೆಸಕೈದಿಹರೆ (ತಿಮ್ಮಣಾಂ. ೩-೫೬). **ಬೆಸಗೆಯ್:** ೧. ಬೆಸಗೆಯ್ದೊನ್ ಪ್ರಯೋಳಮನ್ (ಎಕ. IX (8), ಹೊಸಕೋ. ೯-೦೩ ; ಸು. 875) ; ಚಾಮುಣ್ಡೋಜಂ ಬೆಸಗೆಯ್ದೊಂ (ಎಕ. VIII, ಸೊರಬ. ೦೪೪-೩೦ ; 1033). ೨. ಸ್ವಸ್ತಿಶ್ರೀಸಾನ್ತರಸಪ್ರಥುವೀರಾಜ್ಯದುಳ್ಳಿಗೆಗೆ ಬೆಸಗೆಯ್ವಲ್ಲಿ (ಎಕ. VI, ಕೊಪ್ಪ. ೩೯ ; 700) ; ಕರಮದಾರ್ಗೆ ತೊತ್ತಾಗಿ ಬೆಸಗೆಯ್ವುದು (ಪಮ್ಪಾರಾ. ೯-೪೦) ; ಬೆಸಗೆಯ್ದು ಗೀರ್ವಾಣವೃಂದವಮಂ ಮನ್ನಿಸಿ ಕಳುಪಿ (ಶಂಶದಾ. ೦೩-೪೬). **ಬೆಸಗ್ಗೆ:** ೨. ತಂಗಿ ಬೆಸಗೈದಾದರಿಸಲೀ ಯತಿಪತಿಯು (ಕುವ್ಯಾಶ. ೦೯-೬೩) ; ಅಜಭವ ಶಚಿಯರಸ ಮುಖ್ಯರುಗಳೇ ಬೆಸಗೈ[ಪಾಠಾಂ. ಕೈ]ವ ಸೇವಕರು (ಕೊರಡಾ. ೬-೨೬-೩೦) ; ಭೃತ್ಯರ ಗಡಣವಿದು ಬೆಸಗೈದು ಬದುಕಲಿ (ಶಿಭಾಗ. ೪-೦೭-೨೮). [ಬೆಸ$_1$ + ಕೆಯ್$_1$]

**ಬೆಸಂಬಡೆ**, ಬೆಸವಡೆ (ಕ್ರಿ). ಅಪ್ಪಣೆಯನ್ನು ಪಡೆ.—ಹೊಂದು : ಕನ್ನಡದ ಅತ್ವದೊಳ್ ವಿಕಲ್ಪಬಿಂದುವಿಂಗೆ . . .ಬೆಸಂಬಡೆದಂ, ಬೆಸವಡೆದಂ (ಶಮದ. ೦೬೬ ವೃತ್ತಿ). **ಬೆಸವಡೆ :** ಮೇಲಿನ ಪ್ರಯೋಗವನ್ನು ನೋಡಿ. [ಬೆಸ$_1$ + ಪಡೆ$_1$]

**ಬೆಸಂಬೆಸು** (ಕ್ರಿ). = ಬೆಸಂಬಡೆ : ಪೆರ್ಮ್ಮಾನಡಿಗಳ್ ಬೆಸಸೆ ಬೆಸಂಬೆತ್ತು (ಎಕ. XI, ತಳ್ಕ. ೯-೨ ; 810) ; ನೆರೆದೆತ್ತಂ ಭಗಣಂ ಸನೀಕ್ಷಿಸೆ ಬೆಸಂಬೆತ್ತೀಜು ಚಿತ್ರೋದ್ಭವಂ ಬರೆ ಲಕ್ಷ್ಮಚ್ಛಲದಿಂದಮುಬ್ಬಪಥವೀಧೀಭಾಗದೊಳ್ (ಶುಂರ್ಪು. ೯-೩೩). [ಬೆಸ$_1$ + ಪೆಜು$_1$]

**ಬೆಸಂಬೇಳ್** 'ಬೆಸಂಬೇಟು' ನೋ.

**ಬೆಸಂಬೇಟು**, ಬೆಸಂಬೇಳ್, ಬೆಸವೇಳ್, ಬೆಸವೇಳು, ಬೆಸವೇಟು (ಕ್ರಿ). ೧. ಅಜ್ಞಾಪಿಸು ; ಅಪ್ಪಣೆ ಮಾಡು : ಕಡಲೊಳ್ ನೀರ್ದರ್ಪುದ ಭ್ರಾಸಿಗಳಿವು ನೆರವಕ್ಕೆಂದು ಶತ್ರುಂ ಬೆಸಂಬೇಟ್ಕೊಡೆ ನಾನಾವರ್ಣದಭ್ರಾವಳಿ ನೆರೆದು (ಪುಷ್ಪ. ೦೧-೦೩). **ಬೆಸಂಬೇಳ್:** ೧. ಸಂದಾದ್ರೀಸ ಪೋಗಗ್ಗಣಿಗೆನುತೆ ಬೆಸಂಬೇಳ್ವರ್ (ಎಕ. VII, ಶಿಕಾರಿ. ೩-೦೩ ; 1218). **ಬೆಸವೇಳ್ :** ೧. ನೊಸಲಲಿ ಧರಿಸುವುದು ಯುವರಾಜಪಟ್ಟವನೆಂದು ಬೆಸವೇಳ್ದು (ಕೊರಡಾ. ೪-೩-೨೬) ; ಇದು ಚಿತ್ರಮಾದುದು ಬೆಸವೇಳ್ವುದೆನಲಾಗಿ (ಬೋಕಶ. ೩೦-೨೪). **ಬೆಸವೇಳು :** ೧. ಸಂತಸದ ಚಾರರಂ ಕರೆಸಿ ಬೆಸವೇಳಲತ್ಯಂತಪಸ್ತುಗಳ ವಿಸ್ತಾರದಿಂ ನಗರವನನಂತವಿಭವದೆ ಸಿಂಗರದಲೊಪ್ಪವಿಟ್ಟರು (ಶಂಪು. ೬-೩೦). **ಬೆಸವೇಟ್:** ೧. ಕುಬೇರಪ್ರಿಯನಂ ನೀನೆ ಕೊಲ್ಲೆಂದು ಪೃಥುವಿಂಗೆ ಬೆಸವೇಟ$^3$ (ಶಾಪುಂಕು. ೬೦) ; ಅರಸರ್ ಬೆಸವೇಟ್ಟರ್ ಬೇಗಂ ಕ್ಷುರಭಾಂಡಮನೀಯೆಂದು ಬೇಡಿದೊಡೆ (ಕಂಕಶಂ. ೬೮-೦೬) ; ಬೆಸವೇಟ್ಟಂ ಭುವನೈಕಮಲ್ಲನುದಯಾದಿತ್ಯಂಗೆ (ಶಾಇ. XX, ೪೯-೦೭ ; 1076). ೨. (ಯುದ್ಧದ) ಕಾರ್ಯಕ್ಕೆ ನಿಯೋಜಿಸು.— ನೇಮಿಸು : ಇರುಳೊಳ್ ಬಲಂ ನಿಶಾಚರ ಬಲಕುಂಟು ಮಾಣದೆ ಘಟೋತ್ಕಚನಂ ಬೆಸವೇಟ್ಟುದು (ಶಂಶಭಾ. ೦೨-೬). [ಬೆಸ$_1$ + ಪೇಟ್]

**ಬೆಸಕ** (ನಾ). ಕೆಲಸದ ಆಳು ; ಸೇವಕ : ಈ ಗದೆಗೆ ಆರಾದರೂ ಅಳಪಿದವರು ರಗುಪತಿರಾಜವೊಡೆಯರ ಬೆಸಕರಿಗೆ ತಂಮ ಹೆಂಡಿರ ಕೊಟ್ಟವರು (ವ್ಯಾಅಂ.೦೯೬೨, ೩೯-೨೩;1535). [ಬೆಸ$_1$ + —ಕ$_3$]

**ಬೆಸಕಿಲ್?** (ನಾ). ಅಗ್ಗಿಷ್ಟಿಕೆ (?) : "ಪಾವಕಿ (ಕೆ) ಯೆನಲ್ ಬೆಸಕಿಲಕ್ಕು [ಪಾಠಾಂ. ಬೆಸಕಯುಕ್ಕು, ಬೇಸಕೆಯುಕ್ಕು]" (ಶುಂಗಡಾ. ೬೦-೨೦).
[P ಇದು 'ಬೆಸಳಿಗೆ' ಎಂಬುದರ ಅಪಲಿಖಿತವಿರಬಹುದು]

**ಬೆಸಕೆಯ್** 'ಬೆಸಂಗೆಯ್' ನೋ.

**ಬೆಸಕೆಯ್ಯು** 'ಬೆಸಗೆಯ್ಯು' ನೋ.

**ಬೆಸಕೇಳ್** (ಕ್ರಿ). ಅಪ್ಪಣೆಯನ್ನು ಕೇಳು ; ಆಜ್ಞೆಯನ್ನು ಪಾಲಿಸು : ಇತ್ತ ವಿಕ್ರಾಂತತುಂಗನುಂ ಧರ್ಮಪುತ್ರನುಂ ವಾಯುಸುತನುಂ ಪೊಡವಟ್ಟು ಬೆಸಕೇಳ್ವೆ[ಪಾಠಾಂ. ಕೆಯ್ವೆ]ನೆಂದಾಗಳ್ ಪಾಂಚಾಳರಾಜತನೂಜೆಯಿಂತೆಂದಳ್ (ಶಂಶಭಾ. ೬-೬೬ ವ) ; ಇಂದ್ರಜಿತು ತಪೋವನಕೆ ಪೋದನ ಧೀಶನೆ ಪೋಗೆ ಮಾಣಲಾಗಂದೊಡವೋಗಲಿರ್ದಮುದಜುಂ ಬೆಸಕೇಳ್ದಪೆಂ (ಅಜಿಪು. ೬-೦೦೦). [ಬೆಸ$_1$ + ಕೇಳ್]

**ಬೆಸಕ್ಕೆ** 'ಬೆಸಂಗೆಯ್' ನೋ.

**ಬೆಸಕ್ಕೆಸು** 'ಬೆಸಗೆಯ್ಯು' ನೋ.

**ಬೆಸಕೋಲು** 'ಬೆಸಕೋಲ್' ನೋ.

**ಬೆಸಗಲಿ** (ನಾ). ಆದೇಶವನ್ನು ಕೂಡಲೆ ಪಾಲಿಸುವವನು ; ಅಪ್ಪಣೆಯಂತೆ ನಡೆಯುವವನು : ಆಳ್ದನ ಬೆಸನಂ ಮರಳಿ ಕೇಳದ ಬೆಸಗಲಿಗಳುಮಂ . . . ನೋಡಿ (ಗದಾಯು. ೯-೩೪ ವ) ; ದಾದಿಕಾಜವೆಸವಮರರದೇಂ ಬೆಸಗಲಿಗಳ್ ಬರ್ಪರೊ ಮಾನಸವೇಗರ್ ಪವನವೇಗರಿರುಳುಂ ಪಗಲುಂ (ಅಜಿಪು. ೩-೬೬). [ಬೆಸ$_1$ + ಕಲಿ$_2$]

**ಬೆಸಗುಡು** 'ಬೆಸಗೊಡು' ನೋ.

**ಬೆಸಗೆ** 'ಬಿಸುಗೆ$_1$' ನೋ.

**ಬೆಸಗೆಯ್** 'ಬೆಸಂಗೆಯ್' ನೋ.

**ಬೆಸಗೆಯ್ಯು**, ಬೆಸಕೆಯ್ಯು, ಬೆಸಕ್ಕೆಸು (ಕ್ರಿ). ೧. ಕಂಡರಿಸುವಂತೆ ಮಾಡು ; ಕೆತ್ತಿಸು : ನಿಮ್ಬಿಚ್ಚರ ಬಮ(ಮ್ಮ)ಯ್ಯ ಬೆಸಗೆಯ್ಸಿದೊ ಮಾಧವಯ್ಯನ ಲಿಖಿತಂ (ಇಕ. XII, ೨೦೯-೨೨ ; 814). **ಬೆಸಕೆಯ್ಯು:** ೨. ಅಪ್ಪಣೆಯನ್ನು ಪಾಲಿಸುವಂತೆ ಮಾಡು ; ಅಂಕೆಗೆ

**ಶರು:** ಬೆನ್ನರನಡಿಗೊತ್ತಿ ಮಂಡಳಿಕರಂ ಬೆಸಕೆಯ್ಸಿ ಕುಜುಂಬರಂ ನಿರಾಕರಿಸಿ (ಜಾಹ. ೬-೮೮) ; ಬೆಸಕೆಯ್ಯದ ಮಣ್ಣ [ಳ] ಮಂ ಬೆಸಕೆಯ್ಸಿದನಂಜದಿರ್ದ ರಿಪುಘಟಪರನಂಜಿಸಿದಂ (ಶಾಶ. ೯-೨-೦೦೯ ; 1058). **ಬೆಸಕೈಸು.**

**ಬೆಸಕೆಯ್ಸಿಕೊಳ್, ಬೆಸಕೈಸಿಕೊಳ್** = ಕೆಲಸವನ್ನು ಮಾಡಿಸಿಕೊಳ್ಳು ; ಸೇವೆಯನ್ನು ಕೈಗೊಳ್ಳು : ನಿಮಗೆ ಬೆಸಕೆಯ್ವೆವೆಮ್ಮಂ ಕ್ರಮದಿಂ ಬೆಸಕೆಯ್ಸಿಕೊಂಡು ನೆಲನಂ ಪೂರ್ವಕ್ರಮದಿಂದಾಳ್ವುದು (ಗದಾಯು. ೧೦-೦೬); ಆದರದಿಂ ಬೆಸಕೈಸಿಕೊಳ್ವನೊವೆರ್ದಲೊಳ್ ದೇವಸಂಕುಲಮಂ (ಧರ್ಮಾಮೃ. ೬-೦೬೨) ; ಕುಂತೀಸೂನುಗಳ ಬೆಸಕೈ[ಪಾಠಾಂ.ಗೈ]ಸಿಕೊಂಬುದು ಸೇರದೇ ನಿನಗೆ (ಕುಮಾವ್ಯಾ. ೦೦-೦೩). [ಬೆಸ$_1$ + ಕೆಯ್ಸು]

**ಬೆಸಗೈ** 'ಬೆಸಂಗೆಯ್' ನೋ.

**ಬೆಸಗೊಡು**, ಬೆಸಗುಡಂ (ಕ್ರಿ). ಅಪ್ಪಣೆ ಕೊಡು ; ಆಜ್ಞಾಪಿಸು : ನಿಜಪರಿವಾರಕೆ ಬೆಸಗೊ[ಪಾಠಾಂ. ಗು]ಡು ಮಗನೇ (ಹರಿಶ. ೦೨-೩೦೮ನೆ) ; ಜಟ್ಟಿಗಭೃತ್ಯರ್ಗೆ ಬೆಸಗೊಟ್ಟು ಹಿಡಿತರಲಟ್ಟಿದ ಖಳಕುವರನನು (ವೀರಭದ್ರ. ೦೨-೩೩). **ಬೆಸಗುಡು :** ಬೆಸಗುಡು ದೈತ್ಯಾದೀಶ್ವರ ನೀ ನಿರೂಪಿಸಲಾನು ಮಿತಿಯ ವಿಚಾರಿಪನೆ (ಮೋಹತ. ೩೩-೪೦). [ಬೆಸ$_1$ + ಕೊಡು$_1$]

**ಬೆಸಗೊಳ್**, ಬೆಸಗೊಳು, ಬೆಸಗೊಳ್ಳು (ಕ್ರಿ). ಕೇಳು ; ವಿಚಾರಿಸು : ಪ್ರಶ್ನಿಸು : "ಪ್ರಶ್ನಃ, ಅನುಯೋಗಃ, ಪೃಚ್ಛಾ—ಈ ಮೂಱು ಬೆಸಗೊಂಬುದಱ ಪೆಸರು" (ಶಾಶಾ. ೯೩); ಪ್ರಿಯಾತಂಶಲವಾರ್ತೆಯಂ ಬೆಸಗೊಂಡು ಸ್ಥಿರವಿರ್ದು ಪ್ರಭು ನುಡಿಯೆ (ಶಬರ. ೨-೬) : ವಿರಾಟಂ ನಿನ್ನ ಬಣ್ಣಣಮೇನೆಂದು ಬೆಸಗೊಳೆ (ಶಂಕರಾ. ೯-೩೩ಪ) ; ವನಚರರು . . . ಕೌಶಿಕಮುನಿಯು ಬೆಸಗೊಂಡರು ಮಹೀಸುರವರ್ಗಸಂಗತಿಯ (ಕುವ್ಯಾಕ. ೦೬-೦೯). **ಬೆಸಗೊಳು :** ಹಸೆಯ ಮೇಲಣ ಮಾತ ಬೆಸಗೊಳಲಟ್ಟಿದರೆ ಶಶಿಧರನ ಹತ್ತಿರಕ್ಕೆ ಕಳುಹಿದರೆಮ್ಮವರು (ಮಾಶಾರೀ. ಬಿ. ೨೫-೯೮) ; ದುರ್ಯೋಧನನು ತೆಗೆದಪ್ಪಿದನು ಬೆಸಗೊಳುತಿವನ ಸಂಗತಿಯ (ಸಂಭಶ. ೦೯-೨೦); ಏನನೊ ಕೇಳುತಲಿರುವಳದೇನೆಂದು ಬೆಸಗೊಳು (ಇಂತಾಶ. ೦೬೬-೨೯). **ಬೆಸಗೊಳ್ಳು :** ಆಡುತ್ತ ಹಾಡುತ್ತ ಭಕ್ತಿಯ ಮಾಡಬಹುದು ಲಿಂಗಕ್ಕೆ ಅದು ಬೇಡದು ಬೆಸಗೊಳ್ಳದು (ಬಸವ. ೮೯೩) ; ಭೀಮ ಪಾರ್ಥರ ಬಲುಹ ಬೆಸಗೊಳ್ವ ತದೀಯಶ್ರವಣದೃಷ್ಟಿಗಳ (ಕುವ್ಯಾಕ. ೧೩-೬೦) ; ವಸುಷೇಣನು . . . ಗೃಹಮಹತ್ತರರನ್ನು ಬೆಸಗೊಳ್ಳುತ್ತಿರುವಾಗ (ಕಾವ್ಯಸ. ೬೮). [ಬೆಸ$_1$ + ಕೊಳ್$_1$]

**ಬೆಸಗೊಳು** 'ಬೆಸಗೊಳ್' ನೋ.

**ಬೆಸಗೊಳ್ಳು** 'ಬೆಸಗೊಳ್' ನೋ.

**ಬೆಸಣಿಕೆ** (ನಾ). (?) : ಅಚ್ಚು ಬೆಸಣಿಕೆ ಪೋಪರ ಸರ್ವಗತಿ ಮಂದ ಅಚ್ಚು ಕಂಪನ ಗಹಗಪಿಕೆ ಪೆಚ್ಚು ತಿಪಡಿ ಪಿಷಮಂಗಳೆಂಬ ಚಿಕಳಿ ಸಸ್ತಿತಾ ಭೃಂಗಿ ನಾಟ್ಯಗಳು (ದೇವಾಂಶು. ೫-೦೬೯). [ ? ]

**ಬೆಸದ** 'ಬೆಸ$_3$' ನೋ.

**ಬೆಸದಪ್ಪು** (ಕ್ರಿ). ಆಜ್ಞೆಯನ್ನು ಮೀರು ; ಅಪ್ಪಣೆಯನ್ನು ಉಲ್ಲಂಘಿಸರಿ : ಬೆಸನೆಂದು ಪೂಣ್ದು ದೇವರ ಬೆಸನಂ ಸುಕುಮಾರರೆನಿಪ ರಾಜಕುಮಾರರ್ ಬೆಸದಪ್ಪಿದರೆನಗನಿತೊಂದು ಸ್ಪೃಷ್ಟ ಸಮನಿಸದೆ ಬರ್ಪಂಕೆ ಬಂದೆಂ ನೃಪತೀ (ಅಜಿಪು. ೧೦-೩೨). [ಬೆಸ$_1$ + ತಪ್ಪು$_1$]

**ಬೆಸನ್** 'ಬೆಸ$_1$' ನೋ.

**ಬೆಸನ$_1$** 'ಬೆಸ$_1$' ನೋ.

**ಬೆಸನ$_2$**, ಬಸನ, ವೆಸನ (ನಾ). ೧. ಅಳಲು ; ದುಃಖ ; ವ್ಯಥೆ : "ಬೆಸನಮೆನೆ ವ್ಯಸನ" (ಕಶಬ್ದ. ೦೨೩) ; ಒದಂಕಿನಲ್ಲಿ ಬೆಸನ ತುಂಬಿದಾಗ ತನ್ನ ಗೌಡತನದ ಮೇಲೇ ಅವರಿಗೆ ಜುಗುಪ್ಸೆ ಹುಟ್ಟಿತು (ಶಗ್ರಾಬ. ೨). ೨. ಆಸಕ್ತಿ ; ತತ್ಪರತೆ : ಪುಸಿಯರಸುತನದ ಬೆಸನದೊಳ್ ತೊಡರ್ದು ಸಿರದಿರ್ದನಪ್ಪೊಡೆ ಎನ್ನ ಕೆಳೆಯನೊಳಗನಱವಪಂ (ಶಂತಶ. ೦೨೬-೩) ; ಬೆಸನಂ ಪಠಿಹಿತದಲ್ಲಿಯೆ ಬೆಸನಂ ದ್ವಿಜದೇವಪೂಜೆಯಲ್ಲಿಯೆ ನೆಗಟ್ದಾ ಬೆಸನಂ ನೋಂಪಿಗಳಲ್ಲಿಯೆ ಬೆಸನಂಗಳ್ ಶಾಂತಿದೇವಿಯೊಳ್ ಪೆಱಪೋಳವೇ (ಎಕ. V, ಹಾಸನ. ೦೦೬-೩೫; 1123). ೩. (ಸಪ್ತವ್ಯಸನಗಳಿಗೆ ಸಂಬಂಧಿಸಿದಂತೆ ಉಂಟಾಗುವ) ಅಭ್ಯಾಸ ; ಚಟ ; ಗೀಳು : ಬೆಸನಂಗಳ್ ತನುವಿಚ್ಛೆಗೊಯ್ವುವು (ಕಾದಂಬ. ೩೬೯) ; ಬೇಟೆಯುಂ ಬೆಸನಮೆಂದಾರೇಳಿ ಪರ್ ಲೋಕದೊಳ್ (ಸೂಕ್ತಿಸು. ೩-೯೬). **ಬಸನ :** ೧. ಆ ರಚನೆಯೊಳೇಂ ಬಸನಂ ತನಗನಿತಱ ಬೇವಸಮೇಂ (ಶಬರ. ೮-೦೨) ; ಬಸನಮನುಂಟು ಮಾಡದಿರು ಮಾನ್ಯರೊಳೊಪ್ಪೆ ವಿನೀತನಾಗು (ಬಂಶಾ. ೦೦-೦೯). ೨. ಬಲ್ಮೆಗಂ ಬಸನಕ್ಕಂ ಸದಿಯಪ್ಪ ಕಿಱುವೇಂಟೆಯುಂ ಪೆರ್ವೇಂಟೆಯುಂ ಮಲ್ಲದುಟೀದ ಬೇಂಟೆಯುಂ ಬೇಂಟೆಯೆನ್ನೆಂ (ಶಬ್ದಾ. ೩ ೯೬ ಪ): ಬಸನಮಂ ಸದ್ಧರ್ಮ್ಮದೊಳ್ ತಾಳ್ದಿದಂ (ಎಇ. XIX, ೨೨೯ ೨೩ ; 1022). ೩. ಬಸನಂಗಳಲ್ಲಿ ಚಿತ್ತಂ ಬಸದಪ್ಪಪೊಲಮುಳಮಪ್ಪ ಜೈನಾಗಮದೊಳ್ ಬಸದಾಗೆ ಮರ್ತ್ಯನೇಂ ಸಾಧಿಸನೇ ನಿರ್ವಾಣಪದವಿಯಂ ಕ್ರಮದಿಂದಂ (ಸಮುಶ. ೬-೩೩) ; ತನ್ನ ಗುರುಗಳ ರೂಪನೆ ಕರುವಿಡಿಸುವ ಬಡೆಯಿಸುವ ಕಂಡರಿಸುವ ಬೆಸನೆ ಬಸನವಾಗಿ (ಅರ್ಥಸೇ. ೨-೩೯ ಪ). ೪. ಇಂದ್ರಿಯಸಾಪೇಕ್ಷೆ: ಇಂದ್ರಿಯಚಾಪಲ್ಯ : ಬಸನದೊಡಂಬಡಿಂಗಲಸಿ ಮಾಣ್ದೊಡೆ . . . ಪೇಸದವಳ್ಗೆ ಮತ್ತಮಾಟಿಸುವುದೆ (ಶಂಶಬ. ೯-೯೨) ; ಬಸನದ ವಸದಿಂದಂ ಪುಟ್ಟಿಸಿದಂ ಜನಕನೆ (ಸಮುಶ. ೯-೯೨) ; ಪಱಪೆಂಡಿರೆಮ್ಮ ದಿವಸದೊಳೀತಂ ಪುಟ್ಟದೆ ಪರಿಜು ಪ್ರಾಯಮುಂ ಸುಸಿಲುಂ ಬಸನಮುಂ ಬಱದೊಱ ಯೋದುದೆನೆಯುಂ (ಅರ್ಥಸೇ. ೫-೨ ಪ). **ವೆಸನ :** ೧. ಹಸಿವು ವೆಸನ ತೃಷೆಯಾಲಸ್ಯ ಮೋಹಮೆಂಬೆಸಕವುಳ್ಳುದು ನರದೇಹ (ಕುಂನಿ ೦-೦೫); ವೆಸನದಿಂ ಕಂದಿ ಕಾರ್ಶ್ಯಮನಾಂತು ಸಂತತಂ ಸುಖಲೇಶಮಂ ತಿಳಿಯದೆ . . . ಜೀವಮಂ ಧರಿಸಿರಲು ರಸಿಯೊಳೆಂತಹುದಬ್ಜನೇತ್ರೆ (ವಿಂಕಾದ. ೫-೯-೨) ; ವೆಸನಮಯಸಂಸಾರದಲಿ ವಿನೋದವ ಕಾಣ್ಬ ರಸಿಕತೆಯೆ ಯೋಗವು (ಮಂಕುತಿ. ೨೯೦). [< ಸಂ. ವ್ಯಸನ]

**ಬೆಸನಂಗೊಳ್** (ಕ್ರಿ). ಅಪ್ಪಣೆಯನ್ನು ಪಡೆ; ಅನುಜ್ಞೆಯನ್ನು ಹೊಂದು: ಚ್ಯವನಂ ತನ್ನಾಶ್ರಮಮಂ ವಿಕಟ್ಟಿಟೆದ ಋಷಿಗಳ್ಗೊಪ್ಪಿಸಿ ಬೆಸನಂಗೊಂಡು ತಾನುಂ ಸುಕನ್ನೆಯುಂ ವಾಯುಸುತನ ಪೆಗಲನೇಱ (ರಾಮಾಶ್ವ. ೬೦-೦೨). [ಬೆಸನ$_1$ (< ಬೆಸ$_1$) + ಕೊಳ್$_1$]

**ಬೆಸನಭಾಷೆ** (ನಾ). ಇಂದ್ರಿಯವ್ಯಸನವನ್ನುಂಟುಮಾಡುವ ಮಾತು : ಸಸಿನೆ ಖಳನೆಡೆಗೈದಿ ಲಸುಮಾಸ್ತ್ರನಂಗನೆಗೆ ಬೆಸನಭಾಷೆಯನಿತ್ತು ಕರೆತಂದು ನೀನು ಮೋಹಿಸಬಹುದೆ (ಪಪು. ೯-೯೦). [ಬೆಸನ$_2$ + ಭಾಷೆ]

**ಬೆಸನಿ**, ಬಸನಿ (ನಾ). (ಸಪ್ತವ್ಯಸನಗಳಲ್ಲಿ ಯಾವುದಾದರೊಂದು) ಗೀಳಿರುವ ವ್ಯಕ್ತಿ ; ಚಟವುಳ್ಳ ವ್ಯಕ್ತಿ : ಪುಸಿವವರಂ ಕೊಲ್ವವರಂ ಬೆಸನಿಗಳಂ ಕಳ್ಳರಪ್ಪರಂ ಕಂಡೊಡೆ ಸಂತಸುವರ್ ಪುರುಷರ್ (ಧರ್ಮಾಮೃ. ೯-೨೦); ಬೆ[ಪಾಠಾಂ. ಬ]ಸನಿಗಳ ಗೊಟ್ಟ ತನಗಾಗಿಸೆ ಸಂತಸದೊಮಪನುತ್ತ ಮರ ಗೊಟ್ಟಿ ಕರಂ ಕಸಱಸಿದುದೆರ್ದೆಯನೇಂ ಸೊಗಯಿಸುಗುಮೆ ಚೋರಂಗೆ ಚಂದ್ರಿಕಾವಿಸ್ತಾರಂ (ಪರ್ಶ್ವಪು. ೨-೩೫). **ಬಸನಿ :** ಬಸನಿಯೆ ಗೆಲ್ಲಕಾಱನ ನೆಗಟ್ತಿಗೆ ಕೇಳಿಗೆ ನಾಡೆ ಗೆಂಟನಂ ಬೆಸಗೊಳವೇಡ (ಅದಿಪು. ೦೨-೮೮); ಬಸನಿಗಳೊಳ್ಳಿಸ್ಕ ಬಸನಿ (ಸಮುಶ. ೭-೩೯) ; ಬೇಟಕಾರ್ತಿಯಾರಿಪರೀಕಿನಲ್ ಬಸನಿಗಳ್ ಕಡುಬದ್ದಿಯರ್ (ಬಂಪು. ೩-೯೮). [ < ಸಂ. ವ್ಯಸನಿನ್ ]

**ಬೆಸನಿಗ**, ಬಸನಿಗ (ನಾ). ದುಶ್ಚಟವುಳ್ಳವನು ; ವ್ಯಸನಿ : ಅಡಗಿನ ಕಡುಬೆಸನಿಗನೊಡಲಡಗನೆ . . . ವದನದೊಳು ಗಡ ಗಿಡಿಪರ್ (ಪ್ರಭುಶ. ೨೦-೨೦) ; ನೀಂ ಜೂದಿನ ಬೆಸನಿಗನಾತಂ ಶಿವಪೂಜಾಬೆಸನಿ (ಕಾವ್ಯದೇ. ೩-೬೬). **ಬಸನಿಗ :** ಅಡಗಿನ ಬಸನಿಗನ್ಮೆ ತಿನ್ ಒಡಿಯೆಂದವನೆತ್ತಗನವನ

ಬಾಟೊಳ್ ಗಿಡಿವರ್ (ಅನಿಕ. ೩-೯೬) ; ಮಧು ಮದ್ಯದ ಬಸನಿಗ ಕುಡಿ ಮಧು ಮದ್ಯಮನೆಂದು ಸಪ್ತಧಾತುದ್ರವಮಂ ವಿಧಿಯಿಂ ತಂದೆಟಿವರ್ (ಸಂಕುಮಾ. ೧೦-೯೩) ; ಅಸುಕೆಯು ಕೆಂದಳಿರುಯ್ಯಲನೊರ್ವಗಪೂರ್ವ ಯವ್ವನೋನ್ನತಿ ಬಸನಿಗನನೋಲೈಸುವ ಬೇವಸೆಯಿಂದವನ ಮನವನೇಱು ವಂತೇಱು (ಧಾರಖ. ೦೩-೬೯ ಪ). [ ಬೆಸನ$_2$ + — ಇಗ ]

**ಬೆಸನಿಸು** (ಕ್ರಿ). ದುಃಖಿಪಡು : ಗಲ್ಲ ಹಿಡಿಯುವ ಕೆಲರು ಗಲ್ಲ ಹಿಂಡುವ ಕೆಲರು ಬೆಸನಿಸುವ ಕೆಲರು ಬೆದರಿಸುವ ಕೆಲರು (ಪಶ್ಚ. ೬-೨).

[ ಬೆಸನ$_2$ + — ಇಸು$_3$ ]

**ಬೆಸನೀ** (ಕ್ರಿ). ಅಜ್ಞೆಮಾಡು ; ಆದೇಶಿಸು : ಅಪಾತ್ರರನನಿಬರಂ ಬೆಸನಿತ್ತು ಬಸವನನನುನಯದೊಳೊಡಗೊಂಡು ಬರಲೆಂದಟ್ಟಲು (ಬಸಪು. ೩-೬): ಪೋಗಿಂದ್ರಕೀಲಕ್ಕೆ ಪೆಂಪಡರ್ದಾಧ್ಯತ್ಮಪವಾಂಪುದೆಂದು ಬೆಸನಿತ್ತಂ ವ್ಯಾಸಂ (ಕಶಕ. ೨-೦೦೬); ಶ್ರೀರಘುಜನನ್ನನಡವಿಯೊಳ್ ಬಿಸುಟ್ಟುದೆಂದು ಲಕ್ಷ್ಮಣಂಗೆ ಬೆಸನಿತ್ತು ಕಳಿಪಿದನ್ಯೆ ! (ರಾಮಾಶ್ವ. ೯೦-೨೭).

[ ಬೆಸನ$_1$ ( < ಬೆಸ$_1$ ) + ಈ$_2$ ]

**ಬೆಸನು** 'ಬೆಸ$_1$' ನೋ.

**ಬೆಸಮಗ** 'ಬೆಸವಗ' ನೋ.

**ಬೆಸಮುಟ್ಟು** (ನಾ). ಕಾರ್ಯದ ಸಾಧನ,—ಉಪಕರಣ: ಕನ್ನಡಿಯುಂ ಕಂಧಿತ್ತಡೆ ಮುನ್ನಾಕಾಶಕ್ಕೆ ನೆಲಕೆ ಬೆಸಮುಟ್ಟಂಗಂ ತನ್ನಯ ಕಟ್ಟಿದ ಸುಱಿಗೆಗೆ ಮನ್ನಣೆಯಿಂ ತೋಱಿ ಬಱಿಕೆ ನೊ:ರ್ಪಮಾರ್ಡರ್ (ಶಮಪ. ೦೨-೪).

[ ಬೆಸ$_1$ + ಮುಟ್ಟು$_3$ ]

**ಬೆಸಲ್**, ಬೆಸಲು, ಬೆಸಲೆ$_1$ (ನಾ). ೧. ಹಡೆಯುವಿಕೆ ; ಹೆರಿಗೆ ; ಪ್ರಸೂತಿ: 'ಬೆಸಲಳಲ್', 'ಬೆಸಲೆ$_2$' ಪರಾ. **ಬೆಸಲು** : ೨. ಹುಟ್ಟು; ಜನನ : ನಿಸಿಯು ಬೆಸಲಿಗೆ ಸುಸಿಲ್ ಮಿಸುಕುವಂತೆ (ಗಿರಿಜಾ. ೩೬-೯).

**ಬೆಸಲೆ$_1$** : ೨. 'ಬೆಸಲೆಗೊಳ್' ಪರಾ.

**ಬೆಸಲಾಗು, ಬೆಸನಾಗು**=೧. ಹೆರು ; ಪ್ರಸವಿಸು : ಹೆತ್ತ ತಾಯಿ ಮಗನ ನುಂಗಿ ಶಿಶು ತಾಯ ಬೆಸಲಾಗಿ (ಅವತಂ. ೩-೦೭) ; ವಸುಧೆಗತಿಬಲ ನೊಬ್ಬ ಕಂದನ ಬೆಸಲಹೆನು (ಕಃಪ್ಪಾಳ. ೪-೩೬). ೨. ಈಯು ; ಕರುಹಾಕು : ಬೆಸಲಾದಾವುಗಳಂ ಪೆರ್ಬುಲಿಯಿಂ ಮುಸುಕುವ ಬಲ್ಪಿಡಲಿಂ . . . ದಾರುಣತರಮಪ್ಪ ಪಸರ್ಗಂ ಮಾಡಿದಳು (ಶಯುಕಾ. ೦೬-೦೪); ಪಶುವೆಂದುಂ ಬೆಸಲಾಗಿ ನೋಡಿ ಕಱುವಂ ಬಾಯ್ವಿಟ್ಟು (ಶೃಕಪು. ೯-೬೮); ತುರಂಗದ ಮೊತ್ತಗಳು ತಮತಮಗೆ ಮೋಹರಿಸುತ್ತ ಬರಸಿಡಿಲಂತೆ ಗರ್ಜಿಸಿ ಪೃಥ್ವಿ ಬೆಸನಾದಂತೆ ಬರುತಿರೆ (ದೇಶೀಕ್ರ. ೩೮). ೩. ಬೆಳೆ ; ಫಲಬಿಡು : ನೆಲನೆಲ್ಲಂ ಬೆಸಲಾಗೆ ಧಾನ್ಯತತಿಯಂ . . . ಬಲುಭಾಗ್ಯಂ ದೊರೆಗಪ್ಪುದೈ (ಕೋಪಾಕ. ೩೬). ೪. ಉತ್ಪತ್ತಿಯಾಗು; ಉಂಟಾಗು : ಬಾಪತ್ತರನಿಯೋಗಂ ಬೇಱಿೊಂದು ಮಾಹೇಶ್ವರ ತೇಜ[ಕ್ಕೆ]ಲಾಕೆ ಬೆಸಲಾದಂತಿರೆ (ಸಂಪಶ. ೬-೦೬).

[ದೇ.॥ ತುಳು. ಬಿಜಿಲು, ಬಿಜೆಲು ; ಗದಬ. ಪಂಗ್]

**ಬೆಸಲಳಲ್** (ನಾ). ಹೆರಿಗೆಯ ನೋವು; ಪ್ರಸೂತಿಯ ಬೇನೆ : ತಾಯ ಮೊಗ ನೋಡೆ ಮಗು ಬೆಸಲಳಲನೋತು ಸೈರಿಸುವಂತೆ (ಗೂಕೊ್ಣಕಾ. ೦೨-೪೯೬); ನಿನ್ನ ನೀರಿಂಪಾರ ಬೆಸಲಳಲ ತೊಳೆವೆ ? (ಗಿರಿಜಾ. ೨೯-೬೬).

[ ಬೆಸಲ್ + ಅಳಲ್$_2$ (<ಅಬಲ್$_2$) ]

**ಬೆಸಲು** 'ಬೆಸಲ್' ನೋ.

**ಬೆಸಲೆ$_1$** 'ಬೆಸಲ್' ನೋ.

**ಬೆಸಲೆ$_2$** (ನಾ). (ಮಗುವನ್ನು) ಹೆತ್ತವಳು; ಬಾಣಂತಿ : ಆ ಇರುಳೊ ಳರಸಿ ಬೆಸಲೆಯಾಗಿ ಮಗನಂ ಪೆತ್ತೊಳ್ (ಪಶ್ಚಾರಾ. ೦೯೨-೬); ದಿಂಡಿಭೆಗೆ ಗರ್ಭಂ ಪುಟ್ಟಿ ನವಮಾಸಂ ಶೀದಿ ಬೆಸಲೆಯಾಗಿ ಪೆಣ್ಗೂಸಂ ಪಡೆದು (ರಜುಶ. ೬-೩೦ ಪ): ಎಲ್ಲಿ ನೋಡಿದಡಿಳೆಯ ಬೆಸಲೆಯುಂಬುವೊಲೆಲ್ಲಿಯನುಂ ಪಸರಿಸಿದ ಸೈನ್ಯಮುಂ ನೋಡುತ್ತ (ಜಾಕ್ಶಾ. ೨೪-೨೩).

[ ಬೆಸಲ್ + — ಎ$_3$ ]

**ಬೆಸಲೆಗೊಳ್** (ಕ್ರಿ). ಹುಟ್ಟು; ಜನಿಸು : ತ್ರಿಗ್ರಹಮಲ್ಲಿರಲ್ ಬೆಸಲೆ ಗೊಂಡರ್ ಗಂಡನುಂ ಗಂಡುದೊಟ್ಟಿನಿಕಂ (ಜಾತಕ. ೨೦-೨೦).

[ ಬೆಸಲೆ$_1$ (<ಬೆಸಲ್) + ಕೊಳ್$_1$ ]

**ಬೆಸವಗ,** ಬೆಸವುಗ (ನಾ). ಒಡೆಯನ ಅಪ್ಪಣೆಯಂತೆ ನಡೆಯುವ ವನು; ಸೇವಿಸುವವನು : ಆ ಗೊಯ್ದುಸೆಟ್ಟಿಯ ಬೆಸವಗಂ ಅಕ್ಕಸಾಲೆ ಚಟ್ಟೋಜನ ತಂಮ್ಮಂ . . . ಕೆಱಿಯಂ ಕಟ್ಟಿಸಿದಂ (ಎಕ. VII. ಶಿಮೊ. ೯೩-೪೯; 1172 ?); ಆತನ ಬೆಸವಗ ತಾಳಗುಪ್ಪೆಯ ನಾಯ್ಕನ ಮಗ ಚಿಕವೊಡೆಯ ತಳ್ತಿಱಿದು (ಎಕ. VIII, ಸೊರಬ. ೨೦೬-೯; 1243).

**ಬೆಸಮಗ :** ಶ್ರೀ ಚಣ್ಣದ ಬೆಸನುಗಂ ಕಮ್ಮಬಿಬಮ್ಮಂ (ಎಕ. VII, ಶಿಕಾರಿ. ೩೦೭-೪ ; 1016).

**ಬೆಸಮಕ್ಕಳ್, ಬೆಸಮಕ್ಕಳು** (ಬಹುವ) : ಇಲ್ಲಿಯ ಬೆಸಮಕ್ಕಳಾ ರೆಂದೊಡೆ (ಎಕ. III (R). ಹುಣಸ. ೨೦೪-೬; 915); ಬಸಿವ ಸೋರ್ಕಿಂದಾನೆ ಗಳ ವಾಜಿವದನದಿಂದೊಸರ್ವ ಲಾಲಾಜಲದಿಂದ ಬೆಸಮಕ್ಕಳೊಗುವ ಮೈಬೆಮರಿಂದಾ ಬೀದಿ ಕೆಸರ್ವಡೆದಿಹುದನವರತ (ಕುಮಾರಾಂ. ೪-೦೦೭).

[ಬೆಸ$_1$ + ಮಗ]

**ಬೆಸವಡೆ** 'ಬೆಸಂಬಡೆ' ನೋ.

**ಬೆಸವರಿಗೆಯ್** (ಕ್ರಿ). (ಅಲಂ) ಆಲಿಂಗಿಸಲು ಮುಂದುವರಿ (?) : ಬೆಸವರಿಗೆಯ್ವ ಬೇಸ[ಱ]ಸುವಿತ್ತುದನೆತ್ತುವ ಮೇಗುದೋರ್ವ ಕಂಟಿಸುವ ಕನಲ್ವ ಕಣ್ಣಯಿಸುವೇಳಿದನಂ ತಿಳಿಪಲ್ ಮನಂಗೊಳಲ್ ಬಸಯಿಸ ಲಿಂಬುಕೆಯ್ಸಲೊಳಪೊಯ್ಸಲೊಡಂಬಡಿಸಲ್ ಪ್ರಮೋದದಿಂ ಪೊಸಯಿಸ ಲಾಱಿಸಲ್ ನೆರೆದುಮೊಲ್ಲದೆ ಚಿತ್ರಮುಂದಾತ್ತಚಿತ್ತೆಯಾ (ಶಾಂತಿಪು. ೬-೦೦೩).

[< ಬೆಸ$_2$ + ಪರಿ$_2$ + ಕೆಯ್$_1$]

**ಬೆಸವೆಣ್,** ಬೆಸವೆಣ್ಣು (ನಾ). ಊಳಿಗದವಳು ; ದಾಸಿ ; ಸಿಂಗರಿಸುವ ಬೆಲೆವೆಣ್ಗಳ್ ಬಿನದಕ್ಕೆಗಣಿಪಂ ಸಾರುವ ಬಿಡುವೆಣ್ಗಳ್ ಪಿಂಗದೆ ಹಣಿಗಿ ನಡೆವ ಬೆಸವೆಣ್ಗಳ್ . . . ಸೊಗಸಿದುದು (ಜಯಸಾ. ೦೨-೦೩); ಬೆಲೆವೆಣ್ಗಳಾಡುಂಬೊಲ ಬೆಸವೆಣ್ಗಳ ನೆಲದಾಣ (ಕುಮಾರಾಂ. ೪-೦೦೬). **ಬೆಸವೆಣ್ಣು :** ಬಿಡುವೆಣ್ಣು ಬೆಲೆವೆಣ್ಣು ಬೆಸವೆಣ್ಣು ಮನೆವೆಣ್ಣೊಡನೆಯ್ದುಂದಾ ರಾಮಹನು ಬಿಡದೆ ನೋಡಿದರು (ಕುಮಾರಾಂ. ೩೬-೬೪); ಬಿಡುವೆಣ್ಣು ಬೆಲೆವೆಣ್ಣು ಬೆಸವೆಣ್ಣುಗಳ ವಂಗಡವಾ ಪುರದೊಳೊಪ್ಪಿದವು (ರಾಜುಶ. ೩-೯೩).

[ ಬೆಸ$_1$ + ಪೆಣ್ ]

**ಬೆಸವೆಣ್ಣು** 'ಬೆಸವೆಣ್' ನೋ.

**ಬೆಸವೆಱು** (ಕ್ರಿ). ಕಾರ್ಯವನ್ನು ಒಪ್ಪಿಕೊಳ್ಳು ; ಕೆಲಸವನ್ನು ಕೈಗೊಳ್ಳು : ರಟ್ಟಿವಾಡಿಯ ಬೆಸವೆತ್ತು ಎದಿನುಪ್ಪ್ × × × ತುರಗ ಸಮೂಹಮಾ ಪೊಕ್ಕು (ಎಕ. X, ಗೌರಿಬಿ. ೬೬-೪ ; ಸು. 750) : ಪಡೆ ವಳ್ಳಂಗೆ ರಥಾಂಗಹೇತಿ ನಡೆಯಲ್ವೇಱ ಬೇಗಮಾ ನಿನ್ನ ಪೆರ್ಮಡೆಯಂ ನೀನೆನೆ ನಮ್ಮುಮೂರ್ತಿ ಬೆಸವೆತ್ತು . . . ಪಡೆಯಂ ಕೈಸನ್ನೆಗೆಯ್ದುದ್ಧತಂ ನಡೆಯಲ್ವೇಱೆಂದೊಡೆ (ಶಾಂತಿಪು. ೩-೦೬೩). [ ಬೆಸ$_1$ + ಪೆಱು$_1$ ]

**ಬೆಸವೇಡು** (ಕ್ರಿ). ಅಪ್ಪಣೆಯನ್ನು ಕೇಳು : ಇಬೀಟಿದ ಕಾಳೆಗದಲು ಅಟ್ಟನ ಬೆಸವೇಡಿ ಸತ್ತಂ ಪೊನ್ನಯ್ಯ (ಕೌ್ಇ. IX - i, ೨೩-೬ ; 948).

[ ಬೆಸ$_1$ + ಬೇಡು$_1$ ]

**ಬೆಸವೇಳ್** 'ಬೆಸಂಬೇಟು' ನೋ.

**ಬೆಸವೇಳು** 'ಬೆಸಂಬೇಟು' ನೋ.

**ಬೆಸವೇಟು** 'ಬೆಸಂಬೇಟು' ನೋ.

**ಬೆಸಸು₁** (ಕ್ರಿ). ಬೆಸುಗೆ ಹಾಕಿಸು : ಹೋಳಾದ ಕವಚವ ಹೊಲಿಸಿದರು ಬಾಹುರಕ್ಷೆ ಸವಗದ ಬಿರುಕ ಬೆಸಸಿದರು (ಕುಮಾ್ರಲೀ. ೫-೩೬) ; ಸೋರುವ ಡಬ್ಬಿಯನ್ನು (ಬೆಸಸಿ) ದುರಸ್ತು ಮಾಡಬೇಕಾಗುತ್ತದೆ (ಮುಂಬಮ್ಯಾ. ೨೨೯).

[ ಬೆಸೆ₂ (<ಬಿಸು₁ ) + — ಸು₁ ]

**ಬೆಸಸು₂**, ವೆಸಸು (ಕ್ರಿ). ೧. ಅಪ್ಪಣೆ ಮಾಡು ; ನಿರ್ದೇಶಿಸು ; ವಿಧಿಸು : ಸಿಯುಗೆಲ್ಲರಾ ಮನೆಮಂಗತ್ತಿನ್ಪಲ್ಲಹನಾ ಬೆಸಸಿ ಗಜ್ಜುರ ವಲ್ಲಹ ×× ಜಾನಿಜಿದು ಸತ್ತ (ಎಕ. XVI, ತುಮಕೂ. ೬೯-೭ ; ಸು. 775) ; ಆಂ ಬೆಸಕೆಯ್ವಂ ನಿನ್ನ ಬೆಸಸಿದಂದದೊಳಿರ್ಪಂ (ಪಂಪಭಾ. ೬-೩೭) ; ಬೆಸಸಿ ದೂಳಿಗವನಾ ಪಡಿಹಾಜಿರಿಂದಲೊಡಗಿಸಿ (ಚಂಪು. ೭-೬). ೨. (ಹಿರಿಯರು, ಅಧಿಕಾರಿಗಳೊಂದಿಗೆ ಮಾತನಾಡುವ ಸಂದರ್ಭದಲ್ಲಿ) ಹೇಳು ; ನಿರೂಪಿಸು ; ವಿವರಿಸು : ಶ್ರೀವಿದಿತಾರ್ಥಾಲಂಕಾರಾವಳಿಯಂ . . ಭಾವಿಸಿ ಬೆಸಸಿದನಖಿಳಧರಾವಲ್ಲಭಂ (ಕವಿರಾ. ೩-೦); ಬೆಸಸಿಂ ನಿಮ್ಮೊಂದಭಿಪ್ರಾಯಮಂ (ಪಂಪಭಾ. ೧೦-೯) ; ಕನಸನೀ ಹದನಾಗಿ ಕಂಡೆನು ದನುಜಹರ ಬೆಸಸಿದಜಿ ಫಲವನು ನನಗೆ (ಕುಮಾ್ರವ್ಯಾ. ೯-೧೦). ೩. ನೀಡು ; ದಯಪಾಲಿಸು ; ಅನುಗ್ರಹಿಸು : ದೇವ ಬಿಜಯಂಗೆಯ್ದು ಕರುಣಮಂ ಬೆಸಸುವುದು (ತಿರುಕ. ೭೮. ೧೦-೦೦). **ವೆಸಸು** : ೧. ಬಾಯ್ಕೇಳದಿರೆ ಮುನಿದು ಕೊಳ್ಳಿಪಲ್ಲವನೊಲಿವ್ಪಂ ನೊಲಿವ್ಪುರಾದಿತ್ಯನನ್ ವೆಸಸಲ್ ಆ ಕಾಕರಾಸರುಮೆಟ್ಟು ಪೆಗ್ಗಂಜಿಯ ಕೋಟೆಯಾನ್ ರೋಹಿಸಿಬಿಟ್ಟು (ಎಕ. VIII, ಸೊರಬ. ೦೦-೪; ಸು. 800).

[ಬೆಸ₁ + — ಸು₂]

**ಬೆಸಳಿಗೆ**, ಬಿಸಣಿಗೆ, ಬಿಸುಳಿಗೆ (ನಾ). ೧. ಅಗ್ಗಿಷ್ಟಿಕೆ : "ಅಂಗಾರಶಕಟೀ, ಹಸಂತೀ, ಹಸಂತಿಕಾ — ಈ ೩ ಬೆಸಳಿಗೆ" (ಪಲಾಯು. ೫೨-೦೫೯). ೨. ಬಾಣಲೆ, ಓಡು, ಬೋಗುಣಿ ಮುಂತಾದ ಅಗಲವಾದ ಬಾಯುಳ್ಳ (ಹುರಿಯುವ) ಸಾಧನ : ಬೆಸಳಿಗೆಯೊಳ್ ತರಂಬಡೆಯೆ ಶಾತಚಯಂಗಳನಿಕ್ಕಿ (ನಳಚಂ. ೭೦೯); ಧರ್ಮವ್ಯಾಧಂ . . . ಬಸಿಯ ಹರವಿಯ ಸಾಲ ತೊರಳಿಗೆ ಬೆಸಳಿಗೆಯ ಕುಚಿೀದಲೆಯ ಹಂತಿಯ ಕುಸುರಿದೆಲುವಿನ ಕೋಡ ಮಾಂಸಂಗಡಿಯಲೈತಂದ (ಕುಮಾ್ರ. ೦೫-೮); ಅದಂ ಬೆಸಳಿಗೆಯೊಳಿಂಸಿ ಮೆಣಸಿನ ಹುಡಿಯ ತಳಿದು (ಸೂಪಶಾ. ೪-೫೦). **ಬಿಸಣಿಗೆ** : ೨. ಎಳೆಯ ಬಾಳೆಯ ತೋಕೆಯನು ಬಿಸಣಿಗೆಯುಲಿ ಅಂತರವಕ್ಕಿ ಬೇಯಿಸುವುದು (ಲೀಪಸೂ. ೩೭). **ಬಿಸುಳಿಗೆ** : ೨. ತಿಳಿ ತುಂಬಿಟ್ಟ ಬಿಸುಳಿಗೆಯೊಳಗೆ ತನ್ನ ನೆಳಲನು ನೋಡಿದನು (ಪ್ರಸಭಾ. ೦೭-೨೬).

**ಬೆಸಿಗೆ** 'ಬಿಸುಗೆ₁' ನೋ.

**ಬೆಸು** 'ಬಿಸು₁' ನೋ.

**ಬೆಸುಗಿ** (ನಾ). ಒಬ್ಬಾತನ ಹೆಸರು : ಸ್ವಸ್ತಿಶ್ರೀ ದಿಬಿಗರ ಬೆಸುಗಿ ಕೊಟ್ಟದು ಗೋಸಹಸ್ರ ನಾಲ್ಕು ಕೇರಿಗೆ ನೆಜಿಯೆ ಗೋಸ[ಹ]ಸ್ರಂ (ಎಕ. VII, ಶಿಕಾರಿ. ೯೫-೨೦; ಸು. 890 ?). [?]

**ಬೆಸುಗೆ** 'ಬಿಸುಗೆ₁' ನೋ.

**ಬೆಸುಗೆಕಾಜ** (ನಾ). ಬೆಸೆಯುವವನು : ಕೂಡಿಸುವವನು : ಸಸಿನೆ ಕಣ್ದೆಜಿದೊಲ್ದು ನೋಡೆನ್ನ ಪ್ರಾಣವ ಬೆಸುಗೆಕಾಜಾ (ಭರತ. ೦೫ ೫೦).

[ಬೆಸುಗೆ (<ಬಿಸುಗೆ₁) + — ಕಾಜ]

**ಬೆಸುಗೆಗಣ್** (ನಾ). ನಟ್ಟದೃಷ್ಟಿ : ಶಿವಮುಖದೊಳ್ ಬೆಸುಗೆಗಣ್ಣಳ್ ಪೆಜತು ಕಣ್ಬುವೇ (ಚಂಪು. ೨೦-೨). [ಬೆಸುಗೆ (<ಬಿಸುಗೆ₁) + ಕಣ್]

**ಬೆಸುಗೆಗಳಚು** (ಕ್ರಿ). ಕೂಡಿಕೆಯು ಬಿಟ್ಟುಹೋಗು ; ಬೇರೆಯಾಗು : ಬಿಸುಟಳೆಂದಜುತ ಶೂರ್ಪನಖಿ ನಿವಡಿಸಿದ ಕಟ್ಟಭಿಮಾನಪಿಳಿಸಿತ ಬೆಸುಗೆ ಗಳಚಿದ ನಾಸಿಕವನಿದಿರಲಿ ಖರಾಸುರನ (ತೊರಂಂ. ೩-೫-೩).

[ಬೆಸುಗೆ (<ಬಿಸುಗೆ₁) + ಕಳಚು (<ಕಟಬ್ಬು₁) ]

**ಬೆಸುಗೆಗಿಡು** (ಕ್ರಿ). ೧. =ಬೆಸುಗೆಗಳಚು. ೨. (ಅಲಂ) ಸಂಬಂಧವು ಕೆಡು, — ಹಾಳಾಗು : ಒಸೆದರ್ಜುನಂಗೆ ಮುಂ ಕಳಶಸಂಭವಂ [ಮಾಸ್ತ್ರ ಪದವಿಯಂ ಮಾಡಿದೊಡಂ] ಬೆಸುಗೆಗಿಡೆ ಪಾಟಿಗಿಡೆ ತನ್ನಸುವಂ ತಲ್ಲಟಿಗುಡುವ ತೆಜದೊಳ್ಕೊಟ್ಟಂ (ಗದಾಯು. ೨-೦೩).

[ಬೆಸುಗೆ (<ಬಿಸುಗೆ₁) + ಕಿಡು₁ (<ಕೆಡು₁) ]

**ಬೆಸುಗೆಗೊಳ್ಳು** (ಕ್ರಿ). ಕೂಡು ; ಜೊತೆಯಾಗು; ಸೇರು : ಅವರಿಬ್ಬರ ಹೃದಯಗಳು ಪರಸ್ಪರ ಬೆಸುಗೆಗೊಂಡಿದ್ದುವು (ಕುಸರು. ೦೧೦).

[ಬೆಸುಗೆ (<ಬಿಸುಗೆ₁) + ಕೊಳ್ಳು₁ (<ಕೊಳ್₁) ]

**ಬೆಸುಗೆದಟ್ಟು** (ಕ್ರಿ). =ಬೆಸುಗೆಗೊಳ್ಳು : ಹೊಸಕರ್ಮ ಮುನ್ನಿರ್ದ ದ್ರವ್ಯಕರ್ಮದೊಳು ಬಂಧಿಸುವುದಾ ದ್ರವ್ಯಕರ್ಮವದು ಒಸರುವ ಭಾವಕರ್ಮದೊಳು ಗಂಟಿಪುದದು ಬೆಸುಗೆದಟ್ಟಿಹುದು ಜೀವನೊಳು (ಭರತ. ೬೮-೬೦).

[ಬೆಸುಗೆ (<ಬಿಸುಗೆ₁) + ತಟ್ಟು₁]

**ಬೆಸುಗೆಬಿಡಿ** (ಕ್ರಿ). = ಬೆಸುಗೆಗೊಳ್ಳು : ಬೆಸಸಿದೂಳಿಗವನಾ ಪಡಿಹಾಜಿರಿಂದಲೊಡಗಿಸಿ ಕಾರ್ಯಭಾಗವಿಡಿದರಸನಿಚ್ಛೆಯನಜಿದು ಬೆಸುಗೆಬಿಡಿದಂತೆ ಹತ್ತಿಸಿ (ಚಂಪು. ೭-೬). [ಬೆಸುಗೆ (<ಬಿಸುಗೆ₁) + ಪಿಡಿ₁]

**ಬೆಸುಗೆಯಾನ್** (ಕ್ರಿ). =ಬೆಸುಗೆಗೊಳ್ಳು : ಕಮಲಕುಟ್ಮಲದೊಳು ಬೆಸುಗೆಯಾಂತುವು ತುಂಬಿಗಳು (ಕಂಪಠ. ೯-೫೯). [ಬೆಸುಗೆ (<ಬಿಸುಗೆ₁) + ಆನ್₁]

**ಬೆಸುಗೆಯೊಡೆ** (ಕ್ರಿ). =ಬೆಸುಗೆಗಳಚು : ಭೀಷ್ಮನ ಸರಳ ಗಾಳಿಗೆ ಬೆಸುಗೆಯೊಡೆದುದು ವೈರಿಬಲಮೇಘ (ಕುಮಾ್ರಲೀ. ೯-೨೫); ಕುಸ್ಸುಂದಜಿದವು ಜೋಡುಸೀಸಕ ಬೆಸುಗೆಯೊಡೆದುದು ಘಾಯದಲಿ ಮೈಬಸಿಯೆ ಬಿರಿದುರು ಶೌರ್ಯ ಬಿಗಿದುದು ಭೀತಿ ಭೂಪತಿಗೆ (ಕುಮಾ್ರವ್ಯಾ. ೦೫-೫೭).

[ಬೆಸುಗೆ (<ಬಿಸುಗೆ₁) + ಒಡೆ₁]

**ಬೆಸುಗೆವಡೆ** (ಕ್ರಿ). =ಬೆಸುಗೆಗೊಳ್ಳು: ಕಾಲ ಸಂಕಲೆ ಮುಟಿದುವೇ ಬಲು ಬೆಸುಗೆವಡೆದವು (ಕಥಾಗ. ೦೦-೪-೦೮). [ಬೆಸುಗೆ (<ಬಿಸುಗೆ₁) + ಪಡೆ₁]

**ಬೆಸೆ₁** (ಕ್ರಿ). ೧. ಗರ್ವಿಸು; ಅಹಂಕಾರಪಡು; ಬೀಗು : "ಬೆಸೆ_ಗರ್ವೇ, ಕಾರ್ಪಾಸಚಾಪೇ ಚ (ಹತ್ತಿ ಎಕ್ಕುವ ಬಿಲ್ಲು)" (ಕವಮಾ) ; ಮುಸಗಿ ಜೆ[ಸೆದಿರ್ದು] ವಿವರಮನಸಿಯದಜಿದೆನೊತ್ತಿ ಪೊಕ್ಕು ಕೆಲನಂ ಕೊರ್ಬುತ್ತೆ ಸೆದು ಬಿದಿರ್ದಾರ್ದುಪೋಟ್ಟಿಗೆಟ್ಟಿ ಸಮಂಜಸನಿಕ್ಕಿ ಮಿಕ್ಕನರಿವಾಹಿನಿಯಂ (ಕವಿರಾ. ೦-೬೬); ಕೆಮ್ಮಗೆ ಬೆಸೆವವನರಸದೆಂತೊ ಪಗರಣಬರಸಂ (ಆದಿಪು. ೦೨-೯೯); ಸಭೆ ಬಿಲ್ಲುಂಬೆಜಗಪ್ಪಂತು ಜರ್ವಿ ಬೆಸೆದು ನುಡಿವುದುಂ (ಅನಂತಪು. ೦೯೩-೯). ೨. ಕೋಪಿಸು ; ಸಿಟ್ಟಾಗು : ಒಸೆಯದೆ ಬೆಸೆಯದೆ ಪರಿಭಾವಿಸುತ್ತಮಿಂತಗ್ನಿನಾಯುಭೂತಿಗಳ ಗುಣಕ್ಕೆ ಸಮಾನ ಚಿತ್ತನಾಗಿಯುಂಮುಸಮಾನವನಸ್ಯನಾದಂ (ಸುಕುಮಾ ೩-೩೮); ಒಸೆಯುದೆಯುಂ ಪದಾನತರ್ಗೆ ಸೌಖ್ಯಸಮೃದ್ಧಿಯನೀವೆ ದೇವ ನೀಂ ಬೆಸೆಯುದೆಯುಂ ಪಟಾನತರ್ಗೆ ದುಃಖಸಹಸ್ರವನೀವಗಂ ವಿಷರ್ಜಿಸುವೆ (ವರ್ಧಪು. ೦೬-೭೯); ಪುಸಿವ ಕುಸಿವ ಬೆಸೆವೊಸೆವ ಮನಂಗುಂದುವ ಮಲೆವಲೆವೊಂದುಂ ದಂದುಗದೊಳಗೆ ಸಗನೆಲ್ಲಿಯುಂ ಮುನಿವರ್ಗಂ (ಪುಷ್ಪಪು. ೦೨-೯೫). ೩. ನಿರ್ಲಕ್ಷಿಸು; ವಿಮುಖವಾಗು: ಪರಲೋಕಭಯಕ್ಕೆ ಬೆಸೆದು ಜೆಸನಕ್ಕೊಸೆದು ಯುಕ್ತಾಯುಕ್ತವಿವೇಕಕ್ಕೆ ಪಿಂತ್ರೆಗೆದು (ಕಾದಂಬು. ೫೬೫).

[ದೇ.॥ ತಮಿ. ವಿಮ್ಮು; ತುಳು. ಬೆಸಿ, ಬೆಸೆ]

**ಬೆಸೆ₂** 'ಬಿಸು₁' ನೋ.

**ಬೆಸೆ₃** (ನಾ). ಗರ್ವ; ಹೆಮ್ಮೆ: ಮುಂದುವರಿದವ್ಗಳಿಕೆ ಮುಳಿಸು ಮಾೂದಲೆ ಮೋಡಿ ಬಂದಿ ಭಾರಣೆ ಬಿಂಕ ಬೆಸೆ ಚಮತ್ಕಾರಂಗಳಿಂದೆ ಸಮನಾಗೆ ಕೈದೋಟಿದಂ ವೃಷಕೇತು ಬಭ್ರುವಾಹನನ ಮೇಲೆ (ಜೈಮಿಭಾ. ೨೭-೦೫); ಬಗೆಬಗೆಂಸು ಬೆಡಗು ಬಿನ್ನಣ ಬೆಸೆ ಚಮತ್ಕಾರದೊಗುವಿಗೆಯು ತೋರಿ ನೋಡಿದರು (ವಂಕಾರಾ. ೫-೬-೩೭). [<ಬೆಸೆ₁]

**ಬೆಸ್$_4$** (ನಾ). ೧. ಅರಳೆಯನ್ನು ಹೊಡೆದು ಹಿಂಜುವ ಒಂದು ಬಗೆಯ ಬಿಲ್ಲು : ಒಳ್ಳೆಯನೇಱಿ ಪಟ್ಟು ಬೆಸೆಯಂ ಬೆಸದೇಱಿಸಿ ಪಾವುಗುಳ್ಳೆಯುಂ ಕೊಳ್ಳನಲೊತ್ತಿ ಪುಲ್ಮೊರಡಿಯಾವಲೆಯೊಳ್ ಸಿಲೆಯೊಂದನೆತ್ತಿ ನೀಸೊಳ್ಳಿತು ಬೀಗುವೈ (ಪೇಬುತು.೧೨-೨೩೦) ; ಇಂತು ಬಿಲ್ ಬೆಸೆಯಾಗೆ ಕಂಡು ಶತ್ರುಹಂ ಪೆಱತೊಂದು ಬಿಲ್ಲಂ ಕೊಂಡು ಕಣೆಯುಂ ಪೂಡಿ (ರಾಮಾಕ.೧೫೭-೧೨); ಬೆಸೆಯ ಕಟ್ಟಿಗೆಯಾಗಿ ಕಾಲ್ಗಳು ಪಸಿಯ ತೊಗಲಿನ ಗಂಧ ಪೆಂಗಸು ಪಸುಧೆಯೆಾಳು ಹುಟ್ಟೀನು ಫಲವೈ (ಕಕೊಃಳ. ೪-೨೨). 'ಬೆಸೆಕೋಲ್' ಪರಾ. ೨. ಹೊಡೆತ ; ಪೆಟ್ಟು : ಇವನೊರ್ವನಿಱೆಕೋ ಬಂದನೆಂದಿಸುವ ಬೆಸೆಗಳ್ಗೆ ದೆಸೆಗೆಟ್ಟು ಸೇನೆ ಗಜಬಜಿಸೆ ಕಂಡು (ಜೈಮಿಭಾ.೨೦-೨೫).
[<ಬೆಸ್$_2$]

**ಬೆಸ್$_5$** (ನಾ). ಮೇಕೆಯ ಕರುಳಿನ ಹುರಿ : P ಇದು ಬಹಳ ಗಟ್ಟಿಯಾಗಿದ್ದು ವೀಣೆ. ಸಾರಂಗಿ ಮುಂತಾದ ವಾದ್ಯಗಳಿಗೆ ತಂತಿಗಳಂತೆ ಬಳಸುತ್ತಾರೆ : ಇದು ಬೆಸೆ. ಗೊತ್ತಿಲ್ಲವೇ ಬೆಳ್ಳಿ ? ದೇವಾಲಯಕ್ಕೆ ಕೊಡಬೇಕಲ್ಲ–ಅಲ್ಲಿಯ ವೀಣೆ ಸಾರಂಗಿ ಇವುಗಳಿಗೆಲ್ಲಾ ಬೇಕಾಗುವ ಬೆಸೆ ನಾವೇ ಕೊಡಬೇಕಲ್ಲಾ? (ಬಂಡಯ. ೭೦). [?]

**ಬೆಸೆಕೋಲ್**. ಬೆಸಕೋಲು (ನಾ). ಅರಳೆಯನ್ನು ಹಿಂಜಲು ಬಳಸುವ ಪಿಂಜಾರನ ಕೋಲು : ಕುಡುಪೊಡೆ ನಿಸ್ತ್ರಪಂ ಕುಡುವು ದೇಱಿಸಿದು ಬೆಸೆಕೋಲನೆಂದು ಪೇೞ್ ಕುಡುವುದೆ ಕನ್ನೆಯುಂ ದ್ವಿಜಕುಲಂಗೆ (ಸಂಶಭಾ. ೩-೭೭); ತಲೆಕಟ್ಟು, ಬೆಸೆಕೋಲ್ (ಶಮುವ. ೭೫ ಕ್ರಯೋ). **ಬೆಸಕೋಲು:** ಸುರಧನುವೆಂಬ ಬೆಸಕೋಲ ತುದಿಗೆ ತಳತಳಿಪ ವಿದ್ಯುಲ್ಲತೆಯ ತಿರುವನಿಟ್ಟೆಕ್ಕೆದರಲೆಯ ಪುಂಜವೆಂಬ ತೆಱದಿ ಹಳಿಹಳಿಯೊಳೇಳ್ವ ಘನತತಿ . . . ವಿರಾಜಿಸಿದುದು (ಸಮ್ಯಕೌ. ೧-೦೯); ಒಳ್ಳೆಯನಿರದೇಱಿ ಬೆಸಕೋಲ ನೇಱಿಸಿ ಗುಳ್ಳೆಯ ಔರ್ಚೆ ಪೂರ್ಯಿಸಿ ಪೊಳ್ಳುವೊರಡಿಯೆತ್ತಿದ ಬಿಲ್ಪ ತೋಱುವುದೊಳ್ಳಿತೊಳ್ಳಿತು ತುಱುಗಾಱಾ (ಪೇಬುಸಂ. ೩೦-೩೪).
[ಬೆಸ್$_4$ + ಕೋಲ್$_1$]

**ಬೆಸೆಗಾರ** 'ಬೆಸೆಗಾಱ' ನೋ.

**ಬೆಸೆಗಾಱ**, ಬೆಸೆಗಾರ (ನಾ). ಕೊಬ್ಬಿದವನು ; ಅಹಂಕಾರಿ : ಎನ್ನಂ ಮುನ್ನಮೂರೆಂದು ಕಿಱುಕುಳನೆಂತಂತು ಬೆಸಗೊಳ್ವ ಬೆಸೆಗಾಱ ! (ರಾಮಾಕ. ೧೪೪-೨೨). **ಬೆಸೆಗಾರ:** ಕುಸುಮಾಸ್ತ್ರನ ದೆಸೆಗಾರದ ಬೆಸೆಗಾರ! (ಮಂಪ್ರಶ. ೬೦-೫). [ಬೆಸ್$_3$ + –ಕಾಱ]

**ಬೆಸ್ತ**, ಬೆಸದ (ನಾ). ೧. ಮೀನು ಹಿಡಿಯುವವನು; ಜಾಲಗಾರ : ಕಾಲ್ವೆಳಗೆ ಹರಹಿದ ಬೆಸ್ತನ ಜಾಲಜಾಲಗಳ ದಾಟಿ ಸಮೀಪಿಸಿದೆ ಜಲಪ್ರದೇಶ (ಪಪ್ರಕ. ೧೦-೪); ಇವ ಬೆಸ್ತ; ಇವನ ಕೈಲಿ ಜನಿವಾರ ಮಾಡಿಸೋಕೆ ಆಗದು (ಚಿತ್ರಕ. ೧೧). ೨. ಮೇನೆಯನ್ನು ಹೊರುವವನು ; ಬೋಯಿ : ಬೆಸ್ತ ಬಲ್ಲನೆ ಅಂದಳ ಮೊದಲಾದ ಅಷ್ಟಭೋಗಂಗಳ (ಚನ್ನಪ. ೪. ೧೫-೩೨); ಅಂದಳದ ಬೆಸ್ತನನು ಕರೆಸಿ ಅವಗೆ ಇಂದುಧರವೇಷವನು ಧರಿಸಿ ಹೊಂದಿ ನಿಂಬವ್ವೆಯನು ಬೆರಸಿ ನೀ ಬಾರೆಂದು ಕಳುಹಿದರು ಸತ್ಕರಿಸಿ (ಚರಂ. ೨೯೬-೨). **ಬೆಸದ :** ೧. ಮಿಲ್ಲ ಬೆಸದರ ಮುರಿದು ಯುತುಪುರವ ಪಾಳ್ಮಾಡಿ ಫುಲ್ಲಶರನಂ ಗೆಲಿದ ಸಿದ್ಧರಾಮೇಶನೆಮಗೀಗಿಷ್ಟ ಸಂಸಿದ್ಧಿಯುಂ (ರಾಶತ. ೩-೩) ; ಮನೆಮಾರು ಮಾಡಿ ನೆಮ್ಮದಿಯಾಗಿ ಬಾಳದಿಂತಲೆವನೇತಕೆ ಬೆಸದರೊಡನೆ (ಗೊರವ್ವಾ. ೨-೦೬). [ದೇ.॥ ತೆಲು. ಬೆಸ್ತ]

**ಬೆಳ್$_1$**. ಬೆಳು$_1$ (ಸಪೂರೂ). 'ಬಿಳಿದು' ಎಂಬ ನಾಮಪದಕ್ಕೆ ಸಮಾಸಗಳಲ್ಲಿ ಬರುವ ಆದೇಶರೂಪ : 'ಬೆಳ್ಮುಗಿಲ್', 'ಬೆಳ್ವಕ್ಕಿ' ಪರಾ. ಬೆಳು$_1$ : 'ಬೆಳುಮುಗಿಲು', 'ಬೆಳುವೆಟ್ಟ' ಪರಾ.
[ದೇ.॥ ತಮಿ. ವೆಳ್, ವೆಣ್; ಮಲ. ವೆಣ್; ತುಳು. ಬೊಳ್, ಬೊಲ್; ಕೊತ. ವೆಳ್; ಪರ್ಜಿ. ವಿಲ್]

**ಬೆಳ್$_2$**, ಬೆಳು$_2$, ಬೆಳ್ಳಿ$_2$ (ನಾ). ೧. ದಡ್ಡತನ ; ಮೂರ್ಖತನ: 'ಬೆಳ್ಪು$_2$', 'ಬೆಳ್ಪ$_2$' ಪರಾ. ೨. ಭಯ; ಅಂಜಿಕೆ : 'ಬೆಳ್ಳೆರಲೆ', 'ಬೆಳ್ಗೋಟ' ಪರಾ. ೩. ತೋರಿಕೆ ; ಹುಸಿ : 'ಬೆಳ್ಗೋಕರಿಕೆ' ಪರಾ. ೪. ಕ್ರೂರವಲ್ಲದುದು ; ಸಾಧು: 'ಬೆಳ್ಮಿಗ', 'ಬೆಳ್ಮೃಗ' ಪರಾ. ೫. ಬುದ್ಧಿಯಿಲ್ಲದವನು ; ದಡ್ಡ ; ಅಜ್ಞ: ಲಲಿತಪದಂ ಪ್ರಸನ್ನಕವಿತಾಗುಣಮಿಲ್ಲದೆ ಪೂಣ್ದು ಪೇೞ್ದ ಬೆಳ್ಗಳ ಕೃತಿಬಂಧಮುಂ ಬರೆ[ಪ]ಕಾಱರ ಕೈಗಳ ಕೇಡು (ಶಂಶಭಾ. ೧-೧೨); ಚಿಂತಿಸಿ ಕಬಿಲ್ದು ಬಬಿಲ್ದು ಕನಲ್ದೊಸಲ್ದಂ ಬೆಳ್ಳೆನಿಸುವ ಬೆಳ್ಳಬೇರನಗುಬ್ಬಾಗಸಕೆತ್ತದೆ ಸೂಳೆ ಮಾಣ್ದಪೆಂ (ಶಾಂತಿಪು. ೬-೯೫) ; ಒಳ್ಳೆ ಕಾಲದವರೆನ್ನ ಬೆಳ್ಳೆನ್ನದಿಹರೆ (ಕಾಶ ೩೯-೮). **ಬೆಳು$_2$ :** ೧. 'ಬೆಳುಮಾತು' ಪರಾ. ೫. 'ಬೆಳುಗನ್ನಡಿಗ' ಪರಾ. ೬. ಕಪಟ ; ಸೋಗು : 'ಬೆಳುನಗೆ$_2$' ಪರಾ. **ಬೆಳ್ಳಿ$_2$ :** ೭. ಕಪಟವಿಲ್ಲದಿರುವಿಕೆ ; ಮುಗ್ಧತೆ : ಇನ್ನು ಕೆಲವರು ಬೆಳ್ಳೆಯೋ ಕುಚೋದ್ಯವೋ ಎನ್ನುವುದು ತಿಳಿಯದ ರೀತಿಯಲ್ಲಿ ಓಗೆ ಕರೆಯುವರು (ಜಕರಾ. ೩೭). 'ಬೇಳ್$_2$' ಹೋ.

**ಬೆಳ್ಮಾಡು**, **ಬೆಳುಮಾಡು**=೧. ಮಂಕುಮಾಡು; ಮರುಳುಗೊಳಿಸು: ಧರೆಯುಂ ಬೆಳ್ಮಾಡಿಕೊಂಡರೆಂಗುಂ ಲೋಕಂ (ಸಂರಾಮಾ. ೬-೧೪೦). ೨. ಪರವಶಗೊಳಿಸು ; ಮೋಹಿಸುವಂತೆ ಮಾಡು : "ಬೆಳ್ಮಾಡೆಂದು ಮರುಳ್ಗೊಳಿಪುದು" (ಕಶಾ. ೭೧-೬೨೭) ; ಕಾಂತಿಗೆ ಕೈಗನ್ನಡಿ ತೀರ್ಥಕರ ಕುಮಾರನ ಬೆಡಂಗು ಬೆಳ್ಮಾಡಿದಪುದಲಂಕರಿಸುವರಂ (ಅಸಂಪು. ೫-೬೦) : ಮೆಯ್ಗಣ್ಣನಂ ಪೊಸತಪ್ಪಗ್ಗದ ಗಾಡಿಯಿಂದೆ ಪಿರಿದುಂ ಬೆಳ್ಮಾಡಿ ಬೇಟ್ಪಂ ತುಟುಬ್ಬಸಮಂ ಮಾಡುವ ಬರ್ದೆಯರ್ ಪಲಬರುಂ ಕಣ್ಗೆಂ ಬೆಡಂಗಾದರೋ (ಕಬ್ಬಿಕಾ. ೧೩೪); "ಬೆಳುಮಾಡೆನಲು . . . ಮರುಳ್ಮಾಡುವುದಕ್ಕೆ ಪೆಸರ್" (ಕಅ.೬೨). **ಬೆಳ್ಮಾಗು**=೧. ಮೂಢತನದಿಂದ ಕೂಡಿರು ; ಬೆಪ್ಪಾಗು ; ಅವಿವೇಕಿಯಾಗು : ನಲ್ಲಂಬಿಂದಿಸೆ ಪುಷ್ಪಬಾಣನೆರ್ದೆಯುಂ ಬೆಂಬಿಟ್ಟು ಬೆಳ್ಮಾಗಿ ತಕ್ಕೆಲ್ಲಂ ಕೆಟ್ಟೆರ್ದೆಗೆಟ್ಟು ಜಂಗಮಲತಾಸಲ್ಲೀಲೆಯರ್ ಬಾಲೆಯರ್ ಚೆಲ್ಲಂ ಬೇಂಟದ ತೋಟಿಯೊಳ್ ತೊಡರೆ (ಕಾವ್ಯಸಾ. ೫೫೦ ಕೂದ್ರ೪) ; ಪೋದುದು ಜೌವನಂ ಕ್ರಮದಿನಾದುದು ಮುಪ್ಪಿನಿಸಾದೊಡಂ ಸ್ಮರೋನ್ಮಾದದೊಳೀ ವಿಮೋಹದೊಳದೇಕೆ ಗಡಂ ಬಗೆಯುಂ ತಗುಳ್ದು ಬೆಳ್ಮಾ[ಪಾಠಾಂ. ಬೇಳಾ]ದಪು (ಆದಿಪು. ೨-೩೫). ೨. ಹೆದರು ; ಅಂಜು : ಪೋಗೆನೆ ಪೋಪ ಬಾರೆಲವೊ ಬಾರೆನೆ ಜೀಯ ಹಸಾದವೆಂದು ಬೆಳ್ಮಾಗುತೆ ಬರ್ಪ . . . ಸೇವೆಯ ಕಷ್ಟವೃತ್ತಿಯುಂ ನೀಗಿದೆನಿಂದು ನಿಮ್ಮ ದೆಸೆಯಿಂ (ಸಂಶಾಶ. ೮೬).

**ಬೆಳ** (ನಾ). (?) : ಮೂಡಣ ಬೆಳದೊಳಾ ಗಳೆಯೊಳ್ ಅಗಲಂ ಗಳೆ ೩ ನೀಳಂ ಗಳೆ ೭ (ಇಆ. XIX, ೨೭೩-೩೯ ; 1054); ಫಣಿಕುಳಂಗಳೇ ದಾರವಾಗಿ ಬೊಕ್ಕಣ ಪೊಳವಸಾಜಯಾಗಿ ಚಕ್ರಮೆ; ಬೆಳವಾಗಿ ಕೂರಸಿಯೇ ಮರಸುರಿಗೆಯಾಗೆ (ಎಕ. VII, ಶಿಕಾ. ೦೦೬-೩೦ ; 1054). [?]

△**ಬೆಳಂಗಿಸು** 'ಬೆಳಗಿಸು' ನೋ.

△**ಬೆಳಂಗು** 'ಬೆಳಗು$_1$' ನೋ.

**ಬೆಳಂತಿಗೆ**, ಬೆಣತಿಗೆ, ಬೆಳತಿಗೆ, ಬೆಳ್ತಿಗೆ (ನಾ). ೧. ಹೊಳಪು ; ಕಾಂತಿ; ಪ್ರಕಾಶ : ಅನೇಕ ಪ್ರಕಾರ ನರನಾರೀಜನಂಗಳ್ ಬೆಳಂತಿಗೆಯುಪ್ಪಚ್ಚವೆಳ್ದಿಂಗಳೊಳನಂಗರಾಗರಸದೀಪಿತಾಂತರಂಗರಾಗಿ ನಲಿಯುತ್ತಿರ್ಪಿನಂ (ಧರ್ಮಾಮೃ. ೬-೯೫ ವ); ಕಬರೀಭಾರಾಲಸೆ ತೊಳಪ ಬೆಳಂತಿಗೆಯೆನಿಸಿದಚ್ಚವೆಳ್ದಿಂಗಳೊಳ್ . . . ಬೀಣೆಯಂ ಬಾಜಿಸಿದಳ್ (ಸುಕುಮಾ. ೧೦-೨೪) ; ಬಸಿಱಿಂ ಬಲಿದುಕ್ಕುವ ಮೋಹಾಮೃತರಸದ ಬೆಳಂತಿಗೆ ಪರಕಲಿಸಿದುದೋ (ಶಮುಕಾ. ೪-೦೬). (ಗು). ೨. ಬಿಳುಪಾದ ; ಶುಭ್ರವಾದ : ಕಾಂತಿಯೊಳೆ ಪುದಿದು ಬೆಳಪ ಬೆಳಂತಿಗೆ ಬೆಳ್ದಿಂಗಳೆಲರ್ದು ಪೊಸಜಾದಿ ದಿಶಾಕಾಂತೆಯ ಬೆಳ್ವಸದನದ

ದಗುಂತಿಯುನೇಂ ತನಗೆ ನಾಡೆಯುಂ ಮಾಡಿದುದೋ (ಆದಿಪು. ೦೦-೯) ; ನೀಳ್ದು ಬೆಳಂತಿಗೆ ಬೆಳ್ಪನಾಳ್ದು ಪಂಕರುಹವುನಾಳಿಗೊಳ್ದ ನಗೆಗಣ್ (ಅನಂತಪು. ೨-೨). **ಬೆಣತಿಗೆ :** ೨. ಮುನ್ನದಿನ ರಾತ್ರಿ ಬೆಣತಿಗೆ ಅಕ್ಕಿಯು ನೆನೆಯಿಕ್ಕರಿಸಿ ಬೆಳಗಾಗಿ ಆ ಅಕ್ಕಿಯೊಂದುಹಿಡಿಯುಂ ಮೆಲ್ಲಲು ಮೂರು ದಿನಕ್ಕೆ ಬಿಳಿಸೀರೆ ಕೆಡುವ ರೋಗಂ ನಿಲ್ವುದು (ಸಕವೈ. ೦೯೬); ಒಂದಿಷ್ಟು ಬೆಣತಿಗೆಅಕ್ಕಿ ಕೊಟ್ಟರೆ ನಾವೇ ಬೇಯಿಸಿಕೊಳ್ಳುತ್ತೇವೆ (ಸಂಬಸಾ. ೦೯). **ಬೆಳತಿಗೆ :** ೧. ಬೆಳ್ದಿಂಗಳ ಬೆಳತಿಗೆಯುಂ ಪಸೆ ಪಾಲ್ಗಿತ್ತು ಸಾರ್ದಪ್ಪುದೊ (ಲೀಲಾವ. ೨-೨೨). ೨. ನಿಮ್ಮಡಿಗಳಿಂದಿನ ಬೆಳತಿಗೆ ಬೆಳ್ದಿಂಗಳೊಳು ಬಿಜಯಂಗೆಯ್ದಾ ಕನ್ನೆಯ ಮನೋರಥಮುಂ ಮಾಳ್ಪುದು (ನಂಬಿರ. ೦೦-೨೩); ಬೆಳತಿಗ[ಪಾಠಾಂ.-ಯ]ಕ್ಕಿಯ ಸಣ್ಣ ಹಿಟ್ಟು ಸೋದಿಸಿ ಹುರಿದುಕೊಳುತ ಬೆಲ್ಲದ ಪಾಕದೊಳು ಪಾಕಿ ಕಲಸಿ . . . ಗಾರಿಗೆಯುಡುವುದು (ಸೂಶಶಾ. ೦-೨೯). ೩. ಹೊಳೆಯುವ; ಪ್ರಕಾಶಮಾನವಾದ : ಇರುಳ ತಣ್ಪಸಿಲ್ ಬೆಳತಿಗೆ ಮಿಂಚಿರ್ಕಲ್ಲದಿಂಗಡಲ್ (ಮಲ್ಲಿಪು. ೬-೯೪). ೪. " ಬಿಳಿದಾದ ಅಕ್ಕಿ " (ಸಿಂಕೋ. ೩೯೦). **ಬೆಳ್ತಿಗೆ :** ೨. ನೀನು ಉಣ್ಣುವ ಹೊತ್ತಿಗೆ ನನ್ನ ಅನ್ನವಾಗುತ್ತದೆ. ಅದಕ್ಕೆಷ್ಟು ಹೊತ್ತು? ಬೆಳ್ತಿಗೆ ಅಕ್ಕಿ (ಕದಂಬ. ೦೦).

**ಬೆಣತಕ್ಕಿ** = ಥಳಿಸಿದ ಅಕ್ಕಿ ; ಬಿಳಿಯಕ್ಕಿ : ಬೆಣತಕ್ಕಿಯ ನೆನೆಯುಸಿ ಸಣ್ಣವಾಗಿ ಅರೆದುಕೊಂಡು (ಬಿವೈಬಿ. ೬೦). [<ಬಿಳಿದು./ತುಳು. ಬೊಳಂತೆ]

**ಬೆಳಂತಿಗೆಗಣ್**, ಬೆಳತಿಗೆಗಣ್ (ನಾ). ಹೊಳಪುಳ್ಳ ಕಣ್ಣು; ಕಾಂತಿಯುತವಾದ ಕಣ್ಣು : ಬೆಳಗಾಯ್ಮೊಲೆಯ ಬೆಳಂತಿಗೆಗಣ್ಗಳ ಸುಳಿನಾಭಿಯ ಸುಲಲಿತಲಲಿತಾಂಗದ . . . ಲಲನೆಯುತ ವಿಲಾಸಂ ನೃಪನಜಿತಮನೆಳಕುಳಿಗೊಳಿಸಿದುದು (ಜಯುಕಾ. ೨-೩). **ಬೆಳತಿಗೆಗಣ್ :** ಮಿಂಚುಗುವ ಬೆಳತಿಗೆಗಣ್ಬೊಣರೊಜಿತೆಯ ಜಲದೊಳಗೆ ಪೊಳೆಯೆ . . . ಎಳಮೀನ್ಗಳ್ಗಿತ್ತು (ಲೀಲಾವ. ೬-೩೦); ಬೆಳತಿಗೆಗಣ್ಗಳ ಬೆಳಗಿನಬಲೆಗಿರದೊಳಗಾದುದಾ ವಿಟನಿಕರ (ಶಬರಶಂ. ೦-೯೩); ಬೆಚ್ಚಿಸವಗಣ್ಣ ಬೆಳತಿಗೆಗಣ್ಣ . . . ಬಲ್ಬೊಗಸೆಗಣ್ಣ ಬಲೆಯರ್ . . . ಬರುತಿರ್ದರ್ (ತರಪು. ೩೬-೯೯). [ಬೆಳಂತಿಗೆ + ಕಣ್]

**ಬೆಳಂದಿ** (ನಾ). ಒಂದು ಬಗೆಯ ಸಸ್ಯ : ಕೆಂಪುಗಂಧಗಿರಿ . . . ಬೆಳಂದಿ, ಗಂಧಗರಿಗೆ (ವೃಕ್ಷಶಿ. ೦೯-೩೪೮). [ ? ]

**ಬೆಳಕ** 'ಬೆಳಗು$_2$' ನೋ.

**ಬೆಳಕಂಡಿ** (ನಾ). ಬೆಳಕು ಮತ್ತು ಗಾಳಿಯು ಬರುವುದಕ್ಕಾಗಿ ಕಟ್ಟಡಗಳಲ್ಲಿ ಅಳವಡಿಸುವ ಕಂಡಿ; ಗವಾಕ್ಷ; ವಾತಾಯನ: ನೆಲನಗಲಕ್ಕೆ ತೀವಿದ ಕಟ್ಟಿಲೆಯುಂ ಒಳಿಯಲ್ಕೆ ಗಗನತಳದೊಳ್ಪಲವುಂ ಬೆಳಕಂ [ಪಾಠಾಂ. ಖಂ]ಡಿಗಳಂ ಸಮೆದಂ ಜಳಜಜನೆನೆ ತೊಳಗಿ ಬೆಳಗಿದುವು ಭಗಣಂಗಳ್ (ಧರ್ಮಾಕ. ೨-೦೧). ಕೆಲವು ಕಡೆಯಲ್ಲಿ ಮಾಳಿಗೆಯಲ್ಲಿ ಬೆಳಕಂಡಿಗಳನ್ನು ಬಿಡುತ್ತಿದ್ದರು (ಕಥಾಗ. ೬೦); ಜನಕಜಾತೆಯುಂ . . . ಮೃಗಚರ್ಮದಿಂ ಸಮೆದ ತನ್ನ ಕೈಪೆಟ್ಟಿಗೆಯುಂ ತೆರೆದಯೋಧ್ಯೆಯ ಸಿರಿಗೆ ರಚಿಸಿದಳ್ ಕಿರಿದೊಂದು ಬೆಳಕಂಡಿಯುಂ (ಶ್ರೀರಾಮಪಾ. ೦೩೬-೩೨೯). [<ಬೆಳಗು$_2$+ಕಂಡಿ$_1$]

**ಬೆಳಕಿಂಡಿ** (ನಾ). =ಬೆಳಕಂಡಿ : ಒಳಕೊಂಡೆಯುನಿಕ್ಕಿ ಪೌಗಂಡರ ನಮ್ಮ ಬೆಳಕಿಂಡಿಲಿ ಸಿಲುಕಿಸಿ ಪುಡನೋಡಿದನೌ (ಶೃಸಶಾ. ೦೬-೬) ; ನನ್ನ ಮನದ ಬೆಳಕಿಂಡಿಯೊಳಗಿಂದ ಅಗೊ – ಕಂಡೆ ಕಾಣುವುದು ಬೆಳಕಿನಂದ (ಗು. ೨೯-೦೩). [<ಬೆಳಗು$_2$ + ಕಿಂಡಿ]

**ಬೆಳಕು$_1$** 'ಬೆಳಗು$_1$' ನೋ.

**ಬೆಳಕು$_2$** 'ಬೆಳಗು$_2$' ನೋ.

**ಬೆಳಕುದೋಱು** (ಕ್ರಿ). ಬೆಳಕನ್ನು ಕಾಣಿಸು : ಪರಶಿವನ ಶಶಿಸೂರ್ಯನೇತ್ರಂಗಳಂ ಗಿರಿಜೆ ಸರಸದೊಳ್ ಮುಚ್ಚಲ್ ತಮಂ ಪೆಚ್ಚಲೀಶನಂದುರಿಗಣ್ಣಿನಿಂ ಬೆಳಕುದೋಱಲು (ತರಪು. ೯೬-೨೯). [ ಬೆಳಕು$_2$ (<ಬೆಳಗು$_2$) + ತೋಱು ]

**ಬೆಳಕುಮಾಳಿಗೆ**, ಬೆಕ್ಕುಮಾಳಿಗೆ (ನಾ). ಬೆಳಕಂಡಿಯಿರುವ ಮಾಡ ; ಗವಾಕ್ಷವಿರುವ ಮಾಳಿಗೆ : " ತಳಗಡೆ ಇರುವ ಕೋಣೆ ಮೊದಲಾದವುಗಳಿಗೆ ಬೆಳಕು ಬೀಳುವುದಕ್ಕಾಗಿ ಮಾಡಿರುವ ಎತ್ತರವಾದ ಗವಾಕ್ಷಿ : ಬೆಳಕು ಮಾಳಿಗೆ" (Companion. ೩೨೯೩). **ಬೆಕ್ಕುಮಾಳಿಗೆ :** ಬೆಳಕು ಬರಲು ಮೇಲಿನ ಬೆಕ್ಕುಮಾಳಿಗೆಯೇ ಆಧಾರ (ಸಾಶಿತ್ರಿ. ೫೩).
[ಬೆಳಕು$_2$ (< ಬೆಳಗು$_2$) + ಮಾಳಿಗೆ$_1$ ]

**ಬೆಳಕ್ಕಾಲ್** (ನಾ). ಒಂದು ಪ್ರದೇಶದ ಹೆಸರು : ತೆನ್ಕಣಸೀಮೆ ಬೆಳಕ್ಕಾಲ ತೆನ್ಗೊಬಿಚ್ಚಿ (ಎಪಿಕ. ೦೯೨೬, ೦೨೨-೩೦; 808) [? + ಕಾಲ್$_2$]

**ಬೆಳಗಟು** (ಕ್ರಿ). ಬೆಳಕು ಇಲ್ಲದಂತಾಗು ; ಕತ್ತಲಾಗು : "ಮಸಮಸವಾದುದೆಂದು ಬೆಳಗಟುದುದು" (ಶಕಸಾ. ೫೬-೨೦೬) ; '' ಬೆಳಗಟುದುದು ಮಸಮಸವಾದುದು" (ಕಬ್ಬಿಗೈ. ೬೯). [ಬೆಳಗು$_2$ + ಅಟು$_1$]

**ಬೆಳಗಾಯ್**, ಬೆಳಗಾಯಿ, ಬೆಳುಗಾಯ್ (ನಾ). ಬೆಳವಲದ ಕಾಯಿ ; ಬೆಲ್ಲಪತ್ರೆ : ವಾರಣ ನುಂಗಿದ ಬೆಳಗಾಯುಂ[ಪಾಠಾಂ. ಬೆಳಲ ಪಣ್ಣಂ, ಬೇಲದ ಪಣ್ಣಂ]ತೆ (ಅರಾಸಾಂ. ೨೬-೨); ಜಾಣತನವು . . . ಕಾಣಿಸಬೇಕು ಕಬ್ಬದೊಳು . . . ಕರಿಯುಂಡ ಬೆಳಗಾಯಂತಲ್ಲ ಕರತಳದಾಮಳಕದಂತೆ ನಿಟ್ಟಪರಿಗೆ (ಕವಚ. II, ೪೮೦, ಸೊಬಗಿನ ಬಳ್ಳಿ ಕಾವ್ಯದ ಪೀಠಿಕೆ). **ಬೆಳಗಾಯಿ :** ತಾವರೆ ಮೊಗಕೆ ಬೆಳಗಾಯಿ ಮೊಲೆಗೆ ನೈದಿಲೆ ಕಣ್ಗೆ . . . ಸೋಲ್ದವಯವಂಗಳೊಳ್ನೆಲಸಿದುವು ಪೆಣ್ಗಳ್ಗೆ (ಕೃಬಿಶಾ. ೩೦-೯). **ಬೆಳುಗಾಯ್:** 'ಬೆಳುಗಾಯ್ಮೊಲೆ' ಪರಾ.
[< ಬೆಳಲ್ + ಕಾಯ್$_4$]

**ಬೆಳಗಾಯಿ** 'ಬೆಳಗಾಯ್' ನೋ.

**ಬೆಳಗಾಯಿಮೊಲೆ**, ಬೆಳುಗಾಯ್ಮೊಲೆ (ನಾ). ಬೇಲದ ಕಾಯಿ ಆಕಾರದ ಮೊಲೆ : ಬೆಳಗಾಯಿಮೊಲೆಯ ಹೊಳೆವ ಪೊಂಗಳಸಮೊಲೆಯರಲ್ಲದೆ ಬೀಳುಮೊಲೆಗಳ ಹೆಣ್ಣಿಲ್ಲವಲ್ಲಿ (ಕಂಪಬಿ. ೬-೦೦೦). **ಬೆಳುಗಾಯ್ಮೊಲೆ :** ಬೆಳುಗಾಯ್ಮೊಲೆಯ ಲಸದ್ಬಿಂಬಾಧರದೆಳಜವ್ವನೆ (ಜಯುಕಾ. ೦೧-೦೩) ; ಸಿಂಗರದ ಮೊಲೆಯ ಬೆಳುಗಾ [ಪಾಠಾಂ. ಳಲ್ಗಾ]ಯ್ಮೊಲೆಯ ಬಟ್ಟಡಕೆಮೊಲೆಯ . . . ಬಿಣ್ಮೊಲೆಯ ಭಾವೆಯರ್ ಬರುತಿರ್ದರು (ತರಪು. ೩೬-೯೩).
[ಬೆಳಗಾಯಿ ( <ಬೆಳಗಾಯ್) + ಮೊಲೆ$_1$]

**ಬೆಳಗಾರ** 'ಬೆಳುಗಾರ ' ನೋ.

**ಬೆಳಗಿಲಿ** (ನಾ). ಬೆಳಕು ಇಲ್ಲದುದು : ' ಬೆಳಗಿಲಿಗಣ್ ' ಪರಾ.
[ಬೆಳಗು$_2$ + — ಇಲಿ$_3$]

**ಬೆಳಗಿಲಿಗಣ್** (ನಾ). ಬೆಳಕು ಇಲ್ಲದ ಕಣ್ಣು; ಕುರುಡುಗಣ್ಣು : ಲಿಕಾರಕ್ಕೆ – ಪಲ್ಲಿಲಿವಾಯ್ . . . ಬೆಳಗಿಲಿಗಣ್, ನಾಣಲಿವೆಣ್ (ಶಮದ. ೦೯೬ ಕೃ ವೃ.).
[ಬೆಳಗಿಲಿ + ಕಣ್]

**ಬೆಳಗಿಸು**, ಬೆಳಂಗಿಸು (ಕ್ರಿ). ೧. ಬೆಳಕಾಗುವಂತೆ ಮಾಡು ; ಪ್ರಕಾಶಗೊಳಿಸು : ಪತ್ತುದೆಸೆಯುಂ ಬೆಳಗಿಸುವೆ ಪನ್ನೆರಡುರಾಶಿಗೊತ್ತಾಸೆಯಾಗಿರ್ಪೆ . . . ಎಂದು ದಿನಮಣಿಯನಾ ಲವಂ ನುತಿಸಿದಂ (ಜೈಬಿಭಾ. ೨೦-೯೨) ; ಸೂರ್ಯ . . . ಕತ್ತಲನ್ನು ಓಡಿಸಿ, ಮನೆಯನ್ನು ಬೆಳಗಿಸಲು ಒಳಕ್ಕೆ ಪ್ರವೇಶಿಸುತ್ತಾನೆ (ಪಪದ. ೬). ೨. ದೀಪ, ಬೆಂಕಿ ಮುಂತಾದುವನ್ನು ಹಚ್ಚಿಸು, — ಹೊತ್ತಿಸು : ಘಡಘಡಜರ್ಜನ ಹೋಗುಹೋಗಳ ಪಡದು ಸೈಂಧವನಳಿವು ಭಾಷೆಯ ನಡಸಬಲ್ಲರೆ ಬೇಗ ಬೆಳಗಿಸು ಹವ್ಯವಾಹನನ (ಕುಮ್ಮದ್ರೋ. ೦೯-೩೧) ; ಹೊರಗೆ ಬಂದು ಚಾವಡಿಯ ಲೈಟು ಬೆಳಗಿಸಿದಳು (ಹಳ್ಳಿಹಾ. ೦೦೯). ೩. ಆರತಿ ಮಾಡಿಸು ; ನೀರಾಜನ ಎತ್ತಿಸು : ರಂಭಾಸ್ತ್ರೀಯ ಕೀಳ್ಪಡಿಸುವ ವಧುನಿಕುರುಂಬದೆ ಮುತ್ತಿನಾರತಿಯ ಪೊಂಬರಿವಾಣದಿಂ ಬೆಳಗಿಸಿ (ಬೋಹಿತ. ೪೦-೫೩). ೪. ಶೋಭಿಸುವಂತೆ ಮಾಡು : ಜಗತ್ತನ್ನು ಬೆಳಗಿಸಲು ಒಬ್ಬ ಸೂರ್ಯ ಬೇಕು ; ಬದುಕನ್ನು ಬೆಳಗಿಸಲು ಒಂದು ಪುಸ್ತಕ ಸಾಕು! (ಬಿಕಾಸ. ೨೯) ; ಸಂಗೀತ . . . ಮದುವೆ

ಮುಂಜಗಳಲ್ಲಿ ಮಂಗಳಮಂಟಪವನ್ನು ಬೆಳಗಿಸುವುದು (ಜಗದಾ. ೬೨).
**ಬೆಳಂಗಿಸು :** ೧. ಭೃಂಗಕುಲನೀಲಾಳಕಂಗಳ ಸಭಂಗಳ ಬೆಳಂಗಿಸುವ ಮಧುರವಚನಂಗಳರುಣಪ್ರವಾಳಗಳ ನಖಂಗಳ ಲತಾಂಗಿಯರೆನಿಪ್ಪ ಪಣ್ಯಾಂಗನಾಜನಮೆಸೆದುದು (ಪಶಾ. ೪-೪೦). ☞ ಇದು ಛಂದಸ್ಸಿಗಾಗಿ ಮಾಡಿಕೊಂಡಿರುವ ರೂಪ. [ಬೆಳಗು₂ + — ಇಸು₁]
**ಬೆಳಗು₁**, ಬೆಳಂಗು, ಬೆಳಕು₁ (ಕ್ರಿ). ೧. ಹೊಳೆ ; ಪ್ರಕಾಶಿಸು : "ಬೆಳಗು – ಕಾಂತೌ" (ಶಬ್ದಾ) ; ಜಲದದ ನೆಟಲುಂ ಪರಮುಂ ವಿಲಾಸಮುಂ ಬೆಳಗುವುದಿತ ವಿದ್ಯುಲ್ಲತೆಯುಂ ನೆಲಸವು (ಕಂಠ. ೩-೯೯) ; ಹದಿ . . . ನುಡಿದಂ . . . ಸಭಾಸದನಂ ತೊಳಗಿ ಬೆಳಗೆ ದಂತಪ್ರಭೆಗಳ್ (ಹರಿವಂ. ೯-೩೪) ; ತೊಳತೊಳಗಿ ಬೆಳಗುವ ತನುಚ್ಛವಿಯ . . . ವರಕುಮಾರನ ಕಂಡು (ಸಂಕಶ. ೦೪-೩೩). ೨. ದೀಪ, ಬೆಂಕಿ ಮೊದಲಾದುವುಗಳನ್ನು) ಹೊತ್ತಿಸು ; ಪುಟ ಮಾಡು ; ಹಚ್ಚು : ಬೆಳಗುವ ಸೊಡರೊಳ್ಗೊಡರಂ ಬೆಳಗಿ ಪಲರ್ಕೊಂಡು ಪೋಗೆಯುಂ ಕುಂದದೆ ಪಜ್ವಳಿಸುವವೊಲ್ . . . ತವದಿತ್ತು ಮೆಚ್ಚಿವನಿಚ್ಚವಬೆಡಂಗಂ (ಗದಾಯು. ೦-೩೦) ; ಬೆಳಗಪ್ಪ ಜಾವದಾಗಳ್ ಸೊಡರ್ಗುಡಿಗಳ ಬೆಳಗಿ ಪೊಡೆಗೆಯ್ಯರೆ ದೀಪಾವಳಿಯೆಂಬುದು (ಸಮಚ. ೨-೯೫). ೩. (ಆರತಿ, ನೀರಾಜನ ಮೊದಲಾದುವುಗಳನ್ನು) ಎತ್ತು ; ನಿವಾಳಿಸು : ನೋಟವೇ ಬೆಳಗಿದಾರತಿ ಶಂಕರಂಗಲ್ಲಿ (ಶಾಂಕ. ದೇ. ೨೬೨-೩) ; ಏಕಾರತಿಯು ನೋಡುವ ಬನ್ನಿ ನಮ್ಮ ಲೋಕನಾಥನ ಸಿರಿಪಾದಕ್ಕೆ ಬೆಳಗುವ (ಕ್ಷರಂಕ. ೦-೨೨೬ ಅಪ:ಪ್ರಸ್ತಿ) ; ಓಣೆಯಿಕ್ಕೆಲದಲಿ ದೊರೆವೆಣ್ಣುಗಳು ಮುತ್ತುಮಾಣಿಕ ದಾರತಿ ಬೆಳಗಿ ಕಾಣಿಕೆಯಿತ್ತು ಕೆಯ್ಮುಗಿದರು ಹರಿನೀಲವೇಣಿಯ ಮೋಡಿ (ಮೋಹತ. ೨೪-೦೬). ೪. ಶೋಭಿಸು ; ಮೆರೆ ; ವಿಜೃಂಭಿಸು : ಬೆಳಗು ವುದಿಂದ್ರಲೋಕದೊಳಗಯ್ಯನ ಮಾ[ತನಲೆ]ಮ್ಮ ಸಾಹಸಂ ಬೆಳಗುವುದೀ ಧರಾವಳಯದೊಳ್ (ಸಂಕಶಾ. ೬-೦೯) ; ನೊಸಲೋಳಿಸಿದ ವಿಭೂತಿಯ ಬೊಟ್ಟು ಬೆಳಗುತಿರೆ (ಇಹಶ. ದೇ. ೩೨-೯) ; ಮುನಿವರನು ಶಾಂತಾದೆ.ವಿ ಸಹಿತಾ ಧರಣಿಪನ ಭವನದಲಿ ಬೆಳಗಿದನಧಿಕತೇಜದಲಿ (ಕೂರಿಶಾ. ೦-೩-೩೯). ೫. ಪ್ರಕಟಗೊಳಿಸು ; ಪ್ರಚಾರಮಾಡು : ಬೆಳಗುವೆಸ್ನಿಲ್ಲಿ ಲೌಕಿಕಮುನಲ್ಲಿ ಜಿನಾಗಮಮುಮಂ (ಕೊಶಭಾ. ೦೯-೬೦) ; ಅತ್ತಿಮಬ್ಬೆ ಜಿನಶಾಸನಮಂ ಬೆಳಗುತ್ತ ಮಿರ್ದಪಳ್ (ಅಜಿಪು. ೦-೬೯). ೬. (ಲೋಹ, ಗಾಜು, ಮುಂತಾದವು ಗಳಿಂದಾದ ಉಪಕರಣಗಳನ್ನು) ಮೆರುಗು ಬರುವಂತೆ ತೊಳೆ ; ಹೊಳೆಯುವಂತೆ ಉಜ್ಜು : ಬೆಳಗಿದ ಮಣಿದರ್ಪಣಮಂ ತಿಳಿದ ಸರೋ ವರಮುನಿಟಿಸಿ ನಿರ್ಮಳಮದೆ ನಿರ್ಮಳಿನತರಮಾಯ್ತು ಜಗತೀತಿಳಕನ ನೆಗಳ್ದ ಜಿತಜಿನನ ಚಿತ್ರಮುದಾತ್ತಂ (ಅಜಿಪು. ೬-೯೬) ; ಉಪಾಧ್ಯಾಯ ರೋದಿಸಿ ಕೈಗನ್ನಡಿಯುಂದದಿಂ ಬೆಳಗುಗಂದಂದಿಂಗೆ ಮಚ್ಚಿತ್ತಮಂ (ಅರಕಪ. ೦-೩) ; ಹಿತ್ತಾಳೆಪಾತ್ರೆಗಳನ್ನು ಬೆಳಗುವಾಗ ಹುಣಸೆ ಹಣ್ಣನ್ನು ಉಪಯೋಗಿಸಬೇಕು (ರೂಢಿ). ೭. ತಾಪವುಂಟಾಗು ; ಬಿಸಿ ತಟ್ಟು : ಪೊಸವೇಟಕಾರ್ತಿಯರ ಬಿಸುಸುಯ್ಯೊಳ್ ಬೆಳಗಿದುದೆಂಬಿನಮೊಗಳೆಲ್ಲಂ ಕೊರಗಿದುದೊ ಕುಮುದಿನೀವಿಸ್ತಾರಂ (ಶಾವಂಕಾ. ೦೬೪). ೮. (ಅಲಂ) ಚುರುಕುಗೊಳಿಸು ; ತೀಕ್ಷ್ಣಗೊಳಿಸು : ಇದಿರೆನ್ನ ಹಳಿವರು ಮತಿಯ ಬೆಳಗುವರು (ಸರ್ವಜ್ಞ. ೬-೨೦) ; ಗ್ರಂಥಗಳು ಮಾನಸ್ಸಿಗೆ ಮುಟ್ಟುತ್ತವೆ . . . ಬುದ್ಧಿಯನ್ನು ಬೆಳಗುತ್ತವೆ (ಗ್ರಂಶಾಂ. ೪). **ಬೆಳಂಗು :** ೧. ಕಪೋಲಯುಗಂ ಬೆಳಂಗಿ ನುಣ್ಪೆಡೆ (ಶಂಪ್ರಸ್ತು. ೪-೯). ೯. ಒಪ್ಪು ; ಅಂದವಾಗಿರು : ಪಲಉಂ ಪೂಗಿಡುಗಳಿಂ ಬೆಳಂಗುವ ಧ[ರ್ಮ] ಕೋಂಟಮುಂ . . . ಕೊಟ್ಟು (ಶಶಿತ. IV. ೨೬೬-೯೮ ; 1410). ☞ ಇದು ಛಂದಸ್ಸಿಗಾಗಿ ಮಾಡಿಕೊಂಡಿರುವ ರೂಪ. **ಬೆಳಕು₁ :** ೧. ಕೃತವಿದ್ಧಂತೆ ಉಸ್ಥತ್ವದ ರಸಕ್ಕೆ ಬಾಧು ಬರುವಂತೆ ರಸವಿದ್ಧಂತೆ ಬೆಳಕುವ ಕಾಶವ ಗಳಿಸುವನಂತೆ ಇಂತೀ ರಸಿಕವನಾರು ಬಲ್ಲರು (ಮೋಕ್ಷಶಾ. ೩೯-೨೨೦). [ದೇ.॥ ತಮಿ. ವಿಳಜ್ಜು, ವಿಳಕ್ಕು ; ಮಲ. ವೆಳುಕ್ಕ, ವಿಳಕ್ಕು ; ತುಳು. ಬೆಳಗು ; ಕೊಡ. ಬೊಳೀ ; ತೆಲು. ಬೆಳಗು, ಬೆಳಂಗು, ಬೆಳುಕು, ಬೆಳ್ಕು, ವೆಲುಗು, ವೆಲುಂಗು ; ಕೋತ. ವೆಳ್ಕ್]

5

**ಬೆಳಗು₂**, ಬೆಣಕು, ಬೆಳಕ, ಬೆಳಕು₂ (ನಾ). ೧. ಹೊಳಪು ; ಕಾಂತಿ : "ಪ್ರಕಾಶಃ, ಆಲೋಕಃ, ಉದ್ಯೋತಃ — ಈ ೩ ಬೆಳಗು" (ಹಶಾಯು. ೦೨-೬೬) ; ತೊಟ್ಟ ಮಾಣಿಕಂಗಳ ಬೆಳಗಿಟ್ಟಳಂ ತನಗೊಡಂಬಡೆ (ಸಂಕಶಾ. ೪-೪೦). ೨. ಸೂರ್ಯೋದಯದಿಂದ ಸಾಯಂಕಾಲದ ವರೆಗಿನ ಅವಧಿ ; ಸೂರ್ಯನು ತನ್ನ ಪ್ರಕಾಶವನ್ನು ಬೀರುವ ಕಾಲ ; ದಿವಸ : ಬೆಳಗಿನೊಳಂ ಕಾಣದು ನಿಶಿಯೊಳ್ ಕಾಣ್ಬುದು ಪೆಗ್ಗಣಕ್ಕೆ (ರಶಾಕ್ಯ. ೦-೦೦೬) ; ಚೋರಂಗೆ ಬೆಳಗು ಗುಣ ವಪ್ಪುದೆ (ಚಾಕ್ಯಸಂ. ೨೬೦-೯೫). ೩. ಸೂರ್ಯ, ದೀಪ ಮುಂತಾದುವುಗಳ ಪ್ರಕಾಶ : ಅನಿತರ್ಕೆ ಬೆಳಗಿನಂಕುರವಾದುವು (ಕತ್ತಲಾ. ೬-೨) ; ಸೊಡರು ಬೀದಿಗೆ ಸುಳಿಯಲಿಲ್ಲಿಯ ಬೆಳಗು (ಕುಮಾರವ್ಯಾ. ೦೩-೯೭) ; ಹುಲಿಯು ಹುಲ್ಲೆಯ ನೇಹ ಬಿಜುಗತ್ತಲೆಯು ಬೆಳಗಿನ ಮೈತ್ರಿ . . . ಇರ್ದುದು ಬನದೊಳಾ ಮುನಿಯ (ಕೂರಿಶಾ. ೦-೩-೯೩). ೪. (ಅಲಂ) ಅರಿವು ; ಜ್ಞಾನ ; ತಿಳಿವಳಿಕೆ : ಬೆಳಗಿನೊಳಗೆ ಬೆಳಗಾಗುವ ಚಿನ್ಮಯ (ಉಜ್ಜಟಿ. ೬-೦೦೦) ; ಬೆಳಗ ನುಂಗಿದ ಗುರುವಿನೊಳಗ ನುಂಗಿದ ಶಿಷ್ಯ (ಸರ್ವಜ್ಞ. ೦೦೬). 'ಬೆಳಗುವಡೆ' ಪರಾ. **ಬೆಣಕು :** ೧. 'ಬೆಣಕೇಟು' ಪರಾ. **ಬೆಳಕ :** ೫. ಶೋಭೆ ; ಅಂದ : ತಿಳಗೊಟಿದಂ ಬೆಳೆಗೆಯ್ಯಂ ಗಿಳಿವಿಂಡಿಂ ಪೂತ ಪುಷ್ಪವನದಿಂ ವನದಿಂ ತೊಳಪ ಕಲಿದೇವನಿಳಿಯದ ಬೆಳಕ ದಿನೀ ಯೋರುಪಾಯಿ ಸೊಗಯಿಸುತಿರ್ಕುಂ (ಕೌಸ್ತು. IX-i. ೩೨೨-೭೦ ; 1195). **ಬೆಳಕು₂ :** ೩. ಸಂದ ನಿಶೆಯೊಳಗೂಟವೇವೆಸರಿದಕ್ಕೆ ಬೆಳಕೇಕೆ ಎಸಲು (ಸಂಕಶ. ೦೭-೦೦೬) ; ಅವರು . . . ತೆರಳಿದರು ಕಪ್ಪಾಗುವ ಕತ್ತಲೆ ಯೊಳಗೆ ಕೈಗೊಳ್ಳಿಗಳ ಬೆಳಕಿನಲಿ (ಕೊರಿಶಾ. ೩-೦೦-೩೦) ; ಜ್ಞಾನದೀಪದ ಬೆಳಕಿಲಿ ಓಡಾಡಬೇಕು (ಪುಶಂತ. ೦-೦೬೯-೩). ೬. ದೀಪ ; ಹಣತೆ : "ಬೆಳಕಿನೆ ದೀಪಂ" (ರತ್ನಕಂ. ೩).

ಬೆಳ್ಳಂಬೆಳಗು, ಬೆಳ್ಳಂಬೆಳಕು (ದ್ವಿರುಕ್ತಿ) : ಮಬ್ಬುಗತ್ತಲೆಯಾಗಿದ್ದರೂ ಕೊಟದ ತುಂಬೆಲ್ಲ ವಿದ್ಯುದ್ದೀಪದ ಬೆಳ್ಳಂಬೆಳಗು ಪಸರಿಸಿತ್ತು (ಮುಂಗಾರು. ೦೦೦) ; ಇಲ್ಲದಕೆ ಅಳತೆ ಬೆಳ್ಳಂಬೆಳಕು ಮುಸುಕಿತ್ತು ಗುಪ್ತವಿರಿಸಿ (ಅರಕು. ೨೨೬-೦೨). **ಬೆಳಕಿಗೆ ತರು** = ಪ್ರಕಾಶಕ್ಕೆ ತರು ; ಪ್ರಸಿದ್ಧಪಡಿಸು : ನಮ್ಮನು ತಂದೆ ಬೆಳಕಿಗೆ ತಂದವರು ಮುಂದೆ (ಶಂಕಾಶ. ೨೨-೯೬). **ಬೆಳಕು ಚೆಲ್ಲು** = ೧. ಪ್ರಕಾಶವನ್ನು ಬೀರು, — ತುಂಬು : ಆ ದೀಪವು ಕೋಣೆಯ ತುಂಬ ಬೆಳಕು ಚೆಲ್ಲಿದೆ (ರೂಢಿ). ೨. ಸ್ಪಷ್ಟಗೊಳಿಸು ; ಸ್ಪಷ್ಟೀಕರಿಸು : ಇಲ್ಲಿ ಕೊಡಿಸಿರುವ ಘಟನಾವಳಿಗಳೂ ದಂತಕಥೆಗಳೂ ಈ ಸಂಗೀತರತ್ನಗಳ ಹಿಂದೆ . . . ಇವುಗಳ ಬಗ್ಗೆ ಬೆಳಕು ಚೆಲ್ಲುತ್ತವೆ (ಸಂಗೀತ. VI. ೩೬೫). **ಬೆಳಕು ಬೀರು** = ಬೆಳಕು ಚೆಲ್ಲು ೨ : ಈತನ ಕಡೆಯ ಕಾಲದ ವರೆಗಿನ ಶಾಸನಗಳೆಲ್ಲವೂ ಕೇವಲ ದಾನವತ್ತಿಗಳನ್ನು ನಿರೂಪಿಸುತ್ತವೆಯೇ ಹೊರತು ಈತನ ರಾಜಕೀಯಚರಿತ್ರೆಯ ಮೇಲೆ ಬೆಳಕುಬೀರುವುದಿಲ್ಲ (ಕೊಳಾ. ೩೬). **ಬೆಳಕು ಹರಿ** = ಬೆಳಗಾಗು ; ಸೂರ್ಯೋದಯವಾಗು : ಬೆಳಕುಹರಿ ದೊಡನೆಯೇ . . . ಅವರೆಲ್ಲರೂ ಹೊರಟುಹೋದರು (ಯೋಗಪು. ೬೩). **ಬೆಳಗಿನ ಜಾವ** = ಬೆಳಗಿನ ಸಮಯ ; ಪ್ರಾತಃಕಾಲ : ಬೆಳಗಿನ ಜಾವ ಪೂರಾ ಚಳಿ ಅಗ್ಗದೆ (ಕುಳಿಬ. ೨೫೩). **ಬೆಳಗು ಮಾಡು** = ಶುಭ್ರಗೊಳಿಸು ; ಸ್ವಚ್ಛ ಮಾಡು : ದರ್ಪಣ ನಸುಮಾಸೆ ಬೆಳಗಿ ಬೆಳಗುವಮಾಡಿ ನೇರ್ಪುವಡಿಸಿ ನೋಡುವಂತೆ ಒಪ್ಪುವ ಸುಕವಿಗಳದಚ್ಚೊಳಗೊಂದರತಪ್ಪಿರೆ ತಿದ್ದಿ ಮೆಚ್ಚಿಪುದು (ವರ್ಧತ. ೦-೪೦). **ಬೆಳ್ಳಂಬೆಳಗೂ** = ರಾತ್ರಿಯೆಲ್ಲಾ ;

ಬೆಳಗಾಗುವ ವರೆಗೂ : ತಲೆನೋವಿನಿಂದ ಬೆಳ್ಳಂಬೆಳಗೂ ನಿದ್ರೆಯೇ ಬರಲಿಲ್ಲ (ರೂಂ). [< ಬೆಳಗು$_1$. / ತಮಿ. ಮಲ. ವಿಳಕ್ಕು; ಕೊಡ. ಬೊಳಕೀ ; ತೆಲು. ಬೆಳುಕು, ಬೆಳ್ಕು. ವೆಲುಗು ; ಕೋತ. ವೆಳ್ಕ್]

**ಬೆಳಗುಂಬೊಳ್ತು**, ಬೆಳಗುಪೊಳ್ತು (ನಾ). ಬೆಳಗಿನ ಕಾಲ ; ಪ್ರಾತಃಕಾಲ : ಇಂದು ಬೆಳಗುಂಬೊಳ್ತು . . . ನನ್ನಗ್ರಜಂ ನಿನ್ನನ್ನರುಹಿದನ್ ನನಗೆ (ಶಬ್ದಾಂಗ. ೨೪-೬೧೯). **ಬೆಳಗುಪೊಳ್ತು :** ಮನೋಹರಂ ಮೋಹನ ಮಯೂರಮಿಥುನಂ ಬೆಳಗುಪೊಳ್ತಿನೊಳೆ . . . ಪಾರಿದಪ್ಪೊಲ್ಮೆ ಪೊಯ್ಯಾರದಿಂ ಗಿರಿನೆತ್ತಿಗೆ (ಶಬ್ದಾಂಗ. ೩೩-೦೯೩೯). [ಬೆಳಗು$_2$ + ಪೊಳ್ತು (< ಪೊಲ್ತು)]

**ಬೆಳಗುಜಾವ** (ನಾ). = ಬೆಳಗುಂಬೊಳ್ತು : ಬೆಳಗುಜಾವದ ಬಲುನಿದ್ರೆಗೆ ಮನವಿತ್ತಿಳಿದು ಕೊಲುವರನರಿಯದೆ (ಕೆಂಪಶಿ. ೧೩-೮) ; ಗುರುಸಮರ್ಚನೆ ಗರಲ್ಲರಲೆಂದು ಕುಸುಮಾಕರಂಡಕಮಂ ಕೊಂಡು ಬೆಳಗುಜಾವದೊಳೆಳ್ದು ಜವದಿಂ ನಡೆತರ್ಪಾಗಳ್ (ವೃಷಶಿ. ೨೭-೬೩ ವ) ; ಬೆಳಗುಜಾವ ಎದ್ದಾಗ . . . ಮನಕೊಂದು ಪ್ರಸನ್ನತೆ ಬಂದಿತ್ತು, ಅವಳಿಗೆ (ಶಿಂಬ. ೫೨).
[ಬೆಳಗು$_2$ + ಜಾವ$_1$]

**ಬೆಳಗುಪೊಳ್ತು** 'ಬೆಳಗುಂಬೊಳ್ತು' ನೋ.

**ಬೆಳಗುವಡೆ** (ಕ್ರಿ). ಜ್ಞಾನವನ್ನು ಪಡೆ ; ಅರಿವನ್ನು ಹೊಂದು : ಬೆಳಗುವಡೆಯಲೊಡಂ ಕಣ್ಬ ನಿರ್ಮಲದೃಷ್ಟಿಯಂತೆ (ಬ್ರಹ್ಮ. ೧೦೩-೭).
[ಬೆಳಗು$_2$ + ಪಡೆ$_1$]

**ಬೆಳಗೆಯ್** 'ಬೆಳಿಗೆಯ್' ನೋ.

**ಬೆಳಗ್ಯೆ** 'ಬೆಳಿಗೆಯ್' ನೋ.

**ಬೆಳಗ್ಗೆ**, ಬೆಳಿಗ್ಗೆ, ಬೆಳಿಗ್ಯೆ (ಅ). ಮುಂಜಾವಿನಲ್ಲಿ ; ಪ್ರಾತಃಕಾಲದಲ್ಲಿ : ಬೆಳಗ್ಗೆ ಹೊಲೆಯರೆಲ್ಲಾ ಹೊರಟು . . . ಮನೆಮನೆಗೆ ಹೋಗಿ ರಾಗಿ ಬತ್ತ ವಸೂಲು ಮಾಡುತ್ತಾರೆ (ಜನಪ್ರರು. ೬೭). **ಬೆಳಿಗ್ಗೆ :** ಒಂದು ದಿನ ಬೆಳಿಗ್ಗೆ, ಒಂದು ದಿನ ಸಂಜೆಗೆ . . . ಹೀಗೆ ಅನಿಯಮಿತವಾಗಿ ಊಟ ಮಾಡಬಾರದು (ಮುಂಬಯಿ. ೪-೩೩). **ಬೆಳಿಗ್ಯೆ :** ಆ ಬೆಳಿಗ್ಯೆ ಅರುಣೋದಯದ ಸಮಯದಲ್ಲಿ (ರಾಜೇಂದ್ರ. ೪). [<ಬೆಳಗು$_1$. ಇದು ಶಬ್ದವು 'ಬೆಳಗಿಗೆ' ಎಂಬ ಚತುರ್ಥಿ ವಿಭಕ್ತ್ಯಂತ ರೂಪದಿಂದ ಸಂಕ್ಷಿಪ್ತಗೊಂಡು ಅವ್ಯಯವಾಗಿದೆ]

**ಬೆಳಚವಾಡಿ** (ನಾ). ಒಂದು ಊರಿನ ಹೆಸರು : ಅರಸ ಸಿರೆ ನಾಡೊಳೆ ಬೆಳಚವಾಡಿಯ ಮಹಾಜನಕ್ಕೆ ನೆಲ್ಲಕ್ಕಿಯ ಬಟ್ಟನ್ (ಎಕ. III (R), ಗುಂಡ್ಲು. ೯೩-೬; 10ನೆಯ ಶತ). [ಬೆಳಚು$_0$ + <ಪಾಡಿ$_2$]

**ಬೆಳಡಕಿಲು** (ನಾ). ಒಂದು ಬಗೆಯ ಸಸ್ಯ : "ಕುಮಾರಿ—ಲೋಯಿಸರ. . . ಬೆಳಡಕಿಲು" (ಒಶಂ. ೩೫). [ಬೆಳ್$_1$ (< ಬಿಳಿದು) + ಅಡಿಕಿಲು$_2$]

**ಬೆಳತಿಗೆ** 'ಬೆಳಂತಿಗೆ' ನೋ.

**ಬೆಳತಿಗಣ್** 'ಬೆಳಂತಿಗೆಗಣ್' ನೋ.

**ಬೆಳತಿಗೆವಡೆ** (ಕ್ರಿ). ಹೊಳಪನ್ನು ಪಡೆ ; ಕಾಂತಿಯನ್ನು ಹೊಂದು : ಎಳೆವಸಿಜಿಸಕದ ಪಾಡಿವದೆಳೆದೆಳೆಯಂ ತಾಳ್ದ ಗಗನಲಕ್ಷ್ಮಿಯ ತೆಱದಿಂ ತಿಳಕಾವಳಿ ಸೊಗಸಿರ್ದಳು ಬೆಳತಿಗೆವಡೆದಿರ್ದ ಮೆಯ್ಯ ಚೆಲುವಿಂದಾಗಳ್ (ಕೃಷ್ಣಾಸ್ರ. ೩-೫). [ಬೆಳತಿಗೆ (<ಬೆಳಂತಿಗೆ) + ಪಡೆ$_1$]

**ಬೆಳತಿಗೆವೆಳಗು** (ನಾ). ಉಜ್ವಲವಾದ ಬೆಳಕು ; ಬೆಳ್ದಿಂಗಳ ಬೆಳಗು : ಇದೆಲ್ಲಿಯುತ್ಕಟವ ಕಂಪಿದೆಲ್ಲಿಯ ಬೆಳತಿಗೆವೆಳಗಿದೆಲ್ಲಿಯುಚ್ಚ್ರಿಯಾನಂದಂ ಬಂದು ನಿಂದಪುದು (ಪಂಪರಾ. ೦೨-೦೦೩) ; ತಿಂಗಳ ಬೆಳತಿಗೆವೆಳಗಿನೊಳಂ ಗಡಲೆಸೆವಂತೆ (ಧರ್ಮನಾ. ೧-೯೬). [ಬೆಳತಿಗೆ (<ಬೆಳಂತಿಗೆ) + ಬೆಳಗು$_2$]

**ಬೆಳತೂರ್** (ನಾ). ಒಂದು ಊರಿನ ಹೆಸರು : ಇದರ್ಕೆ ಸಾಕ್ಷಿ ಬೆಳತೂರಾ ಮಹಾಜನಮುಂ (ಎಕ. X, ಕೋಲಾರ. ೦೦-೦೦ ; 753) ; ಕಟಲೆನಾಡ ಬೆಳತೂರ ಪಡುವಣದೆಸೆಯ ಮೊಱಡಿಯೊಳ್ (ಎಕ. III, ಮಂಡ್ಯ. ೪೦-೦೦; 950). [ಬೆಳತ್$_0$ + ಊರ್]

**ಬೆಳದಲೆ** (ನಾ). ಒಂದು ಬಗೆಯ ಸಸ್ಯ : ಜ್ವರಾತಿಸಾರಕ್ಕೆ ಬೆಳದಲೆಯನಕ್ಕೆ ಮೇಣರಿದಳಮಂ ನೀರಕ್ಕಿಗಚ್ಚಿನಿಂದರೆ ಕಳೆಯೊಳ್ಕೆಳಗಿಂ ಉಚ್ಚ್ಯವ ಜ್ವರಮಂ ಘಳಿಲನೆ ತಾನೆರೆಯಲುಲಕ್ಷಣ ಉಪಶಮಂ (ಗೋವೈದ್ಯ ೦೯೯-೩).[?]

**ಬೆಳದಿಂಗಳು** 'ಬೆಳ್ದಿಂಗಳ್' ನೋ.

**ಬೆಳಪ** 'ಬೆಳರ್$_1$' ಪರಾ.

**ಬೆಳಪು** 'ಬೆಳ್ಪು$_1$' ನೋ.

**ಬೆಳಬೆಂಜನ** (ನಾ). (?) : ಸುಮತಿಯನೇಗೆಯ್ದುಂ ಬಿಡಲಾಱದೆ ನೀಂ ಬೆಳಬೆಂಜನನಾಗಿ ಭೋಗಿಸುವೆನೆಂದು ಕೊಕ್ಕಬಗುದಿಪ್ಪೆ (ಧರ್ಮಾಮೃ. ೬-೨೨೪) ; ವಿಜ್ಞಾನಹೀನರುಂ ದುರ್ಗತಿಭಾಜನರುಂ ಅಘಸಮೇತರುಮವಿಚಾರಿಗಳು ಮಪ್ಪ ಮಾರ್ಗಾತಿಗಳಂ ಕಂಡು ಬೆಳಬೆಂಜನನಾಗಿ (ಧರ್ಮಾಮೃ. ೦೦-೩೫). [?]

**ಬೆಳರ್$_1$** (ಕ್ರಿ). ಬೆಳಪ (ವರ್ತಕೃ). ೧. (ರಕ್ತಹೀನತೆಯಿಂದ) ಬೆಳ್ಳಗಾಗು : ಬಿಳಿಚಿಕೊಳ್ಳು : "ಬೆಳರ್—ಧಾವಲ್ಯೇ (ಬಿಳುಪಾಗು, ಕಾಂತಿಯಾಗು)" (ಶಮಂ) ; ಸುರ್ಕೊಱಮುರಾಳಿಗುರುಳ್ ನಸುಸುರ್ಕಿದ ಕುಚಚೂಚುಕಂ ಬೆಳರ್ತಧರಂ (ಆಪು. ೦೦-೦೯೩) ; ಶಶಿಕಾಂತಮುಕುರದಂತಿರೆ ಶಶಿಮುಖಿಯ ಕದಂಪುಗಳ್ ಬೆಳರ್ತುವು (ಶಂಖಪಚ. ೪-೩) ; ನೀರುಣದೆ ಮುಗಿಲ್ಗಳ್ ಬೆಳರ್ತು ಬೆಂಡಾದುವು (ರಾಜಾಕ್ಕ. ೩೩-೦೨). ೨. ಬೆಳಕು ಬೀರು ; ಪ್ರಕಾಶವನ್ನುಂಟುಮಾಡು : ದೀಪಳಿಗೆಯ ಕಟ್ಟಲೆಯೊಳ್ ದೀವಿಗೆಗಳ್ ಬೆಳಪ ತೆಱದೆ . . . ಬೆಳಗುತಿರ್ಪಜ್ಜೈನರ್ (ಸಮಶ. ೬-೯೯) ; ಸುಲಲಿತಮಾಗಿ ನೀಳ್ದ ತುಱುಗಿರ್ದೆವೆಗಳ್ ತಮಮಂ ಬೆಳರ್ಪ ಕಣ್ಮಲರ್ಗ ಣೆಯಂದಮಂ ನೆಱೆಯೆ ಪೋಲ್ತಿರೆ (ಧರ್ಮಾಮೃ. ೭-೧೯೭). ೩. ಬೆಳ್ಳಗಾಗಿಸು ; ಬಿಳುಪೇರಿಸು : ಮಲ್ಲಿಗೆವಳ್ಳಿಗಳ್ ಲಸನ್ಮಂಜರಿಯಿಂ ಬೆಳರ್ತ ಸೆಱೆ ಬಂದುದು ಚೈತ್ರಂ (ಉದ್ಭಟ. ೪-೩). ೪. ಹೊಳೆ; ಮಿಂಚು : ಅಲರ್ದ ಸಂಪಗೆಯರಲಂತೆ ಬೆಳರ್ತ ಬಣ್ಣಂ ಗುಣಾರ್ಣವಂಗೆ ಮಾಡಿದ ಬಣ್ಣದಂತೆ ಸೊಗಯಿಸಿ ಬಳೆದು (ಶಂಕಶಾ. ೦-೦೯೩ ವ).

[ದೇ.॥ ತಮಿ. ವೆಳಿಱು ; ಮಲ. ವಿಳರ್ ; ತುಳು. ಬೊಳಿರು, ಬೊಳೆರು ; ತೆಲು. ವೆಲರು]

**ಬೆಳರ್$_2$** (ನಾ). ಬಿಳಿಯ ಬಣ್ಣ ; ಬಿಳುಪು : ಬೆಳರಂ ಪೊಸಕಿಸುವಂ ಕರ್ಪಂ ಪೊನ್ಬೊಳಪಂ ಪಳಿಕಂ ಪಾಳಿಪ ನಿಮ್ಮಳಿಕನುಮಿನುಗಿಂದುಱಿ ದೆಸೆಸುವ ಮೊಗಮೈದುಂ (ಅಗ್ನಿದೇ. ೬-೩). 'ಬೆಳರ್ವಣ್ಣ' ಪರಾ. ೨. ಹೊಳಪು ; ಕಾಂತಿ ; ಪ್ರಕಾಶ : ಕಾವಿಮುರ್ಗಿಲ ಸೊಂಪಿದರ್ದ ಸೋರ್ಮುಡಿ . . . ಕೂರ್ಮುಚರಣಾಗ್ರಿಮ ಬೆಳರ್ಮುಸುಂಕಿದ ಸೆಳ್ಳು ಗುರ್ಮನೋಹರಮಾಗೆ ಪರಪೆಯೆಸೆದಳು (ಶಾಂತಿಪು. ೭-೦೦); ಬೆಳರ ಬೀಱುತಿಪ ದುಂಡುಮುತ್ತಿನ ಚೌಕುಳಿ (ಶೃಂಗಾರ. ೬-೭೯).

**ಬೆಳರ್ಮಾಡು** = ಬಿಳಿಚಿಕೊಳ್ಳುವಂತೆ ಮಾಡು ; ನಿಸ್ತೇಜಗೊಳಿಸು : ವೈರಿವಾರವನಿತಾವದನಾಂಬುರುಹಂಗಳಂ ಬೆಳರ್ಮಾಡದೆ . . . ಸಂಧಿ ಮಾಡುವನೆ ಪಾಂಡವರೊಳ್ ಫಣಿರಾಜಕೇತನಂ (ಗದಾಯು. ೩-೪೪).

[< ಬೆಳರ್$_1$./ತಮಿ. ವೆಳಿಱು ; ತುಳು. ಬೊಳ್ಪರೆ; ತೆಲು. ವೆಲರು]

**ಬೆಳರಿಸು** (ಕ್ರಿ). ಬಿಳುಪಾಗಿಸು ; ಬೆಳ್ಳಗೆ ಮಾಡು : ಸಿರಿವನೆಯಂ ಸೊದೆಯ ತೊವೆಪದಿಂ ಬೆಳರಿಸಿ ಚಪ್ಪರಮಂ ಬೆಳ್ವಟ್ಟೆಗಳಂ ಪರು ಕವಿಸಿದರಚ್ಚಮುತ್ತಿನೊಳ್ಗೊಂಚ್ಚುಗಳಂ (ಶಕಂ. ೪-೨೬).
[ಬೆಳರ್$_2$ + — ಇಸು$_3$]

**ಬೆಳರ್ಗಣ್** (ನಾ). ಬಿಳುಪಾದ ಕಣ್ಣು ; ಶುಭ್ರವಾದ ಕಣ್ಣು : ಬೆಳರ್ಗಣ್ಕೆಂಪಡರ್ದರ್ಶ್ರುಗಿಳಿತರ್ಪಪೊಲೆಸಗೆ ಕಂಡು (ವೃಷಶಿ. ೦೦-೦೦೩).
[ಬೆಳರ್$_2$ + ಕಣ್]

**ಬೆಳರ್ಗೆಂಪು** (ನಾ). ಕಾಂತಿಯುಕ್ತವಾದ ಕೆಂಬಣ್ಣ ; ಕಡುಗೆಂಪು : ಕಣ್ಗಳೊಳ್ ಕಲಿಕಿದ ಬೆಳರ್ಗೆಂಪು ಬಣ್ಗೆವರೆ (ಆಪು. ೦೨-೩೬); ವಕ್ತ್ರ

ಬಿಂಬಾಧರಂ ಬೆಳರ್ಗೆಂಪಂ ಸ್ಮಿತಕಾಂತಿಯಿಂ ತಳೆದುದಿಲ್ಲ (ಪುಲ್ಲಪು. ೪-೪); ಕುಂತಳದ ಕಾಂತಿ . . . ಬೆಳರ್ಗೆಂಪಿನುಗುರ್ವೆರಲ ಕಾಂತಿಗಳ್ ತಿಂತಿಣಿಸಿ (ಕವ್ಯಗಾ. ೩-೩). [ಬೆಳರ್₂ + ಕೆಂಪು₁]

**ಬೆಳರ್ಚು** (ಕ್ರಿ). (ಆಲಂ) ಶೋಭೆಗೊಳಿಸು : ಈ ಜಗತಿಯನಾಳ್ವ ರಾಜನ್ಯಪನೊಳ್ಪಸದಿಂ ಜಗವಂ ಬೆಳರ್ಚಿದಂ (ಕಳಾ. ೨-೬೦). [ಬೆಳರ್₂ + -ಚು₁]

**ಬೆಳರ್ದುಟಿ** (ನಾ). ಬೆಳ್ಳಗಾದ ತುಟಿ ; ಬಿಳಿಚಿಕೊಂಡ ತುಟಿ : ಬೆಳ [ಕಾಂ. ಳು]ದು‍ರ್ಟಿ . . . ಅಳವಳಿದಂಗವೆಸೆಯೆ ಸುರತಾಂತದ ನಳಿನಾಕ್ಷಿಯೊರ್ವಳೆಸೆದಳು (ಕುಣಾಸಾಂ. ೨೮-೯೦). [ಬೆಳರ್₂ + ತುಟಿ]

**ಬೆಳರ್ಪು** (ನಾ). ಬಿಳಿಯ ಬಣ್ಣ ; ಬಿಳುಪು : ಪುಳಿಂದರಾಜಸುಂದರಿಯರ ನೆಲೆಮೊಲೆಯ ಸಿರಿಕಂಡದಣ್ಪಿನಿಂ ಪೊರೆದು ಬೆಳರ್ಪನಾಂತ ತೆರೆಗಳೊಳಂ . . . ರಂಜಿಸುವುದು (ಕಾದಂಪೂ. ೦೦೬); ಕುಸುಮಶರನ ಪೊಸಜಸದ ಬೆಳರ್ಪು ಮುಸುಂಕಿದುದೋ? (ಜಯುಕಾ. ೪-೦೮). [ಬೆಳರ್₂ + -ಪು₂]

**ಬೆಳರ್ವೇಱು** (ಕ್ರಿ). ಬಿಳಿಚಿಕೊಳ್ಳು ; ಮ್ಲಾನವಾಗು : ಬೆಳರ್ವೇಱಿದಾ ಸ್ಫೋಜ್ಜ್ವಲಪದ್ಮಂ . . . ತಾಪದಿಂದಿರ್ವಱಿದಾ ಬಿಂಬಾಧರಂ (ಕುಸುಮಾ. ೦೩-೬೬). [ಬೆಳರ್ಪು + ಏಱು₁ (<ಏಱ್₁)]

**ಬೆಳರ್ಮಣ್** (ನಾ). ಬಿಳಿಯ ಮಣ್ಣು : ಬೆಳರ್ಮಣ್ಣ ಪೊಸಕಡಾಯದೊಳ್ ತುಂಬಿದ ನೀಲಿಯ ತನಿರಸಮೆಂಬಂತಿರೆ ಕಳಿಂದಜೆಯ ಕರ್ಮಡುವಿನೊಂದು ಪೊಳೆಪಿಂ . . . ಕೊಳಂ . . . ಸೊಗಯಿಸಿದತ್ತು (ರಾಮಾಶ್ವ. ೫೨-೨೦). [ಬೆಳರ್₂ + ಮಣ್]

**ಬೆಳರ್ವಕ್ಕಿ** (ನಾ). ಬಿಳಿಯ ಹಕ್ಕಿ ; ಹಂಸ : ಬಾಣಾನಿರುವ್ವರು ಸಿರಂಬಾಗಿ ವಂದಿಸಲು ಪಿಡಿದೆತ್ತಿ ಪತಸುತ್ತ ಬೆಳರ್ವಕ್ಕಿಯುಮುಯುಡರ್ದು (ಕಪುಪೋ. ೨೯-೩೬). [ಬೆಳರ್₂ + ಪಕ್ಕಿ]

**ಬೆಳರ್ವಡು** (ಕ್ರಿ). ಬೆಳ್ಳಗಾಗು ; ಬಿಳುಪೇರು : ಅಡರೆ ಕವಿಲ್ಪುದೊಂದೆಡೆ ಮೃಗೋದ್ಭವದಿಂ ಬೆಳರ್ವಟ್ಟು ನಿಂದುದೊಂದೆಡೆ ಮಲಯೋದ್ಭವಪ್ರಸರದಿಂ ಕದಡಿಂ . . . ಸರಸೀವಿಭಾಗದೊಳ್ (ಶಾಂತಿಪು. ೬-೨೯). [ಬೆಳರ್₂ + ಪಡು₁]

**ಬೆಳರ್ವಣ್ಣ** (ನಾ). ೧. ಬಿಳಿಯ ಬಣ್ಣ ; ಶ್ವೇತವರ್ಣ : "ಬೆಳರ್ವಣ್ಣಮೆಂದು ಧವಳಂ" (ಕಶಾ. ೦೦-೨೨೦); ಮೂವಣ್ಣಂ ಬರಿಸಿದುವರಲ್ದ ಸುತ ಹೊನ್ನೆಯ ಪೊಂಬಣ್ಣದ ಬೆಳರ್ವಣ್ಣದ ಕೆಂಬಣ್ಣದ ಕೇಸರವುಮೆಸಟ್ಗಳುಂ ಕರ್ಣಿಕೆಯುಂ (ಪುಲ್ಲಪು. ೫-೦೮); ಇಳಿದತ್ತಂಸಂ ಕಪೋಲಂ ಕಡುಬಡವೆಸಿಕುಂ . . . ಬೆಳರ್ವಣ್ಣಂ ಮೆಯ್ಗೆ ಕೀವಿತ್ತು (ಚಾಳುಂತ. ೩೫-೬೦). ೨. ಶಿವ ; ರುದ್ರ : "ಬೆಳರ್ವಣ್ಣಂ ನೆತ್ತಿಗಣ್ಣ . . . ಸ್ಮರಹರಂಗೆ ನಾಮ" (ಕಶಾಂ. ೦೮). [ಬೆಳರ್₃ + ಬಣ್ಣ]

**ಬೆಳರ್ವಾಯ್** (ನಾ). ೧. = ಬೆಳರ್ದುಟಿ : ನಡು ಪುರ್ವು ಬಾಸೆ ಕನ್ಗೊಸೆಗೆಯುನುಂಟುಮಾಟ್ಟ ಜಘನಂ ಬೆಳರ್ವಾಯ್ ಮೊಲೆಗಳ್ ಕದಂಪು ಗುರ್ವಸಿಜನೆ ನೋಡೆ (ಕುಶಾ. ೪-೬೨); ಪೀರೆ ಪೊವಟ್ಟು ಪೊಂಗಿ ಬೀಗಿದ ಬೆಳರ್ವಾಯ್ . . . ತನ್ನೊಳೊಪ್ಪೆ ಸುರತಾಂತ್ಯದೊಳ್ (ರಸರ. ೦-೫೩). ೨. (ರದನಕಾಂತಿಯಿಂದ) ಚೆಲುವಾದ ಬಾಯಿ : ನಾಸಿಕದ ನೀಱಿಗೆ ಬೆಳರ್ವಾಯ ಭಾಗ್ಯನಿಧಿಗೆ (೧೦ಳ. ೩-೪೦ ಪ). [ಬೆಳರ್₂ + ಬಾಯ್]

**ಬೆಳಲ್**, ಬೆಳಲ, ಬೆಳಲು, ಬೆಳವಲ₁, ಬೇಲ. ಬೇಳ₁, ಬೇಳಲು (ನಾ). ಒಂದು ಬಗೆಯ ಮರ ಮತ್ತು ಅದರ ಹಣ್ಣು ; ಕಪಿತ್ಥ : ಆಮ್ರಂ ಬೆಳಲಿಂಗುಳಂ ಪನಸು ನಿಂಬಂ (ಕಾವ್ಯಸಾ. ೦೦೪೦ ಕುಪ್ರಳ); ಗುಡದಿಂ ಬೆಳ್ಳೆಣ್ಣೆಯನರೆಗುದಿಸಿಸಿ ಬೆಳೆದಿರ್ದ ಬೆಳಲ ತಿರುಳೊಳ್ ಬಟಿಕಂತದಱ ಸಮಾಸಾಜ್ಯಮಂ ಕೂಡಿದೊಡದು ಲೇಸಪ್ಪ ತುಪ್ಪಮಪ್ಪುದು ಪುಸಿಯೇ (ಲೋಕೋ. ೩. ೬-೪೨); ಬೆಳಲನೆಟಲೊಳ್ಮಱದುಂಪೋಗಲ್ಕೆ ಸಲ್ಲ (ಸವುಕ. ೦೦-೬೮) ; ಅರಸೇಱಲು ಬಿಕ್ಕ ಬೆಳಲ್ ತಳಿರ್ತ ನಾನಾ ತರು (ದಕಳು. ೦೨-೬೪). **ಬೆಳಲ :** ಬೆಳಲ ಗರುಗಾ ಹಾರಿವಾಳ . . . ಪತ್ರಿಗಳ ನರ್ಪಿಸು ಲಿಂಗಕೆ (ಗುರುಜಾ. ೬-೦೮). **ಬೆಳಲು :** "ಕಪಿತ್ಥಮೆಸೆ ಬೆಳಲುಂ" (ಮಂಗರಾ. ೩೫-೦೩); ಕಡಸಿಗೆಯ ಸೊಕ್ಕನಟಿಗುಂ ಪೊಡವಿಯ ಬೆಳಲಿಂಗೆ ತೊಳಸಿ ಗುಗ್ಗುಳು ಮರಿ(ಚ)ಗಳ್ (ಜಮುದ. ೨-೯೬) ; ಕರಿಗೊಂಡ ಬೆಳಲ ಹಣ್ಣಂತೆ ಗುರುಬೋಧೆ ನೆರೆಗೊಳ್ಳಬೇಕು (ಸರ್ವಜ್ಞ. ೬೬). **ಬೆಳವಲ₁:** ಬೆಳವಲವು ಖರ್ಜೂರ ದಾಡಿಮ ನಿಂಬೆ (ಪಪಪೋ. ೨೪-೫೦). **ಬೇಲ:** ಆಲಂ ಚಾಲ ಬೇಲಂ . . . ಬ್ರಹ್ಮವೃಕ್ಷಂ ಕಱಿಕ ತಱಿಯದಿಂದೊಪ್ಪುತಿರ್ದತ್ತರಣ್ಯಂ (೧೦ಳ. ೦-೬೨); ಬೇಲ ಸೆಳ್ಳು . . . ಪಾದರಿಯಾದಿಯಾದ ಪೆರ್ಮರಗಳ ಕಾಡೊಳೈತರುತಮಿರ್ಪರು (ಕೃಷ್ಣಸ್ರ. ೩-೬೩); ಪರಿಮಳದ ಪಣ್ಗಳನಾಂತು ತುಂಗದ ಬೇಲಗಳಿಹುವು (ಕಂಪರಿ. ೫-೮೮). **ಬೇಳ₁ :** "ಗಂಧಫಲಾ—ಬೇಳ, ಬೆಲ್ಲವತ್ತ, ಸಂಪಗೆ" (೬ಕಂ. ೪೬); ಕವ್ಮಿತರಂತೆ ಬೇಳಂ ಭೂಮಿ ಪರ್ವದಂತೆ ಸೀಗೆ . . . ಮತ್ತಮೆನಿತಾನುಂ ತೆಱದ ಮರದುಱುಗಲ್ (ಬಿಂಹಂ. ೨-೩೮ ಪ). **ಬೇಳಲು:** "ಕಪಿತ್ಥ—ಬೇಳಲು, ಸಿವನ್ನಿ" (೬ಕಧ. ೨೦). [ದೇ.॥ ತಮಿ. ವಿಳವು, ವಿಳಾ, ವೆಳ್ಳಿಲ್; ಮಲ. ವಿಳಾ; ತೆಲು. ವೆಲಗ./ಸಂ. ಬಿಲ್ವ]

**ಬೆಳಲ** 'ಬೆಳಲ್' ನೋ.

**ಬೆಳಲು** 'ಬೆಳಲ್' ನೋ.

**ಬೆಳವ₁** 'ಬೆಳುವ₁' ನೋ.

**ಬೆಳವ₂** 'ಬೆಳುವ₂' ನೋ.

**ಬೆಳವಡಿಚ** 'ವೇಳೆವಡಿಚ' ನೋ.

**ಬೆಳವಣಿಗೆ**, ಬೆಳವಳಿಗೆ, ಬೆಳೆವಣಿಗೆ, ಬೆಳೆವಳಿಗೆ (ನಾ). ೧. (ಮನುಷ್ಯ, ಪ್ರಾಣಿ ಮುಂತಾದುವುಗಳ) ಅಂಗಾಂಗಗಳು ಬಲಿತು ಬೆಳೆಯುವಿಕೆ : ಗಂಡಕಕ್ಕೆ ಸರ್ತಿಗೆ ಒಂದೇ ಮರಿ ಹುಟ್ಟುವುದು . . . ಅದರ ಬೆಳವಣಿಗೆ ಪೂರ್ಣವಾಗಲಿಕ್ಕೆ ಐದುವರ್ಷ ಹತ್ತುವುದು (ಮುಂಬಯಿ.೪-೪೮). ೨. ಏಳಿಗೆ; ಅಭಿವೃದ್ಧಿ : ಭಾಗಮ್ಮ ಮಗನ ಬೆಳವಣಿಗೆಯಲ್ಲಿ ಹೆಚ್ಚಿನ ಆಸಕ್ತಿಯನ್ನು ವಹಿಸಿದ್ದಳು (ರಂಗಲೋ.೦೬). ೩. ಹೆಚ್ಚಳ ; ವೃದ್ಧಿ : ಇಂತಹ ಕೊಳಚೆ ನೀರು ಸೊಳ್ಳೆಗಳ ಬೆಳವಣಿಗೆಗೆ ಎಡೆಕೊಡುವುದು (ಆತುಶಾ. ೪೦). **ಬೆಳವಳಿಗೆ :** ೧. ನಲವಿಂದ ತಮ್ಮ ತಮ್ಮ ಮೊಲೆಗಳ ಉಂಡಲ್ಲದೆ ಬೆಳವಳಿಗೆಯಿಲ್ಲ (ಮುಮುಗುಂ.೪. ೨೫೬-೪೩); ಹರಿಯಂಘ್ರಿಯುಗ್ರತರ ಬೆಳವಳಿಗೆಗಂ ಸಪ್ತಗಿರಿ ಚೂರ್ಣವಾಗೆ (ಬಕೋಪು ೦೨-೫೬). **ಬೆಳೆವಣಿಗೆ :** ೨. ಅಭಿವೃದ್ಧಿ, ವಿಕಾಸ, ಬೆಳೆವಣಿಗೆ (Development. ಶಶ್ರಿ. ೩೦). **ಬೆಳೆವಳಿಗೆ :** ೪. ವಿಕಾಸ : ಈ ದರ್ಶನಗಳ ಬೆಳೆವಳಿಗೆಯಲ್ಲಿ ಅನಂತರ ಉದಿಸಿದ ಪರಿಷ್ಕಾರಯುಗವೇ ಪ್ರಸ್ತುತ ಲೇಖನದ ವಿಷಯ (ತತ್ವಶಾ.೨೪೨); ಆರಂಭ ಕಾಲದಿಂದಲೂ ಸಂಸ್ಕೃತನಾಟಕವು ಮಂಗಳಾಂತದ ನಿಯಮಕ್ಕೆ ಸೆರೆಸಿಕ್ಕಿದ್ದರಿಂದ ಈ ಬಗೆಯ ಬೆಳೆವಳಿಗೆಯನ್ನು ಕಳೆದುಕೊಂಡಿರಬಹುದೇ? (ಕಾವ್ಯಸ.೪). [ಬೆಳೆ₁ + — ವಣಿಗೆ]

**ಬೆಳವಲ₁** 'ಬೆಳಲ್' ನೋ.

**ಬೆಳವಲ₂** 'ಬೆಳ್ವೊಲ' ನೋ.

**ಬೆಳವಳಿಗೆ** 'ಬೆಳವಣಿಗೆ' ನೋ.

**ಬೆಳವಾರ** (ನಾ). ಜಾತಿಗೆಟ್ಟವನು : ಪಱಿವನ್ಯಾವ ನೋಡದನ್ಯರೊಳೆ ದೂಱಿಟ್ಟೆಲ್ಲರಂ ಬಾಧಿಪಾ ತಳವಾಱಿ ಬೆಳವಾರನ್ಯೆ (ಸೋಮೇಶ.೬೬). [ದೇ.॥ ತಮಿ. ವೆಳಿಯಾರ್=ಅಪರಿಚಿತರು; ತೆಲು. ಬೇಲರಿ=ಅವಿವೇಕಿ]

**ಬೆಳವಿಗೆ** (ನಾ). ಏಳಿಗೆ; ಅಭಿವೃದ್ಧಿ : ಬಸವಣ್ಣಾ ನೀವು ಮರ್ತ್ಯಕ್ಕೆ ಬಂದು ನಿಂದರೆ ಭಕ್ತಿಯ ಬೆಳವಿಗೆ ದೆಸೆದೆಸೆಗೆಲ್ಲ ಪಸರಿಸಿತಯ್ಯಾ (ಪಕಸಂ. ೫೮೨-೨೫); ತರುಣಸಿತಕರನ ಬೆಳವಿಗೆ ಪಿರಿದುಂ ಕುಂದಲ್ಕಿಮಿತ್ತವೆಂದೇಳಿಪುದಾ

ಕುರುಕ್ಷ್ಮಪಕುಮಾರಕ ನಿರಂತರವರ್ಧನದೆಸಕವುಪ್ಪ ಬೆಳವಿಗೆ ನಿಸದಂ (ಶಾಂತೀಶ್ವ. ೦೫–೨); ಸಾಲದೆ ಭರತಕುಲದಲಿ ನಿನ್ನ ಬೆಳವಿಗೆ (ಕುಮ್ಮಾರವ್ಯಾ. ೫–೦೬). [ ಬೆಳವು + –ಇಗೆ ]

**ಬೆಳವಿಸಮರ** (ನಾ). ಒಂದು ಬಗೆಯ ಮರ : ಬಿಲ್ವಪತ್ರೆ, ಬಿಲ್ವ, ಬೆಳವಿಸಮರ (ವೃಕ್ಷಾ. ೬–೪೭). [ ? + ಮರ$_1$ ]

**ಬೆಳವು** (ನಾ). = **ಬೆಳವಿಗೆ** : ಭಕ್ತಿಯ ಬೆಳವಿಂಗೆ ಬಸವಣ್ಣನೇ ಕಾರಣಿಕನಾದ ಅಱುವಿನ ಬೆಳವಿಂಗೆ ಚನ್ನಬಸವಣ್ಣನೇ ಕಾರಣಿಕನಾದ (ಮುಂಡು. ೬೬–೪೩); ಮೋಕ್ಷದ ಬೆಳವನಿದಱೊಳು ಪಡೆಯಲೆಂದಾರ್ಜಿಸಿ (ಶಿಭಾಗ. ೫–೩–೨೭). [ಬೆಳ್$_1$ + – ವು./ತಮಿ. ವಿಳೈವು; ಮಲ. ವಿಳವು ]

**ಬೆಳಸಾಲು** 'ಬೆಳೆಸಾಲು' ನೋ.

**ಬೆಳಸಿ** 'ಬೆಳುವಸೆ' ನೋ.

**ಬೆಳಸು$_1$** 'ಬೆಳೆಯಿಸು' ನೋ.

**ಬೆಳಸು$_2$** (ನಾ). ೧. ಬೆಳೆದುದು ; ಬೆಳೆ ; ಫಸಲು ; ಪೀಕು (ಉಕ) : "ಅಚರಂಗಳಲ್ಲಿ ಬೆಳೆದುದು ಬೆಳಸೆನಿಕ್ಕುಂ" (ಶಂಕಾಕ. ೨೭); ನಾಡ ಕಾಡ ಬೆಳಸಿಂಬೆಳಸಾ ವಿತಮಯಾಂತರಾಳದೊಳ್ (ಶಂಕರಾ. ೧–೩೪); ಆರಾಧನೆಯ ಮಾಡಿದಡೆ ಅಮೃತದ ಬೆಳಸು ವಿರೋಧಿಸಿದಡೆ ವಿಷದ ಬೆಳಸು (ಬಸವ. ೯೨೦); ಫಲಿಸಿತರಸಾ ನಿನ್ನ ಭಾಗ್ಯದ ಬೆಳಸು (ಕುಮ್ಮಾರವ್ಯಾ. ೦೫–೩). ೨. ಪೈರು ; ಕಾಳು : ಸಸಿಯೊಳ್ ಬೆಳಸಂ ಕೊಳ್ವಪೋಲಸಾರದೊಳ್ ಸಾರವಂ ಮಹೀಪತಿ ಕೊಂಡಂ (ಶಾಂತಿಪು. ೯–೦೫); ಜಿನಭಕ್ತಿಯೆಂಬ ಬೆಳಸಿನ ರಾಶಿಯಂ ತೋರ್ಪಂತೆ ಪಾಲ ಸಮುದ್ರದ ನೀರಿಂದಭಿಷೇಕಂ ಮಾಡಿ ಪೂಜಿಸಿ (ಧರ್ಮಾಮೃ. ೪–೨೬೩). [ ಬೆಳೆ$_1$ + – ಸು$_2$ ]

**ಬೆಳಸೆ** 'ಬೆಳುವಸೆ' ನೋ.

**ಬೆಳಹು$_1$** (ಕ್ರಿ). ವೃದ್ಧಿಪಡಿಸು ; ಬೆಳೆಸು : ಮುಂದಿನ್ನು ವೀರ ಶೈವಾಗಮದ ನಡವಳಿಯ ಕುಡಿವರಿಸಿ ಬೆಳಹುವನೆನಿಪ್ಪಂತೆ ನಿಡುಗೇಸ ಕವಲಿಱಿದು ಬೆಳೆದುದು (ಸೌಂದಪು. ೨–೩೦). [ ಬೆಳೆ$_1$ + – ಹು$_1$ (< –ಪು$_1$ ) ]

**ಬೆಳಹು$_2$** (ನಾ). = ಬೆಳವಣಿಗೆ : ತುಂಬಿನಲಿ ಕತ್ತರಿಸಿದೆಡೆಯಲಿ ಬೆಳಹಿನಲಿ ಈ ಪರಿಯ ದೋಷವು ದಂಡಿನಲಿ ತರುದೋಷ (ಸಾಳ್ವಭಾ. ೦೯–೦೦). [ ಬೆಳೆ$_1$ + – ಹು$_2$ (< – ಪು$_2$) ]

**ಬೆಳಾಕರಣ** (ನಾ). ಒಂದು ಬಗೆಯ ತೆರಿಗೆ : ಎಱಿದುಕೊಟ್ಟ ಸ್ಥಳಂಗಳಿಗೆ ತೆಱು ಮುಡಗಡ . . . ಬೆಳಾಕರಣ . . . ವತ್ತುಗಾಯಿ ಮೊದಲಾಗಿ (ಕಇ. 1, ೫೪–೪; 1433 ?). [ ಬೆಳ್$_?$ + ಆಕರಣ ]

**ಬೆಳಾಕರಣೆ** (ನಾ). = ಬೆಳಾಕರಣ : ಗುತ್ತಗೆ ಕಾಣಿಕೆ. ಖಿಡ್ಕಾಯ ಬೆಳಾಕರಣೆ ಬೆಳುದಂಡ (ಸೌಇಇ. XV, ೨೪೭–೨೭; 1433). [ ಬೆಳ್$_?$ + ಆಕರಣೆ$_1$ ]

**ಬೆಳಾವಡಿಚ** 'ವೇಳೆವಡಿಚ' ನೋ.

**ಬೆಳಿಗಾರ** 'ಬೆಳುಗಾರ' ನೋ.

**ಬೆಳಿಗೆ** (ನಾ). ಬೆಳವಣಿಗೆ ; ವಿಕಾಸ : ಆದರಿಂದ ಬೆಳಿಗೆ ಕಡಿಮೆಯಾಗುತ್ತದೆ (ಮೂಂಖಾಂ. ೬–೨೬೩) ; ಈಗ ನಾವು ವಿಲಕ್ಷಣವಾದ ಬೆಳಿಗೆಯನ್ನು ಕಾಣುತ್ತೇವೆ (ಮುಕಂಪ. ೫೦). [ <ಬೆಳೆ$_1$ + –ಇಗೆ$_0$ ]

**ಬೆಳಿಗ್ಗ** 'ಬೆಳಗ್ಗೆ' ನೋ.

**ಬೆಳಿಗ್ಗೆ** 'ಬೆಳಗ್ಗೆ' ನೋ.

**ಬೆಳಿಯಕ್ಕಿ** (ನಾ). ತಳಿಸಿದ ಅಕ್ಕಿ ; ಬಿಳಿಯಕ್ಕಿ : × × × ನ್ನಿಲ್ಲಮಲಗೆ ದಯೆಗೆಯ್ದು ಸ್ಥಿ × × ಸೊಪ್ಪಿಗೆಯೆ ಬೆಳಿಯಕ್ಕಿಯೆಮ್ಬುದಿಲ್ಲ ಎಲ್ಲ ಕೂಡಿಯ ಉಣ್ಬೊದು (ಎಕ. VI (R). ಶ್ರೀರಂಗ. ೪೪–೦೭ ; ಸು. ೫ಶತಮಾ ಶ೪). [☞ ಇದು 'ಬಿಳಿಯಕ್ಕಿ' ಎಂಬುವದರ ಅಪಲಿಖಿತ]

**ಬೆಳು$_1$** 'ಬೆಳ್$_1$' ನೋ.

**ಬೆಳು$_2$** 'ಬೆಳ್$_2$' ನೋ.

**ಬೆಳುಕ** (ನಾ). ೧. ಬೆಳ್ಳಗಿರುವವನು : ಅಬ್ಬಿಕಂ, ಬೆಳುಕರೆ, ತೊಳಕಂ (ಶಬ್ದಮ. ೨೦೫ ಪ್ರಯೋ). ೨. ಬಿಳಿದು ; ಬಿಳುಪಾದುದು : ಆ ಕೆಚ್ಚಿಂಗೆ ಕಿಚ್ಚನಿಕ್ಕಿ ಸುಟ್ಟು ಬೆಳು [ಪಾಠಾಂ: ಳ್ಕು] ಕನ ಮಾಡಿ ಬೆಳುಗಾರ ದಂತೆ ಮಾಡು (ಬಸವ. ೨೫೩) ; ಪಳಿಕಿನಂತೆ ಬೆಳುಕನಾಗಿ ಸಹಜೋಚಿತ ರುಚಿಯ ನಿಲೆ (ವರ್ಧಕ. ೦೦–೪೭ ವ). ೩. (ಅಲಂ) ಸ್ಪಷ್ಟವಾದುದು ; ನಿಚ್ಚಳವಾದುದು : ಶ್ರುತಿಯವಿಳಶಾಸ್ತ್ರಾರ್ಥವತಿಬೆಳುಕನಾಗಿ ಸಂತತ ವೃತ್ತವೆಣ್ಣೆಳಂತಿರ್ಪವೆಂದುಂ ಜಿತಪುರನ ವಿದ್ಯೆ ಸಂತತಪತಿವ್ರತೆಯಂತೆ ಕ್ಷಿತಿಯೊಳತಿಗೋಪ್ಯವೆಂದಾ ಸ್ಕಂದವಂ (ಸಾಸಂಕ. ೩–೯). [ ಬೆಳು$_1$ ( <ಬಿಳಿದು ) + –ಕ$_3$ ]

**ಬೆಳುಕರಿಸು** 'ಬೆಳ್ಕರಿಸು' ನೋ.

**ಬೆಳುಕು** (ಕ್ರಿ). ಮಿಟುಕಿಸು : ವಿಜನವುಪ ಠಾವಿನೊಳ್ಕೈದುರ್ಗ ಬೆಳುಕ ದೆವೆಗಳಮುಭಯದಿಟ್ಟಿಗಳ ನಾಸಾಗ್ರದಲ್ಲಿ ನೆಲೆಗೊಳಿಸಿ (ವಿಕಾರಾ. ೨–೦೦–೨೨). [ ←ತೆಲು. ಬೆಳಕು=ಚಲಿಸು ]

**ಬೆಳುಗತ್ತಿ** 'ಬೆಳ್ಗತ್ತಿ' ನೋ.

**ಬೆಳುಗದಿರ** 'ಬೆಳ್ಗದಿರ' ನೋ.

**ಬೆಳುಗದಿರು** 'ಬೆಳ್ಗದಿರ್' ನೋ.

**ಬೆಳುಗನ್ನಡ** 'ಬೆಳ್ಗನ್ನಡ' ನೋ.

**ಬೆಳುಗನ್ನಡಿಗ** (ನಾ). ಅಜ್ಞನಾದ ಕನ್ನಡಿಗ : ಎಲೆ ನಲ್ಲಳೆ ಸಕ್ಕಜವಿನ್ನಿಜ಼ಜೀವನ ಬಳಕೆಯ ಬೆಳುಗನ್ನಡಿಗನ ಹೊಲಬಲ್ಲ ಕೃತಿಯಿದು (ಸೊಬಗೋ. ೦–೨೨). [ ಬೆಳು$_2$ (< ಬೆಳ್$_2$) + ಕನ್ನಡಿಗ ]

**ಬೆಳುಗವತೆ** (ನಾ). ಬೆಳಗಿನಲ್ಲೇ ಮಾಡುವ ಲೂಟಿ ; ಹಗಲುದರೋಡೆ: ಬೆಳುಗವ [ಪಾಠಾಂ. ವಿ]ತೆಯನ್ನಾಯ ಪರಿಭವ ತಕ್ಕು . . . ನಿನ್ನೊಳಿಲ್ಲಲೆ (ಕುಮ್ಮಾಸ. ೦–೪೫) ; ಠಕ್ಕು ಪಳಿವು ಬೆಳುಗವತೆ ದುರ್ವ್ಯಸನಂ . . . ಚೆನ್ನ ಬಸವನಿಹ ರಾಜ್ಯದೊಳ್ ವಿಸುಕವು (ಕಿಬಪು. ೬–೯೦). [ ಬೆಳು$_1$ (< ಬಿಳಿದು) + ಕವತೆ$_1$ (< ಕವರ್ತೆ$_1$) ]

**ಬೆಳುಗಾಯ್** 'ಬೆಳಗಾಯ್' ನೋ.

**ಬೆಳುಗಾಯ್ಮೊಲೆ** 'ಬೆಳಗಾಯಿಮೊಲೆ' ನೋ.

**ಬೆಳುಗಾರ**, ಬೆಳಗಾರ, ಬೆಳಿಗಾರ (ನಾ). ಖನಿಜಲವಣ; ಟಂಕಣ ; ಪಟಿಕ : "ಟಂಕಣಂ–ಬೆಳುಗಾರ" (ಚಿಶಧಿ. ೬೪) ; ಬೆಳುಗಾರವ ಬೆರಸಿ ಬೆಚ್ಚ ಬಂಗಾರಕ್ಕೆ ಸಂದುಂಟೆ ಹೇಳಾ (ಅವಹಂ. ೨೨೭–೦೦೨೯); ಹಿಪ್ಪಲಿ ಗುಳ್ಳ ಬೆಳುಗಾರ ಹೊಮ್ಮುಗುಳ್ಗಳ ಸಲಿಯುಮಂ ಮಧುವಿಂದೆ ಕಲಸಿ (ಶಿವಶ. ೦೩–೪೭); ಅಲಂಪಿನ ಬೆಳುಗಾರವನಿಟ್ಟುರುಪಿ ರತೋದ್ದೀಪನದುರಿಯಿಂ (ಖಹುಕಾ. ೮–೪೭). **ಬೆಳಗಾರ :** ಆ ಕೆಚ್ಚಿಂಗೆ ಕಿಚ್ಚನಿಕ್ಕಿ ಸುಟ್ಟು ಬೆಳ್ಳುಕನ ಮಾಡಿ ಬೆಳ[ಪಾಠಾಂ.ಳು]ಗಾರದಂತೆ ಮಾಡು (ಬಸವ. ೨೫೩) ; ಶರಣನಾದಡೆ ಮುರಿದ ಬಂಗಾರವ ಬೆಳಗಾರದಲ್ಲಿ ಬೆಚ್ಚಂತಿರಬೇಕು ಲಿಂಗದಲ್ಲಿ (ಅಂಂದೆ. ೨೯೫ ೬೭). **ಬೆಳಿಗಾರ :** ಕಕ್ಕೆ ಹಗಿನು ಬೆಳಿಗಾರ ಜೇನುತುಪ್ಪ ಇವಂ ಮರ್ದಿಸಿ ಲಿಂಗಲೇಪನಗೈದು ರತಿಗೈಯೆ ಸ್ತ್ರೀಯರು ಸಂತೋಷ ಪಡುವರು (ಕಾಮಚಾ. ೬೬೦) ; ಕಲಬಾರ್ಗನಲ್ಲಿ ಉಪ್ಪುಬೆಟ್ಟಗಳ ಬಳಿ, ಪಟಿಕವು (ಬೆಳಿಗಾರ) ವಿಶೇಷವಾಗಿ ತಯಾರಾಗುತ್ತದೆ (ಭೂಗೋಳ. ೬೦). 'ಬಿಳಿಗಾರ' ಪರಾ. [ ದೇ. ॥ ತಮಿ. ವೆಳ್ವೈಕ್ಕಾರಮ್; ಮಲ. ವೆಳ್ವಿಕ್ಕಾರಮ್; ತುಳು. ಬೊಳಕಾರ; ತೆಲು. ವೆಲಗಾರಮು]

**ಬೆಳುಗಾಲ** (ನಾ). ಆಕಾಶವು ಶುಭ್ರವಾಗಿರುವ ಕಾಲ ; ಶರತ್ಕಾಲ : ಮಳೆಗಾಲ ಹೋದುದು ಬೆಳುಗಾಲ ಬಂದುದು ದಳ ನಡೆವುದಕಿನ್ನು ಚೆನ್ನು (ಭರತ. ೨೨–೬). [ಬೆಳು$_1$(<ಬಿಳಿದು) + ಕಾಲ]

**ಬೆಳುಗುಳ** 'ಬೆಳ್ಗೊಳ' ನೋ.

**ಬೆಳುಗೊಡೆ** 'ಬೆಳ್ಗೊಡೆ' ನೋ.

**ಬೆಳುಗೊಳ** 'ಬೆಳ್ಗೊಳ 'ನೋ.

**ಬೆಳುಜೊನ್ನ** (ನಾ). ಶುಭ್ರವಾದ ಬೆಳುದಿಂಗಳು : ಸಂಜೆಯೊಳು ಶಶಿಯು ಬೆಳುಜೊನ್ನವಿರೆ ಸೊಡರಿಗೆಳಸರೇ (ಅಮಸಾ. ೧-೨-೦೯).
[ಬೆಳು$_1$ (<ಬಿಳಿದು)+ಜೊನ್ನ]

**ಬೆಳುದಂಡ** (ನಾ). ಒಂದು ಬಗೆಯ ಆದಾಯ ; ದಂಡರೂಪದಿಂದ ಬರುವ ಆದಾಯ : ನೊಗಹಣವೊಕ್ಕಲು ಗುತ್ತಗೆ ಕಾಣಿಕೆ ಬಿಡ್ಡಾಯ ಬೆರಾಕರಣೆ ಬೆಳುದಂಡ ಎಸೆ ಒಸಗೆ (ಶಾಇ. XV. ೨೯೬-೨೭; 1433).
[ಬೆಳು$_2$+ದಂಡ]

**ಬೆಳುದಿಂಗಳ್** 'ಬೆಳ್ದಿಂಗಳ್' ನೋ.

**ಬೆಳುದಿಂಗಳು** 'ಬೆಳ್ದಿಂಗಳ್ 'ನೋ.

**ಬೆಳುದುರೆ** (ನಾ). ಒಂದು ಬಗೆಯ ಸಸ್ಯ : ಉಡೀ. ಬೆಳುದುರೆ, ನೀರುದುರೆ (ವೃಶಿಗ. ೬೨-೬೦೦). [ಬೆಳು$_1$ (<ಬಿಳಿದು)+ಉದುರ್ೆ$_2$]

**ಬೆಳುನಗೆ$_1$** 'ಬೆಳ್ನಗೆ 'ನೋ.

**ಬೆಳುನಗೆ$_2$** (ನಾ). ಕಪಟದಿಂದ ಕೂಡಿದ ನಗು ; ಸೋಗಿನ ನಗು : ಅಸದಳದ ಜಡಗತಿಯು ಬೆಳುನಗೆಯು ವಕ್ರವಾಕ್ಯಸಮೂಹದವಗುಣಂಗಳ ಸಂಗದಿಂ ಕುಲಂ ಹಸಗೆಟ್ಟನಾವಿಕೆಯರಾದರಲ್ಲದೆ ಸಂಗವಾರ ಕುಲವಂ ಕೆಡಿಸದು (ಜತಶಾ. ೬-೩).
[ಬೆಳು$_2$ (<ಬೆಳ್$_2$)+ನಗೆ]

**ಬೆಳುನಗೆವೆಱು** (ಕ್ರಿ). ಮೆಲುನಗೆಯಿಂದ ಕೂಡಿರು ; ಮಂದಹಾಸ ದಿಂದಿರು : ಬೆಳುನಗೆವೆತ್ತನ್ನ ರಂಗ ಬಾರೆಂಬ ಕೋಮಳೆಯ ಕೋಱಿಕೆ ಯೆಂದಾದಪುದೊ (ಕಕಸಾಂ. ೨೨-೯). [ಬೆಳುನಗೆ$_1$ (<ಬೆಳ್ನಗೆ)+ಪೆಱು$_1$]

**ಬೆಳುನುಡಿ** 'ಬೆಳ್ನುಡಿ' ನೋ.

**ಬೆಳುನೆಲ್ಲಿ** (ನಾ). ಒಂದು ಬಗೆಯ ನೆಲ್ಲಿ: ಎಲವ ಮುತ್ತುಗ ಪಾಲೆ ಯಶನೇಱಲು . . . ಬೆಳುನೆಲ್ಲಿ (ಶಾಳ್ಗಶಾ. ೫-೩).
[ಬೆಳು$_1$ (< ಬಿಳಿದು ) + ನೆಲ್ಲಿ ]

**ಬೆಳುನೊರೆ** 'ಬೆಳ್ನೊರೆ' ನೋ.

**ಬೆಳುಪು** 'ಬೆಳ್ಪು$_1$' ನೋ.

**ಬೆಳುಮಣ್ಣು** 'ಬೆಳ್ಮಣ್' ನೋ.

**ಬೆಳುಮುತ್ತು** (ನಾ). ಬಿಳಿಯ ಮುಚ್ಚೆ : ಬೆಳುಮುತ್ತು ಕಾರೆಳ್ಳು ಸುಪ್ರದಕ್ಷಿಣ ವಾಹ ಸುಳಿ . . . ಎಸೆಮುವು ಚಕ್ರಧರಗೆ (ಶರಷ. ೬-೭೦).
[ ಬೆಳು$_1$ (< ಬಿಳಿದು ) + ಮುತ್ತು$_1$ (< ಮುಚ್ಚು$_1$) ]

**ಬೆಳುಮಾತು** (ನಾ). ದಡ್ಡತನದ ಮಾತು ; ಅವಿವೇಕದ ಮಾತು : ಕಲೆಹಂತರೊಲ್ಡು ಕೂಡಿದರೆಸೆ ಸಾಕು . . . ಸಳೆನಡು ತೊಡೆ ತೋಳು ಮೊಗಗಳೊಂದಿದುವೆಂದು ಬೆಳುಮಾತನಾಡಲದೇಕೆ (ಭರತ. ೧೦-೦೨೩).
[ಬೆಳು$_2$ (<ಬೆಳ್$_2$ +) ಮಾತು$_1$]

**ಬೆಳುಮಿಾನ** (ನಾ). ಬೆಳಗುವ ನಕ್ಷತ್ರ ; ಮಿನುಗುವ ತಾರೆ : ಪ್ರಾರ್ಥ ಕೋಟ ಬೆಳುಮಿಾನ ಮಿಂಚುತಿವೆ ಬಾನಿನೊಡಲಿನಲ್ಲಿ (ಹೃದಸ. ೫೨-೫).
[ಬೆಳು$_1$ (<ಬಿಳಿದು) + ಮಿಾನ]

**ಬೆಳುಮುಗಿಲು** 'ಬೆಳ್ಮುಗಿಲ್' ನೋ.

**ಬೆಳುವ$_1$**, ಬೆಳವ$_1$ (ನಾ). (ಅಪಶಕುನ ಸೂಚಕವೆಂದು ಭಾವಿಸುವ) ಒಂದು ಬಗೆಯ ಪಕ್ಷಿ ; ಕಾಡುಪಾರಿವಾಳ : "ಪಿಂಗಂ ಬೆಳುವಮೆನಿಸಿಕ್ಕು" (ಮುಂಗರಾ. ೫೨-೦೦) ; ಬೆಳುವ ಬೆಂಚಗ ಬೆಕ್ಕು ಬಕ ಮಿಾನ್ಬುಲಿಗ . . . ಮಡಗೊಳಲೆ ಮುಖ್ಯವಿಹಂಗನಿವೆ ವೈದೇಹಿ ನೋಡು (ತೊರಾ. ೩-೦-೩೩) ; ಬೆದಱುಗಣ್ಣ ಬೆಳುವನಂತೆ ನಿಸ್ಸಟಿಲ್ಗಟಿಲ್ವೆನಾನ್ (ಅಶ್ವಶಾ. ೬-೦೩೦). **ಬೆಳವ$_1$** : ಗೂಬೆ, ಕಾಗೆ, ಬೆಳವ (ಒಂದು ಬಗೆಯ ಪಾರಿವಾಳ) ಗಳ ವಿಷಯದಲ್ಲಿ ಈ ಮೂಢನಂಬಿಕೆ ಬಂದಿದೆ (ಕಬ್ಬಿ. ೩೨) ; ಹಾಡುವ ಬೆಳವ ; ಹಾರುಳ ಪಾರಿವಾಳ ; ಬೊಗಳುವ ನಾಯಿ . . . ಮುಂತಾದ ದಿನದ ಸಂಸಾರದಲ್ಲಿ ಕಾಣಬರುವ ವಿಷಯಗಳನ್ನೆತ್ತಿ ಅವುಗಳಲ್ಲಿ ವೈರಾಗ್ಯ ಸಂಪತ್ತನ್ನು ತುಂಬಿ ಸೂರೆಗೊಂಡಿದ್ದಾರೆ (ಶಂಶ. ೬೮ ಶಿವಶಾಸ್ತ್ರ ಶಂಕರು).
[ದೇ.॥ ತೆಲು. ಬೆಳವ]

**ಬೆಳುವ$_2$**, ಬೆಳವ$_2$ (ನಾ). ಒಂದು ಬಗೆಯ ಮರ ; ಬಿಳಿಧೂಪದ ಮರ : ನಿಮಿತ್ತ ಲಗ್ನ ಮಾಯಾ ಮಾರವಳಿ ಬೆಳುವ ಮೂಲಿಕೆಯಿಂದ ಕಡೆಯಿ ನಿನ್ನ ಇರವು (ಮರೇವ. ೨೬೯-೩೭). **ಬೆಳವ$_2$** : ಮಾವು ಹಲಸು ಬೆಳವ[ಶಾಕಾಂ.ಲ] ದಾಡಿಮವಣ್ಗಳಾದಿಯಾದಾ ಪಕ್ವಫಲದೊಳಗೆ ಕಲಸಿ (ಸೂಪಶಾ. ೨-೩೬) ; ಮತ್ತಿ ಮಧುಕಂ ಮಂಗಾರೆ ಪಚ್ಚಾರಿದಿಂಡಲವಾಲಂ ಬೆಳವಿಂಗಳಂ ಪೂಣಿಸೆ (ರಾಜಶೇ. ೫-೫೬). [?]

**ಬೆಳುವಟ್ಟೆ** 'ಬೆಳ್ವಟ್ಟೆ' ನೋ.

**ಬೆಳುವಣ್ಣ** (ನಾ). ಬಿಳಿಯ ಬಣ್ಣ : "ಬೆ[ಶಾಕಾಂ.ಬಿ]ಳುವಣ್ಣವೆನೆ ಬಿಳಿದು" (ಕಬ್ಬಿಮಂ.೬೯). [ಬೆಳು$_1$ (< ಬಿಳಿದು) + ಬಣ್ಣ]

**ಬೆಳುವರಿ** (ಕ್ರಿ). ಬೆಳ್ಳಗಾಗು ; ನರೆ : ಜಗುಳಿದ ಹಲ್ಲುಗಳ ಬೆಳುವರಿದ ರೋಮಾವಳಿಯೊಳ್ಳೆತರುಶಿರಲಾ ಪುರಜನ ನೋಡಿತಾ ವೃದ್ಧನನು (ಜೈಮಂಕ. ೦೯-೦೯). [ಬೆಳು$_1$ (<ಬಿಳಿದು) + ಪರಿ$_2$]

**ಬೆಳುವಲ** 'ಬೆಳ್ವೊಲ' ನೋ.

**ಬೆಳುವಲು** 'ಬೆಳ್ವೊಲ' ನೋ.

**ಬೆಳುವಲೆ** 'ಬೆಳ್ವಲೆ' ನೋ.

**ಬೆಳುವಲ್ಲು** 'ಬೆಳ್ವಲ್' ನೋ.

**ಬೆಳುವಸದನ** 'ಬೆಳ್ವಸದನ' ನೋ.

**ಬೆಳುವಸದನಂಗೆಯ್** 'ಬೆಳ್ವಸದನಂಗೆಯ್' ನೋ.

**ಬೆಳುವಸೆ**, ಬೆಳಸಿ, ಬೆಳಸೆ (ನಾ). (ಇನ್ನೂ ಬಲಿಯದ) ಹಾಲು ತುಂಬಿ ಬೆಳ್ಳಗಿರುವ ಕಾಳು; ಸಿಹಿತೆನೆ; "ಬೆಳುವಸೆ ದುಗ್ಧಕಾಖ್ಯಮಕ್ಕುಂ" (ಮುಂಗರಾ. ೦೦೦-೬). **ಬೆಳಸಿ** : ಸುಟ್ಟ ಬೆಳಸಿಯು ಲೇಸು ಅಟ್ಟ ಬೋನವು ಲೇಸು (ಸರ್ವಜ್ಞ. ೦೦೦೬); ಬೆಳಸಿಯ ಹೊರೆ ತಂದು ಇಳುವಿದನು (ಸಿದ್ಧಪು. ೩-೬೬). **ಬೆಳಸೆ** : ಮಲ್ಲನು ಸುಟ್ಟು ಕೊಟ್ಟ ಬೆಳಸೆಯನ್ನು ತಿಂದು (ಬಶರ. ೨೩). [ಬೆಳು$_1$ (<ಬಿಳಿದು) + ಪಸೆ$_1$ (<ಪಸಿ$_3$) ]

**ಬೆಳುವಾಲ**, ಬೆಳುವಾಲಿ (ನಾ). ಒಂದು ಬಗೆಯ ಸಸ್ಯ: "ದೇವಲಾಂಗಲಿಕಾ—ಬೆಳುವಾಲ" (ಓಷಧಿ. ೮೦) ; ಅಣಲೆ ಬೆಳುವಾಲಕುವಿಷಮೆಣಸಲದೇಂ ಹೊನ್ನೆಗಭ್ರನಾದಿಯೆ (ಐಪುದ. ೨-೯೬). **ಬೆಳುವಾಲಿ** : "ಭೂರಿರುಕ್ಕಾ—ಬೆಳುವಾಲಿ" (ಓಷಧಿ. ೦೦೨). [ ? ]

**ಬೆಳುವಾಲಿ** 'ಬೆಳುವಾಲ' ನೋ.

**ಬೆಳುವೆ** 'ಬೇಳ್ವೆ$_2$' ನೋ.

**ಬೆಳುವೆಟ್ಟ** 'ಬೆಳ್ವೆಟ್ಟ' ನೋ.

**ಬೆಳುವೆಳಗು** 'ಬೆಳ್ವೆಳಗು' ನೋ.

**ಬೆಳುವೆಳ್ಳಿ** (ನಾ). ಹೊಳೆಯುವ ಬೆಳ್ಳಿ; ಶುದ್ಧಬೆಳ್ಳಿ : ಕಳಪಿಯ ಕ್ಷತೆಗಳರ್ಚನೆ ತಾಯಿಗೊಮ್ಮೆ ಮುತ್ತಳೆಮುತ್ತಿನಕ್ಷತೆಯೊಮ್ಮೆ ತಳಿರುತಾವರೆ ಮೊಲ್ಲೆ ಮೊದಲಾದ ಪೂವೊಮ್ಮೆ ಬೆಳುವೆಳ್ಳಿಮಿಸುನಿಪೂವೊಮ್ಮೆ (ಭರತ. ೦೯-೦೦೯). [ ಬೆಳು$_1$ (<ಬಿಳಿದು) + ಬೆಳ್ಳಿ ]

**ಬೆಳುಸರಿ** 'ಬೆಳ್ಸರಿ' ನೋ.

**ಬೆಳುಹದಿಯ ಮರ** (ನಾ). ಒಂದು ಬಗೆಯ ಮರ: ಆ ಕೆಱೆಯ ಕೂಡುವ ನೀರೊತ್ತು ಮೇರೆಯು × × × ಮೇರೆಯಾಗಿ ಅಲ್ಲಿಂ ಮೂಡ ಬೆಳುಹದಿಯ ಮರ (ಶಾಇ. IX-i, ೨೯೭-೯೬; 1147). [ ? + ಮರ$_1$]

**ಬೆಳುಹು** 'ಬೆಳ್ಪು$_1$' ನೋ.

**ಬೆಳುಹೂಲಿ** (ನಾ). ಒಂದು ಬಗೆಯ ಸಸ್ಯ; ಬಿಳಿಯ ಹೂಲಿ ಗಿಡ: ನೆಲ್ಲಿ ಬೆಳುಹೂಲಿಗಳ ಬೇರಿಲ್ಲಣ ಮುಳುಗೊಗ್ಗಿಯೆಂಬನಿತ್ತಱ ಪುಡಿಯಂ ಚಿಲ್ಲನೆ ಮೂಗಿನೊಳೂಡಿದೊಡೆಲ್ಲಾ ಪಾವಿನ ವಿಷಕ್ಕೆ ತವಿಲದೆ ಸಾಲ್ಗುಂ (ಖಖಾದ· ೬-೩೩). [ಬೆಳು$_1$ (< ಬಿಳಿದು) + ಹೂಲಿ$_1$ (< ಪೂಲಿ$_1$)]

**ಬೆಳೆ$_1$**, ವೆಳೆ$_1$ (ಕ್ರಿ). ೧. ಮನುಷ್ಯ, ಪ್ರಾಣಿ, ಪಕ್ಷಿ ಮುಂತಾದುವು ಶಾರೀರಕವಾಗಿ, ಮಾನಸಿಕವಾಗಿ ಅಥವಾ ವಯಸ್ಸಿನಲ್ಲಿ ವೃದ್ಧಿ ಹೊಂದು: ಆತಂ ಕ್ರಮಕ್ರಮದಿಂ ಸುಖದಿಂ ಬೆ[ಳಾಕಾಂ. ಜ]ಳೆದು ನವ ಯೌವನನಾಗಿರ್ಪನ್ನೆಗಂ (ವಡ್ಡಾರಾ. ೬೦-೨೯); ಹುಟ್ಟಿದೆ ಶ್ರೀ ಗುರುವಿನ ಹಸ್ತ ದಲ್ಲಿ ಬೆಳೆದೆನು ಅಸಂಖ್ಯಾತರ ಕರುಣದಲ್ಲಿ (ಮಹಾದೇ· ಶಿ· ೫೯-೦೪೬); ಅಂದಿಳೆ ಯನಳೆದಾ ತ್ರಿವಿಕ್ರಮನಂದಕಿಮ್ಮಿಗಿಲೆನಲು ಬೆಳೆದನು (ತೊರರಾ. ೪-೧೨-೨೬). ೨. ಗಿಡ, ಮರಗಳು ವೃದ್ಧಿಯಾಗು; ಸಸ್ಯಗಳು ಬೆಳೆ: “ಬೆಳೆ_ ಸಸ್ಯವೃದ್ಧೌ” (ಶಮಧಾ); ಪೂರ್ವಸ್ಯಾಂ ದಿಶಿ ನೊಲಿ ಬೆಳೆದಾ ಬೆಳ್ಗಲ್ಲೊ ಜಡಿ (ಎಕ. VII (R). ಶಾಗನುಂ· ೦೪೬-೬೦; 776); ಬೆಳೆದೊಜಿಗಿದ ಕಟಮೆ ಗಳುಂ ತಿಳಿಗೊಳದೊಳಗಲರ್ದ ಸರಸಿಜಪ್ರತತಿಗಳುಂ ಕಳಹಂಸೆಗಳ್ಗೆ ಕೋಮಳವಿಳಾಸವತಿಗಳ್ಗೆ ಪಡೆಗುಮೊಸಗೆಯನಾಗಳ್ (ಕಬಿರಾ. ೩-೦೬೬); ಬೆಳೆದು ಮುಗಮುಗಿಪ ಗಂಧಶಾಳಿಯಿಂದಲ್ಲಿ ಸುಚಿಪ್ಪ ಗಿಳಿವಿಂಡಿನೋಳಿಯಿಂ . . . ನಚಿಯೆ ಸೊಗಯಿಪ (ಶಂಕಶಾ. ೩-೨೨ ಕಗಳ); ಮೆತ್ತಿದವು ಶರವಿಭದ ಮೆಯ್ಯೊಳಿ ಬಿತ್ತ ಬೆಳೆದದ್ರಿಯವೊಲಿದ್ದುದು ಮತ್ತಗಜ ನೊಂದಜೀಯದನಬರ ಬಾಣಹತಿಗಳಲಿ (ಕುವ್ಯಾದ್ರೋ· ೩-೫೯). ೩. ಮೊಳೆ; ಮೂಡು; ಹುಟ್ಟು; ಅಂಕುರಿಸು: ಮದವನ್ಮಾತಂಗಕಪೋಲದಿನೊಜಿದೊಜಿತೆ ಯೊಳೆ ಬೆಳೆದುದೆಂಬಿನಮೆತ್ತಂ ಮದಗಂಧಮೊದವೆ ಕತ್ತಲಿಪುದು ಪುದಿದೇಲಾ ಲತಾವನಪ್ರೋದ್ಯಾನಂ (ಕಾದಂಪೂ. ೪೯); ಬೆಳೆದವೋ ಕೈಕಾಲು ನೀಲಾಚಲಕ ಹೇಳೆನೆ ಮುಗಿಲ ತುಡುಕುವ ತಲೆಯ ತೋಕೆಯ ತೋರಪತ್ತನ ಕಂಡು ಕುರುಸೇನೆ ಕಳವಳಿಸಿದರು (ಕುವ್ಯಾದ್ರೋ· ೦೩-೩೦). ೪. (ಕೂದಲು, ಉಗುರು ಮುಂತಾದುವು) ನೀಳವಾಗು; ಉದ್ದವಾಗು: ಬೆಳೆವ ತುಪ್ಪುಳ ಮೀಸೆ ಹಳಹಳನೆ ನಳನಳಿಸೆ (ಐಪತ. ದೀ. ೩೨-೧೨); ಆ ವಿಮಲ ಯತಿರೂಪವನು ಬಹಿರಾವರಣನಭಕೊತ್ತಿ ಲಯದಿನದಾ ವಿರೂಪಾಕ್ಷಂಗೆ ಪಡಿಯೆನೆ ಬೆಳೆದನಾ ಹನುಮ (ತೊರರಾ. ೪-೦-೦೬). ೫. ಮೇಲಕ್ಕೆ ಚಾಚು,—ನೀಡು: ಆ ಮಹಾಗಗನಮಧ್ಯದೊಳಂಬರವರೆಗಂ ಬೆಳೆದ ಮರದುಱುಗಲ ನಡುವೆ ನೀಳ್ದೊಟ್ಟಿ ದಿವಕ್ಕೆ ಪೋಪ ಬಟ್ಟೆಗೆ ಸೋಪಾನಂ ಗಟ್ಟಿದಂತೆ ತೆಱತೆಱದಿಂ ನೆಗೆದೊಗೆವ ಪೊಗೆಯುಂ ಕಂಡು (ಶಂಕಶಂ. ೦೦೬-೩); ಬೇಗಿ ಬೆಳೆದು ನಭಕಡರೋಡೆ ದೇವರ್ಕಳಾರೋಗಿಪ ಸವಿಗಾಣರ್ ಪೋಗಿ ಮಾಡುವುದೇನೆನುತ ಲಜ್ಜಿಸಿ ತಲೆವಾಗಿದಂತಿಹುದು ರಾಜಾನ್ನ (ಪೋಹತ. ೨-೪೦). ೬. ಪೈರಿನಿಂದ ತುಂಬು; ಸಸ್ಯಸಮೃದ್ಧವಾಗು: ಅಳುರದು ಕಿರ್ಚು ಮುಟ್ಟದು ವಿಷಾಹಿ ಮಹಾಸತಿಯರ್ದ ಮಂಡಲಂ ಬೆಳೆ ವುದು ಬೇಡಿದಂತೆ ಮುಟಿ ಕೊಳ್ವುದು (ಅಜಿಪು. ೧-೬೩); ಬೆಳೆಮುದು ಬಿತ್ತ ದೆಯುಂ ಭೂವಳಯಂ ರವಿ ಬಿಸುಪನುಬಿದು ಸೊಗಯಿಸೆ ಜಗಮಂ ಬೆಳ ಗಿದನೇನೆಬುದೊ ಚಕ್ರಲಾಂಛನನ ಪುಣ್ಯದೊದವುಮುಂ ತೇಜಮುಮಂ (ಶಕಆಪು· ೬-೬೩). ೭. ಫಸಲನ್ನು ಕೊಡು; ಫಲ ಬಿಡು: ಅಱು ವತ್ತುದಿಕ್ಕೆ ಬೆಳೆವ ಷಷ್ಟಿಕಗದ್ದೆ ಷಾಷ್ಟಿಕ್ಯಮೆಂಬುದು (ಶಬಾಮು. ೨೬-೬). ೮. ಉತ್ಪತ್ತಿ ಮಾಡು; ಒದಗಿಸು: ಜಳನಿಧಿ ಮೇರೆಯುಂ ಮಿಗದೆ ನ್ನಿಂದುದು ಧಾರುಣಿ ಧಾನ್ಯವರ್ಗಮಂ ಬೆಳೆವುದು . . . ನಿರ್ಮಳ ಗುಣ ಜೈನಯೋಗಿಗಳ ನಿಶ್ಚಳವೀರತಪಃಪ್ರಭಾವದಿಂ (ಸಮಶ. ೬-೪೪). ೯. ಮರ, ಗಿಡ ಮುಂತಾದುವುಗಳನ್ನು ಬೆಳೆಯುವಂತೆ ಮಾಡು; ಬೆಳೆಸು: ಕುರುಧರೆಯಂ ನಿಜೋಗ್ರಗದೆಯೋರ್ಗಳನುತ್ತು . . . ಶಾರ ಭೂಧರಶ[ಕೀರ್ತಿ]ಯೆಂಬ ಬೆಳಸಂ ಬೆಳೆದಂ ಪರಸೈನ್ಯಭೈರವಂ (ಗದಾಯು. ೧೦-೪): ಭಿತ್ತಿಯಿಲ್ಲದೆ ಬರೆಯಬಹುದೆ ಚಿತ್ತಾರವ ಬಿತ್ತಿ ಬೆಳೆಯಬಹುದೆ ಧರೆಯಿಲ್ಲದೆ (ಜಸವ. ೬೯೬); ಬೆಂದುದನು ಬಿತ್ತಿ ಬೆಳೆವಂದಿರನು ನಾ ಕಾಣೆ ಬೆಂದುದನು ಬಿತ್ತಿ ಬೆಳೆದುಂಬ ದಾಸೋಹಿ ಇಂದು ಧರನಕ್ಕು (ಸರ್ವಜ್ಞ. ೬೦೦). ೧೦. ಹೆಚ್ಚಾಗು; ಅಧಿಕವಾಗು: ಉಕ್ಕಿ ಶೋಕದ ಕಡಲು ಪಾರ್ಥನ ಮುಕ್ಕುಳಿಸಿತಾ ಶೋಕಶರಧಿಯ ಹೊಕ್ಕು ಬೆಳೆದುದು ಕೋಪಶಿಖಿ ಪಡಬಾಗ್ನಿಯಂದದಲಿ (ಕುವ್ಯಾದ್ರೋ· ೬-೦೫). ೧೧. ಏಳಿಗೆಹೊಂದು: ಪ್ರಗತಿಯನ್ನು ಪಡೆ: ಅಜಿನಂ ಪಾಳಿಯುಮಂ ಪುದುಂಗೊಳಿಸಿಕೊಂಡೀ ಭೂಮಿಯಂ ಭೂಮಿಪರ್ ನೆಜಿಯಲ್ಕೆಂದು ಮಿಳಾತಳಂ ಬೆಳೆಯುತಿರ್ಕೆ (ಶಂದೋಂಬು. ೬-೨೬೬); ಸಕಲಮಹೀತಳಂ ಬೆಳೆಗೆ (ಜಾತಕ. ೨೪-೪೩); ಶಂತನುವಿನ ಸಂತತಿ ಬೆಳೆಯಬಲ್ಲಂಥ, ಕ್ಷತ್ರಿಯರಿಗೆ ಉಚಿತವಾದಂಥ, ಧರ್ಮವನ್ನು ನಾನು ಹೇಳುತ್ತೇನೆ (ವತಭಾ. ೬). ೧೨. ತಾರುಣ್ಯಕ್ಕೆ ಕಾಲಿಡು; ಪ್ರಾಯಕ್ಕೆ ಬರು: ಅವರ ಮಗಳು ಬೆಳೆದಿದ್ದಾಳೆ, ವರನನ್ನು ಹುಡುಕುತ್ತಿದ್ದಾರೆ (ರೂಢಿ). ೧೩. (ಪ್ರಯಾಣವು) ತೊಡಗು; ಆರಂಭವಾಗು: ಕಾಶಿಗೆ ಅವರ ಪ್ರಯಾಣ ಬೆಳೆಯಿತು (ರೂಢಿ). ೧೪. ಜರುಗು; ನೆರವೇರು: ತೊಳಪ ಕಂಬಳಿಗಳಿಂದ ನೈದಿಲ ಬಳಗವನು ಸಾಲಿಡುತ ನೋಳ್ಪರ ಬೆಳೆದ ಕಂಗಳ ಹಬ್ಬ ವೆನಲಮರಿಯರು ಸೊಗಯಿಪರು (ಸಾಳ್ವಭಾ. ೩೨-೦೬); ಉಪನಯನ ಬೆಳೆಯಿತು. ಬಂದ ನಂಟರೆಲ್ಲಾ ಅವರವರ ಊರಿಗೆ ಪ್ರಯಾಣ ಮಾಡಿ ದರು (ಮುಸುಗ. ೯). ೧೫. ಬಾಗು; ಎರಗು: “ಬೆಳೆಮುದೆನಲ್ಕೆಱ ಗಿದುಮು” (ರನ್ನಕಂ. ೦). ೧೬. (ಅಲಂ) ತೀರು; ಮುಗಿ: ಮನೆ ಯಲ್ಲಿ ಅರಿಸಿನ ಕುಂಕುಮ ಬೆಳೆದಿವೆ. ಅಂಗಡಿಯಿಂದ ತರಿಸಬೇಕು (ರೂಢಿ).

**ವೆಳೆ$_1$**: ೨. ಇದಾನ್ ಕೊಳೆ ಈರೆಬ್ಬಿತ್ತಱುಳವರ್ ಒಕ್ಕಲ್ವನವರ್ ಕಯ್ಯೊನಾ ವಿತ್ತಿದಲ್ಲಿ ವೆಳೆಯಾದೆ ಕೆಡುಗೆ (ಇಕ. XIX. ೦೪೩-೦೬; 680). ೬. ನೆಲನುಂ ವೆಳೆಗೆ ಪಾರ್ವ್ವರು[ಮ್] ಪ್ರಜೆಯುವ್ ತಣಿಗೆ (ಇಕ. XIX. ೦೪೩-೦೬; 680).

**ಬೆಳೆವೆಳೆ, ಬೆಳೆಬೆಳೆ** (ದ್ವಿರುಕ್ತಿ): ದೇವ ನೀಂ ಕೊಟ್ಟ ಕನ್ನಿ ಬೆಳೆ ವೆಳೆಯೆ ನಾಯಾಯ್ತು (ಧರ್ಮಾಮೃ. ೫-೪೨); ವಿಪಿನಪರಿವೃತ ವಿಪುಲ ವಿಸ್ತರದ ಗದ್ದೆಕೋಗಿನಲಿ, ಪಳದಿಯ ಪೈರು ಬೆಳೆಬೆಳೆದು ಪಬ್ಬಿಯಿರೆ (ಶಶ್ರಾಂಗ· ೫೨-೦೪೩); ಬೆಳೆಬೆಳೆಯುತ್ತ ಮಕ್ಕಳ ಪುಣ್ಯ (ಗಾದೆ).

[ದೇ. ॥ ತಮಿ. ವಿಳೈ; ಮಲ. ವಿಳ; ತುಳು. ಬುಲೆ, ಬುಳೆ, ಬೊಳೆ; ಕೊಡ. ಬೊಳೆ; ತೆಲು. ಬೆಲಯು; ಕೋತ. ವೆಳ್; ತೊದ. ಪೆಳ್]

**ಬೆಳೆ$_2$** (ನಾ). ೧. ಬೆಳೆಯುವುದು; ಮರ, ಗಿಡ, ಪೈರು ಮುಂತಾದ ಬೆಳಸು: ಮಟಿಯೋ ಸರ್ವಜನಾಶ್ರಯುಂ . . . ಬೆಳೆಯೋ ಸರ್ವರ ಜೀವನಂ (ಸೋಮೇಶ. ೦೪); ಎಮ್ಮ ಪುಣ್ಯದ ಬೆಳೆಗಳೊಣಗಿದಡವ್ವಿ ಮಾಡುವುದೇನು (ಕುವ್ಯಾಕ. ೦-೨೬); ಬೆಳೆಯ ಗುಣ ಮೊಳೆಯಲ್ಲಿ ಕಾಣು (ಗಾದೆ). ೨. ಬೆಳೆಯುವಿಕೆ; ಬೆಳವಣಿಗೆ; ಅಭಿವೃದ್ಧಿ: ತಿಳಿಯಲ್ಬರ್ಪುದು ಬೆಳೆ ಬಳವಿಗಳೆಂಬ ಭಾವವಚನದ್ವಯದೊಳ್ (ಶಮದ. ೨೦೬); ಬೆಳೆಯ ನ್ನದರಿದೆಂದು ಒಳೆಯ ಕಂಡವರೆಲ್ಲ ಮೊಳೆಮುಲ್ಲಿ ಸಸಿಯನಱಿತು ತಾಂ ಮಾಳಿಯನು ತಿಳಿವವರು ಅಜಿಗು (ಸರ್ವಜ್ಞ. ೦೨); ನಮ್ಮ ಪ್ರಾಚೀನ ಸಂಪ್ರದಾಯದ ವೃಕ್ಷದ ಬುಡಕ್ಕೆ ಪಾಶ್ಚಿಮಾತ್ಯ ಸಂಸ್ಕೃತಿಯ ಕೊಡಲಿ ಪೆಟ್ಟು ಬೀಳುತ್ತಿದೆ (ಶಾರದ· ೩೩೪). [< ಬೆಳೆ$_1$. / ತಮಿ. ವಿಳೈ; ಮಲ. ವಿಳ; ತುಳು. ಬುಲೆ, ಬುಳೆ; ಕೊಡ. ಬೊಳೆ]

**ಬೆಳೆಕಾಣಿಕೆ** (ನಾ). ಬೆಳೆಯು ಕೊಯ್ಲಿಗೆ ಸಿದ್ಧವಾದಾಗ, ಕೊಯ್ಲು ಮಾಡಲು ಅನುಮತಿ ಪಡೆಯಲು ಗುತ್ತಿಗೆದಾರನು ಭೂಮಾಲೀಕನಿಗೆ ಒಪ್ಪಿಸುವ ಹಣ್ಣು, ತರಕಾರಿ ಮೊದಲಾದ ಕಾಣಿಕೆ: (ಕಸಂಗ್ರಾ· ೦೬).
[ಬೆಳೆ$_2$ + ಕಾಣಿಕೆ (< ಕಾಣ್ಕೆ)]

**ಬೆಳೆಕಟು** 'ಬೆಳ್ಗಟು' ನೋ.

**ಬೆಳೆಗಾಡು** (ನಾ). ಮರ, ಗಿಡಗಳು ದಟ್ಟವಾಗಿ ಬೆಳೆದಿರುವ ಕಾಡು : ಹೊದಱು ಬೆಳೆಗಾಡು ಗುಂಡು ಗುಗ್ಗರಿಗಲ್ಮೊರಡಿಗಳ ಬಳಗದಿಂ ಮೆಱೆದುದಾ ವಿಪಿನ (ಶಬರಶಂ. ೪-೨). [ಬೆಳೆ$_1$ + ಕಾಡು$_2$]

**ಬೆಳೆಗಾರ** 'ಬೆಳೆಗಾಱ' ನೋ.

**ಬೆಳೆಗಾಱ, ಬೆಳೆಗಾರ** (ನಾ). ೧. ಉಕ್ಕುವಂತೆ ಮಾಡುವವನು ; ವೃದ್ಧಿಗೊಳಿಸುವವನು : ಶರಧಿಯ ಬೆಳೆಗಾಱ ನೆಯ್ದಿಲ ನನೆಗಾಱ ವಿರಹದುಬ್ಬಟೆಗಾಱ ಜೊನ್ನ ಹರವರಿಗಾಱ ಕಾವನ ಗೆಲ್ಲಗಾಱ ಚಂದಿರನುದಯಿಸಿದ ಮೂಡದೆಸೆಯ (ಪರ್ವತ. ೮-೭). **ಬೆಳೆಗಾರ :** ೨. ಸಸ್ಯಾದಿಗಳನ್ನು ಬೆಳೆಯುವವನು ; ಬೇಸಾಯಗಾರ ; ಕೃಷಿಕ : ಕಬ್ಬಿನ ಬೆಳೆಗಾರರಿಗೆ ಈ ವರ್ಷ ಒಳ್ಳೆಯ ಆದಾಯವಾಗುವ ನಿರೀಕ್ಷೆಯಿದೆ (ರೂಢಿ).

[ಬೆಳೆ$_1$ + — ಕಾಱ]

**ಬೆಳೆಗೆಯ್,** ಬೆಳಗೆಯ್, ಬೆಳಗೈ, ಬೆಳೆಗೈ (ನಾ). ಪೈರು ಬೆಳೆದು ನಿಂತ ನೆಲ ; ಸಸ್ಯಸಮೃದ್ಧವಾದ ಭೂಮಿ : ಅತಿಸಿಗ್ಧಳ ಸಾಮ್ರಿದಾಯಿ ಪೋಕ್ಷದ ಬೆಳೆಗೆಯ್[ಪಾಠಾಂ. ಯ] ಜನಧರ್ಮದಿಂದು ಬಣ್ಣಿಪುದು ಜಗಂ (ಸಮಯ. ೧೩-೨); ಬೆಳೆಗೆಯ್ಯಿಂದೆಸೆಗುಂ ಕಳಿಂಗವಿಷಯಂ (ಶಾಂತಿ. ೩-೬೯) : ಪೂದೋಟಗಳಿಂ ತೋಱೆಗಳಿಂ ರಸದಾಳಿಯ ಬೆಳೆಗೆಯ್ಗಳಿಂ ಮೆಱೆವುದಾ ದೇಶ (ಜಗನ್ನಾಥ. ೧-೩೦). **ಬೆಳಗೆಯ್ :** ಬೆಳಗೆಯ್ಯಿಂ ಪೂಗಣೆಯಿಂ ಫಲತರುವಿಂದೊಳ್ಪಯಂಗಳಿಂ ಕುಸುಮಾರಜಾನಿಳನಿಂ ಪಗರೆಯ ಪರಿಯಿಂ ತಳರದ ಸಿರಿ ಬಲ್ಲಕುಂದೆನಾಳ್ಕೆಸೆದಿರ್ಕುಂ (ಶಾಸಕ. IX-i, ೨೯೯-೦೩ ; 1147) ; ಬೆಳ[ಪಾಠಾಂ. ಳೆ]ಗೆಯ್ಯೊಳ್ಳಂ ಫಲಶಾಲಿಯೊಂದೊಡೆ ಪೊಗಬ್ಬಿದಮಂ(ಕಮಠ. ೬೯ ಶ್ರಯೋ; ಕಾವ್ಯಾವ. ೮೦ ನೋ). **ಬೆಳಗೈ :** ನೆಲವಡಲಿಗೆಗಳೊಳ್ ನೆಲೆವಡೆದೆಳವಳಿಸುವೆಳವಚ್ಚೆಯ ಬೆಳಗೈಯಂತೆ ಬೆಳ್ವಳಗಾಗಿ ಬಳ್ವಳಂ ಬಳೆದು ಪೊಸವಳೆರ ಪೊಸಸಿರಿಯ ಭಾರದಿಂ ಜೋಗಂಬೋದಂತೆ ಮುಲುಂಗಿದ ಜಾಗಂಗಳುಮಂ (ಲೀಲಾವ. ೧೦-೩೮ ವ). **ಬೆಳೆಗೈ :** ಪುಳಕದ ನೆವದಿಂದ ಪೊಣ್ಮುವ ಹರ್ಷದ ಬೆಳೆಗೈಗೆ ನೀರೆಱೆವಂತೆ ತುಳುಕುವ ಸೊಗದಾಲಿನೀರ್ದೊಱೆಯನು ತಂದಿಳುಪುತಪನ ನಿಟ್ಟಪಳು (ತಂಬ. ೬-೧೪). [ಬೆಳೆ$_2$ + ಕೆಯ್$_4$]

**ಬೆಳೆಗೆಯ್ದೆರಿಗೆ** (ನಾ). ಬೆಳೆಯುವ ಜಮೀನಿಗಾಗಿ ಕೊಡುವ ತೆರಿಗೆ : ನಮ್ಮ ರಾಜಒಡೆಯರು ಆಳುತ್ತಿದ್ದ ಆಗ—ಯಾವ ಗದ್ದೆಗೆ ನಾನು ಎಷ್ಟುವರೆ ಹಣವನ್ನು ಬೆಳೆಗೆಯ್ದೆರಿಗೆಯಾಗಿ ಕೊಡುತ್ತಿದ್ದೆನೋ, ಅದಕ್ಕೇ ನಾನು ಈಗ ಉಣ್ಣೆಯಾಗಿ ಎರಡು ದುಗ್ಗೀವರಹಗಳನ್ನು ತೆರುತ್ತಿದ್ದೇನೆ (ಎಗದ. ೩೯-೭). [ಬೆಳೆಗೆಯ್ + ತೆರಿಗೆ (<ತೆಱಿಗೆ)]

**ಬೆಳೆಗೆಯ್ವೊಲ** (ನಾ). = ಬೆಳೆಗೆಯ್ : ಕನ್ನೀರ್ಜಲ ಪೆಣ ಬಿತ್ತು ನೆಣ ಮೊಳೆಯಾಗೆ ರಣಭೂಮಿ ಕಾಲನ ಬೆಳೆಗೆಯ್ವೊಲದ ಸಂದಣಿಯಂತೆ ಕಣ್ಗೆ ಮೆಱೆದುದು (ಶಬರಶಂ. ೧೨-೬೩). [ಬೆಳೆ$_2$ + ಕಯ್ವೊಲ]

**ಬೆಳೆಗೇಡು** (ನಾ). ಬೆಳೆಯು ಕೆಟ್ಟು ಹೋಗುವುದು ; ಫಸಲು ಸರಿಯಾಗಿ ಬರದೆ ಹಾನಿಯಾಗುವುದು : ಈ ಜಿಲ್ಹೆಯೊಳಗಿನ ತೀರ ಬೆಳೆಗೇಡಾದ ಒಕ್ಕಲಿಗನನ್ನು ಸಮೃದ್ಧಿಯಾಗಿ ಬೆಳೆಹೊಂದಿದ ಕೊಂಕಣದೊಳಗಿನ ಒಕ್ಕಲಿಗನು ಸರಿಗಟ್ಟಲಾರನು (ಮುಂಬಯಿ. ೫-೦೯೩) ; ಈ ವರುಷ ಬೆಳೆಗೇಡಾಗಿ ಬಹಳ ನಷ್ಟಕ್ಕೆ ಒಳಗಾಗಿರುವೆ (ಜಯಂತ. ೪೩೩).

[ಬೆಳೆ$_2$ + ಕೇಡು]

**ಬೆಳೆಗೈ** 'ಬೆಳೆಗೆಯ್' ನೋ.

**ಬೆಳೆಗೊಡು** (ಕ್ರಿ). ಫಲವನ್ನು ಕೊಡು; ಫಲಕಾರಿಯಾಗು : ಈ ಪರೀಕ್ಷಿತನ ನಿಳಿಹಿಕೊಂಡಿರ್ದವನ ಸಂತಾನಕೆ . . . ಬೆಳೆಗೊಡುಗು (ತುರಂಗ. ೯೨-೦೯). [ಬೆಳೆ$_2$ + ಕೊಡು$_1$]

**ಬೆಳೆತ** (ನಾ). ಬೆಳೆಯುವುದು ; ಬೆಳವಣಿಗೆ : ಬೆಳೆತ ; ಅಭಿವೃದ್ಧಿ : ವೃದ್ಧಿ (Growth. ಇಂಗ್ಲಿ). 'ಬೆಳೆತಾಯ' ಪರ್ಯಾ. [ಬೆಳೆ$_1$ + — ತ$_2$]

**ಬೆಳೆತಾಯ** (ನಾ). ವೃದ್ಧಿ ; ಹೆಚ್ಚಳ : ಈ ಅತಿರಿಕ್ತಮೂಲ್ಯವು ಕ್ರಯದ ಹಣದ ಬೆಲೆಯ ಬೆಳೆತಾಯವೂ ಅಲ್ಲ . . . ಅದೊಂದು ಸಾಮುದಾಯಿಕ ಸಾಮಾಜಿಕ ಘಟನೆ (ಮಜವಾದ. ೧೦೯). P 'ಉಳಿತಾಯ', 'ಮುಗಿತಾಯ' ಎಂಬ ಶಬ್ದಗಳ ಸಾಮ್ಯದಿಂದ ಮಾಡಿಕೊಂಡ ರೂಪವಿದು.

[ಬೆಳೆತ + ಆಯ$_4$]

**ಬೆಳೆದಾಳ್ದು** (ಕ್ರಿ). ಬೆಳೆಯನ್ನು ಹೊಂದು; ಸಸ್ಯಸಮೃದ್ಧವಾಗು : ಶರದಂ ಬರಲೊಡನೆ ಮೊಳೆಪೋದತ್ತಬ್ಬಕಂದಂ ಕೊಳದೊಳೆ ಬೆಳೆದಾಳ್ದತ್ತಿಳಾಮಂಡಳಂ (ರಾಜಶೇ. ೬-೨). [ಬೆಳೆ$_2$ + ತಾಳ್ದು$_1$]

**ಬೆಳೆನೀರು** (ನಾ). ಬೆಳೆಗೆ ಬೇಕಾದ ನೀರು; ಪೈರಿಗೆ ಹಾಯಿಸುವ ನೀರು: ಜಡೆಗಳೇ ಬೇರುಗಳು ಗಂಗೆಯ ಮಡುವೆ ಬೆಳೆನೀರಂಗವೇ ತರು . . . ಎನಲ್ಕಾ ಮೃಡನೆನಿಪ ಮೂಲಾತ್ಮವೃಕ್ಷಮಹಾ ವಿರಾಜಿಸಿತು (ಶ್ರೀರುಮೀ. ೨-೦೪). [ಬೆಳೆ$_2$ + ನೀರು$_1$ (< ನೀರ್)]

**ಬೆಳೆನೆಲ** (ನಾ). ಬೆಳೆಯಲು ತಕ್ಕದಾದ ಭೂಮಿ; ಸಾಗುವಳಿಜಮೀನು: ಬೆಳೆನೆಲನೊಂದು ಮೆಟ್ಟನೆಡೆಯುಂ ಬಿಡಲಿಲ್ಲದನೇಕಧಾನ್ಯಸಂಕುಳ ಬಹುವರ್ಣಪೂರ್ಣಕಣಿಶಾವಳಿಯಿಂ ನವರತ್ನರಾಶಿಯಂ ಬೆಳೆದವೊಲಿರ್ಪುದು (ಅನಂಪು. ೦-೬೬). [ಬೆಳೆ$_1$ + ನೆಲ]

**ಬೆಳೆಬಡ್ಡಿ** (ನಾ). ವೃದ್ಧಿಯಾಗುವ ಬಡ್ಡಿ; ಚಕ್ರಬಡ್ಡಿ : ಬೆಳೆಬಡ್ಡಿಯುಲು ವರುಷಕ್ಕೆ ಗದ್ಯಾಣಂ ಮೂವತುವನುಮಾ ಕಱೆಗೆ ಆ ತುಂಬಿಂಗೆ . . . ಆ ಮಹಾಜನಂಗಳು ನಡೆಸುತೆ ಬಹರು (ಎಕ. VI, ಕಡೂರು. ೯೨-೦೪ ; 1259 ?). [ಬೆಳೆ$_1$ + ಬಡ್ಡಿ$_2$]

**ಬೆಳೆಯಿಡಿಸು** (ಕ್ರಿ). ಭೂಮಿಯಲ್ಲಿ ಬೆಳೆ ಬರುವಂತೆ ಮಾಡು : ಕ್ಷೇತ್ರಾಜೀವಃ, ಕರ್ಷಕಃ, ಕೃಷಿಕಃ, ಕೃಷೀವಲಃ—ಳ ಹೊಲಗದ್ದೆ ಮುಂತಾದ ಭೂಮಿಯ ಬೆಳೆಯಿಡಿಸಿ ಬದುಕುವವನ ಪೆಸರು (ನಿಘಂಟುಶಿ. ೨೬೩). [ಬೆಳೆ$_2$ + ಇಡಿಸು$_1$]

**ಬೆಳೆಯಿಸು,** ಬೆಳಸು$_1$, ಬೆಳೆಸು (ಕ್ರಿ). ೧. ಗಿಡ ಮರಗಳು ವೃದ್ಧಿಯಾಗುವಂತೆ ಮಾಡು ; ಸಸ್ಯಾದಿಗಳನ್ನು ಬಳೆಸು : ಅನಿಬರುಂ ನಿತಂಬಿನಿಯರ್ . . . ಮುಂ ನೀರೆಱೆದು ನಡಪಿ ಬೆಳೆ[ಪಾಠಾಂ. ಬಳೆ] ಯಿಸಿದ ಬಾಳಾಶೋಕಪಾದಪಾದಿಗಳ್ಗೆ ಮುಕುಳಿತಾಂಜಲಿಯರಾಗಿ (ಅಜಿಪು. ೬-೦೧೦ ವ); ಜಿತರಿಪುಸುರೇಂದ್ರಮನ್ಮಕ್ಷಿತಿಪತಿ ರಿಪುನೃಪಕುಳಾಂಗನಾಜನ ಮನೋಜ್ಞದ ತಬಾಷ್ಪಸಲಿಲಧಾರಾಪ್ರತಾನದಿಂ ಕೀರ್ತಿವಲ್ಲಿಯಂ ಬೆಳೆ[ಪಾಠಾಂ. ಬಳೆ] ಯಿಸಿದಂ (ಶಂಖಾವಾ. ೦-೦೩೭) ; ಕುದ್ದಾಲಹತಿಯನುಱಿತಾಳ್ದಿಮ್ಮನಿನ್ನೆಗಂ ಮುದ್ದುಗೈದೀ ವಸುಧೆ ಬೆಳೆಯಿಸಿದಳು (ಕೃಷ್ಣಾ. ೩-೩೦). ೨. ಅಭಿವೃದ್ಧಿಗೊಳಿಸು ; ಏಳಿಗೆಹೊಂದುವಂತೆ ಮಾಡು : ಉತ್ತರ ಕರ್ನಾಟಕದಲ್ಲಿ ಅಚ್ಚಗನ್ನಡತನವನ್ನು ಬೆಳೆಯಿಸಲು ದುಡಿದವರಲ್ಲಿ ಪ್ರಸ್ತುತ ಲೇಖಕರೊಬ್ಬರು (ಕಗದ್ಯ. ೩೪) . **ಬೆಳಸು$_1$ :** ೧. ಕಂದುಗೊರಲನೊಳು ಕಾದಲ್ಕೆ ಸ್ಮರ ತನ್ನದೊಂದು ಬಿಲ್ಲದು ಸಾಲದೆಂದು ತಂದಿಲ್ಲಿ ಬೆಳಸಿದನೆಂಬಂತೆ ಬೆಳ್ಗಬ್ಬಿನ ಸಂದಣಿಸಿತು ಬನಬನದಿ (ಮೋಹನ. ೨-೪೭) ; ಅಲರುವಿಲ್ಲಾಪ್ತಬಾಣಗಳತಿಮೃದುವದಟಳುಕರು ಜನರೆಂದು ಚಂದ್ರ ಅಳಿಯನ ಬಿಲ್ಗೆ ಬೆಳಸಿದಂತೆ ಧವಳೇಕ್ಷುಗಳ ಗದ್ದೆ ರಾಜಿಸುತಿಹುವು (ಕಂಸವ. ೫-೭೪). ೩. ಪೋಷಿಸು ; ಸಾಕು : ಮೇದಿನಿಯೊಳಮ್ಮವ್ವೆ ತಾಯೋಪಾದಿಯಲಿ ಮೋಲಿಯನೂಡಿ ಬೆಳ[ಪಾಠಾಂ. ಳೆ] ಸಲು ಬೆಳೆದೆ ಮಗನಾಗಿ (ಶಿಸಪು. ೨೫-೭). ೪. ಹೆಚ್ಚಿಸು; ಅಧಿಕಗೊಳಿಸು : ಪರಿಯ ಪಿಸುಣಿಕೆಯವರ ಚಿತ್ತವ ಬೆರಸಿ ವೈರವ ಬೆಳಸಿ ಬಂದರು ಧರೆಯ ಭಾಗವ ಬೇಡಿ ಕದನವ ಮಸೆದರೆಮ್ಮೊಡನೆ (ಕುಮಾವ್ಯಾ. ೧ ೦೯) ; ನೀನಿಂದು ಮುಳಿದು ಮದಗೊಬ್ಬಿನಲಿ ವೈರವ ಬೆಳಸಿ

ಕೆಣಕಿದೊಡಾ ನೃಪಾಲಕತಿಲಕ ತೆಕ್ಕುವನೇ (ತೊರರಾ. ೩-೭-೪೦). ೫. ಉಂಟು ಮಾಡು ; ಹುಟ್ಟಿಸು : ಸಲಿಸಿದವನೋ ಮುನ್ನ ನೀನೆನ್ನವರ ಸಲಿಗೆಗಳ ನಿಲಿಸಿದವನೋ ನೆಲೆಗೆ ಸೇರಿಸಿ ಬೆಳೆ[ಪಾಠಾಂ. ಳೆ]ಸಿದವನೋ (ಐಸಕೃ. ೪೦-೪೦). ೬. ಚಾಚು; ನೀಡು ; ನೀಳವಾಗಿಸು : ಪವನಾಭ್ಯಾಸಂಗಳಿಂದಭ್ಯಾಸಯೋಗಕ್ರಮಕ್ರಮಂಗಳಿಂ ಜಿಹ್ವೆಯು ಬೆಳೆಸಿ ಷಡಸಮ್ಮಿಶ್ರದಿಂ ಷಡಾಧಾರದ ಪಶ್ಚಿಮದ ಪಥವಿಡಿದು ಪ್ರಾಣಪವನನ ಮಸ್ತಕಕ್ಕೇಱಿಸಿ . . . ಮುಕ್ತ್ಯಾಂಬಿಕೆಯೊಡಗೂಡುವುದು ಲಂಬಿಕಾಯೋಗ (ಅವವ. ೨೯-೮೭); ಉಱುವ ಬಾಲವ ಬೆಳಸಿ ದಾರಿಯು ತೆಱಹುಗೊಡದೆಡೆಯೊಡ್ಡಿ ಮನುಜನ ಮುಱುಕವನು ತಾ ಕಾಂಬೆನಿನ್ನೆನುತಿರ್ದನಾ ಹನುಮ (ಕುವ್ಯಾಅ. ೬೦೩. ೦೦-೦೪). ೭. [ಗಣಿತ] ಗುಣಾಕಾರಮಾಡು ; ಗುಣಿಸು : ತಿವಿ ಪೊಯ್ ಪೆರ್ಚಿಸು . . . ಬಳಯಿಸು . . . ಬೆಳಸೆಂದು ಇಂತಿನಿತುಂ ಗುಣಿಸೋದಕ್ಕೆ ಪೆಸರು (ವ್ಯವಾ. ೦೦-೦೦). **ಬೆಳಿಸು :** ೧. ಮೂಱರಡಿ ತೂಮುಮಂ ದೇವಭೋಗದಿಮಾ ಕಱನಿ ಫಲಮಾ ಕೊಣ್ಡು ಬೆಳಿಸಿ ನಾಗೊಮ್ಮೆಯುಂ ಸಾಲೆ ಊಳುವದು (ಎಕ. X, ಕೋಲಾರ. ೦೦-೯ ; ಸು. 753) ; ಇಳೆಯೊಳದಂಕುರಿಸಿ ಹರಿತ್ಕುಳದೊಳ್ ಪರ್ಧಿಸಿಯೆ ನೀಳ್ದು ಗಗನಕ್ಕಸು ಪೃತ್ಕುಳನಾರೀ[ನಯನಾಂ]ಬುವೆ ಬೆಳಿಸಿದುದೆನೆ ಕೀರ್ತಿವಲ್ಲಿಯುಂ ಸತ್ತಿಗನಾ (ಗದಾಯು. ೦೦-೭); ತಿಳಿದ ಮಾತೆ ಹೊಳಿಸಿದಂತೆ ಎದೆಯು ಬೀಜ ಬೆಳಿಸಿದಂತೆ ಭಾವನಾದದಂತೆಪೋಲ್ (ಸೂರ್ಯಶಾ. ೭೦-೦೩). ೪. ಆನೆಗೊಂದಿ ವೆಂಕಟಪತಿರಾಯರು ಈ ರಾಜಒಡೆಯರವರ ಸಂಗಡ ಸ್ನೇಹವಂ ಬೆಳಿಸ ಬೇಕು (ಮೈಶಾಸಂ. I, ೨೩). [ಬೆಳೆ$_1$ + — ಇಸು$_3$]

**ಬೆಳೆವಣಿಗೆ** 'ಬೆಳವಣಿಗೆ' ನೋ.

**ಬೆಳೆವತ್ತರ್** (ನಾ). ಬೆಳೆಯುವ ಭೂಮಿ : ಊರೂರ್ಗಳ್ದಪ್ಪದೆ ಮಾದಾಳಂ ಬೆಳೆವತ್ತರಂ ಪಡಲ್ದಾಣಮುನಾಹಾರಮುಸಾರ್ವಜೆಯುಮುನೀವಾರಿತಮಾರ್ತೀವರೆಂದುಮಾ ನಾಡವರ್ಗಳ್ (ವರ್ಧಮಾ. ೦೦-೮). ℙ ಈ ಪದ್ಯದ ಅರ್ಥ ಕ್ಲಿಷ್ಟವಾಗಿದೆ. [ಬೆಳೆ$_1$ + ಪತ್ತರ್ (< ಮತ್ತಲ್) ]

**ಬೆಳೆವಳಗೆ** 'ಬೆಳವಣಿಗೆ' ನೋ.

**ಬೆಳೆವೊಲ,** ಬೆಳೆಹೊಲ (ನಾ). ಬೆಳೆದ ಹೊಲ ; ಪೈರಿನಿಂದ ತುಂಬಿದ ಭೂಮಿ : ಬೆಳೆವೊಲನೆತ್ತಲುಂ ಕಿಱಿದೆ ಪರ್ವಿದ ಪೆರ್ವಱಿ (ಶಬ್ದ. ಪ. ೭೭ ಪ್ರಯೋ); ಅಳಿಯನ ಪಡೆಮು ನಾಲ್ವತ್ತೆಂಟುಗಾವುದದಳತೆಯೊಳೊಡ್ಡಿ ರತ್ನಗಳ ಬೆಳೆವೊಲದಂತೆ ಸಿಂಗರಿಸಿರ್ದ ಕಟಕಗ್ಗದಳವ ಕಂಡತ್ತ ಬೀಗಿದಳು (ಶರಕ. ೪೯-೬೩); ಬೆಳೆವೊಲಂ ಗೆಯ್ಮೆಯುಂ ಗಾಳಿಯುಂ ತೂಗುತಿರೆ ಗಿಳಿವಳಗ ಮೆಲ್ಲುಲಿಯು ಒಸಗೆಯೆನೆ ಬರಲು (ಕಾಲೂರ. ೩೭-೯೨). **ಬೆಳೆಹೊಲ :** ಕೆಳಗೆ ಬೆಳೆಹೊಲ ಕಪ್ಪು, ಮೇಲೆ ಬಾಂಬೊಲ ಕಪ್ಪು, ಬೆಟ್ಟಗಳು ಕಪ್ಪು (ಹೊಂಗಳ. ೦೩-೨೨). [ಬೆಳೆ$_2$ + ಪೊಲ]

**ಬೆಳೆಸಾಲು,** ಬೆಳಸಾಲು (ನಾ). ಪೈರಿನ ಸಾಲು · **ಬೆಳಸಾಲು :** (ಕ).
**ಬೆಳೆಸಾಲ ಕುಂಟೆ, ಬೆಳಸಾಲ ಕುಂಟೆ**=ಪೈರಿನ ಸಾಲುಗಳ ನಡುವೆ ಪರಗಿ, ಕಳೆಯನ್ನು ತೆಗೆಯಲು ಉಪಯೋಗಿಸುವ ಒಂದು ಬಗೆಯ ಸಾಧನ ; ಎಡೆಕುಂಟೆ : (ಕ). [ಬೆಳೆ$_2$+ಸಾಲು$_2$ (<ಸಾಲ್$_3$) ]

**ಬೆಳೆಸು** 'ಬೆಳೆಯಿಸು' ನೋ.

**ಬೆಳೆಹೊಲ** 'ಬೆಳೆವೊಲ' ನೋ.

**ಬೆಳೊಡಕಿಲು** 'ಬೆಳ್ಳುಡಕಿಲ್' ನೋ.

**ಬೆಳ್ಕನೂರ್** (ನಾ). ಒಂದು ಊರಿನ ಹೆಸರು : ದಕ್ಷಿಣಸ್ಯಾಂ ದಿಶಿ ಬೆಳ್ಕನೂರ್ ಗ್ರಾಮ (ಇಆ. VII, ೦೦೩-೨೭; ೦೦ನೆಯ ಶತ). [? +ಊರ್]

**ಬೆಳ್ಕರಿಸು,** ಬೆಳುಕರಿಸು (ಕ್ರಿ). ೧. ಬಿಳುಪಾಗು; ಬಿಳಿಯ ಬಣ್ಣವನ್ನು ಹೊಂದು : ನೊಸಲೊಳಿಕ್ಕಿದ ಮಂದಪಪ್ಪ ಚಂದನದಣ್ಪನಿಂ ಪತ್ತಿ ಪಗಲ್ತು ಬೆಳ್ಕರಿಸಿದಳಕನಿಕರಮುಂ . . . ಪನ್ನೊಳಳವಡೆ (ಕಾದಂಪೂ. ೮೯೦); ಮುರಿದ ತೊಡಂಬೆಯೊಳ್ಮೊನಸಿ ತೋರ್ಪ ಪಸುರ್ಪನೆ ಪೋಗೆ ಬೀಗಿ ಬೆಳ್ಕರಿಸಿದ ಮೊಗ್ಗೆ ಕೂಡೆ ಬಿಳಿದಾದ ಮುಗುಳ್ (ಮಲ್ಲಪು. ೩-೯೭) ; ಬೆಳ್ಳಿಕಟ್ಟು ಬೆಳ್ಕರಿಪುದು ಕೆಮ್ಮನೆಂದು ರಜತಾದ್ರಿಯಿನಿಳಿಯೆ ಬಂದು ನಿಲ್ವಿನಂ ಗಿರಿಪತಿ ಶಂಭುಮಂದಿರಮನೆತ್ತಿಸಿದಂ ಗುಣಿಕೂಸಚಟ್ಟಿಯಂ (ಎಕ. V, ಬೇಲೂರು. ೦೯೩-೯೩; 1161). **ಬೆಳುಕರಿಸು :** ೧. ನರೆ ನೆಗೆದು ಬೆಳುಕರಿಸಿ ತಲೆಗೆ ತಲೆದೋಱುತಿರೆ ಪರಕರಿಸಿ ಹಂಜೆಯುಂ ಹಂಜರಿಸಿ (ಬಿಂಡೋರ. ೨-೦೦). ೨. ನಿಸ್ತೇಜವಾಗು ; ಬಿಳಿಚಿಕೊಳ್ಳು : ಪೊಳೆವ ಮೊಗ ಬೆಳುಕರಿಸದೆನೆ ಕೋಮಲೆ ತಳೆದ ಗರ್ಭವದು ವಸುಧಾತಳದೊಳತಿ ಸೋಜಿಗವು ಭಾವಿಸುವೊಡೆ ಜನಾಂಬಿಕೆಯಾ (ಶಾಲ್ವಭಾ. ೩೨-೩೯).
[ < ಬೆಳ್$_1$ + — ಇಸು$_3$ ]

**ಬೆಳ್ಕಾಡು** 'ಬೆಂಗಾಡು' ನೋ.

**ಬೆಳ್ಕು$_1$,** ಬಳುಂಕು, ಬಳುಕು$_1$, ಬಳ್ಕು$_1$ (ಕ್ರಿ). ೧. ಅಂಜು ; ಹೆದರು. ℙ 'ಬೆಳ್ಕು' ಎಂಬುದಕ್ಕೆ ಕ್ರಿಯಾರ್ಥದಲ್ಲಿ ಕನ್ನಡದ ಪ್ರಯೋಗ ಸಿಕ್ಕಿರುವುದಿಲ್ಲ. 'ಬೆಳ್ಕುಱು' ಎಂಬ ಶಬ್ದದಲ್ಲಿ ನಾಮಾರ್ಥದಲ್ಲಿ 'ಬೆಳ್ಕು' ಎಂಬುದು ಉಪಲಬ್ಧವಾಗಿರುವುದರಿಂದ ಕ್ರಿಯಾರ್ಥದಲ್ಲಿಯೂ ಇದು ಪ್ರಯೋಗದಲ್ಲಿದ್ದಿರಬಹುದು ಎಂಬ ಆಧಾರದ ಮೇಲೆ ಇದನ್ನು ಮುಖ್ಯೋಲ್ಲೇಖ ಮಾಡಲಾಗಿದೆ. **ಬಳುಂಕು :** ೨. ಬಾಗು; ಬಗ್ಗು : ಕೊರಲೊಳ್ ತಳ್ತಗ್ಗಳಂ ತೊಂಗಲ ಪೊರೆಪೊಲಿಂ ಬಾಗೆ ಬಾಲಂ ಬಳುಂಕುತ್ತಿರೆ ಗಾತ್ರಂ ನೆತ್ತಿಯೊಳ್ ನಟ್ಟುಗುರುಗಿರೆ (ಲೀಲಾವ. ೬-೨೪); ಉಲಿಯೆ ಕಲಕಾಂಚಿ ಮುಡಿಯಿಂದಲರುಗೆ ಬಡನಡು ಬಳುಂಕೆ (ರಾಜಶೇ. ೦೦-೭). ℙ ಇದು ಛಂದಸ್ಸಿಗಾಗಿ ಮಾಡಿಕೊಂಡಿರುವ ರೂಪ. **ಬಳುಕು$_1$ :** ೧. ಬಾಡುತಂ ಬಳುಕುತಂ ಪೆಱಮೆಟ್ಟಿ ಭೀತಿಯಿಂ ಕೆಲಸಾರ್ದು (ತಿರುರ. ದೇ. ೦೩-೨೦); ಅಳುಕುತ್ತ ಬಳುಕುತ್ತ ತಂದೆ ಕರುಣಿಸು ವಿಶಾಪವನೆಂದು (ಸಿದ್ಧರಾ. ೦-೨೩); ದೋಸಮಂ ಕಂಡೊಡಾಂ ಬಳುಕುವೆಂ (ಭಾವಚಂ. ೪-೦೦). ೨. ಲಲನೆ ಸುಳಿದಳು ಕುಚದ ಭಾರಕೆ ಬಳುಕೆ ನಡು . . . ಸುಳಿಗುರುಳೊಲೆಯಲಾ ಕಲಿಭೀಮ ನಿದಿರಿನಲಿ (ಕುವ್ಯಾಅ. ೯-೦೪); ನಡು ಬಳುಕಲ್ ಕುಚಂ ಕುಣಿಯೆ. . . ರಾಜಶೇಖರಗೆಣ್ಣೆಯನೊಲ್ದು ಪೂಸಿದಳ್ (ಕಾವ್ಯಸಾ. ೬೩೦). ೩. ತೊನೆದಾಡು; ಒಲೆದಾಡು : ಭೂವನಿತೆಗೆ ವಂಟಸುವ ತೆಱದಿಂದ ಬಾಗಿ ಬಳುಕುವ ತೆನೆಗಳಿಂದ (ಸಿದ್ಧರಾ. ೨-೨೩) **ಬಳ್ಕು$_1$:** ೧. ಭಾನುಮತಿ. . . ಲಂಬಣಾ ಪಱಿಯೆ ಮುತ್ತಿನ ಕೆಡನೆ ನೋಡಿ ನೋಡಿ ಬಳ್ಕುತ್ತಿರೆ (ಶಂಕಭಾ. ೯-೬೯); ಗಾಂಧಾರಿ ಮನದೊಳ್ಳಿ ಬಳ್ಕಿ ನನೆಕೊನೆವೋಗಿ (ಗದಾಯು. ೩-೭೭ ವ). ೨. "ಬಳ್ಕು—ನಮನೇ" (ಶಮಂಧಾ); ತುಡಿ[ಸದೆ] ಹಾರವುಂ ಮೊಲೆಯ ಬಿಣ್ಪಿನೊಳಂ ನಡು ಬಳ್ಕಿದಪುದು (ಶಂಕರಾ. ೩-೪೭); ಬಲ್ಮೊಂಬಳೆಯಿಂ ಬಳ್ಕಿತ್ತು ಕೌಂಗು (ಕಾದಂಉ. ೭೭೮); ಜಂಬುಕನ ಕೋಪದೊಳ್ ವಾರಣದ ರೋಮಂಗಳೇಂ ಬಳ್ಕಿದಪುವೆ (ಜಬಶು. ೨೦-೭).
[ದೇ.॥ ತಮಿ. ವೆಳ್ಕು; ತುಳು. ಬಳಕು, ಬಳುಕು, ಬೊಳಕು; ತೆಲು. ವಡಕು. ವಣಕು]

**ಬೆಳ್ಕು$_2$,** ಬಳುಕು$_2$, ಬಳ್ಕು$_2$ (ನಾ). ೧. ಹೆದರಿಕೆ ; ಅಂಜಿಕೆ: ಭಯ : 'ಬೆಳ್ಕುಱು$_1$' ಪರಾ. **ಬಳುಕು$_2$ :** ೨. ಒಲೆದಾಟ; ತೊನೆತ : ಗಿಡಬಳ್ಳಿಗಳ ಬಗೆಬಗೆಯ ಬಳುಕು. . . ಒಂದು ಬಗೆಯ ರೂಪರುಚಿಯನ್ನುಂಟುಮಾಡಿವೆ (ಸೌಂದಸ. ೨). **ಬಳ್ಕು$_2$:** ೧. 'ಬಳ್ಕುಱು' ಪರಾ. ೩. ನಡುಕ; ಕಂಪನ : 'ಬಳ್ಕುವೋಗು' ಪರಾ.
**ಬೆಳ್ಕನೆಪೋಗು**= ಅಂಜು ; ಹೆದರು : ನಾಕಚ್ಯುತಿಯನಾಗಳಱಿದು ಮನದೊಳಳ್ಕಿ ಬೆಳ್ಕನೆಪೋಗಿ (ಆದಿಪು. ೩-೩ ವ). [<ಬೆಳ್ಕು$_1$]

**ಬೆಳ್ಕುತ್ತ** 'ಬೆಳ್ಕುಱು$_1$' ಪರಾ.

**ಬೆಳ್ಕುತ್ತು** 'ಬೆಳ್ಕುಱು₁' ಪರಾ.

**ಬೆಳ್ಕುರು** 'ಬೆಳ್ಕುಱು₂' ನೋ.

**ಬೆಳ್ಕುಱು₁**, ಬಳ್ಕುಱು (ಕ್ರಿ). ಬೆಳ್ಕುತ್ತ (ಭೂತಕೃ), ಬೆಳ್ಕುತ್ತು (ಭೂತನ್ಯೂ). ೧. ಭಯಪಡು; ಅಂಜು; ಹೆದರು : "ಬೆಳ್ಕುಱು-ಭಯೇ" (ಶಬ್ದಾ. ೫); ಮತ್ತನಯನರಸನನುಜನ ಸತ್ತ್ವಬಲಂ ನಿನ್ನೊಳ್ ಜಿಸಲೆಂದಿರ್ದಂ ಬೆಳ್ಕುತ್ತಿರ್ದನಪ್ಪುಡೇತೊದಳಿತ್ತಣ ದಿನನಾಥನಿತ್ತ ಮೂಡುಗುವುಲ್ಲೇ (ಕ್ರಿ.ಪಾ. ೦೨-೦೭೯); ಅಱಿಪಿದುದು ರೌದ್ರರಸವಂ ನಿಱಿಸಿದ ಕುಡುವುರ್ವು ಕರ್ಚಿದೌಡುರ್ಚಿದ ಬಾಳ್ ಇಱಿಯಲನುಗೆಯ್ದ ಕೈ ಬೆಳ್ಕುಱೆ ಬಟ್ಟನೆ ಬಟ್ಟ ಕಣ್ಗಳಾರೋಹಕರಾ (ಗದಾಯು. ೯-೨೭); ಗೋಪಾಲಕರ್ ಬೆಳ್ಕುಱೆ ದೈತ್ಯರ್ ಪೋಗೆ ಕೃಷ್ಣಂ ರಿಪುಕರಿಗಿನಿಸಂ ಗೆಲ್ಲವೀವಂತೆ ಪೋರ್ದಂ (ಜಗನ್ನಾ. ೬-೫೨). ೨. ನಡುಗು; ಕಂಪಿಸು : ತನುವಂ ತೀವ್ರಾನಿಳೋಗ್ರಾಸಿ ಭೇದಿಸೆ ಬೆಳ್ಕುತ್ತೆ ವಿಶೀರ್ಣ ಧೈರ್ಯಕವಚರ್ (ವರ್ಧಪು. ೦೦-೯೦); ಅಳ್ಕದೆ ಚಿತ್ತದೊಳ್ ಬೆದಱಿ ಬೆಳ್ಕಱುದುಗ್ರತಪೋನುತಾಪದಿಂ ಬಳ್ಕದೆ ನೋಂಪಿಯಿಂ ಗೊಳಗೆ ವಂದ ಶರೀರಗುಣಾನುರೋಧದೊಳ್ ತಳ್ಕಱದಿರ್ದು ಜೀವಶರವಂ ಬಿಡೆ ಧಾರ್ಮಿಕಚಕ್ರವರ್ತಿ (ಕಸಂಪು. ೯-೩೯). **ಬಳ್ಕುಱು :** ೧. ಕಿಂಪುರುಷರಾವ ಭುಜಬಲದ ಸೊರ್ಕಿಂ ಪುರುಷಸಿಂಹನೊಳ್ ಪೊಣರ್ವವೆಂದು ಬಳ್ಕುಱೆ ಯುಂ (ಜಗನ್ನಾ. ೦೪-೭೭, ೫); ಎಱಗುವ ತುಂಬಿವಿಂಡಿಗಿಯೆ ಬಗ್ಗಿಪ ಕೋಗಿಲೆ ಕೊಂಬುಗೊಂಡು ಬಳ್ಕುಱೆ . . . ಬಾಂದೊಱೆದಲೆಯುಂ ಕನಲ್ದು ನಡೆತಂದು ಬಸಂತನ ಸೊರ್ಕು ಸೋರ್ವಿನಂ ಮುಂದೆ ನಿಂದು (ಅಭಿನಾ. ೩೨೦). 'ಅಳ್ಕುಱು' ಪರಾ. [ ಬೆಳ್ಕು₂ + ಉಱು ]

**ಬೆಳ್ಕುಱು₂**, ಬೆಳ್ಕುರು (ನಾ). ಅಂಜಿಕೆ ; ಹೆದರಿಕೆ ; ಭಯ : ಕಟೋನ ಬಂದಿಯೋಳಾದ ಅವಿಸಂತಿರೆ ಮುನಿಕಾಂತೆ ಬೆಳ್ಕುಱಿಂ ಸಿಡಿಮಿಡಿಗೊಂಡು ದೆಸೆಗೆಟ್ಟು ಬಾಯ್ಬಿಟ್ಟು ಪಿಂದೆಸೆಯುನೆ ನೋಡಿನೋಡಿ . . . ಕೇಱಿದಳ್ (ರಾಜಶೇಖ. ೬೯-೨೮). **ಬೆಳ್ಕುರು :** ಅಳ್ಕೆಯಿನ್ನೆಲ್ಲಿರ್ಪುದಬ್ಬಾಳ್ಗಳ್ ಕೈತರಲ್ ಬೆಳ್ಕುರೇಂ ಬಡಿದಿಕ್ಕಿ ನಿಮ್ಮದೇನೊಸಗೆ ಆಳ್ವಾಳ್ಗೆ ಮುಂದೆಲ್ಲಿ ಬೞಿಕ್ಕೆಯಿರ್ಪುದು ! ತಡೆಗೆ ! (ಶಾಂಜಿಶ. ೦೬೦-೩೩೩). [ <ಬೆಳ್ಕುಱು₁ ]

**ಬೆಳ್ಗಂಗೆ** (ನಾ). ಶುಭ್ರವಾದ ಗಂಗಾನದಿ : ಸಿರಿರಾಣಿಯ ಪೆತ್ತ ಸೊದೆಗಡಲೆಳೆಯು ತಾತ್ಪರಿಯದಿ ನೋಡಬಂದಂತೆ ಮುಂಮುರಿದುರ್ವಿಯಾ ತಳದಲ್ಲಿ ಮುಂಕೊಂಡು ಪರಿದಳು ತುಂಗ ಬೆಳ್ಗಂಗೆ (ಸೋಶತ. ೬-೩೩).

[ ಬೆಳ್₁ ( < ಬಿಳಿದು ) + ಗಂಗೆ₂ ]

**ಬೆಳ್ಗಂಡ** (ನಾ). ತಿಳಿವಳಿಕೆಯಿಲ್ಲದವನು ; ಮೂಢ : ತಪೋಧನರೇಬ ಮಹಾಸಮುದ್ರಮುಮಂ ಶೋಷಿಸುವ ಕಲಿಕಾಲರಾಜನ ಮಹಾ ಪ್ರತಾಪಾಗ್ನಿ ಗೃಹಸ್ಥರೆಂಬ ಬೆಳ್ಗಂಡರುಮನುರುಪುಱುಳೀಗುವಮ (ಕೀಪಸಂ. ೦೦೨-೨೦). [ ಬೆಳ್₂ + ಗಂಡ₁ ]

**ಬೆಳ್ಗಡಲ್** (ನಾ). ಬಿಳಿಯ ಕಡಲು; ಶ್ವೇತಸಮುದ್ರ : ಬಳ್ಳಳ ನೀಳ್ದ ಕಣ್ಮಲರ ತಳ್ತೆಮೆಯಿಂ ಕರೆಗಣ್ಮಿ ಬೆಳ್ಗಡಲ್ಗಳ್ವರಿಯಲ್ಕಮಾಟಿಸಿದೊಡೊಯ್ಯನೆ ಮಂಗಳ [ಭಂಗ]ಭೀತಿಯಿಂ ತಳ್ವದೆ ಮಾಡೆ ಬಾಷ್ಪಜಳಮಂ ಕಳೆದಟ್ಟಿಱಿ ನೀಯೆ (ಶಂಕಪಾ. ೭-೩೬). [ ಬೆಳ್₁ ( < ಬಿಳಿದು ) + ಕಡಲ್₂ ]

**ಬೆಳ್ಗತ್ತೆ** 'ಬೆಳ್ಗಟ್ಟೆ' ನೋ.

**ಬೆಳ್ಗದಿರ್**, ಬೆಳುಗದಿರು (ನಾ). ಚಂದ್ರನ ಬಿಳಿಯದಾದ ಕಿರಣ : ದೆಸೆಯುಂ ಬಾಸಣಿಸುತ್ತೆ ಬೆಳ್ಗದಿರಿನಿಂ ಪಣ್ಯಾಂಗನಾವೀಧಿಯೊಳ್ . . . ತಾರಾವಳೀದೀವಂಗಳಿಂ ಹಸನಾಯಿತ್ತು ಪುರಂ ಗೃಹಾಂಗನೆಯರಿಂ ಚಂದ್ರೋದಯಾನಂದದೊಳ್? (ಸೂಕ್ತಿಸು. ೬-೨೩೭); ಈಶ್ವರಮತಸುಧಾಬ್ಧಿ ವರ್ಧಿಸೆ ಕರಮೆಸೆದುದು ತನ್ನುಪೇಂದು ನಗೆವೆಳ್ಗದಿರಿಂ(ಶೃಕವಿ.೩೭-೬೮). **ಬೆಳುಗದಿರು:** 'ಬೆಳುಗದಿರ' ಪರಾ. [ ಬೆಳ್₁ ( < ಬಿಳಿದು ) + ಕದಿರ್₂ ]

**ಬೆಳ್ಗದಿರ**, ಬೆಳುಗದಿರ (ನಾ). ಬಿಳಿಯ ಕಿರಣಗಳನ್ನುಳ್ಳವನು ; ಚಂದ್ರ : "ಜೊನ್ನೊಡಲಂ . . . ಬೆಳ್ಗದಿರಂ, ಇರುಳರಸಂ, ಚಂದಿರಂ . . . ತಿಂಗಳ್ ಈ ೨೦ ಚಂದ್ರನ ಪೆಸರ್" (ಕಕಾ. ೯೮-೨೩); ಸಿರಿಗೆ ಮನ್ಮಥ ಸರಿಸ್ವತಿಯು ದರದಲಿ ಬೆಳ್ಗದಿರ (ರುಕ್ಮಾಂಗ. ೯-೭). **ಬೆಳುಗದಿರ :** ಕಾಯಘನಕಟ ನಡಸಿದ ವಿಚಾರಣೆಯ ಕಟ್ಟನೀತಿಗೆ ಪೇಸಿ ಬೆಳುಗದಿರನಿಳಿವೋಗೆ (ಗೂರೊಕ್ತಿ. ೦-೪).

[ಬೆಳ್ಗದಿರ್ + —ಅ₂]

**ಬೆಳ್ಗನ್ನಡ**, ಬೆಳುಗನ್ನಡ (ನಾ). ಶುದ್ಧವಾದ ಕನ್ನಡ ಭಾಷೆ; ಅಚ್ಚಗನ್ನಡ: ಅಪ್ಪನ ಹೆಸರು ಕನ್ನಡವೆಂದಷ್ಟೆ . . . ಅವನ ಹಿಂದಿನವನದು ಬೆಳ್ಗನ್ನಡವೆಂದಾಗಿರಬಹುದಂತೆ (ಸಪದಾ. 1, ೯೪೩). **ಬೆಳುಗನ್ನಡ :** ಒಳುಗನ್ನಡ ಬೆಳುಗನ್ನಡ ಪಳೆಗನ್ನಡ ದೇಶೀಯುಂಗಳಾ ಕನ್ನಡವುಂ ತಿಳಿ ಸಕ್ಕಜಗನ್ನಡ ಮುಮುಮನಿಳೆಯೊಳ್ಕವಿತಾಮಹಾತ್ಮೆಯುಂ ಪೊಱಿವ ನರಂ (ಕೀಶ. ೯-೨); ನಿಜಗುಣಶಿವಯೋಗಿ ಬೆಳುಗನ್ನಡವಾದ ವಚನರಚನೆಗಳಿಂ ವಿವೇಕಚಿಂತಾಮಣಿಯೆಂಬ ಪ್ರಕರಣಮಂ ಪೇಳ್ದನು (ಶಿವೇಕ. ೦).

[ಬೆಳ್₁ (<ಬಿಳಿದು) + ಕನ್ನಡ₁]

**ಬೆಳ್ಗಬ್ಬು** 'ಬೆಳ್ಗಬ್ಬು' ನೋ.

**ಬೆಳ್ಗರು** (ನಾ). (ಚದುರಂಗದಾಟದಲ್ಲಿ ಬಳಸುವ ಆನೆ, ಕುದುರೆ ಮುಂತಾದ) ಬಿಳಿಯ ಬಣ್ಣದ ಕಾಯಿ : ಒದವಿದ ತಾರಗೆಗಳ್ ನಿಲ್ಲದವೆಲ್ಲಂ ಪರೆದು ಪೋಗೆ ಬೆಳಗಪ್ಪಾಗಳ್ ಚದುರಂಗದ ಬೆಳ್ಗರುವುದುಗಿದ ನೀಲದ ಮಣಿ[ಕೆ]ಯ ಮಾಟಿಕ್ಕೆಯಾಯ್ತಾಕಾಶಂ (ಸೂಕ್ತಿಸು. ೯-೬).

[ಬೆಳ್₁ (<ಬಿಳಿದು) + ಕರು₂]

**ಬೆಳ್ಗರೆ** (ಕ್ರಿ). (ದಿಗ್ಭ್ರಮೆಯಿಂದ) ಕೂಗಿಕೊಳ್ಳು; ಆಕ್ರಂದನ ಮಾಡು; ಚೀರು : ಇಟ್ಟಣಿಸಿದ ಕೋಪದಿಂದ ಬಿಲ್ಲೊಳು ಶರದೊಟ್ಟಾ ಮಿಗಗಳನೆಸಲು ತೊಟ್ಟನೆ ಬೆಳ್ಗರೆವುತ ತಮ್ಮುಸುವನು ಬಿಟ್ಟು ನೆಲಕೆ ಬೀಳ್ದುದಾಗ (ಪೇಟುಸಂ. ೬-೦೮); ಬೆಬ್ಬಳಿಪಸು ಬೆಳ್ಗರೆವ ಕೊರಲು ಮೆಯ್ಯ ಹಬ್ಬಿದ ನಡುಕ ಹೊಯ್ವಳ್ಳೆ ದಬ್ಬುದಲೆಯ ಮಾತು ದುಱುದುಱು ಗಣ್ಣೆಂದುಬ್ಬುಸಗೊಳುತಿದ್ದನವನು (ಶ್ರೀಶಾಂ. ೮-೬೨); ಮಱುಗಿ ಬಾಯ್ಬಿಟ್ಟು ಬೆಳ್ಗರೆದು ತಱುಗಿದ ನೋವಿನೊಳಗೆ ಸಾವುತಿರ್ಪನ ನೆಱೆ ಕಂಡು ಮಱುಗರಯ್ಯೊ (ಅಪಂಶ. ೦೨-೦೨೬). [ಬೆಳ್₂ + ಕರೆ₁]

**ಬೆಳ್ಗರ್ಬು**, ಬೆಳ್ಗಬ್ಬು (ನಾ). ಬಿಳಿಯ ಬಣ್ಣದ ಒಂದು ಬಗೆಯ ಕಬ್ಬು; ರಸದಾಳಿ : ಬೆಳ್ಗರ್ಬಿನ ಮೆಲ್ಬಿಲ್ಲೇವುದೊಗೆದ ಕಾಮನ ಬಿಲ್ಲುಳ್ಳೊಡೆನುತ್ತೆ ಕಂತು ಮುಯ್ಯಾಂತಿರ್ಪಂ (ಶಂಪ್ರಕೃ. ೯-೪೩); ಕಂದು ಗೊರಲನೂಳು ಕಾದಲ್ಕೆ ಸ್ಮರ ತನ್ನದೊಂದು ಬಿಲ್ಲದು ಸಾಲದೆಂದು ತಂದಿಲ್ಲಿ ಬೆಳೆಸಿದನೆಂಬಂತೆ ಬೆಳ್ಗರ್ಬು ಸಂದಣಿಸಿತು ಬನಬನದಿ (ಸೋಶತ. ೨-೪೭). **ಬೆಳ್ಗಬ್ಬು :** ಗಿಣ್ಣಾಗೊಳ್ಳದ ಬೆಳ್ಗಬ್ಬಿನ ರಸದಂತೆ ಬಣ್ಣಿಸುವೆನು ಕಥಾಮೃತವ (ಪೋಹಶ. ೪-೨).

[ ಬೆಳ್₁ (<ಬಿಳಿದು) + ಕರ್ಬು (<ಕರ್ಬು₁) ]

**ಬೆಳ್ಗಲ್** (ನಾ). ೧. ಬಿಳುಪಾದ ಕಲ್ಲು. ೨. ಒಂದು ಸ್ಥಳದ ಹೆಸರು : ಅನ್ತೆ ಬನ್ದು ಬೆಳ್ಗಲ್ಲೊಱಡೆ ತೆಂಕಾಯ್ದೋಡಿಂ ಕೊಣ್ಡಾರಿಪ್ಪಣಸಿ (ಎಕ. VI (B), ಶ್ರೀರಂಗ. ೬೭-೨೯; ಸು. 800); ಬಂಚರಿವಳ್ಳದ ತಿ(ತೀ)ರದೊ ಸನ್ದಾ ಬೆಳ್ಗಲ ಸರಡೆ ಅನವಂಗೆಱೆಯ ಉತ್ತರಶೃಂಘ(ಗ)ದ × × × (ಇಕ. VIII, ೨೦೩-೨೭; 10ನೆಯ ಶ). [ಬೆಳ್₁ (<ಬಿಳಿದು) + ಕಲ್₃]

**ಬೆಳ್ಗಲಿ** (ನಾ). ಒಂದು ಸ್ಥಳದ ಪೆಸರು : ಶ್ರೀವತ್ ಬಂಕೆಯರಸರ(ರ್) ಬನವಾಸಿಪನ್ನಿರ್ಚ್ಚಾಸಿರಮುಮಾನ್ಪೆಳ್ಗಲಿಮೂನೂಱುಮಾಂ . . . ಆಳುತ್ತಿರೆ (ಎಕ. VII, ೨೦೩-೬; 874); ಶ್ರೀಮತ್ ಸತ್ಯವಾಕ್ಯಪೆರ್ಮ್ಮಾನಡಿಯು ಗೊಟ್ಟ ಕಲ್ನಾಟು ಬೆಳ್ಗಲಿಯ ನಿಗ್ಗುಣ್ದ ಜಗ್ಗಿಯರಸರ್ಗ್ಗೆ ಕೊಟ್ಟರ್ (ಎಕ. V, ಅರಕ. ೬೦-೪; ೯೭೦). [ ? ]

ಗಳುಡಿದು ಬಿದ್ದವು ಕೇಣವಿಲ್ಲದೆ ತಱಿದನರಿಬಲವ (ಕುಣ್ಣಾ,ಶೀ. ೯-೦೨).
[ ಬೆಳ್$_1$ (<ಬಿಳಿದು) + ಕೊಡ್$_2$ ]

**ಬೆಳ್ಗೊಳ**, ಬೆಳುಗುಳ, ಬೆಳುಗೊಳ, ಬೆಳ್ಗುಳ, ಬೆಳ್ಳುಗೊಳ, ವೆಳ್ಗೊಳ (ನಾ). ಒಂದು ಊರಿನ ಹೆಸರು ; P ಈಗಿನ ಹಾಸನ ಜಿಲ್ಲೆಯ ಶ್ರವಣಬೆಳಗೊಳ ; ಪ್ರಸಿದ್ಧವಾದ ಗೊಮ್ಮಟೇಶ್ವರನ ಪ್ರತಿಮೆಯುಳ್ಳ, ಜೈನರ ಪವಿತ್ರಕ್ಷೇತ್ರ : ಬೆಳ್ಗೊಳನಿವಾಸಿಗಳಪ್ಪ ಶ್ರೀ ವೀರಸೇನಸಿದ್ಧಾಂತದೇವರ ಪರಶಿಷ್ಯರ್ ಶ್ರೀ ಗೊಣಸೇನಪಣ್ಡಿತ ಭಟ್ಟಾರರ ಪರಶಿಷ್ಯರ್ ಶ್ರೀಮತ್ ಅನಂತವೀರ್ಯ್ಯಯ್ಯಂಗಳ್ ಪೆಗ್ಗ್ಡೂರುಂ ಪೊಸವಾಡಗವುಮನಭ್ಯಂತರಸಿದ್ಧಿಯಾಗೆ ಪಡೆದರ್ (ಎಕ. VI, ೦೦೩-೯ ; 777). ; ರಣಪಾರಗಾವುಣ್ಡರುಂ ಅನ್ದಮಾಸಲಉತ್ತಮಗಾವು ಣ್ಡರುಂ ನವಿಲೂರ ನಾಟ್ಟಾವುಣ್ಡರುಂ ಬೆಳ್ಗೊಳದ ಗೋವಿಂದಪಾಡಿಯು ಉxxಳ್ಳಾಮಂದು ಬೆಳ್ಗೊಳದಾವಟಿ ಗೋವಿಂದಪಾಡಿಗೆ ಕೊಟ್ಟದು (ಎಕ. II, ೩೩-೯ ; ಕು. ೬೦೦). **ಬೆಳುಗುಳ** : ಶ್ರೀ ತಿರುಮಲೆಯ ತಾತಯ್ಯಂಗಳು ಸಮಸ್ತರಾಜ್ಯದ ಭವ್ಯಜನಂಗಳ ಅನುಮತದಿಂದ ಬೆಳುಗುಳದ ತೀರ್ಥದಲ್ಲಿ ವೈಷ್ಣವ ಅಂಗರಕ್ಷೆಗೋಸುಕ ಸಮಸ್ತರಾಜ್ಯದೊಳಗುಳ್ಳಂತಹ ಜೈನ[ರು] ಬಾಗಿಲುಂಗಟ್ಟಳೆಯಾಗಿ ಮನೆಮನೆಗೆ ವರ್ಷಕ್ಕೆ ೧ ಹಣಕೊಟ್ಟು (ಎಕ. II (R), ೯೬೩-೨೨ ; 1368) ; ಗ್ರಾಮೋತ್ತಮಂ ಬೆಳುಗುಳಾಖ್ಯಮ್ ದತ್ತಧೀಃ (ಎಕ. VIII, ೨೦-೦೦೦ ; 1422). **ಬೆಳುಗೊಳ** : ಹಡುವಲು ಬೆರ್ಕ್ಕನೊಳಗೆಱಿಯ ಮಾವಿನ ಕೆಱಿಯ ಗತ್ತಿಯೊಳಗಾಗಿ ಬೆಳುಗೊಳಕ್ಕೆ ಹೋದ ಬಟ್ಟೆ (ಎಕ. II(R), ೯೨-೯೯ ; 1118). **ಬೆಳ್ಗುಳ** : ನಿರ್ಮ್ಮಳಿನಂ ಘನಪುಷ್ಪವೃಷ್ಟಿ ಬಂದೆಱಗಿದುದಭ್ರದಿಂ ಧರೆಗದಭ್ರತರಾಮೃತ ಹರ್ಷಕೋಟಿ ಕಣ್ಡೆಱೆದಿರೆ ಸಂದ ಬೆಳ್ಗುಳದ ಗೊಂಮಟನಾಥನ ಪಾದಪದ್ಮದೊಳ್ (ಎಕ. II, ೨೩೯-೩೭ ; 1180). **ಬೆಳ್ಳುಗೊಳ**: ಅಥಕಱಿಯ ವೀರ ವೀರಪಲ್ಲವರಾಯನ ಮಕಂ ಕೆದೆ ಸಂಖರ ನಾಯಕಂ ಬೆಳ್ಳುಗೊಳಘ×ಯೊಜ್ಜ ಬೆಳ ಬಡಿಗರ ಬಿಟಕೆ (ಎಕ. II, ೪೩೩-೩ ; 13ನೆಯ ೩೩). **ವೆಳ್ಗೊಳ** : ಶ್ರೀ ಭದ್ರಬಾಹು ಸಚನ್ದ್ರಗುಪ್ತಮುನೀನ್ದ್ರಯುಗ್ಮದಿನೊಪ್ಪೆ ವಲ್ ಭದ್ರಮಾಗಿದ ಧರ್ಮ್ಮಮನ್ದುವಱಿಕ್ಕೆವನ್ದಿನಿಳ್ಕಲೋವಿದ್ರುಮಾಧರ ಶಾನ್ತಿಸೇನ ಮುನೀಶನಾಕ್ಕಿ ಎ ವೆಳ್ಗೊಳ ಅದ್ರಿಮೇಲಶನಾದಿ ವಿಟ್ಟು ಪುನರ್ಭವಕ್ಕೆಱೆ ಆಗಿ × (ಎಕ. II, ೩೦-೩ ; ಕು. 650).
[ ಬೆಳ್$_1$ (<ಬಿಳಿದು) + ಕೊಳ್$_2$ ]

**ಬೆಳ್ಛಾಯ** (ನಾ). ಬಿಳಿಯ ಛಾಯೆ ; ಬಿಳಿಚಿಕೊಂಡ ಬಣ್ಣ : ಸಂಚಲಿಸದೆ ಮರುಳಾಗಿ ಮಿತಿ ಮಿಱಿಮುದು ಮನ್ಮಥಪರವಶನಾಗಿ ಬೆಳ್ಛಾಯವೇಱಿ ಮೌನವಾಗಿದ್ದರೂ ಆಕಾರದಿಂದಲೆ ವಿರಹವೇದನೆಯ ಹೇಳುತ್ತ. . . ಇರುವ ಬಗೆಯನು ಕಂಡು (ವಣಾ. ೨೬). [ಬೆಳ್$_1$ (<ಬಿಳಿದು)+ಛಾಯ]

**ಬೆಳ್ಜಸ** (ನಾ). ಶುಭ್ರವಾದ ಕೀರ್ತಿ ; ನಿರ್ಮಲವಾದ ಯಶಸ್ಸು : ಪುಣ್ಯದ ಪುಂಜದಂತೆ ಶಿವನ ಸದ್ಗುಣರಾಶಿಯಂತೆ ಭಕ್ತರ ಬೆಳ್ಜಸದಂತೆಸವ . . . ವೃಷಭೇಶ್ವರನಂ ಕಂಡು (ಹರಿಶ್ಚಂ. ೩-೯ ವ) ; ಚಳಿಯಾಳ್ಗಳ್ಗೊಗ್ಗಿನೊಡನೆ ನಿಸದಂ ಓಮಶ್ವಸನ ರಥವೇರಿ ದಾಳಿಟ್ಟು ವಸುಧೆಯಂ ನಡುಗಿಸಿದ ಹೇಮಂತನೃಪನ ಬೆಳ್ಜಸದವೋಲಾಗಳ್ಸವಿತ್ತಡಂ ಮಂಜು ದೆಸೆದೆಸೆಯನಾ ವರಿಸಿರ್ದುದು (ಶೀಕರಾ. ೨೩-೦೦) ; ನಿನ್ನಯ ಪಿರಿಯರಿಂತು ಬೇಳ್ದು ಬೆಳ್ಜಸದಿಂದೆಸೆವೆಂಡಿರ್ಗೆ ಪಸದನಂಗೈದುಂ ಬರ್ದಿಲವೆಣ್ಗಳಂ ತೊಟ್ಟು ಗೊಂಡರ್ (ರಾಮಾಶ್ವ. ೦೯-೨೬).. [ ಬೆಳ್$_1$(<ಬಿಳಿದು)+ಜಸ$_1$ ]

**ಬೆಳ್ಜೋತಿ** (ನಾ). ಉಜ್ವಲವಾದ ಕಾಂತಿ ; ನಿರ್ಮಲವಾದ ಹೊಳಪು : ಚಾರುವುದಯಾದ್ರಿಪನ ನಿಟಿಲದಿ ವಿರಾಜಿಸುವ ಶ್ರೀಭಸಿತ ವುರೆರೆ:ಬೆಯೊ ವಾರಿಜಾಂಡದ ನಿಳಯ ಕತ್ತಲೆಯೊಳಂ ಬೆಳಪ ತೋಕ ಬೆಳ್ಜೋತಿಯೋ (ನವಮೋ. ೦೭-೬೦). [ಬೆಳ್$_1$ (< ಬಿಳಿದು) + ಜೋತಿ]

**ಬೆಳ್ತನ** (ನಾ). ೧. ದಡ್ಡತನ; ಬೆಪ್ಪುತನ; ಮೌಢ್ಯ : "ಗಾಂಪು ಶಕ್ಕುತನಮುಂ ಬೆಳ್ತನಂ" (ಸಂಜೀವ. ೨೭); ಸತ್ತರನೆ ಸಾಯದರಂತೆಣಿಸುತ್ತುಮಿರ್ಪ ಬೆಳ್ತನವನಿತಲ್ಲದಾ ಮಾರನನಾ ದವದಗ್ಧಿ ಬರ್ದುಂಕಲೀಗುಮೇ (ಅಂಪು. ೯-೩೯) ; ತ್ರಿಭುವನವಿಜಯಿಯ ವೀರಮುಂ ಚಕ್ರವರ್ತಿತ್ವಮನೆಯ್ದಿದನ ವಿದ್ಯೆಯುಮುಂ ಬೆಸಗೊಂಬವನ ಬೆಳ್ತನದಂತೆ (ಧರ್ಮಾಮೃ. ೨-೦೩೩); ಅವನ ಬೆಳ್ತನಕ್ಕೆ ಬೆಕ್ಕಸಂಬಟ್ಟು ಘನಸಂಭ್ರಮಮೋನಿದು ಪೇಳ್ವನಕ ನಿಜಸ್ಥಿತಿಯನೆಂದು ಬೆಸಗೊಳೆ ಬಸವಂ (ವೃಷಭ. ೩-೩೦ ವ). ೨. ಮೋಸಗಾರಿಕೆ ; ವಂಚನೆ : "ಗಾಂಪು ಶಕ್ಕುತನಮುಂ ಬೆಳ್ತನಂ" (ಸಂಜೀವ. ೨೭). [ ಬೆಳ್$_2$ + — ತನ ]

**ಬೆಳ್ತಿಗೆ** 'ಬೆಳಂತಿಗೆ' ನೋ.

**ಬೆಳ್ತೆರು** (ಕ್ರಿ). ಬೆಳ್ಳಗಾಗು ; ಬಿಳುಪೇರು : ಉದುರಲಿಹ ತರಗೆಲೆಯು ಅದುರಿ ಬೆಳ್ತೆರುವಂತೆ (ಏಕೀಗೀ. ೬-೦೯). [P 'ತಳ್ತಿರು', 'ಬೆಳತಿರು' ಎಂಬ ಶಬ್ದಗಳ ರೂಪಸಾಮ್ಯತೆಯ ಮೇಲೆ ಈ ಶಬ್ದದ ಬಳಕೆಯಾಗಿರಬಹುದು]

**ಬೆಳ್ದಾವರೆ** (ನಾ). ಬಿಳಿಯ ತಾವರೆ; ಪುಂಡರೀಕ : ಮಂಡಳಿಸಿದತ್ತು ನಿಜರುಚಿಮಂಡಲಮಾಗಸದೊಳೆಂಬಿನಂ ಬೆಳ್ಗೊಡೆ ಕಣ್ಗೊಂಡು ಪರಿಭವಿಸಿದುದು ಶಶಿಮಂಡಳಮಂ ಬಂದು ಕಂಡ ಬೆಳ್ದಾವರೆಯಂ (ಶಂರಾಮಾ. ೦೨-೨೯); ಬೆಳೆಯುದ ಪೊಲಂಗಳಂ ಬೆಳ್ದಾವರೆಗಳಲರ್ದಳೆಯುದ ಕೊಳಂಗಳಂ . . . ಮನಕನವರತಸುಖಿ ವೊಳೆಯದ ಜನಂಗಳಂ ಮುಳಿದಱಿಸಲಾಂ ಕಾಣೆನಾ ಮಹೀಮಂಡಲದೊಳು (ಕೃಬಂಕಾ. ೩-೪).
[ ಬೆಳ್$_1$ (< ಬಿಳಿದು) + ತಾವರೆ (< ತಾಮರೆ) ]

**ಬೆಳ್ದಾಳೆ** (ನಾ). ಬಿಳಿಯ ತಾಳೆ ; ಶ್ವೇತವರ್ಣದ ಕೇದಗೆ : ನೆರೆ ಮುಳ್ಳ ತುಂಟವೆಸರ ಬಂಡುಗರಿವ್ಯ ಪೊರೆಯೊಳಗಿರಬೆ ಡವೆಂದು ವರವನ ಪುಷ್ಪಗಳ್ಬೊಱಿಡಿಸೆ ಬೆಳ್ದಾಳೆಯುರಲೊಪ್ಪಿದುವು ವನತಟದಿ (ಕಂಶಂ. ೩-೯೮). [ ಬೆಳ್$_1$ (< ಬಿಳಿದು) + ತಾಳ್$_1$ (< ತಾಱ್) ]

**ಬೆಳ್ದಿಂಗಳ್**, ಬೆಳದಿಂಗಳು, ಬೆಳುದಿಂಗಳ್, ಬೆಳುದಿಂಗಳು, ಬೆಳ್ದಿಂಗಳು (ನಾ). ೧. ಚಂದ್ರನ ಬೆಳಕು,—ಕಾಂತಿ ; ಚಂದ್ರಿಕೆ : "ಚಂದ್ರಿಕಾ, ಕೌಮುದೀ, ಜ್ಯೋತ್ಸ್ನಾ, ಚಂದ್ರಾತಪಃ—ಈ ಳ ಬೆಳ್ದಿಂಗಳ ಪೆಸರ್" (ಕರಾಜು. ೬-೪೪) ; ಅಂಗಲತಾಲಲಿತ ಸಾಂದ್ರಚಂದನರಸಂ ಬೆಳ್ದಿಂಗಳೆಂಬೊಂದು ಪಂಬಲ ಬುಬಲ್ಗೆಡೆಯಾಗಿ ಬೆಳ್ಪಸದನಂ ಕಣ್ಗೊಪ್ಪಿತಾ ಕಾಂತೆಯಾ (ಶಂಕರಾ. ೦-೮೬); ಚಂದ್ರಕಾಂತಪೊಸರ್ವಂಶಿರ ಗೋರಿ ಕಲ್ಲೊಸರ್ಗುಮೇ ಬೆಳ್ದಿಂಗಳೊಳ್ (ಜಗಂ. ೦-೦೩). ೨. ಬಿಳುಪಾದ ಚಂದ್ರ ; ಶೋಭಿಸುವ ಚಂದ್ರಬಿಂಬ : ಬೆಳ್ದಿಂಗಳನಂಗಳವಂ ನೀಳ್ದರ ಪೊರೆಯುತ್ತಿ ರತಿಯ ಮುಖಿಗಂಧಮಸಂತಾಳ್ದಿರೆ ತೊಯ್ದುಪೊಲೊಳ್ಪಂ ತಾಳ್ದುದುವೀ ಸುರಭಿಕೇತಕೀಕುಸುಮಂಗಳ್ (ಪಾರ್ಶ್ವಪು. ೯-೬೦). **ಬೆಳದಿಂಗಳು** : ೧. "ಚಂದ್ರಿಕಾ, ಕೌಮುದೀ, ಜ್ಯೋತ್ಸ್ನಾ—ಇ ಬೆಳದಿಂಗಳ ಹೆಸರುಗಳು" (ಸಿದ್ಧಾಂತಿ. ೩೦) ; ಮೋಘವೆ ಜಡೆ ಬೆಳದಿಂಗಳೇ ವಿಭೂತಿ ಪರ್ವತಂಗಳೆ ರುದ್ರಾಕ್ಷಿ (ಅಪಪ.೦-೩); ವೀರರಂಗವನೆತ್ತ ಬಲ್ಲರು ಹಾರುವರು ಬೆಳದಿಂಗಳಿನ ಬಿಱಿಸಾರ ಸುಡುವುದು ಕೈದು ಓಡಿದರೆ ಕಲಿಗಳೇ ದ್ವಿಜರು (ಕುಮಾವ್ಯದ್ರೋ. ೩-೩೮) ; ನಂದಿತು ಬೆಳದಿಂಗಳ ಕಿಚ್ಚು ಪಾಪಿಷ್ಠಚಂದ್ರಮ ನಸ್ತಮಿಸಿದನು ಕಂದಿತು ನಕ್ಷತ್ರಮುಖಿಕಾಂತಿ ಬೆಳಗಾಗ ಬಂದಿತು ಬೆದಱಿದಿರವ್ವ (ಮೋಹತ. ೨೭-೬೯). **ಬೆಳುದಿಂಗಳ್** : ೧. ದೆಸೆಯೊಳುರುಪುವ ದಾವಶಿಖಿ ಬೆಳುದಿಂಗಳಾಗಿರ್ಪು (ಪಶಪು. ೯-೨೩). **ಬೆಳುದಿಂಗಳು** : ೧. "ಜೊನ್ನ ಬೆಳುದಿಂಗಳಕ್ಕುಂ" (ಕಬ್ಬಕೈ.೦೦) ; ಸಂಜೆಯು ಬೀಸುವ ಗಾಳಿ ಉರಿಯಾಯಿತ್ತಪ್ಪ ಬೆಳುದಿಂಗಳು ಬಿಸಿಲಾಯಿತ್ತು ಕೆಳದಿ (ಮಹಾದೇ.ವ. ೯೩-೦೦೦) ; ಬೆಳುದಿಂಗಳಿಂದ ಮಾಡಿದ ಮೂರ್ತಿಯುಂದದಿಂ ಬೆಳಗು ಚೆಲುವಾಕಾರವಾದರಿ

**ಬೆಳ್ಗವಡೆ** (ನಾ). ಬಿಳಿದಾದ ಕವಡೆ : ಭಾಸುರಶಿರಃಕಂಠಕರ್ಣಾಂಗಗಳೊಳ್ ಶಿಖಿಗಳೊಳ್ ಪಾದಯುಗ್ಮಂಗಳಲ್ಲಿ ಕರವೆಸೆವ ಘೋಣಾಗ್ರದೊಳಗೆ ಬೆಳ್ಗವಡೆಗಳ ಧರಿಸಿ ಕಣ್ಣಡಕಂಗಳಂ ತಾಳ್ದು . . . ಓರ್ವ ಶೋಭಿಸುವ ಭೃಂಗಿಯು ತೆಜದೆ ಮಲೆಯುತ್ತೆ ಪೊಕ್ಕಂ (ಅಂತ. ೫-೮-೩೯).

[ಬೆಳ್$_1$ (<ಬಿಳಿದು)+ಕವಡೆ$_1$]

**ಬೆಳ್ಗವಿ** (ನಾ). ದಡ್ಡನಾದ ಕವಿ : ಒಳ್ಗವಿ, ಬೆಳ್ಗವಿ, ಅಜುಗವಿ (ಶಾಶಾಕೂ. ೦೩೨ ಉದಾ). [ಬೆಳ್$_2$ + ಕವಿ$_1$]

**ಬೆಳ್ಗಱಿ** (ನಾ). ೧. (ಹಕ್ಕಿಯ) ಬಿಳುಪಾದ ರೆಕ್ಕೆ,—ಪುಕ್ಕ : ಪೊನ್ನ ಕಡಿವಾಣದ ರನ್ನ ವೊಗರಂಬದ ಕಿವಿಯ ಚಾಮರದ ಸುತ್ತುರ್ಕಿಲ್ಲರಿಯ ನೆತ್ತಿಯ ಬೆಳ್ಗಱಿಯ . . . ತುರಗಸಂಘಾತದಿಂ (ರಾಜಶೇ. ೬-೦೦ ವ). ೨. ಬಾಣದ ಹಿಂಭಾಗದಲ್ಲಿರುವ ಬಿಳುಪಾದ ಗರಿ : ನಿನಿರ್ದಲರ್ಗಣ್ಣ ನುಣ್ಚೆಳಗಡರ್ಪ ಕೂರಲಗಾ ಸಂಕೋಪಲಾಂಗವೆ ಶರಯುಷ್ಟಿ ತೊಟ್ಟಲರ ಪಚ್ಚವೆ ಬೆಳ್ಗಱಿಯಾಗೆ ಕಾಮಿನೀಸವಿತಿ ವಿರಾಜಿಸಿರ್ದಪದು (ಕುಸುಮಾ. ೫ ೦೨೯). [ಬೆಳ್$_1$ (<ಬಿಳಿದು) + ಗಱಿ]

**ಬೆಳ್ಗಟ್ಟಿ**, **ಬೆಳುಗತ್ತೆ**, **ಬೆಳ್ಗತ್ತೆ** (ನಾ). ಬಿಳಿಯ ಬಣ್ಣದ ಕತ್ತೆ : ಆದಿತ್ಯನಸ್ತಮಾನಕ್ಕೆ ಸಲ್ವುದುಮಂ . . . ಬೆಳ್ಗಟ್ಟಿ ಪೂಡಿದ ಪೊನ್ನ ರಥಮಂ ಬೆಳ್ಗಟ್ಟಿಯನೆರಸರ್ಕಳೇಱುವುದುಮಂ ಇಂತೀ ಪದಿನಾಱುಂ ಕನಸುಗಳಂ . . . ಕಂಡೆಂ(ವಡ್ಡಾರಾ. ೯೫-೩೦). **ಬೆಳುಗತ್ತೆ** : ಪರವಸ್ತುಪುಷ್ಪಮುಮಂ . . . ಹಯಕ್ಕೆ ಮೂವತ್ತೆರಡಪ್ಪತ್ತಯ್ದು ಬೆಳುಗ[ಶಾಶಾಂ. ಬೆಳ್ಗ]ತ್ತೆಗಾ ಕರಭಸ್ಯಂ (ಜಾತಿ. ೮-೦೦) ; ಬಳಿಕ ಪುಳಿತು ನಾತು ಕೊಳೆತು ಸತ್ತು . . . ಬೆಳಗುತ್ತೆಯಾಗಿ ಸಂಜನಿಸಿ (ವೈಜಸಂ. ೩೬-೨೫). **ಬೆಳ್ಗತ್ತೆ** : ನಾಗಶರ್ಮಂ ಬೂದಿವೂಸಿದ ತಪೋಧನನಂತೆಯುಂ ಪುಡಿಯೊಳ್ ಪೊರಳ್ದ ಬೆಳ್ಗತ್ತೆಯಂತೆಯುಂ . . . ಮಠದಿಂ ಪೊಱಮಟ್ಟು ನಿಂದ ಛಾಂದಸ ಬ್ರಾಹ್ಮಣನಂ ಕಂಡು (ಶಂಕಕಂ. ೦೮೬-೦೬) ; ಬಡತನವುಡಸಿ ಬಳಮಟ್ಟದು ಪುಟ್ಟಿತು ಸಮೆದು ಸತ್ತುವಾ ಕೌಶಂಬೀಪುರದೊಳ್ ಬಹುಕರ್ಮಿಯೆಂಬ ದೊಂಬನ ಮನೆಯೊಳ್ ಸ್ತ್ರೀ ವೇದದಿಂ ಬೆಳ್ಗತ್ತೆಯಾಗಿ ಪುಟ್ಟಿ (ಸ್ಕಳುಪಾ. ೫-೦೨ ವ). [ಬೆಳ್$_1$ (< ಬಿಳಿದು) + ಕಟ್ಟಿ]

**ಬೆಳ್ಗಾಡು** (ನಾ). (ಅಲಂ) ಬಿಳಿಯ ಹೂವುಗಳಿಂದ ತುಂಬಿದ ಕಾಡು : ನಾಡುಗಳರಸನಿದೆಂಬೊಂದಾಡಂಬರದಿಂದೆ ಸತ್ತಿಗೆತ್ತಿದುವೆನೆ ಕಣ್ಗಾಡುಂ ಬೊಲನಾದುವು ಬೆಳ್ಗಾಡಿನೊಳಲರ್ದೆಸೆವ ಬಯಲ ಬೆಳ್ದಾವರೆಗಳ್ (ಶಂತ್ರಕು. ೦-೮೮). [ಬೆಳ್$_1$ (< ಬಿಳಿದು) + ಕಾಡು$_1$]

**ಬೆಳ್ಗುಂಜಿ** (ನಾ). ಬಿಳಿಯ ಗುಲಗಂಜಿ : ಕೇಸುರಿಯನುಗುಳ್ವ ಕಣ್ಗಳ . . . ಭಾಸುರದ ಬೆಳ್ಗುಂಜಿದೊಡವುಗಳ ಮೂಡಿಗೆ ಶರಾಸನದ ಕಿಱಿಯ ಕಿಗ್ಗಟ್ಟಿನ ಕಠಾರಿಯ ಮಹಾಶಬರರೂಪದಿಂ ಶಂಕರಂ ಸುಳಿದನಾ ಸೌಂದರೇಶ್ವರನದಿರೊಳು (ಸೌಂದಪು. ೦೮-೩೫).

[ಬೆಳ್$_1$ (< ಬಿಳಿದು) + ಗುಂಜಿ]

**ಬೆಳ್ಗುಂದೂರು** (ನಾ). ಒಂದು ಊರಿನ ಹೆಸರು : ಇದಕ್ಕೆ ಸಕ್ಷಿಳೆ ಬೆಳ್ಗುನ್ದೂರುಂ ಕಿಱುಪೆಳ್ಗುನ್ದೂರುಂ ಸತ್ತಿಯೂರುಂ ಸಿಂಗೂರು ನಗರಲ ವನ್ನಿರ್ವ್ವರು ಮಹಾಪರಿಷೆಯುಂ ಏಡೆನಾಡ ಮುವನ್ನಾರ್ಬ್ಬಗಾವುಣ್ಡುಗಳುಂ ಸಕ್ಷಿ (ಎಕ. III (R). ತಂತಿನ. ೨೩೯-೬; ಸು. 10 ನೆಯ ಶತ).

[ಬೆಳ್ಗುಂದ$_0$ + ಊರು$_3$ (<ಊರ್)]

**ಬೆಳ್ಗುಂಬಳ** (ನಾ). ಒಂದು ಬಗೆಯ ಕುಂಬಳ; ಬಿಳಿಯ ಕುಂಬಳ; ಬೂದುಗುಂಬಳ : ನಿಂಬದ ಬಸುರುಮಂಗಳನೌದುಂಬರಪಂಚಕವೆನಂತೆ ನವನೀತಮನಾಣಂಬೆಯನನವರತಂ ಬೆಳ್ಗುಂಬಳಮಂ ಗಿಣ್ಣಸುಣ್ಣದಿರ್ಪುದಮೋಘಂ (ಸುಕುಮಾ. ೬-೯೩); ಇರುಳೂಟಂ ಕೊಲೆಯುಯ್ದು ಪಾಲ್ಮರದ ಪಣ್ಣಾಣಂಬೆ ಬೆಳ್ಗುಂಬಳಂ [ಶಾಶಾಂ. ಪಣ್ಣುಬೆಣ್ಣೆ ಗಿಣ್ಣಲಿದೀ, ಪಣ್ಣಾಣಂಬೆ ಬೆಳಗುಂಬಳ] ಪರದ್ರವ್ಯಸ್ತುತಿ ಕಳ್ಳು . . . ಜೂದಶಿಕಾಂಕ್ಷೆಯೆಂಬಿವಿನಿತುಂ ಜೈನಂಗೆ ಮೂಲವ್ರತಂ (ಕಶಾರ. ೩೦೪).

[ಬೆಳ್$_1$ (<ಬಿಳಿದು) + ಕುಂಬಳ]

**ಬೆಳ್ಗುಡಾರ** 'ಬೆಳ್ಗೂಡಾರ' ನೋ.

**ಬೆಳ್ಗುದುರೆ** (ನಾ). ಬಿಳಿಯ ಕುದುರೆ ; ಶ್ವೇತಾಶ್ವ : ಬೆಳ್ಗುದುರೆ ಪಗಲು ಕಡೆಗೆದ್ದು ಬಂದಿಳಿಯೆಲ್ಲ ಚೆಲ್ವಿನಲಿ ಬೆಳಗೆ (ಪಾರಶಿ. ೦೫-೩೫೨).

[ಬೆಳ್$_1$ (<ಬಿಳಿದು) + ಕುದುರೆ]

**ಬೆಳ್ಗುಪೆ** (ನಾ). ಒಂದು ನಾಡಿನ ಹೆಸರು : ಶ್ರೀಮತ್ಶಾನ್ತಿಪರ್ವ ಬೆಳ್ಗುಪೆಯೆಪ್ಪತ್ತೆಡೆ ನಾಡೆಪ್ಪತ್ತು ತಂದವೂರ ಪನ್ನೆರಡು . . . ಸಾಸ್ನೆಳಿಗೆ ಸಾಯಿರವುಮಂ ದುಷ್ಟಾಟವಿಕ ನಿವಾರ್ಣೆಳನಂಪ್ಪಾಡಿ ಸುಖದಿಂ ರಾಜ್ಯಂಗೆಯ್ಯುತ್ತಿಪ್ಪು (ಎಕ. VIII, ಸೊರಬ. ೪೭೬-೦೨; 991). [ಬೆಳ್? + ಗುಪೆ]

**ಬೆಳ್ಗುಳ** 'ಬೆಳ್ಗೊಳ' ನೋ.

**ಬೆಳ್ಗೂಡಾರ**, **ಬೆಳ್ಗುಡಾರ** (ನಾ). ಬಿಳಿಯ ಬಣ್ಣದ ಗುಡಾರ; ಬಿಳುಪಾದ ಡೇರೆ : ಅಂತಹ ಒಂದು ಬೆಳ್ಗೂಡಾರದೊಳಗೆ ಸೆಟ್ಟಿಯು ಕೊಳ್ಳುಕೊಡೆಯ ನಾಯಕತ್ವವಿಲ್ಲದೆ ಹಾಳ್ಗರೆಯುತ್ತಿರುವ ಅಂಗಡಿಯಲ್ಲಿ . . . ಬಲ್ಲಪ್ಪನೂ ಬೋರೆಯೂ ಕತ್ತಲಗಿನ ಕಡುಗಾವಲ್ಗುಡುತ್ತಿರುವರು (ಬರುಗಂ. ೦೨-೮). **ಬೆಳ್ಗುಡಾರ** : ಮುಂಸುಕರ್ಪ ಮಂಜಿನಿಂ ಬೆಳ್ಗುಡಾರಂಗಳಂತೆಸೆಯೆ ಶೈಲಂಗಳಲ್ಲಲ್ಲಿ ಶೈವಲಿನಿಗಳ್ಪೊಸರಾಯುವೀಧಿಗಳ ಪಾಂಗಿನಿಂ ಕಂಗೊಳಿಸೆ (ಕೇಶರಾ. ೨೫-೦೦).

[ಬೆಳ್$_1$ (< ಬಿಳಿದು) + ಗುಡಾರ]

**ಬೆಳ್ಗೂಳು** (ನಾ). ಬಿಳಿಯ ಅನ್ನ ; ಬಿಳುಪಾದ ಅನ್ನ : ಮಲ್ಲಿಗೆ ಮರಳಂತೆ ಬೆಳ್ಗೂಳು ಬಹುವರ್ಣದಲ್ಲಿ ರಂಜಿಪ ಬಣ್ಣಗೂಳು ಬೆಳ್ಪೊಂಬರಿವಾಣಗಳ ತುಂಬಿ ಸುಳಿಹತ್ತಿ ಚೆಲ್ಲಿಸಿದಳು ದೆಸೆದೆಸೆಗೆ (ಮೋಹತ. ೩೦-೩೬).

[ಬೆಳ್$_1$ (<ಬಿಳಿದು) + ಕೂಳು$_1$ (<ಕೂೞ್)]

**ಬೆಳ್ಗೆಱಿ**, **ಬೆಳೆಕೆಱಿ**, **ಬೆಟ್ಗೆಱಿ** (ನಾ). ಒಂದು ಸ್ಥಳದ ಹೆಸರು : ರಾಚಮಲ್ಲಗಾವುಣ್ಡನು ಸಿಙನುಂ ಗಂಗಗಾವುಣ್ಡನುಂ ಮಾರೆಯನುಂ ಬೆಳ್ಗೆಱಿಯೊಡೆಯರುಂ ಮೊದಲಾಗೆ ಎಪ್ಪದಿಂಬರುಂ ಕುಸಂಗಿಲಯ್ಯಾರ್ವ್ವರುಂ ಸಾಕ್ಷಿಯಾಗೆ ಕೊಟ್ಟತ್ತು (ಎಕ. XII, ಗುಬ್ಬಿ. ೩೦-೯೬ ; 812). **ಬೆಳೆಕೆಱಿ** : ಅನ್ತೆ ಬನ್ದು ನಗರೆವಳ್ಳಿದ ಘೂಡಣ ಬೇಲಿಯಿಂ ಅನ್ತೆ ಬನ್ದು ಬೆಳೆಕೆಱಿಯ ಪಡುವಣ ಕಡೆಯಿಂ (ಎಕ. III (R), ತಂತಿನ. ೨೦೪-೦೬ ; 915). **Δ ಬೆಟ್ಗೆಱಿ** : ಮಣಲ್ಪೂರ ರಪಾವಣ್ಡುಕ ಬರಳಿಯ ಬೆಟ್ಗೆಱಿ ಎಮ್ಮಗೆ ಕೇಬ್ದು ಯಲವರಿದು ಕಳಿಕ್ಕಿಸಿದ (ಎಕ. XII, ತಿಪಟೂ. ೫೬-೫ ; 961). [ಬೆಳ್$_1$ (<ಬಿಳಿದು) + ಕೆಱಿ]

**ಬೆಳ್ಗೊಡೆ**, **ಬೆಳುಗೊಡೆ** (ನಾ). (ದೇವರು, ರಾಜ, ಇವರಿಗೆ ಹಿಡಿಯುವ) ಬಿಳಿಯ ಕೊಡೆ ; ಶ್ವೇತಚ್ಛತ್ರ : ಗುಡಿ ಶಂಖಂ ಚಾಮರಂ ಬೆಳ್ಗೊಡೆ (ಎಕ. XIII, ೩೩೬-೦೩ ; 929) ; ಪೇಱಿ ದಂಗನೆ ಬೆಳ್ಗೊಡೆಯಲ್ಲಿ ದುದೆತ್ತ ಪೋಯ್ತು ಸುತ್ತಿಱಿದ ಚತುರ್ಬಲಂ ನಿನಗಮಿಯಿರವಾದುದೆ ವೈರಿಭೂಪರಿಂ (ಶಂಕಶಾ. ೦೩-೬೪) ; ಬೆಳ್ಗೊಡೆಯ ವೀರಚ್ಛಾಯೆಯೊಳ್ ವಜ್ರಪ್ರಪಂ ಪಿಡಿದ್ಯರಾವತಪೋಱಿ ನಿಂದನವನಿಂದ್ರಂ ಕೇಳ್ ದನುಪ್ರೋದ್ಭವಾ (ಗಿರಿಜ. ೬-೫೬) ; ಸೀಗುರಿಯ ಚಾಮರದ ಮೇಗಪ್ಪ ಬೆಳ್ಗೊಡೆಯ ಭೋಗ ಹಡಪಿಗರ ಪಡೆಯುವಡೆ ಮಾನವನು ಬೇಗ ಮಾಡುವುದು (ಸರ್ವಜ್ಞ. ೩೫೦). **ಬೆಳುಗೊಡೆ** : ಭೇರಿಯ ಮುದ್ದಳೆಯಾಗೆ ಬೆಳುಗೊಡೆ [ನೆ]ಳಲಾಗೆ ನೆಲಂ ಕಳನಾಗೆ . . . ನರರೊಳು ತುಂಬುಲಿಗರ್ಜ್ಜಸಂಜಡವರಾ ವಿಶ್ವಂಭರಾಭಾಗದೊಳ್ (ಸೌತ್ಇಇ. XX, ೦೦೨-೩೬ ; 1144?) ; ಸಂದಣಿಸ ಕೆಲಬಲದ ಬೆಳುಗೊಡೆಗಳೊಪ್ಪಿರೆ ಹಿಂದೆ ನಿಸ್ಸಾಳಭೇರೀರವಂ ಸಂದಣಿಸೆ (ಬಸವ. ೫-೦೬೫) ; ಮೂಡ ಮುಜದು ನುಗ್ಗಾಯ್ತು ರಥ ಬೆಳುಗೊಡೆ ಪತಾಕಾದಂಡ ಚಮರಿ

ಹಂಶಿದಪ್ಪಿ ತಾಜಿಂಬಟೀಯುಂ ತೆರಳ್ದ ಕುರುಳ್ (ತಂತ್ರಕು. ೬-೭೨); ಜಡಗ್ರಾಹಿಯಾನಾದೆನೆನುತ್ತಂ ಚಿಂತೆಯಿಂ ಬೆಳ್ಪಡರ್ದುದೆನೆ ತದಬ್ಧಂ ಶರನ್ಮೇಘವಿರ್ಕುಂ (ರಾಜಶೇ. ೬-೪). **ಬೆಳ್ಪಡರು :** ನಡು ಪೊದಳ್ದವು ವರವಳಿತ್ರಯವಡಗಿದವು . . . ಬೆಳ್ಪಡರಿ[ಶಾಶಾಂ. ಸಿ]ದವು ಮುಖ ಮಂಡಲಗಳಾ ಮಾನಿನೀತ್ರಯದ (ಕೋರಣ. ೦-೬-೩); ಶಿಶು ಗರ್ಭ ದೊಳ್ಗೊಳಗೆ ಕೂಡಿರ್ದ ಚಂದ್ರಿಕೆವೊಲಿಂಗರುಚಿ ಬೆಳ್ಪಡರಲೊಳ್ಪಿನಿಂದೊಪ್ಪಿ ದರ್ಗಳುತ್ಪಲಾಕ್ಷಿ (ಶ್ರೀಬಿಶಾ. ೦೬-೩೭). [ ಬೆಳ್ಪು$_1$ + ಅಡರ್ ]

**ಬೆಳ್ಪಡರು** 'ಬೆಳ್ಪಡರ್' ನೋ.

**ಬೆಳ್ಪಡಸು** (ಕ್ರಿ).=ಬೆಳ್ಪಡರ್: ನಡು ಪೊದಳ್ದವು ವರವಳಿತ್ರಯವಡಗಿದವು . . . ಬೆಳ್ಪಡಸಿ[ಶಾಶಾಂ. ರಿ]ದವು ಮುಖಮಂಡಲಗಳಾ ಮಾನಿನೀತ್ರಯದ (ಕೋರಣ. ೦-೬-೩). [ ಬೆಳ್ಪು$_1$ + ಅಡಸು ]

**ಬೆಳ್ಪರಿಗೆ** (ನಾ). ಹೊಳೆಯುವ ಗುರಾಣಿ : ಅರ್ರೊಗಿಸಿನ್ ಬಂದೊಸನ್. ತಲೆಯಿಂದೆ ಕಾಲ್ವರಮಾ ಮೆಯ್ಯಾ ಜೋಡ ತೊಟ್ಟಸನ್, ಕಯ್ಯ ಬೆಳ್ಪರಿಗೆಯುನ್ ಪಿಡಿದು ಮೇಲ್ವಾಯ್ದನನ್, ಬೆನ್ನಿತ್ತು ಪೋದನನ್, ದೂಡುತ್ತುಮುಟ್ಟಿದಯ್ ಕಡಿವಾಣಮೊತ್ತಿ ನಿಟ್ಟೋಟದಿನ್ ಪರಿಯೆ (ಅಂತಿಗೂ. ೩-೯೦). [ಬೆಳ್$_1$ (< ಬಿಳಿದು ) + ಪರಿಗೆ]

**ಬೆಳ್ಪಳ**, ಬೆಪ್ಪಳ, ಬೆಬ್ಬಳ, ಬೆಬ್ಬಳಿ, ಬೆಬ್ಬಳಂ, ಬೆಬ್ಬಳೆ, ಬೆಳ್ಪಡ$_2$, ಬೆಳ್ಪಳೆ (ನಾ). ೧. ಭಯ; ಹೆದರಿಕೆ: ಗಾಬರಿ : ತೋಳ್ಪಿರಿದೆಂದು ತಾಯನುಜಿತೆಯಪ್ಪಿ ಕೊಳಲ್ಬಗೆವಂಗೆ ಲೋಕದೊಳ್ಬೆಳ್ಪಳವಿಲ್ಲದಂತೆ ನಿಲಪಾರ್ವಳಿ ಲಕ್ಷ್ಮಿಯುಮಾಮಹೇಶ್ವರಾ (ಉಮಾಶ. ೯೭). ೨. ಚಂಚಲತೆ; ಸಂಚಲನ : "ಬೆಳ್ಪಳಂ ಸಂಚಳಂ" (ಶಬ್ದ. ಶಂ. ೨); ಗಳೆಯಾದತ್ತುರು ಮಂದರಂ ಕನಕಶೈಲಂ ಚಾಪಮಾದತ್ತು ಬೆಳ್ಪಳವಂ ತಾಳ್ದಿದುದೆಯ್ದೆ ರೌಪ್ಯನಗಂ (ವೀರಬ. ೨-೭). **ಬೆಪ್ಪಳ :** ೧. 'ಬೆಪ್ಪಳಿಸು' ಪರಾ. **ಬೆಬ್ಬಳ :** ೧. " ಅಗುರ್ವು . . . ಬೆಬ್ಬಳಂ, ಅಳಲು, ಪೆಳಲು, ಮುಲ್ಲಟಿ, ತಲ್ಲಟಂ, ಅದಿರ್ಪು—ಈ ೧೦ ಭಯಂ" (ಶಶಾ. ೩೭-೨೨೩). ೩. ಬೆರಗು; ಆಶ್ಚರ್ಯ; ಸೋಜಿಗ: "ಬಕ್ಕುಡಿ ಬಿಗುರ್ವಗುರ್ವು ಬೆಬ್ಬಳ . . . ಮುಲ್ಲಟಿಯೆನಲ್ಕೆ ಬೆಜಗಪ್ಪ ಭಾವಂ" (ಕವಿಕೈ. ೪೦); "ತಲ್ಲಣಂ . . . ಬೆಬ್ಬಳಂ ತಳಮಳವೆನಲ್ಕೆ ಸೊಲ್ಲಿಪುದು ಬೆಜಗಪ್ಪ ಭಾವದೊಳು" (ಶಬ್ದಮಂ. ೩೦). ೪. ದಿಕ್ಕುತೋಚದಿರುವಿಕೆ; ದಿಗ್ಭ್ರಾಂತಿ : "ಬೆಬ್ಬಳ ಮೆಂದೆನೆ ವಿಕಳತ್ವಮೆಂದು ತಿಳಿಗೆ ವಿದಗ್ಧರ್" (ಕಾಲು. ೩೨); ಮೂಜಗ ದೊಬ್ಬ ವೀರನು ಕಂಡು ಬೆಜಗಿನ ಬೆಬ್ಬಳದಲೇಜಿದನು ಮಣಿಮಯ ದಿವ್ಯ ಪುಷ್ಪಕವ (ತೊರವ. ೬-೩೭-೯); ತಬ್ಬಿಬ್ಬುವಾತಿನಿಂ ಪೆಜಗುರ್ಬ್ಬೆಗವುಂ ನೆಗಬ್ದ ಬಜಿಯ ಬೆಬ್ಬಳವುಲ್ಮೊಳ್ಗಬ್ಬಿಗರನುಗೊಳಿಸಿದ ಪೊಸ ಕಬ್ಬದ ಪವಣಂತುಟವನ ಸಬ್ಬವನುಡಿಗಳ್ (ತಿಳಿ. ೬-೦೦೯). ೫. ದಿಗ್ಭ್ರಾಂತಿ ಯನ್ನು ಹೊಂದಿದವನು; ದಿಕ್ಕೆಟ್ಟವನು : ಜನಕ ನುಡಿದ ಮಾತ ಕೇಳ್ದು ಕಂಗೆಟ್ಟನಾ ತನುಜ ಬೆಬ್ಬಳನಾದ ಕೂಡೆ (ಶಾಗಳು. ೩೨-೦೦೪). **ಬೆಬ್ಬಳ: ೪.** ಅದ್ಭುತವಾದ ಕನಸ ಕಂಡು ರಾಯನು ಉಬ್ಬಿ ಪೆದಜಿ ಕಣ್ಣ ತೆಜಿದು ಬೆಬ್ಬಳಿಯಾಗಿ ನೋಡಲು ನಾಲ್ಕುದೆಸೆಯನು (ಹಂಶಾಂ. ೨೪-೨೦). **ಬೆಬ್ಬಳು :** ೧. 'ಬೆಬ್ಬಳುಗೊಳ್ಳು' ಪರಾ. **ಬೆಬ್ಬಳೆ : ೪.** ಕುಸಿಯದೆ ಕೊಡದರ್ಚಿಸದೆ ಬೆಬ್ಬಳೆಯಾಗದೆ (ಬೊಂಕಶಾ. ೦೯೩೩, ಹಾವೇರಿ. ೩೭-೪೦; 1136); ಕುದುರೆ ರಥ ಗಜ ಪತ್ತಿ ನಿರ್ಘೋಷದಲಿ ಬೆಬ್ಬಳೆಯಾಯ್ತು ಬೇಳಂಬದ ವಿಘಾತಿಗೆ ಸಿಲುಕಿ ತೆತ್ತುದು ಸಕಲವಸ್ತುಗಳ (ಕುವ್ಯಾಕ. ೩-೩೩). **ಬೆಳ್ಪಡ$_2$ :** ೧. 'ಬೆಳ್ಪಡಂನುಡಿ' ಪರಾ. **ಬೆಳ್ಪಳೆ :** 'ಬೆಳ್ಪಳೆವೋಗು' ಪರಾ.

**ಬೆಳ್ಪಳಂಬೋಗು**, ಬೆಬ್ಬಳಂಬೋಗು, ಬೆಬ್ಬಳವೋಗು, ಬೆಬ್ಬಳಿಯೋಗು, ಬೆಬ್ಬಳಿವೋಗು, ಬೆಬ್ಬಳೆಪೋಗು, ಬೆಬ್ಬಳೆಯೋಗು, ಬೆಬ್ಬಳೆವೋಗು, ಬೆಳ್ಪಳೆವೋಗು (ಕ್ರಿ). ಭಯಪಡು; ಗಾಬರಿಪೊಂದು; ಗಾಬರಿ ಯಿಂದ ದಿಕ್ಕುತೋಚದಂತಾಗು,–ದಿಙ್ಮೂಢನಾಗು: ಬೆಳ್ಪಳಂಬೋದಂ, ಬೆಳ್ಪಡಂನುಡಿದಂ (ಶಬ್ದಾನು. ೨೦ ವ್ಯಾಖ್ಯಾ). **ಬೆಬ್ಬಳಂಬೋಗು :** ತ್ರಿಜಗ ದ್ಭೂಷಣ ಗಜಂ ಕ್ರೋಧಿಯಿಂಬ ಮದದೊಳ್ ಮತ್ತನಾಗಿ . . . ಕಟ್ಟುಪಂಜರದಿಂ ಪೊಱಮಟ್ಟು ಬರುತ್ತಬ್ಬರಿಸುವಾರಿಕಾರರ ಬೊಬ್ಬೆಗಳಿಗೆ ಬೆಬ್ಬಳಂಬೋ[ಶಾಶಾಂ. ಪೊ, ಬೊ]ಗದೆ (ಧನ್ಯಕು. ೨-೬ ವ); ಕಾಮ ದೇವಂ . . . ಉಬ್ಬಟೆಯ ಬಾಣಮಂ ತೊಟ್ಟು ತೆಗೆದಾಕರ್ಣಪೂರಕ್ಕೆ ನಿಲಿಸಿ ಬಿಡಲು ಪಬ್ಬಿದುದು ಬಾಣ ಪರಿದರ್ಧದಾರಿಯೊಳೆ ತಾಂ ಬೆಬ್ಬಳಂಬೋಗಿ ತಿರುಗುತ್ತಿರಲ್ಕದ ಕಾಣುತಬ್ಬರಿಸಿ ಮತ್ತೊಂದ ಹೂಡಿದಂ (ಅಶಿಜ. ೦೪-೩೦). **ಬೆಬ್ಬಳವೋಗು :** ನಿಬಿಲ್ಬಾರದೆನಿಸುವ ನೋವಿಂಗೆ ಬೆಬ್ಬಳವೋಗಿ . . . ಪೊನ್ನ ಮೋಹಕ್ಕೆ ಮನವಂ ಬಲ್ದಿಡಿದು (ರಘರ್ಪ. ೦-೧೪೪); ಕಾಣುತ ಮಣಿಮಯಗೋಪುರದೊಳಗಿದ್ದೀಶಾಂಕ ನಿಘವದನೆಯುರು ಪ್ರಾಣವಳಿದ ದೇಹದಂತೆ ಬೆಬ್ಬಳವೋಗಿ ತ್ರಾಣವಡಗಿ ಮಱಗಿದರು (ಶ್ರೀಶಾ. ೬-೩೭); ಲಕ್ಷ್ಮಣನೀಗಳೆ ಉಟಿದು ಪೋಪಿನಂ ಕಾಡಿಂಗೆ ಕೋಳುವೋದೆನೆಂಬೊಂದು ಭೀತಿಯಿಂ ಬೆದಱಿ ಬೆಬ್ಬಳವೋಗಿ . . . ಮಱಗುತ್ತಿರ್ದಪೆ (ರಾಮಾಶ್ವ. ೪೦-೨೯). **ಬೆಬ್ಬಳಿಯೋಗು :** ಭಯ ದೊಳಂ ತನು ಬೆಮರ್ತಳುಕಿ ಬೆಬ್ಬಳಿಯೋಗಿ ದಯೆಗೆಟ್ಟು ನಿಂದವಂ ನಡೆದು ಸಂಚಳನಾಗಿ (ಸೇಬರ. ದೀ. ೬೪-೦೭); ಸವಣರೆಲ್ಲಂ ಬುದ್ಧಿಗೆಟ್ಟು ಬೆಬ್ಬಳಿ ಯೋಗೆ [ಶಾಶಾಂ. ಯಾಗೆ] ತವತವಗೆ ಸುಯ್ದು ಮನವುಕ್ಕಿ ನೆಜೆ ಮರುಳಾಗೆ (ವಾಗೀರ. ದೀ. ೨೫೭-೦೦). **ಬೆಬ್ಬಳಿವೋಗು :** ಅರಸಂ. . . . ಕೆಲದೊಳಿರ್ದ ನಾನಾದೇಶೀಯ ಬಹುಲಿಪಿವಿಚಕ್ಷಣರಾದ ಕರಣಿಕರು ಕರೆದ ವಂದಿರ ಕರಾಗ್ರದೊಳೀಯಲೊಡನಾ ಲೇಖನಮನವರುಮೋದಲಱಿಯದೆ ಬೆಜಗಾಗಿ ಬೆಬ್ಬಳಿ[ಶಾಶಾಂ. ಳೆ]ವೋಗಿ (ವೃಷಬ. ೩-೨೪ ವ). **ಬೆಬ್ಬಳೆ ಪೋಗು :** ಘಾಯವಡೆದನು ದ್ರುಪದಸುತ ಪೂರಾಯದೇಱನಲೋಡಿದರು ಮಾದ್ರೇಯರುಬ್ಬಟೆ ಮುಱಿದು ಬೆಬ್ಬಳೆಪೋ[ಶಾಶಾಂ. ವೋ]ದನವನೀಶ (ಕುವ್ಯಾಕ. ೨-೩೯). **ಬೆಬ್ಬಳೆಯೋಗು :** ಸೌಂದರನುಂ ತುಂಬುರನುಂ ಬೆಗಡುಗೊಂಡು ಬೆಬ್ಬಳೆಯೋ [ಶಾಶಾಂ. ಳಿಯಾ, ಳೆಯಾ, ಳೆವೋ]ಗಿ ನಡುಕದ ಮೞೆ ಕಱೆದು . . . ಕೌತುಕರಸದೊಳಮಗಾಹಮಿರ್ದು (ಸಂಬರ. ೦೬-೪೩); ಗುರುಪಯೋಧರಿಯನೆಳೆವೇಡತಿಯನೊರ್ವಳಂ ಕಂಡೊರ್ವ ಶಬರನತನುವಿ ನೆಸುಗೆಗೆ ಧರಿಸಿರ್ದ ಬಿಲ್ಲಂಬುಗಳ ಬಸುಟು ಹೆಪ್ಪಳಿಸಿ ಕರತಳವನೊಡ್ಡಿ ಬೆಬ್ಬಳೆ ಯೋದನಾ ವನದೊಳೆ (ಸೌಂದಪು. ೦೬-೩೦). **ಬೆಬ್ಬಳೆವೋಗು :** ಹೂಡಿ ದಂಬಿನ ತೋಳ ತೆಗಹಿನ ಬಾಡಿದುತ್ಸಾಹದ ವಿತಾಳದ ಬೀಡಿಕೆಯ ಬೇಳುವೆಗೆ ಬೆಬ್ಬಳೆವೋದನಾ ಪಾರ್ಥ (ಕುವ್ಯಾಕ. ೦೪-೦೦); ಗೃಹದೊಳಿರ್ದಕ್ಷಯನಿಧಿ ತಕ್ಷಣದೊಳಡಂಗೆ ಕಂಡು ಬೆಬ್ಬ [ಶಾಶಾಂ. ಬ್ಬ]ಳೆವೋಗಿ ತಳಮಳಗಗೊಂಡು ಕಳವಳಿಪ ನಿಜಪತಿಯಂ ನೋಡಿ ದುಗ್ಗಾಂಬೆಯಿಂತೆಂದಳ್ (ವೃಷಬ. ೦೩-೩೩ ವ). **ಬೆಳ್ಪಳೆವೋಗು :** ಆಗಮಿಸುತ್ತಿರಲೆಲ್ಲರ್ ಬೇಗದೆ ನಡೆತಂದು ಪೆಳರ್ದು ಬೆಳ್ಪಳೆವೋಗುತೆ ಸಾಗಿ ವರಮೂಲಲಿಂಗದ ಸೋಗಿನ ದೇಗುಲ ಮನೆಯ್ದಿಜಿಗಿ . . . ಬೇಡಿಕೊಳಲೊಡಂ (ಪಾಲಾಕ್ಷ. ೦-೦೪-೦೬). [ಬೆಳ್ಪಳ + ಪೋಗು$_1$ (< ಪೋ$_1$)]

**ಬೆಳ್ಪಳಿಸು**. ಬೆಪ್ಪಳಿಸು. ಬೆಬ್ಬಳಿಸು (ಕ್ರಿ). ೧. ಹೆದರು ; ಭಯಪಡು: ಬೆರ್ಚಿ ಬೆಳ್ಪಳಿಸಿ ಬಂದಂ ಫಲ್ಗುಣನಲ್ಲಿ (ಕಮುದ. ೦೦ ಕ್ರಿಯೂ); ಚಿಂತಾತುರ ನಾಗಿ ಬೆಳ್ಪಳಿಸಿ ಬೇಪಸಮಂ ತಳೆದಂ ಧನಂಜಯಂ (ಕಬಶಂ. ೪-೦೦೩). **ಬೆಪ್ಪಳಿಸು :** ೧. ಬೆಪ್ಪಳಿಸದಿರು ತಾತ ತೆಪ್ಪಗಿಹೆ ನಾ ನೋಡ (ಹಕ್ಕರ. ೩೩-೦೬೦); ತಪ್ಪತ್ತು ತಲೆಯೆತ್ತಿ ಹೊತ್ತಿಕ್ಕೆ ಜೊಂಗುಳಿಗೆ ಬೆಪ್ಪಳಿಸುವಾಸರಿಂ ಬೆಳ್ವ ಬರುತಿಪಳು (ಕಾಂಚರ. ೦೭೭-೩೭೩). **ಬೆಬ್ಬಳಿಸು :** ೧. ಅಳವಳಿಸಂ ಬೆಪ್ಪಳಿಸಂ ಕಳವಳಿಸಂ . . . ತಳವಳಿಸಂ ಬೇಸಱಿಯ್ದ ಬೆಳ್ಳಾಗದಿನಿತಂ

F—6

(ಆದಿಪು. ೫-೯೦). ೨. ದಿಕ್ಕುತೋಚದಂತಾಗು ; ತಬ್ಬಿಬ್ಬುಗೊಳ್ಳು : "ಬೆಬ್ಬಳಿಸು ವಿಮೋಹೇ (ದಿಕ್ಕುತೋರದಂತಾಗು)"(ಶಮಂಧಾ): ಮುನಿಪಾಳಕಂ ವಿಷವೇಱೆ ಸತ್ತರಸುಪುತ್ರನಂ ಏಳೀಳು ಲೋಹಿತಾಶ್ವಾಂಕ ಎನೆ ಬೆಬ್ಬಳಿಸು ತೆದ್ದನು (ಹರಿಶ್ಚ. ೧೯-೬); ಮದನನಿದೆ ಬಂದನೇಳೇಳೆಂದು ಕಣ್ಗೆಟ್ಟು ಬೆದಱೆ ಕೈಕಾಲ್ಗೆಟ್ಟು ಕಳವಳಿಸಿ ಬೆಬ್ಬಳಿಸಿ ಕುದಿದೋಡಿದರ್ ತಾಪಸರ್ (ಶಂಕ್ರ. ೩೩-೦೩). ೨. ಭ್ರಾಂತಿಗೊಳ್ಳು; ಭ್ರಮೆಯನ್ನು ಹೊಂದು: ಅರಸಿಯುರಾತ್ಮವಲ್ಲಭನ ಮೇಲೆ ತುಳುಂಕೆ ತದಂಬು ಮೇದಿನೀಶ್ವರನತ ಪಾದಪಂಕಜನ ಪೂಸಿದ ಚಂದನಪಂಕದೊಳ್ ಸವಿಸ್ತರಮೊಡಗೂಡಿ ಚೆಲ್ವುವಡೆದೊಪ್ಪುವುದದ್ಭುತವಾಗೆ ಮೌಕ್ತಿಕಾಭರಣಮಿದೆಂದು ಬೆಬ್ಬಳಿಸಿ ನೋಡುವ ನೋಟಕರುಂ ನರೇಂದ್ರರುಂ (ಧರ್ಮಾಮೃ. ೧೯-೦೬). ೪. ಆಶ್ಚರ್ಯಪಡು; ಬೆರಗಾಗು: ಸೋಜಿಗಗೊಳ್ಳು: ಸಭಾಸ್ತಾರರೆಲ್ಲರು ಮಿದೇನೆಂದು ಬೆಬ್ಬಳಿಸೆ ರಘುವೀರನಚ್ಚರಿಗೊಂಡದೇನದೇನೊಲುಬ್ಬ ತಿಳಿಪುವುದೆಂದು ಬೆಸಗೊಂಡನು (ತೊರವೆ. ೫-೦೦). ೫. ಭ್ರಾಂತಿಗೊಳಿಸು: ಮರುಳುಗೊಳಿಸು: ಮಾನವಾರಾರನು ತಿಂದು ತೇಗದು ಬಱಿಯು ಸಂದೇಹದಿಂ ಬಲ್ಲೆನೆಂದವರ ಬೆಬ್ಬಳಿಸಿ ಕಾಡುತಿಹುದು (ಮನೋಬಿ. ೧-೩೯). 'ಪೆಳ್ಪಳಿಸು' ಪರಾ. [ಬೆಳ್ಪಳ್ + — ಇಸು$_3$]

**ಬೆಳ್ಪಾಲು** (ನಾ). ಶುದ್ಧವಾದ ಹಾಲು ; ನಿರ್ಮಲವಾದ ಕ್ಷೀರ : ಇದೊ ತಂದೆ ತನಿಗಳನು, ನನ್ನ ಮಗನಯ್ಯಂಗೆ, ಪಿತೃಗಳಿಗೆ. ತನಿಯೆರ್ರೆಯೊ:_ಅಚ್ಚಹಸು ಕರೆದ ಈ ಇನಿದಾದ ಬೆಳ್‍ಪಾಲು, ಹೂಗೆಲಸಿ ಬೆಟ್ಟಜೇನಿಳಿಸಿದೀ ಬೆಂಜೇನು (ಶಾಕುಸಿ. ೨೩೫-೧೯).

[ಬೆಳ್$_1$ (<ಬಿಳಿದು) + ಪಾಲು$_1$ (<ಪಾಲ್$_1$)]

**ಬೆಳ್ಪಿಲ** (ನಾ). ಮೂರ್ಖತನದಿಂದ ಕೂಡಿದುದು; ದಡ್ಡತನವುಳ್ಳುದು: ಇದು ತಲೆಗೊಯ್ಪುದತ್ತು ಮುಡಿಯುಲ್ ನೆಱೆ ಕಲ್ಲದು ಬೇಕುಬೇಕಿದೆಂದದೆ ತನುವೆಲ್ಲಮಂ ಕಿಡಿಸಿಕೊಂಡು ಮುಡಲ್ ನೆಱೆ ಕಲ್ಲದಾಯ್ತು ಬೇಂಟದೊಳಿದು ಬೆಳ್ಪಿಲಂ ಕಿಱಿಯರಾರೊಳಲ್ಲದು ನೋಡ ಬಂದ ಕಾಲದ ಪರಿಯುಂ ಮುಗುಳ್‍ವೊಲೆಯ (ಮುಕುಲಮುಮಪಾಡುವುದಕ್ಕೆ ಗೋಪ್ಯಮಂ ?) (ಸೂಕ್ತಿಸು. ೬-೪೨೫). [ಬೆಳ್ಪು$_2$ + — ಇಲ]

**ಬೆಳ್ಪು$_1$**, ಬೆಳಪು, ಬೆಳುಪು, ಬೆಳುಹು (ನಾ). ೧. ಬಿಳುಪು ; ಬಿಳಿಯ ಬಣ್ಣ ; ಶ್ವೇತವರ್ಣ ; ಧವಳತೆ: ಹಿಮಧವಳಾತಪತ್ರಮನೆ ಪೋಲೆ ಮುಖೇಂದುವ ಬೆಳ್ಪು (ಶಂಪಾ. ೦-೧೨೦) ; ಕಳಿದುದು ಮಾಗಿ ಕೂಗಿದುದು ಕೋಗಿಲೆ ಪಲ್ಲವಿಸಿತ್ತು ಮಾಮರಂ . . . ತಂಪದೆ ನಿಂದ ನೆದಸಂ ತಳೆದುವು ಕೂಡೆ ಕೆಂಪಿನ ಪಸುರ್ಪಿನ ಕರ್ಪಿನ ಬೆಳ್ಪಿನಂದಮಂ (ಗಿರಿ. ೬-೩೯); ಕಂಪನ ಮೃಗಧರಕೆ ಬೆಳ್ಪು ಕಡೆಗಣ್ಗೆ ಕೆಂಪಡರಿದುದು (ಧರ್ಮ-೦೦-೦೦೨). ೨. ಕಾಂತಿ ; ಹೊಳಪು : ಪೊಸತಲದೊಳಿಂದು ತಾವರೆಯ ಗೆತ್ತು ಮುಖಾಬ್ಜಮನೊಂದು ತುಂಬಿ ಚುಂಬಿಸೆ ಸತಿ ಬೆರ್ಚಿ ಪೆಳ್ಪಳಿಸಿ ನೋಟ್ಟುದುಮಾಕೆಯ ಕಣ್ಣ ಬೆಳ್ಪುಗಳ್ ಪಸರಿಸೆ ತುಂಬಿಗಳ್ ಕುವಲಯಂಗಳೆರಲ್ವಿವೆ ಗೆತ್ತು ಮತ್ತೆಯುಂ ಮುಸುಱುವುದುಂ (ಶಂಕಧಾ. ೫-೬೩) ; ಪೊಳೆವಲರ್ಗಂಗಳಿಂ ಮಿಳಿರ್ಪ ಬೆಳ್ಪು ರಸಾತ್ಮಕಮಾಗಿ ಗಂಡಮಂಡಳತಳದಿಂದಮಂಬಿಚೆಯುತಿರ್ದದೆನಲ್ ನ ಯು ನಾ ಂ ಬು ಲೋಚನಂಗಳಿಕಿದಾಂಗೆ (ಗಾಪಂಚ. ೬೯೯) ; ತರಳ ವಿಶಾಲಲೋಚನದ ಬೆಳ್ಪು ಕುರುಳ್ಗಳ ಚೆಲ್ವು ಭೂಷಣೋತ್ಕರದ ಬೆಡಂಗು . . . ಕಣ್ಗೆ ಪಂದಿರೆ (ಧರ್ಮಾಮೃ. ೫-೪೯). ೩. ಶುಭ್ರವಾಗಿರುವಿಕೆ ; ನಿರ್ಮಲತೆ : ಸ್ವಚ್ಛತೆ: ಶುಭ್ರತೆ : "ಬೆಳ್ಪು-ನಿರ್ಮಳಿಕೆ" (ಶಮಂದ. ಪಂ. ೨) ; "ಬೆಳ್ಪೆಂದು ನಿರ್ಮಲಂ" (ಶಬ್ದಾಸಾ. ೩೬). ೪. ಹೊಳಪು ; ಕಾಂತಿ : 'ಬೆಳ್ಪುವಡೆ' ಪರಾ. ೫. [ಛಂದ] ಉಚ್ಚಾರಣೆಗೆ ಒಂದು ಹ್ರಸ್ವಾಕ್ಷರದಷ್ಟು ಕಾಲವನ್ನು ತೆಗೆದುಕೊಳ್ಳುವ ಅಕ್ಷರ ; ಲಘು : ಮೊದಲೊಳ್ ಛಂದದೀಯೆಡೆಯು ಲೆಕ್ಕದೆ ಕಟ್ಟುದು ವೃತ್ತಮೆಂದು ಪೇಟ್ದುದು ಬಗೆಪಂ ದೊಡಾಗಳವಱಂಕಮನರ್ಧಿಸಿ ಬೆಳ್ಪನಿಟ್ಟುಕೊಳ್ವುದು ಸಮಭಾಗಮಿಾಯು ದೊಡೆ ರೂಪಯುತಾರ್ಧದೆ ಬಿಣ್ಪನಿಟ್ಟುಕೊಳ್ವುದು ಗಡ ಸೂತ್ರಮಿಾ ತೆಱದೆ ಕಾಣ್ಬುದು ನಷ್ಟಮಂ (ಛಂದೋಂಬು. ೬-೨೬೨). 'ಬಿಣ್ಪು' ಪರಾ. **ಬೆಳಪು** : ೨. ಒಳಗುಳ್ಳೋವಣಮುಮರ್ದಿರೆ ಚಳನಂ ಪೊಱಗೆಸೆಯೆ ಬೆಳಪನೆಯ್ದುವ ಬೆಳಗಂ ಪೊಳೆವ ಸುಲಿಪಲ್ಲೆ ಮಸುಳಿಸೆ ವಿಳಾಸದಿಂ ದರ್ಭ ಶಾಸ್ತ್ರನತಳಗತನಾದಂ (ಕಾವ್ಯಾವ. ೨೯೬) ; ಕಡೆಗಣ್ಣ ಪೊಳಪು ಸುಲಿಪಲ್ಬೆಳ ಪುದಾಭರಣಗಡಣದ ಮರೀಚಿ ಮಾಣಿಕ್ಯಮಯದಿಮ್ಮಿರವ ಸೊಡರುಗಳ ದೇದೀಪ್ಯದೀಪ್ಯಾಯಮಾನದಿಂ ಶೋಭಿಸಿದವು (ನವಮೋ. ೨೦-೬). **ಬೆಳುಪು**: ೧. ಬೆಳುಪು [ಶಾಶಂ. ಬೆಳ್ಪಂ] ಬೆಳಗುಮನಾಗಸಕ್ಕೆ ನಿಜಮಲಿನತೆಯುಂ ಮಂ ಬಿಡಿಸಿ ಮತ್ತನಂಗನುಮಂ ಬೇಱೆ ಜನಕ್ಕೆ ತೋಱಿದುದು ಬೆಳ್ದಿಂಗಳ್ (ಚಂದ್ರಪ್ರ. ೬-೪೨) ; ಅಳಿಯೆಱಗದನಿಲನಲುಗದ ರವಿರಂ ಪುಗದ ಸುಳಿ ಗೊಂಡು ದಳವೇಱೆ ಹಸುರಳಿದು ಬೆಳುಪುಳಿದ ಸುರಚಿರಮೆನಿಪ್ಪ ಮಿಾಸಲ ಮೊಗ್ಗೆಯುಂ ಕೋಡು (ಬಸರ. ೩-೨೦) ; ಬೆಳುಪು ನೆಱೆಯದ ಕಿಱುವೆಸಳ ನೆಯ್ದಿಲುಗಳೀ ಮಡದಿಯ ಕುಡಿತೆಗಂಗಳಿಗೆ ಪಡಿಯಲ್ಲ (ಬಸವ. ೪-೨೫). ೨. ತತ್ ಕರಸ್ಥಳ ನಖರನೀರವದು ಪುದಿದಡರ್ದಿರೆ ಥಳಥಳಿಸಿ ಬೆಳುಪೊದಗಿ ಬೆಳ್ಳಿಯ ಬಳ್ಳಿಗಳ ಛಂದದಿ ಬೆಳೆದು ಮೇಲ್ದೆಸೆಗೆ ಪಸರಿಸಿ ಸಲೆ ಬೆಳಗುತಿರಲು (ಬಸವ. ೩೪-೫). **ಬೆಳುಹು** : ೧. ನೇಹವೆಳದಾಯಿತ್ತಾಗಿ ನೋಟ ವಿಪುಳ ವಾಯಿತ್ತು ಕಂಡೆ ಅಂಗದ ಕಳೆ ಕಂಗಳ ಮೋಹ ಎವೆಗಿವೆ ಸ್ಪಂದಿಸದು ಬೆಳುಹಿನ ಮೇಲೆ ಕೆಂಪಡರಿತ್ತು (ಸಕವ. II. ೧೯೪-೫೦೦).[ಬೆಳ್$_1$ (< ಬಿಳಿದು) + — ಪು$_2$]

**ಬೆಳ್ಪು$_2$**, ಬೆಪ್ಪು (ನಾ). ೧. ದಡ್ಡತನ; ಬುದ್ಧಿಹೀನತೆ; ಮೌಢ್ಯ; ಮಂಕುತನ : ಇನಿತೆನಗಿಂಬುಕೆಯ್ದನಿತು ಬೆಳ್ಪನಿತೊಳ್ದಿಳಿದೆನ್ನನಿನ್ನು ಮೊರ್ವನೊಳಿವಳಿಂದೊಡಂಬಡುವಳೆಲ್ಲಿಯು ಬಾಟನಗೆಂಬ ಪಂಬಲಿಂ ಮಾನದೊಳಟಲ್ದು ಚಿಂತಿಸಿ ಕಟಲ್ದು ಬಟಲ್ದು ಕನಲ್ದೊನಲ್ದು ಬೆಳ್ಪನಿಸುವ ಬೆಳ್ಪ ಬೇರನಗುಬಿಪ್ಪಾಗಸಕಿತ್ತದೆ ಸೂಳೆ ಮಾಣ್ದಮೋ (ಶಾಂತಿಪು. ೬-೯೯). 'ಬೆಳ್ಪ' ಪರಾ. **ಬೆಪ್ಪು** : ೧. ಬೆಪ್ಪಿನ ಲೆಪ್ಪ ಗೊಂಡಂತಿದ್ದ ಕಣ್ಣು, ಆ ಮುಖಮಂಡಲದ ಚೆಲುವನ್ನು ಮಾಸಲು ಗೊಳಿಸಿತ್ತು (ಶಾಕೋಟ. ೩೬೯): ಮುಖವೆಲ್ಲ ಒಣಗಿ ವಿವರ್ಣವಾಗಿ ತುಟಿಗಳು ಅದುರುತ್ತಲಿವೆ, ಕಣ್ಣುಗಳಲ್ಲಿ ಬೆಪ್ಪೂ ಅಲ್ಲ, ಭಯವೂ ಅಲ್ಲ, ಏನೋ ಒಂದು ಬಗೆಯ ನೋಟ (ಬಿಕೆ. ೦೬); ಹುಚ್ಚಲ್ಲ, ಬೆಪ್ಪಲ್ಲ, ಶಿವಲೀಲೆ (ಗಾದೆ). ೨.ಬೆಪ್ಪನಾದವನು ; ದಡ್ಡ ; ಮಂಕ : ಮೂರ್ಖತೆಯೊಳ್ಪಿರದ ಸೊಲ್ಲು ಗಳಾಡುತಿರ್ಪ ನಿಜಕೌರ್ಯಗಳ ಬಳಕೆಯುಂ ಮರೆದು ಬೆಪ್ಪೇ (ವೆಂಕಾಚಾ. ೬-೨೬-೬೦) ; ನಾನು ಅಂಥ ಬೆಪ್ಪ ಎಂದು ತಿಳಿದುಕೊಂಡಿದ್ದೀಯೇನು ! (ಮುಜಾಗ. ೬) : ಮೆಡಲ್ ಹೊಡೆಯೋ ಭೂಪನೆಂದರೆ ಸಾಮಾನ್ಯವೇನೋ ಬೆಪ್ಪೇ ? (ನಡಿವಾ. II. ೯೨೯). [ಬೆಳ್$_2$ + — ಪು$_2$]

**ಬೆಳ್ಪುಗಣ್** (ನಾ). ಬಿಳುಪಾದ ಕಣ್ಣು : ಬಿಳಿಚಿಕೊಂಡ ಕಣ್ಣು : ಕಣ್ಣಾಲೆಯೊಡಮುಮ್ಮನೊಡಲಂ ತಬ್ಬಿ ಬಿಗಿದಪ್ಪಿ ಬಾಳ್ಗೆ ಜೇನಂ ಸೂಸು ವ್ವೊಡಲಿಚಿಂ ಬೆಳ್ಪುಗಣ್ ಪೆಳ್ಪಳಿಸೆ, ಬೆರ್ಚಿ ನಿಂದನ್ ಬದರ್ಪಿಂಕೆ ಬೆಬ್ಬಳಿಸಿ (ಶ್ರೀರಾಮಪಾ. ೦೧೬-೦೬೦). [ಬೆಳ್ಪು$_1$ + ಕಣ್]

**ಬೆಳ್ಪುದೋಱು** (ಕ್ರಿ). ಬಿಳಿಯ ಬಣ್ಣವನ್ನು ಹೊಂದು ; ಬಿಳುಪೇರು : ನೆಱೆ ಹಸುರಿರಲು ಮುತ್ತಜನದು ಮುಖಂ ಬೆಳ್ಪುದೋಱಿರೆ ಬೊಲ್ಲನಕ್ಕು ಕಾಲ್ಮೊಗವೆಯ್ದೆ ಬೆಳ್ಪುದೋಱಿರೆ ಮಂಗಳಂ . . . ಸಿಲ್ಕಾದ ಕುಮುರ ಸೂಸಳನೆನಿಕ್ಕುಂ (ಮಂಗರಾ. ೯೨-೦೫). [ಬೆಳ್ಪು$_1$ + ತೋಱು]

**ಬೆಳ್ಪುವಡೆ** (ಕ್ರಿ). ಕಾಂತಿಯನ್ನು ಹೊಂದು ; ಹೊಳೆ : ಅಪ್ಪುವ ನಳಿತೋಳ್ಗಳೆಲ್ಲೆ . . . ಬೆಳ್ಪುವಡೆವ ಸೆಳ್ಳುಗುರ್ಗಳ ತೋಱಿಂದು ನೆಟ್ಟ ನೋಲ್ ಬೆದರಿ ನೋಡಿದಳು (ಮೋಹತ. ೬-೦೪). [ಬೆಳ್ಪು$_1$ + ಪಡೆ$_1$]

**ಬೆಳ್ಪುವೇಱು** (ಕ್ರಿ). ಬಿಳುಪನ್ನು ಹೊಂದು ; ಬಿಳಿಯ ಬಣ್ಣಕ್ಕೆ ತಿರುಗು : ತೊಂಗಲ್ಗೊಂಡಿರ್ದ ಕೆಂಪಾದಸುಗೆಯ ತಳಿರು . . . ಸೊಂಪಿನಿಂ ಬೆಳ್ಪುವೆತ್ತಿರ್ದಿಂಗೋಲಂ ಪಣ್ತ ದಾಳಿಂಬಗಳನೊಲವಿನಿಂ ತೋಂಟಿಗಂ ಕೊಟ್ಟು ಸೊರ್ವಂ (ಕಬ್ಬಿಗ. ೬೬). [ಬೆಳ್ಪು$_{1}$ + ಪೆಱು$_{1}$]

**ಬೆಳ್ಪಿಸೆ** (ಕ್ರಿ). ಬಿಳಿಯ ಬಣ್ಣದಿಂದ ಶೋಭಿಸು,—ಪ್ರಕಾಶಿಸು : ಪಸುರಿಸೆದುದು ಪದ್ಮಿನಿ ಬೆಳ್ಪಿಸೆದುದು ಕುಮುದಿನಿ ನಿಶಾಮುಖಂ ನಸುಗರ್ಪಂದೆಸೆದುದು ಪಡುವಣದೆಸೆ ಕೆಂಪೆಸೆದುದು ದಿವಸಾವಸಾನಮಪ್ಪುದು ಮಾಗಳ್ (ಕಾದಂಬ. ೦೩೬) ; ನೆಲನಂ ಘಟ್ಟಿಸೆ ಶಬ್ದಮುಬ್ಬರಿಪ್ಪೊಡಂ ಮೇಘ ಮಿಂಚುವೆತ್ತಿರ್ಪೊಡಂ ಶಿಲೆಗಳ್ ಬೆಳ್ಪಿಸದಿರ್ಪೊಡಂ . . . ನಿಶ್ಚಯಂ ಜಲಮಾತ್ಯಂ ಪುರುಷದ್ವಯಪ್ರಮಿತದೊಳ್ (ಲೋಕೋಪ. ೩-೦೩).

[ಬೆಳ್ಪು$_{1}$ + ಎಸ್$_{2}$]

**ಬೆಳ್ಪೇರು** 'ಬೆಳ್ಪೇಱು' ನೋ.

**ಬೆಳ್ಪೇಱು, ಬೆಳ್ಪೇರು** (ಕ್ರಿ). ೧. ಬಿಳಿಯ ಬಣ್ಣಕ್ಕೆ ಬರು : ತುಱುಗಿದಲರಿಂ ಬೆಳ್ಪೇಱಿದ ಬಕುಳಂಗಳೊಳಂ ಬಿನವಕ್ಕೆ ಪಕ್ಕಾದ ಬನಮಂ ನೋಡಲ್ಕೇಟ್ಟು ದೇಟಿಂದೆಂಬುದುಂ (ಕಬ್ಬಿಗ. ೬೯). ೨. ಬಿಳಿಚಿಕೊಳ್ಳು; ಮ್ಲಾನವಾಗು: ಬಸಿಱ ತೆಳ್ಪಟಿದತ್ತೆ ಮೊಗಂ ಬೆಳ್ಪೇಱಿದುದೇ . . . ಚೋದ್ಯಮಿದೆಂದು ಮಗುಟ್ದು ಬಣ್ಣಿಸಿದರಿಂದ್ರನ ಕಾಂತೆಯರಂತರ್ವತ್ನಿಯನಾ ನೃಪಪತ್ನಿಯಂ (ಆದಿಪು. ೬-೩೦); ಗಣಕರು ಲೆಕ್ಕಿಸಲಾಱದೆ ಬೆಱಗಾಗೆ ಪರಸಮಯಿಗಳ ಮೊಗಂ ಬೆಳ್ಪೇಱಿ ಬಿಜ್ಜಳನ ಮೊಗಂ ಲಜ್ಜೆಯೇಱಿ ಶರಣರ ಮೊಗಂಗಳು ಹರುಷವೇಱಿ (ಬಸವ. ೮-೦೨೬). **ಬೆಳ್ಪೇರು :** ೧. ಅಳಿಗಳಂ ಪಾರುತಿವೆ ಪವಳ ಬೆಳ್ಪೇರುತಿವೆ (ಪಂಪಾಶ. ೩-೬-೬೧); ಸಣ್ಣದೊಂದು ನಕ್ಷತ್ರದ ಸಮೀಪದಲ್ಲಿ ಪ್ರಕಾಶವುಳ್ಳುದಾಗಿ ಬೆಳ್ಪೇರಿ ಮಂಕಾಗಿರುವ ಬಾಲವೊಂದು ಗೋಚರವಾಗುತ್ತದೆ (ಜ್ಯೋತಿರ್. ೩೦).

[ಬೆಳ್ಪು$_{1}$ + ಏಱು$_{1}$ (< ಏಱ್$_{1}$)]

**ಬೆಳ್ಪೊಡೆ** (ನಾ). (ವಿಭೂತಿಯನ್ನು ಧರಿಸಿರುವುದರಿಂದ) ಬಿಳಿದಾದ ದೇಹ : ದಿಟ್ಟನೊಂದಾನೊಂದು ದಿನದೊಳು ಮುಟ್ಟಬರೆ ಯಾದವರ ಮನೆಗಳವಟ್ಟ ಭಸಿತ[ತ]ದ ಬೆಳ್ಪೊಡೆಯ ಕೆಂಜಡೆಯ ಸುಳಿಪಲ್ಲ (ಕಾವೇಪು. ೫೬-೬). [ಬೆಳ್$_{1}$ (< ಬಿಳಿದು) + ಪೊಡ್$_{3}$]

**ಬೆಳ್ಪೊಱಸು** (ನಾ). ೧. (ಅನಿಷ್ಟಕಾರಕವೆಂದು ನಂಬಲಾದ) ಒಂದು ಬಗೆಯ ಪಕ್ಷಿ ; ಬಿಳಿಯ ಪಾರಿವಾಳ : ನರೆಯ ಪೊಜಂಗಸುಮಾಸುಂ ನೆರೆದಿರ್ದೊಡೆ ನೆರೆದು ಬಿಸದದಿಂ ನೋಟ್ಪವರಿನ್ನರಗಿಳಿಯುಂ ಬೆಳ್ಪೊಱಸುಂ ನೆರೆದುದವಸನಱಸಿಕೊಳ್ವರೆಪ್ಯೋಳಮೋಘಂ (ಸೂಕ್ತಿಸು. ೮-೯೦೮). ೨. (ಆಲಂ) ಅನಿಷ್ಟಕಾರಕ ವ್ಯಕ್ತಿ : ಎನಿತಾನುಮಂದದಿಂ ಜೂದನಿಕ್ಕಿಯುಂ ದ್ರುಪದಸುತೆಯನೆಟಿದುಯ್ಯೆಯುಮಿಂತಿನಿತೊಂದಾದುದು ದುಶ್ಶಾಸನನಿಂದಂ ಶಕುನಿಯೆಂಬ ಬೆಳ್ಪೊಱ[ಪಾಠಾಂ.ಬೆಳ್ಪರ]ನಿಂದಂ (ಪಂಪಭಾ. ೭-೨೦); ಮುಱುಕಿಸುವ ಧರ್ಮಮೊಂದೊಡೆ ಗುಱುಗುಱಿಸುವ ಗಂಡನಿದಿರೊಳೆದ್ದಾಡುವ ಬೆಳ್ಪೊಱಸುಗಳಂ ಕಿಸುಗುಳಿಯುರಲ್ಪಱಿವೊಡೆ ಪೋಲಿಪ್ಪುದೆ ಧರ್ಮರತ್ನಾಕರಮುಂ (ಧರ್ಮಾಮೃ. ೦೦-೭೮). [ಬೆಳ್$_{1}$ (< ಬಿಳಿದು) + ಪೊಱಸು]

**ಬೆಳ್ಬಳಿ** 'ಬೆಳ್ಬಳ' ನೋ.

**ಬೆಳ್ಬಳೆವೋಗು** 'ಬೆಳ್ಬಳಂಬೋಗು' ನೋ.

**ಬೆಳ್ಮಂಜು** (ನಾ). ಬಿಳಿದಾಗಿರುವ ಮಂಜು ; ಶುಭ್ರವಾದ ಹಿಮ : ಅಱಲ ಪಱಿಯುಟ್ಟಿರುಳ್ ಪೊಗಸಿಂಗೆ ಮುಸುಕಿಟ್ಟಿದು ಬರ್ಕೆಂದು, ಬೆಳಗಿನೊಳ್ ಬೆಳ್ಮಂಜ ಕಿದಱುತೆ ನೇಸಱಿಟ್ಟಿರ್ಕೆಂದು, ಪಾರ್ದು ಪಂಬಲಿಸುವಯ್ ನೀನ್ (ಬಿರ್ಕ್ಸ. ೨-೨೮). [ಬೆಳ್$_{1}$ (< ಬಿಳಿದು) + ಮಂಜು$_{1}$]

**ಬೆಳ್ಮಡಿ** (ನಾ). ಶುಭ್ರವಾದ ಬಟ್ಟೆ, ವಸ್ತ್ರ, ಸೀರೆ ಮುಂತಾದುವು : ಕೆಂಪಿನ ಪಸದನಮಂ ಕಳೆದು ಪಲ್ಲಂ ಸುಲಿದು ತಲೆನೀರ್ ಮಿಂದು . . . ಬೆಳ್ಮಡಿಯನುಟ್ಟು ಬಳಪದೋಲೆಯನಿಟ್ಟು ಶ್ವೇತಮಾಲೆಯನೆಟಲೆ ಬಿಟ್ಟು ಕೈಗೈಯೆ (ಲೀಲಾವ. ೭-೫೬ ಪ). [ಬೆಳ್$_{1}$ (< ಬಿಳಿದು) + ಮಡಿ$_{2}$]

**ಬೆಳ್ಮಣ್**, ಬೆಳುಮಣ್ಣು (ನಾ). ೧. ಬಿಳಿಯ ಮಣ್ಣು : ಬೆಳ್ಮಣ್ಬರಸಿದ ಮಹೀಪ್ರದೇಶಂ ನಿರಂತರಂ ಪಾಂಡುಭೂಮಿ (ಶಬ್ದಮಣಿ. ೨೬-೯). **ಬೆಳುಮಣ್ಣು :** ೨. ಗೋಪೀಚಂದನ : ಸಣ್ಣದಂಡಿನ ಜೀರ್ಣಕಂತೆಯ ಥಣ್ಣಗಿಹ ದೇಹದ ನೊಸಲ ಬೆಳುಮಣ್ಣ ಮಟ್ಟಿಯ ತಕ್ಕ ಮಂಡಲ ಕೋರ ಜಪಮಣಿಯ . . . ಮುನಿ ರಂಜಿಸಿದ (ವಿಭಾಗ. ೦೦-೨೯-೨೩).

[ಬೆಳ್$_{1}$ (< ಬಿಳಿದು) + ಮಣ್]

**ಬೆಳ್ಮಣೆ** (ನಾ). ಒಂದು ಸ್ಥಳದ ಹೆಸರು : ಕುಸ್ಥಗೆಸೆವೆ ಕಲಿಯುಮ್ಮ ಬೆಳ್ಮಣೆಯ ಪದುಮಣ್ಣನ್ ಕರ್ಬುರಸೋಮ . . . ಇನ್ನೀ ಎನೆಬರು ಶ್ರೀಕರಣ ಸಹಿತ ಬಿಟ್ಟಾರ್ (ಎಕ. VIII, ಸೊರಬ. ೦೦-೦೨ ; ಸು. ೪೦೦).

[ಬೆಳ್$_{1}$ + ಮಣೆ$_{3}$]

**ಬೆಳ್ಮಸೆ** (ನಾ). ೧. ಬೆಳ್ಳಗಾಗುವಂತೆ ಉಜ್ಜಿದ ಸಾಣೆ; ಚೆನ್ನಾಗಿ ಹರಿತ ಮಾಡಿದ ಸಾಣೆ : ಬೆಳ್ಮಸೆಯಂಬಿನ ಸರಿಮೊನೆಯಂಬಿನ ಸೋಣೆ ಪಾರೆಯಂಬಿನ ತಿಂದಲ್ ಘನಮಾದುದಲ್ಲಿ (ಪಂಪಭಾ. ೦೨-೯೦); ಪೊದಟ್ದ ಬೆಳ್ಮಸೆವಿಸಿಲ್ ರಣದೇವತೆಯಟ್ಟಹಾಸದಂತೊಗೆಯೆ . . . ಪಾಯ್ದುವಂಬುಗಳ್ (ಜಗನ್ನಾ. ೬-೭೮). ೨. ನುಣುಪಾಗಿ ಹೊಳೆಯುತ್ತಿರುವ ಭಾಗ : ಕನ್ನಡಿಯಿರ್ದವೊಲ್ಪೊಳಪ ಚಕ್ರದ ಬೆಳ್ಮಸೆಯಲ್ಲಿ ನೋಡುವಳ್ತನ್ನ ಮುಖಾಬ್ಜಮಂ (ಅನಂತಪು. ೦೨-೭೬). [ಬೆಳ್$_{1}$ (< ಬಿಳಿದು) + ಮಸೆ$_{2}$]

**ಬೆಳ್ಮಳಲ್** (ನಾ). ಬಿಳಿಯ ಮರಳು; ಬೆಳ್ಳಗಿರುವ ಉಸುಕು : ನೀರ್ತಗೆಯಲ್ಕೆ ಬೆಳ್ಮಳಲ್ದೆರೆಗಳನಪ್ಪುಕೆಯ್ಕೆ ತೊಱೆ . . . ಬಂದುದತಿನಿರ್ಮಲ ನೀರದವಪ್ಪ ಶಾರದಂ (ಕಾದಂಬ. ೬೩೨); ಭೃಗುದೇವತಾಪ್ರಹಾಸಮರೀಚಿ ಪ್ರಕರಮೆನೆ ಬೆಳ್ಮಳಲ್ ಪುದಿದು ಕರಂ ಕಣ್ಗೆಸೆದುದಸದಳಂ ಶ್ರವಾಕುಟಿಯೊಳ್ (ಕುಸುಮಾ. ೭-೬೦).

[ಬೆಳ್$_{1}$ (< ಬಿಳಿದು) + ಮಳಲ್ (< ಮಣಲ್)]

**ಬೆಳ್ಮಳೆ** (ನಾ). ಬಿಳಿಯದಾದ ನೀರಿನ ಧಾರೆ : ನೇಸರಿದೊ ತಣ್ಬಿಸಿಲ ಬೆಳ್ಮಳೆಯ ಕರೆಯುತಿದೆ (ಹಕ್ಕಿಹ. ೩-೭೬).

[ಬೆಳ್$_{1}$ (< ಬಿಳಿದು) + ಮಳೆ (< ಮಟಿ)]

**ಬೆಳ್ಮಾದೆಂಗ** (ನಾ). ಒಬ್ಬಾತನ ಹೆಸರು : ಪೊಱಮ್ಯನ್ದ ಬೆಳ್ಮಾದೆಜ್ಜಂ ಶ್ರೀಕಂಚಿಪಾಯಿ ನರಸಿಗಮಙ್ಗಲದ ತೊಱುಗಳೊಳ್ಸತ್ತವ್ (ಎಕ. X, ಶ್ರೀನಿವಾಸ. ೯೨-೩; ಸು. ೭೭೦).

[ಬೆಳ್$_{1}$ + ಮಾದೆಂಗ (< ಮಾದೆಗ)]

**ಬೆಳ್ಮಾನಿಸ** (ನಾ). ಹೇಡಿ; ಅಂಜುಬುರುಕ : ಪುಲ್ವಿಡಿದಱ ಮುಣ್ಮಳಿಯನು ಮಾಳ್ಪುದಱ ಭೀಱುತೆಯುಂ ಬೆಳ್ಮಾನಿಸರಪ್ಪವರ್ಗೆ ಮಱಿಪೊಕ್ಕವರ ಕಾಯದು . . . ತುಳಿಲಾಳ್ಗದು ನೆಱಿವಳಿಗೆಯ ಲೋಕವಟಿಯ (ಶ್ರೀಪಾಂ. ೯-೬೬). [ಬೆಳ್$_{2}$ + ಮಾನಿಸ$_{1}$ (< ಮಾನುಷ)]

**ಬೆಳ್ಮಾರಲ, ಬೆಮ್ಮಾರಲು, ಬೊಮ್ಮರಲು** (ನಾ). ಒಂದು ಬಗೆಯ ಮರ ಮತ್ತು ಅದರ ಹಣ್ಣು : ಮುಳ್ ಪೊದೆಯ ಬೆಳ್ಮಾರಲಂ ಕಾಯ್ತು ತುಂಬಿ ಹಣ್ಣನಕೆ ಹಾರೈಸುತ್ತಿರ್ದುದು ಹೊಸಮಳೆ ಹರಕೆಗಾಗಿ (ಶ್ರೀರಾಮಾ. ೬೯೦-೦೦). **ಬೆಮ್ಮಾರಲು :** ದೂರದಲ್ಲಿ . . . ಬೆಮ್ಮಾರಲ ಮಟ್ಟಿಗಳೂ ಅರಮರಲ ಗಿಡಗಳೂ ಇದ್ದುವು (ಮಲೆಮ. ೦೬೦). **ಬೊಮ್ಮರಲು :** ಬೊಮ್ಮರಲು, ಬಿಳಿಸುರಿಮುಳ್ಳು, ಸಣ್ಣಗುರಕಿ (ವೃಕ್ಷಸಿ. ೭೯-೨೬೩೦). 'ಅರಮರಲು' ನೋ. [ಬೆಳ್$_{1}$ (< ಬಿಳಿದು) + ಮಾರಲ ?]

**ಬೆಳ್ಮಾಳ** (ನಾ). ಬಿಳಿಯ ಮಣ್ಣಿನ ಜಾಗ : ನೀರ್ದಾಣದೆಡೆಗಳೊಳ್ ಕಾಟಿಗಳಪ್ಪೆಡೆಗಳೊಳ್ ಬೆಳ್ಮಾಳ[ಪಾಠಾಂ. ಬೆಳುಮಾನ]ದೆಡೆಗಳೊಳ್ ಭೀತಂಗಳಾಗಿಯುಂ (ಅಭ್ಯಾಸ. ೩-೨). [ಬೆಳ್$_{1}$ (< ಬಿಳಿದು) + ಮಾಳ$_{2}$]

**ಬೆಳ್ಮಿಂಚು** (ನಾ). ೧. ಬಿಳಿಯ ಬಣ್ಣದ ಮಿಂಚು; ಥಳಥಳಿಸುವ ಮಿಂಚು : ಬಲಾಹಕಂ ತಾಳ್ದ ಬೆಳ್ಮಿಂಚಿನೊಬ್ಬುಳಿಯೊ ಪೊಸತೆನೆ ಘಟೋತ್ಕಚತನಯನು ಬಾಹುಬಲದಿಂದೆಡದ ಕಕ್ಷದೊಳಿಱುಂಕಿದ ಮಹಾಹಯಂ ಗಗನಮಾರ್ಗದೊಳ್ಪೆದುತಿರೆ (ಜೈಮಿಭಾ. ೯-೦೩); ಬಱಕ್ಕೆ ಬೆಳ್ಮಿಂಚು, ಲೋಕನಾಶಕ್ಕೆ ಕಪ್ಪೆಯ ಚಂಡಿಕೆ, ಬಿಱುಮಿಸಿಲ್ಗೆ ಕೆಮ್ಮಿಂಚು (ಕಬ್ಬಿಪ. ೨೧೮ ಪ್ರಯೋ); ಬೆಳ್ಮಿಂಚು ಮುಂಚುತಿರೆ ಸೊಡರ ಕಣ್ಮೆಳಗಿನಿಂ (ಶಾಬಂಕ. ೦೨೩-೨೬೩). ೨. ಬಿಳಿಯ ಬಣ್ಣದ ಕಾಂತಿ,—ಪ್ರಕಾಶ : ಶ್ವೇತಚ್ಛತ್ರದ ಕೆಳಗೆ ಬೆಳ್ಮಿಂಚಿನ ದುಕೂಲದ ಸಜ್ಜೆ ಕವುಳುಡೆಗಳನ್ನುಳ್ಳುದೂ ಆದ ಬೆಳ್ಳಿಯ ಭದ್ರಾಸನವನ್ನು ಬಳಸುಗಟ್ಟಿ (ಚಟ್ಕ. ೩೦-೦೩). [ ಬೆಳ್$_{1}$ (<ಬಿಳಿದು) + ಮಿಂಚು$_{2}$ ]

**ಬೆಳ್ಮಿಗ** (ನಾ). ೧. ಸಸ್ಯಾಹಾರಿಯಾದ ಸಾಧುಪ್ರಾಣಿ; ಕ್ರೂರವಲ್ಲದ ಪ್ರಾಣಿ : ಬೆಳ್ಮಿಗಂ ಪಜ್ಜೆ ದಲೆಂಬುದನೆರಡುಮಾಸಱಿವಾತನೆ ಚದುರಂ (ಶಂಕಖಾ. ೩-೯೩); ಕತ್ತಲಿಸಿರ್ದ ಪೇರಡವಿಯೊಳ್ ಸಲೆ ಕೋಟ್ಮಿಗ ಬೆಳ್ಮಿಗಂಗಳಂ ಮಿತ್ತುವಿನಂದದಿಂ ತವಿಸಿ (ದಶಕು. ೨-೧೦೯). ೨. ಒಂದು ಬಗೆಯ ಜಿಂಕೆ; ಚಿಗರೆ : "ಕೃಷ್ಣಸಾರಂ ಮಾತ್ರಮಿಯೆನೆ ಬೆಳ್ಮಿಗ" (ವಸ್ತುಕೋ. ೯೦-೬); ಎಮ್ಮ ಪಾಸಿದ ಚಿತ್ರಪಟಮೆಂಬ ಬಲೆಯೊಳ್ ನಿಮ್ಮಂತಪ್ಪ ಬೆಳ್ಮಿಗಂಗಳುಗಳೆ ತೊಡರ್ಗುಂ (ಆದಿಪು. ೩-೯೯ ವ); ಬರಮಿಯೆಂಬ ಬೆಳ್ಮಿಗಂಗಳನಳುರ್ವ ಕಾಟ್ಕಿಚ್ಚಿನಂತೆ ಕಂಕಮಾದ ಕಂಕೇಳೀಕುಜಂಗಳೊಳಂ (ಮಲ್ಲಿಪು. ೨-೩೩). 'ಕೋಟ್ಮಿಗ' ಪರಾ. [ ಬೆಳ್$_{2}$ + ಮಿಗ ]

**ಬೆಳ್ಮುಗಿಲ್**, ಬೆಳುಮುಗಿಲು, ಬೆಳ್ಮುಗಿಲು (ನಾ). ಬಿಳಿಯ ಬಣ್ಣದ ಮೋಡ : ಬೆಳ್ಮುಗಿಲಿಂದಂ ಮುಸುಕಿದ ಬಾಳಾರ್ಕಬಿಂಬಮಿರ್ಪಂತಿರ್ದಂ (ಆದಿಪು. ೬-೯೨); ಮಿಸುಗುವ ಬೆಳ್ಮುಗಿಲೊಳಗುದಯಿಸುವಿನಬಿಂಬದ ಪೊಲೆಸೆವ . . . ಬಾಲನಂ ನೃಪಾಲಂ ಕಂಡಂ (ಕುಸುಮಾ. ೬-೯೭). **ಬೆಳುಮುಗಿಲು :** ದಟ್ಟೈಸಿ ಬಳೆದ ಬೆಳುದಿಂಗಳಿಂ ಬೆಳುಮುಗಿಲ ಮೆಟ್ಟಿರ್ದ ಚಂದ್ರಕಳೆಯೆಂದೆಂಬ ಭಾವವಳವಟ್ಟ ಬಿಳಿಯುಪ್ಪರಿಗೆಯಗ್ರದೊಳು ನಿಂದೊರ್ವ ಸತಿ ಕಣ್ಗೆ ಸೊಗಯಿಸಿದಳು (ಹತಶಾ. ೪-೮). **ಬೆಳ್ಮುಗಿಲು :** ತಾಪ ವೆಗ್ಗಳಿಸಿದುದವನೀಕಾಂತಗೆ ನಾ ಪರಿಹರಿಸುವೆನೆಂದು ತಾ ಪನ್ನೀರ ಬೆಳ್ಮುಗಿಲು ತುಳುಕಿದವೊಲಾ ಪರಿ ಬೆಳ್ಸರಿಯಾಯ್ತು (ವರ್ಧಶ. ೩-೦೦); ತೊಳಪ ಬೆಳ್ಮುಗಿಲ ಮೊಗ್ಗರದಂತೆ . . . ತೇಜಿಯ ಬಳವೊಪ್ಪಿದುವು (ಕಂಶವ. ೨-೫೫); ಕೆಳಗಿನ ಪ್ರದೇಶ ಮೊಸರಿನ ಸಮುದ್ರದಂತೆ ಬೆಳ್ಮುಗಿಲುಗಳಿಂದ ಸಂಪೂರ್ಣ ತುಂಬಿಕೊಂಡಿತ್ತು (ಅಬೂಬ. ೦೨೮). [ಬೆಳ್$_{1}$ (<ಬಿಳಿದು) + ಮುಗಿಲ್ ]

**ಬೆಳ್ಮುಗಿಲು**, 'ಬೆಳ್ಮುಗಿಲ್' ನೋ.

**ಬೆಳ್ಮುಗುಳ್** (ನಾ). ಬಿಳಿಯ ಬಣ್ಣದ ಮೊಗ್ಗು; ಬಿಳಿಮೊಗ್ಗು : ಮದನಂ ಬೆಳ್ಮುಗುಳೆಂಬನಿಂದಿಸೆ ಜಗಿಲ್ತಿರ್ದಂಬುಗಳ್ ಚಿತ್ತದೊಳ್ ಮೊದೆಯಂ ಬೈತಪೊಲಾಗೆ (ಕಾವ್ಯಸಾ. ೩೮೮ ಪೂರ್ವ್ಯ); ನಗೆಯ ಬೆಳ್ಮುಗುಳೊಂದು ತೊಂಡೆವಣ್ಣುಟಿಗಳಿನಿಯೊತ್ತಿನಿಂದರಳುತಿರೆ (ಶತ್ರಾಂಗ. ೩೩-೯೯೨). [ ಬೆಳ್$_{1}$ (<ಬಿಳಿದು) + ಮುಗುಳ್$_{2}$ ]

**ಬೆಳ್ಮುನಿಸು** (ನಾ). ಹುಸಿಮುನಿಸು; ಸುಳ್ಳು ಕೋಪ : ಬೆಳುಕ್ಕೆ ಬೆಳ್ಮುನಿಸು ಕೈತವಮಂ ಕನಸಿನೊಳ್ ನೆನೆಯದೆ (ಪಿ.ಜಾ. ೬೮). [ ಬೆಳ್$_{2}$ + ಮುನಿಸು$_{2}$ ]

**ಬೆಳ್ಮೃಗ** (ನಾ). = ಬೆಳ್ಮಿಗ ೧ : "ಬೆಳ್ಮೃಗಮುಂ ಮೃಗಾಪೈ" (ವಾಹಾರ. ೯೨); ಬೆಳ್ಮೃಗರಾಜಿಯುಂ ಪ್ರಚುರಪಕ್ಕಣಸಂತತಿಯುಂ ನಿರಂತರಂ ಬಾಳ್ಮೊದಲಾಗಿ ಗಾದ್ರತೆಗೆ ತೋರ್ಪುದು ರಮ್ಯಕಮೆಂಬ ಕಾನನಂ (ಕೃಷ್ಣಸ್ತ್ರ. ೭-೬೯). [ ಬೆಳ್$_{2}$ + ಮೃಗ ]

**ಬೆಳ್ಮೊಗ** (ನಾ). ಬಿಳಿಚಿಕೊಂಡ ಮುಖ; ವಿವರ್ಣವಾದ ಮುಖ : ಪದಂಗಳೊಳೊಗದಾ ಪುಳಕಚಯಂಗಳ್ ಕಳೆದುವು ಮುಳಿಸಂ ನಲ್ಲಳ್ಗೆ ಬೆಳ್ಮೊಗಂಗೆಯ್ದುರೆಯುಂ (ಕಬಂ. ೩-೦೦೮) ; ಅತಿಬೆಳ್ಮೊಗದಿಂದವಿಮಾವ ಮಮ್ಮಲ ಮಱುಗುತ್ತುಮಿಾವ ಕಡುಲೋಭಿಕ ದಾನಗುಣಂಗಳಂ ಪಟುಜಲೆ ದಪುದಾರ್ತರ್ ಕೂರ್ತರ್ ಪಿರಿದೀವ ಗುಣಂ ಗುಣದಂಕಕಾರ್ತಿಯಾ (ಅಜಿತ. ೦೨-೦೭); ದೀರ್ಘನಿಶ್ವಾಸವನ್ನು ಬಿಟ್ಟು ಬೆಳ್ಮೊಗವನ್ನೆತ್ತಿ ಸುತ್ತ ನೋಡಿ ಹಠಾತ್ತಾಗಿ ಬಾಗಿ (ಸಂಗಸಂ. ೮-೫). [ ಬೆಳ್$_{1}$ ( < ಬಿಳಿದು ) + ಮೊಗ ]

**ಬೆಳ್ಮೋರೆ** (ನಾ). =ಬೆಳ್ಮೊಗ : ಬೆಳ್ವರಲ ಪಲ್ಗಳಿಂ ಬೆಳ್ಮೋರೆಯಿಂದಂ . . . ಬೆಳ್ಳಿ ಬೀರ್ದಳು ಬೆಳ್ಳಿಹೂಮರವದೊಂದು (ಶಾಬಂಕ. ೦೨೫-೨೬೫). [ ಬೆಳ್$_{1}$ ( < ಬಿಳಿದು ) + ಮೋರೆ ( < ಮೋಱ$^{3}$ ) ]

**ಬೆಳ್ವಕ್ಕ** (ನಾ). (ಅಮಾವಾಸ್ಯೆಯ ಅನಂತರ) ದಿನದಿನಕ್ಕೆ ಬೆಳಕು ಹೆಚ್ಚಾಗುವ ದಿನಗಳು ಮತ್ತು ಆ ದಿವಸಗಳ ಕಾಲ; ಶುಕ್ಲಪಕ್ಷ ; ▶ ಇದು 'ಶುಕ್ಲಪಕ್ಷ' ಎಂಬ ಶಬ್ದದ ಕನ್ನಡೀಕರಣ : "ಬೆಳ್ವಕ್ಕಮೆಂದು ಶುಕ್ಲಪಕ್ಷಂ" (ಕಶಾ. ೫೭-೨೯೮); ಬೆಳ್ವಕ್ಕದೊಳ್ ತೊಳಗಿ ಬೆಳಗುವ ಸುಧಾಸೂತಿ (ಚಿಬಪು. ೩೯-೫); ಮಕ್ಕಳು ಬೆಳ್ವಕ್ಕದ ಎಳವೆರೆಯನೋಪಾದಿಯಲ್ಲಿ ಬೆಳೆಯುತ್ತಾ ತಾಯ್ತಂದೆಯರ ಮನಸ್ಸಿಗೆ ಸಂತೋಷವನ್ನುಂಟು ಮಾಡಿದರು (ಮುಡಿಸ. ೬೦). [ಬೆಳ್$_{1}$ ( < ಬಿಳಿದು ) + ಪಕ್ಕ]

**ಬೆಳ್ವಕ್ಕಿ**, ಬೆಳ್ಳಕ್ಕಿ (ನಾ). ೧. ಬಿಳಿಯ ಬಣ್ಣದ ಒಂದು ಬಗೆಯ ಜಲಚರ ಪಕ್ಷಿ; ಬಲಾಕ ಪಕ್ಷಿ: ಬಗೆಯೊಳ್ ಬೆಳ್ವಕ್ಕಿ [ಪಾಠಾಂ. ಬೆಳ್ಳಕ್ಕಿ]ಯ ಪಿಂಡಿಂಗ ವಂದಿರಂ ಸರಿಗಂಡಂ (ಶಂಖಾವಾ. ೯-೩೮) ; ತರದೆ ಪಾಱದುವು ಬೆಳ್ವಕ್ಕಿ ನೂಲ್ದೆಗೆದಂತೆ ನೆರೆದ ಕಾಮನ ಬಿಲ್ಗೆ ಬಿಳಿಯದಿರು ಬಿಗಿದಂತೆ (ಅಸಂಪು. ೯-೦೭ ರಗಳೆ); ಬೆಳ್ವಕ್ಕಿಯ ಬಿಗುರ್ಪಿಂ ನೀರೊಳೊಳಗೊಳಗೆ ಮೈಗರೆವ ಮಿಾಂಗಳಿಂ . . . ಕಾಲ್ಪರಿವ ತೆರೆಯಿನೊಂದು ಕೊಳಂ ಪಗಲ್ವಣ್ಣ ಕೈಪಿಡಿಯೆಂಬಂತಿರೆ ಸೊಗಯಿಸಿವತ್ತು (ರಾಮಾಶ್ವ. ೫೨-೨೯). **ಬೆಳ್ಳಕ್ಕಿ :** ೧. "ಬಲಾಕಾ, ಬಿಸಕಂಠಿಕಾ — ಈ ೨ ಬೆಳ್ಳಕ್ಕಿ " (ಹಲಾಯು. ೯೨-೯೭); ಬಸವನಂ ಬೆಳ್ಳಕ್ಕಿಯು . . . ತುಂಬಿಯುಂ ತಿಳಿಯಲ್ ಸ್ವಪ್ನದಿ ಲೇಸು (ಸೋಮೇಶ. ೬೯) ; ಸಲೆ ಸಾಳುವನ ವೈರದಲಿ ಬೆಳ್ಳಕ್ಕಿಯ ಬಳಗ ಮಾಳ್ಪುಜ್ಜುಗವೇನು (ಕಂಶವ. ೦೨-೬೦); ಜಗನ್ಮಾತೆಯ ಆಶೀರ್ವಾದದ ಬಾನಕ್ಷತೆ ಈ ಬೆಳ್ಳಕ್ಕಿ (ಅಬಕೀ. ೯೬-೨). ೨. ಒಂದು ಬಗೆಯ ಪಕ್ಷಿ; ಬಕ : "ಬಕೋಟಃ — ಬೆಳ್ಳಕ್ಕಿ, ಬೋದನಹಕ್ಕಿ" (ಒಶಂ. ೦೦೫); ಬೆಳ್ಳಕ್ಕಿಯಂತೆ ಮಾಯಾಮಾರ್ಗನುಂ ಪುಲಿಯಂತೋಜಾಯಿಲನುಂ . . . ಆಗಿ ಕೆಲವು ದಿವಸಮಿರ್ಪುದುಂ (ರಪಶಾವ್ಯ. ೬-೬೨). ೩. (ಆಲಂ) ಆಡಂಬರದ ವ್ಯಕ್ತಿ; ಪ್ರದರ್ಶನದಲ್ಲಿ ಆಸಕ್ತಿಯಿರುವ ವ್ಯಕ್ತಿ : ನಾವು ಒಳ್ಳೇ ಆಸ್ತಿವಂತರು, ಆಸ್ತಿಗೆಲ್ಲಾ ನಾನೊಬ್ಬನೇ ಮಗ, ತಕ್ಕಮಟ್ಟಿಗೆ ವಿದ್ಯಾವಂತ. ಸರಿ ಪೇಟೆ ಪಟ್ಟಣಗಳಿಂದ ಬೆಳ್ಳಕ್ಕಿಗಳು ಬಂದಿಳಿಯಲಾರಂಭಿಸಿದುವು (ಕುವಸಂ. ೯೧). [ ಬೆಳ್$_{1}$ ( < ಬಿಳಿದು ) + ಪಕ್ಕಿ ]

**ಬೆಳ್ವಟ್ಟೆ**, ಬೆಳುವಟ್ಟೆ, ಬೆಳ್ಳುಂಬಟ್ಟೆ (ನಾ). ಬಿಳಿಯ ಬಣ್ಣದ ವಸ್ತ್ರ ; ಬಿಳಿಯ ಬಟ್ಟೆ : ಬಳ್ಳಿವೆಳಗಂ ಕಱಿವ ಬೆಳ್ವಟ್ಟೆಯ [ಪಾಠಾಂ. ಬೆಳ್ಳುಂಬಟ್ಟೆಯ] ನೀಲದ ನಿರ್ಮಲೋದಕದ . . . ಬೆರಕೆವೆಳಗು ಮಂಟಪದೊಳಗಂ ಪೊಱಗು ತೆಕ್ಕನೆ ತೀವೆ (ಗಿಂಶ. ೦೦-೨೮ ವ); ಮರಸ್ನಾನಮಂ ಮಾಡಿ ಬೆಳ್ವಟ್ಟೆಯ ಧೋತ್ರಮಂ ತೆಗೆದುಟ್ಟು (ಉದ್ಭಟ. ೩-೦೦೨ ವ) ; ಬೆಳ್ವಟ್ಟೆ ಅಂಚಿದುಪ್ಪುಳ್ವಾಸಿನ ಮೇಲೆ ಸತಿಗೂಡಿ ಪಚಾಸ್ತ್ರ ಕಾಳಿತನುತ್ಸವದಿ (ಪೋಪಶ. ೦೭-೦೮). **ಬೆಳುವಟ್ಟೆ :** ಕಟ್ಟಿದ ಬೆಳುವಟ್ಟೆಯ ಮೇಲ್ಕಟ್ಟಿನೊಳಂ . . . ಪರಿಮಳಕ್ಕೆಱಗಿ ಮುಸುಱುವ ಮಱಿದುಂಬಿಯ ಬಂಬಲಿಂ (ಶಾಬಂಧು. ೭೦); ಉಟ್ಟ ಹೊಸ ಬೆಳುವಟ್ಟೆಯೊಮ್ಮೆಱ ಮುಟ್ಟ

ವಿಸೆ ಪೊಂಬಣ್ಣವಾದುದು (ಕೂರಾ. ೩-೮-೩೦); ತಂದು ಕೊಟ್ಟರು ಬೆಳುವಟ್ಟೆಯ ಸುರಳಿಯನಂದು ರಾಯನ ಹಸ್ತದಲ್ಲಿ (ಭರತ. ೩-೬೦). **ಬೆಳ್ಳುಂಬಟ್ಟೆ :** ಬೆಳ್ನುಗಿಲನುಟ್ಟ ಬೆಳ್ಳುವೆಟ್ಟದಂತೆ ಬೆಳ್ಳುಂಬಟ್ಟೆಯನುಟ್ಟು (ಲೀಲಾವ. ೧೨-೩೬ ವ); ಮುಕ್ತಾವಳಿಗಳೆಂಬ ಬೆಳ್ಸರಿಯುಂ ಸುರಿವ ಶರದದ ಮುಗಿಲ ತೆಗಳಿಗೆಯುವೆನಿಪ ಮೇಲ್ಕಟ್ಟಿನ ಬೆಳ್ಳುಂಬಟ್ಟೆಯುಂ (ಚಂದ್ರ ಕ. ೦೨-೦೦ ವ); ಶಿತಾರಕ್ಕೆ : ಬೆಳ್ಳುಂಬಟ್ಟೆ (ಕವಾದ. ಪ. ೦೯೩ ಶ್ರಯೋ).

[ಬೆಳ್$_{1}$ (< ಬಿಳಿದು) + ಬಟ್ಟೆ$_{2}$]

**ಬೆಳ್ವಣಗೆ** (ನಾ). ಒಂದು ಊರಿನ ಹೆಸರು : ಭಟ್ಟಾರಕರಾಜ್ಯಮುತ್ತರೋತ್ತರಾಭಿವೃದ್ಧಿ ಸಲುತ್ತಿರೆ [ಬೆಳ್ವ]ಣಗೆ ಪನ್ನೆರಡು ಮ × ಳ್ಕೆಯೂಗೆಯಾಳೆ (ಸೌಇಇ. XI-i, ೨೯-೩; 912); ಬೆಳ್ವಣಗೆಯೊಳೊನ್ದು ಮಟವಿಜ್ಞ . . . ಒನ್ದು ಗದ್ಯಾಣವದಿತ್ಯಜ್ಞ ಕೊಟ್ಟ (ಸೌಇಇ. XI-i, ೩೩-೮; 933). [?]

**ಬೆಳ್ವಯಲ್** (ನಾ). (ಬಿಸಿಲಿನ ಝಳದಲ್ಲಿ) ಬೆಳ್ಳಗೆ ಕಾಣಿಸುವ ಬಯಲುಪ್ರದೇಶ : ಬಂದುದು ಬೇಸಗೆಕಾಲಂ . . . ತೊಱೆಗಳ್ ಪರಿಗೆಟ್ಟುವು ಬೆಳ್ವಯಲೊಳ್ ಸರಳಿಸಿದವು ಮರುಮರೀಚಿಕಾವಾಹಂಗಳ್ (ಶಂಬಾಪು. ೬-೯೬); ಬೆಳ್ನುಗಿಲ್, ಬೆಳ್ವಲ್, ಬೆಳ್ವಯಲ್ (ಕವಾದ. ೦೭೯ ಶ್ರಯೋ). [ಬೆಳ್$_{1}$ (< ಬಿಳಿದು) + ಬಯಲ್ (< ಪಯಲ್)]

**ಬೆಳ್ವಲ್, ಬೆಳುವಲ್ಲು** (ನಾ). ೧. ಬೆಳ್ಳಗಿರುವ ಹಲ್ಲು ; ಬಿಳಿಯ ಹಲ್ಲು : ಬೆಳ್ನುಗಿಲ್, ಬೆಳ್ವಲ್, ಬೆಳ್ವಯಲ್ (ಕವಾದ. ೦೭೯ ಶ್ರಯೋ). **ಬೆಳುವಲ್ಲು :** ೧. ಮುಂಡೆ ಹಾರುವಿತಿಯಂತೆ ಬೆಳುವಲ್ಲ ಮಾಡಿಕೊಂಡು (ಶಶಪ. ೩೩-೨೬). ೨. (ಆಲಂ) ಉಜ್ವದ ಪಲ್ಲು (?) : ಬೆಳುವಲ್ಲ ಮಲಿನದೇಹದ ಲೋಚುಗೆಯ್ದು ಬೋಳ್ದಲೆಯ . . . ಪಿಶಾಚರು ನೀಚರೆಂದೆನಿಸುವವಿಚಾರ ಜಿನಗುರುಗಳೆಲ್ಲ ನೆರೆದು ಪೊಳಲನೊಳಪುಗಬಹುದೆ (ಸೌಂದಕ. ೦೨-೬೮). 'ಕೀನಿವಲ್' ಪರಾ. [ಬೆಳ್$_{1}$ (< ಬಿಳಿದು) + ಪಲ್]

**ಬೆಳ್ವಲ** 'ಬೆಳೊಲ' ನೋ.

**ಬೆಳ್ವಲೆ, ಬೆಳುವಲೆ** (ನಾ). ಮೋಸದ ಬಲೆ : ಬೆಳಗೆಱಗುವ ಗಿಳಿಗಳ ಬೆದಱಿಸಲೆಂದು ತಳುವದೆ ನೋಳ್ಪ ಗೋಪಿಯರ ತೊಳಪ ಕಣ್ಗದಿರ ಬೆಳ್ವಲೆಗಳೆಂದವು ಮಡಿಗಿಳಿಯಲಮ್ಮದೆ ಬಾನೊಳಿಪವು (ಕುರಾಸಾಂ. ೨೩-೬). **ಬೆಳುವಲೆ :** ಆರಂತಂ ಹಾಳಾಗದು . . . ಆರಾಯತಿಗೆಡರಿಂ ನಾರಿಯ ಬೆಳುವಳಿ[ಲೆ]ಗೆ ಸಿಲುಕಿ (ಶೀತಸಾ. ೬೪೦). [ಬೆಳ್$_{2}$ + ಬಲೆ$_{1}$]

**ಬೆಳ್ವಸದನ, ಬೆಳುವಸದನ** (ನಾ). ಶುಭ್ರವಾದ ಹಾಗೂ ಕಾಂತಿಯುಕ್ತವಾದ ಬಿಳಿಯ ಬಣ್ಣದ ಉಡುಗೆ, -ತೊಡುಗೆ : ಜೀರಸಿರಿಯ ಬೆಳ್ವಸದನದ ಬೆಳಗಿನಂತೆ ದಂತಕಾಂತಿ ಪಸರಿಸೆ (ಕುಂಬಾಪು. ೦೨-೯೯ ವ); ಸೊಗಯಿಪ ಬೆಳ್ವಸದನಮುಂ ಪ್ರ್ಯಗಾಂಬವಿಶಾಲನೇತ್ರೆ ಕೈಕೊಂಡಾಗಳ್ (ಪಾರಪು. ೬-೦೦೦); ಪೊಸಮುತ್ತುದೊಡಿಗೆಗಳಿಂ ತೋರಮಲ್ಲಿಗೆಮಾಲೆಯಿಂ ಸುಕುಮಾರಿ ಬೆಳ್ವಸದನಮನಾಂತಾ ವಾರಿಜಾಸನ ಸೂಳ್ಗವಂದಳದೊಂದು ಲೀಲೆಯಲಿ (ಸಾಳ್ವಭಾ. ೨೬-೬). **ಬೆಳುವಸದನ :** ಚೆನ್ನೆಯನು ಕಾಲೋಚಿತಕೆ ತಕ್ಕನ್ನವಹ ವಸ್ತ್ರಾದಿಯಿಂ ಸುರಕನ್ನೆಯರು ಬೆಳುವಸದನಂಗೊಳಿಸಿದರ್ ಸೊಬಗಾಗಿ (ಸಾಳ್ವಭಾ. ೩೨-೪೩). [ಬೆಳ್$_{1}$ (< ಬಿಳಿದು) + ಪಸದನ]

**ಬೆಳ್ವಸದನಂಕೊಳ್** 'ಬೆಳ್ವಸದನಂಗೊಳ್' ನೋ.

**ಬೆಳ್ವಸದನಂಗೆಯ್, ಬೆಳುವಸದನಂಗೆಯ್** (ಕ್ರಿ). ಶುಭ್ರವಾದ ಹಾಗೂ ಕಾಂತಿಯುಕ್ತವಾದ ಬಿಳಿಯ ಬಣ್ಣದ ಉಡುಗೆ, ತೊಡುಗೆಗಳಿಂದ ಸಿಂಗಾರಗೊಳ್ಳು : ಬಿಸಿಲಂ ಕಳೆದು ಬೆಳುದಿಂಗಳಂ ತೊಡುವ ಗಗನಲಕ್ಷ್ಮಿಯಂತೆ ಕೆಂಪಿನ ಪಸದನಮಂ ಕಳೆದು ತಲೆನೀರ್ಮಿಂದು ಬೆಳ್ವಸದನಂಗೆಯ್ದು (ಅರ್ಹನೀ. ೨-೦೩ ವ). **ಬೆಳುವಸದನಂಗೆಯ್ :** ಅಂತಾ ಪಟ್ಟದರಸಿ ಪೊಸತಾಗಿಯತಿಶಯದಿಂ ಬೆಳುವಸದನಂಗೆಯ್ದನಂತರಂ (ಪಾರಕ. ೩-೦೦೦ ವ). [ಬೆಳ್ವಸದನ + ಕೆಯ್$_{1}$]

**ಬೆಳ್ವಸದನಂಗೊಳ್, ಬೆಳ್ವಸದನಂಕೊಳ್** (ಕ್ರಿ). ಶುಭ್ರವಾದ ಹಾಗೂ ಕಾಂತಿಯುಕ್ತವಾದ ಉಡುಗೆ, ತೊಡುಗೆಗಳಿಂದ ಸಿಂಗರಿಸಿಕೊಳ್ಳು : ತಂದೆಯ ರಾಜಮಂದಿರದೊಳಗಣ ತನ್ನ ಕನ್ನೆಮಾಡದೋವರಿಯೊಳೊಂದು ದೆವಸಂ ಬೆಳ್ವಸದನಂಗೊಂಡು ಸುಖಸುಪ್ತೆಯಾಗಿರೆ (ಜಗಪ. ೧೬-೧೦೩ ವ); ಮುತ್ತಿನಾಭರಣಂ ಚಂದನವಣ್ಪು ಕಂಪಲರ್ದ ಮಲ್ಲಿದಾಮಮೆಂಬೀ ಮನೋಹರವಸ್ತೂತ್ಕರದಿಂದೆ ಬೆಳ್ವಸದನಂಗೊಂಡೊಪ್ಪಿದಳ್ ದೇವಿ (ವರ್ಧಕ. ೦೩-೫೮). **ಬೆಳ್ವಸದನಂಕೊಳ್ :** ಮತ್ತೊಂದು ದಿವಸಂ ಋತುಮತಿಯಾಗಿ ಚತುರ್ಥಸ್ನಾನಾನಂತರಂ ಬೆಳ್ವಸದನಂಕೊಂಡು ತಲ್ಪತಲದೊಳ್ ಧನಪಾಲನೊಡನೆ ಸುಖಸುಪ್ತೆಯಾಗೆ (ಪುಣ್ಯಾಸ್ರ. ೦೨-೦೩ ವ).

[ಬೆಳ್ವಸದನ + ಕೊಳ್$_{1}$]

**ಬೆಳ್ವಳಿ** (ನಾ). ನಿರ್ಮಲವಾಗಿರುವಿಕೆ ; ಸ್ವಚ್ಛತೆ ; ಶುಭ್ರತೆ : "ಬೆಳ್ವಳಿಯೆನಲ್ಕೆ ನಿರ್ಮಲಮಕ್ಕು" (ಕಶಠ. ೮೨).

[ಬೆಳ್$_{1}$ (< ಬಿಳಿದು) + – ವಳಿ$_{3}$]

**ಬೆಳ್ವಳಿಸು** (ಕ್ರಿ). ೧. ಬೆಳ್ಳಗೆ ಹೊಳೆ ; ಸ್ವಚ್ಛವಾಗಿರು : ತೊನೆಯುತ್ತಿರೆ ತಾರಹಾರಮುಜ್ವಳಿಸೆ ಮೊಗಂ ವಿಳಾಸಮನೆ ತೋಱೆ ವಿಲೋಚನಕಾಂತಿ ನೀಳ್ದು ಬೆಳ್ವಳಿಸೆ ... ಉಯ್ಯಲಾಡಿದಳ್ (ಶಾಂತೀಶ್ವ. ೦೦-೫೬). ೨. (?) : ಸಕಳಜಳಚರಮನೊಳಕೊಣ್ಡು ಕರಂ ಬೆಳ್ವಳಿಸಿಡೆಗಳ ಮೂರ್ತ್ತಿಯಳಕೆ ಕುಳಮುಮೊಪ್ಪಲ್ ಅತಿಭುಂಭುಕಮೆನಿಸಿದ ಕೋಷ್ಟಕೋಟವಿಧದಿಂದೆಸೆಗುಂ (ಎಇ. XIII, ೩೩೦-೩೬ ; 929) ; ಎತ್ತಲುಂ ಮಿಳಿರ್ದ ಕೇತನರಾಜಿ ಕರಂ ವಿರಾಜಿಸಲ್ ಬಳಸಿದ ದೇವಾಲಯಮುಂ . . . ಬೆಳ್ವಳಿಸಿಟ್ಟ ಶಾಸ್ತ್ರದಾನಮುಮಳವಟ್ಟವೊ ಕಾಡಿಯರೂರೊಳಾರನ್ನೋಡುವಡೆ (ಎಇ. XIII, ೩೩೨-೪೦ ; 929). [ಬೆಳ್ವಳಿ + – ಇಸು$_{3}$]

**ಬೆಳ್ವಾಗಲ್** (ನಾ). ಬಿಳಿಯ ಹಾಗಲಕಾಯಿ : ಮುಂಡಲಮಾರಿ ಸುವಾರುಣಿ ಮಂಡಿತಮೆಂದೆನಿಸಿ ತೋರ್ಪ ಬೆಳ್ವಾಗಲಿವಂ ಕೊಂಡರೆದು ಪೂಸೆ ಕುಡಿಸಲ್ಕಿಂಡಲೆವುದೆ ಕೊಟಿತ ಪಾವಿನುಗ್ರೋಗ್ರವಿಷಂ (ಖಮದ. ೦೦-೬೨).

[ಬೆಳ್$_{1}$ (< ಬಿಳಿದು) + ಪಾಗಲ್$_{1}$]

**ಬೆಳ್ವಾಯ್** (ನಾ). ಬಿಳಿಚಿಕೊಂಡ ತುಟಿಯುಳ್ಳ ಬಾಯಿ ; ಬಣ್ಣಗುಂದಿದ ಬಾಯಿ : ಎತ್ತಂ ಬಿಸುಸುಯ್ವ ಬೆಂಕೆಯುರೆಪಿಂ ಪಳ್ವಿರ್ದ ಬೆಳ್ವಾಯ ದರ್ದುರಾಜಿಮೇಂ ಮಾಣ್ದುದೆ (ಲೀಲಾವ. ೨-೬೩).

[ಬೆಳ್$_{1}$ (< ಬಿಳಿದು) + ಬಾಯ್]

**ಬೆಳ್ವಾಳ** (ನಾ). ಬಿಳಿಯ ಲಾವಂಚ : ಕರಮೆಸೆದವು ಲತೆಗಳನೆಟ್ಟರದಿಂ ಪಚ್ಚೆಲೆಯ ಹೊದಕೆ ಬೆಳ್ವಾಳದ ಬೇರ್ ಸಿರಿಖಂಡದ ವಳಯಂ (ಸೂಕ್ತಿಸು. ೦೦-೬೦). [ಬೆಳ್$_{1}$ (< ಬಿಳಿದು) + ಬಾಳ$_{2}$]

**ಬೆಳ್ವಿಟ್ಟು** (ನಾ). ಬಿಳಿಯದಾದ ಧೂಳು, –ಪುಡಿ : ಪಿಟ್ಟೆಂಬ ಪೆಸರ್ ಕಳವೆಯ ಪಿಟ್ಟಿಂಗಂ ಭೂತಳಾಗ್ರದೊಳ್ಪಾವಿಸೆ ಬೆಳ್ವಿಟ್ಟಿಂಗಮಕ್ಕುಮಾದೊಡೆ ಪಿಟ್ಟನೊಳಿರ್ಪೊಂದು ರುಚಿಯುಸದು ತಳೆದಪುದೇ (ರವಾರಾಮ್ಮ. ೧-೦೮೯); ಪರದನ ಪೆರ್ಮನೆಯೊಳ್ ರಪ್ಪುರಮಂ ಬೆಳ್ವೆ[ಳ್ವಿ]ಟ್ಟಿದೆಂದು ಚೇಟಿಕೆಯರ್ ಕತ್ತುರಿಯಂ ಹರಿನೀಲ ಮನೋಹರ ಕುಟ್ಟಿಮರಜಮಿದೆಂದು ಪೊಱಗುಗುತಿರ್ಪರ್ (ಅರ್ಹನೀ. ೩-೮೮).

[ಬೆಳ್$_{1}$ (< ಬಿಳಿದು) + ಪಿಟ್ಟು]

**ಬೆಳ್ವಿತ್ತು** (ನಾ). ಬಿಳಿಯ ಬಣ್ಣದ ಬೀಜ : ಕಾವದೇವನ ಜಸವಳ್ಳಿಯ ಬೆಳ್ವಿತ್ತುಗಳ ವಿಸರವೊ ಮೇಣೆನಲೆಸೆದವು ಕರ್ಪೂರಮಸರಗಳಾ ಪುರದೊಳಗೆ (ಕುರಾಸಾಂ. ೩-೮೨). [ಬೆಳ್$_{1}$ (< ಬಿಳಿದು) + ಬಿತ್ತು$_{2}$ (< ಬಿಟ್ಟು)]

**ಬೆಳ್ವೆಟ್ಟ, ಬೆಳುವೆಟ್ಟ** (ನಾ). ಬೆಳ್ಳಿಯ ಬೆಟ್ಟ ; ರಜತಗಿರಿ ; ಕೈಲಾಸ ಪರ್ವತ : ನೀವೆನ್ನ ಬಿಟ್ಟು ಬೆಳ್ವೆಟ್ಟಕೆಯ್ದುವೆವೆಂಬ ಮಾತ ಬಿಟ್ಟೆನ್ನ ರಕ್ಷಿಸಬೇಕೆಂದು ತೆಗೆದೆತ್ತಿ ಕಟ್ಟಕ್ಕರಿಂದಪ್ಪಿಕೊಂಡ (ಭರತ. ೪೩-೫೩)

**ಬೆಳುವೆಟ್ಟು** : ಬೆಳುವೆಟ್ಟುದೊಳು ಬ್ರಾಹ್ಮಿ ಸೌಂದರಿಯರ ಪಕ್ಕದೊಳು ತೆಱಪಾಯ್ತೆಂದರೆಮಗೆ (ಶಶಿ. ೩೨-೯೦). 'ಬೆಳ್ಳಿವೆಟ್ಟ' ಪರಾ.

[ಬೆಳ್$_1$ (< ಬಿಳಿದು) + ಬೆಟ್ಟು]

**ಬೆಳ್ವೆಳಗು**, ಬೆಳುವೆಳಗು (ನಾ). ಹೊಳೆಯುವ ಬೆಳಕು; ಧವಳಕಾಂತಿ : ದೆಸೆಯೆಲ್ಲಂ ಚಂದನಾಸಾರದಿಂ ಮುಸುಕಿತ್ತೆಂಬಿನಮೊಂದು ಬೆಳ್ವೆಳಗು ಪರ್ವಿತ್ತೆಯ್ದೆ ರೋದೋಂತಮಂ (ಕಾದಂಬ. ೧೦೩) ; ತೊಳಗುವ ಮುತ್ತಿನೋಲೆಗಳ ಬೆಳ್ವೆಳಗಿಂ ಸುಲಿಪಲ್ಲ ಮಿಂಚಿನಿಂ . . . ಕಣ್ಗೊಳಿಸಿದಳಾಕೆ ಪಾಲ್ಗಡಲ ಪೆರ್ದೆರೆಯೊಳ್ ಸಿರಿ ನಿಂದಳೆಂಬಿನಂ (ಕಾವ್ಯಸಾ. ೬೯); ಪಿರಿಯ ಬೆಳಕಿದು ನನಗೆ, ಅರಮನೆಗೆ, ಕಾರಿರುಳಿನಲ್ಲಿ ಬೆಳ್ವೆಳಗು (ಹಾರಿಸ. ೦೪-೩೦೯). **ಬೆಳುವೆಳಗು** : ಹೊಳೆವ ನಿಡುನಿಗ್ಗವದ ಬೆಳುವೆಳಗು ಕಡಿಮಿಂಚುಗಳ ಬಳಗ (ಸೌಂದರ. ೩-೮೯); ಲೋಚನ ದೀಧಿತಿಯ ಬೆಳುವೆಳಗು . . . ತನುವೆಳಗೆಸೆಯೆ ದೆಳಗಿನ ದೇವಿಯೆನಿಸಿದಳು (ಶಾಳ್ವಭಾ. ೩೨-೪೯). [ಬೆಳ್$_1$ (<ಬಿಳಿದು) + ಬೆಳಗು$_2$]

**ಬೆಳ್ವೊಗರ್** (ನಾ). = ಬೆಳ್ವೆಳಗು : ಬೆಳ್ವೊಗರ್ ಕೋಮಲಾಂಗದೊಳ್ ಬಿಡದೆ ಪಸರಿಸೆ ಚಂದ್ರಕಾಂತದಿಂ ನಿರ್ಮಿಸಿದ ಪುತ್ತಳಿವೊಲವಳೆಸೆದಳು (ಕೃಷ್ಣಾ. ೧೦-೧೦). [ಬೆಳ್$_1$ (<ಬಿಳಿದು) + ಪೊಗರ್]

**ಬೆಳ್ವೊನಲ್** (ನಾ). ಬೆಳ್ಳಗೆ ಹೊಳೆಯುವ ಪ್ರವಾಹ,—ಹರಿವು : ಪಡುವಣ ಕಡಲ್ಗಾಗಿ ಪರಿವ ಬೆಳ್ದಿಂಗಳ ಬೆಳ್ವೊನಲೊಳುರ್ವಿದ ಬೊಬ್ಬುಳಿಕೆಗಳಂತೆ ತಾರಕೆಗಳ್ ತಲೆಗರೆಯೆ (ಕಾದಂಬ. ೪೨೯) ; ಸಂತತಮಾ ಸುರಾಪಗೆಯ ಬೆಳ್ವೊನಲಂ ಪದೆಪಿಂದುಗುಳ್ದು ಹೇಮಂತನಗೇಂದ್ರಮಂ ನೆನೆಯಿಸುತ್ತುಮುದಂಚಿತ ದಂತಧಾಮವೋರಂತೊಗೆಯುತ್ತಿರಲ್ (ಕುಸುಮಾ. ೦೫-೨೦); ಅನ್ನೆಗಂ ಜಾನಕಿಯ ಕಣ್ಗೆ ತೋಱಿತು . . . ಪೆಂಪೊವವಿ ಪರಿವ ಬೆಳ್ವೊನಲ್ ದಿವಿಜನದಿಯ (ಕೃಷ್ಣಾ. ೦೯-೯).

[ಬೆಳ್$_1$ (<ಬಿಳಿದು) + ಪೊನಲ್]

**ಬೆಳ್ವೊಲ**, ಬೆಳವಲ$_2$, ಬೆಳುವಲ, ಬೆಳುವಲು, ಬೆಳ್ವಲ, ಬೆಟ್ವಲ (ನಾ). ಒಂದು ನಾಡಿನ ಹೆಸರು ; P ಈಗಿನ ಧಾರವಾಡ ಜಿಲ್ಲೆಯ ಸುತ್ತಮುತ್ತಲಿನ ಪ್ರದೇಶ : ಶ್ರೀ ಬೆಳ್ವೊಲ ವಿಷಯಾಭ್ಯನ್ತರ(ರೇ) (ಇಅ. VII, ೨೨೦-೨೮ ; 658) ; ದೇವಣ್ಣಯ್ಯ[ಂ] ಬೆಳ್ವೊಲ ಮೂನೂಱುಮನಾಳುತ್ತುಮನ್ನಿಣ್ಣ (?) ಗೆಱೆಯಳ್(ಲ್)ಇರೆ (ಇಅ. XII, ೨೦೯-೦೮; 814); ಶ್ರೀಮತ್ಪೆರ್ಮ್ಮಾನಡಿಗಳ್ . . . ಬೆಳ್ವೊಲ ಮೂನೂಱುಮಂ ಕಿಸುಕಾಡೆಪ್ಪತ್ತುಮಂ [ಬಾಗಡೆ]ಬ್ಬತ್ತುಮಂ ನಿರಾಕುಳಮಾಳುತ್ತಿರೆ (ಸೌಇಇ. XI-i, ೪೦-೪ ; ೯೬೯). **ಬೆಳವಲ$_2$** : ಜೋಳದ ಬೋನಕ್ಕೆ ಬೇಳೆಯ ತೊಗೆಯಾಗಿ ಕಾಳೆಮ್ಮೆ ಕರೆದ ಹಯನಾಗಿ ಬೆಳವಲ ಮೇಳ ನೋಡೆಂದ (ಸರ್ವಜ್ಞ. ೦೬೦೭) ; ಈ ಸೀಮೆಗೆ ಕರಿನಾಡು ಎಂತಲೂ ಬೆಳವಲ ಎಂತಲೂ ಅನ್ನುವುದುಂಟು (ಕರ್ನಾಇ. ೯) . **ಬೆಳುವಲ** : ಸ್ವಸ್ತಿಶ್ರೀ ಬೆಳುವಲ × × [ನಾ]ಗಿಯುಮ್ಮ (ಸೌಇಇ-XI-i, ೧೨-೨೩ ; 868) ; ಉದಧಿವೃತೋರ್ವಿಗೆ ಮುಖಮೆನಿಸಿದ ಬೆಳುವಲನಾಡಿಗೆ ತಿಲಕದಂದದ ನಱುಗುಂದದ ವಿಪ್ರಕುಲೋತ್ತಮಸಭ್ಯುದಿತಯಶಂ ಶ್ರೀಧರಂ (ಜಾತಕ. ೦-೯); ಪಲಸಿಗೆ ಬೆಳುವಲಮೊಪ್ಪುವ ಹುದಿಗೆಱೆಯಾ ಲೊಕ್ಕಿಗುಂಡಿ ಪೆದ್ದೊರೆವರೆಗಂ ಕಲಿಗಳನೆ ತಗುಳ್ದು ವಿಕ್ರಮಬಲದಿಂ ಕೈಕೊಂಡ ವಿಷ್ಣು ಭೂಮಂಡಲಮಂ (ಎಇ. XVI, ಶಕ್ಸಾ. ೬೨೦೨ ; 1212) ; ಆಕೆ ಬೆಳುವಲ ನಾಡಿನಾಕೆ (ಕುಪರ್ವ. ೦೯೮). **ಬೆಳುವಲು** : ಆದರೂ ಚಿಕ್ಕೋಡಿಯ ತಾಲೂಕಿನೊಳಗಿನ ಪೂರ್ವದ ಅರ್ಧಭಾಗವು ಬೆಳುವಲೆಂದು ಹೇಳಬಹುದು (ಮುಂಬಯಿ. ೩-೦೯೮); ಬೈಲುಸೀಮೆ ಅಥವಾ ಬೆಳುವಲು (ಕರಾಗ. ೯). **ಬೆಳ್ವಲ** : ವಿಜಯಾದಿತ್ಯ ಶಾಸನಾತ್ ಬೆಳ್ವಲವಿಷಯೇ (ಎಇ. II, ೩-೨೦; 754); ಮಾರಸಿ[ಂ]ಗ(ಘ)ದೇವ[ಂ] . . . ಪುರಿಗೆಱೆ ಮೂನೂಱು(ಱು)ಮಂ ಬೆಳ್ವಲ ಮೂನೂಱುಮಂ ಸುಖದಿಱಿನಾಳುತ್ತಮಿರೆ (ಇಅ. XII. ೨೩೬-೦೨ ; 971) ; ಕುಂತ್ತಳದೇಸಕ್ಕಳವಟ್ಟ ಚಿನ್ನಪೂವೆನೆ ಬೆಳಗಿದುದೊಳ್ವಲಮೆನಿಪ್ಪ ಬೆಳ್ವಲದೇಶಂ (ಕಇ. I, ೨೪-೮; 1148). Δ**ಬೆಟ್ವಲ** : ಮಲೆಯೆಂಬುದೇನದಂ ಬೆಟ್ವಲಮಾಗೆ ಮುಂತುಳಿದನಲ್ಲವೆ ಲಕ್ಷ್ಮಣನೆಂಬ ರಾವಣಂ (ಎಇ. VII, ಶಿಕಾ. ೦೩೬-೨೭; 1068). [ಬೆಳ್$_1$(< ಬಿಳಿದು ) + ಪೊಲ]

**ಬೆಳ್ವೊಳೆ** (ನಾ). ಶುಭ್ರವಾದ ನೀರಿನ ನದಿ ; ಧವಳವರ್ಣದ ಹೊಳೆ : ಬೆಳ್ವೊಳೆಯ ಕಪ್ಪೊಳೆಯ ಕೆಂಪೊಳೆಯ ಕೂಡಲ ತೆಱದಿ ಬೆರಕೆವೆಳಗ ಒಳಕೊಂಡು ದಿಟ್ಟಿಗತಿವಿಸ್ಮಯವನೀವುತಿರಲು (ಸೌಂದರ್ಯ. ೬-೩೦).

[ಬೆಳ್$_1$ (< ಬಿಳಿದು) + ಪೊಳೆ$_3$ (< ಪೊಟೆ)]

**ಬೆಳ್ವೊಟಿಲ್** (ನಾ). ಒಂದು ಊರಿನ ಹೆಸರು : ಸಮಳಜ್ಜದ ಮಣ್ಣಗಾವುಣ್ಡನು ಬೆಳ್ವೊಟಿಲ ಬಿನಮ್ಮನು ಬಿತ್ತುವಟ್ಟ ಕೆಱೆಗೆ ಕೊಡಱೆಗೆಯುಮುಂಟಿಕ್ಕಿ ಸಮ್ಮಮುಮ (ಎಇ. V, ಹಸ್ಸಣ. ೨೩೦-೦೪; ಸು. 925). [ಬೆಳ್$_1$ (<ಬಿಳಿದು) + ಪೊಟಿಲ್]

**ಬೆಳ್ಸರಿ**, ಬೆಳುಸರಿ (ನಾ). ಬಿಳಿಯ ಧಾರೆಯಂತಿರುವ ಮಳೆ; ಧವಳವರ್ಣದ ವೃಷ್ಟಿ: ಸುರಿದಪುದು ಮುಗಿಲ ಮುತ್ತಿನ ಸರಿ ಗಗನದಿನೆನಿಸಿ ಪೊಳೆವುವೆಳಮಿಸಿಲೊಳ್ ಬೆಳ್ಸರಿ (ಆದಿಪು. ೦೦-೮); ಸೌಧಂಗಳ ಬೆಳ್ಪು ಪರ್ಬಿದುವು ಬೆಳ್ಪಿನ ಬೆಳ್ಸರಿಯಿಂ ಸುಧಾಂಶುವಾ (ರಾಜಶೇ. ೨-೨೦); ಸೋನೆಯ ಕೆಸರ್ಗಳಲರ್ದಲರ ಬೆಳ್ಸರಿ (ಕಮಲ. ೬೮ ಪ್ರಯೋ). **ಬೆಳುಸರಿ** : ಹಂಸಕುಳವಾ ಪ್ರೀತಿಯಾನಂದಾಶುವೆಂಬಂತೆ ಬೆಳುಸರಿಯು ಭೂತಳಕೆ ಭೋರ್ಗರೆಯೆ (ಶಾಳ್ವಭಾ. ೨೬-೨೨). [ಬೆಳ್$_1$ (<ಬಿಳಿದು) + ಸರಿ$_2$]

**ಬೆಳ್ಸುಟಿ** (ನಾ). ೧. ಬಿಳಿಯ ಸುಳಿಯೆಲೆ : ಬೆಳ್ಸುಟಿ ಪುಟ್ಟೆ ಪುಟ್ಟೆ ಕೇವಗೆಗಳ ಸೊರ್ಕ ಚೇಱಿಸೆ ಚಾದಗೆಗಂ ಚಿರಮಾಗೆ ರಾಗಮಂಚಿಗೆ . . . ತೀಡಿದುದು ತಣ್ಣನೆ ಪಣ್ಣನೆ ಪಶ್ಚಿಮಾನಿಲಂ (ಕಂದಾಹಾ. ೬-೦೩೯). ೨. ನೀರಿನ ಸುಳಿ; ಜಲಾವರ್ತ: ತೋಳ್ಗೆ ದಂತದ ಬಳೆಯಂತಿರಲ್ ಸುಳಿದು ಸುತ್ತುವ ಬೆಳ್ಸುಟಿಯೆಂಬ ಚಂದ್ರಬಿಂಬದ ಕರೆಯಂತೆ ತೋಱಿದುದು ಕುಂತಳವಾಗಳನಂತನಾಥನಾ (ಅನಂಪು. ೯-೨೩).

[ಬೆಳ್$_1$ (<ಬಿಳಿದು) + ಸುಟಿ$_2$]

**ಬೆಳ್ಸಲೆ** (ನಾ). ಬಿಳಿಯ ಕಲ್ಲು : ಎಸೆದಿರೆ ನಾಯುತ್ತಿಯ ಸಂಧಿಸಿ ಸರ್ಪನ ಗೃಹಮುಮಾಗೆ ಪಡುವಣದೆಸೆಯೊಳ್ ನಿಸದಂ ಪುರುಷತ್ರಯದೊಳೊಸಗರ್ಗಂ ಜಲಮಲ್ಲಿ ಕೂಡೆ ಬೆಳ್ಸಲೆ ನೆಗೆಗುಂ (ಲೋಕೋಪ. ೩-೨೦).

[ಬೆಳ್$_1$ (<ಬಿಳಿದು) + ಸಲೆ$_2$ (< ಸಿಲೆ$_1$)]

**ಬೆಳ್ಳ$_1$** (ನಾ). ೧. ಬಿಳಿಯ ಬಣ್ಣ ; ಧವಳವರ್ಣ : 'ಬೆಳ್ಳಂಗೆಡೆ' ಪರಾ. ೨. (ನದಿಯ) ನೆರೆ; ಪ್ರವಾಹ; ಪೂರ : ಬೆಳ್ದಿಂಗಳ ಬೆಳ್ಳದೊಳಗೆ ಬಿನದದಿ ತೇಂಕುವ ಕುಸುಮಾಯುಧನೋ (ಜಮುಕಾ. ೦೦-೬೨); ಜೋಕೆ, ಬೆಳ್ಳ ಆಳ ಇದ್ದೀತು ! ಮೀನು ಕಡಿಯುವ ಹುಚ್ಚಿನಲ್ಲಿ ಮಡುವಿನ ಆಳಕ್ಕೆ ಇಳಿಯದಿರಿ (ಪಡಿದಾ. II, ೦೦೨೩). ೩. ನೊರೆ; ಫೇನ (?) : ಉದಿರ್ದೀ ಲೋಕವಿಯತ್ತ್ರಪಾಳದಲರ್ಪೊಲ್ ನೀರೆೋಡಿ ಬಾಡಲ್ಕೆ ಬಂದುದು ನಕ್ಷತ್ರದ ಬಣ್ಣಪಟ್ಟಟಯದೊಲ್ಪಾನಂದದಿಂ ಪೀರ್ದು ತೀವಿದ ಬೆಳ್ಳಂ ತಿಳಿದಿರೆ ಸಾರ್ಚಿದ ಚಕೋರೀಚಂದ್ರಿಕಾಪಾನಪಾತ್ರದವೊಲ್ಕಾಂತಿ ಕಟ್ಟಲ್ದು ಸಾರ್ವನಪರಾಶಾದ್ರೀಂದ್ರಮಂ ಚಂದ್ರಮಂ (ಅನಂಪು. ೯-೬೧).

[ದೇ.॥ ತಮಿ. ಮಲ. ವೆಳ್ಳ; ತುಳು. ಬೊಳ್ಳ, ಬೊಳ್ಳೊ; ತೆಲು. ವೆಲ್ಲಿ, ವೆಲ್ಲಿಕ, ವೆಲ್ಲುಕ, ವೆಲ್ಲುವ]

**ಬೆಳ್ಳ$_2$** (ನಾ). ೧. ಬುದ್ಧಿಯಿಲ್ಲದವನು ; ದಡ್ಡ ; ಮೂರ್ಖ: ಸತ್ತು ಹೊತ್ತ ಕಣ್ಣಱಿಯದ ಬೆಳ್ಳನಲ್ಲೆನಳಿದೆಂ ಧವಳಾಕ್ಷಿಯ ನೋಟವಂದದಮಂ (ಕಂಕಾ. ೪-೬೬). ೨. ಏನೂ ಅರಿಯದವನು ; ನಿರಪಾಯಕರನಾದವನು; ಮುಗ್ಧ : ಹಾದಿಯ ಬೆಳ್ಳನ ಕಳ್ಳರು ತಾಗಿದಡೆ ಇನ್ನಾರಿಗೆ ಮೊರೆಗೊಡುವ (ಸರ್ವಜ್ಞ. ೨೬-೦೨೨); ಕಳ್ಳರುಂ ಕರುಣಾಕಟಾಕ್ಷದಿ ಬೆಳ್ಳರಾಗಿರೆ

ನೋಡಿ ಬಸವಂ ಸಲ್ಲಲಿತಕಾಮಿತಫಲಂಗಳನಿತ್ತವರ್ಗಳನು ನಲ್ಲ ಭಕ್ತರನಿದು ಮಾಡಿದನೆಲ್ಲರುಂ ಕೊಂಡಾಡುತಿರಲ್ (ಬಸಪು. ೯-೦೯); ಕಳ್ಳನ ಬಾಧೆಗೆ ಸಿಕ್ಕಿದ ಬೆಳ್ಳನವೊಲು ಹಲವ ಹಲುಬಿ ಹಂಬಲಿಸುತ್ತಂ (ಹಂಸಸಂ. ೫೯). ೩. ಒಬ್ಬಾತನ ಹೆಸರು: ಇದಕ್ಕೆ ಸಕ್ಕಿ ಮುಂದಿರೆ ಬೂವಯ್ಯ ಬೆಳ್ಳನ ಕರಕುಡಿಬಾರದರೆಜಿಯುಮ್ಮ ಕಿದಜಿಯು ರಯ್ಯಪ (ಎಕ. IV. ಹುಣಸೂ. ೯೨-೧೦ ; ಸು. ೪೨೧). [ಬೆಳ್$_2$ +– ಅ$_7$./ತಮಿ. ವೆಳ್ಳರ್=ಮುಗ್ಧರು; ತೆಲು. ಬೇಲ, ಬೇಲು. /ಸಂ. ಭೇಲ]

**ಬೆಳ್ಳಂಗ** (ನಾ). ಒಂದು ಮನೆತನದ ಹೆಸರು (?) : ಕಯ್ಯೋಗೆವಡೆಯು ಬೆಳ್ಳಜ್ಗರ ದಸವಮ್ಮರ್ಗಾಯಿಗ ತಾಗರತಿಯು ಮಹಾಜನಕ್ಕೆ ಸುವರ್ಣ್ಣದನ ಮುಜಿಸ್ಕೊಟ್ಟು (ಎಕ. VIII. ಸೊರಬ. ೫೬೨–೧೦; 951). 'ಬಿಳ್ಳ'ಪರಾ [?]

**ಬೆಳ್ಳಂಗೆಡೆ** (ಕ್ರಿ). ೧. ಬೆಳ್ಳಗೆ ಹರಡು: ಧವಳವರ್ಣವಾಗಿ ವ್ಯಾಪಿಸು : ಇಂಗಡಲೆ ಏಡಲ್ಗಳ್. . . ಗಂಗೆಯ ತೊಜೆಗಳಿನಲ್ ಬೆಳ್ಳಂಗೆಡೆದುವು ಕುಮುದವನದ ಸಿರಿ ಬೆಳ್ದಿಂಗಳ್ (ಪುಷ್ಪ. ೬-೯೨); ಜಗದ ಧೀವರೆಯರ್ಕಳ ಕಣ್ಣ ಬೆಳ್ಪು ಬೆಳ್ಳಂಗೆಡೆವತ್ತೊ ಪೇಟುವೆನೆ ನಿರ್ಮಲವಾದುದು ನೀರಜಾಕರಂ (ಅರ್ಜಿಸೆ. ೫–೧೦೦). ೨. ಪ್ರವಾಹವಾಗಿ ಸುರಿ,–ಬೀಳು: ಅಂತು ವೀರರಸದ ತೊಜೆಯುಂ ನೆತ್ತರ ತೊಜೆಯುಮೊಡನೊಡನೆ ಬೆಳ್ಳಂಗೆಡೆದು ಪರಿಯೆ (ಕಂಕಣ.೦೨-೦೬ ಕ); ಇಂತು ಮುಂಗಾಲ್ ತಲೆದೋಜೆ ತಿರವೆಣ್ಗೆ ಮುಗಿಲ್ಕೊಂದಿಯೊಳ್ ಬಳ್ಳಪರಿವ ಸೇಹದಿಂ ಬೆಳ್ಳಂಗೆಡೆವ ಸೊಗಡಾಲಿನೀರೆನೆ ಪೊಚ್ಚಂ ಪರ್ಚಿ ಪರಿದುದು (ರಾಮಚ. ೩-೦೯) ; ನೆಗೆದು ಬೆಳ್ಳಂಗೆಡೆವ ನೀರ ಬೀಳ ಬೆಳ್ಪು (ಹೊಂಗಳು. ೦೬-೫). [ ಬೆಳ್$_{1}$ + ಕೆಡೆ$_1$ ]

**ಬೆಳ್ಳಂಬರ** (ನಾ). ಬಿಳಿಯ ಬಟ್ಟೆ ; ಶ್ವೇತಾಂಬರ : ಸಂಪೂರ್ಣರಾಜಿತ ವದನೆ ಕ್ಷೀರಾಬ್ಧಿವೀಚಿ ಬೆಳ್ಳಂಬರದ ದಿವ್ಯಾಂಗಿ (ಪವಮೋ. ೦೯-೦೭).

[ಬೆಳ್$_1$ (<ಬಿಳಿದು) + ಅಂಬರ]

**ಬೆಳ್ಳಂಬರಿ** (ಕ್ರಿ). ಪ್ರವಾಹವಾಗಿ ಹರಿ; ಕೋಡಿ ಹರಿ: ಕಂಡೆಯ! ಈ ಕಟ್ಟುರ್ಬಿನ ಬೇಸಗೆಯ ಬೇಗೆಯೊಳಂ ಬತ್ತದೆ ತುಂಬಿ ಬೆಳ್ಳಂಬರಿವ ಬೆಂಚೆಯು (ರಾಮಾಶ್ವ. ೫೯-೩೦). [ಬೆಳ್$_2$ + ಪರಿ$_2$]

**ಬೆಳ್ಳಂಬೆಳಕು** 'ಬೆಳಗು$_2$' ಪರಾ.

**ಬೆಳ್ಳಂಬೆಳಗು** 'ಬೆಳಗು$_2$' ಪರಾ.

**ಬೆಳ್ಳಂವಾಡಿ** (ನಾ). ಒಂದು ಸ್ಥಳದ ಹೆಸರು : ಬೆಳ್ಳಂವ್ವಾಡಿಯ ಗೊಟ್ಟ ವಾಡಿಯ . . . ನಾಟ್ಯಾಗಮುಣ್ಣುಗಳ್ಗಂ ತಂಭುಲಶ್ರಾವಣಗೆಯ್ದು ಒಡಂಬಡಿಸಿ ಕೊಣ್ಣುದು (ಎಕ. III (R). ಪಂಚಪ. ೯೦೨-೯೬ ; 904).

[ಬೆಳ್? + ವಾಡಿ$_1$ (<ಪಾಡಿ$_2$)]

**ಬೆಳ್ಳಕ್ಕರಿಗ** (ನಾ). ವ್ಯವಹಾರಜ್ಞಾನವಿಲ್ಲದ ಪಂಡಿತ ; ಅಕ್ಷರಜ್ಞನಾದ ಮೂರ್ಖ: "ಕಾಲುರಿಚನೆಂದುಂ, ಬೆಳ್ಳಕ್ಕರಿಗನೆಂದುಂ ಗ್ರಾಮ್ಯಂ" (ಕಕಾ. ೬೦-೩೩೬); ಇರು ಮರುಳೆ ಶುಷ್ಕವೈಯಾಕರಣಂಗಂ ಶುಷ್ಕ ತಾರ್ಕಿಕಂಗಂ ಬೆಳ್ಳಕ್ಕರಿಗಂಗಂ ವಿಷಯಮೆ ಕಾವ್ಯರತ್ನಮಂತಿಚತುರಕವಿ ಕದಂಬಕವಿಷಯಂ (ಅದಿಪು. ೦-೨೯); ಗುಟಲೊಡೆದೋಣಾಗುವಿನಂ ಬಾಯ್ಮಾಟ್ಟಿ ರೇಕೆ ಬೆಳ್ಳಕ್ಕರಿಗರ್ (ಶಬ್ದಮ. ೦-೦೬) ; ಅಟಿಗಪ್ಪಂ ಬೆಳ್ಳಕ್ಕರಿಗರೊಳ್ ಪಟಿಗಪ್ಪಂ ಪಟ್ಟಸಾಲಿಗರೊಳ್ . . . ಪಾವರಿ ಬಸದೊಳಲ್ಲದಿಲ್ಲಂ (ರಾಮಾಶ್ವ. ೬-೨೯). [ಬೆಳ್$_2$ + ಅಕ್ಕರಿಗ]

**ಬೆಳ್ಳಕ್ಕಿ** 'ಬೆಳ್ವಕ್ಕಿ' ನೋ.

**ಬೆಳ್ಳಕ್ಕೆ** (ನಾ). ಹುಸಿ ಅಳು; ಕಳ್ಳಳು: ಮುಳಿಸು ಬೆಳ್ಳಕ್ಕೆ ವೈಸಿಮುಳಿ ಪುಜಿ ಮಾಮಾಡೆ . . . ಎಂಬಿವು ಗಣಿಕಾಳಿಗೆ ಬಳಗವೆನುತ್ತಬಲೆ ತರಳೆಗೋದಿಸುತಿರ್ದಳ್ (ಪಿರಿ. ೬-೦೨೬) ; ಮುಳಿಸು ಬೆಳ್ಳಕ್ಕೆ ಪುಸಿ ಯೊಲುಮೆ ನಸುವೇಂಟ ಲಲ್ಲೆಗಳೆಂಬಿವು ಬೆಲೆವೆಣ್ಣುಗಳಗತುಳಬಲವು (ಗುರುಚ. ೬-೩೯). [ಬೆಳ್$_2$ + ಅಕ್ಕೆ$_1$ (<ಅಟ್ಟೆ$_3$)]

**ಬೆಳ್ಳಗಸೆ** (ನಾ). ಬಿಳಿಯ ಬಣ್ಣದ ಅಗಸೆ ಮರ : ಬೆಳ್ಳಾಸೆ, ಬೆಳ್ಳಗಸೆ (ಕಬ್ಬಾ.ಪು. ೩೩೬ ಶ್ರಯೋ). [ಬೆಳ್$_1$ (< ಬಿಳಿದು)+ಅಗಸೆ$_2$]

**ಬೆಳ್ಳಗೆ** (ಅ). ಬಿಳುಪಾಗಿ; ಬೆಳ್ಳಗಾಗಿ : ಗಲ್ಲ ಬೆಳ್ಳಗೆ ಹುಡುಗಿ ಬಿಳಿಹೂವ ಮುಟ್ಟಿಸಿದೆ ನನ್ನ ತುಟಿಗೆ (ಶಿಲಾ. ೬೨-೯) ; ಮೈ ಬೆಳ್ಳಗಾದವನ ನೆರಳು ಬೆಳ್ಳಗೆಯೇ ? (ಗಾದೆ).

**ಬೆಳ್ಳಂಬೆಳ್ಳಗೆ** (ದ್ವಿರುಕ್ತಿ) : ಕೇಳಿದ ಮಾತುಗಳಿಂದ ಒಂದು ಮಾತ್ರ ತಿಳಿಯುತ್ತದೆ : ನಾವು ಎಲ್ಲ ಬೆಳ್ಳಂಬೆಳ್ಳಗೆ ಎಂದು ನಂಬಿದಲ್ಲೂ ಏನೋ ಕಪ್ಪು ಇದೆ ಎನ್ನುವುದು (ಮುಕುಂದಾ. ೦೩೯).

[ಬೆಳ್$_1$ ( < ಬಿಳಿದು ) + –ಅಗೆ$_3$]

**ಬೆಳ್ಳಚ್ಚರಿ** (ನಾ). ದಿಗ್ಭ್ರಮೆಯನ್ನು ತರುವ ಆಶ್ಚರ್ಯ : ಊರಿಯ ಊರ್ವಶಿಯೆನಲ್ಕಾ ಕಾಡುಗಿರ್ಚಿನೆಯ, ನಿಟ್ಟಿಸಿದರಾ ಚೆಲ್ವನೆಳಮಕ್ಕಳೋಲಂತೆ ಬಾಯ್ದೆರೆದ ಬೆಳ್ಳಚ್ಚರಿಗೆ ಮನಂ ಮಾರ್ಪೋದವೋಲ್ ! (ಶ್ರೀರಾಮಾ. ೦೯೭-೦೩೯). [ಬೆಳ್$_2$ + ಅಚ್ಚರಿ$_3$]

**ಬೆಳ್ಳಟ್ಟೆ** (ನಾ). ಒಂದು ಬಗೆಯ ಸಸ್ಯ : ಸಾಲಬಾಗೆ, ಬೆಳ್ಳಟ್ಟೆ, ಬಿಕುಲ್ (ವ್ಯಶಿಗ. ೯-೬೭). [ಬೆಳ್$_1$ (< ಬಿಳಿದು) + ಅಟ್ಟೆ$_7$]

**ಬೆಳ್ಳಡಕಿಲ್**, ಬೆಳೊಡಕಿಲು, ಬೆಳ್ಳಡಕಿಲು, ಬೆಳ್ಳಡಿಕಿಲು (ನಾ). ಒಂದು ಬಗೆಯ ಸಸ್ಯ : "ವೈಶಾಕಮಂದ–ಗಣಜಿಲೆ, ಮೂಕೊರತಿ, ಬೆಳ್ಳಡಕಿಲ್" (ಓಷಧಿ. ೦೫೬) ; ನಿಡುಮೆಯ್ಯಂ, ಬೆಳ್ಳಡಕಿಲ್ (ಕಬ್ಬಾ.ಪು. ೫೩ ಶ್ರಯೋ). **ಬೆಳೊಡಕಿಲು:** ಬಹುಮೂತ್ರವಾಗಿ ಇರುವಂಥವರುಗಳಿಗೆ . . . ಕೊಡುವಂಥಾ ಮೇಲೋಗರಗಳು—ಗಣಜಿಲೆಸೊಪ್ಪು, ಬೆಳೊಡಕಿಲಸೊಪ್ಪು, ಮುಳ್ಳಿಯ ಸೊಪ್ಪು, ಮಜ್ಜಿಗೆ (ಅಶ್ವಶಾ. ೦೫೬). **ಬೆಳ್ಳಡಕಿಲು :** "ಬೆಳ್ಳಡಕಿಲು ವಿಶಾಲಂ ಕಠಿಲ್ಲಕಮೆನಿಕ್ಕು" (ಮುಂಗರಾ. ೯೦-೩೦) ; ಬೆಳ್ಳಡಕಿಲ ಬೇರಂ ಅಕ್ಕಿಯನು ಕೂಡ ಕುಟ್ಟಿ ಹಿಟ್ಟು ತೊಳಸಿ ಸಪ್ಪೆ ತುಪ್ಪದಿಂದುಣಲು ಪೆನ್ನೆತ್ತರು ಪರಿಹರ (ಸಕವ್ಯ. ೮೯೬). **ಬೆಳ್ಳಡಿಕಿಲು :** "ದ್ವಿಪುನರ್ನವಾ–ಗಜಪಿಪ್ಪಲಿ, ಬೆಳ್ಳಡಿಕಿಲು" (ಓಷಧಿ. ೭೬).

[ಬೆಳ್$_1$ (<ಬಿಳಿದು) + ಅಡಕಿಲ್$_7$]

**ಬೆಳ್ಳಡಕಿಲು** 'ಬೆಳ್ಳಡಕಿಲ್' ನೋ.

**ಬೆಳ್ಳಡಿ** (ನಾ). ೧. ಬೂದಿ ಬಳಿದ ಪಾದ : ಬೆಳ್ಳಡಿಯ ಬೆಳ್ಳಡಿಗೆ ವಿಸುನಿವಾವುಗೆಯನೊಪ್ಪಿಸಿ . . . ಕಳಿಪುವುದು (ರಾಮಾಶ್ವ. ೦೩೦-೦೩). ೨. ಬೆಳ್ಳಗಿರುವ ಪಾದವನ್ನು ಹೊಂದಿದವನು ; ಶಿವ : "ಬೆಳ್ಳಡಿಯೆಂದು ಗೊರವಂ" (ಕಕಾ. ೬೯-೯೩೬) ; ಬಲ್ಲಿದನಪ್ಪನೇ ರಣಕೆ ಬಂದನೆ ಬೆಳ್ಳಡಿಯೆಂದು ಹಾಸ್ಯದಿಂ ಸೊಲ್ಲಿಸಿದಂ (ಪಿರಿ. ೦೦-೨೯). ೩. ಒಂದು ಬಗೆಯ ಪಕ್ಷಿ : ಗೊರವ. ೨, ೩ : ಸುರಪತಿಯು ಬೆಳ್ಳಡಿಯ ರಥಚರಣದ ಪಾವಕನ ಮುನಿಯ . . . ಪೆಸರ ಖಗಕುಳಂ ಕರಮೆಸೆಗುಂ (ರಾಜಶೇ. ೫-೩೦).

[ಬೆಳ್$_1$ (<ಬಿಳಿದು) + ಅಡಿ$_1$ ]

**ಬೆಳ್ಳಡಿಕಿಲು** 'ಬೆಳ್ಳಡಕಿಲ್' ನೋ.

**ಬೆಳ್ಳಡಿಯ** (ನಾ). ಬಿಳಿಯ ಬಣ್ಣದ ಪಾದವುಳ್ಳವನು ; ಬಿಳುಪಾದ ಪಾದವನ್ನು ಹೊಂದಿದವನು ; ಶಿವ : "ಬಿಜಿತಿನಿಯಣ್ಣ . . . ಸಾಂತ ಬೆಳ್ಳಡಿಯನೆನೆ ಶಿವಗೆ ಪೆಸರ್" (ಕಬ್ಬಕ. ೫). [ಬೆಳ್ಳಡಿ + –ಅ$_7$]

**ಬೆಳ್ಳನೆ** (ಗು). ಬೆಳ್ಳಗಿರುವ ; ಬಿಳುಪಾಗಿರುವ : ಅಲ್ಲದ ರಸವೆಳ್ಳೆಯ ಕಾಯಿಯ ರಸ ಬೆಳ್ಳನೀರುಳ್ಳಿಯ ರಸವು (ಶಾಳಿಸಾಂ. ೦೬) ; ನಡೆದಳಾಹವ ದೆಡೆಗೆ ಕವಚಗಿವಚಂ ಕತ್ತಿಗಿತ್ತಿಗಳನೊಂದುಮಂ ಕೈಕೊಳ್ಳದೆ ,.ಕೊರಳ ಜಪಮಣಿಮಾಲೆ ವೇಣಾಟ್ಟ ನಾರು ಬೆಳ್ಳನೆ ಸೀರೆಯಲಿ ! (ಶಾಂಗ. ೬೫-೨೩೯೦) ; ಕನ್ನೆದಿಲೆರೆಯನು ಬಂದನು ಕನ್ನೆಯ ಕನ್ನೆಯ ಬೆಳ್ಳನೆಯುವನು (ಇಂದ್ರಶ. ೦೦೦-೩೮).

[ಬೆಳ್$_1$ (< ಬಿಳಿದು) + – ಅನೆ$_2$ (< – ಅನೆಯ$_2$)]

**ಬೆಳ್ಳಬ್ಬಟೆ** (ನಾ). ಹುಸಿಯ ಆರ್ಭಟ ; ಮೃಗಗಳನ್ನು ಹೆದರಿಸುವುದಕ್ಕಾಗಿ ಉಂಟುಮಾಡುವ ಕೂಗಾಟ,—ಕಿರುಚಾಟ : ದೀಪದ ಗಿಡಗ ಹುಲಿ ಕೋಳಿಗಾಣಗಳ ಮಂತಣಗಳಿಂದೆ ಬೆಳ್ಳಬ್ಬಟೆಯನೆಸಗಿ ಮಬ್ಬಿನ ಪುತ್ತಳಿಗಳಂದದೆ (ಸಿದ್ಧೇಪು. ೯-೫); ತರದೆ ಬೆಳ್ಳಬ್ಬಟೆಯು ಗೈದು ಬಲೆಗಳನೆಲ್ಲ ಹರಹಿ . . . ಬೇಂಟೆಯಾಡುತ್ತಿರ್ದನಾ ವನದೊಳಗೆ ಮದನಮದದಲ್ಲಣಂ (ಸಿದ್ಧೇಪು. ೧೨-೯). [ಬೆಳ್$_{2}$ + ಅಬ್ಬಟೆ$_{0}$]

**ಬೆಳ್ಳಲರ್** (ನಾ). ಬಿಳಿಯ ಬಣ್ಣದ ಹೂವು ; ಬಿಳುಪಾದ ಪುಷ್ಪ : ಬೆಳ್ಳಲರವೂಲಿರ್ದಳಂದು ಗಿರಿರಾಜತನೂಭವೆ (ಉಮಾಶ. ೬೯). [ಬೆಳ್$_{1}$ (<ಬಿಳಿದು) + ಅಲರ್$_{2}$]

**ಬೆಳ್ಳವರೆ** (ನಾ). (?) : ಬೆಳ್ಳವರೆ ಕದಿರ್ವೊಱಿಂ ಮೊಗಹಿಯೆಂಬವನರ್ಚಿಸಿ ಕೂಡೆ ದೈವಮಂ ವಿರಚಿಸಿ ಪೇಟ್ವ ನಾಡ ದುಱುದುಂಬಿಯರೆಂದುದ ನೆಂದವಂದಿರೊಳ್ ನೆಱೆದೊಡಗೂಡಿ ಕಳ್ಗುಡಿವ ಡಂಬಗಿದೊತ್ತಿರನಾರು ಬಾರಿಪರ್ (ಕಾರ. ೪೬೬). [ ? ]

**ಬೆಳ್ಳವಾಸ** (ನಾ). [ಜೈನ] ಚಳಿಗಾಲದಲ್ಲಿ ಮೊಳಕಾಲುದ್ದದ ಪ್ರವಾಹದ ನೀರಿನ ನಡುವೆ ನಿಂತುಕೊಳ್ಳುವುದು ಮತ್ತು ಹಾಗೆ ನಿಂತು ಮಾಡುವ ತಪಸ್ಸು : ತನು ಪಂಜಿವೊರ್ ಬೆಳರ್ತಿರ್ಪಿನೆಗಂ ಹಿಮಮುಕ್ಕಿದರಲೆವೋಲ್ ಪುದಿದಿರೆಯುಂ ತನು ತನಗಲ್ತೆಂದೇಕಾಂತ ನಿವಾಸದೊಳಿಂತು ಬೆಳ್ಳವಾಸದೊಳಿರ್ದಂ (ಆದಿಪು. ೬-೩೩): ಯೋಗ ವಶೀಕೃತಾಂ[ಗ]ಕಂ ಬೆಳ್ಳವಾಸದೊಳ್ ಮೋಘರಥಮುನೀಂದ್ರಂ ನಿಂದಂ (ಶಾಂತಿಪು. ೯-೦೦೬): ಮಳ್ಳುರಿವೊಲೇಟ್ವ ಬಿಸಿಲ್ ಹಿಮಪುಂಜಮುಂ ಮುಸುಂಕಿವ ತೆಱನಾಗೆ ತನ್ನುನಿಗೆ ಕಲ್ನೆಲೆಯಲ್ಲಿದು ಬೆಳ್ಳವಾಸಮೆಂಬುದ ನೆಸಗಿತ್ತು ಬೇಸಗೆಯು ಬೆಟ್ಟದ ಕಲ್ನೆಲೆ ನಿಂದ ಗೌರವಂ (ಅಪಂಪು. ೪-೦೯). [ ಬೆಳ್ಳ$_{2}$ + ವಾಸ$_{2}$ ]

**ಬೆಳ್ಳಹೋಗು** (ಕ್ರಿ). ಪ್ರವಾಹದಲ್ಲಿ ಕೊಚ್ಚಿ ಹೋಗು.— ತೇಲಿ ಹೋಗು : ತ್ಯಾಂಪಣ್ಣನು ಆ ಹೊಳೆಯಲ್ಲಿ ಬೆಳ್ಳಹೋದನು (ಈಕಠ. ೫೮). [ ಬೆಳ್ಳ$_{2}$ + ಹೋಗು$_{1}$ (<ಪೋ$_{1}$) ]

**ಬೆಳ್ಳಾನೆ** (ನಾ). ಬಿಳಿಯ ಬಣ್ಣದ ಆನೆ; ಐರಾವತ : ಅಂತು ಬೆಳ್ಳಾನೆ ಬೆಳೆಗೆಯ್ಯಂ ಪೊಕ್ಕಂತಿರಾಂತ ಬಲಮಂ ಪಡಲ್ವಡಿಸೆ (ನೇಮಿಪು. ೧೪-೮೫೮); ಇಂದ್ರರನ ಬೆಳ್ಳಾನೆಯುಂ ಬಿದಿಯ ಹಂಸೆಗಳ ವೃಂದಮುಂ . . . ಸಿಂದು ಗಳೆವಮಳಧವಲಾಂಗದಿಂ ಸೊಗಯಿಸುವನಂ ದಿವ್ಯಧರ್ಮಸ್ವರೂಪನಂ ಭಜಿಸುವೆಂ (ಉದ್ಭಟ. ೧-೧೧) ; ತುಂಬು ಬೆಳ್ಳಾನೆಯ ಸುರಾಧಿಪನೆಂಬ ಮೊತ್ತಿಗೆ ತಂದು ಪೊಱಗಪನು (ಶಾಕ್ತಶಾ. ೨-೧೧).

[ಬೆಳ್$_{1}$ (<ಬಿಳಿದು) + ಆನೆ$_{1}$]

**ಬೆಳ್ಳಾಯ** (ನಾ). ಒಂದು ಬಗೆಯ ತೆರಿಗೆ,—ಸುಂಕ : ಕುಮರಿಯ ಪೆಜ್ಜುಂಕದಲು × × × ಪಡ್ಡರಾವುಳದಲು ಬಿ× × × ಜ್ಜುಂಕದ ಬೆಳ್ಳಾಯದಲು × × × ದ್ರಮ್ಮ ೧ (ಕ್ಷೇತ್ರ. XX, ೬೬-೯; 1118); ಪೆಜ್ಜುಂಕದ ಬೆಳ್ಳಾಯದಲು ದ್ರಮ್ಮ ೧ (ಬೊಂಕಶಾ. ೧೯೩೯, ೭೦೩. ೨-೮; ?).

[ ಬೆಳ್? + ಆಯ$_{7}$]

**ಬೆಳ್ಳಾರ$_{1}$**, ಬೆಳ್ಳಾಲ$_{2}$ (ನಾ). (ಪಕ್ಷಿ, ಪ್ರಾಣಿ ಮೊದಲಾದುವುಗಳನ್ನು ಹಿಡಿಯಲು ಬಳಸುವ) ಒಂದು ಬಗೆಯ ಬಲೆ,—ಜಾಲ : "ಮೃಗಜಾಲಿಕಂ ವಾಗುರಂ ಬೆಳ್ಳಾರವೆನಿಸಿಕ್ಕು" (ಮಂಗರಾ. ೦೦೨-೫) ; ಬೆಳ್ಳಾರ ಬಿಗಿ ಮೊದಱ ಹೊದ್ದಿಸುದ್ದವನೇಱು ಸನ್ನದೋಱು . . . ಎಂದೊಬ್ಬರೊಬ್ಬರ ನಾಡುವಬ್ಬರದ ಬೊಬ್ಬೆ ಹಬ್ಬಿತ್ತಡವಿಯ (ಹತಶಾ. ೫-೨೫) ; ಯಮನ ಪಳಿಕಿಪ ಜೂಬು ಯಮಮೃಗದ ಬೆಳ್ಳಾರವದುವು ಯಮ ಹರಿಣಿಗಿಕ್ಕಿದ ಬೆಟ್ಟಿದು (ಶಾಸಂತ. ೦-೪೨); ತರಳಾಪಾಂಗಮರೀಚಿಗಳ್ ಕಳಮಕೇದಾರಕ್ಕೆ ಬೆಳ್ಳಾರದೋಲಿರೆ . . . ಪಾಂಥರ್ ಬಲಪಂದು ಬೆಳ್ಳಗದವೋಲ್ ಸಾರ್ತಂದು ಬೆಳ್ಳಾಗೆ ಪಾಮರಿಯರ್ ಕಾಮನ ಬೇಂಟೆಗಾರ್ತಿಯರೆನಿಪ್ಪಾಶಂಕೆಯಂ ಮಾಡುವರ್ (ಸೂಕ್ತಿಸು. ೪-೭೬). **ಬೆಳ್ಳಾಲ$_{2}$** : ಬೆಳ್ಳಾಲಂ ಗಾಳದ ಕಟ್ಟಿಗೆ ಕೌಳೀಯಕವಿತತಿ ಸೆಂಡು ಕೋಲಸಿ ಚಕ್ರಂ ಮಾತ್ರಂ ಪಲವು ಚಂದದ ಬಲೆಗಳ್ವೆರಸು ಬೇಂಟೆಗೆ . . . ಪೊಱಮಟ್ಟು (ಪಾರ್ಶ್ವಪು. ೦೨-೬೫).

**ಬೆಳ್ಳಾರ$_{2}$** (ನಾ). ಬಿಳಿಯ (ಮುತ್ತಿನ) ಹಾರ : ಆರೆಣೆಯೆಂಬೆನಳುಂಬದ ಬೀರವಾನೀ ಜಗಮನಾವಗಂ ಸುತ್ತಿದ ಮುನ್ನೀರೆಂಬುದು ಬಿರುದಿನ ಬೆಳ್ಳಾರೆನಿಸಿದುದದಟರಾಯ ಕೋಳಾಹಳನಾ (ಯಶೋಚ. ೦-೦೫).

[ಬೆಳ್$_{1}$ ( <ಬಿಳಿದು) + ಆರ$_{2}$]

**ಬೆಳ್ಳಾರಬಲೆ** 'ಬೆಳ್ಳಾರವಲೆ' ನೋ.

**ಬೆಳ್ಳಾರವಲೆ**, ಬೆಳ್ಳಾರಬಲೆ, ಬೆಳ್ಳಾಲವಲೆ (ನಾ). = ಬೆಳ್ಳಾರ$_{1}$ : ಪ್ರಮುಖಮೃಗ ಕಾಲವುರುಱ ಬಿದ್ದುದು ಧಳ್ಳುರಿಯ ಬೆಳ್ಳಾರವಲೆಗಳಲಿ (ಕುಮಾ. ೨೦-೫೦) ; ಹೇಳು ಹೇಳೇನೆಲವೊ ತೆಗೆ ಬೆಳ್ಳಾರವಲೆಯನ್ನು ಹಂದೆಯಮೆ ನಾನಾಳುತನವೆನಗಿಲ್ಲ (ಚಿಶಾಗ. ೨-೮-೦) ; ಮುನಿಮೃಗಾವಳಿಯ ಜಂಗುಳಿಗೊಡ್ಡಿದ ಬೆಳ್ಳಾರವಲೆಯೆನೆ ಕಂಗೊಳಿಸಿತು ಸೂಳೆಗೇರಿ (ಕಂಪಾ. ೬-೯೦). **ಬೆಳ್ಳಾರಬಲೆ** : ಬೆಳ್ಳಾರಬಲೆಗಳ ಹರಹಿ ಸೊಬ್ಬಿನ ತೋಪಿನಲಿ ಸಿಲುಕಿಸಿದರಾ ಮೃಗವ (ಕುಮಾ. ೨೩-೦೦) ; ಪರಿಪರಿಪ ಕಾಳ್ಕಿಚ್ಚು ಮುಂದುಗಡೆ ಕಾಲ್ಬರಿಣೆ ಕಪ್ಪು ಬಲಗಡೆ ಬಿಟ್ಟ ಬೆಳ್ಳಾರಬಲೆ ಯೆಡಗಡೆ (ಸತ್ಯಕಾ. ೨-೪೬): ಬೆಳ್ಳಾರಬಲೆಯು ಗುದಿಯ ಸಬಳದ ಕವಲ್ಗೋಲ ಆಡಿಕಲ್ಗೂಡೆಯ ನೇಣ ಕಡಿಗತ್ತಿಯ ಬಿಲ್ಲಂಬುಗಳ ಬಲೆವ್ಬೆಱೆವೊತ್ತು . . . ಬೇಡರ್ ಕಾಡು ಮುತ್ತಿಯುಂ (ರಾಮಾಶ್ವ. ೮೩-೨೫). **ಬೆಳ್ಳಾಲವಲೆ** : ಕಾಲುಗಣ್ಣಿಯ ಹೆಬ್ಬಲೆಯ ಬೆಳ್ಳಾಲವಲೆಗಳ [ಪಾಠಾಂ. ಹೊಱೆಗಳ] . . . ಬೇಟೆಗಾಱರು ಬಳಸಿದರು ಶಿವನ (ಕುಮಾ. ೫-೩೩). [ಬೆಳ್ಳಾರ$_{1}$ + ಬಲೆ$_{1}$]

**ಬೆಳ್ಳಾರ್ಪಟ** (ನಾ). = ಬೆಳ್ಳಾರ ೧ : ಬೆಳ್ಳಾರ್ಪಟಮೆರೆಬಲೆಗಳ್ . . . ದೀಪದ ಪುಲಿ ನಿರಿತಾಸ್ತ್ರಂಗಳುಗ್ರತ್ವಮಂ ಸಂಗಡಿಸುತ್ತಿರ್ದೊಪ್ಪೆ ವಿಂಧ್ಯಾಟವಿಗೆ ನಡೆದುದುದ್ವೃತ್ತಿರಾತಪ್ರಜಾತಂ (ಗಂಕ. ೦-೬೯): ತಡಿಕೆ ಗಳ ಬಲೆ ಗಾಣ ಕೂಳಿ ಬಿಲು ಸರಳು ನಾಯ್ ಗಿಡುಗ ನೆರೆವುಡ್ಡ ಬೆಳ್ಳಾರ್ಪಟಂ ತೋಱಿತ್ತು . . . ಪ್ರಕರವೆರಸಿ ಬೇಡರು ನಡೆದರು (ಹತಶಾ. ೫-೯) ; ಹಿಡಿಯೆರಳೆ ಬೆಳ್ಳಾರ್ಪಟಂಗಳು ಸರಳಿನ ಮೂಡಿಗೆಗಳೆಯ್ದುತಾ ನೃಪನಾದಿರೊಳ್ (ನವ್ಯಾ. ೪-೨೨). [ಬೆಳ್ಳಾರ$_{1}$ + ಪಟ]

**ಬೆಳ್ಳಾಲ$_{1}$** (ನಾ). ಬಿಳಿ ಆಲದ ಮರ : ಮಾವರಳಿ ಬೆಳ್ಳಾಲ ಸಂಪಗೆ . . . ಪೊನ್ನೆಯದ ಮರನಾ ವನದೊಳಾವೆಡೆಯೊಳಾವಗ ತೀವಿಕೊಂಡಿಹುವು (ಶಿವ್ಯಾ. ೬-೨೦); ಬದರಿ ಬಂಗರಳಿ ತಂಡಸ ತಡಸು ಬೆಳ್ಳಾಲ ಚದುರ ಚಂದನಗಳಿಂದ (ಪುರಾತ. ೦-೨೬). [ಬೆಳ್$_{1}$ (<ಬಿಳಿದು) + ಆಲ$_{1}$]

**ಬೆಳ್ಳಾಲ$_{2}$** 'ಬೆಳ್ಳಾರ$_{1}$' ನೋ.

**ಬೆಳ್ಳಾಲವಲೆ** 'ಬೆಳ್ಳಾರವಲೆ' ನೋ.

**ಬೆಳ್ಳಾಲೆ** (ನಾ). ಬಿಳಿಯ ಬಣ್ಣದ ಹಾಲೆಮರ : ಕೆಲವು ಕಡೆಗಳಲ್ಲಿ ತೇಗ, ನಂದಿ . . . ಬೆಳ್ಳಾಲೆ . . . ಗಂಧಗರಗೆ ಮುಂತಾದ ಗಗನಚುಂಬಿತ ವೃಕ್ಷಗಳು (ಕಂಜಕಂ. ೨). [ಬೆಳ್$_{1}$ (<ಬಿಳಿದು) + ಆಲೆ$_{2}$ (<ಪಾಲೆ$_{3}$)]

**ಬೆಳ್ಳಾಳ್**, ಬೆಳ್ಳಾಳು (ನಾ). ೧. ತಿಳಿವಳಿಕೆಯಿಲ್ಲದವನು; ಅವಿವೇಕಿ ; ಮೂರ್ಖ : ಪೆದ್ದ : ಕೃಷ್ಣೋರಗನು ಪಿಡಿದ ಬೆಳ್ಳಾಳಂತುಮನ್ನನೆ ಬೆಮರುತ್ತುಮಿರ್ದ ದುಶ್ಯಾಸನನುಮಂ . . . ಕಂಡು (ಕಂಜಶಾ. ೬-೫ ವ); ಧರಣೀಸಾಮ್ರಾಜ್ಯಮಿರ್ದಂತೆ ಬಂದುಳಾಗಿರ್ಪ ವಿಭೂತಿಯಂ ಬಿಸುಟು ಭೈಕ್ಷ್ಯಂಗೊಂಡು ತಾನುಣ್ಬ ಬೆಳ್ಳಾಳಂ ಪೋಲನೆ ಮಂತ್ರವೈದ್ಯದಳಿಪಂ ಕೇಡಯ್ದುವಂ ಧರ್ಮಮಂ (ಧರ್ಮಾಮೃ. ೪-೪೮); ಬೆಳ್ಳಾಳೆಡೆಗೊಂಡನೊದಱು ಭಟ್ಟನೊಳೊವಜಂ (ಕಮಾ. ೮೯೦ ಶ್ರಧೋ). ೨. ಹೇಡಿ : ಅಂಜು ಬುರುಕ; ಪುಕ್ಕಲ : ಬೆಳ್ಳಾಳ್ಗೆ ಪೊಳೆಪುದೋಱುವುದೊಳ್ಳಾಳ್ಗೆ ಪೊಡರ್ಪ

ದೋರ್ಪುದು (ಕಂಕಥಾ. ೦೨-೧೨); ಒಳ್ಳಾನೆಗೋಡಲರಿಯದ ಬೆಳ್ಳಾಳ ವೊಲಗಿದು ಕಂಡು ಲಾವಣ್ಯರಸಂ ತಳ್ಳಂಕುಗುಟ್ಟೆ ಮಿಳ್ಳಿಸಿ ದಳ್ಳಿಱಿದಾಡುವ ಜನೇಂದ್ರಶಿಶುವಂ (ಶಾಂತಿಪು. ೦೦-೮); ನೀಂ ಕಳ್ಳರಂ ಕಂಡ ಬೆಳ್ಳಾಳಂತೆ ಬೆದಱಿಯೆನಗಂ ಪೇೞದೆ ಪೆಱಗಂ ನೋಡದೋಡಿ ಬಂದೆಯದೇಂ ಕಾರಣ ಮೆನೆ (ಕಂಕಕಂ. ೨೮೩-೨೩). **ಬೆಳ್ಳಾಳು** : ೨. ಕುದುರೆಯ ಚದುರೆಯ ಹದಿರೆರಡು ಒಂದಯ್ಕ ಚದುರನೇಱಿದರೆ ಕಣಿಯುವದು ಬೆಳ್ಳಾಳ ಬದಿರಿ ಹಾಕುವದು (ಸರ್ವಜ್ಞ. ೦೬೬೭). [ ಬೆಳ್₂ + ಆಳ್₃ ]

**ಬೆಳ್ಳಾಳು** 'ಬೆಳ್ಳಾಳ್' ನೋ.

**ಬೆಳ್ಳಾಟ** (ನಾ). ಒಂದು ಬ್ರಾಹ್ಮಣ ಪಂಗಡದ ಹೆಸರು : ಬೆಳ್ಳಾಟ ಕುಲ ಬ್ರಾಹ್ಮಣ್ಯಶ್ಚ (ಎಕ. XIII, ೧೯೩-೦೨; 902).

[ ದೇ.॥ ತಮಿ. ವೆಳ್ಳಾಳ, ವೆಳ್ಳಾಟ, ವೇಳಾಳ; ಮಲ. ವೆಳ್ಳಾಳ ]

**ಬೆಳ್ಳಿ** (ನಾ). ೧. ಒಂದು ಬಗೆಯ ಹೊಳೆಯುವ ಬಿಳಿಯ ಲೋಹ; ರಜತ : ''ರಜತಂ, ಕಳಧೌತಂ, ರೂಪ್ಯಂ, ತಾರಂ — ಈ ೪ ಬೆಳ್ಳಿ'' (ಕರಾಯು. ೨೮-೦೬); ಬೆಳ್ಳಿಯ ನಾಲ್ಕು ಗೋಪುರಂಗಳಿಂದೊಪ್ಪಿ ವಳಯಾಕೃತಿಯಾಗಿ ಬಳಸಿದ . . . ಮಧ್ಯಪ್ರದೇಶಮುಮಂ (ಆದಿಪು. ೦೦-೪೨ ವ); ಸಾಸಿರಮನ್ ಕವಿಲೆಯ ಕೋಡುಮನ್ ಕೊಳಗ(ಗುಮುಮ್) ಪೊನ್ನುಂ ಬೆಳ್ಳಿಯುಮಂ ಕಟ್ಟಿ ಸಾಯಿ(ಸಿ)ರ್ಬ್ಬರ್ಪ್ಪಾರ್ವರ್ಗ್ಗೆ ದಾನಂಗೊಟ್ಟ ಫಲಂ (ಕೌಇಇ. XI–i, ೪೯-೦೭ ; 951); ಪುಂಡರೀಕದೆಸಳ ಬೆಳ್ಳಿಯ ಸಿಂಪಿಂ ಪರಿಮಳದ ರಸಮನೆಱೆದು ಪರಾಗದ ತಿಲಕಮನಿಕ್ಕಿ (ಗಂಕ. ೨-೬೧ ವ). ೨. ಬೆಳ್ಳಿಯಿಂದ ಮಾಡಿದ (ಮೂರಾಣೆಯ ಬೆಲೆಯ) ನಾಣ್ಯ.—ಹಣ : ಅಲ್ಲಿ ಇಲ್ಲಿ ಗಂಡಿನ ಕಡೆಯವರೂ ಹೆಣ್ಣಿನ ಕಡೆಯವರೂ ಬೆಳ್ಳಿ (ಮೂರಾಣೆ) ಹಂಚಿದರು (ಶ್ರಾಂತಿಸು. ೦೫). ೩. ನವಗ್ರಹಗಳಲ್ಲಿ ಒಂದು ; ಶುಕ್ರ : ಉಷೆಯ ಭಾಳದಲಿ 'ಬೆಳ್ಳಿ' ಯೊಂದೆಯೆ ಮಿರುಗುವಂದದಲಿ . . . ಹಣೆಯಲ್ಲಿ ಚಂದ್ರ ಕುಂಕುಮ ಬಿಂದುವನಿಟ್ಟು (ಚಿತ್ರಾಂಗ. ೦೯-೫೦೨); ಉಷೆಯ ಹಣೆಗೆ ಬೆಳ್ಳಿ ಶುಕ್ರ ತಿಲಕವಸಿಡಲಿ (ಸೂರ್ಯಾಪಾ. ೨೪-೨೦). ೧, ೩ : ಗಗನವಂತು ಬೆಳ್ಳಿಯಿಂ ಮೆಱೆದುಂ, ಕಯ್ಯೊಲದಂತು ಕರ್ಪೂರನ್ನಿಂ ರಂಜಿಸಿಯುಂ . . . ದಿಟ್ಟಿಯ ಬಟ್ಟೆಗೈತರ್ಪ ಲೋಹಕಾರರ ಮನೆಯಿಂ (ಧಾತ್ರಾಶ್ವ. ೦೦೩-೦೦). ೪. ಬೆಳ್ಳಿಯ ಬಣ್ಣ; ಬಿಳುಪು; ಶ್ವೇತವರ್ಣ : ''ಬೆಳ್ಳಿಯುಳ್ಳಿಯುಂ ಶ್ವೇತಮೆಂಬುದು'' (ಹಲಾಯು. ೦೩೦-೫); ಮುಗಿಲ ಬೆಳ್ಳಿಯ ಪೊರೆಯ ಹೊದೆದು ಸೊಗಸು ಕನಸನು ಕಾಣುವಂದದಿ ನಗುವ ಚಂದ್ರನ ಬೆಳಕಿ ನೊಳಗೆ ಕಂಡೆ ತಪ್ಪಲಿ ಮರಿಯನು (ಗಡೀಶ. ೪೦-೦೩). ೫. ಒಂದು ಬಗೆಯ ಔಷಧೀಸಸ್ಯ: ''ನೀಲಮಲ್ಲಿಕಃ—ಬೆಳ್ಳಿ, ಬೆಲ್ಲವತ್ತ'' (೬ಕಧಿ. ೬೯).

**ಬೆಳ್ಳಿಯ ಕಟ್ಟು** = ರಜತದ ಚೌಕಟ್ಟು,—ಅಣಸು : ಚಿನ್ನದ ಹರಡೆ ಬೆಳ್ಳಿಯ ಕಟ್ಟು ಮುತ್ತುಗಳುನ್ನತ ಕಂಚ್ಚಿನಟ್ಟಿಗಳ್ ಸನ್ನಾಹದ ಬಲುಭಟರು ಕೋಟೆಯನತ್ಯುನ್ನತದಲಿ ಕಾದಿಹರು (ಳಂಸವಿ. ೦೦-೦೯೫). **ಬೆಳ್ಳಿಯ ನಾಣ್ಯ** = ಬೆಳ್ಳಿನಾಣ್ಯ : ಸಾಮಾನ್ಯವಾಗಿ ಬೆಳ್ಳಿಯ ನಾಣ್ಯ ಚಲಾವಣೆಯಲ್ಲಿ ಉಳಿದುಕೊಂಡು ಚಿನ್ನದ ನಾಣ್ಯ ಮಾಯವಾಗುವುದು (ಹಣಶ್ರ. ೨೪). **ಬೆಳ್ಳಿಯ ಬೆಟ್ಟ**=ರಜತದ ಬೆಟ್ಟ ; ಕೈಲಾಸಪರ್ವತ: ಗಗನದಿಂ ನವಲೋಹಿತವೃಷ್ಟಿಗಳ್ ಮಲುಮ್ಮನೆ ಕೂಳೆ ನಾಂದು ಕೆಂಪೆಸೆದು ತೊಟ್ಟನೆ ಬೆಳ್ಳಿಯ ಬೆಟ್ಟಮಲ್ತು ಜಾದಿನ ನಗಮೆಂಬ ಶಂಕೆಯನೆ ಮಾಡಿ ದುದಾ ವಿಜಯಾರ್ಧಪರ್ವತಂ (ಶಾಂತಿಪು. ೪-೩೩); ಪಟ್ಟಣದ ನಡುವೆ ಬೆಳ್ಳಿಯ ಬೆಟ್ಟಂಗಳನಿಳಿಪ ಜೈನನಿಳಯಂಗಳನೀ ಸೃಷ್ಟಿಯೊಳೆ ಕೂಡೆ ಮಾಡಿದ ರಟ್ಟಂ ಶಂಬಾವನೀಶನೆನ್ನೆ ಪೊಗಳದರಾರ್ (ಕಮಚ. ೦-೩೬); ಗಂಗೆ ಬಟಲ್ವಪೋಲ್ನಲಕ ಬೆಳ್ಳಿಯ ಬೆಟ್ಟದ ಬಳ್ಳಿವೆಳ್ಪು ಬೆಳ್ಳಂಗೆಡೆದೊಪ್ಪೆ (ಅರ್ಗಾನೀ. ೨-೬೦). **ಬೆಳ್ಳಿಯರ್**=ಬೆಳ್ಳಿ ಕೆಲಸ ಮಾಡುವವನು ; ಅಕ್ಕಸಾಲಿಗ : ನಗರೂರ ಬೆಳ್ಳಿಯರುಂ ಮರವೂರ ವಣ್ಣಾಕರುಂ (ವೈಚರಿ. ೦೯೨೭, ೧೦೬-೪೫ ; 726) ; ಬೆಳ್ಳಿಯರ ಕುಲತಿಲಕ ಧರ್ಮಗವುಡಂಗೆಯುಂ ಬೊಂಮ್ಮಗವುಂಡಿಗೆಯುಂ ಪುಟ್ಟಿದ ಸುಪುತ್ರ ಕುಲದ್ದೀಪಕ ಚಟಿಗವುಂಡ (ಎಕ. VI(R), ಕೃಷ್ಣರಾ. ೬೯-೦೨; 1242) . **ಬೆಳ್ಳಿಯ ಹಬ್ಬ** = ಯಾವುದಾದರೂ ಸಂಘ, ಸಂಸ್ಥೆಗಳಿಗೆ ಇಪ್ಪತ್ತೈದು ವರ್ಷ ತುಂಬಿದ ಸಂದರ್ಭಗಳಲ್ಲಿ ಆಚರಿಸುವ ಸಮಾರಂಭ ; ರಜತಮಹೋತ್ಸವ : "ಇಪ್ಪತ್ತೈದನೆಯ ವಾರ್ಷಿಕೋತ್ಸವ; ರಜತಮಹೋತ್ಸವ, ಪಂಚವಿಂಶತಿ ಪೂರ್ತಿ ; ಬೆಳ್ಳಿಯ ಹಬ್ಬ" (Silver Jubilee. ಇಂಕಾ) ; ಶಿಕ್ಷಣವೃತ್ತಿಯೊಳೀ ವರ್ಷವೆನಗಿದು ಬೆಳ್ಳಿಯ ಹಬ್ಬದ ವರ್ಷ (ತಂಜಾಶ. ೫೬-೬೦). **ಬೆಳ್ಳಿಯುತ್ತರಿಗೆ**=ಬೆಳ್ಳಿಯ ಜರಿಯ ಮೇಲುಹೊದಿಕೆ, — ಉತ್ತರೀಯ : ವರಕಮಂಡಲಮೊಪ್ಪೆ ಹಸ್ತದೊಳೋಜೆವೆತ್ತಿರೆ ಬೆಳ್ಳಿಯುತ್ತರಿಗೆ ಜನ್ನಿವರಂ ಬೆಡಂಗಳವಟ್ಟು ಬಾಲದಿನೇಶನಂತಿರೆ (ರವರ್ಾವ್ಯ. ೫-೨೦೬). **ಬೆಳ್ಳಿಯೊಸಗೆ** = ಬೆಳ್ಳಿಯ ಹಬ್ಬ : ಬೆಳ್ಳಿಬೆಟ್ಟದೊಡತಿ, ಗೌರಿ, ಬೆಳ್ಳಿಯೊಸಗೆಗೊಸಗೆ ಬೀರಿ ಕಾಯಿ ಕೃಷ್ಣನ (ಹೂಂಗಳು. ೯-೪). [ ದೇ.॥ ತಮಿ. ಮಲ. ವೆಳ್ಳಿ ; ಕೊಡ. ತುಳು. ಬೊಳ್ಳಿ ; ತೆಲು. ವೆಂಡಿ]

**ಬೆಳ್ಳಿಂದ** (ನಾ). ಒಂದು ಊರಿನ ಹೆಸರು : ಸ್ವಸ್ತಿ ಮಜ್ಜಳ ಬೆಳ್ಳಿನ್ದಗುಪ್ದನೂರೆತ್ತಱಿಪಾಬ್ದಿತಿ ಪ್ರಸಿದ್ಧಾ ಗ್ರಾಮಾಃ (ಇಕ. XII, ೦೩-೪; 813).

[?]

**ಬೆಳ್ಳಿಗೆ** (ನಾ). ಬಿಳಿಯ ಬಣ್ಣದ ಹಸು : ಬೆಳ್ಳಿಗೆಯಾಕಳವೆಂದರೆ ಬಳ್ಳವಾಲ ಕಱೆವವೇ ಮರುಳೆ (ಅವಕಂ. ೨೨೩-೦೦೦೦) ; ಬೆಳ್ಳಿಗೆಯಾವಿನ ಕಱುವೆಂದೊಡೆ ಬಳ್ಳವಾಲ ಕಱೆವುದೆ (ಬಸವ. ೩೨೭) ; ಕಾಳಿಯ ಕಡೆಗಣ್ಣಿತ್ತು ಏಡಿಯ ಸರ್ವಾಂಗವ ಸೀಳಿ ಅಚ್ಚ ಬೆಳ್ಳಿಗೆಯ ಹಾಲ ನಿಶ್ಚಯದಲ್ಲಿ ತೆಗೆದು ತೃಪ್ತಿಯಾಗಿ ಕೊಳ್ಳಬಲ್ಲಡೆ ಆತನೆ ಸದಾಶಿವಮೂರ್ತಿಲಿಂಗವು (ಸಳವ. I, ೦೫೦-೦೭೮). [ಬೆಳ್ಳಿ + — ಗೆ./ಕೊಡ. ಬೊಳ್ಳಿಗೆ = ಹಸು]

**ಬೆಳ್ಳಿಗೊಡೆ** (ನಾ). ರಜತದ ಛತ್ರಿ ; ಬೆಳ್ಳಿಯ ಕೊಡೆ : ಸಂಗಡಿಸೆ ತನ್ನೊಳರುಣ ಪಿಶಂಗ ಸಿತದ್ಯುತಿಗಳೆಂಬನುಕ್ರಮರುಚಿ ಶಕ್ರಂಗೆತ್ತಿದ ಮಾಣಿಕಗೊಡೆ ಪೊಂಗೊಡೆ ಬೆಳ್ಳಿಗೊಡೆಯೆನಿಸಿದುದು ವಿಧುಬಿಂಬಂ (ಜಗಾ. ೦೬-೦೦೬). [ಬೆಳ್ಳಿ + ಕೊಡೆ₂]

**ಬೆಳ್ಳಿನಾಣ್ಯ** (ನಾ). ಚಲಾವಣೆಗಾಗಿ ಆಡಳಿತದ ಮುದ್ರೆಯೊತ್ತಿ ತಯಾರಿಸಿದ ರಜತದ ಬಿಲ್ಲೆ ; ಬೆಳ್ಳಿಯ ಹಣ : ಹೊರದೇಶಗಳಿಂದ ಆಮದಾಗುವ ವಸ್ತುಗಳಾವುವೆಂದರೆ : ಮಾದಕ ಪಾನೀಯ . . . ಚಿನ್ನ ಮತ್ತು ಬೆಳ್ಳಿನಾಣ್ಯ (ಶ್ರವಾಇ. I, ೯೫) ; ಚಿನ್ನ ಬೆಳ್ಳಿನಾಣ್ಯವನ್ನು ಕರಗಿಸಿದರೆ ಸ್ವಲ್ಪವಾದರೂ ಲೋಹದ ಬೆಲೆಯಷ್ಟು ಮೂಲ್ಯ ದೊರೆಯುತ್ತದೆ (ಹಣಶ್ರ. ೨೭). [ಬೆಳ್ಳಿ + ನಾಣ್ಯ (<ನಾಣಯ)]

**ಬೆಳ್ಳಿಬೆಟ್ಟ** 'ಬೆಳ್ಳಿವೆಟ್ಟ' ನೋ.

**ಬೆಳ್ಳಿಮಲೆ** (ನಾ). ರಜತಗಿರಿ ; ಕೈಲಾಸಪರ್ವತ : ಗಂಗೆಯುಂ ಬೆಳ್ಳಿಮಲೆಯುಂ . . . ಹಿಂದುಗಳೆಸಮಳ ಧವಲಾಂಗದಿಂ ಸೊಗಯಿಸುವನಂ ದಿವ್ಯಧರ್ಮಸ್ವರೂಪನಂ ಭಜಿಸುವೆಂ (ಉತ್ಸರೀ. ೦-೦೦).

[ ಬೆಳ್ಳಿ + ಮಲೆ₄ ]

**ಬೆಳ್ಳಿಮಾಣೆ** (ನಾ). ಒಂದು ಸ್ಥಳದ ಹೆಸರು : ಭೀಮಗಾವುಣ್ಡರುಂ ಬೆಳ್ಳಿಮಾಣೆಯ ಶ್ರೀಯ ಗಾವುಣ್ಡರುಂ . . . ರಿಷರಾಮಗಾವುಣ್ಡನುಂ ಏನೆಬ್ಬರುಂ ಸರಸಾಕ್ಷಿಯಾಗೆ ಪಡೆದಾಮ್ (ಎಕ. VI(R), ಶ್ರೀರಂಗ. ೬೬-೦೯; ಸು. 800). [?]

**ಬೆಳ್ಳಿಯುಗ** (ನಾ). ' ಬೆಳ್ಳಿಯುಗ (ಮನುಷ್ಯನ ಇಳಿಗತಿಯಲ್ಲಿ ಚಿನ್ನ, ಬೆಳ್ಳಿ, ಹಿತ್ತಾಳೆ, ಕಬ್ಬಿಣ ಎಂಬ ನಾಲ್ಕು ಯುಗಗಳಲ್ಲಿ ಎರಡನೆಯದು)'' (The Silver age. ಇಂಕಾ). [ ಬೆಳ್ಳಿ + ಯುಗ ]

**ಬೆಳ್ಳಿಲಿ** (ನಾ). ಒಂದು ಬಗೆಯ ಇಲಿ ; ಬೆಳ್ಳಗಿರುವ ಇಲಿ ; ಬಿಳಿಯ ಇಲಿ : " ಉಂದುರುಃ – ಬೆಳ್ಳಿಲಿ " (ಒಷಧಿ. ೧೫); ಬೆಳ್ಳಿಲಿಯ ಬಿಲದೊಳ್ ನೀರ್ಪೊಕ್ಕಂತೆ (ಧರ್ಮಾಶ್ವ. ೨-೬೦); ಬಿಸಿನೀರ ಹೊಕ್ಕ ಬೆಳ್ಳಿಲಿವಿಂಡು ಬೆದರ್ವಂತೆ (ಶೇಖಸಂ. ೩೦-೦೬); ನಲ್ಲ ದೇವಸಾಲೆ ಪುಲ್ಲೆಗೊಂಬತ್ತು ಮುಖ ಬೆಳ್ಳಿಲಿಗೆ ನಾಲ್ಕು ತನಿಗೋಡು ಮೂಡಿದ್ದನಿಲ್ಲಿಯೇ ಕಂಡೆ (ಸರ್ವಜ್ಞ. ೨೦೬೯). [ಬೆಳ್$_{1}$ (<ಬಿಳಿದು) + ಇಲಿ$_{1}$./ತಮಿ. ವೆಳ್ಳೆಲಿ; ತೆಲು. ವೆಲ್ಲೆಲುಕ]

**ಬೆಳ್ಳಿವಕ್ಕರಿಕೆ** (ನಾ). ಕುದುರೆ, ಆನೆ ಮೊದಲಾದುವುಗಳಿಗೆ ಹಾಕುವ ಬೆಳ್ಳಿಯ ರಕ್ಷಾಕವಚ. – ವ್ಯೆಜೋಡು : ಬಳಸಿದ ಬೆಳ್ಳಿವಕ್ಕರಿಕೆಯ ಕುದುರೆಗಳು (ಭರತೇ. ೬-೭೩). [ ಬೆಳ್ಳಿ + ಪಕ್ಕರಿಕೆ ]

**ಬೆಳ್ಳಿವಕ್ಕರೆ** (ನಾ). = ಬೆಳ್ಳಿವಕ್ಕರಿಕೆ : ಬೆಳ್ಳಿವಕ್ಕರೆಯ ತೇಜಿಯುವ ನಾರಿವನೆಳೆವಳ್ಳಿಯಂತಸೆವ ಮೆಯ್ಯುವನು (ಕುಮಾರಾಂ. ೨೦-೯೨).

[ ಬೆಳ್ಳಿ + ಪಕ್ಕರೆ$_{1}$ ]

**ಬೆಳ್ಳಿವಟ್ಟಲ್** (ನಾ). ರಜತದ ಸಣ್ಣ ಪಾತ್ರೆ ; ಬೆಳ್ಳಿಯ ಬಟ್ಟಲು : ಕಳ್ಳ ಬೆಳ್ಳಿವಟ್ಟಲ್ ಬಾಯೊಳ್ ಬೆಚ್ಚಂತಿರೆ ಸತಿ ಶಶಿಯಂ ಕಚ್ಚಿ ನೆಲಕ್ಕಿಱಿದ ರಾಹುವಂ ನೆಱೆ ಪೋಲ್ತಳ್ (ಕಾವ್ಯಸಾ. ೯೬೬ ಕೂಪ್ರಕ); ಕರತಳಕಳಶೋದಕದೊಳ್ ಸುರುಚಿರ ಚಂದ್ರಮನ ನೆಳಲನೂನಂ ತೋಱುತ್ತಿರೆ ಬೆಳ್ಳಿವಟ್ಟಲೆಂದಾ ತರುಣಿ ಕರಂ ತೆಗೆದು ತೆಗೆದು ಬೆಱಗಾಗಿರ್ದಳ್ (ಗಿರಿಶ. ೪-೦೨೮).

[ ಬೆಳ್ಳಿ + ಬಟ್ಟಲ್ ]

**ಬೆಳ್ಳಿವಾಡ** (ನಾ). ರಜತದ ಸೌಧ ; ಬೆಳ್ಳಿಯ ಉಪ್ಪರಿಗೆ : ಬೆಳ್ಳಿವಾಡಂಗಳೊಳೊಲ್ದು ಸತ್ಯವತಿಗೂಡಿ ಸುಧರ್ಮನರೇಂದ್ರನೊಪ್ಪಿದಂ (ಅದ್ಯಚ. ೬-೯೩). [ ಬೆಳ್ಳಿ + ಮಾಡ$_{1}$ ]

**ಬೆಳ್ಳಿವೆಟ್ಟು, ಬೆಳ್ಳಿಬೆಟ್ಟು, ಬೆಳ್ಳಿವೆಟ್ಟು** (ನಾ). ರಜತಾಚಲ ; ಕೈಲಾಸ ಪರ್ವತ : " ಓಂಜರಿವೆಟ್ಟೆಂದು ಬೆಳ್ಳಿವೆಟ್ಟಂ " (ಕಶಾ. ೪೯-೪೫); ಬೆಳ್ಳುಗಿಲನುಟ್ಟ ಬೆಳ್ಳಿವೆಟ್ಟದಂತೆ ಬೆಳ್ಳಂಬಟ್ಟೆಯನುಟ್ಟು (ಲೀಲಾವ. ೦೨-೮೬ ವ); ಬೆಳ್ಳಿವೆಟ್ಟಕ್ಕೆ ನಿಚ್ಚಂ ಪಡಿಯೆನಿಸುವುದೆತ್ತಂ ರನ್ನಗಲ್ಲೆಂಬ ಬೆಟ್ಟಂ (ಕಬ್ಬಿಗಾ. ೨೩೫). **ಬೆಳ್ಳಿಬೆಟ್ಟು** : ಬೆಳ್ಳಿಬೆಟ್ಟದೊಡತಿ, ಗೌರಿ, ಬೆಳ್ಳಿಯೊಸಗೆಗೊಸಗೆ ಬೀರಿ ಕಾಯಿ ಕೃಷ್ಣನ (ಹೂಂಗಳು. ೪-೪). **ಬೆಳ್ಳಿವೆಟ್ಟು** : " ಬೆಳ್ಳಿವೆಟ್ಟು ಓಂಜರಿವೆಟ್ಟು ಪೊಗರಪ್ಪ ರಜತಾದ್ರಿಗಕ್ಕು " (ಶಬ್ದಸಂ. ೦೦); ಬೆಳ್ಳಿವೆಟ್ಟಂಗವರನನುಜ್ಜ್ಞೆಯನೆಳ್ಳನಿತ ಮೊಗದೊಯ್ದು . . . ಸದ್ಭಕ್ತವತ್ಸಲನಲ್ಲವೆ (ಸುರೇಪು. ೬-೫) ; ಇದೆ ಕೊಳಾ ತೋರ್ಪುದಾತೋರ್ಪುದೊಂದು ದೇಗುಲಂ ಬೆಳ್ಳಿವೆಟ್ಟಿನ ಪಾಂಗಿಂ (ರಾಜಶೇ. ೫೫-೨). [ ಬೆಳ್ಳಿ + ಬೆಟ್ಟ ]

**ಬೆಳ್ಳಿವೆಟ್ಟು** ' ಬೆಳ್ಳಿವೆಟ್ಟ ' ನೋ.

**ಬೆಳ್ಳಿವೆಸ** (ಕ್ರಿ). ೧. ಬೆಳ್ಳಿಯ ಕೆಲಸ. ೨. ಬೆಳ್ಳಿಯಿಂದ ಮಾಡಿದುದು, – ತಯಾರಿಸಿದುದು : ಭೂಪಾಲನ ಸಚ್ಚರಣಾಗ್ರದೊಳಿರ್ದುದು ಭೀರಮೆನಿಸುವ ಬೆಳ್ಳಿವೆಸದ ಸಂಕಲೆಯಾಗಳ್ (ದಶಾ. ೭-೩೫).

[ ಬೆಳ್ಳಿ + ಬೆಸ$_{1}$ ]

**ಬೆಳ್ಳಿಸು** 'ಬೆಲ್ಲಿಸು' ನೋ.

**ಬೆಳ್ಳಿಹಬ್ಬ** (ನಾ). ಯಾವುದಾದರೂ ಸಂಘ, ಸಂಸ್ಥೆಗಳಿಗೆ ಇಪ್ಪತ್ತೈದು ವರ್ಷ ತುಂಬಿದ ಸಂದರ್ಭಗಳಲ್ಲಿ ಆಚರಿಸುವ ಸಮಾರಂಭ ; ರಜತ ಮಹೋತ್ಸವ : ಕನ್ನಡಸಾಹಿತ್ಯಪರಿಷತ್ತಿನ ಬೆಳ್ಳಿಹಬ್ಬ ವಿಜೃಂಭಣೆಯಿಂದ ನಡೆಯಿತು (ರೂಢಿ). [ ಬೆಳ್ಳಿ + ಹಬ್ಬ (< ಪರ್ವ) ]

**ಬೆಳ್ಳುಂಬಟ್ಟೆ** 'ಬೆಳ್ವಟ್ಟೆ' ನೋ.

**ಬೆಳ್ಳುಗೊಳ** 'ಬೆಳಗ್ಗೊಳ' ನೋ.

**ಬೆಳ್ಳುಚಿ** (ನಾ). ಒಂದು ಬಗೆಯ ಸಸ್ಯ : " ಗೂಡೆ ಬೆಳ್ಳುಚಿ [ಪಾಠಾಂ. ಚಿ]ಯರ್ಣೆಯವನಿಯನೆ ಕರಿಬೇವು" (ಮಂಗರಾ. ೪೦-೩೨). [?]

**ಬೆಳ್ಳುಚ್ಚೆ** 'ಬೆಳ್ಳುಚ್ಚೆ' ನೋ.

**ಬೆಳ್ಳುಡೆ** (ನಾ). ಬಿಳಿಯ ಬಣ್ಣದ ಉಡುಪು ; ಬಿಳುಪಾದ ವಸ್ತ್ರ : ಹೊಸವಸ್ತ್ರ ಉಡುವಲ್ಲಿ ಹರಿಯ ಬೆಳ್ಳುಡೆಯೆನ್ನ (ಕೀರ್ತನ. ೦-೬೦-೨) ; ಉದಕವು ಪೊರೆಯನು ಕಳಚುವುದಾವರೆ ಉರಗವು ಪೊರೆ ಬಿಡುವ ಹಾಗೆ ಬೆಳ್ಳುಡೆಯಾಗುತಲಿದ್ದವು ಸತಿಯರ ನೀರಾಟವಾಡುವ ಪ್ಯೆಗೆ (ಇಂಪಾರ. ೦೪೪-೮). [ ಬೆಳ್$_{1}$ (< ಬಿಳಿದು) + ಉಡೆ$_{2}$ ]

**ಬೆಳ್ಳುಪ್ಪರಿಗೆ** (ನಾ). ಅಮೃತಶಿಲೆಯ ಉಪ್ಪರಿಗೆ ಅಥವಾ ಬಿಳಿಯ ಬಣ್ಣದ ಸೌಧ : ಮಿಸುಪ ಬೆಳ್ಳುಪ್ಪರಿಗೆಗಳೊಳು ಪಚ್ಚೆಯ ಪೊಸತಾದ ಪಟಗಳೊಪ್ಪಿರಲು (ಕಂಸವ. ೬-೫); ವರ ಮುನಿಪ ನೋಡಿದಾ ಸ್ಫಟಿಕಮಯ ಭಿತ್ತಿಯೊಳು ಸ್ಫುರಿಸುತೊಪ್ಪಿರ್ಪ ಬೆಳ್ಳುಪ್ಪರಿಗೆಗಳನು (ರಾಘವ. ೭-೬೯).

[ ಬೆಳ್$_{1}$ (< ಬಿಳಿದು) + ಉಪ್ಪರಿಗೆ ]

**ಬೆಳ್ಳುಚ್ಚೆ, ಬೆಳ್ಳುಚ್ಚೆ** (ನಾ). ಬುದ್ಧಿಯಿಲ್ಲದವನು ; ಬುದ್ಧಿಗೇಡಿ (?) : ನಚ್ಚುವುದೀಯರಸನನುಮ್ಮಚ್ಚಂ ಮಿಗಿಲಂಜಿ ತನುಜನಂ ತಟಿನಿಯೊಳಂದಚ್ಚರಿಯಾಗಿಕ್ಕಿದ ಬೆಳ್ಳುಚ್ಚೆಯನಿವರಿರಲೆ ಹರಿಯ ಸಿರಿ ಬೆಳೆಯದುವೇಂ (ನೇಮಿಪು. ೦೦-೦೦೨). **ಬೆಳ್ಳುಚ್ಚೆ** : ಚರ್ಚಿಸಿ ಪೆಂಡಿರರ್ಚನೆಯನಾಡಿಸಲಾಡಲೊಡರ್ಚುತಿರ್ಪ ಬೆಳ್ಳುಚ್ಚೆಗ ಮತ್ತೆ ಜೈನತನವೇಷುದವಂ ಜಿನಧರ್ಮದೂಷಕಂ (ಧರ್ಮಾಮೃ. ೪೩೮). [ < ಬೆಳ್$_{2}$ ? ]

**ಬೆಳ್ಳುಳ್ಳಿ** (ನಾ). (ಸಂಭಾರಪದಾರ್ಥವಾಗಿ ಅಡಿಗೆಯಲ್ಲಿ ಬಳಸುವ) ಬಿಳಿಯ ಬಣ್ಣದಿಂದ ಕೂಡಿದ, ಈರುಳ್ಳಿಯ ಜಾತಿಯ ಒಂದು ಬಗೆಯ ಗಡ್ಡೆ ; ಲಶುನ : " ಮಹೌಷಧಂ, ಲಶುನಂ . . . ರಸೋನಕಃ —ಈ ೬ ಬೆಳ್ಳುಳ್ಳಿ" (ಚಾಕರಾ. ೦೦೨) ; ನೋಡಿ ಕನಲ್ದು ಕೆಂಡದ ಮೇಲೆ ಪಟಿಯ ಬೇವಿನೆಣ್ಣೆಯೊಳ್ ತೊಯ್ದಿಕ್ಕಿದ ಬೆಳ್ಳುಳ್ಳಿಯ ಕಂಪಿನಂತೆ (ಕಂಕಣ. ೦೩-೬೦ ವ); ಅಲ್ಲಮಸಿನಂ ಶುಣ್ಠಿ ಬೆಳ್ಳುಳ್ಳಿ . . . ಎಂಬಿವು ಮೊದಲಾಗಿ ತೂಗಿ ಮಾಱುವ ಭಣ್ಡಂಗಳ್ಗೆ ಹೇಱಂಗಳ್ದೂಲಂ (ಎಇ. XIX. ೩೩-೨೯ ; 1135) ; ಬೆಳ್ಳುಳ್ಳಿಯನ್ನು ಸಾಧಾರಣವಾಗಿ ಒಗ್ಗರಣೆ ಚಟ್ನಿಗಳಿಗೆ ಉಪಯೋಗಿಸುತ್ತಾರೆ (ತರಜ. ೩೩).

[ಬೆಳ್$_{1}$ (< ಬಿಳಿದು) + ಉಳ್ಳಿ$_{1}$./ ತಮಿ. ವೆಳ್ಳುಳ್ಳಿ ; ತುಳು. ಬೊಳ್ಳುಳ್ಳಿ ; ತೆಲು. ವೆಲ್ಲುಲ್ಲಿ]

**ಬೆಳ್ಳಿ$_{1}$** (ನಾ). ದನಗಳಲ್ಲಿ ಒಂದು ಬಗೆ ; ಬಿಳಿಯ ಬಣ್ಣದ ರಾಸು : ಎಡಗೋಲಿನಲ್ಲಿ ಕಾರಿಯ ಹೂಡಿ ಬಲಗೋಲಿನಲ್ಲಿ ಬೆಳ್ಳಿ [ಪಾಠಾಂ. ಳ್ಳಿ]ಯ ಹೂಡಿ ಅಡಿಗೆತ್ತುವಂತೆ ಛಾಯೆಂದು ಹೊಡೆಯಲಾಗಿ ಭೂಮಿಯೊಡಗೂಡಿ ಸವೆಯಿತ್ತು (ಸರ್ವಜ. ೦೦೫-೫೬೬); ಬೆಳ್ಳಿವಿಂಡು [ಪಾಠಾಂ. ಬೆಳ್ಳಿಹಿಂಡು]ಗಳಂಧ್ರದೇಶದಿಂ ಹೇಱಿ ಬಂದೆಳ್ಳ ರಾಸಿಗಳ ತಳ್ಳಿಗರೊಯ್ದು ಗಾಣವಾಡೊಳ್ಳಿತೆನಿಸಿದ ತೈಲ ಕುಂಭಕೋಟಿಗಳ ತಱೆದರು (ಸಿದ್ಧರಾ. ೮-೫೦) ; ಮಲೆವ ಪುಲ್ಲೋರಿ ಬೆಚ್ಚುವ ಬೆಳ್ಳಿ ಬೆದಱಿಸುವ ಚೆಲುವ ಪುಲ್ಲೋರಿ . . . ನಾನಾಪರಿಯ ಕಬ್ಬಸಿಗಳೊಳಗಾದ ಪಲವು ಪರಿಯೆತ್ತು ತೊಂಭತ್ತಾಱು ಲಕ್ಷ ಮೇಳೈಸಿ ಓಡಿದುವು ಗಲ್ಲಕೆ (ಸಿಂಗಿರಾ. ೩೫-೬) ; ಬಟ್ಟಗಡಸು ಕೆಂಡ ಹುರಿಗ ಕಾರಿಯು ಬೆಳ್ಳಿ . . . ಎಸೆದವು ಪಟ್ಟೆಯ ಸೀರೆಯಂದದಲಿ (ಹರಿದಾಸಾಂ. ೦-೪೦).

[ಬೆಳ್$_{1}$ (<ಬಿಳಿದು) + –ಇ$_{2}$./ ತಮಿ. ವೆಳ್ಳೈ ; ತುಳು. ಬೊಳ್ಳಿ]

**ಬೆಳ್ಳಿ$_{2}$** 'ಬೆಳ್$_{2}$' ನೋ.

**ಬೆಳ್ಳಿ$_{3}$** (ನಾ). ಬುದ್ಧಿಯಿಲ್ಲದವಳು ; ದಡ್ಡಹೆಣ್ಣು : ಸಿತಗೆ, ಚದುರೆ . . . ಕಳ್ಳಿ, ಬೆಳ್ಳಿ, ಹೆಡ್ಡ, ಎಗ್ಗ (ಶಬ್ದಸು. ೦೯೬ ಶ್ರುಯೋ).

[ಬೆಳ್$_{2}$ + –ಇ$_{2}$]

**ಬೆಳ್ಳೆದೆ** (ನಾ). ಅಂಜುವ ಹೃದಯ ; ಬೆದರುವ ಹೃದಯ : ಪಡೆಯಿಲರ್ . . . ದಡಿಗಳಿಂ ಬರಲು ಬೆಳ್ಳೆದೆಗಳಳ್ಳಾಡೆ (ಕಾಂಚಿರ. ೦೫೬-೩೪೭). [ಬೆಳ್$_{2}$ + ಎದೆ (< ಎರ್ದೆ)]

**ಬೆಳ್ಳಿಮಣಿಯ** (ನಾ). ಒಬ್ಬಾತನ ಹೆಸರು: ಬಾಣಗುನ್ದೂರಾ ದೇವಡಿಗಳುಂ ಕುನ್ದಡಿಗಳುಂ . . . ಗಣಿಗೂರಾ ನರವೆವರುಂ ಬೆಳ್ಳಿಮಣಿಯರುಂ ಸನ್ನಿಗಾಲಾ ಪುಜ್ಜರುಂ ಬಳ್ಳವರುಂ ಪಸುಂಗಾಯ ಕಟ್ಟಾತರು ಬಿರದರುಂ ಈ ಪೊಲನಂ ನಡಯಿಸಿದೋರ್ (ಎಕ. XVI, ಗುಬ್ಬಿ. ೬೩-೩೯; 733). [?]

**ಬೆಳ್ಳಿರಲೆ, ಬೆಳ್ಳಿರಳೆ** (ನಾ). ೧. ಹೆದರಿಕೆಯಿಂದ ಕೂಡಿದ ಜಿಂಕೆ; ಹೆದರಿದ ಮೃಗ : ರಾಜಸುತಸಂದೋಹಂ ಗಱ ಸೋಂಕದೆ ಬೆಳ್ಳಿರಲೆಗೆ ಗಱಮೂಡಿದ ತೆಱದಿನೋಡಿ ಪೋದತ್ತಾಗಳ್ (ಕಂಠಾಚಾ. ೩-೫೬); ಪರದೇಶಾಧೀಶ್ವರರೆಮ್ಮರಸನ ಪೆಸರ್ಗೊಂಡೊಡಲ್ಕಿ ಭಯದಿಂದಂ ಬೆಳ್ಳಿರಲೆವೊಲೋಡುವರ್ (ರಹ್ವಣಕ. ೯-೨೦೮); ಚಿಲಾತಾಪುತ್ರಂ ಪೊಱಮಟ್ಟುಬ್ಬೆಗದಿಂ ಬೆಳ್ಳಿರಲೆಗೆ ಗಱಮೂಡಿದಂತೆಪೋಡಿದನಾಗಳ್ (ಪುಣ್ಯಾಸ್ರ. ೩-೨೩). **ಬೆಳ್ಳಿರಳೆ**: ೧. ಪೊಣರ್ದೊಂದೆ ಬಿಲ್ಗ ಸಲೆ ಕೊಂಕಣಿಗರು ಬೆಳ್ಳಿರಳೆಯಂತೆ ಬಿಱುತೋಡಲು (ಕಇ. I, ೨೩-೯೬ : 1186); ಕಡುಗರ್ಪುವೆತ್ತು ಬಿತ್ತರಿಪ ದೀವದೆರಳೆಗಳುಂ ಬೆಳ್ಳಿರಳೆಗಳೆನಿಸಿಯುಂ . . . ಪಳಚ್ಚನೆ ಪಜ್ಜಳಿಪ ಸಾಂದ್ರಚಂದ್ರಾತಪಾಡಂಬರದೊಳ್ (ಶಾಂತೀಶ್ವ. ೧೧-೯೬ ವ). ೨. (ಅಲಂ) ಹೇಡಿ; ಅಂಜುಬುರುಕ : ಬೆಳ್ಳಿರಳೆಗಳಪ್ಪ ಲೋಕದ ಜಡಾತ್ಮರನಂಜಿಪನೆಂದು ಧಾರಿಣೀವರವಧು ಕಾಮನಂ ನಗುವ ಭಂಗಿಯೊಳಿರ್ದುವು ವಾರಿಜಾಕರಂ (ರಹ್ವಣಕ. ೧೩-೨೩). [ಬೆಳ್$_2$ + ಎರಲೆ]

**ಬೆಳ್ಳಿರಳೆ** 'ಬೆಳ್ಳಿರಲೆ' ನೋ.

**ಬೆಳ್ಳಿರ್ದೆ** (ನಾ). ಬಿಳಿಯ ಬಣ್ಣದ ಎದೆ,– ವಕ್ಷ : ಬೆಳ್ಳಿರ್ದೆಯಂ ವಾಜಿಯುಮಣಂ ಸಳ್ಳಿಸಿತ ಪಾಂಡುರಗಳಂ . . . ಇದುವೆಯುಲ್ರ್ತು ಧನದಂ (ಹಾಣಕ. ೯-೧೧-೧೧೬). [ಬೆಳ್$_1$ (<ಬಿಳಿದು) + ಎರ್ದೆ]

**ಬೆಳ್ಳಿಲೆ** (ನಾ). ೧. ಬಿಳಿಯ ಬಣ್ಣದ ಎಲೆ; ಬಿಳುಪಾದ ಎಲೆ : ವಲ್ಕಲದಿಂ ಸುಂದರಿಯ ತನು ತನ್ನ ಕಾಂತಿಯ ಪೊರೆಯದು ಬೆಳ್ಳಿಲೆಯ ಮರೆಯ ಕುಸುಮದ ತೆಱದಿಂ (ಶಕುಂತ. ೯-೧೯). ೨. (ಉತ್ತಮ ದರ್ಜೆಯ ಒಂದು ಬಗೆಯ ಬಿಳುಪಾದ ವೀಳೆಯದೆಲೆ ; ಬಿಳಿಯೆಲೆ : ಕುಂದಣದಗಡಿನಂತಿರ್ಪ ಬೆಳ್ಳಿಲೆಗಳನೊಂದಱೊಳೊಂದ ಕೇವಣಿಸಿ ಪೊಂದಾವರೆಯಂತ ವಾಮಹಸ್ತದೊಳಾಂತ ಚೆಂದವನೇನ ಬಣ್ಣಿಸುವೆ (ಪ್ರಭುಲಿಂ. ೧೬-೩೦) ; ಬೆಳ್ಳಿಲೆಯುಂ ಮಡದೀವ ದಿವ್ಯ ಚಾಮರವನೆ ಬೀಸುವಗ್ಗದ ವಿದಗ್ಧೆಯರೊಪ್ಪಿರೆ ದೇವಿ ರಂಜಿಪಳ್ (ರಾಜಶೇ. ೯-೯೦) ; ಎಲೆಗೆ ಬೆಲೆಗೆಯ್ವುದದು ಬೆಳ್ಳಿಲೆಯೋ ಮಾಱೂಳಿವೆಣ್ಣ ಮಱಯೋನುಸಿರಾ (ಚಿಕ್ಕ. ೬-೩೯). [ಬೆಳ್$_1$ (< ಬಿಳಿದು) + ಎಲೆ$_1$./ತಮಿ. ವೆಳ್ಳಿಲೈ]

**ಬೆಳ್ಳಿಲೆಗ** (ನಾ). ಉತ್ತಮವಾದ ಬಿಳಿಯ ವೀಳೆಯದೆಲೆಯನ್ನು ಮಾರುವವನು, — ವಿಕ್ರಯಿಸುವವನು : ಖಗರಾಜನೆಱಕೆಯಿಕ್ಕೆಲದಿ ಕೊಟ್ಟಿಗೆ ಕಾಮಾಟಕ್ರಮುಕ್ಕ ಬೆಳ್ಳಿಲೆಗರು ಜಟ್ಟಿಗ ಗೀತಪಾಠಕರು ಸೆಟ್ಟಿಗ ಬಲು ಚಿನ್ನವರದರು ಘಟ್ಟಿಪ ಕಟ್ಟಿಗೆಕಾಱರೇಱದರು (ಪ್ರಭುಲಿಂ. ೩೬-೯೩).
[ಬೆಳ್ಳಿಲೆ + – ಗ$_2$]

**ಬೆಳ್ಳಿಲೆಗವಳ** (ನಾ). ಬಿಳಿಯೆಲೆಯ ತಾಂಬೂಲ : ಪವಡಿಸಿ ಮುಸುಕಿಕ್ಕಿ ಕೈನೀಡಿ ಬೆಳ್ಳಿಲೆಗವಳವ ಕೊಡುತಿಂತು ನುಡಿದ (ಭರತ. ೧೧-೯೩).
[ಬೆಳ್ಳಿಲೆ+ಕವಳ$_2$ (= ಕವಲ)]

**ಬೆಳ್ಳೇಡಿ** (ನಾ). ಪಿಡಿಯಲ್ಲಿ ಒಂದು ಬಗೆ : ಆ ಗೊರಬುಗಳು ನಾಗಕ್ಕ ಕೂತಿದ್ದ ಪಾಸರೆಯಿಂದಲೆ ಹೊರಟಿದ್ದುವು. ಬೆಳ್ಳೇಡಿ ಹಿಡಿಯಪುದಕ್ಕೆ! (ಕುರಿಸು. ೬೩೩). [ಬೆಳ್$_1$ (<ಬಿಳಿದು) + ಪಿಡಿ$_1$]

**ಬೆಳ್ಳೊಡಲ** (ನಾ). (ವಿಭೂತಿಯನ್ನು ಧರಿಸಿದುದರಿಂದ) ಬಿಳುಪಾದ ದೇಹವುಳ್ಳವನು; ಶಿವ: ಬೆಳ್ಳೊಡಲ ಸದ್ಭಕ್ತವತ್ಸಲನಲ್ಲವೆ (ಸುವೀಶ್ವ. ೬-೩); ಹರಿಯಿರ್ದ್ದಲದೆಲೆ ಬೆಳ್ಳೊಡಲನಲ್ಲವೆ ಕೇಳೊಡಂಬಡಿಸುವೆ ಶ್ರುತಿಗಳಿಂದೆ (ಕಂಠದಾ. ೧೧-೬೯). [ಬೆಳ್$_1$ (<ಬಿಳಿದು) + ಒಡಲ್ + –ಅ$_7$]

**ಬೆಳ್ವೊರೆ** (ನಾ). ಮೌಢ್ಯದ ಮಾತು : ಇರುಳಿನೂಟಂ ಜೇನು ಮಾಂಸಂ ಸುರೆ ಪರಾಂಗನೆಯಱಬೆ ಕೊಲೆ ಬೆಳ್ವೊರೆ ಮಹಾಮಿಥ್ಯಾಪದಂ ಪರಪೀಡೆ ಜೂಜು . . . ಗಿಣ್ಣಾತ್ಕರದ ದಾನಂ ಬೇಂಟೆ ಪೂವಿನ ಶಾಕ ಮೂಲವ್ರತಂ (ಕಂಠದಾ. ೧೩-೩೦). [ಬೆಳ್$_2$ + ಒರೆ$_4$]

**ಬೆಳ್ವೊಲೆ** (ನಾ). ಒಂದು ಊರಿನ ಹೆಸರು : ಬೆಳ್ವೊಲೆಯ ಬಟ್ಟೆಯ ಪೇರಾಟಿಜ್ಜಿ ಪಳ್ಳಂಬಡಿವು ಪೋಗಿ ಪಿರಿಯ ಪಳ್ಳದಳ್ವಡಿ (ಸೌಇಇ. IX-i, ೩೯-೨ ; 10ನೆಯ ಶತ). [ ? ]

**ಬೆಳ್ವೋಕರಿಕೆ** (ನಾ). (ಬಸಿರಿಯರಿಗೆ ಪ್ರಾರಂಭದಲ್ಲಿ ತೋರುವ) ಹುಸಿಯ ಓಕರಿಕೆಯ ಅನುಭವ : ಭುವನದ ವಿಚಾರಕ್ಕೆ ಕೊಕ್ಕರಿಸುವ ಮಹಾದೇವಿಯನು ಬಸುಱೊಳ್ತವೆ ತಳೆದ ದೂಸಱೊಳು ಬೆಳ್ವೋಕರಿಕೆ ತೋಱದುದು (ಸುರೇಶ್ವ. ೧೬-೮). [ಬೆಳ್$_2$ + ಓಕರಿಕೆ]

**ಬೆಳ್ವೋಟ** (ನಾ). ಅಂಜಿಕೆಯಿಂದ ಓಡುವ ಓಟ : ಅಂತು ಬಿಱುತು ಬೆಳ್ವೋಟಮೋಡುವಶನಿಘೋಷನ ಭಯತಸಮುಂ (ಶಾಂತಿಪು. ೬-೯೦ ವ) ; ಅಳ್ಳಾಡೆ ನರನ ಕರ್ಗಣೆಯಳ್ಳೇಱಂಗಳ್ಕಿ ಬಳ್ಕಿ ಕುರುಬಲಮೆಲ್ಲಂ ಬೆಳ್ವೋಟವೋಡೆ (ಕಾವ್ಯಾವ. ೨೨೯). [ಬೆಳ್$_2$ + ಓಟ]

**ಬೆಱಂಟು** 'ಬಱುಂಟು' ನೋ.

**ಬೆಱಗಾಗುಹ** (ನಾ). ೧. ವಿಸ್ಮಯವಾಗುವಿಕೆ ; ಆಶ್ಚರ್ಯವಾಗುವುದು : "ತಳವಳಗು–ಬೆಱಗಾಗುಹಂ" (ಚತುರ. ಕಂ. ೨). ೨. ದಿಗಿಲು; ತಳಮಳ : "ತಳವಳವೆನಲ್ಕೆ ತಾಂ ಬೆಱಗಾಗುಹಂ" (ಕವ್ಯಕ. ೬೯).
[ಬೆಱಗು + ಆಗುಹ]

**ಬೆಱಗಿಡು** (ಕ್ರಿ). ಆಶ್ಚರ್ಯಪಡು ; ಬೆರಗಾಗು : ಸುರರು ಬೆಱಗಿಡೆ ದಾಟಿತಲ್ಲಿಂ ಮೇಲೆ ಮೆಲ್ಲನೆ ಜೀವವಾ ಖಳನ (ಕುಮಾರ. ೩-೬-೧೯).
[ಬೆಱಗು + ಇಡು$_1$]

**ಬೆಱಗು**, ಬೆರಗು$_2$ (ನಾ). ೧. ಬಿಗಿದುಕೊಂಡಿರುವಿಕೆ ; ಸೆಡೆತ : ಸುರಭಿಯ ತೊರೆದ ಕುಚಂಗಳ ಬೆಱಗಂ ಬೆರಲೀಸೆ ಪರಮಹಸ್ತಪುಟಾಂತರದೊಳಮೃತಮೆನೆ ಕಱದಾ ವರವಧು ಪುತ್ರಾರ್ಥಿ ಪಾತ್ರಶೇಷಮನುಣ್ಬಳ್ (ಧರ್ಮಾಮೃ. ೩-೧೧೯). ೨. ದೇಹವು ಸೆಟೆಯುವಂತೆ ಮಾಡುವ ಒಂದು ಬಗೆಯ ರೋಗ: ಮೂರ್ಛೆರೋಗ : ಕುಷ್ಠ, ಅಪಸ್ಮಾರ, ಬೆಱಗು, ಮಹೋದರ, ಕಾಮಿಲೆ, ಇವಕ್ಕೆ ಆದಿಯಲ್ಲಿ ದಿನಸಾಮ್ಯವಿಲ್ಲದೆ ಶೀಘ್ರದಲ್ಲಿಯೇ ಪ್ರತೀಕಾರ ಮಾಡುವದು (ಕೃದ್ಯಾ. I, ೨೬). ೩. ನಿಶ್ಚೇಷ್ಟತೆ; ಸ್ತಂಭನ : 'ಬೆಱಗುವಡು' ಪರಾ. ೪. ಆಶ್ಚರ್ಯ; ವಿಸ್ಮಯ : "ವಿಸ್ಮಯಃ, ಅದ್ಭುತಂ, ಆಶ್ಚರ್ಯಂ, ಚಿತ್ರಂ-ಈ ೪ ಬೆಱಗಿನ ಪೆಸರು" (ನಾಚಿರಾ. ೯೬); ಬಱದೆ . . . ಬೊಗಳುವ ಕುನ್ನಿಗಳ ನೋಡಿ ಎನ್ನ ಮನ ಬೆಱಗು ನಿಬ್ಬೆಱಗು ಆಯಿತ್ತಯ್ಯ (ಮಹಾದೇ. ವ. ೯೮-೨೨೩); ಜೋಡರ ಧುರಚಮತ್ಕೃತಿ ಬೆಱಗನಿತ್ತುದು ದೇವಸಂತತಿಗೆ (ಕುಮಾ.ಭಾ. ೯-೮೬). ೫. (ಮನಸ್ಸಿನ) ಗಲಿಬಿಲಿ; ದಿಗ್ಭ್ರಮೆ; ಗಾಬರಿ : ಆತನ ಪ್ರಾಣೇಶ್ವರಿ ವಜ್ರಮಾಳಿನಿ . . . ನಿಶಿತಾಸಿಧೇನುವಂ ಕಿಱ್ತು ಬೆನ್ನಟ್ಟಿ ಮುಟ್ಟಿ ಬೆ[ಱ]ಗಿಲ್ಲದಾತನ ಬೆನ್ನಂ ಜನ್ನಿವರವಿಕ್ಕಿದಂತಿರೆ ಪೊಯ್ಯೆ (ಶಾಂತಿಪು. ೪-೯೬ವ) ; ನೇಹದೊಳು ಕೋಪವಂ ನೆನಹಿನೊಳ್ ಬೆಱಗುವಂ ತನುವಿನೊಳ್ಪುಸುಪುಮಂ ಬಯ್ತಿಡುತೆ ಬಂದು (ತಿರುಚ. ದೇ. ೬-೧೧); ಮೋನದೊಳಿರದಿರಬ್ಬಾಣೆನಲು ಬೆಱಗಿನ ಗರದ ಗಾಹಿನಲದ್ದು ಮೋನದೊಳಿದ್ದನಾ ಪಾರ್ಥ (ಕುಮಾ.ಭಾ. ೧೬ ೬). ೬. ಅಂಜಿಕೆ; ತಲ್ಲಣ; ಭೀತಿ; ತಳಮಳ : ಪೊತ್ತ ದುಗುಡದ ನಿಡುಸುಯ್ಲುಗಳ ಬಿಗಿದ ಬೆಱಗಿನ ಬಿಟ್ಟ ಕಣ್ಣುಗಳ ಒಡೆಯನಿದಿರಲಿ . . . ಮಿಡುಕದಿರ್ದುದು ರಾಯನೋಲಗದೊಳಗೆ ಪರಿವಾರ (ಕುಮಾ.ಭಾ. ೨-೧೮); ತಲ್ಲಣಂ ತಳವೆಳಗು . . . ತಳಮಳವೆನಲ್ಕೆ ಸೊಲ್ಲಿಪುದು ಬೆಱಗಪ್ಪ ಭಾವದೊಳು

(ಶಬ್ದಮಂ. ೩೦). **ಬೆರಗು₄:** ೨. ಅಪಸ್ಮಾರ, ಬೆರಗು, ಮಹೋದರ, **ಕಾಮಾಲೆ** ಮುಂತಾದ ರೋಗಗಳು ಕಾಣಿಸಿದಲ್ಲಿಯೇ . . . ಪ್ರತೀಕಾರವಂ ಮಾಡಬೇಕು (ಸಕವೈ. ೨೨). ೪. "ಸೋಜಿಗ, ಬೆರಗು, ಬೆಕ್ಕಸ. . . ಚೋದ್ಯ" (ಕಂಸುತು. ೯೦); ಈ ಸವಿಾಪಸ್ಥ ವಸ್ತುಗಳ ನಡುವೆ ಎಷ್ಟೋಂದು ದೂರವಿದೆಯುಲ್ಲ ಎಂಬ ಬೆರಗು ನನಗೆ ಉಂಟಾಗುತ್ತದೆ (ಮೂಕಜ್ಜಿ. ೧೬).

**ಬೆಱಗಾಗು, ಬೆರಗಾಗು** = ೧. ವಿಸ್ಮಯಪಡು; ಆಶ್ಚರ್ಯವನ್ನು ಹೊಂದು : ತಾರದಿಂ ಮೊಗವುನಿತ್ತೆನುತುಂ ಬೆಱಗಾಗೆ ಕೂಡಿದಳ್ (ಕಾವ್ಯಸಾ. ೯೯೪ ಕೂರ್ದ್ರ೪); ಬ್ರಹ್ಮಯ್ಯಂಗೆ ಮಹಾದೇವಿ ಬಡ್ಡಿಸಿದೊಡೆ ದೇಸಿಗಂ ಕಂಡು ಬೆಱಗಾಗಿ (ವಡ್ಡಾರಾ. ೬೮-೦೯); ಘೋರರಕ್ಕಸರೂಪ ನಿಟ್ಟಿಸುತ ಬೆರಗಾದನು (ವೆಂಕಾರಾ. ೩-೦-೩೬); ಮಣಿಪುರದ ಸಿರಿಗೆ ಬೆರಗಾಗಿ ಕೇಳಿದನಂದು ಹಂಸಧ್ವಜನ ಕುರಿತು ನಾಡಿನರಸಾರೆಂದು (ಜೈಮಿನಿ. ೬೨-೦೯೬೪). ೨. ದಿಗ್ಭ್ರಮೆಯಾಗು : ನೋಡಿದೊರೆ ನುರ್ಗಿದವಂ: ಬೆಱಗಾಗದು ಬೇಂಟೆ ಮುತ್ತಿದೆಮ್ (ಅಂತಿಗೂ. ೨೦-೯೦೬).

**ಬೆಱಗಿನ ರೋಗ** = ದೇಹವು ಸೆಡೆಯುವ ರೋಗ ; ಮೂರ್ಛೆ : ಅಷ್ಟಮದದಿಂದಲಿ ಬೆಱೆತಿರುವಗೆ ಬೆಱಗಿನ ರೋಗ ಬಟ್ಟೆಯಲಿ ಮುಳ್ಳು ಹಾಕಿದವಗೆ ನೇತ್ರವ್ಯಾಧಿ (ಕವಕ. ೦೯೨-೪).

[<ಬೆಱ³./ತಮಿ. ವಿಱ್ಯ್ಪ್ಪು, ವಿಱುಮ್ಮ್, ವೆರುವು, ವೆಱುಪ್ಪು; ತುಳು. ಬೆರಗು; ತೆಲು. ವೆಱಂಗು, ವೆರಂಗು, ವೆರಗು, ವೆರವು; ಕುಇ. ಬ್ರಾ]

**ಬೆಱಗುಗೊಳ್, ಬೆರಗುಗೊಳ್** (ಕ್ರಿ). ವಿಸ್ಮಯಪಡು; ಆಶ್ಚರ್ಯ ಹೊಂದು; ಬೆರಗಾಗು : ಇಱಿಯಲೆತ್ತಿದ ಕೈಗಳೆಲ್ಲವ ತಱಿದು ಬಿಸುಟವನು ಮರಳಿ ಹುಟ್ಟಲು ಬೆಱಗುಗೊಂಡನು ರಾಮ (ತೊರಾ. ೯೨-೨); ಗಂಡರು ಬೆಱಗುಗೊಳೆ ಮೊಱೆಯಿಡುತ ಬಾಲೆಯರು ಬೆದಱಲು ಕೇರಿಕೇರಿಯಲಿ (ಜೈಮಿನಿ. ೩೦-೩೭). **ಬೆರಗುಗೊಳ್ :** ವೀರವಲ್ಗುತವೆತ್ತಿಸಿದ ಬಭ್ರುವಾಹನನ ಕಂಡು, ಪೋಲ್ವೆಗೆ ಬೆರಗುಗೊಂಡರು ಸೇನೆಯಲಿ ಪಳಬರಾದ ವರೆಲ್ಲರುಂ (ಜೈಮಿನಿ. ೬೦-೨೨೦೬). [ಬೆಱಗು + ಕೊಳ್₁]

**ಬೆಱಗುವಡು, ಬೆರಗುವಡು** (ಕ್ರಿ). ೧. ನಿಶ್ಚೇಷ್ಟತೆಯನ್ನು ಹೊಂದು; ಸ್ತಂಭಿತವಾಗು: ಮನಮುಂ ಕಲೆಯುಂ ತಪಕಮಸಿನಿಯುನ ಲಾವಣ್ಯಮೂರ್ತಿಯೊಳ್ಬೆಚ್ಚು ತದಂಗನೆ ಬೆಱಗುವಟ್ಟು ನಿಲ್ವಪಳೆನೆ ರುಚಿರಸ್ತಂಭಭಾವಮಂ ಕಂಡಾಗಳ್ (ಅದ್ವಪು. ೮-೯೬); ಶಾಂತರಸದರೇದಿಂ ಸಮೆದ ಪುತ್ಥಳಿಯೆನಲ್ಬೆಱಗುವಟ್ಟಂತಮೂರ್ತಿಭಾಕ್ಷಿಯುಗದಿಂ ವಿಳಿರ್ವ ಶಿವಯೋಗಿಯುಂ ಕಂಡು (ಶಬ್ದರಾ. ೩-೩೦). ೨. = ಬೆಱಗುಗೊಳ್ : ತನುವಿನೊಳಿಂಗುವ ಪನ್ನೀರ್ವನಿಯುಂ ಕಂಡಾಳಿಯರ್ಬೆಱಗುವಟ್ಟು . . . ಶಿಶಿರೋಪಚಾರಮಂ ವಿರಚಿಸಿದರ್ (ಆದ್ಯಪು. ೬-೪೮); ಅನಿಮಿತ್ತಬಂಧುವ ನೋಡಿ ಬೆಱಗುವಟ್ಟೇನೆಂದಱಿಯದೆ (ಶಬ್ದರಾ. ೦೦-೬೯); ಬೆಱಗುವಟ್ಟಳು ಸೀನಿದಾರೆಲೆ ಕಿಱುವಾಗಳೆಯೆನೆ (ಜೈಮಿನಿ. ೩೦-೩೯). **ಬೆರಗುವಡು :** ೨. ಒಂದು ಮಟ್ಟದ ಓದುಗರು ಈ ಬೃಹದಾಕಾರದ ಕೃತಿಯ ಕಲ್ಪನಾತೆಯ ನೈಪುಣ್ಯದಿಂದ ಬೆರಗುವಟ್ಟು ಪರವಶರಾಗುತ್ತಾರೆ (ಶಂಕಸು. XXIV, ಮುಮ್ಮುಡಿ); ಅದನ್ನು ಕೇಳಿ ಶೂದ್ರಕನು ಬೆರಗುವಟ್ಟು ತನ್ನಪ್ಪಕ್ಕೆ ಅಂದನು (ಕಥಾ. ೪೭).

[ಬೆಱಗು + ಪಡು₁]

**ಬೆಱಗುವಡೆ** (ಕ್ರಿ). = ಬೆಱಗುಗೊಳ್ : ಬೆಱಗುವಡೆದರು ಪಾಂಡವಾದಿಗಳುರುಮುದದವರೆ ತಳೆದು (ಜೈಮಿನಿ. ೩೬-೬೬). [ಬೆಱಗು + ಪಡೆ₁]

**ಬೆಱಗುವೆಱು** (ಕ್ರಿ). ಆಶ್ಚರ್ಯಪಡು; ವಿಸ್ಮಯ ಹೊಂದು : ಭೂವಳಯಾಧಿಪಂ ಬೆಱಗುವೆತ್ತು ಮುದಂ ಪೆಱಪಿಂಗಿ ಪಂದೆಯುಂ ಪೊಪಡರ್ದಂತೆ ತೊಟ್ಟನೆ ಕಟಲ್ದು (ಧರ್ಮಾ. ೦೦-೦೦೦); ಅರ್ಜುನನು ಬೆಱಗುವೆತ್ತೋದೆವಡದ ಮಟುವಿನಂತಿರ್ದನಾಹವದೊಳು (ಕೃಮಾಭಾ. ೦೩-೦೪). [ಬೆಱಗು + ಪೆಱು₁]

**ಬೆಱಗೊಂದು** (ಕ್ರಿ). = ಬೆಱಗುಗೊಳ್ : ಸಾಂಗದಿಂ ಮಾಡಿದ ಬಹು ಪದಾರ್ಥಂಗಳಂ ಹಿರಿದೋಗರಂಗಳ ಹಾಂಗೆ ಸಮೆಯಲು ಗೌರಿಯಚ್ಚರಿವಟ್ಟು ಬೆಱಗೊಂದಿ (ಬಸವು. ೮-೪೪). [ಬೆಱಗು + ಒಂದು₁]

**ಬೆಱಟಿ** 'ಬಱಟಿ' ನೋ.

**ಬೆಱಟು₁** 'ಬಱುಂಟು' ನೋ.

**ಬೆಱಟು₂** (ನಾ). ಬೆರಳಿನಿಂದ ಕೆದಕಿ ನೋಡುವಿಕೆ : ಕೈಯೊಳಗಣ ಬೆಱಟು ನಿಲ್ಲದನ್ನಕ್ಕ ಹೃದಯದ ಕಾಮ ಉಡುಗದನ್ನಕ್ಕ ವಿರಕ್ತಿಕೆ ಎಲ್ಲಿಗೆಲ್ಲಿಯದೋ (ಮಹಾದೇ. ಬ. ೦೩೩-೩೦೮). [<ಬಱುಂಟು]

**ಬೆಱಟುಗೊಳ್** (ಕ್ರಿ). ಬೆರಳಿನಿಂದ ಕೆದಕು : ಗೋರಿಕಲ್ಲೊಳಗೆ ಚಿಂತಾಮಣಿಯ ನಱಿಸಿ ಬೆಱಟುಗೊಂಡವನಂತೆ (ಅದವ. ಮು. ೮೪-೦೩೬).

[ಬೆಱಟು₁ (< ಬಱುಂಟು) + ಕೊಳ್₁]

**ಬೆಱಣೆ** ' ಬಱಟಿ ' ನೋ.

**ಬೆಱಣೆ** ' ಬಱಟಿ ' ನೋ.

**ಬೆಱತ** ' ಬೆಱ³ ' ಪರಾ.

Δ**ಬೆಱಸು** ' ಬೆರೆಯಿಸು ' ನೋ.

**ಬೆಱಳಿ** ' ಬಱಟಿ ' ನೋ.

**ಬೆಱಳಿವಲ್** (ನಾ). (ಅಲಂ) (ಬೆರಣೆಯಂತೆ) ಅಗಲವಾದ ಹಲ್ಲು : ದೊಡ್ಡ ಹಲ್ಲು : ಬಿಡುವಾಯ್ ವಿಕಟ್ಯದ್ದಪೂಗಿರ್ಪೊಸಡು ಬೆಱಳಿವಲ್ ಕೊಂಕುಮೂಗಟ್ಟ ಕಣ್ಗಳ್ . . . ಅಸಿಯ ಕುಟಿನೊಸಲ್ ಕೂಡೆ ನಿರ್ಭಾಗ್ಯೆಯಕ್ಕುಂ (ಲೋಕೋಪ. ೦೧-೩೮). [ಬೆಱಳಿ (<ಬಱಟಿ) + ಪಲ್]

**ಬೆಱ³, ಬಿಱು₁, ಬೆರೆ₂** (ಕ್ರಿ). ಬೆಱತ (ಭೂತಕೃ)ಬಿಱೆತು, ಬಿಱುತು, ಬಿಱುತ್ತು, ಬೆಱೆತು (ಭೂತನ್ಯೂ) ೧. (ಚಳಿ, ಗಾಳಿ, ಮಳೆ, ಸಾವು ಇತ್ಯಾದಿಗಳಿಂದ ದೇಹವು) ಸೆಡೆದುಕೊಳ್ಳು; ಮರಗಟ್ಟು; ಬಿಗಿದುಕೊಳ್ಳು: ದಕ್ಕ ನುಂಗಿದಂತೆ ಬೆಱೆತುಕೊಂಡರಬೇಡ (ಬಸವ. ೦೯೯); ದೇವಾಲಯದೊಳಗೆ ಬಡತಪಸ್ವಿಯ ಬೆಱತ ಪೆಣನದೆ ಕೆಡೆದು ಬಾತಿದ್ದುದು (ಬಸವು. ೩೨-೩೨); ತಾಪಸಂ ಬೆಱೆತು ಬಿದ್ದಿಹ ತಂದೆ ಮಕ್ಕಳಂ ಕಂಡು ಹಮ್ಮೈಸಿ ವಿಸ್ಮಿತನಾದನು (ಕೃಮಾಭಾ. ೩೦-೬೩). ೨. ಕಂಗಾಲಾಗು ; ಕಂಗೆಡು : ಬೆಱೆತುಬೆಱೆದೆನಾಗಿಯುಂ ತನು ಕಿಱಿದಾಗಿಯುಂ ಮತ್ತಮಾಯುಂ ಮುಂಬಾಗಿಯುಂ ಪೋಣಱಿಯುಂ ಕಾಣಂ ತಂದೆಯ ಗಱಿಯೊಳಗಿರ್ದವನೆನ್ನ[ನಂದು ನೃಶಂಸಂ] (ಕಾದಂಪೂ. ೦೮೩); ಬೆಱೆತು ಬಿಬ್ಬೆಱಗಾದ ಕೈಯುಂ ಕಾಲುಮನುಡುಂಗಿ ಕುಸುಂಗಿ ಕುಳ್ಳಿರ್ದ ಕಿರಾತನನಾ ಮರದೊಳಿರ್ಪ ಕಪೋತಶಿಖಾಮಣಿ ಕಂಡು (ಶಂಕಸಂ. ೨೪೩-೦೩). ೩. ಜಂಬಪಡು ; ಸೊಕ್ಕು ; ಗರ್ವಿಸು : "ಬೆಱ³_ಅಹಂಕಾರಭಾವೇ (ಗರ್ವಪಡು)" (ಶಬ್ದಾ); ಜಂಗಮದ ಮುಂದೆ ದಿಟ್ಟತನದಲ್ಲಿ ಬೆಱೆತು ನಿಂದಿರಲಮ್ಮೆನು (ಬಸವ. ೩೯೬); ತಾಗುದಟ್ಟಿನ ದಾಮವಱಿಯದೆ ನಿನ್ನ ಕರೆವರೆ ಕೃಷ್ಣ ಬೆಱತೆಯಲ (ಕುಮ್ಯಾಸ. ೮-೩೨); ಇಂತು ರನ್ನಬಂಡಾರಿಯನೆ ಆಯ್ದೊಱಲ್ದು ಬೆರೆದು ಬೆಱೆದಿರ್ಪ ನೀರವೆಣ್ಣ ಕಡುಚಾಣ್ಮೆಗೆ ಸೋಜಿಗಂಗೊಂಡು (ರಾಜಾಶೃ. ೬೦-೨೨). **ಬಿಱು₁ :** ೨. ಎರ್ದೆಗೆಟ್ಟರಣ್ಯದೊಳ್ ತಿರುತಿರ್ದ ಕಣ್ಬಡಿಗರಿನ್ ಮಗುಟ್ಟಂ ಬಿಱುತೋಡಿ ಬೇಡರೊಳ್ ನೆರೆದಿರಲಲ್ಲದೊಡ್ಡಯಿಸಿ ರಾಜ್ಯದೊಳೇಂ ನೆರೆಯಲ್ಕೆ ತೀರ್ಗುವೋ (ಶಃಶಾ. ೮-೬೩); ಕೆಲವು ಪಾಯಸಂಗಳ್ ಬಿಱೆತೋಡಿ ಕಾಡೊಳ್ಕೊಡಿರ್ದುವೆಲ್ಲಂ ಬಂದು (ಶಾಂತಪು. ೨೦೩-೦೬) ; ಚಾಪಮಂ ಪಾಱಗಳಪ್ಪ ಭೂಪರಂತದೆತ್ತಾತೆ . . . ನೆತ್ತರಂ ಕಾಱ ಬಿಱುತ್ತು ಪೋಗೆ (ಲೀಲಾಪು. ೮-೯೬) ; ಜಗಜ್ಜನದ ಜಾಡ್ಯತಮಂ ಬಿಱೆತೋಡೆ . . . ಉದಯಶೈಲಮನೇಱವನಂಬುಜಪ್ರಿಯಂ (ಲಕಾ. ೬-೦೦೮). **ಬೆರೆ₂ :** ೩. ಸೀಳು ದಾರಿಯು ಶಾಸ್ತ್ರವಿಚಯದ ಬೇಳುವೆಗೆ ಬೆರೆಯದೆ . . . ಷಟ್ಪಮಾಧಿಯ

ನ್ಯದಿ ಬದುಕು (ಗಗಣ. ೦೨-೬); ಎಲೆ ಕಾಲುರಿಚ ಬೆರೆಯದಿರು (ಱಕರಾ. ೦೯-೨). [ದೇ.॥ ತಮಿ. ವಿಱ್ಱು; ಮಲ. ವಿಱು]

**ಬೆಱ್ತು** 'ಬೆಱ್' ಪರಾ.

**ಬೆಱ್ಪು** (ನಾ). ಸಡಿಲ: ತೊರೆದುಗುವ ಬಾಷ್ಪವಾರಿಯುನೆಱುಂಕೆಗಳ್ ನಾಂದು ಮುಗುಱ್ ವಿರಹಾನಲನಿಂ ನೆಱ್ ಬೆಱ್ಪು ಪಾಱ್ ಪಡನೇಸಱೊಳಿರ್ದು ದಗಲ್ದು ಚಕ್ರವಾಕದ್ವಂದ್ವಂ (ಶಬ್ದಾ.ಸು. ೦೯೦ ಪ್ರಯೋ).

[ಬೆಱ್ + -ಪು$_{2}$./ತಮಿ. ವಿಱ್ಪು]

**ಬೆಟಂಬಳ್ಳಿ** (ನಾ). ಒಂದು ಊರಿನ ಹೆಸರು : ಪುತ್ರೂರ ಕೊಙ್ಗಣಿ ಸಾಮಿಯುಗೆ ಬೆಟಪ್ಪಳ್ಳಿಯೊಳ್ ರಾಜಮಾನ ಮೂಗಣ್ಣುಗಂ (ಎಕ. X, ಮುಳಬಾ. ೦೦೨-೬; ಸು. 880). [? + ಪಳ್ಳಿ$_{1}$]

**ಬೆಟಿಸು** (ಕ್ರಿ). (?) : ಕೆಡೆ ಬೆಟಿಸುವೇಟ್ರ್ದೀರುಂ ಕಿಡಿಸಿದೋನುಕ್ಕೋಟಿ ×× ಬಾರಣಾಸಿಯುಂಳ್ಳಿಸಿರ್ದಪಾರ್ವರುಂ ಸಾ ××× ಕವಿಲೆಯುಂ ಕೊಂದ್ದ ಕೊಲೆಪಯುದ್ದಗೆ (ಎಕ. VI, ಕಡೂರು. ೦೯೫-೮ ; ಸು. 750). [ ? ]

Δ**ಬೆಟ್ಗಱ್** 'ಬೆಳ್ಗಱ್' ನೋ.

Δ**ಬೆಟ್ಟು** 'ಬೆರ್ಚು$_{1}$' ನೋ.

**ಬೆಟ್ತು** (ನಾ). (?) : ಬೆಟ್ತಿಯು ಛತ್ರದೊಳ್ ನೂಱುಛತ್ರಮುಮಂ ... ಬಿಟ್ಟರ್ (ಎಕ. I (R), ೯೬-೮ ; 890).

[P ಇದು 'ಬೆಳ್ತಿಗೆ' ಎಂಬುದರ ಅಪಲಿಖಿತವಿರಬಹುದೆ ?]

Δ**ಬೆಟ್ದಲೆ** 'ಬೆದ್ದಲ್' ನೋ.

Δ**ಬೆಟ್ದೆಲೆ** 'ಬೆದ್ದಲ್' ನೋ.

**ಬೆಟ್ಪು** (ನಾ). ವಂಶ; ಕುಲ : ತಳ್ತಿಱಿದಸುಂಗೊಳ್ವನ್ನೆಗಂ ಕಾದಿ ತಾಂ ಬೆಟ್ಪುಂ ಕೀರ್ತಿಸಿ ಸಪ್ತದಕ್ಕ ರಣದೋಳ್ಳಾಸಿರ್ವರು ಕೊಂಗನಾಡೆಟ್ಟಿತ್ತುಂ ದಯಗೆಯ್ದಂ (ಎಕ.V(R), ಕೃಕ್ಷಸ. ೪೧-೯ ; ಸು. (10ನೆಯ ಶತ).

[←ತಮಿ. ವಿಟುಪ್ಪು]

Δ**ಬೆಟ್ವಲ** 'ಬೆಳ್ವಲ' ನೋ.

**ಬೇ$_{1}$**, ಬೆಯ್, ಬೇಯು (ಕ್ರಿ). ಬೆಂದ (ಭೂತಕೃ), ಬೇವ (ವರ್ತಕೃ). ಬೆಂದು (ಭೂತನ್ಯೂ). ೧. ಸುಡು ; ದಹಿಸು : "ಬೇ – ದಾಹೇ (ಸುಟ್ಟುಹೋಗು)" (ಶಮಧಾ) ; ಬೇವ ಶವಸಂಘಾತಂಗಳಂ ಚಕ್ಕು ಮೊಕ್ಕಂವಾಗಳ್ ಕಡಿದುಗ್ರಭೂತನಿಕರಂ ಕೆಯ್ ಬೇಯೆ ಬಾಯ್ ಬೇಯೆ ತಿಂಬಂದಂ ತನ್ನ ಮನಕ್ಕಗುರ್ವಿಸುವಿನಂ ದುರ್ಯೋಧನಂ ನೋಡಿದಂ (ಪಂಪಭಾ. ೦೩-೬೦) ; ಬೆಂದ [ಪಾಠಾಂ. ಹುರಿದು ಬಿತ್ತಿದ] ಬೀಜಂ ಪುಟ್ಟದು (ಪಂಚತಂ. ೬೩-೯). ೨. ಕುದಿದು ಪಕ್ವವಾಗು : ಅಕ್ಕಿಗಚ್ಚಂ ಬಸಿದು ತಿಳಿನೀರನೊಲೆಗೆತ್ತಿ ಕಳಸಿಯಕ್ಕಿಯು ಹಾಕಿ ಬೇವಾಗ ಕಳಿಯನೆಱೆದು ಬಳಿಕ ಬೇವಾ ಗಂಜಿಯು ಬಸಿದುಕೊಂಡು ಮುಚ್ಚುಳನಿಕ್ಕಿ . . . ಹೊಂಗಿಸಿ ಕೊಂಡು ಮೃದುವಾಗಿ ಮಾಡಿದುದು ತಾ ಶುದ್ಧಮುಪ್ಪೋದನಂ (ಸೂಶಾ. ೩-೨). ೩. (ಅಲಂ) ಸಂಕಟಪಡು ; ಯಾತನೆಪಡು ; ನರಳು : ಮರ ವಟ್ಟು ಕಾಡದೆ ಕಲ್ಪಮಹೀಜಂ ನಿಂದವು ಜಠರಾನಲನಿಂ ಬೆಂದುವು ತನು ಬಾಟ್ಟುಪಾಯಮಾವುದು ದೇವಾ (ಆದಿಪು. ೬-೬೪); ಅಳುರುತ್ತು ಮಿರ್ಪ ಮದನಾನಳನಿಂದೆತೆಂತು ಬೇವುದನಿತಂತತಿನಿರ್ಮಳಮುಪ್ಪುದು ಲಾವಣ್ಯಂ (ಲಾವಂಬು. ೩೨೬); ರಾಜೆಯೊಳ್ಬೇವಂಗೆ ದಿವ್ಯೌಷಧಂ . . . ಗಡ ಕೈಸಾರ್ದೊಡೆ ಭಾವಿಪಂದವನೆ ಧನ್ಯಂ (ರಮರಾಮ. ೩-೦೬); ಬೆಂದೊಡಲ ಹೊರೆವುದಕ್ಕೆ ನಾನಾಱ್ (ಮಹಾದೇ. ಐ. ೦೫-೦೬). ೪. ನಾಶವಾಗು ; ಹಾಳಾಗು ; ಅಳಿವನ್ನು ಹೊಂದು ; ಅಳಿ : ಸೆನಹು ಸತ್ತಿತ್ತು ಭ್ರಾಂತು ಬೆಂದಿತ್ತು (ಶಪಸಂ. ೬೮-೨೯೮) ; ಬೆಂದುದೊಳತೋಟಿಯಲಿ ಕೌರವವೃಂದ (ಕುಮಾವ್ಯಾ. ೦೫-೦೦); ಇಂದು ನಿಮ್ಮಂಘ್ರಿಯು ಕಂಡು ಮದ್ಭವಬೀಜ ಬೆಂದುದೆಂದರು ದ್ವಿಜೋತ್ತಮರು (ಜೈಭಾರ. ೪೧-೬೦).

**ಬೆಯ್:** ೧. ವಿರಹಾನಲನಳುರೆ . . . ಕಾಯ್ಪಿಂದುರಿಯುತ್ತುಂ ಬೆಯ್ವ ಶೈಲಮಿರ್ಪಂತಿರ್ದಂ (ರಮರಾಮ. ೩-೩೨). ೩. ದಿವದೊಳ್ ಭೋಗಿಪೊಡಂ ಮಹಾನರಕದೊಳ್ ದುಃಖಾಗ್ನಿಯಿಂ ಬೆಯ್ವೊಡಂ . . . ಒರ್ವನೆ ಬೆಯ್ವುಗುಮೆಂಬ ಜನರ ಶ್ರೀವಾಕ್ಯಮಂ ನಂಬಿದೆಂ (ರಮರಾಮ. ೩-೬೦).

**ಬೇಯು** : ೧. ಉರಿಯೊಳಗೆ ಪತ್ರಂಗಳಂ ಹಾಯ್ಕಿ ಕರವನೆತ್ತದ ಮುನ್ನ ಬೆಂದಿತ್ತು (ಬಸಪು. ೫೦-೩೬); ನಿದಾಘಸಮಯದ ಬಿಸಿಲ ಬೇಗೆಗೆ ಬೆಂದು ನೆಲನುಚ್ಚಿಸಿತಲ್ಲೆ ಕಡುಗಾದ ಕಾವಲಿಯಂತೆ (ತೊರವೆ. ೨-೪-೦೫). ೨. ಪಾತ್ರೆ ತುಂಬ ನೀರಿಟ್ಟು ಅಕ್ಕಿ ಹಾಕಿ ಬೆಂದ ಅನಂತರ ನೀರನ್ನೆಲ್ಲ ಬಸಿದು ತೆಗೆಯುವುದು ಸಾಮಾನ್ಯವಾಗಿ ಅನ್ನ ತಯಾರಿಸುವ ವಿಧಾನವಾಗಿದೆ (ಅಡುಗೆ. ೬೪).

[ದೇ.॥ ತಮಿ. ಮಲ. ವೇ ; ತುಳು. ಬೇಯು ; ಕೊಡ. ಬೆಯ್ ; ತೆಲು. ವೇಗು ; ಕೋತ. ವೆಯ್ ; ತೊದ. ಪೊಯ್ ; ನಾಯ್ಕಿ. ವೀ ; ಪರ್ಜಿ. ವೇಪ್ ; ಕುಇ. ವೇವ ; ಕುರುಖ್. ಬೀಯಿನಾ]

**ಬೇ$_{2}$** (ಕ್ರಿ). ಬೇತು$_{1}$ (ಭೂತನ್ಯೂ). ದೈನ್ಯದಿಂದ ಅಥವಾ ಆರ್ತತೆ ಯಿಂದ ಬೇಡು: ಕೇಳುದನಿಯಲಿ, ಬೇತು, ಬಿಸುಸುಯ್ಯುತ, ಇನ್ನೊಬ್ಬ ನೊಲುಮೆಯನು ನಾನು ಹಾಡಿದ ಬಗೆಯ ನನ್ನೊಲುಮೆಬೇಗೆಯನು ತೆರೆದರುಹಿತು (ಇಂಗೀತ. ೪೫-೦೦).

**ಬೇತುಕೊಳ್ಳು**=ದೈನ್ಯದಿಂದ ಕೇಳಿಕೊಳ್ಳು : "ಸ್ವಾಮಿ, ಸ್ವಾಮಿ, ದಿನಾಲೂ ಒಂದು ಗಂಟೆಯಾದರೂ ಪ್ರಾಕ್ಟೀಸು ಮಾಡಿಕೊಳ್ಳೋ" ಎಂದು ರಾಜಂ ಅವನನ್ನು ಬೇತುಕೊಂಡ (ಸ್ವಾಮಿನ್ನೇ. ೦೬೬). [ ? ]

**ಬೇ$_{3}$—** (ಉಪ). ಇಲ್ಲದುದು ಎಂಬ ಅರ್ಥವನ್ನು ಕೊಡುವ ಒಂದು ಉಪಸರ್ಗ : 'ಬೇದಿರುಸು' ಪರಾ. [← ಪಾರ. ಹಿಂ. ಬೇ]

**ಬೇಅಬರು** (ನಾ). ಅವಮರ್ಯಾದೆ ; ತಿರಸ್ಕಾರ : "ಅವಮಾನ" (ಜಾವಕೋ. ೨೯) : ಕಾಟಪ್ಪನವರ ಒಬ್ಬ ಸಭ್ಯಗೃಹಸ್ಥನ ಬೇಅಬರು ಮಾಡ್ತಾ ಇದ್ದೀರಿ ನೀವು (ಜಾಂಬಾಯ. ೬೯).

[← ಪಾರ. ಹಿಂ. ಬೇಆಬರೂ; ಮರಾ. ಬೇಅಬರೂ, ಬೇಅಬ್ರೂ]

**ಬೇಅಸಲ್** (ನಾ). ಆಧಾರವಿಲ್ಲದುದು ; ಸುಳ್ಳು : ಇಂಗ್ರೇಜಸರಕಾರದ ಸೀಮೆ, ಮೈಸೂರುಅರಸಿನ ಸೀಮೆ ಜಾಗದಲ್ಲಿ ಇದ್ದು, ನಿಮ್ಮ ಸೀಮೆಗೆ ಸಮೀಪವಾಗಿ ಇದ್ದರೆ, ತಮ್ಮ ಮನಸ್ಸಿನ ಅಂದೇಶ ಭಾವನೆ ಬೇಅಸಲ್ ಆಗುತ್ತಿತ್ತು (ರಾಜೇಂದ್ರ. ೦೯೪) ; ಮೈಸೂರುಅರಸಿನ ಸೀಮೆ ಜಾಗಾದಲ್ಲಿ ಇಂಗ್ರೇಜಬಹಾದ್ದರಕುಂಪನಿಸರಕಾರದ ಸೀಮೆ ಆಗಿ ಇದ್ದರೆ, ತಮ್ಮ ಯೋಚನೆಗೆ ಬೇಅಸಲ್ ಆಗುತ್ತಿತ್ತಷ್ಟೆ (ರಾಜೇಂದ್ರ. ೦೯೫).

[←ಹಿಂ. ಬೇಅಸಲ್]

**ಬೇಇಮಾನ**, ಬೇಮಾನ (ನಾ). ನಂಬಿಕೆಗೆ ಅರ್ಹನಲ್ಲದವನು ; ಅಪ್ರಮಾಣಿಕ : ಕಾಲಗತಿಯಿಂದ ಸಂಭಾಜಿಯ ವಧೆಯ ನಂತರ ಸೂರ್ಯಾಜಿ ಬೇಇಮಾನನಾದ (ಹಂಸಾ. ೦೦). **ಬೇಮಾನ :** ನೀವಾದರೆ ಮುಸಲ್ಮಾನಪಾದುಷಹರು ಹೀಗೆ ಹಿಂದೂ ಬೇಮಾನನೊಂದಿಗೆ ಸೇರುವುದು ಸರಿಯಲ್ಲ (ಬಕ್ಕರು. ೮).

[ ←ಪಾರ. ಹಿಂ. ಬೇಈಮಾನ್ ; ಮರಾ. ಬೇಇಮಾನ್ ]

**ಬೇಂಕು** 'ಬ್ಯಾಂಕು' ನೋ.

**ಬೇಂಗಪಲ್ಲಿ** (ನಾ). ಒಂದು ಬಗೆಯ ದೊಡ್ಡಹುಲಿ : ಕಳೆದ ತಿಂಗಳಲ್ಲಿ ಒಂದು ಅಡ್ಡಬಲಿಪ್ಪನೋ, ಬೇಂಗಪಲ್ಲಿಯೋ ಒಬ್ಬ ಗೌಡನ ತೋಳನ್ನು ಕಚ್ಚಿ ಹರಿದುಬಿಟ್ಟಿತಲ್ಲ (ಚಟ್ಟಜೀ. ೨೨). P ಇದು ತಮಿಳಿನ 'ವೇಙ್ಕೈ' ಎಂಬ ಶಬ್ದಕ್ಕೆ 'ಪುಲಿ' ಎಂಬುದು (ಒಂದೇ ಅರ್ಥದ ಎರಡು ರೂಪಗಳು) ಸೇರಿ ಉಂಟಾದ ಶಬ್ದರೂಪವಿರಬಹುದು.

[ದೇ.॥ ತಮಿ. ವೇಙ್ಕೈ ; ಮಲ. ವೇಙ್ಙ; ತೆಲು. ವೇಗಿ./ಸಂ. ವ್ಯಾಘ್ರ]

**ಬೇಂಟ**, ಬೇಟ (ನಾ). ೧. ಹೆಣ್ಣುಗಂಡುಗಳಲ್ಲಿ ಪರಸ್ಪರ ಉಂಟಾಗುವ ಮೋಹ; ಪ್ರಣಯ ; ಪ್ರೀತಿ : ಆ ಸ್ವಯಂಪ್ರಭೆ ಲಲಿತಾಂಗನಳ್ಕೆರ್ದೆಗೆ ತೊಟ್ಟನೆ ಬೇಂಟವೆ [ಪಾಠಾಂ. ಬೇಟವೆ] ಪುಟ್ಟೆ ಪುಟ್ಟಿದಳ್ (ಆದಿಪು. ೨-೬೩); ಜವ್ವನೆಯ ಮೊಲೆಯಂತೆ ಬೇಂಟದ ಕೊಂಡಾಟದಂತೆ ಮಧ್ಯಾಹ್ನದರ್ಕನಂತೆ . . . ಕಡೆಯೊಳ್ ಪೇಸುಪಥಮುಮಶೋಭೆಯುಮಾಗದೆ ಪೋಗದು (ಧರ್ಮಾಮೃ. ೬-೧೨೨) ; ರೂಪಂ ಕರಂ ಮೆಚ್ಚಿಯುಂ ತಲೆಯಂ ತೂಗದೆ ಪಾಂಥರೀಂಟೆ ವಿಕಸತ್ತ್ಯಷ್ಣಾತುರರ್ ಚಿತ್ರಭೂತಲದೊಳ್ ನಾಂಟಿದ ಬೇಂಟಮೇಂ ಬಗೆಗೆ ನೀರ್ವೊಯ್ವಂತೆ ಭೃಂಗಾರಶೀತಲತೋಯಂಗಳನಾಂತು ಪಾಣಿತಳದೊಳ್ ಪೊಯ್ವರ್ ಪ್ರಪಾಕಾಂತೆಯರ್ (ಲೀಲಾವ. ೬-೦೨೯). **ಬೇಟ** : ೧. ಬಗೆಯೊಳ್ಪೇಟದ ಬೀಜಮಂ ತಳಿದು ನೀರ್ವೊಯ್ವಂದದಿಂ ತೋಳ ಸುಣ್ಕೊಗರ್ಗಳ್ಕೋರ್ಚಿನಮೆತ್ತಿ ತಣ್ಗೊಳಸಮಂ ನೀರ್ವೊಯ್ವುದುಂ (ಮಲ್ಲಿಪು. ೨-೨೯) ; ನೋಟ ವಶ್ತಲು ಮನದ ಬೆಸುಗೆಯು ಬೇಟವಿತ್ತಲು . . . ನೋಟಕರಿಗರಿದಾಯ್ತು ಭಾವಿಸೆ ಬೆಡಗು ಮಾಯೆಯಲಿ (ಕೃಶಾಲೀ. ೬-೨೯) ; ನೆಲನ ಬೇಟವ ಬಿಸುಟು ಜೀವದಲಾಳಿದೆ ತೊಲಗೆನೆ ಪವನಸುತ ಕಳಲಿಸಿ ನಗುತವೆ ಕೌರವೇಂದ್ರಂಗೆಂದನುತ್ತರವ (ಕುಮಾವ್ಯಾ. ೩-೦೨). ೨. ಆಕರ್ಷಣೆ; ಸೆಳೆತ : ಬೇಟವಿಲ್ಲದ ಬೆಲೆವೆಣ್ಗಳಿಲ್ಲ (ಕವಿಕಾ. ೨೬); ನೋಟದಲಿ ಮಾತಾಡಿ ಪುರ್ಬಿನ ಬೇಟದಲಿ ಬಳ್ಕಾಡಿ . . . ಸರ್ವಸ್ವವನು ನೆಟ್ಟ ಕಪರಿ ಗೋಟು ಗೊಳಿಸುವ . . . ಬೇಟಕಾತಿಯರೊಪ್ಪಿದರು (ಕೊರಠಾ. ೦-೩-೩೦) ; ಕಡೆಗಣ್ಣ ಸವಿನುಡಿ ನಿಡುಹುಬ್ಬಿನ ಬೇಟ ಬಡನಡು ಕಡುನಿತಂಬಗಳ . . . ಮುದ್ದುಮಡದಿರನ್ನೆಯರ್ಬೈದಿದರು (ಶಂಪಾ. ೨೦-೬೩). ೩. ಆಸೆ ; ಬಯಕೆ: ಬೇಟಂ ಲೇಸು ಕುಡುವುದರಿದೆಂಬಂತೆ ಕೊಲೆ ಲೇಸು ಕಾವುದರಿದೆಂಬಂತೆ . . . ಸಂಸಾರದ ಸುಖಂ ಲೇಸು ಮೇಗಣ ನರಕದುಃಖಂಗಳರಿಯವು (ಧರ್ಮಾಮೃ. ೮-೮೦). [ದೇ.॥ ತಮಿ. ವೇಟ, ವೇಟ್ಕೈ, ವೇಟ್ಟು; ಮಲ. ವೇಳ್]

**ಬೇಂಟಂಗೊಳ್**, ಬೇಟಗೊಳ್ (ಕ್ರಿ). ಹೆಣ್ಣುಗಂಡು ಪರಸ್ಪರವಾಗಿ ಪ್ರೀತಿಯನ್ನು ಹೊಂದು ; ಪ್ರಣಯದಲ್ಲಿ ಉತ್ಸಾಹವನ್ನು ಹೊಂದು : ಆನೋರ್ವಳ್ಗೆ ಬೇಂಟಂಗೊಂಡಿರ್ದೆಂ (ವಡ್ಡಾರಾ. ೦೩೦-೦೦). **ಬೇಟಗೊಳ್** : ಸ್ಮರಶಿಖಿ ಹಲವುಕಾಲ ಬೇಟಗೊಂಡಳಲನೊಂದಿರುಳ ಭೋಗದೊಳು ತೀರ್ಚಿದರು (ಭಾಜ. ೪೦-೦೬೯) ; ತಳೆದುತ್ಕಲಿಕೆಯುಸಾದಂ ಬೆಳರ್ತು ಕಡುಬೇಟಗೊಂಡಳಂತೆಸೆವುದ್ಯಾನಲತೆಯನೀಕ್ಷಿಸಿ ನಾಂ ಪಾಟಲವರ್ಣಾಂಗ್ಯೆವೆನಿಂದು ದೇವಿಯು ಮೊಗಪಂ (ರ್ಸ್ವಾಶೀ. ೮೩). [ಬೇಟ+ಕೊಳ್$_1$]

**ಬೇಂಟಗಾಱ**, ಬೇಟಕಾರ, ಬೇಟಕಾಱ$_1$ (ನಾ). ೧. ಪ್ರಣಯಾಸಕ್ತನಾದವನು ; ಪ್ರಣಯಿ. ೨. ಕಾಮುಕ : ಜಾರೆಯ ಮಾತಂ ನಂಬಿ ತನ್ನ ಪೆಂಡತಿಯಂ ಬಿಡುವ ಬೇಂಟಗಾಱನುಮಂ (ಧರ್ಮಾಮೃ. ೬ ೩೦). **ಬೇಟಕಾರ** : ೧. ಬೇಟಕಾರ ಬಂದ ಮಾದ, ಹಸ್ತು! ಏನು ಬೇಟವೋ ! (ಜಂಗೀತ. ೩೯-೦). **ಬೇಟಕಾಱ$_1$** : ೧. ಇದಂ ಪುಗಲಿಂ ಗಡಮೆಂದು ಬೇಟಕಾಱನಿರದೂಱ್ ಸಾಱ್ ಜಡಿಪಂತೆಸೆಗುಂ ಸಹಕಾರಕೋಮಳಾಂಕುರ ಪರಿತುಷ್ಟಪುಷ್ಟ ಪರಪುಷ್ಟಗಳಧ್ವನಿ ನಂದನಂಗಳೊಳ್ (ಶಂಖಾ. ೨-೦೩) ; ಕರುಣಿಸದೆ ಬೇಟಕಾಱರ ಶಿರಮಂ ಕೊಳ್ಳೆಂದು ಕಾತು ಮಧುಮಂಗಟ್ಟಿರ್ಪರಿದಲೆಗೊತ್ತಿದರ್ಣಂಡಿಗೆಯರಗನೆ ಪೋಲ್ದತ್ತು ಶೀತಕರನ ಕಳಂಕಂ (ಸೂಕ್ತಿಸು. ೮-೨೩೩). [ಬೇಂಟ +—ಕಾಱ]

**ಬೇಂಟಿಗ** (ನಾ). ಬೇಟೆಯಾಡುವವನು ; ಬೇಡ; ಶಬರ : ಇಡುವಲೆ ಸಿಡಿವಲೆ . . . ಬಿಡುವಲೆಗಳೆನಿಪ್ಪವೆಸೆದುವಾ ಬೇಂಟಿಗರೊಳ್ (ಜಬಜಂ. ೪-೨೯). [ಬೇಂಟೆ +—ಇಗ]

**ಬೇಂಟೆ**, ಬೇಟೆ (ನಾ). ೧. ಕಾಡುಪ್ರಾಣಿಗಳನ್ನು ಕ್ರೀಡೆಗಾಗಿಯೋ ಆಹಾರಕ್ಕಾಗಿಯೋ ಹಿಂಬಾಲಿಸಿ ಹಿಡಿಯುವುದು ಅಥವಾ ಕೊಲ್ಲುವುದು; ಶಿಕಾರಿ; ೮ ಸಪ್ತವ್ಯಸನಗಳಲ್ಲಿ ಒಂದು: "ಆಖೇಟಸಂ, ಮೃಗಯಾ, ಮೃಗವ್ಯಂ, ಪಾಪರ್ಧಿಃ, ಆಖೇಟಕಃ—ಈ ೫ ಬೇಂಟೆ" (ಹಲಾಯು. ೬೦-೨೮೦); ಅವರ ತಪೋಮಹಾತ್ಮ್ಯದಿಂ ಲಲಿತಘಟಿಗೊಂದುಮಿಂಗ, ಮಪ್ಪೊಡಂ ಬೇಂಟೆ ಸಮನಿಸದೆ (ಪಶ್ವಾರಾ. ೯೩-೨೩); ನಾಮಿದನಱಿಯದಂತು ಬೇಂಟೆಯ ನೆವದೊಳ್ ಬಟ್ಟೆಗಳಂ ಸೋದಿಸುವಂ (ಶಂಖಾ. ೩-೪ ವ): ಜವ್ವನದಿ ಬೇಂಟೆಗೆನುತಾಕೆ ಕಾಡೊಳಗಲೆಯುತಿರಲೊರ್ವ ಗೈರಿಕವಸನವೇಷಿ ಸುರಪುರುಷನೈತರಲ್ (ಶಕ್ರಾಂಗ. ೬೩-೦೯೩). ೨. ಬೇಟೆಗೆ ಸಿಕ್ಕಿ ಬೀಳುವ ಪ್ರಾಣಿ ; ಈಡುಮೃಗ : ದೇವರ ಧರ್ಮದೊಳೊಂದು ಬೇಂಟೆ ದೊರೆಕೊಂಡರೆ ಕೂಡಲಸಂಗಮದೇವಂಗರ್ಪಿತವ ಮಾಡುವೆ (ಬಸವ. ೯೦೬). ೩. (ಆಲಂ) ಅನಾಯಾಸವಾಗಿ ದೊರಕಿದುದು ;ಲಭ್ಯವಾದುದು : ಮೇಧಾವಿನಿಯು ಪುಣ್ಯದಿಂದೆಂತಪ್ಪ ಬೇಂಟೆ ದೊರೆತುದಿಂದು ! (ತಂದ್ರಸ. ೩೯-೨೩). **ಬೇಟೆ** : ೧. ಖೇಳಮೇಳದ ಬೇಟೆಗಳ ವೈಹಾಳಿಗಳ ಜೂಜಿನ ಸಮಂಜಸಲೀಲೆಗಳ ಕೇಳಿಯಲಿ ಕಳೆವರು ಪಂಚವರ್ಷಗಳ (ಸಂಭಶ. ೩೩-೦); ಗಾನವೆಲ್ಲಕೆ ಹಿತವಹುದದು . . . ಪುಣ್ಯಹೀನಸತಿಯರಾಟ ಬೇಟೆ ಕಾಳಗ ಬಂದರೇನೆನ್ನಬಹುದದು ಪಾಪ (ಭಕತ. ೧-೮೯) ; ಎಮ್ಮೆಯ ಬೇಟೆಯನ್ನೇ ಇಚ್ಛಿಸುವ ಅವರು ನಮಗೆ ಕಷ್ಟ ಕೊಡಲಿಕ್ಕಿಲ್ಲ (ಬಂಗಾಪ.೬೦). ೨. ಸಿಕ್ಕ ಬೇಟೆಯನ್ನು ಎಲ್ಲರೂ ಸರಿಯಾಗಿ ಹಂಚಿಕೊಳ್ಳಬೇಕು (ಮುಂಬಯಿ. ೪-೦೦); ಬಿಡದಿರು ನೀನಿಂದು ಹಿಡಿದೊಂದು ಬೇಟೆಯ ಕೈಯೊಳಗಿರುವೊಂದು ಮೊಲವ (ಇಂತಾಕ. ೦೬೩-೦೪). ೩. ಬೇಟೆ ಬಲೆಯೊಳಗಿಂದ ಪಾರಾಗಿ ಹೋದುದಷ್ಟೇನು ಬಲ್ಲಳು (ಪಾಂಶೀ. ೬೯). ೪. ಹುಡುಕಾಟ ; ಅರಸುವಿಕೆ : ಎರಡನೆಯ ಹೆಂಡತಿ ತೀರಿಕೊಂಡು ಆರೇಳು ತಿಂಗಳಾಗಿದ್ದವಂತೆ. ಅಷ್ಟೆ ! ಈಗ ಇನ್ನೊಂದಕ್ಕಾಗಿ ಬೇಟೆಯಂತೆ (ಕವ್ಯತಿ. ೩೩).

**ಬೇಂಟೆಯನ್**=ಬೇಟೆಗಾರ ; ಬೇಡ ; ಶಬರ : ತೊಟ್ಟಿಕ್ಕಮಡಂ ಮರವಿಲ್ ಕಟ್ಟಿದ ಪಣೆಕಟ್ಟು . . . ತನ್ನೊಳಮರೆ ಬೇಂಟೆಯನೊರ್ವಂ ಬಂದು ಪೊಡಮಟ್ಟು ಕರಿಡಿಂತೆಂದಂ (ಶಂಖಾ. ೩-೩೬).

[ದೇ.॥ ತಮಿ. ವೇಟ್ಟೈ, ವೇಟ್ಟು, ವೇಟ್ಟಲ ; ಮಲ. ವೇಟ್ಟ; ತುಳು. ಬೇಂಟೆ, ಬೇಟೆ, ಬೊಂಟೆ ; ಕೊಡ. ಬೋಟೆ ; ತೆಲು. ವೇಂಟ, ವೇಟ ; ಕೋತ.ವೆಟ್ ; ತೊದ. ಪೆಟ್ ; ನಾಯ್ಕಿ. ವೇಟ]

**ಬೇಂಟೆಕಾಱ** 'ಬೇಂಟೆಗಾಱ' ನೋ.

**ಬೇಂಟೆಗ**, ಬೇಟೆಗ (ನಾ). ಶಿಕಾರಿಯಾಡುವವನು : ಬೇಡ ; ಶಬರ; ವ್ಯಾಧ : ಒಂದೆ ಪುಲ್ಲೆ ಬೇಂಟೆಗರ ಕೆಯ್ಯೊಳಾದಂತೆ (ಶಾಂತಿ. ೦೪-೨೬ ವ); ಪಸಿವಿಂದಂ ಬೇಂಟೆಗಂ ನಟ್ಟಡವಿಗೆ ನಡೆತಂದು (ಶಂಪಾಕ. ೦೩) ; ದೀವದ ಹೋರಿಯಂ ಕಟ್ಟಿ ಬೇಂಟೆಗಂ ಮರಸು ಕುಳಿತಿರೆ ಮರದ ತುದಿಮಂಚಿಗೆಯ ಮೇಲೆ (ಶ್ರೀರಾಪಾ. ೩೦೦-೨೮೦). **ಬೇಟೆಗ** : ಬೇಹಿನ ಸಿಂಗ ಬೇಡರ ಪೆಮ್ಮ ಬೇಟೆಗ[ಪಾಠಾಂ. ಬೆಟ್ಟಿಗ, ಬೇಟೆಯ]ಚೋಹದ ಹರಿಗೆಯ ಲಿಂಗ ಸೋಹಿನ ಪೆಸ್ಸನವರ ಕಳುಪಿದನಂದಾ ಹುಯ್ಯಲಿಗೆ (ಕುಠಾಕಾಂ. ೦೯-೮೯).

[ಬೇಂಟೆ + — ಗ$_2$]

**ಬೇಂಟೆಗಾರ್ತಿ** (ನಾ). ಬೇಡಿತಿ : ಶಬರಿ : ಪಾಂಥರ್ ಬಲವಂದು ಬೆಳ್ಮೃಗದವೊಲ್ ಸಾರ್ತಂದು ಬೆಳ್ಪಾಗೆ ಪಾಪರಿಯರ್ ಕಾಮನ ಬೇಂಟೆಗಾರ್ತಿಯರೆನಿಪ್ಪಾಶಂಕೆಯಂ ಮಾಡುವರ್ (ಸೂಕ್ತಿಸು. ೪-೬೬) ; ಯುಂಪೊಸ್ಮೃಗಮಂ ಕಱತ್ತು ಕೋಲೆತ್ತುವ ಬೇಂಟೆಗಾ [ಪಾಠಾಂ. ಕಾ]ರ್ತಿಯರಪೋಲೆಸೆದರ್ ವಿಗೆ ಮಾಲೆಕಾರ್ತಿಯರ್ (ಗಿರಿ. ೨-೮೮).

[ಬೇಂಟೆಗಾಱ+ — ತಿ$_1$ (<— ಇತ್ತಿ)]

**ಬೇಂಟೆಗಾಱ**, ಬೇಂಟೆಕಾಱ, ಬೇಟೆಕಾಱ, ಬೇಟೆಗಾರ, ಬೇಟೆಗಾಱ (ನಾ). ಶಿಕಾರಿಯಾಡುವವನು ; ಬೇಡ ; ಶಬರ : ಕ್ರೂರರಪ್ಪ ಬೇಂಟೆಗಾಱರೊಳ್ಕೂಡಿ . . . ಬೇಂಟೆಗೆ ಪೋಪ ರೌದ್ರಾತ್ಮರ ನೆಗೞ್ತಿಯೆ ನರಕಗಮನ

ಮನಜಿಪುಗುಂ (ಧರ್ಮಾಮೃ. ೬-೬೩) ; ಅಂತೊರ್ವ ಬೇಂಟೆಗಾಱಂ ಬಂದು ರಾಜಹಂಸಂಗೆ ಪೊಡೆಮಟ್ಟು ಇಂತೆಂದಂ (ದಶಕು. ೨-೦೦೨ ವ). **ಬೇಂಟೆಕಾಱ :** ನೋಡಿದ ಪೆಂಡಿರೆಲ್ಲಂ ಕಾಮದೇವನೆಂಬ ಬೇಂಟೆಕಾಱಂಗೊಡ್ಡಿದ ಪುಲ್ಲೆಗಳಂತರಲಂಬಿನ ಮೊನೆಗೆ ಪೂಣೆ ಪೊತ್ತು ಪಕ್ಕಾಗಿರೆ (ಕಾದಂಬ. ೪-೩೯ ವ) ; ಬೇಂಟೆಕಾಱನಂತೆ ಅಡಿವಜ್ಜೆಯನಱಿಸಿಯುಂ (ಗದಾಯು. ೬-೨೮ ವ); ಫೇರಿಟ್ಟಿ . . . ಕವಲಂಬುಸಹಿತಂ ಭೋರನೆ ನೆರೆದತ್ತು ಬೇಂಟೆಕಾಱರ ತಂಡಂ (ಪಶತಂ. ೬೯). **ಬೇಟೆಕಾಱ :** ಬೇಟೆಕಾಱನು ಮೃಗವನಟ್ಟಿ ಮೃಗ ಗೋರಿಗೊಳಗಾಗದಯ್ಯಾ (ಬಸವ. ೮೩೫) ; ಚರರು ಮಲ್ಲರು ಬೇಟೆಕಾಱ[ಪಾಠಾಂ. ಬೇಂಟೆಗಾಱ]ರು ಪರಿಜನಾವಳಿಸಹಿತ . . . ಪಯಣವಲರಸನೈತಂದ (ಕುಮಾ.ರಾ. ೦೬-೩೨). **ಬೇಟೆಗಾರ :** ಲಕ್ಕೂರಿಗೆ ಮೂಡಲ ಆಗ್ನೇಯ ದಿಕ್ಕಿನಲ್ಲಿ ಬೇಟೆಗಾರನ ಆಲದ ತಾಳಿನಲ್ಲಿ ನೆಟ್ಟ ಕಲ್ಲು ೧ (ಎಕ. III, ಮೈಸೂರು. ೦೦೬-೪೦ ; 1664) ; ಬೇಟೆಗಾರನಿಂದ ತಪ್ಪಿಸಿಕೊಂಡು ಓಡುವ ಮೃಗಗಳು ವೇಗದಿಂದ ಪೊದೆಯಲ್ಲಿ ಪ್ರವೇಶಿಸುವಂತೆ ಇವು ಅಗ್ನಿಯನ್ನು ಪ್ರವೇಶಿಸುತ್ತವೆ (ಹುಣ್ಣಿರ. ೨೦೦). **ಬೇಟೆಗಾಱ :** ಬೆಟ್ಟದ ನವಿಲಿಗೆ ಕಣ್ಣೀರು ಬಂದರೆ ಬೇಟೆಗಾಱಗೆ ದಯ ಪುಟ್ಟೀತೆ (ಪುರಂದ. ೦-೦೩೬-೨).

**ಬೇಟೆಗಾರನ ಹಕ್ಕಿ** = ತನ್ನ ಆಹಾರವನ್ನು ಬೇಟೆಯಾಡಿ ದೊರಕಿಸಿಕೊಳ್ಳುವ ಹಕ್ಕಿ; ವಿಸಿಲುಗುಳಿಗೆ ವಾಯುಳ್ಳಿ: (೯). **ಬೇಟೆಯ ರಾಯ** = ಒಂದು ದೇವತೆಯ ಹೆಸರು : ಸಕಲಜನಪರಿಗಿಷ್ಟಾರ್ಥವನೀಯುತ ಭಕುತವತ್ಸಲನು ತಾನಾಗಿ ಅಕಳಂಕಮೂರ್ತಿ ಬೇಟೆಯ ರಾಯನಾ ಗಿರಿಶಿಖರದೊಳಗೆ ನೆಲಸಿಪನು (ಕಂವಲಿ. ೩-೯). [ಬೇಂಟೆ + — ಕಾಱ]

**ಬೇಂಟೆಗೊಳವಿ** (ನಾ). ಶಿಕಾರಿಗೆ ಉಪಯೋಗಿಸುವ ತುಪಾಕಿ,– ಬಂದೂಕು : ತಮ್ಮ ನೇಹಿಗರ್ವೆರಸು ಬೇಂಟೆಗೊಳವಿಗಳಂ ತಳೆದು ಪೊಱಮಟ್ಟು ದೇಗುಲದ ಗೋಪುರಪ್ರಾಕಾರ ಮಂಟಪ ವಿಮಾನಂಗಳೊಳ್ ನೆಲಸಿರ್ಪ ಕಿಱುವಕ್ಕಿಗಳನೂದಿ ಮಿಾಂಟೆಗಳಿಂದಿಟ್ಟು ಕೆಡಪಿ (ಚಕವಂ. ೬-೯).

[ಬೇಂಟೆ + ಕೊಳವಿ (< ಕೊೞವಿ)]

**ಬೇಂಟೆಗೋಲ್** (ನಾ). ಶಿಕಾರಿಯಲ್ಲಿ ಬಳಸುವ ಕೋಲು, – ಬಡಿಗೆ : ಪುಳಿಂದರ ಬೇಂಟೆಗೋಲ್ಗಳಂ ಬಡಿಯೆಂಬರ್ . . . ಅಡಿಯೆಂಬರಂಘ್ರಿಗಳನಲ್ಲದೀ ನುಡಿಗಳಂ ನುಡಿಯರಾ ಜನಪದದೊಳು (ಕಬ್ಬಿ. ೬-೪೪).

[ಬೇಂಟೆ + ಕೋಲ್$_1$]

**ಬೇಂಟೆನಾಯ್**, ಬೇಟೆನಾಯಿ (ನಾ). ಇತರ ಪ್ರಾಣಿಗಳನ್ನು ಶಿಕಾರಿಯಾಡುವ ನಾಯಿ ; ಶಿಕಾರಿಯ ತರಬೇತು ಹೊಂದಿರುವ ನಾಯಿ : ಕಂಪುವಿಡಿದಿಂತು ಬಕರ್ಗಂ ಬಿಡದೆ ಬೇಂಟೆನಾಯ್ (ಅಕ್ರೂ. ೧-೧೦). **ಬೇಟೆನಾಯಿ :** ಕ್ರಮೇಣ ಟೈಗರು ಸೊಗಸಾದ ಬೇಟೆನಾಯಿಯಾಯಿತು (ಕಾಡುಸು. ೦೬೪); ಬೇಟೆಯಾಡುವುದಕ್ಕೆ ಕಲಿತ ಮಲ್ಲ ಬೇಟೆನಾಯಿಯ ಚೊಂಕ ಮುರಿದ (ಗಾಕ). [ಬೇಂಟೆ + ನಾಯ್]

**ಬೇಂಟೆಪಱೆ**[3] 'ಬೇಂಟೆವಱೆ[3]' ನೋ.

**ಬೇಂಟೆವುಲಿ** (ನಾ). ೧. (ಆಲಂ) ಮೃಗಗಳನ್ನು ಬೇಟೆಯಾಡುವುದಕ್ಕೆ ಉಪಯೋಗಿಸುವ ಪಳಗಿಸಿದ ನಾಯಿ. ೨. ಪ್ರಾಣಿಗಳನ್ನು ಬೇಟೆಯಾಡುವುವರಲ್ಲಿ ಹುಲಿಯಂತಿರುವವನು ; ಕಲಿ; ಪರಾಕ್ರಮಿ; P ಬೇಟೆಯಾಡುವ ನಾಯಿಗಳಿಗೆ ಮತ್ತು ಪರಾಕ್ರಮಿಗಳಿಗೆ, ಅವರ ಶಕ್ತಿಯ ಹೆಚ್ಚಳದ ಗುರುತನ್ನು ಸೂಚಿಸಲು ಬಳಸುವ ಪದ: ಬೇಂಟೆವುಲಿಗಳಿರ, ಕಳಿಯರಿರ, ನಿಮ್ಮೊಳಂ, ಅವನೊಳಂ, ಈ ಅಟ್ಟುಳಿಯ ಪೊಱೆಯನ್ ಇಟ್ಟೆನ್ (ಅಕ್ರೂ. ೨೩-೪೬೦). [ಬೇಂಟೆ + ಪುಲಿ]

**ಬೇಂಟೆಯಾಡು**, ಬೇಟೆಯಾಡು (ಕ್ರಿ). ಪ್ರಾಣಿಗಳನ್ನು ಹಿಂಬಾಲಿಸಿ ಹಿಡಿ ಅಥವಾ ಕೊಲ್ಲು ; ಶಿಕಾರಿಯಾಡು: ಬೇಂಟೆಯಾಡುವರುಂ ಮಧುಮದ್ಯಮಾಂಸಂಗಳಂ ಸೇವಿಸುವರುಂ . . . ನಾರಕರಾಗಿ ಪುಟ್ಟಿ . . . ದುಃಖಂಗಳನನುಭವಿಸುವರ್ (ವಡ್ಡಾರಾ. ೯೬-೨೦); ನೀನುಂ ತಾನುಮೊರ್ಮೆ ಗಂಗಾನದೀತೀರದೊಳ್ ಬೇಂಟೆಯಾಡುವಲ್ಲಿ . . . ದಿವ್ಯಜ್ಞಾನಿಗಳಂ ಕಂಡು ಪೊಡೆಮಟ್ಟು (ಕಂಕಥಾ. ೯-೬೬ ವ); ದುಷ್ಟಮೃಗಗಳ ಬೇಂಟೆಯಾಡಿ . . . ಸುಜನರರಿಷ್ಟವನು ಪರಿಹರಿಸುತ್ತೈತಂದನು ಸರಾಗದಲಿ (ಕುಮಾ.ವಿ. ೦-೧೦). **ಬೇಟೆಯಾಡು :** ತುಱುಪಳ್ಳಿಗಳ ನೋಡಿ ವನಾಳಿ ತಪ್ಪದೆ ಬೇ[ಪಾಠಾಂ. ಬೇಂ]ಟೆಯಾಡಿ ಸಮಸ್ತಬಲಸಹಿತ . . . ನೃಪ ಬಿಡಿಸಿದನು ಪಾಳಯವ (ಕುಮಾ.ಭಾ. ೦೬-೦) ; ಬೇಟೆಯಾಡುತ ಬಂದ ಸ್ವಾಮಿ ಬೆಟ್ಟದ ಮೇಲೆ ನಿಂದ (ಪುರಂದ. ೦-೬೬-೨); ಅಂದು ಬೇರೆ ಬೇಟೆಯು ಸಿಕ್ಕಲೂ ಇಲ್ಲ . . . ಬೇಟೆಯಾಡುವ ಮನಸ್ಸೂ ಇರಲಿಲ್ಲ (ಶ್ರೀರಾಯ. ೩೬).

[ಬೇಂಟೆ + ಆಡು$_1$]

**ಬೇಂಟೆವಸದನಂಗೊಳ್** (ಕ್ರಿ). ಶಿಕಾರಿಯ ವೇಷವನ್ನು ಹಾಕಿಕೊಳ್ಳು,– ತೊಟ್ಟುಕೊಳ್ಳು: ಬೇಂಟೆವಸದನಂಗೊಂಡು [ಕ]ಂಡಿಯ ಬಾಗಿಲೊಳು ದಾತ್ತನಾರಾಯಣನುಂ ನಾರಾಯಣನುಮಿರ್ದು ಪುಗಿಲ ಪುಲ್ಲೆಯ ಮೊದಲು ರಮಾಪಂ . . . ಎಚ್ಚು ಬಿಲ್ಲ ಬಲ್ಮೆಯಂ ಮೆಱೆವು (ಕಂಕಥಾ. ೩-೯೬ ವ).

[ಬೇಂಟೆ + ವಸದನ + ಕೊಳ್$_1$]

**ಬೇಂಟೆವಱೆ**[3], ಬೇಂಟೆಪಱೆ[3] (ನಾ). ಶಿಕಾರಿಯ ತಮಟೆ,– ಡೋಲು,– ಹರೆ : ತೊಟ್ಟಿಕ್ಕವಿತಂ ಮರವಿಲ್ ಕಟ್ಟಿದ ಪಣೆಟ್ಟು ಬೇಂಟೆವಱೆ . . . ತನ್ನೊಳಮರೆ ಬೇಂಟೆಯನೊರ್ವಂ ಬಂದು ಪೊಡಮಟ್ಟು (ಕಂಕಥಾ. ೩-೩೬); ಪರೆಪೊತ್ತುಱೊಳೆದ್ದು ಬೇಂಟೆವಱೆಯುಂ ಪೊಯ್ವರ್ (ಸಮುಕ. ಆಮುಖಂ. I. ೩೯೨-೩೯); ಅಬ್ಬರಿಸಿದುದು ಬೇಂ[ಪಾಠಾಂ. ಬೇ]ಟೆವಱೆ (ತೊರರಾ.೩-೩-೦೦); ಬೇಂಟೆವಱೆಯಬ್ಬರಮುಣ್ಮಿತು ತದ್ವನಾಂತರದೊಳ್ (ತ್ರಿಷ. ೨೬-೯೯). **ಬೇಂಟೆಪಱೆ[3]:** ಪಂಚಮಹಾಶಬ್ದಮನೊಲ್ಲದೆ ಬೇಂಟೆಪಱೆಯುಂ ಪೊಯ್ಸಿ (ಧರ್ಮಾಮೃ. ೬-೬೩); [ಬೇಂಟೆ + ಪಱೆ[3]$_1$]

**ಬೇಂಟೆವೋಗು** (ಕ್ರಿ). ಮೃಗಗಳನ್ನು ಹಿಡಿಯಲು ಹೋಗು : ಶಿಕಾರಿ ಮಾಡಲು ಹೋಗು : ಬೇಂಟೆಯ ನೆವದೊಳ್ ಬೆಟ್ಟಗಳಂ ಸೋದಿಸುವ ಮೆಂದು ನಿಚ್ಚಂ ಬೇಂಟೆವೋಗೆ (ಕಂಕಥಾ. ೩-೪ ವ); ಆತನೊಂದು ದಿವಸಂ ಬೇಂಟೆವೋಗಿ ವಯೋಧಿಕನಪ್ಪದೊಂದು ಪುಲಿಯಂ ಕಂಡು (ಕಂಕಥಾ. ೦೦೬-೦೯). [ಬೇಂಟೆ + ಪೋಗು$_1$ (< ಪೋ$_1$)]

**ಬೇಂಟೆಸೋವು** (ನಾ). ಬೇಟೆಯನ್ನು ಅಟ್ಟಿಸಿಕೊಂಡು ಹೋಗುವುದು: ಅಟ್ಟಿದುದು ಸೆಳೆಯಡಗಿತೀ ಬೇಂಟೆಸೋವು ನೆಟ್ಟಗಾಗದೆ ಪೋಯ್ತು, ಬಱಿಯ ಪೆಯ್ಸೋವು! (ಅಕ್ರೂ. ೩೬-೬೯೩).

[ಬೇಂಟೆ + ಸೋವು$_2$ (< ಸೋವು$_1$)]

**ಬೇಕ** (ನಾ). ೧. ಕಪ್ಪೆ. ೨. (ಆಲಂ) ಪುಕ್ಕಲುಮನುಷ್ಯ ; ಭೀರು ; ಹೇಡಿ : ನೀರ ತಡಿಯಲಿ ಕಾಲಯವಗಂಜಿ ಗುಜ್ಜುಹೊಗುವುದು ಹಂಗಳದಿರಿಲಿ ಲಜ್ಜೆದೊಱೆವುದು ಕೀಳುಬೇಕರ ಬಜ್ಜಿಸುವುದಿದು ನಿನ್ನ ಪೌರುಷವೆನುತ ತೆಗದೆಚ್ಚ (ಕುಮಾ.ಭಾ. ೦೩-೬೦). [<ಸಂ. ಭೇಕ]

**ಬೇಕರಿ** (ನಾ). ರೊಟ್ಟಿ, ಬಿಸ್ಕತ್ತು ಮುಂತಾದುವುಗಳನ್ನು ತಯಾರಿಸಿ ಮಾರುವ ಅಂಗಡಿ : ಪ್ರತಿದಿನ ಬೆಳಗಾದೊಡನೆ 'ಬೇಕರಿ'ಗೆ ಹೋಗಿ ಬ್ರೆಡ್ ತೆಗೆದುಕೊಂಡು . . . 'ಸಾಹೇಬರುಗಳಿಗೆ' ಮೋಟಾರುಗಳ ಮೂಲಕ ಕಳಿಸುವುದೂ ಅವುಗಳಲ್ಲೊಂದು ಕೆಲಸ (ಬಾಳೂರಿ. ೦೩೬).

[← ಇಂ. Bakery]

**ಬೇಕರಿಗೊಳ್** (ಕ್ರಿ). ಬೆಂದು ಕರಿಕಾಗು ; ಸೀದು ಹೋಗು ; ಸೀಯು : ಎಲ್ಲಿ ಉಡುಗಿದೆ ಎಲ್ಲಿ ಬೆಂದೆ ಎಲ್ಲಿ ಬೇಕರಿಗೊಂಡೆ ನೀನು ಎಲ್ಲಿ ಹೋದೆ (ಸಶವ. ೪. II. ೩೮-೯೯). [ಬೇ$_1$ + ಕರಿಗೊಳ್]

**ಬೇಕರಿವೋಗು** (ಕ್ರಿ). = ಬೇಕರಿಗೊಳ್ : ಬರಿಯಲ್ಬೇಱಬ್ಬ ಕಂಕಾಳಕ ಪೆಡತಲೆಯೊಳ್ ಪೊಕ್ಕ ಕಣ್ಮೋರ್ಪ ಕಯ್ಮಾಲ್ಸೆರೆ ಪಾತಾಳಕ್ಕೆ ಪತ್ತಿರ್ದೊಣ

ಪಸಿಱುಡುಗಿರ್ದೊಂದುರಂ ಪೂಟ್ದು ಬಾಯ್ಬೇಕರಿ [ತಾತಾಂ. ಬೆಂಕರಿ, ಬೆಕ್ಕರಿ] ಪೋದಂತಿರ್ದ ಬಾನಂಗುಳಿ ಗಿಟಗಿಟಜಂತ್ರಂಬೊಲಾಗಿರ್ದ ಮೆಯ್ ಮೆಯ್ಸರಿ ಚಿದ್ರೂಪಕ್ಕೆ ಪಕ್ಕಾಗಿರೆ ಚರಿಗೆಗುಣಲ್ಬಂದನೊರ್ವಂ ಮುನೀಂದ್ರಂ (ಅರ್ಧನೇ. ೬-೨; ಕನರ. ೪-೨೦೨ ನೋ); ಪಾದಿಗಳೆರ್ದೆಗಳಿಂತು ಬೆಂದು ಬೇಕರಿ ಪೋಗದಿರವೆಂದು ತೋರ್ಪಂತೆ ತಂದ ವಿತಾನಾಂಬರಂದೋಳ್ ತತ್‌ತಥನ ಚೆಲ್ಲವು ವಿಜ್ಞಾಪಿಸೆ (ಶವ್ಯಶಾ. ೩-೦೬). [ಬೇ$_1$ + ಕರಿಪೋಗು]

**ಬೇಕಾಯದೆಶೀರ, ಬೇಕಾಯಿದೇಶೀರ, ಬೇಕಾಯ್ದೆಶೀರ** (ಗು). ೧. ಕಾನೂನುಬಾಹಿರವಾದ; ಅಕ್ರಮವಾದ : ನನ್ನಗೂಡ ಬೇಕಾಯದೆಶೀರ ಸಂಬಂಧ ಇಟ್ಟುಗೊಂಡಿದ ಅಂತ. ಅದನ್ನು ಮುಚ್ಚಿಗೊಳ್ಳಾಗ ವಸ್ತ್ರಾ ವಡವಿ ಅಂಟಿಸತಿ (ಕಶ್ಯಧ್ರ. ೦೨೦); ಆದರೆ . . . ಬೇಕಾಯದೆಶೀರ ಮಗು. ಅಂದರೆ ಒಂದು ಸಮಸ್ಯೆಯಾಗುವುದು (ಹುಟ್ಟ. ೮೩). (ನಾ). ೨. ಕಾನೂನುಬಾಹಿರವಾದುದು; ಅಕ್ರಮ. **ಬೇಕಾಯಿದೇಶೀರ :** ೨. ಧರ್ಮ ಶಾಲೆಯ ಕೋಣೆಯನ್ನು ಬಾಡಿಗೆಯಿಲ್ಲದೇ ಆರು ತಿಂಗಳಗಟ್ಟಲೆ ಒಬ್ಬ ಲಫಂಗ ಹುಡುಗನಿಗೆ ಇರಲು ಕೊಟ್ಟುದು 'ಬೇಕಾಯಿದೇಶೀರ' ಆಗುವು ದೆಂದೂ . . . ಅವರಿಗೆ ತಿಳಿಸಿದರು (ಗಂಗಾಶಾ. ೦೦೪). **ಬೇಕಾಯ್ದೆಶೀರ :** ೨. ಕಾಂಗ್ರೆಸ್ ಕಮಿಟಿಗಳು ಬೇಕಾಯ್ದೆಶೀರ ಎಂದು ನಿಶ್ಚಯಿಸಲ್ಪಟ್ಟವು (ಕಾಂಗ್ರೆಸ. ೨೬). [← ಮರಾ. ಬೇಕಾಯದೇಶೀರ್]

**ಬೇಕಾಯಿದೇಶೀರ** 'ಬೇಕಾಯದೆಶೀರ' ನೋ.

**ಬೇಕಾಯ್ದೆಶೀರ** 'ಬೇಕಾಯದೆಶೀರ' ನೋ.

**ಬೇಕಿ** (ನಾ). ೧. ಹೆಣ್ಣು ಕಪ್ಪೆ. ೨. ಕಪ್ಪೆಯ ಮರಿ ; ಸಣ್ಣ ಕಪ್ಪೆ : ಈ ಕಥೆ ಸಜ್ಜನರಿಗೆ ಕರ್ಣಾಮೃತ ಕಾಕುಪುರುಷರ್ಗೆ ತಿವಿಷವು ಬೇಕಿ ತಾವರೆಯೊಳು ಬಿದ್ದ ರೀತಿಯೊಳು ಮತ್ತಾ ಕುಜನರು ದೂಷಿಪರು (ಭೂಜ್ಯತ. ೦-೩೬) [<ಸಂ. ಭೇಕೀ]

**ಬೇಕು$_1$** (ನಾ). ಅವಶ್ಯಕತೆ; ಅಗತ್ಯ : ತೇಗದ ಉಪಯೋಗ ಹೆಚ್ಚಾಯಿತು; ಜನದ ಬೇಕುಗಳೂ ಅಧಿಕರಿಸಿದವು (ಹಸುಹೂ. ೨೪೦) : ಹೊಸ ಹೊಸ ರುಚಿ ಗಳೂ ಬೇಕುಗಳೂ ಕೊನರಿದಂತೆಲ್ಲ ಸಸ್ಯಸಂಬಂಧವಾದ ಉದ್ಯಮಗಳೂ ಕಸುಬುಗಳೂ ಏರ್ಪಡುವುದು ಅನಿವಾರ್ಯವಾಯಿತು (ಶಾಸಗಿ. ೬೦).

[<ಬೇಕು$_2$]

**ಬೇಕು$_2$** (ಅ). ಇಷ್ಟವನ್ನಾಗಲೀ ಅಗತ್ಯವನ್ನಾಗಲೀ ಸೂಚಿಸುವ ಒಂದು ಅವ್ಯಯ : ಇತ್ತುದನೆ ಕೊಂಡು ತಣಿಯದೆ ಮತ್ತಿನ್ನುಂ ಬೇಕುಮೆಂದು ಪಾಯ್ದುಪರ್ಮಾರ್ಥರ್ (ಸವುಶ. ಅಸುಬಂ. I, ೩೪೦-೨೬); ಬೇಕು ತನಗೊಂದ ವಳಿಯೆಂದಳು ನೋಡಿ ಸುರಗಣವ (ಸಂಭಶ: ೦೩-೮೮); ಹತ್ತೀಬೆಳೆಗೆ ಉಷ್ಣ ಹವೆ ಬೇಕು (ಕುಬಂಬಿಯ. ೪-೨೬); ತಾಯಿ ಬೇಕು ಇಲ್ಲವೆ ಬಾಯಿ ಬೇಕು (ಗಾದೆ).

**ಬೇಕಾಬಿಟ್ಟ** = ೧. ಇಷ್ಟವಿಲ್ಲದೆ; ಮನಸ್ಸಿಲ್ಲದೆ : ಅಂಥ ಬೇಕಾ ಬಿಟ್ಟಿ ಕೆಲಸವನ್ನು ಮಾಡಿದವಳೂ ಅಲ್ಲ (ಶಂಪಕೋ. ೨೨೪) ; ಅವನದು ಏನೋ ಬೇಕಾಬಿಟ್ಟ ಪಾಠ ಹೇಳುವ ವಿಧಾನವಾಗಿರಲಿಲ್ಲ (ರಾಗಿಡ. ೩೩). ೨. ಸುಲಭವಾಗಿ ; ಅನಾಯಾಸವಾಗಿ : ಬೇಕಾಬಿಟ್ಟಿ ಬಂದುಬಿಡುತ್ತ ಅಂದುಕೊಂಡಿದ್ದಿಯೇನು? ಕಷ್ಟಪಟ್ಟರೆ ಫಲವುಂಟು (ಸ್ವಾಬಿಸ್ನೇ. ೦೬೪).

[< ಬೇಡು$_1$]

**ಬೇಕೂಪ** 'ಬೇಕೂಫ್' ನೋ.

**ಬೇಕೂಫ್, ಬೆವಕೂಫ್, ಬೇಕೂಪ, ಬೇಕೂಫ, ಬೇವ್‌ಕೂಫ್** (ನಾ). ಅವಿವೇಕಿ; ತಿಳಿಗೇಡಿ; ಮೂರ್ಖ: ರೊಕ್ಕವಿಲ್ಲದಿದ್ರ ಮೋಟಾರ ತರಬಂತ ಯಾವ ಹೇಳಿದ್ನೋ ನಿನಗೆ ಬೇಕೂಫ್ (ಮುಗಿವು. ೩). **ಬೆವಕೂಫ್ :** ಬೆವಕೂಫ್ ಲಂಚಗುಂಡಿ ಚೋರರು ಬಹಳ ಜನಯಿಧಾರೆ (ಹ್ಯದರ. ೩೦). **ಬೇಕೂಪ :** ಇವನೂ, ಈ ಬೇಕೂಪ ನಮ್ಮ ಟ್ರಾನ್ಸ್‌ಪೋರ್ಟ್‌ನಾಗೆ ಹೆಂಗೆಂಗೆ ಕಾಲಿಕ್ಕಿದ . . . ನನಗೆ ಗೊತ್ತಿಲ್ಲಾ (ಲಂಗಬ. ೨೬). **ಬೇಕೂಪ :** ನೀನೆ ಕಿತ್ತು ನಿನ್ನ ಜುಟ್ಟಿನಲ್ಲಿ ಸಿಕ್ಕಿಸಿಕೊಂಡೆಯೇನೋ ಬೇಕೂಫ (ಹಸುಹೂ. ೨೦೬). **ಬೇವ್‌ಕೂಫ್:** ಯಲೋ ಬೇವ್‌ಕೂಫ್ ಅನಾವಶ್ಯಕ ತಲೆಯೊಳ್ಳಾ ಪರಟಬೇಡ (ದೇಶಭು. ೦೪). [←ಪಾರ. ಬೇವಕೂಫ್; ಹಿಂ. ಬೇಕೂಫ್, ಬೇವಕೂಫ್; ಮರಾ. ಬೇಕೂಬ್, ಬೇವಕೂಫ್, ಬೇಪಕೂಬ್]

**ಬೇಕೂಫ** 'ಬೇಕೂಫ್' ನೋ.

**ಬೇಕೊಂಡಿ** (ನಾ). ಒಂದು ಬಗೆಯ ಔಷಧೀಸಸ್ಯ : ಬೇಕೊಂಡಿಯ ಸೊಪ್ಪಂ ಹಳೇಎಣ್ಣೆಯಲ್ಲಿ ಕಾಸಿ ಬಿಡಲು ಕಿಂಬರವು ಮಾಣ್ಗುಂ (ಏಶ್ಯವಿ. ೩). [?]

**ಬೇಕೋಲು** (ನಾ). (ಉಕ) ಒಂದು ಬಗೆಯ ಕೋಲು; ಕವೆಗೋಲು (?) : ಹೊಲ ಮಾಡುವವರು ಸಹ ತಮ್ಮ ತಮ್ಮ ಈಟಿ ಬೇಕೋಲು ಮುಂತಾದ ಆಯುಧಗಳನ್ನು ತೆಗೆದುಕೊಂಡು ಅವರಿಗೆ ಬೆನ್ನಾಸರೆಯಾಗಿ ಬಂದರು (ಇಂಗ್ಯಂಡ. ೨೩). [ ? + ಕೋಲು$_1$ ( < ಕೋಲ್$_1$) ]

**ಬೇಗ$_1$** (ನಾ). ೧. ತ್ವರೆ; ತೀವ್ರತೆ ; ರಭಸ : ಯುವತಿ ಹಿಮೋಪಲ ಪ್ರತಿಮೆಯುಂ ನಳಿತೋಳ್ಗಳಿನಾಗಳಾಗಳಪ್ಪುವ . . . ಶಶಿಕಾಂತ ಪುತ್ರಿಕೆಯು ಮೇಲೆ ನಿಜಾಂಘ್ರಿಯುಗಾಗಳಾಗಳಿಕ್ಕುವ ಪಿರಿದಪ್ಪ ಬೇವಸ ದೊಳು ತಡೆದಿರ್ದಳದೊಂದು ಬೇಗಮಂ (ಕಾದಂಬ. ೨೨೬); ಗರ್ವ ಪರ್ವತಾರೂಢನಾಗಿ ಪರ್ವತಮಂ ತಾಗೆ ಬೇಗದೊಳ್ ಕೆಡೆಪ ಕೋಡುಂ ಗಲ್ಗಳಂ ಕೋಡೊಳಾಂತು (ಶಂತಕಂ. ೪೬-೦೦) ; ಬೇಗದಿಂ ಬಿರಯಿ ನೀಂ ಪೋಪೋಗು (ಶವ್ಯಶಾ. ೩೩); ಕಂಚನನಿಬರ ಕಾಲ ಬೇಗಮಂ ಕರುಣ ದಿಂದಂಡಲೆಯಬಾರದೆಂದೆನುತೆ (ಕಬಿಕ್ಕ. ೩೨-೪೩). ೨. ವೇಳೆ; ಸಮಯ; ಹೊತ್ತು : ಗೋವರ್ಧನಭಟ್ಟಾರರ್ ಪಿರಿದುಂ ಬೇಗಂ ನೋಡುತ್ತಿರ್ದಿಂ ತೆಂದುದ್ದೇಶಂಗೆಯ್ದೊರ್ (ವಡ್ಡಾರಾ. ೬೪-೩) ; ಆ ಮದಮುಪರ್ಗಂತ್ರೇ ನೇತಜಿಕೋಳಾಬ್ದುದನಿನಿಸಾನುಂ ಬೇಗದೊಳೆ ಕಳೆದು ತೋಱಿನೆ ರಣದೊಳ್ (ಆದಿಪು. ೦೪-೨೩); ಕಿಱಿದಾನುಂ ಬೇಗಕ್ಕೆ ಭೋಂಕನೆ ಪೊಣ್ಮಿದ ಭಯಂಕರಧ್ವಾನಮುಂ ಕೇಳ್ಪು (ಶಂತಕಂ. ೪೦-೬). [< ಸಂ. ವೇಗ]

**ಬೇಗ$_2$** 'ಬೇಗಂ$_1$' ನೋ.

**ಬೇಗಂ$_1$, ಬೇಗ$_2$** (ಅ). ತ್ವರೆಯಾಗಿ ; ಶೀಘ್ರವಾಗಿ; ಜಾಗ್ರತೆಯಾಗಿ : ಸುರಚಾಪಂಬೋಲೆ ವಿದ್ಯುಲ್ಲತೆಗಳ ತೆಱಪೋಲ್ಮಂಜುವೋಲ್ಪೋಱ ಬೇಗಂ ಪಿರಿಗುಂ (ಎಕ. II (R), ೯೮-೨; ೭ನೆಯ ೩೩); ವಿಷಧರ ನೀಂ ವಿಷಧರ ನಾಗದೆ ಬೇಗಂ ವಿಷಯಾಮಿಷವಿಷಮನುಗುಟ್ದು ನಿರ್ವಿಷನಾಗಾ (ಆದಿಪು. ೨-೦೬); ಮನವಲ್ಲದ ಮನದೊಳಗ್ಗವಣೆಹೂಗಳಂ ಬೇಗಂ ತಂದಂತಂತೆ ಪೂಜೆಗೆಯ್ದಾರೋಗಣೆಗಿತ್ತು (ಬಸರ. ೪-೪೦). **ಬೇಗ$_2$:** ತಾಯ್ಗಳುಮ್ಮಳಿಸ ಲಾಗದು ಕಱುಗಳಂ ಬಿಡಿರೆ ಬೇಗ ಮೊಲೆತೊರೆದು ಮಱುಗುವವು ಕಱುವುಂ ಬಿಡಿರೆ (ಬಸರ. ೯-೦೦೬); ಉದಯವಾಗದ ಮುನ್ನ ಕಳನೊಳು ಹೊದಱುಗಟ್ಟಿದರೀ ತ್ರಿಗರ್ತರು ಕದನಕಿಮ್ಮೊಳಗಳವಿಗೊಡುವುದು ಬೇಗ ಬಹುದೆಂದು (ಕುವ್ಯದ್ರೋ. ೨-೦೩); ಕಡಿದು ರಿಪುಗಳ ಶಿರವನಾನೆಕುದುರೆಯ ಗಡಣಗಳನು ಬೇಗ ಪಿಡಿದು . . . ಒಪ್ಪಿಸುವೆವೆಂಬ ಮನ್ನೆಯರೆಡೆವಿಡ ದೆಸೆದರಂ (ಕಂಪಬ. ೯-೩೪).

**ಬೇಗಬೇಗಂ, ಬೇಗಬೇಗ** (ದ್ವಿರುಕ್ತಿ) : ಕೈಯ ಕುಂಚಮಂ ಬೇಗಬೇಗಂ ಬೀಸಲೊಡನೆ (ಶಬ್ಯಶಾ. ೨೬೪); ಬೇಗ ಬೇಗ ಅರ್ಚನೆ ಪೂಜನೆಯ ಮಾಡು ವುದು (ಬಸವ. ೦೬೩). [<ಬೇಗ$_1$]

**ಬೇಗಂ$_2$** (ನಾ). ನವಾಬನ ಹೆಂಡತಿ; ದೊರೆಸಾನಿ; ರಾಣಿ : ನೀನೇ "ಬೇಗಂ" ಎಂಬ ಹೆಸರನ್ನು ಧಾರಣೆಮಾಡುವುದಿಲ್ಲವೇಕೆ ? ಕುಮಾರ ಸಲೀಮನು ನಿನ್ನನ್ನು ವಿವಾಹಮಾಡಿಕೊಂಡು ಖಾಸಾಬೇಗಮಾಗಿ ಮಾಡಿಕೊಳ್ಳುವನೆಂದು ಕೇಳಿದೆನು (ಕಬಾಕುಂ. ೬೩).

[ ←ತುರ್ಕಿ . ಹಿಂ. ಮರಾ. ಬೇಗಮ್]

**ಬೇಗಡ$_1$** (ನಾ). [ಸಂಗೀತ] ಒಂದು ರಾಗದ ಹೆಸರು: ನಾಗಧ್ವನಿಯೆಂಬಿವು ಗಳು ಉಪಾಂಗಗಳು; ನಂತರ ಭಾಷಾಂಗಲಕ್ಷಣದವುಗಳು (ಹೆಸರಿಸಲ್ಪ ಡುತ್ತವೆ): ಬಿಲಾಹುರೀ, ಬೇಗಡ, ನಂತರ ಪೂರ್ಣಚಂದ್ರಿಕಾರಾಗ (ಕಕುಕ್ರ. ೦೬೦). 'ಬೇಗಡೆ$_1$' ಪರಾ. [ಸಂ. ಬೇಗಡಾ]

**ಬೇಗಡ$_2$**, ಬಿಗಡ$_1$, ಬೇಗಡೆ$_3$ (ನಾ). (ವಜ್ರ, ರತ್ನ ಮುಂತಾದುವು ಗಳಿಗೆ ಮಾಡುವ) ತೂತು; ರಂಧ್ರ : "ಬೇಗಡವೆನೆ [ಪಾಠಾಂ. ಡೆಯೆನೆ] ಬೆಜ್ಜವೆಂದು ತಿಳಿಗೆ ವಿದಗ್ಧರ್" (ಛಾಕಿ೨. ೦೬) ; ರತ್ನದ ಪುಂಜವ ಬೇ [ಪಾಠಾಂ. ಬೆ]ಗಡವನಿಕ್ಕುವಲ್ಲಿ ಮೊನೆ ಮುಂದೆ ಸವೆದ ಮತ್ತೆ ಪೂರ್ವಕ್ಕೆ ಉತ್ತರವಿಲ್ಲ (ಸಳವ.ಕ. II, ೯೬೦-೦೯೦೦). **ಬಿಗಡ$_1$** : ರತ್ನ ಮುತ್ತು ಬಿಗಡವ ನಿಕ್ಕಿದಲ್ಲಿ ಉದುರಿದ ಚೂರ್ಣದಲ್ಲಿ ಕಳೆ ಕಾಂತಿ ಇಲ್ಲ (ಮೋಕ್ಷವಾ. ೧೯೨-೬೬). **ಬೇಗಡೆ$_3$** : ಈಗಲೀ ಕದನದಲಿ ವಜ್ರಕೆ ಬೇಗಡೆಯ ಮಾಡಿದನದಾವನು (ಕುಮಾರರಾ. ೦-೦೦); ಪರ್ವತವ ಬೇಗಡೆಯ ಕಳೆಯಲು ಸಾರ್ವ ತೆಐದಿ ಪಿಪೀಲಿಕಂಗಳು ಗರ್ವಿತಾಧಿಕಕರಗಳೊಪ್ಪಿದವಿಭದ ಕಾಯದಲಿ (ತಿಮ್ಮ. ೩-೬೬). [ ? / ಹಿಂ. ಬೇಗಡೀ=ರತ್ನದ ಕೆಲಸ ಮಾಡುವವನು]

**ಬೇಗಡವಸ**, ಬೇಗಡೆವೆಸ (ನಾ). (ವಜ್ರ ಅಥವಾ ರತ್ನಗಳಿಗೆ) ವೆಜ್ಜ ಮಾಡುವ ಅಥವಾ ರಂಧ್ರ ಕೊರೆಯುವ ಕೆಲಸ : ಕಡಪದ ಕಂಡರಣೆಯ ಬೇಗಡವೆಸದ ಬೆಡಂಗು . . . ಜಡಜಜಮಯ ಸುರವರ್ಧಕಿಗೊಡರಿಸುವುವು ಕರ್ಮಕೌಶಳದ ಕೌತುಕಮಂ (ಪುಷ್ಪದಂ. ೧-೮೩) ; ಕಡಪದ ಕಂಡರಣೆಯ ಬೇಗಡವೆಸದ ವಿಚಿತ್ರಮಪ್ಪ ಕೆಲಸದ ಗತಿಯಂ ನಡೆ ನೋಡಿ(ಪಾರ್ಶ್ವ. ೧-೦೩೬). **ಬೇಗಡೆವಸ** : ಕಡಪದ ಕಾಂತಿ ಕಂಡರಣೆಯುನ್ನತಿ ಚಿತ್ರದ ಚಿತ್ರವೃತ್ತಿ ಬೇಗಡೆವಸದೇಟ್‌ಗಿಯಲ್ಲಿ ಪೊಸತಾದುದು (ಕಂಪ್ರಶು. ೦-೦೯೯). [ಬೇಗಡ$_2$ + ಬೆಸ$_1$]

**ಬೇಗಡಿಸು** (ಕ್ರಿ). (ವಜ್ರ, ರತ್ನ ಮುಂತಾದುವುಗಳಿಗೆ) ವೆಜ್ಜ ಮಾಡು; ರಂಧ್ರಮಾಡು ; ತೂತುಕೊರೆ : ಪುಂಜವ ಬೇ[ಪಾಠಾಂ. ಬೆ]ಗಡಿಸುವ ವಜ್ರದ ಮೊನೆಯಂತೆ ಲಿಂಗದ ಭೇದಗೂಡಿಯೆ ಅಂಗ ನಿರಿಯಾಣವಾದಲ್ಲಿ ಅದು ಲಿಂಗಾಂಗಿಯ ಸ್ಥಲ (ಸಳವ.ಕ. II, ೦೦-೨೦). [ಬೇಗಡ$_2$ + —ಇಸು$_3$]

**ಬೇಗಡೆ$_1$** (ನಾ). [ಸಂಗೀತ] ಒಂದು ರಾಗದ ಹೆಸರು : ೨೯ನೇ ಮೇಳಕರ್ತ, ಧೀರಶಂಕರಾಭರಣದಲ್ಲಿ ಜನ್ಯ . . . ವೀರರಸಪ್ರಧಾನರಾಗ (ಸಂಗೀತಂ. ೧೯೩); ಬೇಗಡೆರಾಗದ 'ತ್ಯಾಗರಾಜಾಯ ನಮಸ್ತೆ' . . . ಗರುಡಧ್ವನಿ ರಾಗದ 'ಆನಂದಸಾಗರಮೀ'—ಈ ಕೆಲವು ಕೃತಿಗಳನ್ನು ಮಾತ್ರ ಅವರು ತಮ್ಮ ಕಚೇರಿಗಳಲ್ಲಿ ಹಾಡುತ್ತಿದ್ದರು (ಸಂಗೀಕ. ೩). [ಸಂ. ಬೇಗಡಾ]

**ಬೇಗಡೆ$_2$** (ನಾ). ೧. (ಅಲಂಕಾರಕ್ಕಾಗಿ ಬಳಸುವ) ಹೊಳಪಿನ ತಗಡು; ತಷರದ ರೇಕು : ಮಾಣಿಕ್ಯಮಿರ್ದಂತೆ ಗಾಜಂ ಕಟ್ಟುವರೆ ಬಂಗಾರ ವಿರ್ದಂತೆ ಬೇಗಡೆಯಂ ತೊಡುವರೆ (ತ್ರಿಶೂ೨. ೨೯-೨೦ ಪ); ಆ ಕಂಭಗಳಿಗೆ ಸುತ್ತಿದ್ದ ಕೆಂಪು ಬಿಳಿಯ ಬಟ್ಟೆಯ ಪಟ್ಟಿಗಳನ್ನೂ ಹೊಳೆಯುತ್ತಿದ್ದ ಬೇಗಡೆಯ ಕಾಗದದ ಹೂವು ಮೊದಲಾದ ಅಲಂಕಾರಗಳನ್ನೂ . . . ನೋಡಿದರು (ಮರಿಮ. ೬೩೩). ೨. (ಅಲಂ) ಡೌಲು ; ಆಡಂಬರ : ವೈಭವ : ಇಂಗ್ಲೆಂಡ್‌ನಗರದ ಯಾವ ವಿಲಾಸ ವಿಭ್ರಮಗಳೂ ಬೆಡಗು ಬೇಗಡೆಗಳೂ ಅವರ ಬಳಿಗೆ ಬರಲಾರದಾಗಿದ್ದುವು (ಲಾಜಪ. ೨೯); ಮುಂಬರುವ ವಿಶಾಪದಲ್ಲಿ ತಾಯಿಗರುಳಿನ ಸಹಜವಾದ ಮೊರೆಯಿದೆ. ಅಲಂಕಾರಗಳ ಬೇಗಡೆಯಿಲ್ಲ (ಕನಾಕ. ೩೩೦). [←ಮರಾ. ಬೇಗಡ, ಬೇಂಗಡ. / ತೆಲು. ವೇಗಡ=ಕಾಗೆಬಂಗಾರ]

**ಬೇಗಡೆ$_3$** 'ಬೇಗಡ$_2$' ನೋ.

**ಬೇಗಡೆಗಳೆ** (ಕ್ರಿ). ೧. = ಬೇಗಡಿಸು: ಬೇಗಡೆಗಳೆಯದ ರತ್ನವೃಷ್ಟಿಯ ವೀತರಾಗದಾ ನೃಪನೆಸಗಿದನು (ಕಠಕ. ೬೩-೬೦). ೨. ತೂತು ಕೊರೆ ; ಛಿದ್ರಿಸು : ಹಳಚಿದನು ದಳಪತಿಯನವನಿಪತಿಲಕನೆಚ್ಚನು ನೂಱು ಶರದಲಿ ಕಳಚಿ ಕಯ್ಯೊಡನೆಚ್ಚು ಬೇಗಡೆಗಳೆದನವನಿಪನ (ಕುಮಾರ. ೨-೩೦). [ಬೇಗಡೆ$_3$ (< ಬೇಗಡ$_2$) + ಕಳೆ$_1$]

**ಬೇಗಡೆವೆಸ** 'ಬೇಗಡವೆಸ' ನೋ.

**ಬೇಗನೆ** (ಅ). ತ್ವರೆಯಾಗಿ; ಶೀಘ್ರವಾಗಿ : ರಾಯರು ತಮ್ಮ ಕಾರ್ಯ ವನ್ನು ಇಷ್ಟು ಬೇಗನೆ ಪ್ರಾರಂಭಿಸಿಬಿಡುವರೆಂದು ನಾನು ಕನಸಿನಲ್ಲಿಯೂ ಊಹಿಸಿರಲಿಲ್ಲ (ರಾಯಕ. ೫೨); ಬೇಗನೆ ಆಗಲೆಂದು ಹಾರೈಸುವುದರ ಹೊರತಾಗಿ ಹೆಚ್ಚು ಹೇಳಲು ಸಾಧ್ಯವಿಲ್ಲ (ದ್ರಾಬಿ೨. ೬೩). [ ಬೇಗ$_1$ + — ಅನೆ$_1$ ]

**ಬೇಗಯ್ಕೆ** (ನಾ). ವೇಗ ; ಶೀಘ್ರತೆ (?) : ಕಡುಗೆಯ್ಯನಾಗಿ ಶೀಘ್ರ ಸಂಧಾನವಿಸುವಶ್ವಗ್ರೀವನ ತಕ್ಕುಂ ಬೇಗಯ್ಕೆಯುಂ ಕಿಡೆ (ಶಾಂತಿಪು. ೩-೬೦ ಪ). [ < ಬೇಗ$_1$ ]

**ಬೇಗವಣಿತು** (ನಾ). [ಸಂಗೀತ] ಒಂದು ಮುಖ್ಯತಾಯ ; ಏರುವ ಇಳಿಯುವ ಸ್ವರಗಳ ಬೆರಕೆಯಲ್ಲಿ ಸ್ವರಗಳನ್ನು ಸ್ಥಿರವಾಗಿ ಕಂಪಿಸು ವುದು (?) : ನಿಸ್ಸರಡೆ ರಂಗರಕ್ತ ಬೇಗವಣಿತು ತರಹರಂ ಸುರಿವೊಟ್ಟಜಿ ದಾಳಪಾಳಂ ಪದಿಪ್ಪೊಜಿ ಕೊಂಕು ಕಮ್ಮಣಿಪಸರಂ ಬೆಡಂಗುವಡೆಯೆ ಪಾಡುತ್ತಿರೆಯುಂ (ಶಾಂತೀಶ್ವ. ೦೬-೬೬ ಪ). [ ? ]

**ಬೇಗಾರ್**, ಬೇಗಾರ, ಬೇಗಾರಿ (ನಾ). ೧. (ಸರ್ಕಾರದವರು) ಕೂಲಿ ಯಿಲ್ಲದೆ ಮಾಡಿಸಿಕೊಳ್ಳುವ ಕೆಲಸ ; ಬಿಟ್ಟಿಕೆಲಸ : ಬೇಗಾರ್ ಮತ್ತು ಅದೇ ರೂಪದ ಇತರ ಬಲಾತ್ಕಾರ ದುಡಿಮೆಯನ್ನು ಪ್ರತಿಷೇಧಿಸಲಾಗಿದೆ (ಶಾಧಾನ. ೦೩). **ಬೇಗಾರ** : ೨. ಬಿಟ್ಟಿಯಾಗಿ ಕೆಲಸ ಮಾಡುವವನು ; ಬಿಟ್ಟಿಚಾಕರ : ಯಿಾ ಗ್ರಾಮದ ಪಣಕಟ್ಟು ಆಯಾಗಾರು ಶಾನಬೋಗ ಪುಟರಂಗಪ ತಳವಾರಪೋಬಾ ಬೇಗಾರ ದಾನ ತಿಮ್ಮ (ಎಕ. XI, ಹಿರಿಯೂ. ೩೬-೦೯; 1533?) ; ಗ್ರಾಮದ ಬೇಗಾರರು (ಮಾದಿಗರು) ಖಾಸಾಕುದುರೆಗೆ ದಿನ ೧ಕ್ಕೆ ಹಸಿಹುಲ್ಲು ೧೦ ಹೊರೆ ಪ್ರಕಾರ ಸರದೀ ಮೇಲೆ ತರಬೇಕು (ಶಕ್ರಪಾ. ೯೯) ; ಒಂದೆರಡು ಸಲ ಬೇಗಾರರಿಗೆ ಕಷ್ಟವಾಗಿದ್ದಾಗ ನಾಟಕ ಆಡಿ ಒದಗಿಸಿಕೊಟ್ಟೆವು (ಮರೆ. ೬೩). ೩. ಒಂದು ಬಗೆಯ ತೆರಿಗೆ : ಹೊನ್ನ ಕ್ಷೇತ್ರಲ್ಲದೆ ಹೊಲ ಮಾಡಬಾರದು ಬಿಟ್ಟಿ ಬೇಗಾರವಿಲ್ಲದೆ ಊರೊಳಗಿರಬಾರದು (ಪಕಸಂ. ೬೦-೬೦); ಆ ಪೊಸಲ ಕಯಲೂ ಮನೆದೆಟಿ ಬಿಟಿ ಬೇಗಾರ ಕಾಣಿಕೆ ಕಡಾಯ ಏನನೂ ನಾಉ ಕೊಳ ಸಲ್ಲದು (ಎಕ. X, ಮುಳಬಾ. ೦೬೨-೦೯; 1496). **ಬೇಗಾರಿ**: ೨. ಚಿತ್ರದುರ್ಗ ಮೊದಲಾದ ಪ್ರಾಂತಗಳಲ್ಲಿ ಬೇಗಾರಿಗಳು ಎಂಬ ಸಂಸ್ಥೆ ಇದೆ (ಜಾಳಗಾ. ೩೩). ೩. ಯಿಾ ಗ್ರಾಮದ ರೈತರಿಗೆ ಕಾಲ್ವೆಕೆಲಸ ಹೊರ್ತು ಕಡಮೆ ಬಿಟ್ಟಿ ಬೇಗಾರಿ ಮುಂತಾದ ವುಪದ್ರವಯಿಲ್ಲದ ಹಾಗೆ ನಡ್ಸು ವಂತೆಯೂ (ಮೈಕಂ. ೦೯೩೯, ೯೨-೦೦೯; 1825); ಆದವಾನಿಯಂಥಾ ಬಸಾಲತ್ ಜಂಗನ ರಾಜಧಾನಿಯಲ್ಲೂ ತಹಸೀಲಿನ ಬಿಟ್ಟಿಬೇಗಾರಿಗಳಿಗೆ ಮಿತಿಯಿರಲಿಲ್ಲ (ಕಥಾ. ೩೬೩). [←ಪಾರ. ಹಿಂ. ಬೇಗ್ವಾರ್, ಬೇಗಾರಿ ; ಮರಾ.ಬಿಗಾರ್, ಬಿಗಾರೀ, ಬೇಗಾರ್, ಬೇಗಾರೀ]

**ಬೇಗಾರ** 'ಬೇಗಾರ್' ನೋ.

**ಬೇಗಾರಿ** 'ಬೇಗಾರ್' ನೋ.

**ಬೇಗು** (ಕ್ರಿ). ಅತಿ ಆಸೆಪಡು ; ದುರಾಸೆಪಡು : ಪಥೀ ನಿಣ್ಣ ಹೊಟ್ಟೆ ಕಡಿಯಾ! ಏನು ಬೇಗ್ತದೋ ಪಡಪೇಗುಟ್ಟಿದ್ದು! (ಮರಿಮ. ೨೦). [ ? ]

**ಬೇಗುದಿ$_1$** (ಕ್ರಿ). ೧. ತೀವ್ರವಾಗಿ ಕುದಿ ; ಚೆನ್ನಾಗಿ ಬೇಯು. ೨. (ಅಲಂ) ಸಂತಾಪಗೊಳ್ಳು; ತಪಿಸು : ಆ ದೈತ್ಯನು ತಾಗಿ ಹೊದಕುಳಿಗೊಂಡು ಬೇಗುದಿದುದ್ದೈ ವ್ಯೋಮಗಾಮಿಗಳ ಮೇಣ್ ಕಾಮರೂಪಿಗಳ ಕತಬಲಿಯ ಭೀಮಸೇನಾಬ್ಧಿ (ಶ್ರೀರಾಮಾ. ೬೯೨-೦೮). [ಬೇ$_1$ + ಕುದಿ$_1$]

**ಬೇಗುದಿ$_2$** (ನಾ). ೧. ತೀವ್ರವಾದ ಬೇಗೆ; ಅತ್ಯುಷ್ಣ: ಇಂತಪ್ಪ ಬೇಸಗೆಯೊಳ್ ಬೇಗುದಿಯಪ್ಪ ಮಹಾರಣ್ಯದೊಳ್ (ಕಮಪೂ. ೪-೯೭ ವ). ೨. (ಆಲಂ) ಸಂತಾಪ; ದುಃಖ; ತಳಮಳ: "ಬೇಗುದಿ, ಉಬ್ಬೆಗಂ, ಅದವಟಲ್— ಈ ೩ ಸಂತಾಪಂ" (ಕಶಸಾ. ೫೭-೨೨೭); ವೈರಾನುಬಂಧದ ಬೇಗುದಿಯು ದುಮ್ಮಾನ ದಳವೇಱಿದುದು ಪೇಱಿತು ಭೀತಿ ಭೂಪತಿಗೆ (ಕುವ್ಯಾಗ. ೦-೬೨); ಯಾರ ಸಾಹಚರ್ಯದಿಂದಲೂ ಅವನ ಬೇಗುದಿ ಆರುವಂತಿರಲಿಲ್ಲ (ಊಶಕ. ೩೦೯). [< ಬೇಗುದಿ$_1$]

**ಬೇಗುದಿಗೊಳ್**, ಬೇಗುದಿಗೊಳು, ಬೇಗುದಿಗೊಳ್ಳು (ಕ್ರಿ). ೧. (ಬಿಸಿಲಿನ ತಾಪ ಅಥವಾ ರೋಗಳಿಂದ) ಬೇಗೆ ಹೊಂದು; ಬಳಲು: ಬಿಸಿಲೊಳ್ ಬೇಗುದಿಗೊಂಡಪಂ ತಣ್ಣೊಳಸಂ ಪೊಕ್ಕಂತೆಯುಂ . . . ಪಿರಿದಪ್ಪ ಸಂತಸಮನೆಯ್ದಿ (ಕಬ್ಬಿಕಾ. ೩೨೧). ೨. ಸಂತಾಪವನ್ನು ಹೊಂದು; ತಳಮಳಿಸು: ಸಹೋದರನದೇನೆಂದಪನೊ ಹಾಯೆಂದು ಲಕ್ಷ್ಮಣಂ ಬೆಂದು ಬೇಗುದಿಗೊಂಡನು (ತೊರಾಮಾ. ೧೯-೦೩). **ಬೇಗುದಿಗೊಳು:** ೨. ಓ ರೂಪಸೌಂದರ್ಯವೇ! ಇಳೆಯೊಳಗೆ ಕಳವಳಿಸಿ ಕುದಿದು ಬೇಗುದಿಗೊಳುವ ನನ್ನ ಜೀವದ ಧೈರ್ಯವೇ! (ಕಯುಐ. ೭೦-೩). **ಬೇಗುದಿಗೊಳ್ಳು:** ೨. ದಾಸರು ಆತ್ಮೀಯತೆಯ ತೀವ್ರ ಸೆಳೆತಕ್ಕೆ ಸಿಕ್ಕಿ ತೊಳಲಾಡುತ್ತಾ ಹೇಗೆ ಮುಂದುವರಿಯಬೇಕೆಂದರಿಯದೆ ಬೇಗುದಿಗೊಂಡರು (ಐದಾಪ್ರ. ೧೨೯); ಅಪರಿಚಿತ ಮಲ್ಲನೊಬ್ಬನಿಂದ ತಮಗೆ ಪರಿಭವ ಒದಗಿತಲ್ಲ ಎಂದು ಅವರ ಚಿತ್ತ ಬೇಗುದಿಗೊಂಡಿತು (ಹುಂಪಾ. ೨೯೩). [ಬೇಗುದಿ$_2$ + ಕೊಳ್$_1$]

**ಬೇಗುದಿಗೊಳು** 'ಬೇಗುದಿಗೊಳ್' ನೋ.

**ಬೇಗುದಿಗೊಳ್ಳು** 'ಬೇಗುದಿಗೊಳ್' ನೋ.

**ಬೇಗುದಿಸು** (ಕ್ರಿ). ಬೇಯುವಂತೆ ತಾಪವನ್ನುಂಟುಮಾಡು: ಸುಡುವ ಬೇಗೆಗಳಲ್ಲಿ ತುಪಿಡಿಯುವೆ ಕೊರೆವ ಚಳಿನಡುಗಿಸಲಿ ಬೇಗುದಿಸುವೆ (ದ್ರಾಕ್ಷಿದಾ. ೯-೨೨). [ಬೇ$_1$ + ಕುದಿಸು (<ಕುದಿಯಿಸು)]

**ಬೇಗುರಿಕ** (ನಾ). ಬೇಗುದಿಗೊಂಡವನು; ಅಸೂಯೆ ಹೊಂದಿದವನು: 'ಬೇಗುರಿಕತನ' ಪರಾ. [ಬೇಗೆ + ಉರಿಕ]

**ಬೇಗುರಿಕತನ** (ನಾ). ಬೇಗುದಿಗೊಳ್ಳುವುದು; ಅಸೂಯೆಪಡುವಿಕೆ: ಅಸುರಾರಾತಿ ಅರಸನ ಬೇಗುರಿಕತನವಱಿದು ಶೀಘ್ರದಿನಾಗಲುಕ್ಕಿನಲೊಂದು ಭೀಮನ ರೂಪವನು ರಚಿಸಿ ಸಾಗಿ ಬಂದಾಯೆಂಧನೃಪನೆದುರಾಗಿ ನೂಕಲ್ಕೆ (ತಮ್ಮಸ್ವಾ. ೨-೯೭). [ಬೇಗುರಿಕ + —ತನ]

**ಬೇಗೂರ್** (ನಾ). ಒಂದು ಊರಿನ ಹೆಸರು: 'ತುಯ್ಯಲಬೇಗೂರ್' ಪರಾ. [? + ಊರ್]

**ಬೇಗೆ** (ನಾ). ೧. ಬೆಂಕಿ; ಕಿಚ್ಚು: ಘೋರಕಾಂತಾರಮನೊಂದು ಬೇಗೆ ಪರಿವಂತು ರಥಂ ಪರಿವತ್ತು (ಪಂಪಭಾ. ೬-೯೬); ಕಾನನವಂಜುವುದು ಬೇಗೆಗಯ್ಯಾ (ಬಸವ. ೬೫); ಶ್ರೀಗಂಧ ಧೂಪಾರ್ತಿ ಪಾಪಾರಣ್ಯದ ಬೇಗೆವೊಲ್ ಪೊಗೆ ಮುಸುಕಿದುವು (ಪೋಹಕ. ೧೨-೩೦). ೨. ಉರಿ; ಜ್ವಾಲೆ: ಮನ್ಮಥಾನಳಶಿಖಿ ಬೇಗೆಯಾಗೆ ಮದನಾಟವಿಯಂತೆವೊಲೊಪ್ಪಿ ತೋಱಿದಳ್ (ಕಾವ್ಯಸಾ. ೬೦೨ ಟಿಪ್ಪಣಿ); ಅಭ್ರಮರಗಳಿರ ಬೇಗೆಯೊಳಗಣ ವಿಡುಂಬಿಗಳ ತೆಱದಿ ವ್ಯಕ್ತ ಉರಿದೇ ಹೋಹಿರಿ (ಬಸವು. ೫೭-೨೯). ೩. ಕಾವು; ತಾಪ; ಶಾಖ: ವಿಳಯಕಾಳದ ಕಾಟ್ಕಿಚ್ಚಿನ ಬೇಗೆ ಸಾರ್ವಂಶಿರ್ವಲದಳವುಂ ಕಿಚ್ಚಂ ಕಿಡಿಯುವವಾಗೆ ತಾಗಿದಾಗಳ್ (ಪಂಪಭಾ. ೧೦-೬೬ ವ); ಕಿಚ್ಚಿಲ್ಲದ ಬೇಗೆಯಲಿ ಬೆಂದೆನವ್ವ (ಮಹಾದೇ. ೩. ೩೨-೬೯); ವಿರಹತಾಪದ ಬೇಗೆ ಭೂಮೀಶ್ವರನ ಮುಸುಕಿತು (ಕುಭಾಶ. ೦೩-೨೯). ೪. (ಆಲಂ) ಸಂಕಟ; ತಳಮಳ; ದುಃಖ: ತಂದೆ ಕಟಿದಟಿಲ ಬೇಗೆಯೊಳಂ ದೂರದೆ ಬಿರ್ದದೊಂದು ಕಡುಸೇದೆಯೊಳಂ ಬಂದೆನ್ನಂ ಪರವಶತೆಯೊಳೊಂದಿಸಿದತ್ತಾಗಳಾ ಪಿಪಾಸೋದ್ರೇಕಂ (ಶಾಂತಿಪು. ೦೮೯); ವಿರಹಿಗೆ ಬೇಗೆಯುಂ ಪ್ರಿಯರ್ಗೆ ರಾಗಮುನಾಗಿಸುಗುಂ ಬನಂಗಳೊಳ್ ಮೊರೆವ ಮದಾಳಿ . . . ಕೂಡುವ ತುರಂಗಮು ಘುಮ್ಮೆನುತಿರ್ಪ ಪಾರಿವಂ (ಸೊಕ್ಕುಸು. ೪-೪೧); ತನ್ನ ಒಡಲ ಬೇಗೆಯನ್ನು ತೀರಿಸಿಕೊಳ್ಳಬೇಕೆಂದು ಅರ್ಜುನನು ಅವನನ್ನು ಬೆನ್ನಟ್ಟಿ ಹೋಗಿ . . . ಎಳೆದು ತಂದನು (ಕೀಗಟ್ಟು. ೫೦). [ಬೇ$_1$ + —ಗೆ]

**ಬೇಗೆಗಣ್** (ನಾ). ಕೆಂಡಗಣ್ಣು; ಅಗ್ನಿನೇತ್ರ: ಈತ ಬೇಗೆಗಣ್ಣಿಂದ ದಹಿಸದೆ ಬಿಡನು (ಶವಪೋ. ೪-೨೦). [ಬೇಗೆ + ಕಣ್]

**ಬೇಗೆಗಿಚ್ಚು**, ಬೇಗೆಗಿರ್ಚು (ನಾ). ಬೆಂಕಿಯ ಜ್ವಾಲೆ: ವಿಮಳತೆವೆತ್ತ ನೀರ್ವೊಟಿಯ ತೀರದೆ ಚಾರುನಿಕುಂಜಪಂಕ್ತಿಯೊಳ್ ಸಮನಿಸೆ ಬೇಗೆಗಿಚ್ಚು ಕುರ್ವ ಕೇಸುರಿಯಾಸುರವಾಗೆ (ರಸರ. ಶಂ. ೦-೦೦೯). **ಬೇಗೆಗಿರ್ಚು:** ಬೇಗೆಗಿರ್ಚಿನೊಳ್ ಬೇವವೊಲಿರ್ದುವಿರ್ಪಲದ ಬಿಲ್ಲಣೆಗಳ್ ರಣರಂಗಭೂಮಿಯೊಳ್ (ಶಂರಾವಾ. ೦೩-೪೮); ಬೆಟ್ಟವೇಸಗೆಯ ಬೇಗೆಗಿರ್ಚಿನ ಬಳಸಿಂಗೊಳಗಾದ ಸಿಂಗದ ಸಂಗಡದಂತೆಯುಂ (ಶುಕ್ಕೃ. ೩-೦೨೩ ವ). [ಬೇಗೆ + ಕಿಚ್ಚು]

**ಬೇಗೆಗಿರ್ಚು** 'ಬೇಗೆಗಿಚ್ಚು' ನೋ.

**ಬೇಗೆಗೊಳ್** (ಕ್ರಿ). ಬೇಯು; ಸುಡು: ಅಂಬುಚರಮೆಲ್ಲಂ ಬೇಗೆಗೊಂಡತ್ತು ಬಾಂಬೊಳೆ ಬತ್ತಿತ್ತು ಮರೀಚಿ ಪೊಣ್ಮಿದುದರಣ್ಯಂ ಬೇದುದಾ ಗ್ರೀಷ್ಮದೊಳ್ (ರಾಜಶೇ. ೫-೩೭). [ಬೇಗೆ + ಕೊಳ್$_1$]

**ಬೇಗೆಪತ್ತು** (ಕ್ರಿ). ಬೆಂಕಿಯುಂಟಾಗು; ಕಿಚ್ಚು ಹತ್ತು: ಬೇಗೆಪತ್ತಿದ ಬೆಟ್ಟಂ ಪೊಣರ್ವಂತೆ ಪೋರ್ದುವು ಗಜವ್ಯೂಹಂ ಗಜವ್ಯೂಹದೊಳ್ (ಅಪಂಪು. ೦೯-೩). [ಬೇಗೆ + ಪತ್ತು$_1$]

**ಬೇಗೆಯಾಱು** (ಕ್ರಿ). ಕಿಚ್ಚು ಇಲ್ಲದಂತಾಗು; ಬೆಂಕಿ ಆರು: ಬೇಗೆಯಾಱುವೊಡಾಱು ತಿಂಗಳು ತಡವುಂಟು ಹೋಗಬಹುದು ಮುಂದೆ ಮತ್ತೆ ಈಗ ನೀವೆರಡುಬೀಡದ ಮ್ಲೇಚ್ಛದವರುಕ್ಕನೀಗಾಡಿ ತಹುದಿಲ್ಲಿಗೆ (ಶಶ. ೩೦-೩). [ಬೇಗೆ + ಆಱು$_1$]

**ಬೇಗೆವಡೆ** (ಕ್ರಿ). ತಾಪವನ್ನು ಹೊಂದು; ಸುಡು: ಸುಡುವ ಕನ್ನಡಿಯೊಳ್ ದೊರ್ಡೆ ನಿಜಾಸ್ಯಂ ಬೇಗೆವಡೆಯದು (ಅಪುಸಾ. ೨-೬-೫). [ಬೇಗೆ + ಪಡೆ$_1$]

**ಬೇಗೆವರಿ** (ನಾ). ತಾಪವು ಹೆಚ್ಚಾಗುವಿಕೆ; ಶಾಖವು ಹರಡುವಿಕೆ: ಬೇಗೆವರಿ ಬೆಳುದಿಂಗಳಲಿ ನಮಗೀಗ ತೋಱಿತಲಾ (ಕುಬ್ಯಾಕ. ೦೨-೨೮). [ಬೇಗೆ + ಪರಿ$_3$]

**ಬೇಗೆವೋಗು** (ಕ್ರಿ). ಸುಟ್ಟುಹೋಗು; ದಹಿಸಿಹೋಗು: ಬೇಗೆವೋದ ಬೆಟ್ಟದಂತೆ ಮೆಯ್‌ ಬಿಸುಪನಾಗೆ (ಧರ್ಮಪ್ರ. ೦೦-೩೩); ಪಟಬೇಗೆವೋಗೆ . . . ಬಸಪಟಿದುದು ಬೇಸಗೆಯ ಬಿಸಿಲೊಳೊಂದಿಭಕಳಭಂ (ಶಂಪ್ರಪು. ೯-೭೪). [ಬೇಗೆ + ಪೋಗು$_1$ (< ಪೋ$_1$)]

**ಬೇಚರಾಕ** 'ಬೇಚಿರಾಖಿ' ನೋ.

**ಬೇಚರಾಕು** 'ಬೇಚಿರಾಖಿ' ನೋ.

**ಬೇಚರಾಖು** 'ಬೇಚಿರಾಖಿ' ನೋ.

**ಬೇಚಿರಾಕ** 'ಬೇಚಿರಾಖಿ' ನೋ.

**ಬೇಚಿರಾಕು** 'ಬೇಚಿರಾಖಿ' ನೋ.

**ಬೇಚಿರಾಖ** 'ಬೇಚಿರಾಖಿ' ನೋ.

**ಬೇಚಿರಾಖಿ**, ಬೇಚರಾಕ, ಬೇಚರಾಕು, ಬೇಚರಾಖು, ಬೇಚಿರಾಕ, ಬೇಚಿರಾಕು, ಬೇಚಿರಾಖ (ನಾ). ನಿರ್ಜನವಾದ ಭೂಮಿ; ಪಾಳು ಭೂಮಿ; ಬೀಳು: ಒಂದು ಹಳ್ಳಿಯಲ್ಲಿ ಕೂಡ ಜನವಸತಿಯು ಉಳಿಯದಂತೆ ಬೇಚಿರಾಖಿ ಮಾಡಿದರು (ಕನ್ನಡಿ. ೦೦೭). **ಬೇಚರಾಕ:** ಆ ಹಳ್ಳಿ ಬೇಚರಾಕವಾಗಬೇಕೆ? (ಮುಕ್ಕು. ೦೦೫). **ಬೇಚರಾಕು:** ಅನಾದಿ ಬಂಜರುಭೂಮಿಯು ಬೇಚರಾಕಾಗಿರುವ ಭೂಮಿ ಸಹ ಎಷ್ಟು ಇದೆಂಬೋ

ಚೆನ್ನಾಗಿ ನೋಡಿ . . . ಸಾಗುವಳಿ ಮಾಡಬೇಕು (ಮಹಾಮ. II, ೩೦); ಜೋಗಿಪುರ ಆಗಲೇ ಬೇಚರಾಕು ಆಗುತ್ತಾ ಬಂದಿತ್ತು (ನವ್ಯರು. ೦೩೦). **ಬೇಚರಾಖು :** ಕಸವಗಟ್ಟಯೆಂಬ ದಿನ್ನೆ . . . ಬೇಚರಾಖು ಬಿದ್ದು ಇದೆ (ಮಹಾಮ. II, ೬೯). **ಬೇಚಿರಾಕ:** ವಾಡೇ ಮತ್ತು ಮಠ ಇವೆರಡೂ ಹೀಂಗ ಹಾಳಾದರ, ಪಾದಳ್ಳಿ ಬೇಚಿರಾಕ ಆದ್ಹಾಂಗ (ಗ್ರಾಪಜಾಯ. ೬೯). **ಬೇಚಿರಾಕು :** ಹಳೇಆಲೂರು ಒಂದು ಬೇಚಿರಾಕುಗ್ರಾಮ (ಪ್ರವಾಸು. ೯೬). **ಬೇಚಿರಾಖಿ :** ಗ್ರಾಮಗಳು ಇನಾಮಿ ಬೇಚಿರಾಖಿ ಸಹಿತ (ಶಭಾಗ. ೨).

[← ಪಾರ. ಹಿಂ. ಬೇಚಿರಾಗ್; ಮರಾ. ಬೇಚಿರಾಖ್, ಬೇಚಿರಾಗ್]

**ಬೇಜಮಿ, ಬೇಜಿಮೆ** (ನಾ). ಅಗತ್ಯದ ಪೂರೈಕೆ.—ವ್ಯವಸ್ಥೆ : ಇವೊತ್ತಿನ ಬೇಜಮಿ ಇವತ್ತು ಮಾಡಿಕೊಳ್ಳದಿದ್ದರೆ (ಖಂಡಹು. ೩೩); ಪಗಾರ ಬರೂತನಕ ನಾ ಹೆಂಗರ ಬೇಜಮಿ ಮಾಡತೀನಿ (ಅನ್ನ. ೦೨೦). **ಬೇಜಿಮೆ :** ಕ್ಷೀರ_ದಧಿ ಸುಘೃತದ ಬೇಜಿಮೆಯಾಗುತ್ತಿತ್ತು (ದೀಪಪ. I, ೭೦); ಅಮೇರಿಕೆಯಲ್ಲಿ ವಿದ್ಯಾರ್ಥಿಗಳು ಕೂಲಿ ಮಾಡಿ ದುಡಿದು ವರ್ಷದ ಖರ್ಚಿನ ಬೇಜಿಮೆ ಮಾಡುವರು (ಅಮೇಪ. ೦೨).

[← ಮರಾ. ಬೇಜಮಿ, ಬೇಗಮಿ]

**ಬೇಜವಾಬುದಾರಿ, ಬೇಜವಾಬ್ದಾರಿ** (ಗು). ೧. ಜವಾಬ್ದಾರಿ ಇಲ್ಲದ; ಹೊಣೆಗೇಡಿತನದ : ಈ ರೀತಿ ಬೇಜವಾಬುದಾರಿ ಮಾತನಾಡುವುದು ಸರಿಯಲ್ಲ (ಬಡಾಜ. ೦೩೪) ; ನೀವು ಮಾಡುತ್ತಿರುವ ಬೇಜವಾಬುದಾರಿ ಕೆಲಸದ ಬಗ್ಗೆ ಊರಲ್ಲಿ ಈಗಾಗಲೇ ಗುಲ್ಲು ಎದ್ದಿದೆ (ರಂಗರೋ. ೬೯). (ನಾ). ೨. ಜವಾಬ್ದಾರಿ ಇಲ್ಲದಿರುವಿಕೆ ; ಹೊಣೆಗೇಡಿತನ : ಬೇಜವಾಬುದಾರಿಯಿಂದ ಇಂಥ ಕೃತಿಯನ್ನು ಮುಂದುವರಿಸುವುದೂ . . . ಅಥವಾ. . .ಯಾವುದಾದರೊಂದು ಕಾಲ್ಪನಿಕ ಅಕ್ಲಿಷ್ಟ ಸುಖದೊಳಗೆ ತನ್ಮಯನಾಗಿರುವುದು (ಕೃಬಂಧ. ೦೪). **ಬೇಜವಾಬ್ದಾರಿ :** ೧. ಬೊಂಬಾಯಿಗೆ ಹೋಗಿ ಬೇಜವಾಬ್ದಾರಿ ಬೇವರ್ಸಿಯ ಹಾಗೆ ಅಲೆದು 'ಫ್ಲೂ' ತಂದುಕೊಂಡ ನನಗೆ ಮೈಸೂರಿನಿಂದ ಟೆಲಿಗ್ರಾಂ ಬಂತು (ಹೊಸಕ್ಷಿ. ೦೨೪).

[← ಮರಾ. ಬೇಜಬಾಬ್‌ದಾರ್]

**ಬೇಜವಾಬ್ದಾರಿ** 'ಬೇಜವಾಬುದಾರಿ' ನೋ.

**ಬೇಜಾರು** (ನಾ). ಉತ್ಸಾಹವಿಲ್ಲದಿರುವಿಕೆ ; ನಿರುತ್ಸಾಹ ; ಬೇಸರ : ಅವನನ್ನು ಕೋರ್ಟಿನಲ್ಲಿ ಹಾಜರುಪಡಿಸುವ ವಿಷಯದಲ್ಲಿ ನಿಮಗೆ ಬೇಜಾರು ಬೇಡ! (ಧೂಮಕು. ೪೪) ; ಬಲದೇವನಿಗೆ ಶಾಲೆಗೆ ಹೋಗಲು ಬೇಜಾರು (ಶಲಾಕ. ೨೭). 'ಬೇಸಚಿಂ$_2$' ಪರಾ.

**ಬೇಜಾರುಗೊಳ್ಳು** = ನಿರುತ್ಸಾಹಪಟ್ಟುಕೊಳ್ಳು ; ಬೇಸರಿಸು : ಕೊನೆಗೊಮ್ಮೆ ಬೇಜಾರುಗೊಂಡು ವಿನೋದ ತನ್ನ ತಾಯಿಗೆ ಹೇಳಿಯೇ ಬಿಡುತ್ತಿದ್ದ (ಶಾರಹ. ೦). **ಬೇಜಾರುಪಡು** = ಬೇಜಾರುಗೊಳ್ಳು : ಬೆಂಗಳೂರಿನಿಂದ ಯಾರು ಬಂದರೂ ನಮ್ಮ ಕಡೆ ಹೆಚ್ಚಿಗೆ ದಿನವಿರಲು ಬೇಜಾರುಪಟ್ಟುಕೊಳ್ಳುತ್ತಾರೆ (ಕೂಪಧೇ. ೦೬).

[← ಪಾರ. ಹಿಂ. ಮರಾ. ಬೇಜಾರ್. / ತಮಿ. ವೇಜಾಱು ; ತುಳು. ಬೇಜಾರ್; ಕೊಡ. ಬೇಜಾರ]

**ಬೇಜಿಮೆ** 'ಬೇಜಮಿ' ನೋ.

**ಬೇಜ್ಯಾ** (ನಾ). ಉಪಯೋಗವಿಲ್ಲದುದು; ನಿಷ್ಪ್ರಯೋಜಕವಾದುದು: ಹಾಲಪ್ಪನಾಯ್ಕನ ಮಾತಿನ ಮೇಲೆ ಬಂದದ್ದು ಬೇಜ್ಯಾ ಆಯಿತ್ತು. ಇನ್ನಾಮೇಲೆ ನಾವು ಖಾಮುಷು ಇದ್ದರೆ ಪರಿಣಾಮ ಆಗೋದಿಲ್ಲ (ಮಂದಶ. ೦೬-೯). [←ಹಿಂ. ಮರಾ. ಬೇಜಾನ್=ಸತ್ತ್ವವಿಲ್ಲದುದು]

**ಬೇಟ** 'ಬೇಂಟ' ನೋ.

**ಬೇಟಕಾರ** 'ಬೇಂಟಗಾಱ' ನೋ.

**ಬೇಟಕಾರ್ತಿ** (ನಾ). ೧. ಪ್ರಣಯಲಾಲಸೆಯುಳ್ಳವಳು. ೨. ವೇಶ್ಯೆ, ಗಣಿಕೆ : ಮತ್ತೊರ್ವ ಬೇಟಕಾರ್ತಿ ತಾಯ ಕಣ್ಣಂ ಬಂಚಿಸಿ ತನ್ನ ಮೋಹಿನಾಕೆಯ ಮನೆಗೆ ಪೋಪ ಬೇಟದಾಣ್ಮನಂ ಪಿಡಿದು (ಶಂಶಭಾ. ೪-೯೮ ವ); ಬೇಟಕಾರ್ತಿಯರಿವರೀಕೆಗಳ್ ಬಸನಿಗಳ್ ಕಡುಬದ್ದೆಯರೆಂದುಮಿಾ ಲತಾಂಗಿಯರೆನಿಸಿರ್ದರಂ ನಯದೆ ನೋಡಿದನಪ್ರತಿವೈಶ್ಯಸಂಭವಂ (ಬಂಹಂ. ೩-೪೮); ಸರ್ವಸ್ವವನು ನೆಱೆ ಕವರಿ ಗೋಟುಗೊಳಿಸುವ ಬಲ್ಮೆಗಳ ಬಲ್ಲಾಟವಿತ ಬಹುವಿಧದ ಮಾಯೆಯ ಬೇಟಕಾರ್ತಿ[ಪಾಠಾಂ. ತಿ]ಯರೊಪ್ಪಿದರು (ತೊರರಾ. ೦-೩-೩೦). [ ಬೇಟಕಾಱ$_1$ (< ಬೇಂಟಗಾಱ) + – ತಿ$_1$ (< – ಇತ್ತಿ )]

**ಬೇಟಕಾಱ$_1$** 'ಬೇಂಟಗಾಱ' ನೋ.

**ಬೇಟಕಾಱ$_2$** (ನಾ). ಬೇಟೆಯಾಡುವವನು (?) : ಕೊಂಕಣಗ ಬೇಟಕಾಱ ಮಲೆಯ ತಾತಳತು × × × ಮಚತಿಸುವರವಂ ತಳಸಾಲ ಹೊಸುವ ಗಂಟಲ ಗಾಳ (ಎಕ. VIII, ಸಾಗರ. ೬೬-೦೦; 1107).

[P ಇದು 'ಬೇಟೆಕಾಱ' ಎಂಬುವರ ಅಪಲಿಖಿತವಿರಬಹುದು]

**ಬೇಟಗೊಳ್** 'ಬೇಂಟಂಗೊಳ್' ನೋ.

**ಬೇಟಮರುಳು** (ನಾ). ಪ್ರಣಯಲಾಲಸೆ.

**ಬೇಟಮರುಳಾಗು** = ಪ್ರಣಯಲಾಲಸೆಯಿಂದ ಮರುಳಾಗು : ನಿನ್ನನು ಬಿಡದೆ ನೋಡಿದ ಜವ್ವನಿಗರು ಬಡವಾಗದೆ ಬೇಟಮ [ಪಾಠಾಂ. ಮ]ರುಳಾಗದಿರ್ಪರೆ ಬಡನಡುವಿನ ಬಿಂಕಕಾರ್ತಿ (ಶಂಗಾಸಾ. ೨೪-೩೬). [ ಬೇಟ (< ಬೇಂಟ) + ಮರುಳು ( < ಮರುಳ್$_2$) ]

**ಬೇಟವಾತು** (ನಾ). ಪ್ರೇಮದಿಂದ ಕೂಡಿದ ಮಾತು ; ಲಲ್ಲೆಯ ನುಡಿ : ನಲ್ಲಳ ಬೇಟವಾತೋ ಶುಕಚಾರುನಿನಾದಮೊ . . . ವಿಬುಧಾನುರಾಗಮೊ (ಉದ್ಭಟ. ೦-೩೩). [ ಬೇಟ ( < ಬೇಂಟ ) + ಮಾತು$_1$ ]

**ಬೇಟವೆಣ್** (ನಾ). ಪ್ರಣಯಲಾಲಸೆಯುಳ್ಳವಳು ; ನಲ್ಲೆ : ವಿರಹದಿಂ ಪ್ರಿಯತಮಸಮಾಗಮಪ್ರತ್ಯಾಶೆ ಹೃದಯಮಂ ಬೇಯಿಸಲ್ಕಾ ಬೇಟವೆಣ್ ಸೋಗೆ ನವಿಲುಕಲ್ಲಿಗೆ ಮರಳಿ ಬಂದು ಕರೆವುದು ಕೇಗಿ ತನ್ನೆರೆಯನಂ (ಶಕ್ಯಾಂಗ. ೩೩-೦೩೦೨). [ ಬೇಟ (< ಬೇಂಟ) + ಪೆಣ್ ]

**ಬೇಟವೆಳಸು** (ನಾ). ಪ್ರಣಯದ ವೃದ್ಧಿ ; ಪ್ರೇಮದ ಆಧಿಕ್ಯ,– ಹೆಚ್ಚಳ : ಕಾಮಿನಿ ಹುಲಿಸಾದ ಬೇಟವೆಳಸಂ [ಸಿಂ] ಕಡುಸಂತಸದಂತ ಮೆಯ್ದಿದಳ್ (ಸೂಕ್ತಿಸು. ೦೪-೪೪). [ಬೇಟ (< ಬೇಂಟ) + ಬೆಳಸು$_2$]

**ಬೇಟಹೂಡು** (ಕ್ರಿ). ಪ್ರಣಯದಲ್ಲಿ ತೊಡಗು : ಇನಿಯಳೊಡನೆ ಪಾರಿವಾಳ ಬೇಟಹೂಡಿದೆ (ಮಾಂದೇ. ೦೦-೪).

[ ಬೇಟ ( < ಬೇಂಟ ) + ಹೂಡು$_1$ ( < ಪೂಡು )]

**ಬೇಟೆ** 'ಬೇಂಟೆ' ನೋ.

**ಬೇಟೆಕಾತಿ** (ನಾ). = ಬೇಂಟೆಗಾರ್ತಿ : ಚಾಳವಣೆಗಳ ಬಲೆಯ ಠಕ್ಕಿನ ಠೌಳಿಗಳ ತೋಹುಗಳ ನಗೆಗಳ ಮೇಲುಮುದ್ದಿನ ಬೇಟೆಕಾತಿಯರೈದಿದರು ವನವ (ತೊರರಾ. ೦-೩-೩೯); ವಿಟರಕ್ಷಿಮೃಗಂಗಳ . . . ತುಂಗಕುಚಗಳೆಂಬ ಬನಲಿ ಸಿಲುಕಿಪರನಂಗನ ಬೇಟೆಕಾತಿಯರು (ಕುಸಂ. ೨೦-೬೬).

[ ಬೇಟೆ ( < ಬೇಂಟೆ ) + – ಕಾತಿ$_5$ ]

**ಬೇಟೆಕಾಱ** 'ಬೇಂಟೆಗಾಱ' ನೋ.

**ಬೇಟೆಗ** 'ಬೇಂಟೆಗ' ನೋ.

**ಬೇಟೆಗಾರ** 'ಬೇಂಟೆಗಾಱ' ನೋ.

**ಬೇಟೆಗಾರಿಕೆ** (ನಾ). ಬೇಟೆಯಾಡುವಿಕೆ ; ಶಿಕಾರಿ : ಹಿಂದಿನ ಬೇಟೆಗಾರಿಕೆ ದನಕಾರಿಕೆಗಳು ಬಿಟ್ಟು ಹೋದುವು ಎಂದಲ್ಲ (ಸಾಹಿಸ. ೦೩೦).

[ ಬೇಟೆಗಾರ ( < ಬೇಂಟೆಗಾಱ) + – ಇಕೆ ]

**ಬೇಟೆಗಾಱ** 'ಬೇಂಟೆಗಾಱ' ನೋ.

**ಬೇಟೆನಾಯಿ** 'ಬೇಂಟೆನಾಯ್' ನೋ.

**ಬೇಟೆಯಾಡು** ' ಬೇಂಟೆಯಾಡು ' ನೋ.

**ಬೇಟೆರಾಯ** (ನಾ). ಒಂದು ಕ್ಷುದ್ರದೇವತೆಯ ಹೆಸರು ; ಪ ಹಿಂದೆ ಬೇಟೆಗೆ ಹೋಗುತ್ತಿದ್ದ ಜನರು, ಮೊದಲು ಈ ದೇವತೆಯನ್ನು ಪೂಜಿಸುತ್ತಿದ್ದಿರಬಹುದು : ನಗಧರ ತಿರುಮಲೇಶ್ವರ ಬೇಟೆರಾಯರು ಮಿಗೆ ಕಾದಿಹರು ಪಟ್ಟಣವ (ಕಂಸಿ. ೬-೧೧೨).

[ ಬೇಟೆ ( < ಬೇಂಟೆ ) + ರಾಯ ]

**ಬೇಟೆವೆಸ** (ನಾ). ಶಿಕಾರಿಯ ಹವ್ಯಾಸ.—ಉದ್ಯೋಗ : ಪೊಗಸಿನೊಳ್ ಪೊಗಸಿ ಪೈಗುವರೆಗಂ ಬೇಟೆವೆಸದಿನಸುವರೆಯಾಗಿ . . . ಬೇಸಱಿಸಿದ ಪುಳಿಂದಿನಿಯರ ಮನದೊಳೊಂದಿನಿಸು ಸಂದಿಸಿಯುಂ (ಚಂದ್ರಪು. ೯-೪೮).

[ ಬೇಟೆ ( < ಬೇಂಟೆ ) + ಬೆಸ$_1$ ]

**ಬೇಡ$_1$** (ನಾ). ೧. ಬೇಟೆಯನ್ನು ವೃತ್ತಿಯಾಗಿ ಉಳ್ಳವನು : ಬಿಲ್ಲರ ಜಾತಿಗೆ ಸೇರಿದವನು ; ಶಬರ : "ವನಚರ ಕಿರಾತ ಧಾನುಷ್ಕ ನಿಷಾದ ಪುಳಿಂದ ಶಬರ ಭಿಲ್ಲಾಖ್ಯಂ ಬೇಡನಪಂ" (ಪಶ್ಚಕೋ. ೬೬-೮೮) ; ಕಾಡೊಳ್ ಬೇಡರಂತೆ ತೊಟಿಲ್ವ ದಾಯಿಗರ ಕಂದಿ ಕುಂದಿದ ಮೊಗಂಗಳಂ ನೋಡು ಪುದುಂ (ಕಂಕೌಶಾ. ೬-೩೨ ವ) ; ಇರುಳು ಹಗಲೆನ್ನದೆ ಪ್ರಾಣಘಾತಕವ ಮಾಡಿದ ಬೇಡನ ಕೈಲಾಸಕೊಯ್ದೆಯಯ್ಯಾ (ಬಸವ. ೬೩); ವಿಟರುಗಳ ಕರಣವೆಂಬ ಮಿಗಮಿಂಡನುಱೆ ಬಂಧಿಸುವ ಮುಂಗುಳೆಂಬ ಬೇಡನ ಜಾಲದೊಲ್ ಸೂಳೆಯರಗುಣಿತಗೃಹಗಳೊಪ್ಪಿಹುವು (ಕಂಸಿ. ೨-೮೮).

[ದೇ॥. ತವಿ. ವೇಟನ್. ವೇಟ್ಟುವನ್; ಮಲ. ವೇಟನ್; ತುಳು. ಬೇಡದ]

**ಬೇಡ$_2$** (ನಾ). ಹೆದರುವವನು ; ಭೀರು ; ಹೇಡಿ : "ಬೇಡನೆನೆ ಭೀತಚಿತ್ತಂ" (ಕಸಂ. ೧೫೩); ಕನ್ನಡದೊಳ್ ಬೇಡರೆಂದು ಭೀತರ್ಗೆ ಪೆಸರ್ (ಅಭಿ. ೧೨೯-೩). ' ಪೇಡ ' ನೋ.

[ < ಪ್ರಾ. ಭೇಡ./ಮರಾ. ಭೇಡ್=ಭಯ ]

**ಬೇಡ$_3$** (ಅ). ಸಲ್ಲದು, ಬೇಕಾಗಿಲ್ಲ, ಅಪೇಕ್ಷೆಯಿಲ್ಲ ಮುಂತಾದ ಅರ್ಥಗಳನ್ನು ಸೂಚಿಸುವ ಒಂದು ನಿಷೇಧಾರ್ಥಕ ಅವ್ಯಯ : ಬೇಡ ವಿರೋಧಮೆಂತುಮರಿಕೇಸರಿಯೊಳ್ ಸಮಸಂದು ಸಂಧಿಯುಂ ಮಾಡು (ಪಂಪಭಾ. ೧೩-೫೪); ಒಲೆಯು ಬೂದಿಯು ಬಿಲಿಯಲು ಬೇಡ (ಬಸವ. ೧೧೪): ರಣದಲಿ ಶೂಲಿಯಮೆಚ್ಚಿಸಿದರೆ ಹಿಡಿವೆನು ಚಿಂತೆ ಬೇಡಿದಕೆ (ಕುಮಾವ್ಯಾ. ೪-೯).

**ಬೇಡವೇಡ, ಬೇಡಬೇಡ** (ದ್ವಿರುಕ್ತಿ) : ಅಮರಾಪಗಾಸುತ ಕೃಪ ದ್ರೋಣಾದಿಗಳ್ ಬೇಡವೇಡೆನೆಯುಂ ಮಾಣದೆ . . . ದುಶ್ಶಾಸನಂ . . . ತೆಗೆದಂ ಧಮ್ಮಿಲ್ಲಮಂ ಕೃಷ್ಣೆಯಾ (ಗದಾಯು. ೬-೩) ; ಇದೇಕೆ ಬೇಡ ವೇಡನೆಯುಂ ಕಿವಿಯೊಳ್ ತೊಡರ್ಚಿ ಪೋದಳೇ ಕುಸುಮಮಂಜರಿಯುಂ (ಲೀಲಾವ. ೬೬೮) ; ಗಾಡಿಗನಿರಲೀಸಲಾಗದು ಬೇಡಬೇಡಾವಂದರಿಯೆ ಬೀಡಿನಲಿ ಮೊಱೆವಡಿಸಿಯುತ್ತಲಿ ತಗುಳ್ವುದು ಮಂತ್ರವು (ಬಸವಪು. ೪೨-೩೨) : ಬೇಡಬೇಡಾ ಸಾಹಸಂ, ದೇವಿ ; ಬೇಡುವೆನು (ತತ್ತ್ವಂಗ. ೩೭ ೧೮೪೯).

**ಬೇಡನ್**=ಬೇಡವಾದವನು ; ಅನರ್ಹನಾದವನು : ಘೋಷೋತ್ತಮಾಂಗ ಬಿಸುಟ್ಟಿರದೆ ನಿಮ್ಮೊಳೆ ಪೊಕ್ಕೊಡೆ ಬೇಡನಲ್ಲನೇ (ಪಂಪಭಾ. ೯-೬೯) : "ಬೇಡನಲ್ಲನೇ—ಯಾರಿಗೂ ಬೇಡವಾದವನಲ್ಲವೇ, ಅಥವಾ ಕಿರಾತನಾಗುತ್ತೇನಲ್ಲವೇ ?" (ಪಂಪಭಾ. ೩೨೯). [ದೇ॥ ತಮಿ. ವೇಣ್ಡಾವರ್; ಮಲ. ವೇಣ್ಟ]

**ಬೇಡಕೊಟ್ಟ** ' ಬೇಡಗೊಟ್ಟ ' ನೋ.

**ಬೇಡಗೊಟ್ಟ, ಬೇಡಕೊಟ್ಟ** (ನಾ). ಶಬರರ ವಾಸಸ್ಥಾನ : ಬೇಡರ ಹಳ್ಳಿ : ಬೇಡಗೊಟ್ಟಮೂರಾಗಿಯುಂ ಪಟ್ಟಣಮಾಗದಂತೆ . . . ದೂರಭವ್ಯರುಮಭವ್ಯರುಂ ಶ್ರಾವಕರಾಗಿಯುಂ ಶ್ರಾವಕರಾಗಿಯುಂ ಮೋಕ್ಷಗಾಮಿಗಳಲ್ಲರ್ (ವಡ್ಡಾರಾ. ೧೦-೧೮೬). **ಬೇಡಕೊಟ್ಟ** : ಧನ್ವಂತರಿಯುಮಂತೆ ನಾಲ್ವರುಂ ಕರೆದು ನೀವೀ ಬೇಡಕೊಟ್ಟದೊಳ್ ಮಾಂಸಮಂ ತನ್ನಿಮೆಂದಟ್ಟುವುದುಂ (ವಡ್ಡಾರಾ. ೨-೧೯೯). [ಬೇಡ$_1$ + ಕೊಟ್ಟ$_4$]

**ಬೇಡತಿ** ' ಬೇಡಿತಿ ' ನೋ.

**ಬೇಡಪಡೆ** ' ಬೇಡವಡೆ ' ನೋ.

**ಬೇಡಬಲೆ** (ನಾ). ಶಬರರು ಬೇಟೆಯಲ್ಲಿ ಬಳಸುವ ಬಲೆ.– ಜಾಲ : ಬೆಕ್ಕುಗಳ್ ನುಂಗಿದುವೊ ಪೋಕ್ ಬೇಡಬಲೆಗಳೊಳ್ ಸಿಕ್ಕಿದುದೊ . . . ಠಕ್ಕಿಗೊಳಗಾದುದೋ (ತಿಲಪು. ೪೬-೩). [ಬೇಡ$_1$ + ಬಲೆ$_1$ ]

**ಬೇಡರಸ** (ನಾ). ಶಬರರ ಮುಖಂಡ : ಕಿರಾತರ ಒಡೆಯ ; ಬೇಡರ ನಾಯಕ : ನಾಡರಸಂ ತಗುಳ್ದು . . . ನಾಡನವಂ ಕಡಿದಿಕ್ಕಿ ಮೆಚ್ಚಿದಂ ಬೇಡರಸಂ ತರಂಗತಮನಾನಿರೆ ಬೇಡರಸೆಂಬ ಗರ್ವದಿಂ (ಪಂಪರಾಮಾ. ೪-೩೪): ತಮ್ಮಾಳ್ದನಪ್ಪ ಬೇಡರಸಂಗೆ ದೇವತೆ ಬಂದು ಭೀಮವನದೊಳಿರ್ದಳಲ್ಲಿಗೆ ಪೋಗಿ ನಿಮ್ಮ ಬೇಟ್ಟ ವರಮಂ ಬೇಡಿಕೊಳ್ಳಿಮೆಂದು ಬಿನ್ನಪಂಗೆಯ್ವುದುಂ (ವಡ್ಡಾರಾ. ೩-೯೩). [ಬೇಡ$_1$ + ಅರಸ$_1$ ]

**ಬೇಡವಟ್ಟ** (ನಾ). ಶಬರರ ನಾಡು.—ಊರು : ಅನಂತೆ ಪೋಗೆಪೋಗೆ ಪೊಲಸಿನ ಗಂಧಮುಂ ಪೊತ್ತು ಕಿಱುಕಪ್ಪುರೆಗೊಳ್ವ ಕಾರ ಪೊಗೆಯಿನಱಿಯಲಾದ ಬೇಡವಟ್ಟಮಂ ಕಂಡಂ (ಲೀಲಾವ. ೬೪೩). [ಬೇಡ$_1$ + ಪಟ್ಟ$_3$]

**ಬೇಡವಟ್ಟು** (ನಾ). = ಬೇಡವಟ್ಟ: ಆ ಪಕ್ಷಿಯುಮಪಮುಕ್ಕೆ ಪಕ್ಕುಗೊಟ್ಟು ನುವಂ ಬಿಟ್ಟು ಬೇಡವಟ್ಟಂಗೊಡೆಯನಾದುದು (ಪಂಪರಾಮಾ. ೮-೩೪ ವ) ; ಅಗುರ್ವುವೆತ್ತಱಿಕೆಯ ಬೇಡವಟ್ಟುಗಳ . . . ಕಿಡಿಸಲಂತದ ಮುನ್ನಿನ ಚಕ್ರವರ್ತಿಗಳ್ ಪೆಱರಳವಲ್ತುಮಂ ಕೆಡಿಸಿತೊಟ್ಟಜೆ ತೈಲಪಚಕ್ರವರ್ತಿಯಾ (ಕಾವ್ಯಾವ. ೨೦೨); ಓಡದ ಬೇಡವಟ್ಟು ಪೋಗದ ಕಲಿಗೋಂಟೆ ಸಿಲ್ಕದ ವಿರೋಧಿಕುಟುಂಬಮಿಱುಂಬುಗೊಂಡಡಂಜದ ಬಿಳರನ್ಯಮಂಡಳದೊಳಿಲ್ಲ (ಪುಷ್ಪಪು. ೩-೩೩). [ಬೇಡ$_1$ + ಪಟ್ಟು$_4$]

**ಬೇಡವಡೆ. ಬೇಡಪಡೆ** (ನಾ). ಶಬರರ ದಳ : ಕಿರಾತರ ಸೈನ್ಯ : ಬೇಡವಡೆ ಮುಸುಱಿಕೊಂಡೇಸಾಡೆ ಸುರುಳ್ದಗಿದು ಕೊಡೆಯ ಚರ್ಮದ ಮಱೆಯೊಳ್ ಗೂಡುಗೊಳುತಿರ್ದ ಶೌರ್ಯಕ್ರೀಡೆಯ ದಿಗ್ವಿಜಯ ಮೆಸೆದುದು (ಆದಿಪು. ೧೪-೬೨); ಅಂತುತ್ಪಾತವೇತಾಳವಡೆಯಂತೆ ಭಯಂಕರಾಕಾರಮಾದ ಬೇಡವಡೆಯ ನಡುವೆ . . . ಬಂದಂ ಪುಳಿಂದಪ್ರಕರಬಹುಳ ಸೇನಾಪರೀತಂ ಕಿರಾತಂ (ಲೀಲಾವ. ೧೬೩) ; ತಡಿಕೆವಲೆ ತಟ್ಟವಲೆ . . . ಮುಱಿವಲೆ ಮಂದಸಿನವಲೆಯ ಹೊಱೆಗಳ ಬೇಡವಡೆ ನೆರೆದುದು (ಹರಿಶ್ಚ. ೩-೮). **ಬೇಡಪಡೆ** : ಬರ್ಪ ಬೇಡಪಡೆಯೊಡೆಯನೊಂದು ಕಡೆಯೊಳ್ಬೇಂಟೆ ಯಾಡುತ್ತಮೆಸೆದಿರ್ದಂ (ಉದ್ಭಟ. ೨-೪೬ ವ); ಮರೆ ಲಾಲಾಯ . . . ಕರಿಕಳಭ ವಿಡ್ಗಪ್ರತಾನದ ಮೇಹುಗಾಡಿನಲಿ ಹರಿದು ಬೆರಸಿತು ಬೇಡಪಡೆ (ತೊರವೆ. ೩-೩-೧೩). [ಬೇಡ$_1$ + ಪಡೆ$_2$]

**ಬೇಡವಣ್ಣ** (ನಾ). ಕಿರಾತನ ಬಣ್ಣ ; ಕಪ್ಪುವರ್ಣ : ಬೇಡವೆಂದರು ಬೇಡ ಕಳುವದ ಬಿಡುವನೆ ಬೇಡವಣ್ಣದ ತುಂಬಿವಿಂಡು ಬೇಡವೆಂದರು ಬರುತಿರ್ಪದು ತ್ಯಾಗಿಯ ಬೇಡುವ ಯಾಚಕರಂತೆ (ಶರತ್. ೩-೧೩).

[ ಬೇಡ$_1$ + ಬಣ್ಣ ]

**ಬೇಡವಳ್ಳಿ** (ನಾ). ಶಬರರು ವಾಸಿಸುವ ಹಳ್ಳಿ ; ಕಿರಾತರು ನೆಲಸಿರುವ ಗ್ರಾಮ : ಉಪಶ್ರೇಣಿಕಂ ಬೇಂಟೆಯಾಡಲ್ವೋಗಿ . . . ವಿಂಧ್ಯಾಟವಿಯ ನಟ್ಟನಡುವೆ ಸುರಮ್ಯಮೆಂಬ ಬೇಡವಳ್ಳಿಯ ಸಾರೆ (ವಡ್ಡಾರಾ. ೧೬೨-೦೯) : ಕಾಲೂರ್ಗೆ ಮೆಟ್ಟಿಸು ಬೆಲ್ಲಮೆಂಬಂತೆ ಬೇಡವಳ್ಳಿಗೆ ಪಂದಿ ಮದ್ದಾನೆಯೆಂಬಂತೆ (ವಡ್ಡಾರಾ. ೬-೨೨೯) ; ಬಲೆದೊಡಚುವ ಬಿಲ್ಲನೊಱೆದಂಬುದಿರ್ದವ ಗೊರೆಗಟ್ಟುವ . . . ಬೇಡವಳ್ಳಿಯನಲಘುವಿಕ್ರಮಿ ಕಂಡನಾಗ (ಶ್ರೀಶಾಂ. ೬-೩೦).

[ ಬೇಡ$_1$ + ಪಳಿ$_1$ ]

**ಬೇಡವೆಣ್** (ನಾ). ಶಬರಸ್ತ್ರೀ ; ಕಿರಾತೆ ; ಬೇಡಿತಿ : ಬಿಲ್ಗೋಲಾಂತು ನಿಂದಂದು ಬೇಡವೆಣ್ಗಳು ಕಣ್ಗೆ ರಮಿಸಿ (ಪೋಚಿಪತ. ೧೪-೬೦) : ಬೋಡು ಮಾನಂ ತೆಱೆದೇಡಿಪ ಕ್ರೋಡಗಂಗಳಂ ನೀಡುಂ ನೋಡಿ ನಗೆಗಡಲೊಳೋ

ಆಡುವ ಬೇಡಪೆಣ್ಗಳಿಂ . . . ವಿಜೃಂಭಿಸಿ (ರಾಜಶೇ. ೩-೩೩ ವ).

**ಬೇಡವೆಂಡಿರ್** (ಬಹುವ) : ನಿಚ್ಚಮುಂ ಬೆಳೆಗೆ ಮುಳಿದು ತಿಳಿಪೆ ತಿಳಿದು ನೆರೆವ ಬೇಡವೆಂಡಿರಿಂ (ಕರ್ಣಾ. ೨೦೬). [ಬೇಡ₁ + ಪೆಣ್]

**ಬೇಡಾಧಿಪತಿ** (ನಾ). = ಬೇಡರಸ : ಹಿರಣ್ಯಧನ್ವನೆಂಬ ಬೇಡಾಧಿಪತಿಯ ಮಗನಾದ ಏಕಲವ್ಯನೆಂಬವನು (ಕೃಷ್ಣಾಚ. ೨೪೭). [ಬೇಡ₁ + ಅಧಿಪತಿ]

**ಬೇಡಿ** (ನಾ). ಕಾನೂನಿನ ಅಧಿಕಾರಿಗಳು ಅಪರಾಧಿಗಳನ್ನು ಬಂಧಿಸಿ ಅವರ ಕೈಕಾಲುಗಳಿಗೆ ಹಾಕುವ ಲೋಹದ ಸಂಕೋಲೆ ; ಕೋಳ : ಅಡಿಯ ಬೇಡಿ ಒಡೆಯಲಿಲ್ಲ ; ದುಡಿವ ದಾಸ್ಯ ಬಿಡಲೆ ಇಲ್ಲ ! (ಚಾಂತಜ. ೩೬-೧೦) ; ನಮ್ಮೆಲ್ಲರ ಕೈಕಾಲುಗಳಲ್ಲಿಯೂ ಬೇಡಿಗಳು ಬಿದ್ದವು ! (ಶೃತಾಶ. ೩೯).

**ಬೇಡಿ ಹಾಕಿಸು** = ಸಂಕೋಲೆಯನ್ನು ತೊಡಿಸುವಂತೆ ಮಾಡು : ಬಂಧಿಸುವಂತೆ ಮಾಡು : ಒಂದು ದಿವಸ ಆ ತುಂಟನು ಸರಹದ್ದಿನ ಒಳಗೆ ಬಂದಲ್ಲಿ ಅವನನ್ನು ಹಿಡಿದು . . . ಅವನ ಕಾಲಿಗೆ ಬೇಡಿ ಹಾಕಿಸಿ (ರಾಜೇಂದ್ರ. ೨೦೭) ; ನಿನ್ನ ಕೈಗೆ ಬೇಡಿ ಹಾಕಿಸ್ತೀನಿ (ಹುಗಪಹಾ. ೨೭).

[ ← ಹಿಂ. ಮರಾ. ಬೇಡೀ ]

**ಬೇಡಿಕೆ** (ನಾ). ೧. ಬೇಡಿಕೊಳ್ಳುವಿಕೆ ; ಯಾಚನೆ ; ಕೋರಿಕೆ : ಇಳಿಯ ರಾಯರಿಗಾಯ್ತು ಬೇಡಿಕೆ ವಿಪ್ರರಂದದಲಿ (ಸಂಕಥ. ೨೩-೧೦) ; ಅವಳ ಕಣ್ಣಿನಲ್ಲಿ ಬೇಡಿಕೆಯಿತ್ತು (ಮರೆ. ೧೩೨). ೨. ಬೇಕಾದುದು ; ಅಗತ್ಯವಾದುದು : ಇವರಿಗೆ ಪೇಳಿಯ ಅಭಾವದಿಂದಾಗಲಿ, ಇತರ ಕಾರ್ಯಣದಿಂದಾಗಲಿ, ತಮ್ಮ ಬೇಡಿಕೆಗಳನ್ನು ತಾವೆ ಕೊಂಡು ತರಲಿಕ್ಕೆ ಸಹಜ ವೆನಿಸುವುದಿಲ್ಲ (ತಕ್ಕಿ. ೯೭).

**ಬೇಡಿಕೆ ನೀಡಿಕೆ** = ಅಗತ್ಯ ಮತ್ತು ಅದರ ಪೂರೈಕೆ : ಪ್ರಪಂಚದ ವಿವಿಧ ಭಾಗಗಳೂ ಸಹ 'ಬೇಡಿಕೆ—ನೀಡಿಕೆ' (Demand–Supply)ಗಳ ತಾಕಲಾಟದಿಂದ ಹೋದಿಕೊಂಡು ಒಂದೇ ಆರ್ಥಿಕಕ್ಷೇತ್ರವಾಯಿತು (ಅಂತಸಂ. ೭). [ಬೇಡು₁ + —ಇಕೆ]

**ಬೇಡಿಗೆ** (ನಾ). ಒಂದು ಬಗೆಯ ತೆರಿಗೆ,— ಸುಂಕ : ೯(೦)ಮ್ಮಟೇಶ್ವರ ದೇವರ ನಂದಾದೀವಿಗೆಗೆ ಬಿಟ್ಟ ದತ್ತಿ ಬೇಡಿಗೆಯ ಕಮ್ಮಟದಲು ದಳಕ ವಿಸ ಒಂದು (ಸೌಇಇ. IX–i, ೨೬೨-೦೭ ; ಸು. 1155) ; [ಆರತಿ] ಕಾಣಿಕೆ ಬೇಡಿಗೆ ಯನೂ ಬಿಟ್ಟು ದೇವರ ಗ್ರಾಮದಲಿ ಬಿಟ್ಟವಾಗಿಯೇನನು ಮಾಡಲಿಲ್ಲ (ಸೌಇಇ. IX–ii, ೫೭೦-೨೫ ; 1535). 'ಬೇಡ್ಡು₄' ಪರಾ.

[ಬೇಡು₁ + —ಇಗೆ./ ತೆಲು. ಬೇಡಿಗ]

**ಬೇಡಿತಿ, ಬೇಡತಿ** (ನಾ). ಬೇಡರ ಹೆಂಗಸು ; ಕಿರಾತೆ : ಸೂರ್ಯಾಸ್ತ ಮಯದೊಳ್ ಪಾರ್ವರನೊಡಿ ನಿಷಾದಿತಿಯೆಂಬ ಬೇಡಿತಿಗಮಯ್ವರ್ ಮಗಂದಿರ್ಗಮುಣಲಿಕ್ಕಿದೊಡೆ ತಣಿಯುಂಡು ಬೆಂಡುಮರಲ್ದು ಮಱಸುಂದಿ ದರ್ (ಪಂಪಭಾ. ೩-೯೭) ; ಗೌರೀಪತಿಯ ಬಿನದಕ್ಕೆ ಭೂಭೃತ್ಸುತೆ ಬೇಡಿತಿ ಯಾದ ತೆಱನನನುಕರಿಸಿರ್ದಳ್ (ಕಾದಂಪೂ. ೯೦) ; ಅಲರ್ಗಣೆ ಪೊಂಗಿದ ಲೋಲೆವಾಯ್ ನಗೆಮೊಗಂ . . . ಚಿಲ್ವಾಗಿರೆ ನಿಂದ ಬೇಡಿತಿಯುರಂ ಕೆಡಿಂ ಮಾಹೀವಲ್ಲಭಂ (ಸಾವ್ಯಾಶ. ೨೦೭). **ಬೇಡತಿ :** ಛತ್ರ(ಕಿಚ್ಛ) ಪುರದೊಳ್ ದಾರುಣನೆಂಬ ಬೇಡಂಗಂ ಮಾಂಗಿ (ಮಾಂಗಿಲಿ) ಯೆಂಬ ಬೇಡ [ಬಾಣಂ. ಡಿ]ತಿಗಂ ಅತಿದಾರುಣನೆಂಬ ಮಗನಾಗಿ ಪುಟ್ಟಿರ್ಪಿನಂ (ಕಾಪುಕಥೂ. ೧೬೦) ; ವಾಗುರಿಯೊಡನಾಡುವ ಬೇಡತಿಯರ್ದೊರೆಗೆಡೆದು ಕಂಡುಂ ನೀನುಂ ನಿನ್ನ ಗಂಡನುಂ ಪುಲಿಯಂತಿರ್ದು ನರಿಯಂತಿರೀಕಿರ್ದಪಿರೆನೆ (ಅರ್ಜಪು. ೩-೭೬ ವ); ಪಂಚಪುತ್ರಿಕೆಯೊಂದು ಬೇಡತಿಯೊಬ್ಬಳಿದ್ದಳು ಸಂತರು ಸಹಿತಲಿ (ಶಬ್ದಾರ. ೬-೯೭). [ಬೇಡ₁ + —ಇತಿ₁ (< —ಇತ್ತಿ)]

**ಬೇಡಿತು, ಬೇಡಿತ್ತು, ಬೇಡಿದು** (ನಾ). ಯಾಚಿಸಿದುದು ; ಕೇಳಿದುದು ; ಬೇಡಿದುದು : ಬೇಡಿದರ್ಗೆ ಬೇಡಿತಂ ಕೊಟ್ಟು ಬಂದಿಜನ ಕಸವರಗಲಿಗಳುಮಂ . . . ನೋಡಿ ರುದ್ರಾವತಾರಂ . . . ಹಿಮವತ್ಪರ್ವತಕ್ಕೆ ಪೋಪುದುಂ (ಗದಾಯು. ೯-೬೯ ವ) ; ತಡಿಸುವುದೇಕೆ ನಿಲ್ಲ ಪಲವುಂ ಬಳಿಯಂ ಬಳಿಗಾಜ ನಿನ್ನ ಕಾಲ್ಗಿಡಿದಪೆನಿತ್ತಪೆಂ ನಿನಗೆ ಬೇಡಿತಂ (ಲೀಲಾವ. ೨-೬೦) ; ಬೇಡಿತನೀಯದಾತ್ರಮಿಸಿ ಚಕ್ರಧರಂಗಿದಿರಾಂಪರಾರ್ (ಪಾರ್ಶ್ವಪು. ೦೦-೬೩). **ಬೇಡಿತ್ತು :** ಈ ಕುಮಾರನನೆತ್ತಿದಂಗೆ ಬೇಡಿತ್ತಂ ಕುಡುವೆಂ (ಶಂತಶಂ. ೦೦೩-೦೫) ; ಧರೆಗಿಪಃಪಗೆಯಾಂಡನೆಂಜ ನಾಮದಿನೆಸೆದು ಶರಣರ್ಗೆ ಬೇಡಿತ್ತನಿಲ್ಲೆನ್ನದಂತೊಸೆದು ಕೊಡುತಲಿಪ್ಪಂ (ಇಹರ. ದೇ. ೨೬-೦೦) ; ಬೇಡಿತ್ತನೀವೆನೆಂದೆಂಬ ಪರಶಿವನಮಲಚರಣಾಂಬುಜಕ್ಕೆ ಶರಣು (ಚಿತಂ. ೦೦-೦೦). **ಬೇಡಿದು :** ಬೇಡಿದನೀವ ಭುವನೋದ್ದಂಡದೈವದ ವೃಷ್ಟಿ ಪಥಕಿದಿರಾಗಿ ವ್ಯನಡುಗಿ ತಂಡತಂಡದಲೆದ್ದುನವರರ ತೊಡ (ಶಿರಾಗ. ೯-೪-೦೯).

**ಬೇಡಿದಂ** = ಯಾಚಿಸಿದವನು ; ಯಾಚಕ : ಶ್ರೀವಿಜಯಂ ವಿವಾಹಮನೊಡಂಬಡೆ ತಂಗೆಗೆ ಮಾಡಿ ಬೇಡಿದಂಗೀವುದನಿತ್ತು . . . ಮೆಱೆದಂ ನೆರೆದನ್ನವಯದೊಂದು ಮ್ಮೊಮೆಯುಂ (ಶಾಂತಿಪು. ೬-೦೯) ; ಬೇಡಿದ ನಿಷ್ಟಮಂ ಸಲಿಪುದುಂ ಕರ್ಣಂಗೆ ಜನ್ಮವ್ರತಂ (ಕಪುರ. ೬೨ ಪ್ರಕೀ).

**ಬೇಡಿದರ್** (ಬಹುವ) : ಬೇಡಿದರ್ಗೀಯದೆ ಮಱೆಗೆ ವಂದರಂ ಕಾಯದೆ ನೀಳ್ದೊದವಿದ ಜಸಮನುಪಾರ್ಜಿಸದಧಮನದೇತರ್ಕೆ ಬಾರ್ತೆ ಜೀವನ್ಮೃತಕಂ (ಅಂಪು. ೦೨-೯೭) ; ಬೇಡಿದರ್ಗಿಲ್ಲೆಂಬುದುಂ ಕಾದಿ ಸೋಲ್ವುದುಂ ಪೆಜವೆಣ್ಣಂ ಪೀಡಿಸುವುದುಂ ಕನಸಿನೊಳಪ್ಪೊಡಮಿಲ್ಲಂ (ಗದಾಯು. ೨-೭ ವ).

[ < ಬೇಡು₁ ]

**ಬೇಡಿತ್ತು** 'ಬೇಡಿತು' ನೋ.

**ಬೇಡಿದು** 'ಬೇಡಿತು' ನೋ.

**ಬೇಡಿಸು** (ಕ್ರಿ). ಯಾಚಿಸುವಂತೆ ಮಾಡು ; ಬಯಸುವಂತೆ ಮಾಡು : ಬೇಡಿಸುವಪ್ಪುಗಳ್ಗೊರೆವ ಲಲ್ಲೆಯ ಮೆಲ್ನುಡಿಗಳ್ಗೆ ಕೂಡೆ ನಾಣೊಡದ ಕೆಂದುಗಳ್ಗೆ ಬಗೆಗೊಂಡಿನಿಸಂ ತಲೆದೂಗುವಂತೆವೋಲ್ . . . ಅಳ್ಕಾಡುವದಾಯ್ತು . . . ತತ್ಸುರತಮಂದಿರದುಜ್ಜ್ವಳದೀಪಿಕಾಂಕುರಂ (ಶಂಶಿಖಾ. ೩-೯೩). [ಬೇಡು₁ + —ಇಸು₃]

**ಬೇಡು₁** (ಕ್ರಿ). ಬೇಪ, ಬೇರ್ಪ, ಬೇಪ, ಬೇಳ್ಪ₁, ಬೇಳ್ವ₁, ಬೇಟ್ಟಿ (ಭೂತಕೃ). ೧. ಬಯಸು ; ಇಚ್ಛೆಪಡು ; ಆಶಿಸು : "ಬೇಡು—ಯಾಚ್ಞಾಯಾಂ, ಶಬರಸಮೂಹೇ ಚ" (ಶಮಣ) ; ಭಿ.ಮನಕುಳ ಸಹದೇವರ್ಕಳ್ಗೆ ದುರ್ಯೋಧನನ ತಮ್ಮನಪ್ಪ ಯುಯುತ್ಸು ಗಮವರ್ ಬೇಡಿದ ನಾಡುಗಳನೆ ಕುಡಿಸಿ ಸಂತಸಂಬಡಿಸೆ (ಪಂಪಭಾ. ೧೪-೩೭ ವ); ಬಗೆಯಂ ಬೇರ್ಪ್ಪರ್ತ್ಥಮಂ ವಾಂಛ್ಯೆಯಂ (ಎಕ. VII, ಶಿವಮೊ. ೬೯-೮೦ ; 1112) ; ಬೇಹ ವರವನು ಬೇಡಿಕೊಳ್ಳು (ಕೌಶಿರಾ. ೦೯-೩೬) ; ಈ ಪಾಯೊಳಾ ಸುಗ್ಗಲಾಂಬೆಗೆ ಬೇವನಿತು ಬೋಧಿಸಲು (ಶೀವಪು. ೦೬-೨) ; ತಲೆಗೆ ಎಣ್ಣೆ ಇಲ್ಲ, ತನು ಮೃಗನಾಭಿ ಬೇಡಿತು (ಗಾದೆ). ೨. ಕೇಳು ; ಯಾಚಿಸು : ಬೇಡುವೆನರ್ಥಸಂಚಯಮಂ (ಶಬರ. ೨-೦೦೨) ; ನೀಂ ಬಾ ಪೋಪೆಮೆಂದಂಗೆ ಮೆಲ್ಲಗೆ ತಕ್ಕನ್ನಕೆ ಸಾಣ್ಣೆ ಬೇಡುವ್ಪೊಡೆ ನೀವೆಮ್ಮಯ್ಯನಂ ಬೇಡಿರೇ ಎಂಬುದುಂ (ಶಂಶಿಖಾ. ೦-೬೦) ; ಅಶೇಷ ಭೂಭುಜವನಮಂಡಲವಲ್ಲಭನಾದ ದೇವಸೀಗಾವಗಮೆಮ್ಮ ಬೇಟ್ಟ ವರ ದುನ್ನತಿಯಂ ಸುವೀಂದ್ರವಲ್ಲಭಂ (ಶಂಡೋಂಬಾ. ೦-೦) ; ಬೇಳ್ವರ್ತ್ಥಿಜನಕ್ಕೆ ದಾನಮಣಿ (ಎಕ. VIII, ಶಿವಮೊ. ೦೦-೦೨ ; 1085) ; ಜನವಮಂ ಬೇಳ್ವಾಸೆಯಿಂ . . . ಬಿಟ್ಟು ನಿಮ್ಮಂ ನೆನೆಯುತ್ತಿರ್ಪಂತೆ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ (ರಕ್ಷಾಶ. ೨೦).

**ಬೇಡಿಕೊಳ್, ಬೇಡಿಕೊಳು, ಬೇಡಿಕೊಳ್ಳು** = ಕೇಳಿಕೊಳ್ಳು ; ಯಾಚಿಸು: ನಿನಗೊಸೆದೆಂ ಬೇಡಿಕೊಳ್ ನಿನ್ನ ಬೇಡಿದುದೆಲ್ಲಮಂ ಕುಡುವೆಂ

(ವಡ್ಡಾರಾ. ೧೨೮-೫) ; ಧರಿತ್ರಿಯುಂ ಜೀಯೆನೆ ಬೇಡಿಕೊಳ್ಳದೆ ವಿರೋಧಿ ನರೇಂದ್ರರನೊತ್ತಿಕೊಂಡುಂ (ಶಂಶಭಾ. ೦-೧); ಎನ್ನನೊಡಗೊಂಡು ಮುದದೆ ಪೋಪಂತನುಗ್ರಹಿಸೆಂದವಂ ಬೇಡಿಕೊಳಲೊಪ್ಪಿದಂ (ಜೈಮಿಭಾ. ೪-೬೫); ಸ್ವಪ್ರಶಿಷ್ಟೆಯು ಮತ್ತು ಆತ್ಮಸ್ತುತಿಯು ಒಂದು ಶಬ್ದವೂ ನನ್ನ ಬಾಯಿಯಿಂದ ಹೊರಬೀಳದಿರಲೆಂದು ದೇವರನ್ನು ಬೇಡಿಕೊಳ್ಳುತ್ತೇನೆ (ಶ್ಯಾಮುಶಾ. ೫). **ಬೇಹವಳು, ಬೇಹಳು** = ಇಷ್ಟವಾದವಳು ; ಬೇಕಾದವಳು : ಕಮಲ ಮುಖಿಯನು ಬೇಹವಳನೊಯ್ದುಮಳಗುಣನಿಧಿ ಕೂಡಲೆಂದರು (ಶಿವಾಗ. ೦೦-೦೦೨-೨೭) ; ದೇಹವೆರಡಕೊಂದಸುವೆಂಬಂದದಿ ಬೇಹಳ ಮಾಡಿಕೊಂಡರ್ದ ಆ ಹೂಗಣೆಯು ನೃಪವರನಿರ್ದಂತೆಲೆ ಭಾವಕಿ ಕಟ್ಟಣೆಸುವರೆ (ಶೃಶಂಜ. ೨-೩೭) ; ಬೇಹಳಂ[ಶಾ ಶಾಂ.ರಂ] ಮನ್ನಿಪಂತಬುಜವನಬಲಿಸುತುವಿನನು ದಯುಗಿರಿಯನಡರ್ದಂ (ಶಾವಣಂ. ೬-೩೪). **ಬೇಹುದು, ಬೇಳ್ಪುದು, ಬೇಟ್ಪುದು**=೧. ಬೇಕಾಗಿರುವುದು ; ಅಗತ್ಯವಾದುದು : ಶಿವಗಣ ದ್ರೋಹದ ವಚನವದು ಕಿವಿಗೆ ಸಿಲುಕಿದ ಮಾತ್ರದಲಿ ಹಗೆಯುವ ನನವಿಚಾರದೊಳಿರಿಸಲ್ ಬೇಹುದು (ಬಸಪು. ೬೦-೦೪); ಸತಿಯರ್ಗೆ ಧೈರ್ಯಂ ಬೇಳ್ಪುದು (ನಂಚರಿ. ೦೬-೩೭) ; ಆನೆ ರಿಪುಸೇನೆಗೆ ಸಾಲ್ವೆನವುಂಕಿ ಪೇಡಿ ಪಾಡಿಗಟ್ಟಜಿವೆಡಗೈಯ ಕೈಯುಂಗುರೆ ಸಾಲದೆ ನಚ್ಚಿನ ಕೈದುವೇಟ್ಪುದೇ (ಶಾಪ್ಯಸಾ. ೪೦೦ ಚೂಪ್ರ೪). ೨. ಬೇಡಿದುದು ; ಬಯಸಿದುದು : ಬೇಟ್ಪುದಂ ಪಡೆಟ್ಟಿ ಕಲ್ಪದ್ರುವಿತಾನಂ . . . ವ್ಯೋಮವಿಭಾಗವ್ಯಾಪ್ತಿಯು ಪುನ್ನತತನುವಿನಿತುಂ ನಿಶ್ಚಯಂ ವ್ಯರ್ಥಮಲ್ತೇ (ಶಂಪ್ರಪು. ೩-೪೦). **ಬೇಹೊಡೆಯ**=ಬೇಕಾದ ಒಡೆಯ ; ಇಷ್ಟವಾದ ಸ್ವಾಮಿ : ಬೇಹೊಡೆಯ ನಾನಿರಲು ಮಾಜಿದವನಂ ಕೇಳ್ದ ಸಾಹಸವ ನೋಡು (ಹಕಶ. ೦೦-೧೦). **ಬೇಟ್ಪಂ**=ಬೇಡುವವನು ; ಯಾಚಿಸುವವನು ; ಯಾಚಕ : "ಬೇಡುವಂ ಬೇಟ್ಪಂ" (ಸಂಕೀಶ. ೨೦) ; ಬೇಟ್ಪಿನ ಬೇಟ್ಪಿ ವಸ್ತು ಕಾಂಚನಗಿರಿಯಿಂದಮಗ್ಗಳಂ (ಶಂಶಶಾ. ೫-೬೭). **ಬೇಟ್ಪರ್, ಬೇರ್ಪರು, ಬೇಹವರು, ಬೇಳ್ಪರ್, ಬೇಳ್ವರ್** (ಬಹುವ) : ೧. ಬೇಕಾದವರು ; ಆತ್ಮೀಯರು : ಅರಸಿಯರಣುಗರಂ ಬೇಟ್ಪರುಮಂ ಮೊನೆ ಗಾಜಿರು . . . ಚೌಪಳಿಗೆಗಳೊಳ್ ಬಳ್ಳಿರಿಸಿದರ್ (ಶಂಶಪಾ. ೨-೬೭); ನುಸುಳು ಗಂಡಿಯೊಳುರವಣಿಸಿದರು ಕರ್ಣ ಕೃಪ ಮೊದಲಾದ ಬೇಹವರು (ಕುವ್ಯಾದ್ರೋ. ೬-೫೬). ೨. ಬೇಡುವವರು ; ಯಾಚಕರು : ಬೇರ್ಪ್ಪರಿಗಾತ್ರ್ಮೀವ . . . ಪರಹಿತಕಾರ್ಯತತ್ಪರನುದಾರಗುಣಾನ್ವಿತಂ (ಕ್ಕಾಇಇ. XI-ii, ೦೩೮-೨೪; 1093) ; ಪದನಜಿದಾಸೆದಪ್ಪಿಸದೆ ಬೇಳ್ಪರ ಬೇಳ್ಪುದನಿತ್ತು ಸದ್ಗುಣಾಸ್ಪದನೆನಿಸಲ್ಕೆ ನಿನ್ನ ಪೆಸರೇಂ ಗಳ ಹೊಯ್ಸಳಗೌಣ್ಣನೆಮ್ಮುದೇ (ಎಕ. VI, ಕಡೂರು. ೬೯-೨೬; 1160); ಬೇಳ್ಪವರ್ಗೆ ಬೇಡಿದ ಪರಿಯಲೀವೃತ ಪಾಪಿ ಕೋಪದಿ ಹೋಮಿಸಿದನಂದು (ಶಾಕ್ಯಶಾ. ೦೬-೦೯).

[ದೇ.॥ ತಮಿ. ವೇಣ್ಟು; ತುಳು. ಬೇಡು; ತೆಲು. ವೇಡು]

**ಬೇಡು$_2$** 'ಬೇಳ್$_1$' ನೋ.

**ಬೇಡು$_3$** (ನಾ). ಬೇಡರ ಸಮೂಹ ; ಶಬರರ ಗುಂಪು : "ಬೇಡು— ಯಾಚ್ಞಾಯಾಂ, ಶಬರ ಸಮೂಹೇ ಚ" (ಶಮದ). [<ಬೇಡ$_1$]

**ಬೇಡು$_4$** (ನಾ). ಒಂದು ಬಗೆಯ ತೆರಿಗೆ : ಬೇಡು ಬಿಟ್ಟು . . . ಸುಂಕ ಸಾದಿಲ × × × ಮೊ[ದ]ಲಾಗಿ ಆವುದೊಂದುಯಿಲ್ಲದೆ (ಕ್ಕಾಇಇ. IX–ii, ೪೦೬-೩೦; 1364); ಯಿಾ ಕ್ಷೇತ್ರಕ್ಕೆ ತೆಜು ದೇವಸ್ವ ಅನಾಯ ನಟ್ಟೊ ಬೇಡು ಆಉಡೂ ಯಿಲ್ಲಾ (ಕ್ಕಾಇಇ. IX–ii, ೪೨೬-೨೭; 1402); ತುಳುವದ ಶಾಸನ ಗಳಲ್ಲಿ ಬರುವ ತೆರುವಣಗಳು :— ತೆರು . . . ಅರವಸ್ತು, ಬೇಡು, ಅಪ್ಪಣೆ (ತುಳುಪಾ. ೨೭೦). 'ಬೀಡು$_2$', 'ಬೇಡಿಗೆ' ಪರಾ. [ ? ]

**ಬೇಡುಂಗೊಳು** (ನಾ). ಒಂದು ಬಗೆಯ ತೆರಿಗೆ : ಸುಂಕದ ಬೇಡುಂಗೊಳು ನಲ್ಲೆತ್ತು ಪರಿಹಾರ ಪಗ್ಗಡೆ ಗದ್ಯಾಣ (ಎಕ. XI, ಕೊಡಗು. ೩೩-೬; 1115 ?); ವೃತ್ತಿ(ವೃತ್ತಿ)ಗಳನ್ನು ನಿಧಿನಿಕ್ಷೇಪಸಹಿತವಾಗಿ ಸಿದ್ಧಾಯ ದೆ (ಒ)ಸಗೆ ಕಾಣಿಕೆ ಬೇಡುಂಗೊಳು ಅಕರ ಸರ್ವ್ವಬಾಧಾಪರಿಹಿ[ಹೃ]ತವಾಗಿ . . . ಧಾರಾಪೂರ್ವ್ವಕವಾಗಿ ಕೊಟ್ಟರು (ಎಇ. XXVII, ೦೬೨-೬೫; 1256). [ <ಬೇಡು$_4$]

**ಬೇಡುಗ** (ನಾ). ಯಾಚಿಸುವವನು; ಬೇಡುವವನು : ತಾ ಮಾಡಿದೆನೆಂದಡೆ ತನ್ನ ಕೆಳಗಣವೆ ಆಣವ ಮಾಯಿಕ ಕಾರ್ಮಿಕಮಲಂಗಳು ಇವ ಕೊಂದೆನೆಂದು ಮನಕ್ಕೆ ತೋಜಿವಡೆ ತನ್ನ ಕೆಳಗಣ ಬೇಡುಗರೆ ಈ ಮೂವರು (ಷೋಃಸವ. ೩೩-೦೩೭); ರಾಮರಾಯರು . . . ಬಾಗಿಲಿಗೆ ಬಂದ ಬಡ ಬೇಡುಗರನ್ನು ಬರಿಗೈಯಿಂದ ಎಂದೆಂದೂ ಮರಳಿಸುತ್ತಿರಲಿಲ್ಲ (ಸಂತಶ್ರ. ೨೩).

[ಬೇಡು$_1$ + —ಗ$_2$]

**ಬೇಡುಗಣ್ಣು** (ನಾ). ಯಾಚಿಸುವಿಕೆಯನ್ನು ವ್ಯಕ್ತಪಡಿಸುವ ಕಣ್ಣು ; ಬೇಡುವ ನೋಟ : ಭಾರತಿ ಗಂಡನ ಕಡೆ ಬೇಡುಗಣ್ಣುಗಳಿಂದ ನೋಡು ತ್ತಿದ್ದಳು (ಸೋಕುಗ. ೫೦). [ಬೇಡು$_1$ + ಕಣ್ಣು (<ಕಣ್)]

**ಬೇಡುಹ** (ನಾ). ಯಾಚಿಸುವಿಕೆ; ಯಾಚನೆ : "ಅಧ್ಯೇಷಣಾ . . . ಅರ್ಥನಾ — ಈ ೭ ಬೇಡುಹ" (ಹಲಾಯು. ೫೯-೨೦೫).

[ಬೇಡು$_1$ + —ಹ$_2$ (< —ಪ$_2$)]

**ಬೇಣ** 'ಬೆಣ' ನೋ.

**ಬೇತಾಳ** (ನಾ). ಭೂತ; ಪಿಶಾಚಿ : ತಾಳತರುವಿತತಿಯೊಳ್ ಬೇತಾಳಂಗಳ್ ಪೊಜಿದು. . . ತಳತಾಳಲಯಕ್ರಮದೆ ಕುಣಿಯೆ ಭಯಮಯನಾದಂ (ಕವಿರಾ. ೩-೨೯೩); ಆ ಜಿನಭವನಮೊಳ್ ವಸಿಯಿಸುವ ದೇವತೆಗಳೆಲ್ಲ ಮಿವರಲ್ಲದುದಂ ನೆಗಟ್ಟಿಪ್ಪರೆಂದಗುರ್ವಾಗೆ ಬೇತಾಳರೂಪುಗಳಂ ವಿಗುರ್ವಿಸಿ ಪರಿತಂದು (ಶಂರಾವಾ. ೦೪-೯೦ ವ); ಬೆನ್ನು ಹತ್ತಿದ ಬೇತಾಳ (ಗಾದ).

[< ಸಂ. ವೇತಾಲ]

**ಬೇತು$_1$** 'ಬೇ$_2$' ಪರಾ.

**ಬೇತು$_2$** (ನಾ). ೧. ಹಂಚಿಕೆ; ಯುಕ್ತಿ ; ಉಪಾಯ. ೨. ಉದ್ದೇಶ : ಧ್ಯೇಯ : ಕಿಟ್ಟಿಗೆ ಮಗಳನ ಕೊಟ್ಟು ಅವನ್ನ ದತ್ತಕ ತೊಗೊಳ್ಳೊ ಬೇತು ಇದ್ದ ಹಂಗ ಕಾಣಸತದ (ಗಂಮಾಯ. ೦೦೬). ೩. ಸಿದ್ಧತೆ ; ತಯಾರಿ : ಜನರೆಲ್ಲ ದಿಕ್ಕುಗೆಟ್ಟು ಕಣ್ಣು ತಿಕ್ಕಿಕೊಳ್ಳುತ್ತ ಚೆಲ್ಲಾಪಿಲ್ಲಿಯಾಗುವ ಬೇತಿನಲ್ಲಿದ್ದಾರೆ (ಹೂಸಕ್ಷಿ. ೨೦೭); ಈ ಮನೆಯಲ್ಲಿ ನಿಂತು ಅವಳಿಗೆ ಬೇಸರ ವೆನಿಸಿರಬೇಕು. ಕಾಲು ಕಿತ್ತುಕೊಂಡು ಪಲಾಯನ ಬೆಳೆಸುವ ಬೇತಿನಲ್ಲಿ ಇರಬೇಕು (ಗೀಜುಗ. ೪೫). ೪. (ಆಲಂ) ಅಂದಾಜು ; ಊಹೆ: ಮುಂದೆ ಯಾವ ಕಡೆಯಿಂದಲೂ ಹರಗಿದರೆ ಬರುವ ಹಾಗೆ ಮಾಡಿ ಬೇತಿನ ಮೇಲೆ ಯಾಸಿಯಾಗದೆ ಯಾವ ಕಡೆಗೆ ನೋಡಿದರೂ ಸಾಲುಗಳೇ ಕಾಣುವ ಹಾಗೆ ಮಾಡಿ (ಕೃಷಿಶ್ರ. ೭೦).

**ಬೇತು ನೋಡು**=ಅಂದಾಜು ಮಾಡು : ಮುಂದೆ ಆ ಗಿಡಗಳ ಮಧ್ಯ ದಲ್ಲಿ ಸಣ್ಣ ಕುಡಗಳಿಂದ ಎಡೆಯ ಹರಗುವದಕ್ಕೆ ಅಡಚಣೆಯು ಆಗದ ಹಾಗೆ ಮೊದಲೇ ಬೇತು ನೋಡಿ. . . ಗಟ್ಟಿಯಾಗಿ ಕೂಡ್ರಿಸಬೇಕು (ಕೃಷಿಶ್ರ. ೭೦). **ಬೇತು ಹಾಕು**=ಯೋಜನೆ ಹಾಕು : ಇನ್ನ ಪೋಲಿಸರ ಕೈಯೊಳಗ ಕೊಡೋದು ಅಂತ ಇವರಿಬ್ಬರೂ ಬೇತು ಹಾಕಿದ್ದರು (ಹೂಸಂಶಾ. ೦೨೬).

[←ಮರಾ. ಬೇತ್]

**ಬೇದ** (ನಾ). ವೇದ ; ಪ್ರಾಚೀನವಾದ ನುಡಿ : "ಓದು, ಪಟವಾತು, ಬೇದಂ, ಸುತಿ — ಈ ೪ ವೇದಂ" (ಕಕಶಾ. ೫೭-೨೪೨). 'ಬೇದಕ್ಕರಿಗ' ಪರಾ.

[<ಸಂ. ವೇದ]

**ಬೇದಕ್ಕರಿಗ** (ನಾ). ವೇದಾಭ್ಯಾಸ ಮಾಡಿದವನು; ವೇದಾಧ್ಯಯನ ಮಾಡಿ ದವನು : ಬೆದಕ್ಕರಿಗರ ಜಪಶಾಲೆ ಸೊಕ್ಕಾನೆಕಾದುರೆಯು ವೈಹಾಳಿಯುಂ ಕಣದಿಕ್ಕೆ ಕಣ್ಮನಕೆ ರಂಜಿಸಿತು (ಮೋಹತ. ೨-೫೫). [ಬೇದ + ಅಕ್ಕರಿಗ]

**ಬೇದನೆ** (ನಾ). ಸಂಕಟ ; ವೇದನೆ: "ವೇದನೆಯ ಬೇದನೆಯ" (ಕಶಾರ೩. ೬) ; ವತ್ಸಕ್ಕೆ ಬತ್ವಂ . . . ವೇದನಾ—ಬೇದನೆ (ಕಶಬ್ದ.೨೩೮ ಪ್ರಯೋ).
[<ಸಂ. ವೇದನಾ]

**ಬೇದಬಿಜ್ಜೆ** (ನಾ). ವೇದವಿದ್ಯೆ : 'ಬೇದಬಿಜ್ಜೆಗ' ಪರಾ.
[<ಸಂ. ವೇದವಿದ್ಯಾ]

**ಬೇದಬಿಜ್ಜೆಗ** (ನಾ). ವೇದವಿದ್ಯೆಯನ್ನು ತಿಳಿಸಿಕೊಟ್ಟವನು : ಬ್ರಹ್ಮ : "ಪೊಂಬಸಿಜಾ ನುಡಿವೆಣ್ಣಾಣ್ಮಂ ಬೊಮ್ಮಂ ಬೇದಬಿಜ್ಜೆಗಂ. . . ನಾಲ್ಮೊಗನೆ ನಲಜನೆಂಬ ಪೆಸರ್" (ಕಶಬ್ದ. ೫) ; ಇರ್ವರುಂ ಬೇದಬಿಜ್ಜೆಗಂಗೆ ಸರಿಮಿಗಿಲೆನಿಪರ್ (ಅದ್ಯಕ. ೧೦-೦೫). [ ಬೇದಬಿಜ್ಜೆ + —ಗ$_2$ ]

**ಬೇದಮ್ಮ** (ನಾ). ಒಬ್ಬಾತನ ಹೆಸರು : ಇಂತಿದಕ್ಕೆ ಕಾಪಂಬಾಟ ಕಂಥಯ್ಯನುಂ ಆ ಸಾಗೊರಕ ಕನ್ನನುಂ ಪೊಸವೂರ ಬೇದಮ್ಮನುಂ ಕನ್ನರನುಂ. . . ಸಾಕ್ಷಿ (ಎಕ. XI, ಹಿರ್ರಿಯು. ೬೪-೨೬; 968). [ಬೇದ + ಅಮ್ಮ$_1$]

**ಬೇದಾದ** (ಗು). ವ್ಯವಸ್ಥೆಯಿಲ್ಲದ; ಅವ್ಯವಸ್ಥೆಯಿಂದ ಕೂಡಿದ: ಸಬ್ ರಿಜಿಸ್ಟ್ರಾರ ಅಥವಾ ನೋಂದಣಿ ಕಚೇರಿಯೆಂದರೆ ಮೊಗಲಾಯಿಯ ಒಂದು ಬೇದ್ಯಾದ ಕಚೇರಿಯೇ ಎಂದೆನ್ನಲು ಏನೂ ಅಡ್ಡಿ ತೋರುವುದಿಲ್ಲ (೦೦೩.೦೦).
[←ಪಾರ. ಹಿಂ. ಬೇದಾದ್ = ಅನ್ಯಾಯ, ಅತ್ಯಾಚಾರ]

**ಬೇದಿರುಸು**, ಬೇದಿರ್ಸು (ನಾ). ಅಧಿಕಾರದ ಪ್ರತೀಕವಾಗಿ ಧರಿಸಬೇಕಾದ ಉಡುಪನ್ನು ಬಿಟ್ಟು ಇತರರಂತೆ ಧರಿಸುವ ಸಾಧಾರಣವಾದ ಉಡುಪು : "(ಅಧಿಕಾರದ ಉಡುಪು ಧರಿಸಲುಳ್ಳವನು ತೊಡುವ) ಸಾದಾ ಉಡುಪು; ಬೇದಿರುಸು" ( Mufti, ಇಂಕೊ ). **ಬೇದಿರ್ಸು** : ಒಬ್ಬ ಸಿಐಡಿ ಬೇದಿರ್ಸಿನಲ್ಲಿ ಬಂದು ವಿಷಯಸಂಗ್ರಹ ಮಾಡಲೆತ್ನಿಸಿದ (ಮುಡ್ಯ. ೪೮).
[ಬೇ$_3$— + ದಿರುಸು (<ದಿರಸು)]

**ಬೇದಿರ್ಸು** 'ಬೇದಿರುಸು' ನೋ.

**ಬೇದು** (ನಾ). ಶಾಖ ಬರುವಂತೆ ಕಟ್ಟುವ ಕಟ್ಟು; ಪೋಲ್ಟೀಸು (?): ಹುಲಿಗಿಲು ಹುಣಿಸೆಯ ಸೊಪ್ಪುಂದೆಲಗಂ ಭೂತಾಂಶಿ ಕರಣೆಯೆಂಬಿನಿತ ಜೊಳಂವಲಸದೆ ಬೆರಸಂಕೋಲೆಯನೊಲವಿಂದಂ ಬೇದುಗಟ್ಟಲಖಿಳವಿಷಘ್ನಂ (ಖಶುದ. ೦೦-೫೬); ನೆಗ್ಗಿಲ್ ತಗಚೆ ಸಿದಿಗ್ಧಿಕೆ ತಗ್ಗಿಯಪಾಮಾರ್ಗದೊಡನೆ ಬೆರಸಿದುದಂ ತಾಂ ಕೊಗ್ಗಿ ಕುಮಾರಿಗಳಂ ಕುಡಿಸೊಗ್ಗಿಸಿವಂಬಿಲದೆ ಬೇದುಗಟ್ಟು ವಿಷಘ್ನಂ (ಖಶುದ. ೦೬-೬೪). [ < ಬೇ$_1$ ]

**ಬೇನಾಮಿ**, ಬಿನಾಮಿ, ಬಿನಾಮೀ, ಬಿನಾಮೆ (ಗು). ೧. ಹೆಸರಿಲ್ಲದ ; ಅನಾಮಧೇಯವಾದ : (ಕ್ಯಗಕ. IV, ೬೬೪). ೨. ತನ್ನ ಹೆಸರನ್ನು ಬಿಟ್ಟು, ಬೇರೆಯವರ ಹೆಸರನ್ನು ಹೊಂದಿರುವ. (ನಾ). ೩. ಹೆಸರಿಲ್ಲದುದು ; ಅನಾಮಧೇಯವಾದುದು : ಇಂದಿನ ಹಗರಣಕ್ಕೆಲ್ಲ ಕಾರಣವಾದ ಪತ್ರ ಬೇನಾಮಿಯಾದುದು (ಕಎ೦). ೪. ತನ್ನ ಹೆಸರನ್ನು ಬಿಟ್ಟು ಬೇರೆಯವರ ಹೆಸರನ್ನು ಹೊಂದಿರುವುದು. **ಬಿನಾಮಿ** : ೧. "ಓದಿ ನೋಡಿ" ಎಂದು ಆ ಬಿನಾಮಿ ಅರ್ಜಿಯನ್ನು ಅವನ ಕೈಗೆ ಕೊಟ್ಟರು (ಮುಗಿಯು. ೨೬೬). ೪. ಜಮೀನನ್ನು ಹರಾಜಿಗೆ ತಂದು, ಹರಾಜಿನಲ್ಲಿ ಬಿನಾಮಿಯಾಗಿ ಕೂಗಿಸಿ ಅನಂತರ ಆಸ್ತಿಯನ್ನು ತಮ್ಮ ಹೆಸರಿಗೆ ಮಾಡಿಸಿಕೊಳ್ಳುವುದು ಶಾನುಭೋಗರಿಗೆ ಚೆನ್ನಾಗಿ ಗೊತ್ತಿತ್ತು (ಪಮ್ಮರು. ೦೪೮). **ಬಿನಾಮೀ** : ೧. ಈ ಬಿನಾಮೀ ಹುಂಡಿಯನ್ನು ಈತ ಲಪಟಾಯಿಸಲೆಂದು ನಮ್ಮ ಅಂಗಡಿಗೆ ತಂದಿರುತ್ತಾನೆ (ಪೋಚೀಪ. ೯೩). **ಬಿನಾಮೆ** : ೨. ನನ್ನ ಮತ್ತು ಭಾವ ಕೃಷ್ಣರಾಯನ ಅನ್ಯೋನ್ಯತೆ ದೃಢಮೂಲವಾಗಿದ್ದುದರಿಂದ ಆತನ ಹೆಸರಿನಲ್ಲಿ ಬಿನಾಮೆ ಪ್ರೋನೋಟೊಂದನ್ನು ಸಿದ್ಧಪಡಿಸಿದೆನು (ಕುಕುಣ. ೦೦). [ ← ಹಿಂ. ಬೇನಾಮ್; ಪಾರಾ. ಬಿನಾಮೀ]

**ಬೇನೆ** (ನಾ). ೧. ರೋಗ ; ಖಾಯಿಲೆ ; ವ್ಯಾಧಿ : ಉಟ್ಟುದಂ ಕಳೆಯದಿರಿಂದು ಬೇನೆ ಕೀಳರ್ದಪ್ಪುದು (ಕಾಕ್ಯ. ೯೯೪ ಕೂದ್ರ್ಯ) ; ದುರ್ಬಲಂಗಂ ಅಸಹಾಯಂಗಂ ಪ್ರತಿಕೂಲಂಗೆಯ್ದುನಪ್ಪವಂಗಮಾವ ಕಜ್ಜಮುಂ ಬೆಜ್ಜೆಯಿಲ್ಲದ ಬೇನೆಯಂತೆ ತೀರಲರಿಯದು (ಶಂಕಶಂ. ೯೬-೨) : ಅವಳ ಪರಕೆಯ ನೋಂಪಿಯೆಂದು ಪಡೆದಬ್ಬೆಗೆ ಪರ್ಬಿದ ಬೇನೆಯೆಂದು . . . ಒರೆಯುಂತೆ (ಶಕವಿ. ೬-೯೨). ೨. ನೋವು ; ಯಾತನೆ : ಅಚ್ಚಿಕುಚ್ಚಿದುಕ್ಕಾಣೆ—ಚಣ್ಣ ಬಸಿಜ ಬೇನೆಗಳುಮೆಂದಿವು ಮೊದಲಾಗೊಡೆಯ (ಶಶ್ಯಶಾ. ೫೩-೬); ಬೇನೆಗಳೊಳ್ ಮೊಗಂಗಳಂ ಬಿನ್ನಗೆ ಮಾಡದಿರ್ದರಳವಚ್ಚರಿಯಾಗೆ ಕೆಲರ್ ಮಹಾರಥರ್ (ಶಂಕಶಾ. ೦೦-೩) ; ರೋಮರೋಮಂದಪ್ಪದೆ ಸರ್ವಾಂಗಮುಂ ವೃಶ್ಚಿಕಸಹಸ್ರಗಳೊಡನೆ ಮಿಡಿದಂತಪ್ಪ ಬೇನೆಗಮನಂತಗುಣಮೆನಿಪ ದೇಹವ್ಯಥೆಯನೊದವಿಸುತ್ತುಂ (ವರ್ಧಶ. ೦೦-೦೫ ವ). ೩. (ಹೆರಿಗೆಯ ಸಮಯದಲ್ಲಿ ಉಂಟಾಗುವ) ನೋವು : ಶೂಲೆ : ಬಂಜೆ ಬೇನೆಯನರಿವಳೆ (ಮಹಾದೇ. ಬ. ೦೯೦-೩೦೯) ; ಬೇನೆಯಿಂಸಕ್ಕಿಗಳ್ ನಸು ಮುಗುಳ್ತಿರೆ . . . ತಟಭೂಜದೊಳೊಂದು ಕರೇಣು ಸೂಲಿಸುತ್ತೇನಣವಲ್ಲಿ ಮಾಡಿದುದೊ ಬೇಡರೊಳಂ ಕರುಣಾನುಭಾವಮುಂ (ಕೃಶ್ಯಪು. ೫-೯೨) ; ಸುಖಪ್ರಸೂತಿಯೊಪ್ಪಿರೆ ಪಡೆದಳ್ ಭಯಂ ಗಡ ನಯಂ ಗಡ ಬೇನೆಯ ಸೂಟಿರ್ ಗಡೆಂದು ತತ್ಪುರದ ಪುರಂಧ್ರಿಯರ್ ಸತಿಗೆ ತೂಪಿಜಿದರ್ ಸ್ವಗೃಹಾಂತರಂಗದೊಳ್ (ಸೂಕ್ತಿಸು. ೬-೫೮). ೪. ಅಡಚಣೆ; ಕಷ್ಟ ; ತೊಂದರೆ : "ವೇದನಾಯಾಂ, ಬೇನೆಯೊಳ್" (ಕಾಶಕ್ಯ. ೦೬); ಕಾನನದೊಳು ಕಡುಕಷ್ಟಪಡೆದು ನೋವು ಬೇನೆಗಳಿಗೆ ಬೇಸಱದೆ ಸಾನುರಾಗದೊಳನುಸರಿಸಿ ತನ್ನನಿಯನ ಜಾನಕಿ ಜಸವ ಪಡೆದಳು (ಹರಿ. ೩-೪೬) ; ಪರರ ಬೇನೆಯಲ್ಲಿ ಮನ ಹಿಗ್ಗುವಾತನೆ ಹೊಲೆಯ (ಗಿ೪ರಿಂ. ೦೬-೫).

**ಬೇನೆಬೀಳು**=ರೋಗಕ್ಕೆ ಗುರಿಯಾಗು, – ಈಡಾಗು ; ಖಾಯಿಲೆ ಬೀಳು : ಬೇನೆ ಬಿದ್ದರೆ ಪೇಸದೆ ಬೇಸಱದೆ ಸನ್ಮಾನದೊಳುಪಚರಿಸವುದು (ಹರಿ. ೪-೦೪) ; ಅವಳು ಬೇನೆ ಬಿದ್ದು ಬಹಳ ದಿನಗಳಾದವು (ದಲಕು. ೦).

**ಬೇನೆಗುದಿ** (ಕ್ರಿ). ಪ್ರಸೂತಿಯ ನೋವಿನಂತಹ ನೋವನ್ನು ಅನುಭವಿಸು : ಬಾಳ್ಗಬ್ಬದೊಳ್ ಕರುಣೆ ತಾಂ ಬೇನೆಗುದಿದೊಡವಾಲ್ತೆ ಮೆರೆವಪುದು ಪೊರಪೊಣ್ಮುತಾ ಮಹಾಕಾವ್ಯಶಿಶು ತಾಂ (ಶ್ರೀರಾಮಾ. ೨-೦೦).
[ಬೇನೆ + ಕುದಿ$_1$]

**ಬೇನೆಬಡಿಸು** (ಕ್ರಿ). ನೋವನ್ನುಂಟುಮಾಡು ; ಯಾತನೆಯನ್ನು ಅನುಭವಿಸುವಂತೆ ಮಾಡು : ಜ್ಞಾನಾವರಣೀಯ ದರ್ಶನಾವರಣೀಯ ಬೇನೆಬಡಿಪ ವೇದನೀಯಮಾ ಹೀನದ ಮೋಹನೀಯಮಾಯುಷ್ಯನಾಮಗೋತ್ರಾನುಗದಂತರಾಯಗಳು ಇವು ಕರ್ಮವೆಂಟು (ಧರ್ಮ. ೬೬-೦೦೬).
[ಬೇನೆ + ಪಡಿಸು]

**ಬೇನೆಯ?** (ನಾ). ಒಂದು ಸ್ಥಳದ ಹೆಸರು (?) : ಕೌಣ್ಡಿಲ್ಯಗೋತ್ರ ಕನ್ನಪೇಜಿನ ಮಗಂ ಬೇನೆಯ ಸೋಮೋಜಿ ಬೇನೆಯ ಸೋಮೋಜಿಯ ಮಗ[ಂ] ಮಾ[ರಂಮಭೆ]ಟ್ಟರ ಮಗಂ ಗೋಲೆಯಭಟ್ಟರ್ ಸೂರ್ಯ್ಯಗ್ರಹಣದೊಳ್ಮೊಲಾಪ್ಪುರುಷವಿಪ್ರ್ಪ [ತ]ತ್ಕಾಲದೊಳ್ಪಾಣಿಗ್ರಾಹಣ[ಂ]ಗೆಯ್ದು (ಸೌಇಇ. XI — i, ೯-೮ ; 862). [ ? ]

**ಬೇನೆಯಱಿ** (ಕ್ರಿ). ೧. ಹೆರಿಗೆಯ ನೋವನ್ನು (ಅನುಭವದಿಂದ) ತಿಳಿ.– ಅರ್ಥಮಾಡಿಕೊಳ್ಳು : ಬಂಜೆ ಬೇನೆಯಱಿಯದವೊಲೀ ನುಡಿಯುಂಟೆ (ಬಸರ. ೯-೦೮೦). ೨. (ಕಾವ್ಯರಚನೆಯ) ಕಷ್ಟವನ್ನು ತಿಳಿ. – ಅರ್ಥಮಾಡಿಕೊಳ್ಳು : ಬೇನೆಯಱಿಯದ ನೀರಸರನೇಕೆ ಪುಟ್ಟಿಸಿದನಬುಜಭವನು (ಹತಕಾ. ೦-೨೩). [ಬೇನೆ + ಅಱಿ]

**ಬೇನೆಯಟು** (ಕ್ರಿ). ರೋಗವನ್ನು ಗುಣಪಡಿಸು ; ಖಾಯಿಲೆಯನ್ನು ವಾಸಿಮಾಡು: ಕೊಲುತಿರ್ಪಯ್ಯಗಳೋದು ಬೇನೆಯಟುವಾ ತೀಕ್ಷ್ಣೌಷಧಂ . . . ಬೇಪಾರಮಿಂತೆಲ್ಲ ಮುಂ ಪಲಕಷ್ಟಂ ಕಡೆಗೊಳ್ಳಿತ್ತೈ (ಸೋಮೇಶ. ೯೬).
[ಬೇನೆ + ಅಟು$_1$]

**ಬೇನೆಯೆತ್ತು** (ಕ್ರಿ). ಹೆರಿಗೆಯ ನೋವನ್ನು ಅನುಭವಿಸು, –ತಿನ್ನು : ಮಡದಿಗೆ ನವಮಾಸ ತುಂಬಿತು ಶಿವಯೋಗದೆಡೆಯೊಳು ಬೇನೆಯೆತ್ತಿದಳು (ಅಶ್ವಬಿ. ೨-೪೦). [ಬೇನೆ + ಎತ್ತು$_1$]

**ಬೇಪ** 'ಬೇಡು$_1$' ಪರಾ.

**ಬೇಪತ್ತೆ** (ನಾ). ಸುಳಿವು ಇಲ್ಲದಿರುವಿಕೆ; ನಾಪತ್ತೆ : ನಿನ್ನೆ ರಾತ್ರಿ ಕೇಬಿನ್ನಿಗೆ ಯಾವಾಗ ತಿರುಗಿ ಬಂದಳೋ ನನಗೆ ಗೊತ್ತಿಲ್ಲ. ಮುಂಜಾನೆ ಯಿಂದ ಮಾತ್ರ ಬೇಪತ್ತೆ (ಹೊಸಕ್ಷ. ೦೪೦) ; ಬೇಪತ್ತೆಯಾದ ನಮ್ಮ ಬಾಜೀರಾಯ ಇನ್ನೂ ಮನೆಗೆ ಬಂದಿರಲಿಲ್ಲ (ಹುಚ್ಚರಾಜ. ೬೮). 'ನಾಪತ್ತೆ' ಪರಾ. [ಬೇ$_3$ — + ಪತ್ತೆ$_2$]

**ಬೇಪರವಾಯಿ**, ಬೇಪರ್ವಾ (ನಾ). ೧. ಪರಿವೆ ಇಲ್ಲದಿರುವಿಕೆ ; ನಿರ್ಲಕ್ಷ್ಯ : ಹೀಗೆ ತಿಳಿಸುವದು ಕೆಲಕೆಲವರಿಗೆ ಬೇಪರವಾಯಿಯ ಲಕ್ಷಣವೆಂದು ಕಂಡುಬಂದಾಗ್ಯೂ, ಸ್ವಲ್ಪ ವಿಚಾರ ಮಾಡಿದರೆ . . . ಫಾಯದೆಯ ಸಂಗತಿಯೆಂದು ಕಂಡುಬಂದೀತು (ಮುಂಬಿಪ್ಪ. ೨೦೯). **ಬೇಪರ್ವಾ :** ೨. ಲಕ್ಷ್ಯವಿಲ್ಲದ ವ್ಯಕ್ತಿ ; ಸ್ವೇಚ್ಛಾಚಾರಿ : ಅಂತೂ ಅಡ್ಡಿಯಿಲ್ಲ, ತಾಯಿ ಹಾಂಗ ಮಗಳು ಬೇಪರ್ವಾಯಿನ್ನ (ಜಾಂಬಾಯ. ೩೭).
[←ಪಾರ. ಬೇಪರವಾ, ಬೇಪರವಾಹ್, ಬೇಪರವಾಹೀ, ಬೇಪರ್ವಾ; ಹಿಂ. ಬೇಪರವಾ, ಬೇಪರವಾಈ, ಬೇಪರವಾಹ್, ಬೇಪರವಾಹೀ; ಮರಾ. ಬೇಪರವಾ, ಬೇಪರವಾಈ, ಬೇಪರ್ವಾ, ಬೇಪರ್ವಾಈ]

**ಬೇಪರ್ವಾ** 'ಬೇಪರವಾಯಿ' ನೋ.

**ಬೇಪಾರ** (ನಾ). ಕೊಳ್ಳುವ, ಮಾರುವ ವ್ಯವಹಾರ ; ವ್ಯಾಪಾರ : "ಬೇಪಾರ–ವ್ಯಾಪಾರ" (ಶಬ್ದಕೋ. ೩೨); ಆ ಪರಮವಿರಾಗಿಯ ಸುಜ್ಞಾನದ ಬೇಪಾರದ ಬೆಳವಿಗೆಗಂಡೆಬಗಿನ್ನೇಪರಿಯುಪಬೋಧೆಗಳೇಕೆಂದು ಪೊಗಳ್ದರ್ತಮ ತಮಗೆ (ಬಸವೇಪು. ೨೬-೩೬); ನಾವ್ ಸಬ್ಬಾ ಬೇಪಾರ ಮಾಡತಾವ್ (ಮೋಚಿಹಿ. ೪೦). 'ಬೇರ$_2$' ಪರಾ.
[←ಹಿಂ. ಮರಾ. ಬೇಪಾರ್. / ಸಂ. ವ್ಯಾಪಾರ]

**ಬೇಪಾರಿ** (ನಾ). ವ್ಯಾಪಾರವನ್ನು ಮಾಡುವವನು ; ವ್ಯಾಪಾರಸ್ಥ ; ವ್ಯಾಪಾರಿ : ಕರಿ ತುರಗದ ಬೇಪಾರಿಗಳಾಶ್ರಯದಿರವ . . . ಸಿರಿಯು ಪರ್ಣಗಳ ವಿಕ್ರಯಿಪರ ರನ್ನದೋವರಿಗಳ ನೋಡುತ್ತೀಳ್ತಂದ (ಬಸವೇಪು. ೨೦-೦೮). [←ಹಿಂ. ಮರಾ. ಬೇಪಾರೀ./ಸಂ. ವ್ಯಾಪಾರಿನ್]

**ಬೇಫಾಮು** (ನಾ). ಎಚ್ಚರಿಕೆ ತಪ್ಪುವಿಕೆ ; ಆಲಕ್ಷ್ಯ ; ನಿರ್ಲಕ್ಷ್ಯ : ಗದ್ದೆ ವಗೈರೆ ಸ್ಥಳದಲ್ಲಿ ಪೆಟೆ ಮುಂತಾದ್ದರಲ್ಲಿ ದವಸವಿಟ್ಟು ಬೇಫಾಮಿ ನಿಂದ ನೋಡದೆ ದವಸವನ್ನು ಕೆಡಿಸಿದರೂ . . . ಅದರ ಜವಾಬು ಅಮಿಲನ್ನು ಕೊಡಬೇಕಾದೀತು (ಮುಹಾಪಂ.II, ೭೩) [←ಮರಾ. ಬೇಫಾಮ್]

**ಬೇಫಿಕರ್** 'ಬೇಫಿಕೀರ' ನೋ.

**ಬೇಫಿಕೀರ**, ಬೇಫಿಕರ್, ಬೇಫೀಕೀರ (ಗು). ೧. ಯೋಚನೆಯಿಲ್ಲದ: ನಿಶ್ಚಿಂತೆಯಿಂದ ಕೂಡಿದ : ಬೇಫಿಕೀರ ವೃತ್ತಿಯಿಂದ ಕೋಣೆಯ ಬಾಗಿಲು ದೂಡಿ . . . ವಿಶ್ವಾನ ಕಣ್ಣಿಗೆ ಕತ್ತಲೆ ಬರುವ ಧರ್ತಿಯಲ್ಲಿ ಹೋಗಿ ಎದುರು ನಿಂತ (ದೀಪಹ. II, ೩೩೩). (ನಾ). ೨. ನಿಶ್ಚಿಂತೆಯಿಂದ ಕೂಡಿದುದು; ಯೋಚನೆಯಿಲ್ಲದುದು : ವಿಧೀ ಅನ್ನರಿ, ದೈವ ಅನ್ನರಿ . . . ಅದೆಷ್ಟು ಬೇಫಿಕೀರ ಅದ ನೋಡ್ರೀ (ದೀಪಹ. I, ೬೮). ೩. ನಿಶ್ಚಿಂತೆ ; ಆರ-ಮ. **ಬೇಫಿಕರ್ :** ೩. ನನ್ನ ಜೇಬಿನಲ್ಲಿದ್ದ ಪಿಸ್ತೂಲನ್ನು ನೆನೆದು ನನಗೆ ಎಷ್ಟೋ ಬೇಫಿಕರ್ ಆಯಿತು (ಕಲಿಪ. ೦೦೩). **ಬೇಫೀಕೀರ:** ೧. ಮುಂಚೆ ಒಮ್ಮೆ ಎಲ್ಲವನ್ನೂ ಕಳೆದುಕೊಂಡುದಕ್ಕಾಗಿ ಈಗ ಬೇರೆ ಉಪಾಯವಿಲ್ಲ ಎಂಬುವದಕ್ಕಾಗಿ ಈ 'ಬೇಫೀಕೀರ' ವೃತ್ತಿಯೆ ? (ಕುರುಪಾ. ೦೩೩). [←ಪಾರ. ಬೇಫಿಕ್ರ್; ಹಿಂ. ಬೇಫಿಕರಾ, ಬೇಫಿಕ್ರ್; ಮರಾ. ಬೇಫಿಕಿರ್, ಬೇಫಿಕೀರ್]

**ಬೇಫೀಕೀರ** 'ಬೇಫಿಕೀರ' ನೋ.

**ಬೇಬಂದಶಾಹಿ** (ಗು). ಅವ್ಯವಸ್ಥೆಯಿಂದ ಕೂಡಿದ ; ಕ್ರಮ ತಪ್ಪಿದ; ಗೊಂದಲಮಯವಾದ : ಏನು ಬೇಬಂದಶಾಹೀರಾಜ್ಯವಿದು ? (ಹುತ್ತಾಹಿ. ೭೩). [← ಮರಾ. ಬೇಬಂದಶಾಹೀ, ಬೇಬಂದಶಾಈ]

**ಬೇಬಂದು** (ನಾ). ಕ್ರಮವಿಲ್ಲದುದು; ವ್ಯವಸ್ಥೆಯಿಲ್ಲದುದು; ಅವ್ಯವಸ್ಥೆ : (೪). [←ಪಾರ. ಮರಾ. ಬೇಬಂದ್]

**ಬೇಬಾಕ್** 'ಬೇಬಾಕಿ' ನೋ.

**ಬೇಬಾಕಿ**, ಬೇಬಾಕ್, ಬೇಬಾಕು (ನಾ). ಬಾಕಿಯಿಲ್ಲದಿರುವಿಕೆ; ತೀರ್ವೆ : ರಾಮಕೃಷ್ಣಗೌಡನು . . . ಕಂದಾಯ, ಕೌಳಿ ಮೊದಲಾದವುಗಳನ್ನು ನೋಡಿಕೊಂಡು ಎಲ್ಲವೂ ಬೇಬಾಕಿಯಾದ ಮೇಲೆ ಹಿಂತಿರುಗುವನು (ಶಾಲೀಮು. ೩). **ಬೇಬಾಕ್ :** ಕಳಿತ ಜಾಗದಲ್ಲಿಯೇ ನನ್ನ ದರ್ಪದಿಂದ ಕಂದಾಯ ಬೇಬಾಕ್ (ಶತ್ರು. ೨೨). **ಬೇಬಾಕು :** ನಾಳೆ ಲೆಕ್ಕಾಚಾರ ನೋಡಿ ಎಲ್ಲಾ ಬೇಬಾಕು ಮಾಡ್ತೀನಿ (ಪಲಿಶ. ೪೬೬); ಏನು ಲೆಕ್ಕ ಆದರೂ ಈ ಸುಗ್ಗಿಗೆ ಅವಷ್ಟು ಮಾಡಿ ಬೇಬಾಕ ಆಗೋ ಹಾಂಗ ಮಾಡತೀನಿ (ಬೆಳಾ. ೩೩). [←ಪಾರ. ಹಿಂ. ಮರಾ. ಬೇಬಾಕೀ, ಬೇಬಾಕ್]

**ಬೇಬಾಕು** 'ಬೇಬಾಕಿ' ನೋ.

**ಬೇಮನ** (ನಾ). ಮನಸ್ಸಿಲ್ಲದಿರುವಿಕೆ; ನಿರಾಸಕ್ತಿ; ನಿರುತ್ಸಾಹ : ಇನ್ನೊಂದು ಕಡೆಯೊಳಗೆ ಕಾವಿಗಳೆಂಬು ತಾಪದಿಂದಡಿಗಡಿಗೆ ಚೆಂಸಿ ಬೇಮನದಿ (ಸಾಪಂಗ. ೪). [←ಹಿಂ. ಬೇಮನ್]

**ಬೇಮಾನ** 'ಬೇಇಮಾನ' ನೋ.

**ಬೇಮಾಲುಮ್** 'ಬೇಮಾಲೂಮ್' ನೋ.

**ಬೇಮಾಲೂಮ್**, ಬೇಮಾಲುಮ್ (ನಾ). ಯಾರಿಗೂ ತಿಳಿಯದಂತಿರುವುದು; ಗುಟ್ಟು; ರಹಸ್ಯ : ಬೇಮಾಲೂಮ್ ಮಾತ್ ಆಗಿದಾವ್ (ಮೋಚಿಹಿ. ೪೦). **ಬೇಮಾಲುಮ್ :** ನಾನೀ ಕೊಲೆಗಳನ್ನು ಇಷ್ಟು ಬೇಮಾಲುಮ್ ರೀತಿಯಿಂದ ಮಾಡುತ್ತಿರುವೆನೆಂಬುದು ನನ್ನ ಹೊರತು ಪ್ರತ್ಯಕ್ಷ ಅಂತಃನಿಗಾದರೂ ಗೊತ್ತಿದೆಯೋ ಇಲ್ಲವೋ ಹೇಳಲಾರೆನು (ಅಂದಕ. ೨೪). [←ಹಿಂ. ಮರಾ. ಬೇಮಾಲೂಮ್]

**ಬೇಯಿತಬಾರಿ** (ಗು). ನಂಬಿಕೆಗೆ ಅರ್ಹವಲ್ಲದ; ವಿಶ್ವಾಸಕ್ಕೆ ಯೋಗ್ಯವಲ್ಲದ : ಪ್ರಾಕಿನ ಬಾಕೀದಾರ ನಾದಾರ್ ಬೇಯಿತಬಾರಿ ಜನಕ್ಕೆ ಸಹ ಯಿಜಾರೆ ಕೊಡ ಕೆಲಸವಿಲ್ಲ (ಮುಹಾಪಂ.II, ೬೦).
[←ಪಾರ. ಹಿಂ. ಬೇಏತಬಾರೀ]

**ಬೇಯಿಸು**, ಬೇಸು (ಕ್ರಿ). ೧. (ನೀರು ಅಥವಾ ನೀರಿನ ಅಂಶದೊಂದಿಗೆ ಆಹಾರಪದಾರ್ಥಗಳನ್ನು) ಕುದಿಸು; ಪಕ್ವಮಾಡು; ಅಡು : ಮಾರು ಕಟ್ಟೆಯಿಂದ ತಂದ ತರಕಾರಿಗಳನ್ನು ಮೊದಲು ತೊಳೆದು, ಅನಂತರ ಅವುಗಳನ್ನು ಬೇಕಾದಂತೆ ಕತ್ತರಿಸಿ, ಕೊನೆಗೆ ಬೇಯಿಸುವುದಷ್ಟೆ (ಅಡುಗೆ. ೦೨); ತರಕಾರಿ ಕೊಡಿ ಮೊದಲು; ಕುಯ್ದಾದರೂ ಬೇಯಿಸ್ತೇನೆ (ಹವ್ಯಂದ. ೬೦). ೨. (ಬೆಂಕಿಯ ಮೇಲೆ ಪದಾರ್ಥಗಳನ್ನು ನೇರವಾಗಿ) ಸುಡು; ಕಾಯಿಸು : ಹೊತ್ತದಂಬದೊಳು ಕೆಂಡದೊಳಿರಿಸಿ ಮೊಜಿದಿಂದ ಮತ್ತದಂ ಬೀಸಿ ಬೇಯಿಸಿ ತೆಗೆದುಕೊಂಡಾಜಿಸುತ್ತ ತಿಳಿದುಪ್ಪ ಸಕ್ಕರೆಯ ಕಲಸೆ ಮುಚ್ಚುಳರೊಟ್ಟಿವೆಸರಂ ಪಡೆದುವು (ಸೂಪಶಾ. ೦-೦೦); ಕುಂಬಾರ ಮಡಿ ಹುಬ್ಬಕ್ಕೆ ಬೇಕಾದ ಹೊಸ ಮಡಕೆಗಳನ್ನು ಬೇಯಿಸಿ ಬಿಣಿಬಿಣಿ ಅನ್ನುವಂತೆ ಮಾಡಿರುತ್ತಾನೆ (ಕಮ್ಮರು. ೪೮). ೩. (ಆಲಂ) ನೋಯಿಸು; ಹಿಂಸಿಸು; ತಾಪಕ್ಕೆ ಒಳಗು ಮಾಡು : ಕಂದರ್ಪನ ಸುಟ್ಟ ಪಣೆಗಣ್ಣು ಮುಚ್ಚದೊಂದಾದೊಡೆ ಮತ್ತೆ ತೆಱೆದು ಬೆಂದ ಪಾಪಿಯ ಬೇಯಿಸಬೇಡವೆಂದು ಸುಗಂಧಾಕ್ಷತೆಯ ಮೆತ್ತಿದನು (ಪೋಹಕ. ೨೦-೨೮); ಬಿಚ್ಚುವೆಣೆವಕ್ಕಿಗಳ ಪೃದಯವಂ ಬೇಯಿಸುವ ಪೊತ್ತುಪೊಸ ಕೆಂಡಂಗಳೆನೆ . . . ಸಂಜೆದಾರೆ

ಗಳೆಸೆದುವು (ಕೃಪುರಾ. ೬-೯೭); ನಿನ್ನಿಂದಲ್ಲವೆ ಎನಗೀ ಪಾಪವು ಹೃದಯಾವ ಬೇಯಿಪ ಸಂಕಟವು ! (ಕವಿಶೋ. ೩೦-೧೮). **ಬೇಸು** : ೧. ಹಿರಿಮದ್ದಿನ ಬೇರು ಹಾಲಿನಲ್ಲಿ ಬೇಸಿ ನೆರಳಿನಲ್ಲಿ ಒಣಗಿಸಿ ಪುಡಿಮಾಡಿ . . . ತೆಗೆದು ಕೊಳ್ಳುವುದು (ಆಯುರ್. ೨೬೩). ೨. ತಿನ್ನುವುದಕ್ಕೆ ಬಿಸಿಬಿಸಿ ರೊಟ್ಟಿ ಗಳನ್ನು ಬೇಡುತ್ತಿ; ಬೇಸುವುದಕ್ಕೆ ತಿಳಿಯಲಿಲ್ಲ ಯಾಕೆ ? (ಮುಂಬಯಿ. ೩-೧೮೬). ೪. ಉರಿದು ಹೋಗುವಂತೆ ಮಾಡು; ದಹಿಸು : ಬೀಸದು ಬಿಱುಸುಗಾಳಿ ಬಿಸಿಯು ಬಿಸಿಲವನಿಯಂ ಕಾಸದು ದವಾಗ್ನಿ ಪುಲ್ಗಳೊ ಳೊಂದನಾದೊಡಂ ಬೇಸದು (ಕೃಪುರಾ. ೧೫-೧೭). [ ಬೇ$_1$ + — ಇಸು$_3$ ]

**ಬೇಯಿಸು** 'ಬೇ$_1$' ನೋ.

**ಬೇರ್$_1$**, ಬೇರು, ವೇರ್ (ನಾ). ೧. ಸಸ್ಯವನ್ನು ಭೂಮಿಯಲ್ಲಿ ಹಿಡಿದಿಟ್ಟು ಅದಕ್ಕೆ ಭೂಮಿಯಿಂದ ಪೋಷಣೆಯನ್ನು ಒದಗಿಸುವುದಕ್ಕೆ ಸಹಾಯಕ ವಾದ, ಭೂಮಿಯ ಕೆಳಗಡೆಯಿರುವ ಸಸ್ಯದ ಭಾಗ ; ಮರ, ಗಿಡ ಮುಂತಾದುವುಗಳ ಅಡಿಭಾಗ, —ಮೂಲ : " ಪಾದಮೆನೆ ಮೂಲಮೆನೆ ಪಸರಿಸಿದ ಬೇರಕ್ಕುಂ" (ಮಂಗರಾ. ೩೨-೨); ಭೀಮನುಮೊತ್ತಿ ಕಿೞ್ತು ಬೇರೊಡನೆ ಮಹೀಜಮೊಂದನಿಡೆಯುಂ (ಪಂಪಭಾ. ೩-೧೯); ಬೇರನಱಿ ದವರ್ಗೆಲೆಯುಂ ತೋಱಿದರೆಂಬಂತೆ (ಧರ್ಮಾಮೃ. ೬-೬೪). ೨. ಬುಡ; ತಳಭಾಗ: 'ಬೇರೇೞು', 'ಬೇರ್ಬಿಡಿಸು' ಪರಾ. ೩. (ಆಲಂ) ಮೂಲ ಸತ್ವ; ನೆಲೆ : ತನ್ನ ಸುತನಟಿಲೊಳರ್ಜುನನೆನ್ನುದಯಮನೆಯ್ದೆ ಪಾರ್ದು ಪೆಗವರ ಬೇರೊಳ್ ಬೆನ್ನೀರನೆಱೆಯದಿರಂ (ಪಂಪಭಾ. ೧೦-೧೩೨); ಕರ್ಮದ ಬೇರ್ಗಳಂ ಪಱಿವವೊಲ್ ನೀಲಾಳಿ ಮಾಲಾವಿಲಾಸಿಗಳಂ ಕೇಶಸಮೂಹಮಂ ಪಱಿವುದುಂ (ಆದಿಪು. ೬-೧೨೪); ಮೂಲದ್ವಾರದ ಬೇರೆ ಮೆಟ್ಟಿ ಭೂಮಂಡಲ ವನೇಱದೆ ಆಚಾರದ ಬೇರ ಹಿಡಿದು ಐಕ್ಯದ ತುದಿಯನೇಱದೆ (ಮಹಾದೇ. ೨. ೦೦೫-೩೬೪). ೪. (?) : ಸವಿ ಸಮನಾಗೆ ಸುತ್ತಿಟದ ತೋಳ್ ಸತ ವಾದೆರ್ದೆಯಿಂಪಲಂಪನಪ್ಪುವ ಬಗೆ ಬೀಗಿ ಬಾಯೊಳಗೆ ಸಿಲ್ಕಿದ ಬಾಯ್ ಬೆಱಗಾದ ಬೇರ್ಗೆ ನೋಡುವ ಜವವೋಡಿದಚ್ಚರತದಚ್ಚುಡಿದಂತಿರೆ ಕಾಮ ಸೌಖ್ಯದಿಂ ಸವೆದವೊಲಿರ್ಪವಲ್ಲಿ ಗಗನೇಚರದಂಪತಿಗಳ್ ರತಾಂತದೊಳ್ (ಅಜಿತಪು. ೯-೯೭). **ಬೇರು** : ೧. ಪನ್ನೆರಡುವರ್ಷಂ ಬೇಡರಂತಡವಿಯೊಳ್ ನಾರ ಸೀರೆಯನುಟ್ಟು ಬೇರುಮಂ ಬಿಕ್ಕೆಯುಮಂ ತಿಂದು ಕಂದಿ ಕುಂದಿ (ಪಂಪಶಂ. ೨೦೬-೦೩); ನೀರಿಲ್ಲದ ನೆಳಲಿಲ್ಲದ ಬೇರಿಲ್ಲದ ಗಿಡು ಹುಟ್ಟಿತ್ತು (ಅವಚ. ೧೨೬-೩೭೦); ಬೇರು ಹೋದ ಮೇಲೆ ಮರದ ಯೋಚನೆ ಯಾಕೆ? (ಗಾದೆ). ೨. ಕೋಪಮನುಱೆ ಜಱಿದಾ ಮೋಹಮಂ ದಾಂಟಿ ಲೋಭತ್ವದ ಬೇರಂ ಕಿಳ್ತು (ರಕ್ಷಾಶ. ೭೯); ಆತ್ಮಕೇಶಾಳಿಗಳನಘದ ಬೇರಂ ತೀರೆ ಕೀೞ್ವಂತೆ ಕಿೞ್ತಂ (ಪುಣ್ಯಾ. ೦೩-೧೦೦೦); ಪುರಿದುದು ಭವಬೀಜದುಷ್ಕರ್ಮದಂಕುರ ಪಱಿದುದು ಕಪಟದ ಬೇರು ಸುರಿದುದಾನಂದಾಶ್ರು ಕೃಷ್ಣನಂಘ್ರಿಯ ಕಂಡು ಪುರದವರ್ ಪುಣ್ಯವೊಂದಿದರು (ತೋಹಕ. ೯೨-೩೦). ೫. ಕೆಳಭಾಗದ ತಂದಿ,—ಕೊನೆ: ನೀರಿನಲಿ ಮಟ್ಟಿಯನು ಕಲೆಸಿ ಬರೆಯುತ ಮೂಗ ಬೇರನ್ನು ಪಿಡಿದು ಮುಸುಕಿಕ್ಕಲೇನುಂಟು (ಭರತೇ. ೦-೪೪-೦). **ವೇರ್**: ೨. ಪಾಣ್ಡ್ಯಸಂ ಖಣ್ಡಿಸಲ್ ಚೋಳನ ವೇರಂ ಕಿತ್ತುರ್ ನೀರೊಳ್ಗಲುಗಲ ಸಲೆಯಲ್ಬಂದನಾ ಬಂದನಾ ಬಂದನೇ ತಾನೆಂಬಂತೆ ಬಂದಂ ನಿಜವಿಜಯಭ × × ಸೊಳಂಬಸೊಳಂ (ಸೌಇಇ. XX. ೪೪-೨೦; 1076?).

**ಬೇರುಮುಟ್ಟ ಕೀಳು** = ಮೂಲೋತ್ಪಾಟನ ಮಾಡು; ಪೂರ್ತಿ ಯಾಗಿ ಕೀಳು : ಆ ಕೆಟ್ಟ ಚಾಳಿಯನ್ನು ಬೇರುಮುಟ್ಟ ಕೀಳುವುದು ಕಷ್ಟ (ಕಪರು. ೨೨೮). **ಬೇರೊಳ್ಪಿನೀರಂ ಪೊಯ್** = (ಆಲಂ) ನಾಶಮಾಡು; ಹಾಳುಮಾಡು: ಚಲದಿಂ ಮಣ್ಡಳಿಸರ್ಗ್ಗೆ ಬೇರೊಳ್ಬಿಸಿನೀರಂ ಪೊಯ್ದಂ (ಎಕ. XI. ದಾವಣ. ೪೨-೩೨; ಸು. 1168). [ದೇಶ್ಯ. ತಮಿ. ಮಲ. ನಾಯ್ಕ್. ಗಡಬ. ವೇರ್; ತುಳು. ಬೇರು; ತೆಲು. ವೇರು]

**ಬೇರ್$_2$** 'ಬೇಱ್' ನೋ.

**ಬೇರ$_1$**, ವಯಿರ(ನಾ). ೧. ಹಗೆತನ; ವೈರ; ಶತ್ರುತ್ವ: ಒಟ್ಟೈಸಿದುರ್ವೀಶರ ಬೇರಂ ಬೇರದಿಂ ಕಿತ್ತುರ್ಲೆವನನುಪಮಂ ವಿಕ್ರಮಾದಿತ್ಯದೇವಂ (ಎಇ. XVI. ೩೬-೦೦; 1107) ; ಕೂರಸಿಯಿಂದಿವನ ತಲೆಯನರಿಯೆಂದೊರ್ಬಂ ಕ್ರೂರಾತ್ಮನ ಕಯ್ಗೆನ್ನಂ ಬೇರದೊಳಿತ್ತವರ್ಗಳತ್ತ ಪೋದರ್ (ವಡ್ಡಾ. ೯-೯೭); ಪಿಂತಣ ಬೇರಮನೆಣಿಸದೆ ಸಂತತಮುಂ ಮಱುಕಮೆರಸಿ ಮನ್ನಿಪುದೆನ್ನಂ (ಶಶಿ. ೫-೨೯). **ವಯಿರ**: ೧. ಶ್ರೀ ಪಲ್ಲವಕುಲತಿಲಕನ್ ವಯಿರಮ ಕಟ್ಟಿ ಎಱಿದು ಸಗ್ಗಾಲಯಕ್ಕೇರಿದನ್ (ಪ್ರ್ಯಕಾ. ೦೯೨೪, ೪೬-೨; ?). ೨. ಹಗೆಯಾದವನು ; ಶತ್ರು; ವೈರಿ : ತನಗೆಯಿದಿರಾದ ವಯಿರರಯಿಱಿದು ರಣಖಂಡಿತಮಂ ಮಾಡಿ (ಕಇ. I. ೩೬-೦೩ ; 1438).

[ < ಸಂ. ವೈರ ]

**ಬೇರ$_2$**, ಬ್ಯಾರ (ನಾ). = ಬೇಪಾರ: "ಬೇರ—೧ ವ್ಯಾಪಾರ, ೨ ವೈರ" (ತದ್ಭಕೋ. ೩೨) ; ತಾರವನು ನೀನಿತ್ತು ಬೇರವನು ಬಿಟ್ಟಿಹುದು ನೀಱ ಯಪಳೆಂದು ಪರವಧುವ ಸಾರಿದರೆ ಮಾರಿ ಬಂದಿಹುದು (ಸರ್ವಜ್ಞ. ೦೭೯೫) ; ಬೇರದವಸರದಿಂ ಮೆಯ್ದೆಗೆದು ಬಣಂಜಿಗರ ನೆರವಿ ಕಪಾತವಾಗೆ ಪೊಸ ಮರದಿನೆಣಿಕೆಯೊಳಿರೆಯುಂ (ರಾಮಾಶ್ವ. ೨೨-೦೮). **ಬ್ಯಾರ** : ಕೆಲವು ಪ್ಯಾಟೆ ಗಳೊಳ್ ಬಗೆಬಗೆಯಾದ ಪೈರುಗಳಂ ತಂದು ತುಂಬಿ ಬ್ಯಾರವಂ ಮಾಡುವ ಬೆರಿಯರು ಬಣಜಿಗರು . . . ನಾನಾಜಾತಿಯವರಿಗೆ ಬೇರ್ಬೇರೆ ಬೀದಿಗಳಂ ಹಂಚಿ (ಶೌಗಂಧಿ. ೦೩೫-೫). [< ಸಂ. ವ್ಯಾಪಾರ]

**ಬೇರ$_3$** (ನಾ). ೧. ಶರೀರ: 'ಉಜ್ಜ್ವಳಬೇರ', 'ಕುಂಕುಮಬೇರ' ಪರಾ. ೨. ವಿಗ್ರಹ; ಪ್ರತಿಮೆ : ರುಕ್ಮಿಣೀಸತ್ಯಭಾಮಾಸಮೇತ ಪ್ರಸನ್ನ ಕೃಷ್ಣಸ್ವಾಮಿಯವರ ಪಂಚಬೇರಯುಕ್ತವಾಗಿ ಪ್ರತಿಷ್ಠೆಯಂ ಗೈದು (ಎಕ. XIV. ಮೈಸೂರು. ೩೧-೨೭; 1828). 'ಮೂಲಬೇರ' ಪರಾ.

[< ಸಂ. ವೇರ]

**ಬೇರಯಿಸು** (ಕ್ರಿ). ಬೇರೆಯಾಗಿಸು ; ಬದಲಾಯಿಸು : ಬೇರಯಿಸಿ ನಿಮಿಷನಿಮಿಷಕವೊಡಲ ಬಣ್ಣಗಳ ತೋರಿಪ ಪೂಸರವಳ್ಳಿಯಂತೇನು ಬೊಮ್ಮ ? (ಮಂಕುಳ. ೩೮). [ಬೇರೆ$_1$ ( <ಬೇಱ$_1$) + — ಇಸು$_3$]

**ಬೇರಾಗ** (ನಾ). ಸರಿಯಾದ ರಾಗವಲ್ಲದುದು; ಅಪಸ್ವರದಿಂದ ಕೂಡಿ ದುದು : ನಿನ್ನ ದನಿಯು ಸವಿರಾಗದಲ್ಲಿ ಬೇರಾಗ ಮರೆಸಿ ಮರೆವೆ (ಮುಳ್ಳಕಂ. ೨೪-೬). [ಬೇ$_3$ — + ರಾಗ]

**ಬೇರಿ$_1$**, ಬೆರಿಯ, ಬ್ಯಾರಿ (ನಾ). ೧. ವ್ಯಾಪಾರ ಮಾಡುವವನು; ವರ್ತಕ ; ವೈಶ್ಯ : ಊರವ್ಯ . . . ಭೂಮಿಸ್ಟ್ರಕ್, ವಿಟ್ ವೈಶ್ಯರ ಹೆಸರುಗಳು, ಬೇರಿಯವರು, ನಗರ್ತರು, ಕೋಮಟಿಗಳು ಮುಂತಾಗಿ (ಸಿದ್ಧಾಂತ. ೨೭೩). **ಬೆರಿಯ** : ೧. ಕೆಲವು ಪ್ಯಾಟೆಗಳೊಳ್ ಬಗೆಬಗೆಯಾದ ಪೈರುಗಳಂ ತಂದು ತುಂಬಿ ಬ್ಯಾರವಂ ಮಾಡುವ ಬೆರಿಯರು ಬಣಜಿಗರು . . . ನಾನಾಜಾತಿಯವರಿಗೆ ಬೇರ್ಬೇರೆ ಬೀದಿಗಳಂ ಹಂಚಿ (ಶೌಗಂಧಿ. ೦೩೫-೫). **ಬ್ಯಾರಿ** : ೨. ಕೇರಳದಲ್ಲಿರುವ ಮಹಮ್ಮ ದೀಯರ ಗುಂಪಿಗೆ ಸೇರಿದವನು ; ಮಾಪಿಳ್ಳೆ : ಇಬ್ಬರೂ ಮಾಪಿಳ್ಳೆ, ಲಬ್ಬೆ, ಬ್ಯಾರಿ ಮೊದಲಾದ ಮಲೆಯಾಳಿಗಳು ಉಡುವಂತೆ . . . ಅಡ್ಡಪಂಚೆ ಸುತ್ತಿ ಉದ್ದುದ್ದ ಬನೀನು ಹಾಕಿದ್ದರು (ಮರಳು. ೪೩೨) ; ಬ್ಯಾರಿಗಳೆಲ್ಲ ಬರಿ ಸೈಕಲ್ಲಿನಲ್ಲೆ ಹಿಂತಿರುಗಿದರು (ಹೂಸಕ್ಕಿ. ೪೮).

[ < ಸಂ. ವ್ಯಾಪಾರಿನ್. / ತುಳು. ಬ್ಯಾರಿ]

**ಬೇರಿ$_2$** (ನಾ). ಒಂದು ಬಗೆಯ ಚರ್ಮವಾದ್ಯ; ಭೇರಿ; ನಗಾರಿ : "ಬೇರಿ — ಭೇರಿ = ನಗಾರಿ" (ತದ್ಭಕೋ. ೩೦); ಭಕಾರಕ್ಕೆ ಬಕಾರಂ_ ಆರಂಭ—ಆರಂಬ . . . ಭೇರಿ—ಬೇರಿ (ಶಬ್ದಮ. ೨೫೫ ಪ್ರಯೋ).

[ < ಸಂ. ಭೇರಿ ]

**ಬೇರಿಗ$_1$** (ನಾ). ಹಗೆ; ವೈರಿ; ಶತ್ರು : ಅರವಂಗಂ . . . ಈ ತೇರೇವು ದೆಂದು ನೆಲಕಿಟಿಸಿತಂದು ಬೇರಿಗನನಪ್ಪಳಿಸುವೆನೆಂದು ಕೋಲ್ಗಳಿಂ ತಿರು ವಾಯ್ಗೆ ಪೂಡಿ ಕಾದಿದಂ (ರಾಮಾಕ್ಕ. ೦೨೮-೨೮). [ಬೇರ$_1$ + — ಇಗ]

**ಬೇರಿಗ$_2$** (ನಾ). ವ್ಯಾಪಾರ ಮಾಡುವವನು ; ವರ್ತಕ; ವ್ಯಾಪಾರಸ್ಥ : ಸಂದ ಭಕ್ತಿಯೊಳ್ ಬೇರವನುಳಿದ ಬೇರಿಗರ ವೃಂದಂ . . . . ಅಂದು ಕಾಣಿಸಿತು ರಕ್ಕಸವಗೆಯುಗೆ (ತ್ರೀಣಾಮ. ४-೫೬).

[ಬೇರ$_2$ + — ಇಗ]

**ಬೇರೀಜ್** 'ಬೇರೀಜು' ನೋ.

**ಬೇರೀಜು, ಬೇರೀಜ್** (ನಾ). ೧. ಕೂಡುವಿಕೆ; ಸಂಕಲನ : ಗಣಿತದ ಚತುರೋಪಾಯಗಳಾದ ಬೇರೀಜು, ವಜಾಬಾಕಿ, ಗುಣಾಕಾರ, ಭಾಗಾಕಾರ ಗಳನ್ನು ನಾನು ಸಲೀಸಾಗಿ ಕೈಕೊಳ್ಳಬಲ್ಲೆನಾದರೂ ಕ್ರಿಯೆ ಸದೋಷ ವಾಗುತ್ತದೆ (ಗಾಳಿಹ. ೦೬೪); ಮೊದಲು ಬೇರೀಜು, ಮುಂದೆ ವಜಾಬಾಕಿ, ಆಮೇಲೆ ಗುಣಾಕಾರ ಮತ್ತು ಕಡೆಗೆ ಭಾಗಾಕಾರ ಹೀಗೆ ಸಾಮಾನ್ಯ ಪದ್ಧತಿಯಿರುವುದು (ಕೃಷ್ಣಜ. ೬೩). ೨. ಒಟ್ಟು ಮೊತ್ತ : ಅಲ್ಲಿರುವ ಒಟ್ಟು ಮನೆಗಳ ಬೇರೀಜು ಮೂವತ್ತಕ್ಕೆ ಮಿಕ್ಕುವುದು ಕಷ್ಟ (ಹರಾಪ. ೦೬); ಎಲ್ಲದರ ಬೇರೀಜು ಶೂನ್ಯ (ಮುಕ್ತಿ. ೦೬೨). ೩. ಒಟ್ಟು ಕಂದಾಯದ ಮೊಬಲಗು : ಗ್ರಾಮದ ಬೇರೀಜು ಸಾಗವಳೀ ಬರದಂನ್ನು ಪರಾಂಮರಿಸಿ ಸರ್ವಮಾಂನ್ಯವಾಗಿ ಅಪ್ಪಣೆ ಕೊಟ್ಟಿರುವ ವಿವರಾ (ಪ್ಮೆಐ. ೦೯೩೯, ೪೨-೪೨; ೩೮೫) ; ಈ ವಿರ್ಪಾಡಿನಿಂದ ಜನಗಳಿಗೆ ಸೌಲಭ್ಯವು ಹೆಚ್ಚಿ, ಆ ರಾಜ್ಯದ ಬೇರೀಜು ಒಂದಕ್ಕೆ ಎರಡಾಯಿತು (ಕಾಮುವಂ. ೩೩೪) ; ಕಂದಾಯು ಮಾಫೀ ಮಜಾ ಜಾತಾ ಐನು ಬೇರೀಜು ಎಷ್ಟು ಅಂತ ಹಾಕುವುದಕ್ಕೆ ಕೈಬರುತ್ತಲೇ ಇರಲಿಲ್ಲ (ಹಚೂಕು. ೦೫೩). **ಬೇರೀಜ್** : ೧. ನಮ್ಮ ಭಾಷೆಯಲ್ಲಿ ಸೇರ ಹೊಂದಿಕೊಂಡು ಹೋದ ಮತ್ತು ಅನ್ಯದೇಶೀಯವೆಂದು ಗುರುತಿಸಲಾಗದ ಶಬ್ದಗಳೆಂದರೆ—ಕಚೇರಿ (ಕಚ್ಚರಿ) . . . ದರವಾಜೆ, ಬೇರೀಜ್, ಮುಜರೆ (ಶಾಹಕಾ. ೦೬೬).

[← ಪಾರ. ಬರೀಜ್ ; ಹಿಂ. ಬೇರಿಜ್ ; ಮರಾ. ಬೇರೀಜ್]

ಬೇರು 'ಬೇರ್$_1$' ನೋ.

ಬೇರುಂಗಾಲ್ (ನಾ). **ದೊಡ್ಡ ಕಾಲುವೆ** : ಬಳಿಕೆಱೆಯ ಕೀಱೇರಿಯ ಬೇರುಂಗಾಲಮೊಕ್ಕೆಲೊಳೊನ್ದು ಪೊಱೆಯಂ ಕೆಯ್ಯುಂ ಪದಿಕ್ಕೊರ್ಳಮ್ ವತಮುಂ ಮಿಾಸಲುಂ ಬಳಿವತ್ತಮುಂ ಸಲ್ವದು (ಎಕ. III, ಹಂಹಹ. ೦೩೩-೫೦ ; ४77). [ಇದು 'ಪೇರುಂಗಾಲ್' ಎಂಬುವರ ಅಪಲಿಖಿತವಿರ ಬಹುದು. / ತಮಿ. ಪೆರುಙ್ಕಾಲ್]

ಬೇರುಗ (ನಾ). ಔಷಧದ ಗಿಡಮೂಲಿಕೆಗಳ ವ್ಯಾಪಾರ ಮಾಡುವವನು; ಔಷಧದ ಬೇರುಗಳನ್ನು ಮಾರುವವನು : ಉಗ ಪ್ರತ್ಯಯಕ್ಕೆ— ನಾರುಗಂ, ಬೇರುಗಂ, ಊರುಗಂ (ಶಮದ. ೨೦೪ ಪ್ರಯೋ).

[ಬೇರ್$_1$ + — ಉಗ]

**ಬೇರುಗಾಣ್** (ಕ್ರಿ). (ಆಲಂ) ಅಂತರಂಗವನ್ನು ಅರಿತುಕೊಳ್ಳು : ಭಂಡಾರ ಬೊಕ್ಕಸ ಮನೆಗಳ ನೋಳ್ಪನಾ ಭಂಡಾರಿಗಳು ನೋಡುವಂತೆ ಕಂಡವರೆಲ್ಲರೀ ನೃಪನವೆಂಬರು ಬೇರುಗಂಡೆಣಿಸುವನು ತಾನೊಳಗೆ (ಕುಕಿತ. ೬೩-೩೩). [ಬೇರು (<ಬೇರ್$_1$) + ಕಾಣ್]

**ಬೇರುಗಿ** (ನಾ) ಔಷಧದ ಗಿಡಮೂಲಿಕೆಗಳ ವ್ಯಾಪಾರ ಮಾಡುವವಳು : ನಾರುಗಿ, ನಾರುಗಿತಿ ; ಬೇರುಗಿ, ಬೇರುಗಿತಿ (ಶಬ್ದಮ. ೦೯೩ ಪ್ರಯೋ).

[ಬೇರುಗ + — ಇ$_2$]

**ಬೇರುಗಿಡಿಸು** (ಕ್ರಿ). ಬುಡ ಅಥವಾ ಮೂಲವನ್ನು ಕೆಡಿಸು,—ಹಾಳು ಮಾಡು : ಈ ಮಹಾರಾಜನಿಗೂ ಇವನ ಹಿಂದಣವರಿಗೂ ಆವರಿಸಿಕೊಂಡು ಬೇರುಗಿಡಿಸಲೇಬೇಕಾಗಿದ್ದ ಕುರುಡತನವನ್ನು . . . ತಪ್ಪಿಸಿ ಕಾಪಾಡಿಕೊಂಡು ಬರುತ್ತ . . . ಪಾವನರಾಗಿರುವ ಶೂರರ ಮನೆತನದವರು ನೀವು (ಶುಂಕ್ರಕ. ೫೦-೦೫). [ಬೇರು$_1$ (<ಬೇರ್) + ಕಿಡಿಸು (<ಕೆಡಿಸು$_1$)]

**ಬೇರುಗಿತಿ** (ನಾ). = ಬೇರುಗಿ : ನಾರುಗಿ, ನಾರುಗಿತಿ, ಬೇರುಗಿ; ಬೇರುಗಿತಿ (ಶಬ್ದಮ. ೦೯೩ ಪ್ರಯೋ).

[ಬೇರುಗ + — ಇತಿ$_1$(< — ಇತ್ತಿ)]

**ಬೇರುಗೊಲೆ** 'ಬೇರ್ಗೊಲೆ' ನೋ.

**ಬೇರುಡಿ** (ಕ್ರಿ). ಬೇರುಸಹಿತ ಮುರಿದು ಕೊಳ್ಳು; ಬುಡ ಕಿತ್ತುಬರು : ತೀರೆ ಗಿರಿ ಮುಟ್ಟಿ ಬೆಸೆ ಭುಜದಲಿ ಬೇರುಡಿಯೆ ಬೆಳಲತ್ತ . . . ಹುಣಿಸೆ ನಾನಾ ಭೂರಿಭೂಜಗಳಿಂದ ಹೊಯ್ದಾಡಿದರು ಸರಸದಲಿ (ಕೊರಣ. ४-४-೨೩). [ಬೇರು$_1$ (< ಬೇರ್) + ಉಡಿ$_1$]

**ಬೇರುಬಿಡು** 'ಬೇರ್ಬಿಡು' ನೋ.

**ಬೇರುವರಿ** 'ಬೇರ್ವರಿ' ನೋ.

**ಬೇರೂರಿಸು** (ಕ್ರಿ). (ಆಲಂ) ಸ್ಥಿರಪಡಿಸು ; ನೆಲೆಗೊಳಿಸು : ಈ ಶ್ಲೋಕದ ಚಾರಿತ್ರಿಕತ್ವವನ್ನು ಸಿದ್ಧಾಂತಿಸಲಿಕ್ಕಾಗಲಿ, ಉತ್ತರಭಾಗವನ್ನು ಆ ಕಾಳಿದಾಸನೇ ಬರೆದಿರಬೇಕೆಂಬುದನ್ನು ಬೇರೂರಿಸಲಿಕ್ಕಾಗಲಿ ನಾವು ಹವಣಿಸುವುದಿಲ್ಲ (ಕಾಕೋಲಾ. ೩೪४).

[ಬೇರೂರು (< ಬೇರೂಱು) + — ಇಸು$_2$]

**ಬೇರೂರು** 'ಬೇರೂಱು' ನೋ.

**ಬೇರೂಱು**, ಬೇರೂರು (ಕ್ರಿ). ೧. (ಸಸ್ಯಗಳಿಗೆ ಸಂಬಂಧಿಸಿದಂತೆ) ಭೂಮಿಯ ಕೆಳಗಿರುವ ಮೂಲದ ಬೇರೆಬೇರೆ ತುದಿಗಳಂ ಇನ್ನೂ ಕೆಳಕ್ಕೆ ಬೆಳೆಯುತ್ತಾ ಹೋಗು,- ಭದ್ರವಾಗಿ ನಿಲ್ಲು ; ಬೇರು ಬಿಡು : ಹಾರುವನ ಭಕ್ತಿ ಓಡಿನೊಳಗಗೆಯು ಹೊಯಿದಂತೆ ಕೆಳಯಿಂಕೆ ಬೇರೂಱದು ಮೇಲೆ ಫಲವಾಗದು (ಬಸವ. ೫೯೩). ೨. (ಆಲಂ) ನೆಲೆನಿಲ್ಲು; ತಳವೂರು : ನಭೋಭಾಗದಿನಿಂದ್ರ ಚಾಪಮನಿತುಂ ಭೂಭಾಗದೊಳ್ ಬಂದು ತೊಟ್ಟನೆ ಬೇರೂಱಿದವೋ . . . ಎಂಬಿನಮೇಂ ನಾಡೆ ಬೆಡಂಗನಾಳ್ದುದೊ ವಿಯದ್ದಿಗ್ವ್ಯಾಪಿಭೂಮಂಡಲಂ (ಆದಿಪು. ೬-೨४) ; ಇಂತು ತಪೋಬೀಜಂ ಚಿತ್ತಭೂಮಿಯೊಳ್ ಬೇರೂಱಿಯಹಂಕಾರದೊಳಂಕುರಿಸಿ (ಗಿರಿಕ. ೩-೧೨ ಪ) ; ಬೇಸಱಿಕೆ ಬೇರೂಱಿದುದು ಜಯದಾಸಿ ಜಾಱಿತು (ಕುಬ್ಜಸ. ೨-೦೦४). **ಬೇರೂರು** : ೨. ಈ ದೇಶದಲ್ಲಿ ಮಹಮ್ಮದೀಯಮತವು ಬೇರೂರಿ ಬೆಳೆಯಲು ಸಾಧ್ಯವಾಯಿತು (ರಾಜಾ. ೫೬); ನೈತಿಕ ಮತ್ತು ದೈವಿಕಭಾವನೆಗಳು ಬೇರೂರುವುದು ಈ ಕಾಲದಲ್ಲೇ (೨ಸ್ವರ. ೦೦೫). [ಬೇರ್$_1$ + ಊಱು$_1$]

**ಬೇರೆ$_1$** 'ಬೇಱೆ$_1$' ನೋ.

**ಬೇರೆ$_2$** 'ಬೇಱೆ$_2$' ನೋ.

**ಬೇರೇಟಿಪ್** (ಕ್ರಿ). ಬುಡಸಹಿತ ಕಿತ್ತು ಬರು : ಭೂತಳಂ ನಡುಗೆ ಶೈಲಶ್ರೇಣಿ ಬೇರೇಟಿ ವಿಶ್ವಜಗತ್‌ಕ್ಷೋಭಕರಸ್ವಭಾವಗತಿಯಿಂ ಬಂದಂ ವಿಹಂಗಾಧಿಪಂ (ಜಗಂ. ೦೩-೩೬). [ಬೇರ್$_1$ + ಏಟಿಪ್$_1$]

**ಬೇರೊಡೆ** (ಕ್ರಿ). ಬೇರು ಹರಡು ; ಮೂಲ ವಿಸ್ತರಿಸು : ಏಳು ಫಲಂಗುಣ ಹರಿ ವರೂಥದ ಮೇಲೆ ಬಿಜಯಂಗೈವ ಬಹಳ ಫಲಾಳಿಯಿದೆಲಾ ನಿನ್ನ ಪುಣ್ಯದ್ರುಮದ ಬೇರೊಡೆದು (ಕುಬ್ಜಕ. ೬-೦೫). [ಬೇರ್$_1$ + ಒಡೆ$_1$]

**ಬೇರ್ಕೆ$_1$** (ನಾ). ಬೇರೆಬೇರೆ ಮಾಡುವಿಕೆ ; ಬೇರ್ಪಡಿಸುವಿಕೆ ; ವಿಂಗಡಣೆ : 'ಬೇರ್ಕೆಗೆಯ್' ಪರಾ.

[ಬೇಱ್ (< ಬೇಱೆ$_1$) + — ಕೆ]

**ಬೇರ್ಕೆ$_2$** (ನಾ). (?) : ಪುರದ ಮಣಲೊಳಂ ಪೂಣಿಸಿದ ಗಾಣದೊಳಂ ಬಿರ್ಚಿದ ಬೇರ್ಕೆಯೊಳಂ . . . ಮೊನೆಯಂ ಪೂಣಿಸಿದ ಕೊಂತದೊಳಂ ಕೈಗೆಯ್ದು (ಅಜಿತಪು. ೦೦-೬೫ ಪ). [?]

**ಬೇರ್ಕೆಗೆಯ್** (ಕ್ರಿ). ಬೇರ್ಪಡಿಸು ; ವಿಂಗಡಿಸು ; ಪ್ರತ್ಯೇಕಿಸು : ಅರ್ಕಕೀರ್ತಿಗೆ ರಾಜ್ಯವಿರಲೆಂದು ಮಂತ್ರಿಗೆ ತೋರ್ಕೆಗೊಟ್ಟೈದರೊ ತಪಕೆ ಮರ್ಕಟವೈರಾಗ್ಯವೆಂಬುದು ಜಗವೆಂದು ಬೇರ್ಕೆಗೆಯ್ದೊ [ಪಾಠಾಂ. ಗೈದೊ] ಳಗೆ ಚಿಂತಿಸುವ (ಭರತ. ೩೨–೧೦೪). [ಬೇರ್ಕೆ$_1$ + ಕೆಯ್$_1$]

**ಬೇರ್ಕೆಯ್**, **ಬೇರ್ಕೈ**, **ಬೇಱುಕೆಯ್** (ಕ್ರಿ). =ಬೇರ್ಕೆಗೆಯ್ : ಮನೋವಾಕ್ಕಾಯವೃತ್ತಿಯಿಂ ನೆರಪಿದ ಕರ್ಮವಂ ಬೇರ್ಕೆಯ್ಯಲೆನಗೆಂತಕ್ಕುಮೆಂಬ ಸಂಕಲ್ಪಂ ಪ್ರಥಮಧರ್ಮಂ (ಅಕ್ಷ. ೮–೨೬ ವ); ನಿನಗೆ ಕರ್ಮಬಂಧವುಪ್ಪ ಜೀವಮನೆಂತು ಬೇರ್ಕೆಯ್ದು ತೋಱಲ್ಬರ್ಪುದು (ರಚಚೀಕ್ಕ. ೯–೧೨೦); ತನ್ನಂ ಬೇರ್ಕೆಯ್ದು ಮೆಯ್ಯಂ ಪಗಲಿದಿರುಳೆದೆಂಬೀ ವಿಭೇದಂ ದಲೇನುಂ ಕೆನ್ನಂ ಮೆಯ್ದೋಱಿತಿಲ್ಲಂ (ಪಾರ್ಶ್ವ. ೩–೯೩). **ಬೇರ್ಕೈ** : ಅರ್ಕನಂತೆಸವಾತ್ಮ ಯೋಗವಿಂತಿಹುದೆಂದು ಬೇರ್ಕೈದು ಪಚನಿಸಲರಿದು (ಭರತ. ೨–೧೦); ಖಡ್ಗದಿಂ ಮಸ್ತಕವನರಿದು ಬೇರ್ಕೈದವಂ [ಪಾಠಾಂ. ಬೇರ್ಕೆಯ್ದುದಂ] ಮುಂಡಮಂ ಸೀಳ್ದು (ಕೃತರ. ೦೪–೯೬); ಗಂಗೆಯಲಿ ಬಂದು ತಾನಾಗಿ ಹರಿದಿಹವು ಪತ್ತು ನೀರು ಬೇರ್ಕೈವುದೆಂತು ಬಿಸಿಲಲ್ಲಿ ಬೆರೆತ ತವುದೊಂದು ಏರುಪೇರು ? (ಮುಕ್ತಕಂ. ೦೩–೦೦). **ಬೇಱುಕೆಯ್** : ಇಂತಹ ಪ್ರಳಯ ಹದಿನೆಂಟು ಕೂಡಿ ಮಹಾಂಧಕಾರ ಸಂದಿತ್ತು ಇಂತಹ ಅಂಧಕಾರ ಸಂದಿಲ್ಲದೆ ತಿರುಗುವಲ್ಲಿ ಬಯಲು ಬೇಱುಕೆಯ್ಯಿತ್ತು (ಷಟ್ಸ್ಥಲಪ. ೩–೦೪).

[ಬೇಱು ( < ಬೇಱಿ$_1$) + ಕೆಯ್$_1$]

**ಬೇರ್ಕೈ** ' ಬೇರ್ಕೆಯ್ ' ನೋ.

**ಬೇರ್ಗೊಲೆ**, **ಬೇರುಗೊಲೆ** (ನಾ). ೧. ಮೂಲಪನ್ನು ಕಿತ್ತು ನಾಶಮಾಡುವುದು. ೨. (ಅಲಂ) ಸಂಪೂರ್ಣವಾಗಿ ಇಲ್ಲದಂತೆ ಮಾಡುವುದು : ಅರಿನ್ನು ಗತಿ ನಿನಗೆ ಸಂಬಂಧಿ ಬಾಣನಂ ಹಾರೈಸುವೊಡೆ ನಿನ್ನ ಬೇರ್ಗೊಲೆಗೆ ಶಿವನಪ್ಪ ಕಾರಣಮನಂಗತ್ವಮೇ ಪ್ರಾಪ್ತಮೆಂದು ಹರಿ ತನ್ನ ಸುತನಂ ಜಱಿದನು (ಕೃಬಿಷಾ. ೭–೪೦). **ಬೇರುಗೊಲೆ** : ೨. ನಾರಿಯರು ಮಱುಗಿದರಳಟ ಮುದಿಹಾರುವನ ತನಿಬೇಂಟೆ ನಮ್ಮಯ ಬೇರುಗೊಲೆಯಾಗಿರ್ದುದೇ ಹಾಯೆನುತ ಬಿಸುಸುಯ್ದು (ಕುಮಾ.ಕ. ೪–೨೬); ದುರಾತ್ಮರು ಬೇರುಗೊಲೆಗಂಗೈಸಿದರು ಕುರುವಂಶಸುರಕುಜದ (ಜೈಮಿ. ೩–೦–೦೦).

[ಬೇರ್$_1$ + ಕೊಲೆ$_1$]

**ಬೇರ್ಗೊಳ್** (ಕ್ರಿ). ೧. ಬೇರುಬಿಡು. ೨. ಬೇರಿನಿಂದ ಪ್ರಾರಂಭಿಸು : ಬೇರ್ಗೊಂಡು ಪಣ್ಣ ಪಲಸೆಳನೀರ್ಗಾಯಂ ತಳೆವ ತೆಂಗು . . . ನೇರ್ಗಿಱಿಯವು ಕಲ್ಪತರುಗೆ ಸಿರಿಯಿಂದೆಸಿಕುಂ (ಚಂದ್ರಪ್ರ. ೦೫–೨೬).

[ಬೇರ್$_1$ + ಕೊಳ್$_1$]

**ಬೇರ್ನುಡಿ** (ನಾ). ಅನ್ಯಮಾತು ; ಬೇರೆಯ ನುಡಿ : ಸಿದ್ಧನ್ನಮ ಎಂಬ ವಾಕ್ಯಮಿರೆ ಬೇರ್ನುಡಿಯೇಕೆ (ಅಕಚ. ೦೯).

[ಬೇಱು ( < ಬೇಱಿ$_1$ ) + ನುಡಿ$_2$]

**ಬೇರ್ನೆಲೆವೋಗು** (ಕ್ರಿ). ಬೇರೆಯ ಸ್ಥಳಕ್ಕೆ ಹೋಗು ; ಅನ್ಯಪ್ರದೇಶಕ್ಕೆ ನಡೆ : ಕಾರ್ಯಾಂತರದೆ ಬೇರ್ನೆಲೆವೋದ ನಲ್ಲನ ಪಿಂಬಡಿಯೊಳ್ ಪಂಬಲಿಸುತಿರ್ಪ ಬಿಂಬಫಲದಶನಮಸನೆ (ಅನಂಪು. ೯–೨೦ ವ).

[ಬೇಱು (< ಬೇಱಿ$_1$) + ನೆಲೆ$_1$ + ಪೋಗು$_1$ (< ಪೋ$_1$) ]

**ಬೇರ್ಪ** ' ಬೇಡು$_1$ ' ಪರಾ.

**ಬೇರ್ಪಡಿ** (ನಾ). ಬೇರೆಯಾದ ಭೋಜನಸಾಮಗ್ರಿ,—ಎಡೆ : ಪಡು ಖಂಡವದವ ನಿಟ್ಟಿಸುವನು ಪುಣ್ಯ ಸಂಗಡಿಸಿ ಜಾತ್ರೆಯ ನೋಡುವಂತೆ ಅಡುಗೂಲಿವಮನೆಯಲ್ಲಿ ಮಿಂಡುಂಬನಂತೆ ಬೇರ್ಪಡಿ ನೋಡಿ ಭೋಗಿಸುತಿರ್ಪ (ಭರತ. ೭೩–೩೪).

[ಬೇಱು ( < ಬೇಱಿ$_1$ ) + ಪಡಿ$_1$]

**ಬೇರ್ಪಡಿಕೆ** (ನಾ). ಬೇರೆಯಾಗಿ ಮಾಡುವಿಕೆ ; ಪ್ರತ್ಯೇಕಿಸುವಿಕೆ ; ವಿಂಗಡಣೆ : ಅನೇಕ ಜೀವಾತ್ಮರುಗಳ ಸೃಷ್ಟಿಕರ್ಮವನ್ನು ' ವಿಯೋಗ ' ಎಂದೂ ಕರೆಯುವುದುಂಟು. ಎಂದರೆ, ಬೇರ್ಪಡಿಕೆಯ ಕೆಲಸ ಎಂದು (ತತ್ವಜ್ಞಾ. ೩೬೪).

[ಬೇರ್ಪಡು + —ಇಕೆ]

**ಬೇರ್ಪಡಿಸು** (ಕ್ರಿ). ಬೇರೆಯಾಗಿಸು ; ಪ್ರತ್ಯೇಕಿಸು : ಒಡಲ ಬಳಿ ನೆಳಲಿಂಗೆ ಗತಿ ಬೇರ್ಪಡಿಸಿಹುದೆ (ಕುಮಾ.ರಾ. ೦–೯) ; ಕುಂದಣವನು ರಸ ಗೆಯ್ದೊಡಾಕ್ಷಣ ಕರುವಿಂದೆ ಬೇರ್ಪಡಿಸಿ ಪುತ್ಥಳಿಯ ತಂದಡರ್ಚಿದರು (ಪ್ರೋಢಚ. ೨೭–೩೬) ; ಟೊಮೆಟೊವನ್ನು ಸುಲಿದು ಬೀಜ ಮತ್ತು ತಿರುಳನ್ನು ಬೇರ್ಪಡಿಸಿರಿ (ಅಡುಗೆ. ೦೦೨).

[ಬೇರ್ಪಡು + —ಇಸು$_1$]

**ಬೇರ್ಪಡಿಸುಹ** (ನಾ). ವ್ಯತ್ಯಾಸವನ್ನುಂಟುಮಾಡುವಿಕೆ : "ಬೇರ್ಪಡಿಸುಹ=ಭೇದ, ಅಂತರ" (ನಾಶಬ. ೪).

[ಬೇರ್ಪಡಿಸು + —ಹ$_2$ (< —ಪ$_2$)]

**ಬೇರ್ಪಡು**, **ಬೇಱುಪಡು** (ಕ್ರಿ). ಬೇರೆಯಾಗು ; ಪ್ರತ್ಯೇಕವಾಗು : "ಬೇರ್ಪಡು –ವಿವಿಕ್ತೀ, ವಿವರೇ ಚ" (ಕಮಾಕಾ. ವ) ; ಕೊರಲೊಳ್ ಯಜ್ಞೋಪವೀತಂ ಪೊಳೆಯೆ ಬರಿಗಳೊಳ್ ತೋಱುತಿರ್ಪಲ್ಗಳೊಳ್ ಪಂಜರಿಸಿರ್ದಂತೆಯ್ದೆ ಬೇರ್ಪಟ್ಟಿರೆ ತೆರೆದುಱುಗಲ್ ಗಾಳಿಯಿಂದಾಡೆ ಯೋಗೀಶ್ವರಂ . . . ಎಸೆವ ಗಂಗಾಪ್ರವಾಹಂಬೊಲಿರ್ದಂ (ಆದಿಪು. ೨೪೦); ಉದ್ಯೋತಂ ಶ್ವೇತಕೃಷ್ಣಂಗಳನಱೆಪುವಪೊಲ್ಪುಣ್ಯಪಾಪಂಗಳಂ ಸ್ಯಾದ್ವಿದ್ವಾವಾದಂಗಳಿಂ ಭವ್ಯರ ಬಗೆವುಗುವನ್ನಂ ದಯಾಮೂಲಮಂ ಸಾವದ್ಯವ್ಯಾಪಾರಮಂ ಬೇರ್ಪಡೆ ತಿಳಿಪುವುಪಾಧ್ಯಾಯರಾಧೇಯರೆಮ್ಮೊಳ್ (ಮಲ್ಲಿಪು. ೦–೯). ೨. ಹರಡಿರು ; ಬಿಚ್ಚಿರು : "ಬೇರ್ಪಡು – ವಿವಿಕ್ತೀ, ವಿವರೇ ಚ" (ಕಮಾಕಾ. ವ). ೩. ಬೇರೆ ರೀತಿಯಾಗು; ವ್ಯತ್ಯಾಸಗೊಳ್ಳು : (೪). **ಬೇಱುಪಡು** : ೧. ಬೆಸುಗೆಯಾದಂತಿದ್ದು ಬೇಱುಪಟ್ಟಿಹನಾತ್ಮ (ಭರತ. ೩–೯೯).

[ಬೇಱು$_1$ (<ಬೇಱಿ) + ಪಡು$_1$]

**ಬೇರ್ಪಾಟು** 'ಬೇರ್ಪಾಡು' ನೋ.

**ಬೇರ್ಪಾಡು**, **ಬೇರ್ಪಾಟು** (ನಾ). ೧. ಬೇರೆಯಾಗುವುದು ; ಪ್ರತ್ಯೇಕಗೊಳ್ಳುವುದು. ೨. ವ್ಯತ್ಯಾಸ ; ಅಂತರ : ಇಲ್ಲಿ ಶಿಶಿರ ವಸಂತಗಳೆಂಬ ಬೇರ್ಪಾಡಿಲ್ಲ, ಇಲ್ಲಿರುವುದು ಒಂದೇ ಋತು – ನಿತ್ಯನಡುಬೇಸಗೆ (ಪಸುಕೊ. ೨೬೪). **ಬೇರ್ಪಾಟು** : ೨. ಮನಸ್ಸಿನ ಬೇರ್ಪಾಟಿನಿಂದಲೇ ಲೋಕದಲ್ಲಿ ಕಲಹವುಂಟಾಗುವುದು (ಜ್ಞಾಸಿ. ೦೦೦). [< ಬೇರ್ಪಡು]

**ಬೇರ್ಬಡಪ** (ನಾ). ಬೇರೆಯಾದ ಮಳೆ,—ಧಾರಾವರ್ಷ : ಎಲೆಗಳಱುಂಬಿನೊಳ್ ಮರದ ತೂಱಲುಗೊಂಬಿನ ನೀಡನೀಡದೊಳ್ ತೊಲಗದೆ ನಿಂದಣಂ ನಡುಗುತುಂ ತನು ಕೂಡೆ ಕುಸುಂಗೆ ಕಂಠಕಂದಲ ಭರಮುಟ್ಟೆ ಪೋಲ್ ಕುಸಿದು ಪಕ್ಷಿಗಳಿರ್ದುವೆಱಂಕೆಯುಗ್ರದಿಂ ಜಲಲವಬಿಂದುಗಳ್ ಸುರಿಯೆ ಬೇರ್ಪ[ರ್ಬ]ಡಪಂ ಬಿಡೆ ಸೋರ್ವಗುರ್ವಿನೊಳ್ (ಶಬ್ದಮ. ೬–೩೬). [ಬೇಱು (<ಬೇಱಿ$_1$) + ಬಡಪ]

**ಬೇರ್ಬಿಡಿಸು** (ಕ್ರಿ). ಬುಡವು ಕಿತ್ತುಬರುವಂತೆ ಮಾಡು : ರಜತಶೈಲಮಂ, ಶಿವ ಶಿವಾಣಿಯರೊಡನೆ, ಬೇರ್ಬಿಡಿಸುತಲ್ಕಾಡಿ ನೆಗಹಿದೀ ದೈತ್ಯರ ದೊರೆಯ ತೋಳ್ ಸ್ಥಿರಾತ್ಮಜೆಯ ಹೃದಯದುದ್ಯಾನದೊಳ್ ಉದಿರ್ದಂದು ಪೂಮೆಸಳ ಪೊರೆಗುರುಳ್ವುದು (ಶ್ರೀರಾಮಾ. ೬೦೯–೩೯).

[ಬೇರ್$_1$ + ಬಿಡಿಸು]

**ಬೇರ್ಬಿಡು**, **ಬೇರುಬಿಡು** (ಕ್ರಿ). ೧. ಮರಗಿಡಗಳ ಬೇರು ಭೂಮಿಯಲ್ಲಿ ಬೆಳೆಯುತ್ತಾ ಹೋಗು,—ವಿಸ್ತಾರವಾಗಿ ಹರಡು : ತಾಪಾರ್ತಜನಕೆ ನೆರಳಾಗಿ ನೀಡಿ ವಟವೃಕ್ಷವಾದ ಜೀವ ; ತತ್‌ಬ್ರಹ್ಮದಲ್ಲಿ ಬೇರ್ಬಿಟ್ಟು ಇಳಿದ ಅಶ್ವತ್ಥದಂಥಭಾವ (ಕೃದಶ. ೦೨–೦೪). **ಬೇರುಬಿಡು** : ೧. ಬೀಜಗಳು ಹೊಸಭೂಮಿಯಲ್ಲಿ ಮೊಳೆತು ಜನಸಂಚಾರದೊಂದಿಗೆ ಕಲಿತು ಅಲ್ಲಲ್ಲಿ ಬೇರುಬಿಟ್ಟವು (ಜನಸಂ. ೩೯). ೨. (ಅಲಂ) ತಳವೂರು ; ಸ್ಥಿರವಾಗಿ ನಿಲ್ಲು ; ಬೇರೂರು : ಆ ತಂತ್ರಗಳು ಪುರಾತನಕಾಲದಿಂದ

ಸಮಾಜದಲ್ಲಿ ಬೇರುಬಿಟ್ಟಿವೆ (ಶ್ರೀನಿಸಂ. ೨೯೩); ವೈದಿಕಧರ್ಮದಲ್ಲಿ ಬೇರುಬಿಟ್ಟ ಅಪ್ಪ ಯಾಕೆ ಹೀಗೆ ಬದಲಾದ ? (ಹೊಸಕ್ಷ. ೨೩೦).

**ಬೇರುಬಿಟ್ಟುಕೊಳ್ಳು**=ಶಕ್ತಿಯುತವಾಗು; ಪ್ರಬಲವಾಗು; ಸ್ಥಿರವಾಗಿ ನಿಲ್ಲು : ಪಾಂಡವರು ಇನ್ನೂ ಬೇರುಬಿಟ್ಟುಕೊಳ್ಳುವುದಕ್ಕೆ ಮುಂಚೆಯೇ ಅವರನ್ನು ಪರಾಕ್ರಮದಿಂದ ಅದುಮಿಬಿಡಬೇಕು (ಪಶಭಾ. ೬೩).

[ಬೇರ್$_1$ + ಬಿಡು$_1$]

**ಬೇರ್ಮನೆ** (ನಾ). ೧. ಬೇರೆಯ ಮನೆ; ಪ್ರತ್ಯೇಕ ಗೃಹ. ೨. ಮದುವೆಯ ಸಂದರ್ಭದಲ್ಲಿ ವರನ ಕಡೆಯವರನ್ನು ಇಳಿಸುವ ಮನೆ; ಬಿಡದಿಮನೆ : ಹೋಗಿ ಬಡಬಡ ಬೇರ್ಮನೆ (ವರನಿರುವ ಮನೆ)ಯಿಂದ ಮದಲಿಂಗನನ್ನು ಕರಕೊಂಬರ್‍ರಿ . . . ಬೇರ್ಮನೆಯಿಂದ ಮೆರವಣಿಗೆಯಲ್ಲಿ ಬರುವ ಮದಲಿಂಗನನ್ನು ನೋಡುವುದಕ್ಕೂ ಪುಣ್ಯ ಬೇಕು (ಸಂಪಸಂ. ೩೨). ೩. ಮದುವೆಯ ನಂತರ ವಧೂವರರಿಗೆ ಏರ್ಪಡಿಸುವ ಮನೆ; ಪ್ರಸ್ಥದ ಕೋಣೆ : ಮದುವೆಯ ಶಾಸ್ತ್ರಗಳೆಲ್ಲ ಮುಗಿದು ಮದುಮಕ್ಕಳನ್ನು ಬೇರ್ಮನೆಗೆ ಕಳುಹಿಸುವ ವೇಳೆಗೆ ತುಂಬ ತಡವಾಯಿತು (ದೂಡಿ). [ಬೇರ್$_2$ (<ಬೇಱ್$^3_1$) + ಮನೆ]

**ಬೇರ್ಮೆಯ್** (ನಾ). ಅನ್ಯಶರೀರ ; ಅನ್ಯದೇಹ : 'ಬೇರ್ಮೆಯ್ವೊಗು' ಪರಾ. [ಬೇಱ್ (<ಬೇಱ್$^3_1$) + ಮೆಯ್$_2$]

**ಬೇರ್ಮೆಯ್ವೊಗು** (ಕ್ರಿ). ಅನ್ಯಶರೀರವನ್ನು ಹೊಗು.– ಪ್ರವೇಶಿಸು: ಪರಕಾಯಪ್ರವೇಶ ಮಾಡು : ಇದು ಬೇರ್ಮೆಯ್ವೊಕ್ಕ ಯೋಗೀಂದ್ರನ ತನುವಿನವೊಲ್ ಮುನ್ನಿನಂತಿರ್ಪುದು (ಕಾದಂಉ. ೬೦೨).

[ಬೇರ್ಮೆಯ್ + ಪೊಗು]

**ಬೇರ್ವರಿ, ಬೇರುವರಿ** (ಕ್ರಿ). ಶಾಶ್ವತವಾಗಿ ನಿಲ್ಲುವಂತೆ ಹಬ್ಬು.– ಹರಡು : ಅಳಂಕರಣವಿಳಾಸಮಂ ಮೆಱೆವ ಮೇಳಿಸುವಂದಿನ ರೂಪು ಶಾಸನಂಬರೆದುದು ಬರ್ಣಸಿತ್ರಮಾರ್ಗದಿಟ್ಟುದಳಂಕಿದುದುರ್ಚೆ ಪೊಕ್ಕು ಬೇರ್ವರಿದುದು ಬೆಚ್ಚುದಚ್ಚಿಱಿದುದೆನ್ನೆರ್ದೆಯೊಳ್ ಲಲಿತಾಂಗದೇವನಾ (ಅದಿಪು. ೩-೯೩) ; ಶಿವನಿಷ್ಠೆ ಚಿತ್ತದೊಳು ಬೇರ್ವರಿದವರ್ಕೆಲರು (ತಿರುಶ. ದೇ. ೦೯-೦೭). **ಬೇರುವರಿ** : ಊರೊಳೀ ಕಪಿವಾರ್ತೆಯಾಗಲಿಕೆ ಬೇರುವರಿದುದು (ತೊರರಾ. ೫-೫-೦); ಚಾರುತ್ತರ ಹರಿಮೂರ್ತಿಯಲಿ ಮನ ಬೇರುವರಿದಡಿಗಡಿಗೆ ೭ರಗುತ . . . ಪರಮಭಕುತಿಯ ಸಾರಸಾಮ್ರಾಜ್ಯದಲಿ ಮೆಱೆವುದು (ಹರಿಭಾಗ. ೩-೦೩-೯೭). [ಬೇರ್$_1$ + ಪರಿ$_2$]

**ಬೇರ್ವರೆ** (ಕ್ರಿ).=ಬೇರ್ವರಿ : ಶಿವತತ್ತ್ವಮದು ಬೇರ್ವರೆಯಲಜ್ಞಾನ ಕೂಪ ನೆಲೆಗೆಟ್ಟುದೆನೆ ನಾಭಿ ನಿಮ್ನವನುಳಿದುದು (ಶಿಬಪು. ೯-೦೩).

[ಬೇರ್$_1$ + ಪರೆ$_1$]

**ಬೇರ್ವೆರಸು** (ಅ). ೧. ಬೇರು ಸಹಿತವಾಗಿ; ಬುಡ ಸಮೇತ : ಅರ್ಜುನನಾಗಳ್ ಬೇರ್ವೆರಸು ಕಿೞ್ತು ಬಗೆಯ ಸುರರೆಡೆವೊಕ್ಕರ್ (ಪಂಪಭಾ. ೦೦-೨೩); ಬೇರ್ವೆರಸು ಕಿೞ್ತು ಪಲವುಂ ನೀರ್ವೂಗಳನೊಟ್ಟಿಕೊಂಡು ಬರ್ಪ ಗಜೇಂದ್ರಂ . . . ಸುರಕರೀಂದ್ರಮೆನಿಸಿದುದಾಗಳ್ (ಕಾವ್ಯಾವ. ೬೦). ೨. ಬುಡದಿಂದ ಹಿಡಿದು : ಬೇರ್ವೆರಸಿ ತುದಿವರಂ ಕಾಯ್ತು ಪನಸಂಗಳೆಳನೀರ್ವೊನಲುಮಂ ಕರೆವ ತೆಂಗು ಕಿಸುವಣ್ ಮುಸುಕಿ ತೋರ್ಪ ನಾರಂಗ ಜಂಬೀರಮಿನಿತುಂ ನಾಡೆ ಸಾರ್ವಕಾಲಂ ಕುಂದವು (ತಿಬಪು. ೦೧-೨೨).

[ಬೇರ್$_1$ + ಬೆರಸು$_3$]

**ಬೇಲ** 'ಬೆಳಲ್' ನೋ.

**ಬೇಲಾಯಿ** (ನಾ). ಒಂದು ಕ್ಷುದ್ರದೇವತೆಯ ಹೆಸರು : ತುಳಜಾ ಭವಾನಿ ಬೆಲ್ಲದ ಬೇಲಾಯಿ . . . ಎಲ್ಲ ನಾನಾಕದಾ ಕಳ್ಳದೇವತೆಗಳ ನಿಲ್ಲದೆ ಒಲಿಸಿದರು (ಬಿಸಾತು. ೫೮-೨). 'ಜೋಗಾಯಿ' ಪರಾ.

[ ? + ಆಯಿ$_2$]

**ಬೇಲಾಶಕ್, ಬೇಲಾಷಕ್** (ಅ). ನಿಸ್ಸಂಶಯವಾಗಿ; ನಿಸ್ಸಂದೇಹವಾಗಿ; ಖಾತ್ರಿಯಾಗಿ : ಬೇಲಾಶಕ್ ! ದೇಶದಾಗಿನ ಪ್ರತಿಯೊಬ್ಬರ ಸೇವಾ ಮಾಡೋದು ಕಾಂಗ್ರೆಸ್‌ಭಕ್ತನ ಧರ್ಮ ಅದ (ಜಾತಾಂ. ೦೫); ಬಾಜಾರದಾಗ ಬೇಕಾದ ಹೊತ್ತಿನಾಗ ಬೇಕಾದ ಮಾಲು ಬೇಕಾದಟು ಕೇಳಿರಿ, ಬೇಲಾಶಕ್ ಸಿಗತದ (ಅಷ್ಟ. ೨೫೩). **ಬೇಲಾಷಕ್** : ಬೇಲಾಷಕ್ ಹೋಗರಿ (ಬಾಂಡಾಯ. ೨೫); ಬೇಲಾಷಕ್ ನೀ ಹೇಳಿದ ಕಿಮ್ಮತ್ತಿ ಕೊಡತಾವ್ (ಬೋಚಿಹಿ. ೬೮). [← ಅರ. ಮರಾ. ಬೇಲಾಶಕ್]

**ಬೇಲಾಷಕ್** 'ಬೇಲಾಶಕ್' ನೋ.

**ಬೇಲಿ, ವೇಲಿ** (ನಾ). ೧. ಹೊಲ, ತೋಟ ಮೊದಲಾದುವುಗಳ ರಕ್ಷಣೆಗಾಗಿ ಸುತ್ತಲೂ ಹಾಕುವ ಪೊದೆ, ಮುಳ್ಳು, ಮುಳ್ಳುತಂತಿ ಮುಂತಾದುವುಗಳ ಆವರಣ.– ಸುತ್ತುಗೋಡೆ : "ಆವೇಷ್ಟಕಃ ವೃತಿಃ — ಈ ೨ ಬೇಲಿ" (ಹಲಾಯು. ೯೮-೦೩೫) ; ಪನಿಯಾಲ ಕಾಲ ಬಡ (ಗ)ಣ ಬೇಲಿಯುಂ ಅನ್ತೆ ಬನ್ದ (ಎಕ. III, ಪಂಜನ. ೦೩೯-೦೬; 915 ?); ಕಾವ ಬೇಲಿ ಎದ್ದು ಹೊಲವ ಮೇದ ಮೇಲಿನ್ನೇನಿನ್ನೇನು (ಪುರಂದ. ೨-೩೭-೯). ೨. ವನ್ಯಮೃಗಗಳನ್ನು ಬೇಟೆಯಾಡಲು ದೀವದ ನೆರವಿನಿಂದ ಆಕರ್ಷಿಸುವ ಸ್ಥಳ : "ಬೇಲಿ ತೋಹಕ್ಕು" (ಮಂಗರಾ. ೦೦೨-೫); ಆ ನಾರಾಯಣನುಂ ತಾನುಮಂತಃಪುರಪರಿವಾರಂಬೆರಸು ಬೇಂಟೆಗೆ ಪೊಱಮಟ್ಟು ಪರಿಯ ಶಾಣಕ್ಕೆ ವಂದು ಬೇಲಿಯ ಕೆಲದೊಳಲ್ಲದೆ ಪೆಱಗಣಾಲಿಪಿಂಗಮುಳ್ಳೊಳಕ್ಕಂ ಗೆಂಟಾಗಿ ಬೀಡು ಬಿಡಿಸಿ (ಪುಶಪ್ರಾ. ೫-೯೭ ಪ). ೩. ಭೂಮಿಯ ಒಂದು ಅಳತೆ : ಪರಸುರಾಮದೇವರ್ಗ್ಗೆ ನಿವೇದ್ಯಕಂ ಒನ್ದು ನನ್ದಾದೀವಿಗೆಗಂ ಬಿಟ್ಟ ಭೂಮಿ ದೇವಡುವಿನ್ದ ಮೂಡಲು ಒನ್ದು ಬೇಲಿ (ಎಕ. III (R), ಪಂಜನ. ೩೨೨-೦೭: 1148); ಆ ಭೂಮಿಯೊಳಗೆ ಅಲ್ಲಿಯ ಮೂಲಸ್ಥಾನದೇವರಿಗೆ ಬಿಟ್ಟ ಮಣ್ಣು ಬೇಲಿಯೊಂದು (ಎಕ. III (R), ಗುಂಡ್ಲುಪೇ. ೯೭-೦೩; 1171). ೪. ಎಲ್ಲೆ; ಸೀಮೆ : ಕಾಡ ಬೇಲಿಯುಂ ಮಾರ್ಕಾಡನಱಿಯಲುಂ . . . ಪಡೆ ಮೆಚ್ಚೆ ನೀಂ ಬಲ್ಲೆ ನೀಂ ಮೆಚ್ಚೆ ಹರಿಗ ಕೇಳಾನೆ ಬಲ್ಲೆಂ (ಪಂಪಭಾ. ೫-೯೦). **ವೇಲಿ** : ೧. ಬಡಗಲು ವೇಲಿವಿದಿರುಂ ಈಶಾನ್ಯದೊಳ್ ಕಪಾಳೇಶ್ವರಂ ಕಲ್ಗೊಟ ಪೊಲದ ಸೀಮೆ (ಸೌಇಇ. IX-i, ೦೨೦-೯೯; 1057).

[ದೇ.॥ ತಮಿ. ಮಲ. ವೇಲಿ ; ತುಳು. ಬೇಲಿ; ಕೊಡ. ಬೆಲಿ; ತೆಲು. ವೆಲುಗು ; ಗೊಂಡಿ. ವೆಲ್ರುವ್]

**ಬೇಲಿಫ, ಬೇಲೀಫ** (ನಾ). ನ್ಯಾಯಾಸ್ಥಾನದ ಅನುಜ್ಞೆಗಳನ್ನು ಜಾರಿಗೆ ತರುವ, ಸ್ವತ್ತು ಜಪ್ತಿ ಮಾಡುವ, ತಕ್ಸೀರುದಾರನನ್ನು ಹಿಡಿಯುವ ಅಧಿಕಾರವುಳ್ಳ, ಜಮೀನುದಾರನ ಕಂದಾಯ ಮುಂತಾದುವುಗಳನ್ನು ವಸೂಲುಮಾಡುವ ಕೋರ್ಟಿನ ಅಮೀನ ; ಬೇಲಿಫರು ನಿನ ಚರ-ಸ್ಥಿರ ಆಸ್ತಿಗಳ ಜಪ್ತಿಯನ್ನು ಮಾಡಿಕೊಂಡು ಹೋಗುವಾಗ್ಗೆ ನೀನು ನಿನ್ನ ಮಾನಕ್ಕೆ ಹ್ಯಾಗೆ ಹೆದರುತ್ತಿದ್ದಿಲ್ಲ ? (ಬೋಚಿಹಿ. ೦೩೦). **ಬೇಲೀಫ** : ಬೇಲೀಫ ತಲೆಬಾಗಿಲಿಗೆ ಬಂದು ನಿಂತಾಗ ಗಂಡ ಘಾಬರ್ಯಾಗಿ ಕೂತ (ಗಂಪಜಾಯ. ೯೮); ನಾಲ್ಕಾರುಜನ ಬೇಲೀಫರು ಆತನ ಹಾದಿಯನ್ನು ನೋಡುತ್ತ ನಿಂತಿದ್ದರು (ಜೀವಶ್ರ. ೦೭). [← ಇಂ. Bailiff]

**ಬೇಲಿಯಿಕ್ಕು** (ಕ್ರಿ). ಹೊಲ, ತೋಟ ಮೊದಲಾದುವುಗಳಿಗೆ ಪೊದೆ, ಮುಳ್ಳು ಮುಂತಾದುವುಗಳ ಆವರಣವನ್ನು ಹಾಕು; ಬೇಲಿ ಹಾಕು : ಕೆಯ್ಯಿಲ್ಲದೆ ಬೇಲಿಯಿಕ್ಕುವೆನೆಂಬ ಬಾಗಿಲಿಲ್ಲದೆ ಪೊಗುವೆನೆಂಬ . . . ಪಕ್ಷಿಪಸಿಯೆಗ್ಗನಂ ಪೋಲ್ಕುಂ (ಧರ್ಮಾಮೃ. ೦-೬೭). [ಬೇಲಿ + ಇಕ್ಕು]

**ಬೇಲಿವಳ್ಳಿ** (ನಾ). ಸುತ್ತಲೂ ಬೇಲಿಯಿರುವ ಚಿಕ್ಕಹಳ್ಳಿ : ಡಿಳ್ಳಿಯ ಕೊಳ್ಳಿಗೊಂಡೆವೆಮಗಿಲ್ಲಿದಿರೆಲ್ಲಿಯುಮೆಂದು ಬಂದೆವೀ ಕಳ್ಳಿಯ ಬೇಲಿವಳ್ಳಿಯೊಳಗಳ್ಳಿಱಿದಾಡುತೆ ಜಳ್ಳುವೋದೆವು (ಅಶ್ವಶಾ. ೦೯-೦೦). [ಬೇಲಿ + ಪಳ್ಳಿ$_1$]

**ಬೇಲಿವೀಡು** (ನಾ). ಬೇಲಿಯಿರುವ ಸ್ಥಳ : ಬೇಲಿವೀಡಂ ಪೋಲ್ತು ಸವಿಾಪವರ್ತಿಗಳಾಗಿ ಪೊರ್ದಿಯೋಲಗಿಸುವರ್ ಪಾರಿಷತ್ಯಯಸುರರು (ಜಗಾರ. ೦೫೮). [ಬೇಲಿ + ಬೀಡು$_2$]

**ಬೇಲಿಸೌತೆ** (ನಾ). ಬೇಲಿಯ ಮೇಲೆ ಹಬ್ಬುವ ಒಂದು ಬಗೆಯ ಸೌತೆ ಬಳ್ಳಿ ಮತ್ತು ಅದರ ಕಾಯಿ : "ಮೃಗೋರ್ವಾರು: – ಬೇಲಿಸೌತೆ" (೬೭೦. ೦೨೮); "ಮೃಗಾದಿನೀ–ಹಾವುಮೆಕ್ಕೆ, ಬೇಲಿಸೌತೆ" (೬೭೦. ೦೨೮). [ಬೇಲಿ + ಸೌತೆ (< ಸವುತೆ)]

**ಬೇಲೀಫ** 'ಬೇಲಿಫ' ನೋ.

**ಬೇಲು$_1$** (ನಾ). ಕಟ್ಟು ; ಹೊರೆ ; ಪಿಂಡಿ : ಯಾವುದೋ ರೈಲ್ವೇ ರಶೀದಿ ತೆಗೆದುಕೊಂಡು ಕಾಗದದ 'ಬೇಲು' ಗಳನ್ನು ತರಲು ರೈಲ್ವೇಸ್ಟೇಷನ್ನಿಗೆ ಹೋಗಿದ್ದರೆಂದು ತಿಳಿಯಿತು (ಅವಶಂ. ೦೫೩). [← ಇಂ. Bale]

**ಬೇಲು$_2$** (ನಾ). ಚಿತ್ರಗಳ ಸುತ್ತ ಇರುವ ಅಲಂಕಾರಪಟ್ಟಿಕೆ (?) : ರುಪ್ಯದಲಿ ತಿದ್ದಿದ ಲೋಟಿಗಳು ರಜತದಲಿ ಮಾಡಿದ ಹಂಸೆಗಳು ಕಂಸವು ಗಳಿಂದಲೊಪ್ಪುವ ಬೇಲುಗಳು (ಕಶಂ. ೬೬೪) : ಗೂಡುಗಳಿಗೆ ಬುಡದಿಂದ ಆನೆ, ರಾವುತರು, ಗೋಪುರಗಳುಳ್ಳ ಕಂಬಗಳು, ಬೋದಿಗೆಗಳುಳ್ಳ ಬೇಲು ಈ ರೀತಿಯಾಗಿ ಚಿತ್ರದ ಸಾಲುಗಳಿವೆ (ವ್ಯವಾಸ್ತು. ೦೦೦). [?]

**ಬೇಲೂರ** (ನಾ). ಒಬ್ಬಾತನ ಹೆಸರು : ಸ್ವಸ್ತಿಶ್ರೀ ಬೇಲೂರರಾ ಮಗ ಮಾಘ × × × ಸತ್ತನ್ (ಎಕ.X, ತಂತಾಮ. ೦೬೮-೦; ಸು. 900 ?). [?]

**ಬೇಲೆ** (ನಾ). (ಸಮುದ್ರದ) ತೀರ ; ದಡ : ಪಡುವಲು ಸಮುದ್ರದ ಬೇಲೆ ಬಡಗಲು ಆ ಗದ್ದೆ ಹಿತ್ತಿಲು ಇಂತೀ ನಾಲ್ಕು ಗಡಿ (ಕಇ. I, ೫೪-೦೦ ; 1433). [< ಸಂ. ವೇಲಾ]

**ಬೇವ್‌ಕೂಫ್** 'ಬೇಕೂಫ್' ನೋ.

**ಬೇವ** 'ಬೇ$_1$' ಪರಾ.

**ಬೇವರ್ಸಿ** 'ಬೇವಾರ್ಸಿ' ನೋ.

**ಬೇವಸ** (ನಾ). ೧. ಚಿಂತೆ ; ದುಮ್ಮಾನ ; ಉಮ್ಮಳ : "ಬೇವಸಂ, ದುಮ್ಮಾನಂ, ಉಮ್ಮಳಂ—ಈ ೩ ಚಿಂತೆ" (ಕಶಾ. ೩೬–೨೨೭) ; ತನಗಿನಿತಱ ಬೇವಸಮೇಂ ಕವರ್ದವರುಮೊಳರೆ ಕವಿಯಲ್ಲದರಂ (ಕವಿರಾ. ೦–೧೨) ; ಮತ್ತಾ ಗ್ರಗ್ನನ್ನ ಕಥಾವಳಿಯೊಲ್ಲಮಂ ಬಗೆದು ನೋವೆನಗಾದುದು ನೋವಂ ತಂತೆನಗಾವುದು ಬೇವಸಂ (ಆದಿಪು. ೩-೩೩) ; ಏಱಿದನು ಬೇವಸದ ಬೇಳಂಬದಲಿ ಬೇಸಱುತವನ ಮಣಿರಥವ (ಕೀರರಾ. ೩-೭-೫೦). ೨. ಅತಿಯಾದ ಇಚ್ಛೆ ; ಉತ್ಕಟವಾದ ಬಯಕೆ : ಆಪ ಕಾರ್ಯವು ಎನಗಿಲ್ಲ ನಿಮ್ಮನು ಕಾಣ್ಬ ಬೇವಸದಿಂ ಬಂದೆನು (ಅಂತತ. ೯-೦೫). [< ಬೇ$_1$./ತದ್ಭ. ವೇಪಪ್]

**ಬೇವಸಂಗೊಳ್**, ಬೇವಸಗೊಳ್, ಬೇವಸಗೊಳು (ಕ್ರಿ). ಚಿಂತೆಯನ್ನು ಹೊಂದು ; ದುಮ್ಮಾನಗೊಳ್ಳು : ಅನೇಕಕಾಲಂ ವೃದ್ಧೋರಗನಾ ದರ್ದುರಂಗಳಂ ಪೊತ್ತು ತಿರುಗಿ ಬೇವಸಂಗೊಂಡೊಂದುದಿವಸಂ ತನ್ನಿರ್ದ ಪುತ್ತಿಂಗೆ ಪರ್ಪುದಂ (ಕಂತತಂ. ೭೦-೦೮). **ಬೇವಸಗೊಳ್** : ಭೂತಳದ ಪೊಕ್ಕದಱಕೋಳಿರ್ದ ಮಾನುಷ್ಯಸಂಘಾತಮಮಂ ಕಂಡು ಬೇವಸಗೊಂಡು ತಿರುಗಿದೆಂ (ಜಿನೇಕು. ೦-೯೯). **ಬೇವಸಗೊಳು** : ತಳವಳಗೊಂಬ ಪೌರರು ಬಲುಬೇವಸಗೊಳುವ ಬಂಧುಗಳು . . . ತೀವಿದುದಾ ಪೊಳಲೊಳಗೆ (ಶ್ರೀಜಾಂ. ೯-೨೫) ; ಪಿಂದು ಮುಂದನಾರಯ್ಯದೆ ಜಿದೆಱ ಬೇವಸಗೊಳದ ಮುಂದು ಪರಿದಿನಿಯನೊಳು ಮೋಹವಷದು (ನೀತಿನೋ. ೦೯-೯). [ಬೇವಸ + ಕೊಳ್$_1$]

**ಬೇವಸಂಬಡಿಸು** (ಕ್ರಿ). ವ್ಯಥೆಗೊಳಿಸು ; ದುಃಖಪಡಿಸು : ಜಿನಜಿಷ್ಣಿ ಬೇವಸಂಬಡಿಸಿ ಬೆಂಬಿಡದೆಯ್ದೆ ವಿಡಂಬಿಸುತ್ತ ಸುತ್ತಿನ ಭವಪಾಶದಮಂ ಪಱದು (ಎಂಕ೯. XVI ೬೬೬೮). [ಬೇವಸಂಬಡು + —ಇಸು$_1$]

**ಬೇವಸಂಬಡು** (ಕ್ರಿ). ದುಃಖವನ್ನು ಹೊಂದು ; ತಳಮಳಗೊಳ್ಳು : ಪ್ರಚಂಡಕಿರಣಾತಪಸಹಸ್ರಂಗಳುಮಂ ಸೈರಿಸುವ ಸರಸಿಜಂಗಳುಮಾಕೆಯು ಮೆಯ್ ಸೋಂಕಿದನಿತಱೊಳೆ ಕಱಂಗಿ ಕರಿಮುಪ್ಪೆ ವದುಕಾರಣದಿನಕಾರಣ ದಾರುಣನಪ್ಪ ಮನ್ಮಥನಿನೆಡೆವಿಡದೆ ಬೇವಸಂಬಡುತಿರ್ದಳ್ (ಕಾದಂಬ. ೩೭೯). [ಬೇವಸ + ಪಡು$_1$]

**ಬೇವಸಂಬಡೆ**, ಬೇವಸವಡೆ (ಕ್ರಿ). = ಬೇವಸಂಬಡು : ಅಲರ್ಗೊಂಚಲಂ ಚಂಚರೀಕಶಾಬಕಂ ಕಾಣದುದ್ವೇಕಿಕ್ಕೆ ಬಯಲೊಳಿಱಿಗಿ ಬಱಿದೆ ಬೇವಸಂಬಡೆಯೆಯುಂ (ಪರ್ಪು. ೬-೪೪ ೮) ; ಬೇವಸಂಬಡೆದು ಕಂಗೆಡುತೆ ಮುಂದೇಗೈಯಲೆಂದೆಣಿಸುತಿರಲು (ಕವಿಶಾ. ೪೬-೩). **ಬೇವಸವಡೆ** : ರಸಿಕಶಿರೋಮಣಿಯಿಾತಂ . . . ತಾನಸುಮಂ ಬಿಟ್ಟುದರಿಂ ಬೇವಸವಡೆ ಯುದಱಾರ್ಗುಣಜ್ಞರಾಗಿಪ ವಿಬುಧರ್ (ಕಾವ್ಯಾಂತ. ೨೨ ಅಧ್ಯಾಯಗಳು). [ಬೇವಸ + ಪಡೆ$_1$]

**ಬೇವಸಗೊಳ್** 'ಬೇವಸಂಗೊಳ್' ನೋ.

**ಬೇವಸಗೊಳಿಸು** (ಕ್ರಿ). = ಬೇವಸಂಬಡಿಸು : ಶಶಿಧರಂ ಜಂಗಮಾಕಾರದಿಂ ಬಂದು ಸಂತಸದೆ ಕಪ್ಪರವಿಟ್ಟನೃತ್ಯಮಂ ಮಾಡಿ ಬೇವಸಗೊಳಿಸಲ್ . . . ದಿಸುಪ ಕೊಳಿದೊಳ್ಳುಗಿ ಪೊಸಪರೆಯುಮಂ ತಾಳ್ದನಸವ ತಿರುನೀಲಕಂಠನೆನಿಪ್ಪ ಶರಣನು (ಶಾಕೋಪು. ೦೫-೯೭). [ಬೇವಸಗೊಳ್ (< ಬೇವಸಂಗೊಳ್) + —ಇಸು$_3$]

**ಬೇವಸಗೊಳು** 'ಬೇವಸಂಗೊಳ್' ನೋ.

**ಬೇವಸದಾಳು** (ಕ್ರಿ). = ಬೇವಸಂಬಡು : ಭೂವರವಾಸವ ಮುಸುಕಿತು ಬಲದೆಲ್ಲ ಬೇವಸದಾಳಿ ಸಜ್ಜನರು (ಶಿವಂಕಾ. ೫-೪೨). [ಬೇವಸ + ತಾಳು$_1$ (< ತಾಳ್$_1$)]

**ಬೇವಸವಡೆ** 'ಬೇವಸಂಬಡೆ' ನೋ.

**ಬೇವಾರಸಿ** 'ಬೇವಾರ್ಸಿ' ನೋ.

**ಬೇವಾರಸಿಮಾಲು**, ಬೇವಾರಸುಮಾಲು (ನಾ). ಒಡೆಯರಿಲ್ಲದ ವಸ್ತು ; ವಾರಸುದಾರರಿಲ್ಲದ ಪದಾರ್ಥ : ಬೇವಾರಸಿ (ಮಾಲು), ಅಸ್ವಾಮಿಕ (ವಸ್ತು) (waif. ಇಂಕಾ). **ಬೇವಾರಸುಮಾಲು:** (೧೨) ಬೇವಾರಸುಮಾಲಿನ ವಿಲೆವಾರಿ . . . (೧೫) ನಾದಾರುಕುಳಕ್ಕೆ ತಕಾವಿ ಕೊಡುವುದು (ಮಹಾಮಂ. II, ೫೮); ಹರೇಕೃಷ್ಣನ ಪಾತ್ರೆ ಪರಟೆ ಮೊದಲಾದವುಗಳನ್ನು ಬೇವಾರಸು ಮಾಲೆಂದು ವಶಪಡಿಸಿಕೊಂಡನು (ಸಂಕಮ. ೦೦೭). [ಬೇವಾರಸಿ (< ಬೇವಾರ್ಸಿ) + ಮಾಲು$_3$]

**ಬೇವಾರಸು** 'ಬೇವಾರ್ಸಿ' ನೋ.

**ಬೇವಾರಸುಮಾಲು** 'ಬೇವಾರಸಿಮಾಲು' ನೋ.

**ಬೇವಾರ್ಸಿ**, ಬೇವರ್ಸಿ, ಬೇವಾರಸಿ, ಬೇವಾರಸು (ಗು). ೧. ಯಾರೂ ದಿಕ್ಕಿಲ್ಲದ ; ವಾರಸುದಾರರಿಲ್ಲದ ; ಅನಾಥವಾದ : ಬೇವಾರ್ಸಿ ಹೆಣಕ್ಕೆ ರಣಹದ್ದು ಮುತ್ತಿದ ಹಾಗೆ (ಗಾಳಿಶ. ೨೮) ; ಬೇವಾರ್ಸಿ ಹೆಣದ ಹೊತರು (ಕೆಂಗೂಂ. ೫). (ನಾ). ೨. ಯಾರೂ ದಿಕ್ಕಿಲ್ಲದ ವ್ಯಕ್ತಿ ; ಅನಾಥ ವ್ಯಕ್ತಿ : ನಾನು ನಿನ್ನ ಬೇವಾರ್ಸಿಯಾಗಿ ಮಾಡಿದೆ! (ಮಹಕಹ. ೦೨) ; ನೀವು ಸಂಸಾರವಂದಿಗರು. ನನ್ನಂಥ ಬೇವಾರ್ಸಿಗಳಲ್ಲ (ಅನಾಕ. ೦೫೨). ೩. ಕೆಟ್ಟುದು, ಕೆಟ್ಟವ್ಯಕ್ತಿ ಎಂಬ ಹೀನಾರ್ಥದಲ್ಲಿ ಪ್ರಯೋಗವಾಗುವ ಒಂದು ಬಯ್ಗುಳು : ನಮ್ಮ ಪಾಡಿಗೆ ನಾವು ರಾಜ್ಯ ಆಳೋಕೆ ಬಿಡೋಲ್ಲ ಬೇವಾರ್ಸಿ (ವೈದ್ಯಪಿ. ೫೯); ಬೇವಾರ್ಸಿ . . . ಈ ಮನೆಗೆ ಕಾಲಿಟ್ಟರೆ ಜೋಕೆ (ಬಾಷ್ಪಲ್ಲಿ. ೨೬೦). **ಬೇವರ್ಸಿ** : ೨. ಸಂಬಳದ ಬಾಕಿ ಇಟ್ಕೊಂಡಿರೋವಲ್ಲೆ ಬೇವರ್ಸಿಗಳ ಹಾಗೂ ಪದ್ಮುನ್ನ ನೋಡೊ ಈ ಗುರುಸಿದ್ದೇಶ ನಾಟಕಮಂಡಲಿಗೆ ನಪೋರ್ನ್ನಮಹ (ಮಾಮಹ. ೨೫). **ಬೇವಾರಸಿ** : ೧. 'ಬೇವಾರಸಿಮಾಲು' ಪರಾ. **ಬೇವಾರಸು** : ೧. 'ಬೇವಾರಸು

ಮಾಲು ' ಪರಾ. ೨. ಹರೇಕೃಷ್ಣನು ಬೇವಾರಸು ಅಲ್ಲ, ಕಲ್ಕತ್ತೆಯಲ್ಲಿ ಅವನ ಮಗಳಿದ್ದಾಳೆ (ಶಿಂಕಶು. ೦೦೬).

[ ← ಮರಾ. ಬೇವಾರಶೀ. ಬೇವಾರಸಾ, ಬೇವಾರೀಸ್ ]

**ಬೇವಿಗೆ** (ನಾ). ಒಂದು ಊರಿನ ಹೆಸರು: ಶ್ರೀಬೇವಿಗೆ ಮುತ್ತರಸರ ಮಗನು ಪೊಳೆಯಮ್ಮನ್ನ ವಕರೀಲ್ಲನಾಳುತ್ತಮಿರ್ (ಎಕ. XI, ಚಳ್ಳ. ೩೩-೨೦ ; ಶಾ. 805). [?]

**ಬೇವು₁** (ನಾ). ಔಷಧೀಯಗುಣವುಳ್ಳ, ಕಹಿರುಚಿಯ ಎಲೆಗಳನ್ನು ಹೊಂದಿರುವ ಒಂದು ಬಗೆಯ ಮರ ; ನಿಂಬ ; ಅರಿಷ್ಟ : "ನಿಂಬ ಮರಿಷ್ಟಂ ಪಿಚುಮಂದಂ ಬೇವು" (ಪಸ್ತುಕೋ. ೩೯-೧೦); ಬೇವಿನ ಗೊಟ್ಟೆ ಯೊಳಿನಿದನರ್ಕನೊಳ್ ತಂಪು . . . ಅಜಿಸಿ ತೊಟಲುವಾತನೆ ಗಾಂಪಂ (ರವರ್ಣಿಪ್ಪು. ೩-೧೭೦) ; ಬೇವಂ ಮೆಚ್ಚಿದ ಕಾಗೆಗೆ ಮಾಪಿಚಿದಪ್ಪಂತೆ ಪತಿಯೊಳ್ ಟಿದಾಯ್ತು ಮನಂ (ಯಶೋಧ. ೨-೪೩); ಬೇವು ಕಾ ಪರಿಪಕ್ವವಾದರೆ ಹಾವುಮೆಕ್ಕೆಗೆ ಸಾಕ್ಷಿ (ಕುವ್ಯಾಆ. ೧೬-೧೩).

**ಬೇವಿನೆಣ್ಣೆ** = ಪಿಚುಮಂದದ ಬೀಜದಿಂದ ತೆಗೆಯಲಾದ (ಔಷಧಿಗೆ ಉಪಯೋಗಿಸುವ) ಎಣ್ಣೆ : ಕನಲ್ವ ಕೆಂಡದ ಮೇಲೆ ಪಟಿಯ ಬೇವಿನೆಣ್ಣೆಯೊಳ್ ತೊಯ್ದಿಕ್ಕಿದ ಬೆಳ್ಳುಳ್ಳಿಯ ಕಂಪಿನಂತೆ . . . ಬೇವ ಪೆಣಂಗಳ ಕ[ಂ]ಪು ನಾಱುವುದಕ್ಕೆ ಸೈರಿಸಲಾಱದೆ (ಶಂಕಥಾ. ೧೩-೬೦ ವ). **ಬೇವು ಇಳಿಸಿಕೊಳ್ಳು** = ದೇಹಕ್ಕೆ ಉಂಟಾಗಿರುವ ವಿಷಪೂರಿತವಾದ ರೋಗಗಳನ್ನು ಬೇವಿನಿಂದ ನಿವಾರಿಸಿಕೊಳ್ಳು ; P ಅರೆದ ಬೇವಿನ ಸೊಪ್ಪನ್ನು ನೀರಿನೊಡನೆ ಮಿಶ್ರಮಾಡಿ ದೇವರ ವಿಗ್ರಹವನ್ನು ಮಿಯಿಸಿ ರೋಗಪರಿಹಾರಕ್ಕೆಂದು ಆ ನೀರನ್ನು ಮೈಮೇಲೆ ಹಾಕಿಕೊಳ್ಳುವಿಕೆ, ಮೈಮೇಲೆ ದೇವರು ಬಂದಿರುವ ಸಮಯದಲ್ಲಿ ದೇವರನ್ನು ಶಾಂತಗೊಳಿಸಲೆಂದು ಬೇವಿನ ಸೊಪ್ಪಿನಿಂದ ನಿವಾಳಿಸುವಿಕೆ ಮುಂತಾದುವು ಕೆಲವು ದೇವಾಲಯದ ಸ್ಥಳಗಳಲ್ಲಿ ಇರುವ ನಂಬಿಕೆ ಮತ್ತು ಪದ್ಧತಿ : ಆ ನಾದದಲ್ಲಿ ಪೈಪುರೆತ ಅವರಿಗೆ . . . ಪಟ್ಟದ ಕಲ್ಲಿನ ಜನಸಮಾಜ ' ಬೇವು ' ಇಳಿಸಿಕೊಳ್ಳುತ್ತಿರುವ ಜೋಗತಿ ' ಯ ದನಿ ಕೇಳಿದಾಗಲೇ ಅವರಿಗೆ ಈ ಲೋಕದ ಸ್ಮೃತಿ ಬಂದುದು (ಬಪಸಿ. ೬೩). **ಬೇವು ಬೆಲ್ಲ** = ಬೇವು ಮತ್ತು ಬೆಲ್ಲ ; P ಬೇವಿನ ಹೂವು, ಚಿಗುರುಗಳನ್ನು ಬೆಲ್ಲದ ಜೊತೆಗೆ ಮಿಶ್ರ ಮಾಡಿ ಸೇವಿಸುವುದು ಯುಗಾದಿ ಹಬ್ಬದ ಒಂದು ಆಚರಣೆ. ಬೇವು ಮತ್ತು ಬೆಲ್ಲಗಳ ಕಹಿ ಸಿಹಿಗಳಂತೆ ಬದುಕಿನ ಸುಖ ದುಃಖಗಳಲ್ಲಿ - ಸಮಾನಭಾಗಿಗಳಾಗಬೇಕೆಂಬ ತತ್ತ್ವವನ್ನು ಈ ಆಚರಣೆ ತಿಳಿಸುತ್ತದೆಂಬ ನಂಬಿಕೆಯಿದೆ : ಬೆಳ್ಳಿತಟ್ಟೆಯಲ್ಲಿ ಬೇವುಬೆಲ್ಲ, ಮುಖಗಳ ಮೇಲೆ ಅದರ ಪ್ರಭಾವ, ಇವೆಲ್ಲ ಕಣ್ಣಿಗೆ ಕಟ್ಟಿದುವು (ಜಾಗಹೂ. ೪೩); ಬೇವು ಬೆಲ್ಲದ ಯುಗಾದಿಯ ಹಬ್ಬದ ಬಾಹ್ಯಾಚರಣೆಗಳಿವು (ಶಾಪದ್ಯ. ೬೦). [ ದ್ರಾ. ॥ ತಮಿ. ಮಲ. ವೇಮ್ಪು ; ತುಳು. ಬೇವು : ತೆಲು. ವೇಪ, ವೇಮು ; ಕೋತ. ವೆಪ್ ; ಕುವಿ. ವೇಪ ]

**ಬೇವು₂** ' ಬೇಹು ' ನೋ.

**ಬೇಶ್**, ಬೇಷ್, ಭೇಷ್ (ನಾ). ಲೇಸು, ಒಳಿತು, ಸರಿಯಾದುದು, ಒಳ್ಳೆಯದು ಎಂಬ ಅರ್ಥವನ್ನೊಳಗೊಂಡ ಒಂದು ಕೊಂಡಾಟದ ಮಾತು : ಅವನು ಎಲ್ಲರಿಂದಲೂ ಬೇಶ್ ಎನ್ನಿಸಿಕೊಳ್ಳಬೇಕೆಂಬ ಆಸೆಯಿಂದ ಈ ಸಾರಿ ಚೆನ್ನಾಗಿ ಓದುತ್ತಿದ್ದಾನೆ (ರೂಢಿ). **ಬೇಷ್** : ಆ ಚಿಕ್ಕ ಹುಡುಗಿ ಎಲ್ಲಾ ಉಪಾಧ್ಯಾಯರಿಂದಲೂ ಬೇಷ್ ಎನಿಸಿಕೊಂಡಿದ್ದಳು (ರೂಢಿ). **ಭೇಷ್** : ಹಿರಿಯರಿಂದಾಗಲಿ, ಶಿಕ್ಷಕರಿಂದಾಗಲಿ ಒಂದು ಬಾರಿಯಾದರೂ ಭೇಷ್ ಎನಿಸಿಕೊಂಡುದಿಲ್ಲ (ಅಂಹೂ. ೩೬); ಹುಡುಗರು ಗಳು ಚಪ್ಪಾಳೆಗಳನ್ನು ತಟ್ಟಿ . . . ಭೇಷ್ ಬಲದೇವ್ ಭೇಷ್" ಎಂದೂ ಕೂಗಿದರು (ಕಲಾಸಾ. ೪೩). [←ಪಾರ. ಮರಾ. ಬೇಶ್]

**ಬೇಷ್** ' ಬೇಶ್ ' ನೋ.

**ಬೇಸಗೆ**, ಬೇಸಿಗೆ, ವಯಿಸಾಖ, ವೈಶಾಗ (ನಾ). ೧. ಸೆಕೆಗಾಲ : ಬಿಸಿಲುಕಾಲ : "ನಿದಾಘಃ, ಗ್ರೀಷ್ಮಃ — ಈ ೨ ಬೇಸಗೆ" (ಹಲಾಯು. ೨೦-೦೦೬); ವಿದ್ಯೆಗಳಿಂದಮೆ ಬೇಸಗೆಯನೆ ಮುಟಿಗಾಲಂ ಮಾಡಿ . . . ಕೊಟಲಂ ಪೊಱಮಟ್ಟು (ವಡ್ಡಾರಾ. ೦೩೯-೩); ನರನಾರಾಯಣರಿರ್ವರುಂ . . . ಬೇಂಟೆಯನಾಡಿ ಬೞಲ್ದು ಬೇಸಗೆಯ ನಡುವಗಲೊಳ್ ವನಕ್ರೀಡೆಗಂ ಜಲಕ್ರೀಡೆಗಮಾಸಕ್ತರಾಗಿ ಯಮುನಾನದೀತಟನಿಕಟವರ್ತಿಗಳಾದರ್ (ಶಂಕಥಾ. ೩-೩೦ ವ). **ಬೇಸಿಗೆ** : ೧. ಜವನಿಕೆಯಾಗಳೋಸರಿಸೆ ಬೇಸಿಗೆಯಂತೆ ಪಯೋಧರಂ ನಭೋವಿಪಲವಾದೆಸ್ಟ ತೀವೆ. . .ನರ್ತಕಿ ನೀಡುಪೊಪ್ಪಿದಳ್ (ಶಾರ್ಙ್ಗಪು. ೧೨-೨೯) ; ಉಗುಬ್ದುದು ಕೆಂಗಿಡಿಯುಂ ಬೇಸಿಗೆ ಬಿಸಿಪೊಯ್ದು ನರ್ಕ ಮಣಿಗಣಮಾಗಳ್ (ಕಾವ್ಯಸಿ. ೯-೮೩) : ಧ್ವನಿಯು ಸಣ್ಣದಾಗಿತ್ತು . . . ಬೇಸಿಗೆಯ ನದಿಯಂತೆ ಕೃಶವಾಗಿದ್ದರೂ ನಿರ್ಮಲವಾಗಿತ್ತು (ಮುಶಾಂ. ೧೮). **ವಯಿಸಾಖ** : ೨. ಒಂದು ತಿಂಗಳಿನ ಹೆಸರು : ವೈಶಾಖಮಾಸ : ಸಕವರುಷ ೧೨೯೦ನೆಯ ಕೀಲಕಸಂವತ್ಸರದ ವಯಿಸಾಖ ಬ ೩೦ ಸೋಮವಾರ . . . ದೇವರ ಪ್ರತಿಷ್ಠೆಯನೂ ಮಾಡಿ ( ಪ್ಯಅ. ೧೯೨೯, ೦೦೬-೦೦ ; 1368). **ವೈಶಾಗ** : ೧. ಏಕಾರಕ್ಕೆ ಗಕಾರು_ಮುಖ—ಮೊಗ; ವೈಶಾಖ–ವೈಶಾಗ (ಶಮದ. ೨೩೬ ಪ್ರಯೋ).

**ಬೆಟ್ಟವೇಸಗೆ, ಬೆಟ್ಟಬೇಸಗೆ** = ೧. ತೀಕ್ಷ್ಣವಾದ ಸೆಕೆಗಾಲ ; ಉಗ್ರವಾದ ಬೇಸಗೆ : ಬೆಟ್ಟವೇಸಗೆಯ ಬಿಸಿಲ್ಗೆ ತೀಡಿದುದು ತಣ್ಣನೆ ಪಣ್ಣನೆ ಪಕ್ಷಿಮಾಳು (ಶಂಲಾಪು. ೬-೦೩೯) ; ಒದವಿದ ಬೆಟ್ಟವೇಸಗೆಯ ಕರ್ಮಿಸಿಲವರ್ನೆ ಬೆರ್ಚಿ ವಾಯುವೇಜಿದ ಪರಿಣಂ ನಮುತ್ತುಲ್ತದಿ ನಿಂದುಪಬಿಟುವ ನೋಡಿ ಪೊಕ್ಕು . . . ನೆಲಸಿರ್ದುದು (ಚಂದ್ರಪ್ರ. ೯-೬೬); ಕಾನನಮುರಿದುದು ರವಿಕಾಂತಾನಳನಿಂ ನಗದ ಶಿಖರಮೊಡೆದುದು . . . ಬೆಟ್ಟಬೇಸಗೆ ಬಿಸಿಲೊಳ್ (ಸುಕುಸು. ೦೦-೯೯). ೨. ಸೆಕೆಗಾಲದ ಅತಿಯಾದ ತಾಪ : ಬೆಟ್ಟದೊಂದುರಿಗಳ ಬೆಟ್ಟಬೇಸಗೆ ಸುರಾಗರಸಂಗಳ ಕಾರಮುಂಬು ತತ್ಪುರವರದಲ್ಲಿ ಸಾತ್ವಿಕದ ವ್ಯಸನಡುಂಗಳ ಮಾಗಿಮೂಗಳುಂ (ಅರ್ಜವೇ. ೦-೬೮).

[<ಸಂ. ವೈಶಾಖ. / ತುಳು. ಬೇಸಿಗೆ; ತೆಲು. ವೇಸಂಗಿ, ವೇಸಗಿ]

**ಬೇಸಗೆಗಾಲ**, ಬೇಸಿಗೆಕಾಲ (ನಾ). ಸೆಕೆಯ ಕಾಲ ; ಗ್ರೀಷ್ಮಋತು : ನೀರಸವಾಗೆ ಬಳ್ಳಿ ಗಿಡು ಪೆರ್ಮರಗಳ್ ಕರಯಂತ್ರನಾಳದಿಂ ಘೋರಸಮಲ್ಲಮುಂ ತೆಗೆಯೆ ಭಾನು . . . ಬಂದುದು ಬೇಸಗೆಗಾಲಂ (ಶಂಲಾಪು. ೬-೮೩); ಬೇಸಗೆಗಾ[ಪಾಠಾಂ. ಕಾ]ಲದೆಂಬುಬಳೆ ಬೆಟ್ಟಗಳೆಂಬೊಲೆಗಲ್ಗಳಲ್ಲಿ . . . ದೋಸೆಯನಟ್ಟವೋಲ್ ಮಳಲರಾಶಿಗಳೊಪ್ಪಮನಾಳ್ದುವು (ಪಾರಪು. ೯-೬೮); ಭರದ ಬೇಸಗೆಗಾ[ಪಾಠಾಂ. ಕಾ]ಲದೊಳಗಲುಮರನ ವಿಪಿನದೊಳಿದ್ದ ವೈಶ್ವಾನರನವೊಲು ಕೋಪದಲಿ ಕಿಡಿಕಿಡಿಯೋಗಿ ಕಲಿಹನುಮ ಧರೆಗೆ ಧುಮ್ಮಿಕ್ಕಿದನು (ತೊರರಾ. ೩-೬-೧೨). **ಬೇಸಿಗೆಕಾಲ** : ಕಳೆದ ಸಲದ ಬೇಸಿಗೆಕಾಲ ಬಹಳ ತಾಪದಿಂದ ಕೂಡಿತ್ತು (ರೂಢಿ).

[ ಬೇಸಗೆ + ಕಾಲ ]

**ಬೇಸಗೆರಜ**, ಬೇಸಿಗೆರಜ, ಬೇಸಿಗೆರಜೆ (ನಾ). ಶಾಲೆ, ಕಾಲೇಜು ಮೊದಲಾದುವುಗಳಿಗೆ ಸೆಕೆಗಾಲದಲ್ಲಿ ಕೊಡುವ ಬಿಡುವು. — **ರಜೆ** : ಕಂಡನು ಹಿರಿಯರನೊಮ್ಮೆ ನಾ ಮೊದಲಿಗೆ ಹೋದಾಗ ಬೇಸಗೆರಜಕೆ (ಇಂಶಾಕ. ೦೬-೩೯). **ಬೇಸಿಗೆರಜ** : ಈಗ ಶಾಲೆಗಳಿಗೆ ಬೇಸಿಗೆರಜ ಬಂದಿದೆ (ರೂಢಿ). **ಬೇಸಿಗೆರಜೆ** : ಅವನು. . . ವರುಷಕ್ಕೆ ಒಂದು ಸಾರಿ ಬೇಸಿಗೆರಜೆಗೆ ಮನೆಗೆ ಬರುತ್ತಿದ್ದ (ಗಂಪಾ. ೬೨). [ ಬೇಸಗೆ + ರಜ₂ ( < ರಜಾ) ]

**ಬೇಸತ್ತ** ' ಬೇಸಱು₁ ' ಪರಾ.

**ಬೇಸತ್ತು** ' ಬೇಸಱು₁ ' ಪರಾ.

**ಬೇಸನ್,** ಬೇಸಿನ್ (ನಾ). ಕಡಲೆಯ ಹಿಟ್ಟು. **ಬೇಸಿನ್.**

**ಬೇಸನ್ ಉಂಡೆ** = ಕಡಲೆಹಿಟ್ಟಿನಿಂದ ಮಾಡುವ ಒಂದು ಬಗೆಯ ಸಿಹಿ ತಿಂಡಿ,–ಉಂಡೆ : ಮೆಲ್ಲನೆ ಒಂದೆರಡು ಬೇಸನ್ ಉಂಡೆಗಳನ್ನು ಎತ್ತಿಕೊಂಡು ಬಾಯಾಡಿಸಿದರೆ ಯಾರಿಗೂ ಕಾಣುವಂತಿರಲಿಲ್ಲ (ಕೈಶಿ. ೧೧). **ಬೇಸನ್‌ಲಾಡು, ಬೇಸಿನ್ ಲಾಡು** = ಬೇಸನ್‌ಉಂಡೆ : ಏನು ಕೊಡಲಿ ಸಾರ್. ಜಾಮೂನ್, ಜಲೇಬಿ, ದಂರೋಟ್, ಬಾದಾಮಿಹಲ್ವ, ಬೇಸನ್ ಲಾಡು (ಕುಹಾಂ. ೯೬); ಅವನ ಹೆಂಡತಿ ಮಾಡಿಕೊಟ್ಟಿದ್ದ ತೇಂಗೊಳಲು, ಚಕ್ಕುಲಿ ಮತ್ತು ಬೇಸಿನ್‌ಲಾಡುಗಳು ಅದರಲ್ಲಿದ್ದುವು (ರಂಗಳ. ೬೦).

[←ಹಿಂ. ಮರಾ. ಬೇಸನ್]

**ಬೇಸರ** 'ಬೇಸಱು$_2$' ನೋ.

**ಬೇಸರಗೊಳಿಸು** (ಕ್ರಿ). ಬೇಜಾರುಹೊಂದುವಂತೆ ಮಾಡು ; ಜುಗುಪ್ಸೆಯನ್ನು ಹುಟ್ಟಿಸು : ನಿಮ್ಮನ್ನು ಬೇಸರಗೊಳಿಸುವಂತೆ ಉಪನ್ಯಾಸ ಮಾಡುವ ಅಭ್ಯಾಸವು ನನಗೆ ಇಲ್ಲವೇ ಇಲ್ಲವೆಂದು ಎದೆ ತಟ್ಟಿ ಹೇಳುತ್ತೇನೆ (ರಾಯುಳ. ೯೭).

[ಬೇಸರ (<ಬೇಸಱು$_2$)+ಕೊಳ್$_1$ +— ಇಸು$_3$]

**ಬೇಸರಗೊಳ್ಳು** 'ಬೇಸಱುಗೊಳ್' ನೋ.

**ಬೇಸರಿ,** ಬೇಸ್ರಿ (ನಾ). ಹೆಂಗಸರು ಮೂಗಿನಲ್ಲಿ ಧರಿಸುವ, ಅನೇಕ ಹರಳುಗಳುಳ್ಳ ಒಂದು ಬಗೆಯ ಆಭರಣ : ಕಿವಿಯ ಓಲೆ ಮೂಗಿನ ಬೇಸರಿಯನ್ನು ಬಿಟ್ಟರೆ ಮೈಮೇಲೆ ಬೆಲೆ ಬಾಳುವ ಯಾವ ಒಡವೆಯೂ ಇರಲಿಲ್ಲ (ರಹುಗ್ರಿ. ೫೯) ; ಮೂರುಹರಳಿನ ಬೇಸರಿ ಫಣಕ್, ಫಣಕ್ ಎಂದು ಮಿನುಗುತ್ತಿತ್ತು. ಅವಳ ನಾಸಿಕದಲ್ಲಿ (ಕುಣಾಪ. ೧೫). **ಬೇಸ್ರಿ:** ಎಳಸಾದ ಮೂಗಿಗೆ ಒಪ್ಪೋಂಥ ಸೀಮೆಕಮಲದ ಬೇಸ್ರಿ (ಶಾಗಿಪ. ೦).

[←ಹಿಂ. ಮರಾ. ಬೇಸರ್. / ತಮಿ. ವೇಚರಿ ; ತೆಲು. ಬೇಸರಿ]

**ಬೇಸರಿಕೆ** 'ಬೇಸಱಿಕೆ' ನೋ.

**ಬೇಸರಿಸು** 'ಬೇಸಱಿಸು' ನೋ.

**ಬೇಸರು$_1$** 'ಬೇಸಱು$_1$' ನೋ.

**ಬೇಸರು$_2$** 'ಬೇಸಱು$_2$' ನೋ.

**ಬೇಸರುಗೊಳ್ಳು** 'ಬೇಸಱುಗೊಳ್' ನೋ.

**ಬೇಸರ್ನುಡಿ** (ನಾ). ಬೇಜಾರಿನಿಂದ ಕೂಡಿದ ಅಥವಾ ಬೇಜಾರನ್ನು ತರುವ ಮಾತು,–ನುಡಿ : ರೇಫಕ್ಕೆ–ಕಿಸವರ್ಣಲ್ಲಿಗೆ, ನೇಸವರ್ಣಯಂಽ, ಬೇಸನ್ರ್ನುಡಿ (ಕಶುರ. ೧೮೩ ಪ್ರಯೋ); ಬೇಸಱ್+ನುಡಿ, ಬೇಸರ್ನುಡಿ (ಶಬ್ದಾಮ. ೬೨ ಪ್ರಯೋ). [ಬೇಸಱ್ (<ಬೇಸಱು$_2$) +ನುಡಿ$_2$]

**ಬೇಸಱ್** (ಸಪೂರೂ). 'ಬೇಸಱು' ಎಂಬುದಕ್ಕೆ ಸಮಾಸಗಳಲ್ಲಿ ಬರುವ ಆದೇಶರೂಪ : 'ಬೇಸರ್ನುಡಿ' ಪರಾ. [<ಬೇಸಱು$_2$]

**ಬೇಸಱ** 'ಬೇಸಱು$_2$' ನೋ.

**ಬೇಸಱಿಕೆ,** ಬೇಸರಿಕೆ (ನಾ). ಆಸಕ್ತಿಯಿಲ್ಲದಿರುವಿಕೆ ; ಜುಗುಪ್ಸೆ ; ಬೇಜಾರು : ಎನ್ನ ಚಿತ್ತದ ಬೇಸಱಿಕೆ ಬಯಲಾಯ್ತು (ಕುವ್ಯಾಲ. ೪–೩೯); ದೇವಾರ್ಚನೆಯ ಮಾಡಿದೆನಿನ್ನು ಸಾಕೆಂದೆನುತ ಬೇಸಱಿಕೆಯಲಿ ನುಡಿದಳು ವಿಮಳೆಗಾ ಮಾಯೆ (ಪ್ರಭುಲೀ. ೭–೦೯) ; ಘಾಸಿಯಾದರು ಬಂದ ಬಟ್ಟೆಯ ವೈಸಿರಿಯ ಪಥವಱಿಯದಗ್ಗದ ಬೇಸಱಿಕೆಯಲಿ (ತೊರರಾ. ೪–೧೧–೨೪). **ಬೇಸರಿಕೆ :** ಮುಂರ್ಛಾವದಿಂದ ಕೆಲಸಮಾಡಿ ಬೇಸರಿಕೆ ಮತ್ತು ಆಯಾಸದಿಂದ ಮನೆಗೆ ಹೊರಡಲುದ್ದೇಶಿಸಿ . . . ಗ್ರಾಮಾಭಿಮುಖವಾಗುವುದು ಸಹಜ (ಭೂಮಿಂ. ೨೯) ; ಹಾಳುಸುರಿಯುತ್ತಿದ್ದ ಬೇಸರಿಕೆಯನ್ನು ನೀಗುವ ಸಲುವಾಗಿ ಯಾವುದಾದರೂ ಅಕ್ರಮಗಳು ನಡೆದಾವೆಯೆಂದು ಜಾಗರೂಕರಾಗಿದ್ದರು (ಕುಸರು. ೧೬೨).

[ಬೇಸಱು$_2$ + —ಇಕೆ ]

**ಬೇಸಱಿಸು,** ಬೇಸರಿಸು (ಕ್ರಿ). ೧. ಆಸಕ್ತಿಯನ್ನು ಕಳೆದುಕೊಳ್ಳು ; ಬೇಜಾರು ಪಟ್ಟುಕೊಳ್ಳು; ಬೇಸರಪಡು : ಧುರದ ಶಪಥದೊಳರ್ಜುನನ ಸಂಗರಕೆ ಬೇಸಱಿಸಿದ ಪರಾಕ್ರಮಪರಿಗತರು ಪವಡಿಸಿದರಂದು ಧನಂಜಯಾಸ್ತ್ರದಲಿ (ಕುವ್ಯಾಗ. ೨–೨೦) ; ಮೆಲ್ಲನೆ ಒತ್ತಿದಂತಾಯ್ತುವಗೆ ಕನವರಿಸುತ್ತ ಖಳ ಸುಖಸುಪ್ತನಾದನು ಸೇನೆ ಬೇಸಱಿಸೆ (ಕೌಶಿರಾ. ೨೪–೬). ೨. ಆಸಕ್ತಿಯನ್ನು ಕುಗ್ಗಿಸು ; ಜುಗುಪ್ಸೆಗೊಳ್ಳುವಂತೆ ಮಾಡು ; ಬೇಸರಪಡಿಸು : ಈತನ ಕಟಕಕ್ಕೆ ನಿತ್ಯಕ್ಷಯವ್ಯಯ ಪ್ರತ್ಯವಾಯಂಗಳಂ ಮಾಡಿ ಬೇಸಱಿಸಿ ನೆಲದಿಂ ತೆರಳ್ಚುವಂ (ಅಜಿಪು. ೧೩–೫೮ ವ) ; ಪಿರಿದುಂ ಬೇಸಱಿಸಿದುವು ಬರಯಿಯುಂ ಜಳದಂಗಳ್ (ಶಂಪ್ರಪು. ೪–೩೪). ೩. ದಣಿಯುವಂತೆ ಮಾಡು ; ಬಳಲಿಸು ; ಆಯಾಸಪಡಿಸು : ಬಱಸಿಡಿಲಾಗಿ ಪೊಯ್ವ . . . ಕಟ್ಟಲೆಯಾಗಿ ಮುತ್ತಿ ಬೇಸಱಿಸುವಗುರ್ವ ಪರ್ವಿ ಕವಿದರ್ದನುಜಾರಿಗತರ್ಕ್ಯವಿಕ್ರಮರ್ (ಅಪಂಪು. ೧೪–೯); ಬಿದ್ದವರನೊಡೆ ತುಳಿದು ಮೇಲುಬ್ಬಿದ್ದು ಕವಿಕವಿದಾಳು ಕುದುರೆಯ ಬಿದ್ದಿನಲಿ ಬೇಸಱಿಸಿದನು ಪಿತೃಪತಿಯ ಪರಿಜನವ (ಕುವ್ಯಾಕ. ೧೧–೩೮). **ಬೇಸರಿಸು :** ೧. ಸುಂದರರಾಯರು ಇನ್ನೂ ಮಲಗಿರುವುದಕ್ಕಾಗಿ ಬೇಸರಿಸಿಕೊಂಡು ತಾನೇನು ಮಾಡಲೂ ತೋರದೆ ಬಚ್ಚಲುಮನೆಗೆ ಹೊರಟಳು (ಬದುಕ್ಕ. ೯). ೪. ವ್ಯಸನಹೊಂದು ; ಕನಿಕರಪಡು : ನೀನು ಕ್ಷೀಣಿಸಿರುವುದನ್ನು ಕಂಡು ಬೇಸರಿಸುತ್ತಾರೆ (ಶತಂಗ. ೦೬). [ಬೇಸಱು$_1$ + —ಇಸು$_3$]

**ಬೇಸಱು$_1$,** ಬೇಸರು$_1$ (ಕ್ರಿ). ಬೇಸತ್ತ (ಭೂತಕೃ). ಬೇಸತ್ತು (ಭೂತನ್ಯೂ). ೧. ಬೇಜಾರುಪಡು; ಜುಗುಪ್ಸೆಯನ್ನು ಹೊಂದು; ಆಸಕ್ತಿಯನ್ನು ಕಳೆದುಕೊಳ್ಳು : ದೋಸಮಿನಿತೆಂದು ಬಗೆದುದ್ಭಾಸಿಸಿ ತಱಿಸಂದು ಕನ್ನಡಂಗಳೊಳೆಂದುಂ ವಾಸುಗಿಯುಮಱಿಯಲಾಱದೆ ಬೇಸಱುಗುಂ ದೇಶಿ ಬೇಱೆವೇಱಪ್ಪುದಱಿಂ (ಕಂರಾ. ೦–೪೬) ; ಅವರುಂ ತಮ್ಮ ಕಂಡುದಂ ಪೇಟ್ಟೊಡೆ ಬೇಸಱದೆ ದಿವಸಕ್ಕಂ ಚರಿಗೆವೊಗುವುದೆಂದು ಭಟ್ಟಾರರ್ ಕಲ್ಪಿಸಿದೊಡೆ (ಶಬ್ದಾರಾ. ೯೯–೧೧) ; ಲಲಿತಾಂಗಿಯ ಶಂಕೆಯುಂ ಭಯಂಬೆರಸಿದ ನಾಣುಮಂ ಕ್ರಮದೆ ಪಿಂಗಿಸು ಬೇಸಱದಿರ್ ಗುಣಾರ್ಣವಾ (ಪಂಪಭಾ. ೩–೭೭) : ಕೊಲೆಗೆ ಬೇಸಱರಿವರು ಸಾವುದಕಳುಕದವಧಿರು (ಕುವ್ಯಾಕ. ೪–೦೭). ೨. ಆಲಸ್ಯವನ್ನು ಹೊಂದು ; ದಣಿ ; ಬಳಲು : "ಬೇಸಱು – ಆಲಸ್ಯೇ" (ಕಶುಠ); ಏಬುದಿವಸಮುಂ ಬಿಡದಡವಿಗೆ ಬೇಂಟೆಯಾಡಲ್ ಪೋಗಿ ಒಂದು ಮೃಗಮಪ್ಪೊಡಂ ಸಮನಿಸದೆ ಬೇಸತ್ತುಬಲ್ದು ಪೊಟಲ್ಗೆವೋಗಿ (ಶಬ್ದಾರಾ. ೯೫–೨೫) ; ಕಲಹದೊಳು ಕರಿಘಟೆಯ ಹೊಯ್ ಹೊಯ್ದುಲಸಿ ಕೌರವನನುಜನನು ಮುಂಕೊಳಿಸಿಕೊಳ್ಳದೆ ಕಳುಹಿ ಬೇಸಱುತನಿಲಸುತ ಮಸಗಿ (ಕುವ್ಯಾಭೀ. ೫–೬). **ಬೇಸರು$_1$:** ೧. ಉರುತರಶ್ರಮದಿಂದ ನಿಶೆಯೊಳೀ ನಗರಿಯೊಳ್ ತಿರುತಿರುಗಿ ಬೇಸರದೆ ನೋಡಿ ನಿಷ್ಫಲವಾಯ್ತು (ವೆಂಕಾರಾ. ೫–೫–೪) ; ಆಪತ್ಸಮುದ್ರದಲ್ಲಿ ಮುಳುಗುತ್ತಿರುವ ಸ್ನೇಹಿತನಿಗೆ ಬೇಸರದೆ ಮತ್ತು ಮತ್ತು ವಿವೇಕವನ್ನು ಹೇಳುತ್ತ (ಕೃವಾಲು. ೨೨೨) ; ಈ ಮಗಳ ಮೂರ್ಖತನಕ್ಕೆ ನಾನು ಬೇಸತ್ತಿದ್ದೇನೆ (ಜರಿವಾವ್ಯಾ. ೦೩೯).

[ ದೇ.॥ ತಮಿ. ವೇಚಱು ; ತೆಲು. ವೇಸರು]

**ಬೇಸಱು$_2$,** ಬೇಸರ, ಬೇಸರು$_2$, ಬೇಸಱ (ನಾ). ೧. ಆಸಕ್ತಿಯಿಲ್ಲದಿರುವಿಕೆ ; ಬೇಜಾರು ; ಜುಗುಪ್ಸೆ : ಒಂದೆಡೆಯೊಳ್ . . . ಅಟ್ಟುವೆತ್ತ ಪೊಳೆವುಲ್ಲೆಯಾಳ್ಗೆಯಾದ ಮಾತಂ ತನ್ನ ಸೂಳೆಯ ಬೇಸಱಿಂ ಕೆಳೆಯಂಗಿಂತೆಂದಂ (ಆದಿಪು. ೧೨–೨೮ ವ); ನಿಮ್ಮಡಿಗಳಂ ಕಾಣದಿಪ್ಪ ಕಡುಬೇಸಱಿಂದಿರೆ ಹರಂ ಮಾಹೇಶ್ವರಜ್ವರವನಟ್ಟಿದಂ (ಪಂಬಿರ. ೧೭–೧೧೯); ಘನಸಂಗರಕೆ ಬೇಸಱು ತೋಱಿತೇ ತನ್ನಾಣೆ ಹೇಳು (ಕುವ್ಯಾದ್ರೋ. ೩–೬೩). ೨. ಆಯಾಸ ; ಬಳಲಿಕೆ ; ದಣಿವು : ಆ ಸುದತಿಯ ಮೃದುಪದವಿನ್ಯಾಸಮುಮಂ

ಶೇಷನಾಸಲಾಜದೆ ಸುಯ್ವಂ ಬೇಸಱಿಸೆಂದೊಡೆ ಗರ್ಭವ ಕೂಸಿನ ಬಳಿದಳವಿಯುಳವನಳಿವರುಮೊಳರೇ (ಶಂಕಥಾ. ೧-೧೨೬). **ಬೇಸರ** : ೧. ಪೊಲೆ ಪೊರ್ದ್ದಲ್ ಪೇಸಿ ಬೇಸರದಿವಳಿದ ಮಹೀಕಾಂತೆಯುಂ ರಕ್ಷಿಸಲ್ (ಎಕ. VII, ಶಿವಮೊ. ೫-೯ ; 1218) ; ಮಂಡಲಿಯಲ್ಲಿದ್ದವರಿಗೆಲ್ಲರಿಗೂ ಅವನನ್ನು ಕಂಡರೆ ಬೇಸರ (ಬಾಣಕ. ೩೦೬); ಮನೆಕೆಲಸವನ್ನು ಮಾಡುವುದಕ್ಕೆ ಅವಳಿಗೆ ಬೇಸರವಿಲ್ಲ (ಮುಹಾತ್ಮಾ. ೩೦). ೩. ವ್ಯಸನ ; ಕನಿಕರ : ಅವಳ ದೀನಸ್ಥಿತಿಯನ್ನು ಕಂಡು ತುಂಬ ಬೇಸರವಾಯಿತು (ಕೂಶಿ). **ಬೇಸರು$_2$**: ೧. ನಿಮಗೆ ಬೇಸರಾಗುವ ಕೆಲಸಾ ನಾವು ಹೇಳಲಾರೆವು (ಮುಂಬಯು. ೫-೦೩೪); ಈ ಜನರಿಗೆ ನೌಕರಿಯು ಬೇಸರಾಯಿತು (ಕ್ಷಾಂಬಿ. ೨೨೬) ; ಬೇಸರಿಗೆಂತ ಹೇಸರಕತ್ತೆ ಆಡಿಸಿದ (ಗಾದೆ). **ಬೇಸಱ** : ೧. ವನಜವದುಖಿ. . . ಸತಿಯರ ಮನ್ನಣೆಗೆ ಮೈಗೊಡಳು ಬಲುಬೇಸಱದಿ ಬಳಲುವಳು (ಕಳಕ. ೦-೩೮). 'ಬೇಜಾರು' ಪರಾ. [<ಬೇಸಱು$_1$. / ತುಳು. ಬೇಸರ್]

**ಬೇಸಱುಗೊಳ್**, ಬೇಸರಗೊಳ್ಳು, ಬೇಸರುಗೊಳ್ಳು (ಕ್ರಿ). ಆಸಕ್ತಿಯನ್ನು ಕಳೆದುಕೊಳ್ಳು; ಬೇಜಾರುಪಡು ; ಜುಗುಪ್ಸೆಯನ್ನು ಹೊಂದು: ಬೇಸಱುಗೊಂಬ ತತ್ಕ್ಷಪರಿಯ ಮನದೊಳಗಾಸಱು ಬಹಳ ವೆಗ್ಗಳಿಸಿ ಈಸಱುಂದಿನ್ನು ಕಾಡುವುದೊಳ್ಳಿತಲ್ಲೆಂದು ನೇಸಱು ತಲೆಯ ತೋಱಿಸಿತು (ಪೋಹಕ. ೨೭-೬೩). **ಬೇಸರಗೊಳ್ಳು** : ಅವಳು ಎಷ್ಟೇ ಪ್ರಯತ್ನಿಸಿದರೂ ಕೆಲಸ ಸಿಗಲಿಲ್ಲವೆಂದು ಬಹಳ ಬೇಸರಗೊಂಡಿದ್ದಳು (ಕೂಶಿ).**ಬೇಸರುಗೊಳ್ಳು**: ತನ್ನ ಉದ್ದೇಶವನ್ನು ಸಿದ್ಧಿಗೆ ಒಯ್ಯಬೇಕಾದರೆ ಎಷ್ಟೋ ಸಂಕಟಗಳು ತಟ್ಟಿದರೂ ಬೇಸರುಗೊಳ್ಳುತ್ತಿದ್ದಿಲ್ಲ (ಮುಂಬಯು. ೫-೨೦೬).

[ಬೇಸಱು$_2$ + ಕೊಳ್$_1$ ]

**ಬೇಸಱೆಯ್ದು** (ಕ್ರಿ). =ಬೇಸಱುಗೊಳ್: ಆ ರಾಜಸುತಂ. . . ಅಳವಳಿಸಂ ಬೆಬ್ಬಳಿಸಂ ಕಳವಳಿಸಂ . . . ಬೇಸಱೆಯ್ದಿ ಬಿಳ್ಕೊಗದಿನಿರಂ (ಅಶಪು. ೫-೯೦).

[ಬೇಸಱು$_2$ + ಎಯ್ದು]

**ಬೇಸಾಯ** 'ಬೆವಸಾಯ' ನೋ.

**ಬೇಸಾಯಗಾರ** (ನಾ). ವ್ಯವಸಾಯವನ್ನು ಮಾಡುವವನು : ರೈತ; **ಒಕ್ಕಲಿಗ** : ಅರಸುಕುಲದವನಿಗೆ ಬೇಸಾಯಗಾರನ ಹೆಣ್ಣನ್ನು ತರುವುದೇ? (ಹಾಕುತ್ತ. ೯೭); ಆ ಊರಿನ ಮುಳ್ಳಿನ ಮನೆಯೇ ತನ್ನ ಮೂರುಲೋಕಗಳೆಂದು ತಿಳಿದುಕೊಂಡಿದ್ದ ಕೊರಗು ಎಂಬ ಬೇಸಾಯಗಾರನಿದ್ದನು (ಗಾಂಖರ. ೮ ಕಥಾಸಾರ).

[ಬೇಸಾಯ (< ಬೆವಸಾಯ) +— ಗಾರ (<—ಕಾಱ)]

**ಬೇಸಿಗೆ** 'ಬೇಸಗೆ' ನೋ.

**ಬೇಸಿಗೆಕಾಲ** 'ಬೇಸಗೆಗಾಲ' ನೋ.

**ಬೇಸಿಗೆರಜ** 'ಬೇಸಗೆರಜ' ನೋ.

**ಬೇಸಿಗೆರಜೆ** 'ಬೇಸಗೆರಜ' ನೋ.

**ಬೇಸಿನ್** 'ಬೇಸನ್' ನೋ.

**ಬೇಸಿಸ್ತು** (ನಾ). ಶಿಸ್ತು ಇಲ್ಲದಿರುವಿಕೆ : ಬಹಳ ಬೇಸಿಸ್ತ ಮಾಡಿದಳವಾ ಇದೊಂದು ರುಕ್ಮಿಣಿಬಾಯಿ (ಪಮಾ. ೭೭). [←ಪಾರ. ಮರಾ. ಬೇಶಿಸ್ತ್]

**ಬೇಸು** 'ಬೇಯಿಸು' ನೋ.

**ಬೇಸುರ**, ಬೇಸೂರ, ಬೇಸೂರು (ನಾ). ೧. [ಸಂಗೀತ] ಅಪಸ್ವರ. ೨. (ಅಲಂ) ಅಸಂಬದ್ಧವಾದುದು : ಪ್ರಳಯ ಪೂರ್ವದ ರಾದ್ಧ ಸದ್ದಿಲ್ಲದೇ ಸಂಚು ಯುದ್ಧಬಡುಕರ ಶುದ್ಧಶಾಂತತಾ ಪಾದದೊಲು ಪರಿಣಾಮ ಬೇಸುರವಲಾ (ಸೂರ್ಯಪಾ. ೦೦೦-೦೦). **ಬೇಸೂರ** : ೧. ಬೇಸೂರ ಹಾಡಿಕೊಂತ ತೇಲಗಣ್ಣು, ಮೇಲಗಣ್ಣು ಹಾಕತಾವು (ಗ್ರಾಮಹು. ೦೧೩). **ಬೇಸೂರು** : ೧. ಬೆನ್ನು ಚಪ್ಪರಿಸಿದರೆ ಬೆಳತನಕ ಬೇಸೂರು ಹಾಡಬಲ್ಲ (ಕಿಂಪುು. ೨೮-೦೩). [←ಹಿಂ. ಬೇಸುರ್; ಮರಾ. ಬೇಸೂರ್]

**ಬೇಸುರಿ** (ನಾ). ತೀವ್ರವಾದ ತಾಪ : ಬೇಸುರಿ, ಬೇಸೋಡು (ಕಪ್ಪಾಮ. ೩೪೩ ಪ್ರಯೋ) ; ನಿಟ್ಟುಸಿರಿನ ಬೇಸುರಿಯಲಿ ಜೀವ ಮಿಡುಕುತಿರುವುದು (ಶಾರಂಗ. ೩೨-೭). [< ಬಿಸಿದು + ಉರಿ$_2$]

**ಬೇಸೂರ** 'ಬೇಸುರ' ನೋ.

**ಬೇಸೂರು** 'ಬೇಸುರ' ನೋ.

**ಬೇಸೋಡು** (ನಾ). ಬೆಚ್ಚಗಿರುವ ಕಾವಲಿ ; ಕಾಯ್ದ ಹೆಂಚು : ಬೇಸುರಿ, ಬೇಸೋಡು (ಕಪ್ಪಾಮ. ೩೪೩ ಪ್ರಯೋ).

[< ಬಿಸಿದು + ಓಡು$_2$]

**ಬೇಸ್ತು** (ನಾ). ೧. "ಒಂದು ತೆರದ ಇಸ್ಪೀಟಾಟ ; 'ಬೇಸ್ತು' ಆಟ" (Baste. ಇಂಕಖ). ೨. ಇಪ್ಪತ್ತೆಂಟರ ಇಸ್ಪೀಟಾಟದ ಮೂರು ಹಂತಗಳಲ್ಲಿ ಆಗುವ ಸೋಲು : ಇದು ಮೂರನೇ ಬೇಸ್ತು. ಕಡೆಯ ಆಟ (ಹಾಡಗೇ. ೦೦). ೩. (ಅಲಂ) ಮೋಸ : 'ಬೇಸ್ತುಬೀಳು' ಪರಾ.

[← ಇಂ. Baste]

**ಬೇಸ್ತುಬೀಳಿಸು** (ಕ್ರಿ). ಮೋಸಹೋಗುವಂತೆ ಮಾಡು ; ಪೆಚ್ಚುಬೀಳಿಸು : ಆದಕ್ಕೇ ಮತ್ತೆ ನಮ್ಮ ಮುಳ್ಳುಮುಖದ ಸಂಪತ್ತು ಅವರಿಗೆ ಹಾಗೆ ಬೇಸ್ತು ಬೀಳಿಸಿದ್ದು (ಅಂಹೂ. ೨೯).

[ಬೇಸ್ತುಬೀಳು + —ಇಸು$_3$]

**ಬೇಸ್ತುಬೀಳು** (ಕ್ರಿ). ಮೋಸಹೋಗು ; ಪೆಚ್ಚುಬೀಳು : 'ಬೇಸ್ತುಬಿದ್ದ' ಗಂಡನನ್ನು ಕಂಡು ಚಂಪಾವತಿಗೆ ಮೋಜೆನಿಸಿತು (ರಂಗಪ. ೨೬೬); ಎಂದೂ ತಂತ್ರಿಯವರು ಅಷ್ಟು ಬೇಸ್ತು ಬಿದ್ದಿರಲಿಲ್ಲ (ಕನ್ನಸ. ೨೫೪).

[ಬೇಸ್ತು + ಬೀಳ್$_1$ (< ಬೀೞ್$_1$) ]

**ಬೇಸ್ರಿ** 'ಬೇಸರಿ' ನೋ.

**ಬೇಹ** 'ಬೇಡ್ಕು$_1$' ಪರಾ.

**ಬೇಹಕ್ಕುದಾರ** (ನಾ). ಹಕ್ಕುಬಾಧ್ಯತೆಗಳಿಲ್ಲದವನು ; ಹಕ್ಕುದಾರನಲ್ಲದವನು : ಇಂತಹ ಬೇಹಕ್ಕುದಾರರಿಂದ ಪಟೇಲರು ಶಾನುಭೋಗರುಗಳು ಕಂದಾಯದ ಹಣಗಳನ್ನು ತೆಗೆದುಕೊಳ್ಳಕೂಡದು (ಗ್ರಾಮಖ. ೬೯).

[← ಅರ. ಬೇಹಕ್‌ದಾರ್]

**ಬೇಹಣ** (ನಾ). ಬೇಯುವಿಕೆ ; ಬೆಂಗುಹೋಗುವಿಕೆ : ಲೋಹಕುಂಭದೊಳೆಣ್ಣೆಯಂ ಪೊಯ್ದು ಪಾಪಿಗಳನೋಹೋ ತುಂಬುತ್ತ ಮುಚ್ಚಳವನಿಟ್ಟೆಲಿಗಿಚ್ಚನಾ ಹದಂತಪ್ಪದಂದದೆ ಬೆಳಗಿ ಬೇಯಿಸಲು ನೂಱುಸಾವಿರ ವತ್ಸರಂ ಬೇಹಣಲ್ಲದೆ ಸಾಯಲಿಲ್ಲ (ಬೀಶೈಪು. ೪-೦೯-೪೦).

[< ಬೇ$_1$ + — ಅಣ]

**ಬೇಹಣಗಾಣ** (ನಾ). ಗಾಯಂಕರಲ್ಲಿ ಒಂದು ವರ್ಗ (?) : ಆರಯ್ದು ಕೊಟ್ಟ ಶ್ರುತಿಯ ಹವಣಂ ತೊಟ್ಟು ಕೈಕೊಂಡೆಡಬಲನ ಬೇಹಣಗಾಣರ್ ಮಿನುಕಸಿವ ಮಿಸುನಿಯುಂ ಸರಿಗೆದೆಗೆವಂತೆ ಮಱಿದುಂಬಿಗಳ ಮಣ್ಣುರಮಂ ಸೂಱೆಗೊಂಡಂತೆ ಶಾರವಿಸುತಿರೆಯುಂ (ಶಾಂತೀಶ್ವ. ೭-೯೩ವ).

[ಬೇಹಣ$_1$ + ಗಾಣ$_3$]

**ಬೇಹರ$_1$** 'ಬೇಹುರ' ನೋ.

**ಬೇಹರ$_2$** 'ಬೆವಹಾರ' ನೋ.

**ಬೇಹರದರ** (ನಾ). (?) : ಬೆಲ್ಲ ಹಣ್ಣುಸೀಹಣ್ಣು ಬೇವಿನ ಫಲವ ಎಲ್ಲ ಬೇಹರದರವ ಬಲ್ಲನೊಬ್ಬ ಜಾಣ ಮಲ್ಲಿಕಾರ್ಜುನಸೆಟ್ಟಿ ಮನದೊಡೆಯ (ಶಿವಸ. ೦೯೦-೯೩೨). [ ? ]

**ಬೇಹರಿ** 'ಬೆವಹಾರಿ' ನೋ.

**ಬೇಹರಿಸು**, ವೆವಹರಿಸು (ಕ್ರಿ). ವ್ಯಾಪಾರ ಮಾಡು : ಆ ಸೆಟ್ಟಿ ಬೇ [ಪಾಠಾಂ. ಬ್ಯವ]ಹರಿಸಿ ಬಹುಧನಮಂ ಪಡೆದು (ವರ್ಧಮಾ. ೦೦-೭೮ ವ) ; ಕಡಲೊಳ್ಕಣ್ಗೊಳಿಸುವ ಪೆರ್ವಡಗುಗಳಿಂ ಬಂದ ದೀಪದೀಪದ ಮೇಲಾ

ದೊಡಮೆಗಳಂ ಬೇಹರಿಸಲ್ಗಡಣಿಪ ವಣಿಜರುಲಿವಬ್ಬರವಮಂ ಪಳಿಗುಂ (ಮಲಾಕ. ೬-೨೫). **ವೆವಹರಿಸು :** ಇವನೆನ್ನಂ ಬಿಟ್ಟು ಪೋಪನನಲ್ಲ ನಾನಾವಾವದೇಶಕ್ಕೆ ವೆವಹರಿಸಲ್ ಪೋದಡಿವನೆನ್ನ ಕಡೆಯ ಬಾಗಿಲ ಕಾಪಾಗಿಪ್ಪಂ (ಪನ್ನಶಾ. ೩-೬೮). [ಬೇಹರ$_2$ (< ಬೆವಹಾರ) + — ಇಸು$_3$]

**ಬೇಹಾಗ್**, ಬೇಹಾಗು (ನಾ). [ಸಂಗೀತ] ಒಂದು ರಾಗದ ಹೆಸರು : ಅವರು ಬೇಹಾಗ್‌ರಾಗದಲ್ಲಿ ಹಾಡಿದ ತಿಲ್ಲಾನ ತುಂಬ ಸೊಗಸಾಗಿತ್ತು (ರೂಢಿ). **ಬೇಹಾಗು :** ಯಮುನಾಕಲ್ಯಾಣಿ, ಹುಸೇನಿ, ಬೇಹಾಗು, ಹಮೀರು, ನವರೋಜು ಮುಂತಾದ ರಾಗಗಳು ಹಲವು ನಮ್ಮಲ್ಲಿ ನೆಲೆಗೊಂಡು ಕರ್ನಾಟಕ ಗೌರವವನ್ನು ಪಡೆದಿರುವುದು ಈ ಮಾರ್ಗದಿಂದಲೇ (ಗಾನಕ. ೫೫).

[← ಹಿಂ. ಮರಾ. ಬಿಹಾಗ್./ಸಂ. ಬಿಹಾಗ್]

**ಬೇಹಾಗು** 'ಬೇಹಾಗ್' ನೋ.

**ಬೇಹಾರ** 'ಬೆವಹಾರ' ನೋ.

**ಬೇಹಾರಿ** 'ಬೆವಹಾರಿ' ನೋ.

**ಬೇಹಾರಿಗ** (ನಾ). ವ್ಯಾಪಾರ ಮಾಡುವವನು ; ವ್ಯಾಪಾರಿ ; ವರ್ತಕ : ಅಂಗಡಿಯೊಳು ಮಾಜುತಿಹ ಬೇಹಾರಿ [ಪಾಠಾಂ. ವ್ಯವಹಾರಿ]ಗಳ್ ಕಂಗೊಳಿಸಿದರು ಒಂದೆಸೆಯ (ಅದ್ವೈತ. ೩-೬೬) ; ಸಂಜಶೆಟ್ಟಿ—ಮಹೀಶೂರಪುರದ ಬೇಹಾರಿಗ (ಬಿರುಗಂ. ೧೧-೨). [ಬೇಹಾರ (< ಬೆವಹಾರ) + — ಇಗ]

**ಬೇಹಿಗ** (ನಾ). ಗೂಢಚಾರ ; ಬೇಹುಗಾರ : ಹೊತ್ತಿಳಿಯೆ ಮನೆದೀಪದಂತೆ ಕಣ್ಣಾ ಪೆರತಂ ಕಾಣೆಪಾತ, ನಿನ್ನನನಿತೇಂ ತೋರದಂತೆ ? ನಿನ್ನ ಬೇಹಿಗನೇನಿದು ? (ಗೆಳವಿ. ೬೫-೬೪). [ಬೇಹು + — ಇಗ]

**ಬೇಹು**, ಬೇವು$_2$ (ನಾ). ಗುಪ್ತಚರ್ಯೆ ; ಗೂಢಚರ್ಯೆ: ಬಟ್ಟೆಯ ಬಡಿವ ಕಳ್ಳಂಗೆ ಬೇಹುಸಂದು ಕಳವು ದೊರಕಿದಂತಾಯಿತ್ತು (ಅವಕಂ. ೨೦೯-೯೪೦) ; ವನಚರರು ಬೇಹಿನಲಿ ಭೂಸುರಜನವ ಬೆಂಬತ್ತಿದರು (ಕುಮ್ಯಾಶ. ೦೬-೧೪) ; ಕಟ್ಟಿತು ನನ್ನನು ಮುಕ್ತಿಯ ರಾಹು ಬಾಳಿನ ಬೆನ್ನೊಳೆ ಸಾವಿನ ಬೇಹು ! (ಪಾಂಚಜ. ೫೮-೨೩). **ಬೇವು$_2$:** ಕೆಲವು ಬೇವಿನ ಜನರನ್ನು ಟೀಪುಸುಲ್ತಾನರ ಸೀಮೆ ಒಳಗೆ ಕಳುಹಿಸಿ (ರಾಜೇಂದ್ರ. ೬೮).

**ಬೇವು ಸೋವು** = ಗುಪ್ತವಾಗಿ ಹುಡುಕಿ ತೆಗೆಯುವಿಕೆ ; ಗೂಢಚರ್ಯೆಯಿಂದ ಶೋಧಿಸುವಿಕೆ : ಜಮೇದಾರ ಏಡೂರ ಬೈರೆಗೌಡ ಸಹಾ . . . ಆ ಕಳ್ಳನನ್ನು ಬೇವುಸೋವಿನಿಂದಾ ಪತ್ತೆಹತ್ತಿಸಿ ಹಿಡಿಯುವಂತೆ ಅಪ್ಪಣೆ ಕೊಟ್ಟು, ಗರವಲೆಗೆ ಕಳುಹಿಸಿಕೊಟ್ಟರು (ರಾಜೇಂದ್ರ. ೨೬೬). **ಬೇಹಿನ ಚಾವಡಿ** = (ಮೈಸೂರುಸೀಮೆಯಲ್ಲಿ ಚಿಕ್ಕದೇವರಾಜಒಡೆಯರು ಏರ್ಪಡಿಸಿದ್ದ ಎಂಭತ್ತು ನಾಲ್ಕು ಜಿಲ್ಲೆಗಳ) ಗುಪ್ತಚರ್ಯೆಯ ಕೆಲಸದ ಮೇಲ್ವಿಚಾರಣೆ ಮಾಡುತ್ತಿದ್ದ ಇಲಾಖೆ : ಬೇಹಿನ ಚಾವಡಿ—ಇವರಲ್ಲಿ . . . ಅರಮನೆಯಿಂದ ಗಡಿಗಳಿಗೆ ಬರೆಸಿದ ನಿರೂಪವನ್ನು ಕಳುಹಿಸುವಂತೆಯೂ ಕಟ್ಟಳೆಯನ್ನು ಮಾಡಿದರು (ಮೈಹಾವಂ. I, ೦೪೯). **ಬೇಹಿನ ಜನ** = ಗೂಢಚರ್ಯೆಯ ಕೆಲಸಕ್ಕಾಗಿ ನೇಮಿಸಲಾದ ಜನ; ಗೂಢಚಾರರು ; ಗುಪ್ತಚಾರರು : ಘಣಿತನಯ ಗಜಬೇಂಟೆಯೊಳು ಬಹುದಣಿದು ಬಂದಪ ಸಮಯಮೆನ್ನುತ ಕ್ಷಣದಿ ಬೇಹಿನ ಜನ [ಪಾಠಾಂ. ಚರ]ರು ಪೇಳಲು (ಜೈಗಚ. ೦೦-೬೯). **ಬೇಹಿನವ** = ಗೂಢಚಾರ; ಗುಪ್ತಚಾರ ; ಬೇಹುಗಾರ : "ಹೇರಿಗಂ = ಬೇಹಿನವಂ" (ಕಮುದ. ಶಂ. ೨); ಕೃಷ್ಣನು . . . ದ್ವಾರಕಾಪಟ್ಟಣಕ್ಕೆ ಹೋದ ವೃತ್ತಾಂತವನ್ನೂ ಪಾಂಡವರ ಸಮಾಚಾರವನ್ನೂ ಬೇಹಿನವರ ದೆಸೆಯಿಂದ ಕೇಳಿ (ಕೃಪಾಉ. ೬) ; ವಿವಾಹಸನ್ನಾಹಂ ಮೆರೆಯುತ್ತಿರ್ದಾ ಮಾರನಾಯಕಂ ಬೇಹಿನವರಿಂ . . . ಸುದ್ದಿಯಂ ಕೇಳ್ದು (ಮುದ್ರಾತ. ೧-೩೩).

[ದ್ರಾ. ‖ ತಮಿ. ವೇೞ್, ವೇವು ; ಮಲ. ವೇವು ; ತುಳು. ಬೇಪು ; ತೆಲು. ವೇಗು]

**ಬೇಹುಕಾತಿ** (ನಾ). ಗುಪ್ತಚರ್ಯೆ ಮಾಡುವವಳು ; ಗೂಢಚಾರಿಣಿ : ಈ ಸಮಯದಲ್ಲಿ ದೇವತೆಗಳ ಬೇಹುಕಾತಿಯಾದ ರಂಭೆಯಿಂದ ಸ್ವರ್ಗಕ್ಕೂ ಭೂಮಿಗೂ ನಿಕಟಸಂಬಂಧವೊದಗುತ್ತದೆ (ಅಹರ್ಶ. XI, ಶ್ರಸ್ತಾವನೆ).

[ಬೇಹು + — ಕಾತಿ]

**ಬೇಹುಕಾರ** 'ಬೇಹುಗಾಜಿ' ನೋ.

**ಬೇಹುಕಾಜಿ** 'ಬೇಹುಗಾಜಿ' ನೋ.

**ಬೇಹುಗಡಿ** (ನಾ). ಗೂಢಚರ್ಯೆಯನ್ನು ನಡೆಸುವ ಸೀಮಾ ಪ್ರದೇಶ ; ಬೇಹಿನ ಎಲ್ಲೆ : ಇರ್ದುದು ಮಹೇಂದ್ರಾಚಲಂ ದಕ್ಷಿಣಾಂಬುಧಿಗೆ ಬೇಹುಗಡಿಯಂ ಕಟ್ಟಿ (ಶ್ರೀರಾಮಾ. ೩೬೩-೩೦). [ಬೇಹು + ಗಡಿ$_1$]

**ಬೇಹುಗಾರ** 'ಬೇಹುಗಾಜಿ' ನೋ.

**ಬೇಹುಗಾರಿಕೆ** (ನಾ). ಗೂಢಚಾರನ ಕೆಲಸ ; ಗೂಢಚರ್ಯೆ : ಅಗ್ರಚಾರ . . . ಬೇಹುಗಾರಿಕೆಯಲ್ಲಿ ವಿಶೇಷವಾದ ಶಿಕ್ಷಣವನ್ನು ಪಡೆದ ಕಾರಣ ಆತನನ್ನು ಶತ್ರುವಿನ ಸಮಾಚಾರ ಸಂಗ್ರಹಿಸುವ ಕಾಲಕ್ಕೆ ಅಟ್ಟುಕೊಳ್ಳುತ್ತಾರೆ (ಕವಿಕೋ. I, ೦೮೬).

[ಬೇಹುಗಾರ (< ಬೇಹುಗಾಜಿ) + — ಇಕೆ]

**ಬೇಹುಗಾಜಿ**, ಬೇಹುಕಾರ, ಬೇಹುಕಾಜಿ, ಬೇಹುಗಾರ (ನಾ). ಗೂಢಚರ್ಯೆಯನ್ನು ಮಾಡುವವನು ; ಗೂಢಚಾರ : ಜೂಜುಗಾಜಿಂ ಬೇಹುಗಾಜಿಂ (ಶಾಶಕೂ. ೦೯೨ ಕೃಯೋ); ಬೇಹುಗಾಜಿರ ಮೊಗದಿಂದರಿ ರಾಯರ ಗಾಹುಗದುಕುಗಳನಜಿತು (ಕುಮಾರಾಂ. ೩೦-೩೫). **ಬೇಹುಕಾರ :** ಬೇಹುಕಾರನ ತೆರದಿ ಬೆಳ್ಳಿ ಮೂಡಿದುದು (ಸಾರಂಗ. ೩೨); ಬೇಹುಕಾರರು ಬಂದು ಹಿಂದಿನ ಮೊಕ್ಕಾಮಿನಲ್ಲಿಯೇ ಈ ಆತಿಥ್ಯದ ಸಿದ್ಧತೆಯನ್ನು ಸೇನಾಪತಿಗಳಿಗೆ ಅರಿಕೆ ಮಾಡಿದರು (ದಾಂಡಿ. ೫೫). **ಬೇಹುಕಾಜಿ :** ಎಲ್ಲಿಂದ ಬಂದೆಯೆಂಬರೊ ಕೊಲ್ಲಿವನಂ ಬೇಹುಕಾಜಿನೆಂಬರೊ . . . ಎಂದು ಚಿಂತಿಸುತಿರ್ದಂ (ದಶಕು. ೨-೦೩೬); ನಳಿನಮಿತ್ರನ ಬೇಹುಕಾಜಿರ ಸುಳಿವೊ ತಿಮಿರದ ಪ್ರಳಯವೋಯೆನೆ ನಿಳಯನಿಳಯದ ಸೊಡರು ತಳಿತುದು ಕೂಡೆ ನಗರಿಯಲಿ (ಸಂಭಶ. ೩೨-೦೬). **ಬೇಹುಗಾರ :** ಸುಮತಿಯು ಬೇಹುಗಾರರ ಗೊತ್ತುಗಾರನಂ ನೋಡಿ (ಸೌಗಂಧಿ. ೦೩೩-೪) ; ಘಾತುಕರನ್ನೂ ಬೇಹುಗಾರರನ್ನೂ ಒಳಗೇ ಸಂಚುಮಾಡಿ ಕಳುಹಿಸಿರತಕ್ಕದ್ದೂ . . . ಗೊತ್ತಾಗಿತ್ತು (ಮುಸಗ. ೦೫೨). [ಬೇಹು + — ಕಾಜಿ]

**ಬೇಹುಗುಟ್ಟು** (ಕ್ರಿ). ಗುಪ್ತವಾಗಿ ಮಾತನಾಡು,— ಹೇಳು : ಜನಾಂತಿಕದಲ್ಲಿ ಸೈನ್ಯಾಧಿಪತಿಗೆ ಕ್ಷೀಣಸ್ವರದಿಂದ ಬೇಹುಗುಟ್ಟಿ, ವೀರವನ್ನನ ಮಾಡಿ ಹೊರಟುಹೋಗುವನು (ಬಿರುಗಂ. ೨೬-೫). [ಬೇಹು + ಕುಟ್ಟು$_1$]

**ಬೇಹುಬರ್** (ಕ್ರಿ). ಬೇಹುಗಾರಿಕೆಯನ್ನು ನಡೆಸಲು ಬರು : ಪೊಲಗಾಪಿನವರ್ ಕಾಣುತೆ ಪಲರುಂ ಪರಿತಂದು ಬೇಹು ಬಂದವನಿವನಂ ಕೊಲೆಗೆಯ್ದಪೆವೆನ್ನೆಂದೊಡೆ (ಜೀವಸಂ. ೫೮-೩೯) ; ನೀವ್ ತೊಲಗಿ ಭೀಮನ ಬೇಹು ಬಹುದಿರಬೇಡ ನೀಂ ಮೆಂದ (ಕುಮ್ಯಾಗ. ೪-೪೦). [ ಬೇಹು + ಬರ್ (< ವರ್) ]

**ಬೇಹುರ**, ಬೇಹರ$_1$ (ನಾ). ೧. ಗುಪ್ತಚಾರ ಜನ ; ಗೂಢಚಾರಮಂದಿ : ಏನು ಮಜುಗಿದೊಡೇನು ಪಾಂಡವಮಾನನಿಧಿಗಳ ಪುಣ್ಯದನುಸಂಧಾನ ಬೇಹುರದಲ್ಲಿ ಬೈಚಿಡು ದೇವಲೋಕದಲಿ (ಸಂಭಶ.೦೮-೦೦೬). **ಬೇಹರ$_1$ : ೧.** ಹರಣದಾಸೆಯಂ ಸುಳಿದು ಹರಿದೋಡುವಹಿತಮೋಹರದೊಳಗೆ ಬೇಹ ಬೇಹರರೈದೆ ಸೆಣಸಿ ಸಂಹರಣಕಾಲದ ಕಾಲಹರನ ಕೋಪದೊಳಿಜಿವ ಹರಹನೇಂ ಬಣ್ಣಿಸುವೆನು (ಶಬಶ್ಯ.೨೫-೧೦). ೨. ಬಹಳ ಬುದ್ಧಿವಂತನಾದವನು,— ಬುದ್ಧಿಶಾಲಿ : "ಪೇಹರವೆ [ನ್ರೆ] ನೆ ಭೂರಿ ಬುದ್ಧಿಬಲಯುತನಕ್ಕುಂ" (ಭಾರತಿ. ೩೦). [ < ಬೇಹು ]

**ಬೇಹುವಳ** (ನಾ). ಗೂಢಚರ್ಯೆಗಾಗಿ ನಿಯಮಿತನಾದವನು,—ನೇಮಿಸಲ್ಪಟ್ಟವನು : ನಿಮ್ಮ ದ್ರೋಹದ ಗೆಯ್ಮೆಗಳನ್ನೆಲ್ಲಾ ವಿಚಾರಿಸಿ ವಿವರ

ಗಳನ್ನು ವ್ಯಹಾಸ್ವಾಮಿಯವರ ಒಳಓಲಗದ ಪರಿಶೀಲನಕ್ಕೊಪ್ಪಿಸಲು ಶ್ರೀಮನ್ನರು ಅಧಿಕಾರಗೊಟ್ಟಿರುವ ಹೊಸ ಬೇಹೊವಳ (ಚಿಟ್ಟಿ. ೩೦-೦೪).

[ ಬೇಹು + — ವಳ ]

**ಬೇಹುಪಾರಿ** 'ಬೇಹುಪಾರು' ನೋ.

**ಬೇಹುಪಾರು**, ಬೇಹುಪಾರಿ (ಗು). ೧. ಎಚ್ಚರಿಕೆಯಿಲ್ಲದ ; ನಿರ್ಲಕ್ಷ್ಯತನದ. (ನಾ). ೨. **ಜಾಗರೂಕತೆ** ಇಲ್ಲದಿರುವಿಕೆ ; ಎಚ್ಚರಗೇಡಿತನ ; ನಿರ್ಲಕ್ಷ್ಯ : ಅವನ ಕೂಡ ಹರಟುತ್ತ ಹರಟುತ್ತ ನಾನು ಬೇಹುಪಾರಾದೆ (ತಂಗೂ. ೬೨). **ಬೇಹುಪಾರಿ** : ೧. ಬೇಹುಪಾರಿ ಪೋಲೀಸರಿಂದ ಉಂಟಾದ ಕಳ್ಳತನದ ನಷ್ಟವನ್ನು ನಷ್ಟ ಹೊಂದಿದವರಿಗೆ ತಪ್ಪಿತಸ್ಥರಿಂದ ವಸೂಲುಮಾಡಿ ಕೊಡುತ್ತೇವೆ (ಘೂರಾತಿ. ೮೬). ೨. ನಾನೇನು ಅಷ್ಟು ಬೇಹುಪಾರಿ ಮಾತನಾಡಿದ್ನಾ (ಪಮ್ಮ. ೨೬).

[ ← ಪಾರ. ಮರಾ. ಬೇಹುಶಾರ್, ಬೇಹುಶಾರೀ ]

**ಬೇಹೈಸು** (ಕ್ರಿ). ಬೇಕೆನಿಸು; ಬಯಸು; ಅಪೇಕ್ಷಿಸು : ತಿಪಪದಲವಂ ಬಳಲುತ್ತ ಬೇಹೈಸಿಯುಂದುದಕವುಂ ಕುಡಿಯಲು (ಸಿದ್ಧರಾ. ೯-೨೯).

[ <ಬೇಡು$_1$ + —ಇಸು$_3$ ]

**ಬೇಳ್$_1$**, ಬೇಡು$_2$, ಬೇಳು$_1$ (ಕ್ರಿ). ಬೇಳ್ದ (ಭೂತಕೃ). ಬೇಳ್ದು (ಭೂತನ್ಯೂ), ಬೇಳ್ವ$_2$ (ವರ್ತಕೃ), ಬೇಳ್ಪ$_2$ (ಭವಿಕೃ). ೧. ಹೋಮವನ್ನು ಮಾಡು ; ಹವಿಸ್ಸನ್ನು ಅರ್ಪಿಸು; ಯಜ್ಞ ಮಾಡು : "ಬೇಳ್—ಹವಿಃಪ್ರಧಾನೇ (ಆಹುತಿ ಕೊಡು), ನಿವೃದ್ಧೌ ಚ (ಬೆಳವಣಿಗೆ ಇಲ್ಲದಿರು)" (ಕವಾಧಾ); ಮಹಾಸದಮಲಸರ್ವಕ್ರಿತುಗಳನಾದಾರ [ತ]ರಮಾಗೆ ಬೇ[ಳ್ಪ] ವಿಪ್ರೋತ್ತಮರಂ ಕರೆಯಿಸಿ (ಸೌಇಇ. XI-i.೦೪-೦೬; 872) ; ರಾಜಸೂಯಮೆಂಬ ಯಾಗಮಂ ಬೇಳ್ವಂತೆ ಮಾಡಿ ಬನ್ನಿಂ (ಶಂಪಠಾ. ೬-೦೭ ವ) ; ಹೋಮಸ್ತೋಮಧೂಮಂ ನೆಗೆದುದು ಮುನಿಗಳ್ ಬೇಳ್ವ ಮಂತ್ರಾಗ್ನಿಯಿಂದಂ (ಗಂಕ. ೦-೬೬) . ೨. ಆಹುತಿಯಾಗು ; ಆಹುತಿಗೊಳ್ಳು : ಮಾರಿ ಹೊಡೆದುಣ್ಣ ಕನ್ನೆ ಕುಮಾರಿಗೆ ಕುಱಿಯಾಗಿ ಬೇಳ್ಗೆ ಸಿಡಿಲೆಬಿಗೆ . . . ಮುಂದುಗುಂಟಣಿಯುಂ (ಸೂಕ್ತಿಸು. ೮-೩೮೦) ; ಸಯ್ದರಗಿನಿಂ ಬೋಳನೆಳೆದು ಕಯ್ ಸುಗಿದಂ ಬಯ್ವ ಹಸುಗಳಿಂದ ಬೇಳ್ದ ಬಗೆ ದಳ್ಳಿಸಲ್ (ಶಾಂಪುರ. ೧೩೦-೨೬೮). **ಬೇಡು$_2$** : ೧. ಜಗದಾಶ್ಚರ್ಯದ ರಾಜಸೂಯಮುಖಮಂ ಬೇಡಲ್ಮಹಾತ್ಸಾರ್ಥವಾವಗೆಮೆಯ್ದು × × × ವಿಭೀಷಣನ ಮೇಗಾಕ್ಷೇಪದಿಂ ಪೋಗಿ ವಸ್ತುಗಳಂ ಕಪ್ಪಮನಲ್ಲಿ ಕೊಣ್ಣು (ಎಕ. VII, ಶಿಕಾ. ೦೨೬-೩ ; 1036). **ಬೇಳು$_1$** : ೧. ಬೇಡಿತಂ ಕೊಡಬಲ್ಲ ಶೂಲಿ ಬಂದಿರೆ ಬಗೆಯುದಕಟಕಟ ಬೂದಿಯೊಳು ಬೇಳುವಂತ ಧಮದ್ಯೆವವ ಮಾಡಿದಪರೆಂದು ಹೊಱಮಂಟ ನಿಜಗೃಹವನು (ಸಿದ್ಧರಾ. ೩-೩೩); ಏನೆಂಬೆನಾ ಹೋಮುವ ಬೇಳುವೆಡೆಯೊಳು ಸಾನುರಾಗದೆ ಲಾಜೆಯನು ಭೂಸುತವೆನೆ ಬೇಳುತಿರೆ ಚಟಚಟರೆಂಬ ಧ್ವಾನವೆಸೆದುದು (ಅಂಜತ. ೩-೨೨೬); ಬೇಳುತಿಪೂರ್ಣಾಹುತಿಯುನಿಟ್ಟು ಷಟ್ಕರ್ಮಮಂ ಬಿಟ್ಟು ನೆಱೆ ಬೆಱಗುವಟ್ಟು (ತಿವಿಶ್ಯ. ೨೦-೨೪). ೩. ಸುಟ್ಟುಹಾಕು ; ನಾಶಪಡಿಸು ; ನಾಶಮಾಡು : ಒಂದುಮುಖದಲಿ ಜಗವ ಹೂಡುವನೊಂದುಮುಖದಲಿ ಜಗವ ಸಲಹುವನೊಂದುಮುಖದಲಿ ಬೇಳುವನು ನಯನಾಗ್ನಿಯಲಿ ಜಗವ (ಕುವ್ಯಾ ಶೀ. ೭-೩೨) ; ಮುಕ್ತಿ ರಾಹು ಪ್ರೇಮಜ್ವಾಲೆ ವ್ಯಷ್ಟಿಯು ಸೃಷ್ಟಿಗೆ ಬೇಳುವ ಲೀಲೆ (ಶಾಂತಿ. ೩೩-೦೪). ೪. ಆಹುತಿಯಾಗಿ ಪಡೆ ; ಆಹುತಿ ತೆಗೆದುಕೊಳ್ಳು : ಹರಿಯ ಬಾಣವು . . . ತ್ರಿಶಿರದೂಷಣರ ಖರನ ತಲೆಗಳ ಬೇಳದುದು (ತೊರಾ. ೦೮-೩೩).

[ ದೇ.॥ ತಮಿ. ವೇಳ್; ತೆಲು. ವೇಲು ]

**ಬೇಳ್$_2$**, ಬೇಳು$_2$ (ನಾ). ೧. ದಿಗ್ಭ್ರಾಂತಿ; ಕಕ್ಕಾಬಿಕ್ಕಿ : (ಕ). ೨. ಮೋಹ; ಮರುಳು : 'ಬೇಳ್ಕೆ', 'ಬೇಳ್ವೆ$_2$' ಪರಾ. ೩. ಬೆಪ್ಪುತನ; ದಡ್ಡತನ. ೪. ಮೂರ್ಖನಾದವನು: ಅವಿವೇಕಿ ; ದಡ್ಡ : ಅಮರೇಂದ್ರೋನ್ನತಿ ಖಚರೇಂದ್ರವಿಭವಂ ಭೋಗೇಂದ್ರಭೋಗಂ ಮಹೇಂದ್ರ ಮಹೈಶ್ವರ್ಯಮಿವೆಲ್ಲಮಧ್ರುವಮಿವಂ ಬೇಟ್ಬಂತು ಬೇಳಲ್ಲೆನುತ್ತಮ ದೀಕ್ಷಾವಿಧಿಯುಂ ಸಮಾಧಿಮರಣಂ ಕರ್ಮಕ್ಷಯಂ ಬೋಧಿಲಾಭಮುಮೋಘಂ ದೊರೆಕೊಳ್ವುದಕ್ಕುಂ (ಆದಿಪು. ೦೦-೬೦); ಬೇಳೆನಿಸಿ ಪೆಗಟಿಗೆ ಬೆಂಬೀಳದೆ ತಲ್ಲಣಿಸದಾತರ್ ಕೂರ್ತವಯವದಿಂ ಕೇಳ ಪ್ರಭಾವನಾಂಗಮನೇಳಿಸ ದಟ್ಟಿತರ್ ತಾಳ್ದವೇಟ್ಟುದು ಭವ್ಯಂ (ಧರ್ಮಾಮೃ. ೯-೦೯೬). ೫. ದುಃಖ : ಕಳವಳ : 'ಬೇಳ್ಗರೆ' ಪರಾ. **ಬೇಳು$_3$** : ೨. "ಬೇಳೆಂದೆನೆ ಮರುಳು" (ಕವಿಕಂ. ೨೪೪). ೫. 'ಬೇಳುಗೊಳ್' ಪರಾ. 'ಬೆಳ್$_3$' ನೋ.

**ಬೇಳಾಗು**=೧. ಕಕ್ಕಾಬಿಕ್ಕಿಯಾಗು; ತಬ್ಬಿಬ್ಬಾಗು : ಹರಿ ವಿರಿಂಚ್ಯಾದಿಗಳ್ ಬೇಳಾದರೀಶ್ವರನ ನಿಲವನಱಿಯದೆ (೦೬೩೦. ೦೩-೦೦). ೨. ಹುಚ್ಚಾಗು; ಮರುಳಾಗು: ಮೋಹಗೊಳ್ಳು: ಆ ಕಾಂತೆ ಬೇಳಾದಳವನ ಚೆಲ್ವಿಕೆಗಂಡು (ತ್ರಿಶುತ. ೨೦-೩೦); ಕುಮಾರರಾಮಗೆ ರತ್ನಿ ಬೇಳಾದಳು (ಕ.ರಾಸಾಂ. ೨೬-೦೫). ೩. ಮೂರ್ಖನಾಗು ; ಅವಿವೇಕಿಯಾಗು : ಪಿರಿದೊಂದಜ್ಞಾನದಿಂ ಯೌವನವಿಕಳತೆ ಮೈದೋಱೆ ಕಾಂತಾನಿವಾಸಾಂತರದೊಳ್ ಶ್ವಾನಂಗೆ ಓಹಂದಿಗೆ ಕಪಿಗೆಣೆಯಾಗಿರ್ದ ಬೇಳಾ[ಶಾಕಾಂ. ಬೇಳ್ಳ] ಗುತಂ (ರತ್ನಾಕ. ೩) ; ಗುಣದ ಕಣೆ ದೇವೇಂದ್ರಚಿಂತಾಮಣಿಯೆನುತ ಕಾಲ್ಗೆಡದು ಬೇಳಾದೆಣಿಕೆ ಸಾಕೆಂದನಭೂಚರಿತೆಯನಾಸುರಲೊಡಲಿಸಿದೆ (ಸಾಕ್ಯಾ. ೦-೪೦) ; ಈಶಭಕ್ತಿಲಸತ್ಸರಸುಖಾಬ್ಧಿಯಂ ತೊಱೆದು ದಲ್ಬೇಳಾಗದಿರ್ಸಾಱಿದೆಂ (ವೃಷಭ. ೨೮-೬೨). ೪. ತಳಮಳಗೊಳ್ಳು: ಕಳವಳಿಸು : ಪಾಂಚಾಳನಂದನೆಯಂ ಕಾಣದೆ . . . ನರಂ ಧೈರ್ಯಮನೊಕ್ಕು ವಜ್ರಹೃದಯಂ ಬೇಳಾದಂ (ಜೀಬಿಸ್ಯ. ೦೦_೬೨) ; ಎಸೆವ ಪುರಜನವೆಲ್ಲ ಗೋಳಿಡುತ ಬೇಳಾಗಿ (ಮಹೇಶ. ದೀ. ೭೩-೨೦) ; ಶರಣಜನವಿಯೋಗವ್ಯಥೆಗೆ ಬೆಂಬೀಳ್ದು ಬೇಳಾಗಿ ಮಂಬಲಿಸಿ ಹರಹರಾ ವಿಶ್ವನಾಥಾಯೆನುತ್ತುಂ (ಶಪ್ತರಾ. ೬-೦೦); ಈ ದುರಂತದ ಚಿಂತೆಯಲಿ ಬೇಳಾದುದೆನ್ನಯ ಚಿತ್ತವದ್ದಿನು ಪೇದ ಪಂಕದೊಳು (ಕುವ್ಯಾಕ. ೦೦-೭). **ಬೇಳ್ಮಾಡು**, **ಬೇಳುಮಾಡು**=ಮರುಳಾಗಿಸು ; ಮರುಳುಮಾಡು: ಎಡಗಾಲೊಳ್ ತೊಡರಿಂ ತೊಡರ್ಚಿ ಪತಿಯುಂ ಬೇಳ್ಮಾಡಿ ನಿನ್ನೊಂದು ಓಂಬಡಿನೊಳ್ ನಿಲ್ವವಳಲ್ಲೆನೆಂದು . . . ಅನ್ಯಕಾಮಿನಿಯರಂ ಱೋಡಾಡುವಂತಿಕ್ಕಿದಳ್ ತೊಡರಂ ಸುಗ್ಗಲದೇವಿ (ಎಕ. V, ಶೀರೂರು. ೦೦೨-೪೦; ಸು. 1220); ದೇವ ನೀಮಲ್ಲಿಗೆ ಪದಮ ಬರಲ್ ತೋರ್ಪೆನೆಂದಂತವಳ್ ತಾಪಸನಂ ಬೇಳ್ಮಾಡಿ ಬೇಗಂ ನಲವಿನೊಳೊಡಗೊಂಡುಯ್ದಳ್ (ದಕಳು. ೬-೩೭); ಜಾಲಗಾರನ ಕೈಯ ಮಾಣಿಕ್ಯ ಸಿಕ್ಕದೆ ಆಳಿಗೊಂಡಿತು ಜಗವ ಬೇಳು ಮಾಡಿ (ಸರ್ವಜ. ೪೯-೪೯೩).

[ದೇ.॥ ತೆಲು. ಬೇಲ, ಬೇಲು./ಸಂ. ಭೇಲ]

**ಬೇಳ$_1$** 'ಬೆಳಲ್' ನೋ.

**ಬೇಳ$_2$** (ನಾ). ೧. ಸ್ಪರ್ಶ ; ಸೋಂಕು : ಚಂಡಾಳಿಗಳ ಬೇಳಮಾಂತಶೌಚಂಗಳಿಡೆಗೊಂಡ ತಾಣಮದಲ್ತು ಸುರಭಿಯುತಮಾಗಿಪಾಪಿಂಡಲಾತ್ರಯ ಮಲ್ತಿದೆನೆ ರಂಜಿಸಿತ್ತು ತತ್ಸರಸಿ (ಕೂಟ್ಸಾಬ. ೦೩-೪೦). ೨. (?) : ಚಂದ್ರಾದಿತ್ಯತ್ಕರ್ಕಳಣಸಾಗಿಯುಂ ಚಕ್ರವು ಬೇಳಮಾಗಿಯುಂ ವಜ್ರ ಕವಚವು ಕಂಚುಳಿಕೆಯಾಗಿಯುಂ . . . ಬಸೂರ್ಪ[ರು]ಸ್ವಾಮಿಗಳ್ಗೆ ಸಾಷ್ಟಾಂಗಮರಗಿ ಪೊಡವಟ್ಟು (ಕಇ. IV. ೩೩-೦೩ ; 1000 ?). [?]

**ಬೇಳ$_3$** 'ಬೇಳು$_3$' ನೋ.

**ಬೇಳಂಬ** (ನಾ). ೧. ವಿಡಂಬನೆ ; ಅಣಕ : 'ಬೇಳಂಬಿಗ' ಪರಾ. ೨. ಕೇಡು ; ವಿಪತ್ತು : ಬಗೆನುದೀ ಬೇಳಂಬ ಹಸ್ತಿನನಗರಿಯಲಿ ತತ್ಪೌರಜನ ಮಾನವ್ಯಗಿದು ಬಿದ್ದುದು ಶೋಕಮಯಸಾಗರದ ಮಧ್ಯದಲಿ (ಕುವ್ಯಾ ಆ. ೬-೯೦) ; ಕೇಳು ಧೃತರಾಷ್ಟ್ರಮಹಿಪ ನೀ ಕೋಳು

ವೋಪರೆ ಶೋಕದುಃಖಂಬೆಗೆ . . . ಬೇಳುವೆಯು ಬೇಳಂಬವದ ನಟಿಯಾಳು (ತಿಮ್ಮಕ್ಕ. ೦-೫೪); ಏಳುನೆಲೆ ಉಪ್ಪರಿಗೆಯೆತ್ತೀ ಕೀಳುದಿಪ್ಪ ಯಿದೆತ್ತ ಕರ್ಮವು ಮೇಳಿಸಿದ ಬೇಳಂಬವಲ್ಲದೆ ಬೇಚಿ ಪೆಚಿತಲ್ಲ (ಸಾಳ್ವಭಾ. ೦೬-೩೪). ೩. ಗೊಂದಲ ; ಗಲಿಬಿಲಿ : ಒಚ್ಚತ ಮಾಡಿ ಮಾಣ್ಬೆನ ಯಿಯೆಂ ಮತ್ತಾ ಪುರಂ ಚಿಲ್ವನಾ ಪುರಮಿಂಬಾ ಪುರಮೊಳ್ಳತಾ ಪುರಮುದಂ ತಿಂತೆಂಬ ಬೇಳಂಬಮಂ (ಅಜಿತ. ೦-೧೨೦). ೪. ಮರುಳು; ಆಕರ್ಷಣೆ; ಮೋಹ : ಧರೆ ವನಿತೆಯರ ಬೇಳಂಬಕೊಳಗಾಗದೆ ಜನಾರ್ದನನ ನೆನೆಯೆ ಬೇಡಿದನೀವ (ಕೃಷ್ಣಾ.ಕ. ೯-೬೬). ೫. ಮೋಸ ; ವಂಚನೆ : ಪಾಡುವ ರಾಗದಂತೆ ಬೇಳಂಬದ ಪರ್ವದಂತೆ . . . ಕಡೆಯೊಳ್ ಪೇಸುಪಥಮುಂಮ ಶೋಭೆಯುಮಾಗದೆ ಪೋಗದು (ರಚಕಾಕೃ. ೬-೦೨೨); ಸೋಲದ ಗೆಲ್ಲದ ಪಡಮಾತುಗಳುಮಂ ಬೇಳಂಬಾದಿ ಪುಸಿಗಳುಮಂ ರಾಗಿಸಿ ತಾಂ ಕೇಳ್ವುದು ಪರರ್ಗೆ ಪೇಟ್ವುದು ಮೊದಲಾದುವೆಲ್ಲಂ ದುಃಶ್ರುತಿಯೆಂಬ ನಾಲ್ಕನೆಯನರ್ಥ ದಂಡಮಕ್ಕುಂ (ಧ್ರುಪಕಾ. ೦೩೦). 'ಬೇಳ್$_2$' ನೋ.

[< ಪ್ರಾ. ವೇಲಂಬ. / ಸಂ. ವಿಡಂಬ]

**ಬೇಳಂಬಿಗ** (ನಾ). (ಹಾಸ್ಯಪರವಾದ) ಚಮತ್ಕಾರಗಳನ್ನು ಮಾಡು ವವನು ; ವಿದೂಷಕ : ದಂಡದ ಬೇಳಂಬಿಗರ ಬೆದಂಡೆಯ ತಳೆಗೆಯ ಮಹೇಂದ್ರಜಾಲಿಗಳ ಮನಂಗೊಂಡಿಸುವ ನೆಗ[ಟ್ಟಂಬೆ]ಯ ತಂಡಂಗಳವಾವ ದೆಸೆಯೊಳಂ ಕಡುರಯ್ಯಂ (ಧರ್ಮಪಾ. ೦೦-೨೦).

[< ಪ್ರಾ. ವೇಲಂಬಗ. / ಸಂ. ವಿಡಂಬಕ]

**ಬೇಳಕೆ** (ನಾ). ಒಂದು ಬಗೆಯ ಸಸ್ಯ: "ಮಾಲೂರಃ—ವಿಶಾವಾಲುಕ, ಬೇಳಕೆ, ಬೆಲ್ಲವತ್ತ" (೬ಸಂ. ೨೨೪). [ ? ]

**ಬೇಳಲು** 'ಬೆಳಲ್' ನೋ.

**ಬೇಳಾವನ** (ನಾ). ಸಮುದ್ರತೀರದಬಳಿಯ ಅರಣ್ಯ,—ಕಾಡು : ಬೇಳಾವನಪರಿವೃತಚತುರದಧೀವಳಯುವಳಯಿತಜಂಬೂದ್ವೀಪದ ಭರತ ಕ್ಷೇತ್ರದ ವಿನೀತಾಖಂಡದೊಳೆ ಮಗಧೆಯೆಂಬುದು ವಿಷಯಂ (ಶಾಂತಿ. ೦-೦೬ ಪ). [< ಸಂ. ವೇಲಾವನ]

**ಬೇಳಿ** 'ಬೇಟಿ' ನೋ.

**ಬೇಳಿಡು** (ಕ್ರಿ). (ಹಸು ಮುಂತಾದ ಪ್ರಾಣಿಗಳು) ಅರಚು ; ಕೂಗು : ಘೀಳಿಡುತುರುಳ್ವ ಮೃಗರಾಜಯಿಂ ವಾಜಿಯಿಂ ಬೇಳಿಡುತೆ ಬೀಳ್ವ ಕಾಳ್ಪಸು ಗಳಿಂ ಮುಸುಗಳಿಂ . . . ಪಾಳಾದ ಸಕಲಲೋಕಂಗಳಿಂ ಕಂಗಳಿಂ ನೋಡಲುರಿ ಘನಮಾದುದು (ತಂಡು. ೪೬-೨೬). [ಬೇಳ್$_2$ + ಇಡು$_1$]

**ಬೇಳಿಸು** (ಕ್ರಿ). ೧. ಹೋಮ ಮಾಡು ; ಯಜ್ಞ ಮಾಡು : ಅವನಿಪತಿ ತುಪ್ಪದಿಂ ಸಾಸಿವೆಯಿಂ ಪಾಲ್ಮರನ ಸಮಿಧೆಯಿಂ ಹುತವಹಮಂತ್ರ ವಿಧಾನದೆ ಬೇಳಿಸಿ ಕಡೆ ಸುವರ್ಣಮಂ ದ್ವಿಜರ್ಗೆ (ಲೋಕೋಪ. ೪-೪೬). ೨. ಸುಡು : ಪಗೆಯ ಏಳಸುವೆನದಟರಂ ಸೀಳಿಸುವೆನಂಗಮಂ ಬೇಳಿಸುವೆನಗ್ನಿಯೊಳ್ ತಾಳಿ ಸುರರೆಂದು . . . ಹರಿ ನಡೆದನು (ತಂಡು. ೫೦-೫೫). ೩. (ಅಲಂ) ವಶ ಪಡಿಸಿಕೊಳ್ಳು: ಅಂಕಿತಗೊಳಿಸು : ತಂಜೆಯ ದೊರೆ ವೇದೋಜಿಯುಮಂ ಜಗದೊಳ್ ತನಗೆ ಸಾಟಿಯಿಲ್ಲೆಂಬಾರ್ಪಿಂ ತಂಜಾವೂರಂ ಮಧುರೆಯನಂಜಿಪ ದಾಮರ್ಲದೊರೆಯುಮಂ ಬೇಳಿಸಿದಂ (ಕಳಿ. ೫-೩೯).

[ಬೇಳ್$_1$ + —ಇಸು$_3$]

**ಬೇಳು$_1$** 'ಬೇಳ್$_1$' ನೋ.

**ಬೇಳು$_2$** 'ಬೇಳ್$_2$' ನೋ.

**ಬೇಳು$_3$**, **ಬೇಳ$_3$** (ನಾ). ಒಂದು ಬಗೆಯ ಸಸ್ಯ: "ಶ್ಲೇಷ್ಮಾತಕಃ—ಬೇಳು, ನರುವಲು" (೬ಸಂ. ೦೬೦). **ಬೇಳ$_3$** : "ಬೇಳ ಪುಂಗಳ ತಿಳುವನಿಯೆನಿಕ್ಕು" (ಪುಂಗಿಪ. ೪೦-೩೦). [ ? ]

**ಬೇಳುಗರೆ** 'ಬೇಳ್ಗರೆ' ನೋ.

**ಬೇಳುಗೊಳ್**, ಬೇಳುಗೊಳ್ಳು (ಕ್ರಿ). ತಾಪಕ್ಕೆ ಒಳಗಾಗು : ಸಂಕಟ ಪಡು ; ವ್ಯಸನಪಡು : ಮಡದಿ ಕಾರುಣ್ಯದೆ ಮೇಳಸಹಿತ ಬಂದೆನ್ನ ತಾಳದೆ ತಕ್ಕಸಲುಳಿವೆನಲ್ಲದೊಡಾನು ಬೇಳುಗೊಂಡಳಿವೆ ನಿಶ್ಚಯವು (ಅಪಂತ. ೦೬-೦೦೦). **ಬೇಳುಗೊಳ್ಳು** : ಈ ನಡೆಗೋಳದಲಿ ನೀ ಸಿಲುಕಿ ಬಳಿದೇ ಬೇಳುಗೊಳ್ಳದಿ ರೆಂದು ಬೋಧಿಸಿದಳು ನಿಜಾತ್ಮಜನ (ಶಿಭಾಗ. ೯-೦೯-೦೨).

[ಬೇಳು$_2$ (< ಬೇಳ್$_2$) + ಕೊಳ್$_1$]

**ಬೇಳುಗೊಳ್ಳು** 'ಬೇಳುಗೊಳ್' ನೋ.

**ಬೇಳುನುಡಿ** (ನಾ). ಮರುಳು ಮಾಡುವ ಮಾತು : ಆ ಬೇಳುನುಡಿಗೇಳ್ದು ಕೆಮ್ಮನೆ ಬೇಳಲ್ ನಿಮಗಂತು ರಾಜಸೂಯಂ ಮೊಗ್ಗೇ (ಶಂಕಪಾ. ೬-೨೪).

[ಬೇಳು$_2$ (< ಬೇಳ್$_2$) + ನುಡಿ$_3$]

**ಬೇಳುಮಾತು** (ನಾ). = ಬೇಳುನುಡಿ : ಬೇಳುಮಾತಿದು ಕುವರಿಯ ಜನಗೀ ವುದು ಕಾಲಹರಣ ಲೇಸೆಂದು (ಅಪಂತ. ೬-೭೪).

[ಬೇಳು$_2$ (< ಬೇಳ್$_2$) + ಮಾತು$_1$]

**ಬೇಳುರಿ** (ನಾ). ಹೋಮದ ಉರಿ,—ಜ್ವಾಲೆ : ಜನ್ನಗೊಂಡದ ಬೇಳುರಿ ಚಟುಚಟಿಸಿ ಕಿಡಿಕಿಡಿವೋಪುದುಂ (ರಾಮಾಶ್ವ. ೪೩-೨).

[ಬೇಳು$_1$ (< ಬೇಳ್$_1$) + ಉರಿ$_2$]

**ಬೇಳುವಡು** (ಕ್ರಿ). ಕಳವಳ ಪಡು ; ತಳಮಳ ಹೊಂದು : ನೃಪತಿ ವಿಸ್ಮಯುವಟ್ಟು ಮರವಟ್ಟು ಬೇಳುವಟ್ಟತಿಶಯ ಭಯವಟ್ಟು ಕೇಳಲದಚಿ ವೃತ್ತಾಂತವನು (ತ್ರಿಕುತಿ. ೨೬-೦೪). [ಬೇಳು$_2$ (< ಬೇಳ್$_2$) + ಪಡು$_1$]

**ಬೇಳುವಡೆ** (ಕ್ರಿ). = ಬೇಳುವಡು : ಹೇಳಿದಾ ಕಪ್ಪವನು ತೆತ್ತೀ ತಲೆ ಯುನುಳುಹಿಕೊಳು ಬೇಳುವಡೆಯದಿರೆಂದು ದೂತನು ಹೇಳೆ (ಸಾಳ್ವಭಾ. ೦೪-೦೦). [ಬೇಳು$_2$ (< ಬೇಳ್$_2$) + ಪಡೆ$_1$]

**ಬೇಳುವೆ$_1$** 'ಬೇಳ್ವೆ$_1$' ನೋ.

**ಬೇಳುವೆ$_2$** 'ಬೇಳ್ವೆ$_2$' ನೋ.

**ಬೇಳುವೆಗೊಳ್**, ಬೇಳುವೆಗೊಳ್ಳು (ಕ್ರಿ). ಕಳವಳಪಡು ; ತಳಮಳಿಸು: ಊಳಿಗದಂಗರಕ್ಷಕರು ತಾಳದೆ ತಲೆನವಿರ್ಗೆದರಿ ಗೋಳಿಡುತಂದು ಬೇಳುವೆ ಗೊಂಡಯಿದ್ದರು (ಅಪಂತ. ೦೬-೪೫). **ಬೇಳುವೆಗೊಳ್ಳು**: ಕಾಲಕಾಲನ ಬಲೆಯೊಳಗೆ ಸಿಕ್ಕಿ ಬೇಳುವೆಗೊಳ್ಳುತಿದೆ ಜಗವೆಲ್ಲ (ಪಚರ. ೪೩).

[ಬೇಳುವೆ$_2$ (< ಬೇಳ್ವೆ$_2$) + ಕೊಳ್$_1$]

**ಬೇಳುವೆಗೊಳ್ಳು** 'ಬೇಳುವೆಗೊಳ್' ನೋ.

**ಬೇಳುವೆದಳೆ** (ಕ್ರಿ). = ಬೇಳುವೆಗೊಳ್ : ಕಳೆದು ಕೆಲಹೊತ್ತಿನ್ನು ನಿದ್ರಾ ಲಲನೆ ಬೇಳುವೆದಳೆಯುಲದ ಪದಗೊಳಿಸಲಾರದೆ (ಕಕುಥಾ. ೨೩-೭೦).

[ಬೇಳುವೆ$_2$ (< ಬೇಳ್ವೆ$_2$) + ತಳೆ$_1$]

**ಬೇಳುವೆಬೂದಿ** (ನಾ). ಮಂತ್ರಿಸಿದ ಬೂದಿ; ಮರುಳು ಮಾಡುವ ಬೂದಿ ; ಮಂಕುಬೂದಿ: ಹಾಲ ಚಲ್ಲಿದ ಚಂದದೊಳು ಪುಷ್ಪಬಾಣನ ಬೇಳುವೆಬೂದಿಯ ತೆರದಿ . . . ತೋರಿತು ಮೇಲಾದ ಬೆಳುದಿಂಗಳಾಗ (ಸೌಗಂಪ. ೫-೪೩). [ಬೇಳುವೆ$_2$ (< ಬೇಳ್ವೆ$_2$) + ಬೂದಿ]

**ಬೇಳುವೆಮಾತು** 'ಬೇಳ್ವೆಮಾತು' ನೋ.

**ಬೇಳೆ$_1$** (ನಾ). ೧. (ಕಡಲೆ, ಹೆಸರು, ಉದ್ದು ಇತ್ಯಾದಿ) ದ್ವಿದಳ ಧಾನ್ಯದ ಹೋಳು,—ಭಾಗ : ಕಾಳಾಗ್ನಿರುದ್ರನ ಮೇಳಾಪವನಚಿಯ ದಪರು ಕಾಳು ಬೇಳೆಯೆನುತಿಪ್ಪರಯ್ಯಾ (ಬಸವ. ೨೨೬) ; ಬಂದಿಸಿದ ಕಣಿಕ ದುಂಡೆಗಳನೊಂದೊಂದ ತೆಗೆದೊಂದಕ್ಕೆ ಬೆಂದ ಕಡಲೆಯ ಬೇಳೆಗಳನು ಮತ್ತೊಂದಕ್ಕೆ ಸೂಜ್ಜಿಗೆಯನು . . . ಇಕ್ಕಿ (ಸೂಪಶಾ. ೦-೩೦) ; ದ್ವಿದಳ ಧಾನ್ಯಗಳನ್ನು ಇಡಿಯಾಗಿ ಅಥವಾ ಬೇಳೆ ಮಾಡಿ ಉಪಯೋಗಿಸಬಹುದು (ಆತುರಾ. ೬೫). ೨. ತೊಗರಿಬೇಳೆ : ಆ ವೇಳೆಗೆ ಬೇಳೆ ನುಣ್ಣಗಾದದ್ದರಿಂದ ಅದನ್ನು ಕೆಳಗಿಳಿಸಿ ಅನ್ನಕ್ಕೆ ಎಸರಿಟ್ಟಳು (ಮುಕ್ತ್ಯರ. ೨೫). ೩. ಭಾಗ ;

F-8 *

ಹಿಳುಕು : ಅಗಳುರುಂಠಿ . . . ನಾರಂಬೇಳೆಯು ಬೇರು. ಬೆಳ್ಳುಳ್ಳಿಯು ಸುಲಿದ ಬೇಳೆ ಇವು ಪ್ರತ್ಯೇಕ ೧೦ ಹಲವು ನಾಗಳ ನೀರಿನಲ್ಲಿ ಹಾಕಿ, ಕಷಾಯ ವಿಕ್ಕ (ಸಕವೈ. ೩೯೯). ೪. (ದ್ರವಪದಾರ್ಥಗಳನ್ನು ಅಳೆಯುವ, ಸುಮಾರು ಆರು ಸೇರುಗಳ) ಒಂದು ಅಳತೆ,—ಪ್ರಮಾಣ : ಒಳ್ಳೆಯ ಒಂದು ಬೇಳೆ ತೆಂಗಿನೆಣ್ಣೆಯಿದೆ. ಕೊಟ್ಟು ಹೋಗುವ ಎಂದು ಬಂದೆ (ಮೂಕಜ್ಜ. ೩೮). ೫. ಒಂದು ನಾಣ್ಯ; ಹಾಗದ ಅರ್ಧಭಾಗ : "ಸಿಕ್ಕಸಲ್ಬೇಳೆಯೆರಡನೊಂದು ಪಾಗಂ'' (ಮಂಗರಾ. ೦೦೪-೧೦); ಅಯ್ವದಿಂಬರು ಸಾಸಿರ್ವರು(ಂ) ವಿರ್ದು ಬಾರಿಕೇಚಂಗೆ ಕೊಟ್ಟರು [ವೊ] ಕ್ಕಲಲುಂ ಹಾಗ ತಲೆವೊಜಿಗೆ ಬೇಳೆ (ಶಾಇ. IX-i ೬೬-೨೨; 991); ಹಣವಿಗೊಂದೀಸ ವಿಪ್ಪಣಕೊಂದು ಬೇಳೆಯನು ತ್ರಿಣಯನ ಮಕುಟವಾದರೂ ಅಕಸಾಲೆ ಟೊಣೆಯದೆ ಬಿಡನು (ಸರ್ವಜ್ಞ. ೦೯೦೦). ೬. (ಆಲಂ) ಉಪಾಯ; ಯುಕ್ತಿ: ತಂತ್ರ : ಲೇ ನಿನ್ನ ಕಣವೆ ಕೆಳಗಿನ ಬೇಳೆ ಇಲ್ಲಿ ಬೇಯೊಲ್ಲವೇ ! (ಪಶಿದಾ. I, ೫೦೫).

**ಬೇಳೆಬೇಯಿಸು**=೧. ತೊಗರಿಬೇಳೆಯನ್ನು ಪಕ್ವವಾಗುವಂತೆ ಮಾಡು : ಬೇಳೆಬೇಯಿಸುವಾಗ ಅದು ಬೇಗ ಬೇಯಲೆಂದು ಅಡುಗೆ ಸೋಡವನ್ನು ಬೇಳೆ ಎಸರಿಗೆ ಹಾಕುವರು (ಗೃಹಬಿ. ೫೦). ೨. (ಆಲಂ) ಯುಕ್ತಿ ಸಫಲವಾಗುವಂತೆ ಮಾಡು : ಈಗ ನನ್ನ ಮಾತೊಂದು ನಡೆಯುಲ್ಲಿಲ್ಲ. ಅವಳು ತನ್ನದೇ ಬೇಳೆ ಬೇಯಿಸಲು ಪ್ರಾರಂಭಿಸಿದಳು (ಶೂಖಿಕಾ. ೬೯). **ಬೇಳೆ ಬೇಯು** = (ಆಲಂ) ಯುಕ್ತಿ ಸಫಲವಾಗು ; ಕಾರ್ಯಸಾಧನೆಯಾಗು : ಪೋರ್ಚುಗಲ್‌ನವರು ಇಲ್ಲಿಗೆ ಬಂದ ಮೇಲೆ ತಮ್ಮ ಬೇಳೆ ಬೇಯದೆ ಹೋದ್ದರಿಂದ ಈ ರಾಜ್ಯವನ್ನು ಬಿಟ್ಟು ಒಬ್ಬೊಬ್ಬರಾಗಿ ಹೊರಟು ಹೋದರು (ಪ್ರಪಾಇ. II. ೩೩೩); ಅವನ ಮುಂದೆ ಅವರ ಬೇಳೆ ಬೇಯಲಿಲ್ಲ (ಬಿಸುತ. ೦೯). **ಬೇಳೆಯ ಕಾಳು**=ಎರಡು ಭಾಗವಾಗುವಂತಹ ಕಾಳು ; ದ್ವಿದಳಧಾನ್ಯ : ಬೇಳೆಯ ಕಾಳುಗಳು : ಕಡಲೆ, ಬಟ್ಟಗಡಲೆ, ತೊಗರಿ, ಚನ್ನಂಗಿ, ಉದ್ದು, ಹೆಸರು, ಅಲಸಂದಿ, ಅವರೆ (ಸಸ್ಯಶಾ. ೦೨೬). **ಬೇಳೆಯ ಮಣಿ** = ಬೇಳೆಮಣಿ : ನನ್ನ ಬೇಳೆಯ ಮಣಿಯೊಳಗಿನ ಬಂಗಾರವಲ್ಲವೆ ನೀನು ? (ಉಯ್ಯಾಲೆ. ೯೪-೬).

[ದೇ.॥ ಕೊಡ. ತುಳು. ಬೇಳೆ; ತೆಲು. ಬೇಡಲು]

**ಬೇಳೆ$_2$** (ನಾ). ಒಂದು ಬಗೆಯ ಔಷಧೀಸಸ್ಯ: "ಬೇಳೆಯುನೆ ಮಜಿಪ ನಾಜಿಪವೃಷಧ'' (ತತುಬಿ. ೧೫೮) ; ಬೇಳೆಯ ಪತ್ರಂಗಳೊಳಂ ಬೇಳೆ [ಪಾಠಾಂ. ಬಾಳೆ]ಯ ಗೆಡ್ಡೆಯುನೆ ಕೂಡಿ ಮರ್ದಿಸಿ ಕುಡಲೇಂ ಪೇಟಿಲರಿದೆಂಬ ಕೊಳಕನ ಬೇಟಿನ ಪಾವರಣೆಯುಗ್ರವಿಷಮುಸದಟಿಗುಂ (ಖಘುದ. ೦೦-೬೯). 'ನಾಜುಂಬೇಳೆ' ಪರಾ. [ದೇ.॥ ತಮಿ. ವೇಳ್ಳೈ; ಮಲ. ವೇಳ]

**ಬೇಳೆಕಾಳು** (ನಾ). ೧. ತೊಗರಿ ಮುಂತಾದ ದ್ವಿದಳಧಾನ್ಯಗಳ ಹೋಳು—ಭಾಗ. ೨. (ಆಲಂ) ಶಕ್ತಿ ; ಸಾಮರ್ಥ್ಯ : "ನಾಳೆ ಗೊತ್ತಾಯ್ತದೆ ನಿನ್ನ ಬೇಳೆಕಾಳು" ಎಂದು . . . ಹೇಳಿ, ತಮ್ಮ ಮನೆಯ ಕಡೆ ತಿರುಗಿ ಆ ಮಬ್ಬುಗತ್ತಲಲ್ಲಿ ಕರಗಿ ಹೋದರು ಪಟೇಲರು (ಮುಗಮಾಂ. ೨೯). [ಬೇಳೆ$_1$ + ಕಾಳು$_2$ (< ಕಾಟಿ$_2$)]

**ಬೇಳೆಗೆಯ್** (ಕ್ರಿ). ಒಡೆದು ಭಾಗ ಮಾಡು,—ಚೂರು ಮಾಡು : ಒಗುಮಿಗೆ ಬೇಳೆಗೆಯ್ದ ಮೆಳಸಂ ತಳಿವಲ್ಲದ ಚಲ್ಲಯುಂ ಪವಣ್ಬುಗೆ ಕಲಸಿರ್ದ ತಣ್ಣಲಸುಗೂಬನಿಳಾಪತಿಗಿತ್ತನಟ್ಟುಯಿಂ (ರೀರಾವ. ೫-೬೨).

[ಬೇಳೆ$_1$ + ಕೆಯ್$_1$]

**ಬೇಳೆಮಣಿ** (ನಾ). ತಾಳಿಯ ಜೊತೆಗೆ ಹಾಕಿಕೊಳ್ಳುವ, ಬೇಳೆಯಾಕಾರದ ಚಿನ್ನದ ಮಣಿ: ತಾಳವೋಲೆಯನಿಟ್ಟು ಬೇಳೆಮಣಿಯನು ಕಟ್ಟಿ ಪೇಳೆಯನು ಅಜಿತು ನಡೆವವಳು ದೊರಕುವುದು ಶೂಲಿಯ ಕರುಣ (ಸರ್ವಜ್ಞ. ೦೬೬೬).

[ಬೇಳೆ$_1$ + ಮಣಿ$_3$]

**ಬೇಳ್ಕಟ್ಟೆ** (ನಾ). ಬಲಿಪೀಠ ; ಪಶುವನ್ನು ಬಲಿಕೊಡಲು ರಚಿಸಿರುವ ಜಗಲಿ : ನಲ್‌ಬೆಂಕೆಯುರಿವ ಬೇಳ್‌ಕಟ್ಟೆಯೊಳ್ ಪರಿಕಿಸಲ್ ಬೇಳ್ವಿಯಿನ್, ಕೊಟ್ಟ ಬಲಿಯಿಂದ ಬೆಳಗಿದನ್ನಿಲ್ಲ ತಾನ್ ಅಗ್ನಿದೇವನ್ (ಅಂತಿಗೂ. ೯೨-೯೨೬) ; ಅದುಮರಂ ಶೂನ್ಯಾರ್ಥಮಾಗಿರ್ದ ಬೇಳ್‌ಕಟ್ಟೆಯುರಿಗಳ್ಗೆ ಸೂಚ್ಯಾರ್ಥಂಗಳನ್ ಸುಸ್ಪಷ್ಟಗೊಳಿಸಿದೆನ್ ಅಪರ್ಗೆ (ಬಧೃಕೃ. ೨೬-೫೩೬).

[ಬೇಳ್$_1$ + ಕಟ್ಟು$_1$]

**ಬೇಳ್ಕೆ** (ನಾ). ಬೇಡುವಿಕೆ ; ಕೋರಿಕೆ (?) : ವ್ಯಡನುಡುರಾಜ ಪನ್ನಗ ವಿರಾಜಿ . . . ಸುರಾಸುರ ಕದಂಬಕಸೇವ್ಯಪದಾಂಬುಜದ್ವಯಂ ಅಡರೆ ಮೃಡಾನಿಗನ್ಯಕುಳಶೈಳಕುಳಂಗಳ್ ನಾಡೆ ರಯ್ಯಮಪ್ಪೆಡೆಗಳನೆಲ್ಲಮಂ ನೆಜಿಯೆ ತೋರ್ಪುದು ಬೇಳ್ಕೆಯಿ ಬಂದನೀಶ್ವರಂ (ಕಾವ್ಯಾವ. ೯೩೬) : ಕೇಳುವರ ಗೊಂದಣಕೆ ಶಿಷ್ಯನ ಮೇಲುಮಾಕಿನ ಬೇಳ್ಕೆಗೊಡನನುಕೂಲವಾದುತ್ತರವನಿಂಗೆ ಗುರುಸೂಕ್ತಿಯಿಲ್ಲದಿರೆ (ಬಿವೇಶ. ೩-೦೨). [< ಬೇಡು$_1$ + —ಕೆ]

**ಬೇಳ್ಗರೆ.** ಬೇಳುಗರೆ (ಕ್ರಿ). ೧. ಅರಚುವಂತೆ ಮಾಡು ; ಆಕ್ರಂದನ ಮಾಡಿಸು (?) : ನೆರೆದು ನಾಲ್ದೆಸೆಯುಂಬುಮಾಯ ಮಯುಗರೆದು ಬತ್ತೀಸಾಯುಧದ[ ದೆ] ಬೇಳ್ಗರೆದು ಮುತ್ತಿದರರಸ ಚಿತ್ತೈಸಾಗ ಬರ್ಬರನ (ಶಶುಘಾ. ೬-೯೯). **ಬೇಳುಗರೆ** : ೨. ಆಕ್ರಂದನ ಮಾಡು : ಬೋಳೆಯಂಬಿನ ಗಾಯದ ಬಾಯ್ದೆಜಿಯಿಂದ ಬೀಳುತ ಗೋಣ್ಮುರಿಗೊಂಡು ಬೇಳುಗರೆವ ಹಸುಳೆಯ ನೆಕ್ಕುವ ಹುಲ್ಲೆಯೋಳಿಯುಳಿದವರೊಳಗೆ (ಪೇಬಿಸಂ. ೨-೫೩) ; ಒಬ್ಬೊಬ್ಬರು ಒಂದೊಂದು ಹುಲ್ಲೆಮರಿಯನ್ನು ಹಿಡಿದುಕೊಂಡು ಬಂದರು. ಅವುಗಳು . . . ತಮ್ಮ ತಾಯಿಗಳನ್ನು ಕಾಣದೆ ಬೇಳುಗರೆಯುತ್ತಿದ್ದವು (ಪಂಗಾಳ್ಕ. ೪೨೩). [ಬೇಳ್$_2$ + ಕರೆ$_1$]

**ಬೇಳ್ಪ$_1$** 'ಬೇಡು$_1$' ಪರಾ.

**ಬೇಳ್ಪ$_2$** 'ಬೇಳ್$_1$' ಪರಾ.

**ಬೇಳ್ಪೊಲ** (ನಾ). (?) : ಈಶಂಗೆ ಬೇಳ್ಪೊಲನಾಮಂ ಶಿವಭಕ್ತನಾತನೆಲೆ ಸದ್ಭಕ್ತಂ (ಶಂಖಾಶ. ೫೯). 'ಬೆಳ್ವೊಲ' ಹೋ. [ ? + ಪೊಲ]

**ಬೇಳ್ಮೆ** (ನಾ). ಮರುಳುಮಾಡುವಿಕೆ ; ಮೋಸಗೊಳಿಸುವಿಕೆ : 'ಬೇಳ್ಮೆ ಮಾತು' ಪರಾ. [ಬೇಳ್$_2$ + —ಮೆ$_3$]

**ಬೇಳ್ಮೆಮಾತು** (ನಾ). ಮರುಳುಮಾಡುವ ನುಡಿ : ನೀಚರ ಬೇಳ್ಮೆ ಮಾತನ್ನು ಕೇಳಿ ಕೆಡತಕ್ಕದ್ದೇ ಹೆಂಗಸರ ಹಣೆಯಲ್ಲಿ ಬರೆದಿದೆ (ಅದೂಟ. ೧೬೩). [ಬೇಳ್ಮೆ + ಮಾತು$_1$]

**ಬೇಳ್ವ$_1$** 'ಬೇಡು$_1$' ಪರಾ.

**ಬೇಳ್ವ$_2$** 'ಬೇಳ್$_1$' ಪರಾ.

**ಬೇಳ್ವಿ$_1$**, ಬೇಳುವೆ$_1$ (ನಾ). ೧. ಹೋಮ ; ಯಜ್ಞ : ಸೊಗಯಿಸುವ ಗಂಗಾದ್ವಾರದೊಳ್ ಮುನಿಜನಂಗಳ್ ಬೇಳ್ವಿಗಳ್ಗೆ ಪದ್ರವಂಗೆಯ್ವ ನಿಶಾಟಕೋಟಿಯಂ ನಿಶಿತಶರಕೋಟಿಯಿಂದಮುಚ್ಚಾಟಿಸಿ (ಶಂಖಾ. ೪-೧೫ ವ). ೨. ಆಹುತಿ ; ಬಲಿ : ಪೊಟಿಲ ಬೇಳ್‌ಕಟ್ಟೆಗಳ್ ಮನೆಯ ಬೇಳ್‌ಕಟ್ಟೆಗಳ್, ಎಲ್ಲಮುವರ್ ಪೊರೆಗಲಸಿಯಿರ್ದತ್ತು . . . ದೇವತೆಗಳದಜಿಂದಮಿನ್ ಕೊಳ್ಳರೆವಿಮ್ಮೆತ್ತ ಬೇಳ್ವಿಯನ್ (ಅಂತಿಗೂ. ೯೫. ೯೯೦). **ಬೇಳುವೆ$_1$** : ೧. ಬೇಳುವೆಯ ನೋಡೆನುತ ಮುನಿಗಳತಿಕೋಪದಿಂ ಸರ್ಪಹೋಮವನು ಮಾಡೆ (೦೩ಜಂ. ೨೦-೯) ; ಅಶ್ವಮೇಧದ ಬೇಳುವೆಯ ಸಂಭ್ರಮದ ಧಾಳಾಧೂಳಿಯಲಿ ತಿವಿದಾಡಿದವು ಜಿಹ್ವೆಗಳು ಹುತವಹನ (ತೊರಾ. ೦-೬-೯೬); ಬೇಳುವೆಗಳ ಭಸ್ಮದ ಕೊಪ್ಪರಿಗೆಯ ಸಾಲೊಪ್ಪಿದುವು ದುರ್ಗದೊಳಗೆ (ಕಂಪಬಿ. ೦೦-೦೩೯). [ಬೇಳ್$_1$ + —ವಿ]

**ಬೇಳ್ವಿ$_2$**, ಬೆಳುವೆ, ಬೇಳುವೆ$_2$ (ನಾ). ೧. ಮರುಳು ; ಮಾಯೆ ; ಮಾಟ : ತಲೆದೂಗಿ ಕೈರವಶ್ಯಾಮಳಂ ಬೇಳ್ವಿಯಿಂದಳವುದೋರದೆ ಮತ್ತೆ ನಮ್ಮನೇ ನುತಿಗೈದು ಪಳೆನು ತಳ್ಕೈಸುತ್ತೆ ಮಾತ್ರದಂ ಮರಸಿದಂ (ಶರಬ. ೦೯-೨೦).

**ಬೆಳುವೆ :** ೧. ವಿಲಾಸದ ನಿವಾಸವು ಬೆಳುವೆಯ ಬೆಳಸಿರಿ . . . ಎನಿಪ ಬೆಲೆವೆಣ್ಗಳೈತಂದರು (ಸೌಂದಪು. ೬-೩೦). ☞ ಇದು ಛಂದಸ್ಸಿಗಾಗಿ ಮಾಡಿಕೊಂಡಿರುವ ರೂಪ. **ಬೇಳುವೆ$_{2}$:** ೩. ವಶೀಕರಣಮಾಡುವ ಉಪಾಯ,–ಸಾಧನ : ವೀಳೆಯದೊಳಗೆ ಮದ್ದುಂಟೊ ನಿನ್ನರಸನಾ ತೋಳೊಳುಂಟೊ ವಶ್ಯಯಂತ್ರ ಬೇಳುವೆಯುಂಟೊ ತಿಲಕದೊಳಲ್ಲದರಿಂ ಬೇಳಾಗಿ ನೀನು ಸಿಕ್ಕುವೆಯ (ಭರತ. ೯-೦೦೦) ; ತಾಳಿ ಹೊನ್ನುಂಗುರದವ ಬರೆ ಮೋಹದ ಬೇಳುವೆಯನು ನೀ ತಳೆದು ಮೇಲಾದೊಡವೆಯ ಸೆಳೆಕೊಂಡಾತನ ಚಾಳಿಸಿ ಬಿಡು ನೀ ಮಗಳೆ (ಕಂಪರಿ. ೬-೦೫೬). ೪. ದಡ್ಡತನ; ಬೆಪ್ಪುತನ ; ಮೂರ್ಖತನ : ಸದ್ಗುರುಮುಖವನಱಿಯದಿಹ ಬೇಳುವೆಯ ಬುದ್ಧಿಯಲಿ . . . ಬಿಳ ತನ್ನೋಲಗಕೆ ನಡೆತಂದು ಮಂತ್ರಿಪ್ರಕರಕಿಂತೆಂದ (ಅಕ್ರೂತ. ೬-೯). ೫. ಮೋಸ; ವಂಚನೆ : ಹೇಳುವೆನು ಕರ್ಣಂಗೆ ಶಕ್ರನ ಬೇಳುವೆಗೆ ಸಿಲುಕದ ಪರಿಯನೆಂದಾಲಿಸುತ ರವಿಯಿದ್ದ ನಿತ್ತಲು (ಕುಮ್ಮಾಅ. ೬೦೩. ೨೩-೨); ಬಲಿಭೂಪತಿಯಾಳುವ ನಾಡೊಳೆಲ್ಲಿಯುಂ . . . ಬೇಳುವೆ ಕೈತವಂ ಕಳವು ಹಾದರವಿಲ್ಲನೃತಂಗಳಿಲ್ಲ (ದಶಾವ. ೬-೯೬); ಪುಲಿಕೇಶಿಯು . . . ಲಾಟರ ಆಟವನ್ನು ನಿಲ್ಲಿಸಿ ಮಾಳವರ ಬೇಳುವೆಯನ್ನು ಮುರಿದು ಗುರ್ಜರರನ್ನು ಜರ್ಝರ ಮಾಡಿದನು (ಶಕ್ಕೋಚಿ. ೦೨೨). ೬. ಮೈಮರೆವು ; ಎಚ್ಚರವಿಲ್ಲದಿರುವಿಕೆ: ಅವುಗಿದೇವಯ್ಯನರಸಿ ರುದ್ರಮ್ಮಗೆ ಕವಿದುದು ನಿದ್ರೆ ಬೇಳುವೆಯು (ಅಮುಗಾಂ. ೪-೩೬). ೭. ಕಳವಳ ; ಸಂತಾಪ : 'ಬೇಳುವೆಗೊಳ್' ಪರಾ. ೮. ಹಿಂಸೆ ; ಕಾಟ ; ಪೀಡೆ: ಕಾಮನ ಬೇಳುವೆಗೆ ಬೆಂಡಾದುದಿಬ್ಬರ ಧೈರ್ಯವಡಿಗಡಿಗೆ (ಕುಮ್ಮಾಅ. ೯-೩೬).

**ಬೇಳುವೆಮಾಡು**=ಮಾಟಮಾಡು : ತೋಳ ಮೇಲೆಸೆವ ನರ್ತಕಿ ಸಹಸ್ರಗಳಾಗೆ ಬೇಳುವೆ ಮಾಡಿ ನೋಟಕರ ತಾಳದಾಡಿದನಾ ಶಕ್ರನ ವಿಕ್ರಿಯದಾಳಾಪವೇನ ಪೇಳುವೆನು (ಅನಂತ. ೬-೦೬೭). **ಬೇಳ್ವೆಯ ಬೂದಿ** = ಬೇಳುವೆ ಬೂದಿ : ಅರಲ ಪರಾಗಮೆಂಬ ಪೊಸ ಬೇಳ್ವೆಯ ಬೂದಿಯನಿಟ್ಟು ಮಲ್ಲಿಕಾತರುಣಿಯ ಭೃಂಗನೀಲಮಣಿಮಾಲೆಯನೊಯ್ವಲರೆಂಬ ಚೋರನಂ ಪರಭೃತನಂದು ಕಂಡು (ರಾಜಶೇ. ೦೦-೨೩). [ಬೇಳ್$_{2}$ + –ವೆ]

**ಬೇಳ್ವಮಾತು,** ಬೇಳುವೆಮಾತು (ನಾ). ಮರುಳಂ ಮಾಡುವ ಮಾತು; ಬಣ್ಣದ ಮಾತು : ಅವರ ಬೇಳ್ವಮಾತಿಗೆ ಮರುಳಾಗಿಬಿಟ್ಟು, ಆ ಹೆಳವೀನೇ ಹೆಂಡತೀಂದುಕೊಂಡುಬಿಟ್ಟರೆ, ನನ್ನ ಮನೆ ಹಾಳಾಗಿಹೋಗಿ ಬಿಡುತ್ತಲ್ಲಯ್ಯಾ! (ಉಷಾಹ. ೬೨) ; ಸಾವಿತ್ರಮ್ಮ ಏನೂ ಅರಿಯದವರು. ಬೇಳ್ವಮಾತಿಗೆ ಬಹಳ ಬೇಗ ಮೋಸಹೋಗುತ್ತಾರೆ (ತಾಯಿ. ೩೨). **ಬೇಳುವೆಮಾತು :** ಈ ಬೇಳುವೆಮಾತಿಗೇನಂತೆ ? ನೀನು ಪಾರ್ಟು ಮಾಡಿದರೆ ಅವಳಿಗೆ ಸೊನ್ನೆ ಬಿದ್ದಾಗೆ? (ತುರಾಯ. ೬).

[ಬೇಳ್ವ$_{2}$ + ಮಾತು$_{1}$]

**ಬೇಳ್ವೊಲ** (ನಾ). (ಯಜ್ಞಭೂಮಿಯಂತಿರುವ) ಮಟ್ಟಸವಾದ ಭೂಮಿ (?) : ಆಳ್ವಲಮುಳ್ಳೊಡಶ್ವಬಲಮಿಲ್ಲ ಭಟಾಶ್ವಬಲಂಗಳುಳ್ಳೊಡಂ ತೋಳ್ವಲಮಿಲ್ಲ . . . ಆಳ್ವಸಗೆಯ್ಯದೇಕೆ ಬಲಿವರ್ ಮಲೆವರ್ ಮಲೆಯೆಂಬುದೇನದಂ ಬೇಳ್ವೊಲಮಾಗೆ ಪಯಂ ತುಱಿದನಲ್ಲನೆ ಲಕ್ಷ್ಮಣನೆಂಬ ರಾವಣಂ (ಎಕ. VII, ಶಿಕಾ. ೦೩೬-೨೭; ?; ಶಾಶಮಂ. ೯೯ ನೋ). 'ಬೇಳ್ವೊಲ' ಮೋ. [ಬೇಳ್$_{1}$ + ಪೊಲ]

**ಬೇಱ್,** ಬೇರ್$_{2}$, ಬೇಱು (ಸಪೂರೂ). 'ಬೇಱ್' ಎಂಬುದಕ್ಕೆ ಸಮಾಸಗಳಲ್ಲಿ ಬರುವ ಆದೇಶರೂಪ : 'ಬೇಱೂರ್', 'ಬೇರ್ಕೆಯ್' ಪರಾ. **ಬೇರ್$_{2}$ :** 'ಬೇರ್ವಣೆ' ಪರಾ. **ಬೇಱು :** ಒಂದಱಲ್ಲಿ ಒಂದು ಬಿಚ್ಚಿ ಬೇಱುಮಾಡಬಾರದಾಗಿ ಪ್ರಾಣಲಿಂಗ ಒಂದೆ ಉಪದೇಶವೊಂದೆ ಕ್ರಿಯಾಕರ್ಮ ಒಂದೆ ನೀವಿನ್ನಾವುದ ಬೇಱುಮಾಡಿ ನುಡಿವಿರಯ್ಯಾ (ಕನ್ನಕ. ೯. ೨೦-೯೬); ಕುವಲಯವೈರಿ ಪಂಕರುಹಮಿತ್ರನ ಶೇಷರಸಾಪಹರ್ತೃಮೆಂದವನಿಜನಂ ಪಿಸುಣ್ಗೆಡೆವೆಲೇ ಜಗದಂಬಿಕೆ ಬೇಱುಮಾಡಿದರ್ (ಅಪಂಪು. ೪-೦೦೬). 'ಬೇಱುದೋಱು', 'ಬೇಱುಪಡು' ಪರಾ.

[< ಬೇಱ್$_{1}$. / ತಮಿ. ಮಲ. ವೇಱು; ತೆಲು. ವೇರು. ವೇಱು; ಕೋತ. ವೆರ್]

**ಬೇಱಿರಿಸು** (ಕ್ರಿ). ಪ್ರತ್ಯೇಕವಾಗಿ ಇರಿಸು ; ಬೇರೆಯಾಗಿರಿಸು : ವ್ರತಹೀನರನನಿಬರುಮಂ ಕ್ಷಿತಿಪತಿ ಬೇಱಿರಿಸಿ ಮಾನ್ಯರಂ ಮನ್ನಿಸೆ (ಆದಿಪು. ೦೩-೦೩); ಕರಗಿ ಕಾಸಿದ ವಿದ್ಯೆಯನು ಬೇಱಿರಿಸಿ ಶುದ್ಧಬ್ರಹ್ಮವನು ಕಂಡರಿಸಿದಂತಿರಲೆಸೆವ ಶಿವನನು ಕಂಡನಬುಜಭವ (ಕುಮ್ಮಾಕ. ೬-೦೬); ಸರ್ವಜ್ಞ ಸರಸಿಜೋದರ ಕಂತುರತಿಗೆ ಗಾಂಧರ್ವವಿವಾಹವ ಮಾಡಿ ನಿರ್ವಾಣಗೊಟ್ಟು ಬೇಱಿರಿಸೆಂದು ಮುನಿ ಗರ್ವದಿಂ ಬಿನ್ನಯಿಸಿದನು (ಮೋಹತ. ೦೩-೬೨). [ಬೇಱ್$_{2}$ + ಇರಿಸು]

**ಬೇಱು** 'ಬೇಱ್' ನೋ.

**ಬೇಱುಕೆಯ್** 'ಬೇರ್ಕೆಯ್' ನೋ.

**ಬೇಱುಗಾಣ್** (ಕ್ರಿ). ಬೇರೆಯಾಗಿ ಕಾಣು ; ಪ್ರತ್ಯೇಕವಾಗಿ ಗಣಿಸು : ಭಂಡಾರ ಬೊಕ್ಕಸ ಮನೆಗಳ ನೋಳ್ಪನಾ ಭಂಡಾರಿಗಳು ನೋಡುವಂತೆ ಕಂಡವರೆಲ್ಲರೀ ನೃಪನದೆಂಬರು ಬೇಱುಗಂಡೆಣಿಸುವನು ತಾನೊಳಗೆ (ಭರತ. ೭೩-೩೩). [ಬೇಱು (< ಬೇಱ್$_{1}$) + ಕಾಣ್]

**ಬೇಱುದೋಱು** (ಕ್ರಿ). ಬೇರೆಯಾಗಿ ತೋರು,— ಕಾಣಿಸು ; ಪ್ರತ್ಯೇಕವಾಗಿ ನಿಲ್ಲು : ಗುರುಮಹಾತ್ಮೆಯೊಳಗೆ ಶಿಷ್ಯ ಬೆರಸಿ ಬೇಱುದೋಱದೆ ಗುರುವೆ ಶಿಷ್ಯ ಶಿಷ್ಯನೆ ಗುರುವಾದ ನಿತ್ಯಸೇವ್ಯನು (ಶಿವಗೀ. ೯೬-೪೬೭).

[ಬೇಱು (< ಬೇಱ್$_{1}$) + ತೋಱು]

**ಬೇಱುನುಡಿ** (ಕ್ರಿ). ಪ್ರತ್ಯೇಕವಾಗಿ ಹೇಳು ; ಬೇರೆಯಾಗಿ ಹೇಳು : ಬೇಱುನುಡಿವೆಡೆಯೊಳಾ ವ್ಯತಿಪೃಥಗ್ವಿನಾಂತರಮೆಂಬ ಪೆಸರ್ಗಳಕ್ಕುಂ (ಮಂಗರಾ. ೦೩೩-೬೦). [ಬೇಱು (< ಬೇಱ್$_{1}$) + ನುಡಿ$_{1}$]

**ಬೇಱುಪಡು** 'ಬೇರ್ಪಡು' ನೋ.

**ಬೇಱುವೋಗು** (ಕ್ರಿ). ಪ್ರತ್ಯೇಕವಾಗಿರು : ಬೇಱುಮನವಾದೀತಂದು ಬೇಱುವೋದಳು ನೋಡಾ ಅವ್ವಾ ಕಮ್ಮರಿವಱವಳು ನೋಡಾ ಅವ್ವಾ (ಸಳವ. II, ೨೦೨-೩೬). [ಬೇಱು (<ಬೇಱ್$_{1}$)+ಪೋಗು$_{1}$ (< ಪೋ$_{1}$)]

**ಬೇಱೂರ್** (ನಾ). ಅನ್ಯಸ್ಥಳ; ಪರವೂರು : ಸೋಂಬನಂ ಮೆಚ್ಚಿ ಬೇಱೂರ್ಗೆ ಪೋದ ಸೂಳೆಯಂತುಯ್ಯಲಾಡುವ ರಣದೇವತೆಯರಿಂ (ಕಾವ್ಯಸಾ. ೩೨೯ ಕೂದ್ರಕ) ; ಬೇಱೂರ್ಗೆ ಪೋದ ನಲ್ಲರ ನೆನೆದು ದೂಱುಸುವ ನೀಱೆಯರ ನಿಡುಸುಯ್ಯ ಗಡಣದಿಂ (ಕಬ್ಬಿಗ. ೩೪); ಮಗಳ್ಗೆ ಬುದ್ಧಿ ಪೇಳ್ದು ನಿಜರಮಣನವೆರಸಿ ಬೇಱೂರ್ಗಮಂ ಪೋದಾಗಳ್ (ವೃಷಪ. ೯-೬೦ ಪ).

[ಬೇಱ್ + ಊರ್]

**ಬೇಱ್$_{1}$,** ಬೇರೆ$_{1}$ (ನಾ). ೧. ಪ್ರತ್ಯೇಕವಾದುದು ; ಸಂಬಂಧವಿಲ್ಲದುದು: ದೂಱಲಱಿಯೆನು ಸುಭಟರಿಗೆ ಮನ ಬೇಱ್ ನುಡಿ ಬೇಱಾಯ್ತು ಸಮರದೊಳು (ಕುಮ್ಮಾಭೀ. ೬-೮). ೨. ವಿಶಿಷ್ಟವಾದುದು : ಆ ಕಾಂತೆಗಂದು ನಯಂ ಬೇಱ್ ಬೆಡಂಗು ಬೇಱ್ ಪೊಳೆವಂಗಚ್ಛಾಯೆಯುಂ ಬೇಱ್ ತೊಟ್ಟನೆ ಮೆಯ್ವೊೞೆ ಬೇಱ್ (ಆದಿಪು. ೬-೨೩) : ಸಿರಿ ಗಿರಿಜಾತೆ ಶಾರದೆ ಶಚಿಮುಖ್ಯರು ಸರಿಯಲ್ಲವಿವಳಚ್ಚು ಬೇಱ್ (ಮೋಹತ. ೦೦-೩). ೩. ಇನ್ನೊಬ್ಬ ವ್ಯಕ್ತಿ; ಅನ್ಯವ್ಯಕ್ತಿ : ನೀಂ ಬೇಱಿಮಗೆ ಸುಯೋಧನನೇಂ ಬೇಱೆಯೆ (ಶಂಶಾ. ೬-೬೩) ; ಇವಳೆನ್ನ ಶರೀರದಿಂ ಬೇಱಲ್ಲಳ್ (ಕಾದಂಪೂ. ೯೦೬) ; ನೀಂ ಬೇಱಾಂ ಬೇಱೆಂಬ ಭಿನ್ನಬುದ್ಧಿ ನಿನಗಂ ನನಗಂ ಬೇಡ (ಶಂಶಕಂ. ೦೨೩-೪). (ಗು). ೪. ಪ್ರತ್ಯೇಕವಾದ : ಮರಕತಮಣಿವಿರಚಿತ ವಿಮಲಭಿತ್ತಿ ಪೊಗಬಲ್ಕರಮಿರಿದಟು ಬೇಱ್ ಭಿತ್ತಿ (ಆದಿಪು. ೪-೩೦ ವಚನ) ; ಬೆಡಂಗುಗಳ ಬೇಱ್ ಭಂಗಿಗಳ ಲಳಿಗಳಿದೇಂ ಕಡುಜಾಣನೆ

(ಎಕ. II· ೦೪೩-೦೦೬; ೯೮೭); ಆನು ಚೆನ್ನಮಲ್ಲಿಕಾರ್ಜುನಂಗೆ ಮದುವಳಿಗೆ ಎನಗೆ ಬೇಱು ಶೃಂಗಾರವೇಕೆ (ಶುಹಾದೇ· ೩. ೩೬-೬೮) ; ದೇಹಚ್ಛಾಯೆ ಗುಂಟೇ ಬೇಱು ಬೇಷ್ಟೆ (ಶುಬ್ಯಾಶ. ೦೨-೯೪)· **ಬೇರೆ₁ :** ೪. ಮಹತ್ ವರ್ಗದಲ್ಲಿ ಮೊದಲಿನಿಂದಲೂ ಮೆರೆಯುತ್ತಿದ್ದ ಪ್ರತ್ಯಯಗಳನ್ನು ಜಾಗ ಬಿಟ್ಟು ಬೇರೆಡೆಗೆ ಹೋಗುವಂತೆ ಮಾಡಿತು ! (ದ್ರಾಶಿ. ೨೬೬) ; ನೋಟಗಳ ಕಗ್ಗಟ್ಟು ಬಿಚ್ಚಿದಂತಾಗಿ ಮೇಣ್ ಆಟವಾಡುತಲಿಹುದು ಬೇರೆಡೆಯು ಬಿಗಿದು (ಕಾಂಜರ. ೯೩-೫೫).

**ಬೇಱುವೇಱು, ಬೇರೆಬೇರೆ, ಬೇಱುಬೇಱು** (ದ್ವಿರುಕ್ತಿ) : ವಾಸುಗಿಯುಂ ಮಱಿಯಲಾಱದೆ ಬೇಸಱುಗುಂ ದೇಶಿ ಬೇಱುವೇಱುಪ್ಪುದಱಿಂ (ಕಬಕಾ. ೦-೯೬); ದ್ವಾರವತಿಯಲ್ಲೂ ಜೋಡಿದೇವಾಲಯಗಳು ಕಟ್ಟಲ್ಪಟ್ಟವು. ಆದರೆ ವೇಲಾಪುರಿಯಲ್ಲಿದ್ದಂತೆ ಬೇರೆಬೇರೆಯಾಗಿರದೆ, ಒಂದನ್ನೊಂದು ಅಂಟಿ ಇದ್ದವು (ಶಾಂತಲಾ. ೦೩೮) ; ಪಂಚೇಂದ್ರಿಯವೃತ್ತಿಗಳೆ ಬೇಱುಬೇಱು ರೂಪಂದಳೆದುವೆನಿಪಂಗುಳಿಗಳಿಂ ಮನಂಗೊಳಿಸುವ ಕರಕಮಲಂಗಳು ಚಂದ್ರಾಪೀಡಂ ನೀಡೆ (ಕಾದಂಬ. ೫೮).

[ದೇ.॥ ಕೊಡ. ಬೋರೆ ; ತೆಲು. ವೇರೆ]

**ಬೇಱು₂, ಬೇರೆ₂** (ಅ). ೧. ಪ್ರತ್ಯೇಕವಾಗಿ : ಪದಿನೆಂಟುಕೋಟಿರಥಂ ಬೆರಸು ಬೇಱೊಡ್ಡಿ ನಿಂದರ್ (ಕಂಕಶಾ. ೦೦-೫೬ ಪ) ; ಎನಗೆ ಭೀಮಾರ್ಜುನರವೊಲು ನೀನನುಜನಲ್ಲದೆ ಬೇಱು ನಿನ್ನಲಿ ಮನವಿಭೇದವ ಬಲ್ಲೆನೇ (ಕುವ್ಯಾಶೀ. ೨-೩೯) ; ಕಟ್ಟೆಂಬ ನುಡಿ ಮಾಲೆಗಾರ್ತಿಯರೊಳು . . . ಕುಟ್ಟೆಂಬ ನುಡಿ ವ್ರೀಹಿಯೊಳಲ್ಲದೆ ಬೇಱು ದಿಟ್ಟಸಲಾ ನಾಡೊಳಿಲ್ಲ (ಕಂಪಶ. ೨-೦೫)· **ಬೇರೆ₂ :** ೨. ಕೂಡ ; ಜೊತೆಗೆ : ಅರ್ಯಕ :— ಆಯುಧಪಾಣಿಗಳು ಬೇರೆ (ಅರ್ಯಕ. ೦೫). [<ಬೇಱು₁]

**ಬೇಟ್ ?** (ನಾ)· (?) : ಸುಗವಳ್ಳಿಯಾಯ್ಯುಯ್ಯಗಾವುಣ್ಡ ಗೋಸಾಸ ವಿಟ್ಟಂ ಅವಿತ್ರ್ರಸಿಗೆ ಬೇಟಂ ಕಾಲ ಕಟ್ಟಿ ಕೊಟ್ಟರ್ (ಪ್ರಿಅ. ೦೯೪೨. ೬೦-೦೨ ; 1002). [ ? ]

**ಬೇಟಿ, ಬೇಳಿ** (ನಾ). ೧. ಹೇಡಿ ; ಅಂಜುಪುರುಕ : ಕಾಳಾಂತಕನಂತೆ ನಾಡೆ ಹಳಿಯುಂ ಹರಿಯುಂ ಕಡುಕೆಯ್ದು ಪಾಯ್ದು ಮೂಱಾಂತಿಱ ವಲ್ಲಿ ಬೇಟಿ ಭಯದಿಂ ಬಿಱಿತೋಡ[ನೆ] ನಿನ್ನಧೀಶ[ನುಂ](ಪರ್ಶಪು. ೯-೨೯). **ಬೇಳಿ :** ೨. ನಪುಂಸಕ ; ಷಂಡ : ಖೂಳನಂ ಮೂಳನಂ ಮೋಟನಂ ಮುಕ್ಕನಂ ಕೀಳುಜಾತಿಯನು ಪುರುಳಿಲ್ಲದ ಮೆಯ್ಯಾದೊಡಂ ಬೇಳಿ ಬೆಲೆ ಯಿತ್ತೊಡವನಂ ಕಾಮನೆಂಬ ದುಶ್ಶೀಲೆಯರು ಕಣ್ಗೆಸೆದರು (ಹತಳ. ೯-೯೯). [<ಪೇಡಿ₁]

**ಬೇಟೂರ್** (ನಾ). ಒಂದು ಊರಿನ ಹೆಸರು : ಬೇಲೂರರಾ ಮಗಂ ಮಾವಪ್ಪನ್ ಪ್ರಭುಗೌಡ ಬೇಟೂರಾ ಎಮ್ಮೆಯ ತೊಕಳೊಳ್ ಗುದ್ದಿ ಅನ್ನಿಱಿದು ಸತ್ತನ್ (ಎಕ. X, ಕೋಲಾರ. ೨೨೬-೨ ; ಸು. 950?).

[ ? + ಊರ್]

**ಬೇಟ್ಟು** 'ಬೇಡು₁' ಪರಾ.

**ಬೈ₁** 'ಬಯ್₁' ನೋ.

**ಬೈ₂** 'ಬಯ್₂' ನೋ.

**ಬೈ₃** 'ಬಯ್₃' ನೋ.

**ಬೈ₄** (ನಾ). (ಬತ್ತದ) ಒಣಹುಲ್ಲು : 'ಬೈಸೂಡಿ', 'ಬೈಹುಲ್ಲು' ಪರಾ. [←ತುಳು. ಬೈ, ಬಯಿ]

**ಬೈಂಡು** (ನಾ). ಪುಸ್ತಕಕ್ಕೆ ಹೊದಿಸಿದ ರಟ್ಟು.— ಮೇಲುಹೊದಿಕೆ : ಬಂಗಾರದಂಚು ಮೊರೊಕೊ ಬೈಂಡು (ಅರಕೋ. ೩೩)· [← ಇಂ. Bind]

**ಬೈಂದವ** (ಗು). ೧. ಬಿಂದುವಿಗೆ ಸಂಬಂಧಿಸಿದ. (ನಾ). ೨. [ಶೈವ] ನಿರ್ಮಲತೆ ; ಶುದ್ಧತೆ : ಷಡಧ್ವಾತೀತವಾದ ನವಚಕ್ರೋರ್ಧ್ವಭಾಗದ ಪರಿಗ್ರಹಶಕ್ತಿಯ ಮಸ್ತಕಾಗ್ರದಲ್ಲಿ ನಿರ್ಮಲ ಪರಿಪೂರ್ಣ ಪರಪ್ರಕಾಶಮಹಾ ಶಕ್ತ್ಯವಿನಾಭೂತ ನಿಜವಸ್ತುವಿನಲ್ಲಿ ಬೈಂದವಾನಂದಾದಿ ವಿಲಕ್ಷಣೆಯಿಂದಾದ ನಿಜಶಿವಾಭಿವ್ಯಕ್ತಿಯಿಂದಾದ (ಶಿಪಶ್ರ. ೦-೨); ಪರಮನಾದಾಕ್ಷರದಿ ವಿಕಲಸ್ವರಗಳಡಗಿ ಕರ ರಂಜಿಸದೆಯಿರ್ಪ ಮಾರ್ಗ್ಯೆಯಿಂ ಬೈಂದವಂ ಪರಬಿಂದುಮಾಧ್ಯದೊಳಡಂಗಿದಂವದಿ (ಅಕೋಜ್ಜ. ೦೬-೯೩). 'ಬೈಂದವ ಶರೀರ' ಪರಾ. [ಸಂ.]

**ಬೈಂದವಶರೀರ** (ನಾ). [ಶೈವ] ಮಲರಹಿತವಾದ ಶರೀರವುಳ್ಳವನು ; ನಿರ್ಮಲದೇಹಿ : ಒಂದಾಣವದ ಮಲವನುಳ್ಳ ವಿಜ್ಞಾನಕಲರೆಂದೆರಡು ಮಲದಿನಾ ಪ್ರಳಯಾಕಲರು ಕೇಳ ಕಂದಾ ತ್ರಿಮಲದ ಸಕಲಾಕಲರು ಮೂವರಿವರೊಳಗೆ ವಿಜ್ಞಾನಕಲರೂ ಬೈಂದವಶರೀರರುಮನಾದಿಮುಕ್ತರು ಶಿವನೊಳೊಂದಿ ಶಿವಸಮದ ಸಾಯುಜ್ಯಪದಮಂ ಪಡೆವುತೇಂದೆಂದು ದುಃಕರ್ಮದೂರರಾಗಿರ್ಪರ್ಕೈ (ಅಕ್ಕ್ಷಿ. ೬-೬-೬೦) ; ಪ್ರಥಮವರ್ಗದಲ್ಲಿ ರುವವರು ಪರಿಪಕ್ವಮಲರಾದರೆ ಬೈಂದವಶರೀರವೆಂಬ ಶುದ್ಧಸೃಷ್ಟಿಶರೀರ ವನ್ನು ಕೆಲವರಿಗೆ ಕೊಟ್ಟು . . . ಪಂಚಕೃತ್ಯಾಧಿಕಾರ ಮೊದಲಾದುವುಗಳನ್ನು ಅನುಗ್ರಹಿಸುವನು (ಹಿಂವಶಾ. ೨೯೯)· [ಸಂ·]

**ಬೈಕ** (ನಾ). ತಿರುಪೆ ; ಯಾಚನೆ ; ಭಿಕ್ಷೆ : "ಭೈಕ್ಷದೊಳ್ ಬೈಕಂ" (ಕಶಾಶಿ. ೩೮); ಅವಜ್ಞೆಗೆಯ್ದು ನಾಯ್ಗುಗದೆಡೆಯೊಲ್ಲವಂ ಪುಗಿಸಿ ಬಯ್ಕ[ಬೈಕ]ದ ಭಾಜನಮಾಗೆ ಮಾಡಿ ತೊಟ್ಟಗೆ ವಿಭು ಸಾಯೆ ಪೊಯ್ದು ಕಿವಿಯಂ ಒಡಿದೂಡಲೊಡರ್ಚಿ ಬಂದನೇ (ಸುಕುಮಾ. ೨-೬೩). 'ಬೈಕಂಗುಳಿ', 'ಬೈಕಂದಿರಿ' ಪರಾ. [< ಸಂ. ಭೈಕ್ಷ]

**ಬೈಕಂಗುಳಿ** (ನಾ). ಭಿಕ್ಷೆ ಬೇಡುವುದೇ ವೃತ್ತಿಯಾಗುಳ್ಳವನು; ತಿರುಕ; ಯಾಚಕ : ಈತಂ. . . ಬೈಕಂಗುಳಿ ಬೇಡಿ ಪೊಱಲೆಲ್ಲವಂ ತೊಟಲ್ದು ಬಸಿಱು ಪೊರೆವೊಂ (ಪಪ್ಯಾರಾ ೯೬-೬); ಕಿಸುಗುಳನಪ್ಪ ಬೈಕಂಗುಳಿ [ಪಾಠಾ· ಬಯ್ಕಂಗುಳಿ, ಬೆಸನಂಗುಳಿ, ಬೈಸಂಗುಳಿ]ಯುಮಂ ಕಟ್ಟಪಟ್ಟ ಕಳ್ಳನುಮಂ ಕಂಡಿದು ಮುನ್ನಿನ ಪಾಪದ ಫಲಮಿದೀಗಳಿನ ದೋಷದ ಫಲಮೆಂದು ಬಗೆದಱಿದು ನೆಗಟ್ಟುದು ಗಹನಮೆ (ಶೀಪಸಂ· ೯೬-೬).

[ಬೈಕ +—ಕುಳಿ₃]

**ಬೈಕಂಗೊಳ್** (ಕ್ರಿ)· ಭಿಕ್ಷೆಯನ್ನು ಪಡೆ : ಮುಂದಿಟ್ಟು ಚಿತ್ರಮಂ ತಿರಿತಂದುದುಮಂ ಪಾಳಮಿರ್ದು ಬೈಕಂಗೊಳ್ವೊಂದಯದೆ ಕೊಂಡುದು ಮನದೇನೆಂದುನ್ನತಿ ಮಾಡಿ ಪೊಗಟ್ಟೆ (ಅರಿಪು· ೦೯-೬೬); ತಿರಿವುದು ಬೈಕಂಗೊಳ್ವುದು ಮೊರೆವುದು ಮಱಿದುಂಬಿಯುಲ್ವು (ಕಾವ್ಯಾವ· ೫೯೫).

[ಬೈಕ + ಕೊಳ್₁]

**ಬೈಕಂದಿರಿ** (ಕ್ರಿ)· ತಿರುಪೆಗಾಗಿ ಸುತ್ತು ; ಭಿಕ್ಷೆಗಾಗಿ ಅಲೆದಾಡು : ಇರ್ವರುಂ. . . ಕಪ್ಪಡಮುಟ್ಟು ಬೈಕಂದಿರಿದಿನ್ನಪ್ಪೊಡಮೋದುವವೆಂದು ತಾಯ್ಗೆ ನುಡಿದೊಡಂ (ಪಪ್ಯಾರಾ· ೩-೦). [ಬೈಕ + ತಿರಿ₁]

**ಬೈಕಂಬೇಡು** (ಕ್ರಿ)· ಭಿಕ್ಷೆಕೇಳು; ಯಾಚಿಸು : ಓದಿವ ರಾಳಂ ಕಿವಿವಿಡಿದಾಡಿದ ಚೋಳಂ ವಿನಷ್ಟರಾಜ್ಯಂ ಬೈಕಂಬೇಡಿದ ಕಳಿಂಗಂ (ಎಕ. VII, ಶಿಕಾರಿ. ೦೩೬-೨೦; 1114) ; ಕೆಲರ್ . . . ಪೆಱರ ಮನೆಗಳಂ ಪೊಕ್ಕಯ್ಯೋಯೆಂದು ಬಯ್ಕಂ[ಬೈಕಂ] ಬೇಡಿ ಇಕ್ಕದ ಮನೆಯಂ ಬಯ್ದು . . .ಸತ್ತು ದುರ್ಗತಿಗಳ್ಗೆ ಸಲುವರ್ (ಕಶಾರ. ೧೮೨). [ಬೈಕ + ಬೇಡು₁]

**ಬೈಕೆ** 'ಬಯ್ಕೆ₁' ನೋ.

**ಬೈಕೆಗೊಡು** (ಕ್ರಿ). ನಿಕ್ಷೇಪವಾಗಿಡು; ನ್ಯಾಸವಾಗಿರಿಸು : ನ್ಯಾಸಾಪಹಾರ ಬೈಕೆಗೊಟ್ಟರ್ಥಪ್ರಮಾಣಮಂ ಮಱೆದು ಕಿಱಿದಂ ಬೇಡ್ಡದನಿತೆಯೆಂಬುದು (ತಸೂತ್ರ. ೨೩೮) ; ಏನಂ ಬೇಡುವೆನೆಂದಬ್ಜಾನನೆ ಬಗೆ ದೆವಱ ಬಗೆಗೆ ಬಂದೊಡಮೆಯನೊಲ್ದಾನೆರೆದಾಗಳೆ ಕುಡಿಮೆಂದಾ ನೃಪತಿಗೆ ಕೈಕೆ ಬೈಕೆ ಗೊಟ್ಟಳ್ ಮೆಚ್ಚಂ (ಕುರಾಮಪು. ೩-೬೬). [ಬೈಕೆ (<ಬಯ್ಕೆ₁) + ಕೊಡು₁]

**ಬೈಗಳು** 'ಬಯ್ಗುಳ್' ನೋ.
**ಬೈಗು** 'ಬಯ್ಗು' ನೋ.
**ಬೈಗುಂಬೊಟ್ಟು** 'ಬಯ್ಗುಂಬೊಟ್ಟು' ನೋ.
**ಬೈಗುಗಪ್ಪು** (ನಾ). ಸಾಯಂಕಾಲದ ಮಬ್ಬುಗತ್ತಲೆ; ಸಂಜೆಗತ್ತಲು: ಮತ್ತೊರ್ದಿನಂ, ಬೈಗುಗಪ್ಪಿಳಿಯುತ್ತಿರೆ ಸೀತೆ ಮರ್ಬಿನೊಳ್ ಕಂಡಳಾ ರಸೊ ಕಲ್ಲ ನೆತ್ತಿಯೊಳ್ (ಶ್ರೀರಾಚ. ೦೯೩-೦೦೬); ಆ ವೇಳೆಗಾಗಲೆ ಬೈಗುಗಪ್ಪು ಪಸರಿಸುತ್ತಿತ್ತು (ಪುಮ್ಮ.ಹ. ೪೦).
[ ಬೈಗು (< ಬಯ್ಗು) + ಕಪ್ಪು₄ (< ಕರ್ಪು₁) ]
**ಬೈಗುಗೆಂಪು** 'ಬಯ್ಗುಗೆಂಪು' ನೋ.
**ಬೈಗುದಂಪು**: (ನಾ). ಸಂಜೆಯ ತಂಪು,— ಕೈಶ್ಯ 1 ಬೈಗುದಂಪೆಲರ್ಗೆಳಸಿ ಸೊಗಸಿ, ಮಲೆವಲೆಗೋಡಿಸೊಂದರೆಯು ತುದಿಗೇರಿ ಕುಳಿತು ವಿಶ್ರಮಿಸಿಕೊಳುತಿರ್ದೊರ್ವಿರ್ಗಳಾಪ್ರಿಯಂ ಬೆರಗಾದನೊಂದದ್ಭುತವನನು ಭವಿಸಿ (ಶ್ರೀರಾಚ. ೨೦೪-೨೬೬).
[ ಬೈಗು (< ಬಯ್ಗು) + ತಂಪು₂ (< ತಣ್ಪು₂) ]
**ಬೈಗುಮಬ್ಬು** (ನಾ). = ಬೈಗುಗಪ್ಪು: ವ್ಯಾಘ್ರಮುಂ . . . ನೋಡುತಿರೆಯಿರೆ ಬೈಗುಮಬ್ಬಿಂ ತೀವ್ರುತ್ತಿರ್ದ ದೃಶ್ಯವಿಸ್ತೀರ್ಣಮಂ, ಕಂಡುದೇನನೋ! (ಶ್ರೀರಾಚ. ೦೯೩-೯೩).
[ ಬೈಗು (< ಬಯ್ಗು) + ಮಬ್ಬು (< ಮರ್ಬು₂) ]
**ಬೈಗುಮಲ್ಲಿಗೆ** (ನಾ). ಸಂಜೆಯಲ್ಲಿ ಮಾತ್ರ ಅರಳುವ ಒಂದು ಬಗೆಯ ಮಲ್ಲಿಗೆ; ಸಂಜೆಮಲ್ಲಿಗೆ: ಕಾಂತಾಜನಂ . . . ಅಲರ್ದ ಬೈಗುಮಲ್ಲಿಗೆಯ ಚೆಲ್ವಿನಂತೆ ತುಱುಬಿಂ ಕಣ್ಗೆಡ್ಡಮಾದುದು (ರಾಶಾಕ್ಯ. ೩೨-೦೦).
[ ಬೈಗು (< ಬಯ್ಗು) + ಮಲ್ಲಿಗೆ./ತುಳು. ಬೈಯಮಲ್ಲಿಗೆ ]
**ಬೈಗುಪೊಳ್ತು** 'ಬಯ್ಗುಂಬೊಟ್ಟು' ನೋ.
**ಬೈಗುಳ್** 'ಬಯ್ಗುಳ್' ನೋ.
**ಬೈಗುಳ** 'ಬಯ್ಗುಳ್' ನೋ.
**ಬೈಗುಳು** 'ಬಯ್ಗುಳ್' ನೋ.
**ಬೈಗೆ₁** 'ಬಯ್ಗು' ನೋ.
**ಬೈಗೆ₂** (ನಾ). ಒಂದು ಬಗೆಯ ಮೀನು: ಮಾರ್ಕೆಟ್ಟಿನಲ್ಲಿ ಸದಿಯ ಮೀನು ಅಲ್ಲದೆ ಸಮುದ್ರದ ಕಾಣೆ, ಕುರ್ಚ್, ಬೈಗೆ, ಬೂತಾಯಿ ಎಲ್ಲ. . . ತಂದಿದ್ದರು (ಹೊಸಕ್ಕ. ೩೬). [ ? ]
**ಬೈಜರು** (ನಾ). (?): ಗಂಧದ ಮಡುವಿನೊಳ್ಮಿಟ್ಟ ಕೈ ಹಗರಿ ಸೊಸ್ಸಂಧಿಸಿ ತಾಂಬೂಲಬೆಂಡ ತಂದು ಬಾಗಿಲಗಿಕ್ಕಿ ಕುಚಗಿರಿಗೊಯ್ದಾಗ ನಿಂದು ಬೈಜರಿಗೆ ನೂಕುವರು (ಅಕ್ಷುಂ. ೬-೮೪). [ ? ]
**ಬೈಜಿಕ** (ಗು). ಬೀಜದಿಂದ ಉಂಟಾದ; ರೇತಸ್ಸಿನಿಂದ ಹುಟ್ಟಿದ: 'ಬೈಜಿಕದೋಷ' ಪರಾ. [ಸಂ.]
**ಬೈಜಿಕದೋಷ** (ನಾ). "ಗರ್ಭಾಧಾನಾದಿ ಸಂಸ್ಕಾರಗಳಿಂದ ಗರ್ಭ ಮತ್ತು ಬೀಜಸಂಬಂಧವಾದ ದೋಷಗಳ ನಿವಾರಣವಾಗಿ ಜೀವನು ಪಾಪವಿಮುಕ್ತನಾಗುತ್ತಾನೆ. ಬೀಜವೆಂದರೆ ಶುಕ್ಲ ಶೋಣಿತಗಳು. ತತ್ಸಂಬಂಧವಾದ ನಿಷಿದ್ಧಕಾಲಮೈಥುನಾದಿ ಪ್ರಯುಕ್ತವಾದ ದೋಷವೇ ಬೈಜಿಕದೋಷ" (ಶಾರದ. ೩೩): ಕುಲೀನಮನೆತನದ ಹೆಣ್ಣುಮಕ್ಕಳ ಜೀವನವನ್ನು ಹಾಳುಮಾಡುವಲ್ಲಿ ನಿಮ್ಮ ತಂದೆಯು ನಿಷ್ಣಾತನು . . . ಈ ಬೈಜಿಕದೋಷದ ಪರಂಪರೆಯನ್ನು ನಾನು ತಡೆಯಲೇ ಬೇಕು (ಸಂಶಯ. ೬೩). [ ಸಂ. ]
**ಬೈಟಕ್ಕು** 'ಬೈಠಕು' ನೋ.
**ಬೈಠಕ್** 'ಬೈಠಕು' ನೋ.
**ಬೈಠಕ್‌ಕೋಣೆ** 'ಬೈಠಕಕೋಣೆ' ನೋ.
**ಬೈಠಕ್‌ಖಾನೆ** 'ಬೈಠಕುಖಾನೆ' ನೋ.
**ಬೈಠಕ್‌ಮುಷ್ಕರ** (ನಾ). ಯಾವುದಾದರೊಂದು ಕೋರಿಕೆಯ ಪೂರೈಕೆಗಾಗಿ ನೆಲದ ಮೇಲೆ ಪಟ್ಟುಹಿಡಿದು ಕುಳಿತು ಮಾಡುವ ಸಂಪು: "ಧರಣಿಸಂಪು, ಬೈಠಕ್‌ಮುಷ್ಕರ" (Stay-in-Strike. ಕನ್ರಾ. ೬೯).
[ಬೈಠಕ್ (< ಬೈಠಕು) + ಮುಷ್ಕರ]
**ಬೈಠಕ** 'ಬೈಠಕು' ನೋ.
**ಬೈಠಕಕೋಣೆ**, ಬೈಠಕ್‌ಕೋಣೆ (ನಾ). ಮನೆಗಳಲ್ಲಿ ಅತಿಥಿಗಳನ್ನು ಕೂರಿಸುವ ಸ್ಥಳ; ದಿವಾನಖಾನೆ: ನನ್ನನ್ನು ಬೈಠಕಕೋಣೆಗೆ ಪುನಃ ಎಳೆದುಕೊಂಡು ಹೋದಳು (ಹೂಪಾಠ. ೦೨೦). **ಬೈಠಕ್‌ಕೋಣೆ**: ಬೈಠಕ್‌ಕೋಣೆಗಳಲ್ಲಿ ನಿಲುಗನ್ನಡಿಗಳೂ ಪಟಗಳೂ ಇಟ್ಟಿವೆ (ಬ್ರಿಂಕ್. ೦೦೬).
[ಬೈಠಕ (< ಬೈಠಕು) + ಕೋಣೆ₂ (< ಕೋಣ್)]
**ಬೈಠಕಖಾನೆ** 'ಬೈಠಕುಖಾನೆ' ನೋ.
**ಬೈಠಕಿ** 'ಬೈಠಕು' ನೋ.
**ಬೈಠಕು**, ಬೈಟಕ್ಕು, ಬೈಠಕ್, ಬೈಠಕ, ಬೈಠಕಿ (ನಾ). ೧. ಕುಳಿತುಕೊಳ್ಳುವಿಕೆ; ಕೂರುವಿಕೆ: ಅರಸುಗಳ ಬೈಠಕಿಗೆ, ಇನ್ನೊಂದು ಎತ್ತರವಾದ ಮಂಚವಿಡುತ್ತಾರೆ (ಮೈಸೂ. ೬೯). ೨. ಕುಳಿತುಕೊಳ್ಳುವ ಜಾಗ,— ಸ್ಥಳ. ೩. (ಸಂಘ, ಸಮಿತಿ ಮುಂತಾದುವುಗಳ ಸದಸ್ಯರು ಸೇರುವ) ಸಭೆ; ಅಧಿವೇಶನ: ಗಜೇಂದ್ರಸಿಂಹನ ಬೈಠಕಿನಲ್ಲಿ ಇಂದು ಮುಂಜಾನೆಯಿಂದ ಯುದ್ಧಸಮಿತಿಯ ಬೈಠಕು ನಡೆದಿದೆ (ಇವಾಶಾ. ೦೪೦). ೪. (ಸಂಗೀತ, ನೃತ್ಯ ಮುಂತಾದುವುಗಳ) ಕಚೇರಿ; ಗೋಷ್ಠಿ: ಸುಂದರಪ್ರಸಾದಿಯ ಮನೆಯಲ್ಲಿ ಚಿಕ್ಕ ಬೈಠಕು ಕೂಡ ಆಗಿ ವಸಂತನು . . . ಐದುರೂಪಾಯಿನೋಟನ್ನು ಆಕೆಯ ಕೈಗೆ ಹೊಡೆದನು (ಗಂಡಾಯ. ೨೦೬); ಆಕೆ ಅನೇಕ ಕಡೆ ಸಂಗೀತಬೈಠಕುಗಳಿಗೆ ಹೋಗಬೇಕಾಗುತ್ತಿತ್ತು (ನಾಂಗೀ. ೨೯). **ಬೈಟಕ್ಕು**: ೪. ವೇಷ ಭೂಷಣಗಳಿಲ್ಲದೆ ಒಬ್ಬೊಬ್ಬರು ಒಂದೊಂದು ಪಾತ್ರವನ್ನು ವಹಿಸಿ ಕುಳಿತ ಎಡೆಯಲ್ಲಿಯೇ ಈ ಪ್ರಸಂಗವನ್ನು ವಾಚನ ಮಾಡಬಹುದು . . . ಇದಕ್ಕೆ 'ಬೈಟಕ್ಕು' ಎಂದೂ ಹೆಸರಿದೆ (ಯಕ್ಷಗಾ. ೦೬); ನನ್ನ ಸರಿಸಮನಾಗಿ ಹಾಡಬಲ್ಲವನು ನಿಮ್ಮಲ್ಲಿ ಯಾರಿದ್ದಾರೆ . . . ಎಂದು ಗಂಭೀರವಾಗಿ ಹೇಳಿ ಅಲ್ಲೇ ಬೈಟಕ್ಕಿಗೆ ಕುಳಿತ (ಕನ್ನಡ. I, ೨೩೦). **ಬೈಠಕ್**: ೪. ಅನೇಕ ಉತ್ತರಾದಿ ಗಾಯಕರು, ತಮ್ಮ 'ಬೈಠಕ್' (ಕಚೇರಿ)ನಲ್ಲಿ, ತ್ಯಾಗರಾಜರ ಮತ್ತು ಪುರಂದರದಾಸರ ಕೃತಿಗಳನ್ನು ಹಾಡಲು ಮೊದಲುಮಾಡಿದ್ದಾರೆ (ಸಂಗೀತಂ. ೦೬೩); ಪೆಟ್ಟಿಗೆಯನ್ನು . . . ನಾನಾಸಾಹೇಬರು ಬೈಠಕಿನ ರೀತಿಯಲ್ಲಿ ಕುಳಿತು ಬಾರಿಸಲಿಕ್ಕೆ ಪ್ರಾರಂಭಿಸಿದರು (ಹಂಡುಬ. ೯೯). **ಬೈಠಕ**: ೩. ಅ.ಭಾ.ರಾಷ್ಟ್ರೀಯಸಮಿತಿಯು ೧೯೨೧ರ ನವೆಂಬರದಲ್ಲಿ ದಿಲ್ಲಿಯಲ್ಲಿ ಕೂಡಿದ ಬೈಠಕದಲ್ಲಿ . . . ಬಾರ್ಡೋಲಿ ಇದು ಒಂದು ವಿಶಿಷ್ಟ ತಾಲೂಕ ಎಂದು ನಿಶ್ಚಯಿಸಲ್ಪಟ್ಟಿತು (ಕಾಂಗ್ರೆಸ. ೦೬). ೪. ಅವರು . . . ಹಾಡುವ ಸಮಾರಂಭಕ್ಕೆ ಬೈಠಕಯೆಂದನ್ನುತ್ತಾರೆ (ಕಶಾಗ. ೦೯೬); ಅವನ ಒಂದು ಬೈಠಕನ್ನು ಎಲ್ಲರೂ ಕೇಳಲು ಸಾಧ್ಯವಿಲ್ಲ (ಬಾಲಶ್ರ. II, ೦೦೦೩). ೫. ಬಿಡಾರ; ಠಿಕಾಣೆ; ಮೊಕ್ಕಾಂ: ಶ್ಯಾಮರಾಯ ಊರಿಗೆ ಬಂದು ವಾಡೆಯಲ್ಲಿ ಬೈಠಕ ಹಾಕಿದ ದಿನವೇ, ರಾಚಪ್ಪ ತನ್ನ ಕಚೇರಿಯನ್ನು . . . ಸ್ಥಳಾಂತರಿಸಿದ (ದೀಶತ. II, ೮೬). **ಬೈಠಕಿ**: ೩. ಇಂದಿನ ಬೈಠಕಿಯಲ್ಲಿ ಇದೇ ವಿಷಯದ ಚರ್ಚೆಗೆ ಆರಂಭವಾಗಿತ್ತು (ಶಾಲಾಹ. ೨). [ ← ಹಿಂ. ಮರಾ. ಬೈಠಕ್ ]
**ಬೈಠಕುಖಾನೆ**, ಬೈಠಕ್‌ಖಾನೆ, ಬೈಠಕಖಾನೆ (ನಾ). ಸಮಾರಂಭ, ಸಭೆ ಮುಂತಾದವುಗಳನ್ನು ನಡೆಸಲು ಅನುಕೂಲವಾಗಿರುವ

ವಿಶಾಲವಾದ ಹಜಾರ.– ಪಡಸಾಲೆ ; ದಿವಾನಖಾನೆ : ಮೆಹರ ಉನ್ನೀಸೆಯು ತನ್ನ ಸ್ವಂತ ಬೈಠಕುಖಾನೆಯಲ್ಲಿ ಕುಳಿತುಕೊಂಡು ಚಿತ್ರಪಟಗಳನ್ನು ಬರೆಯುತ್ತ ತಾಂಬೂಲಚರ್ವಣವನ್ನು ಮಾಡುತ್ತಿದ್ದಳು (ಕಪಾಕುಂ. ೬೩). **ಬೈಠಕ್‌ಖಾನೆ:** ತಮ್ಮ ಬೈಠಕ್‌ಖಾನೆಯಾದ ಮಟಮಂಟಪದೊಳಗೆ ಆದರದಿಂದ ಕರೆದೊಯ್ದು ದಿವ್ಯಾಸನದಲ್ಲಿ ಕುಳ್ಳಿರಿಸಿ ಕುಶಲಪ್ರಶ್ನೆಗಳನ್ನು ಮಾಡಿದರು (ಶ್ರೀರಾಮ. ೨೮); ಅತಿಥಿಗಳೆಲ್ಲರೂ ಬೈಠಕ್‌ಖಾನೆಯಲ್ಲಿ ಸೇರಿದಾಗ ಆ ಬೇಹಾಗ್ ಹಾಡನ್ನು ಹಾಡುವಂತೆ ನನ್ನನ್ನು ಕೇಳಿಕೊಳ್ಳುತ್ತಿದ್ದಳು (ಶಿಬಂಧ. II, ೮೩). **ಬೈಠಕಖಾನೆ :** ಎರಡು ಅಂತಸ್ತಿನ ಬೈಠಕ ಖಾನೆ ; ದೊಡ್ಡ ದೇವರ ಮನೆ (ಕೇಪಿಚಿ. ೪) ; ಡಾಕ್ಟರ ರಂಗಣ್ಣನ ಮನೆಯ ಬೈಠಕಖಾನೆ (ಹೊಸಂಸಾ. ೧೪೦).

[ ಬೈಠಕು + ಖಾನೆ. / ಹಿಂ. ಬೈಠಕ್‌ಖಾನಾ ]

**ಬೈತ** ' ಬಯ್$_1$ ' ಪರಾ.

**ಬೈತಲಿಕ್ಕು** (ಕ್ರಿ). ಬೈತಲೆ ತೆಗೆ : ಬೈತಲಿಕ್ಕಿದೆನು ನಾನೆ ನಿನ್ನ ಕೈಯಾರ (ಅರಳು. ೨೯೨–೩). [ ಬೈತಲೆ ( < ಬಯ್ತಲೆ ) + ಇಕ್ಕು ]

**ಬೈತಲೆ** ' ಬಯ್ತಲೆ ' ನೋ.

**ಬೈತಲೆದೆಗೆ** ' ಬಯ್ತಲೆದೆಗೆ ' ನೋ.

**ಬೈತಲೆಬಟ್ಟು**, ಬೈತಲೆಬೊಟ್ಟು (ನಾ). ಬೈತಲೆಗೆ ಧರಿಸುವ ಆಭರಣ ; ಬೈತಲೆಮಣಿ : ಜಡೆಬಿಲ್ಲೆ ಬೈತಲೆಬಟ್ಟು (ಸಿದ್ಧಾ. ೦೦–೦೩). **ಬೈತಲೆ ಬೊಟ್ಟು :** ಮಂದಗಮನೆಗೆ ಮಂದಾರದ ಬೈತಲೆಬೊಟ್ಟಂ . . . ಸಮೆದು ಸಿಂಗರಿಸಲೊಡಂ (ರಾಶಾಕ. ೦೩೦–೦೦).

[ ಬೈತಲೆ ( < ಬಯ್ತಲೆ ) + ಬಟ್ಟು ]

**ಬೈತಲೆಬಟ್ಟೆ** 'ಬೈತಲೆವಟ್ಟೆ' ನೋ.

**ಬೈತಲೆಬೊಟ್ಟು** 'ಬೈತಲೆಬಟ್ಟು' ನೋ.

**ಬೈತಲೆಮಾವು** (ನಾ). ಒಂದು ಬಗೆಯ ಮಾವು : ಪುಳಿಮಾವು ಭಾವಿಸ ಲಡಿಕೆಮಾವು ಗಿಳಿಮಾವು ಬೈತಲೆಮಾವು (ಶಪನೋ. ೨೪–೪೪).

[ ಬೈತಲೆ ? + ಮಾವು ]

**ಬೈತಲೆವಟ್ಟೆ**, ಬೈತಲೆಬಟ್ಟೆ (ನಾ). ಬೈತಲೆ ತೆಗೆದಿರುವ ಸ್ಥಳ : ಪ್ರಸರಿಸಿದುನ್ನತತಿಮಿರಪ್ರಸರದೊಳೆಡೆಸಿಲ್ಕಿ ಮಿಂಚುವ ಕಿಸುಸಂಜೆಯವೋಲ್ ಮಿಸುಗುವ ಬೈತಲೆವಟ್ಟೆಯೊಳೆಸೆದುದು ಸಿಂದೂರಲೇಖೆ ತಮ್ಮಾಲಿಕೆಯಾ (ಉದ್ಭಟ. ೩–೪೩). **ಬೈತಲೆಬಟ್ಟೆ :** ತೊಲಗದ ಕತ್ತಲೆಯಿಂ ಪೊಕ್ಕಲೆವಿಂದು ಮರೀಚಿಯಂತೆ ತತ್ಕಾಂತೆಯ, ಬೈತಲೆಬಟ್ಟೆಯೊಳೆಸೆದುದು ಕೋಮಲೆ ಯೊರ್ವಳೆಮರ್ಚಿದೆಳೆಯ ಮುತ್ತುಮಣಿಯ ಸಾಲ್ (ಉದ್ಭಟ. ೯–೨೮).

[ ಬೈತಲೆ ( < ಬಯ್ತಲೆ ) + ಬಟ್ಟೆ$_1$ ]

**ಬೈತಲೆವಣಿ** ' ಬಯ್ತಲೆವಣಿ ' ನೋ.

**ಬೈತು** ' ಬಯ್$_1$ ' ಪರಾ.

**ಬೈತ್ರ** 'ಬಹಿತ್ರ' ನೋ.

**ಬೈದಿತಿ** (ನಾ). ಗಿಡಮೂಲಿಕೆಯ ಔಷಧಿಯನ್ನು ಕೊಡುವವಳು : ದೇಯಿಬೈದಿತಿಯು ಕೂಡಲೆ ಎದ್ದು ತಾನು ತಂದಿದ್ದ ಔಷಧದ ಪೊಟ್ಟಳವನ್ನು ಬಿಚ್ಚಿ ಅಮ್ಮಣ್ಣನು ಮೊದಲು ಹಚ್ಚಿದ್ದ ಮದ್ದನ್ನು ತೊಳೆದು ತೆಗೆದಳು (ಕೋಚೆಚ. ೩). [< ಬೈದ್ಯ + –ಇತಿ$_2$ (<–ಇತ್ತಿ)]

**ಬೈದೆ** ' ಬೈದ್ಯ ' ನೋ.

**ಬೈದ್ಯ**, ಬೈದೆ, ವಯಿದ್ಯ (ನಾ). ೧. ವೈದ್ಯ; ಡಾಕ್ಟರು : ವೈದ್ಯ ವೆಂಬುದರ ರೂಪವೇ ಬೈದ್ಯ (ತುಳುನಾ. ೨೨೨); ತಿಮ್ಮಣ್ಣ ಬೈದ್ಯನ ಮನೆಯೊಳಕ್ಕೆ ಹೋದನು (ಕಾದ್ಯ. ೬೩). ೨. ಒಂದು ಜಾತಿಯ ಹೆಸರು ಮತ್ತು ಆ ಪಂಗಡದವರು ತಮ್ಮ ಹೆಸರಿನ ಕೊನೆಯಲ್ಲಿ ಸೇರಿಸಿ ಕೊಳ್ಳುವ ಶಬ್ದ : ಬಿಲ್ಲವರನ್ನು ಬೈದ್ಯ ಎಂದೂ ಕರೆಯುತ್ತಾರೆ (ತುಳುನಾ. ೨೨೨); ಅವಳಿಗೆ ಏಳು ವರ್ಷ ವಯಸ್ಸು ಎಂದಾಗ ಪಂಜದಲ್ಲಿನ ಪಯ್ಯ ಬೈದ್ಯನಿಗೆ ಕೈ ಹಿಡಿಸಿ ಕೊಟ್ಟುಬಿಟ್ಟದ್ದೇವೆ (ಕೋಚೆಚ. ೩). **ಬೈದೆ :** ೧. ಇವರು . . . ಗಿಡಮೂಲಿಕೆಯ ಔಷಧಿಗಳನ್ನು ಕೊಡುವ ಉದ್ಯೋಗವನ್ನು ಮಾಡುತ್ತಿದ್ದುದರಿಂದಲೂ ಬೈದ್ಯ(ಬೈದೆ) ಎಂದು ಕರೆಯಲ್ಪಟ್ಟರು (ತುಳುನಾ. ೨೨೨). **ವಯಿದ್ಯ :** ೨. ವಾಸ್ತೇವವಯಿದ್ಯ ನಾರನವಯಿದ್ಯ . . . ಯಿಂತಿನಿಬರು . . . ಕೊಟ ಶಾಸನದ ಕ್ರಮ ವೆಂತೆಂದರೆ (ಸೌಇಇ. IX–ii, ೪೩೦–೦೭ ; 1406); ನಾರಣವಯಿದ್ಯನ ಹಾಳಿಯ × × × (ಎಕ. VIII, ತೀರ್ಥಹ. ೦೬೩–೦೦ ; 1424).

[ < ಸಂ. ವೈದ್ಯ./ತುಳು. ಬೈದ್ಯ ]

**ಬೈನಾಡು** (ನಾ). ಬಯಲುಸೀಮೆ,–ಪ್ರದೇಶ ; ಪಾಂಡಿ, ಕೊಂಗು, ವಯನಾಡು, ತುಳು ಮತ್ತು ಪುನ್ನಾಡು ಎಂಬ ಕೇರಳದ ಐದು ಸೀಮಾಪ್ರದೇಶಗಳಲ್ಲಿ ಒಂದು; ಈಗಿನ ವೈನಾಡು : ಬೈನಾಡ ಸೀಮೆ ತಮ್ಮ ಅಧೀನ ಎಂದು, ತಾವು ಫಿರಿಯಾದಿ ಮಾಡಿದ್ದು ನಾವು ವಿಚಾರಣೆ ಮಾಡಿದ್ದರಲ್ಲಿ. . . ನಕಲು ನಮಗೆ ಬಂದು ಸೇರಿತು (ರಾತೇಂದ್ರ. ೦೬೦).

[←ಮಲ. ವಯನಾಡು]

**ಬೈನಿ** 'ಬಯಿನೆ' ನೋ.

**ಬೈನೆ** ' ಬಯಿನೆ' ನೋ.

**ಬೈಪಣೆ** (ನಾ). ಕೊಟ್ಟಿಗೆಯಲ್ಲಿ ದನಕರುಗಳಿಗೆ ಮೇವು ಹಾಕುವುದಕ್ಕಾಗಿ ಕಟ್ಟಿರುವ ತೊಟ್ಟಿ; ಗೋದಲೆ; ಗೊಂತು : ದನಗಳ ಮೋರೆ ಎಟಕುವಲ್ಲಿ ನೆಲವನ್ನು ಮಣ್ಣಿನಿಂದ ಏರಿಸಿ ಬೈಹುಲ್ಲು ಹಾಕಲು ಬೈಪಣೆ ಮಾಡಿರುವರು (ಶಾಕಗ. ೪೦). [←ತುಳು. ಬೈಪಣೆ]

**ಬೈಬಲ್** 'ಬೈಬಲ್ಲು' ನೋ.

**ಬೈಬಲ್ಲು**, ಬೈಬಲ್ (ನಾ). ಕ್ರೈಸ್ತರ ಧರ್ಮಗ್ರಂಥ : ಪೂರ್ವೋತ್ತರ ಮೀಮಾಂಸೆಗಳೆರಡೂ. . . ಬೈಬಲ್ಲಿನ ಓಲ್ಡ್ ಟೆಸ್ಟಮೆಂಟ್ ಮತ್ತು ನ್ಯೂ ಟೆಸ್ಟಮೆಂಟ್ ಇದ್ದ ಹಾಗೆ (ಶಾರದ. ೦೬೦) ; 'ಶತ್ರುವು ಬಲದ ಗಲ್ಲದ ಮೇಲೆ ಹೊಡೆದರೆ ಎಡಗಲ್ಲವನ್ನೂ ಮುಂದು ಮಾಡಿ'ಯೆಂದು ಬೈಬಲ್ಲು ಹೇಳುತ್ತದೆ (ಧರ್ಮಸಾ. ೦೪೮). **ಬೈಬಲ್ :** ಕ್ರೈಸ್ತರ ಒಂದು ಸಾಂಪ್ರದಾಯ . . . ಬೈಬಲ್‌ವಾಕ್ಯವನ್ನು ಪ್ರಮಾಣವಾಗಿ ತೋರಿಸಿ ಸ್ತ್ರೀಯರಲ್ಲಿ ಆತ್ಮ ವಿಲ್ಲನೆಂದು ವಾದಿಸುತ್ತಾರೆ (ಕೇಶಾಕ. ೦೪೩). [←ಇಂ. Bible]

**ಬೈಮಾತು** (ನಾ). ಬಯ್ಯುವ ಮಾತು; ತೆಗಳಿಕೆ; ನಿಂದೆ ; ಕನ್ನಡದಲ್ಲಿರುವ ನಮ್ಮ ಬೈಮಾತುಗಳನ್ನು ನೋಡು. ತೀರಾ ಮಿದು, ಸಪ್ಪೆ, ನೀರಸ, ನಿಷ್ಪ್ರಯೋಜಕ (ಶಶರಾ. II, ೦೬೩).

[ಬೈ$_2$ (<ಬಯ್$_2$) + ಮಾತು$_1$]

**ಬೈಮೂಗ** 'ಭೈಮೂಗು' ನೋ.

**ಬೈಯ** 'ಬಯ್$_3$' ನೋ.

**ಬೈಯು** 'ಬಯ್$_2$' ನೋ.

**ಬೈರ** 'ಬೈರವ' ನೋ.

**ಬೈರಗ** (ನಾ). ಒಂದು ಬಗೆಯ ಪಕ್ಷಿ : ಆ ಪನಂಗಳೊಳು ಶುಕ. . . ಬೈರಗ . . . ವಾಸಕ ಮೊದಲಾದ ಚಿತ್ರರೂಪಪಕ್ಷಿಗಳುಳ್ಳ ಪಕ್ಷಿಕುಲಂಗಳುಂ (ಶಪೀಕ. ೨೨೨). 'ಭೈರಿ' ಪರಾ. [ ? ]

**ಬೈರಗಿ** 'ಬೈರಿಗೆ' ನೋ.

**ಬೈರಗಿಬೀಟಿ್** (ಕ್ರಿ). (ರಂಧ್ರಮಾಡುವ ಸಾಧನದಿಂದ ಕೊರೆದಂತೆ) ತೂತು ಬೀಳು ; ರಂಧ್ರವಾಗು : ಧಾರಾಮದದಿಂದೆ ನೆಲಂ ಬೈರಗಿ ಬೀಟ್ಟಂದದಿಂದೆ ಬಿಡುತಪ್ಪ ಮಹಾವಾರಣಘಟೆಯಿಂ ನಿಚ್ಚಂ ಕಾರಂ ಕೈಕೊಂಡು ಮೆರೆವುದಾತನ ರಾಜ್ಯಂ (ಸೂಕ್ತಿಸು. ೩–೪).

[ಬೈರಗಿ (<ಬೈರಿಗೆ) + ಬೀಟ್$_1$]

**ಬೈರವ, ಬೈರ** (ನಾ). ೧. ಶಿವ; ಈಶ್ವರ: ಭಕಾರಕ್ಕೆ ಬಕಾರಂ. . . ಭೈರವ ಬೈರವ, ಭೋಗ—ಬೋಗ (ಶಬ್ದ. ೨೩೩ ಪ್ರಯೋ). **ಬೈರ:** ೨. ಒಬ್ಬಾತನ ಹೆಸರು: ಕಿಬ್ಬಂ ಬನ್ನನ ಬೈರನಯ್ದ್ದ ಜಯಮುಂ...ಮಾಟ್ಟಿಂ (ಎಂ. IV (R), ಕೃಕ್ಕಪ. ೪೦-೬; ೯೦೦). 'ಬೈರವೋಜ' ಪರಾ. [<ಸಂ. ಭೈರವ]

**ಬೈರವಾಸ** 'ಬೈರಾಸು' ನೋ.

**ಬೈರವೋಜ** (ನಾ). ಒಬ್ಬಾತನ ಹೆಸರು: ಗೋಪಾಲದೇವನ ಮಗ ಗಯಂಣನು ಬೈರವೋಜಂಗೆ . . . ಕೊಟ್ಟ ಭೂಮಿಯ ಕ್ರಮ (ಎಕ. VII, ಶಿಕಾರಿ. ೯೪-೩: ?). [ಬೈರ (<ಭೈರವ) + ಓಜ$_1$ (<ಒವರ್ಜು)]

**ಬೈರಾಗಿ** (ನಾ). ಸಂಸಾರದಲ್ಲಿ ಆಸಕ್ತಿಯನ್ನು ಕಳೆದುಕೊಂಡವನು ; ವಿರಕ್ತ; ವಿರಾಗಿ: "ಬೈರಾಗಿ—ವೈರಾಗಿನ್" (ಶಬ್ದಕೋ. ೩೨); ಕೆಲ ಬೈರಾಗಿಗಳೂ ಮಾಂತ್ರಿಕರೂ ನಾವು ಚಿನ್ನವನ್ನು ಮಾಡಬಲ್ಲೆವೆಂದು ಹೇಳುತ್ತಾರೆ (ಮುಂಬಯಿ. ೪-೦೦೬); ಬೈರಾಗಿಯು ಮಂಟಪದಲ್ಲಿ ಯೋಗಪಟ್ಟವನ್ನು ಹಾಕಿಕೊಂಡು ಕುಳಿತಿದ್ದನು (ಶ್ರೀಣಾಚು. ೯೨). [<ಸಂ. ವೈರಾಗಿನ್]

**ಬೈರಾಗಿಣಿ** (ನಾ). ವಿರಕ್ತೆ; ವಿರಾಗಿಣಿ : ಬೈರಾಗಿಣಿಯೂ ನಾನೂ ನಾಳೆ ನಗರಕ್ಕೆ ಹೊರಡುತ್ತೇವೆ (ದೌಲತ್. ೦೦೦). [< ಸಂ. ವೈರಾಗಿಣೀ]

**ಬೈರಾಗಿತನ** (ನಾ). ವಿರಕ್ತಿ; ವೈರಾಗ್ಯ: ಬೈರಾಗಿತನಕ್ಕೆ ಮರುಳಾದವಗೆ ಮನೆಯು ಹೆಂಗಸಿನ ಹಂಗೆ ? (ಶಿಣಶ. ೫೯). [ಬೈರಾಗಿ + — ತನ]

**ಬೈರಾವಳಿ** (ನಾ). ಒಂದು ಬಗೆಯ ಬತ್ತ : ಕೊಡಗು ಮೊಳಲಕಂತೆ ಹರಿಹಿನ ಡಣ್ಣಗಳೊಡನೊಪ್ಪುತಿಹ ಬೈರಾವಳಿಯು ಕಡುಸೊಬಗಾಂತಿಹ ಚಂದ್ರೋದಯಶಾಲಿಯೆಡೆವಿಡದೆಸೆಯುವರ್ತಿಯುಲಿ (ಕಂಪಶಿ. ೩-೭೦). [ ? ]

**ಬೈರಾಸ** 'ಬೈರಾಸು' ನೋ.

**ಬೈರಾಸು, ಬೈರವಾಸ, ಬೈರಾಸ, ಬೈರ್ವಾಸ** (ನಾ). ೧. ಮೈಮೇಲೆ ಹೊದೆಯುವ ವಸ್ತ್ರ ; ಉತ್ತರೀಯ: ಕತ್ತಿ, ಎಲೆಅಡಿಕೆ ಚೀಲ, ಒಂದು ಬೈರಾಸು. ಇಷ್ಟನ್ನು ತಾನೇ ಹುಡುಕಿ ತೆಗೆದುಕೊಂಡು ಗುಡಿಸಲಿನಿಂದ ಹೊರಬಿದ್ದ (ಕುಂಕಶೂ. ೦೨೯). ೨. ನೀರು ಹೀರಲು ಅನುಕೂಲವಾಗಿರುವಂತೆ ಜಾಳಂಜಾಳಾಗಿ ಹೆಣೆದ ವಸ್ತ್ರ; ಪಾಣಿಪಂಚೆ : ತಲೆಯೊರಸಲು ಬೈರಾಸನ್ನು ಹುಡುಕಿ ತಂದಿಟ್ಟು . . . ಕರೆಯುವಾಗ ಪಂಡಿತರು ಬಚ್ಚಲು ಮನೆಯೊಳಗೆ ಬಂದಿದ್ದರು (ಅನುರ. ೯೦); ಮೊಳಕೈವರೆಗೆ ಒಂದು ಅಂಗಿ. ಅರೆಗಳು ಮೊಳದ ಒಂದು ಚುಂಗು ಪಂಚೆ . . . ಹೆಗಲ ಮೇಲೊಂದು ಬೈರಾಸು (ಟಾವೆಲ್) (ಹಕ್ಕಿನೋ. ೦೩). **ಬೈರವಾಸ :** ೧. ಬಿದ್ದ ದೋತ್ರವನ್ನೂ ಬೈರವಾಸವನ್ನೂ ಎತ್ತಬೇಕು (ಪಗಗ. ೬೬). **ಬೈರಾಸ :** ೧. ಸನ್ನ ಮೈಯನ್ನು ಒಂದು ಬೈರಾಸದಿಂದ ಮುಚ್ಚಿಕೊಂಡೆ (ಬಿಟ್ಟಿ.ಚ. ೬೪); ಸೇವಕ ಕಿರುಪಂಚೆ ಮತ್ತು ಬೈರಾಸಗಳನ್ನು ತಂದು ಪ್ರಭುಗಳಿಗೆ ಕೊಟ್ಟ (ಹುಲಿಹಾ. ೩೬). **ಬೈರ್ವಾಸ :** ೨. ಹಚ್ಚಡ ಚಿಂದಿಕುಪ್ಪಸಗಳನಿಂಬಿಟ್ಟು ಸ್ವಚ್ಛವ ಬೈರ್ವಾಸದೊಡನೆ ಬೆಚಚ್ಚದೆ ಮಿಂದವರು (ಮೋಹಶ. ೩-೪೩).

[ < ಸಂ. ಬಹಿರ್ವಾಸಸ್ . / ತುಳು. ಬೈರಾಸ್, ಬಯಿರಾಸ್; ತೆಲು. ಬೈರವಾಸ, ಬಯಿರವಾಸ]

**ಬೈರಿ, ಭೈರಿ$_3$** (ನಾ). ಒಂದು ಬಗೆಯ ಮರ : ಅಜ್ಜನ ಪಟ್ಟೆ, ಅರಂಜೆ, ಬೈರಿ, ಜಾಗುರಿ, ವಿಷವೃಕ್ಷ (ವೃಕಿಣ. ೭-೦೨೩). **ಭೈರಿ$_3$ :** "ಅಜ್ಜನಪಟ್ಟೆ, ಅರಣ್ಯಪಟ್ಟೆ, ಅರಣ್ಯ, ಅರಂಜೆ, ಭೈರಿ . . . ವಿಷವೃಕ್ಷ" (ಸಸ್ಯಶ. ೦೩). [ ? ]

**ಬೈರಿಗೆ, ಬೈರಗಿ** (ನಾ). ೧. (ಭೂಮಿ, ಮರ ಮುಂತಾದುವುಗಳನ್ನು) ತೂತು ಕೊರೆಯಲು ಬಳಸುವ ಒಂದು ಬಗೆಯ ಉಪಕರಣ : ಬೈರಿಗೆ . . . ಮರದ ಒಳಕ್ಕೆ ಹೋಗುವ ಆಯುಧ (ಪಮ್ಮಮ. ೦೦೩); ಇವನ್ನು ಭೂಮಿಯಲ್ಲಿ ಸಾವಿರಾರು ಅಡಿಗಳ ಆಳಕ್ಕೆ ಕಂಡಿಗಳನ್ನು ಕೊರೆಯುವುದಕ್ಕಾಗಿ ತಯಾರು ಮಾಡುವ ಬೈರಿಗೆಗಳಿಗೆ ಉಪಯೋಗಿಸುವರು (ವಿಜ್ಞಾ.ಪ. ೩೬). ೨. (ಅಲಂ) ಬೇಸರ ತರಿಸುವುದು; ತಲೆಚಿಟ್ಟು ಹಿಡಿಸುವುದು : ಅವನ ಬೈರಿಗೆ ಪ್ರಾರಂಭವಾಗಿ ಆಗಲೇ ತುಂಬಾ ಹೊತ್ತಾಯಿತು (ರೂಢಿ). ೩. ತಲೆಚಿಟ್ಟು ಹಿಡಿಸುವವನು ; ಬೇಸರವನ್ನುಂಟು ಮಾಡುವವನು : ಅವನೊಬ್ಬ ಬೈರಿಗೆ. ಅವನ ಸಹವಾಸ ಎಲ್ಲರಿಗೂ ಸಾಕಾಗಿದೆ (ರೂಢಿ). **ಬೈರಗಿ :** ೧. ಚಂಡಬಲ ಸುಗ್ಗಾಯ್ತು ಬಲ ಮುಂಕೊಂಡು ಬರೆ ಬೈರಗಿಯಿನರೆದಂತಾಯ್ತು (ಸಂಶಕ. ೭-೩೬). 'ಬೈರಗಿಬೀಟ್' ಪರಾ.

[ದೇ.॥ ತುಳು. ಬೈರಿಗೆ, ಬೈರಯಿ, ಬೈರವು]

**ಬೈರಿಗೆಕೊರೆ** (ಕ್ರಿ). ೧. ರಂಧ್ರಮಾಡುವ ಸಾಧನದಿಂದ ತೂತು ಕೊರೆ : ಅವನು ಬಾಗಿಲಿಗೆ ಬೈರಿಗೆಕೊರೆದು ಅಗುಳಿಯನ್ನು ಆಳವಡಿಸಿದನು (ರೂಢಿ). ೨. (ಅಲಂ) ಇರಿ ; ಚುಚ್ಚು : ಬಾಲಕರೆಲ್ಲರ ಮನದಲ್ಲೂ ಭೀತಿ ಬೈರಿಗೆ ಕೊರೆಯುತ್ತಿತ್ತು (ಪಂಚ. ೦೬). [ಬೈರಿಗೆ + ಕೊರೆ$_1$ (< ಕೊಱ್)]

**ಬೈರೂಪ** (ನಾ). ೧. ನಾನಾ ಬಗೆಯ ರೂಪ,—ವೇಷ,—ಸೋಗು ; ಬಹುರೂಪ : ಗದ್ದ ಜಡೆ ಕಂಥೆ ಲಾಂಛನವ ತೊಟ್ಟಿರುವ ಬೈರೂಪದಂತೆ (ಗಜಶಾ. ೨೮೦-೨) ; ಬಹುಬಗೆಯಿಂದ್ರಜಾಲಿಗಳ್ಬೈರೂಪದವರು ತಾಳ ಮದ್ದಳೆಗಳಿಗಳೆವ ಪಡೆಯ ರತ್ನಕೀಲಿತಗೃಹಗಳೊಪ್ಪಿದುವು (ಕಂಪಶಿ. ೨೦-೪೯) ; ತಮ್ಮ ಧರ್ಮದಲ್ಲಿನ ಉತ್ತಮಾಂಶಗಳನ್ನು ಹುಡುಕಿ ತೆಗೆಯುವುದಕ್ಕೂ ಅದರ ಅಸಹ್ಯ ಬೈರೂಪಗಳನ್ನು ಬಿಸುಡುವುದಕ್ಕೂ ಇದು ಹಿಂದುಗಳನ್ನು ಉತ್ತೇಜಿಸಿತು (ಕಕ್ಕಪ್ರಾ. ೫೬೬). ೨. ಸೋಗು ಹಾಕುವವನು ; ವೇಷಧಾರಿ : ಉಟ್ಟರೆ ತೊಟ್ಟರೇನಯ್ಯ ನಟ್ಟುವರಂತೆ ಕೊಟ್ಟರೆ ಕೊಂಡರೇನಯ್ಯ ವೇಶಿಯರಂತೆ ಬಿಟ್ಟರೆ ಕಟ್ಟದರೇನಯ್ಯ ಬೈರೂಪನಂತೆ (ಶಶಸಂ. ೨೩೯-೫೯).

**ಬೈರೂಪದಾಟ** = ಬಗೆಬಗೆಯ ವೇಷಗಳನ್ನು ಹಾಕಿಕೊಂಡು ಮಾಡುವ ಪ್ರದರ್ಶನ; ವೇಷದಾಟ : ಒಂದು ದೆಸೆಯೊಳಿಂದ್ರಜಾಲವ ತೋರುವ ಮಂದಿ ಬೈರೂಪದಾಟಗಳ ಸಂದಣಿ ಹಾಸ್ಯರಸಗಳಿಂದ ಮೆಚ್ಚಿದುದುಂದಿನ ಸಭೆಯುರ್ತಿಯುಲಿ (ಕಂಪಶಿ. ೨೦-೦೦೭). [<ಸಂ. ಬಹುರೂಪ]

**ಬೈರ್ವಾಸ** 'ಬೈರಾಸು' ನೋ.

**ಬೈಲ, ಬಯಿಲ** (ನಾ). ಒಂದು ಬಗೆಯ ಬತ್ತ: "ಸಿತಶಾಲಿ ಕೆಂಗಟವೆ ಕೆಂಬತ್ತರಾಜಾನ್ನಮವು ಬೈಲಮೆಂದಿವು ನೆಲ್ಲ ಭೇದಂಗಳಕ್ಕು" (ಬುಂಗಸಾ. ೦೦೦-೪). **ಬಯಿಲ:** (೩).

**ಬೈಲಾಟ** 'ಬಯಲಾಟ' ನೋ.

**ಬೈಲು** 'ಬಯಲ್' ನೋ.

**ಬೈಲುಕಡೆ** 'ಬಯಲ್ಕಡೆ' ನೋ.

**ಬೈಲುಗಂಬಾರ** 'ಬೈಲುಗಮ್ಮಾರ' ನೋ.

**ಬೈಲುಗದ್ದೆ** (ನಾ). ಸಮತಟ್ಟಾದ ಪ್ರದೇಶದಲ್ಲಿರುವ ಗದ್ದೆ ; ಬಯಲು ನಾಡಿನಲ್ಲಿರುವ ಗದ್ದೆ : ಬೈಲುಗದ್ದೆ, ಬೆಟ್ಟುಗದ್ದೆ, ಕಾಡು ಬೀಡು ಎಲ್ಲ ಕೂಡಿ ಅಷ್ಟಾಗುತ್ತದೆಯೆ ? (ಶಾಣಿ. ೦೩).

[ ಬೈಲು (<ಬಯಲ್) + ಗದ್ದೆ (<ಗಟ್ದೆ) ]

**ಬೈಲುಗಮ್ಮಾರ, ಬೈಲುಗಂಬಾರ** (ನಾ). (ಜೀವನನಿರ್ವಹಣೆಗಾಗಿ ಊರಿಂದೂರಿಗೆ ಅಲೆಯುತ್ತ) ಊರಿನ ಹೊರಭಾಗದಲ್ಲಿ ಬೀಡು ಬಿಡುವ ಕಮ್ಮಾರರ ವರ್ಗ ಮತ್ತು ಆ ವರ್ಗಕ್ಕೆ ಸೇರಿದ ವ್ಯಕ್ತಿ: ಆ ನರಿಯು ತಿರುಗಾಡುತ್ತ, ಊರ ಮುಂದೆ ಇರುವ ಬೈಲುಗಮ್ಮಾರನ ಗುಡಸಲೊಳಗೆ ಹೊಕ್ಕಿತು (ಮುಂಬಯಿ. ೨-೦೪). **ಬೈಲುಗಂಬಾರ :** ಬೈಲುಗಂಬಾರರು ಹೋರೆ ಹುಡುಕುತ್ತ ಊರಿಂದೂರಿಗೆ ತಿರುಗುತ್ತಿರುತ್ತಾರೆ. ಹೋದಲ್ಲಿ ಊರ ಹೊರಗೆ ಗುಡಾರ ಹೊಡಕೊಂಡು ಹೋರೆ ದೊರೆಯುವ ವರೆಗೆ ನಿಲ್ಲುವರು (ಕಶಾಗ. ೦೩೭).

[ ಬೈಲು (<ಬಯಲ್) + ಕಮ್ಮಾರ(<ಕಮ್ಮಱ) ]

**ಬೈಲುಭೂಮಿ** (ನಾ). ಬಯಲಿನಿಂದ ಕೂಡಿದ ಪ್ರದೇಶ: ಮಂಡಲಾಕಾರವಾಗಿ ಸವ್ಯಾಪಸವ್ಯವಾಗಿ ತಿರುಗಾಡುತ್ತಾ, ನದೀತಟಂಗಳಂ ಹಾರುತ್ತಾ ಬೈಲುಭೂಮಿಯೊಳು ಘಾಳಿಯಂತೆ ಧಾಳಿಯಂಗೈಯುತ್ತ (ಶ್ರೀಗಂ. ೪೦೭–೬).
[ಬೈಲು (< ಬಯಲ್) + ಭೂಮಿ]

**ಬೈಶಣಿಗೆ** 'ಬಯಿಸಣಿಗೆ' ನೋ.

**ಬೈಸ** (ನಾ). ೧. ಚತುರ್ವರ್ಣಗಳಲ್ಲಿ ಒಂದು: ವೈಶ್ಯ: 'ಬೈಸಕುಳ'. 'ಬೈಸಾನ್ವಯ' ಪರಾ. ೨. ವೈಶ್ಯ ಮತ್ತು ಕುಡಿಯರ ಸಂಬಂಧದಿಂದಾದ ವಂಶ.—ಮನೆತನ: ವರವೈಶ್ಯರೊಳೊರ್ವ್ವಂ ಕುಡಿಯರ ಕೂಸಂ ಮದುವೆನಿಲ್ದೊಡಾ ದಂಪತಿಗಾದರದಿಂ ಪುಟ್ಟಿದ ಸುತರಂ ಧರೆ ಬೈಸರೆನಲ್ಕೆ ಬೈಸರೆನಿಸಿದರವರ್ಗಳು (ಕಶಾ. I. ೨೩–೪೯; 1180).
[< ಸಂ. ವೈಶ್ಯ./ಹಿಂ. ಬೈಸ]

**ಬೈಸಕುಳ** (ನಾ). ವೈಶ್ಯರ ವಂಶ; ವೈಶ್ಯಕುಲ: ಬೈಸಕುಳಕಮಳ ಮಾರ್ತ್ತಣ್ಡರು ಬೈಸಕುಳಾನ್ವಯರಪ್ಪ ತೊಜಿಗಲೆಯ ಭೂತರಸರುಂ ಮಲ್ಲಿಗೆ ವರಸರುಮಿರ್ದ್ದು ಬಿಟ್ಟ ಧರ್ಮ್ಮಂ (ಶ್ರೀಇ. XI–ii. ೦೫೬–೪೬; 1109).
[ಬೈಸ + ಕುಳ (= ಕುಲ)]

**ಬೈಸಣಿಗೆ₁** (ನಾ). ೧. [ಸಂಗೀತ] ವೀಣೆಯ ಬುರುಡೆಯ ಮೇಲ್ಭಾಗದಲ್ಲಿ ತಂತಿಗಳನ್ನು ಹಿಡಿದಿಟ್ಟಿರುವ (ಸೇತುವೆಯಂಥ) ಎತ್ತರವಾದ ಭಾಗ: ದಂಡ ಜಾತಿ ಮುಖ್ಯ ಬೈಸಣಿಗೆ ಮುಂತಾದವಂ ಪ್ರಮಾಣಿಸಿ . . . ತಂತ್ರಿಗಳಂ ಕಳಿಯೇಱಿಸಿ (ಬಪುಳ. ೨೪೭); ಅದಱಲ್ಲಿ ದಂಡ ಜಾತಿ ಮುಖ ಬೈಸಣಿಗೆ ಮುಂತಾದವಂ ಪ್ರಮಾಣಿಸಿ ಆಯಾ ರಾಗಾನುಗುಣ್ಯಮಾಗಿ ವೇಳೆಸಿ (ಶೃಂಕೃ. ೩–೩ ವ). ೨. ಒಂದು ರಾಗದ ಹೆಸರು (?): ಇವಱ ಹಾಯುವ ಮಾಡುವಲ್ಲಿ ಮಸರದೊಳು ಹುಟ್ಟುವುದದೇ ಭಾವುಕಂ ಗೀತದಾಣತಿಯ ಸಂಭವದೀರ್ಘತಾಳದೊಳು ಲಲಿತಯಾಣತಿ ಗುರುತ್ವಂ ನುಡಿವ ಬೈಸಣಿಗೆಯುಂ (ರೀಕೃ. ೬–೦–೩೩).
[←ತಲು. ಬೈಸಣ, ಬಯಿಸಣ]

**ಬೈಸಣಿಗೆ₂** 'ಬಯಿಸಣಿಗೆ' ನೋ.

**ಬೈಸನಿಗೆ** 'ಬಯಿಸಣಿಗೆ' ನೋ.

**ಬೈಸರು, ಬೈಸಾರಿ, ಬೈಸಾರು, ಬೈಸಾರೆ** (ನಾ). ಸಂಜೆಯ ಸಮಯ; ಸಾಯಂಕಾಲ; ಇಳಿಹೊತ್ತು: ನಿನ್ನೆ ಸಾಯಂಕಾಲ ಬೈಸರ್ನಾಗ ಇಲ್ಲಿಗೆ ಹತ್ರ ಇರೋ ಊರಿಗೆ ತಪಾಲುಬಸ್ನಾಗ ಬಂದೆ (ಖುಶಿಮಂ. ೬). **ಬೈಸಾರಿ**: ಸೂತಕ ನಿವಾರಣೆಯಾಗುವವರೆಗೂ ಪರ ಊರಲಿರಲಿಕ್ಕೆ ಮನಸ್ಸಿಲ್ಲದೆ ಅವನು ಬೈಸಾರಿ ಸಮಯ ಗುರುದರ್ಶನಕ್ಕೆ ಹೊರಟನು (ವಾಗ್ವಿಹಿ. ೬೪). **ಬೈಸಾರು**: ಈಗ ಮಂಗಳೂರಿಗೆ ಮೋಟಾರಿನಲ್ಲಿ ಹೊರಟರ್ದ್ದೇ ಆದರೆ ಬೈಸಾರಿಗೆ ಕಾಂಚನಕ್ಕೆ ಹೋಗುವ ಮೋಟಾರು ಸಿಕ್ಕೀತು (ಹೊಸಶ್ಹಿ. ೮೩). **ಬೈಸಾರೆ**: ಹೊತ್ತಾರೆ ಹೋದವರೇತಕೆ ಬಾರರು ಬೈಸಾರೆಯಾದರು ಇವರು (ತಂತ್ರಶೀ. ೦೦೯–೩೬). [ ? ]

**ಬೈಸಾನ್ವಯ** (ನಾ). = ಬೈಸಕುಳ: ಶತ್ತಾದವದ್ಧ್ಯೋಪಜೀವಿ ಸಮಧಿಗತ ಪಂಚಮಹಾಶಬ್ದ ಮಹಾಸಾಮನ್ತಂ ಸಮರವಿಜಯಲಕ್ಷ್ಮೀಕಾನ್ತ ಬೈಸಾನ್ವಯಸರೋಜವನಮಾರ್ತ್ತಣ್ಡಂ (ಶ್ರೀಇ. XX. ೦೯–೮ : ೧೧೫೦).
[ಬೈಸ + ಅನ್ವಯ]

**ಬೈಸಾರಿ** 'ಬೈಸರು' ನೋ.

**ಬೈಸಾರು** 'ಬೈಸರು' ನೋ.

**ಬೈಸಾರೆ** 'ಬೈಸರು' ನೋ.

**ಬೈಸಿಕಲ್ಲು, ಬೈಸ್ಕಲ್ಲು** (ನಾ). ಕಾಲುಗಳನ್ನು ಪೆಡಲುಗಳ ಮೇಲೆ ಒತ್ತಿ ನಡೆಸುವ ಎರಡು ಚಕ್ರಗಳ ವಾಹನ: ಸೈಕಲ್ಲು; ರಂಗಣ್ಣ ಬೈಸಿಕಲ್ಲಿಂದ ಇಳಿದು ನಡೆದುಕೊಂಡು ಹೊರಟನು (ರಂಗಕ. ೨೬). **ಬೈಸ್ಕಲ್ಲು**: ಬೂಟ್ಸುಗಳನ್ನು ಎಡಗೈಯಲ್ಲಿ ಹಿಡಿದೆತ್ತಿಕೊಂಡು ಬಲಗೈಯಿಂದ ಬೈಸ್ಕಲ್ಲನ್ನು ತಳ್ಳಿಕೊಂಡು ನೀರಿನೊಳಕ್ಕೆ ರಂಗಣ್ಣ ಇಳಿದನು (ರಂಗಕ. ೨೯).
[← ಇಂ. Bicycle]

**ಬೈಸಿಕೆ, ಬಯ್ಸಿಕೆ, ಬಸಿಗೆ, ಬಸ್ಕಿ, ಬೈಸಿಗೆ** (ನಾ). ೧. ಮಂಡಿಯೂರಿ ಕುಳಿತುಕೊಳ್ಳುವುದು: ಅಳಿದೊಡೆಯನಾ ಕಂಡಾನೆ ಬೈಸಿಕೆಯಿಂದ ತೋಳೆತ್ತಿ ಕೊಡುತ ಸಲ್ಲಾಮ (ಶ್ರೀಂದರಾ. ೩–೬೦). ೨. ಕುಳಿತುಕೊಳ್ಳುವ ಭಂಗಿ—ರೀತಿ: ಯಮುನಿಯಮ ನಿಷ್ಠೆಯಲಿ ಬೈಸಿಕೆ ಕಮಲಸಂಜ್ಞಿಕ ವೆನಲು ಪವನಕ್ರಮವನಳವಡಿಸವನು ಮೂಱು ತದಂಗವಿಧಿಗಳಲಿ (ಚೆಖಾ. ೪–೦೩–೯೦). ೩. ಎರಡು ಕಾಲುಗಳ ಮೇಲೆ ಭಾರ ಬಿಟ್ಟು ಕುಳಿತು-ನಿಂತು ಮಾಡುವುದು; ಊಟಬೈಸು: (?). ೪. ಕುದುರೆ ಸವಾರಿಯಲ್ಲಿಯ ಒಂದು ಪ್ರಕಾರ; ಸವಾರಿಯಲ್ಲಿ ಎದ್ದು, ಕುಳಿತು ಮಾಡುವುದು: ಹಯಶಿಕ್ಷಾಕ್ರೀಡೆಯುಂ ತೋಱುವ ಪರಿಸುತನೋ ತಾನೆನಿಪ್ಪಂದದಿಂ ಪನ್ನಿಯ ಸೋಂಕುಂ ಬಿಂಕಮುಂ ಬೈಸಿಕೆಯ ನಿಱುಗೆಯುಂ ನಿಶ್ಚಲತ್ರಾಣಮುಂ . . . ಪೊದಟ್ಸೊಪ್ಪಿ ದಲ್ ನಾಡೆಯುಮಾ ಕಂದರ್ಪದೇವಂ ಸುರುಚಿರ ತುರಗಾರೂಢಿಯೊಳ್ ಪ್ರೌಢನಾದಂ (ಕುಸುಮಾ. ೬–೬೩). ೫. ವ್ಯಾಪಿಸಿರುವ ಎಡೆ: ಆ ನೆಲದೊಳೀರೆಂಟುಸಾವಿರದ ಯೋಜನಮದಾ ನಿರಂತರವು ಸುರಗಿರಿಯ ಬೈಸಿಕೆಯಾಯ್ತು (ಅಶಿಂ. ೨೬–೪೭). ೬. ದೃಢತೆ; ಅಚಲತೆ: ತೂಱಿದರೆ ತನಿಯೊಟ್ಟು ಗಾಳಿಗೆ ಹಾಱುತ್ತಿಹುದು ಕುಲಗಿರಿಯ ಬೈಸಿಕೆ ಹಾಱುವುದೆ (ಕುಮಾರಮ್ಯಾ. ೦೬–೪೪); ಕಳಚಿತರಸನ ಮಾನದ ಧೈರ್ಯಾಚಲದ ಬೈಸಿಕೆ (ಕೂರಲಾ. ೦–೦೬–೩). ೭. [ನಾಟ್ಯ] (ನೃತ್ಯ, ಅಭಿನಯ ಮುಂತಾದುವುಗಳಲ್ಲಿ ಕುಳಿತಂತೆ ನಟಿಸಿ ಮುಂದೆ ಸಾಗುವ) ಒಂದು ಬಗೆಯ ಭಂಗಿ: ಸುತ್ತುವಳಯುಂ ತಿರುಪು ಚಾರಿ ಬೈಸಿಕೆ ಪುಟವದೊತ್ತಿ ತೋಱುವ ಪಚ್ಚೆಯನಿಕ್ಕು (ಮಂಗರಾ. ೨೩–೯). ೮. [ಸಂಗೀತ] ವಾದ್ಯಗಳನ್ನು ಬಾರಿಸುವ ಅಥವಾ ರಾಗಗಳನ್ನು ಹಾಡುವ ಒಂದು ಬಗೆ: ಕಾಳಸಿ ಬೈಸಿಕೆ ಪಟ್ಟ ಕಾಂತಿ . . . ಪೆಲ್ಲಕೆ ಕಳೆಯೆಂಬಿವಂ ಮೆಱೆದು ಬಾಱಿಸದಂ ಮುರವೈರಿ ಹಾಸಮಾಂ (ಜಗ. ೩–೩); ಕಬ್ಬದ ನಿರ್ವಾಹದ ಮೇಲೆ ಬೈಸಿಕೆ ಬೆಡಂಗಂ ಬೀಱಿ ನಿಂದೊರ್ವಳೋದಿದ ಳಾಂದೋಳದೆ ಪಲ್ಲವಾಧರೆ ವಸಂತೋತ್ಸದ್ಯಮಂ ಗದ್ಯಮಂ (ಅಶಂಕೃ. ೬–೭೦); ಬೈಸಿಕೆ ಸ್ಥಾಯಿ ಘನಸಂಚಾರಿ ಮುಂತಾದೆಲ್ಲ ಭಾವಗಳನ್ನು ತೋರುತ್ತವೆ . . . ಬಾಜಿಪರಾಠ ಮಂತ್ರವನಂತೆ (ಜಾಗಜ. ೨೨–೯೩). **ಬಯ್ಸಿಕೆ**: ೪. ಮಾಮರಾಜಚ್ಛ್ರಿಯತನೂಜಾತ ರೂಪರೇಖೆ ಭಾವನೆ ಬಯ್ಸಿಕೆ ತೊಡ ಮಾಡ ಕಯ್ದುನಿಯೆಂಬ ಚಿಡಾಯತಿಕೆಗಾಯತಿಕವಡೆದಾ ರೂಢವಿದ್ಯಾವಿಳಾಸ (ಶ್ರೀಇ. IX–i. ೩೯೩–೨೦ ; 1226). ೮. ರಾಜದೊಳಂ ನಿರ್ವಹಿಸಿ ನೆಲೆಗೊಳಿಸಿ ಬಯ್ಸಿಕೆ [ಪಾಠಾಂ. ಬಯಿಸಿಕೆ] ಮಹಾ ಚಾಳಿಯದಲ್ಲಿ ಮೂರ್ತಿವಡೆದುದು ರಾಗಂ (ಮುಕೋತ. ೨–೨೯). **ಬಸಿಗೆ**: ೩. ಸ್ಥಿರಬುದ್ಧಿಯೆಂದೆಂಬ ಸಮನಾದ ನೆಲದೊಳು ಗುರುಬೋಧೆಯೆಂಬ ದಂಡೆಗಳನೊತ್ತಿ ಪರತತ್ತ್ವ ವಿಷಿರದ ಬಸಿಗೆಗಳನೆ ಹಾಕುತಱೆಂಬ ಕೋಣತವನೊತ್ತಿ ಕಟ್ಟಿ (ಕೃಕಪ. ೯–೦೩–೧). **ಬಸ್ಕಿ**: ೩. ವೆಂಕಟರಮಣದಾಸರು . . . ದಿನವೂ ತಪ್ಪದೆ ಬಸ್ಕಿಗಳನ್ನೂ ದಂಡೆಗಳನ್ನೂ ಹಾಕುತ್ತಿದ್ದರು (ಸಂಗೀತ. ೬೬). **ಬೈಸಿಗೆ**: ೮. ಅಪೂರ್ವ ಲಾಲಿತ್ಯಾಪ್ತಿಯುಂ ಕೂಟವಾಸವಂತಸವ ಚಾಲಿಯಂ ಬೈಸಿಗೆಯನೆತ್ತಿ ಬಾಱಿಸುವ ಮದ್ದಳೆಗನಂ ಮನ್ನಿಸುತ್ತುಂ (ಕದ್ಯಾ. ೩–೬೦).

**ಬೈಸಿಗೆ ಒತ್ತು** = ಊಟಬೈಸು ಹಾಕು: ರಾಮಲಿಂಗಾಚಾರಿಯು ಗರಡಿ ಮನೆಯಲ್ಲಿ ದಂಡಹೊಡೆಯುವುದು, ಬೈಸಿಗೆಒತ್ತುವುದು, ಕುಸ್ತಿಮಾಡುವುದು ಮುಂತಾದ . . ವ್ಯಾಯಾಮವನ್ನು ಮಾಡಿಸುವನು (ಶಂಗಾಕೃ. ೯೨). **ಬೈಸ್ಕಿ ಹೊಡೆ, ಬಸಿಗೆ ಹೊಡೆ** ಬೈಸಿಗೆ ಒತ್ತು: ಸೋತವರು ಬೈಸ್ಕಿ

ಹೊಡೆಯಬೇಕಾಗುತ್ತದೆ (ಕುಕೋ. I, ೩೦೬): ಬೇಗ್ಗೆ ನಾಲ್ಕಕ್ಕೆ ಎದ್ದರೆ ಸಾವಿರಕ್ಕೆ ಕಡಿಮೆ ಇಲ್ಲದಷ್ಟು ದಂಡ, ಬಸಿಗೆ ಹೊಡೆಯಬೇಕು (೩೮ಕುಕಾ. ೨೦).

[ ← ಮರಾ. ಬೈಸಕ್, ಬೈಸಕಾ ]

**ಬೈಸಿಗೆ** 'ಬೈಸಿಕೆ' ನೋ.

**ಬೈಸಿಗದೆಗೆ** (ಕ್ರಿ). ಪಂಡಿಯಂತಿರು; ವೀರಮಂಡಿ ಹಾಕು: ಹೂಡಿದ ಸರಳ ತಿವಿವರೆಗುಗಿದು ಬೈಸಿಗದೆಗೆದು [ಜಾತಾಂ. ಗೆಯ್ದು, ಗೈದು] ಕಾಣದಲಿ ಪರಿವಿಡಿಯನಾರೈದು ಗರುಡಿಯ ಗುರುವ ನೆನೆದನು (ಕುಮ್ಯಾ.ಶ. ೨೦-೦೨). [ ಬೈಸಿಗೆ (<ಬೈಸಿಕೆ) + ತಗೆ$_1$ ]

**ಬೈಸು$_1$** 'ಬಯ್ಯಿಸು' ನೋ.

**ಬೈಸು$_2$** (ನಾ). ಕುಳಿತುಕೊಳ್ಳುವಿಕೆ.

**ಬೈಸು ಮಾಡು** = ಕುಳಿತುಕೊಳ್ಳುವಂತೆ ಮಾಡು; ಕುಳ್ಳಿರಿಸು: ಸಂವರಣೆಗಳನ್ನು ಮಾಡುವುದಕ್ಕೋಸ್ಕರ ಆನೆಗಳನ್ನು ಬೈಸು ಮಾಡುತಲಿರುವ ಮಾವುತರ ಹದರಿಕೆ ಮಾತುಗಳು (ಕೃಶಾಪ. ೦೦೬).

[←ಮರಾ. ಬೈಸ್ = ಕುಳಿತುಕೊಳ್ಳು; ಹಿಂ. ಬೈಸನಾ=ಕುಳಿತುಕೊಳ್ಳು]

**ಬೈಸೂಡಿ** (ನಾ). ಒಣಹುಲ್ಲಿನ ಕಂತೆ, —ಹೊರೆ, —ಕಟ್ಟು: ಗಾಡಿಯ ಮೇಲೆ ಇರಿಸಿದ್ದ ಬೈಸೂಡಿಗಳನ್ನು ಎಳೆದು ತಂದು, ಬಿಚ್ಚಿ, ಅವುಗಳ ಮುಂದೆ ಹರಡಿದ (ಕೃಹಿಕಾ. ೧).

[ಬೈ$_4$ + ಸೂಡಿ$_2$ (< ಸೂಡ್ಡು$_2$) ]

**ಬೈಸ್ಕಲ್ಲು** 'ಬೈಸಿಕಲ್ಲು' ನೋ.

**ಬೈಹುಲ್ಲು** (ನಾ). ಒಣಗಿದ ಹುಲ್ಲು: ದನಗಳ ಮೇರೆ ಎಟಕುವಲ್ಲಿ ನೆಲವನ್ನು ಮಣ್ಣಿನಿಂದ ಏರಿಸಿ ಬೈಹುಲ್ಲು ಹಾಕಲು ಬೈಪಣೆ ಮಾಡಿರುವರು (ಜಾಗಗಿ.೪೦); ಎರಡೆರಡು ಸೂಡಿ ಬೈಹುಲ್ಲನ್ನು ಬಿಡಿಸಿ ಹಾಕಿ, ಅವುಗಳ ಬೆನ್ನು ಚಪ್ಪರಿಸಿದರು (ಒಸ್ಮಿಕಾ. ೮೬). [ಬೈ$_4$ + ಹುಲ್ಲು (< ಪುಲ್)]

**ಬೊಂಕ** 'ಬಂಕ$_1$' ನೋ.

**ಬೊಂಕು$_1$** (ಕ್ರಿ). ೧. ಸುಳ್ಳಾಡು; ಸುಳ್ಳುಹೇಳು: ಸಮಯ ನೋಡಿ ಕೋಡು ನಂಬಿಕೆ ಹುಟ್ಟುವಂತೆ ಬೊಂಕಿ ಎಷ್ಟು ಕೆಲಸ ಸಾಧ್ಯವೊ ಅಷ್ಟು ಮಾಡಿಕೊಂಡು ಬರಬೇಕು (ಚಕರಾ. ೩೨೪); ಈ ನಿಜಾಂಶವನ್ನು ನಿಸ್ಸಂಕೋಚವಾಗಿ ಹೇಳದೆ ಮೋಹನೆಯು ತನ್ನೊಡನೆ ಬೊಂಕುತ್ತಿರುವಳೆಂತಲೂ ಲೀಲಾವತಿಯ ಮನಸ್ಸಿಗೆ ತೋರಿತು (ಕಕಾರ. ೯೩). ೨. ಹೇಳು; ನುಡಿ: ಲೋಕದ ಕೊಂಕನು ಬೊಂಕಿವು-ಭಲೆ ಲೋಕದ ಕೊಂಕನು ಬೊಂಕದಲೆ ನಾವೇಕಾಂತದೊಳದ ನಗುವೆವು (ಗೀತಕುಶಿ. ೩೯-೨೪). ೩. ಜಂಬದಿಂದ ಹೇಳಿಕೊಳ್ಳು; ಜಂಬ ಕೊಚ್ಚು: ಈ ಯುಗದೊಳಿನಗಾರು ಸರಿಯುಹ ರಾಯರುಂಟಾ ಬೊಂಕಿ ನುಡಿದ ವಿಡಾಯನೆಂಬುದನರಿಯು ಪಾಂಡವರಿಂದ ಮುಂದೇನು (ಕವಿಕಾ. ೬೩-೯೦); ಅವಳು ಬೊಂಕುವಂತೆ ಮದುವೆಗೆ ಮುಂಚೆ ಅವನನ್ನು ಕಂಡಿದ್ದರೂ ಅವನನ್ನು ಅವಳು ಮದುವೆ ಮಾಡಿಕೊಳ್ಳುತ್ತಿರಲಿಲ್ಲ (ಬಂಕಿಕು. ೨೪೩).

[ದೇ.॥ ತುಳು. ತೆಲು. ಬೊಂಕು]

**ಬೊಂಕು$_2$** (ನಾ). ೧. ಬಡಾಯಿ; ಜಂಭ: ಅವರು ನಕ್ಕರು ಅಂತ ಇವರ ಬೊಂಕು ಹೆಚ್ಚು. ಇವರು ಬೊಂಕಿದರು ಅಂತ ಅವರ ನಗು ಹೆಚ್ಚು (ಚಕರಾ. ೩೩೦). ೨. ಭ್ರಾಂತಿ; ಭ್ರಮೆ: 'ಬೊಂಕುದೀವಿಗೆ' ಪರಾ.

[<ಬೊಂಕು$_1$./ತಮಿ. ಪೊಕ್ಕಮ್; ತೆಲು. ಬೊಂಕು]

**ಬೊಂಕುದೀವಿಗೆ** (ನಾ). ಭ್ರಾಂತಿಯನ್ನುಂಟುಮಾಡುವ ದೀಪ; ಸಂಪೂರ್ಣ ಬೆಳಕು ಹರಡದ ದೀಪ: ಶಂಕೆಸೆಡೆಯಿರದು ಕತ್ತಲೆಯೊ ಜಗವನು ಕವಿಯೆ ಬೊಂಕುದೀವಿಗೆ ತಂಟೆ (ಕುಂಕುಕ. ೯೨).

[ಬೊಂಕು$_1$ + ದೀವಿಗೆ]

**ಬೊಂಕೆ** 'ಬಂಕೆ$_1$' ನೋ.

**ಬೊಂಕೆಮಣ್ಣು** (ನಾ). ಜಿಗುಟುಮಣ್ಣು; ಜೇಡಿಮಣ್ಣು: "ಮತ್ಸ್ನಾ, ಮೃತ್ಸ್ನಾ–೨ . . . ಕೆಮ್ಮಣ್ಣು, ಬೊಂಕೆಮಣ್ಣು" (ಸಿದ್ಧಾಂತಿ. ೯೨).

[ಬೊಂಕೆ (< ಬಂಕೆ$_1$) + ಮಣ್ಣು (< ಮಣ್)]

**ಬೊಂಡ** (ನಾ). ೧. ಎಳೆಯ ತೆಂಗಿನಕಾಯಿ; ಸೀಯಾಳ: ಕನಕಮ್ಮ ನವರೊಡನೆ ಮಾತಾಡಿ ಅವರಿಗೆ ಬೊಂಡ ಕೊಟ್ಟೇ ಹೋಗಬೇಕೆಂದು ಕಾದಿದ್ದಕ್ಕೆ ಬಂದ (ಕಡಕ. ೦೦೬); ಮರ ಹತ್ತಿ ಬೊಂಡ ಇಳಿಸುವುದಕ್ಕೆ ಜನವಿದೆ (ಕೇಶಕಾ. ೦೩೦). ೨. ಎಳೆಯ ಕಾಯಿ: 'ಹನೆಬೊಂಡ' ಪರಾ.

[ದೇ.॥ ತುಳು. ಬೊಂಡ; ತೆಲು. ಬೊಂಡ, ಬೊಂಡಾ, ಬೊಂಡಲ, ಬೊಂಡ್ಲ]

**ಬೊಂಡುಲ**, ಬೊಂಡುಳ (ನಾ). ಒಂದು ಬಗೆಯ ಸಸ್ಯ: ಬೊಂಡುಲ ಗಿಡ (ಮೃತ್ತಿಶಿ. ೬೦-೦೨೯೩); ಬೊಂಡುಲ ಗಿಡ (ಸಸ್ಯಶಾ. ೦೦೩). **ಬೊಂಡುಳ**: (ಕಿ).

[←ತುಳು. ಬೊಂಡಲ, ಬೊಂಡೊಲಿ]

**ಬೊಂಡುಳ** 'ಬೊಂಡುಲ' ನೋ.

**ಬೊಂತೆ**, ಬೊಂದು (ನಾ). ೧. ಚಿಂದಿಬಟ್ಟೆಗಳನ್ನು ಹೊಲಿದು ಮಾಡಿದ ಹಚ್ಚಡ; ಕವುದಿ: ಕಂತೆ ಬೊಂತೆಯ ಜಂಗಮ ಬಂದರೆ ಹೀನವೆಂದು ಕಂಡನಾದರೆ ಪಂಚಮಹಾಪಾತಕ (ಬಸವ. ೪೦೦); ಬೊಂತೆಯಂ ಕಚ್ಚುಟವನಾತನು ಮುಂತೆ ಬೇಡಲು ಮುನ್ನ ಮಡಗಿದ ಬೊಂತೆಯಂ ಕಚ್ಚುಟವನಜಿಯು ಕಣಿಣದುಮ್ಮಳಿಸಿ (ಜಕ್ಕ. ೨೬-೯೩); ಬೊತಾದೆವಿ ಬೊಂತೆಯಂ ಕೊಡಹುತಲನೇಕ ಹೊನ್ನಳನೀಯುಳೇ (ಶ್ರೀಕು. ೬-೨೯೩). ೨. ಗುಂಜಾದುದು; ಗೋಜಾದುದು: ಕಾಯಿ ಬಲಿತು ಮಾಗಿದಾಗ ಹಣ್ಣಿನ ಗಾತ್ರ ಕಿರಿದು . . . ಗಲ್ಲದ ದಾಡಿಯಂತೆ ನಾರಿನ ಬೊಂತೆ (ಹಸುಹೂ. ೩೦೬). 'ಬೊಂತೆಕಟ್ಟು' ಪರಾ. ೩. ಗುಚ್ಛ; ಕಟ್ಟು: ಹೂವನ್ನು . . . ಕೆಂಪೀನೇ ಒಂದು ಬೊಂತೆ ಕೂದಲು ಎತ್ತಿ ಅದರೊಳಗೆ ಭದ್ರವಾಗಿ ಸಿಕ್ಕಿಸಿಕೊಂಡಳು (ಪಪ್ಪುರು. ೩೬೯); ಚೀಟಿಯ ಕಂತೆಗಳು, ಹಳೆಯ ವರ್ತಮಾನ ಪತ್ರಿಕೆಗಳ ಬೊಂತೆಗಳು (ಹಸುಹೂ. ೨೫೦); ಕಂತೆಗೆ ತಕ್ಕ ಬೊಂತೆ (ಗಾದೆ). **ಬೊಂದು**: ೧. 'ಬೊಂದುಂಕ$_1$' ಪರಾ.

[ದೇ.॥ ತಮಿ. ಪೊನ್ತೈ; ತೆಲು. ಬೊಂತ]

**ಬೊಂತೆಕಟ್ಟು** (ಕ್ರಿ). ಜಡೆಗಟ್ಟು; ಗಂಟಾಗು; ಗೋಜಲಾಗು: ಬೊಂತೆ ಕಟ್ಟಿ ಹೋಗಿದ್ದ ನಿನ್ನ ತಲೆ, ಮಾಸಲು ಚಿಂದಿಯ ಬಟ್ಟೆಯನ್ನು ನೋಡುತ್ತಿದ್ದಾಗೆಲ್ಲ ಪಪ್ಪ ಹೊಟ್ಟೆ ಉರಿದು ಹೋಗುತ್ತಿತ್ತು (ಕಃಪಹು. ೪೦).

[ಬೊಂತೆ + ಕಟ್ಟು$_1$]

**ಬೊಂತೆಕಳ್ಳಿ** 'ಬೊಂತೆಗಳ್ಳಿ' ನೋ.

**ಬೊಂತೆಗ** (ನಾ). ಕೌದಿಯನ್ನು ಹೊದ್ದಿರುವವನು: ಗ ಪ್ರತ್ಯಯಕ್ಕೆ: ಮಾತಂಗಂ, ಬೂತುಗಂ, ಕಂತೆಗಂ, ಬೊಂತೆ[ಜಾತಾಂ. ದಿ]ಗಂ (ಶಬ್ದಮ. ಶ. ೨೦೨ ವೃತ್ತಿ). [ಬೊಂತೆ + — ಗ$_2$]

**ಬೊಂತೆಗಳ್ಳಿ**, ಬೊಂತೆಕಳ್ಳಿ (ನಾ). ಒಂದು ಬಗೆಯ ಕಳ್ಳಿ ಗಿಡ: ಬೊಂತೆಗಳ್ಳಿ, ಚದರಗಳ್ಳಿ (ಮೃತ್ತಿಶಿ. ೩೫-೬೬೦). **ಬೊಂತೆಕಳ್ಳಿ**: "ಬೊಂತೆಕಳ್ಳಿ, ಚದರಗಳ್ಳಿ, ಜಡೆಗಳ್ಳಿ, ಮುಂಡುಗಳ್ಳಿ" (ಸಸ್ಯಶಾ. ೫೬).

[ಬೊಂತೆ + ಕಳ್ಳಿ$_2$]

**ಬೊಂತೆಮೀಸೆ** (ನಾ). ಗುಂಜುಮೀಸೆ; ಜುಂಗುಜುಂಗಾದ ಮೀಸೆ: ವಿಷಣ್ಣವದನದ ಬೊಂತೆಮೀಸೆಯ . . . ಸೇವಕನೊಬ್ಬನು ಮಂದಿರವನ್ನು ಪ್ರವೇಶಿಸಿದನು (ಪುಕು. ೨೦). [ಬೊಂತೆ + ಮೀಸೆ]

**ಬೊಂದಬಾಳೆ** (ನಾ). ಒಂದು ಬಗೆಯ ಮರ: ಬೊಂದಬಾಳೆ(ಪಡವಳೆ)— ಮಧ್ಯಮ ಆಕಾರದ್ದು. ಕಟ್ಟಿಗೆ ಇಮಾರತಿಗೆ ಬರುತ್ತದೆ (ಕಪಾಗ. ೯೬). [ ? ]

**ಬೊಂದರಿಗೆ** (ನಾ). ಗೌಸು; ಮೇಲುಹೊದಿಕೆ: ಇಕ್ಕಿದ ಪಟ್ಟೆಯು ಸುಭಾಸನಂಗಳೊಳು ಕಟ್ಟಿದ ಚಿನ್ನದ ಬೊಂದರಿಗೆಯೊಳಮೆಸೆದಿರ್ದ ಪಳಿಕೆಮಯಪೀಠದೊಳೊಡನೇಜಿ (ಶಂಕರಾ. ೯-೯೩ ಶ); ಸಿಂಹಾಸನ

ದೆರಡೋಳಿಯೊಳಂ ಸಾರ್ಚಿದ ಲೋಹಾಸನದೊಳ್ ಕಟ್ಟಿದ ದೇವಾಂಗದ ಬೊಂದರಿಗೆಯೊಳವಿಟ್ಟ ನೇರಾಣಿಯ ಪಡಿಗಂಗಳೊಳಂ (ಶಾಂತಿಪು. ೩-೫೦ಪ).

[ ? ]

**ಬೊಂದಿ₁** (ನಾ). ದೇಹ; ಶರೀರ : ''ಬೊಂದಿ=ಶರೀರಂ'' (ಶಮುದ. ಶಂ.೨); ತನ್ನ ಬೊಂದಿಯೊಳಿರ್ದ ಹಂಸನ ನೋಡುತಿರಲವನೆಂದೆಂದು ಸುಖಿ (ಶರಶ. ೩೨-೬೬) ; ದೆಸೆದೆಸೆಯ ಕಟ್ಟಲೆಯ ಬಿಂದವೊಂದುಗೂಡಿ ಗುಂಡು ಗೊಂಡು ತಮ್ಮ ಪಗೆಯ ಬೆಂಗದಿರನ ಬೊಂದಿಯುಂ ಬಂದಿವಿಡಿವೊಂದು ರವಣೆಯಿಂ ಬಾಂದಳಮನೇಱಿ ಪೋಪುವೆನೆ . . . ನೀಲಪರ್ವತಂ . . . ವಿರಾಜಿಸಿದತ್ತು (ರಾಮಾಶ್ವ. ೬೨-೦೫). 'ಗೊಂದೆಬೊಂದಿ' ಪರಾ.

[ದೇ.‖ ತಮಿ. ಪೊನ್ತಿ; ತೆಲು. ಬೊಂದಿ./ಪ್ರಾ. ಬೋಂದಿ]

**ಬೊಂದಿ₂** (ನಾ). ಕಾತಿ, ನಾರು, ಹಗ್ಗ, ಮೊದಲಾದುವುಗಳ ಪೆಂಡಿ.–ಕಟ್ಟು : (*). [ದೇ.‖ ತೆಲು. ಬೊಂದು]

**ಬೊಂದಿಗೆ** (ನಾ). ಬೀಗ ; ಕೀಲಿ (?) : ಮಱಿಹೊಕ್ಕರೆ ಕಾವ ತೊಡರ್ದರ ಡೊಂಕೆ ಬಿರಿದರ ಬಾಯ ಬೊಂದಿಗೆ ಮೀಸೆಯರ ಗಂಡರ ಗಂಡ ಮಾದಿಗದೇವ (ಎಕ. IX, ಕಾನಕಾ. ೦೦೬-೫; 1293). [ ? ]

**ಬೊಂದಿಗೆವಾಯ್** (ನಾ). (?) : ಬಿದಿರಿದ ಮುತ್ತುವಲ್ಲ ಮುಱು-ಮೂಗಿನ ಬೊಂದಿಗೆವಾಯ ಪೊಂಗುಗಲ್ಲದ ಪಸುರ್ಗಣ್ಣ ಕೆಂದಲೆಯ ಕಾಳಿಗವರ್ಣದ ಬೀಡೆಗಾಲ . . . ಪೇರುರದ ಲುಬ್ಧಕರಿರ್ದರಲಬ್ಧ ಮಾರ್ದವರ್ (ಕುಸ್ಕಪು. ೫-೮೯). 'ಬಂದುಗೆವಾಯ್' ಹೋ.

[ಬೊಂದಿಗೆ? + ಬಾಯ್]

**ಬೊಂದು** 'ಬೊಂತೆ' ನೋ.

**ಬೊಂದುಕ₁** (ನಾ). ಚಿಂದಿಯಾದ ಕೋಕುಬಟ್ಟೆಯನ್ನು ತೊಡು ವವನು ; ಬೊಂತೆಯನ್ನು ಧರಿಸುವವನು : ಉಕ ಪ್ರತ್ಯಯಕ್ಕೆ . . . ಬೊಂದುಕಂ, ದಿಂಡುಕಂ (ಶಮುದ. ೨೦೩ ಪ್ರಯೋ) ; ಸಣ್ಣುಕಂ, ಬೊಂದುಕಂ, ದಿಂಡುಕಂ (ಶಬ್ದಾನು. ೪೯೦ ಪ್ರಯೋ).

[ಬೊಂದು (< ಬೊಂತೆ) +– ಉಕ (<–ಉಗ)]

**ಬೊಂದುಕ₂** 'ಬಂದುಕ' ನೋ.

**ಬೊಂದುಗೆ** (ನಾ). (?) : ಕೆಂದಳದೊಳಮರ್ಚಿ ಬಾರಿಸುತೆ ಬೊಂದುಗೆಯುಂ ಕುಱುಪಿಂಗೆ ಪೋದಳವ್ವಳಿಸುತವಾಗಳೊರ್ವಳಭಿಸಾರಿಕೆ ವೀರವಿಡಂಬ ಯಾನದಿಂ (ಸುಕುಸು. ೮-೦೯೨). [ ? ]

**ಬೊಂದೆ** (ನಾ). ಕುಣಿ ; ಕುಳಿ : ಶಿಶುವಳಿಯೆ ಬೊಂದೆಯೊಳಗಿಕ್ಕಿ ಮಣ್ಣಂ ಮುಚ್ಚಿ ಬಂದಯ್ಯಗೆಱಗೆ ದಂಪತಿಗೆಂದನು ಕಂದನಂ ಬಿಟ್ಟು ಬರುವರೆ ಬೇಗ ತಾ ಹೋಗಿರಿ (ಗುರುರಾ. ೦೯-೩೯).

[ದೇ.‖ ತಮಿ. ಪೊನ್ತು=ಬಿಲ ; ತೆಲು. ಬೊಂದ]

**ಬೊಂಪು₁** 'ಬಂಪು₁' ನೋ.

**ಬೊಂಪು₂** 'ಬಂಪು₂' ನೋ.

**ಬೊಂಬಡ** 'ಬೊಮ್ಮಡಿ' ನೋ.

**ಬೊಂಬಲ್** 'ಬಂಬಲ್₁' ನೋ.

**ಬೊಂಬಲಮರ** (ನಾ). ಒಂದು ಬಗೆಯ ಮರ : ಬೊಂಬಲಮರದ ನೆರಳೊಳು ಕುಳಿತಂತೆ ಮರ್ಕಟಕ್ಕೆ ಮಂತ್ರಿತನ ಕೊಟ್ಟಂತೆ (ಉದ್ಯೋಪ್ರ. ೭-೪೨-೩). [ಬೊಂಬಲ₀ + ಮರ₁]

**ಬೊಂಬಳ** 'ಬೊಂಬಾಳ₁' ನೋ.

**ಬೊಂಬಾಳ₁**, ಬಾಂಬೋಳ, ಬೊಂಬಳ (ನಾ). [ಸಂಗೀತ] ನಾಲ್ಕು ಧ್ವನಿಭೇದಗಳಲ್ಲಿ ಒಂದು : ತಾಳಲಯ ಬೊಂಬಾಳ ಮಿಶ್ರದ ಮೇಳಪದು ತಾ ರಾಗಶುದ್ಧದ ಸಾಳಗದ ಸಂಕೀರ್ಣ ದೇಸಿಯ ವಿವಿಧ ರಚನೆಗಳ . . . ಲಯಮಾನವಱಿವವನೆ ಗಾಯಕನು (ಕುವ್ಯಾಸ. ೬೦೩-೦-೯೬); ಕಾವುಳ ಬೊಂಬಾಳ [ಪಾಠಾಂ. ಬಬ್ಬೋಳ]ನಾರಾಟ ಮಿಶ್ರಿತಮೆಂಬ ಚತುರ್ವಿಧಸ್ವರಂಗಳಂ ಪರುಠವಿಸಿ (ವಿವೇಳ. ೧೮೯). **ಬಾಂಬೋಳ** : ಅನೇಕ ರಾಗಗಳಿಂದೆ ಸವಿಯಿಂಪು ಸೊಂಪು ಬಾಂಬೋಳ ಮಧುರಂ ಮಂದ್ರ ವಿವಿಧ ಸುಸ್ಥಾನಮಾನಂಗಳಿಂ ಪಾಡಲುಗ್ಗಡಿಸಿದರು ತಾಳಜ್ಞರು (ಶೃಶುಪು. ೨-೬೬). **ಬೊಂಬಳ** : ಕಾವುಳ ಬೊಂಬಳ ನಾರಾಟ ಮಿಶ್ರಮೆಂಬ ನಾಲ್ಕುಂ ಧ್ವನಿಯ ಭೇದಮನಱಿದು . . . ಬಾಜಿಸುತ್ತಿರೆಯುಂ (ಶಾಂತೀಶ್ವ. ೦೩-೬೬ ಪ). [ ? ]

**ಬೊಂಬಾಳ₂** 'ಬಂಬಾಳ' ನೋ.

**ಬೊಂಬಾಳ₃** (ನಾ). ಒಂದು ಬಗೆಯ ಅಂದಣ : 'ಚವರಬೊಂಬಾಳ' ಪರಾ. [ ? ]

**ಬೊಂಬಾಳದೀಪ** (ನಾ). ಪ್ರಖರವಾಗಿ ಉರಿಯುವ ಪಂಜು.–ಹಿಲಾಲು : ಜನನಂದನನು ಬೊಂಬಾಳದೀಪದ ಸಂದಣಿಗಳಲಿ . . . ಕುರುಭೂಮಿಗೈತಂದ (ಕುವ್ಯಾದ್ರೋ. ೦-೦೯); ಬೆಳಗಿದುವು ಬೊಂಬಾಳ ದೀಪಾವಳಿಗಳಿದ್ದೆಸೆಗಳಲಿ (ಕೊರಿರಾ. ೫-೩-೩೦).

[ ಬೊಂಬಾಳ₂ (<ಬಂಬಾಳ) + ದೀಪ₂ ]

**ಬೊಂಬಾಳದೀಪ್ತಿ** (ನಾ). ಪ್ರಖರವಾದ ಕಾಂತಿ.– ಪ್ರಕಾಶ: ತೋಱುತಿಹ ಬೊಂಬಾಳದೀಪ್ತಿಯ ಚಾರುಶಸ್ತ್ರಪ್ರಭೆಯಲಾ ಮುರವೈರಿ ಯೋಲಗಸಾಲೆ ನೆಱೆ ರಂಜಿಸಿತು ನೋಳ್ಪರಿಗೆ (ಕೋಗಮು. ೩-೩೭).

[ಬೊಂಬಾಳ₂ (<ಬಂಬಾಳ) + ದೀಪ್ತಿ]

**ಬೊಂಬಾಳದೀವಟಿಗೆ** (ನಾ). = ಬೊಂಬಾಳದೀಪ : ತರುಣಿಯರುಗಳ ಹಸ್ತದಲಿ ಮಿಱುಪ ಮಿಸುನಿಯ ಬೊಂಬಾಳದೀವಟಿಗೆಗಳ್ಸುರುಚಿರಪ್ರಭೆಯ ಸೂಸಿದುವು (ಕಂಪಿ. ೮-೨೩). [ಬೊಂಬಾಳ₂(<ಬಂಬಾಳ) + ದೀವಟಿಗೆ]

**ಬೊಂಬಾಳದೀವಿಗೆ** 'ಬಂಬಾಳದೀವಿಗೆ' ನೋ.

**ಬೊಂಬಾಳಿಸು** 'ಬಂಬಲಿಸು' ನೋ.

**ಬೊಂಬಿಡು** 'ಬೊಬ್ಬಿಡು' ನೋ.

**ಬೊಂಬು₁**, ಬಂಬು₁ (ನಾ.) ಪೊಳ್ಳಾದ ದಪ್ಪನೆಯ ಬಿದಿರು.–ಗಳು : ಹೇಗೆ ಒಂದು ವಂಶ ಅಥವಾ ಬೊಂಬಿನಲ್ಲಿ ಪಲವು ಪರ್ವಗಳಿರುತ್ತವೋ ಹಾಗೇ ಈ ಗ್ರಂಥದಲ್ಲಿ ಹದಿನೆಂಟು ಪರ್ವಗಳಿವೆ (ಶಾರದ. ೯೩); ಬೊಂಬು ಗಳನ್ನು ತೆಗೆದುಕೊಂಡು ಹೋಗಿ ಕಾಡಿನಲ್ಲಿ ಒಂದು ಮರಕ್ಕೆ ಅಟ್ಟ ಕಟ್ಟುವಂತೆ ಆಜ್ಞಾಪಿಸಿದರು (ಕ್ಷಾಯುಶ. ೦೯). **ಬಂಬು₁** : ಮೊದಲು ಮೊದಲು ಜೊಂಡು ಬಂಬುಗಳಿಂದ ನಿರ್ಮಿತವಾಗಿದ್ದು ಅನಂತರ ಮರದಿಂದ ಕಟ್ಟಡಗಳು ಕಟ್ಟಲ್ಪಟ್ಟಿರಬೇಕು (ವ್ಯಾಪಾಸ್ತು. ೨೨); ಬಂಬು ಹೊರುವವನ ಸಂಗಡ ಹಂಬಲಿಸಿದರೆ ಇಂಬು ಸಿಕ್ಕೀತೆ (ಗಾದೆ).

[ದೇ.‖ ತಮಿ. ಮಮ್ಬು; ಮಲ. ಮಮ್ಬು; ತುಳು. ಬಂಬು]

**ಬೊಂಬು₂** 'ಬಂಬು₂' ನೋ.

**ಬೊಂಬುಜ** (ನಾ). ಒಂದು ಬಗೆಯ ವಾದ್ಯ : ಬೊಂಬುಜದ ವಾಯುಜದ ಡೋಳಿನ ಬೆಂಬಳಿಯಲಿಹೀನಾಗಸರದಿಂತೆಂಬ ನಾನಾವಾದ್ಯರಸ ತುಂಬಿತು ದಿಶಾವಳಿಯ (ದೇಭಾಮ.೨-೮೯). 'ಬೊಂಬುಳಿ₂' ಹೋ. [?]

**ಬೊಂಬುಳಿ₁** (ನಾ). ಹೆಚ್ಚಳ; ಆಧಿಕ್ಯ : ಚದುರ ಪೊದಱಿ ಸಂಪದದ ಬೊಂಬುಳಿ ಸತ್ಕದ ಬಿತ್ತರಂ. . . ವಿಳಾಸದ ದೇಸೆ ಕೂಡೆ ಭೋಗದ ಕಣ್ಣಿಯಾಯ್ತು ತಾಂ ತನಗೆ ಪೌರಜನಂ (ಜಗಪಿ. ೯-೦೦೬).

[ದೇ.‖ ತಮಿ. ಪೊಮ್ಮಲ್; ತುಳು. ಬೊಂಬುಳಿ]

**ಬೊಂಬುಳಿ₂**, ಬೊಬ್ಬುಳಿ₃ (ನಾ). ಒಂದು ಬಗೆಯ ಚರ್ಮವಾದ್ಯ : "ಪಣವಃ–ಬೊಂಬುಳಿಯ ಪೆಸರು" (ಪಾಠರಾ. ೯೭); ಕೋಟಿಪೆಗ್ಗಾಳೆ ಗಳು ಚಿನ್ನತಿತ್ತಿರಿ ಬೊಂಬುಳಿ ಬಡಿಸಿಕೊಂಡವು (ಹತಕಾ. ೩-೦೯); ಕೊಂಬು ಡಮರುಗ ಡಾಡೆ ಸಂಬಕ ಕಹಳೆ ಢಕ್ಕೆ ಬೊಂ[ಪಾಠಾಂ.ಬೊಂ]ಬುಳಿ ಕರಡೆ

ಜಗ್ಗುಟಿ ಜಝುರ್ಝರಂಗಳಿಂ (ಶಬ್ದಮಣಿ. ೭-೫೬). **ಬೊಬ್ಬುಳಿ$_3$ :** ಪಟಹದ ಢಕ್ಕೆಯ ಧವಳಶಂಖದ ಜವಳಿಗಾಳೆಯ ತಿತ್ತಿರಿಯ ಕಿನ್ನರಿಯ ಹೊನ್ನ ಬೊಬ್ಬುಳಿ[ಪಾಠಾಂ. ಬೊಂಬುಳಿ]ಯ . . . ಕೋಳಾಹಳಂ ನೆಗಳೆ (ಗಿರಿಜಾ. ೬-೭೭ ವ) ; ಬೊಬ್ಬುಳಿ ಘಂಟೆ ರಣವಱೆವೊಱಲುತಿರಲಂದು ಮಱುಗಿ ಲಂಕಾನಗರಿ ಗೋಳಿಟ್ಟೊಱಲುವಂತಿರೆ ತಿರುಗಿ ನೋಡಿದ ಸಿರಿಯ ಹಿಂದಕೆ ಬೀಳುಗೊಟ್ಟನೊಯೆಂಬ ತೆಱನಾಯ್ತು (ಶೌರಿಚ. ೪೦-೦೩) [ ? ]

**ಬೊಂಬೆ,** ಬೊಮ್ಮೆ (ನಾ). ೧. ಗೊಂಬೆ; ಮೂರ್ತಿ; ಪ್ರತಿಮೆ ; ನೆಲದ ಬೊಂಬೆಯ ಮಾಡಿ ಜಲದ ಬಣ್ಣವನುಡಿಸಿ . . . ಆಡಿಸುವ ಯಂತ್ರವಾಹಕನಾರೋ (ಅಪತಂ. ೫-೦೬); ಪಾಱಿದಳ್ ಪೊಳೆದು ಪೇಚರಿ ಮಿಂಚಿನ ಬೊಂಬೆಯೆಂಬಿನಂ (ಅರ್ಜನೀ. ೩-೦೭) ; ಮಾಯೆಯಾಡಿಸುವ ಮಣ್ಣ ರೂಪು ಕಪ್ಪಡದ ಹಾಹೆ ಕಲ್ಲ ಜಂತ್ರ ಹುಲ್ಲ ಬೊಂಬೆ (ಬಸರ. ೮-೧೩೯); ನಾನಾ ಜನ್ಮದಿ ಬಂದ ನಾಟಕದ ಬೊಂಬೆ ಯಿದು (ಕಪಶ. ೦೮೨-೩). ೨. ಕಣ್ಣುಗೊಂಬೆ ; ಕನೀನಿಕೆ : ಅಂಬರ ವಧೂಟಿಗಾ ಪಾಪುರಿಯಲರ್ಗಣ್ಣ ಬೊಂಬೆಗಳ್ ಮನವೊಸೆದು ಪಾಗುಡ ವನಟ್ಟಿದಸಿತಾಂಬರವದೇಬಂತೆ ತತ್ಕಳಪೊಗಳ ತೆನೆಯ ಪಾಲುಣಲ್ಕೆಂದೆಱಗುವಾ ಕೆಂಬಲ್ಲ ಪಕ್ಕಿಗಳುಮಂ ನೋವುತ (ಜಮ್ಮಿನಿ. ೦-೨೯) ; ಅಲರ್ಗಣ್ಗಳ ಬೊಂಬೆಯ ಪಡಿನೆಳಲೆಂಬಾ ಚಾರುವಿಚಿತ್ರಾಂಬರವಂ ಪೊದೆಯಿಸಿ . . . ಮನೋರಮಣನನುಪಚರಿಸಿದಳಂಗನೆಯಾ ನವಸುರತದೊಳು (ಜಯಾಶಾ. ೮-೫೭). ೩. ಆಕೃತಿ ; ರೂಪು : ಚಿತ್ರದ ಬೊಂಬೆಗಳಿದ್ದ ಮನೆ ಕಿಚ್ಚಿದ್ದು ಬೇವಲ್ಲಿ ಬೊಂಬೆಯ ಹೊತ್ತಿದ ಕಿಚ್ಚು ಚಿತ್ರವಾಗಿ ಉರಿವುದೆ (ಸಕವ ४. I, ೯೦೦-೯೦) ; ಭಿತ್ತಿಭಿತ್ತಿಯೊಳ್ ಬರೆದ ನಾನಾ ತೆಱದೊಳೆಸೆವ ಬೊಂಬೆಗಳಿಂದೆ . . . ಕರಂ ಚೆಲ್ವಾದುದು (ತಂಋ. ೫-೫೦). 'ಗೊಂಬೆ$_1$' ಪರಾ. **ಬೊಮ್ಮೆ :** ೩. ಆ ಬೊಮ್ಮೆಯಂತೆ ಈ ಬೊಮ್ಮೆ (ಸುಜೀತ. ೦೯).

**ಬೊಂಬೆಯ ಬಣ್ಣ** = (ಬೊಂಬೆಯ) ಚಿತ್ರಗಳುಳ್ಳ ಸೀರೆ : ಹಳದಿ ಪೊಪ್ಪಳಿ ಚಂದ್ರಗಾವಿ ಬೊಂಬೆಯ ಬಣ್ಣ ಸುಲಿಪಲ್ಲು ಪೊನ್ನ ತಗಡಿನ ಬಿಳುವಟ್ಟೆ ನಾನಾವರ್ಣದ ಜವಳಿಯ ಮಳಿಗೆಗಳೆಸೆದುವು (ಕಂಪಲಿ. ೬-೭೦).

[ ದೇ.॥ ತಮಿ. ಪೊಮ್ಮೈ, ಪೊಮ್ಮಲ್ ; ಮಲ. ಬೊಮ್ಮ ; ತುಳು. ಬೊಂಬೆ ; ತೆಲು. ಬೊಮ್ಮ, ಬೊಮ ; ಕೋಲಾ. ಕುವಿ. ಬೊಮ್ಮ ]

**ಬೊಂಬೆಗಣ್ಣೆ** (ನಾ). ಒಂದು ಬಗೆಯ ಸೀರೆ : ಚಾಪಗಂಟಿಯು ಬೊಂಬೆಗಣ್ಣ ಚಿತ್ರಾವಳಿಯು . . . ವಿರೂಪ ನೇತ್ರಾವಳಿಯು ಮುಂಚು ನಾನಾ ವಿಧದ ಸೀರೆಗಳ ಚಿನ್ನದೆಳೆವೊಗ್ಗ ಕಂಚುಕವ ಬೇಪನಿತ ತಗದು (ನವಮೋ. ೦೭-೬೦). [ ಬೊಂಬೆ + ? ]

**ಬೊಂಬೆಯಾಟ** (ನಾ). ೧. ಮಕ್ಕಳು ಗೊಂಬೆಗಳನ್ನಿಟ್ಟುಕೊಂಡು ಆಡುವ ಆಟ : ಮಗುವುತನದಲಿ ಬೊಂಬೆಯಾಟಕೆ ಮಗುವನೇ ತಹೆನೆಂದು ಬಂದಳು (ಕುಮಾ.ಅ. ೩-೦೭). ೨. ಸೂತ್ರದಿಂದ ಗೊಂಬೆಗಳನ್ನು ಕುಣಿಸಿ ತೋರಿಸುವ ಆಟ. 'ಗೊಂಬೆಯಾಟ' ಪರಾ. [ ಬೊಂಬೆ + ಆಟ ]

**ಬೊಕಸ** 'ಬೊಕ್ಕಸ' ನೋ.

**ಬೊಕ್ಕ** 'ಬಕ್ಕ$_1$' ನೋ.

**ಬೊಕ್ಕಣ$_1$,** ಬಂಕಣ, ಬಕ್ಕಣ$_1$ (ನಾ). ೧. ಚೀಲ ; ಸಂಚಿ : ಘಣಿಕುಳಂಗಳೇ ದಾರವಾಗಿ ಬೊಕ್ಕಣವೊಳವಸುಂಧೆಯಾಗಿ (ಎಕ. VII, ಶಿಕಾ. ೦೦೮-೪೦ ; 1054) ; ಪಿಸುಣಂ ಪೇೞ್ದೊಡದೇವುದೊ ಕಿಸುಜಡೆಯುಂ ಬೂದಿ ಕಚ್ಚಟಂ ಬೊಕ್ಕಣಮುಂ . . . ಪಿಸುಣರ ದೇವಗೆ ನಾರದಂಗಿದು ಸಹಜಂ (ಜಗಎ. ೫-೫೩) ; ಬೊಕ್ಕಣದ ಬೂದಿಯನುಘೆನುತೂದಿ ಮೂಗಿನೊಳ್ ಪೊಕ್ಕೊಡೆ ಸೀಂತು . . . ಪೂರ್ಬಿಕ್ಕುವ ಮಾರ್ಕಟಂ ನಗದ ತಾಪಸರಂ ನಗಿಸಿತ್ತರಣ್ಯದೊಳ್ (ಕಾವ್ಯಸಾ. ೦೦೦೮). ೨. ಕುದುರೆಯ ಬಾಯಿಗೆ ಕಟ್ಟುವ ಚೀಲ ; ತೋಬರಿ : ದುತ್ತೂರದೆಲೆಯನಿಕ್ಕಿಯೆ ಕಟ್ಟುತ ಯಿರದೀಕ್ರಮ ದಶದಿನಮಂತರಿಸದೆ ಬೊಕ್ಕಣಮನಿಕ್ಕಿ (ಅಶ್ವವೈ. ೦೭-೬೦); ಜ್ಞಾನವೆಂಬುದು ಬೀದಿಯ ಪಸಾರವೆ ? ಬೊಕ್ಕಣದೊಳಗಣ ಹುರುಳಿಯೆ ? (ಶರತ. ೪೭೯). ೩. ಜೇಬು ; ಕಿಸೆ : ಲೆಕ್ಕದ ಪಟ್ಟಿ ಅವನ ಬೊಕ್ಕಣದಲ್ಲಿ ಸದಾ ಹಸಿದು ಬಾಯ್ದೆರೆದಿತ್ತು (ಮರಿಮು. ೩೩೩); ಲೆಕ್ಕದ ಪುಸ್ತಕದೊಳಗೆ ಅಂಕಿ ಬಿದ್ದಷ್ಟು ರೊಕ್ಕ ಆ ಬ್ಯಾರಿಸ್ಟರಿನ ಬೊಕ್ಕಣದಲ್ಲಿ ಬೀಳುತ್ತಿದ್ದಿಲ್ಲ (ಇಪ್ಪತ. ೪೦೦). **ಬಂಕಣ :** ೩. ತನ್ನ ಹೊಲಸಾದ 'ಬಂಕಣ'ದೊಳಗೆ ಕೈಯಿಕ್ಕಿ ಎಲೆ–ಅಡಿಕೆ–ತಂಬಾಕುಗಳನ್ನು ಹೊರಗೆ ತೆಗೆದು ಒಂದೊಂದಾಗಿ ಬಾಯಲ್ಲಿ ಹಾಕಿಕೊಂಡ (ಗಂಗಾಗೌ. ೮೯). **ಬಕ್ಕಣ$_1$ :** ೨. ಕುದುರೆ ಕಡಲೆಯನು ಸಲೆ ತಿಂದು ಬಕ್ಕಣವನೊದೆಱೆ ಬಿಟ್ಟಂತೆ (ಸರ್ವಜ್ಞ. ೦೮೨೮). ೩. ತಮ್ಮ ಬಕ್ಕಣದಲ್ಲಿ ಕಾಸು ಕಪರ್ದಿಯಿಲ್ಲದಿದ್ದರೂ ಬಾಯಲ್ಲಿ ಬಕ್ಕಳ ಮಾತಿದ್ದರೆ ಸಾಕೆಂಬ ಸಂತೋಷದಿಂದ, ಜನರು ಕಾಲ ಕಳೆಯುತ್ತಿದ್ದರು (ಶ್ರೀಮುಖಿ. ೭೪).

[ ದೇ.॥ ತಮಿ. ಮಲ. ಪೊಕ್ಕಣ ; ತುಳು. ಬೊಕ್ಕಣ ; ತೆಲು. ಬೊಂಗಣ, ಬೊಂಗನ, ಬೊಕ್ಕಣ, ಬೊಕ್ಕನ. /ಸಂ. ಬೋಕ್ಕಾಣ ]

**ಬೊಕ್ಕಣ$_2$** 'ಬಕ್ಕಣ$_2$' ನೋ.

**ಬೊಕ್ಕಣಿಕೆ,** ಬೊಕ್ಕಳಿಕೆ (ನಾ). ಒಂದು ಬಗೆಯ ಔಷಧೀಸಸ್ಯ : ನೆಲ್ಲಿಚಟ್ಟು, ಬೊಕ್ಕಣಿಕೆಕಾಯಿ, ಶುಂಠಿ . . . ಸಮಾಂಶವಾಗಿ ಅರೆದು ಕೊಡಲು ಶ್ಲೇಷ್ಮಜ್ವರ ಬಿಡುವುದು (ಸಕವೈ. ೪೭). **ಬೊಕ್ಕಳಿಕೆ :** ಹುರಿಗಿಲುಂ ಕುರುಟಿನೆಲಾವ ಬೊಕ್ಕಳಿಕೆಯಿಂತಿನಿತಂ ತುಳಿದಿಟ್ಟು (ಅಶ್ವವೈ. ೯-೫೩). [ ? ]

**ಬೊಕ್ಕತಲೆ** 'ಬಕ್ಕದಲೆ' ನೋ.

**ಬೊಕ್ಕದಲೆ** 'ಬಕ್ಕದಲೆ' ನೋ.

**ಬೊಕ್ಕನೆ** (ಅ). ಒಂದು ಅನುಕರಣಾವ್ಯಯ; ಒಮ್ಮೆಲೇ; ಇದ್ದಕ್ಕಿದ್ದಂತೆ: ದಿಕ್ಕಿಲ್ಲದ ಪಶು ಕೆಸಱೊಳು ಬೊಕ್ಕನೆ ಬಿದ್ದಂತೆ ಬಿದ್ದೆ ನಾಂ ದಂದುಗದೊಳು ಪೊಕ್ಕು ತೆಗೆವವರ ಕಾಣೆಂ ಅಕ್ಕಟ ಶಿವನೇ (ಶಂಕಶಾ. ೬೫).

[ಬೊಕ್$_0$ +— ಅನೆ$_1$]

**ಬೊಕ್ಕನೆತ್ತಿ** 'ಬಕ್ಕನೆತ್ತಿ' ನೋ.

**ಬೊಕ್ಕಬಾಯಿ** (ನಾ). ಬೋಡುಬಾಯಿ ; ಹಲ್ಲಿಲ್ಲದ ಬಾಯಿ ; ಬಚ್ಚಬಾಯಿ : (ಶಿ). [ಬೊಕ್ಕ (<ಬಕ್ಕ$_1$)+ಬಾಯಿ$_1$ (<ಬಾಯ್)]

**ಬೊಕ್ಕಬೋರಲು** 'ಬಕ್ಕಬೋರಲು' ನೋ.

**ಬೊಕ್ಕರಿಸು** (ಕ್ರಿ). ಮಗುಚಿಹಾಕು ; ಎತ್ತಿಹಾಕು (?) : ಮದಜಳದ ಕದಡಂ ಕದರಿ ಕೆದಱುವ ಕರ್ಣಚಾಮರದ ಕತ್ತಲೆ ಸಿರ್ಪಿನ ಬಾಹರಕ್ಕೆಯುಂ ಬೊಕ್ಕರಿಸಿದ ತೋರಹತ್ತದಿನವನೀತಳಮಂ ಕವಳಮಂ ಕೊಳಲಿಂದ್ರ (ಅನಂತ. ೦೪-೭ ವ) ; ತೆಕ್ಕೆಯಿಂದವಚುತ್ತ ಗಿರಿಯಂ ಬೊಕ್ಕರಿಸಿ ಹೂಂಕರಿಸುತಿತ್ತಲು ಲೆಕ್ಕವಿಲ್ಲದ ಲೋಗಗಳು ಗಡಗಡನೆ ಉರುಳುತಿರೆ (ದೇವಮ. ೫-೨೪).

[ ? +— ಇಸು$_3$ ]

**ಬೊಕ್ಕಸ,** ಬೊಕಸ, ಬೊಕ್ಸ (ನಾ). ಹಣದ ಭಂಡಾರ ; ಕೋಶ ; ಖಜಾನೆ : ವ್ರತಸ್ಥನಾಗಿ ಭವಿಗಳ ಕೆಳಗೆ ಬೊಕ್ಕಸ ಭಂಡಾರ ಅಸಿ ಕೃಷಿ ವಾಣಿಜ್ಯ ಮುಂತಾದ ಕಾಯಕವ ಬಿಟ್ಟು ತನ್ನ ಸ್ವಕಾಯಕದಿಂದ ಬಂದು ಒದಗಿದ ದ್ರವ್ಯವ ಒಡೆಯನ ಮುಂದಿಟ್ಟು (ಸಕವ. I, ೪೩೮-೪೭) ; ಬೊಕ್ಕಸದ ಸೇನಬೋವ ಜನ್ನಯ್ಯನ ನರಸಿಂಹ್ವದೇವನ ಬರಹ (ಶ್ಯಾಆ. ೦೯೨೮, ೪-೦೯ ; 1369). **ಬೊಕಸ :** ಪೈದರಲ್ಲಿ ಬಹನರನು ಬೊಕಸಕೆ ವಟ್ಟಿಸ್ತನಾದ (ಕಾಇಉ. ೦೯೩೪, ಸೀಂ೦. ೦೫೫-೦೯; 1759). **ಬೊಕ್ಸ :** ಅವರಿಗೆ ಸಕಲ ಸಾಂಬ್ರಾಜ್ಯವಾಗಬೇಕೆಂದು ಅವರ ಬೊಕ್ಸದ ಕವಾಳ ತಿಂಮಪ್ಪನು ಕನ್ನೆರ ಸೆಟ್ಟಿಯ ನಿಲಿಸಿದನು (ಎಕ. XI. ಹೊಳಲ್ಕೆ, ೦೨೦-೫೦; 1522); ದೇವರ ಬೊಕ್ಸಕೆ ಪಾಲು ೧ (ಕಾಇಇ. IX-ii. ೬೦೭-೯ ; 1543).

**ಬೊಕ್ಕಸಗೊಲ್ಲ**—ಖಜಾನೆಯ ಕಾವಲುಗಾರ : (ಎಪಿಕ್ರ. XX. ೩).
[ದೇ.॥ ತಮಿ. ಪೊಕ್ಕಿಶಮ್ ; ತುಳು. ತೆಲು. ಬೊಕ್ಕಸ]

**ಬೊಕ್ಕಳಿಕೆ** 'ಬೊಕ್ಕಣಿಕೆ' ನೋ.

**ಬೊಕ್ಕಿ** (ನಾ). ಬೋಡುಬಾಯಿಯವಳು ; ಹಲ್ಲಿಲ್ಲದವಳು ; ಬಚ್ಚಬಾಯಿಯವಳು : (?). [ಬೊಕ್ಕ (<ಬಕ್ಕ₁) + —ಇ₂]

**ಬೊಕ್ಕುಬೋರಲು** 'ಬಕ್ಕಬೋರಲು' ನೋ.

**ಬೊಕ್ಕೆ₁** (ನಾ). ೧. (ಚರ್ಮದ ಮೇಲೆ ಏಳುವ, ಕೀವಿರುವ ಅಥವಾ ಇಲ್ಲದಿರುವ) ಸಣ್ಣ ಊತ,—ಉಬ್ಬು; ಗಂಧೆ : ಹಲವು ಹರಳೊತ್ತಿ ಬೊಕ್ಕೆಗಳು ಮೂಡಿ ನಡೆಗೆಟ್ಟು ಮೆಲ್ಲಡಿಯ ನಿಜವನಿತೆಯಂ ನೋಡಿ (ಶಬಾ. ೯-೨೯); ನಾಲಗೆಯ ಮೇಲೆ ಬೊಕ್ಕೆಗಳೆದ್ದು ಹಳದಿವರ್ಣವಾಗಿ ಕಪ್ಪುಗೂಡಿದ್ದರೆ ಅಸಾಧ್ಯವೆಂದರಿವುದು (ಕಳ್ಳ. ೦೯); ರಾಣಿಯವರು ಬೊಕ್ಕೆಯ ಮೇಲೆ ಬರೆಯೆಳೆಯುತ್ತಿದ್ದಾರೆ (ಹುಂಚಾ. ೦೦೩). ೨. (ಸುಡುವುದು ಮುಂತಾದುವುಗಳಿಂದ ಚರ್ಮದ ಮೇಲೆ ಉಂಟಾಗುವ) ಗುಳ್ಳೆ; ಬೊಬ್ಬೆ: ವಡಬಾನಳನುರಿಯ[ಳ್]ಉದೊಡಲೆಲ್ಲ ಬೆಂದು ಬೊಕ್ಕೆ ನೆಗೆದವೊಲೊಳಗಿಂ ದಡಕೊತ್ತಿ ಮುತ್ತುಗಳ್ ನೆಗೆದೊಡೆವವೊಲಾ ಕಡಲ ಬಾಡ್ಬುದಂ ಕಣ್ಗೆಸೆಗುಂ (ಕೋಕ್ಕಸು. ೨-೮); ಕರಿಯನ ವಸ್ತ್ರದಲ್ಲೆಲ್ಲ ಬೆಂಕಿಯ ಕಿಡಿ ಹಾರಿ ತೂತು ಬಿದ್ದಿತ್ತು. ಅವನ ಎರಡು ಕಾಲುಗಳಲ್ಲೂ ಬೊಕ್ಕೆ ಎದ್ದಿತ್ತು (ಕಕ್ಕರೂ. ೩೮).
[ದೇ.॥ ತುಳು. ಪೊಕ್ಕೆ, ಭೊಕ್ಕೆ. ಬೊಕ್ಕೆ ; ತೆಲು. ಪೊಕ್ಕು]

**ಬೊಕ್ಕೆ₂** (ನಾ). ಬಿಲ; ಕುಳಿ; ಹೋರು : ಮೊಗಸದಾದನು ಶಾಪದಿಂದಲಿ ಪೊಗಲಿ ಬೊಕ್ಕೆಯನು (ಉತ್ತ. ೯೨-೦೯); ಈಗವನನ್ನು ಬಡಿದು ಬೊಕ್ಕೆಯಲ್ಲಿ ಹಾಕಬೇಕೆಂದಿದ್ದಾನೆ (ಹಂಸರು. ೯೦); ಲೋಕಕ್ಕಾದರೋ, ನೆಲದಲ್ಲಿ ಬೊಕ್ಕೆಗಳನ್ನು ತೋಡಿ ಅಲ್ಲೇ ವಾಸಮಾಡುವ ಸುಂಡಿಲಿಗಳಂತೆ, ಕಾಲಹರಣ ಮಾಡಿದರೆ ಸಾಕು . . . ಅದರಲ್ಲೇ ತಣಿವು ! (ಕ್ರೋಧಿ. ೬೦).
[ದೇ.॥ ತಮಿ. ಪೊಕ್ಕೈ ; ತೆಲು. ಬೊಕ್ಕ ; ಕೋಲಾ. ಪೊಕ್ಕ, ಬೊಗ್ಗ; ಪಾಯ್ಸ. ಪೊಕ್ಕ]

**ಬೊಕ್ಕೆಯೊಡೆ** (ಕ್ರಿ). ಗುಳ್ಳೆಯೇಳು ; ಬೊಬ್ಬೆಯೇಳು : ಪೊತ್ತ ಹೊಚ್ ಗಳಿಂದ ನೆತ್ತಿ ಬೋರೆಯು ಹರಳೊತ್ತಿ ಪಾದವು ಬೊಕ್ಕೆಯೊಡೆದು ಹಸ್ತಕೆ ದಾವತಿಯಿಲ್ಲವೆಂದೆನಲಾಗ ಮತ್ತೆ ಬಂದಿದಕೊ ಮಾಪಾರಿ (ಅಪುಚಾಂ. ೬-೮).
[ಬೊಕ್ಕೆ₁ + ಒಡೆ₁]

**ಬೊಕ್ಸ** 'ಬೊಕ್ಕಸ' ನೋ.

**ಬೊಗದೆ** (ನಾ). ಬೆಟ್ಟಗಳಲ್ಲಿ ಕೊರೆದ ಸುರಂಗಮಾರ್ಗ: ಪ್ರಭಾ . . . ಖಂಡಾಳೆಘಟ್ಟದ ಆ ಬೊಗದೆಗಳನ್ನು ಸಾರಿಸಾರಿ ತೋರಿಸಿದಳು (ಕಜಾರ. ೦೦೯). [←ಮರಾ. ಬೋಗದಾ]

**ಬೊಗರಿ** 'ಬವರಿ' ನೋ.

**ಬೊಗರಿಗಡ್ಡ** 'ಬವರಿಗಡ್ಡ' ನೋ.

**ಬೊಗರಿದಿರುಗು** 'ಬವರಿದಿರುಗು' ನೋ.

**ಬೊಗರಿಮೊಲೆ**, ಬುಗುರಿಮೊಲೆ (ನಾ). (ಆಕಾರದಲ್ಲಿ) ಬುಗುರಿಯಂತೆ ಇರುವ ಮೊಲೆ : ಬೊಗರಿಯಂತೊಲೆದಾಡುವಳು ನಿಲುವಳು ಹೊನ್ನ ಬೊಗರಿಮೊಲೆಯ ಮೋಹನಾಂಗಿ (ಶಶಿ. ೦೨-೬೯); ಬೊಗರಿಮೊಲೆಯ ಚೆಲ್ವ ಗಾಡಿಕಾತಿಯರ್ಕೈದಿದರು (ಕಂಹು. ೬-೬೦); ಬೊಗರಿಮೊಲೆಗಳಿಗೆ ಕೂರುಗುರು ತಾಗಿದವು (ಕಂಕ. ೩೩-೩). **ಬುಗುರಿಮೊಲೆ:** ನಗೆಮೊಗದ ಪೊಂಬೊಗರ ಮಿಂಚಿನ ಬುಗುರಿಮೊಲೆ[ಪಾಠಾಂ. ಬೊಗಸೆಗಂ]ಗಳ ಸೆಳೆನಡುವ ಸೆಳ್ಳುಗುರ ಬೆಡಗಿನ ಕಾಂತೆ ರಂಜಿಸುತಿರ್ಪಳಾ ಪುರದಿ (ಶಳಶ. ೨-೨೯).
[ಬೊಗರಿ (<ಬವರಿ) + ಮೊಲೆ₁]

**ಬೊಗರೆ** 'ಬವರಿ' ನೋ.

**ಬೊಗಸೆ₁** 'ಬಗಸೆ' ನೋ.

**ಬೊಗಸೆ₂** (ನಾ). ಕೆಲಸ; ಉದ್ಯೋಗ : ಸೊಗಸುಬಾಳುವೆ ಲೇಸು ಬೊ[ಪಾಠಾಂ. ಬ]ಗಸೆಯುಳ್ಳವರ ಕೆಳೆ ಲೇಸು (ಸರ್ವಜ್ಞ. ೦೦೯೨). [ ? ]

**ಬೊಗಸೆಗಣ್** 'ಬಗಸೆಗಣ್' ನೋ.

**ಬೊಗಸೆಗಣ್ಣು** 'ಬಗಸೆಗಣ್' ನೋ.

**ಬೊಗಳಿ**, ಬಗಳಿ (ನಾ). ಕಷ್ಟ; ತೊಂದರೆ ; ಬವಣೆ : 'ಏನಾ ಬೊಗಳಿ ಬಂತವಾ' ಎಂದು ಸುಂದರಕ್ಕ . . . ಕಣ್ಣೀರು ಒರೆಸಿಕೊಳ್ಳುತ್ತಿದ್ದರು (ಕೃತಿ. ೩೯೬). **ಬಗಳಿ :** ನಮ್ಮ ಬಗಳಿ ನಿನಗ್ಯಾಕ ? (ಭೂತಾಕ. ೬೩). [?]

**ಬೊಗಳು** 'ಬಗುಳ್₁' ನೋ.

**ಬೊಗಳೆ** 'ಬಗುಳೆ' ನೋ.

**ಬೊಗಾಟಬುಗರಿ**, ಬಗಾಟಬಗರಿ (ನಾ). ಇಬ್ಬರು ಎದುರುಬದುರಾಗಿ ನಿಂತು ಕೈಹಿಡಿದು, ಹಿಂದಕ್ಕೆ ಬಾಗಿ ದುಂಡಗೆ ಸುತ್ತುವ ಹೆಣ್ಣುಮಕ್ಕಳ ಒಂದು ಬಗೆಯ ಆಟ; ಗಿರಿಗಟ್ಟಲೆ ಆಟ : ಸಾಬಿಯು ಬೊಗಾಟಬುಗರಿ ಆಡುವಾಗ ತನ್ನ ಒಡನಾಡಿಯನ್ನು ತಿರುಗಣಿ ಮಾಡುವಿನಲ್ಲಿ ಸಿಕ್ಕ ತೊಪ್ಪಲ ದಂತೆ ತಿರುಪುವದನ್ನು ಅವಳ ತಾಯಿಯು . . . ನೋಡುತ್ತಿದ್ದಳು (ಗಾಪಸು. ೯). **ಬಗಾಟಬಗರಿ :** ಇಬ್ಬರು ಪ್ರತಿಸ್ಪರ್ಧಿಗಳು ಕೈಕೈಹಿಡಿದು ಪಾದಕ್ಕೆ ಪಾದ ತಾಗಿಸಿ ಗರಗರನೆ ತಿರುಗುವುದುಂಟು . . . ಅದು ಹೆಣ್ಣುಮಕ್ಕಳಾಡುವ 'ಬಗಾಟಬಗರಿ' ಲೀಲೆಯಂತೆ ಕಂಡಿತು (ಯುದ್ಧ. ೦೦೯).
[ ಬೊಗಾಟ ? + ಬುಗರಿ (< ಬವರಿ) ]

**ಬೊಗುಳ್** 'ಬಗುಳು₂' ನೋ.

**ಬೊಗುಳಾಟ** 'ಬಗುಳಾಟ' ನೋ.

**ಬೊಗುಳಿಸು** 'ಬಗುಳಿಸು' ನೋ.

**ಬೊಗುಳು₁** 'ಬಗುಳ್₁' ನೋ.

**ಬೊಗುಳು₂** 'ಬಗುಳು₂' ನೋ.

**ಬೊಗುಳುಸನ್ನಿ** 'ಬಗುಳುಸನ್ನಿ' ನೋ.

**ಬೊಗ್ಗಡ** 'ಬಗ್ಗಡ' ನೋ.

**ಬೊಗ್ಗನೆ** (ಅ). ಒಮ್ಮೆಲೆ ; ಕೂಡಲೆ : ಮೆಗ್ಗಳ ಬಲದೆ ಮೇದೋಜ ಬೊಗ್ಗನೆತ್ತಂದು ಭಂಗಕೆ ಬಂದು ಮನನೊಂದು ಸಿಗ್ಗಾಗೆ ತೆರಳಿದನಾಗ (ಕಂಚಿ. ೦೬-೬೮); ಮಾಯೆಯ ಕಾಡು_ಕಾಮಭಯದಿಂ ಬೊ[ಪಾಠಾಂ. ಬ]ಗ್ಗ ನೋಡುವ ಮುನಿಜಮುಕೆ ಪ್ರಭು ಪ್ರತ್ಯಕ್ಷ ಮೆಗ್ಗಳದೊಳಾದಂತೆ ಸಕಲ ಕರ್ಮಂಗಳಂ ನುಗ್ಗುಮಾಡಿ (ಶತಂ. ೨-೦೬). 'ಬಗ್ಗನೆ' ಪರಾ.

**ಬೊಗ್ಗು** (ನಾ). ೧. (ಕಹಳೆಯಂತಹ) ಒಂದು ಬಗೆಯ ರಣವಾದ್ಯ : ವೀರಬೊಂಬುಳಿಯ ಬೊಗ್ಗಿನೊಗ್ಗುಗಳ ನೆಚ್ಚ ಕುಂಬಿಡುವ ಕೊಂಬುಗಳ. . . ಲಗ್ಗೆವಜ್ಜೆಗಳ ರಭಸವಡಸಿ (ಸೋಮೇಶ. ೩-೩೨); ಲಗ್ಗೆ ಮಸಗಿತು ಸೂಳು ವೊಯಿಲಿನ ಬೊಗ್ಗಿನಲಿ (ಕುಮಾಭಿ. ೯-೯); ಗಗ್ಗರವಜ್ಜೆ ಗಿಡಿಬಿಡಿ ತೂಳು ವಜ್ಜೆ ಚೆನ್ನ ಬೊಗ್ಗಿನ ಹಜ್ಜೆ ಜನಗಹುಳೆ (ಕುಮಾರಾಂ. ೯೦-೬೮). ೨. (ಅಲಂ) (ಜಾತಕನಿಗೆ ವಕ್ರನಾದ) ಶನಿಗ್ರಹ; ಶನಿ : ನಮ್ಮ ಗ್ರಹಚಾರ ಬಂದಾಗ ಬೊಗ್ಗು ಎದುರಾದ (ಜಾನಗ. ೨೮). [ ? ]

**ಬೊಗ್ಗೇಳು** (ಕ್ರಿ). ಉಬ್ಬು ; ಊದು (?) : ಹುಗ್ಗಿ. . .ಸೂಸಲುಂಡಲಿಗೆ ಬೊಗ್ಗದ್ದ ರೊಟ್ಟಿಯಿಡ್ಡಲಿಗೆ ದೋಸೆಯ ಸಬ್ಬಲಗ್ಗೆಯಾಹುತಿಯೊಪ್ಪಿತಲ್ಲಿ (ಶರತ. ೨೦-೦೨೮). [ಬೊಗ್ಗು + ಏಳು₁ (<ಏಟ್ಟು₁ )]

**ಬೊಚ್ಚು₁** (ನಾ). (ಕೂದಲಿಗೆ ಸಂಬಂಧಿಸಿದಂತೆ) ದಟ್ಟವಾದುದು : ಬಾಮರೆಗೆ ಎಂಟನೆಯ ತಿಂಗಳಲ್ಲಿ ಮೆಯ್ಯ ಕೂದಲುಗಳು ಬೊಚ್ಚಾಗಿ ಉದ್ದವಾಗಿ ಕಾಣಿಸುವವು (ಅಕ್ಷಬೀ. ೨೨-೨).
[ದೇ.॥ ತಮಿ. ಪೊಚ್ಚು = ಕೂದಲಿನ ರಾಶಿ ; ತೆಲು. ಬೊಚ್ಚು = ಸವಿರಾದ ಕೂದಲು]

**ಬೊಚ್ಚು₃** 'ಬಚ್ಚು₃' ನೋ.

**ಬೊಚ್ಚುಬಾಯಿ** 'ಬಚ್ಚುಬಾಯಿ' ನೋ.

**ಬೊಜಂಗ, ಬೊಜಗ** (ನಾ). ೧. ವಿಟಪುರುಷ; ಜಾರ: ಪುರುಡಿಂಬುಕ್ಕಿಸೆ ಬಿಯಮಾಡಿಸಿ ಪೊಂದದವಂ ಬೊಜಂಗನೇ (ಅಜಿ. ೦೨-೦೭); ಮುಂದುವ ಬೊಜಂಗನಂ ಕಂಡ ಬೆಳವೆಣ್ಣನಂತೊಳಸಾರುತ್ತುಂ (ಧರ್ಮಾಮೃ. ೪-೭೭); ಇಲ್ಲದ ನೆವಮಿಟ್ಟಗಲಿ ಬೊಜಂಗನ ಕರ್ಲ್ದರ್ ಮೆಲ್ಲರ್ದೆಯುಂಬೊಳಗಂ ತಿಳಿ (ಶಬ್ದಮ. ೦೪-೪೬). ೨. ವ್ಯಾಪಾರಿಗಳ ಸಂಘ(?): 'ಎಲೆಯಬೊಜಂಗ' ಪರಾ. **ಬೊಜಗ** : ೧. "ವೇಶ್ಯಾಪತಿಃ, ಭುಜಂಗಃ, ವಿಟಃ, ಪಲ್ಲವಿಕಃ — ಈ ೪ ಬೊಜಗಂ" (ಶಬ್ದಮ. ೬೩-೨೨೭); ಈ ಪೊಲರೊಳ್ ಸುರದೇವ ನೆಂಬೊಂ ಬೊಜಗನಾತಂ . . . ನಾಲ್ವರ್ ಭಾರ್ಯೆಯರ್ (ಶಾಪುಂ. ೭೦); ಬಿಡು ಹುಸಿಮನಾನೊಲ್ಲೆನೆನುತ್ತೊತ್ತಗೊಡಂಬಡುತುಂ ಬೊಜಗರ್ವೆರಸಾಜಿಡಿಗುರುಳ್ಗಳ ಭಾಲೆಯರ್ಕಳೊಪ್ಪಿದರಾಗಳ್ (ಅನ್ನಿಪು. ೦೨-೬೭); ಗಣಿಕಾಸಖಿಯೊಪಚೊಲಿದರ್ ಬೊಜಗರುತೆ ಜೋಗಿಣಿಯಂತೆ ಮಧುದೂತಿ ಗೆಳಸಿದರ್ ಬಿಲ್ಲ ಬಿನ್ನಣಿಗರೆನೆ ಬಾಣಮಂ ತುಡುಕಿದರ್ (ತಂಕಿ. ೪೫-೪೦).

[< ಸಂ. ಭುಜಂಗ]

**ಬೊಜಂಗತನ, ಬೊಜಗತನ** (ನಾ). ವಿಟನ ವರ್ತನೆ,–ಸ್ವಭಾವ; ವಿಟವೃತ್ತಿ: ನಿದ್ರೆಯಲ್ಲಿ ಮೆಲ್ಲಗೆ ತೊಡೆ ಮೇಲೆ ಬೀಟ್ ಮಡನಾಬಿ ಬೊಜಂಗತನಕ್ಕೆ ನೋಡೆ ಸೂಳೆಗೆ ಕೊಡವೇಟ್ಟರೀ ಪಟುಬಳಾರಿಗೆ ಕೊಟ್ಟನದೊರ್ವ ನೊತ್ತೆಯಂ (ಸೂಕ್ತಿಸು. ೬-೩೯೩). **ಬೊಜಗತನ** : ಪೊಜ ಮಡು ಮದೀಯ ನಿಳದುಪುನೀಗಳ್ ನೆಜ ಬೊಜಗತನವಲಂಪಂ ದುಜ ಮತ್ತೊರ್ವಳೊಳೆ ಬಿಡುಬಿಡೆನ್ನಾತ್ಮಜೆಯಂ (ಧ್ವನಿ. ೨೯-೨೫).

[ಬೊಜಂಗ + – ತನ]

**ಬೊಜಗ** 'ಬೊಜಂಗ' ನೋ.

**ಬೊಜಗತನ** 'ಬೊಜಂಗತನ' ನೋ.

**ಬೊಜ್ಜ** (ನಾ). (ಕರಾ) ಉತ್ತರಕ್ರಿಯೆಯ ಹನ್ನೊಂದನೆಯ ದಿನದ ಕರ್ಮ; ತಿಥಿ; ಶ್ರಾದ್ಧ: ಸತ್ತಭಾವಯ ಬೊಜ್ಜವಾಗಿ ತಿಂಗಳೊಂದು ಕಳೆಯಿತು (ಚಿಜಸು. ೩೭೯); ಬೊಜ್ಜಕ್ಕೆ ಮುನ್ನೂರುರೂಪಾಯಿ ವೆಚ್ಚ ಮಾಡುವುದಾಗಿ ನಿಶ್ಚಯಿಸಿದ್ದರು (ಕಾಂಗಾಮು. ೯೦). [←ತುಳು. ಬೊಜ್ಜ]

**ಬೊಜ್ಜಗೆಱೆ** (ನಾ). ಒಂದು ಕೆರೆಯ ಹೆಸರು: ಮೂಡಗೆಱೆ ಬೊಜ್ಜಗೆಱೆಯ ಒಳಂಗೆಱೆ ಕೂಡಿತ್ತು ಸೀಮೆ (ಎಕ. IV. ಶ್ರೀರಂಗ. ೧೩೦-೨೫; ಪು. ೫೦೦). [ಬೊಜ್ಜ ? + ಕೆಱೆ³]

**ಬೊಜ್ಜು, ಬೊಜ್ಜೆ** (ನಾ). ೧. ಉಬ್ಬಿದ ಶರೀರ; ಜಳ್ಳುಮೈ: ಹೇಗೆ ಬೆಳೆಯಿತು ಬೊಜ್ಜು ನಿನಗೆ, ಎಂತ್ತಣ್ಣ ವಿಮುಂಡೆ? (ಗಜೇಶ ೭೬-೬); ಕಷ್ಟಪಡದೆ ಬೊಜ್ಜು ಬೆಳೆಸಿಕೊಂಡು ಸುಖವಾಗಿ ಬಾಳಬೇಕೆಂದು ನಿನಗಿಚ್ಛೆ ಇದ್ದರೆ ನೀನೂ. . . ಕಳ್ಳವ್ಯವಹಾರದಲ್ಲಿ ಕೈಹಾಕಬಹುದು (ಕಂಜಕಂ. ೦೨೦). ೨. ಡೊಳ್ಳುಹೊಟ್ಟೆ: (ಆ). **ಬೊಜ್ಜೆ** : ೧. ಸಣ್ಣ ಕೋಣೆಗೆ ಚಂದ ಗೆಜ್ಜೆ ಕಾಣಿತಕ ಚಂದ ಬೊಜ್ಜೆ ಪುಡಾರಿಗೆ ಚಂದ (ಇಂಗಾಪ. ೯೪-೫೬). ೩. ಹೊಟ್ಟೆ; ಉದರ: ಸಾಲುತ್ರಿವಳಿ ಡೊಳ್ಳು ಕಿಜು ಬೊಜ್ಜೆ ಕಳನಾಭಿ ಮೇಲಾದ ಕೀಕಿಣಿ ಕಾಂಚಿದಾಮಂ ಕಂಡೆ (ತಿಃಶಾಪ. ೦೦೯).

[ದೇ.॥ ತಮಿ. ಪೊಚ್ಚು; ತೆಲು. ಬೊಜ್ಜ]

**ಬೊಜ್ಜುಗ** (ನಾ). ಉಬ್ಬಿದ ಶರೀರವುಳ್ಳವನು; ಜಳ್ಳುಮೈಯುವನು: "ತುಂದಃ, ತುಂದಿಲಃ — ಈ ೨ ಬೊಜ್ಜುಗಂ" (ಶಾಕ್ತಿ. ೫೨); ದೊಡ್ಡ ಬೊಜ್ಜುಗ ಶೂರ್ಪಕರ್ಣ ಪೇರ್ದಡಿಕೊಂಬಿನವ (ಕಕುಪು. ೪-೭-೭).

[ಬೊಜ್ಜು + – ಗ₂]

**ಬೊಜ್ಜುಮೆಯ್**· **ಬೊಜ್ಜುಮೈ** (ನಾ). ಬೊಜ್ಜು ಬೆಳೆದ ದೇಹ; ಜಳ್ಳುಮೈ: ವಿಕಿ (ಎಂದರೆ ಬೊಜ್ಜುಮೆಯ್ಯ ಅವ್ ಗುಡ ಮಾಸ್ಲನಿಕೋವ್)ಯಲ್ಲಿ ಕೆಲವು ಲೋಪದೋಷಗಳಿರಬಹುದು (ಪುಜರು. ೨೯೯). **ಬೊಜ್ಜುಮೈ** : ಪುಟಬಡಿದ ನಗುವಿಗೆ ಬೊಜ್ಜುಮೈ ತಾಳಹಾಕಿತ್ತು (ಬಳ್ಳಿ. ೪೬). [ಬೊಜ್ಜು + ಮೆಯ್₂]

**ಬೊಜ್ಜುಮೈ** 'ಬೊಜ್ಜುಮೆಯ್' ನೋ.

**ಬೊಜ್ಜೆ** 'ಬೊಜ್ಜು' ನೋ.

**ಬೊಟ್ಟಂಚು** (ನಾ). ಧೋತ್ರ, ಸೀರೆ ಮೊದಲಾದುವುಗಳ ಬೆರಳಗಲದ ಸಾದಾಅಂಚು; ದುಂಡಂಚು: (ಆ). [ಬೊಟ್ಟು₁ + ಅಂಚು₂]

**ಬೊಟ್ಟಗ** (ನಾ). (ಬೀಜ ಸಹಿತವಾದ) ಹುಣಿಸೆಹಣ್ಣಿನ ಅಥವಾ ಕಾಯಿಯ ಚಿಕ್ಕತುಂಡು: (ಆ). [<ಬೊಟ್ಟು₁./ಮರಾ. ಬೋಟೂಕ]

**ಬೊಟ್ಟಸೊಪ್ಪು** (ನಾ). ಒಂದು ಬಗೆಯ ಔಷಧೀಸಸ್ಯ ಮತ್ತು ಅದರ ಸೊಪ್ಪು: ಬೊಟ್ಟಸೊಪ್ಪು ಒಂದು ಹಿಡಿ, ತೀಟಿಕಸಿಂಧುವೇರಿನ ನಾರು ಒಂದು ಹಿಡಿ. . . ಮಜ್ಜಿಗೆಯೊಂದಿಗೆ ಅರೆದು. . , ಕುಡಿಯಲು ಬಹು ಮೂತ್ರ ನಿಲ್ಲುವುದು (ಸಕಶ್ಮ. ಕಂ. ೫೦೦). [ಬೊಟ್ಟು₀ + ಸೊಪ್ಪು₂]

**ಬೊಟ್ಟಳ, ಬೊಟ್ಟಾಳ** (ನಾ). [ಸಂಗೀತ] ವಾದ್ಯವನ್ನು ನುಡಿಸುವುದರಲ್ಲಿ ಒಂದು ಗತ್ತು: ಅಳಗಂ ಸುಟಾಯಳಗಂ ಬೊಟ್ಟಳಮೊಳಕತ್ತರಮುಮೆಸೆವ ಪೊಜಕತ್ತರಮುಗ್ಗಳಿಸಿರೆ ನಾನಾಭೇದಂಗಳ ಪಹರಣಿ ತುಡುಕು ಮಗಾರಿ [ಪಾಠಾಂ. ಮೋಡಿ]ಯುಂ ಬಾಜಿಸಿದಂ (ಧರ್ಮಾಪ. ೨-೨೩). **ಬೊಟ್ಟಾಳ**: ಆವುಜಿಗನಾವುಜಮುಸಳವಡಿಸಿಕೊಂಡು ರುಂಕಾರದಂ ಪೊಯ್ಸಳಗ ಸುಟಾಯಳಗ ಬೊಟ್ಟಾಳು ಒಳಕತ್ತರ ಹೊಜಕತ್ತರ ವಿಷಮಕತ್ತರಮೆಂಬ ವಿಚಿತ್ರ ವಾದನದ ಬಹುಲಿಕೆಯೊಳ್ಳಿಹಿಲನೆನಿಸಿ. . . ಬಾಜಿಸುತ್ತಿರೆಯುಂ (ಶಾಂತೀಶ. ೦೬-೭೭ ವ). [ ? ]

**ಬೊಟ್ಟಳಗ** (ನಾ). ಚುಕ್ಕೆಗಳಿರುವ ಹವಳದ ಬಣ್ಣದ ಪಶು: ಶ್ವೇತ ಪೀತ ಹರಿತ ಕಪೋತ. . . ಅಳಗ ಬೊಟ್ಟಳಗ ಇಂತೀ ದಶವರ್ಣದ ಪಶು ನಾಮದ ಅನುವನರಿತು (ಶಾಣಗಾ. ೫-೦೨)

[ಬೊಟ್ಟು₂(<ಬಟ್ಟು) + ಅಳಗ₁]

**ಬೊಟ್ಟಾಡು** 'ಬಟ್ಟಾಡು' ನೋ.

**ಬೊಟ್ಟಾಳ** 'ಬೊಟ್ಟಳ' ನೋ.

**ಬೊಟ್ಟಿಡಿಸು** (ಕ್ರಿ). ಹನಿಹನಿಯಾಗಿ ಬೀಳಿಸು; ತೊಟ್ಟಿಕ್ಕಿಸು: ಅಟ್ಟ ವಾತದ ತೈಲವಂ ತಾಂ ಬೊಟ್ಟಿಡಿಸಿ ಲೇಪಿಸುತ ಪಥ್ಯಂಗೊಟ್ಟದಕೆ ತಕ್ಕನಿತು ಜೋಪಾಸನವನಾಚರಿಸಿ (ವಸತ್ಮ. ೦೭-೬).

[ಬೊಟ್ಟಿಡು (< ಬಟ್ಟಿಡು) + — ಇಸು₃]

**ಬೊಟ್ಟಿಡು** 'ಬಟ್ಟಿಡು' ನೋ.

**ಬೊಟ್ಟು₁, ಬೆಟ್ಟು₃** (ನಾ). ೧. ಬೆರಳು; ಅಂಗುಲಿ: ನೀಡಿದ ಬೆರಲಂ ನಾರಾಯಣಂ ತನ್ನ ಬಲದ ಕೆಯ್ಯೊಳ್ ಪಿಡಿದೊತ್ತಿದೊಡೆ ಬೊಟ್ಟನೊತ್ತಿದಂತಾದುದಿಲ್ಲ (ಬಂಹಂ. ೦೩-೨೯ ವ); ಚತುರ್ದಶಿಯುಪರಾಹ್ಣದೊಳ್ ಮುದ್ರಿಕೆಯಂ ಬೊ[ಪಾಠಾಂ. ಬೆ]ಟ್ಟನೊಳಕ್ಕಿಕೊಂಡು ಪೋಗಿ . . . ಕುಬೇರಪ್ರಿಯನ ರೂಪಂ ಸ್ಮರಿಯಿಸಿ ಬೆರಳುಂಗುರಮಂ ತಿರಿಪಲಾತನ ರೂಪಕ್ಕು (ಧರ್ಮಾಮೃ. ೭-೦೦ ವ); ಬೊಟ್ಟಿಗೆ ಉಂಗುರವ ಮಾಡಿ ಎನ್ನ ಸೇರಿಸೋ (ತುರಂಧ. ೨-೨೯-೯); ಬೊಟ್ಟು ಸೀಪಿದರೆ ಹೊಟ್ಟೆ ತುಂಬೀತೇ? (ಗಾದೆ). ೨. ಕಾಲಿನ ತುದಿಬೆರಳು; ತುದಿಗಾಲು: ಭೀತಿಯಿಂದೆ ಬೊಟ್ಟನಿಂ ನಡೆದು ಮನಂ ಮುಟ್ಟಿ ನೆರೆದುಪಪತಿಯನಟ್ಟಿ ಬಂದೊಱಗು ವಳೆ ಜಾತಿಜಾರೆ (ಶಸದ. ೦೨-೬೩). ೩. (ಬೀಜ ಸಹಿತವಾದ) ಹುಣಿಸೆ ಹಣ್ಣಿನ ಚಿಕ್ಕ ತುಂಡು: 'ಬೊಟ್ಟಗ', 'ಬೋಟು₂' ಪರಾ. **ಬೆಟ್ಟು₃** : ೧. ಮಧುಶರ್ಕರೆಯೊಡವೆರೆದಿರ್ದ ಬೆಟ್ಟು ಸೀಪಿಸಿದರರ್ಭಕಗೆ (ಬೊಃಹಚ. ೦೭ ೨೬); ಅರೈದುಂಗುರವುಳ್ಳ ಬೆಟ್ಟು (ಬಿವಾಶ್ರ. ೦೦೩-೬); ನಾಲ್ಕುಬೆಟ್ಟು ಅಗಲ ಜರತಾರಿಯ . . . ಕುಪ್ಪಸ (ಪಾಳಮೊ. ೪೦).

**ಬೊಟ್ಟು ಕಚ್ಚು, ಬೆಟ್ಟುಕಚ್ಚು** = (ಅಲಂ) ಆಶ್ಚರ್ಯಪಡು ; ಬೆರಗಾಗು ; ವಿಸ್ಮಯವನ್ನು ಹೊಂದು : ಕಟ್ಟದ ಮನೆಯಿದ್ದು ಚೆಟ್ಟಿಗೆಯರ ಬಟ್ಟು ಹುಟ್ಟದ ಶಿಶುಗಳನುಳಿದು ಕಟ್ಟಿವಿಲ್ಲಿಗೆ ಬಂದು ಬಟ್ಟಿಯಾಳುಗಳೆಂದು ಬೊಟ್ಟು ಕಚ್ಚಿದರು ಕಾಯೆನುತ (ಅಮುಣಾಂ. ೨-೬೦); ಇದನ್ನು ಕಂಡು ಬೇರೆ ಕೆಲವು ರಾಷ್ಟ್ರಗಳು ಬೆಟ್ಟುಕಚ್ಚಿಕೊಂಡರೆ ಅದರಲ್ಲಿ ಆಶ್ಚರ್ಯವಿಲ್ಲ (ರಾಜಶ. ೬೩).

**ಬೊಟ್ಟು₂** 'ಬಟ್ಟು' ನೋ.

**ಬೊಟ್ಟು₃** (ನಾ). [ಸಂಗೀತ] ಮದ್ದಳೆ ಬಾರಿಸುವುದರಲ್ಲಿ ಒಂದು ರೀತಿ (?): ಅಚ್ಚು ವೈಶಿಕ ನೇಮ ವ್ಯಾಪ್ತಿ ಬೊಟ್ಟು ಮೋಹರ ಅರಿದೆಂಬ ಪಂಕದಿರಾ ಎಂಬ ಕೂಡು ತಪ್ಪದೆ ಶುದ್ಧಭಾರಿತವಣೆಯೆಂಬ ಮದ್ದಳೆಗಳಂ ಬಾರಿಸುವ ಮದ್ದಳೆಕಾಱರಿಂ (ರಣಾವ. ೨-೦೦ ವ).

[ ← ತೆಲು. ಬೊಟ್ಟು = ಗಾನವಿಶೇಷ ]

**ಬೊಟ್ಟುಗ.** (ನಾ). ಮೈಮೇಲೆ ಚುಕ್ಕೆಗಳುಳ್ಳ ಪ್ರಾಣಿ ; ಚಿರತೆ : ಮಚ್ಚೆವರ್ಣದ ಬೊಟ್ಟುಗ ಅಚುವರ್ಣದ ಅಳಗ ಐದುವರ್ಣದ ಸಂಚಿಗ ಇವಱೊಳಗಾದ ನಾನಾವರ್ಣದ ಅಜಕುಲ ಕುಱಿವರ್ಗ ಕೊಲುವ ತೋಳನ ಕುಲ ಮುಂತಾದ ತ್ರಿವಿಧದ ಬಟ್ಟೆಯ ಮೆಟ್ಟದೆ (ಸರ್ವ. ೮೨-೯೫೩).

[ ಬೊಟ್ಟು₂ ( < ಬಟ್ಟು ) + – ಗ₂ ]

**ಬೊಟ್ಟುಗೊಳ್** (ಕ್ರಿ). ದುಂಡಾಗು ; ವೃತ್ತಾಕಾರವಾಗು : ಮೊಳೆತವು ಬೊಟ್ಟುಗೊಂಡುವು ಪೊಗರಿದ್ದುವು ನಳಿನಕುಟ್ಮಲಗಳೆಂಬಂತೆ ಬೆಳೆವುತಿರ್ದುವು ಮೊಲೆಗಳು ಪೊಂಗಳಸವ ಗೆಲುವಂತಾ ಕೋಮಲೆಯ (ನಾಗಕು. ೦೨-೪).

[ಬೊಟ್ಟು₂ ( < ಬಟ್ಟು ) + ಕೊಳ್₁]

**ಬೊಟ್ಟುತೋರಿಸು** 'ಬೊಟ್ಟುದೋಱಿಸು' ನೋ.

**ಬೊಟ್ಟುದೋಱಿಸು, ಬೊಟ್ಟುತೋರಿಸು** (ಕ್ರಿ). ೧. ಬೆರಳಿನಿಂದ ತೋರಿಸು ; ಬೆರಳು ಮಾಡು. ೨. (ಅಲಂ) ಸ್ಪರ್ಧೆಗಾಗಿ ಬೆರಳೆತ್ತು,—ತೋರಿಸು : ನೀನೆ ಬಲ್ಲಿದನೆಂಬರ್ ನೇಮಿಕುಮಾರಂ ಬೊಟ್ಟುದೋಱಿಪಂ ಬಾ (ಬಂಹಂ. ೦೩-೧೯ ವ). **ಬೊಟ್ಟುತೋರಿಸು :** ೧. ಹುಡುಗ ಓಡುತ್ತಲೆ ತನ್ನ ಕುರಿಗಳತ್ತ ಬೊಟ್ಟುತೋರಿಸಿ . . . ಹೊರಟುಹೋದನು (ಮಾರ್ಗದ. ೬೭). [ಬೊಟ್ಟು₁ + ತೋಱಿಸು]

**ಬೊಟ್ಟುಮುರಿ, ಬೆಟ್ಟುಮುರಿ** (ಕ್ರಿ). (ಅಲಂ) (ಬೆರಳು ಮುರಿದು) ಶಪಿಸು ; (ನೆಟಿಗೆ ಮುರಿದು) ಶಾಪಹಾಕು : ನೀನು ನನಗೆ ಬೊಟ್ಟು ಮುರಿದು ಶಾಪಳಿಸುತ್ತ ನನ್ನನ್ನು ಮನಸೋಕ್ತ ಬೈಯಬಹುದು (ಪೋಚವ. ೦೨೬) ; ಏನಾಗೇದ ವಸಂತಗ, ನೀವೆಲ್ಲಾ ಇಷ್ಟು ಬೊಟ್ಟುಮುರಿಯಲಿಕ್ಕ ? (ಹಂ. ೮). **ಬೆಟ್ಟುಮುರಿ :** ಅವರನ್ನು ಕಂಡರೆ ಆಗದವರು ಲಟ ಲಟನೆ ಬೆಟ್ಟುಮುರಿದು ತೃಪ್ತಿಪಟ್ಟುಕೊಂಡರು (ಕೂಶಿ)

[ಬೊಟ್ಟು₁ + ಮುರಿ₁]

**ಬೊಟ್ಟುವೋರಿಸು** (ಕ್ರಿ). ೧. ಒಂದು ಬಗೆಯ ಆಟ ಆಡು (?) : ಶಿಱುಕಲ್ಲಾಡುವ ಬೊಟ್ಟುವೋರಿಸುವ ಸೆಂಡಂ ಪೊಯ್ವ ಬಾದಿಂಗ ಕೈನಿಱಿದೆರ್ದಾಡುವ . . . ನಾನಾಕ್ರೀಡೆಯೊಳಿರ್ದರುಂ ತಱಿಸಂದುದ್ಧತ ಭಾವದುಬ್ಬರದಿನೇನುವ್ಯತ್ಯರಾಗಿರ್ದರೋ (ಸಂಕುಮಾ. ೨-೩). ೨. ಸ್ಪರ್ಧೆಗೆ ಆಹ್ವಾನಿಸು ; ಪಂಥಾಹ್ವಾನ ನೀಡು (?) : ಪೆಱರೊಳು ಪೊರ್ದೊಳಿಯಿಕ್ಕುತ್ತಂ ಮೊಯ್ಯೊರಿಸುತ್ತ ಬೊಟ್ಟುವ [ ಪೋ ] ರಿಸುತ್ತುಮಿವು ಮೊದಲಾದ ಪೆಱವುಂ ರಾಗದ್ವೇಷಹೇತುಗಳಪ್ಪುವಂ ಮಾಡುತ್ತಿರ್ಪುದುಂ ವಂಚನೆ ಮೊದಲಾದ ಕ್ಷುದ್ರಿಕೆಗಳನುಪದೇಶಂಗೆಯ್ವುದಾರಂಭಕೋಪದೇಶ ಮಕ್ಕುಂ (ಕಣಾರ. ೪೦೩). 'ಬೊಟ್ಟುದೋಱಿಸು' ಪರಾ. [ ? ]

**ಬೊಟ್ಟೆತ್ತು** (ಕ್ರಿ). ಬೆರಳೆತ್ತಿ ಹೇಳು ; ಕೈಯೆತ್ತಿ ಸ್ಪಷ್ಟ ಪಡಿಸು, – ನಿರ್ದೇಶಿಸು : ಧರಣೀಪಾಳರ್ಕಳುಂ ಮಂತ್ರಿಗಳು ವಿತರರಿಲ್ಲೆಂದು ಬೊಟ್ಟೆತ್ತಿದೆಂ ರಾಯರೊಳೆಂತಾ ನಾರಸಿಂಹಂ ಸಚಿವರೊಳೆಸಕಂವೆತ್ತ ಪೋಲಾಳ್ವನೀಯಿರ್ಬ್ಬರೆ . . . ಹೊಯ್ಸಳನ ಸಕಳ ಸಾಮ್ರಾಜ್ಯಮಂ ಕಾದರಿತ್ತಲ್ (ಎಕ. XI. ದಾವಣ. ೨೫-೫೬ ; ೧೭೨೪) ; ಉತ್ತಮದೇವಿ ನೀನೆ ಮೊಲೆವೊತ್ತರೊಳೆಂದು ಜಗತ್ರಯಕ್ಕೆ ಬೊಟ್ಟೆತ್ತಿದ ಮಾಟಕ್ಕಿಯಿಂದೆ ಗುಡಿಗಟ್ಟಿ . . . ಉನ್ಮತ್ತಗಜೇಂದ್ರಮಿರ್ದೊಡೆ ಗಜೇಂದ್ರ ಮದಾಲಸಯಾನೆ ನೋಡಿದಳ್ (ಅಜಿಪು. ೪-೦೦೦) ; ಭಟ್ಟರ ಗುರುಗಳೆಂದೆನಿಸಿ ಕುಮಾರನ ಬೊಟ್ಟೆತ್ತಿ ಪೊಗಳ್ದ ಲುಬ್ಧಕರು ಕೊಟ್ಟರೊಂದೊಂದು ಕೂರ್ಗಣೆಗಳು ಬಿದ್ದು ಪೆರ್ಬಟ್ಟೆಕೆ ವಾಗಿಲಾದುದೆನಿಸಿ (ಪೋಚಕ. ೦೯-೩೮).

[ಬೊಟ್ಟು₁ + ಎತ್ತು₁]

**ಬೊಡ್ಡಣ** (ನಾ). ಸೋಪಾನಗಳಿಂದ ಕೂಡಿದ, ಜಲಕ್ರೀಡೆಯಾಡುವ ಪುಷ್ಕರಿಣಿ,—ಕೊಳ : ಬಾ ನಾಮಿೞ ಬಾವಿಯೊಳ್ ಜಲಕ್ರೀಡೆಯಾಡುವಮ ಎಂದೊಡಗೊಂಡೊಯ್ವಾತನಂ ಬೊಡ್ಡಣದ ಬಾವಿಯೊಳಗೆ ಪುಗುವಂತೆ ಗೆಯ್ದು (ಚಂದ್ರಸಾ. ೦೯೯-೦೭). 'ಬೊಡ್ಡಣವಾವಿ' ಪರಾ. [?]

**ಬೊಡ್ಡಣಬಾವಿ** 'ಬೊಡ್ಡಣವಾವಿ' ನೋ.

**ಬೊಡ್ಡಣವಾವಿ, ಬೊಡ್ಡಣಬಾವಿ** (ನಾ). = ಬೊಡ್ಡಣ : ಅಲ್ಲಿಯ ಕೆಱೆಗಳೆಲ್ಲಂ ಬೆಳೆಗೆಯ್ಗಳೆ ಕೊಳಂಗಳೆಲ್ಲಂ ಪೂಗೊಳಂಗಳೆ ಬಾವಿಗಳೆಲ್ಲಂ ಬೊಡ್ಡಣವಾವಿಗಳೆ (ಬಂಹಂ. ೦-೨೦ ವ) ; "ವರ್ಧನವಾಪಿ, ತುಂಬಿದ ಬಾವಿ" (ಬಂಹಂ. ಕೋಶ). **ಬೊಡ್ಡಣಬಾವಿ :** ಸುವರ್ಣಮಯಮಣಿ ಕುಟ್ಟಿಮಮಪ್ಪ ಬೊಡ್ಡಣಬಾವಿಯೊಳ್ . . . ಜಲಕ್ರೀಡೆಯಂ ಮನಕ್ಕೆ ಪಂದರಸಿಯರ್ಕಳೊಡನೆ ನೀಡುಂ ಬೇಗಮಾಡುತ್ತಿರ್ಪನ್ನೆಗಂ (ವಡ್ಡಾರಾ. ೦೩೭-೨೨) ; "ಬೊಡ್ಡಣಬಾವಿಯೊಳ್–ದೊಡ್ಡಬಾವಿಯಲ್ಲಿ, ಕೊಳದಲ್ಲಿ (?), (ಸಂ ) ವರ್ಧನವಾಪಿ (?) . . . ಇಂಥ ಬಾವಿಗೆ ನೀರನ್ನು ತುಂಬಬಹುದು, ಕೆಳಗಿರುವ ತೂಬಿನಿಂದ ನೀರನ್ನು ಹೊರಕ್ಕೆ ಬಿಡಬಹುದು, ಇದನ್ನು ಜಲಕ್ರೀಡೆಗೂ ಮಿಂಯುವುದಕ್ಕೂ ಉಪಯೋಗಿಸುತ್ತಿದ್ದರು " (ವಡ್ಡಾರಾ. ಕೋಶ) ; ರತ್ನಮಂ ಪೋಲ್ವ ಲಾಕ್ಷಾದ್ರವದೊಳು ಬೊಡ್ಡಣ ಬಾವಿಯಂ ತೀವಿದೊಡದಱೊಳೋಲಾಡಿ ಮುಕ್ಕುಳಿಸಿ ನೋಡಿ ಕೃತಕ ರುಧಿರಮಪ್ಪುದನಱಿದು (ಶಾಪುಂಕ. ೦೯) ; ತುಂಬಿದ ಬೊಡ್ಡಣಬಾವಿಯ ತೂಂಬಂ ತಡವರಿಸಿ ಕಂಡದಂ ಕಳೆದಲ್ಲಿಂದಂ ಬೇಗಂ ಪೊಱಮಡೆ (ಚಂದ್ರಸಾ. ೦೯೯-೩೪) ; ಅರಸನೊಸದು ಜಲಕ್ರೀಡೆಯಾಡಲ್ ಬಗೆದು . . . ಪಂಚರತ್ನಶಿಲಾಖಚಿತಮಪ್ಪ ಬೊಡ್ಡಣಬಾವಿಯಂ ವನಿತಾಜನಸಹಿತಂ ಪೊಕ್ಕಾಗಳ್ (ಬಂಹಂ. ೦೩-೩ ವ). [ಬೊಡ್ಡಣ + ಬಾವಿ./ ತೆಲು. ಬೊಡ್ಡನಬಾವಿ]

**ಬೊಡ್ಡಿ** 'ಪೊಡ್ಡಿ' ನೋ.

**ಬೊಡ್ಡಿತನ** (ನಾ). ಸೂಳೆತನ ; ಜಾರತನ : ಮನುಕುಲದೆ ಪುಟ್ಟಿ ನಿಟ್ಟುರದ ಬೊಡ್ಡಿತನಮಿಂತೇಂ ಸೂಟನನಾಯ್ದು ಬಾಚ್ದಿ ನೀಂ ಮಗಳೇ ! (ರಾಮಾಶ್ವ. ೬೦-೩).  [ಬೊಡ್ಡಿ ( < ಪೊಡ್ಡಿ ) + – ತನ]

**ಬೊಡ್ಡಿಮಗ** 'ಪೊಡ್ಡಿ' ಪರಾ.

**ಬೊಡ್ಡು** 'ಬಡ್ಡು' ನೋ.

**ಬೊಡ್ಡೆ** (ನಾ). ೧. (ಗಿಡ, ಮರ ಮೊದಲಾದುವುಗಳ) ಬುಡ ; ತಳ ; ಕೆಳಭಾಗ : ಆ ಬೇವಿನ ಮರದ ಬೊಡ್ಡೆಯು ಅವನಿಗೊಂದು ಆಸರವಪ್ಪ (ಚಂಪರಂ. ೦೦); ಅವರೆಲ್ಲರೂ ಬಂಡೆಯ ಬೊಡ್ಡೆಯಲ್ಲಿ ನಿಂತು ಎದುರ್ರ್ಗಿನ ಮಲೆಯ ಮೇಲಿನ ಬಾಹುಬಲಿಯತ್ತ ನೋಡಿದರು (ಸವತಿ. ೦೦೬). ೨. ಮೊದಲು ; ಆರಂಭ : ಬೊಡ್ಡೆಯಲ್ಲಿಯೇ ಅವನೊಂದು ದೊಡ್ಡ ತಪ್ಪನ್ನು ಮಾಡಿರುವನು (ಹುಡುಗಾ. ೯೩). 'ಬುಡ' ಪರಾ.

**ಬೊದಡೆ, ಬೋದಡೆ** (ನಾ). ದಪ್ಪ ಹಾಗೂ ಒರಟಾದ ಹಚ್ಚಡದಂತಹ ಹೊದಿಕೆ : ಬೋಳು ಜಡೆಮುಡಿ ಲೋಚುಮಂಡೆಗಳ ಸಿತಭಸಿತಭಾಳ ಭಸ್ಮಾಂಗಮುದ್ಧೂಳಿತಂ ರುದ್ರಾಕ್ಷಿಮಾಲೆ ಕಂಬಳಿ ಜಾಡಿ ಬೊಂತೆ

ಬೊದವೆಯು ಕಾವು ನಿರ್ವಾಣ ಕಾಶಾಂಬರ (ಗುರುಚ. ೩-೩೬); ಕಾವಿ ಕಾಷಾಯಾಂಬರವು ಕಂತೆ ಜಾಡಿಯು ಬೊದಡೆ ತೀವಿ ಮೈಯೊಳು ಭಸಿತ ದೇವಗಣ ನಡೆಯೆ (ಶರಲೀ. ೧೬೯-೩). **ಬೋದಡೆ** : ತಳೆದ ಒಡಲ ಬೂದಿಯು ಕಚ್ಚುಟದ ಕೈದಡಿಯು ನೆತ್ತಿಯ ಜಡೆಯು ಬೋದಡೆಯು ಮೆರೆಯುತ್ತ ಮಣಿಮಯಾಸನವೆತ್ತ ನೋಡು (ಮಲೇಶ. ೭-೩೭).

[← ಮರಾ. ಬೋಜಡ, ಬೋದಡ]

**ಬೊದಿಲ್** (ನಾ). ಒಂದು ಅನುಕರಣ ಶಬ್ದ : ಸೂತನೆಂಬವಂ ಕಂಡು . . . ಬೊದಿಲ್ಲನೆ ಪಾಯ್ದು ನೀರೊಳಾ ಬಾಳನನಾದಮಾದರದೆ ಕಂಡೊಸೆದು ನಿಧಿಗಂಡನಂತೆವೋಲ್ (ಕಂಕಥಾ. ೧-೯೬) ; ಎಳೆ ಬೊದಿಲ್ಲನೆ ಬಿಟ್ಟಿತ್ತು (ಕಂಕಥಾ. ೧೧-೭೦).

**ಬೊನೆಗಾರೆ** 'ಬೋನಂಗಾರೆ' ನೋ.

**ಬೊಪ್ಪ** 'ಬಪ್ಪ$_2$' ನೋ.

**ಬೊಪ್ಪಡೆ** (ನಾ). ಒಂದು ಬಗೆಯ ತೆರಿಗೆ : ಸಂಕರದಾಸಿವ ಕೊಟ್ಟದಾಸಿಗ ಸುಂಕದ ಹೆಗ್ಗಡೆ ಬೊಪ್ಪಡೆ ಒಳಗಾಗಿ ಸುಂಕ ಆಯದಾಯ . . . ಧಾರಾಪೂರ್ವಕ ಮಾಡಿ ಬಿಟ್ಟರು (ಎಕ. V(R), ಪ್ಯಸೂರು. ೨೦೩-೦೪; 1175).

[ ? ]

**ಬೊಪ್ಪಯ** (ನಾ). ತಂದೆ ; ಜನಕ : ಬೊಪ್ಪಯ, ಮುಚ್ಚುವಿರೆ ನನಗೆ ನಿಮ್ಮಾತ್ಮಮಂ ಸುಡುತ್ತಿರ್ಪಳಲ ಬೇಗೆಯಂ (ಶ್ರೀರಾಮಾ. ೪೬೨-೪೬೩).

[ಬೊಪ್ಪ (<ಬಪ್ಪ$_2$) + ಅಯ$_1$ (<ಅಯ್ಯ$_{61}$)]

**ಬೊಪ್ಪಿ** (ನಾ). (ಸಾಮಾನ್ಯವಾಗಿ ಶೂದ್ರವರ್ಗಕ್ಕೆ ಸೇರಿದ) ಗ್ರಾಮ ದೇವತೆಯ ಅರ್ಚಕ : (೬). [ ← ಮರಾ. ಭೋಪೀ, ಭೋಪ್ಯಾ ]

**ಬೊಪ್ಪಿಬೋಯ** (ನಾ). ಒಬ್ಬಾತನ ಹೆಸರು : ಬೊಪ್ಪಿಬೋಯಸ್ಯ ಕಾಶ್ಯಾ(ಶ್ಯ)ಪಗೋತ್ರ ಕುಮಾರಶರ್ಮಣ (ಇಅ.VII, ೦೬೬-೪೨ ; 668).

[ ಬೊಪ್ಪಿ$_?$ + ಬೋಯ]

**ಬೊಬ್ಬರ** 'ಬಬ್ಬರ' ನೋ.

**ಬೊಬ್ಬರ್ಯ** (ನಾ). (ಕರಾ) ಒಂದು ಕ್ಷುದ್ರದೇವತೆಯ ಹೆಸರು : ನಿದ್ರೆಯಲ್ಲಿ ಬಟ್ಟಾಗ, ಬೊಬ್ಬರ್ಯ ಬಂದ ಹಾಗೆ ಕಾಣಿಸಬಹುದು (ಸ್ವಸ್ವಸೂ. ೮) ; ಆ ಬೊಬ್ಬರ್ಯ ನಿಮಗೆ ಕಾಣಿಸಿತ್ತೆ ? (ರೇವಹಂ. ೩೩).

[← ತುಳು. ಬಬ್ಬರ್ಯ ]

**ಬೊಬ್ಬಾಟ**, ಬಬ್ಬಾಟ (ನಾ). ೧. (ಆನಂದ, ಆವೇಶ, ರೋಷ ಮುಂತಾದುವುಗಳಿಂದ ಮಾಡುವ) ಕೂಗಾಟ ; ಚೀರಾಟ ; ಅರಚುವಿಕೆ : ಬೊಬ್ಬಿಡಿದಾರುವೀ ಬೊಬ್ಬಾಟವೇತಕ್ಕೆ (ಬಸಪು. ೩೬-೧೬); ನಿಜಪದಾತಿಯ ಬೊಬ್ಬಾಟ . . . ತ್ರಿಜಗಕ್ಕೆ ಭಯದ ಬೀಜದುವು (ಕುಂಸಂ. ೦೩-೨೦). ೨. ದೊಡ್ಡ ಶಬ್ದ ; ಗಟ್ಟಿಯಾದ ಧ್ವನಿ : ದಿವಿಜರ ಥಟ್ಟಿನಲಿ ಬೊಬ್ಬಾಟವಾಯ್ತು ಗಭೀರಭೇರಿಗಳು (ಕುವ್ಯಾಅ. ೦೨-೨೩) ; ಅಸುರದ ಬೊಬ್ಬಾಟ ಹಯದುರುಹೇಷಿತಧ್ವನಿ ಕರಿಯ ಬೃಂಹಿತ ಘೋಷ . . . ಅಸುರದಿ ಬೆದಱಿಸಿತು ರಾಮಸುವಾಸಿನಿಯನು (ತೊರರಾ. ೩-೬-೨೮). ೩. ಅಬ್ಬರ ; ಆರ್ಭಟ : ಆಟವಾರಂಭಿಸದು ಬಟಱ ಬೊಬ್ಬಾಟವೇತಕೆ ವಿಜಯಿಸಿದಿ ವಾಚಾಟರಿಗೆ ಮೆಚ್ಚುವಳೆ (ಕುವ್ಯಾಸ. ೦೩-೪೭); ಭಂಡ ಬೊಬ್ಬಾಟವನು ಬಿಡು ಕೈಕೊಂಡು ನೋಡಿದನುಳಿದ ಗೋಪರ ತಂಡವನು ಬಳಿಕಾಹುತಿಯ ಮಾಡಾಪಡೆ (ಶಿಭಾಗ. ೦೦-೩೨-೦೨); ತನ್ನ ಗಂಡನ ಬೊಬ್ಬಾಟ ರಾಧಾಬಾಯಿಗೂ ತುಸು ವಿಚಿತ್ರವಾಗಿಯೇ ತೋರಿರಬೇಕು (ವಾತ್ಸಲ್ಯ. ೭೩). ೪. ಗಲಾಟೆ; ಗಲಿಬಿಲಿ; ಗೊಂದಲ : ಅರಮನೆಯಲಾ ಬೊಬ್ಬೆ ಹಸ್ತಿನಪುರದಲೀ ಬೊಬ್ಬಾಟವಿನ್ನುಳಿದರಸುಗಳ ಪಾಡಾವುದು (ಕುವ್ಯಾಸ. ೬-೬) ; ಇರುಳು ಬೊಬ್ಬಾಟದಲಿ ನಿದ್ದೆಗೆಟ್ಟ ನೆರೆಯವರಾಸಿನಲಿ ಹೆಸರೊಂದನಿಟ್ಟೆ (ನಡೆದಾ. I, ೪೪೨). ೫. ತಕರಾರು ; ತಗಾದೆ ; ಪರಾತ : ಈ ಪ್ರಕಾರದ ಬೊಬ್ಬಾಟಗಳು ಪತ್ರದ್ವಾರದಿಂದ ನೇಹಮಿ ನಡ ದಿರುತ್ತವೆ (ಮುಂಬಯಿ.೮ ಶ್ರಾವಣ). ೬. ಗುಲ್ಲು; ಪುಕಾರು: ನೀ ಅದು ಮಾಡುತೀ ಇದು ಮಾಡುತೀ ಅಂತ ಊರೆಲ್ಲಾ ಬೊಬ್ಬಾಟ ಆಗೈತವ್ವಾ (ಮಣ್ಣುಹ. ೧೦೦): ರಾಚಪ್ಪ ನಿನ್ನ ಕೈಹಿಡಿದು ಕೇಳಿದಾ ಅನ್ನೂದರ ಬೊಬ್ಬಾಟ ಮಾಡಿದವ ಶ್ಯಾಮರಾಯ (ದೀಪಹ. II, ೦೬೭). **ಬಬಪ್ಪಿಟ** : ೬. ಸ್ವಲ್ಪದರ ಮಾತು. ಯಾತಕ್ಕ ಬಬ್ಬಾಟ ಮಾಡೋದು (ಧಪಂಸ. ೩೯); ಈಗ ಇಲ್ಲದ ಬಬ್ಬಾಟ ಮಾಡೂ ಹಂಗಿಲ್ಲ. ಯಾರೆದುರೂ ಹೇಳದ ಸುಮಾಕ ಇರೂದ ಪಾಡ (ಗ್ರಾಮಾಯ. ೪೬).

[ಬೊಬ್ಬೆ$_2$ + ಆಟ./ತುಳು. ತೆಲು. ಬೊಬ್ಬಾಟ]

**ಬೊಬ್ಬಿ** 'ಬೊಪ್ಪೆ$_3$' ನೋ.

**ಬೊಬ್ಬಿಕ್ಕು**, ಬೊಬ್ಬೆಯಿಕ್ಕು (ಕ್ರಿ). ೧. ಕೂಗು ; ಅರಚು : ಲಂಘಿಸುತ ಕಾಡೆಮ್ಮೆಗಳ ತೆಕ್ಕೆಯೊಳು ಕೋಣನಿರೆ ಕಂಡು ಶಬರಿಯರು ಬೊಬ್ಬಿಕ್ಕೆ ಮಂಗುಳ್ದಾಲಿಸಿದರು(ಹಕಶಾ.೩-೩೯). ೨. ಗರ್ಜಿಸು; ಅಬ್ಬರಿಸು: ರಕ್ಕಸಿಯ ಕೊಂದತುಳಪರುಷದ ಹರವರಿಯುಲುಱೆ ಬೊಬ್ಬಿಕ್ಕಿ ಬಾಹಪ್ಪಳಿಸಿ ಘಟನೆಗೆದಂಬರಸ್ಥಳಕೆ . . . ಹಾಱದನು (ತೊರರಾ. ೩-೧-೨೪); ಶಿವ ನೀನಾದ ಕಾರಣದಿಂದೆ ಬಂದಾಹವದೊಳು ಬೊಬ್ಬಿಕ್ಕಬಹುದು (ಷೋಹಶ. ೩೯-೨೬). **ಬೊಬ್ಬೆಯಿಕ್ಕು** : ೧. ತಬ್ಬಿಬ್ಬಯಾಗದೆ ತಳ್ಳಂಕಗೊಳ್ಳದೆ ಬೊಬ್ಬೆ ಯಿಕ್ಕದೆ ಜೋಕೆಯಱದು ಒಬ್ಬರಿಬ್ಬರು ಮೂವರೊಂದೊಂದು ಕಲೆಯ ಮೈಯುಬ್ಬುವೊಲು ಕೇಳಿಸಿದರು (ಶರವ. ೧-೭೦). [ ಬೊಬ್ಬೆ$_2$ + ಇಕ್ಕು ]

**ಬೊಬ್ಬಿಡಿಸು** (ಕ್ರಿ). ಬಹಳ ಶಬ್ದಮಾಡಿಸು : ಮೂಗಿನಲಿ ಹಲವು ಕುಱ ಕೋಣಗಳ ಹೊಗಿಸುವುದುಲಿವ ಹೆಬ್ಬಱಗಳನು ಕಿವಿಗಳ ಬಳಿಯ ಬೊಬ್ಬಿಡಿ ಸುವುದು (ತೊರರಾ. ೬-೨೬-೨೩). [ಬೊಬ್ಬಿಡು + — ಇಸು$_3$]

**ಬೊಬ್ಬಿಡು**, ಬೊಂಬಿಡು, ಬೊಬ್ಬೆಯಿಡು (ಕ್ರಿ). ೧. (ಆನಂದ, ರೋಷ, ಆವೇಶ ಮುಂತಾದುವುಗಳಿಂದ) ಕೂಗು ; ಅರಚು : ಭಿಲ್ಲಪ್ರಕರಮಡಸಿ ಕೊನಾರ್ಯಗ್ಗಳಂ ಬಿಟ್ಟು ಬೊಬ್ಬಿಟ್ಟು (ಗಂಕ. ೧-೦೦೧); ಸೈನ್ಯಂ ನಡೆಯಲ್ ಬೊಬ್ಬಿಟ್ಟು ಕೋಲಂ ತುಡುಕೆ (ದಕಕು. ೭-೭೦); ಬೀಳುಬೀಳಭಿಮನ್ಯುವಿವ ವಧೆ ಬಾಳಲೀವುದೆ ನಿನ್ನನೆನುತುಬ್ಬಾಳುತನದಲಿ ಪಾರ್ಥ ಬೊಬ್ಬಿಡೆ (ಕುವ್ಯಾದ್ರೋ. ೦೪-೪೦). ೨. ಗಟ್ಟಿಯಾಗಿ ಹೇಳು ; ಧ್ವನಿಮಾಡಿ ಹೇಳು; ಉದ್ಘೋಷಿಸು : ಬೇಡಿ ಕರುಣವನೀಯೆನುತ್ತಂ ಕೂಡೆ ಬೊಬ್ಬಿಡುತಾರು ತಾಣತಿಗೂಡಿ ತಾರ್ಕ್ಯಸುತ್ತಂ . . . ತಾಂಡವಮನಾಡುವೆನು (ಬಸಪು. ೦೭-೨೦); ಶ್ರೀ ರುದ್ರವೇದ ಬೊಬ್ಬಿಡುತ್ತಿದೆ (ಗಣಭಾ. ೨೪೩-೧) ; ಕಟ್ಟಿಗೆ ಗಾಜಿರನೇಕವುಗ್ಗಡೆ ಬೊಬ್ಬಿಟ್ಟುದು ರಾಯನೋಳ್ಗಿಯಲಿ (ಷೋಹಶ. ೨೦-೩೬). ೩. ಆಕ್ರಂದನ ಮಾಡು ; ಮೊರೆಯಿಡು : ಚಂದ್ರಂಗೆ ರಾಹು ಅಡ್ಡ ಬಂದಲ್ಲಿ ಅಂಬುಧಿ ಬೊಬ್ಬಿಟ್ಟಿತ್ತೆ (ಬಸವ. ೨೩) ; ಹದ್ದು ಕಾಗೆಯ ಮನೆಗೆ ಬಾಣಸವಿದ್ದುದೋ ಗಜವೆನುತ ಬೊಬ್ಬಿಡುತಿದ್ದುದರಿಬಲ (ಕುವ್ಯಾದ್ರೋ. ೩-೪೩); ಬಾಲೆಯರುಗಳು ಬೊಬ್ಬಿಡಲು ಗೋಪುರದಗ್ರಶಾಲೆಯ ರೋದನ ಗೇಳಿ ಲೀಲೆಗಾಜಿನ ಕೊಲ್ಲುವಿಲ್ಲೆಂದು ದುಃಖದ ಶೀಲೆಗೆ ಮಾತನಟ್ಟದನು (ಪೋಹಶ. ೩೩-೩೨). ೪. ಅಧಿಕವಾಗಿ ಧ್ವನಿಮಾಡು,— ಶಬ್ದಮಾಡು : ನಡೆವೆಡೆಯೊಳಗುರ್ಬಿಂ ಬೊಬ್ಬಿಡುವಂದುಗೆ ಗೆಜ್ಜೆ ಸಜ್ಜನೆಗೆ ಸೊಗ ಯಿಸುಗುಂ (ಗಂಕ. ೩-೬೯); ಕಾಡಿಕಾಡಿದು ಬೊಬ್ಬಿಟ್ಟಾಡುತಿರ್ದವು ಸಾಂದ್ರ ಚಂದ್ರಿಕೆಯಲಿ ಚಕೋರಿಗಳು (ಕುವ್ಯಾದ್ರೋ. ೦೭-೦೪). ಬೊಂಬಿಡು : ೪. ಶಂಖುಗಳ್ ಬೊಂಬಿಡಲ್ . . . ನಡೆದಂ ಮರುಳುಸಿದ್ಧಾಂತ ವೃದ್ಧಂ (ಚತುಪು. ೩-೧-೬). **ಬೊಬ್ಬೆಯಿಡು** : ೧. ಮಾಧವನು ತನ್ನ ಜನರನ್ನು ಗಟ್ಟಿಯಾಗಿ ಬೊಬ್ಬೆಯಿಡುವಂತೆ ಹೇಳಿದನು (ಬಂಕಿಮ. ೩೪).

[ಬೊಬ್ಬೆ$_2$ + ಇಡು$_1$]

**ಬೊಬ್ಬಿರಿ** 'ಬೊಬ್ಬಿಱಿ' ನೋ.

**ಬೊಬ್ಬಲಿ** (ನಾ). ಸ್ತ್ರೀಯರು ಕಾಲಿನ ಹೆಬ್ಬೆರಳಿನಲ್ಲಿ ಧರಿಸುವ ಒಂದು ಬಗೆಯ ಆಭರಣ : ಮುತ್ತಿನ ಗೆಜ್ಜೆಗಳಿಂ ಕೂಡಿದ ವೀರಮುದ್ರಿಕೆ ಕಿರುಪಿಲ್ಲಿ ಬೊಬ್ಬಲಿಗಳನಿಟ್ಟು (ಶಾಗಂಧ. ೨೦೨-೩).

[← ತೆಲು. ಬೊಬ್ಬಲಿ]

**ಬೊಬ್ಬಱಿ, ಬೊಬ್ಬಿರಿ** (ಕ್ರಿ). ೧. (ಆನಂದ, ರೋಷ, ಆವೇಶ ಇತ್ಯಾದಿಗಳಿಂದ) ಕೂಗು ; ಅರಚು : ತಾನುಂ ಒಡಂಬಡುಂ . . . ಕೆನ್ನೆತ್ತರೊಳೊರ್ವರೊರ್ವರಂ ತಳ್ಕೈಱಿದುಂ ಬೊಬ್ಬಿಱಿದುಂ . . . ಆಡುವಾಗಳ್ (ಕಂಕರಾ. ೧೨-೧೩೮ ವ); ಬೇಡಪಡೆ ಬೊಬ್ಬಿಱಿದಾಡಿದುದು (ರಕಳು. ೨-೦೦೯); ಆಯೆನುತ ಬೊಬ್ಬಿಱಿದು ವಿಪ್ರನಿಕಾಯ ಕುಣಿದುದು . . . ಹರುಷದಲಿ (ಕುವ್ಯಾಆ. ೧೫-೩೦). ೨. ದೊಡ್ಡಧ್ವನಿ ಮಾಡು ; ಗಟ್ಟಿಯಾಗಿ ಧ್ವನಿ ಮಾಡು ; ಉದ್ಘೋಷಿಸು : "ಬೊಬ್ಬಿಱಿ (ಬೊಬ್ಬೆ + ಇಱಿ) — ಮಹಾರವೇ" (ಶಮದ); ಸೂಳವಿಸಿ ಬೊಬ್ಬಿಱಿದವುರುನಿಸ್ಸಾಳಚಯವದ್ರಿಗಳ ಹೆಡತಲೆ ಸೀಳೆ ಸಿಡಿಲೇಳಿಗೆಯುಲಿದ್ದವು ವಿವಿಧವಾದ್ಯರವ (ಕುವ್ಯಾದ್ರೋ. ೦-೯೪) ; ಬೊಬ್ಬಿಱಿವುದು ಕೀರ್ತಿಡಿಂಡಿಮಮುಖದಿಂ ಜಗದೊಳು ವಿಜಯಕ್ಷಿತೀಂದ್ರನಾ (ಎಕ. XI. ಚಿತ್ರದು. ೫-೭ ; ೯) ; ನಿಮ್ಮಸುಗಳು ಶರೀರವ ನೀಗಿ ಕಳೆಯಲಿ ಎಂದು ಬೊಬ್ಬಿಱಿದೆಚ್ಚನತಿರಥರ (ಕುವ್ಯಾದ್ರೋ. ೧೫-೬೫). ೩. ಆಕ್ರಂದನಮಾಡು ; ಮೊರೆಯಿಡು : ಬೊಬ್ಬಿಱಿವಿನಮಾಂತಿಱಿವ ನೊರ್ವ ಭಟನರಿಭಟರಂ (ಪರ್ಣವು. ೯-೫೦); ರಥ ಕಡಿವಡೆದುದಿನ್ನೆಂತೊದಗುವನೊ ಸುಕುಮಾರ ತಾನೆನುತ ಪಡೆ ಬಿಡದೆ ಬೊಬ್ಬಿಱಿಯೆ (ಕುವ್ಯಾದ್ರೋ. ೬-೩೬). **ಬೊಬ್ಬಿರಿ** : ೧. ಬಣ್ಣ ಹಚ್ಚಿದವನು ಚಿತ್ರಕಾರ, ಬೊಬ್ಬಿರಿದವಗವಾಯಿ. ಕಾಗದ ಕಪ್ಪು ಮಾಡಿದವ ಕವಿ ಎಂಬ ದೃಷ್ಟಿಯೋ ? (ಒಂಬಿದ. ೬೩); "ಇದೆಯೆ ನಿನ್ನಲ್ಲಿ ಗಂಡಸುತನ ?" ಎಂದು ಬಲವಾಗಿ ಬೊಬ್ಬಿರಿದು ಕೇಳಿದಳು (ಹಳ್ಳಿಹಾ. ೦೦೮). ೨. ಕಬ್ಬಿಲರು ಕಬ್ಬಿಗರು ತಾವೆನುತಬ್ಬರಿಸಿ ಬೊಬ್ಬಿರಿಯೆ ಕಬ್ಬವಾದುದೆ ? (ಕೋಗಿಲೆ. ೦೭-೩೯).

[ಬೊಬ್ಬೆ₂ + ಇಱಿ₁]

**ಬೊಬ್ಬಿಱಿತ** (ನಾ). ಅಬ್ಬರ; ಆರ್ಭಟ; ಗರ್ಜನೆ : ಇಱಿತ ಮುನ್ನವೊ ಸುಭಟರಿಗೆ ಬೊಬ್ಬಿಱಿತ ಮುನ್ನವೊ (ಕುವ್ಯಾಕ.೦೦-೯೬); ಬಲು ಬೊಬ್ಬಿಱಿತ ಕಸುರನ ಧೈರ್ಯ ಕಾಲನ ಮಱಿಯ ಹೊಕ್ಕುದು ಹೊರಳಿಯೊಡೆದುದು ವಿತ್ಕ ರಕ್ಕಸರ (ತೊರರಾ. ೩-೭-೫೦). [ಬೊಬ್ಬಿಱಿ + —ತ₂]

**ಬೊಬ್ಬುಲಿ** 'ಬಬ್ಬುಲಿ' ನೋ.

**ಬೊಬ್ಬುಳಿ₁** 'ಬಬ್ಬುಲಿ' ನೋ.

**ಬೊಬ್ಬುಳಿ₂** (ನಾ). ೧. (ನೀರಿನ) ಗುಳ್ಳೆ; ಬುದ್ಬುದ : ಇಬ್ಬರುಗಳೊಂದಾಗಿ ಕೂಡಿಯೆ ಬೊಬ್ಬುಳಿಯನೊಡೆವಂತೆ ಕೊಂದರು ಹಲವು ಮಲ್ಲರನು (ಕುವ್ಯಾವಿ. ೬೦೫. ೪-೦೦) ; ಬೊಬ್ಬುಳಿಯ ಬೆಳನೊರೆಗಳೊಟ್ಟಲಿನೊಬ್ಬುಳಿಯನಾಪ್ಪರಿಸುತುರವಣೆಗೊಬ್ಬಿನಲಿ ಮದವೇಱಿ ಮಾಲ್ಗಡಲೆಸೆದುದಿದಿರಿನಲಿ (ತೊರರಾ. ೦-೯-೯೫): ನೀರ ಬೊಬ್ಬುಳಿಯಂತೆ ತೋಱುತಿಹ ದೇಹದ ಸಾರವಱಿಯದಲೆ ಸುಖಿಪುದಜ್ಞಾನದ ದಾರಿಯಹುದು (ಸರ್ವಜ್ಞ. ೯೦೭). ೨. (ಗರ್ಭಾಶಯದಲ್ಲಿರುವ) ಐದನೆಯ ದಿವಸದ ಗರ್ಭಪಿಂಡ : ಪ್ರಥಮದಿನ ಕಲಲವೆಸರಂ ಪಡೆವಸವನೈದುದಿನಕೆ ಬೊಬ್ಬುಳಿಯೆನಿಸಿದವನೇಳುದಿನದವಂ ಜನನಿಗರ್ಭದ ಮಾಂಸಪೇಸಿಯೆಂದೆನಿಪವು (ಶಾಸಂತ. ೯-೯೬).

[<ಸಂ. ಬುದ್ಬುದ./ಪ್ರಾ. ಬುಬ್ಬುಅ./ತುಳು.ಬೊಬ್ಬುಳಿ]

**ಬೊಬ್ಬುಳಿ₃** 'ಬೊಂಬುಳಿ₂' ನೋ.

**ಬೊಬ್ಬುಳಿಕೆ** (ನಾ). ೧. = ಬೊಬ್ಬುಳಿ₂ ೧ : ಬೆಳಗುವ ತಾರಕಾನಿಕರಮಾ ಕಡಲೊಳ್ ನಸುತೇಲ್ಕುದೇಂಕೆ ಬೊಬ್ಬುಳಿಕಗಳಂತೆ ತೋಱಿದುವು (ಅದಪು. ೭-೯೮); ತನುಪಪ್ಪೊಡೆ ನಿಲ್ಲದು ಜವ್ವನಮಪ್ಪೊಡೆ ನೀರ ಬೊಬ್ಬುಳಿಕೆ (ಧರ್ಮಾಮೃ. ೯-೨೬೮) ; ನೀರ ಬೊಬ್ಬುಳಿಕೆಗೆ ಕರ್ಬುನದ ಕಟ್ಟ ಕೊಟ್ಟು ಸುರಕ್ಷಿತವ ಮಾಡುವ ಭರವ ನೋಡಾ (ಬಸವ. ೦೬೨). ೨. = ಬೊಬ್ಬುಳಿ₂ ೨: ಪಿಂಡಮಯವಾದ ಪುರುಷನ ವೀರ್ಯ ಸ್ತ್ರೀರಕ್ತದೊಡವೆರೆದೊಂದು ದಿನಕ್ಕೆ ಕಲಲವಹುದು ಐದುದಿನಕ್ಕೆ ಬೊ[ಪಾಠಾಂ.ಬ]ಬ್ಬುಳಿಕೆಯಹುದು (ಬಿವೀಳ. ೨೫೫) ; ಮಾತೆಯ ರಜಸ್ಸು ಪಿತೃವೀರ್ಯಂಗಳೊಂದಾಗಿ ಸಾತಿಶಯದಿಂ ಪ್ರಥಮದಿನದಲ್ಲಿ ಕಲಲಮಹುದಾ ತೆಱದೊಳೈದುರಾತ್ರಿಗೆ ಬೊ[ಪಾಠಾಂ. ಯೊ]ಬ್ಬುಳಿಕೆ (ತಂಪು. ೫೮-೫). [ಬೊಬ್ಬುಳಿ₂ + —ಇಕೆ]

**ಬೊಬ್ಬುಳಿಸು** (ಕ್ರಿ). ಗುಳ್ಳೆಯೇಳು ; ಬುದ್ಬುದವುಂಟಾಗು : ಕೆಸಱುರ್ಬೆರ್ಜೇಱೆ ನೀರ್ಬೊರ್ಬುಳಿಸಿ ಬುಳುಬುಳುಂದೇಂಕೆ ಮಂದೆಬ್ಬಿ ಕಂಪಂ ಮಸಗುತ್ತುಂ ಬತ್ತೆ (ಜಗದ. ೦೭. ೬೪). [ಬೊಬ್ಬುಳಿ₂ + —ಇಸು₃]

**ಬೊಬ್ಬೆ₁** (ನಾ.) ಸುಡುವುದರಿಂದ ಚರ್ಮದ ಮೇಲೇಳುವ ಗುಳ್ಳೆ, ಬೊಕ್ಕೆ : ದೇಹದ ಮೇಲೆ ಏಳುವ ಬೊಬ್ಬೆಗಳು ದೊಡ್ಡವಾಗಿ ಅಥವಾ ಸಣ್ಣವಾಗಿ ಇರುವುದುಂಟು (ಬಜೀ. ೫೦) : ಅಡವಿಯಲ್ಲಿ ನನ್ನ ಸ್ಥಿತಿಗತಿಗಾಗಿ ಯಾರೂ ಅಳಲಿಲ್ಲ. ಗೋಳಾಡಿ ಅತ್ತವರೆಂದರೆ ನನ್ನ ಕಾಲ ಬೊಬ್ಬೆಗಳು (ಉರ್ದಶಾ. ೦೦೬) ; ಬೊಬ್ಬೆ ಬಂದು ಕೈ ನೋಯಲಾರಂಭಿಸಿತು (ಪುಟ್ಟರ. ೧೯).

[ದೇ.॥ ತೆಲು. ಬೊಬ್ಬ]

**ಬೊಬ್ಬೆ₂** (ನಾ). ೧. (ಆನಂದ, ರೋಷ, ಆವೇಶ, ಮುಂತಾದ ಕಾರಣಗಳಿಂದ ಮಾಡುವ) ಆರ್ಭಟ ; ಕೂಗಾಟ : ಅರಚುವಿಕೆ : "ಬೊಬ್ಬೆಯೆನಲ್ ಭಟಗರ್ಜನೆ" (ಅಭಿಧಾ. ೫೨) ; ಬೇಡರ ಬೊಬ್ಬೆಯಿಂದಡವಿ ಗೋಳಿಟ್ಟುದು (ಹರಿಶ್ಚ. ೫-೨೬) ; ಕಳವಳಿಸಿತರಸೇನೆ ಬೊಬ್ಬೆಯೊಳುಲಿದುದೀ ನಮ್ಮವರು (ಕುವ್ಯಾಕ. ೩೦-೨೯) ; ಇಷ್ಟು ಪೌರುಷದ ಬೊಬ್ಬೆಯ ಕೇಳ್ದು . . . ಯಾದವರ್ ತಱುಬಿದರ್ (ಪೋಹಶ. ೩೯-೧೬). ೨. ದೊಡ್ಡ ಶಬ್ದ ; ಮಹಾಧ್ವನಿ : "ಕೋಲಾಹಲಃ, ಕಲಕಲಃ — ಈ ೨ ಬೊಬ್ಬೆಯ ಪೆಸರು" (ನಾಚಿರಾ. ೯೬) ; ಅಬ್ಬರಿಸಿ ಬೊಬ್ಬೆಯುಂ ಕೂಟ್ಟಬ್ಬಿಸಿದೊಡೆ ಶಾಪವಿಗಾಗುವಿನಾತಂ (ಧರ್ಮಾಶ. ೩-೭೯); ಮೆಲುನುಡಿಗೆ ಗಿಣಿ ಹೊದ್ದಿದವು ಸರದುಲಿಗೆ ಕೋಗಿಲೆಯಗೌಕಿದವು . . . ನೇವುರದ ಬೊಬ್ಬೆಗೆ ಸಿಲುಕಿದವು ಹಂಸೆಗಳು ಕಮಲಾನನೆಯ ಕೆಳದಿಯರ (ಕುವ್ಯಾಶ. ೬-೦೦). ೩. ಆಕ್ರಂದನ ; ಪ್ರಲಾಪ : ಅರಮನೆಯಲಾ ಬೊಬ್ಬೆ ಹಸ್ತಿನಪುರದಲೀ ಬೊಬ್ಬಾಟ ವಿನ್ನಳಿದರಸುಗಳ ಪಾಡಾವುದು (ಕುಶ್ಯಾಶ. ೦-೭) ; ಬೊಬ್ಬೆಯಾದುದು ಬಳಿಕ ಸುಮನಸರೊಬ್ಬುಳಿಯ ಜೂಣಿಯಲಿ ಮುನಿಗಳು ಬೆಬ್ಬಳಿಸಿದರು (ತೊರರಾ. ೦-೦೦-೯). ೪. ಗುಲ್ಲು ; ಪುಕಾರು : ಒಂದು ದೊಡ್ಡ ಪಾಪಿಜೋರರ ಗ್ಯಾಂಗು . . . ಬನ್ಯಾ ಕಳವುಗಳನ್ನು ನಡೆಸುತ್ತಿದೆ ಎಂದು ಬೊಬ್ಬೆ ಎದ್ದು (ಪಡಿದಾ. ೧೧, ೮೫೯).

**ಬೊಬ್ಬೆಕಾಯಕ** = ಮುಳ್ಳುಗಳ ಮೇಲೆ ನಿಂತು, ಮೈಗೆ ಕತ್ತಿ ತಿವಿದುಕೊಂಡು, ಗದ್ದಲವೆಬ್ಬಿಸಿ ಭಿಕ್ಷೆಯೆತ್ತುವ ಕಾಯಕ. (ಕ). **ಬೊಬ್ಬೆಹಾಕು** = ಕೂಗಾಡು ; ದೊಡ್ಡದಾಗಿ ಅರಚು : ಸತ್ಯ, ಅಹಿಂಸೆ ಎಂದು ಬಾಯಲ್ಲಿ ಬೊಬ್ಬೆಹಾಕುತ್ತಾರೆ (ಕುರುಕ್ಷೇ. ೬೫) ; ಹುಡುಗರು ಒಂದೇ ಸಮನೆ ಬೊಬ್ಬೆಹಾಕುತ್ತಾರೆ (ಕಾವೆಂ. ೯೨). **ಬೊಬ್ಬೆ ಹೊಡೆ** = ಬೊಬ್ಬೆ ಹಾಕು : ಕಾಂಗ್ರೆಸ್ಸೆಂದು ಬೊಬ್ಬೆಹೊಡೆದರೆ ಹೊಟ್ಟೆ ತುಂಬಲಿಕ್ಕಿಲ್ಲ (ಕುರುಕ್ಷೇ.೧೩೮). [ದೇ.॥ ತುಳು. ಬೊಬ್ಬೆ ; ತೆಲು, ಬೊಬ್ಬ]

**ಬೊಬ್ಬೆ₃, ಬೊಬ್ಬಿ** (ನಾ). ಒಂದು ಬಗೆಯ ಹೊನ್ನೆಮರ; ಕಲ್ಹೊನ್ನೆ : ಹೊಳೆಹೊನ್ನೆ. ಶ್ರೀಹೊನ್ನೆ. ಕೂವೆ, ಬೊಬ್ಬೆ (ವೃಕ್ಷಗ. ೦೬-೨೮೫). ಬೊಬ್ಬಿ : ಬೊಬ್ಬಿ (ಇರಯಿ) — ನೀರಿನ ಆಸರಕ್ಕೆ ಎತ್ತರವಾಗಿ ಬೆಳೆಯುತ್ತದೆ (ಕಾಡಿಗೆ. ೯೬) ; ಮರಗಳು . . . ಮುಳ್ಳುಳಿ. ಕೂವೆ. ಬೊಬ್ಬಿ. ದೇವದಾರು. ಅಡವಿಗೋರಂಟೆ (ವಿಶ್ವಕು. ೨೬೬).

**ಬೊಬ್ಬೆಯ ತಿಂದಾಗ** = ಹೊನ್ನೆಮರದಿಂದ ಮಾಡಿದ ಆಳೆಯುವ

ಸಾಧನದಿಂದ ಅಳತೆಮಾಡಿದ ಧಾನ್ಯದ ಖಂಡುಗಪ್ರಮಾಣ (?) : ಅಮೃತಪಡಿಗೆ ಭತ್ತ ಬೊಬ್ಬೆಯ ಖಂಡುಗ × × ಮಧ್ಯಾಂನದ ಪೂಜೆಗೆ ಬತ್ತ ಬೊಬ್ಬೆಯ ಖಂಡುಗ ೧೫ ದಿನ ೧೬ ಅಕ್ಕಿ ಹಾ ಲೆಕ್ಕದಲು ಅಕ್ಷತೆಗೆ ವರುಷಕ್ಕೆ ಬೊಬ್ಬೆಯ ಖಂಡುಗ ೩॥ (ಎಕ. VIII, ಸಾಗರ. ೦೬೩–೬೪ : 1488).

**ಬೊಬ್ಬೆಗುಟ್ಟು** (ಕ್ರಿ). ಕೂಗಾಡು ; ಗದ್ದಲವೆಬ್ಬಿಸು : ದುರ್ಗಕ್ಕಡರದ ರೆಂದೊದಱೆ ಬೊಬ್ಬೆಗುಟ್ಟುವರದಟಿಂ (ಹರಿಶ್ಚಂ. ೩–೬). [ಬೊಬ್ಬೆ₂ + ಕುಟ್ಟು]

**ಬೊಬ್ಬೆಗುಡು** 'ಬೊಬ್ಬೆಗೊಡು' ನೋ.

**ಬೊಬ್ಬೆಗೊಡು,** ಬೊಬ್ಬೆಗುಡು (ಕ್ರಿ). ದೊಡ್ಡಧ್ವನಿಯಿಂದ ಕೂಗು; ಅರಚು : ಒದಱೆ ನೋಡಿದಳು ಬೊಬ್ಬೆಗೊಟ್ಟಾರಿ ನೋಡಿದಳಾವ ತೆಱದಿ ನೋಡಿದಡೇಂ ವಿಚಾರಿಸದೆ ಲೆಕ್ಕಿಸದೆ ಪೋಗುತಿರೆ ಕಂಡವಂ ಹೆದಱೆನೇಗುವೆನೆಂದಳು (ಸಿದ್ಧರಾ. ೬–೨); ಅಡುಗಬ್ಬುಗಳಿಗುರಿ ಹಬ್ಬಿಸುತ ಕೈದೀವಿಗೆಗಳಂತೆಬ್ಬಿಸಲು ಪ್ರಭೆ ದೆಸೆಯೊಳಾವರಿಸಲ್ಕೆ ನಿರ್ಭರದ ಬೊಬ್ಬೆ ಗೊಟ್ಟಾಲುತ್ತ. . .ಬರುತಿರಲು (ಜಸಿಕು. ೦೬–೨೦) ; ಬಲಮೆರಡಾಗಿ ಪೆರ್ಮೆವಡೆದೊಡ್ಡಿ ವಿಳಾಸದೆ ನಿಂದು ಬೊಬ್ಬೆಗೊಟ್ಟು . . . ಪಳಂಚಿದುದು (ರಾಜಶೇ. ೦೩–೯೩). **ಬೊಬ್ಬೆಗುಡು :** ಬೊಬ್ಬೆಗುಡುತುಂ ಬಂದರ್ ಪಲರ್ ಧೀವರರ್ (ಉದ್ಭಟ. ೨–೫೦); ತಡೆ ವಿಲ್ಲು ಜಡಿ ಬೊಬ್ಬೆಗುಡು ಪೊದ ಱೆಂಳಡಗು (ತ್ರೈಲೋ.೨೬–೪೫). [ಬೊಬ್ಬೆ₂ + ಕೊಡು₁]

**ಬೊಬ್ಬೆಗೊಳ್** (ಕ್ರಿ). ಗರ್ಜಿಸು ; ಅಬ್ಬರಿಸು ; ಆರ್ಭಟಿಸು : ಬೊಬ್ಬೆಗೊಂಡಿರ್ದರ್ ತಗುಳ್ದೊದಱೆ ಸಾರ್ದು (ಅವಂತಿ. ೫–೦೪). [ಬೊಬ್ಬೆ₂ + ಕೊಳ್₁]

**ಬೊಬ್ಬೆಯಿಕ್ಕು** 'ಬೊಬ್ಬಿಕ್ಕು' ನೋ.

**ಬೊಬ್ಬೆಯಿಡು** 'ಬೊಬ್ಬಿಡು' ನೋ.

**ಬೊಮಟೆ** 'ಬೊಮ್ಮಟೆ' ನೋ.

**ಬೊಮ್ಮ,** ಬಮ್ಮ, ಬರಮ, ಬರುಮ, ಬರ್ಮ, ಬೊರ್ಮ (ನಾ). ೧. ಪರಾತ್ಪರವಸ್ತು ; ಪರಬ್ರಹ್ಮ : ಬೇಟದಲಿ ಮೂವಣ್ಣ ದಾಟಿಯ ಕೂಟದಲಿ ಕುಱುಹಾಗಿ ಮಿಗೆ ನಿಲ್ಲೋಟಿಸುವ ನಿಜ ದಿಟ್ಟ ಬೊಮ್ಮವಿದು (ಶುಮ್ಮಸ. ೯–೦೬) ; ಬಳಸಬಾರದ ಬಱೆಯ ಬೊಮ್ಮದ ಪೊಳಪು ಸಾಕ್ಷಾತ್ಕರಿಸಿ ನೆಱೆ ನಿರ್ಮಲತಪೆತ್ತಾ ರುದ್ರನಿರುತಿರ್ದನು ವಿನೋದದಲಿ (ಪ್ರಭುಲೀ. ೨–೯); ಬೊಮ್ಮವನು ಅಱಿದಿಹರೆ ಸುಮ್ಮನಿದ್ದಿರ ಬೇಕು ಬೊಮ್ಮವನಱಿದು ಉಸುರಿದರೆ ಕಳಹೋಗಿ ಕೆಮ್ಮಿ ಸತ್ತಂತೆ (ಸರ್ವಜ್ಞ. ೩೯೬). ೨. ತ್ರಿಮೂರ್ತಿಗಳಲ್ಲಿ ಒಬ್ಬ ; ಸೃಷ್ಟಿಕರ್ತನಾದ ಬ್ರಹ್ಮ : "ಅಜಂ [ಬೊಮ್ಮಂ]" (ಕರ್ಣಾಟ. ೯) ; ಒಡೆಗುಮುಱಂಡ ಮಿಣ್ಣನಿಸು ಜೇವೊಡೆದಾಗಳೆ ಬೊಮ್ಮನುಂ ಮನಂಗಿಡುಗುಂ (ಶಂಖಹಾ. ೨–೬೬) ; ಬೊಮ್ಮದೇವನ ಮೊಮ್ಮಂ ಶ್ರುತಿವಿಹಿತ ಕರ್ಮಾನುಷ್ಠಾನ ನಿಷ್ಠನಪ್ಪ ರಾವಣಂ (ಶಂತಶಂ. ೦೬೪–೦೮) ; ಕಯ್ಯ ಬೊಮ್ಮನ ಶಿರದ ಪರಬೊಮ್ಮನೊಪ್ಪಿದಂ (ವಾಗೀಶ. ದೇ. ೨೮೦–೦೯). ೩. ಧರ್ಮಬೋಧೆ ; ವೇದಾಂತ: ಕೇಳುತಿರ್ದ್ದ ಕರ್ಣ ಬೊಮ್ಮವ ಕೇಳ ಬಂದವೆ ನಾವು ನಾಳಿನ ಕಾಳಿಗದ ಜಯಮುಖದ ಬೆಸಗೊಳ ಬಂದೆವು (ಕುಮಾರವ್ಯಾ. ೮–೬೪). ೪. ಬ್ರಹ್ಮಾಂಡ ; ವಿಶ್ವ : ತಾಂಡವಗೈಯುವ ಭೈರವ ನಾನು! ಬೊಮ್ಮವನೊಡೆಯುವ ಬರಸಿಡಿಲಾನು (ಶಾಂತಪ. ೦೫–೧೦). ೫. ಬ್ರಾಹ್ಮಣ : ಕಮ್ಮನೆ ತುಪ್ಪ ಕಜ್ಜಾಯ ಪಾಯಸದಿಂದೆ ದಮ್ಮನೆ ತಣಿದೆನೆಂದೆನುತ ಬೊಮ್ಮರ ಸಂತತಿ ಸುಡಿಯುತೆ ಸಾರ್ದರು (ಮೋಹತ. ೩–೫೪). ☞ ಸಾಮಾನ್ಯವಾಗಿ ಈ ಶಬ್ದವು ಈ ಅರ್ಥದಲ್ಲಿ ಏಕವಚನದಲ್ಲಿ ಪ್ರಯೋಗವಾಗಿಲ್ಲ. **ಬಮ್ಮ :** ೬. ಒಬ್ಬಾತನ ಹೆಸರು : ಶ್ರೀ ಬಮ್ಮ (ಎಕ. II, ೯೦ ; ಸು. 900) ; ಪುರಿಕರನಗರದ ಬಮ್ಮಂ ಸರಸ್ವತೀಗಣದ ದಾಸಿ ಕ [ಣ.] × × × ನಿರುತಯತಿ [ಸಟಂ] ಖಣ್ಡರಿಸಿದಂ ನಾಗವರ್ಮ್ಮನ ಚ್ಛಾತ್ರ[ಂ] (ಸೌಇಇ. XI–i, ೯೬–೯೮ ; 1062). **ಬರಮ :** ೨. ತರುಣಿಯನೊಂದನೆ ಅದಕುಪಕರಣಂಗೊಂಡೊಡನೆ ತನ್ನ ಪೊಡೆಯು ಲರ್ವಡಿಯಿಂ ಬರಮನನೊಗೆಯಿಸಿಯುಮನೊಳೆ ಮರುಳ್ಗಳಿವಂತೊರೆದ ನೊಸೆದು ನಿಗಮದ ನೆಲೆಯುಂ (ಶಶಿಪ. ೦–೬೦). **ಬರುಮ :** ೬. ಪಲ್ಲ ವರಸ ದೇವಯ ಮೂಡಲ ಗೋವನ್ ಬರುಮಾನಟ್ಟಿದ × × × ಆಗಳು ಪಾಣ್ಡಿಯನ ಮೇಗೆಬ್ದು ಮಱೆಯಱೊಱಱದೊ (ಎಕ. X, ಶ್ರೀನಿವಾ. ೩೦–೬ ; ಸು. 800 ?). **ಬರ್ಮ :** ೧. ನಾಲ್ಮೊಗಗಂದನಾದ ಖಳದಕ್ಷನ ಮೇಳದೆ ಕಟ್ಟಿವೀಗಳೀ ಕಲ್ಮಷಕರ್ಮವಂ ಬಳಿಕೆ ಬರ್ಮವೆನುತ್ತಮೆಯುಧ್ಧ ರಾಂತಕಾ (ವೀರಭ. ೦೨–೯೬). ೨. ಮಾನ್ಮಡಿವವನೇಂ ಚತುರ್ಭುಜನೆ ಮಚ್ಚರಿಪಣ್ಣಲೆ ಬರ್ಮ್ಮನೊಳ್ ಬರಂಬಡಿದನೆ ವಿಱಱೆ ಬಾಳ್ದಡವನೇಂ ಜವನೇ . . . ಕಲಿ ಗೋನಭೂಪನೊಳ್ (ಎಕ. VIII, ಸಾಗರ. ೦೦೯–೩೬ : 1042) ; ಬರ್ಮನುಮಾ ವಿಶ್ವಕರ್ಮನುಂ ಶೋಭೆಯುಂ ನಿರ್ಮಿಸಲೆಂದು ವಧೂವರರೂಪಾಗಿ ನಿರ್ಮಿಸಿದಂತೆ ವಿಸುಗಿತ್ತು (ಲೀಲಾವ. ೦೦–೫೨). **ಬೊರ್ಮ :** ೭. ಕ್ಷುದ್ರದೇವತೆ : ಗಾಳಿಗರುಂ ನೆಲಮುಕ್ಕ ಜಕ್ಕಿಯುಂ ಬೊರ್ಮನುನೆಂದು ಜೀವವಧೆಗೈದರೆ. . .ನಾರಕದುಃಖಮನೈದದಿರ್ಪರೇ (ತ್ರಿಶಷ್ಟಿವ್ಯಾಖ್ಯಾನ. ಧರ್ಮಶಾಸ್ತ್ರಸಾರ. ೬. ೦೨೬೯).

**ಬೊಮ್ಮಜಟ್ಟಿಗ** = ಒಂದು ಕ್ಷುದ್ರದೇವತೆ : ತಾಮ್ಯಾಡಿ ಬೇಡಿ ಹೆಮ್ಮರಂಗಳ ಪಿಡಿದು ಬಾಧಿಸುವುದ ಕಂಡು ಬೊಮ್ಮಜಟ್ಟಿಗನ ಶಿರವರಿ ದಂತರಾತ್ಮ (ಕವಿಕ. ೦೨೪–೪). **ಬೊಮ್ಮಜೆಟ್ಟಿ** = ಒಂದು ಕ್ಷುದ್ರದೇವತೆ : ಬೊಮ್ಮಜೆಟ್ಟಿ ಮಾಡಿದೆವಮ್ಮ ಒಮ್ಮೆಗಿಷ್ಟೆಲ್ಲವಾಯಿತಮ್ಮ (ಜಾನಪದ. ೯೩–೩). **ಬೊಮ್ಮನ ಸತಿ** = ಬ್ರಹ್ಮನ ಪತ್ನಿ ; ಸರಸ್ವತಿ : ರತಿಯ ಚೆಲುವಕಿತಿರಲಿ ಸಿರಿ ಪಾರ್ವತಿಯ ರೂಪಂತಿರಲಿ ಬೊಮ್ಮನ ಸತಿಯ ಸೊಬಗಂತಿರಲಿಯಾ ಬಾಲಕಿಯ ರೂಪಿಂಗೆ ಪ್ರತಿಯ ಕಾಣೆನು (ಕುಮಾರವಿ. ೨–೦೦); ಬೊಮ್ಮ ನಿರ್ಮಿಪನೆಂಬ ದುರ್ಮತಿಯೆ ನೀ ಕೇಳು ಬೊಮ್ಮನ ಸತಿಗೆ ಮೂಗಿಲ್ಲವಾ ಮೂಗ ನಿರ್ಮಿಸನದೇಕೆ (ಸರ್ವಜ್ಞ.೨೦೦). [<ಪ್ರಾ.ಬಮ್ಹ./ಸಂ. ಬ್ರಹ್ಮನ್]

**ಬೊಮ್ಮಚರಿ** (ನಾ). ಬ್ರಹ್ಮಚರ್ಯವನ್ನು ಪಾಲಿಸುವವನು ; ಬ್ರಹ್ಮಚಾರಿ : ಪೊಡವಿಜೆಯ ಪೋಗಾಡಿ ರಾಘವ ಹಿಡಿವನೈ ಬಲು ಬೊಮ್ಮಚರಿಯುವ ಕೊಡುವರಿಲ್ಲದಱಿಂದ ನೀ ಹೊಸ ಬೊಮ್ಮಚರಿಯಾದೆ (ಕೌಶಿಕಾ. ೨೨–೦೪). [< ಸಂ. ಬ್ರಹ್ಮಚಾರಿನ್]

**ಬೊಮ್ಮಚರಿಯ,** ಬೊಮ್ಮಚರಿಯೆ (ನಾ). ಇಂದ್ರಿಯನಿಗ್ರಹ ; ಬ್ರಹ್ಮ ಚರ್ಯೆ : ಜಡೆಯ ಮುಡಿಯೋ ಮಕುಟ . . . ಸೊಪ್ಪು ಸೆಳೆಮಂಚ ಮಡದಿಯಿಲ್ಲದೆ ಬೊಮ್ಮಚರಿಯವು (ಕೌಶಿಕಾ. ೨೨–೪೨); ಲಲನೆಯೊಬ್ಬಳ ವ್ರತವವಗೆ ಗಡ ಹಳುವದಿರವಿಗೆ ಬೊಮ್ಮಚರಿಯದ ಬಳಕೆ ಗಡ ನಿಮಗೆಲೆ ನಪುಂಸಕರೆಂದಳಾ ಕಾಂತೆ (ತೊರವೆ. ೩–೪–೨೦). **ಬೊಮ್ಮಚರಿಯೆ :** ನಿಲ್ಲಿಸುತ ಷಣ್ಮುಖಿಗಳಿರವನು ಬಲ್ಲವನು ಗಜಮುಖವನಳ್ಗಿಸಿ ಸೊಲ್ಲಿಸ ಲಥಶ್ಯಾಯಿಯೊಪ್ಪಿದ ಬೊಮ್ಮಚರಿಯೆಯುಲಿ (ಅರಾಮಾ. ೨–೯–೪೯). [< ಸಂ. ಬ್ರಹ್ಮಚರ್ಯ]

**ಬೊಮ್ಮಚರಿಯೆ** 'ಬೊಮ್ಮಚರಿಯ' ನೋ.

**ಬೊಮ್ಮಟೆ,** ಬೊಮಟೆ (ನಾ). ೧. ಎಳೆಯ ಮಗು; ಹಸುಗೂಸು : ಆ ತಿಂಗಳ ಬೊಮ್ಮಟೆಯನ್ನು ಮುತ್ತಿಟ್ಟುಕೊಂಡು ಮಡದಿಯ ಕೈಗೆ ಕೊಟ್ಟ (ಪುಲ್ಕಿ. ೦೬); "ನಿನ್ನ ಮಾವನನ್ನು ನೋಡು ಪಾಪ" ಎಂಬು ದೊರದಲ್ಲಿ ಮಲಗಿದ್ದ . . . ತನ್ನ ಎಳೆಯ ಬೊಮ್ಮಟೆಗೆ ಹೇಳಿದಳು (ರಮಾಶ್ರೀ. ೦೬೬). ೨. ಕೋಮಲವಾದುದು ; ಎಳೆಯದು : ರಾಜಮ್ಮ ಎದ್ದು ಮಗುವಿನ ಬೊಮ್ಮಟೆಯಾದ ಕೆನ್ನೆಗೆ ನಯವಾಗಿ

ಮುದ್ದಿಟ್ಟಳು (ಚಿಕ್ಕಾ. ೨೩೯). **ಬೊಮಟೆ :** ೧. ಬೊಮಟೆಯ ಆಳು ವಿನ ಧ್ವನಿ ಕೇಳಿಸಿತು (ಜಾಲ್ಯಹು. ೧೦೨); ಗೌಡನ ಹೆಂಡತಿಯು ಆ ಬೊಮಟೆಯನ್ನು ತಬ್ಬಿಕೊಂಡು . . . ಕಾಡಿನಲ್ಲೆಲ್ಲ ಅಲೆದಳು (ದೇಶಾಂಕ. ೬೧).

**ಬೊಮ್ಮಡ** 'ಬೊಮ್ಮಡಿ' ನೋ.

**ಬೊಮ್ಮಡಿ,** ಬವ್ಮಡಿ, ಬೊಂಬಡ, ಬೊಮ್ಮಡ (ನಾ). ೧. ಬೊಬ್ಬೆ: ಕೂಗಾಟ : ಸಂಪುಮಾಡುತ್ತಿದ್ದವರ ಬೊಮ್ಮಡಿ ಜೋರಾಯಿತು (ಕೂ೨). **ಬವ್ಮಡಿ. ಬೊಂಬಡ :** ೨. ಸದ್ದು ; ಶಬ್ದ : 'ಜರ-ಜರೋ', ಹುಯ್ಯುವ ಮಳೆ . . . ಕಿವಿ ಕರಗುವ ಬೊಂಬಡವನ್ನು ಪ್ರತಿಪ್ರತಿ ಧ್ವನಿಸಿ ನುಗ್ಗುಮುಗ್ಗಲಾದ ಮಲೆನಾಡಿನ ಬೆಟ್ಟಗಳು! (ಎಮುಕ. ೪೯). **ಬೊಮ್ಮಡ.**

**ಬವ್ಮಡಿ ಬಜಾಯಿಸು, ಬೊಂಬಡ ಬಜಾಯಿಸು** = ಬೊಬ್ಬೆಹಾಕು : ಕೂಗಾಡು : ಆದವಾನಿ ಕಂಪೆನಿಯವರು ಬವ್ಮಡಿ ಬಜಾಯಿಸುತ್ತಿದ್ದಾರೆ (ಅಂಪಾ. ೦೩) ; ಅದೇಕೆ ಬೊಂಬಡ ಬಜಾಯಿಸುತ್ತಿರುವೆ ? ಸ್ವಲ್ಪ ಇರು (ಕೂ೨). **ಬೊಮ್ಮಡಿಹೊಡೆ. ಬೊಮ್ಮಡಹೊಡೆ** = ಬವ್ಮಡಿ ಬಜಾಯಿಸು : ರೈತರೆಲ್ಲಾ ಬೊಮ್ಮಡಿ ಹೊಡೆದುಕೊಳ್ಳಾ ಅವರೆ (ಸಂಗಾಳ್ಯ. ೨೩೭) ; ಗಿರಾಕಿಗಳು ಬೊಮ್ಮಡ ಹೊಡೆದಾರು (ಸರಸ. ೨೨).

[ದೇ.॥ ತೆಲು. ಬೊಮ್ಮಿಡಿ = ಒಂದು ಬಗೆಯ ವಾದ್ಯ. / ಮರಾ. ಬೋಂಬ್ = (ದುಃಖ, ಸಂಕಟ ಇತ್ಯಾದಿಗಳಿಂದ) ಬಾಯಿ ಬಡಿದುಕೊಳ್ಳುವುದು. ಶಂಖವಾದ್ಯ]

**ಬೊಮ್ಮತಿ** 'ಬೊಮ್ಮಹತಿ' ನೋ.

**ಬೊಮ್ಮದಂಡೆ** 'ಬ್ರಹ್ಮದಂಡೆ' ನೋ.

**ಬೊಮ್ಮಪಾಸ,** ಬೊಮ್ಮಹಾಸ (ನಾ). ೧. ಬ್ರಹ್ಮನನ್ನು ಅಧಿದೇವತೆಯಾಗಿ ಪಡೆದ ಅಸ್ತ್ರ; ಬ್ರಹ್ಮಶಕ್ತಿಯ ಪಾಶ ; ಬ್ರಹ್ಮಪಾಶ. ೨. (ಅಲಂ) ಸುಲಭವಾಗಿ ಬಿಡಿಸಿಕೊಳ್ಳಲಾಗದಂತಹ ಬಂಧನ,- ಕಟ್ಟು : ಆಕೆಯ ಹಾಸವೊ ಬೊಮ್ಮಪಾಸವೋ ತರುಣಿಯ ತೋಳೊ ಬಾಳೊ ಸುಡು ಸೂಳೆಯ ಕೂಟವೊ ಕಾಳಕೂಟವೋ (ಅಲಾವ. ೨-೧೧೧). **ಬೊಮ್ಮಹಾಸ :** ೧. ತರತರದ ಸಪುರವಸ್ತ್ರಂಗಳಂ ಪೋಲಿರಿಸಿ ಬೊಮ್ಮಹಾಸದ ಕೆಲವ ಕೊಂಡಿಗಳೊಳಗೆ ಬಿಗಿದು ಅಮ್ಮಮ್ಮ ಪಾಶಮಂ ಕೈಕೊಳಿಸಿ ಬರೆತೆಗೆದು. . . ಕೊರಲೊಳವತರಿಸಿಕೊಂಡಂ ಬೊಮ್ಮಪಾಸಮಂ (ಕೆಂಗುರ. ೭೭. ೧೫೭-೭). [<ಸಂ. ಬ್ರಹ್ಮಪಾಶ]

**ಬೊಮ್ಮಬರೆಹ** (ನಾ). ಬ್ರಹ್ಮಲಿಖಿತ ; ವಿಧಿಲಿಖಿತ ; ಹಣೆಬರಹ: ಬೊಮ್ಮಬರೆ[ಜಾತಾಂ. ರ]ಹ ಚಿತ್ರವ ವಿಚಾರವಪಾರಮ್ಮ ಲೋಕದೊಳು (ಶಾತ. ೩-೪೯). [ಬೊಮ್ಮ + ಬರೆಹ (< ಬರೆಪ)]

**ಬೊಮ್ಮಬೋಧೆ** (ನಾ). ಪರಬ್ರಹ್ಮದ ಬಗೆಗಿನ ಜ್ಞಾನ,—ತಿಳಿವಳಿಕೆ : ಬೊಮ್ಮಬೋಧೆಯ ಹೇಳಿ ಕೇಳಿಯು ಸುಮ್ಮನಿಹ ನೃಪಕನವು ಬಂದಿರೆ ಹೆಮ್ಮೆಯಲಿ ಹಿರಿದಾಗಿ ಕಿಡುವರು ಪಿತರು ಹೇಳಿದರೆ ಒಮ್ಮೆ ಕೇಳರು (ಸಂಶಕ. ೩-೦೨). [ಬೊಮ್ಮ + ಬೋಧೆ]

**ಬೊಮ್ಮಯ,** ಬವ್ಮಯ್ಯ (ನಾ). ೧. ಒಂದು ಕ್ಷುದ್ರದೇವತೆ : ಲಡ್ಡುಗೆಯುಂ ಬೆನಕಂಗೆ ಹೆಂಡಮಂ ಮಾರಿಗೆ ಬೊಮ್ಮಯಂಗೆ ಚರುವಂ ಪಡೆದೆತ್ತುಮೆ (ಸೂಕ್ತಿಸು. ೯-೯೪). **ಬವ್ಮಯ್ಯ :** ೨. ಒಬ್ಬಾತನ ಹೆಸರು : ನಿವ್ವಿಟ್ಟರ ಬವ್ಮಯ್ಯ ಬೆಸಗೆಯ್ಸಿದೊ (ಇ೦. XII. ೨೦೯-೨೨; 814).

[ಬೊಮ್ಮ + ಅಯ್ಯ₁ (< ಅಯ್ಯ₆₁ )]

**ಬೊಮ್ಮರಕ್ಕಸ** (ನಾ). ೧. ಧರ್ಮಭ್ರಷ್ಟನಾಗಿ ಬ್ರಾಹ್ಮಣರ ಧನ, ಪರಪತ್ನಿಯರನ್ನು ಅಪಹರಿಸಿದ ನೀಚಬ್ರಾಹ್ಮಣನಿಗೆ ಮರಣಾನಂತರ ಬರುವ ಪಿಶಾಚಜನ್ಮ ಮತ್ತು ಹಾಗೆ ಜನ್ಮತಾಳಿದವನು ; ಬ್ರಹ್ಮರಾಕ್ಷಸ : ಮಹಾರಣ್ಯದೊಳಗೆ ಬರ್ಪನನೊರ್ವ ಬೊಮ್ಮರಕ್ಕಸಂ ಕಂಡು ಪಿಡಿದು ತಿನಲೆಂದು ತೆಗೆವುದುಂ (ಕಂತಸಂ. ೧೩೨-೮) ; ಇಂದು ಮೊದಲಾಗಿ ನಿನ್ನೊಡವಂದಿರ್ಪಂ ಬೊಮ್ಮರಕ್ಕಸಂ ಮತ್ತಾರಂ ಕಂಡೆಚ್ಚಿದು ನೋಡಲೀಸಂ (ದಕಕಾ. ೪-೧೦೦) ; ನಮ್ಮೊಳೊಬ್ಬನ ಕೊಡದೆ ಕಾದಿರೆ . . ಬೊಮ್ಮರಕ್ಕಸಗೀವರೇಯಿಾ ಹೆಮ್ಮಗನ (ಸಂಭಶ. ೨೩-೪೯). ೨. ಬ್ರಾಹ್ಮಣ ತಂದೆ ಮತ್ತು ರಾಕ್ಷಸ ತಾಯಿಯಿಂದ ಜನಿಸಿದ ವ್ಯಕ್ತಿ: ದಶರಥರಾಮಂ . . . ರಾವಣ ಕುಂಭಕರ್ಣರ್ ಮುಂತಪ್ಪ ಬೊಮ್ಮರಕ್ಕಸರಂ ಕೊಂದು ಬಂದೊಂದು ಬೊಮ್ಮೆತಿಯ ಶಾಂತಿಗೆಂದು ಮುನಿಯಾಜ್ಞೆಯಿಂ ಜನ್ನಮಂ ಕೈಕೊಂಡು (ರಾವಣಶ್ಚ. ೧೨೪-೨೧). [< ಸಂ. ಬ್ರಹ್ಮರಾಕ್ಷಸ]

**ಬೊಮ್ಮರಲು** 'ಬೆಳ್ಮಾರಲ' ನೋ.

**ಬೊಮ್ಮರಸ** (ನಾ). ೧. ಒಬ್ಬಾತನ ಹೆಸರು : ಬೊಮ್ಮರಸಗೌಡರ ಮಕ್ಕಳು (ಎಕ. VII. ಶಿಮಶಿ. ೦೦೪-೦೩ : 950). ೨. 'ಚತುರಾಸ್ಯನಿಘಂಟು' ಎಂಬ ಕೋಶವನ್ನು ಬರೆದ ಒಬ್ಬ ಕನ್ನಡಕವಿಯ ಹೆಸರು : ಕರ್ಣಾಟಕಸರಸ ಕವೀಂದ್ರರ್ಕಳೊಳ್ಳಿತಾಮದೆನಲ್ ಬಿತ್ತರಿಸಿದನೊಲವಿಂ ಕವಿ ಬೊಮ್ಮರಸಂ (ಚತುನಿ. ೧೩೭). [ಬೊಮ್ಮ + ಅರಸ₁ ]

**ಬೊಮ್ಮವಿದ** (ನಾ). ಬ್ರಹ್ಮವಿದ್ಯೆಯನ್ನು ಬಲ್ಲವನು ; ವೇದಾಂತ ರಹಸ್ಯವನ್ನು ತಿಳಿದವನು ; ಬ್ರಹ್ಮಜ್ಞಾನಿ : ಈ ಪೃಥೂನ್ನತಿ ಬೊಮ್ಮವಿದರಿಗುಂಟೆ ತನಗಾ ಬ್ರಹ್ಮವಿದ್ಯೆಯನಿತ್ತು ರಕ್ಷಿಸುವುದು (ಜಿಶಾಗ. ೯-೦೯-೨೭).

[<ಸಂ. ಬ್ರಹ್ಮವಿದ್]

**ಬೊಮ್ಮವಿದ್ಯೆ** (ನಾ). ವೇದಾಂತರಹಸ್ಯ ; ಬ್ರಹ್ಮತತ್ತ್ವ: ದಕ್ಷ ಹರಹಂ ಹರಿ ತನ್ನ ಬಲವನು ಹುರಿದನೋ ಹರಿಯಬ್ಬ ಸಬಳಾಸ್ತ್ರರೊಳೊಬ್ಬರನುಳಿಯಲೀಸದೆ ಬೊಮ್ಮವಿದ್ಯೆಯನು ತಿರುಕುಳಿಗಳನು ಮಾಡಿದನಲಾ ಗೊರವನಾ ತನ್ನಂತೆ ಭಾಪಿನ್ನರಸುಮಕ್ಕಳನೀವೆನಾನಿದಕೆಂದು ಬಿಸುಸುಯ್ದು (ಜಿಶಾಗ. ೬-೩-೩೩). [< ಸಂ. ಬ್ರಹ್ಮವಿದ್ಯಾ]

**ಬೊಮ್ಮವೊಲೆಯ** (ನಾ). ಆಚಾರಗೆಟ್ಟ ಬ್ರಾಹ್ಮಣ ; ಬ್ರಾಹ್ಮಣಾಧಮ: ನೀಲಾಚಲಂ . . . ಪಟಸುಡಿಯುಂ ಪಟಿದು ವಿಜಾಹ ಜಾನಂಗಳನುಟಿದ ಬೊಮ್ಮವೊಲೆಯಂಗೆ ಬೆಸಲಾದ ಮಡದಿಯುಂ ಬಡಿದ ಮಾನಸರಕ್ಕಸಂಗೆ ಕಣ್ಗೆ ಕಾಣಲ್ಬಾರದೊಂದು ಮೈಮೆವೆತ್ತು ನಿಂದಿರ್ಕುಂ (ಜಾಶಚ್ಚ. ೬೪-೯). [ಬೊಮ್ಮ + ಪೊಲೆಯ]

**ಬೊಮ್ಮಶಿರೋಸ್ತ್ರ** (ನಾ). ಒಂದು ಬಗೆಯ ಮಂತ್ರಾಸ್ತ್ರ : ಸಲಿಸು ಪಾಶುಪತಾಸ್ತ್ರವನು ವೆಗ್ಗಳದ ಬೊಮ್ಮಶಿರೋಸ್ತ್ರವನು ಕೈಗೊಳಿಸುವುದು ಕೃಪೆಯುಳ್ಳೊಡೆ (ಶುಭಾ೪. ೬-೯೭). [< ಸಂ. ಬ್ರಹ್ಮಶಿರೋಸ್ತ್ರ]

**ಬೊಮ್ಮಹತಿ,** ಬವ್ಮೇತಿ, ಬೊಮ್ಮತಿ, ಬೊಮ್ಮೇತಿ, ಬ್ರಮಾತಿ, ಬ್ರಹ್ಮತಿ, ಬ್ರಹ್ಮಾತಿ, ಬ್ರಹ್ಮೇತಿ (ನಾ). ೧. ಬ್ರಾಹ್ಮಣನ ಕೊಲೆ: ಪಂಚಮಹಾಪಾತಕಗಳಲ್ಲಿ ಒಂದಾದ ಬ್ರಹ್ಮಹತ್ಯೆ: ಹೇಳಲೇನದ ಹೇಸುವುದು ಮನ ಬೊಮ್ಮಹತಿಗಾಗಿ (೪ಶಿಶಾ. ೨೭-೦೨). **ಬವ್ಮೇತಿ:** ೧. ಕೊಂದವರುಂ . ಕೊಲಿಸಿದವರುಂ ಬವ್ಮೇತಿಯನೆಸಗಿದಂಥಾ ಮಹಾಪಾತಕಿಗಳೆನಿಸುವರು (ಭಾರಶಾಂ. ೯೩-೦೪). ೨. ಬ್ರಹ್ಮಹತ್ಯೆ ಮುಂತಾದುವುಗಳಿಂದ ಉಂಟಾದ ದೋಷ,-ಪಾಪ : ಭೀತನುಮಂ ಖಳ ಕೃಪಣ ಕಷ್ಟೋತನುಮಂ ಪಡೆದು ಲೋಕಮಂ ಕಿಡಿಸಿದ ಬವ್ಮೇತಿಯಲೆಯದೊಡೆ ಮೊಗದೊಳಗೇತರ್ಕೆ ಚಿಕಾಮಹಂ ಚತುರ್ಮುಖನಾದಂ (ಅಲಾಶ. ೦-೩೩) ; ನಿನಗೆ ಬವ್ಮೇತಿಯಾಗೆ ಸಾವೆನೆಂದು ಅವರ ಕಾಣ್ಬಲ್ಲಿಯೊಂದು ಮರದೊಳ್ ಬಳ್ಳಿಯಂ ಕಟ್ಟಿ ಕೊರಲೊಳ್ ಸುತ್ತಿ ನೇಲ್ದು ಸತ್ತಳ್ (ಜಾಶಸಂ. ೦೬೦-೦೦). **ಬೊಮ್ಮತಿ :** ೨. ಧರ್ಮವೆಂದೆಸಗೆ ಪಸುಕರ್ಮ ಬೊಮ್ಮತಿಯಾಯ್ತು (ಶಾಸಂತ. ೪-೨೩೦) **ಬೊಮ್ಮೇತಿ :** ೨. ಕೇಳಬಾರದ ಬೊಮ್ಮೇತಿಯ ನೆಗಳ್ದೇರಾಳ ಪಾತಕಭೂಭುಜನ ತೋಳಡವಿಯ ತಱಿದೊಟ್ಟಿದೆಲಾ ಪುಂದಿವಾಳದ ತೋಜು ತನ್ನೊಡನೆ (ವಿಶ್ವಕ. ೯೦-೨೯) : ರಾವಣ ಕುಂಭಕರ್ಣರ್

ಮುಂತಪ್ಪ ಬೊಮ್ಮರಕ್ಕಸರಂ ಕೊಂದು ಬಂದೊಂದು ಬೊಮ್ಮೆತಿಯ ಶಾಂತಿಗೆಂದು ಮುನಿಯಾಜ್ಞೆಯಿಂ ಜನ್ನಮಂ ಕೈಕೊಂಡು (ರಾಮಾಶ್ವ. ೧೨೪-೨೨). **ಬ್ರಹ್ಮಾತಿ :** ೨. ಧರ್ಮ್ಮವನಾವನಾನುಮಳಿದರಪ್ಪಡೆ ಗಂಗೆಯ ಬಣವೊಸಿಯೊಳೆ ಅಳಿದ ಬ್ರಹ್ಮಾತಿ (ಎಕ. XIV, ಶ್ರೀರಂಗ. ೩೪-೧೪; 1027). **ಬ್ರಹ್ಮತಿ :** ೩. (ಅಲಂ)ಕಷ್ಟ; ಸಂಕಟ: ತ್ರೇತೆಯಲಿ ರಘುರಾಮನಾವುದಿ ಸೀತೆಯಂ ಹೋಗಾಡಿ ದಶಶಿರದಾತನಿಂ ಬ್ರಹ್ಮತಿಗೆ ಸಿಕ್ಕಿ ತೊಳಲ್ದಜಿಸುತಿರನೇ (ಐಶಕು. ೫೪-೩೯). **ಬ್ರಹ್ಮಾತಿ :** ೨. ಸಾಸಿರ್ಬ್ಬರು[ಂ]ಪಾರ್ವರನಟಿದ ಬ್ರಹ್ಮಾತಿಯ (ಎಕ. XII, ೨೨೫-೧೩; 916); ಸಾಸಿರವೇದಪಾರಗರುಮನಳಿದ ಬ್ರಹ್ಮಾತಿಯಕ್ಕು (ಕಾಳ. ೧೨೬-೨೨-೩೪; 1073). **ಬ್ರಹ್ಮೇತಿ :** ೧. ಕುಲದಲ್ಲಿ ಹಾರುವನು ಬ್ರಹ್ಮೇತಿಗೆ ಸಾರುವನು (ಬಸವ. ೫೬೪). ೨. ದೇವ ನಿನ್ನಾಜ್ಞೆಯಿಂ ನಾಂ ಬ್ರಹ್ಮರಂ ಪಲವು ಸಾವಿರವನೊಂದೊಂದು ದಿನದಲ್ಲಿ ಕೊಲ್ವೆನೆನಗಾವ ಪ್ರಕಾರದಿಂ ಬ್ರಹ್ಮೇತಿಯಿಲ್ಲ ಗಡ (ಶೀಕೃ ಕು. ೨-೩-೫೫); ಕಾಳ್ಕಧನ ಮಡುಹುವೆಂ ಬರಲೆನ್ನ ಗಾತ್ರಕಿಂದೀಗಳುಂ ಬ್ರಹ್ಮೇತಿ (ಹರಿಶ. ೨೯-೧೨); ದೇವತೆಗಳೆಲ್ಲರೂ . . . ಅಶ್ವಮೇಧಯಾಗ ಮಾಡಿಸಲು ಅವನಿಗೆ ಹಿಡಿದಿದ್ದ ಬ್ರಹ್ಮೇತಿ ಹೋಯಿತು (ವಕಶಾ. ೨೩೦). (ಗು). ೪. (ಅಲಂ) ಅತ್ಯಧಿಕವಾದ : ಅಗಾಧವಾದ : ಜಾನಕಿಬಾಯಿಯವರಿಗೆ ಬ್ರಹ್ಮೇತಿ ಸಿಟ್ಟು ಬಂದಿತು (ಸಮಾಜ. ೨೨); ಬೇಡವೆಂದಿದ್ದರೂ ನೀರಿಗೆ ಹೋದಳೆಂದು ಅವಳ ಮೇಲೆ ಅವನಿಗೆ ಬ್ರಹ್ಮೇತಿ ಸಿಟ್ಟು ಬಂದಿತ್ತು (ಬಂಕಿಮ. ೩೭). 'ಬ್ರಹ್ಮಹತಿ' ನೋ. [< ಸಂ. ಬ್ರಹ್ಮಹತ್ಯಾ]

**ಬೊಮ್ಮಹಾಸ** 'ಬೊಮ್ಮಪಾಸ' ನೋ.

**ಬೊಮ್ಮಾಂಡ** (ನಾ). ವಿಶ್ವ; ಜಗತ್ತು: ನಾನು ಬೆಳೆದೊಡೆ . . . ಬೊಮ್ಮಾಂಡ ಕುಸಿಯುವುದು (ಕೌಶಿಕ. ೪೦-೫); ಆರು ಸರಿ ನಿನಗೆ ಬೊಮ್ಮಾಂಡದೊಳಗೆ (ಪುರಂದ. ೨-೧೫ ಪಲ್ಲವಿ) ; ಬೊಮ್ಮಾಂಡವಾ ಬಾಣನ ಪುರವನೆ ಕಾಯ್ದು ಕೊಂಡಿಹವು (ವೀರಶೈ. ೨೦-೨೦). [<ಸಂ. ಬ್ರಹ್ಮಾಂಡ]

**ಬೊಮ್ಮಾರ** (ನಾ). ಬ್ರಾಹ್ಮಣರ ಅಗ್ರಹಾರ : ದೇವಾರ ಬೊಮ್ಮಾರಮಂ ಸೆಗೆಪುತ್ತುಂ ಪೊಜಿದವೃತ್ತಿಪ ಬರುವರ್ ಸದ್ಧರ್ಮಸತ್ವಾನ್ವಿತರ್ (ಪ್ರಸೂಮ. ೬-೨೦೬). [ಬೊಮ್ಮ + < ಅಗ್ರಹಾರ]

**ಬೊಮ್ಮಿ** (ನಾ). ಒಂದು ಬಗೆಯ ವನಸ್ಪತಿ ; ಬ್ರಾಹ್ಮಿ : ಸುರವಾರುಣಿ ಲೊಕ್ಕಿ ಬೊಮ್ಮಿ ಬೇವಿಂಗು ವಿಳಂಗ . . . ತಕ್ರ ಲವಣಾಂಗಳುಮಂ ತಾಟಿದೊಂದುಮಾಡಿ ಸುಸ್ತಂಗಜಿದಿಕ್ಕೆ ಪೂರ್ದವುಮಂ ರುಚಿಗಳ್ (ಲೋಕೋಪ. ೯-೨೨೦); ಬೊಮ್ಮಿಯು ಸೊಪ್ಪನೊಪ್ಪದಿಂ ಗಜಬಜೆಯಿಲ್ಲ ದಂತರೆದು ತದ್ರಸದಿಂದುಜ್ ಮಾಡಿ ನಸ್ಯಮಂ ಪ್ರಜೆನಹರಾ ವಿಷಘ್ನಂ (ಜಸುದ. ೬-೨೫). [ < ಸಂ. ಬ್ರಾಹ್ಮೀ ]

**ಬೊಮ್ಮೆ** 'ಬೊಂಬೆ' ನೋ.

**ಬೊಮ್ಮೇತಿ** 'ಬೊಮ್ಮಹತಿ' ನೋ.

**ಬೊಮ್ಮೇತಿಗಾಜ**, ಬ್ರಹ್ಮತಿಕಾಜ, ಬ್ರಹ್ಮೇತಿಕಾಜಿ (ನಾ). ೧. ಬ್ರಾಹ್ಮಣ ವಧೆಯನ್ನು ಮಾಡಿದವನು ; ಬ್ರಹ್ಮಹತ್ಯೆಯ ದೋಷವನ್ನು ಹೊಂದಿದವನು : ಈತಂ ಮುನ್ನವೊರ್ವನಂ ಪಾರ್ವನಂ ಕೊಂದ ಬೊಮ್ಮೇತಿಗಾಜು ಈಗಳಿದೆ ಎರೆಯಾದಂ (ರಾಮಾಶ್ವ. ೧೦೬-೨೫). **ಬ್ರಹ್ಮತಿಕಾಜ :** ೧. ಇದನಾವನಟಿದನಟಿದವಂ ಕಿಜಿಯುವಾರವೆಯುಂ ವಾರಣಾಸಿಯುಂ ಕವಿಲೆಯನಟಿದ ಬ್ರಹ್ಮತಿಕಾಜಂ (ಎಕ. IV, ಎಳಂದೂ. ೪೦-೫. ೨೫೨). **ಬ್ರಹ್ಮೇತಿಕಾಜ:** ೨. (ಅಲಂ) ಬ್ರಹ್ಮಹತ್ಯೆಯ ದೋಷವು ಬರುವಂತೆ ಮಾಡುವವನು : ಈ ವೃದ್ಧಬ್ರಾಹ್ಮಣನನೀ ಮುಪ್ಪಿನ ಮರುಳನನೀ ಗೌತಮನ ಗೋವನೀ ಬ್ರಹ್ಮೇತಿಕಾಜನನಾರ್ ಪೊಗಿಸಿದರ್ಪ್ಪರ್ ಶಂಕರ್ (ಹಂಪಿ. ೬-೫೨).

[ಬೊಮ್ಮೇತಿ (<ಬೊಮ್ಮಹತಿ)+ —ಕಾಜ]

**ಬೊಮ್ಮೋಪದೇಶ** (ನಾ). ೧. ಬ್ರಹ್ಮವಿದ್ಯೆಯನ್ನು ಹೇಳಿಕೊಡುವುದು; ವೇದಾಂತರಹಸ್ಯದ ಉಪದೇಶವನ್ನು ಮಾಡುವುದು : ಇಪಪರವ ಕೆಡಿಸಿದನು ಸುತರಿಗೆ ವಿಹಿತಕರ್ಮವ ಮಾಡಲೀಸದೆ ಕುಹಕಮುನಿ ಬೊಮ್ಮೋಪದೇಶವ ಮಾಡಿದಡದಹುದೇ (ಐರಾಗ. ೬-೫-೩೬). ೨. ಉಪನಯನ ; ಬ್ರಹ್ಮೋಪದೇಶ. [< ಸಂ. ಬ್ರಹ್ಮೋಪದೇಶ]

**ಬೊರಗೆ** (ನಾ). ಬಿಲ ; ಹೋರು : ಕರಡಿ ಕಳವಳಿಸೆ ಗೋಮಾಯು ಗೊಂದಿಯೊಳಣಗೆ ಬೊರಗೆಯು ಮೊಲಂಬೊಗುತ್ತಿರಲು . . . ಲುಬ್ಧಕ ಸಮೂಹ ಬೆದಕಿದುದು ಘೋರಾರಣ್ಯವ (ಹಂಪಿಮಹಾ. ೧೩-೩೨). [<ಪೋರ್$_{8}$]

**ಬೊರ್ಮ** 'ಬೊಮ್ಮ' ನೋ.

**—ಬೊಲ್** ' —ವೊಲ್' ನೋ.

**ಬೊಲ್ಲ$_1$** (ನಾ). ಮುಖವು ಬೆಳ್ಳಗಿರುವ ಒಂದು ಬಗೆಯ ಕುದುರೆ : "ಮುಖಂ ಬೆಳ್ಪುದೋಜೆರೆ ಬೊಲ್ಲನಕ್ಕು" (ಮಂಗರಾ. ೪೨-೦೫) ; ಚೆನ್ನ ಚೀರಮರ ಬಂಟ ನಾನಯ್ಯ ಎನ್ನ ಚಾಗು ಬೊಲ್ಲನ ಕಾಪ ಗೋವನೆಂಬರು (ಬಸವ. ೩೩೭) ; ತನ್ನ ಬೊಲ್ಲನ ಕೂಡೆ ಮಂಗಳನಂ . . . ವಾಹಕರಿರಾ ನೀವು (ಬಸವು. ೫೯-೪೦) ; ಥಳಥಳಿಸಿ ಪೊರೆದು ಮುಖದೊಳ್ ತೊಳಗುವ ಬೆಳ್ಪಸೆಯ ಬೊಲ್ಲಂ[ಖಾಕಾಂ. ಬೋಟಂ] (ಅಕ್ರೂ. ೨-೧೨).

[ ದೇ.॥ ತೆಲು. ಬೊಲ್ಲಡು ]

**ಬೊಲ್ಲ$_2$**, ಬೊಲ್ಲು (ಅ). ಮೆಚ್ಚುಗೆಯನ್ನು ಸೂಚಿಸುವ ಒಂದು ಭಾವ ಸೂಚಕಾವ್ಯಯ : ಸಭೆಯೊಳುನ್ನ ಪೊಣ್ಮಿತ್ತು ಜಾಂಗು ಬೊಲ್ಲ ಶುಭ ಬೊಲ್ಲ ಮಾಂಗಳಿಕ ಬೊಲ್ಲಮೆಂಬೀ ರವಂ (ಜಗಿ. ೦೨-೭೧); ನೆರೆದ ಜನ ವೆಲ್ಲಾಘೋ ಜಾಂಗು ಬೊಲ್ಲೆನುತಿರಲು (ಹಂಪಿರ. ೫-೬೫). **ಬೊಲ್ಲು :** ಸೊಲ್ಲಿಸಿದರು ಜಾಗು ಬೊಲ್ಲು ಶಬ್ದವ ಕೆಂಬಲ್ಲ ತಳಿಗೆಗಾರ್ತಿಯರು (ವೀರಶೈ. ೦೫-೩೭).

**ಬೊಲ್ಲವಣೆ** (ನಾ). [ಸಂಗೀತ] ಯಾವುದಾದರೂ ಚರ್ಮವಾದ್ಯಗಳಲ್ಲಿ ನುಡಿಸುವ ಪಾಟವಿನ್ಯಾಸ; P 'ಬೊಲ್ಲಾವಣಿ' ಎಂದರೆ ಒಂದು ಪಾಟವಿನ್ಯಾಸವನ್ನು ಏರ್ಪಡಿಸಿ ಅದರ ಮೊದಲು, ಮಧ್ಯ ಮತ್ತು ಕೊನೆಗಳಲ್ಲಿ ಹುಡುಕ್ಕಾ, ಪಟಹ, ಮೃದಂಗ, ಢಕ್ಕಾ, ಕರಟಾ ಇತ್ಯಾದಿ ವಾದ್ಯಗಳಿಗೆ ಪ್ರಧಾನವಾದ ಪಾಟಾಕ್ಷರವನ್ನು ಬಹುವಾಗಿ ಪ್ರಯೋಗಿಸುವುದು ; ಇಂತಹ ಖಂಡವನ್ನು ಎರಡು ಸಲ ನುಡಿಸುವುದು ಎಂದು ಸಂಗೀತವಿದ್ವಾಂಸರು ಅಭಿಪ್ರಾಯಪಡುತ್ತಾರೆ : ಬಹುರೇಖೆಯ ಚಾರಣೆಯ ಧಿಕ್ಕವಣೆಯ ಸೇವಣೆ ಬೊಲ್ಲವಣೆಯ ಬೆಡಂಗು ಬಿತ್ತರಿಕೆಯಂ ಬೀಜ್ ಬಾಜಿಸುತ್ತಿರೆಯುಂ (ಶಾಂತೀಶ್ವ. ೭-೯೩ ವ).

[ ?. / ತೆಲು. ಬೊಲ್ಲಾವಣೆ=ಒಂದು ಬಗೆಯ ನಾಟ್ಯಬಂಧ]

**ಬೊಲ್ಲಿ** (ನಾ). ಕಥೆ ; ಹೇಳಿಕೆ ; ಉಕ್ತಿ : ಭಾರತಕಥೆಯ ಟೀಕು ಸಹಾ ವ್ಯಾಖ್ಯಾನಿಸಿದ ಜಕಣನಾಯಕನ ಬೊಲ್ಲಿ (ಮಾಕಾವ್ಯ-I. ೨೨೦) ; ಇವನ ಗ್ರಂಥ : ಪಂಚಪರಮೇಷ್ಠಿಗಳ ಬೊಲ್ಲಿ (ಕವಿಚ. I, ೪೫೪); ಪಂಚಪರಮೇಷ್ಠಿಗಳ ಬೊಲ್ಲಿಯನ್ನು ಬರೆದು . . . ಗತಿಸಿದ ಬಾಳಚಂದ್ರಪಂಡಿತನು ಮಾಘ ಣಂದಿಯ ಶಿಷ್ಯರ ಶಿಷ್ಯ (ಸಾಹಿತ. ೦೩೦). [<ಪ್ರಾ. ಬೋಲ್ಲಿಅ]

**ಬೊಲ್ಲು** 'ಬೊಲ್ಲ$_2$' ನೋ.

**ಬೊಲ್ಲೆ** (ನಾ). ಅಸತ್ಯ ; ಸುಳ್ಳು : ಬಲ್ಲಿದ ವಾಚಾಳಿ ನಾರದಮುನಿ ನಿನ್ನ ಬೊಲ್ಲೆಯ ಮಾತದುತಿರಲಿ ಎಲ್ಲಿಂದ ಬಂದೆ ಸುದ್ದಿಯ ಪೇಳ್ವುದು (ವೀರಶೈ. ೩೭-೦೪). [←ತೆಲು. ಬೊಲ್ಲು]

**ಬೊಲ್ವ** (ನಾ). ಒಬ್ಬಾತನ ಹೆಸರು : ಕೋಗಟಿಯು ಒಕ್ಕಲ್ ಶ್ರೀ ಎರ್ಮ್ಮಯರ ಮಗ ಬೊಲ್ವ ಗಂಗಗಾವುಣ್ಡನಿಜಿದು ಬಿಟ್ಟನ್ (ಎಕ. X, ಬಂಗಾ. ೧೩. ೪; ಸು. 890). [ ? ]

**ಬೊಹರಿ** 'ಬಹರಿ' ನೋ.

**ಬೊಳ್ಳುಮರ** (ನಾ). ಟೊಳ್ಳಾದ ಮರ ; ಪೊಳ್ಳುಮರ : ನೋಡಲು ಇಷ್ಟು ದೊಡ್ಡದಾಗಿ ಕಂಡರೂ ಒಳಗೇನಿದೆ? ಬೊಳ್ಳುಮರವಿದ್ದ ಹಾಗೆ! (ಚಾಣ. ೯೯). [ ?. / ತುಳು. ಬೊಳ್ಳುದಮರ]

**ಬೊಳ್ಳಿಡು** 'ಬಳ್ಳಿಡು' ನೋ.

**ಬೊಳ್ಳು** 'ಬಗುಳು₂' ನೋ.

**ಬೊಳ್ಳುಗರೆ** 'ಬಳ್ಳುಗರೆ' ನೋ.

**ಬೊಳ್ಳೆ** (ನಾ). ಹುರುಳಿಲ್ಲದಿರುವಿಕೆ; ತಿರುಳಿಲ್ಲದಿರುವಿಕೆ; ಪೊಳ್ಳುತನ: 'ಒಳಬೊಳ್ಳೆ' ಪರಾ. [<ಪೊಳ್ಳು]

**ಬೋ** (ಅ). (ಸಾಮಾನ್ಯವಾಗಿ ಗೌರವಾರ್ಹರಾದವರನ್ನು ಸಂಬೋಧಿಸುವಾಗ ಪ್ರಯೋಗಿಸುವ) ಒಂದು ಅವ್ಯಯ: ನಿಮಿಷದ ನಿಮಿಷಂ ಬೋ ಕ್ಷಣದೊಳಗರ್ಧಂ ಬೋ. . . ನೀ ಮಾಡಿದ ಮಾಯಂ ಬೋ ಅಭ್ರಚ್ಛಾಯೆಯೆಂ ಬೋ (ಬಸವ. ೦೬೮). [< ಭೋ]

**ಬೋಂಡ** (ನಾ). ಕಲಸಿದ ಕಡಲೆಹಿಟ್ಟಿನಲ್ಲಿ ಪಲ್ಯವನ್ನು ಉಂಡೆಮಾಡಿ ಅದ್ದಿ, ಎಣ್ಣೆಯಲ್ಲಿ ಕರಿದು ಮಾಡುವ ಒಂದು ಬಗೆಯ ತಿಂಡಿ: ಕಡಲೆಬೇಳೆಯ ಹಿಟ್ಟನ್ನು ಬಜೆ ಮತ್ತು ಬೋಂಡಕ್ಕೆ ಅದ್ದಿಟ್ಟಾಗಿಯೂ ಸಿಂತಿಂಡಿಗಳನ್ನು ತಯಾರಿಸುವುದಕ್ಕೂ ಉಪಯೋಗಿಸುತ್ತಾರೆ (ಅಡುಗೆ. ೬೬); ನನಗೆ ಎರಡು ಬೋಂಡ, ಅವನಿಗೆ ಎರಡು ಬೋಂಡ ತಂದಿರಿಸಿದ ಹುಡುಗ (ಅಂಜೂ. ೩೬). [ ?. / ಮರಾ. ಬೋಂಡ]

**ಬೋಕಾಣಗಿತ್ತಿ** (ನಾ). (ಉಕ) ಮನಸ್ಸಿನ ವಿಚಾರವನ್ನು ಹೊರಗೆ ತೋರ್ಪಡಿಸದವಳು; ಗುಮ್ಮನ ಗುಸಕಿ : ಏ ಬೋಕಾಣಗಿತ್ತಿ, ಸುರುವು ಆಕೇನು? (ಸವಾಜ. ೬೪); ಈ ಬೋಕಾಣಗಿತ್ತಿಯನ್ನು ಹೊರಗೆ ಹಾಕದಿದ್ದರೆ ಈ ಹಾರೆಯಿಂದಲೇ ತಲೆ ಜಜ್ಜಿಕೊಳ್ಳುತ್ತೇನೆ (ತಂತ್ರಕ. ೨೩). [<ಬೋಕಾಣ+ –ಗಿತ್ತಿ]

**ಬೋಕಾಣಿ** (ನಾ). = ಬೋಕಾಣಗಿತ್ತಿ : ಏ ಬೋಕಾಣಿ ಮುಂಜಾನೆ ಹೊತ್ತು ಎಲ್ಲಿ ಹೋಗಿದ್ದಿ ? (ವಾಂಚಾರು. ೩೦) ; ನನ್ನ ಒರಿಯ ವಾಯಿಲ ಪತ್ಥಲವನ್ನು ಆ ಬೋಕಾಣಿಯೇಕೆ ಉಟ್ಟುಕೊಂಡು ಮೆರೆದಾಡುವಳು? (ಶುಕ್ತ್ರ್ಯ ದಿ. ೩೯). [ ? ]

**ಬೋಕಿ** (ನಾ). ೧. ಒಡೆದ ಮಡಕೆಯ ಚೂರು : ಪ್ರೀತಿಯಿಂದ ಆದರಣೆ ಮಾಡದೆ ಒಡೆದ ಮಡಕೆಯ ಬೋಕಿಯಲ್ಲಿ ನಿತ್ಯವೂ ಗಂಜಿ ಹೊಯ್ಯುತ್ತಾ ಇದ್ದನು (ಕಥಾಸಂ. IV, ೯) ; ಆ ಪದಾರ್ಥಗಳನ್ನು ತುಂಬುವುದಕ್ಕೆ ಹಳೆ ಮಡಿಕೆಯಾಗಲಿ, ಮಡಕಾಬೋಕಿಯಾಗಲಿ ಉಪಯೋಗಿಸಬಾರದು (ಗ್ರಾಮೌಷ. ೩೬) ; ೨. (ಆಲು) ಭಿಕ್ಷಾಪಾತ್ರೆ : ನೂಕೋನ ಮನೆ ಊಟಕ್ಕಿಂತ ಬೋಕಿಯ ಊಟ ಲೇಸು (ಗಾದೆ). 'ಬಕ್ಕರೆ' ಪರಾ. [ದೇ.॥ ತೆಲು. ಬೋಕಿ]

**ಬೋಗ** (ನಾ). ಸುಖಾನುಭವ ; ಭೋಗ : ಭಕಾರಕ್ಕೆ ಬಕಾರಂ . . . ಭೋಗ–ಬೋಗ (ಶಬ್ದಮ. ೨೩೩ ವೃತ್ತಿ). 'ಮೆಯ್ಬೋಗ' ಪರಾ. [< ಸಂ. ಭೋಗ]

**ಬೋಗಣಿ** 'ಬೋಗುಣಿ' ನೋ.

**ಬೋಗನ್‌ವಿಲ್ಲ, ಬೋಗೇನವಿಲಿಯ** (ನಾ). ಒಂದು ಬಗೆಯ (ಅಲಂಕಾರ) ಸಸ್ಯ ಮತ್ತು ಅದರ ಹೂವು : ಬೋಗನ್‌ವಿಲ್ಲ, ಕೆಂಪುಗೊಂಡೆ (ವೃಕ್ಷಗ. ೦೬–೨೯೦). **ಬೋಗೇನವಿಲಿಯ** : ತೊಳಗುತಿವೆ ತೋಟದಲ್ಲಿ ತರತರ ಗುಲಾಬಿ ಹೂ, ಡ್ಯಾಲಿಯಾ, ಬೋಗೇನವಿಲಿಯ (ಸುಪ್ರೀತ. ೬–೩). [←ಇಂ. Bougainvilaea]

**ಬೋಗರ** (ಗು). (ಆಲಂ) ನಿಜವಾದ ; ದಿಟವಾದ : ನೀನು ಬರೇ ಮಾತಿನಲ್ಲೇ ಮುಗಿಸಿದೆ. ಅಪ್ಪು ಬೋಗರ ದುಃಖವಿದ್ದವಳು ಬಟ್ಟಲು ಹಿಡಿ, ನೋಡೋಣ (ಚಾಣ. ೬೬). [← ತುಳು. ಬೋಗರೆ=ಸುಳ್ಳು]

**ಬೋಗಯ್ಯ** ? (ನಾ). (?) : ಶ್ರೀಗಾಶ್ರಯವೆನೆ ತೇಜಕ್ಕಾಗರವೆನೆ ನೆಗಟ್ದ ಗಂಗವಜ್ರನ ಲೆಂಬ್ಬೋಗಯ್ಯನೆಂಬರವರೊಳ್ಬೋಗೆಯು ಮಾರ್ಪ್ಪಡೆಗೊಂಬಿಂಣ್ಣನ ಬಂಟ (ಎಕ. II., ೦೬೩–೨, ೪೧೦). [ ? ]

**ಬೋಗಾರ₁** 'ಬೋಗಾಜಿ' ನೋ.

**ಬೋಗಾರ₂** (ನಾ). ಒಂದು ಬಗೆಯ ವನಸ್ಪತಿ : ಬೋಗಾರ ಜಾಯಿಫಲ ಸೈಂಧವ . . . ಇವನ್ನು ಸಮಾನಂಗೊಂಡು ಚೂರ್ಣಮಂ ಮಾಡಿ . . . ಮೆಲ್ಲಲು ವೀರ್ಯವರ್ಧನವಕ್ಕು (ವೈದ್ಯ ಪಿ. ೬೮). [ ? ]

**ಬೋಗಾರ₃** (ನಾ). ಒಂದು ಬಗೆಯ ಪಕ್ಷಿ: ಅರಸಿ ನೋಡೀಚಿಯುಲಿ ಹುದುಗಿದ ಹರಡೆ ಹಂಗ ಮಯೂರ ಟಿಟ್ಟಿಭ ಗೊರವ ಗೀಜಗ ಲಾವುಗೆ ಬುಬ್ಬುಲಿ ಬೋಗಾರ . . . ಇತ್ತಲಿಪ್ಪೆಂಬವ (ಶೂರಚಾ. ೩–೦–೩೨). [ ? ]

**ಬೋಗಾಜಿ, ಬೋಗಾರ₁** (ನಾ). ಲೋಹದ ಕೆಲಸ ಮಾಡುವವನು ; ಲೋಹಕಾರ ; ಕಂಚುಗಾರ : "ವ್ಯೋಕಾರಃ, ಲೋಹಕಾರಃ — ಈ ೨ ಬೋಗಾಜಂ" (ಪಠಾಮು. ೯೬–೪೬೯) ; ಬೋಗಾಜಿ ದೇವಿಸೆಟ್ಟಿ ಗ ೧ ಬೋಗಾಜಿ ಬಾಣಾಸೆಟ್ಟಿ ಗ ೧ (ಎಕ. XV, ಕೇಲೂರು. ೩೪೩–೮೦ ; 1265) ; ಹುಸಿದು ಮಾಡುವನ ಶಿವಪೂಜೆ ಬೋಗಾಜಿ ಹಸರವಿಟ್ಟಂತೆ (ಸರ್ವಜ್ಞ. ೦೬೦). **ಬೋಗಾರ₁** : ಕಂಚುಗಾರರು ಬೋಗಾರರು ಸಹ ಗುಡಾರ ೧ಕ್ಕೆ ವರುಷ ೧ ಕೆಲ್ ೧ ಹಣಪ್ರಕಾರ ಸಡಿಸಿಕೊಡಲುಳ್ಳವರು (ಎಕ. XII, ಪಾವ್ಗಡ. ೩೦–೯೯; 1656); ತಾವು ಹಿತ್ತಾಳೆಗಳ ಪಾತ್ರೆಗಳನ್ನು ಮಾರುವ ಜೈನರಿಗೆ ಕಾಸಾರರೆಂತಲೂ, ಜೋಗಾರರೆಂತಲೂ, ತಾಂಬಟಗಾರರೆಂತಲೂ ಅನ್ನುವರು (ಕಥಾಗ. ೦೩೩); ಗಂದಿಗರು, ಬೋಗಾರರು . . . ಮೊದಲಾದ ಜಾತಿಯವರೂ ಅಲ್ಲಿ ವಾಸಿಸುತ್ತಿದ್ದರು (ಕರ್ನಾಟ. ೦೫೭). [< ಸಂ. ವ್ಯೋಕಾರ./ತುಳು. ಬೋಗರೆ]

**ಬೋಗಾಜಿದೆಜ್ಜೆ** (ನಾ). ಲೋಹಕಾರರ ಮೇಲೆ ವಿಧಿಸುತ್ತಿದ್ದ ತೆರಿಗೆ : ಬೆಟ್ಟದ ಕಾವಲು ಬೋಗಾಜಿದೆಜ್ಜೆ ಗಣಾಚಾರಿದೆರಿಗೆ ಕೋಜುಂಗಳ ತೆಜ್ಜೆ (ಎಕ. III (R). ಗುಂಡ್ಲುಪೇ. ೦೩೬–೦೭; 1513). [ಬೋಗಾಜಿ + ತೆಜ್ಜೆ]

**ಬೋಗಾಜಿದೆಜ₃** (ನಾ). = ಬೋಗಾಜಿದೆಜ್ಜೆ : ಬೆಟ್ಟದ ಕಾವಲು ಬೋಗಾಜಿದೆಜ₃ ಗಣಾಕಾರತೆಜ್ಜೆ . . . ಸಲಿಯೂರವೆತ್ತನೆ ಮುಂತಾದ ಸರ್ವ್ವತೆಜ್ಜೆ ಕಾಲುವಳಿಯ ಗ್ರಾಮಗಳು (ಎಕ. III (R), ಗುಂಡ್ಲುಪೇ. ೦೩೯–೦೭ ; 1311). [ಬೋಗಾಜಿ + ತೆಜ₃]

**ಬೋಗಾಜೆಕೆ** (ನಾ). = ಬೋಗಾಜಿದೆಜ್ಜೆ: ಬೋಗಾಜೆಕೆ ಮಾದಜೆಕೆ ಮುಂತಾದ ಏನುಳ್ಳ ಸುಲಿಸ್ವಾಮ್ಯವನು ಅಗುಮಡಿ ನಂಜುಡೇಸ್ವರ ದೇವರ ಬಂಡಾರಕ್ಕೆ ಸಲಿಸುವಂತೆ ಸರ್ವಮಾನ್ಯವ ಧರ್ಮಸಾದನ (ಎಕ. III (R), ಗುಂಡ್ಲುಪೇ. ೩೯–೬; 1507). [ಬೋಗಾಜಿ + –ಇಕೆ]

**ಬೋಗಿ₁** (ನಾ). ಸುಖವನ್ನು ಅನುಭವಿಸುವವನು ; ಸುಖಿ : ಭಕಾರಕ್ಕೆ ಬಕಾರಂ . . . ಭೋಗಿ–ಬೋಗಿ (ಶಬ್ದಮ. ೨೩೩ ವೃತ್ತಿ); ವೀಳೆಯ ಪುಷ್ಪ ಮುಂತಾದ ಪರಿಮಳಕೆ ಬೋಗಿಯಾಗಿರುವವನು (ಶಿಕ್ಷಣ. ೩–೨೦). [<ಸಂ. ಭೋಗಿನ್]

**ಬೋಗಿ₂** (ನಾ). ರೈಲುಗಾಡಿಯ ಬಿಡಿಗಾಡಿ,— ಡಬ್ಬಿ : ನೆಕ್ಲುದೋವನಿಗಾಗಲಿ ಇತರರಿಗಾಗಲಿ ಬೋಗಿಗಳ ಬಳಿ ಹೋಗಲು ಅಪ್ಪಣೆ ದೊರೆತಿರಲಿಲ್ಲ (ಪುನರು. ೯೫೩). [←ಇಂ. Bogie]

**ಬೋಗುಡಿಚೆ** (ನಾ). ಒಂದು ಬಗೆಯ ಔಷಧೀ ಸಸ್ಯ : ವ್ಯೈಲತುತ್ತವಂ ಬೋಗುಡಿಚೆಸೊಪ್ಪಿನ ರಸದಲ್ಲಿ ತೇದು ಹೊರಮೊಳೆಗೆ ತೊಡೆಯೆ ಮೊಳೆ ಮಾಣ್ಬುವುದು (ಕಲ್ಯ. ೨೯೩). [ ? ]

**ಬೋಗುಣಿ, ಬೋಗಣಿ, ಬೋಗುನಿ, ಬೋಗೋಣಿ** (ನಾ). ತಳಭಾಗವು ಗುಂಡಾಗಿದ್ದು, ಅಗಲವಾದ ಬಾಯುಳ್ಳ ಲೋಹದ ಪಾತ್ರೆ : ಏಳೆನ್ನ ಮನವನ್ನೆ ! ನೋಡು, ಪೊಳ್ತರೆ ಬಂದು ನಿಶಿಯ ಬೋಗುಣಿಯೊಳಕೆ

ಹೊಂಬುಗುರಿಬೆಸದು ತಾರೆಯರಳುಗಳನಲ್ಲಿಂದೆ ಚೆಲ್ಲಾಡಿಪನು (ಉಷರ.೦); ಒಲೆಯ ಬಳಿ ಒಂದು ಬೋಗುಣಿಯಲ್ಲಿ ಕಳೆದ ರಾತ್ರಿ ಉಳಿದಿದ್ದ ಅನ್ನವನ್ನು ನಾಯಿಗಳಿಗಾಗುತ್ತದೆ ಎಂದು ಸುಬ್ಬಮ್ಮ ಇಟ್ಟಿದ್ದಳು (ಗಾಪೂರು. ೫೬). ಬೋಗಣಿ: ಒಂದು ಬೋಗುಣಿಗೆ ನೀರು ಸುರಿದು ಅವನ್ನೆಲ್ಲ ಸುರುವಿದೆ (ಹುಡುಕಾ. ೬೬); ಅವಲಕ್ಕಿಯನ್ನು ತೊಳೆದು ನೆನೆಯಿಸಿ ಅರ್ಧ ಬೋಗಣಿ ದೊಸರಿನೊಂದಿಗೆ ಚೆನ್ನಾಗಿ ಬೆರೆಯಿಸಿ . . . ಉಪಹಾರಕ್ಕೆ ಕುಳಿತಿದ್ದರು (ಕನ್ಯ.೫.೯). ಬೋಗುನಿ: ಈ ಸೇವಕರು ಚಿನ್ನದ ಪಾತ್ರೆಗಳನ್ನು ಅಂದರೆ ದೊಡ್ಡ ದೊಡ್ಡ ಬೋಗುನಿಗಳನ್ನು . . . ಹೊತ್ತು ಬರುತ್ತಿದ್ದರು (ಶ್ರೀಮಾ. ೧, ೬೮). ಬೋಗೋಣಿ: ಬೋಗೋಣಿಯಲ್ಲಿ ಸವಿನೀರು ಕಾಯಲಿಕ್ಕೆ ಇಟ್ಟು ನೀರು ಹೊಯ್ದಾಡುವಾಗ ಈ ತೊಪ್ಪಲವನ್ನು ಹಾಕಿ ಅದರ ಎಸರನ್ನು ಬಸಿದುಕೊಂಡು ಬಿಳೀಸಕ್ಕರೆಯನ್ನು ಹಾಲನ್ನು ಹಾಕಿ ತೆಗೆದುಕೊಳ್ಳುತ್ತಾರೆ (ಕೃಷಿಶಾ. ೨೦೦); ಬೋಗೋಣಿಯೊಳಗಿನ ನೀರು ಹೊರಸೂಸಿ ಪರಾತದೊಳಗೆ ಬೀಳುತ್ತದೆ (ಮುಂಬಯಿ. ೫-೬೫).

[←ಮರಾ. ಬೋಗಣೇ, ಬೋಗಾಣೇ, ಬೋಘಣೇ, ಬೋಘಾಣೇ. /ತಮಿ. ಪೋಕಣಿ, ಪೋಕಿಣಿ; ತುಳು. ಬೋಗಾಣಿ]

**ಬೋಗುನಿ** 'ಬೋಗುಣಿ' ನೋ.

**ಬೋಗೇನವಿಲಿಯ** 'ಬೋಗನ್‌ವಿಲ್ಲ' ನೋ.

**ಬೋಗೋಣಿ** 'ಬೋಗುಣಿ' ನೋ.

**ಬೋಚಿ** (ನಾ). (ಮಕ್ಕಳ ಮಾತಿನಲ್ಲಿ) ಮೊಲೆ; ಸ್ತನ: ಬಾಚಿ ತಬ್ಬುತಲೆನ್ನ ಉಬ್ಬಿಯಿರುತಿರ್ಪ ಬೋಚಿಯನ್ನು ಕುಡಿಯಪ್ಪ (ಜನಪ. ೦೫೬). 'ಪಾಚಿ₂' ಪರಾ.

**ಬೋಚಿಗ** (ನಾ). ಒಬ್ಬಾತನ ಹೆಸರು: ಸ್ವಸ್ತಿಶ್ರೀ ಗೊಗ್ಗಿಯ ಮನೆಮಗತಿ ಬೋಚಿಗಧರ್ಮ್ಮಸೆಟ್ಟಿ ಉತ್ತಮಗಳ್ಪಂಕ್ರ ?ದೊಳೆ ನಿಲೆ ಎದೆಮ ಊರ ಮಳಿವ [ಲಿ] ಸತ್ತಂ (ಪ್ರಿಆ. ೦೯೩೬, ೯೦-೨ ; ಸು. ೯೦೦).

[?]

**ಬೋಜ** (ನಾ). ಒಂದು ಬಗೆಯ ಹೆಂಡ: ಇವರು ಜೋಳದೊಳಗೆ ಅಮೃತಬಳ್ಳಿ, ಭಂಗಿ, ಕುಂಚಲಿ, ಅಂದರೆ ವಿಷಮುಷ್ಟಿಯ ಬೀಜ, ಇವುಗಳನ್ನು ಹಾಕಿ ಕುದಿಸಿ ಬೋಜವೆಂಬ ಸರಾಯಿಯನ್ನು ಮಾಡಿ . . . ಮಾರುವರು (ಕಜಾಗ. ೨೯೩). 'ಅಕ್ಕಿಬೋಜ' ಪರಾ.

[←ಪಾರ. ಬೋಜಾಪ್; ಹಿಂ. ಬೋಜಾ; ಮರಾ. ಬೋಜಾ, ಬೋರ್ಝಾ]

**ಬೋಜಗಾರ** (ನಾ). ಬೋಜವೆಂಬ ಹೆಂಡವನ್ನು ತಯಾರಿಸುವವನು: ಬೋಜಗಾರರು ಇವರು ಹಲವು ಹಿಂದೂಜಾತಿಗಳ ವಂಶದವರೆಂದು ತೋರುತ್ತದೆ (ಕಜಾಗ. ೨೯೩). [ಬೋಜ +– ಕಾರ₁ (<–ಕಾಜ)]

**ಬೋಜಾ** 'ಬೋಜೆ' ನೋ.

**ಬೋಜಂಕಾರ** (ನಾ). ಮದುಮಗನ ಜೊತೆಯಲ್ಲಿರುವ ಚೆಲುವ.–ಸುಂದರ: ಬೋಜಂಕಾರನಾದ ಕರುಂಬಯ್ಯ ಚೆಂಗುಮಣಿಯ ಕೈಹಿಡಿದು ಶಯ್ಯಾಗೃಹದ ಬಾಗಿಲಿಗೆ ಕರೆದುಕೊಂಡು ಬಂದ (ಕುಂಹಾ. ೨೩೨).

[←ಕೊಡ. ಬೋಜಕಾರ]

**ಬೋಜಂಗಾರ್ತಿ** (ನಾ). ಮದುಮಗಳ ಜೊತೆಯಲ್ಲಿರುವ ಚೆಲುವೆ,–ಸುಂದರಿ: ಯಾಪಳೋ ಒಬ್ಬ ಬೋಜಂಗಾರ್ತಿ ಬಾಲ್ಯಕಾರ್ತಿಯ ಕಣ್ನೋಟದ ಗಾಳಕ್ಕೆ ಚೆಂಗುಮಣಿ ಸಿಕ್ಕಿ ಬಿದ್ದಿರಬೇಕು (ಕುಂಹಾ. ೦೦೩); ನೀನು ನನ್ನ ಬೋಜಂಗಾರ್ತಿ ಹೆಣ್ಣನ್ನು ಎಲ್ಲಿ ಕಂಡೆನೆಂಬುವನ್ನು ಎಂದೆಂದಿಗೂ ಮರೆಯಲಾರೆ (ಸತಿಪಾ. ೧೧, ೦೦೨೯). [←ಕೊಡ. ಬೋಜಕಾರ್ತಿ]

**ಬೋಜೆ, ಬೋಜಾ** (ನಾ). ಭಾರ; ಹೊರೆ: ಸಕರಿನ ಕರಾಯಿಯ ಬೋಜೆಯು ಸಂಪೂರ್ಣವಾಗಿ ಆಸಾಮಿಗಳ ಮೇಲೆ ಬೀಳುತ್ತದೆ (ಮುಂಬಯ್ಯ. ೯೦); ಈಗ ನನ್ನ ಮೇಲೆ ಒಂದು ಬೋಜೆ ಬಂದಿದ್ದು ಆ ಬೋಜೆಯನ್ನು ನೀವೇ ಸ್ವಂತ ಖುಷಿಯಿಂದ ಹೊತ್ತಿದ್ದೀರಿ (ಗಂಪಾಬು. ೨೦೦). ಬೋಜಾ: ನಿಮ್ಮ ಮ್ಯಾಲ ಪ್ರಪಂಚದ ಬೋಜಾ ಭಾಳ ಅದ (ಸಪುಜೀ. ೦೫೬); ನಾಳೆ ಮನೀ ಬೋಜಾ ಅವರ ಮ್ಯಾಲೀ ಅಲ್ಲ (ದೀಪಹ. ೯೩).

[←ಹಿಂ. ಬೋಝ್; ಮರಾ. ಬೋಜಾ, ಬೋರ್ಝಾ]

**ಬೋಟ** 'ಬೋಟು₃' ನೋ.

**ಬೋಟು₁** (ನಾ). ಒಂದು ಬಗೆಯ ಆದಾಯ: ಸ್ಥಳದ ಪೂರ್ವದ ಮಾನ್ಯ ಆಯ ಸ್ವಾಮ್ಯ ಬಾಟು ಬೋಟು ಸಹ ತೋಗರಿಗಟ್ಟಕೆ ಸಲುವ ಉಪಗ್ರಾಮ (ಎಕ. XII, ಮಧುಗಿ. ೯೩-೬; 1634 ?).

**ಬೋಟು₂** (ನಾ). ಹುಣಿಸೆಹಣ್ಣಿನ ಸಿಪ್ಪೆ,–ಗೋಟು,–ಗೊಳಲೆ (?) : ಸ್ವಾತಿನೀರಿಂ ಮುತ್ತು ಜನಿಸಿ ಶೋಭಿಪುದೈಸೆ ಬೋಟ ತೋಯುದಿ ಮಾಕ್ತಿಕ ಫಲಗಳಹುದೆ (ಹಮು. ೨೦). 'ಬೊಟ್ಟು' ಪರಾ. [ ? ]

**ಬೋಟು₃, ಬೋಟ** (ನಾ). ನಾವೆ; ಹರಿಗೋಲು: ಬಂದರಗಳಲ್ಲಿ ಅಲೆದಾಡುವ ಸಣ್ಣ ಪುಟ್ಟ ಮಾಲುಬೋಟುಗಳು. ಇವುಗಳ ಹೊರತು ಆ ಸಮುದ್ರದಲ್ಲಿ ಬೇರೆ ಯಾವ ಸುಳಿದಾಟವೂ ಕಾಣುತ್ತಿರಲಿಲ್ಲ (ಮರುಗಾ. ೯). ಬೋಟ: ಕತ್ತಲಲ್ಲಿ ಬೋಟಿಯ ದೀಪಗಳು ಮಾತ್ರ ಕಾಣಿಸುತ್ತವೆ (ಪರಮ. ೨೦೦); ಕುಮಟೆಯ ಕಡೆಗೆ ಹೋಗುವ . . . 'ಬೋಟ' ಸಿದ್ಧವಾಗಿ ನಿಂತಿತ್ತು (ಮುಂರುದಾ. ೩). [←ಇಂ. Boat]

**ಬೋಟೆ** (ನಾ). (?): ''ಕೂಟದಾಸಿ ಬೋಟೆಯನಿಕರಂ'' (ಪಸ್ತುಕೋ. ೫೬-೨೬).

[ ? ]

**ಬೋಡ, ಬೋಳ₂, ಬೋಟ₂** (ನಾ). ೧. ಹಲ್ಲಿಲ್ಲದವನು; ಬೊಚ್ಚು ಬಾಯಿಯವನು: ''ಅದ್ವಿಜಂ ಬೋಡನಕ್ಕುಂ'' (ರಾಂಗಾ. ೦೦೫-೬); ಅಡಿಗಟ್ಟಣವೇಕೆ ಬೋಡಂಗೆ ಕಬ್ಬೇಕೆ (ಸರ್ವಜ್ಞ. ೦೩೬೪). ೨. ಕೂದಲನ್ನು ತೆಗೆಸಿಕೊಂಡವನು; ಬೋಳಿಸಿಕೊಂಡವನು. ೩. ತಲೆಯಲ್ಲಿ ಕೂದಲಿಲ್ಲದವನು. ೪. ದರಿದ್ರ: ಬೋಡ . . . ಗಂಟಿಲ್ಲದವ; ದಿವಾಳಿಖೋರ '' (ಜಾನಕೋ. ೨೫). ೫. (ಕರಾ). ಪೆದ್ದ; ದಡ್ಡ; ಬುದ್ಧಿಹೀನ. ಬೋಳ₂: ೩. ಬೋಳನಿಗೇಕೆ ಬಾಚಣಿಗೆ (ಇಂಶಾಪ. ೬೮-೬೮); ೬. ಕೊಂಬುಗಳಿಲ್ಲದ ಎತ್ತು: ನಿಲುವ ಸಂಪನು ಬೋಳ ಬಟ್ಟ ಕರಿಮಾಸ ಮುಂದೊಲೆವ ನಾನಾಪರಿಯ ಕಬ್ಬಸಿಗಳೊಳಗಾದ ಪಲವು ಪರಿಯೆತ್ತು ತೊಂಭತ್ತಾಱುಲಕ್ಷ ಮೇಳೈಸಿ ಪಿಡಿದುವು ಗೆಲ್ಲಕೆ (ಸಿಂಗರಾ. ೩೫-೬); ಕೊರಗುತಿರ್ದನು ಹೇರಿ ಹಾಕಿದ ಬೋಳನಂದದಲಿ (ಅಂಬಿಗಾ. ೨೫-೯೦). ೭. (ಆಲು) ಸಂನ್ಯಾಸಿ; ವ್ರತಿ: ನಿನ್ನ ಸಂಚದ ಪರಿ ಬ್ರಹ್ಮಾದಿಗಳಱಿಯರು . . . . ಜಡೆಯ ಮುಡಿಯ ಬೋಳರಱಿಯರು (ಸರ್ವಪ. ೩೦-೦೫೯). ಬೋಟ₂: ೨. ''ಮುಂಡಃ, ಮುಂಡಿತಃ – ಈ ೨ ಬೋಟನು'' (ಶಾಶರಾ. ೦೦೯). ೭. ಸಾರಿಂದಂ . . . ಸೀತೆಯಿರ್ದ ಕನ್ಯಾಮಾಡಕ್ಕೆಯ್ತಪ್ಪುದಲ್ಲಿ ವಿಳಾಸಿನಿಯರಾ ಬೋಟನಂ ಕಾಣುತ್ತಾಳಿಗೊಂಡು ನೆತ್ತಿಯಂ ಹಸ್ತದಿಂ ಪೊಯ್ಯೆ (ಪುಣ್ಯಾಸ್ರ. ೫-೬೧ ಪ). [ಬೋಡು + – ಅ₇./ತೆಲು. ಬೋಡ]

**ಬೋಡಿ, ಬೋಳಿ** (ನಾ). ೧. ಹಲ್ಲಿಲ್ಲದವಳು; ಬೊಚ್ಚು ಬಾಯಿಯವಳು: ಕುಂಟಣಿಯಜ್ಜಿ ಬೋಡಿಯನು ನೋಡಗ್ರಕೆ (ಜಪಮು. ೦೦-೬); ಮಗಳಿಗು ಸುರಿದಳು ಬಹುಯುಕ್ತಿಯು ಬೋಡಿ ಪಿಸುಣತೆಯ ಹೂಡಿ (ಅಂಗಪು. ೨೫-೩೮). ೨. ತಲೆಯಲ್ಲಿ ಕೂದಲಿಲ್ಲದವಳು: (೬). ಬೋಳಿ: ೩. ತಲೆಯ ಕೂದಲನ್ನು ತೆಗೆಸಿಕೊಂಡವಳು; ಕೇಶಮುಂಡನ ಮಾಡಿಸಿಕೊಂಡವಳು: ಕೂಳಿಗೆ ಬಿದ್ದಿರುವ ಬೋಳಿಗೆ ನಿನಗಿಷ್ಟು ಗಯ್ಯಾಳಿತನವೇಕೆ (ಪುರಂದ. ೩-೩೦ ಕಲ್ಪಿ); ಬೋಳಿ ತುರುಬು ನೆನೆಸಿಕೊಂಡ ಹಾಗೆ (ಗಾದೆ). ೪. ಒಂದು ಬಯ್ಗುಳು.

ಬೋಳೀಮಗ = ಮುಂಡೆಯ ಮಗ; ಒಂದು ಬಯ್ಗುಳು:

ಥೂ ಎಷ್ಟು ಪೊತ್ತಾಯ್ತು ? ಎತ್ತ ಸತ್ತ ಈ ಬೋಳೀಮಗ? (ವುಲವು. ೬೩೪). [ಬೋಡ + — ಇ₂./ತುಳು.ಬೋಳಿ]

**ಬೋಡು,** ಬೋಳು, ಬೋಟು (ನಾ). ೧. ಬಾಯಿಯಲ್ಲಿ ಹಲ್ಲಿಲ್ಲದ **ಸ್ಥಿತಿ** ; ಬಾಯಿ ಬರಿದಾಗಿರುವಿಕೆ : (ಕ). ೨. (ತಲೆಯಲ್ಲಿ) **ಕೂದಲಿಲ್ಲದ** ಸ್ಥಿತಿ; ಬೊಕ್ಕು. ೩. ಬರಿದಾಗಿರುವಿಕೆ ; ಖಾಲಿಯಾಗಿ **ರುವಿಕೆ.** (ಗು). ೪. ಹಲ್ಲಿಲ್ಲದ ; ಬಾಯಿ ಬರಿದಾದ : 'ಬೋಡುವಾಯ್' ಪರಾ. **ಬೋಳು :** ೨. ಆತನಿರವು **ತುಱುಬೋ** ಜಡೆಯೋ ಬೋಳೋ ಅಱಿಯಬಾರದಣ್ಣಾ (ಪೊಳಪಟ. ೨೦೯-೬೩೨); ಮಂಡೆ ಬೋಳಿನ ಕರಕಮಂಡಲ ದಂಡಧೋತ್ರದ ಕಾಸೆ ವೇಷದ **ಲಂಡಸಂನ್ಯಾಸಿ**ಯಸು ಹಿರಿಯರೆನುತ್ತ ಭಿಕ್ಷವನು ಕೊಂಡು ನೀಡಿದರೆ (ಕಾತಿಲ. ೬-೩೦). ೫. ಕೂದಲಿಲ್ಲದ ; ಬೊಕ್ಕಾದ: 'ಬೋಳುದಲೆ' ಪರಾ. ೬. ಬರಿದಾದ; ಖಾಲಿಯಾದ : 'ಬೋಳುಗೈ' ಪರಾ. **ಬೋಟು :** ೨. ನಾವಿದಂ ಕನ್ನೆಯ ಪುರ್ವುಂ ನೊಸಲುಮಂ ಸಮಱಿ **ದಾಗಳಾ ಪುರ್ವು**ಂ ಬೋಟಿ ಪುರ್ವಾಗೆ ನೊಸಲುಂ ತಱಿಟುವಂತಾಗೆ (ಶಂಹಂ. ೯-೬ ವ). ೫. 'ಬೋಟುಮಂಡೆ' ಪರಾ.

**ಬೋಡಾಗು, ಬೋಳಾಗು, ಬೋಟಾಗು** = ೧. ಹಲ್ಲಿಲ್ಲದಾಗು; ಬೊಚ್ಚುಬಾಯಾಗು : ಹಲ್ಲುಗಳುದುರಿ ಬಾಯಿ ಬರಿ ಬೋಡಾಗಿಹುದು (ಅಟುಶಂ. ೦೦-೦೮). ೨. ಬರಿದಾಗು: ಖಾಲಿಯಾಗು: ಒಂಟಿಕೊಪ್ಪಲಿನಾಚೆ **ಬೋಡಾದ ಭೋರೆ**ಯಂ . . . ಕುರಿತ್ತುಲಿವ ಗತಿಯಾಯ್ತು (ಕೋಗಿರ. ೦೬-೩೬): ಮಂಡೆ ಬೋಳಾದರೇನೋ **ಹುಟ್ಟು** ಬೋಳಾಗದನ್ನಕ್ಕರ (ಅದವ. ೯-೦೩); **ಹೂವಿಲ್ಲದ ಹೆರಳು, ಹಾರವಿಲ್ಲದ** ಕೊರಳು, ಬರಿಗೈ, **ಬೋಳಾದ ಹಣೆ** (ಅಶಶಂ. ೦೬೦). ೩. **ಅಸಹಾಯಕವಾಗು** ; ನಿಸ್ಸತ್ತ್ವ **ವಾಗು :** ವೀಂಡರ ಭೂಪರ ಬಾರಿಗೆ ಬಿರ್ದು ಬೋಡಾಗಿ ನಾಯಾಗಿ **ತೇಜಂಗೆಟ್ಟು** (ಧರ್ಮನಿತ್ಯ. ೦೬-೦೮೩) ; ಉದಿತಾತ್ಯುಗ್ರಭುಜಪ್ರತಾಪದ **ಪೊಡವ್ಪ**ಗಿಂ ಕಂಡು . . . **ಪೊಡವ್ಪ**ಡುಗರಾರಾಸ್ತೋಡಿ ಬೋಡಾಗಿ **ಪೋಗದರಾರ್** (ಎಕ. XX, ೧೨-೬ ; 1187). ೪. ಕೂದಲಿಲ್ಲವಾಗು ; **ಬೊಕ್ಕವಾಗು :** ಮಂಡೆ ಬೋಳಾದರೇನೋ ಹುಟ್ಟು ಬೋಳಾಗದನ್ನಕ್ಕರ (ಅದವ. ೯-೦೩) ; ಲಲಿತಾಂಗಿಯರೊಳ್ ರಾಗದೆ ನಲಿದಾಡುವ ವಯಸ ದಂದು **ಮಾಡದೆ** ತಪಮಂ ಸಲೆ ಮಾಟಕ್ಕೆ ದೈವದಿಂದಂ ತಲೆ ಬೋಟಾಯ್ತೆ ನಿಪ ಮುಪ್ಪಿನೊಳ್ಮರನೇಜರ್ (ಸವುಕ. ೬-೪೦) ; ಬೋಟಾದ ತಲೆಯ **ರೋಮ**ಂ . . . ಬಳೆಪ ತೆಱದಿಂ **ಕೋಲಾಹಲ**ಮಿಲ್ಲದೊದವುತಿರ್ಕುಂ ಪಾಪಂ (ಧರ್ಮನಿತ್ಯ. ೪-೪೦). ೫. (ಅಲಂ) ಸಂನ್ಯಾಸಿಯಾಗು : **ಹೊನ್ನಿನ** ಆಪ್ಯಾಯನಕ್ಕೆ ಬೋಳಾದವನಲ್ಲ . . . ಕೂಡಲಸಂಗಮ ದೇವರಲ್ಲಿ ಎನಗಾರು ಇಲ್ಲವೆಂದು ಬೋಳಾದನೆನ್ನ ಪ್ರಭುದೇವರು (ಬಸವ. ೪. ೪೯೬-೦೦೬೦). **ಬೋಟದಲೆ** = ಬೋಳಿಸಿದ ತಲೆ ; ಕೂದಲಿಲ್ಲದ **ತಲೆ :** ಕರಿಯ ಕಚ್ಚುಟಮನುಟ್ಟು ಮೆಯ್ಯೆಲ್ಲಂ ಮಸಿಯಂ ಪೂಸಿ ಬೋಟದಲೆವೆರಸು ಬಾಯೊಳ್ ಕವಡಿಕೆಗಳಂ ಪಲ್ಗಳಂತೆ ಮಾಡಿ (ವಡ್ಡಾರಾ. ೦೦೯-೦೬). **ಬೋಟಮಂಡೆ** = ಬೋಟಿದಲೆ : ಕಚ್ಚುಟಂ ಗುಂಡಿಗೆ ಬೋಟಮಂಡೆ ಮಣಿದಂಡಪಿಂಛೀಕ್ಷಣಸೌಖ್ಯಹೇತುವೇ (ಶಂರಾಮಾ. ೪-೬೦) ; ಕೆರಕಿಂ ತುಱಿಯಿಂ ತೀವಿದ ಕರಚರಣಂ ಬೋಟಮಂಡೆ ಕುಗ್ಗಿದ ದೇಹಂ (ಧರ್ಮನಿತ್ಯ. ೬-೨೨೪).

[ದೇ.॥ ತಮಿ. ಪೋಟು ; ತುಳು. ಬೋಳು, ಬೋರು ; ಕೊಡ. ಕೋತ. ಬೋಳ್; ತೆಲು. ಬೋಡು]

**ಬೋಡುಕಡಲೆಸೊಪ್ಪು** (ನಾ). ಒಂದು ಬಗೆಯ ಔಷಧೀಸಸ್ಯ : ಮೂಡುಗಟ್ಟನ ಗಿಡ, ಬೋಡುಕಡಲೆಸೊಪ್ಪು, ಕರಂಡೆ, ಮುಂಡಿಗಿಡ (ಬೃಹಿಗಿ. ೬೦-೦೪೬೦) : ಮೂಡುಗಟ್ಟಿನ ಸೊಪ್ಪು, ಬೋಡುಕಡಲೆಸೊಪ್ಪು, ಗರುಗಲು (ವಸ್ತುಸು. ೨೩೮). 'ಬೋಟಿಗಡಲೆ' ಪರಾ.

[ಬೋಡು ? + ಕಡಲೆ + ಸೊಪ್ಪು₂]

**ಬೋಡುಗೈ** (ಕ್ರಿ). ಬರಿದುಗೊಳಿಸು ; ಬೋಳುಮಾಡು : ದಂತಿ ಮೃಗಪತಿಯ ದಾಡೆಯ **ಬೋಡುಗೈವುದೆ** ಶಕುಂತೇಶನಂ ದಂದಶೂಕ ನುಂಗುವುದೆ (ಮಲೇಪು. ೨೪-೦೦). [ಬೋಡು + ಕೈ₁ (< ಕೆಯ್₁)]

**ಬೋಡುಬಾಯ್** 'ಬೋಡುವಾಯ್' ನೋ.

**ಬೋಡುಬಾಯಿ** 'ಬೋಡುವಾಯ್' ನೋ.

**ಬೋಡುವಾಯ್**, ಬೋಡುಬಾಯ್, **ಬೋಡುಬಾಯಿ** (ನಾ). ಹಲ್ಲಿಲ್ಲದ ಬಾಯಿ : ಬೊಚ್ಚುಬಾಯಿ : **ಆನೆದಲೆಯ ನೆತ್ತರ್ ಪುದಿದ** ಮುತ್ತುಂ ದಾಳಿಂಬಬೀಜಂಗೆತ್ತೆತ್ತಿ ಕಳ್ಕನೆ ಮುಕ್ಕಲೊಡನೆ ಪಲ್ಗಳ್ ಮುಕ್ಕುವೋಗೆ ನೋಡಿಮೆಂಬಂತೆ ಬೋಡುವಾಯುಂ **ತೆಱೆದೀಡಿಪ ಕೋಡ** ಗಂಗಳಂ ನೀಡುಂ ನೋಡಿ (ರಾಶೇಖ. ೩-೩೩ ವ) ; ಶೈಲವೃದ್ಧನ ಬೋಡು ವಾಯಂತೆ ಗವಿ ಮೆರೆದುದು (ಕುಪಾಕು. ೪-೦೯೪). **ಬೋಡುಬಾಯ್ :** ನೆರೆದಲೆಗೆ ಮಸಿದೊಡೆದು ತೆರೆಗೊಂಡೊಡಲನು ಕತ್ತಲೆಯ ಮಱೆಗೆಯ್ದು ಬೋಡು[ಪಾಠಾಂ. ಬೊಗಡು]ಬಾಯಿಂದಲೂಳುತ್ತ . . . ಹಣ್ಣು ಮುದುಕಿ ಸೂಳೆಯುರೆಸವರು (ಕಬ್ಬ. ೧೦-೭೬). **ಬೋಡುಬಾಯಿ :** ಒತ್ತುಗಲ್ಲವ ಬೋಡುಬಾಯಿಗಳ ನೆತ್ತಿ ತರಟಿನ ಸೂಳೆಯರು ಮನವರ್ತಿಯಲಿ ತಿರುಗಿದರು ಶತವೃದ್ಧ ರಸಮೇಳದೊಳು (ಕೊಕ್ಕಾಕ. ೨೦೯).

[ಬೋಡು + ಬಾಯ್]

**ಬೋಣಿ₁** (ನಾ). ಚೆಲುವು ; ಸೌಂದರ್ಯ : 'ಚಿಗುರುಬೋಣಿ' ಪರಾ. [ ← ತೆಲು. ಪೋಡಿ, ಪೋಣಿ]

**ಬೋಣಿ₂** (ನಾ). (ವ್ಯಾಪಾರಿಯು **ಮಾಡುವ**) ದಿನದ ಮೊದಲನೆಯ ನಗದುವ್ಯಾಪಾರ, — **ರೋಖುವ್ಯಾಪಾರ :** ನಮ್ಮ ಸಮರಕೆ ಖಾದುಮೇ ಬೋಣಿ **ಕೊಂಬೆವು** ಭಟರ **ತಲೆ ಕೇಣಿ** (ಕೃಕಪಾಟ. ೬-೩೬); ಆ ಬಕಪಕ್ಷೀಗೆ ನಮ್ಮ **ಬೋಣಿ** ಆಗ್ಲಿ (ಬದುಕ್ಕಿ. ೪೨).

**ಬೋಣಿ ಮಾಡು** = ನಗದಾಗಿ ಮೊದಲನೆಯ ವ್ಯಾಪಾರ **ಮಾಡು :** ಬೋಣಿಮಾಡೀ ತಾಯಿ (ವೃದ್ಧಪ. ೦೨೪) ; **ಕೊಸರಾಡದೆ** ಬೋಣಿ **ಮಾಡಿ** (ನಡಾ. II, ೯೩೨). **ಬೋಣಿಯಾಗು** = ನಗದಾಗಿ ಮೊದಲನೆಯ ವ್ಯಾಪಾರವಾಗು : ಬೋಣಿಯಾಗದೆ ಕಡ ಕೊಡುವುದು **ಹ್ಯಾಗೆ** (ವಾಗ್ಮೀಪ. ೦೬೩); ಮಾಣಿ ಬೋಣಿಯಾಗಲಿಲ್ಲವೆಂದು ತಕರಾರು ಮಾಡಿದ್ದ ರಿಂದ ಹೋಟಲಲ್ಲಿ ಜಗಳ **ಕಾಯಬೇಕಾ**ಯಿತು (ಹೊಸಕ್ಷ. ೪೮).

[← ಮರಾ. ಬೋಣಿ, ಬೋಹಣಿ. ಬೋಹನೀ; **ಹಿಂ.** ಬೋಹನೀ. **ತಮಿ.** ಪೋಣಿ ; ತುಳು. ಬೋಣಿ, ಬೋನಿ; **ತೆಲು.** ಬೋಣಿ]

**ಬೋದ₁** (ನಾ). ಉಬ್ಬಿರುವುದು ; ಊದಿರುವುದು ; **ಬಾತಿರುವುದು.**

**ಬೋದಬೋಟೆಯಾಗು** = ಉಬ್ಬು ; ಉಬ್ಬರಿಸಿಕೊಳ್ಳು ; ಊದಿ ಕೊಳ್ಳು : ಹೊಟ್ಟೆಯುಬ್ಬರಿಸುವುದೇ ವಿಷ್ಕಂಭವೆನಿಸಿಕೊಳ್ಳುವುದು. ದಿನದಿನವಲ್ಲಿಯೂ ಬೋದಬೋಟೆಯಾಗಿ ಹೊಟ್ಟೆಹೋಗುತ್ತ ಇರುವುದೇ ವಿಷ್ಕಂಭವೆನಿಸಿಕೊಂಬುದು (ಸಕವೈ. ೩೩೮).

[ದೇ.॥ ತಮಿ. ಪೋನ್ತು ; ತುಳು. ಬೋದೆ ; ಬೋಂದೆ = ಸ್ಥೂಲ ಕಾಯದ ವ್ಯಕ್ತಿ ; **ತೆಲು.** ಬೋದ, ಬೋದೆ]

**ಬೋದ₂** (ನಾ). ಒಂದು ಬಗೆಯ ಹಕ್ಕಿ : "ಬಕೋಟಃ —ಬೆಳ್ಳಕ್ಕಿ, ಬೋದನ ಹಕ್ಕಿ" (ಒಶಂ. ೦೦೩).

[ ದೇ.॥ **ತಮಿ.** ಪೋತಾ ; **ತೆಲು.** ಬೋದ = ಹಕ್ಕಿಯ ಮರಿ]

**ಬೋದ₃** (ನಾ). ೧. ತಿಳಿವಳಿಕೆ **ಕೊಡುವುದು** ; **ಉಪದೇಶ ; ಬೋಧನೆ :** ತಡೆಯದೆ ಮುಂಕಿರಿದ ಶಿರಂ ಜಡೆಗಟ್ಟಲ್ಬಾರದೆಂದು ಬೋಟಿಸಿ ಬೋದಂ ಕುಡೆ ಕೊಂಡನವಂ ತಪಮಂ ಗೆಡೆಗೊಂಡಿರೆ

ದಂಡು ಬೂದಿ ಸೊರೆ ರುದ್ರಾಕ್ಷಂ (ಕಬ್ಬಿ.ಕಾ. ೧೨೦ ವ್ಯಾ.). ೨. (?) : ಬೋದಂ ಮೋದಗೆಗೊಂಡುದೆಂಬ ನಗೆಯುಂ ನೀಂ ಮಾಡದಿರ್ ಜೀವನೇ (ಜೀತಸಂ. ೧೬೦-೦೪). [ < ಸಂ. ಬೋಧ ]

**ಬೋದಡೆ** 'ಬೊವಡೆ' ನೋ.

**ಬೋದಣಿಗೆ** (ನಾ). (?) : ಮೊದಲೊಳ್ ತಂಬೆಲರ್ಗಾನೆ ಬೋದಣಿಗೆಗಂಪಂ ಬೀಱಿದಂ ಸುಗ್ಗಿ ಬರ್ಪುದನೀ ನಂದನಕಾನೆ ಮುಂದುದೆಗೆದಂ (ಜಗಪ. ೦೪-೬೭). [ ? ]

**ಬೋದನ** (ನಾ). ಒಂದು ಊರಿನ ಹೆಸರು ; P ಪಂಪನಿಗೆ ಆಶ್ರಯದಾತನಾಗಿದ್ದ ಅರಿಕೇಸರಿಯ ರಾಜಧಾನಿ. ಈಗಿನ ಆಂಧ್ರಪ್ರದೇಶ ಕರೀಂನಗರ ತಾಲ್ಲೂಕಿನ ಬೋಧನ: ಅಂತಾ ನೃಪತಿ ನಿಚ್ಚಲಯ್ಯೂಬಾನೆಯುನವಗಾಹವಿುರಿಸುವಂ ಬೋದನದೊಳ್ (ಶಂಕರಾ. ೦-೦೭) ; ಬೋದನ ೭೦೦ಱಱ ಬಳಿಯ ಕಂಪಣ ೨೪ಱ ಮೊದಲ ಬಾಡ (ಶಾಂದೇಶ್. ೦೬-೯ ; 1115). [?./ P ಮಹಾಭಾರತದಲ್ಲಿ ಬರುವ 'ಪೌದನ' ಎಂಬ ನಗರದ ಹೆಸರಿನ ಸಾಮ್ಯವಿರುವುದು ಪರಿಶೀಲನಾರ್ಹವಾದುದು]

**ಬೋದಯ್ಯ** (ನಾ). ಒಬ್ಬಾತನ ಹೆಸರು : ಶ್ರೀಮತು ಬೋದಯ್ಯ ಗಣ್ಣಗೋವ ಪುಱವರ ಕೂಲ (ಎಕ. VIII, ಸೊರಬ. ೪೦೩-೬ ; 986).

[ ಬೋದ? + ಅಯ್ಯ$_{31}$ ]

**ಬೋದಿಗೆ**, ಬೋದು$_1$, **ಬೋದುಗೆ** (ನಾ). ಕಂಬದ ಮೇಲೆ ತೊಲೆಯನ್ನು ನಿಲ್ಲಿಸಲು ಅನುಕೂಲವಾಗುವಂತೆ (ಮರದಿಂದ ಅಥವಾ ಕಲ್ಲಿನಿಂದ) ಸಿದ್ಧಪಡಿಸಿದ ಸಾಧನ : ಪವಳದ ಜಂತೆಯೊಳಂ ಪದ್ಮರಾಗದ ಬೋದಿಗೆಯೊಳಂ . . . ಒಪ್ಪುವ ವಿವಾಹಗೇಹಮಂ ಸಮೆಯಿಸಿ (ಹಂಪಾ. ೩-೭೯ ವ) ; ಕಿಸುಗಲ್ಲ ಬೋದಿಗೆ ನವಮರಕತರತ್ನತೋರಣಂ ಪ್ರಾಕಾರಂ (ಸುಕುಮಾ. ೦೦-೪೫) ; ಚಂದ್ರಕಾಂತದ ಬೋದಿಗೆಗಳಿಂ ಇಂದ್ರನೀಲದ ನಾಗವಟ್ಟಿಗೆಯಿಂ. . .ಮಾಣಿಕದ ಪ್ರತಿಮೆಗಳಿಂದೊಪ್ಪುವ ಕೃತ್ರಿಮ ಚೈತ್ಯಾಲಯಂಗಳಂ ಕಣ್ಣಾಣಿವಿನಂ ನೋಡುತ್ತುಂ (ರಹರ್ಷ. ೨-೦೯೫). **ಬೋದು$_1$**: ರತ್ನರಾಜಿಯ ಕೆಲಸದಿಂದ ರಾಜಿಪ ಕಂಬ ಬೋದು ತೊಲೆ ಪಲಗೆ ಸೂಸಕ ಲೋವೆಯಿಂದೊಪ್ಪೆ (ತ್ರಿಶರಾ. ೦೯-೩೨) ; ವಜ್ರದ ಬೋದು ರನ್ನದೊಲೆ ಕಟ್ಟಿಮನೀಲದ ಕೋಟಿಪಚ್ಚೆಯ ಪಜ್ಜಳಿಪಿಂದುಕಾಂತ ಫಲಕಂ (ಶ್ರಕೃ. ೦-೬೬). **ಬೋದುಗೆ** : ಇಂದ್ರನೀಲದ ಕಂಭ ವಜ್ರದ ಬೋದುಗೆ ಇಂದುಕಾಂತದ ಭಿತ್ತಿಯೊಳೆ . . . ಸುಂದರವಡೆಯ ಚಪ್ಪರವು (ಜೀಶಂಸಾಂ. ೦೭-೦೯) ; ಲಲಿತಪಚ್ಚೆಗಳ ತೊಲೆ ರನ್ನ ಬೋದುಗೆಗಳ ಪ್ರವಾಳಗಳಿಂದೆ ಮೇಲೆಸೆವ ಜಂತೆಗಳ್ . . . ಪೊಂಗದಂಗಳಿಂ ಪೇಳಲಚ್ಚರಿಯಾದುದರಮನೆ (ತರಪು. ೫-೯೯). [ದೇ.॥ ತಮಿ. ಪೋತಿಕೈ ; ಮಲ. ಪೋತಿಕ ; ತುಳು. ಬೋದಿಗೆ ; ತೆಲು. ಬೋದಿಯ, ಬೋದೆ]

**ಬೋದು$_1$** 'ಬೋದಿಗೆ' ನೋ.

**ಬೋದು$_2$** 'ಪೋದೆ' ನೋ.

**ಬೋದು$_3$**, ಬೋದೆ (ನಾ). ಒಂದು ಬಗೆಯ ಅಪ್ರಯೋಜಕವಾದ ಹುಲ್ಲು : ಬೋದು ಬೆಳೆದ ಹೊಲ ಹಾದೀಲಿದ್ದರೇನು, ಬೀದೀಲಿದ್ದರೇನು? (ಗಾದೆ). **ಬೋದೆ** : 'ಬೋದೆಸರ' ಪರಾ. [ ? ]

**ಬೋದುಗೆ** 'ಬೋದಿಗೆ' ನೋ.

**ಬೋದೆ** 'ಬೋದು$_3$' ನೋ.

**ಬೋದೆಸರ** (ನಾ). ಒಂದು ಬಗೆಯ ಹುಲ್ಲು : ಅಂಟುಕಾಮಿನಿಗಿಡ, ಬೋದೆಸರ (ಪ್ರಶಿಗ. ೬೨-೦೯೬೦). [ ← ತೆಲು. ಬೋದಸರ, ಬೊಡ್ಡಸರ ]

**ಬೋಧ** (ನಾ). ೧. ಕಲಿಸುವಿಕೆ ; ಬೋಧಿಸುವಿಕೆ. ೨. ಎಚ್ಚರ : ಸ್ಮೃತಿ : ಮುದುಕನನ್ನು ಸ್ವಲ್ಪ ತಂಪು ಮಾಡಿರಿ. ಅಂದರೆ ಬೋಧ ಬರುತ್ತದೆ (ತರಾಕ. ೦೫೩) ; ರಾತ್ರಿಯಾಗುವಾಗ ಮತ್ತೆ ಬೋಧ ತಪ್ಪಿತು (ರಂಕರ. ೦೨೯). ೩. ಅರಿವು ; ಜ್ಞಾನ ; ತಿಳಿವಳಿಕೆ : ಸರ್ವಾರ್ಥಸಿದ್ಧಿಯೊಳ್ ತೊಡರ್ದು ಬೋಧಂ ಭವ್ಯಸಂಸೇವ್ಯಮಾಯ್ತು (ಶಕ್ತಪು. ೦-೨೯); ಭರದಿಂದ ದೇಶಾವಧಿ ಬೋಧ ಪುಟ್ಟಿತು ಭರತೇಶ್ವರನ ಪುಣ್ಯಕಣಿಯ (ಗೊಮಟಚೆ. ೦೩-೨೯). ೪. ವಿಚಾರ ; ಆಲೋಚನೆ. ೫. ಅರಳುವಿಕೆ ; ವಿಕಾಸ. ೬. [ಕಾವ್ಯಮಿ] ಸಂಚಾರಿಭಾವಗಳಲ್ಲಿ ಒಂದು : ಮತಿ ಲಜ್ಜೆ . . . ಬೋಧ . . . ಅಪಸ್ಮಾರಗಳೆಂಬ ಮೂವತ್ತುಮೂಱು ಸಂಚಾರೀಭಾವಗಳಂ ಪರಿವರ್ಧಿಸಿ (ಶಿವತ. ೨೨೭). ೭. [ಛಂದ] ಒಂದು ಗಣದ ಹೆಸರು : ಮೂರು ಗುರು (— — —)ಇರುವ ಗಣ; ಮಗಣ: ಗುರುವೆರಡಾಗಿರೆ ದರ್ಶನ ಮೂಱಾಗಲ್ ಬೋಧ ನಾಲ್ಕುಮಾಗಲು ಚರಿತಂ (ಛಂದಶಾ. ೫-೦೦.) [ಸಂ.]

**ಬೋಧಕ** (ನಾ). ಕಲಿಸುವವನು ; ತಿಳಿವಳಿಕೆಯನ್ನು ನೀಡುವವನು ; ಶಿಕ್ಷಕ : ಮೊದ್ದ ಸಂಗಕೆ ಸಲ್ಲ ಸದ್ದು ಧ್ಯಾನಕೆ ಸಲ್ಲ ಜಿದ್ದು ಬೋಧಕನಿಗೆ ಸಲ್ಲ (ಇಂಶಾಕ. ೦೭೦-೪೩). [ಸಂ.]

**ಬೋಧದೃಷ್ಟಿ** (ನಾ). ಜ್ಞಾನದೃಷ್ಟಿ : ಜಗವೆಲ್ಲಂ ನಿಜ ಬೋಧದೃಷ್ಟಿಯೊಳೆ ಕಾಣಲ್ ಬಂದುದು (ಜಗಪ. ೦-೬೩). [ಸಂ.]

**ಬೋಧನೆ**(ನಾ). ೧. ಕಲಿಸುವುದು : ಹೇಳಿ ಕೊಡುವುದು : ಆ ಹಿರಿಯರ ಬೋಧನೆ ಮಕ್ಕಳ ಮೇಲೆ ಒಳ್ಳೆಯ ಪರಿಣಾಮ ಬೀರಿತು (ರೂಢಿ). ೨. (ಆಲಂ) ದುಷ್ಕಾರ್ಯಕ್ಕೆ ಚಿತಾವಣೆ ಮಾಡುವಿಕೆ : ಕೆಟ್ಟ ಕೆಲಸವನ್ನು ಮಾಡುವಂತೆ ಪ್ರೇರಿಸುವಿಕೆ : ಆ ದುಷ್ಟನ ಬೋಧನೆಯಿಂದ ಅರಿಯದ ಹುಡುಗರು ದುರ್ಮಾರ್ಗಕ್ಕೆ ಇಳಿದರು (ರೂಢಿ). [ಸಂ. ಬೋಧನ]

**ಬೋಧಾಳ** (ನಾ). (ಕರಾ) ಏನೂ ತಿಳಿಯದವನು ; ಮುಗ್ಧ : ಪ್ರಾಯದಲ್ಲಿ ಹಿರಿಯನು ; ಮಕ್ಕಳಂತೆ ಬೋಧಾಳನು (ಕೋದಂಡ. ೪೫); ಒಬ್ಬ ಮಗನಿದ್ದಾನೆ ಅವನಿಗೆ— ಬೋಧಾಳ ಶಂಕರ (ಕಂಬಹು. ೨೫).

[ ಬೋಧ + ಹಾಳು (< ಪಾೞ್)+ –ಅ$_7$ ]

**ಬೋಧಾಳು** (ನಾ). ಬುದ್ಧಿವಂತ : ನಾಡೆ ಮತ್ಸ್ವಾಮಿ ನಿನ್ನೊಳತಿಪ್ರೇಮ ಮನಪ್ಪುಕೆಯ್ವನದಱಿಂದಾನುಮ್ಮೆನಾ [ತಾಣಕೀ]ಗಳೆನುತ್ತುಂ ನುಡಿದಂ ಮನಂಬುಗುವಿನಂ ಬೋಧಾಳು ಮೇಧಾವಿಳಂ (ಸುಕುಮಾ. ೦೫-೭೭).

[ ಸಂ. ಬೋಧಾಲು]

**ಬೋಧಿ** (ನಾ). ೧. ಶ್ರೇಷ್ಠವಾದ ಅರಿವು ; ದಿವ್ಯಜ್ಞಾನ : ಉತ್ತಮದೀಕ್ಷಾವಿಧಿಯುಂ ಸಮಾಧಿಮರಣಂ ಕರ್ಮಕ್ಷಯಂ ಬೋಧಿಲಾಭಮಮೋಘಂ ದೊರೆಕೊಳ್ವುದಕ್ಕೆಮಗೆ (ಆದಿಪು. ೦೦-೬೦) ; ತಪದೊಳ್ ತನುವಂ ನಿಱಿಸಲರಿದೆನಿಸುವಱಿಕಮೆ ಪೆಱತಲ್ಲದುಮಲ್ತೆ ತಾನೆ ಬೋಧಿಯುಮು [ಶಾಶಾಂ. ಮೆಯು]ಕ್ಕುಂ (ಆಶಕೃ. ೬-೬೦) ; ದೀಕ್ಷೆಗೆ ಸುತಪಂ ಫಲಮೆನೆ ನೆಗಟ್ದುದದೆ ಬೋಧಿ ಫಲಂ (ಪುಶ್ಯಕ. ೦೩-೩೯). ೨. ಗೌತಮಬುದ್ಧನಿಗೆ ಉಂಟಾದ ಜ್ಞಾನೋದಯ : ಸಿದ್ಧಾರ್ಥನು ಬೋಧಿಯನ್ನು ಸಾಕ್ಷಾತ್ಕಾರ ಮಾಡಿಕೊಂಡು . . . ರಾಜಗೃಹಕ್ಕೆ ಬಂದನು (ಹಕ್ರುಕು. ೬೯) ; ಬೋಧಿಯನ್ನು ಪಡೆದ ಬುದ್ಧನ ಕಣ್ಣಿಗೆ ಮನುಷ್ಯಜೀವಿತವೂ ಮನೋಹರವಾಗೇ ಕಂಡಿತು (ಗೌಂದಗ. ೦೨೦) ; ಬೋಧಿಯಾದ ನಂತರ ಸಿದ್ಧಾರ್ಥನು ವೃಕ್ಷದಡಿಯಲ್ಲಿ ಏಳುದಿವಸ ಚಲಿಸದೆ ಕುಳಿತಿದ್ದನು (ಶ್ರವಾಇ. 1, ೨೩೫). ೩. ಒಂದು ಬಗೆಯ ಮರ ; ಅರಳಿ ; ಅಶ್ವತ್ಥ ; P ಈಗಿನ ಪಾಟ್ನಾನಗರದ ಬಳಿಯಿರುವ 'ಬುದ್ಧಗಯಾ' ಎಂಬಲ್ಲಿರುವ ವೃಕ್ಷ. ಗೌತಮಬುದ್ಧನು ಇದರ ಕೆಳಗೆ ಜ್ಞಾನೋದಯವನ್ನು ಪಡೆದನೆಂಬ ನಂಬಿಕೆಯಿದೆ : ''ಶ್ರೀವೃಕ್ಷಃ, ಪಿಪ್ಪಲಃ, ಅಶ್ವತ್ಥಃ, ಬೋಧಿಃ — ಈ ೪ ಅರಳಿ'' (ಹಲಾಯು. ೩೩-೪೩) ; ಸಿದ್ಧಾರ್ಥನು ಈ ಮರದಡಿಯಲ್ಲಿ ತಪಸ್ಸು ಮಾಡಿಯಲ್ಲವೇ ಬುದ್ಧನಾದದ್ದು ? ಮರಕ್ಕೂ ಬೋಧಿಯೆಂಬ ಹೆಸರು ಬಂದದ್ದು ? (ಶಾಸಗ. ೪೨). 'ಬೋಧಿವೃಕ್ಷ' ಪರಾ. [ಸಂ.]

**ಬೋಧಿದುರ್ಲಭಾನುಪ್ರೇಕ್ಷೆ** (ನಾ). [ಜೈನ] ಹನ್ನೆರಡು ಬಗೆಯ ಅನುಪ್ರೇಕ್ಷೆಗಳಲ್ಲಿ ಒಂದು : ದುರ್ಲಭಬೋಧಿಯನಱಿದು ದೃಢಧರ್ಮ ರಾಗಲವೇೞ್ಕುಮೆಂಬ **ಚಿಂತೆ** ಬೋಧಿದುರ್ಲಭಾನುಪ್ರೇಕ್ಷೆ (ಧ್ಯಾಕಳಿ. ೧೯೬-೦೬). 'ದ್ವಾದಶಾನುಪ್ರೇಕ್ಷೆ' ಪರಾ.

[ಸಂ. ಬೋಧಿದುರ್ಲಭಾನುಪ್ರೇಕ್ಷಾ]

**ಬೋಧಿವೃಕ್ಷ** (ನಾ). = ಬೋಧಿ ೩ : ರಾಜನು. . .ಬೋಧಿವೃಕ್ಷದ ಬಳಿಗೆ ಆಗಾಗ ಹೋಗಿ ಅಲ್ಲಿ ತನ್ನ ತಪ್ಪಿಗಾಗಿ ಪರಿತಾಪ ಪಡುತ್ತಿದ್ದ (ಶ್ರವಾ೩. I. ೦೬೬). [ಸಂ.]

**ಬೋಧಿಸತ್ತ್ವ** (ನಾ). ೧. ಬುದ್ಧ. ೨. [ಬೌದ್ಧ] ''ಅರ್ಹತನು ನಡೆಸ ಬೇಕಾದ ಶೀಲಗಳನ್ನು ಕಾಪಾಡಿಕೊಂಡು, ಮುಂದಿನ ಜನ್ಮಗಳಲ್ಲಿ ಬುದ್ಧನಾಗುವ ಯೋಗ್ಯತೆಯನ್ನು ಸಂಪಾದಿಸಿ, ಬುದ್ಧನಾಗುವ ಸತ್ತ್ವವುಳ್ಳವನು'' (ಬುದ್ಧಕ. ಕೋಶ. ೨೦೯) : ಆ ಸಮಯದಲ್ಲಿ ಬೋಧಿ ಸತ್ತ್ವನು ಅವನಿಗೆ ಧರ್ಮ ಅರ್ಥಗಳನ್ನು ಬೋಧಿಸುತ್ತಿದ್ದನು (ಬುದ್ಧಕ. ೩೩); ಅರ್ಹತರಾಗುವುದು ಎಲ್ಲರಿಗೂ ಸುಲಭವಲ್ಲ. ಆದರೆ ಬೋಧಿಸತ್ತ್ವ ನಾಗುವುದು ಎಲ್ಲರಿಗೂ ಸುಲಭ. ಬೋಧಿಸತ್ತ್ವನಾಗಿ ಲೋಕದ ದುಃಖ ವನ್ನು ತಾನು ಪರಿಹರಿಸುವುದಕ್ಕೆ ಎಲ್ಲರೂ ಯತ್ನಿಸಬಹುದು (ಶಾರದ. ೨೦೫).

[ಸಂ.]

**ಬೋಧಿಸತ್ವ** (ನಾ). = ಬೋಧಿಸತ್ತ್ವ ೨ : ಚೈತ್ಯಗಳಲ್ಲಿ ಸೊಗಸಾದ ಬುದ್ಧನ ಮತ್ತು ಬೋಧಿಸತ್ವನ ಪ್ರತಿಮೆಗಳಿವೆ (ಶಾರದ. ೯೯೬) : ರಥದ ನಾಲ್ಕು ಕಡೆಯೂ ನಾಲ್ಕು ಗೂಡುಗಳನ್ನು ಮಾಡಿ ಅವುಗಳಲ್ಲಿ ಬೋಧಿಸತ್ವ ನಿಂದ ಸೇವೆಯನ್ನು ಕೈಗೊಳ್ಳುತ್ತಾ ಕುಳಿತಿರುವಂತಹ ಬುದ್ಧನ ವಿಗ್ರಹ ಗಳನ್ನು ಇಡುತ್ತಾರೆ (ಶ್ರವಾ೩. I. ೦೬೨).

[ <ಸಂ. ಬೋಧಿಸತ್ತ್ವ. / ಪಾಲಿ. ಪ್ರಾ. ಬೋಧಿಸತ್ತ]

**ಬೋಧಿಸು** (ಕ್ರಿ). ಕಲಿಸು ; ಹೇಳಿಕೊಡು : ಸರ್ವಗುಪ್ತಮುನಿಗಳಂ ಕಂಡು . . . ಸಂಸಾರಶರೀರಭೋಗನಿರ್ವೇಗಮಂ ಬೋಧಿಸೆ (ಶಾಂತಿಪು. ೯-೬೩ ವ) ; ಸನ್ಮಾರ್ಗದಿಂ ಸಲ್ವ ಸಾಧುಗಳೆಮ್ಮಂ ದಯೆಯಿಂದೆ ಬೋಧಿಸು ತಮಿರ್ಕೆಂಮುಂ ಜಿನೇಂದ್ರೋಕ್ತಿಯುಂ (ಸುಕುಮಾ. ೦-೫) ; ಹಡೆದುಂಬ ಸೂಳೆಯಂತೆ ಧನವುಳ್ಳವರನಱಸಿಯಱಸಿ ಬೋಧಿಸಲು ಮುನ್ನ ನಾನಱಿಯೆನಯ್ಯಾ (ಬಸವ. ೯೦೨). [ಬೋಧೆ + —ಇಸು$_3$]

**ಬೋಧೆ** (ನಾ). ೧. ತಿಳಿಯುವಿಕೆ; ಅರಿಯುವಿಕೆ. ೨. ಜ್ಞಾನ ; ಅರಿವು ; ತಿಳಿವು : ನಿಷ್ಠುರಗಾದಿಯೊಳಗಿಹರಿಂಗೆ ಪೇಳದಿರಾದಿಗಗನಾನಂದ ಬೋಧೆಯಿದ (ಗಗನಾ. ೩-೨). ೩. ಬುದ್ಧಿ ; ತಿಳಿವಳಿಕೆ. ೪. ಆಲೋಚನೆ. ೫. ಅರಳುವಿಕೆ ; ವಿಕಸನ. ೬. ಎಚ್ಚರ ; ಸ್ಮೃತಿ ; ಜಾಗೃತಿ : ಸಂಕಣ್ಣನಿಗೆ . . . ಒಂದೆರಡು ದಿನಗಳಲ್ಲಿ ಜ್ವರ ಬರತೊಡಗಿತು. ಬೋಧೆಯೇ ಇಲ್ಲವೆನ್ನುವಷ್ಟು ಜ್ವರ (ಯುಮುದೂ. ೮೦). ೭. ಚೈತನ್ಯ. ೮. ಕಲಿಸುವಿಕೆ ; ಶಿಕ್ಷಣ ; ಬೋಧನೆ : 'ಬೋಧಿಸು' ಪರಾ.

[ಸಂ. ಬೋಧ]

**ಬೋನ$_1$**, ಬೋಹಣ (ನಾ). ೧. ಅನ್ನ ; ಆಹಾರ : ಪೊನ್ನ ಮಡಕೆ ಯೊಳ್ ಬೋನಮನೊಡ್ಡಿ (ವಡ್ಡಾರಾ. ೬೯-೧೩) ; ಎತ್ತಿದ ಬೋನದೊಳ್ ಕಲ್ಯಾಣಾಮೃತಾಹಾರಮನಾರೋಗಿಸಿ (ಚಂಪಕಾ. ೩-೬೯ ವ) ; ನಿನ್ನ ಪಾೞಿಯೊಡಲ ನೆತ್ತರ್ ಪಿರಿತಿನಿಪಡೆಗೆ ಪಗಲ ಬೋನದೊಂದು ಕಟಕ್ಕಂ (ರಾಜಶೇ. ೮೬-೨೦). ೨. ಅಡುಗೆ ಮಾಡುವಿಕೆ : 'ಬೋನಗಾಱ' ಪರಾ. ೩. ನೈವೇದ್ಯ ; ಎಡೆ : ಉಂಬ ಜಂಗಮ ಬಂದಡೆ ನಡೆಯೆಂಬರು ಉಣ್ಣದ ಲಿಂಗಕ್ಕೆ ಬೋನವ ಹಿಡಿಯೆಂಬರಯ್ಯ (ಬಸವ. ೦೯೪); ವೇಲಾಪುರಿಯ ಶ್ರೀಚೆಂನೆಯನ ಬೋನದ ಅವಸರದ ಹರಿವಾಣದ ನಯಿವೇದ್ಯಕೆ (ವ್ಯಾಕಂ. ೦೯೩೪. ೯-೮; 1432). ೪. ಪಿಂಡ್ಗೆ ; ಮುದ್ದೆ : ಅನ್ನ ಬೇಂದದ್ದು ಹೆಚ್ಚಾಗಿ ಬೋನವಾಗಿದೆ (ಮರಕು. ೨೨). ೫. ರಾಶಿ ; ಸಮೂಹ : ಸಣ್ಣಸೇವಗೆಯು ಮೆದೆ ಎರೆಯಪ್ಪದಡಕಿಲಿಡ್ಡಲಿಗೆಗಳ ಬೋನ ದೋಸೆಯು ಲಗ್ಗೆ (ಜನ್ನ. ೬-೫೫). ೬. (ಚೆನ್ನಾಗಿ ನಾದ ಕೊಡುವುದಕ್ಕಾಗಿ) ತಬಲ ಅಥವಾ ಮದ್ದಳೆಯ ಚರ್ಮದ ಮೇಲೆ ದುಂಡಾಗಿ ಬಳಿಯುವ ಸರಿ : ಎರಡು ಕಡೆಗೂ ಚರ್ಮದ ಪೊರೆಗಳನ್ನು . . . ಬಿಗಿದು, ಎಡಕ್ಕೆ ಬೋನವನ್ನೂ, ಬಲಕ್ಕೆ ಕರಣೆಯನ್ನೂ ಹಾಕಿ ನುಡಿಸುತ್ತಾರೆ (ಸಂಗೀಚಾ. ೦೨೦) ; ಯಕ್ಷಗಾನದ ಮದ್ದಲೆಯು ಗಾತ್ರದಲ್ಲಿ ಇನ್ನೂ ಚಿಕ್ಕದು. ಇದರ ತೊಗಲಿಗೆ ನಿತ್ಯವೂ ನಿತ್ಯ 'ಬೋನ' ವನ್ನು ಹಚ್ಚಬೇಕು (ಯಕ್ಷಬ. ೦೦೦). **ಬೋಹಣ :** ೬. ಚಂದ್ರಮಂಡಳದ ಕಳಂಕಮನುದ್ದುವಂತೆ ಲೋಹ ಚಕ್ರದಿಂ ಪೞಿಯು ಬೋ[ಶಾಶಾಂ. ಬಾ]ಹಣಮನುದ್ದಿ ಭಾರತಿಯ ಮುಖಕಮಲದೊಳ್ ಕತ್ತುರಿಯ ಬೊಟ್ಟನಿಡುವಂತೆ ಪೊಸ ಬೋಹಣಮಂ ಪತ್ತಿಸಿ (ಧರ್ಮಾಕ. ೨-೨೩ ವ) ; ಮಣಿದೆತ್ತಿ ನೋಡಿ ಬಾರಿಯ ಕಣ್ಣನೆಡಕೆ ಬೋಹಣದ ಹದನಱಿದಿಕ್ಕಿ (ಶೀರಮ. ೧೦-೩೫). [<ಸಂ. ಭೋಜನ./ತಮಿ. ಪೋಣಮ್, ಪೋನಕಮ್; ತುಳು. ಬವನ, ಬೋನ : ತೆಲು. ಬೋನ./ ಮರಾ. ಬೋನ, ಬೋವಣ, ಬೋಹಣ]

**ಬೋನ$_2$** (ನಾ). ಅಡುಗೆ ಮಾಡಲು ಬಳಸುವ ಒಂದು ಬಗೆಯ ಪಾತ್ರೆ : (ಕ). 'ಬೋಸಿ' ಪರಾ. [ ? ]

**ಬೋನಂಗಾರೆ,** ಬೊನೆಗಾರೆ, ಬೋನಗಾರೆ (ನಾ). ಒಂದು ಬಗೆಯ ಕಾರೆಗಿಡ : ಲವಣಂ ಪಿಪ್ಪಲಿ ಬಜೆ ಸಾಸಿವೆ ಬವ(ಬೋ)ನಂಗಾರೆ ಶುಂಠಿ . . . ಎನಿಪ್ಪಿವಱಿಂದಂ ನಸ್ಯವನಶ್ವಾವಳಿಗೆ ಮಾಡಿ (ಲೋಕೋಪ. ೯-೨೨೮). **ಬೊನೆಗಾರೆ :** "ಮುಗ್ಗ, ಬೊನೆಗಾರೆ, ಬೂದುಕಾರೆ" (ಕನ್ನಪ. ೬೪) ; ಬೊನೆಗಾರೆ, ಬುಡುಕಾರೆ, ಮುಗ್ಗ (ವ್ಯಾಶಿಗಿ. ೩೯-೬೬೪). **ಬೋನಗಾರೆ :** ಉಪ್ಪು, ಹಿಪ್ಪಲಿ, ಬಜೆ, ಸಾಸಿವೆ, ಬೋನಗಾರೆಯ ಕಾಯ್, ಶುಂಠಿ. . . ಇವಂ ಚೂರ್ಣಮಂ ಮಾಡಿ . . . ಕಲಸಿ ನಸ್ಯಂ ಮಾಡುವುದು (ಲೋಕೋಪ. ೯-೨೨೮ ಟೀಕು) ; ಬೋನಗಾರೆಬೇರಂ ತುಪ್ಪದಿಂದ ಅರೆದು ನುಂಗಲು ಮುಟ್ಟುಕಟ್ಟು ಗುಣವಾಗುವುದು (ವಿವ್ಯಾ. ೦೦೬). [ಬೋನ$_0$+ಕಾರೆ$_1$]

**ಬೋನಗಾರ** 'ಬೋನಗಾಱ' ನೋ.

**ಬೋನಗಾರೆ** 'ಬೋನಂಗಾರೆ' ನೋ.

**ಬೋನಗಾಱ,** ಬೋನಗಾರ (ನಾ). ಅಡುಗೆ ಮಾಡುವವನು; ಬಾಣಸಿಗ : 'ಬೋನಗಾರ್ತಿ' ಪರಾ. **ಬೋನಗಾರ :** ದೇಸಾಯರ ಅಡಿಗೆಗಾಗಿ ಒಬ್ಬ ಬೋನಗಾರನೂ ಬಂದಿದ್ದಾನೆ (ಜನಪ. ೦೪೨).

[ಬೋನ$_1$+—ಕಾಱ]

**ಬೋನಗಾರ್ತಿ** (ನಾ). ಅಡುಗೆ ಮಾಡುವವಳು; ಬಾಣಸಗಿತ್ತಿ : ನಾನಾಭಕ್ಷ್ಯ ಭೋಜ್ಯಂಗಳಧಿಕವಾಗಿ ಬೋನಗಾರ್ತಿಯರ ಕೈಯಿಂದೆ ಭೂನಾಥಗುಣಬಡಿಸಿ (ಮೋಹತ. ೦೦-೪೯) ; ಮಾರುವದು ನಿನ್ನ ಬೋನಗಾರ್ತಿಯರಿಗೆ ಮಾರುವದು ನಿನ್ನ ನೀರ ಪೊತ್ತವರಿಗೆ (ಮೋಕ್ಷಮ. ೬೦-೬).

[ಬೋನಗಾಱ+—ತಿ$_1$ (<—ಇತ್ತಿ)]

**ಬೋನಗಿತ್ತಿ,** ಬಾನಗಿತ್ತಿ (ನಾ). = ಬೋನಗಾರ್ತಿ : ಭರದ ಜವ್ವನದತಿ ವಿಲಾಸದ ಬೋನಗಿತ್ತಿಯರು ಮರಕಟಾಕ್ಷದ್ಯುತಿಯ ಪಸರಿಸುತುರುಮದದಿ ಸಡ್ಯೋಘ್ರೃತಪನಭಿಗರಿಸುತಿರ್ದರು (ಸವತ್ಸ. ೦೪-೬) ; ಕೆತ್ತಿದ ರತ್ನಾಭರಣ ಭೂಷಿತ ಬೋನಗಿತ್ತಿಯರ್ಸರ್ವಾಂಗಿಗಳಿಗೆ ಅತ್ಯಧಿಕಾರದಿ ನೀನಿರ್ಪುದು (ಮೋಹತ. ೦೦-೪೨); ಅಷ್ಟರಲ್ಲಿ ಬೋನಗಿತ್ತಿ ಮಗೆಪಾಕ ಬಂಗಾರದ ಹರಿವಾಣವನ್ನು ಇಟ್ಟು ಸುತ್ತಲು ನಾಲ್ಕು ಬಂಗಾರದ ಬಟ್ಟಲುಗಳನ್ನು ಇಟ್ಟಳು (ಯುದುರಾ. ೦೯೪). **ಬಾನಗಿತ್ತಿ :** ಲಗ್ನ ಆದಾಗಿನಿಂದ ಬಾನಗಿತ್ತೀ ಹಾಂಗ ದುಡದು ದುಡದು ಸತ್ತೆ (ಬಾಂತಾಡು. ೫); ಭಲರೇ ಬಾನಗಿತ್ತಿ ಯೆಂದರೆ ಮೈಯೆಲ್ಲಾ ಮುಸಿಮಾಡಿಕೊಂಡಳು (ಗಾದೆ). [ಬೋನ$_1$+–ಗಿತ್ತಿ]

**ಬೋನಗುಡಿಕೆ** (ನಾ). ಆಹಾರವನ್ನು ತುಂಬಿದ ಪಾತ್ರೆ : ಬೋನ ಗುಡಿಕೆಗಳಾ ಮುದ್ರೆಯಿಕ್ಕಿದ ಚೀರಗಟ್ಟುಗಳ . . . ಹೊಱೆಯನು ಹೆಗಲೊಳಗಿಕ್ಕಿ ನಡೆವರೊಪ್ಪಿದರು (ಶ್ರೀಪಾಂ. ೦೩-೮೮) : ಮದನನೃಪಗೆಂದು ಸೇರಿಸಿ ಬಯ್ತ ಬೋನಗುಡಿಕೆಯು ತೆಱದಿ ಸಾಲ್ವಿಡಿದ ಪನಸತತಿ ಮೆಱೆದವು (ತೀರಥು. ೭-೦೦) ; ಮಾನಿನಿಯರುಗಾತನನುಜನ ಸತಿಯರ್ಗೆ ಬೋನಗುಡಿಕೆಗಳೆಯ್ದಿದುವು (ಶರತ. ೪೦-೨೩). [ಬೋನ$_1$+ಕುಡಿಕೆ$_1$]

**ಬೋನಗೋಂಟಿಗೆ** (ನಾ). ಅಡುಗೆಯ ಕೋಣೆ : ನೀಗುತ್ತಮಾಗಿಂದಣದ ಭಾರದೋಲಟ್ಟಿ ಸಾಗಿಸಿದ ಬೋನಗೋಂಟಿಗೆಗಾಗ ರಣದೇವಿಗಾಗುತಿಹ ಭಕ್ಷರಸರುಧಿರಸ್ಥಿಖಂಡಕಂ ತಲೆಗಳೊಲೆಗುಂಡುಗಳನು (ಜನಮು. ೦೨-೨೦). [ಬೋನ$_1$+<ಗೊಂಟು]

**ಬೋನವಿಡು** (ಕ್ರಿ). ಊಟವನ್ನು ಬಡಿಸು : ಪುಟ್ಟಂ ಸಟ್ಟುಗಮಂ ಕೊಂಡಟ್ಟಾಱಿಸಿ ಬೋನಮಿಟ್ಟು ಬಂದೆಯೊ (ಗದಾಯು. ೭-೩೬). [ಬೋನ$_1$+ಇಡು$_1$]

**ಬೋನವಟ್ಟಿಗೆ** (ನಾ). ಊಟಕ್ಕೆ ಕುಳಿತುಕೊಳ್ಳುವ ಮಣೆ,-ಪೀಠ (?): ಒಡನೆ ನಾಕೆರಡೆತ್ತು ಕುದುರೆಯು ಮಡಕೆ ಚರುವಿಗೆ ಬೋನವಟ್ಟಿಗೆ ನಿಡಿಯ ಹರಿವಾಣಗಳ (ಕೊರಾ್ನಕ. ೨೦೬). [ಬೋನ$_1$+ಪಟ್ಟಿಗೆ]

**ಬೋನವೆತ್ತು** (ಕ್ರಿ). ಆಹಾರವನ್ನು ಸಿದ್ಧಪಡಿಸು ; ಊಟವನ್ನು ಸಿದ್ಧಗೊಳಿಸು : ಮಡದಿಗೆ ಬೋನವೆತ್ತುವೆಡೆಯಾಡುವ ಬಡ್ಡಿಪ . . . ವೀಳೆಯಮಂ ತೆಗೆದೀವ ದಂದುಗಂ ತೊಡರೆ ಮನಂಗೊಳಲ್ ನೆರೆದರಿಂದ್ರ ಲತಾಂಗಿಯರನ್ನಮಾಸದೊಳ್ (ಪುತ್ತ್ರಕ. ೯-೬೭). [ಬೋನ$_1$+ಎತ್ತು$_1$]

**ಬೋನವೇಳಿಗೆ** (ನಾ). ಅಡುಗೆಮಾಡುವ ಪದಾರ್ಥಗಳು ತುಂಬಿರುವ ಬುಟ್ಟಿ : ಅನ್ನಗಂ ಭೀಮಸೇನನುಂ ಬೋನವೇಳಿಗೆಯುಂ ಸಟ್ಟುಗಮುಂ ಮನೊರ್ವ ಪರಿಚಾರಕನಿಂ ಪಿಡಿಯಿಸಿಕೊಂಡು ಬಂದು (ಪಂಪಭಾ. ೮-೫೩ ವ). [ಬೋನ$_1$+ಪೇಳಿಗೆ (<ಪೆಟ್ಟಿಗೆ)]

**ಬೋನಸ್ಸು** (ನಾ). ಸಾಮಾನ್ಯವಾಗಿ ಕೈಗಾರಿಕೋದ್ಯಮಗಳಲ್ಲಿ ಲಾಭದ ಗಳಿಕೆ ಹೆಚ್ಚಾದಾಗ ಕೆಲಸಗಾರರಿಗೂ ಶ್ರಮಜೀವಿಗಳಿಗೂ ವೇತನದ ಜೊತೆಗೆ ಉಚಿತವಾಗಿ ಕೊಡುವ ಲಾಭದ ಒಂದು ಭಾಗ,-ಅಂಶ : ಆತನು ಸತ್ತುಹೋಗಿದ್ದಲ್ಲಿ ಅಂಥಾ ಬೋನಸ್ಸಿಗೆ ಬಾಧ್ಯರೆಂದು ಆತನು ನೇಮಿಸಿದವರಿಗೆ . . . ಸಂದ ಯಾವುದಾದರೂ ಬೋನಸ್ ಮೊಬಲಗು (ಗ್ರಾಶಾಕ. ೩೬) ; ಮೂರು ತಿಂಗಳ ಬೋನಸ್ಸು ಸಿಗಲೇಬೇಕು (ಕೃಪಾಕ. ೦೪). [← ಇಂ. Bonus]

**ಬೋನಾಶಿ** 'ಬವನಾಶಿ' ನೋ.

**ಬೋನಾಸಿ** 'ಬವನಾಶಿ' ನೋ.

**ಬೋನಿಕ್ಕು** (ಕ್ರಿ). ಪ್ರಾಣಿಗಳನ್ನು ಹಿಡಿಯುವ ಸಾಧನವನ್ನು ಒಡ್ಡು : ಮಂಗ ಹೌದಲ್ಲ, ಒಡೆಯರೆ. ಮಂತ್ರಕ್ಕೆ ಬರದೇ ಇದ್ದರೆ ಬೋನಿಕ್ಕೋದು (ಶಶರಾ. ೩೬೮). [ಬೋನು+ಇಕ್ಕು]

**ಬೋನಿಗ** (ನಾ). ಪ್ರಾಣಿಗಳನ್ನು ಹಿಡಿಯುವ ಸಾಧನವನ್ನು ಒಡ್ಡುವವನು : ನೆಲೆಯುನಂಬಿಗ ಬಲ್ಲ ಬಲೆಯು ಬೋನಿಗ ಬಲ್ಲ (ಸರ್ವಜ್ಞ. ೦೯೦೨). [ಬೋನು +-ಇಗ]

**ಬೋನು** (ನಾ). ೧. ಪ್ರಾಣಿಗಳನ್ನು ಹಿಡಿದಿಡುವ ಸಾಧನ; ಪಂಜರ; ಗೂಡು : ಕಸ್ತೂರಿಮೃಗಂಗಳಂ ವಿಸ್ತಾರವಾಗಿ ಪಿಡಿದು ಬೋನುಗಳಂ ಕೂಡುತ (ಸೌಗಂಧಿ. ೩೩-೦೩); ಅನೇಕ ನಮೂನೆಯ ಇಲಿ ಹಿಡಿಯುವ ಬೋನುಗಳವೆ (ಅದುಸ. ೪೮). ೨. (ಆಲಂ) ಇತರರನ್ನು ಪೇಚಿಗೆ ಸಿಕ್ಕಿಸುವ ಉಪಾಯ : ತಾನು ಒಡ್ಡಿದ ಬೋನಿಗೆ ಸುನಂದ ಬಿದ್ದಿದ್ದಾಳೆ (ದೂಶಟ್ಟ. ೦೦೭).
[ದೇ.॥ ತಮಿ. ಪೋನ್; ತುಳು. ಬೋಣ, ಬೋನು; ತೆಲು. ಬೋನು]

**ಬೋಬಾಟ** 'ಬೋಭಾಟೆ' ನೋ.

**ಬೋಭಾಟೆ**, ಬೋಬಾಟ (ನಾ). ತಕರಾರು ; ಬೊಬ್ಬಾಟ : ಇನ್ನು ಮುಂದೆ ಇಂಥಾ ಪ್ರಕಾರದ ಬೋಭಾಟೆಗಳು ಬರಲಿಕ್ಕಿಲ್ಲವೆಂದು ನಾವು ಬಹಳ ಹವಣಿಸುತ್ತೇವೆ (ಮುಂಬವಾ. ೯೩). **ಬೋಬಾಟ :** ನಮ ಮನಿಗಿ ಬಂದ್ರ ಬೋಬಾಟ ಆಗುದು ತುರ್ತ (ಕವ್ವಜಾ. ೯೨). 'ಬೊಬ್ಬಾಟ'ಹೋ. [←ಮರಾ. ಬೋಭಾಟ, ಬೋಭಾಟಾ]

**ಬೋಯ**, ಬೋಯಿ, ಬೋವ, ಬೋವಿ$_1$, ಬೋವು$_1$ (ನಾ). ೧. (ಇತರರಿಗಾಗಿ ಅಡುಗೆ ಮಾಡುವುದು, ಸಾರಥ್ಯಮಾಡುವುದು ಇತ್ಯಾದಿ) ಸೇವೆ ಮಾಡುವವನು ; ಸೇವಕ ; ಪರಿಚಾರಕ : ಅಲ್ಲಿ ಬಸದಿಯ ಕಸಂಗೆ(ಗ)ಳೆವ ಬೋಯ[ಪ]ದ್ದಂಗೆ ಪಾಗವೊಂದು (ಎಇ. IX, ೨೬೩-೦೦೨; 1117). 'ಬಂಡಿ$_1$' ಪರಾ. ೨. ಬೆಸ್ತ ; ಮೀನುಗಾರ : ಬೆಸ್ತ, ಭಾದೆಲ, ಬೋಯ (ತುಳುಜಾ. ೦೬೩); ಬಲೆಯನ್ನು ಬೀಸಿ ಮೀನು ಹಿಡಿದರೆ "ಲೊ ಬೆಸ್ತ, ಲೊ ಬೋಯಿ" ಎಂದು ಅವನನ್ನು ಅವಮಾನ ಪಡಿಸುತ್ತಿದ್ದರು (ಹುಬ್ಬಹ. ೨೦). ೩. ಕೆಲವು ವ್ಯಕ್ತಿಗಳ ಹೆಸರಿನ ಕೊನೆಯಲ್ಲಿ ಸೇರುವ ಶಬ್ದ; **P** ಇದು ಸಂಸ್ಕೃತದ 'ಭೋಜಕ' ದಿಂದ ಬಂದಿದ್ದು, 'ಬ್ರಾಹ್ಮಣ' ಎಂಬ ಅರ್ಥವಿದೆಯೆಂದು ಕೆಲವು ವಿದ್ವಾಂಸರ ಅಭಿಪ್ರಾಯವಿದೆ. ತೆಲುಗಿನಲ್ಲಿ ಈ ಶಬ್ದಕ್ಕೆ 'ಬ್ರಾಹ್ಮಣ' ಎಂಬ ಅರ್ಥವಿದ್ದು, ಶಾಸನಗಳಲ್ಲಿ ಪ್ರಯೋಗವಾಗಿದೆ ಎಂಬ ಸೂಚನೆಯೂ ಇದೆ : ಸಿಂಗಬೋಯಂ ಮಾಡಿದ ಅಗ್ರುಂ ಒನ್ದು (ಕೆಇ. III-i, ೧-೭; ಸು. 1200). 'ಬೊಪ್ಪಬೋಯ', 'ಮಂದುಬೋಯ' ಪರಾ. ೪. ಕಲ್ಲುಕುಟುಕರ ಹೆಸರಿನ ಕೊನೆಯಲ್ಲಿ ಸೇರುವ ಶಬ್ದ : (೬). **ಬೋಯಿ :** ೫. ಪಲ್ಲಕ್ಕಿಯನ್ನು ಹೊರುವವನು : ಭರತಚಕ್ರಿಯ ಪೊತ್ತ ಬೋಯಿಗಳಿಗೆ ಸ್ವರ್ಗ (ಶರಶ. ೭೭-೦೩೩); ನಿಮಗೆ ಪಾಲ್ಕಿ, ಬೋಯಿಗಳನ್ನು ಕರೆಯಿಸಿ ಕೊಟ್ಟು ಕಳುಹುವೆನು (ದೇವೀಪ. ೧೩೭). **ಬೋವ :** ೧. ಲಂಚಮಿತ್ತುಂ ಪಿರಿದುಂಬರು ಬೆಸದ ಬೋವರಟ್ಟಡುಗೆಗಳಂ (ಸಮಶ. ಅಮುಖಂ. I, ೦೪-೨೪); ದೇವರಿಗೆ ಬಿಟ್ಟ[ಸೀಮೆ]ಸರ್ವ್ವಮಾನ್ಯವಾಗಿ ಬೋವಂಗೆ ಬಿಟ್ಟ ಮತ್ತ ೨ (ಸೌಇಇ. XX, ೬೭-೦೮; 1107) ೨. ಬೋವರ್ಕಳಿಂದಿವರ ಪಾದವ ಮುಱಿಸುವೆವೆಂದು ಆವೂರ ನೆರೆಹೊರೆಯ ಬಿಬ್ಬಿಲರನೊಡಗೂಡಿ. . . ಕಳುಹಿದ ರಥಮರು (ಸಿದ್ಧರಾ. ೩-೦೨). 'ಬಂಡಿ$_1$' ಪರಾ. **ಬೋವಿ$_1$ :** ೫. ಪಲ್ಲಕ್ಕಿ ಹೊರುವ ಉದ್ಯೋಗದಿಂದ ಬೋವಿ ಎಂಬುದಾಗಿಯೂ ಕರೆಯಲ್ಪಡುತ್ತಾರೆ (ತುಳುಜಾ. ೨೨೪): ಈ ಬಡ ಬೋವಿಗಳು ಬಿಟ್ಟಿಯ ಹಿಡಿದು ದಮ್ಮು ಹತ್ತುವಂತೆ ಓಡಿಸುತ್ತಿರಲು (ಶಾಪ್ಪುಕ. ೦೪೩). ೬. ಹರಿಗೋಲನ್ನು ನಡೆಸುವವನು; ಅಂಬಿಗ : ಹರುಗೋಲು ಹಾಕುವ ಬೋವಿಗಳಿಗೆ (ಎಕ. VIII, ತೀರ್ಥಹ. ೦೩೭-೨೦೦; 1702). **ಬೋವು$_1$ :** ೧. ತಿರುಮಂಗಡಿ ೧ ಮತ್ತಮಂಗಡಿಗಳೊಳ್ಪಣ ೧ . . . ಜಗತಿಯ ಬೋವುಗಳೊಳ್ಪಣ ೧ (ಇಇ. V. ೩೪೩-೩೨; 1093).
[ದೇ.॥ ತಮಿ. ಪೋಯಿ, ಪೋಕಿ; ಮಲ. ಬೋಯನ್; ತುಳು. ಬೋಯಿ, ಬೋವಿ; ತೆಲು. ಬೋಯಿ./ಮರಾ. ಭೋಈ]

**ಬೋಯಿ** 'ಬೋಯ' ನೋ.

**ಬೋಯಿಕೆ** (ನಾ). (ಸಾರಥ್ಯ ಮಾಡುವುದು ಮುಂತಾದ) ಸೇವೆ ಮಾಡುವಿಕೆ; ಪರಿಚಾರಿಕೆ. 'ಬಂಡಿ$_1$' ಪರಾ. [ಬೋಯ +-ಇಕೆ]

**ಬೋಯಿಗ** (ನಾ). ಒಬ್ಬಾತನ ಹೆಸರು : ಕೋಣೆಯ ಗಂಗನ ಮೊತ್ತಮೆಲ್ಲಮಂ ಬೆದಱುವಿನಂ ಕೆರಳ್ಚಿ ತ-ಟಲಾಳ್ಗಳನಿಕ್ಕಿ . . . ಅದಟ ನಳುಕ್ಕೆಯುಂ ಮೆಱೆದು ಸಾವುದು ಬೋಯಿಗನನ್ತಿಳಾಗ್ರದೊಳ್ (ಎಕ. II, ೦೩೮-೦೪ ; ಸು. ೨೪೦). [ ? ]

**ಬೋಯಿತಿ**, ಬೋವಿತಿ (ನಾ). ಅಂಬಿಗರ ಜಾತಿಗೆ ಸೇರಿದವಳು: ವ್ಯಾಸ ಬೋಯಿತಿಯ ಮಗ (ಬಸವ. ೫೯೦). **ಬೋವಿತಿ :** ಜನಿಸಿದನು ಬೋವಿತಿಯಲ್ಲಿಯಾ ವ್ಯಾಸನಾಮದಿಂದ (ಏಕೈಕು. ೩-೧೧-೩೪).
[ ಬೋಯ + –ಇತಿ$_1$ (< –ಇತ್ತಿ) ]

**ಬೋಯ್ಗವರ್ಮ್** (ನಾ). ಒಬ್ಬಾತನ ಹೆಸರು : ಶ್ರೀ ಮದಾಳು ವರ[ಸ]ರ್ ಬೋಯ್ಗವರ್ಮರ ನಾಟು ಮುದಿಮೆಯು[ಳ್] . . . ಸಂಕಮರ್ಧದಾಸ ಕಾದರ್ (ಎಇ. IX, ೩೦-೫; ೮೦೦).
[ಬೋಯ್ಗ ? + ವರ್ಮ$_1$ ]

**ಬೋರ್** (ಅ). ಒಂದು ಅನುಕರಣಾವ್ಯಯ : 'ಬೋರಾಡು' ಪರಾ.

**ಬೋರ$_1$** (ನಾ). ೧. ಮಾಸಲುಗೆಂಪು ಬಣ್ಣ : 'ಬೋರಗುದುರೆ' ಪರಾ. ೨. ಮಾಸಲುಗೆಂಪುಬಣ್ಣದ ಕುದುರೆ : " ತುರಗವರ್ಣಂ . . . ಬಿಳಿದುಮಾಗೊರೆದ ಕೆಂಪಿರೆ ಜನ್ನನದು ಮಾಸೆ ಬೋರನರುಣಂ ಮಾಸೆ ಚೀರನಕ್ಕುಂ " (ಮಂಗರಾ. ೯೦-೧೪) ; ತನ್ನಿ ಬೊಲ್ಲನ ಕೂಡೆ ಮಂಗಳನನಿರದೆ ಕೊಂಗನನಸಮನಂ ತನ್ನಿ ಬೋರನನಿರಿಸದಿರಿ ವಾಹಕರಿರ ನೀವು (ಬಸಪು. ೫೯–೪೦); ಸಮಸ್ತಶರೀರದ ರೋಮಂಗಳಲ್ಲಿಯೂ ಕೆಂಪುವರ್ಣವುಳ್ಳ ಶುಭ್ರ ರಕ್ತವರ್ಣಗಳು ಮಿಶ್ರವಾಗಿ ಮುಖದಲ್ಲಿ ಕಾಲು ಬಾಲಗಳಲ್ಲಿ ಕೆಂಪುವರ್ಣವುಳ್ಳ ಕುದುರೆಯು ಬೋರನೆಂದು ಪೇಳಲ್ಪಡುವುದು (ಶಾಗಂಧಿ. ೩೦೦-೬). 'ಬೋರೆ$_2$' ಪರಾ. [ದೇ.॥/ಮರಾ. ಬೋರ ]

**ಬೋರ$_2$, ಬೋರೆ$_3$** (ನಾ). ದಿವಾಳಿಯಾದವನು : ಇಂಥ ಅಪರಿಚಿತನಿಗೆ ಕೆಲಸ ಕೊಟ್ಟು ತಾನು ಬೋರನಾಗುವುದನ್ನೂ ಬಯಸಲಿಲ್ಲ (ಶಾಬಿ. ೯೪). **ಬೋರೆ$_3$ :** ತಾನು ಪೂರ್ಣ ಬೋರೆಯಾಗಿ ದಾನ ಮಾಡುವುದು ದುಃಖಮೂಲ (ಅರಗಿ. ೧೩೬). [←ಮರಾ. ಬೋರಾ ]

**ಬೋರಂಗಿ**, ಭೋರಂಗಿ (ನಾ). ೧. ಬಣ್ಣ ಬಣ್ಣದ ರೆಕ್ಕೆಗಳುಳ್ಳ ಒಂದು ಬಗೆಯ ಹುಳು; **ಜೀರುದುಂಬಿ; ಜೀರುಂಡೆ :** ಗುಲಾಬಿ ಗಿಡಕ್ಕೆ ಮುತ್ತುವ ಹಸುರು ಬಣ್ಣದ ಅಥವಾ ತಾಮ್ರವರ್ಣದ ಜೀರುಂಡೆ: ಗುಲಾಬಿಜೀರುಂಡೆ :—ಬೋರಂಗಿ (Rose-chafer. ಇಂಕ) ; ಏರಬಾರದ ಗುಡ್ಡ ಹ್ಯಾಂಗೇರಿದಿ ಬಸವಣ್ಣ ಬೋರಂಗಿ ಪಕ್ಕ ಸರಜಂಗು ಕಟ್ಟಿಗೊಂಡು (ಜಪಗೀ. ೦೬). ೨. (ಆಲಂ) ಒಯ್ಯಾರಿ; ಬೆಡಗಿ : ಏ ಬೋರಂಗಿ, ವ್ಯೆ ತೊಳಕೊಳ್ಳಲಿಲ್ಲೇನಿನ್ನು ? (ತಾಂಡಾದು. ೫೪). **ಭೋರಂಗಿ :** ೧. ಮಳೆ ಬಂದು ನಿಂತಾಗ . . . ಗಿಡದಿಂದ ಗಿಡಕ್ಕೆ ಭೋರಂಗಿಗಾಗಿ ಅಲೆದಾಡುವುದು (ಸುತ್ತುಮು. ೯); ಭೋರಂಗಿಯ ಒಂದು ಹಸಿರುಪಕ್ಕ ಶಾಪಗ್ರಸ್ತದೇವತೆಯಂತೆ ಇವನ ಸೆರೆಗೆ ಸಿಕ್ಕಿದೆ (ಗಾಳಿ. ೬೪). [<ಬೋರ್]

**ಬೋರಂಟಿ**, ಭೋರಂಗ (ನಾ). ಹಾರುವಾಗ ಶಬ್ದ ಮಾಡುವ, ಬೇರೆ ಬೇರೆ ಆಕಾರದ ಒಂದು ಬಗೆಯ ಗಾಳಿಪಟ : ಆ ಹುಡುಗನು ಬೋರಂಟಿ ಹಾರಿಸುತ್ತಿದ್ದಾನೆ (ಕೂ). **ಭೋರಂಗ :** ಭೋರಂಗ ಆಡಿಸಲು ಬೇಕಿಷ್ಟು ? ನೂಲಿನ ಎಳೆಯೊಂದು ಸಾಕಿಲ್ಲವೇ ? (ಸಬೀಗೀ. ೨೯–೫೨೯). [ < ಬೋರ್ ? ]

**ಬೋರಗುದುರೆ** (ನಾ). ಮಾಸಲುಗೆಂಪು ಬಣ್ಣದ ಕುದುರೆ : ಮಾರುವದ ಬೋರಗುದುರೆಗಳೊಳ್ ಪೂಡಿದ ಪಸುರ್ಪೊನ್ನ ರಥಮನೇರಿ (ಶುಶಭಾ. ೦೨–೫೩ ವ). [ ಬೋರ$_1$ + ಕುದುರೆ ]

**ಬೋರಮಾಳ**, ಬೋರಮಾಳು (ನಾ). (ಎಲಚಿಹಣ್ಣಿನ ಆಕಾರದ ಚಿನ್ನದ ಗುಂಡುಗಳಿಂದ ಮಾಡಿದ) ಒಂದು ಬಗೆಯ ಸರ : ನನ್ನ ಕೊರಳೊಳಗೆ ಬೋರಮಾಳ ಇಲ್ಲ, ಕೈಯೊಳಗೆ ಬಿಲವಾರ ಇಲ್ಲ ! (ಕಾರುಕ. ೩೨). **ಬೋರಮಾಳು :** ಕಾಸಿನ ಸರ, ಗುಂಡಿನ ಸರ . . . ಬೋರಮಾಳು, ನೆಲ್ಲಿಕಾಯಿಸರ, ಗೋಧಿಸರ (ಕಬಕೋ. I, ೮೨೦).
[ ←ಮರಾ. ಬೋರ್‌ಮಾಳ್ ]

**ಬೋರಮಾಳು** 'ಬೋರಮಾಳ' ನೋ.

**ಬೋರಲಿಡು** (ಕ್ರಿ). ಮಗುಚಿ ಹಾಕು; ತಳ ಮೇಲುಮಾಡು : ಬೋರಲಿಟ್ಟ ಬಟ್ಟಲಿನಂತಿರುವ ನೀಲದಿಗಂತ (ಪಕ್ಷಿಪ. ೨೪೪).
[ ಬೋರಲು + ಇಡು$_1$ ]

**ಬೋರಲು** (ನಾ). ತಲೆಕೆಳಗು ; ಬುಡಮೇಲು : ಆ ಪಾತ್ರೆಗಳನ್ನು . . . ಅಲ್ಲೇ ಬೋರಲು ಹಾಕು (ಊರುಕ. ೨೩) ; ಕಂಬಳಿಯ ಮೇಲೆ ಬೋರಲಾಗಿ ಅಪೂರ್ವ ಬಿದ್ದಿದ್ದ (ಶಾರತಿ. ೦೩೪). 'ಬೋರಲಿಡು' ಪರಾ.
[ದೇ.॥ ತೆಲು. ಬೋರ್ಲ]

**ಬೋರಾಡು** (ಕ್ರಿ). ೧. ಸಂಭ್ರಮಗೊಳ್ಳು : ಸಡಗರಪಡು : ಬೋರಾಡಿ ಸಾಬವನು ಹಾಡಿ ಆಡಿ ಒಯ್ಯುವನು (ಸರ್ವಜ್ಞ. ೧೩೯೬) ; ಎಕ್ಕಿಯ ಗಿಡದಾಗ ಹಕ್ಕಿ ಬೋರಾಡಿದಂಗ (ಲೋಕಗೀ. ೬೧) ; ಹಕ್ಕಿಯಲ್ಲಿ ಕಪಿ ಮಾಡಿನ ನಾಲ್ಕು ಹೋರಿಗಳೂ ಬೋರಾಡಿ ಹಿಂಡುವ ಮೂರು ಆಕಳುಗಳೂ, ಎರಡು ಎಮ್ಮೆಗಳೂ ಮುಸುಗುಟ್ಟುತ್ತವೆ (ಕುಂಬೀ. ೧). ೨. ಧ್ವನಿಯೇರಿಸು ; **ದೊಡ್ಡಧ್ವನಿ ಮಾಡು :** ಮಗು ಅನ್ನ ಪೂರ್ಣಿಯರೂ ಬೋರಾಡಿಕೊಂಡು ಅಳತೊಡಗಿದರು (ಎರಕ. ೧೪೮) ; ಇವನು ಮರಣ ಹೊಂದಲು ಅಕಬರನು ಬೋರಾಡಿ ಅತ್ತನು (ಹಿಂಮುಚ. ೦೦೪). 'ಭೋರಾಡು' ಪರಾ. [ಬೋರ್ + ಆಡು$_1$]

**ಬೋರಿ** 'ಬೋರೆ$_2$' ನೋ.

**ಬೋರಿಗೆ** 'ಬೋಪರಿಗೆ' ನೋ.

**ಬೋರಿಯ** (ನಾ). ರಂಗುರಂಗಿನ ಚಿತ್ರಗಳುಳ್ಳ, ನೆಲಕ್ಕೆ ಹಾಸುವ ಹಾಸು ; **ಜಾಜಮು :** ಪೊಂಬಟ್ಟೆಯ ಬೋರಿ[ಪಾಠಾಂ. ರೆ]ಯದೊಳ್ ತುಂಬಿದ ಬಿಡುಮುತ್ತಿನಕ್ಕಿಯುಂ ಮೆಟ್ಟಿದಂದೇಂ ಬಗೆವುಗಿಸಿದುದೋ ಹೇಮಾಂಬುಜದ ಮರಾಳಮಿಥುನಮಂ ತನುಮಿಥುನಂ (ಅನಂಪು. ೬–೫೫).
[?./ಮರಾ. ಬೋರಿಯಾ]

**ಬೋರಿಸರ** (ನಾ).=ಬೋರಮಾಳ : ಕುತ್ತಿಗೆಯಲ್ಲಿರುವ 'ಬೋರಿಸರ' ಕೂಡಾ ಗುಂಡುಗುಂಡಾದ ಮಣಿಗಳಿರುವ ಪಳ್ಳಿಯ ಮಾದರಿಯದು (ಕಶಿ. ೦೫). [ಬೋರಿ (<ಬೋರೆ$_2$) + ಸರ$_3$]

**ಬೋರು$_1$** 'ಪೋರೆ' ನೋ.

**ಬೋರು$_2$** (ನಾ). (?) : ಅಣಲೊಳು ಗುಡಿ[ಪಾಠಾಂ. ಮಡು]ಗಟ್ಟಿದ ಬೋರು ಕೊಬ್ಬಿದ ನೆಣ ಬಾಯೊಳು ಪೊಣಿಮಡುವ ಹೆಣದಿನ ದಡಿಗ ದೈತ್ಯೇಯರು ಹೆಣ್ಗಂಡು ನೊಣ ಹಾಯುಗುಡದೆ ನುಂಗುವರು (ಪೋಹಕ. ೩೨–೫). [ ? ]

**ಬೋರೆ$_1$** 'ಪೋರೆ' ನೋ.

**ಬೋರೆ$_2$, ಬಾರೆ, ಬೋರಿ** (ನಾ). ೧. ಒಂದು ಬಗೆಯ ಮರ ಮತ್ತು ಅದರ ಹಣ್ಣು ; ಎಲಚಿ : "ಬದರೀ, ಕುವಲೀ, ಕರ್ಕಂಧೂಃ — ಈ ೩ ಬೋರೆಗಿಡದ ಪೆಸರ್" (ಪಟಾಮು. ೩೨–೪೦) ; ಕಾರೆ ಬೋರೆ ಗುಳವತ್ತಿ ತುಂಬುರು ನಗರೆ ಮುಂತಾದ ಪಣ್ಗಳ ತಂದರಾಳ್ವನ ಬಳಿಗೆ (ಪೋಹಕ. ೦೯–೫೬) ; ಗೇರು ಕಾರೆ ಬೋರೆಗಳೆಸೆದವು (ಶಂದಿಮಾ. ೦೩–೦೩). ೨. ಎಲಚಿ ಹಣ್ಣಿನ ಬಣ್ಣ ; **ಮಾಸಲುಗೆಂಪುಬಣ್ಣ :** (೬). **ಬಾರೆ :** ೧. ಧರೆಯೊಳೆಸೆವುದಾ ಕಾಳಹಸ್ತೀಶ್ವರಮೆನಿಪ್ಪೊಂದು ಪೆಸರಾಂತು ಭೂಮಿಧರವು ದರಲ್ಲಿ . . . ಮಾಮಂಬಟೆಯು ಬಾರೆ ನೆಲ್ಲಿ . . . ಬಿಲ್ವಾದಿ ಬಹುವೃಕ್ಷಂಗಳಿಂದೆ ತುಂಬಿ ಘೋರತರ ಕಾಂತಾರಮಿಪುದು (ಶುಪಾಶಿ. ೬–೦೮).
**ಬೋರಿ :** ೧. 'ಬೋರಿಸರ' ಪರಾ.
[<ಪ್ರಾ. ಬೋರ್, ಬೋರೀ. / ಸಂ. ಬದರೀ./ಹಿಂ. ಬೇರ್, ಬೋರ್; ಮರಾ. ಬೋರ್, ಬೋರೀ]

**ಬೋರೆ$_3$** 'ಬೋರ$_2$' ನೋ.

**ಬೊರ್ಗರೆ** (ಕ್ರಿ). 'ಬೋರ್' ಎಂದು ಶಬ್ದಮಾಡು : 'ಬೊರ್ಗರೆಯಿಸು' ಪರಾ. [ಬೋರ್ + ಕರೆ$_1$]

**ಬೊರ್ಗರೆಯಿಸು** (ಕ್ರಿ). ಬೋರ್ ಎಂದು ಶಬ್ದ ಮಾಡು ; ಅಬ್ಬರಿಸು : ಪ್ರಳಯದ ದಾವಾಗ್ನಿಯ ಕುಡಿನಾಲಗೆಯುಳಿವೆನೆ ಬೊರ್ಗರೆಯಿಸುತ ಮುಳಿದು ಬಾಣದ ಸುಭಟರು ಮುಂದುವರಿದಾಗ ಸಲೆ ತುರುಕರನಟ್ಟಿದರು (ಕಂಪಬ. ೦೯-೩೩). [ಬೊರ್ಗರೆ + — ಇಸು$_3$]

**ಬೊರ್ಗಲ್ಲು** (ನಾ). (ಉಕ) ಒರಟಾಗಿ, ಉಬ್ಬಿರುವ ಕಲ್ಲು : ಅವಳ ಈ ಎಲ್ಲ ಉಪಾಯಗಳೂ ಬೊರ್ಗಲ್ಲ ಮೇಲೆ ಮಳೆಗರೆದಂತಾದುವು (ಶಂಶೀ. ೦೯) ; ಫಕೀರ ಹೇಳಿಕೊಂಡುದೆಲ್ಲ ಬೊರ್ಗಲ್ಲ ಮೇಲೆ ನೀರು ಸುರುವಿದಂತಾಯಿತು (ಹಾಡುಹು. ೬೨). 'ಗೊರ್ಕಲ್ಲು' ಪರಾ.

[< ಬೋರೆ$_1$ (< ಪೋರೆ) + ಕಲ್ಲು (< ಕಲ್$_3$)]

**ಬೋರ್ಡು** (ನಾ). ೧. ಸೀಮೆಸುಣ್ಣದಿಂದ ಬರೆಯಲು ಬರುವಂತೆ ಸಿದ್ಧಪಡಿಸಿದ ಕರಿಯ ಬಣ್ಣದ ಫಲಕ ; ಕಪ್ಪುಹಲಗೆ : ರಂಗಣ್ಣನು ಬೋರ್ಡಿನ ಹತ್ತಿರ ಹೋಗಿ 'ಶತ್ರು' ಎಂದು ಸರಿಯಾಗಿ ಬರೆದು (ರಂಗಕ. ೧೩೯). ೨. ಹೆಸರು, ವಿಳಾಸ ಮೊದಲಾದುವುಗಳನ್ನು ಬರೆದು ಪ್ರದರ್ಶಿಸುವ ಫಲಕ ; ನಾಮಫಲಕ : ರಾಯರ ಮನೆಯ ಮುಂದಿರುವ ಒಂದು ಬೋರ್ಡಿನ ಜೊತೆಗೆ ಇನ್ನೊಂದು ಬೋರ್ಡು ಇಳಿಬೀಳಬೇಕೆಂದು ರಾಜಮ್ಮನವರ ಹೆಬ್ಬಯಕೆ (ರಾಯಕ. ೬೩). ೩. ಸಮಿತಿ; ಮಂಡಲಿ : ಪರೀಕ್ಷಾಬೋರ್ಡುಗಳು ಪ್ರಾದೇಶಿಕವಾಗಿದ್ದರೆ ಅನರ್ಥ ಕಡಿಮೆ (ಕಿಕ್ಷದ ೩೬೯). [← ಇಂ. Board]

-**ಬೋಲ್** '- ವೋಲ್' ನೋ.

**ಬೋಲಬಗರಿ** (ನಾ). (ಉಕ) ಕೊಬ್ಬರಿಬಟ್ಟಲಿನಲ್ಲಿ ತೂತುಕೊರೆದು ದಾರ ಸೇರಿಸಿ. ತಿರುಗಿಸುವ ಒಂದು ಬಗೆಯ ಆಟಿಕೆ : ಕಾರಹುಣ್ಣಿವೆ ಕರಿ ಹರಿದು ಮಣ್ಣೆತ್ತು ನೀರನು ಕುಡಿದವು. ಬಂತು ಪಂಚಮಿ ಬೋಲಬಗರಿಗೆ, ಹೆಣ್ಣು ತವರಿಗೆ ಮಿಡಿದವು (ಶಂಕು. ೦೨-೯). [ ? ]

**ಬೋಲಿಯಕ್ಕ** (ನಾ). ಒಬ್ಬಾಕೆಯ ಹೆಸರು : ಪಾಟಿಯಕ್ಕಂ ಬೋಲಿಯಕ್ಕಂ ಪುತ್ರಾಣಕ್ಕಯ್ಯಂದಿರ್ಕ್ಕಂಡುಗ ಬಿತ್ತುವುದಂ ಕೊಟ್ಟಳ್ (ಎಕ. VIII. ಶಗರ. ೯೩-೧೦ ; ೨೫೦). [? + ಅಕ್ಕ$_1$]

**ಬೋಲು** (ನಾ). [ಸಂಗೀತ] ತಾಳವಾದ್ಯಗಳ ಲಯಬದ್ಧವಾದ ನುಡಿತ : ಸ್ವರಪಾಠ ಮುಗಿದ ಮೇಲೆ ನಾಗಪ್ಪ ಮೃದಂಗವನ್ನು ಕೈಗೆತ್ತಿಕೊಂಡು . . . ಆದಿತಾಳದ ಕೆಲವು ಬೋಲುಗಳನ್ನು ಸಾಂಬನಿಗೆ ಅಭ್ಯಾಸ ಮಾಡಿಸಿದ (ಮುಖ್ಯ. ೬೩); ಅದರ ಹೆಜ್ಜೆ, ವಿನ್ಯಾಸಗಳನ್ನು ಲೆಕ್ಕಕ್ಕೆ ಸರಿಯಾಗಿ, ತಬಲ ಮೃದಂಗಗಳ ಬೋಲಿಗೆ ಸರಿಯಾಗಿ ಕಟ್ಟಲು ಬರುವಂತಿಲ್ಲ (ನಾಲಕ್ರ. II, ೯೯೦). [← ಹಿಂ. ಬೋಲ್]

**ಬೋವ** 'ಬೋಯಂ' ನೋ.

**ಬೋವಗಾಣಿ** (ನಾ). ಪರಿಚಾರಕರ ಮುಖಂಡ : 'ಬೋವಗಾಣಿಕೆ' ಪರಾ. [ಬೋವ (< ಬೋಯ) + — ಕಾಣಿ]

**ಬೋವಗಾಣಿಕೆ** (ನಾ). ಪರಿಚಾರಕರ ಮುಖಂಡತ್ವ—ನಾಯಕತ್ವ : 'ಬೋವಗಾಣಿಕೆತನ' ಪರಾ. [ಬೋವಗಾಣಿ + — ಇಕೆ]

**ಬೋವಗಾಣಿಕೆತನ** (ನಾ). = ಬೋವಗಾಣಿಕೆ : ಮಾಯೆ . . . ಬಳಕಿರಿಸಿ ಕೊಂಡಳು ನಾಗವಾಸದ ನೆರವಿ ಬಿಂದದ ಬೋವಗಾಣಿಕೆತನದಲಲ್ಲಮನ (ಶ್ರಪಂಶ. ೩-೦೭). [ಬೋವಗಾಣಿಕೆ + — ತನ]

**ಬೋವಿ$_1$** 'ಬೋಯ' ನೋ.

**ಬೋವಿ$_2$** 'ಬೋವು$_2$' ನೋ.

**ಬೋವಿತಿ** 'ಬೋಯಿತಿ' ನೋ.

**ಬೋವು$_1$** 'ಬೋಯ' ನೋ.

**ಬೋವು$_2$**, ಬೋವಿ$_2$ (ನಾ). ಒಂದು ಬಗೆಯ ಮರ : ಕಿರಲ್‌ಬೋಗಿ, ಬೋವುಮರ, ಹಿರಿಬೋಗಿ, ಕರ್ಮಲ, ಕಲ್‌ಬಾಣೆ, ಶಮಿಪಲೆಭೋಗಿ, ಸಣ್ಣೆಲೆಭೋಗಿ (ಪ್ರಶಿಗ. ೯೯-೬೭೩). ಬೋವಿ$_2$ : ಬಿಳಿಬಸರಿ, ಬೋವಿಯ ಮರ (ಪ್ರಶಿಗ. ೩೭-೭೩೦); ಹೆಬ್ಬಲಸಿನ, ಬೋವಿನ, ಸಾಗವಾನಿಯ ಮತ್ತು ಅನೇಕತರದ ಮರಗಳು (ಗಂಗಾಪ. ೩೩). [← ತುಳು. ಬೋವು]

**ಬೋಸ$_1$** (ನಾ). ೧. ಹಲ್ಲಿಲ್ಲದವನು : "ಬೋಡಃ — ಬೋಸಂ" (ಕಾಶಕ. ೨೩೦). ೨. (ಕರಾ) ಬೆಪ್ಪ; ಪೆದ್ದ [ಬೋಸು + — ಅ$_7$]

**ಬೋಸ$_2$** (ನಾ). ಒಡವೆ ; ಆಭರಣ : ಅಲಂಕಾರ : ಕೈಲಿ ಕಾಸಿಲ್ಲ ಮೈಲಿ ಬೋಸಿಲ್ಲ (ಬೋಸ = ಭೂಷಣ) ಹೋಗೊ ಸೂಳೆ ಕಂಡು ಹುಮ್ಮಳಿಸಿ ಬಿದ್ದನಂತೆ (ಮಾಪುರಾ. ೦೩೨). [< ಸಂ. ಭೂಷಾ]

**ಬೋಸಡಿ** 'ಭೋಸಡಿ' ನೋ.

**ಬೋಸರ** (ನಾ). ವಂಚನೆ ; ಕಪಟ : "ಬೋಸರಂ ಕಪಟಾದರಂ" (ಕರ್ನಾಟ. ೩೯): ನಿಚ್ಚ ಬೋಸರದ ಗರುಡಿ ವಂಚನತನ ಹೆಚ್ಚಿ ಬೆಳೆವ ಬಲು ನೆಲನು (ರಾಮಾ. ೩-೯೯); ಬೋಸರದಿಂದ ಕಯ್ಯುಗಿದು (ವಚ್ಚಿಶ. ೦೯೦-೨೦).

**ಬೋಸರಗಿತ್ತಿ** (ನಾ). ವಂಚಕಿ : ಮೋಸಗಾತಿ : ಒಬ್ಬರ ಕೈವಿಡಿದು ಒಬ್ಬರಿಗೆ ಮಾತುಗೊಟ್ಟು ಮತ್ತೊಬ್ಬರಿಗೆ ಸನ್ನೆಯ ಮಾಡುವ ಬೋಸರ [ಪಾಠಾಂ. ಪಾದರ]ಗಿತ್ತಿಯಂತೆ . . . ಕೋಟಲೆಗೊಳಲೇತಕ್ಕೆ (ಬಸ್ವಪ. ೪. ೦೦೦-೨೩೨) ; ವಂಚಕಿ ಬೋಸರಗಿತ್ತಿ ವಂಶವರ್ಜಿತೆ . . . ತೇಪೆಯೊಡ ನಾಡಿದ ಪೆಂಡತಿಗುಂಟೆ ಸಜ್ಜನಂ (ಮುಕ್ತಾ. ೦೩-೭). [ಬೋಸರ + — ಗಿತ್ತಿ]

**ಬೋಸರಣೆ** (ನಾ). ಮೋಸ ; ವಂಚನೆ : ಠಕ್ಕು ಥಾಳಿಕತನ ಬಜ ಬೋಸರಣೆ ಬೇಳಕ್ಕೆ ವೈಶಿಕಗಳೆಂಬಿವಕೆ ಸಿಕ್ಕುವರೇ ಕೋವಿದರು (ಕುರಾಶಾಂ. ೨೮-೭೦); ಬಾಳಿದ ಬೀಳರ್ಪ ಬುದ್ಧಿ ಬೂತಾಟಮಂ ಬೇಳಿಗೆಬ್ಬಿಗಳ ಬೋಸರಣೆ ಬಾಳವೆತ್ತರ ಭಕ್ತರೆಂದು ಬಣ್ಣಿಸಿ ಬರ್ಪುದೇಳಿಗೆಯೆಂತೊ (ಕಶಸಾಂ. ೭೩-೯೦). [ ಬೋಸರ + — ಅಣೆ$_4$ ]

**ಬೋಸರಿಗ** (ನಾ). ಮೋಸಗಾರ ; ವಂಚಕ : ಕಾಮದೇವಂಗೆ ಬೋಸರಿಗಂ ನಿಂದುಬಿಸಿಯೆಂಬರಾ ಪುರದ ವೇಶ್ಯಾವಾಟದೊಳ್ ಜೇಟಿಯರ್ (ಸೂಕ್ತಿಸು. ೯-೦೩೩); ನೀನಲ್ಲದೆಯನ್ನಿಗರೆನ್ನ ತಾಯ ಸಮಾನವೆನುತ ಭಾಷೆಯ ಮಾಡಿ ಮಾನಿಸಿಗೊರ್ವ ಬೋಸರಿಗನಾಣೆಯನಿತ್ತು ತಾನಂದು ಪೊಜಿಮಟ್ಟನಾಗ (ಶ್ರೀಪಾಂ. ೦೩-೭೦); ಕೊಡದೆ ಬೂಟಕವಾಶಿನಲಿ ಮನ್ಮಥ ಕೇಳಿಗೊಡನ್ನೆದುವ ಬೋಸರಿಗನ ನಡೆ ನಾಳೆ ಕರೆವೆನೆಂದೆಬ್ಬಿಸಿ ಪೊನ್ನೀವ ಕಡುದಾತನ ಕರೆ ಮಗಳೆ (ಕಂಪಬ. ೩-೦೯೭). [ಬೋಸರ + — ಇಗ]

**ಬೋಸರಿಗತನ** (ನಾ). ಮೋಸ ; ವಂಚನೆ : ಬೋಸರಿಗತನದಿಂದ ಒಡಲ ಹೊರವಳಂತೆ ವಾಗಾದ್ವೈತದಿಂದ ಒಡಲ ಹೊರವ ಶಬ್ದಬೋಧಕರಿಗೆ ನಿಜಗುರುಭೋಗೇಶ್ವರಶರಣರ ಪದವೆಂತು ದೊರಕೊಂಬುದೊ (ಸಕವ. III, ೨೦೨-೩೭೨) ; ಮತ್ತೀ ದುಷ್ಟತನದ ಬೋಸರಿಗತನವೇಕೆ (ಹಕಶಾ. ೬-೯) ; ನನಗೆ ಬೋಸರಿಗತನಮಂ ನುಡಿದು . . . ನಿನಗೆದೇಹಾರಮಂ ಮಾಡಿದಳಿಗೆ ತಕ್ಕುಪಾಯಮಂ ಬಲ್ಲೆ ನಾನು (ಸಮ್ಯಕ್. ೩-೨೩).

[ ಬೋಸರಿಗ + — ತನ ]

**ಬೋಸರಿಗೆ** (ನಾ). = ಬೋಸರಿಗತನ : ಹಾಸ್ಯರಸವ ಬಲ್ಲವಗರಸಿಚ್ಚೆಯ ಬೋಸರಿಗೆಗೆಯಪಮಾನ ದಾಸಿಯ ಬಿಟ್ಟು ಕಠಿಣತನವಾತಂಗೆ ಲೇಸು ಸೇವೆ (ಶರ್ಶರೀ. ೦೭-೨೯). [< ಬೋಸರ ]

**ಬೋಸರಿಸು** (ಕ್ರಿ). ೧. ವಂಚಿಸು ; ಮೋಸಗೊಳಿಸು : ವಿತಕಲೆ ವಸು ಜಾರಿ ಠಕ್ಕಿನ ಮಾತಿನಲಿ ಬೋಸರಿಸಿ ನಮ್ಮನು ಬೂತು ಮಾಡದೆ ಹೋಗು (ಅಕ್ರೂಶ. ೯-೬೦); ಸವಿನುಡಿಯಿಂ ಬೋಸರಿಸಿ ಮಾಯೆಗೈವರ್ (ರಾಘಾಶ್ಕ. ೪೦-೦೩). ೨. ಸುಳ್ಳು ಆದರವನ್ನು ತೋರಿಸು ; ಪ್ರೀತಿಸುವಂತೆ ನಟಿಸು : " ಬೋಸರಿಸು – ಮಿಥ್ಯಾದರೇ (ಕಪಟಮರ್ಯಾದೆ ಮಾಡು) "

(ಕಮರಾ); ನೆರೆವ ಮಿಂಡರೊಳಧಿಕನೆಂದೊಡಲಿಕ್ಕಿ ಬೋಸರಿಸಿಕೊಳ್ವೊತ್ತೆಯಂ (ಹಕಕಾ. ೯-೨೦). ೩. ಪ್ರೋತ್ಸಾಹಿಸು ; ಉಬ್ಬಿಸು : ವರ ಪರಿಶ್ವಂದ್ರ ಸತ್ಯಂಗೆಡದಿರೆಂದು ಬೋಸರಿಸುವಂತಾಗಿ (ಹಕಕಾ. ೨-೩೦) ; ಅಸುರದೆಡೆ ಯೊಳಿರಿಸಬಾರದು ಬೋಸರಿಸಿ ನಂಬಿಸಿ ನಮಿಸಿ ಕೊಂಡಾಡಿ ಮುಂಡಾಡಿ (ಐಕಫ. ೧೮-೭); ಮಾಯೆ ನಿನ್ನನಗಲಿರಲ್ಲಳೇ ಎಂದು ಬೋಸರಿಸುತಂ (ಶ್ರಶುಪು. ೩-೯೪). [ ಬೋಸರ + — ಇಸು$_3$ ]

**ಬೋಸಿ$_1$** (ನಾ). ಹಲ್ಲಿಲ್ಲದವಳು : "ಬೋಡೀ = ಬೋಸಿ" (ಲಾಶಕ್ಕ. ೨೬೦). [ ಬೋಸು$_1$ + — ಇ$_2$ ]

**ಬೋಸಿ$_2$** (ನಾ). ಅಗಲವಾದ ಬಾಯುಳ್ಳ ಲೋಹದ ಗುಂಡನೆಯ ಪಾತ್ರೆ : ಬಚ್ಚಲಿನ ಜಗಲಿಯ ಮೇಲೆ ತಾಮ್ರದ ಬೋಸಿ, ಮರದ ಮೊರಗೆಯಲ್ಲಿ ನೀರು ಬೆರಸಿದ ಸೀಗೇಪುಡಿ (ಬಾಳಕೊ. ೦೦೩); ಗಡಿಗೆ, ಬೋಸಿ . . . ಬಾಸದ ಸಾಲು ಇವುಗಳನ್ನು ಜಾಗ್ರತೆಯಾಗಿ ಮತ್ತು ಸೂಕ್ಷ್ಮವಾಗಿ ಪರಿಚಯ ಮಾಡಿಕೊಂಡು ಹೊರಗೆ ಬರುತ್ತಾಳೆ (ಸನ್ಮೂರು. ೦೦೦). [ ? ]

**ಬೋಸು** (ನಾ). ಹಲ್ಲಿಲ್ಲದಿರುವಿಕೆ : "ಬೋಡು = ಬೋಸು" (ಲಾಶಕ್ಕ. ೨೬೦). 'ಬೋಸುವಾಯ್' ಪರಾ. [ ದೇ.॥ ತೆಲು. ಬೋಸಿ = ಹಲ್ಲಿಲ್ಲದ ]

**ಬೋಸುಡಿ** 'ಭೋಸಡಿ' ನೋ.

**ಬೋಸುವಾಯ್** (ನಾ). ಹಲ್ಲಿಲ್ಲದ ಬಾಯಿ ; ಬೋಡುಬಾಯಿ : ಪಲ್ಗಳುದುರಿದ ಬೋಸುವಾಯಿಂದರವನೆಯ ಮುಂಬಾಗಿಲೊಳು ನಿಂದ (ಶಂಕರಾ. ೭-೬೩). [ ಬೋಸು$_1$ + ಬಾಯ್ ]

**ಬೋಹಣ** 'ಬೋನ$_1$' ನೋ.

**ಬೋಹಣಿಸು** (ಕ್ರಿ). ಸರಿಯನ್ನು ಬಳಿದು ಮದ್ದಳೆಯನ್ನು ಸಿದ್ಧ ಪಡಿಸು : ಬೋಹಣಿಸಿ ಮದ್ದಳೆಗಳಂ ಶ್ರುತಿಮೋಹಿ ಸಂಧಿಸಿಕೊಂಡು ನಿಲ್ಲಿರೆ ಬೇಹವರು ನೀವಿದಕೆ ಗುಡ್ಡಾದೇವಿ ಮಹದೇವಿ (ಐಕಪು. ೧೨-೪೦). [ ಬೋಹಣ (< ಬೋನ$_1$) + — ಇಸು$_3$ ]

**ಬೋಹರಿಗೆ,** ಬೋರಿಗೆ (ನಾ). ಕಸಬರಿಗೆ ; ಪೊರಕೆ : ಕೈಯ ಬೋಹರಿಗೆ ಮಂಡೆಯ ಮೇಲೆ ಸಿಂಬಿ (ಬಸವ. ೩೩೯) ; ಒಂದು ಬೋಹರಿಗೆಯಂ ಕೊಂಡು ಬೋಹರಿಸಿ ತಂದು ಗೋಮಯದಿಂದೆ ಹೇವರಿಸಿ ಸಾರೈಸಿ (ಕನ್ನ.ರ. ದೇ. ೦೩೯-೩) ; ಸಂತಸದಿಂ ಬೋಹರಿಗೆಯಾಂತು ಮಠಮಂ . . . ನಿರ್ಮಳವ ಮಾಡುತ್ತೆ (ರಾಶಶ. ೦೯-೦೦೨). **ಬೋರಿಗೆ :** ಕಸಕುಪ್ಪೇರು ತಿಪ್ಪೆ ತಿಪ್ಪೆ ಬೋರಿಗೆಯಿಂದ ಕೊಡುವನು (ವಿಶಾಸು. ೬೩-೪) ; ಕೈಯಲ್ಲಿ ಬೋರಿಗೆಯನ್ನು ಕೊಟ್ಟು . . . ಕಸವ ಬಳಿಯಲಿಕ್ಕೆ ಹಚ್ಚುವನು (ಶೃಷಿಶ್ರ. ೨೮೮). [ ದೇ.॥ ತೆಲು. ಬೋರಿಗ. / ಪ್ರಾ. ಬೋಹಾರೀ ]

**ಬೋಹರಿಸು** (ಕ್ರಿ). ಗುಡಿಸು ; ಕಸತೆಗೆ ; ಸ್ವಚ್ಛ ಮಾಡು : ದೇವ ರಾಜ ನಿಮ್ಮ ಸತ್ತಿಗೆಯ ಪಿಡಿವ ವಾಯು ನಿಮ್ಮ ಅಂಗಳವ ಬೋಹರಿಸುವ (ಪದಗೋ. ೧೮೦-೧೦) ; ಒಂದು ಬೋಹರಿಗೆಯಂ ಕೊಂಡು ಬೋಹರಿಸಿ ತಂದು ಗೋಮಯದಿಂದೆ ಹೇವರಿಸಿ ಸಾರೈಸಿ (ಕನ್ನ.ರ.ದೇ. ೦೩೯-೩) ; ರಾಜಾಂಗಳವ ಬೋಹರಿಸುವ ದಾಸಿಗೆಯುಮ್ಮಾಸಕ್ಕಿ (ಎಕ. VI, ಕಡೂರು. ೯೯-೬೪; 1201). [ < ಬೋಹರಿಗೆ + — ಇಸು$_3$ ]

**ಬೋಳ$_1$** 'ಬೋಚಿ$_1$' ನೋ.

**ಬೋಳ$_2$** 'ಬೋಡ' ನೋ.

**ಬೋಳ$_3$** 'ಬೋಚಿ$_3$' ನೋ.

**ಬೋಳಂಗಡಲೆ** 'ಬೋಟಿಗಡಲೆ' ನೋ.

**ಬೋಳಂದರು** (ನಾ). ಒಂದು ಬಗೆಯ ಮರ : ನಂದಿ, ಬೋಳಂದರು ಬೆಲ್ಲತ್ತಿ (ವೃಶಿ. ೯೯-೯೬೪). [ ? + ತರು$_2$ ]

**ಬೋಳಕ** 'ಬೋಳುಕ' ನೋ.

**ಬೋಳಕ್ಕಾರು** (ನಾ). (ಕರಾ) ಹಣ್ಣಿನ ಪ್ರಾರಂಭದ ಸ್ಥಿತಿ ; ದೋರೆ : ನಿನ್ನೆ ನೋಡಿದಾಗ ಕಾಯಿ ಬೋಳಕ್ಕಾರು ಆಗಿತ್ತು. ತೆಗೆಯಲಿಕ್ಕೆ ಹೇಳ ಬೇಕಂತ ಇದ್ದೆ (ಚೊಕುಗು. ೬೩). [ ← ತುಳು. ಬೊಳಕರ್ ]

**ಬೋಳಗಡಲೆ** ' ಬೋಟಿಗಡಲೆ ' ನೋ.

**ಬೋಳತರ** ' ಬೋಟಿತರ ' ನೋ.

**ಬೋಳತರಗ** ' ಬೋಳದರಗ ' ನೋ.

**ಬೋಳದರಗ,** ಬೋಳತರಗ (ನಾ). ಒಂದು ಬಗೆಯ ಔಷಧೀಸಸ್ಯ : ಗಂಡಮಾಲೆ ಒಡೆಯಬೇಕಾದರೆ ಬೋಳದರಗನ ಬೇರ ನೀರಿಂದ ಅರೆದು ಲೇಪಿಸಲು ಅವಶ್ಯ ಒಡೆವದು (ವೈದ್ಯಸಾ. II. ೦೬೨); ಕೊತ್ತುಂಬರಿ, ಬೋಳ ದರಗನ ಬೇರು, ಸೂರ್ಯಭಕ್ತನ ಬೇರು . . . ಪ್ರಾತಃಕಾಲದಲ್ಲಿ ಗ ಳ ತೂಕವಂ ಸೇವಿಸುವುದು (ಸಕವೈ. ೨೦೮). **ಬೋಳತರಗ :** ಹಿಪ್ಪಲಿ, ಬೋಳತರಗ, ಹಾವುಮೆಕ್ಕೆಯ ಬೇರು ಇವಿಷ್ಟನೂ ಸಮಾನವಾಗಿ ತೆಗೆದು ಕೊಂಡು ನಿಂಬೇಹಣ್ಣಿನ ರಸದಲ್ಲಿ ಅರೆದು ಕುಡಿಸಲು ಮೀನು ಕಚ್ಚಿದ ವಿಷ ಶಮನವಹುದು (ವೈದ್ಯಸಾ. II. ೨೨೦). 'ಬೋಟಿತರ' ಪರಾ. [ ? ]

**ಬೋಳಮಟಿ** (ನಾ). ಒಂದು ಬಗೆಯ ಸಸ್ಯ : " ಅರಸೆಲ್ಲಿ . . . ಗೊದ್ದನ ಮರ, ಬೋಳಮಟೆ, ಹಾಲಉಲಿಗೆ, ಗಾಂಗೇರುಕ, ಕಾಷ್ಠನೆಲ್ಲಿ, ಬಾಲಿಗ " (ಸಸ್ಯ. ೬೪); ಗೊದ್ದನ ಮರ, ಹಾಲಬಲಗೆ, ಬೋಳಮಟಿ (ವೃಶಿ. ೩೯-೭೬೩). [ಬೋಳ$_?$ + ಅಮಟಿ$_1$ (< ಅಂಬಟಿ)]

**ಬೋಳಯಿಸು,** ಬೋಳಯ್ಸು, ಬೋಳವಿಸು, ಬೋಳೈಸು (ಕ್ರಿ) ಪುಸಲಾಯಿಸು ; ಉತ್ತೇಜಿಸು ; ಸಮಾಧಾನ ಮಾಡು ; ಸಂತೈಸು : ಸಜ್ಜನಗೆಯ್ದು ಸಜ್ಜನಸ್ನೇಹದಿಂ ಸಾಗಿಸಿ ನೋಡಿ ಭೋಗದೊಳ್ ಬೋಳಯಿಸಿ ರಾಗದಿಂ ಮೇಳಯಿಸಿ (ಗಂಕ. ೨-೦೦೩ ಪ) ; ಬೋಳಯಿ ಸುತ್ತುಮಾ ತುರಗಮಂ . . . ಉಜ್ವಲರತ್ನಕುಂಡಲಾಂದೋಳಕಪೋಲಭಿತ್ತಿ ಯುಗನಿಂತೆಸೆದಂ ಬರುತ್ತಂ ಧರಾಧಿಪಂ (ಕುಸುಪಾ. ೩-೩೨) ; ತುರಗವನು ಬೋಳಯಿಸಿ ವಾಘೆಯ ತಿರುಹಿ . . . ಕೃಷ್ಣ ಪಾರ್ಥನ ರಥವ ಲುಳಿವಡೆದ (ಕುವ್ಯಾಭೀ. ೩-೨). **ಬೋಳಯ್ಸು :** ಹರುಷ ಮಿಗೆ ಮುದ್ದಾಡಿ ಬೋಳಯ್ಸಿದ ನಿಜಾರ್ಭಕನ (ಕೌಶಿರಾ. ೩-೨೬). **ಬೋಳವಿಸು :** ಬೇಗದೊಳಾದಂ ಮನವಿರಾಯೆ ಬೋಳವಿಸುತ್ತಂ (ಕುಸುಪಾ. ೬-೭೦); ತೋಳ ಹಿಡಿದೆಳೆದಪ್ಪಿ ಪಾರ್ಥನ ಬೋಳವಿಸಿದನು . . . ಅರಸ ಮುಂಡಾಡಿದನು ಫಲುಗುಣನ (ಕುವ್ಯಾಕ. ೦೦-೩೨) ; ಬೋಳವಿಸಿದನು ಸಕಲಸುರ ಭಟಾಳಿಗಳ ಸನ್ಮಾನದಲಿ (ತೊರರಾ. ೬-೨೦-೨೬) ; **ಬೋಳೈಸು :** ಪಾರ್ವತೀಪತಿ ಹರಿಶ್ಚಂದ್ರನಂ ತಲೆದಡವಿ ಬೋಳೈಸಿ ಕೌಶಿಕಂಗಿಂತೆಂದನು (ಹಕಕಾ. ೦೯-೦೦); ನಂಬುಗೆಯ ನುಡಿಯಲಿ ಭಾನುಮತಿಯರ ಬಗೆಯ ಸಂತೈಸೆಂದು ಬೋಳೈಸಿದನು ಸಂಜಯನ (ಕುವ್ಯಾಗ. ೩-೩೬); ಆ ನೃಪಾಲಕಂ ಸೋದರವೆಹರಸಿ ಮುನಿವರನ ಪದಕೆಜಿಗಿದೊಡೆ ಮಣಿದೆತ್ತಿ ಬೋಳೈಸಿ ಪರಸಿ ಮಂತ್ರಾಕ್ಷತೆಯನಿತ್ತು (ಶೈಪಿಶಾ. ೨-೦೯). [? + — ಇಸು$_3$. / ತುಳು. ಬೋಳೈಸು]

**ಬೋಳಯ್ಸು** ' ಬೋಳಯಿಸು ' ನೋ.

**ಬೋಳರೆ** (ನಾ). ಚಪ್ಪಟೆಯಾದ ಕಲ್ಲು : ತಮಟಗಲ್ಲು ತೋರುವ ಬಾಣ ಗಲ್ಲುಗಳು ಪೊರಂತೆ ದೊಡ್ಡ ಬೋಳರೆ ಹಿಂಡುಗಲ್ಲೆಂದು ಸಾರುತಿಹರು ಬಲ್ಲವರು (ಕೃಜ್ಯಕ. ೦-೭೩). [ಬೋಳು (< ಬೋಡು) + ಅರೆ$_2$ (<ಅಜೆ$_4$)]

**ಬೋಳವಿಸು** ' ಬೋಳಯಿಸು ' ನೋ.

**ಬೋಳಹ** (ಅ). 'ಹೋಗು' ಎಂಬ ಅರ್ಥದ ಒಂದು ಕೂಗು : ತೊಟ್ಟಿ ಲೊಳಿರ್ದವ್ಯಕ್ತ ಕಿಜಿಗೂಸು ಬೋಳಹ ಬೋಳಹ ಭಟ್ಟಾರಾ ಎಂದತ್ತಾ

ಗಳ್ (ಶಬ್ದಾ. ೮೩-೧೪) ; "ಬೋಳಹಬೋಳಹ—ಗಚ್ಛಗಚ್ಛ, ಹೋಗಂ ಹೋಗು <ಪ್ರಾ. ಬೋಲ" (ಶಬ್ದಾ. ಟಿಪ್ಪಣಿ. ೨೩೩). 'ದೇಹಿ$_2$' ನೋ. [<ಪ್ರಾ. ಬೋಲ, ಬೋಲಿಅ]

**ಬೋಳಾಮಸ್ತಕಿ** (ನಾ). ಒಂದು ಬಗೆಯ ಸಸ್ಯ : ಕುಷ್ಮಕ್ಕೆ :—ಬೋಳಾ ಮಸ್ತಕಿ, ಬಂಗಾಳಪಚ್ಚೆ, ಪಚ್ಚೆತುತ್ತ ಇಷ್ಟು ವರಹ ತೂಕ . . . ತೊಡೆಯ ಗುಣ (ವಿವೈ. ೦೦೪). [ ? ]

**ಬೋಳಿ** 'ಬೋಡಿ' ನೋ.

**ಬೋಳಿಸು** 'ಬೋಳಿಸು' ನೋ.

**ಬೋಳು** 'ಬೋಡು' ನೋ.

**ಬೋಳುಕ**, ಬೋಳಕ (ನಾ). ೧. ಊಳಿಗದವನು ; ಸೇವಕ: ಚಿನ್ನದ ಬೆಳ್ಳಿಯ ಹಾಸದ ಬಿರುದಿನ ಕುನ್ನಿಗಳನು ಬೋಳು[ಹಾಕಾಂ. ಳ]ಕರು ಮನ್ನೆಯ ಮಿಗವೇಟೆಕಾಱ ಕಂಪಿಲನ ಕೈಸನ್ನೆಯೊಳಿಱಿದು ನಿಲಿಸಿದರು (ಕುಂರಾಸಾಂ. ೨೬-೪೦): ಮುಟ್ಟೂಳಿಗದ ಬೋಳುಕರನೆಲ್ಲರ ಬೀಳುಕೊಟ್ಟೋಳ ಪೊಕ್ಕನುತ್ಸವದಿ (ಮೋಚಶ. ೨೦-೬೨). **ಬೋಳಕ** : ೧. ನಿಖಿಳ ಬೋಳಕರ ಕಟ್ಟೆಗಾಱರನೇಕವೃಗ್ಗಡೆ ಬೊಬ್ಬಿಟ್ಟುದು ರಾಯನೋಳ್ಗದೊಳು (ಮೋಚಶ. ೨೦-೩೮). ೨. ಕಲ್ಬುರ್ಗಿಯ ಸುರಪುರ ತಾಲ್ಲೂಕಿನ ಕೊಡೆಕಲ್ಲಿನಲ್ಲಿ ಇರುವ ಮುಸಲ್ಮಾನ್ ಗೋರಿಗೆ ಪೂಜೆಮಾಡುವ, ಜಾಡರ ಜಾತಿಯ, ಹಿಂದೂವ್ಯಕ್ತಿ: ಈ ಜಾಡರಲ್ಲಿ ಒಂದು ಕುಟುಂಬದವನು ಇದರ ಪೂಜಾರಿ. ಈ ಕುಟುಂಬದವರಿಗೆ ಬೋಳಕರೆಂದು ಹೆಸರು (ಕರ್ನಾಸಂ. ೦೯೦). [ ? ]

**ಬೋಳುಗರೆ** 'ಬಳ್ಳುಗರೆ' ನೋ.

**ಬೋಳುಗೈ** (ನಾ). (ಬಳೆಗಳು ಮುಂತಾದ ಆಭರಣ, ಅಲಂಕಾರ ಗಳಿಲ್ಲದ) ಬರಿದಾದ ಕೈ,—ಖಾಲಿಯಾದ ಕೈ : ಬಳೆಯೊಡೆದ ಬೋಳುಗೈ ! ತೈಲವಿಲ್ಲದ ವೇಣಿ ಪೊದರಾಗಿಹುದು ಪಣೆಲ್ಗೊಂಡು ! (ಶ್ರೀರಾಮಾ. ೬೬೦-೮೩೬). [ಬೋಳು (<ಬೋಡು) + ಕೈ$_2$ (<ಕಯ್$_2$)]

**ಬೋಳುತಲೆ** 'ಬೋಳುದಲೆ' ನೋ.

**ಬೋಳುದಲೆ**, ಬೋಳುತಲೆ (ನಾ). ಕೂದಲಿಲ್ಲದ ತಲೆ ; ಬೊಕ್ಕತಲೆ : ಸಿಡಿಲು ಹೊಡೆದಂತಸುರಸಭೆ ಕಂಗೆಡಲು ಮೆಱೆದುದು ಬೋಳುದಲೆಗಳು (ಕೌಶಿರಾ. ೦೬-೩೩): ಬೋಳುದಲೆಯು ಬಂದಿಯೊಡನೆ ಅವನು ಹುಚ್ಚಾ ಬಟ್ಟೆ ಕೂಗಾಡುತ್ತಿದ್ದನು (ಭುವರು. ೦೮೬). **ಬೋಳುತಲೆ** : ಒಂದು ತಾಟಿನ ತುಂಬ ಬೋಳುತಲೆಯ ಜಾರ್ಜರಾಜನ ರೂಪಾಯಿಗಳು (ಕಂಬಹು. ೨೦); ಬೋಳು ತಲೆಯನ್ನು ನಿಧಾನವಾಗಿ ಒರೆಸಿಕೊಳ್ಳುತ್ತ . . . ಕಣ್ಣನ್ನು ಅರಳಿಸಿದರು (ಹಾಳಹೊ. ೨). [ಬೋಳು (<ಬೋಡು) + ತಲೆ$_1$]

**ಬೋಳುಮಂಡೆ** 'ಬೋಟಿಮಂಡೆ' ನೋ.

**ಬೋಳೆ$_1$** 'ಬೋಟಿ$_3$' ನೋ.

**ಬೋಳೆ$_2$** (ನಾ). (ಕರಾ) ಗಿಡ, ಮರಗಳಿಲ್ಲದ ಬೋರೆ; ಬೋಳುಗುಡ್ಡ : ಹುಲ್ಲುಬೋರೆ: ದನಕರುಗಳೆಲ್ಲ ಬೋಳೆಗೆ ಮೇಯಲು ಹೋಗುತ್ತವೆ (ಕೂಬ). 'ಬೋರೆ$_1$' ಪರಾ. [<ಬೋಡು]

**ಬೋಳೆ$_3$** 'ಭೋಳೆ' ನೋ.

**ಬೋಳೆಯ$_1$** 'ಬೋಟಿ$_3$ಯ' ನೋ.

**ಬೋಳೆಯ$_2$** 'ಭೋಳೆ' ನೋ.

**ಬೋಳೆಯತನ** 'ಭೋಳೆತನ' ನೋ.

**ಬೋಳೈಸು** 'ಬೋಳಯಿಸು' ನೋ.

**ಬೋಟಿ$_1$**, ಬೋಳ$_1$ (ನಾ). ೧. ಸಾವು ; ಮೃತ್ಯು : "ಬೋಟಿಂ=ಮಿಟ್ಟು; ಮುಂಡಂ; ಬಂಪೌಷಧಂ" (ಕಮುದ. ಶಂ.೧). **ಬೋಳ$_1$** : ೧. "ಬೋಳ ಯೆನಲ್ ಮೃತ್ಯು" (ಅಭಿರ. ೨೬). ೨. ಅಪಾಯ ; ಗಂಡಾಂತರ; ವಿಪತ್ತು: ಒಂದು ಬೋಳಕ್ಕೆ ಬದುಕಿದೆ ತಂದೆ ಸಾಲ್ಗದ್ಯು (ಕುಂದ್ರಕ. ಪೀ. ೨೦೨-೧೯); ಹರಹರ ಮಹಾದೇವೋಂದು ಬೋಳಕೆ ಬದುಕಿದೆನು (ಕುಮ್ಮಾ. ಶೀ. ೩-೨೯); ಶಿರವ ತಡವರಿಸುತ ಮಹಾದೇವರಿಯ ಬವರದ ಬೋಳಕೊವ್ಮಗೆ ಹರಣವುಳಿದುದೆಯೆನುತ ರವಿಸುತನೇಱಿದನು ಗಿರಿಯಿ (ಕೊರರಾ. ೪-೩-೦೬).

**ಬೋಟರ್**=ಸಾಯುವವರು; ಮರ್ತ್ಯರು : ಈ ಬಾನ ಬನ್ನದ ಕುನ್ನಿ ಮೂಟಿರ್ ಬೋಟರ್ ! (ರಾವಣಾಶ್ವ. ೦೩೩-೪).

**ಬೋಟಿ$_2$** 'ಬೋಡ' ನೋ.

**ಬೋಟಿ$_3$**, ಬೋಳ$_3$ (ನಾ.). ಒಂದು ಬಗೆಯ ಔಷಧೀಸಸ್ಯ: "ಬೋಟಂ= ಮಿಟ್ಟು; ಮುಂಡಂ; ಬಂಪೌಷಧಂ" (ಕಮುದ. ಶಂ. ೧). ಸಕಷಾಯ ಕುಜಂಗಳ ದಂತಕಾಷ್ಠದೊಳ್ ಬೋಟಿ ಕೌಂಗು . . . ತೊಯ್ದುಕೊಂಡು ಪಲ್ಸುಲಿಯೆ ದಂತ ಬಳಮುಂ ಪಡೆಗುಂ (ಲೋಕೋಪ. ೭-೩) ; ಉಪ್ಪುಂ ಬೋಟಿಮುಮಂ ಸಮಸಪ್ಪಂತಿರೆ ಕೂಡಿ ಪುರಿದು. . . ಪೂಸುವುದು ಒಜ್ಜಿ ದುಷ್ಟವ್ರಣದೊಳ್ (ಅಶ್ವಶಾ. ೦೨-೧೯). **ಬೋಳ$_3$** : "ಇಕ್ಷುಪತ್ರಕಂ— ಬೋ(ಬ)ಳ" (೬ಕಂ. ೦೪) ; ವಿಷಮಜ್ವರಕ್ಕೆ ಕಷಾಯ :—ಬೇವಿನ ಒಳ ನಾರು, ಅಮರದವಳ್ಳಿ. ಬೋಳ, ಕಹಿಪಡವಲ ಇವ ಕಷಾಯವ ಮಾಡಿ . . . ಕುಡಿಸಲು ಬಹುದಿನಗಳಿಂದ ಇರುವ ವಿಷಮಜ್ವರ ಮಾಣುವುದು (ವಿವೈ. ೦೩೯). 'ಬಾಳ$_2$' ಪರಾ.

[ದೇ.॥ ತುಳು. ಬೋಳ; ತೆಲು. ಬೋಳ, ಬೋಲ./ ಮರಾ. ಬೋಳ]

**ಬೋಟಿಗಡಲೆ**, ಬೋಳಂಗಡಲೆ, ಬೋಳಗಡಲೆ (ನಾ). ಒಂದು ಬಗೆಯ ಔಷಧೀಸಸ್ಯ : "ಅಮೃತ—ಬೋಟಿಗಡಲೆ. ಹಂದಿಗಡ್ಡೆ" (೬ಕಂ. ೪). **ಬೋಳಂಗಡಲೆ** : ಶುಂಠಿ . . . ಬೋಳಂಗಡಲೆಬೇರು ಇವುಗಳನ್ನು ಸಮ ಭಾಗವಾಗಿ ಕಷಾಯವಿಕ್ಕಿ ಕೊಡಲು ಶೀತಜ್ವರಂ ಗುಣಮಕ್ಕು (ಸಕವೈ. ೬೬). **ಬೋಳಗಡಲೆ** : "ದ್ವಿಬಲಾ—ಕಳ್ಳಂಗಡಲೆ, ಬೋಳಗಡಲೆ" (ಶಾಹಬೀ. ೨-೨-೯ ಬ) ; ಬೋಳಗಡಲೆಯ ರಸದಲ್ಲಿ ಒಂದು ಗುಳಿಗೆಯ ಕೊಡಲು ಸರ್ವಜ್ವರ ಮಾಣ್ಗುಂ (ವಿವೈ. ೩೫). 'ಬೋಟಿತರ' ಪರಾ.

[ಬೋಟಿ$_3$ + ಕಡಲೆ]

**ಬೋಟಿತರ**, ಬೋಳತರ (ನಾ). ಒಂದು ಬಗೆಯ ಔಷಧೀಸಸ್ಯ: "ಬೋಟಿತರಮದು ಪತಂ ಮುಂಡಿ ಭಿಕ್ಷುಮೆಂದೆನಿಸಿಕ್ಕು" (ಮಂಗರಾ. ೩೯-೨೮); ಆಳೆಯೊಳ್ ಬೋಟಿತರಂ ಸಿತಾಜ್ಯದೊಳಮಂಗುರ್ ಬೆಲ್ಲದೊಳ್ ನಾಗರಂ . . . ಆಯುಷ್ಯಕರಂ (ಲೋಕೋಪ. ೯-೪೩); ಜೀರಿಗೆಯುಪ್ಪು ಬೋಟಿ ತರಂ . . . ಇಕ್ಕುವುದು ವಾಜಿಗೆ ಸರ್ವರುಜಾಪಹಾರಕಂ (ಅಶ್ವಶಾ. ೭-೩೦). **ಬೋಳತರ** : "ಮುಂಡಿ=ಬೋಳತರಂ" (ಕಾಕಶ್ವ. ೨೬); ಬೆಲ್ಲಪತ್ರಂ . . . ಬನ್ನಿ ಗೌರೀದರ್ಭೆ ಬೋಳತರ ನೇತ್ರಮೋಹನದಡವಿದವನ ಗರುಗಂ ಹಾರಿವಾಳ ನೇಱಿಲಪಲ್ಲವಾ ಇವು ಪತ್ರೆಗಳೊಳುತ್ತಮಂ(ವೀಶೈಷ. ೭-೦೦-೩೫); ಇಂಗು, ಸೈಂಧವ, ಶುಂಠಿ. . . ಬೋಳತರಂ, ವಾಯುವಿಳಂಗ ಇವಂ ಗೋಮೂತ್ರದಲ್ಲರೆದು ಕುಡಿಯ ಕೊಡಲು ಹೃದ್ರೋಗಂ ಕೆಡುಗುಂ (ಸಕವೈ. ೨೬೮). 'ಬೋಳದರಗ' ಪರಾ. [ದೇ.॥ ತೆಲು. ಬೋಡತರ]

**ಬೋಟಿಸು**, ಬೋಳಿಸು (ಕ್ರಿ). ೧. ಕೂದಲನ್ನು ತೆಗೆ; ಕ್ಷೌರ ಮಾಡು : ತಲೆ ಬೋಟಿಸಿ ಹೋತಂ ಮಿಡಿದಲೆಗುಡುವರ್ (ಸಮುಶ. ೯-೦೨೦) ; ಕಿಡೆ ಮೂಗೋಱಂ ಬೋಟಿಸಿ ನಡುದಲೆಯೊಳ್ ಮೆಟಿಸನೊಡೆದು (ಕಮುತ. ೧೮೮ ಕ್ರಯೋ) ; ಜಡೆಗಟ್ಟಿಬ್ಬಾರದೆಂದು ಬೋಟಿಸಿ (ಕಬ್ಬಾವು. ೧೨೦ ಕ್ರಯೋ). **ಬೋಳಿಸು** : ೧. ಆನು ನಿಮ್ಮ ಶರಣರಿಗೆ ಮಂಡೆಯ ಬೋಳಿಸಿಕೊಂಡು ಗಂಡುದೊತ್ತಾಬಿಲಯ್ಯಾ (ಬಸವ. ೩೫೬) ; ಮಂಡೆಯಂ ನುಣ್ಪೇಳೆ ಬೋಳಿಸಿ (ಬಸಪು. ೩೮-೦೪); ದೀರ್ಘಕುಂತಳವ ಬೋಳಿಸುವಾಗ ಕಂಡು ಕೆಲದೊಳಿರ್ದವರು ಗೋಳಿಡರೆ (ಭರತ. ೬೬-೦೨೫). ೨. (ಆಲಂ) ನಿಶ್ಶೇಷವಾಗಿಸು ; ಇಲ್ಲದಂತೆ ಮಾಡು; ನಷ್ಟ ಮಾಡು : ಹಣ್ಣು ಕಾಯಿಗಳೆಲ್ಲವನ್ನೂ ಬೋಳಿಸಿದರು (ಹಸುಹೊ. ೨೯೮).

ಬೋಳಿಸಿಕೊಳ್ಳು=(ಆಲಂ)ಕಳೆದುಕೊಳ್ಳು; ನಷ್ಟಮಾಡಿ ಕೊಳ್ಳು: ಒಂದೆರಡು ಲಕ್ಷ ರೂಪಾಯಿಗಳನ್ನು ಬೋಳಿಸಿಕೊಳ್ಳಲು ಸಿದ್ಧನಾಗಿರುವ ಒಬ್ಬ ನಿರ್ಮಾಪಕ ಸಿಕ್ಕರೆ ಇಂತಹ ಚಿತ್ರಗಳನ್ನು . . . ತಯಾರಿಸಬಹುದು (ಜಾಂಗೀ. ೩೮). [ಬೋಟು (< ಬೋಡು) + –ಇಸು₃]

**ಬೋಟಿಸುಹ** (ನಾ). ಕೂದಲು ತೆಗೆಯುವಿಕೆ; ಕ್ಷೌರ: "ಕ್ಷೌರಂ, ಭದ್ರಾಕರಣಂ, ಮುಂಡನಂ, ವಪನಂ — ಈ ೪ ಬೋಟಿಸುಹ" (ಹಲಾಯು. ೧೧೯–೩೬). [ಬೋಟಿಸು + –ಹ₂ (<–ಪ₂)]

**ಬೋಟು** 'ಬೋಡು' ನೋ.

**ಬೋಟುಮಂಡೆ**, ಬೋಳುಮಂಡೆ (ನಾ). = ಬೋಳುದಲೆ: ಕರದ ಕಮಂಡಲಂ ಕಿಱಿಯ ಚಂಡಿಕೆ ಮಿಂಚುವ ಬೋಟುಮಂಡೆ (ಶಾಂತೀಶ್ವ. ೭–೯೩). **ಬೋಳುಮಂಡೆ**: ಒಬ್ಬರು ಬೋಳುಮಂಡೆ ಅರಸರಿದ್ದರು ನಮಗೆ (ಸ್ವಸೃಜೂ. ೧೬). [ಬೋಟು (< ಬೋಡು) + ಮಂಡೆ]

**ಬೋಟಿ³**, ಬೋಳಿ₁ (ನಾ). ಒಂದು ಬಗೆಯ ಹರಿತವಾದ ಬಾಣ: "ಬೋಟಿ³ — ಒಂದಂಬಿನ ಭೇದಂ" (ಕಮುದ. ಕಂ. ೧): ಬೋಟಿ³ಯಂಬಿನ ಸೂಟ್ಸರಿ, ನಿಡುಗಲ್ಲ ಮೊಲ್ಸರಿ, ಬಡಿಗೋಲ ಜಡಿ (ರಾಮಾಶ್ವ. ೧೯೩–೨೪). **ಬೋಳಿ₁**: "ಬೋಳಿಯೆನಲ್ ಶರಭೇದಂ" (ಶಾರಂ. ೨೬); ಹಿಳಿಕು ಕವಲಂಬು ಬೋಳಿವಿದಿರೆಲೆ . . . ಸವಿವಾಯನೆಂಬ ನಾನಾ ಸರಳನು ಸೆಳೆದು (ಸೋಮಕ. ೩–೨೬); ಗಱಿಯೊಂದವರಲ ಸರಲನ ಮಸೆದ ಮುಮ್ಮೊನೆಯ ಬೋಳಿಯೋ . . . ಎನಿಸಿ ಕಣ್ಗೆಡ್ಡಮಾಗೆ (ಶದ್ವರಾ. ೩–೩೨); ದುರಿಯೋಧನನ ಮೆಯ್ಯಲಿ ಮೆತ್ತಿದನು ಮುಮ್ಮೊನೆಯ ಬೋಳಿಗಳ (ಕುಮಾರವ್ಯಾ. ೧೯–೩೦).

**ಬೋಟಿ³ಯ**, ಬೋಳಿಯ₁ (ನಾ). ದೇವತೆ; ಅಮರ: "ಅಮರ್ದುಣಿಗಳ್, ಕನಸಿಲ್ಲದರ್ . . . ಬೋಟಿ³ಯರ್—ಈ ೯ ದೇವರ್ಕಳ ಪೆಸರ್" (ಕಕನಾ. ೯೮–೧೯); ಇಂದ್ರನೀತನೆ ಮತ್ತಮಿಂದರ್ ದಿಕ್ಪಾಳರೆ ಬೋಟಿ³ಯರೀಕೆಯರ್ ಚಂದ್ರವಕ್ತ್ರೆಯರಗ್ಗದ ದೇವಸ್ತ್ರೀಯರೆ . . . ಎಂದಿಂದ್ರಜಾಲಮನೀಕ್ಷಿಸಿ ಚೋದ್ಯಂಬಟ್ಟುದು ಭೂಪಸಭಾಜನಂ (ಲೀಲಾವ. ೯–೦೩೬); ದೇಸಿಗರಂ ದೇವರ್ಕಳ್ಗೊಡೆಯರ್ ಮಾಟ್ಪಿರೆ ನೀಟ್ಕರಿಸದೆ ನಿಮ್ಮ ದೊರೆಗೆ ಬೋಟಿ³ಯರೊಳರೇ (ಕಮುದ. ೨೪ ಶ್ರಯೋ); ಪೊಂಬೆಟ್ಟಂ. . . ಬೋಟಿ³ಯರ್ಗೆ ವೋಳದೆಡೆಯುಮೆನಿಸಿ ಕಣ್ಗೊಳಿಕುಂ (ರಾಮಾಶ್ವ. ೭–೬). **ಬೋಳಿಯ₁**: ವಾಳದಂಡದ ಬೋಳಿಯಂಗೆ ಬಸವಣ್ಣಂ ಮುಯ್ಯಿಕ್ಕಿ ಕಾಳಿ ದರ್ಪ (ಬಸರ. ೯–೭೦); ನೀನಲ್ಲದೆ ಕೂರ್ತು ಪಾಲಿಸಿದ ಬೋಳಿಯರಾರ್ (ಶಂಕರಿ. ೪೮).

**ಬೋಳಿಯರರಸ**=ದೇವತೆಗಳ ಒಡೆಯ: ದೇವಾನಿಗಳರಸ . . . ದೇವ ಬೋಳಿಯರರಸ (ಬಂತೋಕ. ಪ. ೩೦೯–೧೧); ನೆನೆವರಿಗೆ ತನ್ನನು ತೆತ್ತು ಬದುಕುವೆನೆಂಬ ಬೋಳಿಯರರಸ ನಡೆತಂದ (ಕುಮಾರವ್ಯಾ. ೧೦–೩೨). **ಬೋಳಿಯರೆಱೆ³ಯ**=ಬೋಳಿಯರರಸ: ಸುಕೃತಂಗಳನಿತ್ತುಂ ಹರ್ಷದಿಂದೆ ಬೋಳಿಯರೆಱೆ³ಯಂ (ವೀರಭ. ೦೨–೧೨೧). **ಬೋಟಿ³ಯರೋಜ**, **ಬೋಳಿಯರೋಜ**=ದೇವತೆಗಳ ಗುರು; ಬೃಹಸ್ಪತಿ: "ಗುರುವಿನಲ್ಲಿ ಬೋಟಿ³ಯರೋಜನೆಂದು" (ಶಬ್ದಮಂ. ೦೪); ಬೋಟಿ³ಯರೋಜನ ಜಾಣ್ಮೆ . . . ತನ್ನೊಳೊದವೆ ಮನುವಿನ ಮಾರ್ಗದೆ ನಡೆಯುತ್ತೆ (ರಾಮಾಶ್ವ. ೦೦೯–೦೦); "ಬೃಹಸ್ಪತಿಗೆ ಪೆಸರೊರೆಗು ಬೋಳಿಯರೋಜನೆಂದು" (ಕಕರ. ೮೯).

**ಬೌಂಡರಿ** (ನಾ). ೧. ಎಲ್ಲೆ; ಮೇರೆ; ಸರಹದ್ದು. ೨. ಕ್ರಿಕೆಟ್ ಆಟದಲ್ಲಿ ಚೆಂಡನ್ನು ಹೊಡೆದಾಗ ಅದು ಮೈದಾನದ ಎಲ್ಲೆಯನ್ನು ದಾಟಿ ಹೋಗುವುದು; P ಇದಕ್ಕೆ ನಾಲ್ಕು ಓಟಗಳ ಬೆಲೆಯಿದೆ: ಒಂದು ಮ್ಯಾಚಿನಲ್ಲಿ ರಾಂ ಭುದರು ಬಾಲನ್ನು ಬೌಂಡರಿಗೆ ಕಳುಹಿಸಿದರು. ಆದರೆ ಅದು ಬೌಂಡರಿ ಗೆರೆ ದಾಟಲಿಲ್ಲ. ಈ ಕಾರಣದಿಂದ ಅಂಪೈರ್ ಅದನ್ನು ಬೌಂಡರಿ ಅಂತ ಹೇಳಲಿಲ್ಲ (ಜಾಂಗೀ. ೦೩೦).

[←ಇಂ. Boundary]

**ಬೌದ್ಧ** (ಗು). ೧. ಬುದ್ಧಿಗೆ ಸಂಬಂಧಿಸಿದ; ಬೌದ್ಧಿಕವಾದ. ೨. ಬುದ್ಧನಿಗೆ ಸಂಬಂಧಿಸಿದ: 'ಬೌದ್ಧಮತ' ಪರಾ. (ನಾ). ೩. ವಿಷ್ಣುವಿನ ದಶಾವತಾರಗಳಲ್ಲಿ ಒಂಬತ್ತನೆಯದು: "ಆ ಮತ್ಸ್ಯನಾ ಕೂರ್ಮ... ಬೌದ್ಧನಾ ಕೃಷ್ಣನೆಂದಾತನವತಾರ ಹತ್ತೆನಿಕ್ಕುಂ" (ಮಂಗರಾ. ೬–೦೯); ರಾಮನಾಮ ರತ್ನಹಾರ ದೊರಕಿತು ಎನಗೆ . . . ಬೌದ್ಧನೆಂಬೋ ಅತಳಗಳ ಬಿಗಿದಿತ್ತು ಬಹು ಬಗೆದಂತಿತ್ತು (ಪುರಂದ. ೩–೭೯–೩); ಬೌದ್ಧ ಒಂಭತ್ತನೆಯ ಅವತಾರ (ಗಗಹಾ. ೦೯–೯೩). ೪. ಬುದ್ಧನ ಮತಾನುಯಾಯಿ; ಬುದ್ಧನಿಂದ ಪ್ರವರ್ತಿತವಾದ ಮತದ ಅನುಯಾಯಿ: ನರಪತಿಯ ಹೊರೆಗಾ ಸಮಯದಲಿ ನೆರೆದು ಜೈನರು ಬೌದ್ಧರುಂ ಧಿಕ್ಕರಿಸಿ ಬಂದಿಂತೆಂದು ಹೇಳಿದರಾ ಮಹೀಶಂಗೆ (ಬಸಪು. ೩೦–೨೦). [ಸಂ.]

**ಬೌದ್ಧಮತ** (ನಾ). ಬುದ್ಧನಿಂದ ಪ್ರವರ್ತಿತವಾದ ಮತ: ಬೌದ್ಧಮತದ ನಾಶದೊಂದಿಗೆ ಬೌದ್ಧಗ್ರಂಥನಾಶವೂ ಆಯಿತು (ಕಕಾಅ. ೦೨೬); ಬೌದ್ಧಮತವೆಲ್ಲಾ ಒಂದೆಂದು ತಿಳಿದು ಶೂನ್ಯವಾದವೂ ವಸ್ತುವಾದವೆಂದು ಭ್ರಾಂತಿಗೆ ಅವಕಾಶವಾಗುವುದು (ಹಿಂದಗಾ. ೯೩). [ಸಂ.]

**ಬೌದ್ಧಾವತಾರ** (ನಾ). ವಿಷ್ಣುವಿನ ಒಂಬತ್ತನೆಯ ಅವತಾರ: ಬತ್ತಲೆ ನಿಂತಗೆ ಬೌದ್ಧಾವತಾರಗೆ . . . ಮುತ್ತೈದೆಯರಾರತಿಯೆತ್ತಿರೆ (ಪುರಂದ. ೯–೨೦೩–೩). [ಸಂ.]

**ಬೌದ್ಧಿಕ** (ಗು). ಬುದ್ಧಿಗೆ ಸಂಬಂಧಿಸಿದ: ಮುಕ್ತಾಯಕ್ಕ . . . ಬೌದ್ಧಿಕಅಜ್ಞಾನವನ್ನು ತನ್ನಲ್ಲೂ ಕಂಡುಕೊಂಡಿದ್ದಾಳೆ (ಕೂಪ್ಲಳು. ೦೦೯); ವಿಶ್ವದ ಸಮಸ್ತ ಬೌದ್ಧಿಕ ವ್ಯಾಪಾರಗಳಿಗೆಲ್ಲ ಮನುಷ್ಯನೇ ಕೇಂದ್ರಬಿಂದು (ಗ್ರಂಥಾಂ. ೧). [ಸಂ.]

**ಬೌದ್ಧಿಕತೆ** (ನಾ). ಬುದ್ಧಿಯ ಪ್ರಧಾನತೆ: ಪಾತ್ರರಚನೆಯ ದೃಷ್ಟಿಯಿಂದ ಎಡ್ವಿನ್ ವ್ಯಕ್ತಿತ್ವದಲ್ಲಿ ಕತೆಯ ಬೌದ್ಧಿಕತೆಯನ್ನು ತೂಗಿಸಿಕೊಂಡು ಹೋಗುವ ನಿರ್ಲಿಪ್ತತೆ ಇಲ್ಲ (ಹೊಸಕ್ಷಿ. ೨೯೦). [ಸಂ. ಬೌದ್ಧಿಕತಾ]

**ಬೌಬೌ** (ನಾ). ಒಂದು ಅನುಕರಣ ಶಬ್ದ: ಬೌಬೌ ಎಂದು ನಾಯಿ ಬೊಗಳುತ್ತಲೇ ಇತ್ತು (ರೂಢಿ).

**ಬೌಲಿ**, ಬೌಳಿ (ನಾ). [ಸಂಗೀತ] ಒಂದು ರಾಗದ ಹೆಸರು: ಘನರಾಗಗಳು, ನಾಟಿ, ಗೌಳ, ವರಾಲೀ ಅಂತೆಯೇ ಬೌಲಿ, ಶ್ರೀರಾಗ (ಕನುಶ್ರ. ೦೩೦). **ಬೌಳಿ**: ಬೌಳಿ – ೧೫ನೇ ಮೇಳಕರ್ತ ಮಾಯಾಮಾಳವಗೌಳದಲ್ಲಿ ಜನ್ಯ . . . ಬೆಳಗಿನ ಜಾವದಲ್ಲಿ ಹಾಡಬೇಕಾದ ರಾಗ (ಸಂಗೀಕಂ. ೦೨೯). 'ಭೌಳಿ' ಪರಾ [<ಸಂ. ಬೌಲೀ]

**ಬೌಳಿ** 'ಬೌಲಿ' ನೋ.

ಬ್ಯತಿಪಾತ 'ಬ್ಯತೀಪಾತ' ನೋ.

**ಬ್ಯತೀಪಾತ**, ಬ್ಯತಿಪಾತ (ನಾ). [ಜ್ಯೋತಿ] ಇಪ್ಪತ್ತೇಳು ಯೋಗಗಳಲ್ಲಿ ಹದಿನೇಳನೆಯದು: ಸೂರ್ಯಗ್ರಹಣ ಸಂಕ್ರಾಂತಿ ಬ್ಯತೀಪಾತಗಳೆಂಬ ಸಕಳಪುಣ್ಯದಿನಂ ದೊರೆಕೊಂಡಂದು (ಎಕ. XII, ಗುಬ್ಬಿ. ೦೦–೯೩; 1226). **ಬ್ಯತಿಪಾತ**: ಉತ್ತರಾಯಣ ಸಂಕ್ರಾನ್ತಿ ಬ್ಯತಿಪಾತದಂದು . . . ಧಾರಾಪೂರ್ವ್ವಕಂ ಮಾಡಿ ಬಿಟ್ಟ ಗದ್ದೆ (ಎಕ. VI, ಕಡೂರು. ೧೬–೩೯; 1171). [<ಸಂ. ವ್ಯತಿಪಾತ, ವ್ಯತೀಪಾತ]

ಬ್ಯವಸಾಯ 'ಬೆವಸಾಯ' ನೋ.

ಬ್ಯವಹಾರ 'ಬೆವಹಾರ' ನೋ.

**ಬ್ಯಾಂಕ್** 'ಬ್ಯಾಂಕು' ನೋ.

# ಭ



**ಭ** (ನಾ). ೧. ಕನ್ನಡವರ್ಣಮಾಲೆಯ ನಲವತ್ತುನಾಲ್ಕನೆಯ ಅಕ್ಷರ. ೨. ನಕ್ಷತ್ರ; ತಾರೆ : ''ಭಂ, ನಕ್ಷತ್ರಂ . . . ಉಡು – ಈ ೯ ನಕ್ಷತ್ರದ ಪೆಸರ್'' (ಹಲಾಯು. ೧೧-೩೦). 'ಭಗಣ' ಪರಾ. ೩. ಶುಕ್ರಗ್ರಹ. ೪. ಪ್ರಕಾಶ ; ಕಾಂತಿ. ೫. ಭ್ರಮೆ ; ಭ್ರಾಂತಿ. ೬. ಸಾಮ್ಯ ; ಹೋಲಿಕೆ. ೭. [ಗಣಿತ] ನಾಲ್ಕು ಎಂಬ ಸಂಖ್ಯೆಯ ಸಂಕೇತ : ''ಘ ಧ ಭ ವಂ ನೆಱೆ ನಾಲ್ಕು'' (ಮಂಗರಾ. ೧೧೪-೧೧). ೮. ಇಪ್ಪತ್ತ್ರೇಳು ಎಂಬ ಸಂಖ್ಯೆಯ ಸಂಕೇತ. ೯. [ಛಂದ] ಆದಿಯಲ್ಲಿ ಗುರುವೂ ಅನಂತರ ಎರಡು ಲಘುಗಳೂ (– ᴗᴗ) ಇರುವ ಮೂರು ಅಕ್ಷರಗಳ ಒಂದು ಗಣ : ನಭಭರಂಗಳುಮೊಂದಿರೆ ಪಾದದೊಳ್ . . . ದ್ರುತಪೂರ್ವ ವಿಲಂಬಿತಂ (ಛಂದೋಂಬು. ೨-೧೨೩).

**ಭಂಗ** (ನಾ). ೧. ಮುರಿಯುವಿಕೆ ; ಚೂರುಮಾಡುವಿಕೆ. ೨. ಭಾಗ ಮಾಡುವಿಕೆ ; ಪಾಲುಮಾಡುವಿಕೆ : 'ಭಂಗಂಬಡೆ' ಪರಾ. ೩. ಮುರಿದುದು ; ಮುರಿದು ಬಿದ್ದುದು : ತುಂಗವನ್ಯಮತಂಗಜದಂತಾಘಾತನಿಪಾತಿತಸಲ್ಲಕೀಭಂಗವಮಂ . . . ನೃಪನೆಯ್ದಿದನುದ್ಯಚ್ಛೃಂಗಮನಾಶತಶೃಂಗವಮಂ (ಶಂಶಭಾ. ೧-೧೧೩). 'ಭಂಗಂಬಡು' ಪರಾ. ೪. ತುಂಡು; ಚೂರು. ೫. ಭಾಗ ; ಪಾಲು. ೬. ಬಿರುಕು ; ಒಡಕು ; ಛಿದ್ರ. ೭. ನಾಶ ; ಹಾಳು : ಈ ಪರಿ ಕೊಲೆಗೆ ಭಂಗಕೆ ನಿನ್ನ ಬಿರುದರು ಬಂದುದಿಲ್ಲ (ಕುಮಾದ್ರೋ. ೧೬-೧೬) ; ಪಂಗುವಾದರೂ ಲಿಂಗಪೂಜೆ ಇದ್ದರೆ ಭಂಗವಾಗ (ಗಾದೆ). ೮. ಸೋಲು ; ಪರಾಜಯ : ಭಂಗಮನಾಳ್ದುವೀಕೆಯರ ಕುಂತಳವೆಂಬುದದಿರ್ಕೆ ತುಂಬಿಗಳ್ ಭಂಗಮನಾಳ್ದುವೀ ಮುನಿವಧೂಟಿ ಕುರುಳ್ಗಳವೆಂದು ಭಂಗಿಸಲ್ (ಜಗಿ. ೧೬-೩೪) ; ತುಂಬುರಂ ಬಂದು ಸೌಂದರನಡಿಗೆ ಬಳಲುತ್ತವೆಱಗಿದಂ ನಿಂದು ಬಿನ್ನೈಸಿದಂ ತನ್ನ ಭಂಗಮನದಂ (ಸಂಬಿರ. ೦೩-೯೪) ; ಕುರುಬಲಜಾಲದಲಿ ಜಳ್ಳುಗರು ಬಿದ್ದುದು ಭಂಗ ಶರಧಿಯಲಿ (ಕುಮಾಕ. ೨೪-೪೬). ೯. ಮಾನಹಾನಿ ; ಅಪಮಾನ ; ತೇಜೋಹಾನಿ : ಭರತಾವನೀಶ್ವರಂ ಗುರು ಪಿರಿಯಣ್ಣಂ ಚಕ್ರವರ್ತಿ ಮಹಿಮಾಱರನೀ ದೊರೆಯನುಮಳವಟಿಯೆ ವಸುಂಧರೆಯೊಳ್ ತಂದಿಕ್ಕಿ ಭಂಗಮಂ ಮಾಡುವೆನೇ (ಆಪು. ೧೪-೧೧೨) ; ಅಂಕ ಓಡಿದರೆ ತೆತ್ತಿಗಂಗೆ ಭಂಗವಯ್ಯಾ (ಬಸವ. ೨೯೯); ಎಲೆಲೆ ದೊದ್ದೆಗರೇಕೆ ಕೊಬ್ಬಿದರಳ ವನಜೆಯದೆ ನುಗ್ಗು ಮುಱಿದರೆ ದಳದ ದೊರೆಗದು ಭಂಗವೇ (ಕುಮಾದ್ರೋ. ೦೬-೨೯). ೧೦. ತೊಂದರೆ; ಕಷ್ಟ; ಕ್ಲೇಶಕರವಾದುದು : ದೂರ ದುರ್ಜನರ ಸಂಗ ಭಂಗವಯ್ಯಾ (ಬಸವ ೦೩೪) ; ಸಂಗದಿಂ ಕೆಳೆಯಿಲ್ಲ ಭಂಗದಿಂ ಮೋಱೆಯಿಲ್ಲ ಗಂಗೆಯಿಂದಧಿಕ ನದಿಯಿಲ್ಲ (ಸರ್ವಜ್ಞ. ೨೩೦); ಸಹ್ಯವಲ್ಲದ ದುರದೃಷ್ಟವೆಂದೆನುವುದು ಅದು ನಮಗೆಂದಿಗು ಬರದು ಈಯೊಂದು ಭರವಸೆಯೊಳು ನಾವು ನಡೆದಂದು ನಮಗಾವ ಭಂಗವು ಇರದು (ಇಂಶಾಕ. ೦೪೦-೯೨). ೧೧. ಅಲೆ ; ತೆರೆ : " ವೀಚೀ, ಭಂಗಃ, ತರಂಗಃ – ಈ ೩ ತೆರೆ " (ಹಲಾಯು. ೧೦೬-೩೧); ಅಕಳಂಕ ರತ್ನಂಗಳೋಳಿಯಿಂದೈತಪ್ಪ ಸ್ಥಲಭಂಗ [ಪಾಠಾಂ. ಭೋಗದ]ಸುಳಿಯ ಸವ್ವಳಿಗಳಿಂದೆ . . . ಕಡಲ್ ಕಣ್ಗೆಸೆದುದು (ಶಬಪು. ೨-೩); ಭೃಂಗದ ಸಂಗೀತದ ಭಂಗಂಗಳು ಸುಳಿವುವು ಸುಳಿಗಾಳಿಯನೇರಿ (ಕರುಶ್ರಾ. ೩೪-೨೬). ೧೨. ಕುಂದು; ದೋಷ. ೧೧, ೧೨ : ಕಾವ್ಯಮೆನಿಸಿರ್ದು ವಿಬುಧಸುಸೇವ್ಯಂ ಘನರಸ ಮಿದೆನಿಸಿ ಭಂಗವಿರಹಿತಂ . . . ಮಶ್ಮೃತಿ ಚಮತ್ಕೃತಿಪ್ರದಮಲ್ತೇ (ಗಾಙಕೇ. ೦-೯೦). 'ಭಂಗಸಮಿತಿ' ಪರಾ. ೧೩. ನಿರಾಶೆ. ೧೪. ಬಾಗು; ತಿರುವು. ೧೫. ಬಾಗುವಿಕೆ; ಸಂಕೋಚಗೊಳ್ಳುವಿಕೆ. ೧೬. ಹಾರುವಿಕೆ. ೧೭. ಚಲನೆ; ಅಲುಗಾಟ: 'ಭಂಗಂಬೆಱು' ಪರಾ. ೧೮. ಕೊಂಕು ; ವಕ್ರತೆ; ಮಣಿತ : ಭಂಗಮನಾಳ್ದುವೀಕೆಯರ ಕುಂತಳವೆಂಬುದದಿರ್ಕೆ ತುಂಬಿಗಳ್ ಭಂಗಮನಾಳ್ದುವೀ ಮುನಿವಧೂಟಿ ಕುರುಳ್ಗಳವೆಂದು ಭಂಗಿಸಲ್ (ಜಗಿ. ೦೬-೩೪); ಭಂಗಮನುಂತುಂ ತಳೆದ ಲತಾಂಗಮನಿಂ ನಿನ್ನ ಕೋಪು ಳಾಂಗದ ಚೆಲ್ವಿಂ ಗೆಲ್ದು (ಚಂದ್ರಪು. ೭-೭೩). 'ಭ್ರೂಭಂಗ' ಪರಾ. ೧೯. ಬಟ್ಟೆಯ ಮಡಿಕೆ. ೨೦. ಕಪಟ; ಮೋಸ: 'ಭೃಂಗಗಾಜಿ' ಪರಾ. ೨೧. [ಗಣಿತ] ಒಂದು ಬಗೆಯ ಗಣಿತ ; ವಿಕಲ್ಪಗಣಿತ : " ವಿಕಲ್ಪ " ಅಥವಾ " ಭಂಗ " ಎಂಬ ಗಣಿತಶಾಖೆಯ ವಿಷಯವಾಗಿ ಸ್ವಲ್ಪ ವಿಸ್ತರಿಸಿ ಹೇಳುವುದು ಅವಶ್ಯಕವಾಗಿದೆ (ಗಣಿತ. ೨೦೬). ೨೨. [ನಾಟ್ಯ] ದೇಹವನ್ನು ನಿಲ್ಲಿಸುವ ರೀತಿ ; ಭಂಗಿ : '' ಭಂಗ " ಎಂದರೆ ಶರೀರವನ್ನು ನಿಲ್ಲಿಸುವ ರೀತಿ. ಶರೀರವು ಸಮರೇಖೆಯಲ್ಲಿ ಇದ್ದರೆ ಸಮಭಂಗವೆನಿಸುವುದು (ಶಾಂಕ್ರ. II. ೬೩೪). 'ತ್ರಿಭಂಗ' ಪರಾ. [ಸಂ.]

**ಭಂಗಂಬಡು**, ಭಂಗಪಡು, ಭಂಗಬಡು, ಭಂಗವಡು (ಕ್ರಿ). ೧. ಅವಮಾನಕ್ಕೊಳಗಾಗು ; ಅಪಮಾನ ಹೊಂದು : ತಾರಕನಿಂದ ಭಂಗಂಬಟ್ಟು ದೇವೇಂದ್ರತ್ವವೇಕೆಮಗೆ (ಬಸಪು. ೦೬-೨೨). **ಭಂಗಪಡು :** ೧. ತುಂಗಬಲಸೌವಿತ್ರಿಯಿಂದುಱೆ ಭಂಗಪ[ಪಾಠಾಂ. ಬ]ಟ್ಟು ಮಹೋಗ್ರರಜನಿ ಚರಾಂಗನೆಯ ದೂಱನಲಿ ವಿರನ್ಯೆತಂದನಾಹವಕೆ (ತೊರಗಾ. ೩-೩ ಸೂಕದ) ; ಅವರು ಗಂಡನ ಮನೆಗೆ ಹೋಗಬಾರದೇಕೆ ? ಇಷ್ಟೊಂದು ಭಂಗಪಟ್ಟುಕೊಂಡೂ ಇಲ್ಲೇ ಇರಬೇಕೆಂದೇನು ? (ಕುಸುಸಂ. ೯೩). ೨. ಕಷ್ಟಕ್ಕೆ ಗುರಿಯಾಗು; ತೊಂದರೆಗೊಳಗಾಗು : ಅಂಗಭೋಗಕೆ ಮೆಚ್ಚಿ ಲಿಂಗಭಕ್ತಿಯ ಮಱೆದೆ ಭಂಗಪಡುತಿಹೆನು (ಸರ್ವಜ್ಞ. ೦೦೩); ಭ್ರಮರ ಭ್ರಮಿಸಿ ಬೇಗೂ ಭಂಗಪಟ್ಟ ಹಾಗೆ (ಗಾದೆ). **ಭಂಗಬಡು :** ೧. ಹಂಗಿನರಮನೆಯಿಂದ ಪಿಂಗಡದ ಗುಡಿ ಲೇಸು ಭಂಗಬಟ್ಟುಂಬ ಬಿಸಿಯನ್ನಕ್ಕಿಂತಲು ತಂಗುಳವೆ ಲೇಸು (ಸರ್ವಜ್ಞ. ೦೩೩೪). ೩. ಮುರಿದು ಹೋಗು; ಚೂರಾಗು : ಲೋಕದೊಳು ಮುಂಗೈಯ ಕಂಕಣಕೇಕೆ ಕನ್ನಡಿ ಭಂಗಬಟ್ಟ ಜಿನಾಕೃತಿಯೆ ತಾಂ ಸಾಕ್ಷಿಯಲ್ಲಾ (ಬಸಪು. ೩೦-೬೩). **ಭಂಗವಡು :** ೨. ವಿಷ್ಣು ಬಲ್ಲಿದನೆಂಬೆನೆ ದಶಾವತಾರದಲ್ಲಿ ಭಂಗವ[ಪಾಠಾಂ. ಬ]ಟ್ಟುದಕ್ಕೆ ಕಡೆಯಿಲ್ಲ (ಬಸವ. ೩೩೨). [ಭಂಗ + ಪಡು$_1$]

**ಭಂಗಂಬಡೆ**, ಭಂಗವಡೆ (ಕ್ರಿ). ೧. ಸೋಲು ; ಪರಾಜಯಗೊಳ್ಳು : ಯಮಕಿಂಕರರು ಭಂಗಂಬಡೆದು ಹರಿಕಿಂಕರರ ಕೈಯಲಿ ಬಿಸುಟಜಾಮಿಳನನು ವಿಷಾದದಲಿ ಮರಳಿ ಹೋದವರೇನನೆಂದರು (ಪಭಾಗ. ೬-೩-೧). **ಭಂಗವಡೆ:** ೧. ಲೋಕಮಾನ್ಯನು ಕರ್ಣ ಕುರುಬಲದ್ದಾಕಿವಾಳನು ಭಂಗವಡೆದುದೆ ಸಾಕು ನೀ ಸಾರೆಂದು ಭೀಮನ ನೂಕಿದನು ಶಲ್ಯ (ಕುಮಾಕ. ೦೨-೩೦) ; ಸಿಂಗಾಡಿಯಂಬಿನ ಮಳೆಯುಱುಬಿಗೆ ಬಲ ಕಂಗೆಟ್ಟು ದೆಸದೆಸಗೋಡಿ ಭಂಗವಡೆಯೆ (ಕಂಪಾ. ೧೧-೬೦). ೨. ವಿಭಾಗ ಹೊಂದು ; ಬೇರೆ ಬೇರೆಯಾಗು : ಭಂಗವಡೆದೆಸೆಗುಮವರ ಗೃಹಂಗಳ್ ಮಾಣಿಕದ ಸಂಜೆಯಿಂ ನೀಲದ ಕರ್ದಿಂಗಳಿನೆಳಮುತ್ತಿನ ಬೆಳ್ದಿಂಗಳಿನುಜ್ವಲಿಸಿ ಪೊಳೆವ ವಜ್ರದ ಬಿಸಿಲಿಂ (ಸೂಕ್ತಿಸು. ೪-೧೩೦). [ಭಂಗ + ಪಡೆ$_1$]

**ಭಂಗಂಬೆಱು** (ಕ್ರಿ). ಅಲುಗಾಡು; ಚಂಚಲತೆಯನ್ನು ಹೊಂದು; ಸ್ಥಿರತೆಯಿಲ್ಲದಾಗು: ಪಿರಿದುಮೆರ್ದೆಡವಕೆ ವಾಜಿಸುತಿರೆ ಭಂಗಂಬೆತ್ತು ಹಾರಲತೆ ಘನಕುಚದೊಳ್ ಕರವಿಕ್ಷೇಪದೆ ನರ್ತಿಸೆ ನರೇಂದ್ರನಂದನನ ನೊಲ್ದು ನೋಡಿದಳೊರ್ವಳ್ (ಕಾದಂಪೂ. ೪೮೦). [ಭಂಗ + ಪೆಱು$_1$]

**ಭಂಗಗಾಱ** (ನಾ). ನಂಬಿಕೆಗೆ ದ್ರೋಹ ಬಗೆಯುವವನು; ವಿಶ್ವಾಸ ಘಾತುಕ; ವಂಚಕ: ಲಿಂಗವ ತೋಱಿ ಉದರವ ಹೊರೆವ ಭಂ[ಪಾಠಾಂ. ಬಂ]ಗಗಾಱ ನಾನು ಕೂಡಲಸಂಗಮದೇವಾ (ಬಸವ. ೩೦೬); ಹಿಂದಾದ ಮುಕ್ತಿಯ ಮಾಱಿಕೊಂಡುಂಬ ಭಂಗಗಾಱರ ತೋಱದಿರಾ (ಚನ್ನವ. ೪. ೦೨೦-೩೭೦). [ಭಂಗ + –ಕಾಱ]

**ಭಂಗಗೊಳು** (ಕ್ರಿ). ಕಷ್ಟಕ್ಕೆ ಗುರಿಯಾಗು; ತೊಂದರೆಗೊಳಗಾಗು: ಕೆಡಕು ಕೂಡುವದೆಂದು ಅಡವಿಗೋಡಲು ಬೇಡ ಕಡುಭಯದಿ ಭಂಗ ಗೊಳಬೇಡ ವಿಧಿಯಱಿಯದವರೊಂದುಂಟೆ (ಸರ್ವಜ್ಞ. ೩೭೭).
[ಭಂಗ + ಕೊಳು (<ಕೊಳ್$_1$)]

**ಭಂಗಚಿಕಿತ್ಸೆ** (ನಾ). ಅವಮಾನವನ್ನು ಹೋಗಲಾಡಿಸಲು ಮಾಡುವ ಪರಿಹಾರೋಪಾಯ: ಭಂಗಚಿಕಿತ್ಸೆಗೆಯ್ದು ಪುವೆನಲ್ ದುರಿತಾಪಹಮಪ್ಪ ಹೋಮಧೂಮಂಗಳ ಕಂಪನುಣ್ಬುವಳಿರಾಜಿಗಳಾ ಮುನಿಗೇಹರಾಜಿಯೊಳ್ (ಜಗನ್ನಾ. ೧೭-೫೪). [ಭಂಗ + ಚಿಕಿತ್ಸೆ]

**ಭಂಗತಾಳ** (ನಾ). [ಸಂಗೀತ] ತಾಳದಲ್ಲಿ ಒಂದು ಪ್ರಭೇದ: ಭಂಗತಾಳ ಉಪಭಂಗತಾಳ ವಿಭಂಗತಾಳ ವಿತಾಳ ಶುದ್ಧತಾಳ ಅನಂತಾಳ ಮೆಂಬಾಱು ವರ್ಗಸಂಖ್ಯಾಭೇದವಾಗಿಹವೆಂದು ಪೇಳ್ವ ಭರತಶಾಸ್ತ್ರ ಪ್ರವೀಣರಪ್ಪ ತಾಳಧಾರಿಗಳಿಂ (ಶಿವೇಶ. ೨೩೬). [ಸಂ. ಭಂಗತಾಲ]

**ಭಂಗಪಡಿಸು** 'ಭಂಗವಡಿಸು' ನೋ.

**ಭಂಗಪಡು** 'ಭಂಗಂಬಡು' ನೋ.

**ಭಂಗಬಡಿಸು** 'ಭಂಗವಡಿಸು' ನೋ.

**ಭಂಗಬಡು** 'ಭಂಗಂಬಡು' ನೋ.

**ಭಂಗವಡಿಸು**, ಭಂಗಪಡಿಸು, ಭಂಗಬಡಿಸು (ಕ್ರಿ). ೧. ಸೋಲಿಸು; ಪರಾಜಯಗೊಳಿಸು: ಹಿಂಗದೆ ಕಾದಿದ ಕೆಂಗ ಹನುಮನನು ಭಂಗವಡಿಸಿ ಸೆಱೆವಿಡಿದು (ಕಂಪರಾ. ೧೭-೩೯). **ಭಂಗಪಡಿಸು**: ೨. ಉಲ್ಲಂಘಿಸು; ಅತಿಕ್ರಮಿಸು: ಉಲ್ಲಂಘಿಸು; ಭಂಗಪಡಿಸು (violate. ಚಿತ್ರಾ. ೬೭). **ಭಂಗಬಡಿಸು**: ೩. ಅವಮಾನಗೊಳಿಸು: ಹೆಂಗುಸಿವಳಿವಳೆಸುವನುಚ್ಚುವು ದಂಗವೇ ಕ್ಷತ್ರಿಯರಿಗೆ . . . ಭಂಗಬಡಿಸಿಯೆ ಬಿಡುವುದೇ ಭಟರಂಗ (ತೊರಿರಾ. ೦-೦೦-೯). [ಭಂಗವಡು (<ಭಂಗಂಬಡು) + –ಇಸು$_3$]

**ಭಂಗವಡು** 'ಭಂಗಂಬಡು' ನೋ.

**ಭಂಗವಡೆ** 'ಭಂಗಂಬಡೆ' ನೋ.

**ಭಂಗವಾದ** (ನಾ). [ಜೈನ] ಜೈನ ಸಿದ್ಧಾಂತದಲ್ಲಿ ಪ್ರತಿಪಾದಿತವಾಗಿರುವ ಪ್ರಧಾನತತ್ತ್ವ; ಏಳುಬಗೆಯ ಭಂಗವನ್ನು ವಿವರಿಸುವ ತತ್ತ್ವ; ಸಪ್ತಭಂಗಿ; ಸ್ಯಾದ್ವಾದ: ಸ್ಯಾದ್ವಾದವು ಅನೇಕ ವಿರೋಧಿವಾದ ಗಳನ್ನು ಸಮನ್ವಯ ಮಾಡುವಾಗ ಅದರಲ್ಲಿ ನಯವಾದ ಭಂಗವಾದಗಳು ತನ್ನಿಂದ ತಾನೇ ರೂಪಗೊಳ್ಳುತ್ತವೆ (ಜೈನಶ. ೨೨೨). [ಸಂ.]

**ಭಂಗವ್ಯಾಕುಳಿತ** (ನಾ). ೧. ನಾಶದಿಂದ ಕಳವಳಗೊಂಡಿರುವುದು. ೨. ಅಲೆಗಳಿಂದ ಅಸ್ತವ್ಯಸ್ತವಾಗಿರುವುದು. ೧, ೨: ಆ ಮಹಾರ್ಣವಂ ಸಮುದ್ರಮಾಗಿಯುಂ ಅಪಾರವಿಸ್ತಾರಿಯುಂ ಭಂಗವ್ಯಾಕುಳಿತಮಾಗಿಯು ಮಚ್ಯುತಪ್ರಭಾವಭಾಸುರಮುಂ . . . ಎನಿಸಿರ್ದುದು (ಜಗನ್ನಾ. ೦-೪೪ ವ).
[ಸಂ. ಭಂಗವ್ಯಾಕುಲಿತ]

**ಭಂಗಶ್ಲೇಷ** (ನಾ). [ಕಾವ್ಯಮೀ] ಒಂದು ಬಗೆಯ ಶಬ್ದಾಲಂಕಾರ: ಒಂದು ಪದವನ್ನು ಬೇರೆ ಬೇರೆ ರೀತಿಯಲ್ಲಿ ವಿಭಾಗ ಮಾಡಿದರೆ ಬೇರೆ ಬೇರೆ ಅರ್ಥವು ಹೊರಡುವ ಪದಸಂಯೋಜನೆ: ಪದವರ್ಣ ವಿಭಕ್ತಿವಿಭಾಗದಿಂ ದ್ವಿಧಾರೂಪಮಿಷ್ಟಮಕ್ಲಿಷ್ಟಂ ಶಬ್ದದೊಳಾಗಿ ತೋಱು ವಂದಂತದು ಭಂಗಶ್ಲೇಷಮೆಂದು ಪೇಱಲ್ಪಡೆಗುಂ (ಕಾವ್ಯಾವ. ೭೭೯). ಉದಾ: 'ಕಡಲಂ ಮಿಗೆವಂದಮರಗಜೇಂದ್ರಂ ಸೊಗಯಿಸುವುದು ದಾನವಾರಿಲೇಖಾನುಗತಂ' ಈ ಪದ್ಯಭಾಗದಲ್ಲಿ 'ಅಮರಗಜೇಂದ್ರವು (ಐರಾವತ) ಕಡಲಂ ಮಿಗೆವಂದು ಸೊಗಯಿಸುವುದು' ಎಂದು ಕಡಲಿಗೂ ಐರಾವತಕ್ಕೂ ಹೋಲಿಸುವಾಗ 'ದಾನವಾರಿಲೇಖಾನು ಗತಂ' ಎಂಬ ಪದವನ್ನು 'ದಾನ+ವಾರಿ+ಲೇಖಾ+ಅನುಗತಂ' ಎಂದು ಒಡೆದರೆ, 'ಮದೋದಕದ ಗೆರೆಯಿಂದ ಕೂಡಿಕೊಂಡಿರುವ' ಎಂದು ಐರಾವತಕ್ಕೆ ಅನ್ವಯವಾಗುತ್ತದೆ. ಅದೇ ಪದವನ್ನು 'ದಾನವ+ಅರಿ+ಲೇಖ+ಅನುಗತಂ' ಎಂದು ಒಡೆದರೆ 'ರಾಕ್ಷಸರ ಶತ್ರುಗಳಾದ ದೇವತೆಗಳಿಂದ ಆಶ್ರಯಿಸಲ್ಪಟ್ಟುದು' ಎಂದು ಕಡಲಿಗೆ ಅನ್ವಯವಾಗುತ್ತದೆ. ಇದಕ್ಕೆ ಭಂಗಶ್ಲೇಷವೆಂದು ಹೆಸರು. [ಸಂ.]

**ಭಂಗಸಮಿತಿ** (ನಾ). ೧. ಅಲೆಗಳ ಸಮೂಹ. ೨. ಕುಂದುಗಳ ಸಮೂಹ. ೧, ೨: ಕುಮುದದಿಂ ಪ್ರತಿಕೂಲದಿಂ ವಿಜಾತಿಗಳ ಸಂಗಮದಿಂದ ಜಡಜೀವನೋಪಾಯದಿಂ ಭಂಗಸಮಿತಿಯಿಂದಿರ್ಪ ತಾವರೆಗೊಳಂ (ಛಾವಶಂ. ೩-೪೫). [ಸಂ.]

**ಭಂಗಾರ** 'ಬಂಗಾರ' ನೋ.

Δ**ಭಂಗಾಱ** 'ಬಂಗಾರ' ನೋ.

**ಭಂಗಿ$_1$**, ಬಂಗಿ (ನಾ). ೧. ಸೇವಿಸಿದರೆ ಅಮಲೇರಿಸುವ ಒಂದು ಬಗೆಯ ವನಸ್ಪತಿ; ಗಾಂಜಾ: ಎಲ್ಲಾ ಬಿಟ್ಟು ಭಂಗೀ ನಟ್ಟ (ಗಾದೆ). ೨. ಗಾಂಜಾ ದಿಂದ ತಯಾರಿಸಿದ ಮಾದಕವಸ್ತು: ಅಡಗ ತಿಂಬರು ಕಣಕದಡಿಗೆ ಇರಲ್ಕೆ ಸುರೆಯ ಕುಡಿವರು ಪಾಲಿರಲ್ಕೆ ಮುಕ್ಕುವರು ಭಂಗಿಯ ಸಕ್ಕರೆ ಇರಲ್ಕೆ (ದೇರಾವ. ೩೩-೩೮); ಇದುವೆ ಪಿತ್ತದ ವಿಕಳವೋ ಮದ್ಯದ ವಿಕಾರವೊ ಭಂಗಿ ತಲೆಗೇಱಿದುದೊ (ಕುವ್ಯಾಸ. ೨-೬೦); ಭಂಗಿಯನು ಸೇದುವನ ಭಂಗವನು ಏನೆಂಬೆ ಭಂಗಿಯ ಗುಂಗು ತಲೆಗೇಱಲಾಡುತಿಹ ಮಂಗನಂತಿಹನು (ಸರ್ವಜ್ಞ. ೦೩೦೫). **ಬಂಗಿ**: ೧. "ವಿಜಯಿಯೆನೆ ಬಂ[ಪಾಠಾಂ. ಭಂ]ಗಿ" (ಮುಂಗಲಾ. ೩೫-೦೫). ೨. ಒಳ್ಳೆ ಬಂಗಿ ನುಗ್ಗೆ ಉಳ್ಳಿ ಮೊದಲಾದ ಇವನೆಲ್ಲವ ಬಿಡಬೇಕು (ಐರೇಶ್ಯ. ೭೪); ಹೇಸರಗತ್ತೆಯ ಮೇಲೆ ಬಂಗಿಯ ಹೇಱು ಸಾಸಿರ ಗಂಗ ಸಾರಗಳ ಸೂಸುವ ಸಾರಾಯದ ಪೀಪಗಳ ಲೆಕ್ಕವೇನೆಂದು ಪೇಳ್ವರಾರದನು (ಕಂಪರಾ. ೦೦-೩೮); ಅಂಗಿ ಕೊಟ್ಟು ಬಂಗಿ ಸೇದಿ ಮಂಗನಾದ (ಗಾದೆ). ೩. ಗಾಂಜಾಸೊಪ್ಪಿನಿಂದ ಮಾಡುವ ಪಾನೀಯ,—ಮದ್ಯ: (*). ೪. ಗಾಂಜಾ ಸೇದುವ ಚಟಕ್ಕೆ ಬಿದ್ದವನು; ಗಾಂಜಾ ಕುಡಿಯು ವವನು: ಶುದ್ಧ ಬಂಗಿಯ ಹಾಗೆ ಆಡುತ್ತೀಯಲ್ಲ (ರೂಢಿ).

**ಭಂಗಿಪುಡಿ** = ಗಾಂಜಾ ಸೊಪ್ಪನ್ನು ಒಣಗಿಸಿ ಮಾಡಿದ ಪುಡಿ,–ಚೂರ್ಣ: ಅರಳಂ ಸೂಸಲುಮಂ ಸಮಂತಟಿನಿಯಂ ಭಂಗೀಪುಡೀ ಬೆಲ್ಲಮಂ ಬೆರಸಿರ್ದಾ ತಿಲಪಿಷ್ಟಮಂ . . . ಮಾಱುವರ್ ಪ್ರತಿದಿನಂ ಮದ್ಯಾರ್ಥಿಗಳ್ ಸಂತತಂ (ದಶಾವ. ೫-೬೨). **ಭಂಗಿಸೊಪ್ಪು**, **ಬಂಗಿಸೊಪ್ಪು** = ಗಾಂಜಾಗಿಡದ ಸೊಪ್ಪು: ಉಮ್ಮತ್ತದ ಸೊಪ್ಪಿನ ರಸದಲ್ಲಿ ಒಂದು ಮರ್ದನೆ, ಭಂಗಿಸೊಪ್ಪಿನ ರಸದಲ್ಲಿ ಒಂದು ಭಾವನೆ (ವಿಷ್ಯಾ. ೨೫); ಪಂಚಕೋಲಗಳು, ತಪಸಿ, ಕೊಮ್ಮೆ . . . ಗುಗ್ಗುಳ, ವಿಜಯಾ (ಭಂಗಿಸೊಪ್ಪು) . . . ಪ್ರಯೋಗಿಸಲು ಶ್ವಾಸಕಾಸಗಳು . . . ಗುಣಹೊಂದುವುವು (ಸಚಿವ್ಯ. ಶಂ. ೪೩೮); ಬಂಗಿಸೊಪ್ಪಿನಿಂದ ಮದ್ಯ ತಯಾರಿಸುತ್ತಾರೆ (ರೂಢಿ). [<ಪ್ರಾ. ಭಂಗೀ, ಭಂಗಾ./ ಸಂ. ಭಂಗಾ./ ತೆಲು. ಭಂಗಿ, ಬಂಗಿ./ ಹಿಂ. ಮರಾ. ಭಾಂಗ್]

**ಭಂಗಿ$_2$** (ನಾ). ೧. ಮುರಿಯುವುದು ; ಸೀಳುವುದು. ೨. ಒಡೆತ ; ಸೀಳು ; ಬಿರುಕು. ೩. ಬಾಗು ; ತಿರುವು : ನೆಲೆನೆಲೆ ಭಂಗಿ ಭಂಗಿ ಪದವಣ್ ಬೆಳರ್ವಾಯ್ ಪೆಱತಲ್ಲಿದೆಂತೊ ಕೋಮಲಲತೆ ಪೇೞ್ ಮೊನ್ನಿನಿಯಳಂ ಮಾಱಿಗೊಂಡುದೊ ಸೂಱಿಗೊಂಡುದೋ (ಶಂಶಥಾ. ೩-೦೨). ೪. ಅಸ್ಥಿರತೆ ; ಭಂಗುರತೆ. ೫. ಡೊಂಕಾದ ದಾರಿ.—ಹಾದಿ. ೬. ಅಲೆ ; ತೆರೆ. ೭. ಮೋಸ ; ವಂಚನೆ. ೮. ನೆಪ ; ವ್ಯಾಜ. ೯. ಬಗೆ ; ವಿಧಾನ ; ರೀತಿ : "ವ್ಯಾಕೂ(ಕ್ರ)ತಿಃ, ಭಂಗಿಃ —ಈ ೨ ಪರಿ" (ಹಲಾಯು. ೧೨೩-೬೬) : ಆವ ಭಂಗಿಯಿಂ ನೋಡುವೊಡೆನ್ನೊಳಿಲ್ಲ ಗುಣಲೇಶಮುಮಿಾ ತಱಿದಿಂದನುಗ್ರಹಂಮಾಡು ವುದರ್ಕೆ ದೇವಿಯರದೊಂದು ಋಜುತ್ವಮೆ ಮುಖ್ಯಕಾರಣಂ (ಕಾದಂಉ. ೦೩೧) : ಜೋಲ್ದುಗುವ ಕುರುಳಂ ತಿದುರ್ತತ್ತುವಿಂತೆಂದಳಂದಿನ ಭಂಗಿಯುಂ (ದುಕೋಚ. ೨-೭೧). ೧೦. ದೇಹದ ನಿಲುವು.—ವಿನ್ಯಾಸ : ಅಂಗೋ ಪಾಂಗದೊಳ್ ಸಂಗಳಿಸುವ ಪಲವುಂ ಭಂಗಿಯಿಂ . . . ಎಸೆದುದು ಭರತಾಂತಃಪುರಸ್ತ್ರೀಸಮೂಹಂ (ಆದಿಪು. ೧೦ ೦೨೩) ; ಪೊಸಬಿಸುಸುಯ್ಯ ಪಾಡಱಿದ ಮೆಯ್ಯ ಕದಂಪಿನ ಕೆಯ್ಯ ಭಂಗಿ ಕಣ್ಗೆಸೆಯೆ (ಶಾಂತಿಪು. ೮-೯೮) ; ಮುರಿಮುರಿದು ನೋಟ್ಟ ಭಂಗಿಯಿಂ ತಮ್ಮ ಕೊನೆಗಣ್ಗಳ ಕಾಂತಿಯಿಂ ದೆಸೆಯನೆತ್ತಂ ಬೆಳಗಿಯುಂ (ರಾಮಾಶ್ವ. ೫೯-೦೪). ೧೧. ಚರ್ಯೆ ; ಅಭಿವ್ಯಕ್ತಿ : ನಿಲುವಿನಲಿ ಸ್ವಸ್ಥಾನದಲಿ ಕೈಚಳಕದಲಿ ಭಂಗಿಯಲಿ ಭರದಲಿ . . . ಶ್ರಮವನು ತೋಱಿದನು ಪಾರ್ಥ (ಕುವ್ಯಾಆ. ೭-೪೧) ; ಕಾಗದ ಕತ್ತರಿಸುವ ಚಾಕನ್ನು ತೆಗೆದುಕೊಂಡು ಅಲ್ಲಾಡಿಸುತ್ತ, ಹೀಗೆ ನಾನಾ ವಿಧವಾದ ಭಂಗಿಭಣಿತೆಗಳಿಂದ ಮಾತಿನ ವೈಖರಿಯನ್ನು ತೋರಿಸು ತ್ತಿದ್ದನು (ಪುಸರು. ೩೭). ೧೨. ಪ್ರಕಾರಾಂತರದಿಂದ ಹೇಳುವ ಮಾತು ; ಉಕ್ತಿವೈಚಿತ್ರ್ಯ : ಅಪ್ರಸಿದ್ಧ ಮಾತುಗಾರಿಕೆಗಳನ್ನೂ ಮಾತಿನ ಭಂಗಿಗಳನ್ನೂ ವಿದಗ್ಧರ ಗೋಷ್ಠಿಗಳಲ್ಲಿ ನಾವು ನೋಡಿಲ್ಲವೇ ? (ಧ್ವನ್ಯಾಲೋ. ೨೦೪). ೧೩. ಬೆಡಗು ; ಒನಪು ; ಒಯ್ಯಾರ : ನಿಲ್ತುವು ರಸಂಗಳಿಲ್ಲಿ ಮಡಲ್ತನೆ ಭಂಗಿಯೊಳನಂಗಸಂಗಮಲತೆವೊಲ್ ನಿಲ್ತು (ಆದಿಪು. ೯-೨೦) ; ಸುತ್ತುವ ಸೋಗೆಯು ಸುತ್ತಿನೊಳಾಡುವ ಕೇಕಿಯು ಭಂಗಿ ಲೋಕಮಂ ಸೋಲಿಸುಗುಂ (ಯಶೋಚ. ೩-೩೭). ೧೪. ಠೀವಿ ; ಗತ್ತು : ಭಂಗಿ ಮನಸಿಜನ ಗಾಡಿಗೆ ಭಂಗಮನೊಡರಿಪೆ . . . ವಿದ್ಯುದಂಗಂ ಬಂದಂ (ಶಂರಾಪೂ. ೭-೭೪). ೧೫. (?) : ಸ್ವಯಂಭುದೇವರ ಸ್ಥಾನಾಧಿಪರಪ್ಪ ದೇವರಾಸಿಜೀಯ್ಯರ ಸಿಷ್ಯಂ ವಾಮ ದೇವ ಭಂಗಿಯಿನೊಡೆಳಗುಳ್ಳಂಗನೆಯರ ಪುತ್ರಂ (ಸೌಇಇ. XX, ೨೪-೨೩ ; 1034). [ಸಂ.]

**ಭಂಗಿ$_3$** (ನಾ). ಬೀದಿಯ ಕಸ ಗುಡಿಸುವ ವೃತ್ತಿಯವನು; ಜಲಗಾರ ; ಜಾಡಮಾಲಿ : ಭಂಗಿಗಳು ಅಥವಾ ಹಲಾಲಖೋರರು . . . ಪಾಯ ಖಾನೆಗಳಲ್ಲಿಯ ಮಲವನ್ನು ತೆಗೆದು ಸ್ವಚ್ಛಮಾಡುವರು (ಕಡಾಗ. ೨೨೦) : ಮ್ಯುನಿಸಿಪಾಲಿಟಿಯ ಭಂಗಿಗಳು ಅದೇ ರಸ್ತೆಯನ್ನು ಗುಡಿಸಿ ಹೋಗಿದ್ದರು (ಮಹರುದಾ. ೦೩೭) ; ಈ ಇಮಾರತಿಯನ್ನು ಒಬ್ಬ ಭಂಗಿಯು ಕಟ್ಟಿಸಿದ ನೆಂತಲೂ ಕೆಲವರು ಹೇಳುತ್ತಾರೆ (ಬಿಪರ್ಣ. ೨೨).

[ ← ಹಿಂ. ಮರಾ. ಭಂಗೀ ]

**ಭಂಗಿಗ** (ನಾ). ಗಾಂಜಾ ಸೇದುವ ಚಟವುಳ್ಳವನು : ಜವುೞಗ ಭಂಗಿಗ ಕಳುಗುಡಿ ಜೂಜಿಗ ಸುಂಕಿಗ ತಲೆಬೋಳಿಸಿ ಭಾಷೆಮಾಡೆ ನಿರ್ಧರವಿಲ್ಲ (ಕಂಳ. ೧೦೪-೧೦). [ ಭಂಗಿ$_1$ + —ಗ$_2$ ]

**ಭಂಗಿತ** (ನಾ). ೧. ಅವಮಾನಕ್ಕೆ ಒಳಗಾದ ವ್ಯಕ್ತಿ : ಒಲ್ಲೆನು . . . ಸಂಗನ ಶರಣರನಱಿಯದ ಉಳಿದ ಭಂಗಿತರ (ಬಸವ. ೬೩೩) : ಅಂಗ ದಾಪ್ಯಾಯನಕ್ಕೆ ಲಿಂಗವನಱಿಸುವ ಭಂಗಿತರನೇನೆಂಬೆ (ಅವಸಂ. ೩೩-೧೪೨) ; ವಾದದಲಿ ತಲೆವಾಗಿ ಭಂಗಿತರಾದ ಜೈನರು ಮತ್ತೆಯುಂ ಸಂವಾದಿಸಿ ದರೀಯಾಲವೊಂದಿದ್ದಿಹುದು . . . ಎನಲು (ಬಸಪು. ೫೦-೬೬). ೨. ಸೋತು ಹೋದವನು ; ಪರಾಜಿತ : ಇನ್ನು ಹುಟ್ಟದೆಯಿರಲಿ ನಾರಿಯರೆನ್ನ ವೊಲು ಭಂಗಿತರು ಭುವನದೊಳಿನ್ನು ಜನಿಸಲು ಬೇಡ ಗಂಡರು ಭೀಮ ಸನ್ನಿಭರು (ಕುವ್ಯಾವಿ. ೩-೫೭). [ಸಂ.]

**ಭಂಗಿಪಟ್ಟಿ** (ನಾ). ಭಂಗಿಗಳಿಗೆ ವೇತನ ನೀಡಲು ವಸೂಲು ಮಾಡುವ ಸುಂಕ,—ತೆರಿಗೆ : ಜಕಾತಿ, ಭಂಗೀಪಟ್ಟಿ, ಮಾರ್ಕೇಟ್ ಫೀ, ಛಕಡೀಪಟ್ಟಿ ಇವೇ ಆದಾಯದ ಮುಖ್ಯಬಾಬುಗಳು (ಕಡಾಗ. ೪೯೩).

[ ಭಂಗಿ$_3$ + ಪಟ್ಟಿ$_2$ ]

**ಭಂಗಿಭಾಷಿತ** (ನಾ). ಪ್ರಕಾರಾಂತರದಿಂದ ಹೇಳುವ ಮಾತು ; ಉಕ್ತಿ ವೈಚಿತ್ರ್ಯ : ಭಂಗಿಭಾಷಿತದಿನಾತನಂ ಪ್ರೀತನಂ ಮಾಡಿ (ಕೃಷ್ಣಪು. ೭-೯೯ ವ).

[ಸಂ.]

**ಭಂಗಿಮುಕ್ಕ.** ಬಂಗಿಮುಕ್ಕ (ನಾ).= ಭಂಗಿಗ : ಲಿಂಗಲಿಂಗದೊಳಗಿರುವ ಚಿನ್ಮಯವ ತಿಳಿಯದೆ . . . ಜಂಗಮ ಸ್ಥಾವರದ ಭಾವವನು ತಿಳಿಯದೆ ಭಂಗಿಮುಕ್ಕಗಳೆಲ್ಲ ಲಿಂಗವಂತರಹರೆ (ಕಪಳ. ೦೨೬-೩). **ಬಂಗಿಮುಕ್ಕ :** ನಾವು ಹೇಳಿ ಕೇಳಿ ಸೆರೆಗುಡುಕರು.ಬಂಗಿಮುಕ್ಕರು ! (ಕಲಕು. ೦೩).

[ ಭಂಗಿ$_1$ + ಮುಕ್ಕ$_1$ ]

**ಭಂಗಿವಡೆ** (ಕ್ರಿ). ಬೆಡಗನ್ನು ಹೊಂದು ; ವಿಲಾಸವನ್ನು ಪಡೆ : ಲತಾಂಗಿ ಭಂಗಿವಡೆದಿರ್ದಳ್ ಜೇಂಟವೇಬೊಂದು ಬಳ್ಳಿಗೆ ಪೊಯ್ಮಿರೆಱ ವಂದದಿಂ (ಜಗಪ. ೧೦-೧೦) ; ಭಂಗಿವಡೆವಿನೆಗವೋದಿನ ಪಾಂಗೆಸೆವಾರ ಛಟಿಯಲ್ಲಿ . . . ಮಂಗಳಪಾಠಕತೆಪೆತ್ತರರೆಬರಮರ್ತ್ಯರ್ (ವರ್ಧಪು. ೦೪-೯).

[ ಭಂಗಿ$_2$ + ಪಡೆ$_1$ ]

**ಭಂಗಿವೆಱು** (ಕ್ರಿ).=ಭಂಗಿವಡೆ : ಸುಳಿಗುರುಳೊಳಿ ಕಣ್ಗೆವರೆ ನೀಳ್ದಲರ್ಗ ಣ್ಕಡುರಯ್ಯಮಾಗೆ ಕೋಮಳತನು ಭಂಗಿವೆತ್ತೆಸೆಯೆ (ಧರ್ಮಾಮೃ. ೭-೦೭೯) : ದೇವಗಜದಂಗಮರೀಚಿಯ ಭಂಗಿವೆತ್ತಿರಲ್ ಬಗೆಗೊಳಿಸಿತ್ತು ಚಂದನ ರಸಂದೊಡೆದಂದದೆ ಪೂರ್ವದಿಙ್ಮುಖಂ (ಜಗಪ. ೦೬-೦೦೩).

[ ಭಂಗಿ$_2$ + ಪೆಱು$_1$ ]

**ಭಂಗಿಸು** (ಕ್ರಿ). ೧. ಮುರಿ; ಒಡೆ : ಬಂಡಿಯುಂ ಭಂಗಿಸಿದ ಬಲ್ಪಿಂದೆ . . . ಬೆಱಿತಿರ್ದೊಡೆ ಸಂಗರದೊಳಾಳಹನೆ (ಜೈಮಿಭಾ. ೭-೫೯). ೨. ಧ್ವಂಸ ಗೊಳಿಸು ; ಹಾಳುಮಾಡು : ಬೆಂಗಳೂರವನ ಪರಾಕ್ರಮವನು ಬೇಗ ಭಂಗಿಸಿ ಬಿಡುವೆನು (ಕಂಪಿಬಿ. ೧೦-೫೭) ; ಭಂಗಿಸಿತು ಭರತನಳುವ ಸುಯ್ಯುಸಿರೊಂದೆ ಆ ವಸ್ಯನೀರವತೆಯಂ (ಶ್ರೀರಾಮಾ. ೦೭೨-೫೪೦). ೩. ಸೋಲಿಸು ; ಪರಾಭವಗೊಳಿಸು : ಸಂದ ಕಾಮದೇವನುಮಂ ರೂಪಿ ನೊಳಾದಂ ಭಂಗಿಸಿ (ಧರ್ಮಾಮೃ. ೪-೨೦೬) ; ಇಂತು ಸಕಲಭುವನಮಂ ಭಂಗಿಸುವ ಚತುರಂಗಸೇನೆಯ ನಡುವೆ ಕಡುಪಿಂ ನಡೆತಂದು (೧೦೪. ೮-೮ ವ); ಕದನದೊಳಿವನ ಭಂಗಿಸಿ ಬಿಡುವೆನು (ಕುವ್ಯಾದ್ರೋ. ೫-೪೯). ೪. ತಡೆಗಟ್ಟು ; ನಿಗ್ರಹಿಸು : ಭಂಗಿಪೊಡವೊಗೆದು ಸೂಸುವ ಶೃಂಗಾರ ರಸಕ್ಕೆ ಸೇತುಗಟ್ಟುವವೋಲ್ ಚಿತ್ರಂಗೊಳಿಪ ರತ್ನಕಾಂಚಿಯನಂಗನೆಯ ನಿತಂಬದೊಳ್ ತೊಡರ್ಚಿದಳೊರ್ವಳ್ (ಶಾಂತೀಶ್ವ. ೪-೨೩೨). ೫. ಅವ ಮಾನಗೊಳಿಸು : ನೀನೇಸು ಪರಿಯಲಿ ಬಯ್ದು ಭಂಗಿಸಿ ನಮ್ಮ ದೂಱಿದಡೆ ಆ ಸಿತಾಶ್ವನ ಬಿಲ್ಲನೊದೆದಾಕಾಕಶವ್ವಳಿಸುವ ಶರಾಘಕೆ ಮಾಸ ಲಱಿಯಾ ಕರ್ಣ ನಿನ್ನೊಡಲು (ಕುವ್ಯಾಕ. ೯-೨೪) ; ಜನಕನ ನಂದನೆಯ ಹಂಬಲನು ಬಿಟ್ಟರು ನೆರೆದಿಳಾಮಂಡಲದ ರಾಯರು ಬೈದು ಭಂಗಿಸುತಾ ವಿದೇಹಜನ (ತೊರರಾ. ೧-೦೩-೨೯) ; ಸಲೆ ನಾಚಿಕೆಯನು ತೊಱಿದು ಬಲಗೈ ಬೆರಳನೊರ್ವನಿಗಿತ್ತೆ ಮೊಣ್ಣಯೆಂದುಲಿದು ಭಂಗಿಸರೆ ಕಂಡವರು (ಕಂಪಿಬಿ. ೬-೧೮೪). ೬. ಕಾಡು; ಹಿಂಸಿಸು : ಬಲುಬಿಸಿಲೊಂದು ಚಪಾಳಿಕೆ ಜಗವ

ಭಂಗಿಸಿತು (ವೀರಶತ. ೦೯-೪೬) ; ಏನೊಂದು ಸಡಗರದಿಂದಲೈತರುವಳು ಹೊಸಸುಗ್ಗಿ ವಧುವಿನ ಹಾಗೆ ಎಷ್ಟೊಂದು ವಿಧದಿಂದಲವಳ ಭಂಗಿಸುವಳು ಮಳೆಗಾಲ ಅತ್ತೆಯ ಹಾಗೆ (ಇಂಚರ. ೨೨೦-೯೦). [ಭಂಗ + –ಇಸು₃]

**ಭಂಗುರ** (ಗು). ೧. ಸುಲಭವಾಗಿ ಮುರಿದುಹೋಗುವ,– ಒಡೆದು ಹೋಗುವ : ಚಳದನಿಳಾಹತಕ್ಷುಭಿತಭಂಗುರತುಂಗತರಂಗಮಾಳಿಕಾವಳನ ಸಮುಚ್ಚಳನ್ಮಣಿಗಣಾತ್ತ . . . ಜಳಮಂ ಮನಂ ಬಯಸಿ ನೋಡಿದನರ್ಣವಮಂ ಗುಣಾರ್ಣವಂ (ಶಂಶಾ. ೪-೨೩). ೨. ಕ್ಷಣಿಕವಾದ; ಚಂಚಲವಾದ ; ಸ್ಥಿರವಲ್ಲದ : ಭಂಗುರಮಿಥ್ಯಾಜ್ಞಾನಂ ಪಿಂಗಲೊಡಂ ಹೃದಯದಮಳಸಮ್ಯಗ್‌ಜ್ಞಾನಂ ಕಂಗೊಳಿಸುವಂತಿರಿರ್ದಂ . . . ವೀರನಳಭೂಪಾಲಂ ( ವಳಶಂ. ೪೦೪ ) ; ಮಾಯೆಯೆಂದು ಅಥವಾ ಪ್ರಭುವಿನ ಭಂಗುರಲೀಲೆಯೆಂದು ಈ ಜಗತ್ತನ್ನು ಅವು ಅಲ್ಲಗಳೆದುಬಿಟ್ಟವು (ಮಹಾಪೋ. ೨೩೪). ೩. ಕೊಂಕಿದ ; ಬಾಗಿದ :ಭಂಗುರ ಕರಾಳದಂಷ್ಟ್ರಿಂಗಳನಯುನಂ ಮಾತಂಗಜಂಗಳ ಮಿದುಳಂ ನುಂಗಿ ನಲಿಗೆದಜಿ ಶಿಖಿರಿಗೆ ಲಂಘಿಸುತಿರೆ ಸಿಂಗಮಂ ಜಿನಾಂಬಿಕೆ ಕಂಡಳ್ (ಸೂಕ್ತಿಸು. ೬-೩೮). ೪. ಗಂಟುಹಾಕಿದ ; ಗಂಟಿಕ್ಕಿದ : ಭಂಗುರಭೀಷಣಭ್ರುಕುಟಿದಂಷ್ಟ್ರಂ . . . ಪಿಂಗಳಸಿಂ ಮೃಗೇಂದ್ರನೊಸೆದಿರ್ಪುದತರ್ಕ್ಯಪರಾಕ್ರಮಕ್ರಮಂ (ಶಂಪಶಂ. ೨೩-೦೩). ೫. ಮೋಸದ ; ವಂಚನೆಯ. (ನಾ). ೬. ಚಂಚಲವಾದುದು: ಇಂದ್ರಿಯಸಂಗದುರುಳುಗಳು ಭಂಗುರಂಗಳಸಂಗನೊಳುಪಾಶಂಗಳು . . . ಪೆಣ್ಗಳ ಕಂಗಳವು ಮತ್ತೆ (ಬಸವು. ೪೦-೩೯). ೭. ಕ್ಷಣಿಕವಾದುದು; ನಶ್ವರವಾದುದು : ಕರ್ಮಂಗಳತ್ತಣಿಂ ದೊರೆಕೊಳ್ವ ಸುಖಂ ಭಂಗುವಲ್ತೆ (ರಾಮಾಶ್ವ. ೧೪೦-೯). ೮. ಕತ್ತರಿಸುವುದು; ನಾಶಮಾಡುವುದು : ಸಂಗತನಿಜಹಸ್ತ ಕನಿಷ್ಠಾಂಗುಲಿಧೃತವಂ ಪ್ರಿಯಾಮನಃಖೇದಲತಾ ಭಂಗುರಮಂ ರವಿಮಂಡಳದುಂಗುರಮಂ ರಘುಜನಿತ್ತನಣಾಪನ ಕೆಯ್ಯೊಳ್ (ರಾಮಾವ. ೯೪೬). ೯. ನದಿಯ ಬಾಗು,–ತಿರುವು. ೧೦. ಬಾಗಿದುದು : "ವಕ್ರಂ, ವೃಜಿನಂ, ಭಂಗುರಂ . . . ಊರ್ಮಿಮತ್—ಈ ೧೨ ಕೊಂಕಿದುದು" (ಹಲಾಯು. ೧೦೬-೦೦). [ಸಂ.]

**ಭಂಗುರಕೇಶಿ** (ನಾ). ಗುಂಗುರು ಗುಂಗುರಾದ ಕೂದಲುಳ್ಳವಳು : ಭಂಗುರಕೇಶಿ ಸಲ್ಲಿಸ ತಳಂಗಳೊಳೊಯ್ಯನೆ ಮೆಯ್ಯನಿಕ್ಕಿ (ರಾಮಾವ. ೯೪೩). [ಸಂ. ಭಂಗುರಕೇಶೀ]

**ಭಂಗುರವೇಣಿ** (ನಾ). ಕೊಂಕಿದ ಕೂದಲು ; ಗುಂಗುರು ಕೂದಲು : ಭಂಗುರವೇಣಿಯೆಂಬ ಬಂಧುರನದಿ ರಂಜಿಸಿತ್ತು ಮಹಿಳಾಂತೆಯ ಭಂಗುರ ವೇಣಿಯೆಂಬಿನಂ (ಪುಷ್ಪಪು. ೬-೯). [ಸಂ.]

**ಭಂಗುವಕಲ್ಲು ?** (ನಾ). (?) : ಚೋಗಗ್ಗ ನೆಲವಂಕಿ ಅಭ್ಯಂತರಸಿದ್ಧಿ ಆಳುತ್ತಿರೆ ಜೋರಯ್ಯನ ವೆಸದಿ ಭಂಗುವಕಲ್ಲು ಈ ಕಲ್ಲ ಮಜಿಪೊಕ್ಕರ ಕೊಲಲಾಗದು (ಪ್ಯಾಲಿ. ೧೯೨೮, ೩೩-೪ 900). [ ? ]

**ಭಂಗ್ಯ** (ನಾ). ಗಾಂಜಾ ಅಥವಾ ಸೆಣಬಿನ ಗಿಡಗಳು ಬೆಳೆಯಲು ಯೋಗ್ಯವಾದ ಭೂಮಿ : ''ಭಂಗ್ಯಂ, ಭಾಂಗೀನಂ – ಈ ೨ ಸೆಣಬಿನ ಕೆಯ್'' (ಹಲಾಯು. ೨೬-೮). [ಸಂ.]

**ಭಂಜಕ** (ನಾ). ೧. ಮುರಿಯುವಂತಹುದು. ೨. ಮುರಿಯುವಿಕೆ. ೩. ನಾಶಪಡಿಸುವಂತಹುದು : ಅವರ ವಾದವೇ ಅವರ ಸಿದ್ಧಾಂತಕ್ಕೆ ಭಂಜಕ (ಶಾತತ್ವ. ೪೨೩). ೪. ನಾಶಪಡಿಸುವವನು : ಸಾರಥಿಗಳೊಳಗೆನಿಸಿದನು ಭೂಭಾರಭಂಜಕನಸುರಹರನು (ಕುಮಾ.ಗ. ೯-೨೪). [ಸಂ.]

**ಭಂಜಣಿಗೆ** (ನಾ). [ಅಶ್ವಶಾ] ಕುದುರೆಯ ನಡಗೆಗಳಲ್ಲಿ ಒಂದು ಪ್ರಕಾರ ; ಮಂದಗತಿ ; ಮೆಲುನಡೆ : ಭಂಜಣಿಗೆಯಲಿ ಮೆಲ್ಲಡೆಯ ವರಮರಾಳನ ಪೋಲ್ತುದೋಜೆನೆ . . . ಜಾತ್ಯಶ್ವಸಂಕುಳವೆಸೆದು ಪೊಗ್ಗಿಸಲಿ (ಜೀವಂಧ. ೨-೩೦). [←ತೆಲು. ಭಂಜಳಿಕ]

**ಭಂಜನ** (ಗು). ೧. ಮುರಿಯುವ. ೨. ತಡೆಯುವ ; ನಿಗ್ರಹಿಸುವ. ೩. ಹಿಂಸಿಸುವ ; ಬಾಧಿಸುವ. (ನಾ). ೪. ಹಾಳುಮಾಡುವುದು : ನಾಶಪಡಿಸುವುದಂ. ೫. ಹಾಳು ; ನಾಶ : ಆರ ನೆರವಿಯೊಳಂಧಕಾರದ ಭಾರವನು ರವಿ ಗೆಲುವ ನಿನ್ನೀ ವೈರಿಬಲಭಂಜನಕೆ ಗುರು ಹಂಗಹನೆ (ಕುಮಾ.ದ್ರೋ. ೦೮-೪೮). ೬. ದೂರಮಾಡುವುದು. ೭. ಪೀಡಿಸುವುದು. ೮. ನಾಶಪಡಿಸಂವವನು : ಅಂತು ಸಮದಕುಂಜರಘಟಾಪುಂಜ ಭಂಜನಂ ಮೃಗಾಧಿರಾಜಂ ಕೈನೀಡಿ ... ಬಟಿಕ್ಕಿಂತೆಂದಂ (ಶಂಪಶಂ. ೩೬-೧೮) ; ಪದಿಮೂಱುಂ ಪ್ರಕೃತಿಗಳುಮೊರ್ಮೆಯೆ ನಿರ್ಮೂಲಮಾಗೆ ಸಕಲಸಂಸಾರಭಾರದುಃಖಭಾರಭಂಜನನುಂ ನಿರಂಜನನುಮಾಗಿ (ಶಂಬಾಪು. ೦೬-೪೦ ವ); ಜೈನಮಾರ್ಗ್ಗರಾದ್ಧಾಂತಪಯೋಧಿಗಳ್ ವಿಷಯವೈರಿಗಳುದ್ಧತವರ್ಮ್ಮಭಜ್ಞನರ್ . . . ಶುಭಚಂದ್ರದೇವಸಿದ್ಧಾಂತಮುನೀಂದ್ರರಂ ಪೊಗಳ್ವುದು (ಎಕ. II, ೦೦೬-೦೦೯ ; 1123). [ಸಂ.]

**ಭಂಜನಿ** (ನಾ). [ಜೈನ] ಒಂದು ಬಗೆಯ ವಿದ್ಯೆ ; ಬೇರೆಯವರನ್ನು ಸೋಲಿಸುವ ವಿದ್ಯೆ : ಅಮಿತತೇಜನುಂ . . . ಪ್ರಜ್ಞಪ್ತಿ ಕಾಮರೂಪಿಣಿ . . . ಭಂಜನಿ . . . ಆಭೋಗಿನಿಯೆಂಬಿವು ಮೊದಲಾಗೆ ಕುಲವಿದ್ಯೆ ಜಾತಿವಿದ್ಯೆ ಸಾಧಿತವಿದ್ಯೆಗಳೊಳ್ ಸಂಪನ್ನನಾಗಿರ್ದು (ಶಾಪುಂಪು. ೦೯೬). [ಸಂ. ಭಂಜನೀ]

**ಭಂಜನೆ₁** (ನಾ). ೧. ಸೋಲಿಸುವಿಕೆ : ಅಡಗಿಸುವಿಕೆ : ಭಂಜನೆಗೆ ಬಲುಹುಳ್ಳಡೆಯು ನಿಮಗಂಜುವರು ಗುರುಭೀಷ್ಮರಾ ಪರಿರಂಜಕರು ತಾವಲ್ಲನುತ ತಾಗಿದನು ಭೂಪತಿಯ (ಕುಮಾ.ಭೀ. ೦೦-೪೨). ೨. ನಾಶ : ಧ್ವಂಸ : ನಂಜಿನಂತಹ ಲೋಕಕಂಟಕರ ಭಂಜನೆಯೆ ನಾವೊಲಿದ ಕರ್ತವ್ಯ (ಶಾಪ್ರಾಂಗ. ೦೩-೩೩೮). [ಸಂ. ಭಂಜನ]

**ಭಂಜನೆ₂** (ನಾ). ವಿವರಣೆ : ಬಯಲ ಭಂಜನೆ ಬೇಡ ಮಾಡಲೊಂದು ಪ್ರತಿಜ್ಞೆಯನರ್ಜುನಂ ನಿನ್ನ ಮುಂದೆ ಸೈರಿಸುವುದು (ಜೈಮಿಭಾ. ೦೩-೨೯). [ಸಂ. ಭಂಜನಾ]

**ಭಂಜವಣೆ** (ನಾ). ೧. ಬಾಗು ; ವಕ್ರತೆ: ಕಂಗಳಲಿ ಕುಡಿಮೀಳ ಹುಬ್ಬಿನ ಹೊಂಗಿನಲಿ ಭಂಜವಣೆ ಭಾವದ ಭಂಗಿಯಲಿ ಪತಿಕರಣೆ . . . ದ್ರೌಪದಿಯ (ಕುಮಾ.ಆ. ೦೩-೨೩). ೨. ತಿರಸ್ಕಾರ ; ಹೀಯಾಳಿಕೆ : ಅಂಜುವರೆ ನಿಲು ಜೂಜುಗಾಜಿರ ಭಂಜವಣೆಗೊಳಗಹರೆ ಬಾ ನೃಪರೆಂಜಲಿಸಿ ಬಿಡಬಹುದೆ ಪರಮದ್ಯೂತರಸಸುಧೆಯ (ಕುಮಾ.ಸ. ೦೬-೩೦). [ಭಂಜಿಸು + – ಅಣೆ₁]

**ಭಂಜಳಿ** (ನಾ). = ಭಂಜಣಿಗೆ : ಭಂಜಳಿ ಮುರಳಿ ರಝಳಿಂಪಿ ವಾಹಿಣಿ ರೂಪು ರಂಜಿಪ ರೇಖೆಯೆಂದೆಂಬ ಮಂಜುಳವಾದ ಪಡಂಗದೊಳಾ ಹಯ ರಂಜನೆವಡೆದುದು (ಶ್ರೀಶಾಂ. ೪-೦೨). [←ತೆಲು. ಭಂಜಳಿ]

**ಭಂಜಿ** (ನಾ). ಒಂದು ಬಗೆಯ ಸಸ್ಯ : ''ತತ್ಕಾಲೀ – ನರುವಲು, ಭಂಜಿ, ಕುಂಬಳಿ'' (೬ಶಂ. ೬೩). [ ? ]

**ಭಂಜಿಕೆ** (ನಾ). ಮೂರ್ತಿ ; ವಿಗ್ರಹ : ಆ ತುರಂಗದ ಖುರಂ ಕೀಲಿಸಿತು . . . ನಿಜತನುವಿನ ಲೀಲೆಯಡಗಿರ್ದುದಾಕೃತಿಯ ಭಂಜಿಕೆಯೆನಲ್ (ಜೈಮಿಭಾ. ೧೦-೦೦). [ಸಂ. ಭಂಜಿಕಾ]

**ಭಂಜಿತ** (ಗು). ೧. ಅವಮಾನಗೊಳಿಸಲ್ಪಟ್ಟ: ಕೀಳುಮಾಡಲ್ಪಟ್ಟ: ತರ್ಜಿತವೀಣಾಶಿಂಜಿತಂ ಭಂಜಿತರತಿರಮಣೀರತ್ನಕಾಂಚೀಪ್ರಣಾದಂ . . . ಆ ಕನ್ನಿಕೆಯ ಮಧುರಸಪ್ತಸ್ವರೋತ್ಥಾನಗಾನಂ (ಶಂಬಾಪು. ೦೦-೦೦೦); ವಿಕ್ರಮಾಬಳದಿಂ ತಾಂ ಬಳೆಯಲ್ಕೆ ಭಂಜಿತಮಹಾಮಂತ್ರಿಕ್ರಮಂ ತ್ರಿಕ್ರಮಂ (ಅರ್ಜನೀ. ೬-೨೯). (ನಾ). ೨. ಅವಮಾನಕ್ಕೊಳಗಾದವನು : ತಿರಸ್ಕೃತ : ಆ ನೃಪತಿ ಭಂಜಿ [ಶಾಶಾಂ.೧]ತನಾಗಿ ಬರುತೆ ನಾರದಮುನಿಪನಂ ಕಂಡನು (ಜೈಮಿಭಾ. ೩-೨೩). ೩. ಒಡೆಯಲ್ಪಟ್ಟುದು; ಭಗ್ನವಾದುದು ;

ಇನ್ನೊಂದಿದೋ ! ಬುಧನ ಜೊತೆಗೆ ಬಾಳಬಲ್ಲ ಗ್ರಹವು ! ಅದರ ಪ್ರಭೆಯೊಳೆಂಥ ಚಲುವಮೂರ್ತಿಯು_ಭಂಜಿತವು (ತಂಪನ. ೫೨-೧೧). [ಸಂ.]

**ಭಂಜಿಸು** (ಕ್ರಿ). ೧. ಒಡೆ ; ಮುರಿ : (ಶ). ೨. ಕೀಳುಮಾಡು; ಅವಮಾನಗೊಳಿಸು: "ಭಂಜಿಸು_ಅಪಮಾನೇ" (ಶಮುಧಾ) : ಕೋಟಿಶಶಿಕಾಂತಿಯಂ ರಂಜಿಸುತೆ ಭಂಜಿಸುತೆ (ಇಹರ. ದೀ. ೯೪–೧೧). ೩. ದಂಡಿಸು ; ಶಿಕ್ಷಿಸು: ಜಂಗಮಪ್ರಾಸಾದದ್ರೂಪಕರ ಭಂಜಿಸುತ (ಬಸವು. ೫೬–೨೨) ; ಕರೆಯುವನ ಮಗನನು ಭಂಜಿಸುವುದಿಲ್ಲಕಟ ಭೀಮಧನಂಜಯರು ಕೊಟ್ಟಭಯವೆಂದನು ನಗುತ ಮುರವೈರಿ (ಕುವ್ಯಾಸ. ೨–೦೨೨). ೪. ಸೋಲಿಸು ; ಪರಾಜಯಗೊಳಿಸಂ: ಸುರಾಯುರ್ ರ್ನುಣರ್ನುಣರೆನೆ ಬಳಸಿ ಭಂಜಿಸುವ ಐರಾವತಂ ಮಲ್ಲವೇಷದೊಳಿರಾದೊಡಂ . . . ಡೊಕ್ಕರಿಸಿ ಪಿಡಿವರಿಬಿರುದಿನ ಕಲ್ಲ ಮಾನಸರಂತಿರ್ಪ ಮಲ್ಲರ ನೆರವಿಗಳೊಳಂ (ಗಿರ್ಜಾ. ೨–೧೧೫ಪ); ಶಿಷ್ಟರುಗಳಂ ಕೃಪೆಮಾಡಿ ಸಲಹಲು ದುಷ್ಟರುಗಳಂ ಕಾದಿ ಭಂಜಿಸಲು (ಬಸವು. ೩೬–೯೩); ನಿನಗಾಂತ ರಿಪುಗಳ ಭಂಜಿಸುವ ಸಾಮರ್ಥ್ಯದನುವನು ತಳೆದು ರಂಜಿಸುವ ಅಂಜನಾಸ್ತ್ರವನಿತ್ತ (ಕುವ್ಯಾಕ. ೬–೧೧೫). ೫. ಧ್ವಂಸಗೊಳಿಸು ; ನಾಶಮಾಡು : ರಂಜಕದ ಮಾತಲ್ಲ ನಿನ್ನನು ಭಂಜಿಸಲು ಬಂದವನನಟ್ಟುವೆ ನಿನ್ನ ರಕ್ಷಿಸುವೆ (ಕೋಗದು. ೧೧–೯೬) ; ಅಂಜದಿರಿ ಚಕ್ರದಲಿ ಅಸುರರ ಭಂಜಿಸುವೆನು (ಉತ್ತಕ. ೫–೫೬). ೬. ತುಂಡರಿಸು : ಕತ್ತರಿಸು : ಕರ್ಣಕುಮಾರನತಹಾಯಿದನು ಭೀಮನ ಭೂರಿಬಾಣದ ಪಂಜರವ ಭಂಜಿ [ಪಾಠಾಂ. ಬಿಂಡಿ] ಸುತ ಪಟಲದಲಿ (ಕುವ್ಯಾಕ. ೧೧–೯೮). [ಭಂಜನ + –ಇಸು₃]

**ಭಂಟ** 'ಬಂಟ₁' ನೋ.

**ಭಂಟಾಕಿ** (ನಾ). ಒಂದು ಬಗೆಯ ಬದನೆಗಿಡ ಮತ್ತು ಅದರ ಕಾಯಿ: ಮುಳ್ಳುಗಾಯಿ ; ಮುಳ್ಳುಬದನೆ : "ವಾರ್ತಾಕೀ, ಹಿಂಗುಳೀ, ಸಿಂಹೀ, ಭಂಟಾಕೀ, ದುಷ್ಪ್ರಧರ್ಷಿಣೀ_ಈ ಬದನೇಗಿಡದಲ್ಲಿ ಮುಳ್ಳುಜಾತಿ. ಗುಳ್ಳ, ವಾದಿರಾಜಗುಳ್ಳ" (ಸಿದ್ಧಾಂಶ ೧೩೮). [ಸಂ. ಭಂಟಾಕೀ]

**ಭಂಡ₁** (ನಾ). ಕ್ಷೌರಿಕ ; ನಾಪಿತ : ಕಮಂಠನಂ ಪಿಡಿತರಿಸಿ ಭಂಡರಿಂ ಮುಂಡೆಯು ಕೀಟಿಸಿ ಕತ್ತೆಯನೇಱಿಸಿ . . . ಪುರಮಂ ಪೊಱಮಡಿಸಿ (ಧರ್ಮಾಸ್ರ. ೯–೪೦ ಪ). [ < ಪ್ರಾ. ಭಂಡ = ಬೋಳಿಸುವಿಕೆ, ಬೋಳಿಸುವ ಕತ್ತಿ]

**ಭಂಡ₂** (ನಾ). ೧. ಮಾರುವ ವಸ್ತು ; ಸರಕು ; ಸಾಮಾನು : ಧನದೇವಂ ಪರದರ್ಗಂದು ಪಿರಿದುಂ ಸಾರಮಪ್ಪ ಭಂಡಮುಂ ತೀವಿಕೊಂಡು. . . ದಕ್ಷಿಣಮಧುರೆಗೆ ಪೋದೊಡೆ (ವಡ್ಡಾರಾ. ೬೦–೧೮); ಮಂಜಿನ ಮಡಕೆಯೊಳಗೆ ರಂಜನೆಯ ಭಂಡವ ತುಂಬಿ ಅಂಜದೆ ಪಾಕವ ಮಾಡಿಕೊಂಡು ಭಂಡವ ಮಾಱುತಿಪ್ಪರು ನೋಡಾ (ಶವಶಂ. ೧೧೩–೪೬೬); ಮಾಱಿದ ತಲೆಯು ಭಂಡವ ಹೊತ್ತಿರದೆ ಕೈಕೊಳಲಿ ಕರ್ಣಾದಿಗಳು (ಕುವ್ಯಾದ್ರೋ. ೫–೯). ೨. ಅಸಲು ; ಮೂಲಧನ ; ಭಂಡವಾಳ : "ಭಂಡ (ಬಂಡ) –ಭಾಂಡ = ಭಂಡವಾಳ" (ತದ್ಭಕೋ. ೩೩); ಭಕ್ತಿಯು ಭಂಡ ಮೊದಲ್ ನಿಜಭಕ್ತಿಯೆ ಕೋಟಾನು ಕೋಟಿ ಲಾಭಂ (ಶಾಇಇ. IX–i, ೨೯೬–೪೦: 1176). ೩. ಪ್ರಯೋಜನ ; ಲಾಭ : 'ಪಿಘಂಡ' ಪರಾ. ೪. ವಿದೂಷಕ ; ಹಾಸ್ಯನಟ. ೫. ನಾಚಿಕೆ ; ಲಜ್ಜೆ: 'ಭಂಡಗೇಡು', 'ಭಂಡತನ' ಪರಾ. ೬. ಮಾನವಿಲ್ಲದವನು ; ನಾಚಿಕೆಗೆಟ್ಟವನು ; ಲಜ್ಜೆಗೇಡಿ : ವಿಕೃತ ವೇಷಧಾರಿಯಾನು ಭಂಡನು ಲಜ್ಜೆಭಂಡನು (ಬಸವ. ೩೩೨); ಭಂಡರ ಬೈದು ಫಲವೇನು (ಕುವ್ಯಾದ್ರೋ. ೫–೩೮) ; ಭಂಡನಾದೆನು ನಾನು ಸಂಸಾರದಿ ಕಂಡು ಕಾಣದ ಹಾಗೆ ಇರಬಹುದೆ ಹರಿಯೆ (ಪುರಂದ. ೧–೩೫–೧). ೭. ಮೊಂಡುವಾದ ಮಾಡುವವನು : ಕೊಳಚೆನೀರೊಳಗಾಳುತೇಳುತ ಜಲಧಿ ಕಾಲ್ಬೊಳೆಯೆಂಬ ಭಂಡರ ಮುಳಿದು ಮಾಡುವುದೇನು (ಕುವ್ಯಾದ್ರೋ. ೫–೪೯). ೮. ಯಾವ ಕೆಲಸಕ್ಕೂ ಹೇಸದವನು ; ನೀಚ; ಅನ್ಯಾಯ ಮಾಡುವವನು : ಊರಿಗೆ ದ್ರೋಹ ಬಗೆದ ಈ ಭಂಡನಿಗೆ ನೆನಪುಳಿಯುವಂತೆ, ಇನ್ನೊಬ್ಬರು ಊರ ಒಕ್ಕಟ್ಟಿಗೆ ಕೊಡಲಿ ಏಟು ಹಾಕದಂತೆ, ಮಾಡಿರಿ (ಮನಬ. ೧೧೫). [ಸಂ.]

**ಭಂಡಗೇಡು** (ನಾ). ನಾಚಿಕೆಗೇಡು ; ಲಜ್ಜೆಗೇಡು: ಕಂಡಕಂಡಲ್ಲಿ ಎನ್ನ ಗಂಡನಂದದಲಿ ನೋಡಿ ಭಂಡಗೇಡು ಮಾಡಿದನು ಪುಂಡ ನಿನ್ನ ಮಗನಮ್ಮ (ಪುರಂದ. ೩–೧೮೮–೯). [ಭಂಡ₂ + ಕೇಡು]

**ಭಂಡಣ** 'ಬಂಡಣ' ನೋ.

**ಭಂಡಣಾಜಿರ** (ನಾ). ಯುದ್ಧರಂಗ ; ರಣಭೂಮಿ: ಭರದಿಂ ರಾವಣಸೇನೆಯುಂ ತವಿಸಿ ಗೆಲ್ದಾ ಗಣ್ಡರುಂ ಭಣ್ಡಣಾಜಿರದೊಳ್ ಕೌರವ ಸೇನೆಯುಂ ತುಳಿದು ಗೆಲ್ದಾ ಗಣ್ಡರುಂ (ಶಾಇಇ. XI–I, ೫೨–೦೨; 1008). [< ಸಂ. ಭಂಡನಾಜಿರ]

**ಭಂಡತನ** (ನಾ). ೧. ನಾಚಿಕೆಯಿಲ್ಲದಿರುವಿಕೆ ; ನಿರ್ಲಜ್ಜೆ : ಉಂಡು ಮೇಣುಟ್ಟೊಲಿದು ಬದುಕುವ ಭಂಡತನವೆನಗಿಲ್ಲ (ಕುವ್ಯಾವಿ. ೬–೨೫); ಕಂಡು ಸೈರಿಸಿ ಬಿಡುವುದಕಟಾ ಭಂಡತನ ಬಲುವೀರರಿಗೆ (ಕೊರರಾ. ೫–೬–೩೫) ; ಇದು ಭಂಡತನವೆ ಮಗ್ಗುಲೊಳಿದ್ದವನ ಕೊಟ್ಟಕೊದಗಲಾಜದೆ ನಿದ್ದೆಗರೆದು ವದನಕ್ಕೆ ಮಸಿ ಸುಣ್ಣವ ಬರೆಯಿಸಿಕೊಂಡ ಚದುರೆವೆಣ್ಣಲ್ಲವೆ ನೀನು (ಕಂನಬ. ೬–೧೮೬). ೨. ಅನ್ಯಾಯ : ನೀವು ವಂಚನೆಯಿಂದ ಅಪಹರಿಸಿದ ರಾಜ್ಯವನ್ನು ಕೊಡದೇ ಭಂಡತನವನ್ನು ಮಾಡುತ್ತಲಿರುವಿರಿ (ಕೃವಾಲು. ೪೨). ೩. ಬೂಟಾಟಿಕೆ ; ಮೋಸ ; ಕಪಟ : ರಾಜ್ಯಯಂತ್ರವನ್ನು ಹೇಗೆ ಸಾಗಿಸಬೇಕೆಂಬ ಬಗೆಗೆ ಭಂಡತನದ ಉದ್ದಿಡಲೇಖನಗಳನ್ನು ಬರೆಯಲಾಗುತ್ತಿದೆ (ಕ್ರಬಿಂತ. ೨೮). ೪. ಹಟಮಾರಿತನ : ನಮ್ಮೊಡನೆ ಭಂಡತನವನ್ನು ಮಾಡಬೇಡ. ನಮ್ಮ ಯೋಗ್ಯತೆಯನ್ನು ನೀನರಿಯೆ (ರಾಜಶೂ. ೧೯). ೫. ಕೆಟ್ಟನಡತೆ ; ಅಸಂಸ್ಕೃತಿ : ಈ ಗಂಡಸರ ಭಂಡತನದಿಂದಾಗಿ ವಾಣಿಗೆ ಸ್ವತಂತ್ರವಾಗಿ ಓಡಾಡಲೂ ಆಸ್ಪದವಿರಲಿಲ್ಲ (ಸೋತುಗ. ೩೬). [ಭಂಡ₂ + –ತನ]

**ಭಂಡನ** (ನಾ). ೧. ಕಾಳಗ ; ಯುದ್ಧ : ಸುರರಾಜ ಕಳುಪಿರ್ದ ಶರಚಾಪರಥಗಳಂ ದಯದಿಂದ ಕೈಕೊಂಡು ಭಂಡನವನೆಸಗು ಜಿಯ್ಯಾ (ವೆಂಕ್ಟಾರಾ. ೬–೫೩–೫೬) ; ಚಂಡಭಂಡನಕಂದರಿರಾಜರೊಳೆತ್ತಿ ನಡೆವ ಗಂಡುಗಲಿಯಂ ಕುಳ್ಳಿರಿಸಿ ಕೊಂಡುಯ್ವ ಸೈಪುಳ್ಳಂಗೆ ನಿನಗಿಂದು ಪೆಣ್ಣಂ ಪೆಱ್ಗೊಲೆಗೆಂತಂತುವನಕೆ ಕೊಂಡುಯ್ವುದಾಯ್ತೋ ? (ರಾಮಾಶ್ವ. ೨೮–೬೦). ೨. ಕವಚ ; ಚಿಲಖತ್ತು. ೩. ತುಂಟತನ ; ದುಷ್ಟತನ. [ಸಂ.]

**ಭಂಡಬಾಳು** (ನಾ). ಹೀನವಾದ ಬದುಕು ; ಕೀಳುಮಟ್ಟದ ಜೀವನ ; ಅವರ ಕೃಪಾಮುಷ್ಟಿಯಲ್ಲಿ ಹಲವು ಜೀವಗಳು ಭಂಡಬಾಳು ಬಾಳುತ್ತಿರುವ ನಿದರ್ಶನಗಳು ಅನೇಕವಿವೆ (ಹೇಮಕೂ. ೧, ಮುನ್ನುಡಿ) ; ಭಂಡಬಾಳು ಬಾಳೊಂತೀಯಾ ? (ವತಿದಾ. II, ೧೧೬೦). [ಭಂಡ₂ + ಬಾಳು₂ (<ಬಾೞ್₂)]

**ಭಂಡವಲ** 'ಬಂಡವಾಳ' ನೋ.

**ಭಂಡವಲು** 'ಬಂಡವಾಳ' ನೋ.

**ಭಂಡವಾನೆ** ? (ನಾ). ಸರಕು ; ಸಾಮಾನು ; ಮಾರಾಟದ ವಸ್ತು (?) : ನಕರಂಗಳ್ ಪತ್ತಿ ಪಂನಿರ್ದ್ದಾನ್ಯ ಸಮಸ್ತಭಂಡವಾನೆ ಮಾಣಿಕಪೊಳಗಾಗಿ ತಾವು ಮಾಱುಗೊಂಡಂತಪ್ಪ ಭಂಡಕ್ಕೆ ಹೊಂಗರ ವೀಸಮಂ ಕೊಟ್ಟರು (ಎಇ. V. ೧೯–೬೫ ; 1165). [ ? ]

**ಭಂಡವಾಳ** 'ಬಂಡವಾಳ' ನೋ.

**ಭಂಡವಾಳಗಾರ** 'ಬಂಡವಾಳಗಾರ' ನೋ.

**ಭಂಡವಾಳಶಾಹಿ** 'ಬಂಡವಾಳಶಾಹಿ' ನೋ.

**ಭಂಡವಾಳಿಗ** 'ಬಂಡವಾಳಿಗ' ನೋ.

**ಭಂಡವಾಳು** 'ಬಂಡವಾಳ' ನೋ.

**ಭಂಡವಾಳುಗಾರ** 'ಬಂಡವಾಳಗಾರ' ನೋ.

**ಭಂಡವಿಕ್ರಯ** (ನಾ). ಸರಕಿನ ಮಾರಾಟ : ಚಾರುದತ್ತಂ . . . ಶಬರ ಶಿಬಿರದೊಳ್ ಕಾಚಮುಮ ಭಂಡವಿಕ್ರಯಮಂ ಮಾಡಿ (ವೀಬಿಕೃ. ೪-೯೬ ವ). [ಸಂ.]

**ಭಂಡವಿದ್ಯೆ** (ನಾ). ವಂಚನೆ ; ಕಪಟ : ತಾನೆ ತನ್ನನೆ ಹೊಗಳಿಕೊಂಬರೆ ಮಾನನಿಧಿಯಾದವರು ಸಾಕೀ ದಾನವರ ಗರುವಾಯಿ ಭಾರಿಯ ಭಂಡವಿದ್ಯೆಗಳು (ಕುಮಾವ್ಯಾ. ೧೬-೩೩). [ಸಂ. ಭಂಡವಿದ್ಯಾ]

**ಭಂಡಸಾಲೆ** (ನಾ). ವಸ್ತುಗಳನ್ನು ಸಂಗ್ರಹಿಸಿಡುವ ಸ್ಥಳ : ಉಗ್ರಾಣ ; ಕೋಠಿ : ಹುಲಿವರದ ಭಂಡಸಾಲೆಯ ಮಲ್ಲಿಸೆಟ್ಟಿ (ಕಇಇ. XX, ೦೦೦. ೩೯ ; 1129): ಭಂಡಸಾಲೆಯಲು ನಾಗೆಂಡುಗದಲು ಭತ್ತಮೂಡೆಯೊಪ್ಪತ್ತು ಆಳಿಗೆ × × × ಬಿಸಿ ಕೊಂಡಲ್ಲಿ (ಕಇಇ. IX-ii, ೪೦೭_೦೬; 1367) ; ಇಂಗ್ಲಿಷರು . . . ಭಂಡಸಾಲೆಗಳ ಸುತ್ತು ಕೋಟೆಗಳನ್ನು ಕಟ್ಟಿಸಿದರು (ವಾಲಚ್ರ. III, ೦೩೫೨). [ <ಸಂ. ಭಂಡಶಾಲಾ]

**ಭಂಡಾಟ** (ನಾ). ೧. ನಾಚಿಕೆಯಿಲ್ಲದಿರುವಿಕೆ ; ಲಜ್ಜೆಗೇಡು : ಭಂಡಾಟದಿ ಮೈಗೊಟ್ಟ ಗೋಪಿಯರು ಪಾವನ ನಿನ್ನಿಂದ್ಯೆ (ಕುರಂದ. ೦-೦೬೫-೦) ; ದೊಡ್ಡವನಾಡಿದ್ದೇ ಆಟ ಬಡವನಾಡಿದ್ದೇ ಭಂಡಾಟ (ಗಾದೆ). ೨. ಬೂಟಾಟಿಕೆ ; ಆಡಂಬರ : ಬೂಟಕದ ಮಾತುಗಳ ನುಡಿದೇ ನಾಟಕವ ನಟಿಸುವ ಕಣಾ ಭಂಡಾಟವಿದು ಗುಣವಲ್ಲ (ಕೋಗಮು. ೨೨-೯೦). ೩. ಕಷ್ಟ ; ತೊಂದರೆ ; ತಾಪತ್ರಯ : ಶಿವಪಥವ ತ್ರಿಪುಂಡ್ರವಂ ಬಿಟ್ಟು ಮಣ್ಣಟ್ಟು ಕಟ್ಟು ಕೊಂಡಾಡುತಿರೆ ಜಗವ ಭಂಡಾಟವಂ ಮನಂಗೊಂಡ ಬ್ರಹ್ಮಾಂಡಪೌರಾಣಾದಿಯಂ (ಸಾಸಂಚ. ೩-೦೨೬) ; ವೃಥಾ ಸಂಭ್ರಮಿತರಿರ ಭಂಡಾಟವೇತಕೆ ರಣಕೆ ಹೆಬಿತಗೆಯ (ಕುಮಾವ್ಯಾ. ೦-೬೦) ; ಉಂಡು ಕೆಂಡವ ಕಾಸಿ ಉಂಡು ಶತಪದ ನಡೆದು ಉಂಡೆಡದ ಮಗ್ಗುಲಲಿ ಮಲಗೆ ವೈದ್ಯನ ಭಂಡಾಟವಿಲ್ಲ (ಸರ್ವಜ್ಞ. ೨೦೦೪).
[ಭಂಡು + ಆಟ]

**ಭಂಡಾರ,** ಬಂಡಾರ, ಬಂಡಾಜಿ (ನಾ). ೧. ಬೆಲೆಬಾಳುವ ವಸ್ತುಗಳನ್ನು ಸಂಗ್ರಹಿಸಿಡುವ ಸ್ಥಳ ; ಬೊಕ್ಕಸ ; ಖಜಾನೆ : "ಭಂಡಾರವೆಂದು ಕೋಶಗೃಹಂ" (ಕಶಾ. ೬೦-೩೦೬) ; ಮೇರು[ವ]ಪೊನ್ . . . ಪರುಸವೇದಿಯ ಕಣಿ ಭಂಡಾರದೊಳುಂಟೆನೆ ಕುಡುವನಿವಾರಿತದಾನಕ್ಕೆ ಪೋಲ್ವರಾರ್ ಬದ್ದೆಗನಂ (ಶಂಶಥಾ. ೦-೨೮) ; ವಾಗ್ದೇವಿಯ ಭಂಡಾರದ ಮುದ್ರೆಯ ನೊಡೆದಂ ಸಾರಸ್ವತಮೆನಿಪ ಕವಿತೆಯೊಳ್ ಕವಿರತ್ನಂ (ಗದಾಯು. ೦-೩೮) ; ಶೂರಸೇನನ ಸದದು ನೆಜಿ ಭಂಡಾರವೆಲ್ಲವ ಕೊಂಡು . . . ಮುಂದೆ ನಡೆದನು (ಕುಮಾ.ಸ. ೫-೨). ೨. ಖಂಡೋಬಾ, ಎಲ್ಲಮ್ಮ ಮುಂತಾದ ದೇವತೆಗಳ ಪೂಜೆಮಾಡಿದ ಮೇಲೆ ಪ್ರಸಾದರೂಪವಾಗಿ ಹಂಚುವ ಅರಿಸಿನ, ಕುಂಕುಮ ಮುಂತಾದುವು : "ಭಂಡಾರಂ=ಹೊನ್ನ ಸಂಚಿಪ್ಪಂ, ಅರಿಸಿನದ ಪುಡಿಯುಂ" (ಕಾಶಕ್ಕ. ೨೬೦) ; ಧೂಳಿಯ ಭಂಡಾರ ಹಣೆಯೊಳಗಿತ್ತೋ (ನಾದರೀ. ೩೮-೦೮) ; ಅವರ ಹಣೆಗೆ ಭಂಡಾರ, ಅಂದರೆ ಕುಂಕುಮ ಹಚ್ಚಿ, ತೀರ್ಥವನ್ನು ಮುಖಕ್ಕೆ ಮೂರುಸಲ ಎರಚುತ್ತಿದ್ದ (ಪಮ್ಮರು. ೩೨). **ಬಂಡಾರ**: ೧. "ಬಂಡಾರಮೆನೆ ಕೋಶಮುಕ್ಕು" (ಕಶ. ೬೫) ; ಅವನಾನೆ ಕುಮರೆ ಪೆಣ್ಣರ್ ಬಣ್ಣಾರಮುಮನ್ ಕೊಣ್ಣು (ಪ್ರಮಲ. ೧೯೨೮, ೩೦-೩ ; 1056): ಅರಸನುಂ ಸಕಲಪರಿಜನಂ ಬೆರಸು ಪೂಜಿಸಿ ಬಂಡಾರದ ಪೊನ್ನೆಲ್ಲಮಂ ಮುಂದೆ ರಾಸಿಮಾಡುವುದುಂ (ಧರ್ಮಾಮೃ. ೩-೨೦೫) ; ಬಂಡಾರ ತುಂಬಿ ನೀ ಬಂಡಿಯಲಿ ಹೇಜುವರೆ ಮಂಡಲವನಾಳಿ ಮೆಜಿಯುವರೆ ಒಕ್ಕಲಿನು ಕೊಂಡಾಡಬೇಕು (ಸರ್ವಜ್ಞ. ೬೨೮). ೨. (ಎಕಮ್ಮ. XIX. ೮). ೩. ಮೊಟ್ಟೆಯ ಒಳಗಿರುವ ಹಳದಿಬಣ್ಣದ ಲೋಳೆ : ಅಂಡಗಳ ಬೆಳವಣಿಗೆ ಪಕ್ಕದ ಪೋಷಣೆ ಜೀವಣಗಳು ಬಂಡಾರವನ್ನು (Yolk) ಸ್ರವಿಸುವುದರಿಂದ ಸಾಧ್ಯವಾಗಿದೆ (ಕೀಟವಿ. ೬೨). △ ಬಂಡಾಜಿ : ೧. 'ಬಂಡಾಜಿಕಾಜಿ' ಪದ.

ಭಂಡಾರ ಒಡೆ = ಭೀಮನ ಅಮಾವಾಸ್ಯೆಯಂದು ಪೂಜೆಯ ನಂತರ ಹೊಸ್ತಿಲ ಪೂಜೆ ಮಾಡಿ, ಹೂರಣದೊಂದಿಗೆ ನಾಣ್ಯವನ್ನಿಟ್ಟು ಕರಿದ ಪೂರಿಯಂತಹ ಭಕ್ಷ್ಯವನ್ನು ಮೊಳಕೈಯಿಂದ ಒಡೆ. –ಮುರಿ : ನನ್ನ ತಮ್ಮ ಈ ಸಾರಿ ಭಂಡಾರ ಒಡೆಯಲು ಊರಿನಿಂದ ಬಂದಿದ್ದಾನೆ (ರೂಢಿ). ಭಂಡಾರದ ಪೆಟ್ಟಿಗೆ = ಅರಿಸಿನ ಪುಡಿ, ಕೋಲು, ಗಂಟೆ ಮುಂತಾದುವುಗಳನ್ನು ತುಂಬಿದ ಪೆಟ್ಟಿಗೆ (ಎಕಮ್ಮ. IX. ೦೦). ಭಂಡಾರದಾಟ = ಅರಿಸಿನವನ್ನು ಎರಚುತ್ತಾ ಸ್ತುತಿಸುವುದು : ಸುರಭಿಯಭಿಷೇಕದಲಿ ದೇವಿಯ ಪರವಶಂತಸಬಡಿಸಿ ಪೂಜಿಸಿ ಹರಿಹರರು ಭಂಡಾರದಾಟದಿ ಸುರರು ಕುಣಿಸಿದರು (ಅಂಬಿಕಾ. ೪೫ ಸಂಚಿಕೆ).

[< ಪ್ರಾ. ಭಂಡಾರ, ಭಂಡಾಆರ, ಭಂಡಾಗಾರ. / ಸಂ. ಭಾಂಡಾರ]

**ಭಂಡಾರಕ** (ನಾ). ಬೊಕ್ಕಸದ ಮುಖ್ಯಾಧಿಕಾರಿ : ತಪಸೀರಾಯನ ಭಂಡಾರಕ ಶ್ರೀಮನ್ ಮಹಾನಾಯಕಾಚಾರ್ಯ ಬಯಲ ಹುಲಿ ಅಪರೆಗೆಜಿಯ ಗಿರಿಯಂಣನಾಯಕರ ಮಕ್ಕಳು ವಿರುಪಂಣನಾಯಕರು ಕೊಟ್ಟ ಧರ್ಮಶಾಸನದ ಕ್ರಮವೆಂತೆಂದರೆ (ಎಕ. VII (R), ಶಾಗವು. ೧೪೩-೨ ; 1529). [ಭಂಡಾರ + –ಕ$_3$]

**ಭಂಡಾರಗರಣತನ** (ನಾ). ಬೊಕ್ಕಸದ ಅಧಿಕಾರ ; ಖಜಾನೆಯ ಮುಖ್ಯಾಧಿಕಾರಿಯ ಹುದ್ದೆ, –ಪದವಿ : ಜಯಸಿಂಹಭೂಪನನ್ ತನ್ನಯದೊಂದುಪಧಾವಿಶುದ್ಧಿಯಿಂ ಮೆಚ್ಚಿಸಿ ತದ್ದಯೆಯಿಂ ಪಡೆದೊಂ ನೆಗಟ್ಟಕ್ಷಯನಿಧಿಭಂಡಾರಗರಣತನದಾಸ್ಪದಮಂ (ಎಇ. XII, ೨೦೦-೦೪೬ ; 1077). [ಭಂಡಾರ + ಕರಣ + –ತನ]

**ಭಂಡಾರಗವಿಟ್ಟಗೆ** (ನಾ). ಒಂದು ಊರಿನ ಹೆಸರು : ಭೀಮರಥೀನದ್ಯುತ್ತರ ತಟಸ್ಥ ಭಣ್ಡಾರಗವಿಟ್ಟಗೆನಾಮಗ್ರಾಮಂ (ಎಇ. V, ೨೦೪-೬೩ ; ಶ. 757). [ ? ]

**ಭಂಡಾರಸದನ** (ನಾ). ನಿಧಿಯನ್ನಿಡುವ ಸ್ಥಳ ; ಭಂಡಾರ ; ಖಜಾನೆ : ಧರಣಿಪತಿಯೆನಿತ ಪ್ರದೇಶದ ಧರಣಿಸುತರಿಂಗಿತ್ತು ಸಂತತವಿರಿಸುವನು ಬಚಿಗೈಯಲಾ ಭಂಡಾರಸದನವನು (ಶಂಶಕ. ೨೫-೩೮). [ಭಂಡಾರ + ಸದನ]

**ಭಂಡಾರಾಲಯ** (ನಾ). = ಭಂಡಾರಸದನ : ನಾನಾಪ್ರಕಾರ ರತ್ನವಿತಾನಂಗಳ ಬಹಳರಾಶಿಯಿಂ ತುಂಬಿ ಕರಂ ಭೂನುತಭಂಡಾರಾಲಯಮಾ ನರಪನಿವಾಸದಲ್ಲಿ ರಂಜಿಸುತಿರ್ಕುಂ (ವಾಧಪು. ೦-೦೬೪) ; ಭಂಡಾರಾಲಯದೊಳುಳ್ಳ ಮಳಪಪೌಕ್ತಿಕಜಾಲಗೆಯ ಪೆಟ್ಟಿಗೆಯೊಳಾಯಿಸು ವರಸುರತ್ನಗಳ (ಕುಮಾ.ಉ. ೬-೦೬). [ಭಂಡಾರ + ಆಲಯ]

**ಭಂಡಾರಿ,** ಬಂಡಾರಿ (ನಾ). ೧. ಖಜಾನೆಯ ಮುಖ್ಯಾಧಿಕಾರಿ ; ಖಜಾಂಚಿ ; ಕೋಶಾಧಿಕಾರಿ : ಕೂಡಲಸಂಗನ ಮಹಾಮನೆಯೊಳು ಧರ್ಮಸಂತಾನ ಭಂಡಾರಿ ಬಸವಣ್ಣನು (ಬಸವ. ೩೪೬) ; ಶಿವಪಾದಪಂಕಜಭಕ್ತಿಯುಕ್ತನು ಮೇದಿನೀಶ್ವರ ಬಿಜ್ಜಳನ ಭಂಡಾರಿ ಬಲದೇವ (ಬಸಪು. ೩_೮೬) ; ಎಲ್ಲರಿಗು ಸುನುತ ಬರುವ ಭಂಡಾರಿಯ ಸೊಲ್ಲ ಕೇಳದ ಬಸವಣ್ಣ (ಪಾಸಾಂ. ೦೩-೦೩೫). ೨. (ಕೊಚ್ಚಿಯ ರಾಜರ ಮತ್ತು ದೇವಸ್ಥಾನಗಳ) ಕೆಳದರ್ಜೆಯ ಸೇವಕವರ್ಗ : ಬಸ್ತಿಯಲ್ಲಿ ಊಳಿಗ ನಡಿಸುವ ಭಂಡಾರಿಗಳ ಜನ ೨ ಕೆ . . . ಅಕ್ಕಿ ಮು ೨೦ (ಕಇ. III-i, ೦೬_೬೦ ; 1556). **ಬಂಡಾರಿ :** ೧. ಇಂತಪ್ಪುದಕ್ಕೆ ಸಾಕ್ಷಿಗಳು ಆತಿಕಾರಿ ಕಾಂತಸೆಟ್ಟಿ . . . ಬಂಡಾರಿ ಬಿರುಸಾಪಣಿ (ಎಇ. XX, ೮. ೬೦ ; 1556).

[< ಪ್ರಾ. ಭಂಡಾರಿ, ಭಂಡಾಗಾರಿ. / ಸಂ. ಭಾಂಡಾಗಾರಿನ್]

**ಭಂಡಾರಿಗ,** ಬಂಡಾರಿಗ (ನಾ). = ಭಂಡಾರಿ ೧ : ಕಾಮವೃಷ್ಟಿಯೆಂಬ ಭಂಡಾರಿಗನುಂ . . . ಪದಿನೆಣ್ಬಾಸಿರಮ್ಲೇಚ್ಛರಾಜರುಮಾತ್ಮೀಯಸಾಮ್ರಾಜ್ಯ

ಪರಿಚ್ಛೇದವಾಗೆ (ಅರಿಶ್ರು. ೦೫-೩ ವ); ಭಂಡಾರಿಗರ್ ವಿವಿಧಪಟಳಕಂಗಳೊಳ್ ತಂದು ಮುಂದಿಟ್ಟಿದ ಸುಗಂಧಾನುಲೇಪನಕುಸುಮವಸನಭೂಷಣಂಗಳಿನರಸಿಯುಂ ತಾನುಂ ಶೃಂಗಾರಂಗೆಯ್ದು (ಚಂದ್ರಪ್ರ. ೬-೦೯೯ ವ); ಬಾಗಿಲಿಗಂ, ದ್ವಾರಿಗಂ, ಭಂಡಾರಿಗಂ (ಶಬ್ದಾ.ಸು. ೧೦೮ ಪ್ರಯೋ). **ಬಂಡಾರಿಗ :** ಬಂಡಾರಿಗರ್ಪೊನ್ನಂ ಪರೀಕ್ಷಿಸುವಂತೆ (ರವರ್ತಾಪು. ೬-೬೩). [ಭಂಡಾರ + —ಇಗ]

**ಭಂಡಾರಿಸು,** ಬಂಡಾರಿಸು (ಕ್ರಿ). ೧. ಆಯುಧವನ್ನು ಒರೆ, ಕೋಶ ಮುಂತಾದುವುಗಳ ಒಳಗಿಡು,–ಮುಚ್ಚಿಡು.–ಸೇರಿಸು: ಕಡುಮುಳಿದು ಕೂರಲಗ ಭಂಡಾರಿಸಿ ಸಮಂತೆಂದಿನಂತೆ ಪ್ರದಕ್ಷಿಣವನು ನೆನೆದು ಬರುತಿರ್ಪ ಸಿದ್ಧನ ಪದಾಬ್ಜದ ಮೇಲೆ . . . ಕೃಷ್ಣಶುನಕಂ ಬಿರ್ದುದು (ಸಿದ್ಧರಾ. ೭-೪೩); ಧುರವಿಲ್ಲದನು ಮಾರುತಿ ಭಂಡಾರಿಸು ಭರದಿನೆನುತ ಜಯಜಾಯೆ ಅರಗಿನ ಮುದ್ರೆಯಿಟ್ಟಂತಾ ಗದೆಯೊಳು ಪೊರೆದ ರಕ್ತಾಂಬುಪೊಪ್ಪಿದುದು (ಜೇಮಿಸಂ. ೩೦-೦೨೩). ೨. ಆಯುಧವು ಒರೆ, ಕೋಶ ಮುಂತಾದುವುಗಳ ಒಳಗಿರು,–ಉಪಯೋಗವಿಲ್ಲದಾಗು : ಮಿಸುಕಲಾಜಿಪ್ಪ ಚಕ್ರ ಭಂ[ಪಾಠಾಂ. ಬಂ]ಡಾರಿಸಿತು ಮುನ್ನಿನ ಜವ್ವನದ ಬಲ ಮಸುಳಿತು (ಶಬ್ದಾಂ.ಣ. ೦-೪೯): ಎನ್ನುದಯವಿಡಿದಿಲಿತನಕ ಸಮಬಲರ ಕಾಣದೆ ಕಲಹ ನೆಱೆ ಭಂಡಾರಿಸಿರ್ದುದು (ತೊರವೆರಾ. ೬-೬-೫೯). ೩. ಮುದುರು; ಸಂಕೋಚಗೊಳಿಸು: ಕಾಯ್ದೋದು ದಂತಾವಳಂ ತೋರದರೆ ಮುಱಿಯೆ ಮೊಱಪ ವಾರಣಮುಂ ಪೋಲ್ತುದಡಸಿ ನಿಡುಗೆಯ್ಯಂ ಭಂಡಾರಿಸಿ ಮೊಡಱದ ತಱಯುಂ ಬಾರಿಯುಮಂ ಮುಱಿಯೆ ಪೊಯ್ದು ಪೊಱಮಡುವಿಭಮಂ (ಅಭಿನವ. ೫-೦೦೩). **ಬಂಡಾರಿಸು :** ೧. ತನ್ನೆಡೆಗೆಯ್ಯನೆಡೆಗೊಂಡ ಬ್ರಹ್ಮನ ಶಿರಃಕಪಾಲವಾಲ್ಲಿ ಬಂಡಾ[ಪಾಠಾಂ. ಡ]ರಿಸಿ (ರಕ್ಷಾತ. ೩-೪೮).

[ಭಂಡಾರ + — ಇಸು$_3$]

**ಭಂಡಿ$_1$** 'ಬಂಡಿ$_1$' ನೋ.

**ಭಂಡಿ$_2$** (ನಾ). ನಾಚಿಕೆಯಿಲ್ಲದವಳು; ನಾಚಿಕೆಗೇಡಿ: ಗಂಡನಂ ವಂಚಿಸುವ ಮಿಂಡಿಯೊಳು . . . ಉಣಲಿಕ್ಕಿ ಹಂಗಿಸುವ ಭಂಡಿಯೊಳು ಸವತಿಯಂ ಮುಲುಮಕ್ಕಳು ಬಳಲಲಂಡಲಿಪಳೊಳು ಕುಟಿಲೆಯೊಳ್ಕುಹಿತೆಯೊಳ್ಪುಟ್ಟಲುಂಟಿವಿಂಗೆ ಕಾರಣ್ಯವು (ಮಲ್ಲಿಕ. ೨-೨೮); ನೀನು ಭಂಡಿ, ಜಗಭಂಡಿ! (ಮಲೆಮ. ೬೬೦).

[ಭಂಡ$_2$ + — ಇ$_2$./ಪ್ರಾ. ಭಂಡೀ = ಕುಲಟೆ]

**ಭಂಡಿಕಾರ** 'ಬಂಡಿಕಾರ' ನೋ.

**ಭಂಡಿಕಾಱ** 'ಬಂಡಿಕಾಱ' ನೋ.

**ಭಂಡಿತೆ** (ನಾ). ತುಚ್ಛಳಾದ ಹೆಂಗಸು ; ಮಾನಗೇಡಿ : ಶತದಿಕ್ಕೆಯುರು ಭಂಡಿತಿ[ತೆ][ಪಾಠಾಂ. ಬಂಡಿತೆ]ಯರಾಗಳು ಕೊಂಡೆಗಿತ್ತಿಯರು (ಐಸಶ್ರು. ೪೦-೩೨). [ಸಂ. ಭಂಡಿತಾ]

**ಭಂಡಿದೆಱೆ** (ನಾ). ಗಾಡಿಗಳ ಮೇಲೆ ಹಾಕುವ ತೆರಿಗೆ : ಕುಂಬಾಱದೆಱೆ ಅಸಗದೆಱೆ ತೊತ್ತುದೆಱೆ ಭಂಡಿದೆಱೆ . . . ಇನ್ನಿನಿಸಱ ತೆಱೆಯನು ಧಾರಾಪೂರ್ವಕಂ ಮಾಡಿ ಬಿಟ್ಟರು (ಎಕ. IV (R), ಹುಣಸೂ. ೨೪-೪೦; 1162). [ಭಂಡಿ$_1$ (< ಬಂಡಿ$_1$) + ತೆಱೆ$_3$]

**ಭಂಡಿಲ** (ನಾ). ೧. ಅದೃಷ್ಟ. ೨. ದೂತ; ಚಾರ. ೩. ಶಿಲ್ಪಿ. ೪. ಒಂದು ಬಗೆಯ ಮರ; ಬಾಗೆ; ಶಿರೀಷ. [ಸಂ.]

**ಭಂಡಿವಟ್ಟೆ** (ನಾ). ಗಾಡಿಗಳು ಹೋಗಲು ಅನುಕೂಲವಾಗಿರುವ ದಾರಿ; ಗಾಡಿರಸ್ತೆ : ಮಣಿಯೆರೆಯಿಂ ಪಡುವಲಪ್ಪ ವಿಟ್ಟವನ ಕೆಱೆಯಿಂ ಬಡಗ ಬರೆ ನೀರ್ಗುಂದದ ಭಣ್ಡಿವಟ್ಟೆಯಿಂದಾನೆದೊಱೆವಿಡಿದಂತೆ ನಾರಣೋರ್ಪುರ ಕೆಱೆಯ ಮೂಡಣ ಕೋಡಿಯಿಂ ಕೂಡಿತ್ತು (ಕ್ಷೇತ್ರ. IX-i, ೬೦-೫೦:1018).

[ಭಂಡಿ$_1$ (< ಬಂಡಿ$_1$) + ಬಟ್ಟೆ$_1$]

**ಭಂಡಿಸು** (ಕ್ರಿ). ೧. ಅವಮಾನಪಡಿಸು ; ಹೀಗಳೆ : ಭಂಡಿಸಿ ಬೈದ ಬೈಗುಳನೆ ಲಾಲಿಸಿ (ಜಾರಪು. ೧೩-೯೭); ಗೃಹ ಹೊಡೆದ ಕೋತಿಯಂತೆ ದೆಸೆದೆಸೆಗೆ ತಿರುಗಿ ಭಂಡಿಸುವನ್ಯಮೊಳವಾನಿಸರೊಳಾಡಿ ಸ್ನೇಹಮಂ ಮಾಳ್ಪೆನು (ತೇರಮ. ೦-೨೩). ೨. ನಾಚಿಕೆಗೊಳ್ಳುವಂತೆ ಮಾಡು : ಕಂಡು ನಿಶ್ಚಾಜ್ರ್ಜಿತೆ ತಾಂಬೂಲಪಿಂಡವ ಕೊಂಡು ಸುಗಂಧವಿದೆಂದು ಉಂಡೆಯರೊರೆಸಲುಪೇಂದ್ರನು ಹಾಸ್ಯದಿ ಭಂಡಿಸುತ ಸುಡಿದನು ನಕ್ಕು (ಕಾಮಚ. ೧-೫೯). ೩. ಬಯ್ಯು; ತೆಗಳು : ಮಿಂಡಿಮೆಂಗಳನಗಲಿದ ಚದುರರು ತಮ್ಮ ದಂಡಿಪ ಸ್ಮರಚಾಪವೆಂದು ಭಂಡಿಪ[ಪ] ಗುಂಡುಗೋಲುಗಳಿಂದ ಲಡೆಗಿಕ್ಕಿ ಮಿಂಡಿಸುವರು ಕಬ್ಬುಗಳನು (ಪೋಚಕ. ೨-೯೯). 'ಬಂಡಿಸು' ಪರಾ.

[ಭಂಡ$_2$ + — ಇಸು$_1$]

**ಭಂಡೀರ** (ನಾ). ೧. ಆಲದ ಮರ; ವಟವೃಕ್ಷ. ೨. ಒಂದು ಬಗೆಯ ಸಸ್ಯ; ಮಂಜಿಷ್ಠೆ : "ಭಂಡೀರಃ–ಮಂಡೂಕಪರ್ಣಿ" (೬ಪಧಿ. ೦೦೦). [ಸಂ.]

**ಭಂಡೀರಿ** (ನಾ). = ಭಂಡೀರ ೨ : "ಮಂಜಿಷ್ಠಾ . . . ಭಂಡೀರೀ, ಛಾಂಡೀ, ಯೋಜನವಲ್ಲೀ–ಈ ಮಂಜಿಷ್ಠೆಯ ಹೆಸರುಗಳು. ಇದು ಗ್ರಂಥಿಕ ದ್ರವ್ಯವು" (ಸಿದ್ಧಾಂತಿ. ೧೪೨). [ಸಂ. ಭಂಡೀರೀ]

**ಭಂಡೀಲ** (ನಾ). = ಭಂಡಿಲ ೪ : "ಶಿರೀಷಃ, ಕಪೀತನಃ, ಭಂಡೀಲಃ–ಇ ಬಾಗೇಮರದ ಹೆಸರು" (ಸಿದ್ಧಾಂತಿ. ೧೨೬). [ಸಂ.]

**ಭಂಡು** (ನಾ). ೧. ಅವಮಾನ : ಸಿಗ್ಗು : ಎಲೆ ಹೇಣ್ಣೆ . . . ದಂಡಿಗೆಯ ತರಿಸಿ ಕೊಂಡೊಯ್ವೆ ನಮ್ಮರಮನೆಗೆ ಭಂಡು ಜನದೊಳು ಬೇಡ ಬೇಗ ನಡೆ (ಜ್ಯೋತಿರ. ೦೩-೦೭). ೨. ಅವಮಾನಕರವಾದ ಕೆಲಸ; ನಾಚಿಕೆಗೇಡಿನ ಕೆಲಸ : ಪೆಂಡಿರ ಪಿಡಿದನನಿದಿರ್ಗೊಂಡು ಕೊಲಲಣ್ಮದಂಡಿಸಿ ಮಱೆಯೊಳು ಕೊಲುವ ಭಂಡು ಬೇಡೆನಗೆ (ಶಂಕರಸಾಂ. ೪೩-೪೮). ೩. ಬೂಟಾಟಿಕೆ; 'ಭಂಡಾಟ' ಪರಾ. (ಗು). ೪. ಅಶ್ಲೀಲವಾದ : ಭಂಡು–ಕವನಗಳನ್ನು ಹಾಡುವ ಹವ್ಯಾಸ ಅವರಿಗಿರುವುದೇನೊ ನಿಜ (ಪರಾ. II, ೬೬೫).

**ಭಂಡಾಗು** = ನಾಚಿಕೆಯಿಲ್ಲದಿರು ; ಲಜ್ಜಾಹೀನವಾಗು : ನನ್ನಯ ಹವಣನಱಿಯದೆ ತೊಡಚಿ ನೀ ಭಂಡಾದೆ ಲೋಗದಲಿ (ಕಾಶಿರಾ. ೧೨-೬).

**ಭಂಡುಮಾಡು** = ಅವಹೇಳನ ಮಾಡು ; ನಾಚಿಕೆಗೊಳ್ಳುವಂತೆ ಮಾಡು : ನಿಜಮನವ ಮುಂಕೊಂಡೆಡೆಯನು ತೊಲಗಿಸಿಯೆ ಭಂಡುಮಾಡಿ ಭ್ರಮೆಗೊಳಿಸುವೆವು (ಶ್ರೀಕೃಸಾಂ. ೦೫-೦೬೯) ; ಭಂಡುಮಾಡದೆ ನನ್ನನಿಂತು ನಿಮ್ಮಯ ಒರಿಮ ಹೆಂಡತಿಯ ದೆಸೆಯಿಂದಂ (ಶಾಕ್ಯಸಾ. ೨೬-೦೦).

[ ಭಂಡ$_2$ + — ಉ$_4$ ]

**ಭಂಡುಗೆಯ್** (ಕ್ರಿ). ಅವಮಾನ ಮಾಡು ; ಅವಹೇಳನ ಮಾಡು : ಎಮ್ಮ ವನಿತೆಯರ . . . ಲಜ್ಜೆಯ ಬಿಡಿಸಿ ಭಂಡುಗೆಯ್ವವನಿಕ್ಕುವೆವು (ಶಾಕೋಶ್ರು. ೦೦-೦೮೬). [ಭಂಡು + ಕೆಯ್$_1$]

**ಭಂಡೆ$_1$** 'ಬಂಡೆ$_1$' ನೋ.

**ಭಂಡೆ$_2$** (ನಾ). = ಭಂಡಿ$_2$ : ಭಂಡೆಮರಂ(ದು)ಡಮಿಂಡರುಧಿರಾದಿಗಳಂ ಬೆರಸಿಕ್ಕೆ ಭೋಜ್ಯದೊಳ್ ಕೊಂಡಿರದಾಗಳಂತೆ ತಲೆಗೇಱದೊಡಂ . . . ನೀಲಿಯ ರಸಂಗಳನೊತ್ತುವುದು (ಐಮುಧ.೦೪-೬೩); ಭಂಡೆ, ಮುಂಡೆ, ತುಂಟೆ (ಶಬ್ದಾ.ಮ. ೦೯೭ ಪ್ರಯೋ); ಬರ್ಪನ ಒರೆದಿರ್ವರ್ಗೆ ಕವನವ ಬಱಿದೆ ಗಂಟಿಕ್ಕಿದ ಭಂಡೆ (ಕಂಸವ. ೬-೦೯೩). [ಭಂಡ$_2$ + — ಎ$_2$]

**ಭಂಭಾ** (ನಾ). ಒಂದು ಬಗೆಯ ಚರ್ಮವಾದ್ಯ ; ಭೇರಿ ; ನಗಾರಿ : ಪಟುಪಟಹ ತುಣವ ಭಂಭಾ ಮರ್ದಳೆ ಝಲ್ಲರಿ ಮುಕುಂದ ತಾಳ ಕಾಹಳ ಶಂಖ ವಂಶವೀಣಾಸ್ವರಂಗಳೆಸೆಯೆ (ಶಬ್ದಾ.ರಾ. ೬೩-೨೮). [ಸಂ.]

**ಭಂಭಾರವ** (ನಾ). ನಗಾರಿಯ ಸದ್ದು ; ಭೇರಿಯ ಶಬ್ದ : ರಾಮಲಕ್ಷ್ಮಣರುಂ ಪೊಕ್ಕರಯೋಧ್ಯೆಯಂ ಪುದಿವಿನಂ ಗಂಭೀರಭಂಭಾರವಂ (ಶಂರಾವಿ. ೦೫-೨೮) ; ಭಟರ ಬಾಹಾರವಂ ವಳದ ಭಂಭಾರವಂ ರಣಕಲಕಲಾರವಂ . . . ಕಿವಿಗತಿ ಕಠೋರವಂ ತೀವಿತಂದು (ಕೃಮಿರಾ ೨೨-೯).

[ಸಂ.]

**ಭಂಳಿ ?** (ನಾ). (?) : ಬಾಡದ ಮಹಾಜನಂ ಪಿರಿಯ ಕೆಱೆಗೆ ಬಿಟ್ಟ ಧರ್ಮ್ಮ ಮೆನ್ತೆಂದಡೆ ಗ್ರಾಮದ ಆವುದೊಂದು ಪ್ರಾಯಶ್ಚಿತ್ತ ದಣ್ಡದೋಪ ತವುಕುರಿ ತವುದಾಯ ಸ ತಿಪ್ಪೆಸುಂಕವಿನಿತುಂ ಕೆರೆಯ ಭಂಳಿಗೆ ಬಿಟ್ಟ ಧರ್ಮ್ಮ (ಎಕ. XI, ದಾವಣ. ೧೪೨-೦೨ ; ೪). [ ? ]

**ಭಕಾರ** (ನಾ). 'ಭ' ಎಂಬ ಅಕ್ಷರ : ಭಕಾರಕ್ಕೆ ಬಕಾರಂ—ಆರಂಭ—ಆರಂಬ (ಶಬ್ದದ. ೨೫೫ ಪ್ರಯೋ). [ಸಂ.]

**ಭಕ್ಕರಿ, ಬಕ್ಕರಿ, ಭಾಕರಿ** (ನಾ). (ಉಕ) ಜೋಳ, ಸಜ್ಜೆ ಮೊದಲಾದುವುಗಳ ಹಿಟ್ಟಿನಿಂದ ಮಾಡುವ ರೊಟ್ಟಿ : ಬೆಕ್ಕು ಭಕ್ಕರಿ ಮಾಡ್ತ್ವದ ಕಂಡೆ (ಕುಕಂದ. ೩-೦೫೬-೦); ಅಕ್ಕಿಯ ಭಕ್ಕರಿ ಮಾಡುವುದು ನನಗೆ ಅದೇ ಮೊದಲ ಪ್ರಸಂಗ (ಸ್ವತಿತ. ೫೦). **ಬಕ್ಕರಿ** : ಉಣ್ಣುವಾಗ ಬರೀ ಅನ್ನವನ್ನಾಗಲಿ ಬರೀ ಬಕ್ಕರಿಯನ್ನಾಗಲಿ ಮೊದಲಿನಿಂದ ಕಡೆಯ ತನಕ ತಿಂದರೆ ನಮಗೆ ಸಮಾಧಾನವಾಗುವುದಿಲ್ಲ (ಪಟುಂಬಯು. ೫-೨೪೬); ಬಕ್ಕರಿಗಳನ್ನು ಸುಡುವ ಕೆಲಸ ಸಾವಿತ್ರಿಯದು (ಚಪಂ. ೦೬). **ಭಾಕರಿ** : ಎರಡು ಭಾಕರಿಗಳನ್ನು ಸುಡುತ್ತೇನೆ (ಬಿರ್ವ. ೦). [← ಮರಾ. ಭಾಕರೀ, ಭಾಕರ]

**ಭಕ್ತ₁** (ಗು). ೧. ಹಂಚಿಕೊಟ್ಟ ; ಭಾಗಮಾಡಿಕೊಟ್ಟ. ೨. ಪಾಲು ಮಾಡಿದ ; ವಿಭಾಗಿಸಲ್ಪಟ್ಟ. ೩. ಭಕ್ತಿಯಿಂದ ಕೂಡಿದ ; ಶ್ರದ್ಧೆಯುಳ್ಳ. ೪. ಆಸಕ್ತಿಯುಳ್ಳ ; ಮಗ್ನವಾದ. (ನಾ). ೫. ಪೂಜಿಸುವವನು ; ಆರಾಧಕ : ತಂದೆಯ ಭಕ್ತಂ [ಬುಧಜನ]ವೃಂದಾರಕನೆನಿಪ ನಾಪೊನಾತನ ತಮ್ಮಂ . . . ನೆಗಟ್ದಂ (ಶಾಂತಿಪು. ೦೨-೬೨) ; ಕಂಡ ಭಕ್ತರಿಗೆ ಕೈಮುಗಿವಾತನೇ ಭಕ್ತ (ಬಸವ. ೨೪೪); ಕೆಲವು ದಿನಂಗಳಲಿ ಮನವಲರಿ ಬಸವನದೊಂದು ಗೀತವನೊಲಿದು ಬೆಸಸಲು ಕಲಿತು ಭಕ್ತರು ತಮ್ಮೆಡೆಗೆ ಬಂದು (ಬಸವು. ೨೨-೪೬) ; ನಕ್ಕನು ಶಂಭು ಭಕ್ತನ ಮನದ ಧೃತಿಯನು . . . ಪಾರ್ವತಿಗೆ ತೋಱಿಸುತ (ಕುಮಾರ. ೬-೨). ೬. ಅಕ್ಕಿಯಿಂದ ಮಾಡಿದ ಅನ್ನ: "ಅಂಧಃ, ಕೂರಂ, ಭಕ್ತಂ . . . ಆಹಾರಃ —ಈ ೯ ಕೂಳು" (ಹಲಾಯು. ೫೩-೦೬೪) ; "ಭಿಸ್ಸಾ, ಭಕ್ತಂ, ಅಂಧಃ, ಅನ್ನಂ, ಓದನಃ, ದೀದಿವಿಃ — ೬ ಅನ್ನದ ಹೆಸರು, ಬೋನ" (ಸಿದ್ಧಾಂತಿ. ೨೮೮). ೭. [ವೀಶೈ] ಮುಕ್ತಿಸಾಧಕವಾದ ಆರುಸ್ಥಲಗಳಲ್ಲಿ ಮೊದಲನೆಯದಾದ ಭಕ್ತಿಸ್ಥಲವನ್ನು ಸಾಧಿಸಿದವನು : ಆಚಾರಲಿಂಗಭಕ್ತನಾದೊಡೆ ಸ್ವಕಾಯಕದಲ್ಲಿರಬೇಕು (ಆದಪ. ೬-೦೨); ಭವಿ ಭಕ್ತರೊಳಗೆ ಕೊಡುಕೊಳೆಯುಂಟೆ (ಶ್ರೀಕಣ. ೦೩-೦೦) ; ಶುದ್ಧಾಂತಃಕರಣನಾದ ಜೀವನು ಶಿವನ ಉಪಾಸನೆ ಮತ್ತು ಧಾರಣೆಗಳಿಗೆ ಅರ್ಹತೆಯನ್ನು ಪಡೆದು ಭಕ್ತನೆನಿಸುವನು (ಕೆಶ್ರಿ. ೬೨). [ಸಂ.]

**ಭಕ್ತ₂** (ನಾ). ಅಕ್ಕಿಯನ್ನು ಕೊಡುವ ಒಂದು ಬಗೆಯ ಧಾನ್ಯ; ನೆಲ್ಲು : ಎರಡುಗದ್ಯಾಣಂ ಪೊನ್ನು ಇಪ್ಪತ್ತುಗಣ್ಡುಗಂ ಭಕ್ತಮುಂ ಇರ್ಕೋದಿ ಕೆಱೆಗೋಡು ಪುಟ್ಟಿಗೆಯುಂ ತಸ್ಯ ಸೀಮಾನ್ತರಂ (ಎಕ. XVI, ಗುಬ್ಬಿ. ೬೫-೪೪; 733); ಮೂರ್ಕ್ಕಣ್ಡುಗ ಭಕ್ತ ಪೋಲಿಯೆ ಕೊಣ್ಡುಟ್ಟುವೊನ್ ಈ ಧರ್ಮ್ಮ (ಎಕ. X, ಕೋಲಾರ. ೬-೯; 753); ಎಡೆಬಾವಿಗೆ :—ಕಿಱುಕು ಸಾಲೆ, ಭಕ್ತಕಾಳು, ಅಂಬಿಲದೊಳಗಣ ಅಕ್ಕಿ, ಹೊಸ ಪೆಂಚು ಇವನ್ನರೆದು ಪೂಸಲು ಎಡೆಬಾವು ಮಾಣ್ಗುಂ (ಬಿಪ್ಪಿ. ೬೯).

[p ಇದು 'ಭತ್ತ' ಎಂಬುದರ ಅಪಲಿಖಿತ]

**ಭಕ್ತಕವಿ** (ನಾ). ತನ್ನ ಕಾವ್ಯದ ಮೂಲಕ ಭಕ್ತಿಯನ್ನು ಬೋಧಿಸುವವನು ; ಸಂತಕವಿ : ಭಕ್ತಕವಿಗಳಲ್ಲಿ ಮೊಟ್ಟಮೊದಲನೆಯವನು ಕಬೀರ್ (ಭಾರದ. ೪೫೬). [ಸಂ.]

**ಭಕ್ತಕುಟುಂಬಕ** (ನಾ). ತನ್ನ ಭಕ್ತರನ್ನೇ ಸಂಸಾರವಾಗುಳ್ಳವನು : ಪರಮಭಕ್ತಕುಟುಂಬಕನು ನೀ ಕರುಣಿಯಲ್ಲದೊಡೀ ಕುಟುಂಬಕ ಶರಣರಾರ್ಪ್ಪೆ ಕೃಷ್ಣ (ಕುಮಾರ. ೦೪-೦೨೦). [ಸಂ.]

**ಭಕ್ತಕುಟುಂಬಿ** (ನಾ). = ಭಕ್ತಕುಟುಂಬಕ : ನಂಬಿದವರಿಗೆ ತನ್ನ ತೆತ್ತಿಪನೆಂಬ ಬಿರುದನು ಮೆಱೆದು ಭಕ್ತಕುಟುಂಬಿ ಸಾರಥಿಯಾದನೊಲಿದರ್ಜುನಗೆ ಮುರವೈರಿ (ಕುಮಾರ. ೦ ಸೂಚನೆ); ಭಕ್ತಕುಟುಂಬಿ ಭಕ್ತಜನವತ್ಸಲ . . . ಪೊರೆ (ಕಬಕಂ. ೫-೦೬). [ಸಂ. ಭಕ್ತಕುಟುಂಬಿನ್]

**ಭಕ್ತತೆ** (ನಾ). ಭಕ್ತಿ ; ಶ್ರದ್ಧೆ : ಭುವನದೊಳೆಲ್ಲಿಯುಂ ಭವಿಗೆ ಭಕ್ತತೆಯಿಲ್ಲ ಬಿಡಾ (ಕಶಕ. ೯೪). [ಸಂ. ಭಕ್ತತಾ]

**ಭಕ್ತಪರಾಧೀನ** (ನಾ). ಭಕ್ತರಿಗೆ ಅಧೀನನಾಗಿರುವವನು ; ಭಕ್ತರ ವಶವರ್ತಿ : ಭಕ್ತಪರಾಧೀನನಾದ ನಾನೆ ಭಕ್ತರ ಭಕ್ತಿಯಿಂದ ಸಂತುಷ್ಟನಾಗಿ ಸರ್ವವನ್ನೂ ಮಾಡುವೆನು (ಅರ್ಥಮೂ. ೬೬) ; ದೈವವನ್ನು ಭಕ್ತಪರಾಧೀನ ಎಂದು ಹೊಗಳಿದ ಮೇಲೆ ಕಂಡ ಮೇಲೆ ಅವನ್ನು ಅನುಭವಿಸಿ ತೋರಿಸಬೇಡವೆ ಭಕ್ತನಾದವನು (ಭಾರದ. ೨೯೪). [ಸಂ.]

**ಭಕ್ತವತ್ಸಲ, ಭಕ್ತವತ್ಸಳ** (ನಾ). ಭಕ್ತರಲ್ಲಿ ವಾತ್ಸಲ್ಯವುಳ್ಳವನು : ಓಹಿಲನ ಮೆಱೆದ ಸೌರಾಷ್ಟ್ರವೆಂಬ ಮಂಡಲದಲ್ಲಿ ಕೂಡಲಸಂಗಮದೇವ ಭಕ್ತವತ್ಸಲನಾಗಿ (ಬಸವ. ೬೮೩); ದೈತ್ಯಪ್ರಳಯಪಾವಕ ಭಕ್ತವತ್ಸಲ ಭಕ್ತಸುರಧೇನು. . . ಕೇಶವ ಕರುಣಿಸೆನಗೆ (ಕುಮಾರ. ೩-೬೯); ಭಕ್ತವತ್ಸಲ ಕೃಪಾಕರ ಮಹಾಭಯನಿವಾರಣ ನೃಸಿಂಹ ತ್ರಾಹಿ (ಕೃಬಿಘ. ೦೦-೩೬). **ಭಕ್ತವತ್ಸಳ** : ಭಕ್ತವತ್ಸಳಂ [ಪಾಠಾಂ. ಭಕ್ತಜನವತ್ಸಳಂ] ಮಗನ ಮಾತಂ ಮನ್ನಿಸಿ ಮಹಾಮಹಿಮನೊಂದು ಗುಪ್ತವೇಷಮುಂ ಕೈಕೊಂಡಧ್ವರಕ್ಕೆ ನಡೆತಪ್ಪಾಗಳ್ (ವಂಬಿರ. ೦೬-೦೩೨). [ಸಂ.]

**ಭಕ್ತವತ್ಸಲತೆ** (ನಾ). ಭಕ್ತರ ಮೇಲಿರುವ ಪ್ರೀತಿ,– ವಾತ್ಸಲ್ಯ : ಆತನ ಕೋಪಮುಂ ನೆನೆಯದಾದಂ ಕೀರ್ತಿಸುತ್ತಿರ್ದನೀಶ್ವರಿಯೊಳ್ ಶಂಭುಗೆ ಭಕ್ತವತ್ಸಲತೆ ಸಲ್ಗುಂ ಮೇಣ್ ಪೆಱರ್ಗಕ್ಕುಮೇ (ಕಬಕಂ. ೪-೬೦). [ಸಂ. ಭಕ್ತವತ್ಸಲತಾ]

**ಭಕ್ತವತ್ಸಲೆ** (ನಾ). ಭಕ್ತರಲ್ಲಿ ವಾತ್ಸಲ್ಯವುಳ್ಳವಳು : ಎಲೆ ಮಾತೆ ! ನೀಂ ಭಕ್ತವತ್ಸಲೆ ಸಾಜಂ ! (ಜಾವಾಕ್ಯ. ೬೨-೦೦). [ಸಂ. ಭಕ್ತವತ್ಸಲಾ]

**ಭಕ್ತವತ್ಸಳ** 'ಭಕ್ತವತ್ಸಲ' ನೋ.

**ಭಕ್ತವಾತ್ಸಲ್ಯ** (ನಾ). = ಭಕ್ತವತ್ಸಲತೆ : ಒಂದು ವೇಳೆಯಾದರು ಮಾತನಾಡು, ನಿನ್ನ ಭಕ್ತವಾತ್ಸಲ್ಯವನ್ನು ತೋರು (ಶತಕ. ೩೭). [ಸಂ.]

**ಭಕ್ತವ್ಯಸನ** (ನಾ). ಭಕ್ತರ ಮೇಲೆ ಇಟ್ಟಿರುವ ಅತ್ಯಾಸಕ್ತಿ,–ಮಮತೆ : ಕುಶಲರನಿಬರು ಜೀಯ ಭಕ್ತವ್ಯಸನಭಾರವು ನಿಮ್ಮಲಿರೆ ಜೀವಿಸುವುದರಿದೇ ಪಾಂಡುನಂದನರು (ಕುಮಾರ. ೦೦-೩೦). [ಸಂ.]

**ಭಕ್ತವ್ಯಸನಿ** (ನಾ). ಭಕ್ತರ ಮೇಲೆ ಬಹಳ ಆಸಕ್ತಿಯುಳ್ಳವನು,– ಮಮತೆಯುಳ್ಳವನು : ನಳಿನನಾಭ ಮುಕುಂದ ಮಂಗಳನಿಳಯ ಭಕ್ತವ್ಯಸನಿ. . . ಕರುಣಿಸೆನಗೆ (ಕುಮಾರ. ೩-೬೯). [ಸಂ. ಭಕ್ತವ್ಯಸನಿನ್]

**ಭಕ್ತಸ್ಥಲ** (ನಾ). [ವೀಶೈ] ಷಟ್ಸ್ಥಲಗಳಲ್ಲಿ ಮೊದಲನೆಯದು; ಮುಕ್ತಿಸಾಧನೆಯ ಹಂತಗಳಲ್ಲಿ ಮೊದಲನೆಯದು : ಗುರುಲಿಂಗದಲ್ಲಿ ಕ್ರಿಯಾಶಕ್ತಿಯ ಪ್ರಭಾವದಿಂದ ಆಚಾರಲಿಂಗದುದಯವಾದುದು ಅದಱ ಉಪಾಸನೆಗಾಗಿ ಭಕ್ತಸ್ಥಲವುಂಟಾದುದು (ಶಿವಾನೂ. ೪೪-೮೨); ಪಿಂಡಸ್ಥಲ ಪಿಂಡಜ್ಞಾನಸ್ಥಲ . . . ಸಹಜಮಾಟಸ್ಥಲ ಈ ೧೫ ಭಕ್ತಸ್ಥಲಂಗಳು (ಅಜಂಜೆ. ೨೫೦-೦೦೪); ಭಕ್ತಸ್ಥಲದಿಂದ ಐಕ್ಯಸ್ಥಲಕ್ಕೆ ದ್ವೈತಭಾವನೆಯಿಂದ ಅದ್ವೈತಸಿದ್ಧಿಗೆ ಮುಂದುವರಿಯುವುದೇ ಸಾಧನೆ (ಜೂವ್ಯಕು. ೭ ಹಿನ್ನುಡಿ). [ಸಂ.]

**ಭಕ್ತಾದಾಯ** (ನಾ). ಭತ್ತದ ಮೇಲೆ ಹಾಕುವ ತೆರಿಗೆ : ಸಕಲ ಸುವರ್ಣಾದಾಯ ಭಕ್ತಾದಾಯಯೇನುಂಟಾದ ಸಾಮ್ಯವನು ಆಗುಮಾಡಿಕೊಂಡು ತೆಱುವ ಗುತ್ತಿಗೆಯ ಹೊಂನು ಗ ೩೦ (ಎಕ. III (R), ನಂಜನ. ೩೮೪-೦೦; 1502). [ಭಕ್ತ₂ + ಆದಾಯ]

**ಭಕ್ತಾನುಕಂಪಿ** (ನಾ). ಭಕ್ತರಲ್ಲಿ ಕನಿಕರವುಳ್ಳವನು,– ದಯೆಯಿರುವವನು : ಭಕ್ತಾನುಕಂಪಿ[ಪಾಠಾಂ. ಭಕ್ತ್ಯಾನುಕಂಜ] . . . ಪರಮೆಯುರ ಮುನಿಸ ತಿಳಿಪುತ್ತಿರ್ದಂ (ಸಂಬರ. ೧೬ ಸೂಚಿಚ). [ಸಂ. ಭಕ್ತಾನುಕಂಪಿನ್]

**ಭಕ್ತಿ** (ನಾ). ೧. ಭಾಗಮಾಡುವಿಕೆ. ೨. ಪಾಲು ; ಪಿಸ್ಸೆ ; ಭಾಗ. ೩. ದೇವರು, ತಾಯಿ, ತಂದೆ, ಗುರು ಮೊದಲಾದವರಲ್ಲಿ ತೋರುವ ನಿಷ್ಠೆ,-ಶ್ರದ್ಧೆ,—ಪೂಜ್ಯಭಾವನೆ : ಸಿದ್ಧಭಕ್ತಿಪೂರ್ವಕಂ ತ್ರಿಜಗದ್ಗುರುವೆನಿಸಿದಸ್ಮದ್ಗುರುವೇ ಗುರುವೆಂದು ತತ್ಪದಸರಸಿಜಧ್ಯಾನಪರಾಯಣನಾಗಿ (ಅದಿಪು. ೦೬-೬೨ ವ); ದೇವರೊಳಂ ಗುರುಗಳೊಳಮಾಗಮದೊಳಂ ನಂಬುಗೆಯುಂ ನಲ್ಮೆಯುಂ ಭಕ್ತಿಯುಮಪೂನವಾಗೆ ಘೋರವೀರತಪೋನಿಯಮನಿಷ್ಠಿತನಾಗಿ (ಸುಕುಮಾ. ೩-೪೬ ವ); ಭಕ್ತಿಯೆಂಬುದ ಮಾಡಬಾರದು ಕರಗಸದಂತೆ ಹೋಗುತ್ತ ಕೊಯ್ಯುವುದು ಬರುತ್ತ ಕೊಯ್ವುದಕು (ಬಸವ. ೨೧೨). ೪. ಸೇವೆ; ಉಪಚಾರ : "ವರಿವಸ್ಯಾ. . . ಭಕ್ತಿಃ . . . ಉಪಚಾರಃ – ಈ ೧೧ ಬೆಸಕೆಯ್ವುದರ್ಕೆ ಪೆಸರ್" (ಪರಾಮು. ೨೧-೦೨೯). ೫. [ತತ್ತ್ವಶಾ] ವ್ಯಂಗ್ಯಾರ್ಥವಿಲ್ಲದಿದ್ದರೂ ಹೇಳಬೇಕಾದುದನ್ನು ಬೇರೆ ರೀತಿಯಿಂದ ಹೇಳುವುದು; ಔಪಚಾರಿಕ ಪ್ರಯೋಗ; ಗೌಣ ಮತ್ತು ಲಾಕ್ಷಣಿಕ ಪ್ರಯೋಗ; ಅಲಂಕಾರಿಕ ಪ್ರಯೋಗ ; ೬ 'ಊಟ ಮಾಡಿಲ್ಲವೆಂಬುದನ್ನು ನಿನ್ನ ಮುಖವೇ ಹೇಳುತ್ತದೆ' ಎಂಬ ವಾಕ್ಯದಲ್ಲಿ 'ತಿಳಿಸುತ್ತದೆ' ಎಂಬ ಅರ್ಥದಲ್ಲಿ 'ಹೇಳುತ್ತದೆ' ಎಂಬ ಪದವಿದೆ. 'ನನ್ನ ಮನಸ್ಸನ್ನು ಸೂರೆಗೊಂಡಿರುವೆ' ಎಂಬಲ್ಲಿ 'ವಶಪಡಿಸಿಕೊಂಡಿರುವೆ' ಎಂಬ ಅರ್ಥದಲ್ಲಿ 'ಸೂರೆಗೊಂಡಿರುವೆ' ಎಂಬ ಪದವು ಪ್ರಯೋಗಿಸಲ್ಪಟ್ಟಿದೆ. ಇದಕ್ಕೆ ಭಕ್ತಿಯೆಂದು ಹೆಸರು : "ಭಕ್ತಿ"ಯೇ ಧ್ವನಿಯೆಂದು ಹೇಳಲಾದ ಪೂರ್ವಪಕ್ಷಕ್ಕೆ ಕೆಳಗಿನ ಕಾರಿಕೆಯಲ್ಲಿ ಸಮಾಧಾನ ಹೇಳುತ್ತಾನೆ (ಧ್ವಾಲೋ. ೪೦) ; ಪದಪದಾರ್ಥಗಳ ಸಂಬಂಧ ಶಕ್ತಿ, ಭಕ್ತಿಯೆಂದು ಎರಡು ಪ್ರಕಾರ. ಶಕ್ತಿ ಸಾಕ್ಷಾತ್ಸಂಬಂಧ. ಭಕ್ತಿ ಪರಂಪರಾಸಂಬಂಧ. ಭಕ್ತಿಯೆಂದರೆ ಭಾಗವೆಂಬ ಏಕದೇಶದಲ್ಲಿರುವುದೆಂದರ್ಥ (ಹಿಂದಶಾ. ೨೪೪). ೬. [ಜೈನ] ಸಮ್ಯಕ್ತ್ವದ ಎಂಟು ಗುಣಗಳಲ್ಲಿ ಒಂದು. [ಸಂ.]

**ಭಕ್ತಿಕ** (ಗು). ಭಕ್ತಿಗೆ ಸಂಬಂಧಿಸಿದ : ಆಗ ಸಂಗಮದೇವರಲ್ಲಿಗೆ ಹೋಗಿ ಬಸವನಸಮುಭ[ಪಾಠಾಂ. ಭಾ]ಕ್ತಿಕಯೋಗನಂ ಕಾಣುತ ನಮಿಸಿ ಬಿನ್ನೈಸಿದರು ಮುಂದೆ (ಬಸಪು. ೫-೬). [ಸಂ.]

**ಭಕ್ತಿಕಂಪಿತ** (ನಾ). ಭಕ್ತರ ಭಕ್ತಿಗೆ ಮಾರುಹೋಗುವವನು,–ಪರವಶನಾಗುವವನು : ಭಕ್ತಿಕಂಪಿತ ನಮ್ಮ ಕೂಡಲಸಂಗಮದೇವ (ಬಸವ. ೨೦೪). [ಸಂ.]

**ಭಕ್ತಿಕಾಂಡ** (ನಾ). ಭಕ್ತಿಯನ್ನು ಮೈಗೂಡಿಸಿಕೊಳ್ಳುವ ಘಟ್ಟ, —ಸ್ಥಿತಿ : ಕರ್ಮಕಾಂಡ ಭಕ್ತಿಕಾಂಡ ಜ್ಞಾನಕಾಂಡ ಇಂತೀ ತ್ರಿವಿಧವಲ್ಲಿ ಪಂಚಕನಾದರೆ ಈಸು ವಿಧದೊಳಗೆ ಅಂಗವಿಲ್ಲ (ಬಸವ. ೬೮೮) ; ಕರ್ತೃತ್ವ ಸಾಕ್ಷಿತ್ವಾಭಿಮಾನಗಳನ್ನು ಬಿಟ್ಟಿರುವುದೇ ಭಕ್ತಿಕಾಂಡವು (ಶಿವಾಸೂ. ೦೨೯ ಅಡಿಬ). [ಸಂ.]

**ಭಕ್ತಿಕಾಂಡಿ** (ನಾ). ಭಕ್ತಿಕಾಂಡದಲ್ಲಿ ಸಿದ್ಧಿಯನ್ನು ಪಡೆದವನು ; ಭಕ್ತಿಯನ್ನು ಸಾಧಿಸಿದವನು : ಉತ್ಪತ್ತಿ ಸ್ಥಿತಿ ಭೋಗ ಭಕ್ತಿಕಾಯವುಳ್ಳನ್ನಕ್ಕ ಭಕ್ತಿಕಾಂಡಿಯಲ್ಲ (ಬಸವ. ೬೬೮) ; ಸಕಲಕ್ರಿಯೆಗಳನೀಶ್ವರಾರ್ಪಣಂಗೈವಾತನೇ ಭಕ್ತಿಕಾಂಡಿಯೆನಿಸುವನು (ಬಪೀಠ. ೦೬). [ಸಂ. ಭಕ್ತಿಕಾಂಡಿನ್]

**ಭಕ್ತಿಗೀತ** (ನಾ). ಭಕ್ತಿಭಾವವೇ ಪ್ರಧಾನವಾದ ಹಾಡು ; ಭಗವಂತನ ಮಹಿಮೆ ಮೊದಲಾದುವನ್ನು ಕೊಂಡಾಡುವ ಹಾಡು ; ದೇವರನಾಮ : ಎಂದಿನಂತೆ ಇಂದಾದರೂ ಆಕೆ ಕಟ್ಟಳೆ ಪ್ರಕಾರ ತನ್ನ ಭಕ್ತಿಗೀತವನ್ನು ಹಾಡಿದ್ದಳು (ಹಳ್ಳಿಹಾ. ೬೪) ; 'ಗೀತಾಂಜಲಿ'ಯು ಭಕ್ತಿಗೀತಗಳ ಸಂಗ್ರಹ (ಧರ್ಮಸಾ. ೫೯). [ಸಂ.]

**ಭಕ್ತಿತ್ರಯ** (ನಾ). [ವೀಶೈ] ಗುರು, ಲಿಂಗ ಮತ್ತು ಜಂಗಮರಿಗೆ ಸಲ್ಲಿಸಲಾಗುವ ಭಕ್ತಿ : ಲೋಕಮೋಹನಶೀಲ ಭಕ್ತಿತ್ರಯವಿಲೋಲ ವಿಧೂತಭವಜಾಲ (ಬಸಪು. ೨೦-೨). [ಸಂ.]

**ಭಕ್ತಿದಾಸೋಹ** (ನಾ). ಭಕ್ತಿಯಿಂದ ಮಾಡುವ ಸೇವೆ : ಭಕ್ತನಾಯಿತ್ತೆ ಭಕ್ತಿದಾಸೋಹಯುಕ್ತನಾಯಿತ್ತೆ ಯುಕ್ತಿದಾಸೋಹ . . . ಈ ದಾಸೋಹದ ಅನುವ ಕೂಡಲಸಂಗಯ್ಯ ತಾನೇ ಬಲ್ಲ (ಬಸವ. ೯೩೫). [ಭಕ್ತಿ + ದಾಸೋಹ]

**ಭಕ್ತಿಪಂಥ** (ನಾ). ಭಗವಂತನ ಅನುಗ್ರಹಕ್ಕೆ ಭಕ್ತಿಯೇ ಮುಖ್ಯಸಾಧನವೆಂದು ನಂಬಿರುವ ಸಂಪ್ರದಾಯ ; ರಾಮದಾಸ, ತುಕಾರಾಮ ಮೊದಲಾದ ಸಂತರಿಂದ ಪ್ರವರ್ತಿತವಾದ ಸಂಪ್ರದಾಯ : ಭಕ್ತಿಪಂಥ ಬಹಳ ಹಳೆಯದು. ಭಗವದ್ಗೀತೆಯಲ್ಲಿ ಅದರ ಸ್ವರೂಪವನ್ನು ಚೆನ್ನಾಗಿ ವಿವರಿಸಿದೆ (ಪಶಾ. ೩೨); ಸುಸಂಸ್ಕೃತರು ಆತ್ಮಶಕ್ತಿಯನ್ನು ಮರೆತು ಪೂರ್ಣವಾಗಿ ದೈವವನ್ನೇ ನಂಬಬೇಕಾಯಿತು. ಈ ಸನ್ನಿವೇಶವೇ ಭಕ್ತಿಪಂಥಕ್ಕೆ ಪ್ರೇರಕವಾಯಿತು (ಮುಕ್ತ್ಯರ. ೦೧೦ ಬಿ೬೪). [ಸಂ. ಭಕ್ತಿಪಂಥಾ]

**ಭಕ್ತಿಪಥ** (ನಾ). ಪರಲೋಕಸಾಧನೆಗಾಗಿ ಹೇಳಿರುವ ಕರ್ಮಮಾರ್ಗ, ಭಕ್ತಿಮಾರ್ಗ, ಜ್ಞಾನಮಾರ್ಗಗಳೆಂಬ ಮೂರುಪ್ರಕಾರಗಳಲ್ಲಿ ಒಂದು; ಭಗವಂತನ ಭಕ್ತಿಯಿಂದ ಆತ್ಮಕಲ್ಯಾಣವನ್ನು ಸಾಧಿಸಿಕೊಳ್ಳುವ ರೀತಿ : ಅಂಗದ ಮೇಲಣ ಲಿಂಗವ ಹಿಂಗಿ ಬಂದ ಸುಖವನಾರಿಗರ್ಪಿಸುವೆ ಹಿಂಗಲಾಗದು ಭಕ್ತಿಪಥಕ್ಕೆ ಸಲ್ಲದಾಗಿ (ಬಸವ. ೭೩೩). [ಸಂ.]

**ಭಕ್ತಿಪೂರ್ವಕ** (ನಾ). ಭಕ್ತಿಯಿಂದ ಕೂಡಿಕೊಂಡಿರುವುದು ; ಭಕ್ತಿಯುಕ್ತವಾದುದು : ತತ್ಪುರಾಧೀಶಂ ದೃಢ(ಧೃತ)ಸೇನಂ ನಿಲಿಸಿ (ನಿಜಿಸಿ) ಭಕ್ತಿಪೂರ್ವಕದಿಂದಮಾಹಾರಂಗುಡೆ (ಶಾಂತಿಪು. ೯-೨೦ ವ) ; ಅವರಿಗೆ ಭಕ್ತಿಪೂರ್ವಕವಾಗಿ ನಮಸ್ಕರಿಸುತ್ತೇನೆ (ಸಂಕೋಧ. ೪. ೮೦೪). [ಸಂ.]

**ಭಕ್ತಿಭಂಡಾರ** (ನಾ). ಅತ್ಯಧಿಕವಾದ ಭಕ್ತಿ ; ನಿರತಿಶಯವಾದ ಭಕ್ತಿ : ಸಂಗನ ಶರಣರ ಭಕ್ತಿಭಂಡಾರವು ಎನಗೆಂತು ಸಾಧ್ಯವಪ್ಪುದು ಹೇಳೆನ್ನ ತಂದೆ (ಬಸವ. ೩೦೫). [ ಭಕ್ತಿ + ಭಂಡಾರ ]

**ಭಕ್ತಿಭಾವ** (ನಾ). ಭಕ್ತಿಯಿಂದ ಕೂಡಿದ ಮನೋವೃತ್ತಿ ; ಭಕ್ತಿಯಿಂದ ಪರಿಪೂರ್ಣವಾದ ಮನಸ್ಸು : ಮಹಾಬಳಿಗೆ ವಿನಿರ್ಮಲ ಭಕ್ತಿಭಾವದಿಂ ಸಾಂಜಲಿನಿಟಿಲಂ ನಿಗಮವಂದ್ಯನಂ ಕೀರ್ತಿಸಿದಂ (ಕಬಿಶಂ. ೪-೨೦೦); ಅವರಿಬ್ಬರೂ ಪರಮಾತ್ಮನ ಬಗೆಗೆ ಉತ್ಕಟವಾದ ಭಕ್ತಿಭಾವವನ್ನು ತಳೆದಿದ್ದರು (ಶರಶ. ೬). [ಸಂ.]

**ಭಕ್ತಿಮಾರ್ಗ** (ನಾ). = ಭಕ್ತಿಪಥ : ಭಕ್ತಿಮಾರ್ಗವಿದೆಮ್ಮ ಸೊಮ್ಮುದ್ಯುಕ್ತಮಂ ತಾನಿನ್ನು ಮೌನತ್ಯಕ್ತನಾಗದು ಪಿತಮೆಮಗೆ (ಬಸಪು. ೪೬-೫೬); ಪೂಜ್ಯರಂ ತಿರಸ್ಕರಿಸದೆ ಭಕ್ತಿಮಾರ್ಗದೊಳೆ ಸಂಚರಿಸುತ್ತ (ಅಮುಕ. ೩); ಎಲ್ಲ ಸಂಸ್ಕೃತಿಗಳೂ ಇಂಥ ಆಧ್ಯಾತ್ಮಜ್ಞಾನದೆಡೆಗೇ ನಮ್ಮನ್ನು ಕರೆದುಕೊಂಡು ಹೋಗುತ್ತವೆ. ಅವುಗಳಲ್ಲಿ ಮುಖ್ಯವಾದವು ಮೂರು : ಜ್ಞಾನಮಾರ್ಗ, ಭಕ್ತಿಮಾರ್ಗ, ಕರ್ಮಮಾರ್ಗ (ಧರ್ಮಸಾ. ೨೦). [ಸಂ.]

**ಭಕ್ತಿಯುಗ** (ನಾ). ಭಕ್ತಿಯೇ ಹೆಚ್ಚು ಪ್ರಚಾರದಲ್ಲಿದ್ದ ಯುಗ : ವಿದೇಶೀಯರ ಆಕ್ರಮಣದಿಂದ ಭಾರತಜನತೆಗೆ ಇಂಥ ಪರಿಸ್ಥಿತಿಯುಂಟಾದಾಗಲೇ "ಭಕ್ತಿಯುಗ" ಆರಂಭವಾಯಿತು (ಕಾರದ. ೪೫೬). [ಸಂ.]

**ಭಕ್ತಿಯೋಗ** (ನಾ). ಭಗವಂತನಲ್ಲಿ ಎಡೆಬಿಡದೆ ಭಕ್ತಿಯನ್ನು ಹೊಂದಿರುವುದು : ವ್ಯಾಘ್ರಪಾದನು ನಂದನಗೆ ಕರಾಗ್ರವೆತ್ತಿಯೆ ಹೇಳ್ದ ವೇದಾಗ್ರ

ದೊಳಗಿಹ ಭಕ್ತಿಯೋಗವನೊಲಿದು ಷಣ್ಮುಖಿಗೆ (ಷ್ಮ. ಪಸಿ. ೧೬ ಸೂತಸ); ನವವಿಧವಾದ ಭಕ್ತಿಯೋಗಮಾರ್ಗವ ಬೋಧಿಸಿದನಾ ಗಗನಸದ್ಗುರು (ಗಗಸಾ. ೩ ಸೂತಸ) ; ಗೀತೆಯಲ್ಲಿಯ ಮೊದಲಿನ ಆರು ಅಧ್ಯಾಯಗಳನ್ನು ಕರ್ಮಯೋಗ, ನಡುವಣ ಆರು ಅಧ್ಯಾಯಗಳನ್ನು ಭಕ್ತಿಯೋಗ . . . ಹೀಗೆ ವಿಂಗಡಿಸಬಹುದು (ಧರ್ಮಸಾ. ೧೦೩). [ಸಂ.]

**ಭಕ್ತಿಯೋಗಿ** (ನಾ). ಭಕ್ತಿಯೋಗದಲ್ಲಿ ನಿರತನಾದವನು ; ಭಕ್ತಿಯೋಗ ಸಾಧಕ : ಸತ್ಯಲೋಕಾಧಿಪನವಿಡಿದು ಶತಸ್ಥದೇವಗಣಾಂತ ಎಲ್ಲರು ಭಕ್ತಿ ಯೋಗಿಗಳೆಂದು ಕರೆಸುವರಾವ ಕಾಲದಲಿ (ಹಸಾರ. ೨೩-೦೦).

[ ಸಂ. ಭಕ್ತಿಯೋಗಿನ್ ]

**ಭಕ್ತಿರತಿ** (ನಾ). ಭಕ್ತಿಯಲ್ಲಿ ತೋರುವ ಆಸಕ್ತಿ, – ವ್ಯಾಮೋಹ : ಭಕ್ತಿರತಿಯ ವಿಕಳತೆಯ ಯುಕ್ತಿಯನೇನ ಬೆಸಗೊಂಬಿರಯ್ಯಾ ಕಾಮಿಗುಂಟೆ ಲಜ್ಜೆ ನಾಚಿಕೆ (ಬಸವ. ೫೦೬); ಮಾಟಕೂಟವೆರಡಱುವುತದಿಂವವೆ ಭಕ್ತಿರತಿ ಯಯ್ಯಾ ಕೂಡಲಚೆನ್ನಸಂಗಮದೇವಾ (ಚನ್ನಬ. ೦೬-೩). [ಸಂ.]

**ಭಕ್ತಿರಸ** (ನಾ). = ಭಕ್ತಿಭಾವ : ವಿಷಯರಹಿತನ ಮಾಡಿ ಭಕ್ತಿರಸವ ದಣಿಯೆ ಮೇಯಿಸಿ ಸುಬುದ್ಧಿಯೆಂಬುದಕವನೆಱೆದು ನೋಡಿ ಸಲಹಯ್ಯಾ (ಬಸವ. ೫೦); ಭಕ್ತಿರಸಂ ಮುಸುಕುವುದನುರಕ್ತಿರಸರಿ ಮಸಗಿವರ್ಪುದೇತೆಱದಿರ್ಪಂ (ಚರಿ. ೬-೨೯೦). [ಸಂ.]

**ಭಕ್ತಿಸಾರಾಯ** (ನಾ). ೧. ಭಕ್ತಿಯ ಸಾರಾಂಶ, – ತತ್ತ್ವ : ಎನಗೆ ನಿನ್ನ ರೂಪು ನಿರೂಪಾದ ಬಳಿಕ ಭಕ್ತಿಸಾರಾಯದ ಪಥವನೊಲ್ಲೆನಯ್ಯ (ಶೀಲವ. ೩೯-೩೯). ೨. ಭಕ್ತಿಯ ರಹಸ್ಯವನ್ನು ತಿಳಿದುಕೊಂಡಿರುವವನು : ಭಕ್ತಿತತ್ತ್ವವನ್ನು ಆಳವಾಗಿ ಅಭ್ಯಾಸಮಾಡಿರುವವನು : ಭಾವ ಸಾರಾಯರ ಭಕ್ತಿಸಾರಾಯರ ತೋಱಯ್ಯಾ ನಿಮ್ಮ ಧರ್ಮ (ಬಸವ. ೫೦೩).

[ ಭಕ್ತಿ + ಸಾರಾಯ$_2$ ]

**ಭಕ್ತಿಸ್ಥಲ** (ನಾ). = ಭಕ್ತಸ್ಥಲ : ಭಕ್ತನ ಮಠವೆಂದು ಜಂಗಮ ನಡೆದು ಬಂದಲ್ಲಿ . . . ತನು ಕರಗಿ ಮನ ಕರಗಿ ನೋಡಿ ಮಾಡುವುದು ಭಕ್ತಿಸ್ಥಲ (ಬಸವ. ೯೬೯); ಗುರುವಿಂಗೆ ತನು ಲಿಂಗಕ್ಕೆ ಮನ ಜಂಗಮಕ್ಕೆ ಧನವ ಕೊಟ್ಟೆನೆಂಬನ್ನಕ್ಕ ಭಕ್ತಿಸ್ಥಲ (ಶಿದಗೋ. ೨-೦೦೮). [ಸಂ.]

**ಭಕ್ತಿಹೀನ** (ನಾ). ಭಕ್ತಿಯಿಲ್ಲದವನು : ಭಕ್ತಿಹೀನನ ದಾಸೋಹವ ಸದ್ಭಕ್ತರು ಸವಿಯರು (ಬಸವ. ೬೦೮) ; ದೇವ ಇಂತಹ ಭಕ್ತಿಹೀನನ ಬಸುಱೊಳೆನ್ನುವನು ನೀವು ಹುಟ್ಟಿಸಲಹುದೆ (ಬಸವು. ೫೦-೬೯). [ ಸಂ. ]

**ಭಕ್ತಿಹೀನತೆ** (ನಾ). ಭಕ್ತಿಯಿಲ್ಲದಿರುವಿಕೆ : ಅಕ್ಕಟಾ ಮೆಚ್ಚುವನೆ ಇಂತಹ ಠಕ್ಕರಿಗೆ ಕಲಿನಾಥನಿದನೆಂತಕ್ಕೆ ಕೇಳ್ದೆವೆ ಭಕ್ತಿಹೀನತೆಯಾದ ವಾರ್ತೆಯನು (ಬಸವು. ೩೬-೦೬). [ ಸಂ. ಭಕ್ತಿಹೀನತಾ ]

**ಭಕ್ತೆ** (ನಾ). ಭಕ್ತಿಯುಳ್ಳವಳು ; ಭಕ್ತಿಯಿಂದ ಕೂಡಿರುವವಳು : ಗಂಡ ಶಿವಲಿಂಗದೇವರ ಭಕ್ತ ಹೆಂಡತಿ ಮಾರಿಮಸಣಿಯ ಭಕ್ತೆ (ಬಸವ. ೦೦೯); ಅವಳು ಭಕ್ತೆ (ಬಸವು. ೯೦-೯). 'ಪತಿಭಕ್ತೆ' ಪರಾ. [ ಸಂ. ಭಕ್ತಾ ]

**ಭಕ್ಷ** (ನಾ). ೧. ತಿಂಡಿ ; ಭಕ್ಷ್ಯ : "ತೈಲಾದಿ ತುಪ್ಪದೊಳ್ ತಾಳಿಸಿದು ವೈದೆ ಭಕ್ಷಮೆನಿಕ್ಕುಂ" (ಮಂಗರಾ. ೬೯-೩); ಪಱಿದ ಭಕ್ಷವನುಂಡು ಕೇರಿಗೆ ಮಣ್ಣನು ಪೊಱುವರ ಕಾಡಿ ಕರಿಕಾಲಚೋಳ ಭರದಲ್ಲಿ ಪೊಯ್ಯಲು ಹರಿ ದಾಡಿದಂದದಿ ಕರುಣದಿ ಕಾಣೆ ನೀ (ಕೋಟಶ. ಅನುಬಂ. ೨೦-೦೦೦); ಪಕ್ಷವಿಲ್ಲ ದಿದ್ದರೂ ಭಕ್ಷಕ್ಕೆ ಕಡಿಮೆಯೆ ? (ಗಾದೆ). ೨. ಆಹಾರ; ಉಣಿಸು : ನಿಡಿಯರ್ ಬಲ್ಲಾಳುದ ಬಲ್ದಡಿಗರ್ ಮಂದಿರ್ದರಯ್ವರಾಲದ ಕೆಬಗಿಂ ತೊಡರ್ದರ್ ನಮ್ಮಯ ಭಕ್ಷದೊಳ್ (ಶಂಕಶಾ. ೩-೦೨); ಊಳಿಗಾಳಿಯ ರೆರಡುಸಾಸಿರದಾಳು ಗೈವರು ಭಕ್ಷಗಳನಾ ಕೂಳ ಬಡಿಸುವಳೋರ್ವಳ್ (ಚಕ್ಕಪು. ೬೯-೦೬). [ ಸಂ. ]

**ಭಕ್ಷಕ** (ಗು). ೧. ತಿನ್ನುವ; ಕಬಳಿಸುವ. (ನಾ). ೨. ತಿನ್ನುವವನು ; ಕಬಳಿಸುವವನು : 'ನರಭಕ್ಷಕ' ಪರಾ. ೩. ಹೆಚ್ಚು ತಿನ್ನುವ ಸ್ವಭಾವದ ವನು ; ಹೊಟ್ಟೆಬಾಕ : "ಭಕ್ಷಕಃ, ಘಸ್ಮರಃ, ಅದ್ಮರಃ—ಈ ೩ ತಿನ್ನಾಳಿ" (ಹಲಾಯು. ೫೮-೦೯೫). [ಸಂ.]

**ಭಕ್ಷಕಾರಿ** (ನಾ). = ಭಕ್ಷಕ ೩ : "ಅದ್ಮರಂ ಘಸ್ಮರಂ ಭಕ್ಷಕಾರಿ ತಿನ್ನಾಳಿಯುಕ್ಕುಂ" (ಮಂಗರಾ. ೬೮-೦೦). [ ಸಂ. ಭಕ್ಷಕಾರಿನ್ ]

**ಭಕ್ಷಣ** (ನಾ). ೧. ತಿನ್ನುವುದು. ೨. ಆಹಾರ : "ವಲ್ಭನಂ . . . ಭಕ್ಷಣಂ . . . ಸ್ವದನಂ—ಈ ೧೧ ಊಟಂ" (ಹಲಾಯು. ೫೯-೦೬೦). ೩. ಲಾಡು ಮೊದಲಾದ ಭಕ್ಷ್ಯ,—ತಿಂಡಿ. [ ಸಂ. ]

**ಭಕ್ಷಣೆ** (ನಾ). ೧. = ಭಕ್ಷಣ ೨ : ಎಲ್ಲಿಗೆಲವೋ ಹೋಗದಿರು ಕಪಿ ನಿಲ್ಲು ಬಂದವಳಾವಳೆಂಬುದ ಬಲ್ಲವಿಕೆಯಲಿ ನೋಡು ಭಕ್ಷಣೆಗಾದೆ ನೀನೆನಗೆ (ತೊರರಾ. ೫-೦-೨); ಹಸಿವಾತ ರಾಕ್ಷಸಿಯ ಭಕ್ಷಣೆಗೆ ಹೊರಗಾಗಿ ತೃಪ್ತಿ ಯಲಿ ಕಳೆದಿರುವೆಯಾ ? (ಅರಳು. ೯೯೯-೦೦); ದಾಕ್ಷಿಣ್ಯವಂತನು ದಕ್ಷಿಣಕ್ಕೆ ಹೋದರೆ ಭಕ್ಷಣೆ ಸಿಕ್ಕೀತೇ ? (ಗಾದೆ). ೨. ಆಹಾರವನ್ನು ರುಚಿಕರ ವಾಗಿ ಮಾಡುವ ವ್ಯಂಜನ : "ಉಪದಂಶಃ, ಅವದಂಶಃ, ಭಕ್ಷಣಂ— ಈ ೩ ಕುಡಿವುತ್ತೆ ಬಾಡಿಸುವುದು" (ಹಲಾಯು. ೫೯-೦೬೩). [ಸಂ. ಭಕ್ಷಣ]

**ಭಕ್ಷಿ** 'ಬಕ್ಷಿ' ನೋ.

**ಭಕ್ಷಿತ** (ಗು). ೧. ತಿನ್ನಲ್ಪಟ್ಟ ; ನುಂಗಿದ : ದಕ್ಷಮುಖಿಕ್ಷಯುಕ್ಷವು ಭಕ್ಷಿತಕ್ಷ್ವೇಡ . . . ಅಕ್ಷಯ ರಕ್ಷಿಸೆಮ್ಮುವನು (ಬಸವು. ೬೦-೯೬). (ನಾ). ೨. ತಿಂದುದು : "ಭಕ್ಷಿತಂ, ಚರ್ವಿತಂ . . . ಭುಕ್ತಂ— ೧೪ ಭುಜಿಸಲ್ಪಟ್ಟದ್ದು" (ಸಿದ್ಧಾಂತಿ. ೩೫೨). [ ಸಂ. ]

**ಭಕ್ಷಿಸು** (ಕ್ರಿ). ತಿನ್ನು; ಕಬಳಿಸು; ಸೇವಿಸು : ನೀವು ಮಾಡಿದ ಬಯಲು ಭಕ್ಷಿಸಿತ್ತು ಅನಂತ ಹಿರಿಯರನು (ಬಸವ. ೯೫೭); ತಾನೇಂ ಮನುಜರನು ಭಕ್ಷಿಸಲು ರಾಕ್ಷಸನೇ (ಬಸವು. ೨೫-೦೬); ರಕ್ತಬೀಜಾಸುರನಂ ಭಕ್ಷಿಸುವದಕ್ಕೆ ಬಾಯ್ದೆಱೆದಿರ್ದ ಮಹದುರ್ಗಿಯ ಪಲ್ಗಳವೊಲ್ ಪಿರಿದಾಪ್ಪರಗೆಲೆಂಟೆದೆನೆಗಳೊಪ್ಪಿದವು (ಹರಿಶ್ಚ. ೦-೬೦).

[ ಭಕ್ಷಣ + — ಇಸು$_3$ ]

**ಭಕ್ಷೀಸ್** 'ಬಕ್ಷೀಸು' ನೋ.

**ಭಕ್ಷೀಸು** 'ಬಕ್ಷೀಸು' ನೋ.

**ಭಕ್ಷ್ಯ** (ಗು). ೧. ತಿನ್ನಬಹುದಾದ ; ತಿನ್ನತಕ್ಕ. (ನಾ). ೨. ತಿನ್ನಲು ಯೋಗ್ಯವಾದುದು; ತಿನ್ನತಕ್ಕುದು : ಗುರುಶಿಷ್ಯ ಪಾತ್ರಾಪಾತ್ರ ಪೇಯಾಪೇಯ ಭಕ್ಷ್ಯಾಭಕ್ಷ್ಯ ಗಮ್ಯಾಗಮ್ಯ ವಧ್ಯಾವಧ್ಯಾದಿ ವಿಭಾಗ ವಿಚಾರವುನೊಡಂಬಡದೆ (ಶಸಾರ. ೦೦೦). ೩. ತಿಂಡಿ; ತಿನಿಸು; P "ಭಕ್ಷ್ಯ-೫ : (ಅ) ಭಕ್ಷ್ಯ, ಭೋಜ್ಯ, ಲೇಹ್ಯ, ಚೋಷ್ಯ, ಪಾನೀಯ (ವಿದ್ಯಾಕ. ೫೦). (ಆ) ಅತಿರಸ, ಹೋಳಿಗೆ, ಲಡ್ಡು, ಜಿಲೇಬಿ, ಅಪೂಪ (ಅಪ್ಪಂ) (ಸಾಂಖ್ಯ. ೪೫)" (ಶ್ರೀವತ್ಸ. ೩೦೦): ಪದಿನೆಂಟುಂ ತೆಱದ ಭಕ್ಷ್ಯರೂಪಂಗಳುಮಂ ನಾನಾಪ್ರಕಾರದ ಪಾನಂಗಳುಮಂ ಭಟ್ಟಾರ್ಗೆ ಬಡ್ಡಿಸಿ (ವಡ್ಡಾರಾ. ೬೮-೦೬) ; ಭಕ್ಷ್ಯಾದಿಗಳಂ ಬೇಡುವ ಮಕ್ಕಳ ಬಾಳ ಕ್ರೀಡೆಗಳಂ ನೋಡುತಿರ್ಪುದೊಂದಿರವಲ್ತೇ (ಸುಕುಮಾ. ೯-೦೦೦); ನಳನಳಿಪ ಬಹುವಿಧದ ಭಕ್ಷ್ಯಾವಳಿಯ ಹೆಡಿಗೆಗಳೋರಣಿಸಿ ಮಂಡಳಿಸಿ (ಕುಮಾರ. ೦೦-೨೫). ೪. ಲಾಡು, ಹೋಳಿಗೆ ಮುಂತಾದ ಸಿಹಿತಿಂಡಿ : ಸಾಮಾನ್ಯವಾಗಿ ದೇವರ ಸಮಾರಾಧನೆಯಂದು ಭಕ್ಷ್ಯಕ್ಕೆ ಹೋಳಿಗೆಯನ್ನು ಮಾಡಿಸುತ್ತಾರೆ (ರೂಢಿ). [ ಸಂ. ]

**ಭಕ್ಷ್ಯಕಾರ** (ನಾ). ಸಿಹಿತಿಂಡಿಯನ್ನು ಮಾಡುವವನು ; ಭಕ್ಷ್ಯವನ್ನು ಮಾಡುವವನು : "ಅಪೂಪಿಕಃ, ಕಾಂದವಿಕಃ, ಭಕ್ಷ್ಯಕಾರಃ—೩ ಕಜ್ಜಾಯ ಮುಂತಾದ ಭಕ್ಷ್ಯಗಳನ್ನು ಮಾಡುವವನಿಗೂ ಹೆಸರುಗಳು" (ಸಿದ್ಧಾಂತಿ. ೨೮೨).

[ ಸಂ. ]

**ಭಗ** (ನಾ). ೧. ಸೂರ್ಯ : "ಆದಿತ್ಯಃ . . . ಭಗಃ . . . ತ್ರಯೀತನುಃ— ಈ ೪೭ ಆದಿತ್ಯನ ಪೆಸರ್" (ಅಭಿಧಾನ. ೬-೩೩); ಬೆಳ್ಪು ಕರಗಿ ಬೆಳಗಾಯ್ತು ಏಳು ಹಗಲಾಗಿ ಭಗನೆ ಸುಡನೆ ? (ಅಕ್ಕ. ೧೦೦-೪). ೨. ದ್ವಾದಿಶಾದಿತ್ಯರಲ್ಲಿ ಒಬ್ಬ : ಅನಲನ ಭುಜಂದಡು ಜಿಹ್ವೆಯಂ ಕೊಯ್ದು ಪೂಷನ ಪಲ್ಗಳನುದಿರ್ಚಿ ಭಗನ ಕಣ್ಣಂ ಕಳೆದು . . . . ನೋಯಿಸೆ (ಶಬ್ದಾ. ೧೧-೨೪೦) ; ಭಗನ ಕಣ್ಣಂ ಕಳ್ತನೆಂದು ಪೇಳ್ಗುಂ ಮತ್ತೆ ಭಗನೇತ್ರ ಎನುತುಂ (ಅರಾಜ. ೩-೧೬_೧೬). 'ಭಗಘ್ನ' ಪರ್ಯಾ. ೩. ಕೀರ್ತಿ; ಯಶಸ್ಸು : ಪೊಗಟ್ ಜಗತೀಚಕ್ರಂ ದಿಕ್ಚಕ್ರದೊಳ್ [ಭ]ಗಮಾಮಗಂ ನೆಗಟ್ ವಿಜಯೋಃ ದ್ಯೋಗವ್ಯಾಭಾಸಮಾನಮಹೋದಯುಂ ಮಗುಟ್ಟು (ಚರ್ಚಿತಾ. ೨-೩೦). ೪. ಸ್ತ್ರೀಯ ಗುಹ್ಯ; ಯೋನಿ : "ಭಗಃ, ಯೋನಿಃ, ಉಪಸ್ಥಃ, ವರಾಂಗಂ, ಸ್ಮರಮಂದಿರಂ—ಈ ೫ ಉಪಸ್ಥಂ" (ಕರ್ನಾಟ. ೬೫-೩೩೦); ಭಗಮಲರ್ದ ಕೆತ್ತುಗುಂ ಗುದಮಗುಗುಂ ತೊಡೆ ನಡುಗುಗುಂ ಲತಾಂಗಿಗೆ (ಪುರಾ. ೧೧-೩೬) ; ಬಿಸುನೀರಿಂ ಪೂಸುಗೆ ತಾಂ ಕಿಸುಗುಳಿಯಪ್ಪವಳ ಭಗದ ಗಂಧಂ ಕಿಡುಗುಂ ( ಕೋಕಶಾಸ. ೯-೧೬೨ ). ೫. ಜನ್ಮಾಂತರಗಳಲ್ಲಿ ಮಾಡಿರುವ ಪಾಪ ಮತ್ತು ಪುಣ್ಯಕಾರ್ಯಗಳ ಪರಿಣಾಮ,— ಫಲ. ೬. ಭಾಗ್ಯ; ಅದೃಷ್ಟ. ೭. ಸಂಪತ್ತು; ಐಶ್ವರ್ಯ. ೮. ಏಳಿಗೆ; ಅಭ್ಯುದಯ. ೯. ಘನತೆ; ಹಿರಿಮೆ. ೧೦. ಉತ್ಕೃಷ್ಟತೆ; ಶ್ರೇಷ್ಠತೆ. ೧೧. ಬಲ; ಶಕ್ತಿ; ಸಾಮರ್ಥ್ಯ. ೧೨. ಮಾಹಾತ್ಮ್ಯ. ೧೩. ಪ್ರಯತ್ನ; ಸಾಹಸ. ೧೪. ತೇಜಸ್ಸು; ಕಾಂತಿ. ೧೫. ಒಲುಮೆ ; ಪ್ರೀತಿ. ೧೬. ಪವಿತ್ರತೆ ; ಪರಿಶುದ್ಧತೆ. ೧೭. ಅರಿವು ; ಜ್ಞಾನ. ೧೮. ಧರ್ಮ. ೧೯. ವಿರಕ್ತಿ; ವೈರಾಗ್ಯ. ೨೦. ಸಂಯಮಿ; ಯತಿ. ೨೧. ಮುಕ್ತಿ; ಮೋಕ್ಷ. ೨೨. ಜಪ; ಸ್ತುತಿ. ೨೩. ಭವಿತವ್ಯ. ೨೪. ದೇವತೆ : "ಸೂರ್ಯನೊಳು ಧರ್ಮದೊಳು ಯೋಗಿಯೊಳು ಯಶದೊಳೈಶ್ವರ್ಯದೊಳು ಜ್ಞಾನದೊಳು ವೈರಾಗ್ಯದೊಳು ದೇವವೀರ್ಯದೊಳು ಮುಕ್ತಿಯೊಳು ಶ್ರೀಯೊಳು ಮಹಾತ್ಮ್ಯೆಯೊಳು ಭರ್ಗನೊಳು ಭಗವೆನಿಕ್ಕುಂ" (ಮಂಗರಾ. ೦೩೦-೫೧); "ತಪನಂ ಸಂಯುಮಿ ಧರ್ಮ ಕೀರ್ತಿ ವೈರಾಗ್ಯ ಜ್ಞಾನಮೈಶ್ವರ್ಯ ಯೋನಿ ಪವಿತ್ರಂ ಭವಿತವ್ಯ ಶಕ್ತಿ ಕಿರಣಂ ಗೀರ್ವಾಣರುಂ ಮುಕ್ತಿಯುಂ ಜಪ ಮಾಹಾತ್ಮ್ಯಂಗಳುಂ ಭಗಾಖ್ಯಂ" (ಶಾಶಾರ. ೩೩). [ಸಂ.]

**ಭಗಂದರ** (ನಾ). ೧. ಗುಹ್ಯಪ್ರದೇಶದಲ್ಲಿ ಉಂಟಾಗುವ ಒಂದು ಬಗೆಯ ವ್ರಣರೋಗ : "ಭಗಂದರಃ—ಶಿಶ್ನೋಪಸ್ಥಗಳ ಬಳಿಯಲ್ಲಿ ಹುಟ್ಟುವ ಹುಣ್ಣು" (ಸಿದ್ಧಾಂತ. ೦೮೪) ; ಪಿಟಕಂ ಶೂಲ ಭಗಂದರಂ ಕುಷ್ಠ ಕ್ಷಯ ಗಂಡಶಿರೋವೇದನೆ ಮೊದಲಾಗೊಡೆಯವೇಟುನೂಱುವ್ಯಾಧಿಗಳೊರ್ಮೊದಲೆ ಮೆಯ್ಯೊಳ್ ಪುಟ್ಟಿದೊಡೆ (ಧರ್ಮಾ.ರಾ. ೬೯-೧೧) ; ಸತಿಯುಂ ವಿಚಾರಿಪಾಗಳು ಋತಿಗಂಗೆಯೊಳವನಿಪತಿ ಭಗಂದರದೊಳು ಮುಂ ಪ್ರತಿದಿನಮಿಟ್ಟನ್ನವು ನುಂಡ ತೆಱಂ ತನಗಕ್ಕುಂ (ಪುದಾ. ೯-೨೦) ; ಬಾಯಿಂದ ಬಂತು ಭಗಂದರ (ಗಾದೆ). ೨. ಒಬ್ಬ ಋಷಿಯ ಹೆಸರು. [ಸಂ.]

**ಭಗಘ್ನ** (ನಾ). ಭಗನೆಂಬ ಆದಿತ್ಯನನ್ನು ಅಡಗಿಸಿದವನು ; ವೀರಭದ್ರ : ರತ್ನಮಯದಂಡಮಂತದನೆಯ್ದೆ ಪಿಡಿದು ಬರಲಾ ಭಗಘ್ನಂ . . . ನಡೆದ ಸಭವಂ (ವೀರಭ.ಪು. ೨-೩-೯೩). [ಸಂ.]

**ಭಗಣ** (ನಾ). ೧. ನಕ್ಷತ್ರಗಳ ಗುಂಪು, — ಸಮೂಹ : ಭಗಣದ ಲೆಕ್ಕಮಂ ಮಟಿಯ ನೀರ್ಪನಿಯುಂ . . . ಪವಣಿಸಲ್ ಬಗೆದರ್ಪನೆ ಗಾಂಪನಾಗಸೇ (ಶಂಕರಾಪ. ೦೩-೧೧); ನೆಗಟ್ದಾ ದ್ವೀಪದ ಮಧ್ಯದಲ್ಲಿ ಕಲಶಂ ಚಂಡಪ್ರಭಂ ಪಂಜರಂ ಭಗಣಂ . . . ಗಗನಚ್ಛತ್ರದ ಹೇಮದಂಡಮೆನಿಸಲ್ ಸಾಲ್ದತ್ತು ಹೇಮಾಚಲಂ (ಜಗದ. ೦-೨೫) ; ಮುತ್ತಿನ ಬಿಂಬದ ಜಾಳದ ಮುತ್ತಿನ ವಿಭ್ರಮದಿನೆಸೆವ ಬೆಳ್ಗೊಡೆ ಭಗಣಂ ಸುತ್ತಿರೆ ಮಿಸುಗುವ ಶಶಿಯೆನಿಸುತ್ತಿರೆ (ಕುಸುಮ. ೧೧-೨೩). ೨. [ಛಂದ] ಮೊದಲನೆಯ ಅಕ್ಷರ ಗುರುವೂ ಉಳಿದೆರಡು ಲಘುಗಳೂ ಆಗಿರುವ ( – ∪∪) ಒಂದು ಅಕ್ಷರಗಣ : ಆದಿ ಗುರುವಾಗೆ ಭಗಣಂ (ಛಂದೋಂಬು. ೦-೯೪ ಅವತರ್ಣ). [ಸಂ.]

**ಭಗಣಮಂಡಲ** (ನಾ). ನಕ್ಷತ್ರಗಳ ಗುಂಪು : ತಾರಾಮಂಡಲ : ಒಡೆದು ಸರ್ರನೆ ತಿರುಹಲಮರರು ನಡುಗಿ ಕಂಗೆಟ್ಟೋಡಿತತ್ತಲು ಬಿಡದೆ ಸುಂಟರಗಾಳಿಯುಟ್ಟಿತು ಭಗಣಮಂಡಲಕೆ (ಕೌಶಿರಾ. ೨೫-೯೩). [ಸಂ.]

**ಭಗದಾಳ**, ಬಗದಳ, ಬಗದಾಳ (ನಾ). = ಭಗಂದರ ೧ : ಹೆಗ್ಗುಳ್ಳದ ಬೇರು ತೂಕ ೭, ಕರಿಯುಉಮ್ಮತ್ತಿಯ ಎಲೆ ತೂಕ ೭, ತುಪ್ಪ ತೂಕ ೭ ಇವ ಅರೆದು ಪೂಸೆ ಭಗದಾಳ ಮಾಣ್ಗುಂ (ಅಶ್ವಶಾ. ೬೩). **ಬಗದಳ** : ಕರಸ್ಥಲವೆಂಬುದು ಕೈಕಟ್ಟ ಹುಣ್ಣು ಅವಳೋಕ್ಯವೆಂಬುದು ಬಾಯ ಬಗದಳ ಅಂಗಸೋಂಕೆಂಬುದು ಪಾಪದ ತವರ್ಮನೆ (ಅವಹಂ. ೦೦೯–೯೭೪) ; ಬಾಯೊಳಗಣ ಬಗದಳಕ್ಕೆ ಎನ್ನ ಕೇಳಬೇಡ (ಸವವ. III, ೬೫-೦೩೨) ; ಶರಣರ್ಗೆ ಸರಿ ಸುರನರರೊಳಿಲ್ಲೆನಲು . . . ಸರಿಯೆಂಬ ಬಾಯ್ಗೆ ಬಗದಳ ವೀಗದಿರ್ಪುದೇ (ಶಂಬಸ. ೧೭-೦೯೨). **ಬಗದಾಳ** : ಬಾಯಿಗೆ ಬಂತು ಬಗದಾಳ ಬೆನ್ನಿಗೆ ಬಂತು ಭೇತಾಳ (ಗಾದೆ).

[←ಮರಾ. ಭಗದಳ, ಭೆಗದಡ, ಭಗದಾಡ. /ಪ್ರಾ. ಭಗಂದಲ]

**ಭಗಭಗ** (ನಾ). ಒಂದು ಅನುಕರಣ ಶಬ್ದ : ಅವರು ಮಾಡಿದ ಅನ್ಯಾಯ ನೆನೆಸಿಕೊಂಡರೆ ಹೊಟ್ಟೆ ಭಗಭಗ ಎಂದು ಉರಿದುಹೋಗುತ್ತೆ (ರೂಢಿ).

**ಭಗರ** (ನಾ). (ಉಪವಾಸದ ದಿನ ಅಲ್ಪಾಹಾರಕ್ಕೆ ಬಳಸುವ) ಒಂದು ಬಗೆಯ ತೃಣಧಾನ್ಯ : ಅಳಿಯುವ ರ ಘರ್ಯಾದ ಖಂಡಗದ ಮೇಲೆ ಧಾರಣೆ. ಇರತಕ್ಕ ಜೀನಸುಗಳು ೧. ಹವೀಜ ; ೨. ಅವಲಕ್ಕಿ; ೩. ಭಗರ (ವರಯುದ ಅಕ್ಕಿ) (ಮುಂಬಪ್ರಾ. ೦೩೦). [←ಮರಾ. ಭಗರ]

**ಭಗರಿ** 'ಬವರಿ' ನೋ.

**ಭಗವ** (ನಾ). ವೈಷ್ಣವ ಸಂನ್ಯಾಸಿ : ಭಗವರೊಳಂ ಗೊರವರೊಳಂ ಸುಗತರೊಳಂ ಋಷಿಯರೊಳವಾದೆಂದುಂ ಪಾಷಂಡಿಗಳಿಂದೆ ನೆಚ್ಚರುಂ ನಲ್ಕೆಗಳವರಾದನೆಂದುಮಿಲ್ಲ ಪಾರ್ವರಿಗೆಂದುಂ (ಸವಃಶ. ಅಸುಬಂ. I, ೧೧-೩೪).
[<ಸಂ. ಭಗವತ್?]

**ಭಗವಂತ** (ನಾ). ೧. ದೇವರು ; ಪರಮಾತ್ಮ : ಭಗವಂತನೆ ಕವಿ ಸಹೃದಯ ನಾಂ (ಅಶೀ. ೩೦-೨) ; ಈ ಈಶ್ವರನು ಮಹದೈಶ್ವರ್ಯಗುಣ ಪೂರ್ಣನಾದ ಭಗವಂತನು ; ಏಕಮೇವಾದ್ವಿತೀಯನು (ಶಾರದ. ೦೨೬) ; ಅರ್ಜುನನು ಮಹಾಸಂಗ್ರಾಮಕ್ಕೆ ಅಣಿಯಾಗುತ್ತಾನೆ. ಹೀಗೆ ಭಗವಂತನ ಕಾರ್ಯ ಫಲಿಸುತ್ತದೆ (ರಮಗೀ. ೦೩೮). ೨. ವಿಷ್ಣು. ೩. ಶಿವ ; ಈಶ್ವರ. ೪. ಜಿನ ; ಅರ್ಹಂತ. ೫. ಗೌತಮ ; ಬುದ್ಧ : ಆನಂದನವರನೆಬ್ಬಿಸುತೊಡನೆ ಮರಳಿ ಬರೆ, ಭಗವಂತ ಮೆಲ್ಲನಿಂತೆಂದ (ವೃಶಾಪ. ೬೫-೫); ಭಗವಂತನು ಒಂದು ಸಲ ಶ್ರಾವಸ್ತಿಯ ಜೇತವನದಲ್ಲಿ ಅನಾಥಪಿಂಡಿಕನ ಆರಾಮದಲ್ಲಿ ತಂಗಿದ್ದನು (ಬುದ್ಧಶ. ೦೫೫). ೬. ಪೂಜ್ಯರನ್ನು ಉದ್ದೇಶಿಸುವಾಗ ಬಳಸುವ ಶಬ್ದ : ಅಜ್ಞಾನಾಚಾರ್ಯ ಭಗವನ್ತರಾಸ್ಥಾನಮಾನ್ ದೇವಾಚಾರ್ಯಭಗವನ್ತರ್ಗ್ಗೆ ಕೊಟ್ಟು (ಎಕ. X, ೦೬೫-೫; 733). [ ಸಂ. ಭಗವತ್ ]

**ಭಗವತಿ** (ನಾ). ೧. ಗೌರಿ ; ಪಾರ್ವತಿ : "ರುದ್ರಾಣೀ . . . ಭಗವತೀ, ದುರ್ಗಾ . . . ಮೇನಕಾತ್ಮಜಾ—ಈ ೨೧ ಗೌರೀದೇವಿಯ ಪೆಸರ್" (ಕರ್ನಾಟ. ೪-೦೫); ಮರಿಯುಸೆಯೊಳ್ ಭಗವತಿಯಂ ಪದಿಷ್ಟೆಗೆಯ್ಸಿದೊಡೆ (ಮೈಶಾ. ೦೯೨೯, ೩೮-೩; ೩೦ನೆಯ ಸಾ) ; ಆ ಭಗವತಿ ಕೊರ್ತು ಬೀರಸಿರಿಯಾಗೆ ಭುಜಾಸಿಗೆ ನಾಗವರ್ಮನಾ (ಛಂದೋಂಬು. ೦-೪). ೨. ಲಕ್ಷ್ಮಿ, ಸರಸ್ವತಿ ಮೊದಲಾದ ಸ್ತ್ರೀದೇವತೆ. ೩. ತಪಸ್ವಿನಿ, ಋಷಿಪತ್ನಿ, ಮೊದಲಾದ ಪೂಜ್ಯಸ್ತ್ರೀಯರನ್ನು ಕುರಿತು ಹೇಳುವಾಗ ಬಳಸುವ ಪದ : ಎಲಾ

ಭಗವತಿಯರಿಂ, ಮಹಾದೇವಿಯರಿಂ ಇತ್ತ ಕಡೆಗೆ ಬರಬೇಕು (ಉಂಡಾಕ. ೯-೩ ಪ).

**ಭಗವತಿಅಂಕಕಾಱ** = ದೇವಿಯ ಭಕ್ತನೆಂದು ಪ್ರಸಿದ್ಧನಾದವನು; ಒಂದು ಬಿರುದು : ಸ್ವಸ್ತಿಶ್ರೀಮನುಮಹಾಮಂಡಳೇಶ್ವರಂ ಚೋಳರ ಭೀಮ ಚೋಳನಾರಾಯಣ ಭಗವತಿಅಂಕಕಾಱ ನಾಗರಸನ ಕುವರಾರವೀರ ಬೊಂಮರಸಂಗೆ ಬಸುರುಕೋಡನು . . . ಕೊಟ್ಟನು (ಕ್ಶಾಇ. IX–i, ೩೬೭–೧೨; 1278). **ಭಗವತಿಯೇಱು** = ದುರ್ಗೆಯ ಯುದ್ಧ ; ದೇವೀ ಸಂಗರ : ಭಗವತಿಯೇಱುವೆಟ್ಟು ತೆಱದಿಂ ಕಥೆಯಾಯ್ತು ಮರೇಱು (ಶಂಕಕಾ. ೦೦–೧೩); ಗಣ್ಡವಾತುಗಿಬಗಿ ಕೀರ್ತಿಗ್ಗಂಪ್ಪ ಉಱುಮುತ್ತರ ಮೂದಲೆ ಪೆಂಪು ವಿಕ್ರಮಂ ಭಗವತಿಯೇಱು ಶೌಚಗುಣಮತ್ತಿಯ ಪಣ್ಣೆನಿಪೇಳ ಪುಣ್ಣರಂ ತೆಗಳ್ವುದುದ್ವಾರಚಾರುಚರಿತಪ್ರಭೆಯಿಂ ಪಡೆವಳ್ಳ ತೈಲನ (ಕ್ಶಾಇ. XI–i, ೩೩–೪೯; ಶು. 1007); P 'ಭಗವತಿ'ಯು ಪರಾಶಕ್ತಿಯ ಒಂದು ಸ್ವರೂಪ. ಪಾರ್ವತಿಯಾಗಿ, ದುರ್ಗೆಯಾಗಿ ಅವಳು ದುಷ್ಟಶಕ್ತಿಯನ್ನು ನಾಶಮಾಡಿದ ಕಥೆ ಪ್ರಸಿದ್ಧ. ಆದುದರಿಂದ **ದೇವಿಯ ಯುದ್ಧ, ದೇವೀಸಂಗರ,** ಭಗವತಿಯೇಱು ಎಂಬ ಪದಗಳಲ್ಲಿ ಈ ದೇವಿಯು ಮಾಡಿದ ಯುದ್ಧದ ಕಥೆ ಅಥವಾ ಪುರಾಣದ ಕಥೆ ಸೂಚಿತವಾಗುತ್ತದೆ. [ಸಂ. ಭಗವತೀ]

**ಭಗವತ್ಪಾದ** (ನಾ). ಮಠಾಚಾರ್ಯರೇ ಮೊದಲಾದ ಪೂಜ್ಯರನ್ನು ಸಂಬೋಧಿಸುವಾಗ ಹೇಳುವ ಒಂದು ಗೌರವಾರ್ಥಕಶಬ್ದ : ಶಂಕರಭಗವತ್ಪಾದರು ಜಗನ್ಮಿಥ್ಯಾವಾದಿಗಳಾದರೂ ಅವರ 'ಮಿಥ್ಯಾ' ಪದ ಪ್ರಯೋಗದ ಅರ್ಥವೇ ಬೇರೆ (ಹಾರಿಠ. ೦೨೨ ಅಖಿ). [ಸಂ.]

**ಭಗವತ್ಪಾದಿ** (ನಾ). (ವಿಷ್ಣುವಿನ ಪಾದದಿಂದ ಹುಟ್ಟಿದುದೆಂದು ಹೇಳುವ) ಗಂಗಾನದಿ : ಸುತ್ತ ಬಳಗವ ಕೂಡೆ ಕುಳಿತು ಭಗವತ್ಪಾದಿ ಪೆತ್ತ ದೇವನ ಸ್ಮರಣೆಮಾಡಿಕೊಳ್ಳುತ (ಐಾಕ್ಯ. ೩೨–೦). [< ಸಂ. ಭಗವತ್ಪದೀ]

**ಭಗವದಿಚ್ಛೆ** (ನಾ). ದೈವೇಚ್ಛೆ ; ಈಶ್ವರಸಂಕಲ್ಪ : ಪ್ರಕಟಣೆಗಾಗಿ ಒಂದೆರಡು ಪ್ರಯತ್ನಗಳು ನಡೆದುವಾದರೂ ಪ್ರಕಟವಾಗಲಿಲ್ಲ. ಭಗವದಿಚ್ಛೆ ಹಾಗಿತ್ತು (ಸಶಕ. XV, ಶ್ರಸ್ತಾ ಪತ) ; ಭಗವದಿಚ್ಛೆಯಿದ್ದರೆ ಶಿಕ್ಷೆ ರದ್ದಾಗುತ್ತದೆ (ಪುಪರು. ೨೩೬). [ಸಂ. ಭಗವದಿಚ್ಛಾ]

**ಭಗವದ್ಗೀತೆ** (ನಾ). ಹಿಂದುಗಳ ಸುಪ್ರಸಿದ್ಧವಾದ ಧರ್ಮಗ್ರಂಥ: ಮಹಾಭಾರತದ ಭೀಷ್ಮಪರ್ವದಲ್ಲಿ ಶ್ರೀಕೃಷ್ಣನು ಅರ್ಜುನನಿಗೆ ಉಪದೇಶ ಮಾಡಿದ ತತ್ತ್ವವನ್ನು ವಿವರಿಸುವ ಹದಿನೆಂಟು ಅಧ್ಯಾಯಗಳನ್ನೊಳಗೊಂಡ ಗ್ರಂಥಭಾಗ : ವೇದಗಳ ಸಾರಸರ್ವಸ್ವ ಉಪನಿಷತ್ತುಗಳಾದರೆ, ಉಪನಿಷತ್ತುಗಳ ಸಾರಸರ್ವಸ್ವ ಭಗವದ್ಗೀತೆ (ಹಾರಿಠ. ೦೦೯); ಉತ್ತಮಸಂದೇಶವನ್ನು ನೀಡುವ ಭಗವದ್ಗೀತೆಯೊಡನೆ ಕೂಡಿದ ಮಹಾಭಾರತವು ಪಂಚಮವೇದವೆನ್ನಿಸಿಕೊಂಡಿತು (ಪುಕ್ಕಾರ. ೦೦೨ ೩೬೬೪). [ಸಂ. ಭಗವದ್ಗೀತಾ]

**ಭಗವನ್** 'ಭಗವಾನ್' ನೋ.

**ಭಗವಾ** (ಗು). ಕಾವಿ ಬಣ್ಣದ : ತಿರಿದುಂಬುವ ಕಾಮುಕಕ್ಕೂ, ವೇದಾಂತ ಮಾರ್ಗದ ಹೆಸರಿನಲ್ಲಿ ಗುಂಪುಕಟ್ಟಿಕೊಂಡು ತಿರುಗುವ ಭಗವಾ ವೇಷ ಭೂಷಣವಲ್ಲಿರುವ ಗಾಂಜಾಮೇಳದವರಿಗೂ ಸೇರುತ್ತಿರಲಿಲ್ಲ (ಶಂಕಶ. ೬೩ ಕಲಾಸ್ಯಪಂತು) ; ದುಡ್ಡಿನ ಅಭಾವದಿಂದ ಟಿಳಕರು ಭಗವಾಕಫನಿ ಧರಿಸ ಹತ್ತಿದರು (ಸ್ವಾತಿಶ. ೪೬೬) ; ಭಗವಾ ಲೆಂಗೋಟಾ ಸುಟ್ಟು ಬೂದಿಯಾಯಿತು (ಹಾರಸಂ. ೨೦). [←ಹಿಂ. ಮರಾ. ಭಗವಾ]

**ಭಗವಾನ್, ಭಗವನ್** (ನಾ). ೧. ಗುರುಹಿರಿಯರನ್ನು ಸಂಬೋಧಿಸುವಾಗ ಬಳಸುವ ಗೌರವಸೂಚಕವಾದ ಒಂದು ಶಬ್ದ : "ತತ್ರಭವಾನ್, ಭಗವಾನ್—(ಇವೆರಡುಂ) ಈ ೨ ಪೂಜಾವಚನಂ" (ಶಬ್ದಮ. ೨೩–೦೩೯). ೨. ಬುದ್ಧ: "ಸರ್ವಜ್ಞಸ್ಸುಗತಃ, ಬುದ್ಧಃ, ಧರ್ಮರಾಜಃ, ತಥಾಗತಃ, ಸಮಂತಭದ್ರಃ. ಭಗವಾನ್. . . ಮುನಿಃ—೧೮ ಬುದ್ಧದೇವರ ಹೆಸರುಗಳು" (ಸಿದ್ಧಾಂತ. ೦೬). **ಭಗವನ್**, ೧. ಭಗವನ್, ನಾನು ವಿಂಗಾರ (ಹಕ್ಕುಶು. ೪೪). [<ಸಂ. ಭಗವತ್]

**ಭಗಾಂಕುರ** (ನಾ). "ಗಂಡಸಿನ ಶಿಶ್ನಕ್ಕೆ ಸರಿಹೋಲುವ ಹೆಂಗಸಿನ ಜನನೇಂದ್ರಿಯ ಭಾಗ; ಭಗಾಂಕುರ" (Clitoris. ೨೦೪೦). [ಸಂ.]

**ಭಗಿನಿ** (ನಾ). ೧. ಒಡಹುಟ್ಟಿದವಳು; ಸಹೋದರಿ : "ಭಗಿನೀ, ಜಾಮಿಃ, ಸ್ವಸಾ — ಈ ೩ ಒಡಹುಟ್ಟಿದವಳ್" (ಶಬ್ದಮ. ೬೯–೩೩೬) ; ೩ನೆಯ ಮಾಧವನು ಅಶ್ವಮೇಧಯಾಜಿಯಾದ ಕದಂಬಕೃಷ್ಣವರ್ಮನ ಭಗಿನಿಯನ್ನು ವಿವಾಹ ಮಾಡಿಕೊಂಡಿದ್ದನು (ಕರ್ನಾಟ. ೨೦). ೨. ಮಹಿಳೆಯರನ್ನು ಸಂಬೋಧಿಸುವಾಗ ಬಳಸುವ ಒಂದು ಶಬ್ದ: ಭಗಿನಿಯರೆ, ನಿಮ್ಮ ಸಮಾಜಕ್ಕೆ ನನ್ನನ್ನು ಆಹ್ವಾನಿಸಿ ಗೌರವಿಸಿದುದಕ್ಕೆ ನಾನು ಕೃತಜ್ಞನಾಗಿದ್ದೇನೆ (೬೩೦). ೩. ಪುಣ್ಯವಂತೆ; ಭಾಗ್ಯವಂತೆ. [ಸಂ. ಭಗಿನೀ]

**ಭಗಿನಿಜ** (ನಾ). ಸೋದರಿಯ ಮಗ ; ಸೋದರಳಿಯ : "ಭಗಿನಿಜಂ ಸ್ವಸ್ರೀಯಂ ಸೋದರಳಿಯಂ" (ಮಂಗರಾ. ೯೩–೦೯). [<ಸಂ. ಭಗಿನೀಜ]

**ಭಗಿನೀಪತಿ** (ನಾ). ಸೋದರಿಯ ಗಂಡ; ಅಕ್ಕ ಅಥವಾ ತಂಗಿಯ ಗಂಡ. [ಸಂ.]

**ಭಗೀರಥ** (ನಾ). ಸ್ವರ್ಗಲೋಕದಲ್ಲಿದ್ದ ಗಂಗಾನದಿಯನ್ನು ತನ್ನ ಅಸಾಧಾರಣ ಪ್ರಯತ್ನದಿಂದ ಭೂಮಿಗೆ ತಂದನೆಂದು ನಂಬಲಾದ ಸೂರ್ಯವಂಶದ ಒಬ್ಬ ಚಕ್ರವರ್ತಿ: ದೀಕ್ಷಾಗ್ರಹಣಮನೋರಥಂ ಮಹಾರಥಂ ಭಗೀರಥಂಗೆ ಸಾಮ್ರಾಜ್ಯಪದವಿಯಂ ದಯೆಗೆಯ್ದು (ಅಜಿತ. ೦೦–೦ ಪ); ಇದು ಭಗೀರಥರಥದ ಬೆಂಕೊಂಡು ಪರಿವ ಸುರನದಿಯ ಪ್ರವಾಹಮೆನಲ್ . . . ಐತಪ್ಪ ಚತುರಂಗದ ಪದಹತಿಗೆ ಧರೆ ನಡುಗುತಿರೆ (ತ್ರಿಲಾ. ೪–೨೮).

**ಭಗೀರಥಪ್ರಯತ್ನ**=ವಿಶೇಷವಾದ ಪ್ರಯತ್ನ : ಗಾನಯೋಗ ದಾದ್ಯಂತಮುಂ ಅಹಂಕೃತಿಗೊಡರ್ವದಲ್ಲಂ. . . ಭಗೀರಥಪ್ರಯತ್ನಕವೊಳಗಾಗದು (ಅದ್ಭುತ. ೨೮–೦೨); ಆ ಹುಡುಗಿಗೆ ಗಂಡು ಗೊತ್ತುಮಾಡುವುದಕ್ಕೆ ಭಗೀರಥಪ್ರಯತ್ನ ಮಾಡಬೇಕಾಯಿತು (೬೩೦). [ಸಂ.]

**ಭಗ್ಗನೆ** (ಅ). ಒಂದು ಅನುಕರಣಾವ್ಯಯ ; ಕೂಡಲೆ ; ತಟ್ಟನೆ : ಒಗ್ಗೊಡೆಯದೊತ್ತಿ ನಡೆತಹನು ಭಟರೆದೆನಡುಗಿ ಝಗಿದರು ಹಿಂದೆ ಹಿಂದೆ ನಿಂದ ಸೈನ್ಯ ಭಗ್ಗನೊಡೆದುದು (ಶಾಂಡಕ. ೬೦–೦೬). [ಭಗ್$_0$+—ಅನೆ$_1$]

**ಭಗ್ನ** (ಗು). ೧. ಮುರಿದ; ಒಡೆದ : ಈ ಭಗ್ನಜೋಪಡಿಯು ನಿನ್ನದೇ (ಪಪ್ಪರ. ೬೭). ೨. ಸೋತ; ಸೋಲಿಸಲ್ಪಟ್ಟ. ೩. ಹಾಳುಮಾಡಲ್ಪಟ್ಟ; ನಾಶಗೊಂಡ. ೪. ಎದೆಗುಂದಿದ ; ನಿರಾಶೆಗೊಂಡ. (ನಾ). ೫. ಮುರಿದಿರುವುದು : ನಂದಗೋಪಂ ಪೊಱವೊಟಲಿಂ ಒಂದು ಭಗ್ನವಾಗಿರ್ದಾ ಮಹಾಸ್ಕಂಧರಾಮಾರ್ಜುನವಿಟಪಿಯುಮಂ. . . ಕಂಡು (ಜಗವ. ೩–೪೯ ಪ). ೬. ಎರಡಾಗಿ ಒಡೆದುದು ; ಹೋಳಾದುದು : "ಭಿನ್ನಂ ಭಂಗುರ ಭಗ್ನಂ . . . ಭಿತಮುಕ್ಕುಂ" (ಪಪ್ಪಕೋ. ೦೦೬–೪೮); ಭಗ್ನವಾದ ಮೂರ್ತಿಗೆ ಭಂಗಾರದ ಗುಡಿಯಿಂದೇನು ? (ರಕ್ತರ್ಪ. ೨೩೬). [ಸಂ.]

**ಭಗ್ನಪಾಠ** (ನಾ). ಪ್ರಾಚೀನಗ್ರಂಥಗಳಲ್ಲಿ ಕಂಡುಬರುವ ತ್ರುಟಿತ ಭಾಗ ; ನಷ್ಟಪಾಠ : ಭಗ್ನಪಾಠಕ್ಕಂತ ತಾತ್ಕಾಲಿಕಪಾಠವೇ (stop gap) ಉತ್ತಮ ಎಂಬುದು ಅವರ ನೀತಿ (ಹಾರಿಠ. ೬೯). [ಸಂ.]

**ಭಗ್ನಮಂದಿರ** (ನಾ). ಮುರಿದು ಬಿದ್ದ ಮನೆ ; ನೆಲಸಮವಾದ ಮನೆ : ಆ ಭಗ್ನಮಂದಿರವನ್ನು ಜೀವಪೂರ್ಣದೇಗುಲವನ್ನಾಗಿಸುವ ಕೆಲಸ ಹರೆಯಕ್ಕೆ ಬಂದ ಮಗ ಈರನದಾಗಿತ್ತು (ಮಂಗಾಮು. ೬೯). [ಸಂ.]

**ಭಗ್ನಮನ** (ನಾ). ನಿರಾಶೆಗೊಂಡ ಮನಸ್ಸು : ಭಗ್ನಮನಮಲ್ಲದಚಲಿತ ಲಗ್ನವ್ರತೆಯಾಗಿ . . . ಪಂಚಾಗ್ನಿಯ ನಡುವಗಚಿ ವಿಪುಳತಪದೊಳ್ ನಿಂದಳ್ (ಗಿರಿಜಾ. ೯-೯). [ಸಂ. ಭಗ್ನಮನಸ್]

**ಭಗ್ನಮನೋರಥ** (ನಾ). ಕೈಗೂಡದ ಆಸೆಯುಳ್ಳವನು ; ನಿರಾಶನಾದವನು : ಭಗ್ನಮನೋರಥಂ ರತಿಸುಖಾಸವಸೇವೆಗೆ ಪಂಚಬಾಣ ಪಂಚಾಗ್ನಿತಪಕ್ಕೆ ನಿಲ್ವ ವಿರಹಾತುರನಂತಿರೆ (ಅರ್ಜುನ. ೪-೦೨೯) ; ಅರಮನೆಗೆ ನಡೆಯೆನಲು ತಂದೆಯು ಪರಮವಚನವಲಂಘ್ಯವೆನೆ ಕಾತರಿಸಿ ಭಗ್ನಮನೋರಥನು ಮರಳಿದನು ಮಂದಿರಕೆ (ಕುಮಾ.ಆ. ೨-೨೩). [ಸಂ.]

**ಭಗ್ನಲತಾವೇಷ್ಟನ** (ನಾ). [ಕಾಮಶಾ] ಆಲಿಂಗನದಲ್ಲಿ ಒಂದು ಪ್ರಕಾರ: ನಿಂದಿರ್ದ ಪುರುಷನ ಮುಂದಲೆಯ ಹೆಡಗಯ್ಯಂ ಬರತೆಗೆದು ಅತ್ಯಂತ ಬಾಗಿಸಿ ಆತನ ಕೊರಳು ಬೆನ್ನಂ ತೊಡೆಗಳಿಂದಾಲಿಂಗಿಸಿ ಆತನ ಶಿಕದಲ್ಲಿ ಕಪೋಲಗಳನ್ನಿಕ್ಕಿಕೊಂಡುಯಿಂತಿಪ್ಪಳು. ಆತನ ಕೈಗಳಿಂದೆರಡುತೊಡೆಗಳಂ ಪಿಡಿದು ಇರುತಿರ್ಪನು. ಇದು ಭಗ್ನಲತಾವೇಷ್ಟನವೆಂಬುವರಿದು (ಕಾಮಶಾ. ೨೨೩). [ಸಂ.]

**ಭಗ್ನಾಂಗ** (ನಾ). ೧. ಮುರಿದ ಅವಯವ. ೨. ಅಂಗವಿಕಲನಾದವನು : ರಿಕ್ತಕುಂಭಂ ವಿಲಾಪಿಪ ಭಗ್ನಾಂಗನ ಕುಷ್ಠಿಯುಂ ವಿಧವೆಯುಂ ಕೊಂದಾಟಮುಂ ಧೂಮಮುಂ ನಿಪುಣರ್ ಕಂಡರೆ ಪೋಗರ್ಕೆ (ಸೋಮೇಶ. ೬೯). [ಸಂ.]

**ಭಗ್ನಾವಶೇಷ** (ನಾ). ಬಹು ಭಾಗ ಹಾಳಾಗಿ, ಉಳಿದಿರುವ ಅಂಶ : ನಮ್ಮ ಸುತ್ತಮುತ್ತಲೆಲ್ಲಾ ಹಳೇ ಸಂಪ್ರದಾಯದ ಭಗ್ನಾವಶೇಷವನ್ನೇ ನೋಡುತ್ತಿದ್ದೇವೆ (ಶಾರದ. ೩೩೪). [ಸಂ.]

**ಭಗ್ನಿಸು** (ಕ್ರಿ). ಮುರಿ ; ಭೇದಿಸು : ಭಗ್ನಿಸಿ ಜೀವನಜಾವು ಚಳಗೆನೆ ಮೂಜು ನಗ್ನಾತ್ಮನೆಂಬಾಗಳೊಂದೆ (ಶರಣ. ೬೬-೯೬). [ಭಗ್ನ + —ಇಸು$_{3}$]

**ಭಗ್ನೋತ್ಸಾಹ** (ನಾ). ಉತ್ಸಾಹವನ್ನು ಕಳೆದುಕೊಂಡವನು : ನಿರುತ್ಸಾಹಿ : ಕ್ಷುತ್ಪಿಪಾಸಾಶೀತಾತಪ ಪ್ರಮುಖಪರೀಷಹಂಗಳಂ ಸೈರಿಸಲಾಱದೆ ಭಗ್ನೋತ್ಸಾಹರುಂ ದೂರೋತ್ಸಾರಿತಾಭಿಮಾನಿಗಳುಮಾಗಿ (ಆದಿಪು. ೯-೬೯೮). [ಸಂ.]

**ಭಚಕ್ರ** (ನಾ). ನಕ್ಷತ್ರಮಂಡಲ : ಗ್ರಹಗಳ ಚಾರವನ್ನು ನಿರ್ದಿಷ್ಟವಾಗಿ ಮಾಡಲು ಅವು ಭೂಮಿಯ ಸುತ್ತಲೂ ತಿರುಗುವ ಹಾಗೆ ಕಾಣುವ ಭಚಕ್ರವನ್ನು (zodiac) ಹನ್ನೆರಡುರಾಶಿಗಳಾಗಿ (ಮೇಷ, ವೃಷಭ ಇತ್ಯಾದಿ) ವಿಂಗಡಿಸಿದರು (ಶಿಲ್ಪಶಾ. ೪೦). [ಸಂ.]

**ಭಚಲ** (ನಾ). (?) : ಕುಡುಕೂರ ಭಚಲ ದೋರಯ್ಯನ ಮಗಂ ಮಾರಯ್ಯಂ ಬಿನವಾರನೊ × × × ಳ್ದಿಯ ಪೆಳ್ಳಿಯೂರಟಾವಿನೊಳ್ಸತ್ತಂ (ಎಕ. IV. ಹುಣಸೂ. ೫೦-೪; 997). [ ? ]

**ಭಜಕ** (ನಾ). ಪೂಜಿಸುವವನು ; ಭಕ್ತ ; ಉಪಾಸಕ : ಭಜಕಂ ದೈವದ ಭಕ್ತಿಯುಳ್ಳೊಡೆ ಭಟಂ ನಿರ್ಭೀತ ತಾನಾದವಂ (ಸೋಮೇಶ. ೯); ಹೊಲಬುಗೆಡಿಸಿದನಖಿಳನಿಗಮಂಗಳನು ತನ್ನಟೀಕೆಯಲಿ ಭಜಕಂಗೊಲಿದು ತಾನ್ಯೆತರಲು ಕರುಣದ ಘನತೆಯನೆ ಲೋಕ (ಕುಮಾ.ಅ. ೬-೦೪). [ಸಂ.]

**ಭಜನ** (ನಾ). ೧. ಭಾಗ ಮಾಡುವಿಕೆ. ೨. ಆರಾಧನೆ ; ಉಪಾಸನೆ ; ಪೂಜೆ. ೩. ಭಕ್ತಿ. ೪. ಸೇವೆ ; ಉಪಚಾರ : ಶುಶ್ರೂಷೆ. ೫. ಹೊಂದುವುದು ; ಪಡೆಯುವುದು. ೬. =ಭಜನೆ ೩. ೭. [ಗಣಿತ] ಭಾಗಹಾರ : (÷). [ಸಂ.]

**ಭಜನೆ** (ನಾ). ೧. ಪೂಜೆ ; ಆರಾಧನೆ : ಅಹುದಹುದು ಭಕ್ತಿಭಾವದ ಭಜನೆ ಎಂತೆಂತಹುದೊ (ಅವತ. ೨೦೬-೯೬೮) ; ಪರಶಿವನ ಭಜನೆಯಿಲ್ಲದನಾಮಿಕರುಗಳಿರಾ (ಬಸವ. ೫೦-೪೮) ; ಕಣ್ಬೇಟವೇ ಕಂಜಾಕ್ಷ ಕಾಮಾರಿಗಳ ಭಜನೆಯಲಿ (ಕೊರವಂ. ೦-೫-೪೪). ೨. ಸೇವೆ; ಉಪಚಾರ; ಶುಶ್ರೂಷೆ : ದುರುಳ ಮದಕರಿಗಾಂತು ಮಡಿವೆನೊ ಗುರುಭಜನೆಯಿಲ್ಲದಕೆ ಶಾಂತಿಯ ದಾವುದವಧರಿಸಿ (ಬಸವ. ೬೦-೫೯). ೩. ದೇವರ ನಾಮ, ಸ್ತೋತ್ರ ಮೊದಲಾದುವನ್ನು ತಾಳ, ಮದ್ದಳೆ ಮೊದಲಾದ ವಾದ್ಯಗಳೊಂದಿಗೆ ಸಂಗಡಿಗರೊಂದಿಗೆ ಹಾಡುವುದು : ಭಜನೆಯ ಮಾಡಿ ಬಾಗಿಲ ಬಂದು ಕಾದಿಹ ದ್ವಿಜರನುಮತವ ಕೇಳಿಸದ ನಿಜಲೋಭಿಶತವೆಂಬಂದದಿ ಸಾಲ್ಗಟ್ಟಿ ಕುಜವಿರ್ದುದಾ ಬನಬನದಿ (ಮೋಹನ. ೨೪-೪೯). ೪. ಸ್ತೋತ್ರರೂಪವಾದ ಹಾಡು: ಭೋಜನವಿಲ್ಲದಿದ್ದರೂ ಭಜನೆ ಇರಬೇಕು (ಗಾದೆ). ೫. ಆಶ್ರಯ ; ಆಸರೆ: 'ಭಜನೆಗೆಡಿಸು', 'ಭಜಿಸು' ನೋ.

**ಭಜನೆಮನೆ**=ಅನೇಕರು ಒಟ್ಟಾಗಿ ಒಂದೆಡೆ ಸೇರಿ ದೇವರ ಭಜನೆ ಮಾಡುವ ಸ್ಥಳ : ರಾಮನವಮಿಯಾದುದರಿಂದ ಅಂದು ಭಜನೆಮನೆಯಲ್ಲಿ ಬಹಳ ಜನ ಸೇರಿದ್ದರು (ರೂಢಿ). **ಭಜನೆಮಾಡು**=ದೇವರನ್ನು ಕುರಿತು (ಗುಂಪಾಗಿ) ಹಾಡು,—ಸ್ತೋತ್ರ ಮಾಡು ; (ಸಾಮೂಹಿಕವಾಗಿ) ಸ್ತುತಿಸು : ಊರ ಹುಡುಗರು ಮತ್ತು ಹೆಂಗಸರು ಗಂಡಸರು ಆದಷ್ಟು ಹೊತ್ತು ಭಜನೆಮಾಡುತ್ತಾರೆ (ಪಶ್ನಕು. ೪೨). [ಸಂ. ಭಜನ]

**ಭಜನೆಗೆಡಿಸು** (ಕ್ರಿ). ಆಶ್ರಯವಿಲ್ಲದಂತೆ ಮಾಡು ; ನೆಲೆಗೆಡಿಸು : ಭಜನೆಗೆಡಿಸಿದನಧಟರನು ಸೂರ್ಯಜನ ಸರಿಭಟನಾವನಿಲ್ಲೆಂದಜಸುರರು ಕೊಂಡಾಡೆ (ಕೋಗಡು. ೨೨-೬೪). [ಭಜನೆ + ಕೆಡಿಸು$_{1}$]

**ಭಜನೆವಂತ** (ನಾ). ದೇವರ ಭಜನೆಯಲ್ಲಿ ತೊಡಗಿದವನು: ತ್ರಿಸಂಧ್ಯಾಕಾಲದ ಭಜನೆವಂತರೆಲ್ಲರು ಪುರಾಣದ ಪುಣ್ಯವಂತರು (ಸೋಳಶು. ೦೦೬-೪೨೬). [ಭಜನೆ + —ವಂತ]

**ಭಜಾವಳಿ** (ನಾ). "ಹೆಚ್ಚು ದೀರ್ಘಸ್ವರಗಳಿಂದಲೂ ಕೆಲವೇ ಹ್ರಸ್ವಸ್ವರಗಳಿಂದಲೂ ಕೂಡಿ, ಪ್ರತಿಸ್ಥಾಯಿಯಲ್ಲೂ ತಾನ ಪ್ರಾರಂಭ ಮತ್ತು ಮುಕ್ತಾಯವಾಗುವಿಕೆ" (ಸಂಗೀತಂ. ೯೮). [ ? ]

**ಭಜಿ**, ಬಜ್ಜಿ$_{2}$, ಬಜ್ಜಿ$_{2}$ (ನಾ). ಕಲಸಿದ ಕಡಲೆಹಿಟ್ಟಿನಲ್ಲಿ ತರಕಾರಿ ಬಿಲ್ಲೆಗಳನ್ನು ಅದ್ದಿ ಕರಿದು ಮಾಡುವ ಒಂದು ಬಗೆಯ ಭಕ್ಷ್ಯ : ಕರಿದ ಎಣ್ಣೆಯಲ್ಲಿಯೆ ಕರಿದರೂ ಬಾಯಿಗೆ ನವೋನವವಾದ ರುಚಿಕೊಡುವ ಆ ಭಜಿ . . . ಸವಿಯಬೇಕೆಂಬ ಲವಲವಿಕೆಯಾಗುತ್ತದೆ (ಹುಂಗಾಪು. ೫೬). **ಬಜೆ$_{2}$** : ಕಡಲೆಬೇಳೆಯ ಹಿಟ್ಟನ್ನು ಬಜೆ ಮತ್ತು ಬೋಂಡಕ್ಕೆ ಅದ್ದಿಟ್ಟಾಗಿಯೂ . . . ಉಪಯೋಗಿಸುತ್ತಾರೆ (ಅಡುಗೆ. ೭೬); ಆ ದಿನದ ಬಜೆ ದಿವ್ಯವಾಗಿತ್ತು (ದೇಶಪು. ೯೪) **ಬಜ್ಜಿ$_{2}$** : ಏನು ಕೊಡಲಿ ಸಾರ್, ಜಾಮೂನ್ . . . ಬೋಂಡಾ, ಬಜ್ಜಿ (ಪಂಜಾಬ ೪೬). [←ಮರಾ. ಭಜೀ]

**ಭಜಿಕೆ** (ನಾ). ಒಂದು ಬಗೆಯ ವನಸ್ಪತಿ : "ಭಜಿನಕಾ—ಭಾರಂಗಿ" (ಓಷಧಿ. ೦೦೦). [ ? ]

**ಭಜಿಯಿಸು** 'ಭಜಿಸು' ನೋ.

**ಭಜಿಸು**, ಭಜಿಯಿಸು (ಕ್ರಿ). ೧. ಪೂಜಿಸು ; ಆರಾಧಿಸು : ತಂದೆ ಕೇಳೀರೇಳು ಲೋಕದ ತಂದೆಯುಂ ಭಜಿಸದೆ ರತೀಶನ ತಂದೆಯುಂ ಬಿದಿ ರವಿ ಶಿಖಿಗಳಂ ಭಜಿಸಿ ಕರ್ಮಕ್ಕೆ ತಂದೆ (ಬಸವ. ೩-೯೦); ಮಹಿಮಾರ್ಣವನನೇಸು ಭವಂಗಳಲಿ ಭಜಿಸಿದರೊ ನಿನ್ನವರು (ಕುಮಾ.ಆ. ೦೬-೩೦); ಇಭಮುಖಂಗೆ ಗುಹಾವಕ್ತ್ರವುಂ ಕೊಟ್ಟು ನಿನ್ನ ಭಜಿಸಿದರಿಷ್ಟಮಹುದೆಂದು ವರವನಿತ್ತು . . . ವಿರೂಪಾಕ್ಷನೊಪ್ಪಿದಂ (ಶಬರ. ೨೮-೩೬). ೨. ಸೇವಿಸು ; ಆಶ್ರಯಿಸು: ಶಾಸ್ತ್ರ ಘನವೆಂಬೆನೆ ಕರ್ಮವ ಭಜಿಸುತ್ತಿದೆ (ಬಸವ. ೨೦೯); ಅಗಣಿತ ಧುರವಿಜಯ ದೋರ್ಬಲರು ಮಣಿಮಯಮಕುಟವರ್ಧನರು ಚರಣಕಾನತರಾಗಿ ನಳಭೂಪರನ ಭಜಿಸುತಲಿರ್ದರು (ನಳಚ. ೦-೨೬); ಪತಿಯನೆ ಪರದೇವತೆಯೆಂದು ಭಜಿಸುವ ಸತಿಯರ ಸನ್ನುತಿಸುವೆನು (ಹರಿಶ. ೨-೩). ೩. ಧ್ಯಾನಿಸು ; ಚಿಂತಿಸು : ಭಜಿಸು ನಿತ್ಯಾನಿತ್ಯವಸ್ತುವ ವಿಜಯನಹೆ ಇಹಪರಕೆ ತತ್ವದ ನಿಜವಿದೆಲೆ (ಕುಮಾ.ಅ. ೪-೦೦) ; ಆ ಯದುಕುಲೇಂದ್ರನಂ

ಭಜಿಸುವಂ ಚಿತ್ತಶುದ್ಧಿಯೊಳರಣ್ಯದೊಳು (ಕೈವಿಂಶಾ. ೨-೦೯). **ಭಜಿಯಿಸು:** ೧. ಭಜಿಯಿಪೆನೆನ್ನ ಸತ್ಕೃತಿಗೆ ಸತ್ಕೃತಿಸಾಧನಮೆಂದು ನಾಂದಿಯೊಳ್ ನಿಜಕವಿತಾನುಕೂಲಗುಣಭದ್ರನಂ (ರರ್ವಣಾ. ೧-೨೦) ; ಕದಿರ ರೇವುನಾ ಗುರುಪದಮಂ ಭಜಿಯಿಸುತ್ತೇಳುಂ ದಿನವಿದಿರ್ದು (ಕೃಕಿ. ೩೩-೨೫) ; ಮಂತ್ರಜಪಂಗಳಿಂದೆ ಸಂಭಾವಿಪರಾವನಂ ಭಜಿಯಿಪರ್ ಮುನಿಗಳ್ ಮನುಗಳ್ (ಕಕಿಂ. ೪-೦೦೭). ೨. ಆ ಭುಜದೊಳೆ ಶಂಖಚಕ್ರನಳಿನೀಗದೆಗಳ್ ತೊಡರ್ದಂತೆ ಸೌಖ್ಯವಂ ಭಜಿಯಿಸಿದತ್ತು (ಜಗಂ. ೫-೭೯). ೪. ಹೊಗಳು ; ಸ್ತುತಿಸು : ಭಜಿಯಿಸುವ ಪುಣ್ಯಪಾಠಕರ ಪರಕೆಗಳೊಳಗೆ ಬರುತಿರ್ದನಪ್ರತಿಮಸುಕುಮಾರಶೇಖರಂ (ಸಂಖರ. ೩-೬೦). ೫. ಅನುಸರಿಸು; ಪಾಲಿಸು : ಆದಿಯ ಚಕ್ರವರ್ತಿಗಳ್ ಭಜಿಯಿಸಿದೀ ಪದಂ ಮಸುಳ್ಗುಂ (ಶಾಂತಿ. ೦೦-೬೬). [ ಭಜನ + — ಇಸು$_3$]

**ಭಜ್ಜಿಸು,** ಬಜ್ಜಿಸು (ಕ್ರಿ). ೧. ಕಾಳು ಮೊದಲಾದುವನ್ನು ಹುರಿ. ೨. ನಾಶಪಡಿಸು ; ತಲೆಯೆತ್ತದಂತೆ ಮಾಡು : ಸಜ್ಜಿಸಿದನು ಸಕಲರು ಈಕ್ಷಿಸುತಿರೆ ಭಜ್ಜಿಸಿದನು ಎರಡು ತುಂಡುಮಾಡಿ (ಕೃಸಕಾ. ೬೦-೪). **ಬಜ್ಜಿಸು :** ೨. ಗುಜ್ಜುಹೊಗುವುದು ಹೆಂಗಳಿದಿರಲಿ ಬಜ್ಜಿದೊರೆವುದು ಕೀಳುಬೇಕರ ಬಜ್ಜಿಸುವುದಿದು ನಿನ್ನ ಪೌರುಷವೆನುತ ತೆಗೆದೆಚ್ಚ (ಕೃಹಾ.ತ. ೦೫-೬೦).

[ಭ್ಜ್ಜಸ್ಸ$_0$ ( P ← ಪ್ರಾ. ಭಜ್ಜಣ. / ಸಂ. ಭರ್ಜನ) + — ಇಸು$_3$ ]

**ಭಟ$_1$** 'ಬಂಟ$_2$' ನೋ.

**ಭಟ$_2$** (ನಾ). ೧. ಯುದ್ಧದಲ್ಲಿ ಕಾದುವವನು ; ಸೈನಿಕ ; ಬಂಟ : ನಿರ್ಧರದ ಭಟ ಜೀವಗಳನ್ನಲ್ಲಿ ಅದ್ದಲಿಸಿಕೊಂಬನೇ (ಕರ್ಣಪ. ೦೨೦-೬೨೦) ; ಭಟರಶ್ವಮನಶ್ವಂ ಗಜಘಟೆಯುಂ ಗಜಘಟೆ ತೆರಳ್ದು ರಥಮಂ ರಥಮುತ್ಕಟ ಭಯದಿಂದೋಡಿ ದಿಶಾತತಿಮಂ ಮಡಿಗೊಳೆ ಹಲಾಯುಧಂ ತಳ್ತಿರ್ದಂ (ಜಗಂ. ೬-೬೦); ಝಳಪಿಸಿ ಪೊಯ್ವ ಖಡ್ಗಲತೆ ಮಿಂಚು ಭಟರ್ಕಳ ಬೊಬ್ಬೆಯುಬ್ಬರಂ ಮೊಳಗು (ಚಕಕು. ೨-೨೨). ೨. ಪರಾಕ್ರಮಶಾಲಿ; ಶೂರ : " ವೀರಃ, ಶೂರಃ, ವಿಕ್ರಾಂತಃ, ಭಟಃ, ಚಾರುಭಟಃ — ಈ ೫ ಕಲಿ" (ಶಲಾಯು. ೫೬-೦೯೯) ; ಭಟನಲ್ಲದಿರ್ದಡೆ ಬಾಣನಂದನೆಯು ಲಂಪಟಿಕೊರ್ಪಸಂಪ್ಪೆಸುವರೆ (ಮೋಹಕ. ೩೪-೦೨). ೩. ಬೇಡ ; ಕಿರಾತ : "ಕಿರಾತಃ, ಶಬರಃ . . . ಭಟಃ, ಮಾಳಃ, ಮ್ಲೇಚ್ಛಃ—ಈ ೮ ಬೇಡ ಮೊದಲಾಗುಳ್ಳಂತ್ಯಜಾತಿಗಳ್" (ಶಲಾಯು. ೯೬-೪೪೫). ೪. ಸೇವಕ ; ದೂತ : 'ಭಟಾಳಿ' ಪರಾ. [ಸಂ.]

**ಭಟಕ** (ನಾ). ಸೇವಕ ; ಆಳು : ಬಡಿಯುತಲಹರೆ ನಿನ್ನಯ ಭಟಕರುಗಳು ಬಿಡಿಸೆಂದು ತವುವೈತಂದು (ಜೈ.ಶಕ. ೩೪-೬೬). [ಸಂ.]

**ಭಟಕಟಾಹ** (ನಾ). ಸೈನಿಕರ ಗುಂಪು,— ಸಮೂಹ : ಸೈತಿರು ನೀನಾಗೆಂದು ತನ್ನಂ ನುಡಿದು ಭಟಕಟಾಹಕ್ಕೆ ಬಣ್ಣಿಂದೆ ಸೂಸುತ್ತುರಿಯಿಂ ಕಲ್ಪಾಂತದುಗ್ರಾಂತಕನ ಮಸಕವುಂ ಶಾಳ್ದಿದಂ ರಾಜಪುತ್ರಂ (ಶಂಶೃಕ. ೫-೦೦೬). [ಸಂ.]

**ಭಟಗುತಿಗೆ** (ನಾ). ಸೈನಿಕರಿಗಾಗಿ ಕೊಡುವ ದವಸ ಧಾನ್ಯ ಮೊದಲಾದುವು : ನಾಲು ತೆಱುವಂತಾ ಭಟಗುತಿಗೆಯು ಸುಂಕವನೂ ಸರ್ವಮಾನ್ಯವಾಗಿ ಬಿಟೆಉ (ಎಕ. XI, ಹಿರಿಯೂ. ೯೫-೪೯ ; ?). [ಭಟ$_2$ + <ಗುತ್ತಗೆ]

**ಭಟಮಾನ್ಯ,** ಬಟಮಾನ್ಯ (ನಾ). ವಿದ್ವಾಂಸನಾದ ಬ್ರಾಹ್ಮಣನಿಗೆ ರಾಜನು ಕೊಡುತ್ತಿದ್ದ ತೆರಿಗೆ ಇಲ್ಲದ ಭೂಮಿ ; ಉಂಬಳಿ : ಮಹಾಮಾತೋಶ್ರೀಯವರು ಕೊಟ್ಟ ಆನಂದೂರು ಭಟಮಾನ್ಯ ೧ ಪ್ರತಿ ೧ ಸಹ ಅನುಭವಿಸಿಕೊಂಡುಯಿರುವಲ್ಲಿ (ಎಕ. V (R), ಮೈಸೂರು. ೫-೪; 1843) ; ಧರ್ಮಾದೀಕ್ಷಿತರ ಭಟಮಾನ್ಯದ ಹೊಲ (ಎಕ. IX, ಬೆಂಗಳೂ. ೩-೮ ; 1855); ಅನೇಕ ದೇವಾಲಯ ಬ್ರಹ್ಮಾದಾಯ ಭಟಮಾನ್ಯಗಳನ್ನು ಬಹಲ್‌ಮಾಡಿ (ಶುಹಾಪಂ. II, ೩೩). **ಬಟಮಾನ್ಯ:** ಅದಕ್ಕೆ ಮೊದಲು ಬಟಮಾನ್ಯವೆಂದು ಬೆಳೆದದ್ದರಲ್ಲಿ ಅರ್ಧದಿನಸಿಯು ವೃತ್ತಿವಂತರಿಗೆ ಬರುತ್ತಿತ್ತು (ಪುಟ್ಟಿಪ. ೩).

[ < ಭಟ್ಟಮಾನ್ಯ ]

**ಭಟರಾಜು** (ನಾ). (ಹಿಂದೆ ಮೈಸೂರುಮಹಾರಾಜರ ದರ್ಬಾರು ಸಂದರ್ಭದಲ್ಲಿ) ಬಿರುದುಗಳನ್ನು ಹೇಳಿ ಹೊಗಳುತ್ತಿದ್ದ ಒಂದು ಜನವರ್ಗ : ಭಟರಾಜು ಎಂದು ಕರೆಸಿಕೊಳ್ಳುತ್ತಿದ್ದವರ ವಂಶಸ್ಥರು ಇಂದಿಗೂ ಮೈಸೂರಿನಲ್ಲಿ ಇದ್ದಾರೆ (ಲೂಕ).

[ಭಟ$_1$ (< ಬಂಟ$_2$) + ರಾಜು$_0$. / ತೆಲು. ಭಟ್ರಾಜು]

**ಭಟರಿ** 'ಭಟಾರಿ' ನೋ.

**ಭಟಸಂಘ** (ನಾ). = ಭಟಕಟಾಹ : ಭಟಸಂಘಕ್ಕೆದಟೆಂತುಟಂತುಟೆ . . . ದರ್ಶನಂ ಸಕಲಧರ್ಮಕ್ಕಂ (ಧರ್ಮಾಮೃ. ೦-೬೨). [ಸಂ.]

**ಭಟಹ** (ನಾ). (?) : ನರಿದಾವಿ[ಳೆ]ನಾಡುಳ್ ಮೃಗೇಶನಾಗೇನ್ದ್ರಾಭೀಳ ಭೃಟಹರಪ್ಪೊರ್ ಶ್ರೀಮೃಗೇಶನಾಗಾಹ್ವಯರಿರ್ವ್ವರ್ (ಮೈಕಂ. ೦೯೩೬, ೦೬-೪; 450). [?]

**ಭಟಾಂಗ** (ನಾ). ಹೊಗಳಿಕೆ ; ಪ್ರಶಂಸೆ : ಅಖಿಳವೀರರೊಳಿಲ್ಲ ಸರಿದೊರೆ ನಿನಗೆ ಬಾಯಲಿ ಬಲ್ಲಿದನು ನೀನಹೆ ಭಟಾಂಗದ ಮಾತದಂತಿರಲಿ (ಕುಮಾರರಾ. ೫-೫೩); ಹಿಂದೆ ಹಿಂದೆ ತಿಂಪು; ತಿಂಪುನ ಕೈಯಲ್ಲಿ ಚಾಮರ, ಬಾಯಲ್ಲಿ ಭಟಾಂಗ (ಪಶ್ಚೊಂದ. ೬೩). 'ಭಟ್ಟಂಗಿ' ಪರಾ.

[ಭಟ$_1$ (< ಬಂಟ$_2$) + ಅಂಗ$_1$]

**ಭಟಾಗ್ರಣಿ** (ನಾ). ಬಹಳ ಪರಾಕ್ರಮವುಳ್ಳವನು; ಶೂರಾಗ್ರೇಸರ : ಅರರೆ ಭಾಪುರೆ ಕರ್ಣ . . . ಭಟಾಗ್ರಣಿ ನಿನ್ನ ಸರಿದೊರೆಯರಡುಯುಗದಲಿ ಕಾಣೆನು (ಕುಮಾ.ಕ. ೨೬-೨೦). [ಸಂ.]

**ಭಟಾರ,** ಬಟಾರ$_1$, ಬಳಾರ, ಭಟ್ಟೋರ, ಭಳಾರ, ಭಟಾರಿ (ನಾ). ೧. ಪೂಜ್ಯವ್ಯಕ್ತಿ; ಗೌರವಾನ್ವಿತ ; ಮಾನ್ಯ. ೨. ಯತಿ; ಗುರು : ಗಾವುಣ್ಡ ಪ್ರಜೆರ್ ಸಕ್ಷಿಪೋವ ಕಾವಾಳಿಗಭಟಾರರ್ ಪಡೆದೋರ್ ಮಣ್ಣಮ್ (ಎಕ. XI, ಚಿತ್ರದು. ೩೪-೨; ಸು. 500?); ಎನ್ನಂ ಜ್ಯೋತಿಷಮಂ ಕಲ್ಪಿಪ್ಪುದೆಂದೊಡೆ ಭಟಾರರೇಂದರ್ (ವಡ್ಡಾರಾ. ೫-೨೬). ೩. ಒಡೆಯ ; ರಾಜ : ಸ್ವಸ್ತಿ ಕೀರ್ತಿವರ್ಮ್ಮ[ಸತ್ಯಾ]ಶ್ರಯ ಶ್ರೀಪ್ರಿಥು[ವೀವಲ್ಲಭ] ಮಹಾರಾಜಾಧಿರಾಜ ಪರಮೇಶ್ವರಭಟಾರರ ರಾಜ್ಯಮೊಂದುತ್ತರಪಂಭ ವೃದ್ಧಿಸಲ್ (ಎಇ. XXI, ೩೪-೩; 751); ಶ್ರೀಅಕಾಲವರಿಷಭಟಾರರ್ ಪ್ರಥುವಿರಾಜ್ಯಬಿಗ್ಗಿಯೆ (ಎಇ. VI, ೦೬೦-೦; 765) ; ಅಮೋಘವರ್ಷ ಶ್ರೀಪ್ರಥಿವಿವಲ್ಲಭಮಹಾರಾಜಾಧಿರಾಜಪರಮೇಶ್ವರಭಟಾರರ್ (ಎಇ. VII, ೨೦೨-೨ ; ಸು. 874). **ಬಟಾರ$_1$:** ೩. ತ್ರಿಭುವನಕರ್ತಾರ ಬಟಾರರ್ತ್ರಾಪರಾಜ್ಯಂಗೆಯ್ಯುತ್ತಿರೆ (ಎಕ. X (S), ಮುಳಬಾ. ೩೦೬-೨ ; ಸು. 950). **ಬಳಾರ:** ೧. ಉರಗನ ಜೊಂಪದಂತೆ ಸುರಿಯುತ್ತಿರೆ ಪೆರ್ಮಟಿ . . . ಕಲ್ಲಬಳಾರನಪೊಲ್ ತಪೋಧನಂ ಮರವೊದಲಿರ್ದನೆನ್ನದೊಡಲೆನ್ನದೊಡಂಬಡೆ ಮೇಘಕಾಲದೊಳ್ (ಅಪಂಪು. ೪-೦೯). **ಭಟ್ಟೋರ :** ೩. ಶ್ರೀಮತ್ಕದಂಬಪನ್ನಾಗಸಂಪನ್ನನ್ಮಲ ಭೋರ[ನಾ]ಅರಿ ಕಕುಸ್ಥಭಟ್ಟೋರನಾಳೆ (ಮೈಕಂ. ೦೯೩೬, ೦೬ —೩ ; ಸು. 450). **ಭಳಾರ :** ೨. ಕೇಶವನನ್ದಿ ಅಷ್ಟೋಪವಾಸಿ ಭಳಾರರ ಬಸದಿಗೆ ಪೂಜಾನಿಮಿತ್ತದಿಂ (ಕಇ. IV, ೦೬೦-೦೪ ; 1048) ; ಭಾವಶಿವಭಳಾರರ ಕಾಲಂ ಕರ್ಚ್ಚಿ ಧಾರಾಪೂರ್ವ್ವಕ ಸರ್ಬ್ಬನಮಸ್ಯಮಾಗಿ . . . ಕೊಟ್ಟ ಗದ್ದೆ (ಮೈಕಂ. ೦೯೩೩, ೬೪-೦೨; ಸು. 1076). **ಭಟಾರಿ :** ೨. ಅವರ ತಮ್ಮೋ ಅಮ್ಮಯ್ಯಂ ದೇಗುಲಮಂ ಮಾಡಿಸಿ ಭಟಾರಿಗ್ಗೆ ಊರಮುನ್ದಣ ಕೀಳರ ಕೆಯ್ಯೊಳ್ . . . ಬಿ × × ಟ್ಟ (ಎಕ. VIII, ತೀರ್ಥಹ. ೨೬-೦೨; 929); ಭುವನಶಕ್ತಿ ಭಟಾರರ್ (ಎಕ. IX (S), ಕನ್ನಕ. ೨೫೨-೭; 10ನೆಯ ಶಕ). [< ಸಂ. ಭಟ್ಟಾರ]

**ಭಟಾರಕ** (ನಾ). = ಭಟಾರ ೨: ಲೋಕಾಖ್ಯಳರಸರ್ತ್ರವ್ಯಾ ವರ್ಷ ನಕ್ಯಾತ್ತಿಗೆ ಕಪುಲಿಕ್ಯುಬುಂಕಿ ಭಟಾರಕ ಪೊಯ್ದು ಪೊನ್ನೂ ಬಗದ್ಯಾಣಮೆ (ಎಕ. X. ಕೋಲಾರ. ೧೧-೪; ಸು. 753). [< ಸಂ. ಭಟ್ಟಾರಕ]

**ಭಟಾರಿ, ಬಟರಿ, ಬಟಾರಿ, ಬಲಾರಿ$_1$, ಬಳರಿ, ಬಳಹರಿ, ಬಳಾರಿ, ಭಟರಿ, ಭಲಾರಿ, ಭಳಾರಿ, ಭಟಿರಿ** (ನಾ). ೧. ಒಂದು ದೇವತೆಯ ಹೆಸರು : ಮಾರಕಬ್ಬೆ ಭಟಾರಿಗೆ ಮತ್ತಪ್ಪ್ರನ್ನೆರಡು ಮನೆಯೊಂದು ನ್ಯಾಸಂ (ಎಇ. XX, ೬-೨೩; 1012) ; ಪಸಾಯಮನಿತ್ತ ಮಕುಟದ ಮುಕುಳ ಮನಾ ಕುಮಾರಿ ಮುಡಿಯೊಳಿಟ್ಟು ಭಟಾರಿ [ಪಾಠಾಂ. ಭಟ್ಟಾತ್ತಿ, ಭಟ್ಟಾರಿ]ಗೆ ಪೊಡೆವಟ್ಟು (ಅರ್ಜುನಚ. ೬-೦೯ ವ); ಈಶಾನ್ಯಾಂದಿಶಿ ಭಟಾರಿಕ್ಷೇತ್ರಂ (ಸೌಇಇ. XX, ೩-೧೧; ?) . **ಬಟರಿ** : ೨. ಒಂದು ಮನೆತನದ ಹೆಸರು ( ? ) : ಬಟರಿಕುಲಾಮಲವ್ಯೋಮ ಶಾರಾಧಿನಾಥನ್ (ಮ್ಯಆ. ೦೯೩೬, ೦೬-೫ ; ಸು. 450). **ಬಟಾರಿ** : ೨. ಬಟಾರಿಕುಲದೊನಳು ಕದಮ್ಬನ್ನಳ್ದೋನ್ ಮಹಾಪಾತಕನ್ (ಮ್ಯಆ. ೦೯೩೬, ೦೬-೦೩; ಸು. 450). **ಬಲಾರಿ$_1$** : ೧. ಬೆನಕ ಕಾರ್ತಿಕೇಯ ಭಗವತಿ ಬಲಾರಿ ಕಾಳಿ ಮಾಕಾಳಿ (ಪ್ರಾಕ್ಯಾಪ್ರಮಾಣಿ. ೦೨೫೯ ಶಾಸ್ತ್ರಸಾರ). **ಬಳರಿ** : ೧. "ಬಳರಿಯ ಮಾಕಾಳಿ" (ಕಕುಶಿ. ೦೧೩); ಬಳರಿಯ ಸೋಂಪಿಗೆ ಬೀದಿಗೆ ಮುಳಿವರ ಮನೆಗಳ್ಗೆ ಮದ್ಯಪಿಗಳಲ್ಲಿಗೆ ಕೋಮಳೆಯಂ ಪೋಗಲ್ಕಿತ್ತಡೆ ಬಳರಿಗೆ ಪೂಯಿ ವಿಡ ಹೋದ ಕುಜೆಯಂತಕ್ಕುಂ (ಮುದಶಿ. ೬-೨೯) ; ಕೂಸಿಂಗೆ ಕುತ್ತ ವಾದೊಡೆ ದೇಶದ ಬಳರಿಯರ್ಗೆ ಕುಡುವರೊಳ್ಪರ್ಚನೆಯಂ (ಸಮಚ. ೫-೧೧೧); ಬಳರಿಯ ಬನದಿಂ ಪೊಱಮಟ್ಟಂ ಚಂಡಕರ್ಮನೆಂಬ ತಳಾಱಂ (ಯಶೋಚ. ೧-೯೩). **ಬಳಹರಿ** : ೧. ದಿಟ್ಟಿ ಬಳಹರಿ ಮಾರಿ ಬತ್ತವ ಕೊಟ್ಟಣಂಗುಟ್ಟಲು (ಅಸಪು. ೨೩-೦೯); ತಮ್ಮಯ ಬಲ್ಲತನವನೇ ಮೆಚ್ಚಿ ಮಣ್ಣಂಗಳ ಬಲ್ಲತನದ ಬಾಯೊಳು ಬಳಹರಿ ಬಲ್ಮನಿಸುದಳೆದು ಹೊಗಲಿ (ಜಯಗಾ. ೦-೦೬). **ಬಳಾರಿ** : ೧. ದುಷ್ಟಬುದ್ಧಿ ತನ್ನ ತಂದೆಯುಂ . . . ಬಳಾರಿಯ ಮನೆಯಂ ಪರಕೆಯ ಕುಜೆಯುಂ ಪುಗಿಸುವಂತೆ . . . ಪುಗಿಸಿ (ತಂಕಸ. ೦೬೫-೧೧) ; ಕರೆಯದೆ ಕಾಡಿ ಕಂಟಸುವ ಕೂಟಣಿಯಂ ಸೊಣಗಪ್ಪ ತಿಂಗೆ ಬೆಂಗುದುಟಿ ಬಳಾರಿ ಬಾಡಿಸುಗೆ ಚಂಡಿಕೆ ನುಂಗುಗೆ (ಅಣಾಕ. ೨-೦೦೩); ಬಳಾರಿ ನೀನಿತ್ತ ಕೂಸಂ ನಾಳೆ ರಕ್ಕಸಂ ಕೊಲಲೆಂದಿರ್ದಪಂ (ಜೀಬಸಂ. ೩೯-೨೯ ವ). **ಭಟರಿ**: ೧. ಭಟರಿಯ ದೇಗುಲ ವಿನಕನ ದೇಗುಲ ಮಟವಮ [ದೇ]ರ ದೇಗುಲವ ಕೇಸವಾದಿತ್ಯರ ದೇಗುಲ (ಸೌಇಇ. XI-i, ೩೫-೫; 933). ೨. ಶೌರ್ಯೋದ್ಯಮಭೂತೋ[ನ್ನಾನ]ಪಶುಪತಿಯೆನಪ್ಪ ಪೊಗಟ್ಟೆಪ್ಪೊಟ್ಟಣ ಪಶುಪತಿನಾಮಧೇಯನಾಸರಕ್ಕೆಲ್ಲ ಭಟರಿಯಾ ಪ್ರೇಮಾಲಯ ಸುತನ್ (ಮ್ಯಆ. ೦೯೩೬, ೦೬-೯; 450). **ಭಲಾರಿ** : ೧. ಭಲಾರಿ ಭುಮಿಂಗದ್ದೆ ೫೦೦ (ತೆಇ. VIII, ೯೫ ; 444); ಭಲಾರೀ ಭೂಮಿ ೨೦೦ (ತೆಇ. XIV, ೦೪೦-೨೯; 13ನೆಯ ಶತ). **ಭಳಾರಿ** : ೧. ತೆಂಕಣಕೋಡಿಯಾಪೊಳಗಣ ಭಳಾರಿಯಾಲ ವಂತೆ ಹಡುವಲು ನಡೆದು (ಎಕ. VI, ಕಡೂರು. ೦೬೦-೪೩; 1137). **ಭಟಿರಿ** : ೧. ಅರಸಂ ಬಸ್ಸ ನೋಡಿ ಭಟಿರಿಗೆ ಬಿಟ್ಟ ಕೆಯ್ಮುತ್ತರೆರಡು (ಎಕ. VIII, ತೀರ್ಥಹ. ೪೪-೧೧; 971). [< ಸಂ. ಭಟ್ಟಾರಿಕಾ ]

**ಭಟಾಳಿ** (ನಾ). ೧. ಯೋಧರ ಗುಂಪು, – ಸಮೂಹ : ಸ್ವಾಮಿ ಕಾರ್ಯದ ಪೊಱಗೆಯುಳ್ಳ ನವಾಯ ಬಿರುದಿನ ಮುಱುವುಳ್ಳ ಭಟಾಳಿ ನಿಲುವುದು ತಡೆವುದರಿಭಟರ (ಕುವ್ಯಾಆ. ೨೨-೨೬) . ೨. ಊಳಿಗದವರ ಗುಂಪು ; ಸೇವಕರ ಸಮೂಹ : ಸಲ್ವ ಭಟಾಳಿ ತಂದುಕೊಡೆ ಧೂಪವ ನೊಲ್ದಿಮಗಿತ್ತು (ಅದ್ಭುರಾ. ೧೧-೭೦). [ ಸಂ. ಭಟಾಲಿ ]

**ಭಟಿತ್ರ** (ನಾ). ಸಲಾಕೆಯ ತುದಿಯಲ್ಲಿ ಚುಚ್ಚಿ ಸುಟ್ಟ ಮಾಂಸ : "ಶೂಲ್ಯಂ, ಭಟಿತ್ರಂ – ಈ ೨ ಸುಂಟಗೆ" (ಹಲಾಯು. ೫೪-೦೬೯); "ಶೂಲಾಕೃತಂ, ಭಟಿತ್ರಂ, ಶೂಲ್ಯಂ – ೩ ಉಡುಗೋಲಿಗೆ ಚುಚ್ಚಿ ಪಕ್ವ ಮಾಡುವ ಭಕ್ಷ್ಯಕ್ಕೂ, ಸುಟ್ಟು ಸಂಚಿಕೊಳ್ಳುವ ಪದಾರ್ಥಕ್ಕೂ ಪೆಸರು ಗಳು" (ಸಿದ್ಧಾಂತಿ. ೨೮೭). ) [ ಸಂ. ]

**ಭಟ್ಟ** (ನಾ). ೧. ಅನೇಕ ಶಾಸ್ತ್ರಗಳಲ್ಲಿ ಪಾರಂಗತನಾದವನು : ವಿದ್ವಾಂಸ : ಚಾಣಾಕ್ಯನೆಂಬ ಭಟ್ಟನಂ ನಂದಂ ಪರಿಭವಿಸಿ (ಪಪ್ಪಾರಾ. ೭೫-೭); ಆ ಭಟ್ಟನೀ ದುಷ್ಟಂಗೆ ಮಱುಮಾತುಗೊಟ್ಟೊಡೇನಪ್ಪುದೆಂದು ಸಿರದೆ ನಡೆವುದುಂ (ತಂಕಸಂ. ೦೯೬-೦೫); ವೇದಶಾಸ್ತ್ರದ ನಿಪ್ಪನೇ ಭಟ್ಟನ್ಯೆ (ಬೀಕ್ಯಕೃ. ೭-೨-೦೯). ೨. ವೈದಿಕಬ್ರಾಹ್ಮಣ ; ಸಂಪ್ರದಾಯಸ್ಥ ಬ್ರಾಹ್ಮಣ : ಕರಿಮರಿನಾಯಿ ಕುಂಯಿಗುಡುತಿತ್ತು ಭಟ್ಟರ ಬಾಯಿ ಒಟ ಗುಡುತಿತ್ತು (ಗಂ. ೪೪-೨); ಪಟ್ಟೇವೀಳ್ಯವಾದರೆ ಭಟ್ಟರಿಗಾಗದೇ? (ಗಾದೆ). ೩. ರಾಜರು ಮೊದಲಾದವರನ್ನು ಹೊಗಳುವ ಊಳಿಗದವನು; ಸ್ತುತಿಪಾಠಕ; ಭಟ್ಟಂಗಿ : ಗಾಣರ ಭಟ್ಟರ ಗೃಹವೀಧಿಗಳನಾ ಪುರಂ ರಂಜಿಸುಗುಂ (ಅದ್ಭುರಾ. ೦-೬೦); ಕೈನೆಗಹಿ ನುತಗುಣನ ಬಿರುದಾವಳಿಯ ಸಂಗತಿಯನಭಿವರ್ಣಿಸುವ ಸಮಯೋಚಿತದ ಪುಣ್ಣಿಕೆವಡೆದು ಮೆಱೆದುದು ಭಟ್ಟಸಂದೋಹ (ಕುವ್ಯಾಆ. ೬-೩೯); ಭಟ್ಟಡೊಂಬರಿಗಿತ್ತು ಕೆಟ್ಟು ಪೋಗಲಿಬೇಡ ಸೃಷ್ಟೀಶ್ವರನ ಶರಣರಿಗೆ ಕೊಟ್ಟಪರೆ ಶ್ರೇಷ್ಠಪದವಕ್ಕು (ಸರ್ವಜ್ಞ. ೬೩೦). ೪. ವಾರ್ತಾವಾಹಕ; ದೂತ : ಕೌರವರಾಯನಲ್ಲಿಗೆ ಕಾಳೆಗದ ಕಾತರಿಗರಿವರಟ್ಟಿದರು ಭಟ್ಟರನು (ಕುವ್ಯಾಉ. ೧-೧); ಬರಹೇಳೆಂದು ಭಟ್ಟರನಟ್ಟಿದನು ಪಾಂಡವರ ಪಾಳಯಕೆ (ಕುವ್ಯಾದ್ರೋ. ೯-೨೯). ೫. ದೇವಸ್ಥಾನದ ಪೂಜಾರಿ,–ಅರ್ಚಕ : ಭಟ್ಟರು ದೇವರಿಗೆ ಮಂಗಳಾರತಿಯನ್ನು ಮಾಡಿದರು (ರೂಢಿ). ೬. ಅಡುಗೆ ಮಾಡುವ ವೃತ್ತಿಯನ್ನು ಅವಲಂಬಿಸಿರುವವನು ; ಬಾಣಸಿಗ : ಪುಣ್ಯಾತ್ಮ ಅಡಿಗೆಭಟ್ಟನಿನ್ನೂ ಬಂದಿರಲಿಲ್ಲ (ಬೀಕತ. ೬೬) ; ಕಾಫಿಹೋಟಲಿನಲ್ಲಿ ಗಿರಾಕಿಯಂತೂ ಯಾರೂ ಇಲ್ಲದಾಗ ಭಟ್ಟರು "ಸರ್ಸಿ ಹೇಗಿದ್ದೀಯಾ?" ಎಂದರು (ಹೊಸಕ್ಷ. ೫೮) ; ಭಟ್ಟರು ಎಲ್ಲರಿಗೂ ಬಡಿಸಿ ಹೊರಟು ಹೋದರು (ದೂಡಬಿ. ೯೬). ೭. ಕೆಲವು ಬ್ರಾಹ್ಮಣರು ತಮ್ಮ ಹೆಸರಿನ ಮುಂದೆ ಸೇರಿಸಿಕೊಳ್ಳುವ ಪರಂಪರಾಗತವಾದ ಉಪಪದ : ಕೂಸುಗಳ್ ಸೋಮಶರ್ಮಭಟ್ಟಂಗೆ ನಿಮ್ಮ ಮಗಳ್ ರಿಸಿಯರ ಪಕ್ಕದೆ ಶ್ರಾವಕಬ್ರತಂಗಳಂ ಕೈಕೊಂಡು ಬಂದಳೆನೆ (ವಡ್ಡಾರಾ. ೦೩-೦೬) ; ಈ ಪರಿಯಲಾ ಶುಕ್ರಭಟ್ಟರು ತಾ ಪರೀಕ್ಷಿಸಿಯವರ ಶಿಷ್ಯಗೆ ವ್ಯಾಪಿಸಿದ ವರತತ್ತ್ವಬೋಧೆಯನುಸಾರದುನ್ನತಿಯ (ಸಂಭಕ. ೬-೩೪) ; ಜೈಮಿನೀಯ ಮೀಮಾಂಸಾಶಾಸ್ತ್ರಕ್ಕೆ ಪ್ರಮುಖ ಪ್ರಚಾರಕನು ಕುಮಾರಿಲಭಟ್ಟ (ಶಾಶದ. ೦೨೯). ೮. ಒಬ್ಬ ಪ್ರಸಿದ್ಧ ಮೀಮಾಂಸಕನ ಹೆಸರು : 'ಭಟ್ಟದರ್ಶನ', 'ಭಟ್ಟಮತ' ಪರಾ. [ಸಂ.]

**ಭಟ್ಟಂಗಿ** (ನಾ). ಹೊಗಳುಭಟ್ಟ; ಸ್ತುತಿಪಾಠಕ : ಈ ಭಟ್ಟಂಗಿಗಳ ಬಳಗದಿಂದ ಜಗತ್ತಿಗೆ ಆಗಬೇಕಾದುದಾದರೂ ಏನು (ಹುಚ್ಚುಮು. ೨೬೬); 'ಭಟ್ಟಂಗಿಗಳು ನಾವೂ' ಎಂದುಕೊಂಡು ಹೊಗಳಿ ಹೊಗಳಿ ಭಿಕ್ಷವೆತ್ತುವ ಒಂದು ಬಗೆಯ ಭಿಕ್ಷುಕರು 'ಮಂತ್ರ ಹೇಳಿದ ಹಾಗೆ' ನುಡಿಯುವ ಪದಗಳು ಹಲವು (ಶಾಶದ. ೦೩೫). [<ಭಟ್ಟ]

**ಭಟ್ಟಂಗಿತನ** (ನಾ). ಹೊಗಳುವ ಕೆಲಸ : ಸಾಕು ನಿಮ್ಮ ಈ ಬಡತನದ ಭಟ್ಟಂಗಿತನ (ಹೂಸಂಶಾ. ೪). [ಭಟ್ಟಂಗಿ + –ತನ]

**ಭಟ್ಟಗುತ್ತ** (ನಾ). (?) : ಮುನಿದೊಡೆ ಭಟ್ಟಗುತ್ತನ ೬ಟಾರದ ಪೊರ್ ನೆಱೆ ತನ್ನ ಕಯ್ದು ತನ್ನನೆ ತಱಿದೊಟ್ಟಿ ದಾನವಧರಾತಳವಲ್ಲಭನಂ ಚತುರ್ಭುಜಂ (ಅವಂಪು. ೦೪-೨೦); ಮುದ್ರೆಯ ವೋಲಗಕ್ಕೆ ಗದ್ಯಾಣಂ ಹನ್ನೆರಡು ಭಂಡಾರದೋಲಗಕ್ಕೆ ಗದ್ಯಾಣಂ ಹನ್ನೆರಡು ಭಟ್ಟಗುತ್ತರು ಎರಡಕ್ಕಂ ಗದ್ಯಾಣಂ ಇಪ್ಪತ್ತು ಕಪ್ಪೂರದಾರತಿಯವರು ಎರಡಕ್ಕಂ ಗದ್ಯಾಣಂ ಪದಿನಾಱು (ಎಕ. III, ತಿರುಮ. ೯೭-೬೨; 1270). [ ? ]

**ಭಟ್ಟಗುತ್ತಿಕೆ** (ನಾ). = ಭಟಗುತಿಗೆ : ಆ ಮಹಾಜನಂಗಳು ಆ ಚಕ್ರವರ್ತ್ತಿ ದಂಣ್ಣಾಯ್ಕರಿಗೆ ಕೊಟ್ಟ ದೇವರ ಭಟ್ಟಗುತ್ತಿಕೆಯ ನಿಯೋಗ ೧ ಕೆ ಜೀವಿತ ಗ ೫ (ಎಕ. VII (R). ಶಾಗಶಿಂ. ೬೬-೮೯ ; 1284). [<ಭಟಗುತಿಗೆ]

**ಭಟ್ಟಗೆಯಿ** (ನಾ). ವಿದ್ವಾಂಸರಿಗೆ ಮಾನ್ಯವಾಗಿ ಕೊಟ್ಟ ಭೂಮಿ : ಭಳಾರಿಗೆ ಮತ್ತ ೬ ಭಟ್ಟಗೆಯಿ ೬ ಚಟ್ಟಗೆಯಿ ಮತ್ತ ೭ (ಸೌಇಇ. IX-i, ೬೯-೭; 981). [ಭಟ್ಟ + ಕೆಯಿ (<ಕೆಯ್₄)]

**ಭಟ್ಟಗ್ರಾಮ** (ನಾ). ಇನಾಮು ಗ್ರಾಮ; ಜಾಗೀರು : ಬಾಳ್ಗುಳ ಕಾರಿಟ್ಟಗೆ ಮೊದಲಾಗೆ ಪಲವುಂ ಭಟ್ಟಗ್ರಾಮಂಗಳುಮಂ (ಎಇ. XV, ೮೮-೨೦; 1060). [p ಇದು 'ಭತ್ತಗ್ರಾಮ' ಎಂಬುದರ ಅಪಲಿಖಿತ]

**ಭಟ್ಟತನ** (ನಾ). (?) : ಇಷ್ಟಲಿಂಗ ನಿದ್ರೆಯಲ್ಲಿ ಸೃಷ್ಟಿಯ ಮೇಲೆ ಬಿದ್ದು ಹೊರಳುವಾಗ ನಿಷ್ಠವಂತರೆಂತಾದಿರೋ . . . ಹೀಗಲ್ಲದೆ ಭಟ್ಟತನಕ್ಕೆ ಹೋರುವ ಭ್ರಷ್ಟಭಂಡರನೇನೆಂಬೆ (ಮೋಳಿಮಾ. ೦೬-೭೦); "ಶ್ರೇಷ್ಠತನ, ಗೆಲುವು" (ಮೋಳಿಮಾ. ೯೩೪). [ಭಟ್ಟ₁ + —ತನ]

**ಭಟ್ಟದರ್ಶನ** (ನಾ). ಕುಮಾರಿಲಭಟ್ಟನೆಂಬ ವಿದ್ವಾಂಸನು ಪ್ರತಿಪಾದಿಸಿರುವ ತತ್ತ್ವ; ಭಾಟ್ಟಮತ : ಭಟ್ಟದರ್ಶನನ್ಯಾ [ಸ] ಪ್ರಭಾಕರವ್ಯಾಖ್ಯಾತೃಗಳ್ಗೊವಗ್ಗ೯ಂ . . . ಸರ್ವ್ವನಮಸ್ಯಮಾಗಿ ಕೊಟ್ಟ ಕೆಯ್ (ಕಇಆ. ೬-೨-೦೯೩; 1068). [ಸಂ.]

**ಭಟ್ಟಬಾಣ** 'ಬಟ್ಟಬಾಣ' ನೋ.

**ಭಟ್ಟಮಂಡಪ** (ನಾ). ವಿದ್ವಾಂಸರು ಸಭೆ ಸೇರುವ ಮಂಟಪ : ಶ್ಲೋಕಾರ್ಥಮಂ ಮನದೊಳ್ ಬಗೆದು ಸಖಾಯನುಂ ಪೆತ್ತನೆಂದೊಸೆದುಮಾತನ ಬುದ್ಧಿಯಂ ಪರೀಕ್ಷಿಸಲ್ವೇಡಿ ಭಟ್ಟ[ಶಾಕಾಂ.ಟ್ಟ]ಮಂಡಪದೊಳ್ ಶ್ಲೋಕಮಂ ಬರೆದು ಪೋದಂ (ವಡ್ಡಾರಾ. ೦೯೯-೮) ; "ರಾಜನ ಸಭಾಮಂದಿರ" (ವಡ್ಡಾರಾ. ಟಿಪ್ಪಣಿ. ೨೮೦). [ಸಂ.]

**ಭಟ್ಟಮತ** (ನಾ). =ಭಟ್ಟದರ್ಶನ : "ವ್ಯವಹಾರೇ ಭಟ್ಟನಯಃ" ಎಂದು ವ್ಯವಹಾರದಲ್ಲಿ . . . ಭಟ್ಟಮತಪ್ರಕಾರ ಪ್ರತ್ಯಕ್ಷ, ಅನುಮಾನ, ಉಪಮಾನ, ಶಬ್ದ, ಅರ್ಥಾಪತ್ತಿ, ಅನುಪಲಬ್ಧಿಯೆಂದು ಆರು ಪ್ರಮಾಣಗಳು (ಹಿಂದಾ. ೨೦೦). [ಸಂ.]

**ಭಟ್ಟಮಾನ್ಯ** (ನಾ). = ಭಟಮಾನ್ಯ : ಹಳೆಆಲಗೂಡುಗ್ರಾಮದಲ್ಲಿ ಭಟ್ಟಮಾಂನ್ಯದ ತೆಂಗಿನಕಾಳು ಹೊಲ ೧ (ಎಕ. V (R). ತಿರುಪು. ೦೯೦-೩೩; 1855) : ಪೂರ್ವದಿಂದ ನಡೆದು ಬರುತ್ತಿರುವ ದೇವದಾಯ ಬ್ರಹ್ಮದಾಯ ಧರ್ಮದಾಯ . . . ಸರ್ವಮಾನ್ಯ ಭಟ್ಟಮಾನ್ಯ ಉಂಬಳಿ ರಕ್ತ ಕೊಡಗೆ ಮುಂತಾದುವೇನೂ ಹೆಚ್ಚು ಕಡಮೆಯಾಗದಂತೆಯೂ. . . ಎಚ್ಚತ್ತಿರಬೇಕು (ಬಿರುಗಂ. ೩೭-೨೦). [ಸಂ.]

**ಭಟ್ಟವುತ್ತ** (ನಾ). (?) : ದುವ್ವಿ೯ನೀತಅರಸರಾ ದಣ್ಣನಾಯಕರು ಭಟ್ಟವುತ್ತರ್ ಸಾಸಿರ್ವ೯ರು ಒಲೆಯ ಅಯ್ನೂರ್ವ್ವ೯ರು ಬೆಯ ಮುನೂರ್ವ೯ರುಂ ಮಿ××× ತಣ್ಣಯ ಮಹಾಜನಕ್ಕೆ ಧಮ್ಮ೯ನಿಮಿತ್ತ ಕೊಟ್ಟ ಸ್ಥಿತಿಯ ಕ್ರಮ ಆವುದೆನ್ನಡೆ (ಎಕ. XVI, ತುಮುಕೂ. ೯೦-೪; 903). [ ? ]

**ಭಟ್ಟವೃತ್ತಿ** (ನಾ). = ಭಟಮಾನ್ಯ : ಮಾರಕಬ್ಬೆ ಭಟಾರಿಗೆ ಮತ್ತರ್ಪನ್ನೆರಡು ಮನೆಯೊಂದು ನ್ಯಾಸಂ ಪ್ರಭಾಕರವುಮಂ ವಕ್ಕಾಣಿಸಿ ಗುಣಶಾಸನದ ಸಣ್ಣ ಭಟ್ಟವೃತ್ತಿ ಮತ್ತರೈವತ್ತು (ಎಇ. XX, ೬-೨೯; 1012); ಬಾಲಶಿಕ್ಷೆಗಂ ನ್ಯಾಸದ ವಕ್ಕಾಣಕ್ಕಂ ವೃತ್ತಿಯ ಭೂಮಿಯೊಳಗೆ ಬಿಟ್ಟ ಭಟ್ಟವೃತ್ತಿಯೊಂದು (ಸೌಇಇ. XX, ೯೩-೬೦; ?); ಪ್ರೌಢ ಉಪಾಧ್ಯಾಯರ ಜೀವನೋಪಾಯಕ್ಕಾಗಿ ಕೊಟ್ಟ ದಾನವನ್ನು ಭಟ್ಟವೃತ್ತಿ ಎಂದು ಕರೆದರೆ, ಪ್ರೌಢ ವಿದ್ಯಾರ್ಥಿಗಳ ಜೀವನೋಪಾಯಕ್ಕಾಗಿ ಕೊಟ್ಟ ದಾನವನ್ನು ಚಟ್ಟವೃತ್ತಿ ಎಂದು ಕರೆದಿದ್ದಾರೆ (ಕಶಾಅ. ೨೨೯). [ಸಂ.]

**ಭಟ್ಟವ್ರಿತ್ತಿ** (ನಾ). = ಭಟಮಾನ್ಯ : ಎಪ್ಪತ್ತು ಗುಳಗಟ್ಟಿ ಭಟ್ಟವ್ರಿತ್ತಿ ಚಾವಯ್ಯ ××× ಇದನಟುವೆನೆನ್ದವ ವಾರಣಸಿಯುವ ಕವಿಲೆಯುವ ನಟುದೊ (ಎಕ. V (R). ತಿರುಪು. ೯೭-೯; ಸು. ೨ನೆಯ ಶತ). [ಭಟ್ಟ + ವ್ರಿತ್ತಿ]

**ಭಟ್ಟಾರ** (ನಾ). =ಭಟಾರ ೩ : ವಿಕ್ರಮಾದಿತ್ಯ ಸತ್ಯಾಶ್ರಯ ಶ್ರೀಪೃಥಿವೀವಲ್ಲಭ ಮಹಾರಾಜಾಧಿರಾಜಪರಮೇಶ್ವರಭಟ್ಟಾರರ್ (ಎಇ. III, ೩೬೦-೨ ; 740); ಸ್ವಸ್ತ್ಯಮೋಘವರ್ಷಪೃಥುವೀವಲ್ಲಭಂ ಮಹಾರಾಜಾಧಿರಾಜಪರಮೇಶ್ವರಭಟ್ಟಾರರ್ ರಾಜ್ಯಾಭಿವೃದ್ಧಿಯೊನ್ದುತ್ತರಂ ಸಲೆ (ಎಇ. XXVI, ೯-೮ ; 906); ನಾಗಶ್ರೀಯುಂ ... ತನ್ನ ಮುನ್ನಿನ ಪೊಲತಿಯಾಗಿ ಪುಟ್ಟಿದ ಭವಮನಱಿದು ಭಟ್ಟಾರರ ಕಾಲ್ಗೆಱಗಿ ಪೊಡವಟ್ಟು ಕುಳ್ಳಿರ್ದಾಗಳ್ (ವಡ್ಡಾರಾ. ೦೨-೨೯). [ಸಂ.]

**ಭಟ್ಟಾರಕ** (ನಾ). ೧. ರಾಜ, ಗುರು, ಹಿರಿಯರ ಹೆಸರುಗಳ ಕೊನೆಯಲ್ಲಿ ಗೌರವಾರ್ಥವಾಗಿ ಸೇರಿಸುವ ಒಂದು ಶಬ್ದ : "ಪಾದಃ, ದೇವಃ, ಭಟ್ಟಾರಕಃ — ಈ ಮೂಱುಂ ಪೆಸರ ಕಡೆಯೊಳ್ ಪೂಜಾವ(ಚ)ನಂ" (ಶಬ್ದಮ. ೨೩-೦೩೯); ಶಿವಗುಪ್ತಭಟ್ಟಾರಕರ್ಗಾಂ ಪಾರಣೆಯಂ ಮಾಡುವೆಂ (ವಡ್ಡಾರಾ. ೭೮-೩); ತನ್ನಂಶಮನಾಕೆಯ ಗರ್ಭದೊಳವತರಿಸಿ ಯುವಭಟ್ಟಾರಕನಂತರ್ಧಾನಕ್ಕೆ ಸಂದಂ (ಶಂಶಕಾ. ೦-೦೦೯ ವ); ವಿಜಯಾಂಬಿಕೆ ಪಡೆದಳಜಿತಭಟ್ಟಾರಕರಂ (ಶಂರಾಪು. ೦೦-೭೯). ೨. ಚಾಲುಕ್ಯರ ಬಿರುದುಗಳಲ್ಲಿ ಒಂದು ಭಾಗವಾಗಿ ಬರುವ ವಿಶೇಷಣ : ಸ್ವಸ್ತಿ ನಿತ್ಯವರ್ಷ ದೇವ ಶ್ರೀಪೃಥುವೀವಲ್ಲಭ ಮಹಾರಾಜಾಧಿರಾಜ ಪರಮೇಸ್ವರ ಪರಮಭಟ್ಟಾರಕ (ಸೌಇಇ. IX-i, ೩೭-೨; 922). [ಸಂ.]

**ಭಟ್ಟಿ₁** 'ಬಟ್ಟಿ₂' ನೋ.

**ಭಟ್ಟಿ₂, ಬಟ್ಟಿ₃** (ನಾ). ೧. ಮದ್ಯ ಮೊದಲಾದಂಥವುಗಳ ಅರ್ಕವನ್ನು ತಯಾರಿಸಲು ಬಳಸುವ ಒಂದು ಬಗೆಯ ಹಬೆಯ ಸಾಧನ : ನೀರು ಹಾಕಿದ್ದರಿಂದ ಭಟ್ಟಿಯೊಳಗಿಂದ ಆ ಹರಳಿನಲ್ಲಿ ನೀರ ಗುಪ್ತವಾಗಿದ್ದ ಅನನುಭೂತೋಷ್ಣತೆಯ ಅನುಭವವಾಯಿತು (ಕುಂಬಿಯ. ೫-೦೩೭) ; ಈ ಪೀಡಾಮನುಷ್ಯನನ್ನು ಭಟ್ಟಿಯಲ್ಲಿ ಹಾಕಿ ತೆಗೆದು, ಒಂದು ಫುಟ್‌ಬಾಲ್ ಮಾಡಬೇಕು (ದೀಕಪ್ರ. ೩೦). ೨. ಕಡಲೆ, ಪುರಿ, ಅವಲಕ್ಕಿ ಮುಂತಾದುವುಗಳನ್ನು ಹುರಿಯುವ ಸ್ಥಳ : ಚಹದಂಗಡಿ, ವಿಶನಾಥಶೆಟ್ಟರ ಚುರುಮುರಿಯ ಭಟ್ಟಿಗಳನ್ನು ದಾಟಿ ಅವನು . . . ಸಂಕವನ್ನು ಸಮೀಪಿಸಿದ್ದ (ಮೂರುದಾ. ೯೦). ೩. ಹಬೆಯ ಯಂತ್ರದಲ್ಲಿ ಕಾಯಿಸಿ ತೆಗೆದ ದ್ರವವಸ್ತು,— ಸಾರ : ವಿವಿಧರಸಗಳ ಭಟ್ಟಿ, ಸೌಂದರ್ಯಕಾಮೇಷ್ಟಿ ಕವಿಜಗತ್ಸೃಷ್ಟಿಯದು (ಕುಂಕುಳ. ೪೭೦) ; ಒಡಲ ನರಕದ ಭಾಂಡ ಕುದಿಸಿ ಭಟ್ಟಿಯ ತೆಗೆದ ಮೋಹಿನಿಯ ಕಣ್ಣೀರ ಗುಟುಕನೆಷ್ಟೋ ಕುಡಿದೆ (ಶಿಂಶು. ೮೩-೦). ೪. (ಆಲಂ) ಹದ ; ರೀತಿ ; ರಚನಾಕ್ರಮ : ನಿನ್ನ ಪರಾಕ್ರಮಕ್ಕೆ ಇದು ಹೊತ್ತಲ್ಲ. ನಮ್ಮ ಕೆಲಸದ ಭಟ್ಟಿ ಕೆಟ್ಟೀತು (ಬಿಶಾ. ೦೦) ; ಭಟ್ಟಿ ಕೆಟ್ಟಿಲ್ಲವೆಂದು ಅವರ ಆಸೆ ಚಿಗುರಿತು (ಕ್ರೀಪಾಕ್ರ. ೨೦೩) ; ಒತ್ತಾಯದಿಂದ ಎಬ್ಬಿಸುತ್ತಿದ್ದರು. ಭಟ್ಟಿ ಕೆಟ್ಟದ್ದು ಅಲ್ಲಿ (ಗಾಶಕ. ೮೭೨). **ಬಟ್ಟಿ₃** : ೧. ಸುಣ್ಣದ ಹರಳುಗಳನ್ನು ತಂದು ಬಟ್ಟಿಗೆ ಹಾಕಿ, ಅವನ್ನು ಸುಟ್ಟು ಸುಣ್ಣ ಮಾಡಬೇಕು (ಕುಂಬಿಯ. ೯-೦೯೭) ; ಒಬ್ಬ ರೊಟ್ಟಿಗಾರನ ಬಟ್ಟಿಯು ಮಿತಿಮೀರಿ ಕಾದದ್ದೇ ಈ ಅಗ್ನಿಸಪ್ಪಕ್ಕೆ ಕಾರಣವಾಯಿತು (ಇಂಗ್ಲಂಡ. ೦೭೪) ; ಬಟ್ಟಿ ಸುಟ್ಟು ಹೋಯಿತೆಂದರೆ ಸೆಟ್ಟಿ ಬಿಟ್ಟಾನೇ ? (ಗಾದೆ). ೨. ಅಲ್ಲಿ ಅವನ ಅವಲಕ್ಕಿಯ ಬಟ್ಟಿಯಿದ್ದಿತು (ಬೆಳಕ. ೨).

**ಭಟ್ಟಿಯಿಳಿಸು ; ಬಟ್ಟಿಯಿಳಿಸು**=೧. (ಬೇರು, ಎಲೆ ಮುಂತಾದುವುಗಳಿಂದ) ಸಾರವನ್ನು ತೆಗೆ : ಜೀವಕನು ಒಂದು ರಾಶಿ ಅದು ಇದು ಬೇರುಗಳನ್ನು ತಂದು ಭಟ್ಟಿಯಿಳಿಸಿ . . . ಔಷಧವನ್ನು ಪಕ್ವಮಾಡಿದನು

(ತತ್ತ್ವಮ. ೧೦೩) ; ಬಿತ್ತ್ರಬಿತ್ತ್ರದ ರಸವ ಸವಿದು ಸವಿದಾಕ್ಷಣದಿ ಆಯುಷ್ಯ ಸಾರವನು ಬಟ್ಟಿಯಿಳಿಸುವ ತೆರದಿ . . . ಆವರ್ತಿ ಚೋದಿಸಿತು ? (ಸೌಂದಕ. ೩೩). ೨. (ಆಲಂ) ನಕಲುಮಾಡು ; ಕಾಪಿಹೊಡೆ : ಆ ಮೂಲಗ್ರಂಥವನ್ನೇ ಇವರು ಭಟ್ಟಿಯಿಳಿಸಿದ್ದಾರೆ (ರೂಢಿ).

[← ಹಿಂ. ಮರಾ. ಭಟ್ಟೀ. / ಸಂ. ಭೃಷ್ಟಿ=ಹುರಿಯುವಿಕೆ]

**ಭಟ್ಟಿಗೆ** (ನಾ). (?) : ಇಟ್ಟ ಕಲ್ಲದೆ ಬಿಟ್ಟಿಯನು ಮಾಡುವಾಳಾದೆ ಭಟ್ಟಿಗೆ ಬಜಾಬ[ಪಾಠಾಂ. ಬಟ್ಟಿಗರುಬನು] ನಾನಾದೆ ಕೊಟ್ಟಣವನು ಇನ್ನು ಟಟ್ಟಿ ಕೊಟ್ಟರೆ ನನಗಿಟ್ಟಿಕೆ ಭವಣೆ ಬರುವದು (ಅಮರಾಂ. ೩-೯೯). 'ಬಟ್ಟಿಗೆ' ಪಾಠ. [ ? ]

**ಭಟ್ಟಿಗೆಯ್** (ಕ್ರಿ). ಭಟ್ಟಿ ಇಳಿಸು ; ಕರಗಿಸಿ ಶುದ್ಧಗೊಳಿಸು : ವಜ್ರ ಮೂಷೆಯೊಳಿಕ್ಕಿ ಭಟ್ಟಿಗೆಯ್ವಂತೂದಿ ಕರಗಿಪ್ಪುದುಂ (ಶಾಂತೀಶ್ವ. ೯-೧೦೦ ವ).

[ಭಟ್ಟಿ$_2$ + ಕೆಯ್$_1$]

**ಭಟ್ಟಿನಿ** (ನಾ). ೧. ಒಡತಿ ; ಯಜಮಾನಿತಿ. ೨. [ಕಾವ್ಯಮೀ] ನಾಟಕಾದಿ ರೂಪಕಗಳಲ್ಲಿ ಚೇಟಿ ಮೊದಲಾದವರು ಪಟ್ಟದ ರಾಣಿಯನ್ನು ಬಿಟ್ಟು ಇತರ ರಾಜಪತ್ನಿಯರನ್ನು ಸಂಬೋಧಿಸುವಾಗ ಬಳಸುವ ಶಬ್ದ : "ಕೃತಾಭಿಷೇಕಾ, ಮಹಿಷೀ—ಈ ೨ ಪಟ್ಟದರಸಿಯರ್. ಭಟ್ಟಿನೀಯೆಂಬುದುಟಿದರಸಿಯರ್" (ಶಬ್ದಮ. ೬೯-೩೨೬). ೩. ಪೂಜಾರಿಯ ಹೆಂಡತಿ : ಇದು ತನ್ನ ಧಂದೆಗೆ ಸುಖಕರವಲ್ಲವೆಂದು ತಿಳಿದನೋ ಏನೋ, ಅಂತೂ ಈ ಭಟ್ಟಿನಿಯ ತಳ್ಳಿ ಬಿಟ್ಟುಬಿಟ್ಟ (ಶೂದ್ರತಪ. ೧೫೨).

[ಸಂ. ಭಟ್ಟಿನೀ]

**ಭಟ್ಟಿಸುಂಕ, ಬಟ್ಟಿಸುಂಕ** (ನಾ). ಭಟ್ಟಿಯಿಳಿಸುವ ಸಾರಾಯಿ ಮೊದಲಾದ ಮಾದಕಪದಾರ್ಥಗಳ ಮೇಲೆ ಹಾಕುವ ತೆರಿಗೆ ; ಅಬ್ಕಾರಿ : (ಕೃಶಗ. II, ೩೯೯). ಬಟ್ಟಿಸುಂಕ: (ಕಿಸಂಗ್ರ. ೦೩೦). [ಭಟ್ಟಿ$_2$+ಸುಂಕ$_1$]

**ಭಟ್ಟೋಪಾಧ್ಯಾಯ** (ನಾ). ವಿದ್ವಾಂಸನಾದ ಉಪಾಧ್ಯಾಯನ ಹೆಸರಿನ ಮುಂದೆ ಸೇರುವ ಒಂದು ಉಪಪದ: ಜನ್ನಯಭಟ್ಟೋಪಾಧ್ಯಾಯರ್ಗ್ಗೆ ಕಾಲ ಮತ್ತರು ೫೦ (ಕಇಅ. ೯-೩-೩೦೯ ; 1062) ; ಮನೆವೆರ್ಗ್ಗಡೆ ದಣ್ಣನಾಯಕ ಭಾಸ್ಕರಭಟ್ಟೋಪಾಧ್ಯಾಯ ಲಾಳ ಮಾಳವ ಸೌರಾಷ್ಟ್ರಗೌಡ ವಿಷಯಂ ಮೊದಲಾಗಿಯುತ್ತರದಿಶಾವರದರಸುಮಕ್ಕಳೆಲ್ಲರುಮಾ ಶ್ರೀಮದ್ಭುವನೈಕಮಲ್ಲದೇವರ ಶ್ರೀಪಾದಾರಾಧನದೀಕ್ಷಯ ಕೈಕೊಳ್ವಸ (ಸೌಇಇ. XX, ೪೬-೩೬; 1072). [ಸಂ.]

**ಭಟ್ಟೋರ** 'ಭಟಾರ' ನೋ.

**ಭಡಕ್ಕನೆ** (ಅ). ಒಂದು ಅನುಕರಣಾವ್ಯಯ ; ತಟ್ಟನೆ ; ಕೂಡಲೆ: ಅವನ ಉಗ್ರಸ್ವರೂಪ ಕಣ್ಣ ಮುಂದೆ ನಿಂತಂತಾಗಿ ಬೆಚ್ಚಿಬಿದ್ದು ಭಡಕ್ಕನೆ ಹಾಸಿಗೆಯಿಂದ ಎದ್ದು ನಿಂತ (ಮೂರುದಾ. ೦೬೨) ; ಅಂದ್ರ ವಸಂತಿ ಒಮ್ಮೆ ಭಡಕ್ಕನ ಹೇಳಿಬಿಡು (ಹೊಸಂಪಾ. ೦೬೪). [ಭಡಕ್$_0$+—ಅನೆ$_1$]

**ಭಡವ** (ನಾ). ೧. ವ್ಯಭಿಚಾರಕ್ಕಾಗಿ ಗಂಡು ಹೆಣ್ಣುಗಳನ್ನು ಹೊಂದಿಸುವವನು ; ತಲೆಹಿಡುಕ ; ಕುಂಟಣಿಗ. ೨. ಒಂದು ಬೈಗುಳು : ಆ ಭಡವ ತುಂಬ ಚೇಷ್ಟೆ ಮಾಡುತ್ತಿದ್ದಾನೆ (ರೂಢಿ).

[← ಹಿಂ. ಭಡುಆ ; ಮರಾ. ಭಡವಾ, ಭಡುವಾ]

**ಭಡಾಭಡಾ** (ಅ). ವೇಗವನ್ನು ಸೂಚಿಸಲು ಬಳಸುವ ಒಂದು ಅನುಕರಣಾವ್ಯಯ : ಏ ಸುಮ್ಮಾ, ದಮ್ಮಾ ಮಳ್ರೀ ಭಡಾಭಡಾ (ಅಮಾಶಿ. ೭೯); ಭಡಾಭಡಾ ಊರು ಬಿಡಬೇಕ (ಹುತ್ತಾಲಿ. ೯೮).

**ಭಣಗುಟ್ಟು** (ಕ್ರಿ). ಬಿಕೋ ಎನ್ನು; ಬರಿದಾಗಿ ಕಾಣು : ಅವರೆಲ್ಲ ತೆರಳಿದ ಮೇಲಂತೂ ಇಡೀ ಮನೆಯೇ ಭಣಗುಟ್ಟುತ್ತಿರುವಂತೆ ಅವರಿಗೆ ಭಾಸವಾದುದಿದೆ (ವಾತ್ಸಲ್ಯ. ೦೩೦); ಆಕೆಗೆ . . . ಮನೆ ಬರಿದಾಗಿ ಭಣಗುಟ್ಟುವಂತೆ ಭಾಸವಾಗುತ್ತಿತ್ತು (ಬರಪಾ. ೪೯). [ಭಣ$_0$ + ಕುಟ್ಟು$_1$]

**ಭಣಗುಡು** (ಕ್ರಿ). =ಭಣಗುಟ್ಟು: ಒಂದು ದಿನ ಅಕಸ್ಮಾತ್ತಾಗಿ ಕುಮಾರಿ ಪಂಡಿತಳು ಕಾಣದೆ ಹೋದರೆ ಅಂದು ಇಡೀ ದಿನವೆಲ್ಲ ಅವನ ಮನಸ್ಸು ಭಣಗುಡುತ್ತಿತ್ತು (ಸಮಶೀ. ೪೦೯); ನಮ್ಮನ್ನಿಳಿಸಿದ ಮನೆ ಭಣಗುಡುತ್ತಿರಬಹುದು (ವ್ಯಸಿ. ೪೦). [ಭಣ$_0$ + ಕುಡು$_1$ (<ಕೊಡು$_1$) ]

**ಭಣಭಣ** (ನಾ). ಬೇಸರ, ಉತ್ಕಂಠೆ ಮೊದಲಾದ ಭಾವಗಳನ್ನು ತಿಳಿಸುವಾಗ ಬಳಸುವ ಶಬ್ದ : ಇಂದು ಏಕೆ ಭಣಭಣ ? (ನಡೆಂ. ೮-೦೭); ಅವರಿಗೊಂದು ಚಟುವಟಿಕೆ ಇಲ್ಲವಾಗಿ ಭಣಭಣ ಎನಿಸಬಹುದು (ದೇಶದ್ವ. ೪೪).

ಭಣಭಣವೆನಿಸು=ಶೂನ್ಯವಾದಂತಾಗು; ಬಿಕೋ ಎನ್ನು: ಮಂಟಪ, ಅವಕ್ಕೆ ಕಟ್ಟಿದ ಬಾಡಿದ ತೋರಣಗಳೆಲ್ಲ ಈಗ ಭಣಭಣವೆನಿಸತೊಡಗಿದುವು (ಅಜೋಕ. ೦೮). ಭಣಭಣಸುರಿ=ಹಾಳು ಸುರಿ; ಶೂನ್ಯವಾಗು : ಅವರಿಲ್ಲದ ಸಾಲೆ ಭಣಭಣ ಸುರಿಯುತ್ತಿತ್ತು (ರಂಗರೋ. ೧೬೯) ; ಏಸಾವಳಿಯು ಭಣಭಣ ಸುರಿಯುತ್ತಿತ್ತು (ರಕ್ತರ್ತ. ೦೦೮).

**ಭಣಭಣಗುಡು** (ಕ್ರಿ). =ಭಣಗುಟ್ಟು : ಮಕ್ಕಳಿಲ್ಲದೆ ಭಣಭಣಗುಡುತ್ತಿದ್ದ ಪಾರ್ವತಮ್ಮನ ಮನೆಯನ್ನು ನೊ ಡಿದ್ದ ಹಳ್ಳಿಯ ಇತರ ಹೆಂಗಸರೂ. . . ಒಪ್ಪಿಕೊಳ್ಳುತ್ತಿದ್ದರು (ಸರ್ವಮಂ. ೯). [ಭಣಭಣ+ಕುಡು$_1$(<ಕೊಡು$_1$) ]

**ಭಣಿತ** (ಗು). ೧. ಉಚ್ಚರಿಸಿದ ; ಹೇಳಿದ ; ಮಾತನಾಡಿದ. (ನಾ). ೨. ಹೇಳಿಕೆ ; ಮಾತು; ವಚನ : ಪ್ರಸ್ತುತಸರ್ಗಂಗಳ್ಗೆ ಚತುಸ್ಸ್ಥಾನಾಸುಭಾಗಮನಂತಗುಣೇತ್ರಮಾಗಿ ಕಟ್ಟುಗುಂ ಇಂತಸುಭಾಗಬಂಧಂ ಭಣಿತಮಾಯ್ತು (ಛಶಾ. ೩-೦೬) ; ಕಣ್ಮಣಿತಕೆ ನಗೆ ಭಣಿತಕೆ ಮನೆ ಹೋಯಿತು ನಡುಗಿ (ಅರಳು. ೩೩೬-೦೪). [ ಸಂ. ]

**ಭಣಿತಿ** (ನಾ). ೧. ಮಾತು; ವಚನ : ನುಡಿದ ವಕ್ರಭಣಿತಿಗಳಾಶ್ಚರ್ಯಮಂ ಪುಟ್ಟಿಸೆ (ಜಗದ. ೮-೦೦೭ ವ) ; ದಣಿಯೆ ಭೂಸುರರನ್ನ ಪಾನದಿಂ ದಾನದಿಂ . . . ಭಣಿತಿಗಳ ಮೃದುಮಧುರಗಾನಸನ್ಮಾನದಿಂ ಭೂಭುಜರ್ ಸಂಭ್ರಮಿಸಲು (ಪಂಪಾರಾ. ೦-೮.೦೪) ; ಭಣಿತಿ ಭಂಗಿಗಳಲ್ಲಿ ಮುಗಿದು ಕುಂಠಿತಮತಿಯು ಮತ್ತೆ ತಲೆಯೆತ್ತಿ ನಿಂತಿಹುದು ದಿತಿಸಂತತಿಯು (ಸೂರ್ಯೋಶಾ. ೪೪-೦೩). ೨. ವಾಕ್ಯರಚನೆ ; ವಾಗ್ಗುಂಫ : ಸಾಂಗತ್ಯದ ಇತರ ಕೃತಿಗಳಲ್ಲಿ ಚಿರಪರಿಚಿತವಾದ ಗಾದೆಗಳು, ಮಾತಿನ ಭಣಿತಿಗಳು ಧಾರಾಳವಾಗಿ . . .ಜಾನಪದಪ್ರಪಂಚಕ್ಕೆ ನಿಕಟವಾಗಿ ಸಂಬಂಧಿಸಿದಂತಿವೆ (ಸುವರ್ಣ.೦೦೭). [ ಸಂ. ]

**ಭಣಿತೆ** (ನಾ). ೧. ಮಾತು ; ವಚನ : ಸಕಲಸುರಾಳಿ ಭಣಿತೆಯಿಂ ಜಯ ಜಯ ಸ್ವಾಮಿಯುಪಧಾರೆಂಬುದೆಣಿಸಲೇನದಜನೀಶಂಗಜಹರಿಮುಖಾಖಿಲಂ ಮಕ್ಕಳಾಟದಂತೆ (ಶದ್ಯಾ. ೦೦-೩೦) ; ರಣಮುಖದೊಳೇ ಕ್ಷತ್ರಧರ್ಮದ ಕುಣಿಕೆ ತಪ್ಪದೆ ವೇದಶಾಸ್ತ್ರದ ಭಣಿತೆ ನೋಯದೆ ವೀರವೃತ್ತಿಯ ಪದದ ಪಾಡಜಿದು . . . ಜೀವದಾಸೆಗೆ ಮಣಿಯುದಳಿದುದನೆಲ್ಲ ಬಲ್ಲರು (ಕುಮ್ಯಾಗ. ೮-೪೦); ಪ್ರಣುತಿಸಿದುವಲ್ಲಿದು ಯಥಾರ್ಥದ ಭಣಿತೆಯುಹುದು (ಶಿವ್ಯಕಾಂ. ೦೦-೭೮). ೨. ಚಮತ್ಕಾರವಾದ ಮಾತು ; ವಕ್ರೋಕ್ತಿ : ಲಾಳಿತೆಯ ರಮಣೀಯ ರಸಗಳ ಸೂಳುನುಡಿಗಳ ಸಡಗರಂಗಳ ಸಾಲಭಣಿತೆಯ ಬಂಧದೋಜೆಯ ಬಗೆಯ ಪ್ರಥುಲತೆಯ . . . ಬಣ್ಣಿಸುವೆ (ಕೌಶಿರಾ. ೦-೩); ಹಲವು ಜನ ಸಾಧಕರನ್ನೂ ಸಿದ್ಧಂಪುರುಷರನ್ನೂ ತನ್ನ ಬೆಳಕಿನ ತುಣುಕಿನ ಭಣಿತೆಗಳಿಂದ ಉದ್ದೀಪಿಸಿ . . . ಚಿತ್ರಿಸಿರುವ ಅಪೂರ್ವ ಕೃತಿಯಿದು ( ಅವತಂ. ೦೯ ೬೬೩೯ ). ೩. ರೀತಿ ; ಭಂಗಿ : ದೇವ ನೀನೀ ಪರಿಯ ಜಂಗಮಭಾವಭಣಿತೆಯ ಧರಿಸಿ ಬಂದರೆ ಗಾವಿಲರು ನಾವೆತ್ತ ಬಲ್ಲೆವು ನಿಮ್ಮ ಮಹಿಮೆಯನು ( ಶ್ರಶಾಂ. ೦೩-೪೦ ) ; ಜಗಳದಾಡಿದ ಭೈರವನ ಭಣಿತೆಗಳಲ್ಲಿರ್ದನು ಭಯರಸದ ಸೋನೆಗಳ ಸೂಸುತ ನಿಮ್ಮ ರಘುರಾಜೇಂದ್ರ ಸೇನೆಯಲಿ (ತೊರರಾ.೭-೩೩-೭); ಅಪರಿಮಿತ ಬಲ ಭೂಸುರ

ಮಹಾವಾರ್ಧಿ ಭಣಿತೆಯುಲಿ ಕುಣಿಕುಣಿವ ಬಗೆಗಾಕ್ಷಣದೊಳೆಚ್ಚರಿಪಟ್ಟುದೈ (ಕೋಗಯು. ೦೬-೩೬). ೪. ಚಟುವಟಿಕೆ; ಕೈಚಳಕ : ಹೊಣಕೆಯಿಂ ಘನವಲ್ಲರಂತೆಳ್ದು ಧನುಗಳಂ ಭಣಿತೆಯಿಂದಾಂತು ಜೇವಡೆದ ರಭಸಕ್ಕರರೆ ಪೆಣದ ಪೋಲ್ ಜೀವಿಗಳ್ ನಿರ್ಜೀವವಾಗೆ (ತಕುಪು. ೪-೨-೬). ೫. ಸ್ಪಷ್ಟತೆ : ಭಣಿತೆಯು ನುಡಿಯಿಂದ ಗುಣವಣಿ ಪೇಳೀಗ ವಣಿಮಾಗುತಿ ಯದೆಲ್ಲಿಯೆಂದ (ಮೂಗುತಿ. ೨೨-೦೦೬). ೬. [ಸಂಗೀತ] ವಾದನ ಗಾಯನ ಗಳಲ್ಲಿಯ ಒಂದು ರೀತಿ (?) : ಭಣಿತೆ ಬೆಡಗು ಕಾಕು ಬಿಚರಂ ಗಮಕಂ . . . ದೇಸೆ ಪೆಲ್ಲಣೆ ಕಳೆಯೆಂಬಿವಂ ಮೆಱೆದು ಬಾಜಿಸಿದಂ ಮುರವೈರಿ ವಾಸವಂ (ಜಗ. ೫-೩) ; ಪೊಸ ಭಣಿತೆ ಬೆಡಗು ಮಧುರಂ ನಯಂಗಳೊಳ್ ಶೋಭಿಸುವ ಠಾನಂಗಳೊಳ್ ಸಕಲರಾಗಂಗಳಿಂದೊಸೆದು ತುಂಬುರ ನಾರದರ್ ಪಾಡುತಿರ್ದರೊಂದೆಸೆಯೊಳತಿವಿಭವದಿಂದೆ (ತಿಬಪು. ೨-೨೮). [ಸಂ. ಭಣಿತ]

**ಭತ್ತ₁** 'ಬತ್ತ' ನೋ.

**ಭತ್ತ₂** 'ಬತ್ತಾಯ' ನೋ.

**ಭತ್ತಗಾವೆ** (ನಾ). ಇನಾಮುಗ್ರಾಮ ; ಜಹಗೀರು : ಮದನಾವ ತಾರಮಂ ಕನಕದಂಡ ಚಾಮರಮಂ . . . ಭತ್ತಗಾವೆಯುಂ ಪಡೆದುದಾತ್ತ ಕವಿತಿಲಕನೆನಿಸಿದಂ ಕವಿರತ್ನಂ (ಅತಪು. ೦೨-೫೦) ; ಶ್ರೀಮನ್ಮಹಾಸಾಹಣಾಧಿಪತಿ[ಸೌ]ಚಯನಾಯಕರ್ ಬೆಳ್ವೊಲ ಮೂನೂಱಱೊಳಗಣ ಭತ್ತಗಾವೆ ಎಲೆಯ ಪಸುಣ್ಣಯುಂ ದುಷ್ಟನಿಗ್ರಹ ವಿಶಿಷ್ಟಪ್ರತಿಪಾಳನದಿನಾಳ್ದು ಸುಖ ದಿನಿರೆ (ಸೌಇಇ. XI-i, ೬೩-೯; ಸು. 1026) ; ದಣ್ಣನಾಯಕ ಲಕ್ಕರಸಂ ಉತ್ತುಮ್ಬಿತ್ತಿ ಭತ್ತಗಾವೆಯೊಳಗಾಗಿ ಬೆಳ್ವಲವೆರಡಱುನೂಱುಮುಮ್. . . ಆಳುತ್ತಮಿರ್ದ್ದು (ಎಇ. XVIII, ೦೯೦-೫; 1104).

[ಭತ್ತ₂ (<ಬತ್ತಾಯ) + ಗಾವೆ (<ಗಾಮ)]

**ಭತ್ತಗ್ರಾಮ** (ನಾ). =ಭತ್ತಗಾವೆ : ಜಯಸಿಂಹದೇವರು. . .ಮಣ್ಣಳಿಸಾಸಿರಮುಮಂ ಪದಿನೆಣ್ಬು ಭತ್ತಗ್ರಾಮಂಗಳಂ ಬೆಳ್ವಲಮೂನೂಱು [ಪು]ಲಿಗೆಱೆ ಮೂನೂಱುಮಂ. . .ಅರಸು[ಗೆ]ಯುತ್ತಮಿರೆ (ಪ್ರಿಆರಿ. ೧೯೩೦, ೬೬-೯ ; 1080). [ಭತ್ತ₂ (<ಬತ್ತಾಯ) + ಗ್ರಾಮ]

**ಭತ್ತವಟ್ಟ** (ನಾ). (?) : ಮತ್ತಂ ಭತ್ತವಟ್ಟಯುಂ ಗಡಿಯ ನಖರಂಗಳು ತಮ್ಮಂಗಡಿಯುಲು ವರ್ಷಂಪ್ರತಿ ಚೈತ್ರಕ್ಕೆ ಹಾಗ ಮತ್ತಂ ವೈತ್ರಕ್ಕೆ ಹಾಗಮುಂ ಬಿಟ್ಟರ್ (ಸೌಇಇ. XV, ೦೩೫-೩೪; 1179). [?]

**ಭತ್ತಾದಾಯ** (ನಾ). ಬತ್ತದ ಬೆಳೆಯಿಂದ ಬರುವ ಆದಾಯ : ಉತ್ಪನ್ನ: ಕೞೆಯ ತೆಂಕಣ ಕೋಡಿವೊ[ಳ]ಗಣ ಭತ್ತಾದಾಯ (ಎಕ. IX, ಬೆಂಮಂ. ೫೩-೨೫;1374); ಸಕಲ ಭತ್ತಾದಾಯ ನಿಧಿ ನಿಕ್ಷೇಪ ಜಲಪಾಷಾಣ. . . ಬಿಟ್ಟುಕೊಟ್ಟ ಧರ್ಮ (ಎಕ. XI, ಹಿರಿರು. ೪೫-೦೯; 1538). 'ಬತ್ತಾಯ' ಪರಾ. [ಭತ್ತ₁ (<ಬತ್ತ) + ಆದಾಯ]

**ಭತ್ತಾಯ** 'ಬತ್ತಾಯ' ನೋ.

**ಭತ್ತೆ** 'ಬತ್ತಾಯ' ನೋ.

**ಭತ್ಯ** 'ಬತ್ತಾಯ' ನೋ.

**ಭತ್ವ** (ನಾ). 'ಭ' ಎಂಬ ಅಕ್ಷರ: "ಭತ್ವಕ್ಕೆ ಹ ಪ ಪಮಸ್ಕಂ" (ಕಮದ. ೨೮೨). [ಸಂ.]

**ಭದಂತ** (ನಾ). ೧. ಪೂಜ್ಯ; ಶ್ರೇಷ್ಠ. ೨. ಗೌತಮ ಬುದ್ಧ. ೩. ಬೌದ್ಧ ಭಿಕ್ಷುಗಳನ್ನು ಸಂಬೋಧಿಸುವಾಗ ವಿಶೇಷವಾಗಿ ಬಳಸುವ ಶಬ್ದ : ಭದಂತನು ಮಸವಾರೆ ಮಾತನಾಡಲಿ (ಬುದ್ಧಕ. ೩೮ ಬಿಂದು). [ಸಂ.]

**ಭದ್ರ** (ಗು). ೧. ಮಂಗಳಕರವಾದ ; ಶ್ರೇಯಸ್ಕರವಾದ. ೨. ಶ್ರೇಷ್ಠವಾದ ; ಉತ್ತಮವಾದ : ದ್ವಿಜವರ್ಗ ರಚಿಸಿದ ತಳಿತ ಗುಡಿಗಳ ಪರ್ಣಶಾಲೆಯ ಭದ್ರಭವನಿಕೆಯ . . . ಓಲಗಶಾಲೆ ಮೆಱೆದುದು ಧರ್ಮನಂದನನ (ಕುವ್ಯಾಆ. ೦-೩೫) ; ಕ್ಷಮೆಯಲ್ಲಿ, ಸತ್ತ್ವದಲಿ, ಶಾಂತಗಾಂಭೀರ್ಯದಲಿ, ಭದ್ರರೂಪದಲಿ, ತನುಕಾಂತಿಯುಲಿ ಮೆರೆದನಾ ಶ್ರೀರಾಮಚಂದ್ರಂ (ಶ್ರೀರಾಮಾ. ೨೬-೬೮೨). ೩. ಅಂದವಾದ; ಚೆನ್ನಾದ. (ನಾ). ೪. ಕ್ಷೇಮ; ಸುಖ ; ಶ್ರೇಯಸ್ಸು : "ಶ್ವಃ(ಸ್ವ)ಶ್ರೇಯಸಂ . . . ಭದ್ರಂ. ಮಂಗಳಂ ಈ ೧೧ ಒಳ್ಪಿತರ್ಕೆ ಪೆಸರ್" (ಹರಾಯು. ೨೦-೦೨೨) : ಮತ್ಕಾವ್ಯಮಂ ಮೆಚ್ಚಿ ಕೇಳ್ವ ಗುಣಂಗೊಳ್ವ ಜನಕ್ಕಮಕ್ಕೆ ವಿಭವಂ ಭದ್ರಂ ಶುಭಂ ಮಂಗಳಂ (ಅಜಪು. ೦೨-೨೬) ; ಸಮಸಂದಿಷ್ಟಾರ್ಥಮಂ ಮಾಟಿಕ್ಕೆ ಕಾಂತನ್ಯಲೋಕಸ್ತುತ ನಿನ್ನೊಳೆಂದು ವಿಜಯಂ ಭದ್ರಂ ಶುಭಂ ಮಂಗಳಂ (ಕುಕ್ಕು. ೮-೬೪) ; ಎಲೈ ಭೂಮಿಪತಿಯೆ ನಿನಗೆ ಭದ್ರವಾಗಲಿ (ಗರಮ. ೪-೨೫). ೫. ಜೋಪಾನ ; ಸುರಕ್ಷಿತ ; ಅಭೇದ್ಯ : ಭದ್ರಮೆನಿಸಿರ್ದ ಕುಸುಮಲಸದ್ರಸಮಂ ಪೀರ್ವ ಪದದೊಳೊಪ್ಪಿತು . . . ಅಳಿನಿಕುರುಂಬಂ (ಗಂಕ. ೨-೬೫); ಉಮ್ಮತ್ತೂರಿನ ಐಶ್ವರ್ಯನಿಧಿ ಭಂಡಾರಗಳು ಭದ್ರವಾಗಿವೆ (ಶ್ರೀರಾಯು. ೦೯೯); ಭದ್ರಾ ಮಾಡಿದಷ್ಟೂ ನಿದ್ರೆ ಬಿಡುವುದಿಲ್ಲ (ಗಾದೆ). ೬. ದೃಢ ; ಗಟ್ಟಿ : ಎಳೆಗಳನ್ನು ಸುಲಿದು ಭದ್ರವಾದ ದಾರಗಳನ್ನಾಗಿ ಮಾಡುತ್ತಾರೆ (ಗೃಪಬಿ. ೬೨); ಕೇಶವರಾಯನಿಗೆ ಸೆರೆಕುಡಿಯಲು ಕಲಿಸಿದುದು ಈ ಸೂರಪ್ಪನೇ ಎಂಬುದು ಸಿದ್ಧಣ್ಣನ ಭದ್ರವಾದ ನಂಬಿಕೆ (ಪಂಗಬಿ. ೬). ೭. ಶುಭಲಕ್ಷಣಗಳುಳ್ಳ ಒಂದು ಜಾತಿಯ ಆನೆ: "ಭದ್ರಃ , ಮಂದಃ, ಮೃಗಃ—ಎಂದಿಂತು ಆನೆಗಳ್ ಮೂಱು ತೆಱನಕ್ಕುಂ" (ಹರಾಯು. ೩೬-೬೨) : ನಯನಿಪುಣಸೂತ್ರಧಾರರ್ ನಿಯಮಿಸುವರ್ ಭದ್ರಮಂದಮೃಗಸಂಕೀರ್ಣಾನ್ವಯದ ನೃಪಕರಿಗಳಂ (ಕುಕ್ಕು. ೨-೫೭). ೪, ೭: ಉನ್ನತವಂಶನುತ್ಸವರೋತ್ತಮ ಭದ್ರಗುಣಾನ್ವಿತಂ ಜಗತ್ಸನ್ನುತದಾನಯುಕ್ತವಿಭವಂ . . . ಎನಗೀತನೆ ನಚ್ಚಿನ ಪಟ್ಟದಾನೆಯೆಂದೇಂ ನೆಱೆ ನಚ್ಚಿ ಮಾಡಿದನೊ ವಿಷ್ಣುನೃಪಂ ಧ್ವಜಿನೀಪತಿತ್ವಮಂ (ಎಕ. VI, ಚಿಕ್ಕಮ. ೦೬೦-೪೩; 1103 ?) ; ಕರಿಯಿಂ ಭದ್ರಯುತಂ ಸರೋಜದೆ ಗುಣಾಧಾರಂ ವೃಷಾಧೀಶನಿಂ ಹರಭಕ್ತಂ . . . ಕುಮಾರಂ ಪುಟ್ಟುವ ನಿಶ್ಚಯಂ (ರಾಜಶೇ. ೪-೨೯). ೮. ದೊಡ್ಡದು : "ಬೃಹತ್ . . . ವಿಪುಳಂ, ಭದ್ರಂ, ವರಿಷ್ಠಂ—ಈ ೧೨ ಪಿರಿದು" (ಹರಾಯು. ೦೦೬-೦೪). ೯. ಬಂಗಾರ ; ಚಿನ್ನ. ೧೦. ಉಪ್ಪರಿಗೆ ; ಮಹಡಿ : ಆಗಳ್ ದ್ರುಪದಂ ಪಚ್ಚೆಯ ನೆಲಗಟ್ಟಿನೊಳಂ . . . ಇಂದ್ರನೀಲದ ಭದ್ರದೊಳಂ . . . ಚಂದ್ರಕಾಂತದ ಚಂದ್ರಶಾಲೆಯೊಳಮೊಪ್ಪುವ ವಿವಾಹಗೇಹಮಂ ಸಮೆಯಿಸಿ (ಪಂಪಭಾ. ೩-೬೪ ವ); ಕಾಂತೆ ಮಾಳಿಗೆಯ ಭದ್ರದ ಬಯಲೊಳಾಡಿದಳು ಪೊಡೆಸೆಂಡನು (ಹತಅ. ೪-೧೨) ; ಮೇಲುಗುಡಿಗಳ ಭದ್ರದುಪ್ಪರಶಾಲೆಗಳ . . . ರಾಜಾಲಯವನನುಕರಿಸಿದರು ಕುಂತೀಕುಮಾರರಿಗೆ (ಕುವ್ಯಾಆ. ೦೦-೪೪). ೧೧. ಪ್ರಮಾಣಕ್ಕೆ ಅನುಸಾರವಾಗಿ ವಿಂಗಡಿಸಿರುವ ಐದು ಪ್ರಕಾರದ ಮನುಷ್ಯಜಾತಿಗಳಲ್ಲಿ ಒಂದು : ವರಾಹಮಿಹಿರನು ಮನುಷ್ಯರನ್ನು ಶರೀರದ ಅಳತೆ ಆಕಾರದ ಮೇಲೆ ಐದು ಜಾತಿಗಳನ್ನಾಗಿ ವಿಂಗಡಿಸುತ್ತಾನೆ : ಹಂಸ, ಶಶ, ರುಚಕ, ಭದ್ರ, ಮಾಲವ್ಯ ಎಂಬುವೇ ಈ ಐದು ಜಾತಿಗಳು (ಶಾರದ. ೫೦೬). ೧೨. ಎತ್ತು ; ಗೂಳಿ ; ವೃಷಭ : "ಉಕ್ಷಾನ್, ಭದ್ರಃ . . . ಗೌಃ— ೯ ಎತ್ತುಗಳ ಹೆಸರು" (ಸಿದ್ಧಾಂತಿ. ೨೯೦). ೧೩. ಒಂದು ಪರ್ವತದ ಹೆಸರು: ಬಳಿಕ ಸುಗಂಧಶಿಖ . . . ಭದ್ರ . . . ಪಾರಿಜಾತವೆಂಬ ಪದಿನಾಲ್ಕು ಕುಲಾಚಲಂಗಳೇ ಪೂರ್ವೋಕ್ತವಿಪುಳವೆಂಬ ಕೀಲಕಪರ್ವತಕ್ಕೆ ಪಶ್ಚಿಮದಿಕ್ಕಿನಲ್ಲಿಹವು (ಬವೇಕ. ೨೦೫). ೧೪. ಉತ್ತಮವಾದ ಪೀಠ; ಸಿಂಹಾಸನ: ವಿದುರ ಧೃತರಾಷ್ಟ್ರರು ಸಹಿತ ಸುರನದಿಯ ಮಗನೈತಂದು ನವಭದ್ರದಲಿ ಕುಳ್ಳಿರ್ದನು ಪಸಾಯಿತ ಸಚಿವಜನಸಹಿತ (ಸಂಭಕ. ೬-೦೭). ೧೫. [ಜ್ಯೋತಿ] ಕರಣಗಳಲ್ಲಿ ಏಳನೆಯದು : ಬವ ಬಾಲವ ಕೌಲವ ತೈತುಲ ಗರಜ ವಣಿಜ ಭದ್ರಂಗಳೆಂಬೇಳು ಚರಕರಣಂಗಳುಂ (೬ವೇಕ. ೩೨೦). ೧೬. ಕತ್ತರಿಸುವುದು ; ಛೇದನ :

"ಅಲಘು ಮದೇಭ ಪುಂಗವ ಸುಮಂಗಳ ಭೇದನ ಭದ್ರವಾಚಕಂ" (ಜಾನಾಕ. ೧೧೧). [ಸಂ.]

**ಭದ್ರಕ** (ಗು). ೧. ಶ್ರೇಯಸ್ಕರವಾದ ; ಮಂಗಳಕರವಾದ. ೨. ಅಂದವಾದ ; ಚೆನ್ನಾದ. ೩. ಪುಣ್ಯಕರವಾದ. (ನಾ). ೪. ಒಂದು ಬಗೆಯ ಮರ; ದೇವದಾರು. ೫. [ಛಂದ] ವರ್ಣಛಂದಸ್ಸಿನಲ್ಲಿ ಪ್ರಸಿದ್ಧವಾದ ಇಪ್ಪತ್ತಾರು ಬಗೆಯ ಛಂದಸ್ಸುಗಳಲ್ಲಿ ಒಂಭತ್ತನೆಯದಾದ ಬೃಹತಿ ಛಂದಸ್ಸಿನ ಒಂದು ವೃತ್ತ: ರೌದ್ರಮಸ್ಸುರಪಾವಕಂ ಕ್ಷುದ್ರಮಲ್ಲದಿರೆ ನಾಮದಿಂ ಭದ್ರಕಂ ಸರಸಿಜಾನನೇ ಸದ್ರಸಂ ಲಯಾಪದ ಕ್ರಮಂ (ಛಂದೋಂಬು. ೨-೧೧೩).

**ಭದ್ರಕವಿದ್ರಾವಣ** = ಚಾಳುಕ್ಯರಾಜನಾದ ಆಹವಮಲ್ಲನ ಒಂದು ಬಿರುದು : ಸಮಸ್ತಭುವನಾಶ್ರಯಂ . . .ಭದ್ರಕವಿದ್ರಾವಣಂ ಕೊಂಕಣ ಭಯಂಕರಂ ಉಭಯಬಲದಲ್ಲಣಂ (ಗದಾಯು. ೬-೭ ವ). [ ಸಂ.]

**ಭದ್ರಕಾಲಿ, ಭದ್ರಕಾಳಿ** (ನಾ). ೧. ಶಕ್ತಿದೇವತೆ; ದುರ್ಗೆ. **ಭದ್ರಕಾಳಿ**: ೧. ನೋಡು ಬರುತಲಿರುವಳದೋ ರುದ್ರಭದ್ರಕಾಳಿಯು ! ದೇವಿ. ಚಂಡಿ. ಚಾಮುಂಡಿ, ರಕ್ತರುಂಡಮಾಲಿಯು ! (ಬಂಂಕಿಬ. ೯-೨). ೨. ದಕ್ಷನ ಯಾಗವನ್ನು ನಾಶಪಡಿಸಲು ಪರಮೇಶ್ವರನು ವೀರಭದ್ರನ ಸಹಾಯಕ್ಕಾಗಿ ಸೃಷ್ಟಿಸಿದ ಸ್ತ್ರೀದೇವತೆ : ಹಸ್ತದ ಹಲಗೆ ಖಂಡೆಯವನಿರದೆ ಝಳಪಿಸುತೆ ತೇರಿಂದಿಳಿದು ಸಲೆ ಭದ್ರಕಾಳಿ ಸಹಿತೆ ಗಂಡುಗಲಿವೀರಂ . . . ಬರುತಿರ್ದಂ (ತಬಪು. ೩೨-೪೩). [ ಸಂ. ಭದ್ರಕಾಲೀ ]

**ಭದ್ರಕಾಳಿ** 'ಭದ್ರಕಾಲಿ' ನೋ.

**ಭದ್ರಕುಂಭ** (ನಾ). ಮಂಗಳಕಲಶ ; ಪೂರ್ಣಕುಂಭ : "ಭದ್ರಕುಂಭಃ. ಪೂರ್ಣಕುಂಭಃ—೨ ಅರಮನೆಯ ಬಾಗಿಲು ಮುಂತಾದವುಗಳಲ್ಲಿ ಮಂಗಳಕರವಾಗಿ ಇರಿಸತಕ್ಕ ಪೂರ್ಣ ಕಲಶಗಳ ಹೆಸರುಗಳು" (ಸಿದ್ಧಾಂತಿ. ೨೪೩). [ ಸಂ. ]

**ಭದ್ರಗಜ** (ನಾ).=ಭದ್ರ ೭ : ಅಂತಿರ್ದ ಸಕಲಶುಭಲಕ್ಷಣಾಕಾರಮುಮತ್ಯಾಯತಕರಮುಮಿಂದ್ರನೀಲಚ್ಛಾಯಮುಂ ಮಹಾಕಾಯಮುಮಪ್ಪ ಭದ್ರಗಜಮಂ ಕಂಡು (ಶಂರಾಪಶು. ೧೧-೧೩೯ ವ) ; ಭದ್ರಗಜ ಅಜಕಾಲದಲ್ಲಿ ಘರ್ಜಿಸಿ ಕೊಂಬುದೇ (ಸರ್ವಪ. ೬೨೦) ; ಅಳಿದುದ್ಯೆ ಸೂಜಿರಸುಗಳು . . . ನುಗ್ಗಾದು ದೊಂಬ್ಯೆಸೂಜು ಭದ್ರಗಜ (ಕುವ್ಯಾದ್ರೌ. ೧೧-೨೦). [ಸಂ.]

**ಭದ್ರತಂತ್ರ** (ನಾ). ಆಗಮಗಳಲ್ಲಿ ಒಂದು ; ವೀರಾಗಮದ ಹದಿಮೂರು ಭೇದಗಳಲ್ಲಿ ಒಂದು : ಪ್ರಸ್ತರತಂತ್ರ . . . ಭದ್ರತಂತ್ರ ವೀರತಂತ್ರವೆಂದು ವೀರಾಗಮದ ಹದಿಮೂಱು ಭೇದಂಗಳು (ಶಿವೀಕ. ೬೦). [ಸಂ.]

**ಭದ್ರತಾಮಂಡಲಿ** (ನಾ). [ರಾಜನೀ] ಪ್ರಪಂಚದ ವಿವಿಧರಾಷ್ಟ್ರಗಳ ನಡುವೆ ಸಂಭವಿಸಬಹುದಾದ ಯುದ್ಧಗಳನ್ನು ತಪ್ಪಿಸಿ ಜಗತ್ತಿನಲ್ಲಿ ಶಾಂತಿಯು ನೆಲಸುವಂತೆ ಮಾಡಲು ಸ್ಥಾಪಿತವಾಗಿರುವ ವಿಶ್ವಸಂಸ್ಥೆಯ ಒಂದು ಅಂಗಸಂಸ್ಥೆ ; ದೇಶದೇಶಗಳ ವಿವಾದಗಳನ್ನು ಚರ್ಚಿಸಿ ನಿರ್ಣಯ ತೆಗೆದುಕೊಳ್ಳುವ ಅಧಿಕಾರವುಳ್ಳ ಸಮಿತಿ : (Security council. ಪತ್ರಿಕೆ.೬೩); ಭದ್ರತಾಮಂಡಲಿಯಲ್ಲಿ ರಷ್ಯ ಖಾಯಂ ಸದಸ್ಯರಾಷ್ಟ್ರವಾಗಿದೆ (ರೂಢಿ). [ಸಂ. ಭದ್ರತಾಮಂಡಲೀ]

**ಭದ್ರತಾಸಮಿತಿ** (ನಾ). = ಭದ್ರತಾಮಂಡಲಿ : ಸಾರ್ವತ್ರಿಕಸಭೆ (General Assembly) ಭದ್ರತಾಸಮಿತಿ (Security Council) . . . ಇವು ವಿಶ್ವಸಂಸ್ಥೆಯ ಆರು ಪ್ರಧಾನಅಂಗಗಳಾಗಿವೆ (ಅಂತಸಂ. ೧೭). [ಸಂ.]

**ಭದ್ರತೆ** (ನಾ). ಈತಿಬಾಧೆಗಳಿಲ್ಲದೆ ಸ್ವಸ್ಥವಾಗಿರುವಿಕೆ ; ಸುರಕ್ಷತೆ; ಕ್ಷೇಮ : ಅನೇಕ ಸಣ್ಣ ಸಣ್ಣ ರಾಷ್ಟ್ರಗಳ ಭವಿಷ್ಯ ಆರ್ಥಿಕ ಬೆಳವಣಿಗೆ ಹಾಗು ಭದ್ರತೆಯು ಇಂತಹ ಆರ್ಥಿಕ ಒಕ್ಕೂಟಗಳ ಸ್ಥಾಪನೆಯನ್ನೇ ಅವಲಂಬಿಸಿರುವುದೆಂದು ಹೇಳಬಹುದು (ಅಂತಸಂ. ೨೪೦). [ಸಂ. ಭದ್ರತಾ]

**ಭದ್ರದಂತಿ** (ನಾ). = ಭದ್ರ ೭ : ಎಣಿಕೆಯಿಲ್ಲದೆ ಕುಂಭಕರ್ಣನು ರಣಕೆ ನೂಕಿದ . . . ಭದ್ರದಂತಿಯನೆಂಟುಕೋಟಿಯನು (ತೊರೆರಾ. ೨೩-೪). [ಸಂ. ಭದ್ರದಂತಿನ್]

**ಭದ್ರದಾರು** (ನಾ). ಒಂದು ಬಗೆಯ ಮರ ; ದೇವದಾರು : "ಚಕ್ರಪಾದಪಃ, ಪಾರಿಭದ್ರಕಃ, ಭದ್ರದಾರುಃ, ದ್ರುಕಿಲಿಮಂ, ಪೀತದಾರು, ದಾರು, ಪೂತಿಕಾಷ್ಠಂ—೭ ದೇವದಾರುವೃಕ್ಷದ ಹೆಸರು" (ಸಿದ್ಧಾಂತಿ. ೧೨೪). [ಸಂ.]

**ಭದ್ರಪದೆ** (ನಾ). [ಜ್ಯೋತಿ] ಪ್ರಸಿದ್ಧವಾದ ಇಪ್ಪತ್ತೇಳು ನಕ್ಷತ್ರಗಳಲ್ಲಿ ಇಪ್ಪತ್ತೈದು ಮತ್ತು ಇಪ್ಪತ್ತಾರನೆಯ ನಕ್ಷತ್ರಗಳು ; ಪೂರ್ವಾಭಾದ್ರೆ ಮತ್ತು ಉತ್ತರಾಭಾದ್ರೆ ನಕ್ಷತ್ರಗಳು. [ಸಂ. ಭದ್ರಪದಾ]

**ಭದ್ರಪರ್ಣೆ** (ನಾ). ಒಂದು ಬಗೆಯ ಸಸ್ಯ : "ಗಂಭಾರೀ, ಸರ್ವತೋಭದ್ರಾ, ಕಾಶ್ಮರೀ, ಮಧುಪರ್ಣಿಕಾ, ಶ್ರೀಪರ್ಣೀ, ಭದ್ರಪರ್ಣೀ, ಕಾಶ್ಮರ್ಯಃ—೭ ಶೀವನೆಯ ಮರದ ಹೆಸರು" (ಸಿದ್ಧಾಂತಿ. ೧೨೦): "ಭದ್ರಪರ್ಣೀಗುಳ್ಳ (ಗೂಳ?)" (ಶಿಶಂ. ೧೧೧). [ಸಂ. ಭದ್ರಪರ್ಣೀ]

**ಭದ್ರಪೀಠ** (ನಾ). ೧. ಶ್ರೇಷ್ಠವಾದ ಪೀಠ ; ಸಿಂಹಾಸನ : "ಸಿಂಹಾಸನಂ ಭದ್ರಪೀಠಂ" (ಮಗಾ. ೬೮-೧). ೨. (ಪ್ರತಿಮೆಗಳ ಸ್ಥಾಪನೆಯಲ್ಲಿ) ಒಂದು ವಿಶೇಷ ರೀತಿಯ ಪೀಠ,-ಆಸನ : ಆ ಶಿವಾರ್ಚನೆಗುಪಯುಕ್ತವಾಗಿ ಅನಂತಪೀಠ ಕಮಠಪೀಠ . . . ಭದ್ರಪೀಠ ಭಾವನೆಯೊಂದುಪಕಲ್ಪಿತಮಾದ ದಿವ್ಯಮಂಟಪಮಧ್ಯಗತ ಸಿಂಹಾಸನಕ್ಕೆ (ಶಿವೀಕ. ೧೧೪) ; 'ಮಯಮತ' ಎಂಬ ಗ್ರಂಥದಲ್ಲಿ ಪ್ರತಿಮೆಗಳಿಗೆ ಬೇಕಾದ ಪೀಠಗಳು ಅನೇಕ ವಿಧವೆಂದೂ, ಅವುಗಳಲ್ಲಿ ಮುಖ್ಯವಾದುವು ಭದ್ರಪೀಠ, ಪದ್ಮಪೀಠ . . . ಶ್ರೀಕಾಮ್ಯವೆಂದೂ ಹೇಳಿದೆ (ಭಾರತ. ೩೦೭). [ಸಂ.]

**ಭದ್ರಬಲೆ** (ನಾ). ಒಂದು ಬಗೆಯ ಸಸ್ಯ; ಸಾರಣೆ ಗಿಡ : "ಸಾರಣೀ, ಪ್ರಸಾರಣೀ, ಕಟುಂಭರಾ, ರಾಜಬಲಾ, ಭದ್ರಬಲಾ — ೫ ಕಿರಿಯ ಪಸಾರಣೆ ಗಿಡ, ಸಾರಣೇಗಿಡ" (ಸಿದ್ಧಾಂತಿ. ೧೪೭). [ಸಂ. ಭದ್ರಬಲಾ]

**ಭದ್ರಬಾಹು** (ನಾ). [ಜೈನ] ಐದನೆಯ ಶ್ರುತಕೇವಲಿ; ಚಂದ್ರಗುಪ್ತನ ಜೊತೆಯಲ್ಲಿ ಉತ್ತರಭಾರತದಿಂದ ಶ್ರವಣಬೆಳಗೊಳಕ್ಕೆ ಬಂದನೆಂದು ಹೇಳಲಾದ ಜೈನಮುನಿ : ಗೋವರ್ಧನ ಭದ್ರಬಾಹು ವಿಶಾಖ ಪ್ರೋಷ್ಠಿಲ ಕೃತ್ತಿಕಾರ್ಯ್ಯ . . . ಮಹಾಪುರುಷಸನ್ತತಿಸಮವದ್ಯೋತಿತಾನ್ವಯ ಭದ್ರಬಾಹುಸ್ವಾಮಿನಾ (ಎಕ. II, ೧-೪; ಸು. 600) ; ಇಂತು ಪದಿನಾಱುಂ ಕಂಡ ಕನಸುಗಳ ಫಲಂಗಳಂ ಸಂಪ್ರತಿ ಚಂದ್ರಗುಪ್ತಮಹಾರಾಜಂಗೆ ಭದ್ರಬಾಹುಭಟ್ಟಾರರ್ ಪೇೞ್ದು (ವಡ್ಡಾರಾ. ೬೭-೧೮). [ಸಂ.]

**ಭದ್ರಮಂಟಪ** (ನಾ). ೧. ಮದುವೆ ಮುಂತಾದ ಮಂಗಳಕಾರ್ಯಗಳನ್ನು ನಡೆಸುವ ಮಂಟಪ; ಶುಭಕಾರ್ಯಕ್ಕಾಗಿ ಕಟ್ಟಿದ ಮಂಟಪ: ಪಾಂಚಾಲೆ ಪೊಕ್ಕಳು ಭದ್ರಮಂಟಪಶಾಲೆಯನು (ಕುವ್ಯಾಆ. ೧೪-೧); ದಂಡಿಗೆಯನಿಳಿದನಾರತಿಗಳ ನಿವಾಳಿಯಿಂ ಚಂದ್ರಹಾಸಂ ಭದ್ರಮಂಟಪದೊಳು (ಜೈಮಿಭಾ. ೩೦-೧೪): ಆನಂತರಮಮಂಬೆರಸಲ್ಲಿಂ ಸಲ್ಲೀಲೆಯಿಂದೇಳ್ತಂದು ಭದ್ರಮಂಟಪದ ಮುಂದಣ ಮುತ್ತಿನ ಮೊಗಸಾಲೆಯೊಳ್ . . . ಓಲಗಂಗೊಟ್ಟು (ರಾಜಶೇ. ೧೩-೬೦ ವ). ೨. ಅತ್ಯುತ್ತಮವಾದ ವಿಶ್ರಾಂತಿಗೃಹ : ಕರುಮಾಡ ಭದ್ರಮಂಟಪ ರಮ್ಯಭವನದೊಳುರುತರನಾಟ್ಯಶಾಲೆಗಳು . . . ಎಸೆಗು (ವರ್ಧಕ. ೧-೨೩). [< ಸಂ. ಭದ್ರಮಂಡಪ]

**ಭದ್ರಮುಸ್ತಕ** (ನಾ). ಒಂದು ಬಗೆಯ ಔಷಧಿಮೂಲಿಕೆ ; ಕೊನ್ನಾರಿಗೆಡ್ಡೆ: "ಭದ್ರಮುಸ್ತಕಃ, ಗುಂದ್ರಾ — ೨ ಕೆಂಪುಭಾಯೀ ಭದ್ರಮುಸ್ತಗಳು. ದೊಪ್ಪಾಸೇ ಭದ್ರಮುಸ್ತಗಳು" (ಸಿದ್ಧಾಂತಿ. ೧೪೯). [ಸಂ.]

**ಭದ್ರಮುಸ್ತೆ** (ನಾ). = ಭದ್ರಮುಸ್ತಕ : "ಮುಸ್ತಕಃ, ಕುರುವಿಂದಃ, ಭದ್ರಾ, ಜಲದಃ –ಈ ೪ ಭದ್ರಮುಸ್ತೆ" (ಹಲಾಯು. ೦೦೨–೪೬೮); ಭದ್ರಮುಸ್ತೆ . . . ತಾವರೆಬಳ್ಳಿ ಇವಿಷ್ಟನ್ನು ಆಡಿನ ಹಾಲಿಂದ ಅರೆದು ಕುಡಿಯ ಕೊಡಿಸಲು ಕತ್ತೆ ಮೊದಲಾದುವುಗಳ ವಿಷ ಪರಿಹರವಹುದು (ವೈದ್ಯಸಾ. II. ೨೦೩); ಕೋಷ್ಟಂ ಪದ್ಮಕಂ ಕರ್ಪೂರ ಬಾಳದ ಬೇರು ಪುಷ್ಕರಂ ಭದ್ರಮುಸ್ತೆಯಿವಂ ಸರಿಗೊಂಡು (ಕಾಮಶಾ. ೨೬೬). [ಸಂ. ಭದ್ರಮುಸ್ತಾ]

**ಭದ್ರಯವ** (ನಾ). ಕೊಡಸಿಗೆಯ ಹಣ್ಣು : "ಕಳಿಂಗಂ, ಇಂದ್ರಯವಂ, ಭದ್ರಯವಂ . . . ಕೊಡಶಿನ ಹಣ್ಣಿನ ಹೆಸರುಗಳು" (ಸಿದ್ಧಾಂತಿ. ೦೨೭). [ಸಂ.]

**ಭದ್ರಯ್ಯ** (ನಾ). ಒಬ್ಬಾತನ ಹೆಸರು : ಮತ್ತಲೆರಡು ಸ್ಥಾನಮಂಗೊಟ್ಟಿಗಡಿಯ ಭದ್ರಯ್ಯನ ಕಲ ಕನ್ನಯ್ಯ ಕಟ್ಟಿಸಿದ (ಎಕ. VIII. ಸೊರಬ. ೪೪–೧೦; 971). [ಭದ್ರ + ಅಯ್ಯ$_{61}$]

**ಭದ್ರಲಕ್ಷಣ** (ನಾ). ೧. ಮಂಗಳಕರವಾದ ಗುರುತು,– ಚಿಹ್ನೆ : ಶೂದ್ರರೈಸಿರಿ ವೇಶಿಯರುಯಿಹ ಭದ್ರಲಕ್ಷಣವವರ ಕೇರಿಲಿ ವಿದ್ರುಮದ್ವಾರಲಾಯಂಗಳು (ಜಿತ್ರಪು. ೨೦–೨೪). ೨. ಭದ್ರವೆಂಬ ಜಾತಿಗೆ ಸೇರಿದ ಶ್ರೇಷ್ಠವಾದ ಆನೆಯ ಗುರುತು, – ಚಿಹ್ನೆ. ೧, ೨: ದಾನದಿಂದೊಡಂಬಟ್ಟಿರೆ ಭದ್ರ ಲಕ್ಷಣಗುಣಾನ್ವಿತನಪ್ಪನ ಗಂಧವಾರಣಂ ಪುಟ್ಟೆ ನರೇಂದ್ರ ರಾಜ್ಯಮುದಿತೋದಿತಮಾಹವಮಲ್ಲದೇವನಾ (ಗದಾಯು ೦-೦೦); ವರದಾನೋನ್ನತ ಭದ್ರಲಕ್ಷಣಪದಂ ಪದ್ಮಾನುಷಂಗಿತ್ವಮಾಗಿರೆ ಮೆಂಪಚ್ಚರಿಯಾದ ದೇವಗಣಪಂ ರಕ್ಷಿಕ್ಕೆ ಭೂಚಕ್ರಮಂ (ಜಗ. ೦–೩). ೩. ಉಪ್ಪರಿಗೆಯಂ ಮನೆಯ ಲಕ್ಷಣ. – ಸ್ವರೂಪ. ೧, ೩ : ಅದು ಬೀರಸಿರಿಯ ಕರುಮಾಡದ ತೆಜದಿಂ ಭದ್ರಲಕ್ಷಣೋಪೇತಂ (ತಂಪ್ರಪು. ೯-೦೦೦). [ಸಂ.]

**ಭದ್ರವಾಹು** (ನಾ).=ಭದ್ರಬಾಹು : ಶ್ರೀ ಭದ್ರವಾಹುಸಚಂದ್ರಗುಪ್ತ ಮುನೀನ್ದ್ರಯುಗ್ಮದಿನೊಪ್ಪೆ (ಎಕ.II. ೩೧-೦; ಸು. 650). [<ಭದ್ರಬಾಹು]

**ಭದ್ರಶಾಲ, ಭದ್ರಶಾಳ** (ನಾ). ೧. ಅರಮನೆ ಮೊದಲಾದ ದೊಡ್ಡ ಭವನಗಳಲ್ಲಿರುವ ಶ್ರೇಷ್ಠವಾದ ಭಾಗ ; ತೊಟ್ಟಿ. ೨. [ಜೈನ] ಮೇರುಪರ್ವತದ ತಳಭಾಗದಲ್ಲಿರುವ ಭದ್ರಶಾಲ. ನಂದನ. ಸೌಮನಸ ಮತ್ತು ಪಾಂಡುಕವೆಂಬ ನಾಲ್ಕು ವನಗಳಲ್ಲಿ ಒಂದು : ನಿಜಪರಿಜನಕೆಲ್ಲಂ ಪೊಗಟುತ್ತಂ ಭದ್ರಶಾಲದಿಂ ತಗುಳ್ದು ಪಾಂಡುಕವನಂಬರಮುವಜಿ ನೆಲೆಯೊಳಿರ್ದ ಕೃತ್ರಿಮಚೈತ್ಯಾಲಯಂಗಳಂ . . . ಅರ್ಚಿಸಿ (ಆದಿಪು. ೨–೩೨ ವ); ಮಂದರಶೈಲಮಂ ದಿವಿಜನಾಯಕನೆಯ್ತರೆ ಭದ್ರಶಾಲದಿಂ . . . ಆ ಗಿರಿರಾಜವಿಲಾಸಮಟ್ಟೆಯುಂ ತಂದುದು (ಶಾಂತಿಪು. ೩–೨). **ಭದ್ರಶಾಳ** : ೨. ಘನತರಭದ್ರಶಾಳದಿನಿನಿತ್ತೆಡೆಮಾಡದೆ ನಂದನಕ್ಕೆ ನಂದನದಿನದೊಂದು ಬೇಗದೊಳೆ ಸೌಮನಸಕ್ಕೆ ತಗುಳ್ದು (ತಂಪ್ರಪು. ೦೨-೦೦೯). [ ಸಂ. ಭದ್ರಶಾಲಾ ]

**ಭದ್ರಶಾಲೆ** (ನಾ). =ಭದ್ರಶಾಲ ೧ : ಜಿನಪೂಜೆಗೈದಾತ್ಮಭೋಗದ ಮಾಡಮೋಹನದ ಶೃಂಗಾರಾಂಗನಾಗಿ ಮನೆಯೊಳಗಣ ಭದ್ರಶಾಲೆಯ ಸಿಂಹಾಸನದಲ್ಲಿ ಕುಳಿತನೆಯ್ತಂದು (ಶಕಚ. ೪೨–೩). [ ಸಂ. ಭದ್ರಶಾಲಾ ]

**ಭದ್ರಶಾಳ** 'ಭದ್ರಶಾಲ' ನೋ.

**ಭದ್ರಶ್ರೀ** (ನಾ). ಗಂಧದ ಮರ; ಚಂದನವೃಕ್ಷ: 'ಗಂಧಸಾರಃ, ಮಲಯಜಃ, ಭದ್ರಶ್ರೀಃ, ಚಂದನಃ –೪ ಚಂದನದ ಗಿಡ" (ಸಿದ್ಧಾಂತಿ. ೨೦೮). [ಸಂ.]

**ಭದ್ರಹಸ್ತಿ** (ನಾ). ಶುಭಲಕ್ಷಣಗಳುಳ್ಳ ಒಂದು ಜಾತಿಯ ಆನೆ : ಎಂಭತ್ತುನಾಲ್ಕುಲಕ್ಕೆ ಗಂಧಸಿಂಧುರಂಗಳಪ್ಪ ಭದ್ರಹಸ್ತಿಗಳುಂ (ಆದಿಪು. ೦೩–೩ ವ). [ಸಂ. ಭದ್ರಹಸ್ತಿನ್]

**ಭದ್ರಾಂಗಿ** (ನಾ). ಸುಂದರವಾದ ದೇಹವುಳ್ಳವಳು ; ಮಂಗಳಾಂಗಿ : ರುದ್ರಾಕ್ಷಿಯ ಭದ್ರಾಂಗಿಗೆ ವಿಭೂತಿಯ ವಿಳಾಸನಿಧಿಗೆ . . . ಪಶುಪತಿಯ ಪಟ್ಟದ ಮಹಾದೇವಿಗೆ (ಗಿಂಕ. ೩–೯೦ ವ). [ಸಂ. ಭದ್ರಾಂಗೀ]

**ಭದ್ರಾಕರಣ** (ನಾ). ಕ್ಷೌರ ; ಮುಂಡನ : "ಕ್ಷೌರಂ. ಭದ್ರಾಕರಣಂ. ಮುಂಡನಂ, ವಪನಂ–ಈ ೪ ಬೋಳಿಸುಹ" (ಹಲಾಯು. ೦೯೯–೩೬); ಭದ್ರಾಕರಣ ಮಾಡಿಕೊಂಡರೆ ಭದ್ರವಾದೀತೇ ? (ಗಾದೆ). [ಸಂ.]

**ಭದ್ರಾಕಾರ** (ನಾ). ೧. ಭವ್ಯವಾದ ಆಕಾರ,–ಸ್ವರೂಪ. ೨. ಭವ್ಯವಾದ ಆಕಾರವುಳ್ಳವನು : ಭದ್ರಾಕಾರನುಂ ಕಾಂತಿಮಂತನುಮಾಭಿರೂಪನುಮಾದ ನೀತಂಗಿನಿತು ವಿಭವಮುಮೆಂತಾದುದು (ಶಾಂತಿಪು. ೯-೮೩ ವ); ಭದ್ರಾಕಾರನೀತಂಗಳುಕುವುದು ಧನು (ಕುಮಾರ. ೦೩–೦೪). ೩. 'ಭದ್ರ' ಎಂಬ ಆನೆಯ ಲಕ್ಷಣ. ೧, ೩ : ಕುಂಭಕುಚದಿಂದೆ ಜವ್ವನದ ಮದದಿಂದೆ ಭದ್ರಾಕಾರದಿಂದೆ . . . ಎಸೆವ ಪೆಣ್ಣಾನೆಗಳ ಮೇಲೈತಂದರವರಾಯುತಂಗಳಿಂದೆ (ಜೈಮಿಭಾ. ೦೬–೩). [ಸಂ.]

**ಭದ್ರಾಕ್ಷ** (ನಾ). ೧. ರುದ್ರಾಕ್ಷಿಮರದ ಜಾತಿಗೆ ಸೇರಿದ ಒಂದು ಬಗೆಯ ಮರ : ರುದ್ರಾಕ್ಷ ಭದ್ರಾಕ್ಷ . . . ಶಿರೀಷಾದಿ ಲತಾಗೃಹಂಗಳುಂ (ವಿವೇಕ. ೨೦೦). ೨. ಒಂದು ಬಗೆಯ ಉತ್ತಮಜಾತಿಗೆ ಸೇರಿದ ಕುದುರೆ : ಸತ್ವಯುತಂ . . . ಅತಿಸತ್ವನರತ್ನಾಸಿಕಂ ಹಯಂ ಭದ್ರಾಕ್ಷಂ (ಅಶ್ವಶಾ. ೩-೪೦). [ಸಂ.]

**ಭದ್ರಾಕ್ಷಿ** (ನಾ). =ಭದ್ರಾಕ್ಷ ೧. ಭದ್ರಾಕ್ಷಿಮರ, ಜೇನುಮರ, ರುದ್ರಾಕ್ಷಿಮರ (ವೃಕ್ಷಶಿ. ೪೧–೮೦೦) : ಸಟ್ಟುಗದ ಬೀಜವನ್ನು ಕೆಲವರು ಭದ್ರಾಕ್ಷಿಯೆಂದೂ ಕರೆಯುವುದುಂಟು (ಹಸುಕೊ. ೬೨). [< ಸಂ. ಭದ್ರಾಕ್ಷ]

**ಭದ್ರಾತಕ** (ನಾ). ಒಂದು ಬಗೆಯ ಗೆಡ್ಡೆ ; ಭದ್ರಮುಸ್ತೆ : "ಮುಸ್ತಕಂ ಮುಸ್ತೆ ಭದ್ರಾತಕಂ" (ಮಂಗರಾ. ೪೦-೩೬). [ ? ]

**ಭದ್ರಾರಮಣ** (ನಾ). ಗೋವುಗಳ ಪ್ರೀತಿಗೆ ಪಾತ್ರನಾದವನು ; ಕೃಷ್ಣ : ನಿದ್ರಾರಹಿತ ಭದ್ರಾರಮಣ ನಿರ್ವಿಕಾರ ಚಿದ್ದೇಹ ಸರ್ವಕಾಲ ಸುಂದರಸಾರ (ವಿದಾಕ್ಷ. ೦೯ ೦). [ಸಂ.]

**ಭದ್ರಾಸನ** (ನಾ). ೧. =ಭದ್ರಪೀಠ ೧ : "ಸಿಂಹಾಸನಂ. ಭದ್ರಾಸನಂ–ಈ ೨ ಸಿಂಹಾಸನಂ" (ಹಲಾಯು. ೭೦–೨೬೯); ನೃಪೇಂದ್ರಂ ಭದ್ರಾಸನಮನಿಕ್ಕಲ್ವೇಳ್ಕೆ ಕುಳ್ಳಿರ್ದು ವಿಜಯಾರ್ಧಕುಮಾರಾ (ಆದಿಪು. ೦೩-೦೯ವ); ಗಿರಿಪತಿಯುಂ ಸತಿಯುಂ ವರನುನಿಗತಿವಿನತರಾಗಿ ಭದ್ರಾಸನದೊಳ್ ಭರದಿಂ ಕುಳ್ಳಿರಿಸುತ್ತುಂ (ಗಿಂಕ. ೪–೩೯); ಕುಳ್ಳಿರ್ದಪನಂದುರು ಭದ್ರಾಸನದೊಳಗಾದರದಿಂ ಮನುರಾಜನತುಳನತಸುರಭೂಜಂ (ಹರಿಶ್ಚಂ. ೨–೨೮). ೨. ಧ್ಯಾನ ಮಾಡುವಾಗ ಕುಳಿತುಕೊಳ್ಳುವ ಒಂದು ವಿಶಿಷ್ಟ ಭಂಗಿ : (೬). [ಸಂ.]

**ಭದ್ರಿಸು** (ಕ್ರಿ). ೧. ಕ್ಷೌರಮಾಡು ; ಮುಂಡನ ಮಾಡು : "ಭದ್ರಿಸು_ಮುಂಡನಕ್ರಿಯಾಯಾಂ" (ಕಮಾ). ೨. ಸಂರಕ್ಷಿತವಾಗಿರುವಂತೆ ಮಾಡು : ವನವಾಸದಲ್ಲಿ ಪಿಂದೈತಂದ ಸಕಲಾನುಜನವ ದೀಕ್ಷಿತರ . . . ಅನುವಿನಿಂದಿರಿಸಿ ಭದ್ರಿಸಿ (ಲಕ್ಷ್ಮೀಶಾ. ೦-೪). ೩. (ಆಲಂ) ಹೋಗಲಾಡಿಸು; ನಿವಾರಿಸು : ಮುದ್ರಿಸೋ ಮಂದರವನಹಿಯುಲಿ ಭದ್ರಿಸೋ ಭಯರಸವ ನೆನುತುಬ್ಬಿದ್ದುದದ್ಭುತಸಿಂಹನಾದದಲುಭಯಬಲನಿಕರ (ಶಿಶಾಗ. ೮-೬-೦೬). [ ಭದ್ರ + – ಇಸು$_3$ ]

**ಭದ್ರೆ** (ನಾ). ೧. ಮಂಗಳರೂಪಳಾದವಳು ; ಮಂಗಳಾಂಗಿ : ಭದ್ರೆ ನೀನು ಭಯಾವೃತಳಾಗಿದ್ದೀಯೆ (ಶಾಂತಲಾ. ೦೯೩). ೨. ಹಸು ; ಆವು: 'ಭದ್ರಾರಮಣ' ಪರಾ. ೩. ದೇವಗಂಗೆ. ೪. ಕರ್ನಾಟಕದಲ್ಲಿರುವ ಒಂದು ನದಿಯ ಹೆಸರು : ವರಾಹಪರ್ವತದ ಗಂಗಾಮೂಲದಲ್ಲಿ ಉಗಮಿಸುವ ತುಂಗಾ ಮತ್ತು ಭದ್ರಾ ನದಿಗಳು . . . ಕೂಡಲಿಯ ಬಳಿ ಒಂದಾಗುತ್ತವೆ (ಕಪಕೋ. IX. ೩೦೩). ೫. = ಭದ್ರಮುಸ್ತಕ : "ಮುಸ್ತಕಃ, ಕುರುವಿಂದಃ. ಭದ್ರಾ, ಜಲದಃ – ಈ ೪ ಭದ್ರಮುಸ್ತೆ" (ಹಲಾಯು. ೦೦೨–೪೬೮). ೬. [ಜ್ಯೋತಿ] ಹನ್ನೊಂದು ಕರಣಗಳಲ್ಲಿ ಏಳನೆಯದು : ಕರಣವೇಕಾದಶಗಳಲಿ ಚರಕರಣ ಶಕುನಿ ಚತುಷ್ಪ . . .

ಭದ್ರೆಯೆನಿಸುವ ಕರಣವಾರು ಶುಭಂಗಳು (ಗಗಚಿ. ೪-೬೦). ೭. ಚಾಂದ್ರಮಾಸದಲ್ಲಿ ಉಭಯಪಕ್ಷಗಳ ಎರಡು, ಏಳು ಮತ್ತು ಹನ್ನೆರಡನೆಯ ತಿಥಿಗಳು ; ಬಿದಿಗೆ, ಸಪ್ತಮಿ ಮತ್ತು ದ್ವಾದಶಿತಿಥಿಗಳು : ನಂದೆಯುಂ ಭದ್ರೆಯುಂ ಒಂದಾಗಿ ಅರ್ಥಿಸಲು ಆ ದಿನ ತಿಥಿಗೆ ಸವನಾಗೆ ಗ್ರಹಣ ತಾ ಮುಂದೆ ಬಂದಕ್ಕು (ಸರ್ವಜ್ಞ. ೧೫೬೦); ೩೦ ತಿಥಿಗಳಲ್ಲಿ ನಂದಾ, ಭದ್ರಾ, ಜಯಾ, ರಿಕ್ತಾ, ಪೂರ್ಣಾ ಎಂಬ ಸಂಕೇತವು ಪಾಡ್ಯ ಮೊದಲು ಪಂಚಮಿವರೆಗೂ ಆಗುವುವು (ಹಕಾರ. ೬-೨೮ ಟೀಕು). ೩. ಇನ್ನೂ ಅನೇಕ ಬಗೆಯ ಸಸ್ಯಗಳಿಗೂ ದೇವತೆಗಳಿಗೂ ಈ ಹೆಸರುಂಟು. [ಸಂ. ಭದ್ರಾ]

**ಭಪ** (ನಾ). ನಕ್ಷತ್ರಗಳ ಅಧಿಪತಿ ; ಚಂದ್ರ : ಗಗನ ಮಂದಿರದಲ್ಲಿಯ ರೌಪ್ಯಘಂಟಿಯೋ ಮತ್ತತಿಕುಂದಪುಷ್ಪಕೃತತುಂಡಳಿತಾಂಗಜಚಾಪಮೋ ಭಪಂ (ಹರಿಶ್ಚಂ. ೨-೫೭). [ಸಂ.]

**ಭಪ್ಪರೆ** ' ಬಾಪ್ಪುರೆ ' ನೋ.

**ಭಬ್ಯ** (ಗು). ಶ್ರೇಷ್ಠವಾದ : ಭಬ್ಯ ಶ್ರಾವ್ಯ ಕಾಬ್ಯ ನಾಟಕಾಖ್ಯಾಯಿಕಾಖ್ಯಾನಾದಿ ಬ್ಯಾಖ್ಯಾನ ವ್ಯಾಪಾರಾ × × × ತನಬ್ಯ ಶ್ರೀಹರ್ಷ (ಎಕ. XI, ದಾವಣ. ೪೦-೬೭; 1148). [<ಸಂ. ಭವ್ಯ]

**ಭವ್ಸನ್** (ನಾ). ಒಂದು ಅನುಕರಣ ಶಬ್ದ : ಅಱಿಯದೆ ಬಂದೆವು ಕಿವ್ಸನ್ ಪರಿಹರಿಸಯ್ಯ ಭ[ಪಾಠಾಂ. ಭಿ]ವ್ಸನ್ (ಶಬರಂದ. ೨-೭೭ ಪಲ್ಲವಿ). ' ಕಿವ್ಸನ್ ' ಪರಾ.

**ಭಯ** (ನಾ). ೧. ಹೆದರಿಕೆ ; ಅಂಜಿಕೆ ; ಭೀತಿ : " ಆತಂಕಃ . ಭಯಂ . . . ಸಾಧ್ವಸಂ – ಈ ೬ ಭಯಂ " (ಹಲಾಯು. ೦೨೦-೪೦) ; ಭಯಮಱಿಯದ ಕಲಿಯುಂ ಚಾಗಿಯುಮೆನಿಸದೆ ನಾಡೆ ಲೋಭಿಯುಂ ಪಂದೆಯುಮಾಗಿಯೆ ಬಾಟ್ವಂಗಲ್ಲದೆ ಸೂಳೆಯ ಕಣ್ ಪಾಸಗೆಯ ಕಣ್ಣುಮೇನು ಜಾಗುಗುಮೇ (ಕಂಕಾ. ೬-೭೩) ; ಅನೃತಂ ಲೋಭಂ ಭಯಮೆಂಬಿನಿತುಂ ನೀನಿರ್ದ ನಾಡೊಳಿರ್ಕುಮೆ ರವಿನಂದನ ನನ್ನಿ ಚಾಗಮಣ್ಮೆಂಬಿನಿತರ್ಕಂ ನೀನೆ ಮೊತ್ತಮೊದಲಿಗನಾವಯ್ (ಗದಾಯು. ೩-೦೭); ಭಯದಿಂದ ಭಕ್ತಿ, ನಯದಿಂದ ಯುಕ್ತಿ (ಗಾದೆ). ೨. ಭೀತಿಯನ್ನುಂಟುಮಾಡುವಂತಹುದು ; ಭಯಾನಕವಾದುದು : ಮುನ್ನಿನವರು ಹೋದ ದಾರಿ ಭಯ ಕಾಂತಾರಣ್ಯ (ಬಸವ. ೦೪೭). ೩. [ಕಾವ್ಯಮೀ] ಸ್ಥಾಯಿಭಾವಗಳಲ್ಲಿ ಒಂದು; ಭಯಾನಕ ರಸದ ಸ್ಥಾಯಿಭಾವ : "ರತಿಃ . . . ಭಯಂ, ಜುಗುಪ್ಸಾ, ವಿಸ್ಮಯಃ, ಶಮಃ–ಈ ೯ ಸ್ಥಾಯಿಭಾವಂಗಳ್" (ಹಲಾಯು. ೦೩-೪೦); ರತಿಪರಿಹಾಸಂ . . . ವಿಸ್ಮಯಾಶಯುತ್ತಂ ಪ್ರತಿನಿಯತ ಸ್ಥಾಯಿಭಾವಮಿವು ಶಾಮಕ್ಕುಂ (ಕಾವ್ಯಾವ. ೬೪೪); ರತಿ ಹಾಸ . . . ಭಯ . . . ಶೃಂಗಾರಾದಿ ನವರಸಂಗಳಿಗೆ ಬೀಜಭೂತಂಗಳಾದ ಸ್ಥಾಯಿಭಾವಂಗಳು: (ಬಿವೇಕ. ೨೨೭) ; ಈ ಸ್ಥಾಯಿಭಾವಗಳು ಎಂಟು (ಅಥವಾ ಒಂಭತ್ತು) ಅವು ಯಾವುವೆಂದರೆ:– ರತಿ . . . ಭಯ, ಜುಗುಪ್ಸೆ (ಅಸಹ್ಯತೆ), ವಿಸ್ಮಯ (ಆಶ್ಚರ್ಯ), ಶಮ (ಶಾಂತಿ) (ಕೈಬಿಡಿ. ೦೯೭). ೪. [ನಾಟ್ಯ] ಮೂವತ್ತಾರು ದೃಷ್ಟಿಭೇದಗಳಲ್ಲಿ ಒಂದು; ಭಯಾನಕರಸಕ್ಕೆ ಸ್ಥಾಯಿಭಾವವಾದ ಅಂಜಿಕೆಯನ್ನು ಅಭಿನಯಿಸುವ ದೃಷ್ಟಿ : ಅಶಿಗಡಿಗೆಯುರ್ವ ಮುಗುಳ್ವಾ ಸಡಗರದಿಂ ಭೀತಿಸುತ್ತೆ ಚಲಸಂಚಿತ್ತುಂ ಬಿಡದಾಲಿ ಬೀಳ್ವ ತೆಱನಿಂ ಗಡಣಿಸಿದೊಡೆ ಭಯಮೆನಿಪ್ಪ ನೋಟಮದಕ್ಕುಂ (ಬಾಸ್ಯಸಂ. ೩-೨೩).

**ಭಯ ಭಕ್ತಿ**=೧. ಹೆದರಿಕೆ ಮತ್ತು ಶ್ರದ್ಧೆ : ಅವಳು ಸೋಮವಾರ ವ್ರತವನ್ನು ಭಯ ಭಕ್ತಿಗಳಿಂದ ಆಚರಿಸುತ್ತಿದ್ದಾಳೆ (ರೂಢಿ). ೨. ಹೆದರಿಕೆಯಿಂದ ಕೂಡಿದ ಶ್ರದ್ಧೆ : ಭಯಭಕ್ತಿಯಿಂದ ತೋಱುವೆ ಮನದಲ್ಲಿ ವಂಚನೆಯಿಲ್ಲದೆ ಭಾವಶುದ್ಧಪೂಜೆಯ ಮಾಡುವೆ (ಬಸವ. ೬೩೪) ; ಅಂಭೋಜಾಯತಾಕ್ಷನ ಖ್ಯಾತಿಯನು ಗಾಂಗೇಯ ಭಯಭಕ್ತಿಯಲಿ ಗೆಲಿದನು ವರಸುದರ್ಶನವ (ಕುಮಾವ್ಯಾ. ೬ ಸೂಚನೆ). [ಸಂ.]

**ಭಯಂಕರ** (ಗು). ೧. ಭಯವನ್ನುಂಟು ಮಾಡುವ ; ಉಗ್ರವಾದ ; ಘೋರವಾದ : ಕುಮುದವನಾಭಿರಾಮ ಪರಚಕ್ರಭಯಂಕರಶೀಲೆ ವಾಹಿನೀರಮಣಸಮೃದ್ಧಿಸಲ್ಲಲಿತೆ ರಾಜ್ಯರಮಾವಧು ಮಂದು ಲೀಲೆಯಿಂ (ಕೃಷ್ಣಕ. ೪-೮೬); ಭೀಕರ ಕಾಡು, ಭಯಂಕರ ಗರ್ಜನೆ (ಕುದ್ರಮಾ. ೨೦-೦೪). ೨. ಅತಿಶಯವಾದ ; ಮೇಲುಮಟ್ಟದ ; ಹೆಚ್ಚಾದ : ಭಯಂಕರ ಭ್ರಮೆಗೊಂಡಿತ್ತು ಮಂತ್ರತಂತ್ರ (ಬಸವ. ೮೦); ಭಯಂಕರ ಸಂತೋಷವೊಂದು ಅವರ ಮನಸ್ಸಿನಲ್ಲಿ ನರ್ತಿಸುತ್ತಿತ್ತು (ಮಹಾಬ. ೧೬). (ನಾ). ೩. ಭಯವನ್ನುಂಟುಮಾಡುವಂತಹುದು ; ಹೆದರಿಕೆಯನ್ನುಂಟುಮಾಡುವಂತಹುದು : ಬವರದೊಳು ಹರಿಪಾಂಚಜನ್ಯದ ರವ ಭಯಂಕರವಾಯ್ತು (ಕುಮಾವ್ಯದ್ರೋ. ೧೧-೧) ; ಒಂದು ಸ್ಟೇಷನ್ನಿನಲ್ಲಿ ಪೋಸ್ಟ್‌ಮಾಸ್ಟರು ಅದೇ ರಸ್ತೆಯಲ್ಲಿ ಆಗತಾನೇ ನಡೆದಿದ್ದ ಭಯಂಕರವಾದ ಕೊಲೆ ಒಂದನ್ನು ಕುರಿತು ಹೇಳಿದನು (ಮೇನಾ. ೦೬); ಹುಲಿಯ. . . ಹಳದಿವರ್ಣದ ದೊಡ್ಡದೊಡ್ಡ ಕಣ್ಣುಗಳೂ ಮೊನೆಯಾದ ಕೋರೆಹಲ್ಲುಗಳೂ ಭಯಂಕರವಾಗಿ ತೋರುವುವು (ಮುಂಬಯಿ. ೪-೩೩). ೪. ಬಹಳ ಸಮರ್ಥನಾದವನು ; ಸಾಹಸಿ : ಶರ್ಮ ಕಡಿಮೆ ಆಸಾಮಿ ಅಂತ ತಿಳಿದೀರೇನು ನೀವು ? ಭಯಂಕರ ಆದ್ಮೀ ಅವರು. ಭಯಂಕರ ಅದಾರ (ರೂಪಕ. ೬೬). ೫. = ಭಯಂಕಾರಿ : "ವೀರಂ ಭಯಂಕರಂ [ಪಾಠಾಂ. ಕಾರಿ] ದಕ್ಷಾರಿ ಶರಭನೆನೆ ವೀರಭದ್ರನೆನಿಕ್ಕು" (ಮಂಗರಾ. ೩-೦೩). [ಸಂ.]

**ಭಯಂಕಾರಿ** (ನಾ). (ದಕ್ಷನಿಗೆ) ಭಯವನ್ನುಂಟು ಮಾಡಿದವನು ; ವೀರಭದ್ರ : "ವೀರಂ ಭಯಂಕಾರಿ [ಪಾಠಾಂ. ಕರಂ] ದಕ್ಷಾರಿ ಶರಭನೆನೆ ವೀರಭದ್ರನೆನಿಕ್ಕು" (ಮಂಗರಾ. ೩-೦೩). [ಸಂ. ಭಯಂಕಾರಿನ್]

**ಭಯಂಕೃತಿ** (ನಾ). ಭಯ : ಅಂಜಿಕೆ : ' ಭಯಂಕೃತಿಗೆಯ್ ' ಪರಾ. [ಸಂ.]

**ಭಯಂಕೃತಿಗೆಯ್** (ಕ್ರಿ). ದಿಗಿಲನ್ನುಂಟು ಮಾಡು ; ಹೆದರಿಸು : ಶರನಿಕರ ಮಹಾಭೀಂಕೃತಿ ನೋಳ್ಪಮರರ್ಗೆ ಭಯಂಕೃತಿಗೆಯ್ದುದು (ರಾಜಶೇ. ೬-೪೭). [ಭಯಂಕೃತಿ + ಕೆಯ್$_1$]

**ಭಯಂಗೊಳ್**, ಭಯಗೊಳ್ (ಕ್ರಿ). ಅಂಜು; ಹೆದರು : ಪೊಗಿಂಕಡಂಗಿ ಬೀರದೊಳೆ ಬೀಗುವ ನಿನ್ನಣುಗಾಳೆ ನೋಡೆ ನಿನ್ನಂಗನೆಯರ್ ತೊವಲ್ವೊಳೆ ಭಯಂಗೊಳೆ ಕೋಡಗಗಟ್ಟುಗಟ್ಟಿ ಚಿತ್ರಾಂಗದನಾಯ್ತು (ಕಂಕಾ. ೯-೩೪); ಸರ್ಪನಂ ಮೆಟ್ಟಿದರಂತೆ ಭಯಂಗೊಂಡು (ರಮಾಷ್ಟು. ೦-೦೬೮); ಗಜಱಿನಲಿ ಗಿರಿ ಬಿರಿಯೆ ದಿವಿಜವ್ರಜ ಭಯಂಗೊಳೆ (ಕುಮಾವ್ಯದ್ರೋ. ೦೩-೦೩). **ಭಯಂಗೊಳ್** : ಪಾಣ್ಡ್ಯಂ ಭಯಗೊಣ್ಡನತ್ತ ಸಮುದ್ರಂ ಬುಗಿಲೆಂದು ತಲ್ಲಳಿಸಿದಂ ಚೋಳಂ ಭಯಭ್ರಾಂತಿಯಿಂ (ಶಾಸಂ. XX, ೪೯-೦೮; 1076 ?); ಬಲವಲ್ಲಲ್ಲಿ ಭಯಗೊಳೆ ದ್ರೋಣ ಹೊಕ್ಕನು ರಾಯ ಮೋಹರವ (ಕುಮಾವ್ಯದ್ರೋ. ೨-೩೪) ; ಸಂತೈಸಿದರು ಭಯಗೊಂಡಿಹ ನೃಪಾಲಕನ (ಪಳಕ. ೩-೪೭). [ಭಯ + ಕೊಳ್$_1$]

**ಭಯಂಗೊಳಿಸು** , ಭಯಗೊಳಿಸು (ಕ್ರಿ). ಹೆದರಿಕೆಯನ್ನುಂಟು ಮಾಡು; ಭಯಪಡಿಸು : ತೊಳಗುವ ದಿವ್ಯಾಸ್ತ್ರಮಮರ್ದ ಕೋದಂಡಮುಮಂ ಗೊಳಿಸೆ ಮನಂಗೊಳಿಸೆ ಭಯಂಗೊಳಿಸೆ ಸಭಾಸದರನುಱದೆ ಕರ್ಣಂ ಬಂದಂ (ಕಂಕಾ. ೨-೬೮) ; ಮಧುಮಾಸಕೇಸರಿ ವಿಯೋಗಿಗಳೆಂಬ ಮೃಗಂಗಳಂ ಭಯಂಗೊಳಿಸಿದುದುತ್ಕಕೀರಮದಕೋಕಿಲಗರ್ಜಿತತರ್ಜಿತಂಗಳಿಂ (ಅಜಪು. ೬-೨೩). **ಭಯಗೊಳಿಸು** : ಮಲೆತ ಧೃಷ್ಟದ್ಯುಮ್ನನನು ಭಯಗೊಳಿಸಿ ಸೋಮಕ ಸೃಂಜಯರನಪ್ಪಳಿಸಿದನು (ಕುಮಾವ್ಯಶ. ೩-೫೭). [ಭಯಂಗೊಳ್ + – ಇಸು$_3$]

**ಭಯಂದೋಱು** (ಕ್ರಿ). ಭಯವನ್ನುಂಟುಮಾಡು; ಹೆದರಿಸು; ಅಂಜಿಸು: ಪೆಱಯಂತೆ ವಕ್ರನಾಗದೆ ಸಿಡಿಲಂತೆ ಭಯಂದೋಱದೆ[ಶಾಣಂ· ಮೇದನಂತೆ ಸೀಳೆತ್ತದೆ] (ಧರ್ಮಾಮೃ. ೧-೦೬೩). [ಭಯ + ತೋಱು]

**ಭಯಂಬಡು**, ಭಯಪಡು (ಕ್ರಿ). = ಭಯಂಗೊಳ್: ಈ ಸಂಜೀವಕ ನೆಂಬೆತ್ತು ಕೆಲೆದೊಡಾ ಧ್ವನಿಗೊಂದಂ ಭಾವಿಸದೆ ನೀಂ ಭಯಂಬಟ್ಟೀ ವನಮಂ ಬಿಟ್ಟು ಪೋಪೆನೆಂಬುದುಂ (ಪಂತಂ. ೯೨-೬); ಮೃಡವಂದ್ಯಾ ಮರರುಂ ಭಯಂಬಡುವಿನಂ . . . ಆರಭಟೆಯಿಂದಿರ್ದಂ ನಿಕುಂಭಾಸುರಂ (ಜಗ. ೦೩-೩೨). **ಭಯಪಡು** : ಬಲವಿದ್ದದ್ದು ಲಯವಾದ ಮೇಲೆ ಭಯ ಪಡುವುದೇ ಸರಿ (ಗಾದೆ). [ಭಯ + ಪಡು₁]

**ಭಯಂಬಡೆ** (ಕ್ರಿ). = ಭಯಂಗೊಳ್: ಕಡೆಗಣ್ಣ ಕುಡಿವೆಳಗೆಂಬ ಬಳ್ಳಿ ಮಿಂಚಿಂಗೆ ಭಯಂಬಡೆದು ಪೆಡಂಮೆಟ್ಟುವ ರಾಜಹಂಸಸಮಾಜಮನೋ ಜೆಯಿಂ ಕರೆದು (ರಾಜಶೇ. ೫-೦೯ ವ). [ಭಯ + ಪಡೆ₁]

**ಭಯಂಬೆರಸು₁** (ಕ್ರಿ). ಭಯದಿಂದ ಕೂಡಿರು; ಹೆದರು: ಲಲಿತಾಂಗಿಯು ಶಂಕೆಯುಂ ಭಯಂ ಬೆರಸಿದ ನಾಣುಮಂ ಕ್ರಮದೆ ಪಿಂಗಿಸು ಬೇಸಱದಿರ್ ಗುಣಾರ್ಣವಾ (ಶಂಕರಾ· ೩-೬೬).

[ಭಯ + ಬೆರಸು₁ (< ಬೆರೆಯಿಸು) ]

**ಭಯಂಬೆರಸು₂** (ಅ). ಹೆದರಿಕೆಯಿಂದ ಕೂಡಿ: ಮೊದಲೊಳೆ ಕೆತ್ತಿದತ್ತು ಬಲಗಣ್ಣನಗೇನನೊಡರ್ಚಲಿರ್ದುದೋ ಬಿದಿಯೆನುತುಂ ಭಯಂಬೆರಸು ಮುನ್ನಮೆ ಶಂಕಿಸುತಿರ್ದಂ (ಕಾದಂಪೂ· ೯೯೯). [ಭಯ + ಬೆರಸು₃]

**ಭಯಗೊಳ್** ' ಭಯಂಗೊಳ್ ' ನೋ.

**ಭಯಗೊಳಿಸು** ' ಭಯಂಗೊಳಿಸು ' ನೋ.

**ಭಯಗ್ರಸ್ತ** (ನಾ). ಹೆದರಿದವನು; ಭೀತ : ಚಿಟ್ಟೆಯೂರರು ಭಯ ಗ್ರಸ್ತರಾಗಿ ಕುಕ್ಕರಿಸಿ ಬಿಟ್ಟರು (ಪಟಿಸಾ· ೬೩೫).

**ಭಯಗ್ರಹಣಿ** (ನಾ). ಒಂದು ಬಗೆಯ ರೋಗ : ಪೊಂಗೆತೊಕ್ಕು, ತಪಸಿ ತೊಕ್ಕು . . . ಸೇವಿಸಲು ವಾತಗ್ರಹಣಿ, ಪಿತ್ತಗ್ರಹಣಿ, ಶ್ಲೇಷ್ಮಗ್ರಹಣಿ, ಭಯಗ್ರಹಣಿ, ಶೋಕಗ್ರಹಣಿ . . . ಮುಂತಾದ ಸಕಲರೋಗಗಳೂ ಗುಣಮಕ್ಕುಂ (ಸಶಪ. ೩೪೦). [ ಸಂ. ]

**ಭಯಚಕಿತ** (ಗು). ೧. ಹೆದರಿಕೆಯಿಂದ ಚಕಿತಗೊಂಡ,–ಬೆರಗಾದ : ಮಾಸ್ಲೋವಾ ಸರ್ಕಾರಿವಕೀಲನ ಕಡೆಗೆ ಭಯಚಕಿತನೇತ್ರೆಯಾಗಿ ಎವೆಯಿಕ್ಕದೆ ನೋಡಿದಳು (ಪುನರು. ೪೯). (ನಾ). ೨. ಹೆದರಿದವನು; ಗಾಬರಿ ಗೊಂಡವನು : ಶ್ರೀಪತಿದಣ್ಣಾಧಿನಾಥನೆಸೆದಂ ಧರೆಯೊಳ್ . . . ಬಂದು ಮಾರ್ಕೊಳ್ಗರಿಭೂಪಬ್ರಾತ[ಪ್ರೇಬಿಜ್ಜಿಡೆ]ಗಭಯಚಕಿತರ್ಕ್ಕಟ್ಟಿ ಬೆನ್ನಟ್ಟಿ ಕೊಲ್ಲಗಂ ಕಾದಿಗಂ (ಎಇಇ· XX, ೬೪-೭; 1112). [ಸಂ.]

**ಭಯಜ್ವರ** (ನಾ). ಬಹಳ ಹೆಚ್ಚಾದ ಹೆದರಿಕೆಯಿಂದ ಬರುವ ಜ್ವರ : ಆಹವದೊಳರಾತಿಸೇನೆಗೆ ಭಯಜ್ವರಮೊರ್ಮೆಯೆ ಪುಟ್ಟೆ ತೋರ್ಪ್ಪಂ (ಎಇಇ. XX, ೯೭-೩೨; ?); ಹಿಂದಿನ ದಿನ ತಾನು ಮಾಡಿದ್ದೆಲ್ಲವನ್ನು ನೆನಸಿ ಕೊಂಡಾಗ, ಅವನು ಭಯಜ್ವರಪೀಡಿತನಾದನು (ಪುನರು. ೨೨೨ ). [ಸಂ.]

**ಭಯಪಡಿಸು** (ಕ್ರಿ). ಹೆದರಿಸು; ಗಾಬರಿಗೊಳಿಸು : ಸುಮ್ಮನೆ ಭಯ ಪಡಿಸಿದರೆ ಕೆಲಸವಾಗುವುದಿಲ್ಲ (ರೂಢಿ).

[ಭಯಪಡು (<ಭಯಂಬಡು) +–ಇಸು₃]

**ಭಯಪಡು** 'ಭಯಂಬಡು' ನೋ.

**ಭಯರಸ** (ನಾ). ೧. ಹೆದರಿಕೆ; ಭೀತಿ : ಅಂತು ಬಿಱುತು ಬೆಳ್ಳೋಟ ವೋಡುವರನಿಘೋಷನ ಭಯರಸಮುಂ ಕರುತ್ತು ನಟ್ಟು ಬೆನ್ನಟ್ಟುವ ಗಗನ ಚರೇಂದ್ರನ ರೌದ್ರರಸಮುಂ . . . ಮಾಣ್ಬುದುಂ (ಶಾಂತಿಪು. ೬-೪೦ ವ): ಪಾರ್ವತೀದೇವಿಗೆ ಕೌತುಕರಸದೊಳಾನಂದಂ ಪುಟ್ಟೆ ಭಯರಸದೊಳ್ ಭಕ್ತಿಯುಣ್ಮೆ (ಗಿರಿಜಾ. ೫-೪೨ ವ). ೨. [ಕಾವ್ಯಮೀ] ನವರಸಗಳಲ್ಲಿ ಒಂದು; ಭಯಾನಕ ರಸ : ಒಮ್ಮೆ ಇವ್ಮೆ ಕೂಡಿ ಒಲ್ಮೆಯಿಂ ಸೊಗಸು ಪುಟ್ಟುವದರಿಂ ಭಯರಸವಪ್ಪುದು. ಅದರಿಂ ಭೀತಿಭಾವವಪ್ಪುದು (ಕಾವ್ಯಸಾ. ೨೩೨). [ಸಂ.]

**ಭಯರಸಕ** (ನಾ). = ಭಯರಸ ೧ : ಕಸವರದ ಸವಿಯುಮಂ ಭಯರಸಕದ ಸವಿಯುಮನದೆಂತುಮಾನಱಿಯದುದಂ ವಸುಮತಿಯಱಿವುದು (ಪಂಶರಾ. ೦೨-೧೮೦). [ಸಂ.]

**ಭಯವಿಹೀನ** (ನಾ). ಹೆದರಿಕೆಯಿಲ್ಲದುದು; ಭಯವಿಲ್ಲದುದು; ನಿರ್ಭಯ : ಕೌರವರೊಳಗೆ ಹಗೆಯಾಗಿಹನು ಕೀಚಕ ಬಲ ವಿರಾಟನಿಗವನ ದೆಸೆಯಿಂ ಭಯವಿಹೀನವದು (ಕುಮಾ.ಭಾ. ೧-೪). [ಸಂ.]

**ಭಯವಿಹ್ವಲ**, ಭಯವಿಹ್ವಳ (ಗು). ಹೆದರಿದ; ಗಾಬರಿಗೊಂಡ : ಲಯಾಂತಕಘೋಷಭೀಷಣಾಂ ಪುರದೊಳಗುಣ್ಮಿದತ್ತು ಭಯವಿಹ್ವಲಪಾರ ಕೃತಂ ಮಹಾರುತಂ (ಚಂದ್ರಪ್ರ· ೯-೯೪). **ಭಯವಿಹ್ವಳ** : ಭಯವಿಹ್ವಳ ಸಿಂಹಳನಾ ಕೊಳುಗುಳದಿಳೆಯಂ ಬೆಂಗೊಟ್ಟು ಜಗುಳ್ದನತಿಜವದಿಂದಂ (ರಾಜಶೇ. ೬-೦೦೦). [ಸಂ.]

**ಭಯವಿಹ್ವಳ** 'ಭಯವಿಹ್ವಲ' ನೋ.

**ಭಯವೊಂದು** (ಕ್ರಿ). = ಭಯಂಗೊಳ್: ಶ್ರಾವಕರು ಭಯವೊಂದಿ ಯುಭಯವನೀವುದೆನುತಡಿಗಡಿಗೆ ಹೊಡವಡಲು (ಬಸವಪು· ೫೦-೬೩).

[ ಭಯ + ಪೊಂದು₁ ]

**ಭಯಸ್ಥ** (ನಾ). ಭೀರು; ಭಯಪ್ರಕೃತಿಯವನು: "ಭೀರು ಕರಂ ಕಾತರಂ ಭಯಸ್ಥಂ ತ್ರಸ್ತಂ" (ವಸ್ತುಕೋ. ೦೦೦-೦೨); ಆ ಹುಡುಗ ಬಹಳ ಭಯಸ್ಥ (ರೂಢಿ). [ಸಂ.]

**ಭಯಸ್ಥೆ** (ನಾ). ಭಯಗೊಂಡವಳು; ಹೆದರಿದವಳು : ಆ ದುರ್ನಯಕ್ಕೆ ಸೀತೆ ಭಯಸ್ಥೆಯಾಗಿ ಗೃಹಮಹತ್ತರನಂ ಕರೆದಾರೇನಂ ಬೇಡಿದೊಡಮರ್ಗದಂ ಕುಡುವುದೆಂದು ಪೇಟ್ದು (ಪಂಪರಾ. ೦೫-೬೫ ವ). [ಸಂ. ಭಯಸ್ಥಾ]

**ಭಯಾಕುಳ** (ಗು). ಹೆದರಿಕೆಯಿಂದ ಕೂಡಿದ; ಅಂಜಿದ : ಇನ್ನದಱ ಮೇಲೆ ಭಯಾಕುಳಲೋಲನೇತ್ರ ನೀಲಾಂಬುಜಲಕ್ಷ್ಮಿಯಂ ಕದಱ ಮಾಣವು ಕಾಣಗೆ ಮಾಯ್ದು ತುಂಬಿಗಳ್ (ಶಾಂತಿಪು. ೮-೯೭). [ಸಂ. ಭಯಾಕುಲ]

**ಭಯಾನಕ** (ಗು). ೧. ಭಯವನ್ನುಂಟುಮಾಡುವ; ಭಯಂಕರವಾದ : ವಿಷ್ಠೋ ಜನ ಶ್ರದ್ಧಾವಂತರು . . . ಜೀವನದ ಅತಿದುರ್ಭರಕಷ್ಟಗಳನ್ನೂ ಭಯಾನಕ ಹಿಂಸೆಗಳನ್ನೂ ಅನುಭವಿಸಿದ್ದಾರೆ (ವೀರಯೋ. ೦೭). (ನಾ). ೨. ಭಯವನ್ನುಂಟುಮಾಡುವುದು; ಭಯಂಕರವಾದುದು; ಘೋರ : ಅಂತೆ ಮೋಣ್ ಇರುಳೊಳುಂ ಘೋರಾಂಧಮುದ್ಯಮಂ ಪೀರ್ದು ಪುಣ್ಯಾರ್ಭನಿಗೆ ಸಂದ ಮೌನಮತಿಸಿಷ್ಕುರಂ, ಕಠಿನಂ, ಭಯಾನಕಂ (ಶ್ರೀರಾಮಾ. ೯೯-೨೯೫); ಈ ಎರಡನೆಯ ವಿಚಾರವು ರಾಘಪ್ಪನಿಗೆ ಭಯಾನಕವಾಗಿ ತೋರುತ್ತಿತ್ತು (ಗಂಪಾರು. ೨೦೫). ೩. ಒಂದು ನರಕದ ಹೆಸರು : ದಹನ . . . ಮಹಾಸಂವರ್ತಕವೆಂಬೈದು ಮಂತ್ರಿನರಕಂಗಳೊಡಗೂಡಿ ಭಯಾನಕವೆಂಬರಸುನರಕವಿಹುದು (ವಿವೇಕ. ೧೮೦). ೪. [ಕಾವ್ಯಮೀ] ನವರಸಗಳಲ್ಲಿ ಒಂದು; ಭಯವೆಂಬ ಸ್ಥಾಯಿಭಾವದಿಂದ ಉಂಟಾಗುವ ರಸ : "ಶೃಂಗಾರಃ . . . ಭಯಾನಕಃ, ಬೀಭತ್ಸಃ, ಅದ್ಭುತಃ, ಶಾಂತಃ — ಈ ೯ ರಸಂಗಳ್" (ಹಲಾಯು. ೦೬-೯೨); ಸತತಂ ಭಯಾನ ಕೋದ್ಯತ್ಪರಸಂ ಕರಂ ವಿಷಮಬಂಧನದಿಂ . . . ಊರ್ಜಿತೋಕ್ತಿಗಳಿನಕ್ಕಿ ರೌದ್ರರಸಂ ರಸಾವಹಂ (ಕಬರಾ· ೨-೦೦೦); ನಿಗ್ರಹಶಂಕಾಭರಾತಂಕಿತ ಹೃದಯರಾದ ಅಂಗ ವಂಗಕಳಿಂಗ . . . ಮರುಪ್ರಭೃತಿಭೂಪಾಲಕರಿಂ ಭಯಾನಕರಸಮಂ . . . ನೆಗಟುತ್ತುಮಿರೆಯುರೆ (ಜಗ. ೨-೩೯ ವ); ಹಱಿದ ಹೊಟ್ಟೆಯ ಪೊಡೆಮರಳಿದಾಲಿಗಳ ತೋಳಿನ ಕಡಿಕುಗಳ ರಣಮಹಿ ಭಯಾನಕರಸಕೆ ಗುಱಿಯಾಯ್ತು (ಕುಮಾ.ಭಾ. ೮-೦೮). [ಸಂ.]

**ಭಯಾರ್ತಿ** (ನಾ). ಹೆದರಿಕೆಯಿಂದ ಉಂಟಾದ ಕಷ್ಟ.—ನೋವು : 'ಭಯಾರ್ತಿಗೊಳ್' ನೋ. [ಸಂ.]

**ಭಯಾರ್ತಿಗೊಳ್** (ಕ್ರಿ). ಹೆದರು; ಅಂಜು : ಮಂಜಿನ ಪುಂಜಮೊತ್ತರಿಸಿ ಮುತ್ತಿ ಮುಸುಂಕೆ ಭಯಾರ್ತಿಗೊಳ್ವನೇ ಕಂಜಸಖಂ (ಶಬಶಂ. ೪-೪೪). [ಭಯಾರ್ತಿ + ಕೊಳ್₁]

**ಭಯಾವಹ** (ನಾ). ಭಯಂಕರವಾದುದು ; ಘೋರವಾದುದು : "ಘೋರಂ, ಪ್ರತಿಭಯಂ, ಭೀಮಂ, ದಾರುಣಂ, ಭಯಾ(ನಕಂ)ವಹಂ . . . ಭಯಾ(ವಹಂ)ನಕಂ — ಈ ೧೦ ಭಯಂಕರಂ" (ಹಲಾಯು. ೦೧೭-೨೦). [ಸಂ.]

**ಭಯಿಮೂಗ** 'ಭೈಮೂಗು' ನೋ.

**ಭಯೋತ್ಕಟ** (ನಾ). ೧. ಭೀತಿಯ ಆಧಿಕ್ಯ.—ಅತಿಶಯ. ೨. ಒಂದು ನರಕದ ಹೆಸರು : ನಿರುಚ್ಛ್ವಾಸ ಸುದೀರ್ಘ ಕೂಟಶಾಲ್ಮಲಿ ಆರಿಷ್ಟ ಸುಮನವೆಂಬೈದು ಮಂತ್ರಿನರಕಂಗಳೊಡನೆ ಭಯೋತ್ಕಟವೆಂಬರಸುನರಕ ವಿಹುದು (ಬಿವೇಕ. ೦೮೦). [ಸಂ.]

**ಭಯ್ಯಾ** (ನಾ). ೧. ಒಡಹುಟ್ಟಿದವನು ; ಸಹೋದರ. ೨. ಆಳು : ಸೇವಕ : ಅವರು ಸಾವಕಾಶ ಮೆಲಕಾಡಿಸುತ್ತಿರುವಂತೆ ನೀರಿನ ಭಯ್ಯಾ ಬಂದು ಎರಡು ಗ್ಲಾಸುಗಳನ್ನು ಅವರೆದುರಿಗೆ ಇಟ್ಟು (ಎಡಹ. ೨೪). ೩. ಚಿಕ್ಕವರು ಮತ್ತು ಸರೀಕರನ್ನು ಕರೆಯುವ ಒಂದು ಶಬ್ದ. [← ಹಿಂ. ಭಯ್ಯಾ, ಭೈಯಾ ; ಮರಾ. ಭಯ್ಯಾ]

**ಭರ್** (ನಾ). ವೇಗವನ್ನು ಸೂಚಿಸುವ ಒಂದು ಅನುಕರಣ ಶಬ್ದ : ಗಾಳಿ ಭರ್ ಎಂದು ಬೀಸುತ್ತಿದೆ (ಶೂಂ).

**ಭರ** (ಗು). ೧. ಹೊರುವ ; ನಿರ್ವಹಿಸುವ. ೨. ಪೋಷಿಸುವ : ಆಶ್ರಯವನ್ನು ಕೊಡುವ ; ಬೆಂಬಲವನ್ನು ನೀಡುವ. (ನಾ). ೩. ತೆಗೆದುಕೊಳ್ಳುವುದು ; ಹೊತ್ತುಕೊಳ್ಳುವುದು. ೪. ಕಳ್ಳತನ ; ಕಳವು ; ಅಪಹರಣ. ೫. ಹೊರೆ; ಭಾರ; ತೂಕ : ಆಸೆಗೆ ಹುಟ್ಟಿದ ಪ್ರಾಣಿ ಆಸೆಯನೆ ಕಲಿತು ಪುಣ್ಯಪದವಿಯ ಬಯಸಿದರೆ ಭವಮಾಲೆಯ ಭರವು ತಪ್ಪದು (ಬಸವ. ೦೨೮). ೬. ಹೊಣೆ : ಜವಾಬ್ದಾರಿ : ನಗರೇಶ್ವರದೀ ಮಠವೊಟ್ಟು ತೋಜುಗುಂ ನರಲೋಕದೊಳಂನಿಲ್ಲಿಯ ಭರವಂ ತಾಳ್ದಿಂತು ಪೆಜಗೆ ಗುರುಕುಳತಿಳಕಂ ಪರಮಗುರು ಬೆಸಸೆ (ಶಾಸ. XI-i, ೯೭ ೩೮ ; 1062) ; ಸೇನೆಯ ಸುತ್ತುವಳಿಯುದ ಭರವ ಕೈಕೊಂಡೊಡ್ಡ ಮೆಚಿದನು ಗರುಡಿಯಾಚಾರ್ಯ (ಕುಮಾ.ದ್ರೋ. ೪-೦೮); ಧರಿಸು ಲೋಕದ ಭರವ ಪರಮಾರ್ಥವನು ಬಿಡದೆ ಹೊರಡು ಕರೆ ಬರಲ್ ಅಳದೆ (ಮಂಕುತಿ. ೩೦೦). ೭. ಹೆಚ್ಚಳ ; ಅತಿಶಯ ; ಆಧಿಕ್ಯ : "ಅತಿಶಯಃ, ಭರಃ . . . ದೃಢಃ — ೧೪ ಅತಿಶಯದ ಹೆಸರುಗಳು" (ಸಿದ್ಧಾಂತ. ೨೫) ; ಸಿರಿಯು ಭರವುಳ್ಳಾಗ ಮಜಿಯದಿರುವವ ಜಾಣ ಕೊಡಿತೆಯಾದಾಗ ಕೊಡಲು ತನಗಿಲ್ಲೆಂದು ಮಜುಗುವವನೆಗ್ಗ (ಸರ್ವಜ್ಞ. ೩೯೭) : ಕಡುಸುಗ್ಗಿಯ ಭರಕೆ ಕೈಮಂದು ಕೊನೆವೆರ್ಚಿದ ಮಾಮರನಂತೆ . . . ಕುವರಂ . . . ಸೊಗಯಿಸಿದನಪ್ಪುದುಂ (ರಾಮಾಶ್ವ. ೦೦೮-೬). ೮. ಆಸಕ್ತಿ ; ತತ್ಪರತೆ : ನೀರ ಬೊಬ್ಬುಳಿಕೆಗೆ ಕಬ್ಬುನದ ಕಟ್ಟ ಕೊಟ್ಟು ಸುರಕ್ಷಿತವ ಮಾಡುವ ಭರವ ನೋಡಾ (ಬಸವ. ೦೬೨) ; ಎರಡು ಬಲವನು ಮುಸಿದು ಕೊಲಿಸುವ ಭರವೆಯಾದವನದು (ಕುಮಾ.ಆ. ೯-೪೦) ; ೯. ಉದ್ರೇಕ ; ಆವೇಶ ; ಆವೇಗ : ತಲಹರದ ನಾ ಕಾಣೆನೋ ಮೋಹರಕೆ ಗತಿಯೇನೆನುತ ಭರದಲಿ ಕಜಿದು ತೋಜಿದನಾ ಕೃಪಾಚಾರ್ಯಂಗೆ ಕಲಿ ದ್ರೋಣ (ಕುಮಾ.ದ್ರೋ. ೫-೩೫) ; ಸಿಟ್ಟಿನ ಭರದಲ್ಲಿ ಏನೇನನ್ನೋ ಮಾತಾಡಿದ್ದರು (ಆಕೃತಿ. ೯೭). ೧೦. ರಭಸ ; ಚುರುಕು ; ವೇಗ : ಭರದಿಂದು ತುಳುಕಿದ ನೀರುರದೊಳ್ ತಾರಾಂಶುರುಚಿಯನಿರ್ಕಟಿಗೊಳೆ (ಅಬಪು. ೧೪-೧೦೮) : ತಿರುನೀಲಕಂಠಾ ಎಂದ ನರವನೊಳಗಿರ್ದ ನಾಯಕಿ ಕೇಳಿ ಭರದಿಂದ ಎದ್ದು (ತಿರುನೀ. ಪೀ. ೬-೦೪) ; ರಾಜಂ ಚಿತ್ರಾಂಬರಯುಕ್ತನಾಗಿ ಬಂದನಂ ಭರದಿಂ (ಪದ್ಮರ. ೩-೦೭) : ಭರದಿಂದ ಹೋಗುವವನ ಸಂಗಡ ಹೊರೆ ಹೊತ್ತೀಯಾ ಅಂದ (ಗಾದೆ). ೧೧. ಭರಾಟೆ ; ಏರಿಕೆ : ೩ ರಿಂದ ೫ನೇ ವರ್ಷದ ವರೆಗೆ ಬಳ್ಳಿಯ ಭರವು ಇರುತ್ತದೆ ; ಆರನೆ ವರ್ಷ ಆ ಭರ ಕುಂದುವುದು (ಮುಂಬಯಿ. ೫-೨೦೮). ೧೨. ನೆರೆ ; ಭರ್ತಿ : ಸಿರಿ ಬಂದ ಕಾಲದೊಳಾಗದು ಉಬ್ಬುವುದ್ಯೆತಂದುದಳಿವುದು ಕೊನೆಗೆ ಭರ ಬಂದ ಕಾಲಕೆ ಬಂದಿಹುದೆಲ್ಲವು ಹೋಗುವುದೀಶಿದ ಜೊತೆಗೆ (ಇಂಪಾಕ. ೨೦೭-೨೨). ೧೩. ಹಿಂದಿನ ಇಪ್ಪತ್ತು ತೊಲೆಯಷ್ಟು ತೂಕ. [ಸಂ.]

**ಭರಂಗೆಯ್**, ಭರಗೈ (ಕ್ರಿ). ೧. ತವಕಿಸು : ಆಂತೊಂದು ವರ್ಷಂಬರಂ ಭರಂಗೆಯ್ದು ನೋಂತು (ಶಂಕಪ್ರಾ. ೧-೦೩೭ವ). ೨. (ಕಾರ್ಯಭಾರವನ್ನು) ವಹಿಸಿಕೊಳ್ಳು ; ಹೊಣೆಹೊರು : ಧೃತರಾಷ್ಟ್ರಂ ನುಡಿದಾತನೇ ಹರಿ ಭರಂಗೆಯ್ವಾತನೇ ನೀಂ ಪೃಥಾಸುತರಂ ನೋಯಿಸಲಾಗದೆಂದು ನುಡಿದೇನಾ ಮಾತೇಮೇ (ಶಂಕಪ್ರಾ. ೦೦-೦೦). ೩. ಅರ್ಭಟಿಸು ; ಜೋರುಮಾಡು : ಎನ್ನನುಜನಾ ಪಾಂಚಾಲಿಯಂ ಪಂಚವಲ್ಲಭೆಯಂಪೋದೆಯುಮಲ್ಲಿ ವಿಳ್ಳಿ ಳನೆನೋಡುತ್ತಿರ್ದ ಬಲ್ಲಾಳ್ಗಳಲ್ಲಿ ಭರಂಗೆಯ್ದಪರ್ (ಗದಾಯು. ೩-೩೬). ೪. ಧಾಳಿಮಾಡು : ಆಕ್ರಮಿಸು ; ಮೇಲೆ ಬೀಳು : ಭೋಂಕನೆ ಸಿಂಹಧ್ವನಿಯಿಂದೆ ಗರ್ಜಿಸುವ ಸಭಾಸೂರರ್ಭ್ಯರಂಗೆಯ್ದುವಯಾದಿತ್ಯಂಗೆ ಬಯಲ್ಗೆ ಪಪ್ಪರೊಳರೇ ವಿಶ್ವಂಭರಾಚಕ್ರದೊಳ್ (ಎಕ.XI, ಚಿತ್ರದು. ೩೪-೨೦; 1123) ; ಈ ವೀರನೊಳ್ . . . ಚಲದೆ ಮಲೆವರಿನ್ನಾರ್ ಭರಂಗೆಯ್ವರಿ ನ್ನಾರ್ . . . ಎಂಬೊಂದೆಸಕದೊಸೆಯ ಬಂದಂ ಜರಾಸಂಧಭೂಪಂ (ಜಗನ್ನಾ. ೭-೪೨). **ಭರಗೈ** : ೪. ತೊಳಪ ಖಡುಗದ ಕೊಂತ ಸಬಳ ಗದೆ ಶಕ್ತಿಗಳ ಮುಸಕದಲಿ ಭರಗೈದರೈ (ಶಾಶ್ವಪ್ರಾ. ೨೫-೦೭). [ಭರ + ಕೆಯ್₁]

**ಭರಂಗೊಳ್** (ಕ್ರಿ.) ಚುರುಕಾಗು : ಮೊಳೆವಲ್ಲುಂ ಮೇದು ಮಧ್ಯಂದಿನದ ಬಿಜುವಿಸಿಲ್ವಾಗೆ ಬೆನ್ನಂ ಭರಂಗೊಂಡೆಳಸುತ್ತಂ . . . ಕಾಡೊಳೊಪ್ಪಂವಳಿ ದಿರ್ದತ್ತುಪ್ರಕಾಯಂ ಪೃಥುನುಹಿಷನಿಕಾಯಂ (ರಾಜಶೇ. ೫-೭೮). [ಭರ + ಕೊಳ್₁]

**ಭರಂಬಡು** (ಕ್ರಿ). = ಭರಂಗೊಳ್ : ಒಂದುದೆವಸಂ ಮಧ್ಯಾಹ್ನಸಮಯ ಮಪ್ಪನ್ನೆಗರ ಭರಂಬಟ್ಟು ಕಲಸಂಗೈದು (ಶಂತಶಂ. ೨೯-೦೪). [ಭರ + ಪಡು₁]

**ಭರಕತ್ತು** 'ಬರಕತ್ತು' ನೋ.

**ಭರಕಾಸ್ತು** 'ಬರಖಾಸ್ತು' ನೋ.

**ಭರಖಾಸ್ತು** 'ಬರಖಾಸ್ತು' ನೋ.

**ಭರಗಚ್ಚು** (ನಾ). ಯಥೇಚ್ಛ; ಹೇರಳ: ಹುರಿ, ಶ್ರೀಖಂಡ . . . ಒಂದೆರಡು ಪಲ್ಯ, ಇತ್ಯಾದಿಯಿಂದ ದೊಡ್ಡ ಬಾಳೆಯೆಲೆ ಭರಗಚ್ಚಾಗಿ ತುಂಬಿದ್ದವು (ಅನ್ನ. ೨೩೭). [← ಮರಾ. ಭರಗಚ್ಚ]

**ಭರಗೆಡು** (ಕ್ರಿ). ತಡಮಾಡು ; ವಿಳಂಬಮಾಡು : ಭರಗೆಡದೆ ನೀನೊಂದು ಗುಂಡನು ಬಿರಿಯ ಬಳ್ಳಿಗೆ ಸೇದಿ ಕೊಡು (ಶಾಶ್ವಪ್ರಾ. ೦೭-೬೫). [ಭರ + ಕೆಡು₁]

**ಭರಗೈ** 'ಭರಂಗೆಯ್' ನೋ.

**ಭರಡಾ** 'ಬರಡಾ' ನೋ.

**ಭರಡಿ** (ನಾ). ೧. ನುಚ್ಚು ; ತರಿ. (ಗು). ೨. (ಆಲಂ) ಅಲ್ಪ ; ತುಚ್ಛ : ಹುರುಡಿಗೆ ಮಾಡುವ ಹುರುಳಿಲ್ಲದ ದಾಸ . . . ಎರಡು ಕಡೆ ಕೆಟ್ಟ ಭರಡಿ ದಾಸನು ನಾನು (ಪುರಂದರ. ೨೬-೪). [← ಮರಾ. ಭರಡೀ]

**ಭರಣ₁** (ನಾ). ೧. ಹೊರುವುದು ; ಧರಿಸುವುದು; ವಹಿಸುವುದು. ೨. ಪೋಷಣೆ ; ರಕ್ಷಣೆ ; ಪರಿಪಾಲನೆ : ದುಂತ್ರಯ್ಯನು ನಾರಣೋಜರು ಯಿಂತೀ ಮುವತ್ತಿವ್ವರ ಭರಣಾ (ಶಾಸ. IX-i, ೨೮ ೦೦ ; ೪೨೪);

ತೋಱುತ್ತಿತ್ತಮಾದಂ ಹರಣಭರಣಚಾತುರ್ಯಮುಂ ಚಾತುರಂಗಂ (ಚಂದ್ರಪ್ರ. ೧೦-೩೦) ; ಮರಸನೇಱಿದರೊಳಗೆ ಪಾಂಡವರಿರಿಸಿ ಹೋದರು ಕೈದುಗಳ ಮಿಗೆ ಹರಣಭರಣಕ್ಷಮೆಗಳಲಿ ನೀನೆನಗೆ ನೀಡೆನಲು (ಕುಮಾ.ವಿ. ೬-೩೨). ೩. ಜೀವನಕ್ಕೆ ಬೇಕಾದ ಗ್ರಾಸ ; ಜೀವಿಸಲು ಬೇಕಾದ ಅನ್ನಾಹಾರ : ವಿಶಾಲಾಕ್ಷಿಯೆಂಬವಳು ಪುರುಷನಿಲ್ಲದೆ ಪ್ರಥಮ ಋತುಗಾಣೆ ಪಿತಮಾತೆ ಮಱುಗಿ ಭರಣವನಿಟ್ಟು ಕಾಳಹಸ್ತೀಶ್ವರನ ವನದಲ್ಲಿ ಬಿಟ್ಟುಬರಲು (ಶ್ರೀಶರಾ. ೧೦-೨). ೪. ಸಂಬಳ ; ಕೂಲಿ ; ವೇತನ : "ಕರ್ಮಣ್ಯಾ . . . ಭರಣಂ, ಮೂಲ್ಯಂ, ನಿರ್ವೇಶಃ, ಪಣಃ – ೧೧ ಕೂಲಿಯ ಪೆಸರುಗಳು " (ನಿಘಂಟು. ೩೧೭). ೫. (ತೆರಪಾದ ಸ್ಥಳವನ್ನು) ತುಂಬುವುದು ; ಭರ್ತಿಮಾಡುವುದು. ೬. ತುಂಬುವ ವಸ್ತು,– ಪದಾರ್ಥ. ೭. ಭೂಮಿಯ ಒಂದು ಅಳತೆ ( ? ) : ತೋಟದ ಸ್ಥಳದಲ್ಲು ಭರಣ ೬೦ಕೆ ಹಕಿದ ಅಡಕೆಮರ ೧೪೫೦೦ಕೆ ಗ ೨೫೩ (ಪ್ರಶಂ. ೦೯೩೭. ೬೬-೦೯; 1679).

ಭರಣದ ಕೋಲ್ = ಒಂದು ಅಳತೆಯ ಕೋಲು (?) : ಗೋವಣ ಪೊಲದೊಳಗೆ ಧಾರಾಪೂರ್ವ್ವಕಂ ಮಾಡಿ ಭರಣದ ಕೋಲೊಳ್ ಸರ್ವ್ವನಮಶ್ಯಂ ಬಿಟ್ಟ ನೆಲ ಮತ್ತರು ೬೦ (ಸೌಇಇ. XX, ೦೯-೩೯ ; 1015); ಭರಣದ ಕೋಲ ಪರಿಸಂಕಿಸ ಮತ್ತರು ೩ (ಕೊಶಾ.ಶಾ. ೦೪-೯೮ ; 1170). [ಸಂ.]

**ಭರಣ$_2$** (ನಾ). (?) : ಕಡೆಪಡೆಮೇಳ್ವಡಂ ಪಡುವಡಂ ಭರಣಂ ತಿಣುಕುತ್ತಮಿಪ್ಪಡಂ ಚರಣವನಾವಗಂ ಒಡಿಪಡಂ ಪೆಱತನಿತು ಕೂಲೆ ತೋಱುತೆಂದಱದು (ಅಕ್ಷಪ್ರ. ೦೩-೯೭). [ ? ]

**ಭರಣಂಗೆಯ್** (ಕ್ರಿ). ಕಾಪಾಡು ; ರಕ್ಷಿಸು : ಕುಡೆ ಪಡೆದಾಯೂರನಾ ಶ್ರೀಧರಭಟ್ಟರ್ ನೂಱನಾಲ್ವರ್ಮ್ಮಹಾಜನಕೆ ಭರಣಂಗೆಯ್ದು ತವಗಂ ಮಹಾಜನಕ್ಕಂ ಪ್ರಜೆಗಂ ಮಾಡಿದ ವ್ಯವಸ್ಥೆಯುಂ(ಎಇ. XX, ೬೭-೦೪; 1012): ಜಗಮೆಲ್ಲಮುಮಂ ವಿಷ್ಣುವೆ ಮಿಗೆ ಭರಣಂಗೆಯ್ಯುತಿರ್ಕುಂ (ವಿಶ್ವಪು. ೦೬-೯೬). [ ಭರಣ$_1$ + ಕಯ್$_1$ ]

**ಭರಣಿ** (ನಾ). ೧. (ಒಡವೆ, ವಸ್ತು ಮೊದಲಾದುವುಗಳನ್ನು ಇಡುವ, ಮುಚ್ಚಳವಿರುವ) ಸಂಪುಟ ; ಕರಂಡ; ಡಬ್ಬಿ : ಮನಸಿಜನನರ್ಘ್ಯಸಂಮೋಹನದ ಮರ್ದು ಮಣಿಯು ಭರಣಿಯೊಳ್ ತೀವಿಯಿ ಸಚ್ಚಿಸ ನಿಧಿಯ ಮೊಗದೊಳಿರಿಸಿದನೆನಲ್ಕೆ ಮಧುರಾಧರಂ ಮನೋಹರಮವಳಾ (ಶಾಂತಿಪು. ೩-೯೭); ತರಿಸಿದನು ಚಂದನದ ಸಾದಿನ ಭರಣಿಗಳ (ಕುಮಾ.ಗ. ೨-೯೦); ಕತ್ತಲೆ ಲೋಕವನು ಮುಸುಕಿದುದು ಭರಣಿಯ ಮುಚ್ಚುಮಿಂಪದಲಿ (ಶಶಕ. ೩-೦೪). ೨. [ಜ್ಯೋತಿ] ಯಮನು ಅಧಿದೇವತೆಯಾಗಿರುವ, ಅಶ್ವಿನಿ ಮೊದಲಾದ ಇಪ್ಪತ್ತೇಳು ನಕ್ಷತ್ರಗಳಲ್ಲಿ ಎರಡನೆಯದು: ಭರಣಿ ಮಘ ಪೂರ್ವೆ ಕೃತ್ತಿಗೆ . . . ಪೈಶಾಚರಮಂಡಳಮೆಂಬ ನಾಮಮಂ ತಳೆದಿರ್ಕುಂ (ಲೋಕೋಪ. ೪-೮೦) ; ಭರಣಿ ಯಾಮ್ಯಭಂ ಯಾಮ್ಯಂ. ಅಂತಕಂ ಯಮತಾರಕಂ ಈ ೫ ಭರಣಿನಕ್ಷತ್ರಕ್ಕೆ ಪೆಸರು (ಶಾಸ್ತ್ರಸಾ. ೬೨-೪) ; ವೀಳೆಯದೆಲೆಯ ಬದಣಿಕೆಯುಂ ಭರಣಿನಕ್ಷತ್ರದಲ್ಲಿ ತಂದು ಕೈಗೆ ಕಟ್ಟುವುದು (ಸಕಪ್ರ. ೨೨೦) ; ಭರಣಿಯಲ್ಲಿ ಹುಟ್ಟಿದವನು ಧರಣಿ ಆಳುವನು (ಗಾದೆ). ೩. ಭರಣಿನಕ್ಷತ್ರದಲ್ಲಿ ಬರುವ ಮಳೆ : ಮರೆಯ ಮೇಷದಂತೆ ಭರಣಿಯಾ ರಸದಂತೆ ಅರಿವೆ ರತುನ ಧಣಿ ಸ್ವರ್ಗವು ಸ್ಥಿರದಿ ಕಾಣಿಸಿದಂತೆ (ತಿರುಕೊ. ೩-೪).

ಭರಣಿಯ ಮಳೆ = ಸಾಮಾನ್ಯವಾಗಿ ಏಪ್ರಿಲ್ ಕೊನೆ, ಮೇ ಆರಂಭದಲ್ಲಿ, ಸೂರ್ಯನು ಭರಣಿನಕ್ಷತ್ರದಲ್ಲಿ ಸಂಚರಿಸುವಾಗ ಬರುವ ಮಳೆ: ಭರಣಿಯ ಮಳೆ, ಧರಣಿಯ ಬೆಳೆ (ಗಾದೆ). [ಸಂ. ಭರಣೀ]

**ಭರಣಿಗ** (ನಾ). ಸಾಗುವಳಿದಾರ : ಕೇರಿಯ ಮಹಾಜನಕ್ಕೆ ಮಾಡಿದ್ದ ಸಮೆಯಮೆನ್ತೆನೆ ಇಲ್ಲಿಯ ಕೆಯ್ಯುಂ ಮನೆಯುಂ ಜೇಷ್ಠನೊರ್ವ್ವನೊಡವೆ ಮಿಕ್ಕುದೆಲ್ಲಂ ಮೂವತ್ತಿಚ್ಛಾಸಿರ ಸಮೆಯಂ ಪೂರ್ವದ ಭರಣಿಗರ ಸನ್ತತಿಯಲ್ಲದೆ ಪೆಱಗ್ಗೆ ಕೆಯ್ಯುಂ ನೆಯುಂ ಮಾಱಲಾಗದು (ಸೌಇಇ. XI-i, ೬೪-೩೪ ; 1028). [ ಭರಣ$_1$ + –ಇಗ ]

**ಭರಣಿಗೆ** (ನಾ). ಒಂದು ಬಗೆಯ ಸಸ್ಯ : ನವುಲಾದಿ, ಪ್ಯುರೊಳೆ, ಭರಣಿಗೆ (ವೃಕ್ಷನಿ. ೭೮-೦೫೯೭). [ ? ]

**ಭರಣ್ಯ** (ನಾ). = ಭರಣ$_1$ ೪ : "ಕರ್ಮಣ್ಯಾ . . . ಭರಣ್ಯಂ, ಭರಣಂ, ಮೂಲ್ಯಂ, ನಿರ್ವೇಶಃ, ಪಣಃ –೧೧ ಕೂಲಿಯ ಪೆಸರುಗಳು" (ನಿಘಂಟು. ೩೧೭). [ಸಂ.]

**ಭರತ$_1$** (ನಾ). ೧. ಅಭಿನಯಿಸುವವನು; ನಟ: "ಶೈಲಾಲೀ . . . ಭರತಃ, ನಟಃ — ಈ ೮ ನಟ್ಟುವಿಗಂ'' (ಹಲಾಯು. ೯೭-೪೩೮) ; 'ನಟ' ಎಂದರೆ ಕುಣಿಯುವವನು ಎಂದು ಅರ್ಥ. ಇವರಿಗೆ ಭರತರು, ಶೈಲೂಷರು ಮುಂತಾದ ಹೆಸರೂ ಉಂಟು (ಸಂಗಾಟಿ. ೨೮). ೨. ನಾಟ್ಯಶಾಸ್ತ್ರ ; ಅಭಿನಯ ಕಲೆ : ಭರತಂಗೆ ಭರತಮುಮನರ್ಥಶಾಸ್ತ್ರಮುಮಂ . . . ಉಪದೇಶಂಗೆಯ್ದು (ಆದಿಪು. ೮-೬೦ ವ) ; ಭರತ ಛಂದೋವ್ಯಾಕರಣ ಸಂಗೀತ ಸಾಹಿತ್ಯ . . ಸ್ಮರಿಸಲೊಡನೆ ಮುಂದೋದ್ಗತಂ ಬಸವಂಗೆ (ಬಸಪು. ೩-೪೨); ಕವಚಾಗಮ . . . ಸಂಗೀತ ಭರತ ಆತೋದ್ಯದೆಂದು ಪ್ರೋದ್ಗೀತಾಗಮದ ಷೋಡಶಭೇದಂಗಳು (೭ವೀಕ. ೭೧). ೩. ನಾಟ್ಯಶಾಸ್ತ್ರವನ್ನು ಬರೆದ ಮುನಿಯ ಹೆಸರು : ಆ ಮುನಿಪ ಭರತನೊಲವಿಂ . . . ಗಂಧರ್ವಾಮರತತಿಗಿತ್ತನೊಲ್ದು ನಾಟ್ಯಶ್ರುತಿಯಂ (ರಾಜಶೇ. ೦-೦೦); ಭರತ ಮುನಿಪ್ರೋಕ್ತವಾದ ಭರತನಾಟ್ಯವನ್ನು ಸಂಪ್ರದಾಯಶುದ್ಧವಾಗಿ ಕಾಪಾಡಿಕೊಂಡು ಬಂದಿರುವ ನಾಟ್ಯಪದ್ಧತಿಗೆ ಭರತನಾಟ್ಯ ಎಂದು ಹೆಸರುಬಂದಿದೆ (ಭಾರತ. ೩೩೪). ೪. ಭಾರತವನ್ನಾಳಿದ ಒಬ್ಬ ಸುಪ್ರಸಿದ್ಧ ಚಕ್ರವರ್ತಿ : ಭರತನ ವಂಶದೊಳ್ ನೆಗಟ್ದ ಪಾಂಡುಗೆಪುಟ್ಟಿಯುಂ . . . ನೀಮುಮಿಮಾರದಡಿಯೊಳ್ ಶಿವಾಶಿವರಮಂಗಳನೆಟ್ಟುಱುಮಂತುಟಾದುದೇ (ಪಂಪಭಾ. ೩-೦೦) ; ಬಾಳಿಕೆಯನನುಜರಿಂದೊಡಗೂಡಿ ಧರ್ಮಜಂ ತಾಳಿದಂ ಭರತ ನಳ ನಹುಷಾದಿ ರಾಜರುಂ ಪೇಳುವೊಡವರ್ಗಿನಿತು ಗುಣವಿಲ್ಲವೆಂದು ಭೂಮಂಡಲಂ ಕೊಂಡಾಡಲು (ಜೈಮಿಭಾ. ೨-೪) ; ನಿನ್ನೀ ಕುಮಾರಂ ನೃಪೋತ್ತಮ ಭೂರಕ್ಷಣದಕ್ಷಣಂ ಭರತನಾಮಂದಾಳ್ದು ತಾಂ ಬಾಳುವಂ (ಶಾಕುಂತ ೧೦೪-೦೯೭). ೫. ದಶರಥನ ನಾಲ್ಕು ಮಕ್ಕಳಲ್ಲಿ ಒಬ್ಬ ; ರಾಮನ ತಮ್ಮ : ಶುಭದಿನ ಮುಹೂರ್ತದೊಳ್ ಸುಮಿತ್ರೆ ಲಕ್ಷ್ಮಣನಂ ಕೈಕೆ ಭರತನಂ ಸುಪ್ರಭೆ ಶತ್ರುಘ್ನನಂ ಪಡೆವುದುಂ (ಪಂಪರಾ. ೩-೦೩೩ ವ) ; ಅರಸುತನಕೊಡಬಡದೆ . . . ನೇಮವ ಧರಿಸಿ ಮರಳಿದು ಭರತ ನಂದಿಗ್ರಾಮಕ್ಕೆತಂದ (ತೊರರಾ. ೨-೬ ಸೂಚನೆ) ; ತೊಳೆದು ಜನನಿಯ ಜಠರವಂ ಜನಿಸಿ ಭವನದೊಳ್ಬೆಳೆದು ಲಕ್ಷ್ಮಣ ಭರತ ಶತ್ರುಘ್ನರೊಡಗೂಡಿ (ಜೈಮಿಭಾ. ೦೮-೨). ೬. ಪರಮಜ್ಞಾನಿಯಾದ ಒಬ್ಬ ಮಹರ್ಷಿ ; ಜಡಭರತ : ಉತ್ತಮದ್ವಿಜಕುಲದಲುದಿಸಿ ದಲುತ್ತಮೋತ್ತಮನಾತ್ಮವಿದ್ಯೆಯ ಪುತ ಳಿಯಪೊಲಖಿಳವಾಯಾವಿರತನಾ ಭರತ (ಭಾಗ. ೫-೭ ಸೂಚನೆ). ೭. ಭಾರತದೇಶ ; ಇಂಡಿಯಾ ; P ಸುಪ್ರಸಿದ್ಧನಾದ ಭರತ ಚಕ್ರವರ್ತಿಯು ಆಳಿದುದರಿಂದ ಈ ನಾಡಿಗೆ ಭರತವೆಂಬ ಹೆಸರು ಬಂದಿತೆಂದು ಪ್ರಾಚೀನರ ಅಭಿಪ್ರಾಯ : ಆ ತಿರ್ಯಗ್ಲೋಕದ ನಟ್ಟನಡುವೆ ಲವಣಜಲಧಿಪರಿವೃತಮಾಗಿ ಭರತ ಹೈಮವತ . . . ಐರಾವತಂಗಳೆಂಬೇೞುಂ ಜನಪದಂಗಳಿಂದಂ . . . ಎಸೆದು(ಆದಿಪು. ೦-೯೮ ವ); ನಾನಾಕ್ಷೇತ್ರದೊಳುತ್ತಮಂ ಭರತಮಾ ಭೂಭಾಗದೊಳ್ (ಸೌಇಇ. XX, ೯೭-೦೩; 1074); ಭರತಾರ್ಧಕ್ಕಧಿರಾಜನಪ್ಪ ಸುನನಂ ಪೆತ್ತಪ್ಪೆ ತನ್ನಂಗಿ (ಶಬ್ದಮಣಿ. ೨೦-೦೯೦). ೮. [ಜೈನ] ಆದಿತೀರ್ಥಂಕರನಾದ ವೃಷಭ

ದೇವನ ಹಿರಿಯ ಮಗ; ಪ್ರಥಮಚಕ್ರವರ್ತಿ : ಪುರುಪರಮೇಶ್ವರ ಪುತ್ರಂ ಚರಮಾಂಗಂ ಚಕ್ರವರ್ತಿಯೆಂದೊಡೆ ಪೇಟಲ್ ದೊರೆ ಪೆಱರಾರ್ ಭರತನೊಳೆನೆ (ಆದಿಪು. ೦೨-೦೦೧); ಭರತಂ ಮುನ್ನಾದಿತೀರ್ಥೇಶ್ವರನ ಚರಣಮಂ . . . ಪೂಜಿಸಿದಂ (ಅಜಪು. ೮-೨೩); ಭರತನನಳ್ಕಿ ಬಾಹುಬಲಿ ತುಳ್ಕಿ ಮರಳ್ಚಿದ ಪೂಗೊಳಂ (ಅನಂಪು. ೦೦-೦೧). [ಸಂ.]

**ಭರತ₂** 'ಭರತಿ' ನೋ.

**ಭರತಕಟ್ಟಳೆ** (ನಾ). ನಾಟ್ಯಶಾಸ್ತ್ರದ ನಿಯಮ : ಪಱಿ ಪಟಹಮಂ ಝುಕಟು ಝುಕಕೆಂದು ಬಾಜಿಸಲು . . . ಭರತಕಟ್ಟಳೆಗೆ ಕುಣಿದನೀಶಂ (ಗುರುಚಾ. ೦-೦೯). [ಭರತ₁ + ಕಟ್ಟಳೆ₁]

**ಭರತಕಳಾವಿದ** (ನಾ). ಭರತನಾಟ್ಯಶಾಸ್ತ್ರವನ್ನು ತಿಳಿದಿರುವವನು : ನೆರೆದೇಳ್ತಂದಿರ್ದುದಾಸ್ಥಾನದೊಳಮುಮ . . . ಭರತಕಳಾವಿತ್ಕುಳಂ (ರಾಜಶೇ. ೦೨-೪೩). [ಸಂ. ಭರತಕಲಾವಿದ್]

**ಭರತಕುಲ,** ಭರತಕುಳ (ನಾ). ೧. ಭರತಚಕ್ರವರ್ತಿಯ ವಂಶ: ಪಾಂಡವ, ಕೌರವರು ಹುಟ್ಟಿದ ರಾಜವಂಶ : ಭರತಕುಲಗಗನ ದಿನೇರಂ . . . ಗರ್ಭೋದಯಮಾದ್ರಿಯಿಂದುದಯಿಸಿದಂ (ಕಂಪಶಾ. ೦-೪೩); ಭರತಕುಲೇಂದುಕಲಂಕಂ. . . ಕುರುಕೇತುವೆಲ್ಲಿದಂ (ಗದಾಯು. ೬-೩೦). ೨. ಭರತಖಂಡದ ಜನತೆ,—ಪ್ರಜಾವರ್ಗ : ಶಿವನ ತಪಸ್ಸಿಗೆ ಭಂಗ ಬಂದರು ನವಕುಮಾರನ ಸಂಭವ ತಾರಕಾಸುರವಧೆಯು ಕಾದಿದೆ ಭರತಕುಲ ವಿಜಯಾಭವ (ಕಂಪು. ೧೮-೦೨). **ಭರತಕುಳ :** ೧. ಭರತಕುಳ ತಿಳಕರಿರ್. . . ನೆರೆದಿನಿಬರುಮೀ ಲಕ್ಷ್ಮಮನಿರದಕ್ಕಟ ಸರದೆ ತೆಗೆಯಲಾರ್ತಿರುಮಿಲ್ಲಾ (ಕಂಪಶಾ. ೨-೩೨). [ಸಂ.]

**ಭರತಕುಳ** 'ಭರತಕುಲ' ನೋ.

**ಭರತಕ್ಷೇತ್ರ** (ನಾ). ಭಾರತವರ್ಷ; ಭರತಭೂಮಿ : ಜಿನೇಂದ್ರವಂದನಾ ಭಕ್ತಿಯಿಂ ಪೋದಲ್ಲಿ ಭರತಕ್ಷೇತ್ರದೊಳೀ ಯುಗದೊಳ್ ತೀರ್ಥಂಕರರುಂ ಚಕ್ರವರ್ತಿಗಳುಮಪ್ಪರೆಂದು ಸರ್ವಜ್ಞರ್ ಬೆಸಸೆ (ಆದಿಪು. ೦೨-೦೦೩ ವ); ಮನೋಹರಮುಮೆನಿಸಿದ ಭರತಕ್ಷೇತ್ರದ ಮಧ್ಯದೊಳ್ ಮಧ್ಯದೇಶಮುಂಟು (ಜಗಂ. ೨-೦ ವ). [ಸಂ.]

**ಭರತಖಂಡ** (ನಾ).= ಭರತಕ್ಷೇತ್ರ : ನಮ್ಮ ಪ್ರಾಚೀನಗ್ರಂಥಗಳಲ್ಲಿ ಈ ದೇಶಕ್ಕೆ ಭರತಖಂಡ ಇಲ್ಲವೆ ಭರತವರ್ಷ ಎಂಬ ಹೆಸರು ಕೊಡಲ್ಪಟ್ಟಿದೆ (ಜಯಂಬರು. ೪-೦೦೦). [ಸಂ.]

**ಭರತಜ** (ನಾ). ಭರತವಂಶದಲ್ಲಿ ಹುಟ್ಟಿದವನು : ಭರತಜರೊಳ್ಮನ್ನಿಲ್ಲದ ಪರಿಭಾಷೆಯನುಂಟುಮಾಡಿ ಪೆಱಗಡಿಯಿಟ್ಟಂ ಕುರುರಾಜಂ (ಗದಾಯು. ೬-೩೯). [ಸಂ.]

**ಭರತಜ್ಞ** (ನಾ). ಭರತಪ್ರಣೀತವಾದ ನಾಟ್ಯಶಾಸ್ತ್ರವನ್ನು ಬಲ್ಲವನು; ನಾಟ್ಯವಿದ್ವಾಂಸ : ಸ್ವರಮನಱಿಗೆ ತಾಂ ಭರತಜ್ಞನಂದದಿಂದಾಸನ ಮನಱಿಗೆ ಜಾತ್ಯಶ್ವದಂತೆ (ಪಾರಪು. ೦೦-೬೬); ಲಲಿತತತವಿತತಾದಿ ವಾದ್ಯಾಕಲಿತ ಭರತಜ್ಞರಿಗೆ . . . ಭಂಡಾರಿಗಳಿಗೆಱೆದು (ಬಸಪು. ೩೯-೨೯); ಭರತಜ್ಞರ್ ಭಯಕಾಱ ನರ್ತಕ ನಟರ್ . . . ಒಪ್ಪುಗುಂ (ರಾಸ್ಕರಂ. ೦-೩೩). [ಸಂ.]

**ಭರತನಾಟ್ಯ** (ನಾ). ಭರತಮುನಿಯಿಂದ ನಿರೂಪಿತವಾದ ನಾಟ್ಯ : ಭರತಮುನಿಪ್ರೋಕ್ತವಾದ ಭರತನಾಟ್ಯವನ್ನು ಸಂಪ್ರದಾಯಶುದ್ಧವಾಗಿ ಕಾಪಾಡಿಕೊಂಡು ಬಂದಿರುವ ನಾಟ್ಯಪದ್ಧತಿಗೆ ಭರತನಾಟ್ಯ ಎಂದು ಹೆಸರು (ಶಾರದ. ೩೩೪). [ಸಂ.]

**ಭರತನಿಪುಣ** (ನಾ).=ಭರತಜ್ಞ : ಸರಸಕವಿಗಳು ತಾರ್ಕಿಕರು ವರಭರತನಿಪುಣರು ಗಾಯಕರು . . . ವೈತಾಳಿಕರು ರಂಜಿಸಿತು (ಕುವ್ಯಾಣ. ೨-೨೬). [ಸಂ.]

**ಭರತಪಕ್ಷಿ** (ನಾ). ಒಂದು ಬಗೆಯ ಹಕ್ಕಿ ; ನೀರುಕಾಗೆ: "ದಾತ್ಯೂಹಃ, ಕಾಲಕಂಟಕಃ-೨ ಭರತಪಕ್ಷಿಯ ಹೆಸರು" (ಸಿದ್ಧಾಂತಿ. ೦೩೯). [ಭರತ₁+ಪಕ್ಷಿ]

**ಭರತಪತಿ** (ನಾ).=ಭರತ ೮ : ಭರತಪತಿಯ ಶೋಕಾವೇಗಮಂ ವೃಷಭಸೇನಗಣಾಗ್ರಣಿಗಳಿಂತೆಂದಾಱಿಸಿದರ್ (ಆದಿಪು. ೦೬-೩೪ ವ). [ಸಂ.]

**ಭರತಭೂಮಿ** (ನಾ).=ಭರತಕ್ಷೇತ್ರ : ಭರತಭೂಮಿ ನನ್ನ ತಾಯಿ, ನನ್ನ ಪೊರೆವ ತೊಟ್ಟಿಲು (ಕೋಗಿಲೆ. ೩೪_೦). [ಸಂ.]

**ಭರತಮಂಡಲ** (ನಾ).=ಭರತಕ್ಷೇತ್ರ : ಅಂತು ಭರತಂ ಭರತಮಂಡಲ[ಸಾಕಾಂ, ಳ]ಮನೇಕಚ್ಛತ್ರಚ್ಛಾಯೆಯಿಂದಂ ಪ್ರತಿಪಾಲಿಸುತ್ತಮಿರೆಯಿರೆ (ಆದಿಪು. ೦೩-೪೪). [ಸಂ.]

**ಭರತಯ್ಯ** (ನಾ). ಒಬ್ಬಾತನ ಹೆಸರು : ಸ್ವಸ್ತಿಶ್ರೀ ಭರತಯ್ಯನ ದಿವ್ಯಲಿಕಿತ (ಎಕ. VIII, ಸೊರಬ. ೨೦೬-೦೪ ; ೯೦೨). [ಭರತ₁ + ಅಯ್ಯ₁]

**ಭರತರ್ಘು** 'ಬರತರಘು' ನೋ.

**ಭರತವರ್ಷ** (ನಾ).=ಭರತಕ್ಷೇತ್ರ : ನಮ್ಮ ಪ್ರಾಚೀನಗ್ರಂಥಗಳಲ್ಲಿ ಈ ದೇಶಕ್ಕೆ ಭರತಖಂಡ ಇಲ್ಲವೆ ಭರತವರ್ಷ ಎಂಬ ಹೆಸರು ಕೊಡಲ್ಪಟ್ಟಿದೆ (ಜಯಂಬರು. ೪-೦೦೦). [ಸಂ.]

**ಭರತವಾಕ್ಯ** (ನಾ). ೧. [ಕಾವ್ಯಮೀ] ನಾಟಕವೇ ಮೊದಲಾದ ರೂಪಕಗಳ ಕೊನೆಯಲ್ಲಿ ನಟನು ಬಂದು ಮಾಡುವ ಮಂಗಳಾಶಂಸನೆಯ ಶ್ಲೋಕ,—ಶುಭದ ಕೋರಿಕೆ : ಪೂಜ್ಯರು ಅನುಗ್ರಹಿಸುವುದಾದರೆ ಈ ಭರತವಾಕ್ಯವು ನೆರವೇರಿಸಲ್ಪಡಲಿ (ಶಾಕುಂತ. ೦೦೩-೨೮) ; ಭರತವಾಕ್ಯಮೀ ಐಹಿಕದ ನಾಟಕಕೆ ತಾನಾದೊಡಂ ಮೃತ್ಯು ತಾಂ ನಾಂದಿಯೈಸಲೆ (ಶ್ರೀರಾಮಾ. ೦೦೯-೨೦೪) ; ಭರತವಾಕ್ಯದೊಂದಿಗೆ ನಾಟಕ ಮುಗಿಯುತ್ತದೆ (ರವೀಂಶಾ. ೬೩). ೨. (ಅಲಂ) ಕೊನೆಯ ಮಾತು : ಅವರು ಈ ವಿಷಯಕ್ಕೆ ಸಂಬಂಧಪಟ್ಟಂತೆ ಭರತವಾಕ್ಯ ಹೇಳಿಬಿಟ್ಟರು (ರೂಢಿ). [ಸಂ.]

**ಭರತವಿದ್ಯೆ** (ನಾ). ನಾಟ್ಯವಿದ್ಯೆ ; ನಾಟ್ಯಕಲೆ : ಆತನ ಮಹಿಮೆಯಂ ಪೇಳ್ವಡೆ . . . ಸಕಳಭರತವಿದ್ಯಾಹೃದ್ಯ ಗಂಭೀರಭಾವೋವಿಪುಳವಿಜಯಲಕ್ಷ್ಮೀವಲ್ಲಭೋ ವಿಷ್ಣುದೇವಃ (ಎಕ. V (R), ತಿರುಮ. ೪೦-೦೦ ; 1180); ಭರತವಿದ್ಯಾವಿಷಯದಲಿ ಪರಿಚರಿಯತನ ನಮಗಲ್ಲದೀ ಸಂಗರದ ಸಾರಥಿತನವ ಮಱೆದೆವು ಹಲವು ಕಾಲದಲಿ (ಕುವ್ಯಾವಿ. ೩-೪೦). [ಸಂ. ಭರತವಿದ್ಯಾ]

**ಭರತಶಾಸ್ತ್ರ** (ನಾ).=ಭರತವಿದ್ಯೆ : ಭಾವಂ ವಿಭಾವಮೆಸವನುಭಾವಂ . . . ಅಱಿಗೆ ಭರತಶಾಸ್ತ್ರಕ್ರಮದಿಂ (ಕಾವ್ಯಾವ. ೬೯೮) ; ಭರತಶಾಸ್ತ್ರಾಂಭೋಧಿಚಂದ್ರಂ . . . ಎಸೆದಂ (ಎಕ. II (R), ೪೪೪-೪೦ ; 1181) ; ಭರತಶಾಸ್ತ್ರದೊಳು ನಾಟಕದೊಳು . . . ನುಡಿದರು (ಛಂಸ. ೪೩-೭೮). [ಸಂ.]

**ಭರತಾಗಮ** (ನಾ).=ಭರತವಿದ್ಯೆ : ಭರತಾಗಮದೊಳ್ ಮೂವತ್ತೆರಡನೆ ನೆಗಟ್ದಂಗಹಾರಮುಂ (ಆದಿಪು. ೪-೨೯) ; ಭರತಾಗಮಲಕ್ಷ್ಮಿಗೆ ನಿಜಕರಣ ಮಳಂಕರಣಮಂಗಹಾರಂ ಹಾರಂ (ಚಂದ್ರಪ್ರ. ೦೨-೦೬೯) ; ಪರಮಭರತಾಗಮೋಚಿತಪರಿವರ್ತನೆಯಿಂದೆ ನಾಟ್ಯದಂತರ್ಭೇದದ ಪರಿಯಂ ಪೇಳು (ರಾಸ್ಕರಂ. ೦-೩೪). [ಸಂ.]

**ಭರತಾತ್ಮಜ** (ನಾ). ಭಾರತದಲ್ಲಿ ಹುಟ್ಟಿದವನು ; ಭಾರತೀಯ : ಸೋದರರೆಲ್ಲಾ ಭಾವನೆ ಸರ್ವರೊಳಿರಿಸು. ಭರತಾತ್ಮಜನೆನ್ನಿಸು, ಕಂದಾ! (ಕಬಿಪು. ೭-೪). [ಸಂ.]

**ಭರತಾನ್ವಯ** (ನಾ). ಭರತವಂಶ : ಸತ್ಯಸೆಂಬವಂಗೆ ಭರತನೆಂಬವನಾದಂ ಆತನಿಂ ಬಱಿಕ ಭರತಾನ್ವಯಮೆಂಬುದಾದುದು (ಗದಾಯು. ೩-೪೪ ವ). [ಸಂ.]

**ಭರತಾನ್ವಾಯ** (ನಾ). = ಭರತಾನ್ವಯ : ಭರತಾನ್ವಾಯದೊಳಂದಿನಿಂದುವರೆಗಂ ಸಾಪತ್ನರೊಳ್ ಬದ್ಧಮತ್ಸರದಿಂದೆಮ್ಮನಕಾರಣಂ ಕದಡಿದ್ದೈ (ಗದಾಯು. ೭-೪). [ <ಸಂ. ಭರತಾನ್ವಯ ]

**ಭರತಿ**, ಬರತ$_1$, ಭರತ$_2$, ಭರತೆ, ಭರ್ತಿ(ಗು). ೧. ತುಂಬಿದ; ಸಂಪೂರ್ಣವಾದ: ಅಲ್ಲಿ ತೊಗಲ ಬಾವಲೀ ಚೀರತಾವ ಭರತಿ ಹಗಲಿನೊಳಗ (ಗಂಗಾತ. ೩೭-೦೩). ೨. ಅಧಿಕವಾದ; ಹೆಚ್ಚಾದ: ಒಂದುಸಲ ಆಕೆಗೆ ಭರತಿ ನೆಗಡಿ ಬಂದು ಬಿಟ್ಟಿತು (ದೀಕ್ಷ್ಮ. ೦೯). ೩. ಇಡಿಯದಾದ; ಪೂರಾ. ೪. ಮಜಭೂತಾದ; ಕಟ್ಟುಮಸ್ತಾದ. (ನಾ). ೫. ಸಮುದ್ರ ಅಥವಾ ನದಿಯಲ್ಲಿ ಏಳುವ ಅಲೆಗಳ ಉಬ್ಬರ: ಭರತಿ ಅಂದರೆ ಏರುವುದು ಅಥವಾ ಉಕ್ಕುವುದು; ಓಹೋಟಿ ಅಂದರೆ ಇಳಿಯುವುದು (ಮುಂಬಯಿ. ೬-೩೬೨); ಚಿನ್ನಿಸಕ್ಕರೆಯು ಬೆರೆಯೆ ಭರತಿ ಉಕ್ಕುವುದು ಕ್ಷೀರಸಿಂಧು (ಸೂರ್ಯಶಾ. ೩೪-೦೦); ನಮ್ಮ ಸಾಹೇಬದಂಪತಿಗಳಿಗೆ ಯಾರೋ ಭರತಿ ಬರುವುದು ಎರಡು ಗಂಟೆಗೆ ಎಂದು ಹೇಳಿದ್ದರಿಂದ ಅವರು ಅದನ್ನೇ ನೆಚ್ಚಿಕೊಂಡಿದ್ದರು (ಸ್ವ.ಶಿತ. ೯೬೪). ೬. ಹೆಚ್ಚಳ; ಅತಿಶಯ; ಆಧಿಕ್ಯ: ದುಃಖದ ಭರತಿ ಇಳಿಯುತ್ತ ಬಂತು (ಅಶೋಕ. ೦೯೬). ೭. ಜೋರು; ಭರಾಟೆ: ಸವಣೂರ ನವಾಬನು ಹೋಗುತ್ತಿದ್ದಾಗ ಜಾತ್ರೆಯು ವೈಳಿತವಾಗಿ ಆಗುತ್ತಿತ್ತು; ಆದರೆ ಈಗ ಅದರ ಭರತಿಯು ಮೊದಲಿನಷ್ಟು ಇರುವುದಿಲ್ಲ (ಕಶಾಗೆ. ೩೦೬); ಜಾತ್ರೆ ಮುಗಿದು ಶಿವರಾತ್ರಿಯಾಯ್ತು ಶ್ರಾವಣಕೆ ತುಂಬು ಭರತಿ (ವಿಲಹು. ೩೫-೨೦). ೮. (ತೆರವಾದ ಸ್ಥಳವನ್ನು) ತುಂಬುವುದು: ಸ್ಥಳಗಳ ಭರತಿಯ ಕಾಲಕ್ಕೆ ಅವಳು ನನಗೆ ಪ್ರತಿಸ್ಪರ್ಧಿಯಾಗಿ ಬರುವಳೆಂದು ನಾನು ಎಣಿಸಿರಲಿಲ್ಲ (ಹೀಮಂತ. ೨೬೬); ನಾನು ನನ್ನ ಶಾಲೆಯ ಭರತಿಗಾಗಿಯೇ ಎಂದು ನಾಲ್ಕಾರು ಮಕ್ಕಳನ್ನು ಒಟ್ಟುಮಾಡಿ ತಂದದ್ದುಂಟು (ಸ್ವಸ್ವಹೊ. ೬). **ಬರತ$_1$**: ೫. ನೀರು ಅಷ್ಟೊಂದು ಇಳಿದಿರಲಿಲ್ಲ . . . ಬರತದ ನೀರೂ ಸೇರಿರಬೇಕು (ಮರಕು. ೩೨); ಈ ಖಾರಿಯ ಮುನ್ನೂರು ನಾನ್ನೂರು ಗಜ ಉದ್ದಗಲವಾದ ಹರಹು, ಬರತದ ನೀರಿಗೆ ತುಂಬಿದ ಜಲಾಶಯವಾಗುತ್ತದೆ (ಜಾರುದಾ. ೩೦). **ಭರತ$_2$**: ೫. ಓಟ ಭರತದ ಭರವಸದ ಹೊಯ್ದಾಟದುರು ಲಹರಿಗಳ. . .ರೌದ್ರದಿಂದ ಸಮುದ್ರ ರಂಜಿಸಿತು (ಕೊರಲಾ. ೯-೦೨-೨); ನಾವಿಕರು ದಿಗ್‌ನಿರೂಪಣೆ ಮಾಡಲಸಮರ್ಥರಾಗಿ ಭರತವನ್ನು (Tide) ಬಿಟ್ಟು ಬಹಳ ದೂರ ಹೊರಟು ಹೋಗಿದ್ದರು (ಕಶಾಕುಂ. ೧). **ಭರತೆ**: ೫. ಒಂದೊಂದು ಕ್ರಾಂತಿಯು ಕಾವ್ಯೋದಧಿಯಲ್ಲಿಯ ಭರತೆಯಿದ್ದಂತೆ (ಪವ್ಯಕಾ. ೨೬). **ಭರ್ತಿ**: ೩. ಅಬ್ಬಾ ಚಂಡಿಯೇ! ಭರ್ತಿ ಒಂದು ತೆಂಗಿನಮರದಷ್ಟು ಎತ್ತರವಿರುವ ಹಾಗೆ ಕಾಣಿಸಿದಳು (ಸ್ವಸ್ವಹೊ. ೯೨). ೪. ಏನು ಗಟ್ಟಿಮುಟ್ಟಾಗಿದ್ದಾನೆ! ತುಂಬು ಗಲ್ಲ, ಬಾರೀಕ ಮೀಸೆ, ಭರ್ತಿ ಆಳು, ನನಗಂತೂ ಸುಬ್ಬನೇ ಬಂದಂತಾಯಿತು (ಹುಂಸ್ಥ. ೭೯). ೮. ಸೈನ್ಯಕ್ಕೆ ಭರ್ತಿಯ ಕೆಲಸ ಪ್ರಾರಂಭವಾಯಿತು (ಕೂಠಿ). ೯. ರಂಗು; ಏರಿಕೆ: ಆಟ ಒಳ್ಳೆ ಭರ್ತಿಗೆ ಬಂದಾಗ ಆಳಲಿಕ್ಕೆ ಹತ್ತಿದಿ (ಅಮಾಶಿ. ೮೩).

**ಭರತ ಇಳಿತ** = ಸಮುದ್ರದ ಉಬ್ಬರ ಮತ್ತು ಇಳಿತ: (ಕ). **ಭರತವೇಳು** = ಸಮುದ್ರವು ಉಬ್ಬರಗೊಳ್ಳು. — ಉಕ್ಕೇರು: ಭರತಚಕ್ರಿಯ ಪುತ್ರರಲ್ಲವೆ ನುಡಿದರು ಭರತವೆದ್ದಂತೆ ಕ್ಷೀರಾಬ್ಧಿ (ಭರತ. ೯೩-೬೮). **ಭರತಿ ಆಗು, ಭರ್ತಿಯಾಗು** = ಪೂರ್ಣವಾಗು; ತುಂಬು: ಒಂದು ಗೋಡೆಗೆ ಹಚ್ಚಿಟ್ಟಿದ್ದ ಭಾರಿ ಸೆಲ್ಫು ಫಲಾಹಾರದ ಡಬ್ಬಿಗಳಿಂದ ಭರತಿ ಆಗಿತ್ತು (ವೈಶಿ. ೦೦); ಉತ್ತರಕಡೆ – ಘೋಲರ – ಎಂಬ ಬಂದರುಪಟ್ಟಣದಿಂದ ಹಡಗುಗಳಿಗೆ ವಿಶೇಷವಾಗಿ ಹತ್ತಿಯು ಭರ್ತಿಯಾಗುತ್ತದೆ (ಭೂಗೋಳ. ೬೪); ರಾಯರ ಮನೆಯ ದೊಡ್ಡ ಹಾಲೆಲ್ಲಾ ಜನರಿಂದ ಭರ್ತಿಯಾಗಿತ್ತು (ರಾಯಳ. ೫೨). **ಭರತಿ ಓಹಟಿ, ಭರತಿಓಹೋಟಿ** = ಭರತ ಇಳಿತ: ಭರತಿ ಓಹಟಿಯು, ಕ್ಷಯವ ವೃದ್ಧಿಯನು ಅರಿಯದೆನ್ನ ಓಗ್ಗ (ಅರಳು. ೩೯೨-೦೩); ಸಮುದ್ರದ ನೀರು ಸ್ಥಿರವಾಗಿ ನಿಲ್ಲುವುದಿಲ್ಲ. ಸರ್ವಕಾಲವೂ ಹಿಂದಕ್ಕೆ ಮುಂದಕ್ಕೆ ಹೋಯಿಮಾಡುತ್ತದೆ. ಇದಕ್ಕೆ ಭರತಿ ಓಹೋಟಿಗಳೆಂತಲೂ ಏರಿಳಿತಗಳೆಂತಲೂ ಅನ್ನುವರು (ಮುಂಬಯಿ. ೬-೩೬೨). **ಭರತಿ ಮಾಡು, ಭರ್ತಿ ಮಾಡು** = ತುಂಬು; ಪೂರ್ಣವಾಡು: ಹುಂಡಿಗಳು ತೋರಿಸಿ ಲಾಗು ಮಾಡುವುದು ಮತ್ತು ಭರತಿ ಮಾಡುವುದು (ಮುಂಬಪ್ರ. ೨೬೯); ಹೀಗೆ ಹೊರ ಹೋದ ನೀರಿನ ಬದಲಿಗೆ ಬೇರೆ ನೀರನ್ನು ಆಗಾಗ ಭರ್ತಿ ಮಾಡುತ್ತಿರಬೇಕು (ಆಡುಸ್. ೬೬); ರಾಜಾದಾಯವನ್ನು ಹೆಚ್ಚಿಸಿ ಬರಿದಾಗಿದ್ದ ಬೊಕ್ಕಸವನ್ನು ಭರ್ತಿ ಮಾಡಿದನು (ಕೃದೇವ. ೦೨). **ಭರತಿ ಹಾಕು** = ತುಂಬು; ಭರ್ತಿ ಮಾಡು: ನಮಗೂ ನಿಮಗೂ ನಡುವೆ ಬಿದ್ದಿರುವ ಈ ಕೊರಕಲಕ್ಕೆ ಭರತಿ ಹಾಕುವಂತಾಗಬಹುದು (ಸಂಸ್ಕಾರ. ೨ ಒಳಮಾತು). [←ಹಿಂ. ಮರಾ. ಭರತೀ]

**ಭರತೆ** 'ಭರತಿ' ನೋ.

**ಭರತೋರ್ವಿ** (ನಾ). = ಭರತಕ್ಷೇತ್ರ: ಅಪ್ಪನೆಯಿಂ ತಜ್ಜಿನಚಕ್ರವರ್ತಿ ಜಿನನಾಥಂ ಷೋಡಶಂ ಧರ್ಮಚಕ್ರನಿಯುಕ್ತಂ ಭರತೋರ್ವಿಗಿಂತು ಸಲೆ ನೋಂತಂ ಶಾಂತಿತೀರ್ಥೇಶ್ವರಂ (ಶಾಂತಿಪು. ೦.೦೬). [ಸಂ. ಭರತೋರ್ವೀ]

**ಭರದಂಡು**, ಬರ್ದಂಡು, ಭರದಾಂಡ್, ಭರದಾಂಡು, ಭರ್ದಂಡು (ಗು). ೧. ಭರದಿಂದ; ಪೂರ್ಣವೇಗದಿಂದ. ೨. (ಅಲಂ) ಅತಿಶಯವಾದ. (ನಾ). ೩. ಬಹಳ ವೇಗದ ಓಟ; ರಭಸವಾದ ಓಟ: ರಥ್ಯಃ . . . ಭರದಂಡು ಕುದುರೆ (ಸಿದ್ಧಾಂತಿ. ೨೫೦). **ಬರ್ದಂಡು**: ೨. ಎಂಥಾ ಆಳು ಅಂತೀರೀ? ಬರ್ದಂಡಾಳು! ಅವರನ್ನ ಕಂಡ್ರೇ ಹುಲಿ ನಡುಗಬೇಕು (ಮಲಿಮ. ೩೦೦). ೩. ಗುಡ್ಡವಿಳಿದು ದೊಳ್ಳನೇನೊ ಬರ್ದಂಡು ಓಡಿದನು (ಮಲಿಮ. ೯೯೯). **ಭರದಾಂಡ್**: ೩. "ಧೋರಿತಕು—ಬಿರು ನಡೆ. ಭರದಾಂಡ್" (ಸಿದ್ಧಾಂತಿ. ೨೫೦). **ಭರದಾಂಡು**: ೩. ಆ ಗುಂಪು ಭರದಾಂಡು ಬಿಟ್ಟುಕೊಂಡು ಹೊರಟುಹೋಯಿತು (ಸಡಿದಾ. II. ೮೫೩). **ಭರ್ದಂಡು**: ೩. ಭರ್ದಂಡು ಹೋಗಿ ಬಂದುಬಿಡ್ತೀನಿ, ಒಂದು ಎಲೆಡಕೆ ಹಾಕೋ ಹೊತ್ತಿನಲ್ಲಿ! (ಮಲಿಮ. ೬೬೬). [←ಮರಾ. ಭರದವಡ, ಭರದೌಡ]

**ಭರದಾಂಡ್** 'ಭರದಂಡು' ನೋ.

**ಭರದಾಂಡು** 'ಭರದಂಡು' ನೋ.

**ಭರದ್ವಾಜ** (ನಾ). ೧. ಒಂದು ಜಾತಿಯ ಹಕ್ಕಿ; ಹೆಗ್ಗಾರ: "ಹೆಗ್ಗಾರಂ ಭರದ್ವಾಜವೆಂದೆನಿಕ್ಕುಂ" (ಮಂಗರಾ. ೫೦-೪); ಗಿಡಗಂ ಚಕೋರ ಸರಸ ಭರದ್ವಾಜಾಳಿಗಳ್ . . . ಚಾತಕಮಾಕುಕರ್ಣಂ ತತ್ತರುವ್ರಾತದೊಳ್ (ಹರಿವಂಶ. ೪-೪೬); ಮರುದಿನಂ ಕೋಕಿಲ ಭರದ್ವಾಜ ಬರ್ಹಿಕೇಕಾ ಧ್ವನಿಗಳೊಡನೆ ಮೊಗದೋರುತಿರೆ. . . ಗುಹಂ ತರಿಸಿದನು ನಾವೆಯಂ (ತ್ರೀರಾಮ. ೯೮-೫೩೯). ೨. ಒಬ್ಬ ಋಷಿಯ ಹೆಸರು: ಭರದ್ವಾಜಂ ದ್ರೋಣಂಗೆ ಕೃಪನ ತಂಗೆಯಪ್ಪ ಶಾರದ್ವತೆಯಂ ತಂದು ಮದುವೆಯಂ ಮಾಡಿದೊಡೆ (ಪಂಪಭಾ. ೨-೪೩ ವ): ಆ ಭರದ್ವಾಜನು ನಿಜೋನ್ನತವೈಭವದಿನಾ. . . ಸುರರ ಸುಖಾಭಿಲಾಷೆಯ ಬಿಡಿಸಿದನು ವಿವಿಧೋಪಚಾರದಲಿ (ತೊರಲಾ. ೨-೬-೦೫); ವಿದ್ವತ್ಸಭಾವಲಯಮಜಾಯೆ ವಿರಚಿಸಿದಂ ಭರದ್ವಾಜಗೋತ್ರಭವನಣ್ಣಮಾಂಕನ ಸುತಂ (ಕೈವಲ್ಯಾ. ೦-೦೦). [ಸಂ.]

**ಭರಪೂರ** (ಅ). ೧. ಸಂಪೂರ್ಣವಾಗಿ; ಪೂರ್ತಿಯಾಗಿ: ಒಬ್ಬರ ಕಂಡರ ಒಬ್ಬರ ಮನಸು ಅಬ್ಬರ ತುಬ್ಬರ ಆಗತೈತಿ ಇಬ್ಬರ ಕೂಡಿ ಬದುಕಿನ ಹಬ್ಬ ಮಾಡಿಲ್ಲ ಭರಪೂರಾ (ಅರಳು. ೨೯೦ ೯); ಕರಡಿಗಳು ಚಳಿಗಾಲದ ಆರಂಭದಲ್ಲಿ ಒಮ್ಮೆ ಹೊಟ್ಟೆಯನ್ನು ಭರಪೂರ ತುಂಬಿಕೊಂಡು ಗವಿಯೊಳಗೆ ಹೋಗಿ ಬಿದ್ದವೆಂದರೆ ನಾಲ್ಕು ತಿಂಗಳು ಸ್ಥಳ ಬಿಟ್ಟು ಕದಲುವುದಿಲ್ಲ (ಮುಂಬಯಿ. ೫-೦೬೮). ೨. ಯಥೇಚ್ಛವಾಗಿ; ಬೇಕಾದಷ್ಟು: ಸುರೇಶ, ಸತೀಶ್,- ಕಿಶೋರರಿಗೆ ಭರಪೂರ ಅರಿವೆ-ಅಂಚಡಿ ಇದ್ದವು (ದೀಶಹ. II. ೨೦೪).

[←ಹಿಂ. ಮರಾ. ಭರ್‌ಪೂರ್]

**ಭರಭರ** (ನಾ). ಒಂದು ಅನುಕರಣ ಶಬ್ದ : ಅವ್ವಾ ಭರಭರ ಬಡಿಸು. ನಾನು ಪೋಲೀಸ ಕಚೇರಿಗೆ ಹೋಗಬೇಕು (ರಕ್ತರ್ಶ. ೨೬೦).

**ಭರಭರನೆ** (ಅ). ಒಂದು ಅನುಕರಣಾವ್ಯಯ; ಬಹಳ ವೇಗವಾಗಿ; ಬಹುಬಿರುಸಾಗಿ : ಭರಭರನೆ ಹೋಗಿ ಭೈರವದೇವರ ಸಂಗಡ ಭೈರವಾಸ ಕೇಳಿದ (ಗಾದೆ). [ಭರಭರ + – ಅನೆ$_1$]

**ಭರಭರಾಟಿ, ಭರಭರಾಟೆ** (ನಾ). ೧. ಏರಾಟ ; ಏರಿಕೆ ; ಜೋರು : ಈ ಅವಧಿಯಲ್ಲಿ, ಹಿಂದುಸ್ಥಾನದಲ್ಲಿ ಮುಂಚಿನಿಂದಲೂ ಭರಭರಾಟಿಯಲ್ಲಿ ನಡೆಯುತ್ತ ಬಂದ ಅನೇಕ ಉದ್ಯೋಗಗಳು ನಾಶವಾದವು (ಮಹಾಜೋ. ೧೧); ವ್ಯವಸಾಯವು ಭರಭರಾಟಿಯಿಂದ ಬೆಳೆಯಿತು (ಕೋಶಾ. ೬೧). ೨. ಸಡಗರ : ಕೃಷ್ಣಪ್ಪ ಭರಭರಾಟಿಯಿಂದ ಪೂರ್ತಿ ಸೂಟಿನಲ್ಲಿ ಬರುತ್ತಿದ್ದರು (ಕೆಂಮುಬಿ. ೫೬). ೩. ಆಧಿಕ್ಯ; ಹೆಚ್ಚಳ : ಹವೆಯ ಭರಭರಾಟಿಯು ಕಡಿಮೆಯಾಗತೊಡಗಿತು (ನಾಕಥ. ೩೮). **ಭರಭರಾಟೆ** : ೧. "ಭರಭರಾಟೆ= ಏರಿಕೆ" (ಶಾವಕೋ. ೨೫). [←ಮರಾ. ಭರಭರಾಟ]

**ಭರಭರಾಟೆ** 'ಭರಭರಾಟಿ' ನೋ.

**ಭರಭರಿ** (ನಾ). = ಭರಭರಾಟಿ ೧ : ಇಲ್ಲಿಯ ವ್ಯಾಪಾರವು ಒಳ್ಳೇ ಭರಭರಿಯಲ್ಲಿ ಇರುವುದರಿಂದಲೂ . . . ಇದೇ ಮೊದಲನೇ ಪಟ್ಟಣವಾಗಿರುತ್ತದೆ (ಮುಂಬಯಿ. ೬-೧೨೬). [ ← ಮರಾ. ಭರಭರ ]

**ಭರಭಾರ** (ನಾ). ರಕ್ಷಣೆಯ ಹೊರೆ; ಕಾಪಾಡುವ ಹೊಣೆಗಾರಿಕೆ : ತಂಗೆವಿರ ಭರಭಾರಕ್ಕಮುಡಿಸಿದ ಬಡತನಕ್ಕವೆಡರ್ಗವಳ್ಕದೆ ನೀಂ ಪೊತ್ತು ನಿಸ್ತರಿಸುತ್ತುಮಿರೆ (ಶಾಂತಿಪು. ೪-೬೬ ವ); ಗುರುವೆ ಭರಭಾರವನು ಹೊಚಿಸಲು ಕರುಣವಿಲ್ಲವೆ ನಿನಗೆ (ಪ್ರಭುಲೀ. ೧೬-೬); ಎನ್ನ ಭರಭಾರ ನಿಮ್ಮದು ಹಾನಿವೃದ್ಧಿಯು ನಿಮ್ಮದು (ಸಿದ್ಧಪು. ೨೪-೬). [ಸಂ.]

**ಭರಭಾರಿ** (ನಾ). ಪೋಷಣೆಯ ಭಾರವನ್ನು ಹೊತ್ತಿರುವುದು : ಬೆಳೆಸಿರಿಯ ಭರಭಾರಿ ಕಾಶ್ರಮಸಂಘವ್ಯೈರಿ . . . ಕಾವೇರಿ ಭೋರ್ಗರೆದೆಸೆಮುದು (ಕಾವಶಂ. ೨-೬). [ ಸಂ. ಭರಭಾರಿನ್ ]

**ಭರವತ್** 'ಭರವಮು' ನೋ.

**ಭರವಮು, ಭರವತ್, ಭರಾಮು** (ನಾ). ೧. ಮನ್ನಣೆ; ಗೌರವ : ನಮ್ಮ ಪತಾರದಲ್ಲಿ ಅಜ್ಜನ 'ಭರವಮು' ದಿನೇ ದಿನೇ ಹೆಚ್ಚುತ್ತಿದ್ದರೂ ತಂದೆಯ ಕಾರ್ಯಕ್ಕೆ ನೆರವಾಗಿರಬೇಕು (ಹಾತಕ. ೪); ಮೂಮುಂಜಿ ತನ್ನ ಮಾತಿಗೆ ಭರವಮು ಬಾರದೆಂದು ತಿಳಿದು, ಜತೆಗೆ ಬೇರೆ ಯಾರೋ ಗುರುತದವರನ್ನು ಕೊಟ್ಟಿದ್ದ (ಮುಗಿದು. ೨೯೩). **ಭರವತ್** : ೧. ಸರಕಾರದವರು ಆಯಾಯ ಗ್ರಾಮವಲ್ಲಿರುವ ವ್ಯಾಪಾರಿಗಳಲ್ಲಿ ಸ್ವಲ್ಪ 'ಭರವತ್' ಉಳ್ಳವರನ್ನು ಆರಿಸಿ ಅವರ ಮುಖೇನ ಕೊರತೆಯ (ಹಸುಗೆಯ) ಸಾಮಾನುಗಳ ಬಟವಾಡೆ ಮಾಡಿಸುತ್ತಿದ್ದರು (ರಾತಂಪ್ರ. ೯). **ಭರಾಮು** : ೧. ಆ ಗ್ರಾಮದಲ್ಲಿ ತಹಶೀಲದಾರರ ಭರಾಮನ್ನು ನಾನು ಗಳಿಸಿಕೊಂಡೆ (ಮ್ಯಾಲಮಾ. ೫೦); ನನ್ನ ಮಾತಿಗೊಂದು ಭರಾಮು ಬಂದೀತೆ ? (ಕರುಕ. ೪೯). ೨. ಯೋಗ್ಯತೆ : ಭಟ್ಟರ ಭರಾಮಿಗೆ ಒಂದು ಹೊಲೆಯರ ಕುಟುಂಬವನ್ನು ಅನ್ನ ಹಾಕಿ ಸಾಕಿಕೊಂಡು ಹೋಗುವುದು ಯೋಗ್ಯವಾದ ಮಾತಾಗಿತ್ತು (ದಂಬಸಾ. ೧೧).

**ಭರಾಮಿನವರು** = ಗೌರವಸ್ಥರು; ದೊಡ್ಡಮನುಷ್ಯರು : ಅಧ್ಯಕ್ಷರು ಬೇಕು. ನಿಜ, ಭರಾಮಿನವರು ಬೇಕೆಂಬುದೂ ನಿಜ (ಮುಗಿದು. ೯೬).

[ ← ಮರಾ. ಭರವತ್ ]

**ಭರವಶ** (ನಾ). ೧. ಬಹಳ ಬಿರುಸು ; ಅತಿ ವೇಗ : ಸುಂದರಂ ಗಾಂಪನೆ ಬೆಳ್ಳಿರಲೆಗೆ ಗಜಿಮುಳಿದವೋಲ್ ಭರವಶದಿಂ ಪೊಕ್ಕನೋಡಿ ಲಂಕಾಪುರಮಂ (ಸಂರಾವಾ. ೯-೧೪೦) : ಪುಣ್ಯದೇವತೆಯುರುತರದಿ ತದ್ಧಾತ್ರಿ ವೇಷದಿ ಬರಲು ಕಂಡಬಲೆ ಭರವಶದಿ ಕೊಂಡುಯ್ದು ತಪವಾಚರಿಪ ಮುನಿಗಳ ಸನ್ನಿಧಿಯೊಳೊಲಿದಿರಿಸಿ (ಚೀಲಂಚ. ೫-೪೩). ೨. ಸ್ಪಷ್ಟ; ಖಚಿತ : ಹರನಯನ ಪೊನ್ನಿಗರ್ಗಂ ಭರವಶದಿಂ ಮೂವದಂ ಯಿದು ಖಂಡಂಗಮಾಗಲುಂ ಇರದೆ ಶರಾದ್ರಿ ಪೊನ್ನಿಗೆ ಭರವಶದಿಂ ತ್ರಿಳಿಯ ಪೇಳ್ಗು ಗಣಿತವಿಳಾಸ (ಭಾಸ್ಕರ. ೧೯-೧). [ಸಂ.]

**ಭರವಸ, ಬರವಸ, ಭರವಸೆ, ಭರೋಸ**(ನಾ). ೧. ನಂಬಿಕೆ: ವಿಶ್ವಾಸ : ಕಂಬಿಸುಂ ಪೊತ್ತುನ್ನತೋತ್ಸುಕವೆತ್ತು ಭರವಸದಿಂ ನಡೆತರಲು (ಬಸವ. ೪೩-೨೬); ಕರುಣಾಕರ ನೀನೆಂಬುವುದೇತಕೊ ಭರವಸವಿಲ್ಲೆನಗೆ (ಪುರಂದ. ೨-೬೧ ಪಲ್ಲವಿ) ; ಭರವಸವಿಲ್ಲದ ಮಾತು ಕೇಳಿ ಬಂಡವಾಳ ಕಳಕೊಂಡ (ಗಾದೆ). ೨. ಅಪೇಕ್ಷೆ; ಆಕಾಂಕ್ಷೆ : ಅದಱಿಂ ನಿಮ್ಮಂ ಪರಿವರ್ತಿಪೆರಸು ನೋಡುವ ಭರವಸದಿಂ ಪಾಂಡ್ಯದೇಶದಿಂದಂ ಬಂದೆಂ (ರಮಾಗಮ್ಯ. ೫-೦೬೦); ಪರಮಸಾಹಸನಾಗಿಯಿಂತಿಹ ಗಿರಿಯೊಳೆಮ್ಮಂ ನೋಡಲೆಂತ್ಯೆ ಭರವಸದೊಳೆಯ್ತಂದಿರಿ (ಬಸವ. ೨೦-೬). ೩. ಆಸರೆ : ಅವಲಂಬನೆ : ಅರಸನ ಸಭೆಯೊಳಗೆ ಕುಱಿತು ಆಡಲು ಬೇಡ ಸರಸ ನಿಂದೆಯಲಿ ಇರಬೇಡ ಒರ್ವರಲಿ ಭರವಸವು ಬೇಡ (ಸರ್ವಜ್ಞ. ೬೪೩). ೪. ರಭಸ ; ವೇಗ ; ಬಿರುಸು : ಉಸುರ್ವ ಪಡಿಯುಂ ಬೇಡಲೊಲ್ಲದೆ ಸಸಿನೆ ತನ್ನೊಡತಿಯ ಮನೆಗೆ ಭರವಸದೊಳೆಯ್ತಂದಿಂದುಮುಖಿಗಿಂತೆಂದಳಾ ದಾಸಿ (ಬಸವ. ೧೧-೨೧); ಗುರುಸುತನನೊಟ್ಟೈಸಿ ಶಲ್ಯನ ಭರವಸವ ನಿಲಿಸಿದನು (ಕುಮಾರವ್ಯಾ. ೫-೨೬); ಅಸುರಬಲ ವಾನರರ ಕುಸುರಿದಱಿಯಲು ಭರವಸದಿಂದ ಸಂಜೀವಿನಿಯ ತಂದು (ಪುರಂದ. ೨-೬೫-೬). **ಬರವಸ**: ೪. ದುರುಳಂ ಪ್ರಹಾರವರ್ಮಂ ಪರನೃಪತಿಯ ಕೆಯ್ಗೆ ಸಿಕ್ಕಿದಂ ರಾಜ್ಯಕ್ಕಾನರಸೆಂದು ವಿಕಟವರ್ಮಂ ಬರವಸದಿಂ ಪಟ್ಟಬದ್ಧನಾದಂ (ದಶಕು. ೨-೦೬೦). ೫. ಉದ್ದೇಶ : ಸಂಕಲ್ಪ : ಭರವಲ್ಯೆತಂದು ಶುಕ್ರಾಚಾರ್ಯರು ಕಾಣುತಿರಲವರುಮತಿಥಿಪೂಜೆಯ ಮಾಡಿ ನೀ ಬಂದ ಬರವಸವದೇನೆಂದು ಕೇಳಲ್ಕೆ (ತುರಂಗ. ೬-೧೧). **ಭರವಸೆ** : ೧. ಈಯೊಂದು ಭರವಸೆಯೊಳು ನಾವು ನಡೆದಂದು ನಮಗಾವ ಭಂಗವು ಇರದು (ಇಂಶಾಚ. ೦೪೦-೯೨); ನನ್ನ ದುಃಖಕ್ಕೆ ಕಿವಿಗೊಟ್ಟು ಮರುಗಿದ್ದೀರಿ ಎಂಬ ಭರವಸೆಯಿಂದಲೇ ಬರೆಯುತ್ತಿದ್ದೇನೆ (ಕಮನ. ೨೩೦). ೬. ಆಶ್ವಾಸನೆ : ನಿಮ್ಮಿಂದ ಸಹಾಯದ ಭರವಸೆ ಬೇಕು (ಮಣಿಪಿ. ೯೫). ೭. (?) : ಭೂಮಿಯ ಹೊಱೆಯನಿಳುಹುವೆನೆಂದು ಬಂದವನಱಿಸಿ ಕಾಂಬುವುದಿದಾವ ಭರವಸೆ ಕಾದ ಬರಹೇಳು (ಕೌಶಿಕಾ. ೨೭-೬). **ಭರೋಸ** : ೧. ನಾಯಕರಿಗೆ ನಿಮ್ಮ ಮಾತಿನ ಮ್ಯಾಲ ಸಂಪೂರ್ಣ ಭರೋಸಾ ಅದ (ಶಾಗ್ಯಶ್ರೀ. ೨೫); ಅವಂದ್ಯಾನ ನನಗ ಭರೋಸ ಇಲ್ಲ ತಗೀರಿ (ಪಡರಾ I. ೨೬೫).

**ಭರವಸೆ ಕೊಡು** = ಆಶ್ವಾಸನೆ ನೀಡು; ಮಾತು ಕೊಡು : ತಂದೆ ಭರವಸೆ ಕೊಟ್ಟರು (ಪತದಾ. II. ೧೧೧೯); ಮಂಜೂರು ಮಾಡಿಸಿ ಬಿಡುತ್ತೇನೆ ಎಂದು ಭರವಸೆ ಕೊಟ್ಟು ಹೋದ (ಹಸುಹೂ. ೩೨೦). **ಭರವಸೆ ನೀಡು** = ಭರವಸೆ ಕೊಡು : ಆಗಾಗ ಸರ್ಕಾರದವರು ತಕ್ಕ. . . ಭರವಸೆ ನೀಡುತ್ತಿದ್ದರೂ ಸಮಸ್ಯೆ ಮಾತ್ರ ಎಂದಿನಂತೆ ಬಗೆಹರಿಯದೆ ನಿಂತಿದೆ (ಶಿಕ್ಷರ. ೬೬೬). **ಭರವಸೆಯಿಡು** = ನಂಬು; ವಿಶ್ವಾಸವಿಡು : ನಿಮ್ಮಲ್ಲಿ ಭರವಸೆಯಿಟ್ಟು ಒಂದು ಮಾತು ಹೇಳುತ್ತೇನೆ (ವಜರಾ. ೬).

[ ← ಹಿಂ. ಭರೋಸಾ; ಮರಾ. ಭರಂವಸಾ, ಭರೋಸಾ ]

**ಭರವಸಿಕೆ** (ನಾ). ೧. ನಂಬಿಕೆ : ಗಿರಿಯ ತಱಿವರೆ ಶಕ್ರನಲ್ಲದೆ ನೆರೆದ ದಿವಿಜನಸಮೂಹ ಮಾಡುವ ಭರವಸಿಕೆ ತಾನೇನು (ಕುಮಾರವ್ಯಾ. ೩-೨೨); ಅಹಿತರಲಿ ಭಯವನು ಕಾಣದಣ್ಣನ ಭರವಸಿಕೆ ತಾನೆಲ್ಲಿಗೆ (ತೊರವೆ. ೩-೮-೩೬). ೨. ಅಪೇಕ್ಷೆ; ಆಸೆ: ಧುರದ ಭರವಸಿಕೆಯೊಳ್ಳನಿಹೆನು (ತುರಂಗ. ೫೫-೪೧). ೩. ಬಿರುಸು ; ವೇಗ : ಅರಿ ಶಿಬಿರದ ಕೈಚಳಕ ಕಾಹುರವಲೇ

ಲೇಸಾಯ್ತು ಬಿಲ್ಲಿನ ಭರವಸಿಕೆಯುಪುದೆನುತ ಕೈಕೊಂಡೆಚ್ಚನಾ ದ್ರೋಣ (ಕುಮಾ.ದ್ರೋ. ೨-೪೦). [ಭರವಸ + — ಇಕೆ]

**ಭರವಸಿಗ, ಬರವಸಿಗೆ** (ನಾ). ೧. ನಂಬಿಕೆಯನ್ನು ಇಟ್ಟುಕೊಂಡಿರುವವನು : ದೇವರೊಳ್ ಭರವಸಿಗನಂತೆ! ಕಾಂಚೆವು ದೇಪರೀತಸಂ ರಕ್ಷಿಸಲಿ! (ಗೊಟ್ಟೆಕಾ. ೮೨-೫೦೩). ೨ ಕಾರ್ಯ ಮಾಡುವವನು ; ಕೆಲಸಗಾರ : "ಕ್ರಿಯಾವಾನ್, ಉದ್ಯುಕ್ತಃ —ಈ ೨ ಭರವಸಿಗಂ" (ಪರಾದು. ೬೩-೨೨೮); "ಭರವಸಿಗನುದ್ಯುಕ್ತನಕ್ಕು" (ಖಂಗರಾ. ೬೮-೯). **ಬರವಸಿಗ** : ೧. ಬರವಸಿಗರೀ ನಮ್ಮನ್ನು ಸಾರ್ಥಕಪಡಿಸಿಕೊಳ್ಳಬೇಕೆಂದು ಪ್ರಾರ್ಥಿಸುವೆವು (ಪಂಕ್ತಿಕ. ೦೨೫-೨೫). [ಭರವಸ + — ಇಗ]

**ಭರವಸೆ** 'ಭರವಸ' ನೋ.

**ಭರವಹನ** (ನಾ). ಭಾರವನ್ನು ಹೊರುವಿಕೆ : ಸಮರ್ಥಮಾಯ್ತು. . . ಭರವಹನಕ್ಕೆ ಮುಂದುವರಿದೀಯುಭಯಪ್ರವಹಸ್ತಮೊಂದು (ವಿತ್ಸಂ. ೦-೫). [ಸಂ.]

**ಭರಷಣ. ಬರಷಣ. ಬರ್ಷಣ** (ನಾ). ಅಹಿತ; ಅಪಥ್ಯ : ಅವರು–ಶುದ್ಧ ನಾಸ್ತಿಕರು. ಹಳೆಯ ದೇವರೆಂದರೆ ಅವರಿಗೆ ಭರಷಣ (ಏಜಾಕ.೬೩).**ಬರಷಣ** : ಇದೆಲ್ಲ ಶ್ಯಾಮರಾಯನಿಗೆ ಬರಷಣವೇ ಆಗಿತ್ತು (ದೀಕಹ. II. ೦೦೦); ಅವರಿಗೆ ಈತನ ಹೊಸಮಾತುಗಳು ಬರಷಣವಾಗಿ ಆವರಿಂದ ಇವನ ಮೇಲೆ ಬಹಳ ಅತ್ಯಾಚಾರಗಳು ನಡೆಯುಬಹುದೆಂದು ತೋರುತ್ತಿತ್ತು (ಕಾಳರಾ. ೨೦). **ಬರ್ಷಣ** : ಲೆಕ್ಕಪತ್ರ ಕೇಶವನಿಗೆ ಬರ್ಷಣವಾಗಿತ್ತು (ಕವುಜೀ. ೬೬೦). [ ←ಹಿಂ. ಭರ್ಸನ್. / ಸಂ. ಭರ್ತ್ಸನ]

**ಭರಸಹ** (ನಾ). ಹೊರೆಯನ್ನು ತಾಳುವ ಸಾಮರ್ಥ್ಯವುಳ್ಳುದು : ಅರಯೆ ಮತ್ತವೇಂ ಭರಸಹಂಗಳೊ ಜಂಘೆಗಳಾಂತುವೀ ಕಟೀಭಾರವಂ (ಕಂಪ್ರಕೃ. ೫-೦೦೯). [ಸಂ.]

**ಭರಾಟಿ, ಭರಾಟೆ** (ನಾ). ೧. ವೇಗ; ರಭಸ; ಆತುರ : ಇನ್ನು ಗ್ರಂಥಕರ್ತರಲ್ಲಿರಡು ಜಾತಿ . . . ತಮಗನಿಸಿದ್ದನ್ನು ಬರೆಯುವ ಭರಾಟಿಯಲ್ಲಿ ತಮ್ಮ ಬಗ್ಗೆ ಇತರರಿಗೇನು ಎನಿಸುತ್ತದೆಂಬುದನ್ನು ಮರೆಯುವ ಇನ್ನೊಂದು (ಹುತ್ಕುಹು. ೬೫); ಓದಿನ ಭರಾಟಿಯಲ್ಲಿ ಬಿಡುವಿಲ್ಲದೆ ಬರೆಯುದಿರಬಹುದು. ಅಷ್ಟಕ್ಕೇ ನೀವು ಹೀಗೆಲ್ಲಾ ಆಲೋಚಿಸುತ್ತೀರಲ್ಲ ! (ಕುಸಂಕಂ. ೦೯೬). ೨. ಹೆಚ್ಚಳ; ಅತಿಶಯ; ಸಮೃದ್ಧಿ : ಅವುಗಳ ದೃಶ್ಯ, ಸ್ಪರ್ಶ, ಗಂಧಗಳ ಭರಾಟಿಯಿಂದ ಪರವಶನಾದ ನನ್ನ ಅಡಿಗೆಯವನು (೯೮೭೮. ೦೯೬); ಆಗ ನಮ್ಮ ಹೊಲದಲ್ಲಿ ಸೊಪ್ಪಿನ ಕಳ್ಳೆ ಬಹಳ ಭರಾಟಿಯಾಗಿ ಬೆಳೆದಿತ್ತು (ಕೃಷರ್ಣ. ೬೬). **ಭರಾಟೆ**: ೧. ನನ್ನ ತಂಗಿಯರಿಗೆ ಓದಿನ ಭರಾಟೆಯಲ್ಲಿ ಮನೆಗೆಲಸಕ್ಕೆ ಬಿಡುವಾಗಲೊಲ್ಲದು (ಕಹಾಪಿ. ೦೪); ಸಂಜೆಯಲ್ಲ ಭರಾಟೆಯಿಂದ ಆಡಿದ ಮೇಲೆ ದಣಿವಾಗದೆ ಇರುತ್ತದೆಯೇ ? (ಕ್ರಾಬುಕ್ಸೇ. ೦೯೯). ೩. ಜೋರು ; ಜರಬು : ಡೆವ್ಟ್ರಿ ಕವಿಸಾಪಸರ್ ಗಾರ್ಡನ್ನನ ಆಡಳಿತವು ಭರಾಟೆಯಿಂದ ಸಾಗಿತು (ಮೂರಾಡಿ. ೦೬೬); ಹೌದಯ್ಯ ಮಿತ್ರ ನನ್ನ ಭರಾಟೆಯ ಕಾಲದಲ್ಲಿ ನನ್ನನ್ನು ನೀನು ನೋಡಲಿಲ್ಲ (ಮಲಿನಾ. ೬೯); ಹಿಂದಿನ ಕೆಲಸದ ಭರಾಟೆ ಈಗಿಲ್ಲ (ಕರಾಮು. ೦೦).[← ಮರಾ. ಭರಾಟಾ]

**ಭರಾಟೆ** 'ಭರಾಟಿ' ನೋ.

**ಭರಾಕ್ಷ್ಮೌಲಿ** (ನಾ). ಚಂದ್ರಶೇಖರ ; ಶಿವ : ಚಕ್ರುಧರನೇತ್ರವನವಿಕ್ರಮ ಭರಾಕ್ಷ್ಮೌಲಿ . . . ಪರಚನ್ನವೀರೇಶ ರಕ್ಷಿಸುವದು (ಮಾರವು. ೨೩-೦). [ಸಂ.]

**ಭರಾಭರಿ** 'ಬರಾಬರಿ$_1$' ನೋ.

**ಭರಾಭರಿಗೊಡು** (ಕ್ರಿ). ಓರಣವಾಗಿ ನಿಂತು ಮುಜರೆ ಮಾಡು : ವ್ಯವಸ್ಥೆಯಿಂದ ನಿಂತು ಗೌರವ ಸೂಚಿಸು : ಸೇತುಗಟ್ಟಾಗಿ ಭರಾಭರಿಗೊಟ್ಟು ಪದಾತಿಯು ಪಯ ಗಜ ರಥಪಾ ಘೂತನಾಥನು ನೋಡುತ (ಶರತ. ೨೫-೬೮); ಪಟ್ಟಗದ್ದುಗೆಗಳ ಕೊಡಿಸಿ ಬಳ್ಳಿರಲತಿಪಟ್ಟು ಚಕ್ರೇಶನೊತ್ತಿನೊಳು ನಿಟ್ಟಿಸಿ ಕೈಮುಗಿದೊಡನೆ ಭರಾಭರಿಗೊಟ್ಟು ನಿಂದುದು ಸುರಸೇನೆ (ಶರತ. ೪೯-೨೮). 'ಭಾರಿ ಮಾಡು' ಪರಾ. [ಭರಾಭರಿ (< ಬರಾಬರಿ$_1$) + ಕೊಡು$_1$]

**ಭರಾಮು** 'ಭರಮು' ನೋ.

**ಭರಾಯಿಸು, ಬರಾಯಿಸು** (ಕ್ರಿ). ಭರ್ತಿಮಾಡು; ತುಂಬು : ಪರೀಕ್ಷಾ ಬಂದ ಕಾಲಕ್ಕೆ ಎಲ್ಲಾ ಗೋಳೇ ಮಾಡಿ ಪೇಪರಿನಾಗ ಭರಾಯಿಸಿರಿ ! (ಕವುಜೀ. ೦೫೩). **ಬರಾಯಿಸು** : ಅವರ ಹೇಳಿಕೆಯಂತೆ ಅರ್ಜಿ ಬರಾಯಿಸಿ ಅದರ ಮೂಲಕವೇ ತಹಶಿಲ್ದಾರರಿಗೆ ಕಳುಹಿಸಿದನು (ಹಹಕ. ೬೦). [ಭರ್ನಾ$_0$ (p ← ಹಿಂ. ಭರಾಈ) + — ಇಸು$_3$]

**ಭರಿ** (ನಾ). ಆನೆಯ ಸೊಂಡಿಲು : ಲಿಂಗಪ್ರಾಣ ಪ್ರಾಣಲಿಂಗವಾದ ನಿರಂಗನಿರವು ಹೇಗಿರಬೇಕೆಂದಡೆ ಉಡಿಯೊಳಗಣ ಮಣಿಸರದಂತೆ . . . ಕರಿಯೊಳಗಣ ಭರಿಯಂತೆ ಮಣಿಯೊಳಗಣ ವಿವರದಂತೆ (ಶೂನ್ಯಸಂ. ೦೬೫-೬೦೬). [?]

**ಭರಿಕರ** (ನಾ). ಆನೆಯ ಸೊಂಡಿಲು : ಭರಿಕರ ಭರಿಕರದೊಳು ಕೊಂಡು ಕೊಂಡಿಲಿ ಶಿರ ಶಿರದೊಳು ತಾಗೆ ವೈರಿಗಳು ಪೊಣರ್ದವು ಮಾವಟಿಗರು ಮೇಲೆ ಶರವಾಳುಗಳೊಳು ಪೊಯ್ವಾಡೆ (ಪರ್ಕಿತ. ೬-೦೦೬).[ಭರಿ + ಕರ್$_3$]

**ಭರಿಕೆಯ್, ಬರಿಕೆಯ್, ಬರಿಕ್ಕೆ, ಭರಿಕ್ಕೆ** (ನಾ). = ಭರಿಕರ : ನೀರಡಿಕೆ ನೆರೆದೊಳಗುದೋಚಿ ಬಾಯೊಳ್ ಭರಿಕೆಯ್ಯನಿಟ್ಟೊಡಲೊಳಗೆ ಪೊಡಿಪಾಚಿ ಬೆಂದ ಪುಷ್ಕರಮಂ ಭೋಂಕನೆ ತೆಗೆದು (ಗಂಕ. ೯-೨೭ ವ); ನಿಡಿದಪ್ಪ ಕದಳಿಯ ಕಂಬ ಪೊಡವಿಯನಿಡಿದಿರ್ಪಂತೆನೆಯು ಭರಿಕೆ[ಪಾಠಾಂ. ಕ]ಯ್ಯ ಪಡಿಯೆನೆ ರಂಜಿಸಿತು (ಶ್ರೀಚಾರಿ. ೬-೨೨); ಭರಿಕೆಯ್ಯೊಳಪಸಿ ಕುದುರೆಯ ಹಿಂಡುಹಿಂಡನಿಟ್ಟೊರಿಸಿ . . . ಹೊಡೆಚೆಂಡಾಡುತಿರ್ದಂ ಗಜಾಸುರಂ ಸಂಗರದೊಳು (ತಂಕೃ. ೨೮-೨೫); ಇಂತಿದು ಭ [ಪಾಠಾಂ. ಬ] ರಿಕೆಯ್ಯನಾನದ ಮಹಾಗಜದಾನವನೋ . . . ಪೇಟಿನೆ ತೋಜಿದುದಾ ವರಾಹಕಂ (ಶವಕಂ. ೯-೩). **ಬರಿಕೆಯ್** : ಬರಿಕೆಯ್ಗ [ಪಾಠಾಂ. ಬರಿಕೈ]ಗ್ಗಳಂ ನೀಡಿ ಪಣ್ಣಾಯಲರ್ಗಳಂ ದಂತಿಗಳ್ಕಡುತಿರ್ಪುವು . . . ತಪೋವನದೊಳಾವಾಸವಾಗಿರ್ಪ ವರ್ಗ (ಕೃಬಂಶಾ. ೦೫-೨೦).**ಬರಿಕ್ಕೆ** : ಎಲವೊ ಸಾತ್ಯಕಿ . . . ಹೋಗೆನುತ ಹೆಡತಲೆಯನೊದೆದನು ನಿಂದು ಬರಿಕ್ಕೆ ಮುಱಿದ ಗಜದಂತೆ (ಕುಮಾ.ದ್ರೋ. ೦೯-೨೦); ಇರದೆ ಕಿರಾತರಾರ್ದಿಸುವಿನಂ ಬರಿಕ್ಕೆ ಪರಿದಾರ್ತನಿಂದೆ ಸಂಚರಿಸುವ ಮತ್ತವಾರಣಸಮೂಹವೊ (ಬಿರಪ. ೪-೯೪). **ಭರಿಕ್ಕೆ** : ಸದಮದ ಭರಿಕ್ಕೆಯೊಳಗೆ ಈರೇಳುಭುವನವನು ಒದಚಿ ಹುಯ್ಯಿ ತಾನೆ ನಿಂದುದಲ್ಲಾ (ತನ್ನಪ. ೪. ೫೯೬-೦೩೩೨); ಕಳಚಿದನು ದಾಡೆಗಳ ಭರಿಕ್ಕೆಗಳನು ತುಂಡಿಸಿ ವಾಲಧಿಯ ಬರಸೆಳೆದು ಕೊಸಿಹಿದನಾನೆಗಳ (ಕುವ್ಯಾಗ. ೦-೫೮); ನೆಗಪಿ ಭರಿಕ್ಕೆಯಿಂಸಬ್ಬಾಂಬುಗಳಂ ಬರೆ ಪೀರ್ದು ಕರ್ಣಚಾಲನದಿನವಂ ಬಿಗೆ ಪರಿಯಿಪ ಮದಕರಿಗಳ್ಪೆಗೆಗೊಂಡೊಡನೊಡ್ಡಿ ನಿಂದುವೆರಡುಂ ಬಲದೊಳ್ (ರಾಜಶೇ. ೬-೬೦). [ಭರಿ + ಕೆಯ್$_2$]

**ಭರಿಕೆಯ್ಬಿಲ** (ನಾ). ಸೊಂಡಿಲಿನ ತೂತು,– ರಂಧ್ರ : ನೀಡಿದ ಭರಿಕೆಯ್ಬಿಲದೊಳ್ ಕಾದೊಡೆಯುಂ ಪೊಡೆದ ಬಾಣವಿಾಭಮಸ್ತಕದೊಳ್ ಮೂಡಿದುವು (ಶಬಕಂ. ೩-೫೮). [ಭರಿಕೆಯ್ + ಬಿಲ]

**ಭರಿಕ್ಕೆ** 'ಭರಿಕೆಯ್' ನೋ.

**ಭರಿತ** (ಗು.) ೧. ತುಂಬಿರುವ; ಪೂರ್ಣವಾಗಿರುವ : ಸ್ಫುರಿಯಿಸದೆ ದರಸವಸನಾಂತರಂ . . . ಭರಿತಭ್ರೂಕುಟಿಕಲಹಾಗಿರದೆ ಮುಖಿಂ ಗಲ್ಲನಿಂತುವರಿಸ್ಯವಬಲವಂ (ಶವಕಂ. ೩-೦೨೨) ; ಭರಿತ ಸಪಯೌವನಶ್ರೀ ತರುಣಿಯ ಕೇಳೀವಿಲಾಸಶೃಕರದ್ವಯುದಂತಿರೆ . . . ಎಸೆದತ್ತು ಕೋಮಳೆಯ ಕುಚಯುಗಳಂ (ಕಾಂತಿಶ್ರ. ೧೩-೦೯೨) ; ಭರಿತಸರಸಾನಂದಲೋಚನಶರಧಿ

ಮೇಲ್ವರಿದೊತ್ತಿ ಪಸರಿಸೆ (ಬಸವು. ೬೦–೬೦). ೨. ಪೋಷಿಸಲ್ಪಟ್ಟ; ರಕ್ಷಿಸಲ್ಪಟ್ಟ. ೩. ಭಾರವನ್ನು ಹೊತ್ತಿರುವ. ೪. ಹಸುರಾದ. (ನಾ). ೫. ತುಂಬಿರುವುದು; ಪರಿಪೂರ್ಣವಾಗಿರುವುದು : ''ಆಚಿತಂ . . . ಭರಿತಂ, ಪೂರ್ಣಂ — ಈ ೯ ಸಂದಣಿ'' (ಹಲಾಯು. ೦೦೬-೦೭); ಬಲ್ಸರಿಗಳ ಭರಿತಂ ಸರಿಗಳ ಕಲ್ಲೋಲಕುಲಂ ಸರಿಗಳ ಘೂರ್ಣಿತದಿಂದಂ ಶರನಿಧಿ ಕವಿವಂತೆ ಕಟಿಸೂದಿಳೆಯೊಳ್ ವರ್ಷಂ (ಗಿರಿ. ೯–೩೦); ಧನಧಾನ್ಯ ಗೋಧನ ಸಂಪದಾದಿಗಳ್ ಭರಿತವಾಗಿಹವಾ ಮುನಿಪನಿಹ ಧರಣಿಯುಲಿ (ತೊರಾ. ೦–೩–೬೦). ೬. ಹಸುರಿನಿಂದ ಕೂಡಿದುದು: ಭರಿತವಹ ಪೆರ್ಗಾನು . . . ನೋಟಕೆ ಶರಧಿ ತಾನೆಂಬಂತೆ ಪೆರ್ಗಾನೆಸೆವುದು (ಮುಹಾವಿ. ೦೩-೭). [ಸಂ.]

**ಭರಿತಬೋನ** (ನಾ). ದೇವತಾಪ್ರಸಾದವೆಂದು ಸೇವಿಸುವ ಆಹಾರ,– ಪ್ರಸಾದ : ಭರಿತಭೋನ ಭರಿತಬೋನವೆಂದು ಭ್ರಮೆಗೊಂಡು ಭ್ರಮಿತರಾದಿರಿ ಲೋಕವೆಲ್ಲ ಭರಿತಬೋನವೆ ದಿಟವಾದರೆ ಮರ್ತ್ಯದಲ್ಲಿ ಸಾಯಲುಂಟೆ (ಅವತಂ. ೨೯೯-೦೦೩೦). [ಭರಿತ + ಬೋನ$_1$]

**ಭರಿತಾರ್ಪಣ** (ನಾ). ಪರಿಪೂರ್ಣವಾದ ಸಮರ್ಪಣೆ; ಎಲ್ಲವನ್ನೂ ದೇವರಲ್ಲಿ ಅರ್ಪಿಸುವುದು : ಇಂತೀ ಭರಿತಾರ್ಪಣವನಂಗೀಕರಿಸಿದ ಸರ್ವವ್ಯವಧಾನಿಯ ಎಚ್ಚಱಿಕೆಯು ಮುಟ್ಟು (ಸರ್ವವ. ೦೩೦– ೬೩೬): ಬಂದುದ ಸಾಕೆನ್ನದೆ ಬಾರದು ತಾಯೆನ್ನದೆ . . . ಲಿಂಗಕ್ಕೆ ಬಂದು ಸಂದುದ ಆನಂದದಿಂದ ಸ್ವೀಕರಿಸಿ ನಿಂದುದೆ ಭರಿತಾರ್ಪಣ (ಬಲೀಶ್ವ. ೦೯೨). [ಸಂ.]

**ಭರಿಸು** (ಕ್ರಿ). ೧. ತಾಳು; ಸಹಿಸು : ಯೌವನದಲ್ಲಿ ಬಹಳ ಕಷ್ಟವನ್ನು ಭರಿಸಲಾರದೆ ಕಾರ್ಖಾನೆಯಲ್ಲಿ ಸಿಗುವ ಸಗುಮ ಕೂಲಿಗೆ ಆಸೆಪಟ್ಟು ನಗರಕ್ಕೆ ತೆರಳಿದರು (ಅಶ್ವಾವ. ೦೯); ಆ ಸಂತೋಷವನ್ನು ಭರಿಸಲಾಗದೆ, ಆ ಭಾವವನ್ನು ಭರಿಸಲಾಗದೆ . . . ಬಳಲುತ್ತಿವೆ (ಬಿಕಂಬಾ. ೬೦). ೨. ಹೊರು; ವಹಿಸು; ನಿರ್ವಹಿಸು: ವಿಶ್ವಸತ್ತ್ವದ ಲಹರಿ ನಮ್ಮ ಹೊರಗೊಳಗುಗಳಲಿ ಸಂತತ ಸೆರೆದು ಹರಿಯುತ್ತ ಭರಿಸುತಿರುವುದು ಬಾಳ (ಕುಂಕಲಕ. ೨೨೩). ೩. ಹೊಂದು; ಪಡೆ : ನೂರಿಂಥ ರಾಯ ಭರಿಸಿದರು ನಿನ್ನಂಥ ತಾಯಿ ಸಿಕ್ಕಾಳೇ ? (ಅರಳು. ೪೩೪–೦೩). [<ಭರಣ$_1$ + — ಇಸು$_3$]

**ಭರೂಟಕ** (ನಾ). ಕರಿದ ಮಾಂಸ :'' ತಾಳಿಸಿದಡಗು ಭರೂಟಕವೆಂಬುದು'' (ಹಲಾಯು. ೩೪–೦೭೮). [ಸಂ.]

**ಭರೋಸ** 'ಭರವಸ' ನೋ.

**ಭರ್ಗ** (ನಾ). ೧. ಕಾಂತಿ; ಶೋಭೆ. ೨. ಶಿವ; ಪರಮೇಶ್ವರ : ''ಈಶಾನಃ . . . ಭರ್ಗಃ, ಕೃತ್ತಿವಾಸಾಃ . . . ನೀಲಲೋಹಿತಃ — ಈ ೪೫ ಮಹಾದೇವರ ಪೆಸರ್'' (ಹಲಾಯು. ೩–೦೨); ಆನೊಂದು ಯಾಗಮನೊಡರ್ಚಿದಪೆ ನಲ್ಲಿಯುಗ್ರಪೂಜೆಗೆ ಭರ್ಗನಂ ಬಿಜಯಂಗೆಯ್ಸಿ ಕೊಡಲ್ವೇಳ್ಪುದು (ನಂಬಿರ. ೦೬–೦೨೦); ಪೂಜಾಗಾರದೊಳ್ ಪೂಜಿಸಿದನಮುಮ ಸದ್ಭಕ್ತಿಯಿಂ ಭರ್ಗನಂ (ರಾಜಶೇ. ೦೨–೦೦೭). [ಸಂ.]

**ಭರ್ಚಿ** 'ಬರ್ಚಿ' ನೋ.

**ಭರ್ಜಕ** (ನಾ). ವಡೆ, ಚಕ್ಕುಲಿ, ಮಾಂಸ ಮೊದಲಾದುವನ್ನು ಕರಿದು, ಮಾರಿ ಜೀವಿಸುವವನು : ತೈಲಿಕರು ಹಂಚುರಿಯ ಮೂಲದಿ ಜೀವಿಸುವ ಭರ್ಜಕರು ಕಟುಕರು (ಐವೇಶ. ೮–೬೪). [ಸಂ.]

**ಭರ್ಜನ** (ನಾ). ೧. ಹುರಿಯುವುದು; ಬಾಡಿಸುವುದು. ೨. ಕರಿಯುವುದು: ಕ್ಷಾರತಪ್ತತೈಲಾವಸೇಚನಾಯುಃಕುಂಭೀಪಾಕಾಂಬರೀಷಭರ್ಜನ [ವೈತರಣೀ ಮಜ್ಜನ] ಯಂತ್ರನಿಷ್ಪೀಡನಾದಿಗಳಿಂ ನಾರಕರ್ಗೆ ಸಂಕ್ಲಿಷ್ಟಾಸುರರ್ ದುಃಖಮಂ ಪುಟ್ಟಿಸಿದೊಡಂ (ತತ್ತ್ವಸೂ. ೧೨೩). ೩. ಹುರಿಯುವ ಓಡು.– ಹಂಚು. ೪. ನಾಶಮಾಡುವುದು; 'ಭರ್ಜಿಸು' ಪರಾ. [ಸಂ.]

**ಭರ್ಜರಿ** (ಗು). ೧. ಸಂಪೂರ್ಣವಾಗಿ ಜರಿಯಿಂದ ಕೂಡಿದ : ಸರಸಿಜಾನನೆ ಕುಚಭರದಿಂ ಜಾರುವ ಭರ್ಜರಿ ಶೆರಗಂ ಕೇರಿಸಿ ತನ್ನ ವರಜಾಣತನವ ತೋರಿ (ಸೌಗಂಧಿ. ೮೩–೩). ೨. ಶ್ರೇಷ್ಠವಾದ; ಭಾರಿ : ರಾಮಮಂದಿರದಲ್ಲಂತೂ ಭರ್ಜರಿ ಕಚೇರಿಗಳಾಗುತ್ತಿದ್ದವು (ರಾಗಿಣಿ. ೮೭); ಭರ್ಜರಿ ವಸ್ತ್ರಗಳನ್ನು ಉಟ್ಟುಕೊಂಡು ಬಂದ ಹುಡುಗಿಯರು ಆ ದಿನ ಅಪೂರ್ವವಾಗಿ ಶೋಭಿಸಿದರು (ರಂಗರೋ. ೦೦೪). (ನಾ). ೩. ಅದ್ದೂರಿ; ಆಡಂಬರ; ಜೋರು : ಭರ್ಜರಿಯಾಗಿ ಮುಗಿದ ಮದುವೆ ಬೇಗರಲ್ಲಿ ಬಹಳ ತೃಪ್ತಿಯನ್ನುಂಟುಮಾಡಿತು (ಮಣ್ಣಮ. ೦೩); ಯಾರು ಯಾರಲ್ಲಿಗೇ ಹೋಗಲಿ–ಅತಿಥಿದೇವರಿಗೆ ಆಗತಕ್ಕ ಅನನ್ಯ ಉಪಚಾರಗಳು ಭರ್ಜರಿಯಿಂದ ನಡೆಯುತ್ತಿದ್ದವು (ಕಂಬಹು. ೨). [←ಮರಾ. ಭರ್ಜರೀ]

**ಭರ್ಜಿ** 'ಬರ್ಜಿ' ನೋ.

**ಭರ್ಜಿಸು** (ಕ್ರಿ). ನಾಶಮಾಡು; ಧ್ವಂಸಗೊಳಿಸು : ದುಷ್ಟತಾರಕನಂ ಭರ್ಜಿಸಿದೀಶ್ವರನ ಕುಮಾರಕನಂ . . . ತುತಿಪೆಂ (ಉದ್ಭದೀ. ೦–೦೦).

[ಭರ್ಜನ + — ಇಸು$_3$]

**ಭರ್ತ$_1$** (ನಾ). ನಾಟ್ಯ; ಅಭಿನಯ: 'ಭರ್ತಶಾಸ್ತ್ರ' ಪರಾ. [<ಸಂ. ಭರತ]

**ಭರ್ತ$_2$** (ನಾ). ೧. ಗಂಡ; ಪತಿ : ''ಕಾಂತಃ . . . ಭರ್ತಾ . . . ಅನಾಕಃ — ಈ ೧೪ ಗಂಡಂ'' (ಹಲಾಯು. ೮೨–೩೪೩); ಭರ್ತನ್ನೈ [ಶಾಕಾಂ. ಕರ್ತನ್ನವೆ] ತರೆ ಕಾಣಂತಾ ಸತಿ ಕೂರ್ತಡಿಗಳಂ ಕರ್ಚಿ (ಬಸವು. ೩೦-೦೩); ವಧುಗಳಿಗೆ ಅಂದು ಪ್ರಾಣವಷ್ಟೆ ಪ್ರಿಯರಾದ ಭರ್ತ, ಭ್ರಾತೃ ಇಬ್ಬರೂ ದೊರಕಿದರು (ಶಾಂತಲಾ. ೦೦೦). ೨. ಒಡೆಯ; ಪಾಲಕ; ಪೋಷಕ : ''ಭರ್ತ (ಭರ್ತಾ)_ ಭರ್ತೃ – ರಕ್ಷಕ'' (ಕರ್ನಕೋ. ೩೩); ಸರ್ವಕ್ಕೆ ಭರ್ತನು ಹರ್ತನುಂ ಪರಮೇಶನಲ್ಲದೆ ಭರ್ತ ಬೇರುಂಟೇ (ಬಸವು. ೩೪–೮). [ಸಂ. ಭರ್ತೃ]

**ಭರ್ತಶಾಸ್ತ್ರ** (ನಾ). ನಾಟ್ಯವಿದ್ಯೆ; ನಾಟ್ಯಕಲೆ : ನರ್ತಕಿಯರು ನಾಟ್ಯಶಿಕ್ಷಕ ಗಾಯಕ ಭರ್ತಶಾಸ್ತ್ರದಿ ಪರಿಣತರು (ಅಭ್ಯಲ. ೩-೦೨೭).

[ಭರ್ತ$_1$ + ಶಾಸ್ತ್ರ]

**ಭರ್ತಾರ** (ನಾ). ೧. ಗಂಡ; ಪತಿ: ಆಂ ಮುನ್ನಿನ ಜನ್ಮದೊಳ್ ಮನೋವೇಗೆಯೆಂಬ ವಿದ್ಯಾಧರಿ ಎನ್ನಂದಿನ ಭರ್ತಾರಂ ಮಣಿಚೂಳನೆಂಬೊಂ ವಿದ್ಯಾಧರಂ (ವಡ್ಡಾರಾ. ೩೩–೨); ಆಕೆಯ ಭರ್ತಾರಂ ನಿಜಮಂದಿರಕ್ಕೆ ಬಂದು (ಕಂದಾಮಾ. ೭-೦೨೩ ಪ); ಸಾರಿದಳು ಸರಸಿಜವದನೆ ಭರ್ತಾರನನು (ಕುಮ್ಮಾಕ. ೦೯-೭೮). ೨. ಒಡೆಯ; ಯಜಮಾನ : ಭರ್ತಾರಂ ನೀನೆ ಪಂಪಾಪುರವರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ (ರಕ್ಷಾಶ. ೯೯). [ಸಂ. ಭರ್ತೃ]

**ಭರ್ತಾರಿ** (ನಾ). ಹೆಂಡತಿ: ಎನ್ನ ಭರ್ತಾರಿಯು ಮಾವಿನ ಪಣ್ಣನೇಕೆ ಬಯಸಿದಳ್ (ಧರ್ಮಾಮೃ. ೮–೪೩). [ಭರ್ತಾರ + —ಇ$_2$]

**ಭರ್ತಿ** 'ಭರತಿ' ನೋ.

**ಭರ್ತೃ** (ನಾ). ೧. ಗಂಡ; ಪತಿ: ಪ್ರಮದೆಗೆತ್ತಮೆಗಾಣ್ಮನ ದೈವ್ವಮೆ ದೆಯ್ವಂ...ಭರ್ತೃವ ತತ್ತ್ವಮೆ ತತ್ತ್ವಂ(ಶಾಂತಿಪು. ೯–೦೯); ಆವಿರೆಯಿರೆ ಭರ್ತೃ ತಪಃಶ್ರೀವಧುಗೆಳಸಿರ್ದಂ (ಪುಷ್ಪಪು. ೧೩–೯೪); ಪಲತೆಱದ ಭರ್ತೃದೈನ್ಯವ ನೋಡಿ ಪೆಣ್ಣಾಡಿದುದು (ಜೈಮಿರಾ. ೪–೩೭). ೨. ಒಡೆಯ; ಸ್ವಾಮಿ; ಯಜಮಾನ : 'ಭರ್ತೃನಿಂದಕ' ಪರಾ. ೩. ರಕ್ಷಕ; ಪಾಲಕ. [ಸಂ.]

**ಭರ್ತೃದಾರಕ** (ನಾ). ೧. ದೊರೆಯ ಮಗ; ರಾಜಪುತ್ರ. ೨. [ಕಾವ್ಯಮಿ] ನಾಟಕಾದಿಗಳಲ್ಲಿ ರಾಜಸೇವಕರು ರಾಜಪುತ್ರನನ್ನು ಸಂಬೋಧಿಸುವಾಗ ಬಳಸುವ ಶಬ್ದ: ''ನಾಟ್ಯದಲ್ಲಿಯರಸಿಯರಂ ದೇವಿಯೆಂಬುದು ಕುಮಾರನು ಭರ್ತೃದಾರಕನೆಂಬುದು'' (ಹಲಾಯು. ೦೭–೯೮): ''ನರ್ತನವ ಸತಿ ದೇವಿಯಕ್ಕುಮಾ ನಂದನಂ ಭರ್ತೃದಾರಕನಕ್ಕುಂ'' (ಮಂಗರಾ. ೨೩–೧೦). [ಸಂ.]

**ಭರ್ತೃದಾರಿಕೆ** (ನಾ). ೧. ಅರಸನ ಮಗಳು; ರಾಜಪುತ್ರಿ. ೨. [ಕಾವ್ಯಮಿ] ನಾಟಕಾದಿಗಳಲ್ಲಿ ಸೇವಕರು ರಾಜನ ಮಗಳನ್ನು

ಸಂಬೋಧಿಸುವಾಗ ಬಳಸುವ ಶಬ್ದ : "ನಂದನಂ ಭರ್ತೃದಾರಕನಕ್ಕು ಮಲ್ಲಿಯ ಸಹೋದರಿ ಭರ್ತೃದಾರಿಕೆಯಕ್ಕು" (ಮಂಗರಾ. ೨೫-೦೦); "ಭರ್ತೃದಾರಿಕಾ, ತತ್ಸುತಾ ಅಂತಾ ಅರಸಿನ ಮಗಳ ಹೆಸರು" (ಸಿದ್ಧಾಂತಿ. ೯೦). [ಸಂ. ಭರ್ತೃದಾರಿಕಾ]

**ಭರ್ತೃನಿಂದಕ** (ನಾ). ಒಡೆಯನನ್ನು ದೂಷಿಸುವವನು; ಸ್ವಾಮಿದ್ರೋಹಿ: ದಳಿತಮರ್ಯಾದನ ಕೃತಘ್ನನ ಭರ್ತೃನಿಂದಕನ . . . ವಿಳಳವ್ರತನ ಲೋಕಾ ವಳಿಗಳಾಗಲಿ ಕೊಲ್ಲದಿದ್ದರೆ ನಾಳೆ ಸೈಂಧವನ (ಕುಮಾರವ್ಯಾಸ. ೮-೩೬). [ಸಂ.]

**ಭರ್ತ್ಸನ** (ನಾ). ೧. ಹೆದರಿಸುವುದು ; ಬೆದರಿಸುವುದು. ೨. ಹೆದರಿಕೆ ; ಭಯ ೩. ತೆಗಳಿಕೆ; ನಿಂದೆ; ಬಯ್ಗುಳ : "ಭರ್ತ್ಸನಂ, ಅಪಕಾರಗೀಃ– ಪರನಿಗೆ ಅಂಜಿಕೆಯನ್ನುಂಟುಮಾಡುವ ಅಪಕಾರವಾಕ್ಯದ ಹೆಸರು, ಬೆದರಣೆ ಸೊಲ್ಲು" (ಸಿದ್ಧಾಂತಿ. ೩೬); ಭರ್ತ್ಸನ . . . ದುರ್ಭೋಗ್ಯ ನಾನಾ ವಿಧಾಸಂಪ್ರಾತಿಶಿವ್ರ ವೇದನಾರೂಪಂಗಳಾಗಿ ಶಿವದ್ರೋಹಿಗಳಿಗೆ ನಿಷ್ಕಾರುಣ್ಯದಿಂ ಮಾಳ್ಪ ಶಿಕ್ಷಾಲೇಶಮೊಂದೆನಿಸಿ (ಏಕೋ. ೦೯೦). 'ಭರ್ತ್ಸನಂಗೆಯ್' ಪರಾ. ೪. ಶಾಪ. [ಸಂ.]

**ಭರ್ತ್ಸನಂಗೆಯ್** (ಕ್ರಿ). ಹೆದರಿಸು ; ಬೆದರಿಸು : ನೆಗಳ್ದವಳ ಕೌಟಿಲವಿದು ತನಗೆ ತಕ್ಕುದಂ ನೆಗಳಿದೊಡೆ ತಾನೆ ತೋಱುವಳೆಂದು ರಯದಿಂದೆ ಘುಗಿಲಿಸುತ್ತಾ ವಿಪ್ರರುಂತೆ ಸೂರಾಂಬಿಕೆಯು ಭರ್ತ್ಸನಂಗೆಯ್ದುರೆಟ್ಟಿ (ಅರಾಕ. ೦-೭-೩೪). [ಭರ್ತ್ಸನ + ಕೆಯ್$_1$]

**ಭರ್ತ್ಸನೆ** (ನಾ). ತೆಗಳಿಕೆ; ನಿಂದೆ : ಶ್ರೋತ್ರಿಯರ ಮಾತಿನಲ್ಲಿ ಭರ್ತ್ಸನೆಯು ಧ್ವನಿಯಿರಲಿಲ್ಲ (ಮಹಕಥ. ೦೯೦) ; ಆ ದನಿಯಲ್ಲಿ ನೋವು ತುಂಬಿತ್ತು, ಭರ್ತ್ಸನೆಯಿರಲಿಲ್ಲ (ಮಹಾಪಾ. ೬೩). [ಸಂ. ಭರ್ತ್ಸನ]

**ಭರ್ದಂಡು** 'ಭರವಂಡು' ನೋ.

**ಭರ್ಮ** (ನಾ). ೧. ಆಧಾರ ; ಬೆಂಬಲ. ೨. ವೇತನ ; ಕೂಲಿ; ಸಂಬಳ. ೩. ಬಂಗಾರ; ಚಿನ್ನ: "ಹೇಮ, ಸ್ವರ್ಣಂ, ಜಾತರೂಪಂ, ಸುವರ್ಣಂ, ಭರ್ಮಂ . . . ತಪನೀಯಂ–ಈ ೨೫ ಹೊನ್ (ಪೊನ್)" (ಕರ್ನಾಟಕ. ೨೧-೦೯); ಜನಪ್ರಶಸ್ತಿಯುತ ಭರ್ಮಚಿತ್ರುಮರ್ಯಾಖಶಾಸನಂಬೊಲುಜ್ವಳಿಪುದು . . . ಪೂರ್ವಮಂದರದ (ಕಂದ್ರಪು. ೦-೬೧). 'ಭರ್ಮಾಂಬರ' ಪರಾ. ೪. ಚಿನ್ನದ ನಾಣ್ಯ. ೫. ಹೊಕ್ಕುಳು. ೬. ಹೊರೆ; ಭಾರ. ೭. ಮನೆ. [ಸಂ. ಭರ್ಮನ್]

**ಭರ್ಮಕರ್ಮ** (ನಾ). ಚಿನ್ನದ ಕೆತ್ತನೆಯ ಕೆಲಸ : ಭರ್ಮಕರ್ಮದ . . . ನಾನಾಯುಧಂಗಳ ರನತ್ನಕನಕಾಂತಿಯಿಂ, ದಿವಿಜದೃಷ್ಟಿಗುಮೊಂದು ಪರ್ವಮಾದುದು (ಚನ್ನಾಂಗ. ೮೦-೨೨೪೦). [ಸಂ. ಭರ್ಮಕರ್ಮನ್]

**ಭರ್ಮಹರ್ಮ್ಯ** (ನಾ). ಚಿನ್ನದ ಉಪ್ಪರಿಗೆ ಮನೆ: ಆ ಪುರಭರ್ಮ ಹರ್ಮ್ಯರುಚಿ ಪೊಂಬಿಸಿಲುತಿರೆ (ರಾಜಶೇ. ೨-೪೯). [ಸಂ.]

**ಭರ್ಮಾಂಬರ** (ನಾ). ೧. ಚಿನ್ನದ ಜರಿಯುಳ್ಳ ವಸ್ತ್ರ ; ಪೀತಾಂಬರ ; ಜರಿಬಟ್ಟೆ. ೨. ಚಿನ್ನದ ಬಣ್ಣದ ಬಟ್ಟೆಯುಳ್ಳವನು; ಕೃಷ್ಣ : ನಿರ್ಮತ್ಸರದೋಳ್ ಕೃತಿಯು ಕೇಳ್ದವರಿಗೆ ಧರ್ಮಾರ್ಥಕಾಮಮೋಕ್ಷಗಳ ಭರ್ಮಾಂಬರನೀವ (ಶೋಕಕ. ೧೨-೬೬). [ಸಂ.]

**ಭರ್ಮ್ಯ** (ಗು). ೧. ಚಿನ್ನದಿಂದ ಮಾಡಿದ : ಆ ದಿವ್ಯ ಭರ್ಮ್ಯಹರ್ಮ್ಯ ದೊಳು ಸುರಸತಿಗೆ ಸಮವಾದ ಸ್ತ್ರೀಯರ ಸುರತಕೇಳಿಯೊಳು ಸ್ಮೈತಿರ್ಪ ನೊಂದರಳ ಶಿವಗರ್ಪಿಸೆ (ಗುರುಕಾ. ೬-೦೯); ಪಟುವೆತ್ತು ಕಾಯ್ದು ಘರ್ಮೋದಕದ ಭರ್ಮ್ಯತಂಬುಗೆಗಳಲಿ ಪೊಗೆದೆರೆವುತೆ (ಶಶಪೂ. ೧೩-೪೨). (ನಾ). ೨. ಚಿನ್ನ ; "ಭಂಗಾರ" (ಶಕುಂ. ೬. ೧. ೬೬). [ಸಂ.]

**ಭರ್ರನೆ** (ಅ). ಒಂದು ಅನುಕರಣಾವ್ಯಯ; ವೇಗವಾಗಿ; ಶೀಘ್ರವಾಗಿ : ಸರ್ರನೆ ಹೋಗವ್ವಾ ಭರ್ರನೆ ಬಾರವ್ವಾ (ಕನ್ನಜಾ. ೯೦). [ಭರ್ + — ಅನ್$_1$]

**ಭಲ** 'ಭಲಾ' ನೋ.

**ಭಲರೆ** (ಅ). ಮೆಚ್ಚುಗೆಯನ್ನು ಸೂಚಿಸುವ ಒಂದು ಭಾವಸೂಚಕಾ ವ್ಯಯ : ಅಪ್ಪ ಬಾಪ್ಪ ಭಲರೇ ಎನೆ ಸ್ಪಂದನೀಳಾತಳಾಗ್ರದೊಳ್ (ಎಪಿ. XV. ೩೨೦-೨೩; 1172); ಭಲರೆ ನೃಪೇಂದ್ರಾ ದಯೆಯೊಳ್ ನೆಲೆಗೊಳಿಸಿದೆ ಮಸವಂ (ಮುಕೋಕ. ೦-೬೧); ಎಲೆಲೆ ಕವಿಕವಿ ಬೆರಸು ಬೆರಸಿಟ್ಟಳಿಸು ತಿವಿತಿವಿ ಭಲರೆ. . . ಹೊಯ್ ಹೊಯ್ ಬೋಣಿಗರನು (ಬಸವಾಪು. ೪-೩).

**ಭಲರೆಭಲರೆ, ಭಲಭಲರೆ** (ದ್ವಿರುಕ್ತಿ) : ಭಲರೆಭಲರೇ ತ್ಯಾಗಿ ಯಾಚಕ ಕುಲಕೆ ನೀನೊಬ್ಬನೆಯಲಾ (ಬಸಪು. ೨೨-೩೯); ಭಲಭಲರೆ ಗುರುಭಕ್ತಿ ತಿಲಕ (ಬಸಪು. ೪೩-೩೦). [<ಭಲಾ]

**ಭಲಾ, ಭಲ, ಭಲೆ** (ಅ). = ಭಲರೆ : ಹೊಲೆಯ ಮಾದಿಗ ಭಕ್ತನಾದಡೆ ಆತನ ಮನೆಯ ಸೊಣಗಂಗೆ ಪಂಚಮಹಾಪಾತ್ಯದಲ್ಲಿ ಸನ್ಮಾನವ ಮಾಡನೆ ನೆಲನನುಗ್ಗಡಿಸಿ ಉಘೇ ಚಾಂಗು ಭಲಾ ಎಂದು (ಬಸವ. ೪. ೫೧೩) ; ಘೇ ! ಉಘೇ ! ಭಲಾ ! ಬಾಪ್ಪುರೇ ! (ಕಂದ್ರಸ. ೯೩-೧೮); ಭಲಾ ಜಟ್ಟಿ ಅಂದರೆ ಕಪ್ಪಣ್ಣು ಮುಕ್ಕಿದ (ಗಾದೆ). **ಭಲ** : "ಭಲ–ಆಘಂಡನೇ, ಮೆಚ್ಚಿನೊಳ್" (ಶಾಕಕ್ಕ. ೨೬೩); ಭಲ ಹೊತ್ತಿಗೆ ಮುಂಚೇನೇ ಬಂದೆಸಲ್ಲ (ಮುಂಜಮಾ. ೬). **ಭಲೆ** : ಉಘ ಚಾಂಗು ಭಲೆಯೆಂ[ಶಾಶಾಂ. ಲ 'ಎಂ]ದು ನೆಗೆವ ರಭಸಂಗಳೊಳು . . . ಶ್ರೀಗುರು ಪ್ರಭು ಬಂದ ಪುಣ್ಯದಿಂ (ಏಕಾಕೋ. ೩೫-೦೦೪೬). ಭಲೆ! ಚೆನ್ನಾಗಿ ಹೇಳಿದೆ. ಇನ್ನೇನು ಕೇಳಿದಲು ? (ಶಾಂಕಲಾ. ೪) ; ಈ ಚಪ್ಪರದ ಸೌಂದರ್ಯವನ್ನು ಕಂಡು ಮುಂದಾಳುಗಳು 'ಭಲೆ' ಎಂದರು (ಹಬ್ಬ. ೯೯). [← ಮರಾ. ಭಲ್ಲಾ./ತೆಲು. ಭಳಾ]

**ಭಲಾರಿ** 'ಭಟಾರಿ' ನೋ.

**ಭಲೆ** 'ಭಲಾ' ನೋ.

**ಭಲ್ಕ** 'ಬಲ್ಲೆಯ' ನೋ.

**ಭಲ್ಲ** (ನಾ). ೧. ಅರ್ಧಚಂದ್ರಾಕಾರವಾದ ತುದಿಯುಳ್ಳ ಒಂದು ಬಗೆಯ ಬಾಣ : ಭಲ್ಲದಿನೆಚ್ಚು ಬಿಕ್ ಖಂಡಿಸಿ ಬಿಲ್ಲಂ ಪ್ರತ್ಯೇಕವಂತೆ ಕುಂಡಲಕೋಟೀರೋಲ್ಲಸಿತರಥಿಶಿರಂಗಳನೆಲ್ಲವನೊರ್ಮೊದಲೆ ಶಾರ್ಙ್ಗಿ ಪಱಿವಿನಮೆಚ್ಚಂ (ಜಗಾ. ೧೨-೨೩); ಕರಯುಗ್ಮದಿಂ ಕಱಿದ ಭಲ್ಲದ ಸೆಲ್ಲವ ಪಿಂಡಿವಾಳದಿಟ್ಟಿಯು . . . ಸರಿಯಿಂ ಶರಾನಿಳವಿಘಾತದೆ ತೂಳ್ದದನಾಗಳ ಚ್ಯುತಂ (ಏರ್ಪಕೃ. ೮-೩೬). ೨. ಒಂದು ಬಗೆಯ ಆಯುಧ ; ಈಟಿ; ಭರ್ಜಿ : ಮುಸುಂಡಿ ಭಿಂಡಿವಾಳ ಶೂಲ ಭಲ್ಲ ಪತಾಕ (ಹಾಡಕಾಂ. ೩-೮ ಪ); ಗಜಹಯವರೂಥಾದಿ ರೋಷಕರ ಸಂದಣಿಯ ಬಾಯ ಭಲ್ಲಗಳ ಪಿಡಿದಿರ್ಪವರನಿಂಗ್ಲೀಷು ವಾದ್ಯದವರ (ಪಕ್ಷಿವ. ೩-೯೬). ೩. ಕರಡಿ; ಭಲ್ಲೂಕ : "ಋಕ್ಷಃ, ಅಚ್ಛಃ, ಭಲ್ಲಃ, ಭಾಲ್ಲೂಕಃ, ಭಲ್ಲೂಕಃ – ಈ ೫ (ಕರಡಿ)" (ಕರ್ನಾಟಕ. ೩೪-೬೫); ಅಳಿ ನಿಜಾಸ್ಯದಿಂ ನಿಮಿರೆ ಪುತ್ತಿನ ಬಾಯ್ದಲೆಯೊಳ್ ಪಿಪೀಲಿಕಾಮಾಳೆಗೆ ಪಾಸಿ ನಾಲಗೆಯ ನೊಂದು ಭಯಂಕರ ಭಲ್ಲಮುಲ್ಲಸದ್ದಾಳತಮಾಳಗುಲ್ಮದೊಳಗಿರ್ಪುದುಂ (ಪ್ರಕೃತಿ. ೩-೬೨) ; ಘೋರಾಟವಿಯೊಳ್ ಭಲ್ಲ ವ್ಯಾಘ್ರಕ್ಕೊಪ್ಪಿಸಿ ೬ಲ್ಲಿರ್ದೆಯಿಂ ತನ್ನನುಬ್ಬಿದು ಪೋಪುದು ಗುಣವೇ (ಸಕಕಂ. ೫೯೯). [ಸಂ.]

**ಭಲ್ಲಾತ** (ನಾ). = ಭಲ್ಲಾತಕ : "ಭಲ್ಲಾತಮರುಷ್ಕಂ" (ವಸ್ತುಕೋ. ೩೯ ೯). [ಸಂ.]

**ಭಲ್ಲಾತಕ** (ನಾ). ಗೇರುಮರ ಮತ್ತು ಅದರ ಫಲ : "ಭಲ್ಲಾತಕಂ ಗೇರು" (ಮಂಗರಾ. ೩೫-೦೩); ತಿಲ ಭಲ್ಲಾತಕವುಂ ಮೇಣ್ ನೆಲದಾಟು ಮಸಲ್ಲದೆಂದು ಚಿತ್ರಕವುಂ ಗೋಜಲದೊಳ್ ಬಡಿದಳಿಗೊಟುಣೆ ಕೆಲವುಂ ದೆವಸಕ್ಕೆ ಕಿಡುಗುಮರುಸೆಯು ಮೊಳೆಗಳ್ (ಲೋಕೋಪಕ. ೯-೦೯೬); ತಿಲಂ ಮಾಷಮುಂ ವರಭಲ್ಲಾತಕದಿಂದೆ ತೋಪರಿ ಕಟುಂಕೆಯ್ದೋದಮಂ . . .

ಬೆಳಿಯುಕುಂ ಜೋಳಂ ಮಹೀಭಾಗದೊಳ್ (ಅಜಿಪು. ೪-೧೧). [ಸಂ.]

**ಭಲ್ಲಾತಕಿ** (ನಾ). = ಭಲ್ಲಾತಕ : "ವೀರವೃಕ್ಷಃ, ಅರುಷ್ಕರಃ, ಅಗ್ನಿಮುಖೀ, ಭಲ್ಲಾತಕೀ – ೪ ಗೇರುಮರದ ಹೆಸರುಗಳು" (ಸಿದ್ಧಾಂತಿ. ೦೨೦); ಒಳವುಗದರಿವಿನೊಳೊಂದಿ ಭಲ್ಲಾತಕಿಫಳಬೀಜದಂದದಿಂದೆಸೆವನು (ಶರಶೋ. ೦-೭-೦); ನೆಲ್ಲಿ ಪೇರಿಲು ಮಾವು ಬದರಿ ಬಸರೀಗಿಡಂ ಭಲ್ಲಾತಕೀ ಪೂಗತ್ಯಾಗ (ಸಿದ್ಧಳ. ೩-೦೭). [ಸಂ. ಭಲ್ಲಾತಕೀ]

**ಭಲ್ಲಾಸನ** (ನಾ). ಬಿಲ್ಲು: ಪಂಚಸಪ್ತತ್ಯುತ್ತರಪಟಶತಭಲ್ಲಾಸನೋತ್ಸೇಧನುಂ ಪದ್ಮಾಂಗಪ್ರಮಿತಜೀವಿತನುಮಪ್ಪ ಎಂಟನೆಯ ಮನು ಪುಟ್ಟಿ (ಆದಿಪು. ೩-೩೬ ವ). [ಸಂ.]

**ಭಲ್ಲುಂಕಿದಂಡ** (ನಾ). ನರಿಯ ಚಿಹ್ನೆಯುಳ್ಳ ದಂಡ (?) ; ಕರಡಿಯ ಕೂದಲನ್ನು ಕಟ್ಟಿರುವ ದಂಡ (?) ; P ಇದು ಪ್ರಾಚೀನ ಕರ್ನಾಟಕದ ವರ್ತಕಶ್ರೇಣಿಯು ತಮ್ಮ ಗುರುತಿಗಾಗಿ ಹಿಡಿಯುತ್ತಿದ್ದ ದಂಡವಿರಬಹುದೇ? : ವೀರಬಣ್ಣಂಜುಧರ್ಮ್ಮರುಂ . . . ಭಲ್ಲುಂಕಿದಂಡಹಸ್ತರುಮಪ್ಪ . . . ಜಯಪತಿಸೆಟ್ಟಿ ಮುಖ್ಯಮಾಗಿ (ಎಕ. XIII, ೨೦-೯೬ : 1024); ಭಗವತೀದೇವಿಲಬ್ಧವರಪ್ರಸಾದರುಂ ಸಮಸ್ತಭಲ್ಲುಂಕಿದಣ್ಡಹಸ್ತರಪ್ಪ ತೆಂಕಕಂಚಿಬಡಗ ಹಿಮಸೇತುವಾದಿಯಾಗಿ ಸಮಸ್ತನಾನಾದೇಸಿಗಳುಂ ಸೆಟ್ಟಿಯರುಂ ಸೆಟ್ಟಿಗುತ್ತರು(c) (ಸೌಇಇ. IX-೧, ೨೨೩-೯೨; 1127). [ಭಲ್ಲುಂಕಿ$_0$ (P ← ಪ್ರಾ. ಭಲ್ಲುಂಕೀ) + ದಂಡ]

**ಭಲ್ಲುಕ** (ನಾ). ಒಂದು ಬಗೆಯ ಕಾಡುಪ್ರಾಣಿ ; ಕರಡಿ : "ಭಲ್ಲುಕಃ . . . ಭಾಲ್ಲೂಕಃ – ೪ ಕರಡಿಯ ಹೆಸರುಗಳು" (ಸಿದ್ಧಾಂತಿ. ೦೫೩); ಒಳ್ಳೆ ಹೆಬ್ಬಾವಹುದೆ ರಾತ್ರಿಯ ಕಳ್ಳ ವೀರನೆ ಗದ್ದ ಬೆಳೆದರೆ ಭಲ್ಲುಕನು ಪಂಡಿತನೆ (ಕೌಶಿಕಾ. ೨೨-೯೦); ತೃಷ್ಣಜಠರದ ಭೀಮಭೀಷ್ಮಭಲ್ಲುಕವೊಂದು ಚರಿಸುತ್ತೈತಂದು (ಶಬ್ದಾಂಗ. ೦೫-೩೯೯). [ಸಂ.]

**ಭಲ್ಲೂಕ** (ನಾ). = ಭಲ್ಲುಕ : "ಋಕ್ಷಃ, ಅಚ್ಛಃ, ಭಲ್ಲಃ, ಭಾಲ್ಲೂಕಃ, ಭಲ್ಲೂಕಃ – ಈ ೫ (ಕರಡಿ)" (ಶಬ್ದಮ. ೩೯-೬೫); ಕಾಳೆನ್ನಣಕಂಟಕನೆಂಬ ಭಲ್ಲೂಕಮಲ್ಲನೆಂಬ . . . ಮರಿಮರಿಯ ಬಿರುದುಲಿವ ಬಾವುಲಿಯ ಕುನ್ನಿಗಳು ನೆರೆದವಂದವನೀಶನೋಲಗದೊಳು (ಹಕಶಾ. ೫-೩); ಉಗ್ರಭಲ್ಲೂಕವೃಕಾದಿ ದುಷ್ಟಮೃಗಸಂಕುಲದಿಂ . . . ಪುದಿದರಣ್ಯವನೆಯ್ದಿದನುರ್ವರಾಧಿಪಂ (ಶಕಶಂ. ೫೨೦); ಎತ್ತಲುಂ ಮೊಜೆವ ಸಿಂಹ ಶಾರ್ದೂಲ ಭಲ್ಲೂಕ ವೃಕ ಸೂಕರಾದಿ ದುಷ್ಟಮೃಗಂಗಳ ನಿಷ್ಠುರಧ್ವನಿಗೆ ಅಳ್ಕುವೆನಯ್! (ರಾಜಶೇಖ. ೩೪-೩). [ಸಂ.]

**ಭಲ್ಲೆ** (ನಾ). ೧. ಈಟಿ ; ಭರ್ಜಿ : ಆನೆ . . . ತನ್ನ ಮೇಲೆ ಕುಳಿತಿರುವವನಿಗೆ ಪೆಟ್ಟು ಬೀಳದಿರಲೆಂದು ಶತ್ರುವು ಎಸೆದ ಭಲ್ಲೆಗೆದುರಾಗಿ ತನ್ನ ಪಾದವನ್ನು ಒಡ್ಡಿ ಮೇಲೆ ಕುಳಿತಿರುವವನನ್ನು ರಕ್ಷಿಸುತ್ತದೆ (ಪ್ರವಾಇ. II, ೦೩೦) ; ಬಿಲ್ಲ ಬಾಗಿಸಲಹುದು, ಭಲ್ಲೆ ಬಾಗಿಸಬಹುದೆ? (ಹರಿಶ್ಚ. ೫-೭೦). ೨. ಭಲ್ಲೆಯಂತೆ ನೀಳವಾದ ಜೋಳದ ಕಡ್ಡಿ, – ಕಾಂಡ : ಮುಂಜಾವಿನಿಂದಲೂ ಮಕ್ಕಳಲ್ಲಿ ಭಲ್ಲೆಯ ಬಗ್ಗೆ ಮೇಲಾಟ ನಡೆದಿದೆ, ಒಬ್ಬರಿಗಿಂತಲೂ ಒಬ್ಬರು ದೊಡ್ಡ ಭಲ್ಲೆಯನ್ನು ತಮ್ಮ ಹೊಲಗಳಿಂದ ತರುತ್ತಿದ್ದಾರೆ (ಕಕಿಗಾ. ೦೫). [ಸಂ. ಭಲ್ಲ]

**ಭಲ್ಲೆಯ** 'ಬಲ್ಲೆಯ' ನೋ.

**ಭಲ್ಲೆಹ** 'ಬಲ್ಲೆಯ' ನೋ.

**ಭವ** (ನಾ). ೧. ಇರುವಿಕೆ ; ಇರವು ; ಅಸ್ತಿತ್ವ. ೨. ಹುಟ್ಟು ; ಉತ್ಪತ್ತಿ: "ಭವಮೆನೆ ಪುಟ್ಟುವುದು" (ರಾರಹ. ೨೩) ; ಅಜೆಯದೆ ಜನನಿಯ ಜಠರದಲ್ಲಿ ಬಾರದ ಭವಂಗಳಲ್ಲಿ ಬರಿಸಿದೆ ತಂದೆ (ಬಸವ. ೨೧). ೩. ಹುಟ್ಟಿನಿಂದ ಸಾವಿನ ವರೆಗಿರುವ ಅವಧಿ ; ಜೀವಿತಕಾಲ : ಎನಿತೆನಿತು ಕಟುಜದ ಭವವುಂ ನೆನೆದಪೆಯೆನಿತೆನಿತು ಭವದ ಬಂಧುಗಳಂ ನೀಂ ನೆನೆದಪೆ (ಅಶಪು. ೨-೭೦) ; ಪೋದ ಭವಂಗಳೊಳ್ ನೆರಪಿದೊಂದು ತಪಂ ಫಲಮಾಯ್ತು (ಜಗಪು. ೬-೮೪) ; ಬಂದ ಭವದ ಬವಣೆಯೊಂದದಂತು ಮುಂದಣ ಭವದ ಭಾವಂ ಬಾರದಂತು ತಡೆಗೆಯ್ವುದೇ ಮೇಲ್ (ರಾಜಶೇಖ. ೭೬-೨). ೪. ಸಂಸಾರ ; ಪ್ರಾಪಂಚಿಕ ವ್ಯವಹಾರ : ಕೂಡಲ ಸಂಗನ ಶರಣರ ಅನುಭಾವದಿಂದ ಎನ್ನ ಭವದ ಕೇಡು ನೋಡಯ್ಯಾ (ಬಸವ. ೪. ೮೪೦) ; ರಸ್ತ್ರಧಾರಾಪರಮತೀರ್ಥಸ್ನಾನ ತೊಳೆವುದು ಭವದ ಕಿಲ್ಬಿಷವ (ಕುಮಾರರಾಮ. ೦೫-೨೦) ; ಸಮತೆ ಸಂಯುಮಶಮಗಳಿಂ ಭವವನೋಲಗಿಸೆ ಸಮನಿಪುದು ಮತಿಯ ಹದಮಾತ್ಮಾನುಭವಕೆ (ಮಂಕುತಿ. ೭೦೪). ೫. ಪ್ರಪಂಚದ ಉತ್ಪತ್ತಿಗೆ ಕಾರಣನಾದವನು; ಶಿವ; ಪರಮೇಶ್ವರ : "ಈಶಾನಃ . . . ಭವಃ, ಭೂತೇಶಃ . . . ನೀಲಲೋಹಿತಃ — ಈ ೪೫ ಮಹಾದೇವರ ಪೆಸರ್" (ಶಬ್ದಮ. ೩-೧೧) ; ಭವಲಲಾಟವಿಲೋಚನಾಗ್ನಿಶಿಖೆಯಿಂ ಬೆಂದಳ್ಕಿ ಮತ್ತಂ ಮನೋಭವನೆಟ್ಟಿತ್ತೊಡೆ (ಶುಕಶಾ. ೭-೨೪) ; ಚಂಡಾಂಶು ಶುಭ್ರಾಂಶುಗಳ್ ಭವನೇತ್ರಂ (ಸೋಮೇಶ. ೮೭) : ಭವನ ಶಕ್ತಿಗೆ ಮಿಗಿಲು ರಾವಣನೆನುತ ನಡೆತಂದ (ತೊರವೆರಾ. ೨೨-೧೯). ೬. ಸಂಸಾರವುಳ್ಳವನು : ಪರನಪರು ಭವನಭವು . . . ಕ್ಷರನಕ್ಷರನೆನಿಪಗಣಿತವಿರುದ್ಧಗುಣ ನಿನ್ನ ನಿಜವದೇಂ ಕೇವಳಮೇ (ಜಗಪು. ೩-೯೭). ೭. ಮರುಹುಟ್ಟು ; ಪುನರ್ಜನ್ಮ : "ಮರಳಿ ಹುಟ್ಟುವುದಜಿಲ್ಲಿ ಭವಮೆಂಬುದಕ್ಕು" (ಮಂಗರಾ. ೦೪೦-೧೧) ; "ಪುನರ್ಭವದೊಳ್ ಶಿವನೊಳ್ ಭವಾಹ್ವಯಂ" (ನಾನಾರ. ೦೦೫). ೮. ಕ್ಷೇಮ ; ಸೌಖ್ಯ : "ಆ ಭವಂ ಭದ್ರಮೆಂಬುದು" (ಮಂಗರಾ. ೦೩೯-೫). ೯. [ಜೈನ] ಜಿನ ; ತೀರ್ಥಂಕರ : ಭವನ ತನು ಭಾಳಮಂಡವ ನವಮಂಡನದಿಂದಮೊಪ್ಪೆ (ಶಾಂತಿಪು. ೦೦-೭೦). ೧೦. ೧೦ತ ವಿಧ ಸಂಸಾರಗಳಲ್ಲಿ ಒಂದು : ಅವಜೊಳ್ ದ್ರವ್ಯಕ್ಷೇತ್ರಕಾಲ ಭವಭಾವಭೇದದಿಂ ಪಂಚವಿಧಂ ಸಂಸಾರಂ (ಆದಿಪು. ೦೦-೭೩ ವ). ೧೧. [ಛಂದ] ಗುರುವಿನ ಸಂಕೇತ : ನನ ಭವಯುತದಿಂ ವನರುಹಪದನೇ . . . ಜನನುತ ಸುಲಭಂ (ಛಂದೋಂಬು. ೨-೬೦); ದಿವಿಜಪುರಯುಗಯುಗದೆ ನಿಲಲನಿಲಂ ಶೀತಕರತ್ರಿತಯಂ ಕಡೆಯೊಳ್ ಭವನಿರೆ ಕರಿಗಿರಿ ಗಣನೆಗಳೊಳಂ ತಟಿಸ್ಸೆಗುಂ ಪದವಿಶ್ರಮಣಂ ಭುವನದೊಳತಿಶಯತರಮಿದು . . . ಹಂಸಪದಂ (ಛಂದೋಂಬು. ೨-೦೯೭). [ಸಂ.]

**ಭವಂಗಬೀಜ** (ನಾ). ಒಂದು ಬಗೆಯ ವನಸ್ಪತಿ : ಕರೀಗೊನ್ನೆ, ಭವಂಗಬೀಜ, ಗಂಗುಂಗಪಂಬು, ಕಂಗೊಂದಿಬಳ್ಳಿ, ಗವನಗೊಂಗೆ (ಶ್ರೀಕಾ. ೦೯-೩೫೦). [ ? + ಬೀಜ]

**ಭವಂಗಳೆ** (ಕ್ರಿ). ಸಂಸಾರವನ್ನು ಪರಿಹರಿಸು, – ನೀಗು : ಎನ್ನಯ ಹಿಂದಣ ಪಾಪ ಕರುಣದಿಂ ಮುಂದಣ ಭವಂಗಳೆವ ತಂದೆ ನೀನಿರಲಾವ ದಂದುಗವಮದಿಲ್ಲ (ಶಿವಪು. ೩-೯). [ಭವ + ಕಳೆ$_1$]

**ಭವಂಗಿಡಿಸು** 'ಭವಗೆಡಿಸು' ನೋ.

**ಭವಂತಿ, ಬಾವಂತಿ** (ನಾ). ಮನೆಯ ನಡುವೆ ಇರುವ ಅಂಗಳ ; ತೊಟ್ಟಿ : ನಡುಮಣ ಭವಂತಿಗಂ ಪಚ್ಚೆಯರಳೆಲೆಸಾಲನೊಡರಿಚಿಯೆ (ಜಮಮೋ. ೨೦-೦೩); ವೇಣುಪುರದರಮನೆಯಂ ಕಾಜಿನ ಭವಂತಿ ಹೊಸಭವಂತಿ ಐದಂಕಣದುಪ್ಪರಿಗೆ ವಸಂತಮಹಲ್ ಚಂದ್ರಮಹಲ್ಗಳೆಂಬೀ ಸ್ಥಾನಗಳಿಂ ವಿಸ್ತಾರಂಗೆಯ್ದು (ಕಳಪ್ಪ. ೦೦-೯೫). **ಬಾವಂತಿ** : ನಾಯಕರ ಮನೆಯ ದನಗಳನ್ನು ಕಾದುದಕ್ಕೆ . . . ಅವರ ಬಾವಂತಿಮನೆಯ ಒಂದು ಮೂಲೆಯಾದರೂ ಆಸರೆಯಾಗಿತ್ತು ಇವನಿಗೆ (ಚೆಳುವ. ೨).

[← ತೆಲು. ಭವಂತಿ, ಬವಂತಿ]

**ಭವಕರ್ಮ** (ನಾ). ಸಂಸಾರಕ್ಕೆ ಕಾರಣವಾದ ಕರ್ಮ : ನಿಮ್ಮ ಮಾಣದೆ ನೆನೆವಡಂಗೆ ಭವಕರ್ಮವೆಲ್ಲಿಯದೊ ಕೂಡಲಸಂಗಯ್ಯಾ (ಬಸವ. ೮೭೦).

[ಸಂ. ಭವಕರ್ಮನ್]

**ಭವಕ್ಷಯ** (ನಾ). ೧. ಸಂಸಾರದ ನಾಶ. ೨. ಸಂಸಾರವನ್ನು ನಿವಾರಿಸುವವನು : ದಕ್ಷಮುಖಕ್ಷಯಾಯ ಭವಕ್ಷಯಾಯ ನಮೋ (ಬಸಪು. ೬೦-೪೭). [ಸಂ.]

**ಭವಗಿಡಿಸು, ಭವಂಗಿಡಿಸು** (ಕ್ರಿ). ೧. ಸಂಸಾರದಿಂದ ಬಿಡುಗಡೆಮಾಡು, ಮುಕ್ತಗೊಳಿಸು : ಸಮ್ಯಜ್ಞಾನವೆಂಬ ದಳ್ಳುರಿ ಸೌರಾಷ್ಟ್ರಸೋಮೇಶ್ವರನ ತೋಱಿ ಭವಗಿಡಿಸಿತ್ತು (ಅರವ. ೩೩-೯೩). ೨. ಹಾಳುಮಾಡು ; ನಾಶಗೊಳಿಸು : ತಾಯಿ ಪಡೆದ ಮಕ್ಕಳನು ಭವಗಿಡಿಸಲೆಂದೇ ನಿಖಿಳಗೋಕುಲವ (ಶಿಶಾಗ. ೦೦-೮-೨೩). **ಭವಂಗಿಡಿಸು** : ೧. ಭವಂಗಿಡಿಸುವೋಲಗಕ್ಕೆ ಭವಬೇಸಱಿಂ ಪೋಕೆ ಪೋ ಭವಂ ಭವದುಪಾಂತದಲ್ಲಿಯೆ ಮನೋಭವಧ್ವಂಸಕಾ (ಆ೨ಪು. ೦೩-೬೭). [ಭವ + ಕೆಡಿಸು₁]

**ಭವಗೆಡು** (ಕ್ರಿ). ೧. ಸಂಸಾರಬಂಧನದಿಂದ ಮುಕ್ತವಾಗು ; ಹುಟ್ಟುಸಾವುಗಳಿಂದ ಪಾರಾಗು : ಗುಹೇಶ್ವರನೆಂಬ ಲಿಂಗವ ಪೂಜಿಸಿ ಭವಗೆಟ್ಟೆ ನಾನಯ್ಯ (ಅವಚಂ. ೯೯-೩೯೬); ಸೋಂಕದ ಮುನ್ನವೆ ಸುಪ್ರಿಯವಾನಪ್ರಸಾದಿ ಅರ್ಪಿಸದ ಮುನ್ನವೆ ಅವಧಾನಪ್ರಸಾದಿ ಅಱುವಱಿತು ಭವಗೆಟ್ಟ ಪರಿಣಾಮಪ್ರಸಾದಿ (ಅವಚ. ೨೪-೬೬). ೨. ಸಾಂಸಾರಿಕಕ್ಲೇಶಗಳಿಂದ ತಪ್ಪಿಸಿಕೊ : ಕಾಯದ ಕರದಲ್ಲಿ ಲಿಂಗವ ಹಿಡಿದು ಬಾಯಾಱಿ ಭವಗೆಟ್ಟು ನಾಣುಗೆಟ್ಟು ನಾನಾರೆಂಬುದನಱಿಯದೆ . . . ಜೀವರ ಬೇಡುವ ಜಾರರಿಗೆಲ್ಲಿಯದೋ ನಿಃಕಳಂಕಮಲ್ಲಿಕಾರ್ಜುನಾ (ಮೋಟವಚ. ೨೪-೯೩); ಭವಗೆಟ್ಟು ಬಂದ ಮಗಳೆಂದು ಕರುಣದಿಂ ತೆಗೆದು ಬಿಗಿಯಪ್ಪಿದರೆ ಚೆನ್ನಮಲ್ಲಿಕಾರ್ಜುನನ ಹೃದಯಕಮಲದಲ್ಲಿ ಅಡಗಿದೆನು (ಮಹಾದೇ. ೨. ೬೭-೦೯೩) ; ಕುಲಗೆಟ್ಟೆನು ಛಲಗೆಟ್ಟೆನು ಸಂಗಾ ನಿನ್ನ ಪೂಜಿಸಿ ಭವಗೆಟ್ಟೆನು ನಾನಯ್ಯಾ (ಬಸವ. ೩೨೨). [ಭವ + ಕೆಡು₁]

**ಭವಗೇಡಿ** (ನಾ). ೧. ಸಂಸಾರದಿಂದ ನಿವೃತ್ತನಾದವನು; ಸಂಸಾರವನ್ನು ತೊರೆದವನು : ಭಕ್ತನಾಗಿ ಭವಗೇಡಿಯಾಗಬೇಕು ಇದು ಗುಱಿ ಭವಗೇಡಿಯಾಗದವ ಬುದ್ಧಿಗೇಡಿ (ಬಸವ. ೪೭೩). ೨. ಸಂಸಾರಬಂಧನವನ್ನು ಹಾಳುಮಾಡುವವನು ; ಮೋಕ್ಷವನ್ನು ಕೊಡುವವನು : ಬೇಡಿಕೊಂಡುಣ ಹೋದೆ ನಿನಗಾನೂಡಿ ಮಾಡಿದುದೆಯ್ದಿದೇ ಭವಗೇಡಿ ಮಗನೇ (ಬಸಪು. ೦೩-೨೮). [ಭವ + ಕೇಡಿ₁]

**ಭವಚಾತುಷ್ಟಯ** (ನಾ). [ಜೈನ] ದೇವ, ಮನುಷ್ಯ, ತಿರ್ಯಕ್ ಮತ್ತು ನರಕಗಳೆಂಬ ನಾಲ್ಕುಬಗೆಯ ಗತಿ–ಸಂಸಾರ : ಕಷ್ಟತರಮಂ ಕಷಾಯಚತುಷ್ಟಯದೆಡೆಗಿಡಿಸಿ ದೇವ ಕಿಡಿಸಿಯೆ ಭವಚಾತುಷ್ಟಯಮುಮಂ (ಅಜಪು. ೬-೬೩). [ಸಂ.]

**ಭವತಾರಿಣಿ** (ನಾ). ಸಂಸಾರದಿಂದ ಪಾರು ಮಾಡುವವಳು : ಪರಮೇಶ್ವರಿ : ತಮಸ್ಸಿನ ಕಡಲಿನಲ್ಲಿ ಜಡವಾಗಿ ಬಿದ್ದಿದ್ದ ಸಮಾಜಪುರುಷನನ್ನು ಎಚ್ಚರಿಸಲು ಭವತಾರಿಣಿಯೇ ಬೇಕಾಗಿತ್ತು (ರಾಜ್ಯೋ. ೯೯). [ಸಂ. ಭವತಾರಿಣೀ]

**ಭವತಿ** (ನಾ). ಗೌರವಾನ್ವಿತಳಾದ ಮಹಿಳೆ ; ಪೂಜ್ಯೆ : ಭುಜಗಪಕ್ಷಪುರಗಣಬುಜದೊಳಾಱಿಕೊಳಪ್ಪುದವಗಣೇಳೆ ಭವತೀ (ಶಂದೋಂ. ೬ ೩-೩೦೭); " ಭವತಿ ಭಿಕ್ಷಾಂದೇಹಿ " ಎಂಬುದಿಮಪೆ ಶಬ್ದಿಗರ್ಗ ಸಿದ್ಧಿಸಿದ ಪೆರ್ಮೆಯ ಸಪ್ತಾಕ್ಷರೀಮಂತ್ರಂ (ರಾಮಾಶ್ವ. ೦೦೯-೦೯). [ಸಂ. ಭವತೀ]

**ಭವತ್ಕಾಲ** (ನಾ). [ವ್ಯಾಕ] ಈಗ ನಡೆಯುತ್ತಿರುವ ಕಾಲ ; ವರ್ತಮಾನ ಕಾಲ : ಭಾವಿ ಭವತ್ಕಾಲಂಗಳೊಳ್ ವಿಹಿತವಿಭಕ್ತಿಯಾದಿಗಳೊಳಾಗಮದ್ವಿತಾಪೊಲ್ವರ್ ಕೆಲಬರ್ ಭಾಷಾವಿದರುದ್ವಾದಿಯಕ್ಕುಮದುಮಂ ಪ್ರಾಯಂ (ಶಾಬ್ದ್ಮ. ೩೯೦). [ಸಂ.]

**ಭವದೀಯ** (ಗು). ನಿನಗೆ ಸಂಬಂಧಿಸಿದ ; ನಿನ್ನ : ಭವದೀಯ ಪದನವ್ಯಲೋಲವಿಲೋಚನಮುದಿತರಾಗಮಣಿಪಿಲಿತವಂ . . . ಪೋಲ್ಗುಂ (ಕಬಿರಾ. ೩-೯೩) ; ಬಂದು ತಂದೆಯಂತಿರೆ ಪದೆದು ಮಹಾಪುರುಷನಾಱಿಸಿದಂ ಭವದೀಯ ಶೋಕವಂ (ಆದಿಪು. ೯೪೪); ಭವದೀಯ ಮನೋಹರಬಾಲ್ಯವಿನೋದಾಮೃತದೊಳೆಯ್ದಿ ತೀವಿದ ಮತ್ತಾನ್ವಂತೆಪನಿಂತೀ ವಿಪದಿಂ ತೀವುವುದೇ (ಜಗ. ೩-೯೩). [ಸಂ.]

**ಭವದೂರ** (ನಾ). ೧. ಸಂಸಾರದಿಂದ ದೂರವಾಗಿರುವವನು; ಪ್ರಾಪಂಚಿಕ ವ್ಯವಹಾರಗಳನ್ನು ತೊರೆದಿರುವವನು ; ವಿರಕ್ತ : ಪೊರೆವುದೆಮ್ಮನು ದುರಮುಪಿಮಾಗಾರ ಬಸವಕುಮಾರ ಭವದೂರ (ಬಸಪು. ೦-೭). ೨. ಶಿವ : ಸೋಮಧರ . . . ಅನತಕಲ್ಪಭೂಮಿರುಹ ಭವದೂರ(ಚೆನ್ನಬಸ. ೩-೦). [ಸಂ.]

**ಭವನ** (ನಾ). ೧. ಇರುವಿಕೆ ; ಅಸ್ತಿತ್ವ. ೨. ಹುಟ್ಟು ; ಜನನ. ೩. ವಾಸಿಸುವ ಸ್ಥಳ ; ಮನೆ ; ಗೃಹ : " ಆವಾಸಃ , [ಅ]ವಸಥಂ, ಗೃಹಂ, ಭವನಂ . . . ಆಲಯಃ — ಈ ೩೧ ಮನೆ " (ಶಬ್ದಮ. ೪೯-೦೩೭). ೪. ದೊಡ್ಡಮನೆ ; ಪ್ರಾಸಾದ ; ಸೌಧ : ಧನದ ಭವನ ಮೆನಿಪ ಸಿರಿಯ ಬಚ್ಚರಾಪಣಂಗಳಿಂ (ಶಂಶಾ. ೦-೩೬ ರಗಳೆ); ವಸುಧೆಗೆ ಗುಡಿ ಕವಿದಂತೆಳ್ದೆಸೆಯಂ ಬಾಸಣಿಸಿ . . . ಎಸೆದುದು ಭುವನೈಕಭವನದಂತಾ ಭೂಜಂ (ಜಗ. ೪-೯೭); ಹಿರಿಯ ಭವನದ ಸುತ್ತುವಳಿಯದ ಮುರುಹಿನಲಿ ಮನೆಮನೆಗಳು (ಕುಮಾವ್ಯಾ. ೯-೭೦). ೫. ಸ್ಥಳ ; ಜಾಗ. ೬. ಹೊಲ ; ಕ್ಷೇತ್ರ. ೭. [ಜ್ಯೋತಿ] ಗ್ರಹಗಳಿರುವ ಮೇಷ ಮೊದಲಾದ ದ್ವಾದಶ ರಾಶಿ : ಭವನಂ ದ್ವಾದಶಭಾಗಂ ನವಾಂಶಕಂ . . . ಇನಿತುಂ ಷಡ್ವರ್ಗಮೆಂಬ ಪೆಸರಿಂ ಪ್ರವರ್ತಿಕುಂ (ಜಾತಕ. ೦-೪೩). [ಸಂ.]

**ಭವನಮಹತ್ತರದೇವ** (ನಾ). = ಭವನವಾಸಿ : ವಿವಿಧಾರ್ಥ್ಯಕರದ ಕಣ್ಮುಬ್ಬುಗದಿಂ ಭವನಮಹತ್ತರದೇವರ್ ಕ್ರಮದಿಂ ಬರೆ (ಶಂಪ್ರಶು. ೪-೬೩ ರಗಳೆ). [ಸಂ.]

**ಭವನವಾಸಿ** (ನಾ). [ಜೈನ] ದೇವತೆಗಳ ಒಂದು ಪಂಗಡ ; ಇವರಲ್ಲಿ ಅಸುರಕುಮಾರರು, ನಾಗಕುಮಾರರು, ಸುಪರ್ಣಕುಮಾರರು, ದ್ವೀಪಕುಮಾರರು, ಉದಧಿಕುಮಾರರು, ವಿದ್ಯುತ್ಕುಮಾರರು, ಸ್ತನಿತಕುಮಾರರು, ದಿಕ್ಕುಮಾರರು, ಅಗ್ನಿಕುಮಾರರು ಮತ್ತು ವಾತಕುಮಾರರು ಎಂಬ ಹತ್ತು ವರ್ಗಗಳಿವೆ : ದೇವಾಃ — ದೇವರ್ಕಳ್, ಚತುರ್ನಿಕಾಯಾಃ — ಭವನವಾಸಿ ವ್ಯಂತರ ಜ್ಯೋತಿಷ್ಕ ವೈಮಾನಿಕ ಭೇದದಿಂ ಚತುಃಸಂಘಾತಮನುಳ್ಳರಪ್ಪರ್ (ತತ್ತ್ವಸೂ. ೦೭೯). [ಸಂ. ಭವನವಾಸಿನ್]

**ಭವನವಾಸಿಕ** (ನಾ). [ಜೈನ] ಭವನವಾಸಿ ದೇವತೆಗಳು ವಾಸಿಸುವ ಲೋಕ : ಸುರನಿಳಯವು ಮೇಲೆ ಮನುಜರುಮಧ್ಯದಿ ಉರಗರು ಭುವನವಾಸಿಕ [ದಾಣಂ.ಗ]ದಿ ಉರು ದಹಿಸುವಡುವನಾರಕರು ಕೆಳಗೆಯೆಂದು ಪರಮಾಗಮದಿ ಪೇಳುವುದು (ಅನಂತ. ೦-೩೨). [ಸಂ. ಭವನವಾಸಿಕಾ]

**ಭವನವಾಸಿಗ** (ನಾ). = ಭವನವಾಸಿ : ಅಲ್ಲಿ ದೇವಗತಿ ನಾಲ್ಕುಕ್ಕುಮೆಂತೆನೆ ಭವನವಾಸಿಗ ವಾನವ್ಯಂತರ ಜ್ಯೋತಿಷ್ಕ ಕಲ್ಪವಾಸಿ ಭೇದಭಿನ್ನತ್ವದಿಂ (ಶಾಂತಿಪು. ೦೨-೬ ವ) ; ಅಸುರ ನಾಗ ವಿದ್ಯುತ್ ಸುಪರ್ಣ ಅಗ್ನಿ ವಾತ ಸ್ತನಿತ ಉದಧಿ ದ್ವೀಪ ದಿಕ್ಕುಮಾರ ದಶವಿಧ ಭವನವಾಸಿಗರುಂ (ತ್ರಿಶಾ. ೬-೪). [ ಭವನವಾಸಿ + –ಗ ]

**ಭವನಾಂಗ** (ನಾ). [ಜೈನ] ಹತ್ತು ಬಗೆಯ ಕಲ್ಪವೃಕ್ಷಗಳಲ್ಲಿ ಒಂದು ; ಮನೆಗಳನ್ನು ಕೊಡುವುದೆಂದು ನಂಬಲಾದ ವೃಕ್ಷ : ಭವನಾಂಗಂ ಕಲ್ಪಭೂಜಂ ಸಮೆದ ಬಹುವಿಧೋತ್ತುಂಗಹರ್ಮ್ಯಾವಳೀ ಗರ್ಭವಿಲಾಸಾವಾಸದೊಳ್ (ಶಂಪ್ರಶು. ೩-೩೮). [ಸಂ.]

**ಭವನಾಂಗಭೂಜ** (ನಾ). = ಭವನಾಂಗ : ಸನ್ನಿದಮಾದ ಭೋಗಭೂಮಿಯ ಭವನಾಂಗಭೂಜದ ವಿಗುರ್ವಣೆ ಸಂಶಯಮೇವುದೆಂಬ ನಿಶ್ಚಯಮನೊಡರ್ಚಿ (ಪಾರ್ಶ್ವಪು. ೨-೬೩) [ಸಂ.]

**ಭವನಾಮರ** (ನಾ). = ಭವನವಾಸಿ : ವಿಮಾನಾರೂಢಕಲ್ಪಜಜ್ಯೋತಿಷ್ಕ ವಾನವ್ಯಂತರ ಭವನಾಮರನಿಕಾಯಪರಿವೇಷ್ಟಿತಶೋಭಿತಮತಿರುಚಿರ ನಿಜಾಂಗರುಚಿಗಳೊಳಂ (ಆದಿಪು. ೧೦-೦೬ ವ) ; ಚಮರವೈರೋಚನಪ್ರಮುಖರಪ್ಪ ಭವನಾಮರರುಮಂ . . . ನಿರವಿಸಿ (ಚಂದ್ರಪು. ೦೨-೦೦೩ ವ). [ಸಂ.]

**ಭವನಾಶಿ** 'ಬವನಾಶಿ' ನೋ.

**ಭವನಿಕೆ** (ನಾ). ಅರಮನೆ ; ಪ್ರಾಸಾದ : ಅವನಿಪತಿ ಮಱುದಿವಸ ಬೀಡಿತ್ತುವ ನಿಧಾನವನಱಿದು ರಾಯನ ಭವನಿಕೆಯ ಹೊಱಬಾಹೆಯಲಿ ದಂಡಿಗೆಯನವನಿಳಿದ (ಕುಮಾ.ಸ. ೦೩-೨೭). [ಸಂ. ಭವನಿಕಾ]

**ಭವನಿರ್ಲೇಪ** (ನಾ). ಸಂಸಾರದಲ್ಲಿ ಆಸಕ್ತಿಯಿಲ್ಲದವನು ; ವಿರಕ್ತ : ತಾಪಸರು ಬಳಿವಿಡಿದು ಬರೆ ಬಳಿಕಾ ಪುರವ ಹೊಱವಂಟು ಭವನಿರ್ಲೇಪ ಭೀಷ್ಮ ದ್ರೋಣರನು ಕಳುಹಿಸಿದನು ಮನೆಗಳಿಗೆ (ಕುಮಾ.ಆ. ೦೩-೮). [ಸಂ.]

**ಭವನಿವಾರಣ** (ಗು). ೧. ಸಂಸಾರವನ್ನು ಪರಿಹರಿಸುವ ; ಪ್ರಾಪಂಚಿಕ ಕ್ಲೇಶಗಳನ್ನು ನಿವಾರಿಸುವ : ಭವನಿವಾರಣ ಭಾವಮೋಹನ ಭಾವನ ಭೂಷಣ ರಾಮಕಥೆಯಿಂದ ಕವಿಕುಲೋತ್ತಮ ಹೊಗಳಿದನು ವಾಲ್ಮೀಕಿ ಮುನಿರಾಯ (ಕೌತಿರಾ. ೦-೯೯). (ನಾ). ೨. ಸಂಸಾರವನ್ನು ಪರಿಹರಿಸುವಂಥದು : ನೈಜವಪ್ಪನುಸಾರಿವೇಷವು ಭವನಿವಾರಣವು (ಬಸವು. ೬-೬೮). [ಸಂ.]

**ಭವಪರಿಣತಿ** (ನಾ). ಮತ್ತೆ ಮತ್ತೆ (ರೂಪಾಂತರದಿಂದ) ಹುಟ್ಟುವಿಕೆ ; ಜನ್ಮಪರಿವರ್ತನೆ : ದಯಿತಾಸಂಬಂಧಬಂಧಂ ಭವಪರಿಣತಿ ತನ್ಮೂಲಮಿಾ ಬೇಷಸಂ ನಿಶ್ಚಯಂ (ಶಾಂತಿಪು. ೯-೦೯). [ಸಂ.] .

**ಭವಪರಿಣಾಮ** (ನಾ). = ಭವಪರಿಣತಿ : ಸಂಜಯನೆಂಬೊಂ . . . ಕಾದಿ ಸತ್ತು ಭವಪರಿಣಾಮಪರಾವರ್ತನದಿಂ ಬಂದು (ಶಾಂತಿಪು. ೯-೯೦ ವ). [ಸಂ.]

**ಭವಪರಿವರ್ತನ** (ನಾ). = ಭವಪರಿಣತಿ : ಚತುರ್ಗತಿಗಳೊಳಂ ಸರ್ವಜಘನ್ಯಮಪ್ಪಾಯುಷ್ಯದೊಳ್ ತೊಡಗಿ ಸಮಯಾದಿಕಾನುಕ್ರಮದಿಂದನೇಕ ಭವಪರ್ಯಾಯಪರಿಭ್ರಮಣದಿಂ ಬಂದು ಪುಟ್ಟುತ್ತುಂ ಕಡೆಯೊಳುತ್ಕೃಷ್ಟಾಯುಷ್ಯಮನೆಯ್ದೆ ನೆಱೆಯಿಸುವ ನೆಱವಿ ಭವಪರಿವರ್ತನಮೆಂಬುದು (ಸುಕುಮಾ. ೬-೬ ವ). [ಸಂ.]

**ಭವಪಾಶ** (ನಾ). ಸಂಸಾರ ಬಂಧನ ; ಪ್ರಾಪಂಚಿಕ ಬಂಧನ : ಭವಬಂಧನ ಭವಪಾಶವಾದ ಕಾರಣವೇನಯ್ಯಾ (ಬಸವ. ೭) ; ಬಿಡಿಸಿ ವಧೂಜನವಮನೊಡಂಬಡಿಸಿ ಪಿತೃದ್ವಯಮನಖಿಳವಿಷಯಸುಖಕ್ಕೋಗಡಿಸಿ ಭವಪಾಶಮಂ ಪಱಿಪಡಿಸಿ (ಪುಷ್ಪ.ಪು. ೦೩-೬೩) ; ವಿರೋಧಿ ಷಡ್ವರ್ಗದ ವಿಕಾರವ್ಯಾಧಿಯಲಿ ಬೆಂಡಾಗಿ ಭವಪಾಶದಲಿ ಬಿಗಿವಡೆದು (ಕುಮಾ.ಕ. ೩-೨೯). [ಸಂ.]

**ಭವಪ್ರತ್ಯಯಜ್ಞಾನ** (ನಾ). [ಜೈನ] "ಕಾಲ ದೇಶಗಳು ಎಷ್ಟೇ ದೂರವಾಗಿದ್ದರೂ ಅಲ್ಲಿನ ವಿಷಯಗಳನ್ನು ತಿಳಿಯುವುದು ; ಹಿಂದೆ ನಡೆದ, ಮುಂದೆ ನಡೆಯುವ ಸಂಗತಿಗಳನ್ನು ಇದರಿಂದ ತಿಳಿಯಬಹುದು ; ದ್ರವ್ಯಕ್ಷೇತ್ರ ಕಾಲಭವಗಳನ್ನು ಅವಧಿಮಾಡಿಕೊಂಡು ಇಂದ್ರಿಯಗಳಿಗೆ ಅಗೋಚರವಾದ ವಿಷಯಗಳನ್ನು ತಿಳಿಯುವ ದಿವ್ಯಜ್ಞಾನ. ಇದು ದೇವ ನಾರಕರಿಗೆ ಸಹಜವಾಗಿರುತ್ತದೆ. ಹೀಗೆ ಸಹಜವಾಗಿ ಬರುವ ಅವಧಿಜ್ಞಾನಕ್ಕೆ 'ಭವಪ್ರತ್ಯಯಜ್ಞಾನ' ಎಂದೂ ಹೆಸರು" (ಕೈಪಿಡಿ. ೨೩) : ಭವಪ್ರತ್ಯಯಜ್ಞಾನಂ ತೊಟ್ಟನೆ ಪುಟ್ಟೆ ಪೂರ್ವಭವದೊಳ್ ತೊಟ್ಟೊಂದು ವೃತ್ತಾಂತಮಂ ನೆಱಿಯಱಿದು (ಆದಿಪು. ೨-೬೬) ; ಪುಟ್ಟಿತ್ತಾ ನಾಕೇಂದ್ರಂಗೆ ನಿಷ್ಕಾರ್ಕುಲಮಪುಳಭವಪ್ರತ್ಯಯಜ್ಞಾನಮಾಗಳ್ (ಸುಕುಮಾ. ೯-೨೩) ; ಅಂತು ಪಲಕಾಲಮೇನಾನುಮಂ ಮಾಡಿ ಮಱಿದವಂಗೆ ನೆನವಿ ಪುಟ್ಟುವಂತೆ ಪುಟ್ಟಿದ ಭವಪ್ರತ್ಯಯಜ್ಞಾನಪ್ರಭಾವದಿಂದಂ (ಚಂದ್ರಪು. ೪-೬೩ ವ). [ಸಂ.]

**ಭವಬಂಧ** (ನಾ). = ಭವಪಾಶ : ಪೂರ್ವಜನ್ಮನಿವೃತ್ತಿಯಾಗಿ ಗುರುಕರುಣ ವಿಡಿದಂಗೆ ಬಂಧನವೆಲ್ಲಿಯದೊ ಭವಬಂಧ[ಪಾಠಾಂ. ಬಂಧನ]ವೆಲ್ಲಿಯದೊ (ಬಸವ. ೯೬೦); ಎನ್ನದಾನೆಂಬೆರಡಱಿಂದವೆ ಬನ್ನಬಡುವನು ಜೀವನಲ್ಲದೆ ಮುನ್ನವಿನ್ನೆಂದೆಂದಿಗಾತ್ಮಂಗಿಲ್ಲ ಭವಬಂಧ (ಕುಮಾ.ದ್ರೋ. ೬-೨೮). [ಸಂ.]

**ಭವಬಂಧನ** (ನಾ). ೧. = ಭವಪಾಶ : ಭವಬಂಧನ ಭವಪಾಶವಾದ ಕಾರಣವೇನಯ್ಯಾ (ಬಸವ. ೭); ಲಿಂಗವರಾಙ್ಮುಖಿರನಾಗಳು ಭಜಿಸಿ ಭವಬಂಧನಕ್ಕೊಳಗಾಗದಂತಿಹರು (ಬಸವು. ೬೦-೩೦) ; ಕರ್ಮದಿಂದಲ್ಲವೇ ಜೀವಿಯು ಬದ್ಧನಾಗಿ ಭವಬಂಧನದಲ್ಲಿ ಬಿದ್ದು ಒದ್ದಾಡುತ್ತಿದ್ದಾನೆ ? (ಶಾಕು. ೦೦೩). ೨. ಸಂಸಾರದಲ್ಲಿ ಸಿಕ್ಕಿ ಬಿದ್ದವನು : ಆಶೆಯೆಂಬ ಪಾಶದಲ್ಲಿ ಭವಬಂಧನನಾಗಿರ್ದೆನಯ್ಯಾ (ಬಸವ. ೬೯). [ಸಂ.]

**ಭವಬಡು** (ಕ್ರಿ). ಹುಟ್ಟು ಸಾವುಗಳ ಕಷ್ಟವನ್ನು ಅನುಭವಿಸು : ಅಶುಭಕರ್ಮಕೆ ಶುಭಕರ್ಮಕೆ ಸರ್ವರು ವಶರಾಗಿ ಭವಬಡುತಿಹರು (ಭರತ. ೬೮-೦೦೨). [ ಭವ + ಪಡು$_1$ ]

**ಭವಬದ್ಧವೈರ** (ನಾ). ಜನ್ಮಾಂತರದಲ್ಲಿ ಉಂಟಾದ ಮತ್ಸರ; ಜನ್ಮಾಂತರೀಯ ದ್ವೇಷ : ಪುಟ್ಟಲೊಡಮಱಿದು ಮೊದಲೊಳ್ ಪುಟ್ಟಿದ ಭವಬದ್ಧವೈರದಿಂ ದಿಟಿಸುತನಣ್ಣುಟ್ಟಾಗೆ (ಶಾಂತಿಪು. ೯-೧೯); ಭವಬದ್ಧವೈರಮಂ ತಿಳಿದು ವಿಭಂಗಜ್ಞಾನದಿಂದೆ . . . ನವಖಂಡಮಾಗೆ ಮೊಟ್ಟಿರ್ ನವನಾರಕರಂ ಪುರಾಣನಾರಕರಾಗಳ್ (ಪುಷ್ಪ.ಪು. ೦೩-೦೬೩). [ ಸಂ. ]

**ಭವಬಾಧೆ** (ನಾ). ಸಂಸಾರದ ತೊಂದರೆ,-ತಾಪತ್ರಯ : ಬೋಧನಿರಾಕೃತಿಯಿಂ ಭವಬಾಧಾಪೀಡಿತಶರೀರಿಯಾದ್ಯೆ (ಸುಕುಮಾ. ೩-೨೬). [ ಸಂ. ಭವಬಾಧಾ ]

**ಭವಭೋಗ** (ನಾ). ಸಂಸಾರಸುಖ ; ಇಹಲೋಕದ ಸುಖ : ಅಪಾರ ಭವಭೋಗಮನಿಂತಿರೆ ಪತ್ತುವಿಟ್ಟು ಕಾನನದೊಳೆ ನಟ್ಟು ನಿಂದು (ಜಗಂಪು. ೯೬೦). [ ಸಂ. ]

**ಭವಭ್ರಮಣ** (ನಾ). ಜನ್ಮಚಕ್ರದಲ್ಲಿ ಸುತ್ತುವುದು ; ಮತ್ತೆಮತ್ತೆ ಹುಟ್ಟಿ ಸಾಯುವುದು : ಇದನಾದಿಪ್ರಭವಂ ಭವಭ್ರಮಣದುಃಖೋಗ್ರಾಗ್ನಿಯೊಳ್ ಮುಗ್ಗಿದಪ್ಪುದು ಜೀವಂಗಳನೆಂಬಿನಂ (ಆದಿಪು. ೦೩-೦೯). [ ಸಂ. ]

**ಭವಮಥನ** (ನಾ). ಜನ್ಮಕರ್ಮವನ್ನು ನಾಶಮಾಡುವವನು; ಮುಕ್ತಿದಾಯಕ : ಭವಗಹನದುಪದ್ರವಮಂ ಕಿಡಿಸು ಭವಾಂತಕಭವನಕ್ಕುಯ್ ತಡೆಯದೆನ್ನ ನೀಂ ಭವಮಥನಾ (ಆದಿಪು. ೧೦-೩೮). [ ಸಂ. ]

**ಭವಮಾಲೆ** (ನಾ). ಹುಟ್ಟು ಸಾವುಗಳ ಪರಂಪರೆ; ಜನ್ಮಚಕ್ರ : ಆಸೆಗೆ ಹುಟ್ಟಿದ ಪ್ರಾಣಿ ಆಸೆಯನೆ ಕಲಿತು ಪುಣ್ಯಪದವಿಯ ಬಯಸಿದರೆ ಭವಮಾಲೆಯ ಭಯವು ತಪ್ಪದು (ಬಸವ. ೦೨೯); ವಿವೇಕಶೂನ್ಯನು ತಿರುಗುವನು ಭವಮಾಲೆಯಲಿ ಮೋಕ್ಷವನಪೇಕ್ಷಿಸದೆ (ಅಮೃತ. ೦-೩೯) ; ಭವಮಾಲೆ ಸಱಿದು ಸುಖಿಸುವೊಡೆ ಆವ ಸದಾಶಿವನು ತಾನಕ್ಕು (ಸರ್ವಜ್ಞ. ೩೦೫). [ ಸಂ. ಭವಮಾಲಾ ]

**ಭವಮುಕ್ತ** (ನಾ). ಸಂಸಾರದಿಂದ ಬಿಡುಗಡೆ ಹೊಂದಿದವನು : ಶಿವಭಕ್ತಿಯುಳ್ಳಾತ ಭವಮುಕ್ತನಾದಾತ (ಸರ್ವಜ್ಞ. ೨೬೯). [ ಸಂ. ]

**ಭವರಮ್ಮ** (ನಾ). ಪಾರ್ವತಿಯ ಹೆಸರುಗಳಲ್ಲಿ ಒಂದು ; ಭ್ರಮರಾಂಬ : ಅವ್ವ ಅವ್ವ ಎಂದು ಭವರಮ್ಮನ ಕರೆವನು ಯಾವ ನೆವ ಎನಗೆ ಹೇಳದಿರು ನಿಮ್ಮಗಳಿ ಜೀವ ಬೇಸರಾಯ್ತು ಹಡೆದವ್ವ (ಸಿದ್ಧಕು. ೩-೮೩). [ < ಸಂ. ಭ್ರಮರಾಂಬಾ ]

**ಭವರಾಟಳ** 'ಭವಜಾಟಣ' ನೋ.

**ಭವರಿಪು** (ನಾ). ೧. ಸಂಸಾರಕ್ಲೇಶವನ್ನು ನಿವಾರಿಸುವವನು ; ಪರಮಾತ್ಮ. ೨. [ಜೈನ] ಅರ್ಹಂತ ; ಜಿನ : ಇಂದ್ರ ಭವರಿಪುವಂ

ಸ್ತುತಿಯಿಂ ಮುಕುಟವಿಘಟ್ಟಿತಪಾದನಾದನನುನಯದಿಂದಂ (ಕೃಷ್ಣ. ೦೦-೩೮). [ ಸಂ. ]

**ಭವರುಜೆ** (ನಾ). ರೋಗದಂತೆ ಕ್ಲೇಶವನ್ನುಂಟುಮಾಡುವ ಸಂಸಾರ ; ಐಹಿಕವ್ಯಾಪಾರ : ನಾನಾಭವರುಜೆಯೊಳು ಬಿದ್ದೆಂ ತೊಳಲ್ದೆಂ ಬಳಲ್ದೆಂ (ಕಂಠೀ. XVII. ೬೮೩೪). [ ಸಂ. ಭವರುಜಾ ]

**ಭವರೋಗ** (ನಾ). = ಭವರುಜೆ : ಭವರೋಗವ ಗೆಲುವ ಪರಿಯ ನೋಡಾ (ಬಸವ. ೬೩೩); ಭವರೋಗಕ್ಕಿದು ಭೇಷಜಂ (ಕೃಷ್ಣ. ೨೭-೨೩). [ ಸಂ. ]

**ಭವರೋಗವೈದ್ಯ** (ನಾ). ಸಂಸಾರದ ತಾಪತ್ರಯಗಳನ್ನು ಪರಿಹರಿಸುವವನು; ಪರಮೇಶ್ವರ : ಭವರೋಗವೈದ್ಯನೆಂದು ನಾ ನಿಮ್ಮ ಮಱೆಹೊಕ್ಕೆ (ಬಸವ. ೪೮೨); ಪವಡಿಸು ಪರಮಾತ್ಮನೆ ನೀನು ಭವರೋಗ ವೈದ್ಯ ಭಕ್ತರ ನಿಧಿಯೆ (ಪುರಂದ. ೩-೦೩೦ ಪಲ್ಲವಿ); ಮುಂದೇನು ತೋಱದೆ ದೈವವೆ ಶರಣೆಂದೆ ಭವರೋಗವೈದ್ಯನ ನೆನೆದೆ (ಜಂಡಾಜಿ. ೪೯-೩೯). [ ಸಂ. ]

**ಭವರೋಗಿ** (ನಾ). ಸಾಂಸಾರಿಕ ಕಷ್ಟಗಳನ್ನು ಅನುಭವಿಸುತ್ತಿರುವವನು : ರಾಗದಿಂದುರಿದೇಳುತಿಹ ಭವರೋಗಿ ನಿನ್ನಲಿ ಮಾತನಾಡಲಿಕಾಗದು (ಕೃಶುಲೀ. ೦೩-೨೪). [ ಸಂ. ಭವರೋಗಿನ್ ]

**ಭವಸ್ಮರಣೆ** (ನಾ). ಹಿಂದಿನ ಜನ್ಮದ ನೆನಪು ; ಜನ್ಮಾಂತರದ ಸ್ಮೃತಿ : ಮಱೆಯಂಚೆಯ ಮುದ್ದುಗೆಯ್ಮೆಮುಂಸಂಚೆವಾಳತಿಯಾ ಮಱೆಯೊಳಾ ದೆಱಕಮುಮಂ ಕಂಡೆನಗೆ ತೋಱುತ್ತುಂ ಭವಸ್ಮರಣೆ ತೊಟ್ಟನೆ ಪುಟ್ಟಿ (ಪಂಪಭಾ. ೪-೨೩). [ ಸಂ. ಭವಸ್ಮರಣ ]

**ಭವಸ್ಮೃತಿ** (ನಾ). = ಭವಸ್ಮರಣೆ : ವೇದನಿವಹಸ್ಮೃತಿಶಾಸ್ತ್ರಕಳಾಕಳಾಪಸಂಪನ್ನತೆಯೆಂತು ಬಂದುದು ಭವಸ್ಮೃತಿ ಪುಟ್ಟಿತೊ ಮೇಣ್ ವರಪ್ರಸಾದೋನ್ನತಿಯಾದುದೋ (ಕಾದಂಪೂ. ೪೦). [ ಸಂ. ]

**ಭವಹರ** (ನಾ). ಸಂಸಾರದ ದುಃಖವನ್ನು ನಾಶಮಾಡುವವನು : ನತವಿನೇಯವ್ರಾತ ಚೇತಸ್ಸಮೋಹರನಾಗಿರ್ದುದಱಿಂ ಹರಂ ಭವಹರಂ ಮಾಣಿಕ್ಯದೇವಂ (ಅಜಿತ. ೦೩-೬); ಭವಹರ ನಿರೀಕ್ಷಿಸು ರಕ್ಷಿಸೆನ್ನನೆನುತ ಹೊರಳಿದನು (ಕುಮಾರಾರಾ. ೩-೬೩). [ಸಂ.]

**ಭವಹರೆ** (ನಾ). ಸಂಸಾರದ ದುಃಖವನ್ನು ದೂರಮಾಡುವವಳು ; ಮುಕ್ತಿದಾಯಿನಿ : ಶ್ರೀಮತ್ಪ್ರಾಲೇಯಶೈಲೋದ್ಭವೆ ಶಿವೆ . . . ಭವಹರೆ ಶರ್ವಾಣಿ (ರಾಜಶೇ. ೬-೦೩೮). [ ಸಂ. ಭವಹರಾ ]

**ಭವಜಾಟಣ,** ಭವರಾಟಳ, ಭವಜಾಟಳ, ಭವಜಾಟಾಳ (ನಾ). ಪುನಃಪುನಃ ಹುಟ್ಟುವುದು ; ಜನ್ಮಚಕ್ರ : ಭವಭವದಲ್ಲೆನ್ನ ಮನವು ಸಿಲುಕದೆ ಭವಜಾಟಣ [ಪಾಠಾಂ-ಟಳ, ಟಾಳ]ದೊಳು ತುಂಬಿದೆ (ಬಸವ. ೬೮). ಭವರಾಟಳ : ಬೋಧಿವೃಕ್ಷದ ಅಡಿಯಲ್ಲಿ ಭವರಾಟಳದ ಕಾರಣಗಳ ಕುಣಿಕೆಯನ್ನು ಕಂಡುಕೊಂಡನು (ತೀನಾಶ್ರೀ. ೦೦೨). **ಭವಜಾಟಳ :** ಮೇಲಿನ 'ಬಸವ' ಪ್ರಯೋಗದ ಪಾಠಾಂತರವನ್ನು ನೋಡಿ. **ಭವಜಾಟಾಳ :** ಅಱುಹು ಆಚಾರಹೀನವಾದ ಗುರುಲಿಂಗಜಂಗಮವ ದೇವರೆಂದು ಪೂಜಿಸುವ ಭಕ್ತಂಗೆ ಭವಜಾಟಾಳದಲ್ಲಿ ಸತ್ತುಸತ್ತು ಹುಟ್ಟಿಬಪ್ಪುದು ತಪ್ಪದಯ್ಯ (ಅಲ್ಲಂದೀ. ೦೩೭-೦೦೬). [ಭವ + ಜಾಟಣ]

**ಭವಜಾಟಳ** 'ಭವಜಾಟಣ' ನೋ.

**ಭವಜಾಟಾಳ** 'ಭವಜಾಟಣ' ನೋ.

**ಭವಾಂತಕ** (ನಾ). ಸಂಸಾರದ ಕೋಟಲೆಗಳಿಗೆ ಯಮಸ್ವರೂಪನಾದವನು; ದೇವರು : ಅಂತ್ಯರಹಿತನನಪ್ರಮೇಯನನನಂತರೂಪನನಂಘ್ರಿಭುಜಕಭವಾಂತಕನನುದ್ದಂಡದೈವವ ಕಂಡನಬುಜಭವ (ಕುಮಾ. ೬-೦೬). [ ಸಂ. ]

**ಭವಾಂತರ** (ನಾ). ಬೇರೆಯ ಹುಟ್ಟು ; ಜನ್ಮಾಂತರ : ನೆನೆದಂ ವಿಭಂಗದಿನತೀತಭವಾಂತರಭೂರಿವೈರಮಂ (ಶಾಂತಿಪು. ೭-೦೦೪); ಈಗಳಾಗಿಯುಂ ನೆನೆದು ನಿರಾಕುಳಂ ಬಗೆದು ಭಾವಿಸು ನಿನ್ನ ಭವಾಂತರಂಗಳಂ (ಸುಕುಮಾ. ೩-೨೪) ; ಪ್ರಥಮ ಭವಾಂತರದಲ್ಲಿ ಶಿಲಾದನೆಂಬ ಗಣೇಶ್ವರನ ಮಾಡಿ ಹೆಸರಿಟ್ಟು ಕರೆದು ನಿಮ್ಮ ಭೃತ್ಯನ ಮಾಡಿಯೆನ್ನನಿರಿಸಿಕೊಂಡಿರ್ದಿರಯ್ಯಾ (ಬಸವ. ೪); ಕಣ್ಣಱಿಯದೊಡಂ ಕರುಳಱಿಯದೆ ಮಱುಗಿಸದಿರ್ಪುದೆ ಭವಾಂತರವ್ಯಾಮೋಹಂ (ಮಹಾಜೀ. ೩-೪೪). [ ಸಂ. ]

**ಭವಾದ್ರಿ** (ನಾ). ಶಿವನು ವಾಸಮಾಡುವ ಬೆಟ್ಟ ; ಕೈಲಾಸಪರ್ವತ : ಮನುಜನನೆನ್ನನೀಕ್ಷಿಸಿ ಭವಾದ್ರಿಯನೇಱದೆ . . . ನಭಕ್ಕೊಗೆದಾಗಳೆ ಪೋಗದಿರ್ದೊಡೊಯ್ಯನೆ ಬೆಸಗೊಳ್ವೆಂ (ಕಾದಂಪೂ. ೬೬೩). [ಸಂ.]

**ಭವಾನಿ** (ನಾ). ಶಿವನ ಹೆಂಡತಿ ; ಪಾರ್ವತಿ : "ರುದ್ರಾಣೀ, ಶರ್ವಾಣೀ, ಕಾಳೀ, ಕಾತ್ಯಾಯನೀ, ಭವಾನೀ . . . ಮೇನಕಾತ್ಮಜಾ—ಈ ೨೧ ಗೌರೀದೇವಿಯ ಪೆಸರ್" (ಹಲಾಯು. ೪-೦೫); ಎಲ್ಲಿ ನದೀನದಾಳಿ ತಾನಲ್ಲಿ ಭವಾನಿ ಭಕ್ತಿ ಮಿಗೆ ಭಾವಿಸಿ ಭರ್ಗನನೊಲ್ದು ಪೂಜಿಪಳ್ (ಗಿರಿಜಾ. ೩-೮೨); ಪಾಲಿಸೆನ್ನಂ ಭೀಮಾಘಮರ್ದಿನಿ ಭವಾರ್ದಿನಿ ನೀಂ ಭವಾನೀ (ರಾಜಶೇ. ೪-೦೨೫). [ಸಂ. ಭವಾನೀ]

**ಭವಾನೀಧವ** (ನಾ). ಪಾರ್ವತಿಯ ಪತಿ ; ಪರಮೇಶ್ವರ : "ಭವನೀಶಂ . . . ಭವಾನೀಧವನುಗ್ರಃ . . . ವಾಮದೇವಂ ವೃಷಾಂಕಂ" (ಅಭಿ. ಕೋ. ೩-೦೫); ಇದು ಕೈಲಾಸಂ ಭವಾನೀಧವನ ನೆಲೆ (ಶಂಕರ. ೬-೭೪). [ಸಂ.]

**ಭವಾರಿ** (ನಾ). ೧. ಸಂಸಾರಕ್ಕೆ ಶತ್ರುವಾದವನು ; ಸಾಂಸಾರಿಕ ಕ್ಲೇಶಗಳನ್ನು ನಿವಾರಿಸುವವನು : ಶಿವ : ಭದ್ರಾರೂಢ ಭವಾರಿ ಭರ್ಗವೃಷಭನಂ . . . ನಾಡೆ ನೆನೆದಂ (ಹರಿಶ್ಚಂ. ೨-೭). ೨. ಶಿವನ ಶತ್ರು; ಮನ್ಮಥ : ಮುರಜನ್ನಾರಾಯಣಗರ್ಗಂ ಸಿರಿಗಂ ಶ್ರೀರಾಮೆಗಮಮನಂಗಂ ಭವಾರಿಗಮೈಕ್ಯಂ (ಕಾವ್ಯಾ. ೪೦೬). [ಸಂ.]

**ಭವಾರ್ದಿನಿ** (ನಾ). ಜನನಮರಣರೂಪವಾದ ಸಂಸಾರಬಂಧವನ್ನು ನಾಶಗೊಳಿಸುವವಳು ; ಪಾರ್ವತಿ : ಪಾರ್ವತಿ ಪಾಲಿಸೆನ್ನಂ ಭೀಮಾಘಮರ್ದಿನಿ ಭವಾರ್ದಿನಿ ನೀಂ ಭವಾನೀ (ರಾಜಶೇ. ೪-೦೨೫). [ಸಂ. ಭವಾರ್ದಿನೀ]

**ಭವಾವಳಿ** (ನಾ). = ಭವಮಾಲೆ : ಅರಸಂ . . . ನಾಲ್ವರ ಭವಾವಳಿಯುಂ ಬೆಸಗೊಳೆ (ಆದಿಪು. ೫-೨ ವ); ಕತೆ ಕಿಡದೆಯುಂ ಭವಾವಳಿ ತಡಮಾಗದೆಯುಂ . . . ಆ ಜಿನಚಂದ್ರಂ ಇಂತೆಂದಂ (ಶಾಂತಿಪು. ೫-೦೦); ಹಸ್ತಿಯ ತನ್ನ ಮುನ್ನಿನ ಭವಾವಳಿಯೆಲ್ಲವನೆಯ್ದೆ ಪೇಳ್ದು (ಕಂಠೀರವ. ೦೫-೫೩). [ಸಂ. ಭವಾವಲಿ]

**ಭವಾಳಿ** (ನಾ). = ಭವಮಾಲೆ : ಅದು ನಮ್ಮಿನಿಬರ ಭವಾಳಿಯಿಂದೆ ನವಾಗನು ಭೂತಪೂರ್ವಂ (ಆದಿಪು. ೦೩-೫೬ ವ); ಅಂತು ಭವಾಳಿಯನೋಳಿಯೆ ಪೂರ್ವಾಪರಪರಾಮರ್ಶಗೆಯ್ದು (ಶಾಂತಿಪು. ೫-೭ ವ). [ಸಂ. ಭವಾಲೀ]

**ಭವಿ** (ಗು). ೧. ಬದುಕಿರುವ; ಜೀವದಿಂದಿರುವ. (ನಾ). ೨. ಸಂಸಾರಬಂಧನಕ್ಕೊಳಗಾದವನು. ೩. [ವೀಶೈ] ವೀರಶೈವದೀಕ್ಷೆಯನ್ನು ಪಡೆಯದವನು : ತನು ಭಕ್ತನಾಯಿತ್ತು ಎನ್ನ ಮನ ಭವಿ ಕೂಡಲಸಂಗಮದೇವಾ (ಬಸವ. ೨೮೪); ಭವಿ ಮುಟ್ಟಬೇಡ ಬೇಡೆಂದು ಮಾಣಿಸುತ ಮಿರೆ (ಪಾಲ್ಕುರಿ. ದೇ. ೨೭೦-೬); ಆದಿಶಿವಭಕ್ತಂಗೆ ಮದುವೆಯಪಾಧರದಿ ನಾ ಮಾಳ್ಪೆನಲ್ಲದೆ ಈ ದುಹಿತೆಯಂ ಭವಿಗೆ ಕೊಡೆನು (ಬಸವಪು. ೩-೮೬); ಭಕ್ತರಿಗೆ ಭವಿಗಳಿಗೆ ಯುಕ್ತಿಯುತರವಕ್ಕು ಭಕ್ತ ತಾ ಮುಕ್ತನಾಗಿಹರೆ ಭವಿ ಭವವ ಸುತ್ತುತ್ತಲಿಹನು (ಸರ್ವಜ್ಞ. ೨೬೦). [ಸಂ. ಭವಿನ್]

**ಭವಿಕ** (ಗು). ೧. ಹಿತಕರವಾದ. ೨. ಯುಕ್ತ; ಯೋಗ್ಯ. ೩. ಸಮೃದ್ಧ. (ನಾ). ೪. ಒಳ್ಳೆಯದು : "ಶ್ವಃ(ಸ್ವ)ಶ್ರೇಯಸಂ . . . ಭವಿಕಂ, ಭಾವುಕಂ, ಶ್ರೇಯಃ, ಭವ್ಯಂ, ಭದ್ರಂ, ಮಂಗಳಂ—ಈ ೧೧ ಒಳ್ಳಿತರ್ಕೆ ಪೆಸರ್" (ಹಲಾಯು. ೨೦-೦೨೨). ೫. ಶುಭ ; ಮಂಗಳ. ೬. ಏಳಿಗೆ;

ಅಭಿವೃದ್ಧಿ. ೭. ಸುಖ ; ಸಂತೋಷ : ಎಲೆಯಕ್ಕ ತವೆಣದಿಂದಲ್ಲವಾಗೆ ವಸ್ಕದ ಸುಮರ್ದಿಕ್ಕಿ ಭವಿಕದಿಂದವ ನಿನ್ನ ತಕ್ಕಿಯೊಳಗಿರುವ ವಾಳ್ಕಿಯು ಮಾಳ್ಪೆನು (ಪ್ರಭುಲಿ. ೩-೯೦); ಶಿವಪ್ರಿಯನಾಟಿಯೆಂದೆಂಬ ಗಣಿಕಾಂಗನೆಯು ಶಿವನ ವಾರಂ ಕುಲಶ್ಚರಿಯುರಂ ಕರೆವುತಂ ಭವಿಕದಿಂ ರತಿಸೆಸಲ್ (ಪ್ರಭುಲಿ. ೩-೦೩೪). ೮. ಐಶ್ವರ್ಯ ; ಸಂಪತ್ತು : ಅವರೆಷ್ಟು ಧನವಂತರ್, ಇವರೆಷ್ಟು ಬಲವಂತರ್, ಅವರೆಷ್ಟು ಯುತವಂತರ್ ಎನುವ ಕರುಬಿನಲಿ ಭವಿಕ ನಿನಗೆಷ್ಟುಹುದೊ ಮರೆತು ನೀಂ ಕೊರಗುವುದು ಶಿವನಿಗೆ ಕೃತಜ್ಞತೆಯೆ ? (ಮಂಕುತಿ. ೭೪೬). [ಸಂ.]

**ಭವಿತನ** (ನಾ). ಭವಿಯಾಗಿರುವಿಕೆ ; ಶಿವಭಕ್ತನಲ್ಲದಿರುವ ಸ್ಥಿತಿ : ಭವಿತನಕ್ಕೆ ಹೇಸಿ ಭಕ್ತನಾದ ಬಳಿಕ ಆ ಭವಿಸಂಗ ಭಂಗವೆಂದಱಿವುದು ನೋಡಾ (ಚನ್ನಬ. ೩-೦) ; ಭವಿತನಂ ತೊಲಗಿ ಸದ್ಭಕ್ತಿಯಿಂಬಾಗಿ ಇರೆ (ಬಸವ. ೯-೬೭). [ಭವಿ + —ತನ]

**ಭವಿತವ್ಯ** (ನಾ). ೧. ಮುಂದೆ ಆಗಬೇಕಾದುದು,— ನಡೆಯತಕ್ಕುದು. ೨. ಹಿಂದೆ ಮಾಡಿದ ಪಾಪಪುಣ್ಯಗಳ ಫಲ,—ಪರಿಣಾಮ : "ಧರ್ಮಮೆನೆ ಪುಣ್ಯಮಕ್ಕು ಭವಿತವ್ಯಮೆನಲು ಆ ವಿಪಾಕಂ" (ಮಂಗರಾ. ೯-೨೯): ಎನ್ನ ಭಾಗ್ಯಕ್ಕಂ ಭವಿತವ್ಯಕ್ಕಂ ಅನುಸಾರಿಗಳೆ ಸಹಾಯರಾದರಿವರ ಮೇಲೆ ದೋಷಮಿಲ್ಲಂ (ಕಂತಕಂ. ೦೯೦-೨೦) ; ಅಂಡಜ ಸ್ವೇದಜ ಉದ್ಭಿಜ ಜರಾಯುಜರೆಂಬ ಪ್ರಾಣಿಗಳಿಗೆ ಭವಿತವ್ಯವ ಕೊಟ್ಟವರಾರೋ (ಬಸವ. ೨೨೩). ೩. ಉತ್ತರಕಾಲ ; ಭವಿಷ್ಯ : ಈಗಲೂ ಹಿಂದೂಸಮಾಜವು ಎಚ್ಚೆತ್ತು ಕೊಳ್ಳದಿದ್ದರೆ ಭವಿತವ್ಯದಲ್ಲಿ ಹಿಂದೂ ಎಂಬುದು ಕೇವಲ ಐತಿಹಾಸಿಕಅಂಶವಾಗಿ ಉಳಿದೀತೇ ವಿನಾ ಜೀವಂತವಾಗಿ ಬದುಕುವ ಜನಾಂಗವಾಗಿ ಮುನ್ನಡೆಯುವುದಿಲ್ಲ (ದರ್ಮಶ್ರೀ. ೩೩೬) ; ಭವಿತವ್ಯದ ತೆರೆಯನ್ನು ಓಸರಿಸಿ ನೋಡುವೆಯೇನು ? (ಮುಕಾಡಾ. ೩೦). [ಸಂ.]

**ಭವಿತವ್ಯತೆ** (ನಾ). ೧. = ಭವಿತವ್ಯ ೨ : "ಭಾಗಧೇಯಂ, ಭಾಗ್ಯಂ, ವಿಪಾಕಃ, ಭವಿತವ್ಯತಾ—ಈ ೪ ಭಾಗ್ಯದ ಪೆಸರ್" (ಹಲಾಯು. ೨೦-೦೨೬); ನಿಶ್ಚಲವಾದಂಥ ಭವಿತವ್ಯತೆಯನುಂತೆ ಓಡಿ ತಪ್ಪಿಸಿಕೊಳ್ಳಲಿದು (ಇಂಶಾಶ. ೦೨೬-೦೬). ೨. = ಭವಿತವ್ಯ ೩ : ಮಾರ್ಕ್ಸನ ಮತ ಒಂದೇ . . . ಜನತೆಯು ಸರ್ವಾಂಗಸುಂದರವಾದ ಸ್ವಾತಂತ್ರ್ಯದ ಭವಿತವ್ಯತೆಯು ಗುರಿಯನ್ನು ತೋರಿಸಿ ದಾರಿಯನ್ನು ತೆರೆಯಬಲ್ಲುದು (ಪಾವಾಡ. ೦೬೦). [ಸಂ. ಭವಿತವ್ಯತಾ]

**ಭವಿಷಿಯು** (ನಾ). = ಭವಿಷ್ಯ ೧ : ದಿವಸದಿಂ ದಿವಸಕ್ಕೆ, ನಿಮಿಷದಿಂ ನಿಮಿಷಕ್ಕೆ, ಭವಿಷಿಯುವ ಚಿಂತಿಸದೆ ಬದುಕ ನೂಕುತಿರು (ಮಂಕುತಿ. ೬೬೨). [< ಸಂ. ಭವಿಷ್ಯ]

**ಭವಿಷ್ಯ** (ನಾ). ೧. ಮುಂದೆ ನಡೆಯುವುದು ; ಮುಂದಿನ ಸ್ಥಿತಿಗತಿ : ಎನ್ನಾಯುಷ್ಯ ಭವಿಷ್ಯ ಎನ್ನ ಭಕ್ತರು ಕಂಡಯ್ಯಾ ಎನ್ನಾಯುಷ್ಯ ಭವಿಷ್ಯ ಎನ್ನ ಪ್ರಮಥರು ಕಂಡಯ್ಯಾ (ಬಸವ. ೪೦೯);ಗೊತ್ತಿಹುದೆಲ್ಲರಿಗೆಮ್ಮ ಭವಿಷ್ಯವು ನಾಳೆಗೆ ಮಣ್ಣಾಗಲಿಹೆವು (ಇಂಶಾಶ. ೦೩೩-೬೩); ತಮ್ಮ ಮನೆಯ ಭವಿಷ್ಯವೇನು ? (ಶರ್ಮಸ. ೨೦೦). ೨. ಮುಂದೆ ಬರುವ ಕಾಲ; ಭವಿಷ್ಯತ್ಕಾಲ: ಭೂತಕಾಲದಲ್ಲಿ ಅನೇಕ ವಿಷಯಗಳು ನಮ್ಮ ಗಮನಕ್ಕೆ ಬಂದಿವೆ, ವರ್ತಮಾನಕಾಲದಲ್ಲೂ ಬರುತ್ತಿವೆ; ಭವಿಷ್ಯದಲ್ಲೂ ಬರತಕ್ಕವಿವೆ (ಶಿಕ್ಷದ. ೩೨೩). ೩. ಜೋಯಿಸರು ಜಾತಕ ಅಥವಾ ಪ್ರಶ್ನಲಗ್ನಕಾಲ ಮೊದಲಾದ ಆಧಾರದಿಂದ ಹೇಳುವ, ಮುಂದೆ ನಡೆಯುವ ವಿಷಯ : ನಮ್ಮ ಜೋಯಿಸರು ಹೇಳಿದ್ದ ಭವಿಷ್ಯ ಅಕ್ಷರಶಃ ಸತ್ಯವಾಯಿತು (ರೂಢಿ). [ಸಂ.]

**ಭವಿಷ್ಯಂತಿ** (ನಾ). [ವ್ಯಾಕ] ಮೂರು ಕಾಲಗಳಲ್ಲಿ ಒಂದು; ಭವಿಷ್ಯತ್ಕಾಲ: ಭೂತವತಿ ವರ್ತಮಾನಂ ಖ್ಯಾತ ಭವಿಷ್ಯಂತಿ ಸರ್ವಸಾಧನಿಯೆಂಬಾಖ್ಯಾತವಿಭಕ್ತಿಗಳಕ್ಕುಮತೀತ ಭವದ್ಭಾವಿಕಾಲ ವಿಧ್ಯಾದಿಗಳೊಳ್ (ಶಾಬ್ದಾವ. ೩೬೪): ಪ್ರಥಮಪುರುಷದ ವರ್ತಮಾನ ಭವಿಷ್ಯಂತಿಗಾದ 'ಗುಂ' ಎಂಬುದು ಪರವಾದೊಡಂ ಕ್ರಿಯಾಪದದೊಳ್ ಶಿಥಿಲತ್ವಮುಂಟು (ಶಬ್ದ. ೯೮ ವೃತ್ತಿ). [ಸಂ. ಭವಿಷ್ಯಂತೀ]

**ಭವಿಷ್ಯತ್ಕಾಲ** (ನಾ). =ಭವಿಷ್ಯತ್ತು ೩: ಭೂತ=ಭೂತಕಾಲದ, ಭವಿಷ್ಯತ್ =ಭವಿಷ್ಯತ್ಕಾಲದ, ಕ್ರಿಯೆಗಳ್=ಕ್ರಿಯಾಪದಂಗಳ್ (ಶಬ್ದ. ೬೩ ಟೀಕೆ); ಭವಿಷ್ಯತ್ಕಾಲದಲ್ಲಿ : (i) ಈ ಪ್ರತ್ಯಯವು ವ ಆಗಿರುತ್ತದೆ (ಕ್ಯಾಬಿ. ೪೩) ; 'ಹೊಡೆಯುವನು' ಎಂಬುದು ಮುಂದೆ ಬರುವ ಕಾಲದಲ್ಲಿ ಎಂದರೆ ಭವಿಷ್ಯತ್ಕಾಲದಲ್ಲಿ ಕ್ರಿಯೆ ನಡೆಯುವುದನ್ನು ತಿಳಿಸುತ್ತದೆ (ಹುರ್ತಮು. ೬೨). [ಸಂ.]

**ಭವಿಷ್ಯತ್ತು** (ಗು.). ೧. ಮುಂದೆ ಆಗಲಿರುವ,—ಜರುಗುವ : ಅಂತು ಭವಿಷ್ಯದ್ದ್ವಿಜನ್ಮವರ್ಣಾಧ್ಯಯನಾಧ್ಯಾಪನ ದಾನಪ್ರತಿಗ್ರಹಯಜನಯಾಜನ ವಿಶಿಷ್ಟವೃತ್ತಿಯುಮಂ . . . ನಿಜೇಸಿ (ಆದಿಪು. ೯-೬೩ ವ). (ನಾ.) ೨. ಬರಲಿರುವ ಕಾಲ ; ಮುಂದಿನ ಕಾಲ : ಭವಿಷ್ಯತ್ತಿನಲ್ಲಿ ಏನಾಗುವುದೋ ಯಾರಿಗೆ ಗೊತ್ತು ? (ರೂಢಿ). ೩. [ವ್ಯಾಕ] ವರ್ತಮಾನ, ಭೂತ ಮತ್ತು ಭವಿಷ್ಯತ್ತು ಎಂಬ ಮೂರುಕಾಲಗಳಲ್ಲಿ ಒಂದು : ಭವಿಷ್ಯತ್ಕಾಲ : ಪದಪದಕಾರಂಗಳ್ ಮೂಲದೊಳಕ್ಕುಂ ಭೂತವರ್ತಮಾನ ಭವಿಷ್ಯದ್ವಿದಿತ ವಿಭಕ್ತಿ ತ್ರಿತಯಕ್ಕದೆಲ್ಲ ವಚನಂಗಳೊಳವಿದಾಗಮಮಾಕ್ಕುಂ (ಶಾಬ್ದಾವ. ೩೬೬); ಸವನಾಗಿ ಭೂತದೊಳ್ ಲಿಂಗವಚನದೊಳ್ ತಳ್ತು ವರ್ತಮಾನ ಭವಿಷ್ಯದ್ವ್ಯವಪೃತಿಗಳ ಗುಂ ಕುಂ ಸಲ್ವುವು ತಾವನ್ಯೆಕವಚನದೊಳ್ ನೆಲಸಿರ್ದುಂ (ಶಬ್ದ. ೨೨೬). [ಸಂ. ಭವಿಷ್ಯತ್]

**ಭವಿಷ್ಯತ್ಪುರಾಣ** (ನಾ). ಪ್ರಸಿದ್ಧವಾದ ಹದಿನೆಂಟು ಪುರಾಣಗಳಲ್ಲಿ ಒಂದು ; P ಇದರಲ್ಲಿ ಹದಿನಾಲ್ಕುಸಾವಿರದ ಐನೂರು ಶ್ಲೋಕಗಳಿವೆಯೆಂದು ಹೇಳಲಾಗಿದೆ : ಬ್ರಹ್ಮಪುರಾಣ . . . ಭವಿಷ್ಯತ್ಪುರಾಣ. . . ಬ್ರಹ್ಮಾಂಡಪುರಾಣವೆಂಬಿವೇ ನಾಲ್ಕುಲಕ್ಷಗ್ರಂಥಸಂಖ್ಯೆಯುಳ್ಳ ಹದಿನೆಂಟು ಮೂಲಪುರಾಣಂಗಳ್ (ಶಿವೇಶ. ೬). [ಸಂ.]

**ಭವಿಷ್ಯನಿಧಿ** (ನಾ). ಉದ್ಯೋಗಸ್ಥರಿಗೆ ಮುಂದೆ ಸಹಾಯವಾಗಲೆಂಬ ದೂರದೃಷ್ಟಿಯಿಂದ ಪ್ರತಿ ತಿಂಗಳ ಸಂಬಳದಲ್ಲೂ ಸ್ವಲ್ಪ ಸ್ವಲ್ಪ ಹಣ ಹಿಡಿದು ಆಡಳಿತದವರೂ ತಮ್ಮ ವಂತಿಗೆಯನ್ನು ಸೇರಿಸಿ ನಿವೃತ್ತರಾದ ಮೇಲೆ ಒಟ್ಟಿಗೆ ಕೊಡಲು ಕೂಡಿಡುವ ಹಣ : "ಕ್ಷೇಮ ನಿಧಿ" (Provident Fund. ಶಶ್ರಿಶಿ. ೬೩): ನಿವೃತ್ತಿವೇತನ . . . ಅದರಲ್ಲಿ ಹಾಗೆ ಸಲ್ಲಬೇಕಾದ ಸೇವಾನಿವೃತ್ತಿವೇತನವೂ ಹಾಗೆ ಸಲ್ಲಬೇಕಾದ ಉಪದಾನವೂ ಮತ್ತು ಭವಿಷ್ಯನಿಧಿಗಾಗಿ ಕೊಟ್ಟ . . . ಮೊತ್ತಗಳೂ ಸೇರಿರುತ್ತವೆ (ಭಾರಶಾಸ. ೨೨೦). [ಸಂ.]

**ಭವಿಷ್ಯಪುರಾಣ** (ನಾ). =ಭವಿಷ್ಯತ್ಪುರಾಣ : ಪದ್ಮ, ಸ್ಕಾಂದ ಮತ್ತು ಭವಿಷ್ಯಪುರಾಣಗಳು . . . ತೀರ್ಥವ್ರತಗಳ ಒಂದು ಸಂಪುಟವಾಗಿ ಪರಿಣಮಿಸಿವೆ (ಭಾರದ. ೦೩೬). [ಭವಿಷ್ಯ + ಪುರಾಣ]

**ಭವಿಷ್ಯಶಾಸ್ತ್ರ** (ನಾ). ಗ್ರಹಗತಿ ಮೊದಲಾದ ಸಾಧನಗಳಿಂದ ಮುಂದೆ ಆಗುವ ಫಲವನ್ನು ತಿಳಿಸುವ ಜ್ಯೋತಿಷ್ಯಶಾಸ್ತ್ರದ ಒಂದು ಭಾಗ : ಪ್ರಶ್ನಭಾಗ : ಭವಿಷ್ಯಶಾಸ್ತ್ರವು ಅವರಿಗೆ ಮುಖಪಾಠವಾದಂತೆಯಾಗಿತ್ತು (ಹೇಮಂತ. ೯). [ಸಂ.]

**ಭವಿಸು** (ಕ್ರಿ). ಹುಟ್ಟು ; ಜನಿಸು : ಜನಹೃದಯದೊಳ್ ಭಕ್ತಿಯಿಂ ಭವಿಸಿದುದು ನವಚೇತನಂ (ಕಿಂಪ್ರಶ. ೬೦-೩); ರಾಮನಾಲೈಸಿದನು ಲೋಕರೋಮಾಂಚಕರವಾಣಿಯುಂ ಭವಿಸಿದಾ ಧರ್ಮದಾಮೋದಮುಂ ! (ಶ್ರೀರಾಮಾ. ೦೬೯-೯೬೯). [ಭವ + — ಇಸು]

**ಭವೋತ್ತಾರಣ** (ಗು). ಸಂಸಾರದಿಂದ ಪಾರುಗಾಣಿಸುವ : ಭವೋತ್ತಾರಣ ಪಂಚವಕ್ತ್ರನೆಸೆದಂ ಕನಕಾದ್ರಿಯೊಳದ್ರಿಜಾನ್ವಿತಂ (ರಾಶೇ. ೩-೦೦೩). [ಸಂ.]

**ಭವ್ಯ** (ಗು). ೧. ಮುಂದೆ ಆಗುವ ; ಆಗಲಿರುವ. ೨. ಸರಿಯಾದ ; ಯೋಗ್ಯವಾದ; ಅರ್ಹವಾದ. ೩. ಮಂಗಳಕರವಾದ; ಶುಭವಾದ. ೪. ಶ್ರೇಷ್ಠವಾದ ; ಲೋಕೋತ್ತರವಾದ : ಭವ್ಯಗುಡಿಯೊಳಗಿನ ದಿವ್ಯಲಿಂಗದ ಮುಂದೆ ಅವ್ವ ಕರೆದೊಯ್ದು ತೋರಿದರು (ಸಿದ್ಧಚ. ೫-೬೫): ಜಗದೀಶ್ವರನ ಮಹಿಮೆ ಸಂವೇದ್ಯವಹುದಿಲ್ಲಿ ಭವ್ಯಸೌಂದರ್ಯಶೀಲದ ವನ್ಯ ಶಾಂತಿಯಲಿ (ಶ್ರೀರಾಮಾ. ೬೬-೧೧೭). (ನಾ). ೫. ಮುಂದೆ ಆಗಬೇಕಾದುದು ; ಆಗಲಿರುವುದು : ವಸ್ತುವನ್ನು ಭೂತ, ಭವ್ಯ (ಇರುವುದು, ಇನ್ನು ಮುಂದೆ ಆಗಬೇಕಾದ್ದು) ಎಂದು ಎರಡು ಬಗೆಯಾಗಿ ವಿಂಗಡಿಸುವರು. ಧರ್ಮಾಧರ್ಮಗಳು ಕರ್ಮವನ್ನು ಮಾಡಿದ ಮೇಲೆ ಆಗತಕ್ಕವುಗಳಾದ್ದರಿಂದ ಅವುಗಳು ಭವ್ಯವೆನಿಸುವುವು (ಪ್ರಶಸ್ತಭಾ. ೨೨ ಅಡಿ). ೬. ಒಳ್ಳೆಯುದು ; ಮಂಗಳ ; ಶುಭ : "ಶ್ವಃ(ಸ್ವ)ಶ್ರೇಯಸಂ. ಕಲ್ಯಾಣಂ. ಶ್ವೋವಶೀಯಂ, ಶಿವಂ, ಶುಭಂ, ಭವಿಕಂ, ಭಾವುಕಂ, ಶ್ರೇಯಃ, ಭವ್ಯಂ. ಭದ್ರಂ, ಮಂಗಳಂ – ಈ ೧೧ ಒಳ್ಳಿತರ್ಕೆ ಪೆಸರ್" (ಶಬ್ದಮ. ೨೦-೧೨೨) : ಭವ್ಯಕ್ಕೆ ಹಬ್ಬಿಲ್ಲ ಸಿದ್ಧನಾಗೆಲ್ಲಕಂ (ಮಂಕುತಿ. ೭೮೩). ೭. ದೊಡ್ಡದು : ವಿಶಾಲವಾದುದು : ಗ್ರಂಥಗಳು ವಾಸವಾಗಿರಬೇಕಾದ ಭವನವು ಭವ್ಯವೂ ಭದ್ರವೂ, ಮನೋಹರವೂ ಆಗಿರಬೇಕು (ಗ್ರಂಥಾಲ. ೫). ೮. ಅದ್ಭುತ : ಸೌಂದರ್ಯಮೀಮಾಂಸೆಯಲ್ಲಿ ಚರ್ಚೆಗೆ ಅರ್ಹವಾದ ಮತ್ತೊಂದು ವಿಚಾರವೆಂದರೆ . . . ಭವ್ಯ ಮತ್ತು ಕ್ಷುದ್ರಗಳ (Rediculous) ಪರಸ್ಪರ ಸಂಬಂಧ ಮತ್ತು ಅವುಗಳ ವಿವರಣೆ (ಸೌಂದರ. ೫೪). ೯. ವಿದ್ವಾಂಸ ; ಪ್ರಾಜ್ಞ : ಭವ್ಯರ್ ಸತ್ಕೃತಿವೇಳ್ದರ್ ಕಾವ್ಯಾಲಾಪಂಶ್ಚ ವರ್ಜಯೇದೆಂಬುದಸತ್ಕಾವ್ಯನಿಬಂಧನು (ರಾಜಶೇ. ೧-೩೪). ೧೦. ಅತರ್ಕ್ಯವಾದುದು; ಗೆಲಲಾರದುದು : "ಕಲ್ಯಾಣಮತರ್ಕ ಮೋಕ್ಷಗತಜೀವಿಗಳೆಂತಿವು ಭವ್ಯವಾಚಕಂ" (ನಾನಾರ. ೯೦). ೧೧. [ಜೈನ] ಮೋಕ್ಷಕ್ಕೆ ಅರ್ಹತೆಯನ್ನು ಹೊಂದಿರುವ ಸಂಸಾರಿಯಾದ ಜೀವ; ಸಮ್ಯಗ್ದರ್ಶನ ಮೊದಲಾದ ಭಾವಗಳನ್ನು ಪ್ರಕಟಿಸುವ ಯೋಗ್ಯತೆಯುಳ್ಳವನು : ಆವನೊ ಭವ್ಯರೆವೊ ಅಭವ್ಯರೆವೊ ಎಂದು ಬೆಸಗೊಂಡೊಡೆ (ವಡ್ಡಾರಾ. ೧೨೦-೨೪); ನೀಂ ಭವ್ಯನೆಯುಜ್ಞಾನಿಯುಮೊಲ್ ನಿನ್ನಂ ಮಱಿದೇನೀ ವಿಷಯದ ಸುಖಕ್ಕೆ ಲಂಪಟನಪ್ಪೋ (ಆದಿಪು. ೩-೭೬) ; ಈ ಶುಭಕಥನಮನತ್ಯಾನಂದದಿಂ ಕೇಳ್ದ ಭವ್ಯಪ್ರಭುಸಭೆಗೆಸೆದಿರ್ಕುಂ ಮಂಗಳ ಶ್ರೀವಿಲಾಸಂ (ಧರ್ಮಾಮೃ. ೦-೭೨).

**ಭವ್ಯಚಿಂತಾಮಣಿ** = ಭವ್ಯರ ಇಷ್ಟಾರ್ಥಗಳನ್ನು ನೆರವೇರಿಸುವವನು. ಗುಣವೆಂಟುಂ ಬಂದು ತನ್ನೊಳ್ ಪೆಸೆದಿರೆ . . . ಭವ್ಯಚಿಂತಾಮಣಿಯುಂ ತಾನಾಗಿ (ಆದಿಪು. ೧೬-೫೦): ಭವ್ಯಚಿನ್ತಾಮಣಿ ಸಕಳಕಳಾಕೋವಿದಂ ಕಾವ್ಯಕಳಾಭ್ಯಾಸನನೆನಾನ್ದದಿಂದಂ ಪೊಗಳೆ ನೆಗಲ್ದನೀ ಗೋಪಣಾನ್ದಿ ಬ್ರತೀಂದ್ರಂ (ಎಕ. II, ೬೯-೩೫; ಸು. 1100). [ಸಂ.]

**ಭವ್ಯಜನ** (ನಾ). [ಜೈನ] ಮುಮುಕ್ಷುಗಳ ಸಮೂಹ : ಲಸದ್ರತ್ನತ್ರಯಂಗಳ್ಸುಶೋಭಾಯಂಗಳ್ ಗಡವೆಂದು ಭವ್ಯಜನಮಂ ಕಣ್ಣಾಱಿ ಕಲ್ಪಿಪ್ಪ ಪಾಥ್ಯಾಯಜ್ಯೋತಿಸುಗೆಮ್ಮ ಚಿತ್ತಗೃಹದೊಳ್ರತ್ನತ್ರಯಜ್ಯೋತಿಯಂ (ಆದಿಪು. ೦-೪): ಭವ್ಯಜನಹೃದಯಾನಂದರುಂ ಕೊಣ್ಡಕುಂದಾನ್ವಯಗಗನ ಮಾರ್ತಣ್ಡರುಂ (ಎಕ. II, ೬೭-೬೩ ; 1176). [ಸಂ.]

**ಭವ್ಯಜೀವ** (ನಾ). ಮೋಕ್ಷಕ್ಕೆ ಯೋಗ್ಯವಾದ ಜೀವ : ಭಟ್ಟಾರಾ ಅದೆಂ ಭವ್ಯಜೀವನೊ ಅಭವ್ಯಜೀವನೊ ಎಂದು ಬೆಸಗೊಂಡೊಡೆ (ವಡ್ಡಾರಾ. ೧೧-೯). [ಸಂ.]

**ಭವ್ಯತೆ** (ನಾ). ೧. ಹಿರಿಮೆ ; ಶ್ರೇಷ್ಠತೆ : ಶೂನ್ಯಸಂಪಾದನೆ ಮತ್ತು ಪ್ರಭುಲಿಂಗಲೀಲೆಗಳಲ್ಲಿ ಬರುವ ಅಲ್ಲಮನ ಚಿತ್ರ ಹೆಚ್ಚು ಕಡಮೆ ಒಂದೇ. ಅದೇ ಭವ್ಯತೆ. ಅದೇ ಔನ್ನತ್ಯ ಎರಡರಲ್ಲೂ (ಶೂನ್ಯಸಂ. ೧೩೪); ಆ ಶಿವನ ಸೃಷ್ಟಿಯಲ್ಲಿ ಭವ್ಯತೆ, ಎಷ್ಟು ಇರುವುದೋ ವೈವಿಧ್ಯತೆಯೂ ಅಷ್ಟೇ ಇರುವುದು (ಬಂಗಾರ. ೨೦). ೨. [ಜೈನ] ಮೋಕ್ಷಕ್ಕೆ ಅರ್ಹತೆಯನ್ನು ಪಡೆಯುವಿಕೆ; ರತ್ನತ್ರಯಪ್ರಾಪ್ತವಾಗುವ ಯೋಗ್ಯತೆ : ಇಂತು ಭವ್ಯತೆ ಜಗತ್ಕಾಶ್ಚರ್ಯಮಾಯ್ತೆನಾ (ಆದಿಪು. ೧೩-೭೩) ;ಅಮರೇಂದ್ರನುಂ ಶಚಿಯುಮಿಂತು ಮರಣಾ ನಮಗಾದೊಡಲ್ತೆ ಭವ್ಯತೆ ಬಳೆದಿರ್ಕುಮೆಂದು ಬಯಸುತ್ತಿರೆ (ಶಾಂತಿಪು. ೭-೪೦) ; ಆ ಮುನೀಂದ್ರರ್ ನಾಗಶರ್ಮನ ಭವ್ಯತೆಯ ಕಾಲಲಬ್ಧಿಯುಮನಱಿಯಾ ವಿನೇಯಜನಂಗಳೆಲ್ಲಮಿಂತಲ್ಲದೆ ಸದ್ಧರ್ಮಕ್ಕೆ ಬಾರರೆಂಬ ಮಾರ್ಗಪ್ರಭಾವಮುಮಂ ದಿವ್ಯಜ್ಞಾನದಿಂದ ಮುಪಲಕ್ಷಿಸಿ (ಸುಕುಮಾ. ೭-೩೯ ವ). [ಸಂ. ಭವ್ಯತಾ]

**ಭವ್ಯತ್ವ** (ನಾ). ೧. ಹಿರಿಮೆ; ಔನ್ನತ್ಯ. ೨. =ಭವ್ಯತೆ ೨ : ಷಡ್ವಿಧಲೇಶ್ಯಮುಂ ದ್ವಿವಿಧ ಭವ್ಯತ್ವಮುಂ . . . ದ್ವಾದಶವಿಧೋಪಯೋಗಮುಂ ಎಂಬಿಪ್ಪತ್ತು ಪ್ರರೂಪಣೆಗಳುಮಂ . . . ಪೇಟ್ದು (ಶಾಪುರು. ೩೯೪) : ಜೀವತ್ವಮುಂ ಭವ್ಯತ್ವದುಂ ಅಭವ್ಯತ್ವಮುಂ ಎಂಬ ಪಾರಿಣಾಮಿಕ ಭಾವತ್ರಯಂ ಜೀವಸ್ವಭಾವಮಕ್ಕುಂ (ತತ್ತ್ವಸೂ. ೮೪). [ಸಂ.]

**ಭವ್ಯಪ್ರಬೋಧಬೋಧಿ** (ನಾ). [ಜೈನ] ದ್ವಾದಶಾನುಪ್ರೇಕೆಗಳಲ್ಲಿ ಒಂದು ; ಬೋಧಿದುರ್ಲಭ : ಅಭಿವಿನುತಧರ್ಮರತಿಯುಂ ಸ್ವಭಾವ ವೈರಾಗ್ಯಭಾವಮುಂ ಸರ್ವಭವಾನುಭವವಿರಕ್ತತೆಯುಂ ದುರ್ಲಭಮದು ಭವ್ಯಪ್ರಬೋಧಬೋಧಿಯೆನಿಕ್ಕುಂ (ಸುಕುಮಾ. ೧೨ ೩೭). 'ದ್ವಾದಶಾನುಪ್ರೇಕ್ಷೆ' ಪರಾ. [ಸಂ.]

**ಭವ್ಯಮಾರ್ಗಣೆ** (ನಾ). [ಜೈನ] ಹದಿನಾಲ್ಕು ಮಾರ್ಗಣಾಸ್ಥಾನಗಳಲ್ಲಿ ಒಂದು ; ಭವ್ಯಜೀವರನ್ನು ಹುಡುಕುವುದು : ಗತೀಂದ್ರಿಯ ಕಾಯ ಯೋಗ ವೇದ ಕಷಾಯ ಜ್ಞಾನ ಸಂಯಮ ದರ್ಶನ ಲೇಶ್ಯಾ ಭವ್ಯ ಸಮ್ಯಕ್ [ಕ್ತ್ವ] ಸಂಜ್ಞಾಹಾರಿಗಳೆಂಬ ಚತುರ್ದಶಮಾರ್ಗಣೆಗಳೊಳಂ . . . ಚತುರ್ಗತಿಗಳೊಳಂ ಸುಟಿವ ಜೀವಂಗಳೆಲ್ಲಂ ಸಂಸಾರಿಜೀವಂಗಳೆಂಬುವಕ್ಕುಂ (ಜೀವಸಂ. ೩-೬ ವ) : ಭವ್ಯಮಾರ್ಗಣೆಯೊಳು ಬಂದ ಯೋಗ್ಯ ಪ್ರಕೃತಿಗಳು ೧೧೭ ಮಿಥ್ಯಾದೃಷ್ಟಿಗುಣಸ್ಥಾನಂ ನಿಯಮದಿಂದಮೊಂದೆಯಕ್ಕುಂ (ಗೊಮ್ಮಸಾ. ೨೧-೭). 'ಚತುರ್ದಶ ಮಾರ್ಗಣೆ' ಪರಾ. [ಸಂ. ಭವ್ಯಮಾರ್ಗಣ]

**ಭವ್ಯಾವಲಿ, ಭವ್ಯಾವಳಿ** (ನಾ). [ಜೈನ] ಭವ್ಯರ ಸಮೂಹ,–ಗುಂಪು : ತ್ರಿದಶಸ್ತುತ್ಯಮಿದಾದಿದೇವಚರಿತಂ ಕರ್ಣಾಮೃತಸ್ಯಂದಿಯಕ್ಕಿದು ಭವ್ಯಾವಲಿ [ಕಾಕಾಂ. ೪] ಗೆಂದು ಪೇಟಿಸೆ ಬುಧರ್ . . . ಪೇಟ್ದಂ . . . ಸಂಸಾರ ಸಾರೋದಯಂ (ಆದಿಪು. ೧೬-೭೮). **ಭವ್ಯಾವಳಿ** : ಜನಪತಿಗಳ್ಭವ್ಯಾವಳಿಗೆ ಚತುರ್ವಿಂಶತಿ ದೇವರ್ದಯೆಗೆಯ್ಗೆ ವಿಮಳರತ್ನತ್ರಯಮಂ (ಶಾಪುಂಪು. ೧) ; ಅಂತೇವಾಸಿ ಭವ್ಯಾವಳಿಗತುಳತಪಃಶೀಲಮಂ ಮಾಡೆ ಲೋಕೋತ್ತರದಾಚಾರ್ಯರೆಮ್ಮಂ ನಿಯಮಿಸುಗೆ (ಧರ್ಮಪು. ೦-೩). [ಸಂ.]

**ಭವ್ಯಾವಳಿ** 'ಭವ್ಯಾವಲಿ' ನೋ.

**ಭವ್ಯಾಳಿ** (ನಾ). = ಭವ್ಯಾವಲಿ : ನೆಗಟ್ದಜಿತನಜೇಯಂ . . . ಜಿನಶ್ರೀಸೇವ್ಯನಪ್ಪಂದು ಭವ್ಯಾಳಿಗೆ ಹಿತಕರನಾದಂ (ಅಜಿತಪು. ೦-೧೧) ; ಅನವದ್ಯರ್ ದಯೆಗೆಯ್ವರಕ್ಕೆ ದಯೆಯಿಂ ಭವ್ಯಾಳಿಗೆ (ಶಂಠಾಮಾ. ೦-೩). [ಸಂ. ಭವ್ಯಾಲೀ]

**ಭವ್ಯೋತ್ಸವ** (ನಾ). ೧. ಅತ್ಯುತ್ತಮವಾದ ಸಂತೋಷ ; ಲೋಕೋತ್ತರವಾದ ಆನಂದ. ೨. [ಜೈನ] ಮುಮುಕ್ಷುಗಳ ಸಂತೋಷ,–ಆನಂದ. ೧ , ೨ : ಆಚಾರ್ಯಪರಂಪರೆಯು ಕುಡುಗೆ ಭವ್ಯೋತ್ಸವಮಂ (ಅಜಿತಪು. ೦-೦೨) ; ಶ್ರೀಯುಂ ತಳೆದಂ ತ್ರಿಜಗಜ್ಜ್ಯಾಯಂ . . . ಭವ್ಯೋತ್ಸವ ದಾಯಿನಿಯುಂ ಜೈನಜನಮನೋಹರಚರಿತಂ (ಚಂದ್ರಪು. ೦೬-೧). [ಸಂ.]

**ಭಷಕ** (ನಾ). ಬೊಗಳುವ ಪ್ರಾಣಿ ; ನಾಯಿ : "ಕೌಲೇಯಕಃ, ಸಾರಮೇಯಃ, ಶುನಕಃ, ಶ್ವಾ, ಕುಕ್ಕುರಃ, ಭಷಕಃ, ಮೃಗದಂಶಃ, ಶಾಲಾ

ವೃಕಃ—ಈ ೮ ನಾಯು"(ಯಿ)" (ಹಲಾಯು. ೪೬-೦೨೬); ಬಳಕೆಯ್ಯೊಳಿರ್ದು ಪಲ್ಲಿ [ಲ್ಗಿ] ಜಾದೊಳವಾಲಂಗೊಂಡು ಮೊಱೆವ ಭಷಕನ ತೆಱದಿಂದೊಳಪೊಕ್ಕ ದುರ್ಗಮಂ ಸಂಚಳಚಿತ್ತಂ ನುಡಿಗುಮೆಮಗೆ ಬಲ್ಗಂಡಿಕೆಯುಂ (ಕಾವ್ಯಾವ.೨೪೪); ವಿಷವಮೃತವಾಗದಿಹುದೇ ಶಿವನ ಭಕ್ತರಿಗೆ ಭಷಕನಂ ಕರೆತಂದು ವೇದವೋದಿ ಸರೆ (ಅಶಿಪಂ.೩೬-೪೮); ಕರಿ ಮಕರಂ ನಕುಲವಮಾಮೆ ಭಷಂ . . . ಪಂಚನಖಂಗಳ್ (ಚಿತ್ತು.ಕು. ೦-೦-೨೦೦). [ಸಂ.]

**ಭಷಣ** (ನಾ). ೧. ನಾಯಿಯು ಬೊಗಳುವಿಕೆ. ೨. ನಾಯಿ; ಶ್ವಾನ. [ಸಂ.]

**ಭಸಣಿಗೆ** 'ಬಯಿಸಣಿಗೆ' ನೋ.

**ಭಸಿತ** (ನಾ). ೧. ಬೂದಿ; ಭಸ್ಮ: "ಭೂತಿಃ, ಭಸಿತಂ, ಭಸ್ಮ, ಕ್ಷಾರಂ, ರಕ್ಷಾ — ಈ ೫ ಬೂದಿ" (ಹಲಾಯು. ೦೩-೬೪); ನಾನೊಮ್ಮೆ ಬೇಂಟೆಯ ಪೋದರೆ ಭಸಿತಕ್ಕಾಹುತಿಯನಿಕ್ಕಿಹೆನೆಂದು ಸಾಸಿರವೇಳುನೂಱುವರುಷ ಒಬ್ಬ ರಾಜನ ಕೊಂದೆನು (ಬಸವ. ೯೬೨). ೨. ಗೋವಿನ ಸಗಣಿಯನ್ನು ಸುಟ್ಟು ಶಿವಭಕ್ತರು ಹಣೆ ಮೊದಲಾದ ಅಂಗಗಳಲ್ಲಿ ಧರಿಸುವ ಭಸ್ಮ; ವಿಭೂತಿ : ಅಂಗಸಂಗತಲಸದ್ಭಸಿತಂ . . . ಫಣಿವಿಭೂಷಣವಾಗೆ . . . ನೆಗಟ್ದುದಾರಮಹೇಶ್ವರನೀಗೆ ಭೋಗಮಂ (ಶಂಶಟಾ. ೦-೨); ಆದ ನಿರೋಧದ ನಿಂದೆಯನಾದರಿಸದೆ ಭಸಿತದಿಂದೆ ವಿಪ್ರನನಿಡೆ ತಾಂ ಪೋದುದು ವಟುವೇಷಂ (ಗಿರಿಕ. ೯-೦೦೬); ಪಾರ್ವತಿಗೆ ಶಿವನಿಂದೆಯನ್ನು ಕೇಳಿ ಮನಸ್ಸು ನೊಂದಿತು . . . ಭಸಿತದಿಂದ ಈ ವಿಪ್ರನನ್ನು ಹೊಡೆದಳು (ಅನುಕ. ೦೬). [ಸಂ.]

**ಭಸಿತಧರ** (ನಾ). ವಿಭೂತಿಯನ್ನು ಧರಿಸಿರುವವನು; ಪರಮೇಶ್ವರ: ಕರಿಗೊರಲನು ಬಂದ ಭಸಿತಧರನು ಬಂದ ರಕ್ತಜಟಾಜೂಟ ಬಂದ (ಇಂಚಾಶ. ೦೨೪-೦೦). [ಸಂ.]

**ಭಸಿತವಿಲೇಪನ** (ನಾ). ವಿಭೂತಿಯನ್ನು ಬಳಿದುಕೊಳ್ಳುವುದು: ಭಸ್ಮವನ್ನು ಧರಿಸುವುದು; ಭಸ್ಮಧಾರಣೆ : ಭಸಿತವಿಲೇಪನಪ್ರಿಯನದೆಂತು ಮೃಗೋದ್ಭವಪಂಕವಾಂಪಂ (ಪ್ರ.ಕು. ೨೮-೬೦). [ಸಂ.]

**ಭಸಿತಾಂಗ** (ನಾ). ೧. ವಿಭೂತಿಯ ಲೇಪನವುಳ್ಳ ಶರೀರ; ಭಸ್ಮವನ್ನು ಧರಿಸಿರುವ ದೇಹ: ಸಂಗಮೇಶ್ವರಂ ಬಸವನ ಚಿತ್ತಮಂ ಪರೀಕ್ಷಿಪೆನೆಂದು ಕೆಂಜೆಡೆ ಕುಂಡಲಂ . . . ಪುಲಿದೊವಲು ಭಸಿತಾಂಗಂ ಸಮುದಾಯವಾಗಿ ಗಳಗಳನೆ ನಡೆತಂದು (ಬಸರ. ೦೨-೨೦). ೨. ವಿಭೂತಿಯನ್ನು ಮೈಗೆ ಲೇಪಿಸಿಕೊಂಡವನು; ಶಿವ: ಪಂಪಾಪುರದ ಲಿಂಗ ಭವಭಸಿತಾಂಗ ಸಂಫುಲ್ಲೇಕ್ಷಣನೆ ತೋರೋ ಭಕ್ತಕೃಪಾಂಗ (ಶಿರಾಕ್ಕ. ೬೪ ಪಲ್ಲವಿ). [ಸಂ.]

**ಭಸಿತೋದ್ಧೂಳಿತ** (ಗು). ವಿಭೂತಿಯನ್ನು ಧರಿಸಿದ: ಭಸಿತೋದ್ಧೂಳಿತತನುವಿಂ . . . ಏಣಾಧಿನಾಥನಿರದೇಳ್ತಂದಂ (ಶ್ರೀಶೈ. ೨೩-೨೦): ಮಾಗೆಯ ಬೆಳ್ಳಿಗಿಲಾಗಸದಂತಿರೆ ಭಸಿತೋದ್ಧೂಳಿತಲಸಿತಲಲಾಟಂ ಕಣ್ಗೊಳಿಸೆ (ರಾಮಾಶ್ವ. ೪೦-೦೮). [ಸಂ. ಭಸಿತೋದ್ಧೂಲಿತ]

**ಭಸ್ತ** (ನಾ). ಚರ್ಮದ ಚೀಲ: ನೆಲದೊಳ್ ಬಿದಿರ್ಪಕ್ಷಣದೊಳೆ ಭಸ್ತಮಂ ಕೊಯ್ದು ಪೊಱಮಟ್ಟೊಂದು ಕಾಸಾರದೊಳ್ ಶರೀರಪ್ರಕ್ಷಾಲನಮಂ ಮಾಡಿ . . . ಚಾರಣಮುನೀಂದ್ರರಂ ಕಂಡು (ಮಹಾಪು. ೪-೦೩೨ ವ). [ಸಂ. ಭಸ್ತ್ರಾ]

**ಭಸ್ತ್ರಿ** (ನಾ). ೧. ಚರ್ಮದ ತಿದಿ: ಭಸ್ತ್ರಿಯ ತೆಱನಂತಲಸದೆ ಕಹಳೆಯ ನೊತ್ತುವ ಜಾವದ ಹೊಲೆಯನ ಪರಿಯಿಂ ತೊತ್ತಿಸಿ (ಕಲ್ಯಾಕೀ. ೩೪). ೨. ಚರ್ಮದ ಚೀಲ. [ಸಂ.]

**ಭಸ್ತ್ರಿಕೆ** (ನಾ). ೧. ಚರ್ಮದ ಚೀಲ: ಚಪಳಕಪಿ ವನಮದಾನೇಕಪಕ್ಕಪಕ್ಕಾಗೆ ಪೊಕ್ಕು ತಾಂ ಭಸ್ತ್ರಿಕಮೆಂದವಹಸ್ತವಿಱಿಯೆ ಕೈಪಿಡಿಗೆ ಪೊಕ್ಕ ಗುಬ್ಬಿವೊಲುರುಳ್ದು ನಗಿಪುದು ನಗದೊಳ್ (ಶಾಂತಿಪು. ೨-೦೦೦). ೨. ಚರ್ಮದ ತಿದಿ; ತಿತ್ತಿ. ೩. ಚರ್ಮದ ಜಲಪಾತ್ರೆ. [ಸಂ. ಭಸ್ತ್ರಿಕಾ]

**ಭಸ್ತ್ರಿಕೆ** (ನಾ). ೧. = ಭಸ್ತ್ರಿಕ ೨ : ಈ ಭಾನುಬಿಂಬಮಂ ಲೀಲಾಭಸ್ತ್ರಿಕೆಯೆಂದು ಪೊಯ್ವುವೊಲ್ ನಿಳ್ಕುವ ಹಸ್ತಾಭೋಗದಿನೆಸೆದತ್ತಚಲಾಭಂ ಕಾನೆನಿಪ ಕುವಲಯಾಪೀಡೇಭಂ (ಜಗಂ. ೬-೪೪). ೨. [ಯೋಗ] ಅಷ್ಟವಿಧವಾದ ಕುಂಭಕಗಳಲ್ಲಿ ಒಂದು: ಸೂರ್ಯಭೇದನ ಉಜ್ಜಾಯಿ ಸೀತ್ಕಾರಿ ಸೀತಳ ಭಸ್ತ್ರಿಕೆ ಭ್ರಮರಿ ಮೂರ್ಛೆ ಕೇವಲವೆಂಬ ಅಷ್ಟಕುಂಭಕಪ್ರಕಾರಂಗಳಂ (ಶಿವೇಕ. ೦೬೦). [ಸಂ. ಭಸ್ತ್ರಿಕಾ]

**ಭಸ್ತ್ರೆ** (ನಾ). ೧. ತಿದಿ; ತಿತ್ತಿ: "ಭಸ್ತ್ರಾ, ಚರ್ಮಪ್ರಸೇವಿಕಾ — ೨ ತಿದಿಯ ಪೆಸರು" (ಸಿದ್ಧಾಂತಿ. ೩೦೬). ೨. ಚರ್ಮದ ಚೀಲ. [ಸಂ. ಭಸ್ತ್ರಾ]

**ಭಸ್ಮ** (ನಾ). ೧. = ಭಸಿತ ೧: "ಭೂತಿಃ, ಭಸಿತಂ, ಭಸ್ಮ, ಕ್ಷಾರಂ, ರಕ್ಷಾ — ಈ ೫ ಬೂದಿ" (ಹಲಾಯು. ೦೩-೬೪); ಅಯ್ದುದೇ ಕಾಮನ ಸುಟ್ಟ ಭಸ್ಮ ಮೈಯಲ್ಲಿ ಮುಖಮೂದಲೆ ಏಕಯ್ಯಾ (ಬಸವ. ೩೩೮). ೨. = ಭಸಿತ ೨: ಭಸ್ಮ ಮತ್ತು ರುದ್ರಾಕ್ಷಿಗಳನ್ನು ಧರಿಸುವುದರಲ್ಲಿ ಅವರಿಗೆ ಬಹಳ ಆನಂದ (ರೂಢಿ). ೩. [ವೈದ್ಯಶಾ] ಸುವರ್ಣ ಮೊದಲಾದ ಧಾತುಗಳನ್ನು ಪುಟಕ್ಕೆ ಹಾಕಿ ತಯಾರು ಮಾಡುವ ಒಂದು ಬಗೆಯ ರಾಸಾಯನಿಕ ಪುಡಿ,— ಔಷಧ: ಹತ್ತಿಕಾಯಿರಸ ಅರ್ಧಸೇರಿನಲ್ಲಿ ಬಿಳಿಗಾರದ ಭಸ್ಮ ಗದ್ಯಾಣ ೩ ತೂಕ, ಸೌತೆಬೀಜ ಗ ೨ ತೂಕ, ಸಹ ಕೂಡಿಸಿ ಕೊಡಲು ಮೂತ್ರವಿಸರ್ಜನೆಯಾಗುವುದು (ಸಕಲವೈ. ಕಾಂ. ೪೯೩); ಆಗ ಒಗ್ಗಾಲಿ ಒಂದು ಭಸ್ಮವನ್ನು ಎಲ್ಲರಿಗೂ ಒಂದೊಂದು ಸಾಸಿವೆಯ ಕಾಳಿನಷ್ಟು ಪ್ರಮಾಣದಲ್ಲಿ ತನ್ನ ಸಂಗಡಿಗರಿಗೆ ಕೊಟ್ಟು . . . ಹೇಳಿದ್ದು—ಆ ಮುದುಕನ ಕಿವಿಗೆ ಬಾಣದಂತೆ ಹೋಗಿ ನಟ್ಟಿತು (ಕಂಬಿಹು. ೦೬).

**ಭಸ್ಮವಾಗು** = ಸುಟ್ಟು ಬೂದಿಯಾಗು; ಸಂಪೂರ್ಣವಾಗಿ ಸುಟ್ಟುಹೋಗು; ನಾಶವಾಗು: ಇದ್ದಿದ್ದ ದೃಶ್ಯವಾಗನೆ ಭಸ್ಮವಾಗನೇ, ಇದ್ದ ನೆಲನೊಳಕೊಳ್ಳದೇ ಜೀರ್ಣವಾಗನೇ (ತಿರುಕ. ದೇ. ೨೦-೩); ಉರಿ ಹತ್ತಿ ತರಿಯುಮಭಟ್ಟರಪ್ಪಣ್ಣಗಳ ಮನೆಯುಂ ಭಸ್ಮವಾಯಿತ್ತು (ಬಸಪು. ೩೬-೩೪); ಸುಟ್ಟ ಸಗಣಿ ಶುದ್ಧವಾಗಿ ಭಸ್ಮವಾಗುತ್ತದೆ (ಕರ್ನಾಟ. ೦೮-೦). [ಸಂ. ಭಸ್ಮನ್]

**ಭಸ್ಮಕ** (ನಾ). ೧. ಜಠರಾಗ್ನಿಯು ತೀವ್ರವಾಗುವುದರಿಂದ ತಿಂದುದೆಲ್ಲ ಭಸ್ಮವಾಗಿ, ಯಾವಾಗಲೂ ಅತಿಯಾದ ಹಸಿವಾಗುವ ಮತ್ತು ತಿಂದ ಆಹಾರ ಮೈಗೆ ಹತ್ತದ ಒಂದು ಬಗೆಯ ವ್ಯಾಧಿ: ಭಸ್ಮಕರೋಗ ಮುನಿಗಾವರಿಸೆ ಕಪಟದ ತಪವ ಸುಡುಸುಡಲೆಂದು ಬಿಸುಸುಯ್ದು (ಜೀವಂಧ. ೩-೩೮); ಅಂತವಗೆ ದುಃಕರ್ಮೋದಯದಿಂದ ಪರಿತಂದು ಭಸ್ಮಕವ್ಯಾಧಿಭರದಿಂದಡಸಲು ನಾಲ್ಕುವರ್ಣದೊಳುಂಡು ತಿರುಗುತಿರ್ದನು ಲೋಕದಲಿ (ಜೀವಂಸಾಂ. ೬-೪೩). ೨. ಒಂದು ಬಗೆಯ ಕಣ್ಣಿನ ವ್ಯಾಧಿ. [ಸಂ.]

**ಭಸ್ಮಗಂಟಿಕೆ** (ನಾ). ವಿಭೂತಿಯಿರುವ ಜೋಳಿಗೆ (?): ಶಿರದಲ್ಲಿ ಜಟಾಬಂಧವಿಲ್ಲ ಕಕ್ಷೆಯಲ್ಲಿ ಭಸ್ಮಗಂಟಿಕೆ [ಪಾಠಾಂ. ಗುಂಡಿಗೆ] ಇಲ್ಲ (ಮೋಳಿಗೆವ. ೦೩೩-೩೮೩). [<ಸಂ. ಭಸ್ಮಗ್ರಂಥಿಕಾ]

**ಭಸ್ಮಗಂಧಿನಿ** (ನಾ). ಒಂದು ಬಗೆಯ ಸಸ್ಯ ಮತ್ತು ಅದರಿಂದ ತಯಾರಿಸುವ ಪರಿಮಳದ್ರವ್ಯ: "ದ್ವಿಜಾ . . . ಭಸ್ಮಗಂಧಿನೀ—೬ ರೇಣುಕ ಎಂಬುವ ಗ್ರಂಥ್ಯದ್ರವ್ಯದ ಹೆಸರು" (ಸಿದ್ಧಾಂತಿ. ೧೪೦). [ಸಂ. ಭಸ್ಮಗಂಧಿನೀ]

**ಭಸ್ಮಧಾರಿ** (ನಾ). ವಿಭೂತಿಯನ್ನು ಧರಿಸಿರುವವನು: ಕೂಡಲಸಂಗಮದೇವ ಭಸ್ಮಧಾರಿಯಾದ (ಬಸವ. ೯೩೦). [ಸಂ. ಭಸ್ಮಧಾರಿನ್]

**ಭಸ್ಮಪುಟ** (ನಾ). [ವೈದ್ಯಶಾ] ಸುವರ್ಣ ಮೊದಲಾದುವುಗಳ ಭಸ್ಮವನ್ನು ಮಾಡುವುದಕ್ಕಾಗಿ ಅಗ್ನಿಯನ್ನು ಅಳವಡಿಸುವುದು: ವೈದ್ಯರು ಸುವರ್ಣಭಸ್ಮವನ್ನು ತಯಾರಿಸಲು ಭಸ್ಮಪುಟ ಹಾಕಿದ್ದಾರೆ (ರೂಢಿ). [ಸಂ.]

**ಭಸ್ಮರಸ** (ನಾ). [ವೈದ್ಯಶಾ] ಪಾದರಸದ ಭಸ್ಮ,— ಪುಡಿ (?): ಪೊಸತಪ್ಪ ಸುಣ್ಣಮಂ ಸೋದಿಸಿ ಕಿಱಿದಂ ಕೊಂಡು ಭಸ್ಮರಸದೊಳದಂ ಯೋಜಿಸಿ (ಅಶ್ವಶಾ. ೦೨-೮). 'ರಸಭಸ್ಮ' ಪರಾ. [ಸಂ.]

**ಭಸ್ಮಸ್ನಾನ** (ನಾ). ವಿಭೂತಿಯ ಲೇಪನ : ಲಿಂಗಧ್ಯಾನದಿಂದಲಿ ಭಸ್ಮಸ್ನಾನವ ಮಾಡುವುದು ಜ್ಞಾನಪಾದೋದಕವು (ಪ್ರಭುಲಿಂ. ೬೩-೨೬೬). 'ಆಗ್ನೇಯಸ್ನಾನ' ಪರಾ. [ಸಂ.]

**ಭಸ್ಮಾಭ್ಯಂಗ** (ನಾ). ವಿಭೂತಿಯನ್ನು ಲೇಪಿಸಿಕೊಂಡಿರುವವನು; ಶಿವ: ಭಸ್ಮಾಭ್ಯಂಗ ಉರಿಲಿಂಗ ಸುಜನಸಂಗ . . . ಪಾರ್ವತೀಶ ಪಾಲಿಪುದೆನ್ನ (ಶ್ರೀಶರಾ.೦೯-೧). [ಸಂ.]

**ಭಸ್ಮಾವಶೇಷ** (ನಾ). ೧. ಉಳಿದಿರುವ ಬೂದಿ: ಮೇಣೆನ್ನ ಭುಜಪರಾಕ್ರಮತೀರ್ಥದಲಿ ನಿನ್ನ ಭಸ್ಮಾವಶೇಷಮಂ ತೊಳೆಯಲೆಂದಿರ್ದೆನ್ನನಾ ಬೋಳೈಸಿದಳ್ ತಾಯಿ! (ಶಕ್ರಾಂಗ. ೬೯-೨೦೬೬). ೨. ಭಸ್ಮವಾಗಿ ಮಾತ್ರ ಉಳಿದಿರುವುದು: ಮಹಾತ್ಮರ ದೇಹ ಭಸ್ಮಾವಶೇಷವಾಯಿತು (ರೂಢಿ). [ಸಂ.]

**ಭಸ್ಮೀಕರಣ** (ನಾ). ಬೂದಿ ಮಾಡುವುದು ; ಸುಟ್ಟು ಹಾಳುಮಾಡುವುದು: ಮುಷ್ಕರ ಮಾಡಲಿ, ದೇಶದ ಆಸ್ತಿಯಾದ ವಾಹನಗಳ ಭಸ್ಮೀಕರಣ ಮಾಡಬಹುದೆ? (ರೂಢಿ). [ಸಂ.]

**ಭಸ್ಮೀಕರಿಸು** (ಕ್ರಿ). ಸುಟ್ಟುಹಾಕು ; ನಾಶ ಮಾಡು : ಹಿಂದಣ ಹಿತತನದಿಂದೀ ವಿರಹದೊಳೊಂದಿದ ಬಲ್ಗಿರ್ಚಿಗೆ ವೇದನೆಯಂ ತಂದೆನ್ನಂ ಭಸ್ಮೀಕರಿಸದೆ ತಾಂ ನಿರ್ನೆರಮಿಹುದಲ್ಲ (ಶಬರಶಂ. ೯-೩೦). [ಭಸ್ಮೀಕರಣ$_0$ + – ಇಸು$_3$]

**ಭಸ್ಮೋದಕ** (ನಾ). ಭಸ್ಮದಿಂದ ಕೂಡಿರುವ ಉದಕ; ವಿಭೂತಿಯನ್ನು ಕದಡಿರುವ ನೀರು–ಜಲ: ವಲಿದು ಭಸ್ಮೋದಕವ ಮಂತ್ರವಾರಿಯು . . . ಇಂತಿಯಪ್ಪಪರಿಯಾ ಜಲದ ಪೊಂಪಾತ್ರೆಯಿಂ (ಪಪಮೋ. ೦೯-೯೧). [ಸಂ.]

**ಭಸ್ಮೋದ್ಧೂಳ** (ನಾ). ವಿಭೂತಿಲೇಪನ ಮಾಡಿಕೊಂಡಿರುವವನು ; ಭಸ್ಮಧಾರಿ : ಮಹಾವೀರಭಟರು ಭಸ್ಮೋದ್ಧೂಳರೆಸೆವ ಜಡೆಯಧಟರ್ಕಳು (ರಾಜಶೇಪು. ೯-೬-೦೦). [ಸಂ. ಭಸ್ಮೋದ್ಧೂಲ]

**ಭಸ್ಮೋದ್ಧೂಳಿತ** (ಗು). ವಿಭೂತಿಯನ್ನು ಬಳಿದುಕೊಂಡ,—ಲೇಪನ ಮಾಡಿಕೊಂಡ : ಪಾದಪ್ರಕ್ಷಾಳನಂಗೆಯ್ದು ಭಸ್ಮೋದ್ಧೂಳಿತಗಾತ್ರನಾಗಿ ದೇವತಾಸಮಾರಾಧನೆಗೆ ಕುಳ್ಳಿರ್ದು (ಶಂಕರಶಂ. ೭೦-೫). [ಸಂ. ಭಸ್ಮೋದ್ಧೂಲಿತ]

**ಭಸ್ಪುಟಿ** (ನಾ). (?) : ಕಡುಭಯಂಕರವೆಸರು ಭಸ್ಪುಟಿ[ಪಾಠಾಂ. ಬೋಸರಿ, ಭಸ್ಪಟ, ಘುಸ್ಪಟಿ] ಕಡೆಗೆ ರಕ್ಕಸರಿವದಿರುಜಿ[3] ಕಳುಗುಡುಹ್ತಿಗಳಲಾಯೆನುತ ತಿವಿದನು ಮತ್ತೆ ರಕ್ಕಸನ (ತೊರರಾ. ೬-೩೩-೨೨). [ ? ]

**ಭಳರಿಯೂರ್** (ನಾ). ಒಂದು ಊರಿನ ಹೆಸರು: ಆಸ್ಥಾನಪಮುಮಂ ಭಳರಿಯೂರಂ ಬನ್ದಸಿಳಕೆಬ್ಬಯುಂ ಚಿಕ್ಕೇಶ್ವರಕ್ಕೆ ಈಶಾನ್ಯದ ಪೊಳಿಯುಂ ಪದಿರ್ಕೊಳಂ ಭತ್ತಮುಂ ವಿೂಸಲುಂ ಬಳಿವತ್ತಮುಂ ಸಲ್ವದು (ಎಕ. III, ನಂಜನ. ೦೬೩-೯; 977). [ ? +ಊರ್ ]

**ಭಳಾರ** 'ಭಟಾರ' ನೋ.

**ಭಳಾರಿ** 'ಭಟಾರಿ' ನೋ.

**ಭಳರೆ** (ಅ). ಮೆಚ್ಚುಗೆಯನ್ನು ಸೂಚಿಸುವ ಒಂದು ಭಾವಸೂಚಕಾವ್ಯಯ : "ಅರರೆ ಧಣಾ ಭಾಪು ಭಳರೇ ಧಿರುರೇ . . . ಸುಂಪುರೆಯೆನೆ ಕೊಂಡಾಟದ ನುಡಿ" (ಭಾರತ. ೯೬); ಗಾಯಕರು ಪಾಠಕರಿಗೊಡವೆಯ ಬೀಯಮಾಡಿದು ಭಳರೆ ಭಾಪೆಂದಾಯತಿಕೆ ರಾಪವೆನ್ನುತುಜುಬಿದಸು ಕಲಿಭೀಮ (ಕುಮಾರರಾ. ಕಂ. ೨೯೫) ; ಧರಣಿಪಾಲಕ ಕಂಡು ಮೆಚ್ಚುತ ವರವನೀವೆನು ಭಳರೆ ಮೆಚ್ಚಿದೆನರಸಿ ಬೇಡೆನಲು (ಕೌಶರಾ. ೦-೨೬). 'ಭಲರೆ' ಪರಾ.

**ಭಳಭಳರೆ** (ದ್ವಿರುಕ್ತಿ): ಘುಲುಘುಲುಘುಲು ಗೆಜ್ಜೆಯ ನಾದ ಭಳಭಳರೆ ನಿಮ್ಮ ತೊಳೆವ ಬೆರಳುಂಗುರ ಕಿಣಕಿಣಿನಾದ (ಪುರಂದ. ೦. ೦೯೦.೦). [ ? ]

**ಭಟರಿ** 'ಭಟಾರಿ' ನೋ.

**ಭಟಾರ** 'ಭಟಾರ' ನೋ.

**ಭಾಂಕರಿಸು** (ಕ್ರಿ). ಭಾಂ, ಭಾಂ' ಎಂಬ ಧ್ವನಿಯನ್ನು ಮಾಡು ; ಗದ್ದಲ ಮಾಡು ; ಕೋಲಾಹಲ ಮಾಡು : ನನಗೆ ನೆಗಡಿ ಹಿಡಿದಾಗ ಭಾಂಕರಿಸುವ ಸೀನುಗಳ ಲೆಕ್ಕ ಇದು ! (ನಂಟರು. ೩೩).
[ಭಾಂಕರಣ$_0$ + – ಇಸು$_3$ ]

**ಭಾಂಕಾರ** (ನಾ). ಭಾಂ, ಭಾಂ ಎಂಬ ಧ್ವನಿ ; ಗಲಾಟೆ ; ಗದ್ದಲ; ಕೋಲಾಹಲ : ಆ ಪ್ರಯಾಣಭೇರೀಭಾಂಕಾರವೆಂಬ ಹೂಂಕಾರದೊಳೆ . . . ಪುರಬಹಿರ್ವಣದ ಪರಿಸರಪ್ರದೇಶದೊಳ್ ಎಡದೊಳ್ಪಂಗಲಿ ಮಟ್ಟುಮೇಲ್ವಟೀದುದು (ಅಪಂಪು. ೦೩-೭೩ ವ); ಆಗಳ್ ಶತ್ರುಹನ ಸೇನೆಯೊಳ್ ಹಾಹಾಕಾರಂ ಪರಬಲದೊಳ್ ಭಾಂಕಾರಮುಂಜಿ[3] ಪೆರ್ಚಲೊಡಂ (ರಾಮಾಶ್ವ. ೦೩೦-೨೩). [ಸಂ.]

**ಭಾಂಕಾರುಗುಡು** (ಕ್ರಿ). ಭಾಂಕಾರ ಮಾಡು; ಆರ್ಭಟಿಸು; ಕೋಲಾಹಲ ಮಾಡು : ಸಂಗರಾರ್ಜುನಂ ಸಿದ್ಧನಂತಾ ಸಿದ್ಧಕ್ಷೇತ್ರಮಂ ಪುಗುತಂದನದೆಂತಪ್ಪುದೆಂದೊಡೆ . . . ಭೈರಪನಂತೆ ಭಾಂಕಾರಂಗುಡುತಿರ್ಪ ಸಾಧಕರಿಂ ಗೋದಾಮೆಯಂತೆ ಬಗೆದ ಬಣ್ಣಮಪ್ಪ ರಣಜಿಟ್ಟಿಗರಿಂ . . . ಅತಿಭಯಂಕರಾಕಾರಮಪ್ಪುದು (ಕಾವ್ಯಸಾ. ೫೨೯ ಕೂದ್ರಕ).
[ ಭಾಂಕಾರ + ಕುಡು$_1$ (<ಕೊಡು$_1$) ]

**ಭಾಂಕಿ** (ನಾ). ಕಹಳೆಯಂತಹ ಒಂದು ಬಗೆಯ ವಾದ್ಯ : ನಗಾರಿ ಭಾಂಕಿ ತುತ್ತೂರಿ ಶಂಖ ಜಾಗಟೆ ಇವುಗಳ ವಾದ್ಯಗಳೊಡನೆ ಐರಣಿ (ಐದು ಕಲಶಗಳು) ಮೆರವಣಿಗೆಯಾಗುತ್ತವೆ (ಹಳ್ಳಿಜಾ. ೫೬); ದಾಸನ ಸರಕುಗಳು . . . ಕಡಾಸು, ಬನವಾಸಿ, ತುತ್ತೂರಿ, ಭಾಂಕಿ, ಹೃದಯದಲ್ಲಿ ಆಂಜನೇಯನ ವಿಗ್ರಹ (ಗರುಡಾ. ೦೦ ಪೀಠಿಕೆ); ದಾಸಯ್ಯನೂ ಅವನ ನಾಲ್ಕಾರು ಜನ ಅನುಚರರೂ ನಗಾರಿ, ಭಾಂಕಿ, ತುತ್ತೂರಿ, ಶಂಖ, ಜಾಗಟೆ ಧ್ವನಿಗಳಿಂದ . . . ಧ್ವನಿಮಾಡುತ್ತಾ ಬರುವರು (ಜನಪದ. ೯).
[←ಹಿಂ. ಬಾಂಕಿಯಾ ; ಮರಾ. ಬಾಂಕಾ]

**ಭಾಂಗಣ** (ನಾ). ನಕ್ಷತ್ರಗಳು ಇರುವ ಸ್ಥಳ,– ಪ್ರದೇಶ ; ಆಕಾಶ : ಮಂಗಲಾಕ್ಷತೆಯನಣ್ಣನಿಗಿಟ್ಟು . . . ಭಾಂಗಣದೊಳು ಪೋದರಾಣ್ಮರೊಡನೆ ಸಿಂಧುಗಂಗಾದೇವಿಯರತ್ತ (ಭರತ. ೯೯-೨೯). [ಸಂ.]

**ಭಾಂಗಿ, ಬಾಂಗಿ** (ನಾ). ೧. ಅಂಚೆಯ ಮೂಲಕ ಕಳುಹಿಸುವ ಗಂಟು ; ಪಾರ್ಸಲ್ಲು : ಒಂದು ದಿನ ಆ ಬಾಲಿಕೆಗೆ ಅಂಚೆಯಲ್ಲಿ ಭಾಂಗಿ ಬಂದಿತು (ಬಾಲಕೃ. II, ೬೨೮); ಕರುಣಾರತ್ನೆಯಿಂದ ರಾಯರ ವಿಳಾಸಕ್ಕೆ ಒಂದು ರಿಜಿಸ್ಟರ್ ಭಾಂಗಿ ಬಂದಿತು (ಪಂಕಪ್ಪ. ೬೦) ; ಯುದ್ಧಕಾಲಗಳಲ್ಲಿ ತಮಗೆ ಬರತಕ್ಕ ಭದ್ರವಾಗಿರುವ ಭಾಂಗಿಗಳೊಳಗೆ ಅಪಾಯಕರವಾದ ಸಿಡಿಮದ್ದಿನ ಗುಂಡುಗಳು . . . ಇರುವವೋ ಎಂಬುದನ್ನೂ ಎಕ್ಸರೇ ಮೂಲಕ ಪರೀಕ್ಷಿಸಿ ನೋಡುವರು (ಎಕ್ಸರೇ. ೫೬). ೨. ಮೂಟೆ ; ಹೊರೆ : ಇಷ್ಟು ಸಾಮಗ್ರಿಗಳನ್ನೂ . . . ಕಟ್ಟಿದಾಗ ನುನೂರು ನೂರು ದೊಡ್ಡ ಭಾಂಗಿಗಳಾದುವು (ಹಸುಹೊ. ೦೦೫). **ಬಾಂಗಿ** : ೧. ಈಗ ತಾನೆ ಅಚ್ಚಕ್ಕನ ಕಡೆಯಿಂದ ಪುಟ್ಟದೊಂದು ಬಾಂಗಿ ಬಂತು (ಕಣಾಕ್ಷಿ. ೯೩).
[←ಹಿಂ. ಬಹಂಗೀ ; ಮರಾ. ಬಂಗೀ, ಬಹಂಗೀ ]

**ಭಾಂಗೀನ** (ನಾ). ಸೆಣಬಿನ ಹೊಲ : "ಭಂಗ್ಯಂ, ಭಾಂಗೀನಂ – ಈ ೨ ಸೆಣಬಿನ ಕೆಯ್ಯ್" (ಶಬ್ದಮ. ೨೭-೬). [ಸಂ.]

**ಭಾಂಡ** (ನಾ). ೧. ವಸ್ತುಗಳನ್ನು ತುಂಬಲು ಮತ್ತು ಅಡಿಗೆ, ಊಟ ಮೊದಲಾದ ಎಲ್ಲ ರೀತಿಯ ಕೆಲಸಗಳಿಗೆ ಉಪಯೋಗಿಸುವ ಮಣ್ಣು, ಲೋಹ, ಮರ ಮುಂತಾದುವುಗಳ ಪಾತ್ರೆ,– ಭಾಜನ : "ಸ್ಥಾಲಿ ಭಾಂಡಂ ಪಾಡಕೆಯೆಂದೆನಿಕ್ಕುಂ" (ಮಂಗರಾ. ೬೨-೨೨) ; ಚಂಡಾಲ

ಭಾಂಡದಿಂ ಭೂಮಿಪತಿತವಾದಂಬುವುಂ ಪವಿತ್ರಮೆಂಬುದುಂಟು (ಕಾದಂಉ. ೬೫೩); ಪಾಕಮಾಡುವ ಭಾಂಡ ಸೊಣಗನ ಡೊಮಿಗೆಯುಯ್ಯಾ (ಬಸವ. ೬೦೪); ಭಾಂಡ ತುಂಬಿತು ಮತ್ತೆ ನಲಿಯುತ ಚಂಡಹೃದಯನ ನುಡಿಯ ವಿಷವನು ಖಂಡಿಸಿದೆಲಾಯೆನುತ ಕೊಂಡಾಡಿದನು ಕೋಮಲೆಯ (ಕುಮ್ಮಾರ. ೭೦೩ . ೧೭-೪೦). ೨. ಸಲಕರಣೆ ; ಉಪಕರಣ. ೩. ಒಂದು ಬಗೆಯ ವಾದ್ಯ. ೪. ಕುದುರೆಯ ಸಜ್ಜು, —ಅಲಂಕಾರ : "ಭಾಂಡಂ – ೧ ಕುದುರೆಗೆ ಅಲಂಕರಿಸುವ ವಡಿವೆ" (ಸಿದ್ಧಾಂತಿ. ೩೮೪). ೫. ಒಡವೆ ; ಆಭರಣ. ೬. ಅಸಲು ; ಮೂಲಧನ. ೭. ನದಿಯ ಪಾತ್ರ. ೮. ಸಾಮಾನು, ಸರಂಜಾಮು ಮೊದಲಾದ ಸಾಮಗ್ರಿ. ೯. ಸರಕುಗಳ ಗಂಟು,–ಮೂಟೆ. ೧೦. ವ್ಯಾಪಾರಿಗಳ ಸರಕು,—ದಾಸ್ತಾನು. ೧೧. ಭಂಡಾರ; ನಿಧಿ. ೧೨. ಹಾಸ್ಯ; ಸಕಲಿ.

**ಭಾಂಡ ಭಾಜನ** = ಪಾತ್ರೆಪರಟೆ : ಭಾಂಡಭಾಜನ ಶುದ್ಧವಿಲ್ಲದವರ ಭಕ್ತಿ ಹೆಂಡದ ಮಡಕೆಯ ಹೊಱಗೆ ತೊಳೆದಂತೆ ಕೂಡಲಸಂಗಮದೇವಾ (ಬಸವ. ೦೦೪). [ ಸಂ. ]

**ಭಾಂಡಕ** (ನಾ). ೧. ಸಣ್ಣಪಾತ್ರೆ. ೨. [ನಾಟ್ಯ] ನೃತ್ಯದ ಒಂದು ಭಂಗಿ (?) : ಭರತಮಾತಂಗದ ತಿರುಪು ಭಾಂಡ [ಕಾಕಾಂ. ಡು]ಕ ಕುಹಳರ [ದ] ಪರಿಯಿಂದಾಡುತಿರಲು . . . ಸುಂದರ್ಪೂಮಳೆಯ ನಿರ್ಜರರು (ಶೃಂಗರ. ೦-೩೯೩). [ ಸಂ. ? ]

**ಭಾಂಡಕರ್ಪೂರ** (ನಾ). ಒಂದು ಬಗೆಯ ಕರ್ಪೂರ : ವಿಕ್ರಮರಾಯನು ದೊರೆಯ ಹೆಸರಿನಲ್ಲಿ ಒಂದು ಸುಳ್ಳುರಾಯಸವನ್ನು ಸೃಷ್ಟಿಸಿ ಅದರ ಬಲದಿಂದ ದಳವಾಯಿಯನ್ನು ಬಂಧಿಸಿ, ಅವನಿಗೆ ಭಾಂಡಕರ್ಪೂರದ ಶಿಕ್ಷೆಯನ್ನು ವಿಧಿಸುವನು (ಕಂಠೀ. ೦೦೪); ರಾಜರು . . . ಅವರನ್ನು ಕರೆಯಿಸಿ, ಕಣ್ಣಿಗೆ ಭಾಂಡಕರ್ಪೂರವನ್ನು ಕಟ್ಟಿಸಿ ಕಣ್ಣುಗಳನ್ನು ಕೀಳಿಸಿ . . . ಕಠೋರವಾಗಿ ನುಡಿದು ಬಿಟ್ಟರು (ಒಡೆ. ೩೪). [ಭಾಂಡ$_0$ + ಕರ್ಪೂರ]

**ಭಾಂಡವಲ** 'ಬಂಡವಾಳ' ನೋ.

**ಭಾಂಡವಲದಾರ** 'ಬಂಡವಾಳದಾರ' ನೋ.

**ಭಾಂಡವಲಶಾಹಿ** 'ಬಂಡವಾಳಶಾಹಿ' ನೋ.

**ಭಾಂಡವಲು** 'ಬಂಡವಾಳ' ನೋ.

**ಭಾಂಡವಳು** 'ಬಂಡವಾಳ' ನೋ.

**ಭಾಂಡಸಂಕರ** (ನಾ). ಪಾತ್ರೆಗಳನ್ನು ಅಪವಿತ್ರಗೊಳಿಸುವುದು; ಮಡಿಪಾತ್ರೆಗಳನ್ನು ಮೈಲಿಗೆ ಮಾಡುವುದು : ಅದು ಗಂಡು ನೆರೆದುಕೊಂಡು ತುಡುಗುಣಿಯಾಗಿ ಭಾಂಡಸಂಕರಂಗೆಯ್ಯುತ್ತಿರ್ಪುದುಂ (ಶಂಕರಂ. ೨೬೦-೨೦). [ ಸಂ. ]

**ಭಾಂಡಾಗಾರ** (ನಾ). ಉಗ್ರಾಣ; ಭಂಡಾರ; ಕೋಶ : ಶ್ರೀಗಂ ರಾಜ್ಯವಿಭೂತಿಗಂ ನೆಲೆಯನಿಪ್ಪಾತ್ಮೀಯಮಾಣಿಕ್ಯಭಾಂಡಾಗಾರಂ ಮೊದಲಾಗೆ ಮಿಕ್ಕ ಬೆಸನಂ ತ್ರೈಲೋಕ್ಯಮಲ್ಲಂ ಜಯಶ್ರೀಗೇಹಂ ಕುಡೆ (ಶಾಂದೇಪ. ೩-೦೨; 1047). [ ಸಂ. ]

**ಭಾಂಡಾರ** (ನಾ).=ಭಾಂಡಾಗಾರ : ಚಾರು ತನ್ನ ಸೆರಗಿನ ತುದಿಯಿಂದ ಭಾಂಡಾರದ ಕೀಲಿಯ ಕೈಗೊಂಚಲನ್ನು ಬಿಚ್ಚಿ. . . ಒಗೆದು ಬಿಟ್ಟಳು (ಇಕ್ಕೆ. ೨೬೩); ಮಹಾನುಭಾವರಾದ ನಮ್ಮ ಪೂರ್ವಜರೂ, ಪುರಾಣದ ವಿಭೂತಿಗಳೂ ಯಾವ ಶಕ್ತಿಸಾರದ ಭಾಂಡಾರವಾಗಿದ್ದರೋ, ಅದರ ಲವಲೇಶವನ್ನಾದರೂ ಉಳಿಸಿಕೊಳ್ಳಲಾರದ ಅವಿವೇಕಿಗಳೆಂದು ನಮ್ಮನ್ನು ತೆಗಳುವುದಕ್ಕೆ ಪ್ರತಿಯೊಬ್ಬ ಪ್ರವಚನಕಾರನೂ ಸಮಯ ನೋಡುತ್ತಿರುತ್ತಾನೆ (ದೇಶಪ್ರ. ೯೦). [ ಸಂ. ]

**ಭಾಂಡಿ** 'ಭಾಂಡೆ' ನೋ.

**ಭಾಂಡಿಕ$_1$** (ಗು). ನಗೆಗೀಡಾದ ; ಹಾಸ್ಯಾಸ್ಪದವಾದ : ಸುರಪಗಾಮುನೀಶನ ಪತ್ನಿಗಳುಪೆ ಭಾಂಡಿಕದೇಹಮಾಯಿತು (ಭಾಷಾಂ. ೬-೦೫); P ಇಂದ್ರನು ಗೌತಮಮುನಿಯ ಶಾಪದಿಂದ ವೃಷಣರಹಿತನಾದನೆಂದು ಪುರಾಣಕಥೆಯಿದೆ. [ <ಸಂ. ಭಂಡ]

**ಭಾಂಡಿಕ$_2$** (ನಾ). ಕ್ಷೌರಿಕ ; ನಾಯಿಂದ ; ನಾಪಿತ. [ ಸಂ. ]

**ಭಾಂಡೀರ** (ನಾ). ೧. ಆಲ, ಗೋಣಿ ಮುಂತಾದ ಜಾತಿಗೆ ಸೇರಿದ ಒಂದು ಬಗೆಯ ಮರ : ಪಣ್ಗಳ ಕೆಂಪಿಂ ಸೊಗಯಿಸಿತುದ್ದಂಡಕಾಂಡಭಾಂಡೀರವಟಂ (ಜಗು. ೪-೪೩); ಆ ಭಾಂಡೀರಮೆಂಬ ಮಹಾವಟವಿಟಪಿಯೊಳ್ (ಜಗು. ೪-೯೬ ವ). ೨. ಒಂದು ಪ್ರಾಚೀನ ಭಾಷೆ : ಸಂಸ್ಕೃತ ಪ್ರಾಕೃತ ಪೈಶಾಚಿಕ ಮಾಗಧ ಶೌರಸೇನ ಭಾಂಡೀರ ಅಪಭ್ರಂಶ ವೈಕೃತ ಶುದ್ಧ ಮಿಶ್ರಾದಿ ಭಾಷಾಭೇದಗಳಿಂ ಪೇಳ್ವ ಲಾಕ್ಷಣಿಕರಪ್ಪ ಕವಿಗಳಿಂ (ಶಬ್ದೀ. ೨೪೨). [ ಸಂ. ]

**ಭಾಂಡು** (ನಾ). (ಉಕ) (ಕಡಮೆ ಬೆಲೆಯ) ನೂಲಿನ ಸೀರೆ : ಬರಿಯ 'ಭಾಂಡು' ಗಳೇ ನಿತ್ಯದ ಉಡಿಗೆಯಾಗಿದ್ದ ಅವರು ಅಂದು ಮೈಸೂರು ಮಾದರಿಯ ಸೀರೆಯೊಂದನ್ನುಟ್ಟು ಅದಕ್ಕನುರೂಪವಾದ ಕುಪ್ಪಸವನ್ನು ತೊಟ್ಟರು (ಕಮಜೀ. ೨೫೮); ಬೆಳೆದ ಮಗಳು ಲಕ್ಷಣವಾಗಿ ಕಾಣಬೇಕೆಂದು ಭಾಗೀರಥಿ ತನ್ನ ಜೀವವನ್ನೇ ಒತ್ತೆ ಇಟ್ಟು ಒಳ್ಳೆಯ ಭಾಂಡನ್ನು ಉಡಿಸಿದರೆ ಅದಕ್ಕೊಂದು ಬೇರೆ ಭಾಷ್ಯವನ್ನೇ ಬರೆಯುತ್ತಿತ್ತು ಸಮಾಜದ ಜನ (ಭಾರತಿ. ೦೦೮); ನಮ್ಮ ಅವ್ವನಿಗೆ ಇರಲೆಂದು, ರಂಗಕ್ಕ ಎರಡು ಭಾಂಡು ಕೊಡಿಸಿ ಕೊಟ್ಟರು (ದೀಶಹ. II, ೪೩). [ ← ಮರಾ. ಬಾಂಡ್ ]

**ಭಾಂಡೆ, ಭಾಂಡಿ**(ನಾ). (ಉಕ) ಪಾತ್ರೆ ; ಭಾಜನ : ಭಾಂಡೆಗಳು ಒಂದಕ್ಕೊಂದು ಹೊಂದಿಕೆಯಾಗುವಂತಹ ಬೇರೆ ಬೇರೆ ಗಾತ್ರದವು ಇರಬೇಕು (ಅಡುಗೆ. ೩೩). **ಭಾಂಡಿ :** ಬಾಯಿಯ ಒಮ್ಮೆ ಪಾತ್ರೆ ತಿಕ್ಕಿ ಹೋದಳು. ಎರಡನೆಯ ಸಲ ಬಂದು ಭಾಂಡಿ ತಿಕ್ಕಲು ಬರಲಾರೆ ಎಂದು ಹೇಳಿ ಹೋದಳು (ಸ್ತ್ರೀಶ. ೨೩೬) ; ಹತ್ತು ಹೊಡೆದರೂ ಭಾಂಡಿ ತಿಕ್ಯಾಕ ಬರೂಹಾಗಿಲ್ಲ (ಕುಂಕುಮ. ೦೪) ; ಸತ್ಯನಾರಾಯಣನನ್ನು ಕೂಡಿಸಿ ಎರಡೂ ಕಡೆಗೆ ತುಪ್ಪದ ದೀಪಗಳನ್ನು ಹಚ್ಚಿದ್ದಾರೆ. ಬೆಳ್ಳಿಯ ಭಾಂಡಿಗಳು ಎಲ್ಲ ಕಡೆಗೆ ಲಕಲಕಿಸುತ್ತವೆ (ಅಪ್ನ. ೪೩). [←ಮರಾ. ಭಾಂಡೇ. / ಸಂ. ಭಾಂಡ]

**ಭಾಕರಿ** 'ಭಕ್ಕರಿ' ನೋ.

**ಭಾಕ್ತ** (ಗು). ೧. ತಿನ್ನಲು ಯೋಗ್ಯವಾದ ; ತಿನ್ನತಕ್ಕ. ೨. ಆಶ್ರಿತವಾದ ; ಪರಾಧೀನವಾದ. ೩. ಗೌಣವಾದ ; ಅಪ್ರಧಾನವಾದ : ಮುಕ್ತಿಸುಖವ್ಯಾಂತರೀಕವದು ನಿರವಧಿಸುಖ ಭಾಕ್ತಪ್ರಪಂಚ ಸುಖಮಂತಪರಿಮಿತವಹುದು (ಮಂಕುತ. ೮೫೮). (ನಾ). ೪. ಅನ್ನ ; ಆಹಾರ : ಭಾಕ್ತವಾರಾರ ದುಡಿತದಿನೊ ನಿನಗಾಗಿಹುದು ಗುಪ್ತಗಾಮಿನಿಯೊ ಋಣ (ಮಂಕುತ. ೮೪೦). ೫. ಆಶ್ರಿತವಾದುದು ; ಪರಾಧೀನವಾದುದು. ೬. ಮುಖ್ಯವಲ್ಲದುದು ; ಅಪ್ರಧಾನವಾದುದು. ೭. [ಕಾವ್ಯಮೀ] ಗೌಣವಾದುದು ; ಲಾಕ್ಷಣಿಕ ; ಔಪಚಾರಿಕ ; P ಯಾವುದಾದರೊಂದು ಪದವು ತನ್ನ ಮುಖ್ಯಾರ್ಥವನ್ನು ಬಿಟ್ಟು ಬೇರೊಂದು ಅರ್ಥದಲ್ಲಿ ಸಂದರ್ಭಾನುಸಾರವಾಗಿ ಪ್ರಯೋಗಿಸಲ್ಪಟ್ಟಿದ್ದರೆ ಅದು ಭಾಕ್ತವೆನಿಸುವುದು. "ಬಿಸಿನೀಪತ್ರದ ಶಯ್ಯೆ ತಾನೆ ತರುಣೀಸಂತಾಪಮಂ ಪೇಳುಗುಂ" ಎಂಬಲ್ಲಿ 'ಪೇಳುಗುಂ' ಎಂಬುದು ಭಾಕ್ತಪದ. ಏಕೆಂದರೆ ಅಚೇತನವಾದ ಶಯ್ಯೆಯು ಮಾತನಾಡುವುದಿಲ್ಲ. ಆದುದರಿಂದ 'ಪೇಳುಗುಂ' ಎಂದರೆ 'ಸ್ಪಷ್ಟಪಡಿಸುತ್ತದೆ' ಎಂದು ಅರ್ಥ. ಇಲ್ಲಿ ಮುಖ್ಯಾರ್ಥವನ್ನು ಬಿಟ್ಟು ಬೇರೊಂದು ಅರ್ಥವನ್ನು ಹೇಳಿದಂತಾಯಿತು : 'ಧ್ವನಿ' ಯೆಂದು ಕಾವ್ಯದ ಆತ್ಮವನ್ನು ವಿದ್ವಾಂಸರು ಹಿಂದೆಯೇ ಹೇಳಿದ್ದರಷ್ಟೆ . . . ಮತ್ತೆ ಕೆಲವರು ಅದನ್ನು 'ಭಾಕ್ತ' ( = ಲಾಕ್ಷಣಿಕ ) ವೆಂದರು (ಧ್ವನ್ಯಾಲೋ. ೪). [ಸಂ.]

**ಭಾಕ್ತಿಕ** (ಗು). ೧. ಭಕ್ತಿಯಿಂದ ಕೂಡಿದ ; ಶ್ರದ್ಧಾವಂತನಾದ : ಇದನೋದುವ ಕೇಳ್ವ ಕಲ್ವ ಭಾಕ್ತಿಕಜನಕಾಗಳುಂ ಸಮನಿಸುರ್ಕೆ ಮನೋರಥ ಕಾರ್ಯಸಿದ್ಧಿ (ಜಾತಿತಿ. ೨೪-೯೩). (ನಾ). ೨. ಭಕ್ತ ; ಆಶ್ರಿತ : ಭಾಕ್ತಿಕನ ಪೊಲ್ ಬಲವಂದುದು ವಹ್ನಿ (ಅಪಂಕ್ರು. ೩-೩). [ಸಂ.]

**ಭಾಗ** (ನಾ). ೧. ಪೂರ್ಣವಾದ ಒಂದು ಪದಾರ್ಥದ ಭಿನ್ನಭಿನ್ನವಾದ ಅಂಶ,—ಪಾಲು: ಕ್ರಮದಿಂ ದ್ವಾದಶಭಾಗವೊಂದು ಗೃಹಕಕ್ಕುಂ (ಜಾತಿತಿ. ೦-೨೬) ; ಎನ್ನಲ್ಲಿ ಭಕ್ತಿ ಸಾಸವೆಯ ಷಡ್ಭಾಗದನಿತಿಲ್ಲ (ಬಸವ. ೩೯೩). ೨. ಹಂಚಿಕೆ ; ವಿಭಾಗ ; ಹಿಸ್ಸೆ : ಅವರು ತಮ್ಮ ಮಕ್ಕಳಿಗೆ ಆಸ್ತಿಯನ್ನು ಭಾಗ ಮಾಡಿಕೊಟ್ಟರು (ರೂಢಿ). ೩. ಕರ್ತವ್ಯ ; ಹೊಣೆ : ಅಪಾಯಕರವಾದ ಕೆಲಸವನ್ನೇ ನಿನ್ನ ಭಾಗಕ್ಕೆ ಆರಿಸಿಕೊಂಡಿದ್ದೀಯೇ (ವಿಚಂ. II, ೯೦೩). ೪. ದೆಸೆ ; ದಿಕ್ಕು : ಪೆರ್ಗ್ಗಾಗಾಮಾಸಿಗ್ರಾಮ ಪಶ್ಚಿಮಭಾಗ ಕೃತಾಕೃತಕ್ಷೇತ್ರಂ (ಎಕ. XI, ದಾವಣ. ೬೬-೩೦; 694) ; ದಕ್ಷಿಣದಿಶಾಭಾಗದೊಳ್ಗೋನಸಮುದ್ರದ ಕೃತ್ರಿಮಪರ್ಬ್ಬತಮೆನಿಸಿದೇರಿ (ಎಕ. VIII, ಶಿಗಸ. ೦೦೯-೬೦; 1079). ೫. ಕೆಲವು ಗ್ರಾಮಗಳ ಗುಂಪು; ಪ್ರಾಂತ; ಆಡಳಿತಕ್ಕಾಗಿ ಮಾಡಿರುವ ನಾಡಿನ ವಲಯ : ವನವಾಸಿ ಪಣ್ಣಿರ್ಚ್ಛಾಸಿರದೊಳಗೆ ಕಿಱುಕಾಗಾಮಾಸಿ ನಾಮಗ್ರಾಮ (ಎಕ. XI, ದಾವಣ. ೬೬-೨೮; 694). ೬. ಅದೃಷ್ಟ; ಭಾಗ್ಯ; ಸುದೈವ. ೭. ಒಂದು ವಸ್ತುವಿನ ನಾಲ್ಕನೆಯ ಒಂದು ಅಂಶ ; ಪಾದಾಂಶ ; ಕಾಲುಭಾಗ. ೮. ಸ್ಥಳ; ಅವಕಾಶ; ಸ್ಥಾನ. ೯. [ಗಣಿತ] ಒಂದು ಅಪೂರ್ಣ ಸಂಖ್ಯೆಯ ಅಂಶ. ೧೦. ಭಾಗಲಬ್ಧ. ೧೧. [ರೇಖಾಗ] ಒಂದು ವೃತ್ತದ ಸುತ್ತಳತೆಯಲ್ಲಿ ಮುನ್ನೂರ ಅರವತ್ತನೆಯ ಒಂದು ($\frac{೧}{೩೬೦}$); ಅಂಶ ಒಂದು ಡಿಗ್ರಿ. ೧೨. [ಜ್ಯೋತಿ] ಒಂದು ರಾಶಿಯ ಮೂವತ್ತನೆಯ ಒಂದು ($\frac{೧}{೩೦}$) ಅಂಶ. [ಸಂ.]

**ಭಾಗಂಗೊಳ್**, ಭಾಗಂಗೊಳು (ಕ್ರಿ). ಭಾಗವಡಾಡು ; ವಿಭಾಗಿಸು : ಮಧ್ಯಮಪದಾಕ್ಷರಸಂಖ್ಯೆಯಿಂ ಆ ನಿಖಿಲಶ್ರುತಾಕ್ಷರಂಗಳಂ ಭಾಗಂಗೊಂಡೊಡಂಗಪೂರ್ವಪದಂಗಳಪ್ಪುವು (ಕತ್ತ್ರಶ್ರು. ೬೬); ಭಾಗಂ ಎಂಬುದಕ್ಕೆ ಪೆಸರು_ತವಿಸು, ಭಾಗಿಸು, ಉಗಿ, ಎತ್ತು . . . ಭಾಗಂಗೊಂಬುದಕ್ಕೆ (ವ್ಯವಹಾ. ೦೨-೦೨). **ಭಾಗಂಗೊಳು :** "ಭಾಗಂ ಎಂಬುದಕ್ಕೆ ಪೆಸರು _ ತವಿಸು ಭಾಗಿಸು. . . ಭಾಗಂಗೊಳು ಸೆಳೆ. . . ಇಂತಿನಿತುಂ ಭಾಗಂಗೊಂಬುದಕ್ಕೆ ಪೆಸರು" (ವ್ಯವಹಾ. ೦೨-೦೨). [ಭಾಗ + ಕೊಳ್$_1$]

**ಭಾಗಂಗೊಳು** 'ಭಾಗಂಗೊಳ್' ನೋ.

**ಭಾಗಂಬೋಗು** (ಕ್ರಿ). ಭಾಗವನ್ನು ಹೊಂದು : ಭಾಗಂಬೋಗದೆ ಉಳಿದಕ್ಕರಂಗಳೆಲ್ಲಂ ಪ್ರಕೀರ್ಣಕಪ್ರಮಾಣಮಕ್ಕುಂ (ಕತ್ತ್ರಶ್ರು. ೬೬).
[ಭಾಗ + ಪೋಗು$_1$ ( < ಪೋ$_1$)]

**ಭಾಗಧೇಯ** (ನಾ). ೧. ಪಾಲು; ಅಂಶ; ಭಾಗ. ೨. ಭಾಗ್ಯ; ಅದೃಷ್ಟ: "ಭಾಗಧೇಯಂ, ಭಾಗ್ಯಂ, ವಿಪಾಕಃ, ಭವಿತವ್ಯತಾ_ಈ ೪ ಭಾಗ್ಯದ ಪೆಸರ್" (ಹಲಾಯು. ೨೦-೦೨೬); ಅಗಣಿತ ಭಾಗಧೇಯಕೃತ ಮೂಲಗುಣಂಗಳನಂದಣಾ ಬ್ರತಾದಿಗಳನನಾಕುಲಂ ಬೆಸಸಿದಂ ಮುನಿಪುಂಗವಂ (ಸುಕುಮಾ. ೩-೯೬); ಭರತಕುಲದಲಿ ಭಾಗಧೇಯಸ್ಫುರಣಹೀನರನೆಮ್ಮನುಜಿ ಧಿಕ್ಕರಿಸಿದಾದಡೆ ಮುನಿದು ಮಾಡುವುದೇನು ವಿಧಿಯೊಡನೆ (ಕುಮ್ಯಾ.ಕ. ೦೬-೪೦); ಭವ್ಯವಿದ್ವನ್ನಿಮಹಕ್ಕಾನಂದದಿಂದಂ ವಸುಮಸನಮಣಿಶ್ರೇಣಿಯುಂ ಮಾಣದೀವೃತ್ತವನಿರ್ದ್ದಂ . . . ಭಾರತೀಭಾಗಧೇಯಂ (ರಾಜಶೇ. ೭-೦೦೩); ತಮ್ಮ ಭಾಗಧೇಯವೇ ತಮ್ಮನ್ನು ರಕ್ಷಿಸಿರುವುದು (ಬಿಣಾಜ. ೦೩೨). ೩. ಆಸ್ತಿ; ಐಶ್ವರ್ಯ. ೪. ಸುಖ ; ಸೌಖ್ಯ. ೫. ತೆರಿಗೆ; ಸುಂಕ : "ಅರ್ಥಾಗಮಃ, ಆಯಃ, ಭಾಗಧೇಯಂ, ಕರಃ, ಬಲಿಃ_ಈ ೫ ಸಿದ್ಧಾಯಂ" (ಹಲಾಯು. ೬೦-೨೬೯). ೬. ಹಕ್ಕುದಾರ ; ಬಾಧ್ಯಸ್ಥ. ೭. ಅದೃಷ್ಟವುಳ್ಳ ವ್ಯಕ್ತಿ ; ಭಾಗ್ಯವಂತ : ಕುಮಾರಿಗುಚಿತೋದ್ವಾಹವೈಭವದ ಸ್ವಯಂವರಕೆ ಭೂರಿ ಭುವನದ ಭಾಗಧೇಯರ ಭೂರಮಣರನು ಬರಿಸಿದನು (ಕೊರಚ. ೧-೦೨-೨೮)
[ಸಂ.]

**ಭಾಗಲಬ್ಧ** (ನಾ). [ಗಣಿತ] ಒಂದು ಸಂಖ್ಯೆಯನ್ನು ಮತ್ತೊಂದು ಸಂಖ್ಯೆಯಿಂದ ಭಾಗಿಸಿದರೆ ಉತ್ತರರೂಪವಾಗಿ ಬರುವ ಸಂಖ್ಯೆ: ಭಾಜ್ಯವು ಭಾಜಕದಿಂದ ಕಡಮೆಯಾದಲ್ಲಿ, ಮೊದಲನೆಯ ಭಾಗಲಬ್ಧವನ್ನು ಎಂದು ತೆಗೆದುಕೊಳ್ಳಬೇಕು (ಗಣಿತ. ೨೯೬). [ಸಂ.]

**ಭಾಗಲಾಂಬಿಕೆ** (ನಾ). ಒಬ್ಬಾಕೆಯ ಹೆಸರು : ಕಾರ್ತ್ತವೀರ್ಯ್ಯಾಗ್ರಕಾನ್ತಯಾ ಶ್ರೀ ಭಾಗಲಾಂಬಿಕಾ ದೇವ್ಯಾ (೧) ನಮಸ್ಕಂ ಕೃತಮುಣ್ಣಸಾ (ಸೌಇಇ. XX, ೦೩-೨೦; 875). [<ಬಗಲೆ ? + ಅಂಬಿಕೆ]

**ಭಾಗವಂತ** (ನಾ). ಪಾಲುದಾರ ; ಹಿಸ್ಸೆದಾರ : ಎನ್ನ ಸುಖದುಃಖಿಕ್ಕೆ ಭಾಗವಂತರು ನೀವಲಾ (ಏಕಕ್ರು. ೩-೨೦-೨೦). [ಸಂ. ಭಾಗವತ್]

**ಭಾಗವಡೆ** (ಕ್ರಿ). ಬೇರ್ಪಡು ; ಬೇರೆಯಾಗು: ಆ ಗಿರಿಯೆಂಬ ದೇವನ ಪಚ್ಚೆಯಂತೆರಡಾಗಿ ತಾ ನದಿಯಿಂದ ಭಾಗವಡೆದು ಪೂರ್ವವಿದೇಹಮಿಹುದಾ ಶ್ರೀಗೆ ನಿವಾಸಮೆಂದೆನಿಸಿ (ಶ್ರೀಪಾಲ. ೦-೩೯). [ಭಾಗ + ಪಡೆ$_1$]

**ಭಾಗವತ** (ಗು). ೧. ಭಗವಂತನಿಗೆ ಸಂಬಂಧಪಟ್ಟ ; ದೇವರಿಗೆ ಸಂಬಂಧಿಸಿದ. ೨. ವಿಷ್ಣುವಿಗೆ ಸಂಬಂಧಿಸಿದ. (ನಾ). ೩. ದೇವಭಕ್ತ ; ಹರಿದಾಸ ; ಕೃಷ್ಣಭಕ್ತ : ಕೌರವಭವನವನು ಹೊಱಮಟು ವರಭಾಗವತಮಸ್ತಕರತ್ನ ವಿದುರನ ಮನೆಗೆ ನಡೆತಂದ (ಕುಮ್ಯಾ.ಉ. ೬-೯) ; ಪೋಗದಿರೆಲೊ ರಂಗ ಬಾಗಿಲಿಂದಾಚೆಗೆ ಭಾಗವತರು ಕಂಡರೆತ್ತಿಕೊಂಡೊಯ್ವರೊ (ಪುರಂದ. ೨-೦೦೦ ಅನುಬಂಧ) ; ಯದೃಚ್ಛಾಮರಣ ಭಾಗವತ ಮಸ್ತಕಮಣಿ ಬೃಂದಾರಕೋಪಮಂ ಸತ್ಯಸಂಧಂ ಭೀಷ್ಮಂ (ಕೈಬಿಡಾ. ೯-೩೦). ೪. ಪುರಾಣದ ಕತೆಗಳನ್ನು ಯಕ್ಷಗಾನ, ಬಯಲಾಟ ಮೊದಲಾದ ನಾಟಕರೂಪಗಳಿಗೆ ಅಳವಡಿಸಿ ಆಡಿಸುವವನು ಮತ್ತು ಹಿಮ್ಮೇಳವನ್ನು ಹಾಡುವವನು : ಹಳೇಕಾಲದಿಂದ ಹಳ್ಳಿಗಳಲ್ಲಿ ಆಟ ಕಲಿಸುವ ಯಜಮಾನನಿಗೆ ಭಾಗವತನೆಂದು ಹೆಸರು (ಜುಟ್ಟುಹ. ೬೨) ; ರಂಗಸ್ಥಳಕ್ಕೆ ಬರುವವರೆಲ್ಲರೂ ಭಾಗವತರನ್ನೂ ರಂಗಸ್ಥಳವನ್ನೂ ವಂದಿಸಿ ಕಾಲನ್ನಿರಿಸಬೇಕು (ಯಕ್ಷಬ. ೩೪); ಯಕ್ಷಗಾನದಲ್ಲಿ . . . ಭಾಗವತನು (ಹಾಡುಗಾರನು) ಅದನ್ನು . . . ಎಲ್ಲ ತಾಳಗಳಲ್ಲಿಯೂ ಸಂದರ್ಭವರಿತು ಹಾಡುತ್ತಾನೆ (ಸಂಶೋಧ. ೦೫೬). ೫. ಕೆಲವರು ಕೀರ್ತನಕಾರರು, ಸಂಗೀತಗಾರರು ತಮ್ಮ ಹೆಸರಿನ ಮುಂದೆ ಸೇರಿಸಿಕೊಳ್ಳುವ ಪದ : ಅನಂತರಾಮಭಾಗವತರಿಗೆ ಮಧುರವಾದ ಮನಮುಟ್ಟುವಂತಹ ಶಾರೀರಸಂಪತ್ತು ದೈವದತ್ತವಾಗಿ ಬಂದಿತ್ತು (ಸಂಗೀತ. ೬೦) ; ಇವನು ಸಂಗೀತ ಕಲಿತಿದ್ದು ಯಾವ ಭಾಗವತರಲ್ಲಿ ? (ಜಾಡಗೀ. ೦೬೨). ೬. ಪ್ರಸಿದ್ಧವಾದ ಹದಿನೆಂಟು ಪುರಾಣಗಳಲ್ಲಿ ಒಂದು : ಭಾಗವತ ಪುರಾಣ . . . ಬ್ರಹ್ಮಾಂಡ ಪುರಾಣವೆಂಬಿವೇ . . . ಹದಿನೆಂಟು ಮೂಲ ಪುರಾಣಂಗಳು (ಶಿವೀಳ. ೬); ವಿಷ್ಣು, ಭಾಗವತ, ನಾರದ, ಗಾರುಡ ಈ ನಾಲ್ಕು ಪುರಾಣಗಳು ವೈಷ್ಣವಗಳು (ಶಾರದ. ೦೩೬).

**ಭಾಗವತರ ಆಟ** = ಯಕ್ಷಗಾನ, ಬಯಲಾಟ ಮೊದಲಾದ ನಾಟಕರೂಪ : ಕರ್ಣಾಟಕದ ಬಯಲಾಟ ಇಲ್ಲವೆ ಭಾಗವತರ ಆಟಗಳೂ ತಿದ್ದಿದ ನರ್ತನಕಲೆಗಳೇ (ದಾಂಶ್ರ. II, ೯೨೦). [ಸಂ.]

**ಭಾಗವತಧರ್ಮ** (ನಾ). ಭಗವಂತನಾದ ವಿಷ್ಣುವೇ ಪರದೈವ ಮತ್ತು ಅವನಲ್ಲಿಡುವ ನಿರತಿಶಯವಾದ ಭಕ್ತಿಯೇ ಮೋಕ್ಷಕ್ಕೆ ಕಾರಣವೆಂದು ಬೋಧಿಸುವ ಮತ ; ವೈಷ್ಣವಮತ : ಇದೇ ಭಗವದ್ಗೀತೆ ಮೊದಲಾದ ಶಾಸ್ತ್ರಗಳಲ್ಲಿರುವ ಭಾಗವತಧರ್ಮ, ವಿಶಿಷ್ಟಾದ್ವೈತಸಿದ್ಧಾಂತ (ಹಿಂದಸಾ. ೨೩೯) ; ಈ ನಾರಾಯಣನ ಆರಾಧಕರ ಒಂದು ಪಂಥವೇ ಬೆಳೆದು

ಮುಂದೆ ಅದು ಭಾಗವತಧರ್ಮದಲ್ಲಿ ಒಂದಾಗಿ ಬೆರೆತಿರುವುದು ಗೋಚರವಾಗುತ್ತದೆ (ಕಾಠಕ. ೨೯೩). [ಸಂ.]

**ಭಾಗವತ ಸಂಪ್ರದಾಯ** (ನಾ). ವಿಷ್ಣುವೇ ಸರ್ವೋತ್ತಮನೆಂದು ಪ್ರತಿಪಾದಿಸಲು ಹೊರಟ ವೈಖಾನಸ, ಪಾಂಚರಾತ್ರ, ಭಾಗವತಸಂಪ್ರದಾಯವೆಂಬ ಮೂರು ಆಗಮಶಾಖೆಗಳಲ್ಲಿ ಮೂರನೆಯದು; ೪ 'ಶಕ್ತಿಭಾಗವತ', 'ಶಿವಭಾಗವತ' ಮುಂತಾದ ಸಂಪ್ರದಾಯಗಳೂ ಇವೆ: ಶ್ರೀಶುಕಭಾಷ್ಯಾನುಸಾರಿಯಾದ ದರ್ಶನದ ಅನುಯಾಯಿಗಳಾಗಿ ಶ್ರೀಗೋಪಿಚಂದನದಿಂದ ಊರ್ಧ್ವಪುಂಡ್ರಾದಿಗಳನ್ನೂ ಧರಿಸಿ ಉಪಾಸಿಸುವ ವೈದಿಕಸಂಪ್ರದಾಯವು "ಭಾಗವತಸಂಪ್ರದಾಯ"ವೆಂದೂ . . . ಆಚರಣೆಯಲ್ಲಿದೆ (ಕಾಠಕ. ೬೬); ಅವರ ಮನೆತನದವರೆಲ್ಲ ಭಾಗವತಸಂಪ್ರದಾಯಕ್ಕೆ ಓಲುತ್ತಿದ್ದುದರಿಂದ ಎಲ್ಲರಿಗೂ ಸಂಗೀತದಲ್ಲಿ ಸಾಮಾನ್ಯವಾದ ಜ್ಞಾನವಿದ್ದೇ ಇತ್ತು (ಸಂಗೀತ. ೯೬). [ಸಂ.]

**ಭಾಗವತಿಕೆ** (ನಾ). ಯಕ್ಷಗಾನ, ಬಯಲಾಟ ಮುಂತಾದುವುಗಳನ್ನು ಕಲಿಸುವಿಕೆ: ಸಂಖ್ಯಭಾಗವತರೆಂಬುವರು . . . ಭಾಗವತಿಕೆಗೂ ಅಸಮರ್ಥರಾಗಿ ಆ ಉದರಶೂಲೆಯಿಂದಲೇ ಪರಲೋಕವಾಸಿಗಳಾದರು (ಕಾತೀಸು. ೬). [ಭಾಗವತ+—ಇಕೆ]

**ಭಾಗವಹಿಸು** (ಕ್ರಿ) ಸೇರು; ಭಾಗಿಯಾಗು; ಪಾಲುಗೊಳ್ಳು: ಇಂದಿನ ಕವಿಗೋಷ್ಠಿಯಲ್ಲಿ ನಾಡಿನ ಹೆಸರಾಂತ ಕವಿಗಳು ಭಾಗವಹಿಸಿದ್ದರು (ರೂಢಿ). [ಭಾಗ+ವಹಿಸು]

**ಭಾಗಶಃ** (ಅ). ಕೆಲವು ಭಾಗ ಮಾತ್ರ; ಭಾಗಭಾಗವಾಗಿ; ಅಸಂಪೂರ್ಣವಾಗಿ: ಸಾಮಾನ್ಯವಾಗಿ ಮಾನವಕೋಟಿಯ ಜೀವನವೂ ಜೀವನವ್ಯವಹಾರಗಳೂ ಭಾಗಶಃ ಸ್ವಂತ ಅಭಿಪ್ರಾಯಗಳಿಂದಲೂ ಭಾಗಶಃ ಪರರ ಅಭಿಪ್ರಾಯಗಳಿಂದಲೂ ರೂಪುಗೊಳ್ಳುತ್ತವೆ (ಕೃಷರು. ೪೪೪). [ಸಂ.]

**ಭಾಗಸ** (ನಾ). ಹಣ; ಧನ; ದ್ರವ್ಯ: ನಿನಗಾನಾಟಿಸಿದೆನೆನಗೆ ನೆಚಿಯೆ ತುಡುಗೆಯಂ ಮಾಡಿಸಲ್ ಭಾಗಸ[ಪಾಠಾಂ. ಭಾಗವಸ]ಮುಳ್ಳೊಡೆ ನಿನಗಾಂ ಪೆಂಡತಿಯೆಂ (ಪದ್ಮರಾ. ೦೬-೦೯); ಕೋವಣಕ್ಕಪ್ಪೊಡಂ ಭಾಗಸಮಿಲ್ಲದೊಂ (ಪದ್ಮರಾ. ೯೬-೮). [<ಸಂ. ಭಾಗಸ್ವ ?]

**ಭಾಗಸ್ತ** (ನಾ). = ಭಾಗಸ್ಥ ೧: ಆ ನಿಮ್ಮ ಭಾಗಸ್ತರೇನಾದರು? (ಶಿದುಶ್ಚ. ೦೩೦). [<ಸಂ. ಭಾಗಸ್ಥ]

**ಭಾಗಸ್ಥ** (ನಾ). ೧. (ಔದ್ಯೋಗಿಕ ಉದ್ಯಮ ಮೊದಲಾದುವುಗಳಲ್ಲಿ ಬಂಡವಾಳವನ್ನು ಹಾಕಿ) ಲಾಭನಷ್ಟಗಳಲ್ಲಿ ಸಮಾನಾಧಿಕಾರವುಳ್ಳವನು; ಪಾಲುಗಾರ: ಆ ಇಬ್ಬರು ಶೆಟ್ಟರೂ ವ್ಯವಹಾರದಲ್ಲಿ ಭಾಗಸ್ಥರು (ರೂಢಿ). ೨. ಪಿತ್ರಾರ್ಜಿತವಾದ ಆಸ್ತಿಯಲ್ಲಿ ಮಗ, ಸಹೋದರ ಮೊದಲಾಗಿ ಪಾಲಿಗೆ ಅರ್ಹನಾದವನು; ದಾಯಾದ: "ದಾಯಾದಃ— ೩ ಮಗನು, ಬಂಧು, ಭಾಗಸ್ಥ" (ಶಿದ್ಯಾಂಶಿ. ೩೯೬). [ಸಂ.]

**ಭಾಗಹಾರ** (ನಾ). [ಗಣಿತ] ಒಂದು ಸಂಖ್ಯೆಯನ್ನು ಮತ್ತೊಂದು ಸಂಖ್ಯೆಯಿಂದ ಭಾಗ ಮಾಡುವುದು,—ಭಾಗಿಸುವುದಂ: ಈ ಮಾರ್ಗದಿಂ . . . ಭಾಗಹಾರಂ ಹೇಳಲ್ಪಟ್ಟುದು (ವ್ಯವಹಾ. ೦೨-೨೪); ಭಾರತೀಯವಿಧಾನಗಳು ಸಾಮಾನ್ಯವಾದ ಗುಣಕಾರ ಭಾಗಹಾರಗಳ ಆಧಾರದ ಮೇಲೆ ಇದ್ದು, ಹೈಸ್ಕೂಲು ವಿದ್ಯಾರ್ಥಿಗಳಿಂದ ಅರ್ಥಮಾಡಿಕೊಳ್ಳಲು ಸಾಧ್ಯ (ಗಣಿತ. ೨೯೩). [ಸಂ.]

**ಭಾಗಾಕಾರ** 'ಭಾಗಾಹಾರ' ನೋ.

**ಭಾಗಾದಿ** (ನಾ). ೧. ಪಾಲುಗಾರ; ಭಾಗಸ್ಥ: ಅವನ ಗೊಡವೆಯೇಕೆ ಅವನಾರು ನೀನಾರು ಅವನ ಪಾಪಕ್ಕೆ ನೀ ಭಾಗಾದಿಯೆ (ಶಿದಾಶ್ಯ. ೩೬-೦). ೨. ದಾಯಾದಿ: ಭಾಗಾದಿ ಬಲಕಿರಲಿ ವೈರಿ ತಾ ಎಡಕಿರಲಿ . . . ಬಲಭೀಮದೇವ ನನ ಮ್ಯಾಲ ದಯವಿರಲಿ (ಗಳಿ. ೦೦೩); ಮೂಲಸಂಬಂಧದ ಭಾಗಾದಿ ಹದ್ದಿಗೆ ಹಳೆಹಾದಿ (ಜಾದಲೀ. ೨೯-೦೬). ೩. (ಆಲಂ) ಶತ್ರು; ದ್ವೇಷಿ: ಯಾರೋ ಸುಳ್ಳು ಹೇಳಿದ್ದಾರೆ ನಮ್ಮ ಭಾಗಾದಿಗಳು (ಜಾಪ್ಲೋಲೀ. ೨೦೬); ಹುಟ್ಟುತ್ತಾ ಬಂಧು ಬೆಳೆಯುತ್ತ ಭಾಗಾದಿ (ಮಾಠವ. II, ೩೨). [ಸಂ. ಭಾಗಾದಿನ್]

**ಭಾಗಾರ** 'ಭಾಗಾಹಾರ' ನೋ.

**ಭಾಗಾರ್ಹ** (ನಾ). ೧. ಭಾಗವನ್ನು ಪಡೆಯಲು ಅರ್ಹನಾದವನು; ವಾರಸುದಾರ; ಉತ್ತರಾಧಿಕಾರಿ. ೨. ಹಂಚಬೇಕಾದುದು; ಭಾಗಮಾಡಬೇಕಾದುದು. [ಸಂ.]

**ಭಾಗಾವಳಿ** (ನಾ). ಪಾಲು; ಭಾಗ: ಮಂಚಗಾವುಂಡನ ಕುಲಸ್ತ್ರೀ ಸಾನ್ತಿಅಬ್ಬೆಗೌಡಿ ಸ್ವರ್ಗಸ್ಥೆಯಾದಾಗಳುಂ ನೆಲ್ಲೂರ ಭೂಮಿ ಆಕಲಗೌನಸೋಮೆಯನ ಭಾಗಾವಳಿ ಕೊಟ್ಟಲ್ಲಿ ಕಳಗುಂದಣೆ ಭೀಮೊಯ ಹರಿಅಸೆ (ಎಕ. VIII, ಸೊರಬ. ೪೬೨_೦೦; 1188). [<ಭಾಗ + — ವಳಿ$_3$]

**ಭಾಗಾಹಾರ, ಬಾಗಾರ, ಭಾಗಾಕಾರ, ಭಾಗಾರ** (ನಾ). [ಗಣಿತ] ಒಂದು ಸಂಖ್ಯೆಯನ್ನು ಮತ್ತೊಂದು ಸಂಖ್ಯೆಯಿಂದ ಭಾಗಿಸುವುದು; ಭಾಗಹಾರ: ಶಾಲೆಯಲ್ಲಿ ಇಂದು ಉಪಾಧ್ಯಾಯರು ಭಾಗಾಹಾರದ ಲೆಕ್ಕಗಳನ್ನು ಕೊಟ್ಟಿದ್ದರು (ರೂಢಿ). **ಬಾಗಾರ**: ಗಣಿತ ಬಾಗಾರಗಳ ಲೆಕ್ಕವ ಗುಣಿಸಿ ಭಾಗಿಸಿ ಹೇಳದರೆ ಲೆಕ್ಕಣಿಕೆಯನು ಪಿಡಿದಜನ ತಂದೆಯ ರೂಪವನು ಬರೆದು ಮಣಿವನು (ಕೃಹ್ಯಾತ. ೬-೨). **ಭಾಗಾಕಾರ**: ಪ್ರತಿವಿನ್ಯಾಸವನ್ನೂ ಬರೆಯುತ್ತ ಹೋಗಿ ಉತ್ತರ ಪಡೆಯುವ ಭಾಗಾಕಾರ; ದೀರ್ಘಭಾಗಾಕಾರ (Long-division. ಇಂಕಕಿ); ಭಾಗಾಕಾರ ತಿಳಿಯದಿದ್ದರೂ ಹಾಗದ ಲಕ್ಷಣ ತಿಳಿಯದೆ? (ಗಾದೆ). **ಭಾಗಾರ**: ಆಳು ಭಾಗಾರ ವಿಷಮಭಾಗಾರ . . . ಇವು ಮೊದಲಾದ ಲೆಕ್ಕಾಚಾರಗಳು (ಚಾಕ್ಕರ. ೦-೩). [< ಸಂ. ಭಾಗಹಾರ]

**ಭಾಗಿ** (ನಾ). ೧. ಭಾಗಕ್ಕೆ ಪಾತ್ರನಾದವನು; ಪಾಲುದಾರ; ಹಿಸ್ಸೆದಾರ. ೨. ಯಾವುದಾದರೂ ಫಲವನ್ನು ಪಡೆಯುವವನು: ಅಕ್ಷಯಕೀರ್ತಿ ತುಸ್ತಕದ ವಾರ್ಧಿಯ ಮೇಲದು ನೋನ್ತು ಭಕ್ತಿಯಿಂ ಅಕ್ಷಮಣಕ್ಕೆ ರಮ್ಯಸುರಲೋಕಸುಕಕ್ಕೆ ಭಾಗಿ (ಎಕ. II, ೨೦-೪; ಸು. 700). ೩. ಪುಣ್ಯವಂತ; ಅದೃಷ್ಟಶಾಲಿ; ಭಾಗ್ಯಶಾಲಿ. ೪. ಸಮಾನವಾದ ಉತ್ತರಾಧಿಕಾರವುಳ್ಳವನು; ಸಮಭಾಗಿ; ದಾಯಾದ. ೫. ಸ್ವಾಮ್ಯವನ್ನು ಪಡೆದವನು; ಮಾಲೀಕ; ಒಡೆಯ. ೬. ಯಾವುದಾದರೂ ಕಾರ್ಯಭಾರ, ಸಮಾರಂಭ, ಸಾರ್ವಜನಿಕಕಾರ್ಯಗಳಲ್ಲಿ ಸೇರಿರುವವನು,—ಮಿಳಿತನಾಗುವವನು: ಆ ಉತ್ಸವದಲ್ಲಿ ನಾನೂ ಭಾಗಿಯಾಗಿದ್ದೆನು (ರೂಢಿ). [ಸಂ. ಭಾಗಿನ್]

**ಭಾಗಿತ್ವ** (ನಾ). ಭಾಗಿಯಾಗುವಿಕೆ; ಭಾಗವಹಿಸುವುದು; ಪಾಲುಗೊಳ್ಳುವುದು: ಒಂದು ಅಕಾರ್ಯದಲ್ಲಿ ಭಾಗವಹಿಸುವುದು; ಭಾಗಿಯಾಗುವುದು, ಭಾಗಿತ್ವ (Complicity. ಇಂಕಕಿ). [ಸಂ.]

**ಭಾಗಿನೇಯ** (ನಾ). ೧. ಅಕ್ಕ ಅಥವಾ ತಂಗಿಯ ಮಗ; ಸಹೋದರಿಯ ಪುತ್ರ; ಸೋದರಳಿಯ: "ಸ್ವಸ್ರೀಯಃ, ಜಾಮೇಯಃ, ಭಾಗಿನೇಯಃ— ಈ ೩ ಒಡಹುಟ್ಟಿದವಳ ಮಗಂ" (ಹಲಾಯು. ೯೪-೩೩೩); ನಿನ್ನ ನಲ್ಲನೆಗಡಂ ಮದ್ಭಾಗಿನೇಯಂ (ಆದಿಪು. ೩-೯೪); ತ್ವದೀಯ ಭಾಗಿನೇಯಂ ಮುನ್ನಮುಳ್ಳ ಭಾಗಾಂಶಮೆಲ್ಲಮಂ ತ್ಯಾಗಭೋಗೋಪಭೋಗಾದಿ ವ್ಯಸನಕ್ಕ ಸದ್ವ್ಯಯಂ ಮಾಡಿ ಕಿಡಿಸಿಯುಂ (ಸುಕುಮಾ.೨-೩೨ ವ). ೨. ದಾಯಾದಿ (?): ಶತಕ್ರತು ಮುಕುಳಿತಾಂಜಲಿಪುಟನಾಗಿ ಜಿನ್ನಪಂ ಜಗನ್ನಾಥ ಪಾಂಡವಮಧ್ಯಮನರ್ಜುನನೆಂಬನೆನಗತಿಪ್ರಿಯತನಯಂ ದುರ್ಯೋಧನಂಗೆ ಭಾಗಿನೇಯಂ ನಿನಗೆ ಮೈದುನನುಮಪ್ಪಂ . . . ಎನೆ (ಜಗದಿ. ೪-೦೦೮ ವ). [ಸಂ.]

**ಭಾಗಿಸು** (ಕ್ರಿ). ೧. ಪಾಲುಮಾಡು ; ಭಾಗಮಾಡು ; ವಿಭಾಗಿಸು : ಭಾವಿಸಿದಂ, ಭಂಗಿಸಿದಂ, ಭಾಗಿಸಿದಂ (ಶಮಲ. ೬೪ ಕ್ರಿಯೋ). ೨. [ಗಣಿತ] ಭಾಗಾಹಾರ ಮಾಡು: ಭಾಗಂ ಎಂಬುದಕ್ಕೆ ಪೆಸರು—ತವಿಸು, ಭಾಗಿಸು, ಉಗಿ (ವ್ಯವಹಾ. ೦೨-೦೨) ; ಧನದ ಗುಣಕಾರ ಭಾಗಹಾರಂಗಳನಪವರ್ತಿಸಿ ಭಾಗಿಸಿ (ಗೊಮ್ಮಟಸಾ. ೯೬-೦೦) ; ೧೨೦ನ್ನು ಎರಡರಿಂದ ಭಾಗಿಸಬೇಕು (ಶಾಲಮ. ೦೦೫).

**ಭಾಗಿಸಿಕೊಳ್ಳು** = ಹಂಚಿಕೊಳ್ಳು ; ಪಾಲು ಮಾಡಿಕೊಳ್ಳು : ಇಬ್ಬರೂ ಒಂದೇ ಹೊಟ್ಟೆಯ ರಕ್ತಮಾಂಸಗಳನ್ನು ಭಾಗಿಸಿಕೊಂಡು ಬೆಳೆದವರಾಗಿರುವಾಗ ಪ್ರೇಮಾತಿಶಯವು ಅವರಿಬ್ಬರಲ್ಲಿ ತೋರದೆ ಮತ್ತಲ್ಲಿ ತೋರೀತು ! (ಹೀಗಟ್ಟು. ೯೦). [ಭಾಗ + —ಇಸು$_3$]

**ಭಾಗಿಸುಹ** (ನಾ). [ಗಣಿತ] ಭಾಗಿಸುವ್ವುದು ; ಭಾಗಾಹಾರ : ಎತ್ತುತೆಗೆಯೆನಲು ಭಾಗಿಸುಹವಾಕ್ಯಂ (ಪಂಗಣಾ. ೦೦೯-೦೦).

[ಭಾಗಿಸು + —ಹ$_2$ (< —ಪ$_2$)]

**ಭಾಗೀದಾರ, ಭಾಗೇದಾರ** (ನಾ). ಪಾಲುಗಾರ; ಭಾಗಸ್ಥ . ಈ ಕಂಪನಿಗಳು ಭಾಗೀದಾರರಿಗೆ ವರ್ಷಕ್ಕೆ ಶೇಕಡಾ ೬ ರೂಪಾಯಿಯಂತೆ ಲಾಭವನ್ನು ಸರಾಸರೀವಾಗಿನದಿಂದ ಕೊಡುತ್ತವೆ (ಕಥಾಗ. ೩೦೩) : ಭಾಗೀದಾರರು ಪ್ರಾರಂಭದ ಬಂಡವಲಕ್ಕೆ (Paid-up Capital) ಹಣವನ್ನು ಪೂರೈಸಿದವರು (ಬ್ಯಾಂಕಿಕ್ಕ. ೭). **ಭಾಗೇದಾರ** : "ಭಾಗೇದಾರ—ಪಾಲುಗಾರ" (ಶಾಪಕೋ. ೨೫). [← ಮರಾ. ಭಾಗೀದ್ದಾರ್]

**ಭಾಗೀರಥಿ** (ನಾ). ಭಗೀರಥನೆಂಬ ಮಹಾರಾಜನಿಂದ ಭೂಮಿಗೆ ಇಳಿದು ಬಂದುದೆಂದು ಹೇಳಲಾದ ನದಿ ; ಗಂಗಾನದಿ : "ಭಾಗೀರಥೀ, ಸುರಸರಿತ್, ವಿಷ್ಣುಪದೀ, ಜಾಹ್ನವೀ, ಗಂಗಾ—ಈ ೫ ಗಂಗೆ" (ಶಬ್ದಮ. ೦೦೦-೫೦) ; ಬಾರದ್ವ ಭಾಗೀರಥಿ ತೋಜವ್ವ ಜನರಿಗೆ ನಾ ಸ್ನಾನ ಮಾಡುವುದು ತೋಜವ್ವ ಜನರಿಗೆ (ಪುರಂದ. ೯-೨೨ ಪಲ್ಲವಿ); ಕೆರಳ್ದು ಭಾಗೀರಥಿ ಸಮಸ್ತನ್ನಬ್ಬುಂದದೊಳ್ತನ್ನ ಮಗನುದ್ದಾಮನಾಗಿರ್ಪನೆಂದುಮಾಳಿವ ನಲ್ಲಮ. . . ನೀನೆನಗೆ ಸುತರಿಲ್ಲೆನಲ್ಬಹುದೆ ಪೋಗೆಂದೊಡೆ (ಕೈವಲ್ಯ. ೯-೩೦); ಭಗೀರಥ ಯತ್ನಮಾಡಿ ಭಾಗೀರಥಿ ತಂದ. ನಗರದವ ಯತ್ನಮಾಡಿ ನಗಾ ಕಳಕೊಂಡ (ಗಾದೆ).

**ಭಾಗೀರಥೀನಂದನ**=ಗಂಗೆಯ ಮಗ; ಗಾಂಗೇಯಂ; ಭೀಷ್ಮ: ಸಾರಿದನು ಶರವಂಚವನು ಭಾಗೀರಥೀನಂದನನು (ಕುಮಾರವ್ಯಾ. ೦೬-೫೬).

[ಸಂ. ಭಾಗೀರಥೀ]

**ಭಾಗುರೆ** (ಅ). ಮೆಚ್ಚುಗೆಯನ್ನು ಸೂಚಿಸುವ ಒಂದು ನಿಪಾತಾವ್ಯಯ: ಜಯ ಮಝಯ ಭಾಪರರೆ ಭಾಗುರೆ ರಾಉತೊ ರಾಉತೊ. . . ಕಂಬಸಿಂಗ ಬೋಳೆಯನಾಯಕಂ (ಎಕ. VIII. ಸಾಗರ. ೩೨-೦೩ ; 1307). [ ? ]

**ಭಾಗೆ** (ನಾ). ೧. ಪಾಲು; ಭಾಗ; ಅಂಶ: ಹೋದ ಮೃಗಮಂ ಕಂಡೊಡೆ ನಗೆ ನೀನೊಳ್ಳಿದಂ ಅದಲ್ಲಿ ಭಾಗೆಯಂ ಪಂಚಿಸೆಂ ಕೊಳ್ಳದಂ (ಕಬ್ಬಿಗ. ರೀ. ೦೩೦-೯); ಅಕ್ಷರಂ ಧರೆಯೊಳೊಬ್ಬರ ಭಾಗೆಗೆ ಬಂದುದಲ್ತು (ಪಳಸಂ. ೭); ಇನಿತುಮಂ ಮೂಜುಭಾಗೆಯ ಮಾಡಿ ಕುಡುವುದು (ಸೌಂದರ. ೦೬-೬). ೨. ಹಂಚಿಕೆ ; ವಿಭಾಗಿಸುವಿಕೆ ; ವಿಂಗಡಣೆ : ಮೂವರಿಗಿಂತು ನಾಲ್ಕುಜವರಿಗಣಿತ ಪರಮಾನ್ನ ಸಂಘಟಿಸಿದುದು ಭಾಗೆಯುಲಿ (ಕೊರವಂ. ೦-೭-೫೮). ೩. ಐಶ್ವರ್ಯ; ಸಂಪತ್ತು: ಭಾಗೆ ಉಳ್ಳವರ ಮನೆಯಾಗ ಶುಭಕಾರ್ಯ ಆಗ ಹುಟ್ಟಿ ಆಗ ಬೆಳದಾವ (ಕನ್ನಡಾ.೬೬). ೪. ಎಡೆ; ಸ್ಥಳ: ಪಂಕಭಾಗೆಯೆಂಬತ್ತುನಾಲ್ಕುಸಾಸಿರಯೋಜನಂ ಬಾಹುಲ್ಯಮುಮಕ್ಕುಂ (ಚಾಸ್ತ್ರ. ೩೬. ೨೨-೦೦) ; ಗುರುರವಿಗಳುತ್ತುಂಗಭಾಗೆಯೊಳಿರಲು . . . ಪುತ್ರೋದಯಗಳಾದವು ಭೂಪ ದಶರಥಗೆ (ಶೌಕರಾ. ೦-೬೬).

**ಭಾಗೆ ಮಾಡಿಕೊಳ್**=ಹಂಚಿಕೊಳ್ಳು: ಅಮೃತಮಥನವಮಂ ಮಾಡುತ್ತೀತ್ರಿದಶಾಳಿಗಳ್ ನುಡಿದರಲ್ಲಿ ಪುಟ್ಟಿದ ವಸ್ತು ಮೊದಲಾದುದನು ಭಾಗೆ ಮಾಡಿಕೊಂಡರ್ ತಮ್ಮೊಳಗೆ ತಾವೆ ನಿಮಗೆನ್ನದೆ (೦೬೫೦. ೦೨-೦೨). [ಸಂ. ಭಾಗ]

**ಭಾಗೆಕಾಜ** (ನಾ). ಭಾಗವಹಿಸುವವನು; ಪಾಲುಗೊಳ್ಳುವವನು; ಭಾಗಿ: ಆಗದಿರದೀಯುಬ್ಬರವು ಕಿವಿಮೂಗು ಮಸುಳಿಸಿದವಳ ಬವರದ ಭಾಗೆಕಾಜರ ಬರವು ಭರತಾವತಜ ನೋಡೆನಲು (ತೊರವೆ. ೩-೫-೦೦). [ಭಾಗೆ+—ಕಾಜ]

**ಭಾಗೆಗೊಡು** (ಕ್ರಿ). ಭಾಗವನ್ನು ಕೊಡು ; ಪಾಲುಕೊಡು: ಪಿತನಳಿದೊಡ ನುಜಂಗೆ ಭಾಗೆಗೊಟ್ಟುಳಿದರ್ಧತತಿಯೊಳನುಜೆಯ ಜಂಗಮಾರ್ಚನೆಯ ಮಾಡೆಂದು ಸಿತಗಳನ ವಶಕಿತ್ತು ಪಡಗೇಜುತಗ್ರಜಂ ಶರಧಿಯೊಳು ಮಡಿಯ (ಬಸವ೦. ೬-೬). [ ಭಾಗೆ + ಕೊಡು$_1$ ]

**ಭಾಗೇದಾರ** 'ಭಾಗೀದಾರ' ನೋ.

**ಭಾಗ್ಯ** (ನಾ). ೧. ಶುಭಾಶುಭಕರ್ಮಗಳ ಫಲ ; ವಿಧಿ ; ಹಣೆಬರಹ : "ಭಾಗಧೇಯಂ, ಭಾಗ್ಯಂ, ವಿಪಾಕಂ, ಭವಿತವ್ಯತಾ—ಈ ೪ ಭಾಗ್ಯದ ಪೆಸರ್" (ಶಬ್ದಮ. ೨೦-೦೨೬); ಎಮಗೆ ತಂದೆಯಿತ್ತವನಿತಳಂ ಪೊರೆಯುಂಟೆ ತನಗೆ ಭಾಗ್ಯಾನುಸಾರದಿಂ ಬಾಟ್ಟಿವೆಜಿಗವೆಂಬತಿ ಮದದಿಂ ನಿನ್ನನುಜರನಿಬರುಂ ಮಾನೋನ್ನತರಣಮೆಜಿಗರ್ (ಅಜಿತ. ೦೯-೦೬) ; ಬಗೆದೆಗೆಯದೆ ತನ್ನ ಭಾಗ್ಯದ ಫಲವೆಂದು ಬಗೆದು ಭಕ್ತಿಯೊಳೆಸಗುವುದು (ಪಂಪ. ೩-೯); ಪಳಿಯುತೆ ನಿಜಭಾಗ್ಯವನಾಯೆಳೆಯಳ್ ತೋಳಿತ್ತಿ ಗೋಳಿಡಲ್ಕುಜ್ಜುಗಿಸಲ್ (ಶಾಕುಂತ. ೬೯-೦೫೦). ೨. ಅದೃಷ್ಟ; ಸುದೈವ : ನಾರಿಯರಿರವ ಪುರುಷನ ಭಾಗ್ಯದೇವತೆಯೊಲಿವ ಕಾಲವನು . . . ವಿಚಿಸುವೊಡೆ ವಿಧಾತೃಗಳವಲ್ಲ (ಕುಮಾರ. ೩-೬೬); ಇದು ಭಾಗ್ಯವಿದು ಭಾಗ್ಯವಿದು ಭಾಗ್ಯವಯ್ಯ ಪದುಮನಾಭನ ಪಾದಭಜನೆ ಸುಖವಯ್ಯ (ಪುರಂದ. ೦-೦೩೨ ಪಲ್ಲವಿ); ನಮ್ಮ ಭಾಗ್ಯವಶದಿಂದ ನೀನು ಬಂದು ಮಾನ ಉಳಿಸಿದೆ (ಪಕಥಾ. ೨೪). 'ಭಾಗ್ಯವಂತ' ಪರಾ. ೩. ಸುಖ; ಶ್ರೇಯಸ್ಸು. ೪. ಸಿರಿ ; ಐಶ್ವರ್ಯ ; ಸಂಪತ್ತು : ರತಿಯಿಂ ಸೌಂದರ್ಯಸೌಭಾಗ್ಯಮನೊಸಗೆ[ಯ] ಪೌಲೋಮಿಯಿಂ ಭಾಗ್ಯಮಂ ಭಾರತಿಯಿಂ ನಾನಾಕಳಾಕೌಶಲಮನತಿಶಯಂಬೆತ್ತಿರಲ್ . . . ಮಹಾದೇವಿ ಕಣ್ಗೆಡ್ಡಮಾದಳ್ ( ಪುಷ್ಪದಂ. ೩-೨೫ ); ಭಾಗ್ಯದ ಲಕ್ಷ್ಮೀ ಬಾರಮ್ಮ ನಮ್ಮಮ್ಮ ನೀ ಸೌಭಾಗ್ಯದ ಲಕ್ಷ್ಮೀ ಬಾರಮ್ಮ (ಪುರಂದ. ೦-೨೦೦ ಪಲ್ಲವಿ); ಯೋಗ್ಯತೆಯುನೆಣಿಸುವೊಡೆ ನಿಜವೈರಾಗ್ಯದಿಂದಾಧಿಕ್ಯವೆನಿಸುವ ಭಾಗ್ಯಮಿರದೆ ಕಂದ ( ಗಣಕಾ. ೦೬-೨೬ ); ಭಾಗ್ಯ ಬರುವಂತಾದ್ದು ಭಾಗವನ್ನು ತಡೆದಾಳೇ ? (ಗಾದೆ). [ಸಂ.]

**ಭಾಗ್ಯದೈವ** (ನಾ). ಅದೃಷ್ಟವನ್ನು ಕೊಡುವ ದೈವ; ಭಾಗ್ಯದೇವತೆ : ಕಾಯ ಪಳಿಯ ಭಾಗ್ಯದೈವ ಗೆಲುವ ಸಿರಿಯ ಪಡೆಯನು (ಶಾರಸಿ. ೯-೧೬೦).

[ ಸಂ. ]

**ಭಾಗ್ಯಲಕ್ಷ್ಮಿ** (ನಾ). ೧. ಭಾಗ್ಯವನ್ನು ಕೊಡುವ ದೇವತೆ ; ಧನಲಕ್ಷ್ಮಿ. ೨. ಐಶ್ವರ್ಯ ; ಸಿರಿ; ಸಂಪತ್ತು : ಸೇರಲ್ ಬರೆ ಭಾಗ್ಯಲಕ್ಷ್ಮಿ ಬಿಡುವನೆ ಬಡವಂ (ಶಾಕುಂತ. ೩೬-೬೫). [ ಸಂ. ಭಾಗ್ಯಲಕ್ಷ್ಮೀ ]

**ಭಾಗ್ಯವಂತ** (ನಾ). ೧. ಪುಣ್ಯವಂತ; ಅದೃಷ್ಟಶಾಲಿ : ಯೋಗ್ಯರಾಗಿ ಭೋಗ್ಯರಾಗಿ ಭಾಗ್ಯವಂತರಾಗಿ ನೀವು (ಪುರಂದ. ೦-೭೮ ಅನುಪಲ್ಲವಿ); ಅವರು ತುಂಬ ಭಾಗ್ಯವಂತರು, ಒಳ್ಳೆಯ ಕೆಲಸ ಸಿಕ್ಕಿದೆ (ರೂಢಿ). ೨. ಸಿರಿವಂತ ; ಐಶ್ವರ್ಯವಂತ : ಇವಳು ಭಾಗ್ಯವಂತರ ಮಗಳೆ? (ಬಾಂಕಳಾ. ೭).

[ ಸಂ. ಭಾಗ್ಯವತ್ ]

**ಭಾಗ್ಯವಂತೆ** (ನಾ). ೧. ಪುಣ್ಯವಂತೆ; ಅದೃಷ್ಟಶಾಲಿನಿ : ಅನ್ನನಿಸಿದಾಚಭೂಪನ ಕಾನ್ತೆ ದಯಾವಂತೆ ಭಾಗ್ಯವಂತೆ ನಿಶಾಂತಂ ಶಾನ್ತೆ . . . ಮಹಾದೇವಿಯೆಂಬ ಪೆಸರಿಂದೆಸೆವಳ್ (ಎಕ. XX. ೦೨-೦೫; 1167); ಆ ಗುಣಶಾಲಿಯ ಕೈಹಿಡಿಯುವ ಹುಡುಗಿ ತುಂಬ ಭಾಗ್ಯವಂತೆ (ರೂಢಿ). ೨.

ಸಿರಿವಂತೆ; ಧನವಂತೆ : ಆ ಬಡಹುಡುಗಿ ಸಿರಿವಂತರ ಮನೆಗೆ ಸೇರಿ ಭಾಗ್ಯವಂತೆಯಾದಳು (ಲೂಶಿ). [ ಭಾಗ್ಯವಂತ + — ಎ₂ ]

**ಭಾಗ್ಯಶಾಲಿ** (ನಾ). = ಭಾಗ್ಯವಂತ ೧ : ಎಲೆಲೆ ಬಹುತರ ಭಾಗ್ಯಶಾಲಿಯ ಬೆಳಗಳವೆಲಾ ಶಿವಯೆನುತ ವದನಳಿನಯುಗಳದಲೊಡಲನೀಡಾಡಿದನು ಹರುಷದಲಿ (ಕುಮಾ. ಉ. ೬-೧೦). [ಸಂ. ಭಾಗ್ಯಶಾಲಿನ್]

**ಭಾಗ್ಯಹೀನ** (ನಾ). ಅದೃಷ್ಟವಿಲ್ಲದವನು; ದುರದೃಷ್ಟಶಾಲಿ; ನಿರ್ಭಾಗ್ಯ: ಅವನು ಯಾರ ಪ್ರೀತಿ ವಿಶ್ವಾಸಗಳೂ ಇಲ್ಲದ ಒಬ್ಬ ಭಾಗ್ಯಹೀನ (ಲೂಶಿ). [ ಸಂ. ]

**ಭಾಗ್ಯಾಧೀನ** (ನಾ). ಹಿಂದಿನ ಜನ್ಮದ ಪುಣ್ಯಕ್ಕೆ ಅನುಸಾರವಾಗಿ ನಡೆಯುವುದು ; ದೈವೇಚ್ಛೆ; ದೈವಾಯತ್ತ : ಪಂಡಿರೊಳ್ ಸರಿಗಂಡೀಕೆಯ ನೀಂ ಬರ್ದುಂಕಿಪುದು ಭಾಗ್ಯಾಧೀನಂ (ಶಾಕುಂತ. ೩೬-೯೩). [ಸಂ.]

**ಭಾಗ್ಯೋದಯ** (ನಾ). ಅದೃಷ್ಟ; ಸುದೈವ : ಭಾಗ್ಯೋದಯವಿಹೀನನು ತಾನೆನುತ ಕುರುರಾಯ ಬಿಸುಸುಯ್ದ (ಕುಮಾ. ಶ. ೦-೨೪). [ಸಂ.]

**ಭಾಜಕ** (ಗು). ೧. ಭಾಗ ಮಾಡುವ; ವಿಭಾಗಿಸುವ : 'ಸಮಭಾಜಕ ವೃತ್ತ' ಪರಾ. (ನಾ). ೨. ಭಾಗಮಾಡುವವನು. ೩. [ಗಣಿತ] ಒಂದು ಸಂಖ್ಯೆಯನ್ನು ಯಾವುದರಿಂದ ಭಾಗಿಸಬೇಕೋ ಆ ಸಂಖ್ಯೆ : ಮೇಲಿನ ಉದಾಹರಣೆಯಲ್ಲಿ ೧೦೦ ಭಾಜ್ಯವೆಂದೂ ೬೩ ಭಾಜಕವೆಂದೂ ಕರೆಯಲ್ಪಡುತ್ತದೆ (ಗಣಿತ. ೨೯೭). [ ಸಂ. ]

**ಭಾಜನ** (ನಾ). ೧. ಭಾಗಿಸುವುದು ; ವಿಭಾಗ ಮಾಡುವುದು. ೨. ತಟ್ಟೆ, ಬಟ್ಟಲು ಮುಂತಾದ ಯಾವುದೇ ಪಾತ್ರೆ ; ಭಾಂಡ : " ಅಮತ್ರಂ, ಭಾಜನಂ, ಪಾತ್ರಂ, ಸ್ಥಾಲಂ — ಈ ೪ ತಳಿಗೆ " (ಕಣಾಯು. ೩೪-೦೭೨) ; ಇದಿರೊಳ್ ಸೂಸುವ ಹೇಮಭಾಜನಚಯುಕ್ಕತ್ಯಂತ ವಸ್ತುಕ್ಕೆ ಮೆಚ್ಚಿದನರ್ಘ್ಯಾಭರಣಕ್ಕೆ ಲೆಕ್ಕಮಣವಿಲ್ಲ (ಅಂಶು. ೪-೩೩) ; ಮೂಜಗದೆಡೆಯಿನ ಕಾಲ್ದೊಳೆದಳು ಹೊನ್ನ ಭಾಜನ ಗಂಧವಾರಿಯಲಿ (ಪ್ರೇಟಕ. ೪-೨೮) ; ಪರಿಮಳಪ್ರಕರಪರಿಮಿಳಿತಭಾಜನಂಗಳನೋಜೆಯಿಂ ಪಿಡಿದು . . . ಬರ್ಪ ಮಡದಿಯರಿಂದತಿಸಂಭ್ರಮಂ ನೆಗಳೆ (ರಾಜಶೇ. ೬-೩೩ ಪ). ೩. ಪಾತ್ರನಾದವನು ; ಅರ್ಹ : ಮನುಜಂ ವಜ್ರಸಮುದ್ಭವಂ ಶಿಶುತೆಯೊಳ್ ವೃದ್ಧತ್ವದೊಳ್ ಸೌಖ್ಯಭಾಜನನಕ್ಕುಂ . . . ಸ್ವಲ್ಪಸೌಖ್ಯಕ್ಕೆ ಭಾಜನನಕ್ಕುಂ ಬಹುಯೋಗದೊಳ್ ನೆಗಟ್ಟ ವಾಪೀಯೋಗದೊಳ್ ಪುಟ್ಟಿದಂ (ಜಾತಕ. ೦೩-೦೭) ; ಪುಣ್ಯಾತ್ಮರಿರ್ವರತಿಗಂ ರಾಜ್ಯಕ್ಕಮೊಪ್ಪೆ ಭಾಜನವಾದರು (ಎಕ. V, ಹಾಸನ. ೦೦೬-೦೦ ; 1123) ; ಅನಾಕುಲೋಜ್ವಲಭಾಗ್ಯಸಂಗ್ರಹಂ ಗೃಹಮಖಿಲಸುಖಭಾಜನಂ ಜನಂ ತದ್ದೇಶದ (ಶಬ್ದಾ. ೬-೦೬) ; ಭರತಂ ಮಾಹಾತ್ಮನೆಸೆದನು . . . ಬಾಲ ಋಷಿಯೆಂಬಂತೆ ಭಾಜನನಾಗಿ ರಾಮಗೌರವಕೆ (ಶ್ರೀರಾಮಾ. ೨೬-೬೯೬).

**ಭಾಜನವಾಗು** = ಈಡಾಗು ; ಗುರಿಯಾಗು ; ಪಕ್ಕಾಗು : ನರನ ಪಾಶಿಗೆ ದ್ರೌಪದಿಯ ತೊತ್ತಿರುಗಳುಪಹಾಸ್ಯಕ್ಕೆ . . . ಭಾಜನವಾದೆನ್ನೆ (ಕುಮಾ. ಶ. ೦೨-೯). [ಸಂ.]

**ಭಾಜನಾಂಗ** (ನಾ). [ಜೈನ] ಹತ್ತುಬಗೆಯ ಕಲ್ಪವೃಕ್ಷಗಳಲ್ಲಿ ಒಂದು ; ಅತ್ಯಮೂಲ್ಯವಾದ ಪಾತ್ರೆಗಳನ್ನು ಕೊಡುವ ಮರ : ಭಾಜನಾಂಗ ತರುವಂ ಪೋಲ್ತಂ ಸುರಾಧೀಶ್ವರಂ (ಆದಿಪು. ೭-೬೬) ; ಬಹುಭಾಜನಂಗಳಂ ನಿರ್ವಹಿಸುವುದವರವರ್ಗೆ ಭಾಜನಾಂಗಮಹೀಜಂ (ಶಾಂತಿಪು. ೬-೦೦೪) ; ಭಾಜನಾಂಗವೆಂಬುದು ಕನತ್ಕನಕಮಣಿಖಚಿತ ವಿವಿಧಭಾಜನವಿಶೇಷಂಗಳ ನೀವುದು (ಜಾವುಂಪು. ೯). [ಸಂ.]

**ಭಾಜ್ಯ** (ನಾ). ೧. ಭಾಗಮಾಡಬೇಕಾದುದು ; ಭಾಗ ಮಾಡಲ್ಪಡುವುದು ; ಹಂಚಲ್ಪಡುವುದು : ಏಕಪ್ರದೇಶಾದಿಷು ಲೋಕಾಕಾಶೈಕಪ್ರದೇಶಾದಿಗಳೊಳ್ ಭಾಜ್ಯಃ ಪಸರಿಸಲ್ಪಡುವುದು (ತತ್ತ್ವಸೂ. ೨೬೬). ೨. (ಪಿತ್ರಾರ್ಜಿತವಾದ ಭೂಮಿ ಮೊದಲಾದುವುಗಳ) ಪಾಲು ; ಭಾಗ. ೩. [ಗಣಿತ] ಭಾಗಿಸಲ್ಪಡುವ ಅಂಕಿ, — ಸಂಖ್ಯೆ : ಮೇಲಿನ ಉದಾಹರಣೆಯಲ್ಲಿ ೧೦೦ ಭಾಜ್ಯವೆಂದೂ ೬೩ ಭಾಜಕವೆಂದೂ ಕರೆಯಲ್ಪಡುತ್ತದೆ. ಭಾಜ್ಯವು ಭಾಜಕದಿಂದ ಕಡಮೆಯಾದಲ್ಲಿ, ಮೊದಲನೆಯ ಭಾಗಲಬ್ಧವನ್ನು ೦ ಎಂದು ತೆಗೆದುಕೊಳ್ಳಬೇಕು (ಗಣಿತ. ೨೯೭). [ಸಂ.]

**ಭಾಟ₁** (ನಾ). ೧. ಕೂಲಿ ; ಮಜೂರಿ. ೨. ಮನೆ ಮೊದಲಾದುವುಗಳ ಬಾಡಿಗೆ. [ಸಂ.]

**ಭಾಟ₂** (ನಾ). ಹೊಗಳುಭಟ್ಟ ; ಸ್ತುತಿಪಾಠಕ : ವೈಭವವು . . . ಉತ್ಸಾಹಿಯ, ಉದ್ಯೋಗಿಯ ಮುಂದೆ, ಭಾಟನಂತೆ ಸ್ತುತಿಪಾಠವನ್ನು ಹಾಡುತ್ತ ಸಿಂಹಾಸನದ ಹಾದಿಯನ್ನು ತೋರಿಸುವುದಿಲ್ಲವೇ? (ಉದಕ್ಕ. ೬೩) ; ಈ ಭಾಟನ ಮಾತುಗಳನ್ನು ದಿಬ್ಮೂಢರಂತೆ ತನ್ನ ಪತಿದೇವರು ಕೇಳುತ್ತ ಕುಳಿತದ್ದು ವೇಣೂಬಾಯಿಗೆ ಸಹನವಾಗಲಿಲ್ಲ (ಗಂಡಾಯ. ೦೦೩).
[ ← ಹಿಂ. ಭಾಟ್ ; ಮರಾ. ಭಾಟ./ಸಂ. ಭಟ್ಟ./ಪ್ರಾ. ಭಟ್ಟ ]

**ಭಾಟಕ** (ನಾ). ಬಾಡಿಗೆ : "ಭಾಟಕಃ, ಅವಕ್ರಯಃ — ಈ ೨ ಬಾಡಗೆ" (ಹಲಾಯು. ೯೪-೪೦೯). [ಸಂ.]

**ಭಾಟಾ, ಬಾಟಾ, ಬಾಟೆ, ಭಾಟೆ** (ನಾ). ದಾರಿ ; ಮಾರ್ಗ ; ರಸ್ತೆ : 'ಭಾಟಾಮಾರ್ಗ' ಪರಾ. **ಬಾಟಾ** : 'ಬಾಟಾಮಾರ್ಗ' ಪರಾ. **ಬಾಟೆ** : ಆ ಭಾರಕ್ಕೆ ಮುರಿಯದಂತಹ ಬಲವಾದ ಶಕಟವಾಗಬೇಕು. ಹಳ್ಳ ತಿಟ್ಟುಗಳಲ್ಲಿ ಚಕ್ರಗಳೂ ಅಚ್ಚುಗಳೂ ಮುರಿಯದಂತಹದೃಢವಾದ ಬಾಟೆಯನ್ನು ನಿರ್ಮಿಸಬೇಕಾಗುವುದು (ಶಾಂಕಲಾ. ೨೦೬). **ಭಾಟೆ** : 'ಭಾಟೆಮಾರ್ಗ' ಪರಾ. [ ← ತೆಲು. ಬಾಟ. /ಸಂ. ವಾಟ. /ಹಿಂ. ಬಾಟ್ ]

**ಭಾಟಾಮಾರ್ಗ, ಬಾಟಾಮಾರ್ಗ, ಭಾಟೆಮಾರ್ಗ** (ನಾ). ಹೆದ್ದಾರಿ; "(ದೇಶದ) ಮುಖ್ಯರಸ್ತೆ ; ಭಾಟಾಮಾರ್ಗ" (Trunk-Road ಇಂಕಶಿ): ಕುಡುಕನಿಗಿರುವ ಲೈಸನ್ಸ್ ಯಾರಿಗಿದೆ ? . . . ಬಟ್ಟೆಯ ಪರಿವಿಲ್ಲದೆ ಭಾಟಾಮಾರ್ಗಗಳಲ್ಲಿ ಅಲೆಯುತ್ತಾನೆ (ಕಕಬಾ. ೦೨); ಸಂಚಾರ ಮಾಡುವುದಕ್ಕೆ ಭಾಟಾಮಾರ್ಗವಾದ್ದರಿಂದ. . . ಚತ್ರವನ್ನೂ ಏರ್ಪಡಿಸಿದರು (ಮಹಾಪಂ. II, ೦೩೪). **ಬಾಟಾಮಾರ್ಗ** : ದಾರೀನು ಬಾಟಾ ಮಾರ್ಗವ್ರಾ ? ಕಾಡುದಾರಿ (ಕಂಗಾಳ್ತ. ೨೩೦); ಶಾನುಭೋಗರು . . . ಬಾಟಾಮಾರ್ಗದಲ್ಲಿ ಅವರ ಊರಾದ ತಳ್ಳೂರಿಗೆ ಹೋಗುತ್ತಿದ್ದರು (ಪಕ್ಷೂರು. ೦೫೦). **ಭಾಟೆಮಾರ್ಗ** : ಭಾಟೆಮಾರ್ಗಕ್ಕೆ ಪಾರ್ಶ್ವದಲ್ಲಿ ದುರ್ಗಾದಾಸನು ಮಾರ್ಗಾಯಾಸದಿಂದ ಕ್ಲಾಂತನಾಗಿ ಮಲಗಿಕೊಂಡು ನಿದ್ರೆಹೋಗುತ್ತಿದ್ದನು (ದುರ್ಗೇಶನಂ. ೨೩). [ ಭಾಟಾ + ಮಾರ್ಗ ]

**ಭಾಟಿ** (ನಾ). ೧. ಕೂಲಿ ; ಮಜೂರಿ. ೨. ಬಾಡಿಗೆ. ೩. ವೇಶ್ಯೆಯು ಸಂಪಾದಿಸುವ ಹಣ. [ಸಂ.]

**ಭಾಟಿಗೆ** 'ಭಾಷ್ಟಿಗೆ' ನೋ.

**ಭಾಟೆ** 'ಭಾಟಾ' ನೋ.

**ಭಾಟೆಮಾರ್ಗ** 'ಭಾಟಾಮಾರ್ಗ' ನೋ.

**ಭಾಟ್ಟ** (ಗು). ೧. ಕುಮಾರಿಲಭಟ್ಟನಿಗೆ ಸಂಬಂಧಿಸಿದ : 'ಭಾಟ್ಟಮತ' ಪರಾ. (ನಾ). ೨. ಕುಮಾರಿಲಭಟ್ಟನ ಅನುಯಾಯಿ. [ಸಂ.]

**ಭಾಟ್ಟದರ್ಶನ** (ನಾ). ಕುಮಾರಿಲಭಟ್ಟನು ಪ್ರತಿಪಾದಿಸಿದ ಮೀಮಾಂಸಾ ತತ್ತ್ವ : ಆ [ಹೊ]ಲಂ ನಾಗಮಾವಿಯ [ದಿ]ಗ್ಗವಿಗೆಯು ಅಬಲೂರ ಎಡೆವಾ ಅನದ [ಕೆ][ರೆ]ಗೆ ಭಾಟ್ಟದರ್ಶನವ್ಯಾಖ್ಯಾತೃಗೆ ಮತ್ತರು ೩೫ (ಕಇಚ. ೬-೨-೨೦೪ ; 1058). [ ಸಂ. ]

**ಭಾಟ್ಟಮತ** (ನಾ). ಕುಮಾರಿಲಭಟ್ಟನೆಂಬ ಮಹಾವಿದ್ವಾಂಸನಿಂದ ಪ್ರಚುರವಾದ ಮತ ; ಪೂರ್ವಮೀಮಾಂಸಾಶಾಸ್ತ್ರದ ಒಂದು ಅವಾಂತರಭೇದ : ಶಿವನಿಗೆ ಕರ್ಮಾಧಿಕಾರಂ ಭಾವವೆಂಬುದು ಭಾಟ್ಟ

ಮತವು (ಏವೇಕ. ೯-೭); ಜೈಮಿನೀಯಮೀಮಾಂಸಾಶಾಸ್ತ್ರಕ್ಕೆ ಪ್ರಮುಖ ಪ್ರಚಾರಕನು ಕುಮಾರಿಲಭಟ್ಟ . . . ಇವನ ಮತಕ್ಕೇ ಭಾಟ್ಟಮತವೆಂದು ಹೆಸರು (ಭಾರಿದ. ೦೨೯). [ಸಂ.]

**ಭಾಡಿಗೆ** 'ಬಾಡಗೆ' ನೋ.

**ಭಾಣ** (ನಾ). [ಕಾವ್ಯಮೀ]ದಶರೂಪಕಗಳಲ್ಲಿ ಒಂದು; ಏಕಪಾತ್ರಾಭಿನಯದಿಂದ ಕೂಡಿರುವ, ವಿಟನಿಂದ ವರ್ಣಿಸಲ್ಪಡುವ ಧೂರ್ತ ಚರಿತ್ರೆ,–ಏಕಾಂಕರೂಪಕ : ವ್ಯಾಕರಣಕ್ಕೆ ಭಾಣಕ್ಕೆ ಪ್ರಹಸನಕೆ ನವರಸಗಳಿಗೆ ತನ್ನೊಳು ಧಿಕ್ಕರಿಪ ಕವಿಯಿಲ್ಲದಿರೆ ನೋಡಿ ಮರ್ತ್ಯಲೋಕಕ್ಕಿವನೆ ಕವಿಶರಭಭೇರುಂಡನೆಂದು ಪೆಸರಿಕ್ಕಿ ಕರೆನುದು ಕವಿನಿಕರವು (ರಾಘಶ. ૩-೩೮); ಇವರಲ್ಲಿ ನಾಟಕ, ಪ್ರಕರಣ, ಭಾಣ, ಪ್ರಹಸನ, ಡಿಮ, ವ್ಯಾಯೋಗ, ಸಮವಕಾರ, ವೀಥಿ, ಅಂಕ, ಈಹಾಮೃಗ—ಎಂಬ ಹತ್ತು ವಿಧಗಳಿವೆ (ಬಾಲಕ್ರ. I, ೩೨೬); ಭಾಣ —ಕಲ್ಪಿತ; ಕಳ್ಳಕಾಕರ ಧೂರ್ತಚರಿತ್ರೆ (ಕೈಬಿ. ೨೦೪). [ಸಂ.]

**ಭಾಣಸರ್ವೆಗಡೆ** 'ಬಾಣಸರ್ವೆಗಡೆ' ನೋ.

**ಭಾಣಸಿಗೆ** 'ಬಾಣಸಿಗೆ' ನೋ.

**ಭಾಣಸುರ್ವೆಗಡೆ** 'ಬಾಣಸರ್ವೆಗಡೆ' ನೋ.

**ಭಾತಿ** (ನಾ). ಬೆಳಕು ; ಪ್ರಕಾಶ; ಕಾಂತಿ : ಭಾತಿ ಮಿಗೆ ಉತ್ತುಂಗವೃಷಭ ಸಮೇತವಾಗೆಸೆವ ಕೇತನಾನೀಕಪ್ರಕೀರ್ಣದೊಳು . . . ರಾಜಿಸಲು (ಬಸಪು. ೩-೨೦) ; ಜ್ಯೋತಿ ಕತ್ತಲೆಯಲ್ಲಿ ಭಾತಿಯಿಂದುರಿವಂತೆ ಪ್ರೀತಿಯಿಂದೆಸೆವ ಶಿವಯೋಗಿ ಜಗಕೆಲ್ಲ ಜ್ಯೋತಿ ತಾನಕ್ಕು (ಸರ್ವಜ್ಞ. ೩೯೦); ಬಸವ ಶರಣನೆ ಪಾಪವಳಿವುದು . . . ಬಸವ ಶರಣನೆ ಪರಮಪಾವನಭಾತಿ ಸಂದಿಸುಗು (ಅಡಕ. ೩-೦). [ಸಂ.]

**ಭಾತಿಸು** (ಕ್ರಿ). ಶೋಭಿಸು; ಪ್ರಕಾಶಿಸು: ಈ ತೆರದೊಳಾ ಕಾಶಿ ಸಾತಿಶಯದಿಂದ ಭಾತಿಸುತ್ತಲಿರುತಿರಲು (ಹಪುಕ. ೭೮). [ಭಾತಿ + –ಇಸು₃]

**ಭಾತು** (ನಾ). ೧. ಭತ್ತ; ನೆಲ್ಲು : (*). ೨. ಕುದುಪಲಕ್ಕಿ; ಕುಸುಬಲಕ್ಕಿ: (*). ೩. ಅನ್ನ; ಬೋನ; ಆಹಾರ. ೪. ವಿಶೇಷವಾಗಿ ಕೇಸರಿಭಾತು, ವಾಂಗೀಭಾತು ಮುಂತಾಗಿ ತುಪ್ಪ, ಸಕ್ಕರೆ ಅಥವಾ ತರಕಾರಿ, ಮಸಾಲೆ ಮುಂತಾದ ರುಚಿಕರವಾದ ಪದಾರ್ಥಗಳಿಂದ ಸಂಸ್ಕರಿಸಿದ ಅನೇಕ ಬಗೆಯ ಕಲಸನ್ನಗಳ ಹೆಸರಿನ ಕೊನೆಯಲ್ಲಿ ಸೇರುವ ಪದ : ಇಂದು ಊಟಕ್ಕೆ ಯಾವುದಾದರೂ ಭಾತು ಮಾಡಬೇಕು (ರೂ). 'ಬತ್ತ₁' ಪರಾ. [← ಹಿಂ. ಮರಾ. ಭಾತ್. /ಸಂ. ಭಕ್ತ./ಪ್ರಾ. ಭತ್ತ]

**ಭಾತ್ಕೃತಿ** (ನಾ). ಭಾ ಭಾ ಎಂಬ ಧ್ವನಿ ; ಭಯಂಕರ ಧ್ವನಿ ; ಗರ್ಜನೆ: ಜಲದಜಗರಘೂತ್ಕೃತಿ ಕೇಸರಿಭಾತ್ಕೃತಿ . . . ವಿಹಗಸಮುತ್ಕರಚೀತ್ಕೃತಿ ತೀವಿ ವಿಪಿನದೊಳ್ ಬಿಡದೆಸೆಗುಂ (ರಾಜಶೇ.೩-೬೨). [ಸಂ.]

**ಭಾದು** (ನಾ).=ಭಾದ್ರಪದ : "ನಭಸ್ಯಃ, ಪ್ರೌಷ್ಠಪದಃ, ಭಾದ್ರಃ, ಭಾದ್ರಪದಃ – ಈ ೪ ಭಾದ್ರಪದಮಾಸದ ಹೆಸರುಗಳು" (ಸಿದ್ಧಾಂತಿ. ೯೦). [ಸಂ.]

**ಭಾದ್ರಪದ** (ನಾ). ಚಾಂದ್ರಮಾನದ ಹನ್ನೆರಡು ತಿಂಗಳುಗಳಲ್ಲಿ ಆರನೆಯದು : "ಭಾದ್ರಪದಮಾಸಮಂ ನಭಸ್ಯವೆಂಬುದು" (ಕಲಾಯು. ೦೯-೦೦೯) ; ಸ್ಥಿರಭಾದ್ರಪದಸಿತಾಷ್ಟಮಿಗಿರದೊಪ್ಪಿರೆ . . . ಪುಷ್ಪದಂತ ಜಿನಪತಿ ಪರಮಶ್ರೀಮುಕ್ತಿಲಕ್ಷ್ಮಿಯಂ ಕೆಯ್ಕೊಂಡಂ (ಪುಷ್ಪಪು. ೦೯-೩೩); ಪಂಚಾಕ್ಷರಾದಿಯಲಿರುವಖಿಳಮಂತ್ರಗಳ ಜಪ . . . ಸ್ತುತಿ ಸುಡುವುದು ಭಾದ್ರಪದದಲಿ (ಗಗಶಾ. ೯-೬೪); ಒಂದು ಕಡೆಯಿಂದ 'ಚೈತ್ರ. . . ಭಾದ್ರಪದ . . . ಫಾಲ್ಗುಣ' ಎಂದು ಒಬ್ಬೊಬ್ಬರನ್ನಾಗಿ ತೋರಿಸಿದರು (ಕಂಕಥ. ૩૩). [ಸಂ.]

**ಭಾದ್ರಪದೆ** (ನಾ). ಪೂರ್ವಾಭಾದ್ರಪದೆ ಮತ್ತು ಉತ್ತರಾಭಾದ್ರಪದೆಗಳೆರಡನ್ನೂ ಕುರಿತಂತೆ ಒಟ್ಟಿಗೆ ಸೇರಿಸಿ ಹೇಳುವ ಶಬ್ದ ; ಇಪ್ಪತ್ತೈದು ಮತ್ತು ಇಪ್ಪತ್ತಾರನೆಯ ನಕ್ಷತ್ರ. [ಸಂ. ಭಾದ್ರಪದಾ]

**ಭಾನ** (ನಾ). ೧. ಕಾಣಿಸುವುದು ; ಗೋಚರಿಸುವುದು ; ಭಾಸವಾಗುವುದು : ಭಾಳದೊಳೆಮಳಭೂತಿಯ ಭಾನಾ ನಿಲಗೆಯೊಳು ನಾಮಾಮೃತಪಾನಾ (ಅಪರೂ. ೬೭); ಮಾನಸವ ಚಿಂತೆವಿಡಿದಂದೊರ್ವನೆರಡಾಗಿ ತಾನದಾರೊಳು ವಾದಿಸುವನಂತೆ ಬಾಯಿಂದೇನನೋ ನುಡಿಯುತ್ತ ಕೈಸನ್ನೆಗೈಯುವನು ಭಾನವೊಂದರೊಳೆರಡು (ಮಂಕುಕ. ೬೩). ೨. ಅರಿವು ; ಜ್ಞಾನ ; ತಿಳಿವಳಿಕೆ. ೩. ಪರಿವೆ; ಪ್ರಜ್ಞೆ : ಸೂನುಗಳ ಗಾನವನು ಕೇಳುತೆ . . . ಸಭಿಕರು ಭಾನವನು ಮರೆತಂದದಿಂ ಕಣ್ಣೀರ ಸುರಿಸಿದರು (ರಘುವಂ. ೦೫-೬೭); ಜೋಶಿಯವರು ಸಿಟ್ಟಿನ ಭರದಲ್ಲಿ ಮೈಮೇಲಿನ ಭಾನವನ್ನೇ ಮರೆತಂತಿತ್ತು (ಮಾರಿದಾ. ೯೦); ದಾದಲ್ಯಾ . . . ಭಾನರಹಿತಶಿಲಾಪ್ರತಿಮೆಯಾಗಿದ್ದ (ದೀಕಪ. II, ೨೮೨). ೪. ನೆನಪು; ಜ್ಞಾಪಕ; ಸ್ಮರಣೆ: ಕ್ಷಣನದೆ ತಮಗಾದ ದುಃಖದ ಭಾನವದು ಮಾನಿನಿಗೆ ಮೇಣಾ ಜ್ಞಾನಿವರನಿಗೆ ಪರವಹರುಷವೆ ಯುಂಟು ಮಾಡಿಹುದು (ರಘುವಂ. ೦೩-೨೩). ೫. ಹೊಳಪು ; ಪ್ರಕಾಶ.

**ಭಾನತಪ್ಪು** = ಜ್ಞಾನತಪ್ಪು; ಪ್ರಜ್ಞಾಹೀನನಾಗು ; ಮೈಮರೆ : ಅವನ ತಂದೆ, ಅಜ್ಜ ಎಲ್ಲ ಕಳ್ಳು ಕುಡಿಯುವುದರಲ್ಲಿ ಭಾರೀ ಹೆಸರು ಹೋದವರು. ಎಷ್ಟು ಕುಡಿದರೂ ಭಾನತಪ್ಪುವರಲ್ಲ (ಕಳರು. ೯೩). [ಸಂ.]

**ಭಾನಗಡಿ**, ಬಾನಗಡಿ (ನಾ). ೧. ತೊಡಕು ; ಗೊಂದಲ ; ಜಟಿಲತೆ : ಅಲ್ಲಿಂದ ಪತ್ರಗಳು ಯಾವಾಗ ಬರತೊಡಗಿದವೋ ಆಗ ನಮಗೆ ಈ ಭಾನಗಡಿ ಲಕ್ಷ್ಯಕ್ಕೆ ಬಂತು (ಸ್ವಾತಂ. ೦೯೩). ೨. ಅಚಾತುರ್ಯ ; ಮಾಡಬಾರದ ಕಾರ್ಯ; ದುರ್ಘಟನೆ : ಬೆಳೆದ ಹೆಣ್ಣನ್ನು ಮನೆಯಲ್ಲಿಟ್ಟುಕೊಂಡು ಉಳಿತರು. ನಾಳೆ ಏನಾದರೂ ನಿಸ್ತರಿಸಲು ಬಾರದ ಭಾನಗಡಿಯಾದರೆ ? (ದೀಕಪ. ೦೩); ಮತ್ತೇನರೆ ಭಾನಗಡಿ ಮಾಡಿರುವರೇನು ? (ಕಾಗಳ. ೭೮); ಯಾಕಪ್ಪಾ ಸುರುಮಾಡಿದೆ ಭಾನಗಡಿ – ಕಾಮಿನಿಯ ಜೊತೆಗೆ ? (ಮುಕ್ತ. ೭). ಬಾನಗಡಿ : ೩. ಕುತಂತ್ರ ; ಕಿತಾಪತಿ : ನೀಲೀದೇ ಏನಾದ್ರೂ ಬಾನಗಡಿ ಇದ್ದಿರಬೇಕು (ಕಪ್ಪುಬಿ. ೦೮); ಅವನು ದಂಬನನ್ನು ತನ್ನ ಕ್ರಿಶ್ಚಿಯನ್ ಜಾತಿಗೆ ಸೇರಿಸಲು ನಡಸಿರುವಂಥ 'ಬಾನಗಡಿ'ಗಳೆಲ್ಲ ಭಟ್ಟರಿಗೆ ಹೊಸವಲ್ಲ (ದಂಬನಾ. ೩೦). [←ಮರಾ. ಭಾನಗಡ]

**ಭಾನಗೇಡಿ** (ನಾ). ಬುದ್ಧಿ ಇಲ್ಲದವನು ; ಅವಿವೇಕಿ : 'ಭಾನಗೇಡಿತನ' ಪರಾ. [ಭಾನ + ಕೇಡಿ₁]

**ಭಾನಗೇಡಿತನ** (ನಾ). ವ್ಯವಹಾರಜ್ಞಾನವಿಲ್ಲದಿರುವಿಕೆ ; ಅವಿವೇಕ : ಹೆಚ್ಚಿನ ಕೈಚಳಕ ಉಮೇಶನಿಗೆ ಬಾರದಿದ್ದರೂ ನ್ಯಾಯಾನ್ಯಾಯವನ್ನು ತಿಳಿದು ಹಟಮಾರಿಯಾಗಿ ಸತ್ಯವನ್ನೇ ಸಾಧಿಸಲು ಮಾತ್ರ ಕಲಿತಿದ್ದನು. ಇವನ ಈ ಭಾನಗೇಡಿತನವೇ ಭಟ್ಟರಿಗೆ ಗಂಟಲ ಗಾಣವಾಗಿದ್ದಿತು (ದಾಕೂಬಿ. ೬೮). [ಭಾನಗೇಡಿ + — ತನ]

**ಭಾನವ** (ಗು). ೧. ಸೂರ್ಯನಿಗೆ ಸಂಬಂಧಿಸಿದ. (ನಾ). ೨. ಸೂರ್ಯನ ಮಗ. ೩. ಶನಿ : ಭಾನವನುಂ ಮಾಹೇಯನುಂ ತಮೋಗ್ರಹಮೆನಿಪರ್ (ಜಾತಕ. ೯-೦). [ಸಂ.]

**ಭಾನವಿ** (ನಾ). ೧. ಸೂರ್ಯನ ಮಗ. ೨. ಶನಿ : ಆದಿತ್ಯನಿಪ್ಪತ್ತು ಭಾನವಿಯಯ್ವತ್ತು ನಿಸರ್ಗಭಾವದ ದಲಾಸಂವತ್ಸರಕ್ಕೀಶರಪ್ಪವರ್ (ಜಾತಕ. ೯-೦೪). [ಸಂ.]

**ಭಾನಾಭಿ** (ನಾ). ತೇಜಸ್ಸಿಗೆ ಕೇಂದ್ರವಾಗಿರುವವನು ; ತೇಜೋನಿಧಿ : ನಯನಂ ನೀಲಸರೋಜವಮಂ ಸೆಣಸುಗುಂ . . . ಊನಮ್ಮಾಡುಗುಂ ಜಾನು ಬಾಟಿಕೆಯ ಕಂಭಂಗಳನೆಂದೊಡೇವೊಗಟ್ಟಿನೋ ಭಾನಾಭಿಯಂ ನಾಭಿಯಂ (ಶಂಬಾವಪ. ೧-೯೩). [ಸಂ.]

**ಭಾನಾಮತಿ** (ನಾ). ಯಕ್ಷಿಣಿ, ಮಾಟ ಮೊದಲಾದ ತಾಂತ್ರಿಕವಿದ್ಯೆ ; ಜಾದೂಗಾರಿಕೆ : ಗುಲ್ಬರ್ಗಜಿಲ್ಲೆಯಲ್ಲಿ ಭಾನಾಮತಿ ತಾಂತ್ರಿಕವಿದ್ಯೆ ಅಷ್ಟೇನೂ ಹೊಸವಿಷಯವಲ್ಲ (ಲೂಪ). ☞ ವಿಕ್ರಮಾದಿತ್ಯರಾಜನ ಹೆಂಡತಿಯಾದ 'ಭಾನುಮತಿ' ಎಂಬುವಳು ಪ್ರಸಿದ್ಧ ಜಾದೂಗಾರಿಣಿಯಾಗಿದ್ದಳೆಂಬ ಐತಿಹ್ಯವಿದೆ.

[← ಹಿಂ. ಭಾನಮತೀ, ಭಾನುಮತೀ = ಜಾದೂಗಾರಿಣಿ ; ಮರಾ. ಭಾನಾಮತೀ, ಭಾನುಮತೀ]

**ಭಾನು** (ನಾ). ೧. ಹೊಳಪು ; ಪ್ರಕಾಶ. ೨. ರಶ್ಮಿ ; ಕಿರಣ : "ಉಸ್ರಃ . . . ಭಾನುಃ, ಕರಃ, ಪಾದಃ, ವಿರೋಕಃ, ಗೌಃ – ಈ ೩೨ ರಶ್ಮಿಗಳ ಪೆಸರ್" (ಹಲಾಯು. ೬–೩೯); ಮಡದೀ ನೀಂ ಪಡೆವಾ ಸುತಂ . . . ಬಿಡಿಕುಂ ತನ್ನಯ ತೇಜದಿಂದೆ ಮಿಗುವುದ್ಯದ್ಭಾಸುಮಂ ಭಾನುವಂ (ಜಗಾ. ೨–೬೫). ೩. ಸೂರ್ಯ ; ಆದಿತ್ಯ : "ಆದಿತ್ಯಃ, ಸವಿತಾ . . . ಭಾನುಃ, ಬ್ರಧ್ನಃ . . . ತ್ರಯಾತನುಃ – ಈ ೪೭ ಆದಿತ್ಯನ ಪೆಸರ್" (ಹಲಾಯು. ೭–೩೭); ಚಕೋರಂಗೆ ಚಂದ್ರಮನ ಬೆಳಗಿನ ಚಿಂತೆ ಅಂಬುಜಕೆ ಭಾನುವಿನುದಯದ ಚಿಂತೆ (ಬಸವ. ೩೬೪); ಭಾನು ಶಶಿಕೋಟಿತೇಜೋಗಾತ್ರ ತ್ರ್ಯನೇತ್ರ (ತ್ರಿಶರಾ. ೨–೪೩); ಪೊಡವಿಗೆ ಮಂಗಳಂ, ಬಾಂಗೆ ಭಾನು ಪುಟ್ಟಿದಂತಿರೆ ದಶರಥಂ ಪುಟ್ಟಿ (ರಾಷಟ್ಕ. ೭–೧೧). ೪. ರಾಜ ; ಚಕ್ರವರ್ತಿ. ೫. [ಗಣಿತ] ಹನ್ನೆರಡಂ ಎಂಬ ಸಂಖ್ಯೆಯ ಸಂಕೇತ : ಭಾನು ಲಘುಗಳೆಸೆವ ಚರಣ ತಾನವೆರಡಕಕ್ಕು . . . ಭೋಗನಾಮ ಸಾನುರಾಗಮಪ್ಪದಿಂದು (ಛಂದೋಂಬು. ೯. ೫–೩೨೭); ಆ ನಿಕೇತನ ಸುತ್ತ ದ್ವಾರವು ಭಾನುಸಂಖ್ಯೆಯೊಳಿಹವು (ಜೈಭಾ. ೨–೩೩). ೬. [ಛಂದ] ಎರಡು ಲಘುಗಳ ಮಧ್ಯೆ ಒಂದು ಗುರುವಿರುವ ಗಣ ; ಜಗಣ (U – U) : ವ್ಯೋಮದ್ವಯಂ ಭಾನುಕಪರ್ದಿಯುಗ್ಮಂ ಶಾವಾಗಿರಲ್ಕೆ (ಛಂದೋಂಬು. ೨–೧೦೩). [ಸಂ.]

**ಭಾನುಜ** (ನಾ). ೧. ಸೂರ್ಯನ ಮಗ. ೨. ಶನಿ. ೩. ಯಮ : ಆ ಭಾನುಜನೊಳು ಉಮೇಶನೊಳು ಅರಿದಜನೊಳು ಮೃತ್ಯುವಿನೊಳಂ ಕಾಲನಾಮಮಕ್ಕುಂ (ಮಂಗರಾ. ೧೪೭–೩೮). ೪. ಸುಗ್ರೀವ. ೫. ಕರ್ಣ : ವೀರರಿನಿಬರು ನೆರೆದು ರಿಪುವಿಗಂ ಭಾನುಜನ ಸೂರೆಗೊಟ್ಟರು (ತುರಂಗ. ೭೩–೦೩). [ಸಂ.]

**ಭಾನುಜೆ** (ನಾ). ಸೂರ್ಯನ ಮಗಳು ; ಯಮುನೆ : ಜಿತಭಾನುಜೆ ಗೋಮತಿ ಧೂತಪಾಪೆ ಭಾಸುರತರ ಲೋಕಪಾವನೆ . . . ಕವೇರಕನ್ಯೆ (ರಾಜಶೇ. ೨–೭). [ಸಂ. ಭಾನುಜಾ]

**ಭಾನುತನುಜ** (ನಾ). ೧. ಸೂರ್ಯನ ಮಗ. ೨. ಕರ್ಣ. ೩. ಸುಗ್ರೀವ. [ಸಂ.]

**ಭಾನುತನೂಜ** (ನಾ). ೧. ಸೂರ್ಯನ ಮಗ. ೨. ಕರ್ಣ : ನೀನು ಕೊಲ್ಲದುಂಟು ಬೆಳ್ಗೊಡೆ ನೀನಿಲ್ಲದವೆಲ್ಲಮೊಳವೆ ಭಾನುತನೂಜಾ (ಕಮುದ. ೦೨೭ ಕ್ರಯೋ). [ಸಂ.]

**ಭಾನುದಾಸ** (ನಾ). ಒಬ್ಬಾತನ ಹೆಸರು: ಆಳು ಎಱಿದು ಸತ್ತೊನ್ ಭಾನುದಾಸನ್ ಜಯಮಿತ್ರನ್ (ಕ್ಯಾಅಂ. ೦೯೭೯,೨೨–೭ ; ಸು. 750). [ಸಂ.]

**ಭಾನುನಂದನ** (ನಾ). ೧. ಸೂರ್ಯನ ಮಗ. ೨. ಸುಗ್ರೀವ : ಆ ಭಾನುನಂದನ ಕವಿದು ಹಳಚಿದ ದಾನವರ ಪಡೆಯ (ತೊರಾ. ೩೭–೨೫). ೩. ಶನಿ : ಭಾನುನಂದನ ಬುಧ ಮಂಗಳರಾ ಬಲವು ತಪ್ಪಿದರೇನು ದೀನನಾಥ ಶ್ರೀ ಪುರಂದರವಿಠಲನ ಧ್ಯಾನವುಳ್ಳ ಹರಿದಾಸರಿಗೆ (ಪುರಂದ. ೦–೦೩೬–೩). [ಸಂ.]

**ಭಾನುಬಿಂಬ** (ನಾ). ಸೂರ್ಯಮಂಡಲ : ಉದ್ಗತಭಾನುಬಿಂಬಮಂ . . . ನಿಜಮುಖದೊಳ್ ಪುಗುವ ಮತ್ತಂಗಜಪತಿವೆರಸಿಂತು ಕನಸು ಪದಿನಾಱು ಮನಂಬುಜವದನೆ ಕಂಡಳ್ (ಶಾಪು. ೯–೯೯); ಭಾನುಬಿಂಬವ ಮೊಗೆವ ಲೌಡೆಯ ಮಾನಸದ ಧಕ್ಕಡರು ಕಲಿ ಪವಮಾನತನಯನ ಮುತ್ತಿಕೊಂಡರು ರಾಯರಾವುತರು (ಕುವ್ಯಾ. ೪. ೦೯–೦೩). [ಸಂ.]

**ಭಾನುಮಂತ** (ನಾ). ಕಿರಣಗಳುಳ್ಳವನು ; ಸೂರ್ಯ : ಮಾನವಮಾನಸ ಕಂಜ ಭಾನುವ[ಮ]ತ್ಪ್ರಭೆಯನೋತ್ಪಲೇಂದುಕಿರಣಪ್ರಭೆಯುವ್ವದು ತಪ್ಪದೊಪ್ಪುಗುಂ (ಶಾಂತಿಪು. ೫–೦೭). [ಸಂ. ಭಾನುಮತ್]

**ಭಾನುಮತಿ** (ನಾ). ೧. ತೇಜಸ್ಸುಳ್ಳವಳು ; ಕಾಂತಿವಂತೆ. ೨. ದುರ್ಯೋಧನನ ಹೆಂಡತಿ,—ರಾಣಿ : ನೆತ್ತಮನಾಡಿ ಭಾನುಮತಿ ಸೋಲ್ದೊಡೆ ಸೋಲಮನೀವುದೆಂದು ಕಾಡುತ್ತಿರೆ ಲಂಬಣಂ ಪಱಿಯೆ (ಪಂಪಭಾ. ೯–೭೯); ನೀನೊಲಿದು ಸಲಹೆಂದು ಮುದದಲಿ ಭಾನುಮತಿ ವೈಯಿಕ್ಕಿದಳು ಮುರಹರನ ಚರಣದಲಿ (ಕುವ್ಯಾ. ಉ. ೯–೭೭). [ಸಂ. ಭಾನುಮತೀ]

**ಭಾನುಮೊಮ್ಮ** (ನಾ). ಸೂರ್ಯನ ಮೊಮ್ಮಗ ; ಕರ್ಣನ ಮಗನಾದ ವೃಷಸೇನ : ಪುರುಹೂತಸುತ ಭಾನುಮೊಮ್ಮನ ತರುಬಿ ನಿಲ್ಲಲಾಗು ಸುರಿದಂ ವೃಷಸೇನನು (ತುರಂಗ. ೭೭–೦೫). [ಭಾನು + ಮೊಮ್ಮ]

**ಭಾನುರಿಪು** (ನಾ). ಸೂರ್ಯನ ಶತ್ರು ; ರಾಹು : " ಭಾನುರಿಪು ಸಿಂಹಿಕಾಪ್ರಿಯಸೂನು ತಮಂ ರಾಹು ಗಗನಚರಭುಜಗಂ ಸ್ವರ್ಭಾನು ವಿಧುಂತುದನಂತದು ತಾನಕ್ಕುಂ" (ವಸ್ತುಕೋ. ೦೩–೭೫). [ಸಂ.]

**ಭಾನುರೋಚಿ** (ನಾ). ಸೂರ್ಯನ ಪ್ರಕಾಶ,– ಕಾಂತಿ : ಭಾನುರೋಚಿಯಿಂ ಬಸವಳಿದೀ ಧರಾಂಗನೆಗೆ ಚಂದನಲೇಪನಮಾದುದು . . . ಕಾಂತಿ ಸುಧಾಮಯೂಖಿನಾ (ರಾಜಶೇ. ೦೦–೬೫). [ಸಂ.]

**ಭಾನುವಂಶ** (ನಾ). ಸೂರ್ಯನಿಂದ ಪ್ರವೃತ್ತವಾಯಿತೆಂದು ಹೇಳಲಾದ ಒಂದು ರಾಜಮನೆತನ,– ರಾಜಕುಲ; ರಾಮನು ಅವತರಿಸಿದ ವಂಶ : ವರಭಾನುವಂಶಲಲಾಮ ನೀ ರಾಮಂಗೆ ಸರಿಯೆಂದ (ಕುವ್ಯಾ. ಆ. ೦೦–೯). [ಸಂ.]

**ಭಾನುವಾರ** (ನಾ). ಒಂದು ವಾರದ ಏಳು ದಿನಗಳಲ್ಲಿ ಮೊದಲನೆಯ ದಿನ ; ಸೂರ್ಯನು ಅಧಿಪತಿಯಾಗಿರುವ ವಾರ; ಆದಿತ್ಯವಾರ : ದೇವರಾಜನನ್ನು ಕರೆದುಕೊಂಡು ಮುಂದಿನ ಭಾನುವಾರ ಧಾತುಪುರಿಗೆ ಹೋಗಬೇಕು (ಚಂಗಾಳ್ವ. ೭). [ಸಂ.]

**ಭಾನುಸುತ** (ನಾ). ೧. ಸೂರ್ಯನ ಮಗ. ೨. ಕರ್ಣ : ಪೃಥಿವಿಪತಿ ಮಾದ್ರೇಶನನು ಸಾರಥಿಯ ಮಾಡಿದನೊಲವು ಮಿಗಲತಿರಥಭಯಂಕರ ಭಾನುಸುತನಾಹವಕೆ ನಡೆತಂದ (ಕುವ್ಯಾ. ೪. ೮ ಸೂಚನೆ). [ಸಂ.]

**ಭಾನೆ** 'ಬಾನಿ₂' ನೋ.

**ಭಾಪು** 'ಬಾಪ್ಪು' ನೋ.

**ಭಾಪುಗೊಳ್** (ಕ್ರಿ). ಮೆಚ್ಚಿಕೆಯನ್ನು ಪಡೆ : ಕವಿಯುಂ ಮೆಚ್ಚಿಸಿ ಭಾಪುಗೊಳಲೆ ಬಾಳ್ವಂ (ಕಂಸಹ. ೩೭–೦೦).

[ಭಾಪು (<ಬಾಪ್ಪು) + ಕೊಳ್₁]

**ಭಾಪುರೆ** 'ಬಾಪ್ಪುರೆ' ನೋ.

**ಭಾಪ್ಪು** 'ಬಾಪ್ಪು' ನೋ.

**ಭಾಮ** (ನಾ). ೧. ಹೊಳಪು; ಪ್ರಕಾಶ. ೨. ಸೂರ್ಯ; ರವಿ. ೩. ಸಿಟ್ಟು; ಕೋಪ; ಭಾವೋದ್ರೇಕ. ೪. ಸಹೋದರಿಯ ಗಂಡು ; ಭಾವ. [ಸಂ.]

**ಭಾಮಂಡಲ**, ಭಾಮಂಡಳ (ನಾ). ೧. ಬೆಳಕಿನ ವಲಯ; ತೇಜೋಮಂಡಲ. ೨. [ಜೈನ] ಅರ್ಹಂತನಿಗಿರುವ ಅಷ್ಟಪ್ರಾತಿಹಾರ್ಯಗಳಲ್ಲಿ ಒಂದು ; ಪ್ರಭಾವಲಯ : ಇರೆ ಭಾಮಂಡಲದೀಪ್ತಿಯ ಪರೆಪುಂ . . . ದಿವಾಕರಹಿಮಕರಕರನಿಕರಪ್ರಚುರರುಚಿಗಳಂ ಮಸುಳಿಸುಗುಂ (ಆದಿಪು. ೦೦–೩೯) ; ಪೂಮಟಿ³ ಕೇಸರಿಪೀಠಂ ಭಾಮಂಡಲ [ಶಾಕಾಂ. ೪]

ಮೆಸೆಯೆ ನೆಗಟ್ದನೊಸೆದಾದಿಜಿನಂ (ಶಾಂತೀಶ್ವ. ೦) ; ಭೂಮಂಡಲದೊಳ್ ನಿನ್ನಿಂ ಭಾಮಂಡಲಮೆಸೆದು ಪಸರಿಸಿರೆ (ಅಜಿತ. ೯-೦೨). **ಭಾಮಂಡಳ** : ೨. ಸುರಭೇರೀಭೂರಿ ಭಾಮಂಡಳಸ್ತೋಮಂ ಭಾಸ್ವದನಂತಬೋಧ ಬಳ ದೃಕ್ಸೌಖ್ಯತ್ವ ಲಕ್ಷ್ಮೀಸಮುದ್ಧಾಮಂ ಮಾಟಿ್ಕವಾಗಟ್ಕಟಿಂ ಶುಭಮಂ ಶ್ರೀವರ್ಧಮಾನಂ ಜಿನಂ(ಶರ್ದೇ . ೦-೦). 'ಪ್ರಾತಿಹಾರ್ಯ' ಪರಾ. [ಸಂ.]

**ಭಾಮಂಡಳ** 'ಭಾಮಂಡಲ' ನೋ.

**ಭಾಮಟ್ಯ** 'ಭಾಮಟ್ಯಾ' ನೋ.

**ಭಾಮಟ್ಯಾ**, ಭಾಮಂಟ್ಯ (ನಾ). (ಉಕ) ಮೋಸಗಾರ ; ವಂಚಕ; ಧೂರ್ತ : ಇವನು ಯಾವನೋ ಪರಿಚಯದ ಭಾಮಟ್ಯಾ ಇರಬೇಕು (ಸ್ವಪ್ನ. ೨೬೩). **ಭಾಮಟ್ಯ** : ನೀ ಒಬ್ಬನ ಸಭ್ಯಗೃಹಸ್ಥ. ನಾವೇನು ಭಾಮಟ್ಯರಿದ್ದೀವೇನು ! (ಬಾಂಣಾಯ. ೬೦). [←ಮರಾ. ಭಾಮಟ್ಯಾ]

**ಭಾಮಿನಿ** (ನಾ). ೧. (ಕೋಪಸ್ವಭಾವದ) ಸುಂದರ ಸ್ತ್ರೀ : "ಕೋಪ ವೆರಸಿರ್ದ ಸ್ತ್ರೀ ಭಾಮಿನಿಯೆನಿಸುವಳು" (ಪಾಕರಾ. ೦೦೬) ; ಜಡೆಮುಡಿಯ ಜಾಣೆಗೆ ಭಾಳತಳದ ಭಾಮಿನಿಗೆ ತ್ರಿಲೋಚನದ ಲಲನೆಗೆ . . . ರಕ್ಷಣಾರ್ಥಂ ತಂದೆ ನಿಯಾಮಿಸಿಕೊಟ್ಟ . . . ಷೋಡಶಸಹಸ್ರವಿಳಾಸಿನಿಯರ್ವೆರಸು ನಡೆ ತಂದು (ಗಿರಿಕ. ೩-೯೦ ವ) ; ಭಾಮಿನಿ ಕೇಳ್ಸೌರಾಷ್ಟ್ರದ ಸೋಮೇಶನ ಭಕ್ತ ನಿರ್ಪನೋಹಿಲನು (ಶೃತಸಿ. ೨೯-೩೯) ; ತಿಂಗಳಾರಕೆ ಮರಳಿ ಬಹೆನೆಂಬ ಭಾಷೆಯುಂ ಭಾಮಿಸುತೆ ಭಾಮಿನಿ ಸಮಾಧಾನಬುದ್ಧಿಯಿಂ ಮೇಲೇಳುತಲ್ಲಿಂ ನಡೆದು (ಜಕ್ಕಾಂಗ. ೩೬-೦೩೩೪). ೨. ಹೆಂಗಸು ; ಸ್ತ್ರೀ ; ಮಹಿಳೆ : "ರಾಮಾ, ವಾಮಾ . . . ಭಾಮಿನಿ, ಕಾಮಿನೀ . . . ಯುವತಿಃ — ಈ ೨೮ ಸ್ತ್ರೀಯರ್" (ಹಲಾಯು. ೭೯-೩೨೭). ೩. = ಭಾಮಿನೀಷಟ್ಪದಿ : ಶರ ಕುಸುಮ ಭೋಗ ಭಾಮಿನಿ ಪರಿವರ್ಧಿನಿ ವಾರ್ಧಕಗಳೆಂಬಾಱು ತೆಱಂ. . . ಷಟ್ಪದಿ ನಡೆಗುಂ (ಛಂದೋಂಬು. ೩-೩೯ ಅಧಿ) ; ಭೂಮಿಸುತ ಜೀವಂಧರನ ಚರಿತವನು ವೇದಿಸುವೆಸುರು ಭಾಮಿನಿಯ ಷಟ್ಪಾದದಿಂ ಕನ್ನಡದೊಳೊಲಿದು (ಜೀವಂಚ. ೦-೩೪); ಇದು ಶರ, ಕುಸುಮ, ಭೋಗ, ಭಾಮಿನಿ, ಪರಿವರ್ಧಿನಿ, ವಾರ್ಧಕ ಎಂದಾರು ವಿಧವು (ಕೃಶಿಪ. ೯೩). [ಸಂ. ಭಾಮಿನೀ]

**ಭಾಮಿನಿವೃತ್ತ** (ನಾ). = ಭಾಮಿನೀಷಟ್ಪದಿ : ಈ ತೆಱದೊಳಚ್ಯುತನ ನಾಮದ ನೂತನದಿ ವಸುಧಾತಳದ ವಿಖ್ಯಾತಿ ಬಯಸದೆ ಬಣ್ಣಿಸಿದೆ ಭಾಮಿನಿ ವೃತ್ತದಲಿ ನಾನು (ಹಂಶಾ. ೦೦೩). [<ಸಂ. ಭಾಮಿನೀವೃತ್ತ]

**ಭಾಮಿನೀದೀರ್ಘದ್ವಿಪದಿ** (ನಾ). [ಛಂದ] ಭಾಮಿನೀಷಟ್ಪದಿಯ ಲಯವನ್ನು ಅನುಸರಿಸಿ ರಚಿಸುವ ಎರಡು ಸಾಲಿನ ಪದ್ಯ : ಭಾಮಿನೀ ದೀರ್ಘದ್ವಿಪದಿಯ ಬಂಧ ಸಾಧ್ಯ (ಛಂತೋಬಿ. ೨೬೬). [ಸಂ.]

**ಭಾಮಿನೀವೇದ** (ನಾ). [ಜೈನ] ಪುರುಷವೇದ, ಸ್ತ್ರೀವೇದ ಮತ್ತು ನಪುಂಸಕವೇದವೆಂಬ ಮೂರು ಬಗೆಯ ವೇದಗಳಲ್ಲಿ ಒಂದು ; ಸ್ತ್ರೀವೇದ ; ಚಾರಿತ್ರ್ಯಮೋಹನೀಯಕರ್ಮವಿಶೇಷ : ಅಭಿಭವಿಸಿ ನಪುಂಸಕವೇದ ಭಾಮಿನೀವೇದಯುಗಳದೊಡನೊಡನೆ ಜಗದ್ವಿಭು ಹಾಸ್ಯರತ್ಯರತಿಶೋಕಭಯಜುಗುಪ್ಸೆಗಳನಾಱುಮಂ ಬೆಂಕೊಂಡಂ (ಮಲ್ಲಿಪು. ೦೪-೬೪) [ಸಂ.]

**ಭಾಮಿನೀಷಟ್ಪದಿ** (ನಾ). [ಛಂದ] ಆರು ಬಗೆಯ ಷಟ್ಪದಿಗಳಲ್ಲಿ ಒಂದು; ಪ್ರತಿಪಾದದಲ್ಲಿ ಹದಿನಾಲ್ಕು ಮಾತ್ರೆಗಳಿರುವ ಆರು ಸಾಲಿನ ಮಾತ್ರಾಗಣ ಛಂದಸ್ಸು ; P "ಮೂರು ಮಾತ್ರೆಯ ಗಣದ ಮುಂದೆ ನಾಲ್ಕು ಮಾತ್ರೆಯ ಗಣವು ಬರುವ ಹಾಗೆ ಈ ಗಣಗಳು ಒಂದೆರಡು ನಾಲ್ಕೈದನೆಯ ಪಾದಗಳಲ್ಲಿ ಎರಡೆರಡೂ ಮೂರಾರನೆಯ ಪಾದಗಳಲ್ಲಿ ಮೂರು ಮೂರೂ ಒಂದು ಗುರುವೂ ಇರುವುದು ಭಾಮಿನೀ ಷಟ್ಪದಿ ಎನಿಸುವುದು" (ಕೃಶಿಪ. ೯೬) : ಸಾಜಕವಿ ಕರ್ಣಾಟಲಕ್ಷಣ ದೋಜೆಗನು ಕವಿಸಾಳ್ವನಿಂ ಜಿನರಾಜಚರಿತೆಯ ಭಾಮಿನೀಷಟ್ಪದಿಯಬುಸು ರೆಂದು . . . ಬೆಸಸಿದನು (ಸಾಳ್ವಭಾ. ೦-೩೪) ; ಕುಮಾರವ್ಯಾಸಭಾರತ ಮತ್ತು ತೊರವೆರಾಮಾಯಣಗಳು ಭಾಮಿನೀಷಟ್ಪದಿಯಲ್ಲಿ ರಚಿತವಾಗಿವೆ (ರೂಢಿ). [ಸಂ. ಭಾಮಿನೀಷಟ್ಪದೀ]

**ಭಾಮೆ** (ನಾ). ೧. ಕೋಪಸ್ವಭಾವದ ಹೆಂಗಸು. ೨. ಹೆಂಗಸು ; ಮಹಿಳೆ : "ಭಾಮಾ, ಭಾಮಿನೀ, ಈ ೨ ಪೆಣ್" (ಶಾಕಶ. ೦೦೮). ೩. ಸುಂದರಿಯಾದ ಸ್ತ್ರೀ : ಸ್ವಾಮಿ ಸದ್ಗುರು ಸಾಂಪ್ರದಾಯದ ಭಾಮೆಯರು ಶ್ರೀಪರ್ವತಂ ಮೊದಲೀ ಮಹಿಯೊಳೊಳರು (ಬಸವ. ೦೨-೩೨) ; ಚೋಳಧರಾಭಾಮಾಧಿಪತಿ ಮನೋಜ್ಞ ಶ್ರೀಮಹಿತಂ ಪೃಥುಳ ಭಾಗ್ಯಮುಂ ಪದೆದಿತ್ತಂ (ರಾಜಶೇ. ೩-೨೩) ; ಬೆರಗು ಹೊಡೆದರ್ಜುನಂ ನೋಡುತಿರಲಾ ಭಾಮೆ ಬಂದವೊಲೆ ಹಿಂದಿರುಗಿ ನಿಬಿಡಕಾಂತಾರದಲಿ ತರುಗುಲ್ಮಪರ್ಣಗರ್ಭಂಬೊಕ್ಕು . . . ಮರೆಯಾದಳರದೆ (ಜಕ್ಕಾಂಗ. ೩೪-೯೦೮). ೪. ಹೆಂಡತಿ ; ಪತ್ನಿ : ಈ ಭೂಮಿ ಈ ಭಾಮೆ ಈ ಭೋಗ ಈ ರಾಗ ಬಾರವು ಜತೆಯೊಳು ಬಲ್ಲೆ (ಶಂಕಾಕ. ೨೪೨-೦೦೦). ೫. ಕೃಷ್ಣನ ಪತ್ನಿಯರಲ್ಲಿ ಒಬ್ಬಳು ; ಸತ್ಯಭಾಮೆ : ಇಂತಾ ಭಾಮೆಯುಂ ದುಃಖಿವನಾಂತಿರೆ ಕಂಡು . . . ಪೇಳ್ದಳು (ಶ್ರೀಕೃಶಾ. ೮). [ಸಂ. ಭಾಮಾ]

**ಭಾಯಿ** (ನಾ). ಭ್ರಾತೃಭಾವನೆಯಿಂದ ಒಬ್ಬರನ್ನೊಬ್ಬರು ಸಂಬೋಧಿಸುವ ಶಬ್ದ : ಸಮಾಜವಾದಿಗಳು ತಮಗೆ 'ಭಾಯಿ' ಎಂದು ಕರೆದು ಕೊಳ್ಳುತ್ತಾರೆ (ಭಾರಸಂ. ೮) ; ಭಾಯಿಸಾ, ಇಂದೋ ನಾಳೆಯೋ ನಿಮ್ಮ ಬಿಡುಗಡೆಯಾಗಬಹುದು (ಅಶ್ವಶ. ೦೯೦).

[ ← ಹಿಂ. ಮರಾ. ಭಾಈ./ಪ್ರಾ. ಭಾಇ./ಸಂ. ಭ್ರಾತೃ]

**ಭಾರ** (ನಾ). ೧. ಹೊರೆ; ತೂಕ : "ತಿಣ್ಣಮೆಸಲ್ಭಾರಂ" (ಶಶುಪ. ೩೦); ಮಾತಿಂದ ಬರ್ಕ ಭವಭಾರಘೋರ (ಬಸವ. ೯೨೪); ಭೂಭಾರಚ್ಛೇದವಿನೋದಿ ಕೃಷ್ಣನೆಮಗೀಗಾನಂದಸಂದೋಹಮಂ (ಜಗಪ್ರ. ೦-೦) : ಆ ಹೂಹಗರು ಶಿಶುವಿದ್ದಕಿದ್ದಂತೆ ಗಿರಿಭಾರವಾಗಿ ಬರೆ (ಶ್ರೀರಾಮಾ. ೦೮-೪೬೨) ; ಇರುವೆ ಭಾರ ಇರುವೆಗೆ, ಆನೆ ಭಾರ ಆನೆಗೆ (ಗಾದೆ). ೨. ತಲೆ, ಹೆಗಲು ಮೊದಲಾದವುಗಳ ಮೇಲೆ ಹೊರುವ ಹೊರೆ; ಮೂಟೆ ಮೊದಲಾದುವು: "ವಿವಿಧಃ , ವೀವಧಃ , ಭಾರಃ , ಪರ್ಯಾಹಾರಃ— ಈ ೪ ತಲೆಹೊಱೆ" (ಹಲಾಯು. ೦೨೩-೬೨). ೩. ಹೊಣೆಗಾರಿಕೆ; ಜವಾಬ್ದಾರಿ; ಕರ್ತವ್ಯ : ಅಂಜದಿರು ಅಳುಕದಿರು ಪರದೈವಕ್ಕೆ ಜಿಗದಿರು ಕೂಡಲಸಂಗನ ಕೈಯಲು ಈಸುವುದೆನ್ನ ಭಾರ (ಬಸವ. ೬೨೨); ಮಳೆ ಬಹಳವಾಗಿ ಕಟ್ ತುಂಬಿ ಹೊಡವರು ಎಂದೆಂದೂ ಕಟ್ ನಿಂಮ ಭಾರವಾಗಿ ಕಟ್ಟಿಕೊಂಡು ಮಾನ್ಯಗದ್ದೆಯನೂ ಬಿತ್ತಿ ಬೆಳೆದುಕೊಂಬುದು (ಎಕ. X(೩), ಕೋಲಾರ. ೩೦೦-೦೪ ; 17ನೆಯ ಶತ); ರತ್ನಾವಳೀನಾಟಕದ ಅಭಿನಯದ ಭಾರ ನನ್ನ ಮೇಲೆ ಬಿತ್ತು (ಶಾಕಶ. ೩೪೬). ೪. ಕಷ್ಟಕರವಾದುದು ; ಕಠಿಣವಾದಂದು : ಈ ತೀರ್ಥಕ್ಕೆ ಅನೇಕ ಕೋಟಿ ಉಪಪಾಪಗಳು ಪರಿಹರಿಸುವದು ಯೇನು ಭಾರವಾದೀತು (ಅಶ್ವಪುಾ. ೨೨). ೫. ಮಹತ್ವ ; ಗುರುತ್ವ ; ಪ್ರಾಮುಖ್ಯತೆ : ಧೀರ ಬಿನ್ನವಿಸಿದನು ಕಾರ್ಯದ ಭಾರವನು (ಕುವ್ಯಾ.ಕ. ೪-೩೦). ೬. ಅಧಿಕವಾದುದು ; ಹೆಚ್ಚಾದುದು ; ಗುರುತರವಾದುದು : ಕದಳಿದಲೆಗಳ ತೋರಭಾರದ ಮದದ ಮೈಯುಬ್ಬುಗಳ ಬಳಿದ್ದುದು (ಕೊರಚಾ. ೩-೬-೮) ; ಭಾರವಾದ ಪಾಪಕ್ಕೆ ಘೋರವಾದ ನರಕ (ಗಾದೆ). 'ಭಾರಸಂಖ್ಯೆ' ಪರಾ. ೭. ಪ್ರಭಾವ ; ವರ್ಚಸ್ಸು. ೮. ಪಂಗು ; ಖಂಡ. ೯. ಹೊರೆಯನ್ನು ಹೊರಲು ಉಪಯೋಗಿಸುವ ಕೋಲು,— ಅಡ್ಡೆ. ೧೦. [ಗಣಿತ] ಇಪ್ಪತ್ತು ತೊಲೆಗಳ ತೂಕ : " ತೊಲೆಯುಂತಿಪ್ಪತ್ತಿರಲ್ಕೆ ಭಾರಂ" (ಕುಂಗಣಿ. ೦೦೪-೧೦); ಭಾರಕ್ಕೆ ಪತ್ತು ತೊಲೆಯುಂ ಭಾರಕ್ಕಂ ನೂಱುಸಂಖ್ಯೆ ಬೀಸಗೆಯುಕ್ಕುಂ

ಭಾರಕ್ಕೆ ಮಣವು ಹತ್ತುಂ ಭಾರಕ್ಕಂತಾಗ ದಡೆಯ ತಪ್ಪದು ಗಣಕ ಭಾರಕ್ಕೆಧರ್ಮಸಿರ ತೊಲೆಯುಂ ಭಾರಕ್ಕಂ ಕರುಷಮೆಂಟುಸಾಸಿರಮಕ್ಕುಂ ಭಾರಕೆ ಕಾಲ್ಕರುಷ ಬತ್ತಿಸಾವಿರ ಭಾರಕ್ಕಂ ಮೂವತೆರಡು ಸಹಸ್ರಪೊನ್ನಿನ ತೂಕಂ ಭಾರಕ್ಕೆ ತೊಲೆಯ ವಿಂಶತಿ (ವ್ಯವಹಾ. ೨-೦೦); ☞ 'ವ್ಯವಹಾರ ಗಣಿತ'ದ ಈ ಭಾಗದಲ್ಲಿ 'ಭಾರ'ಕ್ಕೆ ಅಸ್ಪಷ್ಟವಾದ ಅನೇಕ ತೂಕದ ಅರ್ಥಗಳನ್ನು ಹೇಳಿದೆ : ಇಪ್ಪತ್ತು ತೊಲೆಗಳಕ್ಕುಂ ಭಾರಂ (ವ್ಯವಹಾ. ೪-೨೩); ಪೂಜಿಸುತ್ತಿರಲು ದಿನದಿನದಲೆಂಟೆಂಟು ಭಾರದ ಕನಕವನು ಮಣೆ ಕೊಡುವುದು (ಶಿಶಾಗ. ೦೦-೬೬-೬); ಆ ವಿಪ್ರರನ್ನು ಪೂಜಿಸಿ . . . ಒಂದೊಂದು ಭಾರ ಹೊನ್ನನ್ನು ಕೊಡಬೇಕು (ಬಸುಕ. ೪). ೧೧. ಒಂದು ರೂಪಾಯಿಯ ತೂಕ ; ಒಂದು ತೊಲ : (ಕ).

**ಭಾರ ಬರು** = (ಉಕ) ದೆವ್ವಹಿಡಿ ; ಭೂತಾವೇಶವಾಗು : ತುಸ ಹೊತ್ತಿನ ಮೇಲೆ ನನ್ನ ಮಾತು ಪೂರ ಕೇಳಿಕೊಳ್ಳುವ ಮೊದಲೇ ಭಾರ ಬಂದವರ ಹಾಗೆ . . . ಒದರಾಡಿದರಂತೇ (ಮೂರುದಾ. ೬೩). **ಭಾರವಾಗು** = ಹೊರೆಯಾಗು ; ಒಜ್ಜೆಯಾಗು : ಮಕ್ಕಳು ಮರಿಗಳು ಚಿಕ್ಕ ವರಿರುವಂದು ಸೊಂಟಕೆ ಭಾರವಾಗುವರು (ಶಂಕಾಶ. ೨೨೪-೬) ; ನಾನಾ ಬಗೆಯ ವಾಸನೆಗಳು ಹುಟ್ಟಿದ ಜಾಗಗಳಲ್ಲಿಯೇ ಭಾರವಾಗಿ ಕುಳಿತವು (ಹಸುಹೂ. ೩೦೦). **ಭಾರಹಾಕು** = ಜವಾಬ್ದಾರಿಯನ್ನು ಹೊರಿಸಂ ; ಹೊಣೆಯನ್ನು ಒಪ್ಪಿಸು : ದೇವರ ಮೇಲೆ ಭಾರಹಾಕಿ ನಿಶ್ಚಿಂತೆ ಯಿಂದಿರುವುದು ಅವರ ಸ್ವಭಾವ (ಕಾಂ). [ಸಂ.]

**ಭಾರಂಕ** (ನಾ). ೧. ಘೋರವಾದ ಯುದ್ಧ ; ಭಯಂಕರವಾದ ಕಾಳಗ : "ಭಾರಂಕಮೆನಲ್ಕೆ ದಂಡಿ" (ಛಾರಶ. ೩೯) ; ಕದನವಿದ ಭಾರಂಕವಾರಭ್ಯುದಯ ತಲೆದೋಱುವುದೊ ನಮಗೇಕಿದಱ ಚಿಂತೆ ಮುರಾರಿ ಬಲ್ಲನು (ಕುವ್ಯಾಶೀ. ೨-೨೦) ; ಜರಡನ್ಯೆ ಭಾರಂಕದಾಳಿವ ತರಳನೇ ಸುರ ಗಿರಿಯನಾನುವ ಕೊರಳ ಸತ್ವವೆ ಶಿವಶಿವೆಂದುದು ಮೇಲೆ ಸುರಕಟಕ (ಕುವ್ಯಾಶ. ೩೦-೩೩). ೨. ವೀರಯೋಧ, — ಸೈನಿಕ : ವೀರ ರಾವಣ ಕುಂಭ ಕರ್ಣರನು . . . ಚೂರಿಸುವ ಖಿಡ್ಡೆಯದ ಕಡುಹಿನ ಭಾರಣೆಯ ಭಾರಂಕರಿದ್ದುದು ಭೂರಿಭೂಷಣಾಭರಿತ ವೀರಾವೇಶದುಬ್ಬಿನಲಿ (ತೊರರಾ. ೬-೦೦-೬). [< ಸಂ. ಭಾರಾಂಕ]

**ಭಾರಂಗಿ** (ನಾ). ಒಂದು ಬಗೆಯ ಗ್ರಂಥಿಕದ್ರವ್ಯವನ್ನು ಕೊಡುವ ವನಸ್ಪತಿ : "ಹಂಜಿಕಾ, ಬ್ರಾಹ್ಮಣೀ, ಪದ್ಮಾ, ಭಾರ್ಗೀ, ಬ್ರಾಹ್ಮಣ ಯಷ್ಟಿಕಾ, ಅಂಗಾರವಲ್ಲೀ, ಬಾಲೇಯಶಾಕಃ, ಬರ್ಬರಃ, ವಂದಕಃ — ೯ ಭಾರಂಗೀ ಹೆಸರುಗಳು, ಗಂಟುಭಾರಂಗೀ ಎಂಬುವ ಗ್ರಂಥಿಕದ್ರವ್ಯವು ಪ್ರಸಿದ್ಧವಾದದ್ದು, ಕಿರುದೇಗುಗಿಡವೆಂದು ಕೆಲವರೆನ್ನುವರು, ನಾಯಿ ತ್ಯಾಗದ ಮರ" (ಸಿದ್ಧಾಂತಿ. ೦೩೩) ; ಪಲಸಾಲಂ . . . ಭಾರಂಗಿ ನೇಳಲೆರಂ ಪಾದರಿ ತಾಱತಂಡಸು (ಶಾಕ್ತೇಶ. ೦೨-೩೯).

**ಭಾರಂಗ್ಯಾದಿ ಕಷಾಯ** = ಒಂದು ಬಗೆಯ ಕಷಾಯ: ಭಾರಂಗ್ಯಾದಿ ಕಷಾಯ, ಗಂಟುಭಾರಂಗಿ, ಪುಷ್ಕರಮೂಲ . . . ನೀರಿನಲ್ಲಿ ಕಷಾಯ ವಿಕ್ಕಿ ಅಷ್ಟಾವಶೇಷವಾಗಿ ಕಾಸಿ ಕುಡಿಯೆ ತಾಂದ್ರಿಕಸನ್ನಿ ಗುಣಮಕ್ಕುಂ (ಸಳವ್ಯ. ೦೩೬). [ಸಂ. ಭಾರಂಗೀ]

**ಭಾರಕ** (ನಾ). ೧. ಭಾರವನ್ನು ಹೊರುವ ವ್ಯಕ್ತಿ : ಕೆಲರು ಚತುರ್ವೇದ ಭಾರಕರಾದರು (ಆದಪ. ಪು. ೯೬-೧೬೨) ; ಮನುಜನಾಯಕನಾ ನಿಧಾನದ ಕನಕಗಳನಲ್ಲವನು ಭಾರಸಜನದ ಶಿರವಲಿ ಹೊಱಿಸಿ ನಡೆಸಿದನದನು ರಕ್ಷಿಸುತ (ತಮ್ಮಕೃ. ೪-೨೯). ೨. ಹೊಣೆಯನ್ನು ಹೊತ್ತವನು ; ಹೊಣೆಗಾರ : ಧರ್ಮಜನ ವರಮುಖವನು ನಿಂದು ಮಾಡಿಸುವ ಭಾರಕ ನಸುರಹರನಾ ಮುಕುಂದನಂ ಕಾಣ್ಬುದುಳ್ಳೊಡೆ ತನ್ನ ಕೂಡೆ ನೀಂ ಬಂದು ಸೇವಿಪುದು (ಕೈಬಿಣ. ೪-೬೪). ೩. ಹೊರೆ ; ಭಾರ. ೪. ಭಾರ ವಾದವನು ; ಹೊರೆಯಾದವನು : ನಿನ್ನ ಮರೆದಜ್ಞತೆಯಿಂ ಚರಿಸುತ್ತ ಗರ್ವಾಂತಾ ಮಹಿತಾತ್ಮರಂ ಜರಿದು ಭೂಮಿಗೆ ಭಾರಕನಾದೆನಕ್ಕಟ (ಅಮಕ. ೩೦). ೫. ಸೈನಿಕ ; ಯೋಧ : ಊರೊಳೀ ಕಪಿವಾರ್ತೆಯಗಲಕೆ ಬೇರುವರಿದುದು ಬೆಱಗುಬಿಂಕದ ಭಾರಕರು ಭಾರಿಸಿತು ಕೋಟಾವಳಿಯದ ಗ್ರದಲಿ (ತೊರರಾ. ೩-೩-೦). [ಸಂ.]

**ಭಾರಕರ್ತ** (ನಾ). (ಜಗತ್ತಿನ) ಹೊಣೆಯನ್ನು ನಿರ್ವಹಿಸುವವನು ; ದೇವರು ; ಭಗವಂತ : ಭಾರಕರ್ತನು ನೀನು ಬಹುಸಂಸಾರಿಯೆಂಬುದ ನಿಗಮತತಿ ಕೈವಾರಿಸುತ್ತಿದೆ (ಹಂಸಾ. ೩೩). [ಸಂ. ಭಾರಕರ್ತೃ]

**ಭಾರಕಾರಕ** (ಗು). ತೂಕವನ್ನುಂಟುಮಾಡುವ ; ಭಾರವನ್ನುಂಟು ಮಾಡುವ : ಈ ಸಾಂದ್ರತೆಯು ನೀರಿನ ಸಾಂದ್ರತೆಯನ್ನು ತುಸು ಮಿಗುವ ತನಕ, ನೀರು ಭಾರಕಾರಕ ಟಾಂಕಿಗಳ ಒಳಗೆ ಬರುತ್ತಲೇ ಇರುವುದು (ಶಿಶ್ವಾವಿ. ೦೦೬). [ಸಂ.]

**ಭಾರಕ್ಷಮ** (ನಾ). ಭಾರವನ್ನು ಹೊರಲು ಶಕ್ತವಾದುದು, — ಸಮರ್ಥವಾದುದು: "ಧೂರ್ವಹಃ, ಧುರ್ಯಃ, ಧೌರೇಯಃ ಧುರೀಣಃ, ಧುರಂಧರಃ — ಭಾರಕ್ಷಮಗಳಾಗಿ ಹೇಳುವ ಎತ್ತು" (ನಾಸರಾ. ೬). [ಸಂ.]

**ಭಾರಣೆ**[1] 'ಭಾರವಣೆ' ನೋ.

**ಭಾರಣೆ**[2] (ನಾ). ಮಾಟ ; ಮೋಡಿ ; ವಶೀಕರಣವಿದ್ಯೆ : ನೀವೇ ಲಿಂಗಜಂಗಮವಾಗಬಲ್ಲಡೆ ನಾನಾರೆಂಬುದ ವಿಚಾರಿಸಿಕೊಳ್ಳಿರಣ್ಣಾ . . . ಪೂಜೆಯ ಮಾಡುವ ಭಕ್ತಂಗೆ ಭಾರಣೆಯ ವಿದ್ಯೆವ ಹೊತ್ತ ವಿಧಾತನಂತಿರ ಬೇಡ (ಮೋಳಿಮಾ. ೦೯೩-೬೨೬); ಭಾರಣೆ ಮರನಾಳಿ ಕಡಲೋಟ ಮುಂತಾದ ಚಾರುಕೌಶಲ್ಯವಿದ್ಯೆಗಳ . . . ಪೇಳ್ದೀಲಾಚಾರ್ಯರ ಚಾರುಚರಣ ಶರಣೆನಗೆ (ನಾಗಳು. ೦-೧೨) ; ಭಾರಣೆಯ ವಿದ್ಯೆಮಂ ಸಮರದೊಳ್ ತೋಱದೊಡೆ ಧೀರರೇಂ ಮೆಚ್ಚುವರೆ (ಕಬಿತ್ವ. ೨೩-೨೯). 'ಭಾನುಮತಿ' ಪರಾ. [← ಮರಾ. ಭಾರಣೀ = ವಶೀಕರಣವಿದ್ಯೆ ; ಭಾರಣೀ = ಮಂತ್ರಮಾಟ ಗಳಿಂದ ವಶಪಡಿಸಿಕೊಳ್ಳು]

**ಭಾರತ** (ನಾ). ೧. ಭರತವಂಶಕ್ಕೆ ಸಂಬಂಧಪಟ್ಟದ್ದು : ಚಾರುಚರಿತ್ರಂ ಭರತನಪಾರಗುಣಂ ತನ್ನ ಪೆಸರೊಳಮರ್ದಿಸೆಯೆ ಯಶೋಭಾರಂ ಬಲಮುಂ ಕಥೆಯುಂ ಭಾರತಮೆನೆ ನೆಗಟ್ದಂ (ಪಂಪಭಾ. ೦-೬೩). ೨. ಭರತ ವಂಶದಲ್ಲಿ ಹುಟ್ಟಿದವನು. ೩. ಹಿಂದೂದೇಶ ; ಭರತಖಂಡ ; ಭಾರತವರ್ಷ : ಭಾರತಕ್ಕೆ ಒಂದು ಸ್ಪಷ್ಟ ವ್ಯಕ್ತಿತ್ವವಿದೆ ; ತನ್ನದೇ ಎನ್ನುವ ಶ್ರೇಷ್ಠವಾದ ಸಂಸ್ಕೃತಿ ಇದೆ (ಭಾರದ. ೮) ; ಭಾರತದ ರೈಲುದಾರಿ ಬೇರೆಬೇರೆ ಅಳತೆಯವು (ಶೂಬಿವ. ೨೦೩). ೪. ಭರತವಂಶಕ್ಕೆ ಸೇರಿದ ಪಾಂಡವ ಕೌರವರ ಚರಿತ್ರೆ ಮತ್ತು ಅದನ್ನು ವರ್ಣಿಸುವ, ಸಂಸ್ಕೃತ ಭಾಷೆಯಲ್ಲಿ ವ್ಯಾಸಮಹರ್ಷಿಗಳಿಂದ ರಚಿಸಲ್ಪಟ್ಟ ಸುಪ್ರಸಿದ್ಧವಾದ ಇತಿಹಾಸಮಹಾಕಾವ್ಯ ; ಮಹಾಭಾರತ : ಒಳಪೊಕ್ಕು ನೋಡೆ ಭಾರತ ದೊಳಗಣ ಕಥೆಯೆಲ್ಲಮಿಾ ಗದಾಯುದ್ಧದೊಳಂತೊಳಕೊಂಡತ್ತೆನೆ ಸಿಂಹಾ ವಳೋಕನಕ್ರಮದಿನಱಿದಂ ಕವಿರನ್ನಂ (ಗದಾಯು. ೦-೪೩) ; ಭಾರತ ವನ್ನು ಬರೆಯಬೇಕೆಂದು ವ್ಯಾಸರಿಂದ ಪ್ರಾರ್ಥಿಸಲ್ಪಟ್ಟ ಗಣೇಶನು . . . ನಿಬಂಧನೆಯನ್ನು ಮಾಡಿದನು (ಭಾರದ. ೯೬). ೫. ಹಳಗನ್ನಡದಲ್ಲಿ ಪಂಪಕವಿಯು ರಚಿಸಿದ 'ವಿಕ್ರಮಾರ್ಜುನವಿಜಯ'ವೆಂಬ ಚಂಪೂ ಕಾವ್ಯ ; ಪಂಪಭಾರತ : ಚಲದೊಳ್ ದುರ್ಯೋಧನಂ ನನ್ನಿಯೊಳಿನ ತನಯಂ . . , ಧರ್ಮದೊಳ್ ನಿರ್ಮಲಚಿತ್ತಂ ಧರ್ಮಪುತ್ರಂ ಮಿಗಿಲಿ ವರ್ಗಳಿನೀ ಭಾರತಂ ಲೋಕಪೂಜ್ಯಂ (ಪಂಪಭಾ. ೦೪-೬೪). ೬. ಕನ್ನಡ ಭಾಷೆಯಲ್ಲಿ ಗದುಗಿನ ನಾರಣಪ್ಪನೆಂಬ ಕವಿಯಿಂದ ರಚಿತವಾದ, ಮಹಾಭಾರತದ ಕಥೆಯನ್ನು ವಿವರಿಸಿರುವ ಪ್ರಸಿದ್ಧವಾದ ಷಟ್ಪದೀ ಕಾವ್ಯ; ಕರ್ಣಾಟಭಾರತಕಥಾಮಂಜರಿ : ಕಾವ್ಯಕೆ ಗುರುವೆನಲು ರಚಿಸಿದ

ಕುಮಾರವ್ಯಾಸ ಭಾರತವ (ಕುವ್ಯಾ.೮.೦-೦೯). ೭. ಕುರುಕ್ಷೇತ್ರದಲ್ಲಿ ಕೌರವ ಪಾಂಡವರಿಗೆ ನಡೆದ ಯುದ್ಧ ; ಮಹಾಭಾರತ ತಯುದ್ಧ : ಮಿಕ್ಕ ತೋಳ್ವಲದ ಪೊಡರ್ಪು ಕರ್ಣ ನಿನಗುಳ್ಳನಿತೇನೆನಗುಂಟೆ ಭಾರತಂ ಕಲಹಮಿದಿರ್ಚುವಂ ಹರಿಗನಪ್ಪೊಡೆ ಪೋಕ್ಕಳವೇಕ ನೀಂ ಪಳಂಚಲೆವಪೆಯಣ್ಣ (ಪಂಭಾ. ೧೦-೨೩) ; ಮಾರಿಗೌತಣವಾಯ್ತು ನಾಳಿನ ಭಾರತವು . . . ರಣದಲಿ ಸುಭಟಕೋಟಿಯನು ತೀರಿಸಿಯೆ ಪತಿಯವಸರಕ್ಕೆ ಶರೀರವನು ನೂಕುವೆನು (ಕುವ್ಯಾ.೮. ೧೦-೨೦). ೮. ಮಹಾಭಾರತಯುದ್ಧವು ನಡೆದ ಪ್ರದೇಶ ; ಭರತಕ್ಷೇತ್ರ ; ಕುರುಕ್ಷೇತ್ರ : ಅಂತು ಭಾರತಂ ಸಮರಭಾರಾವತಾರಮಾಗೆ (ಗದಾಯು. ೯-೩೭ ವ). ೯. ಭರತಮುನಿಯಿಂದ ರಚಿತವಾದ ನಾಟ್ಯಶಾಸ್ತ್ರ. ೧೦. ನಟ : “ಶೈಲಾಲೀ, ಶೈಲೂಷಃ . . . ಭಾರತಃ, ನಟಃ – ೬ ನಟ್ಟುವನ ಹೆಸರು” (ಸಿದ್ಧಾಂಶಿ. ೩೦೦) ; ಭಾರತನಿಯೋಗಾಳಿ ಜನಪದಪಾರವಿಭವಗಳಿಂದ ಪಾರಾವಾರ ಗಂಭೀರಗಳೆಸೆವ ನೃಪಸಭೆ ಮೆಚ್ಚಿವುತಿರಲು (ಬಸಪು. ೬೦-೨೯). ೧೧. [ದ್ವೈತ] ವಾಯು : ಭ—ಅಂದರೆ ಪರಮಾತ್ಮ, ಅವನಲ್ಲಿ ರತರಾಗಿರುವುದರಿಂದ ಭಾರತಯೆಂದು ವಾಯುದೇವರಿಗೆ ಹೆಸರು (ಹಕಾರ. ೭-೩ ತಾತ್ಪರ್ಯ).

**ಭಾರತದ ಹುಣ್ಣಿಮೆ** = ಭಾರತಹುಣ್ಣಿಮೆ : ಈ ಆಳ್ವಿಕೆಯಲ್ಲಿ ಅದನ್ನು ತಪ್ಪಿಸಿ ಆ ಸ್ಥಳಕ್ಕೆ ಭಾರತದ ಹುಣ್ಣಿಮೆಯಲ್ಲಿ ಹೋಗಲು ಆರಂಭ ಮಾಡಿದರು (ಶತ್ರ.ಅ. ೯೮). [ ಸಂ. ]

**ಭಾರತವರುಷ** (ನಾ). = ಭಾರತವರ್ಷ : ಹಿಮದ ಹೊಯ್ಲಿನ ಸರಸಿಜಕೆ ರವಿಯಂತೆ . . . ಸುರವಿಮಾನಶ್ರೇಣಿಗಳ ನವಪರಿಮಳದ ಪೂರದಲಿ ಭಾರತ ವರುಷಕೀದನು ಪಾರ್ಥ ಬಂದನು ಧರ್ಮಜನ ಹೊರೆಗೆ(ಕುವ್ಯಾ.೮. ೧೦-೦೯).
[ <ಸಂ. ಭಾರತವರ್ಷ ]

**ಭಾರತವರ್ಷ** (ನಾ). ಹಿಮಾಲಯದಿಂದ ಕನ್ಯಾಕುಮಾರಿಯವರೆಗೆ ವ್ಯಾಪಿಸಿರುವ ಹಿಂದೂದೇಶ ; ಭಾರತ ; ಇಂಡಿಯಾ : ವಿಷ್ಣು ಪುರಾಣದಲ್ಲಿ ಪ್ರಶಂಸಿತವಾಗಿರುವ 'ಭಾರತವರ್ಷ'ದ ಪ್ರಭಾವ ಕಾಂಭೋಜಾದಿ ಪ್ರದೇಶಗಳಿಗೂ ಪ್ರಸರಿಸಿತು (ಹುಕ್ಕಾರ. ೧೦೯ ಬೀಳ್ಕ). [ಸಂ.]

**ಭಾರತಹುಣ್ಣಿಮೆ, ಭಾರತಹುಣ್ಣಿವೆ** (ನಾ). ಮಾಘಮಾಸದ ಹುಣ್ಣಿಮೆ; ವ್ಯಾಸಪೌರ್ಣಿಮೆ: ಆ ದಿವಸ ಭಾರತಹುಣ್ಣಿಮೆ. ಇನ್ನು ಫಾಲ್ಗುಣದ ಆರಂಭ ಆಗಲಿದೆ (೩ಶ್ಯ. ೯೦೭). **ಭಾರತಹುಣ್ಣಿವೆ** : ಭಾರತಹುಣ್ಣಿವೆ ಓರಣದಲಿ ಮಿಂದು ಹೂರಣದಾರತಿ ಮನೆಯೊಳಗೆ (ಕುರಂದ.ದಾ. ೫-೧೨೭-೮); ಸಿಕ್ಕಾಗ ಶಿವರಾತ್ರಿ ಇದ್ದಾಗ ಯುಗಾದಿ ಬಂದಾಗ ಭಾರತಹುಣ್ಣಿವೆ (ಕಪ್ಪ ಜಾ. ೩೮೩) ; ಮಾಘಶುದ್ಧ ೧೫ನೆಯ ದಿವಸ ಭಾರತಹುಣ್ಣಿವೆ. ವ್ಯಾಸರಚಿತವಾದ ಮಹಾಭಾರತದ ಪೂಜಾ—ಪಠನಗಳೂ ವ್ಯಾಸಮುನಿಪೂಜೆಯೂ ಈ ದಿವಸ ದೇವಾಲಯಗಳಲ್ಲಿ ನಡೆಯುತ್ತವೆ. ಈ ಕಾರಣದಿಂದ ಇದು ಭಾರತಹುಣ್ಣಿವೆ (ಬಾಹಮ್ಮ. ೦೭೫).
[ ಭಾರತ + ಹುಣ್ಣಮೆ (<ಪೂರ್ಣಿಮೆ) ]

**ಭಾರತಹುಣ್ಣಿವೆ** 'ಭಾರತಹುಣ್ಣಿಮೆ' ನೋ.

**ಭಾರತಾಹವ** (ನಾ). ಮಹಾಭಾರತದ ಯುದ್ಧ : ವಾರಣದ ಕುಂಭಸ್ಥಳಂಗಳ ಚಾರುಮೌಕ್ತಿಕನಿಕರವೋ ಮೇಣ್ ಭಾರತಾಹವ ಕೌತುಕೋದಯರಸಕೆ ನೆಲೆಯಾಯ್ತೊ (ಕುವ್ಯಾ.ಭೀ. ೯-೮೭). [ ಸಂ. ]

**ಭಾರತಿ** (ನಾ). ೧. ಭಾಷೆ ; ಮಾತು ; ನುಡಿ. ೨. ವಾಣಿ; ಸರಸ್ವತಿ : “ವಾಕ್(ಗ್), ವಾಣೀ, ಭಾರತೀ, ಭಾಷಾ, ಗೌಃ, ಗೀಃ, ಬ್ರಾಹ್ಮೀ, ಸರಸ್ವತೀ ಈ ೮ ಸರಸ್ವತಿಯ ಪೆಸರ್” (ಹಳಾಯು. ೩-೮) ; ರತಿಯುಂ ಕಳೆಗುಂದಿವ ಭಾರತಿಯಂ ಜಾಣಿಂದೆ ಪಟಿವ . . . ಅಗ್ಗದ ಸತಿಯರ್ (ಜಗಪು. ೨-೩೦); ಪೌಲೋಮಿಯಿಂ ಭಾಗ್ಯಮಂ ಭಾರತಿಯಿಂ ನಾನಾಕಳಾಕೌಶಲಮಂ ಪತಿಶಯಂ ಬೆತ್ತಿರಲ್ . . . ಮಹಾದೇವಿ ಕಣ್ಗೆಡ್ಡ ಮಾದಲ್ (ಶಬ್ದಶು. ೩-೨೫) ; ಭಾರತಿಯ ಪದ್ಮಪೀಠಂಬೋಲ್ ಮುಖಕಮಲಮೊಪ್ಪಿರೆ . . . ವಾಲ್ಮೀಕಿ ತಾನಾ ಬಟ್ಟೆಯೊಳೆ ಬರುತುಮಿರ್ದಂ (ರಾಶಾಶ್ಯ. ೯೦-೨೩೭). ೩. ಪಂಡಿತ; ವಿದ್ವಾಂಸ : “ಭಾರತಿಯೆನಲ್ಕೆ ವಿದ್ವಾಂಸನೆನಿಸಿಕ್ಕು” (ಹುಂಗರಾ. ೬೭-೨) . ೪. ಆದಿಶಂಕರಾಚಾರ್ಯರ ಪರಂಪರೆಗೆ ಸೇರಿದ ಕೆಲವು ಜಗದ್ಗುರುಗಳು ತಮ್ಮ ಹೆಸರಿನ ಮುಂದೆ ಸೇರಿಸಿಕೊಳ್ಳುವ ಉಪಪದ: ಶೃಂಗೇರಿಯ ರಾಮಚಂದ್ರಭಾರತಿ ೧೫೦೮ ರಿಂದ ೧೫೬೦ರ ವರೆಗೆ ಪಟ್ಟದಲ್ಲಿದ್ದಂತೆ . . . ತೋರುತ್ತದೆ (ಕಂಶ. II. ೨೦೦). ೫. ಒಂದು ಬಗೆಯ ಸಸ್ಯ ; ಒಂದೆಲಗ ; ಬ್ರಾಹ್ಮೀ. ೬. [ಕಾವ್ಯಮೀ] ನಾಟಕಲಕ್ಷಣ ಪ್ರಕರಣದಲ್ಲಿ ಹೇಳಿರುವ ನಾಲ್ಕು ವೃತ್ತಿಗಳಲ್ಲಿ ಒಂದು : ಭಾರತಿ ಸಾತ್ವತಿ ಕೈಶಿಕೆಯಾರಭಟಿಯುಮೆಂಬ ವೃತ್ತಿಯೊಳ್ ರಸಮಂ ಸಂಚಾರಿಸುವ ಭಾವಮಂ ವಿಸ್ತಾರಿಸುವ ಬೆಡಂಗು ಬೇಜೆ ನೀರಾಂಜನೆಯಾ (ಅಜಪು. ೯-೨೬); ಭಾರತಿ ಸಾತ್ವತಿ ಕೈಶಿಕೆಯಾರಭಟಿಯೆನಿಪ್ಪ ವೃತ್ತಿಗಳ್ ನಾಲ್ಕಕ್ಕುಂ (ಕಾವ್ಯಾವ. ೮೩೭) ; ವೃತ್ತಿ ಎಂದರೆ ನಾಟಕದಲ್ಲಿ ಅಭಿನಯಿಸತಕ್ಕ ವಿಷಯಗಳ ಸ್ವರೂಪ ವಿಶೇಷ ; ಇದು ಕೈಶಿಕೀ, ಸಾತ್ವತೀ, ಆರಭಟೀ, ಭಾರತೀ ಎಂದು ನಾಲ್ಕು ವಿಧ (ಸಂಪಾಟಿ. ೦೩). ೭. [ಸಂಗೀತ] ತಂತ್ರೀವಾದ್ಯಗಳಲ್ಲಿ ಒಂದು : ತಂತ್ರೀವಾದ್ಯಂಗಳು :—ವಿಳಕ ವಿಪಂಚಿಕೆ . . . ಬ್ರಹ್ಮವೀಣೆ ಸ್ವರವೀಣೆ ಭಾರತಿ ಅಲಾಬುಪಲ್ಲಕಿ ಆಕಾಶವೀಣೆ . . . ಎಂಬ ಮೂವತ್ತುಮೂಜು ತಂತ್ರೀವಾದ್ಯಂಗಳಲ್ಲಿ (ಶಿವೀಳ. ೨೩೭). ೮. [ದ್ವೈತ] ಮುಖ್ಯಪ್ರಾಣದೇವರ ಪತ್ನಿ ; ವಾಯುದೇವರ ಪತ್ನಿ : ಶರಣು ಭಾರತಿದೇವಿಗೆ ಶರಣು ವಾಯುರಮಣಿಗೆ (ಪುರಂದ. ೦-೦೮೯ ಪಲ್ಲವಿ) ; ಭಾರತಿ ವಾಣಿ ಈರ್ವರಿಗೆ ಮರುತ ಬ್ರಹ್ಮರು ಉತ್ತಮರು (ಹಕಾರ. ೨೫-೦೦).

**ಭಾರತೀಕರ್ಣಪೂರ** = ೧. ಸರಸ್ವತಿಯ ಓಲೆ, — ತಾಟಂಕ. ೨. ಕವಿ ನಾಗಚಂದ್ರನ ಒಂದು ಬಿರುದು : ಆನಂದಾಶ್ರುವಂ ತಾಳ್ದಿದನ ಪಿಬಲಯಶಂ ಭಾರತೀಕರ್ಣಪೂರಂ (ಪಂಪಾರಾ. ೨-೭೭). **ಭಾರತೀಭಾಗಧೇಯ** = ಸರಸ್ವತಿಯಂ ಭಾಗ್ಯದಂತಿರುವವನು ; ಸರಸ್ವತಿಯನ್ನು ಅಭಿವೃದ್ಧಿ ಪಡಿಸುವವನು ; ವಿದ್ವಾಂಸ : ದಾನೋತ್ಕರದೊಳ್ ಇಂದಾತ ಮೆಂತಂತೆಸೆದನಭಿನವಂ ಭಾರತೀಭಾಗಧೇಯಂ (ರಾಜಶೇ. ೯-೦೨೯). **ಭಾರತೀಭಾಳನೇತ್ರ**=ವಿದ್ಯೆಯಲ್ಲಿ ಪರಮೇಶ್ವರನಂತಿರುವವನು ; ಉದ್ದಾಮ ಪಂಡಿತ : ನಂದನಂ ತದ್ಧರಣೀಶಾವಾಸದೊಳ್ ಶೋಭಿಸುತಿರೆ ಒಗೆದಂ ಭಾರತೀಭಾಳನೇತ್ರಂ (ಚಂದ್ರಪು. ೩-೦೦೯). [ಸಂ. ಭಾರತೀ]

**ಭಾರತಿಕ** (ಗು). ೧. ಭರತಮುನಿಗೆ ಸಂಬಂಧಪಟ್ಟ ; ಭರತಮುನಿಯಿಂದ ಪ್ರವೃತ್ತವಾದ : 'ಭಾರತಿಕವಿದ್ಯೆ' ಪರಾ. (ನಾ). ೨. ನಾಟ್ಯಕಲಾವಿದ ; ನಟ : ದೆಸಸಿಂ ಭಾರತಿಕಂಗೆ ನಾಟ್ಯಘಟನ ಪ್ರಸ್ತಾವನಾಟೋಪಮಂ (ಆದಿಪು. ೯-೦೨) ; ಗೀರ್ವಾಣಮಂಗಳಗಾಯಕರೆ ಸಂಗೀತಗಾಯಕರಾಗೆ ನಿಳಿಂಪ ಭಾರತಿಕರೆ ನಟ್ಟುವರಾಗೆ ಸನ್ಮಾರ್ಗನಾಟಕಾರಂಭಪ್ರಸ್ತುತಪವಿತ್ರಸೂತ್ರಧಾರನೆ ಮುಂದೆ ನಿಂದು ಪುಷ್ಪಾಂಜಲಿಯಂ ಕೆದಜೆ (ಶಾಂತಿಪು. ೦೦-೬೦ ವ) ; ಭಾರತಿಕನಾಗೆ ಮಂದಸಮೀರಂ ಕೈನಿಜಾದುಮುತ್ಸವಧ್ವಜತತಿಗಳ್ (ಪಂಪಾಮಾ. ೯-೨೭). [ಸಂ.]

**ಭಾರತಿಕವಿದ್ಯೆ** (ನಾ). ಭರತಮುನಿಯಿಂದ ಪ್ರವೃತ್ತವಾದುದೆನ್ನಲಾದ ವಿದ್ಯೆ ; ನಾಟ್ಯಶಾಸ್ತ್ರ ; ನಾಟ್ಯಕಲೆ : ಭಾರತಿಕವಿದ್ಯೆಯೊಳ್ ತೂರ್ಯತ್ರಿತಯಮಾಧುರ್ಯಮಾನಭಾವಭಂಗಿಯುಮಂ ನೀತಿಶಾಸ್ತ್ರದೊಳ್ ಧರ್ಮಾರ್ಥಕಾಮೋಪಲಬ್ಧಿತಾತ್ಪರ್ಯಮುಮಂ ಪ್ರತ್ಯೇಕಮಭಿವ್ಯಂಜನಮುಮಂ ಮಾಟ್ಪಂ (ಅಪಂಪು. ೬-೯ ವ). [ಸಂ. ಭಾರತಿಕವಿದ್ಯಾ]

**ಭಾರತೀಪತಿ** (ನಾ). ಸರಸ್ವತಿಯಂ ಗಂಡ; ಬ್ರಹ್ಮ : ಭಾರತೀಪತಿ ಚತುರಪರಿಮಿತೋದಾರ ಗಂಭೀರಭಾಷಿತಂಗಳಿಂ ಬಿನ್ನಪಂಗೆಯ್ಯೆ (ಜಗಪು. ೨-೬೬ ವ). [ಸಂ.]

**ಭಾರತೀಯ** (ಗು). ೧. ಭಾರತಕ್ಕೆ ಸಂಬಂಧಪಟ್ಟ; ಭಾರತದೇಶಕ್ಕೆ ಸೇರಿದ : 'ಭಾರತೀಯ ಸಂಪ್ರದಾಯ' ಪರಾ· (ನಾ). ೨. ಭರತ ಖಂಡದಲ್ಲಿ ಹುಟ್ಟಿದವನಂ; ಭಾರತರಾಷ್ಟ್ರದ ಪ್ರಜೆ : ಭಾರತವೆಲ್ಲ ಒಂದೇ ದೇಶ, ಭಾರತೀಯರೆಲ್ಲ ಒಂದೇ ಜನಾಂಗವೆಂಬುದು ಈ ದೇಶದಲ್ಲಿ ಈ ಜನದಲ್ಲಿ ಒಂದೇ ಸಂಸ್ಕೃತಿ ಇರುವುದರಿಂದ ಇದಕ್ಕೆ ಸಂದೇಹವೇ ಇಲ್ಲ (ಭಾರದ. ೪); ಪ್ರಾಚೀನಭಾರತೀಯರ ತತ್ತ್ವವಿಚಾರಗಳ ಭಾಷಾಂತರ ಅಥವಾ ಸಂಗ್ರಹವು ಸ್ವಾಭಾವಿಕವಾಗಿಯೇ ಬಹು ವ್ಯತ್ಯಾಸವಾಗಿರಬಹುದು (ಭಾತತ್ತ್ವ. ೧೦ ಮುನ್ನುಡಿ). [ಸಂ.]

**ಭಾರತೀಯತೆ** (ನಾ). ಭಾರತೀಯನಾಗಿರುವಿಕೆ ; ಭಾರತೀಯತ್ವ : ಈ ತೆರನಾದ ದೇಶಪ್ರೇಮವು ಮತ್ತು ಭಾರತೀಯತೆ ಅತನ ವೇಷಭೂಷಣ ದಲ್ಲಿಯೂ . . . ಎದ್ದು ಕಾಣುತ್ತಿದ್ದವು (ಸಸ್ಮಕ. ೦೩೦). [ಸಂ. ಭಾರತೀಯತಾ]

**ಭಾರತೀಯತ್ವ** (ನಾ). = ಭಾರತೀಯತೆ : ಒಮ್ಮೆಗೇ ಪಾತಿವ್ರತ್ಯ, ಉದ್ದೀಪನ, ಮೃದುತ್ವ – ಲಕ್ಷಣಗಳನ್ನು ವ್ಯಕ್ತಪಡಿಸುವ ಅಜಂತಾ ಹೆಣ್ಣುಗಳಲ್ಲಿ ಒಂದು ವಿಶಿಷ್ಟ ಭಾರತೀಯತ್ವವನ್ನು ಕಾಣಬಹುದು (ಭಾರದ. ೩೨೬). [ಸಂ.]

**ಭಾರತೀಯಸಂಪ್ರದಾಯ** (ನಾ). ಭರತಖಂಡದಲ್ಲಿ ಅನೂಚಾನವಾಗಿ ನಡೆದುಕೊಂಡು ಬಂದಿರುವ ನಡವಳಿಕೆ, – ಪದ್ಧತಿ, – ಆಚಾರ : ಸಂಸ್ಕೃತಿಯ ದೃಷ್ಟಿಯಿಂದ ಹಿಮವತ್ಸೇತುಪರ್ಯಂತ ಒಂದೇ ವಿಧವಾದ ಭಾರತೀಯಸಂಪ್ರದಾಯ ಸ್ಥಿರವಾಯಿತು (ಮುಕ್ಕಾರ. ೦೨೬ ಪೀಠಿಕೆ). [ಸಂ.]

**ಭಾರತೀಯಸಂಸ್ಕೃತಿ** (ನಾ). ಭರತಖಂಡದ ಜನತೆಯ ಮಾನಸಿಕ ಸಾಧನೆ ; ಭಾರತೀಯರ ಬೌದ್ಧಿಕಸಿದ್ಧಿ : ಭಾರತೀಯಸಂಸ್ಕೃತಿಯನ್ನು ವೈದಿಕಸಂಸ್ಕೃತಿ ಎಂದು ಹೇಳುವುದರಲ್ಲಿ ಔಚಿತ್ಯವಿದೆ (ಮುಕ್ಕಾರ. ೯೬ ಪೀಠಿಕೆ). [ಸಂ.]

**ಭಾರತೇಯ** (ನಾ). = ಭಾರತೀಯ ೨ : ಪ್ರಾಣಿಮಾತ್ರದಲ್ಲಿ ಜೀವವನ್ನು ಆದಿಯಿಂದ ಒಪ್ಪಿಕೊಂಡು ಬಂದಿರುವವರು ಭಾರತೇಯರು (ಜೀವಾತ್ಮ. ೦೯೦). [ಸಂ.]

**ಭಾರದಡಿ** (ನಾ). (ಉಕ) ದೊಡ್ಡತನ ; ಗೌರವ : ಸಾಮಂತನು ಏನಾದರೂ ಕೃಷ್ಣ ತನಯನ ಮೇಲೆ ಅವಲಂಬಿಕೆ ಮಾಡತಕ್ಕ ಮನುಷ್ಯನೇ ಇದ್ದಿಲ್ಲ. ಮೇಲಾಗಿ ಅವರ ತಾಯಿಯು 'ಭಾರದಡಿ'ಯ ಹೆಣ್ಣುಮಗಳು (ಶಿವಶಾ. ೦೦೨).

[←ಮರಾ· ಭಾರಧಡೀ = ಭಾರವಾದ ವಸ್ತು; ದೊಡ್ಡ ಸಾಮಾನು]

**ಭಾರದ್ವಾಜ** (ನಾ). ೧. ಭರದ್ವಾಜನೆಂಬ ಮಹರ್ಷಿಗೆ ಸಂಬಂಧಿಸಿದುದು: ಭಾರದ್ವಾಜವಿಶಾಲಗೋತ್ರಮನುದಂಚದ್ಭಾರತಕ್ಷೇತ್ರಮಂ . . . ಸಾರಂಚಿ ತ್ರಿಸವಂತಲಂಕರಿಸಿತಂಬಾಗಳ್ (ರಪುರಾಣ. ೦-೮೦). ೨. ಭರದ್ವಾಜ ಮುನಿಯಿಂದ ಪ್ರವೃತ್ತವಾದ ಗೋತ್ರದಲ್ಲಿ ಹುಟ್ಟಿದವನು. ೩. ಭರದ್ವಾಜನ ಮಗ ; ದ್ರೋಣ : ಅಂತು ಭಾರದ್ವಾಜನಾಗಾಮಿಕ ಸಂಗ್ರಾಮರಂಗಕ್ಕೆ ಪಾತ್ರಂಗಳಂ ಸಮೆಯಿಸುವ ಸೂತ್ರಧಾರನಂತೆ ಶಸ್ತ್ರವಿದ್ಯಾಭ್ಯಾಸಂಗೆಯ್ಯುತ್ತಿರೆ (ಕಂಪಭಾ. ೨-೩೯ ವ) ; ಓಜಂ ಗಡ ಚೀ ಭಾರದ್ವಾಜಂ ಗಡ ಬಿಲ್ಲ ಒಳ್ಪೆಯುಂ ಕುಲಮುಂ ನಿರ್ವ್ಯಾಜಂ ಮಸುಬುವ್ವ ಪಾಂಡುತನೂಜರ ಪಕ್ಕದೊಳ್ ಪಾಟಿಗಿಡೆ ನೆಗಟ್ದುದೆಂಬಂ (ಗದಾಯು. ೨-೦೬); ನೃಪಾಲಶ್ರೇಣಿಯನು ಶಸ್ತ್ರಾಸ್ತ್ರ ಕಳೆಯಲಿ ಜಾಣರನು ಮಾಡಿದನು ಭಾರದ್ವಾಜಮುನಿಯಂದು (ಕುಪ್ರಾಆ. ೬-೨೨). ೪. ಸಪ್ತರ್ಷಿ ಗಳಲ್ಲಿ ಒಬ್ಬ; ಭರದ್ವಾಜ. ೫. ಒಂದು ಬಗೆಯ ಹಕ್ಕಿ; ಹೆಗ್ಗಾರ : ವಲಿಯ ಭಾರದ್ವಾಜ ಪಿಕ ಪಿಂಗಲಿ . . . ಶಿಖಿ ಮಡ ಗೊಳಲೆ ಮುಖ್ಯವಿಹಂಗವಿವೆ ವೈದೇಹಿ ನೋಡೆಂದ (ತೊರರಾ. ೩-೦-೩೩); ಹರಿಣ ಭಾರದ್ವಾಜ ಪಂಗಂಗಳು ತಡೆಯೆ ನರಿ ನವಿಲು ನಕುಳ ವಾಯಸಂ ಗಳು ತಿರ್ದೆ ಶುಭಶಕುನಂಗಳು (ಎಲೀಳ·೦೨೩); ಕಂಗೊಳಿಪ ಕೊಂಚೆ ಭಾರದ್ವಾಜ ಚೆಂಬೋತ . . . ಪಿಂಗಳಿಕ ಸಾಲ್ವ "ನರಲಿಗನಸಗವಕ್ಕಿಗಳ ಸಂಗಮೊಪ್ಪಿರ್ದವಲ್ಲಿ (ರುಕ್ಮಾಂಗ. ೦೦-೩). ೪, ೫ : ಬಂಧುರ ಭಾರದ್ವಾಜ ಶಾಂಡಿಲ್ಯಕ ಶುಕ ವಿಮದಾಗಸ್ತ್ಯಕಂ ತಾಪಸಪ್ರೋತ್ಕರಮಂ ಸೋಮಾರ್ಕ ರುಕ್ಷಾಂಚಿತಮದು ನಭಮಂ ಪೋಲ್ತು ಚೆಲ್ವಾಯ್ತರಣ್ಯಂ (ರಾಜಶೇ. ೩-೬೩). ೬. ಅಗಸ್ತ್ಯ. ೭. ಅಂಗಾರಕಗ್ರಹ. [ಸಂ.]

**ಭಾರದ್ವಾಜತನೂಜ** (ನಾ). ಭಾರದ್ವಾಜಋಷಿಯ ಮಗ ; ದ್ರೋಣ : ಭಾರದ್ವಾಜತನೂಜಂ ಚಾರುಗುಣಂ ದ್ರೋಣನೆಂಬಂ. . . ಜನವಿನುತ ಚಾಪವಿದ್ಯಾಧಾರಂ (ಪಂಪಭಾ. ೦೦-೩೬). [ಸಂ.]

**ಭಾರದ್ವಾಜಿ** (ನಾ). ಕಾಡುಹತ್ತಿಗಿಡ : "ಆ ಹತ್ತಿಯು ಗಿಡು ಅಡವಿಯಲ್ಲಿ ಹುಟ್ಟಿದರೆ ಭಾರದ್ವಾಜಿಯೆನಿಸುಗು" (ಪಾಕಶಾ· ೦೦೦). [ಸಂ. ಭಾರದ್ವಾಜೀ]

**ಭಾರಯಷ್ಟಿ** (ನಾ). ಭಾರವನ್ನು ಹೊರುವ ಕಂಬಿ,–ಅಡ್ಡೆ: "ಭಾರ ಯಷ್ಟಿಃ, ವಿಹಂಗಿಕಾ—ಈ ೨ ಕಾ(ಚಿ)ಸಿನ ಕಂಬಿ" (ಪಲಾಪದು. ೦೨೩-೬೩). [ಸಂ.]

**ಭಾರಯಿಸು** 'ಭಾರಿಸು' ನೋ.

**ಭಾರವಡ್ಡಿಗೆ** 'ಬಾರವಟ್ಟಿಗೆ' ನೋ.

**ಭಾರವಣೆ, ಭಾರಣೆ**[1] (ನಾ). ೧. ಹೊರೆ ; ತೂಕ ; ಭಾರ. ೨. ಹೆಚ್ಚಳ ; ಆಧಿಕ್ಯ; ಅತಿಶಯ: ಶಿವನರ್ಚನೆಯ ಹರಿವರಿಯ ಶರಣರ ಶಿರತಿಣಿಯ ಭಾರವಣೆಯ ಮೇಲೆ ಮೆಲ್ಲನೆ ನರ್ತನದ ನಟನೆ ಮೈಸಂದು ಕೈವೀಸಿ ನಡೆದು ಬರೆ (ಕೀಚರ. ೦೦೦-೦); ಯುಧಿಷ್ಠಿರ ವೀರನಂದಿವ್ಮಡಿಯ ನೇಹದ ಭಾರ ವಣೆ ತೋಱುವುದಿದೇನ್ಯ ಕರ್ಣನಾರೆಂದ (ಕುಪ್ರಾಕ. ೨೬-೨೪) ; ಬರುತ ಕಂಡನು ತೊಳಗಿ ತೋಱುವ ಶಿರದ ಸಿರಿಪಾದುಕೆಯ ಪುಳಕಾಂಬರದ ಭಾರ ವಣೆಯಲಿ ಬಳುಕುವ ಭದ್ರಕಾಯನನು (ಐಭಾಗ. ೩-೦-೩೬). ೩. ಹಿರಿಮೆ ; ಪೆಂಪು ; ಘನತೆ ; ಠೀವಿ : ಕಡುಮಸದ ಕಲಿ ರಾಜಪುತ್ರರ ನಡುವೆ ಮೈ ಪರಿಮಳದಿ ದೆಸೆ ಕಂಪಿಡಲು ಭಾರವಣೆಯಲಿ ಬಂದನು ಕರ್ಣನೋಲಗಕೆ (ಕುಪ್ರಾದ್ರೋ. ೧-೦೪). ೪. ಆಡಂಬರ; ಆಟಾಟೋಪ; ಕೋಲಾಹಲ : ಬವರಿಯಲಿ ಪಯಪಾಡಿನಲಿ ಮೈಲವಣಿಯಲಿ ಬಿನ್ನಾಣದಲಿ ಭಾರವಣೆ ಯಲಿ . . . ಕೌರವಮಹೀಪತಿ ತೋಱಿದನು ಶ್ರಮವನು ಕಠಾರಿಯಲಿ (ಸಂಭಶ. ೦೬-೯೯); ಪ್ರತಿಭಟನಭಾರವಣೆ ಲೇಸೈ ಕರ್ಣ (ಕುಪ್ರಾವಿ. ೮-೦೩).

**ಭಾರಣೆ**[1] : ೧. "ಭಾರಣೆಯೆನೆ ಬಲುಭಾರಂ" (ಭಾರು. ೩೯); ಸಾರಪರಿಮಳ ವಸ್ತುಗಳ ಬಲುಭಾರಣೆಯ ಪೆಟ್ಟಿಗೆಗಳೊಟ್ಟಿತು (ಕುಪ್ರಾಶ. ೦೭-೨೬); ಜಗತಿ ಜರಿದುದು ರಣದ ಹೆಣವೆಟ್ಟಗಳ ಭಾರಣೆಗೆ (ತೊರರಾ. ೬-೦೩-೨); ಭಾರಣೆಯ ಗಂಡಶೈಲಗಳೆಲ್ಲ ಗಮನದಲು ಮಾರುತನ ಗತಿವಿಡಿದು ಪಡಿಬಲವು ಮುಂಕೊಂಡು ಧಾರಿಣೀಶನ ಸುತ್ತಿ ಪೋಪಂತದೇಂ ಬೆಡಗ ತೋರುವುದೊ ತತ್ಸಮಯದಿ (ಜಂಕಾರಾ. ೩-೦-೨೦). ೨. ಕುಣಿವ ಕುದುರೆಯ ಮದದ ಬಲುಭಾರಣೆಯಲೊಲೆವಾನೆಗಳ . . . ತಿವಿದಗಿವ ಭಟರೊಡ್ಡಣೆ ಸಘಾಡಿಸಿತೆರಡು ಬಲದಲಿ (ಕುಪ್ರಾಶ. ೨-೩); ಅಧಿಕಭೀತಿಯ ಭಾರಣೆಯಲಿರಲುರಿ ಧಡಾಳಿಸಿ ಭೋರೆನುತ ಹಬ್ಬಿದುದು (ತೊರರಾ. ೬-೩೭-೦೦); ಭಾರಣೆಯ ಬಲದೊಡನೆ ಕುದುರೆಗಾವಲೋಳಿರ್ದ ವೀರತಾಮ್ರಧ್ವಜನ ಮಂತ್ರಿ ನಕುಲಧ್ವಜಂ ದೂರದೊಳ್ ಕಂಡನು (ಜೈಮಿಭಾ. ೨೩-೯). ೩. ಅದಟನೊಳ್ಪೀರದೊಳ್ಭಾರಣೆಯೊಳು . . . ಕಾಣೆನ ವರಿರ್ವರ್ಗೆ ಸಮರಾದ ಕಲಿಗಳಂ (ಜೈಮಿಭಾ. ೨೨-೦೨); ವಿಚಾರವಳಿದಾರೂಢ ಯೋಗಿಯ ಭಾರಣೆಯಲಕ್ರೂರನೆಸೆದನು ಭಕ್ತಕೇಳಿಯಲಿ (ಅಕ್ರೂಚ. ೨-೫೭). ೪. ಭೈರವನ ಭಾರಣೆ ರಕ್ಕಸರುರ್ಬು ಮಿಱು ಮೊತ್ತಂ ಗಣನಾತಿರೇಕಮೆನ ಲೊಪ್ಪುವವೋಲ್ ನೆರೆದಿರ್ದುದಾಕ್ಷಣಂ ಸಂಗರದುಜ್ಜುಗಕ್ಕೆ ಚತುರಂಗಬಲಂ

(ದಶಕು. ೬-೯೯); ಕಾಳಗದೊಳಿದಿರಾರು ಭೀಮಾರ್ಜುನರ ಭಾರಣೆಗೆ (ಕುಮಾ.ಸ. ೩-೯೦); ಆರು ಮುರಹರನಲ್ಲದಸುವನು ಹೀರುವರು ಪೂತನಿಯ ಶಕಟನನಾರೊದೆದು ಹುಡಿಹುಡಿಯ ಮಾಳ್ಪರು ಮಾರುತಾಸುರನ ಭಾರಣೆಯ ಬಲುಗೈವ ವೀರರದಾರು (ಕಿಭಾಗ. ೨-೩-೦೭). ೫. ಹೊಣೆಗಾರಿಕೆ ; ಕಾರ್ಯನಿರ್ವಹಣೆಯ ಜವಾಬ್ದಾರಿ :. ತಿಳಿಯಲಟ್ಟದ ಸಾತ್ಯಕಿಗೆ ಕೊಳುಗುಳದ ಭಾರಣೆಯಾಯ್ತು (ಕುಮಾ.ದ್ರೋ. ೦೨-೩) ; ಊರ ನೇಣುಗಳು ದರವೇಷ್ಟನಭಾರಣೆಗೆ ಬಾರದುದನೊಂದೇ ಸೇರಿದುದನರ್ಜುನ ಮಹಾ ವಿಟಪಿಗಳನೀ ಧರೆಗೆ ಬೇರುಸಹಿತೆಡಗೆಡಹುವುದ . . . ನೆಟಿ ಕಂಡೆ ನಾನೆಂದ (ಕಿಭಾಗ. ೦೦-೩೨-೨೮).

[<ಸಂ. ಭಾರ. /ಮರಾ. ಭಾರಾವಣೇ=ಬಹಳ ಭಾರವಾಗು]

**ಭಾರವಹ** (ನಾ). ೧. ಹೊರೆಯನ್ನು ಹೊರುವವನು. ೨. ಹೊಣೆಯನ್ನು ಹೊರುವವನು ; ಹೊಣೆಗಾರ : ತುರಗವಾರಗಜಶಿಕ್ಷಾಭಾರವಹರಿಂ ವಿಳದಪಾರಧನರಿಂ ಪೊಜಿಗುವಾ ರುಚಿರಪಟ್ಟಣಮಿಳಾರಮಣಯುಕ್ತಂ (ರಾಜಶೇ. ೨-೯೦). [ಸಂ.]

**ಭಾರವಾಸಿ** (ನಾ). ಹೆಚ್ಚು ಭಾರ ; ಅಧಿಕವಾದ ತೂಕ : ಪಾರಜಾಗೀರು ಹೊನ್ನಿನ ಚೀಲಚೀಲಗಳು ಭಾರವಾಸಿಯ ಸ್ವರ್ಣರಜತದಿಂ ಅಂಬಾರಿಸಹ ಅಶ್ವಗಜಸಮೂಹ . . . ಧವಳಛತ್ರಗಳನಾರಾರಿಗೀವುದೀವೃತ್ತಿರಲು ರಾಜಚೂಡಾಮಣಿಯ ಸಭೆಯೊಳೊಲವಿಂ (ಕೃ.ಕ.ಚಿ. ೩-೩೩). [ಭಾರ + ವಾಸಿ$_1$]

**ಭಾರವಾಹ** (ನಾ). ಭಾರವನ್ನು ಹೊರುವವನು ; ಹೊರೆಯಾಳು : “ಭಾರವಾಹಃ. ಭಾರಿಕಃ—೨ ಹೊರೆ ಹೊರುವವನ ಪೆಸರು” (ಸಿದ್ಧಾಂತಿ. ೩೦೨). [ಸಂ.]

**ಭಾರವಾಹಕ** (ನಾ). = ಭಾರವಾಹ : ಯುವರಾಜಂಗರಸಂ ರಾಜ್ಯವಿಳಾಸಮನಿತ್ತು . . . ಭಾರವಾಹಕಂ ಪೊಜೆಯನಿಳಿಪಿದಂತೆವೊಲಾದಂ (ಪುಲ್ಯಪು. ೯-೦೩೦). [ಸಂ.]

**ಭಾರವಾಹಿ** (ನಾ). = ಭಾರವಾಹ : ಕರ್ತೃಶಾಲಿಯಾದ ಪುರುಷನು, “ಯಃಕ್ರಿಯಾವಾನ್ ಸ ಪಂಡಿತಃ”, ಉಳಿದವರೆಲ್ಲರೂ ಭಾರವಾಹಿಗಳು (ಶ್ರಿಕೃಷೇ. ೦೨೭). [ಸಂ. ಭಾರವಾಹಿನ್]

**ಭಾರವಿಸು** ‘ಭಾರಿಸು’ ನೋ.

**ಭಾರಸಂಖ್ಯೆ** (ನಾ). ಅಧಿಕ ಸಂಖ್ಯೆ ; ಬಹುಸಂಖ್ಯೆ : ಮರಕತದ ಮಧುಪಾತ್ರ ನೀಲದ ಕರಗ ವೈಡೂರಿಯದ ಪಡಿಗವ ಚರರು ತಂದೊಟ್ಟಿದರು ಬಂಡಿಗೆ ಭಾರಸಂಖ್ಯೆಯಲಿ (ಕುಮಾ.ಗ. ೯-೦೩) ; ತಂದು ಬಳಿಕೊಟ್ಟಿದರು ಪರಿಮಳಚಂದನದ ನೀರಸಕುಜಂಗಳನಂದಮಿಗೆ ಮಧ್ಯದಲಿ ಸುರಿದರು ಭಾರಸಂಖ್ಯೆಯಲಿ ಒಂದು ಕಾಳುತ್ಸೇಧದಲಿ ಹಳುಕೊಂದಿದುತ್ತಮಕರ್ಪೂರವನು (ತೊರರಾ. ೬-೩೩-೮೮). [ಸಂ. ಭಾರಸಂಖ್ಯಾ]

**ಭಾರಾಂಕ** (ನಾ). ೧. ಅತಿಶಯವಾದ ಯುದ್ಧ, -ಕದನ : ಬವರದೊಳು ಹರಿಪಾಂಚಜನ್ಯದ ರವ ಭಯಂಕರವಾಯ್ತು ಬಹಳಾಹವದೊಳಗೆ ಪಾರ್ಥಂಗ ಬಿದ್ದುದು ಭಟರ ಭಾರಾಂಕ (ಕುಮಾ.ದ್ರೋ. ೧೦-೦). ೨. ಯೋಧ ; ಪರಾಕ್ರಮಿ: ನೀರಜಭವನ ಮಾನಸಪುತ್ರ ನೀನಲ್ಲದಾರಾದೊಡೀ ಮಾತುಗಳ ಭಾರಾಂಕನಾಗಿಯೆನ್ನೊಡನೆ ಪೇಳ್ದೊಡೆ ಸೀಳಿ ತೋರಣಗಟ್ಟಪೆನೆಂದ (ಬೊಃಹಕ. ೦೨-೩೦). [ಸಂ.]

**ಭಾರಾಮಾರ್ಗ** ‘ಬಾರಾಮಾರ್ಗ’ ನೋ.

**ಭಾರಾವತಾರ** (ನಾ). ಹೊರೆಯನ್ನು ಇಳಿಸುವಿಕೆ ; ಕಷ್ಟವನ್ನು ಪರಿಹರಿಸುವಿಕೆ : ಮುನ್ನಂ ಕೃತಯುಗದೊಳ್ . . . ನೆಗಟ್ತಿಯ ದೈತ್ಯರೆಲ್ಲಮೆನ್ನ ಚಕ್ರಘಾತದೊಳಟ್ಗಿ ಮಟ್ಗಿದಂತಾದರದೊಂದು ಧರಾವನಿ[ತೆ]ಯ ಭಾರಾವತಾರದೊಳೆನಿತಾನುಂ ಘಸಣಿ ಪೋದುದು (ಕಂಪಭಾ. ೬-೨೯ ವ). [ಸಂ.]

**ಭಾರಾಳಸ** (ನಾ). ಭಾರದಿಂದ ಉಂಟಾಗುವ ಆಲಸ್ಯ; ತೂಕದಿಂದ ಉಂಟಾಗುವ ಜಡತ್ವ : ತನ್ನ ನಡೆಯಿಂ ನಡೆಗಲ್ತೊಡವರ್ಪ ಕೇಳಿಹಂಸಾಳಿಯ ಬೆನ್ನೊಳ್ಬೆದೆ ಪಡೆಯಲ್ ಬಸವಲ್ಲದೆ ನಿಂದು . . . ಭಾರಾಳಸದಿಂದವಾದ ಗಮನಾಲಸವೃತ್ತಿಯನೇನನೆಂದಪೆಂ (ಜಗಚಿ. ೨-೯೭).

[ಸಂ. ಭಾರಾಲಸ]

**ಭಾರಿ$_1$** (ಗು). ೧. ಹೆಚ್ಚಾದ ; ಅತಿಶಯವಾದ ; ಅಧಿಕವಾದ : ಭಾರಿ ಧನವನು ತಂದು ಧರೆಗಿಳುಹಿದರು (ಕುಮಾ.ಆ. ೦೯-೩); ನನಗೆ ಬಲು ಭಾರಿ ದಾನ ಮಾಡಿದಿ (ಮುಃಶಪಶ. ೨೯). ೨. ದೊಡ್ಡದಾದ ; ಗಾತ್ರವಾದ : ಜಾಲಿ ಜೀನೊಡವಿಪ್ಪೆ ಪಿಪ್ಪಲಮಾಲೆಯಿವ ಸೋಡಬಲೆ ಲತೆಗಳ ಮೇಲು ಹೊದಕೆಯ ಬಂದಣಿಕೆಗಳ ಭಾರಿಪೊಜೆಗಳಲಿ (ತೊರರಾ. ೩-೦-೨೮). ೩. ಕಟ್ಟುಮಸ್ತಾದ; ಸ್ಥೂಲವಾದ : ಅವರು ಭಾರಿ ಆಳುಗಳಾಗಿದ್ದಾರೆ (ದೇಶೀಶ. ೯೦). ೪. ಬೆಲೆ ಬಾಳುವ ; ಅತಿ ಬೆಲೆಯ : ಆಕೆ ದಿನವೂ ಭಾರಿ ಸೀರೆಯನ್ನೇ ಉಡುತ್ತಾರೆ (ರೂಢಿ). ೫. ತೀವ್ರವಾದ; ಅತಿಯಾದ : ಮೈಯಲ್ಲಿ ಭಾರಿ ಜ್ವರ. ಪೂರಾ ನಿಶ್ಶಕ್ತಿ (ವಾಕ್ಪೋಲೀ. ೦೦೩). ೬. ಭಯಂಕರವಾದ; ಭೀಕರವಾದ: ಭಾರಿಯಾಹವವಾದೆಡೆಗೆ ನಿಮ್ಮನಿದಾರು ಬಿಟ್ಟರುಪಾಯದಲಿ (ಕುಮಾ.ಶ.೯-೦೧). ೭. ಐಶ್ವರ್ಯವುಳ್ಳ; ಸಿರಿಯುಳ್ಳ: ಆತ ಹಲವಾರು ಜನರನ್ನು ತನ್ನ ಕೈಕೆಳಗೆ ಸಂಬಳಕ್ಕಿಟ್ಟುಕೊಳ್ಳಬಹುದು ಎನ್ನುವಷ್ಟು ಭಾರಿ ಮನುಷ್ಯ (ರೂಢಿ). (ನಾ). ೮. ಭಾರವಾದುದು; ತೂಕವಾದುದು. ೯. ದೊಡ್ಡದಾದುದು ; ಗಾತ್ರವಾದುದು : ಭಾರಿಯ ತಲೆವರಿಗೆಗಳಲೊತ್ತಿದರು ಹೊಗಿಸಿದರು ದುರ್ಗವನು (ಕುಮಾ.ಸ. ೩-೩೦); ಭಾರಿಯ ದಂತಿ ಮಹದಾಹವದೊಳಿದುದು (ಕುಮಾ.ದ್ರೋ. ೩-೦೦). ೧೦. ಹೆಚ್ಚಾದುದು ; ಅತಿಶಯವಾದುದು : ಭಾರಿಯ ಭಟರ ಗಡಣದಲಿ ಭಾರಣೆಯಲೈತಪ್ಪ ನಿಜಪರಿವಾರವನು ಬೋಳೈಸಿ (ಕುಮಾ.ದ್ರೋ. ೦೦-೯); ಬಳಿಕಲಾ ದಮಯಂತಿ ಭಾರಿಯ ಬಳಲಿಕೆಯನನುಭವಿಸಿ ತಂದೆಯ ನಿಳಯವನು ಸಾರಿದಳು (ತೊರರಾ. ೩-೨-೦೩). ೧೧. ದಪ್ಪವಾದುದು ; ಸ್ಥೂಲವಾದುದು : ಕರವ ನೊಸಲಲಿ ಚಾಚಿ ಭಾರಿಯ ಭುಜವನೊದಜಿಸುತ ಅರಸಗಭಿವಂದಿಸುತ (ಕುಮಾ.ದ್ರೋ. ೯-೩೦). ೧೨. ಪ್ರಶಸ್ತವಾದುದು ; ಶ್ರೇಷ್ಠವಾದುದು : ಇತ್ತ ಭೂರಿಶ್ರವನು ಭಾರಿಯ ಹತ್ತುಸಾವಿರರಥಸಹಿತ ಕೈಗುತ್ತಿದನು ರಣವಿಜಯಲಕ್ಷ್ಮಿಯ ಲಲಿತಃಬರಿಯಲಿ (ಕುಮಾ.ದ್ರೋ. ೦೯-೦); ಈರೇಳುಲೋಕದ ಪರಗಂಡನೆಂದೆಂಬ ಭಾರಿಯ ಬಿರುದಿನ ಕಡೆಯ ವೀರದಾನವನೆಡಗಾಲಿನೊಳಗೆ . . . ಒಪ್ಪುತಿಹುದು (ಶ್ರಿಕೃಗಾಂ. ೬-೩೩).

**ಭಾರಿಯಾಳು**=ಮಹಾಶೂರ; ಅತಿ ಪರಾಕ್ರಮಿ; ಶ್ರೇಷ್ಠ ಯೋಧ: ಭಾರಿಯಾಳ್ಗೆ ದ್ರೋಣನಾತನು ತೀರಿದನು (ಕುಮಾ.ದ್ರೋ. ೦೬-೩೬); ವೀರವಿಕ್ರಮ ಶೌರ್ಯದಾಗರ ಭಾರಿಯಾಳಭಟರುಗಳ ಬಂಟಂ . . . ಮಾರಿಮುಖನೆಂಜವನು ಬಂದವ ರಾವಣನ ಮಂತ್ರಿ (ಕೌಶಿರಾ. ೩೩-೦೦).

[< ಸಂ. ಭಾರ. / ತೆಲು. ಭಾರೀ. / ಹಿಂ. ಮರಾ. ಭಾರೀ]

**ಭಾರಿ$_2$** (ನಾ). ಸಿಂಹ.

**ಭಾರಿನಿಗಳಾಂಕ**=ಸಿಂಹಕ್ಕೆ ಬೇಡಿಯನ್ನು ಹಾಕಿದವನು ; ಮದಕರಿನಾಯಕನ ಒಂದು ಬಿರುದು : ಆಗ ಭಟರು “ಮಹಾರಾಜ ಛತ್ರಪತಿ ಖಿಡೆಯಶೋವಂತ . . . ಅರಿಕಲಭಕಂಠೀರವ ವೀರಮದಕರಿರಾಜ ಭಾರಿನಿಗಳಾಂಕ ಜಯ ಜಯ” ಎಂದು ಹೊಗಳಿದರು (ಚಿತ್ರಶಾ. ೯೮). [ಸಂ.]

**ಭಾರಿಕ** (ನಾ). ಹೊರೆಯನ್ನು ಹೊರುವವನು : “ಭಾರವಾಹಃ, ಭಾರಿಕಃ—೨ ಹೊರೆ ಹೊರುವವನ ಪೆಸರು” (ಸಿದ್ಧಾಂತಿ. ೩೦೨.) [ಸಂ.]

**ಭಾರಿಮಾಡು** (ಕ್ರಿ). (ವ್ಯವಸ್ಥೆಯಿಂದ ನಿಂತು) ಮುಜರೆ ಮಾಡು ; ಗೌರವ ಸೂಚಿಸು : ಕರಿಯ ಕುಂಭಸ್ಥಳಕಂಕುಶಗಳನೊತ್ತಿ ಭರದಲಿ ನಡಿಸಿ ತಂದಾಗ ನರಸೇಂದ್ರನೆಂಟ್ರಿಗೆ ನಮಿಸಿ ಜೋದರುಗಳು ಹರುಷದೆ

ಭಾರಿಮಾಡಿದರು (ಕಂಪ. ೨೦-೩೩); ತುರಗಾರೋಹಕರ್ಕಳೆಂದು ಕುದುರೆಯು ಬಿರುದಿನೇಱುಟವ ತೋಱಿ ದೊರೆರಾಯ ಕಂಠೀರವಗೆ ಕೈಮುಗಿದಾಗ ಹರುಷದೆ ಭಾರಿಮಾಡಿದರು (ಕಂಪ. ೨೦-೩೬). 'ಬರಾಬರಿ₁', 'ಭರಾಭರಿಗೊಡು' ನೋ. [ ಭಾರಿ ? + ಮಾಡು₁ ]

**ಭಾರಿಸು, ಭಾರಯಿಸು, ಭಾರವಿಸು, ಭಾರ್ಯಸು** (ಕ್ರಿ). ೧. ಭಾರವಾಗು; ಹೊರೆಯಾಗು; ತೂಕವಾಗು. ೨. ಜಡವಾಗು; ಚೈತನ್ಯಹೀನವಾಗು; ಚಟುವಟಿಕೆಯಿಲ್ಲದಾಗು: ಭಾರಿಸಿತು ಮೈ ಮುಖ್ಯದಲಿ ಲಾಳಿ ಸಾರತರ ಲಂಬಿಸಿತು (ಕುವ್ಯಾದ್ರೋ. ೧೧+೨೩). ೩. ಹೊರೆಯನ್ನು ಹೇರು; ಭಾರವನ್ನು ತುಂಬು: ಭಾ[ಪಾಠಾಂ. ಬಾ]ರಿಸಿದ ಬಲುಹೊಱೆಯ ಭಂಡಿಗಳೋರಣಿಸಿದವು ಪಯಣದಲಿ (ಕುರಣ. ೦-೩-೩). ೪. ಹೆಚ್ಚಾಗು; ಅಧಿಕವಾಗು: ನಮಗೀಯರಿಯ ಭಯ ಭಾರಿಸಿತಿದೇನು ನಿಮಿತ್ತವಿದಕೆನಲು (ಕುವ್ಯಾಗ. ೬-೩೦): ಘುಡುಘುಡಿಪ ಕೋಪದಲಿ ದುರ್ಗದ ಹೆಡಕುಪರಿಯಂತೇಱಿ ಪುರ ಗಡಬಡಿಸಿ ಬೆಚ್ಚಿತು ಭಾ[ಪಾಠಾಂ. ಬಾ]ರಿಸಿತು ಭಯವಿನತತನೂಜಂಗೆ (ಕುರಣ. ೪-೩-೨೦); ಕೌರವಂ ಮುನ್ನಿರ್ದ ಸರಸಿಗೈತಂದು . . . ಭಾರಿಸಿದ ಬಳಲಿಕೆಯ ನೀಗಿ ಸರಸಿಯಲಿ (ತುರಂಗ. ೬೩-೨೦). ೫. ಗುಂಪುಗೂಡು; ಸೇರು; ನೆರೆ: ಊರೊಳೀ ಕಟಿವಾರ್ತೆಯುಗಲಕೆ ಬೇರುವರಿದುದು ಬೆಜಗುಬಿಂಕದ ಭಾರಕರು ಭಾರಿಸಿತು ಕೋಟಾವಳಿಯುದಗ್ರದಲಿ (ಕುರಣ. ೩-೩-೦); ಭಾರಿಸಿದುದೆಡಬಲಕೆ ಸಾಂಬಾಕ್ರೂರ ಸಾತ್ಯಕಿ . . . ಪ್ರವೀರಕರು (ಕುಶಾಗ. ೦೦-೬೦-೨೮). ೬. ಹರಡು; ವ್ಯಾಪಿಸು: ಶಿವಶಿವೆಂದುದು ನಿಖಿಳಜಗ ಕೌರವರು ಕಂಪಿಸಿ ಥಟ್ಟುಗೆಡೆದರು ಭುವನದಲಿ ಭಾರಿಸಿತು ಜಯಜಯ ಜಯೆ ಮಹಾಧ್ವಾನ (ಕುವ್ಯಾಉ. ೬-೪೬); ಫಲುಗುಣಂ ಬಿದ್ದನೆಂದು ಭಾರಿಸಿತು ವಾರ್ತೆಗಳ್ಪುರದೊಳಗೆ ದಳದೊಳಗೆ (ತುರಂಗ. ೬೨-೨೯). **ಭಾರಯಿಸು**: ೨. ಕುರುಬಲದ ಹತ್ತಿರಕ್ಕೆ ನಡೆದಂತೆಲ್ಲ ಕುಮಾರನಿಗೆ ತನು ಭಾರಯಿಸಿತು (ಕಣಾ. ೬೯); ಹೃದಯ ನರ್ತಿಸುವುದಿಲ್ಲ —ಭಾರಯಿಸಿದೆ. ಇನ್ನೂ ಭಾರಯಿಸುತ್ತದೆ (ಶಿಬಂಧ-II, ೦೬೪). ೭. ತೀವ್ರವಾಗು; ಅತಿಶಯವಾಗು: ಇದೆತ್ತಣ ವಾದ್ಯ ಇದೆತ್ತಣ ಗಾನ ಎನ್ನುವಂತೆ ನೃತ್ಯರಸಾನುಭವ ಭಾರಯಿಸಿತು (ಶಾಕುಹಿ. ೦೦೮). **ಭಾರವಿಸು**: ೧. ನೆಲ ಭಾರವಿಸಿತಹಿಪನ ಶಿರಕೆ (ಕುರಣ. ೬-೩೬-೦೪). ೪. ಅವನಿಯೆಡೆಗೆಡೆ ಭಂಡಿಗಳು ಭಾರವಿಸಿ ನೂಕಿತು (ಕುಶಾಗ. ೦೦-೩೪-೪೪). ೮. ಒಟ್ಟುಗೂಡಿಸು; ಸೇರಿಸು: ಕ್ರೂರಕರ್ಮರು ತುಡುಕಿ ದ್ರೌಪದಿಯನಾ ಪೆಣಕೆ ಭಾರವಿಸಿ ಬಿಗಿದು ಕಟ್ಟಿದರಾಗಲು (ತಪಂಗ. ೪೩-೬೨). **ಭಾರ್ಯಸು**: ೨. ಹರನ ಕರುಣಕ್ಕೆ ಹಾರೈಸಿ ಭಕ್ತಿಭರದಿಂ ಭಾರ್ಯಸಿ ಮನದ ಮೊನೆಯಂ ಕೋರೈಸಿ (ರಾಶ. ೪-೬೦); ಮಾರವಿಜಯನ ಕಾಣುತ ಭಕ್ತಿ ತಲೆಗೇಱಿ ಭಾರ್ಯಸಿ ಬೀಳುವಂದದೊಳು ಧಾರಣಿಯೊಳು ಸಾಷ್ಟಾಂಗನಮಿತನಾದನಾ ರಾಯನ ದೇವನಂದು (ಶ್ರೀಶಾಖ. ೬-೬೨). ೪. ಮೇರೆಯಿಲ್ಲದ ರಾಜ್ಯ ಮಗನೆ ನಿನಗೆ ವ್ರತಭಾರವಗ್ಗಳವೆಂಬ ಚಿಂತೆ ಭಾರ್ಯಸಿ ನವಗಿದ್ದುದಿಂದು ಹೋಯ್ತೆಂದು ಕುಮಾರನ ಕೂಡೆ ನುಡಿದಳು (ಶರಷ. ೦೯-೦೦೪); ನುಡಿ ಮೆಲ್ಲನಾಗೆ ಬಡನಡು ದೊಡ್ಡಿತಾಗೆ ತವೆ ಬಿಡುವ ನಿಟ್ಟುಸಿರು ಭಾರ್ಯಸೆ (ತ್ರಿಶರಾ. ೪-೪೩); ತನ್ನ ಕೆಲಸವೆ ತನಗೆ ಭಾರ್ಯಸಿ, ಆಕಳಿಕೆ ಮೈಮುರಿತವೆಡೆಗೊಳಲು (ರಾಕ್ಷಪು. ೪೮). ೯. ದೊಡ್ಡದಾಗು; ದಪ್ಪವಾಗು: ಸಾರಿ ಸಂಸರ್ಗಪೂಜೆಯ ನನುಗೊಳಿಸೆ ಮತ್ತಾ ರಾಯ ಕೈಕೊಳುತಿರ್ದ ಭಾರ್ಯಸಿ ಬೆಳೆದೊಂದು ಕುರುವನತ್ತಿತ್ತೊತ್ತಿ ಧೀರನೊಬ್ಬನು ಸೋರಿಪಂತೆ (ಶರಷ. ೬೩-೯೩).

[ಭಾರ + — ಇಸು₃]

**ಭಾರುಂಡ** (ನಾ). ಒಂದು ಬಗೆಯ ಕಾಲ್ಪನಿಕ ಪಕ್ಷಿ; ಎರಡು ತಲೆಯುಳ್ಳ ಹಕ್ಕಿ; ಗಂಡಭೇರುಂಡ: 'ಭಾರುಂಡವನ', 'ಭೇರುಂಡ' ನೋ.

[ಸಂ.]

**ಭಾರುಂಡವನ** (ನಾ). ೧. ಭಾರುಂಡ ಪಕ್ಷಿಗಳು ವಿಶೇಷವಾಗಿ ವಾಸಿಸುವ ಕಾಡು,—ಅರಣ್ಯ. ೨. ಒಂದು ಅರಣ್ಯದ ಹೆಸರು: ಗಂಗಾಸರಸ್ವತಿಗಳ ಪೊಲಬಿಂಟುತುತ್ತರದ ವೀರಮತ್ಸ್ಯಾದಿಗಳ ಬೆಲುವ ಭಾರುಂಡವನ ಮನಿಸಿಯೆ ಕುಳಿಂಗಾಬ್ಧಿ ಲಲಿತಹ್ಲಾದಿನೀಶೈಲಯುತಮಾದ ಕಾಳಿಂದಿಯೆಡೆಗೈತಂದನು (ವಂಶಾಕಾ. ೨-೨೪-೪೪). [ಸಂ.]

**ಭಾರ್ಯಸು** 'ಭಾರಿಸು' ನೋ.

**ಭಾರೋಪಜೀವಿ** (ನಾ). ಹೊರೆಯನ್ನು ಹೊತ್ತು ಜೀವಿಸುವವನು; ಭಾರವಾಹ: "ಭಾರೋಪಜೀವಿ = ಹೊರೆಯನ್ನು ಹೊತ್ತು ಜೀವಿಸುವವನು" (ನಾನಾರ. ೬೭ ೬೪೬). [ಸಂ. ಭಾರೋಪಜೀವಿನ್]

**ಭಾರ್ಗವ** (ನಾ). ೧. ಭೃಗುಮಹರ್ಷಿಯ ಮಗ; ಚ್ಯವನಮಹರ್ಷಿ: ಭಾರ್ಗವನು ನಾಮ. ಚ್ಯವನನೆಂದು ಕರೆಯುವರು (ಪಡಿಶಾ. II. ೬೪೪೩). ೨. ಶುಕ್ರಾಚಾರ್ಯ: "ಉಶನಾ, ಶುಕ್ರಃ, ಕಾವ್ಯಃ, ದೈತ್ಯಗುರುಃ, ಭಾರ್ಗವಃ, ಕವಿಃ, ಧಿಷ್ಣ್ಯಃ — ಈ ೭ ಶುಕ್ರನ ಪೆಸರ್" (ಹಲಾಯು. ೪-೪೮); ಪೋದುದು ಬೊಮ್ಮಂಗೆ ಶಿರಸ್ಸು ಭಾರ್ಗವನು ಕಣ್ಣಾಣಂ . . . ವಿಧಿಯಂ ಮಾಱುವನಾವನ್ನೆ (ಶೋಪಂಶ. ೨೭). ೩. ಶುಕ್ರಗ್ರಹ: ದಿವಸಕರಂಗೆ ಭಾರ್ಗವ ದಿನೇಶಸುತರ್ . . . ಪಗೆವರ್ ನಿರಂತರಂ (ಶಾಕು. ೨-೦೩). ೪. ಭೃಗುವಂಶದಲ್ಲಿ ಹುಟ್ಟಿದವನು; ಪರಶುರಾಮ: ವಾಯುಪಥದೊಳ್ ಶಿತಾಸ್ತ್ರಂಗಳ್ ಪೋ[ಕ]ಂಗಿಡಿಸೆ ಸುಗಿದಂ ಭಾರ್ಗವಂ (ಕಂಕಥಾ. ೦-೬೦); ಕಲಿವೀರವೈರಿಭಟ ಭಾರ್ಗ್ಗವನೀ ನರಸಿಂಹನೆಂದು ಕಾದದೆ ಸರಣೆಂದು ಬಂದಹಿತವರ್ಗ್ಗಮ ಹೇಳದೆ ವೀರದೇಳ್ಗೆಯಂ (ಎಕ. XII, ಶಿಪಟೂ. ೦೨೩-೨೩; 1286); ಮುನ್ನಂ ಭಾರ್ಗವಂ ತಂದೆಯ ನನ್ನಿಗೆ ಮಾತೆ ರೇಣುಕೆಯಂ ಕೊಲ್ಲನೆ! (ರಾಪಾಕ್ಯ. ೨೬-೦೯). ೫. ಬಿಲ್ಲುಗಾರ; ಧನುರ್ಧರ: ಅಂತು ಕಲ್ತು ಮುನ್ನಮೆ ಚಾಪವಿದ್ಯೆಯೊಳಿರಿಂದಮಾತನೆ ಭಾರ್ಗವನೆನಿಸಿದ ಭಾರ್ಗವಂಗೆ ತಾನೆ ಭಾರ್ಗವನಾಗಿ (ಕಂಕಥಾ. ೦-೬೬ ಪ); ಸಿಡಿಲ ಬಳಗಮಿಂದೆಂಬಿನೆಗಂ ತಾಗಿದತ್ತು ಭಾರ್ಗವಸೈನ್ಯಂ (ಕಂಠಾಪು. ೦೩-೩೪); ಬಿಲ್ಲ ಬಲ್ಲಣಿಯ ತೆರಳ್ಕೆ ಭಾರ್ಗವರ ಮೊಗ್ಗರದೊಬ್ಬುಳಿ ಕುಂತದಾಳ ತಿಂತಿಣಿ ನೆಱೆ ತಮ್ಮ ತಮ್ಮ ಬಿರುದಂ . . . ಇಳಾವಳಯಕ್ಕೆಱೆ ಪುತ್ತುಮಿರ್ಪನಂ (ಕಶ್ಯಕ. ೩-೦೨). ೬. ಶಿವ; ಪರಮೇಶ್ವರ. ೭. ಗಜ; ಆನೆ. ೮. ಕುಂಬಾರ; ಕುಲಾಲ. ೯. ಬಾಣ; ಶರ: ಬಾಳ್ಗಡಿಯಿಂ ಸಿಡಿಲ್ವ ಕಿಡಿಯಿಂ ಬೆನ್ನಟ್ಟಿ ನೋಟ್ಪಂಬರೇಚರರಂ ಕಾಗಿದುದುಗ್ರಭಾರ್ಗವಚಯಂ ವಿತ್ರಸ್ತಲೋಕತ್ರಯಂ (ಪರ್ಣಕ. ೮-೪೮).

[ಸಂ.]

**ಭಾರ್ಗವಪುರಾಣ** (ನಾ). ಹದಿನೆಂಟು ಉಪಪುರಾಣಗಳಲ್ಲಿ ಒಂದು; ಭೃಗುಮಹರ್ಷಿಯಿಂದ ಪ್ರೋಕ್ತವಾದ ಪುರಾಣ: ಸನತ್ಕುಮಾರಪುರಾಣ ನಾರಸಿಂಹಪುರಾಣ . . . ಭಾರ್ಗವಪುರಾಣವೆಂಬವೇ ಆಯಾ ನಾಮಧೇಯ ಮುಳ್ಳವರಿಂ ನಿರೂಪಿತವಾದ ಹದಿನೆಂಟು ಉಪಪುರಾಣಂಗಳು (೭ವೇಳ. ೬).

[ಸಂ.]

**ಭಾರ್ಗವಿ** (ನಾ). ೧. ಲಕ್ಷ್ಮಿ: "ಇಂದಿರಾ, ಲೋಕಮಾತಾ, ಮಾ, ರಮಾ, ಮಂಗಳದೇವತಾ, ಭಾರ್ಗವೀ, ಲೋಕಜನನೀ, ಕ್ಷೀರಸಾಗರತನ್ಯಕಾ —೮ ಲಕ್ಷ್ಮಿಯ ಹೆಸರುಗಳೆಂತಲೂ ಅಧಿಕಪಾಠ ಹೇಳುವರು" (ಸಿದ್ಧಾ ೦೩. ೦೮). ೨. ಪಾರ್ವತಿ. ೩. ಗರಿಕೆ. [ಸಂ. ಭಾರ್ಗವೀ]

**ಭಾರ್ಗವೀಪತಿ** (ನಾ). ಲಕ್ಷ್ಮೀಪತಿ; ವಿಷ್ಣು: ಭಾರ್ಗವೀಪತಿಗಮಳ ಸತ್ವಾಂತರ್ಗತಮದಾಗಿಹುದು (ಕಂಕಾ. ೦೨-೪೬). [ಸಂ.]

**ಭಾರ್ಯ** (ನಾ). ೧. ಭಾರವನ್ನು ವಹಿಸಿಕೊಳ್ಳಬೇಕಾದುದು; ಆಶ್ರಯ ನೀಡಬೇಕಾದುದು. ೨. ಸೈನಿಕ; ಯೋಧ. ೩. [ಗಣಿತ] ಒಂದು ಅಳತೆ: ದ್ರೋಣದಿ ಷೋಡಶಭಾಗವ ಕಾಣುತಲಂ

ಭಾರ್ಯವೆನ್ನುತದು . . . ದ್ರೋಣದಲಿ ಹದಿನಾಲ್ಕುಯೋಳಗೆ ವಂದು ಭಾಗೆ ಭಾರ್ಯವೆನಿಸಿಕೊಂಬುದು (ಶಾಸ್ತ್ರರ. ೭೯-೦). [ಸಂ.]

**ಭಾರ್ಯಾದೂತಿ** (ನಾ). ನಾಯಕ–ನಾಯಿಕೆಯರ ಸಮಾಗಮಕ್ಕೆ ಸಾಧಕರಾದ ದೂತಿಯರಲ್ಲಿ ಒಬ್ಬಳು : ದೂತಿಯು ಪ್ರಯತ್ನದಿಂದ ನಾಯಕನ ಹೆಂಡತಿಯಂ ನಂಬಿಸಿ ಆ ಗಂಡನ ಅರಿಕೆಯಿಂದಲೆ ಮೊದಲಲ್ಲಿ ಅಭಿಲಾಷೆಯ ಕುರುಹಾದರೆ ಆ ಬಟ್ಟೆಯಿಂ ನಾಯಕಿಯ ಪಾದರಕ್ಕೆ ನಡೆಸುವಳು. ಅವಳು ಭಾರ್ಯಾದೂತಿಯೆನಿಸಿಕೊಂಬಳು (ಶಾಪುಶ್ಲಾ. ೨೫೯).
[ಸಂ. ಭಾರ್ಯಾದೂತೀ]

**ಭಾರ್ಯೆ** (ನಾ). ಹೆಂಡತಿ ; ಪತ್ನಿ : "ದಾರಾಃ, ಕ್ಷೇತ್ರಂ, ಕಳತ್ರಂ, ಭಾರ್ಯಾ . . . ಗೃಹಾಃ – ಈ ೧೩ ಹೆಂಡತಿ" (ಹಲಾಯು. ೮೦-೩೪೦); ಆರ್ಯಮನ ಬಳಿಗೈದಿದನು ಫಣಿವರ್ಯನೆಂದಾದರಿಸಿ ನಿನ್ನಯ ಭಾರ್ಯೆ ನುಡಿಯಲು ನಿಂದೆನೀ ವನದಲ್ಲಿ ನಾನೀಗ (ತಿಮ್ಮಶಾಂ. ೦೦-೬೯); ನಿನ್ನ ಕೀರ್ತಿಯನ್ನು ನೀನು ಮೆಚ್ಚಿಕೊಂಡರೆ, ನಿನ್ನ ಭಾರ್ಯೆಯು ಸುಮ್ಮನಿರುವು ದಕ್ಕಾದೀತೆ ? (ಅರ್ಯಶ. ೫೨). [ಸಂ. ಭಾರ್ಯಾ]

**ಭಾಲ, ಭಾಳ** (ನಾ). ಹಣೆ ; ನೊಸಲು : ತನ್ನ ದೈವರೇಷೆ ಬರೆಯುವಂತೆ ತಾನೆ ಭಾಲಾ (ಶಾರಶೀ. ೮೯-೦೦). 'ಫಾಲ', 'ಭಾಲಪಟ್ಟ' ಪರಾ. **ಭಾಳ** : "ನಿಟಿಳಂ ಭಾಳಮಳಿಕಮಲಿಗೆ ಲಲಾಟಂ" (ವಸ್ತುಕೋ. ೭೦-೦೮); ಅಗಣಿತಶೋಭಿವೆತ್ತ ಪುರಲಕ್ಷ್ಮಿಯ ಭಾಳದ ಲೋಚನಾಂಶುಮಾಲೆಗಳೆನೆ ಕಾಂತಿಸುತತಿ ದಿಶಾವಳಿಯೊಳ್ ಕುಡಿಯಿಟ್ಟು . . . ಅಗ್ಗಳಿಸಿ ತೋರ್ಪುದು ತತ್ಪುರವೀಧಿವೀಧಿಯೊಳ್ (ಕುಸುಮಾ. ೨-೦೦೦) ; ಸರಸಿಜಾರಿಯ ಕಿರಣ ದೋಳಿಯ ವಿರಚಿಸಿದ ಸಿಂಧೂರಭಾಳದಿ ಕುಣಿವ ಕುಂತಳದ . . . ಗಣಪತಿ ಮಾಡೆಮಗೆ ನಿರ್ವಿಘ್ನದಾಯಕವ (ಕುವ್ಯಾಅ. ೦-೩) ; ಭಸ್ಮತ್ರಿಪುಂಡ್ರಂ ತೊಳಪುದ್ಯದ್ಭಾಳಂ . . ಮಿಸುಗೆ ಚರಿಯಿಪರ್ ತಪ್ಪಲೊಳ್ ಶಾಪ ಸೇಂದ್ರರ್ (ರಾಜಶೇ. ೦-೦೩೨). [ಸಂ.]

**ಭಾಲಪಟ್ಟ, ಭಾಳಪಟ್ಟ** (ನಾ). ೧. ಹಣೆ ; ನೊಸಲು ; ನೆತ್ತಿ : ರಾಷ್ಟ್ರ ನಿರ್ಮಾಣದಲ್ಲಿ ಕವಿಯ ಕಾರ್ಯವಿದೆ. ವಿಶ್ವದ ಭಾಲಪಟ್ಟದಲ್ಲಿ ಅವನ ಸಾಲುಗಳೂ ಇವೆ (ಶಾಹಿಶಿ. ೩೭). **ಭಾಳಪಟ್ಟ** : ೧. ಅವರ ಭಾಳಪಟ್ಟದ ಮೇಲೆ ಮೂಡಿನಿಂತ ಗೆರೆಗಳು ಇದನ್ನು ತುಂಬಾ ಸೂಚಿಸುದುವು (ಮುಗಿಪು. ೬). ೨. (ಸಂಚಾರದ ಬಗೆಗೆ ವಿವರಣೆಯಿರುವ) ಯಜ್ಞಾಶ್ವದ ಹಣೆಪಟ್ಟಿ,—ಲಲಾಟಪಟ್ಟ : ಕುದುರೆ ತನ್ನಿಚ್ಛೆಯಿಂದೈದೆ ಕಂಡು ಭಾಳಪಟ್ಟದ ಲೇಖನವನೋದಿಕೊಂಡು ನೀಲಾಳಕೆಯರಾಗ ನಡೆತಂದು . . . ಸಂಭ್ರಮದೊಳಿಂತೆಂದರು (ಕೃಮಿಶಾ. ೦೬-೦). [ಸಂ.]

**ಭಾಲಾಂಬಕ, ಭಾಳಾಂಬಕ** (ನಾ). ೧. ಹಣೆಗಣ್ಣು. ೨. ಹಣೆಯಲ್ಲಿ ಕಣ್ಣುಳ್ಳವನು ; ಹಣೆಗಣ್ಣ; ಶಿವ : ಭಾಲಾಂಬಕ ದುಷ್ಟಕಾಲಾರಿ ಖಡ್ಗಾದಿ ಶೂಲಾಯುಧ ತ್ರಿಪುರಕೋಲಾಹಲ (ವೀಶ್ಯಕ. ೮-೦೩-೦). **ಭಾಳಾಂಬಕ** : ೨. ವಿಕಳಬಲನಿವನೇನು ಭಾಳಾಂಬಕನೊ ಬಲಿಬಂಧಕನೊ ಸುರಪಾಲಕನೊ ಘಡಘಡ ಎನುತ ಕವಿದುದು ಕರ್ಣನಿದಿರಿನಲಿ (ಕುವ್ಯಾಕ. ೦೨-೫); ಶರಣಿಯುಂಚುಬೆಗೆ ಧರಣಿ ಕಲ್ಪದ ಹರನ ಭಾಳಾಂಬಕದ ಶಿಖಿ ಸೀವರಿಸಿದಂತಾಯ್ತೆನೆನೆಂಬೆನು ನವಗ್ರಹಾಗಮವ (ಕೊರರಾ. ೦-೫-೦೫); ಬೂಟಕದಿಂದ ಭಾಳಾಂಬಕನ ಭಜಿಸಿಯಾಡಂಬರಂ ಮೆಚ್ಚಿವರೊಳು ಕೂಡದಿರು (ಷಚಿಂ. ೫-೬೯). [ಸಂ.]

**ಭಾಲಾಕ್ಷ, ಭಾಳಾಕ್ಷ** (ನಾ). ೧.=ಭಾಲಾಂಬಕ ೧. ೨.=ಭಾಲಾಂಬಕ ೨ : ಆಲಿಸೈ ಸಿದ್ಧರಾಮೇಶ ಕನಕಾಂಬಕಂ ಭಾಲಾ[ಶಾಕಾಂ. ೪೨]ಕ್ಷನಂ ಕುಜಿತು ಪುತ್ರನಂ ಬೇಡಿ ಬಹುಕಾಲಮಿಯುಂತರಂ ತಪಮನಾಚರಿಸಲು (ತಬಕು. ೯೭-೨). **ಭಾಳಾಕ್ಷ** : ೧. ಮೃಡನ ಭಾಳಾಕ್ಷದನಲನೊಳಿಟ್ಟು ಕಾಸಿ ಗಿರಿಯಡಿಗಲ್ಲ ಮೇಲಿಟ್ಟ ಕೆಂಡಗೆದಜುನ ಬಟ್ಟದೆನೆ ದಿನಪನೆಯ್ತಂದನು (ಹಕಳಾ. ೯-೫೭); ಹೆಚ್ಚಿದುಜುಬಿನಿಂದೆ ಶೃಂಗಾರ . . . ಕಿಡಿಗೆದಜುವ ಭಾಳಾಕ್ಷದಿಂ ರೌದ್ರ . . . ಕ್ಷಮತ್ವದಿ ಶಾಂತ ಮೆಚ್ಚಿಯೋ ಶ್ರೀಕೃಷ್ಣ ನಿದಿರಿನಲಿ ನವರಸಭರಿತನಾಗಿರ್ದನಗಜೇಶನು (ಅಕ್ಷಕ. ೩-೯೨). ೨. ಭಿಕ್ಷಾನ್ನಮನುಂಡಾ ಭಾಳಾಕ್ಷಂ ಸೌರಾಷ್ಟ್ರಪತಿಗತುಳಗುಗ್ಗುಳಮಂ ಸುಕ್ಷಮ ಯಿಂದರ್ಪಿಸುತೊಳ್ದಕ್ಷಯಸುಖದೊಳ್ಪನೋಹಿಲಂ ಪಡೆದಿರ್ದಂ (ಉದ್ಭಟ. ೦೦-೯೦); ಭದ್ರಾರೂಢ ಭವಾರಿ ಭರ್ಗ ಮೃಡನಂ ಭಾಳಾಕ್ಷ ಪಾದಾಕ್ಷನಂ . . . ಹೃದ್ರಾಜೀವದೊಳಿಟ್ಟು ನಾಡೆ ನೆನೆದಂ ಮದ್ರಾಜನುರ್ವೀಶ್ವರಂ (ಹಮ್ಮಾರ. ೨-೭); ಭಾಳಾಕ್ಷನ ಮೂಲಮಂತ್ರವೊಂದೇ ಸಾಲದೆ (ಅಣಂಡೇ. ೫೦-೩). [ಸಂ. (ಭಾಲ + ಅಕ್ಷಿ +–)]

**ಭಾಲೆ** 'ಬಲ್ಲೆಯ' ನೋ.

**ಭಾಲ್ಲುಕ** (ನಾ). = ಭಾಲ್ಲೂಕ : "ಭಲ್ಲೂಕವಚ್ಛಭಲ್ಲ[ಮೆನೆ ಕರಡಿ] ಭಾಲ್ಲೂಕ ಮೃಕ್ಷಂ" (ವಸ್ತುಕೋ. ೪೦-೩). [ಸಂ.]

**ಭಾಲ್ಲೂಕ** (ನಾ). ಕರಡಿ ; ಭಲ್ಲೂಕ : "ಋಕ್ಷಃ, ಅಚ್ಛಃ, ಭಲ್ಲಃ, ಭಾಲ್ಲೂಕಃ, ಭಲ್ಲೂಕಃ – ಈ ೫ ಕರಡಿ" (ಹಲಾಯು. ೩೮-೭೫). [ಸಂ.]

**ಭಾವ$_1$, ಬಾವ** (ನಾ). ೧. ಸೋದರಿಯ ಗಂಡ ; ಅಕ್ಕ ಅಥವಾ ತಂಗಿಯ ಪತಿ : ನಿಮ್ಮ ಭಾವಂ ಕುಬೇರಪ್ರಿಯಂ ಉಪವಾಸಪೂರ್ವಕಂ ರಾತ್ರಿ ಪ್ರತಿಮೆ ನಿಲೆ (ಶಾಪುಂಕ. ೬೯); ಭಾವನೀಗಳೆ ಹೋಗಿ ಬೇಡಿದಡೀವ ನಾಗಳೆ ಬಸವರಾಜನು (ಬಸಕು. ೦೦-೨೩); ಓತಳ್ಕೆ ಶ್ರೀದೇವಿ ಹರಿಯಲ್ಲೋತು ತೊತ್ತಾಗಿಹಳದನಲಿಕ್ಕಾತನಿಂದತ್ಯಧಿಕಸಮಬಲರಿಲ್ಲ. . . ದಿನಕರ ಶೀತಕರ ರಿಗೆ ಭಾವ ವರುಣನಿಗಳಿಯ ಕೇಳೆಂದ (ಸಂಭಷ. ೬-೪೭). ೨. ಗಂಡನ ಅಣ್ಣ : ಆವ ಚೆನ್ನಿಗನೀತನಾವನೀ ಜಾಣನಿವನಾವನೀ ಗಾಡಿಕಾರ ಶಿವಾ ಯೆಂದತ್ತೆ ಮಾವ ಮೈದುನ ಭಾವ ಗಂಡರಿರೆ ಮನೆಗಳಂ ಬಿಟ್ಟು. . . ಪರಿತಂದದೇವೇಳ್ವೆನಜ್ಞಾಕ್ಷಿಯರ್ ಮದನಲಕ್ಷ್ಮಿಯರ್ ನಿಟ್ಟಿಸಿದರೀಶನಿರವ (ಶಿಬಕು. ೨೦-೦೮). ೩. ಸೋದರಮಾವನ ಮಗ : ಸುದಾಮೆಯೆಂಬ ಕನ್ಯೆ. . . [ಗ]ಂಗೆಯುಂ ವಿಹಾವಾಗಳ್ ನೆಗಬ್ ಬಂದು ಕಾಲಂ ಪಿಡಿದೊಡೆ . . . ತಮ್ಮ ಭಾವನಂ ಧನದೇವನಂ ಕರೆದೀ ನೆಗಬಂ ಬಿಡಿಸೆಂಬುದುಂ (ಸುಕುಮಾ. ೬-೦೬ ಪ). ೪. ಹೆಂಡತಿಯ ಅಣ್ಣ : ತಮ್ಮ ಭಾವಂ ಕೃಪನ ಮನೆಯೊಳಪಗತಪರಿಶ್ರಮನಾಗಿರ್ದೊಂದು ದಿವಸಂ ಪಾಂಡವರುಂ ಕೌರ ವರುಂ ಪೊಣರ್ವೊಟಲೊಳ್ ನೆರೆದಿಸುತಿರೆ. . . ಕಂಡು ನಕ್ಕಂ ದ್ರೋಣಂ (ಪಂಪಭಾ. ೨೫-೦ ವ); ರಾವು ಫಲುಗುಣಯೆನುತ ಪಾರ್ಥನ ಭಾವ ಕುಡಿ ಚಮ್ಮಟಿಗೆಯಲಿ ತುರಗಾವಳಿಯನದುಹಿದನು ಸುಳಿಸಿದನಾಹವಕೆ ರಥವ (ಕುವ್ಯಾದ್ರೋ. ೯-೩೭). ೫. ಸೋದರತ್ತೆಯ ಮಗ : ಅವನು ನಮ್ಮ ಸೋದರತ್ತೆಯ ಮಗ, ನನಗೆ ಭಾವನೇ ಆಗಬೇಕು (ಜೂಶಿ). ೬. ಬಂಧುತ್ವ ವಿಲ್ಲದಿದ್ದರೂ ಆತ್ಮೀಯತೆಯನ್ನು ಸೂಚಿಸಲು ಬಳಸುವ ಶಬ್ದ : ಆ ಜಂಬುಕನೊಂದುದೆವಸಂ. . . ವಾಯಸನಿರ್ದಲ್ಲಿಗೆ ಬರ್ಪುದುಮಾ ವಾಯಸು ಇದಿರ್ವಂದು ಎಲೆ ಭಾವ ಏಂ ಬಡವಾದಿರೆನೆ (ಪಂಚತಂ. ೪೦-೨೦); ಭಾವಚಿತ್ರ ತೆಗೆಯುವಷ್ಟರಲ್ಲಿ ಸಾರ್ವಜನಿಕ ಭಾವಂದಿರು ಅವರನ್ನು ಸುತ್ತು ವರಿದಿದ್ದರು (ದೇವದೂ. ೨೦೮). **ಬಾವ** : ೧. ಪುನುವಲವಳ್ಳಿಯ ಗಾವುಣ್ಣನಗ್ಗಸೆರ್ ಎಳವರಿ ತಮ್ಮ ಬಾವಂಗೆ ಪರೋಕ್ಷವಿನಯಂಗೆಯ್ದು ಕಲ್ಲಂ ನಿಱಿಸಿದಂ (ಎಕ. VIII, ಸೊರಬ. ೫೩೦-೦೦; 979).

**ಬಾವನ ಬಂಟ** = ಒಂದು ಬಿರುದು ; ಭಾವನಾದ ರಾಜನಿಗೆ ನಚ್ಚಿನ ಸಹಾಯಕ : ಪರನಾರೀಪುತ್ರಕ . . . ಬಾವನ ಬಣ್ಟ ಗುಣ್ಡ ಚಕ್ರಜೆಡ್ಡುಗರಿ (ಎಕ. II, ೩೦೭; ಕು. 950). **ಭಾವನ ಕೇಸರಿ** = ಒಂದು ಬಿರುದು : ಸತ್ಯಯುಧಿಷ್ಠಿರಂ ಪ್ರತಿಪನ್ನಮೇರು ಭಾವನ ಕೇಸರಿ ನಾಮಾದಿ ಸಮಸ್ತಪ್ರಸಸ್ತಿ (ಕಇ. IV, ೪೦-೦೦; ಕು. 11ನೆಯ ಶತ). **ಭಾವನ ಗಂಧವಾರಣ** = ಚಾಲುಕ್ಯ ತ್ರೈಲೋಕ್ಯಮಲ್ಲದೇವನ ಕಾಲದ

ಒಬ್ಬ ಮಾಂಡಲಿಕನ ಬಿರುದು : ದಿಶಾಗಜವ್ರಜಂ ಬೆದಱೆ ವಿರೋಧಿಯಂ ತುಳಿದು ಕೊಲ್ವುದು ಭಾವನ ಗನ್ಧವಾರಣಂ (ಕಾಇಶ. XI-i, ೦೦೩-೫; ೧). ಭಾವನ ಸಿಂಗ = ಭಾವನ ಕೇಸರಿ : ಶ್ರೀಸೋಮೇಶ್ವ[ರ] ದೇವ ಪಾದಾರವಿಂದ × × ×ಣ ಕಮಳಭೃಂಗಂ ಭಾವನ ಸಿಂಗಂ ಶ್ರೀಮತ್ಪೆಗ್ಗಡೆ ಚಂಗದೇವಯ್ಯ (ಕಾಇಶ. XX, ೬೦-೦೨; 1088).
[< ಸಂ. ಭಾವು ]

**ಭಾವ₂** (ನಾ). ೧. ಇರುವಿಕೆ ; ಇರುವುದು; ಅಸ್ತಿತ್ವ; ಸತ್ತೆ : ವಸ್ತು ಸತ್ತೆಯೇ ಭಾವವೆಂದು ಹೇಳಲ್ಪಡುವುದು (ಶಿವಾಸೂ. ೯೬); ಅಭಾವದಿಂದ ಭಾವ ಹೊರಡದು (ಹುಣ್ಯಾರ. ೯ ೩೬೦೪); ಪ್ರಪಂಚದಲ್ಲಿರುವ ವಸ್ತುಗಳು ಭಾವ, ಅಭಾವ ಎಂದು ಎರಡು ವಿಧ (ಹಿಂದಶಾ. ೦೩೧). ೨. ಆಗುವುದು; ಸಂಭವಿಸುವುದು; ಉಂಟಾಗುವಿಕೆ. ೩. ಹುಟ್ಟು; ಜನ್ಮ. ೪. ನಿಜಸ್ಥಿತಿ ; ಸತ್ಯ. ೫. ಪರಮಾತ್ಮ : ದೇವನಾರೆಂದೆನಲು ಬುದ್ಧಿಯ ಭಾವದಲಿ ಭಾವವನಱಿವ ಸದ್ಭಾವರೂಪನು (ಅಮ್ಮಕ. ೩-೦೯೬). ೬. ಮನಸ್ಸು; ಅಂತರಂಗ ; ಚಿತ್ತ : ''ಬಗೆಯೊಳಾತ್ಮನೊಳು ಘೋರ ಜನ್ಮದೊಳು ಚೇಷ್ಟೆಯೊಳು ಭಾವವೆನಿಕ್ಕು'' (ಪುಂಗಶಾ. ೦೯೩-೩೦); ಭಾವಶುದ್ಧವಿಲ್ಲದವಂಗೆ ಭಕ್ತಿ ನೆಲೆಗೊಳ್ಳದು ಕೂಡಲಸಂಗಯ್ಯನೊಲಿದಂಗಲ್ಲದೆ (ಬಸವ. ೬೩೬); ಆವ ಪರಿಯು ದೇಸಿಯಹಾಣ್ಮಗೆ ಬಗೆವರ್ಪುದಾ ವಿಧಗಳನಾರೈದು. . . ಭಾವವ ಬಂದಿಗೊಳುವುದು (ಹರಿಬ. ೩-೦೬). ೭. ಪ್ರಾಣಿಗಳ ಸ್ವಭಾವ, —ಪ್ರಕೃತಿ; ಜೀವಿಗಳ ನೈಸರ್ಗಿಕ ಗುಣ, —ಪ್ರವೃತ್ತಿ. ೮. ಮನೋಧರ್ಮ; ಭಾವನೆ; ಚಿತ್ತವೃತ್ತಿ; ಸಂವೇದನೆ : ಮರುಳುತಲೆ ಹುರುಳುತಲೆ ನೀನೇ ದೇವಾ. . . ಕೂಡಲಸಂಗಮದೇವಾ ಭ್ರಾಂತಳಿದು ಭಾವ ನಿಂದುದಾಗಿ (ಬಸವ. ೯೦೬); ಭಾವಂ ಭಾಸುರತತ್ತ್ವಗರ್ಭಮಯನಂ ಚಾರಿತ್ರಗರ್ಭಂ (ಚಂದ್ರಪ್ರ. ೦-೨೪); ಭಾವದಿಂ ತಲ್ಲಣಿಸಿತೆದೆಯುರ್ಬಿ ಕಣ್ ತೊಯ್ದುದಿರ್ಬ್ಬನಿಂ (ಶಬ್ದಾಂಗ. ೩೪-೦೦೩೧). ೯. ಅಭಿಪ್ರಾಯ ; ಆಶಯ ; ಇಂಗಿತ : ಭಾವಮೆಂಬುದಕ್ಕುಂ ಕವಿಗಳಾ ಭಾವಿಸಿ ಮನದ ಬಗೆಯೊಂದಿದರ್ಥಂ (ಕಬಿರಾ. ೩-೨೦೪) ; ಪದಮೆ ಪದಂ . . . ಭಾವಂ ಪೊಣ್ಮಿದ ಸದ್ಭಾವಂ ದನಿಯಿಂ ಪೊದವಿದ ದನಿಯೆನಿಸೆ ಪೇಟ್ದಪಂ ಕವಿತಿಲಕಂ (ಪುಸ್ಕಪು. ೦-೬೨) ; ಈ ಸಹದೇವನೀ ಸಾತ್ಯಕಿ ಯುಧಾಮನ್ಯೂತ್ತಮೌಜಸರ ಭಾವವೆಮ್ಮದು (ಕುಮ್ಪಾಭಾ. ೭-೦). ೧೦. ಕಣ್ಣಿಗೆ ಗೋಚರಿಸುವ ವಸ್ತು ; ಪ್ರತ್ಯಕ್ಷ ವಿಷಯುವಾಗುವ ಪದಾರ್ಥ : ಪ್ರಪಂಚದಲ್ಲಿರುವ ವಸ್ತುಗಳು ಭಾವ, ಅಭಾವ ಎಂದು ಎರಡು ವಿಧ, ಭಾವಗಳಾದ ಘಟಪಟಾದಿಗಳು ಹೇಗೆ ಪದಾರ್ಥಗಳೋ ಅವುಗಳ ಅಭಾವಗಳೂ ಪದಾರ್ಥಗಳು (ಹಿಂದಶಾ. ೦೩೧). ೧೧. ಸ್ವರೂಪ ; ಚರ್ಯೆ ; ತೋರಿಕೆ : ಆ ಚಿತ್ರದಲ್ಲಿ, ಹುಡುಗಿಯ ಮುಖದ ಭಾವ ತುಂಬ ಚೆನ್ನಾಗಿ ಮೂಡಿಬಂದಿದೆ (ಆಪ್ರ). ೧೨. ಆಂಗಿಕ ಚಲನೆ, —ಕ್ರಿಯೆ : ಅವರ ಮುಖದ ಭಾವದಿಂದ ಅವರಿಗೆ ಕೋಪ ಬಂದಿರುವುದು ಎದ್ದು ಕಾಣುತ್ತಿದೆ (ಆಪ್ರ). ೧೩. ಅರುವತ್ತು ಸಂವತ್ಸರಗಳಲ್ಲಿ ಎಂಟನೆಯದು : ಮತ್ತಮಾ ವರುಷವೇ ಪ್ರಭವ ವಿಭವ ಶುಕ್ಲ ಪ್ರಮೋದೂತ ಪ್ರಜೋತ್ಪತ್ತಿ ಆಂಗಿರಸ ಶ್ರೀಮುಖ ಭಾವ . . . ಅಕ್ಷಯುವೆಂದಱುವತ್ತು ತೆಱನಾಗಿಪ್ಪುದು (ಶಿವೇಕ. ೩೨೦) ; ಶಾಲಿವಾಹನ ಶಕ ೧೨೫೩ನೆಯ ಭಾವಸಂವತ್ಸರ ಕಾರ್ತಿಕಮಾಸ. ಅಂದು ಪೂರ್ಣಿಮೆಯ ಸಂಜೆ (ಶ್ರೀಚಿಪ್ಪಾ. ೦). ೧೪. [ವ್ಯಾಕ] ಕ್ರಿಯೆ ನಡೆಯುವುದರಿಂದ ಉಂಟಾಗುವ ಸ್ಥಿತಿ : ತನಮಿಕೆಯುಮೆಂಬಿವುಂ ಚೇತನಭಾವದೊಳಕ್ಕುಂ (ಶಾವ್ಯಾಕ. ೩೯೩). ೧೫. ಭಾವನಾಮ : ಚರಮಕ್ಕತ್ವದ ವಿಧಿಯುಂ ಧಾತುಗೆ ಭಾವದೊಳಕ್ಕುಂ ಧಾತು ನಿಜದೆ ಭಾವಮುದಕ್ಕುಂ (ಶಮದ. ೨೦೩). ೧೬. [ಗಣಿತ] ಒಂಬತ್ತು ಎಂಬ ಸಂಖ್ಯೆಯ ಸಂಕೇತ : "ವಸುಧಾಭಾವಂ ಕೇಶವದಿಶವಂಕಂ ಭಾವರಂಧ್ರ . . . ನಿಧಿ ರತ್ನ ನವಮವೊಂಭತ್ತೆನಿಸಂ (ಶ್ರಕಹಾ. ೯-೯). ೧೭. [ನಾಟ್ಯ] ಸೂತ್ರಧಾರನನ್ನು ಸಂಬೋಧಿಸುವಾಗ ಪ್ರಯೋಗಿಸುವ ಶಬ್ದ : "ಸೂತ್ರಧಾರನಂ ಭಾವ ಎಂಬುದು" (ಹಲಾಯು. ೦೬-೯೯) ; ''ಶಿಕ್ಷಕಂ ಭಾವನಕ್ಕುಂ'' (ಶುಂಗಶಾ. ೨೩-೯). ೧೮. [ಕಾವ್ಯವಿಮ] ಶೃಂಗಾರ ಮೊದಲಾದ ರಸಗಳನ್ನುಂಟುಮಾಡುವ ರತಿ, ಶೋಕ ಮೊದಲಾದ ಚಿತ್ತವೃತ್ತಿ ; ವಿಶೇಷ ರಸ ನಿಷ್ಪಾದನೆಗೆ ಕಾರಣಗಳಾದ ಸ್ಥಾಯಿಭಾವ ಮತ್ತು ಸಂಚಾರಿಭಾವ : ''ಬಾಹ್ಯಮಪ್ಪರ್ಥಮಂ ಆಶ್ರಯಿಸಿ ಪುಟ್ಟುವ ಮನದ ವಿಕಾರಮಂ ಭಾವಮೆಂಬುದು'' (ಹಲಾಯು. ೦೬-೯೦) ; ಭಾವದನುಬಾವದೆಸೆವ ವಿಭಾವದ ಪಸುಗೆಗಳೊಳೊಸರ್ವ ರಸದಭಿನಯುಮಂ ಭಾವಿಸು ವೊಡಾದಿದೇವನ ದೇವೇಂದ್ರನ ಬಗೆಗಮುಸದಳಂ ನರ್ತಕಿಯಾ (ಆದಿಪು. ೯-೨೬) ; ರಸಭಾವವಿಳಾಸದಿಂ . . . ಸರಸ್ವತಿ ದಯೆಗೆಯ್ಗೆ (ಕಾದಂಪೂ. ೨) ; ಹಾವಭಾವವಿಲಾಸವಿಭ್ರಮವಿಲಾಸಿನಿಯರಾ ವಿಟ ವಿದೂಷಕಂ ನಾಗರಿಕಪೀಠಮರ್ದಾವಳಿಯನಂದು . . . ಬರಿಸಿದಂ (ಹಶಾ. ೨೦೬ ಕಂ). ೧೯. (ಪ್ರಾಚೀನರ ಮತದಂತೆ) ಅರ್ಥಾಲಂಕಾರಗಳಲ್ಲಿ ಒಂದು ; ಒಬ್ಬರು ಹೇಳಿದ ಮಾತಿಗೆ ಸಂದರ್ಭ ಪರ್ಯಾಲೋಚನೆಯಿಂದ ಬೇರೊಂದರ್ಥವು ತೋರುವುದು : ವಿತರ್ಕಕ್ರಮದಿಂದರ್ಥಾಂತರವಂ ಸಮನಿಸುವೊಂದುಕ್ತಿ ಭಾವವೆನೆ ಪೆಸರ್ವಡೆಗುಂ (ಕಾವ್ಯಾವ. ೬೦೩). ೨೦. [ಜ್ಯೋತಿ] ಜಾತಕನಿಗೆ ಸಂಭವಿಸುವ ಫಲವಿಚಾರವನ್ನು ತಿಳಿಸುವ ಸ್ಥಾನ : ಕ್ರಮದಿಂ ತನು ಧನ ಸಹಜಾತ ಮಿತ್ರಪುತ್ರಾರಿ ಯುವತಿ ನೈಧನ ಧರ್ಮೋದ್ಯಮ ಲಾಭವ್ಯಯಮೆಂದಿಂತು ಮಿವಕ್ಕುಂ ಲಗ್ನಭಾವನಾಮಫಲಂಗಳ್ (ಜಾತಕ. ೦-೩೩) ; ಲಗ್ನದಿಂದ ಕ್ರಮವಾಗಿ ತನು, ಧನ, ಸಹಜ (ಸಹೋದರ), ಮಿತ್ರ, ಪುತ್ರ, ಅರಿ (ಶತ್ರು), ಯುವತಿ (ಕಳತ್ರ), ನೈಧನ (ಮೃತ್ಯು), ಧರ್ಮ, ಉದ್ಯಮ (ಉದ್ಯೋಗ), ಲಾಭ, ವ್ಯಯ (ಖರ್ಚು) ಇವು ಹನ್ನೆರಡು ಭಾವಗಳ ಹೆಸರು ; ಈ ವಿಚಾರಗಳ ಫಲವನ್ನು ಆಯಾ ಭಾವಗಳು ತಿಳಿಸುತ್ತವೆ (ಜಾತಕ. ೦-೩೩ ಟೀಕ). ೨೧. [ಜೈನ] ಜೀವನ ಪರಿಣಾಮ ; ಔಪಶಮಿಕ, ಕ್ಷಾಯಿಕ, ಕ್ಷಯೋಪಶಮಿಕ, ಔದಯಿಕ ಮತ್ತು ಪಾರಿಣಾಮಿಕ ಎಂಬ ಮುಖ್ಯವಾದ ಐದು ಭೇದಗಳುಳ್ಳದು : ಭಾವಮೆಂಬುದು ಕರ್ಮಂಗಳ ಕ್ಷಯದಿನುಪಶಮದಿಂ ಕ್ಷಾಯೋಪಶಮದಿನಪ್ಪಾತ್ಮನ ಪರ್ಯಾಯಂ (ಶಾಪುಂಪು. ೬). [ಸಂ.]

**ಭಾವಂಜಿ** 'ಬಾಗುಜಿ' ನೋ.

**ಭಾವಕ** (ಗು). ೧. ಆಗಲು ಕಾರಣವಾದ ; ಉಂಟುಮಾಡುವ. ೨. ಶ್ರೇಯಸ್ಸನ್ನುಂಟು ಮಾಡುವ ; ಶ್ರೇಯಸ್ಕರವಾದ. ೩. ಕಲ್ಪನೆ ಮಾಡುವ ; ಊಹಿಸುವ. ೪. ಸೌಂದರ್ಯದಲ್ಲಿ ಆಸಕ್ತಿಯನ್ನುಹೊಂದಿರುವ;ಸುಂದರವಸ್ತುಗಳನ್ನು ಅಭಿಲಾಷಿಸುವ. ೫. ರಸಾಸ್ವಾದನೆಯಲ್ಲಿ ಅಭಿರುಚಿಯುಳ್ಳ, (ನಾ). ೬. ಮನೋಭಾವ ; ಚಿತ್ತವೃತ್ತಿ. ೭. ಸೊಗಸಾದುದರಲ್ಲಿ ಅಭಿರುಚಿಯುಳ್ಳವನು ; ಕಲಾಭಿರುಚಿಯುಳ್ಳವನು ; ರಸಿಕ ; ಸಹೃದಯ : ಭಾವಕನೆಂದೊಡಂ ಚದುರನೆಂದೊಡಮಾರ್ ಪೆಱರೊ ನೀನೆ (ಶಂಕಚಾ. ೪-೯೬) ; ಈವ ಗುಣಂ ಬೇಡಲೊಡಂ ಕಾವ ಗುಣಂ ಭೀತಿಯಿಂದೆ ಮಱುವುಗಲೆನಸುಂ ಭೂವಿನುತಮಾಗಿ ತೋರ್ಪ್ಪವು ಭಾವಕನಿಧಿ ನಾರಸಿಂಹಗೌಂಡನೊಳೆನಸುಂ (ಎಕ. V, ಅರಸೀ. ೬೨-೪೬ ; 1117) ; ತೀವಿದರು ಹೊರವಳಯದಲಿ ನಾನಾ ವಿಧದ ನಾಟಕದ ನರ್ತನ ಭಾವಕ. . .ಮಲ್ಲಚಿತ್ರಕರು (ಕುವ್ಯಾಭಾ. ೦೨-೨೦) ; ಭಾವಕರ ಕಿವಿದೊಡವಿಗೊಲವಿದ ಹಿರಣ್ಮಯಮಭೂತಳದೊಳೆಸೆ ವಿರಾಜಿಪ್ಪುದು ಲಕ್ಷ್ಮೀಪತಿಯ ಕಾವ್ಯರಚನೆ (ಕೃಬಿಚಾ. ೩೪-೪೬) [ಸಂ.]

**ಭಾವಕತ್ವ** (ನಾ). ೧. ಭಾವಕನ ಧರ್ಮ; ಭಾವಕತನ ೨. [ಕಾವ್ಯಮಿ] ಸಹೃದಯರು ರಸಾಸ್ವಾದನೆ ಮಾಡಲು ಸಹಾಯಕವಾದ ಒಂದು ವ್ಯಾಪಾರ,—ಕ್ರಿಯೆ ; ಪ ಕಾವ್ಯಾರ್ಥಬೋಧೆಯಾದ ಮೇಲೆ ಸೀತೆ ಯೆಂಬ ರಮಣಿಯು ರಾಮನೆಂಬ ರಮಣನಲ್ಲಿ ಪ್ರಣಯವುಳ್ಳವಳು ಎಂಬ ಅಂಶದಲ್ಲಿ ಸೀತಾಂಶವನ್ನೂ ರಾಮಾಂಶವನ್ನೂ ನಿವಾರಿಸಿ ಕೇವಲ ಕಾಮಿನೀತ್ವ— ಕಾಮುಕತ್ವ ಭಾವನೆ ಬರುವಂತೆ ಮಾಡಿ ಕಾಮಿನಿಯು ಕಾಮುಕನಲ್ಲಿ ಪ್ರಣಯವುಳ್ಳವಳೆಂಬ ಭಾವನೆಯುಂಟು ಮಾಡುವ ಸಾಧಾರಣೀಕರಣ; ಇದು ಭಟ್ಟನಾಯಕನ ಮತ : ಕಾವ್ಯ ನಾಟಕಗಳಲ್ಲಿ ವರ್ಣಿತವಾಗಿರುವ ವಿಭಾವಾದಿಗಳಿಗೆ ಸಾಧಾರಣತ್ವವನ್ನುಂಟು ಮಾಡಿ ಅವು ರಸವಿಷಯವಾಗುವಂತೆ ಮಾಡುವುದು ಭಾವಕತ್ವ (ಭಾರಮಿ. ೩೬೬) ; ಕಾವ್ಯನಾಟಕದಲ್ಲಿ . . . 'ಭಾವಕತ್ವ', 'ಭೋಜಕತ್ವ' ಎಂಬ ಮತ್ತೆರಡು ಶಕ್ತಿಗಳಿವೆ (ಕೃಪಿಐ. ೦೯೨). [ಸಂ.]

**ಭಾವಕಿ** (ನಾ). ೧. ಚೆಲುವೆಯಾದ ಸ್ತ್ರೀ ; ಸುಂದರಿ : ಗಿಳಿಯೊಡನೋದಿ ಯೋದಿ ನುಡಿಗಲ್ತು . . . ಕಳಾಗುಣಂ ಪೊದಟ್ಟಳವಡೆ ಬಾಲಭಾವದೊಳೆ ಭಾವಕಿಯರು ಬಳೆವರ್ ನಿರಂತರಂ (ಶಬುದ. ೦೯೩ ಕೃಯೋ) ; ಭಾವಕಿ ಯೆನ್ನನೊರ್ಮೆವಲೆ ಕಾಣಲೊಡಂ ಬೆಮರುಣ್ಮೆ ವಿಸ್ಮಯಂ ತೀವಿ . . . ಮರವಟ್ಟವೊಲಿರ್ದಳ್ (ದಕಳು. ೦೦-೬೪) ; ಸುರಿಯೆ ಮುತ್ತುಗಳರರೆ ಮುಸುರದಿ ಪರಿಪರಿಯ ಚಾರಿಗಳ ತಂದಚ್ಚರಿಯೆನಿಸಿ ನಟಿಸಿದಳು ಭಾವಕಿ ನಾಟ್ಯರಂಗದಲಿ (ಸವತ್ಕು. ೪-೦೯). ೨. ರಸಿಕಳಾದ ಸ್ತ್ರೀ: ಪಾಂಥರಿರವಟಿ ದೀಯುತುಂ ಜರಾಭೀರುವಂ ಕಾಣಿಸಿ ಕಳವುತೆಸೆದರೇಂ ಜಾತಿಭಾವಕಿಯರೋ (ಶವ್ಯರಾ. ೬-೦೩) ; ಮುದ್ದುಮೊಗದ ಭಾವಕಿಯರ ಲಲ್ಲೆನುಡಿಯೆಂಬ ನಯಗತ್ತಿ ಎಲ್ಲರ ಹೃದಯವ ಕೊಚಿಕೊವುತ್ತಿದೆ ನೋಡಾ (ಸಿದ್ಧೇವ. ೪೦-೦೦೬); ಭಾವಕಿಯರ್ ತೊಡಗಿದರತಿಕೋವಿದೆಯರ್ . . . ಜಲಕೇಳಿಗೆ (ಹವ್ಯಾರ. ೪-೨೨). [ ಭಾವಕ + – ಇ ]

**ಭಾವಕೃದಂತ** (ನಾ). [ವ್ಯಾಕ] ಧಾತುವಿನಿಂದ ಹುಟ್ಟುವ ಭಾವನಾಮ; ಕೃದಂತಭಾವನಾಮ : ಕೆಲವು ಧಾತುಗಳು ನಿಜರೂಪದಿಂದಲೇ ಭಾವ ಕೃದಂತಗಳಾಗುವುವು. ಉದಾ:—ಆಗು, ಉರ್ಕು, ಓದು (ಕೃಪಿಐ. ೦೭). [ಸಂ].

**ಭಾವಗಮ್ಯ** (ನಾ). ಮನಸ್ಸಿಗೆ ಗೋಚರಿಸುವುದು ; ಊಹೆಯಿಂದ ತಿಳಿಯತಕ್ಕುದು : ವಿಚಿತ್ರರತಪ್ರೌಢತೆ ಭಾವಗಮ್ಯಮೆನಿಕುಂ ಶ್ರೀರೂಪ ಕಂದರ್ಪನಾ (ಕಾವ್ಯಸಾ. ೬೩೩). [ಸಂ.]

**ಭಾವಗರ್ಭಿತ** (ನಾ). ಅಭಿಪ್ರಾಯದಿಂದ ಕೂಡಿರುವುದು; ಇಂಗಿತದಿಂದ ಕೂಡಿರುವುದು : ಹುಡುಗಿಯರು ಒಬ್ಬರನೊಬ್ಬರು ಭಾವಗರ್ಭಿತವಾಗಿ ನೋಡಿಕೊಂಡು ಗುಸುಗುಸುಪಟ್ಟುಕೊಂಡರು (ಹಸುಹೂ. ೨೯೬). [ಸಂ.]

**ಭಾವಗೀತ** (ನಾ). ಕವಿಯ ಆತ್ಮೀಯವಾದ ಭಾವನೆಗಳನ್ನು ಚಿತ್ರಿಸುವ ಹ್ರಸ್ವವಾದ ಕವನ; ಪ ಹಾಡಲು ಅನುಕೂಲವಾಗಿದ್ದು, ಸಾಮಾನ್ಯ ವಾಗಿ ಒಂದು ಭಾವಗೀತೆಯಲ್ಲಿ ಒಂದೇ ಭಾವನೆ ನಿರೂಪಿತವಾಗಿರು ತ್ತದೆ. ಇದು ಇಂಗ್ಲಿಷಿನ 'Lyric' ಎನ್ನುವ ಪದದ ಅನುವಾದ : ಭಾವಗೀತ, ಅಷ್ಟಷಟ್ಪದಿ . . . ಎಲ್ಲವೂ ಇಂದು ಕನ್ನಡದಲ್ಲಿ ನೆಲೆಗೊಂಡಿವೆ (ಪಪ್ರಕಾ. ೨೪) ; ನಿಬ್ಬಣಕೆ ಹೊರಟಂತೆ ಹಾಡುಗಬ್ಬಗಳ ಕೊಲ್ಲಾರಿ ಬಂಡಿ. ಭಾವಗೀತ ಒಪ್ಪಿದರೆ ಚಂದ ವಧೂವರ ಜೋಡಿ (ಪಂಚು. ೩೩-೯); ಭೃಂಗದ ಬೆನ್ನೇರಿ ಬಂತು ಕಲ್ಪನಾವಿಲಾಸಾ ಮಾತು ಮಾತು ಮಥಿಸಿ ಬಂದ ನಾದದ ನವನೀತಾ . . . ಅರ್ಥವಿಲ್ಲ ಸ್ವಾರ್ಥವಿಲ್ಲ ಬರಿಯ ಭಾವಗೀತಾ (ನಾದಲೀ. ೬೩-೦೦). [ಸಂ.]

**ಭಾವಗೀತೆ** (ನಾ). = ಭಾವಗೀತ : ಭಾವಗೀತೆಯ ಹಾಗೆ ಹಳ್ಳಿಯ ಜೀವನ ದೇವನೆ ಈ ಗೀತಕಾರ (ಇಂಚಾಕ. ೦೨೮-೨೯); ಕವಿಯ ಭಾವಪ್ರಧಾನವಾದ ಕಾವ್ಯ ಭಾವಗೀತೆ ಎಂದೆವು (ಕಾವಗೀ. ೦೨); ಭಾವಗೀತೆಯಲ್ಲಿ ಕೇವಲ ರಸ ಮಾತ್ರ ಇರುತ್ತದೆ (ಕಾರದ. ೪೬೪). [ಸಂ. ಭಾವಗೀತಾ]

**ಭಾವಚಿತ್ರ** (ನಾ). ೧. ಒಬ್ಬ ವ್ಯಕ್ತಿಯ ಆಕಾರವನ್ನು ತೋರಿಸುವ ಚಿತ್ರ ; ಪ್ರತಿಕೃತಿ : ಮನದಿ ಯೋಚಿಸಿಮ[ಯು]ವನ ಭಾವಚಿತ್ರ ಮನೊಲಿದು ಘನಪ್ರಚುರವಾಗಿ ಚಿತ್ರಿಸಿಕೊಂಡು (ಪಶಮೋ. ೨೬-೨೮) ; ನನ್ನ ಕಯ್ಯಿಂದ ಬರೆದ ಪೂಜ್ಯಳಾದ ಶಕುಂತಳೆಯ ಭಾವಚಿತ್ರವನ್ನು ತೆಗೆದು ಕೊಂಡು ಬಾ (ಕಾಶಂತ. ೬೪-೩); ಪ್ರೀತಿಯಿಂದೈತಂದು ನೀನಂದು ನನಗಿತ್ತ ನಿನ್ನ ಆ ಭಾವಚಿತ್ರವನು ನೋಡುತ್ತ (ಚಂದ್ರವೀ. ೦೦೪-೦೬). ೨. ಕ್ಯಾಮರಾ ಎಂಬ ಯಂತ್ರದ ಮೂಲಕ ಗ್ರಹಿಸಿದ ಪ್ರತಿಬಿಂಬ ; ಛಾಯಾಚಿತ್ರ : ಫೋಟೊ : ಮೇಜಿನ ಮೇಲಿದ್ದ ಭಾವಚಿತ್ರ ತನ್ನ ಕಣ್ಣಿಗೆ ಸ್ಪಷ್ಟವಾಗಿ ಕಂಡಿತ್ತು (ದೂಪಟ್ಟ. ೦೩೩). [ಸಂ.]

**ಭಾವಚೇಷ್ಟೆ** (ನಾ). ಮನಸ್ಸಿನಲ್ಲಿ ತೋರುವ ಭಾವಗಳ ನಿರೂಪಣೆಗೆ ಬಹಿರಂಗವಾಗಿ ತೋರುವ ಶಾರೀರಿಕಕ್ರಿಯೆ ; ಶೃಂಗಾರಚೇಷ್ಟೆ : ಆತನಿನಾದ ಬೇಟಮಭಿಜಾತತೆಯಿಂ ನೆಗಟ್ಟೊಂದು ಧೈರ್ಯವಂತು . . . ಚೇತದೊಳುಣ್ಮೆ ಕನ್ನೆ ತಳೆದಳ್ ಕಿಲಿಕಿಂಚಿತ ಭಾವಚೇಷ್ಟೆಯಂ (ಕಾದ್ರಕ. ೩-೧೨೨). [ಸಂ. ಭಾವಚೇಷ್ಟಾ]

**ಭಾವಜ** (ನಾ). ೧. ಮನಸ್ಸಿನಲ್ಲಿ ಹುಟ್ಟುವುದು. ೨. ಮನಸ್ಸಿನಲ್ಲಿ ಜನಿಸಿದವನು ; ಮನ್ಮಥ ; ಕಾಮ : ಮೂವತ್ತಾಱುಂ ಗುಣದಿಂ ಭಾವ ಜನಂ ಕಟ್ಟಿ ಮೆಟ್ಟಿವೆಬಿದರ್ ವೃಷದಿಂ (ಮಲ್ಲಿಕ. ೦-೨೦) ; ಭಾವತಪದಿಂದೆ ಬೆದಱಿಸಿ ಭಾವಜನಂ ಪರಮಸಂಯಮೋಪಾಯಮನುಜ್ಜೀವಿಸಿದ ಮಾಸ್ತು ಪೂಜ್ಯತ್ರೈವಿದ್ಯಪದಂಗಳಲ್ತೆ ಲೋಕನುತಂಗಳ್ (ಶಾಕೃಸ. ೦-೩೦) ; ಜಾತಿ ಜಾಣ್ಬಡೆಯ ಭಾಮ ಭಾವಜನ ಹೂವಿನಂಬಿನಂತೆ ಮನಮಂ ನಾಟಿ (ರಾಜಶೇ. ೩-೦೯ ವ).

ಭಾವಜನಯ್ಯ = ಮನ್ಮಥನ ತಂದೆ ; ವಿಷ್ಣು : ಭಾವಜನಯ್ಯನ ದಿನದಿ ಉಂಡವರನು ಕೀವಿನೊಳಗೆ ಹಾಕಿ ಕುದಿಸುವ ಯಮನು (ಪುರಂದ. ೦-೦೩೪-೦) ; ಬಾರೊ ಬಾರಯ್ಯ ಮನೆಗೆ ಭಾವಜನಯ್ಯ (ಕಪಳ. ೯೬ ಕಲ್ಲಿ). ಭಾವಜನರಸಿ = ಮನ್ಮಥನ ರಾಣಿ ; ರತಿ : ಅಂಗಲತೆಯು ಅತಿ ಬೆಂದು ಭಾವಜನರಸಿ ಬರವರಲು ತದ್ವನಂ ಕಂಗೊಳಿಸಿತ್ತೇವೇಳ್ವೆನೊ (ಪಪಮೋ. ೬-೨೪). [ಸಂ.]

**ಭಾವಜಜನಕ** (ನಾ). ಮನ್ಮಥನ ತಂದೆ ; ವಿಷ್ಣು : ದ್ವಾಪಾರದಲಿ ಭಾವಜಜನಕನಾಗುದಯಿಸಿದನು ತ್ರಿಜಗವಱಿಯಲು ಬಾದರಾಯಣನೆಂಬ ನಾಮದಲಿ (ಐಸಭ. ೩೪-೩೨). [ಸಂ.]

**ಭಾವಜಾಂತಕ** (ನಾ). ಮನ್ಮಥನನ್ನು ನಾಶಪಡಿಸಿದವನು ; ಶಿವ : ಭಾವಜಾಂತಕ ಜಯವೆನುತ . . . ಪೊಂದೊಟ್ಟಿಲಂ ತರಿಸಿ ಶಿಶುವನೆತ್ತಿ ಪಿಡಿದು (ಶ್ರೀರಾ. ೯-೪೬). [ಸಂ.]

**ಭಾವಜಾರಿ** (ನಾ). = ಭಾವಜಾಂತಕ : ಭಾವಜಾರಿಯು ಹರಿಯು ಕಮಲಜರಾವರಾದರು ಪೂಜಿಸಲುಬೇಕೀ ಮಹಾಗಣಪತಿಯ (ಗಗಣ. ೩-೦೦). [ಸಂ.]

**ಭಾವಜೀವಿ** (ನಾ). ಮಾನಸಿಕ ಕಲ್ಪನೆಗಳಲ್ಲಿ ತನ್ಮಯತೆಯನ್ನನು ಭವಿಸುವ ವ್ಯಕ್ತಿ; ವಾಸ್ತವತೆಗಿಂತಲೂ ಕಾಲ್ಪನಿಕಭಾವನೆಗಳಿಗೇ ಹೆಚ್ಚು ಮಾರುಹೋಗುವ, ಕಾವ್ಯ ನಾಟಕಾದಿಗಳಲ್ಲಿ ತೋರಿ ಬರುವ ಉದಾತ್ತಧ್ಯೇಯಗಳನ್ನು ಆದರ್ಶವಾಗಿಟ್ಟುಕೊಳ್ಳುವ ವ್ಯಕ್ತಿ: ಹೀಗೆ ಮನದಲ್ಲಿಯೇ ಎಣಿಕೆ ಹಾಕುತ್ತಿದ್ದಳು ಆ ಭಾವಜೀವಿಯಾಗಿದ್ದ ಬಾಲಕಿ (ಕರಕ. ೦೪) ; ಬುದ್ಧಿನಿಷ್ಠನು ಭಾವಜೀವಿಯನ್ನು ಬೈದು ಮುಚ್ಚುತ್ತಾನೆ (ಪವ್ರಕಾ. ೦೪) ; ಕನ್ನಡಿಗರು ಭಾವಜೀವಿಗಳು, ಬುದ್ಧಿಜೀವಿ ಗಳಲ್ಲ (ವಿಚಾವಾ. ೦೦). [ಸಂ. ಭಾವಜೀವಿನ್]

**ಭಾವಜ್ಞ** (ನಾ). ಇತರರ ಮನಸ್ಸಿನ ಭಾವನೆಗಳನ್ನು ತಿಳಿಯಬಲ್ಲವನು; **ರಸಿಕ ;** ಸಹೃದಯ : ಬಲ್ಲಂದಟ್ಟು ಅದೆಲ್ಲಿದ್ದರು ತನ್ನ ವೇದನೆಯ ಬಿಡದು ಭಾವಜ್ಞರ ಮನೆಯ ಬಾಗಿಲಲ್ಲಿದ್ದರೂ ಸ್ವಜಾತಿಯ ಗುಣವಲ್ಲದೆ ನೀತಿಯ ಗುಣವಿಲ್ಲ (ಶೋಳಸಾ. ೩೩-೨೨೭); ಭೂಪಾಲನನು ಸಾಮದಲಿ ಮುರರಿಪು ಬೋಳವಿಸಿ ಭಾವಜ್ಞ ನಂದಿಸಿದನು ಮನೋವ್ಯಥೆಯ (ಕುಪ್ರಾ.ಕ. ೧೯-೧); ಸೋತಡೆಯು ಸುಖಿದ್ದೆವದಲಿ ಧೈರ್ಯಾತಿಶಯದಲಿ ಕಾದಿ ಕೀರ್ತಿಯ ಬೈತಲೆಯನಪ್ಪುವುದೆ ಭಾವಜ್ಞರಿಗೆ ಗುಣ (ಕೂರಂ. ೬-೪೪-೪೩). [ಸಂ.]

**ಭಾವತೀವ್ರತೆ** (ನಾ). ಆಲೋಚನೆಯ ಗಾಢತೆ; ಭಾವನೆಯ ತೀವ್ರತೆ: ಅವನ ಭಾವನಾವಿವೇಕಶಕ್ತಿಯು ಭವಿತವ್ಯ ಕಲಾಕೃತಿಯ ಚರಡುಕೊರಡಿಗೆ ಬಣ್ಣವಿಡುತ್ತದೆ. ಮತ್ತು ಭಾವತೀವ್ರತೆಯನ್ನೊದವಿಸುತ್ತದೆ (ನವ್ಯಕಾ. ೦೨೦). [ಸಂ. ಭಾವತೀವ್ರತಾ]

**ಭಾವತ್ರಯ** (ನಾ). [ವೀಶೈ] ಭಾವ, ಸದ್ಭಾವ ಮತ್ತು ನಿರ್ಭಾವ ಎಂಬ ಮೂರು ಭಾವಗಳು : ಭಾವತ್ರಯಂಗಳು ತಾಪತ್ರಯಂಗಳು ಷಟ್ಕರಣಂಗಳು ಇಂತಿವು ಆದಿಯಾಗಿ ತೋಱುವ ತೋಱಿಕೆಯೆ ನಾನಲ್ಲ ಎನ್ನವೆ ಅಲ್ಲ (ಷಾಹಾದೇ. ದ. ೦೦೦-೨೩೩) ; ಭಾವಸದ್ಭಾವ ನಿರ್ಭಾವ ಎಂಬ ಭಾವತ್ರಯಂಗಳುಳ್ಳವರ ದೇವರೆಂದೆನ್ನ (ಸಿದ್ಧೇಶ. ೬-೨೩) : ಭಾಪತ್ರಯಂಗಳ ಬಣ್ಣಗೆಡಿಸಿ ದುರ್ಭಾವತ್ರಯಂಗಳ ದೂರಮಾಡಿ ಮನತ್ರಯಂಗಳ ಮರ್ದನ ಮಾಡಿ (ಅಂಗೇ. ೦೯೪-೦೪). [ಸಂ.]

**ಭಾವದ್ಯೋತಕ** (ನಾ). ಭಾವದ ಅರ್ಥವನ್ನು ಪ್ರಖರಗೊಳಿಸುವುದು : ಮುದ್ರೆಗಳು ಭಾವದ್ಯೋತಕ ; ಆಸನಗಳು ರಾಮಣೀಯಕ (ಭಾರದ. ೩೦೩). [ಸಂ.]

**ಭಾವಧ್ವನಿ** (ನಾ). [ಕಾವ್ಯಮೀ] ಕಾವ್ಯದಲ್ಲಿ ದೇವತೆ. ಗುರು ಮೊದಲಾದವರಲ್ಲಿ ಇಟ್ಟಿರುವ ರತಿಯೂ ಮತ್ತು ವ್ಯಭಿಚಾರಿ ಭಾವಗಳೂ ಪ್ರಧಾನವಾಗಿ ತೋರುವುದು ; ಭಾವವು ಮುಖ್ಯವಾಗಿ ವ್ಯಂಗ್ಯವಾಗಿರುವುದು : ಉದ್ರಿಕ್ತಾವಸ್ಥೆಯನ್ನು ತಳೆದ ವ್ಯಭಿಚಾರಿ ಭಾವವು ಚಮತ್ಕಾರಕಾರಿಯಾದಾಗ 'ಭಾವಧ್ವನಿ' (ಧ್ವನ್ಯಾಲೋ. ೩೮). [ಸಂ.]

**ಭಾವನ** (ನಾ). [ಜೈನ] ನಾಲ್ಕು ಬಗೆಯ ದೇವಸಮೂಹದಲ್ಲಿ ಒಂದು ವರ್ಗಕ್ಕೆ ಸೇರಿದ ದೇವತೆ ; ಭವನವಾಸಿದೇವ : ನಿರುತಂ ಭಾವನರುಂ ವನಾವಸಥರುಂ ಜ್ಯೋತಿಷ್ಕರುಂ ಕಲ್ಪವಾಸರುಮಾಗಿರ್ದ ಚತುರ್ವಿಧಾಮರರು ದಾರರ್ ಸ್ತೋಮದೊಳ್ ಕೂಡೆ (ಪುಷ್ಪಕ. ೦೦-೧೩). [ಸಂ.]

**ಭಾವನಾಜೀವಿ** (ನಾ). = ಭಾವಜೀವಿ : ನಿನ್ನ ವ್ಯವಹಾರದಿಂದ ನೀನು ಭಾವನಾಜೀವಿಯೆಂದು ಕಂಡುಬರುವುದು (ಮೀಮಾಂ. ೨೩೦). [ಸಂ. ಭಾವನಾಜೀವಿನ್]

**ಭಾವನಾಮ** (ನಾ). [ವ್ಯಾಕ] ಭಾವವನ್ನು ತಿಳಿಸುವ ನಾಮಪದ : ಒಂದು ಕ್ರಿಯೆ ನಡೆಯುವುದರಿಂದ ಉಂಟಾಗುವ ಸ್ಥಿತಿಯನ್ನಾಗಲಿ ಒಂದು ವಸ್ತುವಿನ ಸ್ಥಿತಿ ಸ್ವಭಾವಗಳನ್ನಾಗಲಿ ತಿಳಿಸುವ ನಾಮವಾಚಕಕ್ಕೆ ಭಾವ ನಾಮವೆಂದು ಹೆಸರು (ಶಬ್ದಮ. ೨೭). [ಸಂ.]

**ಭಾವನಾಮಯಿ** (ನಾ). ೧. ವಾಸ್ತವತೆಯ ಜಗತ್ತಿನಿಂದ ಬೇರೆಯಾದ ಕಲ್ಪನಾಲೋಕದಲ್ಲಿ ವಿಹರಿಸುವ ವ್ಯಕ್ತಿ : ಆಕೆ ತುಂಬ ಭಾವನಾಮಯಿ (ಹೂ). ೨. [ಬೌದ್ಧ] ಸಂಸ್ಕಾರನಿವೃತ್ತಿಗೆ ಕಾರಣವಾದ ಪ್ರಜ್ಞಾ ಪಾರಮಿತಾ ಎಂಬ ಸದಾಚಾರದ ಮೂರು ಭೇದಗಳಲ್ಲಿ ಒಂದು : ಈ ಸಾಕ್ಷಾತ್ಕಾರವೆಂಬ ಭಾವನೆಯು ವೇದಾಂತಿಗಳ ಶ್ರವಣ ಮನನ ನಿದಿಧ್ಯಾಸಗಳಂತೆ ಶ್ರುತಿಮಯೀ, ಚಿಂತಾಮಯೀ, ಭಾವನಾಮಯೀ ಎಂಬ ಕ್ರಮದಿಂದ ಪ್ರಜ್ಞಾಪಾರಮಿತಾ ಎಂಬ ನಾಮಧೇಯದಿಂದ ಪ್ರಸಿದ್ಧವಾಗಿರುವುದು (ಹಿಂದಶಾ. ೪೦). [ಸಂ. ಭಾವನಾಮಯೀ]

**ಭಾವನಾಲವಣ** (ನಾ). [ವೈದ್ಯಶಾ] ಒಂದು ಬಗೆಯ ಔಷಧ ; ಔಷಧಿದ್ರವ್ಯಗಳೊಡನೆ ಭಾವನೆ ನೀಡಿದ ಉಪ್ಪು : ಭಾವನಾಲವಣ– ಆಡುಸೋಗೆ, ಎಲಹುರಿ . . . ಲೋಳಸರ – ಈ ರಸಗಳಲ್ಲಿ ಮಾಡಿ ಕೇರಿದ ಚೊಕ್ಕಟವಾದ ಲವಣ ಸೇರು ೪ನ್ನು ಪ್ರತ್ಯೇಕವಾಗಿ ಒಂದೊಂದು ದಿನ ಭಾವನೆಯಂ ಕೊಟ್ಟು ನೆಳಲಲ್ಲಿ ಒಣಗಿಸಿ ಇರಿಸಿಕೊಂಡು . . . ಸೇವಿಸಲು ಹುಟ್ಟುಗೂರಲು, ಹುಟ್ಟುಶ್ವಾಸವು ಪರಿಹರವಹುದು (ಸಕವೈ. ೨೨೭). [ಸಂ.]

**ಭಾವನಾಲೋಕ** (ನಾ). ಭಾವನಾಪ್ರಪಂಚ : ಮಾನಸಿಕ ಕಲ್ಪನೆ : ಅವಳ ಮಾತು ಭಾವನಾಲೋಕಕ್ಕೆ ಇಳಿಯತೊಡಗಿತು (ಶ್ಯಾಹಾ. ೬೨). [ಸಂ.]

**ಭಾವನಾವಾದಕ್ಕಿ** (ನಾ). [ವೈದ್ಯಶಾ] ಒಂದು ಬಗೆಯ ಔಷಧ ; ಭಾವನೆ ಕೊಟ್ಟ ಓಮು, – ಅಜಮೋದ : ಭಾವನಾವಾದಕ್ಕಿ – ಕೇರಿ ಮಾಡಿದ ವಾದಕ್ಕಿ ಸೇರು ೪ನ್ನು ಆಡಿನ ಮೂತ್ರದಲ್ಲಿ ಭಾವನೆಯಂ ಮಾಡಿಕೊಟ್ಟು . . . ಸೇವಿಸೆ ಶ್ವಾಸರೋಗಶ್ವಾಸ . . . ಅಗ್ನಿಮಾಂದ್ಯ ಮೊದಲಾದ ರೋಗಗಳು ಸಹ . . . ಶೀಘ್ರವಾಗಿ ಗುಣಮಕ್ಕುಂ (ಸಕವೈ. ೨೨೭). [ (ಸಂ. ಭಾವನಾ) + ವಾದಕ್ಕಿ ]

**ಭಾವನಾಶಕ್ತಿ** (ನಾ). ಊಹಿಸುವ ಸಾಮರ್ಥ್ಯ : ನಿಮಗೆ ಭಾವನಾಶಕ್ತಿ ಸ್ವಲ್ಪವೂ ಇಲ್ಲ (ಹಸುಹೋ. ೭೭). [ಸಂ.]

**ಭಾವನಿರ್ವ್ಯಂದ್ವ** (ನಾ). ೧. ಪ್ರೀತಿಯ ಅಭೇದ ; ಅಭಿನ್ನ ಪ್ರೀತಿ : ಆತ್ಮೀಯತೆಯಲ್ಲಿ ಏಕರೂಪತೆ. ೨. ಸಮಭಾವನೆಯುಳ್ಳವನು ; ಸಮಾನಪ್ರೀತಿಯುಳ್ಳವನು : ತನಯನಂ ಪೆತ್ತಳ್ ಗಡಂ ನಿನ್ನ ಪತ್ನಿ ಯಶೋದಾವಧು ತತ್ತನೂಜನೊಡನಿಂಬಿಂ ಭಾವನಿರ್ವ್ಯಂದ್ವನಾಗಿಯೆ ನೀಂ ರಕ್ಷಿಸು ರೌಹಿಣೇಯನೆನಿಪಸ್ಮತ್ಪುತ್ರನಂ (ಜಗದಿ. ೩-೨೩). [ಸಂ.]

**ಭಾವನಿಷ್ಠ** (ಗು). ಒಬ್ಬ ವ್ಯಕ್ತಿಯ ಭಾವವನ್ನು ಆಶ್ರಯಿಸಿಕೊಂಡಿರುವ ; ಭಾವಕ್ಕೆ ಅಧೀನವಾದ ; ಭಾವಪ್ರಧಾನವಾದ : ಮನಸ್ಸಿನ ಮತ್ತು ಭಾವನೆಯ ಪರಿಣಾಮಗಳನ್ನು ದರ್ಶಿಸುವ ಭಾವನಿಷ್ಠಕಲ್ಪನೆ (subjective imagination) ಹೀಗೆ ಇವೆಲ್ಲ ಕವಿಯ ಕಾವ್ಯಸೃಷ್ಟಿಯ ಉಪಕರಣಗಳು ಮಾತ್ರ (ಕಾಂದಕ. ೩೦). 'ಭಾವನಿಷ್ಠಕಾವ್ಯ' ಪರಾ. [ಸಂ.]

**ಭಾವನಿಷ್ಠಕಾವ್ಯ** (ನಾ). ಆಧುನಿಕ ಸಾಹಿತ್ಯವಿಮರ್ಶಕರು ಸೂಚಿಸಿರುವ ವಸ್ತುನಿಷ್ಠಕಾವ್ಯ, ಭಾವನಿಷ್ಠಕಾವ್ಯ ಎಂಬ ಕಾವ್ಯಭೇದಗಳಲ್ಲಿ ಒಂದು ; ಭಾವವೇ ಪ್ರಧಾನವಾಗಿರುವ ಕಾವ್ಯ : ಕವಿಪ್ರಜ್ಞೆ ತನ್ನ ಕಾವ್ಯವಸ್ತುವಿಗಾಗಿ ಬಾಹ್ಯಜಗತ್ತಿನ ವಸ್ತುಗಳನ್ನು ವಿಶೇಷವಾಗಿ ಆಶ್ರಯಿಸದೆ, ಆಶ್ರಯಿಸಿದರೂ ನಿವಾರ್ಯವಾದ ಉಪಲಂಬವನ್ನಾಗಿ ಮಾತ್ರ ಮಾಡಿಕೊಂಡು, ತನ್ನ ಅಂತರಂಗದ ಆಳಕ್ಕೆ ಇಳಿದು, ತನ್ನ ಅನುಭವ, ಆಲೋಚನೆ, ಭಾವ ಇವುಗಳಿಗೆ ಅಭಿವ್ಯಕ್ತಿಯನ್ನು ನೀಡುವುದು. ಇದನ್ನು 'ಭಾವನಿಷ್ಠ' ಕಾವ್ಯ ಎಂದು ಕರೆಯಬಹುದು (ಭಾಕಗೀ. ೦). 'ವಸ್ತುನಿಷ್ಠಕಾವ್ಯ' ಪರಾ. [ಸಂ.]

**ಭಾವನಿಷ್ಠುರ** (ನಾ). ಕ್ರೂರವಾದ ಅಭಿಪ್ರಾಯವುಳ್ಳದು : ಮುರಮಥನ ಚಿತ್ತ್ಯಸಿದ್ಧೆ ತರುವರಿಯ ಸಾಭಿಪ್ರಾಯವಾಕ್ಯಸ್ಫುರಣವನು ಸಭ್ಯಾಂಗಭಾಷಿತಭಾವನಿಷ್ಠುರವ (ಕುಪ್ರಾ.ಕ. ೨೦-೨೮). [ಸಂ.]

**ಭಾವನೆ** (ನಾ). ೧. ಮನಸ್ಸಿನ ಅಭಿಪ್ರಾಯ.–ಆಶಯ ; ಅಂತರಂಗದ ಆಲೋಚನೆ. – ಅನಿಸಿಕೆ : ವರಗುಣಂಗಳನೊಂದನೊಂದಂ ಪರಿವಿಡಿ ಯೊಳೀಶ್ವರನೊಳರ್ಪಿಸಿ ಪರಿಕಿಪೊಡೆ ತಾನೆಂಬ ಭಾವನೆಯಿಲ್ಲದೆ (ಬಸವ. ೩೩-೩೮) ; ಈ ಪೂಜ್ಯಭಾವನೆಗೆ ಅನುಗುಣವಾದ ಪುರಾಣಗಳೂ ಕಥೆಗಳೂ ಹುಟ್ಟಿಕೊಳ್ಳುವುದು ಸಹಜವಷ್ಟೆ (ವಕದ. ೮) ; ಅವರ ಮುಖಗಳಲ್ಲಿ . . . ಇನ್ಯಾವ ಭಾವನೆಯೂ ಬೆಳಗುತ್ತಿರಲಿಲ್ಲ (ಮಹಾಕ್ಷ. ೦೪೦).

**ಭಾಳಾಕ್ಷಿ** (ನಾ). [ಜೈನ] ಹಣೆಯಲ್ಲಿ ಕಣ್ಣುಳ್ಳವಳು; ಜ್ವಾಲಾಮಾಲಿನಿ: ಚಳದ್ಭಾಳಾಕ್ಷಿ ಸಂಪ್ರೀತಿಯಿಂ ಜ್ವಾಲಾಮಾಲಿನಿ ಮಾಟಕ್ಕೆ ಮಂತ್ರಕೃತಿಗೆ ನಿರ್ವಿಘ್ನೋಕ್ತನಿರ್ವಾಹಮಂ (ಜಂಪ್ರ.ಕು. ೧-೯).
[ಸಂ. ಭಾಲಾಕ್ಷೀ (ಭಾಲ + ಅಕ್ಷಿ + —)]

**ಭಾಳೇಕ್ಷಣ** (ನಾ). ೧. ಹಣೆಗಣ್ಣು : ಶಿವನಿಂತೇಳ್ತಂದು ಭಾಳೇಕ್ಷಣಮಂ ನೆರೆಯೆ ತೆರೆ‌ದು ಕೊಟ್ಟು ತನ್ನಾಯಿಯುಮಂ ತೂಳ್ದು . . . ಗೆಲ್ದೊಪ್ಪಿದಂ (ವೃಷಚ. ೬-೯೭). ೨. = ಭಾಳನಯನ : ಬಿನ್ನೈಸಿದಳು ಭಾಳೇಕ್ಷಣಂಗಾ ವಾಸುದೇವಸ್ತುತಿಪರಾಯಣೆ ಗೌರಿದೇವಿಯರು ಭಾಸುರಾನುಗ್ರಹ ರಹಸ್ಯವನರುಹಬೇಕೆಂದು (ಕೌರರಾ. ೧-೨-೬). [ಸಂ. ಭಾಲೇಕ್ಷಣ]

**ಭಿಂಗಾರ** 'ಬಂಗಾರ' ನೋ.

**ಭಿಂಡಿಮಾಲ** (ನಾ). = ಭಿಂಡಿವಾಲ. [ಸಂ.]

**ಭಿಂಡಿವಾಲ, ಭಿಂಡಿವಾಳ** (ನಾ). ಕೈಯಿಂದ ಎಸೆಯುವ ಸಣ್ಣ ಭಲ್ಲೆ ಯಂತಹ ಆಯುಧ : ಶಕ್ತಿ, ಪ್ರಾಸ, ಹಾಟಕ, ಭಿಂಡಿವಾಲ, ಶೂಲ . . . ಮೊದಲಾದ ಆಯುಧಗಳಿಂದ ತುಂಬಿರುವ ಈ ಸಮಂತಪಂಚಕವು ಎಷ್ಟು ಭಯಂಕರವಾಗಿರುವುದು ! (ಶಾಕಪಾ. ೦೦೨) ; ತೋಮರ ಭಿಂಡಿವಾಲಗಳ ಯುದ್ಧ ಗಜಗಜಗಳ ಹೋರಾಟ . . ಅನಂತಾನಂತವಾಗಿ ಕೆತ್ತಲ್ಪಟ್ಟಿದ್ದುವು (ಚಾಂಕಲಾ. ೦೯೦). **ಭಿಂಡಿವಾಳ :** ತೋಮರಮುಸಲ ಮುಸುಂಡಿಭಿಂಡಿವಾಳಮುದ್ಗರಗದಾದಿವಿವಿಧಾಯುಧಂಗಳೊಳಮತಿಪ್ರವೀಣ[ನು]ಂ . . . ಅಗಿ (ಶಂಕರಾ. ೨-೩೪ ವ) ; ಕುದುರೆಯ ಮೇಲೆ ಬಿಲ್ಪರಸು ಸೂಲಿಗೆ ತೀಡಿಕೆ ಭಿಣ್ಡಿವಾಳಮೆತ್ತಿದ ಕರವಾಳಂ (ಎಕ. VII, ಶಿಕಾ. ೦೩೬-೨೯ ; 1068) ; ಪರಿಘಚಕ್ರಮುಸುಂಡಿತೋಮರಭಿಂಡಿವಾಳಚಯ . . . ವರಧನುರ್ದಂಡಾದಿ ಶಸ್ತ್ರೋತ್ಕರದಲನಿಬರು ಕುಶಲರಾದರು ಮುನಿಯ ಗರುಡಿಯಲಿ (ಸಂಭಕ. ೦೭-೦೦೯). [ಸಂ.]

**ಭಿಂಡಿವಾಳ** 'ಭಿಂಡಿವಾಲ' ನೋ.

**ಭಿಂದಪಾಲ** (ನಾ). = ಭಿಂಡಿವಾಲ. [ಸಂ.]

**ಭಿಂದಿಸು** (ಕ್ರಿ). ಭೇದಿಸು ; ಭೇಧೆಯನ್ನುಂಟುಮಾಡು : ಸೋಲ್ತುದು ಗೆಲ್ದುದು ಮಗುಟ್ದುಂ ಸೋಲ್ತುದು ಭಿಂದಿಸಿದುದು . . . ಗ್ರಹಂಗಳೆಂಬವು ಮುನ್ನಂ (ಅಭಿಷ. ೭-೮೯). 'ಭೇದಿಸು' ಪರಾ. [ಭಿಂದು + —ಇಸು$_3$]

**ಭಿಂದು** (ನಾ). ೧. ಮುರಿಯುವಿಕೆ ; ಹಾಳುಮಾಡುವಿಕೆ ; ನಾಶ ಪಡಿಸುವಿಕೆ : 'ಭಿಂದಿಸು' ಪರಾ. ೨. ಹಾಳುಮಾಡುವವನು ; ನಾಶಪಡಿಸುವವನು. ೩. ಗರ್ಭದಲ್ಲೇ ಸತ್ತ ಮಗುವನ್ನು ಪಡೆಯುವವಳು ; ಮೃತಜಾತ ಶಿಶುವಿನ ಜನನಿ : "ನಶ್ಯತ್ಪ್ರಸೂತಿಃ, ಭಿಂದುಃ — ಈ ೨ ಮಕ್ಕಳ್ ಬಾಳದವಳ್" (ಹಲಾಯು. ೬೦-೩೩೯) ; "ಮಕ್ಕಳುಟ್ಟಿ ಸಾವ ಸತಿ ಭಿಂದುವಕ್ಕು" (ಮಂಗರಾ. ೮೯-೩). [ಸಂ.]

**ಭಿಕಾರಿ** ' ಬಿಕಾರಿ ' ನೋ.

**ಭಿಕ್ಕನೆ** (ಅ). ರಭಸ ಮೊದಲಾದುವುಗಳನ್ನು ಸೂಚಿಸುವ ಒಂದು ಅನುಕರಣಾವ್ಯಯ : ಸರಸಿರುಹಗರ್ಭಾಂಡ ಭಿಕ್ಕನೆ ಬಿರಿಯೆ ಪ್ರಳಯಾಂತಕನ ಕೋಪಮಸ್ಫುರಣೆಗಿಂ ಮಿಗಿಲೆಂದೆನಲು ಬೀಸಿದುದು ಬಿರುಗಾಳಿ (ಅನಂರಾ. ೧-೬-೨೩). [ಭಿಕ್$_0$ + — ಅನೆ$_1$]

**ಭಿಕ್ಷ** (ನಾ). ೧. ಇನ್ನೊಬ್ಬರನ್ನು ಬೇಡುವುದು ; ತಿರುಪೆ ; ಯಾಚನೆ : ಮೃಡದೇವಾ ಶರಣೆಂದು ಭಿಕ್ಷಕ್ಕೆ ಹೋದರೆ ಅಲ್ಲಿ ನಡೆ ದೇವಾ ಎಂದೆನಿಸು ಕೂಡಲಸಂಗಮದೇವಾ (ಬಸವ. ೯೩೬) ; ಆಕಾರಮೇಕಾರಮುಂ ಆಕಾರಮುಮಾದುದರ್ಕೆ — ಗ್ರೀವಾ, ಭಿಕ್ಷಾ — ಎಂಬೆರಡು ಶಬ್ದಂಗಳ್ಗೆ ಗ್ರೀವ, ಗ್ರೀವೆ ; ಭಿಕ್ಷ, ಭಿಕ್ಷೆ — ಎಂದು ನಿಜಿಸುವುದು (ಶಮದ. ೬೨ ಪ್ರಯೋ) ; ದ್ವಾರಾವತಿಯ ಪೊಕ್ಕು . . . ಭಿಕ್ಷವ ಬೇಡುತೆಯ್ದು ಮುವನಾರಿಯುಲ್ಲಿಂದ ಶ್ರೀಕೃಷ್ಣನರಮನೆಯ ನೋಡುವೆನೆಂದು ನಡೆತಂದನು (ಭಿಕ್ಷಾತ. ೨ ಸೂಚನೆ). ೨. ಬೇಡಿದಾಗ ಕೊಡುವ ಅನ್ನ, ಆಹಾರ ಇತ್ಯಾದಿ : ಅಕ್ಷಯನ ಭಕ್ತರ್ಗೆ ಒಕ್ಕೈ ಭಿಕ್ಷಮಂ ತಂದಿಕ್ಕಿದುತ್ತಮಾನಕ್ಷಯದ ಫಲಕೇಂ ಸಮವಹುದೇ (ಬಸಪು. ೬೦-೩೩) ; ರಾಗಿ ತಂದಿರ್ಯಾ ಭಿಕ್ಷಕೆ ರಾಗಿ ತಂದಿರ್ಯಾ (ಪುರಂದ. ೦-೭೯ ಪಲ್ಲವಿ) ; ರಾವಣನು ಸನ್ಯಾಸಿಯ ವೇಷವನ್ನು ಹಾಕಿಕೊಂಡು ಈ ಪರ್ಣಶಾಲೆಗೆ ಬಂದು ಭಿಕ್ಷವನ್ನು ಕೇಳಿದನು. ಈ ತಂತ್ರವನ್ನರಿಯದ ಸೀತೆ ಭಿಕ್ಷವನ್ನು ನೀಡಿದಳು (ಶೀಲಾಚಂ. IV, ೨೩). ೩. ಸಂನ್ಯಾಸಿಗಳಿಗೆ ನೀಡುವ ಭೋಜನ, — ಊಟ: ಸ್ವಾಮಿಗಳನ್ನು ಈ ದಿನ ಭಿಕ್ಷಕ್ಕೆ ಕರೆದಿದ್ದೇವೆ (ರೂಢಿ).
[ಸಂ. ಭಿಕ್ಷಾ]

**ಭಿಕ್ಷಾಂದೇಹಿ** (ಅ). ೧. 'ಭಿಕ್ಷೆಯನ್ನು ಕೊಡಿ' ಎಂಬರ್ಥದಲ್ಲಿ ಬಳಕೆಯಾಗುವ ಸಂಸ್ಕೃತದ ವಾಕ್ಯ : 'ಭವತಿ ಭಿಕ್ಷಾಂದೇಹಿ' ಎಂಬುದಿದುವೆ ಕಬ್ಬಿಗರ್ಗೆ ಸಿದ್ಧಿಸಿದ ಪೆರ್ಮೆಯ ಸಪ್ತಾಕ್ಷರೀಮಂತ್ರಂ (ರಾಮಾಶ್ವ. ೦೦೮-೦೯). ೨. (ಆಲಂ) ಭಿಕ್ಷೆಯನ್ನು ಕೊಡಿ ಎಂದು ಬೇಡುವವನು ; ತಿರುಕ ; ಭಿಕ್ಷುಕ : ಅಶನ ದೊರೆಯದಡೆ ಉಪವಾಸಿ ತಾನೆಂದೆಂದು . . . ದೆಸೆ ದೆಸೆಗಳಂ ತಿರುಗಿ ಭಿಕ್ಷಾಂದೇಹಿಯಾದ ಸಂದೇಹಿಗಳ ಶಿವನೊಲ್ಲನು (೬ಪರ. ೩೩-೨೬೦) ; ನನಗೆ ಭಾವೈದನಾಗಿ ಭಿಕ್ಷಾಂದೇಹಿಯಾಗಬಾರದೆಂದು ಅಧಿಕಾರವನ್ನು ಕೊಡಿಸಿದರೆ ಹೀಗೆ ಹೀನಜನಾಶ್ರಿತನಾಗಿ ಉಭಯಭ್ರಷ್ಟತ್ವವನ್ನು ಹೊಂದಿರುವೆ (ರಜ್ಜ.ಕ. ೭ ಕಥಾಸಾರ). 'ದೇಹಿ' ಪರಾ. [ಸಂ.]

**ಭಿಕ್ಷಾಟನ** (ನಾ). ಭಿಕ್ಷೆಗಾಗಿ ತಿರುಗಾಡುವುದು ; ಭಿಕ್ಷೆ ಬೇಡುವುದು : ನಿಮ್ಮುವನೆ ಜಜಿದೆನರಿದ ತಲೆಯ ಬಾಯೊಳಗೆ ರಕ್ತವನೆ ಒರೆಯಿಸುವಂದದಿಂದ ಭಿಕ್ಷಾಟನವನೆಸಗಬೇಕಭವ (ಶೀಕೃಪು. ೨-೨-೩೭): ದೇವನುತ್ಸವದಿಂದ ಭಿಕ್ಷಾಟನಕ್ಕೆ ನಡೆದ ಠೀವಿಯನದೇಪೊಗಳ್ವೆನು (ಭಿಕ್ಷಾತ. ೦-೦೦). [ಸಂ.]

**ಭಿಕ್ಷಾಟನಂಗೆಯ್** (ಕ್ರಿ). ಭಿಕ್ಷೆಗಾಗಿ ತಿರುಗು; ಯಾಚನೆಗಾಗಿ ಮನೆಮನೆಗೆ ಹೋಗು ; ತಿರುಪೆ ಬೇಡು : ಭಿಕ್ಷಾಟನಂಗೆಯ್ಯಬೇಕೆಂದು ಮನಸಂದು ಗುಹ ಗಣಪರುಗಳಯ್ಯ ಸಿಂಗರಮಾದನು (ಭಿಕ್ಷಾತ. ೧-೦೨).
[ಭಿಕ್ಷಾಟನ + ಕೆಯ್$_1$]

**ಭಿಕ್ಷಾಟನೆ** (ನಾ). = ಭಿಕ್ಷಾಟನ : ಐಶ್ವರ್ಯ ಕಳೆದುಕೊಂಡವರಿಗೆ, ನಿರ್ಗತಿಕರಾದವರಿಗೆ ಈ ಭಿಕ್ಷಾಟನೆಯೇ ಆಶ್ರಯ (ಭಿಕ್ಷಾತ. ೨ ಪ್ರಸ್ತಾವನೆ).
[ಸಂ. ಭಿಕ್ಷಾಟನ]

**ಭಿಕ್ಷಾನ್ನ** (ನಾ). ೧. ಭಿಕ್ಷೆಯಿಂದ ದೊರಕುವ ಅನ್ನ ; ಮನೆಮನೆಗೆ ಹೋಗಿ ಬೇಡಿ ತರುವ ಅನ್ನ, — ಆಹಾರ: ಭಿಕ್ಷಾನ್ನಮನುಂಡಾ ಭಾಳಾಕ್ಷಂ ಸೌರಾಷ್ಟ್ರಪತಿಗತುಳಗುಗ್ಗುಳಮಂ ಸುಕ್ಷಮೆಯಿಂದರ್ಪಿಸುತೊಳ್ದಕ್ಷಯಸುಖದೊಳ್ಪನೋಹಿಲಂ ಪಡೆದಿರ್ದಂ (ಉದ್ಭಟ. ೦೦-೯೦) ; ಇವಂಗೆ ಭಿಕ್ಷೆಯನಿಕ್ಕದೊಡೆ ತಾನೆ ಪೊಜಮಟ್ಟು ಪೋಪನೆಂದು ಭಿಕ್ಷಾನ್ನಂ ಪುಟ್ಟದಂತೆಸಗಲು (ವೃಷಚ. ೨೯-೮೭ ವ) ; ಈ ವಜ್ರವನ್ನು ಕೊಂಡುಕೊಂಡರೆ ನನಗೆ ಮುಂದೆ ಭಿಕ್ಷಾನ್ನವೇ ಗತಿ (ಮುಚಿಕ. ೨೭). ೨. ಬೇಡಿದವರಿಗೆ ನೀಡುವ ಅನ್ನ, — ಆಹಾರ : ನೀಚರ್ಯೊರ್ವಳನುರಾಗದಿಂ ಭಿಕ್ಷಾನ್ನಮಂ ತಂದು ನಿಡಿನಿಂದಾಗಲ್ (ಧರ್ಮಾಮೃ. ೨-೩೭); ಅಲ್ಲಿ ನಮ್ಮ ಜನ ಬೇಕಾದಷ್ಟು ಇರಬೇಕಲ್ಲವೆ ಭಿಕ್ಷಾನ್ನ ಹಾಕುವುದಕ್ಕೆ ? (ಮೂಕಜ್ಜಿ. ೩೯). [ಸಂ.]

**ಭಿಕ್ಷಾಪಾತ್ರ** (ನಾ). ೧. = ಭಿಕ್ಷಾಪಾತ್ರೆ. ೨. ಭಿಕ್ಷಾಪಾತ್ರೆಯನ್ನು ಹಿಡಿದವನು; ಶಿವ : ಎಲ್ಲಿಂದ ಬಂದನೋ ಈ ಮೋಹನದ ಸಿದ್ಧಂ . . . ತಾನೆಲ್ಲಿಂದ ಬಂದನೋ ವಿಸ್ಮಯಾಕಾರ ಕಾರುಣಿಕ ಭಿಕ್ಷಾಪಾತ್ರನು (ಭಿಕ್ಷಾತ. ೨-೩೭). [ಸಂ.]

**ಭಿಕ್ಷಾಪಾತ್ರೆ** (ನಾ). ಭಿಕ್ಷೆ ಬೇಡಲು ಉಪಯೋಗಿಸುವ ಪಾತ್ರೆ ; ತಿರುಪೆಗಾಗಿ ಹಿಡಿದುಕೊಂಡು ಹೋಗುವ ಪಾತ್ರೆ : ಭಿಕ್ಷಾಪಾತ್ರೆ ಹಿಡಿಯುವ ಜನ ಇನ್ನೂ ನಮ್ಮಲ್ಲಿ ಕಡಮೆಯಾಗಿಲ್ಲ (ರೂಢಿ). [ಸಂ. ಭಿಕ್ಷಾಪಾತ್ರ]

**ಭಿಕ್ಷಾಶನ** (ನಾ). = ಭಿಕ್ಷಾನ್ನ ೧ : ತಂದ ಭಿಕ್ಷಾಶನವನ್ನೆವರು ನಂದನರು ತಾಯಿಗೆ ನಿವೇದಿಸಲು (ಕುವ್ಯಾಕ. ೧೧–೪). [ಸಂ.]

**ಭಿಕ್ಷಿಸು** (ಕ್ರಿ). ತಿರುಪೆ ಬೇಡಂ ; ಯಾಚಿಸು ; ಭಿಕ್ಷೆಬೇಡು : ಅಜನ ಕಪಾಲವಂ ಪಿಡಿದಸಮನೇತ್ರನು ಭಿಕ್ಷಿಸುವನೆಂದುಸುರ್ವನು (ಬಸಪು. ೩೭–೨೨). [ಭಿಕ್ಷ + –ಇಸು₃]

**ಭಿಕ್ಷು** (ನಾ). ೧. ಭಿಕ್ಷೆ ಬೇಡುವವನು ; ಯಾಚಕ ; ಭಿಕ್ಷುಕ : ಮಿಂಚುವ ಪಳಿಕಿನ ಕುಂಡಲವ ಕಿವಿಯೊಳಿಂಬಿಟ್ಟು . . . ಮೆಚ್ಚಿಯ ಫಣೆಯೊಳು ತ್ರಿರೇಖೆಯ ಬೊಟ್ಟು ಭಿಕ್ಷುವೇಷವ ತಾಳ್ದನಲ್ಲಿವಟ್ಟು (ಭಕ್ತಾಕ. ೧–೧೧). ೨. ಸಂಸಾರದಲ್ಲಿ ವಿರಕ್ತನಾಗಿ ಭಿಕ್ಷೆಯಿಂದ ಪ್ರಾಣಧಾರಣೆ ಮಾಡಿಕೊಂಡು ಮೋಕ್ಷಕ್ಕಾಗಿ ಪ್ರಯತ್ನಿಸುವ ಸಂನ್ಯಾಸಿ ; ನಾಲ್ಕನೆಯ ಆಶ್ರಮವನ್ನು ಕೈಗೊಂಡಿರುವ ತಪಸ್ವಿ : "ಪರಾಶರೀ, ಬ್ರತೀ, ಭಿಕ್ಷುಃ . . . ತಾಪಸಃ—ಈ ೯ ತಪಸ್ವಿ" (ಹಲಾಯು. ೬೮–೨೫೫). ೩. ಬೌದ್ಧ ಸಂನ್ಯಾಸಿ : ನಾನು ತಂದೆಯ ಬಲಾತ್ಕಾರಕ್ಕಾಗಿ ಭಿಕ್ಷು ಆಗಲಿಲ್ಲ (ಕ್ರಬಾಳ. I, ೧೫೬); ಆನಂದ ಏಳನ್ನು ಭಿಕ್ಷುಗಳನೆಚ್ಚರಿಸು (ವೃಶಾಬ. ೬೫–೦); ಸ್ತೂಪಗಳಲ್ಲಿ ಭಿಕ್ಷುಗಳು . . . ಮೆರವಣಿಗೆಯಲ್ಲಿ ಹೋಗುತ್ತಿರುವ ಶಿಲಾಶಿಲ್ಪಗಳು ಬೇಕಾದಷ್ಟು ದೊರೆತಿವೆ (ಶಾಸಗ. ೪೯). ೪. ಜೈನ ಸಂನ್ಯಾಸಿ; p "ಸನ್ಯಾಸಿ. ಇವರಲ್ಲಿ ನಾಲ್ಕು ವಿಧ:– ೧. ಅನಗಾರ. ೨. ಯತಿ. ೩. ಮುನಿ. ೪. ಋಷಿ" (ಕೃಪಕೋ. ೦೯೪). [ಸಂ.]

**ಭಿಕ್ಷುಕ** (ನಾ). ೧. ಭಿಕ್ಷೆಯನ್ನು ಬೇಡಿ ಜೀವಿಸುವವನು ; ತಿರುಕ; ಯಾಚಕ : ಪುರಹರನು ಭಿಕ್ಷುಕನಾಗಿ ದ್ವಾರಾವತಿಗೆ ಬಂದ ಪರಿಯನದ ವರ್ಣಿಸುವೆನು (ಭಿಕ್ಷಾತ. ೦ ಸೂಚನೆ). ೨. ವಿರಕ್ತ ; ಸಂನ್ಯಾಸಿ : ಈ ದೇಗುಲಮನೊಳಪುಗಲ್ವೇಡ ನೀನೆಂದೊಡಂ ಗರ್ವಂ ತಳ್ತಾಮೆಂದುದಂ ಲೆಕ್ಕಿಸದೊಳಪುಗುವಂ ಭಿಕ್ಷುಕಂಗೇಕಿವಂಗೀ ಪಂತಂ (ವೃಕಥ. ೨೯–೪೫). ೩. ಜೈನಯತಿ ; ಸಂನ್ಯಾಸಿ ; ಶ್ರಮಣ : ಆರ್ಹತದೊಳ್. . . ಬ್ರಹ್ಮಚಾರಿಯುಂ ಗೃಹಸ್ಥನುಂ ವಾನಪ್ರಸ್ಥನುಂ ಭಿಕ್ಷುಕನುಮೆಂದು ನಾಲ್ವರಪ್ಪರ್ (ಶಾಪುಂಶು. ೨೨೬) : ತದಾಶ್ರಮಿಯಪ್ಪ ಲೋಹಿತಾಕ್ಷನೆಂಬ ಭಿಕ್ಷುಕಂ ಬಂದು ಚಾರುದತ್ತನ ಸಮಕ್ಷದೊಳಿರ್ದತ್ತಣಿಂ ಬಂದಿರೆತ್ತ ಪೋದಪಿರ್ ಎಂಬುದುಂ (ಶೇಬಿಪು. ೪–೮೪ ವ). [ಸಂ.]

**ಭಿಕ್ಷುಕಿ** (ನಾ). ೧. ಭಿಕ್ಷೆಯನ್ನು ಬೇಡಿ ಜೀವಿಸುವವಳು ; ಯಾಚಕಿ : ತೆಗೆದುಕೊ! ಭಿಕ್ಷುಕಿ! (ದೌಲತ್ ೨೨೮.); ತಿಂಮನ ಮನೆಯ ಬಾಗಿಲಲ್ಲಿ ಭಿಕ್ಷುಕಿಯೊಬ್ಬಳು ಕೂಗುತ್ತಿದ್ದಳು (ತಿಂಮ್ಯಕ ೧೧೬). ೨. ಜೈನ ಸಂನ್ಯಾಸಿನಿ ; ಕಂತಿ : "ಶ್ರಮಣಾ, ಭಿಕ್ಷುಕೀ, ಮುಂಡಾ—ಈ ೩ ಕಂತಿ" (ಹಲಾಯು. ೫೦–೩೩೩). [ಸಂ. ಭಿಕ್ಷುಕೀ]

**ಭಿಕ್ಷುಣಿ** (ನಾ). ಬೌದ್ಧಸಂನ್ಯಾಸಿನಿ : ಇಂಥ ದಿವ್ಯವಾದ ದೃಷ್ಟಿಯ ಭಗವಂತ ತಾನು ತನ್ನ ಶಿಷ್ಯರ ಸಂಗವನ್ನು ಸ್ಥಾಪಿಸಿದ ಬಹುಕಾಲಕ್ಕಾದರೂ ಸ್ತ್ರೀಯರನ್ನು ಭಿಕ್ಷುಣಿಯರನ್ನಾಗಿ ಸ್ವೀಕರಿಸಿರಲಿಲ್ಲ (ಅವುರಾ. ೦೬); ಬುದ್ಧ, ಧರ್ಮ, ಸಂಘಗಳಿಗೆ ಶರಣಾಗುವುದರಿಂದ ಭಿಕ್ಷುಗಳೂ ಭಿಕ್ಷುಣಿಯರೂ ಮುಕ್ತಿ ಪಡೆಯಬಹುದೇ ಹೊರತು ಅವನ ಸ್ಥಾನವನ್ನು ಪಡೆಯುವುದು ಸಾಧ್ಯವಿಲ್ಲವೆಂಬ ಭಾವನೆ (ಕನ್ನಡಾ. ೦೬೩); ಪ್ರಾಯಶಃ ಇದು ಭಿಕ್ಷುಣಿ ಮತ್ತು ದೇವದಾಸಿಪದ್ಧತಿಯಿಂದ ಪ್ರಾರಂಭಿಸಿರಬಹುದು (ಘಾರಾಶ. ೬೦). [ಸಂ. ಭಿಕ್ಷುಣೀ]

**ಭಿಕ್ಷೆ** (ನಾ). ೧. ತಿರಿಯುವುದು; ಬೇಡುವುದು ; ತಿರುಪೆ ; ಯಾಚನೆ : "ಯಾಚ್ಞಾ, ಭಿಕ್ಷಾ, ಅರ್ಥನಾ, ಅರ್ದನಾ-೪ ಬೇಡುವಿಕೆ, ಕೇಳುವಿಕೆ, ತಿರಿದಾಡುವಿಕೆ" (ಸಿದ್ಧಾಂತಿ. ೩೫೬); ಗ್ರೀವಾ, ಭಿಕ್ಷಾ—ಎಂಬೆರಡು ಶಬ್ದಂಗಳ್ಗೆ ಗ್ರೀವ, ಗ್ರೀವೆ, ಭಿಕ್ಷ, ಭಿಕ್ಷೆ ಎಂದು ನಿಜಾಸುವುದು (ಕಮುವ. ೮೨ ಕ್ರಯೋ). ೨. ಬೇಡಲು ಬಂದವರಿಗೆ ಕೊಡುವ ದಾನ,–ಅನ್ನ, ವಸ್ತ್ರ, ಹಣ ಮೊದಲಾದುವು : ಕರೆದು ಭಿಕ್ಷೆಯ ನೀಡೆ ಗೋಪ್ಯಮ್ಮ ನಿಮ್ಮ ತರಳ ಗೋಪಾಲನಿಗೆ (ಪುರಂದ. ೩–೦೫೨ ಪಲ್ಲವಿ); ಇವಂಗೆ ಭಿಕ್ಷೆಯನಿಕ್ಕದೊಡೆ ತಾನೆ ಪೊಱಮಟ್ಟು ಪೋಪನೆಂದು ಭಿಕ್ಷಾನ್ನಂ ಪುಟ್ಟದಂತೆಸಗಲು (ವೃಕಥ. ೨೯–೪೬ ವ). ೩. ಸಂನ್ಯಾಸಿಗಳು ಮತ್ತು ಮಠಾಧಿಪತಿಗಳಿಗೆ ನೀಡುವ ಭೋಜನ: ಇಂದು ಸ್ವಾಮಿಗಳನ್ನು ನಮ್ಮ ಮನೆಗೆ ಭಿಕ್ಷೆಗೆ ಕರೆದಿದ್ದೆವು (ರೂಢಿ).

ಭಿಕ್ಷೆನೀಡು=ಬೇಡಲು ಬಂದವರಿಗೆ ಏನನ್ನಾದರೂ ಕೊಡು ; ತನ್ನ ಹೃದಯವನ್ನೇ ತಂಡುಲರೂಪವಾಗಿ ಭಿಕ್ಷೆನೀಡಿದಳು (ಶಕಂಬಾ. ೦೦೬). ಭಿಕ್ಷೆ ಬೇಡು=ಯಾಚನೆ ಮಾಡು ; ತಿರಿ : ಮುಂದಿನ ಮನೆಗೆ ಹೋಗಿ ಭೀಕ್ಷೆಬೇಡು (ಅಶ್ರಘು. ೨೬). [ಸಂ. ಭಿಕ್ಷಾ]

**ಭಿಡಿಯ** 'ಬಿಡೆಯ₁' ನೋ.

**ಭಿಡೆಯ** 'ಬಿಡೆಯ₁' ನೋ.

**ಭಿತ್ತ** (ನಾ). ಚೂರು ; ಖಂಡ : "ಭಿತ್ತಂ, ಶಕಲಂ, ಖಂಡಂ, ಅರ್ಧಃ—೪ ಮುರುಕು ಚೂರುಗಳ ಹೆಸರು" (ಸಿದ್ಧಾಂತಿ. ೨೯). [ಸಂ.]

**ಭಿತ್ತರಿ** (ನಾ). ಖಡ್ಗಯುದ್ಧದಲ್ಲಿ ಒಂದು ವರಸೆ : ಬಂಡಿಕೋಲಿನ ಕೆಳಗಡೆಯಲ್ಲಿ ಬಂಡಿಕೋಲಿನಿಂದ ಮುಟ್ಟಿಸಿ ಭ್ರಮಣವನ್ನು ಮಾಡಿ ತೊಡೆಯಲ್ಲಿ ಏಟು ಆಪದು ಅದು ಭಿತ್ತರಿಯೆಂದು ಸಮ್ಮತವು (ಖಡ್ಗಲೀ. ೫–೬೦). 'ತಳಭಿತ್ತರಿ' ಪರಾ. [ ? ]

**ಭಿತ್ತಿ** (ನಾ). ೧. ಮುರಿಯುವುದು ; ಒಡೆಯುವುದು ; ಬೇರ್ಪಡಿಸುವುದು. ೨. ಚೂರು ; ಮುರುಕು ; ತುಂಡು. ೩. ಒಡೆದು ಹೋಗಿರುವ ಅಥವಾ ಭಾಗವಾಗಿರುವ ಯಾವುದಾದರೂ ವಸ್ತು. ೪. ಬಿರುಕು ; ಸೀಳು ; ಛಿದ್ರ. ೫. ಗೋಡೆ ; ಕುಡ್ಯ : "ಭಿತ್ತಿಃ, ಕುಡ್ಯಂ—೨ ಗೋಡೆಯ ಹೆಸರುಗಳು" (ಸಿದ್ಧಾಂತಿ. ೯೯); ಇದಿರೊಳ್ ಪೊಳೆವ ಪಳುಕಿನ ಭಿತ್ತಿಯಂತೆ ಸುತ್ತಿದ ನೇತ್ರದುಕೂಲದೊಳಂ (ಶಾರಂಪು. ೬೯); ಭಿತ್ತಿ ಮೂಱಱ ಮೇಲೆ ಚಿತ್ರ ಬರೆಯಿತ್ತು (ಅವಕಾ. ೯೨–೪೦೯). ೬. ಚಿತ್ರವನ್ನು ಬರೆಯುವ ಮೂಲ ಆಧಾರ ; ಹಲಗೆ, ಬಟ್ಟೆ, ಗೋಡೆ ಮೊದಲಾದ ಸಾಧನ : "ಭಿತ್ತಿಯನೆ ಪುಸ್ತಕಂ" (ಕುಂಗರಾ. ೦೦೬–೦೫); ಭಿತ್ತಿಯಿಲ್ಲದೆ ಬರೆಯಬಹುದೆ ಚಿತ್ತಾರವ ಬಿತ್ತಿ ಬೆಳೆಯಬಹುದೆ ಧರೆಯಿಲ್ಲದೆ (ಬಸವ. ೩೯೮); ಭಿತ್ತಿಯೊಂದಿಲ್ಲದಿರೆ ಚಿತ್ರದೊತಿರಲಹುದು ? ಚಿತ್ರವಿಲ್ಲದೆ ಭಿತ್ತಿ ಸೊಗಸಹುದೆಂತು ? (ಕುಂಕುಳ. ೦೦೫). ೭. ಮೂಲ ; ತಳ : ಅರ್ಚನೆಯವನರ್ಚಿಸಿದಲ್ಲಿ ಪುಣ್ಯದ ಫಲ ಭಕ್ತಿಯಿಂ ದ್ರವ್ಯವ ಕೊಡುವುದು ಮುಕ್ತಿಲೋಕದೊಳಗು ಈ ಉಭಯದ ಭಿತ್ತಿಯನಱಿದು ನಿತ್ಯವ ತಿಳಿದವಂಗೆ ಏನೂ ಎನಲಿಲ್ಲ (ಶೋಳವಚ. ೦೬–೬೦). ೮. ಜೀವನ ನಡೆಸಲು ಅಥವಾ ದೇವತೋತ್ಸವಾದಿಗಳು ನಡೆಯಲು ಸ್ಥಾಪಿಸುವ ಆಧಾರಭೂತವಾದ ಶಾಸನವುಳ್ಳ ಭೂಮಿ, ಇಡುಗಂಟು ಮೊದಲಾದುವು; ಆಶ್ರಯನಿಧಿ: ಉತ್ಸವಗಳು ನಡೆಯುತಕ್ಕ ಬಗೆ ನಮ್ಮ ಹತ್ತು ಮಂದಿ ಒಪ್ಪಿ ಭಿತ್ತಿ ಮಾಡಿ ಕೊಟ್ಟಿರುವುದೇನೆಂದರೆ (ಎಕ. IX (S), ಆನೇಕ. ೦೦೬ ೬; 1892). ೯. ಹಿನ್ನೆಲೆ : "ಮುಂದುಗಡೆ ಇರುವ ಮುಖ್ಯ ವ್ಯಕ್ತಿಗಳಿಗೆ ಅಥವಾ ವಸ್ತುಗಳಿಗೆ ಪ್ರಾಧಾನ್ಯಕೊಡುವಂಥ ದೃಶ್ಯ . . . ಹಿನ್ನೆಲೆ ; ಭಿತ್ತಿ ; ಮರೆ ; ಅಪ್ರಸಿದ್ಧಿ" (Back-ground ಇಂಕಕ). [ಸಂ.]

**ಭಿತ್ತಿಚಿತ್ರ** (ನಾ). ಗೋಡೆಯ ಮೇಲೆ ಬರೆದಿರುವ ಚಿತ್ರ : ಭಿತ್ತಿಚಿತ್ರಾಳೋಕೇಕವಿನೋದದಿಂ. . . ರಯ್ಯಮೆನಿಸಿತ್ತುರ್ವೀಶಶಯ್ಯಾಗೃಹಂ (ಪುಷ್ಪದ. ೯–೯೬); ಪ್ರಕೃತ ಅವಲೋಕನದಲ್ಲಿ . . . ಚೋಳರ ಕಾಲಗಳ ವರೆಗೆ, ಆ ಮೇಲೆ ತಿರುವಾಂಕೂರು—ಕೊಚ್ಚಿ ಭಿತ್ತಿಚಿತ್ರಗಳಿಂದ ಲೇಪಾಕ್ಷಿ ಕಲೆಯ ವರೆಗೆ . . . ಪರಿಚಯ ಮಾಡಿಕೊಡಲು ಉದ್ದೇಶಿಸಲಾಗಿದೆ (ಭಾರದ. ೫೨೨); ಅಜಂತಗುಹಾಲಯದಲ್ಲಿ ಭಿತ್ತಿಚಿತ್ರಗಳಿರುವ ಸಂಗತಿ ಅನೇಕರಿಗೆ ತಿಳಿದದ್ದೇ (ಶಾಸಗ. ೦೨). [ ಸಂ. ]

**ಭಿತ್ತಿದೋಷ** (ನಾ). [ಕಾವ್ಯಮೀ] ಒಂದು ಬಗೆಯ ಕಾವ್ಯದೋಷ ; ಸಂಧಿ ಮಾಡಬೇಕಾದ ಸ್ಥಳದಲ್ಲಿ ಸಂಧಿಯನ್ನು ಮಾಡದಿರುವುದು; ವಿಸಂಧಿ : ಮುನ್ನಂ ಪೇಟ್ದಿರ್ದರ್ಥಂ ಭಿನ್ನಪ್ರಸ್ತಾರ ಭಿತ್ತಿದೋಷಾನು ಗತಂ (ಕವಿರಾ. ೦–೯೬). ☞ "ಜನಪತಿಗೆ ಒಸಗೆಯಂ ಪುರಜನಮೆಲ್ಲಂ ಬೀಱುತಿರ್ಪರಾಗಳ್ ತಾಮುಂ" ಎಂಬಲ್ಲಿ 'ಜನಪತಿಗೊಸಗೆಯಂ' ಎಂಬುದನ್ನು, ಒಂದು ಮಾತ್ರೆ ಕಡಮೆ ಬೀಳುವುದೆಂದು ಕವಿ 'ಜನಪತಿಗೆ ಒಸಗೆಯಂ' ಎಂದು ಬಿಡಿಸಿದ್ದಾನೆ. ಹೀಗೆ ಒಡೆಯ ಬಾರದ ಸ್ಥಳದಲ್ಲಿ ಒಡೆದರೆ ಭಿತ್ತಿದೋಷ. [ಸಂ.]

**ಭಿತ್ತಿಪತ್ರ** (ನಾ). ಯಾವುದಾದರೂ ಒಂದು ವಿಷಯವನ್ನು ಪ್ರಚಾರ ಮಾಡುವುದಕ್ಕಾಗಿ ಜನರಿಗೆ ಚೆನ್ನಾಗಿ ಕಾಣಲೆಂಬ ಉದ್ದೇಶದಿಂದ ಗೋಡೆಗಳಿಗೆ ಅಂಟಿಸುವ ಪತ್ರ; ಪ್ರಚಾರಪತ್ರ : ಆಕಾಶದ ಬೆನ್ನ ಮೇಲೆ ಭಿತ್ತಿಪತ್ರ ಓದಿದೆ (ಅರಲೋ. ೦೯); ಸಾಂಡರ್ಸ್ ಕೊಲೆ ಸಂಬಂಧದ ಭಿತ್ತಿಪತ್ರಗಳನ್ನು ಭಗತ್‌ಸಿಂಗ್ ಬರೆದುದೂ ತಿಳಿಯಬಂತು (ಅಜ್ಞಾ.ಶೆ. ೦೦೯); ಈ ಕಾಯಿಲೆಯ ವಿಚಾರವನ್ನು ಭಿತ್ತಿಪತ್ರಗಳ ಮೂಲಕವಾಗಲಿ. . . ನಾಗರಿಕರಿಗೆ ಅರಿವಾಗುವಂತೆ ವಿವರಿಸಬೇಕು (ಕಂಠೋ. ೮೦). ☞ ಇದು ಇಂಗ್ಲಿಷಿನ 'Wall Poster' ಎಂಬುದರ ಕನ್ನಡ ಅನುವಾದ. [ಸಂ.]

**ಭಿದುರ** (ಗು). ೧. ಮುರಿಯುವ; ಒಡೆಯುವ ; ಸೀಳುವ. (ನಾ). ೨. ಮುರಿಯುವವನು ; ಒಡೆಯುವವನು : ಮದವದರಿಹಸ್ತಿಮಸ್ತಕಭಿದುರಂ [ಭಯ]ವಿಧುರನನ್ಯಬಾಣಚ್ಛಿದುರಂ. . . ವೃಷಸೇನಂ (ಗದಾಯು. ೯–೩೩). ೩. ಇಂದ್ರನ ವಜ್ರಾಯುಧ; ಅಶನಿ : "ಪವಿಃ, ಅಶನಿಃ. . . ಗೌಃ, ಭಿದುರಂ. . . ಶಂಬಃ — ಈ ೧೨ ಇಂದ್ರನ ವಜ್ರಾಯುಧದ ಪೆಸರ್" (ಹಲಾಯು. ೦೦–೩೩) ; ಅರಿಭೂಭೃದ್ಗಿರಿಯುಗ್ರಸಂಘಭಿದುರ ಜ್ವಾಳಾನಳಂ . . . ಬಲ್ಲಾಳನೃಪಾಲ ಭೈರವತರಪ್ರೋದ್ಯತ್ಪ್ರತಾಪಾನಳಂ (ಎಕ. VI, ಕಡ.ಜಿ. ೦೨೯–೨೨ ; 1218) ; ತಾವು ಗೋಚರವಾಗದಿರೆ ಕೋಪ ವೆಗ್ಗಳಿಸಿ ಶಿವಿ ಭಿದುರೋಪಮಿತಶಬ್ದವೇಧಿಯ ತೆಗೆದು ತಾವವನ್ನರಿದು ಕೊಂದಪೆ ನೆನಲು (ಶಂಕರಾ. ೦–೦೨–೯೨). ೪. ವಜ್ರಾಯುಧವನ್ನುಳ್ಳವನು, ಇಂದ್ರ; ದೇವೇಂದ್ರ: ಅರಿರಾಯಗರ್ವಪರ್ವತದಳನಭಿದುರನುರುತರವಿಪಕ್ಷಪ್ರಬಲಸೇನಾಬ್ಧಿಬಾಡಬಂ (ಅರಾಶ. ೦–೦–೯೯). ೫. ಸುಲಭವಾಗಿ ಒಡೆಯುವಂತಹುದು; ಭಂಗುರವಾದುದು. ೬. ಬೆರಕೆಯಾದುದು ; ಮಿಶ್ರವಾದುದು. ೭. ಆನೆಯ ಕಾಲಿನ ಸರಪಳಿ. ೮. ಸಿಡಿಲು. [ಸಂ.]

**ಭಿದೆ** (ನಾ). ೧. ಒಡೆಯುವುದು; ಮುರಿಯುವುದು : "ಭಿದೆ ಸ್ಫುಟನಮಕ್ಕುಂ" (ಚವು.ಕೋ. ೦೦೯–೨೨). ೨. ವ್ಯತ್ಯಾಸ ; ಭೇದ : ರೂಪನಾಮ ಓದಿದು ಭಿದೆಯಂ ಸ್ಥಾಪಿಸಲು (ವಿವೇಶ. ೦೨–೯೦). ೩. ರೀತಿ; ವಿಧ; ಬಗೆ. [ಸಂ. ಭಿದಾ]

**ಭಿದ್ಯ** (ನಾ). ದಂಡೆಯನ್ನು ಭೇದಿಸಿಕೊಂಡು ರಭಸದಿಂದ ಹರಿಯುವ ಹೊಳೆ ; ಗಂಡುಹೊಳೆ ; ನದ : "ಭಿದ್ಯಃ, ಉದ್ಯಃ, ನದಃ —ಈ ೩ ಗಂಡುದೊರೆ" (ಹಲಾಯು. ೦೦೦.೯೯). [ಸಂ.]

**ಭಿನ್ನ** (ಗು). ೧. ಒಡೆದ ; ಮುರಿದ. ೨. ವಿಭಾಗಿಸಿದ ; ಬೇರ್ಪಡಿಸಿದ. ೩. ಬಿಡಿಸಿದ ; ತೆರೆದ. ೪. ಅರಳಿದ; ವಿಕಾಸಹೊಂದಿದ. ೫. ಬೇರೆಬೇರೆಯಾದ ; ಪ್ರತ್ಯೇಕವಾದ : ಭಿನ್ನ ಅಂಕಿ ಅಂಶಗಳನ್ನು ಹೋಲಿಸುವಾಗ ಪ್ರಶ್ನೆಗಳು ತುಂಬಾ ಸಹಾಯವಾಗುತ್ತವೆ (ಶಿಕ್ಷಕ. ೨೬೯). ೬. ವ್ಯತ್ಯಾಸಗೊಂಡ ; ವ್ಯತ್ಯಯಹೊಂದಿದ. (ನಾ). ೭. ಒಡೆದು ಹೋದುದು ; ಸೀಳಿಹೋದುದು ; ಹಾಳಾದುದು : "ಭಗ್ನಮೆನೆ ರುಗ್ಣಮೆನೆ ತಿನ್ನಮೆನೆ . . . ಭಿನ್ನಮೆನೆ ಕೆಟ್ಟುದು" (ಪಂಗಿರಾ. ೦೩೨–೨೬) ; ಜಲಧ ನುಂಗಿತ್ತಯ್ಯಾ ಎನ್ನ ಕರವು ಪತ್ರೆಯ ನುಂಗಿತ್ತಯ್ಯಾ ಶಿವಿ ಎನ್ನಯ ಮಂತ್ರ ಭಿನ್ನವಾಯಿತ್ತು (ಬಸವ. ೯೩೬) ; ಭಿನ್ನವಾದ ಗಡಿಗೆ ಹೊನ್ನು ಕೊಟ್ಟರೆ ಸಮನಾದೀತೆ ? (ಗಾದೆ). ೮. ತುಂಡು ; ಚೂರು ; ಶಕಲ. ೯. ಬೇರೆಯಾದುದು ; ಪ್ರತ್ಯೇಕವಾದುದು ; ಅನ್ಯ : ನೀನೆ ಸರ್ವೇಶ ಸರ್ವಗಸರ್ವಾತ್ಮಕ ಸರ್ವಭೂತಮಯ ನಿನ್ನಿಂ ಭಿನ್ನವಾಗಿರ್ಪ ವಸ್ತುಗಳಿಲ್ಲ (ಜಗು. ೫–೯೯) ; ಅಭವನೊಳ್ಪೆರೆದಾ ಮನವುಂ ನೆನಹುಂ ವಾಂಛೆಯುಮನವರತಂ ಭಿನ್ನವಿಲ್ಲದಿರ್ಕುಂ ನಿಜದಿಂ (ಹರಿಶ್ಚ.ರ. ೨–೩೯). ೧೦. ಅರ್ಧಭಾಗ : "ಖಂಡಃ, ಅರ್ಧಃ (ರ್ಧಂ), ನೇಮಃ, ಶಕಲಂ, ಭಿನ್ನಂ, ಸಾಮಿ — ಈ ೬ ಅರ್ಧಂ" (ಹಲಾಯು. ೦೦೬–೨೮) ; "ಶಕಲಮೆನೆ ನೇಮಮೆನೆ ಭಿನ್ನಮೆನೆ ಖಂಡಮೆನಲರ್ಧಕ್ಕೆ ನಾಮಂ" (ಪಂಗಿರಾ. ೦೨೯–೦೪). ೧೧. ಕುಂದು ; ಕೊರತೆ ; ದೋಷ : ತನ್ನ ಭಿನ್ನವನಜುಯದೆ ಅನ್ಯರನೆಂಬ ಕುನ್ನಿಯನೇನೆಂಬೆ . . . ದೇವಾ (ಬಸವ. ೦೦೫) ; ದೇವಗೊಂದಿಷ್ಟು ಭಿನ್ನವಾದರೆ ಭಾವಿಸರು (ಜಶ್ಮ.ಕೃ. ೭೨–೯೦). ೧೨. ಸೀಳಲ್ಪಟ್ಟವನು ; ಭೇದಿಸಲ್ಪಟ್ಟವನು ; ನಾಶಮಾಡಲ್ಪಟ್ಟವನು : ನಿನ್ನಿಂ ಭಿನ್ನವಾಗಿರ್ಪ ವಸ್ತುಗಳಿಲ್ಲೀರಿಪು ಭಿನ್ನನಾದನಿದು ಚಿತ್ರಂ ಪದ್ಮಪತ್ರಾಂಬಕಾ (ಜಗು. ೫–೯೯). ೧೩. ಬೇರೆಯಾದವನು ; ಬೇರೆಯಾದ ವ್ಯಕ್ತಿ: ಭಿನ್ನನಂತಿಸೆ ತೋಱಿ ಭಿನ್ನಾಭಿನ್ನನೆನಿಸಿಯೆ ಮೆಱೆವ ತಿಳಿಯಲಭಿನ್ನನೈ ಮುರವೈರಿ (ಕುವ್ಯಾ.ಉ. ೯–೭೦). ೧೪. [ಗಣಿತ] ಭಾಗಿಸುವುದು ; ಭಾಗಾಹಾರ ; ಸತ್ತುತಗೆಯಂ ಸಂಹೃತಂ ತವೆ ಭಕ್ತ ಭಿನ್ನ ಚಿನ್ನದಿತಂ ದಾಪ್ಪಭಾವೆಗಳ್ ಭಾಗಿ ಸೂದೆಂದಜ಼ ನೀನಪಂ ಬುಧಾ ? (ಕೃವಶಾ. ೦೨–೦೫). ೧೫. [ಸಂಗೀತ] ರಾಗ ಜಾತಿಗಳಲ್ಲಿ ಒಂದು : ರಾಗಜಾತಿಗಳು ಶುದ್ಧ ಭಿನ್ನ ಗೌಡ ಅಷ್ಟ ಸಾಧಾರಣ ಸಪ್ತಸಾಧಾರಣ ಷಟ್ಸ್ವರವೆಂಬಾಱುಜಾತಿಗಳು (ವಿವೇಶ. ೯೭). [ಸಂ.]

**ಭಿನ್ನಂಗೆಯ್**, ಭಿನ್ನಗೈ (ಕ್ರಿ). ೧. ಸೀಳು ; ನಾಶಮಾಡು : ಲೋಕಾಳಿ ಸಂತಾಪಮಂ ಭಿನ್ನಂಗೆಯ್ಯಲೊಡರ್ಚಿ ಪಾಲ್ಗಡಲನೆಯ್ದಾಲೋಡನಂಗೆಯ್ದು (ಹರಿಶ್ಚ.ರ. ೨–೩೮). **ಭಿನ್ನಗೈ** : ೨. ಭೇದಮಾಡು ; ಪಕ್ಷಪಾತವನ್ನು ಮಾಡು : ತನ್ನನಿಯಳ ತನ್ನೊಡವೆ ವೈಬಳಗವ್ ಭಿನ್ನಗೈಯದೆ ಬೆರಸು ವುದು (ಹರಿಶ. ೬–೯೬). [ಭಿನ್ನ + ಕೆಯ್¹]

**ಭಿನ್ನಕರ್ತೃ** (ನಾ). [ವ್ಯಾಕ] ಕ್ರಿಯಾಪದ ವಾಚ್ಯವಾದ ಕ್ರಿಯೆಯನ್ನು ಮಾಡುವ ವ್ಯಕ್ತಿಯನ್ನು ಪ್ರೇರಿಸುವವನು ; ಕ್ರಿಯೆಯನ್ನು ನಿರ್ವಹಿಸುವ ವ್ಯಕ್ತಿಯಿಂದ ಬೇರೆಯಾದ ವ್ಯಕ್ತಿ ; ಪ್ರಯೋಜಕ ಕರ್ತೃ ; ಪ್ರೇರಕ ಕರ್ತೃ : ಭಿನ್ನಕರ್ತೃವಿನೊಳಿಸುವಿಲ್ಲ (ಶಮದ. ೨೩೦. ಕೃದೋ). [ಸಂ.]

**ಭಿನ್ನಕರ್ತೃಕ** (ನಾ). ೧. = ಭಿನ್ನಕರ್ತೃ : ಅಥ ಭಿನ್ನಕರ್ತೃಕ ಪ್ರಯೋಗೇ _ ಪೆರ್ಚಿಸು _ ವರ್ಧನೇ, ಬೆರ್ಚಿಸು – ಭಯೇ (ಶಮದಾ. ೬). ೨. ಪ್ರಧಾನ ಕ್ರಿಯೆಯ ಕರ್ತೃವಿನಿಂದ ಭಿನ್ನವಾದ ಕರ್ತೃವನ್ನು ಹೊಂದಿರುವ ಅಪೂರ್ಣಕ್ರಿಯಾಪದ : ಅಪೂರ್ಣಕ್ರಿಯಾಪದಗಳು . . . ಇವುಗಳಲ್ಲಿ ಏಕಕರ್ತೃಕ, ಭಿನ್ನಕರ್ತೃಕ ಎಂದು ಎರಡು ವಿಧಗಳವೆ . . . ಕಡೆದೊಡೆ ಪಾಲ್ಗಡಲ್ ವಿವಿಧ ವಸ್ತುವನೀಯದೆ ಎಂಬಲ್ಲಿ ಕಡೆವ ಕ್ರಿಯೆಯೂ ಈವ ಕ್ರಿಯೆಯೂ ಒಂದೇ ಕರ್ತೃವಿನಿಂದ ಆದುವಲ್ಲ ; ಭಿನ್ನಕರ್ತೃಕವಾದುವು (ಕ್ಕಬಿ. ೯೯). [ಸಂ.]

**ಭಿನ್ನಕುಂಭ** (ನಾ). ಒಡೆದ ಗಡಿಗೆ,— ಮಡಕೆ : ಭಿನ್ನಕುಂಭದೊಳಿಱಿದುದಕ ದಂತೆ ನೆಳಲುಗೆಟ್ಟ ಮಹೀಜದಂತೆ (ಬಸವು. ೬೦–೫೦). [ಸಂ.]

**ಭಿನ್ನಕೌಶಿಕ** (ನಾ). [ಸಂಗೀತ] ಒಂದು ರಾಗದ ಹೆಸರು : ಭಿನ್ನಷಡ್ಜ ಭಿನ್ನತಾನ ಭಿನ್ನಕೌಶಿಕ ಮಧ್ಯಭಿನ್ನವೆಂದು ನಾಲ್ಕು ರಾಗಂಗಳು ಗೌಡ ಜಾತೀಯಂಗಳು (ವಿವೇಶ. ೨೩೩). [ಸಂ. ಭಿನ್ನಕೌಶಿಕೀ]

**ಭಿನ್ನಗಣ್ಣು** (ನಾ). ತಪ್ಪುದೃಷ್ಟಿ ; ಸರಿಯಲ್ಲದ ನೋಟ : ತನ್ನಲ್ಲಿ ತಾ ಸುಯಿಧಾನಿಯಾಗಿ ನೋಡಲಱಿಯದೆ ಭಿನ್ನಗಣ್ಣಲಿ ನೋಡಿಹೆನೆಂದು ತಮ್ಮ

ಮಾಟಿದು ಇನ್ನುಳಿಂದು ಅಟಿಸುವ ಅಣ್ಣಗಳಿರಾ ನೀವು ಕೇಳಿರೋ (ರಂಗಪ. ೦೩-೩೦). [ಭಿನ್ನ + ಕಣ್ಣು (< ಕಣ್)]

**ಭಿನ್ನಗ್ಯೆ** 'ಭಿನ್ನಂಗೆಯ್' ನೋ.

**ಭಿನ್ನತಾನ** (ನಾ). [ಸಂಗೀತ] ಒಂದು ರಾಗದ ಹೆಸರು : ಭಿನ್ನಷಡ್ಜ ಭಿನ್ನತಾನ ಭಿನ್ನಕೌಶಿಕಿ ಮಧ್ಯಭಿನ್ನವೆಂದು ನಾಲ್ಕು ರಾಗಂಗಳು ಗೌಡ ಜಾತೀಯಂಗಳು (ಸಿವೇಕ. ೨೩೩). [ಸಂ.]

**ಭಿನ್ನತೆ** (ನಾ). ಬೇರೆಬೇರೆಯಾಗಿರುವಿಕೆ ; ವ್ಯತ್ಯಾಸ : ಮನುಷ್ಯನಲ್ಲಿ ಸಾಹಸ, ಹೇಡಿತನ ಮುಂತಾದುವು ಸ್ನಾಯುಸಂಸ್ಥಾನದ ಭಿನ್ನತೆಯಿಂದುಂಟಾಗುತ್ತದೆ (ಜೀವಾತ್ಮ. ೩೭) ; ಕಲಿಯುವ ಭಾಷೆಗೂ ಆಡುವ ಭಾಷೆಗೂ ತುಂಬ ಭಿನ್ನತೆ ಇದೆ (ಶಿಕ್ಷಣ. ೦೨೯). [ಸಂ. ಭಿನ್ನತಾ]

**ಭಿನ್ನಪಂಚಮ** (ನಾ). [ಸಂಗೀತ] ಒಂದು ರಾಗದ ಹೆಸರು : ಗಾನಸಾಮವರಾಲಿಯ ಮೇಳದಲ್ಲಿ ಪೂರ್ವವರಾಲಿ(ಕಾ), ಭಿನ್ನಪಂಚಮರಾಗ ಹೀಗೆ ಎರಡು ರಾಗಗಳನ್ನು ಹೇಳಿದೆ (ತತುತ್ರ. ೦೨೯). [ಸಂ.]

**ಭಿನ್ನಪದ** (ನಾ). [ವ್ಯಾಕ] ಸಮಾಸವಾಗದೆ ಇರುವ ಬೇರೆಬೇರೆ ಪದ : ವ್ಯಸ್ತಪದ : ಭಿನ್ನಪದದೊಳಂ ಸಮಾಸಪದದೊಳಂ ಣಕಾರಕ್ಕೆ ಪರಮಾದ ನಕಾರಂ ಣಕಾರಮನೆಯ್ದುಗುಂ (ಶಮಂದ. ೦೩೯ ವೃತ್ತಿ). [ಸಂ.]

**ಭಿನ್ನಪಾಠ** (ನಾ). ಸಂಪಾದಿತ ಗ್ರಂಥಗಳಲ್ಲಿ ಸೂಚಿಸಿರುವ ಬೇರೆ ಪಾಠ : ಪಾಠಾಂತರ : ಇಲ್ಲಿ ನಮಗೆ ಎರಡು ಪಾಠಗಳಲ್ಲಿ ಒಂದನ್ನು ಆಯುವ ಅವಕಾಶವಿದೆ. ಇವುಗಳನ್ನು ಭಿನ್ನಪಾಠಗಳು (variants) ಎಂದು ಕರೆಯುತ್ತಾರೆ (ಪಾಠಪ. ೫೩). [ಸಂ.]

**ಭಿನ್ನಪಾಠವಾಹಕ** (ನಾ). ಒಂದು ಮೂಲಪ್ರತಿಯಿಂದ ಜನ್ಯವಾಗಿರಬಹುದಾದ ಪಾಠಾಂತರಗಳನ್ನುಳ್ಳ ಹಸ್ತಪ್ರತಿಗಳಲ್ಲಿ ಒಂದು : ಇವರೆಡರಲ್ಲಿ ಒಂದು 'Z' ಪಾಠವಾಗಿರಬಹುದು. ಇಂಥ ಸಂದರ್ಭಗಳಲ್ಲಿ 'X', 'Y' ಮತ್ತು 'A' ಗಳನ್ನು 'Z' ಮೂಲಪ್ರತಿಯ ಭಿನ್ನಪಾಠವಾಹಕಗಳು (Variant bearers) ಎಂದು ಕರೆಯಬಹುದು (ಪಾಠಪ. ೫೩). [ಸಂ.]

**ಭಿನ್ನಭಾಜನ** (ನಾ). ೧. ಮಡಕೆಯ ಚೂರು ; ಓಡು ; ಬೋಕಿ : ವಿಜ್ಞಾನಮಾತ್ರಮೆ ತತ್ತ್ವಮಾತ್ಮಾದ ತತ್ತ್ವಮಿಲ್ಲೆಂಬ ನಿನ್ನ ಮಾತು ಭಿನ್ನಭಾಜನಸಮಾನಮೆಂದು ಸಂಭಿನ್ನಮತಿಗಂ ಪ್ರತಿಭಾಭಂಗಮಂ ಮಾಡಿ (ಆದಿಪು. ೨-೦೦ ವ). ೨. (ಆಲಂ) ಅಪ್ರಯೋಜಕ ವ್ಯಕ್ತಿ : ಮೃತಮಂ ಕೈಕೊಂಡೆಡೆಯೊಳ್ ಬಿಟ್ಟವನೆ ಭಿನ್ನಭಾಜನಮಲ್ತೇ (ಶಂಖಪಮಾ. ೦೦-೦೭೦). [ಸಂ.]

**ಭಿನ್ನಭಾವ** (ನಾ). ಬೇರೆಯ ಭಾವನೆ ; ಅನ್ಯಭಾವ : ಅಂಬುಧಿಯೊಳಗೆ ಬಿದ್ದ ಆಲಿಕಲ್ಲಂತೆ ಭಿನ್ನಭಾವವಜಿಯದೆ ಶಿವಾಶಿವಾ ಎನುತಿರ್ದೆನು ನಾನು (ಬಸವ. ೯೪೧) ; ಭಿನ್ನಭಾವಪ್ರಕೃತವಿಕೃತೋತ್ಪನ್ನಭೂತಂಗಳು . . . ಪಾರಸತಿಯರ ಮನಸುಗಳು ಮತ್ತೆ (ಐಸಪು. ೪೦-೭೭) ; ಭಿನ್ನಭಾವಗಳಲ್ಲಿ ಸಹಾನುಭೂತಿ ಇದ್ದ ಕಾಲದಲ್ಲಿ ಭಾರತದ ಸಂಸ್ಕೃತಿ ಸರ್ವತೋಮುಖವಾಗಿ ಬೆಳೆಯಿತು (ಭಾರತ. ೩೩೪). [ಸಂ.]

**ಭಿನ್ನಮುಖ** (ನಾ). ವಿರೋಧ : ತನ್ನ ಚಿಂತೆಯದೊಂದು ದೈವದ ಗನ್ನಗತಕವದೆರಡು ಭಾವದ ಬನ್ನಣೆಯ ಬಗೆ ಮೂಱು ದೈವದ ಭಿನ್ನಮುಖ ನಾಲ್ಕು (ಕುವ್ಯಾಉ. ೩-೩). 'ಅಭಿಮುಖ' ಪರಾ. [ಸಂ.]

**ಭಿನ್ನಮುಹೂರ್ತ** (ನಾ). [ಜೈನ] ಒಂದು ಮುಹೂರ್ತ ಅಥವಾ ಎರಡು ಘಳಿಗೆಯಿಂದ ಅತ್ಯಲ್ಪ ಕಡಮೆಯಾಗಿರುವ ಕಾಲ : ಒಂದು ಮುಹೂರ್ತದಲ್ಲಿ ಒಂದು ಸಮಯದಷ್ಟು ಕಡಮೆಯಾಗಿರುವ ಕಾಲ : ಒಂದು ಮುಹೂರ್ತದೊಳಗಿಂದ ಒಂದು ಸಮಯವು ಕಡಿಮೆಯಾದರೆ. ಅದು ಭಿನ್ನಮುಹೂರ್ತವೆನಿಸುವುದು (ಕೃಪಜ. ೩೦೭). [ಸಂ.]

**ಭಿನ್ನಯಿಸು** 'ಭಿನ್ನಿಸು' ನೋ.

**ಭಿನ್ನರಾಶಿ** (ನಾ). ೧. [ಗಣಿತ] ಒಂದು ಪೂರ್ಣಾಂಕವನ್ನು ಒಡೆದರೆ ಬರುವ ಭಾಗ ; ಒಂದು ಎಂಬ ಸಂಖ್ಯೆಗಿಂತ ಕಡಮೆಯಾದ ಭಾಗ; ಕಾಲು, ಅರ್ಧ ಮೊದಲಾದುವು ; ಅಪೂರ್ಣಾಂಕ ; ಭಿನ್ನಾಂಶ : ಸುಮಾರು ಕ್ರಿ. ಪೂ. ೨೪೦೦ಕ್ಕೆ ಸೇರುವ ಶಾಸನಗಳಲ್ಲಿ ಪದಾರ್ಥಗಳ ಅಳತೆ, ತೂಕ ಮುಂತಾದುವುಗಳೂ, ಬಡ್ಡಿಯ ವ್ಯವಹಾರವೂ $\frac{೧}{೨}$, $\frac{೧}{೩}$, $\frac{೧}{೪}$ ಎಂಬ ಭಿನ್ನರಾಶಿಗಳೂ ಕಂಡುಬರುತ್ತವೆ (ಗಣಿತ. ೫). ೨. ಅಪೂರ್ಣಾಂಕ ಲೆಕ್ಕ ; ಭಿನ್ನರಾಶಿಗೆ ಸಂಬಂಧಿಸಿದ ಸಂಕಲನ, ವ್ಯವಕಲನ ಮೊದಲಾದ ಲೆಕ್ಕಗಳು : ಸ್ವಾಮಿನಾಥ ಅರ್ಧಗಂಟೆಹೊತ್ತು ಕುಳಿತು ಭಿನ್ನರಾಶಿ ಲೆಕ್ಕ ಮಾಡಿದ (ಸ್ವಾಮಿಕ್ಲೆ. ೫೯). [ಸಂ.]

**ಭಿನ್ನರುಚಿ** (ನಾ). ೧. ಬೇರೆಬೇರೆ ರೀತಿಯ ರುಚಿ , – ಸ್ವಾದ : ಸಕ್ಕರೆ, ಉಪ್ಪು ಎರಡೂ ಭಿನ್ನರುಚಿಯ ಪದಾರ್ಥಗಳು (ರಚಿ). ೨. ಬೇರೆಬೇರೆ ರೀತಿಯ ಅಭಿರುಚಿ, – ಆಸಕ್ತಿ, – ಅಪೇಕ್ಷೆ : ಅವರಿಬ್ಬರೂ ಅಣ್ಣತಮ್ಮಂದಿರಾದರೂ ಭಿನ್ನರುಚಿಯುಳ್ಳ ವ್ಯಕ್ತಿಗಳು (ರಚಿ). ೩. ಬೇರೆ ಬೇರೆ ರೀತಿಯ ಅಭಿರುಚಿಯುಳ್ಳ ವ್ಯಕ್ತಿ : ಭಿನ್ನರುಚಿಗಳಾಗಿ ತಂತಮ್ಮ ಮೆಚ್ಚನಿಚ್ಚೆಯ ಪೂಗಳನೆ ಪೊಗಟಿ (ಆದಿಪು. ೦೦-೦೨೩ ವ). [ಸಂ.]

**ಭಿನ್ನಲಿಂಗ** (ನಾ). [ವ್ಯಾಕ] ಬೇರೆಬೇರೆಯ ಲಿಂಗ : ಭಿನ್ನಲಿಂಗದ ಅನೇಕ ಕರ್ತೃಪದಗಳಿರುವಲ್ಲಿ ಕ್ರಿಯಾಪದಕ್ಕೆ ಕಡೆಯ ಕರ್ತೃಪದದ ಲಿಂಗವು ಬರುವುದು. ಉದಾ :—ಆನೆಯುಮರಸನುಮರಸಿಯುಂ ಬಂದರ್ (ಕೈಬಿ. ೫೯). [ಸಂ.]

**ಭಿನ್ನವಿದ್ಯ** (ನಾ). ವಿದ್ಯಾಬಲವನ್ನು ಕಳೆದುಕೊಂಡವನು : ಬಹುರೂಪದಿಂ ಕಾಡುತ್ತಿರ್ದಸುರಂ ದೀನಜನಶೋಕಲ್ಪಾಂಘ್ರಿಪನಿಂ ಭಿನ್ನವಿದ್ಯನುಮಭಿನ್ನಸನ್ನಾಹನುಮಾಗಿ ಪೆಜತಿಗೆದು ಪೋಗಿ (ಶಾಂತಿಪು. ೬-೩೮ ವ). [ಸಂ. (ಭಿನ್ನ + ವಿದ್ಯಾ + —)]

**ಭಿನ್ನವಿಸು** 'ಭಿನ್ನಿಸು' ನೋ.

**ಭಿನ್ನವೃತ್ತ** (ನಾ). [ಛಂದ] ಕಾವ್ಯಗಳಲ್ಲಿ ಉಂಟಾಗುವ ಒಂದು ಬಗೆಯ ವಾಕ್ಯದೋಷ ; ಒಂದು ವೃತ್ತದಲ್ಲಿ ನಿಯಮಿತವಾಗಿರುವ ಗುರು ಲಘುಗಳಂ ವ್ಯತ್ಯಾಸವಾಗಿ ಅಕ್ಷರವಾಗಲಿ ಮಾತ್ರೆಯಾಗಲಿ ಹೆಚ್ಚು ಕಡಮೆಯಾಗುವಿಕೆ : ಛಂದೋಭಂಗ : ಸುವಿದಿತ ಯತಿಭಂಗಂ ಭಿನ್ನವೃತ್ತಮೆಂದಿಂತು ವಾಕ್ಯದೋಷಮಿವಕ್ಕುಂ (ಕಾವ್ಯಾವ. ೪೩೩) ; ಗುರುಲಘುರಚನೆಗೆ ನಿರ್ದಿಷ್ಟರೂಪಹೀನಾಧಿಕಾಕ್ಷರಂ ಛಂದದೊಳೊಂದಿರೆ ಭಿನ್ನವೃತ್ತಮೆಂಬುದು ಮರುಕ್ತಮತ್ಯಂತ ದೋಷಮಕ್ಕುಂ ಕೃತಿಯೊಳ್ (ಕಾವ್ಯಾವ. ೪೬೨). [ಸಂ.]

**ಭಿನ್ನಷಡ್ಜ** (ನಾ). [ಸಂಗೀತ] ಒಂದು ರಾಗದ ಹೆಸರು : ಭಿನ್ನಷಡ್ಜ ಭಿನ್ನತಾನ ಭಿನ್ನಕೌಶಿಕಿ ಮಧ್ಯಭಿನ್ನವೆಂದು ನಾಲ್ಕು ರಾಗಂಗಳುಂ ಗೌಡ ಜಾತೀಯಂಗಳು (ಸಿವೇಕ. ೨೩೭) ; ಭಿನ್ನಷಡ್ಜವೆಂಬ ರಾಗವು ಭೂಪಾಲ ಮೇಳದಿಂದ ಹುಟ್ಟಿದೆ (ಕತುತ್ರ. ೬೦). [ಸಂ.]

**ಭಿನ್ನಾಭಿಪ್ರಾಯ** (ನಾ). ವಿರುದ್ಧಾಭಿಪ್ರಾಯ : ಅಭಿಪ್ರಾಯಭೇದ : ಈ ವಿಷಯಕ್ಕೆ ಇಬ್ಬರಿಗೂ ಭಿನ್ನಾಭಿಪ್ರಾಯ ಬಂದು ಕೊನೆಗೆ ಇಬ್ಬರಿಗೂ ಮಾತು ಕೂಡ ನಿಂತುಹೋಗಿತ್ತು (ಸಂಗೀತ. ೦೪) ; ಈ ಬಗೆಯ ಉಚ್ಚ ಭಿನ್ನಾಭಿಪ್ರಾಯದಲ್ಲಿ ಯಾವದೇ ನಿರ್ಣಯವನ್ನು ಕೊಡುವುದು ಕಠಿಣವಾಗುವುದು (ಧರ್ಮಶಾ. ೦೯೯). [ಸಂ.] .

**ಭಿನ್ನಿಸು, ಭಿನ್ನಯಿಸು, ಭಿನ್ನವಿಸು** (ಕ್ರಿ). ೧. ಬೇರ್ಪಡು; ಸಡಿಲವಾಗು: ವಿಪ್ರನುನ್ನತತಪೋಬಲದೊಳಂಘ್ರಿಯು ಬದಿರಲ್ಕೆ ಭಿನ್ನಿಸದೆ ಬಗಿದಿರ್ದ ಒಲ್ಲೆಗಳ ದಂತಂಗಳುಡಿದುವದನೇನೆಂಬೆನು (ಕೃಬಭಾ. ೦೫-೩೦) ; ತೋಯುದದ ಕಪ್ಪಿನೊಳು ವಿದ್ಯುತು ಛಾಯೆ ಭಿನ್ನಿಸಿ ತೋರುವ್ವೊಲು

(ಶಾಗಣ. ೦೨-೬೨). ೨. ಪ್ರತ್ಯೇಕವಾಗು; ಬದಲಾಗು; ವ್ಯತ್ಯಾಸವಾಗು; ಭಿನ್ನವಾಗು: ಮುನ್ನ ತಾಂ ಬರೆಸಿ ಕಳುಹಿದ ಪತ್ರಮಂ ತರಿಸಿ ನೋಡಿಕೊಂಡದಱೊಳಿರ್ದ ಭಿನ್ನಿಸಿದ ಭಾವಾರ್ಥಮಂ ತಿಳಿದು (ಕೃಪಿಚ. ೩೦-೩೫); ನನ್ನ ಅಭಿಪ್ರಾಯವು ಭಿನ್ನಿಸುತ್ತದೆ (ದೇದೀಜ್ಞಾ. ೦೦೯). ೩. ಭಗ್ನವಾಗು; ಚೂರಾಗು: ಭಿನ್ನಿಸದೆ ಕಚ್ಚಿದೆಯು ಸತಿಯುರಾಪಸುವಿಡಿದೆವು (ಕೃಪಿಚ. ೨೩-೫೯). ೪. ಚೂರುಮಾಡು: ತೆಂಗಾಯ ಬಲುಹಿಂದ ಭಿನ್ನಿಕ[ಸ]ಳನೀರ ಸೇವಿಸಬೇಕು (ಶವಶೋ. ೨೬-೩). ೫. ಮುರಿದು ಹಾಕು; ಹಾಳುಮಾಡು; ನಾಶಮಾಡು: ಪುನ್ನಿಸಲಿ ವಿಧಿ ನಿನ್ನ ಬೇಡಿಕೆಯ, ಭಿನ್ನಿಸಲಿ, ನಿನ್ನ ಬಲವನು ಮೆರಸೊ (ಪುಂಕಬಳ. ೫೫೦). ಭಿನ್ನಯಿಸು: ೨. ಒಂದೇ ಮರದಲ್ಲಿ ಅವಸ್ಥಾಭೇದದಿಂದ ಬರುವ ರಸವೈವಿಧ್ಯ, ಗುಣವೈವಿಧ್ಯಗಳನ್ನು ಬೀಜವೂ ಕ್ಷೇತ್ರಬಲದಿಂದ ರಸ, ಪಾಕ ಮೊದಲಾದುವುಗಳಲ್ಲಿಯೂ ಭಿನ್ನಯಿಸುವುದನ್ನೂ ಗಮನಿಸಿ (ಮುಪಾಇ. ೩೦೯ ಸಂಖ್ಯಾ ಪಂಡಿವೆ). ೬. ಬೇರೆಮಾಡು; ಪ್ರತ್ಯೇಕಿಸು: 'ನಾನು ಇದ್ದೇನೆ' ಎಂಬ ವಿಷಯವನ್ನು ಎಲ್ಲರೂ ಒಪ್ಪುತ್ತಾರಾಗಲಿ ನನ್ನ ಸ್ವರೂಪದ ವಿಷಯದಲ್ಲಿ ಭಿನ್ನಯಿಸುತ್ತಾರೆ (ಜೀವಾತ್ಮ. ೦೬). ಭಿನ್ನವಿಸು: ೨. ಮನುಷ್ಯನು ಕರ್ಮಯೋನಿ ಭೋಗಯೋನಿ ಎರಡೂ ಆಗಿರುವುದಾದರೆ ಕರ್ಮ ಮತ್ತು ಭೋಗಗಳ ಅನುಪಾತವು ಒಂದೇ ಆಗಿರದೆ ಭಿನ್ನವಿಸುತ್ತದೆ (ಜೀವಾತ್ಮ. ೨೬೫).

[ಭಿನ್ನ + — ಇಸು₃]

**ಭಿನ್ನೋದರ** (ನಾ). ಮಲತಾಯಿಯ ಮಗ; ಮಲಅಣ್ಣ ಅಥವಾ ಮಲತಮ್ಮ: ರಾಜಒಡೆಯರ ಕಾಲದಲ್ಲಿ ಆ ಗ್ರಾಮವನ್ನು ಲಕ್ಷ್ಮೀಕಾಂತಯ್ಯನೆಂಭಾತನು ಅನುಭವಿಸುತ್ತಾ ಭಿನ್ನೋದರರಾದ ತನ್ನ ಸಹೋದರರನ್ನು ಪೋಷಿಸುತ್ತಿದ್ದನು (ಒಚಳ. ೦೯). 'ಏಕೋದರ' ಪರಾ.

[ಸಂ.]

**ಭಿನ್ನೋಪಪಾಠ** (ನಾ). ಗ್ರಂಥಸಂಪಾದನೆಯಲ್ಲಿ ಒಂದೆರಡು ಮಾತೃಕೆಗಳ ಆಧಾರದಿಂದ ಕಲ್ಪಿಸಿರುವ ಪೂರಕ ಪಾಠಾಂತರ: ಇವುಗಳಲ್ಲಿ ಒಮ್ಮತವಿಲ್ಲದಾಗ ಈ ಭಿನ್ನೋಪಪಾಠ (Sub-Variant)ಗಳಲ್ಲಿ ಯಾವುದಾದರೊಂದನ್ನು ಆರಿಸಿಕೊಳ್ಳಬೇಕಾಗುತ್ತದೆ (ಶಾರಿಶ. ೫೩); ಈ ಪ್ರತಿಗಳನ್ನು ಭಿನ್ನೋಪಪಾಠವಾಹಕಗಳೆಂದು (Sub-Variant Carriers) ಉಪಪ್ರಧಾನಮಾತೃಕೆಯ ದೃಷ್ಟಿಯಿಂದ ಕರೆಯಬಹುದು (ಶಾಸ್ತ್ರಸಂ. ೦೬೬).

[ಸಂ.]

**ಭಿಮ್ಮೆನು** (ಕ್ರಿ). ಶಬ್ದದಿಂದ ತುಂಬು; ಪ್ರತಿಧ್ವನಿಸು: ಜಿನಪೂಜೆಗೆಂದು ಮುನ್ನವೆ ಸುಚಮಿತ್ರರ ಮನೆಯಿಂದ ಬಂದಿರ್ದರತ್ತೆ ಅನುಪಮ ಪೂಜೆಗೈದರು ವಾದ್ಯಕೋಟಿ ಭೋರೆನೆ ದಶದಿಕ್ಕು ಭಿಮ್ಮೆನಲು (ಜರಿಶ. ೫೯-೨೦).

[ಭಿಂ₀ + ಎನು ( < ಎನ್₁ ) ]

**ಭಿಮ್ಸನ್** (ನಾ). ಒಂದು ಅನುಕರಣ ಶಬ್ದ: ಅಱಿಯದೆ ಬಂದವು ಕಿಮ್ಸನ್ ಪರಿಹರಿಸಯ್ಯ ಭಿ [ಶಾಕಾಂ. ಭ] ಮ್ಸನ್ (ಭರಂದ. ೨-೫೭ ಶಿಕ್ಷಿತ); ಮತ್ಸ್ಯಾವತಾರಗೆ ಕಿಮ್ಸನ್ ಕೂರ್ಮಾವತಾರಗೆ ಭಿ [ಶಾಕಾಂ. ಭ] ಮ್ಸನ್ (ಭೀಂದ. ೨-೫೭-೦). P ಮಹಮ್ಮದೀಯರು ತಮ್ಮ ಮತದ ಉತ್ಸವಗಳಲ್ಲಿ ಕ್ಯಾ ಹುಸೇನ್, ಬಾ ಹುಸೇನ್ ಎಂಬ ಶಬ್ದಗಳನ್ನು ಮತ್ತೆ ಮತ್ತೆ ಉಚ್ಚರಿಸುವುದನ್ನು ನೋಡಿ ಈ ರೀತಿಯಲ್ಲಿ ಕನ್ನಡ ಪದಗಳನ್ನು ಸೃಷ್ಟಿಮಾಡಿಕೊಂಡಿರಬಹುದೆಂದು ಕೆಲವರು ಊಹಿಸುತ್ತಾರೆ. 'ಕಿಮ್ಸನ್' ಪರಾ.

[ ? ]

**ಭಿರಿಂಗನೆ** (ಅ). ಒಂದು ಅನುಕರಣಾವ್ಯಯ; ತಟ್ಟನೆ; ಕೂಡಲೆ; ಇದ್ದಕ್ಕಿದ್ದಂತೆ; ಧಿಡೀರನೆ: ಸಿಟ್ಟಿಗೆದ್ದು ಭಿರಿಂಗನೆ ಇನ್ನೊಂದು ಮೂಲೆಗೆ ಯಾರೂ ಇಲ್ಲವೆಂದು ಹೋಗಿ ಕೂಡುವಳು (ಅಮೂಶ. ೬೭).

[ ? + — ಅನೆ₁ ]

**ಭಿರ್ಕಾ₁** (ನಾ). ಬಿರುಸಾದ ಮಾತು; ಪೊಳ್ಳುಮಾತು: ಅದಕ್ಕೆ ಸರಿಯಾಗಿ ಏನು ಹೇಳಬೇಕೋ ತಿಳಿಯಲಿಲ್ಲ. ಆದರೂ ಅಲ್ಲಿಗೇ ಬಿಟ್ಟರೆ ತನಗೆ ಅವಮಾನ ಎಂದು, ಏನೋ ಒಂದು ಭಿರ್ಕಾ ಹೊಡೆದ (ಮುಲ್ಲ. ೦೦೪).

[ ← ಮರಾ. ಭಿರಕಾ ]

**ಭಿರ್ಕಾ₂**, ಬೃಗ (ನಾ). [ಸಂಗೀತ] ರಾಗಾಲಾಪನೆಯಲ್ಲಿ ದ್ರುತ (ಕಾಲ)ದಲ್ಲಿ ಹಾಡುವಿಕೆ: ಒಮ್ಮೊಮ್ಮೆ ಒಂದೇ ಸಮನಾಗಿ ೨ ಸ್ಥಾಯಿಗಳ ವ್ಯಾಪ್ತಿಯುಳ್ಳ ಬೃಗಗಳನ್ನು (ಭಿರ್ಕಾ) ಅದ್ಭುತವಾದ ವೇಗ ಮತ್ತು ಸುಲಭ ರೀತಿಗಳಲ್ಲಿ ಹಾಡುತ್ತಿದ್ದರು (ಸಂಗೀತ. ೩). **ಬೃಗ**: ಕೇಳುವವರಿಗೆ ದೀಪಾವಳಿಯ ಮದ್ದು ಮತಾಪುಗಳ, ಬಾಣಬಿರುಸುಗಳ ಮಿಣುಕು ಬೆಳಕಿನ ಕಣ್ಣು ಕೋರೈಸುವ ಸೌಂದರ್ಯ ಸೊಗಸುಗಳು ಈ ಬೃಗಗಳಲ್ಲಿ ಕಾಣುತ್ತಿದ್ದವು (ಸಂಗೀತ. ೩).

[ ? ]

**ಭಿರ್ರನೆ** (ಅ). ಒಂದು ಅನುಕರಣಾವ್ಯಯ; ಬೇಗನೆ; ಚುರುಕಾಗಿ: ಭಿರ್ರನೆ ಸಮಸ್ತ ಕುರುಸೇನೆಗಳ್ಗಲ್ಲೆ ಗಜ ಕಿರ್ರೆನಲ್ (ಶುರಂಗ. ೫೦-೩೦).

[ ? + — ಅನೆ₁ ]

**ಭಿಲ್ಲ** (ನಾ). ಬೇಡ; ವ್ಯಾಧ: "ಬಿಯದರ್ ಭಿಲ್ಲರ್ ವ್ಯಾಧರ್ ನಯದಿಂ" (ಕಬಿಕಂ. ೮೦); ಒಂದೊಂದೆಡೆಯ ಮುಳ್ಳಡುಗಳೊಳ್ ತೊಡರ್ದ ಮೆಯ್ನವಿರ್ ಪಱಿಗುಮೆಂದು ಮಿಡುಕಲೊಲ್ಲದಲ್ಲಿಯೆ ನಿಂದು ಬಿ[ಭಿ]ಲ್ಲರ್ಗೆ ತಮ್ಮಿಂ ತಾಮೆ ಪಡುಮಿಗಂಗುಡುವ ಚಮರೀಮೃಗಂಗಳುಂ (ಚಂದ್ರಪು. ೫-೬೫ ವ); ಭಿಲ್ಲಗಾದುದೇ ಗೋಪುರಂ (ಸೋಮೇಶ. ೩೦).

[ ಸಂ. ]

**ಭಿಲ್ಲಜಕರ** (ನಾ). [ಸಂಗೀತ] ಒಂದು ರಾಗದ ಹೆಸರು: ಸಾಳಗ ನಾಟ ಭಿಲ್ಲಜಕರಂಯೆಂಬೆರಡುಂ ರಾಮಕ್ರಿಯಾರಾಗಕ್ಕೆ ಉಪಾಂಗಗಳು (ಶಿವೇಳ. ೨೩೪).

[ ? ]

**ಭಿಲ್ಲಪಲ್ಲಿ** (ನಾ). ಬೇಡರು ವಾಸಿಸುವ ಗ್ರಾಮ; ಬೇಡರ ಹಳ್ಳಿ: ಸೊಗಯಿಪುದೀ ಕಾನನೋದ್ದೇಶಮೋರಂತಿರೆ ನಾನಾಭಿಲ್ಲಪಲ್ಲೀಖಗಮೃಗಲತಿಕಾವೃಕ್ಷಗುಲ್ಮಾವಕಾಶಂ (ಶಿಕ್ಷಾಪು. ೫-೬೯). [ಸಂ. ಭಿಲ್ಲಪಲ್ಲೀ]

**ಭಿಲ್ಲಪಳ್ಳಿ** (ನಾ). = ಭಿಲ್ಲಪಲ್ಲಿ: ದರಿಸರಿಯಾನೆಗಳ್ ಗಜಿಕೆ ಮೇವ ಮುಗಿಲ್ ದೊಣೆ ಭಿಲ್ಲಪಳ್ಳಿ ಕಿನ್ನರಮಿಥುನಾಳಿಗಳ್ ವಿಷಯಮಾಗಿರೆ ತೀವಿರ್ದುದು ಶೈಲವರ್ಣನಂ (ಸೂಕ್ತಿಸು. ೩-೦). [ಭಿಲ್ಲ + ಪಳ್ಳಿ₁]

**ಭಿಲ್ಲಿ** (ನಾ). ಬೇಡರ ಹೆಂಗಸು; ಬೇಡಿತಿ: ವನವನದಿ ಬನದಿಪ ಭಿಲ್ಲಿಯರ ಬಸ್ಸಣವ ತೋಱಿದುದು (ಮುದೇಶ್ವ. ೫-೫); ಭಿಲ್ಲಿಯ ವಿಳಾಸ ಮನಾಳ್ದಿಸೆದಂದು ಸರ್ವಮಂಗಳೆ ನಿಜಕಾಳರಾತ್ರಿವೆಸರಂ ವಿಗೆ ಸಾರ್ಥಕಮಂ ನೆಗಳ್ಚದಳ್ (ಶಬಕಂ. ೩-೬); ಆ ಶಿವದೀಕ್ಷಾಪರಾಯಣೆಯು ಯಾರಿರಬೇಕು? ಭಿಲ್ಲಿಯ ವೇಷಧಾರಿಯಾದ ದಾಕ್ಷಾಯಣಿಯಾಗಿರಬೇಕು (ಶ್ರೀಶಾಮ. ೨೭೭).

[ಸಂ. ಭಿಲ್ಲೀ]

**ಭಿವೊಮ್ಮ** (ನಾ). ಒಬ್ಬಾತನ ಹೆಸರು (?): ಸ್ವಸ್ತಿಶ್ರೀ ಭಿವೊಮ್ಮ ಕೂರಾಳಿಗದ ಅಲರೊಳೆ ಕೊಣಮಿರುಗಂಗ ದುರದುಳ್ ದುಗ್ಗಮಾರರ ಪಡೆಬಟ್ಟ ಎಱಿದು ಬಿದ್ದ (ಎಕ. IX, ದೇವನ. ೬೭-೦; ಸು. 780).

[ ? + ಅಮ್ಮ₁ ]

**ಭಿಷಗ್ಜನ** (ನಾ). ವೈದ್ಯರ ಗುಂಪು: ಶರೀರರಕ್ಷಣೆಗಂ ಪರಿಚರ್ಯೆಗಂ ಸಮಯೋಚಿತಕುಶಲರಪ್ಪ ಗುರುಜನ ಭಿಷಗ್ಜನ ಗಣಕಜನ ಗಣಿಕಾಜನ ಧಾತ್ರೀಜನ ಬಾಲಮಹತ್ತರಿಕಾಜನಮಂ ಸಮರ್ಪಿಸುವುದುಂ (ಮಲ್ಲಿಪು. ೪-೯೩).

[ಸಂ.]

**ಭಿಷಗ್ದೋಷ** (ನಾ). ವೈದ್ಯನ ತಪ್ಪು: ಮತ್ತಮಾತುರನೌಷಧಭೀರುವಾದೊಡಂ ಭಿಷಗ್ದೋಷಮಾಗದಂತೆ ನಿಮ್ಮ ಪೇಟ್ಟುದನುಪೇಕ್ಷಿಸಿದೊಡೆನ್ನ ದೋಷಂ (ಶಾಂತಿಪು. ೪-೧೦೦ ವ). [ಸಂ.]

**ಭಿಷಗ್ವರ** (ನಾ). ೧. ಶ್ರೇಷ್ಠನಾದ ವೈದ್ಯ. ೨. ಉತ್ತಮವಾದ ಮದ್ದು,– ಔಷಧ : ಮನೋರೋಗಕಾ ಶ್ರೀಮಮೇ ಭಿಷಗ್ವರಂ (ಶ್ರೀಣಾಪತಿ. ೨೭೪–೬೦೩). [ಸಂ.]

**ಭಿಷಜ** (ನಾ). ವೈದ್ಯ : "ದೋಷಜಿತ್ ಭಿಷಜಂ ಚಿಕಿತ್ಸಕಂ ವೈದ್ಯನಕ್ಕು" (ಶುಂಗರಾ. ೦೦೫–೭): ಕಾಕುಬಡತನವಡಸಿ ನರಳುವಾತನ ಮನೆಗೆ ಜೋಕೆಯಿಂ ನಿಧಿ ತಾನೆ ಬಂದವೋಲ್ ರಂಜಿಸಿರೆ ನೋಕದಳಲುವನ ಮನೆ ಗಾರ್ರೈದು ಭಿಷಜ[ಜ]ನಂದೆಯ್ತಂದ ಮಾಳ್ಕೆಯಂತೆ . . . ಶಿಪಮಂತ್ರ ಮೆನಗೀಗ ದೊರೆಕೊಂಡುದು (೬೦೬ಟೀ. ೩–೦೦). [ಸಂ. ಭಿಷಜ್]

**ಭಿಸ್ಸಟೆ** (ನಾ). ಸೀದುಹೋದ ಅನ್ನ : "ಭಿಸ್ಸಟ, ದಗ್ಧಿತಾ–೨ ಅನ್ನದ ಸೀಕು; ಸೀದುಹೋದ ಅನ್ನ" (ಸಿದ್ಧ್ಯಂತಿ. ೨೬೮). [ಸಂ. ಭಿಸ್ಸಟಾ]

**ಭಿಸ್ಸೆ** (ನಾ). ಬೋನ; ಅನ್ನ : "ಅಂಧಃ, ಕೂರಂ, ಭಕ್ತಂ, ದೀದಿವಿಃ, ಅನ್ನಂ, ಓದನಂ, ಭಿಸ್ಸಾ, ಅಶನಂ, ಆಹಾರಃ – ಈ ೯ ಕೂಟಿ್" (ಕಲಾಯು. ೫೩–೨೭೪). [ಸಂ. ಭಿಸ್ಸಾ]

**ಭೀ** (ನಾ). ಹೆದರಿಕೆ; ಭಯಂ; ಭೀತಿ : ಏಕಾಕ್ಷರಕ್ಕೆ – ಜ್ಯಾ, ಮಾ, ಪ್ರಾ, ಶ್ರೀ, ಸ್ತ್ರೀ, ಭೀ, ಭ್ರೂ, ಕೂ – ಎಂಬಿವು ಮೊದಲಾದ ಏಕಾಕ್ಷರ ಶಬ್ದಂಗಳಿರ್ದ ತೆಜದಿಂ ವಿಭಕ್ತಿಯಂ ಪಡೆವುವು (ಶಬ್ದ. ೯೩ ವೃಯೋ); ಅನೇಕ ಸ್ವರಸ್ಯೇತಿ ಕಿಂ? ಶ್ರೀ, ಹ್ರೀ, ಭೀ, ಧೀ (ಶಬ್ದ್ಯಮ. ೦೦೫ ವೃಯೋ); ಕೋಡಿ ಖರದೂಷಣರ ಭೀಯಿಂದೋಡಿ ಪೋದಂಥೆಲ್ಲ ಮುನಿಗಳು ಕೂಡಿ ಪುನರಪಿ ಬಂದು . . . ಸೌಖ್ಯದಿಂದಾವಾಸ ಮಾಡಿಹರು (ರಘುಪಂ. ೦೩–೨೨). [ಸಂ.]

**ಭೀಂಕೃತ** (ನಾ). ಬಾಣದ ಧ್ವನಿ : ಭೀಂಕೃತಂ ಬಾಣದೊಳು ಘೀತ್ಕೃತಂ ಕಲಭದೊಳು ಬೃಂಹಿತಂ ಮದಗಜದೊಳು (ಶುಂಗರಾ. ೨೭–೬). [ಸಂ.]

**ಭೀಂಕೃತಿ** (ನಾ). = ಭೀಂಕೃತ : ಕುಣಿವುತಿದೆ ರಣಭೂತ ರಾಮನ ಕಣೆಯು ಭೀಂ[ಪಾಠಾಂ. ರ್ಘೀಂ]ಕೃತಿರವಕೆ ನಭದಲಿ (ತೊರವೆ ೩–೬–೩೫); ಬಿಲ್ಲಾಳಿರ ಗುಣಠಂಕೃತಿ ಚಾಪಪ್ರಯುಕ್ತ ಶರನಿಕರ ಮಹಾಭೀಂಕೃತಿ ನೋಳ್ಪಮರರ್ಗೆ ಭಯಂಕೃತಿಗೆಯ್ದುದು (ಶಾಂತೀ. ೬–೪೭). [ಸಂ.]

**ಭೀಕರ** (ಗು). ೧. ಭಯವನ್ನುಂಟುಮಾಡುವ; ಹೆದರಿಕೆಯನ್ನುಂಟು ಮಾಡುವ : ಭೀಕರಕರಿಮಕರನಿಕರಭಿನ್ನತರಂಗಾನೀಕಲವಣಾಂಬು ರಾಶಿವೃತಾಕೃತಿ ಕಮನೀಯಮುಂಟು ಜಂಬೂದ್ವೀಪಂ (ಶಾಂತಿಪು. ೧–೫೬); ಪುರಹರಂ ಪೊಡೆಯೆ ತೋಳ್ಪಿಜಿದ ಭೀಕರಗಜಾಸುರನೊ . . . ಎಂದೆಂಬ ಸಂದೇಹಕೆಡೆಯಾದ ಸೊಕ್ಕಿದೆಕ್ಕಲನನೊಂದಂ ಕಂಡೆಂ (ಹರಿ. ೬–೨೦); ಉರವಣಿಸಿ ನಾವೆಸುವ ಭೀಕರ ಸರಳ್ಗಳಿಂ ತಪ್ಪಿಸಿಕೊಳುತ (ಬಸವ. ೩೪–೨೭). (ನಾ). ೨. ಭಯವನ್ನು ಉಂಟುಮಾಡುವಂಥದು; ಹೆದರಿಕೆ ಯನ್ನುಂಟುಮಾಡುವಂಥದು : ಭೀಕರಮಪ್ಪ ಶೂಲಿಯಭಿಲಾಷೆಯೊಳೀ ತಪವಾತನೇಕೆ ನೀನೇಕೆ ಕೃಪಾಣವೇಕೆ . . . ಸಿಡಿಲೇಕೆ ಮರಾಳನದೇಕೆ ಲೋಕದೊಳ್ (೧೦೪. ೯–೧೦೨); ಕುಸುಮಧವಳರೋಮಂಥಫೇನಂ ಕರಂ ಭೀಕರಮಾಗಲ್ಕೊಪ್ಪುಗುಂ ಕಾನನದೊಳಿಭುಮಾನ ಬಲಾಯುಪ್ರತಾನಂ (ಪತಿ. ೪–೨೯); ತರಳನ ಕೂರ್ಗಣೆಯಿಂದೆ . . . ಕೊರಲರೆಗಡಿದು ಕತ್ತರಿಸಲು ತಲೆ ಬಿದ್ದು ಹೊರಳಲು ಭೀಕರವಾಯ್ತು (ಮೋಹತ. ೩೫–೦೪). ೩. ಭಯಾನಕತೆ : ನರಹರಿಯು ವೇಷಂದಳೆದು ಭೀಕರದೊಳಂದು ಹಿರಣ್ಯಕನ ಸಂಹರಿಸಿದನು (ಬಸವ. ೫೭–೨೫). [ಸಂ.]

**ಭೀಕರವಡೆ** (ಕ್ರಿ). ಭಯಂಕರತೆಯನ್ನು ಹೊಂದು; ಭಯಂಕರವಾಗು: ತೊಡೆದರೆ ಹೊಡೆದು ಡೊಕ್ಕರಿಸಿ . . . ಭೀಕರವಡೆದು ಹೊಯ್ದಾಡಿದು ವೆರತು (ಮೋಹತ. ೩೬–೨೬). [ಭೀಕರ + ಪಡೆ₁]

**ಭೀಕರಿಸು** (ಕ್ರಿ). ಭಯವನ್ನುಂಟುಮಾಡು; ಹೆದರಿಸು : ಬಿತವೆ ಭುಸ್ಸನೆ ಘೂತ್ಕರಿಸುತಡಿಗಡಿಗೆ ಕೋಪಾಟೋಪದಲಿ ಭೀಕರಿಸು[ಸಿ]ತಾ ಶಯ್ಯೆ (ಶಾಕ್ಯಕಾ. ೨೨–೨೯); ಆಕಾಶದೊಳು ಬಾಣ ಚುಮ್ಮು ಭೋರ್ಚುರ್ಯೆಂದು ಭೀಕರಿಸುತ ಹೋದುದತ್ತ (ಭರತ. ೨೪–೩೪); ರಣ ವಂದು ಭೀಕರಿಸಿದುದು ಸುರಥನೃಪಾಲ ಕೇಳೆಂದ (ದೇಹೀಪು. ೩–೨೫).

[ಭೀಕರ + — ಇಸು₃]

**ಭೀತ** (ಗು). ೧. ಭಯಗೊಂಡ; ಹೆದರಿದ. (ನಾ). ೨. ಅಂಜು ಬುರುಕ; ಹೇಡಿ; ಪುಕ್ಕ : "ದರಿತಃ, ಚಕಿತಃ, ಭೀತಃ . . . ಶಂಕಿತಃ ಈ ೮ ವ(ಹ)ಂದೆ" (ಕಲಾಯು. ೫೬–೦೯೪); ಭೀತನನಲಸಿದನಂ ಕಾರ್ಯಾ ತುರನಂ ಪಸಿದನಂ . . . ಅಜಿದಜಿದು ಬಿನ್ನವಿಪ್ಪಂ ಗಾಂಪಂ (ಶಂಕಕಂ. ೨೭–೦೨). ಭೀತಂ ಲೋಚಂ ಶರಂ ನಿರ್ಗುಣಿ ಕಿಸುಗುಳಿಗಂ ನಿರ್ಲಜ್ಜಂ ಪಾಪಿ ಕಳ್ಳಂ (ಮಾಲ. ೬–೦೪). ೩. [ಸಂಗೀತ] ಹೆದರಿಕೆಯಿಂದ ಹಾಡುವವನು : ಭೀತ/ = ಭಯದಿಂದ ಹಾಡುವವನು (ಸಂಗೀಕಂ. ೦೦೩).

[ಸಂ.]

**ಭೀತಿ** (ನಾ). ೧. ಹೆದರಿಕೆ; ಅಂಜಿಕೆ; ಭಯ : ಜಗತ್ತ್ರಯ ರಕ್ಷಾಪ್ರಿಯನಪ್ಪ ಕೃಷ್ಣನ ಚರಿತ್ರಂ ಭೀತಿಯಂ ಮಾಟ್ಕುಮೇ (ಜಗಹು. ೩–೩೪); ಭೀತಿಯನುಂಟುಮಾಡುಗುವಿವಳಿಗೆ ಶರಾಸನ ಬಾಣಜಾಲಂ (ಕುಸುಮಾ. ೦೦–೩೦); ಕರುಣದಲಿ ಬಿಟ್ಟಾತನನು ಮುಂದರುಣಪಟಪರಿಧಾನ ಶೌರ್ಯಾ ಭರಣ ಧಾಳಿಯನಿಕ್ಕಲೋಡಿದನನಿಲ ಭೀತಿಯಲಿ (ತೊರವೆ. ೦–೬–೩೭). ೨. ಅಪಾಯ. ೩. ನಡುಕ; ಕಂಪನ. [ಸಂ.]

**ಭೀತಿಗೊಳಿಸು** (ಕ್ರಿ). ಅಂಜಿಸು; ಹೆದರಿಸು : ದ್ವಿತಯ ಕಾಮುರ್ಗಳ ನಿಷ್ಠುರದಿಂದಖಿಳದೇವತೆಗಳೆಲ್ಲರ ಭೀತಿಗೊಳಿಸಿ (ಮೋಹತ. ೦೨–೫೪); ಪಾತಾಳಗಡಿಯಾದಗಳು ದಿಟ್ಟಗೆ ನೆಟಿ ಭೀತಿಗೊಳಿಸುವ ಕೊತ್ತಳವು (ಸಂಪಾ. ೦೬–೫೫). [ಭೀತಿಗೊಳು + — ಇಸು₃]

**ಭೀತಿಗೊಳು** (ಕ್ರಿ). ಹೆದರು; ಅಂಜು; ಗಾಬರಿಯಾಗು; ಭಯಗೊಳ್ಳು: ಮಂದಸ್ಮಿತಮುಖಾಂಬುಜನಾಗಿ ಭೀತಿಗೊಳುತ್ತಮಿಪ್ಪವರ ವಿತತಭಯಮಂ ಪರಿಹರಿಸಿ (ಬಸವ. ೨–೨೭); ಭೀತಿಗೊಂಡನು ದ್ರೋಣ ಸೋಲಿಕೆ ಕೇತು ವಾದನು ಶಲ್ಯ (ಕುಮಾರರಾ. ೦೩–೦೩); ಪಲ್ಲಿಯ ಹುಲ್ಲೋಳಡಗಿ ಭೀತಿ ಗೊಂಡಾಗ ನಿಲ್ಲದೆ ದೆಸೆಯ ನಿಟ್ಟಿಸುತ (ಸಂಪಾ. ೦೫–೯೪).

[ಭೀತಿ + ಕೊಳು (<ಕೊಳ್₁)]

**ಭೀತಿಯುಕ್ತ** (ನಾ). ಹೆದರಿದವನು; ಅಂಜಿದವನು : ಭೀತಿಯುಕ್ತನಾಗಿ ಆತ ಯೋಚಿಸಿದ (ಅಕ್ರಮ. ೦೩೪). [ಸಂ.]

**ಭೀತಿವಡಿಸು** (ಕ್ರಿ). = ಭೀತಿಗೊಳಿಸು : ವರ ದುಗ್ಧಾಬ್ಧಿಯ ಮಥನದಿಂ ತುಸುಮಾತ್ರ ಗರಳವ ಬಿಡಲಾಕ್ಷಣದಿ ಸುರಮುಖ್ಯರ ಭೀತಿವಡಿಸಿದ ಧರಣೀಧರ ಫಣಿರಾಜ ರಕ್ಷಿಪುದು (ಮೋಹತ. ೦–೦೪).

[ಭೀತಿವಡು + — ಇಸು₃]

**ಭೀತಿವಡು** (ಕ್ರಿ). = ಭೀತಿಗೊಳು : ಪೂಸಿದ ಸಿರಿಗಂಧ ಕರಿಕಾದುದು ಸದ್ವಿಳಾಸಿನಿಯರು ಭೀತಿವಡಲು (ಮೋಹತ. ೨೬–೦೭); ರಣದೊಳ್ ಕಲಿಪಾರ್ಥಂ ಭೀತಿವಟ್ಟು ಬೆನ್ನೊಗ್ಟಪನೇ (ಕಂಚಿಕಂ. ೪–೬೬). [ಭೀತಿ + ಪಡು₁]

**ಭೀತಿಸು** (ಕ್ರಿ). = ಭೀತಿಗೊಳು : ನೆಲೆಯನಿಸಿದನಗೆ ಶಿವಾಂಘ್ರಿಯೆಂದು ಭೀತಿಸಿ ಬೇಡಿಕೊಳುವೆ (ಕೃಷ್ಣ. ೦೩–೦); ಮದ್ದಾನೆಗೆ ಸಿಂಹ ಮಲೆತಂತೆ ಸುಭಟಾನಿರುದ್ಧ ನಿಂದಿರ್ದ ಭೀತಿಸದೆ (ಮೋಹತ. ೩೫–೦೬).

[ಭೀತಿ + — ಇಸು₃]

**ಭೀತೆ** (ನಾ). ಹೆದರಿದ ಹೆಂಗಸು : ನಿಜನಾಥಭೀತೆ ಸುಚರಿತ್ರ ಗುಣಪತಿ ಮಾನಿನಿ ಜನಾಪವಾದವಿರಹಿತೆಯೆನಿಪ ನಾರಿ ನನ್ನಿಜನಾರ್ದನಾದಿನಿರ್ಜರ ಮರ್ಯವಿನುತೆಯತಳು (ಕೃಷ್ಣಾ. ೫–೫೦). [ಸಂ. ಭೀತಾ]

**ಭೀಮ** (ಗು). ೧. ಹೆದರಿಕೆಯನ್ನುಂಟುಮಾಡುವ; ಅಂಜಿಕೆಯನ್ನುಂಟು ಮಾಡುವ; ಭೀಕರವಾದ : ಜವಂ ಕೊಲ್ವಪೊಲೆಯ್ದೆ ಬಂದು ಜವದಿಂ

ಗಂಧಾಂಧನಾ ಭೀಮಸಾಮಜವುಂ ವಿಸ್ಮಯಮುಪ್ಪಿನಂ ಭರತನಂ ಕಂಡಾಯ್ತು ಜಾತಿಸ್ಮರಂ (ಕಂರಾಮೂ. ೦೩-೩೧). (ನಾ). ೨. ಹೆದರಿಕೆಯನ್ನುಂಟುಮಾಡುವುದು; ಭಯಂಕರವಾದುದು; ಭೀಕರವಾದುದು: "ಘೋರಂ, ಪ್ರತಿಭಯಂ, ಭೀಮಂ . . . ಭಯಾನಕಂ—ಈ ೧೦ ಭಯಂಕರಂ" (ಹಲಾಯು. ೦೦೭-೨೦); ಭೀಮಂ ಭಯಂಕರಂ ಪೆಜಿತೇ ಮಾತೀ ಕೂಸಿನಂವಿವಾತನ ಪೆಸರುಂ ಭೀಮನೆ (ಕಂಕಥಾ. ೧-೦೨೮). ೩. ಶಿವ; ಶಂಭು; ಈಶ್ವರ: "ಈಶಾನಃ . . . ಭೀಮಃ, ಭರ್ಗಃ, ಕೃತ್ತಿವಾಸಾಃ . . . ಮಹಾದೇವಃ, ಮೃಡಃ (ಸ್ಯಾತ್), ನೀಲಲೋಹಿತಃ—ಈ ೪೫ ಮಹಾದೇವರ ಪೆಸರ್" (ಹಲಾಯು. ೩-೦೨); ಭೀಮ . . . ವಿರೂಪಾಕ್ಷ ಕರುಣಿಸುವುದೆಮಗೆ (ಹಕಥಾ. ೦-೩). ೪. ಪಾಂಡುರಾಜನ ಮಗ; ಯುಧಿಷ್ಠಿರನ ತಮ್ಮ: "ಕೌರುವ್ಯಂ ವಾಯುಪುತ್ರಂ ವೃಕೋದರನೆನಲು ಭೀಮನಕ್ಕುಂ" (ಶಬ್ದಮ. ೭೮-೩); ಆಗಳಶ್ವತ್ಥಾಮಂ ಹೇಮಪುಂಖಾಂಕಿತ ಭೀಮಸಾಯಕನಿರ್ಭಾತದಿಂದಟಿಯೆ ನೊಂದು (ಕಂಕಥಾ. ೧೨-೭೪ ಪ); ಕುರುವಂಶಾಧೀಶನಂ ಮೂದಲಿಸಿದನದಟಂ ಭೀಮನುದ್ದಾಮಭೀಮಂ (ಗದಾಯು. ೭-೦೪). ೧, ೪: ಮತ್ತಮಾ ಮಹಾವನಂ . . . ಪಾಂಡವಪ್ರಕರದಂತಾತ್ತಭೀಮನಕುಲದ್ರುಪದಮುಂ ಅರ್ಜುನೋರ್ಜಿತಮುಂ (ಕಂದ್ರಶು. ೩-೩೨ ಪ). ೫. ಯಮ. ೩, ೪, ೫: ಭೀಮ ಬಲವದರಾತಿಸೇನಾಭೀಮ ಕುರುಕುಲಕುಸುಮ ಮಾರ್ಗಣ ಭೀಮ ಮಟಿದೈ ಮಾನಿನಿಯ ಮಾನಾಪಮಾನಗಳ (ಕುವ್ಯಾಅ. ೩-೨೩). ೬. ವಿದರ್ಭದೇಶವನ್ನು ಆಳಿದ ಒಬ್ಬ ರಾಜ; ದಮಯಂತಿಯ ತಂದೆ: ಭೀಮನೃಪಾಲಕಂ ಪೆರೆದ ನಿಬ್ಬಣಿಗರ್ಗೆ ವಿಚಿತ್ರವಸ್ತ್ರಮುಕ್ತಾಮಯಭೂಷಣಂಗಳನನೇಕವನಿತ್ತು (ಪಳಕಂ. ೪೬೨); ಎಸೆದುದಲ್ಲಿ ವಿದರ್ಭನಗರವದು . . . ಅಲ್ಲಿಗಧಿಪತಿ ಭೀಮನೃಪ (ಪಳಕ. ೦-೨೮). ೭. 'ಬಸವಪುರಾಣ' ಎಂಬ ಕಾವ್ಯವನ್ನು ರಚಿಸಿದ ಕನ್ನಡದ ಒಬ್ಬ ಕವಿಯ ಹೆಸರು: ಒದವಿದಖಿಳಕಳಾಪ್ರಪೂರಿತಹೃದಯ ಭೀಮಕವಿಪ್ರಣೀತಾಭ್ಯುದಯ ಬಸವಪುರಾಣಕಥೆಯೊಳು (ಬಸಪು. ೬೦-೪೭). ೮. ಸಂಸ್ಕೃತದಲ್ಲಿ ಧಾತುಪಾಠವನ್ನು ಬರೆದ ಒಬ್ಬ ವೈಯಾಕರಣನ ಹೆಸರು: ವೇದಸಮನಾಗಿ ಭೀಮನಿನಾದುದು ಸಂಸ್ಕೃತದ ಧಾತು (ಕಮುದ. ೬-೦). ೯. ಒಂದು ನರಕದ ಹೆಸರು: ಪೂತಿವಕ್ತ್ರ ರಕ್ತಪೂತಿ ಮೃತ್ತಿಕ ಕಣಧೂಮವೆಂಬೈದು ಮಂತ್ರಿನರಕಂಗಳಿಂ ಸುತ್ತಿ ಭೀಮವೆಂಬರಸುನರಕವಿಹುದು (ವಿವೇಕ. ೦೬೦). ೧೦. (ಆಲಂ) ಹೆಚ್ಚಾಗಿ ಊಟಮಾಡುವವನು; ಹೊಟ್ಟೆಬಾಕ: ಭೀಮನಿಗೆ ಭಾನುವಾರವಾದರೇನು? ಭೌಮವಾರವಾದರೇನು? ಭೋಜನ ಸಿಕ್ಕಿದರೆ ಸೈ. (ಗಾದೆ).

ಭೀಮಗದೆ = ಭೀಕರವಾದ ಗದೆ: ದುರ್ಯೋಧನಾನುಜ ದುಶ್ಶಾಸನ ಭೀಮ ಭೀಮಗದೆಯಿಂ ಪಂಚತ್ವಮಂ ಪೊರ್ದಿದೈ (ಗದಾಯು. ೩-೩); ಬಂದಿ ಪೋಟಿಟ್ಟು ಸಬಳ ಭೀಮಗದೆ ಕೊಂತ ಮುಂದುಗುಡಿಸುವ ಕೈದುಗಳ ಸಂದಣಿ ಖಣಿಖಟಿಲೆನೆ (ಕುಂರಾಕಾ. ೦೦-೪೨). ಭೀಮನ ಅಮಾವಾಸ್ಯೆ = ಆಷಾಢಮಾಸ ಮುಗಿದು ಶ್ರಾವಣಮಾಸ ಆರಂಭವಾಗುವಾಗ ಬರುವ ಅಮಾವಾಸ್ಯೆ: ಇಂದು ಭೀಮನ ಅಮಾವಾಸ್ಯೆಯಾದ್ದರಿಂದ ಶಾಲೆಗೆ ರಜ (ರೂಢಿ). ಭೀಮನ ಬಿಲ್ಲು = ಕಾಮನ ಬಿಲ್ಲು: ರಾಮನು ಹೊರಗೆ ಬಂದು ಪಡುವಿನಲ್ಲಿ ಉಂಟಾದ ಭೀಮನ ಬಿಲ್ಲನ್ನು ಕಂಡು 'ಅಮ್ಮಾ, ಅಮ್ಮಾ, ಇಲ್ಲಿ ನೋಡು!' ಎಂದು ಕೂಗಿ ಹೇಳಿದನು (ಮಕಥೆ. ೪೨೨). [ಸಂ.]

**ಭೀಮಕಾಯ** (ನಾ). ದಪ್ಪವಾಗಿಯೂ ಎತ್ತರವಾಗಿಯೂ ಇರುವ ದೇಹವುಳ್ಳವನು: ಒಪ್ಪುವ ಉರುಯಜ್ಞಚರ್ಮಾಸನಂ ಭೀಮಕಾಯನುಂ (ಅನಾಥ. ೪-೪-೨೦); ಭೀಮಕಾಯನಾದರೂ ಕೌಶಿಕನು ಆ ರುದ್ರಮೂರ್ತಿಯ ಮುಂದೆ ಮಗುವಿನಂತಿದ್ದಾನೆ (ಮಹಾಪ. ೩೬). [ಸಂ.]

**ಭೀಮಗಾಮುಂಡ** (ನಾ). ಒಬ್ಬಾತನ ಹೆಸರು: ಮರವೂರ ಉರ್ಕ್ವಣೆ ಗಾವುಂಡರುಂ ಭೀಮಗಾವುಂಡರುಂ . . . ಎನೆಬ್ಬರುಂ ನರಸಾಕ್ಷಿಯಾಗೆ ಪಡೆದಾವು (ಎಕ. VI (R), ಶ್ರೀರಂಗ. ೩೩-೦೯; ಸು. ೬೦೦). [ಭೀಮ + ಗಾವುಂಡ]

**ಭೀಮನಕಡ್ಡಿ** (ನಾ). ಒಂದು ಬಗೆಯ ಸಸ್ಯ: ವಿಷಬೊದ್ದಿ, ವಿಷಕಡ್ಡಿ, ಭೀಮನಕಡ್ಡಿ (ಸ್ಯಶಿಗ. ೭೦-೦೪೨೮). [? + ಕಡ್ಡಿ]

**ಭೀಮನಸೊಪ್ಪು** (ನಾ). ಒಂದು ಬಗೆಯ ಸೊಪ್ಪು: (ಸ್ಯಶಿಗ. ೩೭-೦೩೩೩). [? + ಸೊಪ್ಪು$_2$]

**ಭೀಮನಹಂಚಿ** (ನಾ). ಒಂದು ಬಗೆಯ ಹುಲ್ಲು: ಬೆಟ್ಟಂಚಿಹುಲ್ಲು, ಭೀಮನ ಹಂಚಿ, . . . ಗಂಟುಕಾಚಿ (ಸ್ಯಶಿಗ. ೭೪-೦೩೦೯). [? + ಹಂಚಿ$_1$]

**ಭೀಮಪರಾಕ್ರಮ** (ನಾ). ೧. (ಶತ್ರುಗಳಿಗೆ) ಭಯವನ್ನುಂಟುಮಾಡುವ ಶಕ್ತಿಯುಳ್ಳವನು. ೨. ಭೀಮನಂತೆ ಶಕ್ತಿಯುಳ್ಳವನು: ಊರ್ಜಿತತೇಜಂ ಭೀಮಪರಾಕ್ರಮನೆನೆಸಿದನೀ ಮಹಿಯೊಳ್ ಪೃಥ್ವೀರಾಮನನುಪಮರೂಪಂ (ಸೌಇಇ. XX, ೦೪-೦೦; ೯೮೦). [ಸಂ.]

**ಭೀಮಪಾಕ** (ನಾ). (ಆಲಂ) ಅತ್ಯಂತ ರುಚಿಕರವಾದ ಅಡುಗೆ; P ಭೀಮನು ರುಚಿಕರವಾದ ಅಡುಗೆ ಮಾಡುವುದರಲ್ಲಿ ತುಂಬಾ ಸಮರ್ಥನಾಗಿದ್ದನೆಂದು ಪ್ರಸಿದ್ಧವಾಗಿದೆ: ಷಡ್ರಸಗಳನ್ನು ಸೇರಿಸಿ ನಳಪಾಕ ಭೀಮಪಾಕಗಳನ್ನು ಇಳಿಸುವವರೇ ಪಾಕಕಲಾನಿಪುಣರು (ಸೂಪಶಾ. ೦೬೨). 'ನಳಪಾಕ' ಪರಾ. [ಸಂ.]

**ಭೀಮಬಲ** (ನಾ). (ಆಲಂ) ಅತಿಶಯವಾದ ಬಲ,-ಶಕ್ತಿ: ಭೀಮಬಲದಿಂದ ತನ್ನ ಮುಂದಿರುವ ಒಂದು ವಿದ್ಯುತ್ ಬಳ್ಳಿಯನ್ನು ಕಟ್ಟಿಗೆಯ ಕವಚ ಹೊದ್ದುಕೊಂಡದ್ದನ್ನು ಹಿಡಿದು ಸೆಳೆದಳು (ಹಳ್ಳಿಹಾ. ೦೨೦). [ಸಂ.]

**ಭೀಮಭೀಷಣ** (ನಾ). ಒಂದು ನರಕದ ಹೆಸರು: ತುಷಾಗ್ನಿ ಕ್ರಿಮಿಸಂಘ ಅಮೇಧ್ಯ ಪ್ರತಿಷ್ಠ ಮೂತ್ರಕೂಪ ದುರ್ಗಂಧವಾಸಗಳೆಂಬೈದು ಮಂತ್ರಿನರಕಂಗಳಿಂದೊಡಗೂಡಿ ಭೀಮಭೀಷಣವೆಂಬರಸುನರಕವಿಹುದು (ವಿವೇಕ. ೦೬೦). [ಸಂ.]

**ಭೀಮಯ್ಯ** (ನಾ). ಒಬ್ಬಾತನ ಹೆಸರು: ಭೀಮಯ್ಯನ ಮಗಂ ಪೆರ್ಗ್ಗಡೆ ಬೇಚಯ್ಯಂ ಗಂಗರಾನೆಯ ಕುಮ್ಭಸ್ಥಳಕ್ಕೆ ಕುದುರೆಯಂ ಪಾಯ್ಸಿ ಸತ್ತೊಡೆ (ಎಕ. XII, ಮಧುಗಿ. ೭೦-೭; ಸು. ೯೭೦); ಬಿಟ್ಟಿಗನ ಪೆರ್ಗ್ಗಡೆ ದಾಸಯ್ಯನ ಮಗಂ ಭೀಮಯ್ಯಂ ಬರೆದ (ಎಕ. VIII, ಸೊರಬ. ೩೩೦-೮; 979). [ಭೀಮ + ಅಯ್ಯ$_1$]

**ಭೀಮರ** (ನಾ). ಕಾಳಗ; ಯುದ್ಧ. [ಸಂ.]

**ಭೀಮರಕ್ಷೆ** (ನಾ). ಯಾವ ಭೀತಿಯೂ ತಟ್ಟದಿರಲೆಂದು ದೇಹದಲ್ಲಿ ಲೇಪಿಸುವ ಕಾಡಿಗೆ, ಕಟ್ಟುವ ಯಂತ್ರ ಮೊದಲಾದುವು: ರೋಮರೋಮಗಳಲ್ಲಿ ಭೀಮರಕ್ಷೆಯ ಬಲ ಕೊರಳಾಗ ಕಟ್ಟಿರಿ ಒಂದಾನ (ಸೂಯಾರಾ. ೩೪-೦೩). [ಸಂ. ಭೀಮರಕ್ಷಾ]

**ಭೀಮರಥಿ** (ನಾ.) ೧. ದಕ್ಷಿಣ ಭಾರತದಲ್ಲಿ ಹರಿಯುವ ಒಂದು ನದಿ; ಕೃಷ್ಣಾನದಿಯ ಉಪನದಿ; ಭೀಮಾನದಿ. ೨. ಒಬ್ಬ ಮನುಷ್ಯನ ಜೀವಮಾನದಲ್ಲಿ ಬರುವ ಒಂದು ದುಷ್ಕಾಲ; ಎಪ್ಪತ್ತೇಳನೆಯ ವರ್ಷದ ಏಳನೆಯ ತಿಂಗಳ ಏಳನೆಯ ದಿನದ ರಾತ್ರಿ; P ಇದು ಬಹಳ ಅನಿಷ್ಟಪ್ರದವಾದ ಕಾಲವಾದುದರಿಂದ ಶಾಂತಿಯನ್ನು ಮಾಡಬೇಕೆಂದು ಶಾಸ್ತ್ರಗಳಲ್ಲಿ ಹೇಳಿದೆ. ಆ ಶಾಂತಿಗೆ ಭೀಮರಥಿಶಾಂತಿ ಎಂದು ಹೇಳುತ್ತಾರೆ. [ಸಂ. ಭೀಮರಥೀ]

**ಭೀಮರಾಜ** (ನಾ). ಪಶ್ಚಿಮಸಮುದ್ರತೀರದ ಕಾಡುಗಳಲ್ಲಿ ವಾಸಿಸುವ, ಕಪ್ಪುಬಣ್ಣದ 'ನೀಳವಾದ ರೆಕ್ಕೆಗಳುಳ್ಳ' ಮಧುರವಾದ ಕಂಠಧ್ವನಿಯುಳ್ಳ ಒಂದು ಬಗೆಯ ಹಕ್ಕಿ: (೪). [ಸಂ. ?]

**ಭೀಮಸೇನ** (ನಾ). ೧. = ಭೀಮ ೪ : ಭೀಮಸೇನಚರಣಪ್ರಹರಣಗಳಿತಶೋಣಿತಾರ್ದ್ರಮಾಳಿಯುಮಾಗಿ (ಶಂಕಥಾ. ೦೩-೦೦೨ ವ); ಭೂಮಿಪತಿ ಹೇಳುವೆನದೇನನು ಭೀಮಸೇನನ ಜನನದದ್ಭುತವ (ಕುವ್ಯಾಕ. ೯-೯೯). ೨. ಒಂದು ಬಗೆಯ ಕರ್ಪೂರ. [ಸಂ.]

**ಭೀಮಸೇನಿಕ** (ನಾ). =ಭೀಮಸೇನ ೨ : ಅಡಸಿದ ಪಾರಿಜಾತಕದ ಕಪ್ಪುರವಳ್ಳಿಯ ನೇಲವತ್ತಿಯಾಯ್ದಡಕೆಯ ಭೀಮಸೇನಿಕದ ತಂಬುಲದಿಂ (ಶಾಂತಿಪು. ೦೦-೯೩). [ಸಂ.]

**ಭೀಮಾಟವಿ** (ನಾ). ಭಯಂಕರವಾದ ಕಾಡು ; ಮಹಾರಣ್ಯ : ಆ ಭೀಮಾಟವೀಸರಸ್ತೀರದೊಳಿರಿಸಿ ಪೋಪುದುಂ ನಾಮಲ್ಲಿ ಧೈರ್ಯಮನೆ ಮನದೊಳವಳಂಬಿಸಿ ಚತುರ್ವಿಧಾಧಾರ ಶರೀರಪ್ರತ್ಯಾಖ್ಯಾನಪೂರ್ವಕಂ ಸನ್ಯಸನದಿಂ ಮುಡಿಪಿ (ಶಾಂತಿಪು. ೯-೯೭ ವ); ರಾಮಂ ಕಲಿಸಿದ ತೆಱದಿಂ ರಾಮೆಗೆ ಪುಸಿ ನುಡಿದು ರಥಮನೇಱಿಸಿಕೊಂಡಾ ಭೀಮಾಟವಿಯಂ ಕರಿಹರಿಭೀಮಾಟನಮಂ ಕೃತಾಂತಮುಖವೆನೆಯ್ದಂದಂ (ಶಂರಾಪು. ೦೫-೭೩). [ಸಂ.]

**ಭೀಮೆ** (ನಾ). ೧. ದುರ್ಗೆಯ ಒಂದು ಹೆಸರು. ೨. ಭೀಮಾನದಿ: ಸೋಪಾನ ಕಟ್ಟಿ ಭೀಮೆಯೊಳು ಇಳಿಯುದಕೆ ಸೋಪಾನವಮಾನೆ ವತನಿತ್ತ (ಕನ್ಯಶಾ. ೪೦೬). [ಸಂ. ಭೀಮಾ]

**ಭೀರು** (ನಾ). ೧. ಅಂಜಿಕೆಯುಳ್ಳ ವ್ಯಕ್ತಿ : "ಜರಿತಃ, ಚಕಿತಃ, ಭೀತಃ, ತ್ರಸ್ತಃ, ಭೀರುಃ, ಕಾತರಃ, ಕ್ಷುಭಿತಃ, ಶಂಕಿತಃ—ಈ ೮ ಪ(ಹ)ಂದೆ" (ಹಲಾಯು. ೩೬-೦೯೯); ಭೀರುಗಳಂ ಶರಣ್ಬುಗುವರಂ. . . ಇಱಿಯಲ್ಕೆ ವೇಸಿ (ಎಇ. XX. ೦೨-೨೩ ; 1167) ; ನೀನಿನಿಯುಳ್ ವಿಷವಾತಂ . . . ನೀನುರುತರ ಭೀರು ಸರ್ವಭೂಷಣನಾತಂ (ಗಂಕ. ೯-೦೦೩). ೨. ನರಿ. ೩. ಹುಲಿ. ೪. ಒಂದು ಬಗೆಯ ಕಬ್ಬು. ೫. ಬೆಳ್ಳಿ. ೬. ಆಡು. ೭. ನೆರಳು ; ಛಾಯೆ. ೮. ಸಾವಿರಕಾಲಿನ ಹುಳು ; ಜರಿ. [ಸಂ.]

**ಭೀರುಕ** (ಗು). ೧. ಅಂಜುವ ; ಹೆದರುವ. (ನಾ). ೨. =ಭೀರು ೧: "ತ್ರಸ್ನುಃ, ಭೀರುಃ, ಭೀರುಕಃ, ಭೀಲುಕಃ—೪ ಹೆದರುವವನ ಹೆಸರು. ಭಯಪಡುವ ಪಿರಿಕಿ" (ಸಿದ್ಧಾಂತಿ. ೩೨೯). ೩. ಹುಲಿ. ೪. ನರಿ. ೫. ಕರಡಿ. ೬. ಗೂಬೆ. ೭. ಒಂದು ಬಗೆಯ ಕಬ್ಬು. [ಸಂ.]

**ಭೀರುತನ** (ನಾ). ಹೆದರಿಕೆ; ಹೇಡಿತನ : ಆರು ಕಲಿಸಿದರೆಲವೊ ಸಂಗರಭೀರುತನವನು ನಿನಗೆ ಯಾದವವೀರರಲಿ ಮುನ್ನಿಲ್ಲದಪಯಶವಾಯ್ತು (ತಿಭಾಗ. ೦೦-೮೦-೩೯). [ಭೀರು + —ತನ]

**ಭೀರುತೆ** (ನಾ). = ಭೀರುತನ : ಶೈವಾಲವಾಪರಿಸಿದೆಳೆಯ ತಾವರೆಯಂತೆ ಚಾರುಭೀರುತೆ ಮೆರೆಯೆ ನಾರಿಯ ದುಕೂಲಮಂ ತಳೆದು (ಕಶ್ರಾಂಗ. ೦೯-೩೦೦). [ಸಂ. ಭೀರುತಾ]

**ಭೀರುತ್ವ** (ನಾ).=ಭೀರುತನ : ಭೀರುತ್ವಮೇಗೆಯ್ಕುದೋ (ಶಾಂತಿಪು. ೭-೩೯). ಅಂತುಪಶಮಭಾವಮುಂ ಪಾಪಭೀರುತ್ವಮುಂ ತನಗೆ ತೊಟ್ಟನೆ ಪುಟ್ಟೆ (ಶಂರಾಪು. ೪-೦೯ ವ). [ಸಂ.]

**ಭೀರುತ್ವಪ್ರತ್ಯಾಖ್ಯಾನ** (ನಾ). [ಜೈನ] ಸತ್ಯವ್ರತದ ಐದು ವಿಧವಾದ ಭಾವನೆಗಳಲ್ಲಿ ಒಂದು; ಭಯವನ್ನು ಬಿಡುವುದು; ೮ ಕ್ರೋಧಪ್ರತ್ಯಾಖ್ಯಾನ, ಲೋಭಪ್ರತ್ಯಾಖ್ಯಾನ, ಭೀರುತ್ವಪ್ರತ್ಯಾಖ್ಯಾನ, ಹಾಸ್ಯಪ್ರತ್ಯಾಖ್ಯಾನ ಮತ್ತು ಅನವೀಚಿಭಾಷಣ—ಇವು ಸತ್ಯವ್ರತದ ಐದು ಭಾವನೆಗಳು: ಭೀರುತ್ವಪ್ರತ್ಯಾಖ್ಯಾನ—ಭಯಮಂ ತೊಱೆವುದು . . . ಈಯಯ್ದುಂ ಸತ್ಯವ್ರತದ ಭಾವನೆಗಳಪ್ಪುವು (ತತ್ತ್ವಶ್ರು. ೨೭೦). [ಸಂ.]

**ಭೀಲುಕ** (ನಾ).=ಭೀರು ೧: "ತ್ರಸ್ನುಃ, ಭೀರುಃ, ಭೀರುಕಃ, ಭೀಲುಕಃ—೪ ಹೆದರುವವನ ಹೆಸರು. ಭಯಪಡುವ ಪಿರಿಕಿ" (ಸಿದ್ಧಾಂತಿ. ೩೨೯). [ಸಂ.]

**ಭೀಷಣ** (ಗು). ೧. ಭಯವನ್ನುಂಟುಮಾಡುವ ; ಭಯಂಕರವಾದ : ಪ್ರಕುಪಿತ ಮೃಗಪತಿ ಶಿಶುಸನ್ನಿಕಾಶ ರಶಿವಿಕಟ ಭೀಷಣಭ್ರೂಭಂಗರ್ ನಕುಲ ಸಹದೇವರ್ (ಶಂಕಥಾ. ೭-೬); ಭೀಷಣಬಲಿರಸ್ತಹೃದ್ಬಲಶೋಷಣದಕ್ಷರ್. . . ಕುಂಭಕರ್ಣ ವಿಭೀಷಣರೆಂಬರ್ (ಶಂರಾಪು. ೦೦-೨೨೬); ಆದರ ಭೀಷಣ ಪರಿಣಾಮವನ್ನು . . . ಕಾಣಲು ನಾವು ಐದನೆಯ ಅಂಕಕ್ಕೆ ಹೋಗಬೇಕು (ರರ್ಣಶಾ. ೭೦). (ನಾ). ೨. ಭಯಂಕರವಾದುದು: ದಾರುಣವಾದುದು : "ಘೋರಂ. . . ಭೀಷಣಾ, ಭೀಷ್ಮಂ, ಭೈರವಂ, ಭಯಾ(ವಹ)ನಕಂ—ಈ ೧೦ ಭಯಂಕರಂ" (ಹಲಾಯು. ೦೦೭-೨೦). ೩. ಭಯಂಕರನಾದವನು : ಸಂಸ್ಫಾಳಿತೋದ್ಧತ ಚಪಳಚಾಪಕರಾಳಮೌರ್ವೀನಾದಭೀಷಣನಾದನಾ ಭೀಮ (ಕುವ್ಯಾಕ. ೦೨-೦೩). ೪. ರುದ್ರ; ಶಿವ. ೫. 'ತಾಸೆ' ಎಂಬ ಒಂದು ವಾದ್ಯ: ಭದ್ರಕವೆಂಬ ಕರಾಡ ಶಾಸಕವೆಂಬ ನಗಾರಿ ಭೀಷಣವೆಂಬ ತಾಸಾ . . . ಘೋರಘಂಟಿಕೆಯೆಂಬ ಘಂಟೆ ಇತ್ಯಾದಿ ದಶವಾದ್ಯಂಗಳಂ ಬಾರಿಸಲುಳ್ಳ ವಿಚಕ್ಷಣರಿಂ ವಿನುತರಾಗಿ (ಬಸವೇಶ. ೨೩೭). 'ಪಂಚಮಹಾವಾದ್ಯ' ಪರಾ. ೬. [ಕಾವ್ಯಮೀ] ಎಂಟುರಸಗಳಲ್ಲಿ ಒಂದು ; ಭಯಾನಕರಸ : ಬಳಿಕ ಹಸಿತವ್ಯ ಶೋಚ್ಯ ದ್ವೇಷ್ಯ ಪ್ರತಿಭಟ ಭೀಷಣ ಜುಗುಪ್ಸನೀಯ ಆಶ್ಚರ್ಯ ಸಾಮ್ಯಾಸ್ಪದಂಗಳೆಂಬ ರಸಾಷ್ಟಕರೂಪವಾಗಿ ತತ್ತದ್ವಾಚ್ಯಮಹುದು (ಬಸವೇಶ. ೨೯೯). [ಸಂ.]

**ಭೀಷ್ಮ** (ಗು). ೧. ಭಯವನ್ನುಂಟುಮಾಡುವ ; ಭಯಂಕರವಾದ : ಜಾಜ್ವಲ್ಯಮಾನಾನಲಾಭ್ಯರ್ಣಸ್ಥಂ ಬಹುಬಂಧನಂಬಡೆದು ಭೀಷ್ಮಧ್ಯಾನನಿರ್ದಂ ಚಿರಂ (ಯಶೋಧ. ೦೨-೬) ; ತೃಪ್ತಜಠರದ ಭೀಮಭೀಷ್ಮಭಲ್ಲುಕವೊಂದು ಚರಿಸುತ್ತೈತಂದು (ಕಶ್ರಾಂಗ. ೦೩-೩೯೯). (ನಾ). ೨. ಭೀಕರವಾದುದು; ಭಯಂಕರವಾದುದು : "ಘೋರಂ . . . ಭೀಷ್ಮಂ, ಭೈರವಂ ಭಯಾ(ವಹ)ನಕಂ—ಈ ೧೦ ಭಯಂಕರಂ" (ಹಲಾಯು. ೦೦೭-೨೦) ; ಮುತ್ತುಗಳ್ ಸುತ್ತುಲುಂ ಸಿಡಿಯುತ್ತಿರ್ಪಿನಮಿರ್ದುದೊಂದತಿಮದೇಭಂ ಭೀಷ್ಮದೊಳ್ ಗ್ರೀಷ್ಮದೊಳ್ (ಗಂಕ. ೯-೨೯); ಮೇಘಚುಂಬಿತ ಗಿರಿಯ ಚೂಡದಿಂದಾರ್ಭಟಿಸಿ ದುಮ್ಮಿಕ್ಕುವಬ್ಧಿಯಾಘಾತದಿಂ ಭೀಷ್ಮವಹ ಜಲಪಾತವ್ರಾತಂಗಳಿಂ ಭೀಕರಮರಣ್ಯಂ! (ಶ್ರೀರಾಪು. ೬೮-೨೯೦). ೩. ಭಯ ; ಭೀತಿ : ದೊರೆಕೊಳ್ಗುಂ ಯಾಮಿನೀ ಸ್ವಾಮಿಯಿನೊಗೆವ ಮಹಾರಿಷ್ಟ ಭೀಷ್ಮ [ಪಾಠಾಂ. ಭೀಷ್ಟ· ಭೀಷ್ಟ]ಕ್ಕಭಂಗಂ (ಜಾತತಿ. ೭-೦೦). ೪. 'ಶಂತನು' ಎಂಬ ರಾಜನಿಗೆ ಗಂಗಾದೇವಿಯಲ್ಲಿ ಹುಟ್ಟಿದವನು ; ಪಾಂಡವ, ಕೌರವರ ಅಜ್ಜ ; ಗಾಂಗೇಯ : "ಗಾಂಗೇಯನೆನೆ ಭೀಷ್ಮನಕ್ಕು" (ಚುಂಗರಾ. ೭೮-೨); ತಂದನಂದಂಬೆಯಂಬಿಕೆಯಂಬಾಲಿಯರೆಂಬ ಬಾಲೆಯ[ರನೇಂ] ಭೀಷ್ಮಂ ಯಶೋಭಾಗಿಯೋ (ಶಂಕಥಾ. ೦-೭೯) ; ಕೌರವೇಂದ್ರನ ಮೋಹರದ ಗುರುಭಾರ ಭೀಷ್ಮಂಗಾಯ್ತು (ಕುವ್ಯಾಕ. ೦-೩೨); ಯದೃಚ್ಛಾಮರಣ ಭಾಗವತಮಸ್ತಕಮಣಿ ಬೃಂದಾರ ಕೋಪವಮಂ ಸತ್ಯಸಂಧಂ ಭೀಷ್ಮಂ (ಕೃಬಾಥಾ. ೯-೩೦). ೫. (ಆಲಂ) (ಒಂದು ಮನೆತನ ಅಥವಾ ಒಂದು ಊರು ಮುಂತಾದ ಕಡೆಗಳಲ್ಲಿ) ಬಹಳ ವಯಸ್ಸಾದವನು ; ಹಿರಿಯ ವ್ಯಕ್ತಿ : ರಾಜಮಾತೆಯವರ ಕರ್ಮಾಂತರಗಳು ಮುಗಿಯುತ್ತಿದ್ದಂತೆಯೆ ಭೀಷ್ಮರ ಆರೋಗ್ಯ ಕೆಟ್ಟಿತು (ಶಾಂತಲಾ. ೦೬೪). [ಸಂ.]

**ಭೀಷ್ಮತೆ** (ನಾ). ಭಯಂಕರತೆ ; ಭೀಕರತೆ : ಬಲಶಾಲಿಗಳ್ ತಣಿಕೆ ತಂದಿಟ್ಟ ಕಾಮುರ್ಕದ ಭೀಮ ಭೀಷ್ಮತೆಯುಜ್ವಲಿಸಿದತ್ತು (ಶ್ರೀರಾಪು. ೪೭-೯೯೨). [ಸಂ.]

**ಭೀಷ್ಮಪ್ರತಿಜ್ಞೆ** (ನಾ). (ಆಲಂ) (ಮಹಾಭಾರತದ ಭೀಷ್ಮನು ಮಾಡಿದಂಥ) ಪ್ರತಿಜ್ಞೆ: ಅಚಲವಾದ ಪ್ರತಿಜ್ಞೆ; ದೃಢಪ್ರತಿಜ್ಞೆ : ಗೌಡರು ಈ ಖಿಟ್ಲೆಯಲ್ಲಿ ಭೀಮಪ್ಪನಿಗೆ ಶಿಕ್ಷೆಮಾಡಿಸುವ ಭೀಷ್ಮಪ್ರತಿಜ್ಞೆಮಾಡಿ ನಿಂತರು (ಮುಪವಿ. ೩). [ಸಂ. ಭೀಷ್ಮಪ್ರತಿಜ್ಞಾ]

**ಭೀಷ್ಮಪ್ರಯತ್ನ** (ನಾ). (ಆಲಂ) ಅಚಲವಾದ ಪ್ರಯತ್ನ; ಎಷ್ಟೇ ಕಷ್ಟ ಬಂದರೂ ಬಿಡದೆ ಸಾಧಿಸುವಿಕೆ: ಹಟದಿಂದ ಕಾರ್ಯವನ್ನು ಮುಂದುವರಿಸುವಿಕೆ: ಸರ್ವಾಪರಾಧವನ್ನು ನನ್ನ ತಲೆಯ ಮೇಲೆ ಹೊರಿಸಿ ಅವಳನ್ನು ನಿರಪರಾಧಿಯನ್ನಾಗಿ ಮಾಡುವ ಈ ನಿನ್ನ ಭೀಷ್ಮ ಪ್ರಯತ್ನವೇಕೆ ? (ರಕ್ತರ. ೨೬೮). [ಸಂ.]

**ಭೀಷ್ಮಾರಿ** (ನಾ). ಭೀಷ್ಮನ ವೈರಿ ; ಶಿಖಂಡಿ : ಬೊಬ್ಬಿರಿವುತಂ ಬಂದು ಭೀಷ್ಮಾರಿಯಂ ಮನೆಯನೊಳಪೊಕ್ಕನು ಘಡಯಿಸುತಲಿರಿದನು ಶಿಖಂಡಿಯುಂ (ತುರಂಗ. ೬೬-೪೬). [ಸಂ.]

**ಭೀಷ್ಮಿಸು** (ಕ್ರಿ). ಉಗ್ರವಾಗು : ಉಸಿರ್ದಂ ವಸುದೇವಂ ಭೀಷ್ಮಿಸೆ ಕೋಪಾರಕ್ತನೇತ್ರನರಿಬಳಜೈತ್ರಂ (ನೇಮಿಪು. ೫-೫೨) ; ಇಸೆ ಪರಿಯೆ ರಥ ಹರಿಗಳ್ ಮಿಸುಗುವ ಸಂಕಲೆಯ ಕಣ್ಣಿಗಳ್ ಭೋಂಕೆನೆ ಭೀಷ್ಮಿಸೆ ದೆಸೆಗೆ ಹರಿಗಳೋಡಲ್ ಪೊಸಪಥಮುಮನೇಱು ಮತ್ತೆ ನಿಲೆ ಸಿಂಹರಥಂ (ನೇಮಿಪು. ೫-೪೮). [ಭೀಷ್ಮ + — ಇಸು₃]

**ಭು** (ನಾ). ಒಂದು ಅನುಕರಣ ಶಬ್ದ; ಶಂಖ ಮೊದಲಾದ ವಾದ್ಯಗಳ ಧ್ವನಿಯನ್ನು ಅನುಕರಿಸುವ ಶಬ್ದ : ಭು ಭೂ ಭೂ ಎಂದು ಪೂರಯಿಸಿದುದು ಶಂಖಂ (ಕಮಲ. ೧೦ ಕ್ರಿಯೋ).

**ಭುಂಕರಿಸು** (ಕ್ರಿ). ೧. ಭುಂ ಎಂದು ಶಬ್ದಮಾಡು. ೨. ಸಶಬ್ದವಾಗಿ ಬಂಧಿಸು : ಸಂಕಲೆಯನಳವಡಿಸಿಯಾಗಳಿಯ ಭುಂಕರಿಸಿದನು (ಪ್ರಭುರಾ. ೩-೪೦). [ಭುಂಕರಣ₂ + — ಇಸು₃]

**ಭುಂಕಾರ** (ನಾ). ಭುಂ ಎಂಬ ಧ್ವನಿ : ಭೋರಂಗಿಗಳ ಭುಂಕಾರ (ಸಂಗ. ೬೦-೧೦). [ ? ]

**ಭುಂಗಾ** 'ಭೋಂಗಾ' ನೋ.

**ಭುಂಜಕ** (ನಾ). ತಿನ್ನುವವನು ; ಉಣ್ಣುವವನು ; ಭಕ್ಷಿಸುವವನು : ಆತ ಪ್ರಸಾದವಿಡಿದು ಭುಂಜಿಸುವ ಭುಂಜಕನಾಗಿ ವೇಶವಿಡಿದು ರಂಜಿಸುವ ರಂಜಕನಲ್ಲ (ಶದಗೋ. ೧೦೬-೯೬); ನೆರೆ ಹೊಲ್ಲ ಜಾರ ಚೋರಕರ ನೆರೆ ಹೊಲ್ಲ ಬ್ರಹ್ಮೇತಿಕಾರರ ನೆರೆ ಪೊಲ್ಲ ಸುರೆಯ ಭುಂಜಕರ (ಅಣಂಶ. ೧೨೮-೯೨). [<ಪ್ರಾ. ಭುಂಜಗ. / ಸಂ. ಭೋಜಕ]

**ಭುಂಜನ** (ನಾ). ತಿನ್ನುವುದು: 'ಭುಂಜಿಸು' ಪರಾ. [< ಪ್ರಾ. ಭುಂಜಣ. / ಸಂ. ಭೋಜನ]

**ಭುಂಜಿಸು**, ಭುಜಿಸು (ಕ್ರಿ). ೧. ಆಹಾರವನ್ನು ಸೇವಿಸು ; ತಿನ್ನು; ಊಟ ಮಾಡು : ಏಕವ್ರತದ ಭೂಸುರರು ಏಕಾಂತನಿಳಯದೊಳೇಕವಾಗಿರೆ ಸ್ವಯಂಪಾಕವ ಮಾಡಿ ಭುಂಜಿಪರು (ಸೋಹಕ. ೬-೩೩); ಭುವನಜನವಂಜದಿರಿ ನೋಟಕರ್ ಭು[ಪಾಠಾಂ. ಭಂ]ಜಿಸುವೆನೀ ಕಾಳಕೂಟಮಂ ನಾನೆನುತೆ ಕರವೆತ್ತಿ ಬಾರೆನೆಲ್ಕೆ (ಚಿಂಪು. ೨೨-೧೯) ; ಸ್ವಾದುವಾದ ಫಲವಂ ಭುಂಜಿಸಿ (ಶಿಗಂಪು. ೨೮೫-೪). ೨. ಸುಖವನ್ನು ಅನುಭವಿಸು ; ಸವಿ : ನನೆಯುದಿರದ ಪೊಸ ಕಮ್ಮಂಗಳವೆಯ ತನಿಯ ತುದಿಯ ತನಿಗಂಪಂ ಭುಂಜಿಸಲೆನುತನುರಾಗ ದಿನವಱಿಗೊಳ್ಳುಳ್ಳಿದ್ರ್ಯಜಡಿವನುಳಿಗಳು (ಜಯಾಂಕಾ. ೦-೩೯) ; ಜಗದುದರ ಕೊಟ್ಟುದನು ಭುಂಜಿಸು (ಜಗದಾ. ೦೯೩) ; ಹಾನಿ ವೃದ್ಧಿ ಜಯಾಪ ಜಯಗಳು ಏನು ಕೊಟ್ಟುದ ಭುಂಜಿಸುತ ಲಕ್ಷ್ಮೀನಿವಾಸನ ಕರುಣವನೆ ಸಂಪಾದಿಸನುದಿನದ (ಕಪಾಶಾಂ. ೦೦೯). **ಭುಜಿಸು**: ೧. ಮುಡಿಯಿಕ್ಕಿ ರಾಘವನ ಚರಣದೆಡೆ ಕಾಣಿಕೆಯ ನೀಡಿದನು ತರತರದ ಪಣ್ಣಳಂ, ಪೂಗಳಂ ಮಾಂಸಾನ್ನಮಂ ಭುಜಿಸಿ ಸರ್ವರುಂ ತಣಿಯುತಂ . . . ಕಳೆದರಾ ರಾತ್ರಿಯಂ ಸುಖದ ನಿದ್ರೆಯಲಿ (ಶ್ರೀರಾಮಾ. ೯೬-೫೩೬). 'ಭೋಜಿಸು' ಪರಾ. [ಭುಂಜನ + — ಇಸು₃. / ತೆಲು. ಭುಜಿಂಚು]

**ಭುಂಭುಕ** 'ಬುಂಭುಕ' ನೋ.

**ಭುಕ್ತ** (ಗು). ೧. ತಿಂದ ; ಊಟಮಾಡಿದ. ೨. ಅನುಭವಿಸಿದ. (ನಾ). ೩. ತಿಂದುದು ; ಊಟಮಾಡಿದುದು : "ಭಕ್ಷಿತಂ, ಚರ್ವಿತಂ . . . ಅಶಿತಂ, ಭುಕ್ತಂ—೧೪ ಭುಜಿಸಲ್ಪಟ್ಟದ್ದು, ತಿನ್ನಲ್ಪಟ್ಟದ್ದು, ಅಗಿಯಲ್ಪಟ್ಟದ್ದು, ನುಂಗಲ್ಪಟ್ಟದ್ದು, ಮೆದ್ದದ್ದು" (ನಿಘಂಟು. ೩೫೨). ೪. ತಿನ್ನುವಿಕೆ ; ಊಟಮಾಡುವುದು : "ಭುಕ್ತಿಃ, ಭುಕ್ತಃ . . . ಭೋಜನೀಯಂ—ಈ ೭ ಹೊರೆತವೂ, ಊಟವುಂ" (ಶಾಕಕ್ಕ. ೨೩೫). ೫. ಅನ್ನ ; ಆಹಾರ : "ಕೂರಮನ್ನಂ ಭುಕ್ತವೋ[ಪಾಠಾಂ. ಭಕ್ತವೋ]ದನಂ ಭಿಕ್ಷಮಾಹಾರಮಶನಂ ಬಲಿಯೆನಲ್ಕೆ ಪೋಗರಮಕ್ಕು" (ಮಂಗರಾ. ೬೩-೧). ೬. (ಆಲಂ) ಸಾಂಸಾರಿಕ ಸುಖಗಳನ್ನು ಅನುಭವಿಸುವವನು ; ವಿಷಯಲಂಪಟ : ಶಿವಭಕ್ತಿಯಳಿದ ಭುಕ್ತಂಗೆ ಎಂದೆಂದು ಭವಮುಕ್ತಿಯಿಲ್ಲ (ಸರ್ವಜ್ಞ. ೨೬೯). [ಸಂ.]

**ಭುಕ್ತಶಾಲೆ** (ನಾ). ೧. ಊಟದ ಮನೆ ; ಭೋಜನಗೃಹ. ೨. ಪ್ರಯಾಣಿಕರಿಗೆ ಧರ್ಮಾರ್ಥವಾಗಿ ಊಟಕ್ಕೆ ಏರ್ಪಾಡು ಮಾಡುವ ಮನೆ ; ಅನ್ನಸತ್ರ : ಮಠ ಭುಕ್ತಶಾಲೆ ಕಂಪೆಸೆವ ಘಟಪೂರಿತ ಗಂಧ ಶೈತ್ಯೋದಕದಱವಟಿಗೆಯ ಮನೆಗಳೊಪ್ಪಿಸುವುದು (ಮೋಹಕ. ೨-೨೬). [ಸಂ. ಭುಕ್ತಶಾಲಾ]

**ಭುಕ್ತಶೇಷ** (ನಾ). ಉಂಡು ಮಿಕ್ಕ ಅನ್ನ; ಎಂಜಲು ; ಉಚ್ಛಿಷ್ಟ: "ವಿಘಸಃ, ಭುಕ್ತಶೇಷಃ—ಈ ೨ ಉಂಡು ಮಿಕ್ಕುದು" (ಹಲಾಯು.೫೪-೦೬೦); ಕೊಳೆತ ಬೆರಳನು ಭುಕ್ತಶೇಷದೊಳಿಳುಹಿದರೆ ಕಂಡೀಕೆ ಚಿತ್ತದೊಳಳುಕದುಪ ಭೋಗಿಸೆ (ಕುವ್ಯಾಅ. ೦೬-೪೫). [ಸಂ.]

**ಭುಕ್ತಿ** (ನಾ). ೧. ಊಟ ಮಾಡುವುದು; ಊಟ ; ಭೋಜನ : "ಭುಕ್ತಿಃ. ಭುಕ್ತಂ . . . ಭೋಜನೀಯಂ—ಈ ೭ ಹೊರೆತವುಂ ಊಟವುಂ" (ಶಾಕಕ್ಕ. ೨೩೫); ತೃಪ್ತಿಯರಿಯದ ವಾಂಛೆ ಜೀರ್ಣಿಸದ ಭುಕ್ತಿವೊಲು ಗುಪ್ತದಲಿ ಕೊಳೆಯುತ್ತ ವಿಷಬೀಜವಾಗಿ (ಪ್ರಂಕುಳ. ೩೬೯); ಪುರುಷನ ಒಕ್ಕಲು ಮದುವೆಯಲ್ಲಾ ಆದ ಮೇಲೆ ಜಾತಿಪದ್ಧತಿಯನ್ನನುಸರಿಸಿ ಊಟಹಾಕಿಸುತ್ತಿದ್ದರು. ಇದಕ್ಕೆ 'ಭುಕ್ತಿ' ಎಂದು ಹೆಸರು (ಹುಟ್ಟುಹ. ೦೪). ೨. ಸುಖಾನುಭವ : ಭೋಗ :"ಕಾಮದೊಳು ಭುಕ್ತಿಯೊಳು ಸಂಭೋಗಮೆಂದೆನಿಕು" (ಮಂಗರಾ. ೦೪೩-೨೦); ಕರ್ತನನಱಿಯದವನು ವಿಪ್ರನಾದರೇನು ಚತುರ್ವೇದಿಯಾದವರೇನು ಭುಕ್ತಿಕಾರಣ ಲೋಕದ ಇಚ್ಛೆಗೆ ನುಡಿದು ನಡೆವರಯ್ಯಾ (ಬಸವ. ೬೨೮); ಮಲತ್ರಯಂಗಳಿಗೆ ತಲೆಗೊಡಹಿ ಭೋಗಮುಂ ನೀಗಿ ಭುಕ್ತಿಯಂ ತೊತ್ತಳದುಳಿದು (ಶಿವತ. ೨೬-೨೨). ೩. [ಜ್ಯೋತಿ] ಸೂರ್ಯಾದಿ ಗ್ರಹಗಳು ಯಾವುದಾದರೂ ರಾಶಿಯನ್ನು ಪ್ರವೇಶಿಸಿ ಮುಂದುವರಿಯುತ್ತಿರುವಾಗ ಅತಿಕ್ರಮಿಸಿದ ಕಾಲ : ಆಯಿದನು . . . ರಿಪುಭಟನಾಯುಷದ ಕಡವಗಲ ಭುಕ್ತಿಯ ಶಕ್ತಿಯನು ನೃಪತಿ (ಕುವ್ಯಾಕ. ೩-೬೫). ೪. ವ್ಯಕ್ತಿಯ ಜೀವಮಾನದಲ್ಲಿ ಯಾವ ಕಾಲದಲ್ಲಿ ಯಾವ ಫಲ ನಡೆಯುವುದೆಂಬುದನ್ನು ಕಂಡುಹಿಡಿಯಲು ಜ್ಯೋತಿಃಶಾಸ್ತ್ರಜ್ಞರು ನಿರ್ಣಯಿಸಿರುವ ಸೂರ್ಯಾದಿಗ್ರಹಗಳು ಫಲಕೊಡುವ ಕಾಲ ವಿಶೇಷ ; P ಒಬ್ಬ ಮನುಷ್ಯನು ೧೨೦ ವರ್ಷಗಳ ಕಾಲ ಬದುಕುವುದಾದರೆ ಆತನ ಜೀವಮಾನದಲ್ಲಿ ಒಂಭತ್ತುಗ್ರಹಗಳ ದೆಶೆಗಳೂ ನಡೆಯುತ್ತವೆ. ಪ್ರತಿಯೊಂದು ದೆಶೆಯಲ್ಲೂ ಒಂಭತ್ತು ಗ್ರಹಗಳ ಭುಕ್ತಿಗಳು ನಡೆಯುತ್ತವೆ. ಪ್ರತಿಯೊಂದು ಭುಕ್ತಿಯಲ್ಲೂ ಬೇರೆ ಬೇರೆ ಫಲಗಳು ನಡೆಯುತ್ತವೆ. ಈ ದೆಶೆ ಮತ್ತು ಭುಕ್ತಿಗಳ ಕಾಲನಿರ್ಣಯಕ್ಕೆ ನಿರ್ದಿಷ್ಟವಾದ ಗಣಿತವಿದೆ. ಉದಾಹರಣೆಗೆ ಕೃತ್ತಿಕಾನಕ್ಷತ್ರದಲ್ಲಿ ಒಬ್ಬನು ಜನಿಸಿದರೆ ಅವನಿಗೆ ಜನನಕಾಲದಲ್ಲಿ ರವಿದಶೆಯು ಪ್ರಾರಂಭವಾಗುತ್ತದೆ. ಬಳಿಕ ಚಂದ್ರದಶೆ ಇತ್ಯಾದಿ. ರವಿದಶೆಯು ಆರುವರ್ಷಗಳು ನಡೆಯುತ್ತದೆ. ಆಗ ರವಿ, ಚಂದ್ರ, ಕುಜ, ರಾಹು, ಗುರು, ಶನಿ, ಬುಧ, ಕೇತು, ಶುಕ್ರ

ಗ್ರಹಗಳ ಭುಕ್ತಿಗಳು ಕ್ರಮವಾಗಿ ಲೆಕ್ಕಾಚಾರದಂತೆ ನಡೆಯುತ್ತವೆ : ಯುಕ್ತಿವಂತನು ಶುಕ್ರನ ಭುಕ್ತಿಯಲ್ಲಿ ಮುಕ್ತಿ ಪಡೆದನಂತೆ (ಗಾದೆ): ಮಾಘಮಾಸದ ಹೊತ್ತಿಗೆ ಶುಕ್ರಭುಕ್ತಿ ಪ್ರಾರಂಭವಾಗುತ್ತದೆ. ಆಗ ಮದುವೆಯಾಗುತ್ತದೆ (ರೂಢಿ). [ಸಂ.]

**ಭುಕ್ತಿಗೆಯ್** (ಕ್ರಿ). ಊಟಮಾಡು : ವರಮಂತಮುಂ ಪುಗುತಂದಲ್ಲಿರುತಂ ಸಲೆ ಭುಕ್ತಿಗೆಯ್ದು ಶಯನಂಗೊಂಡಿರೆ (ಜಾತಕ. ೪-೦೪-೦೬). [ಭುಕ್ತಿ + ಕೆಯ್₁]

**ಭುಕ್ತಿಗೆಯ್ಸು** (ಕ್ರಿ). ಊಟಮಾಡಿಸು ; ಭೋಜನ ಮಾಡಿಸು : ಸಡಗರದಿಂದುಪಚರಿಸುತೆ ಮೆಲ್ಲನೆ ಪಡೆದಳಾ ರತಿಯು ಚಿತ್ರವನು . . . ಮಜ್ಜನ ಭುಕ್ತಿಗೆಯ್ಸಿ (ವೀರಹಕ. ೦೦-೨೦). [ಭುಕ್ತಿ + ಕೆಯ್ಸು]

**ಭುಕ್ತಿದ** (ನಾ). ಸುಖವನ್ನು ಕೊಡುವವನು; ಐಹಿಕಸುಖವನ್ನುಂಟು ಮಾಡುವವನು : ಭುಕ್ತಿದರು ದೇವತೆಗಳಲ್ಲದೆ ಮುಕ್ತಿದರು ತಾವಾಗರು (ಏವೀಶ. ೬-೩೦). [ಸಂ.]

**ಭುಕ್ತೋಚ್ಛಿಷ್ಟ** (ನಾ). ಊಟಮಾಡಿ ಬಿಟ್ಟ ಎಂಜಲು ಅನ್ನ : "ಭುಕ್ತೋಚ್ಛಿಷ್ಟಂ, ಫೇಳಿಕಾ—ಈ ೨ ಮಂಡಗೂಟು" (ಹಲಾಯು. ೫೪-೦೬೦). [ಸಂ.]

**ಭುಗ್** (ನಾ). ಒಂದು ಅನುಕರಣ ಶಬ್ದ; ಬೆಂಕಿಯು ತಟ್ಟನೆ ಹತ್ತಿ ಕೊಳ್ಳುವುದನ್ನು ಸೂಚಿಸುವ ಶಬ್ದ : ಒಮ್ಮೆ ಹೊಗೆಗಟ್ಟುವುದೊಮ್ಮೆ ಭುಗ್ಗೆನುವುದು ಒರ್ನರು ಕೆಟ್ಟ ಲಾಟೀನು (ಇಂಶಾಹ. ೨೦೫-೬೫).

**ಭುಗಭುಗ** (ನಾ). ಒಂದು ಅನುಕರಣ ಶಬ್ದ : 'ಭುಗಭುಗನೆ' ಪರಾ.

**ಭುಗಭುಗನೆ** (ಅ). ಒಂದು ಅನುಕರಣಾವ್ಯಯ ; 'ಭುಗಭುಗ ಎಂದು ಧ್ವನಿಯಾಗುವಂತೆ : ಭುಗಭುಗನುರ್ಚಿ ಪಾಯ್ವ ಬಿಸುನೆತ್ತರ ಸುಟ್ಟುರೆಯಂ ನೆಲಕ್ಕೆ ಪರ್ದುಗಳುಗಲೀಯದವ್ವಳಿಸಿ ಪೀರ್ವಿಸಂ (ಶಂಶಸಾ. ೦೦-೬೦). [ಭುಗಭುಗ + — ಅನೆ₁]

**ಭುಗಿಭುಗಿ** (ನಾ). ಒಂದು ಅನುಕರಣ ಶಬ್ದ : ಛಟಿ ಛಟೀ ಛಟಿ ಭುಗಿಲು ಭುಗಿಭುಗಿ (ಅಸತ್ಯ. ೫೬-೩೨) ; ಭುಗಿಲು ಭುಗಿಭುಗಿ ಧಗಿಲು ಧಗಿಲೆಂದೊಗೆದು ದಳ್ಳುರಿಯುಗುಳಲು (ಕೌಶಿಕ. ೩೬-೭೪).

**ಭುಗಿಭುಗಿಸು** (ಕ್ರಿ). ಭುಗಿಭುಗಿ ಎಂದು ಧ್ವನಿ ಬರುವಂತೆ ಉರಿ, — ಜ್ವಲಿಸು ; ಹೆಚ್ಚಾಗಿ ಜ್ವಾಲೆಗಳನ್ನು ತೋರ್ಪಡಿಸುತ್ತಾ ಜ್ವಲಿಸು ; ಹೆಚ್ಚಾಗಿ ಉರಿ : ಭುಗಿಭುಗಿಸಿ ರಿಪುವನನಿಕರದಲಿ ಸಲೆ ಬೀದಿವರಿದುದು ಭೀಮದಾವಾಗ್ನಿ (ಕುಮಾರವ್ಯಾ. ೦೨-೨೪) ; ಭುಗಿಭುಗಿಸೆ ಕೋಪಾಗ್ನಿ ಮೂಡಿಗೆಯ ಕೋಲ್ಗಳಂ ತೆಗೆತೆಗೆದು . . . ಬಿಲ್ಲನಿಕ್ಕಡಿಗೈದು ಬೊಬ್ಬಿರಿದನು (ಕೈಮಿಜ. ೦೨-೨೨). 'ಭುಗುಭುಗಿಸು' ಪರಾ. [ಭುಗಭುಗಿ + — ಇಸು₃]

**ಭುಗಿಲ್, ಭುಗಿಲು** (ನಾ). ೧. ಒಂದು ಅನುಕರಣ ಶಬ್ದ : ಅನುಕರಣಾವ್ಯಯಗಳು . . . ನಿಟಿಲ್, ಪಠಿಲ್, ಭುಗಿಲ್, ಭೋರ್ . . . ಇತ್ಯಾದಿ (ಶಬ್ದ. ೫೨). **ಭುಗಿಲು** : ೧. ಛಟಿ ಛಟೀ ಛಟಿ ಭುಗಿಲು ಭುಗಿಭುಗಿ (ಅಸತ್ಯ. ೫೬-೩೨); ಭುಗಿಲು ಭುಗಿಭುಗಿ ಧಗಿಲು ಧಗಿಲೆಂದೊಗೆದು ದಳ್ಳುರಿಯುಗುಳಲು (ಕೌಶಿಕ. ೩೬-೭೪). ೨. ತಾಪ; ಝಳ : ಎರಡುಹನಿಯಾದರೂ ಕಣ್ಣೀರು ಉದುರಬಾರದೆ ? ಆ ಒಳಗಿನ ಭುಗಿಲು ಸ್ವಲ್ಪವಾದರೂ ಹೊರಮುಖವಾಗಬಾರದೆ ? (ಶಾಂತಲಾ. ೩೦೩); ತಲೆಯಲ್ಲಿ ಮಯಿಲು ಎದೆಯಲ್ಲಿ ಭುಗಿಲು (ಚಂದ್ರವತಿ. ೩-೫).

**ಭುಗಿಭುಗಿಲ್, ಭುಗಿಭುಗಿಲು, ಭುಗಿಲ್ಭುಗಿಲ್, ಭುಗುಭುಗಿಲ್, ಭುಗ್ಭುಗಿಲ್, ಭುಭುರ್ಗಿಲ್** (ದ್ವಿರುಕ್ತಿ) : ದೆಸೆಗಳಂ ದಹಿಸುತ್ತೆ ರಸೆಯನಲ್ಲಾಡಿಸುತೆ ಭುಗಿ[ಪಾಠಾಂ. ಗು]ಭುಗಿಲ್ ಛಳಿಛಿಟಿಲನೊಗೆದುದು ಮಹಾವಿಷಂ (ಶಂಬರ. ೦-೦೩) ; ಉರಿಗೆ ಹವಿಯಂ ಕೊಡಲೊಡನೆ ಸೆಕೆ ಏರಿದು ಭುಗಿಭುಗಿಲೆನುತ (ಅಸತ್ಯ. ೫೬-೦೮) ; ಬಿಸುನೆತ್ತರ ಧಾರೆಗಳ್ ಭುಗಿಲ್ಭುಗಿಲೆನೆ ಪಾಯ್ದು ಪೊಣ್ಮಿದುವು (ಶಂಶಸಾ. ೦೩-೬೦) ; ಭುಗ್ಭುಗಿಲ್ ಭುಗಿಭುಗಿಲು ಧಗಧಗ ಧಗಿಧಗಿಲುಧಲೆಂದೊದಱಿದುರಿ ನಾಲಿಗೆಗಳನು ನೀಡಿದುವು (ತೊರವೆ. ೫-೬-೫೯) ; ದಳ್ಳಂಬ ಭೋರೆಂಬ ಭುಗ್ಭುಗಿಲೆಂ[ಪಾಠಾಂ. ಭುಭುರ್ಗಿಲೆಂ]ಬೀಟ್ಗಿಯನಾಂತು ಕೇಸುರಿಗಳಂ ಸೂಸಿತ್ತು ಗುರ್ವಿಪ್ಪಿನಂ (ಜಗ. ೦೫-೪೦) ; ಸೆಗೆದುರಿ ಭುಭುರ್ಗಿಲ್ ಭುಗಿಲೆನುತು ಮಗುರ್ವಿಸಿ ಪರ್ವೆ (ಶುಶಾಶೇ. ೦೬-೩೮).

**ಭುಗಿಲನೆ** (ಅ). ಒಂದು ಅನುಕರಣಾವ್ಯಯ ; ಭುಗಿಲ್ ಎಂದು ಧ್ವನಿಯಾಗುವಂತೆ : ಧಗಿಲನೆ, ಭುಗಿಲನೆ, ಭೋರನೆ ಎಂಬನುಕರಣ ಪದಂಗಳ್ . . . ಅವ್ಯಯಪದಂಗಳಪ್ಪುವು (ಶಮ:ದ. ೩೦೦ ವೃತ್ತಿ).

**ಭುಗಿಭುಗಿಲನೆ** (ದ್ವಿರುಕ್ತಿ) : ಧಗಧಗಸ್ವನಂ ನಿಮಿರೆ ಪಾಂ ಭುಗಿಭುಗಿಲನುರಿದುದು [ಪಾಠಾಂ. ಭುಗಿಲನುರಿದ್ದುದು] (ರಾಜಶೇ. ೫-೩೬). [ಭುಗಿಲ್ + — ಅನೆ₁]

**ಭುಗಿಲಿಡಿ** (ಕ್ರಿ). ತಳಮಳವು ತುಂಬು, — ವ್ಯಾಪಿಸು : ರಾಗದಿಂ ಟಂಕಾರಗೈಯ್ಯೆ ದಶದಿಶ ಬೆಸುಗೆ ಬಿಚ್ಚಿತ್ತು ತನ್ನಾದದೀ ಶ್ರೀಗಿರೀಶನ ಹೃದಯ ಭುಗಿಲಿಡಿದು ತನುಕಂಪನಾಗಿ ಜರ್ಝರಿಸಿ ತಲ್ಲಣಗೊಳುತಿರಲು (ನವಮೋ. ೬-೪೮). [ಭುಗಿಲ್ + ಇಡಿ₂]

**ಭುಗಿಲಿಡು** (ಕ್ರಿ). ೧. ಉರಿ ; ಜ್ವಲಿಸು ; ಧಗಧಗಿಸು : ಹುಟ್ಟಿದುರಿ . . . ಭುಗಿಲಿಟ್ಟು ಕವಿದುದು ತುದಿಗೆ ಬಹುಶಾಖೋಪಶಾಖೆಗಳ (ಕುಮಾರ. ೨೦-೫೫) ; ಅದು ಬಳಿಕ ಭುಗಿಲಿಡುತ ಬೆಂಬತ್ತಿದುದು ಬಿಡದಾ ಕಾಕನನು (ತೊರವೆ. ೨-೬-೦೦). ೨. ಬಹಳ ಶಬ್ದವನ್ನು ಮಾಡು ; ಭೋರ್ಗರೆ : ಕಹಳೆಗಳ ಕಳಕಳದ ಬೊಗ್ಗುಗಳ ಮೇಳವಣೆ ಭುಗಿಲಿಡಲು (ಕುಮಾರ. ೬-೪). ೩. ತಟ್ಟನೆ ಹೊರಸೂಸು, — ಚಿಮ್ಮು ; ಮೇಲಕ್ಕೆ ಉಕ್ಕು : ತಗರಾಗಿ ಕಾದಿ ನೆತ್ತರ್ ಭುಗಿಲಿಡೆ ತಲೆಯೊಡೆದು ಸತ್ತು ಗಂಗಾತಟದೊಳ್ ಸೊಗಯಿಪ ವೃಷಭಂಗಳಾಗಿಯೂ ಮಿಗೆ ಕ್ರೋಧಗೊಂಡು ಕಾದಿಯುಬೀದು (ಕುಮಾರಸ್ವ. ೪-೬). ೪. ಸಿಟ್ಟುಗೊಳ್ಳು ; ಕೋಪವನ್ನು ತೋರಿಸು : ಎನ್ನ ಕಂಡರೆ ಭುಗಿಲಿಡಲದೇಕಯ್ಯ ಶರಣರ ಮಿಗಿಲು ನುಡಿಗಾನಮ್ಮೆನು (ಶ್ರಕುಶೀ. ೦೬-೮); ಕಿದಿಯೂದುಗಿಚ್ಚಿನ ಹೊದಱೆನಂತಿರೆ ಬಿಡದೆ ಭುಗಿಲಿಡುತ (ಕುಮಾರ. ೬-೨೮). [ಭುಗಿಲ್ + ಇಡು₁]

**ಭುಗಿಲು** 'ಭುಗಿಲ್' ನೋ.

**ಭುಗಿಲೆನ್** (ಕ್ರಿ). ಭುಗ್ಗನೆ ಹತ್ತಿಕೊಳ್ಳು; ತಟ್ಟನೆ ಉರಿಯೇಳು; ಜ್ವಲಿಸು : ಕೆಣಕಿದರೆ ಭುಗಿಲೆಂದುದೀತನ ರಣಪರಾಕ್ರಮಪಹ್ನಿ (ಕುಮಾರ. ೩-೮); ಪಶು ಹವಿಗೆ ಭುಗಿಲೆಂದುಲಿದು ನಲಿದಾಡಿದನು ಹುತವಹನಶ್ವಮೇಧದಲಿ (ತೊರವೆ. ೦-೬-೪೯); ಬಿಂಕದುರಿ ಮಸಗಿದುದು ಭುಗಿಲೆಂದು ವೀರನಾರಿಯ ಮನದಿ (ಜಕ್ಕಾಂಗ. ೦೨-೩೨೬). [ಭುಗಿಲ್ + ಎನ್₁]

**ಭುಗಿಲ್ಗರೆ** (ಕ್ರಿ). ಭುಗಿಲೆಂದು ಶಬ್ದಮಾಡು : ದನುಜಾರಿಯುಂ ದನುಜನುಂ . . . ಭುಗಲ್ಗರೆವಿನಂ ಪೊಯ್ದರ್ ಗದಾದಂಡದಿಂ (ಜಗ. ೯-೬೫). [ಭುಗಿಲ್ + ಕರೆ₁]

**ಭುಗುಭುಗಿಸು** (ಕ್ರಿ). ಭುಗುಭುಗು ಎಂದು ಶಬ್ದಮಾಡು : ಸಗಾಢದ ಲುಚ್ಚಿ ಭುಗುಭುಗಿಸಿ ಉಚ್ಚಳಿಸಿದವು ಹರಹಿನಲಿ ನಾಲಗೆ ಹವ್ಯವಾಹನನ (ಕುಮಾರ. ೦೨-೨); ಆರಿಗಿರಿಯೊಳು ದಗದಗಿಸಿ . . . ಭುಗುಭುಗಿಸಿ ಬಿರುದಿನ ಮನ್ನೆಯ ಭಟರ ಪ್ರತಾಪಾಗ್ನಿ ಮೆರೆದುದು ರಿಪುವನದೊಳಗೆ (ಕಂಸವ. ೦೫-೫೫). 'ಭುಗಿಭುಗಿಸು' ಪರಾ. [ಭುಗುಭುಗು + — ಇಸು₃]

**ಭುಗುಭುಗು** (ನಾ). ಒಂದು ಅನುಕರಣ ಶಬ್ದ : ಭುಗುಭುಗು ಛಟಛಟಲೆಂದು ಲೋಚನದಿಂದೊಗೆದ ದಳ್ಳುರಿ ಸುತ್ತಿ ಸ್ಮರನ ಬಿಗಿದ ಬತ್ತಳಿಕೆ ಕರ್ವಿಲ್ಲುಸಹಿತೆ ಸುಟ್ಟುಗಿದುದು ಉರಿ ನಭಸ್ಥಳಕೆ (ಬೀಶಹಕ. ೬-೩೯);

ಧಗಧಗಧಗನೆ ಉರಿವ ಜ್ವಾಲೆಗಳ ಮಾಲೆ ಭುಗಂಭುಗು . . . ಎಂದು ಹಾವರಿಸೆ (ಕೈಬಿಡಾ. ೯-೩೪).

**ಭುಗ್ನ** (ಗು). ೧. ಬಗ್ಗಿದ ; ಡೊಂಕಾದ : ವಕ್ರವಾದ. (ನಾ). ೨. ಬಗ್ಗಿರುವುದು; ಡೊಂಕಾದುದು; ಬಾಗಿರುವುದು; ವಕ್ರವಾದುದು : "ವಕ್ರಂ ..., ಭುಗ್ನಂ, ಅರಾಳಂ, ಕುಟಿಳಂ, ವ್ಯಾಕುಂಚಿತಂ, ಊರ್ಮಿಮತ್ — ಈ ೧೨ ಕೊಂಕಿದುದು" (ಹಲಾಯು. ೦೦೬-೦೦) ; "ಭಂಗುರ ಮರಾಳಂ ಭುಗ್ನಮಾವಿದ್ಧಂ . . . ವೃಜಿನಮೆನಲು ಪೊರೆದ ಕೊಂಕಕ್ಕು" (ಶಬ್ದಮಣಿ. ೦೨೬-೭). ೩. [ಕಾಮಶಾ] ರತಿಬಂಧದಲ್ಲಿ ಒಂದು ಬಗೆ : ತೊಡೆರಮೊಲೆಗಳನೊತ್ತಿ ಕೂರಿ ಕೂಡುವನೊಳಾಯ್ತೋರಂತಿ[ರೆ] ಭುಗ್ನಕರಣ ಮೆಂಬುದು (ಜವಪ. ೯-೨೦). ೪. [ನಾಟ್ಯ] ಮುಖದ ಒಂದು ಅಭಿನಯ : "ಲಜ್ಜೆಯಿಂದ ಮುಖವನ್ನು ಕೆಳಕ್ಕೆ ಮಾಡುವುದು" (ಭಾಸ್ಕರಂ. ೨೯೫ ಗದ್ಯಾನುವಾದ) : ವ್ಯಾಭುಗ್ನ ಭುಗ್ನ ಉದ್ವಾಹಿತ ವಿಧುತ ವಿವೃತ ವಿನಿವೃತ್ತ —ಈ ಆಱು ವದನಭೇದಂಗಳ್ (ಭಾಸ್ಕರಂ. ೩-೦೦೪ ವ). [ ಸಂ. ]

**ಭುಜ** (ನಾ). ೧. ತೋಳು; ಬಾಹು : "ದೋಃ. ಪ್ರವೇಷ್ಟಃ. ಭುಜಃ, ಬಾಹುಃ, ಭುಜಾ—ಈ ೫ ತೋಳ್" (ಹಲಾಯು. ೯೬-೩೭೮); ವನ್ನತರ ನಡುವನುಡಿಯಲ್ಕೆನ್ನ ಭುಜಾರ್ಗಳವೆ ಸಾಲ್ಗುಂ (ಪಂಪಭಾ. ೬-೨೬) : ಭುಜಕೆ ಜಯಮೇಜಿ ರಿಪುಭೂಭುಜರ್ಗಂ ಭಯಮೇಜಿ (ತ್ರಿಷಷ್ಟಿ. ೨೪-೨೪೯). ೨. ಹೆಗಲು : ನಾನು ಎರಡು ಮೂರು ವರ್ಷದ ಎಳೆಯ ಬಾಲಕನಿದ್ದಾಗ ನೆರೆಹಳ್ಳಿಯ ಒಂದು ಬಯಲಾಟಕ್ಕೆ ಯಾರದೋ ಭುಜವನ್ನೇರಿಕೊಂಡು ಹೋಗಿದ್ದೆ (ಹುಚ್ಚಿಬ. ೦೪೦). ೩. ಆನೆಯ ಸೊಂಡಿಲು. ೪. ಡೊಂಕು; ವಕ್ರತೆ. ೫. (ಅಲಂ) ಪರಾಕ್ರಮ : 'ಭುಜಾಕ್ರಾಂತ' ಪರಾ. ೬. [ರೇಖಾಗ] ಎರಡು ಕೋನಗಳನ್ನು ಸೇರಿಸುವ ರೇಖೆ : ಅ, ಆ ಎಂಬುವುದೆ ತಾನು ನಡೆಯುತ್ತಿರುವ ಸರಳರೇಖೆಯು. ಇ ಈ ಯೆಂಬುವುದು ಆ ಸರಳರೇಖೆಗೆ ಭುಜಗಳಾಗಿರುತ್ತೆ (ಕೂಪಂಲ. ೦೯). ೭. ದೂರದ ಒಂದು ಅಳತೆ: ಹತ್ತುಯೋಜನ(?) : ದಂಡವೆಂದೆಂಬ ಸಾವಿರದ ನೆರ ಕೂಡೆ ತೋಱಿರುವ ಕ್ರೋಶ ಚತುರುನ್ನತಕೆ ಯೋಜನವನೀರೈದ ಕೂಡೆ ಭುಜವೈ (ಭಾಸ್ಕರ. ೩೨-೦).

**ಭುಜ ತಟ್ಟಿಕೊಳ್ಳು**=ಜಂಭ ಕೊಚ್ಚಿಕೊಳ್ಳು : ಆತ್ಮಪ್ರಶಂಸೆ ಮಾಡಿ ಕೊಳ್ಳು : ಉನ್ನತಾಧಿಕಾರದಲ್ಲಿರುವ ಜನ ಹಿಂಸಾತ್ಮಕವಾದ ತಮ್ಮ ಅಧಿಕಾರದ ಬಗ್ಗೆ ಭುಜತಟ್ಟಿಕೊಳ್ಳುವಾಗ ನಾವು ಅಂಥದೇ ವಿಚಿತ್ರ ವ್ಯಾಪಾರವನ್ನು ಗಮನಿಸಬಹುದಲ್ಲವೆ ? (ಕೃಪರು. ೧೯೭). [ಸಂ.]

**ಭುಜಂಗ** (ನಾ). ೧. ಹಾವು; ಸರ್ಪ : "ಭುಜಂಗಕ್ಕೆ ಲಯಿಣಿ" (ಕಬಿಕಂ. ೨೩೩); ಅಂತಜಾತಶತ್ರು ಶತ್ರುಪಕ್ಷಕ್ಷಯಕರಕರವಾಳದಂಷ್ಟ್ರಾಭೀಳ ಭುಜಂಗ ಮೂರ್ತಿ ವಿಶ್ವವಿಶ್ವಂಭರಾಧಾರಮಪ್ಪರಿಕೇಸರಿಯ ತೋಳ್ವಲದೊಳ್ ರಾಜ್ಯಂಗೆಯ್ಯುತಿರ್ಪನ್ನೆಗರ (ಪಂಪಭಾ. ೪-೦೦ ವ). ೨. ವಿಟ; ಜಾರ : "ವೇಶ್ಯಾಪತಿಃ, ಭುಜಂಗಃ, ವಿಟಃ, ಪಲ್ಲವಿಕಃ — ಈ ೪ ಬೊಜಗಂ" (ಹಲಾಯು. ೬೩-೨೨೭); ತಿಸುಳಿಯುಂ ದೇವಚಯುವೇಶ್ಯಾಭುಜಂಗನುಂ . . . ನುತಿಸಿದು (ಉದ್ಭಟೀ. ೩-೩೦); ವಿಳಾಸದಿಂ ಸುಳಿದೊಡಿನ್ನುಮಿವಳ್ಸೊಳಿದ್ದೈ ದಳೇಯೆನುತ್ತಾಡಿ ಭುಜಂಗರು (ರಾಜಶೇ. ೦೦-೦೦೦). ೩. ಪತಿ; ಒಡೆಯ. ೪. ಪಂಡಿತ ; ವಿದ್ವಾಂಸ : ವೆಸರ್ವೆತ್ತಿರ್ದರ್ದಿರಾಜರ್ಕಳುಮನಿಱಿಸಿದಂ ರಾಜವಿದ್ಯಾಭುಜಂಗಂ ವಸುಧಾಲಕ್ಷ್ಮೀಭುಜಂಗಂ. . . ಸಹಜ ಮಧುರ ಸಂಗೀತಗೋಷ್ಠೀಭುಜಂಗಂ ರಸವದ್ವಾಣೀಭುಜಂಗಂ ನೃಪಗುಣನಿಳಯಂ (ಶಾಸಪಂ. ೩೯-೨೦೦ ; 1112). ೫. ತಪಸ್ಸು ಮಾಡುವವನು : ಋಷಿ : ಮುನಿ : "ವಿಟ ತಪೋನಿಧಿ ಭೋಗಿಗಳುಂ ಭುಜಂಗಮಕ್ಕುಂ" (ನಾನಾರ. ೩೭) : "ಪಾವನಮುನಿ ವಿಟ ಸರ್ಪಂ ಶೀವಿದ ಮೂರುಂ ಭುಜಂಗಶಬ್ದಂ ಜಗದೊಳ್" (ನಾನಾಕಂ. ೭೭). [ ಸಂ. ]

**ಭುಜಂಗತ್ರಾಸ** (ನಾ). [ನಾಟ್ಯ] ಹದಿನಾರು ವಿಧವಾದ ಮಾರ್ಗದ ಆಕಾಶಚಾರಿಗಳಲ್ಲಿ ಒಂದು; P "ಒಂದು ಕಾಲನ್ನು ಕುಂಚಿತ [ಚರಣ ೩] ಮಾಡಿ ಹಿಮ್ಮಡಿಯನ್ನು ನಿತಂಬಕ್ಕೆದುರಾಗಿರಿಸಿ ಮೊಣಕಾಲನ್ನು ತನ್ನ ಪಾರ್ಶ್ವಕ್ಕೆ ತಿರುಗಿಸಿ ಅಂಗಾಲನ್ನು ಮೇಲಕ್ಕೆ ಮಾಡಿ ಸೊಂಟದಿಂದ ಮೊಳಕಾಲವರೆಗೂ ಅಡಿಯನ್ನು ಚಲಿಸುವುದು. [ಅಂಗಾಲನ್ನು ಮೇಲಕ್ಕೆ ಮಾಡಿ ಸೊಂಟ ಮೊಳಕಾಲು ಇವೆರಡನ್ನೂ ಚಲಿಸಬೇಕು. ಎಂದು ಭರತನಾಟ್ಯ ಮತ್ತು ಸಂಗೀತ ರತ್ನಾಕರದಲ್ಲಿದೆ]" (ಭಾಸ್ಕರಂ. ೩೦೯ ಗದ್ಯಾನುವಾದ) : ಅತಿಕ್ರಾಂತ, ಅಪಕ್ರಾಂತ, ಪಾರ್ಶ್ವಕ್ರಾಂತ, ಮೃಗಪ್ಲುತ, ಊರ್ಧ್ವಜಾನು, ಅಲಾತ, ಸೂಚೀ, ನೂಪುರಪಾದ, ಡೋಲಪಾದ, ದಂಡಪಾದ, ವಿದ್ಯುದ್ಭ್ರಾಂತ, ಭ್ರಮರಿ, ಭುಜಂಗತ್ರಾಸ, ಆಕ್ಷಿಪ್ತ, ಆವಿದ್ಧ, ಉದ್ವೃತ್ತ ಈ ಪದಿನಾಱು ಮಾರ್ಗದ ಆಕಾಶಚಾರಿಗಳು (ಭಾಸ್ಕರಂ. ೬-೦೭ ವ). [ಸಂ.]

**ಭುಜಂಗತ್ರಾಸಿತ** (ನಾ). [ನಾಟ್ಯ] ನೂರೆಂಟು ಬಗೆಯ ಕರಣಗಳಲ್ಲಿ ಒಂದು: P "ಭುಜಂಗತ್ರಾಸಿತ ಚಾರಿಯನ್ನು ಮಾಡಿ. ಕುಂಚಿತ ಪಾದವನ್ನು ಎತ್ತಿ, ಸೊಂಟ ತೊಡೆ ಮತ್ತು ಮೊಳಕಾಲುಗಳಿಂದ ತ್ರ್ಯಸ್ರಾಕಾರವನ್ನು ಮಾಡಿ ತಿರುಗಿಸಿ [ಸುತ್ತಿ] ಒಂದು ಕೈಯನ್ನು ವ್ಯಾವರ್ತ ಮತ್ತು ಪರಿವರ್ತ ಮಾಡಿ ದೋಲಹಸ್ತದಲ್ಲೂ ಇನ್ನೊಂದನ್ನು ಕಟಿಕಾಮುಖ ಹಸ್ತದಲ್ಲೂ ಹಿಡಿಯುವುದು" (ಭಾಸ್ಕರಂ. ೨೯೦ ಗದ್ಯಾನುವಾದ) : ತಲಪುಷ್ಪಪುಟ. . . ಭುಜಂಗತ್ರಾಸಿತ. . . ಗಂಗಾವತರಣ—ಈ ನೂಱೆಂಟು ಕರಣಂಗಳ್ (ಭಾಸ್ಕರಂ. ೪-೯೨ ವ). [ಸಂ.]

**ಭುಜಂಗನಿಲಯ** (ನಾ). ೧. ಹಾವುಗಳ ವಾಸಸ್ಥಾನ; ಹಾವಿನ ಹುತ್ತ; ಗೆದ್ದಲುಹುತ್ತ. ೨. ಪಾತಾಳಲೋಕ : ಭುಜಂಗನಿಲಯಂ [ಪಾತಾ. ಭವನಂ]ಕ್ರೂರಂ ತ್ರಿಶೂಲಾಹ್ವಯಂ (ನಾನಾರ. ೯೩). [ಸಂ.]

**ಭುಜಂಗಪ್ರಯಾತ** (ನಾ). [ಛಂದ] ವರ್ಣಛಂದಸ್ಸಿನಲ್ಲಿ ಹನ್ನೆರಡನೆಯದಾದ ಜಗತಿಯಲ್ಲಿ ಒಂದು ವೃತ್ತ; ಪ್ರತಿಪಾದದಲ್ಲೂ ನಾಲ್ಕು ನಾಲ್ಕು ಯಗಣವಿರುವ ವೃತ್ತ : ಕುಶಂ ವಾರ್ಧಿಪರ್ಯಾಯಮಕ್ಕುಂ ವಿರಾಮಂ ದಿಶಾಸಂಖ್ಯೆಯಕ್ಕುಂ ಪಯೋಜಾಯತಾಕ್ಷೀ ವಿಶೇಷಂ ಕವೀಂದ್ರಸ್ತುತಂ ನಾಕಿಗಂಬೋಲ್ ಪ್ರಶಸ್ತಂ ಸಮಸ್ತಂ ಭುಜಂಗಪ್ರಯಾತಂ (ಛಂದೋಂಬು. ೨-೦೨೭). [ಸಂ.]

**ಭುಜಂಗಭೋಗ** (ನಾ). ೧. ಹಾವಿನ ಶರೀರ. ೨. ಹಾವಿನ ಹೆಡೆ : 'ಭುಜಂಗಭೋಗಾಶ್ರಿತೆ' ಪರಾ. [ಸಂ.]

**ಭುಜಂಗಭೋಗಾಶ್ರಿತೆ** (ನಾ). ೧. ಆದಿಶೇಷನ ಹೆಡೆಗಳನ್ನು ಆಶ್ರಯಿಸಿಕೊಂಡಿರುವವಳು; ಆದಿಶೇಷನ ಹೆಡೆಗಳ ಮೇಲೆ ಇರುವವಳು. ೨. ಜಾರರೊಂದಿಗೆ ಸುಖಿಸುವವಳು. ೧, ೨ : ಸತತಂ ಭುಜಂಗಭೋಗಾಶ್ರಿತೆ ನಿನ್ನ ಕಳತ್ರಮಿಾ ಧರಾವಧು ಮತ್ತೆಂತತಿಶಯದೆ ಮಹಾಪುರುಷವ್ರತಮಂ ತಾಳ್ದುವಳುದಾರಚರಿತಕ್ರಮದಿಂ [ಇಂತು] ವ್ಯಾಜಸ್ತುತ್ಯಲಂಕಾರಂ (ಕಾವಲೋ. ೩-೧೬೩). [ಸಂ. ಭುಜಂಗಭೋಗಾಶ್ರಿತಾ]

**ಭುಜಂಗಮ** (ನಾ). ೧.= ಭುಜಂಗ ೧: "ವಿಷಧರಃ . . . ದರ್ವೀಕರಃ, ದೃಕ್ಶ್ರುತಿಃ, ಭುಜಂಗಮಃ — ಈ ೨೫ ಹಾವಿನ ಪೆಸರ್" (ಹಲಾಯು. ೦೦೩-೦೯): "ಉರಗಂ ಸರೀಸೃಪಂ ಕುಂಭೀನಸಂ ಭೋಗಿ ಮರುತಾಶನಂ ದಂದಶೂಕಂ ಭುಜಂಗಮಂ . . . ಸರ್ಪಂಗೆ ನಾಮಂ" (ಶಬ್ದಮಣಿ. ೦೦೬-೦). ೨. ಪಾತಾಳವಾಸಿಯಾದ ನಾಗ : ಸಿದ್ಧ ವಿದ್ಯಾಧರರು ವಸುಗಳು ಮನುಗಳಾದಿತ್ಯರು ಭುಜಂಗಮರು . . . ಎಸೆದರು ರೋಮರೋಮದ ಕುಳಿಯ ಚೌಕದಲಿ (ಕುಮಾರವ್ಯಾ. ೯-೩೯). ೩. ರಾಹು. ೪. [ಗಣಿತ] ಎಂಟು ಎಂಬ ಸಂಖ್ಯೆಯ ಸಂಕೇತ. ೫. [ಜ್ಯೋತಿ] ಇಪ್ಪತ್ತೇಳು ನಕ್ಷತ್ರರಾಶಿಗಳಲ್ಲಿ ಒಂಬತ್ತನೆಯದು; ಆಶ್ಲೇಷ. [ಸಂ.]

**ಭುಜಂಗಯಾಗ** (ನಾ). ಸರ್ಪಗಳನ್ನು ಹವಿಸ್ಸನ್ನಾಗಿ ಹೋಮ ಮಾಡುತ್ತಿದ್ದ ಯಾಗ ; ಸರ್ಪಯಾಗ : ತಂದೆಗಂ ಸರ್ಪದಷ್ಟಮಿರ ದಾದುದೆನುತ್ತ ಭುಜಂಗಯಾಗಮಂ ಕುಂದಿನಿತಿಲ್ಲದಂತೆ ರಚಿಸುತ್ತಿರಲಾಗ (ಕಬ್ಬಿಗಂ. ೨೮). [ಸಂ.]

**ಭುಜಂಗಲೋಕ** (ನಾ). ನಾಗಲೋಕ ; ಪಾತಾಳ : ರಂಗನಾಥನ ಪದಪತಿಗೆ ರಣರಂಗಭೀತನು ಬಿದ್ದನಿರದೆ ಭುಜಂಗಲೋಕಕೆ (ಸಿಶಾಗ. ೧೦-೩೬-೬೦). [ಸಂ.]

**ಭುಜಂಗವಳಿ** (ನಾ). [ಶೈವ] ಕಾಳಾಮುಖ ಸಂಪ್ರದಾಯದ ಒಂದು ಶಾಖೆ : ಸಮುದ್ರದ ಬಲಗೆನಿತೊನ್ದು ಗದ್ದೆ ಬೆಯುವುದೆನಿತುಮಂ ಕೊಟ್ಟರೀ ಸ್ಥಾನಕ್ಕೆ ಭುಜಂಗವಳಿ ಕಾಳಾಮುಖಿಂ ನೈಷ್ಟಿಕತಪೋಧನನೆ ನಡೆಯಿಸುವ . . . ಈ ಧರ್ಮ್ಮಮಂ ಪ್ರತಿಪಾಳಿಸಿದವಂಗೆ ವಾರಣಾಸಿಯೊಳ್ಕೋಟಿ ಚತುರ್ವೇದಪಾರಗರ್ಗ್ಗೆ ಕವಿಲೆಯುಂ ಕೊಟ್ಟ ಫಲಮಕ್ಕುಂ (ಕಶಿಲ. ೨೨-೭-೩೭ ; 1083). [ಭುಜಂಗ ? + ಬಳ್ಳಿ₃ (<ಬಟ್ಟು₃)]

**ಭುಜಂಗವಿಜೃಂಭಿತ** (ನಾ). [ಛಂದ] ಅಕ್ಷರಛಂದಸ್ಸಿನಲ್ಲಿ ಇಪ್ಪತ್ತಾರ ನೆಯ ಉತ್ಕೃತಿಯಲ್ಲಿ ಒಂದು ವೃತ್ತ ; ಪ್ರತಿಪಾದದಲ್ಲೂ ಇಪ್ಪತ್ತಾರು ಅಕ್ಷರಗಳು ಇರುವ ನಾಲ್ಕುಪಾದಗಳುಳ್ಳ ವೃತ್ತ : ಆದಿಕ್ಷ್ಮಾಯುಗ್ಮಾಕಾಶಾಗ್ರಂ ಪುರಮಿತಸುರಪುರಸಹಿತಂ . . . ಸ್ತನಭರ ವಿನಮಿತ ಪೆಸರಿಂ ಭುಜಂಗವಿಜೃಂಭಿತಂ (ಛಂದೋಂಬು. ೨-೧೯೭). [ಸಂ.]

**ಭುಜಂಗವೀಣೆ** (ನಾ). ಒಂದು ಬಗೆಯ ವೀಣೆ : ಇವಲ್ಲದೆ ಪ್ರಾಚೀನ ಗ್ರಂಥಗಳು, ಕಿನ್ನರಿ, ಪಿನಾಕಿ, ರುದ್ರವೀಣೆ, ಆಕಾಶವೀಣೆ, ಬ್ರಹ್ಮವೀಣೆ, ಭುಜಂಗವೀಣೆ, ರಾವಣಹಸ್ತ ಮುಂತಾಗಿ ನಾನಾ ರೀತಿಯ ವೀಣೆಗಳನ್ನು ನಮೂದಿಸುತ್ತವೆ (ಸಂಗೀತಂ. ೩೦೦). [ಸಂ. ಭುಜಂಗವೀಣಾ]

**ಭುಜಂಗಶಯನ** (ನಾ). ಆದಿಶೇಷನನ್ನು ಹಾಸಿಗೆಯಾಗಿ ಉಳ್ಳವನು : ವಿಷ್ಣು : ಮಾತಂಗವರದ ವಿಹಂಗಗಮನ ಭುಜಂಗಶಯನ (ಐರಾಕ್ಷ. ೪೭-೧). [ಸಂ.]

**ಭುಜಂಗಾಂಚಿತ** (ನಾ). [ನಾಟ್ಯ] ನೂರೆಂಟು ಕರಣಗಳಲ್ಲಿ ಒಂದು : P "ಬಲಗಾಲಿನಿಂದ ಭುಜಂಗತ್ರಾಸಿತಚಾರಿಯನ್ನು ಮಾಡಿ ಬಲಗೈ ಯಿಂದ ರೇಚಿತವನ್ನೂ ಎಡಗೈಯಿಂದ ಲತಾಕರವನ್ನೂ ಮಾಡು ವುದು" (ಶಾಸ್ತ್ರಂ. ೨೬೪ ಗದ್ಯಾನುವಾದ) : ಭುಜಂಗಾಂಚಿತಮೊದಲು ಭುಜಂಗತ್ರಾಸಿತಮದು ಬಲಗಾಲೊಂದಿ ಮಗುಳ್ದು ಬಲಗೈ ರೇಚಿತಮೊಡವೆ ಲತಾಕರಮದು ವಾಮದೊಳಿರೆ ಭುಜಂಗಾಂಚಿತಾಖ್ಯಕರಣಮೆನಿಕ್ಕುಂ (ಶಾಸ್ತ್ರಂ. ೪-೯೨). [ಸಂ.]

**ಭುಜಂಗಾಂಚಿತಕ** (ನಾ). =ಭುಜಂಗಾಂಚಿತ : ತಲಪುಷ್ಪಪುಟ ಲೀನ. . . ಭುಜಂಗಾಂಚಿತಕ . . . ಗಂಗಾವತರಣ – ಈ ನೂಱೆಂಟು ಕರಣಂಗಳ್ (ಶಾಸ್ತ್ರಂ. ೪-೯೨ ವ). [ಸಂ.]

**ಭುಜಂಗಾಕ್ಷಿ** (ನಾ). ಒಂದು ಬಗೆಯ ಸಸ್ಯ ; ಸರ್ಪಾಕ್ಷಿ ಗಿಡ : "ನಾಕುಲೀ, ಸುರಸಾ, ನಾಗಸುಗಂಧಾ, ಗಂಧನಾಕುಲೀ, ನಕುಲೇಷ್ಟಾ ಭುಜಂಗಾಕ್ಷೀ, ಛತ್ರಾರ್ಕೀ, ಸುವಹಾ, ಈ ಸರ್ಪಾಕ್ಷಿಗಿಡದ ಹೆಸರುಗಳು" (ಸಿದ್ಧೌಷ. ೧೩೮). [ಸಂ. ಭುಜಂಗಾಕ್ಷೀ]

**ಭುಜಂಗಾಧಿಪ** (ನಾ). ಹಾವುಗಳ ಒಡೆಯ ; ಸರ್ಪರಾಜ ; ಆದಿಶೇಷ : ಉರುಭುಜಂಗಳ್ ಭುಜಂಗಾಧಿಪಂಗೆ ಪಡೆವನ್ನಂ ಸೋಲಮಂ . . . ಯೌವನಶ್ರೀ ಪಡೆನುದು ನೃಪಪುತ್ರಾಂಗದೊಳ್ ನಾಡೆ ಚೆಲ್ವಂ (ಚಂದ್ರಪ್ರ. ೨-೨೪). [ಸಂ.]

**ಭುಜಂಗಾಸ್ತ್ರ** (ನಾ). ಒಂದು ಬಗೆಯ ಮಂತ್ರಾಸ್ತ್ರ : ಸರ್ಪಾಸ್ತ್ರ : ಖಗೇಂದ್ರಾಸ್ತ್ರಂ ಭುಜಂಗಾಸ್ತ್ರಮಂ ಗೆಲೆ ಗೆಲ್ದಾಸೆಯಿನಂದು ಕೇಶವ ನಿಕುಂಭರ್ ತಮ್ಮೊಳ್ಬಿಟ್ಟಾಡಿದರ್ (ಜಗ. ೦೫-೩೦). [ಸಂ.]

**ಭುಜಂಗಿ** (ನಾ). ೧. ಹೆಣ್ಣುಹಾವು : ವೀರಶ್ರೀ ಭುಜಂಗೀಸಮಾಶ್ರಯ ಶ್ರೀಖಂಡಕಾಂಡಂಗಳುಮಪ್ಪ ದೋರ್ದಂಡಂಗಳಿಂದಮತಿನಿಬಿಡಾಲಿಂಗನಂ ಗೆಯ್ದು (ಆದಿಪು. ೦೪-೪೬ ವ). ೨. ನಾಗಸ್ತ್ರೀ. ೩. ಸೂಳೆ ; ವೇಶ್ಯೆ : ಇಂತನಂತಚರಿತ್ರದಿಂ ಲಂಕಿಣಿ ತಾಟಕಿ ಪಾಪಾಪತ್ಮ ರತಿ ಭಾರತಿ ಸಾಗರ ಸುತೆಯವಂತೊಪ್ಪುವ ಭುಜಂಗಿಯರಂ . . . ನೋಡಿ (ಪುಷ್ಪರ. ೨-೯೨). [ಸಂ. ಭುಜಂಗೀ]

**ಭುಜಂಗೇಂದ್ರ** (ನಾ). ೧. ಶ್ರೇಷ್ಠವಾದ ಸರ್ಪ. ೨. ಆದಿಶೇಷ : ತರುಣೋತ್ತುಂಗ ಶಶಾಂಕಖಂಡಮೆ ಸುಧಾಬೀಜಂ ಭುಜಂಗೇಂದ್ರನಂಕುರಂ . . . ಶಂಕರ ಕಲ್ಪದ್ರುಮನೀಗಭೀಷ್ಟಫಲಮಂ ಚಾಳುಕ್ಯನಾರಾಯಣಂ (ಗದಾಯು. ೧-೨). [ಸಂ.]

**ಭುಜಕಿರೀಟ** (ನಾ). ತೋಳಿನಲ್ಲಿ ಧರಿಸುವ ಒಂದು ಬಗೆಯ ಆಭರಣ : ನಮ್ಮ ಕರ್ಣಕುಂಡಲ, ಭುಜಕಿರೀಟ, ಅಲಂಕಾರಗಳ ರೀತಿ ಹಾಗಿಲ್ಲ (ಹುಕ್ಷಲ. ೧೩೮). [ಸಂ.]

**ಭುಜಕೀರ್ತಿ** (ನಾ). = ಭುಜಕಿರೀಟ : ನಳಿತೋಳ್ಬಂಬಹಿಗಳ ಪೆಡೆಯೊಳು ಥಳಥಳಿಸುವ ರತ್ನಗಳಂತೆ ಬೆಳಸಕುಚಿಗೆ ರನ್ನದ ಭುಜಕೀರ್ತಿಯನಳವಡಿಸಿದರು ನಾರಿಯರು (ಜೀವಂಧರ. ೧೦-೦೮); ಮುತ್ತಿನ ಮೂಗುತ್ತಿ ಮುಕಡಿಟ್ಟು ಭುಜಕೀರ್ತಿ ವೃತ್ತಕುಚದ ನಡುವೆಸೆವ ಕಸ್ತೂರಿಯಣ್ಣನ ಕಾಂತೆನೋಡಿ ಯದನ ವೃತ್ತಾಂತವನುಸುರುವೆನು (ಕುಮಾರಾಂ. ೧-೧೦೪) ; ಭುಜವಲ್ಲರಿಯ ಮಂಜರಿಯ ಸಿರಿಯುಂ ಭುಜಕೀರ್ತಿ ಕಳೆದು ತೆರಬೊಳೆಯೆ (ರಾಜಶೇ. ೬-೧೧ ವ). [ಭುಜ + ಕೀರ್ತಿ₁. / ತೆಲು. ಭುಜಕೀರ್ತಿ]

**ಭುಜಗ** (ನಾ). = ಭುಜಂಗ ೧ : "ವಿಷಧರಃ . . . ಭುಜಗಃ . . . ಭುಜಂಗಮಃ –ಈ ೨೫ ಹಾವಿನ ಹೆಸರ್" (ಹಲಾಯು. ೦೦೫-೦೮) ; ಭುಜಗನ ಫಣಾಮಣಿನಿವಾಳಿ ಬೇಕೆಂದಡಂ ಕೋಡಿದನೆ ಕೊಂಕಿದನೆ ಕಂದಿದನೆ ಕುಂದಿದನೆ (ಬಸವ. ೭-೬೪) ; ಕೊಡಹಿದರೆ ಕಟ್ಟಜುಹೆಗಳು ಬೆಂಬಿಡದೆ ಭುಜಗನ ನಳಲಿಸುವವೋಲ್ (ಕುಮಾರವ್ಯಾ. ೧೬-೩). ೨. =ಭುಜಂಗ ೨ : ಪುರವ ಪೊಗುವನಿತಱೊಳಗಲ್ಲಿಪ್ಪ ಭುಜಗ[ಪಾಠಾಂ. ಭುಜಂಗ]ನೀ ತೆಱನಱಿದು ತನ್ನ ಮಧುವೆಂದು ಹಸ್ತವ ಪಿಡಿಯೆ (ಶ್ರೀಶಾ. ೨-೦೩). ೩. [ಗಣಿತ] ಎಂಟು ಎಂಬ ಸಂಖ್ಯೆಯ ಸಂಕೇತ. [ಸಂ.]

**ಭುಜಗತ್ರಸ್ತ** (ನಾ). [ನಾಟ್ಯ] ನೂರೆಂಟು ಬಗೆಯ ಕರಣಗಳಲ್ಲಿ ಒಂದು ; P "ಭುಜಂಗತ್ರಾಸಿತಚಾರಿಯನ್ನು . . . ಮಾಡಿ ಎರಡು ಕೈಗಳಿಂದಲೂ ಎಡಪಾರ್ಶ್ವದಲ್ಲಿ ರೇಚಿತ ಮಾಡುವುದು" (ಶಾಸ್ತ್ರಂ. ೨೬೪ ಗದ್ಯಾನುವಾದ) : ಭುಜಗತ್ರಾಸಿತಚಾರಿಯ ಋಜುವಿಂದಂ ಮಾಡುತೆರಡು ಕೈಗಳನೆಡದೊಳ್ ನಿಜದಿಂ ರೇಚಿತಮಾಗಲ್ ಭುಜಗತ್ರಸ್ತಾಖ್ಯಮೆಂಬ ಕರಣಮೆನಿಕ್ಕುಂ (ಶಾಸ್ತ್ರಂ. ೪-೯೦). [ಸಂ.]

**ಭುಜಗದ್ವೇಷಿ** (ನಾ). ೧. ಹಾವುಗಳ ವೈರಿ ; ಗರುಡ. ೨. ವಿಟರನ್ನು ದ್ವೇಷಮಾಡುವವಳು ; ಜಾರಶತ್ರು. ೧, ೨ : ವೈನತೇಯನ ಚಿತ್ತವೃತ್ತಿಯಂತೆ ಭುಜಗದ್ವೇಷಿಯಾಗಿರ್ದ(ದ)ನಱಿದುರಗವನಿತೆಯಂತೆ ಕೋಳ್ಪಟ್ಟಿ ಮುಳಿದಿರ್ದಳಂ (ಶಾಂತಿಪು. ೮-೬೩ ವ). [ಸಂ. ಭುಜಗದ್ವೇಷೀ]

**ಭುಜಗಧಾರಿ** (ನಾ). ೧. ಹಾವನ್ನು ಆಭರಣವನ್ನಾಗಿ ಧರಿಸಿರುವವನು; ನಾಗಭೂಷಣ ; ಶಿವ. ೨. [ಛಂದ] ರುದ್ರಗಣಪ್ರಸ್ತಾರದ ಹದಿನಾರುಭೇದಗಳಲ್ಲಿ ಒಂದು : ೧. ಗಂಗಾಧೀಶಂ . . . ೧೨. ಭುಜಗಧಾರಿ (ಛಂದೋಂಬು. ೫-೨೪೦ ವ). [ಸಂ. ಭುಜಗಧಾರಿನ್]

**ಭುಜಗಧ್ವಜ** (ನಾ). ೧. ಹಾವಿನ ಚಿಹ್ನೆಯಿರುವ ಬಾವುಟ, —ಧ್ವಜ ; ಸರ್ಪಧ್ವಜ. ೨. ಹಾವಿನ ಚಿಹ್ನೆಯಿರುವ ಬಾವುಟ ವನ್ನುಳ್ಳವನು ; ದುರ್ಯೋಧನ : ಒದವಿದರುಣ್ಣತಮೂರ್ತಿಗಳೊದವಿ ಗದಾಯುಧದೆ ಭೀಮ ಭುಜಗಧ್ವಜರುಂ (ಗದಾಯು. ೮-೬). [ಸಂ.]

**ಭುಜಗನಾಯಕ** (ನಾ). ೧. ಸರ್ಪಗಳ ನಾಯಕ. ೨. [ಜೈನ] ನಾಗಕುಮಾರರಲ್ಲಿ ಅಗ್ರಗಣ್ಯನಾದವನು : ವಂದನಾಭಕ್ತಿಗೆ ವಂದನಂ ಭುಜಗನಾಯಕನಂ ನಡೆನೋಡಿ (ಶಾಂತಿಪು. ೧-೯೬). [ಸಂ.]

**ಭುಜಗಪುರಿ** (ನಾ). ನಾಗಲೋಕದ ರಾಜಧಾನಿ ; ಭೋಗವತಿ : ಭುಜಗಪುರಿಧನದ[ನ ಪುರಿ ದಿತಿಜ]ಪುರಿ ಪಡೆದೂರ್ಗಳಂತಿವೆಂಬಂತಿರೆ(ಶಾಂತೀಶ್ವ. ೧೩-೧೨೯). [ಸಂ.]

**ಭುಜಗಬಂಧ** (ನಾ). ಮಲ್ಲಯುದ್ಧದಲ್ಲಿ ಒಂದು ಪಟ್ಟು; ನಾಗಬಂಧ : ತಳಹತ್ತಂ ದಣುವಟ್ಟ . . . ಭುಜಗಬಂಧಂ ತೋರಹತ್ತಂ ಶಿರೋವಳಯಂ ಬಾಹುತಳಂ ಚಮತ್ಕರಿಸೆ ನಾನಾ ಕೌಶಲಂದೋಜಿದರ್ (ಕಬಕಂ. ೪-೬೫). [ಸಂ.]

**ಭುಜಗಭೂಷ** (ನಾ). ಸರ್ಪಗಳನ್ನು ಆಭರಣವಾಗಿ ಧರಿಸಿರುವವನು ; ಸರ್ಪಭೂಷಣ ; ಶಿವ : ತಾಪತ್ರಯಾಪಹಾರಿ ವಿರೂಪಾಕ್ಷಂ ಭುಜಗಭೂಷಂ . . . ಕಣ್ಗೆಸೆದಂ ( ಕಬಕಂ. ೧-೬೫).

[ ಸಂ. (ಭುಜಗ + ಭೂಷಾ + − ) ]

**ಭುಜಗಭೋಜನ** (ನಾ). ಹಾವಿಗೆ ಆಹಾರವಾದುದು ; ಇಲಿ : 'ಭುಜಗ ಭೋಜನಗಮನ' ಪರಾ. [ಸಂ.]

**ಭುಜಗಭೋಜನಗಮನ** (ನಾ). ಇಲಿಯ ಮೇಲೆ ಸಂಚರಿಸುವವನು ; ಮೂಷಕವಾಹನ ; ಗಣಪತಿ : ಚಿರರಸಮಂ ಮಾಳ್ಕೆ ಭುಜಗಭೋಜನ ಗಮನಂ (ಹರ್ಮ್ಯಕ. ೧-೬). [ಸಂ.]

**ಭುಜಗಮರ್ದನ** (ನಾ). (ಕಾಳಿಂಗ) ಸರ್ಪವನ್ನು ಹಿಂಸಿಸಿದವನು ; ಶ್ರೀಕೃಷ್ಣ ; ಕಾಳಿಂಗಮರ್ದನ : ಕಡಿಕೆಯಿಂದು ಕಾದಲೆಂದೊಡರಿಸುವಾತ ನೇಂ ಭುಜಗಮರ್ದ್ದನನೇ ಕಲಿಗೋನಭೂಪನೊಳ್ (ಎಕ. VIII, ಸಾಗರ. ೧೧೪-೩೭ ; 1042). [ಸಂ.]

**ಭುಜಗರ್ಬ** (ನಾ). ತೋಳಿನ ಮದ,—ಕೊಬ್ಬು,—ಗರ್ವ : ಕರವಿಂದ ಸಾಧ್ಯವೆಂಬ ಕೊಳನಂ ಭುಜಗರ್ಬ್ಬದೆ ಕೊಂಡನುಗ್ರಸಂಗರಜಯಿ ನಾಗವರ್ಮ್ಮವಿಭು (ಪಾಂಡೇಶ್. ೩-೧೪ ; 1074).

[ ಭುಜ + ಗರ್ಬ ( < ಗರುವ ) ]

**ಭುಜಗಲೋಕ** (ನಾ). ನಾಗಲೋಕ ; ಪಾತಾಳ : ಬಿದಿ ಮನದಟ್ಟಿಯಿಂ ಭುಜಗಲೋಕದ ಮಾನವಲೋಕದಿಂದ್ರಲೋಕದ ಬಹುಸಾರವಸ್ತುಗಳ ನೊಂದೆಡೆಗೆಯ್ದೆ ತರಲ್ಪಿ ತಂದು (ಜಗಂ. ೨-೧೨). [ಸಂ.]

**ಭುಜಗಶಯನ** (ನಾ). ಹಾವನ್ನು ಹಾಸಿಗೆಯಾಗಿ ಉಳ್ಳವನು ; ಶೇಷ ಶಾಯಿ ; ವಿಷ್ಣು : ಎನಗೊಬ್ಬ ದೊರೆಯು ದೊರಕಿದನು . . . ಭುಜಗ ಶಯನನಾದ. ತ್ರಿಜಗವಂದಿತನಾದ (ಪುರಂದ. ೧-೧೪೪-೨). [ಸಂ.]

**ಭುಜಗಶಿಶುಸೃತ** (ನಾ). [ಛಂದ] ಅಕ್ಷರಛಂದಸ್ಸಿನಲ್ಲಿ ಒಂಬತ್ತನೆಯ ದಾದ ಬೃಹತಿಯಲ್ಲಿ ಒಂದು ವೃತ್ತ : ಸೃಜಯುಸೆ ನನಮುಂ ಮತ್ತಂ ಗಜಪತಿಗಮನೇ ವೃತ್ತಂ ತ್ರಿಜಗದೋಳದು ಸಂಸಿದ್ಧಂ ಭುಜಗಶಿಶುಸೃತಂ ನಾಮಂ (ಛಂದೋಂಬು. ೨-೧೧೪). [ಸಂ.]

**ಭುಜಗಾಭರಣ** (ನಾ). ಹಾವನ್ನು ಆಭರಣವಾಗಿ ಉಳ್ಳವನು ; ಶಿವ : ಶರಣಸಂಗವ್ಯಸನ ಭುಜಗಾಭರಣನಮರಕಿರೀಟಮಂಡಿತಚರಣ . . . ಸಲಹುಗೆ ಭಕುತಜನರನು ಪಾರ್ವತೀರಮಣ (ಶಿವಾಷ್ಟ. ೧-೨). [ಸಂ.]

**ಭುಜಗಾರಿ** (ನಾ). ಹಾವುಗಳ ಶತ್ರು ; ಗರುಡ : ಕುರುಕುಲಮಂ ಬಕಾರಿ ಭುಜಗವ್ರಜಮಂ ಭುಜಗಾರಿ ದಾನವೇಶ್ವರಕುಲಮಂ ಮುರಾರಿ . . . ಕೊಂದ ಮೊಟ್ಟೆಯಿಂ (ಶಂಕರಂ. ೩೩೪-೧೫). [ಸಂ.]

**ಭುಜಗೇಂದ್ರ** (ನಾ). ೧. ನಾಗರುಗಳ ಒಡೆಯ ; ಹಾವುಗಳ ಒಡೆಯ; ನಾಗೇಂದ್ರ: ಘನಪರಾಕ್ರಮಿ ಭೀಮಸೇನಗೆ ವಿನುತ ಭುಜಗೇಂದ್ರಂಗೆ ದುಶ್ಶಾಸನನ ಜೀವಾನಿಳನ ಪಾರಣೆ ಸಮರಭೂಮಿಯಲಿ (ಶಿವಾಷ್ಟ. ೧೪-೬೨); ಎಚ್ಚು ಕೆಡಪಿದನಾತನುರುಭುಜವನ್ನೆವೆಡೆಯ ಭುಜಗೇಂದ್ರನಂದದಿಂ ಧರೆಯೊಳ್ ಪೊರಳ್ದು ( ಕೃಬಿಹಾ. ೧೪-೧೪ ). ೨. = ಭುಜಗ ನಾಯಕ ೨ : ಭುಜಗೇಂದ್ರರ್ ಭವನಪ್ರಕಾಶನದಿನನೂನವ್ಯಂತರರ್ (ಶಂಪ್ರಕೃ. ೧೨-೪೨). [ಸಂ.]

**ಭುಜಪತ್ರ**, ಭುಜಪತ್ರೆ, ಭೋಜಪತ್ರೆ (ನಾ). ಒಂದು ಬಗೆಯ ಮರ ; ಭೂರ್ಜವೃಕ್ಷ : "ಭೂರ್ಜ, ಚರ್ಮಿ, ಮೃದುತ್ವಕ್—೩ ಭುಜಪತ್ರಗಿಡದ ಹೆಸರುಗಳು" (ನಿಘಂಟು. ೧೨೨). **ಭುಜಪತ್ರೆ:** ''ಭೂತಘ್ನಿ—ಭುಜಪತ್ರೆ" (೬ಕಂ. ೧೧೨) ; ದೇವದಾರು, ಭುಜಪತ್ರ, ರಾಸ್ನೆ . . . ಇವುಗಳ ಕಷಾಯ ವನಿಕ್ಕಿ ತೆಗೆದುಕೊಳ್ಳಲು ವಾತಜ್ವರಂ ಕಡುಗುಂ (ಸಕವೈ. ೬೫). **ಭೋಜ ಪತ್ರೆ** : (ವೈಶಿಗ. ೧೩-೨೨೨).

[<ಪ್ರಾ. ಭುಜ್ಜಪತ್ರ. / ಸಂ.ಭೂರ್ಜಪತ್ರ./ಮರಾ. ಭುಜಪತ್ರ]

**ಭುಜಪತ್ರೆ** ' ಭುಜಪತ್ರ ' ನೋ.

**ಭುಜಬಲ**, ಭುಜಬಳ (ನಾ). ೧. ತೋಳಿನ ಕಸುವು, – ಶಕ್ತಿ : "ತೋಳ್ವಲಂ ಭುಜಬಲಂ" (ಶಬ್ದಮ. ೪೯); ಭುಜಬಲಮಂ ಪವಣ್ಬಡಿಪೊಡ ಪ್ರತಿಮಂ . . . ಮತ್ತೆ ಸಾಧಿಸಿದವಂ ಬಹುರೂಪಿಣಿಯಂ ದಶಾನನಂ (ಶಂರಾಚರಿ. ೧೪-೮೫); ಆ ಸುಧನ್ವಂ ತನ್ನ ಭುಜಬಲದೊಳಾರ್ದು ನಿಜಧನುವ ನೊದರಿಸುತಿರ್ದನು (ಕೃಬಿಹಾ. ೧೩-೪೫). ೨. ಶೂರ ; ಪರಾಕ್ರಮಿ : ಕಳಕಳವಿದೇಕೆನುತ್ತಂ ಭುಜಬಲರು ದೌವಾರಿಕರು ಹೋ ಎನುತ ವಾರಿಸಲು (ಬಸವು. ೧-೪೪). ಭುಜಬಳ.

ಭುಜಬಳಮಲ್ಲ = ಪರಾಕ್ರಮದಲ್ಲಿ ಜಟ್ಟಿಯಂತಿರುವವನು ; ಶೂರ ; ಒಂದು ಬಿರುದು : ರಿಪುಮದನಮಹೇಶ್ವರ ರಾಯಮುರಾರಿ ಭುಜಬಳಮಲ್ಲ ಶ್ರೀಸೋಮಿದೇವರಸರು (ಕಶಿಶ. ೬೪-೧೨-೧೪; 1170). [ಸಂ.]

**ಭುಜಬಲಿ** (ನಾ). ೧. ಪರಾಕ್ರಮಶಾಲಿ ; ಶೂರ. ೨. [ಜೈನ] ಆದಿ ತೀರ್ಥಂಕರನ ಎರಡನೆಯ ಮಗ ; ಬಾಹುಬಲಿ : ಪುರುತನಯರ್ ಭುಜಬಲಿಯುಂ ಭರತನುಮೆನೆ ದೊರೆಗೆವಂದೊಡೆ (ಅಂಶು. ೧೪-೯೦). [ಸಂ. ಭುಜಬಲಿನ್]

**ಭುಜಬಳ** ' ಭುಜಬಲ ' ನೋ.

**ಭುಜಭವ** (ನಾ). ಪರಬ್ರಹ್ಮನ ತೋಳಿನಿಂದ ಉತ್ಪತ್ತಿಯಾದವನೆಂದು ಹೇಳಲಾದ ವ್ಯಕ್ತಿ : ಕ್ಷತ್ರಿಯ : ಭುಜಭವಗುಚಿತಂ ಶಿಷ್ಟಪ್ರಜ ಪಾಲನೆ (ಬಸ್ವಪು. ೩-೨-೬೦). [ಸಂ.]

**ಭುಜಮಧ್ಯ** (ನಾ). ತೋಳುಗಳ ಮಧ್ಯಭಾಗ ; ಎದೆ : " ಭುಜ ಮಧ್ಯಂ, ಉರಃ, ವಕ್ಷಃ, ಹೃದಯಂ, ವತ್ಸ : — ಈ ೫ ಉರಂ" (ಹಲಾಯು. ೯೬-೩೬೩). [ಸಂ.]

**ಭುಜವಲಯ** (ನಾ). ತೋಳುಗಳಿಗೆ ತೊಡಿಸುವ ಆಭರಣ ; ತೋಳು ಬಳೆ : ಲಲನೆಗೆ ಮಿಸುಪ ಭುಜವಲಯ [ಪಾಠಾಂ. ಭುಜವಳೆಯ, ಭುಜಪಳಿಯ] ಭುಜಕೀರ್ತಿಗಳನಂಕಿಸಿ ಕಡಗ ಕಂಕಣ ಸೂಡಗವನಿಕ್ಕಿ (ಬಸವು. ೪-೩೬). [ಸಂ.]

**ಭುಜವಿಕ್ರಮ** (ನಾ). = ಭುಜಬಲ ೧. ಕಳಾವಿಭವದೊಳ್ ಭುಜ ವಿಕ್ರಮದೊಳ್ . . . ನಿನಗಾರ್ ದೊರೆ ಮಾನವರೀ ಧರಿತ್ರಿಯೊಳ್ (ಕುಶತ್ರ. ೮-೬೬). [ಸಂ.]

**ಭುಜವಿಕ್ಷೇಪ** (ನಾ). ೧ ತೋಳುಗಳನ್ನು ಕೊಡಹುವಿಕೆ ; ತೋಳು ಗಳನ್ನು ಒದರುವುದು. ೨. [ನಾಟ್ಯ] ನೃತ್ಯದಲ್ಲಿ ನಿರ್ದಿಷ್ಟ ರೀತಿ ಯಿಂದ ಮಾಡುವ ಬಾಹುಚಲನೆ : ಈರಯ್ದೆನಿಸಿದ ಭುಜವಿಕ್ಷೇಪದಿಂ ದಿಗ್ವಿಭಾಗಂ ಪರಭಾಗಂಬೆತ್ತುವೊಂಭತ್ತೆನಿಪ ನಯನಭೇದಗಳಿಂದೆಂಬಿನಂ ನಿರ್ಭರಹರ್ಷಾಯತ್ತಚಿತ್ತಂ ದಿವಿಜಪರಿವೃಢಂ ತಾಂಡವಪ್ರೌಢಿವೆತ್ತಂ (ಪುಣ್ಯಶ. ೧೩-೪೩). [ಸಂ.]

**ಭುಜವೊಯ್** (ಕ್ರಿ). ತೋಳುಗಳನ್ನು ತಟ್ಟಿಕೊಳ್ಳು; ಬಾಹುಗಳನ್ನು ಅಪ್ಪಳಿಸು ; ಸಡ್ಡುಹೊಡೆ : ಬಳಿಕ್ಕೇವೇಳುವೆನು ಬಲಿದಂಘ್ರಿಯನು ಭುಜವೊಯ್ದು ಬೊಬ್ಬಿಱಿದ (ಕೃಷ್ಣರಾ. ೯-೧೨-೨೭). [ಭುಜ + ವೊಯ್₁]

**ಭುಜಶಿಖರ** (ನಾ). ತೋಳಿನ ಮೇಲುಭಾಗ ; ಹೆಗಲು : ಕುಲಶಿಖರಿ ಶಿಖರೋತ್ತುಂಗಂಗಳಾದ ಭುಜಶಿಖರಂಗಳುಂ . . . ಆತ್ಮೀಯಯೌವನ ಪ್ರಾದುರ್ಭಾವಮಂ ಪ್ರಕಟಂ ಮಾಡೆ (ಆದಿಪು. ೩-೯ ವ); ಭುಜಶಿಖರಾಗ್ರದಲ್ಲಿ ಘನಕುಂಕುಮದಿಂ ಬರೆದಿರ್ದ ಪತ್ರಕವ್ರಜದಿಂ (ಪಾರ್ಶ್ವ. ೬-೧೧೨). [ಸಂ.]

**ಭುಜಶಿರ** (ನಾ). = ಭುಜಶಿಖರ : "ಸ್ಕಂಧಃ, ಭುಜಶಿರಃ, ಅಂಸಃ— ೩ ಹೆಗಲು ಪೆಸರು, ಭುಜಶಿರಸ್ಸು" (ಸಿದ್ಧಾಂತ. ೧೯೨); ಹೊಯ್ದನಾ ಪವನಜನ ಭುಜಶಿರವ ಸೀಸಕಕವಚವಜೊಜ್ಜಯಾಗೆ ಬೀಳೆನುತರಸ ಬೊಬ್ಬಿಱಿದ (ಕುಮಾ.ಗ. ೭-೩೫); ಗುರುಕುಚವಂ ಮುಸುಕುತೆ ಭುಜಶಿರದೊಳ್ ಕುರು ಗಂಟನಾಂತ ಪಲ್ಲಲದಿಂ (ಶಾಸಂತಿ. ೯-೧೯). [ಸಂ.]

**ಭುಜಶಿರಸ್ಸು** (ನಾ). = ಭುಜಶಿಖರ : "ಸ್ಕಂಧಃ. ಭುಜಶಿರಃ, ಅಂಸಃ— ೩ ಹೆಗಲ ಪೆಸರು, ಭುಜಶಿರಸ್ಸು" (ಸಿದ್ಧಾಂತ. ೧೯೨). [ಸಂ. ಭುಜಶಿರಸ್]

**ಭುಜಾಕ್ರಾಂತ** (ಗು). (ಅಲಂ) ಪರಾಕ್ರಮದಿಂದ ಆಧೀನ ಮಾಡಿ ಕೊಂಡಿರುವ : ಅಜಿತಂಜಯಮಹಾರಾಜಂ ಯುವರಾಜಂಬೆರಸು ನಿಜ ಭುಜಾಕ್ರಾಂತಪ್ರತ್ಯಂತರಾಜಸಮಾಜಂಬೆರಸು . . . ಅಖಿಳಪ್ರಧಾನ ಪರಿವಾರಪರಿಕೃತನುಮಾಗಿರೆ (ಶಾಂತಿಪು. ೫-೨ ವ). [ಸಂ.]

**ಭುಜಾಗ್ರ** (ನಾ). = ಭುಜಶಿಖರ : "ಭುಜಾಗ್ರಃ, ಅಲಸಂ—ಈ ೨ ಮುಯ್ಯು" (ಹಲಾಯು. ೬೭-೩೩೦); ನಾಭಿಯಲಭವ ಪರಭುಜಾಗ್ರದೊಳಖಿಳ ದಿಗುಪಾಲಕರು ರಂಜಿಸಿತು (ಕುಮಾ.ಭಾ. ೯-೫೬). [ಸಂ.]

**ಭುಜಾಸ್ಫಾಲನ, ಭುಜಾಸ್ಫಾಳನ** (ನಾ). ತೋಳನ್ನು ತಟ್ಟಿಕೊಳ್ಳುವುದು: ಅಂತು ಬಿಸುಟ್ಟು ಮಲ್ಲಯುದ್ಧಸನ್ನದ್ಧರಾಗಿರ್ವರುಂ ಭುಜಾಸ್ಫಾಲನಂ ಮಾಡಲೊಡಂ (ಶಾಂತಿಪು. ೫-೭೬ ವ); ಅವನ ಪ್ರದರ್ಶನಕಾರ್ಯವು ಮುಗಿಯುತ್ತ ಬರಲು . . . ಬಾಗಿಲ ಹತ್ತಿರ ಹಠಾತ್ತಾಗಿ ಸಿಡಿಲಿನಂಥ ಭುಜಾಸ್ಫಾಲನವು ಕೇಳಬಂತು (ಪತಾ. ೨೪). ಭುಜಾಸ್ಫಾಳನ : ಭಟಭಟ ಭಟಭಟನೆ ಭುಜಾಸ್ಫಾಳನಂ ಮಾಡಿ (ಇಹರ. ದೇ. ೪೦-೧೩). [ಸಂ.]

**ಭುಜಾಸ್ಫಾಳನ** 'ಭುಜಾಸ್ಫಾಲನ' ನೋ.

**ಭುಜಿಷ್ಯ** (ನಾ). ೧. ಆಳು; ಸೇವಕ : "ಚೇಟಃ, ಭುಜಿಷ್ಯಃ, ಕಿಂಕರಃ — ಈ ೩ ಭಂಟಂ" (ಹಲಾಯು. ೬೦-೨೦೦) ; "ಭೃತ್ಯಃ, ದಾಸೇರಃ, ಭುಜಿಷ್ಯಃ. ಪರಿಚಾರಕಃ—ಈ ೧೧ ಬಂಟನ ಪೆಸರು, ಚಾಕರಿಯವನು" (ಸಿದ್ಧಾಂತ. ೩೦೨). ೨. ದಾಸ್ಯದಿಂದ ಬಿಡುಗಡೆಹೊಂದಿದವನು : ಪಂಚನಿವಾರಣಗಳು ಹೋದ ಮೇಲೆ, ತಾನು ಅನೃಣ್ಯ, ಆರೋಗ್ಯ, ಬಂಧನಮೋಕ್ಷ, ಭುಜಿಷ್ಯ, ಕ್ಷೇಮಾತಭೂಮಿಗಳಲ್ಲಿ ಇದ್ದಂತೆ ಕಾಣುವನು (ಬುದ್ಧಕ. ೧೯೩). ೩. ಜೊತೆಗಾರ. ೪. ಹಸ್ತಸೂತ್ರ ; ಕಂಕಣ. ೫. ರೋಗ ; ಜಾಯಿಲೆ. [ಸಂ.]

**ಭುಜಿಷ್ಯೆ** (ನಾ). ೧. ದಾಸಿ ; ಸೇವಕಿ : ಕಳಿಂಗೇಶನ ಮುಂದೆ ನಿಜೀಸಿ ನೃಪಕನ್ನೆಯುನಿಂತೆಂಗುಂ ಭುಜಿಷ್ಯೆ ಮದನನ ಭೃಂಗೀಧ್ವನಿ ತನ್ನ ದನಿಗೆ ಸಮನೆನಿಸುಪಿನಂ (ಶಾಂತಿಪು. ೫-೦೩೨). ೨. ಸೂಳೆ; ಗಣಿಕೆ. [ಸಂ.ಭುಜಿಷ್ಯಾ]

**ಭುಜಿಸು** 'ಭುಂಜಿಸು' ನೋ.

**ಭುಜೆ** (ನಾ). ೧. ತೋಳು; ಭುಜ : "ದೋಃ. ಪ್ರವೇಷ್ಟಃ. ಭುಜಃ. ಬಾಹುಃ. ಭುಜಾ—ಈ ೫ ತೋಳ್" (ಹಲಾಯು. ೬೭-೩೩೬). ೨. ಹಾವಿನ ತೆಕ್ಕೆ,-ಮಂಡಲ. ೩. ಕ್ಷೇತ್ರದ ಅಳತೆಯ ಒಂದು ಪ್ರಮಾಣ (?): ಧಾರಾಪೂರ್ವಕಂ ಮಾಡಿ ಕುಡಲು ಮಾರ್ತಂಡಯ್ಯನಾಯಕಂ ಪಡೆವು ಬಿಟ್ಟ ಸ್ಥಳಂ ಕುರವನ ಕೇರಿಯಾದಿತ್ಯದೇವರ ಕಯ್ಯಂ ಪತ್ತಿರೆ ಬಡಗ ತೋರಣಗಾವುಂಡಗೆಯು ನವಿಲಮತ್ತರು ಹತ್ತುಕಮ್ಮ ೪೪ಜ ಭುಜೆ ಪಡುವ ೨೭ ಬಡಗ ೧ ॥ ಮೂಡ ೨೪ ॥ ತೆಂಕ ೨೭ ॥ ಮತ್ತರು (ಶಾಇಸ. IX–i, ೧೯೭-೪೭ ; 1119) ; ಪೂಜೆ ಪುನಸ್ಕಾರ ನಿವೇದ್ಯಕ್ಕಂ ಜೀರ್ಣೋದ್ಧಾರಕ್ಕ ಮಂದು ಬಿಟ್ಟ ಭೂಮಿಯಯ್ವತ್ತಾಱು ಗೇಣ ಘಳೆಯು(೦) ನೀಳದ ಭುಜೆ ಯಂ ದ್ವಿಗುಣಿಸಿಯಗಲದೊಳೊಂದ ಕೂಡಿ ಗುಣಿಸುವೀ ಕ್ರಮದಳತೆಯಲು (ಶಾಇಸ. IX – i, ೨೯೯-೭೭ ; 1147) ; ಭುಜೆಗಳನಿಱದನಿತಱಿಳೆಂ ಭುಜೆಯೊಂದುಮನುಳಿದು ಕೂಡಿ ಭುಜೆಸಂಖ್ಯೆಯೊಳಂ ನಿಜದಿಂ ಪ್ರತಿಗಳ ಕೂಡಿಯ ಭುಜೆಸಂಖ್ಯೆಯೊಳೊಂದ ಕಳೆಯಲುಳಿದುದು ಹಾರಂ (ಕ್ಷೇತ್ರಗ. ೨೬-೦೦). [ಸಂ. ಭುಜಾ]

**ಭುದಿಂಗನೆ** (ಅ). ಒಂದು ಅನುಕರಣಾವ್ಯಯ ; ಥಟ್ಟನೆ ; ಫಕ್ಕನೆ : ಇದ್ದಕ್ಕಿದ್ದಂತೆ : 'ಉಪ್ಪು–ನೀರಿ'ನಲ್ಲಿ ಭುದಿಂಗನೆ 'ಹಿಮಗಿರಿ ತಿಮಿಂಗಲ' ಬಂದು 'ತಪ್ಪು ಯಾರದು ?' ಎಂದು ಕೇಳುವಂತಾಗಿದೆ (ಸಂಪು. VIII, ಮುನ್ನುಡಿ). [ ? + – ಅನೆ₁ ]

**ಭುರ್ರನೆ** (ಅ). ಒಂದು ಅನುಕರಣಾವ್ಯಯ : ಭುರ್ ಎಂದು ಶಬ್ದ ವಾಗುವಂತೆ : ಭರಭರನೆ ಹೋಗಿ ಭುರ್ರನೆ ಹಾರಿ ಬಂದ ಹಾಗೆ (ಗಾದೆ). [ ಭುರ್₀ + — ಅನೆ₁ ]

**ಭುಲತಾಪಿ**, ಭುಲತಾಪೆ (ನಾ). ಸುಳ್ಳುಭರವಸೆ : ಮೋಸದ ಆಶ್ವಾಸನೆ : ಪಡದಪ್ಪನ ಭುಲತಾಪಿಯಿಂದ ಬಾಪೂಸಾಹೇಬ ಅವರಿಗೆ ಭೂಮಿ ಮತ್ತು ವಾಡೇದ ಕಬಜಾ ಕೊಡಲಿಕ್ಕೆ ಸಾಫ ಒಲ್ಲೆಂದಾಗ, ಆ ಹೆಣ್ಣು ಮಗಳು ಏನು ಮಾಡಬೇಕು ? (ಗ್ರಾಮಾಯ. ೩೦೯). ಭುಲತಾಪೆ.

**ಭುಲತಾಪಿ ತುಂಬು, ಭುಲತಾಪೆ ತುಂಬು** = ಸುಳ್ಳು ಭರವಸೆಯನ್ನುಂಟುಮಾಡು ; ಸುಳ್ಳು ನಂಬಿಕೆಯನ್ನು ಹುಟ್ಟಿಸು : ಇಲ್ಲದ ಭುಲತಾಪಿ ತುಂಬಿ ಈ ಕೇಶಾಗ ನಿನ್ನ ತಂಗಿನ್ನ ಗಂಟು ಹಾಕಿ ಅವನ ತಲಿ ಕೆಡಿಸಿಟ್ಟ! (ಸಮಾಜ. ೯೬೨) ; ಲಗ್ನ ಆಗತೀನಿ ಅಂತ ಭುಲತಾಪಿ ತುಂಬಿ (ಗ್ರಾಮಾಯ. ೧೯) ; ಯಾರಾದರೂ ಭುಲತಾಪೆ ತುಂಬ್ಯಾರು ಜೋಕೆ (ಗಂಪಾಯ. ೨೦). **ಭುಲತಾಪಿ ಹೊಡೆ** = ಸುಳ್ಳು ಹೇಳು ; ಬುರುಡೆ ಹೊಡೆ : ಅವರಿಗೆ ಭುಲತಾಪೀ ಹೊಡೆದು ನಿನ್ನ ಊರಿಗೆ ಕರಕೊಂಡು ಹೋಗತಾನ (ದೀಕಥ. II, ೨೦೬).

[ ← ಮರಾ. ಭುಲತಾಪ, ಭುಲಥಾಪ, ಭೂಲತಾಫ, ಭೂಲಥಾಪ ]

**ಭುಲತಾಪೆ** 'ಭುಲತಾಪಿ' ನೋ.

**ಭುಲ್ಲಣೆ** 'ಬುಲ್ಲವಣೆ' ನೋ.

**ಭುಲ್ಲಯಿಸು** 'ಬುಲ್ಲವಿಸು' ನೋ.

**ಭುಲ್ಲವ** (ನಾ). ೧. ಸಡಗರ ; ಸಂಭ್ರಮ : ಎಲ್ಲಾ ಶಸ್ತ್ರಮನಾಂತತಿ ಭುಲ್ಲವದಿಂ ವೀರರಥಟನಿಂ ಪರಿಯಿಟ್ಟರ್ (ತ್ರಿಪುರ. ೬-೬). ೨. ಆಧಿಕ್ಯ ; ಅತಿಶಯ : ಎಲ್ಲಿ ನೋಡಲು ರೋದನದ ಪೆಚ್ಚಲ್ಲಿ ನೋಡಿದಡಲ್ಲಿ ಚಿಂತಾ ಭುಲ್ಲವವು ಯೆಲ್ಲೆಲ್ಲಿ ನೋಡಿದೊಡಲ್ಲಿ ಸಂತಾಪವು (ಶಿವಸ್ತ್ರೀ. ೦-೦೬).

[ < ಬುಲ್ಲವಣೆ, / ತೆಲು. ಬುಲುವು ]

**ಭುಲ್ಲವಣೆ** 'ಬುಲ್ಲವಣೆ' ನೋ.

**ಭುಲ್ಲವಣೆ** 'ಬುಲ್ಲವಣೆ' ನೋ.

**ಭುಲ್ಲವಿಸು** 'ಬುಲ್ಲವಿಸು' ನೋ.

**ಭುಲ್ಲಿಸು** 'ಬುಲ್ಲವಿಸು' ನೋ.

**ಭುಲ್ಲೈಸು** 'ಬುಲ್ಲವಿಸು' ನೋ.

**ಭುವ** (ನಾ). ೧. ಬೆಂಕಿ. ೨. ಭೂಮಿ : ಭೂರ್ಭುವಂ ಸ್ವರ್ಮಹಂ ಜನತಪಂ ಸತ್ಯವೆಂದೇಳು ಮೇಲಣ ಲೋಕಮಕ್ಕು" (ಮಂಗರಾ. ೦೦-೩೨). ೩. ವಾಯುಮಂಡಲ. [ಸಂ.]

**ಭುವನ** (ನಾ). ೧. ಜಗತ್ತು; ಪ್ರಪಂಚ ; ಲೋಕ : ಭುವನಂ, ವಿಷ್ಟಪಂ. ಲೋಕಃ, ಜಗತ್ – ಈ ೪ ಜಗದ ಪೆಸರ್" (ಹಲಾಯು. ೨೨-೧೩೩);

ಭುವನಂಗಳ್ ಪದಿನಾಲ್ಕುಮಂ ನಡುಗಿಸಲ್ ಸಾಮರ್ಥ್ಯಮುಳ್ಳೆನ್ನ ಕೆಯ್ದುವಿನೊಳ್ ತೀರದುದಾವ ಕೆಯ್ದುವಿನೊಳಂ ತೀರ್ದಪುದೇ (ಪಂಪಭಾ. ೧೨-೪೪); ಭುವನಂಗಳ್ ಪದಿನಾಲ್ಕು ನಾಲ್ಕು ಪೆಸರಿಂ ವಾರಾಶಿಗಳ್ . . . ಎಲ್ಲಿ ಪೊಕ್ಕು ಬರ್ದುಕಲ್ಕಕ್ಕುಂ ಭುಜಂಗಧ್ವಜಂ (ಗದಾಯು. ೬-೨೦); ಭುವನಂ ಸಹಸ್ರಶತವಾದವಟುರ್ಯೆ ನಿಲ್ವ ಹಿರಣ್ಯಗರ್ಭನುಮಂ ನುಂಗುವ . . . ಹರಿಗರಿದುಂಟೇ (ಜಗ. ೫-೮೮). ೨. ಮನುಷ್ಯರು ವಾಸಮಾಡುವ ಲೋಕ; ಭೂಮಿ : ಭುವನದ ಕನ್ನಡ ಸಕ್ಕದಗವಿಗಳ್ ಸರೆ ಸಾಲೆ ಸೋಲೆ (ಶಾಂತಿಪು. ೧-೯); ಭುವನಜನಮೆಲ್ಲಮೊರ್ವರ್ಯೆ ೬ವಿದುದೆನಲ್ (ಕಾದಂಪೂ. ೪೬೫); ಭುವನಜನವಿನುತಪಾದಂ ದಿವಸಕರಂ . . . ದಿವಿಜಾಶಾಶಿಖರಿಶಿಖರ ಶೇಖರನಾದಂ (ಪಂಪರಾ. ೭೮-೧೩೬). ೩. ಮನುಷ್ಯವರ್ಗ; ಜನತೆ : ನೀವಧಾರ್ಮಿಕರು ಮುಯ್ವನಾನುವುದರ್ಗೆ ಭವನವು ಬೈಪುದ್ಯೆ ನಿಮ್ಮ ನಿಬರನು(ಕುಮಾ.ಭಾ. ೧-೨೩). ೪. ನೀರು ; ಜಲ : "ಆಪ(ಪ್), ತೋಯಂ . . . ನೀರಂ, ಭುವನಂ, ಅಮೃತಂ, ಜೀವನಂ, ಜೀವನೀಯಂ — ಈ ೨೬ ನೀರ್" (ಹಲಾಯು. ೦೦೬-೨೬). ೧, ೪ : ಶ್ರೀನಾರೀಜನ್ಮಗೇಹಂ ಭುವನ ವಿನುತ ಮುದ್ರಾಮಸತ್ವಪ್ರಯುಕ್ತಂ ನಾನಾರತ್ನಪ್ರಕೀರ್ಣಂ. . . ಪೊಯ್ಸಳೋರ್ವೀಶವಂಶಂ (ಎಕ. V, ಹಸ್ಸನ. ೨೦೯-೩; 1178); ರಥದಂತೆ ಚಕ್ರ ವಿಸ್ತರಮುರುಪದ್ಮಜಾಂಡದವೊಲಾತ್ತಲಸದ್ಭುವನಾಶ್ರಯಂ . . . ಕೊಳಂ (ಗಿರಿಜಾ. ೨-೫೪). ೫. ವಾಸಿಸುವ ಮನೆ, — ಗೃಹ. ೬. ಅಭಿವೃದ್ಧಿ ಹೊಂದುವಿಕೆ ; ಏಳಿಗೆಯಾಗುವಿಕೆ. ೭. ಸಮುದ್ರ; ಸಾಗರ. ೮. ಬಾನು; ಆಕಾಶ : "ಲೋಕದೊಳು ನಭದೊಳಂಬುಧಿಯೊಳುದಕದೊಳ್ ಭುವನಾಖ್ಯಮಕ್ಕುಂ" (ಕುಂಟಾ. ೦೩೦-೫೩). ೯. ಕಾಡು; ಅರಣ್ಯ. ೧೦. ಯುದ್ಧ : "ಲೋಕಂ ರಣವಿಪಿನೋದಕವಾಕಾಶವಿವೈದು ಭುವನ ಶಬ್ದಂ" (ನಾಣಕಂ. ೨೩). ೧೧. [ಗಣಿತ] ಹದಿನಾಲ್ಕು ಎಂಬ ಸಂಖ್ಯೆಯ ಸಂಕೇತ : "ಮನು ಭುವನ ಪದಿನಾಲ್ಕು" (ಕುಂಗರಾ. ೦೦೪-೯); ನವಪುರ ಶಶಿಗಣತ[ಕ]ವನುಚ್ ನವಕೂಡಿದ ಶತಕದಿಂದ ಗುಣಿಸಲು ಮತ್ತಾ ಭುವನಂ ಶರ ಶಶಿ ಕುಸುಮಂ ಪವಣಿಸಿ ಧರೆಯೊಬ ಲಬ್ಧ ತಪ್ಪದೆ ಬಪ್ಪಂ (ಭಾಸ್ಕರ. ೪೩-೦).

**ಭುವನಯ್ಯಮಲ್ಲ**=ಜಗತ್ತಿನಲ್ಲಿ ಬಹಳ ಶೂರನಾದವನು; ಲೋಕೈಕ ವೀರ : ಆತನ ತಮ್ಮಂ ಭುವನಯ್ಯಮಲ್ಲನೆನಿಸಿದ ದಸವರ್ಮದೇವ (ಸೌಇಇ. XX, ೦೯-೨೨ ; 1015). **ಭುವನೈಕ ಮಾನ್ಯ** = ಜಗತ್ತಿನಲ್ಲಿ ಮತ್ತಾರೂ ಸಮಾನರಿಲ್ಲದಂತಹ ಗೌರವಸ್ಥ : ಶಿವಶಿವಾ ಭುವನೈಕ ಮಾನ್ಯರನಪಗಡಿಸಲಂಗೈಸಿದ್ಯೆ ಮಾಳಿಂದನಾ ಶಕುನಿ (ಕುಮಾ.ಸ. ೦೨-೦೪). **ಭುವನೈಕರಾಮ** =ಅದ್ವಿತೀಯನಾದ ಸುಂದರ : ಆನೆಯ ಮೇಲೆಯುಂ ಆಳ ಮೇಲೆಯುಂ ಕುದುರೆಯ ಮೇಲೆಯುಂ ಪರಿದುದೊಂದೆ ಗಜಂ ಭುವನೈಕರಾಮನಾ (ಚುದ. ೦೨೦ ಕ್ರಮೋ). **ಭುವನೈಕವೀರ** = ಜಗತ್ತಿನಲ್ಲಿ ತನ್ನ ಸರಿಸಮಾನರಿಲ್ಲದ ಶೂರ,— ಬಲಶಾಲಿ ; ಲೋಕದಲ್ಲಿ ಅಪ್ರತಿಮಶೂರ; ಅಸಹಾಯಶೂರ: ಮಂಡಳಿಕಮುಕುಟಚೂಡಾಮಣಿ ಶ್ರೀಮಚ್ಚ × × × ಪೆರ್ಮಾಡಿ ಭುವನೈಕವೀರನುದೆಯಾದಿತ್ಯನುಂ (ಎಕ. VII, ಶಿಕಾ. ೨೨೦-೨೫; 1075). [ಸಂ.]

**ಭುವನಕಂಟಕ** (ನಾ). ೧. ಪ್ರಪಂಚಕ್ಕೆ ಆಗುವ ಹಾನಿ. ೨. ನೀರಿನಲ್ಲಿ ಇರುವ ಮುಳ್ಳು; ತಾವರೆದಂಟಿನ ಮುಳ್ಳು. ೧, ೨ : ಸಕಲಂಕತೆ ಚಂದ್ರಮನೊಳ್ . . . ಭುವನಕಂಟಕಂ ಬಿಸದೊಳಲ್ಲದಿಲ್ಲಾ ನಾಡೊಳ್ (ಗಿರಿಜಾ. ೨-೩). [ಸಂ.]

**ಭುವನಕುಕ್ಷಿ** (ನಾ). ೧. ನೀರನ್ನು ಒಳಗೊಂಡಿರುವುದು ; ಸರೋವರ : ವನಮಾಲಿಯಂದದಿಂ ಪದ್ಮಿ ಪದ್ಮಿಯುವೊಲ್ಪುವನಕುಕ್ಷಿ ಭುವನಕುಕ್ಷಿಯು ತೆಜದೆ ಹಂಸಲೋಭನಶೋಭಿ. . .ಎನೆ ರಂಜಿಸುವ ಕಾಸಾರಮಂ (ಶ್ರೀಶಿಖಾ. ೦೫-೦೨). ೨. ಜಗತ್ತುಗಳನ್ನು ಗರ್ಭದಲ್ಲಿ ಹೊಂದಿರುವವನು ; ವಿಶ್ವಂಭರ; ನಾರಾಯಣ. [ಸಂ.]

**ಭುವನಖ್ಯಾತಿ** (ನಾ). ಲೋಕದಲ್ಲಿ ಹೆಸರುವಾಸಿಯಾಗಿರುವಿಕೆ ; ಲೋಕಪ್ರಸಿದ್ಧಿ : ಭುವನಖ್ಯಾತಿಯು ಜಾತರೂಪಭರದಿಂ . . . ಸರ್ವೇರು ವೆನಿಪ್ಪಂ ಶ್ರುತಕೀರ್ತಿಸನ್ಮುನಿವರಂ (ಶಾಂತೀಶ್ವ. ೧-೪೪). [ಸಂ.]

**ಭುವನಗರ್ಭಿತ** (ನಾ). ೧. ಜಗತ್ತಿನ ಒಳಭಾಗದಲ್ಲಿ ಆವರಿಸಿಕೊಂಡಿರುವುದು. ೨. ಪ್ರಪಂಚವನ್ನೆಲ್ಲಾ ತನ್ನಲ್ಲಿ ಅಳವಡಿಸಿಕೊಂಡಿರುವುದು. ೧, ೨ : ಭುವನಗರ್ಭಿತವಾದುದಾ ಮಾಧವನ ಜಠರದವೋಲು ಪರಭಾಗ ವತನಂತಿರೆ ವಿಷ್ಣುಪದಸಂಸಕ್ತನುವಾಯ್ತು (ಕುಮಾ.ಭಾ. ೮-೦೨). [ಸಂ.]

**ಭುವನಜ** (ನಾ). ನೀರಿನಲ್ಲಿ ಹುಟ್ಟಿದುದು ; ತಾವರೆ ; ಕಮಲ : ಶಾಂತಿ ಜನರ ಪಾದಭುವನಜಗಳಿಗೆಜಗುವೆನು [ಶಾಂತಿ. ಪಾದಕವನತನಾಗುವೆ ಮುದದಿ] (ತ್ರಿಕೂಟ. ೦-೩). [ಸಂ.]

**ಭುವನಜನಕ** (ನಾ). ೧. ಜಗತ್ತಿನ ಸೃಷ್ಟಿಗೆ ಕಾರಣನಾದವನು; ಬ್ರಹ್ಮ. ೨. ಜನರಿಗೆ ತಂದೆಯಂತಿರುವವನು ; ರಾಜ: ಘನರಥನರನಾಥನ ಬವಣಿಯೊಳ್ ತಾವ್ರುಚಳಂಗಳಾಗಿ ಪೋರುತ್ತುಮಾಮಿರೆ ಭುವನಜನಕಂ ಬೆಸಗೊಳೆ ನೀಂ ಪೇಟ್ (ಶಾಂತಿಪು. ೯-೭೦ ವ). [ಸಂ.]

**ಭುವನಜಭವ** (ನಾ). (ವಿಷ್ಣುವಿನ ನಾಭಿ)ಕಮಲದಲ್ಲಿ ಹುಟ್ಟಿದವನು ; ಬ್ರಹ್ಮ.

**ಭುವನಜಭವಾಂಡ** = ಬ್ರಹ್ಮಾಂಡ : ಭುವನಜಭವಾಂಡಭವನಕೆ ಸಮೆದುರು ರವಿಬಿಂಬಮೆಂಬ ಪಾದಣದೊಳಪೊಕ್ಕವಿರಳತದಂಡದ ಬಹಿಃ ಸುಪರ್ಣರುಚಿ ಪರ್ಬಿದಂತೆ ಕೆಂಬಿಸಿಲೆಸೆಗುಂ (ರಾಜಶೇ. ೪-೨೪). [ಸಂ.]

**ಭುವನಜ್ಯಾಯ** (ನಾ). ಪ್ರಪಂಚಕ್ಕೇ ಹಿರಿಯನಾದವನು,-ಶ್ರೇಷ್ಠನಾದವನು : ಭುವನಜ್ಯಾಯನ ತಂದೆ ತದ್ವಿಭುವ ತಾಯೆಂಬೊಂದು ಸಯ್ಪಂಗೆ ನೋಂತವರಾರ್ ನಿಮ್ಮವೊಲು (ಚಂದ್ರಪ್ರ. ೦೨-೧೬೮).

[ಸಂ. ಭುವನಜ್ಯಾಯಸ್]

**ಭುವನತ್ರಯ** (ನಾ). (ಸ್ವರ್ಗ, ಮರ್ತ್ಯ, ಪಾತಾಳವೆಂಬ) ಮೂರು ಲೋಕಗಳು : ಭುವನತ್ರಯ ದುರ್ಲಭವೆನಿಸುವ ವಸ್ತುಗಳಿನ್ನುಮೊಳವೆ (ಕಾದಂಪೂ. ೪೫೯); ಭುವನತ್ರಯಂಗಳೊಳಗುಳ್ಳ ವಸ್ತುಗಳ್ ದೇವ ಕರತಳಾ ಮಳಕಸಮಾನವೆ ನಿಶ್ಚಯಮಾದವು (ಸುಕುಮಾ. ೪-೫೦). [ಸಂ.]

**ಭುವನತ್ರಿಣೇತ್ರ** (ನಾ). ಲೋಕಕ್ಕೆ ರುದ್ರನಂತಿರುವವನು ; ಜನರಿಗೆ ಭಯವನ್ನುಂಟುಮಾಡುವವನು : ಭುವನತ್ರಿಣೇತ್ರರುಚಿಯಂ ಕೈಕೊಂಡನಾ ಪಾಂಡವಂ (ಕಮುದ. ೨೪೧ ಕ್ರಮೋ). [<ಸಂ. ಭುವನತ್ರಿನೇತ್ರ]

**ಭುವನದಯಿತ** (ನಾ.) ಲೋಕಕ್ಕೆ ಒಡೆಯನಾದವನು : ಅದ್ಭುತಂಗಜಿತಂಗೆ ಭುವನದಯಿತಂಗಾಗಳ್ ದೈತೇಂದ್ರರೆಲ್ಲಮೆಜಗಿದರ್ (ಅಜಿತ. ೫-೩). [ಸಂ.]

**ಭುವನದಲ್ಲಣ** (ನಾ). ೧. ಪ್ರಪಂಚದ ಭಯ ; ಜನರ ಗಾಬರಿ : ಒಜಲಿದುದು ಜನನಿವಹವೆದೆ ಬಾಯಜಿತು ಬಸವಳಿದಖಿಳ ಸಚರಾಚರ ನಿರೋಧವನೇನನೆಂಬೆನು ಭುವನದಲ್ಲಣವ (ಶಿಭಾಗ. ೫-೩-೦೪). ೨. ಪ್ರಪಂಚಕ್ಕೆ ಭಯವನ್ನುಂಟುಮಾಡುವವನು : ಸುರನರ ಭುಜಂಗವು ಭುವನದಲ್ಲಣ ದಶವದನನುತ್ಸವದಿನೊಡ್ಡೋಲಗದೊಳಿದ್ದನು (ತೊರರಾ. ೩-೬-೨).

[ಭುವನ + ತಲ್ಲಣ (<ತಲ್ಲಟ)]

**ಭುವನನಯನ** (ನಾ). ಲೋಕಕ್ಕೆ ಕಣ್ಣಾಗಿರುವವನು ; ಸೂರ್ಯ: ನಯನಕರ್ಣಾಹಾರವಾಹನನಯನ ಭುವನೇಶಯುವನ ಭುವನನಯನ (ಬಸವ. ೬೦-೫೦). [ಸಂ.]

**ಭುವನನಾಥ** (ನಾ). ಭೂಮಿಗೆ ಒಡೆಯನಾದವನು; ಅರಸು ; ರಾಜ: ಚರಿಗೆವುಗೆ ಬೋಧನಿಧಿ ದಮವರಮುನಿಯಂ ಭುವನನಾಥನಿದಿರ್ಗೊಂಡು . . . ಕಂಡೆ (ಶಾಂತಿಪು. ೯-೯೫). [ಸಂ.]

**ಭುವನಪ್ರಾಣ** (ನಾ). ಜಗತ್ತಿಗೆ ಪ್ರಾಣಸ್ವರೂಪನಾದವನು; ವಾಯು : ಮಾಣು ಭಯವನು ಭೀಮ ಭೂಪನ ಕಾಣು ಹೋಗೆನೆ ನಡುಗಿ ಭುವನ ಪ್ರಾಣನಾತ್ಮಜ ಬದ್ದನಾ ಧೃತರಾಷ್ಟ್ರನಂಘ್ರಿಯಲಿ (ಕುಮಾ.ಗ. ೧೧-೪೦). [ಸಂ.]

**ಭುವನಬುಂಭುಕ, ಭುವನಭುಂಭುಕ** (ಗು). ೧. ಜಗತ್ತಿನಲ್ಲಿ ಹೆಸರುವಾಸಿಯಾದ ; ಲೋಕಪ್ರಸಿದ್ಧವಾದ : ಭುವನಬುಂಭುಕದೇವಿ ಮಹಿಮೆಯನಿವಹವಾರರುಹಕ್ಕು (ಜಜಮಾ. ೦-೦೮). (ನಾ). ೨. ಜಗತ್ತಿನಲ್ಲಿ ಹರಡಿರುವುದು,–ವ್ಯಾಪಿಸಿರುವುದು : ಭುವನಬುಂಭುಕವಾಗಿ ಶಿಖಿ ತದ್ವನವೆಲ್ಲವ ದಹಿಸಲು (ಜಜಮಾ. ೦೩-೫೧). ೩. ಜಗತ್ತಿನಲ್ಲಿ ಪ್ರಸಿದ್ಧನಾದವನು,–ಕೀರ್ತಿವಂತ : ತದನುಜನಪರಿಮಿತ ಗುಣಾಸ್ಪದ ನೆಸೆದಂ ಭುವನಬುಂಭುಕಂ . . . ದೋಣಂ (ಎಇ. XVI, ೩೦-೦೯, 1081); ಭೀಷ್ಮನು ಭುವನಬುಂಭುಕನೈದಿ ಪೊಕ್ಕನು ಹಸ್ತಿನಾಪುರವ (ಜಜಮಾ. ೪-೩೪). **ಭುವನಭುಂಭುಕ** : ೧. ಪೂರ್ವದ ಧಾತ್ರಿಯೊಳು ಭುವನಭುಂಭುಕ ದಾನಿಗಳುರ್ವ್ವರಾಗ್ರದೊಳು ಮೂವರೆ ರಾಜನೀತಿನಿಳಯರ್ಧರೆಯೊಳು ಸುಚರಿತ್ರಪಾತ್ರರುಂ (ಎಕ. VIII, ಸಾಗರ. ೦೩೯-೦೬; 1159); ಎಸೆದುದು ವಸುಧಾಧರನ ಭುವನಭುಂಭುಕತೇಜಂ (ರಘುಜಾ. ೩-೦೪); ಕವಿಜನವಿತತಿ ಕೋಕಿಲ ಮಾತಂಗ[ ಮಾಕಂದ ]ಭೂಭುವನಭುಂಭುಕ ಕೀರ್ತಿಯುತನು (ಶ್ರೀಜಾಂ. ೩-೬೮). ೨. ಜಗತ್ಕಾಂತನ ಕೀರ್ತಿಯುಂ ಭುವನಭುಂಭುಕನೆ (ಎಇ. XIII, ೩೦೪-೩೬; 1125) ; ಭುವನಭುಂ [ಪಾಠಾಂ.ಬುಂ]ಭುಕವಾದ ತನ್ನ ಮಗಳ ವಿಚಿತ್ರನೃತ್ಯ ವಿದ್ಯಾವಿಳಾಸಮಂ ಕಂಡು ಜಿತಶತ್ರು ಮಹಾರಾಜಂ . . . ಬರಿಸಿ (ಅರ್ಜಶೀ. ೩-೯೬ ಪ); ಆಡಲದೇನೋ ಭೂಭುವನಭುಂ[ಭು]ಕವಾದು[ದು]ಕೀರ್ತ್ತಿ (ಸೌಇಇ. IV, ೨೬೭-೩೨; 1380). ೩. ಉನ್ನತಕೀರ್ತಿ ಭುವನಭುಂಭುಕನೊಪ್ಪಿದನು (ರಾಪುಂ. ೬-೩೦).
[ಭುವನ + ಬುಂಭುಕ]

**ಭುವನಭುಂಭುಕ** 'ಭುವನಬುಂಭುಕ' ನೋ.

**ಭುವನವಾಸ** (ನಾ). [ಸಂಗೀತ] ಹದಿನೆಂಟು ಬಗೆಯ ಕೊಳಲುಗಳಲ್ಲಿ ಒಂದು : ಹದಿನೆಂಟಂಗುಳ ಮೊದಲಾಗಿ ಒಂದಂಗುಳ ಪರ್ಯಂತಮಾದ ಪರಿಣಾಮಕ್ರಮವಿಡಿದು ಜಾತಿವಾಸ . . . ಭುವನವಾಸ . . . ಭುವನಾಧಿಪವಾಸವೆಂಬ ಹದಿನೆಂಟು ತೆಱದ ವಾಸಂಗಳ ಲಕ್ಷಣವಱಿಸು (ಬಿವೀಳ. ೨೩೭). [ಭುವನ + ವಾಸ$_1$]

**ಭುವನಾಂತರ** (ನಾ). ೧. ಭೂಮಿಯ ಮಧ್ಯಪ್ರದೇಶ,–ಒಳಭಾಗ. ೨. ಭೂಮಿಯ ಎಲ್ಲಾ ಭಾಗ : ಶಾಂತಿಕಥೆಯುಂ ಭುವನಾಂತರದೊಳ್ ನಿರ್ಮಿಸಿದೊಂದಂದವನೋಡೆ ನಾಲಗೆಯೊಳೇವೊಗಟ್ಟಿಂ ನೆಗಟ್ದತ್ತಿ ಪುಟ್ಟಿಯ (ಶಾಂತಿಪು. ೧-೪ ಶಂ); ಭುವನಾಂತರಮಂ ಸಿಂಪಿಸುವವೊಲ್ . . . ನಿಜಲಾವಣ್ಯರಸದ ಪೆರ್ಪೊನಲಿಂದಂ (ಗಾದಂಪು. ೯೯೯); ಭುವನಾಂತರಮಂ ಭೇರೀರವಮಿದು ತೀವಲ್ಕೆ (ತ್ರಿಪುರ. ೨-೭೦). ೩. ಬೇರೆಲೋಕ ; ಲೋಕಾಂತರ. [ಸಂ.]

**ಭುವನಾದಿತ್ಯ** (ನಾ). ೧. ಭೂಮಿಗೆ ಸೂರ್ಯನಂತಿರುವವನು. ೨. ಒಬ್ಬಾತನ ಹೆಸರು : ಕಿಱಿಯ ರಾಚಮಲ್ಲ ಮನ್ನೆ ಬೇಡಿದೊಳರೆನೆಲನುಂ ಭಣ್ಡಾರವುಮಂ ಕೊಟ್ಟಾನೆನ್ದು ಬನ್ದು ಭುವನಾದಿತ್ಯಂ ಬರೆ (ಎಕ. IV, ಹೆಗ್ಗ.ಡ. ೦೦೩-೫; ಸು. 930). [ಸಂ.]

**ಭುವನಾಧಿಪ** (ನಾ). ಭೂಮಿಯ ಒಡೆಯ; ರಾಜ : ಭುವನಾಧಿಪನಂ ಮೆಚ್ಚಿಸಿ ಜವದಿಂ ಕೈಲಾಸಕೊಲ್ದು ತಳರ್ವೋಹಿಲನಂ ಸವಿಲಾಸಂಬಡೆದೀಕ್ಷಿಸಿ (ಉದ್ಭಟ. ೦೨-೬). [ಸಂ.]

**ಭುವನಾಧಿಪತ್ಯ** (ನಾ). ೧.–ಪ್ರಪಂಚದ ಒಡೆತನ,–ಪ್ರಭುತ್ವ. ೨. ಜಗತ್ತಿನ ಪ್ರಭುತ್ವವನ್ನು ಹೊಂದಿರುವವನು ; ಪರಮೇಶ್ವರ : ಶರಣ[ಸಾ]ಂಗತ್ಯಂಗೆ ಭುವನಾಧಿಪತ್ಯಂಗೆ ಸುರಗಣಾದಿತ್ಯಂಗೆ . . . ಮಯ್ಯಿಕ್ಕಿ ನಿಂದಿರೆ ವಿರೂಪಾಕ್ಷಲಿಂಗಕ್ಕೆ (ಶಂಬರ. ೦೯-೧೩೯). [ಸಂ.]

**ಭುವನಾಧಿಪವಾಸ** (ನಾ). [ಸಂಗೀತ] ಹದಿನೆಂಟು ಬಗೆಯ ಕೊಳಲುಗಳಲ್ಲಿ ಒಂದು : ಬಳಿಕ ಹದಿನೆಂಟಂಗುಳ ಮೊದಲಾಗಿ ಒಂದಂಗುಳ ಪರ್ಯಂತಮಾದ ಪರಿಣಾಮಕ್ರಮವಿಡಿದು ಜಾತಿವಾಸ. . . ಭುವನಾಧಿಪವಾಸವೆಂಬ ಹದಿನೆಂಟು ತೆಱದ ವಾಸಂಗಳ ಲಕ್ಷಣವಱಿದು (ಬಿವೀಳ. ೨೩೭).
[ಭುವನಾಧಿಪ + ವಾಸ$_1$]

**ಭುವನಾಧೀಶ** (ನಾ). ಭೂಪತಿ; ರಾಜ : ಭುವನಾಧೀಶನನೀಕ್ಷಿಪೊಂದು ತವಕಂ ಕೆಯ್ಗಣ್ಮೆ (ರಘುಜಾ. ೪-೪೬). [ಸಂ.]

**ಭುವನಾಧ್ವ** (ನಾ). [ವೀಶೈ] ಮಂತ್ರ, ಪದ, ವರ್ಣ, ಭುವನ, ತತ್ತ್ವ, ಕಲಾ ಎಂಬ ಆರು ಮಾರ್ಗಗಳಲ್ಲಿ ಒಂದು : ತತ್ತ್ವಾಧ್ವ, ಕಲಾಧ್ವ ಭುವನಾಧ್ವ (ಇವು ಮೂರು ಅರ್ಥಾಧ್ವಗಳು) (ಶಿವಾತತ. ೨-೦ ಅವಚ).
[ಸಂ. ಭುವನಾಧ್ವನ್]

**ಭುವನಾಭಿರಾಮ** (ನಾ). ಲೋಕಕ್ಕೇ ಅತ್ಯಂತ ಸುಂದರನಾಗಿರುವವನು: ರಾಮನಂ ಭುವನಾಭಿರಾಮನಂ ಗುಣರತ್ನಧಾಮನಂ. . . ಸಂತತಂ ನಾ ಮನಂದಣಿಯೆ ರಮಿಸದೆ ಬಾಳ್ವೆನೆಂತೆಂದಳು (ಕೈಬಿಜಾ. ೦೯-೨೨). [ಸಂ].

**ಭುವನಾಯ್ತ** (ನಾ). ಒಬ್ಬಾತನ ಹೆಸರು : ರಾಚಮಲ್ಲಂಗಲ್ಲದೆ ರಾಜ್ಯಮಂಗೆಯಲೀಯೆಮೆನ್ದು ಭುವನಾಯ್ತನ ಮಾಗುಣ್ಡಿಯೊಳ್ಕಾದಿದನ್ದು.(ಎಕ. IV, ಹೆಗ್ಗ.ಡ. ೧೦೬-೮; ಸು. 930). [ ? ]

**ಭುವನಾರಾಧ್ಯೆ** (ನಾ). ಜಗತ್ತಿನ ಜನರಿಂದ ಪೂಜಿಸಲ್ಪಡತಕ್ಕವಳು ; ಲೋಕಪೂಜ್ಯೆ : ಶ್ರೀಮತ್ಪ್ರಾಲೇಯಶೈಲೋದ್ಭವೆ ಶಿವೆ ಭುವನಾರಾಧ್ಯೆ ಕಲ್ಯಾಣಿ (ರಾಜಶೇ. ೬-೦೩೮). [ಸಂ. ಭುವನಾರಾಧ್ಯಾ]

**ಭುವನಾಲಯ** (ನಾ). ನೀರಿಗೆ ವಾಸಸ್ಥಾನವಾದುದು ; ಸಮುದ್ರ : ಶಿವದೇವರ ವರಸದನಂ ಭುವನಾಲಯಮಬ್ಜಗೇಹ . . . ಶರಧಿ ಮಹಿಮಾವಾಸಂ (ಹರಿಶ್ಚಂ. ೦-೩೮). [ಸಂ.]

**ಭುವನಾಶ್ರಯ** (ನಾ). ೧. ಪ್ರಪಂಚಕ್ಕೆ ಆಶ್ರಯನಾಗಿರುವವನು. ೨. ನೀರಿಗೆ ಆಶ್ರಯವಾಗಿರುವುದು. ೧, ೨ : ಪಂಕರುಹಭವನಂತೆ ಸಕಲ ಭುವನಾಶ್ರಯಂ ಶಕ್ರನಂತನಿಮಿಷನಿಕರಕಾಂತನು . . . ತಾನೆಂಬುದಧಿ ಮೆಱೆದುದು (ಕೈಬಿಜಾ. ೬-೫). [ಸಂ.]

**ಭುವನೇಜ** (ನಾ). ನೀರಿನಲ್ಲಿ ಹುಟ್ಟಿರುವುದು; ತಾವರೆ ; ಕಮಲ : ನಯನಭುವನೇಜಾರ್ಚಿತಕ್ರಮ ನಯನಕರ್ಣವಿಪಕ್ಷಲಕ್ಷಣ ಜಯತು ಸಿದ್ಧೇಶ (ಬಸಪು. ೨೦-೩೭). [ಸಂ.]

**ಭುವನೇಶ** (ನಾ). ೧. ರಾಜ ; ಅರಸು : ಭುವನೇಶಂ ಬೆಸಗೊಳೆ ವಿನಯ ವಚಃಪ್ರಸರಂಗಳೆಸೆದೊಡಂಬಡೆ ನುಡಿದಂ (ಅಜಿತ. ೦೩-೨೪); ಈ ಭುವನೇಶಂ ಬಾಯ್ಕೇಳದೊಡವಂ ತಡೆಯದೊಂ ತ್ರಿಪೃಷ್ಠನಂಬಾಧಿತಟದೊಳ್ (ಶಾಂತಿಪು. ೫-೦೩೪). ೨. ಶಿವ; ಪರಮೇಶ್ವರ : ಭುವನೇಶಂ ಭೂತಿಯುಕ್ತ ಭುಜಗಧರನಜೇಯಂ (ಕಬಿಕಂ. ೩-೦೮). [ಸಂ.]

**ಭುವನೇಶಯುಜ** (ನಾ).=ಭುವನೇಜ : ನಯನಕರ್ಣಾಹಾರವಾಹನನಯನ ಭುವನೇಶಯನ ನಯನಾಸಯನ ಭುವನತ್ರಯನಯನ (ಬಸಪು. ೨೦-೩೭).
[ಸಂ.]

**ಭುವನೇಶ್ವರ** (ನಾ).=ಭುವನೇಶ ೧: ಹರನೊಡನೆ ಹೊಯ್ದಾಡಿದಗ್ಗದ ನರನು ತಂದೆ ಸಮಸ್ತ ಭುವನೇಶ್ವರನಲಾ ಮುರವೈರಿ ಮಾವನು ನಿನ್ನ ತನಯನಿಗೆ (ಕುಮಾ.ದ್ರೋ. ೭-೨೬). [ಸಂ.]

**ಭುವನೇಶ್ವರಿ** (ನಾ). ೧. ಜಗತ್ತಿಗೆಲ್ಲ ಒಡೆಯಳಾದ ಶಕ್ತಿದೇವತೆ ; ಆದಿಶಕ್ತಿ. ೨. [ವಾಸ್ತು] ದೇವಸ್ಥಾನದ ಶಿಖರಗಳ ಒಳಮೈ,– ಒಳಭಾಗ; ಫಲಕವಿಮಾನದ ಎತ್ತರದ ಪರಮಾವಧಿ : ಮನೆ

ಮನೆಯ ಮೇಲೆ ಗೋಪುರದ ಭುವನೇಶ್ವರಿಯು ಪರಿಜನಾವಳಿಸಿ (ಶ್ರೀರಾಮ. ೪೪೯-೯೦); ಈ ರೀತಿಯ ಕಟ್ಟಡಗಳಲ್ಲಿ ಆಶ್ಚರ್ಯದಿಂದ ಬೆರಗುಮಾಡುವ ಭಾಗವೆಂದರೆ ಅವುಗಳ ಭುವನೇಶ್ವರಿಗಳು (ಮೈ.ವಾಸ್ತು. ೪೦).
[ಸಂ. ಭುವನೇಶ್ವರೀ]

**ಭುವರ್ಲೋಕ** (ನಾ). ಭೂಮಿಯೇ ಮೊದಲಾದ ಮೇಲಿನ ಏಳು ಲೋಕಗಳಲ್ಲಿ ಎರಡನೆಯದು : ಭುವರ್ಲೋಕದ ಸ್ವಾವರಕ್ಕೆ ಸತ್ಯ ಲೋಕದ ಅಗ್ರವಣಿಯುಲ್ಲಿ ಮಜ್ಜನಕ್ಕೆಳಿದು (ಅವತಂ. ೪೬-೦೪೬). ಪರಮ ಜಂಗಮದಲ್ಲಿ ಹದಿನಾಲ್ಕು ಲೋಕಂಗಳಡಗಿರ್ಪವು . . . ಕುಕ್ಷಿಯುಲ್ಲಿ ಭುವರ್ಲೋಕ (ಅಣಂಡೇ. ೦೯೨-೦೨೪); ಈ ಮಹಾಪುರುಷನ (ವಿರಾಟನ) . . . ಕುಕ್ಷಿಯುಲ್ಲಿ ಭುವರ್ಲೋಕವಿರುವುದು (ನಾವಾಗು. ೯-೦೩). [ಸಂ.]

**ಭುಸ್** (ನಾ). ಒಂದು ಅನುಕರಣ ಶಬ್ದ ; ಹಾವಿನ ಫೂತ್ಕಾರ. ದೀರ್ಘನಿಶ್ವಾಸ ಮೊದಲಾದುವನ್ನು ಅನುಕರಿಸುವ ಶಬ್ದ : ಅಲುಗೆ ಭುಸ್ಸೆಂದೆಂಬ ಫಣೆಗಳಾಭರಣಮಪ್ಪ ತೋಳಗೆ . . . ವಿರೂಪಾಕ್ಷನಿರ್ದಂ ವಿಲಾಸದಿಂದೆ (ಚಂದ್ರ. ೨-೨೨); ನಡೆಮುದೆ ಶಡಂ ಲಕ್ಷೋಪಲಕ್ಷ ಹೆಡೆಗಳನ್ನೆತ್ತಿ ಭುಸ್ಸೆಂಬ ಸಾಸಿರಶಿರದ ಮಹಾಫಣಿಯಂತೆ (ಚತ್ರಾಂಗ. ೬೬-೦೪೦೨).

**ಭುಸುಂಡಿ** (ನಾ). ಒಂದು ಬಗೆಯ ಆಯುಧ : ಮಿಸುಪ ಚಕ್ರ ಭುಸುಂಡಿ ಲುಡಿಗಳ ಸರಳ ಸಮಕೈದುಗಳಿಂದ ದಾನವ ಮುಸುಕಿದನು ಬೊಬ್ಬಿಡುತ ರಿಪುಸಂಹಾರಭೈರವಿಯಾ (ದೇವೀಮ. ೦-೦೨). [< ಸಂ. ಭುಶುಂಡೀ]

**ಭುಸುಗುಟ್ಟು** (ಕ್ರಿ). ೧. (ಹಾವು) ಭುಸ್ ಎಂದು ಶಬ್ದ ಮಾಡು. ೨. (ಅಲಂ) (ರೋಷದಿಂದ) ವೇಗವಾಗಿ ಉಸಿರುಬಿಡು ; ಉದ್ವೇಗವನ್ನು ಹೊಂದು : ಕೆಂಪುಸೀರೆಯ ಹುಡಿಗೆ, ಹೆಡೆಯನ್ನು ತುಳಿಸಿಕೊಂಡ ನಾಗರಹಾವಿನಂತೆ ಭುಸುಗುಟ್ಟಿದಳು (ಚಂದ್ರು. ೪೦); ಗೆಲುವಾದ ಗಂಡುಕುದುರೆಯು . . . ಒಂದು ಸಲ ಭುಸುಗುಟ್ಟಿ ಕತ್ತನ್ನು ಗಂಭೀರವಾಗಿ ಅಲುಗಿಸಿ, ಅನಂತರ ಚಲಿಸದೆ ಸುಮ್ಮನೆ ನಿಂತುಬಿಟ್ಟಂತೆ ತೋರುತ್ತಿದ್ದಿತು (ಮಲೆಗಾ. ೬೦). [< ಭುಸ್ + ಕುಟ್ಟು$_1$]

**ಭುಸುಗುಡು** (ಕ್ರಿ). = ಭುಸುಗುಟ್ಟು ೨ : ಆವರೂ ಗೋಪಾಲನು ಭುಸುಗುಡುತ್ತಾ ಅನಂತನ ಮೇಲೆ ನೆಗೆದು ಬಿದ್ದಿದನು (ಬಿ.ಅ. ೦೨೬); ಗೆಲುವಾದ ಮನಸ್ಸು . . . ಎಲ್ಲ ಬಿಟ್ಟು ನೆರೆಮನೆಯ ಪಾರ್ವತಕ್ಕನ ಮಾತನ್ನು ನೆನೆದು ಭುಸುಗುಡಹತ್ತಿತು (ಮೂರುದಾ. ೨೪೯).
[< ಭುಸ್ + ಕುಡು$_1$ (< ಕೊಡು$_1$)]

**ಭೂ** (ನಾ). ೧. ಭೂಮಿ ; ಧರಣಿ ; ನೆಲ : "ಭೂಃ, ಭೂಮಿಃ, ವಸುಧಾ, ಅವನಿಃ . . . ಧರಾ, ಆಧಾರಾ – ಈ ೩೭ ಭೂಮಿಯ ಹೆಸರ" (ಹಲಾಯು. ೨೬-೦). ೨. ಭೂಲೋಕ : "ಬಿತ್ತರದ ಭೂರ್ಭುವಂ ಸ್ವರ್ಮಹಂ ಜನತಪಂ ಸತ್ಯಮೆಂದೇಳು ಮೇಲಣ ಲೋಕಮೆಕ್ಕು" (ಮಂಗರಾ. ೦೦-೪೨). ೩. ಪಂಚಭೂತಗಳಲ್ಲಿ ಒಂದು ; ಪೃಥ್ವಿ : ಭೂ ತೋಯ ಪಾವಕ ಸಮೀರಣ ಅಂಬರಾದಿ ಗಳೆಲ್ಲ ಆದಿಯಾಧಾರದ ಪರಮಾತ್ಮಲಿಂಗದಲ್ಲಿ (ಬಸವ. ೯೪೪). ೪. [ಛಂದ] ಮೂರುಗುರುಗಳನ್ನು ಹೊಂದಿರುವ ಗಣ ; ಮಗಣ (— — —) : ಬಿಳಿಶ ಭೂ ಯುಗ್ಮಂ ನೆಲಸಿದುದಕ್ಕಂ ಜಲಜಪತ್ರಾಕ್ಷೀ ಸುಲಲಿತವೃತ್ತಂ (ಛಂದೋಂಬು. ೨-೬೦); ಭೂ ನಾಕಾಂತದೊಳಿರೆ ತೋಯೇಶಂ ತಾನೆಂದುಂ ಪವನಕ ನಾಮಂ (ಛಂದೋಂಬು. ೨-೦೦೭). [ಸಂ.]

**ಭೂಂಕೃತಿ** (ನಾ). ಹಾವಿನ ಫೂತ್ಕಾರದ ಶಬ್ದ : ಅಖಿಳ ಭೂಂಕೃತಿ ಪೊಣ್ಮೆ ಮೊರೆವುತ್ತೇಳುತ ವಿಜೃಂಭಿಸುವ ಸರ್ಪಟಸರ್ಪನಂ ನೋಡಿ (ಬಸವ. ೫೦-೩೯). [ಸಂ.]

**ಭೂಕಂದಾಯ** (ನಾ). ಜಮೀನಿನ ಮೇಲೆ ಹಾಕುವ ಕಂದಾಯ.— ತೆರಿಗೆ : ಭೂಕಂದಾಯ ಕಂದಾಯದ ನಿರ್ಧಾರವೂ ವಸೂಲಿಯೂ ಭೂಆಭಿಲೇಖಗಳನ್ನು ಇಟ್ಟಿರುವುದೂ . . . ಕಂದಾಯದ ಪರಭಾರೆಯೂ ಸೇರಿ (ಭಾಭಾವ. ೨೯೦). [ಭೂ + ಕಂದಾಯ]

**ಭೂಕಂಪ** (ನಾ). ಭೌತಿಕಕಾರಣದಿಂದ ಆಗುವ ಭೂಮಿಯ ಕಂಪನ : ಭೂಮಿಯು ನಡುಗುವುದು : ದೊಡ್ಡದೊಡ್ಡ ದ್ವೀಪಗಳಲ್ಲಿ ಎತ್ತರ ವಾದ ಪರ್ವತಗಳಿವೆ . . . ಅನೇಕ ಜ್ವಾಲಾಮುಖಿಗಳಿವೆ. ಆಗಾಗ್ಗೆ ಭೂಕಂಪಗಳುಂಟಾಗುತ್ತವೆ (ಭೂಗೋಳ. ೦೨೨) ; ಕಾಲನೇಮಿಯ ಪ್ರಾಣ . . . ಆಕಾಶದಲ್ಲಿ ಮಿಂಚಿ, ಭೂಕಂಪದಲ್ಲಿ ಗದಗದ ನಡುಗಿ, ಜ್ವಾಲಾಮುಖಿ ಯೊಳಗೆ ಸಿಡಿದು ನುಚ್ಚುನೂರಾಗಿ . . . ನಮ್ಮೆದೆಯಲ್ಲಿ ತುಡಿವ ತಬಲ ವಾಗಿದ್ದಾನೆ (ನಲಮ. ೩೦-೫). [ಸಂ.]

**ಭೂಕಂಪನ** (ನಾ). = ಭೂಕಂಪ : ಇದೆ ಭೂಕಂಪನವಿದೆ ರಕುತದ ಮಳೆ . . . ಇದೆ ಧೂಮಕೇತು ಮುಂಗಡೆಯೊಳಗಾ ರಾಮನಿದಿರಾಗದಿರ ನೆಪಂಗೇದ (ಕುಂಡಾಕಾಂ. ೪೦-೯). [ಸಂ.]

**ಭೂಕದಂಬ** (ನಾ). ಒಂದು ಬಗೆಯ ಸಸ್ಯ : "ಭೂಮಿಜಾ—ಭೂಕದಂಬ" (೬೩೦. ೦೦೨). [ಭೂ + ಕದಂಬ$_1$ (< ಕಡಂಬ)]

**ಭೂಕಾಂತ** (ನಾ). ಭೂಮಿಯ ಪತಿ ; ರಾಜ : ಉಪವಾಸವಿಸರಕ್ಕಾ ಪುಣ್ಯಶಿಥ್ಯುತ್ಕರಂ ತಾನೆಯ್ದುತ್ತಣಮಿಲ್ಲದೇಂ ನಿಂತರೋ ಭೂಕಾಂತನುಂ ಕಾಂತೆಯುಂ (ಕಂದ್ರಪು. ೩-೬೨) ; ಜಸಂಬಡೆದ ಹಸ್ತಿನಾಪುರದಲ್ಲಿ ಗರಸಿನಿಸುವ ಭೂಕಾಂತ ಜನಮೇಜಯಂ (ಜೈಮಿನಿ. ೨-೨). [ಸಂ.]

**ಭೂಖಂಡ** (ನಾ). ಭೂಮಿಯ ಭಾಗ : ಭೂಖಂಡಗಳ ಸಮೀಪದಲ್ಲಿಯೂ ಅವುಗಳ ಪಕ್ಕಗಳಲ್ಲಿರುವ ದ್ವೀಪಗಳ ಸಮೀಪದಲ್ಲಿಯೂ ಸಾಗರದ ನೀರಿನ ಆಳ ಕಡಮೆ (ಭೂರಚ. II, ೩೬) ; ನಮ್ಮದು ಬಹಳ ದೊಡ್ಡ ಭೂಖಂಡ (ಮುಕ್ತಾ. ೨). [ಸಂ.]

**ಭೂಖರ್ಜೂರ** (ನಾ). ಒಂದು ಬಗೆಯ ಸಸ್ಯ : "ಭೂಮಿಖರ್ಜೂರೀ — ಭೂಖರ್ಜೂರ" (೬೩೦. ೦೦೩). [ಸಂ.]

**ಭೂಗತ** (ಗು). ೧. ಭೂಮಿಯ ಒಳಗಿರುವ : ಯಾವುದೇ ನಾಡಿನಲ್ಲಿ ಭೂಗತ ಖನಿಜಸಂಪತ್ತನ್ನು ಕಂಡುಹಿಡಿಯುವುದು ಮುಖ್ಯವಾದುದು (ಕೂಶ). ೨. ಬಹಿರಂಗವಾಗಿ ಕಾಣಿಸಿಕೊಳ್ಳದ : ಅನೇಕ ರಾಜ್ಯ ಗಳಲ್ಲಿ ಭೂಗತನಾಯಕರು ಸರ್ಕಾರಕ್ಕೆ ಕಿರುಕುಳವನ್ನು ಕೊಡುತ್ತಿದ್ದಾರೆ (ಕೂಶ). (ನಾ). ೩. ಭೂಮಿಯಲ್ಲಿ ಮುಚ್ಚಿಹೋದುದು.— ಹೂತುಹೋದುದು : ಆದರೆ ಹತ್ತಿರದಲ್ಲಿದ್ದ ಊರುಗಳೆಲ್ಲವು ಭೂಗತ ವಾದವು (ಕಪ್ಪು.೫-೦೪೩). ೪. ಹಾಳು ; ನಾಶ : ಜೀವ ಹಾಟ್ ಕಾಯ ಕೆಡೆದು ಭೂಗತವಾಗಿ ವಾಯುಪ್ರಾಣಿಯಾಗಿ ಹೋಹಾಗ ಆಗ ಮುಕ್ತಿಯ ಬಯಸಿದರುಂಟೆ (ಸಿದ್ಧೇಶ. ೨೦೭-೩೯೨) ; ಒಂದೇ ದಿನದಲ್ಲಿ ಐದುನೂರು ಮೊಯಿಸಳಸೇನೆ ಭೂಗತವಾಯಿತು (ಕಾಂತಳಾ. ೨೨೦). ೫. ನಾಶವಾದವನು : ಲೆಕ್ಕದಲ್ಲಿ ಲೇಪಿತವಾಹರಿಗೇಕೆ ಆಜಾತನ ಸುದ್ದಿ . . . ಇವರೆಲ್ಲರು ಈಶನ ಭಾಷೆಯಲ್ಲಿ ಸಿಕ್ಕಿ ಭೂಗತರಾದರು (ಪೋಳವಚ. ೦೨-೪೪).

**ಭೂಗತ ಮಾಡು** = ೧. ನೆಲದೊಳಗೆ ಮುಚ್ಚಿಡು; ಹೂತಿಡು : ಅವನು ಹಣವನ್ನೆಲ್ಲ ಭೂಗತ ಮಾಡಿ ಹಠಾತ್ತಾಗಿ ಸತ್ತುಹೋದುದ ರಿಂದ ಅದು ಮಕ್ಕಳಿಗೆ ಸೇರದಂತಾಯಿತು (ಕೂಶ). ೨. ಹಾಳುಮಾಡು : ಅವನಲ್ಲಿದ್ದ ಪಾಶವೀಶಕ್ತಿ . . . ಆ ದಿನ ಸುಳುಹುದೋರಿದ್ದ ದೈವೀ ಪ್ರವೃತ್ತಿಯನ್ನು ಮೆಟ್ಟಿ ತುಳಿದು ಭೂಗತಮಾಡಿತು (ಕುಸರು. ೬೩). [ಸಂ.]

**ಭೂಗರ್ಭ** (ನಾ). ಭೂಮಿಯ ಒಳಭಾಗ : ಭೂಗೋಳದ ವ್ಯಾಸವು ಅಥವಾ ಭೂಗರ್ಭದ ಪಾರಳತೆಯು ೭೯೧೨ ಮೈಲುಗಳುಳ್ಳದ್ದಾಗಿದೆ (ಭೂಗೋಳ. ೩); ಭೂಗರ್ಭವನ್ನು ಸೀಳಿ ನೋಡಿದರೆ ಅಲ್ಲೂ ಅದೇ ಹಾಡು (ಶಾಂತಶ್ರ. I. ೦೨೦). [ಸಂ.]

**ಭೂಗರ್ಭಜಲ** (ನಾ). ಭೂಮಿಯ ಒಳಗಿರುವ ನೀರು : ಭೂಗರ್ಭಜಲ (ಗುಪ್ತ ಜಲ) (ಭೂವಿ. ೧೨೩). [ ಸಂ. ]

**ಭೂಗರ್ಭಶಾಸ್ತ್ರ** (ನಾ). ಭೂಮಿಯ ಒಳಗಿರುವ ವಸ್ತುಗಳ ವಿಷಯವನ್ನು ತಿಳಿಸುವ ಶಾಸ್ತ್ರ : ಭೂಮಿಯ ಚಿಪ್ಪಿನ ವಿಚಾರವನ್ನು ಪರಿಶೀಲಿಸುವ ಶಾಸ್ತ್ರ ಭೂಗರ್ಭಶಾಸ್ತ್ರ ( ಭೂವಿ. ೧೧೭); ಭೂಗರ್ಭಶಾಸ್ತ್ರ ಪ್ರವರ್ತಕನಾದ ಲಿಲಿ ಮತ್ತು ಅರ್ಥವಾದಿಯಾದ ಮಾಲ್ಥ್ಯಸ್ ಮುಂತಾದವರ ಸಂಶೋಧನೆಗಳೂ ಪರಿಣಾಮವಾದಕ್ಕೆ ಪುಷ್ಟಿಯನ್ನು ಕೊಟ್ಟುವು (ಹುಕ್ಕಾರ. ೩೫ ೩೬೧೪). [ ಸಂ. ]

**ಭೂಗರ್ಭಶಾಸ್ತ್ರಜ್ಞ** (ನಾ). ಭೂಗರ್ಭ ಶಾಸ್ತ್ರವನ್ನು ಬಲ್ಲವನು : ಭೂಗರ್ಭಶಾಸ್ತ್ರಜ್ಞರು ಭೂಮಿಯ ಪದರಗಳ ವಿಷಯವನ್ನು ಚೆನ್ನಾಗಿ ಪರಿಶೀಲಿಸಿ . . . ನಿರ್ಧರಿಸಿದ್ದಾರೆ (ಶಿ.ಹು.ಟ್ಟು. ೯೪). [ ಸಂ. ]

**ಭೂಗುಗ್ಗಳ** (ನಾ). ಒಂದು ಬಗೆಯ ಸಸ್ಯ : "ಮೇದಜಃ_ಭೂಗುಗ್ಗಳ" (ಓಷಧಿ. ೧೨೯). [ಸಂ. ಭೂಗುಗ್ಗುಲ]

**ಭೂಗುಗ್ಗುಳು** (ನಾ). =ಭೂಗುಗ್ಗುಳ : "ಅಸುರಸಂಭವಾ-ಭೂಗುಗ್ಗುಳು" (ಓಷಧಿ. ೯). [ಸಂ. ಭೂಗುಗ್ಗುಲು]

**ಭೂಗುಣ** (ನಾ). ನೆಲದ ಸತ್ತ್ವ,-ಗುಣ: ಪೂರ್ವಕಡೆಯಲ್ಲಿರುವ ಬೆಂಗಳೂರು . . . ಇದರ ಭೂಗುಣವು ಇಂಡಿಯಾದಲ್ಲಿ ಅತ್ಯಂತ ಉತ್ತಮವಾದದ್ದು (ಭೂಗೋಳ. ೬೯). [ ಸಂ. ]

**ಭೂಗೃಹ** (ನಾ). ನೆಲದೊಳಗೆ ಕಟ್ಟಿರುವ ಮನೆ ; ನೆಲಮನೆ : ನೆಲಮಾಳಿಗೆ : ಭೂಗೃಹದೊಳ್ ಮಾಡನಿಟ್ಟು ಮೇಣ್ ಸುದತಿಯರ್ಕಳ ರೂಪಿನೊಳಂ ಮೆಯ್ಗೊಳ್ ಮೇಣ್ಪಂಚಿಸಿ ಪಾಣ್ಬನೊಳಾಡುವರ್ (ವ.ದ.೩. ೬-೨೩). [ ಸಂ. ]

**ಭೂಗೋಚರ** (ನಾ). ಭೂಮಿಯ ಮೇಲೆ ವಾಸಮಾಡುವವನು; ಮನುಷ್ಯ : ತಕ್ಕುಗಿಡೆ ಕಿಂಕರಭಾವಂ ನಿನಗೆ ಸಮನಿಸಿತ್ತು . . . ನೀಚ ಭೂಗೋಚರರೊಳ್ (ಶಂರಾಪ. ೧೪-೧೧). [ಸಂ.]

**ಭೂಗೋಲ, ಭೂಗೋಳ** (ನಾ). ೧. ಗೋಲಾಕಾರವಾದ ಭೂಮಿ: ಭೂಮಂಡಲ : ಆವ ದೇವಿ ರವಿಯ ಸುತ್ತ ಭೂಗೋಲವ ತಿರುಗಿಸುತ್ತ ತನ್ನ ರುಂದ್ರಲೀಲೆಯುತ್ತ ಸಾಗುತಿರುವಳೋ (ಅನಿಕೇ. ೧೨-೧೧). ೨. =ಭೂಗೋಳಶಾಸ್ತ್ರ : ಅರ್ಥಶಾಸ್ತ್ರ . . . ಭೂಗೋಲ, ಗಣಿತ . . . ಅನುಭವಶಾಸ್ತ್ರ, ಇತ್ಯಾದಿ ವಿಷಯಗಳ ಮೇಲಿನ ಮೂಲಭೂತತತ್ತ್ವಗಳನ್ನೊಳಗೊಂಡ ಗ್ರಂಥಗಳನ್ನು ಅರಿಸಿಕೊಳ್ಳಬೇಕು ( ಗ್ರಂಥಾಲ. ೯ ). **ಭೂಗೋಳ:** ೧. ಆದಿವರಾಹರೂಪದೊಳೆ ನೀನಂದೆತ್ತಿದೈ ಗೋಮಿನೀಧವ . . . ಭೂಗೋಳಮಂ (ಜಗಬ. ೧-೫೭) ; ಭೂಗೋಳದ ಮೇಲ್ಭಾಗವು ಭೂಗೋಳಪಠದಲ್ಲಿ . . . ಎರಡು ಗೋಳಗಳಾಗಿ ವಿಂಗಡಿಸಲ್ಪಟ್ಟಿವೆ (ಭೂಗೋಳ. ೧೨). ೩. ಭೂಗೋಳಶಾಸ್ತ್ರದ ಪಾಠ,- ಬೋಧೆ : ಮೂರನೆಯ ಘಂಟೆ ನಮಗೆ ಭೂಗೋಳವಿತ್ತು (ಬಾಲಿವು. ೧೧). [ಸಂ.]

**ಭೂಗೋಳ** 'ಭೂಗೋಲ' ನೋ.

**ಭೂಗೋಳಶಾಸ್ತ್ರ** (ನಾ). " ಭೂಮಿಯ ಮೇಲ್ಮೈ, ಆಕಾರ, ಪ್ರಕೃತಿ ಲಕ್ಷಣಗಳು, ಸ್ವಾಭಾವಿಕ ಮತ್ತು ರಾಜಕೀಯ ವಿಭಾಗಗಳು, ವಾಯುಗುಣ, ಉತ್ಪನ್ನಗಳು, ಜನಸಂಖ್ಯೆ, ಮೊ. ವಿಷಯಗಳನ್ನೊಳಗೊಂಡ ಶಾಸ್ತ್ರ ; ಭೂಗೋಳಶಾಸ್ತ್ರ : ಭೂವಿವರಣೆ" (Geography. ಇಂಕಾ): ಭೂಮಿಯನ್ನು ವಿವರಿಸುವ ಗ್ರಂಥಕ್ಕೆ ಭೂಗೋಳಶಾಸ್ತ್ರವೆಂದು ಹೆಸರು (ಭೂಗೋಳ. ೧); ಭೂಗೋಳಶಾಸ್ತ್ರದ ಅಭ್ಯಾಸಕ್ಕೆ ತೊಡಗುವ ಮೊದಲು ಭೂಮಿಯ ಆಕಾರದ ವಿಷಯವನ್ನು ವಿಶದವಾಗಿ ತಿಳಿದುಕೊಂಡಿರಬೇಕು (ಭೂವಿವ. ೧). [ಸಂ. ಭೂಗೋಲಶಾಸ್ತ್ರ]

**ಭೂಚಕ್ರ** (ನಾ). ೧. ಚಕ್ರಾಕಾರವಾದ ಭೂಮಿ; ಭೂಮಂಡಲ: ಪೆಂಪಚ್ಚರಿಯಾದ ದೇವಗಣವಂ ರಕ್ಷಿಕ್ಕೆ ಭೂಚಕ್ರಮಂ (ಜಗಬ. ೬-೫); ಚಕ್ರಸಹಾಯನಾಕ್ರಮಿಸಿದಂ ಭೂಚಕ್ರಮಂ ಪಾದದಿಂ (ಕೃಷ್ಣ. ೬-೨೩); ಧರ್ಮಾರ್ಜನ ಕೀರ್ತಿ ಭೂಚಕ್ರಮಂ ಮುಸುಕಿದಂತೆ ಬೆಳ್ದಿಂಗಳಿರೆ (ಕ್ರಿ.ಚ.ಶಾ. ೬-೨೭). ೨. ಭೂಮಧ್ಯರೇಖೆ : ಸಮಭಾಜಕವೃತ್ತ. ೩. ಅರಸುಗಳಿಗೆ, ದೇವರುಗಳಿಗೆ ಉತ್ಸವಕಾಲದಲ್ಲಿ ಎತ್ತಿಹಿಡಿಯುವ ನೀಳವಾದ ದಂಡವನ್ನು ಹೊಂದಿರುವ ಹೆಚ್ಚು ಅಗಲವಾದ ಕೊಡೆ,—ಛತ್ರಿ; ಭೂಚಕ್ರಗಳನ್ನು ಭೂಪತಿಗಳಾದ ಅರಸುಗಳು ಹಿಡಿಸಿಕೊಳ್ಳುವುದರಿಂದ ಐಶ್ವರ್ಯವುಂಟಾಗಿ ಪುಷ್ಟಿಯನ್ನು ಕೊಡುತ್ತ ಮಹಾಮೋಹನಕರವಾಗಿರುವುದು (ಸಕಲ. ೫೫). ೪. ರಥ, ಸಿಂಹಾಸನಗಳಿಗೆ ಅಳವಡಿಸುವ ಛತ್ರಿ: ನವರತ್ನ ರಚಿಸಿದ ಲಾವೆಗಳಿಂದ ಪೊಳೆಯುವ. . . ಭೂಚಕ್ರ ಕೊಡೆಯಿಂದ ಪೊಳೆವ ಕಳಶಂಗಳ ಸೋಜಿಗದಿರುತಿರ್ಪ ರಥವು (ಶಾನಂಗ. ೨೫). ೫. ಹತ್ತಿಸಿದಾಗ ಕಿಡಿಗಳನ್ನು ಕಾರುತ್ತಾ ಚಕ್ರದಂತೆ ವೃತ್ತಾಕಾರವಾಗಿ ನೆಲದ ಮೇಲೆ ಸುತ್ತುವ ಒಂದು ಬಗೆಯ ಪಟಾಕಿ: ಮಕ್ಕಳು ಭೂಚಕ್ರ, ವಿಷ್ಣುಚಕ್ರ, ಮತಾಪು ಮುಂತಾದ ಹಲವಾರು ಬಗೆಯ ಪಟಾಕಿಗಳನ್ನು ಆನಂದದಿಂದ ಸುಟ್ಟರು (ರೂಢಿ). [ಸಂ.]

**ಭೂಚಕ್ರಬಳ್ಳಿ** (ನಾ). ಒಂದು ಬಗೆಯ ಬಳ್ಳಿ: ಸರಂಜಿಬಳ್ಳಿ, ಅಸುರಾಣಿ ಬಳ್ಳಿ, ಭೂಚಕ್ರಬಳ್ಳಿ (ವೈಶಿಗ. ೨೪-೯೯೯). [ಭೂಚಕ್ರ + ಬಳ್ಳಿ]

**ಭೂಚಕ್ರಿ** (ನಾ). ಭೂಮಿಯನ್ನೆಲ್ಲ ಆಳುವವನು : ಚಕ್ರವರ್ತಿ : ನಿಜಾಯುಷ್ಯಾಂತದಿಂದಂ ಪ್ರಜಾಪತಿ ಭೂಚಕ್ರಿಗೆ ಬಂದು ಪುಟ್ಟಿ ಬಲದೇವಂ ವಾಸುದೇವಂ (ಶಾಂತಿಪು. ೭-೬೨). [ಸಂ. ಭೂಚಕ್ರಿನ್]

**ಭೂಚರ** (ನಾ). ೧. ಭೂಮಿಯ ಮೇಲೆ ನಡೆಯುವಿಕೆ; ಭೂಸಂಚಾರ : ಆಚಾರವಿಹುದೆಂದು ಲೋಚಗುಂಡಿಗೆವಿಡಿದು ಭೂಚರದಿ ಸತ್ತ ನವಿಲ ಗರಿ ಪಿಡಿಯುವುದು ನೀಚವಲ್ಲೇನು (ಸರ್ವಜ್ಞ. ೧೧೧೯). 'ಭೂಚರತ್ವ' ಪರಾ. ೨. ಭೂಮಿಯ ಮೇಲೆ ಚಲಿಸುವ ಪ್ರಾಣಿ. ೩. ಮನುಷ್ಯ; ಮಾನವ: ಪುಟ್ಟಿದಳ್ ಸ್ವಯಂಪ್ರಭೆ ಮಗಳಾಕೆ ಪಾರ್ಶ್ವಚರ ಭೂಚರ ಖೇಚರ ನೇತ್ರವೃತ್ತಿಕಾನಿಧಿ (ಶಾಂತಿಪು. ೫-೧೭); ಈಗಳಿನ ಪೊತ್ತಪ್ಪುದು ಖೇಚರನಿಶಾಚರದ್ಯುಚರಸಂಚಾರಮಲ್ಲದೆ ಭೂಚರ ಗೋಚರಮಲ್ಲೆಂದು ಮುಟ್ಟೆನರ್ಪುದುಂ (ಸುಕುಮಾ. ೭-೦೬ ವ); ಪುರಂಜನನಾದಿಯಾಗೆ ಜನಪುಂಗವರುಂ. . . ಚಕ್ರಿಗಳು ಮೇಗಳ ಭೂಚರರಲ್ಲವಾರೊ ಖೇಚರರ್ (ಶಂರಾಪ. ೫-೨೪). [ ಸಂ. ]

**ಭೂಚರತ್ವ** (ನಾ). ೧. ಭೂಮಿಯ ಮೇಲೆ ಸಂಚರಿಸುವಿಕೆ. ೨. ಭೂಮಿಯಲ್ಲಿ ಸಂಚಾರ ಮಾಡುವ ವಿಷಯದಲ್ಲಿ ವಿಶೇಷ ಪ್ರಾವೀಣ್ಯವನ್ನು ಹೊಂದುವ ಕಲೆ : ಮೂಲಿಕಾಸಿದ್ಧಿ ಭೂಚರತ್ವ ಖೇಚರತ್ವ . . . ಘುಟಿಕಾಸಿದ್ಧಿ ಮಂತ್ರತಂತ್ರ ಸಿದ್ಧಿ ಇವೆಲ್ಲವ ಕಲಿತಡೇನೋ (ಮುದಿಮಾ. ೪೭-೬೧): ಭೂಚರತ್ವದಿ ಪೊರಳ್ದು ಪೊರಳ್ದು ತೆರಳ್ವ ಲಿಂಗೋತ್ಕರವನಿಲವೇಗದೊಳೆಡೆವಿಡದೆ ನಡೆವ ಲಿಂಗಚಯ (ಬಸಪು. ೫೭-೪೫). [ಸಂ.]

**ಭೂಚಿಕ್ಕಿಗೆಡ್ಡೆ** (ನಾ). ಒಂದು ಬಗೆಯ ವನಸ್ಪತಿ: ಮೂಲವ್ಯಾಧಿಗೆ:- ಭೂಚಿಕ್ಕಗಡ್ಡೆ ಪುಡಿಮಾಡಿ ಗುಳಿಯನಗೆದು ಒಂದಾಗಿ ಇದಕ್ಕೆ ಕೆಂಡವನ್ನು ಮಾಡಿ ಅದರ ಮೇಲೆ ಈ ಪುಡಿಯನ್ನು ಹಾಕಿ ಆ ಹೊಗೆಯನ್ನು ಆಸನಕ್ಕೆ ಹಿಡಿಸಿದರೆ ಮೊಳಕರಗಿ ಹೋಗುವುದು (ಬಿವೈ. ೧೭೭). 'ಭೂಮಿಚಕ್ರಗಡ್ಡೆ' ನೋ. [ ಭೂಚಿಕ್ಕಿ + ಗೆಡ್ಡೆ (< ಗಡ್ಡೆ )]

**ಭೂಛಾಯ** (ನಾ). ೧. ಕತ್ತಲೆ ; ಇರುಳು : "ಧ್ವಾಂತಂ, ಅಂಧಕಾರಂ . . . ತಮಿಸ್ರಂ, ಭೂಛಾಯಂ _ಈ ೭ ಕತ್ತಲೆ" (ಹಲಾಯು. ೧೯-೧೧೧). ೨. ರಾಹು. [ಸಂ.]

**ಭೂಛಾಯೆ** (ನಾ). ಭೂಮಿಯ ನೆರಳು : ಭೂಛಾಯೆಯು ಚಂದ್ರನ ಮೇಲೆ ಬೀಳುವದರಿಂದ ಚಂದ್ರಗ್ರಹಣಗಳುಂಟಾಗುತ್ತವೆ (ಭೂಗೋಳ. ೨). [ಸಂ. ಭೂಛಾಯಾ]

**ಭೂಚ್ಛೇದಕ** (ನಾ). (ಗಾಡಿ, ರಥ ಮೊದಲಾದ ವಾಹನಗಳು ಮುಂದೆ ಹೋಗಲು ಅನುಕೂಲವಾಗುವಂತೆ) ನೆಲವನ್ನು ಕೆತ್ತುವವನು : ಎತ್ತ ನೋಡಲು ಮುದ್ದುಗುಂಡಿನ ಹೇರುಗಳ್ ಎತ್ತ ನೋಡಲು ಭೂಚ್ಛೇದರು (ಬಿಜ್ಜರಾ. ೧೨-೨೨). [ಸಂ.]

**ಭೂಜ$_1$** (ನಾ). ಒಂದು ಬಗೆಯ ಮರ ; ಭೂರ್ಜ : ಮಧ್ಯಇಂಡಿಯಾ ಮತ್ತು ಉತ್ತರ ಇಂಡಿಯಾದಲ್ಲಿ ಜನರು ಭೂಜಮರದ ತೊಗಟೆಯ ಮೇಲೆ ಬರೆಯುತ್ತಾರೆ (ಕೃವಾಇ. I, ೩೬೫).

[< ಪ್ರಾ. ಭೂಜ, ಭುಜ್ಜ./ಸಂ. ಭೂರ್ಜ]

**ಭೂಜ$_2$** (ನಾ). ಭೂಮಿಯಲ್ಲಿ ಹುಟ್ಟುವುದು : ಮರ : ಗಿಡ; ವೃಕ್ಷ : "ಗಿಡು ಬಳ್ಳಿ ಮರನೆಯ್ದೆ ಭೂಜಮುಮಕ್ಕುಂ" (ಮಂಗರಾ. ೯೩-೯೬) : ಕರಿಂಭಾಶೋಕ ಕದಂಬಲುಂಗಲಪಲೀಭೂಜಾರ್ಜುನಾನೋಕಹಪ್ರಾರಂ (ಪಂಪಭಾ. ೩-೬೨) ; ಬಳಸಿತ್ತ ಮದನನರಮನೆ ವಸಂತನ ಬೀಡುಂಬೆಳಲತೆಗಳಿಕ್ಕೆ ನಾನಾಭೂಜದಾಗರಂ (ಪತಆ. ೩-೨೬) ; ಇದು ಶೈವಶಾಸ್ತ್ರಭೂಜದ ಘನ ಮೂಲಂ . . . ಷಡ್ವರ್ಣಮಂತ್ರಂ (ರಾಶಿಓ. ೪.೮೪). [ಸಂ.]

**ಭೂಜಟೆ** (ನಾ). ಒಂದು ಬಗೆಯ ಗಿಡ ; ಗೌರಿಜಡೆ : "ಭೂಜಟೆಯೆನಲು ಗೌರಿಜಡೆ" (ಮಂಗರಾ. ೪೦-೩೩). [ಸಂ. ಭೂಜಟಾ]

**ಭೂಜಾಂಗವೃತ್ತಿ** (ನಾ). ಪ್ರವಾಹಕ್ಕೆ ಸಿಕ್ಕಿದ ನದಿಯ ದಡದ ಮರದಂತೆ ವರ್ತಿಸುವುದು : P ನದಿಯ ದಡದಲ್ಲಿ ಬೆಳೆದಿರುವ ದೊಡ್ಡ ಮರವು ಪೂರ್ಣಪ್ರವಾಹ ಬಂದಾಗಲೂ ಯಾವ ರಕ್ಷಣೆಯನ್ನೂ ಮಾಡಿಕೊಳ್ಳದೆ ನಿಂತ ಹಾಗೆಯೆ ನಿಂತಿರುತ್ತದೆ. ಆಗ ಬೇರುಸಹಿತವಾಗಿ ನದಿಯ ವೇಗದಲ್ಲಿ ಕೊಚ್ಚಿಹೋಗುತ್ತದೆ. ಹಾಗೆಯೇ ಪ್ರಬಲವಾದ ಶತ್ರು ಮೇಲೇರಿಬಂದಾಗ ಸಮಯೋಚಿತವಾಗಿ ವರ್ತಿಸದೆ ಇದ್ದಂತೆಯೆ ಅವನನ್ನು ಪ್ರತಿಭಟಿಸುವ ರಾಜನು ಸೋತು ಹೋಗುತ್ತಾನೆ. ಇಂತಹ ವರ್ತನೆಗೆ ಭೂಜಾಂಗವೃತ್ತಿಯೆಂದು ಹೇಳಲಾಗುತ್ತದೆ : ಭೂಜಾಂಗವೃತ್ತಿಯುಂ ಬಿಸುಟಾ ಜಗದಧಿಪಂಗೆ ವೈತಸಾವಳಿ ಪರಿವಂದಾ ಜಳಕೇಳಿಗುವವೋಲ್ ನಯಭಾಜನರೆಡಗಿದರಜ್ಞಿಂಹರೆನಿಸಿದ ಸುಪ್ಪರ್ (ಶಾಂತಿಪು. ೧೧-೧೩೯). [ಸಂ.]

**ಭೂಜಾತ** (ನಾ). = ಭೂಜ$_2$ : ಪಲ್ಲವಿತ ಕುಸುಮಿತ ಮುಕುಲಿತ ಫಲಿತ ಮಂಜರೀರಂಜಿತ ಚೂತ ಭೂಜಾತಂಗಳಂ . . . ಅಲ್ಲಲ್ಲಿಗೆ ನಿಂದು ಮೆಲ್ಲಮೆಲ್ಲನೆ ನೋಡುತ್ತಂ (ಸುಕುಮಾ. ೯-೧೦೬ ವ) ; ತದ್ವನಂ ಪಣ್ಗಳಿಂ ಪೂಗಳಿಂ ತಳ್ತ ಭೂಜಾತನಿಕುರುಂಬಸಚ್ಛಾಯದಿಂದಂ ತಣ್ಗದಿರನಂತೆ ಸೌಖ್ಯಮನೀಯಲ್ (ಮಾಹಾಪು. ೧೨-೮). [ ಸಂ. ]

**ಭೂಜಾತೆ** (ನಾ). ಭೂಮಿಯಲ್ಲಿ ಹುಟ್ಟಿದವಳು ; ಭೂಮಿಯ ಮಗಳು ; ಸೀತೆ : "ಪಿರಸ್ನಾತೆ ! ಭೂಜಾತೆ ! ರಾಕ್ಷಸಭೀಯಂತೆ ! ಅಲಂಕೃತೆ!" ಎನುತ್ತೆನುತೆ . . . ಕೋಮಲೆಯ ಹೃದಯಮಂ ಜಾಳಂಪ್ರಗೆಯ್ಯೆ ವಿರದೂಷಣಾನಿಪೂದನಂ (ಶ್ರೀರಾಪಟ್ಟಾ. ೮೪೨-೯೩೦).

[ ಸಂ. ಭೂಜಾತಾ ]

**ಭೂಜಾನಿ** (ನಾ). ಭೂಪತಿ; ರಾಜ : ಆ ನಿಲಿಂಪೋದ್ಭೂತ ಪರಮಾನ್ನವನ್ನು ಭೂಜಾನಿ ಕೊಡಲತಿಮುದದಿ ಪ್ರಾಶನಂಗೈದರಾ ಮಾನಿನಿಯರು (ತೊರಾರಾ. ೦-೬-೩೯) ; ಮತ್ತಮನಿತಜಿರೊಳ್ ಸುಗ್ರೀವಾದಿ ಮರ್ಕಟರುಂ ಸುಭುಜಭೂಜಾನಿಯುಂ ಬಂದೊದವಿದರ್ (ರಾಪಕಶ. ೦೩೩-೦೦).

[ ಸಂ. (ಭೂ + ಜಾಯಾ + –) ]

**ಭೂತ** (ಗು). ೧. ಆದ; ಇರುವ. ೨. ಉಂಟಾದ. ೩. ನಡೆದಿರುವ; ಸಂಭವಿಸಿರುವ. ೪. ಸರಿಯಾದ; ಉಚಿತವಾದ; ಯೋಗ್ಯವಾದ. ೫. ಕಳೆದ; ಅತೀತವಾದ : 'ಭೂತಕಾಲ' ಪರಾ. ೬. ಸೇರಿಕೊಂಡಿರುವ; ಕೂಡಿರುವ. ೭. ಸಮಾನವಾದ ; ಸದೃಶವಾದ. (ನಾ). ೮. ನಿಜ; ಸತ್ಯ. ೯. ಕಳೆದುಹೋದುದು : ಹಿಂದೆ ಆದುದು: ಪ್ರತ್ಯಕ್ಷಾದಿ ಪ್ರಮಾಣಗಳಿಗೆ ಗೋಚರವಾದ ವಸ್ತುಗಳು ಪ್ರಮಾಣವ್ಯಾಪಾರಕ್ಕಿಂತ ಮೊದಲೇ ಇರುವುದರಿಂದ ಅವು ಭೂತವೆನಿಸುವುವು (ಭ್ರಷ್ಟಕಾ. ೨೨೮೩೬). ೧೦. ಪಡೆದುದು : "ಲಬ್ಧಂ. ಪ್ರಾಪ್ತಂ. ವಿನ್ನಂ, ಭಾವಿತಂ, ಆಸಾದಿತಂ. ಭೂತಂ—೬ ಹೊಂದಲ್ಪಟ್ಟಿರುವುದು, ಪಡೆಯಲ್ಪಟ್ಟಿರುವುದು, ಆಗಿ ಬಂದಿರುವುದು" (ಸಿದ್ಧಾಂತ. ೩೩೦). ೧೧. ಶಿವ : ಪರಮೇಶ್ವರ. ೧೨. ಶಿವಗಣ ; ಪ್ರಮಥಗಣ. ೧೩. ಜಗತ್ತಿನ ಪ್ರಾಣಿವರ್ಗ : ಚರಾಚರಾತ್ಮಕ ಜೀವರಾಶಿ : ಸಲಭೂತಂಗಳಲಿ ನೆಚ್ಚಿ ಕೃಪೆಯ ಸವನಿಸಲು ಸೀನಾರು (ಶಿಭಾಗ. ೧೦-೬೩-೧೦) ; ಸಕಲಭೂತಂಗಳ ಮನಸ್ಸನ್ನೂ ತಿಳಿದು . . . ಮತ್ತೊಬ್ಬ ಮನುಷ್ಯನ ಉಪಾಯವನ್ನು ತಿಳಿದವನೂ ಪಂಡಿತನೆನಿಸಿಕೊಳ್ಳುವನು (ಕೃವಾಶಾ. ೪೩); ಚರಾಚರಭೂತಗಳಲ್ಲಿ ಕಂಡುಬರುವ ಜನನಮರಣಗಳ ವ್ಯವಹಾರ ಆತ್ಮನ ವಿಚಾರದಲ್ಲಿ ಮುಖ್ಯವಲ್ಲ : ಗೌಣ (ಶಾಬಾಶ್ರ. ೧೬೮). ೧೪. (ಕಣ್ಣಿಗೆ ಗೋಚರವಾಗದೆ ಮನುಷ್ಯರನ್ನು ಕಾಡಿಸುವ) ದೆವ್ವ; ಪಿಶಾಚಿ : ಲೋಕದವರನೊಂದು ಭೂತ ಹಿಡಿದಡೆ ಆ ಭೂತದಿಚ್ಛೆಯಲ್ಲಿ ನುಡಿವುತಿಪ್ಪರು (ಅವಚ. ೦೦೬-೪೮೪); ಭೂತಪತಿಯೊಗೆವುದುಂ ತನ್ಮಾತೆ ಪಲಂ ಮಡಿದಳುಮಲ್ಲದೊಡಾತಂ ಪ್ರೇತಾವಾಸದೊಳಾಡುವ ಭೂತಂಗಳ ಕೂಡೆ ವಿಹರಣಂಗೆಯ್ವವನೆ (ವ್ಯಕಂ. ೯-೦೦೨); ತಂತ್ರಿಯುಮವರು ಕೂಡ ಹೇಳುತ್ತಾರೆ. . . ನಾನೇ ನಾಲ್ಕು ಭೂತಗಳನ್ನು ಬಂಧಿಸಿ ಆ ಜಾಗಕ್ಕೆ ಕಳುಹಿಸಿದ್ದೇನೆ ಎಂದು (ಶದ್ಯಕ. ೨೭); ಪ್ರೇತಕ್ಕೆ ಹೆದರುವವ ಭೂತಕ್ಕೆ ಹೆದರನೇ ? (ಗಾದೆ). ೧೫. ನಿಜವಾಗಿಯೂ ನಡೆದುದು: ವಸ್ತುಸ್ಥಿತಿ; ವಿಷಯ. ೧೬. ಜಗತ್ತು: ಪ್ರಪಂಚ; ಲೋಕ. ೧೭. ಕಲ್ಯಾಣ : ಕ್ಷೇಮ. ೧೮. ದೇವತೆಗಳಲ್ಲಿ ಒಂದು ವರ್ಗ : "ಯಕ್ಷಃ, ರಾಕ್ಷಸಃ. . . ಭೂತಃ, ಪೈಶಾಚಃ. . . ದೇವಯೋನಿಃ—ಇಂತಿವೆಲ್ಲಂ ದೇವಜಾತಿಯೆಂಬುದು" (ಹಲಾಯು. ೦೩-೮೭). ೧೯. ಕೈವಿವಾರಿ ಹೋದುದು : "ವಿವಾಚಿದುದಜೊಳು ದೇವಯೋನಿಯೊಳು ಜಾತಿ(ಯೊಳು) ಭೂತದೊಳು ಭೂತಮಕ್ಕುಂ" (ಮಂಗರಾ. ೦೯೩-೩೦). ೨೦. ನವಗ್ರಹಗಳು. ೨೧. ಆರ್ಯ: ಪೂಜ್ಯ : "ಗ್ರಹನಿಕರ ಮರುಳ್ ಪಂಚಭೂತಾತ್ಮಮುಂ ವಿವಾರಿದುದುಂ ಜಾತಾಸಮೂಹಾದ್ಯರು ಜನಿತಮಿವುಂ ಭೂತಶಬ್ದಂ ಪ್ರಸಿದ್ಧಂ"(ನಾನಾರ. ೬೯). ೨೨. ಪ್ರಪಂಚದ ಸೃಷ್ಟಿಗೆ ಮೂಲವೆನಿಸಿದ ಪೃಥ್ವಿ, ಅಪ್ಪು, ತೇಜಸ್ಸು, ವಾಯು ಮತ್ತು ಆಕಾಶ ಎಂಬ ಐದು ಪದಾರ್ಥಗಳು : ಭೂತವೈದಜಿಂದ ಸ್ಥೂಲತನು (ಅವಚ. ೫. ೯೮೨.೦೩೩೨); ಭಾವಿಸಲು ಭೂಮ್ಯಾದಿ ಭೂತಪನಾತ್ಮವೆನಿಸುವುದು (ಗಗತಾ. ೩-೨೨); ನಾಲ್ಕು ಭೂತಗಳ ಜೊತೆಗೆ ಐದನೆಯ ಭೂತವಾದ ಆಕಾಶವಿದೆಯೆಂತಲೂ ಇವರ ವಾದ(ಕೃವಾಇ.I.೩೦). ೨೩. (ಆಲು) ದೊಡ್ಡದು ; ಗಾತ್ರವಾದುದು : 'ಭೂತಗನ್ನಡಿ'. 'ಭೂತಾಕಾರ' ಪರಾ. ೨೪. [ಗಣಿತ] ಐದು ಎಂಬ ಸಂಖ್ಯೆಯ ಸಂಕೇತ : ಕಾದಿರಲ್ಕತಿ ಭೂತದೊಳರ್ದಂದೋವೆ ಕಲ್ಪವೆಲೇ ಮಣಿರಂಗಂ (ಛಂದೋಂಬು. ೨-೧೧೧) : ಪುರಹರ ವಕ್ತ್ರಂ ಪಂಚಂ ಪರಮ ವ್ರತಭೂತ ಮಿಂದ್ರಿಯಂ. . .ಐದಱ ನಾಮಂ (ನ್ಯವಚಾ. ೯-೩) ೨೫. =ಭೂತಕಾಲ ೨ : ವವಪವಕಾರಂಗಳ್ ಮೂಲದೊಳಕ್ಕುಂ ಭೂತ ವರ್ತಮಾನ ಭವಿಷ್ಯದ್ವಿದಿತವಿಭಕ್ತಿತ್ರಿತಯಕ್ಕದೆಲ್ಲ ವಚನಂಗಳೊಳಮಿವಾಗಮಮಕ್ಕುಂ (ಶಾಬ್ದ್ಯಾವ. ೩೮೬) ;ರೇಫಾಂತಗಳಪ್ಪನೇಕಾಕ್ಷರಧಾತುಂಗಳ್ಗೆ ಭೂತ ವರ್ತಮಾನ ಭವಿಷ್ಯಂತಿಗಾದ ದ, ದಪ, ವ ಎಂಬಿವು ಪರಮಾದೊಡಂ(ಕಮಂರ. ವ. ೩೪ ವೃತ್ತಿ).

**ಭೂತ ಬಡಿ** = ಪಿಶಾಚಿ ಮೆಟ್ಟಿಕೊಳ್ಳು : ಏನೋ ಭೂತ ಬಡಿದವಳಂತೆ ವಿಮನಸ್ಕಳಾಗಿದ್ದವಳು . . . ಬೆಳಗಾವಿಗೆ ಬಂದು ಅಲ್ಲಿಯ ವಾತಾವರಣಕ್ಕೆ ಪೂರ್ಣಚಂದ್ರನಂತಾದಳು (ಪಶಾರ. ೯೨). **ಭೂತ ಹಿಡಿ** :

ಭೂತ ಬಡಿ : ನನಗೆ ಭೂತ ಹಿಡಿದಿದೆ . . . ಎಂದು ಅವನು ಹೆದರಿದ ಹಾಗೆ ಕಾಣುತ್ತದೆ (ಮೂಕಜ್ಞ. ೬೩). [ಸಂ.]

**ಭೂತಕರುಳು** (ನಾ). ಒಂದು ಬಗೆಯ ಗಿಡ : ಎಡಮುರಿ, ಮುರುಗಿ ಕಾಯಿ, ಭೂತಕರುಳು, ಕಾಡತಲ್ಲಾರು, ಕೌರಿ, ಕಪರ್ಗಿ (ವೈ.ಶಿ. ೪೨–೯೩೨). [?]

**ಭೂತಕಾಲ** (ನಾ). ೧. ಕಳೆದುಹೋದ ಕಾಲ : ಭವಿಷ್ಯ ಹಾಗಾದರೂ ಭೂತಕಾಲ ಹಾಗಲ್ಲವಲ್ಲ. ನಮ್ಮ ಅನುಭವದಿಂದ ಕೇಳಿದ್ದನ್ನು ಅದು ನಡೆದಿದೆ ಅಥವಾ ಇಲ್ಲ — ಎಂಬುದನ್ನು ಸ್ಪಷ್ಟವಾಗಿ ತೀರ್ಮಾನಿಸಬಹುದು (ಮೂಕಜ್ಞ. ೧೩೦) : ಭೂತಕಾಲದಲ್ಲಿ ಅನೇಕ ವಿಷಯಗಳು ನಮ್ಮ ಗಮನಕ್ಕೆ ಬಂದಿವೆ (ಶಿಕ್ಷಣ. ೩೨೩). ೨. [ವ್ಯಾಕ] ವರ್ತಮಾನಕಾಲ, ಭೂತ ಕಾಲ, ಭವಿಷ್ಯತ್ಕಾಲಗಳೆಂಬ ಮೂರು ಕಾಲಗಳಲ್ಲಿ ಒಂದು : ಹಿಂದೆ ನಡೆದುದನ್ನು ಸೂಚಿಸುವ ಕಾಲ : ಕೊಳ್, ಉಣ್, ಕಾಣ್ ಧಾತುಗಳಲ್ಲಿ ಭೂತಕಾಲದಲ್ಲಿ ಡ ಪ್ರತ್ಯಯವು ಸೇರುವುದು (ಕೈಬಿ. ೪೬) ; ಕಳೆದುಹೋದ ಕಾಲಕ್ಕೆ ಭೂತಕಾಲವೆಂದೂ, ಈ ಕ್ರಿಯಾಪದರೂಪಕ್ಕೆ ಭೂತಕಾಲದ ರೂಪವೆಂದೂ ಹೆಸರು (ವ್ಯಾಕ್ರಮ. ೬೨). [ಸಂ.]

**ಭೂತಕಾಲಕ್ರಿಯೆ** (ನಾ). [ವ್ಯಾಕ] ಭೂತಕಾಲದ ಅರ್ಥವನ್ನು ತಿಳಿಸುವ ಕ್ರಿಯಾಪದ: ಭೂತಕಾಲಕ್ರಿಯೆಯೊಳ್ ಪ್ರತಿಷೇಧಮನುಸರ್ವ ಅದೆ ಎಂಬುದು ಪರಮಾದೊಡಂ ನ ಣ ಲ ಯ ಳಂಗಳ್ಗೆ ದ್ವಿತ್ವವೃತ್ತಿನಿತ್ಯಂ (ಶಮದ. ೬೦ ವೃತ್ತಿ). [ಸಂ. ಭೂತಕಾಲಕ್ರಿಯಾ]

**ಭೂತಕೇಶ** (ನಾ). ಒಂದು ಬಗೆಯ ಹುಲ್ಲು : "ಗೋಲೋಮೀ. ಭೂತ ಕೇಶಃ — ೨ ಜಟಾಮಾಂಸಿಯ ಹೆಸರುಗಳು. ಭೂತಕೇಶವೆಂಬ ಹುಲ್ಲಿಗೆ ಹೆಸರೆಂದು ಕೆಲವರನ್ನುವರು" (ನಿಘಂಟು. ೩೦೬). [ಸಂ.]

**ಭೂತಕೇಶಿ** (ನಾ). ಒಂದು ಬಗೆಯ ಗಿಡ : "ಭೂತಕೇಶೀ = ಬಿಳಿಯ ಲೊಕ್ಕಿ" (ಓಷಧಿ. ೧೧೨). [?./ಸಂ. ಭೂತಕೇಶೀ = ತುಳಸೀಗಿಡ]

**ಭೂತಕೋಲ** (ನಾ). (ಕರಾ) ಭೂತದ ವೇಷವನ್ನು ಹಾಕಿಕೊಂಡು ಕುಣಿಯುವ ಒಂದು ಹಬ್ಬ : ಭೂತಕೋಲ ಮೊದಲಾದ ವರ್ಷಾವಧಿ ನಡೆಯತಕ್ಕ ಕ್ರಿಯೆಗಳಿಗೆ ವಂತಿಗೆ ಸಂತಿಗೆ ಮೊದಲಾದುವು ಸಲ್ಲಬೇಕು (ಕುರುಣ. ೩೪) : ಹರಿಜನರ ವರ್ಗವಾದ 'ನಳಿಕೆ' ಜಾತಿಯವರು ಈ ಭೂತ ಕೋಲವನ್ನು ಕಟ್ಟುತ್ತಾರೆ (ಕಜಕ. ೧೪೦). [ಭೂತ + ಕೋಲ$_1$]

**ಭೂತಗಣ** (ನಾ). ೧. ದೆವ್ವಗಳ ಗುಂಪು ; ಪಿಶಾಚಿಗಳ ಸಮೂಹ : ಎಲವೋ ನಿನ್ನನ್ನಸ್ಥಾನಪತಿಶೀ ಹೊಳಲ ಸಾಡುವೆನು ನಿನ್ನ ಸೀಳಿದು ಬಲಿಯ ಕೊಡುವೆನು ಭೂತಗಣಕೆ (ಕುವ್ಯಾ.ವಿ. ೬–೩೫). ೨. ಪರಮೇಶ್ವರನ ಪರಿವಾರದೇವತೆಗಳ ಗುಂಪು ; ಪ್ರಮಥಗಣ : ಭೂತಗಣಂಗಳವರ್ ಪರಿವೃತರ್ ಪ್ರಮಥೇಂದ್ರರಿರ್ಪರಿನ್ನುಂ ಕೇಳ್ ವಿಖ್ಯಾತರ್ ನಂದೀಶಾದಿಗಳ್ (ಪ್ರಾಲಾಶ. ೧–೮–೨೬). [ಸಂ.]

**ಭೂತಗಣೇಶ** (ನಾ). ೧. ಪ್ರಮಥಗಣಗಳ ಒಡೆಯ : ಶಿವ. ೨. [ಛಂದ] ಗುರು ಎಂಬುದರ ಸಂಕೇತ : ಭೂತಗಣೇಶಂ ಭೂತಶರಾಶಗಜದೊಳೆ ಯತಿಗಣಮೆಸೆದಿರೆ . . . ಕ್ರೌಂಚಪದಂ (ಛಂದೋಂಬು. ೧–೧೯೪). [ಸಂ.]

**ಭೂತಗನ್ನಡಿ** (ನಾ). ವಸ್ತುಗಳನ್ನು ಇರುವುದಕ್ಕಿಂತ ದೊಡ್ಡದು ಮಾಡಿ ತೋರಿಸುವ ಕನ್ನಡಿ ; ರಾವುಗನ್ನಡಿ : ಆಗ ಭೂತ ಗನ್ನಡಿಯೊಳಗಿನಿಂದ ಹಾದು ಬರುವ ಬೆಳಕಿನ ಕಿರಣದಂತೆ, ನಿನ್ನ ಬಯಕೆಯೂ ಪ್ರಭಾವಶಾಲಿಯಾಗುತ್ತದೆ (ಹಂಗೇಕೆ. ೯೬) ; ಸರಾಫನು ಕಿಸೆಯಲ್ಲಿರುವ ಭೂತಗನ್ನಡಿಯನ್ನು ಒಂದು ಕಣ್ಣಿಗೆ ಇಟ್ಟುಕೊಂಡು, ರತ್ನ ಪರೀಕ್ಷೆಯನ್ನು ನಿಧಾನವಾಗಿ ಓರೆಕಣ್ಣಿನಿಂದ ಮಾಡುತ್ತಾ ಇದ್ದನು (ಶಿವ್ಯ. ೨೯). [ಭೂತ + ಕನ್ನಡಿ$_1$]

**ಭೂತಚತುಷ್ಟಯ** (ನಾ). ಪೃಥ್ವಿ, ಅಪ್ಪು, ತೇಜಸ್ಸು, ವಾಯು ಎಂಬ ನಾಲ್ಕು ಬಗೆಯ ಮೂಲವಸ್ತುಗಳು : ಈ ನಿಮ್ಮ ಜಿನಮತದ ಜೀವ ಸಂಭಾವನೆಯೊಳ್ ಪೃಥಿವ್ಯಪ್ತೇಜೋವಾತಾಭಿಧಾನ ಭೂತಚತುಷ್ಟಯ ದಿಂದಂ ಬೇಱೆ ಜೀವತ್ವಗ್ರಾಹಕಪ್ರಮಾಣಮಿಲ್ಲಂ (ಶಾಂತಿಪು. ೮–೦೨೮ ವ) ; ಭೂತಚತುಷ್ಟಯಂಯೋಗದೆ ಚೇತನನುದಯಿಸುಗುಂ (ಧರ್ಮಾಮೃ. ೩–೧೨೦). [ಸಂ.]

**ಭೂತಚಿಕಿತ್ಸೆ** (ನಾ). ದೆವ್ವ, ಪಿಶಾಚಿಗಳು ಹಿಡಿದಿರಬಹುದೆಂದು ನಂಬಿ ಮಾಡುವ ಚಿಕಿತ್ಸೆ ; ಯಂತ್ರ ಮಂತ್ರಗಳನ್ನು ಮಾಡುವುದು: ಇಂಡಿಯಾ ದೇಶದಲ್ಲಿ ಔಷಧಿಚಿಕಿತ್ಸೆ ಎಂಟು ವಿಧ : ಒಂದನೆಯದು ಹುಣ್ಣುಗಳ ಚಿಕಿತ್ಸೆ . . . ನಾಲ್ಕನೆಯದು ಭೂತಚಿಕಿತ್ಸೆ (ಶ್ರೀವಾಜ. I, ೨೯೬). [ಸಂ. ಭೂತಚಿಕಿತ್ಸಾ]

**ಭೂತಚೇಷ್ಟೆ** (ನಾ). ಪಿಶಾಚಿಗಳಿಂದಾಗುವ ತೊಂದರೆ, — ಕಾಟ : ಈ ಭೂತಚೇಷ್ಟೆ ನಿಜವಾಗಿಯೂ ಹಾಸ್ಯಮಯವಾಗಿತ್ತು (ಸಮಜ. ೯೪೩). [ಸಂ. ಭೂತಚೇಷ್ಟಾ]

**ಭೂತದಯ** (ನಾ). ಪ್ರಾಣಿಗಳ ಬಗೆಗೆ ಇರುವ ಕರುಣೆ, — ದಯೆ : ಸರ್ವಜೀವದಯಾಪಾರಿಯೆಂದು ಭೂತದಯಕ್ಕಿಕ್ಕುವವನ ಮನೆ ಸಯಿಧಾನದ ಕೇಡು (ಬಸವ. ೨೨೬) ; ಯಾವ ಕಾರಣದಿಂದಲಾಗಲೀ ಪ್ರಾಣಿಗೆ ಹಿಂಸೆಯು ಪ್ರಾಪ್ತವಾದರೆ ಯಥಾಶಕ್ತಿಯಾಗಿ ಅದರ ದುಃಖವನ್ನು ನಿವಾರಿಸಬೇಕೆಂದು ಹೃದಯದಲ್ಲಾಗುವ ಪ್ರೇರಣೆಯು ಭೂತದಯವು (ಆರ್ಯಧ. ೬೨). [ಸಂ. ಭೂತದಯಾ]

**ಭೂತದಯೆ** (ನಾ). = ಭೂತದಯ : ಹರುಷದಿ ಶಾಂತಿ ಸತ್ಯಂ ಭೂತ ದಯೆಗಳಂ ದೊರಕಿಸಿಯೆ . . . ಮುನೀಶ್ವರರೆನಿಸಿ (ಹರಿಶ. ೮–೦೬) ; ಭೂತ ದಯೆಯಿಲ್ಲದನ ಮಾಟಂ ಶಾಂತಿಯಿಲ್ಲದ ತಾಪಸನ ತಪವು . . . ಭಕ್ತಿ ಪ್ರವರ್ಧನವಹುದೆ (ಬಸಪು. ೩೬–೩೪) ; ದುರಭಿಮಾನವಿಲ್ಲದಲ್ಲಿಯೇ ಔದಾರ್ಯ ನೆಲೆಸುತ್ತದೆ. ಅಲ್ಲಿಯೇ ಭೂತದಯೆ ಇದೆ (ಕರ್ನಾಕ. ೪೦). [ಸಂ. ಭೂತದಯಾ]

**ಭೂತದೇಹಿ** (ನಾ). ಪಂಚಭೂತಾತ್ಮಕವಾದ ಶರೀರವುಳ್ಳವನು ; ಮನುಷ್ಯ : ಭೂಮಿಯ ಮೇಲೆ ಹುಟ್ಟಿದ ಕಲ್ಲ ತಂದು ಭೂತದೇಹಿಗಳ ಕೈಯಲ್ಲಿ ಕೊಟ್ಟು ಕೊಟ್ಟ ಕೂಲಿಯ ತೆಕ್ಕೊಂಡು ಹೊಟ್ಟೆಯ ಹೊರೆವ ಭ್ರಷ್ಟರಿಗೆ ಪ್ರಸಾದವೆಲ್ಲಿಯದೋ (ಸಿದ್ಧೇಶ. ೧೩೪–೪೦೬). [ಸಂ. ಭೂತದೇಹಿನ್]

**ಭೂತಧಾತ್ರಿ** (ನಾ). ಭೂಮಿ ; ಧರಣಿ : "ಭೂಃ, ಭೂಮಿಃ . . . ಭೂತಧಾತ್ರೀ, ರತ್ನಗರ್ಭಾ, ವಸುಂಧರಾ, ಧರಾ, ಆಧಾರಾ— ಈ ೩೭ ಭೂಮಿಯ ಪೆಸರ್" (ಹಲಾಯು. ೨೬–೨) ; ಭೂ[ತ]ಧಾತ್ರಿಯೊಳೋರಂತೆ ನೆಗಟ್ಟ . . . ಸೆಟ್ಟಿಯ ಬಳ್ಳಂ ಕಱಿದೆಂಬುದೊಂದು ನುಡಿಯಂ ನೀಂ ನಿಕ್ಕುವಂ ಮಾಡಿದ್ಯೆ (ಪಂಶಾ. ೧೨–೧೬೩) ; ದಾಡೆಯಲಿ ದಾನವನ ಕೋದು ಹಾಕೀ ಭೂತಧಾತ್ರಿಯ ಕಾದೆಲಾ ಕಾರುಣ್ಯಸಿಂಧುವೆ (ಕುವ್ಯಾಸ. ೦೪–೦೦೩). [ಸಂ. ಭೂತಧಾತ್ರೀ]

**ಭೂತನಾಥ** (ನಾ). ಪ್ರಮಥಗಣಗಳ ಅಧಿಪತಿ ; ಶಿವ : ಕರ್ಣಾ ರ್ಜುನರೆಱಿಂ ನೋಡಲ್ಕೆ ಭೂತನಾಥಂ ಬಂದಂ (ಪಂಭಾ. ೦೨–೦೩೪)) ; ವಾತಜನ ಮೂಲಿಕೆಗೆ ಕಪಿಬಲ ಚೇತರಿಸಿದುದು ಬೇಡ ತತ್ತರೆ ಭೂತನಾಥನ ತಡೆವನೆಂದನು ದನುಜ ರಘುಪತಿಗೆ (ತೊರಾ. ೩೬–೨೦). [ಸಂ.]

**ಭೂತನುಜೆ** (ನಾ). ಭೂಮಿಯಲ್ಲಿ ಜನಿಸಿದವಳು ; ಸೀತೆ : ಪೂರ್ಣಗರ್ಭಿಣಿಯಾದ ಭೂತನುಜೆಯಂ ಕಾನನದೊಳಿರಿಸಿ ಬಂದೆನಲ್ಲದೆ ಮುಂದಱಿಯೆನೆಂದನು (ಜೈಮಿಭಾ. ೨೦–೩೪). [ಸಂ. ಭೂತನುಜಾ]

**ಭೂತನ್ಯೂನ** (ನಾ). [ವ್ಯಾಕ] ಒಂದು ಪ್ರಧಾನಕ್ರಿಯೆ ನಡೆಯುವುದಕ್ಕೆ ಮೊದಲು ನಡೆದಿರುವ ಮತ್ತೊಂದು ಕ್ರಿಯೆಯನ್ನು ತಿಳಿಸುವ ಅಪೂರ್ಣಕ್ರಿಯಾರೂಪ ; ಸಾಪೇಕ್ಷ ಕ್ರಿಯಾವಾಚಕರೂಪ : ಅತ್ತು

ಅತ್ತು ಅವಳ ಕಣ್ಣು ಕೆಂಪಗಾಯಿತು . . . ಹೀಗೆ ಅರ್ಥಪೂರ್ತಿಗಾಗಿ ಬಂದಿರುವ ಕ್ರಿಯಾಪದದ ಕಾರ್ಯ ನಡೆಯುವುದಕ್ಕೆ ಮುಂಚೆ ಸಾಪೇಕ್ಷ ಕ್ರಿಯಾಪದದ ಕಾರ್ಯ ನಡೆದಿರುತ್ತದೆಂಬುದನ್ನು ತೋರಿಸುವ ರೂಪಗಳಿಗೆ ಭೂತಸ್ಯೂನರೂಪಗಳೆಂದು ಹೆಸರು (ಶುದ್ಧಮ. ೧೧೨). [ಸಂ.]

**ಭೂತಪಂಚಕ** (ನಾ). ಪೃಥ್ವಿ, ಅಪ್ಪು, ತೇಜಸ್ಸು, ವಾಯು, ಆಕಾಶ ವೆಂಬ ಐದು ಪದಾರ್ಥಗಳು ; ಪಂಚಮಹಾಭೂತಗಳು : ಧರಣಿ ಮೊದಲೆನೆ ಭೂತಪಂಚಕ ಮರುತಪಂಚಕ ವಿಷಯುವಿಂದ್ರಿಯ ಕರಣ ವಿಪ್ಪತ್ತೈದು ತತ್ವಾತ್ಮಕನ ಚಿಂತಿಸಿದ (ಕುಮಾ.ಅ. ೫-೧) ; ಭೂತಪಂಚಕ ಬುದ್ಧ್ಯಹಂಕೃತಿ ಸಾತಿಶಯುದವ್ಯಕ್ತ ದಶವಿಧ ಜಾತವಾದಿಂದ್ರಿಯನಿಕರ ಪ್ರಾಣಾದಿವಾಯುಗಳು (ಅಮೃತ. ೩-೩೨) ; ಇವನ್ನು ಭೂತಪಂಚಕ, ತನ್ಮಾತ್ರಪಂಚಕ . . . ಎಂದು ಐದು ಪಂಚಕವಾಗಿ ವಿಭಜಿಸುವರು (ಹಿಂದಶಾ. ೫೫). [ಸಂ.]

**ಭೂತಪತಿ** (ನಾ). = ಭೂತನಾಥ : ಭೂತಪತಿಗಾನಾದಡಂ ಬಡವಾತ ಯಾಗಿ ಸಮುದ್ಧರಿಸುವೆನು (ಬಸವ. ೧೫-೭). [ಸಂ.]

**ಭೂತಪದಿ** (ನಾ). ಹದಿನಾರು ಬಗೆಯ ರೂಪಾಯಿ ನಾಣ್ಯಗಳಲ್ಲಿ ಒಂದು : ೧. ಗಜಪತಿ . . . ೧೧. ಭೂತಪದಿ (ಕಥಾಗ. ೨೬೦). [ ? ]

**ಭೂತಪುಣ್ಯ** (ನಾ). ಹಿಂದೆ ಮಾಡಿದ ಸತ್ಕರ್ಮಗಳ ಫಲ : ಸಂಚಿತ ಪುಣ್ಯ : ಇತ್ತ ಶ್ರೀಷೇಣಂಗಮಾ ಮೂವರುಮಂಗನೋತ್ತಮೆಯರ್ಗ ಮುತ್ತಮಪಾತ್ರದಾನದ ದಾನಾನುಮೋದದ ಭೂತಪುಣ್ಯದಿಂ (ಶಾಂತಿಪು. ೩-೯೭ ವ). [ಸಂ.]

**ಭೂತಪೂಜೆ** (ನಾ). ೧. (ಕರಾವಳಿಯಲ್ಲಿ ಆಚರಣೆಯಲ್ಲಿರುವ) ದೆವ್ವಗಳ ಆರಾಧನೆ : ಭೂತಪೂಜೆ ಎಂದರೆ ಪ್ರಕೃತಿಯ ಮತ್ತು ಸಂಸಾರದಲ್ಲಿಯ ವಿಶೇಷದರ್ಶನಗಳನ್ನು ಅಥವಾ ಸಂಭವಗಳನ್ನು ಇಲ್ಲವೆ ಕೆಲವೊಮ್ಮೆ ವ್ಯಕ್ತಿ ಗಳನ್ನು, ಪ್ರಪಂಚ ಕಣ್ಣಿಗೆ ಕಾಣುವ ಹಾಗೂ ಮನಸ್ಸಿನಲ್ಲಿ ಒತ್ತುವ ವಿಷಯ ಗಳನ್ನು, ವ್ಯಕ್ತೀಕರಿಸಿ ಹಾಗೂ ಅವನ್ನು ದೇವೀಕರಿಸಿ ಆರಾಧಿಸುವಿಕೆ (ತುಳುಜಾ. ೨೫೦). ೨. ಪಂಚಭೂತಗಳ ಹಾಗೂ ನದಿ, ಪರ್ವತ ಮೊದಲಾದ ಪ್ರಕೃತಿವಸ್ತುಗಳ ಪೂಜೆ,— ಆರಾಧನೆ : ವೇದದಲ್ಲಿ ಮೊದಲು ಭೂತಪೂಜೆ (Nature worship) ಇರುವುದು. ಭೂತ ಪೂಜೆಯಿಂದ ವಿವಿಧ ಭೂತಗಳಿಗೆ ನಿಯಾಮಕವಾದ ವಿವಿಧದೇವತೆಗಳ ಪೂಜೆ (Polytheism) ಪ್ರಸಕ್ತವಾಯಿತು (ಭಾತತ್ತ್ವ. ೩೫). [ಸಂ. ಭೂತಪೂಜಾ]

**ಭೂತಬಲಿ** (ನಾ). ದೇವತೆ, ಭೂತ, ದೈವ ಮೊದಲಾದುವುಗಳ ತೃಪ್ತಿ ಗಾಗಿ ಕೊಡುವ ಬಲಿ,— ಆಹುತಿ :ಕುಜೀಯ ಹಣಿದದ . . . ದಂಡೆ ಯುಲಿ ಕಲಸಿದ ಕೂಳ ಮುದ್ದೆಗಳ ಹೊಜಗೆ ಬಡಿಸಿದ ಭೂತಬಲಿ ಬೊಬ್ಬಿಟ್ಟಿತ್ತ ದೊಡನುಬ್ಬೇಳ್ವ ಲಗ್ಗೆಯ ಹಜೆಗಳಬ್ಬರವಾಯ್ತು ಬರ್ಣನ ಶಸ್ತ್ರಪೂಜೆಯುಲಿ (ಕುಮಾ.ಭ. ೬-೯). [ಸಂ.]

**ಭೂತಭಾಗ್ಯ** (ನಾ). ಅದೃಷ್ಟಶಾಲಿ ; ಭಾಗ್ಯವಂತ : ಆತುಕೆಲಳ ಲಿಂದೀ ಸುಯೋಧನ ಜಾತಪುಣ್ಯನೊ ಧರ್ಮಪುತ್ರನೆ ಭೂತಭಾಗ್ಯನೊ ಕಾಣಲಹುದ್ಯೆ ಶಲ್ಯ ಕೇಳೆಂದ (ಕುಮಾ.ಭ. ೨೧-೧೧). [ಸಂ.]

**ಭೂತಯಜ್ಞ** (ನಾ). (ಗೃಹಸ್ಥನು ಪ್ರತಿದಿನವೂ ಆಚರಿಸಬೇಕೆಂದು ಧರ್ಮಶಾಸ್ತ್ರಗಳಲ್ಲಿ ಹೇಳಿರುವ) ಪಂಚಯಜ್ಞಗಳಲ್ಲಿ ಒಂದು : ಪ್ರಾಣಿಗಳನ್ನು ಉದ್ದೇಶಿಸಿ ಕೊಡುವ ಬಲಿ : ಶ್ರುತಿಪಠಣವೋ ತರ್ಪ ಣವೋ ಮೋಣತಿಥಿಪೂಜೆಯೊ ಭೂತಯಜ್ಞವೊ ಹುತವಹಾರಾಧನೆಯೊ ರಣವೀರರ್ಪ್ಯೊಯ್ಬರೊಳಗೇನು (ಕುಮಾ.ದ್ರೋ. ೧೬-೫೭); ಬಳಿಕ ದೇವಯಜ್ಞ ಪಿತೃಯಜ್ಞ ಮನುಷ್ಯಯಜ್ಞ ಭೂತಯಜ್ಞ ಬ್ರಹ್ಮಯಜ್ಞಾದಿಗಳಂ ಮಾಳ್ಪಾತನಾಗಿ (ಶಿವೇಕ. ೦೩೯); ಬ್ರಹ್ಮಯಜ್ಞ, ಪಿತೃಯಜ್ಞ, ದೈವಯಜ್ಞ, ಭೂತಯಜ್ಞ, ಮನುಷ್ಯಯಜ್ಞ — ಈ ಐದು ಮಹಾಯಜ್ಞಗಳು . . . ಬಲಿಹರಣವು ಭೂತಯಜ್ಞವು (ಆರ್ಯಧ. ೧೬೭). [ಸಂ.]

**ಭೂತರೂಪ** (ನಾ). [ವ್ಯಾಕ] ಭೂತಕಾಲದ ರೂಪ : ಬಿಸುಡು ಎಂಬ ಧಾತುವಿಗೆ ಭೂತರೂಪದಲ್ಲಿ ಬಿಸುಟ್ಟಂ, ಬಿಸುಟಂ ಎಂಬ ರೂಪಗಳು ಬರುವುವು (ಕೈಪಿಡಿ. ೯೭). [ಸಂ.]

**ಭೂತಲ, ಭೂತಳ** (ನಾ). ೧. ಭೂಮಿಯ ಮೇಲ್ಮೈ : ಭೂಮಿಯ ಮೇಲುಭಾಗ. ೨. ಭೂಮಿ : ಭೂತಲಮನಾಂ ತರಲಾದಿವರಾಹ ನಾದೆಂ (ಶಬರ. ೧೧-೭೬) ; ಈ ಸುಂದರವಾದ ಭೂತಲದ ಮೇಲೆ ಅವನು . . . ಮಸಿಯ ಒಂದು ಕರ್ಕಶ ಮುಚ್ಚೆಯಂತಿದ್ದ ! (ಶೀರಯೋ. ೫೩). ಭೂತಳ : ೨. ರಸೆಯಿಂ ಭೂತಳದಿಂ ಕುಳಾದ್ರಿಕುಳದಿಂ . . . ಅಜಾಂಡತಟದಿಂದತ್ತಲ್ಲಾ ಪೊಕ್ಕಿರ್ದುವಿಂ ಮಿಸುಗಲ್ ತಿಗುರ್ಮಿ (ಶಂಕರಾ. ೧೦-೧೦೬) ; ನಿಮ್ಮಯ ಭೂತಳವನಾಳುವರೆ ನೀವೆಂದಿಟ್ಟನಾ ಭೀಷ್ಮ (ಕುಮಾ.ವಿ. ೬-೫೩). ೩. ಲೋಕದ ಜನ ; ಮಾನವಸಮೂಹ : ಸೀತೆ ಭೂತಳವಜಿಯೆ ಪರಿಶುದ್ಧೆ (ಕೈಬಾ. ೨೦-೭೩). [ಸಂ.]

**ಭೂತಲಪತಿ** (ನಾ). ಭೂಮಿಯ ಒಡೆಯ; ಅರಸು; ರಾಜ : ನಿಲಲೊಡ ಮನಿಬರುಮಂ ಭೂತಲಪತಿ ಬಟಿಯಟ್ಟಿ ಬರಿಸೆ (ಆದಿಪು. ೦೫-೧೧); ಭೂತಲಪತಿ ಬಂದನುಚ್ಚಿತಸಿತಾತಪವಾರಣಪುಷ್ಪಿತಾಂಬರಂ (ಚಂದ್ರಪು. ೩-೫೦). [ಸಂ.]

**ಭೂತಲೀಲೆ** (ನಾ). ೧. ದೆವ್ವದ ಆಟ. ೨. (ಅಲಂ) ಗೊತ್ತುಗುರಿ ಯಿಲ್ಲದ, ವಿಚಾರಶೂನ್ಯವಾದ ವ್ಯವಹಾರ : ಸಣ್ಣಸಣ್ಣ ಮಾತಿನ ಸಲುವಾಗಿ ವಾದವಿವಾದದ ಭೂತಲೀಲೆ ನಡೆದು ಜೀವದ ಸಂವಾದವು ಮರೆತುಹೋಗಿ ಹೃದಯವು ರಣರಂಗವಾಗುತ್ತದೆ (ಗೊತ್ತುಗು. ೧೫೪). [ಸಂ. ಭೂತಲೀಲಾ]

**ಭೂತಲೇಶ, ಭೂತಳೇಶ** (ನಾ). ಭೂಮಿಯ ಒಡೆಯ; ಅರಸು; ರಾಜ : ಶೀತಕರಧರನೊಲಿದ ಭಕ್ತನು ಭೂತಲೇ [ಪಾಠಾಂ. ಳೇ]ಶನು ನಗಲೊಡನೆ ತನ್ನಳಿನಮುಖಿ ನೋಡಿ (ಐಶಪು. ೯೩-೯). ಭೂತಳೇಶ : ಪೂತುರೆಯೆಂದು ಕೊಂಡಾಡಿ ತನ್ನಯ ತನುಜಾತರುಗಳನಾಹವಕೆ ಭೂತಳೇಶ[ಪಾಠಾಂ. ಧಾತ್ರೀಶ್ವರ]ನು ಬೀಳ್ಕೊಡಲು (ತ್ರಿಪುರಾಂ. ೧೬-೧೯೯); ಪ್ರಾತಿಕಾಮಿಕ ಬಾ ಯುಧಿಷ್ಠಿರ ಭೂತಳೇಶನ ಕರೆದು ತಾರೆ (ಕುಮಾ.ಸ. ೦೭-೨೩). [ಸಂ.]

**ಭೂತವತಿ** (ನಾ). [ವ್ಯಾಕ] ಭೂತಕಾಲ : ಭೂತವತಿ ವರ್ತಮಾನಂ ಖ್ಯಾತ ಭವಿಷ್ಯಂತಿ ಸರ್ವಸಾಧನಿಯೆಂಬಖ್ಯಾತವಿಭಕ್ತಿಗಳಕ್ಕುಮತೀತಭವ ದ್ಭಾವಿಕಾಲ ವಿದ್ಯಾದಿಗಳೊಳ್ (ಕಾವ್ಯಾವ. ೩೭೯); ಭೂತವತಿಯ ಕೃತ್ತಿಂಗೆ 'ನಲಿವಂ' ಎಂಬಲ್ಲಿ ಅವನ್ ಎಂಬ ವಿಭಕ್ತಿಯುಂ ಕಳೆದು, ನಲಿದ ಎಂಬ ಕೃತ್ತನಿರಿಸಿ, ನಾಮವಿಭಕ್ತಿಯುಂ ಪತ್ತಿಸಿ, ನಲಿದಂ, ನಲಿದನಂ, ನಲಿದನಿಂ ಎಂದು ಮಾಳ್ಪುದು (ಶಬ್ದಮ. ೭೩ ಪ್ರಯೋ). [ಸಂ. ಭೂತವತೀ]

**ಭೂತವಾದಿ** (ನಾ). [ತತ್ತ್ವಶಾ] ಭೂಮಿ, ಜಲ, ತೇಜಸ್ಸು, ವಾಯುವೆಂಬ ಭೂತಗಳ ಸಂಯೋಗದಿಂದ ಉಂಟಾಗುವ ಚೈತನ್ಯವನ್ನೇ ಜೀವವೆಂದು ವಾದಿಸುವವನು ; ನಾಸ್ತಿಕ ; ಚಾರ್ವಾಕ : ಶರೀರವೃದ್ಧಿಯೊಳ್ ಚೈತನ್ಯವೃದ್ಧಿಯೆಂಬುದುದ್ವೃದ್ಧಿ ಯೊಳ್ ಅಂಕುರವೃದ್ಧಿಯಂತಂತೆ ಸಹಕಾರಿಕಾರಣಮೆಂದನೇಕಯುಕ್ತ್ಯುಕ್ತಿ ಗಳಿಂ ಭೂತವಾದಿಯಪ್ಪ ಮಹಾಮತಿಯಂ ನಿರಾಕರಿಸಿ (ಆದಿಪು. ೨-೧೧ ವ). [ಸಂ. ಭೂತವಾದಿನ್]

**ಭೂತವಾಸ** (ನಾ). ಒಂದು ಬಗೆಯ ಮರ ; ತಾರೆ : 'ಭೂತಾವಾಸ' ಪಾಠ. [ಸಂ.]

**ಭೂತವೇಶಿ** (ನಾ). ಒಂದು ಬಗೆಯ ಸಸ್ಯ ; ನಿರ್ಗುಂಡಿ : "ಶ್ವೇತಸುರಸಾ. ಭೂತವೇಶಿ. ಸಿತಾಸಾ, ಬಿಳೀಹುವ್ವುಗಳುಳ್ಳ ಲಕ್ಕಿಲಿ" (ಸಿದ್ಧೌಷಧಿ. ೧೨೬). [ಸಂ. ಭೂತವೇಶೀ]

**ಭೂತಶಂಕೆ** (ನಾ). ದೆವ್ವಗಳಿಂದಾಗುವ ಭಯ ; ದೆವ್ವ, ಪಿಶಾಚಿಗಳ ಭಯ : ಅವಳಿಗೆ ಭೂತಶಂಕೆಯಾಗಿರಬೇಕು. ಒಂದು ಯಂತ್ರ ಕಟ್ಟಿಸಬೇಕು (ರೂಢಿ). [ಸಂ. ಭೂತಶಂಕಾ]

**ಭೂತಶುದ್ಧಿ** (ನಾ). [ಶೈವ] ಶಿವೋಪಾಸನೆಯ ಅಂಗವಾಗಿ ಮಾಡುವ ಸಂಸ್ಕಾರ ; ಪೂಜಾದಿಗಳ ಪ್ರಾರಂಭದಲ್ಲಿ ದೇಹಾರಂಭಕವಾದ ಪಂಚಭೂತಗಳನ್ನು ಶೋಧಿಸುವುದು, ಬೀಜಮಂತ್ರಪೂರ್ವಕವಾಗಿ ಎಡಹೊಟ್ಟೆಯಲ್ಲಿರುವ ಪಾಪಪುರುಷನನ್ನು ಸುಟ್ಟು ಶರೀರವನ್ನು ಶುದ್ಧಿಗೊಳಿಸುವುದು. ಇದರ ಕ್ರಮವು ಆಗಮಗ್ರಂಥಗಳಲ್ಲಿ ನಿರೂಪಿತವಾಗಿದೆ : ಭೂತಶುದ್ಧಿಯೇ ಮೊದಲಾದ ಭಾವನಾಸಂಸ್ಕಾರಗಳಿಂದ ಪರಿಶುದ್ಧವಾದ ದೇಹದಲ್ಲಿ ಮಾನಸಿಕವಾಗಿ ಧ್ಯಾನಯೋಗದಿಂದ ಮಾಡುವ ಉಪಾಸನೆಯು "ಅಂತರ್ಯಾಗ" ವೆಂದೂ . . . ಉಕ್ತವಾಗಿದೆ (ಶಾರದ. ೬೨). [ಸಂ.]

**ಭೂತಸಂಜ್ಞೆ** (ನಾ). ಪದಾರ್ಥಗಳ ಸಂಕೇತ : "ಮನು ಭುವನ ಪದಿನಾಲ್ಕು . . . ದಂತ ಮೂವತ್ತೆರಡುಮಿಂತಿವೆಲ್ಲಂ ಭೂತಸಂಜ್ಞೆಯಕ್ಕುಂ" (ಷುಂಗರಾ. ೦೦೪-೯). [ಸಂ. ಭೂತಸಂಜ್ಞಾ]

**ಭೂತಸಂತುಷ್ಟಿ** (ನಾ). ದೆವ್ವ, ಪಿಶಾಚಿ. ಕ್ಷುದ್ರಶಕ್ತಿಗಳೇ ಮೊದಲಾದ ಅಮಾನುಷಸತ್ವಗಳ ತೃಪ್ತಿ ; ಕ್ಷುದ್ರಶಕ್ತಿಗಳ ತೃಪ್ತಿ : ಭೂತಸಂತುಷ್ಟಿಯಪ್ಪಂತೆ ಕುಜಿ ಕೋಣಂಗಳಂ ಪೊಯ್ಸಿ ಬಣ್ಣಗೂಳಂ ಪಸರಿಸಿ (ಶೈಮಿಭಾ. ೩-೬೨). [ಸಂ.]

**ಭೂತಸಂಹಾರಿ** (ನಾ). ಒಂದು ಬಗೆಯ ಸಸ್ಯ : "ಭೂತಾಂಕುಶಂ ಭೂತಸಂಹಾರಿಯಕ್ಕುಂ" (ಷುಂಗರಾ. ೩೭-೦೬). [ಸಂ. ಭೂತಸಂಹಾರಿನ್]

**ಭೂತಸಿದ್ಧಿ** (ನಾ). ಪಂಚಮಹಾಭೂತಗಳನ್ನು ವಶಪಡಿಸಿಕೊಳ್ಳುವ ಒಂದು ಬಗೆಯ ಯೋಗಸಿದ್ಧಿ : ಧರೆ ಜಲಾನಲ ಮಾರುತಾಂಬರವಿರುವ ತತ್ವಗಳಿವನು ಜಯಿಸಲು ದೊರೆಯುತಿಹುದಾ ಭೂತಸಿದ್ಧಿಯು ಪರಿಪಯಿಪಲವಗೆ (ಗನಶಾ. ೪-೦೨೬). [ಸಂ.]

**ಭೂತಸ್ಥಾನ** (ನಾ). (ಕರಾ) ಭೂತಗಳ ಪೂಜೆ ನಡೆಯುವ ಸ್ಥಳ, - ಬೀಡು : ತುಳುರಾಜ್ಯದಲ್ಲಿ ಬ್ರಾಹ್ಮಣರ ಅನಂತರ ೨ನೇ ಮರ್ಯಾದೆಯು ಎಲ್ಲಾ ದೇವಸ್ಥಾನಗಳಲ್ಲಿಯೂ ಭೂತಸ್ಥಾನಗಳಲ್ಲಿಯೂ ಇವರಿಗೆ ಸಲ್ಲುತ್ತದೆ (ತುಳುಪಾ. ೩೦). [ಸಂ.]

**ಭೂತಹಿತ** (ನಾ). ಜನತೆಯ ಕ್ಷೇಮ : ಭೂತಹಿತಕಾರುಣ್ಯಸುಧೆಗಡಲ್ತಾತ ದುರ್ಧರಕರ್ಮಕೋಟಿವಿಘಾತನಂ (ಜಾಗಷ. ೦೪-೯೦); ಒಂದಾನೊಂದು ದಿನಮುಮಾ ದೇವಿಯು . . . ತಾನೆಳಸಿದ ಭೂತಹಿತಪ್ರಯೋಜನವನ್ನು ಆ ಪರಮೇಶ್ವರನಿಂದಲೇ ತಿಳಿಯೆ ಕೇಳ್ವೆನೆಂಬಿಚ್ಛೆಯಿಂದ . . . ವಿಜ್ಞಾಪನಂಗೆಯ್ವಲ್ಲಿ (ಶಕವ್ವ. ೩). [ಸಂ.]

**ಭೂತಳ** 'ಭೂತಲ' ನೋ.

**ಭೂತಳೇಶ** 'ಭೂತಲೇಶ' ನೋ.

**ಭೂತಾಂಜನ** (ನಾ). ದೆವ್ವ, ಪಿಶಾಚಿ ಮೊದಲಾದ ಕಣ್ಣಿಗೆ ಕಾಣದ ವಸ್ತುಗಳನ್ನು ಕಾಣುವಂತೆ ಮಾಡುವ ಸಾಮರ್ಥ್ಯವನ್ನು ಹೊಂದಿರುವುದೆಂದು ನಂಬಲಾದ ಕಾಡಿಗೆ : (ಕಿ). [ಸಂ.]

**ಭೂತಾಕಾರ** (ನಾ). ದೊಡ್ಡ ಆಕಾರ,—ಗಾತ್ರ : ಹೆಂಗುಸಾದ ಚಿಕ್ಕಿಯ ಮನಸ್ಸನ್ನು ಅದು ಹೊಕ್ಕ ಮೇಲೆ ಕೇಳಬೇಕೆ ? ಕ್ಷಣದಲ್ಲಿ ಭೂತಾಕಾರವನ್ನೇ ತಾಳಿತು ಅದು ! (ಕುಬಕೂ. ೩೭). [ಸಂ.]

**ಭೂತಾಗ್ರಣಿ** (ನಾ). ೧. ಶಿವ. ೨. [ಛಂದ] ರುದ್ರಗಣಪ್ರಸ್ತಾರದ ಪದಿನಾರು ಭೇದಗಳಲ್ಲಿ ಒಂದು: ರುದ್ರಗಣಮೆಂತೆಂದೊಡೆ :-೧. ಗಂಗಾಧೀಶಂ ... ೧೩. ಭೂತಾಗ್ರಣಿ (ಛಂದೋಂಬು.೩-೨೪೦ವ). [ಸಂ. ಭೂತಾಗ್ರಣೀ]

**ಭೂತಾಡನಂಗೆಯ್** (ಕ್ರಿ). ನೆಲವನ್ನು ಒದೆ.-ಘಟ್ಟಿಸು: ಪುಷ್ಕರಣದೊಳ್ ಕೆಂದಳಿಂ ಕೆಂದಳಿರಂತೆ ತೊಳಗೆ ದೀರ್ಘಾಂಗುಳಿಯಿಂ ಪಿಡಿದು ಗರುಡನೊಪ್ಪಮಂ ಗಾಳಿಯ ನುಸುಳುಮಂ ಕೈಕೊಂಡು ಕೊಂಡಾಡಿ ಮನಮೆ ಮಾನಸವಾದಂತೆ ಪರಿದು ಪರಿಯಾಳ್ ಬಳಲ್ದು ಕುಡೆಂಬ ತಿಂಬುಮೊಳಗಿಂ ಬೆಂಗೆ ಬಾ ಎಂಬಂತೆ ಭೂತಾಟ[ಡ]ನಂಗೆಯ್ದು ಗಜದ ಬೆಂಗೆ ಸಿಂಗದಂತೆ ಲಂಘಿಸಿಯಾನೆಯ ಪೊರಜೆಯಾಗೆ ಪೂರ್ವಾಸನದೊಳ್ ಪದುಳಮಿರ್ದು (ಆರ್ಜನೇ. ೩-೦೦೩ ವ). [ಭೂ + ತಾಡನ + ಕೆಯ್$_1$]

**ಭೂತಾತ್ಮ** (ನಾ). ೧. ಪಂಚಭೂತಸ್ವರೂಪವಾದುದು ; ದೇಹ ; ಶರೀರ: 'ಭೂತಾತ್ಮ', 'ಇಂದ್ರಿಯಾತ್ಮ'. ಎಂದು ಪ್ರಯೋಗ ಮಾಡಿರುವುದು ಕಂಡುಬರುತ್ತದೆ(ಯಾದ್ದರಿಂದ ಮುಖ್ಯವೃತ್ತಿಯಿಂದಲೇ ಅಚೇತನವನ್ನು ಆತ್ಮಬಲದಿಂದ ಕರೆಯಬಹುದೆಂದು ಗೊತ್ತಾಗುತ್ತದೆ) (ಬ್ರಹ್ಮಶಾ. ೯೦). ೨. ಎಲ್ಲಾ ಭೂತಗಳಲ್ಲೂ ಆತ್ಮರೂಪದಿಂದ ಇರುವವನು ; ಪರಮಾತ್ಮ ; ಶಿವ : ಎನಗೆ ನ್ಯೆಜಾತ್ಮನಾಗುತ್ತಾ ಸಮಸ್ತ ಭೂತಾತ್ಮನಾಗುತ್ತಮಿರ್ಪ ಅನಘಗುರುವೇ ನಿನಗೆ ವಂದಿಸುವೆ (ಶೀಕ್ಷಪು. ೦-೦-೦೪). ೩. ವಿಷ್ಣು. ೪. ಜೀವಾತ್ಮ ; ಜೀವ. [ಸಂ. ಭೂತಾತ್ಮನ್]

**ಭೂತಾಪಕಾರಿ** (ನಾ). ೧. ಜಗತ್ತಿಗೆ ಧಗೆಯನ್ನುಂಟುಮಾಡುವವನು,-ತಾಪವನ್ನುಂಟುಮಾಡುವವನು. ೨. ಪ್ರಾಣಿಗಳಿಗೆ ಕೆಡುಕನ್ನುಂಟುಮಾಡುವವನು. ೧, ೨ : ಪೊನಲೊಳ್ ಮುಳುಗಿಸಿ ಹಿಮಕರ ದಿನಕರರಂ ಮುಸುಳಿಸಿತ್ತು ಜನಸವನಪ್ರಯೋಂಬುನಿಕಾಯಂ ದೋಷಾಕರನೆನಿಪನ ಭೂತಾಪಕಾರಿಯೆನಿಪನ ಸಿರಿಯೇಂ (ಪುಷ್ಪಕ. ೦೧-೩೬).
[ಸಂ. ಭೂತಾಪಕಾರಿನ್ (ಭೂ + ತಾಪಕಾರಿನ್ ; ಭೂತ+ಅಪಕಾರಿನ್)]

**ಭೂತಾಮರ** (ನಾ). [ಜೈನ] ವ್ಯಂತರದೇವತೆಗಳಲ್ಲಿ ಒಂದು ಪಂಗಡ,-ಭೇದ : ನೆನೆದ ಮನದಿಂ ಮುನ್ನಂ ಭೂತಾಮರರ್ ಬರೆ (ಶಾಂತಿಪು. ೯-೮೦). [ಸಂ.]

**ಭೂತಾರಾಧನೆ** (ನಾ). = ಭೂತಪೂಜೆ ೧ : ಹೀಗೆ ಭೂತಾರಾಧನೆಯು ಕ್ರಮಬದ್ಧ ಜೀವನದ ಮೊತ್ತ ಮೊದಲಿನ ವ್ಯವಸ್ಥೆಯೆಂದೂ . . . ಎಣಿಸಬಹುದು (ತುಳುಪಾ. ೨೩೦); ಇದೇನು ಭೂತಾರಾಧನೆ ? ಇದಾವ ಬಗೆಯ ಪೂಜೆ ಎಂಬುದು ಅವನಿಗೆ ಹೊಳೆಯದೆ ಹೋಯಿತು (ಸ್ವಶ್ವಹೂ. ೨೪೨). [ಸಂ. ಭೂತಾರಾಧನಾ]

**ಭೂತಾವಾಸ** (ನಾ). ೧. ಶರೀರ. ೨. ಶಿವ. ೩. ವಿಷ್ಣು. ೪. ಒಂದು ಬಗೆಯ ಮರ; ತಾರೆಮರ: "ವಿಭೀತಕಃ, ಅಕ್ಷಃ, ತುಷಃ, ಕರ್ಷಫಲಃ ಭೂತಾವಾಸಃ, ಕಲಿದ್ರುಮಃ- ೬, ತಾರೇಗಿಡದ ಹೆಸರುಗಳು" (ಸಿದ್ಧೌಷಧಿ. ೦೨೩). 'ಭೂತವಾಸ' ಪರಾ. [ಸಂ.]

**ಭೂತಾಳ** (ನಾ). ಒಂದು ಬಗೆಯ ಮರ : ತಮಾಳ ಭೂತಾಳ ತಾಳ ವೃಕ್ಷವನರನೆಲ್ಲಿಯ ಕರ್ಪೂರವಾಳಿಯನವ ಕಂಡನಲ್ಲಿ (ರಾಜಮು. ೦೦-೦೦೭). [ಸಂ. ಭೂತಾಲ]

**ಭೂತಾಳಕ್ರಿಯೆ** (ನಾ). [ಸಂಗೀತ] ಒಂದು ಉಪಾಂಗರಾಗದ ಹೆಸರು : ದೇವಕ್ರಿಯೆ ತ್ರಿಣೇತ್ರಕ್ರಿಯೆ ಭೂತಾಳಕ್ರಿಯೆಯೆಂಬ ಮೂಱುಂ ಕೋಲಾಹಲರಾಗಕ್ಕುಪಾಂಗಂಗಳು (ವಿವೇಳ. ೨೩೪). [ಸಂ. ಭೂತಾಲಕ್ರಿಯಾ]

**ಭೂತಾಳಿ** (ನಾ). ಒಂದು ಬಗೆಯ ಮರ : "ಭೂತಾಳಿ – ನೆಲದಾಳು, ನೆಲಹಾದರಿ" (೬ಶಧಿ. ೦೦೨) ; ಗೊರಟೆಹೂಗಳ ಹಳದಿಯ ನಡುವೆ . . . ಭೂತಾಳಿಯ ರಕ್ತವರ್ಣದ ಎಲೆಯ ರೂಪದ ಹೂಗಳೂ ರಂಜಿಸಿದ್ದುವು (ಮರವು. ೯೬). [ಸಂ. ಭೂತಾಲೀ]

ದ್ವಾರಪಾಲಕರಾಗಿದ್ದು ಶಿವಸೇವೆಯನ್ನು ಮಾಡುತ್ತಿದ್ದರೆಂದು ಕಾಳಿಕಾಪುರಾಣದ ೪೫ನೆಯ ಅಧ್ಯಾಯದಲ್ಲಿ ವಿವರಿಸಲಾಗಿದೆ. [ಸಂ.]

**ಭೃಂಗೀಶ** (ನಾ). =ಭೃಂಗಿ$_1$ ೧ : ಭೃಂಗೀಶ ವೀರಗಣೇಶರುಂ ರುದ್ರೇಶ ಯೋಗಾಚಾರ್ಯರುಂ ನೆರೆದೋಲಯಿಸುತಿರಲು (ಐಸೃ. ೨೪-೪೮) : ಗಗನ ಪಥದೊಳ್ ಪಿನಾಕಿ ಕಂಡಳ್ಕಿಯಿಂದಾ ತಲೆಗೆ ಕಳುಹಿದಂ ಭೃಂಗೀಶನಂ ಮುದದೊಳು (ಶೈಬಸ. ೦೪-೦೮). [ಸಂ.]

**ಭೃಗು** (ನಾ). ೧. ಬ್ರಹ್ಮನ ಹೃದಯದಿಂದ ಜನಿಸಿದವನು; ಒಬ್ಬ ಬ್ರಹ್ಮರ್ಷಿ: ಪರನಿಳಯದೊಳು ಹುಗುವ ಸಂದೀಶ್ವರನೊ . . . ವರಮುನಿಪ ದೂರ್ವಾಸನೋ ಭೃಗುವೋ (ಐಸೃ. ೪೩-೪೦); ರಕ್ಷೋಘ್ನ ಮಂತ್ರದಿಂದೆಂಟುಬಾಗಿಲ್ಗಳಂ ರಕ್ಷಿಸುವರಾಗಿ ವಿಶ್ವಾಮಿತ್ರ ಭೃಗು . . . ಅಕ್ಷಯತಪೋಧನದ ವರಮುನಿಗಳೆಲ್ಲರುಂ ಲಕ್ಷಿತದ ಪೂಜೆಗಳನನುಕರಿಸಲು (ಶೈಬಸ. ೩೩-೪೦); ಭೃಗುಮುನಿಯ ಶಾಪದಿಂ ಪನ್ನಗಶಯನಂ ಪತ್ತು ಯೋನಿಯೊಳ್ ಪುಟ್ಟಿದನು (ಶೃತಂ. ೩೬-೪೦). ೨. ಪರಶುರಾಮನ ತಂದೆ; ಜಮದಗ್ನಿ: 'ಭೃಗುಸುತ' ನೋಡಿ. ೩. ದೈತ್ಯಗುರು; ಶುಕ್ರ: "ರಂಗವಾನ್ ಕಾವ್ಯನಾ ಕವಿ ಭಾರ್ಗವಂ ಭೃಗು ಸಿತಾಂಗನುಶನನಸುರಗುರು ವೆಂದೆನಲು ಶುಕ್ರನು" (ಶಂಗಣ. ೦೨-೬); ಕವಿರಿಪು ಗುರು ಗುರುರಿಪು ಭೃಗುವವರೇಪರೆನಲ್ ಧರಿತ್ರಿ ಕವಿಗುರು ಜನತೋದ್ಭವವೊವವೆ ಮಂತ್ರ ಗುಣಮೊಪ್ಪುವುದು ಮಹಾದೇವದಣ್ಣನಾಥೋತ್ತಮನೊಳ್ (ಎಕ. VIII. ಸೊರಬ. ೨೮-೪೬; 1208?). ೪. ಬೆಟ್ಟದ ಇಳಿಜಾರು,— ಕಡಿದಾದ ಭಾಗ: "ಸಾನುಕಟಕಂ ಭೃಗು ಪ್ರಸ್ಥಂ ತಟಂ ನಿತಂಬಂ ಗಿರಿಯ ಹೊರೆಯಕ್ಕು" (ಶಂಗಣ. ೩೦-೨). ೫. ಶುಕ್ರವಾರ. ೬. ಶುಕ್ರನೀತಿಶಾಸ್ತ್ರ: ವರಸೂಪಶಾಸ್ತ್ರ ಭೃಗು ಚಿತ್ರ ರಸಾಳಂಕಾರ ಗಣಿತ ಗಜ ಹಯ ವೈದ್ಯಂ ಸ್ವರ ಶಕುನ ಕಾವ್ಯನಾಟಕ ಭರದಿ ಕಳಾವಿದನೆನಿಪ್ಪುದತಿ ಜಮುರವಿಟಂ (ಪುಶಂ. ೧೦-೦೮). ೭. [ಜ್ಯೋತಿ] ಶುಕ್ರನು ಅಧಿದೇವತೆಯಾದ ಗ್ರಹ; ಶುಕ್ರಗ್ರಹ. [ಸಂ.]

**ಭೃಗುಜ** (ನಾ). ೧. ಭೃಗುಋಷಿಯ ಮಗ: ಶುಕ್ರಾಚಾರ್ಯ. ೨. [ಜ್ಯೋತಿ] ಶುಕ್ರಗ್ರಹ: ಭೃಗುಜನಿಪ್ಪತ್ತೇಟಜೊಳ್ ನಿಂದೊಡಲ್ಲಿ ನಿಜೋಚ್ಚಾಲಯಭಾಗದಲ್ಲಿ ಪರಮೋಚ್ಚಸ್ಥಾಯಿ ತಾನಾ ಗ್ರಹಂ (ಜಾತಿ. ೦-೪೦). [ಸಂ.]

**ಭೃಗುಜೆ** (ನಾ). ೧. ಭೃಗುಋಷಿಯ ಮಗಳು; ಲಕ್ಷ್ಮಿ; ಭಾರ್ಗವಿ. ೨. ಒಂದು ಬಗೆಯ ಮರ; ಕಿರುದೇಗು: "ಸ್ವಸು ಭೃಗುಜೆ ಕಾಸಷ್ಠ ಕಿರುದೇಗೆನಿಪ್ಪುಂ" (ಶಂಗಣ. ೪೨-೧೮). [ಸಂ. ಭೃಗುಜಾ]

**ಭೃಗುಪತನ** (ನಾ). ಬೆಟ್ಟದ ಕಡಿದಾದ ಪ್ರದೇಶದಿಂದ ಕೆಳಕ್ಕೆ ಬೀಳುವುದು; ಮಹತ್ತರವಾದ ಪಾಪವನ್ನು ಮಾಡಿದವರು ಬೆಟ್ಟದಿಂದ ಧುಮುಕಿ ಆತ್ಮಹತ್ಯೆ ಮಾಡಿಕೊಂಡರೆ ಪಾಪಪರಿಹಾರವಾಗುವುದೆಂದು ಧರ್ಮಶಾಸ್ತ್ರಗಳಲ್ಲಿ ಹೇಳಿದೆ: ಜಮುಕು ಮರ್ಭರವಾದಾಗ ಬೆಟ್ಟದ ಶಿಖರದಿಂದ ಹಾರಿ ಪ್ರಾಣವನ್ನು ಕಳೆದುಕೊಳ್ಳುವ ಭೃಗುಪತನವೂ ಪುರಾಣೇತಿಹಾಸಕಾಲಗಳ ವೀರರ ಆತ್ಮಾರ್ಪಣೆಯ ಉದಾಹರಣೆಗಳು (ಶಾಂತಲಾ. ೩೪೨ ಟಿಪ್ಪಣಿ). [ಸಂ.]

**ಭೃಗುವಾರ** (ನಾ). ಶುಕ್ರವಾರ: ಅಂದಿದೊ ವಸಂತಪೂರ್ಣಿಮಿಯು ಭೃಗುವಾರದಾ ನಡುಹಗಲ ಸಿರಿ ಹೊತ್ತು (ಗೂರೊಕ್ಕಿಕ. ೦೦-೨೮೦). [ಸಂ.]

**ಭೃಗುವಿದ್ಯೆ** (ನಾ). (?) : ಚಿತ್ರಮೆಂಬ ಭೃಗುವಿದ್ಯೆಯೊಳಾರ್ದೊರೆ ರೇಚಭೂಪನೊಳ್ (ಪುಶಂ. ೦-೨೦). [ ? ]

**ಭೃಗುಸುತ** (ನಾ). ೧. ಜಮದಗ್ನಿಯ ಮಗ; ಪರಶುರಾಮ: ಬಲವಂತಂ ಭೀಮನಿಂದಂ ಛಲಿ ಭೃಗುಸುತನಿಂದಂ . . . ಸಮರವಿಜಯ ವಿಕ್ರಾಂತರಂಹಂ ನೃಸಿಂಹಂ (ಎಕ. XI. ದಾವಣ. ೨೫-೨೬; 1224); ಇಪ್ಪತ್ತೊಂದು ದಿನ ಭೃಗುಸುತನೊಡನೆ ಕಾದಿದನು ವಿರಥನ ಮಾಡಿದನು ಭೀಷ್ಮ (ಕುವ್ಯಾಉ. ೨-೩೬). ೨. ಶುಕ್ರಾಚಾರ್ಯ. ೩. [ಜ್ಯೋತಿ] ಶುಕ್ರಗ್ರಹ: ನಿಶಾಪತಿಸುತನಿಂ ಮಲ್ಲಂ ಭೃಗುಸುತನಿಂ ಪರದಾರಶೀಲನೆನಿಕುಂ ಮನುಜಂ (ಜಾತಿ. ೦೫-೩). [ಸಂ.]

**ಭೃಗುಸೂನು** (ನಾ). = ಭೃಗುಸುತ ೩ : ಸೋಮಸೂನು ಭೃಗುಸೂನು ಸುಧಾಕರರೇಕಾದಶದೊಳ್ ನಿಲೆ ಪರಾಕ್ರಮೋನ್ನತಿಯೆನಿಪ್ಪ ಭೂಪತಿಯಕ್ಕುಂ (ಜಾತಿ. ೦೨-೪). [ಸಂ.]

**ಭೃತ** (ಗು). ೧. ಕಾಪಾಡಿದ; ರಕ್ಷಿಸಿದ: ಧಾರಿಣಿ ಬಣ್ಣಕುಂ ನಿಜ ಯಶೋವಲ್ಲೀ ವೃತಾಂಭೋದಮಾರ್ಗನನಾರಾಧಿತ ಭರ್ಗನಂ ಭೃತವಿಪಶ್ಚಿದ್ವರ್ಗನಂ ದುರ್ಗನಂ (ಶಂಶಸಂ. ೦೦-೦೬); ಧೃತಶಶಿಖಂಡ ಜಿತಸುಮಕಾಂಡ ವಿತರಣಶೌಂಡ ಭೃತಜಗದಂಡ ಪಾಲಯ . . . ಮಹೇಶ (ಶಾಳುಂತ. ೦೬೬ ಅಡಿ). ೨. ತುಂಬಿರುವ; ತುಂಬಿದ. (ನಾ). ೩. ಕೂಲಿಯ ಆಳು: ಸೇವಕ. ೪. ಅರ್ಥಪೂರ್ಣವಾದುದು: ಗಜಜ್ ಗರ್ಜಿಸುವುದು ಮಮಳರುವಿಸಾ ಬೇಳ್ವಿಯ ಮಾತಂ [ತೆ]ಮಳೆ ನುಡಿದೊಡಮ್ಮ ಗಂಡ[ವಾ] ತುಮಳುಂಬಂ ಭೃತಮಕ್ಕುಮೆಂದು ಮೆಯ್ಯಾಮೆಯ್ಗೆ ಬೆಸಸೆಂಬುದುಂ (ಶಂಶಭಾ. ೬-೨೬ ವ); "ಭೃತಮಕ್ಕುಂ – ಹೀನವಾಗುತ್ತದೆ" (ಶಂಶಟೀ. ೨೨೨). [ಸಂ.]

**ಭೃತಕ** (ಗು). ೧. ಪೊರೆದ; ಪೋಷಿಸಿದ. ೨. ಕೂಲಿ ತೆಗೆದುಕೊಳ್ಳುವ; ಸಂಬಳವನ್ನು ಪಡೆಯುವ. (ನಾ). ೩. ವೇತನವನ್ನು ತೆಗೆದುಕೊಂಡು ಸೇವೆ ಮಾಡುವವನು; ಸೇವಕ: "ಭೃತಕಃ, ಭೃತಿಭುಕ್, ಕರ್ಮಕರಃ, ವೈತನಿಕಃ – ೪ ಕೂಲಿಯವನ ಪೆಸರು" (ಸಿದ್ಧಾಂತಿ. ೩೦೨); ಭೃತಕಂ ಕೃತಕಪ್ರಣಯಮೆಂದಱಿಯದೆ ನೆಱೆ ಕೂರ್ತಳೆಗೆತ್ತು (ಸುಕುಮಾ. ೭-೨೮ ವ); ಕೂಲಿಕಾಱರೆಱಿಯನೆಂದು. . . ಭಕ್ತಿಯಿರ್ದ ನೆಲೆಗೆ ಗಮನಿಸಿ ಯಬ್ಬೆಗೆ ಭೃತಕನಿರ್ಜೆಯಿಂದೊಡಂಸಿರ್ಪುದೆನಗೆ ಸಮುಮದಾಗೆ ಮಾಳ್ಪೆನಾನೆ ಕೂಲಿಯುಂ ದಿಟಂ ಸಮಂತು ಎನೆ (ಶಾಲಾಸ್ಕ. ೪-೦೩-೦ ರಗಳೆ). [ಸಂ.]

**ಭೃತವಂಶ** (ನಾ). ೧. ಕೊಳಲನ್ನು ಹಿಡಿದಿರುವವನು. ೨. ಕುಲವನ್ನು ಪೋಷಿಸುವವನು; ಕುಲರಕ್ಷಕ. ೧, ೨ : ಭೃತವಂಶನಾಗಿಯುಂ ವ್ಯಪಗತರಾಗಾಸಕ್ತ ಸಿಂಹನಂದ್ಯಾಚಾರ್ಯವ್ರತಿಪತಿ ಸತ್ತ್ವತ್ವಸಮನ್ವಿತನಾಗಿಯುಮಾತ್ತತತ್ತ್ವಚಯಚಾತುರ್ಯಂ (ಶಂಧೃಕ. ೦-೦೪). [ಸಂ.]

**ಭೃತಿ** (ನಾ). ೧. ರಕ್ಷಣೆ; ಪೋಷಣೆ. ೨. ಕೂಲಿ; ವೇತನ; ಸಂಬಳ: "ಕರ್ಮಣ್ಯಾ, ವಿಧಾ, ಭೃತ್ಯಾ, ಭೃತಿಃ . . . ಪಣಃ – ೧೧ ಕೂಲಿಯ ಪೆಸರುಗಳು" (ಸಿದ್ಧಾಂತಿ. ೩೦೬). ೩. ಅಸಲು; ಮೂಲಧನ; ಬಂಡವಾಳ. ೪. ಆಹಾರ. ೫. ಕೂಲಿ ಪಡೆದು ಮಾಡುವ ಸೇವೆ. ೬. ಕೊಡುವುದು; ದಾನ: "ವಿಶ್ರಾಣನಂ, ವಿಹಾಯನಂ, ಭೃತಿಃ . . . ದಾನಂ — ಈ ೧೦ ಕುಡುವುದು" (ಶಲಾಯು. ೩೪-೨೬೩). ೭. ಸಂಪಾದನೆ; ಗಳಿಕೆ: ಶತಲಕ್ಷಧನದ ಲೆಕ್ಕದ ಬಾಯಿ ನುಡಿದೊಡೇಂ? ಭೃತಿಯೆಷ್ಟು ವೆಚ್ಚಕ್ಕೆ ? (ಶಂಕಳ. ೬೫೫). [ಸಂ.]

**ಭೃತಿಭುಜ** (ನಾ). ಕೂಲಿಯನ್ನು ಪಡೆಯುವವನು; ಸೇವಕ: "ಭೃತಕಃ, ಭೃತಿಭುಕ್, ಕರ್ಮಕರಃ, ವೈತನಿಕಃ —೪ ಕೂಲಿಯವನ ಪೆಸರು" (ಸಿದ್ಧಾಂತಿ. ೩೦೨). [ಸಂ. ಭೃತಿಭುಜ್]

**ಭೃತ್ಯ** (ನಾ). ೧. ಆಳು; ಸೇವಕ: "ಭೃತ್ಯಃ, ದಾಸೇರಃ . . . ಪರಿಚಾರಕಃ — ೧೧ ಬಂಟನ ಪೆಸರು" (ಸಿದ್ಧಾಂತಿ. ೩೦೨); ಈ ವರ್ಣಮಿಾ ವರ್ಣಶೂನ್ಯನ ಭೃತ್ಯಂಗೆಸೆವಂದಮಚ್ಚರಿ (ಜಗಪ. ೦-೫೦); ಬಲಿಸತೀರದು ನೃಪರ ಸೇವೆಯ ಮಾಡಿ ಭೃತ್ಯರಿಗೆ (ಕೌತಿರಾ. ೩೮-೫೬); ಬುದ್ಧಿ ಪರಾಕ್ರಮ ವಿರಬೇಕು ಭೃತ್ಯಗೆ ಭಕ್ತಿಯೊಂದಿರಬೇಕು ಜೊತೆಗೆ (ಇಂಜಾಶ. ೧೩೪-೮೦).

೨. ಸಚಿವ; ಮಂತ್ರಿ. ೩. ಪ್ರಜೆ.

**ಭೃತ್ಯಚಿಂತಾಮಣಿ**=ಸೇವಕರ ಇಷ್ಟಾರ್ಥಗಳನ್ನು ಪೂರೈಸುವವನು; ಒಂದು ಬಿರುದು : ಸುಭಟಚೂಡಾಮಣಿ ಭೃತ್ಯಚಿನ್ತಾಮಣಿ (ಶಾಇಇ. XX. ೦೩-೦೭; 875). [ಸಂ.]

**ಭೃತ್ಯತೆ** (ನಾ). ಆಳುತನ ; ದಾಸ್ಯ : ಎನ್ನಯ ಭೃತ್ಯತೆ ಪೋದೊಡ ಮೆನ್ನರಸನಾಜ್ಞೆಯುಳಿದೊಡಪೋಂ . . . ಮಾದೇವನೊಳ್ಕೈಕೃತ್ಯತ್ರಿಯೇಂ ಸಮನಿಸುಮೋ (ಶಾಚರಿ. ೦೯-೫೯). [ಸಂ. ಭೃತ್ಯತಾ]

**ಭೃತ್ಯತ್ವ** (ನಾ). ೧. = ಭೃತ್ಯತೆ: ದಾಸತ್ವ ವೀರದಾಸತ್ವ ಭೃತ್ಯತ್ವ ವೀರ ಭೃತ್ಯತ್ವ . . . ಎಂಬ ಷಡ್ವಿಧ ಸಜ್ಜನತ್ವಯುಕ್ತನಾಗಿ (ಬಿಬೀಳ. ೯೭). ೨. ವಿನಯ : ದಾಸಭಾವ ಇಂತೆಂದು ಖಿಳರಾಯನಧಿಕದೈನ್ಯದಲಿಯುತ್ಕಂತ ಭೃತ್ಯತ್ವದಿಂ ಬೇಡಿಕೊಳ್ಳಲು (ಜಪಪು. ೯-೯೭). [ಸಂ.]

**ಭೃತ್ಯಭಾವ** (ನಾ). = ಭೃತ್ಯತೆ : ಅವರ ದೇಶನಾಮಕುಲಗೋತ್ರಂಗಳಂ ನೆಱಿಯೆ ತಿಳಿಯೆ ಬಿನ್ನಪಂಗೆಯ್ದು ಭೃತ್ಯಭಾವಮಂ ಪೂಣಿಸಿ (ಅದಿಪು. ೦೩-೯೦ ವ). [ಸಂ.]

**ಭೃತ್ಯಾಚಾರ** (ನಾ). [ವೀಶೈ] ಪಂಚಾಚಾರಗಳಲ್ಲಿ ಒಂದು ; ಭೃತ್ಯ ನಂತೆ ಸೇವೆ ಸಲ್ಲಿಸುವುದು : ಲಿಂಗ ಜಂಗಮವ ಪೂಜಿಸಿ ಭಕ್ತನಾದ ನೆಂದರೆ ಭೃತ್ಯಾಚಾರ ಸದಾಚಾರವೆ ಮೊದಲು ನೋಡಾ (ಅಪಷಕ್ಷ. ೨೨೫-೦೦೨೦) ; ಭಕ್ತರೆಲ್ಲರೂ ಕೂರ್ತು ಹತ್ತೆ ಕರೆಯುತಿರೆ ಮತ್ತೆ ಕೆಲಕ್ಕೆ ಹೋಗಿ . . . ಭೃತ್ಯಾಚಾರವ ನುಡಿದು (ಬಸವ. ೨೪೫) ; ಬಸವಣ್ಣನವರ ಬಾಳಿನ ಘನತೆಯ ಗುರುತು ಅವರ ಭೃತ್ಯಾಚಾರ (ಶಕತ. ೦೨೯). 'ಪಂಚಾಚಾರ' ಪರಾ. [ಸಂ.]

**ಭೃತ್ಯಾಚಾರಿ** (ನಾ). [ವೀಶೈ] ಭೃತ್ಯಾಚಾರವನ್ನು ಪಾಲಿಸುವವನು : ಇಕ್ಕುಳ ಕೈಮುಗಿದರೇನು ಭೃತ್ಯಾಚಾರಿಯಾಗಬಲ್ಲುದೆ (ಬಸವ. ೦೨೫); ಲಿಂಗಕ್ಕೆ ಕೊಟ್ಟು ಕೊಂಡಡೆ ಪ್ರಸಾದಿ ಇದು ಕಾರಣ ಇಂತಪ್ಪ ಭೃತ್ಯಾಚಾರಿಗಲ್ಲದೆ ಪ್ರಸಾದವಿಲ್ಲ ಗುಹೇಶ್ವರ (ಅವಚಂ. ೩೯-೦೬೬). [ಸಂ. ಭೃತ್ಯಾಚಾರಿನ್]

**ಭೃತ್ಯೆ** (ನಾ). ೧. ಪೋಷಿಸುವುದು ; ಸಲಹುವುದು. ೨. ಆಧಾರ; ಬೆಂಬಲ. ೩. ಆಹಾರ. ೪. ಕೂಲಿ ; ಸಂಬಳ ; ವೇತನ : "ಭೃತಿಃ, ಭೃತ್ಯಾ . . . ವೇತನಂ—ಈ ೬ ಬೆಲೆ" (ಶಬಾಯು. ೦೨೦-೯೩). ೫. ಸೇವೆ. [ಸಂ. ಭೃತ್ಯಾ]

**ಭೃಶ** (ಗು). ೧. ಪ್ರಬಲವಾದ ; ಪ್ರಚಂಡವಾದ : ಭೃಶವಿಶ್ವ ಜೀವಿತ ಗಭೀರತೆಯ ದರ್ಶನದ ರಸವದದ್ಭುತ ಮೌನ (ಪಂಚಶ. ೯೬೬). (ನಾ). ೨. ಆಧಿಕ್ಯ; ಅತಿಶಯ : "ಅತಿಶಯಃ, ಭರಃ, ಅತಿವೇಲಂ, ಭೃಶಂ . . . ದೃಢಂ — ೧೪ ಅತಿಶಯದ ಹೆಸರುಗಳು" (ಸಿದ್ಧಾಂತಿ. ೨೫). ೩. ದೊಡ್ಡದಾದುದು; ಅತಿಶಯವಾದುದು : "ಕಾಮಂ, ಪ್ರಕಾಮಂ, ಪರ್ಯಾಪ್ತಂ, ನಿತಾಂತಂ, ಭೃಶಂ . . . ಅತಿವೇಳಂ—ಈ ೮ ಪಿರಿದಾಗಿ ರ್ದುದು" (ಶಬಾಯು. ೦೦೯-೩೯). ೪. ಸಂಕಟ : "ಭೃಶದೊಳಂ ನೆಗಟ್ಟು ಸಂಬಾಧಮೆಂದೆನಿಸು" (ಮಂಗರಾ. ೦೫೩-೨೦). ೫. ಆಣೆ : ಪ್ರತಿಜ್ಞೆ : "ಭೃಶ=ಸಂಬಾಧ, ಸೂರುಳು" (ನಾಶಶಾ. ೦೫೬ ೬). [ಸಂ.]

**ಭೃಷ್ಟ** (ಗು). ಹುರಿದ; ಸುಟ್ಟ: ಸೊಗಯಿಸುವ ದೇಹಾದಿ ನಿಷಹಂಗಳೆಯ್ದೆ ತೊಟ್ಟಗೆ ದಗ್ಧಪಟ ಭೃಷ್ಟಬೀಜಂಗಳಂತೆ ಕಮ್ಮಗೆ ಕಟ್ಟು ಪೋಕುಂ (ಅಂಜಶ. ೩-೬-೩೯). [ಸಂ.]

**ಭೆಂಡೆವಾಡ** (ನಾ). ಒಂದು ಊರಿನ ಹೆಸರು: ಪಶ್ಚಿಮತಃ ಭೆಂಡೆವಾಡೋ ನಾಮಗ್ರಾಮಃ (ಇಇ. XVI. ೨೯-೬೬ ; 1009). [ ? ]

**ಭೆಟ್ಟಿ** 'ಭೇಟಿ' ನೋ.

**ಭೇಕ** (ನಾ). ೧. ಕಪ್ಪೆ; ಮಂಡೂಕ : "ಮಂಡೂಕಃ, ಪ್ಲವಗಃ, ಭೇಕಃ. . . ಪ್ಲವಂಗಃ—ಈ ೮ ಕಪ್ಪೆ" (ಶಬಾಯು. ೦೦೯-೯೦); ಕಂತುವೀ ಬಂದನೆನುತ್ತುಂ ಗರ್ಜಿಪಂತಾದುದು ವಿರಹಿಗಳಂ ಕೇಳಿ ಭೇಕಪ್ರಣಾದಂ (ಜಗಪು. ೯-೨೦); ಕಾಳಸರ್ಪನ ಹೆಡೆಯ ನೆಳಲಲಿ ಬಾಳಲೆಳಸಿದ ಭೇಕನಂತಿಹುದನ್ಯಸತಿ ಬೇಟ (ಕೌಶಿಕಾ. ೩೯-೮). ೨. ಪುಕ್ಕಲ ; ಭೀರು. ೩. ಮುಗಿಲು ; ಮೋಡ. [ಸಂ.]

**ಭೇಕವೈರಿ** (ನಾ). ಕಪ್ಪೆಯ ಶತ್ರು ; ಹಾವು : ಸೂಕರನ ತುಂಬಿಯ ಮರಾಳನ ಭೇಕವೈರಿಯ ಕಾರುರಗ ೯ಪಿ ಕೋಕಿಲನ. . . ಒಂದು ಗುಣವಿರ ಬೇಕು ನೃಪರಿಗೆ (ಕುಮ್ಯಾಕ. ೦-೩೯). [ಸಂ. ಭೇಕವೈರಿನ್]

**ಭೇಕಾಸನ** (ನಾ). [ಯೋಗ] ಒಂದು ಬಗೆಯ ಆಸನ : ಭೇಕಾಸನ . . . ಈ ಆಸನದಲ್ಲಿನ ಚಲನವಲನಗಳು ಕಪ್ಪೆಯನ್ನು ಹೋಲುವುದರಿಂದ ಇದಕ್ಕೆ ಈ ಹೆಸರು (ಯೋಗದೀ. ೦೦೦). 'ಮಂಡೂಕಾಸನ' ಪರಾ. [ಸಂ.]

**ಭೇಕಿ** (ನಾ). ಹೆಣ್ಣು ಕಪ್ಪೆ : "ಭೇಕಿ ವರ್ಷಾಭುಯೆನೆ ಪೆಣ್ಗಪ್ಪೆಯಕ್ಕುಂ" (ಮಂಗರಾ. ೦೨೨-೮). [ಸಂ. ಭೇಕೀ]

**ಭೇಕಿಸು** (ಕ್ರಿ). (ಅಲಂ) ವಟಗುಟ್ಟು; ಅರಚು: ಹುಲುಗೊಡ್ಡು ಮೋಡ ಹುಸಿಗುಡುಗಿದಾಗ ಕೆಲ ಜೀವ ಭೇಕಿಸುವುವು (ಅರಳು. ೩೯-೬).
[ಭೇಕ + — ಇಸು]

**ಭೇಟಿ, ಬೆಟ್ಟಿ, ಭೆಟ್ಟಿ** (ನಾ). ಒಬ್ಬರನ್ನೊಬ್ಬರು ಸಂಧಿಸಿ ಮಾತನಾಡು ವುದು ; ಸಂದರ್ಶನ : ಇನ್ನು ಕಡೆಯ ಭೇಟಿಯನ್ನು ನನಗೊಮ್ಮೆ ಕೊಟ್ಟು ಆಮೇಲೆ ಏನು ಮಾಡಬೇಕೆಂದು ಹೇಳು (ಕುಂಬಯು. ೬-೦೬೯); ಸ್ಟಾಲಿನ್ ಟ್ರೂಮನ್ ಭೇಟಿಗೆ ನೂರ್ಮಡಿ ಮುಖ್ಯಂ ಭವ್ಯಂ ಕವಿಗೀ ನೀರ್ಕಡಿ! (ಅಶೀಶ. ೩೩-೦೫). **ಬೆಟ್ಟಿ**: ಮೂರು ಕುರ್ಚಿಗಳು ಒಂದು ಮೇಜಿನ ಹತ್ತಿರವಿದೆ; ಮತ್ತೊಂದನ್ನು ಅದರ ಮುಂದುಗಡೆ ಮುಖ್ಯೋಪಾಧ್ಯಾಯರ ಬೆಟ್ಟಿಗೆಂದು ಬಂದವರು ಕೂಡುವುದಕ್ಕಾಗಿ ಇಟ್ಟಿದೆ (ಕೃತಿಶಿಂ. ೩೩); ಬೆಟ್ಟಿಯ ಆವಶ್ಯಕತೆಯು ತಿಳಿಯಲಿಲ್ಲ. ಬೆಟ್ಟಿಯು ಅನುಚಿತವೆಂದೂ ತಿಳಿದನು (ಸಂಶೀಲ. ೦೦೦). **ಭೆಟ್ಟಿ**: ಒಡೆಯದೇವರಿಗೆ ಕೊಟ್ಟಲ್ಲದೆ ಕೊಳ್ಳೆವೆಂಬ ವ್ರುಡನ ಭಕ್ತರ ನೋಡಾ ಒಡೆಯಂಗೆ ಭೆಟ್ಟಿ ಮನೆಯೊಡೆಯಂಗೆ ತುಪ್ಪ ಕಟ್ಟುಮೊಸರು ವೃಷ್ಟಾನ್ನ (ಬೋಳಶಾ. ೨೨-೬೫): ಕುಬ್ಜೆಗೆ ದಯವಿಟ್ಟು . . . ಸದಯಳಿಗೆ ಭೆಟ್ಟಿಯನೆ ಕೊಟ್ಟ (ಶ್ರೀಕೃಪಾ. ೬೦) ; ಮನೆಯ ಒಳಗೇ ಕುಳಿತು ಕಾತರಿಸಿಹೆನು ಗೆಳೆಯರ ಭೆಟ್ಟಿಗೆ (ಬೆಲಕು. ೦೩-೪).
[<ಪ್ರಾ. ಭಟ್ಟಿ, ಭಿಟ್ಟಣ./ಹಿಂ. ಭೇಂಟ್; ಮರಾ. ಭೇಟ./ತೆಲು. ಭೇಟೀ]

**ಭೇಣ** (ನಾ). ಸಮತಟ್ಟಾದ, ಗಿಡಮರಗಳಿಲ್ಲದ ಬರಿದಾದ ನೆಲ: ಹಕ್ಕಲು ಹಳಗಾಡು ಭೇಣ ಭಿಳರು ಭಿಟ್ಟು ಚಿಟೆ ಮುಂತಾದ ಸೀಮೆ ಸಾಮ್ಯ (ಕಇ. III-i, ೯-೨೨; 1538). [ ℙ ಇದು 'ಬೇಣ' ಎಂಬುದರ ಅಪಲಿಖಿತ]

**ಭೇದ** (ನಾ). ೧. ಮುರಿಯುವುದು; ಒಡೆಯುವುದು. ೨. ಹರಿಯು ವುದು ; ಸೀಳುವುದು. ೩. ಭಾಗ ಮಾಡುವುದು; ಬೇರ್ಪಡಿಸುವುದು. ೪. ಬಿರುಕು ; ಛಿದ್ರ. ೫. ಗಾಯ ; ಪೆಟ್ಟು. ೬. ವಿಂಗಡಣೆ; ಪಂಜಿಕೆ. ೭. ವ್ಯತ್ಯಾಸ ; ಅಂತರ ; ಬೇರೆಯಾಗಿರುವುದು : ಕಾಯದ ಜೀವದ ಹೊಲಿಗೆಯ ಅಳಿದ ಭೇದವ ತಿಳಿಯಬಲ್ಲಡೆ ನಮ್ಮ ಗುಹೇಶ್ವರಲಿಂಗದ ಅಱಿವು ಸಾಧ್ಯವಪ್ಪುದು ಕಾಣಾ (ಅವಚಂ. ೨೭೩-೦೨೫೭); ಕನ್ನಡದ ನುಡಿಯೆಂದುಪೇಕ್ಷಿಸಲಿನ್ನು ಹಿರಿಯರಿಗಂಜಿ ನುಡಿವೆನು ಕನ್ನಡಿಯ ವರ್ಪಣವಿದಲ್ಲದೆ ಭೇದವೇನಿದಕೆ (ಅಮ್ಮಕ. ೦-೪); ಪಿರಿದು ಕಿಱಿದುಗಳ ಭೇದವನೆಣಿಸದೆ ನಿರವಿಸಿದುದನೆಸಗುವುದು (ಜಲಶಿ. ೩-೩೩). ೮. ಬಗೆ ; ವಿಧ; ಪ್ರಕಾರ: ವೇದಾಂಗಂ ಸ್ಮೃತಿ ಭೇದಮೆಂದಿನಿತುಮಂ ಪೂರ್ಣೋದಿದಂ ಸತ್ಕಲಾಭೇದಂಗಳ್ ಪದಿನೆಂಟುಮಂ ತಿಳಿದಂ (ಸುಕುಮಾ. ೩-೯೩). ೯. ಗುಟ್ಟನ್ನು ರಟ್ಟುಮಾಡುವುದು ; ರಹಸ್ಯವನ್ನು ಬಹಿರಂಗ

ಪಡಿಸುವಿಕೆ. ೧೦. ಮಾರ್ಪಾಡು; ಬದಲಾವಣೆ. ೧೧. ಭಿನ್ನಾಭಿಪ್ರಾಯ; ಪರಸ್ಪರವಿರೋಧ: ಇಂದಿರಮ್ಮನವರ ಕೈಲಿ ಭೇದದ ಬೀಜ ಬಿತ್ತಿಸಬೇಕೆಂದು ಕಾದಿದ್ದ ಭಾಗೀರತಮ್ಮನಿಗೆ ಸದವಕಾಶ ಸಿಕ್ಕಿತು (ಕೂಸಕೇ. ೬೮). ೧೨. ಹಗೆ: ಶತ್ರು. ೧೩. ಎರಡು ಎಂಬ ಭಾವ: ದ್ವೈತ. ೧೪. ಮಲವಿಸರ್ಜನೆ. ೧೫. ಕ್ಷೋಭೆ. ೧೬. ಸೋಲು: ಅಪಜಯ. ೧೭. (ಕೈ, ಕಾಲುಗಳಲ್ಲುಂಟಾಗುವ) ನೋವು. — ಚಳಕು. ೧೮. ಪಾರ್ಶ್ವವಾಯು: ಲಕ್ವ. ೧೯. ಕುಗ್ಗುವಿಕೆ: ಸಂಕೋಚನ. ೨೦. ಗ್ರಹಗಳ ಕೂಟ,–ಸೇರುವೆ. ೨೧. ನೀರು: ಜಲ: "ತಂತ್ರಂ ಗಜಸಂತ್ರಾಸಂ ಸಪತ್ನಂಬುಗಳವು ಚತುರಂ ಭೇದಮುಮ್ಮಂ" (ಶಾಪಾರ. ೬೩). ೨೨. [ರಾಜನೀ] ಸಾಮ, ದಾನ, ಭೇದ, ದಂಡಗಳೆಂಬ ನಾಲ್ಕು ಬಗೆಯ ಪ್ರಸಿದ್ಧವಾದ ಉಪಾಯಗಳಲ್ಲಿ ಒಂದು: ತನಗೆ ಶತ್ರುಗಳಾದವರಲ್ಲಿ ಪರಸ್ಪರ ಜಗಳ ತರುವುದು; ಶತ್ರುಪಕ್ಷದಲ್ಲಿ ಒಡಕು ಹುಟ್ಟಿಸಿ ಒಳಜಗಳವನ್ನುಂಟುಮಾಡುವುದು: "ಉಪಜಾಪಃ-ಭೇದಃ–ಈ ೨ ಒಳಗುಗುಡುವುದು" (ಶಬ್ದಮ. ೦೨೮-೯೩); ಭೇದಮ ಕೃತ್ಯಪೇಕ್ಷೋಪೇತ ಭೂಪಾಲಪ್ರಾಪ್ತಂ (ಶಾಂತಿಪು. ೨-೯೩ ಪ); ತನ್ನ ಪಗೆಗಾತನ ಪಿತರ್ಗನ್ನತಿಯುಂ ಭಿನ್ನವೆಸಗೆ ತಾನದು ಭೇದಂ (ಹರಿಶ್ಚ. ೨-೦೨೦). 'ಚತುರುಪಾಯ' ಪರಾ. ೨೩. [ಸಾಂಖ್ಯ] ಮೂಲಭೂತವಾದ ಹತ್ತುಬಗೆಯ ಪ್ರಕೃತಿಧರ್ಮಗಳಲ್ಲಿ ಒಂದು: ಮೂಲಭೂತಗಳಾದ ಪ್ರಕೃತಿಧರ್ಮಗಳು ಹತ್ತು:—ಅಸ್ತಿತ್ವ, ಏಕತ್ವ, ಅರ್ಥವತ್ತ್ವ, ಅನ್ಯತ್ವ, ಪರಾರ್ಥತ್ವ, ಭೇದ, ಸಂಯೋಗ, ವಿಯೋಗ, ಶೇಷತ್ವ, ಅಕರ್ತೃತ್ವ–ಇವುಗಳು (ಹಿಂದಶಾ. ೫೭). ೨೪. [ತತ್ತ್ವಶಾ] (ಮರಕ್ಕೂ-ಕೊಂಬೆಗೂ ಇರುವಂತೆ) ದೊಡ್ಡ ವಸ್ತುವಿಗೂ ಅದರ ಅಂಶವಾದ ಸಣ್ಣವಸ್ತುವಿಗೂ ಇರುವ ವ್ಯತ್ಯಾಸ: ಅವಚ್ಛೇದ, ಅವಚ್ಛೇದಕ, ಅವಚ್ಛಿನ್ನವೆಂಬ ಪದಗಳಿಗೆ ಪರ್ಯಾಯಪದಗಳಾಗಿ . . . ಭೇದ, ಭೇದಕ, ಭೇದ್ಯ . . . ಎಂದು ವ್ಯವಹರಿಸುವರು (ಹಿಂದಶಾ. ೦೯೯). ೨೫. [ಜೈನ] ಪುದ್ಗಲಸ್ಕಂಧಗಳು ವಿಭಾಗವಾಗುವಿಕೆ: ಪುದ್ಗಲಸ್ಕಂಧವು ಒಡೆದು ಅಣುಗಳು ಚೆದರುವುದು 'ಭೇದ'ವೆಂದೂ ಹೇಳಿದ್ದಾರೆ (ಜೈದಶ. ೯೨೭). ೨೬. [ವೇದಾಂತ] ವಿವಕ್ಷಿತವಾದ ಎರಡು ಪದಾರ್ಥಗಳಲ್ಲಿ ಒಂದಕ್ಕೊಂದಕ್ಕೆ ಒಂದು ದೃಷ್ಟಿಯಿಂದ ಇರುವ ಪರಸ್ಪರ ವ್ಯತ್ಯಾಸ: ಜ್ಞಾನಕ್ಕೂ ಜೀವನಿಗೂ ಭೇದ, ಅಭೇದ ಭೇದಾಭೇದಗಳೆಂಬ ಮೂರು ಪಕ್ಷಗಳು ಸಮ್ಮತವಾಗಿವೆ (ಹಿಂದಶಾ. ೬೩). 'ಭೇದಾಭೇದ' ಪರಾ. ೨೭. [ನಾಟ್ಯ] ಇಪ್ಪತ್ತು ಬಗೆಯ ಕರಕರ್ಮಗಳಲ್ಲಿ ಒಂದು: ಧೂನನ . . . ಭೇದ, ಸ್ಫೋಟನ, ಮೋಟನ, ವಿಸರ್ಜನ, ಆಹ್ವಾನ, ತರ್ಜನ ಈ ಇಪ್ಪತ್ತು ಕರಕರ್ಮಭೇದಂಗಳ್ (ಶಾಸ್ತ್ರರಂ. ೪-೧೩ ವ). [ಸಂ.]

**ಭೇದಂಬಡು** (ಕ್ರಿ). ಬೇರೆಯಾಗು; ದೂರವಾಗು: ದುರ್ವಾದದಿಂದಿನ್ನಿಗಂ ಭೇದಂಬಟ್ಟಿರ್ದೆಗೆಟ್ಟು ಕಟ್ಟಿನಿಸಿತು ಕಾಲಂಗಳೀಂ ನಿರ್ಮಮೋ (ಸುಕುಮಾ. ೩-೯೩). [ಭೇದ + ಪಡು₁]

**ಭೇದಂಬಡೆ** (ಕ್ರಿ). ಬೇರೆಬೇರೆ ವಿಧಗಳನ್ನು ಹೊಂದು: ಪಾದವಿಪರ್ಯಾಸದೊಳ್ ಭೇದಂಬಡೆದೇಕವರ್ಣಪೀನಾಧಿಕದಿಂಪಾದಂದರ್ಥಸಮಂ ಪೆಸರಾದುದು (ಛಂದೋಂಬು. ೩-೨೦೦). [ಭೇದ + ಪಡೆ₁]

**ಭೇದಕ** (ಗು). ೧. ಮುರಿಯುವ; ಸೀಳುವ; ಒಡೆಯುವ. ೨. ಪ್ರತ್ಯೇಕಿಸುವ; ವಿಂಗಡಿಸುವ; ಬೇರ್ಪಡಿಸುವ. ೩. ನಿಷ್ಕೃಷ್ಟವಾಗಿ ತಿಳಿಸುವ. (ನಾ). ೪. ಮುರಿಯುವುದು; ನಾಶಮಾಡುವುದು. ೫. ಮುರಿಯುವವನು; ನಾಶಮಾಡುವವನು. ೬. (ಪದಾರ್ಥಗಳನ್ನು) ವಿಶ್ಲೇಷಣೆಮಾಡುವಿಕೆ: ಪದಾರ್ಥಗಳ ಒಳಹೊಕ್ಕು ತತ್ತ್ವವನ್ನು ಗ್ರಹಿಸುವುದು: ಜ್ಞಾನಕ್ಕೆ ಲೇಪವಾದವನಿರವು ತುಪ್ಪದ ಸಂಬಿದ ಬತ್ತಿಯಂತೆ ಕಾದ ಲೋಹದ ಜಲದಿರವಿನಂತೆ. . . ಇದಾರಿಗೆ ಭೇದಕ ಇದ ಶೋಧಿಸಬೇಕು (ಷೋಡಶಾ. ೪-೧೦). ೭. (ಪದಾರ್ಥಗಳನ್ನು ವಿಶ್ಲೇಷಣೆ ಮಾಡಿ ತತ್ತ್ವವನ್ನು ಗ್ರಹಿಸುವವನು.–ವಿಚಾರ ಮಾಡುವವನು: ಆ ಶರಣನು. . . ವೇದ ಶಾಸ್ತ್ರ ಪುರಾಣ ಛಂದಸ್ಸು ನಿಘಂಟುಗಳೆಂಬುವಕ್ಕೆ ಭೇದಕನಲ್ಲ (ಅವಚಂ. ೨೩೦–೦೦೪೬). ೮. [ವ್ಯಾಕ] ಒಂದು ವಸ್ತುವನ್ನು ಬೇರೆ ವಸ್ತುವಿನಿಂದ ಬೇರ್ಪಡಿಸಬೇಕಾದಾಗ ಪ್ರಯೋಗಿಸುವ ಗುಣವಿಶಿಷ್ಟ ಪದ: P ಒಂದು ಕೊಟ್ಟಿಗೆಯಲ್ಲಿ ಬೇರೆ ಬೇರೆ ಬಣ್ಣದ ಕರೆಯುವ ಹಸುಗಳಿದ್ದು, ಕೆಂಪುಹಸುವಿನ ಹಾಲನ್ನು ಕರೆದುಕೊಂಡು ಬಾ ಎಂದು ಹೇಳಿದರೆ, ಆಗ ಕೆಂಪು ಎಂಬ ಪದವು ಭೇದಕ. ಏಕೆಂದರೆ ಅದು ಕರೆಯಬೇಕಾದ ಹಸುವನ್ನು ಅಲ್ಲಿದ್ದ ಕರಿಯ ಮತ್ತು ಬಿಳಿಯ ಹಸುಗಳಿಂದ ಬೇರ್ಪಡಿಸುತ್ತದೆ: ಅಲ್ಲದೆ ಕರೆಯಬೇಕಾದ ಹಸುವನ್ನು ನಿರ್ದಿಷ್ಟವಾಗಿ ತಿಳಿಸುತ್ತದೆ: ಭೇದ್ಯಂ ವಿಶೇಷ್ಯಂ; ಭೇದಕಂ ವಿಶೇಷಣಂ (ಶಬ್ದಾನು. ೦೦೦ ವೃತ್ತಿ). ೯. [ತತ್ತ್ವಶಾ] ಒಂದು ದೊಡ್ಡ ಪದಾರ್ಥವನ್ನು ಚಿಕ್ಕದನ್ನಾಗಿ ಮಾಡಿಕೊಳ್ಳುವುದಕ್ಕಾಗಿ ಉಪಯೋಗಿಸುವ ಸಾಧನ: P ಬ್ರಹ್ಮವಸ್ತು ಸರ್ವವ್ಯಾಪಿ. ಇದು ಒಂದರಲ್ಲಿ ಅಡಕವಾಗಿಲ್ಲವಾದುದರಿಂದ ಅಪರಿಚ್ಛಿನ್ನ. ಇದು ಪರಿಚ್ಛಿನ್ನವಾದರೆ ಜೀವವೆನಿಸಿಕೊಳ್ಳುತ್ತದೆ. ಸರ್ವವ್ಯಾಪಿಯಾದ ಬ್ರಹ್ಮ ಪ್ರಾಣಿಗಳ ಅಂತಃಕರಣದಲ್ಲೂ ಇರಲೇಬೇಕಷ್ಟೆ. ಆ ಅಂತಃಕರಣದಲ್ಲಿ ಇರುವ ಬ್ರಹ್ಮವೇ ಜೀವ. ಈಗ ಅಂತಃಕರಣವು ಬ್ರಹ್ಮನನ್ನು ವಿಶಾಲಜಗತ್ತಿನಿಂದ ಪ್ರತ್ಯೇಕಿಸಿ ತನ್ನೊಳಗಿರುವ ಅವನಿಗೆ ಜೀವವೆಂಬ ಹೆಸರನ್ನು ಕೊಟ್ಟಿತು. ಹೀಗೆ ಪ್ರತ್ಯೇಕಿಸಿದ್ದು ಆ ಅಂತಃಕರಣ. ಇದನ್ನು ಭೇದಕ ಅಥವಾ ಅವಚ್ಛೇದಕ ಎಂದು ಶಾಸ್ತ್ರಗಳು ಹೇಳುತ್ತವೆ: ಅವಚ್ಛೇದಕ, ಅವಚ್ಛಿನ್ನವೆಂಬ ಪದಗಳಿಗೆ ಪರ್ಯಾಯಪದಗಳಾಗಿ . . . ಭೇದ, ಭೇದಕ, ಭೇದ್ಯ . . . ಎಂದು ವ್ಯವಹರಿಸುವರು (ಹಿಂದಶಾ. ೦೯೯). [ಸಂ.]

**ಭೇದಕಾತಿಶಯೋಕ್ತಿ** (ನಾ). [ಕಾವ್ಯಮೀ] ಎಂಟುಬಗೆಯ ಅತಿಶಯೋಕ್ತಿಗಳಲ್ಲಿ ಒಂದು: P ವರ್ಣಿಸಬೇಕಾದ ವಸ್ತುವು ಜಗತ್ತಿನಲ್ಲಿರುವ ಒಂದು ವಸ್ತುವಾಗಿದ್ದರೂ ಅದು ಲೋಕಾತೀತವಾದುದು. ಅಂದರೆ ಪ್ರಪಂಚದ ವಸ್ತುಗಳಿಗಿಂತ ಬೇರೆಯಾದುದು ಎಂದು ವರ್ಣಿಸುವುದು: ವರ್ಣ್ಯಮಾದ ವಸ್ತುವಂ ಲೋಕದೊಳ್ಪ ವಸ್ತುವತ್ತಣಿಂ ಬೇಱೆಂದು ಪೇಟ್ಟುದು ಭೇದಕಾತಿಶಯೋಕ್ತಿಯೆನಿಪುದು (ಅಕ್ರತಿ. ೫೩-೦೬); ಲೋಕಪ್ರಸಿದ್ಧ ಪದಾರ್ಥಕ್ಕಿಂತಲೂ ಬೇರೆಯಾಗದೆ ಇದ್ದರೂ ಬೇರೆಯೆಂದು ತೋರುವಂತೆ ವರ್ಣಿಸುವುದೇ ಭೇದಕಾತಿಶಯೋಕ್ತಿ (ಕೃಶಬ. ೨೬೪). [ಸಂ.]

**ಭೇದಗೆಡು** (ಕ್ರಿ). ವ್ಯತ್ಯಾಸವು ಇಲ್ಲವಾಗು; ಅಭೇದವುಂಟಾಗು: ಗುಹೇಶ್ವರನ ಬೆರಸಿ ಭೇದಗೆಟ್ಟು ಬೆಳಕ ಮತ್ತೆ ಸಂಗವ ಮಾಡಿಹೆನು ತವಕವೇಕಯ್ಯ (ಪ್ರಭುವ. ೨೦೩). [ಭೇದ + ಕೆಡು₁]

**ಭೇದತಂತ್ರ** (ನಾ). ಒಡಕನ್ನು ಹುಟ್ಟಿಸುವ ಉಪಾಯ: ಶ್ರೀರಾಮನಿಗೆ ಭೇದತಂತ್ರವನ್ನಟ್ಟಿಸುವ ಹಾಗೂ ಕೈಕೆಯಿದೇವಿಗೆ ಅತ್ಯಂತ ಮನೋವ್ಯಥೆ ಹುಟ್ಟುವ ಹಾಗೂ ಆಕೆಯನ್ನು ಕುರಿತು. . . ನುಡಿವಳು (ಕಗಾ. ೬೩). [ಸಂ.]

**ಭೇದದರ್ಶನ** (ನಾ). ವಸ್ತುತಃ ಒಂದೇ ಆದರೂ ಬೇರೆಯಾಗಿ ಕಾಣುವುದು: ಈ ಅವಿದ್ಯೆಗೆ ಆವರಣಶಕ್ತಿ, ವಿಕ್ಷೇಪಶಕ್ತಿ ಎಂದೆರಡು ಸ್ವಭಾವಗಳು ಇರುವುವು. ಆವರಣಶಕ್ತಿಯಿಂದ ವಸ್ತುಸ್ವರೂಪವು ಮುಚ್ಚಲ್ಪಡುವುದು. ವಿಕ್ಷೇಪಶಕ್ತಿಯಿಂದ ವಸ್ತು ವಿಚಿತ್ರವಾಗಿ ಕಾಣುವುದು. ಇದಕ್ಕೇ ಭೇದದರ್ಶನವೆಂದು ಹೆಸರು (ಹಿಂದಶಾ. ೨೦೪). [ಸಂ.]

**ಭೇದದೃಷ್ಟಿ** (ನಾ). ಜೀವಾತ್ಮ ಮತ್ತು ಪರಮಾತ್ಮನು ಬೇರೆ ಬೇರೆ ಎಂಬ ಭಾವನೆ; ದ್ವೈತ: ಜೀವನು . . . ಭಕ್ತನಾದ ಮೇಲೆ . . .

ದ್ವೈತವೇದಾಂತದ ಭೇದವೃತ್ತಿ ಜೀವನದಲ್ಲಿ ಸಹಜವಾಗಿ ನೆಲಸಿರುತ್ತದೆ (ಜ್ಞಾ.ಶಿ. ೦೦೦). [ಸಂ.]

**ಭೇದನ** (ನಾ). ೧. ಒಡೆಯುವುದು: ಮುರಿಯುವುದು: ಸೀಳುವುದು. ೨. ಬೇರೆ ಮಾಡುವುದು; ಬೇರ್ಪಡಿಸುವುದು. ೩. ಮನಸ್ತಾಪವನ್ನುಂಟುಮಾಡುವುದು: ಭಿನ್ನಾಭಿಪ್ರಾಯ ಬರುವಂತೆ ಮಾಡುವುದು. ೪. ಶಿಥಿಲಗೊಳಿಸುವುದು; ಸಡಿಲಗೊಳಿಸುವುದು. ೫. ಗುಟ್ಟನ್ನು ಬಿಟ್ಟುಕೊಡುವುದು. ೬. ಭೇದ; ಒಡಕು; ವೈಮನಸ್ಯ. ೭. ಇಂಗು. ೮. ಭೇದಿಯಾಗುವುದು. ೯. ಭೇದಿ ಮಾಡಿಸುವ ಔಷಧ; ವಿರೇಚಕ. ೧೦. ಹಂದಿ. [ಸಂ.]

**ಭೇದಬುದ್ಧಿ** (ನಾ). ಒಬ್ಬರಿಗೊಂದು, ಮತ್ತೊಬ್ಬರಿಗೊಂದು ಮಾಡುವ ಮನೋಭಾವ; ಪಕ್ಷಪಾತಭಾವನೆ: ಈ ಪ್ರಕಾರ ಪ್ರತ್ಯಕ್ಷ ತಮ್ಮ ಹೊಟ್ಟೆಮಕ್ಕಳಲ್ಲಿ ಭೇದಬುದ್ಧಿ ಮಾಡುವುದರ ಕಾರಣವನ್ನು ದೇವರೇ ಬಲ್ಲನು (ಮುಂಬಯಿ. ೪-೧೦೪). [ಸಂ.]

**ಭೇದಭಾವ** (ನಾ). ಬೇರೆಬೇರೆ ಎಂಬ ಭಾವನೆ: ಶಿವನು ಪ್ರೇರಕನೂ. ಜೀವನು ಪ್ರೇರ್ಯನೂ ಆದ ಮೇಲೆ ಶಿವ – ಜೀವರಿಗೆ ಭೇದಭಾವ ಸಹಜವಾಗಿ ಇರುವುದರಿಂದ ಅದ್ವೈತವನ್ನು ಭಾವಿಸುವುದು ಯುಕ್ತವಾಗದು (ಶಿ.ಶ. ೦೦೬); ಭಾವನೆ ಸಂಕುಚಿತವಾಗಿದ್ದಾಗ ತನ್ನದು ಪರರದು ಎಂಬ ಭೇದಭಾವ ಇದ್ದದ್ದೇ (ಹೊಸಕ. ೩೦). [ಸಂ.]

**ಭೇದಶ್ರುತಿ** (ನಾ). [ವೇದಾಂತ] "ಚಿತ್ತು. ಅಚಿತ್ತು. ನಾರಾಯಣ ಈ ಮೂರಕ್ಕೂ ಇರುವ ಪರಸ್ಪರ ಭೇದಸ್ವರೂಪವನ್ನು ತಾತ್ವಿಕವಾಗಿ ಬೋಧಿಸುವುದಕ್ಕೋಸ್ಕರ ಹೊರಟಿರುವುದಕ್ಕೆ 'ಭೇದಶ್ರುತಿ' ಎಂದು ಹೆಸರು" (ತತ್ವಶು. ೦). [ಸಂ.]

**ಭೇದಾಭೇದ** (ನಾ). [ವೇದಾಂತ] ವಿವಕ್ಷಿತವಾದ ಎರಡು ಪದಾರ್ಥಗಳಲ್ಲಿ ಒಂದಕ್ಕೊಂದಕ್ಕೆ ಒಂದು ದೃಷ್ಟಿಯಿಂದ ಪರಸ್ಪರ ಭೇದವೂ ಮತ್ತೊಂದು ದೃಷ್ಟಿಯಿಂದ ಅಭೇದವೂ ಇರುವಿಕೆ; P ಉದಾಹರಣೆಗೆ ಚಿನ್ನದ ಸರ ಮತ್ತು ಡಾಬು – ಈ ಎರಡು ಪದಾರ್ಥಗಳಲ್ಲಿ ಸರವನ್ನೂ ಡಾಬನ್ನೂ ಆಕಾರದೃಷ್ಟಿಯಿಂದ ನೋಡಿದರೆ ಸರವೇ ಬೇರೆ. ಡಾಬೇ ಬೇರೆ— ಹೀಗೆ ಭೇದವಿದೆ. ಆದರೆ ಎರಡೂ ಚಿನ್ನದಿಂದಲೇ ಆಗಿವೆ. ಕರಗಿಸಿದಾಗ ಆಕಾರ ಹೋದರೆ ಎರಡೂ ಚಿನ್ನವೇ ಆಗಿಬಿಡುತ್ತವೆ. ಆದ್ದರಿಂದ ಮೂಲದ್ರವ್ಯದ ದೃಷ್ಟಿಯಿಂದ ಎರಡಕ್ಕೂ ಅಭೇದವೇ ಇರುತ್ತದೆ: ಜ್ಞಾನಕ್ಕೂ ಜೀವನಿಗೂ ಭೇದ. ಅಭೇದ. ಭೇದಾಭೇದಗಳೆಂಬ ಮೂರು ಪಕ್ಷಗಳೂ ಸಮ್ಮತವಾಗಿವೆ (ಹಿಂದಸಂ. ೮೩); ಶಿವ ಜೀವರಿಗೆ ಭೇದಾಭೇದಗಳೆರಡೂ ಕಾಲಭೇದದಿಂದಲೂ ಅವಸ್ಥಾಭೇದದಿಂದಲೂ ಯಥಾರ್ಥವಾಗಿ ಅನ್ವಯಿಸುತ್ತವೆ (ಶಿ.ಶ. ೨೦). [ಸಂ.]

**ಭೇದಿ** (ಗು). ೧. ಒಡೆಯುವ: ಸೀಳುವ; ಭಾಗ ಮಾಡುವ. (ನಾ). ೨. ಮಲವು ನೀರಾಗಿ ಗುದದ್ವಾರದಿಂದ ಹರಿಯುವುದು: ವಿರೇಚನ; ಜುಲಾಬು: ಇದ್ದಕ್ಕಿದ್ದ ಹಾಗೆ ಅನೇಕ ಸಲ ಭೇದಿಯಾಗಲು ಆರಂಭವಾಗುತ್ತದೆ (ಗೃಹವ. ೦೪೪).

**ಭೇದಿ ಕಟ್ಟು** = ಜುಲಾಬಾಗುವುದು ನಿಲ್ಲು: ಭೇದಿ ಕಟ್ಟುವುದಕ್ಕೆ ಬೇರೆ ಚೂರ್ಣವನ್ನು ಕೊಟ್ಟಿದ್ದೇನೆ (ರೂಢಿ). **ಭೇದಿಗೆ ಕೊಡು** = ೧. ಜುಲಾಬಾಗುವಂತೆ ಔಷಧಿಯನ್ನು ಕೊಡು: ವೈದ್ಯನು ಮಗುವಿಗೆ ಭೇದಿಗೆ ಕೊಟ್ಟನು (ರೂಢಿ). ೨. (ಅಲಂ) ಭಯವನ್ನುಂಟುಮಾಡು; ಗಾಬರಿಪಡಿಸು: ಅವನಿಗೆ ಸರಿಯಾಗಿ ಭೇದಿಗೆ ಕೊಟ್ಟಿದ್ದೇನೆ (ರೂಢಿ). **ಭೇದಿಮಾತ್ರೆ** = ಭೇದಿಯನ್ನು ಮಾಡಿಸುವ ಜಾಪಾಳ ಮೊದಲಾದುವುಗಳಿಂದ ಮಾಡಿರುವ ಮಾತ್ರೆ, – ಗುಳಿಗೆ: ಪಂಡಿತರು ಭೇದಿ ಮಾತ್ರೆಯನ್ನು ಕೊಟ್ಟು ಕಳುಹಿಸಿದರು (ರೂಢಿ). [ಸಂ. ಭೇದಿನ್]

**ಭೇದಿಗ** (ನಾ). ಒಡಕನ್ನು ಹುಟ್ಟಿಸುವವನು; ಜಗಳ ತಂದುಹಾಕುವವನು: ಹಾದಿಯ ಮನೆ ಹೊಲ್ಲ ಬೀದಿಯ ಸಸಿ ಹೊಲ್ಲ ಹಾವರದ ಹೆಣ್ಣು ನೆರೆ ಹೊಲ್ಲ ಹಳ್ಳಿಯಲಿ ಭೇದಿಗನೆ ಹೊಲ್ಲ (ಸರ್ವಜ್ಞ. ೦೦೦೦).
[ಭೇದ + – ಇಗ]

**ಭೇದಿತ** (ಗು). ೧. ಮುರಿದ; ಒಡೆದ; ಸೀಳಿದ; ಭಿನ್ನವಾದ. (ನಾ). ೨. ಒಡೆದುಹೋದುದು; ಸೀಳಿದುದು: "ದಾರಿತಃ, ಭಿನ್ನಃ, ಭೇದಿತಃ—೩ ಸೀಳುವುದಕ್ಕೆ ಯೋಗ್ಯವಾಗಿರುವುದು, ಕಡಿಯಲ್ಪಟ್ಟದ್ದು" (ಸಿದ್ಧಾಂತ. ೩೩೧). [ಸಂ.]

**ಭೇದಿಸು** (ಕ್ರಿ). ೧. ಒಡೆ; ಮುರಿ: ಸೀಳು; ಭಾಗ ಮಾಡು: ಬೆಸಸಿದೊಡದು ಮಾರ್ಕೊಳ್ಳದೆ ಬೆಸನಂ ಬಲವಂದು ಬಾಹುಬಲಿಯನಣಂ ಭೇದಿಸಲಾಱದು ದಱನಿರ್ದುದು. . .ಕೆಲದೊಳ್ (ಆದಿಪು. ೦೪-೦೦೬); ಬೆಟ್ಟತಪ್ಪ ಕಲ್ಲುಗಳುಳ್ಳ ಬೆಟ್ಟಮಂ ಸಿಡಿಲುಂ ನೀರುಂ ಭೇದಿಸುವಹಗೆ (ಶಂಕರಂ. ೦೬೬-೨೦); ಹೊನ್ನ ಪೆಟ್ಟಿಗೆಯ ಭೇದಿಸಿ ತೆಗೆದು ನಾನಾ ವಸ್ತುಗಳನು ಸಂಪಾದಿಸಿಕೊಂಡನರ್ತಿಯಲಿ (ಪೋಹತ. ೧೮-೨೦). ೨. ಸೋಲಿಸು; ಪರಿಭವವನ್ನುಂಟುಮಾಡು: ಶರೌಘದಿಂ ಭೇದಿಪ ಬಿನ್ನಣಂ ಗಡ ಜಿತಾಂತಕನೊಳ್ . . . ಚಿತ್ರಮಲ್ಲವೇ (ರಶು. ೪-೦೩೧). ೩. ಪರಿಹರಿಸು; ನಿವಾರಿಸು: ಕಯ್ದಾವಿಗೆಗಳ ಬೆಳಗಿಂ ಕಾಯ್ದುಸೆವ ಸಹಸ್ರಕಿರಣನಿಂ ಭೇದಿಸಲೇಗೆಯ್ದುಂ ಬಾರದುದಲ್ ತವೆ ಮಾಯ್ದು ಜವ್ವನದೊಳೊಡಲೊಳಡಿದಿರ್ದ ತಮಂ (ಕಾದಂಪೂ. ೩೨೯). ೪. ಅಭಿಪ್ರಾಯವನ್ನು ಖಂಡಿಸು: ನಿರಾಕರಿಸು: ಲೋಕಾಯತವೆನಿಸಿದ ಚಾರ್ವಾಕೋಕ್ತಿಯುಂ . . . ಜಿನಚಂದ್ರಭೂಭುಜಂ ಭೇದಿಸಿದಂ (ಶಾಂತಿಪು. ೮-೧೩೫). ೫. ಛಿದ್ರಿಸಿ ಒಳಹೊಗು: ಸೀಳಿಕೊಂಡು ಒಳನುಗ್ಗು: ಅಸಮಪದ್ಮವ್ಯೂಹವನು ಭೇದಿಸುವನಾವವನೆನಲು ಕೇಳದು ಶಿಶುತನದಲಾಹವಕೆ ನಡೆದನು (ಕುಮಾ.ದ್ರೋ. ೮-೨೨); ಭೀಮಸೇನ, ನಕುಲ, ಸಹದೇವರು ಯಾರೂ ಪದ್ಮವ್ಯೂಹವನ್ನು ಭೇದಿಸಿ ಒಳಗೆ ನುಗ್ಗಲಾರದೆ ಹಿಂತಿರುಗಿದ್ದು (ಕಂಗಾಳ. ೨೦). ೬. ಗುಟ್ಟನ್ನು ಕಂಡುಹಿಡಿ: ರಹಸ್ಯವನ್ನು ತಿಳಿ: ಪತ್ತೆ ಮಾಡು: ಭೇದಿಸಿ ಸಹದೇವಿಗೆ ಮಗನಾದುದನೋರ್ವಂ ಧನಾರ್ಥಿ ಮೆಚ್ಚಂ ಪಡೆವೊಂದಾದರದಿನಱಿಪೆ (ಕಂಗಾಖ. ೨-೩೫); ಕೃಷ್ಣನ ನೊಳಗುಮಾಡುವ ಮುದದಿ ಬಂದನು ಕೌರವೇಂದ್ರನು ದ್ವಾರಕಾಪುರಿಗೆ ಇದನು ಭೇದಿಸಿ ಹೇಳಿನವರಱುಹಿದರು ಕುಂತೀಸುತರಿಗೆ (ಕುಮಾ.ಉ. ೦-೦೬); ಆದಿದೈವವನು ತಾ ಭೇದಿಸಲಿಕಱಿಯವಲೆ ಹಾದಿಯ ಕಲ್ಲಿಗೆಡೆಮಾಡಿ ನಮಿಸುವ ಮಾದಿಗರ ನೋಡು (ಸರ್ವಜ್ಞ. ೦೯೯). ೭. ಭೇದೋಪಾಯಕ್ಕೆ ಒಳಗು ಮಾಡು; ಪಕ್ಷಾಂತರ ಮಾಡಿಸು: ಈ ಮೃದುಹೃದಯನಪ್ಪ ಸಂಜೀವಕನಂ ಭೇದಿಸುವುದಾವ ಗಹನಂ (ಶಂಕರಂ. ೦೩೨-೦೪). ೮. (ಒಂದು ವಿಷಯವನ್ನು) ಚೆನ್ನಾಗಿ ಆಲೋಚನೆಮಾಡು, – ವಿಚಾರಿಸು: ಇದಱೊಳಗೊಂದು ಕುಂದಿಲ್ಲ ಭೇದಿಸುವೊಡೀ ಕೃತಿಗೆ ಪ್ರತಿಯಿಲ್ಲ (ಜತಾ. ೦-೦೩); ಹಸಗೆಟ್ಟು ತನುಸುಖಿಕೊಲಿಯದೆ ಕೆಲರು ಭೇದಿಸಿ ನಿಜಸುಖವ ಭೋಗಿಪರು (ಶರ. ೦-೧೦೬); ವೇದದೊಳು ಮನ್ವಾದಿ ಧರ್ಮಶಾಸ್ತ್ರದೊಳು ಭೇದಿಸಿ ಹಿರಿಯರು ಪೇಳಿದುದನೆ ಕೃತಿಗೈದಾನು ಕಿವಿಗೊಳಿಸಿದೆನು (ಹರಿ. ೦-೩೦). ೯. ವ್ಯತ್ಯಾಸವನ್ನು ಗ್ರಹಿಸು; ಭೇದವನ್ನು ಕಾಣು: ದೆಸೆಯಿದಾಗಸ ಭೂವಿಭಾಗವೆನುತ ಭೇದಿಸಬಾರದವಾರನಿಕರಕೆ ಮಸೆದ ಕೂರ್ಗಣೆಯಲಿ ಭುವನವ ಕೂಡೆ ಮುದ್ರಿಸಿದರು ಕೈಚಳಕದಲಿ (ವಿರಾ. ೬-೦೨). ೧೦. ಬೇರೆಯಾಗು: ಪಾದದೆ ಷೋಡಶಷೋಡಶಮಾತ್ರೆಯು ಭೇದಿಸಿ ಮೂಱನೆಯಾಱನೆಯಡಿಯೊಳ್ ಲಘುವಿರ್ಪತ್ತು ಸಾವರದಿಂತಾಱಡಿಯೊಳ್ ಗುಣೆಯಿಸೆ (ಛಂದೋಂಬು. ೫-೨೫೯ ರ ಅಂಕಿತದ್ಯ).
[ಭೇದ + – ಇಸು]

**ಭೇದಿಸೊಪ್ಪು** (ನಾ). (ಭೇದಿಯಾಗುವುದಕ್ಕೆಂದು ಕಷಾಯಮಾಡಲು ಬಳಸುವ) ಒಂದು ಬಗೆಯ ಸೊಪ್ಪು : (ಪ್ರಿ.ಶಿ. ೩೬–೬೭).
[ಭೇದಿ + ಸೊಪ್ಪು೨]

**ಭೇದೋಪಾಯ** (ನಾ). = ಭೇದ ೨೨ : ರಾಜ್ಯವನ್ನು ಪುನಃ ಪಡೆಯಲು ಸಾಮ, ದಾನ ಮತ್ತು ಭೇದೋಪಾಯಗಳನ್ನು ಬಳಸಿ ವಿಫಲವಾದ ಮೇಲೆ . . . ಯುದ್ಧಸನ್ನಾಹವಾಗುತ್ತದೆ (ಜಾರಡ. ೯೯). [ಸಂ.]

**ಭೇದ್ಯ** (ಗು). ೧. ಒಡೆಯಲು ಯೋಗ್ಯವಾದ ; ಮುರಿಯಬಹುದಾದ. ೨. ಒಳನುಗ್ಗಬಹುದಾದ ; ಪ್ರವೇಶಿಸಲು ಸಾಧ್ಯವಾದ. 'ಅಭೇದ್ಯ' ಪರಾ. ೩. ಸುಲಭವಾಗಿ ಒಡೆಯುವ ; ಭಂಗುರವಾದ. ೪. ತಪ್ಪುದಾರಿಗೆ ಎಳೆಯಲು ಸಾಧ್ಯವಾದ ; ದುಷ್ಪ್ರೇರಣೆಗೆ ಒಳಗಾಗುವ. (ನಾ). ೫. ಭೇದಿಸಲು ಸಾಧ್ಯವಾಗಿರುವುದು. ೬. [ವ್ಯಾಕ] ವಿಶೇಷಣವನ್ನು ಹೊಂದುವ ನಾಮಪದ ; ವಿಶೇಷ್ಯ : ಭೇದ್ಯಂ ವಿಶೇಷ್ಯಂ, ಭೇದಕಂ, ವಿಶೇಷಣಂ (ಶಬ್ದಾ.ಸೂ. ೦೦೦ ವೃತ್ತಿ). ೭. [ತತ್ತ್ವಶಾ] ಭೇದ, ಭೇದಕ, ಭೇದ್ಯವೆಂಬ ತ್ರಿಪುಟಿಯಲ್ಲಿ ಒಂದು ; ಪ್ರತ್ಯೇಕಿಸಿ ಗುರುತಿಸಬೇಕಾದುದು ; ☞ ಉದಾಹರಣೆಗೆ ಕೆಂಪು ಹೂವು ಎಂಬಲ್ಲಿ ಹೂವು ಎಂಬುದು ವಿಶೇಷ್ಯ ಅಥವಾ ಭೇದ್ಯ, ಕೆಂಪು ಎಂಬ ಪದಾರ್ಥದ ಸಂಬಂಧದಿಂದ ಹೂವು ಬಿಳಿಹೂವು ಮೊದಲಾದುವುಗಳಿಂದ ಬೇರ್ಪಡುತ್ತದೆ : ಅವಚ್ಛೇದ, ಅವಚ್ಛೇದಕ, ಅವಚ್ಛಿನ್ನವೆಂಬ ಪದಗಳಿಗೆ ಪರ್ಯಾಯಪದಗಳಾಗಿ ವ್ಯಾವೃತ್ತಿ, ವ್ಯಾವರ್ತಕ, ವ್ಯಾವರ್ತ್ಯ, ವಿಶೇಷ, ವಿಶೇಷಣ, ವಿಶೇಷ್ಯ, ಭೇದ, ಭೇದಕ, ಭೇದ್ಯ . . . ಎಂದು ವ್ಯವಹರಿಸುವರು (ಹಿಂದಕಾ. ೦೯೯). [ಸಂ.]

**ಭೇನ** (ನಾ). ನಕ್ಷತ್ರಗಳ ಒಡೆಯ ; ಚಂದ್ರ : ಸೇನಾಧಿಪತಿಜನಕ ಭೇನಾನಲಾರ್ಕಾಕ್ಷಿ ಕೀನಾಶದರ್ಪಹರ (ಗುರುಚಾ. ೦–೯). [ಸಂ.]

**ಭೇನಚೂಡ** (ನಾ). ನಕ್ಷತ್ರಗಳ ಒಡೆಯನಾದ ಚಂದ್ರನನ್ನು ತಲೆಯಲ್ಲಿ ಧರಿಸಿದವನು ; ಚಂದ್ರಚೂಡ ; ಶಿವ : ಆನಿರಲು ಏನು ಸಂಶಯ ಬೇಡ ನಿನಗೆಂದು ಬೇ[ಭೇ]ನಚೂಡಂ ನಂಬಿಸಿದ ಮಹಾನೀಕಾಮಗಣರುಂಟು ಮಾಯೆಯೆಂದು ವಿವರಿಸಿ ಪೇಳಲು (ಶ್ರಶುಕ್ಷ. ೫–೦೩೯). [ಸಂ.]

**ಭೇರ** (ನಾ). ಒಂದು ಬಗೆಯ ಚರ್ಮವಾದ್ಯ ; ನಗಾರಿ ; ದುಂದುಭಿ : ಗಾಳಿಪಟಕ್ಕೆ ಭೇರಬಿರಿಕೆಯ ಕಟ್ಟಿ ನುಡಿಸುವ ತೆಱದಂತೆ ತೇಜವಾಗಿ (ಅಶಂಡೆ. ೩೨೬–೨೮). [ಸಂ.]

**ಭೇರಿ** (ನಾ). = ಭೇರ : "ವಿಸ್ತರ ಭೇರಿ ದುಂದುಭಿಯೆನಿಕ್ಕು" (ಶಂಗರಾ. ೨೯–೬); ಧರೆ ನಡುಗೆ ಪೊಡೆವ ಭೇರಿಯ ಘನಧ್ವನಿಯೊಳಗೆ (ಶಂಶಿಶ. ೬–೦೨೦); ಧರಧುರದ ನಿಸ್ಸಾಳಸೂಳಿನ ಮೊಱೆವ ಭೇರಿಯ ರಾಯಗಿಡಿಗನ ಜಡಿವ ಚಂಬಕನ (ಶುಭ್ರ.೯. ೦೯–೩೩) ; ತಂಬಟೆ ಹೋಗಿ ಭೇರಿಗೆ ದೂರು ಹೇಳದ ಹಾಗೆ (ಗಾದೆ). [ಸಂ. ಭೇರೀ]

**ಭೇರುಂಡ** (ಗು). ೧. ಭಯಂಕರವಾದ ; ಕ್ರೂರವಾದ; ಭೀಷಣವಾದ. (ನಾ). ೨. ಎರಡು ತಲೆಗಳುಳ್ಳ, ಭಯಂಕರವಾದುದೆಂದು ತಿಳಿಯಲಾದ ಒಂದು ಬಗೆಯ ಕಾಲ್ಪನಿಕ ಹಕ್ಕಿ ; ಗಂಡಭೇರುಂಡ : "ಬಿಡದಮಳ್ಗಲೆವಕ್ಕಿಯುಮೆಂದೊಡೆ ಭೇರುಂಡಕ್ಕೆ ನಾಮಂ" (ಕವಿಶಿಂ. ೬೦); ಸಕಲ ಶಕುನಿಗಣಂಗಳೊಳಗೆ ಸತ್ತ್ವದೊಳಂ ಸಾಹಸದೊಳಮಧಿಕವಪ್ಪ ಭೇರುಂಡಮಂಡಳಿಯುಂ . . . ಇರ್ದಂತೆ (ಶಂತಕಂ. ೨೨೫–೨೦); ನಮ್ಮ ಮುಂದಿಗಳಂ ಸಿಂಹ ಶರಭ ಭೇರುಂಡ ಶುಂಡಾಲ . . . ರೂಪಂಗಳಿಂ ಬಾಧಿಸದಂತು ಶಾಂತಿಯಂ ಮಾಡಲ್ವೇಳ್ಕುದು (ಜಗದ. ೯–೬೭ ಪ). [ಸಂ.]

**ಭೇರುಂಡಗಳೆ** (ನಾ). (ಬಳ್ಳಿಗಾವೆಯ ಭೇರುಂಡೇಶ್ವರವಂತರ ಅಧಿಕಾರದಲ್ಲಿ ಸ್ಥಾಪಿತವಾಗಿದ್ದ) ಭೂಮಿಯನ್ನು ಅಳೆಯುವ ಒಂದು ಅಳತೆ ಮತ್ತು ಅಳತೆಗೋಲು (?) : ಊರಿಂ ಮೂಡಣ ಭೇರುಂಡೇಶ್ವರದ ತಳವೃತ್ತಿ ಪುಲ್ಲೆಯ ಬಯಲ ಮೂಡಣಪತ್ತುಗೆಯಲೆ ಭೇರುಣ್ಡಗಳೆಯ ಲ್ಕೊಟ್ಟ ಗಟ್ಟಿ (ಎಕ. VII, ಶಿಕಾ. ೦೫೦–೮೦೮ ; 1047) ; ಬಳ್ಳಿಗಾವೆಯ ಪುಲ್ಲೆಯ ಬಯಲೊಳ್ ಭೇರುಣ್ಡಗಳೆಯೊಳ್ ಕೊಟ್ಟ ಗಟ್ಟಿ ಮತ್ತರಿಯುದ್ದ (ಅಅ. IV, ೦೫೦–೦೬: 1048). [ಭೇರುಂಡ + ಗಳೆ (<ಗಟಿ)]

**ಭೇರುಂಡವಕ್ಕಿ** (ನಾ). = ಭೇರುಂಡ ೨ : ಭೇರುಂಡವಕ್ಕಿಯಾಗಿ ಪುಟ್ಟಿ ಸತ್ತು (ವಡ್ಡಾರಾ. ೦೬೬–೨೫); ಶರಭಂ ಬೆಂಕೊಳ್ವ ಭೇರುಂಡವಕ್ಕಿಗಳಂ ನೋಡಿದ ನೋಟದಾಸದಿಯಿಗಿವಸ್ತು೦ ಕಂಡಂ (ಶಂರಾಮಾ. ೦೦–೬೮).
[ಭೇರುಂಡ + ಪಕ್ಕಿ]

**ಭೇಲ್**, ಭೇಳ (ನಾ). ಒಂದು ಬಗೆಯ ತಿಂಡಿ ; ಎರಡು ಮೂರು ತಿಂಡಿಗಳನ್ನು ಸೇರಿಸಿರುವ ಮಿಶ್ರಣ; ಚೌಚೌ; ಮಿಸಳ (ಉಕ): ಇನ್ನೊಂದು ಕಡೆ ಕಡಲೆಕಾಯಿ, ಭೇಲ್, ಮಿಠಾಯಿ ಮಾರುವ ಹುಡುಗರು ಬಂದು ಕೊಳ್ಳಿರೆಂದು ಎಲ್ಲರನ್ನು ಬಲವಂತ ಪಡಿಸುತ್ತಿದ್ದರು (ಸೋತಗೆ. ೭೦). **ಭೇಳ** : ಆರ್ಡರ್ ದೊರೆತೊಡನೆ ಸಂತುಷ್ಟನಾದ ಭಯ್ಯಾ . . . ಓಡುತ್ತ ಹೋಗಿ ಭೇಳ (ಚೌಚೌ)ನ್ನು ಎರಡು ಎಲೆಗಳಲ್ಲಿ ತಂದು ಅವರ ಮುಂದಿರಿಸಿದ (ಎಡಹ. ೨೮). [ ← ಮರಾ. ಭೇಲ್. / ಪ್ರಾ. ಭೇಲ್, ಭೇಳ್]

**ಭೇಶ** (ನಾ). ೧. ನಕ್ಷತ್ರಗಳ ಒಡೆಯ ; ಚಂದ್ರ : ದುರಿತವಾರಿಜಭೇಶ ಜಗದೀಶ (ಪ್ರಶಕಾ. ೪–೦). ೨. ಕಾಂತಿಯ ಒಡೆಯ ; ತೇಜಸ್ಸಿಗೆ ಒಡೆಯನಾದವನು : ಭೂವಂದ್ಯ ಭೇಶ ಭೈಷಜ್ಯ . . . ಎನೆ ಕಾಯ್ದು ಹರಿಯೆ (ತತಾಂ. ೭೭–೬೨). [ಸಂ.]

**ಭೇಶಚೂಡ** (ನಾ). ಚಂದ್ರನನ್ನು ತಲೆಯಲ್ಲಿ ಧರಿಸಿರುವವನು ; ಚಂದ್ರಚೂಡ ; ಶಿವ : ಬಸವ ಭೇಷ[ಶ]ಚೂಡನ ಧ್ಯಾನದೊಳು ರಾಜ್ಯವೈಭವದಿ ಮೋಸಹೋಗದೆ (ಶ್ರಶುಕ್ಷ. ೬–೪೦). [ಸಂ.]

**ಭೇಷ್** 'ಬೇಶ್' ನೋ.

**ಭೇಷಜ** (ನಾ). ೧. ಮದ್ದು ; ಔಷಧಿ : "ಭೈಷಜ್ಯಂ ಭೇಷಜಂ, ಜಾಯುಃ, ಅಗದಂ, ತಂತ್ರಂ, ಔಷಧಂ— ಈ ೬ ಮದ್ದು" (ಶಬ್ದಮ. ೦೦೦–೪೫೯); ನಿನ್ನೀ ಸ್ತವಭೇಷಜದಿಂದಘ ಕರಗುವುದಲ್ತೆ (ಜಕಾರೆ. ೨೨); ದಿವ್ಯಶಸ್ತ್ರಪ್ರಹರಣ ಭಯಮನಪಹರಿಸುವ ಭೇಷಜಪ್ರಯೋಗಮನೊಡರಿಸುವಮೆಂದು ಶೋಕೋದ್ರೇಕಮನುಪಶಮಿಸುವುದುಂ (ಶಂರಾಮಾ. ೦೯–೩೪ ವ). ೨. ಪರಿಹಾರೋಪಾಯ ; ನಿವಾರಣೆ : ಕಾಮಿನಿಯರ ಕುಚಾಲಿಂಗನವನುಳಿದೊಡೆತ್ತಣದು ಹಿಮಮುಕೆ ಭೇಷಜವೆಂದು ವಿರಹಿಗಳ್ಮೊರ್ಪರನಱಸುತಿರ್ದರು (ಕ್ಕಿಬಿಂಶಾ. ೨೬–೩); ಪ್ರೀತಿಯಲ್ಲದೆ ಬೇರೆ ಭೇಷಜಂ ಪೋ ಭ್ರಾಂತಿಯೆಂಬಿನಂ, ಕೇಳಾಲ್ಪಕೆ ಮಾಡಿದಳೊ (ಶ್ರೀರಾಮಾ. ೨೬೪–೪೦೫). [ಸಂ.]

**ಭೇಷಜನಿವಾಸ** (ನಾ). ಔಷಧಗಳು ಸಿಗುವ ಸ್ಥಳ ; ಆರೋಗ್ಯಗೃಹ : "ಭೇಷಜನಿವಾಸಮೆನಲು ಆರೋಗ್ಯಗೃಹಮಕ್ಕು" (ಶಂಗರಾ. ೫೬–೦೦).
[ಸಂ.]

**ಭೇಳ** 'ಭೇಲ್' ನೋ.

**ಭೈ** (ನಾ). ಒಂದು ಅನುಕರಣ ಶಬ್ದ : ಪೂರಿತ ರಣಶಂಖ ಗಭೀರಾರಾವಂ ದೆಸೆಯ ಕೋಣ ಕುಸುಕುಱ ಗಜಘಂಟಾರವಮನುಱಿದೆ ಪೆಱಗಿಡೆ ಭೈ ರವ ಮೆಸೆದತ್ತು ಚರದ ಬಲಜಲನಿಧಿಯೊಳ್ (ಶಾಂತಿಪು. ೩–೯೭).

**ಭೈಭೈ** (ದ್ವಿರುಕ್ತಿ) : ದೋರ್ಗರ್ಬ್ಬದಗರ್ವನಲ್ಲಿ ಮೆಱೆವಂ ಭೈಭೈ ಎನುತ್ತಾಗಳೇಱಿದ ಮತ್ತದ್ವಿಪಮಂ ನೃಸಿಂಹಮಹಿಪಂ (ಎಕ. VI, ಶೃಪು. ೨೦–೦೯; 1249) ; ಒಡೆದದ್ರಿಕ್ಷಿತಿಸಂಧಿ ಪತ್ತುವಿಡೆ ಭೈಭೈಯೆಂಬಿನಂ ಕಿಬ್ಬು (ಕವಿದ. ೩೩ ಪ್ರಯೋ).

**ಭೈಕಾರ** (ನಾ). ಭೈ ಎಂಬ ಅಕ್ಷರ : ಬತ್ತದ ಭೈಕಾರಕ್ಕೆ—ಬಹಿತ್ರ—ಭೈತ್ರ (ಕವಿದ. ೨೬೫ ಪ್ರಯೋ).

**ಭೈಭೈಕಾರ** (ದ್ವಿರುಕ್ತಿ) : ಆ ಕುವಲಯಾಪೀಡಗಜವುಂ ಕಂಡು

ಗಜಾಸುರನಂ ಕಂಡ ಖಂಡಪರಶುವಿನಂತುದ್ಭಟಾರಭಟಿಯಿಂದಾರ್ದು ಭೈಭೈ ಕಾರದಿಂದಾ ದ್ವಿರದದಿದಿರಂ ನಡೆಯೆ (ಜಗಂ. ೬-೩೦ ವ). [ಸಂ.]

**ಭೈಕೃತ** (ನಾ). ಭೈಯೆಂಬ ಕೂಗು : ದಿಶಿಜಾರಿಯ ಭೈಕೃತದೊಡನೆ ತಗುಳ್ದಣ್ಮೆದುದು ಕಳರ್ದಿಭೇಂದ್ರದ ಗಳಬೃಂಹಿತಮುಂ . . . ಮದಗಂಧ ವಿಚಲದಳಿಝಂಕೃತಮುಂ (ಜಗಂ. ೬-೩೦). [ಸಂ.]

**ಭೈಕ್ಷ** (ನಾ). ೧. ಭಿಕ್ಷೆ ಬೇಡುವುದು ; ಭಿಕ್ಷಾಟನೆ ; ತಿರುಪೆ. ೨. ಭಿಕ್ಷೆಯಿಂದ ತಂದ (ಆಹಾರ) ಪದಾರ್ಥ : "ಭೈಕ್ಷಂ, ಭಿಕ್ಷಾ ಕದಂಬಕಂ — ೨ ತಿರಿದು ತಂದ ಪದಾರ್ಥಗಳ ಗುಂಪಿನ ಹೆಸರುಗಳು" (ಸಿದ್ಧಾಂತಿ. ೨೨೯). ೩. ಕರುಣೆಯನ್ನು ಯಾಚಿಸುವುದು ; ಕೃಪೆಗಾಗಿ ಪ್ರಾರ್ಥನೆ ಮಾಡುವುದು : ಸೊರ್ಕಿಕ್ಕಿಟ ಮುಕ್ಕುವೋಗಿ ಕಡೆಯೊಳ್ ಭೈಕ್ಷಕ್ಕೆ ಪಕ್ಕಾದಿರೇ (ಸುಕುಮಾ. ೪-೨೬). ೪. ಭಿಕ್ಷಾದಾನ : 'ಪುರುಷಭೈಕ್ಷ' ಪರಾ. [ಸಂ.]

**ಭೈಕ್ಷಶುದ್ಧಿ** (ನಾ). [ಜೈನ] ಆಚಾರ್ಯವ್ರತದ ಐದು ಭಾವನೆಗಳಲ್ಲಿ ಒಂದು ; ಆಹಾರಶುದ್ಧಿ : ಆಚಾರಸೂತ್ರೋಕ್ತಮಾರ್ಗದಿಂ ಭೈಕ್ಷ ಶುದ್ಧಿಯುಂ . . . ಅಸ್ತೇಯವ್ರತದ ಭಾವನೆಗಳೈದುವು (ತತ್ತ್ವಸೂ. ೨೬೦) ; ಅನ್ಯಾಯ ಮತ್ತು ಅಭಕ್ಷ್ಯಗಳನ್ನು ತ್ಯಾಗಮಾಡಿ ಭೋಗಾಂತರಾಯದ ಕ್ಷಯೋಪಶಮಕ್ಕನುಸರಿಸಿ ಲಭಿಸುವಂಥ ಸರಸವಾಗಿರಲಿ ನಿ[ನೀ]ರಸವಾಗಿರಲಿ . . . ಅದನ್ನೇ ಸ್ವೀಕರಿಸುವವಕ್ಕೆ ಭೈಕ್ಷಶುದ್ಧಿಭಾವನೆ ಎನ್ನುವರು (ಶ್ರಾವಕಾ. ೩೦೪). [ಸಂ.]

**ಭೈಕ್ಷುಕ** (ನಾ). ಭಿಕ್ಷುಕರ ಗುಂಪು, — ಸಮೂಹ : ಭೈಕ್ಷುಕಕ್ಕಂಜಿ ಅಟ್ಟುಂಬುದಂ ಮಾಣಬೇಡ (ಪಂಚತಂ. ೦-೩೮ ವ). [ಸಂ.]

**ಭೈಕ್ಷೆ** (ನಾ). ಯಾಚನೆ ; ಭಿಕ್ಷೆ : 'ಪುರುಷಭೈಕ್ಷೆ' ಪರಾ. [ಸಂ. ಭೈಕ್ಷ]

**ಭೈತು** (ನಾ). ನೃತ್ಯದಲ್ಲಿ ಒಂದು ಬಗೆ : ಚಿಂದು ಜಕ್ಕಡಿ ಕವಿಲು ಗಜಲು ಭೈತು ತುರಿಗೆ ಆಂದೋಳಿತ ಮೊದಲಾದ ಆಟಗಳಿಂ ನೋಟಕರ ದಿಟ್ಟಿಗೆ ಮಧುರಮಾಗೆ ಮೆಚ್ಚಿನಚ್ಚೊತ್ತಿರ್ದಳ್ (ವಿರೂಪಾ. ೯೦). [ ? ]

**ಭೈತ್ರ** 'ಬಹಿತ್ರ' ನೋ.

**ಭೈತ್ರಕಾಜಿ** (ನಾ). ಹಡಗನ್ನು ನಡೆಸುವವನು ; ನಾವಿಕ : ಭೈತ್ರ ಕಾಜಿರಿಂ ದ್ವೀಪಗಳಂ ಜೋಯಿಸರಿಂ ಗ್ರಹಣಮುಮಱಿವಂತೆ (ಧರ್ಮಾಮೃ. ೯-೬೯). [ಭೈತ್ರ (<ಬಹಿತ್ರ) + —ಕಾಜಿ]

**ಭೈತ್ವ** (ನಾ). = ಭೈಕಾರ : ಆದಿಸು ಬತ್ವಂ ಭೈತ್ವ ವೈತ್ವ ವಿಧಿಯುತ್ತ ವಾತ್ವದೊಳ್ ದೊರೆಕೊಳ್ಗುಂ (ಕವಿಪ. ೩೬೩). [ಸಂ.]

**ಭೈಮುಂಗ** 'ಭೈಮೂಗು' ನೋ.

**ಭೈಮುಂಗು** 'ಭೈಮೂಗು' ನೋ.

**ಭೈಮೂಗು**. ಬೈಮೂಗ, ಭಯಿಮೂಗ, ಭೈಮುಂಗ, ಭೈಮುಂಗು (ನಾ). (ಉಕ) ನೆಲಗಡಲೆ ; ಶೇಂಗಾ : ಇಲ್ಲಿ ಭತ್ತ, ಜೋಳ, ಸಜ್ಜೆ, ಕುಸುಬೆ, ಭೈಮೂಗು ಚನ್ನಾಗಿ ಬೆಳೆಯುತ್ತವೆ (ಮುಂಬಭೂ. ೧೩೦). **ಬೈಮೂಗ** : ಎಣ್ಣೆಯ ಪ್ರಕಾರವು . . . ಕುಸುಬಿ, ಬೈಮೂಗ, ಗಣಜಲ (ಮುಂಬವ್ಯಾ. ೦೬೨). **ಭಯಿಮೂಗ** : ಬಜಿ, ಭಯಿಮೂಗದ ಕಾಯಿ (ಶೇಂಗಾದ ಕಾಯಿ) ಈ ಮಾಲಿನ ಕಿಮ್ಮತ್ತು ಸೂರ್ತಿ ಚವಾಳಾ ೨೦ ಮಣದ ಖಂಡುಗದ ಮೇಲೆ ಇರುತ್ತದೆ (ಮುಂಬವ್ಯಾ. ೦೦೩). **ಭೈಮುಂಗ** : ಭೈಮುಂಗ ಮಾರಾಟದ ಹಣ ಬೆಳಗಾಂವಿಯ ಅಡತಿಯಲ್ಲಿತ್ತು (ದೀಕ್ಷಾ: II. ೨೪೬). **ಭೈಮುಂಗು** : ಅನೇಕ ದಿನ ಬರಿ ಹಾಲು ಕುಡಿದು ಭೈಮುಂಗು ತಿಂದಿದ್ದೆ ನಾನು (ಸಮಾಜೇ. ೩೬೬). [← ಮರಾ. ಭುಇಮೂಗ್]

**ಭೈರವ** (ಗು). ೧. ಭಯವನ್ನುಂಟುಮಾಡುವ ; ಭಯಂಕರವಾದ : ಭೈರವನ ಭೈರವಾಡಂಬರಕ್ಕೆರ್ದೆ ಬಿರಿದು ತಾರಕಾಕ್ಷಂ ಮುಂದಿದಂ (ಶಿವಪು. ೩೪-೩೮) ; ಗಂಗಾಗಾತ್ರಭವ್ಯದಿಂ ಪರ್ವತ ಸಹೋದರತೆಯಾಂತುದು ವಿಯಚ್ಚುಂಬಿ ಭೈರವಬೃಹತ್ತರುವರಂ (ಶ್ರೀರಾಮಾ. ೨೩೬-೬೯೨). ೨. ಶಿವನಿಗೆ ಸಂಬಂಧಿಸಿದ. (ನಾ). ೩. ಭಯಂಕರವಾದುದು : ಭೀತಿಯನ್ನುಂಟು ಮಾಡುವಂತಹುದು : ಘೋರಂ, ಪ್ರತಿಭಯಂ . . . ಭೈರವಂ, ಭಯಾ (ವಹಂ)ನಕಂ —ತೀ ೧೦ ಭಯಂಕರು" (ಹಲಾಯು. ೦೮೩-೨೦) : ಮುಲೆತುದು ಮುಂದೆ . . . ಕರ್ಕಶಂ ಭೈರವಂ ಜನಸಂಗ್ಫೋಸಂ ಮಹದ್ಧ್ವನಂ (ಶ್ರೀರಾಮಾ. ೦೨೬-೩೬). ೪. ಪರಮೇಶ್ವರನ ರೂಪಗಳಲ್ಲಿ ಒಂದು : "ಘೋರಮೂರ್ತಿಯುಂ ಖಡ್ಗಹಸ್ತಂ ದಿಗಂಬರಂ ಭೈರವನ ಪೆಸರಕ್ಕು" (ಮಂಗರಾ. ೩-೦೩) ; ಭೈರವನಂತೆ ಭಾಂಕಾರಂಗುಡುತಿರ್ಪ ಸಾಧಕರುಂ . . . ಅತಿಭಯಂಕರಾಕಾರಮಪ್ಪುದು (ಕಾವ್ಯಸಾ. ೩೨೯ ಜನ್ನ೪) ; ಪರಸೈನ್ಯ ಭೈರವನೊಳಿಱಿವೆನೆಂಬ ಪಟುವಗೆಯೊಳ್ ಭೈರವಂಬಾಯ್ದಂತೆ ಬಂದು ನಿಂದ ಪುರಂದರನಲ್ಲಿಗೆ ಸರಸಿಜಸಂಭವಂ ಬಂದು ಮಾರ್ಕೊಂಡು (ಶಂಕರಾ. ೩-೦೦೦ವ). ೫. ಈಶ್ವರನ ಪ್ರಮಥ ಗಣ: ಎಡೆಬಿಡದೆ ಕಿಕ್ಕಿರಿದು ಕುಳಿತಿರ್ಪ ಭೈರವರ ಗಡಣ ತರತರದಿ ನಿಖಿಳಾಯುಧಮನಾಂತು ಕಾಯ್ದಿರುಯುತಿ ಜಾಗ್ರದಿಂದೇ (ನವನೂ. ೨೪-೩೬). 'ಭೈರವಾಳಿ' ಪರಾ. ೬. ಮಹಾ ಮಂತ್ರಗಳಲ್ಲಿ ಒಂದು: ಗಾಯಿತ್ರಿ. . . ಭೈರವಾದಿ ಮಹಾಮಂತ್ರಂಗಳಂ ...ಬೇಜ಼್‌ಬೇಜ಼್ ವಿವೇಕಿಸಿ ನೋಡಿ (ವಿವೇ. ೭೩) ೭. ಒಡೆಯನಿಗಾಗಿಯೇ ಬದುಕಿ ಅವನೊಡನೆಯೇ ಮಡಿಯುವುದೆಂಬ ದೀಕ್ಷೆಯನ್ನು ಕೈಗೊಂಡಿರುವ ವೀರ : ಲಿಂಕರಾಯನೆಂಬ ಒಬ್ಬ ಸೈನಿಕ ತಾನು 'ಭೈರವ' ನಾಗಲು ನಿರ್ಧರಿಸಿ . . . ವೀಳೆಯ ಅಪ್ಪಣೆಯಾಗಬೇಕು ಎಂದ (ಶಾಂತಲಾ. ೨೨೯). 'ಗರುಡ' ಪರಾ. ೮. ಭಯ; ಹೆದರಿಕೆ. ೯. ಪರ್ವತ ; ಬೆಟ್ಟ. ೧೦. [ಸಂಗೀತ] ಒಂದು ರಾಗದ ಹೆಸರು : ವೇಗವಾಹಿನೀ ಮೇಳದ ಲ್ಲಾದರೋ ಭಾಷಾಂಗ (ರಾಗ)ವಾದ ಭೈರವವು ಹುಟ್ಟಿತು (ಸಂಗೀ. ೦೨೯) ; ಕೇಶವಲಾಲನು . . . ಶುದ್ಧಸುಸ್ವರದಿಂದ ಭೈರವರಾಗದಲ್ಲಿ ಭಜನೆಯ ಹಾಡು ಹಾಡುತ್ತ ಮನೆಗೆ ಮರಳುತ್ತಿದ್ದನು (ಬಕ್ಕ. ೦೬೬). [ಸಂ.]

**ಭೈರವಾಂಜನ** (ನಾ). ಒಂದು ಬಗೆಯ ಅಂಜನ : ಭೈರವಾಂಜನ– ಹಿಂಗು, ಸೈಂಧವ, ಹಿಪ್ಪಲಿ ಇವನ್ನು ಗೋಮೂತ್ರದಲ್ಲಿ ತೇದು ಅಂಜನ ವಿಡಲು ಸನ್ನಿಪಾತಜ್ವರಗಳು ಮಾಣುವುವು (ಸಕಲ. ೪೨೨ ಪು). [ಸಂ.]

**ಭೈರವಾವಳಿ** (ನಾ). ಭೈರವದೇವರ ಸಮೂಹ,– ಗುಂಪು ; P ಇವರು ಎಂಟು ಜನ:—ವಿದ್ಯಾರಾಜ, ಕಾಮರಾಜ, ನಾಗರಾಜ ಸ್ವಚ್ಛಂದ ರಾಜ, ಲಂಬಿತರಾಜ, ದೇವರಾಜ, ಉಗ್ರರಾಜ ಮತ್ತು ವಿಘ್ನರಾಜ– ಎಂದು ವಾಮನಪುರಾಣದ ೬೭ನೆಯ ಅಧ್ಯಾಯದಲ್ಲೂ ಅಸಿತಾಂಗ, ರುರು, ಚಂಡ, ಕ್ರೋಧ, ಉನ್ಮತ್ತ, ಕಪಾಲ, ಭೀಷಣ ಮತ್ತು ಸಂಹಾರ–ಎಂದು ತಂತ್ರಸಾರದಲ್ಲೂ ಹೇಳಿದೆ. ಈ ರೀತಿ ಈ ಎಂಟು ಜನ ಭೈರವರಿಗೆ ಇನ್ನೂ ಬೇರೆ ಬೇರೆ ಹೆಸರುಗಳಿವೆ : ಆ ಮಹಾವನಂ . . . ಭೈರವಾವಳಿಯಂತೆ ರುರುಪರಿಚಿತಮುಂ ಪಿತಾಮಹಾನನದಂತೆ ಸಾಮಜ ಪದಾಭಿರಾಮಮುಂ . . . ಅಲ್ತು (ಚಂದ್ರಪ್ರ. ೩-೩೨ ವ). [ಸಂ. ಭೈರವಾವಲಿ]

**ಭೈರವಾಸನ** (ನಾ). [ಯೋಗ] ಒಂದು ಬಗೆಯ ಆಸನ : ಮೊದಲು 'ಭೈರವಾಸನ'ವನ್ನು ಅಭ್ಯಸಿಸಿ . . . 'ಏಕಪಾದಶೀರ್ಷಾಸನ'ಕ್ಕೆ ಮತ್ತೆ ಹಿಂದಿರುಗಬೇಕು (ಯೋಗದೀ. ೨೦೭) ; ಮುಖ್ಯವಾದ ಕೆಲವು ಆಸನ ಗಳು. ಅಷ್ಟವಿನ್ಯಾಸಗಳು. ೧. ಉತ್ತಾನಾಸನ . . . ೭೯. ಭೈರವಾಸನ (ಶಾರದ. ೦೬೭). [ಸಂ.]

**ಭೈರವಿ** (ನಾ). ೧. ದುರ್ಗಾದೇವಿಯ ಒಂದು ರೂಪ : "ಚಾಮುಂಡಿ ಚರ್ಚಿ ಭೈರವಿಯೆನಲು ವನದೇವಿ" (ಮಂಗರಾ. ೪-೦೪) ; ರೋದನದಿಂ ಸುತನ ಶಿರಶ್ಛೇದನವಚಲಾಜನಾಜುಗುಂ ರಿಪುರುಧಿರಾಸ್ವಾದನದಿನೆಂದು ವಿಲಯೋತ್ಪಾದನ ಭೈರವಿಯ ಮುಸಕಮಂ ಕೈಗೊಂಡಳ್ (ಶಂಖಮಾ. ೯೩೩) :

ಈಕೆಯುದಾವಳೊ ಪ್ರತ್ಯಕ್ಷವೊ ಮಾಕಾಳಿಯೊ ಚಂಡಿಯೋ ಮಹಾ ಭೈರವಿಯೋ (ಜಗವ. ೩-೦೩). ೨. [ಸಂಗೀತ] ಒಂದು ರಾಗದ ಹೆಸರು: ಕಾಂಭೋದಿ ಭೈರವಿ ಮೊದಲಾದವನು ಸಾರವಡೆದು ಸವಿಧಾನಗಳಿಂ ಸುರನಾರಿಯರೊಲಿವಂತೆ ಪಾಡೆ (ಕೀವಂಕಾಂ. ೦೬-೯೭) ; ಶ್ರೀರಾಗ ಭೈರವಿ ವರಾಳಿ ಹುಸಾನಿ ಗುಂಡಾಕ್ರೀ . . . ವಸಂತರಾಗಂ ಇವಾದಿಯಾದ ರಾಗಂಗಳಂ ಪಾಡುತ್ತಿರೆ (ಹಮ್ಮಿ.ರ. ೨-೯೦) ; ಭೈರವಿರಾಗವ . . . ಕೆಲವು ಕೃತಿಗಳನ್ನು ಮಾತ್ರ ಅವರು ತಮ್ಮ ಕಚೇರಿಗಳಲ್ಲಿ ಹಾಡುತ್ತಿದ್ದರು (ಸಂಗೀತ. ೩). [ಸಂ. ಭೈರವೀ]

**ಭೈರವೇಶ್ವರ** (ನಾ). = ಭೈರವ ೪ : ಆ ಭೈರವೇಶ್ವರದೇವರ ನಾಲ್ಕು ವ್ರಿತ್ತಿಯ ಪ್ರಾಪ್ತಿಪೊಳಗಾದ ಗ್ರಿಹಕ್ಷೇತ್ರ (ಎಕ. IV. ಕೃಕ್ಕರಾ. ೦೨-೩೩ ; 1267). [ಸಂ.]

**ಭೈರಿ₁** (ನಾ). ಒಂದು ಬಗೆಯ ಹಕ್ಕಿ : ಆ ಮೃಗಶಾಲೆಯಲ್ಲಿ ಹುಲಿ, ಕರಡಿ . . . ಗಿಡಗ, ಭೈರಿ ಮುಂತಾದ ನಾನಾಬಗೆಯ ಮೃಗಗಳದ್ದವು (ಒಕ್. ೩೩) ; ದೊರೆಗಳವರು . . . ಗೌಜಲಹಕ್ಕಿ, ಲಾವಕಹಕ್ಕಿ, ಗಿಡಗ ಭೈರಿ ಮುಂತಾದ ಅನೇಕ ಮೃಗಪಕ್ಷಿಗಳನ್ನೂ ಚೆನ್ನಾಗಿ ಕಾಪಾಡುತ್ತಿದ್ದರು (ಮಹಾವ. I, ೦೬೨).
[ದೇ.॥ ತೆಲು. ಭೈರಿ, ಬೈರಿ, ಬಯಿರಿ, ಭೈರವಿ./ಮರಾ. ಭೈರೀ, ಬಹಿರೀ]

**ಭೈರಿ₂** (ನಾ). ಒಬ್ಬ ದೇವತೆಯ ಹೆಸರು ; ಭೈರವ : ಲಿವಜೋಗಿಗಳು . . . ಇವರು ಭೈರಿ, ವಿಠೋಬ, ಹನುಮಂತ ಮುಂತಾದ ದೇವರಿಗೆ ನಡದುಕೊಳ್ಳುವರು (ಕಜಾಗಿ. ೨೭೯). [←ಮರಾ. ಭೈರೀ]

**ಭೈರಿ₃** 'ಬೈರಿ' ನೋ.

**ಭೈಷಜ್ಯ** (ನಾ). ೧. ವೈದ್ಯಕೀಯ ಚಿಕಿತ್ಸೆ : ಔಷಧೋಪಚಾರ : ಅಥರ್ವವೇದದಲ್ಲಿ ಭೈಷಜ್ಯಕ್ಕೆ ಪ್ರಾಧಾನ್ಯ (ಕರ್ನಾಟ. ೦೭). ೨. ಮದ್ದು ; ಔಷಧ : "ಭೈಷಜ್ಯಂ, ಭೇಷಜಂ, ಜಾಯುಃ, ಅಗದಂ, ತಂತ್ರಂ, ಔಷಧಂ —ಈ ೬ ಮದ್ದುಗ" (ಅಭಿಧಾ. ೦೦೦-೯೩೯); ಭೈಷಜ್ಯಜ್ಞಾನಮೆ ಮಾಡುಗುಮೆ ವೇದನಾನಿಗ್ರಹಮಂ (ಕಂಪ್ರ.ಭು. ೬-೨೬) ; ಆ ಜನಪದಂ . . . ಭೈಷಜ್ಯಸಂಗ್ರಹದಂತೆ ಬಹುಧಾನ್ಯಕಥಾತ್ರಿಸಂಯುಕ್ತಮುಂ ಸಾರರಸಾಷಧಿಸಮೇತಮುಂ . . . ವಿನಿಸಿ ರಮಣೀಯಮಾಗಿರ್ದುದು (ರಾಜಶೇ. ೨-೨೮ ವ). ೩. ರೋಗವನ್ನು ಗುಣಪಡಿಸುವ ಸಾಮರ್ಥ್ಯ. [ಸಂ.]

**ಭೈಷಜ್ಯಕ** (ನಾ). ಒಂದು ಬಗೆಯ ಜ್ವರ, ತಾಪ : ಶರ್ವಂ . . . ನಂದಿಪ್ರಮುಖನಿಖಿಲಪ್ರಮಥಯೂಥಮನಲ್ಲಿಂ ಪೆಜಗೆ ಭೈಷಜ್ಯಕನಿಂದಿ ಜ್ವರಮುಮಂ ಬೆಸಸೆ (ಜಗವ. ೦೯-೯ ವ). [ಸಂ.]

**ಭೈಷಜ್ಯಶಾಸ್ತ್ರ** (ನಾ). ವೈದ್ಯಶಾಸ್ತ್ರ : ಧರೆಯೊಳ್ ಭೈಷಜ್ಯಶಾಸ್ತ್ರಂ ಸುಖಕರಮಖಿಳರ್ಗೆ (ಕಳ್ವ. ೪ ಪ್ರಸ್ತಾವನೆ). [ಸಂ.]

**ಭೊಂ** (ನಾ). ಒಂದು ಅನುಕರಣ ಶಬ್ದ.

**ಭೊಂಭೊಂ** (ದ್ವಿರುಕ್ತಿ) : ರಂಭೆಯದೊರ್ವಳ್ . . . ಭೊಂಭೊಂ ಭೊಂಭೊಂಬೆಂಬೀ ಶಂಖಧ್ವನಿ ಪೊಣ್ಮೆ ಢಕ್ಕೆಯುಂ ಬಾಜಿಸಿನಳ್ (ಪಾರಪು. ೬-೮೯).

**ಭೊಗ್ಗನೆ** (ಅ). ಒಂದು ಅನುಕರಣಾವ್ಯಯ : ಕೂಡಲೆ, ತಟ್ಟನೆ : ಕೋಟೆಯನು ಭೊಗ್ಗನೆ ವಶಮಾಡಬೇಕೆಂಬ ನುಡಿಗಳು ಕಗ್ಗಲಿಗಳೊಳೊಪ್ಪಿದವು (ಕಂಕ್ರಸಾ. ೯-೨೦) ; ಭೊಗ್ಗನಯ್ಯನ ಕಾಣಲೊಡನೆ ರೋಮಾಂಚದ ಸುಗ್ಗಿ ಪೆತ್ತಿಗೆರೆಯ್ತು ದರು (ಭರತ. ೩೮-೯೯). [ಭೊಗ್ಗ್₀ + – ಅನೆ₁]

**ಭೊಪ್ಪರ** (ನಾ). (?) : ಪೂರ್ವ್ವಕಟಳೆ ಪೂರ್ವಮರಿಯಾದೆ ಹಾಗುವ ವೊಲೆಯು ಕೋಲಿನಲು ತೆಗವಂಥಾ ದೇವಿಯ ಭೊಪ್ಪರವನು ಪೂರ್ವಮರಿಯಾದೆಯಲು ಎರಡು ಕೇರಿಯ ಹಲರು ಸಟಿಕಾಜಿರು ಆ ದೇವ್ಯಿದೇವರಿಗೆ ನಡಸಿ ಬಹರು(ಎಕ್.ಇ. IX–ii, ಕ್ಷೀ-೦೬; 1465). 'ಬೊಪ್ಪರ' ಪಾಠ.[?]

**ಭೋ** (ಅ). ೧. (ಸಾಮಾನ್ಯವಾಗಿ ಗೌರವಾರ್ಹರಾದವರನ್ನು ಸಂಭೋಧಿಸುವಾಗ ಹೇಳುವ) ಒಂದು ಅವ್ಯಯ : ತೋಟಿಯ ಮಾವಣ್ಣಗಳಿರಾ . . . ಪರನಾರಿಯ ಸಂಗವ ತೊಟಿಯಿಂ ಭೋ (ಬಸವ. ೬೪೪); ಗುಹೇಶ್ವರ ಲಿಂಗವ ತನ್ನೊಳಚಿದೆನೆಂಬ ಮಹಾಂತಂಗೆ ಸತ್ಕ್ರಿಯಾಚರಣೆಯ ಸಾಧನೆ ಕಾಣೆ ಭೋ (ವಚರ. ೮೯). ೨. ದುಃಖ, ಗಾಬರಿ, ಅಪಘಾತ ಮುಂತಾದ ಸಂಕಟಪ್ರಸಂಗಗಳಲ್ಲಿ ಉದ್ಗರಿಸುವ ಶಬ್ದ ; ಅಯ್ಯೋ ಎಂಬ ಅರ್ಥವನ್ನು ಕೊಡುವ ಶಬ್ದ : ಬ್ರಹ್ಮರ್ ಭೋಯೆನಲುಂ ಬಲ್ಲಕೊರಲೆಧೋಯೆನಲುಂ ಬಲ್ಲರಿಜ್‌ಯೆಲವರೆತ್ತಜ್‌ವರ್ (ಗದಾಯು. ೨-೦೬); ಈಯೆಡೆಯಿಂ ಪೋಗೆಲೆ ಪಾರ್ವಾಯೆನೆತಲ್ಲಣಿಸಿ ಪಾರ್ವನಬ್ರಾಹ್ಮ (ಬ್ರಹ್ಮಣ್ಯಂ ಭೋಯೆಂದು ಪುಯ್ಯಲಿಡುತುಂ . . . ನೃಪೇಂದ್ರಸಭೆಯಂ ಪೊಕ್ಕಂ (ಸುಕುಮಾ. ೬-೯೦) : ಭೋಯೆಂದುದುನಿಖಿಳಪರಿವಾರಮುಡಿಗಡಿಗೆ ಹಾಹಾಯೆಂದು ಮಱುಗಿದುದು (ತ್ರಿಲಾ. ೦೦-೩೯). [ಸಂ. ಭೋಸ್]

**ಭೋಂಕನೆ** (ಅ). ಒಂದು ಅನುಕರಣಾವ್ಯಯ : ತಟ್ಟನೆ ; ಬೇಗನೆ : ಸಿದ್ಧಾರ್ಥಂ . . . ಪುತ್ರಮುಖಮಂ ನೋಟ್ಟೆನೆಂದು ಭೋಂಕನೆ ನೆಲಮನೆಯೊಳಗಂ ಪೊಕ್ಕು ನೋಟ್ಟಸ್ಸಗಂ (ವರ್ಧಮಾ. ೯೯-೨೦); ಸೂರ್ಯಜಂ . . . ಮಂಗಳಲಕ್ಷಣೆಯಾನದು ಭೋಂಕನೆ ಕಂಡಂ (ಕಾಕರಾ. ೯-೬೬): ಪಾಪದಂ ತನ್ನ ಗಿಳಿಗಳ ಮಱಗೋಗಿಲೆಗಳ ಪಸಾಯ್ಯನಿಂ ಕೂಡಿ ಭೋಂಕನೆಟ್ಟು (ರಾಜಶೇ. ೩೬-೦೯). [? + – ಅನೆ₁]

**ಭೋಂಕರಿಸು** (ಕ್ರಿ). ಧ್ವನಿಮಾಡು ; ಘೋಷಿಸು ; ಮೊಳಗು : ಬರಿದುದುಬಾಜಭವಾಂಡವೆನೆ ಭೋಂಕರಿಸಿದವು ನಿಸ್ಸಾಳತತಿ (ಕುಮಾ.ಭಾ.೯.೯-೦೪); ಭೋಂಕರಿಸುತೊಗ್ಗಿದಕಹಳೆವಿದು ಜೀನ್ನೊಣದಂತೆ . . . ಪಟುಭಟರ್ (ಕೈಬಿಹಾ. ೯-೩೨). [ಭೋಂಕರಣ₀ + – ಇಸು₃]

**ಭೋಂಕಲ್** (ಅ). = ಭೋಂಕನೆ : ನಿಜದೋಳಿಂದಟ್ಟಿ ಭೋಂಕಲ್ ಭಯದೆ ನಡುಗುತಂ . . . ತಾನದೇನೆಂದಱಿಯದಬಲೆ ನಾನಾರಸಾಕ್ರಾಂತೆಯಾದಳ್ (ಅಜಂಡು. ೬೮೬) ; ದೇವಂಗೊಗೆತಂದುದವಧಿಬೋಧಂ ಭೋಂಕಲ್ (ಪೇಳ್‌ಪು. ೧-೦೦೦) ; ಭೋಂಕನೆ ಚೆಕ್ಕನೆ ಭೋರನೆ ಭೋಂಕಲ್ . . . ಕೂಡಿರೆ ತಮ್ಮೊಳೊದವುಗಂ ಶೀಘ್ರಾರ್ಥಂ (ಶಮದ. ೪೦೩). [ ? ]

**ಭೋಂಗಾ, ಭುಂಗಾ** (ನಾ). ಕಾರ್ಖಾನೆ, ಗಿರಣಿ ಮುಂತಾದುವುಗಳಲ್ಲಿ ಕೆಲಸಗಾರರನ್ನು ಎಚ್ಚರಿಸಲು ಇರುವ ಯಂತ್ರ ಮತ್ತು ಅದರ ಮೂಲಕ ಹೊರಡಿಸುವ ಸಿಳ್ಳು : ನಿದ್ರೆಗಟ್ಟು ಬಳಲ್ಲಿದ ದೇಹವನ್ನು ಎಳೆದುಕೊಂಡು ಕಚೇರಿಗೆ ಬಂದು . . . ಕೂಡಲೆ ಬಂದಾಗ ಗಿರಣಿಯ ಭೋಂಗಾ ಭೋರಿಡುತ್ತಿತ್ತು (ನಾಭೋ.೦೬. ೯೬). ಭುಂಗಾ : ಗಿರಣಿಯ ಭುಂಗಾ ಜೋರಿನಿಂದ ಸಿಳ್ಳುಹಾಕಿತು (ಕಂಪ್ರತಿ. ೯೩).
[← ಮರಾ. ಭೋಂಗಾ]

**ಭೋಕು** (ನಾ). ತೂತು ; ರಂಧ್ರ : ಅವಳ ತಲೆಯಲ್ಲಿ ಭೋಕು ಬಿದ್ದು ರಕ್ತ ಪುಟಿಯ ಹತ್ತಿತು (ಜೀಸಖಾ. ೩೦). [←ಮರಾ. ಭೋಕ್, ಭೋಂಕ್]

**ಭೋಕ್ತೃ** (ನಾ). ೧. ಅನುಭವಿಸುವವನು : ಭೋಗಿಸುವವನು : ನಾವು ಕರ್ತರೂ ಅಲ್ಲ ಭೋಕ್ತರೂ ಅಲ್ಲ (ಶಾಂಕರಾ. ೯೯) ; ಪುರುಷನಿಗೆ ಕೈವಲ್ಯ ಬೇಕಾಗಿರುವುದರಿಂದ ಪ್ರಕೃತಿ ಪ್ರಾಕೃತ ವಸ್ತುಗಳಿರಬೇಕು. ಆ ವಸ್ತುಗಳು ಭೋಗ್ಯಗಳಾದುದರಿಂದ ಭೋಕ್ತನು ಬೇಕು (ಹಿಂದತಾ. ೫೯). ೨. ತಿನ್ನುವವನು : ಭೋಜ್ಯ ಭೋಜನವಲ್ಲ, ಭೋಕ್ತ ನಾನಲ್ಲ (ಅಲ್ಲಮ. ೬೪). ೩. ಅನುಭವಿಸುವುದು ; ಭೋಗಿಸುವುದು : "ಉಪಭೋಗಮೆನಲು ನಿರ್ದೇಶಮೆನೆ ಭೋಕ್ತ್ರಂ" (ಮಂಗರಾ. ೦೩೩-೩೩). [ ಸಂ. ಭೋಕ್ತೃ ]

**ಭೋಕ್ತವ್ಯ** (ನಾ). ೧. ತಿನ್ನಲು ಯೋಗ್ಯವಾದುದು ; ತಿನ್ನಬಹುದಾದುದು. ೨. ಅನುಭವಿಸಬೇಕಾದುದು ; ಭೋಗಿಸಬೇಕಾದುದು :

ಸ್ವಾಧ್ಯಾಯಪರನಪ ಭೂಸುರೋತ್ತಮನ ಭವ್ಯನೆಂದುಂ ವಂದನೆಯು ಭೋಕ್ತೃವ್ಯವಪ್ಯೋ ಜೇಡಿವತಿಥಿಗೆ ಸೇವ್ಯಭಿಕ್ಷವನಿತ್ತುವುದು ನಡೆಯೆಂಬು ದಿಲ್ಲವಡೆ ಇಂದು ಕೊಲುವರೆ (ಜಸಕ. ೫೬-೪೦) ; ವಿಪ್ರಾಳಿ ವಧೆಯಾತಂಗೆ ಬಂದುದು ಹೇಳಲದು ಭೋಕ್ತೃವ್ಯವತಿಪಾತಕದ ಫಲವೆಂದ (ಕುವ್ಯಾ. ೪. ೧೭-೧೬). [ಸಂ.]

**ಭೋಕ್ತೃ** (ನಾ). ೧. ಅನುಭವಿಸುವವನು : ಭೋಗಿಸುವವನು : ಪೂಜೆ ತ್ರಿಪುಟಿಯ ರೂಪು ತ್ರಿಪುಟಿನಿಕಾಯವೇ ಜಗಜ್ಜೀವಕರಣ ನಿಕಾಯವವು ತಿಳಿ ಭೋಗ ಭೋಗ್ಯವು ಭೋಕ್ತೃವೆನಿಸುವವು(ಅವ್ಯ.ಕ. ೪-೫): ಆತ್ಮವೆಂಬುದು ಶರೀರಕ್ಕಿಂತ ಭಿನ್ನವಾದುದು. ಅದು ಸಂಸಾರದಲ್ಲಿ ಕರ್ತೃವೂ ಭೋಕ್ತೃವೂ ಆಗಿರುತ್ತದೆ (ಜೀವಾಶ್ಯ. ೧೬). ೨. ರಾಜ; ಅರಸ. ೩. ನಲ್ಲ : ಪ್ರಿಯಕರ. ೪. ಚೆನ್ನಾಗಿ ಸುಖವನ್ನು ಅನುಭವಿಸುವವನು : ಸುಖಿ : ಭೋಗಿ : ರವಿಜಂ . . . ಶನಿಗೇಹ ದೊಳ್ ನಿಲೆ ಪುಳಿಷ್ಟಂ ಭೋಕ್ತೃ ಸಸ್ವಂ ಧನಂ (ಜಾತಿ. ೧೭-೬೬). ೫. [ತತ್ತ್ವಶಾ]ರಜೋಗುಣದಿಂದ ಕೂಡಿದ ಚೇತನ : ಸ್ವಲ್ಪ ಸತ್ತ್ವ ಸಹಿತವಾದ ರಜೋಗುಣದ ರೂಪಕ್ಕೆ ಭೋಕ್ತೃ ಎಂದು ಹೆಸರು (ಭಾತತ್ತ್ವ. ೬೭೨): ಕೊಂಚ ಸತ್ತ್ವಗುಣ ಮತ್ತು ಹೆಚ್ಚು ರಜೋಗುಣಗಳಿಂದ ಕೂಡಿದ ಚೇತನವು ಭೋಕ್ತೃ ಅಥವಾ ಜೀವವೆನಿಸುವುದು (ಕೆತ್ರಿ. ೫೬). ೬. [ದ್ವೈತ] ವಿಷ್ಣು : ಜಯಾಪತಿಯಾದ ಸಂಕರ್ಷಣನು ಪಿತೃಗಳನ್ನು ಆವಾಹನ ಮಾಡಿರುವ ಬ್ರಾಹ್ಮಣರಲ್ಲಿದ್ದು ಶ್ರಾದ್ಧಾನ್ನವನ್ನು ಭುಂಜಿಸಿ, ಭೋಕ್ತೃ ಎನಿಸುವನು (ಹಕಾರ. ೧೪-೧ ತಾತ್ಪರ್ಯ). [ ಸಂ. ]

**ಭೋಕ್ತೃತ್ವ** (ನಾ). ಅನುಭವಿಸುವ ಸಾಮರ್ಥ್ಯ : ಆತ್ಮವಸ್ತುಗಳಿಗೆ ಚೇತನತ್ವ ಜ್ಞಾತೃತ್ವ ಕರ್ತೃತ್ವ ಭೋಕ್ತೃತ್ವ ಮೊದಲಾದ ವ್ಯವಹಾರ ಗಳಿರುವುವು (ಹಿಂದಸಾ. ೨೩೪); ಆತ್ಮನಿಗೆ ಸುಖದುಃಖ ಭೋಕ್ತೃತ್ವವು ಇಲ್ಲ ವಾದರೆ ಜಗದ್ವ್ಯಾಪಾರವು ಹೇಗೆ ಸಂಭವಿಸುವುದು ? (ತ್ವನಪ. ೦೩). [ಸಂ.]

**ಭೋಗ** (ನಾ). ೧. ಉಣ್ಣುವುದು ; ತಿನ್ನುವುದು. ೨. ಭೋಗಿಸು ವುದು : ಅನುಭವಿಸುವುದು. ೩. ಸುಖವನ್ನು ಅನುಭವಿಸು ವುದು.—ಹೊಂದುವುದು ; ಸುಖಾನುಭವ : ಬೆರಸಿ ಯೋಗದೆ ದುಡಿವ ಭೋಗದೆ ಮೆರೆವನೇ ಸುಖಿಮನುಜನ್ಮೆ (ಕಎತ. ೪೦-೪) ; ಪ್ರತಿ ಪುರುಷನೂ ಕ್ರಮಕ್ರಮವಾಗಿ ಭೋಗದಿಂದ ವಿರಕ್ತನಾಗಿ ಮೋಕ್ಷವನ್ನು ಪಡೆಯುವುದಕ್ಕಾಗಿಯೇ ಪ್ರಕೃತಿಯ ವ್ಯಾಪಾರವು (ಹಿಂದಸಾ. ೬೩). ೪. ಪೂರ್ವಜನ್ಮದಲ್ಲಿ ಮಾಡಿದ ಪುಣ್ಯ ಅಥವಾ ಪಾಪದ ಪರಿಣಾಮ ; ಕರ್ಮಫಲ : ಹುಟ್ಟಿದ ಬಳಿಕ ಕೊಟ್ಟ ಭೋಗಂಗಳ ತಪ್ಪಿಸಿಹೆನೆಂದರೆ ತಪ್ಪದು ನೋಡಯ್ಯಾ (ಬಸವ. ೬೮೮) ; ಹಿಂದೆ ಮಾಡಿದ ಕರ್ಮವೆಂದಿಗೂ ಬೆಂಬಿಡದು ಬಂದ ಭೋಗವನು ತಿಂದು ತೀರಲೆ ಬೇಕು ನೊಂದೆನೆನಬೇಡ (ಸರ್ವಜ್ಞ. ೮೭೯). ೫. ಸೌಖ್ಯ ; ಸುಖ : ಹಿಂದಣ ಜನನವೇನಾದೊಡಾಗಲಿ ಇಂದಿನ ಭೋಗವು ಕಯ್ಯ ಮೇಲೆ (ಬಸವ. ೦೭೦): ಶಿವನ ಭೋಗಂ ರಾಗದಿಂದೆ ಬಳೆವಂದದಿಂ ಭವನ ಭಾಗ್ಯಂ ಮೂರ್ತಿಗೊಂಡು ಬಳೆವಂದದಿಂ (ಸುಬಶ. ೧-೦೧೬). ೬. ಸುಖವನ್ನುಂಟುಮಾಡುವ ವಸ್ತು, —ಸಾಮಗ್ರಿ : ಅಮರಾಧಿಪಪ್ರಹಿತಸುರತರುಪ್ರಸೂನಗ್ರಥಿತ . . . ಸುರಭಿವಿಲೇಪನಪ್ರಮುಖಭೋಗೋಪಭೋಗಂಗಳೊಳಂ (ಆದಿಪು. ೮-೩ವ): ರಾಜ್ಯದಿನೇಂ. ಭಾಗ್ಯದಿನೇಂ ? ಆನೊಲ್ಲೆನೀ ಕ್ಷಣಭಂಗುರದ ಭೋಗಂಗಳಂ (ಧರ್ಮಾಮೃ. ೬೨-೨೦). ೭. ಧನ: ಸಂಪತ್ತು. ೮. ದೇವಾಲಯದಲ್ಲಿ ದೇವತಾಮೂರ್ತಿಗೆ ಮಾಡಿಸುವ ಸ್ನಾನ, ಗಂಧಲೇಪನ ಮುಂತಾದ ಸೇವೆ. —ಉಪಚಾರ : ನಗರೇಶ್ವರದೇವರ ಭೋಗಕ್ಕಂ ಖಣ್ಡಸ್ಫುಟಿತಕ್ಕಂ . . . ಧಾರಾಪೂರ್ವಕಂ ಮಾಡಿಬಿಟ್ಟ ನೆಲಂ (ಎಕ. XX, ೨೦-೫೫ : 1019) ; ಸಿದ್ಧಾಯದಲು ಸ್ವಯಂಭುದೇವರ ಭೋಗಕ್ಕೆ ವರ್ಷಂಪ್ರತಿ ಕುಡುವ ಗದ್ಯಾಣ ಹತ್ತು (ಎಕ. XX, ೬೦-೫೬: 1109) ; ವಿಗ್ರಹದ ದೇಹಕ್ಕೆ ಸಲ್ಲುವ ಭೋಗ ಎಂದರೆ ಸ್ನಾನ, ಗಂಧಲೇಪನ, ಧೂಪ, ದೀಪ, ಪುಷ್ಪ ಇತ್ಯಾದಿಗಳು ಅಂಗಭೋಗಗಳು (ಕಶಾಳ. ೦೮೦). 'ಅಂಗಭೋಗ', 'ರಂಗಭೋಗ' ಪರಾ. ೯. ಹಾವಿನ(ಬಿಚ್ಚಿದ) ಹೆಡೆ: ಶ್ರೀಮನ್ನಾಗೇಂದ್ರ ಭೋಗಸ್ಫುರದರುಣಮಣಿದ್ಯೋತಿಸಂಧ್ಯಾನಿಬದ್ಧಪ್ರೇಮಂ (ಕಾದಂಪೂ.೦); ಮೆರೆವಳು ಕೈಕೆ ಮುಂಥರೆಯ ತೊಡೆಯಲ್ಲಿ ಕಾಳಾಹಿಭೋಗದಲಿ ಹೊಳೆವ ಹೆಡೆಮಣಿಯಂತೆ (ತೊರಾವಾ. ೨೩-೬೦೭). ೧೦. ಹಾವಿನ ಶರೀರ, ದೇಹ : "ಭೋಗವೆಂಬುದು ಹಾವಿನ ಒಡಲ್" (ಶಬ್ದಮ. ೦೦೬-೨೦). ೧೧. ವಿಷಯಸುಖಾನುಭವ: ಸಂಭೋಗ : 'ಭೋಗಿಸು' ಪರಾ. ೧೨. ಸೂಳೆಗೆ ಕೊಡುವ ಹಣ : ಒತ್ತೆ. ೧೩. ನಾಡಿನ ಒಂದು ಭಾಗ, — ಪ್ರದೇಶ : ಮಂಡಲ : 'ಭೋಗನಾಯಕ' ಪರಾ. ೧೪. ರಕ್ಷಣೆ : ಪಾಲನೆ. ೧೫. ಚಿಂತೆಯಿಲ್ಲದಿರುವಿಕೆ: ನಿಶ್ಚಿಂತೆ. ೧೬. ಸೈನ್ಯ; ಪಡೆ : ಪರಿವಾರ : " ನಿರ್ವ್ಯಸನದೊಳು ಪಾಲನೆಯೊಳು ಧನದೊಳಧಿಕಾಯದೊಳ್ ವ್ಯವಹಾರದೊಳ್ ಪಣ್ಯವನಿತೆಯೊಳ್ಪಡೆಯೊಳತಿ ಸುಖದೊಳಂ ಭೋಗವುಕ್ಕು " (ಮಂಗರಾ. ೦೫೦-೫೦). ೧೭. ಜಹಗೀರು : ಉಂಬಳಿ. ೧೮. ತೆರಿಗೆ ; ಕರ. ೧೯. ಬೆಳೆಯಿಂದಾದ ಗಳಿಕೆ : ಅಚಕಟಿನ ಗದೆಯುಂ ಬೆಳೆದ ಭೋಗ ನಾಲ್ಕು ಭೋಗಮಾನ್ಯವಾಗಿ (ಎಕ. ೦೯೩೪. ಶೃಂಗೇರಿ. ೧೫೬-೯; 1419). ೨೦. =ಭೋಗಷಟ್ಪದಿ: ಶರ ಕುಸುಮ ಭೋಗ ಭಾಮಿನಿ ಪರಿವರ್ಧಿನಿ ವಾರ್ಧಕಗಳೆಂದಾಱು ತೆಱಂ (ಛಂದೋಂಬು. ೫-೨೫೯); ಇದು ಶರ, ಕುಸುಮ, ಭೋಗ, ಭಾಮಿನಿ, ಪರಿವರ್ಧಿನಿ, ವಾರ್ಧಕ ಎಂದಾರು ವಿಧವು (ಕ್ರಿಬಿ. ೯೫). ೨೧. [ದ್ವೈತ] ಮುಕ್ತಿಯ ಭೇದಗಳಲ್ಲಿ ಒಂದು : ಸಾರೂಪ್ಯಪ್ರಾಪ್ತಿ : ಈ ಪುರುಷಾರ್ಥವನ್ನು ಕರ್ಮಕ್ಷಯ, ಉತ್ಕ್ರಾಂತಿ, ಮಾರ್ಗ, ಭೋಗ ಎಂದು ವಿಂಗಡಿಸಿ . . . ಸಾಲೋಕ್ಯ, ಸಾಮೀಪ್ಯ, ಸಾಯುಜ್ಯ, ಸಾರೂಪ್ಯ ಪ್ರಭೇದ ದಿಂದ ನಿರೂಪಿಸಿರುವರು (ಭಾರವ. ೨೭೮); ಇದರಿಂದ ಬರುವ ಮೋಕ್ಷ ಕರ್ಮ ಕ್ಷಯ . . . ಭೋಗ ಎಂದು ನಾಲ್ಕು ಪರ್ವಗಳುಳ್ಳದ್ದು (ಹಿಂದಸಾ. ೨೮೨).

**ಭೋಗದ ಸೂಳೆ** = ದೇವಾಲಯದಲ್ಲಿ ನಾಟ್ಯವಾಡಲು ನಿಯಮಿತ ಳಾಗಿರುವ ಸೂಳೆ ; ದೇವದಾಸಿ : ಭೋಗದ ಸೂಳೆಯಾಗ್ಗೆ ಸರ್ವಬಾಧಾಪರಿಹಾರವಾಗಿ ಬಿಟ್ಟ ಮನೆ ಹನ್ನೆರಡು (ಎಕ. XX, ೩೫-೦೨ ; 1055). [ಸಂ.]

**ಭೋಗಕ್ಷಿತಿ** (ನಾ). = ಭೋಗಭೂಮಿ ೩ : ಹುಸಿ ಹಸಿವಾವುದು ಮೂಱುಲಮುಸುರಾಪಿ ಕ್ರೂರಸತ್ತ್ವಬಾಧೆಗಳಿವು ವರ್ತಿಸವೆನೆ ಭೋಗಕ್ಷಿತಿಗಳೆ ನಿಸದಂ ಸಗ್ಗಕ್ಕಮಗ್ಗಳಂ ತಾಮಲ್ತೇ (ಚಂದ್ರಪ್ರ. ೩-೩೫). [ಸಂ.]

**ಭೋಗಚೌಪದಿ** (ನಾ). [ಛಂದ] ಭೋಗಷಟ್ಪದಿಯನ್ನು ನಾಲ್ಕು ಪಾದ ಗಳಲ್ಲಿ ಅಳವಡಿಸುವ ಆಧುನಿಕ ಪದ್ಯಭೇದ: P ಇದರಲ್ಲಿ ಒಂದು ಮತ್ತು ಮೂರನೆಯ ಸಾಲುಗಳಲ್ಲಿ ೨೪ ಮಾತ್ರೆಗಳೂ ಎರಡು ಮತ್ತು ನಾಲ್ಕನೆಯ ಸಾಲುಗಳಲ್ಲಿ ೧೯ ಮಾತ್ರೆಗಳೂ ಇರುತ್ತವೆ : ಭೋಗಚೌಪದಿ : ಭೋಗಷಟ್ಪದಿಯನ್ನು ನಾಲ್ಕು ಪಾದಗಳಲ್ಲಿ ಏರ್ಪಡಿಸಿದ ರೂಪವಿದು (ಛಂದೋಗ. ೨೬೦). [ಭೋಗ + ಚೌಪದಿ]

**ಭೋಗತಲ್ಪ** (ನಾ). ಹಾವಿನ ಹಾಸುಗೆ ; ಶೇಷಶಯ್ಯೆ : ಆ ಗರುವೆ ಹೊಕ್ಕಳು ಮಹಾಹಿಯ ಭೋಗತಲ್ಪದ ಹರಿಯೊಲಿಹ ಶತಮಾಗಸುತನನು ಕಂಡಳಂಗನೆ ಮಣಿಯ ಮಂಚದಲಿ (ಕುವ್ಯಾ. ೮-೦೪). [ಸಂ.]

**ಭೋಗತೃಷ್ಣೆ** (ನಾ). ಸುಖವನ್ನು ಅನುಭವಿಸಬೇಕೆಂಬ ಉತ್ಕಟೇಚ್ಛೆ : ತನ್ನ ಭೋಗತೃಷ್ಣೆಯುಂ ತಾನೆ ತನ್ನ ಮನದೊಳ್ ನಿಂದಿಸುತ್ತುಂ (ಆದಿಪು. ೦೬-೬೦ ವ). [ಸಂ. ಭೋಗತೃಷ್ಣಾ]

**ಭೋಗನಾಯಕ** (ನಾ). ಪ್ರದೇಶಪಾಲಕ; ಮಂಡಲಾಧಿಪ : ಭೋಗಿಗಳ್ ಭೋಗಿಗಳೆಂಬ ಭೋಗಿಗಳೆ ಭೋಗಿಗಳಲ್ಲಿಯ ಭೋಗನಾಯಕರ್ (ಶಂಶ್ಚಾ. ೯-೧೬). [ಸಂ.]

**ಭೋಗಪಟ್ಟ** (ನಾ). ಆಸ್ತಿಯನ್ನು ಅನುಭವಿಸುವ ಹಕ್ಕಿಗಾಗಿ ಬರೆದು ಕೊಡುವ ಪತ್ರ : ಆ ಬಳಿಜೋಡಿನ ಜೋಯಿಸರಿಗೆ ಮಕ್ಕಳಿಲ್ಲದ್ದರಿಂದ ಈ ನಾಯಕರ ಹತ್ತಿರವಿದ್ದ ಇಬ್ಬರು ಪೂಜಾರಿಗಳ ಹುಡುಗರನ್ನು ಭೋಗಪಟ್ಟ ಬರಸಿಕೊಟ್ಟು ತಮ್ಮ ತರುವಾಯಕ್ಕಾಗಿ ನಿಯಮಿಸಿಕೊಂಡರು (ಕಂಠ. ೦೦೭). [ಭೋಗ + ಪಟ್ಟ₂]

**ಭೋಗಪಟ್ಟೆ** (ನಾ). = ಭೋಗಪಟ್ಟ : ಬಳಿಜೋಡುಸ್ಥಳದ ಪಂಚಾಂಗದ ಜೋಯಿಸರು ನಷ್ಟಸಂತಾನರಾಗಿದ್ದದರಿಂದ . . . ಈ ಕರಿಜೋಯಿಸ ವಿರೂಪಾಕ್ಷಜೋಯಿಸರಿಗೆ ಭೋಗಪಟ್ಟೆ ಬರಸಿಕೊಟ್ಟು ಅವರನ್ನು ಸ್ಥಳಕ್ಕೆ ಜೋಯಿಸರನ್ನಾಗಿ ನೇಮಿಸಿದರು (ಚಿತ್ರಕಾ. ೪). [ಭೋಗ + ಪಟ್ಟೆ₃]

**ಭೋಗಪಾತ್ರ** (ನಾ). ದೇವಾಲಯದ ರಂಗಭೋಗದಲ್ಲಿ ನಡೆಸುವ ನಾಟ್ಯದ ಸೇವೆ : ಸೂಳೆಯಿಪ್ಪತ್ತಒಂದು ಹೊನನೂ ಕಾಲಕಾಲಕ್ಕೆ ಯೆತ್ತಿಕೊಂಡು ಯೆರಡುಹೊತಿನ ಭೋಗಪಾತ್ರದ ಉಳಿಗವನೂ ನಡೆಸಿಕೊಂಡು ಬಹಿರಿ (ಕಾಇಇ. IX–ii, ೪೩೬–೦೩; 1451). [ಸಂ.]

**ಭೋಗಬ್ರಹ್ಮವ್ರತ** (ನಾ). [ಜೈನ] ಒಂದು ಬಗೆಯ ವ್ರತ; P ಬ್ರಹ್ಮಚರ್ಯವಲ್ಲಿದ್ದಾಗ ಮೂಗು, ಕಣ್ಣು, ಕಿವಿ ಎಂಬ ಭೋಗೇಂದ್ರಿಯಗಳಿಂದ ಗಂಧ, ರೂಪ, ಶಬ್ದಗಳ ಅನುಭವವನ್ನು ಮಾತ್ರ ಮಾಡತಕ್ಕುದು; ಗೃಹಸ್ಥಾಶ್ರಮಕ್ಕೆ ಬಂದ ಮೇಲೆ ಕಾಮಬ್ರಹ್ಮವ್ರತ ಅಂದರೆ ರಸ, ಸ್ಪರ್ಶ ಇವುಗಳನ್ನು ಅನುಭವಿಸತಕ್ಕುದು : ಭೋಗಬ್ರಹ್ಮವ್ರತಮಂ ಪತ್ತುವಿಟ್ಟು ಕಾಮಬ್ರಹ್ಮವ್ರತಮನಂತ್ತರಕ್ರಿಯೆಯರ್ಪಿಸೆಗಂ ನಡಯಿಸುವುದು ವ್ರತಾವತರಣಕ್ರಿಯೆ (ಚಾಪುಂಪು. ೨೦೫). 'ಕಾಮಬ್ರಹ್ಮವ್ರತ' ಪರಾ. [ಸಂ.]

**ಭೋಗಭಾಗ್ಯ** (ನಾ). ಸುಖಕೊಡುವ ಸಂಪತ್ತು: ಸುಖವನ್ನು ಅನುಭವಿಸಲು ಸಾಧಕವಾದ ಐಶ್ವರ್ಯ : ಭೋಗಭಾಗ್ಯವ ಬಯಸಿ ಮುಕ್ತಿಯ ನೀಗಿ ನಿಮ್ಮನು ಭಜಿಸಲಱಿಯದ ಯೋಗಿಗಳ ಮಾತೇಸು (ಹಂಶಾ. ೦೬): ನಾನು ರಾಜನಾದಾಗ ನನ್ನ ರಾಜ್ಯವನ್ನೂ ಅದರ ಸಮಸ್ತ ಭೋಗಭಾಗ್ಯಗಳನ್ನೂ ಮಿತ್ರನಾದ ನಿನ್ನೊಡನೆ ಹಂಚಿಕೊಂಡು ಅನುಭವಿಸುತ್ತೇನೆ (ವಚಾ. ೦೪). [ಸಂ.]

**ಭೋಗಭೂತಲ** (ನಾ). = ಭೋಗಭೂಮಿ ೩ : ತನ್ನೊಳೆ ಸರಿದೊರೆ ಸುರರೇಂ ಭೋಗಭೂತಲಂ ಸುಖಿಮಯಮೋ (ಶಂಶ್ರ ಪು. ೩–೩೬). [ಸಂ.]

**ಭೋಗಭೂಮಿ** (ನಾ). ೧. ಭೂಲೋಕದಲ್ಲಿ ಹುಟ್ಟಿ ಪುಣ್ಯವಂತನಾಗಿ ಬಾಳಿ, ಸತ್ತ ಮೇಲೆ ಪುಣ್ಯಫಲಗಳನ್ನು ಅನುಭವಿಸುವುದಕ್ಕಾಗಿ ಇರುವುದೆಂದು ನಂಬಲಾದ ಲೋಕ : ಸ್ವರ್ಗಲೋಕ; ಊರ್ಧ್ವಲೋಕ. ೨. ವ್ಯವಸಾಯಕ್ಕೆ ಉತ್ತಮವಾದ ಭೂಮಿ ; ಫಲವತ್ತಾದ ಭೂಮಿ ; ಸುಕ್ಷೇತ್ರ : ಚಾವುಣ್ಡಸೆಟ್ಟಿಯರು ಕಾರಿಗಾವುಣ್ಡನ ಕಯ್ಯೊಳು ಮತ್ತಂ ಭೋಗಭೂಮಿಯಂ ಪೊನ್ನಂ ಕೊಟ್ಟು ಮಾಱಿಕೊ(ಂ)ಣ್ಡು ಆ ತೋಟಮಂ ಮಾಡಿಸಿ (ಕಾಇಇ. XI–ii, ೦೫೮–೩೭; 1109). ೩. [ಜೈನ] ಭೂಮಿಯ ಮೇಲೆಯೇ ಇರುವುದೆಂದು ಹೇಳಲಾದ, ಪುಣ್ಯವಂತರು ಹುಟ್ಟುವ ಪ್ರದೇಶ; ಭೂಮಿಯಲ್ಲಿ ಅತ್ಯಂತ ಸಂತೋಷವನ್ನು ಪಡೆಯುವ ಸ್ಥಳ : P ಇಲ್ಲಿ ಕೇಳಿದುದನ್ನು ಕೊಡುವ ಹತ್ತುಬಗೆಯ ಕಲ್ಪವೃಕ್ಷಗಳಿದ್ದು, ಈ ಭೂಮಿಯಲ್ಲಿ ಊರು, ನಗರ, ಮನೆ, ಇತ್ಯಾದಿ ಯಾವುದೂ ಇರುವುದಿಲ್ಲ. ಒಂದು ಸಂಸಾರದಲ್ಲಿ ಗಂಡ ಹೆಂಡಿರು ಮಾತ್ರ ಇದ್ದು ಪೂರ್ವಜನ್ಮದ ಪುಣ್ಯಫಲವನ್ನು ಅನುಭವಿಸಿ, ಸತ್ತ ಮೇಲೆ ಸ್ವರ್ಗಕ್ಕೆ ಹೋಗುತ್ತಾರೆ. ಇಲ್ಲಿ ರೋಗ ರುಜಿನಗಳಿರುವುದಿಲ್ಲ ಎಂದು ನಂಬಲಾಗಿದೆ : ಪುಣ್ಯಫಲದಿಂದಲೂ ಜಂಬೂದ್ವೀಪದ ಮಂದರಮಹೀಧರದುತ್ತರದಿಗ್ಭಾಗದೊಳಿರ್ದುತ್ತರಕುರುವೆಂಬುತ್ತಮಭೋಗಭೂಮಿಯೆ ಜನ್ಮಭೂಮಿಯಾದುದು (ಆಪು. ೫–೨೭ ವ) : ಈ ಭರತಾವನಿಭೋಗಭೂಮಿ ಭೂಭಾಗಿ ಸುಖಾತ್ಮ್ಯಮಂ ಪಡೆದುದು (ಚಾಂತಿಪು. ೦೨–೨೯). [ಸಂ.]

**ಭೋಗಮಂಟಪ** (ನಾ). ಉತ್ಸವಮೂರ್ತಿಗೆ ಅಲಂಕಾರ, ಕಲ್ಯಾಣೋತ್ಸವ, ಶಯನೋತ್ಸವ ಮೊದಲಾದುವನ್ನು ಮಾಡುವ ದೇವಾಲಯದ ಕಟ್ಟಡ : ಕಲ್ಯಾಣಮಂಟಪ: ಸೋಮವಾರ ದಿನ ಕಲ್ಲೂರ ಕಲ್ಲಯ್ಯದೇವರ ಭೋಗಮಂಟಪ ಆಯಿತು (ಚಾಕಚ. ೯೯–೩೮). [< ಸಂ. ಭೋಗಮಂಡಪ]

**ಭೋಗಮಾನ್ಯ** (ನಾ). ಮಾನ್ಯವಾಗಿ ಕೊಡುವ (ತೆರಿಗೆ ವಿನಾಯಿತಿ ಪಡೆದ) ಭೂಮಿ : ಅಚಕಟಿನ ಗದೆಯನುಂ ಬೆಳೆದ ಭೋಗ ನಾಲ್ಕು ಭೋಗಮಾನ್ಯವಾಗಿ (ಕಾಇಎ. ೦೯೩೪. ಕೊಂಗನೂರು. ೦೫೬–೯; 1419). [ಸಂ.]

**ಭೋಗಯುತ** (ನಾ). ೧. ಸುಖದಿಂದ ಕೂಡಿಕೊಂಡಿರುವವನು. ೨. ಆದಿಶೇಷನ ದೇಹದ ಮೇಲೆ ಮಲಗಿರುವವನು. ೧, ೨ : ಧರಧಾರಕನೆಂಬ ಭೋಗಯುತನೆಂಬುದ್ಯದ್ವಲಾಂಸ್ತೀತನೆಂಬ . . . ವಿಷ್ಣುಧರೇಶಂ ಸರಿ ವಿಷ್ಣುವೊಲು ಸೊಗಯ್ಪಂ ಲಕ್ಷ್ಮೀಮನೋವಲ್ಲಭಂ (ಎಕ. V, ಅರಸೀ. ೩೮–೭; ಸು. 1200). [ಸಂ.]

**ಭೋಗರತ್ನ** (ನಾ). ನಾಗರಹಾವಿನ ಹೆಡೆಯಲ್ಲಿರುವುದೆಂದು ಹೇಳಲಾಗುವ ಮಣಿ : ಹೆಡೆಮಣಿ: ಮಿತ್ಯಂ ವಿಷವಹ್ನಿಯಿಂ ವಿಳಯಕಾಲಜ್ವಾಲೆಯುಂ ಭೋಗರತ್ನದ ಬೆಳ್ಪಿಂ ದ್ಯುತಿಮಾಲಿಯುಂ ಮಸಕದಿಂದಂ ಭೋಳಿಯುಂ ಕಾಳಿಯುಂ (ಜಗಪ. ೩–೮೪). [ಸಂ.]

**ಭೋಗರಾಜ** (ನಾ). ಹಾವುಗಳ ಒಡೆಯ : ಭೋಗರಾಜನ ನಗರದಂತನುವಾಗಿ ರಾಜಿಪ ನಗರವನು ಸುತ್ತಾಗಿ ಶೋಭಿಪ ಸಲಿಲಖಾತಿಯು ಮುಟ್ಟುತಿಹುದಡಿಯಾ (ಐಪ್ಪ ಪು. ೨೦–೦೯). [ಸಂ. ಭೋಗರಾಜನ್]

**ಭೋಗವತಿ** (ನಾ). ೧. ಪಾತಾಳಲೋಕದ ರಾಜಧಾನಿ : ಅದು ಕೊಯ್ದು ದಳಕಿಯಳಕಮನದು ಮಿಕ್ಕುದು ಭೋಗವತಿಯ ಭೋಗಮಂ . . . ಎನಲ್ ವೀತಶೋಕಪುರವರಮೆಸೆಗುಂ (ಮಲ್ಲಪು. ೨–೩೨); ಮುತ್ತು ಪಚ್ಚೆ ಮಾಣಿಕಾದ ರಾಶಿಗಳಿಂದಲೂ ರಾಜಬೀದಿಯು ನೋಡಿಯದು ತೇಜೋವತಿಯೊ ಅಲ್ಲದೆ ಭೋಗವತಿಯೊಯೆಂದು ಸಂದೇಹಪಡುತ್ತ ಬರುತಿರುವ ಸುರಸುಂದರಿಯರಂ ನೋಡಿ (ಕಾಗಂಧ. ೫೦೯–೦೬). ೨. ಪಾತಾಳಲೋಕದ ನದಿ ; ಪಾತಾಳಗಂಗೆ : ವಿವಿಧೋಪಚಾರಕೃತ ಪೂಜೆಗಳ ನಾನಾವಿಧವಂದೆಸೆವ ಮಹಾಹಾಟಕೇಶ್ವರನೆಂಬ ಶಿವಲಿಂಗವಿರೆ ಭೋಗವತಿಯ ತಟದೊಳ್ಕಂಡು ಪುಂಡರೀಕಂ ಮಣಿದನು (ಕೃಮಿಚಾ. ೨೯–೦೪).

[ಸಂ. ಭೋಗವತೀ]

**ಭೋಗವಾಡಗೆ** (ನಾ). ಪರಕೀಯವಾದ ಮನೆ ಮೊದಲಾದುವನ್ನು ಅನುಭವಿಸಲು ಮಾಲೀಕನಿಗೆ ಕೊಡುವ ಪ್ರತಿಫಲರೂಪವಾದ ಶುಲ್ಕ: ಬಾಡಿಗೆ : ಮನೆವೊಂದು ಭೋಗವಾಡಗೆ ಗದ್ಯಾಣಂ ನಾಲ್ಕು (ಎಇ. XV. ೩೪೨–೬೦ ; 1072). [ಭೋಗ + ಬಾಡಗೆ]

**ಭೋಗಷಟ್ಪದಿ** (ನಾ). [ಛಂದ] ಕನ್ನಡಭಾಷೆಯಲ್ಲಿ ಪ್ರಸಿದ್ಧವಾದ ಷಟ್ಪದಿಗಳಲ್ಲಿ ಒಂದು : ಪೇಳ್ವ ಮೊದಲಿನೆರಡುಪದದೆ ಬಟಕ ಚರಣದೆರಡುಮೆಡೆಗೆ ಕಳೆಗಳರ್ಕಸಂಖ್ಯೆಯಾಱು ಮೂಜಣಂಘ್ರಿಗೆ ತಿಳಿಯಲಿರ್ಪತಿರ್ಪ ತಿಂತು ಕಳೆಗಳೆಂಬತೆಂಟಱಿಂದೆ ತೊಂಪುದಾಗಲೊಡನೆ ಬಲನೆ ಭೋಗಷಟ್ಪದೀ (ಛಂದೋಂಬು. ೫–೨೫೯ ಅರಿಳಶರ್ವ); ಮೂರುಮಾತ್ರೆಯ ಗಣವು ಒಂದೆರಡು ನಾಲ್ಕಯ್ದನೆಯ ಪಾದಗಳಲ್ಲಿ ನಾಲ್ಕುನಾಲ್ಕು, ಮೂರಾರನೆಯ ಪಾದಗಳಲ್ಲಿ ಆರಾರೂ ಒಂದು ಗುರುವೂ ಬರಲು ಭೋಗಷಟ್ಪದಿಯಾಗುವುದು (ಕೈಪಿಡಿ. ೯೭). [ಸಂ. ಭೋಗಷಟ್ಪದೀ]

**ಭೋಗಾಂಗ** (ನಾ). ೧. ಸುಖಾನುಭವಕ್ಕೆ ಬೇಕಾದ ಸಾಧನ : ಭೋಗಾಂಗವಾಗಿಯುಂ ಕೃಷ್ಣಾಗರುಧೂಪಂ ಮುಸುಂಕೆ ಕೊಂದಿಕ್ಕಿದುದಾ ಭೋಗಿಗಳಂ (ಆದಿಪು. ೩-೨೫). ೨. [ವೀಶೈ] ಅಂಗಸ್ಥಲದ ಮೂರು ಭೇದಗಳಲ್ಲಿ ಒಂದು ; ಜೀವನು ತನ್ನ ಭೋಗವನ್ನು ಮೊದಲು ಶಿವನಿಗರ್ಪಿಸಿ ನಂತರ ಅದನ್ನು ಪ್ರಸಾದರೂಪವಾಗಿ ಪರಿಗ್ರಹಿಸುವುದು: ಯೋಗಾಂಗ ತಾನೆ ಕಾರಣತನುವೆನಿಪ್ಪುದಾ ಭೋಗಾಂಗವೇ ಸೂಕ್ಷ್ಮತನುವಾಚಕಂ ಮಹಾತ್ಯಾಗಾಂಗವೇ ಸ್ಥೂಲತನುವೆನಿಸಿ ವಿವಿಧಭೇದದೊಳಿಪ್ಪುದಂಗತ್ರಯಂ (ಚಸಶಂ. ೩೦-೪) : ಇನ್ನು ಸ್ವಭಾವವನ್ನು ಹೊಂದಿದ ಅಂಗಸ್ಥಲವು (ಶುದ್ಧಜೀವನು) ಯೋಗಾಂಗ, ಭೋಗಾಂಗ, ತ್ಯಾಗಾಂಗ ವೆಂದು ಮೂರುವಿಧವಾಯಿತು (ಶಾರದ. ೨೩೩). 'ತ್ಯಾಗಾಂಗ' ಪರಾ. ೩. ತನ್ನ ಭೋಗವನ್ನು ಮೊದಲು ಶಿವನಿಗರ್ಪಿಸಿ ನಂತರ ಅವನ್ನು ಪ್ರಸಾದರೂಪವಾಗಿ ಪರಿಗ್ರಹಿಸುವ ಜೀವ : ಉದ್ಯಾಪನ ವ್ಯಾಪಾರ ಕೃತಭೇದ ಸರ್ವವನರಿದು ತ್ಯಾಗಾಂಗನಾಗಿ ಭೋಗಾಂಗನಾಗಿ ಯೋಗಾಂಗನಾಗಿ . . . ಆತನ ಲಿಂಗವೇ ಅಂಗವಾದ ಕಾರಣ ಪೃಥಕ್ ಎಂಬುದಿಲ್ಲ (ಪೋಟವಚ. ೯೬-೧೯೦). [ಸಂ.]

**ಭೋಗಾಂಗಿ** (ನಾ). =ಭೋಗಾಂಗ ೩ : ಜಂಗಮಲಿಂಗದ ಎಚ್ಚರಿಕೆಯ ಬಲದಿಂದ . . . ಲಿಂಗಭೋಗೋಪಭೋಗಿಯಾಗಿ ಭೋಗಾಂಗಿಯಾದೆ (ಶಿವಪ. ೩೯-೩೨); ಭೋಗಾಂಗಿಯಾಗಿ ತನ್ನ ಭೋಗವೆಲ್ಲವನ್ನೂ ಶಿವನಿಗರ್ಪಿಸಿ ಶಿವಪ್ರಸಾದರೂಪದಿಂದ ಸ್ವೀಕರಿಸುವನು (ಶಾರದ. ೨೦೭).

[ಸಂ. ಭೋಗಾಂಗಿನ್]

**ಭೋಗಾಂತರಾಯ** (ನಾ). [ಜೈನ] ಮೋಕ್ಷಸಾಧಕನಿಗೆ ಸಾಧನ ಮಾರ್ಗದಲ್ಲಿ ಉಂಟಾಗುವ ಐದುಬಗೆಯ ವಿಘ್ನಗಳಲ್ಲಿ ಒಂದು : ಸುಖಾನುಭವಕ್ಕೆ ವಿಘ್ನವನ್ನುಂಟುಮಾಡುವ ಕರ್ಮ : ಭೋಗಾಂತರಾಯ : ಭೋಗವ ಇಚ್ಛೆ ಸಾಧನಗಳೆಲ್ಲ ಇದ್ದೂ ಭೋಗಿಸಗೊಡದ ಕರ್ಮಪ್ರಕೃತಿ (ಜೈನಶ. ೩೭೭). 'ಅಂತರಾಯಪಂಚಕ' ಪರಾ. [ಸಂ.]

**ಭೋಗಾಧಿ** (ನಾ). ಒಬ್ಬನಿಗೆ ಸೇರಿದ ಆಸ್ತಿಯನ್ನು ಮತ್ತೊಬ್ಬನಿಗೆ ಅನುಭವಿಸಲು ಕೊಡುವಿಕೆ; ಭೋಗ್ಯ; ಒತ್ತೆ; ಅಡವು.

**ಭೋಗಾಧಿಯ ಪತ್ರ** = ಆಸ್ತಿಯನ್ನು ಭೋಗ್ಯಮಾಡಿರುವ ಬಗ್ಗೆ ಬರೆದುಕೊಡುವ ದಾಖಲೆಪತ್ರ : ಭೋಗ್ಯಪತ್ರ : ಭೂಮಿಯ ಭೋಗಾಧಿಯ ಪತ್ರದ ಕ್ರಮ (ಎಕ. VI. ಕಡೂ. ೫೬-೪; 1592 ?) [ಸಂ.]

**ಭೋಗಾಭೋಗ** (ನಾ). ಭೋಗಸಾಮಗ್ರಿಗಳಿಂದ ದೊರಕುವ ಸುಖಾನುಭವ : ವಿದ್ಯುತ್ ಕ್ಷಣಿಕಂ ನಿಚ್ಚಿಯ ತನುಭೃದ್ಗಣಯೌವನ ರೂಪವಿಭವಭೋಗಾಭೋಗಂ (ಆದಿಪು. ೪-೭೫). [ಸಂ.]

**ಭೋಗಾರುಹ** (ನಾ). ಸುಖಕ್ಕೆ ಯೋಗ್ಯವಾದುದು : ನಗರದ ಸುತ್ತ ಹೊರವಳಯದಲಿ ಕಾಣಿಸಿ ಕತ್ತಲಿಸುವ ಸಮಸ್ತಭೋಗಾರುಹದ ತರುಲತೆಯ . . . ಉದ್ಯಾನವನು ಪೃಥು ಕಂಡ (ಕೃಭಾರ. ೧೪-೬).

[<ಸಂ. ಭೋಗಾರ್ಹ]

**ಭೋಗಾವತಿ** (ನಾ). ೧. ಪಾತಾಳಲೋಕದ ರಾಜಧಾನಿ: ಭೋಗವತಿ: ವಿಸುಭೋಗಿಗಳುಳ್ಳೊಡೇಂ ಫಲಂ ವಿಷಧರನಿವಾಸವಾ ಭೋಗಾವತೀಪುರಂ (ಶಾಂತಿ. ೧೦-೩೭). ೨. ಲಕ್ಷ್ಮಿ. ೩. ಪಾತಾಳಲೋಕದ ನದಿ : ಪಾತಾಳಗಂಗೆ : "ನಗರಂ ಸಿರಿ ಪಾತಾಳಂ ನದಿ ನಾಲ್ಕುಂ ಭೋಗಾವತಿಯ ನಾಮಮೆನಿಕುಂ ಜಗದೊಳ್" (ನಾನಾಳಂ. ೩೯): "ರಮೆ ಪಾತಾಳತರಂಗಿಣಿ ನಗರದುಂ ಭೋಗಾವತೀವಾಚಕಂ" (ನಾನಾರ. ೨೩).

[<ಸಂ. ಭೋಗವತೀ]

**ಭೋಗಿ$_1$** (ನಾ). ೧. ಮಕರಸಂಕ್ರಾಂತಿಯ ಹಿಂದಿನ ದಿನ (ಕೆಲವು ಕಡೆ) ಆಚರಿಸುವ ಒಂದು ಹಬ್ಬ: ಮಕರಸಂಕ್ರಮಣ ಎರಡುದಿವಸಗಳ ಹಬ್ಬ: ಭೋಗಿ, ಸಂಕ್ರಮಣ. ಭೋಗಿಹಬ್ಬದ ಆಚರಣೆ ಉಪವಾಸವ್ರತಕ್ಕೆ ಸಮೀಪವಾದುದೆಂದು ಹೇಳಬಹುದು . . . ಭೋಗಿ ಪೊಂಗಲ ಪ್ರಥಮ ದಿವಸದ ಹಬ್ಬ (ಶಾಹಬ್ಬ. ೧೭೭). ೨. ನರಕಚತುರ್ದಶಿಯ ಹಿಂದಿನ ದಿನದ ಹಬ್ಬ : ಮಗಳು, ಅಳಿಯ ಭೋಗಿಹಬ್ಬದಂದು ಊರಿಗೆ ಬಂದರು (ರೂಢಿ). [←ತಮಿ. ಪೋಕಿ./ಮರಾ. ಭೋಗೀ]

**ಭೋಗಿ$_2$** (ಗು). ೧. ತಿನ್ನುವ: ಉಣ್ಣುವ. ೨. ಸಹಿಸುವ : ತಾಳುವ. ೩. ಉಪಯೋಗಿಸುವ ; ಬಳಸುವ. ೪. ಉಪಭೋಗಿಸುವ; ಅನುಭವಿಸುವ. ೫. ಇಂದ್ರಿಯಸುಖಲೋಲುಪನಾದ ; ಇಂದ್ರಿಯ ಸುಖಪರವಶನಾದ. ೬. ಸಂಪತ್ತಿನಿಂದ ಕೂಡಿದ; ಐಶ್ವರ್ಯವುಳ್ಳ. (ನಾ). ೭. ಸುಖವನ್ನು ಅನುಭವಿಸುವವನು ; ವಿಲಾಸಿ: ನಾಗಕನ್ನೆಯರ ರೂಪುಗಳಿಟ್ಟಳವಾಗೆ ಭೋಗಿಗಳ್ ಭೋಗಿಗಳ್ (ಶಂಕರಾ. ೪-೧೭): ಜಲದೊಳ್ ಪುಟ್ಟಿದ ವಸ್ತುವಿಂ ಪೆಱರ ಪೊನ್ನಿಂ ಭೋಗಿ . . . ವನಿಕಂ ವಿಮಾನಾಲಯಪ್ರೋದ್ಭವಂ (ಜಾತಕ. ೦೭-೦೨); ಭೋಗಿಗೆ ಲೋಭಿಗೆ ಯೋಗಂ ತ್ಯಾಗಂ ಹಿತಮಾಗದೆಂದು ನುಡಿದಂ ಭೂಪಂ (ಹರಿಶ್ಚಂ. ೨-೫). ೮. ಜಿಡಗಿ : ವಿಲಾಸವತಿ : ನಡೆತಂದರ್ ಸಂತಸದೆ ಪೊನ್ನ ಕಳಸದ ದಂತದ ಸಿವಿಗೆಗಳನೇಱಿ ಭೋಗಿಯರರೆಬರ್ (ಶಂಕರಾ. ೯-೧೧೦); ವಾಚ್ಯಲಿಂಗಮೆಂದು ವಿಶೇಷ್ಯಾಧೀನಲಿಂಗಕ್ಕೆ—ನೇರಿದನಿವಂ, ನೇರಿದಳಿವಳ್, ನೇರಿತ್ತಿದು . . . ಭೋಗಿ, ಸುಖಿ. ಹೇಡಿ, ಕಲಿ, ಗುರು, ಲಘು – ಇವು ತೆಱದೆ ಸಲ್ವುವು (ಶಮದ. ೩೬ ವ್ಯಾಖ್ಯೆ). ೯. ಹಾವು : ಸರ್ಪ : "ವಿಷಧರಃ . . . ನಾಗಃ, ಭೋಗೀ, ಅಹಿಃ . . . ಭುಜಂಗಮಃ -- ಈ ೨೫ ಹಾವಿನ ಪೆಸರ್" (ಕರ್ಣಾಮು. ೦೦೫-೦೬); ನಾಗರ ನಾಗಕನ್ನೆಯರ ರೂಪುಗಳಿಟ್ಟಳಮಾಗೆ ಭೋಗಿಗಳ್ ಭೋಗಿಗಳೆಂಬ ಭೋಗಿಗಳೆ ಭೋಗಿಗಳಲ್ಲಿಯ ಭೋಗನಾಯಕರ್ (ಶಂಕರಾ. ೪-೦೭); ಭೋಗಿಕುಲ ಪಾತಾಳಕೆ ಪೋಗಲು (ಗುರುಶಾ. ೦-೩೦). ೭, ೯ : ಇದು ನೋಡ ನಾಗಲೋಕದವೊಲನಂತಭೋಗಿಜನಸೇವಿತಂ (ಎಕ. VIII. ೪೦; 1112; ಶಾಶಮಂ. ೨೦೫ ನೋ); ಭೋಗಿಯಾಗಿಯುಂ ಪ್ರವಿಗತವಕ್ರಮಾರ್ಗಂ . . . ಅ[ದನಾ] ನೃಪಂ (ಕುಮ್ಮ. ೧೩-೭) ; ನಾಡಿಗರೊಳೆಲ್ಲರುಂ ಭೋಗಿಗಳ್ ಕುಟಿಲಗಾಮಿಗಳಲ್ತು (ರಾಮಾಶ್ವ. ೭-೨೨). ೧೦. ಕಾಮುಕ ; ವಿಷಯಾಸಕ್ತ. ೧೧. ದೊರೆ ; ರಾಜ. ೧೨. ಹಳ್ಳಿಯ ಮುಖಂಡ ; ಗ್ರಾಮಾಧಿಪತಿ. ೧೩. ಜಹಗೀರುದಾರ : ಶ್ರೀನೇಟ್ಟಭಂಜದೇವಃ ಕುಶ(ಲ)ೀ ನಾನಾಖಂಡವಿಷಯೇ ಯಥಾನಿವಾಸಿನ್(ನ) ಕರಣ ಸಾಮಂತ ಭೋಗ್ಯಾದಿ ಜನಪದಾನ್ ಯಥಾರ್ಹಂ ಮಾನಯತಿ (ಎಇ. XXVIII. ೨೬೨-೧೨; 11ನೆಯ ಶತ). ೧೪. ಹಜಾಮ ; ಕ್ಷೌರಿಕ. ೧೫. ಒಂದು ನಿರ್ದಿಷ್ಟವಾದ ಖರ್ಚಿಗಾಗಿ ಹಣವನ್ನು ಕೂಡಿಡುವವನು,– ಸಂಗ್ರಹಿಸುವವನು. ೧೬. ಒಂದು ಬಗೆಯ ಪೊದೆ. ೧೭. ಒಂದು ಬಗೆಯ ಮರ : ಕೆಲವು ಕಡೆಗಳಲ್ಲಿ ತೇಗ, ನಂದಿ, ಹೆಬ್ಬಲಸು. ಬಲಿಗೆ, ದೂಪ, ಜಂಭೆ, ಭೋಗಿ, ಮತ್ತಿ . . . ಮುಂತಾದ ಗಗನಚುಂಬಿತ ವೃಕ್ಷಗಳಿದ್ದರೆ ಕೆಲವು ಕಡೆಗಳಲ್ಲಿ ಗುರಗಿ, ಬಿದಿರು, ಕೆಂಜಿಗೆ. ವಾಟೆ . . . ಮುಂತಾದ ಗಿಡ ಬಳ್ಳಿ ಪೊದೆಗಳಿದ್ದವು (ಕಂಜಿಶಂ. ೨).

[ಸಂ. ಭೋಗಿನ್]

**ಭೋಗಿಕಟಕ** (ನಾ). ಹಾವುಗಳನ್ನು ಕಂಕಣವನ್ನಾಗಿ ಮಾಡಿಕೊಂಡಿರುವವನು : ಶಿವ : ಭೋಗಿಕಟಕನ ಗಾಣಪತ್ಯಕೆ ಹೋಗನೇ ತಂತ್ರಂ ಬೆರಸಿ ಶಿವಯೋಗದಿಂದ ಕುಮಾರಪಾಲಕ ಗುರ್ಜರನು ಮುನ್ನ (ಬಸವು. ೫೪-೭೫).

[ಸಂ.]

**ಭೋಗಿತ** (ನಾ). ಊಟಮಾಡಿದವನು : ಭೋಜನಮಾಡಿದವನು : ಇದುವಲಾ ನಿಜಪದವಿಗೆಳಗಾಸ್ಪದವೆನುತ್ತಂ ತತ್ಪ್ರಸಾದಸಮುದಿತ ಭೋಗಿತನಾಗಿ ತತ್ಸದನಾಂಗಣಕೆ ಬಂದು (ಬಸವು. ೩೦-೧೨). [< ಭೋಗ]

**ಭೋಗಿತಲ್ಪ** (ನಾ). ಆದಿಶೇಷನನ್ನು ಹಾಸುಗೆಯಾಗುಳ್ಳವನು; ವಿಷ್ಣು.
**ಭೋಗಿತಲ್ಪಾತ್ಮಜ** = ವಿಷ್ಣುವಿನ ಮಗ; ಮನ್ಮಥ: ಭೋಗಿತಲ್ಪಾತ್ಮಜನ ಪಡೆ ಸೋಲದರಾರು (ಶ್ರೀರಾ. ೩-೪೦). [ಸಂ.]

**ಭೋಗಿತ್ವ** (ನಾ). ೧. ಸುಖಪಡುವಿಕೆ; ಉಪಭೋಗಿಸುವಿಕೆ. ೨. ಹಾವಿನ ಗುಣ. ೧, ೨: ಅಸಿಯುಳುಸಿರೆಲರನಾಸ್ವಾದಿಸುತಧರಾಮೃತವನೀರಿಟೆ ಭೋಗಿತ್ವಮನಾಂತಸಮುಕುಚಕಲಶನಾಧಿಗಾದೆಸೆವಂಗೆ ಭುಜಂಗನಾಮಮೇಂ ಬಗೆವುಗದೇ (ರಾಜಶೇ. ೦೦-೦೯೬). [ಸಂ.]

**ಭೋಗಿನಿ** (ನಾ). ೧. ಹೆಣ್ಣುಹಾವು; ನಾಗಿಣಿ: ಪೆಡೆಯುಡುಗದ ಭೋಗಿನಿಯೆಮೆಮಿಡುಕಂ ಸಂಗಳಿಸಿದವಾರಿ . . . ಎಂಬೀ ನುಡಿಗೆಡೆಗೊಟ್ಟಳ್ ಲತಾಂಗಿ ನವತರುಣಿಮದೊಳ್ (ಚಂದ್ರಪು. ೩-೦೦೦). ೨. ಪಟ್ಟಮಹಿಷಿಯಲ್ಲದ ರಾಣಿ: ರಾಜನ ಪಟ್ಟದರಸಿಯು ಮಹಿಷೀಯನ್ನಲ್ಪಡುವಳು . . . ಮಿಕ್ಕ ರಾಜಸ್ತ್ರೀಯರೆಲ್ಲಾ ಭೋಗಿನಿಗಳೆನ್ನಲ್ಪಡುವರು (ಗುರುಚ. ೨-೨೦೦). 'ಭಟ್ಟಿನಿ' ಪರಾ. [ಸಂ. ಭೋಗಿನೀ]

**ಭೋಗಿಪ** (ನಾ). ಹಾವುಗಳ ಒಡೆಯ: ನಾಗರಾಜ: ಆದಿಶೇಷ: ಭೋಗಿಪಭೋಗತಳ್ಪತಳದೊಳ್ ಸದ್ಯೋಗನಿದ್ರಾಪರಂ ಕಮಳಾವಲ್ಲಭದೇವ (ಎಕ. XI. ಬಾವಣ. ೩೩-೯; ಕ. 1160): ಹುದುಗಿದಂ ಭೋಗಿಪನ ಗದಗದಿಸಿತಾ ಸಾಯುವ ಬಿಸಿಗೆ ಬ್ರಹ್ಮಾಂಡಂ (ಕೃ.ಬಾ. ೦೩-೯೭); ಕಮಠನ ಕೊರಲ್ ಕುಸಿಯೆ ಭೋಗಿಪನ ಭೋಗಂ ನಸಿಯೆ . . . ಸಬ್ಬಸಬ್ಬರಂ ಕಡಿದಾಯ್ತು (ಭುವನೈ. ೦೩೦-೨೩). [ಸಂ.]

**ಭೋಗಿಪತಿ** (ನಾ). = ಭೋಗಿಪ: ಭೋಗಿಪತಿ ತನ್ನ ಸಹಸ್ರಫಣಾಮಣಿದ್ಯುತಿ ವ್ಯಾಪಿಸೆ ಸುತ್ತಿ ನಿಂದನೆನೆ ಕೋಟೆಯು ಪೊಂದೆನೆಗಳ್ ವಿರಾಜಿಕುಂ (ಜಗದ. ೨-೦೯). [ಸಂ.]

**ಭೋಗಿಭೋಗ** (ನಾ). ೧. ಹಾವಿನ ಹೆಡೆ: ಸಂಸ್ಕೃತಿಭೋಗಂಗಳ್ ಭೋಗಿಭೋಗದಿಂ ವಿಷಮಂಗಳ್ (ಅಂಕು. ೩-೨೩). ೨. ಹಾವಿನ ದೇಹ: ಬೋಗೆಯಲಿ ಬಿದ್ದಂತೆ ಜನ ಸವಿಗಾಗಿ ಹರಿತಂದಾ ಜಲಾಂತ್ರದ ಭೋಗಿಭೋಗ ಪರೀತನಾಗಿಹ ಕೃಷ್ಣನನು ಕಂಡು (ಕಿಶಾಗ. ೦೦-೦೩-೨೮). [ಸಂ.]

**ಭೋಗಿವಿಷ** (ನಾ). ಹಾವಿನ ನಂಜು: ಸರ್ಪದ ವಿಷ: ಅಗದಮನಪ್ಪಾಯ ವಿಧಾಗಕಳಿಕಾಲ ಲೋಕದೇಶವಿರುದ್ಧಂ ಭೋಗಿವಿಷಂಬೋಲ್ ಪ್ರಾಣತ್ಯಾಗಮನಾಗಿಸುಗುಮುಮಳಿಕೃತಿ ಪಥುಗಿನಿತುಂ (ಕವಿರಾ. ೦-೬೦). [ಸಂ.]

**ಭೋಗಿಶಯನ** (ನಾ). ೧. ಹಾವಿನ ಹಾಸುಗೆ: ಸಾಗರಪತಿಯಾಗಿ ಭೋಗಿಶಯನದಲ್ಲಿ ಭೋಗನಿದ್ರೆಯೊಳಿಪ್ಪ ಆ ಕಂದನ. . . ತೂಗಿ ನೋಡುವ ಪುಣ್ಯವೆಲ್ಲಿ ಪಡೆವಳೊ (ಪುರಂದ. ೪-೦೦೩-೨). ೨. ಹಾವಿನ ಮೇಲೆ ಮಲಗುವವನು: ಶೇಷಶಾಯಿ: ವಿಷ್ಣು: ಭೋಗಿಶಯನನ ಚರಣದಲಿ ತಲೆವಾಗಿ ಪರಿತೋಷದಲಿ ಪುಳಕಿತ್ಸರಾಗುತ್ತವೆ ಬೀಳ್ಕೊಂಡರಳಿಪುರಿಗೆ ಧನುಜರ್ (ಕಿಶಾಗ. ೦೦-೧೦-೩೩): ಭೋಗಿಶಯನ ಶ್ರೀ ಪುರಂದರ ವಿಠಲನ ಆಗ ನೆನೆಯಲಿಲ್ಲಾ (ಪುರಂದ. ೧-೩೯-೩). [ಸಂ.]

**ಭೋಗಿಸು** (ಕ್ರಿ). ೧. ತಿನ್ನು: ಸೇವಿಸು: ಆವ ಪದಾರ್ಥವಾದಡೇನು ತಾನಿದ್ದೆಡೆಗೆ ಬಂದುದ ಲಿಂಗಾರ್ಪಿತವ ಮಾಡಿ ಭೋಗಿಸುವುದೆ ಆಚಾರ (ಬಸವ. ೭೭೯): ರಾಜಾನ್ನದಕ್ಕಿಯಂ ಬೋನವಂ ಮಾಡಿ ಇತ್ತು ತಲ್ಲಿಂಗಪ್ರಸಾದವನಾರ್ಯರು ಭೋಗಿಸಲು (ಬಸವು. ೨೭-೦೩). ೨. (ಸುಖ ಮುಂತಾದುಗಳನ್ನು) ಅನುಭವಿಸು; ಉಪಭೋಗಿಸು: ನಿತ್ಯಲಾಭಮಾ ಬಿದ್ದಾಮಾ ವಿನೋದವಾ ಪಸದನವಾ ವಿಲಾಸದೊಳೊಡಂಬಡೆ ಭೋಗಿಸಿದಂ ಗುಣಾರ್ಣವಂ (ಪಂಪಭಾ. ೦೯-೩೮); ಮುಂದೆ ನೀಂ ಭೋಗಿಸುವ ಸಕ್ಕಳ ಭಾಗ್ಯಕ್ಕೆ ಬೀಜಭೂತಮಾಗಿರಲ್ಕೆ (ಸಂಭರ. ೯-೨೯); ಭಾಗೀರಥಿ ನಿನ್ನ ಸೋಂಕಿನ ತೆರೆಗಳ ತಾಗಿದ ಸಕಲಜಂತುಗಳು ಯೋಗಿತವಡೆದು ಸ್ವರ್ಗದ ಸೌಖ್ಯಂಗಳ ಭೋಗಿಸುತಿಹರು ಸಂತತದಿ (ಮೋಹತ. ೭ ೪೨). ೩. ಸೆರೆ: ಕೂಡು: ಸಂಭೋಗಿಸು: ಬಸನದಿಂ ವನಿತೆಯರೊಳ್ ಭೋಗಿಸುವುದು ಸಚ್ಚರಿತಂಗಾಗದು (ಸಮಯ. ೩-೬೨): ಪರಿಪರಿಯ ವೇಷಿಯರ ಮನೆಗಳೊಳಿರವಿನಲಿ ಭೋಗಿಸುವವರು ಹನ್ನೆರಡುಸಾವಿರ ವಿಂಡಜಂಗಮವು (ಬಸವು. ೬-೩೩): ಓಪರೊಳ್ನೆರೆದು ವಿರಹಿಗಳ್ಮಲಯಜದ ಘನಸಾರದೊಳ್ ತಂಪುವೆತ್ತು ನಿಚ್ಚಳದ ಕರುವಾಡದೊಳ್ ಭೋಗಿಸಿದರಂದು ಚೈತ್ರಾಗಮದ ಸಂಭ್ರಮದೊಳು (ಕೃ.ಬಾ. ೮-೩). [ಭೋಗ + —ಇಸು₃]

**ಭೋಗೀಂದ್ರ** (ನಾ). = ಭೋಗಿಪ: ಇಂದ್ರನೆ ಭೋಗೀಂದ್ರನೆ ಖೇಚರೇಂದ್ರನೆ ದಲ್ ಭೂಪೇಂದ್ರನೆಂಬನ್ನೆಗಂ ಮನುವಂಶಪ್ರಭು ಮೆರೆದನೃ ತರ್ವರ್ಗಂ (ಅಜಿತ. ೦೨-೦೩೩). [ಸಂ.]

**ಭೋಗೀಶ್ವರ** (ನಾ). ೧. ಸುಖವನ್ನು ಅನುಭವಿಸುವವರಲ್ಲಿ ಅಗ್ರಗಣ್ಯ: ಬಹಳ ಸುಖವನ್ನು ಅನುಭವಿಸುವವನು. ೨. = ಭೋಗಿಪ. ೧, ೨: ಅಂತು ವೀರಮಹೇಂದ್ರ . . . ವಿಶೇಷ ಭೋಗೀಶ್ವರನಾಗಿರ್ದುಂ ಶೇಷಫಣೀಶ್ವರನಲ್ಲ (ಶಬರ. ೭ ೩ ೩). [ಸಂ.]

**ಭೋಗ್ಯ** (ಗು). ೧. ಭೋಗಿಸಲು ಯೋಗ್ಯವಾದ ಉಪಭೋಗಿಸಬೇಕಾದ. ೨. ಅನುಭವಿಸಬೇಕಾದ: ಸಹಿಸಬೇಕಾದ. (ನಾ.) ೩. ಸುಖಾನುಭವಕ್ಕೆ ಯೋಗ್ಯವಾದ ವಸ್ತು: ಭೋಗಪರಿಕರ: ಭೋಗ್ಯಭೋಕ್ತೃಗಳೊಳಗೆ ಹರಿ ತಾ ಬೋಗ್ಯಭೋಕ್ತನು ವಿನಿಸಿ ಬೋಗ್ಯಾಬೋಗ್ಯರಸಗಳ ದೇವದಾನವರಿಗೆ ಉಣಿಸುವನು (ಹರಿಕ. ೦೩-೬೨): ತೊಜಿವರ್ಗ ಭೋಗ್ಯವಾನ್ ನೀಡೆ ಮಜಿತ್ರರೇನೊ ಮುತ್ತಿನವರ್ಗಳ್ ತಪಮಂ (ಕುಶಲ. ೦-೨೭); ಆ ವಸ್ತುಗಳು ಭೋಗ್ಯಗಳಾದುದರಿಂದ ಭೋಕ್ತನು ಬೇಕು (ಹಿಂದಶಾ. ೩೯). ೪. ಒಬ್ಬನಿಂದ ಸಾಲವನ್ನು ಪಡೆದು ಆತನಿಗೆ ಧನರೂಪವಾಗಿ ಬಡ್ಡಿಯನ್ನು ಕೊಡುವ ಬದಲು ಆಸ್ತಿಯನ್ನೇ ಅಸಲು ತೀರುವವರೆಗೂ ಬಿಟ್ಟು ಕೊಡುವುದು; ಆಧಾರ; ಈಡು; ಅಡಮಾನ: ತಾನು ಭೋಗ್ಯಕ್ಕೆ ಕೊಟ್ಟಿರೊ ಮನೇನ ಬಿಡಿಸಿಕೋಬೇಕು (ಶಾಗರ. ೩೩); ಕಾನೂನಿನ ಪ್ರಕಾರ ಕೆಳಮನೆಯು ಆಸ್ತಿಯನ್ನೆಲ್ಲ ತನ್ನ ಹೆಸರಿಗೆ ಭೋಗ್ಯಮಾಡಿಸಿಕೊಂಡ (ಗಂಗಾಧ. ೦೪). [ಸಂ.]

**ಭೋಗ್ಯಕ** (ನಾ) = ಭೋಗ್ಯ ೩: ಈ ಮೂರು ಜಾತಿಯ ದ್ರವ್ಯಗಳನ್ನು ರಾಮಾನುಜಗೀತಾಭಾಷ್ಯದಲ್ಲಿ ಧಾರಕ, ಪೋಷಕ, ಭೋಗ್ಯಕ ಎಂದು ಕರೆದಿದೆ (ಧಾರದ.೩೩೩). [ಸಂ.]

**ಭೋಗ್ಯಡವು** (ನಾ). ಒಬ್ಬ ವ್ಯಕ್ತಿಯು ತಾನೇ ಕಂದಾಯ ಮೊದಲಾದ ಉತ್ಪತ್ತಿಗಳನ್ನು ತೆಗೆದುಕೊಳ್ಳುವಂತೆ ಇಡುವ ಸ್ಥಿರಾಸ್ತಿಯ ಒತ್ತೆ: ಭೋಗ್ಯರೂಪವಾದ ಒತ್ತೆ: ಪೈದರನು ಕೋಟಾರಪ್ರಾಂತವನ್ನು ಪೇಶ್ವೇಗೆ ಭೋಗ್ಯಡವು ಮಾಡಿಕೊಡಬೇಕು (ತಂಕಂ.೦೯೨). [ಭೋಗ್ಯ + ಅಡವು₂ (< ಅಡರ್ಪು₂)]

**ಭೋಗ್ಯದಾರ** (ನಾ). ಜಮೀನನ್ನು ಭೋಗ್ಯಮಾಡಿಕೊಂಡಿರುವವನು: (ರೈಕಗ. II. ೩೯೩). [ಭೋಗ್ಯ + —ದಾರ₁]

**ಭೋಗ್ಯಪತ್ರ** (ನಾ). ಜಮೀನನ್ನು ಮನೆ ಮೊದಲಾದುವನ್ನು ಭೋಗ್ಯ ಮಾಡಿರುವ ಬಗ್ಗೆ ಬರೆದುಕೊಡುವ ದಾಖಲೆ ಪತ್ರ.—ದಸ್ತಾವೇಜು: "ಗುತ್ತಿಗೆ ಕರಾರು; ಗೇಣಿಚೀಟಿ: ಭೋಗ್ಯಪತ್ರ" (Lease. ಇಂಕಾ). [ಸಂ.]

**ಭೋಗ್ಯಾಧಿ** (ನಾ). = ಭೋಗಾಧಿ: ಆ ಗದ್ದೆಯನ್ನು ಭೋಗ್ಯಾಧಿಗೆ ಹಾಕಿದ್ದಾರೆ (ರೂಢಿ). 'ಭೋಗ್ಯಾಧಿಪತ್ರ' ಪರಾ. [ಸಂ.]

**ಭೋಗ್ಯಾಧಿಪತ್ರ** (ನಾ). ಆಸ್ತಿಯನ್ನು ಭೋಗ್ಯಕ್ಕೆ ಹಾಕಿ ಬರೆದುಕೊಡುವ ದಾಖಲೆಪತ್ರ.—ದಸ್ತಾವೇಜು: ಸಾಲ ತೀರಿದ ಮೇಲೆ ಭೋಗ್ಯಾಧಿಪತ್ರವನ್ನು ಹರಿದು ಬರಿ ಹಿಂದಕ್ಕೆ ತೆಗೆದುಕೊಳ್ಳಬೇಕು (ರೂಢಿ). [ಸಂ.]

**ಭೋಜ** (ನಾ). ೧. (ಸಂಸ್ಕೃತಸಾಹಿತ್ಯದಲ್ಲಿ ಕವಿಯಾಗಿಯೂ ಕವಿಗಳಿಗೆ ಪ್ರೋತ್ಸಾಹಕನಾಗಿಯೂ ಇದ್ದ) ಮಾಳವದೇಶದ ಮಹಾರಾಜನ ಹೆಸರು : ವಿನುತ ಭೋಜನ ಭಲ್ಲಟನ ಭಾರವಿಯ ಪದವ ನೆನೆದು ಬಲಗೊಂಡು ತೊಡಗಿದೆನೀ ಮಹಾಕೃತಿಯನು (ಹನಕಾ.೧-೧೪). ೨. ಯಾದವರ ಒಂದು ಒಳಪಂಗಡ : ಅಂಧಕವೃಷ್ಣಿ ಭೋಜರೆನಿಪಖಿಳಯಾದವಕುಲದ ಪಟುಭಟಸಮಾಜಮಂ ಪ್ರದ್ಯುಮ್ನನೊಡನೆ ಸುರಥನ ರಥಕ್ಕೆಣೆಯೊಡ್ಡಿ (ಪ್ರಭುಚ. ೧೪-೩). ೩. ಒಂದು ರಾಜವಂಶದ ಹೆಸರು : ವಿಜಯ ವೃಷಭಿಣೆ ಖೇಟಾತ್ ಭೋಜಾನಾಂ ಪೃಥಿವೀ ಮಲ್ಲವರ್ಮ್ಮಣೋ ವಚನಾತ್ ದೇಶೇ ಕುಪಲ[ಪ]ಕಟಾಹಾರೇ ಗ್ರಾಮೋ ಭಾಗಲಪಲಿ[ಲ್ಲಿ]ಕಾಯೋಂವರ್ತ್ತಮಾನ ಭವಿಷ್ಯದ್ ಭೋಜಕಾಯುಕ[ಕ್ತ]ಕ ಸ್ಥಾಯ್ಯಾದಯೋ [ವಕ್ತವ್ಯಾಃ] (ಎಇ. XXXIII, ೬೨-೧ ; 7ನೆಯ ಶತ ?). ೪. ಭರತಖಂಡದ ಪ್ರಾಚೀನ ದೇಶಗಳಲ್ಲಿ ಒಂದು : "ಭೋಜಃ . ಕಾಂಭೋಜಃ—ಈ ೨ ದೇಶಂ " (ಶಬ್ದಕೌ. ೨೨೨). 'ಕಾಂಭೋಜ' ನೋ. [ಸಂ.]

**ಭೋಜಕ** (ನಾ). ೧. ಭೋಜನಮಾಡುವವನು : ತಿನ್ನುವವನು. ೨. =ಭೋಜ ೨ : ಭೋಜರು ಅಥವಾ ಭೋಜಕರುಗಳ ನೆಲೆವೀಡು ವಿದರ್ಭವೆಂದು ಸಿದ್ಧವಾಗುತ್ತದೆ ([illegible]). ೩. ಜಹಗೀರುದಾರ : ಭಾಗಲಪಲಿ[ಲ್ಲಿ]ಕಾಯಾಂವರ್ತ್ತಮಾನ ಭವಿಷ್ಯದ್ ಭೋಜಕಾಯುಕ [ಕ್ತ]ಕ ಸ್ಥಾಯ್ಯಾದಯೋ [ವಕ್ತವ್ಯಾಃ] (ಎಇ. XXXIII. ೬೨-೧ ; 7ನೆಯ ಶತ ?): ಒಂದು ಅಥವಾ ಹೆಚ್ಚು ಗ್ರಾಮಗಳ ಮೇಲೆ ನಿರಾಬಾಧಸ್ವಾಮ್ಯವುಳ್ಳವರೇ ಭೋಜಕರು ([illegible]. ೪೦). [ಸಂ.]

**ಭೋಜಕತ್ವ** (ನಾ). ೧. ಊಟಮಾಡುವಿಕೆ. ೨. [ಕಾವ್ಯಮೀ] ಸಹೃದಯರಿಗೆ ಕಾವ್ಯನಾಟಕಗಳಿಂದ ರಸಾಸ್ವಾದವನ್ನುಂಟು ಮಾಡುವ ಒಂದು ಕಾರ್ಯವಿಶೇಷ : ಕಾವ್ಯ ನಾಟಕದಲ್ಲಿ ಮುಖ್ಯವಾದ ಅರ್ಥವನ್ನು ಕೊಡುವ ಅಭಿಧಾವೃತ್ತಿ ಅಥವಾ 'ಶಕ್ತಿ' ಇರುವಂತೆ 'ಭಾವಕತ್ವ'. 'ಭೋಜಕತ್ವ' ಎಂಬ ಮತ್ತೆರಡು ಶಕ್ತಿಗಳಿವೆ . . . ಎರಡನೆಯ 'ಭೋಜಕತ್ವ' ಎಂಬ ಶಕ್ತಿಯಿಂದ ಈ ಸಾಧಾರಣವಾಗಿ ಮಾಡಲ್ಪಟ್ಟ ರತ್ಯಾದಿಗಳು ಅನುಭವಿಸಲ್ಪಟ್ಟು ಸುಖಗೊಳಿಸುತ್ತವೆ ([illegible]): ಇಲ್ಲಿಂದ ಮುಂದಕ್ಕೆ "ಭೋಜಕತ್ವ" . . . ಎಂಬ ಮೂರನೆಯ ವ್ಯಾಪಾರವು ಪ್ರವರ್ತಿಸುತ್ತದೆ. ರಸವು ಇದರ ಬಲದಿಂದ ಸಾಮಾಜಿಕನಿಗೆ ಭೋಗವಿಷಯವಾಗುತ್ತದೆ ([illegible]). [ಸಂ.]

**ಭೋಜನ** (ನಾ). ೧. ಆಹಾರಸೇವನೆ : ತಿನ್ನುವುದು ; ಉಣ್ಣುವುದು. ೨. ಅನುಭವಿಸುವುದು: ಭೋಗಿಸುವುದು. ೩. ಊಟ: ಆಹಾರ : "ವಲ್ಭನಂ . . . ಆಹಾರಃ, ಭೋಜನಂ, ಸ್ವದನಂ—ಈ ೧೧ ಊಟಂ" ([illegible]) : ರಕ್ಕಸಿಯ ಮನೆಯಲ್ಲು ಭೋಜನವುಂಡು ತೃಪ್ತಿಯಾಯಿತ್ತೆಂದು ಬೆಸಗೊಂಡರೆ ಹೇಳುವೆನು ([illegible]) ; ಮಜ್ಜನ ಭೋಜನಾದಿ ದಿವಸವ್ಯಾಪಾರಂಗಳಂ ತೀರ್ಚಿ ([illegible]). ೪. ಊಟವನ್ನು ನೀಡುವುದು; ಆಹಾರವನ್ನು ಕೊಡುವುದು. [ಸಂ.]

**ಭೋಜನಂಬಡೆ** (ಕ್ರಿ). ಊಟವನ್ನು ಪಡೆ.— ದೊರಕಿಸಿಕೊಳ್ಳು : ರಾಜಕುಮಾರರ್ ಭೋಜನಂಬಡೆಯದರಿಂತೆ ಬಡವಾಗೆ ([illegible]). [ಭೋಜನ + ಪಡೆ$_1$]

**ಭೋಜನಕೂಟ** (ನಾ). ಯಾವುದಾದರೂ ಒಂದು ವಿಶೇಷ ಸಂದರ್ಭದಲ್ಲಿ ನೀಡುವ ಸವಿಯಾದ ಊಟ: ಔತಣಕೂಟ : ಸಿದ್ಧನಾಥನನ್ನು ಕಂಡಿದ್ದ ಅಪರಿಚಿತನು ಭೋಜನಕೂಟದಲ್ಲಿ ಸಮ್ಮಿಲಿತನಾಗಿದ್ದ ([illegible]). [ಭೋಜನ + ಕೂಟ$_1$]

**ಭೋಜನಗೆಯ್** (ಕ್ರಿ). ಊಟಮಾಡು : ಇತ್ತ ರಂಬರಾಸುರ ಬಂದು ಭೋಜನಗೆಯ್ದು ವರರತ್ನಮಂಟಪದೆಡೆಗೈದಿ . ಸಿಂಹಾಸನದಲ್ಲಿ ಕುಳಿತ ವೈಭವದಿ ([illegible]). [ಭೋಜನ + ಕೆಯ್$_1$]

**ಭೋಜನಪ್ರಿಯ** (ನಾ). ತಿನ್ನುವುದರಲ್ಲಿ ಬಹಳ ಆಸಕ್ತಿಯುಳ್ಳವನು : ಇಂತು ಗಂಧಾಕ್ಷತಾ ಭೋಜನಪ್ರಿಯಂಗಳಿಂದ ಸಂತತಂ ಸದ್ಬ್ರಾಹ್ಮಣರ ಕೆಯ್ಯಿಂ ವಂದಿಸಿಯು ([illegible]). [ಸಂ.]

**ಭೋಜನಭೂಮಿ** (ನಾ). ಊಟಮಾಡುವ ಸ್ಥಳ.—ಮನೆ ; ಭೋಜನಶಾಲೆ : ವಿಕಸಿತಾಂಭೋಜ ಹೇಮಕಮಲಮನೋಹರತರಶ್ರೀಯಿಂ ತಾಳ್ದಿರ್ದ ಭೋಜನಭೂಮಿಗೆ ರಾಜಹಂಸ ವಿಳಾಸದಿಂ ಬಿಜಯಂಗೆಯ್ದು ([illegible]). [ಸಂ.]

**ಭೋಜನಶಾಲೆ** (ನಾ). ಊಟದ ಮನೆ : ಚಿತ್ರಶಾಲೆ ಚಂದ್ರಶಾಲೆ ಶಿಶಿರಶಾಲೆ . . . ಭೋಜನಶಾಲೆ ಮಜ್ಜನಶಾಲೆ ([illegible]); ಸಿದ್ಧನಾಥನ ಜೊತೆಗೆ ಮುಕ್ತಾ ಭೋಜನಶಾಲೆಯಲ್ಲಿ ಪ್ರವೇಶಿಸಿದಳು ([illegible]). [ಸಂ. ಭೋಜನಶಾಲಾ]

**ಭೋಜನಾಂಗ** (ನಾ). [ಜೈನ] ಭೋಗಭೂಮಿಯಲ್ಲಿರುವ ಹತ್ತು ಬಗೆಯ ಕಲ್ಪವೃಕ್ಷಗಳಲ್ಲಿ ಒಂದು ; ಬಯಸಿದ ಆಹಾರವನ್ನು ಕೊಡುವುದೆಂದು ಭಾವಿಸಲಾದ ಮರ : ತೇಜೋಬಲಾಯು ರಾರೋಗ್ಯಸಮೇತಮನಮೃತಾನ್ನಮಂ ಸೊಲ್ಲಿಗುಮಾಗಳುಂ ಭೋಜನಾಂಗ ಕಲ್ಪಾವನಿಜಂ ([illegible]) : ಭೋಜನಾಂಗವೆಂಬುದು ತೇಜೋಬಲಾಯುರಾರೋಗ್ಯತುಷ್ಟಿಪುಷ್ಟಿಪ್ರತಿಭಾಪ್ರೀತಿಪ್ರದಾಯಿಗಳಪ್ಪಮೃತಾನ್ನಂಗಳ ನೀವುದು ([illegible]). [ಸಂ.]

**ಭೋಜಪತ್ರ** 'ಭೂರ್ಜಪತ್ರ' ನೋ.

**ಭೋಜಿಸು** (ಕ್ರಿ). ೧. ಊಟಮಾಡು ; ಆಹಾರವನ್ನು ಸೇವಿಸು : ಅರಮನೆಗೊಯ್ದು ಕಂಪಾಂಕ ಮನ್ನಿಸಿ ತನ್ನರಸಿ ಕೂರ್ತಯ್ದು ಭೋಜಿಸಿದ ([illegible]): ಸೇವಿಸುವಂ, ಪಾಲಿಸುವಂ, ಭೋಜಿಸುವಂ ([illegible]). ೨. (ಸುಖವನ್ನು) ಅನುಭವಿಸು ; ಸವಿ : ಕುಮಾರರೆಯ ಮಾಣ್ ಇಜುದು ಪಲರಂ ಕೊಂದು ಸೂರ್ಯ್ಯಮಂಡಲಮಂ ಭೋಜಿಸಿದರ್ (ಎಕ. XVIII, ೨೦೦-೬ ; 1107). [ಭೋಜನ + — ಇಸು$_2$]

**ಭೋಜ್ಯ** (ಗು). ೧. ತಿನ್ನಲು ಯೋಗ್ಯವಾದ ; ತಿನ್ನಬಹುದಾದ. (ನಾ). ೨. ತಿನ್ನಲು ಯೋಗ್ಯವಾದುದು ;ತಿನಿಸು; ಆಹಾರಪದಾರ್ಥ: ಅಸಿಸಿತು ಭೋಜ್ಯದಿಂ ಪೆಚ್ಚಿತ್ತೆನುಮನುಣಪ್ರೊಳ್ಗಿಂ ([illegible]) : ನೆರೆದ ಸಚರಾಚರವಿಲ್ಲದೆಲ್ಲವೂ ನರರ ನಿಜಭೋಜನಕೆ ಜನಿಸಿದವರಸ ಕೇಳಿದ ಜಗೊಳಗೆ ಭೋಜ್ಯಾಭೋಜ್ಯವನು ತಿಳಿದು ಪರಿಹರಿಸಬಲ್ಲವರುಗಳು ಘನತರದ ಸುಕೃತವನೈದುವರು ([illegible]) : ಅಡಿಗೆವಸ್ತುಗಳು ಅವೇ ಆಗಿದ್ದರೂ ಸಿದ್ಧಪಡಿಸಿದ ಭೋಜ್ಯ ಮಾತ್ರ ಹೊಸದು ([illegible]). ೩. ಉತ್ತಮವಾದ ಆಹಾರ; ರಸಕವಳ : ಮೃಷ್ಟಾನ್ನಭೋಜನ: ರಚಿತರುಚಿನಿಚಿತಶುಚಿ ಸಾಜ್ಯಭೋಜ್ಯಾಳಿಯಿಂ . . . ರಾಜಿಸುತೆ ನಲ್ಮೆಯಿಂ ಪೂಜಿಸಿದನೊಲ್ಮೆಯಿಂ ([illegible]). ೪. ಅನುಭವಿಸಲು ಯೋಗ್ಯವಾದುದು ; ಭೋಗವಸ್ತು : ವಿಪ್ರಶ್ಯವೈಭವದಿಂದ ರಂಜಿಸುವ ಧರೆಯ ಸಾಮ್ರಾಜ್ಯಾಧಿಪತ್ಯದ ಮಹಾಧನಂ ಸುರವಿಪ್ರಭೋಜ್ಯಮಪ್ಪವೊಲು ([illegible]). [ಸಂ.]

**ಭೋಜ್ಯಾಂಗ** (ನಾ). ಭೋಜನಾಂಗ : ತ್ರಿದಶಾಮೃತಾನ್ನಮಂ ಕುಡುವುದಪರ್ಗೆ ಭೋಜ್ಯಾಂಗ ತುಂಗಕಲ್ಪಮಹೀಜಂ ([illegible]). [ಸಂ.]

**ಭೋದರಿಯೂರ್** (ನಾ). ಒಂದು ಊರಿನ ಹೆಸರು : ಕೂಡಲೂರ ಭೋದರಿಯೂರ ಮಾನ್ಯಸ್ಥಕ್ಕೆ ಬಿಟ್ಟ ಸ್ವಸ್ತಿಕ್ರಮವಾದುದು ಎನ್ನಡ (ಎಕ. IX. [illegible] ; [illegible]). [ ? + ಊರ್ ]

**ಭೋರ್** (ಅ). ಒಂದು ಅನುಕರಣಾವ್ಯಯ : ಆಗಳಶ್ವತ್ಥಾಮಂ . . . ನೊಂದು ಭೋರೆಂದು ಕವಿವ ಬಿಸುನೆತ್ತರ್ ಕಣ್ಣಂ ಕವಿಯೆ ಸೀಂಟಿ ಕಳೆದು (ಶಂಕಪು. ೧೨-೭೪೮) ; ಘೋರೆಂಬ ಭೋರೆಂಬ ಕೂರಸಿಗಳುರವಣೆಯು ದನಿ ಯುಡಸುತಂ ಪುಟ್ಟೆ (ಇಹರ. ರೇ. ೪೨-೨).

**ಭೋಭೋರ್** (ದ್ವಿರುಕ್ತಿ): ಭೋಭೋರೆನೆ ಪಾಯ್ವುದು ಪಿಪುನಗಕ್ಕೆ ಗಂಗಾಸ್ರೋತ್ರಂ (ತಳುವ. ೦೯೫ ಪ್ರಯೋ) ; ಬೊಬ್ಬುಳಿತೆರೆಯನು ದಡಕ್ಕೆ ಹೊಮ್ಮಿಸಿ, ಅಬ್ಬರದಲಿ ಭೋರ್‌ಭೋರೆನೆ ಗುಮ್ಮಿಸಿ, ಬರುತಿದೆ . . . ತೆಂಕಣಗಾಳಿಯು ಕೊಂಕಣಸೀಮೆಗೆ (ಕನ್ನಪ. ೦೨೧).

**ಭೋರಂಗ** 'ಬೋರಂಟಿ' ನೋ.

**ಭೋರಂಗಿ** 'ಬೋರಂಗಿ' ನೋ.

**ಭೋರಜಗುಲಿ** 'ಭೋರ್ಜಗಲಿ' ನೋ.

**ಭೋರನೆ** (ಅ). ೧. ಒಂದು ಅನುಕರಣಾವ್ಯಯ; ಭೋರೆಂದು ಶಬ್ದವಾಗುವಂತೆ : ಭೋರನೆ ಕೊಂಡುದಾಗಳಂಬಿನ ಮಟೆ (ಶಂಶಾಪು. ೦೩-೪೯): ಭೋರನಬ್ಬರಿಸಿದುವು ದಿವಿಜರ ಭೇರಿಗಳು (ತೊರ್ವಾ. ೧-೬-೮). ೨. ಶೀಘ್ರವಾಗಿ : "ಭೋರನೆಯೆನೆ ಭೋಂಕನೆನಲು . . . ಶೀಘ್ರಾರ್ಥಂ" (ಕಶಂ. ೧೦೦); ತರಳೆ ಮಹಾಶ್ವೇತೆಯುಂ ಬಿಟ್ಟು ಭೋರನೆ ಚಂದ್ರಾಪೀಡಶರೀರಮಂ ಸಾರ್ದು (ಕಾದಂಕ. ೫೭೬). ೩. ಥಟ್ಟನೆ : ಕೂಡಲೆ : ನಾರಿಯರ್ಕೈವರ ಕೂಡಿಕೊಂಡು ಸಾ ದಾರಿಸಂಗಡವಾಗಿ ಬರುತಿರಲು ಭೋರನೆ ಶ್ರೀಶೈಲ ಚೆನ್ನಮಲ್ಲೇಶಂಗೆ ಓರಂತೆ ಮನಸೋತೆ (ಶಿಪರ. ೦೩೪-೭೭೨).

[ ಭೋರ್ + — ಅನೆ$_1$ ]

**ಭೋರಾಟ** (ನಾ). ಭೋರೆಂಬ ಶಬ್ದ: ಆರ್ಭಟ; ಮೊರೆತ : ಬಿರುಮಳೆಯು ಸೂಚನೆ ಗಾಳಿಯು ಭೋರಾಟದಿಂದಲೂ . . . ಗುಡುಗುಗಳ ಆರ್ಭಟದಿಂದಲೂ ರೌದ್ರವಾಗಿದೆ (ಶಂದ್ರಸ. ೦೦೯-೫) ; ತೊರೆಯ ನೀರಿನ ಭೋರಾಟವನ್ನು ಆಲಿಸಿ (ಪುರಕು. ೫). [ಭೋರ್ + ಆಟ]

**ಭೋರಾಡು** (ಕ್ರಿ). ಹೆಚ್ಚು ಧ್ವನಿಮಾಡು ; ಗೋಳಾಡು : ಅವಳು ನಿಂತ ಸ್ಥಳದಲ್ಲಿಯೇ ಕುಸಿಬಿದ್ದು ಭೋರಾಡಿ ರೋದಿಸತೊಡಗಿದಳು (ಸ್ವಾರಖ. ೦೭೬); ಇವರ ದಶರಥನ ಪಾರ್ಟು ನೋಡಿದವರೆಲ್ಲ ಭೋರಾಡಿ ಅತ್ತರು (ಸ್ವತಿ. ೨೭). [ಭೋರ್ + ಆಡು$_1$]

**ಭೋರಿಡು** (ಕ್ರಿ). ೧. ಘೋಷಿಸು : ನೀರಜಾಕ್ಷ ನಿರ್ಜರಪತಿ ಪರಿಯೆಂದು ಚೀಚ್ ಹಾಚ್ ಭೋರಿಡುತಲಿ ಕುಣಿಯೊ (ಪುರಂದ. ೨-೭೭-೧). ೨. ಗೋಳಾಡು ; ರೋದಿಸು : ಕಳೆದ ಸುಖ-ಸೊಬಗುಗಳ ಗೋರಿಗೀತವ ಕಟ್ಟಿ ಭೋರಿಡುವ ಮಾನವನ ನಿತ್ಯಮಿಡುಕು (ಬಿಶಾಕ. ೬-೮). ೩. ಅಬ್ಬರಿಸು : ಮೊರೆ : ಗಂಗತ್ತೆಯ ಗೋಳು ಬೊಬ್ಬೆಗಳು ಭೋರಿಡುವ ಮಳೆಯನ್ನು ಭೇದಿಸಿಕೊಂಡು ದೂರಕ್ಕೆ ಹೋಗಲೇ ಇಲ್ಲ (ಬಿನ್ನಾ. ೫).

[ಭೋರ್ + ಇಡು$_1$]

**ಭೋರೆನ್** (ಕ್ರಿ). ೧. ಭೋರೆಂದು ಶಬ್ದಮಾಡು : ಅಬ್ಬರಿಸು : ಮವವತ್ಕರಿಸೆಚೆಯುಂ ಪಚಿದೊದವಿದ ಮುಳಿಸಿಂದೆ ಭೋರೆನೆಯ್ತಂದೊಡ ದರ್ಕ್ಕದಿರದಿರೆ ಭಕ್ತಿಯಿಂದವು ಪದಯುಗಕೆಱಗಿದುವು ದಾನಚಿಂತಾಮಣಿಯ (ಶಾಇಇ. XI-i, ೫೨-೩೦; 1007). ೨. ರಭಸದಿಂದ ಕೂಡು: ವೇಗವಾಗು : ಸಂಜೀವಕಂ ನಿಮ್ಮಲ್ಲಿ ಮುನ್ನಂ ಬರ್ಪಂದಮಲ್ಲದೆ ಭೋರೆನೆ ಬಂದು (ಶಂತಶಂ. ೦೩೨-೨). [ಭೋರ್ + ಎನ್$_1$]

**ಭೋರ್ಗರೆ** (ಕ್ರಿ). ಭೋರೆಂದು ಶಬ್ದಮಾಡು; ಅಬ್ಬರಿಸು : ಭೋರ್ಗರ ದೂದುವ ಗಾಳಿ ಸಿಡಿದು ಪೊಯ್ವ ಸಿಡಿಲ್ (ಆದಿಪು. ೬-೩೨); ನಭದೊಳ್ ಭೋರ್ಗರೆದುಱುಶಿರೆ ಸುರದುಂದುಭಿ (ವರ್ಧಪು. ೦೨-೪೩) ; ಸೊಂಡಿಲ ನೆಗಹಿ ಭೋರ್ಗರೆವ ನೀರಾನೆಯ ತಂಡ . . . ಜಲಚರ ತುಂಬಿ ಕಣ್ಗೆ ಶ್ರೀಖಂಡವಾಗಿರ್ದಳಾ ಗಂಗೆ (ಮೋಹತ. ೬-೩೭). [ಭೋರ್ + ಕರೆ$_1$]

**ಭೋರ್ಗಱೆ** (ಕ್ರಿ). ಬಿರುಸಿನಿಂದ ಸುರಿಸು, — ವರ್ಷಿಸು : ಧರೆಗೆ ಪೊಸತೆನೆ ಕೂಕಿಱಿದು ಭೋರ್ಗಱೆದರಂಬಿನ ಬಲುಮಳೆಯ ಮೇಡರು (ಶಾಳ್ವಭಾ. ೩೦-೨೩). [ಭೋರ್ + ಕಱೆ$_1$]

**ಭೋರ್ಜಗಲಿ**, ಭೋರಜಗುಲಿ, ಭೋರ್ಜಗುಲಿ (ನಾ). ೧. (ಉಕ) ಮದುಮಕ್ಕಳನ್ನು ಕೂರಿಸಿ ಧಾರೆ, ಮಾಂಗಲ್ಯಬಂಧನ ಮೊದಲಾದ ಮಂಗಳಕಾರ್ಯಗಳನ್ನು ಮಾಡುವುದಕ್ಕಾಗಿ ಏರ್ಪಡಿಸಿರುವ ಜಗಲಿ (?) : ಈ ಗದ್ದಲದಲ್ಲಿ ಸ್ಥೂಲಕಾಯಳಾದ ಮೆಹಬೂಬ ಭೋರ್ಜಗಲಿಯಿಂದ ದೂರವೇ ಉಳಿದಳು (ಗಂಕಮಿ. ೦೪೪). **ಭೋರಜಗುಲಿ** : ೧. ತೆಲಗುಬಣಜಿಗರು :— ಇವರು ಲಗ್ನದಲ್ಲಿ ಭೋರಜಗುಲಿಯ ಬಿಡಬಲದಲ್ಲಿ ಹೊಸಗಡಿಗೆಗಳ ಅಡಿಕಿಲುಯೇರಿಸಿ ಇಡುವರು (ಕಶಾಗ. ೦೦೬). **ಭೋರ್ಜಗುಲಿ** : ೨. ಸಂಪ್ರದಾಯ ಬದ್ಧವಾದ ರೇಖಾವಿನ್ಯಾಸಗಳನ್ನು ಬರೆದು ಸಿದ್ಧಪಡಿಸಿರುವ ಸ್ಥಳ (?) : ಮದುಮಕ್ಕಳು ಕೂಡುವ ಹಸೆಮಣೆಯ ಹಿಂದೆ ಗೋಡೆಯ ಮೇಲೆ ಬರೆದಿರುವ ರೇಖಾಕೃತಿ (?) : ಅವರು ತಮ್ಮ ಮಗಳನ್ನು ನಿನಗೆ ತೋರಿಸಬೇಕೂ ಎಂದು ಅನ್ನುತ್ತಿದ್ದರು . . . ಒಪ್ಪಿತ ವಾದರೆ ಎರಡು ಭೋರ್ಜಗುಲಿ ಎದುರೆದುರು ಬರೆಯಿಸಬಹುದು (ಶಾಅರ. ೩೭). [ ? + ಜಗಲಿ]

**ಭೋರ್ಜಗುಲಿ** 'ಭೋರ್ಜಗಲಿ' ನೋ.

**ಭೋಷ** 'ಭೌಷ' ನೋ.

**ಭೋಷವಂತ** (ನಾ). ಮರ್ಯಾದಸ್ಥ : ಪರಮಪವಿತ್ರ ಸದ್ಗತಿಯರಿಕೆ ಯುಂಟೇ ಭೋಷವಂತರಿಗೆ (ಕಂಕದಾ. ೬-೫೫).

[ ಭೋಷ (< ಭೌಷ ) + — ವಂತ ]

**ಭೋಸಡಿ**, ಬೋಸಡಿ, ಬೋಸುಡಿ, ಭೋಸುಡಿ (ನಾ). ೧. ಹೆಂಗಸಿನ ಜನನೇಂದ್ರಿಯ : ಯೋನಿ : (*). ೨. (ಆಲಂ) ಅಶ್ಲೀಲವಾದ ಒಂದು ಬಯ್ಗುಳ ; ಹಾದರಗಿತ್ತಿ : ರಮಾಬಾಯರು ವೆಂಕಮ್ಮ ನವರನ್ನು "ಭೋಸಡಿ" ಎಂದು ಬಯ್ದುದ್ದಲ್ಲದೆ . . . ಮೋರೆಗೆ ಕೈ ತಿವಿದಿದ್ದರು (ಸಮುಜ. ೬೭) ; ಈಗ ತಾನೆ ಮೊಗ ಹೆತ್ತ ಬಾಣಂತಿ ಹಂಗೆ ಕುಂತುಗೊಂಡಿದ್ದೀಯಲ್ಲೇ ? ಎದ್ದು ಬದುಕು ಮಾಡೆ ಭೋಸಡಿ (ಸರ್ಪಬಂ. ೩೫೩). **ಬೋಸಡಿ** : ೨. ಈ ಬೋಸಡಿಯ ಎಂತಹ ಬೇಡಿಕೆಯನ್ನು ಬೇಡಿದಳು ನೋಡು (ಶಿಶಂ. ೬೦). **ಬೋಸುಡಿ** : ೨. ಇನ್ಯಾವ ಮರ್ಯಾದಸ್ತ ಬೋಸುಡಿ ಬಂದಾಳು ಇಲ್ಲೆ ಅಮ್ಮಾನಿ (ಬಂಗಶ. ೦೦೩). **ಭೋಸುಡಿ** : ೨. "ಮನಗೇ ಭೋಸುಡಿ" ಗದರಿ ಕೊಂಡಳು ಸೋನೂಬಾಯಿ (ಬಂಗಶ. ೦೭೦).

[← ಮರಾ. ಭೋಸಡೀ]

**ಭೋಸುಡಿ** 'ಭೋಸಡಿ' ನೋ.

**ಭೋಳಾಶಂಕರ** (ನಾ). ೧. ಶಿವ ; ಶಂಕರ : ಭಸ್ಮಾಸುರಬಾಧಿತನಾದ ಭೋಳಾಶಂಕರನೆಂಬ ಮೊಮ್ಮನಂ ಪಾಲಿಸಲಾ ನಿಶಾಚರನ ಮಾಯದಿಂ ಮೋಹಿಸಿ (ಅಶಾರಿ. ೨೫-೦೩ ಪ). ೨. ಏನೂ ಅರಿಯದವನು ; ಮುಗ್ಧ : ಅವರ ಸರಳತೆ ಔದಾರ್ಯಗಳ ದುರುಪಯೋಗ ಮಾಡಿಕೊಂಡು ಅವರನ್ನು ಮೋಸಗೊಳಿಸಿದ ಜನರೂ ಉಂಟು. ಅಂತೆಯೇ ಜನರು ಅವರಿಗೆ ಆಗಾಗ 'ಭೋಳಾಶಂಕರ' ಎಂದು ಚೇಷ್ಟೆ ಮಾಡುವರು (ಗಂಗಾಶಾ. ೨೫).

[ ← ಮರಾ. ಭೋಳಾಶಂಕರ್ ]

**ಭೋಳೆ**, ಬೋಳೆ$_3$, ಬೋಳೆಯ$_2$ (ನಾ). ೧. ಸಾಧುಸ್ವಭಾವದವನು ; ಕಪಟವನ್ನರಿಯದವನು : ಮುಗ್ಧ : ಗರುಡ ಊರು ಹಾಳು ಮಾಡುವ ಪ್ರಚಂಡ ಗಟ್ಟಿಗ, ನಿಮ್ಮ ಹಾಗೆ ಭೋಳೇ ಅಲ್ಲ (ಶಂಕ್ರಾರ. ೩೫) ; ನಾನು ಇಷ್ಟು ಭೋಳೆ ಇಲ್ಲ — ಎನ್ನ ಮುಂದೆ ಮೋಸದಾಟ ನಡೆಯುವು

(ಬೋಧಶಿ. ೧೩೦). (ಗು). ೨. ಸಾಧುಸ್ವಭಾವದ ; ಮುಗ್ಧವಾದ : ನೀವು ಹಳೇ ಕಾಲದ ಮಂದಿ ; ಬಹಳ ಭೋಳೇ ಮಂದಿ (ಹೊಸಂಶಾ. ೦೦೪); "ಭೋಳೇ" ಜನರನ್ನು ಬಗಲಿಗೆ ಹಾಕುವ ಚಾತುರ್ಯವೂ ಅವರಲ್ಲಿದೆ (ಬಂಜಹು. ೪೮). **ಬೋಳೆ₃ :** ೨. ಹಳ್ಳಿಯ ಬೋಳೇಜನದ ಮಾತು ಹೇಳಬೇಕೆ? (ಸುವಸಂ. ೧). **ಬೋಳೆಯ₂ :** ೧. ಬೋಳೆಯನೆಂದು ನಂಬಬೇಡ ಫಾಳಕನವನು ಜಗದ ಬಿನ್ನಾಣಿ (ಮಹಾದೇ. ೪. ೨೮-೬೩).

**ಬೋಳೆಯ ಮಾತು** = ನಿಷ್ಕಪಟವಾದ ನುಡಿ : ನಗುನಗುತ್ತಲೆ ಬೋಳೆಯ ಮಾತುಗಳನ್ನಾಡುತ್ತಾ, ತಮಾಷೆ ಮಾಡುವವರಂತೆಯೆ ಕಸಿದು ಕೊಳ್ಳುತ್ತಿದ್ದರು (ಮಲೆಮ. ೪೨೬).

[ ← ಹಿಂ. ಭೋಲಾ ; ಮರಾ. ಭೋಳಾ ]

**ಭೋಳೆತನ**. ಬೋಳೆಯಂತನ (ನಾ). ೧. ಸರಳಸ್ವಭಾವ ; ಮುಗ್ಧತೆ : ಉರಿಯ ಹಸ್ತವ ಕೇಳಲಾ ಶಂಕರನು ತಿಳಿಯದೆ ಭೋಳೆತನದಲಿ ಕೊಟ್ಟು ಮರುಳ್ಗೆಳಗೊಡೆಯನಾದನಲಾ (ಅಕ್ಷಾರಿ. ೩-೨೮) ; ಅವಳ ಆ ಮಾತು ಕೇಳಿ, ನನ್ನ ಭೋಳೇತನದ ಅರಿವಾಗಲು ನನಗೆ ನಗು ಬಂದಿತು (ತಿರುಕ್ಷ. ೦೩೩) ; ನಮ್ಮ ತಂದೆ ಭೋಳೆತನದಿಂದ . . . ತಮ್ಮ ಎಲ್ಲಾ ಆಸ್ತಿಯನ್ನು ನಾಶಮಾಡಿಕೊಂಡರು (ಇತಿಶ್ರೀ. ೨೦೩). **ಬೋಳೆಯತನ :** ೨. ಮೂರ್ಖತನ; ಅಜ್ಞಾನ : ಜನಪನೀತಿಯೊ ಮೇಣು ಬೋಳೆಯ ತನವೊ . . . ನಾವಱಿಯೆವು (ಕುವ್ಯಾ.ಆ. ೨೦-೩೩) ; ಕೇಳು ನಿನ್ನಾತನ ವಿನೋದದ ಖೂಳ ಬೋಳೆಯತನದಲೊದಗಿದ ಬಾಳಿಕೆಯ ಬೀಸರವನು (ಕುವ್ಯಾ.ಕ. ೧-೦೬). [ ಭೋಳೆ + -ತನ ]

**ಭೋಳೆಭಾವಿಕ** (ನಾ). = ಭೋಳೆ ೧ : ಬಾದಶಹ ತನ್ನ ಮಿತಿಮೀರಿದ ಠಕ್ಕತನ ತೋರಿಸಿ ಭೋಳೆಭಾವಿಕರಿಂದ ದೊಡ್ಡ ಸತ್ಪುರುಷನೆಂದೆನಿಸಿ ಕೊಳ್ಳುತ್ತಿದ್ದ (ತುಶಾ. ೦೦೦). [ಭೋಳೆ + ಭಾವಿಕ ]

**ಭೋಳೆಭಾವಿಕತನ** (ನಾ). = ಭೋಳೆತನ ೧ : ಆತನ ಭೋಳೆಭಾವಿಕ ತನಕ್ಕೆ ಮೋಹಿತನಾಗಿ ಆತನನ್ನು ತೀರ ಹತ್ತಿರ ಕುಳ್ಳಿರಿಸಿಕೊಂಡು ಕುಶಲ ಪ್ರಶ್ನೆಗಳನ್ನು ಕೇಳಿದನು (ತುಳಸೀ. ೦೩೪). [ಭೋಳೆಭಾವಿಕ + —ತನ]

**ಭೋಳೇಸ್ವಭಾವ** (ನಾ). = ಭೋಳೆತನ ೧ : ನೀನು ಶುದ್ಧ ಭೋಳೇ ಸ್ವಭಾವದವ (ಕುರುಕಾ. ೪೪). [ ಭೋಳೆ + ಸ್ವಭಾವ ]

**ಭೌಗೋಳಿಕ** (ಗು). ೧. ಭೂಗೋಳಕ್ಕೆ ಸಂಬಂಧಿಸಿದ. ೨. ಭೂಮಿ ಯಂತಿರುವ: ಅವು ಭೌಗೋಳಿಕ ಗ್ರಹಗಳಿಗಿಂತಲೂ (ಅಂದರೆ ಭೂಮಿ, ಬುಧ, ಶುಕ್ರ, ಮಂಗಳ ಗ್ರಹಗಳು) ಹೆಚ್ಚುಹೆಚ್ಚು ಸ್ಥೂಲ ಮತ್ತು ಗಾತ್ರ (ಬೂಹುಟ್ಟು. ೬). [ಸಂ. ಭೌಗೋಲಿಕ]

**ಭೌತ** (ಗು). ೧. ಪೃಥ್ವಿ, ಅಪ್ಪು, ತೇಜಸ್ಸು, ವಾಯು ಮತ್ತು ಆಕಾಶ ಗಳೆಂಬ ಪಂಚಭೂತಗಳಿಗೆ ಸಂಬಂಧಿಸಿದ. ೨. ಭೂತ, ಪಿಶಾಚಿ ಗಳಿಗೆ ಸಂಬಂಧಿಸಿದ ; ಅತಿಮಾನುಷವಾದ. ೩. ಉನ್ಮತ್ತವಾದ; ಹುಚ್ಚುಹಿಡಿದ. (ನಾ). ೪. ಪಂಚಭೂತಗಳಿಂದ ಹುಟ್ಟಿದುದು ; ಪಂಚಭೂತಾತ್ಮಕವಾದುದು : ಶರೀರವೂ ಭೌತ, ಅದರಲ್ಲಿನ ರಕ್ತ, ಮೂಳೆ, ಮಾಂಸ, ಮಜ್ಜಾದಿಗಳೆಲ್ಲವೂ ಭೌತ (ತತ್ವಾಕ. ೦೦೪). ೫. ಪಿಶಾಚಿ ಗಳ ಆರಾಧಕ ; ಭೂತಗಳ ಉಪಾಸಕ. ೬. ದೇವರ ಪೂಜೆಯ ಆಧಾರದಿಂದ ಜೀವಿಸುವವನು ; ದೇವಲ. ೭. ಗೃಹಸ್ಥನು ಪ್ರತಿದಿನವೂ ಆಚರಿಸಬೇಕಾದ ಪಂಚಯಜ್ಞಗಳಲ್ಲಿ ಒಂದು : ಭೂತಯಜ್ಞ. ೮. (ದೆವ್ವ, ಭೂತ ಮೊದಲಾದ) ದುಷ್ಟಶಕ್ತಿಗಳ ಸಮೂಹ. [ಸಂ.]

**ಭೌತವಸ್ತು** (ನಾ). ಪಂಚಭೂತಗಳಿಂದಾದ ವಸ್ತು ; ಪದಾರ್ಥ : ಭೌತವಸ್ತುಗಳು ಭೌತವಿಜ್ಞಾನಕ್ಕೆ ಸಂಬಂಧಪಟ್ಟವುಗಳು (ತತ್ವಾಕ. ೪೨). [ಸಂ.]

**ಭೌತವಾದಿ** (ನಾ). ಪಂಚಭೌತಿಕವಸ್ತುಗಳಿಗಿಂತ ಭಿನ್ನವಾದ ಆತ್ಮನನ್ನು ಒಪ್ಪದಿರುವ ಮತದವನು ; ಚೇತನಶಕ್ತಿಯೊಂದಿಲ್ಲದೆ ಆತ್ಮನ ಎಲ್ಲ ಕಾರ್ಯಗಳೂ ಭೌತದ್ರವ್ಯದಿಂದಲೇ ಆಗುವುದೆಂಬುದನ್ನು ಪ್ರತಿ ಪಾದಿಸುವವನು : ಭೌತವಾದಿಗಳು (ಲೋಕಾಯತಿಕರು) ಸ್ಪಷ್ಟವಾಗಿ ಇದೆಲ್ಲ ಅಸಂಬದ್ಧ ಎನ್ನುತ್ತಾರೆ (ಪಥ್ಯಕಾ. ೦೨೬) ; ಅಭೌತ ಆತ್ಮವೆಂಬ ಬೇರೊಂದು ವಸ್ತು ಅನಾವಶ್ಯಕವೆಂದು ಭೌತವಾದಿಗಳ ವಾದ (ತತ್ವಾಕ. ೦೦೪). [ ಸಂ. ಭೌತವಾದಿನ್ ]

**ಭೌತವಿಜ್ಞಾನ** (ನಾ). ಪ್ರಕೃತಿಯ ಶಕ್ತಿಗಳನ್ನು ತಿಳಿಸುವ ಶಾಸ್ತ್ರ ; "ದ್ರವ್ಯದ ಮತ್ತು ಶಕ್ತಿಯ ಲಕ್ಷಣಗಳನ್ನೂ ಅಥವಾ ಶಕ್ತಿಯ ನಾನಾರೂಪಗಳು ದ್ರವ್ಯದ ಮೇಲೆ ಉಂಟುಮಾಡುವ ಪರಿಣಾಮ ವನ್ನೂ ಕುರಿತ ಶಾಸ್ತ್ರ" (Physics. ಇಂಕಶ) : ಯಾಂತ್ರಿಕವಾದ ದಿಂದ ಜಗತ್ತನ್ನು ವಿವರಿಸಲು ಹೊರಟ ಭೌತವಿಜ್ಞಾನದ ಪ್ರಗತಿಯು ಎರಡ ನೆಯ ಘಟ್ಟವೆನ್ನಬಹುದು (ಜುಶ್ಯಾರ. ೬ ಶಿ೯೪). [ಸಂ.]

**ಭೌತಶರೀರ** (ನಾ). ಪಂಚಮಹಾಭೂತಗಳಿಂದಾದ ದೇಹ : ಶಾಂತಲೆಯ ಈ ಸುಂದರಸ್ವಪ್ನ ಅಲ್ಲಿಗೇ ಕೊನೆಗಂಡಿತು. ಆಕೆಯ ಭೌತಶರೀರ ಆಗ ಎಚ್ಚರ ಗೊಂಡಿತು (ಶಾಂತಲಾ. ೪೨). [ಸಂ.]

**ಭೌತಶಾಸ್ತ್ರ** (ನಾ). = ಭೌತವಿಜ್ಞಾನ : " ಅಥಾತೋ ವಸ್ತುಜಿಜ್ಞಾಸಾ " ಎಂಬೀ ಸೂತ್ರದಿಂದ ನಾವು ಭೌತಶಾಸ್ತ್ರವನ್ನು ಪ್ರಾರಂಭಿಸಿದರೆ ಉಚಿತ ವಾಗಿರುವುದು (ಭೌಶಾ. ೧) ; ಒಂದು ನಕ್ಷತ್ರದಿಂದ ಹೊರಟ ಕಿರಣವು ಕಣ್ಣಿನ ತಂತುವಿನ ತನಕ ಹೇಗೆ ಬರುತ್ತದೆ ? ಎಂಬ ವಿಚಾರವನ್ನು ಭೌತಶಾಸ್ತ್ರವು ಚಿತ್ರಿಸಬಲ್ಲದು (ತತ್ವಾಕ. ೧೦೨). [ಸಂ.]

**ಭೌತಿಕ** (ಗು). ೧. ಭೂಮಿ ಮೊದಲಾದ ಪಂಚಭೂತಗಳಿಂದಾದ ; ಐಹಿಕವಾದ : ಈ ಧರಣೀಭಾರಮನಾಂ ಬಿಸುಟ್ಟೊಡದು ಚೀ ಲೋಕಕ್ಕೆ ಬಾತ್ಯಾಸಮೀಕರಣಂ ಭೌತಿಕಮೋದಕವ್ಯತಿಕರಂ ತಾನೆಂಬುದಂ ಮಾಡದೇ (ಅದಿಪು. ೪-೮೦). ೨. ಜೀವಿಗಳಿಗೆ ಸಂಬಂಧಿಸಿದ. ೩. ಭೂತ, ಪ್ರೇತಾದಿಗಳಿಗೆ ಸಂಬಂಧಿಸಿದ. (ನಾ). ೪. ಪಂಚಭೌತಿಕವಾದುದು ; ಶರೀರ ಮುಂತಾದುವು. ೫. ಜ್ಯೋತಿಶ್ಶಾಸ್ತ್ರವನ್ನು ಬಲ್ಲವನು ; ಜ್ಯೋತಿಷಿ : ಮಳೆಯ[ದೆ] ಶಾಂಬ್ಯ ಮಟ್ಟವಿರು ಭೌತಿಕ ಪೊಂಗಿ ಕಡಂಗಿ ಬಾಗದಿರ್ (ಎಕ. H. ೬೯-೩೭ ; 1100) ; ದುರ್ಭಿಕ್ಷಾದಿ ರಾಜ್ಯಾರಿಷ್ಟ ಕ್ಕೇನಂ ಮಾಳ್ಪೆನೆಂದು ಭೌತಿಕರಂ ಬರಿಸಿ ಕೇಳ್ವುದುಂ (ರಾಜಾವ. ೬೩). ೬. ತಪಸ್ವಿ ; ತಾಪಸಿ : ಆ ಭೌತಿಕನರಸಂ ತಾನೆಂದು ಬಯಮವೆನಲ್ಲಿಂ ಕನ್ಯಾವರೆಂಸುತ ಗತಯೌವನರ್ಗನಲುರಿದಂ ವಿರಹಾಗ್ನಿ ಪೆರ್ಚೆ ಶಾಂತನು ಭೂತಂ (ನೇಮಿಪು. ೩-೨೬). ೭. ಶಿವ; ಈಶ್ವರ. ೮. ಮುತ್ತು ; ಮೌಕ್ತಿಕ. ೯. ಜೀವಿ ; ಪ್ರಾಣಿ. ೧೦. ಭೂತ, ದೆವ್ವ ಮುಂತಾದ ದುಷ್ಟ ಶಕ್ತಿಗಳಿಂದ ಆವೃತವಾಗುವುದು ; ದೆವ್ವ ಹಿಡಿಯುವುದು. [ಸಂ.]

**ಭೌತಿಕತೆ** (ನಾ). ೧. ಐಹಿಕವಿಚಾರಗಳಿಗೆ ಹೆಚ್ಚು ಪ್ರಾಮುಖ್ಯತೆ ಕೊಡುವ ಪ್ರವೃತ್ತಿ : ಸ್ಟೂಅರ್ಟನ ಕಣ್ಣಿಗೆ ಮಾತ್ರ ಇದು ಭಾರತೀಯ ಯುವಕರ ಭಯಂಕರವಾದ ಭೌತಿಕತೆಯೆಂದೇ ಕಾಣುತ್ತದೆ (ಹೊಸಕ್ಷ. ೨೯೬). ೨. ಪಂಚಭೂತಗಳಿಂದ ಆಗುವಿಕೆ : ಈ ರೀತಿ ಭೌತಿಕತೆ, ಪಾರಮಾರ್ಥಿ ಕತೆ ಹಾಗೂ ದಾರ್ಶನಿಕತೆ ಇವು ಈ ಲಿಂಗಗಳ ಮೂರು ಪ್ರಧಾನಸ್ವರೂಪ ಗಳು (ಶರಶ. ೧೯೬). [ಸಂ. ಭೌತಿಕತಾ]

**ಭೌಮ** (ಗು). ೧. ಭೂಮಿಗೆ ಸಂಬಂಧಪಟ್ಟ ; ಭೂಮಿಗೆ ಸೇರಿದ : ಕಣ್ಗೊಂಡುದೆತ್ತಂ ಪರಿಯುತ್ತುಂ ಭೌಮವ್ಯೆಹಾಯಸವಧವಿಧಮಂ ತೋಱುತರ್ಕ ದಂತಿಸೈನ್ಯಂ (ಜಗಪು. ೬-೬೦). ೨. ಮಣ್ಣಿನಿಂದ ಮಾಡಿದ. (ನಾ). ೩. ಭೂದೇವಿಯ ಮಗ ; ಅಂಗಾರಕ ;

ಮಂಗಳ: ಕುಜ : "ಅಂಗಾರಕಂ ವಕ್ರನವನಿಜಂ ಭೌಮನೆನೆ ಮಂಗಳಾಖ್ಯಂ" (ಶಂಗರಾ. ೧೦-೬); ಧ್ರುವಮಬ್ಧಾಹಿತನೊಂದು ಭೌಮನೆರಡಿಂದುತ್ಪನ್ನ ಸೋಬಿತ್ತು . . . ಸಂವತ್ಸರಕ್ಕೀಶರಪ್ಪವರ್ (ಶಾತಿ. ೯-೦೯); ಭೌಮನು ದಗ್ರಗ್ರಾಹದೊಳ್ . . . ಧಿಷಣಂ ಕರ್ಕಿಯೊಳ್ಸಂತಮಿಂತಿರ್ಪಿನಂ . . . ಪುತ್ರನಂ ಪೆತ್ತಳಾಗಳ್ (ಸುಕುಮಾ. ೦೦-೨೬); ಜೀವ ಭಾಸ್ಕರ ಭೌಮ ರಿಶುಭಸ್ಥಾಯಿಗಳು ಗುರು ಮಂದರಭಿಭವದಾಯಿಗಳು ವಿಪರೀತ ದೆಸೆ ಬುಧ ಶುಕ್ರ ರಾಹುಗಳ ಮಾಯಿಗಳಿಗಪಜಯ ನಿವಾಸಸ್ಥಾಯಿಗೊಳ್ಳಿತು (ಕುಮ್ಬಾ. ೨೨-೪). 'ಭೌಮವಾರ' ಪರಾ. ೪. ಭೂದೇವಿಯ ಮಗ : ನರಕಾಸುರ : ಚೋದಿತರಥನಸುರಾರಿಗೆ ಮಾರಾಂತನಾಜಿಭೀಮ ಭೌಮಂ (ಜಗ. ೧೨-೪೫) : ಭೌಮ ನಿರುದ್ಧ ಕನ್ಯಾನಿಳಯುವನು ದೈತ್ಯಾರಿ ಹೊಕ್ಕನು (ಕಭಾಗ ೦೦-೬೯-೪೯). ೫. ಭೂಮಿಯಲ್ಲಾಗುವ ಉತ್ಪಾತ; ಭೂಕಂಪನ: ಭೂಮಿಯೊಳಪ್ಪುವು ಭೌಮಂ ಜೀಮೂತದೊಳಪ್ಪುದಾಂತರಿಕ್ಷಂ ಗ್ರಹದಿಂ ತಾಮಪ್ಪುದು ದಿವ್ಯಮೆನಲ್ ಘಾಮತ್ರಯದಿಂದಮೆಸೆವುತ್ಪಾತಂಗಳ್ (ಚಿಕ್ಕು. ೫-೦). ೬. ಭೌತಿಕವಾದ ವಸ್ತು; ಭೌತದ್ರವ್ಯ. ೭. ನೀರು : ಜಲ. ೮. ಬೆಳಕು ; ಪ್ರಕಾಶ. ೯. ಆಕಾಶ ; ಗಗನ. ೧೦. ಅತ್ರಿ ಮುನಿಯ ಹೆಸರು. ೧೧. ಕಾಳು ; ಧಾನ್ಯ. ೧೨. [ಅಶ್ವಶಾ] ಕುದುರೆ ಸವಾರಿಯ ಒಂದು ರೀತಿ : ಪರಿಬಂಧನಮುಂ ಭೌಮಂ ಪ್ರೈಹಾಯಸಂ ವಯಸ ಯಂತ್ರಕ್ಷೇತ್ರ ವಹಳಿ ಸತ್ಕಂ ದ್ವಾರಮೆಂಬ ಭೇದಂಗಳೀಂದಶ್ವಮ ನೇಱಲು ರೇಚಿಗನ್ಪತಿ ಶಾಣೆ ಬಲ್ಲಂ (ಶುಚಿತಿ. ೦-೨೦). [ಸಂ.]

**ಭೌಮಚಾರಿ** (ನಾ). [ನಾಟ್ಯ] ಭೌಮ ಮತ್ತು ಆಕಾಶವೆಂಬ ಚಾರಿಗಳಲ್ಲಿ ಒಂದು ಬಗೆ : ಕಾಲು ನೆಲವನ್ನು ಬಿಟ್ಟಿರದೆ ಚಲಿಸುವ ಒಂದು ಬಗೆಯ ಚಲನೆ : ಭೌಮಚಾರಿಗಳನ್ನು ಮುಖ್ಯಿಯುದ್ಧ, ಅಂಗಹಾರ, ನಾಟ್ಯ ಇವುಗಳಲ್ಲಿ ಉಪಯೋಗಿಸಬೇಕು (ಲಾಸ್ಯರಂ. ೩೦೬ ಗದ್ಯಾಸುವಾದ). [ಸಂ. ಭೌಮಚಾರೀ]

**ಭೌಮನಿಮಿತ್ತ** (ನಾ). [ಜೈನ] ಎಂಟು ಬಗೆಯ ನಿಮಿತ್ತಗಳಲ್ಲಿ ಒಂದು : ಭೂಮಿಯ ಮೇಲೆ ಸಂಭವಿಸುವ ಆಗುಹೋಗುಗಳಿಂದ ಶುಭಾಶುಭ ಫಲಗಳನ್ನು ತಿಳಿದುಕೊಳ್ಳುವುದು : ಭೂಮಿಯ ಘನ, ಸುಷಿರ, ಸ್ನಿಗ್ಧತೆ, ರೂಕ್ಷತೆ ಮೊದಲಾದುವುಗಳಿಂದ ತಾಮ್ರ, ಕಬ್ಬಿಣ, ಬೆಳ್ಳಿ, ಬಂಗಾರಗಳ ಹಾನಿ ಅಥವಾ ವೃದ್ಧಿಯನ್ನು ತಿಳಿಯುವುದು : ಭೂಮಿಯ ಕಠಿಣತ್ವಮೊದಲಾದುದಂ ನೋಡಿ ನಯಾನಯಂ ಪೇಳ್ವುದುಂ ಭೌಮನಿಮಿತ್ತಮೆಂಬುದು (ಶ್ರುತತ. ೬೪-೭೭). 'ನಿಮಿತ್ತ' ಪರಾ. [ಸಂ.]

**ಭೌಮಮಂಡಲ** (ನಾ). [ನಾಟ್ಯ] ಚಾರಿಗಳ ಸಮುದಾಯವಾದ ಭೌಮಮಂಡಲ ಮತ್ತು ಆಕಾಶಮಂಡಲ ಎಂಬ ಮಂಡಲದ ಎರಡು ಬಗೆಗಳಲ್ಲಿ ಒಂದು : ಭ್ರಮರ, ಆಸ್ಕಂದಿತ, ಆವರ್ತ, ಶಕಟಾಸ್ಯ, ಅಡ್ಡಿತ, ಸಮೋಸರಿತ [ಮತ್ತಲ್ಲಿ], ಅಧ್ಯರ್ಧಿಕ, ಪಿಲಕಾಕ್ರೀಡಿತ, ಪಿಷ್ಟಕುಟ್ಟ, ಚಾಷಗತಿ ಈ ಹತ್ತು ಭೌಮಮಂಡಲಂಗಳ್ (ಲಾಸ್ಯರಂ. ೬-೪೨). [ಸಂ.]

**ಭೌಮವಾರ** (ನಾ). ಮಂಗಳವಾರ : ಭೀಮನಿಗೆ ಭಾನುವಾರವಾದರೇನು ? ಭೌಮವಾರವಾದರೇನು ? ಭೋಜನ ಸಿಕ್ಕಿದರೆ ಸೈ (ಗಾದೆ). [ಸಂ.]

**ಭೌಮವಾಸರ** (ನಾ). ಭೌಮವಾರ : ಸಂಕಲ್ಪ ಹೇಳುವಾಗ ಭೌಮ ವಾಸರ ಎಂದು ಹೇಳುವುದು ಪದ್ಧತಿ (ರೂಢಿ). [ಸಂ.]

**ಭೌಮವಿಹಾರ** (ನಾ). ಭೂಲೋಕದಲ್ಲಿ ಮಾಡುವ ವಿನೋದಾರ್ಥವಾದ ಸಂಚಾರ : ಎನ್ನಂತನ ಭರ್ತಾರಂ ಮಣಿಚೂಳನೆಂಬೊಂ ವಿದ್ಯಾಧರನಾತ ನೊಡನೆ ಭೌಮವಿಹಾರಾರ್ಥಂ ತೊಟಲ್ಸಲ್ಲಿ (ಪಂಪಾರಾ. ೩೫-೨) ; ಭವನವಾಸಿ ಗಳೊಳನಂತವೀರ್ಯನುಂ ಮಹಾಬಲನುಮೆಂಬ ಪೆಸರೊಳಸುರರಾಗಿ ಪುಟ್ಟಿ ಭೌಮವಿಹಾರಾರ್ಥಂ ಪೋಗಿ (ಚಾಂತಿಪು. ೯-೭೭ ವ). [ಸಂ.]

**ಭೌಮಾಗ್ನಿ** (ನಾ). ಭೂಮಿಯಲ್ಲಿರುವ ಮರ, ಕಲ್ಲು ಮೊದಲಾದುವು ಗಳಿಂದ ಉಂಟಾಗುವ ಬೆಂಕಿ : ತರು ಪಾಷಾಣಾದಿ ಗರ್ಭಸ್ಥಮಾಗಿ ವ್ಯಕ್ತಮಪ್ಪ ಭೌಮಾಗ್ನಿ . . . ಸೂಕ್ಷ್ಮ ಬಿಂದುರೂಪ ಪಂಚಾಗ್ನಿಗಳನುಂ (ಎವೀಶ. ೦೪೯). [ಸಂ.]

**ಭೌಮಾಷ್ಟಮಿ** (ನಾ). ಮಂಗಳವಾರದಂದು ಬರುವ ಅಷ್ಟಮಿ : ಆ ನೃಪತಿ ಬಿಟೀಕೆ ತಾಯುಂ ತಾನುಂ ಚಂಡಿಕೆಯ ಪೂಜೆಗೆಂದೆಟ್ಟಿಂದಾ ನಾನಾವಿಧವರ್ಚನೆಯುಂ ಮಾನೋಮಿಯ ಮುಂದೆ ಬಂದ ಭೌಮಾಷ್ಟಮಿ ಯೊಳ್ (ಯಶೋತಿ. ೩-೨೬). 'ಜೀವದಯಾಷ್ಟಮಿ' ಪರಾ. [ಸಂ. ಭೌಮಾಷ್ಟಮಿ]

**ಭೌರಿಕ** (ನಾ). ಅರಮನೆ ಮುಂತಾದವುಗಳ ಭಂಡಾರದ ಅಧಿಕಾರಿ ; ಕೋಶಾಧಿಕಾರಿ: "ಭೌರಿಕಃ- ಕನಕಾಧ್ಯಕ್ಷಃ-ಭಂಗಾರದ ಅಧಿಕಾರವುಳ್ಳವನು, ಖಜಾನೇ ಅಧಿಕಾರಿ" (ಸಿದ್ಧಾಂತಿ. ೨೯೭) ; ಕಣ್ಗೊಳಿಪ ಭಂಡಾರದ ಮನೆಯು ನೆಯ್ದಿ ಕಾಳ್ಗಿರ್ದು ತದ್ಭೌರಿಕಂಗೆ ಪೇಳ್ದು (ಕದ್ಯರಾ. ೫-೪೦). [ಸಂ.]

**ಭೌಷೆ, ಭೋಷ** (ನಾ). ಮರ್ಯಾದೆ : ಎಲ್ಲರುಂ ಮೆಲ್ಲನೆ ಕಯ್ಯುಮಂ ಕಾಲುಮಂ ಪಿಡಿದೆತ್ತಿ ಕೊಂಡು ಹೋಗಿ ತಮ್ಮಾಡಬಹ್ಯ ಭೌಷೆ [ಪಾಠಾಂ. ಕಲುಷೆ, ಬಾಷೆ]ಗಳಂ ಪೂಜಿಸುವಂತೆ ಚಪ್ಪರದ ಪೂಜೆಗೆ ಮೆಲ್ಲನಿಳುಪಿ (ನಂಬಿಕ. ೬-೫೫). **ಭೋಷ** : ಹಮ್ಮಿನಿಂದಜರಿದ ನೀಗಿದ ಹಮ್ಮಿನಿಂ ಸಾರ ದಾಜ ಭೋಷವ ಹೋಗಲಾಡಿವನು (ಕುಕಿರಾ. ೬-೬೦); ದೇಶಾವರಕ್ಕೆ ಹೋಗಿ ಭೋಷ ಕಳೆದುಕೊಂಡ (ಗಾದೆ): ನಹುಷರಾಯನ ಭೋಷ ನಾಕದಲ್ಲಿ ಹೋಯಿತು (ಗಾದೆ). 'ಭೋಷವಂತ' ಪರಾ. [ ? ]

**ಭೌಳಿ** (ನಾ). [ಸಂಗೀತ] ಒಂದು ರಾಗದ ಹೆಸರು: ಸಮಸ್ತರಾಗಂ ಗಳೊಳಗೆ ರಾಮಕ್ರಿಯೆ . . . ಭೌ[ಪಾಠಾಂ. ಬೌ]ಳಿ . . . ಮಧ್ಯಮಾವತಿ ಯೆಂಬ ಮೂವತ್ತಾಱುರಾಗಂಗಳೇ . . . ಪ್ರಸಿದ್ಧ ಗೊಂಡಿರ್ಪವು (ಎವೀಶ. ೨೪೯). [ಸಂ. ಭೌಲೀ]

**ಭ್ಯವಹಾರ** 'ಬೆವಹಾರ' ನೋ.

**ಭ್ರಂಶ** (ನಾ). ೧. ಕೆಳಕ್ಕೆ ಬೀಳುವುದು; ಕುಸಿಯುವುದು: ಪತನ. ೨. ಓಡಿ ಹೋಗುವುದು; ಪಲಾಯನ. ೩. ಕಮ್ಮಿಯಾಗುವುದು; ಕುಗ್ಗುವುದು. ೪. ಬೇರೆಯಾಗುವುದು ; ಅಗಲುವುದು. ೫. ನಷ್ಟ; ಹಾನಿ. ೬. ನಾಶ; ಹಾಳು. ೭. ಕ್ರಮ ತಪ್ಪುವುದು; ಹಾದಿ ತಪ್ಪುವುದು. ೮. ಮರೆಯಾಗುವುದು; ಅದೃಶ್ಯವಾಗುವುದು. ೯. [ಕಾವ್ಯಮೀ] (ನಾಟಕದಲ್ಲಿ) ಉದ್ರೇಕದಿಂದ ಬಾಯಿ ತಪ್ಪು ವುದು. [ಸಂ.]

**ಭ್ರಂಶಿಸು** (ಕ್ರಿ). ಭ್ರಂಶವನ್ನುಂಟುಮಾಡು : ತತ್ತ್ವಜ್ಞಾನರೂಪದರಿ ಭ್ರಂಶಿಸುವ ಮಾಯಾಗುಣಪ್ರಧ್ವಂಸನವನಭಿಷಾಸಿಸುವನಾ ಕಂಸಹರನು (ಕಭಾಗ. ೨-೩-೪೪). [ ಭ್ರಂಶ + — ಇಸು ]

**ಭ್ರುಕುಂಸ** (ನಾ). ಹೆಣ್ಣುವೇಷವನ್ನು ಧರಿಸಿರುವ ನಟ : "ಭ್ರುಕುಂಸಃ, ಭ್ರುಕುಂಸಃ, ಭ್ರೂಕುಂಸಃ—೩ ಸ್ತ್ರೀವೇಷಧಾರೀ—ಹೆಣ್ಣುವೇಷವನ್ನು ಧರಿಸಿದ—ನರ್ತಕಃ—ಪುರುಷಃ, ಕುಣಿಯುವ ಗಂಡಿನ ಹೆಸರುಗಳು" (ಸಿದ್ಧಾಂತಿ. ೬೦). [ಸಂ.]

**ಭ್ರುಕುಟಿ** (ನಾ). (ಕೋಪ ಮೊದಲಾದ ಕಾರಣಗಳಿಂದ) ಹುಬ್ಬು ಗಂಟಿಕ್ಕಿಕೊಳ್ಳುವುದು: "ಭ್ರುಕುಟಿಃ, ಭ್ರುಕುಟಿಃ, ಭ್ರೂಕುಟಿಃ—೩ ಕಣ್ಣಿನ ಹುಬ್ಬುಗಳನ್ನು ಗಂಟಿಕ್ಕುವದಕ್ಕೆ ಹೆಸರುಗಳು" (ಸಿದ್ಧಾಂತಿ. ೭೦). [ಸಂ.]

**ಭ್ರಮ** (ನಾ). ೧. ಅಲೆದಾಡುವುದು; ಸುತ್ತಾಟ. ೨. (ದುಂಬಿ ಮೊದ ಲಾದ ಕೀಟಗಳಂತೆ) ಹಾರಾಡುವಿಕೆ ; ಭ್ರಮಣ. ೩. ವೃತ್ತಾಕಾರದ ಚಲನೆ : ಗುಂಡಗೆ ತಿರುಗುವುದು : "ಭ್ರಮಃ, ಭ್ರಮಿಃ — ೨ ತಿರುಗುವಿಕೆ, ಸುತ್ತುವಿಕೆ" (ಸಿದ್ಧಾಂತಿ. ೩೫೭). ೪. ಸುಳಿ; ಆವರ್ತ;

"ಆವರ್ತಃ. ಅಂಭಸಾಂ. ಭ್ರಮಃ — ನೀರುಗಳ ಸುಳಿಗುಂಡೀ ಹೆಸರು" (ಸಿದ್ಧಾಂತಿ. ೬೬). ೫. ದಾರಿ ಬಿಟ್ಟುಹೋಗುವುದು ; ಅಡ್ಡದಾರಿ ಹಿಡಿಯುವುದು. ೬. ತಪ್ಪು: ದೋಷ. ೭. ತಲೆಸುತ್ತುವಿಕೆ ; ತಲೆ ತಿರುಗುವಿಕೆ. ೮. ತಪ್ಪುತಿಳಿವಳಿಕೆ ; ಭ್ರಾಂತಿ : "ಭ್ರಾಂತಿಃ, ಮಿಥ್ಯಾ ಮತಿಃ, ಭ್ರಮಃ — ೩ ಭ್ರಾಂತಿ. ಅಂದರೆ ಒಂದನ್ನು ಮತ್ತೊಂದ ನ್ನಾಗಿ ತಿಳಿದು ನಂಬುವಿಕೆ" (ಸಿದ್ಧಾಂತಿ. ೪೩) : ಜನಿತ ಕುದೃಷ್ಟಿ ಭ್ರಮಮತಿಘನಮೋಹತಮಃಪಟಾವೃತಂ ಜಗಂ (ತಂಪ್ರಕೃ. ೯-೩೦). ೯. ತೊರೆ ; ಸಣ್ಣಹೊಳೆ. ೧೦. ಕುಂಬಾರನ ಚಕ್ರ ; ತಿಗುರಿ. ೧೧. ಬೀಸುವ ಕಲ್ಲು. ೧೨. ಛತ್ರಿ; ಕೊಡೆ. ೧೩. ವೃತ್ತ; ಮಂಡಲ. ೧೪. [ಕಾವ್ಯಮೀ] ಅರ್ಥಾಲಂಕಾರಗಳಲ್ಲಿ ಒಂದು: ಒಂದು ವಸ್ತು ವನ್ನು ಸಾಮ್ಯದಿಂದ ಬೇರೊಂದೆಂದು ತಿಳಿದುಕೊಳ್ಳುವುದು; ಭ್ರಾಂತಿಮದಲಂಕಾರ: ಚಿತ್ರಮೋಹನಂ ಭ್ರಮವಾಕ್ಯಂ (ಕಾವ್ಯಾವ. ೬೦೬). [ಸಂ.]

**ಭ್ರಮಣ** (ನಾ). ೧. ತಿರುಗಾಟ : ಅಲೆದಾಟ : ಸಂಚಾರ : ಸುತ್ತ ಮುತ್ತಲೂ ಇದ್ದ ರಮಣೀಯಸ್ಥಳಗಳಲ್ಲಿ ಭ್ರಮಣ ಮಾಡುವುದೊಂದು ಅವನು ನಿಶ್ಚಯಿಸಿಕೊಂಡನು (ಮ್ಯಾಕ್ಬೆ. ೪೦). ೨. ಗುಂಡಗೆ ತಿರುಗು ವುದು; ಪರಿಭ್ರಮಣ : ಅವಜನವಿರಳವಾ ತೂಳಿಕಾಭ್ರಮಣಪರಿಗತ ತೂಳಿಕಾತಳಮಪ್ಪ ಮನಕ್ಕಂತಾನುಂ ಕಾಲಲಬ್ಧಿವಶದಿಂ ನಿವೃತ್ತಿಪರಿಣತಿ ಯೊಳ್ ಪರಿಣಮಿಸಿದ ಸುಸ್ಥಿತೆಯುಂ ವ್ಯರ್ಥಂ ಮಾಡದೆ (ತಂಪ್ರಕೃ. ೪-೦೬ ವ). ೩. ಮಲ್ಲಯುದ್ಧದ ಒಂದು ವರಸೆ; ಜಟ್ಟಿ ಕಾಳಗದ ಒಂದು ಭಂಗಿ : ನಂದಗೋಪನಂದನಂ . . . ನಿರ್ವರ್ತನಾವರ್ತನ ಭ್ರಮಣ ವಲ್ಗನ ಪ್ಲವನಾವಸ್ಥಾನಾದಿ ಕ್ರಿಯಾಪರಿಣತಂ ತಿರಿಪಿ(ದೊಕ್ಕರಿಸಿ)ನಿಂದಾಗಳ್ (ಜಾಫ್ತೆಂಕೃ. ೩೪೧). ೪. ಗ್ರಹಗಳು ತಿರುಗುವ ಪಥ : ಕಕ್ಷೆ. ೫. ಅದುರು ವಿಕೆ ; ಕಂಪನ : ಓಷ್ಠಭ್ರಮಣ ಮೋಚಾಗರ್ವಮೋಚಮೆನಿಸುವ ವಾಮೆಯೂರು ಚಾಂಚಲ್ಯಮಾಗಿ ಪ್ರಮುದಿತಾಂತಃಕರಣಮಾಗಲ್ (ವಂಕಾಲ. ೫-೦೦-೪೩). ೬. ತತ್ತರಿಸುವಿಕೆ; ಅಸ್ಥಿರತೆ. ೭. ಕಂಗೆಡುವಿಕೆ; ತಬ್ಬಿಬ್ಬು: ದಿಗ್ಭ್ರಮೆ. ೮. ತಲೆ ಸುತ್ತುವಿಕೆ ; ತಲೆ ತಿರುಗುವಿಕೆ. ೯. ತಪ್ಪು ಮಾಡುವಿಕೆ. ೧೦. ಸುತ್ತಿಸುವಿಕೆ : ತಿರುಗಿಸುವಿಕೆ. ೧೧. ಪ್ರವಾಸ : ಯಾತ್ರೆ. ೧೨. ಕಟ್ಟಡದ ಅರ್ಧಗೋಲಾಕಾರದ ಮೇಲ್ಛಾವಣಿ; ಗುಮ್ಮಟ. ೧೩. [ನಾಟ್ಯ] ಕಣ್ಣಿನ ಚಲನೆಯ ಒಂದು ಬಗೆ: P "ಆಲಿ ಗಳನ್ನು ರೆಪ್ಪೆಗಳ ಮಧ್ಯದಲ್ಲಿ ಮಂಡಲಾಕಾರವಾಗಿ ಜಾಗ್ರತೆ ಸುತ್ತಿಸುವುದು" (ಅಸ್ಕಂ. ೨೬೪ ಗದ್ಯಾನುವಾದ): ಭ್ರಮಣ, ವಲನ, ಪಾತ, ಚಲನ, ಪ್ರವೇಶ, ವಿವರ್ತ, ಸಮುದ್ವೃತ್ತ, ನಿಷ್ಕ್ರಾಮ, ಪ್ರಾಕೃತ—ಈ ಒಂಭತ್ತು [ಸ್ವನಿಷ್ಠ] ಆಲಿಯ ಭೇದಂಗಳ್ ಎರಡೆವೆಗಳ ಮಧ್ಯದೊಳಂ ತಿರುಗಲ್ ಪಟುವಾಗಿ ತಾರೆಗಳ್ ಭ್ರಮಣಾಖ್ಯಂ (ಅಸ್ಕಂ. ೩-೫೪ ವ). ೧೪. (ಅಲಂ) ಹುಟ್ಟುಸಾವುಗಳ ಪರಂಪರೆ ; ಭವಾವಳಿ : ಪುಟ್ಟಿ ಕಟ್ಟಿದಾಯುಷ್ಯದ ವಿರಾಮದೊಳ್ ಸತ್ತು ನಾನಾ ಭ್ರಮಣದಿಂ ಒಂದು ಪೂರ್ವಾರ್ಕ್ಷಸಮಯದ ತದ್ವಿತೀಯಾದಿ ಸಮಯದೊಳ್ ಪುಟ್ಟುತ್ತುಂ ಸಾಯುತ್ತುಂ (ಸುಕುಮಾ. ೬-೬ ವ). [ಸಂ.]

**ಭ್ರಮಣಿ** (ನಾ). ೧. (ಪ್ರಿಯ, ಪ್ರೇಯಸಿಯರು ಸೇರಿ ಆಡುವ ವೃತ್ತಾ ಕಾರದ ಚಲನೆಯುಳ್ಳ) ಒಂದು ಬಗೆಯ ಆಟ. ೨. ಜೂಗಟೆ. ೩. ಕ್ರೀಡಾಸಂಚಾರ ; ವಿನೋದವಿಹಾರ. [ಸಂ. ಭ್ರಮಣೀ]

**ಭ್ರಮಣೆ** (ನಾ). ೧. ಸುತ್ತುವಿಕೆ : ತಿರುಗುತಿರ್ದುದು ಮರೂಥಂ ಕುಲಾಲಚಕ್ರದವೊಲಸಮಳದಂ ಕಪೀಶ್ವರಂ ಭ್ರಮಣೆಯಿಂ ಧ್ವಜದ ಮೇಲೆ (ಕೈಬರ. ೧೩-೨೦). ೨. ಭ್ರಾಂತಿ : ಭ್ರಮಣೆಯಿಂದಪ್ಪಾಂಗಯೋಗವನು ಮಾಡ್ಪರಿಗೆ ಲಿಂಗಾಂಗಯೋಗಮಿಲ್ಲ (ಪ್ರಭುಲಿ ೩.೩೨). [ಸಂ. ಭ್ರಮಣ]

**ಭ್ರಮನಿರಸನ** (ನಾ). ತಪ್ಪು ಕಲ್ಪನೆಯನ್ನು ಹೋಗಲಾಡಿಸುವುದು ; ಭ್ರಾಂತಿನಿವಾರಣೆ : ಶೀನೂ ಕುಸುಮಾರ ಬಗ್ಗೆ ನರಹರಿಯಲ್ಲಾದ ತಪ್ಪು ತಿಳಿವಳಿಕೆ ಕೂಲಂಕಷವಾಗಿ ಚಿತ್ರಿಸಲ್ಪಟ್ಟಿದೆ. ಶೀನೂನ ಭ್ರಮನಿರಸನವೂ ಹಾಗೆಯೇ (ಸಮೀಕ್ಷೆ. ೨೭ ೬೧೦೪); ಗೋವಿಂದರಾಯರಿಗೆ ಕೊನೆಯ ಗಳಿಗೆ ಯಲ್ಲಿ ಭ್ರಮನಿರಸನವಾಗಲು ಅವರು ತಮ್ಮ ಔದಾರ್ಯವನ್ನೇ ಇನ್ನಷ್ಟು ಹಿಗ್ಗಿಸಬೇಕಾಯಿತು (ಕುಗಿಪು. ೬೧). [ಸಂ.]

**ಭ್ರಮರ** (ನಾ). ೧. ದುಂಬಿ ; ಭೃಂಗ ; ಅಳಿ : "ಮಲ್ಲಿಕಾ . . . ಮಯಿನ್ಯಾರಡಿಯೊಂದೆಲ್ಲಿಯುಮಲರುಣೆಯುಂ ತಾಂ ಬಲ್ಲವರಿಂ ಭ್ರಮರ ಮಕ್ಕುಂ" (ಕಬಿಕಂ. ೬೯) ; ಕಮಳವಿಮೋಹದಿನೀ ನಿನ್ನ ಮೊಗಕ್ಕೆಱಗುವುದು ತೊಱೆವುದಾ ಸರಸಿಜಮಂ ಭ್ರಮರಂ (ಕವಿರಾ. ೩-೬೯) ; ತಂದೆ ಜನೇಂದ್ರ ಪಾದಕಮಲಭ್ರಮರಂ ಜನವಲ್ಲಭೇಂದ್ರಂ (ಅಜಿಪು. ೧೨-೪೬) ; ಭ್ರಮರಂಗೆ ಪರಿಮಳದ ಬಂಡುಂಬ ಚಿಂತೆ (ಬಸವ. ೩೬೪). ೨. ಕುಂಬಾರನ ಚಕ್ರ; ತಿಗುರಿ. ೩. ಕಾಮುಕ: ವಿಟ. ೪. ಮೋಡಗಳ ಘರ್ಷಣೆಯಿಂದ ಉಂಟಾಗುವ ಬೆಳಕು : ಮಿಂಚು : "ಮಿಂಚು ಭುಜಂಗ ಕಾಮುಕ . ಮಧುವ್ರತ ಭ್ರಮರಾಂಕಿತಂ" (ನಾನಾರ. ೬೪). ೫. ತಲೆ ಸುತ್ತುವಿಕೆ: ತಲೆ ತಿರುಗುವುದು. ೬. ಬುಗುರಿ. ೭. [ಕಾಮಶಾ]ಸಂಭೋಗದಲ್ಲಿ ಒಂದು ವಿಧ : ಅಲ್ಲಿ ಪುರುಷನ ಲಿಂಗದಲ್ಲಿ ತನ್ನ ಯೋನಿಯಂ ಸಿಕ್ಕಿಸಿ ಪುರುಷನು ಎರಡು ಕಾಲಂ ನೀಡಿ ಮಲಗಿರೆ ಬುಗುರಿಯಂತೆ ಪದ್ಮಾಸನಂಗಳ ಮಾಡಿ ತಿರುಗುತಿರ್ಪುದು ಭ್ರಮರವೆಂಬುದು (ಕಾಮಶಾ. ೨೩೮). ೮. [ನಾಟ್ಯ] ಸ್ಥಿರಹಸ್ತ ಮೊದಲಾದ ಮೂವತ್ತೆರಡು ಬಗೆಯ ಅಂಗ ಹಾರಗಳಲ್ಲಿ ಒಂದು ; P ನೂಪುರ, ವಿಕ್ಷಿಪ್ತಕ, ಅಲಾತ, ಆಕ್ಷಿಪ್ತ, ಉರೋಮಂಡಲ, ನಿತಂಬ, ಕರಿಹಸ್ತ, ಕಟೀಛಿನ್ನ ಎಂಬ ಕರಣ ಗಳನ್ನು ಕ್ರಮವಾಗಿ ಪ್ರಯೋಗಿಸುವಿಕೆ : ಸಲೆ ನೂಪುರ ವಿಕ್ಷಿಪ್ತಕ ಮಲಾತಮಾಕ್ಷಿಪ್ತವೆಸವುರೋಮಂಡಲಮುಂ ನೆಲೆಗೊಂಡ ನಿತಂಬಂ ಕೇಳ್ ಬಲನೇ ಕರಿಹಸ್ತಮುಂ ಕಟೀಛಿನ್ನಾಖ್ಯಂ ಇಂತೊಪ್ಪುವೆಂಟುಕರಣಮುಮಂ ತವೆ ಮಾಡಿದೊಡಂಗಹಾರಮೆನಿಕ್ಕುಂ ಸಂತತ ಭರತಾಗಮದೊಳ್ ಕಾಂತೇ ಕೇಳ್ ಭ್ರಮರಮೆಂಬ ಪೆಸರಂ ತಾಳ್ದುಂ (ಅಸ್ಕಂ. ೫-೨೨). ೯. ಹತ್ತು ಬಗೆಯ ಭೌಮಮಂಡಲಗಳಲ್ಲಿ ಒಂದು : ಚಂದದ ಶಕಟಾಸ್ಯಮಪ ಸ್ಯಂದಿತವೆಡಪಾದದಿಂದೆ ಬಲದಿಂ ಭ್ರಮರಂ ಸ್ಯಂದಿತಮದು ವಾಮಂ ಬಲದಿಂದಂ ಶಕಟಾಸ್ಯವೆಡದಿ ಚಾಷದ ಗತಿಯುಂ ಬಲಪಾದಂ ಭ್ರಮರಮನೆಡ ಗಲಪಾದಂ ಸ್ಯಂದಿತಾಖ್ಯಮಂ ಸಮೆಯಲೊಡಂ ಬಲನೇ ಕೇಳ್ ಭ್ರಮರ[ದ] ಮಂಡಲಮೆಂಬೀ ಪೆಸರನಾಂತು ರಂಜಿಸಿ ತೋರ್ಕುಂ (ಅಸ್ಕಂ. ೯-೬). [ಸಂ.]

**ಭ್ರಮರಕ** (ನಾ). ೧. ದುಂಬಿ ; ಭ್ರಮರ : ಅನುನಯದಿನೆಱಗಿದಲ್ ಸೀತೆ ನಗುವಿನಂ ಭ್ರಮರಕಂ ಭ್ರಮದ್ಭ್ರಮರಕಮುಂ (ಕಂರಾಮಾ. ೬-೪೧). ೨. ಮುಂದಲೆಯ ಗುಂಗುರುಕೂದಲು ; ಮುಂಗುರುಳು : "ನೊಸಲನಲೆವ ಕುರುಳ್ ಭ್ರಮರಕಮೆಂಬುದು" (ಕರಾಮು. ೯೭-೩೭೭) ; ಬಿಂದೇಂದುಭಾಲಸ್ಥಲಾಗ್ರಮುಮಂ ಶಾಗೆ ಚಳಲ್ಲಸದ್ಭ್ರಮರಕಂ ಸಂಭೋಗಿನೀ ಪ್ರಾಂತದೊಳ್ ಸಮಸತ್ತ್ವಂಬಡುವಂತಿರಾಯ್ತು ಸುರತಪ್ರಾರಂಭ ಕೋಳಾಹಳಂ (ಕಾವ್ಯಸಾ. ೬೫೬); ಬಾಷ್ಪಸರಿದ್ವ್ಯಾಲಗ್ನಕೀರ್ಣಭ್ರಮರಕ ಮುಮ್ಮೃತಾಪಾಂಡುಗಂಡಸ್ಥಲಂ . . . ವ್ಯಥಾನಲ್ಪಸಂಕಲ್ಪಚಿತ್ತಂ ಮಸುಕಿ ದಾರ್ಲಸ್ಯಭಾವಂ ನೆಗಳ್ದರೆ ವಿರಹಾಕ್ರಾಂತೆ ಕಾಂತೆಯಿರ್ದಳ್ (ರಾಜಶೇ. ೬-೬೬). ೩. ನೀರಿನ ಸುಳಿ ; ಆವರ್ತ. ೪. (ಸುತ್ತು ತಿರುಗುವಾಗ) ಮೊರೆಯುವ ಬುಗುರಿ. [ಸಂ.]

**ಭ್ರಮರಕೀಟ** (ನಾ). ಕಣಜದ ಹುಳು: 'ಭ್ರಮರಕೀಟನ್ಯಾಯ' ನೋಡಿ. [ಸಂ.]

**ಭ್ರಮರಕೀಟನ್ಯಾಯ** (ನಾ). ಕಣಜದ ಹುಳುವಿನ ಗೂಡಿನಲ್ಲಿರುವ ಯಾವುದಾದರೊಂದು ಹುಳುವು, ಕಣಜವು ಬಂದು ತನ್ನನ್ನು ಚುಚ್ಚುವುದೆಂಬ ಭೀತಿಯಿಂದ ಸದಾ ಅದನ್ನೇ ನೆನೆಯುತ್ತಿದ್ದು, ಕೊನೆಗೆ ಕಣಜದ ಹುಳುವಿನ ಆಕಾರವನ್ನೇ ಪಡೆಯುವ ದೃಷ್ಟಾಂತ: ಭ್ರಮರಕೀಟನ್ಯಾಯದಂದದಲಿ ನೀನೊಲಿಯೆ ತೃಣ ಪರ್ವತವು ಭಸಿಯೇನು (ಹಂಶಾ. ೪೦) ; ಶಿವಾಗಮವು ಭ್ರಮರಕೀಟನ್ಯಾಯದಿಂದ ಶಿವ ಜೀವೈಕ್ಯವನ್ನು ಪ್ರತಿಪಾದಿಸುತ್ತದೆ (ಶಿತ್ರಿ. ೬೭). [ಸಂ.]

**ಭ್ರಮರವಿಲಸಿತ** (ನಾ). ೧. ತುಂಬಿಯ ಲೀಲೆ.–ವಿಲಾಸ ; ತುಂಬಿಯ ಹಾರಾಟ. ೨. [ಛಂದ]ಪ್ರತಿಯೊಂದು ಸಾಲಿನಲ್ಲೂ ಹನ್ನೊಂದು ಅಕ್ಷರಗಳುಳ್ಳ, ತ್ರಿಷ್ಟುಪ್ ಛಂದಸ್ಸಿಗೆ ಸೇರಿದ ಒಂದು ವೃತ್ತ ; ಪ್ರತಿಯೊಂದು ಸಾಲಿನಲ್ಲೂ ಮಗಣ. ಭಗಣ. ನಗಣ. ಲಘು ಮತ್ತು ಗುರು –ಹೀಗೆ ಗಣನಿಯಮವುಳ್ಳ ವೃತ್ತ : ಮಮಾತುರ್ವೀಶಿ ದಿವಿಜ ಲಗಂ ತಾಮೆತ್ತಂ ಬಂದಿರೆ ಯತಿ ಚತುರೋದ್ವಾಮಂ ವೃತ್ತಂ ಘನಜಘನಯುಗೇ ನಾಮಂ ಶ್ರೀಮದ್ಭ್ರಮರವಿಲಸಿತಂ (ಛಂದೋಂಬು. ೨-೦೨೦). [ಸಂ.]

**ಭ್ರಮರವೃತ್ತಿ** (ನಾ). ೧. ನಾನಾ ಬಗೆಯ ಹೂವುಗಳಿಂದ ರಸವನ್ನು ಸಂಗ್ರಹಿಸುವ ದುಂಬಿಯ ಕೆಲಸ : ತೊಟ್ಟು ಹನಿ ರಸಕ್ಕಾಗಿ ಹುಡುಕುವ ಹುಚ್ಚು ಹಿಡಿದಿಹ ಹುಳಕೆ ಭ್ರಮರವೃತ್ತಿಯ ಬಿಡಿಸಿ ಸಾಗ್ಗಿಸು ಒಳಕೆ ಬೆಳಕಿನ ಕಳಕೆ (ಹೃದಸ. ೦೪-೧೪). ೨. ಚಾಂಚಲ್ಯ ; ಅಸ್ಥಿರಪ್ರವೃತ್ತಿ: ಮೊದಲಿನಿಂದಲೂ ಬಲ್ಲೆ ನಿಮ್ಮಾ ಭ್ರಮರವೃತ್ತಿ, ಎದುರಿಗಿರುವ ಹೂವಿನಿಂದ ಸೆಳೆಯಲ್ಪಟ್ಟು ಅದರಲ್ಲಿಯೇ ರಮಮಾಣನಾಗುವುದು (ದಾಸಹು. ೮೦). [ಸಂ.]

**ಭ್ರಮರಹಿತ** (ನಾ). ೧. ದುಂಬಿಗೆ ಅನುಕೂಲವಾದುದು.—ಹಿತವನ್ನುಂಟುಮಾಡುವುದು. ೨. ಭ್ರಾಂತಿ ಅಥವಾ ತಪ್ಪುಕಲ್ಪನೆ ಇಲ್ಲದುದು ; ಯಥಾರ್ಥಜ್ಞಾನವುಳ್ಳದು. ೧, ೨ : ಭ್ರಮರಹಿತಂ ವೈಭಾತಿಕಸಮೀರನೆಸಗಿದುದು ಪೋಲ್ತು ಸುವಿಧಿಯ ಬಗೆಯಂ (ಶಿಕ್ಕೃ. ೦೩-೩೬) ; ಭ್ರಮರಹಿತಾಮೋದಪ್ರದ ಸುಮನೋಗಣಹೃದ್ಯಂ . . . ನೀತಿ ಸುರಮಹೀರುಹಂ (ರಾಜಶೇ. ೦೩-೦೬).

[ ಸಂ. ( ಭ್ರಮರ + ಹಿತ : ಭ್ರಮ + ರಹಿತ )]

**ಭ್ರಮರಾಳಕಿ** (ನಾ). ದುಂಬಿಯಂತೆ ಕಪ್ಪಾದ ಮುಂಗುರುಳುಳ್ಳವಳು: ಲೀಳೆಯೊಳ್ ತಾಮ ನಡೆದ ಕೇಳೀವನಲತೆಗಳಂ ನಿರೀಕ್ಷಿಸಿ ಸುಯ್ಯಾಲಾಳವಳಯಂಗಳಂ ಭ್ರಮರಾಳಕಿಯರ್ ಬಾಷ್ಪವಾರಿಯಿಂ ಪೂರಿಸಿದರ್ (ಶಿಕ್ಕೃ. ೦೩-೯೯). [ ಸಂ. ಭ್ರಮರಾಲಕೀ ]

**ಭ್ರಮರಿ** (ನಾ). ೧. ಹೆಣ್ಣುದುಂಬಿ. ೨. ಬುಗುರಿ : ವಾಯಸದಂತೆ ನೋಡು ಬಕನಂತಿರೆ ಮೆಲ್ಲನೆ ಮೆಟ್ಟು ಕಚ್ಚಪೋಪಾಯದಡಂಗು[ಪಾಠಾಂ.೧] ನಿಲ್ ಭ್ರಮರಿವೊಲ್[ಪಾಠಾಂ. ಯೊಳ್]ಭ್ರಮಿಯಂತಿರೆ ಬೆಚ್ಚರಾಗು (ಶಬ್ದಮ. ೨೩೦ ವೃಯೋ ; ಕಾವ್ಯಾವ. ೪೦೨ ನೋ). ೩. ಸುತ್ತುವುದು ; ತಿರುಗುವುದು : 'ಭ್ರಮರಿಗುಡು', 'ಭ್ರಮರಿಗೊಳಿಸು' ಪರಾ. ೪. ಸುತ್ತಿಸುವುದು ; ತಿರುಗಿಸುವುದು : (+). ೫. [ಯೋಗ] ಪ್ರಾಣಾಯಾಮದ ಒಂದು ಭಾಗವಾದ ಕುಂಭಕದಲ್ಲಿನ ಒಂದು ಪ್ರಕಾರ : ಸೂರ್ಯಭೇದನ ಉಜ್ಜಾಯ ಸೀತ್ಕಾರಿ ಶೀತಳ ಭಸ್ತ್ರಿಕೆ ಭ್ರಮರಿ ಮೂರ್ಛೆ ಕೇವಲವೆಂಬ ಅಷ್ಟಕುಂಭಕಪ್ರಕಾರಂಗಳಂ (ಚಿವೀಳ. ೧೬೭). ೬. [ನಾಟ್ಯ] ಮಾರ್ಗ ಆಕಾಶಚಾರಿಗಳಲ್ಲಿ ಒಂದು : "ಅತಿಕ್ರಾಂತಚಾರಿಯಂತೆ . . . ಕಾಲನ್ನಿರಿಸಿ [ಕುಂಚಿತಪಾದವನ್ನೆತ್ತಿ] ತ್ರ್ಯಸ್ರಾಕಾರದಲ್ಲಿ ತೊಡೆಯನ್ನೂ ಮೇಲಕ್ಕೆತ್ತಿ ಇನ್ನೊಂದು ಕಾಲಿನ ಅಂಗಾಲಿನಿಂದ ಸುತ್ತುವುದು" (ಲಾಸ್ಯರಂ. ೩೧೯ ಗದ್ಯಸಾರ) : ನೇವಣೆ ಕರಣ ಭ್ರಮರಿಗಳನಱಿದು ತರುಣಿ ರಂಗಸ್ಥಲದಲಿ ನರ್ತಿಸಿದಳು (ಸೌಶಂಕಾ. ೯-೯೪); ಅತಿಕ್ರಾಂತಚಾರಿಯಂ ಸಮೆದತಿತ್ರ್ಯಸ್ರದಿನೂರುಮೂರ್ಧ್ವವರ್ತನಮಾಗಲ್ ಸತಿ ಕೇಳ್ ಮತ್ತೊಂದಂ ಪದದ ತಲದಿನಾಜೆ ತಿರುಪುಗೆಯ್ಯೆ ಭ್ರಮರಿಯೆನಿಕ್ಕುಂ (ಲಾಸ್ಯರಂ. ೬-೩೨). ೭. ಒಂದು ಬಗೆಯ ವಿದ್ಯೆ : ಪ್ರಜ್ಞಪ್ತಿ ಕಾಮರೂಪಿಣಿ . . . ಭ್ರ[ಪಾಠಾಂ. ಭ್ರಾ]ಮರಿ ಆಭೋಗನಿಯೆಂಬಿವು ಮೊದಲಾಗೆ ಕುಲವಿದ್ಯೆ ಜಾತಿವಿದ್ಯೆ ಸಾಧಿತವಿದ್ಯೆಗಳೊಳ್ ಸಂಪನ್ನನಾಗಿರ್ದು (ಶಾಪುಂತ. ೦೯೬). [ ಸಂ. ಭ್ರಮರೀ ]

**ಭ್ರಮರಿಗುಡು** (ಕ್ರಿ). ವರ್ತುಳಾಕಾರವಾಗಿ ಸುತ್ತು, – ತಿರುಗು : ಭ್ರಮರಿಗುಡುತ್ತೆ ಕಂತುಕಮನಂಗನೆ ಪೊಯ್ಯಲಲಾತಚಕ್ರದಂತಮರ್ದಿರೆ ಸೆಂಡು ವೃತ್ತತೆಯೊಳಂಗನೆ ಮಧ್ಯದೊಳೊಪ್ಪುತಿರ್ದಳುತ್ತಮಪರಿವೇಷಮಧ್ಯದ ಶಶಾಂಕಕಳಾಕೃತಿಯಂತೆ (ರಜಕು. ೦೨-೩೦).

[ ಭ್ರಮರಿ + ಕುಡು₁ (< ಕೊಡು₁ ) ]

**ಭ್ರಮರಿಗೊಳಿಸು** (ಕ್ರಿ). ವರ್ತುಳಾಕಾರವಾಗಿ ಸುತ್ತಿಸು : ತೂಗಿತೊನೆವ ನಳಿತೋಳ್ಗಳ ಕಂಕಣದ ಝುಂಕಾರಂ ಭ್ರಮರಮಾಲೆಯಾ ಭ್ರಮರಿಗೊಳಿಸೆಯುಂ (ಅಜಂಪು. ೭-೦೦ ವ).

[ ಭ್ರಮರಿ + ಕೊಳ್₁ + — ಇಸು₃ ]

**ಭ್ರಮರೀಗೀತ** (ನಾ). ಹೆಣ್ಣುದುಂಬಿಯ ಝೇಂಕಾರ. – ಮೊರೆತ : ಭ್ರಮರೀಗೀತಸಮೇತ ಹೇಮನಳಿನೀಶ್ರೀಸಂಗೆಯಂ ನೋಡಿ ನಾಡೆ ಮನಂಗೊಂಡನಿಳೇಶ್ವರಂ ಲಲಿತಮತ್ತ್ಯಾವಾಣಿಯಂ ಗಂಗೆಯಂ (ಅಜಪು. ೨೦-೩೪). [ ಸಂ. ]

**ಭ್ರಮಾಂತುಕ ?** (ನಾ). ಸಾಮಾನುಗಳನ್ನು ಹೊತ್ತುಕೊಂಡು ಊರೂರು ತಿರುಗುತ್ತ ವ್ಯಾಪಾರ ಮಾಡುವವನು ; ಸಂಚಾರೀ ವ್ಯಾಪಾರಿ (?) : ಲಕ್ಷ್ಮಣೇಶ್ವರದೇವರ ಅಂಗಭೋಗಕ್ಕಂ ನಿವೇದ್ಯಕ್ಕಂ ಚೈತ್ರಪವಿತ್ರಾದಿಗಳ್ಗಂ ೧ × ವಿಲ್ಲಿಯ ತಳದೊಕ್ಕಲುಂ ಪೊಱಗಣ ಭ್ರಮಾಂತುಕರುಂ ಮಾಱಿದ ಸೀರೆಗಂ ಅಡಕೆಗಂ ಪೊಂಗೊಂದು ಸಲಿವೀಸಮಂ ಆಯಮಂ ಮಾಡಿಬಿಟ್ಟರು (ಕಇಅ. ೦-೧-೮; 1092). [?]

**ಭ್ರಮಾಳ** (ನಾ). [ಸಂಗೀತ] ಒಂದು ರಾಗದ ಹೆಸರು : ನರ್ತಕಿ ಕಕುಭ ಷಡ್ಜಕೌಶಿಕ ಭ್ರಮಾಳ ಪಂಚಮಭ್ರಮಾಳ ಪಂಚಮಗಾಂಧಾರ ರೂಪಸಾಧಾರಣವೆಂಬೇಳು ಸಪ್ತಸಾಧಾರಣಜಾತಿಯಿಂದಾದ ರಾಗಂಗಳು (ಬಿವೀಳ. ೦೪೭). [ ? ]

**ಭ್ರಮಿ₁** (ನಾ). ಭ್ರಮೆಯುಳ್ಳವನು ; ನಿಶ್ಚಯಜ್ಞಾನವಿಲ್ಲದವನು : ಭ್ರಾಂತನಾದವನು: ವಾಯಸದಂತೆ ನೋಡು ಬಕನಂತಿರೆ ಮೆಲ್ಲನೆ ಮೆಟ್ಟು ಕಚ್ಚಪೋಪಾಯದಡಂಗು[ಪಾಠಾಂ. ೧] ನಿಲ್ ಭ್ರಮರಿವೊಲ್ [ಪಾಠಾಂ. ಯೊಳ್] ಭ್ರಮಿಯಂತಿರೆ ಬೆಚ್ಚರಾಗು (ಶಬ್ದಮ. ೨೩೦ ವೃಯೋ; ಕಾವ್ಯಾವ. ೪೦೨ ನೋ) : ಭ್ರಮಿ ನಾನು ಭ್ರಮರ; ನಿಃಶಂಕ ನೀನು. ಈ ಜಾತಶಂಕೆಯನ್ನು ಶಮಿಯಾಗಿ ಶಮಿಸಿ, ನೀನಾಗಿ ಹೊಸೆದು ಹೊತ್ತಿಸಿದೆ ಬೆಂಕಿಯನ್ನು (ಹೃದಸ. ೨೨-೯). [ಸಂ. ಭ್ರಮಿನ್]

**ಭ್ರಮಿ₂** (ನಾ). ೧. ತಿರುಗುವುದು ; ಅಲೆಯುವುದು : ಭ್ರಮಣ : "ಭ್ರಮಃ, ಭ್ರಮಿಃ—೨ ತಿರುಗುವಿಕೆ, ಸುತ್ತುವಿಕೆ" (ಸಿದ್ಧಂಶಿ. ೩೫೭). ೨. ಮಂಡಲಾಕಾರವಾಗಿ ಸುತ್ತುವುದು. ೩. ಸೈನ್ಯದ ಮಂಡಲಾಕಾರವಾದ ರಚನೆ: ಚಕ್ರವ್ಯೂಹ : ಅೞದುಳಿದ ರಿಪುವಾಹಿನೀಭ್ರಮಿಗಳು ಪರೆದುವೆಣ್ದೆಸೆಗಳ್ಗೆ (ಕೃಮಬಾ. ೨೮-೬೨). ೪. ಒಂದು ನಿರ್ದಿಷ್ಟವಾದ ಸಂಖ್ಯೆಯ ಆಳು. ಕುದುರೆ, ರಥ ಮತ್ತು ಆನೆಗಳನ್ನು ಹೊಂದಿರುವ ಸೇನೆ : ನೂಱುಾಳಿಗೊಂದು ಹಯವಿರುತಿರ್ಪುದಾ ಹಯಂ ನೂಱು ಕಿರುತಿಹುದು ಮೇಣೊಂದು ರಥಮಾ ರಥಂ ನೂಱಿಭಮೊಂದಿರ್ಪುದಿಂತಿಭ ಸಹಸ್ರಮಿರೆ ಭ್ರಮಿಯೆಂದೆನಿಸಿಕೊಳ್ವುದು (ಕೃಮಬಾ. ೨೦-೪೪).

೫. ಸುಂಟರಗಾಳಿ. ೬. ನೀರಿನ ಸುಳಿ; ಜಲಾವರ್ತ. ೭. ಕುಂಬಾರನ ಚಕ್ರ; ತಿಗುರಿ. ೮. ತಪ್ಪು: ದೋಷ. ೯. ಚರಕಿ ಯಂತ್ರ; ಕಡೆತದ ಯಂತ್ರ. [ಸಂ.]

**ಭ್ರಮಿತ** (ಗು). ೧. ಸುತ್ತಿಸಿದ; ತಿರುಗಿಸಿದ: ನೀಳ್ದಗುರ್ವಿಸೆ ಬಾಹು ಭ್ರಮಿತಾಭ್ರ ವಿಭ್ರಮಗದಂ ಕೌರವ್ಯರಂ ತಿಂದ ರಕ್ಕಸನೋ ಈತನೊ ಭೀಮಸೇನಂ (ಗದಾಯು. ೬-೩೩). ೨. ಹರಡಿದ; ಪ್ರಸರಿಸಿದ: ಅಮಿತ ಕರುಣಾಮೂರ್ತಿ ದಶದಿಗ್ಭ್ರಮಿತಕೀರ್ತಿಯುದಾರಧೀರಂ (ಬಸವ. ೧೯-೩). (ನಾ). ೩. ಭ್ರಾಂತಿಯನ್ನು ಹೊಂದಿದ ವ್ಯಕ್ತಿ: ಕೂಡಲಸಂಗನವಜೀಯದ ದ್ವಿಜರೆಲ್ಲಾ ಭ್ರಮಿತರು (ಬಸವ. ೫೯೯); ಹಿಂಗದಾಲೋಕಂಗಳುಂ ಭ್ರಮಿತಂಗಳಪವಿತ್ರಂಗಳುಂಪತಾಪಂಗಳಾಪಾಸಂಗಳು (ಬಸವು. ೪೦-೫೯). ೪. [ನಾಟ್ಯ] ಪ್ರತ್ಯಂಗಾಭಿನಯದಲ್ಲಿ ಐದು ಬಗೆಯ ಮುಂಗೈಯ ಭೇದಗಳಲ್ಲಿ ಒಂದು; ಮುಂಗೈಯನ್ನು ಸುತ್ತಿಸುವುದು (ಲಾಸ್ಯರಂ. ೨೬೪ ಗದ್ಯಾನುವಾದ): ಪ್ರಕಟ ನಿಕುಂಚಿತಮಾಕುಂಚಕ ಚಲಮುಂ ಭ್ರಮಿತ ಸಮಗಳುಂ ಪರಿಣತಿಯಿಂ ಸಖಿ ಕೇಳ್ ಮಣಿಬಂಧಂ ಕೌತುಕದಿಂದೈದುಂ ವಿಭೇದದಿಂ ರಂಜಿಸಿಗುಂ (ಲಾಸ್ಯರಂ. ೨-೧೫೦). [ಸಂ.]

**ಭ್ರಮಿಯಿಸು** 'ಭ್ರಮಿಸು' ನೋ.

**ಭ್ರಮಿಷ್ಠ** (ನಾ). ಬುದ್ಧಿಯು ಪತೋಟಿಯಲ್ಲಿಲ್ಲದವನು: ಹುಚ್ಚ: ಆ ವನದ ಭವ್ಯವಾದ ದರ್ಶನವನ್ನು ಬಿಟ್ಟುಕೊಟ್ಟು ಭ್ರಮಿಷ್ಠನಂತೆ ಆಕಾಶವನ್ನು ನೋಡುತ್ತ ಕುಳಿತುಕೊಂಡಿದ್ದನು (ಕಗದ್ಯ. ೧೧. ೨೦); ಭ್ರಮಿಷ್ಠರಂತೆ ಅಲೆಯುವ ಅವರ ಜೀವಕ್ಕೆ ಯಾವ ತೊಂದರೆಯೂ ಬಾರದಿರಲಿ (ದೂರಕ. ೦೫೨). [ಸಂ.]

**ಭ್ರಮಿಸು, ಭ್ರಮಿಯಿಸು** (ಕ್ರಿ). ೧. ಅಲೆದಾಡು; ಸುತ್ತಾಡು: ತಿರುಗಾಡು: ಭ್ರಮರದಂತೆ ಕುಸುಮಮಂಜರೀರಂಜಿತಲತಾಭವನಂಗಳೊಳ್ ಭ್ರಮಿಸಿಯುಂ (ಕಾದಂಪೂ. ೩೨೪); ಓರೊರ್ಮೆ ಸುರಭಿ ಪರಿಮಳೋದ್ಗಾರಿಸ್ಮೇರ ಕುಸುಮಮಂಜರೀನಿಕರಭರವಿನತಲತಿಕಾಗೃಹಂಗಳೊಳ್ ಭ್ರಮರಮಿಥುನದಂತೆ ಪುಷ್ಪಾಪಚಯದಿಂ ಭ್ರಮಿಸಿಯುಂ (ಚಂದ್ರಪು. ೩-೨೬ ವ): ಸರಸಿಜದೊಳ್ಭ್ರಮಿಸುವ ಮಜೀಮುಂಬಿಗಳ ವೃಂದಮಂ ಕೂಡಿಕೊಂಡೆಳವೆಲರ್ಬಂದುದು (ಕೃಬಿಭಾ. ೮-೨). ೨. ಆಸೆ ಪಡು: ಮರುಳಾಗು; ಮೋಹಗೊಳ್: ಭಾವಲಿಂಗವಾದರೆ ಸಕಲವಿಷಯಂಗಳಿಗೆ ಭ್ರಮಿಸುವುದೆ (ಅದಪ. ೩೨-೯೨): ಭ್ರಮಿಸಿ ಮಗಳಂ ಹರಿಣರೂಪದಿ ರಮಿಸುವಾ ನೀರೇಜಭವನಂ ನಿಮಿಷದಲಿ ಹರಿಸಿದನತಿ ಮೃಗವ್ಯಾಧರೂಪನಲಾ (ಬಸಪು. ೫೪-೪೮): ಇಂತು ಯೋಜನಗಂಧಿಯುರೆ ಬೇಟೆಗೈತಂದು ಶಂತನುವಳಂ ಕಂಡು ಭ್ರಮಿಸಿ ಕರೆಯಲ್ಕೆ (ಶಿಬಪು. ೫೪-೯). ೩. ಭ್ರಾಂತಿಗೆ ಒಳಗಾಗು: ಸರಿಯಲ್ಲದುದನ್ನು ಸರಿಯೆಂದು ತಿಳಿದುಕೊಳ್ಳು: ತಪ್ಪಾಗಿ ಭಾವಿಸು: ಭ್ರಮಿಸಿ ಸಸಿನೆ ಇದ್ದಂತಿರ್ದ ತುಂಬಿರ್ದಸಮುಸಭೆಯೊಳು ಅಂಜದಿರುಬೆನುತೂಸೆದು ತೋಳ್ಗಳನೆತ್ತಿ ನೋಡುತ ಹಿಡಿಮುದೇನೆನಲು (ಬಸಪು. ೨೦-೩): ಲೋಕಮೆಂಬುದು ವರ್ಣಧರ್ಮವನೌಕಿ ನಡೆವುದು ವೈದಿಕಕೆ ನಾವಾಕೆವಾಳರು ತಪ್ಪಿ ನಡೆವರೆ ಭ್ರಮಿಸುವರು ಬುಧರು (ಕುಮಾ. ದ್ರೋ. ೦೮-೫೬): ಕೆಟ್ಟುದ್ದನ್ನು ಒಳ್ಳೆಯದೆಂದು ಭ್ರಮಿಸುತ್ತೀವೆ (ಕಾಂಟಿಜ. ೮೫). ೪. ದಿಗ್ಭ್ರಮೆ ಹೊಂದು; ತಬ್ಬಿಬ್ಬಾಗು: ಭ್ರಮಿಸಿ ನುಡಿಯಂದೆ ಸುಮ್ಮನಿರ್ದ ಪರಿಯಂ ಕಂಡು ಕ್ಷಮಿಸಿ ನುಡಿದಂ (ಶಬಪು. ೩೩-೯): ಎನಿತೊ ಅರಸರ ಗಲ್ಲನಾದರೂ ಒಮ್ಮೆಯೂ ಕರ್ಬುರ್ದಮಂ ಕ್ಷಾತ್ರಮೆಂದವನು ಭ್ರಮಿಸಲಿಲ್ಲ (ಚಂದ್ರಕ. ೫೦-೨). ೫. ಬೆರಗಾಗು: ಅಚ್ಚರಿಗೊಳ್ಳು: ಅದೇ ತೆರನಾದ ತಪಸ್ಸನ್ನು ಆಚರಿಸುತ್ತಿದ್ದ ಮುನಿಗಳೂ ಯೋಗಿಗಳೂ ಪಾರ್ವತಿಯ ಉಗ್ರತಪಸ್ಸನ್ನು ಕಂಡು ಭ್ರಮಿಸುತ್ತಿದ್ದರು (ಒಂಕರು. ೭೪). ೬. ಭ್ರಮಿಯಿಸು: ೧. ಎಮಗೀ ಪೊಟಲೊಳ್ ನಿಶ್ಚಂ ಭ್ರಮಿಯಿಸಿ . . . ಗ್ರಾಸಮಾತ್ರಮಿಲ್ಲಾಯ್ತು ಸೂರ್ಯಮಿತ್ರಸ್ವಾಮಿ (ಸುಕುಮಾ. ೨-೩೬). ೬. ಭವಾಳಿಯಲ್ಲಿ ತಿರುಗು; ಸಂಸಾರಚಕ್ರದಲ್ಲಿ ತೊಳಲು: ರತ್ನಕಂಠಕನುಂ ರತ್ನಾಯುಧನುಮೆಂಬರ್ ಸಂಸಾರದೊಳ್ ಭ್ರಮಿಯಿಸಿ ಮಹಾಬಲ ಅತಿಬಲರೆಂಬ ಅಸುರರಾಗಿ ಪುಟ್ಟಿ (ಶಾಪುಂಪು. ೨೦೫): ಸಮನಿಸಿದ ನಿಷ್ಟಸಂಯೋಗಮನಿಷ್ಟ ವಿಯೋಗಮುಂ ಚತುರ್ಗತಿಗಳೊಳಂ ಭ್ರಮಿಯಿಸಿ ಕೈಕೊಳ್ಗುಂ (ಕಂರಾಪು. ೪-೦೨೬). [ಭ್ರಮು + – ಇಸು₃]

**ಭ್ರಮೆ** (ನಾ). ೧. ಇದ್ದುದನ್ನು ಇದ್ದ ಹಾಗೆ ಗ್ರಹಿಸದೆ ಬೇರೆ ರೀತಿಯಲ್ಲಿ ಗ್ರಹಿಸುವುದು; ವಸ್ತುಸ್ಥಿತಿಗೆ ವ್ಯತಿರಿಕ್ತವಾದ ಜ್ಞಾನ; ಭ್ರಾಂತಿ: ಈ ಮನದ ಭ್ರಮೆಯನೆಲ್ಲವ ಮಜಿಸಿ ನಿಮ್ಮ ಶರಣರಿಗೆ ಶರಣೆಂಬುದ ಕರುಣಿಸಿ (ಬಸವ. ೨೫೬); ಭಾವವಿಲ್ಲದ ಭ್ರಮೆಯು ಭ್ರಮೆಗೊಳಿಸಿ ಭಾವಕ್ಕೆ ತಂದಾತ ನಮ್ಮ ಬಸವಯ್ಯನು (ಸಿಂಅ. ೪. ೬-೯); ಅವಳ ಭ್ರಮೆಯನ್ನು ಮತ್ತಷ್ಟು ಉಲ್ಬಣಗೊಳಿಸುವ ಘಟನೆಯೊಂದು ನಡೆಯಿತು (ಶದ್ಯಸ. ೮೦). ೨. ಹುಚ್ಚು: ಉನ್ಮಾದ: ಅಳಲೆಕಾಯಿ, ಪರ್ಪಾಟಕ . . . ಕಷಾಯ ಹಾಕಿ ಶೋಧಿಸಿ ದ್ರಾಕ್ಷಿಹಣ್ಣು ಹಾಕಿ ಕೊಡಲು ಪ್ರಲಾಪ. ಮೂರ್ಛೆ, ಭ್ರಮೆ . . . ಪೈತ್ಯಜ್ವರ ಮಾಣುವುವು (ಸಳವೈ. ೮೨). ೩. ಮೋಹ: ವಾಂಛೆ; ಅಕ್ಕರೆ. [ಸಂ. ಭ್ರಮ]

**ಭ್ರಮೆಗವಿ** (ಕ್ರಿ). ಭ್ರಾಂತಿಯು ಆವರಿಸು: ದಿಕ್ಕು ತೋಚದಂತಾಗು: ಎವೆಯನಿಕ್ಕದೆ ನೋಡುತಂ ಭ್ರಮೆಗವಿದೆದೆಗಳುಜಿ ರ್ಚಲ್ಲೆ ಸುತ್ತೆ (ಬಸಪು. ೯-೩). [ಭ್ರಮೆ + ಕವಿ₁]

**ಭ್ರಮೆಗೊಳ್** (ಕ್ರಿ). ದಿಗ್ಭ್ರಾಂತವಾಗು: ಕಕ್ಕಾಬಿಕ್ಕಿಯಾಗು: ಭಯಂಕರ ಭ್ರಮೆಗೊಂಡಿತ್ತು ಮಂತ್ರ ತಂತ್ರ (ಬಸಪ. ೮೦). [ಭ್ರಮೆ + ಕೊಳ್₁]

**ಭ್ರಮೆಗೊಳಿಸು** (ಕ್ರಿ). ಭ್ರಾಂತಿಯನ್ನುಂಟುಮಾಡು: ದಿಕ್ಕು ತೋಚದಂತೆ ಮಾಡು: ಅಮರಾಧಿಪನ ಪಂಚಿಸಿ ಸುರನಿಕರವ ಭ್ರಮೆಗೊಳಿಸಿಯೆ . . . ಕಾಡುತಿಹನು (ಕೃಕುಸಾಂ. ೬-೬೬). [ಭ್ರಮೆಗೊಳ್ + – ಇಸು₃]

**ಭ್ರಷ್ಟ** (ಗು). ೧. ಕೆಳಗೆ ಬಿದ್ದ. ೨. ದಾರಿತಪ್ಪಿದ; ಪತಿತ. ೩. ಧರ್ಮವನ್ನು ಬಿಟ್ಟ; ಧರ್ಮಹೀನವಾದ: ಇಷ್ಟಲಿಂಗದಲ್ಲಿ ಅವಿಶ್ವಾಸ ಮಾಡುವ ಭ್ರಷ್ಟಭವಿಗಳ ಮುಖವ ನೋಡಲಾಗದಯ್ಯ (ಅಬಂದೇ. ೦೦೯-೫೦); ಶಿಷ್ಟ ಸಾತ್ವಿಕತೆ ನಡೆಯುವುದೆ ಭ್ರಷ್ಟ ರಾಕ್ಷಸ ನೀತಿ? (ಶ್ರೀರಾಪ. ೨೯೦-೦೫೬); ಭ್ರಷ್ಟ ಋಷಿಯೆ ಎಲ್ಲರಿಗೂ ವೇದವು ಓದದೆಯೆ ಬರಬೇಕೆಂದು ನೀನು ತಪಸ್ಸು ಮಾಡಿದರೆ ಅದು ಸಾಗೀತೆ? (ಸೀತಿತಾ. ೦೩-೦೬). ೪. ಹಾಳಾದ. ೫. ಕಳೆದುಹೋದ: ನಷ್ಟವಾದ. ೬. ಅಗಲಿದ. ೭. ಕೆಟ್ಟತನದಿಂದ ಕೂಡಿದ; ನೀಚವಾದ. (ನಾ). ೮. ಕೆಳಗೆ ಬಿದ್ದು ಹೋದುದು: "ಸ್ರಸ್ತಂ. ಧ್ವಸ್ತಂ. ಭ್ರಷ್ಟಂ . . . ಗಳಿತಂ — ಜಾರಿ ಬಿದ್ದುದು" (ಶಬ್ದಾ. ೩೫೦). ೯. ನಾಶ: ಹಾಳು: ಹುಟ್ಟಿಸಿದವರನು ಭ್ರಷ್ಟ ಮಾಡುವರೇನೊ (ಭರಂದ. ೩-೮೯-೨): ನಮ್ಮ ಹೊಲ. ನಮ್ಮ ಮನೆ . . . ನಮ್ಮ ಮಕ್ಕಳು ಎಲ್ಲರನ್ನೂ ಎಲ್ಲವನ್ನೂ ಭ್ರಷ್ಟ ಮಾಡಿದ್ದೀರಿ (ಶಾಬೀಮು. ೫೮). ೧೦. ತಪ್ಪಿಹೋಗಿರುವುದು; ಕಳೆದುದು: ಅಟವಿಯ ಕುಟಿಲಪಥದಲಿ ಹಠಾತ್ತನಲ್ ಭ್ರಷ್ಟಮಾದುದು ಪರಿಚಿತಾಧ್ವಂ (ಶ್ರೀರಾಪ. ೩೫-೨೦೮). ೧೧. ಧರ್ಮಹೀನನಾದವನು: ಹರಿನಾಮವನು ದಿನದಿ ಸ್ಮರಿಸದಾತನು ಭ್ರಷ್ಟ (ಭರಂದ. ೪-೦೫೮-೫). ೧೨. (ಗೌರವ. ಅಧಿಕಾರ. ಜಾತಿ. ಧರ್ಮ ಮೊದಲಾದುವುಗಳಿಂದ) ಹೊರಗೆ ಹಾಕಲ್ಪಟ್ಟವನು: ಮಾತ್ರೀಗಳವುಗಳಂ ಬೇಡವೆಂಬುವ ನೆಮದಿ ಪದಗ್ಭ್ರಷ್ಟನಂ ಮಾಡಿ ರವಿಕುಲಯಶೋದೀಪ್ತಿಯಂ ನನ್ನಿಂದೆ ಮಸುಳಿಸುವ ಪಾಂಗುಮಂ ನೆನೆವೆ! (ಶ್ರೀರಾಪ. ೬೨-೪೯೬). 'ಜಾತಿಭ್ರಷ್ಟ', 'ದೇಶಭ್ರಷ್ಟ' ಪರಾ.

ಭ್ರಷ್ಟಳಾಗು = ಪತಿತಳಾಗು ; ದಾರಿತಪ್ಪು : ನಿಷ್ಠೆಯಿಂದಿರುವರಿಥ ಸತಿಯು ಭ್ರಷ್ಟಳಾಗುವುದಿಲ್ಲವಿದನು ನೀನರಿತಿರು (ಇಜಾಕ. ೦೦೦-೮೮).
[ಸಂ.]

**ಭ್ರಷ್ಟಗೊಳಿಸು** (ಕ್ರಿ). ಹೊರತುಗೊಳಿಸು ; ಹೊರತು ಮಾಡು: ನನ್ನನ್ನು ಯಾವ ಗೃಹಿಣೀಪದದಿಂದ ನೀಚನಾದ ನೀನು ಒಮ್ಮೆ ಭ್ರಷ್ಟಗೊಳಿಸಿರುವೆಯೋ ಆ ಪೂಜ್ಯಪದವು ಜನ್ಮಜನ್ಮಾಂತರದಲ್ಲಿಯೂ ನನಗೆ ದುರ್ಲಭವಾಗಿ ಬಿಟ್ಟಿತು (ಅಂಬಿ. ೦೭).
[ಭ್ರಷ್ಟ + ಕೊಳು (< ಕೊಳ್$_1$) + — ಇಸು$_3$]

**ಭ್ರಷ್ಟತೆ** (ನಾ). ಧರ್ಮದ ಲೋಪ : ಕರ್ಮಗಳ ಸನುಮತದಲಾರ್ಜಿಸಲು ಶಿಷ್ಟತೆ ಜನಕ ಕರ್ಮವಿಲೋಪ ಭ್ರಷ್ಟತೆ ಎನುತ ವಿಧಿಯಿರಲು (ಗಗಶಾ. ೦೭-೩೦). [ಸಂ. ಭ್ರಷ್ಟತಾ]

**ಭ್ರಷ್ಟಾಚರಣೆ** (ನಾ). ಧರ್ಮವಿರುದ್ಧವಾದ ಕೆಲಸವನ್ನು ಮಾಡುವಿಕೆ; ದುರಾಚಾರ; ನೀತಿಬಾಹಿರವಾದ ಆಚರಣೆ : ಸಮಾಜವೇ ಭ್ರಷ್ಟಾಚರಣೆಯಿಂದ ಕೂಡಿರುವಾಗ ಸರ್ಕಾರೀನೌಕರರು ಅದರಿಂದ ವಿರಹಿತರಾಗಿರುವುದು ಕಷ್ಟವೇ ಸರಿ (ಕ್ರಮಾವ. ೦೩೯). [ಸಂ. ಭ್ರಷ್ಟಾಚರಣ]

**ಭ್ರಷ್ಟಾಚಾರ** (ನಾ). ೧. = ಭ್ರಷ್ಟಾಚರಣೆ : ಗ್ರಂಥಾಲಯದ ಕಾರ್ಯವಾಹಕರು ಈ ಬಗೆಯ ಭ್ರಷ್ಟಾಚಾರಗಳನ್ನು ತಡೆಯುವಲ್ಲಿ ಬಹು ಎಚ್ಚರಿಕೆ ವಹಿಸಬೇಕು (ಗ್ರಂಥಾಂ. ೬೬); ದೇವರ ಹೆಸರಿನಲ್ಲಿ ಭ್ರಷ್ಟಾಚಾರ, ಜಾತಿಯ ಬೆಲೆಕೊಂಡ ಸ್ಥಾನಗೌರವ! (ಜೀವುಕಗ. ೨ ಪುಟ೩೩). ೨. ಧರ್ಮವಿರುದ್ಧವಾದ ಕೆಲಸಗಳನ್ನು ಮಾಡುವವನು : ದುರಾಚಾರಿಯಾದವನು : ನೀನೆತ್ತಲೀ ಚಂಡಾಲಕರ್ಮದೊಳ್ ತೊಡರ್ದು ಇಂತು ಭ್ರಷ್ಟಾಚಾರನಾದೆ ನಿನ್ನಂ ಮುಟ್ಟಲಾಗದೆಂದವಂ ಕಟೆದು ಪೋಪುದುಂ (ಶಂಕಶಂ. ೦೯೭-೨೦). ೩. ಲಂಚ ತಿನ್ನುವುದು ; ಲಂಚಗುಳಿತನ. [ಸಂ.]

**ಭ್ರಷ್ಟಾಚಾರನಿರೋಧ** (ನಾ). ಅನೀತಿಯುತವಾದ ಲಂಚ ಮೊದಲಾದ ಕೆಟ್ಟ ನಡವಳಿಕೆಗಳನ್ನು ಪ್ರತಿಬಂಧಿಸುವುದು, — ತಪ್ಪಿಸುವುದು : " ಭ್ರಷ್ಟಾಚಾರನಿರೋಧ, ಲಂಚನಿರೋಧ " (Anti - Corruption· ಪತ್ರಿ. ೫) ; ಭ್ರಷ್ಟಾಚಾರನಿರೋಧವನ್ನು ಕೈಗೊಳ್ಳದಿದ್ದರೆ ದೇಶವು ಹಾಳಾಗುತ್ತದೆ (ರೂಢಿ). [ಸಂ.]

**ಭ್ರಷ್ಟೆ** (ನಾ). ಪತಿತೆ ; ನೀತಿಗೆಟ್ಟವಳು : ವಿಶ್ವಕೆ ನಾನೇಕಾಕಿನಿ . . . ಅಸತಿ ಅನಾತ್ಮೆ ಭ್ರಷ್ಟೆ ಹೇಸಿಕೆ ಎಲ್ಲರ ಮನಕು (ಅಹಲ್ಯ. ೦೦೩-೭).
[ಸಂ. ಭ್ರಷ್ಟಾ]

**ಭ್ರಷ್ಟೆಬ್ಬಿಸು** (ಕ್ರಿ). ಭ್ರಷ್ಟರನ್ನಾಗಿ ಮಾಡು ; ದಾರಿ ತಪ್ಪಿಸು : ವರಸಿದ್ಧಸಾಧಕರ ಮುನಿ ತಪೋಧನರುಗಳಯಲರಂಬಿನಿಂದೆಚ್ಚು ವಿರಹಾಗ್ನಿಯಿಂದವರ ಬೇಗುದಿಗೊಳಿಸಿ ಭ್ರಷ್ಟೆಬ್ಬಿಸಿ ತರುಣಿಯರ ತೋಳ್ತೊಡೆಯ ನಿರಿಮುರಿಯೊಳಂ ಪೊಗಿಸಿ (ಶಶಪೋ. ೦೫-೯೦).
[ಭ್ರಷ್ಟ + ಎಬ್ಬಿಸು (< ಎಟ್ಟಿಸು)]

**ಭ್ರಾಂತ** (ಗು). ೧. ಅಲೆದಾಡಿದ. ೨. ಗುಂಡಗೆ ತಿರುಗಿದ,-ಸುತ್ತಿದ. ೩. ಕಂಗೆಟ್ಟ; ದಿಕ್ಕುತೋಚದಂತಾದ : ಭ್ರಾಂತಮುನಿ ನಾನೊಬ್ಬ ಸಾಲದೇ ಸ್ತ್ರೀಬಾಲರೆಂತಾದಡಂ ನುಡಿವರಮುಚ್ಚಿಯೇ (ಹತಶಾ. ೬-೯೫). (ನಾ). ೪. ತಿರುಗುವವನು ; ಸಂಚರಿಸುವವನು : "ಭ್ರಮನ್ . . . ಭ್ರಾಂತಃ—ಈ ೪ ತಿರುಗುವಂ" (ಲಾಕಕೃ. ೦೯೮). ೫. ಭ್ರಮೆಗೊಂಡವನು ; ತಪ್ಪಾಗಿ ತಿಳಿದುಕೊಂಡವನು : ಇಷ್ಟಲಿಂಗ ಪ್ರಾಣಲಿಂಗ ಒಂದೇಯೆಂದಱಿಯದೆ ಭಿನ್ನವಿಟ್ಟು ನುಡಿವ ಭ್ರಾಂತರ ಮಾತ ಕೇಳಲಾಗದು (ಅಪಂಚೇ. ೦೦೯-೫೦). ೬. ರಥದ ಚಲನೆಗಳಲ್ಲಿ ಒಂದು : ಆಗಲ್ ಸವ್ಯಾಪಸವ್ಯ ಭ್ರಾಂತೋದ್ಭ್ರಾಂತಂಗಳೆಂಬ ರಥಕಲ್ಪವಿಶೇಷವಿನ್ಯಾಸಂಗಳನಱಿದು (ಶಂಕಶಾ. ೦೨-೬೫ ವ). ೭. ದಿಕ್ಕುತಪ್ಪಿರುಗಿದ. ೮. ಮದಿಸಿದ ಆನೆ. ೯. [ಕಾಮಶಾ] ಒಂದು ಬಗೆಯ ಚುಂಬನ : ಓಪಳಂ ಕರ(?) ದಿಂ ತುಟವಿಡಿಸುತ್ತ ಚುಂಬಿಸಲ್ ಭ್ರಾಂತಾಖ್ಯಂ (ಮನ್ಮಥಿ. ೦೨-೦೧). ೧೦. [ನಾಟ್ಯ] ಅಭಿನಯದಲ್ಲಿ ಉಪಾಂಗವಾದ ಉಸಿರಿನ ಒಂದು ಭೇದ ; "ಒಳಗೊಳಗೇ ಉಸುರಾಡುವುದು" (ಅಾಸ್ತಕ್ರ. ೨೬೮ ಗದ್ಯಮುದ್ರಾ) : ಸಮ, ಭ್ರಾಂತ, ವಿಲೀನ . . . ಸೀತ್ಕೃತ — ಈ ಹತ್ತು ಮೊದಲ ಒಂಬತ್ತುಗೂಡಿ ಒಟ್ಟು ಹತ್ತೊಂಬತ್ತು ಭೇದಂಗಳ್ (ಅಾಸ್ತರಂ. ೩-೭೮ ವ). [ಸಂ.]

**ಭ್ರಾಂತಕ** (ನಾ). [ಕಾಮಶಾ] ಚುಂಬನದ ಒಂದು ಪ್ರಕಾರ : ಒಂದಣ ಮೆಯ್ಯಿಂ ಬಂದಿನೆಯಂ ತಲೆಯಿಂದ ಮೊಗಂಗುಡೆ ಮೊಗಮೆತ್ತಿ ಸಂದುಱಿ ಚುಂಬಿಸುವಂದಂ. . . ಭ್ರಾಂತಕಂ (ಜನವ. ೭-೦೮) ; ನಿಮಿತ್ತಕ ಸಂಘಟಕ ಸ್ಫುರಿತಕ ಭ್ರಾಂತಕ . . . ಜಿಹ್ವಾಯೋಗವೆಂಬ ದ್ವಾದಶಚುಂಬನ ಸಂಭ್ರಮಿಗಳಿಂ (ಖಚೀಳ. ೦೮೩). [ಸಂ.]

**ಭ್ರಾಂತತೆ** (ನಾ). ಭ್ರಮೆ; ಭ್ರಾಂತಿ : ಇರವಧಿಕಭ್ರಾಂತತೆಯಿಂ ಧರಿಯಿಸಿ ಕಡುಗಂದಿ ಜಿನುಗುವಾಜಿಡಿಯಾದಂತಿರೆ ತೋರ್ಪೀ ಪರಿಜನಮಂ ಹರಿಸದೊಳೊಡಗೂಡಿ ತೋಱಿ ಚರಣಾಂಬುಜಮಂ (ಶಂಪ್ರಕೃ. ೫-೦೫).
[ಸಂ. ಭ್ರಾಂತತಾ]

**ಭ್ರಾಂತಾತ್ಮ** (ನಾ). ಭ್ರಾಂತಿಗೊಂಡ ಮನಸ್ಸುಳ್ಳವನು ; ಮರುಳ : ಅಶ್ವಗ್ರೀವನೆಟ್ಟಂದಹಿತನ ಮೊನೆಯುತ್ತತ್ತಣಂ ಪೋಟ್ ತ್ರಿಪೃಷ್ಠಂ ಭ್ರಾಂತಾತ್ಮಂ ತೋಱು ತೋಱೆಂದೊದಱ (ಶಾಂತಿಪು. ೫-೫೮).
[ಸಂ. ಭ್ರಾಂತಾತ್ಮನ್]

**ಭ್ರಾಂತಿ** (ನಾ). ೧. ತಿರುಗುವಿಕೆ ; ಸುತ್ತುವಿಕೆ. ೨. ತಿರುಗಾಟ; ಸಂಚಾರ : ಅರಿಸೇನಾಚಕ್ರಚಕ್ರಂ ಪೊರಳೆ ರಿಪುಕುಭೃತ್ಶೃಂಗಭ್ರಾಂತಿ ತಳ್ತೊಪ್ಪಿರೆ . . . ನವಘಟೀಯಂತ್ರದಿಂ ವಿಷ್ಣು ಯುದ್ಧಾಜಿರವಾಟೀ ವೈರಿರಕ್ತಾಂಬುವನೆ ನಿಜಯಶೋವಲ್ಲಿಗೆತ್ತುತ್ತುಮಿರ್ಪಂ (ಎಕ. V. ಹಾಸಕ. ೦೩೦-೦೦ ; 1147). ೩. ಒಂದನ್ನು ಮತ್ತೊಂದೆಂದು ತಿಳಿದುಕೊಳ್ಳುವುದು ; ತಪ್ಪುತಿಳಿವಳಿಕೆ; ಭ್ರಮೆ : ಅಂಬಿಗರ ಮಗನೆಂಬ ಭ್ರಾಂತಿಯು ಕೃಷ್ಣನಿಂ ಕೇಳಿ ನಂಬಿ ಕರ್ಣಗೆ ಬಿಟ್ಟ ಪರಿ (ಗಗಶಾ. ೦೩-೯೦); ಒಂದು ವಸ್ತುವನ್ನು ಮತ್ತೊಂದೆಂದು ತಪ್ಪಾಗಿ ತಿಳಿಯುವುದೇ ಅಧ್ಯಾಸವು. ಅಧ್ಯಾಸ, ಭ್ರಾಂತಿ, ಮಿಥ್ಯಾಜ್ಞಾನ, ಮಿಥ್ಯಾಪ್ರತ್ಯಯ ಇವೆಲ್ಲ ಪರ್ಯಾಯ ಶಬ್ದಗಳು (ಬ್ರಹ್ಮಶಾ. ೨-೦೦) ; ಸರ್ವತ್ರ ಚೆನ್ನಾಗಿ ತಿಳಿಯದಿರುವಿಕೆಯೇ ಭ್ರಾಂತಿ (ಹಿಂದಶಾ. ೨೯೦). ೪. ತಲೆ ತಿರುಗುವುದು ; ತಲೆ ಸುತ್ತುವುದು : ಸುರುಸುರಿಕೆಸೊಪ್ಪಿನ ರಸದಲ್ಲಿ ಜೀರಿಗೆಯಂ ಭಾವನೆ ಮಾಡಿ ವಿಲಕ್ಕಿ ಸಕ್ಕರೆವೆರಸಿ ಸೇವಿಸೆ ಭ್ರಾಂತಿ ಮಾಣ್ಗುಂ (ಕಳಕ್ಕ. ೦೩೨). ೫. ದಿಕ್ಕು ತೋಚದಿರುವಿಕೆ ; ದಿಗ್ಭ್ರಾಂತಿ : ಮವಿಭಯಭ್ರಾಂತಿಯಿಂದಂ ಶರಣೊಕ್ಕುಕ್ಕಿದು ತನ್ನಂ ಗೋತ್ರಧಾತ್ರೀಧರತತಿಯೆನೆ ಪೆಂಪಣ್ವಕ್ಕೇನೊ ಚೋದ್ಯಂ (ಜಗಂ. ೦-೯೫). ೬. ಸಂದೇಹ ; ಸಂಶಯ ; ಅನಿಶ್ಚಿತತೆ : ಭ್ರಾಂತಿಯನುಟಿದಂತಿಂತಂತಂತೆಂಬಿವು ಶಾಂ ಪ್ರಕಾರ ಕಾಲ್ಯಾರ್ಥಂಗಳ್ (ಶಮದ. ೩೨೦). ೭. = ಭ್ರಾಂತಿಮದಲಂಕಾರ : ಒಂದನ್ನು ಬೇರೊಂದನ್ನಾಗಿ ತಿಳಿಯುವುದೇ ಭ್ರಾಂತಿ. ಸಾದೃಶ್ಯಮೂಲಕವಾಗಿ ಉಕ್ತವಾಗಿರುವ ಭ್ರಾಂತಿ ಭ್ರಾಂತ್ಯಲಂಕಾರ (ಕೃಬಿಡ. ೨೬೬). ೮. [ಸಾಂಖ್ಯ] ಒಂದು ವಸ್ತುವಿನಲ್ಲಿ ಮುಖ್ಯಾಂಶವನ್ನು ಗ್ರಹಿಸದೆ ಸಾಧಾರಣಾಂಶವನ್ನು ಮಾತ್ರ ಗ್ರಹಿಸುವುದು : ಎದುರಿಗಿರುವ ವಸ್ತುವಿಗೆ ಸಮಾನವಾದ ಬೇರೊಂದು ವಸ್ತುವಿನ ಸ್ಮರಣೆ ಬೆರೆತು ಭ್ರಾಂತಿ ಎಂದು ವ್ಯವಹರಿಸಲ್ಪಡುವುದು (ಹಿಂದಶಾ. ೫೦). ೯. [ಕಾಮಶಾ] ಚುಂಬನದಲ್ಲಿ ಒಂದು ಬಗೆ : ಪುರುಷಂ ಸ್ತ್ರೀಕೂದಲ ಚಿಬುಕವಂ ಎರಡು ಕೈಗಳಿಂ ಪಿಡಿದು ಅವಳ ಹಿಂದೆ ನಿಂದಿರ್ದು ಮೋರೆಯ ಸ್ವಲ್ಪ ತಿರುಗಿಸಿ ಹಿಡಿದು ಅವಳ

ಕೆಳಗಣ ತುಟಿಯುಂ ಕಾಂ ಪಿಡಿದು ಅವಳ ಕೈಯಿಂದ ತನ್ನ ಕೆಳಗಣ ತುಟಿಯುಂ ಅಂಗುಷ್ಠ ತರ್ಜನಿಗಳಿಂ ಪೀಡಿಸಿ ಚುಂಬಿಸುವ ಭಾವಂ ಭ್ರಾಂತಿ ಯೆಂಬ ಚುಂಬನಂ (ಕಾಮಶಾ. ೨೨೩). [ಸಂ.]

**ಭ್ರಾಂತಿಗೊಳ್** (ಕ್ರಿ). ದಿಕ್ಕು ತೋಚದಂತಾಗು ; ಕಂಗೆಡು : ಮುಂತೆ ಗೌರೀಶನ ಶರೀರದೊಳೆಂತು ಮಾಡಿದಡಂತಲಾ ನಾಂ ಭ್ರಾಂತಿಗೊಂಡಡಿದು (ಬಸಪು. ೦೬-೯) ; ತನ್ನ ಪ್ರಾಣೇಶನ . . . ಕಾಣದೆ ಕಂಗೆಟ್ಟಳು ಭ್ರಾಂತಿ ಗೊಂಡಳು ಮಾಣದೆ ಮಗುಳಳಜಿಸಿದಳು (ಜೋಚಕ. ೨೭-೯೬).
[ ಭ್ರಾಂತಿ + ಕೊಳ್$_1$ ]

**ಭ್ರಾಂತಿಗೊಳಿಸು** (ಕ್ರಿ). ಅಜ್ಞಾನವನ್ನುಂಟುಮಾಡು ; ಭ್ರಮಿಸುವಂತೆ ಮಾಡು : ಶಂಬರಾಸುರನ ಭ್ರಾಂತಿಗೊಳಿಸಿ ಮಹದಾದಿವಿದ್ಯವ ಸೈಪಿಂ ತೋಜಿಸಿದನು ಕಂತುವಿಗೆ (ಜೋಚಕ. ೦೦-೬೦).
[ ಭ್ರಾಂತಿಗೊಳ್ + — ಇಸು$_1$ ]

**ಭ್ರಾಂತಿಜನ್ಯ** (ನಾ). ಭ್ರಾಂತಿಯಿಂದ ಉಂಟಾದುದು ; ಅಜ್ಞಾನದಿಂದ ಉಂಟಾದುದು : ಸರ್ವಾಧಿಷ್ಠಾನವಾದಂಥಾ ಆತ್ಮಸ್ವರೂಪವನು ತಿಳಿಯದ್ದರಿಂದಾ ಬಂದದ ಆಗಲಾಗಿ ಇದಕ್ಕೆ ಭ್ರಾಂತಿಜನ್ಯವೆಂದು ಹೆಸರು (ಅಕ್ಕಸ್ವ. ೨೯-೦೦). [ಸಂ.]

**ಭ್ರಾಂತಿಮದಲಂಕಾರ** (ನಾ). [ಕಾವ್ಯಮೀ] ಪರಸ್ಪರ ಹೋಲಿಕೆಯುಳ್ಳ ಎರಡು ವಸ್ತುಗಳಲ್ಲಿ ಒಂದು ವಸ್ತುವನ್ನು ನೋಡಿ ಆ ಬೇರೊಂದು ವಸ್ತುವೇ ಇದು ಎಂಬ ಭ್ರಾಂತಿಯನ್ನು ಉಂಟು ಮಾಡುವ ಅಲಂಕಾರ : ಉದಾಹರಣೆಗೆ — ' ಈ ದುಂಬಿಯು ನಿನ್ನ ಮುಖವನ್ನು ಕಮಲವೆಂದು ತಿಳಿದುಕೊಂಡುಬಿಟ್ಟಿದೆ ' — ಎಂಬ ಈ ವಾಕ್ಯದಲ್ಲಿ ಸುಂದರಿಯೊಬ್ಬಳ ಮುಖಕ್ಕೂ ಕಮಲಕ್ಕೂ ಸಾದೃಶ್ಯವಿರುವುದರಿಂದ ದುಂಬಿಗೆ ಮುಖದಲ್ಲಿ ಕಮಲವೆಂಬ ಭ್ರಾಂತಿಯುಂಟಾಯಿತು ಎಂದು ವರ್ಣಿಸಿರುವುದರಿಂದ ಇದು ಭ್ರಾಂತಿಮದಲಂಕಾರ : ಒಂದು ವಸ್ತುವಂ ಪೆಱತೊಂದು ವಸ್ತುವೆಂದು ಭ್ರಮಿಸುವುದು ಭ್ರಾಂತಿಮದಲಂಕಾರಂ ಎಂದುಂ (ಅಪ್ರತಿ. ೯೩-೦೩) ; ಸಾದೃಶ್ಯಮೂಲಕ ಸ್ಮೃತಿ ಸಂದೇಹ ಭ್ರಾಂತಿಗಳಿಂ ಪ್ರತ್ಯೇಕಮಾಗಿ ಸ್ಮೃತಿಮದಲಂಕಾರಂ ಸಂದೇಹಾಲಂಕಾರಂ ಭ್ರಾಂತಿಮದಲಂಕಾರಂ ಎಂಬಿವಕ್ಕುಂ (ಪಕಕ. ೨೪). [ಸಂ.]

**ಭ್ರಾಂತಿಯೋಗ** (ನಾ). (ಆಲಂ) ಇತರರಿಗೆ ಭ್ರಮೆಯನ್ನುಂಟುಮಾಡುವ ಸ್ಥಿತಿ : ಸೊಗಸು ಮಿಗಲಲೆದೆಱೆದ ಲೋಚನಯುಗಳ ಸಮತಳಿಸಿದ ಸುಷುಪ್ತಿಯ ಬಿಗುಹಿನಲಿ ಪರಮಾತ್ಮನೆಸೆದನು ಭ್ರಾಂತಿಯೋಗದಲಿ (ಕುಮಾಉ. ೦-೨೩). [ಸಂ.]

**ಭ್ರಾಂತಿವಡೆ** (ಕ್ರಿ). ಭ್ರಾಂತಿಯನ್ನು ಹೊಂದು : ಎಂತು ಸೈರಿಪೆ ಕನಸಲ್ಲಿ ಕಂಡ ವಿರಹದ ಭ್ರಾಂತಿವಡೆದ ನೀಱೆ ತನ್ನ ಅಂತಕಾಲದೆ ನೀ ಜೀವಿಸಲಾಱೆಂದು ಸಂತವಿಡಿದನು ಮಾನಿನಿಯ (ಜೋಚಕ. ೬೬-೩೦).
[ ಭ್ರಾಂತಿ + ಪಡೆ$_1$ ]

**ಭ್ರಾಂತಿವಿಡಿ** (ಕ್ರಿ). ಭ್ರಾಂತಿಯನ್ನು ಹೊಂದು ; ತಪ್ಪುತಿಳಿವಳಿಕೆಯನ್ನು ತಾಳು : ಅಱಿಯದೆ ಭ್ರಾಂತಿವಿಡಿದೇ ತೀರ್ಥಯಾತ್ರೆಗಳಂತವಿಲ್ಲದೆ ತಿರುತಿರುಗಿ ಬೇಸತ್ತು ಬೆಂಡಾಗಿ (ಗಗಣ. ೯-೯೯). [ಭ್ರಾಂತಿ + ಪಿಡಿ$_1$]

**ಭ್ರಾಂತಿಸು** (ಕ್ರಿ). ತಪ್ಪಾಗಿ ತಿಳಿ ; ಭ್ರಮೆಗೆ ಒಳಗಾಗು : ಪ್ರಿಯಕಾಂತಾಭ್ರೂವಿಭ್ರಮಗ್ರಹಾಗ್ರಹವಶದಿಂ ಭ್ರಾಂತಿಸದುಪಶಾಂತಮನಂ ಶಂತನು ಗಿತ್ತಂ ಸಮಸ್ತರಾಜ್ಯಶ್ರೀಯುಂ (ಕುಕಪಾ. ೦-೬೬) ; ಗ್ರಂಥಕಾರನ ಸಂಕಲನೆಯೊಳು ವಿರೋಧಿಸಲ್ಪಡುಗುಮೆಂದು ಭ್ರಾಂತಿಸಲ್ವೇಡ (ಗೂಡುಕಾ. ೩೬-೬).
[ ಭ್ರಾಂತಿ + — ಇಸು$_1$ ]

**ಭ್ರಾಂತು** (ನಾ). ೧. ತಪ್ಪು ತಿಳಿವಳಿಕೆ ; ಭ್ರಮೆ : ಪಾಪ ನೇನೆಂಬ ಭ್ರಾಂತುಳ್ಳನ್ನಕ್ಕ ನಾನು ಭಕ್ತನೆಂತಪ್ಪೆನು (ಬಸವ. ೯೦೩) ; ಅವನಿಯೊಳಾಂ ಕ್ಷುಲ್ಲಕಂ ತಪ್ಪದೆಂಬೀ ಭ್ರಾಂತಂ ಬಿಟ್ಟಿರ್ಪುದಿನ್ನಾದಪೆ ನಿಖಿಳಜನಾನೀಕದಿಂ ಪೂಜ್ಯನಾಂ (ಜಾರಕ. ೬-೬೨) ; ವಿರಕ್ತನಾದ ಬಳಿಕ ಚಿಂತೆ ಭ್ರಾಂತುಗಳನಳಿದು . . . ಮಹಾಬಯಲು ನಿಜವಾಸಿಯಾಗಿರಬೇಕು (ಶಿವಶರ. ೦೩೯-೦೨೦).
೨. ಸಂದೇಹ ; ಸಂಶಯ : ಭ್ರಾಂತೇಂ ಜಗತ್ಪ್ರಸಿದ್ಧ ಚಿರಂತನ ನೂತನ ಮಹಾಕವೀಶ್ವರಕೃತಿ ಶಾಸ್ತ್ರಾಂತರಸ್ಮಾರತೆ ನಿಶ್ಚೈ ನಿರಂತರ ಮಸ್ಮತ್ಪ್ರಣೀತ ಜಾತಕಕೃತಿಯೊಳ್ (ಜಾತಕ. ೦-೩) : ಮಿಪಾಸಕ್ಕಂ ಕೂರ್ಮಕ್ಕಂತೇನೊಂದಂ ಪ್ರೋಥರೇಖೆ ಪೋಲ್ತೊಡಮಿರ್ಪತ್ತಾನಾಲ್ಕು ವರ್ಷದೊಳ್ ಸಾವಾನುಂ ಭ್ರಾಂತಿಲ್ಲದಕ್ಕು (ಅಶ್ವಶಾ. ೩-೩೦). ೩. ಭ್ರಮೆಗೊಳಗಾದವನು ; ಮರುಳ : ಭ್ರಾಂತುಗಳಿರಾ ಶಿವಮಥನಸುಖವೇಕಹುದು ನಿಮಗೆ (ಬಸವು. ೩೦-೨೩). [ < ಸಂ. ಭ್ರಾಂತಿ ]

**ಭ್ರಾಂತುಮಾರಿ** (ನಾ). ಭ್ರಮೆಗೊಂಡವನು ; ಭ್ರಾಂತಿಶೀಲ : ಜಗದ ಪಾತಕರ ಘಾತಿಸದೆ ವಿಷಯುವನಱಿಯದೆ ಆಶೆಯಲ್ಲಿ ಸುಳಿವ ಭ್ರಾಂತುಮಾರಿಗಳನೇನೆಂದಱಿಯದೆ (ಶೋಚಶಾ. ೩೯-೦೯೩). [ಭ್ರಾಂತು + — ಮಾರಿ$_1$]

**ಭ್ರಾಂತುವಿಡಿ** (ಕ್ರಿ). ಭ್ರಮೆಯನ್ನು ಹೊಂದು : ಅಜ್ಞಾನದಿಂದ ಕೂಡಿರು : ಭ್ರಾಂತುವಿಡಿದು ಲಿಂಗಕೋಗರವನಱಸುವ ಪಾತಕರ ಮೆಚ್ಚ ಕೂಡಲಸಂಗಮದೇವ (ಬಸವ. ೬೬೨). [ಭ್ರಾಂತು + ಪಿಡಿ$_1$]

**ಭ್ರಾಜಿತ** (ಗು). ೧. ಹೊಳಪುಗೊಂಡ ; ಪ್ರಕಾಶಮಾನವಾದ ; ಕಾಂತಿಯುಕ್ತವಾದ : ಮುಂದೊಂದೆಡೆಯೊಳ [ದ] ಭ್ರೂಭ್ರವಿಭ್ರಮಭ್ರಾಜತೋತ್ತುಂಗಶೈಲಮಂ ಕಂಡು (ಶಂಕಶಾ. ೯-೨೩ ಪ); ಅಭ್ರಂಕಷಹರ್ಮ್ಯಾಗ್ರತಳ ಭ್ರಾಜಿತ ಮತ್ತವಾರಣಸ್ಥಿತ ಕಾಂತಾವಿಭ್ರಮನಿರೀಕ್ಷಣೋಪಗತಭ್ರಮದಿಂದಮರಸಮಿತಿಗಾಯ್ತನಿಮೇಷಂ (ಶಂಕ್ರಕೃ.೦-೦೨೬). (ನಾ). ೨. ಪ್ರಕಾಶಮಾನವಾದುದು ; ಕಾಂತಿಯುಕ್ತವಾದುದು : ಅನತಿಶಿಪ್ಲೋಷ್ಠಭ್ರಾಜಿತಮಾಯ್ತಾನನ ಶುಭ್ರಾಂಬುಜಮಾತ್ಮಭಾವನಾತತ್ಪರನಾ (ಶಂದ್ರಕೃ. ೦೯-೦೯). ೩. ಪ್ರಕಾಶಮಾನನಾದವನು ; ಕಾಂತಿಯುಕ್ತನಾದವನು : ಧವಳಿಕಾತಪತ್ರಚಾರುಚಾಮರಚತುಷ್ಟಯಭ್ರಾಜಿತನುಂ (ಕಸಾಬಚಾ. ೬-೬೯ ಪ).
[ಸಂ.]

**ಭ್ರಾಜಿಷ್ಣು** (ಗು). ೧. = ಭ್ರಾಜಿತ ೧. (ನಾ). ೨. = ಭ್ರಾಜಿತ ೩ : "ವಿಭ್ರಾಟ್, ಭ್ರಾಜಿಷ್ಣುಃ, ರೋಚಿಷ್ಣುಃ—೩ ಭೂಷಣಾದಿಗಳಿಂದ ಪ್ರಕಾಶಿಸುತ್ತಿರುವವನ ಹೆಸರುಗಳು" (ಸಿದ್ಧಾಂತಿ. ೦೯೯) ; ಬಂದನೀಕ್ಷಿಸುವ ಲಂಪಿಂ ವಜ್ರಿ ಗೋವರ್ಧನಾಚಳಭಾರೈಕಸಹಿಷ್ಣುವಂ ಜಳಧರಭ್ರಾಜಿಷ್ಣುವಂ ವಿಷ್ಣುವಂ (ಜಗಂ. ೯-೯೯) ; ನುತಿಗೆಯ್ದಂ . . . ಸಿತ ಶೂಲಾಹತನಾಗನಾಗಭರಣ ಭ್ರಾಜಿಷ್ಣುವಂ ಜಿಷ್ಣುವಂ (ರಾಜಶೇ. ೩-೩೩). ೩. ಶಿವ : ಭ್ರಾಜಿಷ್ಣು ಭರ್ಗಂ . . . ರಕ್ಷಿಕ್ಕೆ ವೀರೇಶ್ವರಂ (ಹರ್ಷ್ಮಾಕ. ೦-೬). ೪. ವಿಷ್ಣು. [ಸಂ.]

**ಭ್ರಾತೃ** (ನಾ). ೧. ಅಣ್ಣ ಅಥವಾ ತಮ್ಮ ; ಒಡಹುಟ್ಟಿದವನು : "ಸಹಜಾತಂ ಸಹೋದರಂ ಸೋದರಂ ಭ್ರಾತೃವೆನಲೊಡಹುಟ್ಟಿದಂ" (ಶಬ್ದಗಾ. ೯೨-೦೦); ಅಂತಃಕಲಹದಿಂದಾಗಿ ಭ್ರಾತೃಗಳಲ್ಲಿ ಯುದ್ಧ ಪ್ರಾರಂಭವಾಯಿತು (ಸೋಸಂ. ೩೨). ೨. [ಜ್ಯೋತಿ] ಲಗ್ನದಿಂದ ಮೂರನೆಯ ಸ್ಥಾನ ; ಸಹೋದರಸ್ಥಾನ : ಲಗ್ನದಿಂ ಚತುಸ್ತನು ದಶಲಾಭಂಪು ಭ್ರಾತೃವಿನೊಳ್ [ಜಾತಾ. ತ್ರಿರಾಶಿಯೊಳ್] . . . ಶುಭಪ್ರದನಸಿತಂ (ಜಾತಕ. ೦೦-೦೩). [ಸಂ.]

**ಭ್ರಾತೃಜ** (ನಾ). ಅಣ್ಣನ ಅಥವಾ ತಮ್ಮನ ಮಗ ; ದಾಯಾದಿ : "ಭ್ರಾತ್ರೀಯಃ, ಭ್ರಾತೃಜಃ—೨ ಒಡಹುಟ್ಟಿದವನ ಮಗ, ಅಣ್ಣನ ಮಗ, ತಮ್ಮನ ಮಗ" (ಸಿದ್ಧಾಂತಿ. ೦೬೬). [ಸಂ.]

**ಭ್ರಾತೃಜಾಯೆ** (ನಾ). ಸಹೋದರನ ಹೆಂಡತಿ : "ಪ್ರಜಾವತೀ. ಭ್ರಾತೃಜಾಯಾ—೨ ಒಡಹುಟ್ಟಿದವನ ಹೆಂಡತಿ" (ಸಿದ್ಧಾಂತಿ. ೦೬೩).
[ ಸಂ. ಭ್ರಾತೃಜಾಯಾ ]

**ಭ್ರಾತೃದ್ರೋಹ** (ನಾ). ಒಡಹುಟ್ಟಿದವರು ಪರಸ್ಪರರಿಗೆ ಮಾಡುವ ಮೋಸ,-ವಿಶ್ವಾಸಘಾತ : (೬). [ಸಂ.]

**ಭ್ರಾತೃಪುತ್ರ** (ನಾ). = ಭ್ರಾತೃಜ : "ಭ್ರಾತೃವ್ಯಃ, ಭ್ರಾತೃಪುತ್ರಃ, ಭ್ರಾತ್ರೀಯಃ, ಭ್ರಾತೃಜಃ — ಈ ೪ ಒಡಹುಟ್ಟಿದನ ಮಗಂ" (ಹಲಾಯು. ೯೩-೩೩೨) ; ಧರ್ಮರಿಗೆ ಶ್ರೀಮಾನ್ ಎಸ್. ಜಿ. ನರಸಿಂಹಾಚಾರ್ಯರು ನನ್ನ ಸಮೀಪಬಂಧು. ಭ್ರಾತೃಪುತ್ರರು ಎಂಬಂಶವು ತಿಳಿದಿರಲಾರದು (ಕಂಠ. III. XXXVII. ಅವತರಣಿಕೆ). [ಸಂ.]

**ಭ್ರಾತೃರೇಖೆ** (ನಾ). [ಸಾಮುದ್ರಿ] ಅಣ್ಣ ತಮ್ಮಂದಿರ ವಿಚಾರವನ್ನು ತಿಳಿಸುವ ಅಂಗೈಯಲ್ಲಿರುವ ಗೆರೆ : ಕಿರುಬೆರಳ ತಾಳಿನಲ್ಲಿ ಭ್ರಾತೃರೇಖೆ ಯಿರುವುದು (ಸಾಮುಂ. ೯೬-೬). [ಸಂ. ಭ್ರಾತೃರೇಖಾ]

**ಭ್ರಾತೃವಧು** (ನಾ).=ಭ್ರಾತೃಜಾಯೆ : "ಪ್ರಜಾವತೀ, ಭ್ರಾತೃವಧೂಃ — ಈ ೨ ನಾ(ದಿ)ದುನಿ" (ಹಲಾಯು. ೯೩-೩೩೦). [ಸಂ.]

**ಭ್ರಾತೃವ್ಯ** (ನಾ). ೧. = ಭ್ರಾತೃಜ : "ಭ್ರಾತೃವ್ಯಃ, ಭ್ರಾತೃಪುತ್ರಃ, ಭ್ರಾತ್ರೀಯಃ, ಭ್ರಾತೃಜಃ — ಈ ೪ ಒಡಹುಟ್ಟಿದನ ಮಗಂ" (ಹಲಾಯು. ೯೩-೩೩೨). ೨. ಶತ್ರು ; ಹಗೆ. [ಸಂ.]

**ಭ್ರಾತ್ರೀಯ** (ಗು). ೧. ಸಹೋದರನಿಗೆ ಸಂಬಂಧಿಸಿದ ; ಸಹೋದರ ನಿಗೆ ಸೇರಿದ. (ನಾ). ೨. = ಭ್ರಾತೃಜ : "ಭ್ರಾತೃವ್ಯಃ, ಭ್ರಾತೃ ಪುತ್ರಃ, ಭ್ರಾತ್ರೀಯಃ, ಭ್ರಾತೃಜಃ— ೪ ಒಡಹುಟ್ಟಿದನ ಮಗಂ" (ಹಲಾಯು. ೯೩-೩೩೨). [ಸಂ.]

**ಭ್ರಾಮ** (ನಾ). ೧. ಅಲೆದಾಟ ; ತಿರುಗಾಟ. ೨. ಭ್ರಾಂತಿ ; ಭ್ರಮೆ. [ಸಂ.]

**ಭ್ರಾಮಕ** (ಗು). ೧. ತಿರುಗುವಂತೆ ಮಾಡುವ ; ಸುತ್ತಿಸುವ. ೨. ಭ್ರಮೆಯನ್ನುಂಟುಮಾಡುವ ; ತಪ್ಪು ತಿಳಿವಳಿಕೆಯನ್ನು ಕೊಡುವ ; ಮಿಥ್ಯಾಜ್ಞಾನವನ್ನುಂಟುಮಾಡುವ : ಆತುರಾತುರದೊಳು ಮದುವೆ ನಿಂದನು ಅರಿದು ಭ್ರಾಮಕಸುಖದೊಳು ಸಂದು (ಇಂಶಾಕ. ೨೦೩-೩೨) ; ಅನೇಕ ಭಾಷೆಗಳ ಲಿಂಗವಿಂಗಡಣೆಯಲ್ಲಿ ಚಂಚಲ ಹಾಗೂ ಭ್ರಾಮಕ ಅಂಶ ಗಳು ಇರುವುದೇ ಈ ಅಪಹಾಸ್ಯಕ್ಕೆ ಕಾರಣವಿದ್ದಿರಬೇಕು (ಪ್ರಾ.ಶಿ. ೨೩೬). ೩. ಮೋಸದ ; ಕಪಟದ. (ನಾ). ೪. ತಪ್ಪುತಿಳಿವಳಿಕೆ ; ಭ್ರಾಂತಿ ; ಭ್ರಮೆ : ಭ್ರಮೆಯೊಳಗೆ ತನ್ನಯ ಭ್ರಾಮಕ ಹಿಂಗಿದಲ್ಲದೆ ಕಂಡುದ ಕಾಣ ಬಾರದೆಂಬುದಕ್ಕೆ ಸೂಚನೆ (ಶೂನ್ಯಸಂ. ೧೧೦-೬೨೦) ; ಪಾಶವದಿತು ಗುರು ವಾಗಬೇಕು ವೇಷವದಿತು ಚರವಾಗಬೇಕು ಭ್ರಾಮಕವದಿತು ಲಿಂಗವಾಗಬೇಕು (ಶವಗೋ. ೫೦-೦೦೩). ೫. ಮೋಹ ; ವ್ಯಾಮೋಹ : ಪರಮಪತಿವ್ರತೆ ಯಾಗಿರ್ದು ತನಗೀ ತರಳನ ಮೇಲೆ ಭ್ರಾಮಕ ಇರಲೀಯದೊಡಲನೀಡಾಡು ವೆನು (ಸೋಹಕ. ೦೦-೯೩). ೬. ಭ್ರಮೆಯನ್ನುಂಟುಮಾಡುವುದು ; ಸುಳ್ಳನ್ನು ನಿಜವೆಂದು ನಂಬಿಸುವುದು : ಮೋಸ : ಭೊಮಿಾಶನತ್ತವನೆ ತನ್ನ ತನುಭಾಗವುಂ ಭ್ರಾಮಕವಿದೆಂದು ಜಱಿದು (ಕೈ.ಬಿಚಾ. ೨೬-೯೦). ೭. ಸೂಜಿಗಲ್ಲು ; ಅಯಸ್ಕಾಂತ : "ಚುಂಬಕಃ, ಭ್ರಾಮಕಃ ಮೊದ ಲಾದುವು ಅಯಸ್ಕಾಂತದ ಭೇದಂಗಳ್" (ಹಲಾಯು. ೨೩-೦೩) ; ತತ್ತ ರಣಿಯ ಬಱಿಪಟಯಂ ಪತ್ತಿ . . . ಮುನಿಪಂ ಭ್ರಾಮಕದತ್ತೆಳಸುವ ಪಚ್ಚಿಗರ್ಬುನಕ್ಕೆಣೆಯಾದಂ (ಸಂಶಾಚ. ೬-೯೩) ; ಇವೊತ್ತಿನ ವಿದ್ಯುಜ್ಜನಕ ಗಳಲ್ಲಿ ಒಂದೇ ಚಾಲಕದಂಡದ (Driving Shaft) ಮೇಲೆ ಅನೇಕ ಭ್ರಾಮಕ ಗಳನ್ನು ಜೋಡಿಸಿರುತ್ತಾರೆ (ಶಿಲ್ಪಾ. ೨೯೨). ೮. ಧೂರ್ತ ; ಮೋಸ ಗಾರ. ೯. ನರಿ. ೧೦. ಸೂರ್ಯಕಾಂತಿ ಹೂವು. [ಸಂ.]

**ಭ್ರಾಮಕಗೊಳ್ಳು** (ಕ್ರಿ). ಮರುಳಾಗು ; ಮೋಹಗೊಳ್ಳು : ಸತ್ಕೋಮ ಲಾಂಗಿಯು ಪೇರುರದ ಹೇಮಾಬ್ಜಮುಕುಳಸ್ತನ ಬಗಿವಡೆದಿರೆಭ್ರಾಮಕಗೊಂಡು ವೀಕ್ಷಿಸಿದ (ಸೋಹಕ. ೦೬-೩೬). [ಭ್ರಾಮಕ+ಕೊಳ್ಳು$_1$ (<ಕೊಳ್$_1$)]

**ಭ್ರಾಮಕರತಿ** (ನಾ). [ಕಾಮಶಾ] ಒಂದು ಬಗೆಯ ರತಿ : ಪ್ರಪಂಚದಲ್ಲಿ ಸ್ತ್ರೀಯರೆ ಅವರ ಮನಃಪೂರ್ವಕ ಮನಸ್ಸಿಟ್ಟು ರಮಿಸಿದರೆ ಮಹಾರತಿ. ಆಕೆ ಮನಸ್ಸಿಲ್ಲದೆ ರಮಿಸುವದು ಭ್ರಾಮಕರತಿ ಎಂದು ತಿಳಿಯುವದು (ಕಾಮಶಾ. ೨೩೦). [ಸಂ.]

**ಭ್ರಾಮಕವಡಿಸು** (ಕ್ರಿ). ಮೋಹಗೊಳಿಸಂ : ಮರುಳುಮಾಡು : ನಿನ್ನನ್ನು ತಾಮರಸಾಸ್ತ್ರದೊಳೆಚ್ಚು ಭ್ರಾಮಕವಡಿಸಿದನಿವನೀಗ ನೋಡೆಂದು ಕಾಮನ ರೂಹ ತೋಱಿದಳು (ಸೋಹಕ. ೬೦-೩೦). [ಭ್ರಾಮಕ + ಪಡಿಸು]

**ಭ್ರಾಮಕವಡೆ** (ಕ್ರಿ). ಮರುಳಾಗು ; ಮೋಹಗೊಳ್ಳು : ಕಾಮನ ತರಳ ವಿಗ್ರಹದ . . . ಮಾನಿನಿ ಕಂಡು ಭ್ರಾಮಕವಡೆದಳಾಕ್ಷಣದಿ (ಸೋಹಕ. ೦೩-೯೩). [ಭ್ರಾಮಕ + ಪಡೆ$_1$]

**ಭ್ರಾಮಕಾಸ್ತ್ರ** (ನಾ). ದಿಗ್ಭ್ರಮೆ ಹಿಡಿಸುವ ಅಸ್ತ್ರ ; ಸಮ್ಮೋಹನಾಸ್ತ್ರ : ಭ್ರಾಮಕಾಸ್ತ್ರಗಳಂ ಸಂಧಿಸಿಯುಂ ಕಡುಕೆಯ್ದು ಪುಷ್ಕಲನೊಳ್ ಚಿತ್ರಂ ಚಿತ್ರತರವಾಗಿ ಕೈಗೆಯ್ದುತಿರ್ದಂ (ರಾವಾಶ್ವ. ೯೬-೯). [ಸಂ.]

**ಭ್ರಾಮರ** (ನಾ). ೧. ದುಂಬಿಯಿಂದಾದುದು ; ದುಂಬಿಗೆ ಸಂಬಂಧ ಪಟ್ಟುದು. ೨. ಜೇನುತುಪ್ಪ. ೩. ಸಂತ್ಸುವಿಕೆ ; ತಿರುಗುವಿಕೆ. ೪. (ಅಲಂ) ಮನಸ್ಸಿನ ಅಲೆದಾಟ ; ಭ್ರಾಂತಿ ; ಅಜ್ಞಾನ : ತ್ಯಾಗಾಂಗ ಭೋಗಾಂಗ ಯೋಗಾಂಗ ಸ್ಪರ್ಶನಸಮಾಧಾನ ಸುಚಿತ್ತವಿರ್ದು ಮತ್ತ ಇತ್ಯಾದಿಗಳಲ್ಲಿ ನೋಡಿಹೆನೆಂಬ ಭ್ರಾಂತು ಭ್ರಾಮರವೇತಕ್ಕೆ (ಶೂನ್ಯಸಂ. ೦೧೦-೬೦೩). [ಸಂ.]

**ಭ್ರಾಷ್ಟ್ರ** (ನಾ). ೧. ಹುರಿಯುವ ಓಡು ; ಬಾಂಡಲೆ : "ಅಂಬರೀಷಃ, ಭ್ರಾಷ್ಟ್ರಂ—ಈ ೨ ಹುರಿಗಾವಲಿ" (ಹಲಾಯು. ೩೨-೦೫೬) ; "ಭ್ರಾಷ್ಟ್ರ ಮಂಬರೀಷಂ ಹುರಿವ ಹಂಚಕ್ಕು" (ಸಂಗಣಾ. ೬೨-೨೪). ೨. ಬೆಳಕು ; ಪ್ರಕಾಶ. ೩. ಆಕಾಶ. [ಸಂ.]

**ಭ್ರಾಷ್ಟ್ರಕ** (ನಾ). = ಭ್ರಾಷ್ಟ್ರ ೧. [ಸಂ.]

**ಭ್ರುಕಂಸ** (ನಾ). ಹೆಂಗಸಿನ ವೇಷಧಾರಿಯಾದ ನಟ : "ಭ್ರುಕಂಸಃ, ಭ್ರುಕುಂಸಃ, ಭ್ರೂಕುಂಸಃ — ೩ ಸ್ತ್ರೀವೇಷಧಾರೀ— ಹೆಣ್ಣುವೇಷವನ್ನು ಧರಿಸಿದ, ನರ್ತಕಃ, ಪುರುಷಃ, ಕುಣಿಯುವ ಗಂಡಿನ ಹೆಸರುಗಳು" (ಸಿದ್ಧಾಂತಿ. ೬೦). [ಸಂ.]

**ಭ್ರುಕುಟಿ** (ನಾ). ೧. (ಕೋಪ ಮೊದಲಾದ ಕಾರಣದಿಂದ ಉಂಟಾ ಗುವ) ಹುಬ್ಬುಗಂಟು ; ಭ್ರೂಭಂಗ : ಪಿರಿದುಂ ಪ್ರಯತ್ನದಿಂದಮೆ ವಿರಚಿಸೆ ಬಗ್ಗೆಸಪ ಭೀಷಣಭ್ರುಕುಟಿ ಪೊದಟ್ಟಿರೆ (ಕಾದಂಪೂ. ೬೦೦); ಭ್ರುಕುಟಿ ಪೊದಳ್ದಿಡೆಗೊಂಡಿರೆ ಕೋಪಾಗ್ನಿಯು ಪೊಡರ್ಪು ರೂಪಾಂತ ತೆಱದೆ ಘುಡುಘುಡಿಸುತ್ತುಂ (ರಾಜಶೇ. ೦೯-೬). ೨. [ನಾಟ್ಯ] ಅಭಿನಯದಲ್ಲಿ ಹುಬ್ಬಿನ ಏಳು ಭೇದಗಳಲ್ಲಿ ಒಂದು ; "ಎರಡು ಹುಬ್ಬುಗಳನ್ನು ಜಾಗ್ರತೆ ಮೇಲೆತ್ತುವುದು" (ಶಾಸ್ತ್ರರಂ. ೨೭೨ ಗದ್ಯಾನುವಾದ) : ಸಹಜ, ಪತಿತ, ಉತ್ಕ್ಷಿಪ್ತ, ರೇಚಿತ, ಕುಂಚಿತ, ಭ್ರುಕುಟಿ, ಚತುರ—ಈ ಏಳು ಹುಬ್ಬಿನ ಭೇದಂಗಳ್ . . . ಫಳಿಲನೆಯೆತ್ತಲ್ಕೆರಡುಂ ಜಲಜಾಕ್ಷೀ ಭ್ರುಕುಟಿ ಯೆಂಬ ಪುರ್ಬೆಸೆದಿರ್ಕುಂ (ಶಾಸ್ತ್ರರಂ. ೩-೯೩). [ಸಂ.]

**ಭ್ರೂಕುಂಸ** (ನಾ). = ಭ್ರುಕಂಸ : "ಭ್ರುಕುಂಸಃ, ಭ್ರುಕಂಸಃ, ಭ್ರೂಕುಂಸಃ— ೩ ಸ್ತ್ರೀವೇಷಧಾರೀ — ಹೆಣ್ಣುವೇಷವನ್ನು ಧರಿಸಿದ ನರ್ತಕ, ಪುರುಷ, ಕುಣಿಯುವ ಗಂಡಿನ ಹೆಸರುಗಳು" (ಸಿದ್ಧಾಂತಿ. ೬೦). [ಸಂ.]

**ಭ್ರೂಕುಟಿ** (ನಾ). = ಭ್ರುಕುಟಿ ೧ : "ಭ್ರುಕುಟಿಃ, ಭ್ರೂಕುಟಿಃ — ೨ ಹುಬ್ಬು (ಪುರ್ಬು) ಗಂಟಿಕ್ಕುವುದು" (ಹಲಾಯು. ೦೨೬-೯೦). [ಸಂ.]

**ಭ್ರೂಕೋಟಿ** (ನಾ). ಹುಬ್ಬಿನ ಕೊನೆ,— ತುದಿ : ಈ ಜಗದೊಳ್ ಬದ್ದೆಗ ನನ್ನನಾತನಿಟಿಸಂ ಭ್ರೂಕೋಟಿಯಿಂ ಕೋಟಿಯುಂ (ಶಂಕರಾ. ೦-೨೬);

ಕಾರುಣ್ಯದೃಷ್ಟಿಯೊಳಿತ್ತಂ ಧರಣೀಶ್ವರಂ ಕನಕಮಂ ಭ್ರೂಕೋಟಿಯಿಂ ಕೋಟಿಯುಂ (ಮಲ್ಲಿ. ೩-೪೪). [ಸಂ.]

**ಭ್ರೂಣ** (ನಾ). ೧. ಗರ್ಭಸ್ಥ ಶಿಶು ; ಪಿಂಡ : " ಗರ್ಭಃ, ಭ್ರೂಣಃ —ಈ ೨ ಗರ್ಭಂ " (ಕರ್ಣಾ. ೯೨-೩೪೩); ತಾಯಿಯ ಗರ್ಭದಲ್ಲಿ, ತಾಯಿಯಿಂದಲೇ ಆಹಾರವನ್ನು ಪಡೆದು ಬೆಳೆಯುವ ಮನುಷ್ಯನ ಭ್ರೂಣವೂ (Embryo) ಕೂಡ ಶಾಸ್ತ್ರೀಯವಾಗಿ ನೋಡಿದರೆ ಪರತಂತ್ರಜೀವಿಯೇ (ಪರೋ. ೯). ೨. ಕೂಸು ; ಶಿಶು ; ಮಗು. ೩. ಹುಡುಗ ; ಬಾಲಕ. ೪. ಬಸುರಿ ; ಗರ್ಭಿಣಿ ; " ಬಸುರಿ ಸತಿಯೊಳ್ ಭ್ರೂಣವೆಂಬುದು " (ಮಂಗರಾ. ೧೪೦-೦೨). ೫. ಸಸ್ಯದ ಅಂಕುರ ; ಮೊಳಕೆ : ಈ ಅಂಡವು ಪರಾಗನಳಿಕೆಯ ದ್ರವದೊಂದಿಗೆ ಸ್ಪರ್ಶವಾದ ಮೇಲೆಯೇ ಭ್ರೂಣವು ತಯಾರಾಗುವುದೆಂದೂ ಖಚಿತವಾಗಿ ನಿರ್ಧರಿಸಲ್ಪಟ್ಟಿತು (ಸಸ್ಯ. ೦೮) ; ಭತ್ತದ ಉಮಿ ಅಥವಾ ಹೊರಕವಚವನ್ನು ತೆಗೆದರೆ ಬರುವ ಅಕ್ಕಿಯಲ್ಲಿ ಮೇಲ್ಭಾಗದಲ್ಲಿ ಭ್ರೂಣ . . . ಮತ್ತು ಒಳಗೆ ಪಿಷ್ಟದ ಭಾಗ ಇರುತ್ತವೆ (ಅಮೃತ. ೬೨). ೬. ಮೂಲಾವಸ್ಥೆಯಲ್ಲಿರುವ ವಸ್ತು ; ಮೂಲವಸ್ತು : ಈ ಹಂತದಲ್ಲಿ ರೂಪುಗೊಂಡ ವಸ್ತುಗಳನ್ನು ಸೌರವ್ಯೂಹದ ಗ್ರಹಗಳ ಮತ್ತು ಇತರ ವಸ್ತುಗಳ ಭ್ರೂಣಗಳೆಂದು ವರ್ಣಿಸಬಹುದು (ಖಗೋಳ. ೩೯). ೭. (?) : "ಗರ್ಭಿಣೀ ಜ್ವಾಲೆಯಶೀವ ಬಾಲಕರುವಿಂತಿವು ಭ್ರೂಣಮೆನಿಕ್ಕು" (ನಾನಾರ್. ೧೩೪). [ಸಂ.]

**ಭ್ರೂಣಹತ್ಯ** (ನಾ). ಗರ್ಭದಲ್ಲಿರುವ ಶಿಶುವನ್ನು ನಾಶಪಡಿಸುವುದು,-ಕೊಲ್ಲುವುದು : ಅಂದು ಕಣ್ಣಪ್ಪನ ನಯನವಿರೆ ಇಂದುಜೂಟಂ ಭ್ರೂಣಹತ್ಯಕೆ ಬಂದು ನಿಲುವನೆ (ಬಸವ. ೦೮-೪೦); ಆತ್ಮಹತ್ಯ ಭ್ರೂಣಹತ್ಯದೋಷಂಗಳೊರ್ಮೊದಲೊಳೆ ಬಂದೊದವುಗುಮೆಂದೆ ಮಾಣ್ದಂ (ರಾಜಶೇ. ೪೨-೩). [ಸಂ.]

**ಭ್ರೂಣಹತ್ಯಾಪಾತಕ** (ನಾ). ೧. ಗರ್ಭದಲ್ಲಿರುವ ಶಿಶುವನ್ನು ಕೊಂದುದರಿಂದ ಬರುವ ಪಾಪ. ೨. ಹಸುಳೆಯನ್ನು ಕೊಂದುದರಿಂದ ಉಂಟಾಗುವ ಪಾಪ ; ಬಾಲವಧೆಯಿಂದ ಬರುವ ದೋಷ : ಕರೆನಿಮ್ಮಾತಗಳನೀ ಭ್ರೂಣಹತ್ಯಾಪಾತಕಕ್ಕಂಜುವೆನು (ಕುಮಾರವ್ಯಾ. ೩-೨೩) ; ಈ ತರಳನ ಮರ್ದಿಸಿ ಭ್ರೂಣಹತ್ಯಾಪಾತಕವನು ಕಟ್ಟಿಕೊಳಲು ಏತಕೆ (ಮೋಹನ. ೦೦-೨೭). [ಸಂ.]

**ಭ್ರೂಣಹತ್ಯಾಪಾತಕಿ** (ನಾ). ಬಾಲಕನನ್ನು ಕೊಂದ ಪಾಪಿ : ಆತುಕೊಳ್ಳೆಲೆ ಭ್ರೂಣಹತ್ಯಾಪಾತಕಿಯೆ ಪಡಿತಳಿಸು ವಿಶಿಖವ್ರಾತವಿದೆಯೆನುತೆಚ್ಚನಿನ ಸುತನನಿಲನಂದನನ (ಕುಮಾರ. ೦೦-೪೦). [ಸಂ. ಭ್ರೂಣಹತ್ಯಾಪಾತಕಿನ್]

**ಭ್ರೂಣಹತ್ಯೆ** (ನಾ). =ಭ್ರೂಣಹತ್ಯ : ಭ್ರೂಣಹತ್ಯೆ ನಮ್ಮ ಮೊದಲನೆಯ ಹೆಜ್ಜೆ (ಚಂದ್ರಮ. ೪೩-೨೦). [ಸಂ. ಭ್ರೂಣಹತ್ಯಾ]

**ಭ್ರೂಭಂಗ** (ನಾ). = ಭ್ರುಕುಟಿ ೧ : ಪ್ರಕುಪಿತಮೃಗಪತಿಶಿಶುಸನ್ನಿಕಾಶರತಿವಿಕಟಭೀಷಣಭ್ರೂಭಂಗರ್ ನಕುಲ ಸಹದೇವರ್ (ಪಂಪಭಾ. ೬-೯) ; ನಿಮಗಿನಿತು ಭಂಗಮಂ ಮಾಡಿದಂಗವಾದಿಗಳಂ ಭ್ರೂಭಂಗಮಾತ್ರದೊಳೆ ಸೆಱೆಗೆಯ್ದು ತಂದು . . . ಪರಿಭವಿಸುವೆಂ (ಶಾಂತಿಪು. ೦೪-೦೦೭ ವ); ೯ಂಗಳಿಂದನುಯೋಗ ನಿಜಹಸ್ತಾಂಗುಲಿಯೊಳುತ್ತರ ಲಸದ್ಭ್ರೂಭಂಗದರಿ ಸಂದೇಹ ಮುಖವಿಕೃತಿಯಲಿ ದುರ್ನೀತಿ (ಕುಮಾರ. ೦೪-೯೩). [ಸಂ.]

**ಭ್ರೂಭ್ರುಕುಟಿ** (ನಾ). =ಭ್ರುಕುಟಿ ೧ : ಕೃತಾಂತಭ್ರೂಭ್ರುಕುಟಿಕುಟಿಲಮಂ ಜಯಲಕ್ಷ್ಮೀಕಾಂತಂ ಕಾರ್ಮುಕಮಂ ತಳೆದು (ಚಂದ್ರಪ್ರ. ೬-೩೦). [ಸಂ.]

**ಭ್ರೂಮಧ್ಯ** (ನಾ). ಎರಡು ಹುಬ್ಬುಗಳ ಮಧ್ಯಪ್ರದೇಶ : ಮೂಲನಾಭಿಸ್ಥಿತನೆ ಕಂಠಮುಖನಾಸಾಗ್ರಲೋಲನೇ ಭ್ರೂಮಧ್ಯನಾದ ಮಧ್ಯಸ್ಥನೆ (ವೀಕ್ಷ. ೩-೦೭-೬೨) ; ದ್ವಾರಗಳೊಂಭತ್ತು ಮುಚ್ಚಿ ನಿಲ್ಲಿಸಿ ಧ್ಯಾನ ಭ್ರೂಮಧ್ಯದಿ (ಪುರಂದ. ೩-೮೦ ಅನುಪಲ್ಲವಿ). [ಸಂ.]

**ಭ್ರೂಲಾಸ್ಯ** (ನಾ). ಹುಬ್ಬನ್ನು ಆಡಿಸುವುದು : ಹುಬ್ಬನ್ನು ಕುಣಿಸುವಿಕೆ : ಇದು ನಿನ್ನರ್ಚಿಸುವಿಕ್ಷುಚಾಪಂ . . . ಎಂದು ತೋರ್ಪ ತೆಱದಿಂ ಭ್ರೂಲಾಸ್ಯಮಂ . . . ತೋಱಿದಳ್ (ಆದಿಪು. ೮೦-೦೭). [ಸಂ.]

**ಭ್ರೂಲೇಖೆ** (ನಾ). ಹುಬ್ಬಿನ ರೇಖೆ,-ಗೆರೆ : ಮುಂದೆ ನಿಂದ ಸಕಳಮುಕುಟಬದ್ಧರನುನ್ನಮಿತಭ್ರೂಲೇಖೆಯಿಂ . . . ಬೀಡಿಂಗೆ ಬೆಸಸೆ (ಮಲ್ಲಿ. ೯-೩೨). [ಸಂ. ಭ್ರೂಲೇಖಾ]

**ಭ್ರೂವಿಕ್ಷೇಪ** (ನಾ). = ಭ್ರೂಲಾಸ್ಯ : ಆ ಪುರಸ್ತ್ರೀಭ್ರೂವಿಕ್ಷೇಪಕ್ಕೆ ಸೇನಾಪತಿಪದವಿಯನಿತ್ತಂ ಮನೋಜಾತಂ (ಮಲ್ಲಿ. ೨-೩೭). [ಸಂ.]

**ಭ್ರೂವಿಕ್ಷೇಪಣ** (ನಾ). = ಭ್ರೂಲಾಸ್ಯ : ತದ್ಭ್ರೂವಿಕ್ಷೇಪಣಪ್ರೇರಿತಂ ಮೇಘನಾದನಾದರದಿಂ ಬಂದು (ರಾಜಶೇ. ೬-೩೦ ವ). [ಸಂ.]

**ಭ್ರೂವಿಭ್ರಮ** (ನಾ). ಹುಬ್ಬಿನ ರಮಣೀಯವಾದ ಚಲನೆ,-ವಿಲಾಸ : ಕಂತುಶರಭವ[ನ]ನಾ ಪ್ರಿಯಕಾಂತಾಭ್ರೂವಿಭ್ರಮಗ್ರಹಾಗ್ರಹವಶದಿಂ ಭ್ರಾಂತಿಸದುಪಶಾಂತಮನಂ ಶಂತನುಗಿತ್ತಂ ಸಮಸ್ತರಾಜ್ಯಶ್ರೀಯಂ (ಪಂಪಭಾ. ೦-೬೬) ; ಆಕೆಯರ ಸಪ್ತವಿಧಭ್ರೂವಿಭ್ರಮದಿಂ ಮದನನ ಪದೆವಿಲ್ಗಳಂ ಕೆದಱಿದಂತೆಯುಂ . . . ಅತಿ ಮನೋಹರವಾಗೆ (ಚಂದ್ರಪ್ರ. ೧೨-೦೪೪ ವ). [ಸಂ.]

**ಭ್ರೂವಿಲಾಸ** (ನಾ). = ಭ್ರೂವಿಭ್ರಮ : ಭ್ರೂವಿಲಾಸಸ್ಥಿತಿಯೊಳೀ ಸುತ್ಪತ್ತಿಯಾಗದೆ ಬ್ರಹ್ಮಕೋಟಿಗಳು . . . ದೇವ (ಕುಮಾರ. ೬-೪೨). [ಸಂ.]

**ಭ್ರೂಸಂಜ್ಞೆ** (ನಾ). ಹುಬ್ಬಿನಿಂದ ಮಾಡುವ ಸನ್ನೆ : ವಿವಾಹಮಂಗಳಕಿದೇ ಭ್ರೂಸಂಜ್ಞೆಯೆಂಬಂತೆ ಚೆಲ್ವನದೇಂ ಶ್ಮಶ್ರುವಿಕಾಸರೇಖೆ ತಳೆದತ್ತೀಗಳ್ ಕುಮಾರಾಸ್ಯದೊಳ್ (ಶಾಂತಿ. ೪೦೦). [ಸಂ. ಭ್ರೂಸಂಜ್ಞಾ]

*

# ಮ



**ಮ** (ನಾ). ೧. ಕನ್ನಡ ವರ್ಣಮಾಲೆಯ ನಲವತ್ತೈದನೆಯ ಅಕ್ಷರ : ಪಫಬಭಮಯರಲವಶಷಸಹ (ಶಬ್ದಮ. ೬ ಸೂತ್ರ) ; ಅಚ್ಚಗನ್ನಡದಲ್ಲಿ ೪೭ ಅಕ್ಷರಗಳಿವೆಯೆಂದು ಕೇಶಿರಾಜನು ಹೇಳಿರುತ್ತಾನೆ . . . ವ್ಯಂಜನಗಳು . . . ಪಫಬಭಮ (ಶ್ರಬ್ದ. ೩). ೨. ಚಂದ್ರ. ೩. ಬ್ರಹ್ಮ. ೪. ವಿಷ್ಣು. ೫. ಶಿವ. ೬. ಯಮ. ೭. ಸಮಯ ; ಕಾಲ. ೮. ವಿಷ. ೯. ನೀರು. ೧೦. ಸುಖ ; ಕ್ಷೇಮ. ೧೧. [ಛಂದ] ಮೂರು ಗುರುಗಳನ್ನು ಒಳಗೊಂಡಿರುವ ಒಂದು ಅಕ್ಷರ ಗಣ ; ಮಗಣ ( — — — ) : ಮಯರಸತಜಭನಲಿ ಗುನಿಚಯಮೆಂಬಿವು ನಿಯಮದಿಂ ಗಣಾಕ್ಷರಮಕ್ಕುಂ (ಛಂದೋಂಬು. ೦-೩೬). ೧೨. [ಸಂಗೀತ] ಸರಿಗಮಪಧನಿ ಎಂಬ ಸಪ್ತ ಸ್ವರಗಳಲ್ಲಿ ನಾಲ್ಕನೆಯದು ; ಮಧ್ಯಮ : ಅವಟಲ್ಲಿ ತೋಜುವಕ್ಷರಾದಿ ಸಂಜ್ಞೆಗಳು ಪುಟ್ಟಿದುವು ಸರಿಗಮಪಧನಿಯೆಂಬಿವು (ಶುಂಗಾ. ೨೩-೩) ; ಸಪ್ತಸ್ವರ ಕ್ರಮವಾಗಿ ಸ, ರಿ, ಗ, ಮ, ಪ, ಧ, ನಿ ಎಂಬ ಸಂಕೇತಾಕ್ಷರಗಳಿಂದ ಪ್ರಯೋಗದಲ್ಲಿವೆ (ಸಂಗೀತ. ೦೫). ೧೩. [ಗಣಿತ] ಐದು ಎಂಬ ಸಂಖ್ಯೆಯ ಸಂಕೇತ ; P ಜ್ಯೋತಿಷ್ಯದಲ್ಲಿ ಅಕ್ಷರಗಳಿಂದ ಸಂಖ್ಯೆಯನ್ನು ಗುರುತಿಸುವ ಒಂದು ಕ್ರಮವಿದೆ· 'ಪಾದಿ ಪಂಚ' ಎಂದರೆ–ಪ ಎಂದರೆ ೧, ಫ = ೨, ಬ = ೩, ಭ = ೪, ಮ = ೫ — ಈ ರೀತಿ ಲೆಕ್ಕ ಮಾಡುತ್ತಾರೆ. [ಸಂ.]

**ಮಇಂದ** 'ಮೆಯಿಂದ' ನೋ.

**ಮಇದು** 'ಮೆಯ್ದುನ' ನೋ.

**ಮಂಕ** (ನಾ). ೧. ಕಳೆಗುಂದಿದವನು ; ಪೆಚ್ಚುಮೋರೆ ಹಾಕಿಕೊಂಡಿರುವವನು : ಯಾಕೆ ಮಂಕನಾಗಿ ಕುಳಿತುಕೊಂಡಿದ್ದೀಯ ? (ರೂಢಿ). ೨. ದಡ್ಡ ; ತಿಳಿಗೇಡಿ ; ಮೂಢ : ಕುರುಬನೆಂಬ ಮಾತು ಮಂಕನೆಂಬ ಅರ್ಥದಲ್ಲಿ ರೂಢಿಯಾಗಿರುವುದು (ಕಸಾಪಮಂ. IV. ೨೩); ಆಗ ನಾನು ಮಂಕನಂತೆ ಕುಳಿತು ಬಿಡುತ್ತೇನೆ (ಶಾಲಿಪು. ೨೭).

[ ಮಂಕು + – ಅ₇ ]

**ಮಂಕಡ** 'ಮಕ್ಕಡ' ನೋ.

**ಮಂಕಣಿ** 'ಮಕ್ಕರಿ₁' ನೋ.

**ಮಂಕಬ್ಬೆ** (ನಾ). ಒಬ್ಬಾಕೆಯ ಹೆಸರು : ಪಮ್ಮಣ್ಣಭಟಾರರ ಮಾಳವೆ ಕನ್ತಿಯರ ಸಿಷಿತ್ತಿಯರಪ್ಪ ಮಂಕಬ್ಬೆಕನ್ತಿಯರ್ (ಎಕ. IX (S). ಶಂಗಹೂ ೯೩–೬; ಸು. 1000). [ಮಂಕ ? + ಅಬ್ಬೆ₁]

**ಮಂಕರಿ** 'ಮಕ್ಕರಿ₁' ನೋ.

**ಮಂಕಿ** (ನಾ). ಬುದ್ಧಿಯಿಲ್ಲದವಳು ; ದಡ್ಡಿ : ಕಂಕಿ ಹೋಹುದಱಿಂದ ಮಂಕಿ ಹೋಹುದು ಲೇಸು (ಸರ್ವಜ್ಞ. ೧೬೨೨). [ಮಂಕ + — ಇ₂]

**ಮಂಕು** (ನಾ). ೧. ಮಸುಕು ; ಮಬ್ಬು : ಅವಳ ಕಣ್ಣ ಬೆಳಕಿನಲ್ಲಿ ಹಗಲು ಮಂಕು ಬಿಡುರಿತು (ಕಾವಗೀ. ೩೦೯). ೨. ಜಡತೆ ; ಆಲಸ್ಯ ; ನಿರುತ್ಸಾಹ : ಗೆಲವು ಹೋಗಿ ಮಂಕು ಕವಿಯಿತು (ಮುಂಜಾವು. ೩); ನಿವಾರಿಸಲಾಗದ ಮಂಕು ಒಳಸಾಪುರವನ್ನು ಕವಿದಂತೆ ಅವರಿಗೆ ತೋರಿತು (ಕಳಸು. ೯೦). ೩. ದಿಗ್ಭ್ರಮೆ; ಕಕ್ಕಾಬಿಕ್ಕಿ : ಅರಿವೂ ಮಾಯೆಯ ಮಂಕೂ (ಶಿಸೀಗೀ. ೦೨-೧). ೪. ಮಂದಬುದ್ಧಿ ; ಅಜ್ಞಾನ : ಮಂಕಿನ ಜಡ್ಡು ಕವಿದರೆ ಮಜಿಸಿದರೇ ಮಾಡಿದ ಮಹಾತ್ಮಕರ (ಸುಜ್ಞಾಕಂ. ೨-೩೯). ೫. ತಿಳಿವಳಿಕೆ ಇಲ್ಲದ ವ್ಯಕ್ತಿ; ಬುದ್ಧಿಗೇಡಿ : ಕೋಕಗುರುಳಿನ ರಂಭೆ ಕಂಕಣವು ಕಟಿಸೂತ್ರ ಪಂಕಜಮುಖಿಯು ಎನಬೇಡ ತಾನೊಲಿದ ಮಂಕೆ ಮಾಣಿಕವು (ಸರ್ವಜ್ಞ. ೦೬೦೦). (ಗು). ೬. ಬುದ್ಧಿಯಿಲ್ಲದ; ದಡ್ಡತನದಿಂದ ಕೂಡಿದ : ಮಂಕು ಜೀವನಾಗಿ ಮುಕ್ತಿ ಬೇಡಬಾರದು (ಕುಂಡ. ೨-೩೯-೪); ಎಲೆ ಮಂಕುಮದದ ನಿನ್ನರಳಂಬು . . . ಎನ್ನ ಕಲುವಕ್ಷದೊಳು, ನಾಂಟಲರಿಯವು ಹೋಗು (ಪೋತಶ. ೦೨-೫೮).

**ಮಂಕಾಡು** = ಹುಡುಗಾಟಿಕೆ ಮಾಡು ; ಹುಡುಗಾಟವಾಡು : ತಾಯ ಮುಂದೆ ಮಗು ಮಂಕಾಡಿದೋಪಾದಿಯಲ್ಲಿ (ಕಾಶೀಗು. ೪೦).

**ಮಂಕುಮಾಡು** = ೧. ಮರುಳುಮಾಡು; ಮೋಹಗೊಳಿಸು : ಬಿಂಕದ ಗಿಳಿಯ ಕೇಳಿಮ್ಮ ನಾಯಕ ತನ್ನ ಸೋಂಕಿದಾಕ್ಷಣವೆ ನೀಚಿಯರ ಮಂಕು ಮಾಡುವ (ಛಲಶ. ೬-೮೫). ೨. ಕಳೆಗುಂದಿಸು : ಕಾಂತಿಹೀನನನ್ನಾಗಿ ಮಾಡು : ಪ್ರಖರತೇಜಸ್ಸುಳ್ಳ ಸೂರ್ಯ. . . ಶಾಂತಪ್ರಕಾಶನಾದ ಚಂದ್ರನನ್ನು ಮಂಕು ಮಾಡಿ ಲೋಕದ ಕಣ್ಣಿಗೆ ಅವನ ಇರವೇ ಗೊತ್ತಾಗದಂತೆ ಮಾಡಿಬಿಡುತ್ತಾನೆ (ಕೂಪ್ಕು. ೦೦೩). [ದೇ.೫ ತಮಿ. ಮಕ್ಕು; ಮಲ. ಮಣ್ಣುಕ ; ತುಳು. ತೆಲು. ಮಂಕು./ಪಾಲಿ. ಮಂಕು ]

**ಮಂಕುಗೊಳಿಸು** (ಕ್ರಿ). ೧. ಮರುಳುಮಾಡು ; ವಿಸ್ಮಯಗೊಳಿಸು : ಭಾರತದ ಸನ್ಯಾಸಿಯೊಬ್ಬ ಅಮೇರಿಕೆಯ ಜನವನ್ನು ಮಂಕುಗೊಳಿಸಿದ (ಭರ್ಗಾ. ೫೦). ೨. ಹೆಚ್ಚದಂತೆ ಮಾಡು ; ಕುಂಠಿತಗೊಳಿಸು : ಆ ಹುಡುಗಿಯಲ್ಲಿ ಅಡಕವಾಗಿರುವ ಪ್ರತಿಭೆಯನ್ನು ತಾಯಿ ತಂದೆ ಮಂಕುಗೊಳಿಸುತ್ತಾರಲ್ಲಾ ಎಂದು ಸುನಂದಳಿಗೆ ವ್ಯಥೆಯಾಯಿತು (ದೂಶಲ್ಯ. ೦೦೦). ೩. ಮಸಕಾಗುವಂತೆ ಮಾಡು ; ಮಬ್ಬಾಗಿಸು.

[ಮಂಕು + ಕೊಳ್₁ + — ಇಸು₃]

**ಮಂಕುತನ** (ನಾ). ತಿಳಿವಳಿಕೆಯಿಲ್ಲದಿರುವಿಕೆ ; ದಡ್ಡತನ ; ಬೆಪ್ಪುತನ : ನಿನಗೀ ಮಂಕುತನವೇನೆಂದರಾ ಸಖರು (ಕೃಹಾ.ಕ. ೬-೬) ; ಏ ಚಿನ್ನಾ ಇದೇನೋ ನಿನ್ನ ಮಂಕುತನ ? (ಬೆಂದಯು. ೫೯). [ಮಂಕು + – ತನ]

**ಮಂಕುದಿಣ್ಣೆ** (ನಾ). ದಡ್ಡತನದ ರಾಶಿಯಂತಿರುವವನು ; ಬಹಳ ಪೆದ್ದ: ನೀನು ಬೆಳೆದ ಮೇಲೆ ಶುದ್ಧ ಮಂಕುದಿಣ್ಣೆ ಆಗುತ್ತೀಯ ನೋಡುತ್ತಿರು (ಶಾಲಿಪು. ೦೬) ; ಮಂಕುದಿಣ್ಣೆ ಮದುವೆಗೆ ಹೋದರೆ ವಾಲಗದವರೆಲ್ಲಾ ಅಟ್ಟಾಡಿಕೊಂಡು ಹೊಡೆದರಂತೆ (ಗಾದೆ). [ಮಂಕು + ದಿಣ್ಣೆ]

**ಮಂಕುಬಡಿ** (ಕ್ರಿ). ಏನೂ ತೋಚದಿರು ; ದಿಗ್ಭ್ರಮೆಯುಂಟಾಗು : ಮಂಕುಬಡಿದವರಂತೆ ಕುಳಿತುಬಿಟ್ಟವರೂ ಒಮ್ಮೆಲೇ ಚೇತರಿಸಿ ಘಟಘಟನೆ ಅಂಗೈಯಿಂದ ಹಣೆ ಬಡೆದುಕೊಳ್ಳುತ್ತಿದರು (ಮೂಕಜ್ಜಿ. ೨೫೨); ಚಿದಂಬರನಂತೂ. . . ಮಂಕುಬಡಿದವನಂತೆ ನಿಂತುಬಿಟ್ಟ (ಹಸುಹೂ. ೯೩).

[ ಮಂಕು + ಬಡಿ₁ ]

**ಮಂಕುಬೂದಿ** (ನಾ). ತಾಂತ್ರಿಕಸಿದ್ಧಿಯನ್ನು ಪಡೆದವರು ಜನರ ಮನಸ್ಸನ್ನು ವಶಪಡಿಸಿಕೊಳ್ಳಲು ಪ್ರಯೋಗಿಸುವರೆಂದು ನಂಬಲಾದ ಮಂತ್ರದ ಬೂದಿ ; ವಶೀಕರಣ ಭಸ್ಮ : ಮಂಕುಬೂದಿಯನ್ನೆರಚಿದ ಮಾಟಗಾರನಿಗೆ ಶರಣು ಹೊಂದಿದವರಂತೆ ಈ ದೇಶದ ಜನರು ಪವಾಡಪುರುಷರಾದ ಮಹಾತ್ಮರನ್ನು ಹಿಂಬಾಲಿಸಿದರು (ಕಂಜಕಂ. ೭೫).

**ಮಂಕುಬೂದಿಯನ್ನೆರಚು** = (ಅಲಂ) ಮೋಸಮಾಡು ; ವಂಚನೆ ಮಾಡು : ವೃದ್ಧತೀರ್ಥಯಾತ್ರಿಗಳ ಮೇಲೆ ಮಂಕುಬೂದಿಯನ್ನೆರಚುವುದಂತೂ ಪಾಪ ಅವರಿಗೆ ಗೊತ್ತೇ ಇಲ್ಲ ! (ಬಾಬಾ. ೫೨) ; ಈ ವಿಭೂತಿ

ರುದ್ರಾಕ್ಷಿಗಳು ಅವನ ಕಣ್ಣಿಗೆ ಮಂಕುಬೂದಿಯನ್ನೆರಚಲಾರವು (ಶ್ರೀರಾಮ. ೨೯೩). [ಮಂಕು + ಬೂದಿ]

**ಮಂಕುಮಳೆ** (ನಾ). ದಿಗ್ಭ್ರಮೆಗೊಳಿಸುವ ಮಳೆ ; ಭಯಂಕರವಾದ ಮಳೆ: ತೆಂಕಣಗಾಳಿ ಮಂಕುಮಳೆ ಬರಸೀತು (ಗಾದೆ).

[ ಮಂಕು + ಮಳೆ ( < ಮಟ³ ) ]

**ಮಂಕುರ** (ನಾ). ಕನ್ನಡಿ ; ದರ್ಪಣ. [ಸಂ.]

**ಮಂಕುವೊಯ್** (ಕ್ರಿ). ಮಂಕು ಆವರಿಸು ; ಭ್ರಾಂತಿಯುಂಟಾಗು ; ದಿಗ್ಭ್ರಾಂತನಾಗು : ಝೇಂಕರಿಸುವ ತುಂಬಿಗಳ ಕಂಡು ನಮಿರಾಜ ಮಂಕುವೊಯ್ದಂತಾದನೊಡನೆ (ಕರಕ. ೩೯–೬೮). [ಮಂಕು + ಪೊಯ್₂]

**ಮಂಕುಹಿಡಿ** (ಕ್ರಿ). ಪೆಚ್ಚುತನ ಆವರಿಸು ; ಪೆಚ್ಚಾಗಂ ; ಬೆಪ್ಪಾಗಂ : ಅದೆಲ್ಲವನ್ನೂ ನೋಡಿ ಶ್ರೀನಿವಾಸರಾಯನು ಮಂಕುಹಿಡಿದವನಾಗಿ "ಸುಬ್ಬಣ್ಣವರೇ, ಇದೇನು ಮನೆಯೋ, ಇಲ್ಲವೆ ದೆವ್ವದ ಗುಹೆಯೋ ?" ಎಂದು ಕೇಳಿದನು (ಶ್ರೀಕೃ. ೦೨೩). [ ಮಂಕು + ಹಿಡಿ₁ ( <ಪಿಡಿ₁)]

**ಮಂಕ್ರಿ** 'ಮಕ್ಕರಿ₁' ನೋ.

**ಮಂಗ₁** (ನಾ). ೧. (ಮನುಷ್ಯನನ್ನು ಹೋಲುವ ಹಾಗೂ ಬಾಲವುಳ್ಳ) ಒಂದು ಬಗೆಯ ಪ್ರಾಣಿ; ಕೋತಿ; ಕಪಿ; ವಿಕಾಸವಾದದ ಪ್ರಕಾರ ಮಾನವಜನಾಂಗದ ಮೂಲಪ್ರಾಣಿ : ಮಾಡಿದ ಗಣಪತಿ ಮಂಗನಾದ ಮೇಲಿನ್ನೇನಿನ್ನೇನು (ಕುರಂಡ. ೨–೩೬–೩); ಮಂಗನ ಕೈಗೆ ಮಾಣಿಕ್ಯ ಸಿಕ್ಕಿದ ಹಾಗಾಗಿದೆ (ದೇಕಶು. ೫); ಮಂಗನ ಕೈಯಲ್ಲಿ ಕೊಳ್ಳಿ ಕೊಟ್ಟ ಹಾಗೆ (ಗಾದೆ). ೨. (ಅಲಂ) ಕುರೂಪಿ ; ಅಂದಗೇಡಿ : ಆ ಮಂಗನನ್ನು ಯಾರು ಮದುವೆ ಮಾಡಿಕೊಳ್ಳುತ್ತಾರೆ ? (ರೂಢಿ).

**ಮಂಗನ ಕಾಯಿಲೆ** = ಸತ್ತ ಕೋತಿಯಿಂದ ಹರಡುವ ಒಂದು ಬಗೆಯ ಸಾಂಕ್ರಾಮಿಕರೋಗ : ಸಾಗರ, ಸೊರಬ ಮುಂತಾದ ಕಡೆಗಳಲ್ಲಿರುವ ಮಂಗನ ಕಾಯಿಲೆಗೆ ಅನೇಕರು ಬಲಿಯಾಗಿದ್ದಾರೆ (ರೂಢಿ). **ಮಂಗನ ಕೆಮ್ಮು**=ಸಣ್ಣಮಕ್ಕಳಿಗೆ ಬರುವ ಒಂದು ಬಗೆಯ ಕೆಮ್ಮು; ಕೋಡಗಕೆಮ್ಮು ; ನಾಯಿಕೆಮ್ಮು : ಸಣ್ಣ ಹುಡುಗರ ಮಂಗನ ಕೆಮ್ಮಿನಲ್ಲಿ ಪ್ರವಾಳಭಸ್ಮವು ಬಹಳೇ ಉತ್ತಮ ಔಷಧವಾಗಿರುವುದು (ಶಿಶುಧೀ. ೬೨). **ಮಂಗನ ಕೈ** = ಅನ್ನ ಮೊದಲಾದುವನ್ನು ತೋಡಲು ಉಪಯೋಗಿಸುವ ಸಲಕರಣೆ. **ಮಂಗನ ಬಾವು** = ಕೆನ್ನೆ ಹಾಗೂ ಕೊರಳು ಊದಿಕೊಳ್ಳುವ ಒಂದು ಬಗೆಯ ರೋಗ; ಕೆಪ್ಪಟರಾಯ (ಕರಾ); ಗದ್ದ ಕಟ್ಟು : "ಗದ್ದಕಟ್ಟು; ಮಂಗನ ಬಾವು" (Parotitis. ಇಂಕಡ). **ಮಂಗಮಾಯ** = ಕಣ್ಣಿಗೆ ಕಾಣದಂತಾಗುವಿಕೆ ; ಅದೃಶ್ಯವಾಗುವಿಕೆ : ಎಷ್ಟೆಷ್ಟು ತಡಕಿದರೂ ಅದು ಮಂಗಮಾಯವಾಗಿದೆಯಲ್ಲೇ! (ಸಟಿಪಾ. I, ೫೦೫).

[ ದೇ.॥ ಮಲ. ಮೊಣ್ಣ ; ತುಳು. ಮಂಗ]

**ಮಂಗ₂** (ನಾ). ೧. ದೋಣಿಯ ಮೇಲುಭಾಗ ; ನಾವೆಯ ಅಗ್ರಭಾಗ; ನೌಕಾಶಿರ : "ಪುಳಿಂದಃ, ಮಂಗಃ_ ಈ ೨ ನಾವೆಯ ಬಿಸುಟು" (ಶಬ್ದಮ. ೧೧೦–೫೦). ೨. ಹಡಗಿನ ಪಕ್ಕ,–ಪಾರ್ಶ್ವಭಾಗ. [ಸಂ.]

**ಮಂಗಚೇಷ್ಟೆ** (ನಾ). ಕಪಿಯಂತೆ ಹುಬ್ಬು ಕುಣಿಸುವುದು, ಹಲ್ಲು ಕಿರಿಯುವುದು ಮೊದಲಾದ ಅಂಗಚಲನೆ : ಹೀಗೆ ನಾನಾತರದ ಮಂಗಚೇಷ್ಟೆಗಳಿಂದ ತನ್ನ ಸೌಂದರ್ಯವನ್ನು ತಾನೇ ಪ್ರಶಂಸಿಸಿಕೊಂಡು ಕನ್ನಡಿಯಿಂದ ಈಚೆಗೆ ಸರಿದಳು (ಅಪಪಾ. ೦೬೮). [ಮಂಗ₁ + ಚೇಷ್ಟೆ]

**ಮಂಗಟ್ಟೆ** (ನಾ). ಒಂದು ಜಾತಿಯ ಪಕ್ಷಿ : ಒಂದೆಡೆ ಮಂಗಟ್ಟೆಪಕ್ಕಿಗಳ ವಿಕಟನಾದವು ಕಾಡನ್ನು ಭಯಗೊಳಿಸುವಂತಿತ್ತು (ಕಾನೂರು. ೪೩).

**ಮಂಗತಂದಟಿಕೆಟಿ³** (ನಾ). ಒಂದು ಕೆರೆಯ ಹೆಸರು : ಮಂಗತಣ್ಣಟಿಕೆಟಿಯೊಳ್ ಬಿತ್ತು ಬೀಜ ಮಾಗೊಟಿಗಟ್ಟಿಯುಂ ಮಾಗೊಟಿ ಪಾಳ್ಯಂ ಬಿಟ್ಟರ್ (ಎಕ. X, ಶಿಂತಾಮ. ೦೫೩–೪; ಕು. 1000). [ ? + ಕೆಟಿ³ ]

**ಮಂಗತನ** (ನಾ). ೧. ಕಪಿಯ ಮೂಲಸ್ವರೂಪ,–ಪ್ರಕೃತಿ : ಮನುಷ್ಯನು ವಿವೇಕವಂತನೂ ವಿಕಾಸಶೀಲನೂ ಆದ ಪ್ರಾಣಿಯೆಂದು ಕೇಳುತ್ತೇವೆ. ಮಂಗತನದಿಂದ ಮನುಷ್ಯತ್ವಕ್ಕೆ ಬಂದಿದ್ದಾನೆ (ದೇಕಪ್ಪ. ೦೦೯). ೨. (ಅಲಂ) ಕುಚೇಷ್ಟೆ; ಅಧಿಕಪ್ರಸಂಗ : ಹೆಣ್ಣುಹುಡುಗೇರ ತಂದೆ ಅಂದರೆ ದೇವರ ಗುಡಿ ಅಂತ ತಿಳಿದಾನೇನೋ, ಮನಸಿಗೆ ಬಂದ್ಹಾಂಗ ಮಂಗತನ ಮಾಡಲಿಕ್ಕೆ ? (ಅಶ್ವಮೇ. ೦೫); ತಿಪ್ಪನಲ್ಲಿ ವೈದಿಕವೃತ್ತಿಯ ಹುಡುಗರ ಮಂಗತನವೆಲ್ಲ ತುಂಬಿಕೊಂಡಿತ್ತು ( ಸಮೂಹ. ೦೨ ).

[ಮಂಗ₁ + – ತನ ]

**ಮಂಗತೋರಣ** (ನಾ). ಒಬ್ಬಾತನ ಹೆಸರು: ಶ್ರೀಮಂಗತೋರಣನ್ ಪ್ರಮಾದಿಯೆಮ್ಬ ಸಂವತ್ಸರದಾ[ಷಾಢ]ಸುದ್ಧಸಪ್ತಮಿಯಾ ಆದಿತ್ಯವಾರದನ್ದು ಬೆಳ್ವೊಲನಾಡನಾಳ್ದರ್ಕೆ (ತೌಇಇ. XI–i, ೨೦–೪ ; ೫೯೩). [ ? ]

**ಮಂಗನಉಡಿದಾರ** (ನಾ). ಒಂದು ಬಗೆಯ ಬಳ್ಳಿ : ಆಕಾಶಬಳ್ಳಿ, ಮಂಗನ ಉಡಿದಾರ (ವ್ಯಶಿಗ. ೦೯–೩೪೨). [ ? ]

**ಮಂಗನಬಳ್ಳಿ** (ನಾ.) = ಮಂಗನಉಡಿದಾರ : ಇದನ್ನು ಆಕಾಶಬಳ್ಳಿ ಅಥವಾ ಮಂಗನಬಳ್ಳಿ (Cuscuta) ಎಂದು ಕರೆಯುತ್ತಾರೆ (ಸಸ್ಯಶಾ. ೦೦೯). [ ? + ಬಳ್ಳಿ ]

**ಮಂಗಪೆರಸ** (ನಾ). ಒಬ್ಬಾತನ ಹೆಸರು : ಸ್ವಸ್ತಿಶ್ರೀ ನಿಜರವನ ಮಂಗವರ್ ಮಜ್ಜಪರಸರ ಅಟೀಯ ತುಱುಗೋಳೊರಟವಿನೊಲೆಟಪಡೆ ಪರಿಯಾಟ್ಟು × × ಸತ್ತ (ಎಕ. XII, ತುಮಕೂ. ೬೯–೨ ; ಕು. ೯೦೦ ?).

[ ಮಂಗ₁ + ಅಪ (< ಅಪ್ಪ₁) + ಅರಸ₁ ]

**ಮಂಗಪ್ಪೆ** (ನಾ). ಒಂದು ಬಗೆಯ ಸಸ್ಯ : (ವ್ಯಶಿಗ. ೬೬–೦೫೬೯). 'ಅಪ್ಪೆಯಸೊಪ್ಪು' ಪರಾ. [ ? ]

**ಮಂಗಮಾರಿ** (ನಾ). ಒಂದು ಬಗೆಯ ಸಸ್ಯ : ಮಂಗಮಾರಿಸೊಪ್ಪು, ಹೆಣ್ಣುಕರೀತುಂಬೆ, ಹುಚ್ಚುಮುಟ್ಟೇಗಿಡ (ವ್ಯಶಿಗ. ೬–೦೦೬); ಮಂಗಮಾರಿ, ತುಂಬೆ, ಶಿರಪೊಟ್ಟಲಿ (ಸಸ್ಯಸು. ೨೩೮). 'ಮಂಡಳಮಾರಿ' ಪರಾ. [?]

**ಮಂಗಮುಷ್ಟಿ** (ನಾ). ೧. ಕಪಿಯ ಮುಷ್ಟಿ,–ಹಿಡಿತ. ೨. (ಅಲಂ) ಹಿಡಿದ ಹಟವನ್ನು ಬಿಡದಿರುವುದು ; ಹಟಮಾರಿತನ : ಮಣ್ಣುಮಿನೂ ಅಷ್ಟುಷ್ಟರವನಲ್ಲ, ತುಂಬ ಹಟಮಾರಿ ! ಉಡದ ಹಿಡಿತ ಅವನದು. ಅದಕ್ಕೆ 'ಮಂಗಮುಷ್ಟಿ' ಎಂದು ಹೇಳಿದರೆ ಸಲ್ಲೀತು (ಕೂಬಾಶಾ. ೪೨). ೩. ಜಿಪುಣ ; ಲೋಭಿ : ಅವನು ಬಹಳ ಮಂಗಮುಷ್ಟಿ, ಅವನನ್ನು ಸಾಲ ಕೇಳಲೇ ಬೇಡ (ರೂಢಿ). 'ಕಪಿಮುಷ್ಟಿ' ಪರಾ.

[ ಮಂಗ₁ + ಮುಷ್ಟಿ ]

**ಮಂಗಯ್ಯ** (ನಾ). ಒಬ್ಬಾತನ ಹೆಸರು : ತೋಟಯ್ಯನ ಮಗ ಮಙ್ಗಯ್ಯಂ . . . ಕಾಳೆಗದೊಳ್ ಆನೆಯ ಮುಂದೆ ಸತ್ತು ಸಗ್ಗಕ್ಕೆ ಸಂದೊಂ (ಎಕ. XII, ಮಧುಗಿ. ೩೯–೦೨ ; ಕು. ೨೬೦). [ ಮಂಗ₁ + ಅಯ್ಯ₆₁ ]

**ಮಂಗರವಳ್ಳಿ** 'ಮಂಗುಱುವಳ್ಳಿ' ನೋ.

**ಮಂಗರೆ** 'ಮಗ್ಗಾರೆ' ನೋ.

**ಮಂಗಲ, ಮಂಗಳ** (ಗು). ೧. ಶುಭಕರವಾದ ; ಕಲ್ಯಾಣಕರವಾದ : ಶಶಿಯ ಪೋಲ್ವ ಮುಖಮೈದೆ ಕೊರಗಿತ್ತೆ ಮಂಗಲಸೌಮ್ಯವಱತುದೇ . . . ಗ್ರಹಬಲಂ ತಪ್ಪಿತಕಟಾಯೆಂದಳು (ಶಾವಶಂ. ೮–೨೮). (ನಾ). ೨. ಏಳಿಗೆ ; ಅಭಿವೃದ್ಧಿ. ೩. ಅದೃಷ್ಟ ; ಭಾಗ್ಯ ; ಮೇಲ್ಮೆ. ೪. ಕುಶಲ ; ಕ್ಷೇಮ. ೫. ಸುಖ ; ಸಂತೋಷ. ೬. ಶುಭ ; ಕಲ್ಯಾಣ ; ಒಳ್ಳಿತು ; ಶ್ರೇಯಸ್ಸು : "ಶ್ವಃ(ಸ್ವ)ಶ್ರೇಯಸಂ, ಕಲ್ಯಾಣಂ . . . ಮಂಗಳಂ_ ಈ ೧೧ ಒಳ್ಳಿತರ್ಕೆ ಪೆಸರ್'' (ಶಬ್ದಮ. ೨೦–೦೨೨) ; ಬೆಳಗಾದುದಾ ದಿನಂ ಪೂಜೆಗೈದಂಗಜಾರಿಗೆ, ಮಧುರ

ಮಂಗಲದ ಸಂಗೀತದಿ ಸ್ತುತಿಸಿ (ಚನ್ನಾಂಗ. ೬೨-೧೭೬). ೭. ಕಾವ್ಯ, ಗೀತ, ಶಾಸನ ಇತ್ಯಾದಿಗಳ ಆರಂಭ ಅಥವಾ ಅಂತ್ಯದಲ್ಲಿ ಬರುವ ಇಷ್ಟದೇವತಾಪ್ರಾರ್ಥನೆ ಅಥವಾ ಶುಭವನ್ನು ಕೋರುವಿಕೆ ,—ಶುಭದ ಹಾರೈಕೆ : ಮಂಗಲವು ಕರುಣಾಂತರಂಗ ಶ್ರೀರಂಗಗೆ ಮಂಗಲವು ಸಿಂಹಾದ್ರಿ ನರಸಿಂಹಗೆ (ತುರಂದ. ೩-೨೨೦ ಅನುಬಂಧ). 'ಜಯಮಂಗಲ'ಹೋ. ೮. ಶುಭಶಕುನ,–ನಿಮಿತ್ತ. ೯. (ಶುಭ ಕಾರ್ಯಗಳಿಗೆ ಸಂಬಂಧಪಟ್ಟಂತೆ ಮಾಡುವ) ಶುಭಾರಂಭ. ತಲವಜ್ರಾಘಾತದಿಂ ಮರ್ದಿಸಿ ರಜಕನನಾತ್ಮಪ್ರವೇಶಕ್ಕದೇಮಂಗಲ ಮೆಂಬಂತಾ ಪುರದ್ವಾರದೊಳವನಡಗಿಂ ಬಾತ್ತಿಯಿಟ್ಟು . . . ಪೊಕ್ಕಂ ದನುಜನ ಪೊಬಿಲಂ (ಜಗ. ೬-೧೧). ೧೦. ಮದುವೆ ಮೊದಲಾದ ಶುಭಕಾರ್ಯ, – ಉತ್ಸವ, – ಸಮಾರಂಭ : 'ಮಂಗಲಕಾರ', 'ಮಂಗಲವಣಿ' ಪರಾ. ೧೧. ಅನೂಚಾನವಾಗಿ ಬಂದ ಆಚಾರ, –ಪದ್ಧತಿ, –ಸಂಪ್ರದಾಯ. ೧೨. ನವಗ್ರಹಗಳಲ್ಲಿ ಒಂದು ; ಕುಜ. ೧೩. ಸೈನ್ಯವು ನೆಲಸಿರುವ ಸ್ಥಳ : ವಾಸ್ತುಶಾಸ್ತ್ರದ ಪ್ರಕಾರ "ಮಂಗಲ" ಎಂದರೆ ದುರ್ಗರಕ್ಷಣಕ್ಕಾಗಿ ನಗರದ ಸೈನ್ಯವು ನೆಲೆಗೊಂಡಿರುವ ಸ್ಥಳವೆಂದರ್ಥ (ತುಳುವಾ. ೨೦೪). ೧೪. ಕೋಟೆ ; ದುರ್ಗ : ಮಂಗಲ_ ವಾಸ್ತುಶಾಸ್ತ್ರದಲ್ಲಿ ಕೋಟೆ ಎಂಬರ್ಥ (ತುಳುವಾ. ೪೯). ೧೫. ಕೆಲವು ಊರುಗಳ ಹೆಸರಿನ ಕೊನೆಯಲ್ಲಿ ಸೇರುವ ಪದ ; ಉದಾಹರಣೆಗೆ– ನಾಗಮಂಗಲ, ನೆಲಮಂಗಲ, ಸತ್ಯಮಂಗಲ ಇತ್ಯಾದಿ. ೧೬. ಒಂದು ಊರಿನ ಹೆಸರು : ಮಜ್ಜಿಲಾಳ್ಳ ಅಪ್ಪಶತೂ ಕ್ಷೇತ್ರ (೦) ಗೊಟ್ಟಳ್ (ಇಐ. X, ೧೦೩-೯; 696 ?) ; ಮಂಗಲದ ಗರಳೋಜ ಆರ× ×ಕೊಟ್ಟ (ಎಕ. IV, ಗುಂಡ್ಲುಪೇ. ೬೭-೧೧ ; ಸು. 750). **ಮಂಗಳ** : ೧. ಮಂಗಳ ಮಣಿಪೀಠಂ ವಿಜಯಾಂಗನೆಗೆನೆ . . . ಭುಜಶಿಖರಮಂ ರತ್ನಾಂಗದಮಂ ಸಾರ್ಚವೊಂದು ನೆವದಿಂ ಮೆಚಿದಂ (ಶಂಬಾಪು. ೩-೩೬) ; ತುಂಗೆ ಮಂಗಳ ತರಂಗೆ (ತುರಂದ. ೪-೪೦ ಅನುಬಂಧ). ೨. ತ್ರಿಜಗವಂದಿತ ಗಣಪ ಮಾಳ್ಪುದು ಮತಿಗೆ ಮಂಗಳವ (ಅಮ್ಮಾಲ. ೧-೪). ೩. "ಶ್ವೋವಶೀಯಂ ಶಿವಂ . . . ಮಂಗಳಂ . . . ಕಲ್ಯಾಣಮೆಂದೆನಲ್ಕೊಳ್ಳತಕೆ ಪೆಸರೆನಿಕ್ಕುಂ" (ಮಂಗರಾ. ೮-೨೬) ; ಮಂಗಳಮಪ್ಪ ಪಾಲ್ಗಡಲೊಳಾ ಹರಿಯುಂ ಸಿರಿಯುಂ . . .ಎಸೆ ವಂತೆ (ಅಸುಮಾ. ೪-೩೯). ೪. ಮನದೊಳಾಟಿಸುವುದಂ ಪಡೆವರೀ ಪೋಡ ಶಸ್ವಪ್ನದ ಫಲಂಗಳಂ ಪಡೆಯಲಣಮಾಗದ ಸುಖಂಗಳಂ ಮಂಗಳಂ (ಆದಿಪು. ೭-೨೭ ವಚನ); ಮಂಗಳಂ ಪೃಥಿಲಿಗೆ ಅಂಗುಲಿಯನಿತ್ತವಗೆ (ತುರಂದ. ೦-೨೩೦ ಅನುಬಂಧ) ; ಇಂತು ಶ್ರೀರಾಘವಂ ಸೀತಾಸಮೇತಂ ಜನ್ನಮಂ ಬೇಳ್ದು . . . ಅರಸುಗೆಯುತ್ತುಮಿರ್ದನವಂಗಂ ಮಂಗಳಂ (ರಾಮಾಶ್ವ. ೧೬೬-೨೪). ೧೦. ಮಂಗಳ ಹತ್ತಿರವಾದ್ರೂ ಗಂಗಳ ತೂಳಿಲಿಲ್ಲಂತ (ದುರಂಬಾ. ೧೦೮). ೧೧. " ಪೂರ್ವಪದ್ಧತಿಯ ತೆಜನುಸಿರ್ವಲ್ಲಿಯುಂ . . . ಮಂಗಳಾಖ್ಯಂ" (ಮಂಗರಾ. ೦೩೪-೬೭). ೧೨. "ಅಂಗಾರಕಂ ವಕ್ರಸವನಿಜಂ ಭೌಮನೆನೆ ಮಂಗಳಾಖ್ಯಂ" (ಮಂಗರಾ. ೦೦-೬) ; ಲಿಂಗದ ಸ್ಥಲ ಲೇಸು ಮಂಗಳನ ಬಲ ಲೇಸು . . . ಶರಣರ ಸಂಗವೇ ಲೇಸು (ಸರ್ವಜ್ಞ. ೨೮೩). ೧೭. ಶುಭವನ್ನು ಕೋರುವ ಹಾಡು : ಮಂಗಳಮನೆ ಪಾಡುತ್ತುಂ ಮಂಗಳಧಾರಿಣಿಯರಿಳಿಗಿ ಮುಂದಂ ನತಪಾಶಾಂಗನೆಯರಿಂದೆ ದಿವಿಜೇಂದ್ರಾಂಗನೆ ಕರಮೆಸೆದು ಹಂಸಗತಿಯೊಳ್ ಬಂದಳ್ (ಆದಿಪು. ೭-೪೯). ೧೮. ಒಂದು ಬಗೆಯ ಕಾಂಡರೆ : "ಕಾಲ್ಕೊಗವೆಸ್ದು ಬೆಳ್ಪುದೋಚಾರೆ ಮಂಗಳಂ " (ಮಂಗರಾ. ೬೨-೧೩) ; ಬಾಲದೊಳುರದೊಳ್ ತಾಂ ಕೇಸರದೊಳಮತಿಶಯ ಬೆಳ್ಪದಾಗೆ ಮಂಗ(ಕ)ಳನಕ್ಕುಂ (ಅಶ್ವಶಾ. ೨-೧೮). ೧೯. ಸೊಬಗು ; ಚೆಲುವು : 'ಮಂಗಳವಡೆ' ಪರಾ. ೨೦. ಕ್ಷೌರಮಾಡುವ ವೃತ್ತಿಯವನು ; ನಾಯಿಂದ : ನಿಲಿಸಿ ಕುರುಳನು ತೆಗವನಿಗೆ ಮಂಗಳನುಯೆಂಬಾಖ್ಯದಲಿ (ಭರಂಪು. ೦೯-೬೮). ೨೧. ಕೇಡನ್ನು ಸೂಚಿಸುವ ಸಂದರ್ಭದಲ್ಲಿ ಬಳಸುವ ಸೌಮ್ಯೋಕ್ತಿ : "ನಿಷಾತ ಶಬ್ದವನು ಪೇಟ್ವಲ್ಲಿಯುಂ ಮಂಗಳಾಖ್ಯಂ" (ಮಂಗರಾ. ೦೩೪-೬೭). ೨೨. (ಅಲಂ) ಯಾವುದಾದರೂ ಉತ್ಸವ ಸಮಾರಂಭದ ಮುಕ್ತಾಯದಲ್ಲಿ ಮಾಡುವ ಆರತಿ, ನೈವೇದ್ಯ ಇತ್ಯಾದಿ ವಿಧಿ: ಆಯ್ತ್ಯಾಯ್ತು ಪೇಟ್ದ ಕತೆಗೆ ಮಂಗಳಮಂ ಮಾಡು (ರಾಮಾಶ್ವ.೦೬೩-೩). ೨೩. [ಛಂದ] ನಾಲ್ಕು ಪಾದಗಳುಳ್ಳ ಒಂದು ಅಕ್ಷರಗಣದ ಸಮವೃತ್ತ; ಪ್ರತಿ ಸಾಲಿನಲ್ಲೂ ಹದಿನಾರು ಅಕ್ಷರಗಳಿರುವ ಅಷ್ಟಛಂದಸ್ಸಿನ ಒಂದು ವೃತ್ತ : ದಂತಿಯೊಳೊಪ್ಪ ಪದ್ಧತಿಯೊಳಲ್ಲಿ ಯತಿಯುಂ ನಿಲೆ ಮಂಗಳಮೆಂಬುದೀ ಕ್ಷಿತಿಗೆ ಸಂದುದು (ಛಂದೋಂಬು. ೨-೧೩೪) ; ವಿಭಜಜಂ ಜಗಮುಮೊಂದಿರಲಪ್ಪುದು ಮಂಗಳಂ (ಕೃವಿಶಿ. ೬೪).

**ಮಂಗಲಮಾಡಿಕೊಡು** = ಮದುವೆ ಮಾಡಿಕೊಡು : ನಿನ್ನಂತಹ ಸಾಮಾನ್ಯನಿಗೆ ಅವನು ಮಗಳನ್ನು ಮಂಗಲ ಮಾಡಿಕೊಡಲಾರ (ಹುಂಹಾ. ೦೦೪). **ಮಂಗಳಹಾಡು** = ಪರಿಸಮಾಪ್ತಿಗೊಳಿಸು ; ಮುಕ್ತಾಯಮಾಡು : 'ಶಾಕುಂತಲ' ನಾಟಕವನ್ನು ಹಲವಾರು ಬಾರಿ ಆಡಿ ಕಡೆಗೆ ಮಂಗಳ ಹಾಡಿದರು (ರೂಢಿ). [ಸಂ.]

**ಮಂಗಲಂಬಾಡು**, ಮಂಗಳಂಬಾಡು (ಕ್ರಿ). ಶುಭವನ್ನು ಕೋರುವ ಹಾಡನ್ನು ಹಾಡು : ಮುನಿವೃಂದಾರಕನ ಬರವಿನೊಸಗೆಯೊಳ್ ಮಂಗಲಂ [ಪಾಠಾಂ. ಳಂ]ಬಾಡುವಂತಿನಿಯ ದನಿಯಂ ನೆರೆದು ಮೊರೆವ ಪೆಣ್ದುಂಬಿಗಳುಂ (ಚಂಪ್ರಪು. ೨-೧೦೩). **ಮಂಗಳಂಬಾಡು** : ನೆರೆದೊಡನೆ ಮಂಗಳಂ ಬಾಡೆ ಗಾಯಕಗಣಂ ಕರಮೆ ಕಣ್ಗೆಸೆದುದು ನರೇಂದ್ರಭವನಾಂಗಣಂ (ಆದಿಪು. ೪-೭ ವಚನ). [ಮಂಗಲ + ಪಾಡು$_1$]

**ಮಂಗಲಕಾರ** (ನಾ). ಮದುವಣಿಗ ; ವರ : ಮಂಗಲಕಾರನನ್ನು ಈ ಮೊದಲು ನಾನು ನೋಡಲೇ ಇಲ್ಲವಲ್ಲ ? (ಹುಂಹಾ. ೨೦೩).

[ಮಂಗಲ + – ಕಾರ$_1$ (< – ಕಾಱ)]

**ಮಂಗಲಕಾರ್ಯ**, ಮಂಗಳಕಾರ್ಯ (ನಾ). ಮಂಗಲಕರವಾದ ಸಮಾರಂಭ ; ಶುಭಕಾರ್ಯ : ಬಂದವರು ಯಾವ ಆತಂಕವೂ ಇಲ್ಲದೆ ಮಂಗಲಕಾರ್ಯಗಳನ್ನು ನೋಡಿ ಅನುಭವಿಸಲಿ ಎಂದು ವಿಧಿಸಿದಳು (ಹಕ್ಕುಪ. ೨೮). **ಮಂಗಳಕಾರ್ಯ** : ಸ್ವಸ್ತಿಶ್ರೀ ಲಕ್ಷ್ಮೀಸೇನಭಟ್ಟಾರಕ ಸ್ವಾಮಿಗಳವರು . . . ಮಂಗಳಕಾರ್ಯವನ್ನು ನೆರವೇರಿಸಿಕೊಟ್ಟರು (ಶಿಲ್ಪಶಾಂ. iii, ೬೦೯). [ಸಂ.]

**ಮಂಗಲಕಾಲ** (ನಾ). ಶುಭ ಸನ್ನಿವೇಶ; ಒಳ್ಳೆಯ ಕಾಲ : ಎಲೆ ಸಖಿ, ಮಂಗಲಕಾಲದಲ್ಲಿ ನೀನಿಂತು ರೋದನ ಮಾಡುವುದು ಉಚಿತವಲ್ಲ (ಶಾಕುಂತ. ೩೦-೨೦). [ಸಂ.]

**ಮಂಗಲಗಾತ್ರಿ** (ನಾ). ಮನೋಹರವಾದ ದೇಹವುಳ್ಳವಳು ; ಸುಂದರಿ : ಕಲಹಂಸಗಮನೆ ಪೂರ್ಣೇಂದುಮುಖಿ ಚಾರುಮಂಗಲ[ಪಾಠಾಂ. ಳ]ಗಾತ್ರ [ಪಾಠಾಂ. ತ್ರಿ] ಘನ ಸೌಮ್ಯ ಸುಂದರವಿಲಾಸಿನಿ . . . ಕೇಳ್ದಿನ್ನ ದೆಸೆಗದೆ ನವಗ್ರಹಂಗಳ ಪೆಸರ ಬಲಂ (ಶ್ರೀವಿಜ. ೬-೨೯).

[ಸಂ. ಮಂಗಲಗಾತ್ರಾ (ಮಂಗಲ + ಗಾತ್ರ + –)]

**ಮಂಗಲತೋರಣ**, ಮಂಗಳತೋರಣ (ನಾ). ಮದುವೆ, ಹಬ್ಬ ಮೊದಲಾದ ಶುಭಸಮಾರಂಭಗಳಲ್ಲಿ ಅಲಂಕಾರಕ್ಕಾಗಿ ಬಾಗಿಲು, ಬೀದಿ ಮುಂತಾದೆಡೆಗಳಲ್ಲಿ ಕಟ್ಟುವ ತಳಿರು, ಹೂವು, ಬಟ್ಟೆ ಮೊದಲಾದುವುಗಳ ಮಾಲಿಕೆ : ತ್ರಿಭುವನಮಂಗಲತೋರಣನಿಭಮಂ ಪ್ರವಚನಮನೆಯ್ದೆ ರೈಸ್ತಂಭಸಮಪ್ರಭರಂತರ್ನಿಭೃ ತೋನ್ನತವಿಭವರ್ ಭೂತಬಲಿಪುಷ್ಪದಂತಾಚಾರ್ಯರ್ (ಚಂಪ್ರಪು. ೧-೧೩).**ಮಂಗಳತೋರಣ** : ಉತ್ಸವದ ಸಮಯದಲ್ಲಿ ಊರ ಬಾಗಿಲಿಗೆ ಮಂಗಳ ತೋರಣ ಕಟ್ಟಿ ಅಲಂಕರಿಸಿದ್ದರು (ರೂಢಿ). [ಸಂ.]

**ಮಂಗಲಪಾತಕ,** ಮಂಗಳಪಾತಕ (ನಾ). ಬಿರುದಾವಳಿಯನ್ನು ಹೇಳು ವವನು; ಹೊಗಳುಭಟ್ಟ; ವಂದಿ : ಆಗಳ್ ಮಜ್ಜನಾವಸರಮಂಗಲ [ಪಾಠಾಂ. ಳ]ಪಾಠಕಮಧುರಗಂಭೀರನಿನದಮನಾಲಿಸುತ್ತುಂ (ಆದಿಪು. ೬-೭೦ ವ). **ಮಂಗಳಪಾಠಕ :** "ಪ್ರಬೋಧಕಾಃ, ಮಗಧಾಃ . . . ಮಂಗಳಪಾಠಕಾಃ _ಈ ೬ ಮಂಗಳಪಾಠಕರ್" (ಹಲಾಯು. ೭೦-೨೬೦); ಮಂಗಳಪಾಠಕರವ ವಾದ್ಯಂಗಳ ರವಮುಖಿಳಕಂಚುಕಿಗಳ ನಿನಾದಂ ಪೊಂಗೆ . . . ಎಸೆದನುದ್ಭ ಟಕ್ಷಿತಿಪಾಲಂ (ಅದ್ಭುಟ. ೨-೨೯); ಒಡನೆ ಮಂಗಳಪಾಠಕರು ಸಂಗಡಿಸಿ ಬಿರಿದುಗಳಂ ಪೊಗಳುತಂ ನಡೆಯೆ (ಬಸವ. ೫೦-೧೬). [ಸಂ.]

**ಮಂಗಲಪ್ರಸಾಧನ,** ಮಂಗಳಪ್ರಸಾಧನ (ನಾ). ಶುಭಪ್ರದವಾದ ಅಲಂಕಾರಸಾಮಗ್ರಿ : ಪರಪದಂ ತದ್ಭವಮಾದ ಸಮಾಸಕ್ಕೆ . . . ಮಂಗಲ[ಪಾಠಾಂ.ಳ]ಪ್ರಸಾಧನ – ಮಂಗಳಪಸವನ (ಶಬ್ದ. ೨೯೯ ವೃತ್ತಿ). **ಮಂಗಳಪ್ರಸಾಧನ :** ಮನ್ಮಥನ ಮೋಹನಯಂತ್ರಮಿ ದಪ್ಪುದಲ್ಲದಂದಿನಿತುವರಂ ಮನಂಗೊಳಿಸದೆಂಬಿನಮುಜ್ಜ್ವಳಮಂಗಳ [ಪಾಠಾಂ.ಲ]ಪ್ರಸಾಧನಮೆ ಮನೋಜರಾಜಜಯಸಾಧನಮಾದುದು ವಜ್ರ ಜಂಘನಾ (ಆದಿಪು. ೯-೯೦) ; ಮಂಗಳಪ್ರಸಾಧನಸನಾಥನುಂ ವಿನೀತನುಂ (ಶಾಂತಿಪು. ೦೦-೯೯ ವ). [ಸಂ.]

**ಮಂಗಲಬೀವಣ್ಣ** (ನಾ). ಒಬ್ಬಾತನ ಹೆಸರು : ನಾಗತ್ತರನಳು ಮಂಗಲ ಬೀವಣ್ಣನೆಮ್ಬೋನು ನಾಗದೇವನೆಮ್ಬೋನು × × × ಕದಮ್ಬೂರ್ ತುಱುಗಳ್ಗೊಳ ಕಾದಿ ಸತ್ತ (ಎಕ. IX. ಆನೇ. ೭೩-೬; ಸು. ೯೦೦).

[ಮಂಗಲ + ಬೀವ (< ಬೀಮು) + ಅಣ್ಣ₁]

**ಮಂಗಲಮಣಿ** (ನಾ). ಮದುವೆಯಲ್ಲಿ ವರನು ವಧುವಿನ ಕೊರಳಿಗೆ ಕಟ್ಟುವ ಮಾಂಗಲ್ಯದ ಬೊಟ್ಟು.– ತಾಳಿ : ನಿನ್ನ ಕೊರಳಿಗೆ ಮಂಗಲ ಮಣಿಯನ್ನು ಕಟ್ಟಿದ ಗಂಡಭಟ್ಟ ನಾನು (ಶ್ರಾವಣಂ. ೨೦).

[ಮಂಗಲ + ಮಣಿ₃. / ತಮಿ. ಮಙ್ಗಲಮಣಿ]

**ಮಂಗಲವತಿ** (ನಾ). ಮುತ್ತೈದೆ; ಸುಮಂಗಲಿ : 'ಚಿರಮಂಗಲವತಿ' ಪರಾ. [ಸಂ. ಮಂಗಲವತೀ]

**ಮಂಗಲವರಿಗೆ** (ನಾ). ಶುಭಸನ್ನಿವೇಶದಲ್ಲಿ ಬಾರಿಸುವ ಹಲಗೆ : "ಮಂಗಲದ ವಾದ್ಯದೊಳಗೆ ಮಂಗಲವರಿಗೆಯೆಂಬ ನಾಮಮಂ" (ಶಬ. ೯೩).

[ಮಂಗಲ + ಪರಿಗೆ]

**ಮಂಗಲವಾದ್ಯ,** ಮಂಗಳವಾದ್ಯ (ನಾ). ಶುಭಸಂದರ್ಭಗಳಲ್ಲಿ ಬಾರಿ ಸುವ ವಾದ್ಯ ; ಮಂಗಳವನ್ನು ಸೂಚಿಸುವ ವಾದ್ಯ : ಎಸೆದುದು ವಿಹಂಗಮಂಗಲವಾದ್ಯಮೆತ್ತಲುಂ (ಶೃಂಗ. ೯೦-೦೦೦೬). **ಮಂಗಳವಾದ್ಯ:** ಮಂಗಳವಾದ್ಯದಿಂ ಕಳಸಕ[ನ್ನ]ಡಿಯಿಂ . . . ಇದಿರ್ಗೊಳುತ್ತಂಗಜ ರೂಪಸನ್ನಿಭರನುರ್ವಿಪರಂ ಸ್ವಪುರಪ್ರವೇಶಮಂ ಕಂಗೊಳಿಪಂತು ಮಾಡಿಸಿದಂ (ಪಳಕಂ. ೪೦೩); ತಪ್ಪದೆ ಮಂಗಳವಾದ್ಯದ ಬಲುರವವುಪ್ಪರಿಸಿದುವೆಂಟು ದೆಸೆಗೆ (ಕಂಕಾ. ೨-೧೧೯). [ಸಂ.]

**ಮಂಗಲಸೂತ್ರ,** ಮಂಗಳಸೂತ್ರ (ನಾ). ವಿವಾಹಕಾಲದಲ್ಲಿ ವಧುವಿನ ಕೊರಳಿಗೆ ವರನು ಕಟ್ಟುವ ತಾಳಿಯನ್ನು ಪೋಣಿಸಿರುವ ದಾರ : ಪಱಿವುದಿನ್ನಸುರೇಂದ್ರವನಿತೆಯು ಮೆಱೆವ ಮಂಗಲಸೂತ್ರ (ಕೋರಗಾ. ೫-೨-೦೦). **ಮಂಗಳಸೂತ್ರ :** ಭಾಸುರಜ್ಯೋತಿಗಳಿಗರ್ಥವನೋಸರಿ ಸದಿಂತರ್ಪಸುತ್ತಿರೆ ನೈಸಜಿರಿ ಪಂಡಿತಿಯು ಮಂಗಳಸೂತ್ರವದು ಮೊದಲು (ಬಸವ. ೨೭-೯) ; ಬೇಸರಾಗದೆ ಬಾಳ್ವುದೆಂದು ಮಂಗಳಸೂತ್ರ ಲೇಸಿನಲಿ ಕಂಠದಲಿ ಬಂಧಿಸುತ (ಪಪುರಾ. ೦೩-೫೭). [ಸಂ.]

**ಮಂಗಲಾಗುರು** (ನಾ). ಒಂದು ಬಗೆಯ ಸುಗಂಧದ್ರವ್ಯ : "ಮಲ್ಲಿಕಾ ಗಂಧ_ ಮಂಗಲಾಗುರು" (೬ಕರಿ. ೦೨೦). [ಸಂ.]

**ಮಂಗಲಾತ್ರಯೋದಶಿ** (ನಾ). ಒಂದು ಬಗೆಯ ವ್ರತ : ಈ ವಾರಂ ಗಳಲ್ಲಿ ಮಂಗಲಾತ್ರಯೋದಶಿ ಬಹಾಗ ಆ ಮಂಗಲಾತ್ರಯೋದಶಿ ನಡವ[ದ]ಂದು ವಿಶೇಷವಾಗಿ ಯಿರಿಸಿದ ಅಕ್ಕಿಮೂಡೆ ೨ (ಎಕ. XX. ೯೯-೫೦; ೧೬೬೬). [ಸಂ. ಮಂಗಲಾತ್ರಯೋದಶೀ]

**ಮಂಗಲಾನಕ,** ಮಂಗಳಾನಕ (ನಾ). ಮದುವೆ ಮೊದಲಾದ ಶುಭ ಸಮಾರಂಭಗಳಲ್ಲಿ ಬಾರಿಸುವ ತಮಟೆ. – ಭೇರಿ : ಆಶೀರ್ನಿನಾದ ವಾಶಾದೇಶಮನೆಯ್ದಿದುದು ಮಂಗಲಾನಕರವಮಾಕಾಶಮನಡರ್ದುದು (ಶಂಕರವಿ. ೦೯-೭೨). **ಮಂಗಳಾನಕ :** ಜಿನಪೂಜೋತ್ಸವಮಂಗಳಾ [ಪಾಠಾಂ. ಲಾ]ನಕಮೃದುಪ್ರಧ್ವಾನದೊಳ್ . . . ಪೊಂಪುಱಿವೋಗುತಿರ್ಪ್ಪ ಮೆರಡುಂ ವಿದ್ಯಾಧರಶ್ರೇಣಿಗಳ್ (ಆದಿಪು. ೦-೭೦) ; ಮಂಗಳಾನಕಂಗಳುಂ ಭೋರ್ಗರೆಯೆ ಪೊಱಮಟ್ಟು ಬರ್ಪಲ್ಲಿ (ಪುಷ್ಪ. ೦೦-೦೬ ವ). [ಸಂ.]

**ಮಂಗಲೀಶ** (ನಾ). ಒಬ್ಬಾತನ ಹೆಸರು : ಸ್ವಸ್ತಿಶ್ರೀ ಮಾತ್ಪಿ(ಪೃ)ಥಿವಿ ವಲ್ಲಭ ಮಂಗ(ಲೀ)ಸ(ಶ)ನಾ ಕಲ್ಮನೆಗೆ ಇತ್ತೊದು (ಇಆ. X. ೬೦-೦; ೬ನೆಯ ಶತ). [ಸಂ.]

**ಮಂಗಲೋತ್ತರ** (ನಾ). ಮೋಕ್ಷವನ್ನು ಪಡೆದವನು ; ಮುಕ್ತ : ನಿರಂಗಸಂಗವನ್ನೆದಿದ ಮಂಗಲೋತ್ತರನಂತೆ ಇದಱಿಂದದ ಸಂಗ ಇದೇ ಹಿಂಗದ ಲಿಂಗೈಕ್ಯ (ಮೋಳಿಗೆ. ೦೨೯-೯೯೨). [ಸಂ.]

**ಮಂಗಲ್ಯಕ,** ಮಂಗಳ್ಯಕ (ನಾ). ಒಂದು ಬಗೆಯ ಕಡಲೆ; ಕಾಡುಗಡಲೆ ; ಸಣ್ಣಗಡಲೆ. **ಮಂಗಳ್ಯಕ :** "ಮಂಗಳ್ಯಕಃ, ಮಸೂರಃ — ೨ ಚಣ್ಣಂಗಿ ಹೆಸರು, ಸಣ್ಣಬಟ್ಟಗಡಲೆ, ಕಿರಿಗಡಲೆ ; ಕಾಡುಗಡಲೆ" (ಬಿದ್ಯಾಂತಿ. ೨೬೮). [ಸಂ.]

**ಮಂಗಲ್ಯೆ** (ನಾ). ೧. ಬಹಳ ಸುವಾಸನೆಯುಳ್ಳ ಒಂದು ಬಗೆಯ ಗಂಧದ ಮರ. ೨. ಶಕ್ತಿದೇವತೆ ; ದುರ್ಗೆ. ೩. ಒಂದು ಬಗೆಯ ಸುಗಂಧ ದ್ರವ್ಯ. [ಸಂ. ಮಂಗಲ್ಯಾ]

**ಮಂಗಸಮುದ್ರ** (ನಾ). ಒಂದು ಊರಿನ ಹೆಸರು : ಮಂಗಸಮುದ್ರ × × × ಗಣ್ಡಾಗನ್ ಕಳನಿಗೆಯ್ದು ಕಾಸಿಯ × × × ಱಿವಿಟ್ಟಿಗೆಯ್ದು ಈವಿ × × × (ತ್ಯಾಗರ. ೦೯೨೬, ೦೨೫-೯ ; ೯೫೬). [ ? ]

**ಮಂಗಳ** 'ಮಂಗಲ' ನೋ.

**ಮಂಗಳಂಬಾಡು** 'ಮಂಗಲಂಬಾಡು' ನೋ.

**ಮಂಗಳಕರ** (ಗು). ಶುಭವನ್ನುಂಟುಮಾಡುವ ; ಶ್ರೇಯಸ್ಕರವಾದ : ಮಂಗಳಕರ ಭುವನಾಧಿಕ ಮಂಗಳನನಂತಬೋಧನಿಧಿಯಂ ನಿಧಿಗಳ್ ಸಂಗಡದೋಲಗಿಸುವುದುಚಿತಂ ಗಡಮೆನೆ ನೆಲಸಿ ಗೋಪುರದೊಳೋಲಗಿಸುಂ (ಶಾಂತೀಶಪು. ೦೬-೬೮). [ಸಂ. ಮಂಗಲಕರ]

**ಮಂಗಳಕಷ್ಟ** (ನಾ). [ಜ್ಯೋತಿ] ಕುಜಗ್ರಹವು ವಿರುದ್ಧಸ್ಥಾನದಲ್ಲಿರು ವಾಗ ಜಾತಕನಿಗೆ ಉಂಟಾಗುವ ತೊಂದರೆ : ಅಂಗಳದಲ್ಲಿ ಹೇತು ಮಂಗಳಕಷ್ಟ ಅಂದ ಹಾಗೆ (ಗಾದೆ). [ಸಂ. ಮಂಗಲಕಷ್ಟ]

**ಮಂಗಳಕಾಂಕ್ಷಿ** (ನಾ). ಶುಭವನ್ನು ಬಯಸುವ ವ್ಯಕ್ತಿ : ನೀವು ಅವರ ಮಂಗಳಕಾಂಕ್ಷಿಗಳಾಗಿದ್ದರೆ ಅವರಿಗೆ ಸತ್ಪರಾಮರ್ಶವನ್ನು ಕೊಡುತ್ತಿದ್ದಿರಿ (ಬನ್ನಬೀ. ೫೩). [ಸಂ. ಮಂಗಲಕಾಂಕ್ಷಿನ್]

**ಮಂಗಳಕಾರಣ** (ಗು). ೧. ಶುಭಕ್ಕೆ ಕಾರಣವಾದ ; ಶ್ರೇಯಸ್ಸನ್ನುಂಟು ಮಾಡುವ : ಮಂಗಳಕಾರಣಪಂಚಪದಂಗಳಂ . . . ಅಕ್ಷಯಮಂತ್ರ ಪದಂಗಳನೋದುವುದು ನೆಱೆಯೆ ನಿಶ್ಚಲಮತಿಯಿಂ (ಆದಿಪು. ೨-೫೯). (ನಾ). ೨. ಶುಭಕಾರಿಯಾದುದು ; ಶ್ರೇಯಸ್ಕರವಾದುದು : ಚಂದನದೆಳದಳಿರ್ದೋರಣಂಗಳವು ಸೂಚಿತ ಮಂಗಳಕಾರಣಂಗಳವು (ಆದಿಪು. ೯-೩೦ ರಗಳೆ); ಪುರುಷೋತ್ತಮನೀ ಚಳುಕ್ಯನಾರಾಯಣದೇವನೀಗೆಮಗೆ ಮಂಗಳಕಾರಣಮುತ್ಸವಂಗಳಂ (ಗದಾಯು. ೦-೦). [ಸಂ. ಮಂಗಲಕಾರಣ]

**ಮಂಗಳಕಾರ್ಯ** 'ಮಂಗಲಕಾರ್ಯ' ನೋ.

**ಮಂಗಳಕೇತು** (ನಾ). ೧. ಉತ್ಸವಕಾಲದಲ್ಲಿ ಏರಿಸುವ ಶುಭಸೂಚಕವಾದ ಬಾವುಟ. ೨. ನವಗ್ರಹಗಳಲ್ಲಿರುವ ಕುಜ ಮತ್ತು ಕೇತು ಎಂಬ ಎರಡು ಗ್ರಹಗಳು. ೧, ೨ : ಮಂಗಳಕೇತುವಿರಾಜಿತಮಂಗೀಕೃತನೀಲ ಭಾನು ತಮಸು ಮಣಿಷತ್ಸಂಗತಬುಧಗುರುಕವಿರಾಜಂಗತಿನವಗ್ರಹಪರೀತ ಮುದ್ರಾಹಗೃಹಂ (ಅಕಂಕೃ. ೬-೪೬). [ಮಂಗಳ (= ಮಂಗಲ) + ಕೇತು]

**ಮಂಗಳಕ್ರಿಯೆ** (ನಾ). ಶುಭಸಮಾರಂಭಗಳಲ್ಲಿ ನಡೆಸಬೇಕಾದ ಕೆಲಸ,– ಕಾರ್ಯ : ಜನಂಗಳೆಲ್ಲಂ ಮಂಗಳ[ಶಾಕಾಂ. ಲ]ಕ್ರಿಯೆಗಳೊಳು ವಂದನ ಮಾಲೆಗಳೊಳು ಮಾಡಲು ತಗುಟ್ಟರು (ಕಾವುಂಕೃ. ೫೪).

[ಸಂ. ಮಂಗಲಕ್ರಿಯಾ]

**ಮಂಗಳಗಾಯಕ** (ನಾ). ಶುಭಸೂಚಕವಾದ ಹಾಡನ್ನು ಹಾಡುವವನು : ಗೀರ್ವಾಣಮಂಗಳಗಾಯಕರೆ ಸಂಗೀತಗಾಯಕರಾಗೆ ನಿಳಿಂಪಭಾರತಿಕರ ನಟ್ಟುವರಾಗೆ (ಶಾಂತಿಕೃ. ೧೧-೬೦ ವ); ಮಂಗಳಗಾಯಕರ್ . . . ಮಂಗಳ ಪಾಠಕರ್ ಗಣಿಕಸಂತತಿ ಸಂಭ್ರಮದಿಂ ಪುಗುತ್ತಿರಲ್ ಮಂಗಳಗೇಹಮಂ (ದಕಶಾ. ೮-೩೨೬). [ಸಂ. ಮಂಗಲಗಾಯಕ]

**ಮಂಗಳಗಾಯಿಕೆ** (ನಾ). ಶುಭಸೂಚಕವಾದ ಹಾಡನ್ನು ಹಾಡುವವಳು: ಮಂಗಳಗಾಯಿಕಾಮುಖಸರೋರುಹಗೀತಮಧುಪ್ರಸೇವನಾ ಸಂಗತರಾಜ ಭೃಂಗಕುಳದಿಂ . . . ಒಪ್ಪುತಿರ್ದುದು ಸರೋವರದಂತೆ ಗೃಹಂ ಮಹೀಶನಾ (ಶಾಕ್ಯಗೃ. ೦೪-೦೦೯) : ಮಂಗಳಗಾಯಿಕಾಮಧುರಗಾನದಿ ನೆಟ್ಟನೆಯ್ದಿ ನಿತ್ಯಕೃತ್ಯಂಗಳ ಮಂಗಳಾಚರಣಮಂ ನೆಗಟುತ್ತೆ (ಪುಸ್ಪಕೃ. ೩-೦೨೦). [ಸಂ. ಮಂಗಲಗಾಯಿಕಾ]

**ಮಂಗಳಗಾಯಿನಿ** (ನಾ). = ಮಂಗಳಗಾಯಿಕೆ : ಮಂಗಳಗಾಯಿ[ಶಾಕಾಂ. ಯ]ನಿಯರ ಗೀತಂಗಳನುಪಹಾರಕುಸುಮಮಧುಪಾನವ್ಯಾಸಂಗದೊಳಿರ್ದಳದುಂಬಿಗಳಿಂಗೊರಲಿಪರ್ಗಡಿಸಿದತ್ತು ರಾಜಾಂಗಣದೊಳ್ (ತಂಗಾಪು. ೩-೦೦೬). [ಸಂ. ಮಂಗಲಗಾಯಿನೀ]

**ಮಂಗಳಗೀತ** (ನಾ). ಶುಭಕರವಾದ ಹಾಡು : ಯುಗಪದುತ್ಥಿತ ಮಂಗಳ [ಶಾಕಾಂ. ಲ]ಗೀತೋನ್ಮಿಶ್ರಿತಾನೇಕಲಯಾನುಗತಲೀಲಾಲಾಸ್ಯಪ್ರಸಕ್ತ ಕಾಮಿನೀಕಮನೀಯಮುಮಾಗಿ (ಆದಿಪು. ೮-೩೫ ವ); ಮಂಗಳಗೀತವಾದ್ಯ ನಿನದಂಗಳಶೇಷದಿಶಾತಟಂಗಳೊಳ್ ಪೊಂಗಿರೆ (ವರ್ಧಕೃ. ೦೪-೩೯).

[ಸಂ. ಮಂಗಲಗೀತ]

**ಮಂಗಳಗೀತಿ** (ನಾ). = ಮಂಗಳಗೀತ : ಮಂಗಳಗೀತಿಗಳೊಳ್ಪಿಗೆ ಮಂಗಳ ಪಾಠಕರವಂಗಳಿಂದೆಸೆದಿರೆ ರಾಜಾಂಗಣದೊಳ್ (ಆದಿಪು. ೦೨-೪೯).

[ಸಂ. ಮಂಗಲಗೀತಿ]

**ಮಂಗಳಗುಣ** (ನಾ). ೧. ಒಳ್ಳೆಯ ಗುಣ,– ನಡತೆ ; ಸದಾಚಾರ : ಮಂಗಳಗುಣಾನ್ವಿತ ರಥಾಂಗಧರಸೇವಿತ . . . ದಯಾದ್ರ್ರಾಪಾಂಗ ಪೊರೆಯೆನ್ನನು (ಶೃಶಾ. ೪-೦೨೬). ೨. ಒಳ್ಳೆಯ ಗುಣವುಳ್ಳವನು ; ಸದಾಚಾರವುಳ್ಳವನು : ಮಂಗಳಗುಣರೇಟುಂ ನರಕಂಗಳ ನಾರಕರ ದಂಡನಾದಿಗಳಂ ದುಃಖಂಗಳನಭಿವರ್ಣಿಸಿದೊಡೆ (ಅಕಪು. ೦೧-೦೩).

[ಸಂ. ಮಂಗಲಗುಣ]

**ಮಂಗಳಗೌರಿವ್ರತ** (ನಾ). ಶ್ರಾವಣಮಾಸದ ಪ್ರತಿ ಮಂಗಳವಾರ ನಡೆಸುವ ಗೌರೀದೇವಿಯ ವ್ರತಾಚರಣೆ : ಅವರ ಮನೆಯಲ್ಲಿ ಮಂಗಳಗೌರಿವ್ರತವನ್ನು ಬಹಳ ವಿಜೃಂಭಣೆಯಿಂದ ಆಚರಿಸುತ್ತಾರೆ (ರೂಢಿ).

[ಮಂಗಳ (=ಮಂಗಲ) + ಗೌರಿ + ವ್ರತ]

**ಮಂಗಳಚರಿತ** (ನಾ). ಪುಣ್ಯಕರವಾದ ನಡವಳಿಕೆಯುಳ್ಳವನು ; ಶುಭಚರಿತನಾದವನು : ತಣ್ಣಟಲೊಳ್ ಗೋಕುಳಮಂ ನಿಲಿಸುತ್ತುಂ ಮಂಗಳಚರಿತಂ ಕ್ರೀಡಮಾನನೆಸೆದಂ ಕೃಷ್ಣಂ (ಜಗಪು. ೪-೪೩).

[ಸಂ. ಮಂಗಲಚರಿತ]

**ಮಂಗಳತಾಳಿ** (ನಾ). ಮದುವೆಯಲ್ಲಿ ವರನು ವಧುವಿನ ಕೊರಳಿಗೆ ಕಟ್ಟುವ ತಾಳಿ,– ಮಾಂಗಲ್ಯ : ಸದಮಲಾರಕ್ತಸರಸಿಜಪೊ ದೋಣ್ ಪ್ರಾಗ್ದಿಶಾಸುದತಿ ಧರಿಸಿರ್ದ ಮಂಗಳತಾಳಿಯಂತೆ . . . ಬಿಸಿಗದಿರಬಿಂಬಂ ಕಾಣಿಸಿತು ಪ್ರಭಾತದೊಳ್ಕೌತುಕವೆನೆ (ನಂದಿಪು. ೨೨-೪೪).

[ಮಂಗಳ (=ಮಂಗಲ) + ತಾಳಿ$_1$ (=ತಾಲಿ$_1$)]

**ಮಂಗಳತೂರ್ಯ** (ನಾ). ಶುಭಸಂದರ್ಭದಲ್ಲಿ ನುಡಿಸುವ ವಾದ್ಯ : ಮೊಟಗುವ ಮಂಗಳತೂರ್ಯಂಗಳೆಸೆಯೆ (ಶಂಕಪು. ೩-೪೬ ವ) ; ಪುಣ್ಯಕೃತಮಂಗಳತೂರ್ಯನಿನಾದಮೆತ್ತಲುಂ (ಪುಸ್ಪಕೃ. ೮-೫೦).

[ಸಂ. ಮಂಗಲತೂರ್ಯ]

**ಮಂಗಳತೆ** (ನಾ). ಸುಖ ; ಸಂತೋಷ : ತಿಳುಹಿ . . . ಸತ್ಕೃತಿಯ ಮಂಗಳತೆಯನು ಕೈಕೊಂಡು ಹಾಯ್ದನು ಹಂಸೆಯಲಿ ಮುನಿಪ (ಕೊರಾ. ೦-೫-೨೫). [ಸಂ. ಮಂಗಲತಾ]

**ಮಂಗಳತೋರಣ** 'ಮಂಗಲತೋರಣ' ನೋ.

**ಮಂಗಳದ್ರವ್ಯ** (ನಾ). ೧. ಶುಭಸಮಾರಂಭಗಳಲ್ಲಿ ಉಪಯೋಗಿಸುವ ಅರಿಸಿನ, ಕುಂಕುಮ, ಗಂಧ, ಮೊದಲಾದ ಪದಾರ್ಥಗಳು : ಅನಿಬರಿಂದ್ರರುಮಭಿಷೇಕಮಂಗಳದ್ರವ್ಯಂಗಳಂ ಕೂಡಿ ಶಚೀದೇವಿ (ಶಕ್ರ)ಕರತಳಕ್ಕವಂ ನೋಡಿ ನೀಡೆ (ಶಾಂತಿಕೃ. ೦೦-೩೬ ವ); ಕೊರಳೊಳಾಭರಣದೊಳು . . . ಮಂಗಳದ್ರವ್ಯದೊಳು ಮಾತಾಳಂಗದೊಳು ನಿರುತದಿಂ ರುಚಿಕಮಸ್ತು (ಮಂಗರಾ. ೦೫೨-೫೯). ೨. ಹೆಣ್ಣುಮಕ್ಕಳಿಗೆ ಗೌರಿಹಬ್ಬ, ಮೊದಲಾದ ಶುಭಕಾರ್ಯಕ್ಕೆ ಪೂಜಾದ್ರವ್ಯ ತರಲು ತೌರುಮನೆಯವರು ಕೊಡುವ ಹಣ : ತಂಗಿಗೆ ಗೌರೀಹಬ್ಬದ ಮಂಗಳದ್ರವ್ಯ ಇಪ್ಪತ್ತೈದು ರೂಪಾಯಿಗಳನ್ನು ಕಳುಹಿಸಿರುತ್ತೇನೆ (ಕಾಂ). [ಸಂ. ಮಂಗಲದ್ರವ್ಯ]

**ಮಂಗಳಧಾರಿಣಿ** (ನಾ). (ಶುಭ ಸಂದರ್ಭಗಳಲ್ಲಿ) ಮಂಗಳದ್ರವ್ಯಗಳನ್ನು ಹಿಡಿದಿರುವವಳು ; ಸುಮಂಗಲಿ : ಮಂಗಳ[ ಶಾಕಾಂ. ಲ ]ಮನೆ ಪಾಡುತ್ತುಂ ಮಂಗಳ[ಶಾಕಾಂ. ಲ]ಧಾರಿಣಿಯರಾಗಿ ಮುಂದಂ ನಡೆ ವಾಶಾಂಗನೆಯರಿಂದೆ ದಿವಿಜೇಂದ್ರಾಂಗನೆ ಕರಮೆಸೆದು ಹಂಸಗತಿಯೊಳ್ ಬಂದಳ್ (ಆದಿಪು. ೭-೪೬) ; ಅರ್ಚಿಸಿದರಷ್ಟವಿಧದರ್ಚನೆಯಿಂ ಮಂಗಳ ಧಾರಿಣಿಯರ್ ಶಕ್ರಾಂಗನೆಯುಂ ನೆಗಟ್ದ ನಾಗದೇವಾಂಗನೆಯುಂ (ಅಕಪು. ೪-೭೯). [ಸಂ. ಮಂಗಲಧಾರಿಣೀ]

**ಮಂಗಳನಿಲಯ, ಮಂಗಳನಿಳಯ** (ನಾ). ಶ್ರೇಯಸ್ಸಿಗೆ ನೆಲೆಯಾಗಿರುವವನು : ಸುರಪ್ರವ್ಯಚರಿತ್ರನಖಿಳಮಂಗಳನಿಲಯಂ (ಪಸ್ತಶಂ. ೬-೪೦). **ಮಂಗಳನಿಳಯ** : ಮಂಗಳನಿಳಯನ ಪದಪದ್ಮಂಗಳನರ್ಚಿಸಿದರಷ್ಟವಿಧದರ್ಚನೆಯಿಂ (ಅಕಪು. ೪-೭೯). [ಸಂ. ಮಂಗಲನಿಲಯ]

**ಮಂಗಳನಿಳಯ** 'ಮಂಗಳನಿಲಯ' ನೋ.

**ಮಂಗಳಪಾಠಕ** 'ಮಂಗಲಪಾಠಕ' ನೋ.

**ಮಂಗಳಪ್ರಸಾಧನ** 'ಮಂಗಲಪ್ರಸಾಧನ' ನೋ.

**ಮಂಗಳಬೇರ** (ನಾ). ಹವಳದ ಬಣ್ಣ ಮತ್ತು ಬಿಳುಪು ಮಿಶ್ರವಾದ ಬಣ್ಣದ ಒಂದು ಜಾತಿಯ ಕುದುರೆ : ಪವಳಾಂಗ ತನುಚ್ಛವಿ ಬೆಳ್ಪವಿರಳ ಮಾದುದು ನೋಡೆ ಮಂಗಳಬೇರಂ (ಅಶ್ವಶಾ. ೨-೦೩).

[ಮಂಗಳ ( = ಮಂಗಲ) + ಬೇರ$_3$]

**ಮಂಗಳಭೂಷಣ** (ನಾ). = ಮಂಗಲಪ್ರಸಾಧನ : ಮಂಗಳಭೂಷಣಂಗಳಿನಲಂಕರಿಸಿರ್ದೆಡೆಯಾಡುತಿರ್ಪವಳ್ . . . ನಿಜೇಶಂಗಿದಿರೆಟ್ದು ಬಂದು ಮಂಟೌದಳ್ ಧವಳೇಕ್ಷಣೆ ತನ್ನ ನಲ್ಮೆಯಂ (ಶೃಂಗಾರ. ೩-೬೪).

[ಸಂ. ಮಂಗಲಭೂಷಣ]

**ಮಂಗಳಮಂಡನ** (ನಾ). = ಮಂಗಲಪ್ರಸಾಧನ : ಮಂಗಳಮಂಡನಕ್ಕೆ ನೆಲೆಯಾದ ಕುಮಾರನ ಭೂಷಣಾಂಶು ದಿವ್ಯಾಂಗದ ಕಾಂತಿಯೊಳ್ ಕೊಡರ್ದು

ರಂಜಿಸಲಾಜಿವೆ (ಧರ್ಮಾ. ೧೨-೧೦೪). [ಸಂ. ಮಂಗಲಮಂಡನ]

**ಮಂಗಳಮಜ್ಜನ** (ನಾ). ಶುಭಕಾರ್ಯದ ಅಂಗವಾಗಿ ಮಾಡುವ ಸ್ನಾನ: ಶ್ರೀರಮಣೀಪ್ರಿಯಂಗಮೃತಮಂಗಳಮಜ್ಜನಮಂ ಜಿನಂಗೆ ವಿಸ್ತಾರಿಸೆ (ಶಾಂತಿಪು. ೧೦-೯೩); ಪರಮಮಂಗಳಮಜ್ಜನವನಾಭರಣವಸನಾದಿಗಳ ನೀ ಸ್ವೀಕರಿಸಬೇಹುದು (ಕೌಶಿಕಾ. ೪೪-೦). [ಸಂ. ಮಂಗಲಮಜ್ಜನ]

**ಮಂಗಳಮುಖಿ** (ನಾ). ಶುಭಕರವಾದ ಮುಖವುಳ್ಳವಳು; ಕಲ್ಯಾಣಿ : ಮಂಗಳಮುಖಿ ಮಾನಿನಿ . . . ಗಿರಿಸುತೆಯೆಸೆದಳ್ (ಗಿರಿಜಾ. ೩-೫೮). [ಸಂ. ಮಂಗಲಮುಖೀ (ಮಂಗಲ + ಮುಖ + — )]

**ಮಂಗಳಮುಹೂರ್ತ** (ನಾ). ಶುಭಗಳಿಗೆ ಮತ್ತು ಆ ಗಳಿಗೆಯಲ್ಲಿ ನಡೆಸುವ ಶುಭಕಾರ್ಯ : ಹರುಷದಲಿ ಮಂಗಳಮುಹೂರ್ತವ ಮಾಡಿಯೆಂದನು (ಕುಮಾ.ಪಿ. ೧೦-೬೩); ಮಂಗಳಮುಹೂರ್ತವನು ಜನತತಿಗೆ ತಿಳುಹಿಸುತ . . . ಬರುತಿಹುದು (ಕಿತ್ತ. ೦-೧೨). [ಸಂ. ಮಂಗಲಮುಹೂರ್ತ]

**ಮಂಗಳಮೂರುತಿ** (ನಾ). ಶುಭಕರವಾದ ಸ್ವರೂಪವುಳ್ಳವನು : ಗಂಗೆ ನೀ ಪಾತಾಳಕೆ ಹೆಂಗ ಬಂದಿದಿ ಹೇಳೆ ಮಂಗಳಮೂರುತಿ ಮಾರಾಯನ ಜಡೆ ಬಿಟ್ಟು (ಸಿದ್ಧ.ಪು. ೩-೯೩). [ಮಂಗಳ (= ಮಂಗಲ) + ಮೂರುತಿ]

**ಮಂಗಳಮೂರ್ತಿ** (ನಾ). ೧. ಶುಭಕರವಾದ ಆಕಾರ,—ಸ್ವರೂಪ : ದೇವರ ಮಂಗಳಮೂರ್ತಿಯನ್ನು ನೋಡಿ ಆನಂದಪರವಶನಾದನು (ರೂಢಿ). ೨. ಶುಭಕರವಾದ ಸ್ವರೂಪವುಳ್ಳ ವ್ಯಕ್ತಿ : ಸಂಗವೆರಡುಂಟು ಒಂದ ಬಿಡು ಒಂದ ಹಿಡಿ ಮಂಗಳಮೂರ್ತಿ ನಮ್ಮ ಕೂಡಲಸಂಗನ ಶರಣರ (ಬಸವ. ೨೬೪); ಮಂಗಳಮೂರ್ತಿ ತಾಪಸಶಿರೋಮಣಿ . . . ಶಿವಯೋಗಿಯೆಸೆ ತಿರ್ದನದೊರ್ಬ ಭೂಸುರಂ (ಪಂಪಾ. ೩-೪೬); ಜಯಮಂಗಳಂ . . . ಮಾರನ್ನ ಪಡೆದ ಮಂಗಳಮೂರ್ತಿಗೆ (ಕುಕೊಂಡ. ೦-೨೩೩-೨). [ಸಂ. ಮಂಗಲಮೂರ್ತಿ]

**ಮಂಗಳವಡೆ** (ಕ್ರಿ). ಸೊಬಗನ್ನು ಹೊಂದು ; ಚೆಲುವಾಗು : ಸಕಯಿಲ್ಲದಾವಗಮುರಿವ ಕೆಂಗಿಡಿಯ ಮಾಲಿಕೆಯಂತೆ ಮಂಗಳವಡೆದ ನಿಖಿಳರತ್ನಂಗಳ ಡಸಿದ ಮುದ್ರಿಕೆ ಮಂಟಿಕೆಯನಿಟ್ಟರು ಬೆರಲ್ಗಳಿಗೆ (ಚೋಹಕ. ೨೩-೪೭). [ಮಂಗಳ (= ಮಂಗಲ) + ಪಡೆ₁]

**ಮಂಗಳವರೆ** ' ಮಂಗಳವಜೆ² ' ನೋ.

**ಮಂಗಳವಸದನ** (ನಾ). = ಮಂಗಲಪ್ರಸಾಧನ : ಓರೊರ್ವರಾಕೆಯ ರೂಪಂ ವಕ್ರೋಕ್ತಿಯೊಳ್ ಪೊಗಟ್ದು ಮಂಗಳವಸದನವಿಕ್ಕಿಯುಂ (ಶಂಖಚಾ. ೩-೯೬ ಪ) ; ಮಂಗಳವಸದನದಿಂದೆ ಮನಂಗೊಳಿಸುತವಿರ್ದ ಪಡೆಯು ಕಾಪಂ ಪಡೆವಳ್ಳಂಗೆ ಸಮರ್ಪಿಸಿ (ಜಾತ್ಕಾಪು. ೧೦-೯೯). [ಮಂಗಳ (= ಮಂಗಲ) + ಪಸದನ]

**ಮಂಗಳವಸದನಂಗೊಳ್** (ಕ್ರಿ). ಶುಭಪ್ರಸಂಗಕ್ಕೆ ಉಚಿತವಾದ ವೇಷಭೂಷಣಗಳನ್ನು ಧರಿಸು : ಪಾಂಡವರಯ್ವರುಮುನ್ಮೀಲಿತನಯನರಾಗಿ ನಿತ್ಯನಿಯಮಂಗಳಂ ನಿರ್ವರ್ತಿಸಿ ಮಂಗಳವಸದನಂಗೊಂಡು • (ಪಂಪಭಾ. ೨-೯೩ ಪ) ; ಸೌಜನ್ಯಕಂದಾಂಕುರಂ ವಿಜಯಪ್ರಸ್ಥಾನೋದ್ಯುಕ್ತಂ ಮಂಗಳ ಪಸದನಂಗೊಂಡು (ಶಾಂತಿಪು. ೧೦-೦೯೨ ಪ). [ಮಂಗಳಪಸದನ + ಕೊಳ್₁]

**ಮಂಗಳವಸ್ತು** (ನಾ). = ಮಂಗಳದ್ರವ್ಯ ೧ : ಮಂಗಳವಸ್ತುಗಳಿಂ ದೇವಾಂಗನೆಯರ್ಮಾಡೆ ಗರ್ಭಶೋಧನಮಂ (ಮಲ್ಲಿಪು. ೧೦-೯೯); ಗೌರಿಯು ಮನೆಯ ಮಗಳೆಂದು . . . ಆದರದಿಂದ ಹಸಿರುಬಳೆ, ಕುಂಕುಮ, ಅರಿಷಿಣ, ಪತ್ತಲ ಮೊದಲಾದ ಮಂಗಳವಸ್ತುಗಳನ್ನು ಇಡಿಸಹೋಗಿದ್ದಾರೆ ನಮ್ಮ ಹೆಣ್ಣುಮಕ್ಕಳು (ಕನ್ನಡಾ. ೦೬೮). [ಸಂ. ಮಂಗಲವಸ್ತು]

**ಮಂಗಳವಜೆ²**, ಮಂಗಳವರೆ (ನಾ). = ಮಂಗಲಾನಕ : ಮಂಗಳವಜೆ²ಗಳ್ . . . ಶ್ವೇತಚ್ಛತ್ರಂಗಳಮರ್ದಸೆಯೆ ಕರ್ಣಂಗಂಗಮಹೀತಳ ವಿಭೂತಿಯಂ ನೆಱೆಯುತ್ತಂ (ಪಂಪಭಾ. ೨-೮೪) ; ಪೊಂಗಳಸದ ನೀರಂ ತರಿಸಿ ಮಂಗಳವಜೆ²ಗಳೆಸೆಯೆ ಧಾರೆಯನೆಱೆಯಲೆಂದಿರ್ಪುದುಂ (ಧರ್ಮಾಮೃ. ೯-೨೨೬). **ಮಂಗಳವರೆ :** ಮಂಗಳವರೆಯ ನಾದಕ್ಕೆ ನಡೆನಡೆಯ ನಿಡುವೊಸಗೆ (ತ್ರಿಲಾಶು. ೩೦-೬೪೬). [ಮಂಗಳ (= ಮಂಗಲ) + ಪಜೆ²₁]

**ಮಂಗಳವಾಚಕ** (ನಾ). ಶುಭದ ಅರ್ಥವನ್ನು ಸೂಚಿಸುವ ಶಬ್ದ ; ಓಂ, ಶ್ರೀ ಇತ್ಯಾದಿ ಶಬ್ದಗಳು : ಭಾರತೀಯರ ಪ್ರಕಾರ ಯಾವ ಕೃತಿಯೇ ಆಗಲಿ ಮಂಗಳಶ್ಲೋಕದಿಂದ ಅಥವಾ ಮಂಗಳವಾಚಕದಿಂದ ಆರಂಭವಾಗಬೇಕು (ಕನಾಅ. ೯೬). [ಸಂ. ಮಂಗಲವಾಚಕ]

**ಮಂಗಳವಾದ್ಯ** 'ಮಂಗಲವಾದ್ಯ' ನೋ.

**ಮಂಗಳವಾರ** (ನಾ). ವಾರದ ಏಳುದಿನಗಳಲ್ಲಿ ಮೂರನೆಯ ದಿನ ; ಕುಜನು ಅಧಿದೇವತೆಯಾಗಿರುವ ವಾರ ; ಕುಜವಾರ : ಆ ದಿನವೇ ಆದಿತ್ಯವಾರ ಸೋಮವಾರ ಮಂಗಳವಾರ . . . ಶನಿವಾರವೆಂದೇಳು ತೆಱನಾಗಿಹುದು (ಶಬ್ದಾ. ೨೬೧) ; ಹೇವಿಳಂಬಿನಾಮಸಂವತ್ಸರದ ಜ್ಯೇಷ್ಠ ಬ ೪ ಮಂಗಳವಾರಕ್ಕೆ (ಕುಂತಿ. ೦೯೩೪, ೨೬-೨ ; 1897). [ಸಂ. ಮಂಗಲವಾರ]

**ಮಂಗಳವಿಧಿ** (ನಾ). ನಿಯಮಿತ ಕಾಲದಲ್ಲಿ ಮಾಡಬೇಕಾದ ಶುಭಕಾರ್ಯ; ಸ್ನಾನ, ಪೂಜೆ ಮೊದಲಾದುವು : ಕನಕಾದ್ರಿಶಿಖಾವಳವರ್ತನಕ್ಕೆಲಯಮೆಳಸೆ ದಿವಿಜದುಂದುಭಿ ಶಂಖಸ್ವನದೊಡನೆ ಮೊಟಗಿದುವು ಜಿನಜನನಾಭಿಷವಪ್ರಸಂಗಮಂಗಳವಿಧಿಯೊಳ್ (ಶಾಂತಿಪು. ೦೦-೩೪); ನೃಪನೊಡರಿಸಿದಂ ಬೇಗಂ ಪ್ರತ್ಯೂಷಕೃತ್ಯಮಂಗಳವಿಧಿಯಂ (ಧರ್ಮಾ. ೬-೨೪). [ಸಂ. ಮಂಗಲವಿಧಿ]

**ಮಂಗಳವೇದಿ** (ನಾ). ಶುಭಕಾರ್ಯಕ್ಕಾಗಿ ನಿರ್ಮಿಸಿದ ಜಗಲಿ, ಕಟ್ಟೆ : ಸುತ್ತಿದ ಚಿತ್ರಕಾಂಡಪಟಮಿಕ್ಕಿದ ಮಂಗಳವೇದಿ . . . ಕಣ್ಗೊಳಿಸುತಿರ್ದುವಾ ಮಂಟಪದೊಳ್ (ಧರ್ಮಾ. ೪-೬೮). [ಸಂ. ಮಂಗಲವೇದಿ]

**ಮಂಗಳಶಿಖಿ** (ನಾ). ಮದುವೆ ಮೊದಲಾದ ಶುಭಕಾಲದಲ್ಲಿ ಹೋಮಕ್ಕಾಗಿ ಸಿದ್ಧಪಡಿಸುವ ಅಗ್ನಿ : ಮಂಗಳಶಿಖಿಗಳ್ ಜಾತ್ಯಶ್ವಂಗಳ ಪೋಲ್ತೆಳೆದು ದಕ್ಷಿಣಾವರ್ತವಿಳಾಸಂಗಳನೇಂ ಧನದನ ರತ್ನಂಗಳ ಪುರಂಗಳಂತೆ ಜಲಜಲಿಸಿದುವೋ (ಮಲ್ಲಿಪು. ೦೪-೯೯). [ಸಂ. ಮಂಗಲಶಿಖಿನ್]

**ಮಂಗಳಶ್ಲೋಕ** (ನಾ). ಕಾವ್ಯ, ನಾಟಕ ಮೊದಲಾದುವುಗಳ ಪ್ರಾರಂಭದಲ್ಲಿ ಅಥವಾ ಮುಕ್ತಾಯದಲ್ಲಿ ಮಾಡುವ ದೇವತಾಸ್ತುತಿರೂಪವಾದ ಪದ್ಯ : ಅಂತು ಸೂತ್ರಧಾರನು ಈ ಮಂಗಳಶ್ಲೋಕವನ್ನು ಹೇಳಿ . . . ಹೋಗುವವನು (ಕೃಷ್ಣ. ೨೮೨) ; ಭಾರತೀಯರ ಪ್ರಕಾರ ಯಾವ ಕೃತಿಯೇ ಆಗಲಿ ಮಂಗಳಶ್ಲೋಕದಿಂದ ಅಥವಾ ಮಂಗಳವಾಚಕದಿಂದ ಆರಂಭವಾಗಬೇಕು (ಕನಾಅ. ೯೬). [ಸಂ. ಮಂಗಲಶ್ಲೋಕ]

**ಮಂಗಳಸವನ** (ನಾ). = ಮಂಗಳಮಜ್ಜನ : ಮಳಯಜಮಿಶ್ರತೀರ್ಥಜಲಧಾರೆಗಳಿಂ ಶಶಿಕಾಂತಕಾಂತಮಂಗಳಕಲಶಾಂಶುಧಾರೆಗಳಿನಿರ್ವಾಡಿಸಿತ್ತು ವಿವಾಹಮುಖ್ಯಮಂಗಳಸವನಂ (ಪಂಪರಾಮಾ. ೩-೩೪) ; ಮಂಗಳಸವನಾನಂತರ ಮಂಗೀಕೃತಶುಭವಿಭೂಷರಂ ಮಾಡಿ (ಶಾಂತೀಶ್ವ. ೨-೦೩೪). [ಸಂ. ಮಂಗಲಸವನ]

**ಮಂಗಳಸಾಧನ** (ನಾ). = ಮಂಗಳದ್ರವ್ಯ ೧ : ನೆರಪಿದ ಮಂಗಳಸಾಧನಂಗಳಿಂ ಸರಸಗೀತಮಂ ಪಾಡುವ ಗಾಯಕರಿಂ. . . ಪಸದನಂಬಡೆದ ಪೊಸಪಸುರ್ವಂದರೊಸಗೆ ಮಿಗೆ ಮಿಸುಗುತ್ತಿರ್ದುದು (ಜಾತಕ. ೬-೩ ಪ). [ಸಂ. ಮಂಗಲಸಾಧನ]

**ಮಂಗಳಸೂಕ್ತ** (ನಾ). ಶುಭವನ್ನು ಕೋರುವ ಮಂತ್ರ : ವೀರಸೇಸೆಯನಿಕ್ಕಿ ರಾಯನ ನಾರಿ ಪರುಸದಳಖಿಳವಿಪ್ರರ ಚಾರು ಚಾತುರ್ವೇದ ಮಂಗಳಸೂಕ್ತಘೋಷದಲಿ ಕೇರನೇಱಿದನಸುರರಿಪು (ಕುಮಾ.ಪಿ. ೦೬-೦೨). [ಸಂ. ಮಂಗಲಸೂಕ್ತ]

**ಮಂಗಳಸೂತ್ರ** 'ಮಂಗಲಸೂತ್ರ' ನೋ.

**ಮಂಗಳಾಂಗ** (ನಾ). ಶುಭಕರವಾದ ದೇಹವುಳ್ಳವನು ; ಪವಿತ್ರವಾದ ಶರೀರವುಳ್ಳವನು : ಮಂಗಳಾಂಗನು ಮತ್ತೆ ಕರುಣಾಪಾಂಗದಲಿ ನೋಡುತ್ತ ನಿನ್ನತಿಸಾಂಗಭಕ್ತಿಗೆ ಮೆಚ್ಚಿದೆವು ಎನಲು (ಜಕೃ. ೫೭-೩೦) ; ಇವನಾವನು, ಕಟ್ಟಿದ ರಕ್ಷೆಯಿಂದ ಮಂಗಳಾಂಗನಾದ ನನ್ನ ಮಗನನ್ನು ಮುಟ್ಟಿ ಅಪರಿಶುದ್ಧನನ್ನು ಮಾಡುವನು ? (ಶಾಕುಂತ. ೦೦೯-೪).
[ಸಂ. ಮಂಗಲಾಂಗ]

**ಮಂಗಳಾಂಗಿ** (ನಾ). ಶುಭಲಕ್ಷಣಗಳಿಂದ ಕೂಡಿದ ದೇಹವುಳ್ಳವಳು ; ಸುಂದರಿ : ಮಂಗಳಾಂಗಿ ಮಂಜುಳಾಂಬುಜಾಸ್ಯೆ . . . ರಕ್ಷಿಸೆನ್ನನದ್ರಿರಾಟ್ಸುತೇ (ಪ್ರಕಾ. ೨೭-೬೦).
[ಸಂ. ಮಂಗಲಾಂಗೀ (ಮಂಗಲ + ಅಂಗ + — )]

**ಮಂಗಳಾಚರಣ** (ನಾ). ಶುಭಕಾರ್ಯ ; ಮಂಗಳಕಾರ್ಯ : ಮಂಗಳಗಾಯಿಕಾಮಧುರಗಾನದಿನೆಬ್ಬಿ ಜನೆಯ್ದೆ ನಿತ್ಯಕೃತ್ಯಂಗಳ ಮಂಗಳಾಚರಣಮಂ ನೆಗಟುತ್ತೆ (ಕುಮ್ಮ. ೪-೦೨೦). [ಸಂ. ಮಂಗಲಾಚರಣ]

**ಮಂಗಳಾಚ್ಚಾರ** (ನಾ). = ಮಂಗಳಾಚರಣ : ಅಗಳಾ ಗರ್ಭಸ್ಸಲನ ಸಮಯಮ ಋತುಸಮಯಮಾಗೆ ಚತುರ್ಥದಿವಸಮನಂತರ ಮಜ್ಜನಂ ಬೊಕ್ಕು ಮಂಗಳಾಚಾರಮನಪ್ಪುಕೆಯ್ದು (ಕಗು. ೨-೭೦ ವ).
[ಸಂ. ಮಂಗಲಾಚಾರ]

**ಮಂಗಳಾನಕ** 'ಮಂಗಲಾನಕ' ನೋ.

**ಮಂಗಳಾನುಲೇಪ** (ನಾ). ಶುಭಕರವಾದ ಲೇಪನದ್ರವ್ಯ : ಅಷ್ಟರಲ್ಲಿ ನಾನೂ ಕೂಡ ಶಕುಂತಳೆಗೋಸ್ಕರ ಗೋರೋಚನ, ತೀರ್ಥಮೃತ್ತಿಕೆ, ದೂರ್ವಾಕಿಸಲಯಗಳ ಮಂಗಳಾನುಲೇಪನಗಳನ್ನು ಮಾಡುವೆನು (ಶಾಕುಂತ. ೫೯-೨೦). [ಸಂ. ಮಂಗಲಾನುಲೇಪ]

**ಮಂಗಳಾರತಿ** (ನಾ). ೧. ದೇವರ ಪೂಜೆಯ ಕಾಲದಲ್ಲಿ ಬತ್ತಿ, ಕರ್ಪೂರಗಳನ್ನು ಹಚ್ಚಿ ಬೆಳಗುವುದು : ಚಿತ್ರದೊಳು ಪೂಜೆಯಚ್ಚೋತ್ತಿ ದಂತರ್ಚಿಸುತೆ . . . , ಮಂಗಳಾರತಿಯಿತ್ತು ಚವರ ಸೀಗುಷಿಯಿಕ್ಕಿ (ಶಸ. ೦೩-೬೦); ಪಲ ಬಗೆ ಪಂಚವುಂವ ಜ್ಯೋತಿಯ ಮಂಗಳಾರತಿಯನಿಡಲು (ಚಚಚೋ. ೨೦-೨೮). ೨. ಶುಭೋತ್ಸವಗಳಲ್ಲಿ ಮುತ್ತೈದೆಯರು ಹಿಡಿದುಕೊಳ್ಳುವ ದೀಪಾರತಿ : ತಮತಮಗೆ ಫಳವಿಡಿದು ಮಂಗಳಾರತಿವಿಡಿದು ಸೇಸೆವಿಡಿದಮರಕಾಮಿನಿಯರೈದೆ (ಸಿದ್ಧಪು. ೦-೩೬). ೩. (ಅಲಂ) ಅಪಮಾನ ; ಮುಖಭಂಗ : ರಾಮುರಿಗೆ ಮಂಗಳಾರತಿಯಾಗಿದ್ದು ಏನಾಶ್ಚರ್ಯ ? (ಸವಃಜ. ೬); ಕೇಳಿದರೆ ಮಾಡುತೀನಿ ಅವನಿಗೆ ಮಂಗಳಾರತಿ ! (ಶಾಪೋಲೀ. ೨೦೩). [ಮಂಗಳ (= ಮಂಗಲ) + ಆರತಿ$_1$]

**ಮಂಗಳಾಲಂಕಾರ** (ನಾ). ಶುಭಸನ್ನಿವೇಶಕ್ಕೆ ಉಚಿತವಾದ ವೇಷಭೂಷಣ : ಅನಂತರಂ ಭಗವಜ್ಜಿನೇಂದ್ರಪೂಜಾವಿವಿಧಮಂಗಳಮನಾಚರಿಸಿ ಮಂಗಳಾಲಂಕಾರಾಲಂಕೃತೆಯಾಗಿ (ಕೃಷ್ಣಪು. ೩-೧೧೭ ವ).
[ಸಂ. ಮಂಗಲಾಲಂಕಾರ]

**ಮಂಗಳಾಷ್ಟಕ** (ನಾ). ಮದುವೆ, ಮುಂಜಿ ಮೊದಲಾದ ಶುಭ ಮುಹೂರ್ತದಲ್ಲಿ ಸಾಂಪ್ರದಾಯಿಕವಾಗಿ ಹೇಳುವ ಶುಭವನ್ನು ಕೋರುವ ಎಂಟು ಶ್ಲೋಕಗಳು ; ▶ ಇವು 'ಕುರ್ಯಾತ್ ಸದಾ ಮಂಗಳಂ' ಎಂದು ಕೊನೆಗಾಣುತ್ತವೆ : ಮಾಂಗಲ್ಯಧಾರಣೆಯ ಸಮಯದಲ್ಲಿ ಮಂಗಳಾಷ್ಟಕ ಹೇಳುವುದು ಪದ್ಧತಿ (ರೂಢಿ).
[ಸಂ. ಮಂಗಲಾಷ್ಟಕ]

**ಮಂಗಳೆ** (ನಾ). ದುರ್ಗೆ; ಪಾರ್ವತಿ : ಮಾನ್ಯ ಮಾನಿನಿ ಮಹನೀಯೆ ಮಂಗಳೆ ಮಹೇಶ್ವರಿ (ಶಾಕಸೆ. ೦೩-೦೩). [ಸಂ. ಮಂಗಲಾ]

**ಮಂಗಳ್ಯಕ** 'ಮಂಗಲ್ಯಕ' ನೋ.

**ಮಂಗಜಿವಳ್ಳಿ** 'ಮಂಗುಜಿವಳ್ಳಿ' ನೋ.

**ಮಂಗಾಟ** (ನಾ). ೧. ಕಪಿಯ ಆಟ ; ಕೋತಿಚೇಷ್ಟೆ. ೨. (ಅಲಂ) ಬುದ್ಧಿಹೀನತೆಯಿಂದ ಮಾಡುವ ಕೆಲಸ ; ವಿವೇಕವಿಲ್ಲದೆ ಮಾಡುವ ಕಾರ್ಯ: ಹ್ಯಾಂಗಾರೆ ಕುಣಿಕುಣಿದು ಮಂಗಾಟ ನಡೆದಾಗ ಅಂಗಾತ ಬಿತ್ತೋ ಪೆಗಲಲಿ ಎತ್ತೋ (ಜಾರಲ. ೩೮-೨೩) ; ಕಾಯಿದೆ ನಿಮ್ಮ ಕಡೆಗೆ ಇರುವದೆಂದು ಮಂಗಾಟ ನಡೆಸಬಾರದು (ಮಕ್ಕಪು. ೨೧೧).
[ಮಂಗ$_1$ + ಆಟ]

**ಮಂಗಾಟಿಕೆ** (ನಾ). = ಮಂಗಾಟ ೨ : ಆತ ಮಂಗಾಟಿಕೆ ಮಾಡದೆ ಹಳೆಯ ಸಂಪ್ರದಾಯವನ್ನು ಉಳಿಸಿಕೊಂಡು ಬರಬೇಕಾದುದು ಅನಿವಾರ್ಯವಾಗುತ್ತದೆ (ಹುಕ್ಕಿಪಾ. ೦೯೦). [ಮಂಗ$_1$ + ಆಟಿಕೆ]

**ಮಂಗಾಡಿಸು** (ಕ್ರಿ). (ಅಲಂ) ಕಪಿಯಂತೆ ಕುಣಿಸು ; ತನಗೆ ಇಷ್ಟಬಂದುದನ್ನು ಮತ್ತೊಬ್ಬರಿಂದ ಮಾಡಿಸು : "ನನ್ನನ್ನು ಮಂಗಾಡಿಸಿ ಬಿಟ್ಟ" ಎಂದು ಕಿಟ್ಟಪ್ಪ ಮಾಸ್ತರರು ನಾಲ್ಕು ಜನರ ಮುಂದೆ ದೂರಿ, ತಮ್ಮ ಮರ್ಯಾದೆಯನ್ನು ಉಳಿಸಿಕೊಂಡರು (ಜಾಕುಣಿ. ೦೭). [ಮಂಗ$_1$ + ಆಡಿಸು]

**ಮಂಗಾರೆ** 'ಮಗ್ಗಾರೆ' ನೋ.

**ಮಂಗಾರೆಮುಳ್ಳು** (ನಾ). (ದಟ್ಟವಾಗಿಯೂ ಒರಟಾಗಿಯೂ ಇರುವ ಮುಳ್ಳುಗಳುಳ್ಳ) ಒಂದು ಬಗೆಯ ಪೊದರು ಗಿಡ : (•).
[ಮಂಗಾರೆ (< ಮಗ್ಗಾರೆ) + ಮುಳ್ಳು (< ಮುಳ್)]

**ಮಂಗಿ** (ನಾ). ೧. ಹೆಣ್ಣುಕಪಿ : ಆ ಮಂಗಿ ಮರಿಯನ್ನು ಎತ್ತಿಕೊಂಡು ಕೊಂಬೆಯಿಂದ ಕೊಂಬೆಗೆ ನೆಗೆಯುತ್ತಿದೆ (ರೂಢಿ). ೨. (ಅಲಂ) ತಿಳುವಳಿಕೆಯಿಲ್ಲದವಳು : ಅವಳು ಶುದ್ಧ ಮಂಗಿ, ಹೊಲಮನೆಯನ್ನೆಲ್ಲಾ ಅಡ್ಡಾದಿಡ್ಡಿಯಾಗಿ ಮಾರಿಬಿಟ್ಟಳು (ರೂಢಿ). [ಮಂಗ$_1$ + — ಇ$_2$]

**ಮಂಗಿನಿ** (ನಾ). ಹಡಗು; ನೌಕೆ. [ಸಂ. ಮಂಗಿನೀ]

**ಮಂಗುರವಳ್ಳಿ** 'ಮಂಗುಜಿವಳ್ಳಿ' ನೋ.

**ಮಂಗುಜವಳ್ಳಿ** 'ಮಂಗುಜಿವಳ್ಳಿ' ನೋ.

**ಮಂಗುಜಿವಳ್ಳಿ**, ಮಂಗರವಳ್ಳಿ, ಮಂಗಜಿವಳ್ಳಿ, ಮಂಗುರವಳ್ಳಿ, ಮಂಗುಜವಳ್ಳಿ, **ಮೊಗರವಳ್ಳಿ** (ನಾ). (ಚಕ್ಕುಲಿ ಮೊದಲಾದ ಭಕ್ಷ್ಯಗಳಿಗೆ ಸೇರಿಸುವ, ಚಟ್ನಿ ಮೊದಲಾದ ಅಡಿಗೆಗೂ ಮತ್ತು ಔಷಧಗಳಿಗೂ ಉಪಯೋಗಿಸುವ) ಒಂದು ಬಗೆಯ ಬಳ್ಳಿ ; ನಾಲ್ಕು ಏಣುಗಳುಳ್ಳ ಒಂದು ಬಗೆಯ ಹಸಿರು ಬಳ್ಳಿ ; ನರಳೆ : ತುಜುಮೆಯ ಕಾಯ್ಗಳುಮಂ ಮಂಗುಜುವಳ್ಳಿಯನಿನಿದ ಚೂರ್ಣಮಂ ಶರ್ಕರೆಯಿಂ ನೆಜೆ ತಿಂದು ಬಿಸಿಯ ನೀರಂ ಕಿಜಿದುಗೊಳಲ್ಕೊಬ್ಬಿಯುಮಟಗುಮೇ ಕೆಯ್ಮುಸಕಂ (ಕಮುದ. ೦೯-೯೨). **ಮಂಗರವಳ್ಳಿ** : ಅಮುಸೋಗೆಯಲೆಯು ಕಡ್ಡಿ, ಬಜೆ, ಮಂಗರವಳ್ಳಿ, ರಾಮಗುಳ್ಳ, ಶುಂಠಿ, ಕಟುಕರೋಹಿಣಿ ಇವುಗಳನ್ನು ಸಮಭಾಗ ಕಷಾಯ ಕಾಯಿಸಿ ಕೊಡಲು ಶ್ಲೇಷ್ಮಜ್ವರವು ಗುಣವಾಗುವುದು (ಸಕಪ್ರ. ೬೦). **ಮಂಗಜಿವಳ್ಳಿ** : ಮಂಗಜಿವಳ್ಳಿರಸ, ಕಳ್ಳಿರಸ ಎಲುಹುರಿ, ಈ ಮೂಜು ರಸಗಳಲ್ಲಿ ಪೋಡಶಾಂಶ ಶೋಧಿಸಿದ ಗಂಧಕವನ್ನಿಕ್ಕಿ (ವೈದ್ಯಪಿ. ೨೩); ಬಳ್ಳಿಸುಂಡೆಯ ಸಹಮೂಲವು ಮಂಗಜಿವಳ್ಳಿ ರಸಂಗಳ ಸಹಿತ (ಶಾಳ್ಯಹೊ. ೦೮). **ಮಂಗುರವಳ್ಳಿ** : "ಅಸ್ಥಿಸಂಘಾತಃ — ಮಂಗುರವಳ್ಳಿ" (ಟಿಕ್ಸಪಿ. ೬). **ಮಂಗುಜವಳ್ಳಿ** : "ಅಸ್ಥಿವಳ್ಳಿ ಮಂಗುಜವಳ್ಳಿ" (ವೈಂಗರಾ. ೯೩-೯೩). **ಮೊಗರವಳ್ಳಿ** : ಮೊಗರವಳ್ಳಿಬೇರು, ಉದ್ದರಣೆಯ ಬೇರು, ನೆಲಗುಳ್ಳದ ಬೇರು, ಹೆಗ್ಗುಳ್ಳದ ಬೇರು (ವ್ಯಾಕ್ಷಾಕೂ. ೬-೯).
[ಮಂಗುಜು$_1$ + ಬಳ್ಳಿ]

**ಮಂಗುಳಿಅಳತೆ** (ನಾ). [ಗಣಿತ] ಒಂದು ಅಳತೆ : ಕ್ಷೇತ್ರಗಣಿತ, ಮಂಗುಳಿ ಅಳತೆ, ರಾಜನೀತಿ . . . ಉತ್ಕಳಿತಗುಣಿ ಮುತ್ತಿನ ಚೆಲ್ವಿನ ಗುಣಿತವುಂ ಅಷ್ಟಾದಶ ಗುಣಿತಂಗಳು (ಕ್ಷೇತ್ರಗ. ೨-೩). [? + ಅಳತೆ]

**ಮಂಗೇಶ** (ನಾ). ಶಿವ : (೬). P ಇದು ದಕ್ಷಿಣಕನ್ನಡ, ಉತ್ತರಕನ್ನಡದಲ್ಲಿ ವಾಸಿಸುವ ಕೊಂಕಣಿಭಾಷೆಯನ್ನಾಡುವ ಅನೇಕರ ಮನೆದೇವತೆಯ ಹೆಸರು. [< ಮಂಗಲ ? + ಈಶ]

**ಮಂಚ** (ನಾ). ೧. ಮಲಗಲು ಉಪಯೋಗಿಸುವ, ನಾಲ್ಕುಕಾಲುಗಳುಳ್ಳ ಮರ ಅಥವಾ ಲೋಹದ ಸಾಧನ : ಪರ್ಯಂಕ : " ಶಯನವಾ ಪರಿಯಂಕವಾ ಶಯ್ಯೆಯೆನೆ ಮಂಚಮೆನಿಸಿಕ್ಕು " (ಮಂಗರಾ. ೬೦-೦೫) ; ನೀಂ ಮಹಾದೇವಿಯ ಮಂಚಮನಂಜದೇಱ ಆಕೆಯೊಡನೆ ನಗುತ್ತುಂ ತೆಗಟುತ್ತಮಿರೆಂದು ಕಲ್ಪಿಸಿದಂ (ವಡ್ಡಾರಾ. ೦೭೭-೦೬) ; ದ್ರುಪದನಂ ತನ್ನ ಮಂಚದ ಕಾಲೊಳ್ ಕಟ್ಟಿವೇಟ್ಟು (ಶಂಕಭಾ. ೨-೬೨ ವ) ; ಭಾಳಾಕ್ಷಿಯರ ಮನೆಯೊಳಾಭೀಳದ ದಳ್ಳುರಿಯು ಮಂಚದೊಳ್ ಪವಡಿಸಿದಯ್ (ಗಂಠೆ. ೮-೬೬). ೨. ಉತ್ತಮವಾದ ಪೀಠ; ಉನ್ನತವಾದ ಆಸನ : ಮಣಿ ಮಂಚಂ ಪಟ್ಟಂ . . . ಗಲ್ಲಂ ಮಲ್ಲಂ ತಳಮಿಂತೆಲ್ಲಂ ತತ್ಸಮಮುಂ (ಶಮತ. ೨೯೭) ; ಜ್ಯೋತಿಷನಿಪುಣವರರ್ ಬಂದು ಪೊಕ್ಕಲ್ಲಿ ಮಂಚೋತ್ಕರದೊಳ್ ಕುಳ್ಳಿರ್ದರ್ (ಅಕ್ರೂಚ. ೫-೫-೨೫). ೩. ವೇದಿಕೆ : ರಂಗಸ್ಥಳ : ಪ್ರೇಕ್ಷಕರಲ್ಲಿಂದ ಸುಮಾರು ೨೫ ವಯಸ್ಸಿನವನೊಬ್ಬನು ಮಂಚದ (ವ್ಯಾಸಪೀಠ) ಕಡೆಗೆ ಬರಹತ್ತಿದನು (ದಾಸಪು. ೫೨). ೪. ಹೊಲ, ಗದ್ದೆಗಳನ್ನು ಕಾಯಲು ಎತ್ತರವಾಗಿ ಕಟ್ಟಿರುವ ಬಿದಿರು ಮೊದಲಾದುವುಗಳಿಂದ ಮಾಡಿರುವ ಅಟ್ಟಣೆ; ಮಂಚಿಕೆ. [ಸಂ.]

**ಮಂಚಕ** (ನಾ). ೧. = ಮಂಚ ೧ : ನಿನ್ನ ನಾಲಗೆಯನ್ನು ತನ್ನ ಮಂಚಕ ಮಾಡಿ . . . ಚೆನ್ನೆ ಸರಸತಿ ನಿತ್ಯ ಪವಡಿಸುವಳಾಡಿ (ಗಂ. ೨೩-೦). ೨. = ಮಂಚ ೨ : ಒಂದು ಉತ್ತಮವಾದ ಮಂಚಕದ ಮೇಲೆ ಕುಳಿತು ಕೊಳ್ಳುವಷ್ಟರಲ್ಲಿ ಅವನ ಅಣ್ಣನಾದ ಶಹರಿಯಾದನು ಅಲ್ಲಿಯೇ ಬಂದು ಕುಳಿತುಕೊಂಡನು (ಅಗತ್ಯ. II. ೦೬). [ಸಂ.]

**ಮಂಚಟಿಕೆ** ' ಮಂಜಿಟ್ಟಿಗೆ ' ನೋ.

**ಮಂಚದಕಾಲಹುಲ್ಲು**, ಮಂಚದಕಾಲುಹುಲ್ಲು (ನಾ). ನಾಲ್ಕುದಳಗಳಿರುವ ಒಂದು ಬಗೆಯ ಹುಲ್ಲು : (೬). **ಮಂಚದಕಾಲುಹುಲ್ಲು** : ಮಂಚದಕಾಲುಹಲ್ಲು, ಉಪ್ಪುಗಡ್ಡಿ (ಪ್ರ ಜಿಗ. ೨೦-೩೬೮).
[< ಮಂಚ + ಕಾಲು₁ ( < ಕಾಲ್₁ ) + ಹುಲ್ಲು (< ಪುಲ್)]

**ಮಂಚದಕಾಲುಹುಲ್ಲು** ' ಮಂಚದಕಾಲಹುಲ್ಲು ' ನೋ.

**ಮಂಚಯ್ಯ** (ನಾ). ಒಬ್ಬಾತನ ಹೆಸರು : ಪಟ್ಟಣ ವಸನ್ತರ ಮಞ್ಚಯ್ಯನು ಇಪ್ಪತ್ತಅಯ್ವರು ಕೆಱೆಯ × × ಬೆಸಕೆ . . . ದ್ರವ್ಯಮ ಕೊಟ್ಟು (ಎಕ. XIV. ತಿರುಮ. ೨೦೪-೭ ; ಕಾ. ೯೩೩). [ಮಂಚ ? + ಅಯ್ಯ₁]

**ಮಂಚಲ್**, ಮಂಚಲು₁ (ನಾ). ೧. ಮೋಸ ; ವಂಚನೆ : ಎನಗಿಂದಿಂ ಗಾಱುತಿಂಗಳ್ ಸಮನಿಸಿದಪುದಿಲ್ಲೆಲ್ಲಿಯುಂ ಬಂದಿ ಮಂಚಲ್ ಖನನ ಪ್ರಾರಂಭ ಚೌರ್ಯಾದಿಗಳನಶನವಿಭಾಗಳ್ ಚತುರ್ವಾಗರಂ ಭೋಜನ ಮಾತ್ರಂ ಬಂದೊಡಂದಾಂ ಸಕಲವಿಭವಮಂ ಪೆತ್ತಂ (ಸುಕುಮಾ. ೬-೦೬) ; ಕೈಮುಡಕಂ ವಂಚನೆ ಮಿಕ್ಕ ಮಾನಸಿಕ ಮಂಚು ಮಂಚಲಂ ತಾನೆ ತಾಂ ಗೆಡೆವಳ್ ಪತ್ರದರಾರೊ ಧೂರ್ತವಿಟಹೃತ್ಸಂತಾಪಯುಂ ತೇಪೆಯುಂ (ಲೀಲಾವ. ೨-೯೬) ; ಮಂಚಲ್ ಕಳವಾಱಡಿ ಭಯಸಂಚಯಮೆಂಬಿವಱ ಪೆಸರುಮಿಲ್ಲಾ ನಾಡೊಳ್ (ಪುಷ್ಪಚ. ೨-೫). ೨. ಬಂಧನ ; ಸೆರೆ : 'ಮಂಚಲ್ವಿಡಿ' ಪರಾ.
**ಮಂಚಲು₁** : ೧. ಮಂಚಲು ಲಂಚಂ ಕಳವು ಬಿಸುಣ್ ಪಸವು ಪಱಿವಱಿಪಲಸೊಲಸು ಕುತ್ತುಮಿಲ್ಲಾ ನಾಡೊಳ್ (ಶಬ್ದಾಮ. ೦೯೦ ಪ್ರಯೋ).
ಮಂಚಲಂಬಿಡಿ = (ಅಲಂ) ಆಕರ್ಷಿಸು ; ಸೆಳೆ ; ಮರುಳುಮಾಡು: ನಡೆ ನೋಟ್ಟರ ಕಣ್ಗಳನೆಯ್ದಿ ಮಂಚಲಂಬಿಡಿವ ವಿಳಾಸಿನೀನಿಜಾಹಮೋಱು ದುಮಿತು ಕರೇಣುಜಾಲಮಂ (ಶಾಂತೀಶ್ವ. ೦೦-೭೭).

**ಮಂಚಲು₁** 'ಮಂಚಲ್' ನೋ.

**ಮಂಚಲು₂** 'ಮಂಚಿಲ್' ನೋ.

**ಮಂಚಲ್ಬಿಡಿ** 'ಮಂಚಲ್ವಿಡಿ' ನೋ.

**ಮಂಚಲ್ವಿಡಿ**, ಮಂಚಲ್ಬಿಡಿ (ಕ್ರಿ). ೧. ಸೆರೆ ಹಿಡಿ ; ಬಂಧಿಸು : ಕಳ್ಳಂ ಬನ್ನಿಕಾಱಂ ಮಂಚಲ್ವಿಡಿವವಂ ಪಗೆವಂ ಪೊಲ್ಲಮಾನಸನಿನ್ನಿವರಂ . . . ಇಱಿದೊಡೆ ದಣ್ಡಂ ದೋಷಮಿಲ್ಲ (ಎಕ. XV. ೭೯-೨೫; 1050). **ಮಂಚಲ್ಬಿಡಿ** : ೨. (ಅಲಂ) ಆಕರ್ಷಿಸು ; ಸೆಳೆ : ಅಂಚೆಯ ನಡೆಯನಿದಂ ತನತೆಸುತುಂ ಮಂಚಲ್ಬಿಡಿವೊಳ್ನಡೆ ರತಿರೂಪಂ ಲಂಚಂಗೊಂಡ ವಿಲಾಸದಿನೆಸೆದತ್ತಾ ರಾಣೀವಾಸ (ಜಗನ್ನಾ. ೨-೨). [ಮಂಚಲ್ + ಪಿಡಿ₁]

**ಮಂಚಾಲೆ** 'ಮಂಚಾಳ' ನೋ.

**ಮಂಚಾಳ**, ಮಂಚಾಲೆ (ನಾ). ಒಂದು ಊರಿನ ಹೆಸರು : P ರಾಘವೇಂದ್ರಸ್ವಾಮಿಗಳ ಬೃಂದಾವನವಿರುವ ಈಗಿನ ಮಂತ್ರಾಲಯ : ಶ್ರೀಮತುಕಣ್ಣಂ ಸಿಂದವಾಡಿಸಾಯಿರಮುಮನಾಳುತ್ತು ಮಂಚಾಳ ಕೊಟ್ಟ ಸ್ಥಿತಿ ಆವುದೆನ್ನೊಡೆ (ಸೌಇಇ. IX-i, ೫೫-೯ ; 893). **ಮಂಚಾಲೆ** : ಶ್ರೀರಾಘವೇಂದ್ರರು ಮಂತ್ರಾಲಯ(ಮಂಚಾಲೆ)ವನ್ನು ಸೇರಿದೊಡನೆಯೇ ಮೊದಲು ಕುಲದೇವಿ ಮಂಚಾಲಮ್ಮನ ದರ್ಶನ ಮಾಡಿದರು (ಕಥಾ. ೩೫೬). [ ? ]

**ಮಂಚಿಕೆ** (ನಾ). ೧. ಪೀಠ ; ಆಸನ. ೨. ದನಕರುಗಳಿಗೆ ನೀರು ಹಾಕುವ ಹರಿದೋಣಿ, – ತೊಟ್ಟಿ. ೩. ಕಾಲುಮಣೆ : 'ಅಡೆಮಂಚಿಕೆ' ಪರಾ. ೪. ಹೊಲ, ಗದ್ದೆಗಳನ್ನು ಕಾಯಲು ಎತ್ತರವಾಗಿ ಕಟ್ಟಿರುವ ಬಿದಿರು ಮೊದಲಾದುವುಗಳಿಂದ ಮಾಡಿರುವ ಅಟ್ಟಣೆ : (೬).
[ಸಂ. ಮಂಚಿಕಾ]

**ಮಂಚಿಗೆ**, ಮಂಜಿಗೆ, ಮೆಂಚಿಗೆ (ನಾ). = ಮಂಚಿಕೆ ೪ : ಆ ಸಸಿ . . . ಫಲಕ್ಕೆ ಬರಲಾಗಿ ಚತುರ್ವಿಧವೆಂಬ ಮಂಚಿಗೆಯಂ ಮೆಟ್ಟಿ (ಸರ್ವವ. ೦೦೭-೫೬೬); ಆವಿತತಿ ತೆನೆಗೆ ಪಾಯ್ದುವುದುರವಣೆಯಿಂದೆದಂ ನಿವಾರಿಪ ಬಗೆಯಿಂ ನೆರಪಿದ ಕಲ್ಲುಂ ಕವಣೆಯುಮಿರೆ ಮಂಚಿಗೆಯಂತಿರೆಸೆದುವಟ್ಟಳೆ ಪಲವುಂ (ಪಾರ್ಶ್ವಪು. ೩-೦೩೩) ; ಕಯ್ಯೆತ್ತಿ ಕೊಡಲಿಲ್ಲ ಮಯ್ಯ ದಂಡಿಸಲಿಲ್ಲ ಅಯ್ಯಗಳೆಲ್ಲ ಹರಿಯಲ್ಕೆ ಕೈಲಾಸ ಕಯ್ಯ ಮಂಚಿಗೆ[ಪಾಠಾಂ. ಕೆ]ಯೆ (ಸರ್ವಜ್ಞ. ೬೮೯) ; ಮರಸು ಕುಳಿತಿರೆ ಮರದ ತುದಿಮಂಚಿಗೆಯ ಮೇಲೆ (ಶ್ರೀರಾಮಪ. ೩೧೦-೨೮೨). **ಮಂಜಿಗೆ** : ಹೊಲದಲ್ಲಿ ಹಾಕಿದ ಎತ್ತರವಾದ ಮಂಜಿಗೆಯ ಮೇಲೆ ನಿಂತುಕೊಂಡು ಒಕ್ಕಲಿಗರು ಕವಣೆಯಿಂದ ಕಲ್ಲುಗಳನ್ನು ಹೊಡೆಯುತ್ತಾ ಹಕ್ಕಿಗಳನ್ನು ಹಾರಿಸಹತ್ತಿದ್ದಾರೆ (ಪುಂಶುಳ. ೨). **ಮೆಂಚಿಗೆ**: ಪಂಚಬೀಜಗಳೆಲ್ಲ ಸಂಚರಿಸಿ ಹೊಲದೊಳಗೆ ಮೆಂಚಿಗೆಯ ನಿಲವುಬೆಳೆ ಬಂದು ನಗುತಿರಲು (ಕಠತ. ೮೭); ಮೇಘದ ಮೆಂಚಿಗೆಯನ್ನೇರಿ ಮಿಂಚಿನ ಕವಣೆಯೊಳಾಲಿಯ ಕಲ್ಲನು ತೂರುವಳು (ಕರುಶ್ರಾ. ೦೭-೦).
[ < ಸಂ. ಮಂಚಿಕಾ]

**ಮಂಚಿಗೆಗಲ್** (ನಾ). (ದಾರಿಯಲ್ಲಿ ಹೊರೆಯನ್ನು ಇಳಿಸಲು ಮಾಡಿರುವ) ಎತ್ತರ ಹಾಗೂ ಸಪಾಟಾದ ಕಲ್ಲು : ನವಿಲೆಯೂಱಂ ಪಡುವಣ ಮಂಚಿಗೆಗಲ್ಲಿಂ ಪಡುವ ಹಳ್ಳದಿಂ ಮೂಡಲಿಬ್ಬ × × ವಾಡವಾಗಿ ಯಿಕ್ಕಿದ ಕೆಯಿಮತ್ತರು ೫೦ (ಸೌಇಇ. IX-i, ೨೨೬-೦೩ : 1133). [ಮಂಚಿಗೆ + ಕಲ್₃]

**ಮಂಚಿಟಿಕೆ** 'ಮಂಜಿಟ್ಟಿಗೆ' ನೋ.

**ಮಂಚಿಟಿಗೆ** 'ಮಂಜಿಟ್ಟಿಗೆ' ನೋ.

**ಮಂಚಿಪತ್ರ** (ನಾ). (ಸುವಾಸನೆಯ ಎಲೆಗಳನ್ನು ಹೊಂದಿರುವ) ಒಂದು ಬಗೆಯ ಸಸ್ಯ ಮತ್ತು ಅದರ ಎಲೆ : ಮಂಚಿಪತ್ರವನ್ನು ಧರಿಸುವುದರಿಂದ ದೇವತೆಗಳಿಗೂ ಸೂರ್ಯನಿಗೂ ಪ್ರಿಯವಾಗಿ . . . ಸುಖವನ್ನುಂಟುಮಾಡುವುದು (ಸಳವ್ಯ. ೪೫). [ಸಂ.]

**ಮಂಚಿಪತ್ರೆ** (ನಾ). = ಮಂಚಿಪತ್ರ : "ದೇವಾರ್ಹಂ – ಮಂಚಿ(ಜಿ) ಪತ್ರೆ" (ಒಷಧಿ. ೭೯). [ಸಂ. ಮಂಚಿಪತ್ರ]

**ಮಂಚಿಲ್**, ಮಂಚಲು₂ (ನಾ). (ಬಟ್ಟೆಯಿಂದ ಮಾಡಿದ, ತೊಟ್ಟಿಲನ್ನು ಹೋಲುವ) ಡೋಲಿಯಂತಹ ಒಂದು ಬಗೆಯ ಸಾಧನ : ಅವರು ಬಂದ ಬಳಿಕ ಕಂಬಳಿಯ ಒಂದು ಮಂಚಿಲ್ ತಯಾರಿಸಿದರು (ಕೃಹಿಶಾ. ೨೭೦). **ಮಂಚಲು₂** : ಭೋಯಿಗಳಲ್ಲದೆ . . . ಅಂಬಿಗರು ಮಂಚಲುಗಳನ್ನು ಹೊರುವ ಹೋರೆಯನ್ನು ಮಾಡುವರು (ಕಥಾಗ. ೫೭).
[← ತುಳು. ಮಂಚಿಲ್]

**ಮಂಜಟಿ** 'ಮಂಜಿಟೆ' ನೋ.

**ಮಂಜಟ್ಟಿ** 'ಮಂಜಿಟೆ' ನೋ.

**ಮಂಜಡಿ₁** 'ಮಂಜಿಟೆ' ನೋ.

**ಮಂಜಡಿ₂** 'ಮಂಜಾಡಿ' ನೋ.

**ಮಂಜತ್ತಿ** 'ಮಂಜಿಟೆ' ನೋ.

**ಮಂಜನ₁**, ಮಜ್ಜಣ (ನಾ). ೧. ಪವಿತ್ರವಾದ ನೀರು, ಹಾಲು ಮುಂತಾದ ದ್ರವವನ್ನು ಎರೆಯುವುದು ; ಅಭಿಷೇಕ : ರಾಮಾನುಜಾಚಾರ್ಯ್ಯರಿಗೆ ನಿತ್ಯ ತಿರುಮಂಜನಕೆ . . . ತಿರುನಾಳಿಗೆ ಗ ೬೦ ವರಹ (ಎಕ. XIV, ಶ್ರೀರಂಗ. ೨೫೬-೧೧ ; 1154) ; ಜಲದಿಂದ ಗಂಧದಿಂದಕ್ಷತೆಯಿಂ ಕಮ್ಮಲರಿಂದ ಚರು ದೀಪದಿಂದ ಕಲುಕುಮಂಜನದಿಂದ ಫಲದಿಂದಲಾ ಫೂಲಲನೇಶ ಜಿನರನರ್ಚಿಸಿದ (ರಾಮಾಪು. ೧೯-೨೨). **ಮಜ್ಜಣ** : ೨. ಸ್ನಾನ; ಮಿಾಹ ; ಜಳಕ : ಮಜ್ಜಣದ ಈ ಮನೆಯ ಎದ್ದು ನೋಡೋಣ ಬಾರ (ಲೋಕಗೀ. ೧೫). [< ಪ್ರಾ. ಮಜ್ಜಣ./ಸಂ. ಮಜ್ಜನ]

**ಮಂಜನ₂** (ನಾ). (ಹಲ್ಲು, ಮುಖ ಮುಂತಾದುವನ್ನು) ಉಜ್ಜಿ ಸ್ವಚ್ಛಗೊಳಿಸಲು ಉಪಯೋಗಿಸುವ ವಸ್ತು : 'ದಂತಮಂಜನ' ಪರಾ. [<ಪ್ರಾ. ಮಜ್ಜಣ./ಸಂ. ಮಾರ್ಜನ./ಹಿಂ. ಮರಾ. ಮಂಜನ್]

**ಮಂಜರ**, ಮಂಜರೆ (ನಾ). ಬೆಕ್ಕು ; ಮಾರ್ಜಾಲ : "ಮಂಜರವೆನೆ ಮಾರ್ಜಾಲಂ" (ಶಾರ. ೦೩) ; ನಿನ್ನ ಮನದಲ್ಲಿ ಮಾಯಾಮಂಜರ ಕೊಲುವರೆ ನಿನ್ನ ಹಂಜರ ಕಾವುದೆ ಕೂಡಲಸಂಗಮದೇವನಲ್ಲದೆ (ಬಸವ. ೦೬೩); ಪಂಜರದ ಗಿಣಿ ನೀವು ನಿಮಗೀ ಮಂಜರನ ಪಡಿಮುಖಕೆ ನಿಲುವುದು ನೀತಿಯೇ (ಕುಮಾ.ಕ. ೦೦-೯೨). **ಮಂಜರೆ**: ಪಂಜರದೊಳು ತೇಜಃಪುಂಜ ರಂಜಿಸುತಿರಲು ಅಂಜನಸಿದ್ಧ ಶಿವಯೋಗಿ ತಾ ಕುಟಿಲ ಮಂಜರೆಯ ಕಾದ (ಸರ್ವಜ್ಞ. ೪೯೫). [<ಪ್ರಾ. ಮಂಜರ./ಸಂ. ಮಾರ್ಜಾರ, ಮಾರ್ಜಾಲ]

**ಮಂಜರದೃಷ್ಟಿ** (ನಾ). ೧. ಬೆಕ್ಕಿನ ಕಣ್ಣು. ೨. (ಅಲಂ) ಸೂಕ್ಷ್ಮವಾದ ದೃಷ್ಟಿ : ಮಂಜರದೃಷ್ಟಿಯಲ್ಲಿ ತೋರುವ ಇಂದ್ರಿಯಭೋಗಂಗಳು ಮಹೇಂದ್ರಜಾಲವಾಗಿಪ್ಪವಯ್ಯ (ಸಿದ್ಧೇವ. ೦೦೯-೩೩೮).
[ಮಂಜರ + ದೃಷ್ಟಿ]

**ಮಂಜರನೇತ್ರ** (ನಾ). = ಮಂಜರದೃಷ್ಟಿ ೨ : ಮಂಜರನೇತ್ರದಲ್ಲಿ ಉಭಯಚಂದ್ರರ ಕಾಬುವರಾರೋ (ಅವತಂ. ೫೭-೨೯೦).
[ಮಂಜರ + ನೇತ್ರ]

**ಮಂಜರಿ₁**, ಮಂಜಲಿ (ನಾ). ಹೆಣ್ಣುಬೆಕ್ಕು : ಮಾತನಾಡುವ ಪಂಜರದ ವಿಹಂಗನದೊಂದು ಕೋಡಗ ನುಂಗಿತ್ತು ನುಂಗಿದ ಕೋಡಗವ ಮಂಜರಿ ತಿಂದಿತ್ತು (ಪೋಚಪಾ. ೨೫೫-೮೦೭). **ಮಂಜಲಿ** : ಮಂಜಲಿ[ಪಾಠಾಂ. ಡಳಿ]ಯ ಮಜಾ ಮಿಡುಕಿದರೆ ಕಳವಳಿಸುವುದೆ ಕಲಿಸಿಂಹೆ (ಕುಮಾ.ಸ. ೬-೯೭).
[ಮಂಜರ + —ಇ₂]

**ಮಂಜರಿ₂** (ನಾ). ೧. ಗೊಂಚಲು ; ಗುಚ್ಛ : "ವಲ್ಲರೀ, ಮಂಜರೀ —ಈ ೨ ಮರದ ಗೊಂಚಲ್" (ಹಲಾಯು. ೩೦-೩೧) ; ಲಲಾಟದೊಳ್ ತುಜುಗಿದ ಸಿಂಧುವಾರ ನವಮಂಜರಿಯೆಂಬಿನೆಗಂ . . . ಘನಘರ್ಮಬಿಂದುಗಳ್ ಪೊಜಮಡೆ (ಶಾರಂಜ. ೬೯) ; ಗಂಡಾಭರಣಮಂ ಪಡೆಯುದವೋಲ್ ಪಂಮಳಮತಿಬಹಳವಾಗಿ ಮಂಜರಿಗೆ (ಮಲ್ಲಿಶ. ೧೧-೧೩೦). ೨. ಕಾವು ; ತೊಟ್ಟು. ೩. ಮುತ್ತು ; ಮುಕ್ತಾಫಲ. ೪. ಒಂದು ಬಗೆಯ ಮರ ; ತಿಲಕವೃಕ್ಷ. ೫. ಕುದುರೆಯ ಶರೀರದ ಒಂದು ಭಾಗ : ಮೊಳಕಾಲು ; ಜಾನು : ಸ್ತುರೆಯಿಂ ಕೆಟಗಕ್ಕುಂ ಮಂಜರಿಯೆಂಬಾ ಪೆಸರ್ (ಅಶ್ವಶಾ. ೯-೫೫). 'ಜಾನುಮಂಜರಿ' ಪರಾ. [ಸಂ. ಮಂಜರೀ]

**ಮಂಜರಿಕೆ** (ನಾ). = ಮಂಜರಿ₂ ೧ : "ಮಂಜರಿಗೆ — ಮಂಜರಿಕಾ = ಹೂಗೊಂಚಲು" (ಕರ್ನಾ.ಕೋ. ೩೩). [ಸಂ. ಮಂಜರಿಕಾ]

**ಮಂಜರಿಗ** (ನಾ). ಒಂದು ಬಗೆಯ ಹಕ್ಕಿ : ಗಳಿಗಳಂಟಿಗೆ ಸಿಲುಕಿದವು ಪಿಸ್ಕುಳಿಗ ಪಿಂಜರ ಮಂಜರಿಗ ಮಿಾಂಬುಲಿಗ ಲಾವುಗೆ ಸರಲೆ ಬುಜಾಲೆಗಳೆಚ್ಚ ಮಿಂಚೆಯಲಿ (ತೊರವೆ. ೩-೩-೦೯). [ ? ]

**ಮಂಜರಿಗೆ**, ಮಂಜಳಿಕೆ (ನಾ). = ಮಂಜರಿ₂ ೧ : "ಮಂಜರಿಗೆ — ಮಂಜರಿಕಾ=ಹೂಗೊಂಚಲು" (ಕರ್ನಾ.ಕೋ. ೩೩). **ಮಂಜಳಿಕೆ** : ಆಭರಣಂಗಳ ಪೆಟ್ಟಿಗೆಯುಂ ತರಿಸಿ ರತ್ನಮಂಜ[ಪಾಠಾಂ. ಜು]ಳಿಕೆಯ ಮುದ್ರಿಸಿದ ಮುಚ್ಚಳಂ ತೆಗೆದು ಮಾಣಿಕದ ಕರ್ಣಾವತಂಸಮಂ ಕಿವಿಗಳವಡಿಸಿ (ಬಸವ. ೬-೦೭).
[< ಸಂ. ಮಂಜರಿಕಾ]

**ಮಂಜರಿಸು** (ಕ್ರಿ). ಗೊಂಚಲಾಗು ; ಗುಚ್ಛವಾಗು : ಕೆಂಪಿನ ಕಂಪಿನ ಮಂಜರಿಯಂತೆ ಮಂಜರಿಸಿ ಮಗವಾಗಿಸಿ ಮರಿಪುಗೊಂಡು ಸೊಬಗು ಕೊಂಬುಗೊಂಡರಿಸಿನದ ಕೊಂಬುಗಳಂ ಸೊಪ್ಪುಗಟ್ಟಿ (ಧರ್ಮಾವ. ೦೨-೭೭ ವ).
[ಮಂಜರಿ₂ + —ಇಸು₃]

**ಮಂಜರೆ** 'ಮಂಜರ' ನೋ.

**ಮಂಜಲಿ** 'ಮಂಜರಿ₁' ನೋ.

**ಮಂಜಳ್**, ಮಂಜಳ₁ (ನಾ). ೧. ಅರಿಸಿನದ ಗಿಡ ಮತ್ತು ಅದರಿಂದ ತಯಾರಾಗುವ ಅರಿಸಿನ : 'ಮಂಜಳೆಣ್ಣೆ' ಪರಾ. ೨. ಅರಿಸಿನದ ಮೇಲೆ ವಿಧಿಸುತ್ತಿದ್ದ ಒಂದು ಬಗೆಯ ತೆರಿಗೆ : ತೆನ್ನಮರಂ ಕೊಳಂದು ವಾಳೈ ಕುರುಂಬು ಮಂಜಳ್ (ಎಕ. XVIII, ೧೯೨-೯೫ ; 1434). **ಮಂಜಳ₁** : ೧. 'ಕಳಿಮಂಜಳ' ಪರಾ.
[ದೇ.॥ ತಮಿ. ಮಞ್ಞಳ್ ; ಮಲ. ಮಞ್ಞಳ್ ; ತುಳು. ಮಂಜಲ್, ಮಂಜಳ್ ; ಕೊಡ. ಮಂಜ]

**ಮಂಜಳ₁** 'ಮಂಜಳ್' ನೋ.

**ಮಂಜಳ₂** 'ಮಂಜಾಡಿ' ನೋ.

**ಮಂಜಳಿಕೆ** 'ಮಂಜರಿಗೆ' ನೋ.

**ಮಂಜಳೆಣ್ಣೆ** (ನಾ). ಮದುವೆ ಮುಂತಾದ ಶುಭಸಂದರ್ಭಗಳಲ್ಲಿ ಮಾಡುವ ಅರಿಸಿನೆಣ್ಣೆಯೆಂಬ ವಿಧಿ : ಪಳಿ ಮಂಜಳೆಣ್ಣೆಯುಂ ದೊಡ್ಡಂಗೆ ದೂಳಿಸಿದರೆಳೆವೆಣ್ಣಳ್ (ಶಾಲಿಶ. ೧೪೭-೩೨೦). [ಮಂಜಳ್ + ಎಣ್ಣೆ]

**ಮಂಜಳೊ್ರಣೆ** (ನಾ). ಒಂದು ಪ್ರದೇಶದ ಹೆಸರು (?): ಅಂತೆ ಮಂದು ಮಂಜಳೊ್ರಣೆಯ ಬಾಟಿಕೊಟ್ಟಿವ ಸಂದು . . . ಕೂಡಿತ್ತು ಸೀಮೆ (ಮ್ಯಾಆ. ೧೯೨೭, ೧೦೬-೯೯; 726). [ ? ]

**ಮಂಜಾಡಿ**, ಮಂಜಡಿ₂, ಮಂಜಳ₂ (ನಾ). ಒಂದು ಬಗೆಯ ಮರ ಮತ್ತು ಅದರ ಹೂವು ಹಾಗೂ ಕೆಂಪುಬಣ್ಣದ ಬೀಜವುಳ್ಳ ಅದರ ಕಾಯಿ ; P ಗುಲಗಂಜಿಯಂತೆ ಈ ಬೀಜವನ್ನು ವಜ್ರ, ಚಿನ್ನ, ಬೆಳ್ಳಿಗಳನ್ನು ತೂಗಲು ಅಕ್ಕಸಾಲಿಗರು ಉಪಯೋಗಿಸುತ್ತಿದ್ದರು : ವಜ್ರವ ತೂಗುವುದು ಮಂಜಾ[ಪಾಠಾಂ. ಜ]ಡಿ ೧ಕ್ಕೆ ತೂಕಂ (ಪ್ರವಹಾ. ಅಮುಬಂಧ. ೦-೦೭ ಟೀಕು); ಓರಂತೆ ಬುಧರ್ಕಳಾಯೆನೆ ಸದಾ ಮೇಣ್ ಗುಂಜೆ ಮಂಜಾಡಿಗಳ್ ಸರಿಯಪ್ಪಂತೆಯೆನರ್ಘ್ಯಮಪ್ಪ ಗುಣಿಯೊಳ್ (ಪಾವಶ. ೫೭) ; ಮಂಜಾಡಿ ಇರವಂತಿಗೆ ವನಸಂಪಿಗೆ ಸಣ್ಣಮಲ್ಲಿಗೆ ಮೊಲ್ಲೆ

ಪಾರಿಜಾತ . . . ಮೊದಲಾದ ಪುಷ್ಪಂಗಳಂ (ಶಾಶಿಪು. ೬೩-೨). ಮಂಜಡಿ₂: "ಮಂಜತ್ತಿ, ಮಂಜಡಿ, ಆನೆಗುಲಗಂಜಿ" (ಸಸ್ಯಕೋ. ೬); ಹವಳಕ್ಕೆ ಕಣಜುಗಟ್ಟಳೆ . . . ಧ್ರುವದಿಂ ಮಂ(ಜ)ಡಿ ಮಜ್ರಿಕೆ (ವೃಷಹಾ. ಅನುಬಂಧ. ೧-೩-೧೫). ಮಂಜಳ₂ : ಎನಿತು ಪಸುರೊಳ್ ತೆರಮದೆನಿತು ಮಂಜಳ ಕೆಂಪದೆನಿತು ನಾಲಗೆ ನುಡಿಯಂದಿರ್ಪ ಪೊಗರೆನಿತು ? (ಶಾಬೂರ. ೧೧೯-೨೫೦).

[ದೇ.॥ ತಮಿ. ಮಞ್ಞಟಿ; ಮಲ. ಮಞ್ಞಾಡಿ; ತುಳು. ಮಂಜೊಟ್ಟಿ, ಮಂಜೆಟ್ಟಿ, ಮಂಜೋಟಿ ; ತೆಲು. ಮಂಜಾಡಿ, ಮಂಜಾಳಿ]

**ಮಂಜಾಣ** 'ಮಂಜಾಳ' ನೋ.

**ಮಂಜಾಳ**, ಮಂಜಾಣ (ನಾ) ೧. (ಉಕ) ತಿಳಿಗೇಡಿತನ (?) : ಥೇ ನಿಮ್ಮ ಮಂಜಾಳಾ ಹೋಗಲಿ! ಅದನ್ನು ನೀವು ಕೇಳಿಯೋ ತೀರಬೇಕು (ಸಂದರ್ಶ. ೧೬); ಅಯ್ಯ! ನನ ಮಂಜಾಳ ಹೋಗಲಿ. ಮರೆತೇ ಬಿಟ್ಟಿದ್ದನಲ್ಲ (ಪೋಪಜ. ೧೨); ಥೂ ನಿನ್ನ ಮಂಜಾಳ ಹೋಗಲಿ, ಹುಟ್ಟಿಸಿದ ದೇವರು ಹುಲ್ಲ ಮೇಯಿಸತಾನೇನೋ ? (ತತುಗು. ೫೦). **ಮಂಜಾಣ** : ೨. ಮಬ್ಬು ; ಮಸುಕು (?) : ಈ ಮಲ್ನಾಡದ ಪ್ರದೇಶದಲ್ಲಿ ಮಂಜಾಣಾದ ಅಡವಿಯು ಹಬ್ಬಿರುತ್ತದೆ (ಕಪಾಗ. ೫). [ ? ]

**ಮಂಜಿ₁** (ನಾ). (ಕರಾ) ಉದ್ದವಾದ ನಾಡದೋಣಿ ; ಒಂದೇ ಒಂದು ಪಟಸ್ತಂಭವುಳ್ಳ ದೋಣಿ : ತಾನು ಮಂಜಿಯನ್ನೇರಿ ಹೊನ್ನಹಳ್ಳಿಗೆ ಪಯಣವನ್ನು ಕೈಗೊಂಡ (ಜಾಹುತ. ೯); ದೀವಿಯಿಂದ ಮಂಜಿಗಳು ಬರಲಿಕ್ಕಾಯಿತು (ಮರವು. ೪೮); ಮಂಜಿಯೊಡೆದರೆ ಗುಂಜಿಗಿಂತ ಕಡೆಯೇ ? (ಗಾದೆ). 'ಮಂಚವೆ' ಪರ್ಯಾ.

[ದೇ.॥ ತಮಿ. ಮಞ್ಜಿ; ಮಲ. ಮಞ್ಜಿ; ತುಳು. ಮಂಜಿ]

**ಮಂಜಿ₂** (ನಾ). ೧. (ಕತ್ತಾಳೆ. ಬಾಳೆ ಮೊದಲಾದುವುಗಳ) ನಾರು : ನೂಲು : ಅಲರಿಂದೆ ಮಂಜಿ ಬಂದುಜೆ ತಲೆಗೇಜಿದ ತೆಜದೆ (ಉವ್ಯಲಿ. ೫-೧೧೮). ೨. ನಾರಿನ ಗಿಡ ; ಸೆಣಬು : ಮಂಜಿಯ ಗೆಡ್ಡೆ, ಪಂಚಲವಣ, ಸರ್ಜ್ಯಕ್ಷಾರ, ಯವಕ್ಷಾರ, ಇಂಗು . . . ವಸಗದ ಬೇರು. ಇಷ್ಟನೂ ಮುಂಡುಗಳ್ಳಿಯ ಹಾಲಲ್ಲಿ ಮರ್ದಿಸಿ (ವೈವ್ಯಸಾ. I. ೩೨೨).

[ದೇ.॥ ತಮಿ. ಮಞ್ಜಿ : ತುಳು. ಮಂಜಿ]

**ಮಂಜಿಗೆ** 'ಮಂಚಿಗೆ' ನೋ.

**ಮಂಜಿಟ** 'ಮಂಜಿಟೆ' ನೋ.

**ಮಂಜಿಟಗೆ** 'ಮಂಜಿಟ್ಟಿಗೆ' ನೋ.

**ಮಂಜಿಟೆ**, ಮಂಜಟಿ, ಮಂಜಟ್ಟಿ, ಮಂಜಡಿ₁. ಮಂಜತ್ತಿ. ಮಂಜಿಟಿ, ಮಂಜಿಟ್ಟೆ, ಮಂಜಿಷ್ಟೆ, ಮಂಜೂತಿ (ನಾ). ೧. (ಬಟ್ಟೆಗಳಿಗೆ ಹಾಕಲು ಗಾಢವಾದ ಕೆಂಪುಬಣ್ಣವನ್ನು ತಯಾರಿಸಲು ಮತ್ತು ಔಷಧದ್ರವ್ಯವಾಗಿ ಉಪಯೋಗಿಸುವ) ಒಂದು ಬಗೆಯ ಸಸ್ಯ : "ಮಂಜಿಟೆಯು ಮಂಜಿಷ್ಠೆ" (ಮಂಗರಾ. ೪೨-೩೮); ಯಷ್ಟಿಮಧುಕಂ ಮಧು ಮಂಜಿಟೆ ತುಪ್ಪವಿಂತಿವಂ ಕಲಸಿ ಹಯಕ್ಕೆ ಕೊಟ್ಟು (ಅಶ್ವಶಾ. ೧೧-೨೪). **ಮಂಜಟಿ** : ೧. "ಮಂಜಿಟ (ಮಂಜಟಿ) = ಮಂಜಿಷ್ಠಾ" (ತದ್ಭಕೋ. ೩೩). **ಮಂಜಟ್ಟಿ** : ೧. ಹುಣಿಸೆ, ಕಂಚವಾಳ, ಮಂಜಟ್ಟಿ, ಗೌಳಿಗೆ (ಸಮ್ಮಸು. ೨೩೮). **ಮಂಜಡಿ₁** : ೧. ಮಂಜತ್ತಿ, ಮಂಜಡಿ, ಮಂಜಿಟ್ಟೆ, ದೊಡ್ಡಗುಲಗಂಜಿ, ಆನೆಗುಲಗಂಜಿ (ವ್ಯಶಿಗ. ೩-೩೮). **ಮಂಜತ್ತಿ** : ೧. "ಮಂಜತ್ತಿ, ಮಂಜಡಿ. . . ಆನೆಗುಲಗಂಜಿ" (ಸಸ್ಯಕೋ. ೬). **ಮಂಜಿಟಿ** : ೧. "ಮಂಜಿಟಿ (ಮಂಜಟಿ) = ಮಂಜಿಷ್ಠಾ" (ತದ್ಭಕೋ. ೩೨). **ಮಂಜಿಟ್ಟೆ** : ೧. ಮಂಜತ್ತಿ, ಮಂಜಡಿ, ಮಂಜಿಟ್ಟೆ, ದೊಡ್ಡಗುಲಗಂಜಿ, ಆನೆಗುಲಗಂಜಿ (ವ್ಯಶಿಗ. ೩-೩೮). **ಮಂಜಿಷ್ಟೆ** : ೧. "ರಕ್ತಾಂಗೀ— ಮಂಜಿಷ್ಟೆ" (೬ಸಧಿ. ೧೩೪); ಮಂಜಿಷ್ಟೆ ಎಳ್ಳು ಅಮೃತವಳ್ಳಿಯೆಲೆಗಳು ಮಣಿಸಿಲೆಯಿಂವುಗಳಂ ಅರದು (ಶಾಗಂಧಿ. ೪೩೬-೧). ೨. ನಸುಕೆಂಪು ಬಣ್ಣದ ಮೂತ್ರ ಹೋಗುವ ಒಂದು ಬಗೆಯ ರೋಗ : ರಕ್ತವರ್ಣವಾಗಿ ಹೋಗುವ ಮೂತ್ರವನ್ನು ಮಂಜಿಷ್ಟೆ ಎಂಬುವರು (೬ವೈಶಿ. ೧೫೩). **ಮಂಜೂತಿ** : ೧. ಮಂಜೂತಿ. (ಮಂಜಿಷ್ಠ) ಎತ್ತರವಾಗಿ ಬೆಳೆಯುತ್ತದೆ . . . ಇದರಿಂದ ಕೆಂಪುಬಣ್ಣವಾಗುತ್ತದೆ (ಕಪಾಗ. ೪೩).

[<ಪ್ರಾ. ಮಂಜಿಟ್ಠಾ ./ ಸಂ. ಮಂಜಿಷ್ಠಾ]

**ಮಂಜಿಟ್ಟಿಗೆ**, ಮಂಚಟಿಕೆ. ಮಂಚಿಟಿಕೆ, ಮಂಚಿಟಿಗೆ, ಮಂಜಿಟಿಗೆ, ಮಂಜಿಡಿಕೆ₂, ಮಂಜಿಷ್ಟಿಗೆ (ನಾ). ೧.=ಮಂಜಿಟೆ ೧ : ಮಂಜಿಷ್ಠಕ– ಮಂಜಿಟ್ಟಿಗೆ, ಮಂಜಿಟಗೆ (ಕವುದ. ೨೮೩ ಪ್ರಯೋ). **ಮಂಚಟಿಕೆ** : ೧. "ಮಂಜಿಷ್ಠಾ—ಮಂಚಟಿಕೆ" (ಜಾಹಟೀ. ೨-೨-೫೦ ವ). **ಮಂಚಿಟಿಕೆ** : ೨. ಕೆಂಪುಬಣ್ಣದ ಸೀರೆ ಮೊದಲಾದ ವಸ್ತ್ರ : ಪೊಸತಹ ಮಂಚಿಟಿಕೆ ಗುಜ್ಜರಿ ದುಕೂಲಗಳ ಅಳವಡಿಸಿ . . . ಶ್ರೀಕೃಷ್ಣನೋಲಗಸಾಲೆ ರಂಜಿಸಿತು (ಕೋಗಡು. ೩-೩೮). **ಮಂಚಿಟಿಗೆ** : ೨. ಕರಮೆಸೆವ ಕಾವಿ ಮಂಚಿ[ಶಾಅಂ. ಜ]ಟಿಗೆ ತೋಪುಗಳಿಂದೆ ಭರದೆ ಬಾಸಣಿಸಿಸೆವ ಬಲ್ಲಾಳದಟ್ಟಿಯೊಳಗುರುಮೋದದಿಂ ಬರ್ಪವರ್ ಕೆಲಬರ್ (ಅರಾತ. ೫-೪-೨೩); ಮಂಚಿ[ಶಾತಂ. ಜ]ಟಿಗೆ ಪಲ್ಲಕ್ಕಿ ನಲ್ಲೂರ ತೆಳಗಾವಿಯೆಂಬಾ ಸೀರೆಗಳಂ ಸತಿಯರೊಲಿದೊಳುರುಪಿದರಾಗಳ್ (ತ್ರಿಶಿಪ. ೧೧-೨೮). **ಮಂಜಿಟಿಗೆ** : ೧. ಮತ್ತಗಜಮಂ ಪಾಯ್ದು ಪೊಯ್ಕೆ ಪವನಖಂಗಳೊಳ್ ಪತ್ತಿ ಜಗುಳ್ದ ನೆತ್ತರಿಂ ಮಹೀತಳಂ ಮಂಜಿಟಿಗೆಯ [ಕೆಂಬಣ್ಣಮಂ ಪ]ತ್ತಿದಂತಾಗುತ್ತಿರೆ ಪೋದ ಕೇಸರಿಗಳ ಕೇಸಡಿವಜ್ಜೆಗಳುಮಂ (ಕುಸುಮಾ. ೦೪-೨೯ವ); ಅರಿಸಿನ . . . ಮಂಜಿಟಿಗೆಯ...ಂ . . . ಘೃತದಿಂದಮಟ್ಟುದುಮನುಂಜನಲೇಪನ ನಸ್ಯಪಾನದಿಂ ಪರಿಕಿಸೆ (೬ಹುದ. ೯-೧೯). ೨. ಪೊಸ ಪಸಗೆಯ ಮಂಜಿಟಿಗೆ[ಶಾತಂ. ಕೆ]ಯ ಮಿಸುಗುವ ದೋರಿಯದ ಪಟ್ಟೆಯ ಪುಲ್ಲಿಯ ಸೊಂಪಂ ಪಸರಿಸಿದ ಪಕ್ಕರಕ್ಕೆಗಳೆಸೆದಿರ್ದುವು ತರದಿನೊಡ್ಡಿದೆರಡುಂ ಪಡೆಯೊಳ್ (ಕಬ್ಬಿಣ. ೨೬೦). **ಮಂಜಿಡಿಕೆ₂** : ೨. ಚಿಂನದ ಬರಹದ ಸೀರೆ ೩ ಮಂಜಿಡಿಕೆ ಸೀರೆ ೨ (ಶಾಶಾ. IX–ii, ೫೪೬–೩; 1532). **ಮಂಜಿಷ್ಟಿಗೆ** : ೧. "ಮಂಜಿಷ್ಠಾ, ವಿಕಸಾ . . . ಯೋಜನವಲ್ಲೀ—ಈ ೯ ಮಂಜಿಷ್ಟಿಗೆ" (ಜಾಶಾ. ೧೧೯) ; ಪರಮಂಜಿಷ್ಟಿಗೆ ದೇವದಾರು ಮಧುಕಂ . . . ಸರಿಗೊಂಡಾಜ್ಯದೊಳೀಯೆ (೬ಮಾಧ. ೯-೬). [ < ಸಂ. ಮಂಜಿಷ್ಠಕ ? ]

**ಮಂಜೀಕ್ಕಿ** 'ಮಂಜಿಟೆ' ನೋ.

**ಮಂಜಿಡಿ** (ಕ್ರಿ). ಮಂಜಿನಿಂದ ಮುಚ್ಚಿಕೊಂಡಿರು,–ಆವೃತವಾಗಿರು : ರಂಜಿಸುವ ಮೊಗ್ಗುಗಳು ಮಂಜಿಡಿದ ತುಟಿ ತೆರೆದು ನೋಡುತಿಹವು (ಕಪು. ೨೬-೨).
[ಮಂಜು₁ + ಇಡಿ₂]

**ಮಂಜಿಡಿಕೆ₁** (ನಾ). ೧. ಮಂಜು ಕವಿಯುವುದು,–ಆವರಿಸುವುದು,– ತುಂಬಿರುವುದು. ೨. (ಅಲಂ) ಮಂಕು ಕವಿಯುವುದು ; ವಿವೇಕವಿಲ್ಲದಂತಾಗುವುದು : ಭಯಂರಸಗದ್ಬುಗೆಯ ಮಂಜಿಡಿಕೆಮನದವರಿದ್ದು ಫಲವೇನೆನುತ ಕೈ ಮಾಡಿದನು ಕಲಿಕರ್ಣ (ಕುವ್ಯಾಶ. ೧೯-೨೫).
[ಮಂಜು₁ + ಇಡಿಕೆ]

**ಮಂಜಿಡಿಕೆ₂** 'ಮಂಜಿಟ್ಟಿಗೆ' ನೋ.

**ಮಂಜಿಪತ್ರೆ**, ಮಂಜುಪತ್ರೆ (ನಾ). = ಮಂಚಿಪತ್ರ : "ಮಂಜಪರ್ಣಂ_ ಮಂಜಿಪತ್ರೆ" (೬ಕಧಿ. ೧೧೯). **ಮಂಜುಪತ್ರೆ** : ಮಂಜುಪತ್ರೆಸೊಪ್ಪನ್ನು ಕುಟ್ಟಿ ಪಾವುರಸಮಂ ತೆಗೆದುಕೊಳ್ಳಲು ಶ್ಲೇಷ್ಮ, ಉದರಶೂಲೆ ಸಹ ಮಾಣ್ಗುಂ (ಸಕವ್ಯ. ೨೦೬). [ < ಸಂ. ಮಂಚಿಪತ್ರ ]

**ಮಂಜಿಮ** (ನಾ). ಸೊಬಗು ; ಸೊಗಸು ; ಸೌಂದರ್ಯ : ಕಮಳದಳಾಯತೇಕ್ಷಣರುಚಿಪ್ರಸರಂ ಭಸಿತತ್ರಿಪುಂಡ್ರಮಂಜಿಮಯುತಪಾಲಮಾಲಿತಕುಂಡಳಮಂಡಿತಗಂಡಮಂಡಳಂ (ರಾಜಶೇ. ೦೪-೬೪).

[ಸಂ. ಮಂಜಿಮನ್]

**ಮಂಜಿರ** (ನಾ). ೧. ಒಂದು ಬಗೆಯ ಪದ್ಯಜಾತಿ : ಸರಸಮಂಜಿರ ವೆಂಟುಕಂದಂಗಳೈನೂಱು ವಿರಚಿಸಿದ ಕೃತಿಯು ಮೂಱುವತ್ತಾಱು (ಗುರುತಾ. ೧೨-೩೬). ೨. [ಛಂದ] ಒಂದು ಬಗೆಯ ಛಂದಸ್ಸು.
[ < ಪ್ರಾ. ಮಂಜೀರ./ ಸಂ. ಮಂಜೀರಾ ]

**ಮಂಜಿಷ್ಟಿಗೆ** 'ಮಂಜಿಟ್ಟಿಗೆ' ನೋ.

**ಮಂಜಿಷ್ಟೆ** 'ಮಂಜಿಟೆ' ನೋ.

**ಮಂಜಿಷ್ಠ** (ಗು). ೧. ಪ್ರಕಾಶಮಾನವಾದ ಕೆಂಬಣ್ಣದ; ಗಾಢವಾದ ಕೆಂಬಣ್ಣದ : ವಜ್ರಪಟ್ಟ ಮಂಜಿಷ್ಠಪಟ್ಟ ಕ್ರಮವನು ಪೊಸದೇಸಿಕಾಱತನ ಮಿಗಲು ಗಳಿಗಳಲು ಜೋಡಿಸಿ (ಸಿದ್ಧರಾ. ೬-೫೬). (ನಾ). ೨. ಗಾಢವಾದ ಕೆಂಬಣ್ಣ ; ಪ್ರಕಾಶಮಾನವಾದ ಕೆಂಬಣ್ಣ : ಆತ್ಮನ ಇರವು ಶ್ವೇತವೋ ಹರಿತವೋ ಕಪೋತವೋ ಮಂಜಿಷ್ಠವೋ ಕೃಷ್ಣವೋ (ವೋಳಶಿವ. ೯೯-೩೫೩). ೩. = ಮಂಜಿಟೆ ೧ : "ಕಾಡುಬಳ್ಳಿ, ಸೋಮಲತೆ, ಸಿರಗತ್ತಿ, ಮಂಜಿಷ್ಠ . . . ಯೋಜನವಲ್ಲಿ "(ಶಬ್ದ.ಶಿ. ೧೧೪) ; ಸೋಮಲತೆ, ಮಂಜಿಷ್ಠ, ಸಿರಗತ್ತಿ (ವೈಶಿಗ. ೬೬-೧೩೬೦). [ಸಂ.]

**ಮಂಜಿಷ್ಠಾರಾಗ** (ನಾ). ೧. ಮಂಜಿಷ್ಠೆಯ ಬಣ್ಣ. ೨. ವಿಪ್ರಲಂಭ ಶೃಂಗಾರದ ಪೂರ್ವರಾಗದಲ್ಲಿರುವ ಮೂರು ವಿಧಗಳಲ್ಲಿ ಒಂದು ; ಮೊದಲಿನಿಂದ ಕೊನೆಯವರೆಗೂ ಅತಿಶಯವಾಗಿಯೇ ಇರುವ ಪ್ರೀತಿ ; ಶಾಶ್ವತವಾದ ಪ್ರೀತಿ. 'ನೀಲೀರಾಗ' ಪರಾ. [ಸಂ.].

**ಮಂಜಿಷ್ಠೆ** (ನಾ). ೧. = ಮಂಜಿಟೆ ೧ : "ಮಂಜಿಟೆಯು ಮಂಜಿಷ್ಠೆ" (ಮಂಗರಾ. ೪೨-೩೮) ; "ರಕ್ತಯಷ್ಟೀ-ಮಂಜಿಷ್ಠೆ" (ಚಿಶಂ. ೧೩೪) ; ಧಾತಕೀಕುಸುಮ, ಲೋಧ್ರ, ಮಂಜಿಷ್ಠೆ, ಲಾಮಂಚ, ಶ್ರೀಗಂಧ ಇಷ್ಟನೂ ಸಮಾಂಶವಾಗಿ ನೀರಿಂದ ಅರೆದು ಮೈಗೆ ಲೇಪಿಸಲು ಸಕಲಗ್ರಹಗಳು ಹರವಹವು (ವೈದ್ಯಸಾ. II. ೧೫) ; ಮಂಜಿಷ್ಠೆ ಕೋಲುಮುರುಕಿನ ಚಕ್ಕೆ(ರಿ) . . . ಕುರುಟಿಗೆಗಳನು ಪರಿಹರಿಸುವುದು (ದ್ರವ್ಯಗುಣ. ೪-೧೦). ೨. ಮಂಜಿಷ್ಠೆಯ ಬಣ್ಣ ; ಕೆಂಪುಬಣ್ಣ : ನಿಡದೇಹ ಸ್ವರ್ಣಚ್ಛಾಯೆ ಮಂಜಿಷ್ಠೆ ಬಾಯ್ದುಡುವ ಪೆಣ್ಮೀನ ತಂದವಳು . . . ಬೇಗಡಿಗೆಯ ಮಾತ ಹೇಳಿವಳು (ವೋಹಶ. ೧೧-೩೬). ೩. ಕೆಂಪುಬಣ್ಣದ ಬಟ್ಟೆ : "ದಸರಿ ಗಬ್ಬುಳ ನೀಲಿಗಂಧ . . . ಮಂಜಿಷ್ಠೆ ದೇವಾಂಗವೆಂದು ಪಟಭೇದಮಿಪ್ಪುಂ" (ಮಂಗರಾ. ೧೧೧-೨೮). [ಸಂ. ಮಂಜಿಷ್ಠಾ]

**ಮಂಜೀರ** (ನಾ). ೧. ಕಾಲಿಗೆ ಹಾಕಿಕೊಳ್ಳುವ ಆಭರಣ ; ನೂಪುರ : "ಶಿಂಜಿನಿ ನೂಪುರಮೆಂದುಗೆ ಮಂಜೀರಂ ಹಂಸಕಂ" (ಪಶ್ಚಕೋ. ೬೬-೬) ; ಲಲನಾಮಂಜೀರನಾದಕ್ಕೆಳಸುವ ಕಳಹಂಸಂಗಳಂ ಕಂಡು (ಆದಿಪು. ೩೩೯) ; ಮಂಜೀರಧ್ವನಿಯುಂ ಸುಕಂಕಣಝಣತ್ಕಾರಂಗಳುಂ . . . ಪೊಣ್ಮೆ (ಶಾಂತಿಪು. ೬-೧೪೩). ೨. ಕಡೆಗೋಲಿನ ಹಗ್ಗವನ್ನು ಕಟ್ಟುವ ಕಂಬ. [ಸಂ.]

**ಮಂಜೀರಕ** (ನಾ). = ಮಂಜೀರ ೧ : ಸುರಗಣಿಕಾಗುಂಜನ್ಮಣಿರತ್ನಾಮಣಿ ಮಂಜೀರಕ ಮಂಜುಸಿಂಜಿತಂ ರಂಜಿಸುಗುಂ (ಅಜಿಪು. ೬-೧೮) ; ಪದದಿಂ ಮಂಜೀರಕರವಮೊಗೆಯೆ ಮಗಂ ಜಗುಟುತ್ತೆಂದೊ ತೊಟ್ಟಿಲಂ ಪಟ್ಟೊದೆವಾ (ಪುಷ್ಪಪು. ೩-೯೦). [ಸಂ.]

**ಮಂಜೀರಿಕೆ** (ನಾ). = ಮಂಜೀರ ೧ : ಏಂ ಕಱಿದುದೋ ಕರ್ಣಾಮೃತಾಸ್ವರಮುಂ ವಿವಿಧಾತೋದ್ಯಲಯಾನುಗಂ ಸುರಸತೀಮಂಜೀರಿಕಾಶಿಂಜಿತಂ (ಕಂದಾಪಶ. ೧೬-೯೬) ; ಮಂಜೀರಿಕಾಪುಂಜಮಂಜುಶಿಂಜಾನಮೊಳವು ವಿನಮೊದೆವ ಪದದೊಳ್ (ಕಂದ್ರಪು. ೧-೧೧೬). [ಸಂ. ಮಂಜೀರಿಕಾ]

**ಮಂಜು₁** (ನಾ). ೧. ವಾಯುಮಂಡಲದಲ್ಲಿರುವ ನೀರಿನ ಕಣ, – ನೀರಿನ ಆವಿರೂಪ ; ಇಬ್ಬನಿ ; ಕಾವಳ : ಸುರಚಾಪಂಬೋಲೆ ವಿದ್ಯುಲ್ಲತೆಗಳ ತೆಱವೋಲ್ ಇಬ್ಬನಿ ಪೋಲ್ವೋಱಿ ಬೇಗಂ ಪಿರಿಗುಂ ಶ್ರೀರೂಪಲೀಲಾಧನವಿಭವ ಮಹಾರಾಶಿಗಳ್ಳಿಲ್ಲವಾಗ್ಗೆ(?)ಂ (ಎಕ. II, ೯೯-೦; ಕು. 700) ; ಕಾಂಡಪಟದಂತಿರ್ಪನ್ನೆಗಂ ಮಾಡಿ ಮಂಜನಲಂಪಟ್ಯಱನೀಯೆ ಕೂಡುವೆಡೆಯೊಳ್ ಜ್ಞಾನಸ್ವರೂಪಂ ಮಹಾಮುನಿಪಂ ಪುಟ್ಟಿದಂ (ಕಂಕಶಾ. ೦-೬೯) ; ದೂರ್ತರ್ ಮಾರ್ತಾಂಡನಂ ಕಂಡ ಮಂಜಿನಂತೆ ಮಱಿಯೆ (ಧರ್ಮಾಮೃ. ೨-೬೯). ೨. ತಂಪು ; ಶೈತ್ಯ : 'ಮಂಜುವೆಳಗ' ಪರಾ. ೩. ಮುಸುಕು ; ಆಚ್ಛಾದನೆ ; ತೆರೆ : ಮುಂದೆ ರಘುಂಗಿಡುವ ನಂಜಿನ ಮಂಜನುತ್ತರಿಸಿ ನಡೆದನು (ಸಿದ್ಧರಾ. ೩-೯) ; ಕರ್ಪೂರಕಿಂಜಲ್ಕಪರಾಗದಿಂ ಮಂಜು ಮಸಗೆ ಸಂಜೆಯಾಯ್ತೆಂದಂಜುವ ಚಕ್ರವಾಕಂಗಳಿಂ (ಧಕಳು. ೪-೩೫ ಪ). ೪. ವಾತಾವರಣದಲ್ಲಿರುವ ಘನೀಕೃತವಾದ ಆವಿಯ ಬಿಳಿಯ ಹಲ್ಲೆ, – ಪದರ; ಹಿಮ : "ಪ್ರಾಲೇಯಂ, ಅವಶ್ಯಾಯಃ . . . ನೀಹಾರಃ – ಈ ೮. ಮಂಜು" (ಕಲಾಛುು. ೦೦೬-೨೯). 'ಮಂಜುಪೆಟ್ಟು' ಪರಾ. ೫. (ದೃಷ್ಟಿಯ) ಮಬ್ಬು ; ಮಸಕು : 'ಮಂಜುಗಣ್ಣು' ಪರಾ. ೬. ವಿವೇಚನೆಯಿಲ್ಲದಿರುವಿಕೆ ; ಅಜ್ಞಾನ ; ಬೌದ್ಧಿಕವಾದ ಜಡತೆ : ಮಾಮರದೊಳಗೊಂದು ಮಾಯದ ಮಂಜು ಕವಿದರೆ ಹೂಮಿಡಿಫಲಂಗಳು ಉದುರವಿನ್ನೆಂತೋ ಮಂಜಿನ ರಸವನುಂಡು ಫಲ ನಿರ್ಮೂಲ ಬೆಳೆದರೆ ಆ ಫಲವ ನಾನು ಮುಟ್ಟೆನು (ಅವಶಂ. ೬೬-೩೪೬).

**ಮಂಜುಮಂಜು** (ದ್ವಿರುಕ್ತಿ) : ಅವರಿಗೆ ಕಣ್ಣು ಮಂಜುಮಂಜಾಗುತ್ತಿವೆಯಂತೆ (ಕಙ). **ಮಂಜಾಗು** = ೧. ಮಂಜಿನಿಂದ ಕೂಡು ; ಮಂಜು ಉಂಟಾಗು : ಮಂಡಲ ವರ್ಷವಾಗಿ(ರೆ)ಕೊಂಡು ಮಂಜಾಗಿ ಕೊಂಡೊಡಂ . . . ಪೊಲ್ಲ ವಸುಧೆಯೊಳ್ (ಅಭ್ರಶು. ೬-೦). ೨. ತಂಪಾಗು ; ಶೀತಲವಾಗು : ವಿಶ್ವಾಸದಿಂ ಶಿವನೇ ಎಂದು ಜಪಿಸುತ್ತಿರ್ದಂಗೆ . . . ಬೆಂಕಿ ಮಂಜಾವಪುದು (ಆಶಕ್ಕ. ೩೦೦). ೩. ಮಸಕಾಗು ; ಮಬ್ಬಾಗು : ಎಲ್ಲವೂ ಮಂಜಾಯಿತು (ಮುರುಳು. ೫೯) ; ನಶ್ಯ ಹಾಕಿ ಹಾಕಿ ಮಂಜಾದ ಕಣ್ಣು (ಮುಹಾಂ. ೬). **ಮಂಜಿನ ಗಡ್ಡೆ** = ಮಂಜುಗಡ್ಡೆ : ದಟ್ಟ ಮಂಜಿನ ಗಡ್ಡೆ ಹೆಪ್ಪುಗಟ್ಟಿರೆ (ಅಶಕೇ. ೨-೫). **ಮಂಜಿನ ನೀರು** = ಇಬ್ಬನಿಯ ಜಲ : ಮಂಜಿನ ನೀರನಕ್ಕಟ ನಂಬಿ ಬಿತ್ತುವೆನೆಂಬನುಂ . . . ಮರುಳನಲ್ಲನೇ (ಧರ್ಮಾಮೃ. ೯-೨೨) ; ಮಳೆನೀರು ಬಿಟ್ಟು ಮಂಜಿನ ನೀರಿಗೆ ಕೈ ಒಡ್ಡಿದ ಹಾಗೆ (ಗಾದೆ). **ಮಂಜಿನ ಹನಿ** = ಇಬ್ಬನಿಯ ಹನಿ ; ಕಾವಳದ ಬಿಂದು : ಕುಳಿರ್ವ ಮಂಜಿನ ಪನಿಗಳಿಂ ಕಮಲಸಂಕುಲಂ. . . ಸಲೆ ಕಿಡುವವೊಲ್ (ನೇಮಿ. ೬-೫). **ಮಂಜಿನ ಮಱಿ, ಮಂಜಿನ ಮಳೆ** = ಇಬ್ಬನಿಯ ಧಾರೆ, – ವೃಷ್ಟಿ : ಅಂತಿಸುವ ಚಾಪಧರನೀರದನಿಕರದ ಶರಾಸಾರಮುಂ ಮಂಜಿನ ಮಱಿಯುಸಹಿಮಕಿರಣನಾತ್ಮಕಿರಣಂಗಳಿಂ ಕಿಡಿಸುವಂತೆ (ಶಾಂತಿಪು. ೪-೧೪ ವ) ; ಮುಸುಕಿದ ಮಂಜಿನ ಮಱಿಯೊಳ್ ನಸುದೋಱುವ ಶೋಣಕಮಲ[ಯುಗ]ದಂತೆ (ಕುಸುಮಾ. ೧೧-೫೦) ; ಮಂಜಿನ ಮಳೆಗೆ ಕುಲಗಿರಿ ಕರಗುವುದೆ (ಕುಮಾರರಾ. ೨-೫೪) ; ಕಾಲಾಗ್ನಿ ಮಂಜಿನ ಮಳೆಗೆ ಮೈದೆಗೆವುದೆ (ಕೂರರಾ. ೫-೫-೨೬). **ಮಂಜಿನ ಸರಿ** = ಮಂಜಿನ ಮಱಿ : ಅರಳಿದಂಬುಜವನಕೆ ಮಂಜಿನ ಸರಿಯು ಸುರಿವಂದದಲಿ (ಕುಮಾ.ಕ. ೧೪-೫೦).
[ದೇ.॥ ತಮಿ. ಮಞ್ಞು ; ಮಲ. ಮಞ್ಞು ; ತುಳು. ಮಂಜು, ಮೈಂದ ; ಕೊಡ. ಮಂಜ ; ತೆಲು. ಮಂಚು]

**ಮಂಜು₂** (ಗು). ೧. ಚೆಲುವಾದ ; ರಮಣೀಯವಾದ ; ಮನೋಹರವಾದ : ಮಂಜು ಮಹಿಮಾಸ್ಪದಂ ಚಾರುವೃತ್ತಂ ಕಲಾಪುಂಜಂ ಸದಾನಭೋಗಂ (ಕೃಷ್ಣಶಾ. ೨೮-೬೨). 'ಮಂಜುಮ' ಹೋ. ೨. ಇಂಪಾದ ; ಮಧುರವಾದ : ಸೊಗಯಿಸಿದುದು ಕಣ್ಗೆಳುಂಬಮೋರಂತೆಡೆಯಾಡುವ ಯುವತಿಜನದ ಮಂಜೀರಗುಂಜನ್ಮಂಜುಸಿನದಂ (ಸುಕುಮಾ. ೧೧-೯೯ ರಗಳೆ) ; ಕಳಕಾಂಚೀಮಂಜುಮಂಜೀರರವಯುರವಂ ಪೊಣ್ಮೆ (ಜಗಂ. ೨-೬೮). (ನಾ). ೩. ಸುಂದರವಾಗಿರುವುದು ; ಸೊಗಸಾಗಿರುವುದು : "ಪ್ರಾಗ್ರ್ಯ.

ಪ್ರಾಗ್ರ್ಯಹರಂ . . . ಮಂಜು, ಪ್ರಿಯಂ . . . ಪೇಶಲಂ—ಈ ೨೯ ಒಳ್ಳಿತು" (ಹಲಾಯು. ೦೦೪-೪); "ಕಮನಂ ಶುಭಂ. . . ಮಂಜು . . . ಪ್ರವೇಕಮೆನೆ ಸೌಮ್ಯಕ್ಕೆ ನಾಮಮಕ್ಕುಂ" (ಮಂಗರಾ. ೦೨೬-೨) : ಸನ್ನುತಚಂದ್ರ(ದ)ನಂ ದಿನಪನೀಕ್ಷಿಸೆ ಚಾರಿ ಕುಜಂ ನಿರೀಕ್ಷಿಸಲ್ ಬಿಸ್ಮಣಮೇನೋ ಶುಕ್ರ ಶನಿ ನೋಡಿದನ(ರ)ಪ್ಪೊಡೆ ಮಂಜು (ಜಿಲ್ಪಮು. ೯-೩). [ಸಂ.]

**ಮಂಜು₃** (ನಾ). ಒಂದು ಬಗೆಯ ಸಸ್ಯ : ಅನಾನಸ್, ಕರಡೀಕಣ್ಣಿನ ಗಿಡ, ಮಂಜು, ಈರುಳ್ಳಿ, ಬೆಳ್ಳುಳ್ಳಿ (ಪಮ್ಮಮ. ೨೩೮). 'ಮಂಜಿ₂' ಪರಾ. [?]

**ಮಂಜುಗಡ್ಡೆ** (ನಾ). ಗಡ್ಡೆಗಟ್ಟಿದ ನೀರು; ಬರ್ಫ; ನೀರ್ಗಲ್ಲು : ನಮ್ಮ ಮನಸ್ಸನ್ನು ಸಾಗರದಲ್ಲಿ ತೇಲುವ ಮಂಜುಗಡ್ಡೆಗೆ ಹೋಲಿಸಬಹುದು (ಶಿಕ್ಷರ. ೬೪೬) ; ಶೀತವಲಯಗಳಲ್ಲಿ ಮಳೆಗೆ ಬದಲಾಗಿ ಮಂಜುಗಡ್ಡೆಗಳು ಬೀಳುತ್ತವೆ (ಕೂಗೋಳ. ೦೬). [ಮಂಜು₁ + ಗಡ್ಡೆ]

**ಮಂಜುಗಣ್ಣು** (ನಾ). ೧. ಮಬ್ಬಾದ ಕಣ್ಣು; ಚೆನ್ನಾಗಿ ಕಾಣದಿರುವ ಕಣ್ಣು : ಬೇರಂ ಕಕ್ಕೆಯ ಎಲೆಯ ರಸದಿಂದ ಹಚ್ಚಲು ಮಂಜುಗಣ್ಣು ಮಾಣ್ಗುಂ (ಶಿಷ್ಯ೦. ೦೩೫) ; ನೀರುಗಣ್ಣು ಕಾಚಗಣ್ಣು ಮಂಜುಗಣ್ಣು (ಬಳಸ. ೬೨೮). ೨. (ಆಲಂ) ವಿವೇಚನಾಶಕ್ತಿಯಿಲ್ಲದ ಬುದ್ಧಿ: ಹಿಂದಿನ ಮಂಜುಗಣ್ಣಿನಿಂದ, ಅಂಧಶ್ರದ್ಧೆಯಿಂದ . . . ನಮ್ಮ ಕನ್ನಡದ ಬಯಲಿಗೆ ತಿದ್ದಿಕೊಂಡ ಕಾಲುವೆಗಳನ್ನೇ ಮತ್ತೆ ನಾವು ಈಗ ತಿದ್ದ ಬೇಕಾಗಿಲ್ಲ (ಕಬಸಾ. ೩೦). [ಮಂಜು₁ + ಕಣ್ಣು (< ಕಣ್)]

**ಮಂಜುಗತ್ತಲು** 'ಮಂಜುಗತ್ತಲೆ' ನೋ.

**ಮಂಜುಗತ್ತಲೆ**, ಮಂಜುಗತ್ತಲು (ನಾ). ೧. ಮಬ್ಬುಗತ್ತಲೆ ; ಮಸುಕಾದ ಕತ್ತಲೆ; ನಸುಗತ್ತಲೆ : ಹಗಲು ಮಸುಗಿತು ಮಂಜುಗತ್ತಲೆ ಗಗನದೊಳು . . . ಉದಯಾದ್ರಿಗೆ ತರಣಿ ಬಹ ಸಮಯದಲಿ ಪ್ರತಿಯಿನ ನುದಯಿಸಿದನು (ಬಸಕ್ಕ. ೬೧-೧೨). **ಮಂಜುಗತ್ತಲು** : ೨. ಹಿಮದಿಂದ ಆವೃತವಾದ ಕತ್ತಲು ; ಮಂಜಿನಿಂದ ತುಂಬಿರುವ ಕತ್ತಲೆ : ತಂಗು ದಾಣದ ಮುಂಭಾಗದಲ್ಲಿ ನೇತುಹಾಕಿದ್ದ ದೀಪಗಳ ಬೆಳಕು ಆ ಮಂಜು ಗತ್ತಲಲ್ಲಿಯೂ ಬರಬರುತ್ತ ಸುಸ್ಪಷ್ಟವಾಯಿತು (ಕೃಸರು. ೩೦೬). [ಮಂಜು₁ + ಕತ್ತಲೆ₁ (< ಕಟ್ಟಲೆ) ]

**ಮಂಜುಗಾಲ** (ನಾ). ಮಂಜು ಸುರಿಯುವ ಕಾಲ ; ಚಳಿಗಾಲ : "ಇಕಿಲೆ ಹ್ಯಮಂತಂ ಮಂಜುಗಾಲಂ" (ಚಕುಶ. ೬೬). [ಮಂಜು₁ + ಕಾಲ]

**ಮಂಜುಗಾಳಿ** (ನಾ). ಹಿಮದಿಂದ ಕೂಡಿರುವ ಗಾಳಿ : ಆಸೆಯೊಂದು ಎಂದು ಮನದಿ ಪೊಳೆವುದಂದೆ ಮಂಜುಗಾಳಿ ಬೀಸಿ ಬಂದು ಬಂದ ಪೊಳಕೆ ಬೇರ ಕತ್ತು ಅಂದೆ ಅಂತೆ ತೂರಿಕೊಂಡು ಪೋಪುದೆತ್ತಲೊ (ಬಸೀಗೀ. ೬೪-೩). [ಮಂಜು₁ + ಗಾಳಿ₁]

**ಮಂಜುಗಿರಿ** (ನಾ). ಹಿಮಾಲಯಪರ್ವತ ; ಹಿಮಾಚಲ : ಆ ಮಂಜುಗಿರಿ ಬಳಿಯಲ್ಲಿ ಪುಟ್ಟಿದ ಸಿರಿಯ ಸೋಮಕುಲಪಾವನೇ ಶರಣಸಂಜೀವನೆ (ತೀರ್ಥಮ. ೨೬). [ಮಂಜು₁ + ಗಿರಿ₁]

**ಮಂಜುಗೈಯ** (ನಾ). ತಂಪಾದ ಕಿರಣಗಳುಳ್ಳವನು ; ಚಂದ್ರ : "ಜೊನ್ನೊಡಲಂ . . . ಮಂಜುಗೈಯಂ . . . ತಿಂಗಳ್ — ಈ ೨೦ ಚಂದ್ರನ ಪೆಸರ್" (ಕಕಶಾ. ೪೬-೨೩) ; "ಚಳಗದಿರಂ . . . ಐಕಿಲ್ವೆಳಗಂ ತಣ್ಗದಿರ ಮಂಜುಗೈಯಂ ಚಂದ್ರಂ" (ಕವಿಕಂ. ೪೩). [ಮಂಜು₁ + ಕೈ₂ (< ಕೆಯ್₂) + -ಅ₇]

**ಮಂಜುಘೋಷ** (ನಾ). ಇಂಪಾದ ಶಬ್ದ : ಮಂಜುಘೋಷಮಂ ಬೀಱುವ ಸಿಂಜಿನೀಪಳಯುಕ್ತಾಂಚಿಗಳೆಂಬಿವಱಿಂದೊಂದು ಚೆಲ್ವೇಱಿರೆ ಭೋಗಿ ಭಾಮಿನಿಯರಾ ಮಡುವಿಂ ಪೊಱಮಟ್ಟರಬ್ಜಿಯಿಂ (ಜಗಶ. ೩-೦೦೨). [ಸಂ.]

**ಮಂಜುಘೋಷೆ** (ನಾ). ೧. ಇಂಪಾದ ಧ್ವನಿಯುಳ್ಳವಳು. ೨. ಒಬ್ಬ ಅಪ್ಸರೆಯ ಹೆಸರು : ಘೃತಾಚೀ, ಮೇನಕಾ . . . ಮಂಜುಘೋಷಾ—ಇವರು ಮೊದಲಾದವರ್ ಅಚ್ಚರಸಿಯರ್ (ಹಲಾಯು. ೧೩-೬೬) : ಮೇನಕೆ . . . ಮಂಜುಘೋಷೆಯೆಂಬೀ ನೆಗಟ್ಟಗ್ಗದಚ್ಚರಿಯರಚ್ಚರಿಯಪ್ಪ ವಿಳಾಸಮುಂ ನಿಜನಟನೈಕದೇಶಮೆ ತಱುಂಬಿದುದು (ವೃಕ್ಷ. ೨-೬೬). [ಸಂ.ಮಂಜುಘೋಷಾ]

**ಮಂಜುಪತ್ರೆ** 'ಮಂಜಿಪತ್ರೆ' ನೋ.

**ಮಂಜುಬೆಟ್ಟ** 'ಮಂಜುವೆಟ್ಟ' ನೋ.

**ಮಂಜುಭಾಷಿಣಿ** (ನಾ). ೧. ಇಂಪಾಗಿ ಮಾತನಾಡುವವಳು ; ಚೆನ್ನಾಗಿ ಮಾತನಾಡುವವಳು. ೨. [ಛಂದ] ಒಂದು ವೃತ್ತದ ಹೆಸರು ; ಪ್ರತಿ ಸಾಲಿನಲ್ಲೂ ಹದಿಮೂರು ಅಕ್ಷರಗಳಿರುವ ಅತಿಜಗತೀಛಂದಸ್ಸಿಗೆ ಸೇರಿದ ಸಮವೃತ್ತ : ಇರೆ ಮಂಜುಭಾಷಿಣಿ ಸಜಂಸಜಂಗಮುಂ (ಛಂಬು. ೮೨). [ಸಂ. ಮಂಜುಭಾಷಿಣೀ]

**ಮಂಜುಮ** (ಗು). ಸುಂದರವಾದ ; ರಮಣೀಯವಾದ : ಮಂಜುಮ ಹಿಮಾಸ್ಪದಂ ಚಾರುವೃತ್ತಂ ಕಲಾಪುಂಜಂ (ಕೈಬಾಥಾ. ೨೪-೬೨); ಮಂಜಿ ನೊಲ್ ಪಸರಿಸಿದ ಮುಗಿಲ ತೇರಿಂದೊಂದು ಮೂಡಿದುದು ಮಂಜುಮ ಸ್ತ್ರೀಮೂರ್ತಿ (ಶ್ರೀರಾಮಪಾ. ೨೦೩-೩೦೦). [ಸಂ. ಮಂಜುಮನ್]

**ಮಂಜುಲ**, ಮಂಜುಳ (ಗು). ೧. ಮನೋಹರವಾದ : ಸೊಬಗಿನಿಂದ ಕೂಡಿದ ; ರಮಣೀಯವಾದ : ಮಂಜುಲವೇಣೀರಮಣೀಯ . . . ವಿಮಲಶ್ರೀಮಜ್ಜನಸ್ಥಾನೆ ಕಣ್ಗೊಳಿಕುಂ ವಾಹಿನಿ ಸೀತೆ ಪೋಲ್ತು ಭುವನಪ್ರಖ್ಯಾತೆಯುಂ ಸೀತೆಯುಂ (ಕೃಷ್ಣಕೃ. ೨-೮); ಕಂಜಬಾಂಧವನಸ್ತಮಿಸೆ ಪಡುವಣವೆಣ್ಣು ಮುಂ ಚೇತನಗುಂದಿ ತನ್ನ ಮಂಜುಲ ಬಾಯ ತಂಬುಲ ವುಗುಳ್ದಂತೆ ಸಂಜೆಗೆಂಪೆಸೆದಿರ್ದುದಾಗ (ವೋಹಶ. ೦೩-೪). ೨. ಇಂಪಾದ ; ಮಧುರವಾದ : ಸವಿಯಾದ. (ನಾ). ೩. ಚಿತ್ರವರ್ಣ; ಶಬಲವರ್ಣ. ೪. ನೀರಿನ ಬುಗ್ಗೆ ; ಊಟೆ. ೫. ಲತಾಗೃಹ ; ಬಳ್ಳಿಮಾಡ. ೬. ನೀರುಕೋಳಿ. **ಮಂಜುಳ** : ೧. 'ಮಂಜುಳವೆಳಗ' ಪರಾ. ೨. ಶುಕತತಿ . . . ಮಂಜುಳಾರಾವಂ ಪ್ರಕಟಿಸೆ ಮರ್ಬುಗೊಂಡು ಸುಟಿದಾಡುವ್ವಲ್ಲಿಯ ಕೆಯ್ದೊಲಂಗಳೊಳ್ (ಜಗಶ. ೨-೬) ; ಮತ್ತಾರ ಮಂಜುಳಮಧುರಕಂಠದ ವಿಪಂಚಿಕಾನಾದವುಂ ಸವಿಸವಿದು ಕಿವಿ ತಣಿಯುವ್ವೋ ಅವನ್ನಾಲಿಪನ್ನೆಗಮುಣಂ ಶಾಂತಿಯಿಲ್ಲೆನಗೆ (ಶ್ರೀರಾಮಪಾ. ೦೬೦-೨೬೩). ೭. ಮನೋಹರವಾದುದು : "ಪ್ರಾಗ್ರ್ಯಂ . . . ಮಂಜುಳಂ, ಹೃದ್ಯಂ, ಹಾರಿ, ಮನೋಹರಂ . . . ಪೇಶಲಂ—ಈ ೨೯ ಒಳ್ಳಿತು" (ಹಲಾಯು. ೦೦೪-೪) ; ದೃಗುಮನೋಮಂಜುಳದ ಕಂಜಾಳಿಗಳ ಕಡುಪರಿಮಳದ ಪಸರದ ಸೊಗಸು ತೀವಿತು (ಕುಮ್ಯಾ. ೨೩-೦೩); ಬಹುಮೃಗಮನೋಹರಂ, ಬಹುಪಕ್ಷಿ ಮಂಜುಳಂ (ಶ್ರೀರಾಮಪಾ. ೦೯೩-೪೩೪). [ಸಂ.]

**ಮಂಜುಲಾಸ್ಯ** (ನಾ). ೧. ಚೆಲುವಾದ ಮುಖ ; ಸುಂದರವದನ. ೨. ರಮಣೀಯವಾದ ನಾಟ್ಯ. ೧, ೨ : ಆ ತರುಣಿ . . . ನರ್ತಕಿಯಂತೆ ಮಂಜುಲಾಸ್ಯಮನೋಜ್ಞೆಯುಂ (ರಾಜಶೇ. ೬-೬೦ ವ).
[ಸಂ. ( ಮಂಜುಲ + ಆಸ್ಯ ; ಮಂಜು + ಲಾಸ್ಯ) ]

**ಮಂಜುವೆಟ್ಟು**, ಮಂಜುಬೆಟ್ಟು, ಮಂಜುವೆಟ್ಟು (ನಾ). ಮಂಜು ಮುಚ್ಚಿರುವ ಪರ್ವತ ; ಕೈಲಾಸ : ಈಗಳ್ ಸಿವನೆಂಬ ದುಟ್ಟಗೊರವಂ ಮಂಜುವೆಟ್ಟಮುಂ ಗೊಟ್ಟಂಪಾಡಿ ಕಿತ್ತಡಿಗಳಂ ಮರುಳ್ವಡೆಗಳಂ ಕೂಡಿಕೊಂಡು . . . ಮೆಯ್ಯಱಿಯದಿರ್ಪಂ (ಕಬ್ಬಿಗ. ೦೪೩) ; ನೀಱೆ ನಿನಗೆ ಸೋತು ವಿರಹದುರಿಯ ತಾಳಲಾಱದೆ ಮಂಜುವೆಟ್ಟವನು ಏಱಿದನಾ ನಳಕೂಬರನು (ಕುಂರಾ. ೨೪-೬೨). **ಮಂಜುಬೆಟ್ಟು** : ಮಂಜುಬೆಟ್ಟವನು ಮೀಟು, ಹಂಸ ದ್ವಾರವನು ದಾಟು ಓಡು (ಪೋಶಿಪು. ೦೩-೬೬). **ಮಂಜುವೆಟ್ಟು** : ತಾವರೆಯೊಂದು ತೋಱಬಾರದು ಪೊಸಸುಗ್ಗಿಯೆಂದುಸಿರಬಾರದು ತನ್ನಯ ಮಂಜುವೆಟ್ಟಿನೊಳ್ (ಕಬ್ಬಿಗ. ೦೪೬). [ಮಂಜು₁ + ಬೆಟ್ಟ]

**ಮಂಜುವೆಟ್ಟು** 'ಮಂಜುವೆಟ್ಟು' ನೋ.

**ಮಂಜುವೆಳಗ** (ನಾ). ತಂಪಾದ ಕಾಂತಿಯುಳ್ಳವನು ; ಚಂದ್ರ : "ಮಂಜುವೆಳಗನು ಬೆಳ್ಗದಿರನ್ನೈಕಿಲ್ವೆಳಗ ಚಂದಿರನು . . . ಕತ್ತಲೆವಣಿಯು ಶಶಿಯು ನಾಮಂ" (ಕಬ್ಬಿ. ೯೩). [ಮಂಜು$_1$ + ಬೆಳಗು$_2$ + –ಅ$_7$ ]

**ಮಂಜುಸಿಂಜಿತ** (ನಾ). ಇಂಪಾದ ಶಬ್ದ ; ಮಧುರವಾದ ನಾದ : ಲಂಜಿಕೆಯರ ಗುಂಜನ್ಮಣಿಮಂಜೀರಕ ಮಂಜುಸಿಂಜಿತಂ ರಂಜಿಸಿತೊ (ಅಕ್ಷ. ೫-೪೨). [ಸಂ.]

**ಮಂಜುಹುಲ್ಲು** (ನಾ). ಒಂದು ಬಗೆಯ ಹುಲ್ಲು : ಮಂಜುಹುಲ್ಲು, ತಪ್ಪರಿಕೆಹುಲ್ಲು (ವ್ಯಶಿಗ. ೦೪-೨೪೬). [ಮಂಜು$_3$ + ಹುಲ್ಲು ( < ಪುಲ್ )]

**ಮಂಜುಳ** 'ಮಂಜುಲ' ನೋ.

**ಮಂಜುಳತೆ** (ನಾ). ಸೊಗಸು ; ಸೊಬಗು : 'ಮಂಜುಳತೆವಡೆ' ಪರಾ. [ಸಂ. ಮಂಜುಲತಾ]

**ಮಂಜುಳತೆವಡೆ** (ಕ್ರಿ). ಸೊಗಸಾಗು ; ಮನೋಹರವಾಗು : ನಿಳಯ ನಿಳಯದೊಳು ಮಂಜುಳತೆವಡೆದು ದೀಪಾಳಿ . . . ಸಾಲ್ವಿಡಿದೊಪ್ಪುತ (ಸೌಂದರ. ೦೬-೦೬). [ಮಂಜುಳತೆ + ಪಡೆ$_1$]

**ಮಂಜುಳವೆಳಗ** (ನಾ). ಮನೋಹರವಾದ ಬೆಳಕುಳ್ಳವನು ; ಚಂದ್ರ : "ಮಂಜುಳವೆಳಗನೆನೆ ಶಶಿ" (ಕಜಿ. ೯೬).
[ಮಂಜುಳ ( = ಮಂಜುಲ) + ಬೆಳಗು$_2$ + –ಅ$_7$ ]

**ಮಂಜುಳಿ** (ನಾ). ವಿಧವಿಧವಾದ ಬಣ್ಣ ; ಚಿತ್ರವರ್ಣ : ಹಸುರು ನಸುಹುರುಮಂಜಿ ಮಂಜುಳಿ ಮಸುತ ಗೌರವ ಮತ್ಸ್ಯಮಾದವಿ ಮುಸುಲ ಮಲ್ಲಿಗೆ ಕದಡುಚುಕ್ಕಿಗ ಚಿತ್ರಹೇಮಲತೆ ಮಿಸುನಿಚಂಪಕ ನೀಲಪಂಕಜ ಶಶಕಮಂಜರಿ ಹಲವು ವಿಲಸಿತ ಕುಶಲವರ್ಣದ ರಾಜಮೃಗತತಿ ಕಣಾಲಾಜುಸ್ತು (ಅಂಬಿಕಾ. ೩೩-೩೭).
[ಸಂ. ಮಂಜುಲ. / ತೆಲು. ಮಂಜಿಡಿ]

**ಮಂಜೂತಿ** 'ಮಂಜಿಟೆ' ನೋ.

**ಮಂಜೂರ್** 'ಮಂಜೂರು' ನೋ.

**ಮಂಜೂರಾತಿ** (ನಾ). ಒಪ್ಪಿಗೆ ; ಅಂಗೀಕಾರ ; ಅನುಮೋದನೆ ; ಅನುಮತಿ : ರೆವಿನ್ಯೂಕಮಿಷನರ ಮಂಜೂರಾತಿಯಿಲ್ಲದೆ ಜಾಪತಿ ಮಾಡಲ್ಪಡಕೂಡದು (ಗ್ರಾಪೊಳ. ೭) ; ೫೦೦ ರೂಪಾಯಿಗೆ ಮೀರಿದ ಕಂಟೆಂಜನ್ಸಿಮೊಬಲಗನ್ನು ಮಂಜೂರಾತಿ ಮಾಡುವ ಹಕ್ಕು ನನ್ನ ಪ್ರಿನ್ಸಿಪಾಲಿಗೂ ಇಲ್ಲ (ಹಸುಹೊ. ೨೨೭). [< ಮಂಜೂರು]

**ಮಂಜೂರಿ** (ನಾ). = ಮಂಜೂರಾತಿ : ಇದಕ್ಕೆ ಸುಬ್ಬೂನ ಮಂಜೂರಿ ಇದೆ (ಛಂದುಕಾ. ೨೫೦). [← ಹಿಂ. ಮರಾ. ಮಂಜೂರೀ]

**ಮಂಜೂರು, ಮಂಜೂರ್** (ನಾ). = ಮಂಜೂರಾತಿ : ಅವುಗಳನ್ನು ಮಂಜೂರು ಅಥವಾ ತಿದ್ದುಪಡಿ ಮಾಡಿ ಅವರ ಡಿಕ್ರಿಗಳನ್ನು ನೋಡಿ ಅವುಗಳಿಗೆ ತಮ್ಮ ಮೊಹರು ಮಾಡುತ್ತಿದ್ದರು (ಮಹಾಸಂ. II. ೯೫). **ಮಂಜೂರ್:** ವೈಸರಾಯಿ ವ ಗವರ್ನರ್ಜನರಲ್ಯವರಿಂದ ಮಂಜೂರ್ ಮಾಡಲ್ಪಟ್ಟು (ಗ್ರಾಪೂಳ. ೪ ಟೀಕ).

**ಮಂಜೂರುಮಾಡು** = ಒಪ್ಪಿಗೆ ಕೊಡು ; ಅನುಮೋದಿಸು : ಕೃಷ್ಣರಾಜವಡೆಯರವರು ದಯಮಾಡಿ ಮಂಜೂರುಮಾಡಿರುವ ಕಳಶದ . . . ಪ್ರತಿಷ್ಠೆ ಮಾಡಿರುತ್ತಾರೆ (ವ್ಯಅಂ. ೦೯೩೪. ೨೩-೫ ; 1898) ; ಈ ರಾಜೀನಾಮೆಯನ್ನು ಮಂಜೂರುಮಾಡಬೇಕು (ರಂಗಕೊ. ೬೦).
[ ←ಅರ. ಹಿಂ. ಮರಾ. ಮಂಜೂರ್ ]

**ಮಂಜೂಷ** (ನಾ). ೧. ಪೆಟ್ಟಿಗೆ ; ಸಂದೂಕ : "ಪೇಟಾ, ಮಂಜೂಷಾ —ಈ ೨ ಪೆಟ್ಟಿಯುಂ" (ಶಬ್ದಮ. ೫೨-೦೫೭) ; ಅಮರೇಂದ್ರೋತ್ತುಂಗ ಮಾತಂಗದ ಬಿದುವಿನ ಮುಕ್ತಾಳಿಯಿಂದಾದ ಮಂಜೂಷವಿದು (ಜಗಜ. ೬-೨೯). ೨. ಊರು ; ಪಟ್ಟಣ. ೩. ಬಿದಿರಿನ ಬುಟ್ಟಿ ; ಮಂಕರಿ. ೪. ಶಿಲೆ ; ಕಲ್ಲು. [ ಸಂ. ಮಂಜೂಷಾ ]

**ಮಂಜೂಷಿಕೆ** (ನಾ). = ಮಂಜೂಷ ೧ : ಭೂಮಿಗೃಹಪ್ರವೇಶಮಂಜೂಷಿಕಾ[ಪಾಠಾಂ. ಮಂಜೂಷಿ] ಜಯಾ[ಪಾಠಾಂ. ಲಾ]ವಗಾಹಾದಿ ರಕ್ಷೋಪಾಯಂಗಳನೇಕಂಗಳಂ ಮಂತ್ರಿಗಣಂ ನುಡಿದು ತೋಟಿ (ಶಾಂತಿಪು. ೬-೨೫ ವ).
[ ಸಂ. ಮಂಜೂಷಿಕಾ ]

**ಮಂಜೂಷೆ** (ನಾ). ೧.=ಮಂಜೂಷ ೧: "ಪಿಟಕಃ, ಪೇಟಕಃ, ೨ ಪೆಟಾರಿಗೆ ಹೆಸರುಗಳು, ಪೇಟಾ, ಮಂಜೂಷಾ ೨ ಮಂದಾಸನದ ಹೆಸರು — ಈ ೪ ಪರ್ಯಾಯಪದಗಳೆಂದು ಕೆಲವರು, ಪೆಟ್ಟಿಗೆ, ಗೌಸಣಿಗೆ" (ಸಿದ್ದಾಂತಿ. ೩೦೫). ೨. ದೇವತಾವಿಗ್ರಹಗಳನ್ನಿಡುವ ಮರ ಅಥವಾ ಲೋಹದ ಮಂಟಪ ; ಮಂದಾಸನ : "ಪೇಟಾ, ಮಂಜೂಷಾ – ೨ ಮಂದಾಸನದ ಹೆಸರು" (ಸಿದ್ದಾಂತಿ. ೩೦೫). [ಸಂ. ಮಂಜೂಷಾ]

**ಮಂಟಕೆ** 'ಮೆಂಟಿಕೆ' ನೋ.

**ಮಂಟಗೆ** 'ಮೆಂಟಿಕೆ' ನೋ.

**ಮಂಟಪ, ಮಂಟಮೆ, ಮಂಟಯ, ಮಂಟೆಯ, ಮಂಠೆಯ, ಮಂಡಪ** (ನಾ). ೧. (ಹೆದ್ದಾರಿ, ನದೀತೀರ ಮೊದಲಾದ ಕಡೆಗಳಲ್ಲಿ ಜನರ ಉಪಯೋಗಕ್ಕಾಗಿ ನಿರ್ಮಿಸುತ್ತಿದ್ದ) ಸಮತಲವಾದ ಚಾವಣಿಯುಳ್ಳ, ಬಾಗಿಲಿಲ್ಲದ ಚಪ್ಪರದಾಕಾರದ ಕಲ್ಲಿನ ಕಟ್ಟಡ : ಮಂಟಪದಲ್ಲಿ ಕುಳಿತರೂ ಕಂಟಕ ಬಿಡಲಿಲ್ಲ (ಗಾದೆ). ೨. ದೇವಾಲಯಗಳಲ್ಲಿ ಉತ್ಸವಮೂರ್ತಿಯನ್ನು ಕೂರಿಸಿ ಮಾಡುವ ಸಮಾರಂಭಗಳಿಗಾಗಿ ಕಟ್ಟಿರುವ ಕಟ್ಟಡ : ಅಪ್ರತಿಮಂಗಳಪ್ಪ ರೂಪಾರದಿನಾರುಮಂ ಬಗೆಗೊಳಲ್ ಪರಿಶೋಭಿಪ ಮಂಟಪಂಗಳಿಂ . . . ಜಿನರಾಜಗೃಹಂಗಳೊಪ್ಪುಗುಂ (ಸುಕುಮಾ. ೯-೫೮). ೩. ಅರಮನೆ, ರಾಜಭವನ ಮುಂತಾದ ಕಡೆಗಳಲ್ಲಿ ದರ್ಬಾರು ಮೊದಲಾದ ಸಮಾರಂಭಗಳನ್ನು ನಡೆಸಲು ನಿರ್ಮಿಸುತ್ತಿದ್ದ ಸಭಾಸ್ಥಾನ ; ಓಲಗಶಾಲೆ : "ಜನಾಶ್ರಯಂ ಮಂಟಪಾಖ್ಯಂ" (ಮಂಗರಾ. ೫೭-೬) ; ನಗೆವಗರುಧೂಪಧೂಮದೊಳಮೆಸೆವಾಸ್ಥಾನಮಂಟಪದೊಳ್ ಸಮುಚಿತಾಮಾತ್ಯರಾಜಪುತ್ರಮಿತ್ರಸಮನ್ವಿತಂ ಬಂದು ಪುಗುವಲ್ಲಿ (ಕಾದಂಪೂ. ೬೯) ; ಅಚಲಸಿಂಹಾಸನವನಿಕ್ಕಿ ನಿಶ್ಚಲ ಮಂಟಪದ ಸಂಚದೋವರಿಯೊಳಗೆ ರುಚಿಗಳೆಲ್ಲವ ನಿಲ್ಲಿಸಿ (ಅದಸಂ. ೪೭-೦೯೭) ; ಸಿಂಗರಿಸಿದ ರ್ಝುಲ್ಲಿಪಟ್ಟೆ ಪೂಮಾಲೆ ಬೆಡಂಗಾದ ಮಂಟಪದಲ್ಲಿ ಶೃಂಗಾರವನದೊಳು ಮೆರೆವ ವಸಂತರಾಜಂಗೆಣೆಯಾದನಾ ಸೊಬಗ (ಭರತ. ೦-೨೮). 'ಅನುಭವಮಂಟಪ' ಪರಾ. ೪. ನ್ಯಾಯದ ಕಟ್ಟೆ, —ಚಾವಡಿ : ನಡೆಯಿ ಪೊನ್ನಾಂಬಲದ ಹಿರಿಯರಿಹ ಮಂಟಪಕೆ (ತಿರುಕ. ದೇ. ೦೪-೦). ೫. ಮದುವೆ, ಪೂಜೆ, ಯಾಗ, ಸಮ್ಮೇಳನ ಮೊದಲಾದ ಸಂದರ್ಭಗಳಲ್ಲಿ ಹೆಚ್ಚು ಜನರು ಕುಳಿತುಕೊಳ್ಳಲು ಅನುಕೂಲವಾಗುವಂತೆ ನಿರ್ಮಿಸುವ ಚಪ್ಪರ : ಮಂಗಳಲಕ್ಷ್ಮಿ ತೊಟ್ಟಲಂಕಾರನಿಕಾಯದಂತಿರೆ ಮನೋಹರಮಾಯ್ತು ವಿವಾಹಮಂಟಪಂ (ಜಗಜ. ೦೦-೯೭) ; ಮಾಡಿದಾಕ್ಷಣ ಮಂಟಪಂಗಳ ರೂಢಿಯಲಿ ಕೈಗಟ್ಟಿಕೊಂಡರು ನೀಡಿದರು ಮೇಳೈಸುವ (ಸಂಭಶ. ೨೪-೬೩). **ಮಂಟಮೆ :** ೧. 'ಅಟಮಂಟಮೆ' ಪರಾ. ೬. "ಮನೆಯ ಪಕ್ಕದಲ್ಲಿ ಕಟ್ಟಿರುವ ಸಣ್ಣಮನೆ" (ಅಪಂಕಾ). **ಮಂಟಯ :** ೫. ಅಂತು ಬಂದಾ ಪಾರ್ವರ ಮಂಟಯದೊಳ್ ಕುಳ್ಳಿರ್ದಾ ಸಮಯದೊಳ್ ಇಂದ್ರದತ್ತನೆಂಬ ವೃದ್ಧವೈಶ್ಯನೋರ್ವಂ . . . ಆ ಮಂಟಯಕ್ಕೆ ಬರ್ಪುದುಂ (ಧರ್ಮಾಮೃ. ೩-೯ ವ). **ಮಂಟೆಯ :** ೧. ಎಂಟುಕಾಲ ಮಂಟೆಯ ಟೆಂಟಿಣಿಸಿ ನಿಂದುವೈದು ಕಂಭ (ಪೋಳವಾ. ೨೫೪-೬೦೫) ; ಮಟ ಮಂಟೆಯ ದೇಗುಲ ನಿನಗೆಂದು ದಿಟದಿಂದೆನಗಿತ್ತೆಯೊ ನೀನಿಂದು (ಹಕಾಕಾ. ೦೨-೩೦ ರಗಳೆ) ; ತೀನಿ ಕೆರಳ್ದ ಡಂಗವನು ಬೂದಿಯ

ಮೇಲೆ **ಪೊರಳ್ಚಿಕೊಂಡುದಾ** ಶ್ವಾನನು ಮುಂಟೆಯುಕ್ಕಿ ನಡೆತಂದು ನರಳ್ವನ ಮೆಟ್ಟಲು (ಪಪ್ನ ಶಾ. ೩-೯೭). **ಮುಂಠೆಯು :** ೧. ಕೇತಾರಗುರುಗಳುಂ ಸಂದ ಹಾವಿನಹಾಳ ಕಲ್ಲಿದೇವಂಗಳುಂ ಬಂದೊಂದುದಿನವಿರುಳು ಪೊತ್ತು ಹೋಗದೆ ಕುಳ್ಳಿರ್ದ ಮುಂಠೆಯುಂ ಮುಂದಿಯೊಳಗೆ. . . ಮನವುಕ್ಕಿ ಸುಜನ ನೊರ್ವಂ ಪೊಗಳ್ದಪೆ (ಸಿದ್ಧರಾ. ೭-೨); ಮಹಾಪ್ರಾಣ್ಯಳಂ. . . ಚವುಬಾರದ ಮುಂಠೆಯದೊಳು ಕುಳ್ಳಿರ್ಪುದುಂ (ಪುಣ್ಯಾಸ್ರ. ೭-೭೪ ವ). ೭. ಜೂಜಿನ ಕಟ್ಟೆ; ಜೂಜಿನ ಚಾವಡಿ : ನಾಗರೀಕನಾನಾಜನದುಂದು ಪೆಂಪೆಸೆವ ಮುಂಠೆಯದೊಳ್ ನೆರೆದುತ್ಸವಂ ಮಿಗಲ್ ಜೂಜುಗಳಂ ಸಮಗ್ರ ಮನಲಾಪುತಿರಲ್ ಪದೆದಲ್ಲಿಗೆಯ್ದಿದಂ (ಜಕಚ. ೬-೮೭). **ಮುಂಡವ :** ೫. ದಿವಸಾಧಿಪ ಶ್ರೀರಂಗಧಾಮನ ರಥೋತ್ಸವವನು ನಿಟ್ಟಿಸಲೆಂದು ತವೆ ಹರುಷದೆ ಬಂದನೆಸೆ ಪೂರ್ವಗಿರಿಯ ಮುಂಡವದೆ ರಾಜಿಸಿದನೇವೇಳ್ವೆ (ಕಂಠೀ. ೨೩-೭೪). ೮. ಬಳ್ಳಿಯನ್ನು ಹಬ್ಬಿಸಲು ಮಾಡಿದ ಚಪ್ಪರ : ಕಾವಣ : ಬಳಸಿದ ಬಳ್ಳಿಮಲ್ಲಿಗೆಯ ಮುಂಡವದೊಳ್ ಸುಚಿದಾಡಿ (ಕಬ್ಬಿಗ. ೩೦೭). [< ಸಂ. ಮಂಡಪ. / ಪ್ರಾ. ಮಂಡವ]

**ಮುಂಟಬೆಕ್ಕು** 'ಮಂಟಬೆಕ್ಕು' ನೋ.

**ಮುಂಟಮೆ** 'ಮಂಟಪ' ನೋ.

**ಮುಂಟಯು** 'ಮಂಟಪ' ನೋ.

**ಮುಂಟವಲ್** (ನಾ). ಒಂದು ಹಲ್ಲಿಗೆ ಮತ್ತೊಂದು ಹಲ್ಲು ಒತ್ತಿ ವಿಕಾರವಾಗಿರುವ ಹಲ್ಲುಸಾಲು : ಕಿವಿಯುಂ ಮುಂಟಿಸಿ ಮುಂಟಪಲ್ಲ [ಶಾಶಾಂ. ಮುಂಡಿಸಿ ಮೂಟವಲ್ಲಿ, ಮೆಳ್ಳಿಸಿ ಮೂಟವಲ್ಲಿ. ಮೆಳ್ಳಿಸಿ ಮೂಪುವಲ್ಲಿ] ಜೀದು ಕಣ್ಣಂ ಬಿಟ್ಟು ವಕ್ರಾಂಗಿ . . . ತೋರ್ಪ ವಿಕಾರಂ ಸಭೆಗಾಗಳೇಂ ಪಡೆದುದೋ ವಕ್ರಪ್ರಕಾರೋದಿತಾರವಮಂ (ರಸರ. ೨-೯೮).
[< ಮುಂಟು + ಪಲ್]

**ಮುಂಟೆ** (ನಾ). ಮೃತ್ತಿಕೆ : ಉಂಟಾದ ಗುರುಪಾದತೀರ್ಥವನಿತ್ತು ತಾ ಮುಂಟೆ ಬೂದಿಯನು ಧರಿಸಿ (ಬಸವರಾ. ೨-೨೪). 'ಮಟ್ಟಿ$_1$', 'ಮಡ್ಡಿ$_1$' ಪರಾ. [ದೇ.॥ ತಮಿ. ಮಣ್ಣು: ತೆಲು. ಮುಂಟಿ]

**ಮುಂಟಿಕೆ** 'ಮೆಂಟಿಕೆ' ನೋ.

**ಮುಂಟಿಗೆ** 'ಮೆಂಟಿಕೆ' ನೋ.

**ಮುಂಟು** (ಕ್ರಿ). ೧. ದಟ್ಟವಾಗು ; ಸಾಂದ್ರವಾಗು : 'ಮುಂಟುವಲ್' ಪರಾ. ೨. ಬಾಗು ; ಬಗ್ಗು : ಸೊಂಟಮೊರಗುತ ಮುಖವು ಬಾಡಿ ಬತ್ತಿಹುದು ಮುಂಟೆ ಸಿರ ಸುಲಿದೊಂದು ಚರಣ ಮೇಲಕ್ಕೆ ಎದ್ದು ಭೂಮಿಯ ಮೇಲೆ ಬಿದ್ದಿರುವುದೊಂದು (ಶರಲೀ. ೩೯೯-೫). [ದೇ.॥ ತಮಿ. ಮುಣ್ಣು]

**ಮುಂಟೆ** 'ಮೊರಡ್ಡು' ನೋ.

**ಮುಂಟೆಯು** 'ಮಂಟಪ' ನೋ.

**ಮುಂಠ** (ನಾ). (ಬೇಯಿಸಿ ತಯಾರಿಸುವ) ಒಂದು ಬಗೆಯ ಸಿಹಿ ತಿಂಡಿ. [ಸಂ.]

**ಮುಂಠೆಯು** 'ಮಂಟಪ' ನೋ.

**ಮುಂಡ$_1$** 'ಮಡ್ಡಿ$_1$' ನೋ.

**ಮುಂಡ$_2$** (ನಾ). ಅಂಗಡಿಯಲ್ಲಿ ವರ್ತಕನು ಕುಳಿತುಕೊಳ್ಳುವ ಸ್ಥಳ ; ಹಣದ ಪೆಟ್ಟಿಗೆ ಇಡುವ ಸ್ಥಳ ; ಗಲ್ಲ: ಆಫೀಸರಿಗೂ ಬಿಟ್ಟುಕೊಡದ ತನ್ನ ಮುಂಡದ ಉನ್ನತಾಸನವನ್ನು ಸೆಟ್ಟಿಗೆ ಬಿಟ್ಟುಕೊಟ್ಟು ಹಲ್ಲುಕಿರಿದು ನಿಲ್ಲುತ್ತಿದ್ದರು (ಬ್ರಾಜಾ. ೦೦೭). [←ತುಳು. ಮುಂಡ]

**ಮುಂಡ$_3$** (ನಾ). ೧. ಹಾಲಿನ ಕೆನೆ. ೨. ಅನ್ನವನ್ನು ಬಸಿದ ಗಂಜಿ. ೩. ಯಾವುದೇ ದ್ರವಪದಾರ್ಥದ ಮೇಲುಭಾಗದಲ್ಲಿ ಕೆನೆಗಟ್ಟುವ ರಸಭಾಗ : "ಮಂಡಂ—ಸರ್ವರಸಾಗ್ರೇ=ತುಪ್ಪ, ಎಣ್ಣೆ ಮುಂತಾದ ಸರ್ವರಸಗಳ ತಿಳಿಗೂ, ಮೊಸರು, ಹಾಲು, ಮುಂತಾದುವುಗಳ ಕೆನೆಗೂ; ಎಲ್ಲಾ ವಸ್ತುಗಳ ಬಸಿದ ನೀರಿಗೂ ಪೆಸರುಗಳು" (ಸಿದ್ಧಾಂತಿ. ೨೬೯). ೪. ಮದ್ಯದಲ್ಲಿರುವ ಮಾದಕಾಂಶ ; ಮಾದಕಪಾನೀಯದಲ್ಲಿರುವ ಮತ್ತುಬರುವ ಅಂಶ,-ಪದಾರ್ಥ : ಮದ್ಯವನ್ನು ಸ್ವಲ್ಪ ಭಯದಿಂದ ಸ್ವಲ್ಪವೇ ಬಾಯಿಗೆ ತೆಗೆದುಕೊಂಡನು. ಅದರಲ್ಲಿ ಮಂಡ ಕಡಮೆ. ಆದರೆ ಅದೂ ರುಚಿಯಾಗಿ ಕುಡಿಯೋಣ ಎಂಬಂತೆ ಇದ್ದಿತು (ಕಥಾಕ. VIII, ೪೪). ೫. ಹುದುಗು ಬರುವಂತೆ ಮಾಡುವ ಪದಾರ್ಥ : "ಮಂಡ, ಕಿಣ್ವ, ಹುದುಗು" (yeast. ಇಂಕಾ). ೬. ಹರಳುಗಿಡ ; ಔಡಲ : "ಕಂಟಕಿ ಬೆಸಲ್ ಮಾ[ಶಾಶಾಂ. ಕಂ]ಡನೆಂಗು" (ಮಂಗರಾ. ೩೭-೧೯) ; ಮಂಡನ ಬೀಜ,ಸಾರಗದ ಕೊಂಬು, ಇಲಿಯ ಹಿಕ್ಕೆ, ಇಲ್ಲಣ ಸಹ ಮಕ್ಕಳ ಮೂತ್ರ ದಿಂದರೆದು ಗುಳಿಗೆಯುಂ ಮಾಡಿ...ತೊಡೆದು ಕಾಸಲು ಆ ಕ್ಷಣವೆ ಮೂತ್ರ ಬಿಡುವುದು (ಸಸ್ಪ. ೩೭೫). ೭. ತಲೆ ; ಶಿರಸ್ಸು. ೮. ಅಲಂಕಾರ ; ಆಭರಣ. ೯. ಕಪ್ಪೆ; ಮಂಡೂಕ. ೧೦. ಸಾರ : ತಿರುಳು. ೧೧. ಹಕ್ಕಿಯ ಪುಕ್ಕ. [ಸಂ.]

**ಮುಂಡಕ$_1$** (ನಾ). ಗೋಧಿಯ ಹಿಟ್ಟಿನಿಂದ ಮಾಡುವ ಒಂದು ಬಗೆಯ ಭಕ್ಷ್ಯ; ಮಂಡಿಗೆ : ಪಾಲ್ಗಡಲ ನೊರೆಯ ಪೊರೆಯ ತೆರೆಯನನುಕರಿಸಿಯುಂ ಮಲ್ಲದಶನದಂಶಮಾತ್ರ ಖಂಡನೀಯಕರಂಗಳೆನಿಸಿದ ಮಂಡಕಂಗಳುಮಂ . . . ಪರಿಜನಕ್ಕೆಲ್ಲಂ ಬಡ್ಡಿಸಿದಾಗಳ್ (ಸುಕುಮಾ. ೧೦-೨೪ ವ). [ಸಂ.]

**ಮುಂಡಕ$_2$** (ನಾ). ಅಧೀನತೆಯನ್ನೂ ವಿನಯವನ್ನೂ ತೋರಿಸಲು ತಲೆಯನ್ನು ನೆಲಕ್ಕೆ ಮುಟ್ಟಿಸುವುದು ; P ಗುರುಹಿರಿಯರ ಮತ್ತು ರಾಜರ ಹಾಗೂ ದೇವರ ಮುಂದೆ ಮಂಡಿಯೂರಿ ಕಿವಿಗಳನ್ನು ಹಿಡಿದುಕೊಂಡು ತಲೆಯನ್ನು ನೆಲಕ್ಕೆ ಮುಟ್ಟಿಸುವ ಸಂಪ್ರದಾಯ: ಕಿವಿಗಳನ್ನು ಹಿಡಿಕೊಂಡು ನಾಲ್ಕಾರು ಬಾರಿ ಮಂಡಕವನ್ನಾಚರಿಸಿ ಮಣಿದು ಮುಖವನ್ನು ಮಣ್ಣಲ್ಲಿ ಹೊರಳಿಸಿ (ಬರುಗಂ. ೩೯-೮). [ ? ]

**ಮುಂಡಕತ್ತಿ** 'ಮೊಂಡಗತ್ತಿ' ನೋ.

**ಮುಂಡಕುಸುಬಿ** (ನಾ). ಒಂದು ಬಗೆಯ ಸಸ್ಯ : "ಚಿಪ್ಪಲಿಪೆಂಡು, ಮಂಡಕುಸುಬಿ" (ಸಸ್ಯ ಪಿ. ೦೩೦). [? + ಕುಸುಬಿ$_1$ (<ಕುಸುಂಬೆ)]

**ಮುಂಡಕ್ಕಿ**, ಮೊಂಡಕ್ಕಿ (ನಾ). ಕುದಿಸಿದ ಬತ್ತವನ್ನು ಹುರಿದು ಮಾಡುವ ಅರಳು ; ಪುರಿ : ಬುರುಗು ; ಚುರುಮುರಿ (ಉಕ) : ಮಗಳ ಉಡಿಯಾಗ ಹುರುಗಡ್ಲಿ ಮಡಲಾಗ ಮಂಡಕ್ಕಿ (ರೋಕಗೀ. ೫೫); ಬದಿಯಲ್ಲಿಯೇ ಮುಂಡಕ್ಕಿ ಹುರಿಗಡಲೆಯ ರಾಶಿಗಳು ಇದ್ದುವು (ಕಪತು. ೩-೨೫). **ಮೊಂಡಕ್ಕಿ:** ಮೊಂಡಕ್ಕಿ (ಚುರಮುರಿ) ಮುಂತಾದ ಹುರಿದ ಧಾನ್ಯವು ಸ್ತಂಭಕ (ಅಶ್ವಾಂಗ. ೦೨೨ ವ-೩೭ ೮೧೯). [ಮುಂಡ$_?$ + ಅಕ್ಕಿ$_1$]

**ಮುಂಡಗನ ಗಡ್ಡೆ** (ನಾ). ಒಂದು ಬಗೆಯ ಸಸ್ಯ : ಕುರುಬನ ಗಡ್ಡೆ : (ಪ). [? + ಗಡ್ಡೆ]

**ಮುಂಡಗಳ್ಳಿ** 'ಮುಂಡಗಳ್ಳಿ' ನೋ.

**ಮುಂಡಗೆ**. ಮಂಡಿಗೆ (ನಾ). =ಮುಂಡಕ$_1$ : ಲಾವಣಿಗೆ ಘೃತಪೂರಂ ಬಿಡ್ಡಗೆ ಮುಂಡಗೆ ಮೊದಲಾಗೊಡೆಯ ಪದಿನೆಂಟುಂ ತೆಱದ ಭಕ್ಷ್ಯರೂಪಂಗಳುಮಂ . . . ಮಹಾದೇವಿ ಬಡ್ಡಿಸಿದೊಡೆ (ವಡ್ಡಾರಾ. ೭೬-೮೭); ಸೊಗಯಿಪ ಘೃತಪೂರಂ ಹೋಳಿಗೆ ಮುಂಡಗೆ ತಳಿಗು . . . ಪೂರಿಗೆ ಮೊದಲಾಗಿರ್ದ ಪಲವು ಭಕ್ಷ್ಯ ಮಾನಗಳ್ ಆಜ್ಯಯುತಮಪ್ಪುವಂ ಮೆಲ್ದು (ವರ್ಧಮಾನ. ೦-೮೪೭); ಮೊದಲ ಪೂರಿಗೆಗೆ ಸಮೆದುಂಡೆಯೊಂದನೆ ತೆಗೆದು ಬದಿರ ನೇತ್ರದ ತೆಱದಿ ನೇಣಗಲವಂ ಮಾಡಿ ಪದಪಿನಿಂ ಹಂಚಿನೊಳು ತುಪ್ಪವಂ ತಡಹಿ ಅಪಲು ಮುಂಡಗೆಯೆನಿಸಿ ಕೊಂಡುದು (ಸೂಪಶಾ. ೧-೨೪). **ಮುಂಡಿಗೆ :** ಹಾಲಲವುಗು ಹಾಲಲುಂಡೆ ಹಾಲ ಮುಂಡಿಗೆಗಳನಟ್ಟು . . . ಸುಕರಚಿತ್ರಸಚ್ಚರಿತ್ರೆ ವೈಜಕವ್ವೆ ಮಾಡಿ ನೋಡಿ (ಪ್ರಶರ. ಪ. ೨೭೭-೦) ; ಪಲ್ಲಿಗೆಯ ತಕ್ಸವಿಯ ಮುಂಡಿಗೆಯಲ್ಲಿ ನವಘೃತಸೂಪದಂಶಕದಲ್ಲಿ ನೋಡಲಿ ನಮ್ಮನೆಂದುದು ಧೂರ್ತಪಟುನಿಕರ

(ಕುವ್ಯಾ.ಕ. ೦೩-೬); ವಡೆ ಮಂಡಿಗೆ ಕಜ್ಜಾಯಗಳ ತಂಡತಂಡದೆ ರಾಸಿಗೈದು ನೈವೇದ್ಯವ ಚಂಡಿಕಾಂಬಿಕೆಗರ್ಪಿಸಿದರು (ಕಂಸಂ. ೨೨-೨೬).

**ಮಂಡಗೆಯುರುಳಿ** = ಮಂಡಗೆಯನ್ನು ಸುರುಳಿ ಮಾಡಿ ಕತ್ತರಿಸಿ ಬೇರೆ ಬೇರೆ ಹಣ್ಣುಗಳ ರಸಗಳಲ್ಲಿ ಹಾಕಿ ತಯಾರಿಸುವ ಒಂದು ಬಗೆಯ ಸಿಹಿಭಕ್ಷ್ಯ: ಪಲಸಿನ್ಮಾವು ದ್ರಾಕ್ಷೆ ಖರ್ಜೂರವಣ್ಣು ರಸಂಗಳಂ ಬೇಱ[3] ಬೇಱಿಕ್ಕಿಯಿವ ಸುರುಳಿ ಕುಯಿದಿಕ್ಕಲವು ತಾನದಱ ಹೆಸರ ಮುಂಡಗೆಯುರುಳಿ ಪೆಸರಾದುದು (ಸೂಶಾ. ೦-೩೯). **ಮಂಡಗೆಹೂರಿಗೆ**=ಮಂಡಗೆಯನ್ನು ಪುಡಿ ಮಾಡಿ ಅದರಿಂದ ತಯಾರಿಸುವ ಒಂದು ಬಗೆಯ ಹೂರಿಗೆ : ತುಪ್ಪ ಸಕ್ಕರೆ ಮಂಡಗೆಯು ಕಲಸಿಯೆಸೆವ ಹೂರಣವಿಕ್ಕಿ ಚೆನ್ನಾಗಿ ಪಾಕ ಮಾಡಿದುದು ಮಂಡಗೆಹೂರಿಗೆ (ಸೂಶಾ. ೦-೨೯).

[<ಸಂ. ಮಂಡಕ. /ತೆಲು. ಮಂಟಕ, ಮಂಡಗ, ಮಂಡಿಗೆ]

**ಮಂಡಗೆಱ[3]** (ನಾ). ಒಂದು ಊರಿನ ಹೆಸರು: ಮೂಡಣದೆಸೆಯು ವ[ರಾಹ] ಕೆಱ[3]ಯುಂ ಮೂಡಣ ಪಳ್ಳ ಅದಱ ತೆಙ್ಕಣ ದೆಸೆ [ಮಣ್ಣಗೆಱ[3]]ಗೊಟ್ಟಂ (ಎಕ. XI-i, ೯-೨೬; ೪೯೭). [ ? + ಕೆಱ[3] ]

**ಮಂಡಗೊಳಲೆ** (ನಾ). ಒಂದು ಬಗೆಯ ಹಕ್ಕಿ : ಬಕ ಮಂಡಗೊಳಲೆ ಹೆಬ್ಬಕ್ಕಿ . . . ನಾಗರಪಕ್ಷಿಮುಖ್ಯಂಗಳ್ ಸುಖಮಿಪ್ಪವಾ ವನದೊಳು (ಬಸೋತ. ೦೦-೩೦). 'ಮರಗೊಳಲೆ' ಪಠಾ. [ ? ]

**ಮಂಡಣ$_1$** (ನಾ). = ಮಂಡನ ೧ : 'ಮಂಡಣಂಗೊಳಿಸು' ಪಠಾ.

[< ಪ್ರಾ. ಮಂಡಣ. /ಸಂ. ಮಂಡನ ]

**ಮಂಡಣ$_2$** (ನಾ). ಸುತ್ತು ; ಸುರುಳಿ : 'ಮಂಡಣಿಸು' ಪಠಾ.

[< ಸಂ. ಮಂಡಲ]

**ಮಂಡಣಂಗೊಳಿಸು** (ಕ್ರಿ). (ಅಲಂ) ಕುಳಿತುಕೊಳ್ಳುವಂತೆ ಮಾಡು : ಕುಳ್ಳಿರಿಸು : ಭೂಸುರವಿತಾನಮುಮಂನೂ ಸಂತಸದಿ ಕರಸಿಯವರವರ ಯೋಗ್ಯಮನರಿತು ತಾಂ ತಮಗೆ ಮಂಡಣಂಗೊಳಿಸಿ (ಜಮಿಭಾ. ೦೪-೩೩).

[ಮಂಡಣ$_1$ + ಕೊಳ್$_1$ + — ಇಸು$_3$]

**ಮಂಡಣಿಸು** (ಕ್ರಿ). ಸುತ್ತು ; ಸುರುಳಿಮಾಡು : ರಣವೊ ದಾನವಕುಲ ವಿಹಿತಮಾರಣವೊ ಪರಿಯೊ ಮಾರಿಯೊ ಮಂಡಣಿಸಿ ಕಳುಹಿದ ಕೃತ್ಯಿಯೊ (ಬಿಕಾಗ. ೯-೦೬-೩೩). [ಮಂಡಣ$_2$ + — ಇಸು$_3$]

**ಮಂಡನ** (ನಾ). ೧. ಸಿಂಗರಿಸುವುದು; ಅಲಂಕರಿಸುವುದು : "ಆಕಲ್ಪಂ ಮಂಡನಂ . . . ಪ್ರಸಾಧನಂ—ಈ ೫ ಶೃಂಗಾರಂಗೆಯ್ವುದು" (ಕಾಹು. ೯೯-೩೯೩) ; ಇತ್ತ ದೇವಿಯರುಂ ಮಜ್ಜನಮಂಡನಕ್ಷ್ವೇಳನಾದಿವಿಧಿಗಳಂ ಮಾಡಿ ವಯೋನುರೂಪದಿಂ ಕುಮಾರಂಗನುಷ್ಪಸುತ್ತಿರ್ಪನ್ನೆಗಂ (ಜಾಪುಂಪು. ೩೪). ೨. ಆಭರಣ ; ಭೂಷಣ ; ಅಲಂಕಾರ : ಸೌಮ್ಯಸಂವತ್ಸರದೊಳ್ ಕರ್ಕಟಕರಾಶಿಯೊಳ್ ಸೌಮ್ಯಮುಮಂ ಗುರುವತ್ಸಳನುದಯಿಸಿದಂ ಸರಸ್ವತೀರತ್ನಮಂಡನಂ ಕವಿರತ್ನಂ (ಅಜಿಪು. ೦೨-೮೯); ಎಳೆಮಾವಿಂ ಬನಪಬ್ಬದಿಂ ತಳಿಗೊಳಂ ಮಾಣಿಕ್ಯದಿಂ ಮಣ್ಣನಾವಳಿ ತಾರಾಧಿಪದಿಂ ನಭಂ ಶುಭದಮಾಗಿರ್ಪ್ಪಂತಿರೆ (ಎಕ. II, ೩೪-೩೯; 1163). ೩. (ಶಾಸನ ಸಭೆ, ಚರ್ಚಾಕೂಟ ಮೊದಲಾದ ಕಡೆ ಆಗುವ ಗೊತ್ತುವಳಿಯ) ಪ್ರತಿಪಾದನೆ; ಸಮರ್ಥನೆ : ತದನಂತರ ಅವತರಿಸಿದ ಆಚಾರ್ಯದ್ವಯರೂ ಪ್ರಸ್ಥಾನತ್ರಯಕ್ಕೆ ಭಾಷ್ಯ ಬರೆದು ಪರಮತಖಂಡನೆ ಮತ್ತು ಸ್ವಮತಮಂಡನಕಾರ್ಯೋದ್ಯುಕ್ತರಾದರು (ಭಾರದ. ೦೦೯) ; ಹೊಸ ಸಿದ್ಧಾಂತದ ಮಂಡನ ಮತ್ತು ಆಕ್ಷೇಪಗಳ ಖಂಡನ (ರೃಣ್ಯಕೋ. xxii, ೬೮೪೪). [ಸಂ.]

**ಮಂಡನಾಯೋಗ** (ನಾ). (ಆನೆಯ ಮೇಲೆ) ಅಲಂಕಾರಕ್ಕಾಗಿ ಹೊದಿಸುವ ಜೂಲು,— ಸಬರ : ಮುತ್ತಿನ ಮಾಣಿಕದ ಮಂಡನಾಯೋಗಂಗಳೊಳ್ ನೆಱೆಯೆ ಪಣ್ಣಿದ ಮದಾಂಧಗಂಧಸಿಂಧೂರಂಗಳನೇಱ (ಶಾಂತಿಪು. ೩-೪೯ ವ) ; ರತ್ನಮಂಡನಾಯೋಗಪರಿಗೃಹೀತಸುರೇಂದ್ರಕರೀಂದ್ರಪೃಷ್ಠಗತನಪ್ಪಮರೇಂದ್ರನನೆ ಪೋಲ್ತುಂ ಸೌಜನ್ಯಕಂದಾಂಕುರನಿರ್ಪುದುಂ (ಶಾಂತಿಪು. ೩-೯೪ ವ). [ಸಂ.]

**ಮಂಡನೆ** (ನಾ). ಪ್ರತಿಪಾದನೆ; ಸಮರ್ಥನೆ : ಈ ಅವಧಿಯಲ್ಲಿ ಅಲ್ಲಲ್ಲಿ ಅಭಿಪ್ರಾಯಗಳ ಚಕಮಕಿಯೂ ಮಂಡನೆ — ಖಂಡನೆಗಳೂ ಆದುವು (ದ್ರಾಹಿ. ೦೬ ಹಿನ್ನೆಲೆ). [ಸಂ. ಮಂಡನ]

**ಮಂಡಪ** (ನಾ). ೧. = ಮಂಟಪ ೧. ೨. = ಮಂಟಪ ೨ : ಜಿನಮಂದಿರದ ಮುಂದಣ ಮಂಡಪದೊಳ್ ನಿಂದಿರ್ಪುದುಂ (ಶಾಂತಿಪು. ೯-೪೬ ವ) ; ಇವೇ ಶಿಲ್ಪದಲ್ಲಿ 'ವಿಮಾನ', 'ಪ್ರಾಸಾದ', 'ಮಂಡಪ' ಗಳ ಮಾದರಿಗಳಾಗಿ ಭಾರತೀಯ ದೇವಾಲಯಶಿಲ್ಪಕ್ಕೆ ಮೂಲವಾದುವು (ಕರ್ಣಾಸ. ೧೨೦). ೩. = ಮಂಟಪ ೩ : "ಜನಾಶ್ರಯಃ ಮಂಡಪಃ— ಈ ೨ ಸಭಾಮಂಟಪಂ" (ಕಹು. ೩೦-೧೯೩); ಆರೋಗಿಸುವ ಮನೆ ಮಂಡಪಂ ಗುಣನೆಸಾಲೆಯೆಂಬಿನಿತುಮಂ ಗೃಹಾಂಗಂ ಕುದುಗುಂ (ಶಾಂತಿಪು. ೬-೦೦೬); ಮಂಡಪದುಪರಿಮತಲದೊಳ್ಕಂಡರಿಸಿದ ಚಿತ್ರಮಂಡಲಂ . . . ಸೊಗಯಿಸುಗುಂ (ಕಾದಂಪೂ. ೦೦೧೩). ೪. = ಮಂಟಪ ೫ : ಪಳುಕೆನೆಸೆವಾ ಕಳಸಮಂಡಪದೊಳಗೆ ಚಂದಳರಿಂದ ಕರಮಂಗಳವೆಯುಕ್ತೆಯಿಂದ ಮಾದಲವಣ್ಣಳಂ . . . ಕಾಂಚನವಿಲಸಿತದ ಮಾಲೆಗಳನೆಸೆವುದನೀಕ್ಷಿಸಿದ ನರಸ (ಸಾಳ್ವಭಾ. ೪-೩೪); ಮುಂದೆ ಮಗುವಿಗೆ ಎಂಟು ವರ್ಷಗಳು ಕಳೆದ ಮೇಲೆ ಕ್ರಮವಾಗಿ ಕುಂಡ, ಮಂಡಪ, ಪಂಚಕಲಶಗಳನ್ನು ಸ್ಥಾಪಿಸಿ . . . ಸಂಸ್ಕೃತವಾದ ಅಂಗದಲ್ಲಿ ಶಿವಕಲಾಸಮಾವಿಷ್ಟವಾದ ಲಿಂಗವನ್ನು ಮಂತ್ರೋಪದೇಶಪೂರ್ವಕವಾಗಿ ನೆಲೆಗೊಳಿಸುವನು (ಭಾರದ. ೨೪೯). [ಸಂ.]

**ಮಂಡಯ್ಸು** 'ಮಂಡಿಸು$_2$' ನೋ.

**ಮಂಡರಗಪ್ಪೆ** (ನಾ). ಒಂದು ಬಗೆಯ ದೊಡ್ಡ ಚೇಳು : ಎಮ್ಮೆಚೇಳು : ಮಂಡರಗಪ್ಪೆಯೊಂದು ಕಳಕ್ಕೆ ಬಿದ್ದು ಕೊಂಡಿಯನ್ನು ಮೇಲಕ್ಕೆತ್ತಿ ನೆಲದ ಮೇಲೆ ಚಲಿಸಿತು (ಹಸಹೂ. ೧೩೩). [ದೇ.॥ ತೆಲು. ಮಂಡ್ರಗಪ್ಪ]

**ಮಂಡರಳು, ಮೊಂಡರಳು** (ನಾ). ಅವಲಕ್ಕಿ : ಈ ಮನೆತನದ ಹುಡುಗ ಕಾಲಾಯಿ ಕಟ್ಟಿಕೊಂಡು ಬೆಲ್ಲ ಮಂಡರಳು ತಿನ್ನುವದೆಂದರೇನು ? (ಚಕ್ರ. ೩೬೩). **ಮೊಂಡರಳು** : ಮೊಂಡರಳು ಬೆಲ್ಲದಿಂದಲೇ ಅಪ್ಪನ ಉಪಹಾರ ಮುಗಿಯುವಂತೆ ಏರ್ಪಡಿಸಿದಳು (ಚಕ್ರ. ೩೬೩).

[ ಮಂಡ$_?$ + ಅರಳು$_3$ (< ಅರಲ್$_3$) ]

**ಮಂಡರಿಸಿನ** (ನಾ). ಉತ್ತಮವಾದ ಅರಿಸಿನ : ಒಳ್ಳೆಯ ಅರಿಸಿನ (ಮಂಡರಿಸಿನ) ಮತ್ತು ಚಿಕ್ಕಣಅಡಿಕೆಗಳ ಸಮಚೂರ್ಣವನ್ನು ಜೇನುತುಪ್ಪದೊಡನೆ ಗದ್ಯಾಣ ೧ ತೂಕ ಕೊಡಲು ವಾಂತಿಭ್ರಾಂತಿ ಗುಣವಾಗುವುದು (ಸಕಪ್ರ. ಪು ೪೯೦). [ ಮಂಡ$_1$ (< ಮಡ್ಡಿ$_1$) + ಅರಿಸಿನ ]

**ಮಂಡಲ, ಮಂಡಳ** (ನಾ). ೧. ವರ್ತುಲಾಕಾರವಾಗಿರುವ ಸೂರ್ಯ ಅಥವಾ ಚಂದ್ರಬಿಂಬ: "ಮಂಡಲಂ, ಬಿಂಬಂ—ಈ ಎರಡು ಚಂದ್ರಮಂಡಲದ ಪೆಸರ್" (ಕಹು. ೬-೪೪); ಬೆಟ್ಟ ತಲೆಯಲಿ ಕಂಡು ಹೊಳೆವ ಚಂದ್ರನನು ದಿಟ್ಟಿಸಿ . . . ತಟ್ಟನೆ ನುಡಿದೆ "ಅಲ್ಲಿ ನಾ ಹೋಗಲೇನು ? ಬಟ್ಟಲಾಕೃತಿಹ ಮಂಡಲದಲಿರುವುದೇನು ?" (ಕಂಪು. ೦೦-೪). ೨. ಸೂರ್ಯ ಅಥವಾ ಚಂದ್ರನ ಸುತ್ತಲೂ ದುಂಡಾಗಿರುವ ಪ್ರಭಾವಲಯ, — ವರ್ತುಲರೇಖೆ ; ಪರಿವೇಷ : "ಪರಿಧಿಃ, ಪರಿವೇಷಃ(ಸ್ಯಾತ್), ಮಂಡಲಂ, ಉಪಸೂರ್ಯಕಂ — ಈ ೪ ಪರಿವೇಷದ ಪೆಸರ್" (ಕಹು. ೬-೪೦). ೩. (ಚೆಂಡು, ಚಕ್ರ ಮೊದಲಾದುವುಗಳಂತೆ) ಯಾವುದೇ ದುಂಡಾಗಿರುವ ವಸ್ತು, ಆಕೃತಿ ಇತ್ಯಾದಿ : "ಚಕ್ರವಾಳ, ಮಂಡಲ ಶಬ್ದಗಳು ೨ ಮಂಡಲಾಕಾರವಾದ ಪದಾರ್ಥದ ಹೆಸರುಗಳು" (ಗುರುಶಾ ೩೩). ೪. ಸುತ್ತು ; ಇರಿಕೆ ; ಸುರುಳಿ : 'ಮಂಡಲಂಗೊಳ್ಳು' ಪಠಾ.

೫. ವೃತ್ತ; ಬಟ್ಟು : "ಬಟ್ಟೆಂದು ಮಂಡಲಂ" (ಶಶಾ. ೪೩-೨೪); "ಬಟ್ಟೆಂದು ಮಂಡಲಾಖ್ಯಂ" (ಕಬ್ಬಿಷ. ೧೭). ೬. ವರ್ತುಲಾಕಾರವಾಗಿ ನಿಲ್ಲಿಸುವ ಒಂದು ಬಗೆಯ ಸೇನಾವ್ಯೂಹ. ೭. ನಾಯಿ : ಶುನಕ. ೮. ಒಂದು ಬಗೆಯ ಹಾವು : ಮಂಡಲ ಕಚ್ಚಿದೊಡೌಷಧಗೊಂಡಾಕ್ಷಣಮುಟ್ಟಿಗುಮಲ್ಲದಾತವನಟ್ಟಿಗುಂ (ಶೀತಾ. ೭೨೭); ದರ್ವೀಕರ ಮಂಡಲ ರಾಜಿಗಳೆಂಬ . . . ವಿಷಗಳಲ್ಲಿ ಸಳಿಯ ಸಟ್ಟುಗದ ಬೇರ ನೀರಲ್ಲಿ ಅರೆದು ಕುಡಿಯಲು ವಿಷ ಹರ (ವಿಷತ. ೧೦-೪). ೯. (ಸಾಧಾರಣವಾಗಿ ಮಾಂತ್ರಿಕನಿಂದ ಬರೆಯಲಾದ ಗೂಢಮಂತ್ರಪೂರಿತವಾದ, ವೃತ್ತಾಕಾರವಾದ) ರೇಖಾವಿನ್ಯಾಸ : ಪತಿಲಿಖಿತಮಂಡಲಸ್ಥಿತೆ ಕೃತಾಷ್ಟದಿಗ್ದೇವತಾರ್ಚನಪ್ರಕರೆ ದೃಢವ್ರತೆ . . . ಚತುಷ್ಪಥಸ್ನಾನವಿಧಿಯನಿರುಳೊಳ್ ತಳೆದಳ್ (ಕಾದಂಪೂ. ೩೭೭). ೧೦. ಗುಂಪು; ಸಮೂಹ : ಅಗಳವರ ಮುಸಕಮಂ ಕಂಡು ಭಯಂಗೊಂಡು ಖಚರಮಂಡಲಂ ಪ್ರಭಾಮಂಡಲಂಗೆ ಕನ್ನೆ ಕೈಸಾರ್ದಳೆಂದು ಪೆಜಸಾರ್ದು ನೋಡುತಿರ್ದುದುಂ (ಶಂರಾಮಾ. ೩-೭೩ ವ). 'ಮಂಡಲಿಸು' ಪರಾ. ೧೧. ನಾಡು; ರಾಷ್ಟ್ರ; ದೇಶ : ತಜಿಸಂದು ಲಾಳರೊಳ್ ತ[ಳ್ತ]ಜಿದೇಜಿ ಪೇಟ್ ಕೇಳ್ದು ಮಂಡಲಮಿನ್ನುಂ ತಿಱುನೀರಿಕ್ಕುವುದೆನಿಸಿದ ತಜಿಸಲವಿನ ಬಲದ ಬಲದ ಕಲಿ ನರಸಿಂಹಂ (ಶಂಕಶಾ. ೦-೩೩); ಪುರುಷೋತ್ತಮಂ ಕ್ಷಣೆಕರಿವರ್ಯ್ಯರಂ ಕೂಡಿಕೊಂಡು ಬಂದನೀ ಮಂಡಲದೊಳಿರವಿಲ್ಲ ತನಗಿನ್ನು (ಕೈವಿಜಾ. ೩೨-೨೭); ಕೊಂಡೆಯುವ ಕೇಳುವರಸಿನ ಮಂಡಲ ಹಾಟಿಕ್ಕು (ಶೀತಾ. ೭೨೪). ೧೨. ಒಂದು ದೇಶದ ವಿಭಾಗ : ಜಿಲ್ಲೆ; ಪ್ರಾಂತ್ಯ : ಭೌಗೋಳಿಕ ಯಾ ರಾಜಕೀಯ ವಿಭಾಗಗಳು :– ಊರು, ಪುರ . . . ಮಂಡಲ, ಕುದುರು (ತುಳುಜಾ. ೨೭೦); ರಾಜ್ಯವನ್ನು ಹಲವು ಮಂಡಲಗಳಾಗಿ ವಿಭಾಗಿಸಿ, ಅವುಗಳ ಆಡಳಿತಕ್ಕಾಗಿ ಮಂಡಲೇಶ್ವರನನ್ನು ನೇಮಿಸಿದ್ದನು (ಕಶತ. ೭-೩೦). ೧೩. ಬಿಲ್ಲುಗಾರನ ಒಂದು ಭಂಗಿ; P ಬಾಣಪ್ರಯೋಗಕಾಲದಲ್ಲಿ ಮೂರಡಿಯ ಅಗಲದಲ್ಲಿ ಕಾಲುಗಳನ್ನು ಇಟ್ಟುಕೊಳ್ಳುವುದು. ೧೪. ಮಲ್ಲಯುದ್ಧ, ಗದಾಯುದ್ಧ ಮೊದಲಾದ ದ್ವಂದ್ವಯುದ್ಧಗಳ ಒಂದು ಗತಿ : ಭೀಮನು ಅದನ್ನು ಅರ್ಥಮಾಡಿಕೊಂಡು, ಮಂಡಲಗಳು ಯಮಕಗಳು ಗೋಮೂತ್ರಿಕ ಮೊದಲಾದ ಚಿತ್ರವಿಚಿತ್ರವಾದ ಗತಿಗಳಲ್ಲಿ ಓಡಾಡುತ್ತ ಎದುರಾಳಿಯನ್ನು ಬುದ್ಧಿಭ್ರಮೆಗೊಳಿಸುವುದಕ್ಕೆ ಪ್ರಯತ್ನಪಟ್ಟನು (ವಕಥಾ. ೩೦೭). ೧೫. ವ್ರತಾಚರಣೆ, ಔಷಧಸೇವನೆ ಮೊದಲಾದ ಸಂದರ್ಭಗಳಲ್ಲಿ ಅನುಸರಿಸುವ ಕಾಲದ ಒಂದು ಗಡು; ನಲವತ್ತೆಂಟುದಿನಗಳ ಅವಧಿ : ಈ ರಸಮಂ ಒಂದು ಮಂಡಲ ಕೊಂಬುದು (ವಿವೈಕಿ. ೩೩); ಆದಿವಾರದ ದಿವಸ ನೆಲತಂಗನ್ನು ತಂದು . . . ಚೂರ್ಣಂಗೈದು ಜೇನುತುಪ್ಪದಲ್ಲಿ ಲೇಹ್ಯದ ಹಾಗೆ ಕಲಸಿ ಕಾಲುಮಂಡಲ ತೆಗೆದುಕೊಳ್ಳಲು ಸಕಲಜ್ವರ ಹರವು (ಸಕವೈ. ೦೦೩); ಒಂದು ಮಂಡಲಕಾಲ ಚಂಡೀಯಾಗವು ನಿರ್ವಿಘ್ನವಾಗಿ ನೆರವೇರಿತು (ಶ್ರೀರಾಮ. ೩೬೦). ೧೬. ಋಗ್ವೇದದ ಒಂದು ಭಾಗ; ಸಂಹಿತಾಭಾಗ : ಸಂಹಿತೆಗಳಲ್ಲಿ ಮೊದಲನೆಯದು ಋಕ್ಸಂಹಿತೆ. ಅದರಲ್ಲಿ ೧೦೨೮ ಸ್ತೋತ್ರಗಳುಂಟು. ಅವುಗಳನ್ನು ೧೦ ಮಂಡಲಗಳಾಗಿಯೂ . . . ಅಧ್ಯಯನ ಮಾಡುತ್ತಾರೆ (ವಾಇಶ್ರ. ೨೪); ಈ ಅಗಾಧವಾದ ಸಂಹಿತೆಯ ಸೂಕ್ತಗಳನ್ನು ಹತ್ತುಮಂಡಲಗಳಾಗಿ ವಿಭಾಗ ಮಾಡಿದ್ದಾರೆ (ಕಾಲಕ. ೨೦). ೧೭. ಅಥರ್ವಣವೇದದ ಒಂದು ಭಾಗ : ಇತಿಹಾಸ ಮತ್ತು ಪುರಾಣಗಳ ಸಾಹಿತ್ಯ ಅಥರ್ವವೇದದ ಹದಿನೈದನೆಯ ಮಂಡಲ ಮತ್ತು ಛಾಂದೋಗ್ಯೋಪನಿಷತ್ತಿನ ಏಳನೆಯ ಅಧ್ಯಾಯಗಳಲ್ಲಿ ಕಂಡುಬರುತ್ತದೆ (ವಾಲಕ. ೦೩೬). ೧೮. ದುಂಡಾದ ಮಚ್ಚೆಗಳುಂಟಾಗುವ ಒಂದು ಬಗೆಯ ಕುಷ್ಠರೋಗ. ೧೯. [ರಾಜನೀ] ಹನ್ನೆರಡು ಬಗೆಯ ರಾಜರ ಕೂಟ,— ಗುಂಪು; P ದಿಗ್ವಿಜಯಕ್ಕೆ ಹೊರಡುವ ರಾಜನು ಇವರನ್ನು ಮುಖ್ಯವಾಗಿ ಪರಿಗಣಿಸಬೇಕು. ೧. ಶತ್ರು. ೨. ಮಿತ್ರ. ೩. ಶತ್ರುವಿನ ಮಿತ್ರ. ೪. ಮಿತ್ರನ ಮಿತ್ರ. ೫. ಶತ್ರುವಿನ ಮಿತ್ರನ ಮಿತ್ರ. ೬. ವಿಜಿಗೀಷು. ೭. ಪಾರ್ಷ್ಣಿಗ್ರಾಹ. ೮. ಆಕ್ರಂದ. ೯. ಪಾರ್ಷ್ಣಿಗ್ರಾಹಾಸಾರ. ೧೦. ಆಕ್ರಂದಾಸಾರ. ೧೧. ಭೂಮ್ಯನಂತರ. ೧೨. ಉದಾಸೀನ. ೨೦. [ನಾಟ್ಯ] ಒಂದು ಬಗೆಯ ಪಾದಚಲನೆ : ಮೂರುಕರಣಗಳ ಜೋಡಣೆಗೆ 'ಖಂಡ' ವೆಂದು ಹೆಸರು. ಮೂರು ಅಥವಾ ನಾಲ್ಕುಖಂಡಗಳನ್ನು ಜೋಡಿಸಿದರೆ ಒಂದು ಮಂಡಲವಾಗುತ್ತದೆ (ಅಶಾಸ್ತ್ರ. ೩೦); ಆ ನರ್ತಕಿಯರಿಗೆ ನಾಟ್ಯಭೇದಗಳಾದ . . . ಮಂಡಲ, ಕರಕ್ಷೇತ್ರ ಎಂಬುವೆಲ್ಲ ಚೆನ್ನಾಗಿ ಗೊತ್ತಿದ್ದುವು (ಕರ್ಣಾಟ. ೦೭೬). ೨೧. ವೈಷ್ಣವ, ಸಮಪಾದ, ವೈಶಾಖ, ಮಂಡಲ, ಪ್ರತ್ಯಾಲೀಢ ಮತ್ತು ಆಲೀಢವೆಂಬ ಆರುಬಗೆಯ ಪುರುಷಸ್ಥಾನಕಗಳಲ್ಲಿ ಒಂದು; P "ಇದಕ್ಕೆ ದೇವೇಂದ್ರನು ಅಧಿದೇವತೆ. ಗಜವಾಹನ, ಧನುಸ್ಸು ಮತ್ತು ವಜ್ರಾಯುಧ ಇವುಗಳ ಪ್ರಯೋಗ, ಗರುಡ ಮೊದಲಾದ ಪಕ್ಷಿಗಳ ನೋಟ ಇವುಗಳನ್ನು ತೋರಿಸುವಾಗ ಇದನ್ನು ವಿನಿಯೋಗಿಸಬೇಕು" (ಲಾಸ್ಯರಂ. ೩೨೭ ಗದ್ಯಾನುವಾದ) : ಎರಡುಂ ಪಾದಂ ತ್ರ್ಯಸ್ರದಿನಿರೆ ನಡು ಗೇಣೆಡೆಯನುಳಿದು ಕಟಿ ಮೊಳಕಾಲ್ಗಳ್ ಸರಿಯಾಗುತೆರಡುಗೇಣರೆ ಧರೆಯಂ ಬಿಟ್ಟೊಡನೆ ನಿಲ್ಲೆ ಮಂಡಲಮೆನಿಸಂ (ಲಾಸ್ಯರಂ. ೭-೨೦). 'ಮಂಡಲಾಗ್ರ' ಹೋ. ೨೨. [ಕಾಮಶಾ] ಒಂದು ಬಗೆಯ ನಖಕ್ಷತ : P ಮೇಲೆ ಅರ್ಧಚಂದ್ರ ಮತ್ತು ಕೆಳಗೆ ಅರ್ಧಚಂದ್ರನಂತೆ ಕಾಣುವ ಪರಸ್ಪರ ಅಭಿಮುಖವಾಗುವ ಉಗುರಿನ ಗುರುತು : ಪಂಚನಖಯೋಗ ದ್ವಂದ್ವಯೋಗ ಅರ್ಧಚಂದ್ರಕ ಮಂಡಲ ಮಯೂರಪಥ ಶಶಪ್ಲುತ ಉತ್ಪಲದೆಂಬ ಸಪ್ತವಿಧ ವಿರೋಪಹತಿ ವಿಹಿತರಿಂ (ವಿವೇಕ. ೦೩೪). ೨೩. [ಜೈನ] ಪಾರಿವ್ರಜ್ಯಲಕ್ಷಣಗಳನ್ನು ತಿಳಿಸುವ ಇಪ್ಪತ್ತೇಳು ಸೂತ್ರಪದಗಳಲ್ಲಿ ಒಂದು : ಮಂಡಲಮೆಂಬುದು ಪರಮತೇಜೋಮಂಡಲಮಂಡಿತನಪ್ಪ ಜಿನಪತಿಗೆಱಗಿ ಮಣಿದೀಪ ಸ್ನೇಹದೀಪಮೆಂಬೆರಡುಮಂ ಪತ್ತುವಿಟ್ಟು ತಪದೊಳೆಸಗಿದೊಡೆ ದಿವ್ಯಾದಿ ತೇಜೋಪಳಯೋಜ್ವಳನಕ್ಕುಂ (ಶಾಪುಂಪು. ೨೨೪). ೨೪. [ಯೋಗ] ಮೂಲಾಧಾರದಿಂದ ಹಿಡಿದು ಶಿರಸ್ಸಿನವರೆಗೆ ಇರುವ ಆರು ಸ್ಥಳಗಳು : ಮೂಲಾಧಾರ ಮೊದಲು ಮೇಲೆ ಹೇಳಿದ ಆರು ಪದ್ಮಗಳಲ್ಲೂ ಮಧ್ಯಪ್ರದೇಶಗಳಲ್ಲಿ ೬ ಮಂಡಲಗಳು ಇರುವುವು. ತ್ರಿಕೋಣಮಂಡಲ, ಷಟ್ಕೋಣಮಂಡಲ, ದ್ವಾದಶಕೋಣ, ವರ್ತುಳಮಂಡಲ, ತ್ರಿಕೋಣ, ವರ್ತುಳವೆಂಬ ಆರು ಮಂಡಲಗಳು ಇರುವುವು (ಹಠಾರ. ೯-೪ ತಾತ್ಪರ್ಯ). ಮಂಡಳ : ೧೦. "ನಿಕರಃ, ನಿಕಾಯಃ . . . ಮಂಡಳಂ, ಜಾಳಂ . . . ಸ್ತೋಮಃ — ಈ ೩೯ ಸಮೂಹಂ" (ಹಲಾಯು. ೦೦೩-೨); ಎರೆಗೊಳ್ವುದಖಿಳವಿದ್ವದ್ವಿದ್ರತಾಜಿಶಿತಮಂ ದ್ವಿಷದ್ರಾಜಮನೋಹರಮಣ್ಡಳಮುಮನುಮನೀವರನಾಗತಿಯರಸನತುಳಬಳ ಭುಜ ಭುಜಂಗಂ (ಎಕ. XI, ದಾವಣ. ೩೨-೩೭; 1171). ೧೨. ಡೆಕ್ಕನ್ನಿನ ಕೆಲವು ಪ್ರಾಂತ್ಯಗಳಲ್ಲಿ 'ರಾಷ್ಟ್ರ'ವು ಒಳಗೊಂಡ ಭಾಗವನ್ನು 'ಮಂಡಳ' ಎಂದು ಕರೆಯುತ್ತಿದ್ದರು (ದಶಾಇ. ೦೦೭). ೨೦. ಮಂಡಳಮುಂ ನೆರೆದಳ್ಳಿಮಂಡಳಮಮೃತಾಂಶುಮಂಡಳಕ್ಕೆಣೆವರೆ ಭೂಮಂಡಳದಿಂ ನೆಗೆದು ನಭೋಮಂಡಳದೊಳ್ಳೆಂದು ನೀಱ್ ಮೇಣ್ದಸಿಧಮಂ (ಅಶಾಕೇ. ೦೨-೪೪).

ಮಂಡಲದ ಹಾವು = ಮೈಮೇಲೆ ದುಂಡಾದ ಮಚ್ಚೆಗಳಿರುವ ಒಂದು ಜಾತಿಯ ಹಾವು : "ಚಿತ್ರ(ಕಃ)ತಃ—ಚಿತ್ರಮೂಲ, ಮಂಡಲದ ಹಾವು" (೬ಕಧಿ. ೩೭); ಮಂಡಲದ ಹಾವಿನ ಪ್ರಧಾನಆಹಾರ ಇಲಿ, ಓತಿ, ಹಲ್ಲಿ, ಏಡಿ, ಕೆಲವು ತೆರನ ಕೀಟಗಳು (ಕಂಕೊ. XII, ೯೬೩). ಮಂಡಲ ಹಾಕಿ

**ಕೊಳ್ಳು** = ಸುರುಳಿ ಸುತ್ತಿಕೊಳ್ಳು : ಜನರ ಗಲಾಟೆಗೆ ಹೆದರಿದ ಹಾವು ಮಂಡಲಹಾಕಿಕೊಂಡು ಹೆಡೆಯನ್ನು ಮುಚ್ಚಿಕೊಂಡಿತು (ಲೂ). **ಮಂಡಲ ಹಾಕಿಸು** = (ವಿಶೇಷವಾಗಿ ನಾಗದೇವತೆಯ ಪ್ರೀತ್ಯರ್ಥವಾಗಿ) ನಲವತ್ತೆಂಟುದಿನಗಳ ಸೇವೆಯನ್ನು ಮಾಡಿಸು : "ಪೂಜಾರಿಯ ಬಳಿ ಹೋಗಿ ಹಣ್ಣು ಹಂಪಲು ಹಣ ಕೊಟ್ಟು ಮಂಡಲ ಹಾಕಿಸಬೇಕು". "ಮಂಡಲ ಅಂದರೆ ?" "ಬಣ್ಣಬಣ್ಣಗಳಲ್ಲಿ ಹಾವಿನ ಆಕೃತಿಯನ್ನು ರಂಗೋಲೆಯಲ್ಲಿ ಎಳೆದು ಪೂಜೆ ಮಾಡಬೇಕು" (ತಸುತೂ. ೬೯). **ಮಂಡಲ ಹಾಕು** = ಮಾಟ, ಮಂತ್ರ, ತಂತ್ರ ಮುಂತಾದ ತಾಂತ್ರಿಕವಿಧಿಗಳನ್ನು ಆಚರಿಸುವ ಸಂದರ್ಭಗಳಲ್ಲಿ ಚಕ್ರಾಕಾರವಾದ ಆಕೃತಿಯನ್ನು ಬರೆ : ಮಾಂತ್ರಿಕನು ಮಂಡಲಹಾಕಿ ಪೂಜೆಗಾರಂಭಿಸಿದನು (ಲೂ). [ಸಂ.]

**ಮಂಡಲಂಗೊಳ್ಳು** (ಕ್ರಿ). ಸುರುಳಿಸುತ್ತಿಕೊಳ್ಳು ; ಸುತ್ತುಹಾಕು : ಪೆರ್ವಾವಿನಂತೆ ಮಂಡಲಂಗೊಳ್ಳುತ್ತುಂ . . . ಲತೆಯಂತಲ್ಲಾಡುತ್ತುಂ ಕಣ್ಗೊಳ್ಳೆ ಬೆಳಗಾಗೆ (ವರ್ಧಮಾ. ೦-೦೬೦).
[ಮಂಡಲ + ಕೊಳ್ಳು₁ (< ಕೊಳ್₁)]

**ಮಂಡಲಕ** (ನಾ). ೧. ಮೈಮೇಲೆ ದುಂಡುದುಂಡಾದ ಮಚ್ಚೆಗಳುಂಟಾಗುವ ಒಂದು ಬಗೆಯ ಕುಷ್ಠರೋಗ : "ಕೋಠಃ, ಮಂಡಲಕಂ – ೨ ಮಂಡಲಾಕಾರವಾದ ಕುಷ್ಠಕ್ಕೆ ಹೆಸರು; ಕೊಳೆಮಚ್ಚೆ ಹುಣ್ಣು" (ಸಿದ್ಧಾಂತಿ. ೦೬೪). ೨. ಯುದ್ಧದಲ್ಲಿ ಸೈನ್ಯವನ್ನು ಮಂಡಲಾಕಾರವಾಗಿ ನಿಲ್ಲಿಸುವ ಒಂದು ಬಗೆಯ ಸೈನ್ಯರಚನೆ. ೩. ಸೂರ್ಯ ಅಥವಾ ಚಂದ್ರಬಿಂಬ. ೪. ವಲಯ ; ಗೋಳ. ೫. ಕನ್ನಡಿ ; ದರ್ಪಣ. ೬. ದೇಶ; ರಾಷ್ಟ್ರ. ೭. ನಾಯಿ. ೮. [ಕಾಮಶಾ] ಒಂದು ಬಗೆಯ ನಖಕ್ಷತ ; ಮಂಡಲ : ಕವಪು . . . ಎದೆಯೆನಿಪ್ಪೆಡೆಗಳಂ ಸೊಗಸುವಂತೆ ಪದೆದುಗುರ ಮೊನೆಗಳಿಂ ಕಮಂಕಿಸುವಜಾದಿರೊಳಜಿಬಿಸುಗಳೆರಡಿರಲದೇ ಮಂಡಲಕವು (ಜಪದ. ೬-೩೯). [ಸಂ.]

**ಮಂಡಲಗತಿ** (ನಾ). ೧. ಯುದ್ಧ, ಕತ್ತಿವರಸೆ ಮೊದಲಾದ ಸಂದರ್ಭಗಳಲ್ಲಿ ಮಾಡುವ ಚಕ್ರಾಕಾರವಾದ ಚಲನೆ. ೨. [ನಾಟ್ಯ] ಹದಿನಾರು ಬಗೆಯ ಬಾಹುಚಲನ ಭೇದಗಳಲ್ಲಿ ಒಂದು: P "ಎಲ್ಲ ಕಡೆಗಳಲ್ಲೂ ತೋಳುಗಳನ್ನು ಸುತ್ತಿಸುವುದು,–ಕತ್ತಿವರಸೆಯನ್ನು ಅಭಿನಯಿಸುವಾಗ" (ಲಾಸ್ಯರಂ. ೨೬೦ ಗದ್ಯಾನುವಾದ) : ಮಂಡಲಗತಿ –ಎಲ್ಲಾ ಕಡೆಯಂ ತೋಳ್ಗಳ್ ನಿಲ್ಲದೆ ಸುತ್ತಲ್ಕೆ ತಾನೆ ಮಂಡಲಗಮನಂ (ಲಾಸ್ಯರಂ. ೨-೦೨೬). [ಸಂ.]

**ಮಂಡಲನೃತ್ಯ** (ನಾ). (ಕೃಷ್ಣ ಮತ್ತು ರಾಧೆಯ ಸುತ್ತಲೂ ಗೋಪಿಯರು ನರ್ತಿಸಿದಂತೆ) ಚಕ್ರಾಕಾರವಾಗಿ ಚಲಿಸಿ ಮಾಡುವ ನೃತ್ಯ : ಗೊಂದಳದ ನೃತ್ಯವು ಮಂಡಲನೃತ್ಯ . . . ಎಂದು ಪ್ರತ್ಯಕ್ಷವಿದೆ . . . ಅದರಲ್ಲಿ ಗೊಂದಳಿಗರು ಹಾಡುತ್ತ ಕುಣಿಯುತ್ತ ನಡುವೆ ಇಟ್ಟ ದೀಪವನ್ನು ಸುತ್ತಿಸುತ್ತಿ ಬರುತ್ತಾರೆ (ಹದ್ಮರ. ೬ ಮುನ್ನುಡಿ). [ಸಂ.]

**ಮಂಡಲವರ್ಷ** (ನಾ). ದೀರ್ಘಕಾಲ ನಿಲ್ಲದೆ ಸುರಿಯುವ ಮಳೆ : ಮಂಡಲವರ್ಷಮಾಗಿ(ರೆ) ಕೊಂಡು ಮಂಜಾಗಿ ಕೊಂಡೊಡಂ ತುಂತುರ್ವನಿ(ಯೊಳೆ)ಯಾಗಿ ಬಡಪಮಂ ಕೊಂಡೊಡಂ ಪೊಲ್ಲ ವಸುಧೆಯೊಳ್ (ಅಟ್ಟಮ. ೬-೦); ಮಂಡಲವರ್ಷಂ ಪುಷ್ಯದೆ ಚಂಡಕರಪ್ರಿಯಾತನುಜನೊಸೆದಿರ್ದಾಗಳ್ ಕೊಂಡುಂ ಮುತಗಿಡು ಭತ್ತಮ ಮಂಡಲದೊಳ್ ಪಡೆಯ ಲಾಬಿರೆಂದರ್ ಗಾರ್ಗ್ಯರ್ (ಅಟ್ಟಮ. ೦೨-೯೩). [ಸಂ.]

**ಮಂಡಲಸೇವೆ** (ನಾ). ೧. ಯಾವುದಾದರೂ ದೇವತೆಯ ಪ್ರೀತ್ಯರ್ಥವಾಗಿ ಕೈಗೊಳ್ಳುವ ನಲವತ್ತೆಂಟು ದಿನಗಳ ಪೂಜೆ.–ಉಪಾಸನೆ : ಹಿರಿಯರು ಹೇಳದಂತೆ ಮಂಡಲಸೇವೆ ಮಾಡಿದ ಮೇಲೆ ಅವಳ ಕಷ್ಟವೆಲ್ಲ ಪರಿಹಾರವಾಯಿತು (ಲೂ). ೨. ಕರಾವಳಿಯಲ್ಲಿ ಆಚರಿಸುವ ವಿಶಿಷ್ಟ ರೀತಿಯ ನಾಗಪೂಜೆ : ನಾಗನ ಪ್ರೀತಿಗಾಗಿ ದಕ್ಷಿಣಕನ್ನಡಜಿಲ್ಲೆಯ ಉಡುಪಿ, ಕಾರ್ಕಳ, ಕುಂದಾಪುರ ಮತ್ತು ಪುತ್ತೂರು ತಾಲ್ಲೂಕುಗಳಲ್ಲಿ 'ನಾಗಮಂಡಲ' ವೆಂಬ ಸೇವೆಯು ನಡೆಸಲ್ಪಡುತ್ತದೆ. (ವ್ಯವಹಾರದಲ್ಲಿ ಇದನ್ನು ಮಂಡಲಸೇವೆ ಅನ್ನುತ್ತಾರೆ) (ತುಳುಜಾ. ೨೩೦). 'ನಾಗಮಂಡಲ' ಪರಾ. [ಮಂಡಲ + ಸೇವೆ₁]

**ಮಂಡಲಸ್ವಸ್ತಿಕ** (ನಾ). [ನಾಟ್ಯ] ನೂರೆಂಟು ಕರಣಗಳಲ್ಲಿ ಒಂದು : P "ಚತುರಸ್ರಹಸ್ತವನ್ನು ಮಾಡಿ ಉದ್ವೇಷ್ಟನ ಮಾಡುತ್ತ ಕೈಗಳನ್ನು ನೀಡುವಾಗಲೇ ವಿಕ್ಷಿಪ್ತಚಾರಿಯನ್ನು ಮಾಡಿದ ಊರ್ಧ್ವಮಂಡಲ ಹಸ್ತದಿಂದ ಸುತ್ತಿಸುತ್ತ ಕೈಗಳನ್ನು ಸ್ವಸ್ತಿಕದಂತೆ ಹಿಡಿಯುವುದು" (ಲಾಸ್ಯರಂ. ೨೫೬ ಗದ್ಯಾನುವಾದ): ತಲಪುಷ್ಪಪುಟ, ಲೀನ, ವಿವರ್ತಿತ, ವಲಿತೋರು, ಮಂಡಲಸ್ವಸ್ತಿಕ . . . ಗಂಗಾವತರಣ– ಈ ನೂಱೆಂಟು ಕರಣಂಗಳ್ (ಲಾಸ್ಯರಂ. ೪-೯೨ ವ). [ಸಂ.]

**ಮಂಡಲಾಗ್ರ**, ಮಂಡಳಾಗ್ರ (ನಾ). ೧. ತುದಿಯಲ್ಲಿ ಬಾಗಿರುವ ಕತ್ತಿ : "ನಿಸ್ತ್ರಿಂಶಃ . . . ಮಂಡಲಾಗ್ರಂ – ಈ ೧೦ ಅಡಾಯುಧಂ" (ಹಲಾಯು. ೬೬-೩೦೬): ಮತ್ತೊರ್ವನತ್ಯುಗ್ರಮಂಡಲಾ[ಬಾಣಂ. ೪ಾ]ಗ್ರಮನ ನುಗೆಯ್ದು ವೀರಗ್ರಹಗ್ರಸ್ತನಾಗಿ (ಶಂಕರಾ. ೦೦-೪೦ ವ); ಪ್ರಭಾಮಂಡಲನ ಮಂಡಲಾಗ್ರಮುಂ ಚಂದ್ರಹಾಸಪ್ರಭಾಮಂಡಲದಿಂ ಹತಪ್ರಭಾಮಂಡಲಂ ಮಾತಲುಂ (ಶಂಕರಪ. ೦೩-೦೩೩ ವ). ೨. ಗದಾಯುದ್ಧ ಹಾಗೂ ದ್ವಂದ್ವಯುದ್ಧಗಳಲ್ಲಿ ಅನುಸರಿಸುವ ಒಂದು ಬಗೆಯ ವರಸೆ, –ಪಟ್ಟು: ಆಲೀಢ ಪ್ರತ್ಯಾಲೀಢ ಸಮಪಾದ ವೈಷ್ಣವ ಮಂಡಲಾಗ್ರಮುಮೆಂಬ ಪಂಚವಿಧಸ್ಥಾನಕೃತಂಗಳೊಳಂ . . . ನಿಂದು (ಗದಾಯು. ೬-೦ ವ). **ಮಂಡಳಾಗ್ರ** : ೧. ಕದನಸಮುತ್ಪೇಕ್ಷರಂ ಪ್ರಚಣ್ಡಮಣ್ಡಳಾಗ್ರಮಣ್ಡಿತ ದೋರ್ದ್ದಣ್ಡಾಂ (ಶಾಇಸಂ. XX, ೪೭-೨೨; 1076). [ಸಂ.]

**ಮಂಡಲಾಧಿಪ** (ನಾ). ೧. ರಾಜ ; ದೊರೆ : ಬಸವನಾ ಮಂಡಲಾಧಿಪನೋಲಗದೊಳೊಲವಿಂದ ಕುಳ್ಳಿರ್ದ (ಬಸಪು. ೧೦-೦). ೨. ಪ್ರಾಂತ್ಯದ ಒಡೆಯ. [ಸಂ.]

**ಮಂಡಲಾಧಿಪತಿ** (ನಾ). = ಮಂಡಲಾಧಿಪ ೨ : ಮುಂದೆ ಬಂದ ರಕ್ಕಸತಂಗಡಿ ಅನಾಹುತಕ್ಕೆ ಮಂಡಲಾಧಿಪತಿಗಳ ವೈಮನಸ್ಯ ನಾಂದಿಯಾಯಿತು (ಕರಕೋ. I, ೦೯೬). [ಸಂ.]

**ಮಂಡಲಾಧೀಶ** (ನಾ). = ಮಂಡಲಾಧಿಪ ೨ : ಓಲಗಿಸುವ ನೃಪರಿಂ ಮಂಡಲಾಧೀಶರಿಂ . . . ವಿರ್ದ್ದಿಭರೋರ್ವೀಶ್ವರನರಸುಗೆಯುತ್ತಿರ್ಪಂ (ಕುಸುಮಾ. ೩-೨೨). [ಸಂ.]

**ಮಂಡಲಿ₁**, ಮಂಡಳಿ₁ (ನಾ). ೧. ಸುತ್ತು ; ವರ್ತುಲ ; ವಲಯ . ೨. ದುಂಡಾದ ಚಲನೆ ; ಚಕ್ರಾಕಾರವಾಗಿ ತಿರುಗುವುದು. ೩. ಗುಂಪು; ಸಮೂಹ : ' ಮಂಡಲಿಗೊಳ್ ' ಪರಾ. ೪. ಯಾವುದಾದರೊಂದು ಉದ್ದೇಶಕ್ಕಾಗಿ ರಚಿತವಾದ ಅಧಿಕಾರಿಗಳ ಸಮಿತಿ, ಸಂಸ್ಥೆ ಮುಂತಾದುವು : ಮಂಡಲಿಯಲ್ಲಿದ್ದವರಿಗೆಲ್ಲರಿಗೂ ಅವನನ್ನು ಕಂಡರೆ ಬೇಸರ (ಬಾದಕ. ೩೦೬). **ಮಂಡಳಿ₁** : ೩. ಆಗಳನೇಕ ಮೂರ್ಧಾಭಿಷಿಕ್ತ ಮಂಡಲಿಕ ಮಂಡಳೀಪರಿವೃತನಾಗಿ ಪದ್ಮರಾಜನಾ ರಾಜವಿದ್ಯಾ ವಿಳಾಸನಂ . . . ಕಲ್ಯಾಣಪೀಠಸಿಂಹಿತನಂ ಮಾಡಿ (ಪುಸ್ತಕ. ೪-೬೦ ವ) ; ಗಿಳಿಜೊಡನೋದಿದೋದಿ ನುಡಿಗಲ್ತು ಮರಾಳಸರಾಜಹಂಸಮಂಡಳಿಯೊಡ ನಾಡಿಯಾಡಿ ನಡೆಗಲ್ತು (ಕಮದ. ೦೯೩ ಕೃಷೋ) : ಪಾಂಡುರಂಗನ ಭಕ್ತರಂ ಭೂಮಂಡಲದೊಳಗೆ ಸುಳಿವ ಜಂಗಮಮಂಡಳಿಗಳಂ ಕರಸಿದರು ಪಡಿಹಾಱರು ಕಳುಹಿ (ಬಸಪು. ೪-೩). ೪. ರಾಜನಿಗೆ ಸಲಹೆನೀಡುವ ಸಚಿವಮಂಡಳಿ ಇತ್ತೆಂಬುದಕ್ಕೆ ಸೂಕ್ತನಿದರ್ಶನಗಳಿವೆ (ರಘಾಇ. ೦೦೪).

☞ ಸಂಸ್ಕೃತದಲ್ಲಿ ಸಾಮಾನ್ಯವಾಗಿ 'ಮಂಡಲ' ಶಬ್ದಕ್ಕೆ 'ಈ' ಎಂಬ ಸ್ತ್ರೀವಾಚಕಪ್ರತ್ಯಯವು ಸೇರಿದಾಗ ಈ ಎಲ್ಲ ಅರ್ಥಗಳೂ ಬರುತ್ತವೆ. [ಸಂ. ಮಂಡಲೀ]

**ಮಂಡಲಿ₂**, ಮಂಡಳಿ₃ (ನಾ). ೧. ಸುತ್ತುಹಾಕುವುದು ; ಬಳಸುವುದು. ೨. ವರ್ತುಲಾಕಾರವಾಗಿ ಬರುವ ಗಾಳಿ; ಸುಂಟರಗಾಳಿ. ೩. ಹಾವು. ೪. ಮೈಮೇಲೆ ಗುಂಡನೆಯ ಚಿಹ್ನೆಗಳುಳ್ಳ ಒಂದು ಬಗೆಯ ವಿಷಸರ್ಪ. ೫. (ಇಲಿಯನ್ನು ಹಿಡಿಯಲು ಹೊಂಚುಹಾಕುತ್ತಿರುವ) ಬೆಕ್ಕು : "ಜಾಹಕಃ, ಗಾತ್ರಸಂಕೋಚೀ, ಮಂಡಲೀ--ಈ ೩ ಇಲಿಯಂ ಹಿಡಿಯಲನುಗೆಯ್ವ ಬೆಕ್ಕು" (ಪಠಾಯು. ೪೦-೮೩). ೬. ಗೋಸುಂಬೆ. ೭. ನಾಯಿ. ೮. ಆಲದ ಮರ. ೯. ಒಂದು ಪ್ರದೇಶವನ್ನು ಆಳುವುದು : 'ಮಂಡಲಿನಾಡುಸಾಸಿರ' ಪರಾ. ೧೦. ಪ್ರಾಂತವನ್ನು ಆಳುವವನು. ೧೧. ಸೂರ್ಯ. ೧೨. (?) : ಸಂತಸದಿ ಕೇಳಿ ಮುನಿವರರೆಲ್ಲ ಮಾನವರೊಳಿಂತು ಲಕ್ಷಣಂಗಳೆ ತಿಳಿದು ಬೆಲೆಯ ಮಾಳ್ಪ ಸಂತವನು ಮಂಡಲಿಯು ಪೆಸರಾದುದಾತಂಗೆ (ರಕ್ನಶಾ. ೬-೨೩). **ಮಂಡಳಿ₂**: ೨. "ವಾತ್ಯೆ ಮಂಡಳಿಯೆನಲು ಸುಟಿಫಾನಿಲಂ" (ಮಂಗರಾ. ೦೩-೦೦). [ಸಂ. ಮಂಡಲಿನ್]

**ಮಂಡಲಿಕ**, ಮಂಡಳಿಕ (ನಾ). ಸಾಮಾನ್ಯವಾಗಿ ಈಗಿನ ಒಂದು ಜಿಲ್ಲೆಯಷ್ಟು ವಿಸ್ತಾರವಾದ ದೇಶಭಾಗದ ಒಡೆಯ ; ಮಾಂಡಲಿಕ ; ಸಾಮಂತ : "ಮಧ್ಯಮು ಮಂಡಲೇಶಂ ಮಂಡಲಿಕನೆನಿಕ್ಕುಂ" (ಮಂಗರಾ. ೭೮-೦) ; ಅತಿಪ್ರಚಂಡಮಂಡಲಿ[ ಕಾಕಂ. ೪ ]ಕಮಹಾಸಾಮಂತಮಂತ್ರಿಪ್ರಧಾನಪುರೋಹಿತಾಂತರ್ವಂಶಿಕಾದಿಪರಿವಾರಪರಿವೃತಂ . . . ಒಡ್ಡೋಲಗಂಗೊಟ್ಟಿರೆ (ಆದಿಪು. ೨-೨ ವ); ಮನ್ನೆಯ ಮಂಡಲಿಕರುಗಳು ಪೊಡವೀಶಗೆ ಕೈಯ ಮುಗಿದು ಎಡಬಲವನು ಸಾರಿರಲು (ಕಂಪಿ. ೦೧-೦೨೬). **ಮಂಡಳಿಕ** : "ಮಧ್ಯಮಃ, ಮಂಡಳೇಶ್ವರಃ — ಈ ೨ ಮಂಡಳಿಕಂ" (ಪಠಾಯು. ೭೦-೨೬೮); ಆ ಪೊಟಲನಾಳ್ದಂ . . . ಸ್ತಿಮಿತಸಾಗರಂ ಮಂಡಳಿಕಂ (ಶಾಂತಿಪು. ೦-೭೭); ಮಾಂಡಳಿಕ ಮನ್ನೆಯರಾಂಪರೇ ಚತುರಂಗಪದಹತಿಗೆ (ಕುಮಾ,ಸ. ೩-೩).

ಮಂಡಳಿಕಕಂಠೀರವ = ಸಾಮಂತರಾಜರಿಗೆ ಸಿಂಹದಂತಿರುವವನು ; ಒಂದು ಬಿರುದು : ಮಣ್ಡಳಿಕಕಣ್ಠೀರವಂ ಪರಚಕ್ರಭೈರವಂ ರಾಯದಣ್ಡಗೋಪಾಳಂ (ಸೌಇಇ. XX. ೪೭-೯; 1074). ಮಂಡಳಿಕಚೂಡಾಮಣಿ = ಸಾಮಂತರಲ್ಲಿ ಶಿರೋಭೂಷಣಪ್ರಾಯನಾದವನು ; ಒಂದು ಬಿರುದು : ಅಜ್ಜಿವಂಶಾಂಬರದ್ಯುಮಣಿ ಮಣ್ಡಳಿಕಚೂಡಾಮಣಿ (ಎಕ. XII. ತಿಪ. ೪೦-೨೩; 1040). ಮಂಡಳಿಕತ್ರಿಣೇತ್ರ=ಸಾಮಂತರಾಜರಲ್ಲಿ ಪರಮೇಶ್ವರನಂತಿರುವವನು ; ಒಂದು ಬಿರುದು : ಪರಮಣ್ಡಳಿಕರ್ಕ್ಕಳ ನಮ್ಮ ನೀವು ಇ ಯೋಳಿಗೆ ನಿಮ್ಮ ಪಸ್ದಲೆಗಳಂ ಬರಲೀಯದೆ ಕಣ್ದು ಬಾಬ್ಬುದೇಳೋಳಿಯುಳೆಂಬಿನಂ ನೆಗಬ್ದುದೊಟ್ಟಜೆ ಮಣ್ಡಳಿಕತ್ರಿಣೇತ್ರನಾ (ಎಕ. II (R). ೬೪-೯೦; 974). ಮಂಡಳಿಕಭೈರವ= ಸಾಮಂತರಲ್ಲಿ ಭೈರವನಂತಿರುವವನು ; ಒಂದು ಬಿರುದು : ವಿಕ್ರಾನ್ತಕಣ್ಠೀರವಂ ಮಣ್ಡಳಿಕಭೈರವಂ ಶರಣಾಗತವಜ್ರಪಂಜರಂ (ಸೌಇಇ. XX. ೪೦-೦೦ ; 1056). ಮಂಡಳಿಕಮುಖದರ್ಪಣ = ಸಾಮಂತರಾಜರಿಗೆ ಕನ್ನಡಿಯಂತಿರುವವನು ; ಒಂದು ಬಿರುದು : ವಿಬುಧಸನ್ತರ್ಪಣಂ ಮಣ್ಡಳಿಕಮುಖದರ್ಪ್ಪಣನುಮಣ್ಡಳಿಕಗಜಕಂಠೀರವಂ (ಕಇ. IV. ೪೦-೬; 11 ನೆಯ ಶತ). ಮಂಡಳಿಕವೃಷಭಶಂಕರ = ಸಾಮಂತರೆಂಬ ಎತ್ತುಗಳಿಗೆ ಶಿವನಂತಿರುವವನು ; ಒಂದು ಬಿರುದು : ಗಣ್ಡರ ಗಣ್ಡಂ ಗಣ್ಡಭೇರುಣ್ಡಂ ಮೂಜುರಾಯಸ್ಥಾನಕಲಿ ಮಣ್ಡಳಿಕವೃಷಭಶಂಕರಂ (ಕಇ.IV. ೪೦-೪ ; 11ನೆಯ ಶತ). [ಸಂ.]

**ಮಂಡಲಿನಾಡುಸಾಸಿರ** (ನಾ). ಒಂದು ಆಡಳಿತಕ್ಕೆ ಒಳಗಾದ ಪ್ರದೇಶ : ಮಣ್ಡಲಿನಾಡುಸಾಸಿರಮುಮಂ ನಾಳೆ (ಎಕ. VII. ಶಿಕಾ. ೨೪-೩ ; 920). [ಮಂಡಲಿ₂ + ನಾಡು + ಸಾಸಿರ]

**ಮಂಡಲಿಸು**, ಮಂಡಳಿಸು (ಕ್ರಿ). ೧. ಚಕ್ರಾಕಾರವಾಗಿ ಸುತ್ತು-ತಿರುಗು : ಕಿರುವಕ್ಕಿ ಪೊರಹೊಮ್ಮಿ ಚಿಲಿಮಿಲಿಸುತಿರೆ, ಹದ್ದು ಮಂಡಲಿಸುತಿರೆ (ಪ್ರಬಾಪ. ೭೪-೨೬೬). ೨. ಗುಂಪಾಗಿ ಸೇರು ; ಒಟ್ಟಾಗಿ ಕೂಡು : ಮಂಡಲಿ[ಕಾಕಂ. ೪]ಸಿರ್ದ ಖೇಚರಸಮೂಹದ ಮಧ್ಯದೊಳಿರ್ದ ಮೂರದಿಂ . . . ಕಂಡನಣುವ್ರತಪ್ರಕರಪಾಲಕನಂ (ಶಂಪ್ರಪು. ೬-೮); ನೆತ್ತಿಯೊಳ್ ಪಾಜುವ ಗಿಳಿವಿಂಡು ಪಚ್ಚೆಯ ಸತ್ತಿಗೆಯಂತೆ ಮಂಡಲಿಸೆ (ಪೋಲಚ. ೨-೪೩). **ಮಂಡಳಿಸು** : ೨. ನೀರ್ವನಿಯಂ ಸುರಿವಂಬುದಾಳಿ ಮಂಡಳಿಸಿದ ಮೇಘಕಾಲಮೆನೆ ಕಣ್ಗೆಸೆದಂ ನೃಪರೂಪಚಂದ್ರಮಂ (ಕಾವಂಪೂ. ೩೮೯); ಕೊಡೆವಿಡಿದಂತೆ ಮಂಡಳಿಸೆ ಮೇಲೆ ಕಿರೀಟಮರೀಚಿ . . . ಕುಂಡಳಮಂಡಿತನೇಂ ವಿಳಾಸಮಂ ಪಡೆದನೊ (ಸಂಶಾಪಾ. ೪-೯); ಕಲಶಪಲ್ಲವಚೌಕದಲಿ ಮಂಡಳಿಸಿದವು ಸತ್ತಿಗೆಗಳು (ಕುಮಾರಿರಾ. ೬-೨); ಬಂಡುಣಲೆಂದು ತಂಡತಂಡದಿಂ ಮಂಡಳಿಸಿ ಮಯ್ಯೇರಡಿಗಳ್ ಬಂದೆಜಿಗುಗುಂ (ರಾಜಶೇಕ. ೯-೦). ೩. ಸುತ್ತುಗಟ್ಟು ; ಆವರಿಸು; ಬಳಸು: ಮಂಡಳಿಸಿ ಮುರಿದೇಳ್ವ ಪಕ್ಷಿಯ ತುಂಡದಲಿ ತಳಿತೊಗೆದವಂಬರಮಂಡಲದ ವಳಯದಲಿ ವಿಲಯಶಿಖಾಗ್ನಿಕಣದಂತೆ (ಕೊರಾಾ. ೩-೮-೮೨). ೪. ಸುರುಳಿಸುತ್ತಿಕೊಳ್ಳು ; ಇರಿಕೆ ಹಾಕಿಕೊಳ್ಳು : ಪೆಡೆಯ ಮೊದಲ್ಗೆ ತಂದಡರೆ ಮಂಡಳಿಸಿತ್ತಹಿ ಶೇಷಕಾಯಮಂ (ಶಂಪ್ರಪು. ೯-೮೨). [ಮಂಡಲ + – ಇಸು₃]

**ಮಂಡಲೀಕ**, ಮಂಡಳೀಕ (ನಾ). = ಮಂಡಲಿಕ : ಕುಡಿಯರ ಪಲ್ಲಭನುಜಿ ಮಂಡಲೀಕಪದಮಂ ಪಡೆದಂ (ಎಇ. VI. ೨೦೬-೦೦; 1057) ; ಮಂಡಲೀಕರ ಶಿರವ ಶೀಳಿದ ಗೆಲವ ತೆಗೆ . . . ಎನುತ ತೆಗೆದೆಚ್ಚರು ಮಹಾರಥರು (ಕುಮಾರರಾ. ೫೦. ೨೯೧). **ಮಂಡಳೀಕ** : ಬಾಳಿಮಮಂಡಳೀಕತಾಂ ಪಡೆದನಪಾರಶೌರ್ಯ್ಯಮಹಿಮೋನ್ನತಿಯಂ ವಸುಧಾತಳಾಗ್ರದೊಳು (ಎಕ. VIII. ಸಾಗರ. ೦೩-೬೪ ; 1218). [< ಮಂಡಲಿಕ]

**ಮಂಡಲೆಸಾಯಿರನಾಡು**(ನಾ). ಒಂದು ಆಡಳಿತಕ್ಕೆ ಒಳಪಟ್ಟ ಪ್ರದೇಶ : ಮಣ್ಡಲೆಸಾಯಿರನಾಡ ತುಜುಗೊಳೆಲ್ ತೆರಳ್ದು ಸತ್ತಂ (ಮ್ಯಆ. ೦೯೩೩, ೩೩-೪ : 939). [< ಮಂಡಲಿ₂ + ಸಾಯಿರ (< ಸಾಸಿರ) + ನಾಡು]

**ಮಂಡಲೇಶ** (ನಾ). ೧. = ಮಂಡಲಿಕ : "ಮಂಡಲೇಶಂ ಮಂಡಲಿಕನೆನಿಕ್ಕುಂ" (ಮಂಗರಾ. ೭೮-೧). ೨. = ಮಂಡಲಾಧಿಪ ೧ : ಮಂಡಲೇಶನುದ್ಭಟೇಂದ್ರನಿಟ್ಟ ಶೂಲಪೈದೆ ಮಂಕೊಂಡು ನಾಟಿ ವಕ್ಷಮಂ ಸುಶಕ್ತಿಯುಕ್ತನಾಗಿಯುಂ ಚಂಡಶಕ್ತಿಹೀನನಾಗಿ ಕೂಡೆ ನಿರ್ಜರಾರಿ ಕೈಕೊಂಡು ಪುಲ್ಲೆಯಂದದಿಂದೆ ಕೂರ್ತು ಪೋದನದ್ಭುತಂ (ಉದ್ಯೆಬಿ. ೪-೦೦೮). [ಸಂ.]

**ಮಂಡಲೇಶ್ವರ**, ಮಂಡಳೇಶ್ವರ (ನಾ). = ಮಂಡಲಾಧಿಪ ೨: ಮಹೋನ್ನತಿವೆತ್ತ ಮಣ್ಡಲೇಶ್ವರ ನಡೆಗೊಣ್ಡೆ ಸಾಯ್ಕನ ಕುಮಾರಕನಗ್ಗದ ಮಲ್ಲಿನಾಥನಂ ಪರಬಲಧೀರನೆನ್ದೊಲಿದು ಮನ್ನಿಸುವಂ (ಎಕ. XI. ಚಿತ್ರದು. ೨-೦೪; 1355) ; ಮಂಡಲೇಶ್ವರ ನಿನಗೆ ಕೊಡುವೆನಖಂಡಿತಾಭಿಮತಂಗಳಂ (ಐಕಪು. ೨೭-೩೩) ; ರಾಯರಾವುತ ಮನ್ನೆಯರಿಂ ಮಂತ್ರಿಮಂಡಲೇಶ್ವರರಿಂದೊಡ್ಡೋಲಗಂಗೊಟ್ಟು (ಹರಿಶ್ಚ. ೨-೩೩ ವ). **ಮಂಡಳೇಶ್ವರ** : "ಮಧ್ಯಮಃ, ಮಂಡಳೇಶ್ವರಃ — ಈ ೨ ಮಂಡಳಿಕಂ" (ಪಠಾಯು. ೭೦-೨೭೮) ; ಚಕ್ರೇಶ್ವರ ಮಂಡಳೇಶ್ವರಂ ಬೆಸಸೆ ನೆಗಟ್ದ ಕವಿ ಕವಿರತ್ನಂ (ಅಜಿಪು. ೦೨-೪೫). [ಸಂ.]

**ಮಂಡವ** 'ಮಂಟಪ' ನೋ.

**ಮಂಡವಳ್ಳಿ** (ನಾ). ವಧೂವರರ ತಲೆಗೆ ಸಂಪ್ರದಾಯಬದ್ಧವಾಗಿ ತೊಡಿಸುವ ಹೂವು, ಮುತ್ತು ಮುಂತಾದುವುಗಳ ಅಲಂಕಾರಸಾಧನ : ಸರೋಜಳಿಗೆ ಮುತ್ತಿನ ಮಂಡವಳ್ಳಿಯನ್ನು ಕಟ್ಟಿ . . . ಶೃಂಗರಿಸಿದರು (ಹರಿಶ್ಚಂ. ೪೦). [ ← ಮರಾ. ಮಂಡವಳೀ, ಮಂಡಾವಳ, ಮುಂಡಾವಳ, ಮುಂಡಾವಳೀ]

**ಮಂಡವಿಗೆ** (ನಾ). ೧. ಸಣ್ಣಮಂಟಪ : ಮಂಡವಿಗೆಯ ವಿಳಾಸ ನಿವಾಸಂಗಳಿಂದಂ . . . ಅಂದಂಬಡೆದ ಪೊಚಿವೀಡಂ ಸೋವಾನ್ವಯಪ್ರದೀಪಂ ಪುಗುವಾಗಳ್ (ಶಾಂತಿಪು. ೧೧-೦೯೭ ವ) ; ಪವಳದ ಕಂಬಂ ಪಳಿಕಿನೆಸೆವ ತೊಲೆ ವಜ್ರದ ಮತ್ತವಾರಣಂ ಮುತ್ತಿನ ಮಂಡವಿಗೆ (ಸುಕುಮಾ. ೧೦-೯೩) : ರಾಯನರಮನೆ ಮಂಡವಿಗೆ ಗುಡಿ ಲಾಯ ಚವುಕಿಗೆ ನಿಖಿಳಭವನನಿಕಾಯವನು ತೆಗೆದೊಟ್ಟಿದರು ಬಂಡಿಗಳ ಹಂತಿಯಲಿ (ಕುಮಾ.ಭಾ. ೪-೦೭). ೨. ಮೆರವಣಿಗೆ, ಉತ್ಸವ ಮೊದಲಾದ ಸಂದರ್ಭಗಳಲ್ಲಿ ಉತ್ಸವಮೂರ್ತಿ ಮೊದಲಾದುವುಗಳ ಮೇಲೆ ಎತ್ತಿಹಿಡಿಯುವ ಚತುಷ್ಕೋಣಾಕಾರದ ಮೇಲ್ಕಟ್ಟು ; ವಿತಾನ : ಸಂಪತ್ತಿನ ಚಿತ್ರರಚೆತ್ತಿದ ಮುತ್ತಿನ ಮಂಡವಿಗೆ ಪೊಚಲ ಮನೆಗಳೊಳಿಲ್ಲಂ (ಸುಕುಮಾ. ೩-೨) ; ಚಿತ್ರರದಿಂ ಬೆಳ್ಪಂಗಳ ಬಿತ್ತಿನೆ ತೊಳತೊಳಗೆ ತೊಳಪ ತಾರಗೆಯಿಂ ತಾಳ್ದಿತ್ತದು ಮದಸಂಗೆತ್ತಿದ ಮುತ್ತಿನ ಮಂಡವಿಗೆಯೊಪ್ಪಮಂ ಗಗನತಳಂ (ಪಾರ್ಶ್ವಪು. ೧೦-೦೯). [ < ಸಂ. ಮಂಡಪಿಕಾ]

**ಮಂಡವಿಗೆಬಲೆ** (ನಾ). ಒಂದು ಬಗೆಯ ಬಲೆ : ಹಿಂಡುವಲೆಗಳ ಮಂಡವಿಗೆಬಲೆ[ಶಾಣಂ. ಮಂಡವಿಗವಲೆ]ಗಳ ಕಿರಾತರು ಕಿಡಜೆಂತಗಲದಲಿ (ಕುಮಾ.ಆ. ೦೩-೨೩). [ಮಂಡವಿಗೆ? + ಬಲೆ₁]

**ಮಂಡಸೀಗೆ**, ಮಂಡೆಸೀಗೆ (ನಾ) ಒಂದು ಬಗೆಯ ಮುಳ್ಳಿನ ಬಳ್ಳಿ : ಮಂಡಸೀಗೆಯ ತುಜೆಂತಮೊನಿಪ್ಪ ಪಾಪಟಿಯ ಸದ್ದಳಮಂ ಬೆರಸುತ್ತುಂ (ಜಗನ್ನಾ. ೦೩-೭೦). **ಮಂಡೆಸೀಗೆ** : ಮಂಡೆಸೀಗೆ ಹೇರಿಜೆಯೆಲಚಿ ತಂಡಸಿ ಮುಳ್ಳುಬೇಲಿಗಳ್ ಸೇರಿ ಮುಟ್ಟಹುವಾಗಸವನು (ಕಂಶರ. ೦೮-೩೩). [ಮಂಡ? + ಸೀಗೆ₁]

**ಮಂಡಹಾರಕ** (ನಾ). ಮದ್ಯವನ್ನು ಬಟ್ಟಿ ಇಳಿಸುವವನು ; ಸಾರಾಯಿ ಮಾಡುವವನು : "ಶೌಂಡಿಕಃ, ಮಂಡಹಾರಕಃ — ೨ ಹೆಂಡಾ ಮಾಡುವವನ ಹೆಸರುಗಳು" (ಸಿದ್ಧಾಂತಿ. ೩೦೦). [ಸಂ.]

**ಮಂಡಳ** 'ಮಂಡಲ' ನೋ.

**ಮಂಡಳಮಾರಿ** (ನಾ). ಒಂದು ಬಗೆಯ ವನಸ್ಪತಿ : ಬೆಳಹೂಲಿಯ ಬೇರಂ ಮಂಡಳಮಾರಿಯ ಬೇರನಕ್ಕಿ ಪೊಳೆಯುದರೆವಾ ವಿಳಸರ್ಪ ಕಾಡಿದೆಡೆಗಾಗಳೆ ಪೊಸಲ್ ನಿರ್ವಿಷಂ (ಜಗನ್ನಾ. ೬-೦೨). 'ಮಂಗಮಾರಿ' ಪಠಾ. [ ? ]

**ಮಂಡಳಾಂಕ** (ನಾ). ೧. ಬಿಂಬದಲ್ಲಿ ಕಪ್ಪುಮಚ್ಚೆಯುಳ್ಳವನು : ಚಂದ್ರ. ೨. ಗ್ರಹಣಸಮಯದಲ್ಲಿ ತನ್ನ ಸುತ್ತಲೂ ನೆರಳುಳ್ಳವನು: ಸೂರ್ಯ. ೧. ೨ : ವರಮಂಡಳಾಂಕನೀ ಹಿಮಕರನೆಸೆದಪನಾ ದಿನೇಶನೆಸೆ ನೋಡರಸಾ (ರಾಜಶೇ. ೦೦-೬೬). ೩. ಯಾವುದಾದರೂ ಅಪಾರದರ್ಶಕ ವಸ್ತುವಿನ ಸುತ್ತಲೂ ಕಂಡುಬರುವ ನೆರಳಿನಂತಹ ಭಾಗ. [ಸಂ. ಮಂಡಲಾಂಕ]

**ಮಂಡಳಾಗ್ರ** 'ಮಂಡಲಾಗ್ರ' ನೋ.

**ಮಂಡಳಿ₁** 'ಮಂಡಲಿ₁' ನೋ.

**ಮಂಡಳಿ₂** 'ಮಂಡಲಿ₂' ನೋ.

**ಮಂಡಳಿಕ** 'ಮಂಡಲಿಕ' ನೋ.

**ಮಂಡಳಿಗೊಳ್** (ಕ್ರಿ). ಗುಂಪುಗೂಡು ; ಒಟ್ಟಾಗು : ಮಂಡಳಿಗೊಂಡು ಸಿಂಪಿಸುವ ತುಂಕುಮವಾರಿಯ ಚಿಂಚಗೆಂಚು ಕೈಕೊಂಡು (ಅನಂತಪು. ೬-೩೦) ; ಈತಗೇಕೀ ದುಃಕೃತ್ಯವು ಮೊನೆಕೊಂಡುದು ವಿಸ್ಮಯವೆನುತ ಮಂಡಳಿಗೊಂಡು ಮಾಜುಗುತಿರಲು (ಶ್ರೀಶಂಕ. ೨-೦೩೩) ; 'ಮಂಡಳಿ' [ಶಾಣಂ. ಲಿ] ಗೊಂಡಾಗಳ್ ಮರಾಳಾವಳಿ ನಗದ ಬಿಲದ್ವಾರದಿಂದೇಳ್ವುದು (ರಾಜಶೇ. ೬-೨). [ಮಂಡಳಿ₁ ( = ಮಂಡಲಿ₁ ) + ಕೊಳ್₁ ]

**ಮಂಡಳಿಸು** 'ಮಂಡಲಿಸು' ನೋ.

**ಮಂಡಳೀಕ** 'ಮಂಡಲೀಕ' ನೋ.

**ಮಂಡಳೇಶ್ವರ** 'ಮಂಡಲೇಶ್ವರ' ನೋ.

**ಮಂಡಿ₁** (ನಾ). ೧. ತೊಡೆ ಮತ್ತು ಕಣಕಾಲಿನ ಮಧ್ಯದ ಕೀಲು, – ಸಂಧಿ : ತಿವಿದು ಕಡುಪಿಂ ಕೆಡೆಪಿ ಕೊಪ್ಪರದೊಳ್ ಕಾದ್ಮಿ ಮಂಡಿಯೊಳ್ ಮಿದಿದು (ಗಿರಿಶ. ೨-೦೦೩ ವ) ; ಅವರು ಮಂಡಿಯಿಂದ ಮೇಲೆ ದಟ್ಟಿ ಸುತ್ತುತ್ತಿದ್ದರು (ಪುಟ್ಟಪ. ೬) ; ಮಂಡಿ ಹಾಕಿ ಕೂತರೆ ಮಂಡಿಗೆ ಬಡಿಸ್ಯಾರೆ ? (ಗಾದೆ). ೨. ಮೊಳಕಾಲು ; ಜಾನು : ಬಲಿದು ಮುಂಡಿಯನೂಜೆ ಕನ್ನೆಗೆ ಸೆಳೆದು ಮುಷ್ಟಿಯ ಪಾರ್ಥನಿಸುತನ ತಲೆಯ ನೆಟ್ಟನು (ಕುಮಾ.ದ್ರೋ. ೦೯-೪೦); ಮಿಡುಕು ಕಂಠದೊಳಾಯ್ತು ಮಂಡಿಯ ಪಡಿಯ ಪದಪದ್ಧತಿಗೆ ಘಣಿಪನ ಹೆಡೆ ನಿಜಲುನಿಟಿಲೆಂದುದ (ಕೊರವಂ. ೪-೩-೬). ೩. ಮಲ್ಲಗಾಳಗ, ಕತ್ತಿವರಸೆ, ಬಾಣಪ್ರಯೋಗ ಮುಂತಾದ ಸಂದರ್ಭಗಳಲ್ಲಿ ಮೊಳಕಾಲನ್ನೂರಿ ಕುಳಿತುಕೊಳ್ಳುವ ಒಂದು ಭಂಗಿ : "ಕಳಾಸ ಚಾಳಿಯು ಮಂಡಿ ಸೀರಣಾ ಪಜ್ಜೆಯಕ್ಕುಂ" (ಮಂಗರಾ. ೮೮-೩೮); ಆಯತ ಮಂಡಿ ದುವ್ವಾಡಮೆಕ್ಕಸರವಿಸರದುಲ್ಲಾಸ ದುಸ್ಸರಚವ್ವಡಿ . . . ಚಟಿಯೆಂಬ ಚತುರತಾನದ ತರಹರದೊಳು ಹಲಗೆಯ ಮಗ್ಗುಲೊಳು ಮಿಕ್ಕಮಂ ಜಡಿದರು (ಸೋಮನ. ೩-೦೯) ; ಕಕ್ಕಡ ಪರರು ಖಂಡೆಯ ದವರು ಮಂಡಿಯ ತೆರಳದುಂತರು ಘಲುಗುಣನ ರಥದೆರಡುಪಕ್ಕದಲಿ ( ಕುಮಾ.ಕ. ೨೪-೩೯ ) ; ಧ್ರುವುಣದಲ್ಲಿ ಮೊಳಕಾಲಿನೊಡನೆಯೆದೆಯ ಕೂಡಿಸುವುದು ಯಾವುದು ಸಾಧನೆಯಲ್ಲಿ ಬೇರೆ ಉಂಟು ಅದರ ಹೆಸರು ಮಂಡಿಯುಂಬುದು (ಜಗ್ಗಟೀ. ೪-೨೭). ೪. ವಾತದಿಂದ ಮೊಳಕಾಲು ಹಿಡಿದುಕೊಳ್ಳುವ ಒಂದು ಬಗೆಯ ರೋಗ : (೬).

**ಮಂಡಿದಕ್ಕೆ** = ಮಂಡಿಗೆ ಕಟ್ಟಿಕೊಂಡು ಬಾರಿಸುವ ಒಂದು ಬಗೆಯ ವಾದ್ಯ: ಮಂಡಿದಕ್ಕೆ ಶಲ್ಲುಕೆ ಕುಡುಪೆ . . . ಶಂಖಿಪಾವಪ್ರಭೃತಿ ಸುಷಿರ ವಾದ್ಯಚಯಮುಂ . . . ಬಾಜಿಸುತೆ (ಶತ್ಕ.ರಾ. ೩-೩೩). **ಮಂಡಿಯೂರು** = ಮೊಳಕಾಲನ್ನು ನೆಲದ ಮೇಲೆ ಊರಿ ಕುಳಿತುಕೊಳ್ಳು : ಪುಟ್ಟ ಲಕ್ಷ್ಮಿಯ ಆಕೃತಿ . . . ಘೂತದ ಎದುರಿಗೆ ಮಂಡಿಯೂರಿ ನಮಸ್ಕಾರ ಮಾಡಿತು (ಕನ್ನ.ಕ. IV, ೩೬) ; ದೇವರ ಮುಂದೆ ಆಕೆ ಮಂಡಿಯೂರಿ ಕುಳಿತು ಪ್ರಾರ್ಥಿಸುತ್ತಿದ್ದಳು (ರೂಢಿ). **ಮಂಡಿಯೊಳರು** = ಮಂಡಿಯೂರು : ಗಗನದಲಿ ರಥ ಯೋಜನಾಂತಕೆ ಚಿಗಿದು ಧರಣಿಯ ಮೇಲೆ ಬೀಳಲು ನಗುತ ಕರಣವ ಹಾಯ್ಕಿ ಮಂಡಿಯೊಳರ್ದನಾ ದ್ರೋಣ (ಕುಮಾ.ದ್ರೋ. ೦೩-೦೯). **ಮಂಡಿಹೂಡು**, **ಮಂಡಿಯಹೂಡು** = ಮಂಡಿಯೂರು : (೬) ; ಪರಮಶಿವನಾನಂದಯೋಗದೊಳಿರಲು ಕಂಡಿಡವಂಕದಲಿ ಘನತರುವ ಮರೆಗೊಂಡಾಗ ಮಂಡಿಯ ಹೂಡಿ ಬಿಲ್ಪಿಡಿದು . . . ಎಚ್ಚಡೆ (ಅನಂತರಾ. ೧-೦೯-೦೩).

[ದೇ. ॥ ತಮಿ. ಮುಣ್ಟು; ಮಲ. ಮುಣ್ಬುಕ = ಹಿಮ್ಮಡಿಯ ಮೇಲೆ ಕುಳಿತುಕೊಳ್ಳು ; ತುಳು. ಮಂಡಿ , ತೆಲು. ಮಂಟ, ಮಂಡಿವಿ ; ಗೊಂಡಿ. ಮೊಂಡಾ; ಕುಇ. ಕುವಿ. ಮೊಂಡ./ಮರಾ. ಮಾಂಡೀ]

**ಮಂಡಿ₂** 'ಮೊಂಡಿ' ನೋ.

**ಮಂಡಿ₃** (ನಾ). ಭಾರಿ ಪ್ರಮಾಣದ ವ್ಯಾಪಾರ ನಡೆಯುವ ಸ್ಥಳ ; ಸಗಟು ವ್ಯಾಪಾರದ ಅಂಗಡಿ : ಆ ಮಂಜಪ್ಪನವರು ಅಡಿಕೆಯ ಮಂಡಿಯ

ವೆಂಕಟಸ್ವಶೆಟ್ಟರು ಎಲ್ಲರೂ ಮಾಳೂರಿನವರು (ಸಂತಾಕ. ೬–೨೨) ; ಬಹುಶ್ರುವು ಷಟ್ಟು ಒಂದು ಮಂಡಿ ಅಂಗಡಿಯಲ್ಲಿ ಗುಮಾಸ್ತೆ ಕೆಲಸವನ್ನು ಕೊಡಿಸಿದನು (ಶಾಂತೇ. ೦೬೭). [← ಹಿಂ. ಮಂಡೀ ; ಮರಾ. ಮಂಡಈ]

**ಮಂಡಿಕಲ್** (ನಾ). ಒಂದು ಊರಿನ ಹೆಸರು : ಮಣ್ಣಕಲ್ಲ ಕಪ್ಪಾಲ ದಾನವರ್ಮ್ಮ ಕಡಸಂ ಪೆರ್ಗುಲಿ ಕೋಕ್ಕೋಡೆ ಆ ಪುಲಿಯಂ ಕೊಲ್ವೆನೆನ್ದು ಪ್ರತಿಜ್ಞೆ ಕಡಿದು (ಎಕ. X. ಮುಳಬಾ. ೧೬೨–೩ ; ಸು. 950).

[ ಮಂಡಿ₁ + ಕಲ್₃ ]

**ಮಂಡಿಗಾಲು** (ನಾ). ಕುಳಿತುಕೊಳ್ಳುವುದರಲ್ಲಿ ಒಂದು ರೀತಿ; ಕುಳಿತುಕೊಳ್ಳುವಾಗ ಮೊಣಕಾಲನ್ನು ಊರುವುದು; ಮಂಡಿಯೂರುವುದು: ಮಂಡಿಗಾಲಲ್ಲಿ ಕುಳಿತುಕೊಳ್ಳುವುದರಿಂದ ಪಾಪಕ್ಷಯವಾಗಿ ತ್ರಿದೋಷ ಹರವಾಗ್ತ ಶರೀರಕ್ಕೆ ಕಾಂತಿಯುಂಟಾಗುವುದು (ಸಳನ್ನ. ೫೯) ; ಮಂಡಿಗಾಲು ಹೂಡಿ . . . ಕಂಗೊಳಿಸುವ ಬಾಲಕೃಷ್ಣನ . . . ಶಿಲ್ಪಕಲಾವಿಶಿಷ್ಟವಾದ ಮೂರ್ತಿಗಳು ವಿನಾ ಬೇರೆಯವು ಭಕ್ತರ ಚೇತೋಹಾರಿಯಾಗಲು ಶಕ್ಯವಿಲ್ಲ (ಕಾರಿರ. ೬೫). [ಮಂಡಿ₁ + ಕಾಲು₁ (<ಕಾಲ್₁)]

**ಮಂಡಿಗೆ** 'ಮಂಡಗೆ' ನೋ.

**ಮಂಡಿಚಡ್ಡಿ** (ನಾ). ಮೊಳಕಾಲಿನವರೆಗೆ ಬರುವಂತೆ ಸೊಂಟದ ಕೆಳಗೆ ತೊಡುವ ಉಡುಪು ; ಚಲ್ಲಣ : ಮಂಡಿಚಡ್ಡಿಯು ಕಾಲಾಳೊಬ್ಬ ಬೆಳ್ಳಿತಟ್ಟೆಯಲ್ಲೊಂದು ಪತ್ರ ತಂದನು (ಹೃದಯ. ೩೨೯).

[ಮಂಡಿ₁ + ಚಡ್ಡಿ₁]

**ಮಂಡಿತ** (ಗು). ೧. ಶೋಭೆಗೊಂಡ ; ಅಲಂಕೃತವಾದ : ರವಿಕುಲದ ರಾಮಂ . . . ನಿಜಸತಿಯು ತೋರದೊಡೆಗಳ ಮೇಲೆ ಲಲಿತಮಣಿಮಕುಟ ಮಂಡಿತಮಸ್ತಕವನಿಳುಹಿ ಮಗ್ಗುಲಿಕ್ಕಿದನು (ಜತಕಾ. ೬–೩೦) ; ಗುರು ಮಲ್ಲಿಕಾರ್ಜುನಮಂಡಿತರ ಕೃಪೆಯಿಂ ಮಂಡಿತೋಕ್ತಿಯೊಳವರ್ಗಳಿತ್ತುದ್ದಂಡ ಮತಿಯಿಂದಿಳೆಗೆ ಬಸವಣದಂಡನಾಥನ ಕೃತಿಯನೊರೆದೆನು (ಬಸಪು. ೦–೧೧). ೨. (ಅಧಿಕಾರಕ್ಕಾಗಿ) ಸ್ಥಾಪಿಸಿದ ; ನೆಲೆಗೊಳಿಸಿದ : ಕದನಮಹೇಶ್ವರಂ ಪ್ರಚಣ್ಡಮಣ್ಡಳಾಗ್ರಮಣ್ಡಿತದೋರ್ದ್ದಣ್ಡಂ (ಕೆ೨ಇ. XX. ೪೭–೨೨ ; 1074). (ನಾ). ೩. ಅಲಂಕೃತನಾದವನು ; ಭೂಷಿತನಾದವನು : "ಮಂಡಿತಃ . . . ಪರಿಷ್ಕೃತಃ — ೫ ಅಲಂಕರಿಸಲ್ಪಟ್ಟವನ ಹೆಸರುಗಳು" (ಸಿದ್ಧಾಂತಿ. ೦೯೯). ೪. ಸ್ಥಾನ ; ಪದವಿ. ೫. ಕಪ್ಪೆ. ೬. ಕುದುರೆ. ೭. ಮನಸ್ಸು. ೮. ಹುಲ್ಲು : "ಮಂಡಿತಮೆನೆ ಪದಮಕ್ಕುಂ ಮಂಡಿತಮೆನೆ ಕಪ್ಪೆಯಕ್ಕು ಮಂಡಿತಮೆನೆ ತುರಗಂ ಮಂಡಿತಮೆನೆ ಮನಮಕ್ಕುಂ ಮಂಡಿತಮದು ತೃಣವೆನಿಕ್ಕು ಶಬ್ದಾಗಮದೊಳ್" (ಅಭಿಧಾನ. ೨೭). ೯. ಚಂದ್ರ. ೧೦. ಹಂಸ. ೧೧. ಕಮಲ. ೧೨. ಬೆಟ್ಟ. ೧೩. ಸಿಹಿ ; ಮಧುರ : "ಮಂಡಿತಮೆನೆ ಶಶಿಯಕ್ಕುಂ ಮಂಡಿತಮೆನೆ ಹಂಸೆಯಕ್ಕುಂ ಮಂಡಿತ ಕಮಲಂ ಮಂಡಿತಮೆನೆ ಗಿರಿಯಕ್ಕುಂ ಮಂಡಿತಮೆನೆ ಮಧುರಮಕ್ಕು ಶಬ್ದಾಗಮದೊಳ್" (ಅಭಿಧಾನ. ೨೮). [ಸಂ.]

**ಮಂಡಿಸು₁** 'ಮುಂಡಿಸು' ನೋ.

**ಮಂಡಿಸು₂**, ಮಂಡಯಿಸು (ಕ್ರಿ). ೧. ಪೀಠ ಮೊದಲಾದುವುಗಳ ಮೇಲೆ ಕುಳಿತು ಅದಕ್ಕೆ ಶೋಭೆಯನ್ನು ತರು : ಅಂಧನೃಪನನು ಹರುಷದಲಂದು ಮುನಿ ಮಂಡಿಸಿದನುನ್ನತಸಿಂಹಪೀಠದಲಿ (ಕುಮಾ.ಭಾ. ೦೬–೯) ; ಉಚಿತವ ಕೈಕೊಂಡು ನಾರದ ನೆವರತ್ನಖಚಿತಪೀಠದಲಿ ಮಂಡಿಸಿದ (ಪೋತಕ. ೩೩–೦೩). ೨. ಕುಳಿತುಕೊಳ್ಳು ; ಕೂಡು : ಮಂಡಿಸಿ ವನವನೆದೆಯಲಾ ದೋರ್ದಂಡಬಲ ಕಲಿನೃಪಭನಂದಿನ ಖಂಡಪರಶುವಿನಂತೆ ನೆಗಹಿದ ಮುಷ್ಟಿ ಕಿಡಿಗೆದರೆ (ಕೃಪಾಭಾ. ೬–೩೩–೦೯) ; ತಾನುಮವರೆಗಳೆಗೆ ಕೆಲದೊಳ್ ಮಂಡಿಸಿ ಬಾಲಲೀಲೆಯಂ ನೆನೆನೆನೆದು (ರಾಜಶೇ. ೦೪–೦೪) ; ಯಜಮಾನರು ನಡುವೆ ಉಯ್ಯಾಲೆಯ ಮೇಲೆ ಮಂಡಿಸಿದ್ದಾರೆ (ಕಪಾಟ. ೩೩).

೩. ಶಕ್ತಿಯನ್ನು ಕಳೆದುಕೊಂಡು ಕುಸಿದುಬೀಳು ; ಒರಗು : ಚೇತನಗುಂದಿ ದಿಗ್ದಂತಿ ಮಂಡಿಸಲಾಗ ಭೂತಲವೆಲ್ಲ ಕಂಪಿಸಿತು (ವೆಂಕಟ. ೩೮–೬೨). ೪. ಬಾಗಿಸು ; ಬಗ್ಗಿಸು : ಕವಿಯಂ ಮಂಡಿಸಿ [ಕಾಕಾಂ. ಮಂಟಿಸಿ, ಮೆಳ್ಳಿಸಿ] ಮಂಚುವಲ್ಲಿರಿದು ಕಣ್ಣಂ ಬಟ್ಟು ವಕ್ರಾಂಗಿ . . . ಶೋರ್ಪ ವಿಶಾರಂ ಸಭೆಗಾಗಳೇಂ ಪಡೆದುದೋ ವಕ್ರಪ್ರಕಾಶೋದಿತಾರವಮಂ (ರಸರ. ೨–೯೯) ; ಬಲಗಿವಿಯಂ ಮಂಡಿಸಿ ಮಣಿಪುತ್ರಂ (ಶೃಂಗಾರ.ಪ. ೪೯–೩). ೫. ಇರು ; ನೆಲಸು : ಐಕಿಲ್ವೆಟ್ಟನಣಾಗಿಗೆಡದೊಡಲಿನತ್ತಲ್ಲಿ ಮಂಡಿಸಿದ ಶಂಕರನಲ್ಲಿಯಿಂ (ಭಾಪಾಂ. ೦–೩೦) ; ವಿಸ್ತರಗೆಯ್ದು ನೋಡಿದಡೆ ಬ್ರಹ್ಮಾಂಡಸಮಸ್ತ ನಿನ್ನೊಳಡಗಿರುದು ಪ್ರಸ್ತವಿದೇನು ಕಾರಣ ಸ್ವಾಮಿ ನೀನೆನ್ನ ಹಸ್ತಾಬ್ಜದೊಳಗೆ ಮಂಡಿಸಿದೆ (ಪೋತಕ. ೨೦–೨೪). ೬. ನೆಡು ; ನಾಟು : ಮಂಡಿಸಿದವಕ್ತಿಗಳು ಶಿಲೆಗೊಳನಲಿ ತಳೋದರಿಯ (ಕುರಂಗ. ೩–೮–೨೪). ೭. ವಿಷಯವನ್ನು ಮುಂದಿಡು ; ಪ್ರತಿಪಾದಿಸು : ಜ್ಞಾನ ಕರ್ಮಗಳ ತಿಕ್ಕಾಟವನ್ನು ಬಿಂಡಿಸಿ ಇಲ್ಲಿಯೂ ಸಮನ್ವಯ ಸಿದ್ಧಾಂತವನ್ನೇ ಮಂಡಿಸುತ್ತಾನೆ ಶ್ರೀಕೃಷ್ಣ (ಶಾರದ. ೦೦೩) ; ಮುಂಕಾತ್ಯಕ್ಕೆ ಅಲ್ಲಮನ ಮುಂದೆ ತನ್ನ ಮನದ ಸಂದೇಹಗಳನ್ನು ಮಂಡಿಸಿ ಅದನಿಂದ ಸಮರ್ಪಕವಾಗಿ ಸಂದೇಹಗಳನ್ನು ಪರಿಹರಿಸಿಕೊಂಡು . . . ಸದ್ಯೋನ್ಮುಕ್ತೆಯಾಗುತ್ತಾಳೆ (ಅಕ್ಕಕು. ೦೩೯). ೮. [ರಾಜನೀ] ಶಾಸನಸಭೆ ಮೊದಲಾದುವುಗಳಲ್ಲಿ ಒಪ್ಪಿಗೆಯನ್ನು ಪಡೆಯಬೇಕಾದ ನಿರ್ಣಯ ಅಥವಾ ಠರಾವನ್ನು ಸಭೆಯಲ್ಲಿ ಪ್ರಸ್ತಾಪಿಸು : ಸಂಸತ್ತಿನ ಯಾವ ಸದಸದಲ್ಲಿಯೂ ಆ ವಿಧೇಯಕವನ್ನು ಮಂಡಿಸತಕ್ಕುದಲ್ಲ (ಭಾರಾಸ. ೩) ; ಕಾರ್ಯದರ್ಶಿ ಕೃಷ್ಣಮೂರ್ತಿಗಳು . . . ಬಜೆಟ್ಟಿನ ವಿವರವನ್ನು ಮಂಡಿಸಿದರು (ಮುರೀ. ೦೦೭). **ಮಂಡಯಿಸು** : ೯. ಶೋಭಿಸು ; ಕಂಗೊಳಿಸು : ಸರಧಿಯಂ ದಾಂಟಿ ಮೆಯ್ಸೆರ್ಚಿ ಮತ್ತಾಗಸದೊಳ್ ಮಂಡಯಿಸು ನಕ್ಷತ್ರಮೆಯಿಸುವ ಫಳಂ ಚಂದ್ರಸೂರ್ಯರ್ಕ್ಕಳಾ ಕೀರ್ತ್ತಿ ಸುರಾವಳಿಯಕ್ಕಾಗಿರೆ ಬಳೆವುದು (ಕ೨ಇ. IX–i. ೨೪೯–೩೦ ; 1147). [ಮಂಡನ + -ಇಸು]

**ಮಂಡುಕ** (ನಾ). ಕಪ್ಪೆ ; ಭೇಕ : ಅಡವಿಯ ಸತ್ವಸಾಂಖ್ಯಪದ ಪಕ್ಷಿಮದೊಳ್ ತ್ರಿಕಪಸ್ಥದಿಂದೆ ನೋಡಗುಬುತುಮಂತೆ ಪೊಸವರೆ ಮಂಡುಕಮಂ ಸಿತಪೀತವರ್ಣದಿಂದಷಟಿವಮಾ ಬಬೆಕ್ಕೆ ಸಿರೆ(ಲೆ)ಯಾಮೊಡೆ (ಅಶ್ವಿಶಾ. ೦೦ ೩).

[<ಪ್ರಾ. ಮಂಡುಕ / ಸಂ. ಮಂಡೂಕ]

**ಮಂಡೂಕ** (ನಾ). ೧. = ಮಂಡುಕ : "ಮಂಡೂಕಃ, ಪ್ಲವಗಃ . . . ಪ್ಲವಂಗಂ — ಈ ೨ ಕಪ್ಪೆ" (ಕಬ್ಬಿಗ. ೦೦೯–೯೦) ; ಮಂಡೂಕ ಶರನಿಧಿಯಂ ಲಂಘಿಸುದೆ ಪಳಗುಮಬ್ಧಿಗದು ಭಂಗಮೆ (ಧರ್ಮಾಮೃ. ೦–೯೯). ೨. ಒಂದು ಜಾತಿಯ ಕುದುರೆ. ೩. ಕುದುರೆಯ ಗೊರಸಿನ ತಳಭಾಗ. ೪. ಒಂದು ಬಗೆಯ ಸಸ್ಯ. [ಸಂ.]

**ಮಂಡೂಕಪರ್ಣ** (ನಾ). ಒಂದು ಬಗೆಯ ಮರ : "ಮಂಡೂಕಪರ್ಣಃ . . . ಶೋಣಕಃ, ಅರಳುಃ — ೧೨ ಹೆಮ್ಮರದ ಹೆಸರುಗಳು" (ಸಿದ್ಧಾಂತಿ. ೦೨೪). [ಸಂ.]

**ಮಂಡೂಕಪರ್ಣಿ** (ನಾ). ಒಂದು ಬಗೆಯ ಗ್ರಂದಿಗೆ ದ್ರವ್ಯ ; ಮಂಜಿಷ್ಠೆ : "ಮಂಜಿಷ್ಠಾ . . . ಮಂಡೂಕಪರ್ಣೀ, ಭಂಡೀರೀ, ಭಾಂಡೀ, ಯೋಜನವಲ್ಲೀ — ೯ ಮಂಜಿಷ್ಠೆ ಹೆಸರುಗಳು, ಇವು ಗ್ರಂಧಿಕದ್ರವ್ಯವು" (ಸಿದ್ಧಾಂತಿ. ೭೩೨). [ಸಂ. ಮಂಡೂಕಪರ್ಣೀ]

**ಮಂಡೂಕಾಸನ** (ನಾ). [ಯೋಗ] ಆಸನಗಳಲ್ಲಿ ಒಂದು ಬಗೆ: ಸಿದ್ಧಾಸನ ಸಿಂಹಾಸನ . . . ಮಂಡೂಕಾಸನ. . . ಅರ್ಥಾಸನಾದಿ ಎಂಬತ್ತುನಾಲ್ಕು ಆಸನಭೇದಂಗಳು (ಅಪೀಕ. ೦೩೦) ; ಮಂಡೂಕಾಸನ . . . ಈ ಆಸನದಲ್ಲಿನ ಚಲನವಲನಗಳು ಕಪ್ಪೆಯನ್ನು ಹೋಲುವುದರಿಂದ ಇದಕ್ಕೆ ಈ ಹೆಸರು (ಯೋಗಾ. ೦೦೦). [ಸಂ.]

**ಮಂಡೂಕಿ** (ನಾ). ೧. ಹೆಣ್ಣುಕಪ್ಪೆ. ೨. ಕುದುರೆಯ ಗೊರಸಿನ ಮೇಲಿರುವ, ಕಪ್ಪೆಯಂತಿರುವ ತ್ರಿಕೋನಾಕಾರವಾದ ರೇಖೆ : ಖುರದ ನಡುವೆ ತಳಮೆ(ಮಂ)ಬ ಪೆಸರಕ್ಕುಂ ತಳದ ನಡುವಣ ತ್ರಿಕೋಣರೇಖೆಗೆ ಮಂಡೂಕಿಯೆಂಬ ಪೆಸರಕ್ಕುಂ (ಅಶ್ವಶಾ. ೬೮-೨೬). [ಸಂ. ಮಂಡೂಕೀ]

**ಮಂಡೂರ** (ನಾ). ೧. ಕಬ್ಬಿಣದ ತುಕ್ಕು, — ಕಿಟ್ಟ : "ಮಂಡೂರಃ, ಸಿಂಹಾಣಂ—೨ ಕಬ್ಬಿಣದ ಕಿಟ್ಟಕ್ಕೆ ಹೆಸರುಗಳು" (ಸಿದ್ಧಾಂತ. ೩೦೯). ೨. ಕಬ್ಬಿಣದ ಕಿಟ್ಟದಿಂದ ಮಾಡಿದ ಕೆಂಪು ಭಸ್ಮ : ಮೆಣಸು. ಮಂಡೂರ. ರಜಸ್ಸು . . . ಪ್ರಾತಃಕಾಲದಲ್ಲಿ ಗ ಳ ತೂಕವಂ ಸೇವಿಸುವುದು (ಸಕವ. ೨೦೬). [ಸಂ.]

**ಮಂಡೆ** (ನಾ). ೧. ತಲೆ ; ಶಿರಸ್ಸು : "ತಲೆ ನೆತ್ತಿ ಮಂಡೆ" (ಶಬ್ದಮಂ. ೬೨) ; ಉತ್ಸುಕತನದಿಂ ಪೆಟ್ಟುವೆಚ್ಚಿ ಕಡುಪೆಸನಂ ಪೂಟ್ಟಿ ಸೊಸೆ ಮಾವನ ಮಂಡೆಯುಂ ಬೋಟಿಸಿದಳ್ (ಧರ್ಮಾಮೃ. ೬-೩೪) ; ಮಂಡೆ ಬೋಳಾದ ರೇನೋ ಹುಟ್ಟು ಬೋಳಾಗದನ್ನಕ್ಕರ (ಅದಪ. ೯-೦೫) ; ಕಂಡೆ ಕರುಣಾ ನಿಧಿಯ ಗಂಗೆಯ ಮಂಡೆಯೊಳಿಟ್ಟ ದೊರೆಯ (ಪುರಂದ. ೦-೧೯೫ ಕಲ್ಯಾ). ೨. ತಲೆಯ ಓಡು ; ಬುರುಡೆ : 'ಮಂಡೆಗೈಯ' ಪರಾ. ೩. (ಅಲಂ) ತಲೆಗೂದಲು : ವೃದ್ಧವಿಟೆಯೊರ್ವಳ್ತನ್ನ ಪೊಗದ ತೆರೆಯುಮಂ ಮಂಡೆಯ ನರೆಯುಮಂ ಕಂಡಪರೆಂದಡಿಗಡಿಗೆ ಮೊಗಕ್ಕೆ ತೆರೆಯಂ ತೆಗೆವುದಂ ಕಂಡು (ಕಾರ್ಕ್ಯಕ. ೦೦-೬೦ ವ) ; ಬೆನ್ನಲಿ ಬಿಟ್ಟ ಮಂಡೆಗಳ ಸುಯ್ಯ ಬಹಳದ ಭಟರು ತೊದಳಿಸುತೊಯ್ಯನೆಂದರು (ಕುಮಾ.ಅ. ೦೯-೬) ; ವೃದ್ಧಾಪ್ಯವಿಲ್ಲದೆ ಮಂಡೆ ನರೆವದು, ಕೆಂಪಾಗಿಹನು . . . ಈತನನ್ನು ಪಿತ್ತ ಪ್ರಕೃತಿಕನೆಂದು ಅರಿವುದು (ವೈದ್ಯಸಾ. I, ೦೩). ೪. ಅತ್ಯುತ್ತಮವ್ವಾದುದು ; ಶ್ರೇಷ್ಠವಾದುದು : ಬೇಡಿದ್ಯೆದೂರುಗಳು ನಮ್ಮಯ ನಾಡುಗಳ [ಪಾಠಾಂ. ನಾಡ ತಲೆ] ಮಂಡೆಗಳು (ಕುಮಾ.ಉ. ೯-೩೩). ೫. ದೊಡ್ಡದು ; ಗಾತ್ರವಾದುದು : 'ಮಂಡೆಕಾಗೆ' ಪರಾ. ೬. (?) : ಬಲದೊಳ್ ಪತ್ತಿದ ಮಂಡೆ ಚಮ್ಮಟಿಗೆ ಕೈವೀಣಂ ಬೆಡಂಗಾಗೆ (ಅಪಂಶ. ೦೦-೬೨); ಒಂದು ಕಾಲದಕ್ಕಿ ಸಿಕ್ಕಿದರೆ ಅಕ್ಕಿಯ ಕೊಟ್ಟು ಬಾಳೆ ಒಪ್ಪಿಸುವರು ತೋಟಕ್ಕೆ × × × ತೆಕಲ ಮಂಡೆ ೪ ನಾಲ್ಬಡರ ಒಪ್ಪ ಮುದ್ದಣದೇವರು (ಶಾಸನ. IX-ii, ೪೪೪-೩೯ : 1433).

**ಮಂಡೆಗೆ ನೀರು ತಳ್** = ಅಭಿಷೇಕ ಮಾಡು : ದೇವರ ಮಂಡೆಗೆ ನೀರುತಳಿಯುವರಿರಲಿಲ್ಲ (ಇಳರಾ. ೨೬). **ಮಂಡೆಬೀಳು** = ಶರೀರದಿಂದ ತಲೆಯು ಬೇರ್ಪಡು ; ಸಾಯು : ಚಂಡೀಮುಖಕ್ಷುತ್ತಿಪಾಶಗಳ ನೀಗಿಸಲು ಮಂಡೆ ಬೀಳಲಿ ಬಿಟ್ಟು ದುರ್ಧರಕಬಂಧವ ಚರಂಡಿಯಲಿ (ಪಪ್ಪರ್. ೦೩-೬). **ಮಂಡೆಮಾಣಿಕ** = (ಅಲಂ) ಶ್ರೇಷ್ಠವ್ಯಕ್ತಿ : ಇನಿವಾತುಗಳ ಸತ್ಪದಬಂಧವ್ಯಂಗ್ಯೋಕ್ತಿ ಧ್ವನಿಯರ್ಥಗೌರವದಿಂದೆ ತನಿರಸವಡೆದ ಮತ್ಕೃತಿಯ ಚಿತ್ತೈಸೆಲೆ ವನಿತೆಯ ಮಂಡೆಮಾಣಿಕವೆ (ಮೋಹತ. ೨೮-೨). **ಮಂಡೆಮಾಣಿಕ್ಯ** = ಮಂಡೆಮಾಣಿಕ : ವನಿತೆಯರ ಮಂಡೆಮಾಣಿಕ್ಯ ತಾನಾದ ಕಾರಣ ತನ್ನ ಸೌಂದರ್ಯ ಮಾಜಿಕೊಂಡಿರ್ಪಡೇಂ (ನವಮೋ. ೯-೦೦). **ಮಂಡೆಮಾರಿ**$_1$ = ತಲೆಗೆ ಕುತ್ತದಂತಿರುವವನು; ಪ್ರಾಣಾಪಾಯವನ್ನುಂಟುಮಾಡುವವನು ; ಒಂದು ಬಿರುದು : ಸ್ವಸ್ತಿಶ್ರೀಜಯ ಕಾಮಣ್ಣೀರಪೆಬ್ಬಾರ್ಣನ್ ಕಡಿತಲೆ ಮಣ್ಡೆಮಾರಿ ತೊಮ್ಬತ್ತೈವರ್ ಇಱಿದೊ (ಎಕ. IX (8), ಬೊತ್ತಾ. ೩೨-೬ ; ೯೦೦). **ಮಂಡೆ ಬೋಚು** = ತಲೆಯನ್ನು ಬೋಳಿಸಿಕೊಳ್ಳು ; ಮುಂಡನಮಾಡಿಸಿಕೊಳ್ಳು : ಮಂಡೆಬೋಚಿದಾ ಹೆಂಡಿರ ದಂಡೇ ವಿವಿಧಾಲಾಪಚಂಡಪ್ರಲಾಪದ ಓಲಗ ಬಾಜಿಸಿರಿ ! (ಗಂ. ೬೬-೩). **ಮಂಡೆಯಾಱುಳ್ಳವ** = ಆರುತಲೆಗಳುಳ್ಳವನು ; ಷಣ್ಮುಖ : ಶುಂಡಲ ಮೊಗನು ಮಂಡೆಯಾಱುಳ್ಳವ ಕೆಂಡಗಣ್ಣವನು ಕಂಗಳ ಗಂಡು ಮೂವರ ಚೆಲ್ವ ಹೆಡತಿ ಪೊಗಳ್ವರೆ. . . ಇಂದು ಕುಣಿಯೆಂದ (ಕೋಟಕ. ೩-೦೬೭). [ ದೇ.॥ ತಮಿ. ಮಣ್ಟೈ: ಮಲ. ಮಣ್ಡ; ತುಳು. ಕೊಡ. ಮಂಡೆ; ಕೋತ. ಮಂಡ್; ತೊದ. ಮಡ್ ]

**ಮಂಡೆಕತೆ** (ನಾ). (ಕರಾ) ಸಮಸ್ಯೆ; ಒಡಪು : ಒಂದು ಒಗಟನ್ನು ಬಿಡಿಸಿದಾಗ, ಒಂದು ಮಂಡೆಕತೆಯ ಗುಟ್ಟನ್ನು ಪ್ರಕಟಿಸಿದಾಗ ಆಗುವ ಆನಂದ ಅನುಪಮ (ಸಂಕೋಧ. ೦೯೬). [ ಮಂಡೆ + ಕತೆ ]

**ಮಂಡೆಕರಂಡೆ** (ನಾ). ಒಂದು ಬಗೆಯ ಗಿಡ ಮತ್ತು ಅದರ ಹೂವು : ಮಂಡೆಕರಂಡೆ(ಬೇಸಿಗೆಯಲ್ಲಿ ಗದ್ದೆಗಳಲ್ಲಿ ಬೆಳೆಯುವ ಗೋಲಿಯಾಕಾರದ ಕೆಂಪುಗೊಂಡೆಹೂವುಳ್ಳ ಗಿಡ)ಯ ಸೊಪ್ಪಿನ ರಸ ಎರಡುತೊಲೆಯಷ್ಟನ್ನು ಬಿಸಿಮಾಡಿ ಅರ್ಧತೊಲೆ ಕಾಳುಮೆಣಸಿನ ಪುಡಿ ಬೆರೆಸಿ ಬಿಸಿಬಿಸಿ ಏಳುದಿನ ಬೆಳಗ್ಗೆ ಕುಡಿದರೆ ಪೂರ್ಣಗುಣ (ಮನೆಮ. ೯೮). [ ಮಂಡೆ$_?$ + ಕರಂಡೆ ]

**ಮಂಡೆಕಾಗೆ** (ನಾ). ದೊಡ್ಡ ಆಕಾರದ ಒಂದು ಬಗೆಯ ಕಾಗೆ : ಮಂಡೆಕಾಗೆ ಕಾಗೆಯಲ್ಲೆ ದೊಡ್ಡದು. ಅದರ ಕತ್ತು, ಎದೆಗಳು, ತಲೆ, ರೆಕ್ಕೆಗಳಷ್ಟು ಕಡುಪಾಗಿಲ್ಲ (ಪಾಂಶ್ರ. III, ೦೬೩೨). 'ಡೊಂಬಕಾಗೆ' ಪರಾ. [ ಮಂಡೆ + ಕಾಗೆ./ ತುಳು. ಮಂಡೆಕಕ್ಕೆ ]

**ಮಂಡೆಗೈಯ** (ನಾ). ತಲೆಬುರುಡೆಯನ್ನು ಕೈಯಲ್ಲಿ ಧರಿಸಿರುವವನು : ಕಪಾಲಧರ; ಶಿವ : ಜೈನರು ... ತಂಡತಂಡದಿ ಬಂದು ನೆರವುತಲಿರ್ದರು ಮಂಡೆಗೈಯನ ಹಳಿವುತಲಿ (ಅಬ್ಬಲಿ. ೪-೦೯). [ ಮಂಡ + ಕೈ$_{12}$ (< ಕೆಮ್$_2$) + — ಅ$_7$ ]

**ಮಂಡೆತರಿಗೆ** 'ಮಂಡೆದೆರಿಗೆ' ನೋ.

**ಮಂಡೆದೂಗು** (ಕ್ರಿ). (ಆಶ್ಚರ್ಯ, ಮೆಚ್ಚುಗೆ ಮುಂತಾದುವುಗಳಿಂದ) ತಲೆಯನ್ನು ಅಲುಗಿಸು,—ಒಲೆದಾಡಿಸು : ಕುವರರು ನೋಳ್ಪರು ನಗುವರು ಮಂಡೆದೂಗುವರು ಕೈಮುಗಿವರುಬ್ಬುವರು . . . ಅಜ್ಞನ ಭುವನತ್ರಯಾದ್ಭುತೋಜ್ವಲಕೆ (ಭರತ. ೪೩-೩). [ ಮಂಡೆ + ತೂಗು$_1$ (< ತೂಂಕು$_1$) ]

**ಮಂಡೆದೆರಿಗೆ, ಮಂಡೆತೆರಿಗೆ** (ನಾ). ಪ್ರತಿಯೊಬ್ಬ ವ್ಯಕ್ತಿಯೂ ಕೊಡಬೇಕಾದ ತೆರಿಗೆ; ತಲೆಗಂದಾಯ : ಕ್ರಿ.ಶ. ೧೩೭೭ರಲ್ಲಿ ಸೇರಿದ ಪಾರ್ಲಿಮೆಂಟಿನವರು ಹಿಂದಾದದ್ದನ್ನೆಲ್ಲ ರದ್ದುಮಾಡಿದ್ದಲ್ಲದೆ ಮಂಡೆದೆರಿಗೆ ಎಂಬ ಹೊಸತೆರಿಗೆಯನ್ನು ಏರ್ಪಡಿಸಿದರು (ಇಂಗ್ಲಂಡ. ೬೩); ಜಿಜಿಯಾಯೆಂಬ ಮಂಡೆದೆರಿಗೆಯನ್ನು ಬಿಟ್ಟುಕೊಟ್ಟನು (ಅಕ್ಬರ. ೧೨೯). **ಮಂಡೆತೆರಿಗೆ :** ತಮ್ಮ ಮೇಲೆ ಮತ್ತೆಲ್ಲಿ ಮಂಡೆತೆರಿಗೆ ಬೀಳುತ್ತದೋ ಎಂಬುದಾಗಿ ಶಂಕಿಸಿದ್ದ (ಬಡ್ತಿ. ೦೪೦). [ಮಂಡೆ + ತೆರಿಗೆ ( < ತೆಱಿಗೆ). / ತುಳು. ಮಂಡೆತೆರಿಗೆ]

**ಮಂಡೆದೋಱು** (ಕ್ರಿ). ಗೋಚರವಾಗು ; ಕಾಣಿಸಿಕೊಳ್ಳು : ಗಂಡುತನವುಳ್ಳವರು ರಣದಲಿ ಮಂಡೆದೋಱುವರೆನುತ ಬಳಿಕೀ ರಂಡೆಯುಯ್ಯಲು ಬೇಡ ಕಾದುವರುಂಟೇ ಕರೆಯೆಂದ (ಕೌಶಿರಾ. ೨೧-೩೦). [ ಮಂಡೆ + ತೋಱು ]

**ಮಂಡೆನೋವು** (ನಾ). ತಲೆನೋವು ; ಶಿರೋವೇದನೆ : "ಮಂಡೆ ನೋವದು ಶಿರೋವ್ಯಾಧಿಯೆನಿಕುಂ" (ಮಂಗರಾ. ೦೦೪-೪) ; ತೃಷೆ, ಮಂಡೆ ನೋವು, ಪ್ರಲಾಪ ಇವಿಷ್ಟೂ ಅಮ್ಲಪಿತ್ತಲಕ್ಷಣ (ವೈದ್ಯಸಾ. I, ೪೪೫). [ಮಂಡೆ + ನೋವು]

**ಮಂಡೆಬೇನೆ** 'ಮಂಡೆವೇನೆ' ನೋ.

**ಮಂಡೆಮಣಿ** 'ಮಂಡೆವಣಿ' ನೋ.

**ಮಂಡೆಮಲಗು** (ನಾ). ಮಲಗುವಾಗ ತಲೆಗೆ ಆಶ್ರಯವಾಗುವಂಥ ಸಾಧನ ; ತಲೆದಿಂಬು : ಮಣಿಮಂಚ ಸುಪ್ಪತಿಗೆ ಮಂಡೆಮಲಗುಗಳಷ್ಟ ಪೊಱೆಯಾಳ್ಗಳಿಟ್ಟಣಿಸಿ ನಡೆತಂದುದೇವೇಳ್ವೆನು (ಶಬ್ದ. ೪೬-೪೦). [ಮಂಡೆ + ಮಲಗು$_2$ ( < ಮಲಂಗು$_2$)]

**ಮಂಡೆಮಾರಿ$_1$** 'ಮಂಡೆ' ಪರಾ.

**ಮಂಡೆಮಾರಿ$_2$** (ನಾ). ತಲೆಸುತ್ತು ಮುಂತಾದ ತಲೆಗೆ ಸಂಬಂಧಿಸಿದ ರೋಗ : ಅವನಿಗೇನಾಗಿದೆ ಮಂಡೆಮಾರಿ? ಕಲ್ಲುಗುಂಡಿನ ಹಾಗೆ ಇದ್ದಾನೆ (ಚಾಳಗ. ೦೬) ; ನಿಮಗೆ ದುಡಿಯಲಿಕ್ಕೆ ಮಂಡೆಮಾರಿ. ಮನೆಯಲ್ಲಿ ಸುಮ್ಮನೇ ಕೂಡುವುದೇ ಕೂಡುವುದು (ಪರಾವ. ೦೩೯).

[ ← ತುಳು. ಮಂಡೆಮಾರಿ]

**ಮಂಡೆಯ** (ನಾ). (?) : ಮಣ್ಣೆಯ ಗಾವುಂಣ್ಡನ ಮಗಂ ಪೃಥುವೀರಾಮ ಸೆಟ್ಟಿ ಬಿಡವಂ ಕಟ್ಟಿಸಿದೊಡೆ (ಎಕ. X, ಮುಳಬಾ. ೨೦೬-೨೦:1000). [ ? ]

**ಮಂಡೆವಣಿ**, ಮಂಡೆಮಣಿ (ನಾ). ೧. (ಅಲಂ) ಶ್ರೇಷ್ಠವ್ಯಕ್ತಿ; ಅಗ್ರೇಸರ: ನೃಪತಿ . . . ಚಂಡಸೇನೆಯನೊಳಪೊಕ್ಕೆಱಿ ತಿವಿದನು ಮಂಡಳಿಕರ ಮಂಡೆವಣಿಯು (ಜೀವಂಧಾಂ. ೩-೩೬). **ಮಂಡೆಮಣಿ** : ೨. ಶ್ರೇಷ್ಠವಾದ ರತ್ನ : ಕಂಜಾಕ್ಷಿಯ ಮಂಡೆಯೊಳತಿರಂಜಿಸುವನುಪಮದ ಮಂಡೆಮಣಿ ನೆಲೆಸಿರ್ಕುಂ (ಪದ್ಮಾರ. ೨-೩೩). [ಮಂಡೆ + ಮಣಿ$_3$]

**ಮಂಡೆಬೇನೆ**, ಮಂಡೆಬೇನೆ (ನಾ). = ಮಂಡೆನೋವು : ಕೊಂಡಯುರಾಡಿದ ನುಡಿಯಿಂದ ಬಂದುದೊ ಮಂಡೆಬೇನೆಯೊ ಸವತಿಯರ ತಂಡದಿಂದಾದುದೊ ಪೇಳೀ ಚಿಂತೆಯು (ಕುರಾಣಾಂ. ೨೬-೦೪). **ಮಂಡೆಬೇನೆ** : ನಸ್ಯವಂ ಮಾಡಿಸಲು . . . ಮಂಡೆಬೇನೆ . . . ಸ್ವರಭಂಗ ಇವಿಷ್ಟನ್ನೂ ಪರಿಹರಿಸುವದು (ವೃತ್ಯಶಾ. ೧, ೩೩). [ಮಂಡ + ಬೇನೆ]

**ಮಂಡೆಶೂಲೆ** (ನಾ). = ಮಂಡೆನೋವು : ಮಂಡಶೂಲೆಗೆ :– ಹುಳಿಎಣ್ಣೆಗೆ ಕಟುಸೋರೆಯನ್ನು ತಂದು ಅರೆದು ಸಾಮಕ್ಕಿಯನ್ನು ಹಾಕಿ ಬೇಯಿಸಿ ಮಂಡೆಗೆ ಹಾಕಿ ಕಟ್ಟಿ (ಬಿಷ್ಮವಿ. ೦೪೬). [ಮಂಡೆ + ಶೂಲೆ$_1$]

**ಮಂಡೆಸೀಗೆ** 'ಮಂಡಸೀಗೆ' ನೋ.

**ಮಂಡೆಸುತ್ತು** (ನಾ). ೧. ತಲೆತಿರುಗುವುದು : ತಲೆಸುತ್ತು ಎಂಬುವನ್ನೇ ಕೆಲವುಕಡೆಗಳಲ್ಲಿ ಮಂಡೆಸುತ್ತು ಎಂದು ಹೇಳುತ್ತಾರೆ (ರೂಢಿ). ೨. ರುಮಾಲು ; ಪೇಟ : ಒತ್ತಿ ಬೇಡುತ ಮಂಡೆಸುತ್ತಿನೊಳಿತ್ತಿ ಕಾಲಂ ಕಟ್ಟಿ (ಬಸವು. ೪೪-೬೦). [ಮಂಡೆ + ಸುತ್ತು$_2$]

**ಮಂಡೆಹಱಿಕ** (ನಾ). ತಲೆಗೂದಲನ್ನು ಕೀಳಿಸಿಕೊಂಡವನು : ಜೈನಸಂನ್ಯಾಸಿ ; ಶ್ರಮಣ : ಕಂಡ ಮಾತ್ರದೊಳು ಕೈವಲ್ಯಸುಖವನೀವ ಪೆಂಡವಾಸವನುಱಿ ತೊಱಿದು ಮಂಡೆಹಱಿಕರ ಮಾತನು ಕೇಳ್ವುದಕೆ ಮನಗೊಂಡೆಯಲಾ (ಶೇಖಸಂ. ೩೪-೩೩).

[ಮಂಡೆ + ಹಱಿ$_1$ ( < ಪಱಿ$_1$) + – ಕ$_3$]

**ಮಂಡೆಹುಣ್ಣು** (ನಾ). ತಲೆಯಲ್ಲಿ ಏಳುವ ಹುಣ್ಣು : ತಲೆಕಜ್ಜಿ : ಅಕ್ಕಿಹೊಡೆಯ ಸಪ್ಪುಲವನ್ನು ಒಳ್ಳೆಣ್ಣೆಯಲ್ಲಿ ಅರೆದು ಪೂಸೆ ಮಂಡೆ ಹುಣ್ಣು ಮಾಣ್ಗುಂ (ಬಿಷ್ಮವಿ. ೬೬). [ಮಂಡೆ + ಹುಣ್ಣು (<ಪುಣ್)]

**ಮಂಡೋದಕ** (ನಾ). ೧. ದೋಸೆ, ಇಡ್ಲಿ ಮುಂತಾದುವು ಮೆದುವಾಗಲು ಬೆರಸುವ ಉದ್ದು ಮುಂತಾದ ಹಿಟ್ಟು : ಹುದುಗು. ೨. ಅನೇಕ ವರ್ಣಗಳಿಂದ ಕೂಡಿದುದು; ನಾನಾವರ್ಣಗಳ ಮಿಶ್ರಣ : ' ಮಂಡೋದಕಚಿತ್ರ ' ಪರಾ. [ಸಂ.]

**ಮಂಡೋದಕಚಿತ್ರ** (ನಾ). " (ಗೋಡೆಯ, ಚಾವಣಿಯೊಳಮೈಯ) ಗಾರೆ ಒಣಗುವುದಕ್ಕೆ ಮೊದಲೇ ಅದರ ಮೇಲೆ ನೀರುಬಣ್ಣಗಳಿಂದ ಬರೆದ ಚಿತ್ರ : ಮಂಡೋದಕಚಿತ್ರ ; ಭಿತ್ತಿಚಿತ್ರ " (Fresco. ಇ:ಕಬಿ): ಮನಮೋಹಕವಾಗಿ ಬರೆದಿದ್ದ ಚಿತ್ರವು ರೇಖಾಚಿತ್ರವಾಗಿರದೆ ಬಣ್ಣದಿಂದ ಬರೆದಿದ್ದ ಮಂಡೋದಕಚಿತ್ರವಾಗಿದ್ದಿತು (ಹೇಮಂಥ. ೩೯೩). [ಸಂ.]

**ಮಂಡೋಳ** (ನಾ). ಒಂದು ಬಗೆಯ ವಿಷಸರ್ಪ : ಬೇರೆ ವಿಷಯುಕ್ತ ಸರ್ಪಗಳು ಜಿಣಗೀಹಾವು (ಘುಸರ್), ಮಂಡೋಳ (ಘೋಣಸ) . . . ಅಜಗರ ಮುಂತಾದವುಗಳು ಪ್ರಸಿದ್ಧ ಉಂಟು (ಕಣಗ. ೬೬).

[←ಮರಾ. ಮಾಂಡೂಳ, ಮಾಂಘೂಳ, ಮಾಡೂಳ, ಮಾಘೂಳ]

**ಮಂತ**, ಮಂತು$_1$ (ನಾ). ೧. ಕಡೆಯುವ ಕೋಲು : ಕಡೆಗೋಲು : ಥಕಾರಕ್ಕೆ ತಕಾರಂ . . . ಮಂಥ_ಮಂತ ; ಮಿಥಿಳಾ-ಮಿತಿಳೆ (ಶಮದ. ೨೩೩ ಸೂತ್ರ). ೨. ಮೊಸರಿನ ಮೇಲಿನ ಒಡಕಲಾದ ನೀರು : ನಿಡಿ : ಮುಂತಮೆಂದುಂ ಕಡೆಗೋಲುಂ ಮೊಸರ ಮೇಲಿನ ನಿಡಿಯುಮಕ್ಕುಂ (ಶಮದ. ಪ. ೨೬೯ ಸೂತ್ರ). ೩. (?) : ಆತನಂ ನೋಯಿಪುದೇಂ ಪುರುಷಾರ್ಥಮೆ ಮಂತ್ರದೊಳೇಂ ಕರಿ ಹರಿಯೊಳ್ ಸೆಣಸಿ ಪೋದರ್ ನಿರ್ವಹಿಸುಗುಮೇ (ಶಾಂತಿಪು. ೩-೮೩). **ಮಂತು$_1$** : ೧. ಮಂದರ ಪರ್ವತ್ರಮಂ ಮಂತುಮಾಡಿ ಪಾಲ್ಗಡಲ ಮಥನವನೆಂತು ಮಾಡಿದರೊ (ಸೌಗಂಧಿ. ೩೦೩-೪) ; ನಗುಪಾತ್ರ ಪರಿಮಳದ ಪಸರಿಸುವ ಕುಸುಮ ದುಗುಡ ಪಾತ್ರವ ಕಡೆದು ಸತ್ತ್ವವೆತ್ತುವ ಮಂತು ಬಗೆದೆರಡನುಂ ಭುಜಿಸು (ಮಂಕುತಿ. ೪೩೪). ೪. ಕಡೆಯುವುದು : ಮಥಿಸುವುದು : (ಕ).

[< ಸಂ. ಮಂಥ]

**ಮಂತಣ$_1$**, ಮಂತಣೆ$_1$ (ನಾ). ೧. ಆಪ್ತರೊಂದಿಗೆ ಯಾವುದಾದರೂ ಗಹನವಾದ ವಿಷಯವನ್ನು ಗುಟ್ಟಾಗಿ ಆಲೋಚಿಸುವುದು : ಮಂತ್ರಾಲೋಚನೆ : " ಮಂತಣಮೆಂದೇಕಾಂತಂ " (ಕಶಬ್ದ. ೬೬-೩೦೨); ಮಂತ್ರಿಯಿಲ್ಲದರಸು ಮಂತಣಮಿ[ಶಾಕಾಂ. ಮನ್ನಣೆಯಿ]ಲ್ಲದ ನೃಪನೋಲಗಮೆಣೆಯಿಲ್ಲದ ಚಕ್ಕವಕ್ಕಿ ಸೊಗಯಿಸಿದಪುದೇ (ಅಜಿತ. ೬-೯೬); ಮಂತಣಕಂ ನೆಗಱಿ ಬಂದರೆನಿಸಿರ್ದುಂ ತಾಂ ಮಂತಣಮುಸಿರದೆ ಕೆಲರಾಮಂತಣ ಮುಂಡಂತೆ ಪೆಱರ ನಯದೊಳೆ ತಣಪರ್ (ಕಾವ್ಯಾವ. ೩೩೩). ೨. ಉತ್ತಮವಾದ ರಾಜನೀತಿ : ಪುಸಿವುದೆ ತಪ್ಪು ಕೊಟ್ಟಱಿಱಿಕೊಳ್ವುದೆ ಮಂತಣಂ (ಎಕ. II, ೦೩೩-೪೩ ; ೪೮೨). ೩. ಬುದ್ಧಿವಾದ ಹೇಳುವುದು : ಸಂಜೀವಕಂ ದಾಮಪಾಮಕನಾದಂ ಭವದಿಷ್ಟಸೇವಕಗಣಕ್ಕೇಂ ಪರ್ಚುವೇಂ ಮಂತಣಂ (ಪಂಚತಂ. ೯೬-೨೦). ೪. ಆಲೋಚನೆ : ವಿಚಾರ : ಭವದೀಯ ವಿಯೋಗದಿಂದೇಂ ಮಂತಣಂ (ನೇಮಿಪು. ೪-೯೪). ೫. ರಹಸ್ಯವಾದ ಮಾತುಕತೆಯಾಡುವ ಸ್ಥಳ ; ಮಂತ್ರಾಲೋಚನೆಯ ಸ್ಥಳ : ಚಿಂತಪು ಮಂತಣಂ ದುಗುಡದೋವರಿ ಜಾಡ್ಯದ ಬೀಡು (ದಶಕು. ೮-೨೩೬). ೬. (ಅಲಂ) ಗುಂಪು; ಸಮೂಹ : ವಿರಚಿಪ ಮಾಲೆಗಾರ್ತಿಯರ ಮಂತಣ ಮೊಪ್ಪುಗುಮಲ್ಲಿ ಸಂತತಂ (ರಾಜಶೇ. ೨-೦೦೪). ೭. ಒಟ್ಟಿಲು ; ರಾಶಿ : ಬಾಳೆಯ ಹಣ್ಣಿನಿಕ್ಕೆಯ ಮಧೂಫಲದ ಮಂತಣದ ನಾರಿಕೇಳದ ನೆರವಿಯ ಸರ್ವಫಲಮಸ್ತುಸಂತಾನಮಂ (ಕೇಶಿರ. ಪ. ೩೦೪-೦೦). **ಮಂತಣೆ$_1$** : ೪. ವಿಧಾತ್ರಂ ಮಂತಣೆಯಂ ಮಾಡಿದನಪ್ಪ ಮಾಯ್ಕಲೆಯೊಳಾತ್ಮಸ್ಥಾಯ್ಯನ ಪಾಯ್ವನಂ (ಸೌಇಇ. XX. ೨೦೨-೬೦; 1244).

**ಮಂತಣದ ತೊಟ್ಟಿ** = ರಾಜನು ಇತರರೊಂದಿಗೆ ಸಮಾಲೋಚನೆ ಮಾಡುವ ಶಾಲೆ._ಮಂಟಪ : ಮೈಸೂರ ಅರಮನೆ, ಮನ್ತಣದ ತೊಟ್ಟಿ (ಸಂಗಗಂ. ೪೩-೦ ). **ಮಂತಣದ ಮಂದಿರ** = ಮಂತ್ರಾಲೋಚನೆಮಾಡುವ ಭವನ : ಅವಳು ಮಹರೆಯವರ ನುಡಿಗೆ ಕಿವಿಗೊಡದೆ ಬಿರುಗಾಳಿಯಂತೆ ಮಂತಣದ ಮಂದಿರದೊಳಗೆ ನುಗ್ಗಿದಳು (ಹಾಹುತ್. ೪೦). **ಮಂತಣದ ಸಾಲೆ** = ಮಂತಣದ ಮಂದಿರ : ಚಿತ್ರಶಾಲೆಯೊಳಿನಿಸೂರ್ಮೆ ಮಂತಣದ ಸಾಲೆಯೊಳಂದಿರದೊರ್ಮೆ . . . ಪೊಱುತ್ತಗಳೆವಂ ಕವಿತಾಕಳಿಕಾಮ್ರಕೋಕಿಳಂ (೦ಲಾಪ. ೪-೦೨) ; ಸಾಂತಣ್ಣ ಮಂತ್ರಣದ ಸಾಲೆಯಲ್ಲಿ ಕುಳಿತು ಅಧಿಕಾರಿಗಳಿಂದ ಬಂದ ಓಲೆಗಳನ್ನು ಪರಿಶೀಲಿಸುತ್ತಿದ್ದಾಗ (ಹಾಹುತ್. ೦೦೦).

[<ಪ್ರಾ. ಮಂತಣ. / ಸಂ. ಮಂತ್ರಣ]

**ಮಂತಣ$_2$**, ಮಂತಣೆ$_2$ (ನಾ). ೧. ಕಡೆಗೋಲು : ' ಮಂತಣಸೂಲ ' ಪರಾ. **ಮಂತಣೆ$_2$** : ೨. ಅಡಗಿಸುವಿಕೆ : ಮತೋಟಿಗೆ ತರುವುದು :

ಬಿನ್ನಪಂಗೆಯ್ದು ಬಸಂತನ ಮಂತಣದ ಮಾತುಂ ಸೊಕರ್ಣನ ಮಂತಣೆಯು ಮಾವಂತನ ಮಾತುಂ ಮನ್ನಿಸುವಂತೆ ಮನ್ನಿಸಿ (ಕಲ್ಯಾಣ. ೦೬೦).
[<ಪ್ರಾ. ಮಂಥಣ./ಸಂ. ಮಂಥನ]

**ಮಂತಣಂಗೊಳ್**. ಮಂತಣಂಗೊಳು, ಮಂತಣಗೊಳು (ಕ್ರಿ). ೧. ಮಂತ್ರಾಲೋಚನೆಮಾಡು: ಸಲಹೆಯನ್ನು ಕೇಳು : ದೂತಿಯೊರ್ವಳ್ ... ಓಲಗಂ ಪರೆಯೆ ಸಚಿವಂಬೆರಸು ಮಂತಣಂಗೊಳ್ಳ ರಾಯನೆಡೆಗೈತಂದು (ರಾಮಾಶ್ವ. ೦೯-೦೩). **ಮಂತಣಂಗೊಳು** : ೧. ಪಲವು ಪಿಸುಣರ್ ಪಾತಕರ್ ನೆರೆದು ತಾಮೆಲ್ಲರೊಲವಿಂ ಮಂತಣಂಗೊಳುತೆ ಗುಜುಗುಜು ಗುಟ್ಟಿ (ಪದ್ಮರಾ. ೬-೨). **ಮಂತಣಗೊಳು** : ೨. ಆಲೋಚಿಸು : ವಿಚಾರಮಾಡು : ಚಿಂತೆರಪಿತರಾಗಿಹ ತನುಜರ ಕಂಡು ಮಂತಣಗೊಂಡು ಮಾನವಲಿ (ಭಕ್ತಿ. ೦೬). [ಮಂತಣ₁ + ಕೊಳ್₁]

**ಮಂತಣಂಗೊಳು** 'ಮಂತಣಂಗೊಳ್' ನೋ.

**ಮಂತಣಂಬಡೆ** (ಕ್ರಿ). ಗುಂಪುಗೂಡು ; ಒಟ್ಟಿಗೆ ಸೇರು : ತರುಬಿಡಿದ ರಾಜಪುತ್ರರಿಂ ಮಂತಣಂಬಡೆದ ಮಂತ್ರಿಗಳಿಂ . . . ಪೊಸುಪಸುರ್ವಿಂದ ರೊಸಗೆ ಪಿಂಗೆ ಮಿನುಗುತ್ತಿರ್ದುದು (ರಾಜಶೇ. ೬-೩ ವ). [ಮಂತಣ₁+ಪಡೆ₁]

**ಮಂತಣಗಾರ್ತಿ** (ನಾ). ಏಕಾಂತದಲ್ಲಿ ಸಲಹೆ ಕೊಡುವವಳು : "ಪಚ್ಚುಗೆಗಾರ್ತಿ, ಮಂತಣಗಾರ್ತಿ_ಈ ಎರಡು ಏಕಾಂತದವಳ್" (ಶಶಾ. ೬೨-೩೭೯). [ಮಂತಣ₁ + —ಕಾಱ + —ತಿ₁ (<—ಇತ್ತಿ)]

**ಮಂತಣಗೆಯ್**, ಮಂತಣಗೈ (ಕ್ರಿ). ೧. ಮಂತ್ರಾಲೋಚನೆಯನ್ನು ಮಾಡು ; ಸಮಾಲೋಚಿಸು : ನೆನೆದು ರಣಭಂಗಮಂ ಸಕಲದೈತ್ಯರ್ ತಮ್ಮ ಮನದಹಂಕೃತಮಳಿದು ದುಃಖದಿಂ ನೋವುತಿರ್ಪನಮಂಧಕಾಸುರಂ ಕರೆಸಿದಂ ದೊರೆದೊರೆಗಳಂ ಮಂತಣಗೆಯ್ಕಲು (ವೀಭಕ್ತಿ. ೩೦-೨). **ಮಂತಣಗೈ** : ೨. ಆಲೋಚಿಸು ; ವಿಚಾರಮಾಡು : ಅರಸನಚ್ಚರಿ ಪಟ್ಟು ಮನದಿ ಮಂತಣಗೈದು ಮಗುಳವರೊಳೆಂತೆಂದನು (ಶ್ರೀರಂ. ೩-೯).
[ಮಂತಣ₁ + ಕೆಯ್₁]

**ಮಂತಣಗೈ** 'ಮಂತಣಗೆಯ್' ನೋ.

**ಮಂತಣಗೊಳು** 'ಮಂತಣಂಗೊಳ್' ನೋ.

**ಮಂತಣಮಿರ್** (ಕ್ರಿ). ೧. ಸಮಾಲೋಚನೆ ಮಾಡು ; ಮಂತ್ರಾಲೋಚನೆಯಲ್ಲಿ ತೊಡಗು : ಅತಿರಥಮಹಾರಾಜಂ ಮಂತ್ರಿವರ್ಗಳೊಡನೆ ಮಂತಣಮಿರ್ದಲ್ಲಿ ಮಂತ್ರಿವರ್ಗಳನಿಂತೆಂದು ಬೆಸಗೊಂಡಂ (ವಡ್ಡಾರಾ. ೯೦-೨೦) ; ದುಶ್ಶಾಸನ ಕರ್ಣ ಶಕುನಿ ಸೈಂಧವರೆಂಬ ದುಷ್ಟಚತುಷ್ಟಯದೊಳ್ ಮಂತಣಮಿರ್ದ (ಗಂಪಭಾ. ೬-೬೬ ವ). ೨. ಆಲೋಚಿಸು : ಅಂತು ಕಿಱಿದುಪೊತ್ತು ಮನದೊಳೆ ಮಂತಣಮಿರ್ದು ನಿಶ್ಚಯಿಸಲಱಿಯದೆ (ವರ್ಧಮಾ. ೩-೦೬ ವ) ; ಮನದೊಳ್ ಮಂತಣಮಿರ್ದು ಲಕ್ಷ್ಮಣಂ ಸಭೆಯಿನೆಟ್ಟು ಪೋಪುದುಂ (ಶಂರಾಪಾ. ೬-೦೩೯ ವ). [ಮಂತಣ₁ + ಇರ್₁]

**ಮಂತಣಮಟ್ಟೆ** (ನಾ). ಆಲೋಚನೆಯ ಮಾರ್ಗ : ಸಲಹೆಯ ರೀತಿ : ಮಾಯಾಸಮರ್ಥರಿರ, ತಿಳಿಯಲಾಟಿಪೆನಿಲ್ಲಿಗೇಂ ಮುಂದೆ ಪದನೆಂಬ ನಿಮ್ಮ ಮಂತಣಮಟ್ಟೆಯುಂ (ಶ್ರೀರಾಮಾ. ೩೩೬-೦೦೯). [ಮಂತಣ₁ + ಬಟ್ಟೆ₁]

**ಮಂತಣಶಾಲೆ**, ಮಂತಣಸಾಲೆ (ನಾ). ಮಂತ್ರಾಲೋಚನೆ ಮಾಡುವ ಮನೆ : ಮಾರಿಯ ಮಂತಣಶಾಲೆಯೆಂದೆನಿಪಾ ಘೋರಾಕಾರವನಾಂತ ಪೇರಾಲದಡಿಯೊಳು ವಿಕೃತಾಕಾರದ ಕೂರಾಳಿರ್ದ ಸದೊರ್ವ (ಶ್ರೀಪಾಲ. ೬-೩೬) : ಸಂಜರಾಜಯ್ಯನವರು ಟಿಪೂಸುಲ್ತಾನರ ದಿವಾನರನ್ನು ಅರಮನೆಯ ಮಂತಣಶಾಲೆಯಲ್ಲಿ ಕುಳ್ಳಿರಿಸಿ ... ತಾವೂ ಕುಳಿತುಕೊಂಡರು (ಕೃಷ್ಣಭೂ. ೩೬). **ಮಂತಣಸಾಲೆ** : ಮಂತಣಸಾಲೆಗೆ ಬಂದನಿಂದ್ರಸಿಂಧುಗತಿ ರೇವತೀಧವನುಮುದ್ಧವನುಂ ಬರೆ ರುಕ್ಮಿಣೀಧವಂ (ಜಗಭಿ. ೦೩-೯೬); ಓಲಗಸಾಲೆ ಮಂತಣಸಾ[ಪಾಠಾಂ. ಶಾ]ಲೆ . . . ಸುಚಿತ್ರಸಾಲೆಗಳೊಳಿಸಿದಳು ಲೋಲಲೋಚನೆ ರಾಮನನು (ಕಃರಾಸಾಂ. ೩೩-೯೨): ರಾಜನೂ ಮಂತಣಸಾಲೆಯ ಬಾಗಿಲಲ್ಲಿ ಕಾದು ನಿಂತಿದ್ದ ಪ್ರಭಾಚಂದ್ರರನ್ನು ಕರೆದು ಕೊಂಡನು (ಸವಿ. ೨೨). [ < ಸಂ. ಮಂತ್ರಣಶಾಲಾ ]

**ಮಂತಣಸಾಲೆ** 'ಮಂತಣಶಾಲೆ' ನೋ.

**ಮಂತಣಸೂಲ** (ನಾ). ಕಡೆಗೋಲಿನಾಕಾರದ ಶೂಲ. —ಈಟಿ : ಜವನ ಮಂತಣಸೂಲದಂತೆ ನೆಗೆದ ಕೊಂತದ ಕೂರ್ಮೊನೆಯ ಕೋಲಾಟಕ್ಕೆ. . . ಬಿಜ್ಜೋದರಿವರ್ ಪುಗಲಱಿಯದೆ ಸಿಡಿಮಿಡಿಗೊಳುತ್ತಿರೆಯುಂ (ಕಲ್ಯಾಣ. ೨೮೮). [ ಮಂತಣ₂ + ಸೂಲ₂ ]

**ಮಂತಣಿ** (ನಾ). ೧. ಮೊಸರಿನ ಪಾತ್ರೆ: ಥಕಾರಕ್ಕೆ ತಕಾರಂ—ಕಥಾ—ಕತೆ . . . ಮಂಥನಿ—ಮಂತಣಿ (ಶಮದ. ೨೩೩ ಸೂತ್ರ ವೃತ್ತಿ) ; ಹರಿ . . . ತೆಗೆದೊಂದ ಸುಬೆಗಲ್ಲನು ಮಿಕ್ಕು ವಿಡಾಜುವ ಕೋಪದಿಂದೆತ್ತಿಕ್ಕಿದನು ಮಂಥ[ತ]ಣಿಯ ಮೇಲಿದ್ದ ನೆಯಮಾನಿಕ್ಷಿಸುತ (ನಿಭಾಗ. ೦೦-೯-೨೮). ೨. ಕಡೆಗೋಲು.

**ಮಂತಣಿಯ ಶೂಲ**=ಮಂತಣಸೂಲ : ಹರನ ಮಂತ[ಪಾಠಾಂ. ಥ]ಣಿಯ ಶೂಲದಲ್ಲಿ ಶಿರದ ಉಂಗುಟ ಲ್ಗೂಜು ನೆರೆವುತ್ತಿದ್ದುದ ನಾನೇನೆಂಬೆ (ಅಪಸಂ. ೩೩-೨೩೮). [ < ಪ್ರಾ. ಮಂಥಣೀ./ಸಂ. ಮಂಥನೀ ]

**ಮಂತಣೆ₁** 'ಮಂತಣ₁' ನೋ.

**ಮಂತಣೆ₂** 'ಮಂತಣ₂' ನೋ.

**ಮಂತರ** (ನಾ). ೧. ವೇದದಲ್ಲಿರುವ ಪವಿತ್ರವಾದ ದೇವತಾಸ್ತುತಿ; ಮಂತ್ರ : "ಮಂತರ (ಮಂತುರ)—ಮಂತ್ರ = ಆಲೋಚನೆ, ವೇದೋಕ್ತಿ" (ತದ್ಭಕೋ. ೩೯); ಎಂತಪ್ಪ ಮೂರ್ಖ ಪಂಡಿತನಾಗಲಿ ಉಂತೆ ಪಂಚಾಕ್ಷರಿಯ ಮಂತು[ತ]ರವ ಜಪಿಸುವಾತಂ ತಾನೆ ಶಿವನೆಂದುದ್ಯೆ ಲೈಂಗ್ಯವು (ಷ:ರಃ. ೯-೦೮). ೨. ಮಾಟ, ಇಂದ್ರಜಾಲ ಮುಂತಾದುವುಗಳಲ್ಲಿ ಬಳಸುವ ವೈದಿಕವಲ್ಲದ ಪದಸಮೂಹ : ತಂತರವಿದ್ದವನಿಗೆ ಮಂತರ ಬೇಡ (ಗಾದೆ). 'ಮಂತರಿಸು' ಪರಾ. [ <ಸಂ. ಮಂತ್ರ ]

**ಮಂತರವರಿಜು** (ನಾ). ಮಂತ್ರರೂಪವಾದ ಆಕಾರ. —ಮೂರ್ತಿ: ಅಮರ್ಮಣಿವರನೆನಿಸಿ. . . ಮಂತು[ತ]ರವರಿಜುದಾಳ್ದು ನೆಲೆ ಮೞೆವ ಕಾಶಿಯೊಡೆಯಂ ತಡೆಯದೋವುಗೆಮ್ಮಂ (ಪದ್ಮರಾ. ೦೩-೬೩).
[ ಮಂತರ + ವರಿಜು ]

**ಮಂತರಿಸು** (ಕ್ರಿ). ಮಂತ್ರಹಾಕು; ಮಂತ್ರಿಸು: ಕೋಟ್ಯಾಂತರ ಸರ್ಪ ಒಡಿದ ಸಮಯದಿ ಪಂಥಣಿಯ(ತಿಂತಿಣಿಯ) ಮರದಡಿಯ ತೀವ್ರದಲಿ ಮಲಗಿರಲು ಮಂತರಿಸಿ ಮನೆಗೆ ಕಳುಹಿದ ಮಹಾತ್ಮಕನೆ (ಶವಶ. ೦೦೨-೨); ಫಕೀರನು ಮಂತರಿಸಿ ಬಿಟ್ಟ ಮೇಲೆ ಅವ ಹೇಳಿದ್ದ ಪ್ರಕಾರವೇ ಇವನಿಗೆ ಜ್ಞಾನ ಬಂತು (ಅಡೂಟಿ. ೮೦).
[ ಮಂತರ + —ಇಸು₃ ]

**ಮಂತವ್ಯ** (ನಾ). ೧. ನೆನೆಯತಕ್ಕುದು ; ಮನನಮಾಡಬೇಕಾದುದು : "ಮನನಂ, ಮನನೀಯಂ, ಮಂತವ್ಯಂ, ಈ ೩ ನೆನೆಯಲ್ತಕ್ಕುದು" (ಕಾಲಿಕ. ೨೦೨) : ಲಲಿತಶ್ರಾವ್ಯ ಪರಮಂತವ್ಯವೆಂದೆನಿಪ ಘನತೆಯುಳ್ಳ ಸಪ್ತಸಂಖ್ಯೆಗಳನಘವಾದ ಸಮಿತ್ಕದಂಬಕ ಘನರು ಮಿಗೆ ಸಂಸ್ತುತಿಪರರು ವೈಶ್ವಾನರಾನಲಗೆ (ತಿಮ್ಮ. ೨-೬೩); ಪ್ರಭುದೇವರ 'ಅನಾಯಾಸವಾದ ಅನು', 'ಚಿಂತೆಯಿಲ್ಲದ ಅನುಭಾವ ಗೊಹೇಶ್ವರ' ಇನ್ನೂ ಶ್ರೋತವ್ಯ, ಇನ್ನೂ ಮಂತವ್ಯ (ವಚಸಂ. VIII, ೬೪ಗೆ ಪ್ರವೇಶ). ೨. ಅಭಿಪ್ರಾಯ; ಮತ: ಆಮೇಲೆ ದುರಭಿಮಾನಿ ಮತ್ತು ಮೂರ್ಖಳು ಎಂದು ಕೇಶವಯ್ಯನ ಮಂತವ್ಯ (ಮಮಹೀ. ೦); ಕಾರ್ಲಮಾರ್ಕ್ಸನು ತನ್ನ ಮತ—ಮಂತವ್ಯಗಳನ್ನು ಆರ್ಥಿಕ ರಾಜಕೀಯ ಶೋಧಗಳನ್ನು ಮಂಡಿಸಿದನು (ಮೂವಾರ. ೯೩). ೩. ಮನನಮಾಡಲ್ಪಡತಕ್ಕವನು ; ಧ್ಯಾನಯೋಗ್ಯನಾದವನು ; ಶ್ರೇಷ್ಠನಾದವನು : ಸೇವ್ಯನನು ಸತ್ಕೃತಿಗಳಲಿ ದ್ರಷ್ಟವ್ಯನನು ದೃಢ

ಚಿತ್ತದಲಿ ಮಂತವ್ಯನನು ಶ್ರೋತವ್ಯನನು ಸಂಕೀರ್ತಿತವ್ಯನನು . . . ಅಜ್ಞಾನದಲಿ ಯೋಗವ್ಯನೆಂದೇ ನೆಣಸಿದೆವಲಾ (ಕುವ್ಯಾ.೮.೬-೬೪). [ಸಂ.]

**ಮಂತಿಡು** (ಕ್ರಿ). ಮಂತುಕೋಲನ್ನು ಇಟ್ಟು ಕಡೆ : ತಟವನುಚ್ಚಳಿಸಿತು ಕಡಲು ಮಂತಿಟ್ಟರೆ ಘಟದ ಮೊಸರು ಚೆಲ್ಲುವಂತೆ (ಭರತ. ೨೪-೩೬).

[ ಮಂತು$_1$ (<ಮಂತ) + ಇಡು$_1$ ]

**ಮಂತು$_1$** 'ಮಂತ' ನೋ.

**ಮಂತು$_2$** (ನಾ). ೧. ಮಂತ್ರಿ ; ಸಚಿವ : ಇತ್ವಕ್ಕುತ್ವಂ . . . ಮಂತ್ರಿ —ಮಂತು; ಸಿಧಿ—ಸಂದು (ಶಮುತ. ೨೬೯ ಪ್ರಯೋ) : ಐವತ್ತಾಜಿಜೆಗೊಳಂ ನೀಂ ನೋಡದ ನಾಡಿಲ್ಲಕ್ಕುಂ . . . ಮಂತುಗಳಿಂತಿರವೇಡಾ (ರಾಮಾಶ್ವ. ೦೨೭-೦೦). ೨. ತಪ್ಪು; ದೋಷ ; ಅಪರಾಧ : "ವ್ಯಳೀಕಂ . . . ಮಂತುಃ, ವಿಪ್ರಿಯಂ _ ಈ ೫ ಅಪರಾಧಂ" (ಹಲಾಯು. ೦೨೩-೬೪) ; ನೆಟ್ಟನೆ ಚಂದ್ರನೊಳ್ ಬಿಸುಪು ಪುಟ್ಟಿದವೋಲ್ ಸ್ವಪರೂಪಚಂದ್ರನೊಳ್ ಪುಟ್ಟಿದು ಮಂತು (ಕಾದಂಬ. ೪೭೯). [ಸಂ.]

**ಮಂತುಗೋಲು** (ನಾ). ಕಡೆಗೋಲು : ತತ್ವವೆಂಬ ಮಂತುಗೋಲಿನಿಂ ಮಥಿಸಲು ಲಿಂಗವೆಂಬ ನವನೀತವು ಕಾಣಿಸಲಾಗಿ ಅದಂ ಪರಿಗ್ರಹಿಸಿ (ವಚಶಾ. III, ೦೩೪) ; ಸುರರೆಲ್ಲಂ ಕೂಡಿ ಭೋಗೀಶ್ವರಗುಣಮಿಳಿತಂ ಮಂದರಂ ಮಂತುಗೋಲಾಗಿರೆ ದುಗ್ಧಾಂಭೋಧಿಯಂ ಪೋಣ್ ಕಡೆಯೆ (ಜ್ಞಾನ. ೯-೩೯).

[ ಮಂತು$_1$ (< ಮಂತ) + ಕೋಲು$_1$ (<ಕೋಲ್$_1$) ]

**ಮಂತುಳ್ಳಿ**; ಮಂತೇಹುಳಿ (ನಾ). ಒಂದು ಬಗೆಯ ಕಾಡುಮರ : ಮಂತುಳ್ಳಿ . . . ಈ ಮರದ ಚೌಬೀನೆಯನ್ನು ಪೆಟ್ಟಿಗೆ ತಯಾರಿಕೆಯಲ್ಲಿ ಉಪಯೋಗಿಸುವುದುಂಟು (ಕರ್ನಾಗೆ. XII, ೯೬೭). ಮಂತೇಹುಳಿ : ಮಂತುಳ್ಳಿ . . . ಅರವಳ, ಉಪಾಗಿ, ಮಂತೇಹುಳಿ ಪರ್ಯಾಯನಾಮಗಳು (ಕರ್ನಾಗೆ. XII, ೯೬೭). [ ? ]

**ಮಂತೇಹುಳಿ** 'ಮಂತುಳ್ಳಿ' ನೋ.

**ಮಂತ್ರ** (ನಾ). ೧. ವೇದದಲ್ಲಿರುವ, ಛಂದೋಬದ್ಧವೂ ಪವಿತ್ರವೂ ಆದ ದೇವತಾಸ್ತುತಿ : ಪೂಜೆ, ಹೋಮ, ಅಭಿಷೇಕ ಮೊದಲಾದ ಸಂದರ್ಭಗಳಲ್ಲಿ ಪಠಿಸುವ ವೇದಭಾಗ : ದೈವವು ಮಂತ್ರವು ತೀರ್ಥವು ವೈದ್ಯವು . . . ಲೋಗರಿಗಿವು ದಿಟ ಸಿದ್ಧಿಯನೀವುವು (ಜಂತಾಪ. ೬೬-೬೬) : ಮಂತ್ರಕ್ಕಿಂತ ಉಗುಳು ಜಾಸ್ತಿ (ಗಾದೆ). ೨. ದೇವತೆಗಳನ್ನು ವಶೀಕರಿಸಿಕೊಳ್ಳುವುದಕ್ಕಾಗಿ ಹೇಳುವ, ಆಯಾ ದೇವತೆಯ ಸಾಮರ್ಥ್ಯವುಳ್ಳ ವಾಕ್ಯಸಮೂಹ : ಮಗಳೆ ಬಾ ಕೊಳ್ ಐದು ಮಂತ್ರಾಳಿಗಳನಿವು ಸಿದ್ಧಪ್ರಯೋಗವು (ಕುವ್ಯಾ.೮. ೩-೦೬) ; ಕಾಟಾಬರಮ್ಮನು ಬಲು ಸೌಮ್ಯದೇವತೆ . . . ಮಂತ್ರಗಳನ್ನು ಹೇಳದರೇ ಆಕೆಯ ಹೊಟ್ಟೆ ತುಂಬುತ್ತದೆ (ಮಹಿಶೋಸಂ. ೦೩೪). ೩. ಮೀಮಾಂಸಾಶಾಸ್ತ್ರದ ಪ್ರಕಾರ ಛಂದೋಬದ್ಧವಲ್ಲದ ಬ್ರಾಹ್ಮಣಭಾಗವನ್ನು ಬಿಟ್ಟು ಉಳಿದ ವೇದ ಭಾಗ ; ಸಂಹಿತೆ ಮತ್ತು ಉಪನಿಷತ್ತು : ಅವನಿಗೆ ಮಂತ್ರಭಾಗವೆಲ್ಲ ಆಗಿದೆ. ಬ್ರಾಹ್ಮಣವನ್ನು ಇನ್ನೂ ಹೇಳಿಲ್ಲ (ರೂಢಿ). ೪. ಮಾಂತ್ರಿಕರು ಮಾಟ, ವಶೀಕರಣ ಮೊದಲಾದ ಕ್ರಿಯೆಗಳಲ್ಲಿ ಬಳಸುವ ವೈದಿಕವಲ್ಲದ ಅಕ್ಷರಸಮೂಹ : ಇನ್ನು ಕೆಲವರು ಇದು ಪಿಶಾಚಿಯ ಬಾಧೆಯೆಂದೂ ಹೇಳತೊಡಗಿದರು. ಇದಕ್ಕಾಗಿ ಮಂತ್ರ – ಹರಕೆ ಮೊದಲಾದುವುಗಳ ಸೂಚನೆಗಳು ಬಂದುವು (ಕಾಂಊರ. ೦೪ ಕಥಾಸಾರ). ೫. ರಾಜ ಮೊದಲಾದವರು ನಡೆಸುವ ರಹಸ್ಯಾಲೋಚನೆ.– ಮಂತ್ರಾಲೋಚನೆ : ಸತ್ಯವತಿ ತಾನುಮಾತನುಮಾಳೋಚಿಸಿ ನಿಶ್ಚಿತಮಂತ್ರರಾಗಿ ಕೃಷ್ಣದ್ವೈಪಾಯನನಂ ನೆನೆದು ಬರಿಸಿದೊಡೆ (ಪಂಪಭಾ. ೧-೯೪ ವ) ; ಮಂತ್ರವುಳ್ಳವನವನೆ ಹಿರಿಯನು ಮಂತ್ರವುಳ್ಳವನವನೆ ರಾಯನು ಮಂತ್ರವುಳ್ಳವನವನೆ ಸಚಿವ ನಿಯೋಗಿಯೆನಿಸುವನು ಮಂತ್ರವಿಲ್ಲದ ಬಾಳುವ ಬಲುತಳತಂತ್ರದಲಿ ಫಲವಿಲ್ಲವೈ (ಕುವ್ಯಾ.ಸ. ೦-೪೯) ; ಮಂತ್ರಿಯು ಹಗೆ ನೃಪನ ಕಾಂತೆಯ ಸಮಗೋಷ್ಠಿ ಮಂತ್ರವಿಲ್ಲದನ ಒಡನಾಟ ಇವು ತನ್ನ ಆತ್ಮಕಾಲಕ್ಕೆ (ಸರ್ವಜ್ಞ. ೬೩೯). ೬. ಆಲೋಚನೆ; ವಿಚಾರ : ಮಂತ್ರಾಕ್ಷರನಿಯಮದಿನಭಿಮಂತ್ರಿಸಿ ಬರಿಸಿದೊಡೆ ವಾಯುದೇವಂ ಬಂದೇಂ ಮಂತ್ರಂ ಪೇಳೆನೆ (ಪಂಪಭಾ. ೦-೦೨೪). ೭. ವಿಷ್ಣು. ೮. ಶಿವ. ೯. [ಜ್ಯೋತಿ] ಐದನೆಯ ರಾಶಿ. ೧೦. [ರಾಜನೀ] ಸಾಮ, ದಾನ, ಭೇದ ಮತ್ತು ದಂಡ ಎಂಬ ನಾಲ್ಕು ಬಗೆಯ ಉಪಾಯಗಳು: ರಾಜತಂತ್ರಜ್ಞಾನ; ರಾಜನೀತಿ : "ಚತುರೋಪಾಯಮಕ್ಕು ಮಂತ್ರಂ ಕ್ಷಾತ್ರಮಟ್ಟೆ ರಾಜಪ್ರಕೃತಿಯಕ್ಕು" (ಚಂಗಾ. ೬೯-೬). ೧೧. [ಜೈನ] ದೀಕ್ಷಾನ್ವಯಕ್ರಿಯೆಗೆ ಸೇರಿದ ಅವತಾರಕ್ರಿಯೆಯ ಹತ್ತು ವಿಧಗಳಲ್ಲಿ ಆರನೆಯದು : ಆಜಿನೆಯ ಮಂತ್ರಮೆಂಬುದು ಪಂಚವಿಧಮಕ್ಕುಂ (ಚಾಪುಂಪು. ೨೨೦). ೧೨. ಪರಂಪರಾಗತವಾದ ಮುಕ್ತಿಸಾಧಕವೆನಿಸಿದ ಸಂಸ್ಕೃತ, ಪ್ರಾಕೃತ ಭಾಷೆಗಳ ಪವಿತ್ರವಾಕ್ಯಗಳು : ಣಮೋ ಅರಹಂತಾಣಂ . . . ಈ ಐದು ಮಂತ್ರಗಳಿಗೆ ಣಮೋಕಾರಮಂತ್ರಗಳೆಂಬ ಹೆಸರು (ಜೈನಪ. ೯೪). [ಸಂ.]

**ಮಂತ್ರಕರ್ತ** (ನಾ). ತನ್ನ ತಪಸ್ಸಿನ ಪ್ರಭಾವದಿಂದ ಮಂತ್ರಗಳನ್ನು ಕಂಡುಕೊಳ್ಳುವವನು; ಋಷಿ : ನಮ್ಮಲ್ಲಿ ಯಾರೂ ಮಂತ್ರದ್ರಷ್ಟರಾಗುವುದಿರಲಿ ಮಂತ್ರಕರ್ತರೂ ಆಗಿಲ್ಲ (ಮಹಾದ. ೨೬೦). [ಸಂ.]

**ಮಂತ್ರಕೋವಿದ** (ನಾ). ೧. ವೇದಮಂತ್ರಗಳನ್ನು ಆಳವಾಗಿ ಅಭ್ಯಾಸ ಮಾಡಿರುವವನು ; ವೈದಿಕ. ೨. (ಮಂತ್ರಾಸ್ತ್ರಗಳಲ್ಲಿ) ಪಾರಂಗತನಾದವನು : ಖಳ ಮರಳಿ ವರುಣಾಸ್ತ್ರವನು ಬಿಟ್ಟನು ಮಂತ್ರಕೋವಿದನು (ಕರ್ಣಾಶರಾ. ೩೬-೫೭). [ಸಂ.]

**ಮಂತ್ರಗಾರ** (ನಾ). ೧. ಮಂತ್ರಗಳ ಸಹಾಯದಿಂದ ಅಲೌಕಿಕಸಿದ್ಧಿಯನ್ನು ಪಡೆದವನು : ಮನೆಯೊಳಗೆ ನುಗ್ಗಿದ್ದ ಹಾವನ್ನು ಮಂತ್ರಹಾಕಿ ಹಿಡಿದ ಮಂತ್ರಗಾರನನ್ನು ನಾನು ಕಣ್ಣಾರೆ ಕಂಡಿದ್ದೇನೆ (ರೂಢಿ). ೨. ಮಾಟಮಾಡುವವನು ; ಮಾಟಗಾರ : ಆ ಮಂತ್ರಗಾರನು ಮಾಟ ಮಾಡುವುದರಲ್ಲಿ ಎತ್ತಿದ ಕೈ(ರೂಢಿ).

[ ಮಂತ್ರ + — ಕಾರ$_1$ (< — ಕಾಜ) ]

**ಮಂತ್ರಗಾರಿಕೆ** (ನಾ). ೧. ಮಂತ್ರಗಾರ ವೃತ್ತಿ.—ಉದ್ಯೋಗ. ೨. ಮಾಯಾವಿದ್ಯೆ; ಇಂದ್ರಜಾಲ : ಮಾನವೀಯ ವ್ಯಕ್ತಿತ್ವದ ಮೂಲದ್ರವ್ಯವನ್ನು ಮೇಲಿನ ಮಟ್ಟಕ್ಕೆ ಮಾರ್ಪಡಿಸುವ ಮಂತ್ರಗಾರಿಕೆಯನ್ನು ತರಬೇಕು (ಪವ್ಯಕಾ. ೦೭). [ ಮಂತ್ರಗಾರ + _ ಇಕೆ ]

**ಮಂತ್ರಗಾರ್ತಿ** (ನಾ). ಮಂತ್ರಮಾಡುವವಳು; ಯಕ್ಷಿಣೀವಿದ್ಯೆಯನ್ನು ತಿಳಿದಿರುವವಳು : ಆ ಮಂತ್ರಗಾರ್ತಿ . . . ಜವನಾಲಯಕ್ಕೆ ಸಂದಿದ್ದಳು (ಬಗಾಳ. ೭ ಮುನ್ನುಡಿ).

[ಮಂತ್ರಗಾರ + _ ತಿ$_1$ (< _ ಇತ್ತಿ)]

**ಮಂತ್ರಗುಪ್ತಿ** (ನಾ). ರಾಜಕಾರ್ಯ ಮುಂತಾದುವುಗಳಲ್ಲಿ ಮಾಡುವ ಸಮಾಲೋಚನೆ; ಮಂತ್ರಾಲೋಚನೆ: ಆ ಮುನಿನಾಥಂ ತ್ರಿಗುಪ್ತಿಯೊಳ್ ನೆರೆದಂ ಈ ಮಹೀನಾಥಂ ಮಂತ್ರಗುಪ್ತಿಯೊಳ್ ನೆರೆದಂ (ಆದಿಪು. ೬-೨೪ ವ). [ ಸಂ. ]

**ಮಂತ್ರಗೋಪ್ಯ** (ನಾ). ೧. ವೇದಾಗಮಂಗಳಲ್ಲಿ ನಿರೂಪಿತವಾಗಿರುವ ಮಂತ್ರಗಳ ಗುಟ್ಟು.—ರಹಸ್ಯ. ೨. [ವೀಶೈ] "ಈ ಮಂತ್ರಗೋಪ್ಯಕ್ಕೆ ಅರ್ಥವೇನೆಂದರೆ 'ಮಂ' ಎಂಬಲ್ಲಿ ಮನಸವೆಂದು ಪ್ರಣವಸ್ವರೂಪವಪ್ಪ ಪರಶಿವನ ನೆನಹು. 'ತ್ರ' ಎಂದರೆ ತ್ರಾಣವೆಂದು. ಅಂತು ಪರಶಿವನ ನೆನಹೆಂಬುದು ನೆನೆವಾತನ ಚಿತ್ತವ ಸಂಸಾರವ್ಯಾಪ್ತಿಯಿಂದ ಕಡೆಗೆ ದಾಂಟಿಸಿ, ಆ ಚಿತ್ತವ ತನ್ನಲ್ಲಿ ಸಂಬಂಧಿಸಿ

ಕೊಳ್ಳುತಿರ್ದ ಕಾರಣ, ಆ ನೆಸಹಿಂಗೆ ಮಂತ್ರವೆಂಬ ಅರ್ಥವಾಯಿತು" (ತನ್ನಣಾ. ೯೭). [ಸಂ.]

**ಮಂತ್ರಘೋಷ** (ನಾ). ೧. ವೇದಮಂತ್ರಗಳ ಧ್ವನಿ ; ವೇದವನ್ನು ಪಠಿಸುವಾಗ ಕೇಳಿ ಬರುವ ಧ್ವನಿ : ಓಂಕಾರಸ್ವಾಹಾದಿಮಂತ್ರಘೋಷಂ ಬೆರಸಿ . . . ದೇವರಿಗೆ ಹವಿಯನರ್ಪಿಸುತಿರ್ದಂ (ಶ್ರೀರಾಮಾ. ೦೨-೩೦೦). ೨. ಉದಾತ್ತ, ಅನುದಾತ್ತ ಮತ್ತು ಸ್ವರಿತಗಳೆಂಬ ಮೂರು ಪ್ರಕಾರದ ಸ್ಥಾಯಿಗಳಲ್ಲಿ ವೇದಮಂತ್ರವನ್ನು ಹೇಳುವುದು.— ವೇದಪಠಣ : ವೈದಿಕರು ಮಂತ್ರಘೋಷ ಮಾಡುತ್ತಿದ್ದಂತೆಯೇ ದೇವರ ಮೂರ್ತಿಯನ್ನು ಪ್ರತಿಷ್ಠಾಪಿಸಿದರು (ರೂಢಿ). [ಸಂ.]

**ಮಂತ್ರಜಾಪ್ಯ** (ನಾ). ಮಂತ್ರಪಠಣ ; ಮಂತ್ರವನ್ನು ಜಪಿಸುವುದು : ಈ ಗುಹೆಯೊಳ್ ಮಹಾಗ್ನಿಶ್ರಿತಯ ನೆಲಸಿರ್ದಪುದಲ್ಲಿ ಮಂತ್ರನಾನಾಗಮ ವಿರ್ಪ ಪುಸ್ತಕಮುಮುಂಟಿವಜಾದಿಯ ಮಂತ್ರಜಾಪ್ಯದಿಂ ಬೇಗ ದೊಳಗ್ನಿಯಿಂ ಪುಗು (ದಶಾ. ೩-೨೭). [ಸಂ.]

**ಮಂತ್ರಜ್ಞ** (ನಾ). ೧. ವೇದಗಳ ಮಂತ್ರಭಾಗದಲ್ಲಿ ಪಾರಂಗತನಾದ ವನು : ನಮ್ಮ ಪುರೋಹಿತರು ಒಳ್ಳೆಯ ಮಂತ್ರಜ್ಞರು (ರೂಢಿ). ೨. ವಿದ್ವಾಂಸನಾದ ಬ್ರಾಹ್ಮಣ. ೩.(ರಾಜನಿಗೆ) ಸಲಹೆ ಕೊಡು ವುದರಲ್ಲಿ ನಿಪುಣನಾದವನು : ವಿಶ್ವೇಶ್ವರಯ್ಯನವರು ಮೇಲ್ಮಟ್ಟದ ಆಡಳಿತಗಾರರು, ಶ್ರೇಷ್ಠ ಮಂತ್ರಜ್ಞರು (ರೂಢಿ). ೪. ಗೂಢಚಾರ ; ನಿಯೋಗಿ : "ಯಥಾರ್ಥವರ್ಣಃ, ಮಂತ್ರಜ್ಞಃ, ಸ್ಪಶಃ, ಹೇರಿಕಃ — ಈ ೪ ಹೆಸರಿಗಂ" (ಅಭಿಧಾ. ೭೦-೨೭೦). [ಸಂ.]

**ಮಂತ್ರಣ** (ನಾ). ಗಹನವಾದ ರಾಜಕಾರ್ಯವೇ ಮೊದಲಾದುವುಗಳ ರಹಸ್ಯವಾದ ಚರ್ಚೆ ; ಮಂತ್ರಾಲೋಚನೆ : ದಶಶಿರಪ್ರಣಯ ಮಂತ್ರಣಕಾಕೆ ಸಚಿವರ್ (ಶ್ರೀರಾಮಾ. ೩೦೯-೦೭). [ಸಂ.]

**ಮಂತ್ರದಂಡ** (ನಾ). ಇಂದ್ರಜಾಲಿಕರು ಮಂತ್ರಪ್ರಯೋಗಮಾಡು ವಾಗ ಹಿಡಿಯುವ ಕೋಲು : ಮಂತ್ರವನ್ನು ಹೇಳುತ್ತಾ ಮಂತ್ರಗಾರನು ತನ್ನ ಮಂತ್ರದಂಡದಿಂದ ಮುಟ್ಟಿದ ಕೂಡಲೇ ಅದ್ಭುತವಾದ ಚಮತ್ಕಾರ ವಾಯಿತು (ರೂಢಿ). [ಸಂ.]

**ಮಂತ್ರದಾತ** (ನಾ). ಮಂತ್ರವನ್ನು ಹೇಳಿಕೊಡುವವನು ; ಗುರು ; ಪುರೋಹಿತ : ಅವನ ತಂದೆ ಊರಿನ ಮಂತ್ರದಾತರು. ಈತ ಊರಿನ ಮಂತ್ರಣದಾತ, ಸಲಹಾಕಾರ (ಐತೃಕ. ೩೫೭). [ಸಂ. ಮಂತ್ರದಾತೃ]

**ಮಂತ್ರದೀಕ್ಷಿತ** (ನಾ). ಯಾವುದಾದರೊಂದು ಮಂತ್ರವನ್ನು ಸಾಧಿಸು ವುದಕ್ಕಾಗಿ ವ್ರತವನ್ನು ಕೈಗೊಂಡಿರುವವನು ; ಮಂತ್ರಸಿದ್ಧಿಗಾಗಿ ನಿಯಮಬದ್ಧನಾಗಿರುವವನು : ನಂಬು ! ನಿಸ್ಸನೆ ನಂಬು ! ಮಂತ್ರ ದೀಕ್ಷಿತಗೆ ಗುರಿ ತಪ್ಪದೆಂದು (ಪಾಂಚಜ. ೫೦-೦೨). [ಸಂ.]

**ಮಂತ್ರದೀಕ್ಷೆ** (ನಾ). ೧. ಯಾವುದಾದರೊಂದು ಮಂತ್ರಸಿದ್ಧಿಗಾಗಿ ಕೈಗೊಂಡಿರುವ ನಿಯಮ.—ವ್ರತ : ಅವನು ಮಂತ್ರದೀಕ್ಷೆ ತಾಳಿ ದ್ದಾನೆ. ಆದ್ದರಿಂದ ಸೋಮವಾರ ಉಪವಾಸ ಮಾಡುತ್ತಾನೆ (ರೂಢಿ). ೨. ಗುರುವಿನಿಂದ ಯಾವುದಾದರೊಂದು ಮಂತ್ರಸಿದ್ಧಿಗಾಗಿ ಉಪದೇಶವನ್ನು ತೆಗೆದುಕೊಳ್ಳುವುದು : ಗುರುವಿನಿಂದ ಶಿಷ್ಯನ ಕಿವಿ ಯಲ್ಲಿ ಉಪದೇಶಿಸಲ್ಪಡುವ ಮಂತ್ರವೇ ಮಂತ್ರದೀಕ್ಷೆಯು (ಶಿವಾಸೂ. ೭೦); ಶಿವಧ್ಯಾನಪರನಾಗಿ ಪಂಚಾಕ್ಷರಿಯ ಶಿಷ್ಯಗೊರೆವುದೇಮಂತ್ರದೀಕ್ಷೆಯದೇವಜಾ (ಶೀಕೃತಿ. ೬-೬-೬೩). [ಸಂ. ಮಂತ್ರದೀಕ್ಷಾ]

**ಮಂತ್ರದೇವತೆ** (ನಾ). ಮಂತ್ರಾಭಿಮಾನಿಯಾದ ದೇವತೆ : ಬೆಸಸಂ ಪಾರ್ವುವು ಮಂತ್ರದೇವತೆಗಳ್ (ಅಂಬಿ. ೦-೬೯) ; ಮನಸಿಜಮಂತ್ರದೇವತೆ ಯುವಂಗನೆಯರ್ (ಚಾಂಪಿ. ೬-೦೯). [ಸಂ. ಮಂತ್ರದೇವತಾ]

**ಮಂತ್ರದ್ರಷ್ಟ** (ನಾ). ಮಂತ್ರಗಳ ತತ್ತ್ವಾರ್ಥವನ್ನು ಕಂಡುಕೊಳ್ಳುವ ವನು,—ರಹಸ್ಯಗಳನ್ನು ಕಂಡುಕೊಳ್ಳುವವನು : ಋಷಿ : ನಮ್ಮಲ್ಲಿ ಯಾರೂ ಮಂತ್ರದ್ರಷ್ಟರಾಗುವುದಿರಲಿ ಮಂತ್ರಕರ್ತರೂ ಅಗಿಲ್ಲ (ಮಹಾಕ್ಷ. ೨೬೦). [ಸಂ. ಮಂತ್ರದ್ರಷ್ಟೃ]

**ಮಂತ್ರದ್ರಷ್ಟಾರ** (ನಾ). = ಮಂತ್ರದ್ರಷ್ಟ : ಕ್ರೌಂಚದರ್ಶನ ಕವಿಯು ಮಂತ್ರದ್ರಷ್ಟಾರ (ಕ್ರೌಂಚಗ. ೩೩-೦೩). [ಸಂ. ಮಂತ್ರದ್ರಷ್ಟೃ]

**ಮಂತ್ರಪಿಂಡ** (ನಾ). [ವೀಶೈ] ಮಂತ್ರಪೂತವಾದ ದೇಹ : ಎನಿಸಿದನು ಮಂತ್ರಪಿಂಡ ಎನಿಸದೆ ಮಾಂಸಪಿಂಡ ಎನಿಸದೆ ವಾಯುಪ್ರಾಣಿ ಎಂದು ಬಸವಣ್ಣ ಎನಿಸಿದನು ಲಿಂಗಪ್ರಾಣಿ ಎಂದು (ಸಿದ್ಧ ವ. ೨೬-೯೯) ; ಶರೀರದಲ್ಲಿ ಲಿಂಗವನ್ನು ಧರಿಸುವುದರಿಂದ ಈ ಶರೀರವು ಮಂತ್ರಪಿಂಡವೆನಿಸಿತು (ಶಾರದ. ೫೩೩). [ಸಂ.]

**ಮಂತ್ರಪುರಶ್ಚರಣ** (ನಾ). ಏಕಚಿತ್ತದಿಂದ ಮಂತ್ರವನ್ನು ಮೆಲ್ಲಗೆ ಉಚ್ಚರಿಸುವುದು : ಮಂತ್ರಜಪ : ಯಂತ್ರೋದ್ಧಾರಣ, ಮಂತ್ರ ಪುರಶ್ಚರಣ . . . ಮೊದಲಾದ ವಿವರಣಗಳು . . . ಪಾಂಚರಾತ್ರಾಗಮ ದಲ್ಲಿಯೂ ಸುಂದರವಾಗಿ ಚಿತ್ರಿತವಾಗಿವೆ (ಶಾರದ. ೬೭). [ಸಂ.]

**ಮಂತ್ರಪುಷ್ಪ** (ನಾ). ದೇವರಿಗೆ ಮಹಾಮಂಗಳಾರತಿಯಾದ ಮೇಲೆ ಮಂತ್ರಪೂರ್ವಕವಾಗಿ ಅರ್ಪಿಸುವ ಹೂವು ಮತ್ತು ಆಗ ಹೇಳುವ ಮಂತ್ರಸಮುದಾಯ : ರಾಜಾಧಿರಾಜನೆಂಬ ಮಂತ್ರಪುಷ್ಪಗಳಿಂದ ಪೂಜಿಸಿದರು ಒಲ್ಲ ಪುರಂದರವಿಠಲನು (ಪುರಂದ. ೨-೭೯-೩) ; ಯಂತ್ರವಾಹನಂಗೆ ಮಂತ್ರ[ಶಾಕಾಂ. ಸುಮಂತ್ರ]ಪುಷ್ಪಮನಿತ್ತು ನಿವ್ಯಾಜಭಕ್ತಿಯಿಂ ಪ್ರದಕ್ಷಿಣಂ ಗೆಯ್ದು ಪೊಡಮಟ್ಟು (ರಾಜಶೇ. ೦೩-೩೪ ವ). [ಸಂ.]

**ಮಂತ್ರಪೂತ** (ನಾ). ಮಂತ್ರದಿಂದ ಪವಿತ್ರವಾದುದು.—ಪರಿಶುದ್ಧ ವಾದುದು : ಮಂತ್ರಪೂತವಾದ ಈ ದರ್ಭೋದಕದಿಂದ ನಿನ್ನ ಶರೀರ ಬಾಧೆಯೆಲ್ಲಾ ಪರಿಹಾರವಾಗುವುದು (ಶಾಕುಂತ. ೯೨-೨೪). [ಸಂ.]

**ಮಂತ್ರಭ್ರಮಿತ** (ನಾ). ರಹಸ್ಯಾಲೋಚನೆಯಲ್ಲಿ ತಪ್ಪುದಾರಿಯನ್ನು ಹಿಡಿದವನು : ಸಮರಜಯಸಾಧಕರು ಮಂತ್ರಭ್ರಮಿತರಾಯ್ತುವಜಯ ವಧೂವಿಭ್ರಮಕಟಾಕ್ಷದ ಛಾಯದಲಿ ಕಳವಳಿಸದವರಾರು (ಕುಮಾ.ಕ. ೩-೦೩) ; ☞ ಇಲ್ಲಿ 'ಭ್ರಾಂತ' ಎಂಬ ಅರ್ಥದಲ್ಲಿ 'ಭ್ರಮಿತ' ಎಂದು ಪ್ರಯೋಗ ವಾಗಿದೆ. [ಸಂ.]

**ಮಂತ್ರಮುಕ್ತ** (ನಾ). ಮಂತ್ರದ ಸಹಾಯದಿಂದ ಪ್ರಯೋಗಿಸುವ ಆಯುಧ ; ಮಂತ್ರಾಸ್ತ್ರ : ಅಗ್ನಿಪುರಾಣವು ಆಯುಧಗಳನ್ನು ಅಸ್ತ್ರ ಮತ್ತು ಶಸ್ತ್ರಗಳೆಂದು ಎರಡು ಭಾಗಗಳಾಗಿ ವಿಂಗಡಿಸುತ್ತದೆ. ಇವುಗಳಲ್ಲಿ ಮೊದಲನೆಯದನ್ನು (೧) ಯಂತ್ರಮುಕ್ತ, (೨) ಪಾಣಿಮುಕ್ತ, (೩) ಮಂತ್ರಮುಕ್ತ, (೪) ಮುಕ್ತಸಂಧಾರಿತ (ಬಿಟ್ಟು ಹಿಂದಕ್ಕೆ ಪಡೆದದ್ದು) ಎಂದು ನಾಲ್ಕಾಗಿ ವಿಭಾಗಿಸುತ್ತದೆ (ಕರಾಶಿ. ೨೬೨). [ಸಂ.]

**ಮಂತ್ರಮುಗ್ಧ** (ನಾ). ಮಾಟ, ವಶೀಕರಣ ಮುಂತಾದ ಮಂತ್ರದ ಪ್ರಯೋಗಗಳಿಗೀಡೆಂಬಂತೆ ಮರುಳಾದವನು.—ಪರವಶನಾದವನು : ಶ್ರೀ ರಾಮಕೃಷ್ಣಪರಮಹಂಸರ ಮಾತು ನರೇಂದ್ರನನ್ನು ಮಂತ್ರಮುಗ್ಧ ನನ್ನಾಗಿ ಮಾಡಿತು (ಧರ್ಮಸಾ. ೪೬) ; ಈ ಅದ್ಭುತಭಾವವನ್ನು ಅನುಭವಿಸ ಬಲ್ಲವರು ಇದರಿಂದ ಮಂತ್ರಮುಗ್ಧರಾಗುತ್ತಾರೆ (ಶಾರದ. ೩೨೯). [ಸಂ.]

**ಮಂತ್ರಯೋಗ** (ನಾ). ಮಂತ್ರಸಾಧನೆ ; ಮಂತ್ರದ ಅನುಸಂಧಾನ : ಪ್ರಣವಾದಿ ಮಂತ್ರಾನುಸಂಧಾನದಿಂ ಪರಮಾತ್ಮನಲ್ಲಿ ಮನೋಲಯವಹುದೇ ಮಂತ್ರಯೋಗವೆನಿಸುವುದು (ವೇಶ. ೯೯) ; ಆಗಮೋಕ್ತಮಾರ್ಗದಿಂದೆ ಜಪಮಾಲಿಕೆಯಿಂದೆ ಅಂಗುಷ್ಠಮಧ್ಯಮಗಳಿಂದೆ ಉಪಾಂಶುರೂಪದಿಂದೆ ಧ್ಯಾನಪೂರ್ವಕದಿಂ ಜಪಮಂ ಮಾಡುವುದೆ ಮಂತ್ರಯೋಗವೆನಿಸಿತ್ತು (ಕಕಿಂಡೆ. ೨೦೬-೫೨) ; ಈ ಮಂತ್ರಗಳ ಜಪಗಳಿಂದ ಶಾಸ್ತ್ರದಲ್ಲಿ ಹೇಳಿರುವಂತೆ ಕಾಲ

ದೇಶಗಳಿಗನುಸಾರವಾಗಿ ಅಭ್ಯಾಸಮಾಡುವುದಕ್ಕೆ "ಮಂತ್ರಯೋಗ" ವೆಂದು ಹೆಸರು (ಶಾರದ. ೦೭೪). [ಸಂ.]

**ಮಂತ್ರವಾದ** (ನಾ). ೧. ಯಕ್ಷಿಣೀವಿದ್ಯೆ; ಇಂದ್ರಜಾಲ: ಚಾಣಕ್ಯಂ ಜ್ಯೋತಿಷಂ ಮಂತ್ರವಾದಂ ಮೊದಲಾಗೊಡೆಯ ಶಾಸ್ತ್ರಂಗಳಿಲ್ಲಮನೇನಿ ಕೂಸನೋದಿಸಿದಾ (ವಡ್ಡಾರಾ. ೨೩-೦೭); ಜ್ಯೋತಿಷ ಮಂತ್ರವಾದದೆಡೆಯೊಳ್ ವಿದ್ವಾಂಸರೊಳ್ ಸ್ತ್ರೀಯರೊಳ್ ದೊರೆಗಳ್ಗೆ ಚಿತ್ತಜು ಬೇಕೆಲ್ಲೆ (ಸೋಮೇಶ. ೫೭); ವಿಗಡಮುನಿ ಚಿತ್ರಾಕರುಷಣದ ಮಂತ್ರವಾದವೊ . . . ಚಿತ್ರವಾಯ್ತೂ ರ್ವಶಿಯ ಬರವಿನಲಿ (ಕುಮಾ.ಭಾ. ೬-೩). ೨. ಸನ್ಮಾರ್ಗವನ್ನು ತೋರಿಸು ವುದು: ಆಚಾರ್ಯಸಂತೆ ಮಾಡಲ್ಕಕ್ಕುವಂ ತೋರ್ಪುದೇ ಮಂತ್ರವಾದ ವೆನಿಸುವುದು (ವಿವೇಕ. ೪). [ಸಂ.]

**ಮಂತ್ರವಾದಿ** (ನಾ). ೧. ವೇದಮಂತ್ರಗಳನ್ನು ಹೇಳುವವನು; ಸನ್ಮಾರ್ಗವನ್ನು ತೋರಿಸುವವನು. ೨. ಯಕ್ಷಿಣೀವಿದ್ಯೆಯನ್ನು ಬಲ್ಲವನು; ಐಂದ್ರಜಾಲಿಕ: ಮಾಂತ್ರಿಕ: ವಿವಿಧ ಮಣಿಕಿರಣಚಯದಿಂ ನವನಿಹನಂ ಬಟ್ಟಿದು ಕೊಟ್ಟನರ್ಥಿಜನಕ್ಕಾ ವಿವಿಜೇಂದ್ರಂ ಬಳವಿಯ ಮಂತ್ರ ವಾದಿಯೆನೆ ಮಕುಟಬದ್ಧಸಮಾಜಂ (ಶಾಂತಿಪು. ೦೦-೦೦). ೩. ಜನರನ್ನು ಪೀಡಿಸುವ ಭೂತಪ್ರೇತಪಿಶಾಚಾದಿ ಬಾಧೆಗಳನ್ನು ಮಂತ್ರತಂತ್ರ ಗಳಿಂದ ಪರಿಹರಿಸುವವನು; ವಾಮಾಚಾರಿ: ಬಡತನವೆಂಬ ಮಂತ್ರ ವಾದಿ ಹೊಗಲು ಒಡನೆ ನುಡಿವರು (ಬಸವ. ೦೩೨); ಎಲವೊ ದುಷ್ಟಗ್ರಹದ ಬಾಧೆಯ ನಿಲಿಸಲರಿಯರೆ ಮಂತ್ರವಾದಿಗಳು (ಕುಮಾ.ದ್ರೋ. ೦೩-೦೦); ಮಂತ್ರವಾದಿ ಎಂಬವನು ಊರನ್ನು ಕಣ್ಣಿವೆ ತೆರೆಯುವುದರೊಳಗೆ ಸುಟ್ಟು ಬಿಡಬಲ್ಲ ಶಕ್ತಿಗಾರನೆಂದು ಅವರ ತಿಳಿವು (ಪಾಂಶ್ರ. I, ೧೩೦).

[ಸಂ. ಮಂತ್ರವಾದಿನ್]

**ಮಂತ್ರವಾದಿನಿ** (ನಾ). ಮಾಯಾವಿದ್ಯೆಯನ್ನು ಬಲ್ಲವಳು; ಮಾಟಗಾತಿ: 'ಶನಿ'ವೆಸರ ಮುದುಕಿಯಾದಾ ಮಂತ್ರವಾದಿನಿಯ ಮರೆತೆಯೇಂ? (ಬಿಗಾ. ೨೭-೦). [ಸಂ. ಮಂತ್ರವಾದಿನೀ]

**ಮಂತ್ರವಿದ** (ನಾ). ೧. ಮಾಟ, ಮಂತ್ರಗಳನ್ನು ಬಲ್ಲವನು; ಮಂತ್ರವಾದಿ: ಕನಕಲತೆಯುಮಾಕೆಗಮುರಸಂಗಂ ಕ್ಷಣಮಾತ್ರ ವಿದ್ವೇಷಕಾರಿಯಪ್ಪ ಪುಷ್ಪಮಾಲೆಯುಂ ಮಂತ್ರವಿದರುಪದೇಶದಿಂ ಮನ್ಮರಸನಿವೇದನವ್ಯಾಜದಿಂ ಪರಿಚಾರಿಕೆಯರ ಕೆಯ್ಯೊಳಟ್ಟುವುದುಂ (ಶಾಂತಿಪು. ೯-೫೦ ವ). ೨. ಮಂತ್ರಪ್ರಯೋಗದಿಂದ ರೋಗ, ವಿಷ ಮುಂತಾದವುಗಳನ್ನು ಹೋಗಲಾಡಿಸುವವನು: ಅಹಿದಷ್ಟನಂ ಪರೀಕ್ಷಿಸಿ ದಯೆಯಿಂ ಮಂತ್ರೌಷಧಿಯಂ ಮಾಬ್ಬುದು ಮಂತ್ರವಿದು (ಜಮರ. ೩-೦೦೦). [ಸಂ. ಮಂತ್ರವಿದ್]

**ಮಂತ್ರವೈದ್ಯ** (ನಾ). = ಮಂತ್ರವಿದ ೨: ಗುರೂಪದೇಶ ಮಂತ್ರವೈದ್ಯ ಜಂಗಮೋಪದೇಶ ಶಸ್ತ್ರವೈದ್ಯ ನೋಡಾ (ಬಸವ. ೬೩೩). [ಸಂ.]

**ಮಂತ್ರಶಕ್ತಿ** (ನಾ). ೧. ವೇದಾದಿ ಮಂತ್ರಗಳ ಸಾಮರ್ಥ್ಯ: ಮಂತ್ರಿಗಳ ಮಂತ್ರಕ್ಕೆ ಉದುರುವುದೆ ಮಾಗಾಣಿಯ ಮಂತ್ರಶಕ್ತಿಯು ದೈವಪಂಚಾಯತ (ವೀಜು. ೦೯-೨೦). ೨. ಹಿಂದೆ ರಾಜನಾಗಿದ್ದ ಪ್ರಭುಶಕ್ತಿ, ಮಂತ್ರಶಕ್ತಿ ಮತ್ತು ಉತ್ಸಾಹಶಕ್ತಿ ಎಂಬ ಮೂರು ಪ್ರಕಾರದ ಶಕ್ತಿಗಳಲ್ಲಿ ಒಂದು; ರಾಜನೀತಿಯ ಸಾಮರ್ಥ್ಯ: ಕಾರ್ಯಾಂಶವಿಶೇಷಾರ್ಥಮಂ ನೆನೆದು ತಿಳಿವಾ ಧರಾಧೀಶ್ವರಂ ಮಂತ್ರಶಕ್ತಿಗೆ ಜನ್ಮಭೂಮಿಯಾದಂ (ಪುಲ್ಲಿಪು. ೩-೦೦); ಒಲಿದರೊಳಲಂಚದಲಿ ಭಿದ್ರಿಸಿ ಕೊಲುವ ಮುನಿದೊಡೆ ಮಂತ್ರ ಶಕ್ತಿಯೊಳಳುಕಿಸುವ ಮಂತ್ರಿಗಳು ಮೆಚ್ಚಿದರು ವಾಮಭಾಗದಲಿ (ಕುಮಾ.ಐ. ೮-೩೫). ೩. ಅಭಿಚಾರ; ಮಾಟ: ಮಂತ್ರಶಕ್ತಿಯುಲ್ಲಿ ಸನ್ನದು ಅದ್ಭುತ ಎಂಬ ಹೆಮ್ಮೆ ನನಗೆ (ಶದ್ರ.ಸ. ೨೫೮). [ಸಂ.]

**ಮಂತ್ರಶಾಲೆ** (ನಾ). (ಅರಸನು) ಮಂತ್ರಿಗಳೊಂದಿಗೆ ಗಹನವಾದ ವಿಷಯಗಳಿಗೆ ಸಂಬಂಧಿಸಿದಂತೆ ಸಮಾಲೋಚನೆ ನಡೆಸುವ ಮನೆ: ನಿರ್ಣೀತಮಂತ್ರರಾದ ಮಂತ್ರಿಗಣಮಂ ಸನ್ಮಾನಪುರಸ್ಸರಂ ಕ್ರಮದಿಂದ ವಿಸರ್ಜಿಸಿ ಮಂತ್ರಶಾಲೆಯಿಂ ಪೊಱಮಟ್ಟು ಬಂದು (ಶಾಂತಿಪು. ೬೨-೦ ವ); ವಾಲಿ ಮಂತ್ರಶಾಲೆಯಂ ಸುಗ್ರೀವಂಬೆರಸು ಪೊಕ್ಕು ಮಂತ್ರಿಮಂಡಲಮು ಮನಾಪ್ತಪರಿಜನಮುಮಂ ಬರಿಸಿ (ಶಂಖಾಪಪಾ. ೦೦-೦೭೯ ವ).

[ಸಂ. ಮಂತ್ರಶಾಲಾ]

**ಮಂತ್ರಸಾಕ್ಷಾತ್ಕಾರ** (ನಾ). ತನ್ನ ತಪಸ್ಸಿನ ಪ್ರಭಾವದಿಂದ ಮಂತ್ರಗಳ ಪ್ರಯೋಜನವನ್ನು ಕಂಡುಕೊಳ್ಳುವಿಕೆ: ಈ ವಿಧವಾದ ಮಂತ್ರ ಸಾಕ್ಷಾತ್ಕಾರ ಮಾಡಿಕೊಂಡವರೇ ಋಷಿಗಳು (ಶಾರದ. ೪೭೮). [ಸಂ.]

**ಮಂತ್ರಸಾನಿ** (ನಾ). ೧. ಮಾಟಮಾಡುವವಳು; ಮಾಟಗಾತಿ: ಆ ಮುದುಕಿ ಮಂತ್ರಸಾನಿ (ಪೀಠಾಂಕ. ೬೭). ೨. ಹೆರಿಗೆ ಮಾಡಿಸುವ ವೃತ್ತಿಯವಳು; ಸೂಲಗಿತ್ತಿ: ಈ ಪೊಳಲ ಮಂತ್ರಸಾನಿಯರೆಲ್ಲರನ್ನೂ ಹಿಡಿದು . . . ದೇಶಾಂತರಕ್ಕೆ ಕಳುಹಿಸುವರಂತೆ (ಮುದ್ರಾ.ಮಂ. ೪೯೩).

[ಮಂತ್ರ + ಸಾನಿ$_1$. / ತೆಲು. ಮಂತ್ರಸಾನಿ, ಮಂತರಸಾನಿ]

**ಮಂತ್ರಸಿದ್ಧ** (ನಾ). ಮಂತ್ರದ ಬಲವನ್ನು ವಶಪಡಿಸಿಕೊಂಡಿರು ವವನು: ಮಹನೀಯಂ ಮಂತ್ರಸಿದ್ಧಂ ಬಿಡೆ ಪಿಡಿದ ಮಹಾಮುದ್ರೆಯಂ ಕಂಡು ದುಷ್ಟಗ್ರಹಮಾದಂ ಶಾಂತಿಯಂ ತಾಳ್ವುವ ತೆಱದೆ (ಶಾರ್ಙ್ಗಪು. ೪-೦೪೮). [ಸಂ.]

**ಮಂತ್ರಸಿದ್ಧಿ** (ನಾ). ೧. ಮಂತ್ರದ ಬಲವನ್ನು ಸಾಧಿಸುವುದರಿಂದ ಉಂಟಾಗುವ ಸಾಮರ್ಥ್ಯ,– ಶಕ್ತಿ: ಕಾಮೇಶ್ವರಮಂತ್ರಮುಂ ಲಕ್ಷಮಂ ಜಪಿಸಿ ಅದರ ಪತ್ನನೆಯ ಭಾಗ ಮುತ್ತುಗದ ಹೂವಂ ಹೋಮಮಂ ಗೈಯಲು ಮಂತ್ರಸಿದ್ಧಿಯಪ್ಪುದು (ಕಾಮಶಾ. ೨೬೦); ಈ ರಾಕ್ಷಸನು ನನ್ನ ಮಗನನ್ನು ಕೊಲ್ಲಲು ಶಕ್ತನಲ್ಲ; ಏಕೆಂದರೆ ನನ್ನ ಮಗ ತೇಜಶ್ಶಾಲಿ, ವೀರ, ಮಂತ್ರಸಿದ್ಧಿಯನ್ನು ಪಡೆದವನು (ವಕಶಾ. ೪೭). ೨. ಮಾಟ, ವಶೀಕರಣ ಮುಂತಾದ ವಿದ್ಯೆ: ಮಂತ್ರಸಿದ್ಧಿಯೊ . . . ಮೋಹಕ್ ವರೌಷಧತಂತ್ರತಿಲಕವೊ ರಮಣಿರವರ್ಗವರ ವಶೀಕರಣ (ಕುಮಾ.ಭಾ. ೦೫-೨೨). [ಸಂ.]

**ಮಂತ್ರಾಕ್ಷತೆ** (ನಾ). ಶುಭಕಾರ್ಯಗಳಲ್ಲಿ ಮಂತ್ರಪೂರ್ವಕವಾಗಿ ಬಳಸುವ ಅರಿಸಿನ ಅಥವಾ ಕುಂಕುಮದಲ್ಲಿ ಕಲಸಿದ ಅಕ್ಕಿ; ಅಕ್ಷತೆ: ಆ ಪರಿತುಷ್ಟನಹ ನೃಪಗೆ ಮಂತ್ರಾಕ್ಷತೆಯನಿತ್ತು (ಹಠಕಾ. ೫-೬೩); ನಿಖಿಲ ಭೂಸುರರುರುವ ಮಂತ್ರಾಕ್ಷತೆಯ ಕೊಳುತಳ್ಳಿಜ್ವ ಜಯರವದೊಡನೆ ರಥ ವೇಱಿದನು ಕಲಿದ್ರೋಣ (ಕುಮಾ.ದ್ರೋ. ೯-೦೫); ಬರಲಾ ನೃಪಾಲಕಂ ಸೋದರರ್ವೆರಸಿ . . . ಪರಸಿ ಮಂತ್ರಾಕ್ಷತೆಯನಿತ್ತು (ಜೈಮಿಭಾ. ೨-೦೯).

[ ಸಂ. ಮಂತ್ರಾಕ್ಷತ ]

**ಮಂತ್ರಾಕ್ಷರ** (ನಾ). ಮಂತ್ರದಲ್ಲಿರುವ ವರ್ಣ; ಮಂತ್ರಘಟಿತವಾದ ಅಕ್ಷರ: ಮಂತ್ರಾಕ್ಷರನಿಯಮದಿನಭಿಮಂತ್ರಿಸಿ ಬರಿಸಿದೊಡೆ ವಾಯು ದೇವಂ ಬಂದೀಂ ಮಂತ್ರಂ ಪೇಟಿಕೆ (ಶಂಶಭಾ. ೦-೦೨೪); ಎನಗಂ ಸಮ್ಮೋ ಹನಮಾದುದಕ್ಕುಮಂದಣ್ಣನ ಸೂನೃತವಚನವೆಂಬ ಮಂತ್ರಾಕ್ಷರದಿಂ (ಗದಾಯು. ೦-೬೨). [ಸಂ.]

**ಮಂತ್ರಾಗಮ** (ನಾ). ಮಂತ್ರದ ಉಚ್ಚಾರಣೆ; ಮಂತ್ರಪಠಣ: ಪೊರೆಯುವರ ಕೈಲಾಗುಮದ್ದಿನ ಕಮಳಜಳಮಂತ್ರಾಗಮದರೆಚ್ಚತ್ತನೊಂದೇ ನಿಮಿಷದಲಿ ಕರ್ಣ (ಕುಮಾ.ಕ. ೦೦-೫೦). [ಸಂ.]

**ಮಂತ್ರಾಗಾರ** (ನಾ). = ಮಂತ್ರಶಾಲೆ: ಮಂತ್ರಾಗಾರದಿಂದಂ ಕ್ಷಿತಿಪತಿ ಪೊಱಮಟ್ಟಂ (ಶಂಧ್ರಪು. ೯-೦೩೦). [ಸಂ.]

**ಮಂತ್ರಾಧ್ವ** (ನಾ). [ವೀಶೈ] ಮಹಾಲಿಂಗದಲ್ಲಿ ಉತ್ಪತ್ತಿಯಾದ ಸಾದಾಖ್ಯಗಳು ಜಗತ್ತಿನಲ್ಲಿ ಪ್ರಕಟವಾಗಲು ಸಹಾಯಕವಾಗಿರುವ

ಆರುಮಾರ್ಗಗಳಲ್ಲಿ ಒಂದು; ಮಂತ್ರರೂಪವಾದ ಮಾರ್ಗ: ವರ್ಣಾಧ್ವ, ಪದಾಧ್ವ, ಮಂತ್ರಾಧ್ವ (ಇವು ಮೂರು ಶಬ್ದಾಧ್ವಗಳು) (ಶಿವಾಸೂ. ೨ ಅಡಿ); ಐವತ್ತೆರಡಕ್ಷರಗಳೇ ವರ್ಣಾಧ್ವ. ಈ ವರ್ಣಗಳ ಮೂಲಕ ಪದಗಳು ಉಂಟಾಗುತ್ತವೆ. ಇವೇ ಪದಾಧ್ವ. ಈ ಪದಗಳ ಮೂಲಕ ಮಂತ್ರಗಳು ಉತ್ಪನ್ನವಾಗುತ್ತವೆ. ಇವೇ ಮಂತ್ರಾಧ್ವ (ಶಿವಾಕೋ. ೨೨)· 'ಷಡಧ್ವ' ಪರಾ. [ಸಂ. ಮಂತ್ರಾಧ್ವನ್]

**ಮಂತ್ರಾನುಷ್ಠಾನ** (ನಾ). ಮಂತ್ರಸಹಿತವಾದ ವಿಧಿ. – ಆಚರಣೆ: ವಿಧುವಿಶದದುಕೂಲವಸನಶೋಭಂ ನಾನಾವಿಧಮಂತ್ರಾನುಷ್ಠಾನಪ್ರಧಾನ ಸುಪವಾಸದಿಂ ತ್ರಿರಾತ್ರಮನಿರ್ದಂ (ಆದಿಪು. ೦೨-೬೧): ಚಿನ್ನದಲ್ಲಿ ಮಾಡಿದ್ದ ಒಂದು ಗೋವಿನ ಉದರದೊಳಗೆ . . . ಕುಳಿತುಕೊಂಡು, ಮಂತ್ರಾನುಷ್ಠಾನ ಮಾಡಿ ಅನಂತರ ಈಚೆಗೆ ಬಂದರು (ಶಾಂತಲಾ. ೨೩೭). [ಸಂ.]

**ಮಂತ್ರಾಲಯ**[1] (ನಾ). = ಮಂತ್ರಶಾಲೆ: ಸಚಿವರೊಡವರೆ ಪತಿ ಮಂತ್ರಾಲಯಕೆ ಬಂದು ಮಂತಣವಿರ್ದಂ (ಕೃಷ್ಣಕೃ. ೬-೫೦). [ಸಂ.]

**ಮಂತ್ರಾಲಯ**[2] (ನಾ). ಆಂಧ್ರಪ್ರದೇಶದ ಕರ್ನೂಲುಜಿಲ್ಲೆಯ ಆದವಾನಿ ತಾಲ್ಲೂಕಿನಲ್ಲಿರುವ ಒಂದು ಪುಣ್ಯಕ್ಷೇತ್ರ: ಶ್ರೀ ರಾಘವೇಂದ್ರರು ಮಂತ್ರಾಲಯ(ಮಂಚಾಲೆ)ವನ್ನು ಸೇರಿದೊಡನೆಯೇ ಮೊದಲು ಕುಲದೇವಿ ಮಂಚಾಲಮ್ಮನ ದರ್ಶನ ಮಾಡಿದರು (ಕಥಾ. ೩೫೬); ಮಂತ್ರಾಲಯ . . . ಇಲ್ಲಿ ರಾಘವೇಂದ್ರಸ್ವಾಮಿಗಳ ಮಠ ಹಾಗೂ ಬೃಂದಾವನವಿದೆ (ಕಲಕೋ. XII. ೯೬೬).

[p ಇದು 'ಮಂಚಾಲೆ' (ಗ್ರಾಮ) ಎಂಬುದರ ಸಂಸ್ಕೃತೀಕರಣ]

**ಮಂತ್ರಾಲೋಚನ**, 'ಮಂತ್ರಾಲೋಚನೆ' (ನಾ). ರಾಜಕಾರ್ಯ ಮುಂತಾದ ವಿಷಯಗಳಲ್ಲಿ ಮಾಡಬೇಕಾದ ಕರ್ತವ್ಯವನ್ನು ಕುರಿತು ಆಪ್ತರೊಡನೆ ಮಾಡುವ ಸಮಾಲೋಚನೆ.— ಚರ್ಚೆ: ವಿಶಾಖಭೂತಿ ಮಂತ್ರಾಲೋಚನೆಯೊಳ್ ಯುವರಾಜಂಗೆ ಬಟಿಯನಟ್ಟಿ (ಶಾಂತಿಪು. ೬-೩೩ ವ): ಧರ್ಮರಾಯನು . . . ಧೌಮ್ಯಮಹರ್ಷಿಗಳನ್ನು ಬರಮಾಡಿಕೊಂಡು ರಾಜಸೂಯಯಾಗದ ವಿಚಾರದಲ್ಲಿ ಮಂತ್ರಾಲೋಚನೆ ನಡಸಿದನು (ರಾಜಸೂ. ೬). **ಮಂತ್ರಾಲೋಚನೆ**: ದೇವಋಷಿಗಣಂ ನೆರೆದು ಬಹುವಿಧ ಮಂತ್ರಾಲೋಚನೆಯನೆಸಗಿ (ವೆಂಕಟಾ. ೨-೩-೨೬).

[ಸಂ. ಮಂತ್ರಾಲೋಚನ]

**ಮಂತ್ರಾವಾಸ** (ನಾ). = ಮಂತ್ರಶಾಲೆ: ಮಾಣ್ದರದೆ ಮಂತ್ರಾವಾಸದೊಳ್ ಮಂತ್ರನಿಶ್ಚಿತನಾಗೀಗಡೆ ಕಾದಿದಲ್ಲದಿಳಿಯಂ ನೀನೆಂತುಮೇನಿತ್ತಪಯ್ (ಪಂಪಭಾ. ೮-೯೭). [ಸಂ.]

**ಮಂತ್ರಾಸ್ತ್ರ** (ನಾ). ಇಂದ್ರ, ಅಗ್ನಿ ಮೊದಲಾದ ದೇವತೆಗಳು ಆವಾಹನೆಯಾಗಿರುವರೆಂದು ನಂಬಲಾದ ಬಾಣ ಮುಂತಾದ ಅಸ್ತ್ರ: ದನುಜ ಮನದಲಿ ಕಡುಗಿ ಮಂತ್ರಾಸ್ತ್ರವನು ತೊಡಚಿದನಾಹವಾಗ್ರದಲಿ (ಕೌಶಿಲಾ. ೨೨-೩೦); ಪೂತುರೇ ತರುಣ ಮಂತ್ರಾಸ್ತ್ರಪ್ರತೀಕಾರಚಾತುರ್ಯ ಮುಂಟಲಾ ನಿನ್ನೊಳಮ ಲೇಸು (ಕೈಪಿಯಾ. ೮-೩೬). [ಸಂ.]

**ಮಂತ್ರಾಲೋಚನೆ** 'ಮಂತ್ರಾಲೋಚನೆ' ನೋ.

**ಮಂತ್ರಿ** (ನಾ). ೧. ವೇದಪಾಠದಲ್ಲಿ ಪರಿಶ್ರಮವಿರುವವನು. ೨. ಮಂತ್ರಗಾರ; ಇಂದ್ರಜಾಲಿಕ: ಎಡ್ಡದೊಂದು ರಕ್ಕಸಗಾಳಿ . . . ಮಂತ್ರಿಯ ಮುಂದೆ ಮಂತ್ರಕೆ ಬೆದರುತೋಡುವ ಮರುಳ್ಗಳನೆ ಪೋಲಿ ಧೂಳಿ ತರಗೆಲೆ ತೃಣಂ ಕಸಕಡ್ಡಿಗಳ ಹಿಂಡು ಚೆದರಿದುವು (ಶಶ್ರಾಂಗ. ೬೮-೦೩೦೬). ೩. = ಮಂತ್ರವಿದ ೨: ದಷ್ಟನೊಳ್ ಕರಂ ಸುರುಚಿರ ಶಾಂತಿಯಿಂ ನೆಗಟ್ ಮಂತ್ರಿ ಪೊಗಟ್ಕೆಯ ಮಂ[ಶಾಸ್ತ್ರಾ. ತಂ]ತ್ರಿಯುಲ್ಲಸೀ (ಜನಮ. ೩-೦೦೨). ೪. ಅರಸನಿಗೆ ಸಲಹೆಯನ್ನು ಕೊಡುವವನು; ಸಚಿವ: "ಮಂತ್ರೀ, ಬುದ್ಧಿಸಹಾಯಃ, ಅಮಾತ್ಯಃ, ಸಚಿವಃ— ಈ ೪ ಮಂತ್ರಿ" (ಶಠಾಂಯು. ೬೦-೨೬೨); ಮಂತ್ರಿ ಪುರೋಹಿತ ಶ್ರೀಕರಣಮುಂ ಸಾಸಿರ್ವ್ವರುಂ ಅಖಿಳನೂರ್ವ್ವರುಂ ಸಹಿತಂ . . . ಕೊಟ್ಟರ್ (ಎಇ. XXI. ೨೯-೬; ೩ನೆಯ ೫೩); ನಾನಾ ಚಮತ್ಕಾರವಂ ಅಱಿಯಲ್ಬಲ್ಲೊಡೆ ಮಂತ್ರಿಯಾಗು (ಸೋಮೇಶ. ೬೬). ೫. ಪ್ರಜಾತಂತ್ರದಲ್ಲಿ ರಾಜ್ಯಕ್ಕೆ ಸಂಬಂಧಿಸಿದಂತೆ ಆಡಳಿತವನ್ನು ನಿರ್ವಹಿಸುವವನು: ಮಂತ್ರಿಗಳ ಮನೆಗೇ ಹೋಟಾರು ಹೋಯಿತು (ಮಣೋಹಂ. ೬೯). 'ಮಂತ್ರಿಮಂಡಲ' ಪರಾ.

[ಸಂ. ಮಂತ್ರಿನ್]

**ಮಂತ್ರಿತ** (ಗು). ೧. ಮಂತ್ರಾಲೋಚನೆ ಮಾಡಲ್ಪಟ್ಟ; ಸಲಹೆಯನ್ನು ಕೊಡಲ್ಪಟ್ಟ. ೨. ಮಂತ್ರ ಹಾಕಲ್ಪಟ್ಟ; ಅಭಿಮಂತ್ರಿಸಿದ: ವೇದವ್ಯಾಸ ಪರಮಋಷಿ ಗಂಗೆಯೊಳ್ಗಲದೇವತೆಯನರ್ಚಿಸಿದ ಮಂತ್ರಿತೋದಕವನು ವರಪುಷ್ಪಪಲ್ಲವದ ಪೊಂಗಳಸಮಂ ತುಂಬಿ . . . ಈಯಲ್ಕೆ (ಕೈಪಿಯಾ. ೬೯-೧). [ಸಂ.]

**ಮಂತ್ರಿತನ** (ನಾ). ಸಚಿವನ ಪದವಿ.— ಹುದ್ದೆ: ಆತನು ನಿನಗೆ ಮಂತ್ರಿತನಕ್ಕೆ ತಕ್ಕವನು (ಐಕಪು. ೩-೬). [ಮಂತ್ರಿ + – ತನ]

**ಮಂತ್ರಿತ್ವ** (ನಾ). = ಮಂತ್ರಿತನ: ನಮ್ಮ ಕಥಾನಾಯಕರ ಕಾಲಕ್ಕೆ ಮಂತ್ರಿತ್ವ ಹೋಗಿ ಕೇವಲ ಶಾನುಭೋಗಿಕೆ ಮಾತ್ರ ಉಳಿದಿತ್ತು (ಅರಿಪಂ. ೩೩). [ಸಂ.]

**ಮಂತ್ರಿಪ** (ನಾ). ಮಂತ್ರಿಗಳಲ್ಲಿ ಮುಖ್ಯನಾದವನು: ಭೂಸುರವರ ವಿರೂಪಾಕ್ಷಸುತ ಲಿಂಗಮಂತ್ರಿಪಂ ವಿರಚಿಸಿದ ಕಬ್ಬಿಗರ ಕೈಪಿಡಿಯನಂಗೀಕರಿಪುದಖಿಲಸುಜನರ್ಕಳು (ಕಬ್ಬಿಕೈ. ೦೦೦); ನೀಲಗಿರಿಮಾಹಾತ್ಮ್ಯಯಂ ಮಂತ್ರಿಪಂ ಕಥಿಸಿದಂ (ರಾಜಶೇಖ. ೬೨-೨೩). [ಸಂ.]

**ಮಂತ್ರಿಮಂಡಲ**, **ಮಂತ್ರಿಮಂಡಳ** (ನಾ). ರಾಜ್ಯಾಡಳಿತದ ಹೊಣೆಯನ್ನು ಹೊತ್ತಿರುವ ಸಚಿವಸಮಿತಿ: ವಾಲಿ . . . ಮಂತ್ರಿಮಂಡಲ [ಶಾಸ್ತ್ರಾ. ೪] ಮುಮನಾಪ್ತಪರಿಜನಮುಮಂ ಬರಿಸಿ (ರಾಮಚಂ.೦೦-೦೬೯ ವ); ಮಹಾಪ್ರಧಾನ ಅಥವಾ ಮಹಾಮಾತ್ಯನು, ಮಂತ್ರಿಮಂಡಲದ ಮುಖ್ಯಸ್ಥನೆಂದು ಭಾವಿಸಬಹುದು (ಕಶಾಸ. ೩೩೧). **ಮಂತ್ರಿಮಂಡಳ**: ಚುನಾವಣೆಯ ನಂತರ ಮೊದಲ ಬಾರಿಗೆ ಮಂತ್ರಿಮಂಡಳವು ಸಭೆ ಸೇರಿತು (ರೂಢಿ).

[ಸಂ.]

**ಮಂತ್ರಿಮಂಡಳ** 'ಮಂತ್ರಿಮಂಡಲ' ನೋ.

**ಮಂತ್ರಿಸಂಪುಟ** (ನಾ). = ಮಂತ್ರಿಮಂಡಲ: ಮಂತ್ರಿಸಂಪುಟದಲ್ಲಿ ಪಕ್ಷಗಳು ಚಾಲನಶಕ್ತಿಯನ್ನು ಮತ್ತು ನಿರ್ದೇಶನದ ತತ್ತ್ವಗಳನ್ನು ನೀಡುತ್ತ ಬಂದಿವೆ (ರಾಜಶ. ೨); ಮಂತ್ರಿಸಂಪುಟವು ದುರ್ಬಲವಾಗಿದೆಯೆಂದು ತೋರಿದಾಗ ರಾಜನು ಅದಕ್ಕೆ ಧೈರ್ಯ ಹೇಳಿ ಅದನ್ನು ಪ್ರೋತ್ಸಾಹಪಡಿಸಬಹುದು (ರಾಜ್ಯಾಂಗ. ೦೦೨). [ಸಂ.]

**ಮಂತ್ರಿಸು** (ಕ್ರಿ). ೧. ಯಜ್ಞ, ಯಾಗ, ಹೋಮ, ಪೂಜೆ ಮೊದಲಾದ ಧಾರ್ಮಿಕಸಮಾರಂಭಗಳಲ್ಲಿ ಯಾವ ವಸ್ತುವನ್ನಾಗಲಿ ಪವಿತ್ರಗೊಳಿಸಲು ಅದನ್ನು ಮುಟ್ಟಿ ವಿಧ್ಯುಕ್ತವಾಗಿ ಮಂತ್ರಗಳನ್ನು ಪಠಿಸು: ಮಂತ್ರಿಸಿದ ಪಶು ಉಪಾಕೃತವೆಂಬುದು (ಶಠಾಯು. ೬೯-೨೬೩). ೨. ಮಂತ್ರವನ್ನು ಉಚ್ಚರಿಸು.— ಪಠಿಸು.— ಹೇಳು: ಬ್ರಹ್ಮರ್ಷಿ ದೇವರ್ಷಿ ವಿಪ್ರೋತ್ತಮರನುಮತದಿಂ ಪ್ರಾಣಾಯಾಮಂ ಮಂತ್ರಿಸಿ . . . ಹೋಮಮಂ ಮಾಡುತ್ತಿರ್ದು (ಗಿರಿಜಾ. ೦೦-೯೬ ವ); ಮಣಿದೆಳೆಯರಂ ಪರಸಿದನು ಮಂತ್ರಿಸುತೆ ಓಂ ಶಾಂತಿಯಂ (ಶ್ರೀರಾಮಾ. ೦೬೬-೯೨). ೩. ವಿಷ, ರೋಗ ಮುಂತಾದುವನ್ನು ಪರಿಹರಿಸಲು ವಿಧ್ಯುಕ್ತವಾಗಿ ಮಂತ್ರ ಹಾಕು: ಗಾರುಡಿಗರ್ ಬಂದು ಕಂಡು ತಪ್ಪುತಮ್ಮಱಿವಂದದಿಂ ಮಂತ್ರಿಸಿದೊಡೆಂತುಂ ನಿರ್ವಿಷಮಾಗದಿರ್ಪುದುಂ (ಶಂಕರಕ. ೦೦೩-೦೩); ಗಾರುಡಿಗರು . . . ಬಂದು ಮಂತ್ರಿಸಿ ನಾಗವಿಷದಿಂ ಮಡಿದ ರಾಯನ

ನಾಗದಯ್ಯೋ ತಮ್ಮ ಕೈಯಲೆನುತ್ತ ತೊಲಗಿವರು (ಬಸಪು. ೪೬-೨೩); ಮಂತ್ರಜಲದಲಿ ತೊಳೆದು ಘಾಯವ ಮಂತ್ರಿಸುತ ಕರ್ಪೂರದ ಕವಳದ ಯಂತ್ರರಕ್ಷೆಯಲವನಿಪನ ಸಂತೈಸಿ ಮಲಗಿಸುತ (ಕುವ್ಯಾಕ. ೧೦-೩೬). ೪. ಬಾಣ, ಜಲ, ದರ್ಭೆ ಮೊದಲಾದುವುಗಳಲ್ಲಿ ದಿವ್ಯಶಕ್ತಿಯನ್ನುಂಟುಮಾಡಲು ಯಾವುದಾದರೂ ದೇವತೆಯನ್ನು ಆಹ್ವಾನಿಸಿ ಮಂತ್ರ ಹಾಕು: ಹರಶರಣರಂ ನೆನೆದು ಪಂಚಾಕ್ಷರಿಯ ಮಂತ್ರದಿ ಮಂತ್ರಿಸಿದ ಸುರುಚಿರ ಭಸಿತವಂ ತಳಿದು ತಾಂ ತೊಡೆಯಲ್ಕೆ ತತ್‌ಶೂಲೆ ಪರಿಹರಿಸಲು (ಬಸಪು. ೪೯-೨೯); ಬಸಿವ ರಕುತವ ತೊಳೆತೊಳೆದು ಮಂತ್ರಿಸಿದ ಸಲಿಲವ ಮುಕ್ಕಳಿಸಿ (ಕುವ್ಯಾಕ. ೧೦-೫೦); ಜಗಜಗಿಸುವ ಮೂಡಿಗೆಯಿಂ ತೆಗೆದು ದಿವ್ಯಾಸ್ತ್ರವೃಂದಮಂ ಮಂತ್ರಿಸುತುಂ ಮಗುಳ್ಚಿಟ್ಟಂ (ಶಬಸಂ. ೩-೩೪). ೫. ಸಲಹೆ ನೀಡು; ಬುದ್ಧಿವಾದವನ್ನು ಹೇಳು: ಮಂತ್ರಿಸಲ್ ಶ್ರೇಷ್ಠವಾಗ್ಮಿಷಿ ಗುರುವಸಿಷ್ಠನೀ ವಾಕ್ಯಿಯಿಂ, ಭರತನಾತನ ಓಂದೆ ನಡೆದನ್ (ಶ್ರೀರಾಪಷಾ. ೧೦೬-೦೩೮). [ಮಂತ್ರ + — ಇಸು₃]

**ಮಂತ್ರೋದಕ** (ನಾ). ಮಂತ್ರಪಠಣದಿಂದ ಪವಿತ್ರಗೊಂಡ ನೀರು; ಮಂತ್ರಪೂತವಾದ ಜಲ: ಕುಡಿಸಿದರು ಮಂತ್ರೋದಕವನೊಳಗಡಸಿ ಕರುಳನು ಮುಚ್ಚಿ ಮಂತ್ರಿಸಿ ತೊಡೆದರಪಿಳೌಷಧಿಗಳನು ನೃಪಸೇನೆಯೆರಡಟಲಿ (ಕುವ್ಯಾಶೀ. ೩-೪೨). [ಸಂ.]

**ಮಂಥ** (ನಾ). ೧. ಕಡೆಯುವುದು. ೨. ಕಲಕುವುದು; ಅಲುಗಾಡಿಸುವುದು. ೩. ಕೊಲ್ಲುವುದು; ನಾಶಪಡಿಸುವುದು: ಅರಿಗಾ ಸಾಗರನು ಮಂಥಮೂರ್ಧೆಯನಂತು ಒಲಿದಿತ್ತನೋ ಅವನೆ ಪೊರೆಗೆಮ್ಮನು (ಕೃಕ್ಯಾಲೋ. ೯೯). ೪. ತುಪ್ಪದಿಂದ ಮಿಶ್ರಿತವಾದ ಹುರಿಹಿಟ್ಟನ್ನು ತಣ್ಣೀರಿನಲ್ಲಿ ಹದವಾಗಿ ಕಲಸಿ ಮಾಡಿದ ಒಂದು ಬಗೆಯ ಪಾನೀಯ. ೫. ಕಡೆಗೋಲು; ಮಂತು: "ಮಂಥಾಃ, ಮಂಥಃ . . . ಖಜಕಃ — ಈ ೫ ಕಡೆಗೋಲ್" (ಕರಾಳು. ೪೬-೦೨೦). ೬. ಸೂರ್ಯ; ರವಿ. ೭. ಸೂರ್ಯನ ಕಿರಣ. ೮. ಒಂದು ಬಗೆಯ ಕಣ್ಣುಬೇನೆ. ೯. ಕಣ್ಣಿನ ಪಿಸುರು. ೧೦. (ಯಾಗದ) ಅಗ್ನಿಯನ್ನು ಉತ್ಪಾದಿಸಲು ಉಜ್ಜುವ ಸಾಧನ; ಬನ್ನಿಯ ಕೊರಡು; ಅರಣಿ. ೧೧. ಪದಾರ್ಥಗಳನ್ನು ತೊಳಸುವುದಕ್ಕೆ ಉಪಯೋಗಿಸುವ ಸೌಟು. ೧೨. ಒಂದು ಬಗೆಯ ಜಿಂಕೆ. [ಸಂ.]

**ಮಂಥನ** (ನಾ). ೧. ಕಡೆಯುವುದು; ಮಥಿಸುವುದು: ಮದಗಜ ಬೃಂಹಿತಧ್ವನಿ ತುರಂಗಮ ಹೇಷಿತಘೋಷಮಾದಮೊರ್ಮೊದಲೆ ಪಯೋಧಿ ಮಂಥನಮಹಾರವಮಂ ಗೆಲೆ (ಶಂಪರಾ. ೩-೩೬); ಒಲಿದು ಮಂಥನವನೆಸಗೆಂಬುದಂ ಕಡೆಯೆಂಬರು (ಕೃಬಚಾ. ೨-೯); ಅನುಭವದ ಪಾಲೊಳು ವಿಚಾರಮಂಥನವಾಣಿ ಜನಿಯಿಸಿ ಜ್ಞಾನನವನೀತವಡೆ ಸುಖದಿಂ (ಮಂಕುಶ. ೩೪೪). ೨. ಕಡೆಗೋಲು; ಮಂತು. ೩. ಅರಣಿಯನ್ನು ಯಾಗಾಗ್ನಿಗಾಗಿ ಉಜ್ಜುವುದು: ಬನ್ನಿಕೊರಡನ್ನು ಚೆನ್ನಾಗಿ ಮಂಥನ ಮಾಡಿದರೆ ಬೆಂಕಿಯುಂಟಾಗುತ್ತದೆ (ರೂಢಿ). ೪. ಯಾವುದಾದರೊಂದು ವಿಷಯದ ಕೂಲಂಕಷವಾದ ಚರ್ಚೆ,-ವಿಚಾರ: ಮಾತಿಲ್ಲದೆ ಮಂಥನ [ಶಾಕಾಂ. ಮಥನ]ವ ಮಾಡಿ ಮೆಚ್ಚಿದೆ ಬಸವಾ (ಶೀಲಪ. ೪. ೧೩-೩೩). ೫. (ಮನಸ್ಸಿನ) ತುಡಿತ; ಹೊಯ್ದಾಟ: ಮಧುರಯಾತನೆಯ ಮಂಥನ ಎದೆಯಿಂದಿಳಿದು ಉದರವತ್ತ ಕೊಸಳಿ (ಹೊಸಕ್ಷ. ೩೨). [ಸಂ.]

**ಮಂಥನಿ** (ನಾ). ೧. ಮೊಸರು ಕಡೆಯುವ ಪಾತ್ರೆ,-ಗಡಿಗೆ: "ಮಂಥನೀ, ಗರ್ಗರೀ—೨ ಮೊಸರು ಕಡೆಯುವ ಗಡಿಗೆ. ಗುಡಾಣ" (ಸಿದ್ಯಾಂತಿ. ೨೯೬). ೨. ಮರದ ತುಂಡುಗಳನ್ನು ಉಜ್ಜಿ ಬೆಂಕಿಯನ್ನು ಹುತ್ತಿಸುವಿಕೆ. [ಸಂ. ಮಂಥನೀ]

**ಮಂಥರ** (ಗು). ೧. ನಿಧಾನವಾದ; ಮಂದಗತಿಯ: ಮದಮಂಥರಗಮನಾಭಿಧಾನ ಮನ್ಮಥರರವ್ಯಾಪಾರವಿಫಲೀಕರಣಚರಣಪರಿಣತನುಂ ಅಪ್ಪ ಜನಯೋಗಿಗೆ ನಿಕ್ಕುವಂ ಸ್ತ್ರೀಬಾಧಾಪರೀಷಹ ಜಯಮುಕ್ಕುಂ (ಶಶ್ರೃಕ್ರ. ೩೩೪). ೨. ಆಲಸ್ಯದಿಂದ ಕೂಡಿದ; ಜಡವಾದ: ನಿರತಿಶಯಮಪ್ಪಮದು . . . ಗುರುಜಘನಸ್ತನಭರಮಂಥರಲೀಲಾಲಸವಿಲಾಸಿನೀಚಳಿತಂಬೋಲ್ (ಶಪರಾ. ೦-೬೩); ಗುರುಕಬರೀಭರಸ್ತನಭರೋರುಭರಸ್ಥಿತಿಯಿಂ ಸ್ವಭಾವಮಂಥರಗತಿಯಪ್ಪ ತನ್ವಿಗೆ . . . ಗರ್ಭದೊಳ್ ಧರಿಯಿಸಿದಚ್ಯುತಂ ಬಳೆಯೆ (ಜಗಪಿ. ೨-೯೮). ೩. ದಡ್ಡತನದ: ಮೂರ್ಖತನದಿಂದ ಕೂಡಿದ. ೪. ತಗ್ಗಾದ; ಕೆಳಸ್ತರದ. ೫. ಬಾಗಿದ; ವಕ್ರವಾದ. ೬. ಅಗಲವಾದ; ವಿಸ್ತಾರವಾದ. (ನಾ). ೭. ನಿಧಾನವಾಗಿ ನಡೆಯುವವನು: "ಮಂದಗಾಮಿ, ಮಂಥರಃ — ೨ ಮೆಲ್ಲಗೆ ನಡಿಯುವವನು" (ಸಿದ್ಯಾಂತಿ. ೨೩೮). ೮. ಸೋಮಾರಿ; ಜಡ; ಆಲಸ: "ಅಲಸಃ. ಶಿಥಿಲಃ . . . ಮಂಥರಃ— ಈ ೬ ಸೋಂಬಂ" (ಕರಾಳು. ೬೪-೨೩೩). [ಸಂ.]

**ಮಂಥರೆ** (ನಾ). ೧. ಚಟುವಟಿಕೆಯಿಲ್ಲದವಳು; ಸೋಮಾರಿ: ಅಂತರ್ಮನ್ಯುಭಾರಾತಿಮಂಥರೆ ಪೆಂಡಿರ್ಗಿದು ತಕ್ಕುದಲ್ತೆನಿಪವಸ್ಥಾಭೇದವಂ ತಾಳ್ದಿದಳ್ (ಕಾದಂಉ. ೩೬೩). ೨. ಕೈಕೇಯಿಯ ಗೂನು ಬೆನ್ನಿನ ಒಬ್ಬ ದಾಸಿ: ಹರೆದುದಿಃ ವೃತ್ತಾಂತವಿದನಾದರಿಸಿದಳಲ್ತೆ ಪೂರ್ವಮಾಯಾತರುಣಿ ಮಂಥರೆ ಮಥಿಸಿ ಮನದಲಿ ಪೂರ್ವಸೂಚಿತವ (ತೊರರಾ. ೨-೦-೨೦). [ಸಂ. ಮಂಥರಾ]

**ಮಂಥಾಚಲ** (ನಾ). ದೇವಾಸುರರು ಕ್ಷೀರಸಮುದ್ರವನ್ನು ಕಡೆಯಲು ಕಡೆಗೋಲನ್ನಾಗಿ ಮಾಡಿಕೊಂಡರೆಂದು ಭಾವಿಸಲಾದ ಬೆಟ್ಟ; ಮಂದರಪರ್ವತ: ದೇವ ಸಮುದಗ್ರಮಂಥಾಚಲೋದ್ಧರಣ ಜಯ (ಜಗಪಿ. ೩-೦೦೩ ರಗಳೆ). [ಸಂ.]

**ಮಂಥಾನ** (ನಾ). ೧. ಕಡೆಗೋಲು; ಮಂತು: "ಮಂಥಾಃ, ಮಂಥಃ, ಮಂಥಾನಃ, ವೈಶಾಖಃ, ಖಜಕಃ - ಈ ೫ ಕಡೆಗೋಲ್" (ಕರಾಳು. ೪೬-೦೨೦). ೨. ಶಿವನ ಹೆಸರುಗಳಲ್ಲಿ ಒಂದು. [ಸಂ.]

**ಮಂಥಿ** (ನಾ). ೧. ಕಡೆಯುವಿಕೆ. ೨. = ಮಂಥಾನ ೧: "ವೈಶಾಖಮೆನೆ ಮಂಥಮೆನೆ ದಧಿವಿಘಾತಮೆನೆ ಮಂಥಿ ಮಂಥಾನಮೆನೆ ಕಡೆಗೋಲದು" (ಮಂಗರಾ. ೩೯-೬). [ಸಂ. ಮಂಥಿನ್]

**ಮಂಥಿಕ** (ನಾ). ಒಂದು ಬಗೆಯ ಸಸ್ಯ ಮತ್ತು ಅಡುಗೆಗೆ ಬಳಸುವ ಅದರ ಕಾಳು; ಮೆಂತ್ಯ: "ಮಂಥಿಕಮೆನಲು ಮೆಂತೆಯಕೆ ನಾಮ ಮಕ್ಕುಂ" (ಮಂಗರಾ. ೪೦-೩೬). [ಸಂ. ?]

**ಮಂದ₁** 'ಮಂದು' ನೋ.

**ಮಂದ₂** (ಗು). ೧. ನಿಧಾನವಾದ; ಚುರುಕಲ್ಲದ: 'ಮಂದಗತಿ' ಪರಾ. ೨. ಜಡವಾದ; ಆಲಸ್ಯದಿಂದ ಕೂಡಿದ. ೩. ಮಂಕಾದ; ಕಾಂತಿಹೀನವಾದ: ನಾನು ಗಿಡಗಳ ಮರೆಗಿದ್ದ ಮಂದಪ್ರಕಾಶದಲ್ಲಿ ಎರಳೆಯ ಎಳಗಂದಿನಂತೆ ಓಡಲು ತೊಡಗಿದೆ (ಶ್ರೃಇಸ. ೩); ಗರ್ಭಗುಡಿಯಿಂದ ಬರುವ ಮಂದಪ್ರಕಾಶದಲ್ಲಿ ಪರವಶನಾಗಿ ನನ್ನ ಹೊಂಡದ ಮಾದರಿಯಲ್ಲಿ ಕಾಲಿಟ್ಟರೆ ಏನು ಗತಿ (ದಃಕನ್ನ. ೮೪). ೪. ದಡ್ಡತನದಿಂದ ಕೂಡಿದ; ಮೊದ್ದುತನದ: 'ಮಂದಬುದ್ಧಿ' ಪರಾ. ೫. ಮೃದುವಾದ; ಕೋಮಲವಾದ: 'ಮಂದಪವನ' ಪರಾ. ೬. ತೀಕ್ಷ್ಣತೆಯನ್ನು ಕಳೆದುಕೊಂಡ; ಪಾಟವವಿಲ್ಲದ: ಶಾಶಕ್ರೀಜ್ಯಗೃಹಸ್ಥನಾಗೆ ನೃಪರಿಂ ಶುದ್ಧಾತ್ಮಕಂ ಮಂದದೃಷ್ಟಿ ನಿಜಸ್ತ್ರೀಸುತವೈಭವಂ. . . ಅಕ್ಕುಂ ನರಂ (ಜಾಕಶ. ೦೬-೩೪). ೭. (ಆಲಂ) ಅಳ್ಳಕವಲ್ಲದ; ನೀರಾಗಿರದ; ಗಟ್ಟಿಯಾಗಿರುವ. ೮. ಗಾಢವಾದ; ದಟ್ಟವಾದ: 'ಮಂದಗತ್ತಲೆ' ಪರಾ. (ನಾ). ೯. ನಿಧಾನಗತಿಯುಳ್ಳುದು: ಅವುಗಳಲ್ಲಿ ಕೆಲವು ಅತಿ ಮಂದ; ಇನ್ನು

ಕೆಲವು ಅತಿ ದ್ರುತ (ಕ್ರೋಷ್ಠ. ೨೦೦). ೧೦. ಮೈಗಳ್ಳ; ಸೋಮಾರಿ : "ಅಲಸಃ, ಶಿಥಿಲಃ, ಮಂದಃ, ಜಡಃ, ಜಿಹ್ಮಃ, ಮಂಥರಃ — ಈ ೬ ಸೋಂಬಂ" (ಹಲಾಯು. ೬೪-೨೩೩). ೧೧. ಎಗ್ಗ; ದಡ್ಡ; ತಿಳಿಗೇಡಿ : "ಮೈಧೇಯಃ . . . ಮಂದಃ, ವಿವರ್ಣಃ, ಮೂರ್ಖಃ, ಮಾತೃಶಾಸಿತಃ — ಈ ೧೧ ಅಱಿಯದವಂ" (ಹಲಾಯು. ೩೬-೦೫೦); ಅಂಥ ಮಂದರಂದವ ನುಡಿದಡೆ ನೊಂದು ಬೈಯಲೇಕೆ (ಮೋಹತ. ೨೦-೬೪); ಇವನು . . . ಮಂದನಾಗಿದ್ದರೂ ಕಡೆಗೆ ಹೇಗೋ ಅಲ್ಲಿಂದ ಹೊರಟು ಇಲ್ಲಿಗೆ ಬಂದಂದಿನಿಂದ ನಮ್ಮ ಈ ರಾಜಹಿತನಾಗಿ ಬಹಳ ಪ್ರಸಿದ್ಧನಾಗಿದ್ದಾನೆ (ಪಗೆ. ೦೯); ಕಂಧಿದವನಾದರೂ ಮಂದನಾಗಿರಬಾರದು (ಗಾದೆ). ೧೨. ತೀಕ್ಷ್ಣವಾಗಿಲ್ಲದಿರುವುದು; ಪಾಟವವಿಲ್ಲದಿರುವುದು : ಕಣ್ಣು ಮಾತ್ರ ಸ್ವಲ್ಪ ಮಂದವಾಗಿದೆ (ಬಾಳಗ. ೦೬); ಅವರ ಕಿವಿ ಸ್ವಲ್ಪ ಮಂದವಾಗಿರುವುದರಿಂದ ಮೆಲ್ಲಗೆ ಮಾತನಾಡಿದರೆ ಕೇಳಿಸುವುದಿಲ್ಲ (ರೂಢಿ). ೧೩. ಅಳ್ಳಕವಾಗಿಲ್ಲದುದು ; ಗಟ್ಟಿಯಾದುದು : ಸುರಾಮೇಹವೆಂಬುದು . . . ಕೆಳಗೆ ಮಂದವಾಗಿ ಗಟ್ಟಿಯಾಗಿ ಇಹುದು (ವೈದ್ಯಸಾ. ೧. ೨೬). ೧೪. ದಟ್ಟವಾದುದು ; ನಿಬಿಡವಾದುದು ; ಒತ್ತಾಗಿರುವುದು : "ನಿರಂತರಂ . . . ವಿರಳೇತರಂ — ಈ ೫ ಮಂದಂ" (ಹಲಾಯು. ೦೧೯-೩೨) ; ಸಣ್ಣಂ ನಡು ತಿಣ್ಣಂ ಮೊಲೆ . . . ಕಣ್ಣಲರ್ಗಣ್ಣಮೆ ಮಂದಂ ಬಣ್ಣಿಸಲರಿದಬ್ಜಜಂಗಮಾಕೆಯ ರೂಪಂ (ಕಾವ್ಯಸಾ. ೨೫೦ ಕೂಡ್ರ೪) ; ಕಾಮಸಾಮ್ರಾಜ್ಯದೊಸಗೆಯೊಳ್ ಪಸರಿಸಿದ ಪಿಷ್ಟಾತಕಚೂರ್ಣದಂತೆ ಮಂದಮಾದ ಪೊಂದಾವರೆಯ ರಜದೊಳಂ (ಪುಲ್ಲಪು. ೨-೩೩): ಬೆಂದ ಕೆಂಡವನ್ನು ಕೊಡದ ಉದ್ದಕ್ಕೂ ಮಂದವಾಗಿ ಹರಡುವರು (ತೋಟಗಾ. ೪೯). ೧೫. ದುಷ್ಟ : ಖಳ. ೧೬. ಭಾಗ್ಯಹೀನ : ದುರದೃಷ್ಟಶಾಲಿ: ಕಂದದೆ ಕುಂದದೆ ಬಾಳ್ವರ್ ಚಂದದಿ ಮಸುರಾಜರಾಜಧರೆಯೊಳ್ಮನುಜರ್ ಮಂದರ ಮಂದರ ಮಂದರ ಮಂದರ ಕೆಳೆ ರೀತಿ ನೀತಿ ಬಗೆಯಿಲ್ಲವರೊಳ್ (ಹಟ್ಟಾರ. ೦-೪೯). ೧೭. ರೋಗ. ೧೮. ಮದವೇರಿದವನು. ೧೯. ಆಹಾರವನ್ನು ಅರಗಿಸುವ ಶಕ್ತಿಯಿಲ್ಲದಿರುವಿಕೆ : ಅಜೀರ್ಣ : ಮಗುವಿಗೆ ಮಂದವಾಗಿದೆ, ಹಾಲು ಕುಡಿಸಬೇಡ (ರೂಢಿ). ೨೦. ಸುಲಭವಾಗಿ ಜೀರ್ಣಿಸದಿರುವ ಪದಾರ್ಥ : ಆಲೂಗಡ್ಡೆ, ಗಟ್ಟಿಮೊಸರು ಮುಂತಾದುವನ್ನು ಮಂದವೆಂದು ಹೇಳುತ್ತಾರೆ (ರೂಢಿ). ೨೧. ಅಜೀರ್ಣದಿಂದ ಬರುವ ಒಂದು ಬಗೆಯ ಜ್ವರ : ಈ ರೀತಿಯಲ್ಲೇ ರಾತ್ರಿಯ ಕಾಲದಲ್ಲಿ ಬರುವ ಜ್ವರವು ಮಂದವೆಂದು ಹೇಳುವುದು (ಬಾಲಪ್ರ. ೦೨). ೨೨. ನವಗ್ರಹಗಳಲ್ಲಿ ಒಂದು ; ಶನಿಗ್ರಹ : ಶಶಲಕ್ಷ್ಮಂ ಮಂದನೊಳ್ ಮೇಣ್ ಮಹೀಜನೊಳೊಂದಿರ್ದೊಡೆ . . . ಲಗ್ನಜಂ ಪೊರ್ದುಗುಂ (ಜಾತಕ. ೬-೯೨) ; ಭಾಸ್ಕರ ಭೌಮರಶುಭಸ್ಥಾಯಿಗಳು ಗುರುಮಂದರ ಖಿಭವದಾಯಿಗಳು (ಕುವ್ಯಾಕ. ೨೨-೪). 'ಮಂದವಾರ' ಪರಾ. ೨೩. (ನಿಧಾನಗತಿಯ) ಆನೆಗಳಲ್ಲಿ ಒಂದು ಜಾತಿ : "ಭದ್ರಃ ಮಂದಃ, ಮೃಗಃ. ಎಂದಿಂತು ಆನೆಗಳ್ ಮೂಱು ತೆಱನಕ್ಕುಂ" (ಹಲಾಯು. ೩೬-೬೨) ; ನಯನಿಪುಣಸೂತ್ರಧಾರರ್ ನಿಯಮಿಸುವರ್ ಭದ್ರ ಮಂದ ಮೃಗಸಂಕೀರ್ಣಾನ್ವಯದ ನೃಪಕರಿಗಳಂ (ಕುಸುಪು. ೨-೩೬). ೨೪. [ಸಂಗೀತ] ಕೆಳಸ್ವರದ ಧ್ವನಿ ; ಮಂದ್ರಸ್ಥಾಯಿಯ ಧ್ವನಿ : ಆ ರಾಗಂಗಳಂ ಪಾಡುವಲ್ಲಿ . . . ಮಂದ ಮಧ್ಯ . . . ಸ್ತಂಭನ ದೀರ್ಘಭೇದಗಳಂ ರವವಿಕಲ್ಪಗಳಂ ತೋಱಿ (ವಿವೇಕ. ೨೩೬). [ಸಂ.]

**ಮಂದಕಾಲಿ** (ನಾ). ಒಂದು ಬಗೆಯ ಗಿಡ ; ಬಸಲೆ : "ಪೋತಕಿ ಮಂದಕಾಲಿ [ಪಾಠಾಂ. ಮಂಥಗಾಲಿ, ಮಣ್ಮಡಕಾಳಿ]ಯೆನೆ ಬಸಲೆಯಕ್ಕು" (ಮಂಗರಾ. ೪೪-೪೬). [ ? ]

**ಮಂದಗತಿ** (ನಾ). ನಿಧಾನವಾದ ನಡೆ, — ಚಲನೆ : ಅಂತು ಗಗನತಳದಿನವನೀತಳಕ್ಕವತರಿಸಿದಿಂದುಗತಿ ಮಂದಗತಿಯಿಂ ಜಿನಮಂದಿರಮಂ ಬಲಗೊಂಡೊಳಗಂ ಪೊಕ್ಕು (ಕಂಠಾಪಾ. ೩-೦೩ ವ) ; ಕಾಲ್ಮಂದಗತಿಗಲಸೆ ನಗೆಮೊಗಂ ಬೆಳ್ಪುದೋಱೆ . . . ಸುತಲಾಂಛನದ ಗರ್ಭದಿಂದೆ (ಕೈಬಿಚ. ೦೯-೩೪) : ವಿಸ್ತರಣಪ್ರಗತಿ ಏಕೆ ಇಂಥ ಮಂದಗತಿಯನ್ನು ಪ್ರದರ್ಶಿಸುತ್ತಿವೆ (ಶಿಕ್ಷದ. ೬೨೩). [ಸಂ.]

**ಮಂದಗಮನ** (ನಾ). = ಮಂದಗತಿ : ಮಂದಗಮನದ ತಳೆತ ಮುಸುಕಿನ ಮೌಳಿಕಾಂತೆಯರ್ಬೈದಿತೊಗ್ಗಿನಲಿ (ಕುಮ್ಯಾಭಿ. ೦೦-೩೦) ; ರಾಜಕುಮಾರನು ಮುಂದೆ ನೀಲನದಿಯ ಮಂದಗಮನವನ್ನು ನೋಡುತ್ತಾ ಮೈಮರೆತನು (ಮಹಿಕ. ೪೮). [ಸಂ.]

**ಮಂದಗಮನೆ** (ನಾ). ಮೆಲ್ಲಗೆ ನಡೆಯುವವಳು ; ನಿಧಾನವಾಗಿ ಚಲಿಸುವವಳು : ಮಂದಗಮನೆ ಇವನಾರೆ ಪೇಳಮ್ಮ ಮಂದರಧರಗೋವಿಂದ ಕಾಣಮ್ಮ (ಪುರಂದ. ೨-೬೦ ಪಲ್ಲವಿ) ; ಮಂದಗಮನೆಯ ಮಂದಹಾಸದ ವಿಲಾಸಮಂ . . . ಏನೆಂದು ಬಣ್ಣಿಸಬಹುದು (ಕೈಬಿಚ. ೦೯-೨೮) ; ಅಂದಳವನೇಱುವರೆ ಅಂದದಲಿ ಸುಖಿಸುವರೆ ಮಂದಗಮನೆ ಸಿರಿ ದೊರೆಯುವರೆ ಹಸಿದರಿಗೆ ಚೆಂದದಿಂದಿಕ್ಕು (ಸರ್ವಜ್ಞ. ೬೪೬). [ಸಂ. ಮಂದಗಮನಾ]

**ಮಂದಗತ್ತಲೆ** (ನಾ). ದಟ್ಟವಾದ ಕತ್ತಲೆ ; ಗಾಢಾಂಧಕಾರ : ಮಹಾವೀಧಿದ್ವಯದಿಂ ಮಹಾಗುಹಾದ್ವಾರಮನೆಯ್ದಿ ಮಂದಗತ್ತ[ಪಾಠಾಂ. ತ್ತ]ಲೆಯೊಳ್ ಮಣಿರತ್ನಕಾಕಿಣೀರತ್ನಂಗಳೊಳ್ ಬರೆದ ಚಂದ್ರಾದಿತ್ಯಮಂಡಲದ ಬೆಳಗು ಬೆಳಗೆ ಸಿಂಧುವಿನ ತಡಿವಿಡಿದು . . . ನಡೆದು (ಆದಿಪು. ೯-೩೪ ವ). [ಮಂದ₂ + ಕತ್ತಲೆ]

**ಮಂದಗಾತಿ** (ನಾ). ಮೃದುಸ್ವಭಾವದವಳು ; ನಿಧಾನಸ್ಥೆ : ಹಸ್ತದೊಳ್ ಹಸ್ತಮಂ ಹಾಕುತ್ತಿರುವ ಮಂದಗಾತಿಯಂ ನೋಡಿ ರಾಯನು ಸೋತು (ಶೌಗಂ೨. ೩೩೮-೦೦). [ಮಂದ₂ + — ಗಾತಿ₅]

**ಮಂದಗಾಮಿ** (ನಾ). ೧. ನಿಧಾನಗತಿಯುಳ್ಳುದು. ೨. ಮೆಲ್ಲನೆ ಚಲಿಸುವವನು : ನಿಧಾನವಾಗಿ ನಡೆಯುವವನು : "ಮಂದಗಾಮೀ. ಮಂಥರಃ — ೨ ಮೆಲ್ಲಗೆ ನಡಿಯುವವನು" (ಸಿದ್ಧಾಂತಿ. ೨೩೮).
[ಸಂ. ಮಂದಗಾಮಿನ್]

**ಮಂದಗಾಮಿನಿ** (ನಾ). = ಮಂದಗಮನೆ : ಬಹುಮಂದಗಾಮಿನಿ ಬಹುದೂರ ಸಾಗಳು ನಿನ್ನ ಸತ್ಕೀರ್ತಿಯ ಹೆಣ್ಣು (ಇಂಚಾಕ. ೨೦೬-೦೮).
[ಸಂ. ಮಂದಗಾಮಿನೀ]

**ಮಂದಜ** (ನಾ). ಕಮಲ ; ತಾವರೆ (?) : ಮಂದಜಾಯತನಯನ ಬಾರ ಮುಕುಂದ ಬಾರ ಮುರಾರಿ ಬಾರ (ಶಿಖಾಗ. ೦೦-೦೦-೪೬). [ ? ]

**ಮಂದಜಾಸನ** (ನಾ). ಕಮಲವನ್ನು ಪೀಠವಾಗಿ ಉಳ್ಳವನು ; ಬ್ರಹ್ಮ (?) : ನಿಜಮಾಯೆಯನು ಮೆಱೆದು ಮುಕುಂದನನು ಮೋಹಿಸಲು ಬಂದಾ ಮಂದಜಾಸನ ತನ್ನ ಮಾಯೆಗೆ ತಾನೆ ಗುಱಿಯಾಗಿ ನಿಂದು ಬೆಱಗಾಗುತ್ತಿರಲು (ಶಿಖಾಗ. ೦೦-೦೩-೪೪). [ಮಂದಜ + ಆಸನ]

**ಮಂದಟ್ಟು** 'ಮನದಟ್ಟು₂' ನೋ.

**ಮಂದತನ** (ನಾ). ಆಲಸ್ಯ; ಜಡತ್ವ: ಮಂದಿಯ ತಡೆ ಕುದುರೆಯ ಕಟ್ಟು ಜೀವಿತ ಸಂದು ಬರಲಿ ಸುಭಟರಿಗೆ ಮಂದತನವ ಬಿಡು ಮಕ್ಕಳಾಟಿಕೆ ಬೇಡ (ಕುಂಬಾರಾ. ೩೦-೨೬) ; ಕುಂದು ಬಂದವಗೆ ಸೊಬಗೇಕೆ ಸೂಳೆಗೆ ಮಂದತನವೇಕೆ (ಸರ್ವಜ್ಞ. ೦೬೯೪). [ಮಂದ₂ + — ತನ]

**ಮಂದತೆ** (ನಾ). ನಿಧಾನ ; ವಿಳಂಬ ಗತಿ : ಅವಳ ಅಲಸಗತಿಗೆ ಮತ್ತೊಂದಿಷ್ಟು ಮಂದತೆ ಬಂದಿತ್ತು (೬ಣಾಕ. ೩೦). [ಸಂ. ಮಂದತಾ]

**ಮಂದತ್ವ** (ನಾ). ೧. ನಿಧಾನ ; ವಿಳಂಬಗತಿ. ೨. ದಡ್ಡತನ ; ಮೌಢ್ಯ. ೩. = ಮಂದತನ. ೪. ಜೀರ್ಣಶಕ್ತಿಯು ಕಡಮೆಯಾಗಿರುವುದು ; ಅಜೀರ್ಣ : ವಾತಪಿತ್ತಂಗಳಿಗೆ ಅಧಿಕ ಶ್ಲೇಷ್ಮಕ್ಕೆ ಮಂದತ್ವವೆಂಬುವ

ದೊಂದು ಸನ್ನಿಪಾತ . . . ವಾತಶ್ಲೇಷ್ಮಗಳಗಾಧಿಕ್ಯ ಪಿತ್ತಕ್ಕೆ ಮಂದತ್ವ ಮಾದುದೊಂದು ಸನ್ನಿಪಾತ (ಕಠಪ್ಟ. ೦೩೦). [ಸಂ.]

**ಮಂದದೋಷ** (ನಾ). ದೋಷಯುಕ್ತವಾದ ಪಚ್ಚೆಯ ಐದು ವಿಧಗಳಲ್ಲಿ ಒಂದು ; ನವಿಲುಗರಿಯ ಬಣ್ಣವನ್ನು ಹೊಂದಿರುವ ಪಚ್ಚೆ : ದೋಷಲೇಶಾನ್ವಿತಂ ದುಷ್ಟಂ ದೋಷಪೂರ್ಣಿತಂ ದೋಷಲೇಶಂ ಮಂದ ದೋಷಮೆಂದಿಂತೀ ಪಂಚವಿಧಮಾದ ಸದೋಷಜಾತಿ ಮರಕತಮಂ ಪೇಳ್ವೆಂ (ಹಾಠಾಸ್ಕ. ೨-೦-೬೬ ಪ). [ಸಂ.]

**ಮಂದಪವನ** (ನಾ). ಮೃದುವಾಗಿ ಬೀಸುವ ಗಾಳಿ ; ಮೆಲ್ಲನೆ ಬೀಸುವ ಗಾಳಿ : ಎಸಗಿತ್ತುಂದನುಕೂಲಮಂದಪವನಂ (ಪಂಶಬಾ. ೯-೯೬) ; ಗಾಳಿಯಲ್ಲಿ ಯಾವ ಪ್ರಮಾಣದ ವೇಗವಿದ್ದರೆ ಅದನ್ನು ಮಂದಪವನವೆನ್ನಬಹುದೋ, ಎಂದರೆ ಯುವತಿಯ ಮಂದಗಮನದೊಡನೆ ಹೋಲಿಸಬಹುದೋ, ಇದು ಅದಕ್ಕಿಂತ ಹೆಚ್ಚು (ಶಿಬಂಠ. II. ೦೬೨). [ಸಂ.]

**ಮಂದಪ್ರಕೃತಿ** (ನಾ). ಆಲಸ್ಯ ; ಜಡಸ್ವಭಾವ : ಸ್ವಲ್ಪ ಮಂದ ಪ್ರಕೃತಿಯ ವಿದ್ಯಾರ್ಥಿಗಳಿಗೆ ಇದೊಂದು ನೂತನವೂ ಫಲಪ್ರದವೂ ಆದ ಶಿಕ್ಷಣಕ್ರಮವೆಂದು ಉಪಾಧ್ಯಾಯರು ಗಣಿಸಬೇಕು (ಶಿಕ್ಷದ. ೨೮೯). [ಸಂ.]

**ಮಂದಫಲ** (ನಾ). ೧. ಕಡಮೆಯಾದ ಆದಾಯ.— ಉತ್ಪತ್ತಿ : ಕಳೆದ ವರ್ಷ ಕಪ್ಪುಧಾನ್ಯಗಳ ಪೈರುಗಳು ಮಂದಫಲವನ್ನು ಕೊಟ್ಟವು (ರೂಖ). ೨. [ಜ್ಯೋತಿ] "ಸೂರ್ಯನೀಚದಿಂದ (ಅಥವಾ ಚಂದ್ರ ನೀಚದಿಂದ) ಗ್ರಹಕ್ಕೆ ಅಥವಾ ಉಪಗ್ರಹಕ್ಕೆ ಇರುವ ಕೋನದೂರ ; ನೀಚಾಂತರ ; ಮಂದಫಲ, ಸೌರಶೃಂಗಾಂತರ" (Anomaly. ಇಂಕಪ). [ಸಂ.]

**ಮಂದಬುದ್ಧಿ** (ನಾ). ೧. ಅಜ್ಞಾನ ; ಮೂರ್ಖತನ : ಮಂದಬುದ್ಧಿಯಿಂದ ನೀವು ಮುಕುಂದನ ಮಹಿಮೆಯರಿದಿರಿ (ಭೂಕಂಠ. ೨-೨೦೩-೩) ; ಅವನು . . . ಮಂದಬುದ್ಧಿಯ ಆಡಂಬರವ್ಯಕ್ತಿಯೆಂದು . . . ಮನದಟ್ಟಾಯಿತು (ಭೂಸರು. ೩೩೩). ೨. ಚುರುಕುಬುದ್ಧಿಯಿಲ್ಲದವನು ; ದಡ್ಡ ; ಹೆಡ್ಡ : ಮಂದ ಬುದ್ಧಿಯವರಿಗೆ ಅಂತಹುದು ಸಾಧ್ಯವಾಗಬಹುದು. ನಿನಗಲ್ಲ (ವಂಕೋಸಂ. ೮೦). [ಸಂ.]

**ಮಂದಭಾಗ್ಯ** (ನಾ). ೧. ದುರ್ದೈವ ; ದುರದೃಷ್ಟ : ತಂದೆ ತಾಯ್ಗಳ ಸೇವೆ ಒಂದುದಿನ ಮಾಡಲಿಲ್ಲ ಮಂದಭಾಗ್ಯದ[ಬಾಲಂ. ಗೆ] ಭವಣೆ ತಪ್ಪಲಿಲ್ಲ (ಭೂಕಂವ. ಾ. ೨-೦೯-೩). ೨. ದುರದೃಷ್ಟಶಾಲಿ ; ಅದೃಷ್ಟ ಹೀನ: ಇಂದಿನಾಹವ ಲೇಸು ಲೇಸಿದು ಮಂದಭಾಗ್ಯನು ತಾನು ಸಾಕಿನ್ನೆಂದು ಮಾಡುವುದೇನು ನಿಮ್ಮೊಳು ಕದನ ಬೇಡ (ಕುಮ್ಯಾದ್ರೋ. ೦೩-೦೦); ಅಂಥವನಿಗೆ ಕತ್ತಲೆಯಿಲ್ಲ, ಮಂದಭಾಗ್ಯನಿಗೆ ದರಿದ್ರವಿಲ್ಲ (ಗಾದೆ). [ಸಂ.]

**ಮಂದಭಾಗ್ಯತೆ** (ನಾ). ಅದೃಷ್ಟಹೀನತೆ ; ದುರದೃಷ್ಟ : ಮದೀಯ ಮಂದಭಾಗ್ಯತೆಯುಮಂ ದೈವದ ದಾರುಣತೆಯುಮಂ . . . ಭಾವಿಸಿ ನೋಡಿ (ಕಾದಂಪೂ. ೯೩೨). [ಸಂ. ಮಂದಭಾಗ್ಯತಾ]

**ಮಂದಮತಿ** (ನಾ). ೧. = ಮಂದಬುದ್ಧಿ ೧ : ತಂದೆ ಸತ್ತ ಮೇಲೆ ನೂಱುಮಂದಿ ವಿಪ್ರರಿಗುಣಿಸಿ ತಮ್ಮ ತಂದೆ ತೃಪ್ತಪಡುವನೆಂಬರು ಮಂದ ಮತಿಯ ಜನಗಳು (ಭೂಕಂಠ. ೦-೦೬೦-೪). ೨.=ಮಂದಬುದ್ಧಿ ೨ : ಮಂದಮತಿಯಾಗಿ ಮರುಳೆ ಕಾದದ ಕಟ್ಟದೆಮ್ಮನು ಬಱಿದೆ ಬಯಸಿದೆ (ಕುವ್ಯಾಕು. ೦-೯೦) ; ಮಂದಮತಿಯೋ ನಾನು ಮದನಜನಕನು ನೀನು (ಭೂಕಂಠ. ೪-೯೦ ಕಲ್ಪಿ) ; ಮಂದಮತಿಯುಲಿ ತರ್ಕ ಸಲ್ಲ (ಕುಪು. ೦೩-೯). [ಸಂ.]

**ಮಂದಮರುತ** (ನಾ).=ಮಂದಪವನ : ಪರಿವ ಪರಿವೊನಲ ಹಿಮಶೀಕರಂ ಗಳೊಳ್ ಪುದಿದ ಮಂದಮರುತಂ . . . ಒಗೆದ ಬೆಮರ್ವನಿಳಪಡಿಸುವಿನಂ (ಶಾಂತಿಪು. ೯-೭೯). [ಸಂ.]

**ಮಂದಮಾರುತ** (ನಾ). =ಮಂದಪವನ : ಅನಂತಲತಾಳಿಲತಾಂತವಾಂತ ಸೌರಭಭರಮಂದರಂ ಸೊಗಯಿಸುಕುಂ ಪುರಸಂದನಮಂದಮಾರುತಂ (ಕಂದ್ರಪು. ೦-೦೦೦); ಒಗುಮಿಂಗೆಯ ಪರಿಮಳದ ಕಂಪಿನ . . . ಸೊಗಸ ಸೇರಿಸಿ ಮಂದ ಮಾರುತನಪ್ಪಿದನು ಮಗನ (ಕುವ್ಯಾಅ. ೦೦-೯೩) ; ಸುಮಲತೆಗಳ ಪರಿಮಳದ ಬಿತ್ತರಿಸಿ . . . ಮಂದಮಾರುತವು ಬೀಸುತ್ತಿರಲಿನಿಸು (ಕಪು. ೨೩-೦). [ಸಂ.]

**ಮಂದಯಾನ** (ನಾ). = ಮಂದಗತಿ : ತೋರನಿತಂಬಭಾರಕಲಸುತ್ತವೆ ಪೋಪಳ ಮಂದಯಾನಮುಂ (ಶಾಕುಂತ. ೨೦-೩೬). [ಸಂ.]

**ಮಂದಯಿಸು**, ಮಂದಯ್ಸು, ಮಂದವಿಸು, ಮಂದೈಸು (ಕ್ರಿ). ೧. ದಟ್ಟ ವಾಗು ; ಸಾಂದ್ರವಾಗು : "ಮಂದಯಿಸು—ಸಾಂದ್ರತ್ವೇ (ದಟ್ಟ ವಾಗು)" (ಶಮದಾ) ; ರಸೆ ಪತ್ತಿತ್ತಿತ್ತವಾಕಾಶದೊಳನಿಲಪಥಂ ಧಾರಿಣೀ ಚಕ್ರದೊಳ್ ಕಾಳಸಗೊಂಡತ್ತೆಂಬಿನಂ ಮಂದಯಿಸಿ ನಿಜಪರಾಲೋಕನ ವ್ಯಗ್ರದೃಷ್ಟಿ ಪ್ರಸರಕ್ಕೆಡೆತ್ತೊ ಮಾರ್ಗಂ (ಆದಿಪು. ೦೯-೯೩) ; ತಳ್ಪಿಂಗಗರ್ಭದಿಂದೆಯ ಜಾಜ್ವಲ್ಯಮಾನವಾಗೊಂದು ಬೆಳಗು ಮಂದಯಿಸಿ ಪೊಜಪ್ಪೊಣ್ಣೆ (ಕವ್ಯಾ. ೦೩-೩೩) ; ಮಂದಯಿಸಿದ ಘೋರತಮಂ ಮುಸುಕಿ ತ್ತಿಳೆಯಂ (ಜಾಮ್ಸಿಕ. ೩-೦೯). **ಮಂದಯ್ಸು** : ೨. ಒಟ್ಟುಗೂಡು ; ಗುಂಪಾಗು : ಭೃಂಗೀವೃಂದಮನುಜೆ ಸೋವೃತ್ತುಂ ಮಂದಯ್ಸಿ ಮುಗುಳ್ಗಿ ಗಟ್ಟಿವಲ್ಲಿಯುರಿಸಗುಂ (ಗಂಕ. ೨-೯೦). ೩. ನೀರಾಗಿಲ್ಲದಿರು ; ಗಟ್ಟಿಯಾಗು : ಪೊರೆದ ಪುಡಿಯನೊಡನೊಡನೆ ಬೆಮರ ಬಿಂದುಗಳ್ ನಾಂದೆ ಮಂದಯ್ಸಿದಳ್ಗೆ ಸಜಿಳೊಡಿದು ಜಿಡೆಗೊಂಡು ನಗವೊಗವು ನಾಗಳಾಗಳೆ ಕರಂಗಿಸಿದ ಮಸಿಯ ಕುಂಚಿಗೆಳಿಸಿ ನೊಸಲಂ ಮುಸುಂಕಿ ದಳಕಿತಲ್ಲರಿಗಳೊಳಂ (ಪರ್ಪಿ. ೯-೬೦ ಪ). **ಮಂದವಿಸು** : ೧. ಮಂದವಿಸಿ ಮುಸುಕಿದ ಮಹೀರುಹವೃಂದವನು ಕುಶ ಕೀಳ್ಕುವಿತ್ತಾಸಂದನನು ಬಳಿ ಕಾಗಿದು ಹೂಡಿದನಸಮಮಾರ್ಗಣವ (ಕೊರಂ. ೩-೩-೨೦). **ಮಂದೈಸು**: ೧. ಮೊದಲೊಳ್ ನೀಳ್ಪು ಪೊದಟ್ಟು ಪರ್ವಿ ಪರೆಪಂ ಕೈಕೊಂಡು ಮಂದೈಸಿ ಮಾಣದೆ . . . ಪುದಿದಾ ದಂಪತಿಯಂ ಪುದುಂಗೊಳಿಸಿ ಲೋಕಾ ಶ್ಚರ್ಯಮಂ ಮಾಡಿ ಕೊಂಡುದು ಕೃಷ್ಣಾಗರುಧೂಪಧೂಮನಿವಹಂ (ಆದಿಪು. ೩-೨೩) ; ಮುಂದೊಂದು ಮಂದೈಸಿದ ಮರದಡಿಯೊಳ್ ಕುಳ್ಳಿರ್ದ ನ್ನೆಗಂ (ಭಕ್ತಾಸ್ತ. ೦೨-೦೬ ಪ). ೨. ಮಂದಸ್ಮಿತಮಧುರವಿಲೋಚನದಿಂ ಮಂದೈಸಿದ ನೃಪಸುತರಂ ನೋಡುತ ಕಂದರ್ಪನ ಪಟ್ಟದ ಕರಿ ಮೆಲ್ಲನೆ ನಡೆವಂತೆಯ್ದಿದಳು (ಜದುಕಾ. ೩-೯೩) ; ಮಂದೈಸಿದಲರ್ಜೊಂಪಮಂ ಕಂಡು ಪಿಂಡೆಱಿ ಪೊಸಜೇನನುಂಡು . . . ಮುಂಬರಿವ ಬವರಿವಿಂದಿಂ . . . ಬನಂ ಮನಂಗೊಂಡುದು (ರಾಮಾಶ್ವ. ೩೯-೯). ೪. ಹೆಚ್ಚಾಗು : ಅಧಿಕ ವಾಗು: ತರುಣಿಗೆ ದೇವ ನಿಜಾನುಸ್ಮರಣದೆ ಮಂದೈಸಿ ಮೈಯೊಳುಣ್ಮಿದ ಪುಳಕಾಂಕುರನಿಕರಂ ಕುಸುಮಾಯುಧಶರಘಾತಕ್ಕಗಿದು ತೊಟ್ಟ ಕವಚ ಮಿದೆನಿಸುಕುಂ (ಕಾದಂಉ. ೩೩೦) ; ಹೊಗಳುತ್ತೆ ಹೊಂಗುತ್ತೆ ಮಂದೈಸಿ ಪಲ್ಲವಿಸಿ ಪುಳಕದಿಂ ಪೊಣ್ಮುತ್ತೆ (ಸಂಶೇಠ.ದೇ. ೨೯೩-೯) ; ಮಂದೈಸಿದ ಲಜ್ಜೆ ಯಿಂದೆರ್ದು ನುಡಿದಳು ಮುಂದಣ ಕಾರ್ಯದ ತೆಜನ (ಶ್ರೀಚಾಂ. ೬-೭). [ಮಂದ₂ + —ಇಸು₃]

**ಮಂದಯ್ಸು** 'ಮಂದಯಿಸು' ನೋ.

**ಮಂದರ₁** (ನಾ). [ಸಂಗೀತ] ಕೆಳಸ್ವರದ ಧ್ವನಿ ; ಮಂದ್ರಸ್ಥಾಯಿ : "ಮಂದರ–ಮಂದ್ರ=ಕೆಳದನಿ" (ಶಬ್ದಕೋ. ೩೯) ; ಮಂದ್ರಂ–ಮಂದರಂ, ಮಂದಿರಂ (ಶಬ್ದಾಶು. ೦೯೭ ವ್ಯಾಖ್ಯಾ). 'ಮಂದರಶ್ರುತಿ' ಪರಾ. [< ಸಂ. ಮಂದ್ರ]

**ಮಂದರ₂** (ಗು). ೧. ನಿಧಾನವಾದ ; ಮಂದವಾದ : 'ಮಂದರ ಯಾನ' ಪರಾ. ೨. ದಟ್ಟವಾದ ; ಸಾಂದ್ರವಾದ. ೩. ದೃಢವಾದ.

೮. ಹೆಚ್ಚಾದ: ಅಧಿಕವಾದ. (ನಾ). ೫. ಒಂದು ಪರ್ವತದ ಹೆಸರು; ಇದು ಅಷ್ಟಕುಲಪರ್ವತಗಳಲ್ಲಿ ಒಂದೆಂದೂ ಕ್ಷೀರಸಮುದ್ರವನ್ನು ಕಡೆಯುವುದಕ್ಕಾಗಿ ದೇವತೆಗಳು ಇದನ್ನು ಕಡೆಗೋಲನ್ನಾಗಿ ಮಾಡಿಕೊಂಡಿದ್ದರೆಂದೂ ಭಾವಿಸಲಾಗಿದೆ : ಮಂದರಕ್ಷುಭಿತಪಯೋಧಿನಾದದಿಂ ಗಜಜಃ ಗರ್ಜಿಸಿ (ಕುಕತಂ. ೩೦-೪) ; ಮೊರಡಿಗಳ ನಡುವೆ ಮಂದರ [ಬಾಹು. ೧೮] . . . ಬಕಂಗಳ ನಡುವೆ ಪರಹಂಸೆಯುಪ್ಪಂತೆ (ಸೋಮಕು. ೧-೧೦೭). 'ಮಂದರಧರ' ಪರಾ. ೬. ಕೈಲಾಸ : 'ಮಂದರನಿಲಯ' ಪರಾ. ೭. ಸ್ವರ್ಗ : ದೇವಲೋಕ : ಕೋಪದಿ ವಡವಡಿಸಿ ಭೂಮಂದರಂ ನಡುಗಲ್ಕೆ (ಸಂಕದಾ. ೨೨-೯೨). ೮. ಒಂದು ಬಗೆಯ ಮರ : ಮಂದಾರ : ಮಂದರ-ಶೋಭೆಯ ವೃಕ್ಷ. ಹೂಗಳು ತರತರದ ಬಣ್ಣವುಳ್ಳವು. ಕಟ್ಟಿಗೆ ಗಟ್ಟಿ. ಕೆಲಸಕ್ಕೆ ಬರುತ್ತದೆ (ಕರಾಗಿ. ೯೬). ೯. ಒಂದು ರಥದ ಹೆಸರು : ಬಾಹುಬಲಿವಿಗ್ರಹ ಸುಮಾರು ಐವತ್ತು ಎತ್ತರವಿದೆ. ಇದರ ಮುಂದಿರುವ " ತೇರಿ "ಗೆ ಮಂದರವೆಂದು ಹೆಸರು (ಹೂಮ್ನಾ. ೨೦೬). ೧೦. ಎಂಟು ಅಥವಾ ಹದಿನಾರು ಎಳೆಗಳುಳ್ಳ ಮುತ್ತಿನ ಹಾರ. ೧೧. [ಜೈನ] ದೇವತೆಗಳು ತೀರ್ಥಂಕರರಿಗೆ ಪಂಚಕಲ್ಯಾಣಗಳನ್ನು ನೆರವೇರಿಸುವ ಸ್ಥಳವೆಂದು ಭಾವಿಸಲಾದ ಪರ್ವತ : ಮೇರು : ಮೂಲೋಕಕ್ಕೆ ಪೆಂಪಿಂದಗುಂದಲೆಯಾಗಿರ್ದುದು ದೇವದಂಪತಿರತ ಶ್ರೀಸುಂದರಂ ಮಂದರಂ (ಆದಿಪು. ೦-೩೦) : ಜಗತೀವಿಶ್ರುತಮಂದರಕ್ಕೆ ನಡೆಯಲ್ ಪೇಟ್ಟು (ಕೃಷ್ಣಕೃ. ೦೦-೨೯). [ಸಂ.]

**ಮಂದರಧರ** (ನಾ). ೧. ಸಮುದ್ರಮಥನಕಾಲದಲ್ಲಿ ಕೂರ್ಮಾವತಾರದಿಂದ ಮಂದರಪರ್ವತವನ್ನು ತನ್ನ ಬೆನ್ನಿನ ಮೇಲೆ ಧರಿಸಿದ ವಿಷ್ಣು : [ಶರಸಿಧಿ]ಮಂದದೀವತಿಗಭೀರಗುಣೋನ್ನತಿಯಿಂದೆ ಸಂದ ಮಂದರಧರಬಾಹುಗಳ್ ವಸುಮತೀತಳರಕ್ಷಣದಕ್ಷರಪ್ಪ ನಾಲ್ವರುಮಂ ನೀಶರಂ ದಶರಥಂ ಪಡೆದಂ ತನುಜಾತರಂ (ರಾಮಚಂದ್ರ. ೩೩೦) : ಮಂದರಧರನೀಕ್ಷಿಸಿ ಸಂಕ್ರಂದನಮುಹುಮೋನಿಮಿತ್ತಮೆಮಗಿದು ಚಿತ್ರಂ ಎಂದು ಬೆಸಗೊಳ್ವುದುಂ (ಜಗಂ. ೪-೭೬). ೨. ಗತಿಸಿದವನು ; ಸ್ವರ್ಗಸ್ಥ : ನಂದಕಮಂ ದಿವಿಜಗಣಾನಂದಕಮಂ ಕೊಂಡು ಚೇದಿಪತಿಯೊಳ್ ಪೊಣರ್ದಂ ಮಂದರಧರನಾತುಪದೊಳ್ ಮಂದರಧರರಾದರಹಿತರೆಂದೆಂಬಿನೆಗಂ (ಜಗಂ. ೩-೯೭). ೩. [ಛಂದ] ಅಂಶಗಣಗಳಲ್ಲಿ ಒಂದು : ವಿಷ್ಣುಗಣ : ಮಂದರಧರಗಣವೆಸೆದಿರೆ ಪೊದಲೊಳ್ . . . ಛಂದೋವತಂಸ (ಛಂದೋಂಬು. ೩-೨೫೩). [ಸಂ.]

**ಮಂದರನಿಲಯ** (ನಾ). ಕೈಲಾಸದಲ್ಲಿ ವಾಸಮಾಡುವವನು : ಶಿವ : ಸಿಂಧುಮಕುಟನೆ ಪಾಹಿ ಶ್ಯಾಮಾಂಗಸಖ ಪಾಹಿ ಮಂದರನಿಲಯನೆ ಪಾಹಿ (ಪ್ರಭುಲಿ. ೨೦-೯೩). [ಸಂ.]

**ಮಂದರಯಾನ** (ನಾ). ನಿಧಾನವಾದ ನಡಗೆ : ಮಂದಗಮನ : ಬಿಸರುಹನೇತ್ರೆಯೊಳ್ನಡು ಪೊದಬ್ಬುದು . . . ಮಂದರಯಾನವೊಡರ್ಚಿತು (ಶಂಶಶಂ. ೨೯೯-೦೨). [ಸಂ.]

**ಮಂದರಶ್ರುತಿ** (ನಾ). = ಮಂದರ$_1$ ; ಅವರ ತಂಬೂರಿಯ ಮಂದರ ಶ್ರುತಿಯು ತಂತಿಯು ಒಂದು ಶ್ರುತಿಗೆ ಸರಿಯಾಗಿರುತ್ತಿತ್ತು (ಸಂಗೀತ. ೨೩).
[ಮಂದರ$_1$ + ಶ್ರುತಿ]

**ಮಂದರಿ** (ನಾ). ಚಾಪೆ : ಮಕ್ಕಳಿಗೆ ಮಲಗಲಿಕ್ಕೆ ಮಂದರಿ. ಮಂದರಿ ಹರಿದರೆ ಹಚ್ಚಡ, ಹಚ್ಚಡ ಹರಿದರೆ ಮಂದರಿ ಕೊಡಿಸಿ, ಅವನನ್ನು ಕಳುಹಿದನು (ಕೋಣ. ೬). 'ಮಂದಲಿಗೆ' ಪರಾ.
[ದೇ.॥ ಮಲ. ಮನ್ನಿರಿ ; ತುಳು. ಮಂದಿರಿ, ಮಂದ್ರಿ = ಮಗ್ಗುಲಿಂ ಹಾಸುಗೆ; ತೊದ. ಮೊದರ‍್ಯ. / ಮರಾ. ಮಾಂದರೀ. / ಸಂ. ಮಂದುರಾ]

**ಮಂದಲಿಗೆ** (ನಾ). = ಮಂದರಿ : ಬಾಯಿಗಿಕ್ಕಿದ ಅಕ್ಕಿ ಒಕ್ಕವು ಮಂದಲಿಗೆಯಲ್ಲಿ ಮಂದಲಿಗೆ ಆನಲಾಣದ ಹಿಂಗಿ ಒಕ್ಕವು ನೆಲಕ್ಕೆ (ವಚನಕಾ. ೨೩೮-೬೦೯); ಅಂಗಳದಲ್ಲಿ ಒಬ್ಬರು ಒಂದು ಪಂಚೆಯನ್ನು ಹೊದೆದು ಮಂದಲಿಗೆಯ ಮೇಲೆ ಮಲಗಿದ್ದರು (ರಹಃಕೃ. ೩೯).

**ಮಂದಲಿಸು** (ಕ್ರಿ). ತಪ್ಪನ್ನು ಎತ್ತಿ ಹೇಳು : ಮೂದಲಿಸು : ತವ ಸ್ತ್ರೀಯು ಕೂಡೆ ತನ್ನ ಮನೆಯಲ್ಲಿರುವ ಗಿಳಿಯು ಕೂಡೆಯೂ ಅರಸು ಮಂದಲಿಸಿದ ವೃತ್ತಾಂತಮಂ ಪೇಳಲು (ಶುಕ. ೯) ; ನಿಮ್ಮೆಲ್ಲರನು ಕಡಿದೊಟ್ಟಿ ಖಂಡವ ಚೆಲ್ಲಿ ಭೂತಕೆ ಬಲಿಯನಿಕ್ಕುವೆ . . . ಎಂದು ಒಬ್ಬರಿಗೊಬ್ಬರಿದಿರಲಿ ಮಂದಲಿಸಿ (ಕರಿಯ. ೩೩೬-೦೩) ; ಅರಶಿನವರು ಮಂದಲಿಸಲಾಗಿ ನವಾಬರು ಯುದ್ಧ ಪುನಹಾ ಕೈಜೋಡಿಸಿಕೊಂಡೂ (ಸ್ವರಾ. ೯೯). [ದೇ.॥ ತೆಲು. ಮಂದಲಿಂಚು = ಆಜ್ಞಾಪಿಸು, ಬೋಧಿಸು, ಎಚ್ಚರಿಕೆ ನೀಡು, ಬಿನ್ನವಿಸು, ಪ್ರಶ್ನಿಸು]

**ಮಂದವಾರ** (ನಾ). ಶನಿವಾರ : ದಂಡನಾಯಕರುಂ . . . ಆಷಾಢ ಬಹುಳನವಮೀಮಂದವಾರ ದಕ್ಷಿಣಾಯನಸಂಕ್ರಾಂತಿಯಲು . . . ಸರ್ಬ್ಬನ ಮಶ್ಯಂ ಮಾಡಿ (ಕೊಣ್ಣೂರು. ೦೩-೩೯ : 1166) ; ವರಜಯ (ಸಂ)ವತ್ಸರಂ ವಿನುತಜೇಷ್ಠಮಾಸಂ ಸಿತಪಕ್ಷಮುಪ್ಪಮೀಪರಿಗತಂ ಮಂದ ವಾರದೊಳ್ (ಎಕ. XII, ತಿಪಟೂ. ೯೯-೧೩ : 1174 ?). [ಸಂ.]

**ಮಂದವಿಸು** 'ಮಂದಯಿಸು' ನೋ.

**ಮಂದವೇಗ** (ನಾ). [ಕಾಮಶಾ] ರತಿಭೇದದೃಷ್ಟಿಯಿಂದ ವಿಂಗಡಿಸಿದ ಮೂರುಪ್ರಕಾರದ ಪುರುಷವರ್ಗಗಳಲ್ಲಿ ಒಂದು ವರ್ಗಕ್ಕೆ ಸೇರಿದವನು : ವೇಗಗತಿಯಿನಾಯ್ತು ಮಂದವೇಗ ಮಧ್ಯವೇಗ ಚಂಡವೇಗನೆಂಬ ಪೆಸರು ಪುರುಷರಿಂಗೆ ಸುರತದೊಳ್ (ಜಪದ. ೪-೩೬) ; ಬಗೆಗೆ ತಂದು ಸತಿಯನಿಚ್ಛೆಯೊಗೆಯೆ ನೆರೆವನವನೆ . . . ಮಂದವೇಗನೆಂಬವಂ (ಜಪದ. ೪-೪೦). [ಸಂ.]

**ಮಂದವೇಗಿ** (ನಾ). [ಕಾಮಶಾ] ಸಂಭೋಗದಲ್ಲಿ ಉದಾಸೀನಳಾದವಳು : ವೇಗಗತಿಯಿನಾಯ್ತು . . . ಸುರತದೊಳ್ ತೂಗಿದಂದದಿಂದೆ ಮಂದವೇಗಿ ಮಧ್ಯವೇಗಿ ಚಂಡವೇಗಿಯೆಂಬುದಾದುದಬಲೆಯರ್ಗೆ (ಜಪದ. ೪-೩೬).
[<ಸಂ. ಮಂದವೇಗಿನೀ]

**ಮಂದವೇಗಿನಿ** (ನಾ). = ಮಂದವೇಗಿ : ಮಂದವೇಗಿನಿ ಮಧ್ಯವೇಗಿನಿ ಚಂಡವೇಗಿನಿಯರೆಂಬ ತ್ರಿವಿಧರತಿಭೇದಕಾಂತೆಯರಿಂ (ಚಂದ್ರ. ೨:೯).
[ಸಂ. ಮಂದವೇಗಿನೀ]

**ಮಂದಸ** 'ಮಂದಸು' ನೋ.

**ಮಂದಸು**, ಮಂದಸ, ಮಂದಾಸನ, ಮಂದಾಸು (ನಾ). ೧. ಪೆಟ್ಟಿಗೆ : ಮಂಜೂಷ : ತಳಾಜಿಸಂ ಮಂದಸಿನೊಳಗಿಟ್ಟುತ್ಪಲಮಾಲೆ ಪೃಥುಪನೆಂದಳ್ (ಶಾಪುಂಪು. ೬೯) ; ಪಡೆಯ ಮಗನಂ ನಿದಾನವಾಸಿತುವಂತೆಪೊಲಿಟ್ಟು ಪೊನ್ನ ಮಂದಸಿನೊಳಗಾಗಡೆ ಗಡ ಬಿಟ್ಟರ್ಜಗುನೆಯ ಮಡುವಿನೊಳ್ (ಅರ್ಜುನ. ೪-೯೩) ; ಉಪೇಂದ್ರನರ್ಬಿದ ಮುಳಿಸಿಂದೆ ಮಂದಸಿನ ಮುಚ್ಚಳನಂಗುಟದಿಂದೆ ಮೀಂಟಿ (ಜಗಂ. ೬-೩೦) ; ಮೊಗವ ನೋಡದೆ ಮಂದಸಿನೊಳು ನಿಸ್ಸೀಮ ಚೆಲ್ವ ಮಗಳನಿರಿಸಿ ಬೇಗದೊಳು ನಗರವ ಪೊಚಮಾಡಿಸು (ರಾಜಶೇ. ೬-೩೬). **ಮಂದಸ** : ೧. ಆ ಮಂದಸಮಂತು ನೀರೊಳದಿಂದು ಬರಿಯದೊಂದು ಮೀನ ಬೆನ್ನಂ ತಾಗಿ . . . ಮೇಗೆ ನೆಗೆದ ಮಂದಸಂ ಸಿಡಿಲ್ ಬಡಿಯೆ ಸುಭೌಮಂ ಸತ್ತು (ಶಾಪುಂ. ೦೩೯-೩) ; ಕರ್ಣಂಗಳ ತುದಿಯೊಳ್ ಸೂಚಿನಿರ್ಮಿತಂ ತೋರೆ ಪತಿಗೆ ಮಂತ್ರಿಗಮಾರಭ್ಯರ್ಣದೊಳಿರ್ದಂ ಮರಣಾ ಸ್ವರ್ಣದ ಕರ್ಬುನದ ಮಂದಸಂ ಪುಗಿಸಿದೊಡಂ (ಅಶ್ವಾ. ೪-೦೯) ; ಚಿನ್ನ ಭೂಮಿಯನುಳಿಸೆ ಕಂಡುದು ಹೊನ್ನ ಮಂದಸವಾ ಹಲಾಗ್ರದಿ (ಕೌಶಿಕಾ. ೨-೨). **ಮಂದಾಸನ** : ೧. ಲೋಕಾಪವಾದಕ್ಕೆ ಹೆದರಿದ ಕುಂತಿಯು ಒಂದು ಮಂದಾಸನದೊಳಗೆ ರತ್ನವನ್ನು ತುಂಬಿ ಅದರ ಮಧ್ಯದಲ್ಲಿ ಆ ಮಗು

ವನ್ನಿಟ್ಟು ಯಮುನಾನದಿಗೆ ಬಿಟ್ಟಳು (ಕಿಟ್ಟೂಕಾಂ. ೦೦). ೨. ದೇವರ ವಿಗ್ರಹಗಳನ್ನಿಡುವ ಮರ ಅಥವಾ ಲೋಹದ ಮಂಟಪ: ಮಂದಾಸನದಲ್ಲಿದ್ದ ದೇವರ ಮೂರ್ತಿಯು ನಯನಮನೋಹರವಾಗಿತ್ತು (ಯೂ). **ಮಂದಾಸು :** ೧. ಆ ಸುಕುಮಾರನನೊಂದು ಮಂದಾಸಿನೊಳ್ ರಾಸಿಮಾಡಿದ ರತ್ನಸಹಿತ ಆ ಸಹಚರಿಯುರಿಲಿಸಿ (ನೇಮಿನಂ. ೩-೦೮೩). ೩. ಪ್ರಾಣಿಗಳನ್ನು ಬಂಧಿಸಿಡುವ ಸಾಧನ ; ಪಂಜರ ; ಬೋನು : ಘೋಟದರಸು ಅಟ್ಟಿದ ಮಂದಾಸಿನೊಳು ಶಕಟದ ಮೇಲಿಟ್ಟೊಂದು ದುಷ್ಟವಾಜಿಯನು ಕರವೊಪ್ಪವೆತ್ತು (ಜಾಗಳು. ೬-೦).

[<ಸಂ. ಮಂಜೂಷಾ./ತೆಲು. ಮಂದಸ]

**ಮಂದಸ್ಮಿತ** (ನಾ). ೧. ನಸುನಗೆ ; ಮುಗುಳುನಗೆ ; ಮೆಲುನಗೆ : ಹನುಮನ ನೋಡಿ ತಲೆದೂಗಿದನು ಮಂದಸ್ಮಿತಮಧುರಮುಖಕಮಳ ನೊಲವಿನಲಿ (ಕುವ್ಯಾಕ. ೨೩-೨೬) ; ಶಿವನುರಿಗಣ್ಣಿನ ಬೆಳುದಿಂಗಳೊ ಎನೆ ನೋಟದ ಮಂದಸ್ಮಿತರುಚಿ ತಣ್ಣನೆ ತೀಡುವ ಸೂಸುತಲೆಲ್ಲೆಡೆಗೆ ಬೆಳಗೆ (ಗಕೀಶ. ೨-೩೭). ೨. ಮಂದಹಾಸದಿಂದ ಕೂಡಿರುವವನು : ಆ ಮಹಾಪುರುಷನು ವಿನಯವಂತನಾಗಿ ಮಂದಸ್ಮಿತನಾಗಿ ಶಾಂತಲೆಯನ್ನು ನೋಡಿದನು (ಶಾಂತಲಾ. ೪೨). [ಸಂ.]

**ಮಂದಸ್ಮೇರ** (ನಾ). ಮುಗುಳುನಗೆ ; ಮಂದಸ್ಮಿತ : ಮಂಜುಳ ಮಂದಸ್ಮೇರವಕ್ತ್ರಂ ಮಿಸುಗೆ (ರಾಜಶೇ. ೦-೧೩೨); ರಾಜನು ಮತ್ತೊಂದು ಮಂದಸ್ಮೇರವನ್ನು ತುಟಿಗಳಲ್ಲಿ ಮಿನುಗಿಸಿ ಸುಮ್ಮನಾದನು (ಕವಿ. ೧೦೬). [ಸಂ.]

**ಮಂದಹಸಿತ** (ನಾ). = ಮಂದಸ್ಮಿತ ೧ : ಅಂದದೊಡವೆಯ ಮೊನೆಗಳಿಂ ದೆಯನೊತ್ತುವಾ ಮಂದಹಸಿತದ ಕೊಲೆಯೊ (ಮುಂಕುಕ. ೦೭೭). [ಸಂ.]

**ಮಂದಹಾಸ** (ನಾ). = ಮಂದಸ್ಮಿತ ೧ : ಲಲಿತಾನನಾಂಬುಜದಲರ್ದಸೆದುದು ಮಂದಹಾಸಮಂ ಮಾರಹರನಾ (ಜಗಿ. ೪-೩೨); ಮುಂದೆ ಬರುತಿಹ ಭಟರ ಬರವಿಗೆ ಮಂದಹಾಸದಲಸುರ ನೋಡಿದನೊಡೆ (ಗೌರಿಂ. ೪೩-೦೨). [ಸಂ.]

**ಮಂದಳ** 'ಮಸೆದಳ' ನೋ.

**ಮಂದಾಕಿನಿ** (ನಾ). ಗಂಗಾನದಿ; ದೇವನದಿ : "ಮಂದಾಕಿನೀ, ವಿಯದ್ಗಂಗಾ, ಸ್ವರ್ಣದೀ, ಸುರದೀರ್ಘಿಕಾ—ಇ ಆಕಾಶಗಂಗೆ ಹೆಸರುಗಳು" (ಸಿದ್ಧಾಂಶ. ೨೨); ಆದಾರ್ಯವೀರ್ಯಂ ಸೂರ್ಯದಿನದಂದು ಮಂದಾಕಿನಿಯುಂ ಮಿಾಯಲೆಂದು ಬಂದು (ಶಂಕಪು. ೬-೭೦ ವ); ವಿಕ್ರಮಾರ್ಜಿತವಿಶುದ್ಧಕೀರ್ತಿ ಮಂದಾಕಿನೀ ಪವಿತ್ರೀಕೃತತ್ರಿಲೋಕನುಂ (ಕಶಿ. ೩-೨-೦೩೭; 1058); ಮಂದಾಕಿನಿಯನ್ನು ಯಾರು (ತಲೆಯಲ್ಲಿ) ಧರಿಸಿದನೋ. . . ಆ ಅಂಧಕಾಸುರಸಂಹಾರಕನೂ . . . ಆದ ಭಗವಂತನು ನಿನ್ನನ್ನು ಸರ್ವದಾ ರಕ್ಷಿಸಲಿ (ವೃತ್ತಾಶೋ. ೮೯).

[ ಸಂ. ಮಂದಾಕಿನೀ ]

**ಮಂದಾಕಿನೀನಂದನ** (ನಾ). ಗಂಗಾನದಿಯ ಮಗ; ಗಾಂಗೇಯ; ಭೀಷ್ಮ; ಮಂದಾಕಿನೀನಂದನನ ಮಾತಿಂಗೆ ಯಮನಂದನನಾನಂದಮನಸ್ಕನಾಗಿ ದೇವಕೀನಂದನಂಗಗ್ರಪೂಜೆಯನೆತ್ತುವಾಗಳ್ (ಶಂಕಶಂ. ೨೩೩-೦೨) ; ಮಂದಾಕಿನೀನಂದನು ನುಡಿಯೆ ಕೇಳ್ದು (ಜಗಿ. ೦೭-೦೭ ವ). [ಸಂ.]

**ಮಂದಾಕ್ರಾಂತ** (ನಾ). [ಛಂದ] ವರ್ಣಛಂದಸ್ಸಿನಲ್ಲಿ ಹದಿನೇಳು ಅಕ್ಷರಗಳ ಅತ್ಯಷ್ಟಿಯಲ್ಲಿ ಒಂದು ವೃತ್ತ; ಪ್ರತಿಸಾಲಿನಲ್ಲೂ ಕ್ರಮವಾಗಿ ಮಗಣ, ಭಗಣ, ನಗಣ, ತಗಣ, ತಗಣ ಮತ್ತು ಎರಡು ಗುರು—ಹೀಗೆ ಬರುವ ನಾಲ್ಕುಸಾಲುಗಳುಳ್ಳ ವರ್ಣವೃತ್ತ: ಯೌವನಾಕ್ರಾಂತ ಮಂದಾಕ್ರಾಂತಂ ವೃತ್ತಂ ನೆಗಬ್ದುದಿಳೆಯೊಳ್ (ಛಂದೋಂಬು. ೨-೧೭೩). ಮಂದಾಕ್ರಾಂತಂ ನೆರೆಯೆ ಮಘನಂತದ್ವಯಂಗದ್ವಯಂ ಮೇಣ್ (ಕೃಬಿ. ೬೩). [ ಸಂ. ಮಂದಾಕ್ರಾಂತಾ ]

**ಮಂದಾಕ್ಷ** (ನಾ). ೧. ಮಂದವಾದ ದೃಷ್ಟಿಯುಳ್ಳವನು; ಚೆನ್ನಾಗಿ ಕಾಣದ ಕಣ್ಣುಳ್ಳವನು. ೨. ನಾಚಿಕೆ; ಲಜ್ಜೆ : "ಹ್ರೀ, ಲಜ್ಜಾ . . . ಮಂದಾಕ್ಷಂ—ಈ ೬ ಲಜ್ಜೆ" (ಹಲಾಯು. ೯೩-೪೦೩). [ಸಂ.]

**ಮಂದಾಕ್ಷಿ** (ನಾ). ೧. ದೃಷ್ಟಿಪಾಟವವಿಲ್ಲದಿರುವ ಕಣ್ಣು; ಮಂದವಾದ ಕಣ್ಣು: ಮಂದಾಕ್ಷಿ ನಮಗಿಹುದು ಬಲುದೂರ ಸಾಗದದು (ಮುಂಕುಕ. ೪೪). ೨. ದೃಷ್ಟಿಪಾಟವವಿಲ್ಲದವಳು; ಸರಿಯಾಗಿ ಕಣ್ಣುಕಾಣದವಳು: ದಯಿತಾವಿಯೋಗಾಗ್ನಿಯಿಂಧನಶರೀರನಂ, ರೂಕ್ಷರೂಪದ ರಾಮನಂ ಕಂಡು ಮಂದಾಕ್ಷಿ, ಶಬರಿ, ಬೇಡಂಗೆತ್ತಳ್ (ಶ್ರೀರಾದ. ೨೩೯-೦೭೭).

[ಸಂ. ಮಂದಾಕ್ಷೀ]

**ಮಂದಾಗ್ನಿ** (ನಾ). ೧. ಪ್ರಖರವಾದ ಉರಿಯಿಲ್ಲದಿರುವ ಬೆಂಕಿ ; ಹೆಚ್ಚು ಶಾಖವಿಲ್ಲದಿರುವ ಬೆಂಕಿ : ಒಳ್ಳೆಣ್ಣೆಯಲ್ಲಿ ಅರುಬಳ್ಳ ಮಜ್ಜಿಗೆಯನ್ನು ಹಸಿ, ಮಂದಾಗ್ನಿಯಿಂದ ಕಾಯಿಸಿ, ಪಾಕದಲ್ಲಿಳುಹಿ ಅಭ್ಯಂಜನವನ್ನು ಮಾಡಿಸಲು ಶ್ಲೇಷ್ಮಜ್ವರ ಪರಿಹಾರವಾಗುವುದು (ಸಕವೈ. ೪೦). ೨. ಗುಪ್ತವಾದ ಬೆಂಕಿ: ಸುಪ್ತಾಗ್ನಿ : ಪ್ರತಿಯೊಂದು ಮರದಲ್ಲೂ ಮಂದಾಗ್ನಿ ಯಡಗಿರುವುದನ್ನು ಅವರು ಅರಿತಿದ್ದರು (ಶಾಸಗಿ. ೭೬). ೩. ಜಠರಾಗ್ನಿಯ ನಾಲ್ಕು ಸ್ಥಿತಿಗಳಲ್ಲಿ ಒಂದು; ಕಫದಿಂದ ಉಂಟಾಗುವ ವಿಕಾರ : ದೇಹದಲ್ಲಿ ಜಠರಾಗ್ನಿಯು ನಾಲ್ಕು ತೆರನಾಗಿರುವುದೆಂತೆಂದೊಡೆ—ಮಂದಾಗ್ನಿ ತೀಕ್ಷ್ಣಾಗ್ನಿ ವಿಷಮಾಗ್ನಿ ಸಮಾಗ್ನಿಯೆಂಬ ನಾಲ್ಕು ವಿಧವಾದ ಅಗ್ನಿಗಳಲ್ಲಿ ಶ್ಲೇಷ್ಮದಿಂ ಮಂದಾಗ್ನಿ. . . ಉಂಟಾಗಿರುವುದು (ಸಕವೈ. ೦೭); ತಾಯಿಯು ನೋಡಿ ಮಗನಿಗೆ ಮಂದಾಗ್ನಿಯಾಗಿದೆ ಎಂದು ಒಳ್ಳೊಳ್ಳೆ ಜೀರ್ಣಕಾರಿ ಮಾತ್ರೆ ಲೇಹಗಳನ್ನು ಮಾಡಿಸಿಕೊಟ್ಟಳು (ದೇವೀಶಾ. ೩೭). ೪. ತಿಂದ ಆಹಾರವು ಪಚನವಾಗಲು ಶಕ್ತಿಯಿಲ್ಲದಂತಾಗುವ ಒಂದು ಬಗೆಯ ರೋಗ : ಅಮೃತಾದಿಯೋಗ . . . ಊರ್ಧ್ವತೃಷೆ, ಮಂದಾಗ್ನಿ, ಗ್ರಹಣಿ, ಸಂಗ್ರಹಣಿ ಈ ವ್ಯಾಧಿಗಳೊಳು ಹಿತಮಪ್ಪುದು (ಶಿವೈಪಿ. ೦೦).

[ಸಂ.]

**ಮಂದಾನಿಲ, ಮಂದಾನಿಳ** (ನಾ). ೧. ಮೆಲ್ಲಗೆ ಬೀಸುವ ಗಾಳಿ; ಮಂದಮಾರುತ : ಮಂದಾನಿಲಂ ತೆಂಕಣಂ ಬರೆ ಚೈತ್ರಂ ಕುಡುವರ್ಘ್ಯ ಲಾಜತತಿಯೋ ಪೇಟೆಂಬಿನಂ ಪುಷ್ಪಮಂಜರಿಯುಂ ತನ್ನುನಿಕರ್ಣಪೂರಕ ಮನತ್ಯಾಶ್ಚರ್ಯದಿಂ ನೋಡಿದಂ (ಕಾದಂಪೂ. ೭೪೦); ಪರವೆಸಾಚಿಯರ ಮೆಯ್ಯ ಸುಗಂಧಂ ಮೊದಲಾದ ಸಕಲಪರಿಮಳಮಂ ಕವರ್ತೆಗೊಂಡಾ ಮೋದಭಾರದಿಂ ಮಂದಾನಿಲನಾಗಿ ಮೆಲ್ಲಮೆಲ್ಲನೆ ಬಂದು (ಶಂಬರ. ೦೪-೭೬). ೨. [ಛಂದ] ಮಂದಾನಿಲ, ಲಲಿತ, ಉತ್ಸಾಹ ಎಂಬ ಮೂರು ಬಗೆಯ ರಗಳೆಗಳಲ್ಲಿ ಒಂದು; ಪ್ರತಿಯೊಂದು ಸಾಲಿನಲ್ಲಿಯೂ ನಾಲ್ಕುಮಾತ್ರೆಯ ನಾಲ್ಕುಗಣಗಳಂ ಎಂದರೆ ಹದಿನಾರುಮಾತ್ರೆಗಳಿರುವ, ಅಂತ್ಯಪ್ರಾಸವುಳ್ಳ ಹಾಗೂ ಪಾದನಿಯಮವಿಲ್ಲದ ಒಂದು ಪ್ರಕಾರ : ಮಂದಾನಿಲ ಲಲಿತೋತ್ಸಾಹವೆಂದೇ ರಗಳೆಗಳ ನಾಮಮಕ್ಕುಂ (ಛಂದೋಂಬು. ೩-೨೨೦ ಅಧಿಕಸ್ತ); ಉತ್ಸಾಹ, ಮಂದಾನಿಲ, ಲಲಿತ ಎಂದು ಮೂರುವಿಧವಾದ ರಗಳೆಗಳು ಪ್ರಸಿದ್ಧವಾಗಿರುವುವು (ಕೃಬಿ. ೯೭). **ಮಂದಾನಿಳ :** ೧. ಮಂದಾನಿಳನಲೆಪದೆ ಮಾಕಂದಂ ವಿಚಕಿಲಲತಾಸಮೇತಮರಲ್ವಂತು . . . ಒಸೆದುದಾ ನೃಪಚಿತ್ತಂ (ಪುಷ್ಪ. ೩-೦೨೩).

[ಸಂ.]

**ಮಂದಾನಿಲವೃತ್ತ** (ನಾ). [ಛಂದ] ಪಂಕ್ತಿಛಂದಸ್ಸಿನಲ್ಲಿ ಒಂದು ಪ್ರಕಾರ; ಪ್ರತಿಸಾಲಿನಲ್ಲೂ ಹತ್ತುಅಕ್ಷರಗಳುಳ್ಳ ನಾಲ್ಕುಸಾಲುಗಳ ವೃತ್ತ : ಶೀತಕರೋರ್ವೀಮಾರುತಚೇತೋಜಾತಹರಂ ಬಂದಿರ್ದೊಡ ಪೆಂತುಂ ಭೂತಳಕೆಲ್ಲಂ ಸಂದುದಿದೆತ್ತಂ ನೀತಿಯುತೇ ಮಂದಾನಿಲವೃತ್ತಂ (ಛಂದೋಂಬು. ೨-೦೦೬). [ಸಂ.]

**ಮಂದಾನಿಳ** 'ಮಂದಾನಿಲ' ನೋ.

**ಮಂದಾರ** (ನಾ). ೧. ಒಂದು ಬಗೆಯ ಮರ ಮತ್ತು ಸುವಾಸನೆಯುಳ್ಳ ಅದರ ಹೂವು; ೨ ಸುರಾಸುರರು ಕ್ಷೀರಸಮುದ್ರವನ್ನು ಕಡೆದಾಗ ಹುಟ್ಟಿದ ಐದು ಕಲ್ಪವೃಕ್ಷಗಳಲ್ಲಿ ಒಂದೆಂದು ನಂಬಲಾಗಿದೆ : "ಮಂದಾರಃ, ಪಾರಿಜಾತಕಃ, ಹರಿಚಂದನಃ, ಕಲ್ಪವೃಕ್ಷಃ, ಸಂತಾನಃ –ಈ ೫ ದೇವರ ಮರಂಗಳ್" (ಶಅಮ. ೨೨-೦೩೩); ನಮೇರು ಮಂದಾರ ಸಂತಾನಕ ಪಾರಿಜಾತಂಗಳೆಂಬ ಪೂಗಳಂ ಸುರಿಯುತ್ತುಂ (ವರ್ಧಮಾ. ೬೪-೬); ಸಿರಿಯುಂ ಮಂದಾರವಮಂ ಚಂದ್ರನನಮಲಮಣಿಶ್ರೇಣಿಯುಂ ಮಾಣದಂತಃ ಕರಿಸಿರ್ದಾ ಪೂರ್ಣದುಗ್ಧಾರ್ಣವ ದೊರೆಗೆಣೆವಂದತ್ತು . . . ಆಸ್ಥಾನಗೇಹಂ (ಸಂಪ್ರಪು. ೩-೩); ಈ ವನದಿ ಮಂದಾರ ಅಗೊಮ್ಮೆ ಈಗೊಮ್ಮೆ (ಕಚೂ.೧೦. ೩-೦). ೨. ಎಕ್ಕದ ಗಿಡ; **ಅರ್ಕ** : "ಅರ್ಕಾಹ್ವಃ . . . ಮಂದಾರಃ, ಅರ್ಕಪರ್ಣಃ – ೭ ಎಕ್ಕಗಿಡ, ಯಕ್ಕೇಗಿಡ, ಸೂರ್ಯವೃಕ್ಷ" (ಸಿದ್ಧಾಂತಿ. ೦೩೦). ೩. ದತ್ತೂರದ ಗಿಡ. ೪. ಸ್ವರ್ಗ. ೫. ಆನೆ. [ಸಂ.]

**ಮಂದಾರಿ** (ನಾ). ಒಂದು ಬಗೆಯ ಮರ ಮತ್ತು ಅದರ ಹೂವು : ಬಗಿನಿ ಪಚಾರಿ ಮಂದಾರಿ ದೇವದಾರಿ . . . ಬೋರೆಗಳೆಸೆದವು (ಶಂಬಶಾ. ೦೩-೦೩). [ ಸಂ. ಮಂದಾರೀ ]

**ಮಂದಾರಿಕ** (ನಾ). ಒಂದು ಬಗೆಯ ಸಸ್ಯ : "ರೂಪ–ಮಂದಾರಿಕ, ತುಪ್ಪಕೀರೆ" (ಓಪ೨. ೦೪೦). [ <ಸಂ. ಮಂದಾರಕ ]

**ಮಂದಾಸನ** 'ಮಂದಸು' ನೋ.

**ಮಂದಾಸು** 'ಮಂದಸು' ನೋ.

**ಮಂದಾಸುವಲೆ** (ನಾ). ಪೆಟ್ಟಿಗೆಯಂತಿರುವ ಒಂದು ಬಗೆಯ ಬಲೆ : ತಡಿಕವಲೆ ತಟ್ಟಿವಲೆ ಹಾಸುವಲೆ ಬೀಸುವಲೆ . . . ಮಂದಾಸು [ಪಾಠಾಂ. ಮಂದಸಿನ]ವಲೆಯು ಮೊದಲಾಗಳ ಮೊತ್ತಮಂ ಕಂಡನಾದಯ್ಯನು (ಸೋಮಶ. ಕಂ. ೨೦೦; ಶಕಅ. ೩-೬ ನೋ). [ಮಂದಾಸು (<ಮಂದಸು) + ಬಲೆ$_1$]

**ಮಂದಿ$_1$** (ನಾ). ೧. ಜನಸಮೂಹ; ಜನತೆ : ಸಿರಿಯೆಂಬುದೊಂದು ಸಂತೆಯ ಮಂದಿ ಕಂಡಯ್ಯಾ ಇದ ನೆಚ್ಚಿ ಕೆಡಬೇಡ (ಬಸವ. ೦೩೪); ಮಂದಿಯಿಲ್ಲದ ರಾಜ್ಯ ಕಂದನಿಲ್ಲದ ಭಾಗ್ಯ ಬಂಧುವಿಲ್ಲದ ಬಾಳುವೆಯು ಜಗದೊಳಗೆ ಚಂದವಲ್ಲ (ಸರ್ವಜ್ಞ. ೭೦೭); ಮಂದಿ ಹೇಳಿದರೆಂದು ಹಂದಿ ತಿನ್ನಬಹುದೆ ? (ಗಾದೆ). ೨. ಜನ; ವ್ಯಕ್ತಿ : ಸಂದಣಿಸಿದುದು ಕೇರಿ ಕೇರಿಯ ಮಂದಿ ಮಾಣೆ ಮನೆ ಮೇಲೆ ಘನತರುವ್ಯಂದದಲಿ (ಕುವ್ಯಾಸ. ೦೬-೬೬); ತಂದೆ ಸತ್ತ ಮೇಲೆ ನೂಜಿಮಂದಿ ವಿಪ್ರರಿಗುಣಿಸಿ ತಮ್ಮ ತಂದೆ ತೃಪ್ತನಾದನೆಂಬರು ಮಂದಮತಿಯ ಜನಗಳು (ಪುರಂದ. ೦-೦೬೦-೪); ನೀವು ಅಷ್ಟೊಂದು ಮಂದಿ ಜನರನ್ನು ಕೊಲ್ಲಬೇಕೆಂದೆಣಿಸಿರುವಿರಿ (ದೇಪಾಂ. ೦೩೩).

**ಮಂದಿಗೆ ಬರಿಸು** = ಎಲ್ಲರಿಗೂ ತಿಳಿಯುವಂತೆ ಮಾಡು; ಬಹಿರಂಗಗೊಳಿಸು : ಕನಸಿನೊಳಾದೊಡಮಿದಿರುವಾತಾಡದೆ ಕನಲದೆ ಕಲಹ ಮೆಸಗದೆ ಮನೆಯೊಳಗಿರುವವಸ್ತ್ವ ಮಂದಿಗೆ ಬರಿಸದೆ ಮನವನ್ನ ಮನವೊಲಿಸು (ಹರಿಶ. ೩-೩೪). **ಮಂದಿಗೆಳೆ** = ಬಲಾತ್ಕಾರವಾಗಿ ಜನರ ಮುಂದೆ ಬರುವಂತೆ ಮಾಡು : ಮಂದಿಗೆಳೆವನು[ಪಾಠಾಂ. ಮಂದೆಗೆಳೆವ] ಪಾಪಿ ಕೌರವನೆಂದು ಮುಂದಲೆವಿಡಿದು ಸೈಂಧವ ಬಂದು ಬಳಿಕಾರಣ್ಯವಾಸದೊಳೆನ್ನನೆಳೆದೊಯ್ದು (ಕುವ್ಯಾವಿ. ೩-೩೪). 'ಮಂದೆ' ಪರಾ.

[ದೇ.॥ ತಮಿ. ಮನ್ರು=ಸಭೆ, ಗೋಷ್ಠಿ; ತುಳು. ಮಂದಿ, ಮಂದೆ; ತೆಲು. ಮಂದಿ; ಕೋಲಾ. ಮಂದೀ ]

**ಮಂದಿ$_2$** (ನಾ). (ಉಕ) ವ್ಯಾಪಾರದಲ್ಲುಂಟಾಗುವ ಪದಾರ್ಥಗಳ ಬೆಲೆಯ ಇಳಿತ; ಅಗ್ಗ : ಈಗ ಬಟಾಟೆ ಮಂದಿಯಾಗಿದೆ (ಬಾಂ). [ ← ಹಿಂ. ಮರಾ. ಮಂದೀ ]

**ಮಂದಿರ** (ನಾ). ೧. ವಾಸಮಾಡುವ ಕಟ್ಟಡ; ಮನೆ; ಭವನ : "ಆವಾಸಃ . . . ಗೇಹಂ, ಕಟಂ, ಮಂದಿರಂ . . . ಆಲಯಃ — ಈ ೩೧ ಮನೆ" (ಶಅಮ. ೪೯–೦೩೩); ಕಂಸಮಹಾಮಂದಿರಮಧ್ಯದ ಮಣಿಗೃಹದಿಂದಗಲದೆ ನಲಿಯುತಿರ್ದರಾ ದಂಪತಿಗಳ್ (ಹಗಿಪ. ೨-೩೨); ಆನೆಗೊಂದಿಯ ಪ್ರಹರೇಶ್ವರಪಾತ್ರನು ತನ್ನ ಮಂದಿರದಲ್ಲಿ ಕುಳಿತುಕೊಂಡು ಏನೋ ಯೋಚಿಸಿಕೊಳ್ಳುತ್ತಾ ಇರಲು ಹುಚ್ಚನು ಅವನ ಬಳಿಗೆ ಬಂದನು (ರಾಜಶ. ೦೩). ೨. ಹೆಂಡತಿ ಮತ್ತು ಮಕ್ಕಳಿಂದ ಕೂಡಿದ ಸಂಸಾರ, — ಕುಟುಂಬ : ಮುರಾಂತಕ ನೀಂದು ಮುಸದೊಲವಿನಲಿ . . . ಮಂದಿರದ ಸುಕ್ಷೇಮಕುಶಲವನೆಂದು ಕೇಳಿದು ವೀಳೆಯವನಾ ಮಂದಿಗಿತ್ತನು ದೇವ (ಕುವ್ಯಾಅ. ೭-೨೨). ೩. ದೇವಾಲಯ; ಗುಡಿ. ೪. ನಗರ; ಪಟ್ಟಣ : "ಮಂದಿರಂ—೧. ಮನೆ, ೨. ನಗರ" (ಸಿದ್ಧಾಂತಿ. ೯೦೭). ೫. ಕುದುರೆಯ ಲಾಯ; ಅಶ್ವಶಾಲೆ : "ವಾಜಿಶಾಲಾ, ಮಂದುರಾ—ಈ ೨ ಕುದಿರೆಯ ಮಂ(ದಿ)ದುರಂ" (ಶಅಮ. ೩೦–೦೯೦). [ಸಂ.]

**ಮಂದಿರಂಬೊಗು** (ಕ್ರಿ). ಮನೆಯನ್ನು ಪ್ರವೇಶಿಸು : ಈ ಕನಕಲೋಚನಂ . . . ಪೊಳಲೊಳ್ ಮೆಚ್ಚಿದು ಮಂದಿರಂಬೊತ್ತು (ಶಂಪು. ೪೭-೩). [ಮಂದಿರ + ಪೊಗು]

**ಮಂದಿಲ** 'ಮಂದೀಲ' ನೋ.

**ಮಂದಿವಾಳ**, **ಮಂದೆವಳ**, **ಮಂದೆವಾಳ**, **ಮಂದ್ಯಾಳ** (ನಾ). ೧. ಓರಿಮೆಯಿಲ್ಲದವನು; ಜನಸಾಮಾನ್ಯ; ನಾಡಾಡಿ : ಮಂದಿವಾಳನ ತೆಜನ ಸರನೊಳು ಸಂದುದೇ ಕಾಳಗವು ನಿನ್ನಂ ಬೆಂದುದೇಯೆನ್ನೊಡಲು (ತಿಪ್ಪಸ್ವಿ. ೩-೩೧); ಒಂದೆ ದಕ್ಷನ ಯಜ್ಞಕುಂಡದಿ ಬೆಂದಿರ್ಪ ಸತಿಯೊಳು . . . ತಂದೆತಾಯ್ಗಳುಯೆಂದು ಸುಮ್ಮನೆ ಮಂದಿವಾಳರವೋಲು ಮುಂದುಗೆಡುತಿಹುದಂದವೇನೈ (ಜಾಗೀ. ೩). ೨. (ಅತಿಪರಿಚಯದಿಂದುಂಟಾದ) ಸಲುಗೆ; ಸದರ : ಹರಿಯೊಳ್ ನಾರದ ಮಂದಿವಾಳದೆ ಮಹಾಶಾಪಂಗಳಂ ತಾಳನೇ (ಸೋಮೇಶ. ೬೪); ನಂಬಿಯೆಂಬ ವಿಚಾರದೂರನು ಮಂದಿ [ಪಾಠಾಂ. ದೆ]ವಾಳದಿ ಮಾರಮರ್ದನನೆಂದಿನಿತು ಭಯವಿಲ್ಲದಾತ್ಮದಲಿ ಕಾಳುಗೆಲಸಂಗಳಿಗೆ ಕಳುಪುತ (ಬಸಪು. ೨೬-೩೭); ಕಾತರಿಸದಿರು ಮಂದಿವಾಳದ ಮಾತುಗಳು ಸಾಕಟ ತೊಲಗೈ (ಕುವ್ಯಾವಿ. ೨-೨೩); ಮಂದಿವಾಳದೊಳನ್ನ ಮೋಗಣ ದೂಜ ತಂದ ತನ್ನಣುಗಿಯನೊಡನೆ ಹಿಂದುಮುಂದೆಣಿಸದೆ ಹೀಯಾಳಿಸಿ ನಿಂಗೆ ನಿಂದಿಸಿ ನೀಕರಿಸುವುದು (ಹರಿಶ. ೩-೩೦). ೩. ಸೊಕ್ಕು; ಮದ; ಔದ್ಧತ್ಯ : ಹಂದಿ ಹೋಗೆಲೆ ನಾಯೆ . . . ಬಹುವಿಕಾರದ ಮಂದಿವಾಳದ ಮಾತದೇಕೆ (ತೊರವೆ. ೩-೩-೩೩); ಕೇಳಬಾರದ ಬೊಮ್ಮೆಂತಿಯ ನ್ನೆಗಳ್ದ ಪೇರಾಳಪಾತಕ ಭೂಭುಜನ ತೋಳಡವಿಯ ತಜಿದೊಟ್ಟಿದೆಲಾ ಮಂದಿವಾಳದ ತೋಜು ತನ್ನೊಡನೆ (ಸೋಮಶ. ೪೦-೨೪); ನಾಲಗೆದೀಕ್ಷ್ಣಗೆ ಬಗುಳ್ದಾಡುವ ನಿನ್ನ ಅವಿಧೇಯತೆಯು—ಮಂದಿವಾಳವು ಎದೆಗೊಬ್ಬು ಅಕ್ಷಮ್ಯವಾಗಿದೆ (ಮಂಶ್ರಶ. ೭೦.೦೦). ೪. ಸಡಗರ; ಸಂಭ್ರಮ : ಮಂತ್ರದ ತಂತ್ರದ ಮಂದಿವಾಳದ ಮದುವೆ ಸಂದಣಿಯುಲಿ ಹೇಗೊ ಮೆರೆಯುತಿರೆ (ಸರ್ವಾಗ. ೮-೨೪). **ಮಂದೆವಳ** : ೫. ಪ್ರೇಮ; ಪ್ರೀತಿ : ಆ ಧರ್ಮನಾಥಕುಮಾರಂ ಮುನ್ನಮೆ ಲೋಕತ್ರಯೈಕಸ್ವಾಮಿಯಪ್ಪುದ ನಱಿದಿರ್ದತಮಾ ಮಹಾಸೇನಮಹಾರಾಜಂ ನಿಜತನೂಜನೆಂಬೀ ಮಂದೆವಳದಿಂದೊಂದಿದ ಮೋಹನೀಯೋದ್ರೇಕ ಪರಿಪಾಕದಿಂ ಮೂಱುಂಲೋಕಕ್ಕ ತೀವಕೌತುಕಮಪ್ಪಂತಿರೆ (ಧರ್ಮಪು. ೯-೧೯ ವ). **ಮಂದೆವಾಳ** : ೨. ಭೋಗದೊಳ್ ಬೋಳೈಸಿ ರಾಗದಿಂ ಮೇಳೈಸಿ ಮಂದೆವಾಳಂ ಪೆಮ್ಮಿಂದೊಂದೆರಡು ಚೆಂದದನುಭವದೊಳ್ ಮಂದಯಿಪ ಸುಖಮನಿತ್ತು (ನೀಶ. ೨-೦೦೩ ವ). ೩. ನಿಂಬವ್ವೆ ಬರಿಯಾಳನಂದನನ ಕೊಂದು ತಿರಿಗಿತ್ತಹಂಕಾರ ನಮ್ಮೊಳು ನೀನ ಮಂದೆ[ಪಾಠಾಂ. ದಿ]ವಾಳವೆ ನಿಜದ ಭತ್ತರೊಳಗೆಂಬವಳ ಚರಣಾಂಬುಜಕ್ಕೆ ಶರಣು (ಅಶಾಂ. ೩೭–೯೦); ಮಂದ ದಕ್ಷಂ ತಿವಿಗೆ

ಮಾರ್ಮಲತು ಯಜ್ಞವಂ ಮಂದೆವಾಳದೆ ಮಾಡಲು (ಹರಿಶ್ಚ. ೨-೦-೬೮).
**ಮಂದ್ಯಾಳ :** ಶಿ. ಒಡಹುಟ್ಟಿದೊಂದು ಮಂದ್ಯಾಳದೊಳ್ನುಡಿದನೊ ಕೆಡುವುದರಿಯದೆ ತಾನು (ಶರತ. ೪೯-೩೦). P 'ಮಂದಿವಾಳ' ಎಂಬ ಶಬ್ದಕ್ಕೆ 'ಮಂದಿವಾಳತನ' ಎಂಬ ಶಬ್ದದ ಭಾವವಾಚಕದ ಅರ್ಥಗಳು ಅನೇಕ ಕಡೆ ಆರೋಪಿತವಾಗಿವೆ.

[ಮಂದಿ$_1$ + —ವಾಳ$_3$ (< —ವಳ). / ತೆಲು. ಮಂದೆಮೇಲು]

**ಮಂದಿವಾಳತನ**, ಮಂದೆವಾಳತನ, ಮಂದ್ಯಾಳತನ (ನಾ). ೧. ಪ್ರೀತಿ; ಪ್ರೇಮ : ಪರಮಕಾರಣಿಕೆಯಾದಂಬಿಕೆಯೆಂದರಿಯದೆ ತನ್ನ ಪುತ್ರಿಯೆಂಬ ಮಂದಿವಾಳತನದಿಂ ಸಲಪುತ್ರಿರೆ (ಭೈರಸೂ. I, ೦೯೮). **ಮಂದೆವಾಳತನ :** ೨. (ಅತಿಪರಿಚಯದಿಂದಾದ) ಸಲುಗೆ; ಸದರ : ಅನಂಗಕೇಳಿಗೆ ಮನ ಸಂದಣಿಸಿ . . . ಭೀತಿಬಿಟ್ಟು ಮಂದೆ [ವಾಣಂ. ದಿ] ವಾಳತನಂ ಮೈಸಂದು ಸೋಂಕಂ ಸವಿಗಂಡಾಲಿಂಗನಕ್ಕಾತುರಿಸಿ (ಮಲುರ. ೦೦೬-೭). **ಮಂದ್ಯಾಳತನ :** ೨. ತಂದೆಯೋಲಗವೆಂಬ ಮಂದ್ಯಾಳತನವಿಲ್ಲ ಹೊಂದಿದ ಭಯಭಕ್ತಿಯಿಂದ ಮಂದಗತಿಯೊಳೊಯ್ಯನೋಸರಿಸುತ ಬಪ್ಪ ಚಂದಕೆ ನೃಪರು ಮೆಚ್ಚಿದರು (ಶರತ. ೨೬-೫೬). [ಮಂದಿವಾಳ + —ತನ]
**ಮಂದಿವಾಳಿಕೆ** (ನಾ). ಸೊಕ್ಕು ; ಅಹಂಕಾರ : ಏನಿದು— ಈ ನನ್ನ ಮಂದಿವಾಳಿಕೆ ! ಅವಿನಯ ! ಸ್ವಾಮಿದ್ರೋಹ ! (ಶಬ್ದಾ. ೦೬೩-೦೪).

[ಮಂದಿವಾಳ + — ಇಕೆ]

**ಮಂದಿವಾಳ್ಕೆ** (ನಾ). ಜನರ ಬದುಕು ; ಜನಜೀವನ : ಮುಸುಗಿಹುದು . . . ರೂಪಮಿಲ್ಲದ ಭೀತಿಭೂತದ ಬೃಹಚ್ಛಾಯೆ ನಮ್ಮ ನಗರದ ಮಂದಿವಾಳ್ಕೆಯಂ (ಶ್ರೀರಾಮಾ. ೫೬೩-೩೫೫). [ಮಂದಿ$_1$ + ಬಾಳ್ಕೆ (< ಬಾಟ್ಕೆ) ]
**ಮಂದೀಭೂತ** (ಗು). ೧. ಕುಗ್ಗಿದ ; ಕ್ಷೀಣವಾದ : ತನಯುನಾನನಮನ ವನೀವಲ್ಲಭಂ ಮಂದೀಭೂತಮೋಹರಸಾನುಬಂಧಿಗಳಪ್ಪ ದೃಷ್ಟಿಗಳಿಂ ನೋಡಿ (ಚಂದ್ರಶೇ. ೪-೦೪ ವ). (ನಾ). ೨. ಕುಗ್ಗಿದುದು ; ಕ್ಷೀಣವಾದುದು : ಧ್ವನಿಯು . . . ಸಾಗರದ ಘೋಷದಲ್ಲಿ ಮಂದೀಭೂತವಾಯಿತು (ಕಾಕಂ. ೨೦). [ಸಂ.]
**ಮಂದೀಲ**, ಮಂದಿಲ, ಮಂದೀಲು (ನಾ). ಜರಿಯ ರುಮಾಲು; ಜರತಾರಿ ಪೇಟ : ತನ್ನ ಅಂದವಾಗಿರುವ ಅಂಗಿಗೆ ಒಪ್ಪುವಂಥ ಹೊಸ 'ಮಂದೀಲ' ವನ್ನು ತರಬೇಕಾಗಿ ಬೇರೊಬ್ಬನು ಗುಮಾಸ್ತನನ್ನು ಜಾಗ್ರತೆಯಾಗಿ ಪೇಟೆಗೆ ಅಟ್ಟುತ್ತಿದ್ದನು (ತಿರಂಗ. ೩) ; ಅವನ ಶೇರವಾನ್, ಅವನ ಮಂದೀಲ ಮುಂತಾದವುಗಳನ್ನು ನೋಡಲಾಗಿ ಅವನು ಒಳ್ಳೇ ಮನೆತನಸ್ಥನಾಗಿ ತೋರಿದನು (ತೋಳವು. ೨೮೪). **ಮಂದಿಲ :** ಕುಮಾರನು ತನ್ನ ತಲೆಯ ಮೇಲಿನ ಮಂದಿಲವನ್ನು ತೆಗೆದು ಮಾನಸಿಂಹನ ಚರಣದೆಡೆಯಲ್ಲಿಟ್ಟು ಕೈ ಮೋಡಿಸಿ (ತಿರೋವು. ೦೩೭). **ಮಂದೀಲು :** ತಲೆಯ ಮೇಲೆ ಕಲಾಬತ್ತಿನ ಕುಸುರುಗಳುಳ್ಳ ಮೇಘವರ್ಣದ ಮಂದೀಲು (ರಾಜಮೋ. ೨).

[← ಹಿಂ. ಮರಾ. ಮಂದೀಲ್; ಅರ. ಮಿಂದೀಲ್]

**ಮಂದೀಲು** ' ಮಂದೀಲ ' ನೋ.
**ಮಂದು$_1$**, ಮಂದ$_1$ (ನಾ). ೧. ಆವರಣವಿಲ್ಲದ ನಿವೇಶ ; ಬಯಲು : ಕುಮ್ಮರಿ ಕೋಹು ಮನ್ನು ಮನೆ ಮಾನಿ ಸರುಹು ಕಾಡಾರಂಭ ಮುಂತಾದ ನಿಧಿ ನಿಕ್ಷೇಪ . . . ಸಹಿತವಾಗಿ (ಎಕ. VI, ಕಡೂ. ೫೨-೦೭; 1403); ಹಿತ್ತಿಲು ಕೊಪ್ಪ ಮಂದು ಮನೆ ಹಲಸು (ಎಕ. VIII, ತೀರ್ಥಹ. ೦೪೪-೦೭; 1421); ಭಾವಿ ಪಕ್ಕಲು × ಮಂದು ಮರ ಫಲ ಸಹ ಮತ್ತಂ ಹಡುವಲ ಗದ್ದೆ ಚತುಸೀಮೆ (ಕಾಇಇ. IX-ii, ೪೬೫-೩೦; 1472). ೨. ಸಣ್ಣ ಹಳ್ಳಿಗಳ ಗುಂಪು : ಅಯ್ನೂರ್ವರ್ ಮನ್ನಿನ ಸಾಸಿವರ್ ಕಂಡು ಕಾಪ್ಪರಕ್ಕೆ (ಪ್ಯಾಲಿ. ೦೯೩೦. ೭೪-೬೯; 1053); ಅಯಿವತ್ತುನಾಡಂ ಸಮೇತ . . . ಅಯ್ವದಿಂಗೆ ಮೂಡಲ ಮಂದೆನಿಸುವ (ಪ್ಯಾಲಿ. ೦೯೫೦, ೭೦-೦೭; 1297).
**ಮಂದ$_1$ :** ೧. ಎಲೆ ಬಸವಣ್ಣಾ ನಾವು ಬಾಹುದಕ್ಕೆ ಮುನ್ನವೆ ಬಂದಹರೆಂದು ಶುಭಸೂಚನೆ ತೋರುತ್ತೆಂದೆ ಮನೆಯ ಮಿಸುಪ ಮಂದದ ದೈವವುಂಟೆ ಎಂಬುದ ತಿಳಿ ಗೋಹೇಶ್ವರಲಿಂಗದಲ್ಲಿ ಸಂಗನಬಸವಣ್ಣ (ಅವಸಂ. ೨೨೮-೦೦೩೦). 'ಮಂದೆ' ಪರಾ. [ದೇ.॥ ತಮಿ. ಮನ್ದ ಮ್]
**ಮಂದು$_2$** ' ಮರ್ದು ' ನೋ.
**ಮಂದುಬೋಯ** (ನಾ). ಒಬ್ಬಾತನ ಹೆಸರು : ಮನ್ದುಬೋಯಸ್ಯ ಭಾರದ್ವಾಜಗೋತ್ರ ಕತ್ತಿಶರ್ಮ್ಮಣ (ಇಆ. VII, ೦೮೮-೫೯ ; 668).

[ಮಂದು$_2$ + ಬೋಯ]

**ಮಂದುರ** (ನಾ). ಕುದುರೆಯ ಲಾಯ ; ಅಶ್ವಶಾಲೆ : "ವಾಜಿಶಾಲಾ, ಮಂದುರಾ— ಈ ೨ ಕುದಿರೆಯ ಮಂ(ದಿ)ದುರಂ " (ಹಲಾಯು. ೫೦-೧೪೦) ; ವಲ್ಲಭವಾಜಿಯು ಮಂದುರದಲ್ಲಿಗೆ ಕೇಯೂರದ್ವಿತೀಯನಾಗಿ ಬಂದು (ಕಾದಂಬ. ೦೯೩); ಆ ತಗರ್ ಪರಿದು ಕುದುರೆಯ ಮಂದುರಮಂ ಮಾರಿ ಪುಗುವಂತೆ ಪೊಕ್ಕು ಚರಣಿಯ ಪುಲ್ಲೊಳ್ ಪೊರಳಲು (ಕಂತಕಂ. ೦೬೯-೦೦) ; ಎಳಸಿದುವು ತುಹಿನಕರಮಂಡಳಮಂ ತೀವ್ರಾತಪಕ್ಕೆ ಸುಗಿದಿನನ ಹಯಾವಳಿ ಸಂಪೆಯಮೇನೆನಿಪುವು ಪಳುಕಿನ ಮಂದುರದೊಳಿರ್ದ ಜಾತ್ಯಶ್ವಂಗಳ್ (ಶುಲ್ಲಶ. ೨-೬೮). [ಸಂ. ಮಂದುರಾ]
**ಮಂದುರಿಗ** (ನಾ). ಕುದುರೆಯ ಲಾಯದ ಅಧಿಕಾರಿ,— ಮೇಲ್ವಿಚಾರಕ : ಮುರರಿಪು ರಾವುತ್ ಸುಬೇದರ್ ಹರಿಶಿಕ್ಷಕರಶ್ವಶಿಕ್ಷಕರ ಜೋದರ ಮಲ್ಲರ ಮಾವಂತರ ಮಂದುರಿಗರ ನೆಗಟ್ಬಾವಾಸಮಾರಿಗಳ ಕೇರಿಗಳೊಳ್ (ಜಗವ. ೬-೨೬); ರಾಜವಾಹನನಾದ ಮಂದುರಿಗು ತಾನುಂ ಚಿಂತೆಯಿಂ ಮಂದುರಕ್ಕೆ ವಂದಿರ್ದುದಂ ಬಾಹುಕಂ ಕಂಡು (ನಳಕಂ. ೬೬೮ ವ); ಆ ಚೆನ್ನರುಗರನ್ನು . . . ಕಯ್ಯ ಕಸಗೋಲಿಂದ ಬಡಿದು ಮಂದುರಿಗರಿಂದ ಹೊರಗಣ್ಗೆ ನೂಂಕಿಸಿಬಿಟ್ಟನು (ಮಂಕ್ರಕ. ೬೮-೮). [ಮಂದುರ + —ಇಗ]
**ಮಂದುರೆ** (ನಾ). = ಮಂದುರ : "ಮಂದುರೆ—ಮಂದುರಾ=ಲಾಯ" (ತದ್ಭಕೋ. ೩೪) ; ತರುಣಕೇಸರಿವಿಸರಭ್ರಾಂತಿಯನೊದವಿಸುವುದು ಹಯಸಂತತಿ ನೆಲಸಿರ್ದ ಹೊನ್ನ ಹೊಸ ಮಂದುರೆಯೊಳ್ (ಚಂದ್ರಶೇ. ೦-೦೪೦).

[ಸಂ. ಮಂದುರಾ]

**ಮಂದುವೂರ್** (ನಾ). ಒಂದು ಊರಿನ ಹೆಸರು : ಶ್ರೀಮತ್ ಶ್ರೀಪುರುಷ ಮಹಾರಾಜರ್ ಪೃಥಿವೀರಾಜ್ಯಂಗೆಯೆ ಮಂದುವೂರಾ ತೊಟುಕೊಳ್ವಲ್ಲಿ ವಿಟ್ಟೋರ್ (ಎಕ. X, ಶ್ರೀನಿವಾ. ೨೦-೪; 750). [ಮಂದು$_1$ + ಊರ್]
**ಮಂದೆ** (ನಾ). ೧. ಗುಂಪು; ತಂಡ; ಸಮೂಹ : ಅರುವಿನ ಮೇಲಣ ಎ ವರ್ಣಕ್ಕೆ—ಭಟ್ಟರೆ ಬಂದಿರೇಂ ಮಂದೆಗೆ (ಶಬ್ದ. ೦೨೪ ಪ್ರಯೋ); ಸಡಿಲಿದುಡುಗೆಯ ಕುಚದ ಸೆಱಗಿನ ಮಡದಿಯರ ಮಂದೆಯ [ಪಾಠಾಂ. ಮೇಳದ]ಲಿ ಬಂದಳು ಕೌಸಲಾದೇವಿ (ತೊರವೆ. ೨-೩-೨) ; ಈತನೆ ಪೂರ್ವದೊಳ್ ಇಂದ್ರನಿಗೆ ಬಲವಾಗಿ ದಾನವರ ಮಂದೆಗಳನೆಲ್ಲವಂ ಕೊಂದು ಮಂದರಗಿರಿಯಂ ಧರಿಸಿದನು (ಕೌಗಂ. ೦೭೭-೭). ೨. ಹಸು, ಎಮ್ಮೆ ಮೊದಲಾದ ಪ್ರಾಣಿಗಳ ಹಿಂಡು : ಒಂದೇ ಹೊಲದಲ್ಲಿ ಮೇದು ಮಂದೆಯಲ್ಲಿ ನಿಂದು ಸಂದೆಯ ಕಳೆದು ಉದಯದ ಸಂದೇಹವಳಿದು ವೀರಬೀರೇಶ್ವರಲಿಂಗದಲ್ಲಿಗೆ ಹೋಗುತ್ತಿರಬೇಕು (ಸರ್ವವ. ೮೨-೪೫೫) ; ದೂಱುಮಾಡುವರೇನೆ ರಂಗಯ್ಯನ . . . ನಂದಗೋಕುಲದಲ್ಲಿ ಮಂದೆಗೋವುಗಳ ಮುಂದೆ ಕೊಳಲನೂದಿ ಚಂದದಿ ಬರುವನ (ಪುರಂದ. ೦-೯೪-೧); ಮಂದೆಪಸುಗಳ್ ಪೊಸ ಮಂದೆಯಂ ಕಂಡ ಪಾಂಗಿನಿಂ ತೊಲಗುವುದೆಮ್ಮ ಬಲ್ಪಡೆಯ ನೆಟ್ಟನೆ ನಿಟ್ಟಿಸಿದಾಗಳ್ (ಶಕಾ. ೫-೪೩). ೩. ಈಗಿನ ಒಂದು ಪಂಚಾಯಿತಿಯ ಘಟಕಕ್ಕೆ ಸೇರುವಷ್ಟು ಗ್ರಾಮಗಳ ಗುಂಪು; ಫಿರ್ಕಾ : ಬೇಲೂರಿಗೆ ಸಲ್ಲುವ ಹೆತ್ತ್ಯಾಳಿಗನಾಡ ಬೆಳ್ಳೂರು ಮಂದೆಯೊಳಗಣ ಹೊಸವೂರುಯೆಂಬ ಗ್ರಾಮವನು (ಎಕ. XIV, ತಿರುಮ. ೦೬೪-೦೭ ; 1668); ಹೆತ್ತಿಗೆನಾಡ ಹೆತ್ತೂರ

ಮುಂದೆ ವಳಿತವಾದ ಕಿರಕಹಳ್ಳಿ ಗೊದ್ಯ್ಯವಳಿನಾಡ ಮರತ್ತೂರ ಮಂದೆ ವಳಿತವಾದ (ಎಕ. V. ಹಾಸನ. ೧೭-೯; 1774). ೪. ದನ, ಕರು ಮುಂತಾದುವುಗಳ ಮೇವಿಗಾಗಿ ಬಿಟ್ಟಿರುವ ಸಾರ್ವಜನಿಕ ಸ್ಥಳ; ಗೋಮಾಳ; ಹುಲ್ಲುಗಾವಲು : ಅದು ತುಱುವಂ ಕಾಯಲೆಂದೆಯ್ತಂದು ಬಾಲಕನೊರ್ವನಡವಿಯ ಮಂದೆಯುಳ್ ನಲಿದೊಂದೆ ಮಳಲಲಿಂಗವಂ ಮಾಡಿ . . . ಪೂವನೇಱಿಸಿದ (ಬಸವ. ೩೬-೨೨). 'ಮಂದಿ$_1$', 'ಮಂದು$_1$' ಪರಾ.

[ದೇ.॥ ತಮಿ. ಮನ್ರೈ ; ತುಳು. ಮಂದೆ : ತೆಲು. ಮಂದ]

**ಮಂದೆಗರುಳ್** (ನಾ). ಗುಂಪಾದ ಕರುಳು ; ಬೊಂತೆಯಾದ ಕರುಳು : ಕರುಳ ಬಿಣಿಲು ಕಾಲಂ ತೊಡಂಕಯುಂ ಮಂದೆಗರುಳ್ಗಳಿಂದೆ ದಾಡೆ × × ಯುಂ (ಎಕ. VIII, ಸೊರಬ. ೧೩೯-೦೯ ; 1173). [ ಮಂದೆ + ಕರುಳ್]

**ಮಂದೆವಳ** 'ಮಂದಿವಾಳ' ನೋ.

**ಮಂದೆವಾಳ** 'ಮಂದಿವಾಳ' ನೋ.

**ಮಂದೆವಾಳತನ** 'ಮಂದಿವಾಳತನ' ನೋ.

**ಮಂದೇಹ** (ನಾ). ಸೂರ್ಯೋದಯಕಾಲದಲ್ಲಿ ಸೂರ್ಯನಿಗೆ ಮುತ್ತಿಗೆ ಹಾಕುವರೆಂದು ನಂಬಲಾದ ಒಂದು ರಾಕ್ಷಸವರ್ಗ ಮತ್ತು ಆ ವರ್ಗಕ್ಕೆ ಸೇರಿದವನು : ಮಂದೇಹರ ಶೋಣಾಂಬುವಿನಿಂದಂ ತೊಯ್ದಂಗಮಂ ತೊಳೆಯಲೆಂದೊಲ್ದಿಟ್ಟಂದಿರದಿಟಿವವೊಲಿಟಾದಂ ಕುಂದದೆ ಪಡುಗಡಲೊಳೊಪ್ಪುವಂಬುಜಮಿತ್ರಂ (ಅದ್ಭುತ. ೩-೦೨) ; ಮಂದೇಹರ ಭಯದಿಂದರವಿಂದಸಖಂ ನಿಜಮಯೂಖಮಂ ಪಸರಿಸನೇ (ರಾಜಶೇ. ೦-೩೦) ; ಲೋಕವುಂ ನುಂಗಲ್ಕೆಂದು ಬಂದ ಮಂದೇಹರಾಕ್ಷಸನೆನೆ ಕಟ್ಟಿಲೆಯೊತ್ತಂ ಪರ್ಬಿದುದು (ರಾಮಾಶ್ವ. ೨೨-೨೩). [ಸಂ.]

**ಮಂದೈಸು** 'ಮಂದಯಿಸು' ನೋ.

**ಮಂದೋಷ್ಣ** (ನಾ). ನಸುಬೆಚ್ಚಗಿರುವುದು : "ಕೋಷ್ಣಂ, ಕದುಷ್ಣಂ, ಮಂದೋಷ್ಣಂ, ಕವೋಷ್ಣಂ-೪ ಸ್ವಲ್ಪ ಬಿಸಿಯ ಹೆಸರುಗಳು" (ಸಿದ್ಧಾಂತ. ೩೩). [ಸಂ.]

**ಮಂದ್ಯಾಳ** 'ಮಂದಿವಾಳ' ನೋ.

**ಮಂದ್ಯಾಳತನ** 'ಮಂದಿವಾಳತನ' ನೋ.

**ಮಂದ್ರ** (ಗು). ೧. (ಧ್ವನಿಗೆ ಸಂಬಂಧಿಸಿದಂತೆ) ಗಂಭೀರವಾದ : ಆಳವಾದ : ಶುಭಮುಹೂರ್ತದೊಳ್ ಮಂದ್ರ ಮಧುರ ಮನೋಹರ ಮಂಗಳಪಟಹಗೀತಾಶೀರ್ವಾದಕೋಳಾಹಳರವಂಗಳೆಸೆಯೆ (ಸುಕುಮಾ. ೧೦-೧೧೦ ವ) ; ಪೇಳ್ದನಾಶೀರ್ವಾದಮಂ, ಮಂದ್ರಗಂಭೀರ ಮಂದುಭಿಧ್ವನಿ ಸಭಾನಿಶ್ಶಬ್ದತೆಯ ಮಥಿಸಿ ಪೊಣ್ಮೆ (ಶ್ರೀರಾಮಪಟ್ಟಾ. ೧೩-೩೩೦). (ನಾ). ೨. ತಗ್ಗಾದ ಧ್ವನಿ; ಕೆಳದನಿ : "ಮಂದ್ರಃ . . . ಮೆಲ್ಲಗೆ ನುಡಿಯಲ್ಪಡುವುದು" (ಗುರುಬಾ. ೭೬). ೩. (ಧ್ವನಿಯ)ಗಂಭೀರತೆ : ಗಾಂಭೀರ್ಯ : ಶೋಕಿಸಿತು ಸಂಧ್ಯೆ ತಾನುಮಾರಣ್ಯಾದ್ರಿ ಸಾಂದ್ರ ಸಾಯಂಧ್ವನಿಯ ಮಂದ್ರದಿಂ (ಶ್ರೀರಾಮಾ. ೨೬೦-೯೭೩). ೪. ಒಂದು ಬಗೆಯ ವಾದ್ಯ ; ಮೃದಂಗ. ೫. ಒಂದು ಜಾತಿಯ ಆನೆ. ೬. [ಸಂಗೀತ] ಮಂದ್ರ, ಮಧ್ಯ ಮತ್ತು ತಾರ ಎಂಬ ಮೂರು ಬಗೆಯ ಸ್ವರಸ್ಥಾಯಿಗಳಲ್ಲಿ ಒಂದು ; ತಗ್ಗಿನ ಸ್ಥಾಯಿ : ಓರ್ವಳ್ . . . ಮಂದ್ರತಾರಗೀತಿಯ ಪವಣೊಪ್ಪೆ . . . ವೀಣೆಯಂ ಮಿಡಿದಳ್ (ಶಾಂತಿಪು. ೯-೧೬೭) ; ಅಮರ್ದಂ . . . ಕೋಗಿಲೆ ಗಿಳಿ ತುಂಬಿ ಮಹೀಶನ ಕಿವಿಗಾಗಳ್ ಕ್ರಮದಿತ್ತುವು ತಾರಮಧ್ಯ ಮಂದ್ರಸ್ವರದಿಂ (ಚಂದ್ರಪ್ರ. ೭-೯೩); ಮಾಯಮಬಲೆಯರು . . . ಯಥೋಚಿತ ತಾರಮಧುರ ಮಂದ್ರಂಗಳಿಂ ಹಾಡಿ ಭೂಪತಿಯ ಮಗುಡವನು ತೊಳೆದರು (ಪಂಪಾ. ೭-೭). ೭. ತಂಬೂರಿ, ವೀಣೆ ಮುಂತಾದ ವಾದ್ಯಗಳಲ್ಲಿ ತಗ್ಗಿನ ಸ್ಥಾಯಿಯಲ್ಲಿ ನುಡಿಯುವ ಒಂದು ತಂತಿ : ಬಲದಿಂದ ಎಡಕ್ಕೆ ನಾಲ್ಕು ತಂತಿಗಳು ಕ್ರಮವಾಗಿ ಪಂಚಮ, ಸಾರಣಿ, ಅನುಸಾರಣಿ ಮತ್ತು ಮಂದ್ರ ಎಂದು ಕರೆಯಲ್ಪಟ್ಟಿವೆ (ಸಂಗೀತಂ. ೧೧೦). [ಸಂ.]

**ಮಂಪರ** 'ಮರ್ವು$_2$' ನೋ.

**ಮಂಪರು** 'ಮರ್ವು$_2$' ನೋ.

**ಮಂರೇಜು** 'ಮಮರೇಜು' ನೋ.

**ಮಕ** 'ಮೊಗ' ನೋ.

**ಮಕಮಕ** (ನಾ). (ದೀಪ ಮೊದಲಾದುವು) ಮಂಕಾಗಿರುವುದನ್ನು ಸೂಚಿಸುವ ಒಂದು ಅನುಕರಣ ಶಬ್ದ : ಹೊರಗೆ ಮುಚ್ಚಂಜೆ ಮಕಮಕ ಕವಿಯುತ್ತಿತ್ತು (ಕಮನ. ೨೦೩). 'ಮಕಮಕಿಸು' ಪರಾ.

**ಮಕಮಕಿಸು** (ಕ್ರಿ). (ಬೆಳಕಿಲ್ಲದೆ) ಮಂಕಾಗು ; ಪ್ರಕಾಶಹೀನವಾಗು : ಕತ್ತಲೆಯ ಜಪ್ಪನಂ ಜಾಜಿಲೊಡನೆ ಮಿಱುಪ ತಾರಾಳಿ ಮಕಮಕಿಸಿದುವು (ಮದೇಪು. ೧೫-೯). [ ಮಕಮಕ + — ಇಸು$_3$ ]

**ಮಕಮಲ್ಲು** 'ಮಖಮಲ್ಲು' ನೋ.

**ಮಕರ$_1$** (ನಾ). ೧. ಒಂದು ಬಗೆಯ ಜಲಚರಪ್ರಾಣಿ ; ಮೊಸಳೆ: "ಮಕರ ಮೊಸಲುಗ್ರಪಾಠೀನಮಕ್ಕುಂ" (ಮಂಗರಾ. ೨೨೦-೭); ಕರಿಮಕರಂಗಳುಚ್ಚಳಿತ ಭಂಗುರತುಂಗತರಂಗಮಾಲೆಯಂ ಬಿರರದನಾಗ್ರದಿಂದಿಱಿಯೆ (ಕಾವ್ಯಸಾ. ೭೮ ಕೂಪ್ಯ೪); ಮಕರಂಗಳಂ ಭಯಂಕರ ಕರಿಗಳ್ ತೆಱಂಬೊಳೆವ ಮೀಂಗಳ ಸುಳ್ಳುವ ಕೈದುಗಳ್ ನಿರಾಕರಿಸಿರೆ ಪೇರೆದಪ್ಪಿ ಕವಿದತ್ತು ನರಾಧಿಪಸೈನ್ಯ ಸಾಗರಂ (ಶಂಕಪಾ. ೩-೩೮); ಅಬ್ಧಿಪಂ ಮಕರಮಂ . . . ಏಱೆ ನಭಕ್ಕೆ ಸಲ್ವುದುಂ (ಜಗನ್ನಾ. ೦-೩೩). ೨. ಒಂದು ಬಗೆಯ ಮೀನು: "ಮತ್ಸ್ಯಭೇದಮಂ ಮಕರಮೆಂಬುದು" (ಶಬ್ದಮ. ೦೦೯-೩೮); ಕರಿಮಕರನಕ್ರ . . . ಜಳೂಕವ್ಯಾಳಕೋಳಾಹಳಧ್ವಾನವೆರಸಿ ಜಲನಿಧಿ ಮೆಱೆದುದು (ಪಶಾ. ೦-೩೩). ೩. ಕುಬೇರನ ನವನಿಧಿಗಳಲ್ಲಿ ಒಂದು : ಆ ಕುಬೇರನೇ ಪದ್ಮ ಮಹಾಪದ್ಮ ಶಂಖ ಮಕರ . . . ಖರ್ವಂಗಳೆಂಬ ನವನಿಧಿಗೊಡೆಯನಾಗಿ ಈಶ್ವರನಿಗೆ ಸಖನಾಗಿರ್ಪಂ (ಶಿವೇಶ. ೧೭೭). ೪. ಮೊಸಳೆಯಾಕಾರದಲ್ಲಿ ನಿಲ್ಲಿಸಿರುವ ಸೇನೆಯ ತುಕಡಿ. ೫. ಮೀನಿನ ಗುರುತುಳ್ಳ ಧ್ವಜ: ನನೆಯಂಬಂ ಮಿಗೆ ಕಣ್ಮಲರ್ ಮಕರಮಂ ಕೊರ್ೞಡಧ್ವಜಂ ಪೋಲೆ(ಗದಾಯು. ೦-೭). ೬. [ಜ್ಯೋತಿ] ಹನ್ನೆರಡು ರಾಶಿಗಳಲ್ಲಿ ಒಂದು : ಅಮರಾಸೆಯನಜ ಹರಿ ಧನುಯುಮಾಸೆಯುಂ ವೃಷಭಕನ್ಯಕಾಮಕರಂ . . . ಆಳ್ಗಂ (ಜಾತಕ. ೧-೨೪) ; ಶಕವರುಷದ ೧೧೮೩ನೆಯ ಮಕರದಲು ಬ್ರುಹಸ್ಪತಿ ದುರ್ಮ್ಮತಿಸಂವತ್ಸರ ಮಾರ್ಗಶಿರ ಸು ೬ ಮಂ (ಸೌಇಇ. IX-i, ೩೯೩-೬; 1261): ಮಕರಕ್ಕೆ ಗುರು ಬರಲು ಮಕರತೋರಣವಕ್ಕು (ಸರ್ವಜ್ಞ. ೧೩೮೯). ೭. [ನಾಟ್ಯ] ಹದಿಮೂರು ಬಗೆಯ ಸಂಯುತಹಸ್ತಗಳಲ್ಲಿ ಒಂದು; P "ಪತಾಕಹಸ್ತಗಳೆರಡರ ಹೆಬ್ಬೆರಳುಗಳನ್ನು ಮೇಲಕ್ಕೆ ನೀಡಿ, ಅಂಗೈಗಳನ್ನು ಕೆಳಮುಖಮಾಡಿ ಕೈಗಳನ್ನು ಒಂದರ ಮೇಲೊಂದು ಇಡುವುದು" (ಅಭಿನಯದ. ೨೪೫ ಗದ್ಯಾನುವಾದ) : ನಾಟ್ಯಶಾಸ್ತ್ರದಲ್ಲಿ ಹೇಳಿರುವ ಸಂಯುತಹಸ್ತಗಳು ಯಾವುವೆಂದರೆ—೧. ಅಂಜಲಿ. . . ೧೦. ಮಕರ ೧೧. ಗಜದಂತ ೧೨. ಅವಹಿತ್ಥ ಮತ್ತು ೧೩. ವರ್ಧಮಾನ (ಅಭಿನ. ೪೯). [ಸಂ.]

**ಮಕರ$_2$** (ನಾ). ದೇವತಾಮೂರ್ತಿ, ನವದಂಪತಿಗಳು, ಮೈನೆರೆದ ಹುಡುಗಿ ಮುಂತಾದವರನ್ನು ಕುಳ್ಳಿರಿಸಿ ಆರತಿಯೆತ್ತಲು ರಚಿಸಿದ ಮಂಟಪ: ಮಕರ ಸಹಿತ ಎಲ್ಲಾ ಕಟ್ಟಿ ತಯಾರ ಆಗೀತೆಲ್ಲಾ ? (ಶಿಸರ್ಗ. ೭೭): ಹಾಡು ಕೇಳುವುದರಲ್ಲಿ ಮೈಮರೆತ ಜನ ಮಕರದ ಕಡೆಗೆ ನೋಡುವಲ್ಲಿ ಅದಾವಾಗಲೋ ತಾರಕ್ಕ ಬಂದು ಕುಳಿತಿದ್ದಳು (ಶಿಸರ್ಗ. ೭೯).

[ ← ಮರಾ. ಮಖರ್ ]

**ಮಕರಂದ** (ನಾ). ೧. ಹೂವಿನ ರಸ; ಜೇನು; ಮಧು: "ಮಕರಂದಃ, ಮಧು— ಈ ೨ ಪೂವಿನ ಬಂಡು" (ಶಬ್ದಮ. ೩೦-೩೪); ನಂದನನಾನಾ ಪ್ರಸವಪ್ರಭೂತ ಮಕರಂದಾಮೋದಮುಂ ತಂದು (ಸುಕುಮಚ. ೪-೯೩): ಶರದಭ್ರಮೆಂಬ ಬೆಳ್ದಾವರೆಗಳ ಮಕರಂದರೇಣು ಪವನಾಹತಿಯಿಂ ಪರೆದು (ಜಗ. ೪-೬೨); ಆರ ವದನಾರವಿಂದಮುಂ ನೋಡಿ, ಮಕರಂದಮಂ ಹೀರಿ, ಜನನಯನಾಳಿ ತೃಪ್ತಿಯುರಿಯುವೊ ಅದನ್ನೊಸೆದು ನೋಳ್ಪನ್ನೆಗಂ ಶಾಂತಿಯಿಲ್ಲೆನಗೆ (ಶ್ರೀರಾಮಪ. ೧೩೦-೨೬೪). ೨. [ಸಂಗೀತ] ಅಟ್ಟ ತಾಳದಲ್ಲಿ ಒಂದು ಭೇದ : ನಿಃಶಂಕ, ಶಂಖ, ಶೀಲ, ಚಾರ ನಂತರ ಮಕರಂದ ಮತ್ತು ವಿಜಯ– ಈ ಆರು ಭೇದಗಳನ್ನು ಅಟ್ಟತಾಳದಲ್ಲಿ ಹೇಳಿದೆ (ಕತಂಶ್ರ. ೬೩). [ಸಂ.]

**ಮಕರಂದಪ** (ನಾ). ಹೂವಿನ ರಸವನ್ನು ಕುಡಿಯು ಒಮುಕು ಪಂತಪುದು ; ಬಂಡುಣಿ ; ಜೇನುನೊಣ : ಕೃಷ್ಣನ್ನ ಪಾದಕಮಲದಲ್ಲಿ ಮಕರಂದಪನಂತೆ ನಲಿವೋದು ಭ್ರಾಂತೆ (ಶ್ರೀಕೃಪಾ. ೩೬). [ಸಂ.]

**ಮಕರಂದಿ** (ನಾ). [ಸಂಗೀತ] ಒಂದು ರಾಗದ ಹೆಸರು : ಶ್ರೀರಾಗ . . . ಮಕರಂದಿ ವಸಂತರಾಗಂ ಇವಾದಿಯಾದ ರಾಗಂಗಳಂ ಪಾಡುತ್ತಿರೆ (ಶಬ್ದಾರ. ೨-೯೦). [ ? ]

**ಮಕರಕಂಠಿ** (ನಾ). ಮೊಸಳೆ ಅಥವಾ ಮೀನಿನ ಆಕಾರದ ಚಿತ್ರಗಳುಳ್ಳ ಒಂದು ಬಗೆಯ ಕೊರಳಿನ ಆಭರಣ : ತನಗೆ ಮಹಾರಾಜರು ಬಹುಮಾನವಾಗಿ ಕೊಟ್ಟ ತೋಡಾ, ಮಕರಕಂಠಿ ಮುಂತಾದ ಒಡವೆಗಳಿಂದ ಆತನನ್ನು ಅಲಂಕರಿಸಿ (ಗಾಪಕ. ೬೮). [ಸಂ. ಮಕರಕಂಠೀ]

**ಮಕರಕುಂಡಲ** (ನಾ). ಮೊಸಳೆ ಅಥವಾ ಮೀನಿನ ಆಕಾರದ ಒಂದು ಬಗೆಯ ಕಿವಿಯ ಆಭರಣ : ಮಣಿಮಯಭೂಷಣ ಮಕರ ಕುಂಡಲಯುತ ಪಾಣಿಪ ಭಕ್ತರ ಮಹದ್ಭಾಗ್ಯ (ಕಕಸಾಂ. ೬೨-೬೬) ; ಹರಿಹರನಿಗೆ . . . ಬಲಗಿವಿಯಲ್ಲಿ ನಾಗಕುಂಡಲ. ಎಡಗಿವಿಯಲ್ಲಿ ಮಕರ ಕುಂಡಲವೂ ಇವೆ (ಹೊಯ್ಸಳಾ. ೯೬). [ಸಂ.]

**ಮಕರಕೇತನ** (ನಾ). ೧. ಮೀನಿನ ಗುರುತುಳ್ಳ ಧ್ವಜ. ೨. ಮೊಸಳೆ ಮುಂತಾದ ಜಲಚರಗಳ ವಾಸಸ್ಥಾನ ; ಸಮುದ್ರ. ೩. ಮೀನಿನ ಗುರುತುಳ್ಳ ಧ್ವಜವುಳ್ಳವನು ; ಮನ್ಮಥ : ಮಲ್ಲಿಕಾರ್ಜುನಂ ಜನಿಯಿಸಿದಂ ಭೂವಲ್ಲಭಂ × × × ಗುಣಾವಾಸಂ ಮಕರಕೇತನಂ ಪುಟ್ಟುವ ವೋಲ್ (ಕಶಿ. ೯೦-೧-೦೪ ; 1082): ಪೊಡಚಿದಂ ತನಗಂಜಿ ಮಕರ ಕೇತನಂ (ಶಂಬಕ. ೩-೩) ; ಮಕರಕೇತನರತಿಗಳಲಿ ಹೇಸಿಕೆಗಳಂ ಹುಟ್ಟಿಸುವೆನು (ಬಸಪು. ೪೦-೩೦). ೨, ೩ : ಭವನಂತೆ ಗಿರಿಸುತಾನ್ವಿತನೆಂದೆನಿಸಿ ಮನೋ ಭವನಂತೆ ಮಕರಕೇತನನಾಗಿ . . . ಅರ್ಣವಂ ಕಣ್ಗೊಳಿಪುದು (ಶ್ರೀರಾಪ. ೩-೨೬). [ಸಂ.]

**ಮಕರಕೇತು** (ನಾ). ೧. = ಮಕರಕೇತನ ೧. ೨. = ಮಕರಕೇತನ ೩ : ಉಪಹಸಿತ ಸನತ್ಕುಮಾರ ನಳಕೂಬರ ಮಕರಕೇತು ಸೌಂದರ್ಯನುಂ . . . ಅಪ್ಪ ಸ್ತ್ರಿಮಿತ್ರಸಾಗರಮಹೀವಲ್ಲಭಂಗೆ . . . ಅರಸಿಯು ರಾದರ್ (ಶಾಂತಿಪು. ೦-೭೦ ವ) ; ಸಕಲಜಗಜ್ಜನಮಂ ಮಕರಕೇತು ಗೆಲೆ (ಅಜಪು. ೬-೦೦) ; ಮಕರಕೇತುವರವಾತುಲಾಸನೆ ಸಿಂಹಮಧ್ಯೆ ವೃಷಭ ಧ್ವಜಾರಿಯು ಪಟ್ಟದಾನೆ (ಕೈಲಾಶಾ. ೬-೨೩). [ಸಂ.]

**ಮಕರಗುಬ್ಬಿ**, ಮಕರಡಿಬ್ಬಿ, ಮಕರದಿಬ್ಬಿ, ಮಕರಬಿಬ್ಬಿ (ನಾ). ೧. (ಹಿಂದೆ ಯುದ್ಧದ ಸಮಯದಲ್ಲಿ ಶತ್ರುಗಳ ಮೇಲೆ ಎಸೆಯುತ್ತಿದ್ದ) ಮೀನಿನಾಕಾರದ ಪೊಳೆಯುತ್ತಿದ್ದ ಒಂದು ಸ್ಫೋಟಕವಸ್ತು : ಎತ್ತಿದ ಕೇತು ಸುತ್ತಿದ ಜೀವಿನ ದಂಡೆ ಮತ್ತಿಡಿದಿರ್ದ ದಸಿಗಳು ಬತ್ತರಿ ಸಿರ್ದ ಮಕರಗುಬ್ಬಿಗಳೊಪ್ಪೆ ಪೆತ್ತುದು ಪುರ ಕೌತುಕದ (ಅಪಂತ. ೦೮-೯೩). **ಮಕರಡಿಬ್ಬಿ** : ೧. ರಂಗಯ್ಯನ ಬಾಗಿಲ ಕಡೆ ತ್ಯವರನ ಸೇನೆಯವರು ಭಾರಿಯಾಗಿ ಮೊಹರ್ಚೆ ಕಟ್ಟಿ ಫಿರಂಗಿಯನ್ನೂ ಮಕರಡಿಬ್ಬಿಯನ್ನೂ ಹೊರಗಿನಿಂದ ಹೊಡೆಯುತ್ತಾ ಬಂದರು (ಶಕ್ರಚ. ೯೬). ೨. ಮಕರಡಿಬ್ಬಿ ಎಂಬ ಸ್ಫೋಟಕವಸ್ತುವನ್ನು ಎಸೆಯಲು ಬಳಸುತ್ತಿದ್ದ ಸಾಧನ : ಮಾಯು ರಚಿಸಿದನು ಕೋಟಾವಲಯ ಮುಗಿಲಟ್ಟಲೆಯ ಕೊತ್ತಲಗಳ ಮಹಾಡೆಂಕಣೆಯ ಕಿದರುವ ಮಕರಡಿಬ್ಬಿಗಳಾ (ಅಸಂಶಾ. ೩-೩-೦೨) ; ಫಿರಂಗಿ ಮಕರಡಿಬ್ಬಿ ಮೊದಲಾದ ಯುದ್ಧಸಾಧನಗಳು (ಕೃಚಾಸ. ೯). **ಮಕರದಿಬ್ಬಿ** : ೧. ಸೂತ್ರದೊಳಟ್ಟಿ ಸೂಸುವ ಮಕರದಿಬ್ಬಿ (ಮೈರಾಕಾ. ೨-೦೬). ೨. ಬದ್ದರ ಸಾರವಾರಿ ತೊಲೆ ತೂಗುವರ ಬಲೆ ಹಗ್ಗ ಮಕರದಿ[ಶಾಕಾಂ. ಬಿ]ಬ್ಬಿ ಸಲೆ ಮೆಚಿದುವು ಮಾರ್ಗದೊಳಗೆ (ಕುರಾಕಾಂ. ೩೭-೩೬) ; ನೆಗೆವ ಮಕರದಿಬ್ಬ[ ಬ್ಬಿ ] ಹುಲಿಮುಖ ಡೆಂಕಣಿ ಮಿಗೆ ಚೋರ ಅಂಬುಗಂಡಿಗಳು ( ಬಸಪ. ೦-೯೦ ); ಮಕರದಿಬ್ಬಿ, ರೇಕವಿಸರ, ಗೋವಿ, ತುಪಾಕಿ ಮೊದಲಾದ ಆಯುಸಯಂತ್ರಜಾಲಗಳಿಂದಲೂ (ಕೃಚಾಸ. ೯೭). **ಮಕರಬಿಬ್ಬಿ** : ೧. ಛಡಾಳಿಸಿರ್ದ ಮಕರಬಿಬ್ಬಿಗಳು ಗಬ್ಬಿಗಳು (ತೇರಸು. ೨-೨೬); ನಡೆಚಪ್ಪರವೇಣಿ ಭದ್ರಿಕೆ ನೆಲಗುಮ್ಮ ಬೆಡಗಿನ ಮಕರಬಿಬ್ಬಿಗಳು (ಶಾಗಳು. ೦೭-೨೦); ರಾಮಡೆಂಕಣಿ ಮಕರಬಿಬ್ಬಿಯನಾಯ ವಲಿ ಹೂಡಿದರು (ಕೊಲ್ಲಾಕ. ೨೪೦).

[ಮಕರ$_1$ + ಗುಬ್ಬಿ?. / ತೆಲು. ಮಕರಬಿಬ್ಬಿ = ಮಕರತೋರಣ]

**ಮಕರಟೆಕ್ಕೆ** (ನಾ). ಮೀನಿನ ಚಿತ್ರವುಳ್ಳ ಬಾವುಟ; ಮೀನಧ್ವಜ; P ಮೈಸೂರಿನ ರಾಜರ ಮೆರವಣಿಗೆ, ದರ್ಬಾರು ಮುಂತಾದ ಸಂದರ್ಭ ಗಳಲ್ಲಿ ಸೇವಕರು ಎತ್ತಿ ಹಿಡಿಯುತ್ತಿದ್ದ ಬಿರುದಿನ ಸಂಕೇತಗಳಲ್ಲಿ ಒಂದು : ಬಿರುದಿನ ಪಾಳು ಡಮಾಮಿ ಮಕರಟೆಕ್ಕೆಯುರುತರ ರಾಜಚಿಹ್ನಗಳ ಪರಿಯ ತೋಋತ (ಕಂಪರಿ. ೩-೩೭); ಗರುಡಧ್ವಜ, ಮಕರಟೆಕ್ಕೆ . . . ಪಿಟುಪಾವಡೆ ಮುಂತಾದ ಬಿರುದುಗಳಿಂದಲೂ ( ಮಹಾಪಂ. I. ೩೪ ); ಸಾಲುಗ್ಗಡಿ, ಮಕರಟೆಕ್ಕೆ, ಸತ್ತಿಗೆ, ಸೀಗುರಿ . . . ಕಂಠೀರವಾದಿ ಬಿರುದುಗಳು ಮುಂತಾದುವನ್ನು ಹಿಡಿದು ಊಳಿಗಗುಡುತ್ತ (ಪಟ್ಟಾ. ೩೦-೭). [ ಮಕರ$_1$ + ಟೆಕ್ಕೆ$_1$ (< ಟೆಕ್ಕೆಯ) ]

**ಮಕರಡಿಬ್ಬಿ** ' ಮಕರಗುಬ್ಬಿ ' ನೋ.

**ಮಕರತೋರಣ** (ನಾ). ೧. ಮೀನು, ಮೊಸಳೆ ಮುಂತಾದ ಆಕೃತಿ ಗಳುಳ್ಳ ಒಂದು ಬಗೆಯ ತೋರಣ ; P ದೇವಾಲಯದ ಶಿಲ್ಪಗಳಲ್ಲಿ ಅನೇಕ ಕಡೆಗಳಲ್ಲಿ ಇದನ್ನು ಕಡೆದಿರುತ್ತಾರೆ. ರಾಜರು ಮುಂತಾದವರ ಮೆರವಣಿಗೆಗಳಲ್ಲಿಯೂ ದೇವರ ಉತ್ಸವಾದಿಗಳಲ್ಲಿಯೂ ಇಂತಹ ತೋರಣಗಳನ್ನು ಉದ್ದಕ್ಕೂ ಹಿಡಿದು ನಡೆಯುವ ವಾಡಿಕೆ ಯುಂಟು : ವರುಣರೂಪಾರೂಢಮುಂ ಚಾಮೀರಮಯಮುಮಪ್ಪ ಮಕರತೋರಣಮುಂ ನೋಡುತ್ತುಂ (ಶಾಂತಿಪು. ೩-೦೯ ವ); ಉತ್ತಂಭಿತಮಾನ ಸ್ತಂಭ ಮಕರತೋರಣವಿರಚಿತಾಂಗಳುಂ (ಕೃಷ್ಣ. ೨-೬೩ ವ); ದೇವಾಲಯದ . . . ಗೂಡುಗಳಿಗೆ ಪುಷ್ಪ ಅಥವಾ ಮಕರತೋರಣಗಳಿವೆ. ಗಂಧರ್ವ, ಯಾಳಿ, ಮುಕ್ಕೊಡೆ, ಮಕರ, ಯಕ್ಷರು ಈ ತೋರಣಗಳಲ್ಲಿರುವರು (ಹೊಯ್ಸಳಾ. ೯೯). ೨. (ಅಲಂ) ಶುಭ ; ಮಂಗಳ : ಮಕರಕ್ಕೆ ಗುರು ಬರಲು ಮಕರತೋರಣವಕ್ಕು (ಸರ್ವಜ್ಞ. ೦೩೯೯). [ಸಂ.]

**ಮಕರದಿಬ್ಬಿ** 'ಮಕರಗುಬ್ಬಿ' ನೋ.

**ಮಕರಧ್ವಜ** (ನಾ). ೧. = ಮಕರಕೇತನ ೧. ೨. = ಮಕರಕೇತನ ೩ : "ಪ್ರದ್ಯುಮ್ನಃ, ಮಕರಧ್ವಜಃ . . . ಮನೋಭವಃ — ಈ ೨೮ ಕಾಮ (ದೇವ)ನ ಪೆಸರ್" (ಶಬ್ದಮ. ೭-೩೩) ; ಓರ್ವಳುತ್ತುಂಗಸೌಧೋತ್ತುಂಗ ದೊಳ್ ನಿಂದು ಮನುವಂಶಧ್ವಜನಂ ಮಕರಧ್ವಜನೆಂದು ಬಗೆದು (ಅಂಪು. ೦೦-೦೭ ವ); ಮಕರಧ್ವಜನಂತೆ ಸದಾಸನ್ನವಿಗ್ರಹನುಂ . . . ಪುರುಷೋತ್ತಮ ಪ್ರತಿನಿಧಿಯುಮೆನಿಸಿದ ಮಹಾನುಭಾವಂ ಶಾರಾಪೀಡನೃಪಂ

(ಕಾದಂಬ. ೩೦೭). ೩. ಮೊಸಳೆಯ ಆಕಾರದಲ್ಲಿ ನಿಲ್ಲಿಸಿದ ಸೈನ್ಯ.–ಪಡೆ. [ಸಂ.]

**ಮಕರಪತಾಕ** (ನಾ). ೧. =ಮಕರಕೇತನ ೧. ೨. =ಮಕರಕೇತನ ೩ : ಮಕರಪತಾಕನಾರ್ಪ ಮನಿಶಾಕೃತಿವೆತ್ತುದೊ . . . ಎನೆ ಕಣ್ಗೆಸೆದಿರ್ದುದು ರೂಪು ಕಾಂತೆಯಾ (ದಕಳು. ೩-೪೦). [ಸಂ. ಮಕರಪತಾಕಾ]

**ಮಕರಪತ್ರ** (ನಾ). ಸ್ತ್ರೀಯರು ಅಲಂಕಾರಕ್ಕಾಗಿ ಕೆನ್ನೆ, ಗಲ್ಲ, ಸ್ತನ ಮುಂತಾದ ಅಂಗಾಂಗಗಳ ಮೇಲೆ ಪರಿಮಳಯುಕ್ತವಾದ ಬಣ್ಣಬಣ್ಣದ ಪುಡಿ ಮುಂತಾದುವುಗಳಿಂದ ಮೀನು, ಮೊಸಳೆ ಬಳ್ಳಿ ಮೊದಲಾದ ಆಕಾರಗಳಲ್ಲಿ ಬರೆದುಕೊಳ್ಳುತ್ತಿದ್ದ ಚಿತ್ತಾರ: ಪತ್ರಭಂಗ : ಮಸುಳ್ದ ಮಕರಪತ್ರದ ಕದಪು . . . ಸೊಪ್ಪಾದಧರ ಮೊಪ್ಪಿತಾ ಕಾಂತೆಗೆ (ಕೈಬಾ. ೧೦-೨೩). 'ಮಕರಿಕಾಪತ್ರ', 'ಮಕರಿಕೆ' ಪರಾ. [ಸಂ.]

**ಮಕರಬಿಬ್ಬಿ** 'ಮಕರಗುಬ್ಬಿ' ನೋ.

**ಮಕರಭೋಜನ** (ನಾ). ೧. ತಾನು ಮಾಡಿದ ಪಾಪದ ಫಲವಾಗಿ ತಿನ್ನುವ ಆಹಾರವು ಹುಳುಗಳಾಗಿ ಮಾರ್ಪಡುವುದು. ೨. ತಿನ್ನುವ ಆಹಾರವು ಹುಳುಗಳಾಗಿ ಮಾರ್ಪಡುವ ಪಾಪಿಷ್ಠವ್ಯಕ್ತಿ : ಶಿವ ಧರ್ಮದ ಕೆಡಿಸಿದವನು ಅಧರ್ಮಕ್ಕಳಿವನು ಕೂಡಲಸಂಗಮದೇವ ಸಾಕ್ಷಿಯಾಗಿ ಮಕರಭೋಜನನಾಗನೆ ಪಿನಾಕ್ಕಿಗಾಯನು (ಬಸವ. ೬೨೩). [ಮಕರ್‌ + ಭೋಜನ]

**ಮಕರಮಾಸ** (ನಾ). ಸೌರಮಾನದ ಹತ್ತನೆಯ ತಿಂಗಳು : [ನವಿಲೇಶ್ವರ] ದೇವರಿಗೆ ಮನುಮತಸಂವತ್ಸರದ ಮಕರಮಾಸ ೧೮ನೆಯ ಸೋಮವಾರ ದಂದು . . . ಧ(ಾ)ರ್ಮ್ಮ (ಶಾಇ. IX-i, ೩೯೪-೯ ; 1176). [ಸಂ.]

**ಮಕರಮುದ್ರೆ** (ನಾ). ಮೀನು ಅಥವಾ ಮೊಸಳೆಯ ಆಕಾರವುಳ್ಳ ಒಂದು ಬಗೆಯ ಆಭರಣ : ಭುಜಕೀರ್ತಿ ಮರಕತಕಂಕಣಂ ತೋಳ ಭಾಪ್ಪುರಿ ಮಕರಮುದ್ರೆಗಳನೂ ಲೀಲೆಯಿಂದಳವಡಿಸಿ (ಶಶಮೋ. ೩-೨೬). [ಸಂ. ಮಕರಮುದ್ರಾ]

**ಮಕರರಾಶಿ** (ನಾ). [ಜ್ಯೋತಿ] ಹನ್ನೆರಡು ರಾಶಿಗಳಲ್ಲಿ ಒಂದು : ಮಕರರಾಶಿಯು ಅಂಗಾರಕನಿಗೆ ಕುಂಭರಾಶಿಯಂತೆಯೇ ಸಮಶತ್ರುಕ್ಷೇತ್ರ ವಾಗಿದ್ದರೂ . . . ಶುಭಫಲವೇ ಉಕ್ತವಾಗಿದೆ (ಜಾತಕ. ೧೭-೨೦ ೬೯೪). [ಸಂ.]

**ಮಕರವೃತ್ತ** (ನಾ). [ಭೂಗೋಳ] ಭೂಮಿಯ ಮೇಲೆ ಸಮಭಾಜಕ ವೃತ್ತಕ್ಕೆ ಸಮಾನಾಂತರವಾಗಿ ದಕ್ಷಿಣದಲ್ಲಿ ಇಪ್ಪತ್ತುಮೂರೂವರೆ ಅಕ್ಷಾಂಶಗಳ ಅಂತರದಲ್ಲಿ ಎಳೆದಿರುವಂತೆ ಭಾವಿಸಿರುವ ರೇಖೆ : ಮಕರಸಂಕ್ರಾಂತಿವೃತ್ತ : ವಿಷುವವೃತ್ತದ ದಕ್ಷಿಣಕ್ಕೂ ಉತ್ತರಕ್ಕೂ ೨೩½ ಅಂಶಗಳ ಅಂತರದಲ್ಲಿ ಒಂದೊಂದು ವರ್ತುಲಗಳನ್ನು ಕಲ್ಪಿಸುವರು ; ಅವುಗಳಿಗೆ ಯಥಾಕ್ರಮವಾಗಿ ಮಕರವೃತ್ತವೆಂತಲೂ ಕರ್ಕವೃತ್ತವೆಂತಲೂ ಹೆಸರುಗಳಿವೆ (ಮುಂಬಾಮ. ೬-೬೦). 'ಕರ್ಕವೃತ್ತ' ಪರಾ. [ಸಂ.]

**ಮಕರವ್ಯೂಹ** (ನಾ). ಮೊಸಳೆಯ ಆಕಾರದಲ್ಲಿ ಸೈನ್ಯವನ್ನು ನಿಲ್ಲಿಸುವ ಒಂದು ರಚನೆ : ಮಕರವ್ಯೂಹಮನೊಡ್ಡಿ ನಿಂದನಸುರಂ (ಅವಂಪು. ೧೩-೯೪); ಅರಸನನುಜರು ಸಹಿತ ಕೃಷ್ಣನ ಬಿರಳ ಸನ್ನೆಯೊಳೈದೆ ಬಿಡೆ ಮೋಹರಿಸಿ ನಿಂದುದು ಮುರಿದ ಮಕರವ್ಯೂಹ ರಚನೆಯಲಿ (ಕುಮ್ಮಾದ್ರೋ. ೪-೨೨). 'ಗರುಡವ್ಯೂಹ', 'ಪದ್ಮವ್ಯೂಹ' ಪರಾ. [ಸಂ.]

**ಮಕರಶೃಂಗಾರ** (ನಾ). ಮಕರಿಕಾಪತ್ರದ ಶೃಂಗಾರ,–ಅಲಂಕಾರ (?): ಭಿನ್ನರುಚಿಗಳಿಗೆಜಗದೆ ಕಾಮನ ಬೆಂಬಳಿವಿಡಿಯದೆ ಮಕರಶೃಂಗಾರವ ಮಾಡದೆ ಅಂಗನೆಯರ ಸಂಗವ ತೊಜದೊಡೆ ಶೀಲವಂತರೆಂಬೆನು (ಬಸಗೋ. ೩-೦೯೯). [ಸಂ.]

**ಮಕರಸಂಕ್ರಮಣ** (ನಾ). ಸೂರ್ಯನು ಮಕರರಾಶಿಯನ್ನು ಪ್ರವೇಶಿಸುವ ದಿನ ಮತ್ತು ಅಂದು ಆಚರಿಸುವ ಹಬ್ಬ: ಎಳ್ಳು ಬೀರುವ ಹಬ್ಬ; ಪೊಂಗಲ್ : ಜನವರಿ ತಿಂಗಳ ೧೪ನೆಯ ದಿನಾಂಕಕ್ಕೆ ಪ್ರಾಯಶಃ ಮಕರಸಂಕ್ರಮಣ ಹಬ್ಬ ಬರುತ್ತದೆ (ಕಾಹಬ್ಬ. ೧೬೭). [ಸಂ.]

**ಮಕರಸಂಕ್ರಾಂತಿ** (ನಾ). =ಮಕರಸಂಕ್ರಮಣ : ಮಕರಸಂಕ್ರಾಂತಿಯಂದು ಎಳ್ಳುಬೀರುವ ವಾಡಿಕೆ ಇದೆ (ರೂಢಿ). [ಸಂ.]

**ಮಕರಸಂಕ್ರಾಂತಿವೃತ್ತ** (ನಾ). = ಮಕರವೃತ್ತ : ವಿಷುವದ್ರೇಖೆಗೆ . . . ದಕ್ಷಿಣಕ್ಕೆ ಇಪ್ಪತ್ತು ಮೂರೂವರೆ ಅಕ್ಷಾಂಶಭಾಗಗಳದೂರದಲ್ಲಿ ಮಕರ ಸಂಕ್ರಾಂತಿವೃತ್ತವೂ (Tropic of Capricorn) ಇವೆ (ಭೂಗೋಳ. ೮): ಡಿಸೆಂಬರು ೨೨ನೆ ತಾರೀಖಿನ ದಿವಸ . . . ಸೂರ್ಯಕಿರಣ ನೇರವಾಗಿ ಮಕರ ಸಂಕ್ರಾಂತಿವೃತ್ತದ ಮೇಲೆ ಬೀಳುತ್ತದೆ (ಖಗೋಳ. ೦೩). 'ಕರ್ಕಾಟಕ ಸಂಕ್ರಾಂತಿವೃತ್ತ' ಪರಾ. [ಸಂ.]

**ಮಕರಾಂಕ** (ನಾ). = ಮಕರಕೇತನ ೩ : ಮಕರಾಂಕದ್ವಿಪಮದಪಟ್ಟಿಕೆ ಯೆನಿಸಿ ಕಪೋಲಮೂಲಮಂ ಮುಟ್ಟಿದುವಾ ಚಕಿತಾಕ್ಷಿಯ ಹರಿನೀಳಾ ಳಕಂಗಳ್ (ಶಂಖಪು. ೩-೯೪) ; ಮಕರಾಂಕಂ ಬಂದೊಡಂ ಮೆಚ್ಚದ ನಿರುಪಮಸೌಭಾಗ್ಯಸಂಪನ್ನೆಯಂ ಬಾಲಿಕೆ ನಿನ್ನಂ ಕಂಡು ಕಣ್ಗೋಲ್ಪ್ರತಿಪದು ಮದನಾಸ್ತ್ರಾಗ್ನಿಸಂತಾಪದಿಂ × × × ನೀರ್ವಸೆಯೊಳೊಡಲನಟ್ಟಾಡು ಪೋಲ್ ಮಾಡಿದ್ದೈ (ದಕಳು. ೮-೨೬೯). [ಸಂ.]

**ಮಕರಾಕರ** (ನಾ). ಮೊಸಳೆ ಮುಂತಾದ ಜಲಚರಗಳ ವಾಸಸ್ಥಾನ : ಸಮುದ್ರ : ಹರಿವ ರಥಪದಧೂಳಿ ಮಕರಾಕರವ ಕುಡಿದುದು (ಕುಮ್ಮಾಭೀ. ೪-೯೪). [ಸಂ.]

**ಮಕರಾಯನ** (ನಾ). ಸೂರ್ಯನು ಮಕರಸಂಕ್ರಾಂತಿವೃತ್ತದ ಮೇಲೆ ಬರುವ ಕಾಲ : ಡಿಸೆಂಬರು ೨೨ನೆ ತಾರೀಖಿನ ದಿವಸ . . . ಸೂರ್ಯ ಕಿರಣ ನೇರವಾಗಿ ಮಕರಸಂಕ್ರಾಂತಿವೃತ್ತದ ಮೇಲೆ ಬೀಳುತ್ತದೆ. ಇದನ್ನು ಮಕರಾಯನ (Inter solstice) ಎಂದು ಹೇಳುತ್ತೇವೆ (ಖಗೋಳ. ೦೩). 'ಕಟಕಾಯನ' ಪರಾ. [ಸಂ.]

**ಮಕರಿ** (ನಾ). ೧. ಹೆಣ್ಣುಮೊಸಳೆ. ೨. =ಮಕರಪತ್ರ. [ಸಂ. ಮಕರೀ]

**ಮಕರಿಕಾಪತ್ರ** (ನಾ). = ಮಕರಪತ್ರ : ಅಲಕಂ ಮಂದಾರಶೂನ್ಯಂ ಕದಪು ಮಕರಿಕಾಪತ್ರಶೂನ್ಯಂ (ಅಜಿಪು. ೩-೦೩); ಆಸ್ಥಾನಮಂಟಪದಿಂ ಮಹೀಪಾಲನೆಬ್ಬುದುಮನೇಕಾಂಗದಮಕರಿಕಾಪತ್ರಾದಿಗಳಿಂ ಮಿಂಚು ಪೊಣ್ಮೆ ತಮ್ಮೊಳ್ ಪಳಂಚಲೆಯೆಯುಂ (ಕಾದಂಬ. ೬೭). [ಸಂ.]

**ಮಕರಿಕೆ** (ನಾ). = ಮಕರಪತ್ರ : "ಮೊಲೆ ಗಲ್ಲ ತೋಳ್ ಕೊರಲ್ಲಿ ತೀವಿ ಸಜೀವಿಯಿಂ ಬರೆದ ಪಂಸೆ ಲತೆಗಳು ಪತ್ರವಲ್ಲಿ ಮಕರಿಕೆಯೆನಿಸ್ಕುಂ" (ಶಬ್ದಮ. ೧೦೦-೨೩) ; ಶ್ರೀವಿಜಯಾರ್ಧಾಚಳಖಚರಾವಳಿಮಣಿಮಕುಟ ಮಕರಿಕಾನಿಕಷಣಲೇಖಾವಿಳಸಿತಪದ ಕಮಲಂ (ಆದಿಪು. ೨-೦) ; ಕಿವಿದೊಡವಿನ ಮುಕ್ತಾತತಿ ನಪೋಡುಗಣಮೆನಿಸೆ ಕಜಿಯ ಮಕರಿಕೆಯೆನೆ ತದ್ಯುವತಿಯ ನಮನೋತ್ಪಳದಂದವನೀಕ್ಷಿಸಲೈದಿದಿಂದುವೆನೆ ಕದಪೆಸೆಗುಂ (ರಾಜಶೇ. ೬-೩೩). [ಸಂ. ಮಕರಿಕಾ]

**ಮಕರಿಣೆ** (ನಾ). [ಸಂಗೀತ] ಆಲಾಪನೆಯಲ್ಲಿ ಒಂದು ವಿಧ ; P ಇದು ರಾಗಾಲಾಪನೆಯನ್ನು ಮುಗಿಸುವ ಖಂಡ. ಜೀವಸ್ವರದ ಸುತ್ತ ಹೆಣೆದ, ಸ್ಥಾಯಿಸ್ವರದಲ್ಲಿ ಮುಗಿಯುವ ಮೂರು ಆಲಾಪಾಂಶಗಳ ನಂತರ, ಅಂತಮದೇ ಅಲ್ಪಸಂಚಾರವನ್ನು ಸ್ಥಾಯಿಯ ವ್ಯಾಪ್ತಿ ಯಲ್ಲಿ ನಡೆಸಿ ಮಧ್ಯಷಡ್ಜದಲ್ಲಿ ನ್ಯಾಸಮಾಡಿ ರಾಗಾಲಾಪನೆಯನ್ನು ಮುಕ್ತಾಯಮಾಡುವ ಕ್ರಮಕ್ಕೆ 'ಮಕರಿಣಿ' ಎಂದು ಹೆಸರು. ಇದಕ್ಕೆ 'ವರ್ತನೀ' ಎಂದೂ ಹೆಸರುಂಟು : ಪ್ರತಿಸ್ಥಾಯಿಯಲ್ಲೂ

ಜೀವಸ್ವರ ಹಿಡಿದು . . . ಮಂದ್ರಸ್ಥಾಯಿಯಲ್ಲಿ ಆಲಾಪನೆ ಮುಕ್ತಾಯ ಮಾಡುವುದೂ ಒಂದು ಕ್ರಮ. ಈ ಕ್ರಮ 'ಮಕರಿಣೀ' ಎಂದು ಹೆಸರುಗೊಂಡಿದೆ (ಸಂಗೀತಂ. ೨೯); ಸ್ಥಾಯಿಯಲ್ಲಿರುವ ಅದೇ ಯುಡುಪನ್ನೇ ಲೋಕದಲ್ಲಿ ಮಕರಿಣಿಯೆಂಬ ಸಂಜ್ಞೆಯಿಂದ ಕರೆಯುತ್ತಾರೆ (ಚತುಶ್ರ. ೬೯).
[ಸಂ. ಮಕರಿಣೀ]

**ಮಕರಿಸು** (ಕ್ರಿ). ೧. ಕವಿ ; ಆವರಿಸು : ಮಕರಿಸದೆ ಮಾಯಾಪ್ರಪಂಚದೊಳಖಿಳನಿಷ್ಠಾಚಾರಶೀಲಪ್ರಕಟಿತ್ರಗ್ಗರ್ಪಿತವನೀವಂ (ಸದ್ಗುರು. ೦-೦೮) ; ಏಣಿಕೆ ಮನವನು ಮಕರಿಸುತಿದೆ (ತೊರಲಾ. ೩-೦೦-೩); ವಿಹರಿಸುವ ಮನದೊಳಗೆ ದುಗುಡದ ಮಕರಿಸಿದುದ ಕಾಣುತಬುಜಾಂಬಕನು ನಸುನಗುತುಸುರಿದರ್ಜುನಗೊಥಭಾವದಲಿ (ಸಿಹಾಗ. ೦೦-೬೦-೭). ೨. ಹೆಚ್ಚು ; ಅಧಿಕವಾಗು ; ವರ್ಧಿಸು : ನಾಟಿ ನಲಿದುದು ಚಿತ್ರವೀ ನಟನಾಟಕನ ಸಿಕ್ಕಿಸುವ ಬಗೆಯಲಿ ಮಾಟ ಮಕರಿಸಿ ಕಾಣಲಾದುದು ಮತ್ತೆ ಮಾಯೆಯಲಿ (ಶ್ರಕುಲ. ೭-೩೮); ಅಕುಟಿಲೆ ಕೇಳ್ ಪ್ರವರ್ತಕನಿಷೇಧಂ ನಿವರ್ತಕವೆ ವಿಹಿತವಿಂತುಭಯಮಾಗಿ ಮಕರಿಸುವೀ ಕರ್ಮವಳಿದು ನಿಂದಾತ್ಮನವಕಲಂಕಪರಮಾತ್ಮಕನು ತಾನೆ (ಶರಮೋ. ೦-೦೬-೦೦) ; ದಾಸಿಮಯ್ಯನ ಮನದಲ್ಲಿ ಮಮಕಾರ ಮಕರಿಸಲು ಕಾರಣವೇನೆಂದು ಹೊಳೆಯಿತು (ಶರಶ. ೩೧). ೩. ಗಾತ್ರವು ಹೆಚ್ಚಾಗು,- ದೊಡ್ಡದಾಗು: ಕಲಶೋದಕದಲಿಟ್ಟನು ಶಫರಿಯನು ತಂದನು ನಿಜಾಶ್ರಮಕೆ ಮಕರಿಸಿದುದನೊಂದುರಾತ್ರಿಗೆ ಮಕರಿಕಲಶೋದಕವನನ್ಯಾಸಕತಿಯಲಿ ಸತ್ಯವ್ರತಂಗಿಂತೆಂದುದಳವಳಿದು (ಸಿಹಾಗ. ೯-೨೩-೦೨). ೪. ಹೊಳೆ; ಪ್ರಕಾಶಿಸು: ಚಕಚಕಿಸುತ ರನ್ನಗನ್ನಡಿಯಲ್ಲಲ್ಲಿ ಮಕರಿಸೆ ಸಾಲುಸಾಲಾಗಿ (ಛರಿಶ. ೦೨-೦೮).
[ಮಕರ, + — ಇಸು]

**ಮಕರೇಶ** (ನಾ). ಮೊಸಳೆಯನ್ನು ವಾಹನವನ್ನಾಗಿ ಉಳ್ಳವನು ; ವರುಣ : ಮಕರೇಶ ಚಾರುಚಾಮರಮರುತಂ . . . ಇದೆಂದು ವಿತರ್ಕಿಪನ್ನಮಸ್ಫುರಿತ ದವಾನಳಂ ಸುಟ್ಟುದುದೊಯ್ಯನೆ ಪಶ್ಚಿಮದಿಗ್ವಾನಿಳಂ (ಜಗಂ. ೯-೨).
[ಸಂ.]

**ಮಕಾಂ** ' ಮುಕ್ಕಾಂ ' ನೋ.

**ಮಕಾಡಿ** ' ಮೊಗ ' ಪರಾ.

**ಮಕಾಡು** ' ಮೊಗವಡ ' ನೋ.

**ಮಕಾಡೆ** ' ಮೊಗ ' ಪರಾ.

**ಮಕಾನು** (ನಾ). ವಾಸಮಾಡುವ ಸ್ಥಳ; ಮನೆ ; ನಿವಾಸ : ಹೆಳವರು, ಮೂಕರು ಮುಂತಾದ ಜನರಿಗೆಲ್ಲಾ ಜೀವನವನ್ನು ಕಲ್ಪಿಸಿ, ಮಕಾನುಗಳಿಗೂ ಕೆಲವು ನಗದನ್ನೂ ಭೂಮಿಯನ್ನೂ ಕೊಟ್ಟು . . . ಸುಖವಾಗಿರುವಂತೆ ಆಳಿದರು (ಮಹಾಸಂ. ೧, ೦೯೦).
[←ಅರ. ಪಾರ. ಹಿಂ. ಮಕಾನ್ ; ಮರಾ. ಮಕಾಣ್]

**ಮಕಾಬಲಿ** 'ಮೊಕಾಬಿಲೆ' ನೋ.

**ಮಕಾರ** (ನಾ). ೧. ಕನ್ನಡವರ್ಣಮಾಲೆಯ ನಲವತ್ತೈದನೆಯ ಅಕ್ಷರ: ಮೇಲಣ ಹತ್ವಕ್ಕೆ ಮಕಾರಂ-ಬ್ರಹ್ಮ-ಬೊಮ್ಮ (ಕಶಬ್ದ. ೨೬೯ ಶ್ರಯೋ); ವ್ಯಂಜನಗಳಲ್ಲಿ ಕಕಾರದಿಂದ ಮಕಾರದವರೆಗೆ ಇರುವ ಇಪ್ಪತ್ತೈದನ್ನು ನೋಡಿ (ಮಸ್ಕಮ. ೦೩). ೨. ಮದ್ಯ, ಮತ್ಸ್ಯ, ಮಾಂಸ, ಮೈಥುನ ಮತ್ತು ಮುದ್ರೆಗಳೆಂಬ ಮಕಾರದಿಂದ ಪ್ರಾರಂಭವಾಗುವ ಐದು ಬಗೆಯ ತಾಂತ್ರಿಕ ಆಚರಣೆಗಳಲ್ಲಿ ಪ್ರತಿಯೊಂದು : 'ಪಂಚಮಕಾರ' ಪರಾ.
[ಸಂ.]

**ಮಕಾಳ, ಮಖಾಳ, ಮೊಖಾಳ** (ನಾ). ೧. ಮಸುಕು ; ಮಂಕು ; ಕಾಂತಿಹೀನತೆ : ತರಲನ ಮಕಾಳವಾದ ಸ್ಮೃತಿ ಸಜೀವಮೂರ್ತಿಯಾಗಿ ಹೈಮವತಿಯ ಹೃದಯದ ಗದ್ದುಗೆಯನ್ನೇರಿ ಕುಳಿತಿತು! (ಎರಹ. ೦೦೯). (ಗು). ೨. ಮಂಕಾದ ; ಕಾಂತಿಹೀನವಾದ : "ಮಕಾಳ-ಮಬ್ಬು, ಸ್ವಚ್ಛವಲ್ಲದ ; ಕಳೆಗುಂದಿದ ; ಬಾಡಿದ" (ಶಾಸಕೋ. ೨೬). ಮಖಾಳ: ೧. ನಗರದಲ್ಲಿ ಹೊಳೆಯುವ ವಿದ್ಯುದ್ದೀಪದ ಹಾಗೆ ಹೊಳೆವ ಜೀವನದ ಮುಂದೆ ಹಳ್ಳಿಯ ಹಣತೆ 'ಮಖಾಳ'ವಾಗಿ ಕಂಡಿತು (ಅರಿಯಾ. ೦೦೯) ; ಹೆಬ್ಬೆರಳಿನ ಗುರುತುಗಳು ಮಖಾಳವಾಗಿ ತೋರತೊಡಗಿದ್ದವು (ಗಂಪಜಾಯ. ೨೦೯). **ಮೊಖಾಳ** : ೨. ನಾವು ಕಂಡ ತಿಂದು ಬದುಕುತ್ತಿರಲಾಗಿ ಈ ಮೊಖಾಳ ಮೋರೆಗಳು . . . ಕಾಳುತಿಂದು ಬದುಕುತ್ತವೆ (ಮಹಂಭಾಯ. ೬-೨೮೮).
[ ? ]

**ಮಕಿ** 'ಮಕ್ಕಿ₁' ನೋ.

**ಮಕುಟ₁** 'ಮಗುಟ₁' ನೋ.

**ಮಕುಟ₂** (ನಾ). ೧. ತಲೆಯ ಮೇಲೆ ಧರಿಸಿಕೊಳ್ಳುವ ರತ್ನಖಚಿತವಾದ ಭೂಷಣ; ಕಿರೀಟ; ಮುಡಿ: "ಕಿರೀಟಂ, ಉಷ್ಣೀಷಂ, ಕೋಟೀರಂ, ಮುಕುಟಂ ಈ ಳ ಮಕುಟಂ" (ಕಶಾಯ. ೧೩-೯೦೦); ಆತಂ ನಿಜಭುಜವಿಜಯಖ್ಯಾತಿಯನಾಳ್ದಾಳ್ದನಧಿಕಬಲನವನಿಪತಿವ್ರಾತಮಣಿಮಕುಟ ಕಿರಣದ್ಯೋತಿತಪಾದಂ ಸಪಾದಲಕ್ಷಕ್ಷಿತಿಯಂ (ಶಂಶಾ. ೦-೦೬); ನವಮಣಿಮಕುಟಕೇಯೂರದಾಭರಣದ . . . ಮೃಗಮದಸೊಬಗನಡಿಯಿಟ್ಟನಪ್ರತಿಮನವನೀಶನು (ಹರಕಾ. ೯-೨) ; ತಲೆಯವೊಲಿದ್ದರೆ ಗಂಡನು ಮನೆಯೊಳು ಸತಿಯೆ ಕಿರೀಟದವೊಲು ಮಕ್ಕಳುಮರಿಗಳು ಮಕುಟದ ಮಣಿಗಳು ಕಾವಲು ಆಳುಕಾಳುಗಳು (ಕಂಪಾಶ. ೨೨೦-೬೭). ೨. (ಅಲಂ) ಅಲಂಕಾರ ಪ್ರಾಯವಾದುದು ; ಶ್ರೇಷ್ಠವಾದುದು ; ಪೂರ್ಣಜ್ಞಾನಿಯಾದಾಗ ಮೌನವೇ ಮಕುಟವಾಗುವುದು (ದಾಪತಂ. ೨).
[ಸಂ.]

**ಮಕುಟಧರ** (ನಾ). ಕಿರೀಟವನ್ನು ಧರಿಸಿದವನು ; ರಾಜ : ಮಕುಟಧರಂ ಸಲೋಮಂಕರ್ಣಂ ಘಟಾಂತಿಮದ್ರೋಕ್ಕಾಣಂ (ಶಾಶ. ೦೯-೩೩) ; ಮಕುಟಧರರ್ ಮಳಯನೃಪಾಲಕ ಪಾಳಿವಮಹಿಪರೆಂಬ ವೀರರ್ (ಜಗಂ. ೯-೫).
[ಸಂ.]

**ಮಕುಟಬದ್ಧ** (ನಾ). = ಮಕುಟಧರ : ಮಹಾಮಂಡಳಿಕಪ್ರಮುಖ ಮಕುಟಬದ್ಧರ್ ಮಾಟ್ಟ ಚತುರ್ಮುಖಮುಂ (ಅದಪು. ೦೫-೦೩ ವ). ಮಂಡಲೀಕರ ಮಕುಟಬದ್ಧರ . . . ರಾಜಾಧಿರಾಜಕೇರಿಗಳು (ಚಾಗಹ. ೨-೬೦).
[ಸಂ.]

**ಮಕುಟಭಂಗ** (ನಾ). ೧. ಕಿರೀಟವನ್ನು ಒಡೆಯುವುದು. — ನಾಶಮಾಡುವುದು : ಮಕುಟಭಂಗಪ್ರತಿಜ್ಞೆಯಂ ತೀರ್ಚಲೆಂದು ಉರುಕುಲಾಂತಕಂ ಮಾಮುನಕಂ ಮಸಗಿ (ಗದಾಯ. ೮-೩೭ ವ). ೨. ಸೋಲು ; ಅಪಜಯ : ಮಕುಟಭಂಗವ ಪಡೆದು ರಾವಣ ವಿಕಳನಾಗಿರೆ ಮಾಲ್ಯವಂತನು . . . ಬುದ್ಧಿಯ ಹೇಳಲೈತಂದ (ಕೌರಾ. ೨೩-೦).
[ಸಂ.]

**ಮಕುಟಮಣಿ** (ನಾ). ೧. ಕಿರೀಟದಲ್ಲಿರುವ ರತ್ನ : ಒದೆದ ಭರದಿಂದ ಮುಚ್ಚಳಿಸಿದ ದುರ್ಯೋಧನನ ಮಕುಟಮಣಿಗಣವೆತ್ತಂ ಕೆದರ್ದುವು (ಗದಾಯ. ೮-೯೦) ; ಮಕುಟಮಣಿ ಸೊರ್ಗಳೆನೆ ಮಸ್ತಕಸಹಿತಮಿ ನೆಗೆದು ತಿರುಗುವಾ ಪರಿಯಣಮೇಂ ಪ್ರಕಟಿಸಿದುದೊ ಕೃಷ್ಣನ ವಿಜಯಕಾಂತೆ ಗಾಕ್ಷಾಶಲಕ್ಷ್ಮಿ ನಿವಳಿಪ ತೆಜದಿಂ (ಜಗಂ. ೦೭-೩೯) ; ಸುರರ ಮಕುಟಮಣಿ ರಂಜಿತಚರಣಾಬ್ಜ ಶರಣಾಗು ಪ್ರಥಮಜಿನೇಶ (ಕರಕ. ೦-೦). ೨. (ಅಲಂ) ಶ್ರೇಷ್ಠನಾದವನು : ಕರ್ನಾಟಕಸಂಗೀತದ ಮಕುಟಮಣಿಗಳಾದ ಈ ತ್ರಿಮೂರ್ತಿಗಳು ಒಂದೇ ಕಡೆಯಲ್ಲಿ ನಡೆಸಿದ ಚಟುವಟಿಕೆಯ ಅದ್ಭುತಮೋಡಿಕೆಯನ್ನು ಮಾತುಗಳಲ್ಲಿ ಅಳವಡಿಸಲು ಸಾಧ್ಯವೇ ಇಲ್ಲ (ಸಂಗೀತ. ೬೦).
[ಸಂ.]

**ಮಕುಟಮಸ್ತಕ** (ನಾ). ಕಿರೀಟವನ್ನು ಧರಿಸಿರುವ ಶಿರಸ್ಸು, — ತಲೆ : ಆ ಪುರದರಸಂ ನತಭೂಮಿಪಾಲರ ಮಕುಟಮಸ್ತಕದ ನಿಜತೇಜೋರೂಪಕಮೆ ಪದ್ಮರಾಗದ ದೀಪದವೋಲ್ ಮೆಚ್ಚಿವಿನಂ ಯಶೌಘಂ ಮೆಚ್ಚಿವಂ

(ಜಂಕೋಠ. ३-३) ; ನಿಮಿತ ಚಾತುರ್ಬಲವೆರಡು ನಿರ್ಘಯದಲೊದಗಿತು ಮಕುಟಮಸ್ತಕಮಾಯಮಹೀತಳವೆನಲು ಹಳಚಿದು ಹೊಯ್ದುದುಭಯಬಲ (ಕುವ್ಯಾದ್ರೋ. ೦೫-೪೯). [ಸಂ.]

**ಮಕುಟರತ್ನ** (ನಾ). = ಮಕುಟಮಣಿ ೧: ಮಕುಟರತ್ನದ ಲಹರಿ ಖಿಡುಗದ ವಿಕಟಧಾರಾರಶ್ಮಿ ದೀಪಪ್ರಕರದಲಿ ಥಳಥಳಿಸೆ ರವಿಯುಪೊಲಿಸೆದನಾ ದ್ರೋಣ (ಕುವ್ಯಾದ್ರೋ. ೧-೩೮). [ಸಂ.]

**ಮಕುಟವರ್ಧನ** (ನಾ). ಕಿರೀಟದಿಂದ ಹಿರಿಮೆಯನ್ನು ಪಡೆಯುವವನು ; ರಾಜ : ಕುಳ್ಳಿರ್ದೋಲಗದ ಮಕುಟವರ್ಧನರನೆಡಹುತುಂ ತಾಗುತುಂ . . . ಬಂದು ನಂಬಿಯಣ್ಣನ ಸಿಂಹಾಸನದ ಮುಂದೆ ನಿಲೆ (ಸಂಬರ. ೬-೮೬) : ಕಾರ್ಮುಕದ ಸ್ವಾಧ್ಯಾಯಸಿದ್ಧರು ಹತ್ತುಸಾವಿರ ಮಕುಟವರ್ಧನರು (ಕುವ್ಯಾಶೀ. ४-೯) ; ಮಕುಟವರ್ಧನರ ಮಂಡಳಿಕ ಮನ್ನೆಯರ ಗೇಹಂಗಳಿಂ (ಭಾವಚಂ. ३-೦೪). [ಸಂ.]

**ಮಕುಟಸ್ವರ** (ನಾ). [ಸಂಗೀತ] ಕೃತಿಗೆ ಸೇರಿಸುವ ಸ್ವರಗಳ ಗುಂಪು : ಕೃತಿಯನ್ನು ಹಾಡುವಾಗ ಅನುಪಲ್ಲವಿ ಮತ್ತು ಚರಣದ ಪ್ರಾರಂಭದಲ್ಲಿ ಹಾಡುವ ಸ್ವರಗಳ ಸಮೂಹ : ಪ್ರತಿಭಾಗದ ರಾಗದಲ್ಲಿ ಚಿಟ್ಟೆಸ್ವರ ಹಾಡಿದ ಕೂಡಲೇ ಪಲ್ಲವಿಯ 'ಮಕುಟಸ್ವರ'ವೆಂದು ಹೆಸರಾದ ಚಿಟ್ಟೆಸ್ವರ ಹಾಡಿ ಪಲ್ಲವಿಗೆ ಸೇರುವುದು ರೂಢಿಯಾಯಿತು . . . ಪಲ್ಲವಿಯ ಮಕುಟಸ್ವರದೊಡನೆ ಪಲ್ಲವಿಗೆ ಸೇರುವ ಮಾರ್ಗ ಏರ್ಪಾಡಾಗಿರುವುದು ಕಂಡುಬಂದಿದೆ (ಸಂಗೀಕಂ. ೬೬). P ೧. ಒಂದು ಕೃತಿಯ ಚಿಟ್ಟೆಸ್ವರದ ಕೊನೆಯಲ್ಲಿ ಅಥವಾ ಕಲ್ಪನಾಸ್ವರದ ಕೊನೆಯಲ್ಲಿ ಪುನರಾವರ್ತನೆಯಾಗುವ ಸ್ವರ ; ಮುಕ್ತಾಯ ಸ್ವರ. ೨. ಒಂದು ರಾಗಮಾಲಿಕಾಕೃತಿಯಲ್ಲಿ ಒಂದೊಂದು ಚರಣದ ನಂತರವೂ ಆಯಾ ರಾಗದಲ್ಲಿ ರಚಿತವಾಗಿದ್ದು ಪಲ್ಲವಿಯ ರಾಗಕ್ಕೂ ಅದರ ಧಾತುವಿಗೂ ಸಮಂಜಸವಾಗಿ ಸೇರಿಕೊಳ್ಳುವಂತೆ ನಿರ್ಮಿಸಿದ ಸ್ವರಸಮುಚ್ಚಯದ ಬಂಧ. [ಸಂ.]

**ಮಕ್ಕಡ**, ಮಂಕಡ (ನಾ). ೧. ಕೋತಿ; ಮಂಗ : "ಮಕ್ಕಡವೋದು ಮರ್ಕಟಂ" (ಕಕಶಾ. ३೦-೯೯); ಒಂದು ಮರನಿರೆ ಬಟ್ಟೆಯೊಂದು ಬಗೆದಡರ್ದು ಪೋಗುತ್ತಿರಲನಿತಜಲ್ಲಿ ಮಕ್ಕಡದಿರವನಾಂತುದೆನ್ನಂಗವು (ಶಾಸೋಕೃ. ३-೬३); ಕಲಕಲಂಗೈವ ಮಕ್ಕಡಂಗಳ ವಂಗಡಂಗಳ್ (ಮಂರಾತ. ೯-३३ ಪ). **ಮಂಕಡ** : ೧. ಪುಲಿಯಿರ್ಕುಮಾನೆಯಿರ್ಕುಂ ಚಲದಂಕರ ಲೆಂಕ ! ನೀನೇಂ ಮಂಕಡನಾಗ ! (ರಾಮಾಶ್ವ. ३೯-३೮). ೨. ಮಲ್ಲಯುದ್ಧದ ಒಂದು ಪಟ್ಟು.–ವರಸೆ : ಕರವಲಯಾಕೋರೊರ್ಮೆ ತಳಪತ್ರಕೋರೊರ್ಮೆ ಸರಿಸ ಮಂಕಡಕೊರ್ಮೆ ಬಂಧಪಟ್ಟಿಸಕೊರ್ಮೆ. . . ಕಂಡ ಡೊಕ್ಕರಕೊರ್ಮೆ ಹರಿಕಮಲಭವರೊದಗಿದರ್ (ತಂಪು. ೦೬-೪೯).

[< ಪ್ರಾ. ಮಕ್ಕಡ, ಮಂಕಡ./ಸಂ. ಮರ್ಕಟ]

**ಮಕ್ಕರಿ**₁, ಮಂಕಣಿ, ಮಂಕರಿ, ಮಂಕ್ರಿ (ನಾ). ೧. ಬಿದಿರು, ಈಚಲು ಮೊದಲಾದ ಕಡ್ಡಿಗಳಿಂದ ಹೆಣೆದ ಗೂಡೆ,–ಕುಕ್ಕೆ,–ಹೆಡಿಗೆ: ಮೇಲಣ ಷತ್ವಕ್ಕೆ ಕತ್ವಂ. . . ಮಷ್ಕರಿ–ಮಕ್ಕರಿ (ಕಮರ. ३೬३ ಕೃಯೋ) : P ಇಲ್ಲಿ ಸೂಚಿಸುವ 'ಮಷ್ಕರಿ' ರೂಪವು ಸಂಸ್ಕೃತಕೋಶಗಳಲ್ಲಿಲ್ಲ; ಬಾತ ಕೆಕ್ಕೆಯ ಬಲುಮಕ್ಕರಿಹೊಟ್ಟೆಯ . . . ನಳ್ಳಿಮೂಗಿನ ಭೂತವೆ ನಡೆತಪ್ಪಂತೆ ಮನೆಗೆ ಬರಲು (ಪೀಖಿಸಂ. ೬-೦೦೬); ತಡಿಕೆ ಮಕ್ಕರಿ ಸಹ ಬಹ ಕಾವಾಟದ ಬಿಡು ಮಂದಿಗೆ ಲೆಕ್ಕವಿಲ್ಲ (ಕಂಪವಿ. ೦೦-೪೦); ಅವಳು ಒಗೆದು ಹಿಂಡಿದ ಬಟ್ಟೆಗಳನ್ನು ಮಕ್ಕರಿಯಲ್ಲಿಟ್ಟುಕೊಂಡು ಬಾವಿಯಿಂದ ಹೊರಕ್ಕೆ ಬಂದಳು (ಕವ್ಯಕ. X, ೬೬). **ಮಂಕಣಿ** : ೧. ಸಗಣಿ ಮಂಕಣಿಯನು ತೆಗದು ಕೊಂಡ್ಹೋಗಿ ಸಾರಿಸಿ ಕಣವೊಣಗಿದಾ ಬಳಿಕ ರಾಗಿಯ ಹುಲ್ಲ ಹರವುತಿರು (ಅರ್ಜಾವಿ. ४೦-४೦). ೨. ಎತ್ತು, ಕತ್ತೆ ಮೊದಲಾದ ಪ್ರಾಣಿಗಳು ಸಾಮಾನುಗಳನ್ನು ಹೊರಲು ಅನುಕೂಲವಾಗುವಂತೆ ಬೆನ್ನಿನ ಎರಡು ಕಡೆಗೂ ಬರುವ ಹಾಗೆ ಬಿದಿರು, ಮರ ಮೊದಲಾದುವುಗಳಿಂದ ಮಾಡಿದ ಕುಕ್ಕೆಯಂತಹ ಸಾಧನ : ಮಂಕಣಿಹೊರುವಾ ಕೋಣನ ಮುಂದೆ ಮಹಾವೀಣೆಯನ್ನು ಹಿಡಿದು. . . ಬಾರಿಸೆ ತಿಳಿವುದೆ (ಶರಾವ. ೪೬-३). ३. ಜಲಾಶಯದಿಂದ ಕಾಲುವೆಗೆ ನೀರನ್ನು ಎತ್ತಿಹಾಕಲು ಉಪಯೋಗಿಸುವ ಬಿದಿರಿನ ಸಾಧನ : (ಕ್ಯಾಂಡರ್). **ಮಂಕರಿ** : ೧. ಮರಿಗಳಿಗನುಕೂಲವಾಗಿ ಚನ್ನಕ್ಕನು ಒಂದು ಮಂಕರಿಯಲ್ಲಿ ಸೆಲ್ಲುಹುಲ್ಲನ್ನೂ ಬಟ್ಟೆಯ ಚಿಂದಿಯನ್ನೂ ಹಾಕಿ ಅಟ್ಟದ ಮೇಲಿಟ್ಟಿದ್ದಳು (ಕಂಕಥ. ೬३); ಒಂದು ಸೇದುವ ಹಗ್ಗ ಮತ್ತು ಒಂದು ಮಂಕರಿ ಬೇಕು (ಕಳಹು. ೬३). **ಮಂಕ್ರಿ** : ೧. ಮುತ್ತಿನ ಗುದ್ಲಲ್ಲಿ ಅಗೆಸ್ಯಾರು ಅರಸಣವ ಬೆಳ್ಳಿ ಮಂಕ್ರೀಗೇ ಬವರ್ಯಾರು (ಹುಟ್ಟಿಹ. ೦೬३); ಗೌಡನ ಹೆಂಡತಿ ಕಡುಚಿಲ್ವೆ ಯಾದರೆ ಕಸದ ಮಂಕ್ರಿ ಹೊತ್ತು ತಂದಾಗ ಕಂಡೀತು (ಗಾದೆ).

[ < ಸಂ. ಮಸ್ಕರ./ತುಳು. ಮಕ್ಕರಿ; ತೆಲು. ಮಂಕೆನ; ತೊದ. ಮೊಕರಿ./ಮರಾ. ಮಾಂಕಣ ]

**ಮಕ್ಕರಿ**₂ (ನಾ). ಸಂನ್ಯಾಸಿ ; ಯತಿ : (*). [< ಸಂ. ಮಸ್ಕರಿನ್]

**ಮಕ್ಕಳ್** 'ಮಗು' ಪರಾ.

**ಮಕ್ಕಳು** 'ಮಗು' ಪರಾ.

**ಮಕ್ಕಾಮಕ್ಕಿ** 'ಮಕ್ಕಿ₂' ಪರಾ.

**ಮಕ್ಕಿ**₁, ಮಕಿ, ಮಕ್ಕೆ, ಮೆಕ್ಕೆ₁ (ನಾ). ಬೆಳೆ ಹುಲುಸಾಗಿ ಬೆಳೆಯದಿರುವ ಎತ್ತರವಾದ ಜಮೀನು ; ಮೇಡುಗದ್ದೆ : ಕೊಸಿಗಗೊಳದ ಕೆಲಗೆರಡು ಮತ್ತಮರ್ಕಿಯೊಳೆರಡುಮತ್ತರ್ (ಎಕ. VIII, ಸೊರಬ. ೬೦-೦४; 938); ಮನೆಯ ಬಾಗಿಲ ಗದ್ದೆ ಮಕ್ಕಿ ಸಹ ಬಿತ್ತುವದು ಮುಡಿ ೬ ಅಂತು ಬಯಲು ಮಕ್ಕಿ ಸಹ ಬಿತ್ತುವದು ಮುಡಿ ೧೮ (ಕಾಇಇ. IX-ii, ४४೯-೦३; 1444); ಗದ್ದೇಭೂಮಿಯಲ್ಲಿ ಮಕ್ಕಿ, ಬೈಲು, ಕಾರು ಎಂದು ಮೂರು ವಿಧವು (ಮಂಂಬರು. ३-३೦३). **ಮಕಿ** : ಆ ಭೂಮಿಯ ಮೇಲಣ ಮಕಿ ಬೀಜವರಿ ಸ ३ ಉಭಯ ಕಾರಗದೆ ಮಕಿ ಸಹ ಬೀಜವರಿ ಸ ೧೦ (ಎಕ. VI, ಮೂಡಗೆ. ४६-३३; 1547). 'ತಲೆಮಕಿ' ಪರಾ. **ಮಕ್ಕೆ** : ಗದ್ದೆಯ ಮೇಲಣ ತೋಟ ಮನೆ ಮಕ್ಕೆ ಆರವೆ ಸಹಿತವಾಗಿ (ಎಇ. XXVII, ೦೬೦-೪३; 1256); ಗದ್ದೆ ಅಲ್ಲಿ ಪಡುವ ಮಕ್ಕೆಯಲ್ಲಲೂ ಕಂನುವಕಟ್ಟೆಯ ಬಡಗಣಉ ಎರಡುಗದ್ದೆ (ಕಾಇಇ. IX-ii, ४೦३-೦೬; 1372). **ಮೆಕ್ಕೆ**₁ : ಮಕ್ಕಿ ಮೂಡೆ ३೦ ಮೆಕ್ಕೆ ಮೂಡೆ ೧೦ ಬಯಲು ಮೂಡೆ ४೦ ಅಂತು ಬಾಳು ನಾಗಂಡುಗದಲು ಬಿತ್ತುವ ಮೂಡೆ ೮೦ (ಕಾಇಇ. IX-ii, ४೦೬-೦४; 1377); ದಿಂತೀ ಚತುಃಸೀಮೆಯಿಂದೊಳಗುಳ್ಳ ಮನೆ ಬಾವಿ . . . ಮಕ್ಕಿ ಮೆಕ್ಕೆ ಬಯಲು (ಕಾಇಇ. IX-ii, ४३४-೦೬; 1400); ಬೀಡಿನ ಬಗೆ ಮಯ್ಯನ ಬೆಟ್ಟು ಮೆಕ್ಕೆ ಮು ೨ (ಕಾಇಇ. ೦೯४೦, ಕುಂದಾಪುರ. ೩६३-೦೯; 1499).

[ದೇ.॥ ತಮಿ. ಮಕ್ಕಿ = ಸುಣ್ಣಕಲ್ಲು ಸೇರಿರುವ ಭೂಮಿ; ತುಳು. ಮಕ್ಕಿ = ಉಳುವಿಕೆ]

**ಮಕ್ಕಿ**₂, ಮಚ್ಚಿ, ಮಚ್ಚು₇ (ನಾ). ನೊಣ; ಮಕ್ಷಿಕ. **ಮಚ್ಚಿ** : "ಮಚ್ಚಿ = ನೊಳಂ, ನೊಣಂ" (ಕಮರ ಕಂ. ३). **ಮಚ್ಚು**₇ : "ನೊಳವು ಮಚ್ಚೆಂದಕ್ಕು" (ಕಬ್ಬಿಕ. ४४) : ದ್ವಿತ್ವದ ಚಕಾರಕ್ಕೆ . . . ಮಕ್ಷಿ – ಮಚ್ಚು (ಕಮರ. ३೬३ ಕೃಯೋ).

**ಮಕ್ಕಿಕಾಮಕ್ಕಿ**, **ಮಕ್ಕಾಮಕ್ಕಿ** = ಒಂದು ಕೃತಿಯನ್ನು ಇರುವಂತೆಯೇ ನಕಲುಮಾಡುವುದು,—ಯಥಾವತ್ತಾಗಿ ಪ್ರತಿಮಾಡುವುದು ; P ಜನಜನಿತವಾಗಿರುವ ಒಂದು ಕಥೆಯ ಪ್ರಕಾರ ಒಬ್ಬ ಸಂಸ್ಥಾನನು ಪ್ರತಿಕಾರನೊಬ್ಬನಿಗೆ ಕುರಾನನ್ನು ಯಥಾವತ್ತಾಗಿ ಪ್ರತಿಮಾಡಲು ಅಜ್ಞೆಮಾಡಿದಾಗ, ಪುಟದ ಮಧ್ಯೆ ಸಿಕ್ಕು ಸತ್ತ

ನೊಣವಿದ್ದುದನ್ನೂ ಬಿಡದೆ ನೊಣದ ಚಿತ್ರವನ್ನು ಬರೆದನು. ಈ ಕಥೆಯನ್ನು ಅನುಸರಿಸಿ ಪ್ರಚಲಿತವಾಗಿರುವ ನುಡಿಗಟ್ಟು ಇದು : ಅವನು ಬರೆಯುವುದೆಲ್ಲ ಮಕ್ಕಿಕಾಮಕ್ಕಿ (ರಂ೩); ಇಲ್ಲಿ ಕಾಣುವುದು ಕುಮಾರವ್ಯಾಸನ ಭಾವಗಳ ಇಲ್ಲವೆ ಶೈಲಿಯ 'ಮಕ್ಕಾಮಕ್ಕಿ' ತೆರದ ಶುಷ್ಕಾನುಕರಣವಲ್ಲ (ಕನಾಕ. ೩೬೦); ಅಲ್ಲಿಯ ಕಥೆಯನ್ನೇ ಇಲ್ಲಿ ಮಕ್ಕಾಮಕ್ಕಿಯಾಗಿ ಅನುವರ್ತಿಸಿಲ್ಲ (ಹಕ್ಕಿಕೆ. ೭ ಮುನ್ನು೩).
[<ಪ್ರಾ. ಮಕ್ಖಿ. / ಸಂ. ಮಕ್ಷಿ./ಹಿಂ. ಮಕ್ಖೀ]

**ಮಕ್ಕಿಕಾಮಕ್ಕಿ** 'ಮಕ್ಕಿ₂' ಪರಾ.

**ಮಕ್ಕಿಗದ್ದೆ** (ನಾ). = ಮಕ್ಕಿ₁ : ಮಕ್ಕಳ ಕೆಲಸ ತಿಳಿಯದು. ಮಕ್ಕಿಗದ್ದೇ ಬೆಳೆ ತಿಳಿಯದು (ಗಾದೆ). [ಮಕ್ಕಿ₁ + ಗದ್ದೆ (<ಗಟ್ಟಿ)]

**ಮಕ್ಕಿಭೂಮಿ** (ನಾ). ಎತ್ತರವಾದ ಪ್ರದೇಶ ; ಮೋಡು : ಮಕ್ಕಿ ಭೂಮಿಯು –ಇದು ಎತ್ತರವಾದದ್ದು. ಇದರೊಳಗೆ ವರ್ಷದಲ್ಲಿ ಒಂದು ಬೆಳೆ ಮಾತ್ರ ಬರುವುದು (ಮುಂಬಯಿ. ೩-೨೦೩) ; ಶಾಗೇರಿತೋಡಿನ ಉತ್ತರಕ್ಕಿರುವುದು ಮಾರ್ಕೋಡು ಮಕ್ಕಿಭೂಮಿ (ದೀವಹೆಂ. ೫೩).
[ಮಕ್ಕಿ₁ + ಭೂಮಿ]

**ಮಕ್ಕು** (ನಾ). ದೀಪವು ಉರಿಯುವಾಗ ಅಥವಾ ಉರಿದಾದ ಮೇಲೆ ಬತ್ತಿಯ ಕುಡಿಯಲ್ಲಿ ಕಟ್ಟಿಕೊಳ್ಳುವ ಕಿಟ್ಟ.– ಕಾಡಿಗೆ : ಮುದುಕಿ ಅದೇ ಕಡ್ಡಿಯಿಂದ ದೀಪದ ಮಕ್ಕು ಹೊಡೆದು ಬತ್ತಿಯನ್ನು ಸ್ವಲ್ಪ ಚಾಚಲು . . . ಉರಿಯತೊಡಗಿತು (ಶ್ರಪಕ. ೭೭) ; ಕೋಣೆಯಲ್ಲಿಯ ಚಿಮಣಿಯ ಮಕ್ಕಿನಿಂದ ಹೊಗೆಯು ಯಮನ ಪಾಶದಂತೆ ಸುಳಿಸುಳಿಯಾಗಿ ಮೇಲೆದ್ದಿತ್ತು (ಕಾಗೆಕ. ೬೦). 'ಅಂಟುಮಕ್ಕು' ಪರಾ.

**ಮಕ್ಕುಹಿಡಿ** (ಕ್ರಿ). ಕಿಟ್ಟವುಂಟಾಗು ; ಕಾಡಿಗೆಗಟ್ಟು : ದೀಪಕ್ಕೆ ಮಕ್ಕುಹಿಡಿಯದ ಹಾಗೆ ನೋಡಿಕೊಂಡು ಸದಾ ಅದಕ್ಕೆ ತೈಲ ಒದಗಿಸುತ್ತ ಇರಲು ನೀಲಕಂಠನೇ ತಕ್ಕ ಪ್ರಹಾರಿ ಅಲ್ಲವೇ ? (ಇಕ್ಷ್ವ. ೪೨೦) ; ಹೊತ್ತಿದ ಬತ್ತಿಗೆ ಮಕ್ಕುಹಿಡಿದಂತೆ ಆಗಿ ಕಾಂತಿ ಕಂದಿಹೋಗಿದೆ (ಹುಚ್ಚಾಟ. ೦೯). [ಮಕ್ಕು + ಹಿಡಿ₁ (<ಪಿಡಿ₁)]

**ಮಕ್ಕೆ** 'ಮಕ್ಕಿ₁' ನೋ.

**ಮಕ್ತೆ, ಮಖ್ತೆ** (ನಾ). ಗುತ್ತಿಗೆ : ಕಂಪೆನಿಯ ವ್ಯಾಪಾರದ ಮಕ್ತೆಯು ಸ್ಥಿರಗೊಳಿಸಲ್ಪಟ್ಟಿತು (ಹಿಂದುಇ. ೨೬೯) ; ಇವಳಿಗೆ ಬೇಕಾದವರು ನಮ್ಮ ಮನೆಗೆ ಬಂದರೆ ಮಾತಾಡುವ ಮಕ್ತೆ ಅವಳಿಗೆ (ಕ್ಷಿತಿ. ೩೩). **ಮಖ್ತೆ :** ಈಗ ಜೇನು, ಅಳ್ಳಿಕಾಯಿಗಳ ಮಖ್ತೆಯಾಗುತ್ತದೆ (ಶೇಷ. ೬೦).
[←ಅರ. ಮಕ್ತ್‌ಅ : ಹಿಂ. ಮರಾ. ಮಕ್ತಾ, ಮಖ್ತಾ]

**ಮಕ್ತೆದಾರ, ಮಕ್ತೇದಾರ** (ನಾ). ಗುತ್ತಿಗೆದಾರ : ಕೆಲವರು ವಕೀಲರೂ ವ್ಯಾಪಾರಸ್ಥರೂ ಮಕ್ತೆದಾರರೂ . . . ಕೆಲವರು ಸಾವಕಾರರು ಇರುತ್ತಾರೆ (ಕಹಾಗೆ. ೮೦) ; ಮಕ್ತೆದಾರನೂ ಹೆಚ್ಚು ಮಾತನಾಡಿಸಲಿಲ್ಲ (ಪಟ್ಟಶೂ. ೩೯). **ಮಕ್ತೇದಾರ :** ಇದಕ್ಕೆಲ್ಲ ಸಂಸ್ಕೃತಿಯ ಕ್ಷೇತ್ರದಲ್ಲಿ ಮಕ್ತೇದಾರರಾದ ಧರ್ಮಗುರುಗಳೂ ಸಾಮಾಜಿಕಕ್ಷೇತ್ರದಲ್ಲಿ ಮಕ್ತೇದಾರರಾದ ರಾಜರೂ ವಿರೋಧಿಸುವರು (ಜಾಪಾರ. ೭೩). [←ಮರಾ. ಮಕ್ತೇದಾರ್]

**ಮಕ್ತೆಹಣ** (ನಾ). ಗುತ್ತಿಗೆ ಹಣ ; ಕರಾರುಹಣ : ಎಂಟು ಪಡವೆಗಳಿಗೆ ಕೂಡಿ ಒಟ್ಟು ಮಕ್ತೆಹಣ ಎಷ್ಟಾದೀತು (ಗಂಪಾರು. ೨೦೭).
[ಮಕ್ತೆ + ಹಣ (<ಪಣವು₁)]

**ಮಕ್ತೇದಾರ** 'ಮಕ್ತೆದಾರ' ನೋ.

**ಮಕ್ಷಿ** (ನಾ). ನೊಣ : ಬ್ರಿತ್ವದ ಚಕಾರಕ್ಕೆ . . . ಮಕ್ಷಿ—ಮಚ್ಚು (ಕಮುಕ. ೨೬೩ ಪ್ರಯೋ) ; ಕಾಮಾಕ್ಷಿ ಏಕೆ ಮರುಳು ? ನಿನ್ನುದರದಿ ನಿಲ್ಲದು ಜೀರ್ಣವಾಗದಲೆ, ಈ ಮಾಕ್ಷಿ (ಪಪಶಾ. v. ೩೩). [ಸಂ.]

**ಮಕ್ಷಿಕ** (ನಾ). ೧. ನೊಣ : ಮೊರೆದೆಱಪ ಮಶಕ ಮಕ್ಷಿಕವುಂ ನೋವುತ್ತು ಮನವರತಮೋಲಗಿಸುತ್ತಿರ್ಪುದು ಭೂತಕೋಟಿ ದನುಜನ ಗದೆಯಂ (ಜಗಂ. ೯-೩೯) ; ಅರಸ ಕೇಳೈ ನಿಮ್ಮ ಭೀಮನ ಪರಿಯನೀ ಸರ್ವಾಸ್ತ್ರಘಾತಸ್ಫುರಣವುದಕರಿ ಮಕ್ಷಿಕಾಸಂಘಾತದಂದದಲಿ ಕೆರಳಿ ಕವಿದನು (ಕುಪ್ಪಾಶ. ೦೩-೨೦). ೨. ಜೇನುನೊಣ : "ಮಕ್ಷಿಕಂ ಜೇನ ನೊಣನಕ್ಕು" (ಮಂಗರಾ. ೫೨-೯). [ಸಂ.]

**ಮಕ್ಷಿಕೆ** (ನಾ). ೧. = ಮಕ್ಷಿಕ ೧ : ದಂಶಮಶಕಮಕ್ಷಿಕಾಭ್ರಮರಪತಂಗಾದಿ ಚತುರಿಂದ್ರಿಯಂಗಳ್ ಸ್ಪರ್ಶನರಸನಘ್ರಾಣಚಕ್ಷುರಿಂದ್ರಿಯಪರಿಚ್ಛಿತ್ತ್ಯಪೇತಂಗಳಪ್ಪುವು (ತತ್ತ್ವಸೂ. ೯೮). ೨. =ಮಕ್ಷಿಕ ೨ : ಮಧುರಾಣಿ ಸಂಭ್ರಮದಿ ಮಕ್ಷಿಕಾಮಾಲೆ (ಅರಳು. ೯೨೩-೩). [ಸಂ. ಮಕ್ಷಿಕಾ]

**ಮಕ್ಷುರಕ** (ನಾ). = ಮಕ್ಷಿಕ ೧ : ಪರಿವಾಳವನಳಿ ಪೀರ್ವವೊಲು ಮಕ್ಷುರಕ ಬಲ್ಲುದೆ (ಜೀವಂತ. ೦-೨೭). [<ಸಂ. ಮತ್ಸರಕ]

**ಮಖ** (ನಾ). ಯಜ್ಞ ; ಯಾಗ : "ಯಾಗಃ . . . ಮಖಃ . . . ಸತ್ರಂ-ಈ ೧೨ ಯಾಗಂ" (ಹಲಾಯು. ೬೮-೨೬೦) ; ಆ ಮಖದ ಮಾಹಾತ್ಮ್ಯವಂ ಪೇಳ್ಬೊಡೆ (ಶಂಪಶಾ. ೬-೦೭ ಪ) ; ನಡೆತಂದನಪ್ರತಿಮನದಟನುರವಣೆಯಿಂದೆ ಸಮೆದ ಮಖಮಂ ಸುಡುವ ವೀರಭದ್ರನ ತೆಜದ (ಇಪರ. ದೀ. ೪೦-೨೦) ; ಸತ್ಯ ಶಿವ ಸೌಂದರ್ಯ ಮಖಕೆ ಕವಿಯ ಯಾಜನ (ಅನಿಕೇ. ೨೦-೦೭).

ಮಖದಯ್ಯ=ಯಜ್ಞದ ಅಧಿಪತಿ; ದೇವತೆ : ಈ ಜ್ಞಾತಿಬಾಂಧವರ ಕೈಯಲರಿಗಳ ಹೊಯ್ದು ಶಿರನರಿದುಯ್ಯಲಾಡಿದರ್ಪಗೆ ಮೇಣ್ ಮಖದಯ್ಯಗಳಿಗಾನೊಬ್ಬಳು (ಕುಪ್ಪಾಶ. ೬-೨೭). ಮಖದೂಟ = ಯಜ್ಞದಲ್ಲಿ (ದೇವತೆಗಳಿಗೆ) ನೀಡುವ ಆಹಾರ; ಹವಿಸ್ಸು : ಸೊರ್ಕಿದ ದೈತ್ಯರಂ . . . ಮಖದೂಟಕೊಜಲ್ದು ಬಂದ ದೇವರ್ಕಳನಿಕ್ಕಿದಂ (ಪ್ರಪಶಿ. ೦೦-೮).
[ಸಂ.]

**ಮಖಜೆ** (ನಾ). ಯಜ್ಞದಿಂದ ಹುಟ್ಟಿದವಳು ; ದ್ರೌಪದಿ : ಮೃಡ ತಾಂ ಭಿಕ್ಷವ ಬೇಡನೇ ಮಖಜೆ ತಾಂ ತೊಟ್ಟಾಗಳೇ (ಸೋಮೇಕ. ೩೨).
[ ಸಂ. ಮಖಜಾ ]

**ಮಖತುರಗ** (ನಾ). ಯಜ್ಞದ ಕುದುರೆ ; ಯಾಗಾಶ್ವ : ಆವ ಮಖತುರಗಕ್ಕೆ ಬೆಂಬಲಿಪೋಪೆಯಾ ರಾಮನೊಲ್ಮೆ ನಿನಗೆ ರಕ್ಷೆಯಿರ್ಕೆ (ನಪಮಕ್ಕ. ೪೯-೦೩). [ಸಂ.]

**ಮಖಧ್ವಂಸಿ** (ನಾ). ೧. (ದಕ್ಷನ) ಯಾಗವನ್ನು ನಾಶಪಡಿಸಿದವನು ; ಈಶ್ವರ : ಅಂಜದಿರಂಜದಿರು ಪರವೇಷಬಾಹಿರವಲ್ಲ ಸತಿಯರೊಳಾದಿ ಪಾತಿವ್ರತ್ಯ ನಿನಗೆಂದನು ಮಖಧ್ವಂಸಿ (ಕುಪ್ಪಾಶ. ೦೬-೩೦). ೨. ವೀರಭದ್ರ.
[ಸಂ. ಮಖಧ್ವಂಸಿನ್]

**ಮಖಪುರುಷ** (ನಾ). ಯಜ್ಞದ ದೇವತೆ; ಯಜ್ಞಪುರುಷ; ವಿಷ್ಣು : "ಹರಿ ಶೌರಿ. . . ಮಖಪುರುಷಂ ಜನಾರ್ದನಂ . . . ಗೋವಿಂದನಕ್ಕುಂ" (ಮಂಗರಾ. ೬-೦೭); ಮಖಪುರುಷನಿರ್ವ ದೆಸೆಗಭಿಮುಖನಾದೊಡೆ ಪೋಯ್ತುಘಂ (ಜಗಂ. ೩-೬೭). [ಸಂ.]

**ಮಖಮಲ್ಲು, ಮಕಮಲ್ಲು** (ನಾ). ಸೂಕ್ಷ್ಮನೆಯ್ಗೆಯ. ನಯವಾದ ಹೊರಮೈಯುಳ್ಳ ಒಂದು ಬಗೆಯ ರೇಷ್ಮೆಯ ದಪ್ಪಬಟ್ಟೆ ; ವೆಲ್ವೆಟ್ಟು : ಆಕೆಯ ಮೈಚರ್ಮ ಮಖಮಲ್ಲಿನ ಹಾಗೆ ಮೃದುತ್ವ ಹೊಂದಲು ಆ ಸಾಬೂನಿನ ವಿಪುಲ ನೊರೆಯೇ ಕಾರಣ (ಜಾಹಿಗೆ. ೨೬೩); ಮಖಮಲ್ಲಿನಂಥ ಗುಂಜುಗಳುಳ್ಳ ಹತ್ತಿಯ ಬಟ್ಟೆ: (ರೇಷ್ಮೆ ಮತ್ತು ಹತ್ತಿಬೆರಕೆಯ) ಒಂದು ಬಗೆಯ ಮಿಶ್ರ ಮಖಮಲ್ಲು (Velvet. ೨೦೪೩). **ಮಕಮಲ್ಲು :** ತಮ್ಮ ಕೋಣೆಯೊಳಗೆ ಹೋಗಿ ಕೆಂಪುಮಕಮಲ್ಲುಬಟ್ಟೆಯ ಉಡುಪುಗಳನ್ನು ಧರಿಸಿಕೊಂಡು ಬಂದರು (ಶ್ರಪಾ೨. II. ೦೦).
[← ಪಾರ. ಮಖ್ಮಲ್; ಹಿಂ. ಮಖಮಲ್; ಮರಾ. ಮಖ್‌ಮಲ್, ಮಖಮಲ್, ಮಖ್ಮಲ್]

**ಮಖಶಾಲೆ** (ನಾ). ಯಜ್ಞವನ್ನು ಮಾಡುವ ಸ್ಥಳ; ಯಾಗಮಂಟಪ : ಮಯನ ಮತದಲಿ ವಿಶ್ವಕರ್ಮನ ನಯವಿವೇಕದಲಮಲಮಖಶಾಲೆಯನು ನಿರ್ಮಿಸಿದರು ಸುಲಕ್ಷಣಶಾಸ್ತ್ರಸೂತ್ರದಲಿ (ಕುಮ್ಯಾ.ಕ. ೭-೨೪) ; ಬಹು ಸಾಧನಂಗಳಿಂ ಭೂರಿಸಂಭಾರಸಂಗ್ರಹದಿಂದೆ ಬೇಕಾದ ವಸ್ತುಸಂಜಾತದಿಂ ಮಖಶಾಲೆ ಕಣ್ಗೆಸೆದುದು (ಕೈಏಶಾ. ೩೩-೩೬) ; ಮಖಶಾಲೆಯುಂ ರಚಿಸಿ ಯಜ್ಞಕುಂಡಂಗೈದು (ಶ್ರೀರಾಮ. ೧೦-೨೩೪). [ಸಂ. ಮಖಶಾಲಾ]

**ಮಖಶಿಖಿ** (ನಾ). ಯಜ್ಞಕುಂಡದಿಂದ ಏಳುವ ಬೆಂಕಿ ; ಯಾಗಜ್ವಾಲೆ : ಮಖಶಿಖಿ ಮಖಸಂಭವ ಲೋಹಖುರಂಗಳಿವೆನಿಪ ಪಟ್ಟಸಾಹಣಾದ ಹಯಂ ಮುಖಲೀನ ಖಲೀನೋತ್ಥಾನಖಣತ್ಕೃತಮೊದವೆ ನಿಂದುವಂದರಮನೆಯೊಳ್ (ಪುಲ್ಗೆ. ೯-೫). [ಸಂ. ಮಖಶಿಖಿನ್]

**ಮಖಾಡೆ** 'ಮೊಗ' ಪರಾ.

**ಮಖಾರಿ** (ನಾ). = ಮಖಧ್ವಂಸಿ ೧ : ಮಖಾರಿಯುಸ್ಥಿರಪರದೈವದೊಳ್ ತೊಡರದಿಂತು ಬರ್ದುಂಕಿದೆನ್ನೆ ಮಹೇಶ (ಶಂಪಾಶ. ೨೩). [ಸಂ.]

**ಮಖಾಳ** ' ಮಕಾಳ ' ನೋ.

**ಮಖೆ** 'ಮಗ್ಗೆ' ನೋ.

**ಮಖೇಡಿ** ' ಮುಖಹೇಡಿ ' ನೋ.

**ಮಖೇಡಿತನ** ' ಮುಖಹೇಡಿತನ ' ನೋ.

**ಮಖ್ತೆ** ' ಮಕ್ತೆ ' ನೋ.

**ಮಗ** (ನಾ). ೧. ಗಂಡ ಹೆಂಡತಿಯರ ಅಥವಾ ಗಂಡು ಹೆಣ್ಣಿನ ಪರಸ್ಪರ ಲೈಂಗಿಕಸಂಬಂಧದಿಂದ ಜನಿಸಿದ ಗಂಡುಸಂತಾನ; ಪುತ್ರ ; ತನುಜ : ಶಾಸ್ತ್ರಪನ ಮಗ ದೇಪರೆಜೆಯ (ಎಕ. VIII. ಸೊರಬ. ೫೭೦-೨೯; 672); ಈ ಪೊಳಲ ಪ್ರಧಾನನಪ್ಪ ಶ್ರೇಷ್ಠಿ ಇಂದ್ರದತ್ತನೆಂಬೊಂ ಪದಿನಾಱುಂ ಕೋಟಿ ಕಸವರಮನೊಡೆಯೊನಾತನ ಮಗನೀತಂ (ವಡ್ಡಾರಾ. ೧೯-೪) : ಕೊಂದೆನ್ನ ಮಗನನಿಂ ಘಯದಿಂದಂ ರಸೆವೊಕ್ಕುಮಜನ ಗುಂಡಿಗೆ ಪೊಕ್ಕುಂ . . . ಪೋಣವಂ ಬರ್ದುಕುವನೇ (ಶಂಪಶಾ. ೧೨-೦೨೦); ಸೂಳೆಯ ಮಗ ಪಾಳವ ಮಾಡಿದರೆ ತಾಯ ಹೆಸರಾಯಿತ್ತಲ್ಲದೆ ತಂದೆಯ ಹೆಸರಿಲ್ಲಾ (ಬಸವ. ೨೨೬) ; ವೇದಪುರುಷನ ಸುತನ ಸುತನ ಸಹೋದರನ ಹೆಮ್ಮಗನ ಮಗನ ತಳೋದರಿಯ . . . ಜಠರದಲಿ ಜನಿಸಿದನಾಗಿಮೂರುತಿ ಸಲಹೊ ಗದುಗಿನ ವೀರನಾರಯಣ (ಕುಮ್ಯಾ.ಆ. ೦-೨೩). ೨. ಹಿರಿಯರು ಕಿರಿಯ ಗಂಡುಮಕ್ಕಳನ್ನು ಕುರಿತು ಪ್ರೀತಿ, ವಿಶ್ವಾಸದಿಂದ ಮಾತನಾಡು ವಾಗ ಬಳಸುವ ಶಬ್ದ : ಭಟ್ಟಾರಾ ಎನಗೆ ದೀಕ್ಷೆಯಂ ದಯೆಗೆಯ್ಯಿಮೆನೆ ಭಟಾರರೆಂದರೆಮಗಂತು ದೀಕ್ಷೆಯಂ ಕುಡಲಾಗಾ ಮಗನೆ (ವಡ್ಡಾರಾ. ೭೪-೦೩); ಭೀಮನಂದನನಾ ಪದದೊಳ್ ಯಮರಾಜನಂದನಂ ಕರೆದು ಮಗನೆ ನೀನಿಂದಿನಿರುಳಿನನುವರಮನೆನಗೆ ಗೆಲ್ದೀಯಲ್ವೇಟ್ಟುಮೆಂದೊಡೆ (ಶಂಪಶಾ. ೦೨-೭ ವ). ' ದತ್ತುಮಗ ', ' ಸಾಕುಮಗ ' ಪರಾ.

**ಮಗಂದಿರ್, ಮಗಂದಿರು** = ೧. ಗಂಡುಮಕ್ಕಳು : ಸಾಗರಸೇನೆಗಂ ಸಾಗರದತ್ತನುಂ ಸಮುದ್ರದತ್ತನುಮೆಂಬ ಮಗಂದಿರುಂ ಸಾಗರದತ್ತೆಯೆಂಬ ಮಗಳುಮಾದರ್ (ಜಾಪುಂಕು. ೭೯); ಚಾವುಂಡನು ಕಳಚುರ್ಯ ಬಿಜ್ಜಳನ ಮಗಳಾದ ಸಿರಿಯಾದೇವಿಯನ್ನು ಮದುವೆಯಾಗಿ ಅವಳಲ್ಲಿ . . . ಇಬ್ಬರು ಮಗಂದಿರನ್ನು ಪಡೆದಿದ್ದನು (ಮೂರುಲು. ೭೪). ೨. ' ಮಗ ' ಎಂಬು ದಕ್ಕೆ ಗೌರವಾರ್ಥವಾಗಿ ಬಳಸುವ ಬಹುವಚನ ರೂಪ : ಲೋಕಾದಿತ್ಯ ಎಳಅರಸಮ್ಮಗನ್ದಿಮ್ಮಗಲ್ಲಡಿಯುವರ್ ಕದಮ್ಬೂರಾ ನಾಳ್ವದಿನ್ನರು . . . ಮುನಿಗಿತ್ತು (ಎಕ. X. ಕೋಲಾರ. ೭-೫; 760); ಮಹಾರಾಜರಾ ಮಗನ್ದಿರ್ ರಣಾವಲೋಕ ಶ್ರೀಕಮ್ಬಯ್ಯನ್ ಪೃಥುವೀರಾಜ್ಯಂಗೆಯೆ (ಎಕ. II. ೩೫-೩; 800). [ದೇ.॥ ತಮಿ. ಮಲ. ಮಕನ್; ತುಳು. ಮಗ, ಮಗೆ; ತೆಲು. ಮಗ, ಮೊಗ; ಮಾಲ್ತೊ. ಮಕ್]

**ಮಗಉಕೋಲ್** (ನಾ). ಭೂಮಿಯನ್ನು ಅಳೆಯುವ ಒಂದು ಬಗೆಯ ಅಳತೆಯ ಕೋಲು (?) : ಮಗಉಕೋಲಲು ಬಳಂಬುಗೆ ಯಿಮ್ಮತ್ತರು ನೆಲನೂ (ಎಇ. IV. ೫-೦೬; 11ನೆಯ ಶತ ?). [ ? + ಕೋಲ್[1] ]

**ಮಗಂಬಡೆ** (ಕ್ರಿ). ಮಗನನ್ನು ಪಡೆ; ಪುತ್ರನನ್ನು ಹೊಂದು : ನೀನೆಮ್ಮಂ ಮೀಱದೆ ರಾಜ್ಯಾನುಷ್ಠಾನದೊಳೊಡಂಬಡೀಗಳ್ ನಿಜಸಂತಾನಕ್ಕೆ ಮಗಂ ಬಡೆಯೆ ತಪೋನಿಯಮಮಂ ಮಗನೆ ಕಡೆಯೊಳಿರ್ದಪುದಲ್ತೇ (ಆದಿಪು. ೯-೬೦); ಗಂಗಾನದಿಯೊಳು ಮಿಂದು ಲತಾಂಗಿ ಮಗಂಬಡೆದಳಪ್ಪ ಕಾರಣದಿಂದಂ (ಎಕ. VII. ಶಿವಮೊ. ೪-೦೦; 1122). [ಮಗ + ಪಡೆ[1]]

**ಮಗಗೆಱೆ**[3] (ನಾ). ಒಂದು ಕೆರೆಯ ಹೆಸರು : ಪೂರ್ವಸ್ಯಾಮ್ ದಿಶಿ ಮಗಗೆಱೆ[3] (ಪ್ಯಾಲಿ. ೦೯೨೪. ೬೦-೯೭; 799). [ಮಗ? + ಕೆಱೆ[3]]

**ಮಗಣ** (ನಾ). [ಛಂದ] ಮೂರು ಗುರುಗಳುಳ್ಳ ಒಂದು ಅಕ್ಷರ ಗಣ: ( — — — ) : ಗುರು ಲಘು ಮೂಱಿರೆ ಮನ ಗಣ . . . ಮಗಣಂ ಭೂಮಿಯೆನಿಕ್ಕುಂ (ಛಂದೋಂಬು. ೦-೩೯ ಅಡಿತ); ಮಗಣ_ಓದಿಂದಂ, ಆನಂದಂ (ಛಂಬು. ೭೦). [ಸಂ.]

**ಮಗದುಮುಸಕ್ಕರೆ** ' ಮಗದುಮಿಂಸಕ್ಕರೆ ' ನೋ.

**ಮಗದುಮಿಸಕ್ಕರೆ,** ಮಗದುಮುಸಕ್ಕರೆ, ಮೊಗದುಂಸಕ್ಕರೆ (ನಾ). ನಸುಹಳದಿಯೂ ಹಿಟ್ಟಿನಂತೆಯೂ ಇರುವ ಒಂದು ಬಗೆಯ ಸಕ್ಕರೆ : ಕೂರಾ, ಮಗದುಮಿಸಕ್ಕರೆ, ತುಪ್ಪ, ಹಿಪ್ಪಿ, ಯಣ್ಣೆ ಮುಂತಾದ ಕಿರಾಣಿ ಜೀನಸಗಳು (ಮುಂಬಯ್ಯ. ೨೬). **ಮಗದುಮುಸಕ್ಕರೆ :** ಆ ಸಕ್ಕರೆಯಲ್ಲಿ ಜವಾರೀಸಕ್ಕರೆಗೆ ಮಗದುಮುಸಕ್ಕರೆ ಎನ್ನುತ್ತಾರೆ (ಕೃಷಿಶ. ೦೯೩). **ಮೊಗದುಂಸಕ್ಕರೆ :** "ಕಬ್ಬಿನ ಹಾಲನ್ನು ಕಾಯಿಸಿ, ಇಂಗಿಸಿ, ಕಾಕಂಬಿಯನ್ನು ಹೊರಡಿಸಿ, ತಯಾರಿಸಿದ ಕಚ್ಚಾ ಸಕ್ಕರೆ ; ಮೊಗದುಂಸಕ್ಕರೆ" (Muscovado. ೨೦೪೩) ; ಅರ್ಧಪಾಕವಾಗಿ ಕಾಯಿಸಿದ ಕಬ್ಬಿನ ಹಾಲಿಗೆ . . . ಮೊಗದುಂಸಕ್ಕರೆಯೆಂತಲೂ ಕೆಲವರು ಹೇಳುವರು (ಸಿದ್ಧಾಂತಿ. ೨೯೭). [← ಮರಾ. ಮಗದುಮಿಸಾಖರ್]

**ಮಗಧ** (ನಾ). ೧. ಹೊಗಳುಭಟ್ಟ ; ಸ್ತುತಿಪಾಠಕ : ಕುಲದೇಟ್ಗೆಯಂ ಮಗಧರು ಸಾದರಮಾತ್ಕರ್ ನಿಯುಕ್ತವಾರ್ತೆಗಳಂ ನಿವೇದಿಸೆ (ಶ್ರೀರಾಕ. ೫-೫೭). ೨. ಪ್ರಸಿದ್ಧವಾದ ಐವತ್ತಾರುದೇಶಗಳಲ್ಲಿ ಒಂದು ; P ಈಗಿನ ಬಿಹಾರದ ದಕ್ಷಿಣದಲ್ಲಿದ್ದ ಒಂದು ದೇಶ : ಅಂಗ . . . ಮಗಧ . . . ಕರ್ನಾಟಕವೆಂಬೈವತ್ತಾಱುದೇಶಂಗಳಕ್ಕುಂ (ಐಪೇಕ. ೦೯೫). [ಸಂ.]

**ಮಗಮಗ** (ನಾ). ಸುವಾಸನೆ ; ಪರಿಮಳ : ಹಾಸಿಗಿ ಮಗಮಗ, ಮಂಚಕ ಝಗಝಗ, ನನ್ನ ಎದಿ ಮಾತ್ರ ಧಗಧಗ ಉರಿದೀತು (ನಾದಲೀ. ೫೪-೯). 'ಮಗಮಗಿಸು' ಪರಾ.

**ಮಗಮಗಿಸು** (ಕ್ರಿ). ಸುವಾಸನೆಯನ್ನು ಬೀರು ; ಕಂಪನ್ನು ಸೂಸು ; ಗಮಗುಟ್ಟು : ಮಗಮಗಿಪ ಜಾದಿ ಪೊಂಗೇದಗೆ ಮಲ್ಲಿಗೆಯೆಂಬ ಪಲವು ಪೂಮಾಲೆಗಳಂ ಬಗೆಯಱಿದು ನೀಡುಗುಂ ಮಾಲೆಗಾಱನಂ ಪೋಲ್ತು ದಗ್ರಮಾಲ್ಯಮಹೀಜಂ (ಆದಿಪು. ೫-೩೭) ; ಮಗಮಗಿಪ ಕರ್ಪೂರ ಕುಂಕುಮದ ಗರುಚಂದನ ಕರ್ದಮ (ಶಾಕೃಶಾ. ೩-೨೭) ; ಮಣ್ಣು ಮೈಯ ಮಗು ಮೂಡಿದಾಗ ಮಗಮಗಿಸಿತಣ್ಣ ಮುಗಿಲು (ಕನ್ನಡಿಗಾ. ೩೪-೦೫). 'ಗಮಗಮಿಸು' ಪರಾ. [ಮಗಮಗ + —ಇಸು[3]]

**ಮಗಮೆ** (ನಾ). ೧. (ಹಿಂದೆ ದೇವಾಲಯ, ಛತ್ರ ಮುಂತಾದುವು ಗಳ ಖರ್ಚಿಗಾಗಿ ವರ್ತಕರ ಮೇಲೆ ವಿಧಿಸುತ್ತಿದ್ದ) ಒಂದು ಬಗೆಯ ತೆರಿಗೆ : ಹೊವಕೆ ಹೊಂಬಳಿ ಮಗಮೆ ಮಟ್ಟ ಕಟ್ಟಿಗೆ ಸಹ . . . ದಾನ ಧಾರಾಪೂರ್ವಕವಾಗಿ ಕೊಟ್ಟ ತಾಮ್ರಶಾಸನ (ಪ್ಯಾಲಿ. ೦೯೩೩. ೨೩-೪೯; 1384) ; ಮಠದ ಧರ್ಮಕ್ಕೆ ಸಾರೋದ್ಧಾರವಾಗಿ ಅನ್ನಧಾನ ನಡದುಬರೂ

ರೀತಿಗೆ ನಾಲು ಮಗಮೆಯು ಉಂಟುಮಾಡಿದ ವಿವರಾ (ವ್ಯ.ಕಂ. ೧೯೩೫. ೨೬-೦೮; 1751). ೨. ಹಿಂದೆ ಭೂಮಿಯಂ ಮೇಲೆ ಹಾಕುತ್ತಿದ್ದ ಒಂದು ಬಗೆಯ ತೆರಿಗೆ : ಮಗಮೆ ಸುಂಕದಿಂದ ಧಾರಾಪೂರಕೆ ವರಹವೊಂದಕೆ ಮಗಮೆ ಹಾಗವಲೆ ಕವಲು ನೂಜುವರಹ ವಣಾಯಕರ ಕೋಟೆಯ ಮಗಮೆ ವರಹವೊಂಧಕೆ ಹಾಗದಲೆ ಕವಲು ಮಗಮೆ ಯಿಪತಐದುವರಹ (ಎಕ. XIV, ಗುಂಡ್ಲುಪೇ. ೧೨೮-೬೨; ಕ್ರಿ. 1410) ; ಅರಮನೆಯಿಂದ ಬಂದ ಹದಿಕೆ ಹೊದಿಕೆ ಮಗಮೆ × × × ಸಿದ್ಧಾಯ ಮನೆವಾರ್ತೆ (ವ್ಯ.ಕಂ. ೧೯೩೪, ೫೮-೨೩; 1434).

[← ಉರ್ದು. ಮಹ್ಕಮಾ ; ಅರ. ಮಹ್ಕಮಾ = ನ್ಯಾಯಕಚೇರಿ ; ಮರಾ. ಮಹ್ಕಮಾ = ನೌಕರರ ಮಂಡಲಿ. / ತಮಿ. ಮಕಮೈ]

**ಮಗರಿ** (ನಾ). ಒಂದು ಬಗೆಯ ಬಟ್ಟೆ : ಮಿಗೆ ಬೆಲೆಯೇಜಿದ ಪೂಲಿಯ ಮಗರಿಯ ದೋರಿಯದ ಪಟ್ಟೆಯ ತಳರ್ವಟ್ಟೆಯ ಕಾಡಿಗನೀರಿನ ಬಟ್ಟೆಯ ಮಟ್ಟಗೆಗಳಿಂ ಸೋಲಿಪುವು ಸೀರೆವರದರ ಪಸರಂ (ಶಬ್ದಸಾ. ೩೮) : ಮಗರಿ . . . ಗಜಾವಳಿ ಮಂಡೋದರಿ ಮೆಚ್ಚಿನ ಸೀರೆಯ ಮಳಿಗೆಗಳಂ ಬಳುವಳನೆ ಬಳಸಿದುದನೆ ಮೂಸಿಗರಾಸುರದಿಂದೊಡರಿಸೆ (ಶುಮರಾ. ೦೫-೩೮). [?]

**ಮಗರಿಗೆ** (ನಾ). ಸ್ತ್ರೀಯರು ಅಲಂಕಾರಕ್ಕಾಗಿ ಕೆನ್ನೆ, ಗಲ್ಲ ಮುಂತಾದೆಡೆಗಳಲ್ಲಿ ಬರೆದುಕೊಳ್ಳುವ ಚಿತ್ರ ; ಮಕರಪತ್ರ : ಕಪೋಲದೊಳ್ ಮಗರಿಗೆಯುಂ ಬರೆದು (ರಾಜಶೇ. ೧೨೪-೫) ; ಸಸಿಗರೆಯೋ ತಿಮಿರವೆಣ್ಣ ಮೊಲೆ ಮಗರಿಗೆಯೋ (ತಂತ್ರಶು. ೦೦-೬೫). [< ಮಕರಿಕೆ]

**ಮಗರೂರಿ** (ನಾ). ಉದ್ಧಟತನ ; ಔದ್ಧತ್ಯ : ಈ ಚಿನ್ನವನ್ನು ಮಾತ್ರ ತರಬಾರದಿತ್ತು. ನಮ್ಮಿಂದ ಸ್ವಲ್ಪ ಮಗರೂರಿಯಾಯಿತು. ತಪ್ಪಾಯಿತು (ಶಾರುದಾ. ೧೦೨) ; ತಿರಕನಿಗೆ ಇಷ್ಟು ಸೊಕ್ಕೇ ? ನಾನು ಕರೆಸಿದರೆ ಬರುವುದಿಲ್ಲವೆ ? ಇಷ್ಟು ಮಗರೂರಿಯೇ? (ರಾಜಾರಾ. ೭೬).

[ ← ಅರ. ಮಗರೂರೀ, ಮಘರೂರೀ ; ಹಿಂ. ಮರಾ. ಮಗರೂರೀ ]

**ಮಗವು** ' ಮಗು ' ನೋ.

**ಮಗಳ್**, ಮಗಳು (ನಾ). ೧. ಗಂಡ ಹೆಂಡತಿಯರ ಅಥವಾ ಗಂಡು ಹೆಣ್ಣಿನ ಪರಸ್ಪರ ಲೈಂಗಿಕಸಂಬಂಧದಿಂದ ಜನಿಸಿದ ಹೆಣ್ಣುಸಂತಾನ : ಪುತ್ರಿ ; ಸುತೆ : " ದುಹಿತಾ, ತನಯಾ, ಪುತ್ರೀ – ಈ ೩ ಮಗಳ್ " (ಹಲಾಯು. ೮೩-೩೫೦) ; ಕಾಡಚ್ಚಿಯ ಮಗಳ್ ಕಾಡಬ್ಬೆ (ಎಕ. XI, ದಾವಣ ೧೭-೬; 889) ; ಎನ್ನ ಮಗಳಂ ಕುಡೆವೆಮ್ಮ ಮಗಳ್ಗೆ ಪುಟ್ಟಿದಾತಂ ರಾಜ್ಯಕ್ಕೊಡೆಯನುಂ ಪಿರಿಯ ಮಗನುಂ ಕ್ರಮಕ್ಕರ್ಹನುಮಪ್ಪೊಡೆ ಕುಡುವೆಂ (ಪಂಪಭಾ. ೧-೭೦ ವ) ; ಅನುಜೆಯೆನಿತ್ತು ನರಂಗಾತನ ತನಯಂಗಿತ್ತು ತನ್ನ ಮಗಳಂ (ಗದಾಯು. ೩-೪೨). ೨. ಹಿರಿಯರು ಕಿರಿಯ ಹೆಣ್ಣುಮಕ್ಕಳನ್ನು ಕುರಿತು ಪ್ರೀತಿ, ವಿಶ್ವಾಸದಿಂದ ಮಾತನಾಡುವಾಗ ಬಳಸುವ ಪದ : ಅರಸರೊಳೆಲೆ ನೀಂ ಸರಸಮನರಸಿಯುವೊಲಾಡುತಿರ್ಪೆ ನಿನಗಿದು ಗುಣಮೇ ಅರಸರ್ ಸರಸಮನಜಿಪರೆ ಸರಸಮನಾಡರಸರಲ್ಲದವರೊಳ್ ಮಗಳೇ (ಶಬರ. ೩-೨೩೩) ; ಬಗೆಗೆಟ್ಟು ಸಾವ ಬಗೆಯಂ ಮಗಳೆ ಮಹಾಶ್ವೇತೆ ಬಗೆಯದಿರ್ (ಕಾದಂಪೂ. ೯೪೦) ; ಮಗಳೇ ನಿನ್ನಜಿಯುಮೆಯಿಂ ಬಗೆಯದೆ ನುಡಿದಮ್ಮನಿನಿತು ದುಃಖಂಗಳನುಬ್ಬೆಗಪೊದವಲುಂಡೆ (ನೇಮಿಪು. ೦೪-೦೦).

**ಮಗಳು** : ೧. ಮಂಡೋದರಿ ಕಪ್ಪೆಯ ಮಗಳು (ಬಸವ. ೫೯೦) ; ಮೇದಿನಿಯು ಸಲಿಸುವೆನು ನಿನ್ನಯ ಮಗಳ ಮಕ್ಕಳಿಗೆ (ಕುಮಾ.ಭಾ. ೨-೨೮) ; ಜಗವ ಪಾವನೆ ಭಾಗೀರಥಿ ನಿನ್ನ ಮಗಳಯ್ಯ (ಪುರಂದ. ದಾ. ೩-೯೯-೧) ; ತಾಯಿಯಂತೆ ಮಗಳು, ನೂಲಿನಂತೆ ಸೀರೆ (ಗಾದೆ). ೨. ಮಗಳೆ ಬಾ ಕೇಳ್ ಐದುಮಂತ್ರಾಳಿಗಳನಿವು ಸಿದ್ಧಪ್ರಯೋಗವು (ಕುಮಾ.ಭಾ. ೩-೦೬) ; ಮಗಳೆ, ಪೇಳ್ವೆನಿದೊ ದುರ್ವಾರ್ತೆಯಂ (ಶ್ರೀರಾಮಪ. ೩೦-೦೯೯).

ಮಗಳ್ದಿರ್, ಮಗಳುದಿರು = ೧. ಹೆಣ್ಣುಮಕ್ಕಳು : ಕನಕಮಾಲೆಯುಮಾಕೆಯ ಮಗಳ್ದಿರಪ್ಪ ಕನಕಲತೆಯುಂ ಪದ್ಮಲತೆಯುಂ ಸೌಧರ್ಮಕಲ್ಪದೊಳ್ ಮೂವರುಂ ದೇವಿಯರಾಗಿ ಪುಟ್ಟಿದರ್ (ಶಾಪುಪು. ೧೯೪) : ಹರಡಿ ನೆಲಸಿದ ಮಗಳ್ದಿರಣುಗರು ತಾಯ ಕಾಯುತ ಬಿದ್ದರು (ಹೊಂಗಳು. ೩-೦೪) ; ಏಳು ಮಗಳುದಿರು ಚೋಳರಾಯನಿಗೆ (ತಂಗೀತ. ೬೯-೦). ೨. 'ಮಗಳು' ಎಂಬುದಕ್ಕೆ ಗೌರವಾರ್ಥವಾಗಿ ಬಳಸುವ ಬಹುವಚನ ರೂಪ : ಶ್ರೀ ಪೃಥಿವೀವಲ್ಲಭ ಸಿಂಘಪೋತರಸರ ಮಗಳ್ದಿರ್ ಶ್ರೀ ಮಹಾದೇವಿ (ಎಕ. XI, ತರೀಕೆ. ೩೩-೪ ; ಕ್ರಿ. 815).

[ ಮಗ + – ಅಳ್. / ತಮಿ. ಮಕಳ್ ; ಮಲ. ಮೋಳ್ ; ತುಳು. ಮಗಳು ]

**ಮಗಳು** ' ಮಗಳ್ ' ನೋ.

**ಮಗಳ್ಮಾ** (ನಾ). ೧. ಸ್ತ್ರೀರೂಪದ ಒಂದು ಪೌರಾಣಿಕ ಪ್ರಾಣಿ : ತುರಗಾರೋಹಕನೊರ್ಬಂ . . . ಅಶ್ವಕಂಧರವಂ ಪೊಕ್ಕನೆಪೋಗೆ ಪೊಯ್ದುಡೆಸಿದಿರ್ದಂತಾ ಶಿರಂ ಯೋಗಿನೀಶಿರದೊಳ್ ಪತ್ತಿಸಿದಂತೆ ಬಿರ್ದಡೆ ಮಗಳ್ಮಾವೆಂದದಂ ನೋಡಿದಂ (ಪಂಪರಾ. ೦೨-೬೩); ಕುಲಜರೊಳಂ ಮತ್ತಂತೆಯಕುಲಜರೊಳಂ ಬೆರೆದು ತಾಂ ಮಗಳ್ಮಾಯೆನಿಸುತೆ ನೆಲದೊಳ್ಮೇರ್ವಳಿನುತ್ತವಾಗ್ಲಲನೆಯ ನಾಸಿಕಮನರಿದನಾ ವೀರೇಶಂ (ವೀರಬ. ೦೨-೫೮). ೨. ಗಂಡನೊಡನೆ ಇರುವವಳು (?) : "ಮಗಳ್ಮಾಯೆಂದು ಗಂಡನಂ ಪತ್ತಿಬಿಡದಾಕೆ" (ಕಮುದ. ನ. ೩೬೫). 'ಮಾಳ್ಮಕಿ' ಪರಾ.

[ದೇ.॥ ತಮಿ. ಮಕಣ್ಮಾ, ಮಕಣ್ಮೈ = ಸ್ತ್ರೀಸ್ವಭಾವ, ಸ್ತ್ರೀತ್ವ]

**ಮಗಿಮಾವು** (ನಾ). "ಮಾವಿನ ಹಣ್ಣಿನ ಒಂದು ಜಾತಿ" (ಶಾನಕೋ. ೨೬): ಮಾವು ಗೇವರ್ಮಾವು ಪುಳಿಮಾವು . . . ಮಗಿಮಾವು ಮಧುರಸಭರಿತ ಪರಿಮಳಿಪ ಸೀರುಚಿಯನೀವ ಮಾವು (ನವಮೋ. ೨೪-೪೯) ; ಮೂರೆಂಬ ತಿಂಗಳಿಗೆ ಮೂರೇನು ಬಗಿಸ್ಯಾಳ ಮೂಡಲ ದಿಕ್ಕಿನ ಮಗಿಮಾವ ತಿಂದೇನಂಬುವಳ (ಲೋಕಗೀ. ೯೩). [ಮಗಿ ? + ಮಾವು]

**ಮಗಿಲ್**, ಮಗಿಲು (ನಾ). ಪ್ರಾಕಾರ ; ಪೌಳಿ : ಆ ಮಗಿಲೊಳಮೆಯ್ಯೊಳ್ . . . ಲಕ್ಷ್ಮೀಮಂಡಪಮಿಂಬನಾಳ್ದು ಕಣ್ಗೆಸೆದಿತ್ತುಂ (ವರ್ಧಮಾ. ೦೩-೫೩); ಮಾಸ್ಯದ ಮಗಿಲ್ ಹಸ್ತಂ ೪೦ ಬಣಂಬೆ ಹಸ್ತಂ ೪೦ (ಕೊಲ್ಲಾಶಾ. ೨೩-೩೨; 1209) : ಆ ಪುರಮಧ್ಯದೊಳಿರ್ಪುದು ಭೂಪನಿವಾಸದ ಮಗಿಲ್ . . . ವಿಚಿತ್ರಮಣಿಗಣಖಚಿತಂ (ಕಾಂತೀಶ. ೦-೦೩೪). 'ಪೊಮ್ಮಗಿಲ್' ಪರಾ.

**ಮಗಿಲು** : ಗ್ರಾಮಾಸ(?)ರ್ವ ೨೦೦೦ ಮಗಿಲು ಗ್ರಿಹೇ ಹಸ್ತ ೪೦ (ಇಕ. XIV, ೦೪೦-೨೪ ; 12ನೆಯ ಶತ) ; ಮಗಿಲು ಬಾಗಿಲುವಾಡದೊಳಗಣ ಜಗಲಿ ಚಪ್ಪರದುಪ್ಪರಿಗೆ . . . ಗಣಿಕೆಯರೊಗ್ಗಿನಲಿ ಮೆಜಿದುದು ಸತಿಯ ಭವನ (ಬಸಪು. ೦೨-೮) ; ಮಂಡಳಿಸಿದ ಹೊನ್ನ ಮಗಿಲ ಮಧ್ಯದಲಿ ತ್ರಿಖಂಡ ಹರ್ಮ್ಯಗಳ ಹೊಂಗಳಸ (ಮೋಹತ. ೨೦-೨೯). 'ಮದಿಲ್' ಪರಾ.

[ ದೇ.॥ ತೆಲು. ಮಗುಲು ]

**ಮಗಿಲು** ' ಮಗಿಲ್ ' ನೋ.

**ಮಗು**, ಮಂಗವು, ಮಗುವು (ನಾ). ೧. ಎಳೆಯ (ಹೆಣ್ಣು ಅಥವಾ ಗಂಡು) ಸಂತಾನ ; ಹಸುಳೆ ; ಶಿಶು ; ಏಕೆ ನಿರರ್ಥಕಂ ಮಗುವಿನಂದದೆ ಕೋಟಲೆಗೊಂಡೆನಕ್ಕಟ (ಕಾದಂಪೂ. ೬೨೩) ; ಮಗುವಿನ ಮಕ್ಕಳಾಟಿಕೆ ಮಾರಿಯಾಯಿತು ವೈರಿರಾಯರಿಗೆ (ಕುಮಾ.ದ್ರೋ. ೫-೩) ; ಮಗುವಿನ ಸುಖಕ್ಕಾಗಿ ತಾಯಿ ತನ್ನ ಸುಖವನ್ನು ತ್ಯಜಿಸಬಲ್ಲಳು (ರಮೇಶಾ. ೦೩೪). ೨. ದೊಡ್ಡವರು ಚಿಕ್ಕವರನ್ನು ಪ್ರೀತಿಯಿಂದ ಸಂಬೋಧಿಸುವಾಗ ಬಳಸುವ ಮಾತು: ಬಾ ಮಗು, ಊಟಕ್ಕೆ ಹೊತ್ತಾಯಿತು (ರೂಢಿ.) **ಮಗವು** : ೧. "ಬಾಳಃ, ಪಾಕಃ . . . ಡಿಂಬಃ –ಈ ೯ ಮಗವು" (ಹಲಾಯು. ೮೩-೩೪೮); ನೆಲಹಿನ ಮೊಸರಂತೆ ಬೆಸ್ಲೇಜಿದ ಮಗವಿನಂತೆ ಮಣಿಗಡಗದ ಕೀಲಿನಂತೆ (ಭವಸೇಪು. ೮-೦೪೬ ಅಡಿ) ; ಮಗವೀತಂ ಕೊಂಗುಗೊಳ್ವಂ ಗಡ ಗಜಘಟೆ

ಯುಂ ತಪ್ಪೆನೀತಂ ಗಡ (ಎಕ. V. ಬೇಲೂರು. ೦೬-೯೬: 1136) **ಮಗುವು :** ೧. ಮಗುವು ತಾನಹೆ ತನ್ನ ಬಾಣಕೆ ಮಗುವೃತನ ಬೇಜಿಲ್ಲ (ಕುಮಾ.ದ್ರೋ. ೩-೨೦) : ಮಗುವ್ವೆ ರಾಘವನೆಂದು ತಪ್ಪಿಸಿ ನುಡಿವ ನುಡಿ ನಿನಗೆ ನಿಗರವೇ (ತೊರವ. ೧-೯-೩೦).

**ಮಕ್ಕಳ್, ಮಕಳು, ಮಕ್ಕಳು, ಮಗುಗಳು** (ಬಹುವ) : p ಮಗ', 'ಮಗಳು' ಮತ್ತು 'ಮಗು'-ಮೂರಕ್ಕೂ ಬಹುವಚನದಲ್ಲಿ ಈ ರೂಪ ಬರುತ್ತದೆ : ೧. ಒಂದಕ್ಕಿಂತ ಹೆಚ್ಚು (ಹೆಣ್ಣು ಅಥವಾ ಗಂಡು) ಸಂತಾನ ; ಸಂತತಿ: ''ಮಕ್ಕಳೆನಲ್ಕೆ ಸಂತತಿಯೊಳಂ'' (ಶಶಾಂ. ೩೦) ; ಕೀರ್ತಿಧರನೆಂಬೊನರಸನಾತನ ಮಹಾದೇವಿಯರ್ಕಳ್ ಅರತಿ ರತಿಯೆಂಬೊರಾ ಇರ್ವರ್ಗಂ ಮಕ್ಕಳ್ ಧರ್ಮಘೋಷನುಂ ಧರ್ಮಕೀರ್ತಿಯುಂ (ವಡ್ಡಾ. ೦೦೨-೦೩) ; ಭೃತ್ಯರರಸುಗಳ್ಗೆ ಪೆಂಡಿರ್ಮಕ್ಕಳೋಪಾದಿಯಲ್ಲಿ ಸಂಪತ್ತಾದೊಡಂ ವಿಪತ್ತಾದೊಡಂ ಬಿಡರ್ (ಕುಸುಮಾ. ೪೨-೨೨) ; ತಂದೆ ಮಕ್ಕಳಿಗೆ ಬುದ್ಧಿಯ ಹೇಳುವಲ್ಲಿ ತಪ್ಪಿಂಗೆ ಮುನಿವನಲ್ಲದೆ ಪ್ರಾಣಕ್ಕೆ ಮುನಿಯ (ಬಸವ. ೬೩೪); ಓಡಿ ಬದುಕುವ ಹುಲುಪಜೀಯತನ ಹೆಮ್ಮೆಯೇ ಕ್ಷತ್ರಿಯರ ಮಕ್ಕಳಿಗೆ (ಕುಮಾ.ದ್ರೋ. ೨.೩೮) : ಮಕ್ಕಳಿದ್ದರೆ ಮನೆ, ಒಕ್ಕಲಿದ್ದರೆ ಊರು (ಗಾದೆ) ; ಮಗುಗಳ ಮಾಣಿಕ್ಯನ ಅಡಿಸಿದೆಶೋದೆ (ಪುರಂದ. ೪-೦೬೬-೦) ; ಮನೆಯ ಮಕ್ಕಳೆಲ್ಲ ಬಿಕ್ಕಿದರು. ಒಂದೆರಡು ಮಗುಗಳು ಗಾಬರಿಯಾಗಿ ಕೂತವು (ಸಮುದ್ರ. ೩೦೪). ೨. 'ಮಗ' ಎಂಬುದಕ್ಕೆ ಗೌರವಸೂಚಕವಾಗಿ ಬಳಸುವ ಬಹುವಚನ ರೂಪ : ಕರುವದ ಅಂಗೀರಸಗೋತ್ರದ ಇ(ಈ)ಶ್ವರನ ಕತ್ತಿಗನ ಮಕ್ಕಳು ನಾರಾಯಣಭಟ್ಟರಿಂಗೆ . . . ಮೂಡೆ ೧೦ (ಎಇ. XVII, ೦೬೨-೩೨ ; 1256) ; ಲಿಂಗಾದೀಕ್ಷಿತರ ಮಕಳು ತಿಂಮಣಭಟ್ಟರಿಗೆ ಗ ೬ . . . ಧಾರಾ ಪೂರ್ವಕವಾಗಿ ಶಿವಾರ್ಪಣವಾಗಿ ಬಿಟ್ಟೆಧೇವೆ (ಎಕ. VII, ಶಿವಮೊ. ೮೨-೨೨ : 1683). **ಮಕ್ಕಮಕ್ಕಳು, ಮಕ್ಕಳ ಮಕ್ಕಳ್, ಮಕ್ಕಳುಕ್ಕಳ್** = ವಂಶಪರಂಪರೆ; ಸಂತತಿ : ಚಂದ್ರಸೂರ್ಯರುಳ್ಳನಕಲೂ ಅವರ ಮಕ್ಕಮಕ್ಕಳು ತರಾಂತರದಲ್ಲೂ . . . ವೊಕ್ಕಲಿದ್ದರು (ಎಕ. XII, ಶಿರಾ. ೬೬-೦೬; 1379) ; ಬೀರನೊಬಪ್ಪ ಮೆಚ್ಚಿ ಕಿಬ್ಬನಾಡ ಖರಿಯ ಬಿದಿರೂರ ಕಲ್ನಾಡುಗೊಟ್ಟಂ ಗಂಗನ ಮಕ್ಕಳ ಮಕ್ಕಳ್ವರೆಗಂ ಸಲ್ವಂ (ಎಕ. X, ಗೌರಿಬಿ. ೪-೨೪; 920) ; ಮನೆ ದೀವಿ ಮಕ್ಕಳಂ ಪಡೆದಬಳಾಜನಂ ನೆರೆದ ಮಕ್ಕಳ ಮಕ್ಕಳ ನೀಳ್ದೊಂದು ದಾಂಗುಡಿವಿಡಿದೀವ ಚಾಗಂ . . . ವೃದ್ಧರಾಜ್ಯಮುಮದೇನೆಸೆದತ್ತೊ ತೊಡರ್ದಿರೆ (ಆದಿಪು. ೨-೨೪) ; ಪಂಣಮಾಂಡಹೆಗ್ಗಡೆಯರು ತಾವು ಕೊಣ್ಣಕೊಟ್ಟ ನಂದಾದೀವಿಗೆ ಸೊಡರೆಣ್ಣೆಗೆ ಆ ಸ್ಥಾನಿಕ ಗೋಣೆಯಜೀಯ ಪರದೇಸಿಯುಮನವರ ಮಕ್ಕಳುಕ್ಕಳ ವಂಶೋದುಭವರ ವಸಂ ಹೋಗೆ ಹಾಗ ವಡ್ಡಿಯಿಂ ದೇವರ ಭಂಡಾರವಾಗಿ ಕೊಟ್ಟ ಗದ್ಯಾಣಂ ಮೂಜು (ಎಕ. XIV, ತಿರುಮ. ೨೭೦-೪: 1199). **ಮಕ್ಕಳ ತಾಯಿ** = (ಎಳೆಯ ಮಕ್ಕಳಿಗೆ ತಾಯಿಯಂತೆ ಅಗತ್ಯವಾದ) ಒಂದು ಬಗೆಯ ಔಷಧೀಯ ಗುಣವುಳ್ಳ ಬೇರು ; ಬಜೆ ; ಉಗ್ರಗಂಧಿ : ''ವಚಾ, ಉಗ್ರಗಂಧ . . . ಶತಪರ್ವಿಕಾ — ೫ ಬಜೇ ಹೆಸರುಗಳು. ಇವನ್ನು ಮಕ್ಕಳತಾಯಿಯೆಂತಲೂ ಕಹಿಯಾದ ಕಡ್ಡಿಯೆಂತಲೂ ಅನ್ನುವರು'' (ಸಿದ್ಧಂತಿ. ೦೩೫). **ಮಕ್ಕಳ ಸಂತಾನಕಟ್ಟು** = ಆಸ್ತಿಯ ಹಕ್ಕು ಮಕ್ಕಳಿಗೆ ಬರುವ ನಿಯಮ; ಸಂತತಿಕಟ್ಟು : ಉತ್ತರದಲ್ಲಿರುವ ನಾಡವರೂ ದಕ್ಷಿಣದಲ್ಲಿರುವ ಬಂಟರೂ ಅಳಿಯಸಂತಾನಕಟ್ಟನ್ನೇ ಅನುಸರಿಸುತ್ತಾರೆ. ಪರಿವಾರ ಬಂಟರಿಗೆ ಮಕ್ಕಳ ಸಂತಾನಕಟ್ಟು (ತುಳುನಾ. ೫೦). ' ಅಳಿಯಸಂತಾನಕಟ್ಟು ' ಪರಾ. **ಮಕ್ಕಳಾಟಿಕೆ** = ೧. ಮಕ್ಕಳ ಆಟದ ಸಾಮಾನು : ಆ ಅಂಗಡಿಯಲ್ಲಿ ಬಗೆ ಬಗೆಯ ಮಕ್ಕಳಾಟಿಕೆಗಳಿವೆ (ರೂಢಿ). ೨. ಮಕ್ಕಳಂತೆ ವರ್ತಿಸುವುದು ; ಹುಡುಗಾಟ : ಮ ಗು ವಿ ನ ಮಕ್ಕಳಾಟಿಕೆ ಮಾರಿಯಾಯಿತು ವೈರಿರಾಯರಿಗೆ (ಕುಮಾ.ದ್ರೋ. ೩-೩) ; ಹಾಗೆಲ್ಲ ಮಕ್ಕಳಾಟಿಕೆ ಮಾಡಬೇಡ (ಬಿಡಿ.ಬ. ೩೩). **ಮಕ್ಕಳುಮಜೀ, ಮಕ್ಕಳುಮರಿ** = ಸಣ್ಣ ಪುಟ್ಟ ಮಕ್ಕಳು : ಹೆಜತೆಗೆದು ಕೆಲಸಾರಿ ಮಕ್ಕಳುಮಜೀಗಳಿಗೆ ರಣವೇಕೆ (ಕುಮಾ.ಕ. ೩-೦೬) ; ಅವರ ಮನೆತುಂಬ ಮಕ್ಕಳುಮರಿಗಳಿವೆ (ರೂಢಿ). **ಮಕ್ಕಳೊಂದಿಗ** = ಅನೇಕ ಮಕ್ಕಳಿರುವ ವ್ಯಕ್ತಿ : ನಾವು ಮಕ್ಕಳೊಂದಿಗರು, ಒಕ್ಕಲ ಕುಳ, ದೇವರು (ಶಿಲ್ಪಿಕ. ೩೪-೩). **ಮಕ್ಕಳೊಂದಿಗಳು** = ಅನೇಕ ಮಕ್ಕಳಿರುವವಳು : ಕುಟುಂಬಿನೀ, ಪುರಂಧ್ರೀ . . . ಪುತ್ರ ಭೃತ್ಯಾದಿ ಕುಟುಂಬವುಳ್ಳ ಸ್ತ್ರೀಯ ಹೆಸರು, ಮಕ್ಕಳೊಂದಿಗಳು (ಸಿದ್ಧಂತಿ. ೦೬೮). **ಮಕ್ಕಳೊಂದಿಗಿತ್ತಿ** = ಮಕ್ಕಳೊಂದಿಗಳು : ಮಳೆರಾಯನ ಹೆಂಡತಿ ಮಕ್ಕಳೊಂದಿಗಿತ್ತಿ (ಹಳ.ಹು. ೪೦). **ಮಕ್ಕಳ್ಗಿಡು** = ಮಕ್ಕಳನ್ನು ಕಳೆದುಕೊಳ್ಳು : ರಾಮನುಂ ಧೂಮುಂ ಸುತ್ತಿದಂತೆ ಜೀವಂಗಿಡಿಸಿ, ಲಕ್ಷ್ಮಣನುಂ ಮಕ್ಕಳ್ಗಿಟ್ಟರಂತೆ ಗೋಬುಂಡೆಗೊಳಿಸಿ (ಧರ್ಮಾಮೃ. ೬-೯೫).

[ < ಮಗ./ತಮಿ. ಮಕವ್ ]

**ಮಗುಂ** ' ಮೋಘವಾ[5] ' ನೋ.

**ಮಗುಗೊಲೆ** (ನಾ). ಶಿಶುವನ್ನು ಕೊಲ್ಲುವುದು : **ಶಿಶುಹತ್ಯೆ** : ನಾ ಮೊದಲೆ ಹೇಳಲಿಲ್ಲವೆ ? ಈ ಮಗುಗೊಲೆಯ ಕೆಲಸ ಬೇಡ ಎಂದು ? (ತಂಪ್ರಸ. ೨೫-೨೨). [ ಮಗು + ಕೊಲೆ ]

**ಮಗುಚು** 'ಮಗುಚ್ಚು' ನೋ.

**ಮಗುಚುಕಟ್ಟಿಗೆ** (ನಾ). (ಉಕ) (ಹಂಚಿನ ಮೇಲೆ ಬಿಸಿಯಾಗಿರುವ ದೋಸೆ ಮೊದಲಾದುವನ್ನು) ತಿರುವಿಹಾಕಲು ಉಪಯೋಗಿಸುವ ಮರದ ಅಥವಾ ಕಬ್ಬಿಣದ ಸಾಧನ ; ಕುರುಪಿ ; ಕಡಚಿ : ಸೀತಮ್ಮನು ಮಗುಚುಕಟ್ಟಿಗೆಯೊಡನೆ ಬರುವಳು (ಹುತ್ತಾಟ. ೨೬).

[ ಮಗುಚು (< ಮಗುಚ್ಚು) + ಕಟ್ಟಿಗೆ$_1$ ]

**ಮಗುಚುಕೈ** (ನಾ). = ಮಗುಚುಕಟ್ಟಿಗೆ : ಮಗುಚುಕೈಯ ತುದಿಯು ತೆಳುವಾಗಿದ್ದರೆ ದೋಸೆಯನ್ನು ತೆಗೆಯಲು ಸುಲಭವಾಗುವುದು (ರೂಢಿ).

[ ಮಗುಚು (<ಮಗುಚ್ಚು) + ಕೈ$_2$ (<ಕಯ್$_2$) ]

**ಮಗುಟ$_1$, ಮಕುಟ$_1$** (ನಾ). ೧. (ಮಡಿಗಾಗಿ ಉಡುವ) ನಾರು, ರೇಷ್ಮೆ ಮುಂತಾದುವುಗಳ ಧೋತ್ರ : ತರದ ಪಟ್ಟಾವಳಿಯ ಮಗುಟಗಳ ಹೇರ್ಗಳನು ತಂದು ದೇಶಂಗಳಿಂದ (ಕೃಷ್ಣ.ಶಿ. ೨-೪೬) ; ಅನಂತರಾಯರು ಮಗುಟ ಉಟ್ಟು ಸಾಂಗವಾಗಿ ಪೂಜೆಮಾಡಿದರು (ಕಂಕಣ. ೦೨೨). ೨. (ಬಿಳಿಯ) ಉಣ್ಣೆಯ ಧಾವಳಿ : ಅಗಸೆಮರದಡಿಯಲ್ಲಿ ಮಗುಟ ಕಂಬಳಿ ಹಾಸಿ ಸೊಗಸು ಮಾಡ್ಯವರೆ (ಜಾನಗೀ. ೬೦). **ಮಕುಟ$_1$** : ೧. ಬಿಸಿ ನೀರಿನಿಂದ ಸ್ನಾನಮಾಡಿಸಿ ಅವನಿಗೆ ಮಕುಟವನ್ನು ಮಡಿಯುಡುವುದಕ್ಕೆ ಕೊಟ್ಟು (ಕಥಾಮಂ. IV, ೦೨೩) ; ಶಾಲೆಗೆ ಹೋಗುವ ಮುನ್ನ ಅವನೇ ಮಕುಟವನ್ನು ಸುತ್ತಿಕೊಂಡು ಹೊಳೆಯಿಂದ . . . ನೀರು ತಂದು ಕೊಡುತ್ತಿದ್ದ (ಪುಂಶವ್ಯ. ೩೦೨). [ ದೇ.॥ ತೆಲು. ಮುಕಟು, ಮುಕ್ಕುಟ ]

**ಮಗುಟ$_2$, ಮಗುಡ$_1$** (ನಾ). ಕಿರೀಟ ; ಮಕುಟ : ಸಗುಣಗುಣಾಢ್ಯ ಭೂಪತಿಗಳೇಕಾಂತದಿ ಮಗುಟಗಳೊಂದೊಂದೊರಸಿ ಉಗುವ ಮಾಣಿಕ ಹೇಮರಜ ನೂಜುಕೋಟಿಗೆ ಮುಗಿದು ಕೊಟ್ಟಿಹರು ವೈಶ್ಯರಿಗೆ (ಮೋಹತ. ೨೦-೩೫); ಆಳವಟ್ಟ ಮಣಿಯ ಕುಂದಣದ ಮಗುಟದ ಸೊಬಗಿನ, ಕಿಜುಜವ್ವನದ ಬಿಂಕದ, ನಡೆವೊಂದು ಗಾಡಿಯ ಪುಷ್ಕಲಂ . . . ಪೋಪಮಸರದೊಳ್ (ರಾಮಾಶ್ವ. ೪೬-೦೬). **ಮಗುಡ$_1$** : ''ಮಗುಡಮೆಂದು ಮಕುಟಂ'' (ಶಬ್ದಮ. ೨೪-೫೦೫) : ಟಕಾರಕ್ಕೆ ಡಕಾರಂ . . . ಮಕುಟ — ಮಗುಡ (ಶಮದ. ೨೫೫ ಪ್ರಯೋ) ; ಪೊಸಬಾವನ್ನದಣ್ಣು ನಿಜುವಿಡಿದುಟ್ಟೊಳ್ಳುಡೆಯ ಸೊಗಸು ತಲೆಯ ಮಗುಡದಂದಂ . . . ಮನಂಗೊಂಡುದು (ಅದ್ಭುತ. ೫೩-೨೩).

[< ಸಂ. ಮಕುಟ ]

**ಮಗುಡ₁** 'ಮಗುಟ್ಚು' ನೋ.

**ಮಗುಡ₂** (ನಾ). ಒಂದು ಊರಿನ ಹೆಸರು : **P** ಈಗಿನ ಬಾವಾವಿಯ ಸಮೀಪದ ಮಹಾಕೂಟ : ಬುಧವಾರದನ್ದು[ಂ] ಮಗುಡಕೆ ಮಂದು ನಪ್ಪು ಕೇಸ(ಶ್ವ)ರಮು(ಮೂ)ಸೆಲ್ಲಂಗೆಯುಮಂ **ಕೊಟ್ಟ**[ರು] (ಇಅ. X, ೦೦೯-೯ : 934). [ ? ]

**ಮಗುಚ್ರ್ಚು** 'ಮಗುಟ್ಚು' ನೋ.

**ಮಗುವು** 'ಮಗಂ' ನೋ.

**ಮಗುವುತನ** (ನಾ). ಎಳಮೆ ; ಬಾಲ್ಯ ; ಶೈಶವ : ಮಗುವುತನದಲಿ ಬೊಂಬೆಯಾಟಕೆ ಮಗುವನೇ ತಹೆನೆಂದು ಬಂದಳು (**ಕುವ್ಯಾ,ಅ. ೩-೦೭**) ; ಜಗದ ಜೀವರ ಯಂತ್ರಮುಮಾಹೆಗಳನಾಡಿಸಿ ತೋರ್ಪ ನಾಟಕಿ ಮಗುವುತನದಲಿ ಬಾಲಕರ ಕೇಳೀಕಲಾಪದಲಿ ಸೊಗಸುವುದು ಸೋಜಿಗವಲಾ (**ತೊರಾ. ೦-೬-೭೭**). [ಮಗುವು (<ಮಗು) + —ತನ]

**ಮಗುಸಿ** (ನಾ). ಒಂದು ಊರಿನ ಹೆಸರು : ತಮ್ಮಿಜ್ಜಂ ಮಗುಸಿ ಮಾಕಳನ ದೇಗುಲಕ್ಕೆ ಮುಂದಿ × × × ಮಳ್ಗಟ್ಟಿಸಿದ (**ಎಕ. VIII, ಸೊರಬ. ೯೭೯-೦೯** ; 954). [ ? ]

**ಮಗುಳ್** 'ಮಗುಟ್' ನೋ.

**ಮಗುಳಿಚು** 'ಮಗುಟ್ಚು' ನೋ.

**ಮಗುಳು** 'ಮಗುಟ್' ನೋ.

**ಮಗುಳೆ** 'ಮಗುಟೆ³' ನೋ.

**ಮಗುಳ್ಚು** 'ಮಗುಟ್ಚು' ನೋ.

**ಮಗುಳ್ದು** 'ಮಗುಟ್' ಪರಾ.

**ಮಗುಳ್ದಂ** 'ಮಗುಟ್ದು' ನೋ.

**ಮಗುಟ್**, **ಮಗುಳ್**, ಮಗುಳು (ಕ್ರಿ). ಮಗುಳ್ದು, ಮಗುಟ್ದು (ಭೂತನ್ಯೂ). ೧. ಹಿಂತಿರುಗು ; ಮರಳು : "ಮಗುಟ್—ನಿವರ್ತನೇ (ಹಿಂದಿರುಗು)" (**ಕವುಶಾ**) ; ಶಂತನು ಪೊಟಲ್ಗೆ ಮಗುಟ್ದು ಮಂದವರಯ್ಯನಪ್ಪ ದಾಶರಾಜನಲ್ಲಿಗೆ ಕೂಸಂ ಬೇಡೆ ಪೆರ್ಗಡೆಗಳನಟ್ಟಿದೊಡೆ (**ಪಂಪಭಾ. ೦-೭೦ ವ**) : ಸೃಗಾಲತನಯನಂ ತದ್ರಾಜ್ಯದೊಳ್ ನಿಲಿಸಿ ಮಗುಟ್ದು ಬಂದು ಮಧುರಾಪುರದ ಪೊಱಪೊಱಲನೆಯ್ದಿದಲ್ಲಿ (**ಜಗ. ೬-೭೩ ವ**) ; ಮನದನ್ನಳಪ್ಪ ಕೆಳದಿಗೆಮನಮಂ ಮುಂದಿಟ್ಟು ಬಟಿಕ ಕಟಿಪಿದೊಡವಳಾತನ ರೂಪುಗಂಡು ಕಣ್ಗಂ ಮನಕ್ಕಮುಡ್ಗಾರವೆತ್ತು ಛೋಂಕನೆ ಮಗುಟ್ದಳ್ (**ಹುಚೋಹ. ೨-೩೩**). ೨. ಬೋರಲಾಗು ; ಮುಂಖ ಅಡಿಯಾಗು : 'ಪೆಡಂಮಗುಟ್' ಪರಾ. **ಮಗುಳ್** : ೧. ಶ್ರೀಮಂತು ಕೃಷ್ಣಕನ್ನಿಹ ದೇವರು ಜೋತಿ ಜಾತ್ರೆಮಾಡಿ ಮಗುಳ ಬನ್ದು (**ಸಇಇ. IX-i, ೭೯-೬**; 11ನೆಯ ಶತ) ; ಅಲ್ಲಿಂ ಮಗುಳ್ದುಬರುತಾ ಬಳಿಮುಲಾ ಮುನಿವರರ ಚರಣಂಗಳ ಕೆಲದಲಿಳಿಪಿದನು ಮಂಗಿಯ ಶವವನಾ ಭಟನು (**ಶಾಕ್ಯ,ಶಾ. ೨೦-೯೦**). ೩. ಮಡಿಚು ; ಮಡಿಸು : ರಥದಲಿ ಮಗುಳ್ದ ಮಂಡಿಯ ದೃಷ್ಟಿಯಿಹೋರೆಯಬಾಗಿದವಯವದ . . . ಬಲುಗೈ ಕರ್ಣ ಮೂದಲಿಸಿದನು ಪವನಜನ (**ಕುವ್ಯಾ,ದ್ರೋ. ೦೩-೨೦**). **ಮಗುಳು** : ೧. ಎನ್ನ ಮುಂದು ಮನೆಗೆ ಮಗುಳಿದ ಮಾಡದಿ . . . ಬೇಸರಳೆ ನಾನಿಲ್ಲದೆ ? (**ಗೀಪಂ, ೩೪-೦೩**).

**ಮಗುಟೆ³**, ಮಗುಳೆ (ಅ). ಮತ್ತೆ : ಪುನಃ ; **ತಿರುಗಿ** : ಬಡವರ್ಗೆಮಗೀ ವ್ರತಂಗಳ್ ಪಿಗೆಯ್ವುವು ಇವಂ ನಿನಗಿತ್ತವರ್ಗೆ ಮಗುಟೆ³ ಕೊಟ್ಟು ಬರ್ಪಂ ಬಾ (**ಜಾವುಂಪು. ೬೮**) ; ನೀವೀ ಕಥೆಯಂ ಮಗುಟೆ³ ಪೇಟಲ್ ಬಲ್ಲಿರೆ (**ಶಾಕಶಂ. ೨೦-೦೦**) ; ಭೂಪಾಲಂ ಸೌಂದರವತಿಯುಂ ಛೋಂಕನೆ ಸಿಂಗರಿಸುವುದೆಂದುಸುರ್ದು ಮಗುಟೆ³ ಕಟುಪಿದನವರಂ (**ಉದ್ಭ,ಟಿ. ೮-೨೦**). ಮಗುಳೆ : ನೆಗೆಯಲುಘೆಯುಘೆ ಶಬ್ದ ಒಗೆಯೆ ಮಂದುಭಿ ಶಿವಂ ಮಗುಳೆ ಮೂರ್ಛೆಗೆ ಘ್ರಾಣವೆಸಗಿ ಸುಡಿದಂ (**ಸಅಪಂಕ. ೦-೮೮**) : ಆಗಳಲ್ಲಿಂ ಮಗುಳೆ ನೆಲಸಿದ ಬೇಗದಲಿ ಸಿರಿವೊಳಲ ನರಹರಿ (**ಸಂಪಕ. ೬-೦೨೮**) : ಕಗ್ಗಲ್ಗಳೊಸರ್ದುವಾ ಕೊಯ್ದು ಫಲತತಿ ಮಗುಳೆ ಫಲವಾದುವು . . . ಪಟ್ಟಲುಬ್ರಿಹ್ಮ ಘೂತಳದೊಳವತರಿಸಲು (**ತಂಪು. ೪-೩೯**). 'ಮಗುಟ್ದಂ' ಪರಾ.

**ಮಗುಟೆ³ಮಗುಟೆ³** , **ಮಗುಳೆಮಗುಳೆ** (ದ್ವಿರುಕ್ತಿ) : "ಪ್ರತಿಕ್ಷಣಂ, ಅಭೀಕ್ಷ್ಣಂ, ಭೂಯಃ, ಅಸಕೃತ್, ಮುಹುಃ — ಈ ೫ ಮಗುಟೆ³ ಮಗುಟೆ³" (**ಹಲಾಯು. ೦೨೦-೩೯**) ; ದಿವ್ಯಾಹಾರಮಂ ಮಗುಟೆ³ಮಗುಟೆ³ ಬಡ್ಡಿಸೆ (**ಪದ್ಮಾರಾ. ೯೯-೨೯**); ಮಗುಳೆಮಗುಳೊಡ್ಡಿದನು ಹೇರಾಳದಲಿ ಧನವನು (**ಕುವ್ಯಾ,ಸ. ೦೯-೩೯**). ಮಗದೊಬ್ಬ=ಮತ್ತೊಬ್ಬ ; ಬೇರೊಬ್ಬ : ಬ್ರಹ್ಮಶರ್ಮನೆಂಬ ವಿದ್ವಾಂಸನಿದ್ದನು. . . ಈತನ ಬಳಿಯಲ್ಲಿ ಒಬ್ಬ ಶಿಷ್ಯ ವ್ಯಾಕರಣವನ್ನೂ . . . ಮಗದೊಬ್ಬ ತರ್ಕವನ್ನೂ ಓದುತ್ತಿದ್ದರು (**ನಾಕಿಶಂ. VII, ೦೩**). ಮಗುಳೊಂದು , ಮಗದೊಂದು=ಮತ್ತೊಂದು ; ಬೇರೊಂದು: ಎಚ್ಚಱು ಬಹಳ ಪೋಪರೆ ಶಕ್ಯವಿಲ್ಲೆಂದು ಮಚ್ಚರವಳಿದು ಕೊಂಡಾಡಿ ಸ್ವಚ್ಛದಿ ಮಗುಳೊಂದು ಬುದ್ಧಿಯ ನೆನೆದುಕೊಂಡುಚ್ಚರಿಸಿದ ಮನದೊಳಗೆ (**ಮೋಹತ. ೦೦-೨೦**); ಈ ಪ್ರಾಣಿಯ ಹಿಂದೆ ಅಂತಹುದೇ ಮತ್ತೊಂದು ಪ್ರಾಣಿ; ಅದರ ಹಿಂದೆ ಮತ್ತೊಂದು ; ಅದರ ಹಿಂದೆ ಮಗದೊಂದು (**ಗಂಶ್ರ. ೩**); ಕನ್ನಡಲಿಪಿಯ ಬೆಳವಣಿಗೆಯಲ್ಲಿ ಅದರ ಪ್ರಾರಂಭದಿಂದ ಕ್ರಿ.ಶ. ೫ನೆಯ ಶ.ದ ವರೆಗೆ ಒಂದು . . . ಕ್ರಿ.ಶ. ೧೪ನೆಯ ಶ. ದಿಂದ ೧೮-೧೯ನೆಯ ಶ.ವರೆಗೆ ಮಗದೊಂದು . . . ಹೀಗೆ ಐದಾರು ಮುಖ್ಯಮಜಲುಗಳನ್ನು ಕಾಣುತ್ತೇವೆ (**ದ್ರ್ಯಾಲಿ. ೬೨**). [ <ಮಗುಟ್ ]

**ಮಗುಟ್ಚು**, ಮಗುಚು, ಮಗುಚ್ರ್ಚು, ಮಗುಳಿಚು, ಮಗುಳ್ಚು, ಮೊಗಚು, ಮೊಗುಚು (ಕ್ರಿ). ೧. ಹಿಂದಿರುಗಿಸು; ಮರಳಿಸು : "ಮಗುಟ್ಚು—ಪರಾಙ್ಮುಖೀಕರಣೇ (ಹಿಂದಿರುಗಿಸು)" (**ಕವುಶಾ**); ತುಱುವಂ ಮಗುಟ್ಚು (**ಇಂ. ೦೯೯೭, ಹಾಸನ.೨೦೩-೩೩**; 850) ; ಗೋಗ್ರಹಣದೊಳ್ ತನಗಾಗಿ ಕಾದಿ ತುಱುವಂ ಮಗುಟ್ಚಿದುದುಮಂ ನೆನೆದು (**ಪಂಪಭಾ. ೦೨-೦೭ ವ**) ; ಬಿನ್ನಾಂಡಿ ತುಱುವ ಮಗುಟ್ಚಿ ಸುರಗತಿಗೆ ಸನ್ದ (**ಪ್ಯಾಅಂ. ೦೯೪೦, ೨೩-೦೩**; 1030). ೨. ಕಾರು; ವಾಂತಿಮಾಡು: ತೆಗೆದಂಬುಜಮಧುರಸವಂ ಪಗಲೆಲ್ಲಂ ಕರಪುಟಂಗಳಿಂ ಪೀರ್ದುದನಾ ಗಗನಪಥಶ್ರಮದಿಂ ರವಿ ಮಗುಟ್ಚಿದಂತಾಯ್ತು ಮಿಸುಪ ಕೆಂಬಿಸಿಲುಗಳುಂ (**ಕಾರಂಪೂ. ೩೦೦**); ಆ ತಪನಂ ತಪನೀಯದೀಧಿತಿಪ್ರಸರಮನಟ್ಟಿಸಲ್ ನೆಱೆಯದಿಂತು ಮಗುಟ್ಚಿದನೆಂಬಿನಂ ವಿರಾಜಿಸಿದುದು ಪೊಂಬಿಸಿಲ್ (**ಕುಸುವಿಇ. ೯-೬**); ಮಿಱಿ ಬಾಯ್ಗಳಿಂ ನೆಣನುಗೆ ನೆತ್ತರುಚ್ಚಳಿಸೆ ಜಾದಿನ ಬೆಟ್ಟು ಮಗುಟ್ಚುವಂತೆ ಭಂಡಣದೆಡೆಯೊಳ್ ಪೊಣರ್ವ ಪಲವಾನೆಗಳಂ ಕಡಿಪಿತ್ತದೊಂದು ಮನ್ನಣೆವಡೆದಾನೆ (**ಕಬ್ಬಿಕಾ. ೨೮೯**). ೩. ಅರೆ ; ಸಣ್ಣಿಸು ; ತೇಯು : ತಮ್ಮ ಮುಃ ನೆರೆಪಿದಾಯುಷ್ಯಂಬರಂ ಮಾಯುಮಾಗದು ಮೆಯ್ ಸಣ್ಣಿಗೆಯೊಳ್ ಮಗುಟ್ಚಿದೊಡಮೇಂ ದುಃಖಿಕ್ಕವರ್ ನೋಂತರೋ (**ಅದಿಪು. ೩-೯೩**) : ಗಂಧನಿಷದ್ಪತಕ್ಕೆ ಸಮಘವರ್ಗಂ ಗಾತ್ರದೊಳ್ ಪೊನ್ಮೆ ಪಜ್ಜಳಿಸಲ್ ಕುಟ್ಟಿ ಮಗುಟ್ಚುವರ್ ವರವಿಳಾಸೋದ್ಧಾವೆಯರ್ ಭಾಮೆಯರ್ (**ಕುಸುವಿಇ ೨-೦೦೭**);ತೆರಳ್ವ ಕಂಪು ನೆಲದೊಳ್ ನಱುಸುಯ್ಗಳ ಗಾಳಿ ತೋಟಿಯುಂ ತೆಗೆದು ಮಗುಟ್ಚಿ ಕಸ್ತೂರಿ ಮಗುಟ್ಚುವರಲ್ಲಿಯ ಘಟ್ಟಿವಳ್ತಿಯರ್ (**ಸೂಕ್ತಿಸು. ೯-೦೦೯**). 'ಗಟ್ಟಿಮಗುಟ್ಚು' ಪರಾ. ೪. ನಂದಿಸು ; ಆರಿಸು : ಕಾಲಸೊತ್ತಿಂಗುಂ ತಂಬುಲಮಿಕ್ಕಿಂಗುಂ ತಲೆಯನಿಗುರಿಸಿಂಗುಂ . . . ಬಾಲೆ ಸೊಡರಂ ಮಗುಟ್ಚಿಂಗುಂ (**ಮಂದಿ. ೦೦-೬೨**). **ಮೊಗುಚು** : ೧. ತುಱು ಪರಿಯೆ ಕಾದಿ ತುಱುವ ಮಗುಚಿ ಸುರಲೋಕಪ್ರಾಪ್ತನಾದ (**ಎಕ. VII, ಶಿಕಾ. ೩೩೩-೩**; 1200); ಜನಪ ಮಾಡಿದ ಹಂಗ ಮಗುಚುವಡೆನಗೆ

ಶೀರುವದಲ್ಲ ಚತುರಾನನಪರಮಾಯುಷ್ಯಪರಿಯಂತಂ (ತೊರಾ. ೯-೩-೨೦) ; ಂಗದೆ ಹಿಂದೆ ಹಲವು ಕಾಲಂ ತನ್ನಂಗದ ಮೇಲೆ ಧರಿಸಿಕೊಂಡಿರ್ದಾ ಹಂಗಂ ಮಗುಚುವೆನೆನುತುಜಿ ಭಾವಿಸಿ (ಜಯಶಾ. ೧೩-೧೧). ೫. ಹಿಂದಿರುಗು; ಮರಳು : ಪೆಗಲ ಹಿರಿಯುಬ್ಬಣವ ಕೈತಳ ಮಗುಚಲಮ್ಮದು ವಾಘೆಯಲಿ (ಕುವ್ಯಾ.ಗ. ೨-೦೩); ಕೌರವಯೋಧಶ್ರೇಷ್ಠರು ಮರಳಿ ಮಗುಚಿ ಬರುವದಿಲ್ಲವೆಂದು ಯೋಚಿಸಿ (ಕೃಷಾಶೀ. ೯೮). ೬. ಸುತ್ತು; ತಿರುಗು : ಮಗುಚುವ ಭರಕಿಡೆಬಲಕೊಳದಾ ತೇಜಿ ಮೊಗಗೊಟ್ಟು ತಿರಿವಾಗ ಹಮುಕೆ ಮೊಗಗಳಿರಷ್ಟೂ ನಾಲ್ಕೊ ಯೆಂಟೊ ಹೊ ಅಗಣಿತ ಮೊಗವೊಯೆಂದೆನೆ ವಿರಾಜಿಸಿತು (ಭರತ. ೨೯-೨೩). ೭. ತಳಮೇಲು ಮಾಡು ; ಬುಡಮೇಲುಮಾಡು : ಬಿಜೀಗಾಳಿ ಗಿರಿಗಳ ಮಗುಚಿ ಮುಜಿದುವು (ಕುವ್ಯಾ.ಸ. ೧೩-೯೦) ; ತೊಳೆಸುವಾಗ ಅಥವಾ ಮಗುಚುವಾಗ ಹೈಯನ್ನು ಹೆಚ್ಚು ಎತ್ತರಕ್ಕೆ ಎತ್ತುವಂತೆ ಆಗಬಾರದು (ಅಪುಶಾ. ೦೩). ೮. ಅಡಿಮೇಲಾಗು ; ಬೋರಲಾಗು : ಎಲ್ಲಿಯುರಿ ಪತ್ತುವುದೋ ಹಡಗೆಲ್ಲಿ ಮಗುಚುವುದೊ (ಕೃತಿಶೋ. ೩೯-೦೧). ೯. ಕವಿ ; ಆವರಿಸು: ಜಲನಿಧಿ ಮಗುಚಿ ಮಹಿಯನು ಮೊಗೆವ ಮಗುವಿನ ನುಡಿಗೆ ಪ್ಯೊಗೊಡುವ . . . ಕೃಪೆಯನೆನ್ನಲಿ ತೋಜಬೇಕು (ಕುವ್ಯಾ.೨೯. ೩-೬೨); ಕೆಲವೊಮ್ಮೆ ಪ್ರವಾಹ ಹೆಚ್ಚಿ ದಡವನ್ನು ಕೊರೆಯುವುದೂ ಮೇಲೆ ಮಗುಚಿ ಹರಿಯು ವುವೂ ಸಹಜ (ಸಂಕೋರ. ೬೩); ಊರಿಗೆ ಊರೇ ಮಗುಚಿ ಬಂತು (ಶಂತಾಪ್ಯು. ೯). **ಮಗುಚುರ್ಚ** : ೧. ವಿಂಣ್ಣಗಾವುಣ್ಣ ಓಟೂರ ತುಱು ಗೆವಲಿ ತುಱುವ ಮಗುಚ್ಚಿರ್ಚೆ ಹಲರಂ ಕೊಂನ್ನು ಸುರಲೋಕಪ್ರಾಪ್ತನಾದ (ಎಕ. VIII, ಸೊರಬ. ೬೨-೩; 1034 ?) ; ಕಾದಿ ತುಱುವಂ ಮಗುಚ್ಚಿ (ಮೈ.ಆಂ. ೦೯೯೩, ೭-೯ ; 1150). ೧೦. (ಚೀಲ, ಬಟ್ಟೆ ಮೊದಲಾದುವು ಗಳಂತೆ) ಒಳಗನ್ನು ಹೊರಗೆ ಮಾಡು : ಪ್ರಾರಬ್ಧಸ್ಕಾಂತಗಮನಂ ಮಹಾ ಪುರುಷಕ್ಕ ಲಕ್ಷಣಮೆಂದಿ ಕುಸಿಯಲಾಗದೆಂದು ಖಿಂಜಂ ಪೊಱಗಾಗೆ ಮಗುಚ್ಚಿ ಪೇಱುಂ ತಿದಿಯುಮನೇಱುಂ ಪಕ್ಕಿ ಕೊಂಡು ನೆಗೆದು (ಪಂಪಾ. ೯-೩೭ ವ). **ಮಗುಳಿಚು** : ೧. ಖಂಡಯದ ಮೊನೆಯಲಿ ಮಗುಳಿಚುವರೇ ತನ್ನನೆನು ಸುರವಣಿಸಿತಮಳಾಸ್ತ್ರ (ಕುವ್ಯಾ.ದ್ರೋ. ೦೯-೯೭). **ಮಗುಳ್ಚು** : ೧. ಬೊಪ್ಪ ಗಾವುಣವರು ತುಱುವ ಮಗುಳ್ಚಿ ಸುರಲೋಕಪ್ರಾಪ್ತರಾದರು (ಎಕ. XVI, ತೃಷಾ. ೬೦-೩; 1124); ಸೀಬಿಯ್ಯ ಪಱಿದು ಹಲರಂ ಕೊಂದು ತುಱುವೆಲ್ಲಂ ಮಗುಳ್ಚಿ ಸುರಲೋಕಪ್ರಾಪ್ತನಾದಂ (ಎಕ. VII, ಶಿಕಾಪು. ೩೭-೭; 1180); ಮುನಿದಹಿತಗೆಯ್ವೆಲ್ಲಿಯುಂ ಮಗುಳ್ಚಿಮಹಿತಮಂ ಗೆಯ್ಯಮೆ ಮಾಸಜಿತವರ ಕರಿಸಲಂ (ಕುಪಲ್. ೦-೩೨-೨). ೨. ಘನರಾಹುವೀದುವಂ ತಿಂದು ನಭಸ್ಥಳ ದೊಳೆ ಮಗುಳ್ಚಿದಂತೆ . . . ಪಾಂಜದೇಂ ರಂಜಿಸಿತೋ (ರಾಜಶೇ. ೯-೩). ೩. ಸುಳಿಗುರುಳಾಪೆ . . . ಕರ್ಣಪೂರಿತೋತ್ಪಲವೊಲೆಪಾಡೆ ಗಟ್ಟಿಗಳ ಸಂದು ಮಗುಳ್ಚಿದರಿಂದುವಕ್ತ್ರೆಯರ್ (ಗಂಕ. ೨-೯೦). **ಮೊಗಚು** : ೧೧. ತಿರುವಿಹಾಕು ; ತಿರುಗಿಸು : ತಮ್ಮಲ್ಲಿದ್ದ ಪುಸ್ತಕಗಳನ್ನೆಲ್ಲ ಮೊಗಚಿದರು (ದೀಣಾಳ. ೦೦೯). **ಮೊಗುಚು** : ೧. ಚಿಕ್ಕಗೊಂಡನ ಮಗ ಕಾಬೈಯ ನಿಱಿದು ತುಱುವ ಮೊಗುಚಿ ಪರಲೋಕಪ್ರಾಪ್ತನಾದ (ಎಕ. III, ಪಾಂಶ್ಯ. ೩೩-೦೩; 1199).

ಮಗುಚಿಕೊಳ್ಳು, **ಮೊಗಚಿಕೊಳ್ಳು** = ೧. ಅಡಿಮೇಲಾಗಿ ಬೀಳು; ಬೋರಲಾಗಿ ಬೀಳು: ಪಾಪದ ಹೊರೆ ಹೊತ್ತು ಕೆರೆಗೋ ಬಾವಿಗೋ ಮಗುಚಿಕೊಂಡಿದ್ದಾಳೆ (ಸವಣ. II, ೦೦೨೦) ; ದೋಣಿ ಮೊಗಚಿಕೊಂಡು ಬಿದ್ದಿತು (ಗಂಶ್ರ.೯). ೨. ಬೋರಲಾಗು ; ಬೆನ್ನು ಮೇಲೆ ಮಾಡಿ ಮಲಗು: ಇಂದು ಅವರ ಮಗು ಮಗುಚಿಕೊಂಡಿತೆಂದು ಸಕ್ಕರೆ ಹಂಚಿದರು (ಬಾ). **ಮೊಗಚಿಬೀಳು** = ಕುಸಿದು ಬೀಳು : ಮೇಲಿನ ಕಟ್ಟಡವು ಮೊಗಚಿಬೀಳುತ್ತದೆ (ದೇವೀಚ. ೭೩).

[ಮಗುಚಿ + — ಚು. / ತುಳು. ಮಗುಚು, ಮಗುಪು; ತೆಲು. ಮ್ರುಗುಚು, ಮಗುಡುಚು, ಮಗುಡ್ಚು ]

**ಮಗುಟ್ಚು** 'ಮಗುಟಿ' ಪರಾ.

**ಮಗುಟ್ಚಿಂ**, ಮಗುಳ್ದುಂ (ಅ). ಪುನಃ ; ಮತ್ತೆ; ತಿರುಗಿ : ಮಗುಟ್ಚಿಂ ಪಾ[ತ್ರಿನ] ಪಾತಂ ನೆಗೞ್ದರೆ ಪೇಟ್ಯಾಗಳಕ್ಕುಮಾ ವ್ಯಾವೃತ್ತಿ (ಶಬ್ದಾ. ೩-೨೦೦); ಪತ್ರಲೇಖೆಯುಂ ಕಟಾಪಿ ಮಗುಟ್ಚಿಂ ಬಂದು ಪೊಡಮಟ್ಟು ಮೇಘನಾದನನಿದಿರೊಳ್ ಕಂಡು. . . ಚಂದ್ರಾಪೀಡನೀತೆಂದಂ (ಕಾದಂಬ. ೫೬೩). **ಮಗುಳ್ದುಂ** : ಸುತೆ ನೀಂ ತನಯಾರ್ಪಿತರಾಜ್ಯನಪ್ಪ ನಿನ್ನದು ಪತಿಯೊಡನೀಕ್ಷಿಸುವೆ ಮಗುಳ್ದುವಿಹಾಯಾಶ್ರಮಮಂ (ಚಾಕುಂತ. ೩೬-೯೬). 'ಮಗುಟಿ' ಪರಾ. [ < ಮಗುಟು ]

**ಮಗೆ**$_1$ 'ಮೊಗೆ$_2$' ನೋ.

**ಮಗೆ**$_2$, ಮಖೆ (ನಾ). ೧. ಪ್ರಸಿದ್ಧವಾದ ಇಪ್ಪತ್ತೇಳು ನಕ್ಷತ್ರಗಳಲ್ಲಿ ಹತ್ತನೆಯದು ; ಮಘಾನಕ್ಷತ್ರ : "ಮಗೆ — ಮಘಾ — ಒಂದು ನಕ್ಷತ್ರ" (ಕರ್ನಕೋ. ೩೩); ದುಡಿತ ಹೋಯಿತು ಮಗೆಯ ಮಳೆಯೊಲ್ (ಕುಪು. ೦೯-೨೨). ೨. ಮಘಾನಕ್ಷತ್ರದಲ್ಲಿ ಬರುವ ಮಳೆ : ಬಂದರೆ ಮಗೆ ಬರದಿದ್ದರೆ ಹಗೆ (ಗಾದೆ). **ಮಖೆ** : ೧. ಮಖೆ ಅವಳದ ಹಾಗೆ ೫. . . ಹಸ್ತ ಕೈಬೆರಳಿನ ಹಾಗೆ ೫ (ಶಾಸ್ಕರ. ೭೦-೩); ಮಘಾ (೧೦) ನಕ್ಷತ್ರವು ಕಾಂತಿವೃತ್ತದ ಮೇಲೆಯೇ ಇದೆ (ನಕ್ಷತ್ರ. ೬೯). ೩. (ಕರಾ) (ಶಿವರಾತ್ರಿಯಂದು ಆಚರಿಸುವ) ಒಂದು ಉತ್ಸವ : ಶಿವರಾತ್ರಿಯ ಮಖೆಯು ಅಚ್ಯುತನಿಗೆ ಹಬ್ಬವಾಗಿದ್ದರೂ ಜೈನಬಾಲಕ ನಾಗರಾಜನಿಗೆ ಹೆಚ್ಚಿನ ಹುರುಪನ್ನು ಅದು ಕೊಡಬೇಕಾಗಿರಲಿಲ್ಲ (ಮುಗಿಯ. ೦). [<ಸಂ. ಮಘಾ]

**ಮಗ್ಗ** (ನಾ). ೧. ಬಟ್ಟೆಯನ್ನು ನೇಯುವ ಯಂತ್ರ : ನಮ್ಮ ದೇವರಿಗೆ ಆ ಕನ್ನೆಲ್ಲಿಯುಲು ಯೆರಡು ಮಗ್ಗವನು ಸುಂಕಮಾನ್ಯವಾಗಿ . . . ಕೊಟ್ಟು ಧರ್ಮ್ಮಶಾಸನ (ಎಕ. IX, ಬೆಂಗಳೂ. ೦೩೨-೦೨; 1408); ನವಮಗ್ಗೊಂದು ಮಗ್ಗವ ತೋಱಬೇಕು (ಅಪುಸಾಂ. ೩-೦೭೦); ಹೊಲಿಗೇಯಂತ್ರ, ನೇಯುವ ಮಗ್ಗಗಳೂ ಇದ್ದುವು (ಹುಟ್ಟಿ.ಹ. ೭): ಮಗ್ಗ ನೇಯಲಿಕ್ಕೆ ತಿಳಿಯದಿದ್ದರೂ ಹಗ್ಗ ನೇಯಲಿಕ್ಕೆ ತಿಳಿಯದೇ ? (ಗಾದೆ). ೨. ನೇಯುವ ಯಂತ್ರದ ಮೇಲೆ ಹಾಕುವ ಒಂದು ಬಗೆಯ ತೆರಿಗೆ : ಚಿಕ್ಕಬೇಳಗಲಿಯ ಮಗ್ಗ ಪಟ್ಟಿ ಕಾರುಕದೆಱೆಯೊಳಗೆ ನಿಬನ್ಧಿಯಾಗಿ ನನ್ದಾದೀವಿಗೆ ಕೊಟ್ಟ ಪ ೩ (ಎಕ. XV, ಹೊಳೆನ. ೯೯-೯; 1267); ಸುಂಕ ಮಗ್ಗ × × ತಳವಾಱಕೆ ಕಾಣಿಕೆ ಕಷ್ಟಾಯ ಬೀಡಗೋಳು (ಎಕ. X, ಮುಳಬಾ. ೨೦-೨; 1468). 'ಮಗ್ಗದೆಱೆ' ಪರಾ. [ದೇ.॥ ತಮಿ. ಮಲ. ಮಕ್ಕಮ್ : ತುಳು. ತೆಲು. ಮಗ್ಗ./ಮರಾ. ಮಾಗ್]

**ಮಗ್ಗತೆಱಗೆ** (ನಾ). = ಮಗ್ಗ ೨ : ನನ್ನರಸನೊಡೆಯರು ಪೂರ ನನ್ನು ನಾಥದೇವರ ಶ್ರೀಕಾರ್ಯಕ್ಕೆ ಬಿಟ್ಟ ಮಗ್ಗತೆಱಗೆ ಸಾಮ್ಯ (ಪ್ಯ.ಆಂ. ೦೯೭೮, ೩೩-೭; ?). [ಮಗ್ಗ + ತೆಱಗೆ]

**ಮಗ್ಗದೆರೆ** 'ಮಗ್ಗದೆಱೆ' ನೋ.

**ಮಗ್ಗದೆಱೆ**, ಮಗ್ಗದೆರೆ (ನಾ). = ಮಗ್ಗ ೨ : ಮಗ್ಗದೆಱೆ ಪಂಚಕಾರುಕ . . . ದೇವಪ್ರಸಾದ ಗದ್ಯಾಣವೆರಡ ಕೊಂಬುದು (ಎಕ. V, ಹಾಸನ. ೦೩೩-೯; 1114 ?): ಪೊಱವಾಱೊಳವಾಱ ಮಗ್ಗದೆಱೆ . . . ಮನೆಸುಂಕ ನೆಱೆವಾಲಪತ್ತಿಯ ಸುಂಕವಿನಿತಂ (ಪ್ಯ.ಆಂ. ೦೯೪೦, ೨೯-೯ ; 1173) ; ಕಬ್ಬಿಲದೆಱೆ ಮಗ್ಗದೆಱೆ ಕಾವಲಿದೆಱೆ (ಎಕ. VI, ಕಡೂರು. ೯೬-೪೦ ; 1291). **ಮಗ್ಗದೆರೆ** : ಬೇಡಿಗೆ ಬೀಜವರಿ ಮಣುದೆರೆ ಮಗ್ಗದೆರೆ ಸುಂಕ ಸೊಡಿಗೆ . . . ಕುದುರೇಸುಂಕಯಿವು ಮೊದಲಾದವೆಲ್ಲಾ × × ಲವು (ಎಕ. X, ಕೋಲಾರ. ೨೪೭-೨೮ ; 1637). [ಮಗ್ಗ + ತೆಱೆ$_3$]

**ಮಗ್ಗಲು** 'ಮಗ್ಗುಲ್' ನೋ.

**ಮಗ್ಗಾರೆ**, ಮಂಗರೆ, ಮಂಗಾರೆ (ನಾ). ಒಂದು ಬಗೆಯ ಕಾರೆಗಿಡ : "ಮಂಗಾರೆ ಮಗ್ಗಾರೆಯುಕ್ಕುಂ" (ಚಂಗಣಾ. ೩೬-೧೭); ಮಗ್ಗಾರೆಯ ಪಣ್ಗಳನವಜಿಗೊಗ್ಗಿನೊಳಾಗಿಸಿ ಬಟ್ಟಿಕ್ಕಮಂತಾ ಕರಿಯಿಂದಗ್ಗಳಿಕೆವಡೆವ ವಿಷಮುಂ ಮಗ್ಗುಗುಮಾ ಪಣ್ಗಳಾಜಿಗುಂ (ಕಮದ. ೦೬-೧೦೦);ಬೆಲ್ಲ . . . ಮಗ್ಗಾರೆಕಾಯಿ ಇವಿಷ್ಟನು ಎಮ್ಮೆಯ ತುಪ್ಪದಿಂದ ಮರ್ದಿಸಿ ಕಾಲಿಗೆ ಇಕ್ಕಿಸಲು ಕಾಲ ಬೀಟೆ ಹೋಗುವುದು (ವೈದ್ಯಕಾ. II. ೦೬೮) ; ಕಾರೆ ಮಗ್ಗಾರೆ ಗೂಳವು ಮುಳ್ಳುಬೊಬ್ಬುಲಿ . . . ಮುಳುಬೇಲಿಗಳ್ ಸೇರಿ ಮುಟ್ಟಹುವಾಗಸವನು (ಕೃಷಿ. ೦೮-೩೩). **ಮಂಗರೆ :** ಭದ್ರಮುಸ್ತೆ . . . ಮಂಗರೆಕಾಯಿ ಇವಂ ಹಸುವಿನ ಹಾಲಿನಲ್ಲಿ ಸಣ್ಣನಾಗರೆದು ಜೇನುತುಪ್ಪ ವೆರಸಿ ಸೇವಿಸೆ ವಾಂತಿಯಾಹುದು (ಸಕವೈ. ೦೮೩). **ಮಂಗಾರೆ :** ಬಕುಳಂ ಮಂಗಾರೆಯಾಚಂ ಪುಲಿಂಗಿಲೆರಂ (ಚಾದವ. ೪-೩೨); ಪುಣಿಸೆ ಹೆಗ್ಗವಣೆ ಮಂಗಾರೆ . . . ಹೊನ್ನೆ ಮೊದಲಾದ ವೃಕ್ಷಂಗಳಿಂ ಗಿರಿಯು ತಪ್ಪಲದರಣ್ಯಂ ತೋರಿದತ್ತರುಣರುಚಿ ನಸುಳಲೀಯದಂತೆ (ಮಹಾಪ. ೦೭-೨೬); ಗೋಣೆ ಗೋರಂಟೆ ಮಲ್ಲಿಗೆಯು ಮಂಗಾರೆ ಬೆಟ್ಟದಾವರೆಗಳಿಂದಾ ವನಂ ಕಣ್ಗೆಸೆದುದು (ಸಿದ್ಧಕಾ. ೬-೦೭). [ ? + ಕಾರೆ$_1$]

**ಮಗ್ಗಿ** (ನಾ). [ಗಣಿತ] (೨ × ೨ = ೪ ಎಂಬಂತೆ) ಒಂದರಿಂದ ಹತ್ತರವರೆಗೆ ಅಥವಾ ಮುಂದಕ್ಕೆ ಕ್ರಮವಾಗಿ ಗುಣಿಸುವ ಅಂಕಿಗಳ ಪಟ್ಟಿ; ಅಂಕಗಣಿತದ ಕೋಷ್ಟಕ : ಒಲವಿನಾಗಮದ ಗಣಿತದ ಗುಣಿತಪ ತಾ ಕಲಿವೆನೆನುತ ಹರಿಸೂನು ನೆಲಸಿದ ಮೊದಲ ಮಗ್ಗಿ[ಪಾಠಾಂ. ಮೊಗ್ಗೆ]ಯ ಮೂರೇಖೆಯ ಗೆಲುವಂದವಾ ತ್ರಿವಳಿಗಳು (ಶ್ರೀಪಾಂ. ೩-೩೩); ಮಗ್ಗಿಯ ಕೂಡಿ ಕಳೆಯೆನೆ ಹರಿಯ ನಾಮದ ಕೂಡಿ ಕಳೆವನು (ಪ್ರಹ್ಲಾದ. ೬-೪); ಮಗ್ಗಿ ಕಂಠಪಾಠ ಮಾಡುವುದು . . . ಬೇಸರ ಹುಟ್ಟಿಸುವ ಕೆಲಸ (ಶಿಕ್ಷದ. ೨೪೩).

**ಮಗ್ಗಿಯ ಸೂಜಿ** = (?) : ರಾಜಸುತರ ನುಣ್ಗೊರಳೆಂಬ ಮಗ್ಗಿಯ ಸೂಜಿಯ ಮೇಲೆ ಮಸ್ತಕವ ರಾಜಿಪ ಬೊಗರಿಯಂತೊಲೆದಾಡಿಸಿದನವ ಸೋಜಿಗವಡೆಯೆ ಗಾಯಕರು (ಪಾಗಳು. ೦೨-೯೩). [ದೇ.|| ತುಳು. ಮಗ್ಗಿ]

**ಮಗ್ಗಿಗ** (ನಾ). ದಾರಿಯಲ್ಲಿ ಹೋಗುವ ಪ್ರಯಾಣಿಕ; ಪಾಂಥ : ಮಹಾದೇವಪಣಂಗಿಪುರ ಬ್ರಾಹ್ಮಣೆ ಕಂಚಿಕಬ್ಬೆಗಳು ತಕ್ಕರ ಮಗ್ಗಿಗರ ಭೋಜನಕ್ಕೆ ಪೊಂಗೆ ವರಿಷಕ್ಕೆ ಇಪ್ಪಣ ವೃದ್ಧಿಯುಲು ಊರ ಮೇಲೆ ಕೊಟ್ಟ ಗದ್ಯಾಣ ಅಯಿದು (ಸೌಇಇ. XX, ೮೨-೩೯; 1122). [<ಸಂ. ಮಾರ್ಗಿಕ]

**ಮಗ್ಗಿಲು** 'ಮಗ್ಗುಲ್' ನೋ.

**ಮಗ್ಗಿಸು** 'ಮಟ್ಟಿಗೆಸು' ನೋ.

**ಮಗ್ಗು$_1$** 'ಮಬ್ಬು' ನೋ.

**ಮಗ್ಗು$_2$** 'ಮೊಗ್ಗೆ' ನೋ.

**ಮಗ್ಗುಗೆ** (ನಾ). ಕುಗ್ಗುವಿಕೆ ; ಕಡಮೆಯಾಗುವಿಕೆ : ವ್ಯಾಧಿಪ್ರಶಮಃ = ಕಾತ್ರದ ಮಗ್ಗುಗೆ (ಚಿಕಿಪಾ. ೯-೯೪) ; ಉಪಶಾಂತಾ = ಮಗ್ಗುಗೆಯೊಳ್ (ಚಿಕಿಪಾ. ೨೪-೩೩). [ಮಗ್ಗು$_1$(<ಮಬ್ಬು) + —ಗೆ]

**ಮಗ್ಗುಲ್**, ಮಗ್ಗಲು. ಮಗ್ಗಿಲು. ಮಗ್ಗುಲು (ನಾ). ೧. ಬದಿ : ಪಕ್ಕ; ಪಾರ್ಶ್ವ : ಬೆಟ್ಟದ ಮೂಲೆವಿ ಬೆಟ್ಟದ ಮಗ್ಗುಲನೆ ಬನ್ದು ಕೂಡಿತ್ತು ಪೊಲವಾರ (ಮ್ಯಾಆ. ೦೯೨೦, ೯-೨೬ ; 2077) ; ಅಸಿತಾಂಬುಜದಿವ್ಯಗಂಧ ದೊಳ್ಪೊರೆದು ಮರಲ್ದು ತೂಂಕಡಿಪ ವನ್ಯಮೃಗಂಗಳ ಮಗ್ಗುಲೊಳ್ತಿರಂ ದಿದಿದು . . . ಪರೆದೆಸಗಿತ್ತತಿಪ್ರಮದಕಾರಣಕಂದು ನಿಶಾಸಮೀರಣಂ (ಕಾದಂಪೂ. ೩೮೩) ; ಒಂದು ಮಗ್ಗುಲೊಳ್ ಪಕ್ಕಯನಿತ್ತು ಸಾಕಿದುದ ನೋಡುತಲಿನ್ನಯ ನಾಯನೆಕ್ಕಲಂಗಿಕ್ಕಿದಂ (ಸೂಕ್ತಿಸು. ೩-೨೨೪). ೨. ದೇಹದ ಪಕ್ಕೆ; ಬರಿ : ನತಮುಂ ಮಾಂಸಳಮುಂ ನುಣ್ಣಿತುಮಾಗಿರೆ ತೋರ್ಪ ಮಗ್ಗುಲದು ಶುಭಮಂ (ರೂಪಸೂಚಿ. ೦೧-೯). ೩. (ಅಲಂ) ಆಶ್ರಯ ; ನೆರೆ : ಮೊಲೆಯೂಡುವ ಮೇನೆಯ ಮಗ್ಗುಲೊಳಂ . . . ಗಿರಿಜಾತೆ ಶೈಶವಲೀಲೆಯನೊಳಕೊಂಡು ಕೊಳಕೊಳಗೆ ಬೆಳಬೆಳಗಿ ನಳನಳಿಸಿ ಬಳೆಯುತಿರ್ದಳ್ (ಗಿರಿಕ. ೩-೬೯ ವ). **ಮಗ್ಗಲು :** ೧. ಲಲಿತಾ ಹೊರಸಿನ ಮೇಲೆ ಕೂಸನ್ನು ಮಗ್ಗಲಲ್ಲಿ ಮಲಗಿಸಿಕೊಂಡು ತಾನೂ ಮಲಗಿದಳು (ಕಷು. ೯). ೨. ಮಗ್ಗಲುಗಳು ಅತ್ಯಂತ ಉನ್ನತವಾಗಿ ದೃಢವಾಗಿ ನೀಟವಾಗಿ ಸಮವಾಗಿದ್ದರೂ (ಸೌಗಂಂ. ೩೦೦-೦೨). ೪. ಹತ್ತಿರ; ಸಮೀಪ ; ಸನಿಹ : ದೇಗುಲದ ಅಧಿಷ್ಠಾನಮಂ ಕಟ್ಟಿಸಿ ಮಠ ಮಗ್ಗಲು ಬಾವಿಯೆಂಬಿವಂ ಮಾಡಿಸಿ (ಸೌಇಇ. IX—i, ೦೨೬-೩೦ ; 1061). **ಮಗ್ಗಿಲು :** ೧. ಎನ್ನಯ ಮಗ್ಗಿಲೊಳ್ಗೆ ಬಳೆವ ಸುರಭಿಯ ವತ್ಸವೆ (ಏರಪ. ೮-೩೭). ೨. ಪಾಡಜಿದೆಡದ ಮಗ್ಗಿಲನೂಜು ನೃಪತಿ ಮೈನೀಡಿ ಪವಡಿಸಿದನೊಡನೆ (ಶರತ. ೧೦-೬೦). ೫. ಕಡೆ ; ದಿಕ್ಕು ; ದೆಸೆ : ಈ ಕಲ್ಲಿಗೆ ನೈಋತ್ಯ ತೆಂಕಣ ಮಗ್ಗಿಲ ಹಳ್ಳದ ಹರದನ ಹಳ್ಳಿಗೆ ಸಲುವ ಕುಂಬಾರಗುಂಡಿಗೆ ಬಡಗಣ ಹಳ್ಳದಲ್ಲೂ ನೆಟ್ಟ ಕಲ್ಲು ೧ (ಎಕ. XIV. ಮೈಸೂರು, ೦೦೩-೩೩೯; 1674). **ಮಗ್ಗುಲು :** ೧. ರಾಜ್ಯಲಕ್ಷ್ಮಿಯ ಮಗ್ಗುಲಲಿ ಮೇಳೈಸಿ ಮೆರೆದರು (ಕುವ್ಯಾಸ. ೦೦-೬೯) ; ಅವಳ ಮಗ್ಗುಲಲ್ಲಿ ಮಲಗಿದ್ದ ಮಗು ಎದ್ದು ಅಳತೊಡಗಿತು (ಕೂಠ). ೨. ಮಣಿದು ಮಲಗಿದಳವಳ ಮಗ್ಗುಲ ಸೆಜಗ ಮೆಲ್ಲನೆ ಜಾಜಿಸುತಲ್ಯಾಗರಸ ಬೆಸನವನೊಂದಿ ಮಲಗಿದ ಸತಿಯನೀಕ್ಷಿಸುತ ಮಜುಗಿದನು ಮನದೊಳಗೆ (ಪಳಕ. ೫-೦೭). ೪. ಹೂವಂ ಬಿಚ್ಚುತೊಳಗಣ ಪರಿಮಳದ ತನೆಯು ಮಗ್ಗುಲೊಳೊಗ್ಗಿ ಬೆಳೆವ ಸಣ್ಣಮಪ್ಪ ನುಣ್ಣಿಸಳ ನೊಂದಂ ತೆಗೆದು (ಬಸರ. ೬-೬೯).

ಮಗ್ಗಲುಹಚ್ಚು = ಒಂದು ಪಕ್ಕಕ್ಕೆ ಒರಗು,—ಮಲಗು : ಮಗ್ಗಲು ಹಚ್ಚಿದ್ದೊಂದೇ ತಡ . . . ನಿದ್ರೆ ಆವರಿಸಿಬಿಟ್ಟಿತು (ಬಕೃಕ. ೩೪೦). ಮಗ್ಗುಲನಿಕ್ಕು = ಒಂದು ಪಕ್ಕಕ್ಕೆ ಒರಗು,—ಮಲಗು : ನಿದ್ದೆ ವರೆ ಮಗ್ಗುಲನಿಕ್ಕುವುದಿಲ್ಲ ಬಾಗಿಲಂ ಕಿಜುತೆಜೆಯುಂಬುದಿಲ್ಲುಗುಳ್ವುದಿಲ್ಲ (ಎಕ. II. ೩೫೦-೦೮; 1119). ಮಗ್ಗುಲ ಬೇನೆ = ಒಂದು ಬಗೆಯ ಪಕ್ಕೆಕಾಯಿಲೆ; ಪಾರ್ಶ್ವವಾಯು : ಪಾರ್ಶ್ವರುಜಾ_ಮಗ್ಗುಲ ಬೇನೆ, ಪಕ್ಷಾಘಾತವೆಂದರ್ಥ (ಚಾಪಟೀ. ೨-೫). ಮಗ್ಗುಲ ಮುಳ್ಳಾಗು = (ಅಲಂ) ಸಮೀಪದಲ್ಲಿದ್ದೂ ಗೊತ್ತಾಗದಂತೆ ನಿರಂತರವಾಗಿ ಕಿರುಕುಳವನ್ನು ಕೊಡು : ಹಾಳು ಸಮಾಜ ನನ್ನ ಹಾದಿಯಲ್ಲಿ ಅಡ್ಡನಿಂತಿದೆ. ಅದರ ಪ್ರತಿನಿಧಿ ಗಳಾಗಿ ನನ್ನ ತಾಯಿ ತಂದೆ ಮಗ್ಗುಲ ಮುಳ್ಳಾಗಿದ್ದಾರೆ (ಅರಹೂ. ೫೯). ಮಗ್ಗುಲ ರತಿ = ಸಂಭೋಗದಲ್ಲಿ ಒಂದು ಬಗೆ : ಓರಂತೆ ವಿಟನೊಳು ಮಗ್ಗುಲ ರತಿಗೈವ ವಾರಾಂಗನೆಯತೊಪ್ಪಿದರು (ಕಂಪಪ. ೬ - ೦೨೦). ಮಗ್ಗುಲಹಾಸಿಗೆ = ಹಾಸುಗೆಯ ಮೇಲೆ ಹಾಸುವ ಅಥವಾ ಹೊದೆಯುವ ದುಪ್ಪಟಿ : ಹಾಸುಗಯ ಮೇಲೆ ಹತ್ತಿಯ ನಯವಾದ ಮಗ್ಗುಲ ಹಾಸಿಗೆಯನ್ನು ಹಾಸಿದರೆ ಮಲಗಲು ಹಿತವಾಗಿ ರುತ್ತದೆ (ಕೂಠ). ಮಗ್ಗುಲಾಗು = ೧. ಪಕ್ಕಕ್ಕೆ ಸರಿ; ಓರೆಯಾಗು; ಅರುಗಾಗು : ನವವಧು ಬಹಳ ನಾಚುವಳು ಮುದ್ದಿಸಲಿನಿಯನು ಪೊಂಪುಳಿಗೊಳುವಳು ಕುಚಿದಳು ಮಗ್ಗುಲಾಗುವಳು (ಇಂಪಾಕ. ೨೨-೨೦). ೨. ಒಂದು ಪಕ್ಕಕ್ಕೆ ಹೊರಳು, – ತಿರುಗು : ಮೊದಲು ಮೂರು ವಾರ ತಾಯಿಯು ಹಾಸಿಗೆ ಮೇಲೆ ಮಗ್ಗುಲಾಗಿ ಮಲಗಿ ಮಗುವಿಗೆ ೨೦ ನಿಮಿಷವಾದರೂ ಸ್ತನ್ಯಪಾನ ಮಾಡಿಸಬೇಕು (ಗೃಹಶ. ೦೦೬). ಮಗ್ಗುಲು ಮನೆ = ಪಕ್ಕದ ಮನೆ; ನೆರೆಮನೆ : ಒಂದು ಮೈಲಿಯ ಕೊಂಡಾಪುರ ಅತ್ತಿಗೆ ಮಗ್ಗುಲುಮನೆಯಾಗಿತ್ತು (ಮರೆ. ೯೨).

[ದೇ||. ತಮಿ. ಮರುಙ್ಕು ; ಮಲ. ಮರುಙ್ಙು ; ತುಳು. ಮರ್ಗಿಲು ; ಕೋತ. ಮಗ್ಲ್]

**ಮಗ್ಗುಲಿಕ್ಕು** (ಕ್ರಿ). ೧. ಒಂದು ಪಕ್ಕಕ್ಕೆ ತಿರುಗಿ ಒರಗು,—ಮಲಗು : ಕಣ್ಮುಚ್ಚಿ ಮಗ್ಗುಲಿಕ್ಕಿಯಜಸ್ರಂ ತಳರದೆ ನಿದ್ರಾಸುಖದಿಂ ೞಹೀಸೆಪು

ಮಣಿಗಳಿರ್ಪ್ಪವಂತಾ ಕೊಳನೊಳ್ (ಗಂಗ. ೨-೫೫): ನೀರಡಸಿ ಕುಡಿದು ಸಿಂಹೆಯು ನೀರೊಳಗೆರೆಮುಟುಗಿ ಮುಗ್ಗುಲಿಕ್ಕಿರ್ದುದು ಮುನ್ನೀರಂ ನೀಲಾಚಲದಿಂ ಸಾರಂಗಟ್ಟಿದವೊಲಿರೆ ಬಟಿಲ್ದು ಲುಲಾಯಂ (ಯಶೋಧ. ೩-೬೬); ವನವಾಕ್ಷಿ ಮುಗ್ಗುಲಿಕ್ಕಿದಳು (ಪೋಷತ. ೪-೭೭). ೨. ಬಾಗು : ಬಗ್ಗು : ನಡುಗುವ ತೊಡೆ ಮುಗ್ಗುಲಿಕ್ಕಿದ ಮೈಸವಿರೊಡನೆ ಪೊಣ್ಮುವ ನಸುಬೆವರು ಕಡುಸೊಗಯಿಸೆ ರತಿಯಿಂ ತಣಿಮೊಯ್ಮನೆ ನಡೆದಳ್ (ಶಬರಶಂ. ೨೯-೧೧); ಪದುಳಿಸದಂಗವೆಳ್ತಜದ ಕಣ್ಮಲರಾಜಿದ ಸೇದೆ ಮುಗ್ಗುಲಿಕ್ಕಿದ ಪುಲಕಂಗಳಿಂಗದ ಬೆಮರ್ (ಅಜಿತ. ೦-೦೯) : ಪೊಂಪುಳಿ ಮುಗ್ಗುಲಿಕ್ಕದವೊಲಂಗದ ಬಲ್ಪೆಮರಿಂಗದಂತೆ . . . ಇಂಪಡರ್ದಂಗಜಾತ ಸುಖಮಂ ನಿನಗೀಯದೊಡಾಂ ಭುಜಂಗನೇ (ಶೃಂಖ. ೨೮-೩೨). ೩. ಬೀಳು ; ಕೆಡೆ : ಕೆಲಕೆಲವು ನಡುದೊಡೆ ಕಾಲು ಖಂಡಿಸಿ ಬಸಿವ ನೆತ್ತರಲಾಳೆ ನೆಲವಲಿ ಮುಗ್ಗುಲಿಕ್ಕಿದವಮಿಳಮೃಗನಿಕರ (ಕೋಲಾ. ೩-೩-೦೭).

[ಮುಗ್ಗುಲು (<ಮುಗ್ಗುಲ್) + ಇಕ್ಕು]

**ಮುಗ್ಗುಲಿಸು** (ಕ್ರಿ). ೧. ಒಂದು ಪಕ್ಕಕ್ಕೆ ಹೊರಳು : ಹಲಗೆವಾಣಕ ದೊಟ್ಟಿಲಲಿ ಮುಗ್ಗುಲಿಸಿ ಮಲಗಿ ನಿರೀಕ್ಷಿಸುತೆ (ಪ್ರಭುಲಿಂ. ೩-೨೭). ೨. (ಸಂಭೋಗಕ್ಕಾಗಿ) ಒರಗುವಂತೆ ಮಾಡು: ಮಲಗುವಂತೆ ಮಾಡು : ಪೊಸನಸೆಯಿಂ ಮೃಗಂ ಮೃಗಿಯು ಮುಗ್ಗುಲಿಸುತ್ತಿರೆ (ಸೂಕ್ತಿಸು. ೩-೨೨೯).

[ಮುಗ್ಗುಲ್ + — ಇಸು₃]

**ಮುಗ್ಗುಲು** 'ಮುಗ್ಗುಲ್' ನೋ.

**ಮುಗ್ಗುಲುಹೊಡೆ** (ಕ್ರಿ). ಪಕ್ಕಕ್ಕೆ ತಿರುಗು ; ಬದಿಗೆ ಸರಿ : ಓಡುತ್ತಿದ್ದ ಕುದುರೆಯು ಚಿಗಿದು ಹಿಂಗಾಲ ಮೇಲೆ ನಿಂತು ಮುಗ್ಗುಲುಹೊಡೆದು ಹಿಂತಿರುಗುವಂತೆ ತಟ್ಟನೆ ತಿರುಗಿ (ಮುಹಾಪ. ೧೫೯).

[ ಮುಗ್ಗುಲು ( <ಮುಗ್ಗುಲ್ ) + ಹೊಡೆ₁ (< ಪೊಡೆ₁) ]

**ಮುಗ್ಗುಲೂರು** (ಕ್ರಿ). ಪಕ್ಕಕ್ಕೆ ಬೀಳು,— ಕೆಡೆ : ಉತ್ತುಮದ ತಾಳಲಾಗ್ಗಳವ್ಟ ಪದಚಾರಿಗಳ್ ಸತ್ತುದಾರಬ್ಬರ್ದಂ ಮಂದಬ್ಬರ್ದದ ಸಂಪೆತ್ತ ಗಜ ಮುಗ್ಗುಲೂರಿದವು (ಶೋಣಾಸು. ೯೮-೨೭).

[ ಮುಗ್ಗುಲು (< ಮುಗ್ಗುಲ್) + ಊರು₁ (< ಊಱು₁)]

**ಮುಗ್ಗೆ₁** 'ಮೊಗ್ಗೆ' ನೋ.

**ಮುಗ್ಗೆ₂** (ನಾ). ಒಂದು ಬಗೆಯ ಸಸ್ಯ : "ಬಹುಮೂಲಃ _ ದೊಡ್ಡ ದರ್ಭೆ, ಮುಗ್ಗೆ" (೬೫೨. ೧೦೭). [ ? ]

**ಮುಗ್ನ** (ಗು). ೧. ಮುಳುಗಿದ ; ಒಳಸೇರಿದ. (ನಾ). ೨. ಮುಳುಗಿದ ವ್ಯಕ್ತಿ; ಒಳಸೇರಿದ ವ್ಯಕ್ತಿ : ಭಗ್ನರಾದರ್ಕೆಲರ್ . . . ಪೊಕ್ಕುದುಗಿಟ್ಟಿನೊಳ್ಮಗ್ನರಾದರ್ಕೆಲರ್ತನ್ನ ಸೇನೆಯೊಳ್ (ಕೈಟಭ. ೮-೪೦). ೩. ಏಕಾಗ್ರತೆಯಿಂದಿರುವ ವ್ಯಕ್ತಿ ; ತಲ್ಲೀನನಾದವನು : ಭೀಮಕಾಯಂ ಕಠಿನಗಂಭೀರನಾ ಯೋಗಿ . . . ಮಗ್ನನಾದಂ ಧ್ಯಾನದವ್ಯೈತನಗ್ನತೆಗೆ ! (ಶ್ರೀರಾಮಾ. ೧೪೩-೪೦) ; ಶ್ರೀಯುತರ ದರ್ಶನಾಕಾಂಕ್ಷಿಯಾಗಿ ನಾನು ಹೋದಾಗ ಒಂದಾನೊಂದು ಅರ್ಥಸಂಪಿತೆಯ ಚಿಂತನೆಯಲ್ಲಿ ಮಗ್ನರಾಗಿದ್ದರು (ಕೀಪಾತ್ರ. xi. ಮುನ್ನುಡಿ). [ಸಂ.]

**ಮಗ್ನತೆ** (ನಾ). ಏಕಾಗ್ರತೆ; ತನ್ಮಯತೆ; ಲೀನತೆ : ಮಗ್ನತೆಯಿನೆಜಗಿಸುಯ್ಯಲರಗ್ನಿಯಿನಟಿದಳಿಗಳುದುರುತಿರೆ ಪೊತ್ತಿದು ಸಂಲಗ್ನವಿರಹಾಗ್ನಿ ತಾಪೋದ್ವಿಗ್ನೆಯು ನಾಸಿಕಮುಭೇದದುಂ ಚಂಪಕದೊಳ್ (ಶಂಪ್ರಶ. ೩-೧೩೦): ರಸನೆಯು ಸುಧೆಯಂ ಮಿಗೆ ಸವಿದು ಸವಿದು ಮಗ್ನತೆಯನೆಯ್ದೆ ಮಂಧುರಾಕ್ಷರಮುಬ್ಬಸದಿಂ ಪೊರಳುತ್ತುರುಳುತ್ತೊತ್ತಸರ್ವಸ್ವದೆಸೆ ಗಿರಿಜೆಯೊಳ್ ತೊದಳ್ನುಡಿಯಿಸಗುಂ (ಗಂಗ. ೩-೭೭). [ ಸಂ. ಮಗ್ನತಾ ]

**ಮಗ್ನತೆಗೊಳು** (ಕ್ರಿ). ತನ್ಮಯತೆಯನ್ನು ತೋರು; ಲೀನವಾಗು : ವಿಷಯಕೆ ಸೋತು ಮಗ್ನತೆಗೊಳದೆ ಬಂಧನಹೇತುವೆವೆ ಸಂಕಲ್ಪದಿಂ ಕೆಲಕ್ಕೆದಿಬಮುಕು (ಗಗಶಾ. ೦೭-೨೯). [ ಮಗ್ನತೆ + ಕೊಳು (< ಕೊಳ್₁) ]

**ಮಘ** (ನಾ). ೧. ಒಂದು ದ್ವೀಪದ ಹೆಸರು. ೨. ಒಂದು ದೇಶದ ಹೆಸರು. ೩. ಒಂದು ಬಗೆಯ ಔಷಧಿ. ೪. ಒಂದು ಬಗೆಯ ಹೂವು. ೫. ಉಡುಗೊರೆ. ೬. ಐಶ್ವರ್ಯ ; ಸಂಪತ್ತು. ೭. ಸಂತೋಷ ; ಆನಂದ. ೮. [ಜ್ಯೋತಿ] ಪ್ರಸಿದ್ಧವಾದ ಇಪ್ಪತ್ತೇಳು ನಕ್ಷತ್ರಗಳಲ್ಲಿ ಹತ್ತನೆಯದು: ಮಖೆ. [ ಸಂ. ]

**ಮಘಮಘ** (ನಾ). ಸುವಾಸನೆ; ಪರಿಮಳ : 'ಮಘಮಘಿಸು' ಪರಾ.

**ಮಘಮಘಿಸು** (ಕ್ರಿ). ೧. ಪರಿಮಳವನ್ನು ಸೂಸು ; ಕಂಪನ್ನು ಬೀರು : ಮಘಮಘಿಪ ಮಲಯಜದ ಸಾರದ ಸೊಗಯಿಸುವ ಸರಹುಗಳ. . . ತಿಂಥಿಣಿ ಮೆಱೆದುದಲ್ಲಿಯು ಸುತ್ತುವಳಯದಲಿ (ಕೋಲಾ. ೦-೦೩. ೯). ೨. ಪರಿಮಳವು ತುಂಬುವಂತೆ ಮಾಡು; ಕಂಪು ಆವರಿಸುವಂತೆ ಮಾಡು : ಪೂಸುವರೆ ಕತ್ತುರಿ ಜವಾಜಿಗಳೈಸಲೇ ಪರಿಮಳವು ಪೂಸದೆ ಸೂಸಿ ದೆಸೆ ದಂಬಿಡುತ ಮಘಮಘಿಸುವಳು ಯೋಜನವ (ಶಬ್ದಸ. ೦೩-೦೯) : ದೆಸೆದೆಸೆಗಳನು ಮಘಮಘಿಸುತಲಾಗ ಮದನಮೋಹಿನಿ ಚೆಲ್ವಿನೊಗು ಮಿಗೆಯೊಳಗೊಪ್ಪಿದಳು (ಕಂಠೀ. ೯-೬೯). [ಮಘಮಘ + — ಇಸು₃]

**ಮಘವ** (ನಾ). ದೇವತೆಗಳ ಒಡೆಯ ; ದೇವೇಂದ್ರ : ಮಘವಂ ರಚಿಪೂತ ಚೂತವಮಂ ನೆರ್ಮಿದಶೋಕವಲ್ಲರಿಯ ಪಲ್ಲವಮೊಂದನೆ ಕೊಯ್ದು ರಾಗದಿಂ ಸೋಮರ್ಬುಡಿಯೊಳ್ ತಗುಳ್ಚಿದೊಡೆ ಸೂಟಿಸೆ ಬಾರಿಸಿದಂ (ಕಂಪಶ. ೫-೮೨); ಪುಳಕಿತಗಾತ್ರನಾಗಿ ಮಘವಂ ಮೆಱೆದಂ (ಕೃಷ್ಣಶ. ೧೧-೨೨); ಮಘವನೇನೀ ಧರಾತಳವನುಂ ಹರುಷದಿಂ ಸೋಲ್ವೊಡ್ಯೆತಂದನೋ (ವೆಂಕಾರಾ. ೩-೯-೧೧). [ಸಂ.]

**ಮಘೆ** (ನಾ). ಪ್ರಸಿದ್ಧವಾದ ಇಪ್ಪತ್ತೇಳುನಕ್ಷತ್ರಗಳಲ್ಲಿ ಹತ್ತನೆಯದು : ಮಘಾನಕ್ಷತ್ರ : ಅಶ್ವಿನಿ. . . ಮಘೆ . . . ರೇವತಿಯೆಂಬ ಇಪ್ಪತ್ತೇಳುನಕ್ಷತ್ರಂಗಳುಂ ತಮ್ಮತಮ್ಮ ಅಧಿಕಾರಮಂ ಮಾಡುತ್ತಿರ್ಪವು (೬ಪೀಠ. ೨೦೦); ಕಾರಿಗಳ ಮೊತ್ತವಿಪ್ಪತ್ತೇಳರೊಳಗೆಯು ಹಸ್ತ . . . ಉತ್ತರೆಯು ಮಘೆ . . . ಉತ್ತರಾಷಾಢ (ಗಗಶಾ. ೪-೬೮) ; ಮಘಾ_ಪೂರ್ವಾ–ಉತ್ತರಾನಕ್ಷತ್ರಗಳ ಮಳೆಗೆ ಹುಟ್ಟಿಯು ಬಿತ್ತಿಗೆಯಾಗುತ್ತದೆ (ಮುಂಬಡು. ೪-೨೭). [ ಸಂ. ಮಘಾ ]

**ಮಚವಾ** 'ಮಚವೆ' ನೋ.

**ಮಚವೆ**, ಮಚವಾ, ಮಚುವೆ, ಮಚ್ವೆ (ನಾ). ದೊಡ್ಡ ನಾವೆ.— ದೋಣಿ : ವ್ಯಾಪಾರಸ್ಥರು ದೊಡ್ಡ ದೊಡ್ಡ ಮಚವೆಗಳ ಮೇಲೆ ಸಾಮಾನುಗಳನ್ನು ತುಂಬಿಕೊಂಡು ಹೋಗುವರು (ಕಾರವ. ೫೪): ಬೈತಪೋಲವಲ್ಲಿಯ ಮಚವೆಗಳು, ಅವುಗಳಾಚೆಯ ಗುಡ್ಡ, ಇವೆಲ್ಲವುಗಳ ಮೇಲೂ ಬೇಸಿನ ಕಿರಣಗಳು ಸಿಡಿದು ಅವುಗಳಿಗೆ ಬಂಗಾರದ ಮೆರುಗನ್ನು ತಂದಿದ್ದುವು (ಮುಹುರಾ. ೬೫). **ಮಚವಾ** : ಪತ್ತೆಮಾರಿಗಿಂತ ಸಣ್ಣ ಆಕಾರದ ನಾವೆಗಳಿಗೆ ಮಚವಾ, ಫಡಾವ, ಗಲಬತ್, ಮಹಾಂಗಿರಿಯೆಂಬ ಹೆಸರುಗಳುಂಟು (ಕನಾಗಿ. ೩೦೭). **ಮಚುವೆ** : ಉಪ್ಪನ್ನು ಖರೀದಿ ಬರಿಯುವವರು ಜಲಮಾರ್ಗದಿಂದ ಮಚುವೆಗಳೊಳಗಿಂದ . . . ಬರಿಯುತ್ತಾರೆ (ಮುಂಬಡ್ತಿ. ೪೨ ಪ್ರಸ್ತಾವನೆ). **ಮಚ್ವೆ** : ಆವರಿಗೆ ಸೇರಿದ ಎರಡು ಮಚ್ವೆಗಳು ಸದಾ ಗೋವೆ. ವಿರಾದಲ್. ಕೊಚ್ಚಿಗಳಿಗೆ ತಿರುಗಾಡುತ್ತಲಿವೆ (೩ಅರಾ. ೪೭) ; ಆತನ ತಂದೆ ಸಾಮಾನು ತುಂಬಿದ ಕಪಲ ದೋಣಿಗಳಲ್ಲಿ-ಮಚ್ವೆಗಳಲ್ಲಿ_ಸಂಚಾರ ಮಾಡುತ್ತಿದ್ದ ನಾವಿಕ (ಜಠತ್ತ. ೦೯೪). 'ಮಂಜಿ₁' ಪರಾ.

[←ಉರ್ದು. ಮಚ್ಚಾ ; ಹಿಂ. ಮಚವಾ, ಮಛವಾ=ಮೀನು ಹಿಡಿಯಲು ಬಳಸುವ ದೋಣಿ ; ಮರಾ. ಮಾಚವಾ / ಸಂ. ಮತ್ಸ್ಯ ]

**ಮಚಾಯಿಸು** (ಕ್ರಿ). ಜೋಡಿಸು ; ಹೊಂದಿಸು : ನವಾಬರು . . . ಭಾರಿ ಬಿವರ ಟೊಕರೆ ಮಾತ್ರ ಬಿದ್ದುಯಿದ್ದದನ್ನು ತರಿಸಿ ದಂಡಿನ ಪರಾಲಿ

ಗಳು ಪರಿಶಿ ಶ್ರಮ್ಮ ಎದುರಿಗೆ ಆ ಟೊಕರಿಗೆ ಚಿನ್ನಾಡಿ ಮಚಾಯಿಸಿ ಯಿದ್ದ ನಗದು ಜವಾಹಿರಿ ಸಾಗಿದಷ್ಟು ಹಣದ ಥೈಲಿಗಳ ಕಟ್ಟಿ... ನದಿ ದಾಟಿ ಹೋದರು (ಕ್ಷ.ದಂ. ೯೬).

[ಮಚಾ$_0$ ( p ←ಹಿಂ. ಮಚಾನಾ=ಹಬ್ಬಿಸು. ಹರಡು) + — ಇಸು$_3$]

**ಮಚುವೆ** 'ಮಚವೆ' ನೋ.

**ಮಚ್ಚ$_1$** 'ಮಚ್ಚೆ$_1$' ನೋ.

**ಮಚ್ಚ$_2$,** ಮಚ್ಚು$_6$, ಮಚ್ಚೆ$_2$ (ನಾ). ೧. ಚಿನ್ನ, ಬೆಳ್ಳಿ ಮುಂತಾದ ಲೋಹಗಳ ಶುದ್ಧತೆಯ ಪ್ರಮಾಣ : ಒರೆಯಂ ನೋಡದೆ ನೋಡಿ ಚಿನ್ನಮನೆ ಕಂಡಾ ಚಿನ್ನಮಂ ವರ್ಣಾಂತರಮಂ ತಪ್ಪದೆ ಪೇಟ್ವ . . . ಮಚ್ಚಮನೆ ಲೀಲಾಮಾತ್ರದಿಂ ಕಟ್ಟುವಚ್ಚರಿಯಿಂದಾ ಪುರದಲ್ಲಿ ಚಿನ್ನವರದರ್ ತಾವಿಂತು ವಿಭ್ರಾಜಿಪರ್ (ಚಂಶೇಖ. ೧-೦೨೧). ೨. (ಒಡವೆಗಳನ್ನು ಮಾಡಿಸುವಾಗ) ಒರೆಹಚ್ಚುವುದಕ್ಕಾಗಿ ಅಕ್ಕಸಾಲಿಗನಿಂದ ಪಡೆದು ಕೊಂಡ ಚಿನ್ನ, ಬೆಳ್ಳಿ ಮುಂತಾದುವುಗಳ ಚೂರು : ಪಣದಿಂದೆ ತೆಗೆಯೆ ಮಚ್ಚದ ತೂಕಂ ಮಚ್ಚದ ಕೆಟಿಗಿಡು ರೂಪಂ ಇಚ್ಚೆಯ ಪವಣಿಂ ದಿಜಿದು ಹೀನಮಚ್ಚಮುಮಮಕೆ (ವ್ಯವಹಾ. ೫೯-೨೯) ; ಕನಕದ ಮಚ್ಚದ ತಗಡ ತಟ್ಟಿದರದ ಘನಶಕ್ತಿ ತೆಳುವಾಗುವಂತೆ (ಜ್ಞಾ.ಸತ. ೯೫-೯೩). 'ಮಚ್ಚತೂಕ' ಪರಾ. ೩. ಒರೆಗಲ್ಲು ; ನಿಕಷ : "ದೃಷ್ಟಮೆನೆ ಮಚ್ಚಮುತ್ಕ್ಯಂ" (ಮಂಗರಾ. ೧೦೫-೦೦); ಕೌರವನು ... ನೆನೆದ ಮತವನು ತನ್ನ ತಂದೆಯ ಮನದ ಮಚ್ಚದೊಳೊರೆದು . . . ಜನಪನಪಕೀರ್ತ್ಯಂಗನೆಗೆ ತೊಡಿಸಿದನು ಭೂಷಣವ (ಕುಮ್ಮಾಭಾ. ೨-೨೨). ಮಚ್ಚು$_6$ : ೨. ಸಾವಿರತೂಕ ಚಿನ್ನಕ್ಕೆ ಹಾಗ ತೂಕ ಮಚ್ಚು (ಗಾದೆ). ಮಚ್ಚೆ$_2$ : ೧. ಬಲ್ಲವರೊಡಗೂಡಿ ಬಣ್ಣದಿಂದೊರೆಯಿಂ ತೂಕದಿಂ ಮಚ್ಚೆ [-ಚ್ಚೆ] ಯಿಂದಂ ಪೊನ್ನಂತೊಪ್ಪುಗುಂ . . . ಅಂತೆ ಸಮ್ಯಕ್ತ್ವದೊಳ್ ಕೂಡಿ . . . ವ್ರತಂಗಳಿಂದಂ ಶ್ರಾವಕನುಮೊಪ್ಪುವುದು (ಧರ್ಮಾಮೃ. ೦೩-೫).

[ದೇ.॥ ತಮಿ. ಮಚ್ಚಮ್. ಮಚ್ಚು : ಮಲ. ಮಚ್ಚಮ್ : ತುಳು. ಮಚ್ಚ : ತೆಲು. ಮಚ್ಚು]

**ಮಚ್ಚ$_3$,** ಮಚ್ಚೆ (ನಾ). ೧. ಈಜುರೆಕ್ಕೆಗಳುಳ್ಳ ಒಂದು ಬಗೆಯ ಕಶೇರುಕ ಜಲಚರಪ್ರಾಣಿ : ಮೀನು : "ಮಚ್ಚ (ಮಚ್ಚೆ)-ಮತ್ಸ್ಯ (ಫ್ರ) =ಮೀನು" (ಶಬ್ದಕೋ. ೩೩) ; ಕಣ್ಣೊಳಗಣ ಮಚ್ಚ[ಪಾಠಾಂ. ತ್ಸ್ಯ]ಕ್ಕೆ ಬಲೆಯ ಬೀಸಿ ಹದ್ದಿನ ಬಾಯ ಹಾವಿಂಗೆ ಹೇಳಿಗೆಯ ಮಾಡಿ (ಕೋಲಶಾಂ. ೩೫-೨೩) ; ಮಚ್ಚ ಜಪ್ಪಾಲಂಪಟದಿ . . . ಘ್ರಾಣೇಚ್ಛೆಯಲಿ ಭ್ರಮರ ಹುಚ್ಚುಗೊಂಡೊಂದೊಂದು ವಿಷಯಕೆ ಮೆಚ್ಚಿ ಕಟ್ಟುವ (ಅಮ್ಮತ. ೨-೯೯) ; ಮಚ್ಚಕಂ ಬಲೆಯೊಡ್ಡಿ ಹಿಡಿದವರ ಶರಗಳಂ ಮೆಚ್ಚಿಂದು ಧರಿಸುವೆನೆ ಸೂತಸುತ (ತುರಂಗ. ೬೨-೩). ೨. ಮೀನಿನ ಆಕಾರ : ಪೊಜಮಚ್ಚ ನೆಟಲನಾ ರೇಖೆಯೊಳ್ಚಿಗುಟ್ಟು ಪಿಡಿಯೆ ಸೂತ್ರಮಂ ಪಡುವಲಿಂ ಮೂಡಲುಮಾಗಿರ್ಕೆ ಮತ್ತಲ್ಲಿ ಮಚ್ಚಂ ಬೀಸೆ ಬಡಗಲುಂ ತೆಂಕಲೆಂದಜೀ (ಲೋಕೋಪ. ೩-೦೬). ಮಚ್ಛ : ೧. ಕೊಚ್ಚೆನೀರಿನಲ್ಲಿ ಮಚ್ಛ ಹಿಡಿಯು ವವರಿಗೆ ಕೊರತೆ ಇಲ್ಲ (ಮುಕ್ಕಾಟಿ. ೧) [<ಪ್ರಾ. ಮಚ್ಛ./ಸಂ. ಮತ್ಸ್ಯ]

**ಮಚ್ಚಗಾಜಿ** (ನಾ). ಚಿನ್ನವನ್ನು ಒರೆಹಚ್ಚುವವನು ; ಅಕ್ಕಸಾಲಿಗ : ಹೊನ್ನ ನೋಟಕರು ಚಿನ್ನದ ಮಚ್ಚಗಾಜಿರು ರನ್ನಪರೀಕ್ಷೆ ಪ್ರಾಜ್ಞಕರು . . . ಚಿನ್ನವಾರರುವೊಪ್ಪಿಹರು (ಸನ್ಮಕಾ. ೦-೫೫). [ಮಚ್ಚ$_2$ + — ಕಾಜಿ]

**ಮಚ್ಚತೂಕ** (ನಾ). ಅಕ್ಕಸಾಲಿಗನಿಂದ ಒರೆಹಚ್ಚಲು ತೆಗೆದುಕೊಳ್ಳುವ ಚಿನ್ನದ ಅಥವಾ ಬೆಳ್ಳಿಯ ಚೂರಿನ ತೂಕ : ತೋಜಿದ ಬಣ್ಣಂ ನೆಜೆ ಪದಿನಾಜಾಗಲ್ ಮಚ್ಚತೂಕವೈಪಣವಾಗಲ್ . . . ಹೀನಬಣ್ಣವಹುದು ಬ ೧೨ ಮಚ್ಚತೂಕ ಹ ೨ . . . ಮಚ್ಚ(ತ್ಸ)ತೂಕ ಹ ೨ (ವ್ಯವಹಾ. ೩೧-೦೯). [ಮಚ್ಚ$_2$ + ತೂಕ]

**ಮಚ್ಚಧ್ವಜ** (ನಾ). ಮೀನಿನ ಗುರುತುಳ್ಳ ಬಾವುಟ ; ಮೀನಧ್ವಜ : ಹಡಪ ಕನ್ನಡಿ . . . ಮಕರತೋರಣ ಮಚ್ಚಧ್ವಜವಾಂತು (ಸಮಬೋ. ೯-೩೮). [ಮಚ್ಚ$_3$ + ಧ್ವಜ]

**ಮಚ್ಚರ** (ನಾ). ಹೊಟ್ಟೆಕಿಚ್ಚು : ಅಸೂಯೆ : "ಮಚ್ಚರಂ ಮತ್ಸರಂ" (ಶಬ್ದಾ. ೨೨-೯೫೭); ಒರ್ವರೊರ್ವರನೆ ಮಚ್ಚರದಿಂ ಗಜಾಸನ್ನೆಗೆಯ್ದು ದಿರ್ಪದ ಪದದೊಳ್ ಪತತ್ರಿಮಯುಮೆಂಬಿನಿತಾಯ್ತು ಸಮಸ್ತದಿಕ್ತಟಂ (ಶಂಪುಪ. ೦೦-೮೭) ; ಎನ್ನ ಆಪತ್ತು ಸುಖದುಃಖವೆನಿಸ್ಸಾರಿಗೆ ಹೇಳುವೆ ಶರಣಸ್ಥಳ ದವರಿಗೆ ಹೇಳಿದರೆ ಮಚ್ಚರ (ಬಸವ. ೩೮೯) ; ಹುಚ್ಚುನಾಯಿಯು ಹೊಲ್ಲ ಮಚ್ಚರದ ಮಗ ಹೊಲ್ಲ (ಸರ್ವಜ್ಞ. ೦೭೫೭).

[< ಪ್ರಾ. ಮಚ್ಛರ./ಸಂ. ಮತ್ಸರ]

**ಮಚ್ಚರಕಾಜಿ** (ನಾ). (ತನ್ನ ಹೆಗ್ಗಳಿಕೆಯಿಂದ) ಬೇರೆಯವರು ಕರುಬು ವಂತೆ ಮಾಡುವವನು; ಇತರರಲ್ಲಿ ಮತ್ಸರವನ್ನುಂಟುಮಾಡುವವನು : ಮಹಾಥರ್ವರದೊಳ್ ಮಚ್ಚರಕಾಜಂ ಭಾವಕೋತ್ಪಾದಕರಸಿಕವಿಸ್ಮೋಪ ದೊಳ್ ನೇಮಿಚಂದ್ರಂ (ಅರ್ಧನೇ. ೧-೩೭). [ಮಚ್ಚರ + — ಕಾಜಿ]

**ಮಚ್ಚರಗೊಳ್ಳು** (ಕ್ರಿ). ಹೊಟ್ಟೆಕಿಚ್ಚುಪಡು : ಕರುಬು : ಎನ್ನವರನ್ನಿಗ ರೆನುತುಂ ಮಜುಕಂ ಮಚ್ಚರಗೊಳ್ಳದ ಸತ್ಕಕ್ಕಜಮೆಟ್ಟೆನಿಸುವ ಸಾಧುಸಮಿತಿ ಗತಿಸಮಂತೆಯೊಳಜಿಗುಮೆನು (ಜಯು.ಕಾ. ೦-೫).

[ಮಚ್ಚರ + ಕೊಳ್ಳು$_1$ (<ಕೊಳ್$_1$)]

**ಮಚ್ಚರದಾಣಿ** 'ಮಚ್ಛರದಾನಿ' ನೋ.

**ಮಚ್ಚರದಾನಿ** 'ಮಚ್ಛರದಾನಿ' ನೋ.

**ಮಚ್ಚರವಳಿ** (ಕ್ರಿ). ಹೊಟ್ಟೆಕಿಚ್ಚು ಇಲ್ಲದಂತಾಗು : ಅಸೂಯೆಯುಮು ಹೋಗು : ವಿಚ್ಚಜು ಬಹಳ ಪೋಪರೆ ಶಕ್ಯವಿಲ್ಲೆಂದು ಮಚ್ಚರವಳಿದು ಕೊಂಡಾಡಿ ಸ್ವಚ್ಛದಿ ಮಗುಳೊಂದು ಬುದ್ಧಿಯ ನೆನೆದುಕೊಂಡುಚ್ಚರಿಸಿದ ಮನದೊಳಗೆ (ಮೋಹತ. ೦೦-೨೦). [ಮಚ್ಚರ + ಅಳಿ$_1$ (<ಅಜಿ$_1$)]

**ಮಚ್ಚರಿ** (ನಾ). ಹೊಟ್ಟೆಕಿಚ್ಚುಪಡುವವನು : ಕರುಬುವವನು : ಹರಿಸಲಪ್ಪುದೆ ನರರು ಮಚ್ಚರಿಯ ಸಂಕಟವ ? ಕರುಬಿವನ ಹರಿ ಪೊರೆಗೆ (ಮುಂಕುಂದ. ೨೦೧). [<ಸಂ. ಮತ್ಸರಿನ್]

**ಮಚ್ಚರಿಗ** (ನಾ). = ಮಚ್ಚರಿ : "ಮಚ್ಚರಿಗನು ದೋಷಗ್ರಾಹಿಯೆನಿಸಿಕ್ಕು" (ಮಂಗರಾ. ೬೮-೮). [ಮಚ್ಚರ + — ಇಗ]

**ಮಚ್ಚರಿಸು** (ಕ್ರಿ). = ಮಚ್ಚರಗೊಳ್ಳು: ಇಳಾಚಕ್ರವಿಖ್ಯಾತಭೂಭೃತ್ಪ್ರಭು ಚಕ್ರಾಧೀಶನೊಳ್ ಮಚ್ಚರಿಪಪೊಲೆಸೆದಿರ್ದತ್ತು ರೌಪ್ಯಾಚಳೇಂದ್ರಂ (ಆದಿಪು. ೦೩-೯೬) : ನರಪತಿ ಬೆನ್ನೊಳಜೊಸಿದಿರಾನ್ಸುದು ವೈರಿಸಮೂಹಮಿಲ್ಲಿ ಮಚ್ಚರಿಸುವರೆಲ್ಲರುಂ ಸರಗುವಾಟ್ಟಪೊರ್ (ಎಕ. III. ಮಂಡ್ಯ ೯೦-೦೮ ; 950) ; ಇಂದು ಸುರುಚಿ ಸಗರ್ವದಲಿ ನಿನಗೆಂದಡೇನದು ತವಗೆ ಹಿತವೆಲೆ ಕಂದ ಮಚ್ಚರಿಸದಿರು ಗುಣಕೆ (ಹರಿಭಾಗ. ೪-೩-೦೮).

[ಮಚ್ಚರ + — ಇಸು$_3$]

**ಮಚ್ಚಜಿ** (ಕ್ರಿ). ಮೆಚ್ಚನ್ನು ಕಳೆ: ಒಲವನ್ನು ಅರಿ : ಮಚ್ಚಜಿದು ಮನವಿಚ್ಚೆವಟ್ಟ ಪುರುಳಂ ಬೇಡಿ ಪೊಚ್ಚವಿಲ್ಲದ ರಾಗರಸದಿಂ ಕಳಕೊಂಡಿ (ಪುಷ್ಪ. ೨-೯೯ ರಗಳೆ). [ಮಚ್ಚು$_2$ (< ಮೆಚ್ಚು$_2$) + ಅಜಿ]

**ಮಚ್ಚಿ** 'ಮಕ್ಕಿ$_2$' ನೋ.

**ಮಚ್ಚಿಕೆ** 'ಮೆಚ್ಚಿಕೆ' ನೋ.

**ಮಚ್ಚಿಗೆ** (ನಾ). ಮನೆಯ ಮೇಲ್ಭಾವಣಿ : ಕಸಬರಿಕೆ ಮಾಡಿ ಮನೆಯ ಮಚ್ಚಿಗೆ ಮತ್ತು ಮಾಡುಗೋಡೆಗಳನ್ನು ಗುಡಿಸಿದೆ (ಮಕಳು. ೯೨). 'ಮಂಚಿಗೆ' ಪರಾ. [< ಮಚ್ಚು$_4$]

**ಮಚ್ಚಿಸು** 'ಮೆಚ್ಚಿಸು' ನೋ.

**ಮಚ್ಚು$_1$** 'ಮೆಚ್ಚು$_1$' ನೋ.

**ಮಚ್ಚು$_2$** 'ಮೆಚ್ಚು$_2$' ನೋ.

**ಮಚ್ಚು$_3$** (ನಾ). ಮರ, ಗಿಡ ಮುಂತಾದುವುಗಳನ್ನು ಕತ್ತರಿಸಲು ಉಪಯೋಗಿಸುವ, ಮರದ ಹಿಡಿಯುಳ್ಳ, ಕಬ್ಬಿಣದ ಒಂದು ಬಗೆಯ ಸಾಧನ : ಕಡುಗೋಲ್ಕೊಡಲಿ ಕೈವಾರೆ ಗುದ್ದಲಿ ಮಚ್ಚು ಕಡುಕತ್ತಿ ದಬ್ಬುಕಗಳನು ಬಿಡದಾಂತು ನಡೆದರು ಬಿಚ್ಚುಯುವರು (ಕುಮಾರಾ. ೪೦-೪೮); ಕಿಚ್ಚಿಂದ ಬೇಯನು ನೀರಿಂದ ನೆನೆಯನು ಮಚ್ಚು ಕೊಡಲಿಗೆ ಸಂದಿಸನು ಕಿಚ್ಚು ನೀರಲಗಿನ ಬಾಧೆ ತನುವಿಗಾತ್ಮನಚ್ಚುಗವಳಿದ ಸುವಸ್ತು (ಭರತ. ೬೭-೧೩೨); ಕೈಯಲ್ಲಿ ಒಂದು ಮಚ್ಚನ್ನು ಹಿಡಿದುಕೊಂಡನು (ಉಳಪ. ೨೦). 'ಮಚ್ಚುಗತ್ತಿ' ಪರಾ. [ದೇ.॥ ತಮಿ. ತೆಲು. ಮಚ್ಚು]

**ಮಚ್ಚು$_4$** (ನಾ). ಕಟ್ಟಡದ ಮೇಲಿನ ಭಾಗ,— ಮೇಲ್ಛಾವಣಿ : ಪನಿವೊತ್ತಿನೊಳು ತಂದ ನೀರ ಕಳಸಿಗೆಯೊಳಾ ದಿನವ ಹಗಲಿರುಳು ಮಾಳಿಗೆಯ ಮಚ್ಚಿನೊಳು ಮಱುದಿನದುದಯದಲ್ಲಿರಿಸಿ (ಸೂಶಠ. ೨-೯೦): ಪುರವನಿತೆಯರು ನೋಳ್ಪೊಡೆ ಸಜ್ಜೆವಳಿಗೆ ಮಂದಿರಗಳ ಮಚ್ಚನೇಱಿದರು (ಕಂಪಠಿ. ೨೨-೧೦೦೦); ಎಲ್ಲರೂ ನಿದ್ರೆಹೋಗುತ್ತಿದ್ದ ಒಂದುಮನೆಯ ಮಚ್ಚಿನ ಮೇಲೆ ಇದ್ದ ಒಂದು ಒಪ್ಪಾರಿನ ಗುಜ್ಜುಕೋಣೆಯು ಎಲ್ಲಕ್ಕಿಂತಲೂ ಹೆಚ್ಚಾಗಿ ಏಕೆ ನನ್ನ ಕಣ್ಣಿಗೆ ಬೀಳುತ್ತಿತ್ತೋ ಕಾಣೆ (ಸಿರಿಂಥ. II. ೩೬). 'ಬಿಸಿಲುಮಚ್ಚು' ಪರಾ.

[ದೇ.॥ ತಮಿ. ಮಲ. ತೆಲು. ಮಚ್ಚು; ಕೊಡ. ಮಚ್ಚಿ]

**ಮಚ್ಚು$_5$** (ನಾ). ೧. ಕಪಟ ; ಮೋಸ ; ವಂಚನೆ : "ಮಾಯೆಯೆನೆ ಮಚ್ಚಕ್ಕು" (ಬಂಗರಾ. ೧೦೨-೩) ; ಮಚ್ಚು ಮಾಯಂಗಳುಂ ಮರುಳು ಕೌಟಲಗಳುಂ. . .ವಂಚನಾಲಲಿತವಾಗ್ಜಾಲವಿಷಯಂಗಳ ಎಚ್ಚರಿಂದವನಾವ ಯತಿಯಾದಡಮ್ಮ ಮನಮೆಚ್ಚಿ ಮುಂಗಾಣದನುಚರನಂತೆ ಚರಿಸುವಂತೊ ಚಿತ್ತಿನಲಿ ತೋರ್ಪೆಂ (ಪಂಪಾರಾ. ೧-೬-೪೦). ೨. (ಆಲಂ) ಮರುಳು ಗೊಳಿಸಲು ಉಪಯೋಗಿಸುವ ಪುಡಿ ; ಮಂಕುಬೂದಿ : 'ಮಚ್ಚುಗಾರ', 'ಮಚ್ಚುಗೊಳಿಸು' ಪರಾ.

[ದೇ.॥ ತೆಲು. ಮಚ್ಚು, ಮಯಿಕ, ಮಯಿದು, ಮೈದು]

**ಮಚ್ಚು$_6$** 'ಮಚ್ಚೆ$_2$' ನೋ.

**ಮಚ್ಚು$_7$** 'ಮಕ್ಕೆ$_2$' ನೋ.

**ಮಚ್ಚುಕತ್ತಿ** 'ಮಚ್ಚುಗತ್ತಿ' ನೋ.

**ಮಚ್ಚುಗತ್ತಿ**, ಮಚ್ಚುಕತ್ತಿ (ನಾ). = ಮಚ್ಚು$_3$ : ಕೊಂಬೆಯನ್ನು ಕತ್ತರಿಸಲು ಮಚ್ಚುಗತ್ತಿ ತೆಗೆದುಕೊಂಡು ಬಾ (ರೂಢಿ). **ಮಚ್ಚುಕತ್ತಿ** : ಅಗಲವಾದ ಅಲಗಿನ ತುಂಡುಕೊಡಲಿ ; ಕಟುಕನ ಕಡಿಗತ್ತಿ : ಮಚ್ಚುಕತ್ತಿ (Chopper. ೨೦೪೩).

[ಮಚ್ಚು$_3$ + ಕತ್ತಿ. / ತಮಿ. ಮಚ್ಚುಕ್ಕತ್ತಿ : ತೆಲು. ಮಚ್ಚುಕತ್ತಿ]

**ಮಚ್ಚುಗಾರ** (ನಾ). (ಆಲಂ) ಮಾಟಮಾಡುವವನು : "ಮಚ್ಚುಗಾರ–ಮಾಟಗಾರ" (ಶಾಸಕೋ. ೨೬). [ ಮಚ್ಚು$_5$ + – ಗಾರ (< – ಕಾಱ) ]

**ಮಚ್ಚುಗುಡಿಸು** (ಕ್ರಿ). ಬಹುಮಾನವನ್ನು ಕೊಡಿಸು ; ಮೆಚ್ಚುಗೆಯನ್ನು ಕೊಡುವಂತೆ ಮಾಡು : ದವಿತಾರಿಯ ಭುಜಬಲವಿಕ್ರಮದಳವಿಗೆ ಮಚ್ಚಿ ಮಚ್ಚುಗುಡಿಸುವವೊಲ್ (ಶಾಂತಿಪು. ೯-೩೮).

[ ಮಚ್ಚು$_2$ (< ಮೆಚ್ಚು$_2$) + ಕುಡಿಸು$_2$ (< ಕೊಡಿಸು) ]

**ಮಚ್ಚುಗುಡು** 'ಮೆಚ್ಚುಗೊಡು' ನೋ.

**ಮಚ್ಚುಗೆ** 'ಮೆಚ್ಚುಗೆ' ನೋ.

**ಮಚ್ಚುಗೆವೆಱು** (ಕ್ರಿ). ಪ್ರಶಂಸೆಯನ್ನು ಹೊಂದು : ಒಮ್ಮೆಗೊಮ್ಮೆಗೆರ್ದೆ ಯೊಳ್ ಬೈತಿಚ್ಚೆಯೊಳ್ ಕೂರ್ಮೆ ತಳ್ತಿರವಿಂ ಮಚ್ಚುಗೆವೆತ್ತ ಪತ್ತುಗೆಯಿನಂತಾ ವಾಲ್ವರಂದಿರ್ವರಿರ್ವರೆ ಯುಗ್ಮದ್ವಯಮಾದರ್ (ಶಾಂತಿಪು. ೬-೦೨೩). [ ಮಚ್ಚುಗೆ (< ಮೆಚ್ಚುಗೆ) + ಪೆಱು$_1$ ]

**ಮಚ್ಚುಗೊಡು** 'ಮೆಚ್ಚುಗೊಡು' ನೋ.

**ಮಚ್ಚುಗೊಳಿಸು** (ಕ್ರಿ). ಮರುಳುಗೊಳಿಸು ; ಭ್ರಾಂತಿಗೊಳಿಸು : ನೆಚ್ಚದಿರು ಸಂಸಾರ ಕಡೆಗೆ ಹಾಕುವದಲ್ಲ ಮಚ್ಚುಗೊಳಿಸುವುದು ವಿಷಯದಲಿ (ವಿದಾಕ್ಷ. ೯೮ ಪಲ್ಲವಿ). [ ಮಚ್ಚು$_5$ + ಕೊಳ್$_1$ + – ಇಸು$_3$ ]

**ಮಚ್ಚುನುಡಿ** (ನಾ). ಹೊಗಳಿಕೆಯ ಮಾತು ; ಪ್ರಶಂಸೆಯ ನುಡಿ : ಮುಂಗುಳುನುಡಿ . . . ಲಲ್ಲೆನುಡಿ ಮಚ್ಚುನುಡಿ ಸೊಗಸುನುಡಿ . . . ಬಿನ್ನಣೆಯ ನುಡಿಯ ಭಾವೆಯರು ಬರುತಿರ್ದರು (ನವಮೋ. ೨೩-೧೩).

[ಮಚ್ಚು$_2$ (< ಮೆಚ್ಚು$_2$) + ನುಡಿ$_2$]

**ಮಚ್ಚುಮದ್ದು** 'ಮೆಚ್ಚುಮದ್ದು' ನೋ.

**ಮಚ್ಚುವಡೆ** 'ಮೆಚ್ಚುವಡೆ' ನೋ.

**ಮಚ್ಚುವೆಱು** (ಕ್ರಿ). ಮಚ್ಚಿನ ಏಟನ್ನು ಹೊಂದು : ಮಚ್ಚಿನ ಪೆಟ್ಟನ್ನು ಪಡೆ : ಕಿಡುವುದು ತಾನುಂ ತನ್ನೊಳ್ ತೊಡರ್ದವರುಮನಂತೆ ಕಿಡಿಸುವೀಯಟ್ಟೊಡಲಂ ಕಡುಮೋಹದೆ ಮಚ್ಚಿರ್ದೊಡೆ ಪಡೆವೈ ನೀಂ ಮಚ್ಚುವೆತ್ತ ಕಳ್ಳನ ಪಡೆವಂ (ಜೀವಸಂ. ೦೨೩-೬). [ಮಚ್ಚು$_3$ + ಪೆಱು$_1$]

**ಮಚ್ಚೆ$_1$**, ಮಚ್ಚ$_1$ (ನಾ). ಹುಟ್ಟಿನಿಂದಲೇ ಚರ್ಮದ ಮೇಲೆ ಕಂಡು ಬರುವ ಕಪ್ಪು, ಬಿಳಿ ಮುಂತಾದ ಬಣ್ಣದ ಗುರುತು ; ಮತ್ತಿ : ಆ ಚಿತ್ರದ ಶರೀರದೊಳ್ ತೊಡೆಯ ಮೇಲೆ ಕಾಡಿಗೆಯ ಬಿಂದು ಬಿರ್ದುದು ಮುನ್ನುಳ್ಳ ಮಚ್ಚೆಯಾಗಿರ್ಪುದುಮಾ ಚಿತ್ರದ ರಚನೆಯುಂ ಭರತಂ ಚೇಟಕ ಮಹಾರಾಜಂಗೆ ತೋಱಲ್ ಕಂಡವನೀ ಕನ್ನಿಕೆಯ ಏಕಾಂತಪ್ರದೇಶದ ಮಚ್ಚೆಯನೆಂತಱಿದನೆಂದು ಸಂಶಯಂ ಪುಟ್ಟಿ (ಭುಜಾಸ್ವ. ೩-೪೦ ವ); ಮೂಗಿನ ಎಡಬದಿಯಲ್ಲಿ ಕಣ್ಣಿನಿಂದ ಕೆಳಗೆ ಕಡಲೆಕಾಳುಗಾತ್ರದ ಕಪ್ಪಾದ ಮಚ್ಚೆ ರೂಪವನ್ನು ಕುರೂಪಗೊಳಿಸಿತ್ತು (ಜಗುಬಿ. ೧). **ಮಚ್ಚ$_1$** : ಹುಟ್ಟಿದ ದಿನದಿಂದಾ ಬೆನ್ನ ಮಚ್ಚವ ಕೊಟ್ಟುದಿಲ್ಲಾರ್ಗೆಯುಂ ಭೂಪ ಬೆಟ್ಟದ ಚಾಪನ ವೀರರಸದ ಬಲುಗಟ್ಟಿಯನೇನ ಬಣ್ಣಿಸುವೆ (ಕಂಪಠಿ. ೩-೯೯). 'ಮತ್ತಿ$_2$' ಪರಾ.

[ ದೇ.॥ ತಮಿ. ಮಚ್ಚಂ : ತುಳು. ಮಜೆ ; ತೆಲು. ಮಚ್ಚ ]

**ಮಚ್ಚೆ$_2$** 'ಮುಚ್ಚ$_2$' ನೋ.

**ಮಚ್ಚೆ$_3$** 'ಮೊಚ್ಚೆಯ' ನೋ.

**ಮಚ್ಚೆನಾಲಿಗೆ** (ನಾ). ಕಪ್ಪುಮತ್ತಿಯಿಂದ ಕೂಡಿದ ನಾಲಗೆ ; ಮತ್ತಿ ನಾಲಗೆ ; P ನಾಲಗೆಯಲ್ಲಿ ಮಚ್ಚೆಯಿರುವವರು ಆಡುವ ಕೆಟ್ಟಮಾತು ಫಲಿಸುವುದೆಂದು ನಂಬಿಕೆಯಿದೆ : ಮಚ್ಚೆನಾಲಿಗೆ ಇದ್ದವನ ಸಂಗಡ ಕಚ್ಚಾಟ ಮಾಡಬಾರದು (ಗಾದೆ). [ಮಚ್ಚೆ$_1$ + ನಾಲಿಗೆ (<ನಾಲಗೆ)]

**ಮಚ್ಛ** 'ಮಚ್ಚೆ$_3$' ನೋ.

**ಮಚ್ಛರದಾಣಿ** 'ಮಚ್ಛರದಾನಿ' ನೋ.

**ಮಚ್ಛರದಾನಿ**, ಮಚ್ಛರದಾಣಿ, ಮಚ್ಚರದಾನಿ, ಮಚ್ಚರದಾಣಿ (ನಾ). ಸೊಳ್ಳೆಪರದೆ : ಮಚ್ಛರದಾನಿಯಿಂದ ಪರಿವೇಷ್ಟಿತವಾದ, ಚಂದನದಿಂದ ನಿರ್ಮಿತವಾದ ಪರ್ಯಂಕದ ಮೇಲೆ . . . ಶಯನ ಮಾಡಿದ್ದಾಳೆ (ಮಂಜುಳ. ೧೯) ; ಮಚ್ಛರದಾನಿ ಸಹಿತವಾದ ಪಲ್ಲಂಗಗಳು ಮುಂತಾದುವುಗಳನ್ನು ಕಂಡು ಇವರೊಳ್ಳೆ ಶ್ರೀಮಂತರಿರಬೇಕೆಂದು ಊಹಿಸಿದೆ (ಎಡಹೆ. ೦೨೪). **ಮಚ್ಚರದಾಣಿ** : ಬೆಳಗ್ಗೆಯೇ ಏಳುವಾಗ ಇಳಿಬಿಟ್ಟ ಮಚ್ಚರದಾಣಿಯನ್ನು ಇನ್ನೂ ತೆಗೆದಿರಲಿಲ್ಲ (ಸ್ವಪ್ನದ. ೦೦೮). **ಮಚ್ಚರದಾನಿ** : ದಕ್ಷಿಣಭಾಗದಲ್ಲಿ ಕಿಡಿಕಿಯ ಮಗ್ಗುಲಿಗೆ ಹಾಸಿಕೊಳ್ಳಲೇನು ಬಾಬೂಜೀ, ಮಚ್ಚರದಾನಿ ಕಟ್ಟುವ ಅವಶ್ಯಕತೆ ಬೀಳುವುದಿಲ್ಲ (ಶ್ರೀಕಾಂತ. ೬೬) ; ಮಚ್ಚರದಾನಿಯನ್ನು ಮಡಚಿ ಅತ್ತ ಇಟ್ಟನು (ಬಂಬಿಣಾ. ೨೨). **ಮಚ್ಛರದಾಣಿ** : ಮಚ್ಛರದಾಣಿ, ಪೀಕದಾಣಿ . . . ಮೊದಲಾದವುಗಳಲ್ಲಿ ಕಂಡುಬರುವ ಪ್ರತ್ಯಯಗಳೂ 'ಪಾರಸಿ' ಆಗಿವೆ (ಭಾಶಾಣ. ೦೬೬).

[←ಹಿಂ. ಮಚ್ಚರದಾನೀ ; ಮರಾ. ಮಚ್ಚರದಾಣೀ. ಮಚ್ಛರದಾನೀ]

**ಮಚ್ವೆ** 'ಮಚವೆ' ನೋ.

**ಮಜ** 'ಮಜಾ' ನೋ.

**ಮಜಕೂರು** (ನಾ). ೧. ಕಾಗದ, ಪತ್ರ ಮೊದಲಾದುವುಗಳಲ್ಲಿ ಬರೆಯುವ ಅಥವಾ ಬಾಯಿಯಲ್ಲಿ ಹೇಳುವ ವಿಷಯ ; ಸಮಾಚಾರ ; ಸುದ್ದಿ : ನಿನಗೆ ಈ ಮಜಕೂರ ತಿಳಿಸಬೇಕಂತ ಬಂದರ ನೀನು . . . ನಮ್ಮನ್ನು ಜಡೀಬೇಕಂತ ಮಾಡಿದ್ಹಿ (ಗ್ರಾಮಾಯ. ೨೧೭) ; ಕೈಯಲ್ಲಿದ್ದುದನ್ನು ಓದಿ ತೋರಿಸದೆ ಅದರ ಮಜಕೂರನ್ನು ನಿವೇದಿಸಹತ್ತಿದರು (ಮೂರುದಾ. ೦೦೨). ೨. ಪ್ರಸ್ತುತವಾದುದು ; ಸಂಬಂಧಿಸಿದುದು : ತಾಲೂಕು ಮಜಕೂರು ಪೈಕಿ ಬಗುಂಜಿ ಮಾಗಣಿಯಲು ಇರುವ ಹೆಜ್ಜೆ ಶಿವೈಯ್ಯನು . . . ಶಿಲಾಮಯ ದೇವಸ್ತಾನಾ ಕಟ್ಟಿಸಿ (ಎಕ. VI, ಕೊಪ್ಪ. ೯೬-೨೯ ; 1811); ತಾಲ್ಲೂಕು ಮಜಕೂರು ಜಮಾಬಂದಿ ಕ್ರಮ (ಮಹಾಪಂ.II, ೫೯). [←ಅರ. ಹಿಂ. ಮಜಕೂರ್ ; ಮರಾ. ಮಜಕೂರ್, ಮಜ್ಕೂರ್]

**ಮಜಡ** 'ಮದಡ' ನೋ.

**ಮಜಡು** 'ಮದಡು' ನೋ.

**ಮಜಬೂತು** (ಗು). ೧. ಗಟ್ಟಿಯಾದ ; ಭದ್ರವಾದ : ಸಿಮೆಂಟು ಕಾಂಕ್ರೀಟಿನ ಮಜಬೂತ ಮನೆ (ಹೊಸಕ್ಷಿ. ೦೨೯). (ನಾ). ೨. ಗಟ್ಟಿಯಾದುದು ; ಬಲವಾದುದು ; ದೃಢವಾದುದು : ಪರಿಹರ ಕಿಲ್ಲೆ ದಾಹಳ ಮಜಬೂತು ಯಿಥೆ. ಸ್ವಾಧೀನಕ ಬರೋದಿಲ್ಲ (ಮದಕ. ೬೦-೨) ; ಒಳ್ಳೆ ಮಜಬೂತಾದ ಹವಣಾದ ನಯಗೆಲಸದ ಸಣ್ಣಸಿಬರಿನ ತೊಟ್ಟಿಲು (ಸಹಿಶಾ. II, ೦೦೦೬). ೩. ಭರ್ಜರಿಯಾದುದು : ಎಲ್ಲರಿಗೂ ಔತಣ ಮಜಬೂತಾದ ಊಟ (ಮಲ್ಲಿ. ೦೬) ; ಸಣ್ಣ ಗುಲಾಬಿಯಾಕಾರದಲ್ಲಿ ವಜ್ರಗಳನ್ನು ಕೂಡಿಸಿದ್ದ ಮಜಬೂತಾದ ಉಂಗುರ (ಕೃನರು. ೯೭).
[← ಅರ. ಹಿಂ. ಮರಾ. ಮಜಬೂತ್]

**ಮಜಮಾ**, ಮಝುಮಾ (ನಾ). (ಬಹಳ ಜನರು ಒಂದೆಡೆ ಸೇರುವ) ಸಭೆ ; ಕೂಟ ; ಎರಡನೇ ದಿವಸ ಮಜಮಾಕ್ಕೆ ಈವೂರ ಬ್ರಾಹ್ಮಣರು ಅನೇಕರು ಬಂದಿದ್ದರು (ಮುಸುಗ. ೦೩). **ಮಝುಮಾ** : ಮಝುಮಾ (ಲಾವಣಿಗಾರರ ಎರಡು ಗುಂಪುಗಳೂ ಸೇರಿ ಹಾಡುವುದಕ್ಕೆ ಕುಳಿತುಕೊಳ್ಳುವ ಸಭೆ) ಸೇರುವಾಗ ತುರಾದವರು ರಾಹುವಿರುವ ದಿಕ್ಕಿಗೆ ಎದುರಾಗಿ ಕುಳಿತುಕೊಳ್ಳುತ್ತಾರೆ (ಕರ್ನಾಸಂ. ೨೯).
[← ಅರ. ಮಜ್ಮಅ ; ಹಿಂ. ಮಜಮಾ]

**ಮಜರೆ** (ನಾ). ಸಣ್ಣಹಳ್ಳಿ ; ಉಪಗ್ರಾಮ : ಕೆರೆ ಮಧ್ಯೆ ಇರಲಿಲ್ಲ ಎಂದರೆ ನಮ್ಮ ಊರು ಕಲ್ಮಾಡಿಯ ಒಂದು ಮಜರೆಯಾಗುತ್ತಿದ್ದಿತೊ ಏನೊ (ಸಣ್ಣಕ. VI. ೦). [← ಅರ. ಮಜ್ರೀ ; ಮರಾ. ಮಜರಾ, ಮಜರೇ]

**ಮಜಲೀಸು** (ನಾ). ನೃತ್ಯ, ಸಂಗೀತ ಮುಂತಾದುವು ನಡೆಯುವ ಸಭೆ : ಬೈಠಕ್ಕು : ಈಗಲೂ ಹೈದರಾಬಾದಿನ ಕನ್ನಡಜಿಲ್ಲೆಗಳಲ್ಲಿ ಮಜಲೀಸು ನಡೆಯುವ ಸ್ಥಳಗಳಿವೆ (ರೂ೨). [← ಅರ. ಮಜ್ಲಿಸ್ ; ಹಿಂ. ಮಜಲಿಸ್ ; ಮರಾ. ಮಜಲಸ್, ಮಜಾಲಸ್, ಮಜಾಲೀಸ್]

**ಮಜಲು, ಮಜಲೆ** (ನಾ). ೧. ಹಂತ ; ಘಟ್ಟ : ಹನ್ನೊಂದು ಹೊಡೆದು ಹನ್ನೆರಡರ ಮಜಲು ಬರಲು ತೊಡಗಿತ್ತು (ಶ್ರೀರಂಗ.೦೨೧) ; ನದಿಯ ಮೊದಲ ಮಜಲಿನಲ್ಲಿ ಭೂಮಿ ಉಬ್ಬುತಗ್ಗುಗಳಿಂದ ಕೂಡಿರುತ್ತದೆ (ಕಂಕೋ. I, ೨೩೯). ೨. ಪ್ರಯಾಣಕಾಲದಲ್ಲಿ ಅಲ್ಲಲ್ಲಿ ತಂಗುವ ಸ್ಥಳ ; ಟಪ್ಪೆ : ಎರಡು ಮೂರು ಹರಿದಾರಿಗಳಲ್ಲಿ ಮಧುಪುರವಿದೆ. ಒಂದೇ ಮಜಲಿನೊಳಗೆ ಕೊಲ್ಲೂರಿದೆ (ಮುಕ್ಷಬ. ೨೦೯) ; ಶ್ರೀದೇವಿಯು ಅವರೊಡನೆ ದಾರಿ ನಡೆಯುತ್ತಿದ್ದಳು. ಒಂದೆರಡು ಮಜಲು ದಾಟುವುದರೊಳಗಾಗಿ ಶ್ರೀದೇವಿಯು ಅವರ ಗುಂಪಿನಲ್ಲಿಯೇ ಒಬ್ಬಳೆಂತೆಯೇ ಪರಿಗಣಿತಳಾದಳು (ಶ್ರೀಠಾಕು. ೨೦೯). ೩. ದೇವರ ಉತ್ಸವ, ಮೆರವಣಿಗೆಗಳನ್ನು ಅಲ್ಲಲ್ಲಿ ನಿಲ್ಲಿಸುವ ಸ್ಥಳ : ಉತ್ತರಕರ್ನಾಟಕದಲ್ಲಿ ಒಕ್ಕಲಿಗನು . . . ತೇರೆಳೆದು, ಮಜಲುಮೋಜುಗಳನ್ನು ಮಾಡುತ್ತಾನೆ (ಕನ್ನಶಾ. ೯) ; ಊರವರೆಲ್ಲ ಕೂಡಿ ದುರಗಮ್ಮನ ಮುಂದೆ ಡೊಳ್ಳಿನ ಮಜಲುಮಾಡಿದರು (ಮಣ್ಣಿಮ. ೬). ೪. ಮಹಡಿ ; ಉಪ್ಪರಿಗೆ : ಅವರು ಈ ಕಟ್ಟಡದ ಮೂರನೇ ಮಜಲಿನಲ್ಲಿದ್ದಾರೆ (ರೂ೨). ೫. (ಕರಾ) ಮಧ್ಯಮ ವರ್ಗಕ್ಕೆ ಸೇರಿದುದು : 'ಮಜಲುಗದ್ದೆ' ಪರಾ. ೬. ಒಂದು ಬಗೆಯ ಮಧ್ಯಮವರ್ಗದ ವ್ಯವಸಾಯದ ಭೂಮಿ ; ಒಣಗದ್ದೆ : ಗದ್ದೆಬಯಲು ಮಜಲು ಬಿತ್ತುವ (ಇಎ. ೦೯೯೬, ಮಂಗಳೂರು. ೦೩೬-೦೭ ; 1346) ; ಯೆಮ್ಮಾರ್ಳ ಡೇವಾಲ್ಯದ ಯಿನಾಶಾ(ಂ)ನ್ಯದ ಮೂಲೆಯ ಪಾಳ ದೇವರ ಮಜಲು (ಸೌಇಇ. IX – ii, ೯೨೬-೦೫ ; 1402) ; ಕಂಬಳ . . . ಉತ್ತು ಹದಮಾಡಿರುವ ಮಜಲುತರದ ಗದ್ದೆಗಳಲ್ಲಿಯೇ ಇದು ನಡೆಯುವುದು ಹೆಚ್ಚು (ಕಶಪು. ೫-೨೭). **ಮಜಲೆ** : ೪. ರಸ್ತೆಗಳ ಇಕ್ಕೆಲಗಳಲ್ಲಿ ಮೂರು ಮಜಲೆಗಳ ನಾಲ್ಕು ಮಜಲೆಗಳ ಚಾಳುಗಳು (ಅಮೋಲಿ. ೦೦೯) ; ಮೂರನೇ ಮಜಲೆಯ ಮೇಲಿನ – ರಸ್ತೆಯ ಬದಿಯ – ಕೊನೆಯ ಎರಡು ಕೋಣೆಗಳಲ್ಲಿ ಅವಳ ಅಕ್ಕನ ಚಿಕ್ಕ ಸಂಸಾರ (ನಡದಾ. II, ೦೦೭೬).
[← ಅರ. ಮಂಜಿಲ್, ಮಂರ್ಝಿಲ್ ; ಹಿಂ. ಮರಾ. ಮಜಲ್./ ತುಳು. ಮಜಲ್ = ಮಧ್ಯಮತರಗತಿಯ]

**ಮಜಲುಗದ್ದೆ** (ನಾ). ಮಧ್ಯಮ ವರ್ಗದ ಗದ್ದೆ : ಹೆಚ್ಚಿನ ಬೆಟ್ಟು ಮತ್ತು ಮಜಲು-ಗದ್ದೆಗಳನ್ನು ಉತ್ತು ಬಿತ್ತಿದರು (ಬಾಳಗಿ. ೦೦೩) ; ರಸ್ತೆಯ ಎಡತ್ತಿನಲ್ಲಿ ಪಂಜುರ್ಲಿಯ ಗುಡಿಯ ಎದುರು ಮಜಲುಗದ್ದೆಯಲ್ಲಿ ತುಂಬ ಜನ ಸೇರಿದ್ದರು (ಮುಂಗಾರು. ೦೦೬). [ಮಜಲು + ಗದ್ದೆ (<ಗಟ್ದೆ)]

**ಮಜಲುಬಿಡು** (ಕ್ರಿ). ಪ್ರಯಾಣದ ಮಧ್ಯದಲ್ಲಿ ಬೀಡು ಬಿಡು, – ಬಿಡಾರ ಹೂಡು : ಇಪ್ಪತ್ತುಮೈಲಿ ಪ್ರಯಾಣಮಾಡಿ ಊಟಕ್ಕಾಗಿ ಮಜಲುಬಿಟ್ಟು ಸೇನೆ ಸಂಜೆಯ ವೇಳೆಗೆ ಶ್ರೀರಂಗಪಟ್ಟಣವನ್ನು ತಲುಪಿತು (ಐಕ್ಯದೇ. ೦೬೮). [ಮಜಲು + ಬಿಡು₁]

**ಮಜಲೆ** 'ಮಜಲು' ನೋ.

**ಮಜಾ**, ಮಜ, ಮಝಾ (ನಾ). ೧. ಮೋಜು ; ಗಮ್ಮತ್ತು : ನಿಮ್ಮಿಬ್ಬರದೂ ಮಜಾ ಐತಿ ಬಿಡಲೇ (ಮಣ್ಣುಹ. ೯೯) ; ಕೇಶವರಾಯನಿಗೆ ಇನ್ನೂ ಬೆಳಕಿರುವಾಗಲೆ ಕುಡಿಯುವುದೆಂದರೆ ಅದೇನೋ ಮಜಾ ಎನ್ನಿಸುತ್ತಿರಲಿಲ್ಲ (ಬಂಗಬಿ. ೭). ೨. ತಮಾಷೆ ; ವಿನೋದ : ಏನೋ ಮಾತಿನ 'ಮಜಾ' ದಲ್ಲಿ ಅದನ್ನೂ ಹೇಳಿಬಿಟ್ಟಿದ್ದಳು (ಕಾನೂರು. ೦೩೬) ; ಸಾಹಸಮಾಡಿ ಮುಂದೆ ಹೋದರೆ ಮಾತ್ರ ಮಜಾ (ಸಾಹೇಬ್. ೩). **ಮಜ** : ೧. ರಜವನ್ನು ಮಜವಾಗಿ ಕಳೆಯಬೇಕೆಂದು ನೂರಾರು ಯೋಚನೆಗಳನ್ನು ಮಾಡಿಕೊಂಡರು (ಸ್ವಾಮಿಸ್ನೇ. ೭೬). ೨. ಜಾರುವಂತಹ ಈ ಕಲ್ಲುಗಳ ಮೇಲೆ ಜೋರಿನಿಂದ ಹೋಗುವುದರಲ್ಲಿಯೇ ಮಜವಿದೆ (ಮುಕ್ತಿ. ೫೬). ೩. ಸಂತೋಷ ; ಖುಷಿ : ನಾವು ಕೊಡೋ ಐನೂರು ರೂಪಾಯಿ ಕರಗೋತನಕ ಮಜವಾಗಿರುತ್ತಾನೆ (ರಂಗವ. ೦೦೭). **ಮಝಾ** : ೧. ದುಡಿದರೆ ಮಝಾ ; ಇಲ್ಲದಿದ್ದರೆ ಪರದಾಟ (ಅನಾಥ. ೦೯೨). [←ಪಾರ. ಮಜಾಹ್, ಮಝಾ ; ಹಿಂ. ಮರಾ. ಮಜಾ]

**ಮಜೂರ** (ನಾ). ಕೂಲಿಕೆಲಸಮಾಡುವವನು : ಎಲ್ಲರಿಗಿಂತಲೂ ಮಜೂರರಿಗೆ ನಾನು ಹೆಚ್ಚಿನ ಸಹಾನುಭೂತಿ-ಭೂತದಯೆಗಳನ್ನು ತೋರಿಸುತ್ತೇನೆ (ಸಿಹ್ಯಾಮು. ೬) ; ಕಾರ್ಖಾನೆಗಳಲ್ಲಿ ಕೆಲಸಮಾಡುವ ಮಜೂರರ ಪರಿಸ್ಥಿತಿಯನ್ನು ಪರಿಶೀಲಿಸಿದರೆ ಕನಿಕರ ಹುಟ್ಟದಿರದು (ಜಾಪಕ. ೩೯).
[←ಹಿಂ. ಮರಾ. ಮಜೂರ್]

**ಮಜೂರಿ** (ನಾ). ೧. ಮಾಡಿದ ಕೆಲಸಕ್ಕೆ ಪ್ರತಿಫಲವಾಗಿ ಕೊಡುವ ಹಣ ; ಕೂಲಿ : ಭಕ್ತಿಯು ಕೆಲಸಗಾರರಿಗೆ ಚೆನ್ನಾಗಿ ಮಜೂರಿ

ಕೊಡುತ್ತಿದ್ದನು (ಬ೦ಂಠ್. ೦೯೨) : ದಿನದಿನದ ದುಡಿಮೆಗೆ ಕೊಡುವ ಮಜೂರಿಗೆ ಕೂಲಿ ಎನ್ನಲಾಗುತ್ತದೆ (ಗೃಪರಿ. ೦೯೩).

[←ಹಿಂ. ಮರಾ. ಮಜೂರೀ]

**ಮಜೆದಾರ** (ನಾ). ವಿನೋದಪೂರ್ಣವಾದುದು; ಅವರ ನಾಟಕಾನೂ ಮಜೆದಾರ ಐತಿ (ಹೊಸಂಣಾ. ೦೦೮).

[←ಪಾರ. ಹಿಂ. ಮಜೇದಾರ್; ಮರಾ. ಮಜೇದಾರ, ಮಜಾದಾರ್]

**ಮಜ್ಜ** (ನಾ). ೧. ದೇಹದ ಧಾತುಗಳಲ್ಲಿ ಒಂದು; ಮೂಳೆಯ ಒಳಗಿನ ಸಾರವತ್ತಾದ ಭಾಗ; ಅಸ್ಥಿಸಾರ : ಒಡಲೆಂಬುದು ಮಜ್ಜದ ಪೆರ್ಮಡು (ರತ್ನಕ. ೩-೨೦); ಧಾತುಗಳು ರಸಧಾತು, ರಕ್ತಧಾತು, ಮಾಂಸಧಾತು, ಮೇದೋಧಾತು, ಅಸ್ಥಿಧಾತು, ಮಜ್ಜಧಾತು, ಶುಕ್ಲಧಾತು ಎಂದು ಏಳು ತರನಾಗಿವೆ (ಸಕವೈ. ೯೮). ೨. ಸಸ್ಯನಾಳದ ಒಳಭಾಗದ ಸತ್ತ್ವ; ಮರದ ಕೆಚ್ಚು; ಚೇಗು : "ಮಜ್ಜಮೆನೆ [ಪಾಠಾಂ. ಜ್ಜೆಯೆನೆ] ಸಾರಮೆನೆ ಮರದ ಕೆಚ್ಚಕ್ಕು" (ಮಂಗರಾ. ೩೨-೩).

[ಸಂ. ಮಜ್ಜಾ]

**ಮಜ್ಜಣ** 'ಮಂಜಣ$_1$' ನೋ.

**ಮಜ್ಜನ** (ನಾ). ಸ್ನಾನ; ಮಿಾಹು; ಜಳಕ : ಮಜ್ಜನಕೀಗಳೆ ರಾಜಪುತ್ರಿ ನೀಂ ನಡೆ (ಕಾದಂಪೂ. ೭೭೨); ಮಜ್ಜನಕ್ಕೆಟಿವೆನಯ್ಯಾ ಕಾಯವಿಕಾರಿಯಾನು (ಬಸವ. ೨೩೯); ಸಜ್ಜೆವನೆಯ ಪೊಱಮಟ್ಟು ಗುಜ್ಜುಮೆಟ್ಟಿಂದ ನಡೆದು ಪೋಗಿ ಮೆಲ್ಲನೆ ಮಜ್ಜನವನು ಮಾಡಿದಳು (ಕುಂರಾಕಾಂ. ೨೮-೦೬೬).

**ಮಜ್ಜನದ ಮನೆ** = ಸ್ನಾನಮಾಡುವ ಮನೆ; ಸ್ನಾನಗೃಹ : ಮಜ್ಜನದ ಮನೆಯನೊಳಪೊಕ್ಕುಜ್ವಳಿಪ ಸುವರ್ಣಪೀಠದೊಳ್ಕುಳ್ಳಿರ್ದಾ ಸಜ್ಜನೆಗ ನುರಾಗದೆ ಯೋಷಿಜ್ಜನಮಣಿಯೊರ್ವಳಿಕ್ಕಿದಳ್ ಮಲಯಜಮಂ (ಉದ್ಭಟ. ೬-೦೬).

[ಸಂ.]

**ಮಜ್ಜನಂಗೆಯ್**. ಮಜ್ಜನಗೆಯ್ (ಕ್ರಿ). ಸ್ನಾನಮಾಡಿಸು; ಮಿಾಯಿಸು : ನಳಿನಮುಕುರದಿಂ ಮಜ್ಜನಂಗೆಯ್ದು ತಜ್ಜಳಜಧೂಳೀಗಂಧ ವಿಟ್ಟು . . . ಕಮಳೆಯರ್ಚಿಸಿದಳೋಯೆನೆ ಕೊಳದೊಳಾರ್ಯನೆಸೆದಂ (ಕನ್ನರಾ. ೮-೩೦). **ಮಜ್ಜನಗೆಯ್** : ನುಡಿಸಿದರಖಿಲೋಪಚಾರದಿಂ ಸಂಕಲೆಗಿಡಿಸಿದರ್ ಮಜ್ಜನಗೆಯ್ಸಿ ಉಡಿಸಿದು[ಉಡಿಸಿದರು] ತೆ ನವ್ಯವಸ್ತ್ರವ ನಾಯಾತಣಕೆ (ಮೋಹತ. ೯೦-೩೦). [ಮಜ್ಜನ + ಕೆಯ್]

**ಮಜ್ಜನಂಬುಗಿಸು** 'ಮಜ್ಜನಂಬೊಗಿಸು' ನೋ.

**ಮಜ್ಜನಂಬುಗು** 'ಮಜ್ಜನಂಬೊಗು' ನೋ.

**ಮಜ್ಜನಂಬೊಗಿಸು**, ಮಜ್ಜನಂಬುಗಿಸು (ಕ್ರಿ). = ಮಜ್ಜನಂಗೆಯ್ : ಸೊಗಸುವ ಬೋನಮಂ ಸಮೆವ ಕಾರ್ಯದೊಳು ಕೆಲರಂ ಸುಮಜ್ಜನಂಬೊಗಿಸುವ ಕಜ್ಜದಲ್ಲಿ ಕೆಲರಂ . . . ಅಪ್ಪೈಸಿದಳ್ (ಜಾರಪು. ೬-೬೯). **ಮಜ್ಜನಂಬುಗಿಸು** : ನಾಗಕನ್ನೆಯರುಂ ತಾನುಂ ಮನಂಬುಗಿಸುವಂತೆ ಮಜ್ಜನಂಬುಗಿಸಿ . . . ಗುಣಾರ್ಣವನಂ ಮರುಳ್ಚಿದಳ್ (ಶಂಶಭಾ. ೯-೦೬ ವ); ತಾತಮ್ಮ ಮಗಳ್ದಿರಂ ಮಜ್ಜನಂಬುಗಿಸಿ (ನೇಮಿಪು. ೦೩-೫೩ ವ) : ಮಗಮಗಿಸುತಿಹ ಪರಿಮಳದ ಪನ್ನೀರಿನಿಂ ಮಜ್ಜನಂಬುಗಿಸಿ (ತಿಪು. ೩೭-೬). [ಮಜ್ಜನಂಬೊಗು + — ಇಸು$_3$]

**ಮಜ್ಜನಂಬೊಗು**, ಮಜ್ಜನಂಬುಗು (ಕ್ರಿ). ಸ್ನಾನಮಾಡು; ಮಿಾಯು : ಪ್ರಭಾವತೀಮಹಾದೇವಿ ಮಜ್ಜನಂಬೊಕ್ಕು ದಿವ್ಯವಸ್ತ್ರಮನುಟ್ಟು ಮಗುೞ್ದು ಬಂದು . . . ಇಂತೆಂದಳ್ (ರವರ್ಣಾಪು. ೪-೦೬೩). **ಮಜ್ಜನಂಬುಗು** : ಸುಗಂಧತೈಲದಿಂ ಮೆಯ್ಯಭ್ಯಂಗನಂಗೆಯ್ದು ಮಜ್ಜನಂಬುಗಲೆಂದಿರ್ದಾವಸರದೊಳ್ (ವರ್ಧಾರಾ. ೬೬-೦); ಮಜ್ಜನಂಬುಗದಾತೋಗಿಸಲೊಲ್ಲದಿರ್ದೆರ ವಿದೇಂ (ಶಂಶಭಾ. ೯-೬೩); ಲಗ್ನಕಾಂ ಬಂದು ಮಜ್ಜನಂಬುಗುವಾಗಳ್ . . . ಸುವತಿಯರ್ ಪದೆದೆನ್ನಯ ದೇಹಮೆಯ್ದೆ ರೆಞೋಂಚಿಸುತಿರೆ ಪೂಸಿದರ್ ಮೃದುಕರಾಂಬುಜದಿಂ ನವಗಂಧತೈಲಮಂ (ವಕಶು. ೯-೦೦೯ ವ).

[ಮಜ್ಜನ + ಪೊಗು]

**ಮಜ್ಜನಗೃಹ** (ನಾ). ಸ್ನಾನದ ಮನೆ; ನೀರುಮನೆ : ವಸುಧಾರಕವೆಂಬ ಕೋಷ್ಠಾಂಗಾರಮುಂ ಜೀಮೂತಮೆಂಬ ಮಜ್ಜನಗೃಹಮುಂ . . . ಎಪ್ಪತ್ತಿಚ್ಛಾರ್ಸಿರ ದುರ್ಗಾಟವಿಗಳುಂ ಪದಿನೆಣ್ಛಾಸಿರಮ್ಲೇಚ್ಛರಾಜರುಮಾತ್ಮೀಯ ಸಾಮ್ರಾಜ್ಯಪರಿಚ್ಛೇದವಾಗೆ (ಆದಿಪು. ೧೫-೩ ವ). [ಸಂ.]

**ಮಜ್ಜನಗೆಯ್** 'ಮಜ್ಜನಂಗೆಯ್' ನೋ.

**ಮಜ್ಜನಗೊಳಿಸು** (ಕ್ರಿ). = ಮಜ್ಜನಂಗೆಯ್ : ನೆರೆದಮರರ ದಾವಿಯರು ಬೆನ್ನನೆ ಪರಿದು ಪಾದವ ಕಟ್ಟಿಕೊಂಡು ಪರಮನನು ಮಜ್ಜನಗೊಳಿಸುವರು ಸಜ್ಜೆಗೊಳಿಸುವರು (ಸಾಳ್ವಭಾ. ೩೩-೦೦೫).

[ಮಜ್ಜನ + ಕೊಳ್$_1$ + — ಇಸು$_3$]

**ಮಜ್ಜನಜಲ** (ನಾ). ೧. ಸ್ನಾನಮಾಡುವ ನೀರು; ಮಿಾಹದ ಜಲ : ಮಜ್ಜನಪೀಠಂ ಸುರಗಿರಿಮಜ್ಜನಜಲಮಮೃತಜಲಧಿಜಲಮಮರೇಂದ್ರಂ ಮಜ್ಜನವಳ್ಳನುಮೆನೆ ಜಿನಮಜ್ಜನಮಹಿಮೆಯ ಬೆಡಂಗನೇವಣ್ಣಿಪುದೊ (ಆದಿಪು. ೭-೧೦೩). ೨. ಸ್ನಾನಮಾಡಿದ ನೀರು. — ಅಶುದ್ಧಜಲ : ವಿವಿಧ ಜನರಾಶ್ಚರ್ಯರಾಗಿರೆ ಅಪರಿಮಿತಂ ಕೇಳಿ ಪರಿತಂದವರ ಮಜ್ಜನ ಜಲದ ಕೆಸಱಲಿ ಪೊರಳುತಿರಲು (ಬಸಪು. ೫೬-೫೬). [ಸಂ.]

**ಮಜ್ಜನಪೀಠ** (ನಾ). ಸ್ನಾನಮಾಡುವಾಗ ಕುಳಿತುಕೊಳ್ಳುವ ಮಣೆ. — ಪೀಠ : ವಿಶದ ಯಶಸ್ಸಿದ್ಧಾಧಿಷ್ಠಾನಪೀಠಮೆನಿಪ ಮಜ್ಜನಪೀಠಮನಧಿಷ್ಠಿಸಿದಾಗಳ್ (ಆದಿಪು ೬-೭೯ವ); ವಿಳಸನ್ಮಜ್ಜನಪೀಠಮಾದುದು ಜಿನಂಗೆಂಬೊಳ್ಪಿನಿಂ ಪೆರ್ಮೆಯುಂ ತಳೆದತ್ತು (ಶಾಂತಿಪು. ೯-೭೭). [ಸಂ.]

**ಮಜ್ಜನಬಾವಿ** (ನಾ). ಸ್ನಾನಮಾಡುವ ಬಾವಿ; ಮಿಾಹದ ಬಾವಿ : ಮಜ್ಜನಬಾವಿಯೊಳಗಿರ್ದ ಸಲಿಲಮಂ ನೀನೆಱೆವುತಿರು ಪ್ರಜ್ವಳಿಸುವುವು ದೀವಿಗೆಗಳ್ (ಬಸಪು. ೫೦-೫೬). [ಮಜ್ಜನ + ಬಾವಿ]

**ಮಜ್ಜನವಡಿಸು** (ಕ್ರಿ). = ಮಜ್ಜನಂಗೆಯ್ : ಮಜ್ಜನವಡಿಸಿ ಸುವರ್ಣ ಶೂರ್ಪದೊಳಾಂತು ಸೆಜ್ಜೆಗೆ ತಂದರಾ ಶಿಶುವ (ಮೋಹತ. ೦೬-೩೦).

[ಮಜ್ಜನ + ಪಡಿಸು]

**ಮಜ್ಜನವಳ**, ಮಜ್ಜನವಳ್ಳ, ಮಜ್ಜನವಾಳ (ನಾ). ಸ್ನಾನಮಾಡಿಸುವವನು: "ಮಜ್ಜನವಳನೆಂದು ಮಜ್ಜನಂಬುಗಿಸುವಾತಂ" (ಳಕಸಾ. ೬೦-೩೯೯); ಇಂದ್ರನೆ ಮಜ್ಜನವಳನಾಗೆ ಕ್ಷೀರಾಂಭೋರಾಶಿಯ ಜಲಮೆ ನೀರಾಗೆ . . . ಜನ್ಮಾಭಿಷೇಕ ಮಹಾಕಲ್ಯಾಣಮನೆಯ್ದಿ (ಶ್ರಾವಕಾ. ೦೭೨-೬) : ಸುರರದೆಲ್ಲರು ನಿರತರುಹರೆನೆ ಸುರಗಿರಿಯೆ ಮಜ್ಜನದ ಪೀಠವು ಸುರಪ ಮಜ್ಜನವಳನಮೃತಾಂಬುಧಿಯೆ ನೀರ್ದೊಣೆಯು (ಸಾಳ್ವಭಾ. ೩೩-೭೩). **ಮಜ್ಜನವಳ್ಳ** : ಮಜ್ಜನಪೀಠಂ ಸುರಗಿರಿ ಮಜ್ಜನಜಲಮಮೃತಜಲಧಿಜಲಮಮರೇಂದ್ರಂ ಮಜ್ಜನವಳ್ಳನುಮೆನೆ ಜಿನಮಜ್ಜನಮಹಿಮೆಯ ಬೆಡಂಗನೇವಣ್ಣಿಪುದೋ (ಆದಿಪು. ೭-೦೦೩); ವೃತ್ರಾರಿ ಬಿತ್ತರದಿಂ ಮಜ್ಜನವಳ್ಳನಾಗೆ ನಿಜಜನ್ಮಸ್ನಾನ ಕಾರ್ಯಂ ಕರಂ ಪಿರಿದಾಶ್ಚರ್ಯಮದಾದುದು (ವರ್ಧಮಾ. ೦೬-೨೫) : ಮಜ್ಜನವಳ್ಳರ ಮಣಿಹಡಾಜಿರ ಚಿಲುಬೆಜ್ಜರ ಬೆಸದಾಳುಗಳ ಅಜ್ಜರ ಕೇರಿ . . . ಮೆಱೆದಿಹುದು (ಕುಂರಾಕಾಂ. ೯-೦೦೫). **ಮಜ್ಜನವಾಳ** : ಮಜ್ಜನವಾಳರ ಮಣಿಹಗಾರರ . . . ನಿಡುಗೇರಿಗಳು ಆ ದುರ್ಗದಲ್ಲಿ ವ್ಯವಸ್ಥೆಗೊಂಡಿವೆ (ಪಂಜುಂಡ. ೦೨೬). [ಮಜ್ಜನ + — ವಳ]

**ಮಜ್ಜನವಳ್ತಿ** (ನಾ). ಸ್ನಾನಮಾಡಿಸುವವಳು : ಲಕ್ಷ್ಮಣಾಮಹಾದೇವಿ ಮಣಿಮಯ ಮಜ್ಜನಪೀಠಿಕಾಗ್ರಮನಲಂಕರಿಸಿದಾಗಳ್ . . . ಮಜ್ಜನಂಬುಗಿಸಿದರಂದಮರ್ತ್ಯೆಯರೆ ಮಜ್ಜನವಳ್ತಿಯರಾಗಿ ರಾಗದಿಂ (ಚಂದ್ರಪು. ೦೨-೩).

[ಮಜ್ಜನವಳ + — ತಿ$_1$ (< — ಇತ್ತಿ)]

**ಮಜ್ಜನವಳ್ಳ** 'ಮಜ್ಜನವಳ' ನೋ.

**ಮಜ್ಜನವಾರಿ** (ನಾ). = ಮಜ್ಜನಜಲ ೧ : ನಿನ್ನ ಪದಾಂಬುವೇ ನಿನಗೆ ಮಜ್ಜನವಾರಿ ತವಪ್ರಸಾದ ದಿವ್ಯಾನ್ನಮೆ ಭೋಜನಾನ್ನಮಿದು ತಥ್ಯಂ (ಜಿಶ. ೧೬೦). [ಸಂ.]

**ಮಜ್ಜನವಾಳ** 'ಮಜ್ಜನವಳ' ನೋ.

**ಮಜ್ಜನಶಾಲೆ** (ನಾ). = ಮಜ್ಜನಗೃಹ : ಸೊಗಯಿಪ ನಾಟ್ಯಶಾಲೆಗೆ ವಿರಾಜಿಪ ಮಜ್ಜನಶಾಲೆಗೆ . . . ಮಾಟ್ಟುದಕೃತ್ಯವಿಚಿತ್ರಶೋಭೆಯಂ (ಪುಕ್ಕಪು. ೨-೯೩) ; ದ್ರುಪದನು ಬಳಿಕ ಮಜ್ಜನಶಾಲೆಗಾಯತವಮಾಡ ಹೇಳಿದನು (ಕಂಭಕ. ೩೨-೩೪). [ಸಂ. ಮಜ್ಜನಶಾಲಾ]

**ಮಜ್ಜನಸಾಲೆ** (ನಾ). = ಮಜ್ಜನಗೃಹ : ಬಾಲೆಯು ಕೈಲಾಗೊಳು ಬಾಣ ಮಜ್ಜನಸಾಲೆಯು ಸಾರ್ವನಳ್ತಿಯಲಿ (ಮೋಹತ. ೨೦-೨).
[< ಸಂ. ಮಜ್ಜನಶಾಲಾ]

**ಮಜ್ಜಾನಲು** (ನಾ). ಬಯಲುಭೂಮಿ (?) : ಕುಂಬಾರಗೊಡಿಗಿಯ ಹತ್ತು ಖಂಡುಗ ಭೂಮಿಯು ಮಜ್ಜಾನಲು ಕ್ಷೇತ್ರವನಿಕ್ಕುವದಕ್ಕೆ ಈಸಿಕೊಂಡು ಪ್ರತಿವರ್ತನೆಯೂ ಘಟ್ಟಿಯ ಬಸವಾನಿಯವೊಳಗೆ ಚಿಕ್ಕೋಡುವತ್ತಿನ ಹರು ಖಂಡುಗ ಭೂಮಿಯನು ಕಲ್ಲ ನಡೆಸಿಕೊಟ್ಟೆವಾಗಿ (ಎಕ. VII, ಶೀರ್ಥಪ. ೦೩೨-೯ : 1467). 'ಮಜಲ್ಲು' ಪರಾ. [ ? ]

**ಮಜ್ಜಾಸಾರ** (ನಾ). ೧. ದೇಹದ ಮೂಲಸತ್ತ್ವ : ಅಸ್ಥಿಸಾರ. ೨. ಮರದ ತಿರುಳು ; ಕೆಚ್ಚು. ೩. ಸುಗಂಧವುಳ್ಳ ಒಂದು ಬಗೆಯ ಔಷಧೀಸಸ್ಯದ ಬೀಜ. ೪. ಶ್ರೇಷ್ಠವಾದುದು. ೫. ವಸ್ತು. ೬. ಧನ. ೭. ವೀರ್ಯ. ೮. ನಿಷ್ಠೆ. ೯. ಪ್ರತಿಜ್ಞೆ. ೧೦. ಆಕಾಶ. ೧೧. ಒಂದು ಬಗೆಯ ರೋಗ ; ವಾತ. ೧೨. ದುಃಖ. ೧೩. ನಷ್ಟವಾದ ಸ್ಥಿತಿ : "ಕ್ಲೇಶದಲಿ ನಿಷ್ಠೆಯಲಿ ತೀರದೆಡೆಯಲ್ಲಿ ಆಕಾಶದಲಿ ಶುಕ್ಲದಲಿ ಧನದಲ್ಲಿ ಪೊಳುಹಿನಲಿ ಆ ಸೂರುಳಲ್ಲಿ ಮಜ್ಜಾಸಾರ ವೆನಿಸಿರ್ಕು" (ಮಂಗರಾ. ೦೪೬-೩೩) ; "ಕ್ಲೇಶಂನಷ್ಟ ಪದೇಂದ್ರಿಯಂ ದ್ರವಿಣಸಾರಂ ಸೂರುಳುಂ ಶ್ರೇಷ್ಠಮಾಕಾಶಂ ನಿಷ್ಠೆಯುತೀವಕಷ್ಟಮಿವು ಮಜ್ಜಾಸಾರವುಕ್ಕುಂ" (ನಾನಾರ.೦೨೬). [ಸಂ.]

**ಮಜ್ಜಿಗೆ** (ನಾ). ೧. ಮೊಸರನ್ನು ಕಡೆದು ಬೆಣ್ಣೆ ತೆಗೆದ ಮೇಲೆ ಉಳಿಯುವ ದ್ರವ ; ಅಳೆ : "ದಧಿಮಂ(ತ)ಥಃ, ಮಸ್ತು – ಈ ೨ ಮಜ್ಜಿಗೆ" (ಹಲಾಯು. ೫೩-೦೬೬); ಇಂತಿದು ರುಚಿಪೆತ್ತಿರ್ದ ಪಾನಮಿದು ಮಜ್ಜಿಗೆ ತಾನಿದು ಶಿಖರಿಣಿಯೆನುತ್ತುಂ ತಿಂಬಿದಿಂಬಿ ತಂದೆಜಿಕಿದರಬಲೆಯರ್ ಸಿರ್ಪುಗಳಿಂ (ಸುಕುಮಾ. ೦೦-೩೧); ಭಾಗ್ಯದ ಲಕ್ಷ್ಮೀ ಬಾರಮ್ಮ . . . ಸಜ್ಜನ ಸಾಧು ಪೂಜೆಯ ವೇಳೆಗೆ ಮಜ್ಜಿಗೆಯೊಳಗಿನ ಬೆಣ್ಣೆಯಂತೆ (ಪುರಂದ. ೦-೨೦೦-೦); ದಕ್ಷಿಣ ಹಿಂದೂಸ್ಥಾನದಲ್ಲಿ ಹೆಚ್ಚಿನ ಜನರು ಮೊಸರು ಮತ್ತು ಮಜ್ಜಿಗೆಯನ್ನು ಅನ್ನದೊಡನೆ ತೆಗೆದುಕೊಳ್ಳುವರು (ಆಡುಶಾ. ೬೯). ೨. ಮಜ್ಜಿಗೆಯ ವಾಸನೆಯಿರುವ ಒಂದು ಬಗೆಯ ಸಸ್ಯ : "ಶಿವಳೇಯುಕಂ– ಮಾರದರಿಸಿನ, ರಕ್ತಚಂದನ, ಮಜ್ಜಿಗೆ" (ನಿಘ. ೩೦). 'ಮಜ್ಜಿಗೆಗಡ್ಡೆ' ಪರಾ.

ಮಜ್ಜಿಗೆಪಳಿದ್ಯ = ತರಕಾರಿಯನ್ನು ಬೇಯಿಸಿ ಮಸಾಲೆಯೊಂದಿಗೆ ಮಜ್ಜಿಗೆ ಅಥವಾ ಮೊಸರನ್ನು ಸೇರಿಸಿ ಮಾಡುವ ಒಂದು ಬಗೆಯ ಮೇಲೋಗರ : ಮಜ್ಜಿಗೆಪಳಿದ್ಯ, ತೊಗರಿಯ ಕಟ್ಟು . . . ಇವು ಅತಿಸಾರದಲ್ಲಿ ಹಿತ (ವೈದ್ಯಸಾ. I, ೨೦೦). ಮಜ್ಜಿಗೆಹುಳಿ = ಮಜ್ಜಿಗೆ ಪಳಿದ್ಯ : ಪದ್ಮಾವತಮ್ಮ ಮಜ್ಜಿಗೆಹುಳಿಯನ್ನು ಕುದಿಯಲು ಒಲೆಯ ಮೇಲಿಟ್ಟಿದ್ದರು (ಜಿಂದನ. ೦೪೦).
[ದೇ. ‖ ತಮಿ. ಮಜ್ಜಿಕೈ; ತೆಲು. ಮಜ್ಜಿಗ]

**ಮಜ್ಜಿಗೆಗಡ್ಡೆ, ಮಜ್ಜಿಗೆಗೆಡ್ಡೆ** (ನಾ). (ಮಜ್ಜಿಗೆಯ ವಾಸನೆಯಿರುವ) ಒಂದು ಬಗೆಯ ಗಡ್ಡೆ : "ಶತಮೂಲೀ . . . ಅಹೇರುಃ—೧೦ ಹಿಲ್ಲ ಪಿಚ್ಚರವ ಹೆಸರುಗಳು. ಅಂದರೆ ಆಸಡಿಯನ್ನುವರು, ಆಷಾಡೀಬೇರು ಪ್ರಸಿದ್ಧ, ಮಜ್ಜಿಗೇಗಡ್ಡೆ. ಅಜ್ಜಿಗಡ್ಡೆ" (ಸಿದ್ಧಾಂತಿ. ೦೩೫). ಮಜ್ಜಿಗೆಗೆಡ್ಡೆ : ಕಳ್ಳಂಗಡಲೆ, ಜೋಳಗಡಲೆ . . . ಮಜ್ಜಿಗೆಗೆಡ್ಡೆ, ಅಳಲೆಕಾಯಿ . . . ಎಲುವನ ಸಂದಿಬೇರು ಇವಂ ಸಮಾಂಶ ಕಷಾಯಮಿಕ್ಕಿ ಸೇವಿಸಲು ತ್ವಗ್ಗತ ಜ್ವರ ಗುಣಮಕ್ಕುಂ (ಸಕವೈ. ೧೦೬). [ಮಜ್ಜಿಗೆ + ಗಡ್ಡೆ]

**ಮಜ್ಜಿಗೆಗೆಡ್ಡೆ** 'ಮಜ್ಜಿಗೆಗಡ್ಡೆ' ನೋ.

**ಮಜ್ಜಿಗೆಹುಲ್ಲು** (ನಾ). (ಮಜ್ಜಿಗೆಯ ವಾಸನೆಯಿರುವ) ಒಂದು ಬಗೆಯ ಹುಲ್ಲು : ಹೊನ್ನುಗನೆಬೇರು, ಮಜ್ಜಿಗೆಹುಲ್ಲಿನ ಬೇರು (ಚಾಯಬೇರು) . . . ಸಕ್ಕರೆ ಇಷ್ಟನ್ನು ಅರೆದು ಕಲಸಿ ಕೊಡಲು ಆ ತಕ್ಷಣವೇ ಮೂತ್ರ ಬಿಡುವುದು (ಸಕವೈ. ೪೪೪); ಈ ಹುಲ್ಲುಜಾತಿಗೆ . . . 'ಮಜ್ಜಿಗೆಹುಲ್ಲು' ಎನ್ನುತ್ತಾರೆ (ಹಸುಹೊ. ೨೫೮). [ಮಜ್ಜಿಗೆ + ಹುಲ್ಲು (<ಪುಲ್)]

**ಮಜ್ಜೆ** (ನಾ). ೧. = ಮಜ್ಜ ೧ : ಮಸಣದ ಕಿಚ್ಚಿನಿಂ ನರಕಪಾಲದ ಭಾಂಡಮನಿಟ್ಟು ಮಜ್ಜೆಯ ರಸವೆಸರಾಗೆ ಕೀಲಿಗನ ಹೆಂಡತಿ ತಾಂ ತೊಳ ಸುತ್ತ ಮಯೊಳೆಯೊಳೆ . . . ಮುಚ್ಚಿದಳ್ (ಧರ್ಮಾಮೃ. ೦೦–೧೮೧ ಅವಚರ್ಯ); ತೊರಳೆ ತೊಗಲೆಲು ಮಜ್ಜೆ ಮಾಂಸದ ಹೊರಳಿಯಲಿ ರಣಭೂತದಾಣಸಿಗೆ ಪರಿಯಣವನಿಟ್ಟಂತೆ ಹೊಸ ಪರಿಯಾಯ್ತು ರಣಭೂಮಿ (ತೊರವಾ. ೫-೬-೦೬) ; ನಾವು ತಿನ್ನುವ ಆಹಾರದಿಂದ ರಕ್ತ ಉಂಟಾಗಿ, ಅದರಿಂದ ಅಸ್ಥಿ, ಮಾಂಸ, ಸ್ನಾಯು, ಮೇದ, ಮಜ್ಜಾ ಮುಂತಾದ ಧಾತುಗಳ ಪೋಷಣವಾಗುತ್ತದೆ (ಮಾಂಬಯು. ೫-೦೬೦). ೨. = ಮಜ್ಜ ೨ : "ಮಜ್ಜಾ, ಸಾರಃ – ಈ ೨ ಮರದ ಕೆಚ್ಚು" (ಹಲಾಯು. ೩೦-೨೯).
[ ಸಂ. ಮಜ್ಜಾ ]

**ಮಝು** (ನಾ). ಕೊಂಡಾಟದ ಒಂದು ಮಾತು : ಮಝು ಭಾಪುರೆ ಜಿತಮದನಂ ಧವಳಪ್ರಕಾಶಮಂಡಿತರದನಂ (ಗಿಂಶ. ೦೦-೫೩); ಪೊತು ಮಝು ದಳಪತಿಯ ಹರಿಬವನಾತುದೇ ಕುರುಸೇನೆ (ಕುಮಾಶ. ೦೩-೮) ; ಭಾಪುರೇ ಮಝು ಭಾಪುರೇ ಭಲೆ ಲೇಸು ಲೇಸು (ಗದಾಕದ. ೩೯-೦೫).

**ಮಝುಮಾ** 'ಮಜಮಾ' ನೋ.

**ಮಝುರೆ** (ಅ). ಕೊಂಡಾಟದಲ್ಲಿ ಬಳಸುವ ಒಂದು ಅವ್ಯಯ : ಅಂಘವಣೆಯಹುದೋ ಮಹಾದೇವಂಗೆ ನೂಕದು ಪೊತು ಮಝುರೆಯ ಭಂಗನೋ ನೀನೆನುತ ಮೂದಲಿಸಿದನು ಕಲಿಭೀಮ (ಕುಮಾಶ. ೨-೦೬); ಪೊಕ್ಕರಾಹವದೊಳಗೆ ಕಾಲಾಳೊಕ್ಕಲಿಸಿ ಬರೆ ಕಂಡು ಮಝುರೆ ಚುಕ್ಕಿಗಳಿರಾ ಯೆನುತ ಹೊಯ್ದರು ಬೆರಸಿ ಪಟುಭಟರ (ಪಳತ. ೯-೨೪).

**ಮಝಾ** 'ಮಜಾ' ನೋ.

**ಮಟ, ಮಡ$_3$** (ನಾ). ೧. ಸಂನ್ಯಾಸಿ, ಗುರು ಮುಂತಾದವರ ವಾಸ ಸ್ಥಾನ ; ಆಶ್ರಮ ; ಮಠ : ಪೆರ್ಗ್ಗಡೆ ವೇಲೆಯುಮಂ ಬಾವಿಯುಂ ಕಟ್ಟಿಸಿ ಮಟವಂ ಮಾಡಿಸಿದಂ (ಎಕ. VIII, ಸೊರಬ. ೬೦-೮; 938) ; ಕಲ್ಯಾಣದೊಳ್ ತುಂಬೇಶ್ವರಮುಂ ಮಟಮುಂ ದೀಪಮಾಲೆಯುಂ . . . ಮಾಡಿಸಿ (ಸೌಇಇ. XI – i, ೦೦೩-೧೨ ; 1070) ; ಮಟದ ಬೆಕ್ಕಿನಂತೊಳಗಣ್ಣೋಡಿ ಯಾಡಿ (ಧರ್ಮಾಮೃ. ೦-೦೬೮). ೨. ಪಾಠಶಾಲೆ : ನೀಂ ಬಿಜ್ಜೆಗಲ್ತ ನಾಂಬಿನ ಮಟಮನೇಕುಳಿದೆ ? (ಕಂಸಹ. ೨೨-೩೦). ಮಡ$_3$ : ೧. "ಮಡ (ಮಟ)– ಮಠ = ಗುರುವಿನ ಮಠ, ಪಾಠಶಾಲೆ" (ತದ್ಭಕೋ. ೩೩) ; ಪಾರ್ವರ ಕೇರಿಯಂತೆ ಚೆಂದಂಬಡೆದ ಮಡದಿನೆಸೆದುಂ ತೇರೆನಿಸಂ ಬಾನಂತೆ ವಿಮಾನ್ಗಳಂ ತಳೆದುಂ ಮುನ್ನೀರೆನಿಸಂ (ಕಬ್ಬಿಗ. ೫೦) ; ಠಕಾರಕ್ಕೆ ಡಕಾರಂ . . . ಮಠ – ಮಡ (ಶಮದ. ೨೫೬ ವೃಯೋ). [ < ಸಂ. ಮಠ ]

**ಮಟಂಬ** 'ಮಡಂಬ' ನೋ.

**ಮಟಕಳೆ** (ನಾ). ಒಂದು ಬಗೆಯ ಸುಗಂಧ ದ್ರವ್ಯ (?) : ವಟಫಲಾಧರೆ ಯರಾರತಿಯ ಸಿರಿವಲೆಗೊಲಿದು ಮಟಕಳೆಯ ಪೂಸಿ . . . ಕಾಯ್ದು

ಬೊದಡೆಯು ಕೌಪು ನಿರ್ವಾಣ ಕಾಶಾಂಬರ (ಗುರುಚ. ೩-೫೬); ಕಾವಿ ಕಾಷಾಯಾಂಬರವು ಕಂತೆ ಜೋಡಿಯು ಬೊದಡೆ ತೀವಿ ಮೈಯೊಳು ಭಸಿತ ದೇವಗಣ ನಡೆಯೆ (ಶರಂ. ೦೬೯-೫). **ಬೋದಡೆ :** ತಳೆದ ಒಡಲ ಬೂದಿಯು ಕಚ್ಚುಟದ ಕೈವಡಿಯು ನೆತ್ತಿಯು ಜಡೆಯು ಬೋದಡೆಯು ವಡಪುರೆತ್ತ ಮಣಿಮಯಾಸನವೆತ್ತ ನೋಡು (ಮರೇಶ್ವ. ೭-೫೭).

[← ಮರಾ. ಬೋಜಡ, ಬೋದಡ]

**ಬೊದಿಲ್** (ನಾ). ಒಂದು ಅನುಕರಣ ಶಬ್ದ : ಸೂತನೆಂಬವಂ ಕಂಡು . . . ಬೊದಿಲ್ಲೆನೆ ಪಾಯ್ದು ನೀರೊಳಾ ಬಾಳನನಾದಮಾದರದೆ ಕಂಡೊಸೆದು ನಿಧಿಗಂಡನಂತೆಪ್ಪೋಲ್ (ಶಂಶಖ. ೧-೯೭) ; ಎಳೆ ಬೊದಿಲ್ಲನೆ ಬಿದ್ದಿತ್ತು (ಶಂಶಖ. ೧೦-೭೦).

**ಬೊನೆಗಾರೆ** 'ಬೋನಂಗಾರೆ' ನೋ.

**ಬೊಪ್ಪ** 'ಬಪ್ಪ$_2$' ನೋ.

**ಬೊಪ್ಪಡೆ** (ನಾ). ಒಂದು ಬಗೆಯ ತೆರಿಗೆ : ಸಂಕರದಾಸಿವ ಕೊಟ್ಟದಾಸಿಗ ಸುಂಕದ ಪೆಗ್ಗಡೆ ಬೊಪ್ಪಡೆ ಒಳಗಾಗಿ ಸುಂಕ ಆಯದಾಯ . . . ಧಾರಾಪೂರ್ವಕ ಮಾಡಿ ಬಿಟ್ಟರು (ಎಕ. V(R). ಮೈಸೂರು. ೨೦೫-೦೯; 1175).

[ ? ]

**ಬೊಪ್ಪಯ** (ನಾ). ತಂದೆ; ಜನಕ : ಬೊಪ್ಪಯ. ಮುಚ್ಚುವಿರೆ ನನಗೆ ನಿಮ್ಮಾತ್ಮಪಂ ಸಂಡುತ್ತಿರ್ಪಳಲ ಬೇಗೆಯಂ (ಶ್ರೀರಾಮಾ. ೯೭೨-೯೭೫).

[ಬೊಪ್ಪ (<ಬಪ್ಪ$_2$) + ಅಯ$_1$ (<ಅಯ್ಯ$_{61}$)]

**ಬೊಪ್ಪಿ** (ನಾ). (ಸಾಮಾನ್ಯವಾಗಿ ಶೂದ್ರವರ್ಗಕ್ಕೆ ಸೇರಿದ) ಗ್ರಾಮ ದೇವತೆಯ ಅರ್ಚಕ : (?). [ ← ಮರಾ. ಭೋಪೀ, ಭೋಪ್ಯಾ ]

**ಬೊಪ್ಪಿಬೋಯ** (ನಾ). ಒಬ್ಬಾತನ ಹೆಸರು : ಬೊಪ್ಪಿಬೋಯಸ್ಯ ಕಾಶ್ಯಾ(ಶ್ಯ)ಪಗೋತ್ರ ಕುಮಾರಶರ್ಮಣ (ಇಐ.VII, ೦೬೬-೯೨ ; 668).

[ ಬೊಪ್ಪಿ$_?$ + ಬೋಯ]

**ಬೊಬ್ಬರ** 'ಬಬ್ಬರ' ನೋ.

**ಬೊಬ್ಬರ್ಯ** (ನಾ). (ಕರಾ) ಒಂದು ಕ್ಷುದ್ರದೇವತೆಯ ಹೆಸರು : ನಿದ್ರೆಯಲ್ಲಿ ಜಟ್ಟಿಗ, ಬೊಬ್ಬರ್ಯ ಬಂದ ಹಾಗೆ ಕಾಣಿಸಬಹುದು (ಸ್ವಪ್ನಹೊ. ೮) ; ಆ ಬೊಬ್ಬರ್ಯ ನಿಮಗೆ ಕಾಣಿಸಿತ್ತೆ ? (ರೇವಹಂ. ೫೫).

[← ತುಳು. ಬಬ್ಬರ್ಯ ]

**ಬೊಬ್ಬಾಟ**, ಬಬ್ಬಾಟ (ನಾ). ೧. (ಆನಂದ, ಆವೇಶ, ರೋಷ ಮುಂತಾದುವುಗಳಿಂದ ಮಾಡುವ) ಕೂಗಾಟ ; ಚೀರಾಟ ; ಅರಚುವಿಕೆ : ಬೊಬ್ಬಿಡದಾರುಮೀ ಬೊಬ್ಬಾಟಮೇತಕ್ಕೆ (ಬಸಪು. ೫೭-೦೭); ನಿಜಪದಾತಿಯ ಬೊಬ್ಬಾಟ . . . ತ್ರಿಜಗಕ್ಕೆ ಭಯವ ಬೀಜಿಮವು (ಕುಸಪ. ೦೫-೨೦). ೨. ದೊಡ್ಡಶಬ್ದ ; ಗಟ್ಟಿಯಾದ ಧ್ವನಿ : ದಿವಿಜರ ಥಟ್ಟಿನಲಿ ಬೊಬ್ಬಾಟವಾಯ್ತು ಗಭೀರಭೇರಿಗಳು (ಕುವ್ಯಾಉ. ೦೨-೨೫) ; ಅಸುರರ ಬೊಬ್ಬಾಟ ಹಯದುರುಹೇಷಿತಧ್ವನಿ ಕರಿಯ ಬೃಂಹಿತ ಘೋಷ . . . ಅಸುರರ ಬೆದಚಿಸಿತು ರಾಮಸುವಾಸಿನಿಯನು (ತೊರರಾ. ೩-೬-೨೮). ೩. ಅಬ್ಬರ ; ಆರ್ಭಟ : ಆಟವಾರಂಭಿಸದು ಬಚಿ ಬೊಬ್ಬಾಟವೇತಕೆ ವಿಜಯಸಖಿ ವಾಚಾಟರಿಗೆ ಮೆಚ್ಚುವಳೆ (ಕುವ್ಯಾಸ. ೦೩-೯೭); ಭಂಡ ಬೊಬ್ಬಾಟವನು ಬಿಡು ಕೈಕೊಂಡು ನೋಡಿದನುಳಿದ ಗೋಪರ ತಂಡದನು ಬಳಿಕಾವುಕಿಯು ಮಾಡಾಪಡೆ (ಶಿಭಾಗ. ೧೧-೩೨-೦೨); ತನ್ನ ಗಂಡನ ಬೊಬ್ಬಾಟ ಅಧಿಥಾಬಾಯಿಗೂ ತುಸು ವಿಚಿತ್ರವಾಗಿಯೇ ತೋರಿರಬೇಕು (ವಾಶ್ರ್ಯ. ೭೩). ೪. ಗಲಾಟೆ; ಗಲಿಬಿಲಿ; ಗೊಂದಲ : ಅರಮನೆಯಲಾ ಬೊಬ್ಬೆ ಹುಸ್ಸಿನಪುರದಲೀ ಬೊಬ್ಬಾಟವಿನ್ನುಳಿದರಸುಗಳ ಪಾಡಾವುದು (ಕುವ್ಯಾಕ. ೦-೭) ; ಇರುಳು ಬೊಬ್ಬಾಟದಲಿ ನಿದ್ದೆಗೆಟ್ಟ ನೆರೆಯವರಾಸಿನಲಿ ಹೋರೋದನಿಟ್ಟ (ಶರೆಜ. I, ೯೯೨). ೫. ತಕರಾರು ; ತಗಾದೆ ; ವರಾತ : ಈ ಪ್ರಕಾರದ ಬೊಬ್ಬಾಟಗಳು ಪತ್ರದ್ವಾರದಿಂದ ನೇಹಮಿ ನಡದಿರುತ್ತವೆ (ಮುಂಬವ್ಯಾ.೮ ಪ್ರಸ್ತಾವನೆ). ೬. ಗುಲ್ಲು; ಪುಕಾರು; ನೀ ಅದು ಮಾಡುತೀ ಇದು ಮಾಡುತೀ ಅಂತ ಊರೆಲ್ಲಾ ಬೊಬ್ಬಾಟ ಆಗ್ಯೆತವ್ವಾ (ಮಣ್ಣುಪ. ೧೦೦): ರಾಚಪ್ಪ ನಿನ್ನ ಕೈಹಿಡಿದು ಕೇಳಿದಾ ಅನ್ನೂದರ ಬೊಬ್ಬಾಟ ಮಾಡಿದವ ಶ್ಯಾಮರಾಯ (ದೀಪಹ. II, ೦೬೭). **ಬಬಪ್ಪಟ :** ೬. ಸ್ವಲ್ಪದರ ಮಾತು. ಬಾತಕ್ಕ ಬಬ್ಬಾಟ ಮಾಡೋದು (ಧವಂಜ. ೩೯); ಈಗ ಇಲ್ಲದ ಬಬ್ಬಾಟ ಮಾಡೂ ಹಂಗಿಲ್ಲ. ಯಾರೆದುರೂ ಹೇಳದ ಸುಮಾರ ಇರೂದ ಪಾಡ (ಗ್ರಾಮಾಯ. ೯೬).

[ಬೊಬ್ಬೆ$_2$ + ಆಟ./ತುಳು. ತೆಲು. ಬೊಬ್ಬಾಟ]

**ಬೊಬ್ಬಿ** 'ಬೊಬ್ಬೆ$_3$' ನೋ.

**ಬೊಬ್ಬಿಕ್ಕು**, ಬೊಬ್ಬೆಯಿಕ್ಕು (ಕ್ರಿ). ೧. ಕೂಗು ; ಅರಚು : ಲಂಘಿಸುತ ಕಾಡೆಮ್ಮೆಗಳ ತೆಕ್ಕೆಯೊಳು ಕೋಣನಿರೆ ಕಂಡು ಶಬರಿಯರು ಬೊಬ್ಬಿಕ್ಕಿ ಮಂಗಳಾಲಿಸಿದರು (ಹಕಶಾ. ೫-೩೯). ೨. ಗರ್ಜಿಸು; ಅಬ್ಬರಿಸು: ರಕ್ಕಸಿಯ ಕೊಂದತುಳಪರುಷದ ಹರವರಿಯಲಾಚೆ ಬೊಬ್ಬಿಕ್ಕಿ ಬಾಹಪ್ಪಳಿಸಿ ಫುಟಿನೆಗೆದಂಬರಸ್ಥಳಕೆ . . . ಹಾಜೀದನು (ತೊರರಾ. ೫-೧-೨೯); ಶಿವ ನೀನಾದ ಕಾರಣದಿಂದೆ ಬಂದಾಪವದೊಳು ಬೊಬ್ಬಿಕ್ಕಬಹುದು (ಪೋಹತ. ೩೯-೨೬). **ಬೊಬ್ಬೆಯಿಕ್ಕು :** ೧. ತಬ್ಬಿಬ್ಬಿಯಾಗದೆ ತಳ್ಳಂಕಗೊಳ್ಳದೆ ಬೊಬ್ಬೆಯಿಕ್ಕದೆ ಜೋಕೆಯಿಂದು ಒಬ್ಬರಿಬ್ಬರು ಮೂವರೊಂದೊಂದು ಕಲೆಯು ಮೈಯುಬ್ಬುವೊಲು ಕೇಳಿಸಿದರು (ಶರತ. ೧-೭೦). [ ಬೊಬ್ಬೆ$_2$ + ಇಕ್ಕು ]

**ಬೊಬ್ಬಿಡಿಸು** (ಕ್ರಿ). ಬಹಳ ಶಬ್ದಮಾಡಿಸು : ಮೂಗಿನಲಿ ಹಲವು ಕುಟಿ ಕೋಣಗಳ ಹೊಗಿಸುವುದುಳಿವ ಹೆಬ್ಬಿಚಿಗಳನು ಕಿವಿಗಳ ಬಳಿಯ ಬೊಬ್ಬಿಡಿಸುವುದು (ತೊರರಾ. ೬-೨೬-೨೫). [ಬೊಬ್ಬಿಡು + — ಇಸು$_3$]

**ಬೊಬ್ಬಿಡು**, ಬೊಂಬಿಡು, ಬೊಬ್ಬೆಯಿಡು (ಕ್ರಿ). ೧. (ಆನಂದ, ರೋಷ, ಆವೇಶ ಮುಂತಾದುವುಗಳಿಂದ) ಕೂಗು ; ಅರಚು : ಭಲ್ಲಪ್ರಕರಮಡಸಿ ಕೂರ್ನಾರಾಯ್ಗಳಂ ಬಿಟ್ಟು ಬೊಬ್ಬಿಟ್ಟು (ಗದಾ. ೧-೧೦೧); ಸೈನ್ಯಂ ನಡೆಯಲ್ ಬೊಬ್ಬಿಟ್ಟು ಕೋಲಂ ತುಡುಕೆ (ದಶಕು. ೭-೭೦); ಬೀಳುಬೀಳಭಿಮನ್ಯುವಿನ ವಧೆ ಬಾಳಲೀವುದೆ ನಿನ್ನನೆನುತುಬ್ಬಾಳುತನದಲಿ ಪಾರ್ಥ ಬೊಬ್ಬಿಡೆ (ಕುವ್ಯಾದ್ರೋ. ೦೯-೯೦). ೨. ಗಟ್ಟಿಯಾಗಿ ಹೇಳು ; ಧ್ವನಿಮಾಡಿ ಹೇಳು; ಉದ್ಘೋಷಿಸು : ಬೇಡಿ ಕರುಣವನೀಯೆನುತ್ತಂ ಕೂಡೆ ಬೊಬ್ಬಿಡುತಾರು ತಾಣತಿಗೂಡಿ ತಾರ್ಕ್ಯಸುತ್ತಂ . . . ತಾಂಡವಮನಾಡುವೆನು (ಬಸಪು. ೦೭-೨೦); ಶ್ರೀ ರುದ್ರವೇದ ಬೊಬ್ಬಿಡುತ್ತಿದೆ (ಗಣಭಾ. ೨೯೫-೧) ; ಕಟ್ಟಿಗೆ ಗಾಜಿರನೇಕವುಗ್ಗಡೆ ಬೊಬ್ಬಿಟ್ಟುದು ರಾಯನೋಲ್ಗದಲಿ (ಪೋಹತ. ೨೦-೫೮). ೩. ಆಕ್ರಂದನ ಮಾಡು ; ಮೊರೆಯಿಡು : ಚಂದ್ರಂಗೆ ರಾಹು ಅಡ್ಡ ಬಂದಲ್ಲಿ ಅಂಬುಧಿ ಬೊಬ್ಬಿಟ್ಟಿತ್ತೆ (ಬಸವ. ೨೫) ; ಹದ್ದು ಕಾಗೆಯು ಮನೆಗೆ ಬಾಣಸವಿದ್ದುದೋ ಗಜಪೆನುತ ಬೊಬ್ಬಿಡುತಿದ್ದುದರಿಬಲ (ಕುವ್ಯಾದ್ರೋ. ೩-೯೩); ಬಾಲೆಯುರುಗಳು ಬೊಬ್ಬಿಡಲು ಗೋಪುರದಗ್ರಶಾಲೆಯ ರೋದನ ಗೇಳಿ ಲೀಲೆಗಾಜಿನ ಕೊಲ್ಲುದಿಲ್ಲೆಂದು ದುಃಖದ ಶೀಲೆಗೆ ಮಾತನಟ್ಟದನು (ಪೋಹತ. ೩೫-೫೨). ೪. ಅಧಿಕವಾಗಿ ಧ್ವನಿಮಾಡು,— ಶಬ್ದಮಾಡು : ನಡೆವೆಡೆಯೊಳಗುರ್ಬಿಂ ಬೊಬ್ಬಿಡುವಂದುಗೆ ಗೆಜ್ಜೆ ಸಜ್ಜನೆಗೆ ಸೊಗಯಿಸುಗುಂ (ಗಂಕ. ೩-೬೯); ಕಾಡಿಕಾಡಿದು ಬೊಬ್ಬಿಟ್ಟಾಡುತಿರ್ದುವು ಸಾಂದ್ರ ಚಂದ್ರಿಕೆಯಲಿ ಚಕೋರಿಗಳು (ಕುವ್ಯಾದ್ರೋ. ೦೭-೦೯). **ಬೊಂಬಿಡು :** ೪. ರಂಬುಗಳ್ ಬೊಂಬಿಡಲ್ . . . ನಡೆದಂ ಪುರುಳುಸಿದ್ಧಾಂತ ವೃದ್ಧಂ (ಚಕುವು. ೩-೧-೮). **ಬೊಬ್ಬೆಯಿಡು :** ೧. ಮಾಧವನು ತನ್ನ ಜನರನ್ನು ಗಟ್ಟಿಯಾಗಿ ಬೊಬ್ಬೆಯಿಡುವಂತೆ ಹೇಳಿದನು (ಬಂಕಿಮ. ೩೯).

[ಬೊಬ್ಬೆ$_2$ + ಇಡು$_1$]

**ಬೊಬ್ಬಿರಿ** 'ಬೊಬ್ಬಿಜಿ' ನೋ.

**ಬೊಬ್ಬಲಿ** (ನಾ). ಸ್ತ್ರೀಯರು ಕಾಲಿನ ಹೆಬ್ಬೆರಳಿನಲ್ಲಿ ಧರಿಸುವ ಒಂದು ಬಗೆಯ ಆಭರಣ : ಮುತ್ತಿನ ಗೆಜ್ಜೆಗಳಿಂ ಕೂಡಿದ ವೀರಮುದ್ರಿಕೆ ಕಿರುಪಿಲ್ಲಿ ಬೊಬ್ಬಲಿಗಳನಿಟ್ಟು (ಶಾಗಂಧಿ. ೨೦೨-೩).

[← ತೆಲು. ಬೊಬ್ಬಲಿ]

**ಬೊಬ್ಬಿಱ್, ಬೊಬ್ಬಿರಿ** (ಕ್ರಿ). ೧. (ಆನಂದ, ರೋಷ, ಆವೇಶ ಇತ್ಯಾದಿಗಳಿಂದ) ಕೂಗು ; ಅರಚು : ಶಾನಂ ಪಿಡಿಂಬೆಯುಂ . . . ಕೆನ್ನೆತ್ತರೊಳೊರ್ವರೊರ್ವರಂ ಶಳ್ಕಿಱಿದುಂ ಬೊಬ್ಬಿಱಿದುಂ . . . ಆಡುವಾಗಳ್ (ಪಂಪಭಾ. ೧೨-೧೩೮ ವ); ಬೇಡಪಡೆ ಬೊಬ್ಬಿಱಿದಾಡಿದುದು (ವಡ್ಡಾ. ೨-೦೦೯); ಆಯೆನುತ ಬೊಬ್ಬಿಱಿದು ವಿಪ್ರನಿಕಾಯ ಕುಣಿದುದು . . . ಹರುಷದಲಿ (ಕುಮಾವ್ಯಾ. ೧೩-೩೦). ೨. ದೊಡ್ಡಧ್ವನಿ ಮಾಡು ; ಗಟ್ಟಿಯಾಗಿ ಧ್ವನಿಮಾಡು ; ಉದ್ಘೋಷಿಸು : "ಬೊಬ್ಬಿಱ್ (ಬೊಬ್ಬೆ + ಇಱ್)– ಮಹಾರವೇ" (ಶಬ್ದಾ); ಸೂಳವಿಸಿ ಬೊಬ್ಬಿಱಿದವುರುನಿಸ್ಸಾಳಚಯಪದ್ರಿಗಳ ಹೆಡತಲೆ ಸೀಳೆ ಸಿಡಿಲೇಳಿಗೆಯುಲಿದ್ದವು ವಿವಿಧವಾದ್ಯರವ (ಕುಮಾವ್ಯಾದ್ರೋ. ೧-೯೮) ; ಬೊಬ್ಬಿಱಿವುದು ಕೀರ್ತಿಡಿಂಡಿಮವುದುಖಿಂ ಜಗದೊಳು ವಿಜಯಕ್ಷಿತೀಂದ್ರನಾ (ಎಕ. XI. ಚಿತ್ರದು. ೫-೭; ೪) ; ನಿಮ್ಮಸುಗಳು ಶರೀರವ ನೀಗಿ ಕಳೆಯಲಿ ಎಂದು ಬೊಬ್ಬಿಱಿದೆಚ್ಚನತಿರಥರ (ಕುಮಾವ್ಯಾದ್ರೋ. ೧೫-೩೫). ೩. ಆಕ್ರಂದನಮಾಡು ; ಮೊರೆಯಿಡು : ಬೊಬ್ಬಿಱಿವಿನಮಾಂತಿಱಿವನೊರ್ವ ಭಟನರಿಭಟರಂ (ಪಾರ್ಶ್ವಪು. ೯-೫೦); ರಥ ಕಡಿವಡೆದುದಿನ್ನೆಂತೊದಗುವನೊ ಸುಕುಮಾರ ಶಾಸನುತ ಪಡೆ ಬಿಡದೆ ಬೊಬ್ಬಿಱಿಯೆ (ಕುಮಾವ್ಯಾದ್ರೋ. ೬-೩೬). **ಬೊಬ್ಬಿರಿ** : ೧. ಬಣ್ಣ ಹಚ್ಚಿದವನು ಚಿತ್ರಕಾರ, ಬೊಬ್ಬಿರಿದವ ಗವಾಯಿ. ಕಾಗದ ಕಪ್ಪು ಮಾಡಿದವ ಕವಿ ಎಂಬ ದೃಷ್ಟಿಯೋ ? (ಒಂದಿದ. ೬೩); "ಇದೆಯೆ ನಿನ್ನಲ್ಲಿ ಗಂಡಸುತನ ?" ಎಂದು ಬಲವಾಗಿ ಬೊಬ್ಬಿರಿದು ಕೇಳಿದಳು (ಹಳ್ಳಿಚಿ. ೦೦೬). ೨. ಕಬ್ಬಿಲರು ಕಬ್ಬಿಗರು ತಾವೆನುತಬ್ಬರಿಸಿ ಬೊಬ್ಬಿರಿಯೆ ಕಬ್ಬವಾದುದೆ ? (ಕೋಗಿಲೆ. ೦೭-೩೯).

[ಬೊಬ್ಬೆ₂ + ಇಱ್₁]

**ಬೊಬ್ಬಿಱಿತ** (ನಾ). ಅಬ್ಬರ; ಆರ್ಭಟ; ಗರ್ಜನೆ : ಇಱಿತ ಮುನ್ನವೊ ಸುಭಟರಿಗೆ ಬೊಬ್ಬಿಱಿತ ಮುನ್ನವೊ (ಕುಮಾವ್ಯಾಕ.೦೦-೯೭); ಬಲು ಬೊಬ್ಬಿಱಿತ ಕಸುರನ ಧೈರ್ಯ ಕಾಲನ ಮಱಿಯ ಥೊಕ್ಕುದು ಹೊರಳಿಯೊಡೆದುದು ವಿತ್ತ ರಕ್ಕಸರ (ತೊರವೆರಾ. ೩-೭-೫೦). [ಬೊಬ್ಬಿಱ್ + –ತ₂]

**ಬೊಬ್ಬುಲಿ** 'ಬಬ್ಬುಲಿ' ನೋ.

**ಬೊಬ್ಬುಳಿ₁** 'ಬಬ್ಬುಲಿ' ನೋ.

**ಬೊಬ್ಬುಳಿ₂** (ನಾ). ೧. (ನೀರಿನ) ಗುಳ್ಳೆ; ಬುದ್ಬುದ : ಇಬ್ಬರುಗಳೊಂದಾಗಿ ಕೂಡಿಯೆ ಬೊಬ್ಬುಳಿಯನೊಡೆವಂತೆ ಕೊಂದರು ಹಲವು ಮಲ್ಲರನು (ಕುಮಾವ್ಯಾವಿ. ಬಿಂಜ. ೪-೦೦) ; ಬೊಬ್ಬುಳಿಯ ಬೆಲೆನೊರೆಗಳೊಟ್ಟಿಲಿನೊಬ್ಬುಳಿಯನಬ್ಬರಿಸುತರಪಣಿಗೊಬ್ಬಿನಲಿ ಮಧವೇಱಿ ಮಾಲ್ಗದ ಲೆಸೆದುದಿದಿರಿನಲಿ (ತೊರವೆರಾ. ೦-೯-೯೫): ನೀರ ಬೊಬ್ಬುಳಿಯಂತೆ ತೋಱುತಿಹ ದೇಹದ ಸಾರವಱಿಯದಲೆ ಸುಖಿಪುದಜ್ಞಾನದ ದಾರಿಯಹುದು (ಸರ್ವಜ್ಞ. ೪೦೭). ೨. (ಗರ್ಭಾಶಯದಲ್ಲಿರುವ) ಐದನೆಯ ದಿವಸದ ಗರ್ಭಪಿಂಡ : ಪ್ರಥಮದಿನ ಕಲಲವೆಸರಂ ಪಡೆವನವನೈದುದಿನಕೆ ಬೊಬ್ಬುಳಿಯೆನಿಸಿ ಪವನೇಳುದಿನದವಂ ಜನನಿಗರ್ಭದ ಮಾಂಸಪೇಸಿಯೆಂದೆನಿಪವು (ಶಾಪಂತ. ೪-೯೭).

[<ಸಂ. ಬುದ್ಬುದ./ಪ್ರಾ. ಬುಬ್ಬುಅ./ತುಳು.ಬೊಬ್ಬುಳಿ]

**ಬೊಬ್ಬುಳಿ₃** 'ಬೊಂಬುಳಿ₂' ನೋ.

**ಬೊಬ್ಬುಳಿಕೆ** (ನಾ). ೧. = ಬೊಬ್ಬುಳಿ₂ ೧ : ಬೆಳಗುವ ತಾರಕಾನಿಕರಮಾಕಡಲೊಳ್ ನಸುತೇಲ್ದಕಾದೇಂಕೆ ಬೊಬ್ಬುಳಿಕೆಗಳಂತೆ ತೋಱಿದುವು (ಅಧಿಪು. ೭-೯೬); ತಸುಪಪೊಡೆ ನಿಲ್ಲದು ಜವ್ವನಮಪ್ಪೊಡೆ ನೀರ ಬೊಬ್ಬುಳಿಕೆ (ರಜಶೇಖ. ೯-೨೭೮) ; ನೀರ ಬೊಬ್ಬುಳಿಕೆಗೆ ಕರ್ಬುನದ ಕಟ್ಟ ಕೊಟ್ಟು ಸುರಕ್ಷಿತವ ಮಾಡುವ ಭರವ ನೋಡಾ (ಬಸವ. ೦೬೨). ೨. = ಬೊಬ್ಬುಳಿ₂ ೨: ಪಿಂಡಮಯವಾದ ಪುರುಷನ ವೀರ್ಯ ಸ್ತ್ರೀರಕ್ತದೊಡವೆರೆದೊಂದು ದಿನಕ್ಕೆ ಕಲಲವಹುದು ಐದುದಿನಕ್ಕೆ ಬೊ[ಪಾಠಾಂ.ಬ]ಬ್ಬುಳಿಕೆಯಹುದು (ಶಿವತ. ೨೫೫) ; ಮಾತೆಯ ರಜಸ್ಸು ಪಿತೃವೀರ್ಯಂಗಳೊಂದಾಗಿ ಸಾತಿಶಯದಿಂ ಪ್ರಥಮದಿನದಲ್ಲಿ ಕಲಲವಹುದಾ ತೆಱದೊಳೈದುರಾತ್ರಿಗೆ ಬೊ[ಪಾಠಾಂ. ಯೊ]ಬ್ಬುಳಿಕೆ (ಚಂಪು. ೫೬-೫). [ಬೊಬ್ಬುಳಿ₂ + –ಇಕೆ]

**ಬೊಬ್ಬುಳಿಸು** (ಕ್ರಿ). ಗುಳ್ಳೆಯೇಳು ; ಬುದ್ಬುದವುಂಟಾಗು : ಕೆಸಱುಬುರ್ಬೆಯೆಡೆ ನೀಬೊರ್ಬೊಳಿಸಿ ಬುಳುಬುಳುಂದೇಂಕೆ ಪಂದೆಬ್ಬಿ ಕಂಪಂ ಮಸಗುತ್ತುಂ ಬತ್ತೆ (ಜಗದ. ೦೭-೬೪). [ಬೊಬ್ಬುಳಿ₂ + –ಇಸು₃].

**ಬೊಬ್ಬೆ₁** (ನಾ.) ಸುಡುವುದರಿಂದ ಚರ್ಮದ ಮೇಲೇಳುವ ಗುಳ್ಳೆ,–ಬೊಕ್ಕೆ : ದೇಹದ ಮೇಲೆ ಏಳುವ ಬೊಬ್ಬೆಗಳು ದೊಡ್ಡವಾಗಿ ಅಥವಾ ಸಣ್ಣವಾಗಿ ಇರುವುದುಂಟು (ಚಿಕಿ. ೫೦) : ಅಡವಿಯಲ್ಲಿ ನನ್ನ ಸ್ಥಿತಿಗತಿಗಾಗಿ ಯಾರೂ ಅಳಲಿಲ್ಲ. ಗೋಳಾಡಿ ಅತ್ತವರೆಂದರೆ ನನ್ನ ಕಾಲ ಬೊಬ್ಬೆಗಳು (ಉರ್ವಶಾ. ೦೦೬) ; ಬೊಬ್ಬೆ ಬಂದು ಕೈ ನೋಯಲಾರಂಭಿಸಿತು (ಪುಟ್ಟರ. ೧೯).

[ದೇ.॥ ತೆಲು. ಬೊಬ್ಬ]

**ಬೊಬ್ಬೆ₂** (ನಾ). ೧. (ಆನಂದ, ರೋಷ. ಆವೇಶ ಮುಂತಾದ ಕಾರಣಗಳಿಂದ ಮಾಡುವ) ಆರ್ಭಟ ; ಕೂಗಾಟ : ಅರಚುವಿಕೆ : "ಬೊಬ್ಬೆಯೆನಲ್ ಭಟಗರ್ಜನೆ" (ಶಬ್ದಾ. ೫೨) ; ಬೇಡರ ಬೊಬ್ಬೆಯಿಂದಡವಿ ಗೋಳಿಟ್ಟುದು (ಹರಿಶ. ೫-೨೩) ; ಕಳವಳಿಸಿತರಿಸೇನೆ ಬೊಬ್ಬೆಯೊಳುಲಿದುದೀ ನಮ್ಮವರು (ಕುಮಾವ್ಯಾಕ. ೩೦-೨೯) ; ಇಷ್ಟು ಪೌರುಷದ ಬೊಬ್ಬೆಯ ಕೇಳ್ದು . . . ಯಾವವರ್ ತಱುಬಿದರ್ (ವೀರೇಶ. ೩೯-೧೭) ೨. ದೊಡ್ಡ ಶಬ್ದ ; ಮಹಾಧ್ವನಿ : "ಕೋಲಾಹಲಃ, ಕಲಕಲಃ — ಈ ೨ ಬೊಬ್ಬೆಯ ಪೆಸರು" (ನಾಚಿರಾ. ೯೭) ; ಅಬ್ಬರಿಸಿ ಬೊಬ್ಬೆಯುಂ ಕೊಟ್ಟೆಬ್ಬಿಸಿದೊಡೆ ಶಾಪ ವಿನಾಗುವಿನಾತಂ (ರಾಜಶೇ. ೩-೭೯); ಮೆಲುನುಡಿಗೆ ಗಿಳಿ ಹೊದ್ದಿದವು ಸರದುಲಿಗೆ ಕೋಗಿಲೆಯಗೌಕಿದವು . . . ನೇವುರದ ಬೊಬ್ಬೆಗೆ ಸಿಲುಕಿದವು ಹಂಸೆಗಳು ಕಮಲಾನನೆಯ ಕೆಳದಿಯರ (ಕುಮಾವ್ಯಾವಿ. ೬-೦೦). ೩. ಆಕ್ರಂದನ ; ಪ್ರಲಾಪ : ಅರಮನೆಯಲಾ ಬೊಬ್ಬೆ ಹಸ್ತಿನಪುರದಲೀ ಬೊಬ್ಬಾಟ ವಿನ್ನಳಿದರಸುಗಳ ಪಾಡಾವುದು (ಕುಮಾವ್ಯಾಕ. ೦-೭) : ಬೊಬ್ಬೆಯಾದುದು ಖಳಕ ಸುಮನಸರೊಬ್ಬುಳಿಯ ಚೂಣಿಯಲಿ ಮುನಿಗಳು ಬೆಬ್ಬಳಿಸಿದರು (ತೊರವೆರಾ. ೦-೦೦-೯). ೪. ಗುಲ್ಲು ; ಪುಕಾರು : ಒಂದು ದೊಡ್ಡ ಪಾಮುಜೋರರ ಗ್ಯಾಂಗು . . . ಬನ್ನಾ ಕಳವುಗಳನ್ನು ನಡೆಸುತ್ತಿದೆ ಎಂದು ಬೊಬ್ಬೆ ಎದ್ದು (ಪರಿಶಾ. II. ೯೩೯).

**ಬೊಬ್ಬೆಕಾಯಕ** = ಮುಳ್ಳುಗಳ ಮೇಲೆ ನಿಂತು. ಮೈಗೆ ಕತ್ತಿ ತಿವಿದುಕೊಂಡು, ಗದ್ದಲವೆಬ್ಬಿಸಿ ಭಿಕ್ಷೆಯೆತ್ತುವ ಕಾಯಕ (+). **ಬೊಬ್ಬೆಹಾಕು** = ಕೂಗಾಡು ; ದೊಡ್ಡದಾಗಿ ಅರಚು : ಸತ್ಯ, ಅಹಿಂಸೆ ಎಂದು ಬಾಯಲ್ಲಿ ಬೊಬ್ಬೆಹಾಕುತ್ತಾರೆ (ಕುರುಕ್ಷೇ. ೬೫) : ಹುಡುಗರು ಒಂದೇ ಸಮನೆ ಬೊಬ್ಬೆಹಾಕುತ್ತಾರೆ (ಕಾವೇರಿ. ೯೨). **ಬೊಬ್ಬೆ ಹೊಡೆ** = ಬೊಬ್ಬೆ ಹಾಕು : ಕಾಂಗ್ರೆಸ್ಸೆಂದು ಬೊಬ್ಬೆಹೊಡೆದರೆ ಹೊಟ್ಟೆ ತುಂಬಲಿಕ್ಕಿಲ್ಲ (ಕುರುಕ್ಷೇ.೧೩೮). [ದೇ.॥ ತುಳು. ಬೊಬ್ಬೆ ; ತೆಲು. ಬೊಬ್ಬ]

**ಬೊಬ್ಬೆ₃, ಬೊಬ್ಬಿ** (ನಾ). ಒಂದು ಬಗೆಯ ಹೊನ್ನೆಮರ; ಕಲ್ಹೊನ್ನೆ : ಹೊಳೆಹೊನ್ನೆ, ಶ್ರೀಹೊನ್ನೆ, ಕೂಪೆ, ಬೊಬ್ಬೆ (ವೃಕ್ಷಗ. ೦೩-೨೮೫). **ಬೊಬ್ಬಿ :** ಬೊಬ್ಬಿ (ಇದಯ) — ನೀರಿನ ಆಸರಕ್ಕೆ ಎತ್ತರವಾಗಿ ಬೆಳೆಯುತ್ತದೆ (ಕಾಗ. ೯೭) ; ಮರಗಳು . . . ಮಲ್ಲಾಳಿ, ಕೂಪೆ, ಬೊಬ್ಬಿ, ದೇವದಾರು, ಅಡವಿಗೋರಂಟೆ (ಪಶ್ಚಿಘ. ೨೩೬).

**ಬೊಬ್ಬೆಯ ಖಿಂಡಾಗ** = ಹೊನ್ನೆಮರದಿಂದ ಮಾಡಿದ ಅಳೆಯುವ

**ಮಟ್ಟಗೋಲು**, ಮಟ್ಟಕೋಲು (ನಾ). ೧. ಕಟ್ಟಡ ಕಟ್ಟುವಾಗ ಗೋಡೆಯು ಒಂದೇಸಮನಾಗಿ ಮೇಲಕ್ಕೆ ಏರುತ್ತಿದೆಯೆ ಎಂಬುದನ್ನು ಪರೀಕ್ಷಿಸಲು ಮೇಲಿನ ಇಟ್ಟಿಗೆಯ ಸಮಕ್ಕೆ ಕೆಳಗಿನವರೆಗೂ ತೂಕವನ್ನು ಇಳಿಬಿಟ್ಟು ನೋಡುವ ಒಂದು ಸಾಧನ: ಕಟ್ಟಡ ಕಟ್ಟಲು ಮಟ್ಟಗೋಲು. ಚೆಕ್ಕೆ. ರಸಮಟ್ಟ ಮುಂತಾದ ಸಾಧನಗಳು ಬೇಕು (ರೂಿ). **ಮಟ್ಟಕೋಲು** : ೨. "ವಸ್ತುಗಳು ಸಮತಲವಾಗಿವೆಯೆ ಇಲ್ಲವೆ ಎಂಬುದನ್ನು ಪರೀಕ್ಷಿಸಲು ಉಪಯೋಗಿಸುವ ಒಂದು ಸಲಕರಣೆ ; ಮಟ್ಟಕೋಲು, ಮಣಲೆಮಟ್ಟ ; (ರಸ) ಮಟ್ಟ" (Level. ಇಂಕೋ).
[ ಮಟ್ಟ$_1$ + ಕೋಲು$_1$ (<ಕೋಲ್$_1$). / ತಮಿ. ಮಟ್ಟಕ್ಕೋಲ್, ಮಟ್ಟುಕ್ಕೋಲ್]

**ಮಟ್ಟತರ** (ನಾ). ೧. ಕಡಮೆ ದರ್ಜೆ; ಕೆಳತರ : (ಕ). (ನಾ). ೨. ಎತ್ತರವಿಲ್ಲದಿರುವುದು; ಮಟ್ಟಸವಾಗಿರುವುದು : ಆಳು ಎತ್ತರವಿಲ್ಲ, ಕುಳ್ಳು ಎಂದೆನಲಾರೆ, ಮಟ್ಟತರ (ವಸ್ಕ. ೧).
[ ಮಟ್ಟ$_1$ + ತರ$_6$ (< ತರಪ). / ತಮಿ. ಮಟ್ಟತ್ತರಮ್ ]

**ಮಟ್ಟಬೆಳ್ಳಿ** (ನಾ). ಕಡಮೆ ದರ್ಜೆಯ ಬೆಳ್ಳಿ : (ಕ).
[ಮಟ್ಟ$_1$ + ಬೆಳ್ಳಿ]

**ಮಟ್ಟಮಧ್ಯಾಹ್ನ** (ನಾ). ಹಗಲಿನ ನಡುಭಾಗ ; ಸುಮಾರು ಹನ್ನೆರಡು ಗಂಟೆ ಸಮಯ : ಮಟ್ಟಮಧ್ಯಾಹ್ನದಲ್ಲಿ ಬಿಸಿಲು ಹೆಚ್ಚು (ರೂಿ). 'ಮಟಮಟ' ನೋ.
[ಮಟ್ಟ$_1$ + ಮಧ್ಯಾಹ್ನ. / ತೆಲು. ಮಟ್ಟಮಧ್ಯಾಹ್ನಮು]

**ಮಟ್ಟಮಾಲಂಗಿ** 'ಮಟಿಮಾಲಂಗಿ' ನೋ.

**ಮಟ್ಟಮೀಱು**, ಮಟ್ಟುಮೀರು, ಮಟ್ಟುಮೀಱು (ಕ್ರಿ). ಮೇರೆಯನ್ನು ಮೀರು ; ಮಿತಿಮೀರು ; ಅತಿಕ್ರಮಿಸು : ತೊಟ್ಟ ತೊಡಿಗೆಗಳುಡಿಯೆ ನಿನ್ನನು ತೆಗೆದಿಟ್ಟಾ ಬೊಳಸೆಯ್ದುದನು ಮಟ್ಟಮೀಱಿತಿನ್ನೇಕವನ ಹಂಬಲು (ಕುಂಸಾಂ. ೩೩-೬೮). **ಮಟ್ಟುಮೀರು** : ಮಟ್ಟುಮೀರಿದ ವಿರಹಭಾರದಿ ಕಂಗೆಟ್ಟವರು ಕೆಲಂಬರು (ಹಗುಂಧ. ೧೩೨-೧೨). **ಮಟ್ಟುಮೀಱು** : ಎಲೆಲೆ ಮಟ್ಟುಮೀಱಿದ ಮಾಯದ ಬಾಲಕ ! ನೀಂ ದಿಟ್ಟಂ (ರಾಪಾಶ್ಚ. ೧೫೬-೦೩). [ಮಟ್ಟ$_1$ + ಮೀಱು. / ತೆಲು. ಮಟ್ಟುಮೀರು]

**ಮಟ್ಟಯಿಸು**, ಮಟ್ಟೈಸು (ಕ್ರಿ). ೧. ಸಮಗೊಳಿಸು ; ಸಮಾನ ಮಾಡು : ಬಿಟ್ಟು ಪರಿಗ್ರಹಮೆರಡಂ ತೊಟ್ಟಯ್ದಾಚಾರಮಂ ಪರೀಷಹಮಂ ಬೆನ್ನಟ್ಟಿ ವಿಹಿತಮನನುಷ್ಠಿಸಿ ಮಟ್ಟಯಿಸಿದ ಕರಣಯೋಗ ಮಘನಿರ್ಹರಣಂ (ಮಲ್ಲಿ. ೧೪-೭೨). **ಮಟ್ಟೈಸು** : ೨. ಹತೋಟಿಗೆ ತರು ; ಅಧೀನಗೊಳಿಸು : ಅರಿಷಡ್ವರ್ಗಮಂ ಬಿಟ್ಟು ಪಂಚೇಂದ್ರಿಯಮಂ ಮ[ಶಾಶಾಂ. ಮ]ಟ್ಟೈಸಿ ಚಾತುರ್ವಿಧಕರಣಮನಂತಸ್ಸ್ಥಮಂ ತೂಳಿ (ಜಗಪ. ೯-೫೩). [ಮಟ್ಟ$_1$ + — ಇಸು$_3$]

**ಮಟ್ಟರಗಳೆ** (ನಾ). [ಛಂದ] ಒಂದು ಬಗೆಯ ಛಂದೋವೃತ್ತ : ಪಾದದಲ್ಲಿ ನಾಲ್ಕುಮಾತ್ರೆಯ ನಾಲ್ಕುಗಣಗಳಿರುವ ರಗಳೆ : ಮಂದಾನಿಲ ರಗಳೆ : ಪಾದವೊಂದಕ್ಕೆ ಚತುರ್ಮಾತ್ರಾಗಣವು ನಾಲ್ಕಾಗಲಿ. ಮೂರುಮಾತ್ರೆಯ ಗಣದ ಮುಂದೆ ಐದುಮಾತ್ರೆಯ ಗಣವು ಬರುವಂತೆ ಗಣಗಳೆರಡೆರಡಾಗಲಿ ಬರಲು ಅದು ಮಂದಾನಿಲರಗಳೆಯೆನಿಸುವುದು. ಇದಕ್ಕೆ ಮಟ್ಟರಗಳೆ ಎಂಬ ಹೆಸರೂ ಉಂಟು (ಛಂಬು. ೯೮) ; 'ಪದ್ದಳಿ', 'ಮಟ್ಟರಗಳೆ', 'ತ್ವರಿತರಗಳೆ' ಎಂದು ಬೇರೆ ಬೇರೆ ಹೆಸರುಗಳಿವೆ. ಮಂದಾನಿಲ ರಗಳೆ ಎಂಬುದು ಈಚಿನ ಕಾಲದ ಹೆಸರು (ಸಂಕುಪಾ. LXXXVI, ಮುನ್ನುಡಿ). [ಮಟ್ಟ? + ರಗಳೆ]

**ಮಟ್ಟಸ** (ನಾ). ಏರುತಗ್ಗಿಲ್ಲದಿರುವುದು ; ಸಪಾಟು : ಸೊಟ್ಟಗಳ ಸೆಟ್ಟಗಾಗಿಪ ಯತ್ನ ಲೋಕದಲಿ . . . ಮಟ್ಟಸವೆ ಸಿರಿ ಹರವು (ಮಂಕುತಿ. ೩೫೯).

**ಮಟ್ಟಸಮಾಡು** = ಸಮತಲಮಾಡು : ಸಮಗೊಳಿಸು : ಒಂದೊಂದು ಕಡೆ ಅಸ್ಥಿರವಾದ ನೀರನ್ನು ಎರಡು ಕಯ್ಯಿಂದಲೂ ಅದುಮಿ ಅದುಮಿ ಮಟ್ಟಸಮಾಡುವಂತಿದೆ (ಪಿಎಂಕ. II, ೧೦೬). **ಮಟ್ಟಸವಾಗು**, **ಮಟ್ಟಸಾಗು** = ೧. ಏರುತಗ್ಗಿಲ್ಲದಿರು ; ಸಪಾಟಾಗು : ಸಡಕು ಮಟ್ಟಸವಾಗಿದ್ದುದರಿಂದ ಬಂಡಿ ಮತ್ತಷ್ಟು ವೇಗವಾಗಿ ಸಾಗಿತು (ಭೂಪರು. ೫೫೬). ೨. ಮಧ್ಯಮರೀತಿಯದಾಗು : ಡಾ. ಸದಾಶಿವರಾಯರು ಸುಮಾರು ಮೂವತ್ತೈದು ವಯಸ್ಸಿನ ಮಟ್ಟಸವಾದ ಆಳು (ವಂಶವೃ. ೬) ; ಹೊರಗೆ ಹೋಗಿದ್ದರೂ ಮನೆಯು ಮಾತ್ರ ಮಟ್ಟಸಾಗಿತ್ತು (ದರ್ಪಣ. ೧೨೬). [< ಮಟ್ಟ$_1$. / ತೆಲು. ಮಟ್ಟಸ]

**ಮಟ್ಟಸುತ್ತಿಗೆ** (ನಾ). (ಅಕ್ಕಸಾಲೆಯು ಬಳಸುವ) ಸಣ್ಣ ಸುತ್ತಿಗೆ: (ಕ).
[ಮಟ್ಟ$_1$ + ಸುತ್ತಿಗೆ$_1$]

**ಮಟ್ಟಱೆ**[3], ಮೊಟ್ಟಱೆ[3] (ನಾ). ಸಮತಲವಾಗಿರುವ ಬಂಡೆ ; ಸಪಾಟಾದ ಬಂಡೆ : ಅವಱ ತದನಾನ್ತರ ಎಣೆತೋಣೆಯ ಮಟ್ಟಱೆ ಅದರ ತದನಾನ್ತರ ಬೆಂಬುಗುಳ್ಳಿ (ಶಾಇಇ. IX-i, ೯೦-೨೬ ; 11ನೆಯ ಶತ). **ಮೊಟ್ಟಱೆ**[3] : ಈಶಾನ್ಯದ ದೆಸೆಯಿಂ ಪೋಣಿಯ ಮೊಟ್ಟಱೆ[3] ಮೂಡಲ ದಿನ್ನೆಯ ಹೊಲಗಡಿಯಿಂದಂ ತೆಂಕ ಬರಲು ಬಿಲ್ಲಱೆ[3] (ಎಕ. VII, ಶಿವಮೊ. ೫೬-೬೮ : 1115). [ಮಟ್ಟ$_1$ + ಅಱೆ[3]$_4$]

**ಮಟ್ಟೆ** (ನಾ). ೧. ಮಣ್ಣು : ಕ್ಷುತ್ತೃಷೆ ನಿದ್ರೆಯಿಲ್ಲದವರೇ ಹಿರಿಯರ್ ಪರಿಪೂಜ್ಯರಾದೊಡೀ ಕ್ಷುತ್ತೃಷೆ ನಿದ್ರೆಯಿಲ್ಲದಿಹ ಕಲ್ಮರ ಮಟ್ಟೆಗಳೇ ಸುಪೂಜ್ಯರೇ (ಕಕ. ೭೩) ; ಅದರ ಅರ್ಧಭಾಗ ಮಟ್ಟೆ ಕಾಮಗಾರಿಗೆ ತಗಲ ತಕ್ಕದ್ದು (ಕಲಿಪ. ೧೫೦). ೨. (ಬ್ರಾಹ್ಮಣರು ಹಣೆಯಲ್ಲಿ ಧರಿಸುವ) ಗೋಪಿಚಂದನ, ಮೃತ್ತಿಕೆ ಇತ್ಯಾದಿ : ಮಟ್ಟೆಯನಿಟ್ಟ ದ್ವಿಜರ ಮಾತದೇಕೆ (ಬಸವ. ೫೭೮); ಇಟ್ಟ ಮಟ್ಟೆಯ ಬೊಟ್ಟು ಇಟ್ಟೆಯಾಯಿತ್ತಹೋ (ಶಾಪಂತ. ೪-೨೨೯ ರಗಳೆ) ; ಎಲವೊ ಮಟ್ಟೆಯ ಮದನ ದರ್ಭೆಯ ತಿಲದ ಮನ್ಮಥ (ಕುಮಾ.ಆ. ೦೫-೨೧) ; ಹಣೆಗೆ ನಿತ್ಯ ನೀರಿನಲಿ ಮಟ್ಟೆಯನು ಕಲೆಸಿ ಬರೆಯುತ ಮೂಗ ಬೇರನ್ನು ಹಿಡಿದು ಮುಸುಕಿಕ್ಕಲೇನುಂಟು (ಭರಂಪ. ೧-೯೪-೧). ೩. ದಿಬ್ಬ ; ತೆವರು ; ತಿಟ್ಟು : ಉದಿಟಿ ದೆಸೆ ಕಱೆಯನ್ನೀ ಗ್ರೋರೆ ಮಟ್ಟೆ ಈಶಾನದೆಸೆ ಆರನೆಱೆ (ಎಕ. X (ಆ), ಮುಳಬಾ. ೩೨೮-೫೩ ; 650) ; ಮಣ್ಣ ಮಟ್ಟೆಯ ಮೇಲೆ ಕಣ್ಣ ಕುಪ್ಪೆಯ ದುರ್ಗ ಬಣ್ಣ ಬೈರೂಪು ಸಣ್ಣ ಬಾಗಿಲಿಗೆ ಮೂವಣ್ಣವೈ (ಮೈಲಾರ. ೪೭-೭೨). ೪. ಗರಡಿ ಮನೆಯಲ್ಲಿ ಸಾಮುಮಾಡುವ ಸ್ಥಳದಲ್ಲಿರುವ ಕೆಂಪನೆಯ ಮಣ್ಣು ; ಗರಡಿಯ ಕೆಮ್ಮಣ್ಣು : ವರ್ಷಕ್ಕೊಂದು ಬಾರಿ 'ಮಟ್ಟೆ' ಮೊದಲು ತರುವುದು ಕಾಟನಾಯಕನ ಗರಡಿಗೆ (ತದೇಪ. ೨೬) ; ಸುಬ್ಬು ಕೆಳಗೆ ಸಿಕ್ಕಿ ಮಟ್ಟೆಯನ್ನು ಹಿಡಿದಿದ್ದ (ಛೀಮಣಾ. ೪).

**ಮಟ್ಟೆವಡಿಕೆ** = ಮಣ್ಣು : ಬಿಡದೆ ಚಕ್ರಾದಿಯುಮನೊಡಲೊಳಂ ಕೀಸಿ ಮಟ್ಟೆವಡಿಕೆಯಿಂದೂರ್ಧ್ವತಿಲಕಾದಿಗಳುಮಂ ನಡಯಿಪಾ ಮಂಡದೊಳುವೊಡದೋಡುಗಳೆಂದು ಕಡುಗಲಿ ದಧೀಚಿಮುನಿರಾಯ ನೊರೆದಂ (ಶಾಪಂತ. ೨-೭೪). P ಇದೊಂದು ಕೂಡುನುಡಿ.
[ < ಪ್ರಾ. ಮಟ್ಟಿಆ, ಮಟ್ಟೀ. / ಸಂ. ಮೃತ್ತಿಕಾ ]

**ಮಟ್ಟೆ**$_2$, ಮಟ್ಟು$_4$, ಮೊಟ್ಟು$_3$ (ನಾ). (ಗಿಡಗಳ) ಹೊದರು ; ಪೊದೆ ; ಮೆಳೆ : ಮರಗಳೆರಾ ಮಟ್ಟೆಗಳೆರಾ ಕಂಡಿರೇ (ಶಾಪಂತ. ೪-೨೩೯ ರಗಳೆ) ; ಕೇದಿಗೆಹೂ ಕೊಯ್ಯಲು ಹಳ್ಳದಲ್ಲಿ ಬೆಳೆದ ಅದರ ಮಟ್ಟೆಯೆಡೆಗೆ ಇಳಿದ (ಜಾಲವೃ. ೯೫). **ಮಟ್ಟು**$_4$ : ಬಿದಿರುಮಟ್ಟನಲಿ ಪುಟ್ಟಿ ವನಗಳನ್ನೆಲ್ಲ ಕಾಳ್ಗಿಚ್ಚು ಸುಟ್ಟು ತಾ ವೇಣುಗಳ ಮೆಳೆಗಳನ್ನೆಲ್ಲ ದಹಿಸುವವೋಲ್ (ಕುಕಂಗ. ೬೬-೩೫) ; ಎಂತದೋ ಸರಸರ ಅಂತು ಮಟ್ಟೆನಲ್ಲಿ, ನಂಗೆ ಹೆದರಿಕೆ

ಬಿಸಿಮಡ್ಡಿಯ ಗಂಡಗೆ ಹಾಕಿ (ಶ್ರೀಅರ. ೧–೦೦೦–೬); ಕುದುರೆಗೆ ಕುದಿವ ಮಡ್ಡಿಯಂ ನೀಡಿಸಲು (ಗುರುಜಾ. ೨–೬); ಮಡ್ಡಿ ಕುದುರೆಗೆ ಲೇಸು (ಸರ್ವಜ್ಞ. ೦೦೩೩). ೫. ಮೃದುವಾದ ಅಂಟನ್ನು ಸ್ರವಿಸುವ ಒಂದು ಬಗೆಯ ಮರ : ಹಳದಿ ಪಾವಟೆ, ಐನ್‌ಷೆ, ಮಡ್ಡಿ (ವೃ.ಶಿ. ೩೩–೦೦೯೬). ಮರಗಳು . . . ಚೌನಂಗಿ, ಮಡ್ಡಿ, ಹೊಂಗೆ, ಗೇರು (ವಸ್ತು.ಸು. ೨೩೬). ೬. ಒಂದು ಬಗೆಯ ಸುಗಂಧದ್ರವ್ಯ : ಪರಿದಗರು ಮಡ್ಡಿ ಕಾಳಾಗರು ಧೂಪದ ಪೊಗೆ ತೆರಳ್ದು ಮುಂದಯಿಸಿದ ಕಪ್ಪುರದ ರಜಂ ಕೆದಱಿದ ಕತ್ತುರಿ [ಯಾ ಕೆಸರಣಮದಾ]ದುದಾ ನೃಪಸಭೆಯೊಳ್ (ವರ್ಧಮಾ. ೩–೩೩); ಮಡ್ಡಿ ಎಂದರೆ ಸಾಂಬ್ರಾಣಿ (ವಸ್ತು.ಸು. ೦೩೬). 'ಹಾಲುಮಡ್ಡಿ' ಪರಾ. ೭. ಸುಗಂಧದ್ರವ್ಯದ ಮೇಲೆ ಹಾಕುವ ತೆರಿಗೆ: ಹುಲ್ಲುಹಣಾ ವುಪ್ಪಿನ ವೋಳೆ ಯಾಚಲ ವೈರು ಮಡ್ಡಿ ಪತಂಗ ಪೊಪ್ಪಳಿ ಶೀಗೆ ಕೆಂಪುನೂಲು (ಪ್ರೆಅಂ. ೦೯೩೯, ೪೨–೯೯ ; 1825). ಮಂಡ₁ : ೬. ಗುಗ್ಗುಳ ಧೂಪ, ಮಂಡಧೂಪ, ಮಡ್ಡಿಧೂಪ, ಬಾಗಧೂಪ (ವೃ.ಶಿ. ೪–೩೯). ಮಡ್ಡು₁: ೧. ಜಿಡ್ಡು ತುಪ್ಪಕ್ಕೆ ಮಡ್ಡು ಬಹಳ (ಗಾದೆ). ೮. ಹೊಟ್ಟು : ಉಮಿ : "ಮಡ್ಡು : ಗುಂಗು" (ಕನ್ನಡಾ. ೨೦೦). ೯. (ಅಲಂ) ಸೊಕ್ಕು : ಮದ : ರೀಪಜೀಕಾಣಾ ಅವರ ತಲೆಯಲ್ಲಿಯ ಮಾಮಲತ್ತಿಯ ಮಡ್ಡನ್ನು ಇಳಿಸಿ . . . ನಿರ್ಣಾಯಕ ಅಭಿಪ್ರಾಯ ಕೊಟ್ಟರು (ರೀಶಹ. I. ೦೬); ನೂರಾರು ವೇಷ ಕಳಿಸಿದಿರಿ ಮತ್ತ ಇಳಿಸಿದಿರಿ ಮಾನ ಬೆಳಿಸಿದಿರಿ (ಹಾದುಬಾ. ೪೦–೦೬). 'ಜಿಡ್ಡು' ನೋ. ಮಿಡ್ಡೆ : ೩. ಅದೇನು ಅನ್ನ ಹಾಗೆ ಹಿಸುಕಿ ಹಿಸುಕಿ ನೋಡುತ್ತೀರಿ ? ಮಿಡ್ಡೆಯೋ ? ಸ್ವಲ್ಪ ನೀರು ಹೆಚ್ಚಾಗಿ ಬಿಟ್ಟಿತೇನೋ ! (ತ್ರೀಕತ. ೦೯೦). ಮೆಡ್ಡೆ : ೩. ಗೆಡ್ಡೆಯ ಹೊಲ ಹೀನ ಗೊಡ್ಡುಹೆಂಡತಿ ಹೀನ ಮೆಡ್ಡೆಯ ಬೋನವೆ ಹೀನ (ಶಂಪಾಶ. ೯೬–೬೩).
[ದೇ.॥ ತಮಿ. ಮಣ್ಣಿ ; ಮಲ. ಮಟ್ಟು ; ತುಳು, ತೆಲು. ಮಡ್ಡಿ]

**ಮಡ್ಡಿ₂, ಮಡ್ಡು₂** (ನಾ). ೧. ಮೂಢ ; ದಡ್ಡ : ಇದರಿಂದ ಮಡ್ಡಿ ಎಂದರೆ ಬುದ್ಧಿ ಚುರುಕಿಲ್ಲದ ವ್ಯಕ್ತಿ ಎಂಬ ಅರ್ಥ ಬಂದಿದೆ (ವಸ್ತು.ಸು. ೦೩೬); ಇಷ್ಟಾದರೂ ಮಡ್ಡಿ ಜನಾರ್ಧನನಿಗೆ ಜಡ್ಡು ಹರಿಯಲಿಲ್ಲ (ಶುಲಿಷು. ೯೬); ಮರುಳ, ಮಂಕ, ಮುಟ್ಠಾಳ, ಮಡೆಯ, ಮಡ್ಡಿ ಎಂಬ ಬಿರುದುಗಳನ್ನು ಹೊಂದಿದ್ದ ಐವರು ಶಿಷ್ಯರಿದ್ದರು (ಪಗಗ. ೦). 'ಮಡೆಯ' ಪರಾ. (ಗು). ೨. ಮೂಢತನದ ; ತಿಳಿವಳಿಕೆಯಿಲ್ಲದ : ಆಯುಷ್ಯಕ್ಕೆ ಮಡ್ಡಿ ಜನರು ಏಕೆ ಆಶೆಪಡುವರೋ (ಶಂಪುಾತ್ರ. ೨೯); ನೀನು ಮಡ್ಡಿ ಹುಡುಗ (ಕಾಪುಲಾ. ೩೩). ಮಡ್ಡು₂ : ೨. ಹಳ್ಳಿಯವು ಮಡ್ಡುಜನಗಳಾ ? (ಶೀಗುಸು. ೨೯೩). [ದೇ.॥ ತಮಿ. ಮಟ್ಟಿ ; ತೆಲು. ಮಡ್ಡಿ]

**ಮಡ್ಡಿ₃** 'ಮೊರಡ್ಡು₃' ನೋ.

**ಮಡ್ಡಿತನ** (ನಾ). = ಮಡ್ಡತನ : ಪುಳಕದಲಿ ಮೈಯುಬ್ಬಿ ಅಚ್ಚರಿಯ ಸವಿಮುತಿರೆ ಆಡಿ ಜರೆಯುವರೆಷ್ಟು ಮಡ್ಡಿತನಕಿವರು (ಡ್ರಾ.ಶಿಬಾ. ೨೦–೬); ಮದುಮೆಯಾಗುವುದು ಮೂರ್ಖತನ ; ಮಡ್ಡಿತನ (ಅಂಕಹೂ. ೩೬).
[ ಮಡ್ಡಿ₂ + – ತನ ]

**ಮಡ್ಡಿಮರ** (ನಾ). ಹಾಲುಮಡ್ಡಿಯನ್ನು ಉತ್ಪತ್ತಿಮಾಡುವ ಮರ : ಚಿಲಟಧೂಪ, ಚಿಲಕಡಿ, ಗುಗ್ಗುಳಧೂಪ, ಮಡ್ಡಿಮರ, ಮಾದಿ, ಚಿತ್ತ, ಧೂಪ (ವೃ.ಶಿ. ೦೩–೨೩೬). [ ಮಡ್ಡಿ₁ + ಮರ₁ ]

**ಮಡ್ಡಿಸಾಂಬ್ರಾಣಿ** (ನಾ). ಬುದ್ಧಿಯಿಲ್ಲದವನು ; ದಡ್ಡ : ಮಡ್ಡಿ ಸಾಂಬ್ರಾಣಿ. ಗುಣಿತಪದ. ಮಡ್ಡಿ ಎಂದರೆ ಸಾಂಬ್ರಾಣಿ. ಮಡ್ಡಿ ಪದದಂತೆ ಬುದ್ಧಿ ಚುರುಕಿಲ್ಲದ ಪ್ರಾಣಿ ಎಂಬ ಅರ್ಥದಲ್ಲಿ ಬಳಕೆಯಲ್ಲಿದೆ (ವಸ್ತು.ಸು. ೦೩೬); ನೀನು ಜಾಣ, ನಿನ್ನನ್ನು ಕಟ್ಟಿಸಿದರು. ನಾನು ತಿಳಿದೇ ಇದೆ ದಡ್ಡ, ಮಡ್ಡಿಸಾಂಬ್ರಾಣಿ (ಶಂಪ್ಪಾರಾ. ೨೫); ಈ ಹಳ್ಳಿಯವರ ಹಾಗೆ ನಾನೂ ಮಡ್ಡಿಸಾಂಬ್ರಾಣಿ ಎಂದು ಹೇಳುವೆಯೇನು ? (ಪುಂಡುಬ್ಬಪು. ೬೬). P ಮಡ್ಡಿ ಮತ್ತು ಸಾಂಬ್ರಾಣಿ ಎಂಬ ಎರಡು ಶಬ್ದಗಳಿಗೂ ಸುಗಂಧ ದ್ರವ್ಯ ಮತ್ತು ತಿಳಿಗೇಡಿ ಎಂಬ ಅರ್ಥಗಳಿರುವುದರಿಂದ ಇದು ಚಮತ್ಕಾರದಿಂದ ಮಾಡಿದ ಒಂದು ಕೂಡುನುಡಿ.
[ ಮಡ್ಡಿ₂ + ಸಾಂಬ್ರಾಣಿ. / ತಮಿ. ಮಟ್ಟೈಯುಜಾವ್ಪಿರಾಣಿ ; ಮಟ್ಟೈ ಯಾನ್‌ಜಾವ್ಪಿರಾಣಿ ]

**ಮಡ್ಡು₁** 'ಮಡ್ಡಿ₁' ನೋ.

**ಮಡ್ಡು₂** 'ಮಡ್ಡಿ₂' ನೋ.

**ಮಡ್ಡು₃** (ನಾ). ಪಶುಗಳ ಯೋನಿ : ಆಗ ತಾಯಿಕುರಿ ಅದರ ಮಡ್ಡು ಮೂಸಿ ತನ್ನ ಮರಿಯೇ ಅಲ್ಲವೇ ಎನ್ನುವುದನ್ನು ನೋಡಿಕೊಳ್ಳುತ್ತದೆ (ವಹೂರು. ೦೩). [ < ಮಡಿಲ್ ]

**ಮಡ್ಡು₄** (ನಾ). ೧. ಒಂದು ಬಗೆಯ ಚರ್ಮವಾದ್ಯ : ಪಟಹ ಮೃದಂಗ ಡಿಂಡಿಮ ಮಡ್ಡು[ಬಾಕಂ. ಡ್ಡ]ಜರ್ಝರ ಪಟು ಶಂಖಿವಾಸ ಭೇರಿಗಳ ಜಟಿಲಿತನಾದವೆಸೆಯೆ ಕಂಪಭೂಪನ ಕಟಕ ನಡೆವುದು (ಕುಮಾರಾಂ. ೦೪–೬೪). ೨. ಒಂದು ಬಗೆಯ ಆಯುಧ (?) : ಹೊಳೆವ ಮಡ್ಡು ಕಠಾರಿ ಡೊಂಕಣಿ . . . ಕಟಿಯ ಗಂಟೆಯ ವಳವನೀಕ್ಷಿಸು (ಕುಮ್ಮಾಶಿ. ೩–೨೦); ಚಾರಿವರಿದನು ದನುಜ ಮಡ್ಡು ಕಠಾರಿಯಲಿ ಕರ್ಣಾಸ್ತ್ರ ಧಾರಾಸಾರದಲಿ ಮೈ ನೆನೆದು ಪೊಸಲಿಡುವರುಣವಾರಿಯಲಿ (ಕುಮ್ಮಾದ್ರೋ. ೦೬–೪೭). [ಸಂ.]

**ಮಣ್**, ಮಣು, ಮಣ್ಣು (ನಾ). ೧. (ಬಿಸಿಲು, ಗಾಳಿ, ಮಳೆಗಳಿಂದ ಕಲ್ಲುಗಳು ಚೂರಾಗಿ ಉಂಟಾದ) ಸಣ್ಣನಾದ ಹುಡಿ ; ಮೃತ್ತಿಕೆ : "ಮೃತ್, ಮೃತ್ತಿಕಾ – ಈ ೨ ಮಣ್" (ಹಲಾಯು. ೨೬–೩) ; ಐರಾವತದ ಹರವೃಷಭದ ಕೋಡ ಮಣ್ಣುಮನಾಕಾಶಗಂಗೆಯ ನೀರುಮಂ . . . ತಂದ ವಾರವನಿತಾಜನಕ್ಕಂ ಸಾಮಂತಚಕ್ರಕ್ಕಮುಡಲಿಕ್ಕಿ (ಶಂಕಹಾ. ೦೯–೦೬ ಪ); ವರಿಯ ಮಣ್ಣಂ ಕೋಡೊಳೆತ್ತಿ ತಂದವರ ಮುಂದಿಕ್ಕುವ ಭದ್ರಗಜವ್ರಜ ಮುದಮಂ (ಶಂಕಶಂ. ೦೦೬–೨೦). 'ತಿರುಮಣ್' ಪರಾ. ೨. ಬೆಳೆ ಬೆಳೆಯುವ ಭೂಭಾಗ ; ಜಮೀನು ; ಗದ್ದೆ : ಕೊಟ್ಟೂನ್ಸಾರ್ವ್ವಮಗ್ರವುಂ ಅದರ್ಕ್ಕೆ ಆ ಪುಸುರಾತದ ಕದ ಕೆಟಿಗೆ ದಸಕಣ್ಣುಗಂ ಮಣ್ಣದ ಬೂ ಒಡೆ ಯದು ತನಗೆಯುಂ (ಎಕ. X (೩), ಶಿಕ್ಷಿಪ. ೦೦೯–೦೩ ; ಸು. 500 ?) : ಸ್ವಸ್ತಿಶ್ರೀ ಚೆನ್ನಿಯಮ್ಮರಸರ್ ದೇವಗ್ಗೆ ಮಣ್ಣಂ ಕೊಟ್ಟರ್ (ಎಕ. XI, ಚಿತ್ರದು. ೨೯–೦ ; ಸು. 500 ?) ; ಮಣ್ಣಿಲ್ಲದೆ ಬೆಳೆವೆನೆಂಬ . . . ವಚ್ಚಪುಸಿಯೆಗ್ಗನು ಪೋಲ್ಕುಂ (ಧರ್ಮಾಮೃ. ೦–೬೭). ಮಣು : ೧. ಮರ ದೇವರಲ್ಲ ಉರಿಯಲ್ಲಿ ಬೆಂದಿತ್ತು ಮಣು ದೇವರಲ್ಲ ನೀರಿನ ಕೊನೆಯಲ್ಲಿ ಕರಡಿತ್ತು (ಸರ್ವಪ. ೮೨–೯೩೮) ; ಖಿಲ್ಲ ಪರವಾದಿ ಜೈನರನಿರದೆ ಸಂಹರಿಸಿ ಹಲ್ಲುಗಳ ಕಳೆದು ಮಣುವಿನ ಮೂಜು ಖಂಡುಗವನಲ್ಲಿ ಕಣಜಂ ಕಟ್ಟಿ ತುಂಬಿಸುವರು (ಚಿಕ್ಕೃ. ೬೨–೪೦). ೨. ಮೂಲಸ್ಥಾನದ ಸೋಮಯದೇವರಿಗೆ ಖಂಡಿತವಾಗಿ ಗದೆ ಮಣುವಿನ ಮೂಗುಳ ಗದೆ ಹೊಲನು ಮೂಗುಳ (ಎಕ. X. ಬಾಗೇಶ. ೦೬–೨; 1391). ಮಣ್ಣು : ೧. ಮಾಯೆಯಾಡಿಸುವ ಮಣ್ಣ ರೂಪು ಕಪ್ಪಡದ ಹಾವೆ ಕಲ್ಲ ಜಂತ್ರ ಹುಲ್ಲ ಬೊಂಬೆ (ಬಸರ. ೮–೦೩೪) ; ಕರಿಯ ನೋಂಪಿಗೆ ತನುಜರಿರ ನೀವೆ ತರಲು ಬೇಕ್ಕೆ ಮಣ್ಣನೆಂದರೆ ಹಿರಿದು ತಂದೊಟ್ಟಿದರು ಮಿಗೆ ಮೃತ್ತಿಕೆಯ ಗಿರಿಯಂತೆ (ಕುಮ್ಮಾಅ. ೬೦೩. ೨೦–೯) : ಮಣ್ಣಿಂದ ಕಾಯ ಮಣ್ಣಿಂದ ಮಣ್ಣಿಂದ ಸಕಲ ದರುಶನಗಳೆಲ್ಲ ಮಣ್ಣಿಂದ ಸಕಲವಸ್ತುಗಳೆಲ್ಲ ಮಣ್ಣು ಬಿಟ್ಟವರಿಗೆ ಆಧಾರವಿಲ್ಲ (ಪುರಂದರ. ೨–೮೦ ಅನುಬಂಧ). ೨. ಬಿಜಲಿ ಮಾದೇವಿಯಾಳುತ್ತಿರೆ ಅಲ್ಲಿ ಕೊಟ್ಟುದು ಪದಿರ್ಕಣ್ಣುಗ ಮಣ್ಣು ಬತ್ತದ ಮಣ್ಣು (ಎಕ. XII, ಶಿರಾ. ೨೯–೩೮ ; 900) ; ಮಾಜುಪಸುವಂ . . . ಕೊಟ್ಟಂ (ಎಕ. III (R), ಗುಂಡ್ಲುಪೇ. ೩೬–೦೦ ; 1049) ; ಮಣ್ಣ ಎಂದರೆ

ಭೂಮಿಗೆ ಮೇಲ್ಮುಖವಾಗಿರುವ, ಧೂಳಾಗುವ ಮತ್ತು ಸಸ್ಯಗಳಿಗೆ ಆಹಾರಭೂತವಾಗಿರುವ ಪದಾರ್ಥ (ವ್ಯವಸ. ೦). ೩. ಭೂಮಿ ; ನೆಲ : ಹೊನ್ನೆನ್ನದು ಹೆಣ್ಣೆನ್ನದು ಮಣ್ಣೆನ್ನದು ಎಂದು ನೆನೆಸೆನೆದು (ಮಹಾದೇ. ೨. ೦೯-೩೦) ; ಕಣ್ಣು ನೀಗರ್ಗಳುಗುಳಸೊಗುತಡ್ಡಬಿದ್ದನು ಮಣ್ಣೊಳಾ ಗಜದ ಮುಂದವನು (ಶರತ. ೫೬-೫೫) ; ಮಣ್ಣಿನಿಂದ ಕೌರವ ಕೆಟ್ಟ, ಹೆಣ್ಣಿನಿಂದ ರಾವಣ ಕೆಟ್ಟ (ಗಾದೆ). ೪. ಧೂಳು : ಎಳ್ಳು ಮತ್ತು ಅಗಸಿ ಇವು ಘುಟ್ಟ (ಮಣ್ಣು ಕಸಾ) ತೆಗಿಯುವ ಜೀನಸುಗಳಿರುವುದರಿಂದ (ಮುಂಬಯಿ. ಪ್ರಸ್ತಾವನೆ .೨೯). ೫. (ಅಲಂ) ಅನಿತ್ಯವಾದುದು : ಎನ್ನ ಕಾಯ ಮಣ್ಣು ಜೀವ ಬಯಲು ಆವುದ ಹಿಡಿವೆನಯ್ಯ ದೇವ (ಮಹಾದೇ. ೫. ೦೯-೦೨).

**ಮಣ್ಣಾಂಗಟ್ಟಿ** = ೧. ಮಣ್ಣಿನ ಉಂಡೆ. — ಮುದ್ದೆ. ೨. (ಅಲಂ) ಕೆಲಸಕ್ಕೆ ಬಾರದುದು : ನಿರುಪಯೋಗಿಯಾದುದು : ಏನೋ ರಾಜ್ಯ ಕೊಳ್ಳೆ ಹೋಗುತ್ತೆ ಅಂದರೆ ಏನಿಲ್ಲ ಮಣ್ಣಾಂಗಟ್ಟಿ (ಶ್ಯಾಮಸ್ವ. ೬೭). **ಮಣ್ಣಾಗು** = ೧. ಮಣ್ಣು ಹತ್ತಿಕೊಳ್ಳು : ಧೂಳಾಗು : ಮಣ್ಣಾಯಿತ್ತು ಮೈಯು ಪೀತಾಂಬರವು (ಪುರಂದ. ೨-೨೦೦-೫) ; ಇಳಿವುದರೊಳು ಹೊಸಮರಸೆಯಿದೆಂದನು ಕುಮುಳಿಯುಂದಿಳಿಗೆ ಬಿದ್ದವನು ಮೀಸೆಯು ಮಣ್ಣಾಗಲಿಲ್ಲವು ಬಿದ್ದರು ಎಂದುಕೊಂಡೇಳ್ವರಂತಹರು (ಅಂಶಾಶ. ೨೬೫-೬೫). ೨. (ಅಲಂ) ಕೇಡುಂಟಾಗು : ಇಂದುವರೆಗಂ ತಂಗಿಯೆಂದು ಕರೆದಿಪ ಬಾಯ್ಗೆ ಮುಂದೆ ಮಣ್ಣಾಯ್ತು (ಕಾಂಚನ. ೦೬೯-೪೦೦). ೩. ಮಣ್ಣಿನಲ್ಲಿ ಸೇರು ; ಮಣ್ಣಿನಲ್ಲಿ ಒಂದಾಗು : ನಮ್ಮೊಂದಿರವಂತಿಂತುಟೆಂದೇನುಮುಣಿಯದೆ ಮಣ್ಣಾಗಿ ಕಲ್ಲಾಗುತುಂ. . . ಎಂತಕ್ಕೆ ಬಂದೆಂ ಪರಜನ್ಮಕ್ಕಯ್ಯ (ಕಬ್ಬಿಗ. ೨) ; ಗೊತ್ತಿಹುದೆಲ್ಲರಿಗೆಮ್ಮ ಭವಿಷ್ಯವು ನಾಳಿಗೆ ಮಣ್ಣಾಗಲಿಹೆವು (ಇಂಚರ. ೦೪೨-೦೦೦). **ಮಣ್ಣಿಗೆ ಮಣ್ಣು ತಿನ್ನಿಸು** = (ಅಲಂ) ಕಷ್ಟಪಡಿಸು ; ಹಿಂಸೆಗೊಳಿಸು : ದೊಡ್ಡ ಮನುಷ್ಯನಂತೆ ಆವಾಗಲೂ ವೇಷವನ್ನು ತಾಳಿಕೊಂಡು. . .ಪೋಲೀಸಿನವರಿಗೆ ಮಣ್ಣಿಗೆ ಮಣ್ಣು ತಿನ್ನಿಸಬೇಕು (ಬೆಸ್ತಬೇ. ೩೦). **ಮಣ್ಣಿಗೆ ಮಣ್ಣು ತಿನ್ನು** = (ಅಲಂ) ಕಷ್ಟಪಡು ; ಹಿಂಸೆಗೊಳ್ಳು : ಶತ್ರುಗಳೊಡನೆ ಹೋರಾಡಿ ಮಣ್ಣಿಗೆ ಮಣ್ಣು ತಿಂದು ಹೋಗಿರುವನು (ಬೆಸ್ತಬೇ. ೦೩೦). **ಮಣ್ಣಿನ ಮಕ್ಕಳು** = ರೈತರು : ಮಣ್ಣಿನ ಮಕ್ಕಳು ನಾವು (ಮಣ್ಣಕು. ೨೬೦). **ಮಣ್ಣು ತಿನ್ನು** = ೧. ಮಣ್ಣನ್ನು ಮುಕ್ಕು ; ಮಣ್ಣನ್ನು ತಿನ್ನು : ಕಂದಾ ಬೇಡವೊ ಮಣ್ಣು ತಿನ್ನಬೇಡವೊ (ಪುರಂದ. ೨-೨೦೪ ಪಲ್ಲವಿ). ೨. =ಮಣ್ಣಿಗೆ ಮಣ್ಣು ತಿನ್ನು : ಅವರೆಲ್ಲಾ ಮಣ್ಣು ತಿಂದು ಹೋಗುತ್ತಾರೆ (ಮಣ್ಣಪ. ೦೬೮). **ಮಣ್ಣು ತಿನ್ನೋ ಕೆಲಸ** = (ಅಲಂ) ನಿಕೃಷ್ಟವಾದ ಕೆಲಸ ; ಪೆಚ್ಚು ಕೆಲಸ : ನನಗೆ ಹೇಳದೇಲೇ ಮಣ್ಣು ತಿನ್ನೋ ಕೆಲಸ ಮಾಡಿಕೊಂಡಿದ್ದಾರೆ (ಕಲಶ. ೨೮೨). **ಮಣ್ಣುಬೀಳು** = ೧. ಧೂಳು ಉದುರು : ಕಣ್ಣಿಗೆ ಮಣ್ಣು ಬಿದ್ದು ಕೆಂಪಾಯಿತು (ಕೂಂ). ೨. (ಅಲಂ) ಹಾಳಾಗು ; ನಾಶವಾಗು : ನಿಮ್ಮ ದಮ್ಮಯ್ಯ. ಅಂತಹವುಗಳನ್ನು ಪ್ರಕಟಿಸಬೇಡೀಂದ್ರೆ. ಎಲ್ಲಾದರೂ ಕೆಲಸದ ಬಾಯಿಗೆ ಮಣ್ಣು ಬಿದ್ದೀತು (ಸಂಧ್ಯಾರಾ. ೦೩೫). **ಮಣ್ಣು ಮಸಿ**=ಕೆಲಸಕ್ಕೆ ಬಾರದುದು ; ಅಪ್ರಯೋಜಕವಾದುದು : ನಾನು ಕಾಣೆನೆ ಅವಳು ಕೊಳ್ಳುವುದು. ಸ್ನೋ, ಪೌಡರು, ಚೋಳಿಪೀಸು, ಮಣ್ಣುಮಸಿ (ಕೃಶ್ನ. ೧೨೪). **ಮಣ್ಣು ಮುಕ್ಕಿಸು** = ಮಣ್ಣಿಗೆ ಮಣ್ಣು ತಿನ್ನಿಸು : ಜಿಜಾಪುರದ ರಣದುಲ್ಲಾಖಾನನನ್ನು ಪಟ್ಟಣದ ಬಳಿ ಮಣ್ಣು ಮುಕ್ಕಿಸಿದ ವೀರ ಕುಮಾರಯ್ಯ (ತರೀಪ. ೦೦) ; ಮೊಗಲ ಸಾಮ್ರಾಟ್ ಔರಂಗಜೇಬನನ್ನು ಮಣ್ಣು ಮುಕ್ಕಿಸಿದ ಮರಾಠಿಗರ ಭುಜಬಲ ಅಂತಃಕಲಹಗಳಿಂದ ಕುಗ್ಗಿ ಹೋಗಿತ್ತು (ಭಾರತ. ೪೨೫). **ಮಣ್ಣು ಮುಕ್ಕು** = ೧. ನೆಲದ ಧೂಳನ್ನು ತಿನ್ನು, — ಮುಕ್ಕು : ಬಲವಾದ ಉಕ್ಕಿನ ಕೈಗಳ ಹೊಡೆತದಿಂದ ಫಜ್ ಒಮ್ಮೆಲೆ ನೆಲಕ್ಕೆ ಬಿದ್ದನು. ನೆಲ್ಲ ಮುಳುಗಿದ ಅವನ ಬಾಯಿಯು ಮಣ್ಣು ಮುಕ್ಕಿತು (ಶಿಂಗಾಪ. ೯). ೨. (ಅಲಂ) ಕಷ್ಟಪಡು : ಭಂಗ ಪಡು : ಹಣಬರಹ ಎಂದು ಕುಳಿತಿದ್ದರೆ ಒಂದಲ್ಲ ಒಂದು ದಿನ ನಾವು ಮಣ್ಣು ಮುಕ್ಕುತ್ತೇವೆ (ಕಾವೇರಿ. ೭೭) : ವೈದ್ಯನು . . . ಮಣ್ಣುಮುಕ್ಕಿದವನಂತೆ ಬೆಪ್ಪಾಗಿ ಒಂದೆಡೆಯಲ್ಲಿ ನಿಂತುಕೊಂಡಿದ್ದನು (ಬೆಸ್ತಬೇ. ೦೭೫). ೩. ಹಾಳಾಗು ; ನಾಶವಾಗು : ಜಗತ್ತಿನಲ್ಲಿ ಸಾಮ್ರಾಜ್ಯಗಳನ್ನಾಳಿದ ದೊರೆಗಳೂ ಚಕ್ರವರ್ತಿಗಳೂ ಮಣ್ಣು ಮುಕ್ಕಿ ಹೋಗಿದ್ದಾರೆ (ಕುಜಕು. ೦೭೮). **ಮಣ್ಣು ಹೊರು** = ೧. ಮಣ್ಣು ತುಂಬಿರುವ ಮಂಕರಿಯನ್ನು ತಲೆಯ ಮೇಲೆ ಹೊತ್ತುಕೊಳ್ಳು : ಮಣ್ಣು ಹೊರುವವ ತಲೆಗೆ ಬೆಣ್ಣೆ ಹಚ್ಚಿಕೊಂಡಂತೆ (ಗಾದೆ). ೨. (ಅಲಂ) ದುಡಿ ; ಶ್ರಮಿಸು : ಅವನಿನ್ನೂ ಬಹಳ ಮಣ್ಣು ಹೊರಬೇಕು (ಕೂಂ). ೩. (ಪಾಠವನ್ನು ಕಲಿಯಲು) ಶಾಲೆಗೆ ಹೋಗು : ಚಲಂ ಒಂದು ದಿನವೂ ಶಾಲೆಗೆ ಮಣ್ಣು ಹೊತ್ತಿರಲಿಲ್ಲ (ಎವೆಂಟ್ಸ. ೦೫೯). **ಮಣ್ಮಾಡು, ಮಣ್ಣು ಮಾಡು** = ೧. (ಅಲಂ) ಹೂಳು : ಸಮಾಧಿ ಮಾಡು : ಎತೆಯೊಕ್ಲೇಸ್ ಅಣ್ಣನನ್ ಮಣ್ ಮಾಡಿ ಕಿರ್ಬ್ನೆಲದ ಕಟಿದರೊಳ್ ಪುಗಿಸಿ ಮನ್ನಿಸಿದನೆಂಬರ್ (ಅಂತಿಗೊ. ೩-೩೦) ; ಇಂದೊ ನಾಳೆಯೊ ಸಾಯುತ್ತಾಳೆ. ನಾನು ಇವಳನ್ನು ಮಣ್ಣು ಮಾಡಿ ಎಲ್ಲಿಯಾದರೂ ಹೊರಟು ಹೋಗುತ್ತೇನೆ (ಶ್ರೀರಾಮ. ೦೦೨). ೨. ಹಾಳು ಮಾಡು ; ನಾಶಪಡಿಸು : ಬಂಗಾರದಂತಹ ನಾ ಕೊಟ್ಟ ದಿನವನು ಮಣ್ಣುಮಾಡಿದೆಯೆಂದು . . . ನಿನ್ನನೆ ನೋಳ್ಪನು ದಿನಪನು ತಾ ಪೋಗುವಂದು (ಇಂಚರ. ೦೪೯-೩೨).

[ದೇ.॥ ತಮಿ. ಮಣ್ ; ಮಲ. ಮಣ್, ಮಣ್ಣು ; ಕೊಡ. ಮಣ್ಣ್ ; ತೊದ. ಮೊಣ್ ; ತುಳು. ಮಣ್ಣು ; ತೆಲು. ಮನ್ನು, ಮನು]

**ಮಣ, ಮಣವು** (ನಾ). ೧. ತೂಕದ ಒಂದು ಪ್ರಮಾಣ ; (ಸುಮಾರು) ನಲವತ್ತುಸೇರು ; P ಈ ತೂಕದ ಪ್ರಮಾಣವು ಸ್ಥಳದಿಂದ ಸ್ಥಳಕ್ಕೆ ವ್ಯತ್ಯಾಸವಾಗುತ್ತದೆ : ಆನೆಗೈದು ಮಣದ ಆಹಾರವ ತಾನೆ ತಂದು ಕೊಡುವ ದೀನರೊಡೆಯ ಶ್ರೀನಿವಾಸದಯಾನಿಧಿ (ಪುರಂದ. ೦-೫೬-೨). ೨. (?) : ಕೈವರದೊಳ್ ಒಸ್ದು ಮಾನ್ಯಂ ಮಣಮುಂ ಮೂಗಣ್ಣುಗಂ . . . ಪಡೆದೊರ್ (ಎಕ. X (೪), ಶಿಡ್ಲ. ೦೦೬-೭೩ ; 850). **ಮಣವು** : ೧. ಆಱು ಮಣವಿಸಂಡಗೆಯ ತಂದೆತ್ತಿಕೊಳ್ಳಿಸೆ (ಗುರುಚಾ. ೦೪-೫).

[←ಅರ. ಓಂ. ಮನ್ ; ಮರಾ. ಮಣ./ಸಂ. ಮಣ]

**ಮಣಕ$_1$, ಮಣಿಕ$_1$** (ನಾ). (ಪ್ರಾಯಕ್ಕೆ ಬರುತ್ತಿರುವ) ಹಸು, ಎಮ್ಮೆ ಮೊದಲಾದ ಪ್ರಾಣಿಗಳ ಕರು ; ಪಡ್ಡೆ ; ಕಡಸು : ಕಣುಕವ ಕಡುಬಾಗಿ ಮಣಕಮ್ಮೆ ಹಯನಾಗಿ ಕುಣಿಕುಣಿದು ಕಡೆವ ಸತಿಯಾಗಿ ಬೆಳವಲದ ಅಣಕ ನೋಡೆಂದ (ಸರ್ವಜ್ಞ. ೦೬೦೯) ; ಮಣಕಕೆ ಸೇರುತುಪ್ಪ ಮನಿಯೊಳ ಗಾದರೆ ಮಣಕಕೆ ಬಂದದೇನು (ಶಿಶ್ರಸು. ೩೬-೨). **ಮಣಿಕ$_1$** : ಪೊಸನಸೆಯ ಸೊವಡನಾಘ್ರಾಣಿಸಿ ಮಣಿಕದ ಮಿಡುಕುಗಚ್ಚೆಯೊಳ್ ಮೊಗವೆತ್ತುತೆಸೆದುದು ವೃಷಮುಮರರನೇಡಿಸುವವೊಲೇನುಂಟೆ ನಿಮಗಮಾ ಸುಖಮೆನುತಂ (ಲೀಲಾವ. ೫-೯೩); ಮಣಿಕದ ನಸೆಗಸವಸದಿಂದಣಿಯರವಾಡುವ ಗವೇಂದ್ರನಂ ಸತಿ ಕಂಡಳ್ (ಅನಂತ. ೪-೦೨೦). [ದೇ.॥ ತಮಿ. ಮಣಜ್ಯ=ಕುರಿಮರಿ]

**ಮಣಕ$_2$** 'ಮಣಕು' ನೋ.

**ಮಣಕ$_3$, ಮಣಗು$_2$** (ನಾ). ೧. ಮೊಸಳೆ ; ಮಕರ : ಇದ್ದಕ್ಕಿದ್ದಂತೆ ಮಣಕ ಬಂದು ಅವಳ ಕಾಲನ್ನು ಗಟ್ಟಿಯಾಗಿ ಕಚ್ಚಿ ನೀರಿಗೆ ಎಳೆಯಿತು (ಕನ್ನಸ. ೨೫). **ಮಣಗು$_2$** : ೨. ಅಗಲವೂ ಮತ್ತು ಉದ್ದವೂ ಆದ ಒಂದು ಬಗೆಯ ಮೀನು. [← ತುಳು. ಮಣಂಗ್]

**ಮಣಕಾಲು** 'ಮೊಣಕಾಲ್' ನೋ.

**ಮಣಕು, ಮಣಕ$_2$, ಮಣುಕು** (ನಾ). ೧. ಹಳೆಯ ಎಣ್ಣೆಯ ಜಿಡ್ಡಿನ ವಾಸನೆ ; ಕಮಟುವಾಸನೆ; ದುರ್ವಾಸನೆ : "ತಿಲ_ಸ್ನೇಹನೇ, ಮಣಕಿ

ನೊಳ್ " (ಆಶಕ್ಕೆ. ೨೨೬); ಆವ ಜಾತಿಯದಾರೆಂದಱಿಯದೆ ಮಿಂದು ಮುಬುಂಕಿಯುಮಱಿಯದ ಮಣಕಿನ ಬಣಂಬೆಗಾನೆಱಗುವೆನೇ (ಧುಶೋಪ. ೪-೪೯); ಅವರಂ ಕರದು ಮಂಡೆಯೊಳ್ ಮಣಕೇಱಿರ್ದ ಜಡೆಗಳಂ ಲೋಚಂ ಮಾಡಿಸಿ (ಧರ್ಮಾಮೃ. ೯-೦೯ ವ). ೨. (ಆಲಂ) ದುರ್ಗುಣ: ಗುಣಕೃತಿಯನು ಕಿವಿಯಿರ್ದು ಕೇಳದ ಮನವೆಣಿಸಿ ಮೆಚ್ಚದವರನಪ್ಪ ಮಣಕಿನಥಮಗೋದಿ ಪೇಳ್ವವ ಪೊಲ್ಲನು ಪೆಣಕೆ ಪಾಡುವ ಸುಗಾಯಕನ (ವರ್ಧಚ. ೦-೨೨). ೩. ಹೊಲಸು; ಕೊಳೆ; ಕೊಳಕು: ತಲೆಯೊಳ್ ತೀವಿದ ಹೇನು ಸೀರ್ಮಣಕನೆಂತುಂ ಬಾರ್ಚಿ ತಾಂ ತಾಳ್ದಿಯಾ ತಲೆಯಂ ನಿರ್ಮಳಮಪ್ಪಿನಂ ಪಣಿಗೆ ಮಾಟ್ಕುಂ (ರರ್ಮಚ. ೦೦-೦೨). **ಮಣಕ**₂: ೨. ಅಣಕವನಾಡುತ ಐವರ ಕೊಡೆ ಸೆಣಸುತ ನಾಲ್ವರ ಕೈವಿಡಿದು ಮಣಕದಿಂದಲಿ ಅಱು ಮಂದಿಯ ಕೂಡೆ ಉಣ ಕುಳಿತಲ್ಲಿ ಮೈಮಱೆದೆನಕ್ಕ (ಶಿವಗೀ. ೦೪೬-೬೪೪). **ಮಣುಕು**: ೩. ಬಾಳಿಕೆ ಬರುವುದೆಂದುಕೊಂಡ ಸೀರೆ ಆರು ತಿಂಗಳಿಗೇ ಹರಿಯುತ್ತ ಬಂದುವಲ್ಲದೆ ಮಣುಕು ಓಡಿದು ಗೂಬೆಯಾಗಿತ್ತು (ಅರಜ. ೦೬೦). [ದೇ.॥ ಮಲ. ಮಣಕ್ಕ = ವಾಸನೆಯುಂಟಾಗು, ವಾಸನೆ ಬರು; ತುಳು. ಮಣ, ಮಣಕ್ = ಅಂಟಿಕೊಳ್ಳುವ; ಜಿಗುಟಾಗಿರುವ ]

**ಮಣಗು**₁ (ಕ್ರಿ). ಹತೋಟಿಗೆ ಬರು; ವಿನೀತನಾಗು; ವಿನಮ್ರನಾಗು: ಆ ಕಾಲದಲ್ಲಿ ಅಣಗಿ ಮಣಗಿ ಇದ್ದ ಮಹಮ್ಮದೀಯರನ್ನು 'ಮುಸಲಿಮಾನು' (ಮುದಿಮರ)ಗಳೆಂದು ಗೇಲಿ ಮಾಡಿದೆವು (ಸಾಹಿಜೀ. ೮೬). 'ಅಣಗು' ಪರಾ. [ದೇ.॥ ತೆಲು. ಮಡುಂಗು, ಮಣಂಗು]

**ಮಣಗು**₂ 'ಮಣಕ₃' ನೋ.

**ಮಣಮಣ** (ನಾ). ಒಂದು ಅನುಕರಣ ಶಬ್ದ: ಬಾಯಲ್ಲಿ ಮಣಮಣ ಮಂತ್ರ! (ಸ್ವಸ್ವಹೊ. ೩೦); ಅರೆತಾಸಿನ ತನಕ ತಾಳ್ಮೆಗೆಟ್ಟು ಮಣಮಣ ಅನ್ನುತ್ತಿದ್ದನು (ಶಾಂಕೃ. I. ೪೩೩).

**ಮಣಮಣಗುಟ್ಟು** (ಕ್ರಿ). ತನ್ನಷ್ಟಕ್ಕೇ ತಗ್ಗುಧ್ವನಿಯಲ್ಲಿ ಹೇಳಿಕೊಳ್ಳು; ಗುಣುಗುಣಿಸು: ತಂತ್ರ ಅರಿಯದೇ ಮಂತ್ರ ಮಣಮಣಗುಟ್ಟೇ (ಸೂರ್ಯಶಾ. ೩-೦೩). [ಮಣಮಣ + ಕುಟ್ಟು₁]

**ಮಣಮಣೆ** (ನಾ). ಒಂದು ಅನುಕರಣ ಶಬ್ದ: ರಣವು ದಾನವಕುಲ ವಿಹಿತವಾ ರಣವೂ ಹರಿಯೋ ಮಾರಿಯೋ ಮಂಡಣಿಸಿ ಕಳುಹಿದ ಕೃತ್ತಿಯೊ ಸುರರೆಮ್ಮ ವಲ್ಲಭರು ಸೆಣಸಿ ಮಡಿದರು ಶಿವಯನುತ ಮಣಮಣೆಯು ಹೊರಳುವ ದಾನವಿಯರುಬ್ಬಣವೆನಿಪ ಹಾಹಾರಘಸಂಬರವನಲ್ಲಿಱಿಯೆ (ಶಿತಾಗ. ೮-೦೭-೩೩).

**ಮಣಮಣಿಸು** (ಕ್ರಿ). = ಮಣಮಣಗುಟ್ಟು: ಗೆಣೆಯನ್ನ ಕಳಕೊಂಡ ಒಣಮಾರಿ ಮಾಡಿಕೊಂಡ ಮಣಮಣಿಸಿ ಊರ ತಿರುಗ್ಯಾಳೊ (ಜಪಗೀ. ೪೦). [ಮಣಮಣ + — ಇಸು₃]

**ಮಣಲ್**, ಮಣಲು, ಮರಳ್ಳು₂, ಮಲರ್₄, ಮಳಲ್, ಮಳಲು₂ (ನಾ). (ಸಮುದ್ರ ಅಥವಾ ನದೀತೀರ, ಮರುಭೂಮಿ ಮೊದಲಾದ ಕಡೆಗಳಲ್ಲಿ ದೊರಕುವ) ಮಳೆ, ಬಿಸಿಲುಗಳ ಪ್ರಭಾವಕ್ಕೊಳಗಾಗಿ ಸಣ್ಣ ಸಣ್ಣ ಚೂರಾಗಿರುವ ಕಲ್ಲಿನ ಕಣಗಳ ರಾಶಿ; ಉಸುಕು; ಹೊಯಿಗೆ: "ಸಿಕತಾ, ವಾಳುಕಾ _ ಈ ೨ ಮಣಲ್" (ಶಬ್ದಮ. ೦೦೦-೪೬); ಮುಡಿಯ ಕುಚಯುಗದ ಜಘನದ ಕಡುವಿಣ್ಪಿಂ ಮಣಲೊಳಟ್ಟು ಬರೆ ಮೆಲ್ಲಡಿಗಳ್ (ಶಂಶಭಾ. ೭-೬೩); ಅಯ್ದುಪುರುಷಂಬರೆಗಂ ನೆಱೆ ತೋಡುಗುಪ್ಪನೀರ್ ಮಣಲೊಱವಾಗಿ ಬಿಕರ್ಗಂ (ಲೋಕೋಪ. ೩-೩೦); ಮಣೆಯಲ್ಲದ ಕಲ ಜ್ಯೋತಿಸ್ತೃಣಮಲ್ಲದ ಪುಲ್. . . ಮುತ್ತಿನ ಮಣಲಲ್ಲದ ಪುಣಿಲುಮಿಲ್ಲ ತತ್ಪುರಿಸರದೊಳ್ (ಚಂದ್ರಪ್ರ. ೦೦-೪೦). **ಮಣಲು**: ಮಣಲ ಲಿಂಗ ವನಳ್ಕಱಿಂ ತೋಱೆ (ಚಂದೀರ. ದೇ. ೨೪೩-೨೦); ಕಾಡವರೆ ಮಣಲು ಸುಣ್ಣವಿಂ ವೇಡಿತ ವಜ್ರೋಪಮಾನ ತಿಮ್ಮರೆನಿಸಿರ್ದಂ (ಜಪುರ. ೦೬-೨೬); ಮಣಲಿಂ ಮಹಾಲಿಂಗಮಂ ಮಾಡಿ (ಶಿವತಂ. ೩-೦೬). **ಮರಳ್ಳು**₂: ಗಂಗಾನದಿಯ ಶಾಖೆಯಾದ ಹೂಗ್ಲೀನದೀಮುಖದಲ್ಲಿಯೂ ಮರಳು ಹೀಗೇ ತುಂಬುತ್ತದೆ (ನಸಂ. ೨೩). **ಮಲರ್**₄: ಮರಲ್ ಅರಲ್ ಎರಲ್ ಎಂಬಿವಱ ಮಧ್ಯರೇಫಕ್ಕೆ ಲತ್ವಮುಂ ಸಮುಚ್ಚಯುಪಶದಿಂದಂತ್ಯಲತ್ವಕ್ಕೆ ರೇಫಮುಮಾಗಿ ಮಲರ್ ಅಲರ್ ಎಲರ್ ಎಂದು ವಿಕಲ್ಪದಿನಕ್ಕು ಪಿರಿದೆಂಬುದಱಿಂ ಮರಲೆಂಬುದಱ ರೇಫಕ್ಕೆ ಣತ್ವಮುಮಾಗಿ ಮಣಲೆಂದು ಮುಂಟು (ಶಮದ. ೨೯ ವೃತ್ತಿ). P ಈ ಶಬ್ದರೂಪವು ವಿರಳವಾಗಿದ್ದು, ಬೇರೆಯ ಕಾವ್ಯ ಪ್ರಯೋಗ ದೊರೆತಿಲ್ಲ. **ಮಳಲ್**: ಸಾಗರಿಕೆಯಂ ಗಂಧೋದಕಕನಕದೀರ್ಘಿಕೆಗಳೊಳ್ ರನ್ನದ ಮಳಲ್ಗಳಂ ಸುರಿಯಲುಂ . . . ಕರೆದು ಪೇಟ್ವ ಮನೋಹರಾಲಾಪಂಗಳಂ ಕೇಳುತ್ತಂ (ಕಾದಂಬ. ೦೦೦೬): ಮಳಲಂ ಪಿಱಿದೆಣ್ಣೆಯನಱಸುವ ನಿರ್ಬುದ್ಧಿಯುಮಂ ಪೋಲ್ಕುಂ (ಧರ್ಮಾಮೃ. ೬-೦೬೬); ಮಳಲೊಳ್ ತೈಲಂಗಳಂ ಹಿಂಡಲಕ್ಕು. . . ಕಱಿಯಲ್ ಬಿಕ್ಕುಗ್ರುದ ವ್ಯಾಘ್ರಮಂ (ಸೋಮೇಶ. ೯೯). **ಮಳಲು**₂: "ಪುಳಿನಲು ಮಳಲು" (ಕಬ್ಬಿಗ. ೦೨); ಹಾಲ ತೊಱೆಗೆ ಬೆಲ್ಲದ ಕೆಸಱು ಸಕ್ಕರೆಯ ಮಳಲು ತವರಾಜದ ನೊರೆ ತೆರೆಯಂತೆ ಆದ್ಯರ ವಚನ (ಬಸವ. ೨೯೦): ಮಿಗೆ ಹುರಿದ ಬಿಸಿಯ ಮಳಲಂ ತರಿಸಿ ಬಾಯ್ತುಂಬಿಸಿದಪೆಂ (ಬಸಪು. ೦೦-೦೯). [ ದ್ರಾ॥ ತಮಿ. ಮಲ. ಮಣಲ್; ಕೊಡ. ಮಣ; ಕೋತ. ಮಣ್ಳ್; ಪರ್ಜಿ. ಮನ್ ]

**ಮಣಲಿ** (ನಾ). ಒಂದು ಊರಿನ ಹೆಸರು: ನೊಕ್ಕಗೋಡು ಮಣಲಿ ಮಕ್ಕಿಯುಸ್ಕ ಮುಮುವಕ್ಕಗ್ರಾಮ (ಪ್ಯಅಂ. ೦೯೦೬, ೦೦-೦೦; 700); ಅತ್ತವಳಿಗೆಯ ಮಣಲಿ ನಾಡ ಮೊರಸು ಹಂಸೆರಡು (ಎಕ. V, ಚೇಲೂರು. ೬೦-೨೩೬; 1117). [ ? ]

**ಮಣಲು** 'ಮಣಲ್' ನೋ.

**ಮಣಲೆ ?** (ನಾ). ಒಬ್ಬಾತನ ಹೆಸರು (?): ವಿನೋದಿಮಣಲೆಯುರ ತಳಿಯೂರಾಳ್ವ ತಿಜ × (ಎಕ. III (R), ಗುಂಡ್ಲುಪೇ. ೪೩-೪: 750). 'ಶೌಚಮಣಲೆ' ಪರಾ. [ ? ]

**ಮಣಲೆವಾಡಿ**, ಮಳಲವಾಡಿ (ನಾ). ಒಂದು ಊರಿನ ಹೆಸರು: ನರಸಿಂಗೇಸ್ವರಮ್ಮಾಡಿಸಿ ಮಣಲೆವಾಡಿಯನಭ್ಯಸ್ತರಸಿದ್ಧಿಯಾಗೆ ಬಿಟ್ಟಂ (ಎಕ. XIV, ಮೈಸೂರು. ೦೨೬-೭; 900); ಶ್ರೀಮಬ್ಬೆಗಳದ ತೀರ್ಥಕ್ಕೆ ಮಣಲೆ ವಾಡಿಯನಪ್ಪರ್ತರಂ ಶಿದ್ಧಿಯಾಗೆ ಬಿಟ್ಟು (ಎಕ. III, ಮೈಸೂರು. ೦೩-೦೦; 1128). **ಮಳಲವಾಡಿ**: ತಿಪ್ಪೂರು ಕನ್ನಂಬಾಡಿ ಮಳಲವಾಡಿಯೊಪ್ಪುವ ಮನ್ನೆಯರುಗಳು ತಪ್ಪದೆ ಲಗ್ಗೆಗೇಱಿದ ಖಳರನು ಕೊಲ್ವ ದಪ್ಪವನೇನೆಂಬೆನದನು (ಕಂಪಚ. ೦೪-೩೬). [ ಮಣಲೆ ? + ಪಾಡಿ₂ ]

**ಮಣಲ್ದಾಣ** (ನಾ). ಮರಳಿರುವ ಸ್ಥಳ; ಪುಳಿನ ಸ್ಥಳ: ಲತೆಯ ಪೊದಱ ಪುದುವಿಂ ಪೆಣೆದ ಮಣಲ್ದಾಣಂಗಳುಮಂ (ಕಾದಂಬ. ೨೬೬). [ ಮಣಲ್ + ತಾಣ ]

**ಮಣಲ್ದಿಂಟೆ**, ಮಳಲ್ದಿಂಟೆ (ನಾ). ಮರಳಿನ ದಿಬ್ಬ,—ದಿಣ್ಣೆ: ವೈತರಣಿಯ ಪಿರಿಯ ದರಿಯಂ ಮೆಟ್ಟಿ ಸುಣ್ಮಣಲಂ ಮಣಲ್ದಿಂಟೆಗೆತ್ತದಱ ಪರಿತಪ್ತ ಲೋಹರಜಸ್ಸಿಕಶಿಳತಳದೊಳ್ ಮೆಯ್ಯನೀಡಾಡುವುದುಂ (ಶಾಂತಿಪು. ೭-೯೧ವ). **ಮಳಲ್ದಿಂಟೆ**: ಉರಿವರಿವ ಬಿಸಿಲ ಬೆಂಕಿಯ ಭರದೆ ಮಳಲ್ದಿಂಟೆ [ಪಾಠಾಂ. ಲ್ದೀಂಟೆ] ಕಾಯ್ದು ಸಿಡಿಯುತ್ತಿರೆ (ಜಗಪು. ೧೬-೭೪); ಉಱೆ ಮಳಲ್ದಿಂಟೆಯಂ ಶ್ರೋಣಿ ಮಿಂಚಂ ಚಪಲಾಂಗು . . . ಕಂಠಂ ಕಂಬುವಂ ತಾಂ ಪಟಿಯಲೆಸೆದಳಾ ಕಾಂತೆ (ಉತ್ತಪು. ೬-೮೪). [ ಮಣಲ್ + ತಿಂಟೆ ( < ತಿಟ್ಟು₃ ) ]

**ಮಣಲ್ದಿಣ್ಣೆ**, ಮರಳುದಿಣ್ಣೆ (ನಾ). = ಮಣಲ್ದಿಂಟೆ: ಚೆನ್ನೆಯರ್ ಪಾಱುಗುಪ್ಪೆಯನಾಡುವ ಮಣಲ್ದಿಣ್ಣೆಯ ನೋಡಿ ಹಿಗ್ಗಿದರು

(ಕೋಚಕ. ೯-೩೯). **ಮರಳುದಿಣ್ಣೆ** : ಇವೆರಡು ತುದಿಗಳ ನಡುವೆ ಮರಳುದಿಣ್ಣೆಕಲ್ಲು ಸಾಲಾಗಿವೆ (ಛೂಖವ. ೩೯೭). [ ಮಣಲ್ + ದಿಣ್ಣೆ ]

**ಮಣಲ್ಪೂರ್** (ನಾ). ಒಂದು ಊರಿನ ಹೆಸರು : ಮಣಲ್ಪೂರ ರಜಾ ವಣ್ಣಾಕ × × × ಬೆಳ್ಗಿಟಿ ಎಮ್ಮಗೆ ಕೇಟ್ಟು (ಎಕ. XII. ತಿಪಟೂ. ೩೬-೮ ; 961). [ < ಮಣಲ್ ? + ಊರ್ ) ]

**ಮಣಲ್ಪಿಟಿ** (ಕ್ರಿ). ಮರಳನ್ನು ಹಿಂಡು : ಅದೃಶ್ಯರಾಗಿ ಪೋಗಿ ಮತ್ತಮಾ ಯಂದದಿಂ ಮುಂದೆ ಬಂದುಯ್ಗುಟ್ಟಿಯುಂ ನೀರ್ಗಡೆದುಂ ಮಣಲ್ಪಿಟಿಯುತ್ತುಮಿರ್ದಂ ಮುನ್ನಿನಂತೆ ನಾಡಿದೊಡೆ (ಕೇಶಿಪ್ಪ. ೦೯-೦೦೪ ಕ). [ ಮಣಲ್ + ಪಿಟಿ ]

ಮಣವಾಳ್ಗೊಳಿ (ನಾ). ಒಂದು ಊರಿನ ಹೆಸರು : ಉಭಯುತಯೋರ್ಮ್ಮಣವಾಳ್ಗೊಳಿ ಮಣಗಿಯುರ್ನಿಧಿಪುರವತ್ ಮಣಲಿ ನೆರೆಣ್ಬೂರ್ ಪಡೆಪ್ಪುರ್ ವಾಸಿನಾವತ್ (ಪ್ರಿಆಂ. ೦೯೦೬,೦೦-೦೦ ; 700). [ ? ]

**ಮಣವು** 'ಮಣ' ನೋ.

**ಮಣಿ₁** (ಕ್ರಿ). ೧. ಬಾಗು ; ಬಗ್ಗು : ಮಹಾನುಭಾವಿಗಳ ಸಂಗ ಮಣಿದ ಅಲಗಿನ ಮೊನೆಯು ಗುಣದಂತಿರಬೇಕು (ಪೋಳಿಪಾ. ೮೬-೩೩೦) ; ಇಂತು ಮದಿರಾಪಾನಮಂ ಮಾಡಿ . . . ಕುಣಿಯುತ್ತುಂ ಮಣಿಯುತ್ತುಂ . . . ಮನಂಗೊಳಿಪ ತದ್ವನಿತಾಜನಮಧ್ಯದಲ್ಲಿ (ಉದ್ಯ.ಟಿ. ೩-೯೦ ವ) ; ಮಣಿದು ಹಿಡಿದೆತ್ತಿದನು ರಾಯನ ಹಣೆಯುನನುಪಮಕರುಣಾನಿಧಿ (ಕುಪ್ಪಾ.ಶ. ೭-೩೬). ೨. ಕುಸಿ ; ಕುಗ್ಗು : ಮಣಿದುದಮರಾಚಲಂ . . . ಗುಣಿಯೊಳಿ ಳದುದು ವಿಂಧ್ಯಪರ್ವತಂ (ಶಂಶಪಾ. ೦೦-೩೭). ೩. ವಂದಿಸು ; ನಮಸ್ಕರಿಸು : "ಮಣಿ—ನಮನೇ, ಭಯ, ರತ್ನಯೋ:" (ಕಮರ) ; ಅಣುರೇಣುಮಧ್ಯದಲಿ ಗುಣಭರಿತ ನೀನೆಂದು ಮಣಿವುತಿಪ್ಪೆನಯ್ಯ (ದೇದಾವ. ೨-೩); ನಾಗಭೂಷಣಚಿತ್ರವಲ್ಲಭೆಯಾದ ಶೈಲತನೂಜೆಯಿಂಬಾಗಿ ಕಣ್ಗೊಳಿಪಂಘ್ರಿಗಳ್ಗೆ ಸಮುತುಟಾಂ ಮಣಿದೆಂ ಸತಿ (ಉದ್ಯ.ಟಿ. ೭-೦೦೦) ; ಕರವ ನೊಸಲೊಳು ಚಾಚಿ ದಿಗುಪಾಲರಿಗೆ ಮಣಿದಳು (ಸಂಶಕ. ೨೦-೦೩೬). ೪. ವಶವಾಗು ; ಸಗ್ಗು ; ಹತೋಟಿಗೆ ಬರು ; ಅಧೀನವಾಗು : ಸಂಗರದೊಳ್ ಪೊಣರಿ ಪೆಸರ್ಗೊಂದಿ ಮಣಿಯದೆ ರಣದೊಳ್ ಹರಿಯಂತೆ ನಿಂದರಂ ಸಂಗರದೊಳ್ . . . ನೀಂ ಗೆಲಿದೈ (ಛಂದೋಂಬು. ೬-೩೬೬ ಅತಿಶಕ್ವ); ಗಿರಿ(ಸಿರ)ಕರ್ಣಿ ನೀಲಿಜಂಜಿಗೆ ಸುರದಾಳಿಯ ಬಿತ್ತು ಗರ್ಮಗಿನೆಲೆಯೆಂಬಿವ ನೊಂದಿರೆ ಕೂಡಿ ತಿಂದೊಡಾತನೆ ಗರುಡನವಂಗಟ್ಟು ಬಳ್ಕಿ ಮಣಿಗುಂ ಫಣಿಗಳ್ (ಕೋಕಕೇಶ. ೦೦-೦೬); ಒಂದೆಡೆಯೊಳುಂಡೆನಪ್ಪೊಡೆ ಸಂದೀ ಬಿಲ್ವಿದ್ಯೆಯಾಗಲರಿಯದು ತಿರಿಮುಂಡುವಲ್ಲದೆ ಮೆಯ್ಮಣಿಯದು (ರಕರಾಪ್ಪ. ೦೩-೪೩); ಮಣಿದು ಬದುಕುವನಲ್ಲ ಹಗೆಯೊಳು (ಕುಪ್ಪಾ.ಉ. ೬೦೨. ೦೦-೪೬). ೫. ಅಂಜು ; ಹೆದರು ; ಭಯಪಡು : ಅಂತಣಿ ಮಣಿಯದೆ ಸೆಣಸಿ ಪೊಣರ್ದ ಕಿಱುದು ಪೊಟ್ಟು ಕಾದಿ ನಿಂದಾಗಳ್ (ಶಂಶಪಾ. ೦೦-೮೩ ವ); ಮಣಿಯದೆ ಬಂದು ಗೊಂದಣಿಸಿದದ್ದಣದೊಡ್ಡಣಮುರ್ಬು (ಕೃಕೃ. ೩-೦೨) ; ರಣದೊಳವನಡಗೆಡದವಾದರೆ ಮಣಿಯದಿಱುವವನು (ಕುಪ್ಪಾ.ಶೀ. ೦-೩೬). ೬. ಬಾಗಿಸು ; ಬಗ್ಗಿಸು : ಉಡಲೊಂದು ವಸ್ತ್ರಮಂ ಬೇಡಿ ಪೊಟ್ಟ ಮಣಿಯದೆ ನೀಂದಿರ್ದ ನಂದಿಮಿತ್ರನಂ ನೋಡಿ (ಕುಪ್ಪಾ.ಸ್ವ. ೯-೭೭ ಪ); ಮೈಮಣಿದಾಕಿ ತಿವಿದಾಡಿದರು ಸಬಳಿಗರು (ಕುಪ್ಪಾ.ಶೀ. ೬-೦೩). ೭. ಒಪ್ಪಿಗೆ ಕೊಡು ; ಅಂಗೀಕರಿಸು ; ಸಮ್ಮತಿಸು : ಕಲಶೋದ್ಭವನ ಮತದಲಿ ಬಳಿಕ ಮಣಿದನು ಕೌರವರ ರಾಯ (ಕುಪ್ಪಾ.ಶೀ. ೦-೦೯); ಹಿರಿಯರಿದ್ದಾರೆ, ಅವರ ತೀರ್ಪಿಗೆ ಮಣಿಯೋಣ (ಸಪಾ. ೩). ೮. ಇಣುಕು; ಕಾಣಿಸಿಕೊಳ್ಳು ; ತಲೆ ತೋರಿಸು : ಅಪತ್ತಿನೊಳ್ ಮಣಿದುಂ ನೋಡದ ಬಂಧುವೇಶಕೆ (ಕೋಕೋ. ೧೬).

**ಮಣಿಮಣಿ** (ದ್ವಿರುಕ್ತಿ) : ಜೋಂಪಿಸುತೆ ತನು ಜೋಲೆ ಸಾತ್ವಿಕರಸಂ ಮಸಗೆ ಮಣಿಮಣಿದು ಕುಣಿಕುಣಿದು (ಬಸರ. ೩-೦೦೩). **ಮಣಿದಾಡು** = ವಂದಿಸು : ಕುಣಿದಾಡಲೀವೃತಂ ಮಣಿದಾಡಲೀವೃತಂ . . . ದೇವಾಂಗ ವಸ್ತ್ರಮಂ ದೇವರ್ಗೆ ಈವುತಂ (ಅಚೀ. ದೇ. ೬೩-೦೩) ; ಪಶುಪಕ್ಷಿಗಳು ಉಲಿಉಲಿದು ಮಣಿದಾಡಿ ಭಕ್ತಿಯು ಹುಮ್ಮಸ್ಸನ್ನು ಹೊರಪಡಿಸುತ್ತವೆ (ಕನ್ನಪಾ. ೦೯೩). **ಮಣಿಬಲ್ಲತನ** = ಹೊಂದಿಕೊಳ್ಳುವ ಗುಣ : ಪ್ರೌಢವಾದ ಚಂಪೂರೂಪವನ್ನು ಕಂದವೃತ್ತಗಳನ್ನು ಬಳಸಿದ ಜೈನಕವಿಗಳ ಸಂಪ್ರದಾಯವು ಹಿಂದುಳಿದು ಷಟ್ಪದಿ ಸಾಂಗತ್ಯಗಳ ಹೊಸ ಸಂಪ್ರದಾಯ ರೂಢವಾದುದು ಕನ್ನಡಕವಿಗಳ ಮಣಿಬಲ್ಲತನಕ್ಕೆ ನಿದರ್ಶನವಾಗಿದೆ (ಕಸಾಕ. ೩೭೭).

**ಮಣಿ₂** (ನಾ). ಗಂಟೆ : 'ಮಣಿಯೋಱು', 'ಮಣಿಪೊರಜೆ' ಪರಾ. [ದೇ.॥ ತಮಿ. ಮಲ. ತುಳು. ಮಣಿ; ಕೋತ. ಮಯ್ಣ್; ತೊದ. ಮೊಣಿ]

**ಮಣಿ₃** (ನಾ). ೧. ಬೆಲೆಬಾಳುವ ಹರಳು ; ರತ್ನ, ಮುತ್ತು, ವಜ್ರ ಮುಂತಾದುವು : ಮಣಿಕನಕಂ ವಸ್ತುವಿಭೂಷಣಂಗಳಂ ಕೊಟ್ಟು ಪೆಂಡಿರೊಲ್ವರೆ ಗಂಡರ್ ಗುಣಮನೆ ಮೆಚ್ಚುವುದು (ಗದಾಯು. ೨-೩); ವರಮಣಿಗಳಿಂದೆಸೆವ ಮೌಳಿಯು . . . ಗಣಪತಿ ಮಾಡೆಮಗೆ ನಿರ್ವಿಘ್ನದಾಯಕವ (ಕುಪ್ಪಾ.ಆ. ೦-೩). 'ನವಮಣಿ' ಪರಾ. ೨. ಹಾವಿನ ಹೆಡೆಯಲ್ಲಿರುವುದೆಂದು ಭಾವಿಸಲಾದ ಅಮೂಲ್ಯವಾದ ರತ್ನ ; ನಾಗಮಣಿ : ಪೆರ್ಬೆಡೆಯಿಂ ಮಣಿ ಸೂಸೆ . . . ಬೇಸಱಿಂ ಕಿಱುಕಿದನಾನಲುಮ್ಮಳಿಸಿ ಶೇಷನಶೇಷಮಹೀವಿಭಾಗಮಂ (ಶಂಶಪಾ. ೯-೯೯). ೩. (ಆಭರಣಗಳಲ್ಲಿ ಉಪಯೋಗಿಸುವ) ಮರ, ಗಾಜು, ಲೋಹ ಮೊದಲಾದುವುಗಳಿಂದ ತಯಾರಿಸಿದ, ಪೋಣಿಸಲು ಅನುಕೂಲವಾದ ದುಂಡನೆಯ ವಸ್ತು : ಎನಿತೊಳ್ಪಿತಾದೊಡಂ ಕಾಜಿನ ಮಣಿಗಳ್ ಪೊನ್ನ ತೊಡವನಿಟಿಕೆಯ್ಗುಮೆ (ರಕರಾಪ್ಪ. ೮-೪೯) ; ತುಱುಗಾಹಿ ಕಾಜಿನ ಮಣಿಯ ಬಲ್ಲನು ಗಡ (ಕುಪ್ಪಾ.ಕ. ೯-೦೯); ಅದು ಬಡವರೂ ಧರಿಸುವ ಬಳಿಯ ಮಣಿಗಳ ಸರವೆ ? (ಕಾಂಕಲಾ. ೭). ೪. ಜಪಮಾಲೆಯಲ್ಲಿ ಉಪಯೋಗಿಸುವ ತಾವರೆ ಬೀಜ, ರುದ್ರಾಕ್ಷಿ, ತುಲಸಿಯ ಮಣಿ ಇತ್ಯಾದಿ : ಮಣಿಯ ಕಟ್ಟಿ ಏವೆನಯ್ಯಾ ಮನ ಮುಟ್ಟದನ್ನಕ್ಕ (ಬಸವ. ೯೭೩); ಮಣಿಯನೆಣಿಸಿ ಕಾಲವ ಕಳೆಯಬೇಡ (ಅವಕಂ. ೦೯೦-೬೩೩). 'ಜಪಮಣಿ' ಪರಾ. ೫. ಬಯಸಿದುದನ್ನು ಕೊಡುವುದೆಂದು ಭಾವಿಸಲಾದ ಸ್ವರ್ಗಲೋಕದ ರತ್ನ ; ಚಿಂತಾಮಣಿ : ಮಣಿ ಚಿಂತಿಸಲ್ಕೆ ಕೈಗೂಡುವುದಲ್ಲದಿರ್ದ್ದಡದು ತಾಂ ಕುಡದರ್ತ್ತಿಜನಕ್ಕೆ ರಾಗದಿಂ (ಎಕ. VII, ಶಿಕಾಂ. ೦೬-೦೩; 1158). ೬. ಕಣ್ಣಿನ ಗುಡ್ಡೆ ; ಕಣ್ಣಿನ ನಡುವಿನ ಕರಿಯ ಗೋಲ : 'ಕಣ್ಮಣಿ' ಪರಾ. ೭. (ಬೆನ್ನು)ಮೂಳೆಯಲ್ಲಿನ ಕೊಂಡಿ ; ಪೃಷ್ಠಾಸ್ಥಿಯ ಕೊಂಡಿ : ಬೆನ್ನು ಹುರಿಯ ಈ ಮಣಿಯನ್ನು ಸ್ವಲ್ಪ ಅಡಚಿ ಹಿಡಿ (ಮೂಕರುದಾ. ೯೩). ೮. ಮೇಕೆಯ ಕೊರಳ ಮೊಲೆ. ೯. ಪುರುಷಜನನಾಂಗದ ತುದಿ. ೧೦. ಹೂಸು ; ಅಪಾನವಾಯು : "ಭಾಗಗಳಸ್ತನಾವಯವಭೇದ ಸುರತ್ನಮಪಾನವಾಯು ವೈರಾಗವಿನವ್ರಮಿಂತು ಮಣಿಯುಕ್ಕು" (ಪಾವಾರ. ೩೬). ೧೧. ದೊಡ್ಡ ಮಣ್ಣಿನ ಪಾತ್ರೆ ; ಗುಡಾಣ. ೧೨. ಹಸ್ತದ ಮೂಲಭಾಗ ; ಮಣಿಬಂಧ ; ಮಣಿಕಟ್ಟು. ೧೩. ಶ್ರೇಷ್ಠವಾದುದು; ಉತ್ಕೃಷ್ಟವಾದುದು. ೧೪. ಶ್ರೇಷ್ಠನಾದವನು : ಮುನಿಮೌಳಿಗಳ ಮಣಿ ಪರಿತೋಷದಲಿ ತಿರುಗಿದ ತಪೋವನಕೆ (ಸಂಕಶ. ೦೯-೨೬). 'ನಾಯಕಮಣಿ' ಪರಾ. ೧೫. (ಅಲಂ) ಅಚ್ಚುಮೆಚ್ಚಾದುದು ; ಪ್ರಿಯವಾದುದು : ನೋಳ್ಪರ ಕಣ್ಣ ಮಣಿಯುಂ . . . ಚಿಂತಿಸುವರ ಚಿಂತಾರತ್ನವೆನಿಪ ಸಂಗಮೇಶ್ವರನ[ಂ] ಕಪ್ಪಡಿಯ ಸಂಗಮ

ದೊಳೊಪ್ಪದಿಂದರ್ಚಿಸುತ್ತಮಿಪ್ಪ ಸಮಯದೊಳು (ಪಂಚರ. ೪-೨). ೧೬. [ಗಣಿತ] ಒಂಬತ್ತು ಎಂಬ ಸಂಖ್ಯೆಯ ಸಂಕೇತ : "ನಿಧಿ ಮಣಿ ಗ್ರಹ ರಂಧ್ರಮಿರಲು ಪೊಂಭತ್ತು" (ಮಂಗರಾ. ೧೦೪-೮).

**ಮಣಿ ಕಟ್ಟಿಸು** = (ಕೆಲವು ವರ್ಗಗಳಲ್ಲಿ, ಹೆಣ್ಣುಮಕ್ಕಳನ್ನು ಬಸವಿಯರಾಗಿ ಬಿಡುವ ಸಂಕೇತವಾಗಿ) ಕೊರಳಿಗೆ ಮಣಿಯ ಸರವನ್ನು ಕಟ್ಟಿಸು : ಅಂದು ಹರಿಜನರಲ್ಲಿ . . . ಕೆಲವು ಸಂದರ್ಭಗಳಲ್ಲಿ, ಹೆಣ್ಣುಮಕ್ಕಳು ಚೆಲುವೆಯರಾಗಿದ್ದರೆ, ಅವರಿಗೆ ಮಣಿ ಕಟ್ಟಿಸಿ ಅವರನ್ನು ಬಸವಿಯರನ್ನಾಗಿ ಮಾಡಬೇಕೆಂದು ಮೇಲ್ಜಾತಿಯ ಮುಂದಾಳುಗಳು ಆ ಹೆಣ್ಣುಮಕ್ಕಳ ತಂದೆ ತಾಯಿಗಳಿಗೆ ಪ್ರೋತ್ಸಾಹ ಮಾಡುತ್ತಿದ್ದರು (ಹಂಜಹಂ. ೧೧). **ಮಣಿಕಟ್ಟು₁** = (ಕೆಲವು ವರ್ಗಗಳಲ್ಲಿ, ಹೆಣ್ಣುಮಕ್ಕಳನ್ನು ಬಸವಿಯರಾಗಿ ಬಿಡುವ ಸಂಕೇತವಾಗಿ) ಮಣಿಯ ಸರವನ್ನು ಕಟ್ಟು : ಭರಮಿ ಸ್ವಲ್ಪ ಧೈರ್ಯವನ್ನು ತಾಳಿ ಮಣಿಕಟ್ಟುವ ಪದ್ಧತಿ ಅಳಿಸಿ ಹೋಗುವ ಕಾಲದಲ್ಲಿ ಮಗಳಿಗೆ ಮಣಿಕಟ್ಟುವುದು ತರವಲ್ಲವೆಂದು ವಾದಿಸಿದಳು (ಹಂಜಹಂ. ೧೩೬). [ಸಂ.]

**ಮಣಿಕ₁** 'ಮಣಿಕ₁' ನೋ.

**ಮಣಿಕ₂** (ನಾ). ೧. ನೀರಿನ ಹರವಿ ; ಗುಡಾಣ : "ಮಣಿಕಃ, ಅಳಿಂಜರಃ– ಈ ೨ ಕೇಲು" (ಹಲಾಯು. ೩೩-೧೬೨). ೨. ಮೇಕೆಯ ಕೊರಳ ಮೊಲೆ. ೩. ಪುರುಷ ಜನನಾಂಗದ ತುದಿ. ೪. ಯೋನಿಯ ತುದಿ ; ಭಗಾಂಕುರ. ೫. ರತ್ನ. [ಸಂ.]

**ಮಣಿಕಂಕಣ** (ನಾ). ರತ್ನಖಚಿತವಾದ ಬಳೆ,—ಕಡಗ : ಕಂಕಣಕ್ಕೆ–ಗುಬ್ಬಿಗಂಕಣ, ಮಣಿಕಂಕಣ, ಹಸ್ತಕಂಕಣ, ಹಿಂಡುಗಂಕಣ (ಕಮುದ. ೨೯೬ ಕೃಹೋ). [ಸಂ.]

**ಮಣಿಕಟಕ** (ನಾ). ೧. = ಮಣಿಕಂಕಣ. ೨. ರತ್ನಖಚಿತವಾದ ಬೆಟ್ಟದ ತಪ್ಪಲು. ೧, ೨ : ಮಣಿಮುಕುಟಂ ಶಿಖರಂ ಲಂಬಣೆಗೆಯ ಪೊಸಮುತ್ತು ನಿರ್ಝರಂ ಮಣಿಕಟಕಂ ಮಣಿಕಟಕಮಾಗೆ ತದ್ಗಿರಿಗೆಣೆಯಾದಂ ತನ್ನ ಪೆಸರೊಳಂ ವಿಜಯಾರ್ಧಂ (ಆದಿಪು. ೦೩-೦೩). [ಸಂ.]

**ಮಣಿಕಟ್ಟು₁** 'ಮಣ್ಣಿ₃' ಪರಾ.

**ಮಣಿಕಟ್ಟು₂** 'ಮಣಿಗಟ್ಟು' ನೋ.

**ಮಣಿಕಳಶ** (ನಾ). ಬೆಲೆಬಾಳುವ ಹರಳುಗಳನ್ನು ಹೊಂದಿರುವ ಕಲಶ ; ರತ್ನಖಚಿತವಾದ ಕಲಶ : ಮಣಿಕುಟ್ಟಿಮದಿಂ ಮಣಿತೋರಣದಿಂ ಮಣಿಕಳಶದಿಂ ತಮಸ್ತೋಮನಿವಾರಣದೆಡೆಗಳಿಂ ಗೃಹಗ್ರಾಮಣಿಯನಪೇಕ್ಷಿಸವು ನೃಪಕುಮಾರಗೃಹಂಗಳ್ (ಮಲ್ಲಿಪು. ೨-೬೨). [ಸಂ. ಮಣಿಕಲಶ]

**ಮಣಿಕಾರ** (ನಾ). ಮುತ್ತು, ರತ್ನ, ವಜ್ರಗಳ ಆಭರಣಗಳನ್ನು ಮಾಡಿ ವ್ಯಾಪಾರ ಮಾಡುವವನು ; ಅಕ್ಕಸಾಲೆ : "ವೈಕಟಿಕಂ ಮಣಿಕಾರಂ" (ಮಾನುಕೋ. ೬೩-೬೮). [ಸಂ.]

**ಮಣಿಕಾಲ್** 'ಮೊಟಿಕಾಲ್' ನೋ.

**ಮಣಿಕಾಲು** 'ಮೊಟಿಕಾಲ್' ನೋ.

**ಮಣಿಕುಂಡಲ,** ಮಣಿಕುಂಡಳ (ನಾ). ಬೆಲೆಬಾಳುವ ಹರಳುಗಳಿಂದ ಮಾಡಿದ ಕಿವಿಯ ಆಭರಣ ; ರತ್ನಕುಂಡಲ : ಮಣಿಕುಂಡಲಮುಂ ಕವಚಂ ಮಣಿಯದ ಚಾರಿತ್ರಮುಗ್ರತೇಜಮುಮಿಾಯೊಳ್ಗುಣಮುಂ ಕಲಿತನ ಮುನ್ನಮೇಂ ಪ್ರಣತಾರೀಸೂತಸುತನೊಳೊಡವುಟ್ಟುಗುಮೇ (ಪಂಪಭಾ. ೦೨-೯೬) ; ಮಣಿಕುಂಡಲಕಿರಣಂಗಳ್ ಸೆಣಸುವಿನಂ ನಖಮಯೂಖದೊಳ್ ದಶರಥಧಾರಿಣೀಪತಿಯ ಪದಪಯೋಜಪ್ರಣಮನಮನೊದರ್ಚಿದಂ ವಿದುಚ್ಚರತಿಲಕಂ (ಪಂಪರಾ. ೬-೪೦). **ಮಣಿಕುಂಡಳ** : ಕಪೋಲರಂಗತಟದೊಳ್ ಕುಣಿಯಲ್ ಮಣಿಕುಂಡಳದ್ವಯಂ (ಪುಷ್ಪ. ೩-೬೪). [ಸಂ.]

**ಮಣಿಕುಂಡಳ** 'ಮಣಿಕುಂಡಲ' ನೋ.

**ಮಣಿಕುಟ್ಟಿಮ** (ನಾ). ರತ್ನಖಚಿತವಾದ ನೆಲ : ತನ್ನಗಲ್ಕೆಗೆ ಬಿನ್ನನಿರ್ಪಂತೆ ಬಿನ್ನನಾಗಿರ್ಪ ವಿಮಾನದ ಮಣಿಕುಟ್ಟಿಮಭೂಮಿಗಳುಮಂ . . . ಭೋಂಕನೆ ಕಂಡು (ಆದಿಪು. ೩-೩ ವ) ; ಅಜಿತನಾಥಂ ಮಣಿಕುಟ್ಟಿಮಭೂಮಿಯೊಳ್ ಮನಂಗೊಳೆ ನಡೆದಂ (ಅಜಪು. ೫-೬೧) ; ಮಣಿಕುಟ್ಟಿಮಂಗಳಿಂ ಬಾಳೆಯ ರೊಟ್ಟಿಗಳಿಂ ಸಕಲವೈಭವದಿಂದೆಸೆದಿರ್ಪುದಾ ಪುರಂ (ಜಗಂ. ೨-೩೪). [ಸಂ.]

**ಮಣಿಕುರುಜು** 'ಮಣಿಗುರುಜು' ನೋ.

**ಮಣಿಕೂಟ** (ನಾ). [ಜೈನ] ಮಾನುಷೋತ್ತರದ್ವೀಪದ ಒಂದು ಪರ್ವತದ ಹೆಸರು : ಖಚರದ್ವಯಂ ಮನೋಹರಮಣಿಕೂಟದೊಳ್ . . . ಅಂಗಜಕೇಳಿಲೀಲೆಯಿಂದಿರೆ (ಮಲ್ಲಿಪು. ೧೧-೧೧೪). [ಸಂ.]

**ಮಣಿಕೆ** (ನಾ). ನೀರಿನ ಹರವಿ,—ಗುಡಾಣ : "ಅಳಿಂಜರಂ ಮಣಿಕೆ [ಕಾಕಾ. ಜೆ]ಬೆಂಸೆ ಕಲ್ಲೆ ನಾಮಂ" (ಮಂಗರಾ. ೬೨-೨೩). [ಸಂ. ಮಣಿಕ]

**ಮಣಿಖಚಿತ** (ಗು). ೧. ಬೆಲೆಬಾಳುವ ಹರಳುಗಳಿಂದ ಕೂಡಿದ : ರತ್ನಖಚಿತವಾದ : ಅರಸ ಬಂದನು ಮಣಿಖಚಿತಕೇಸರಿಯ ಪೀಠವ ನಡರಿದನು (ಕುಮ್ಯಾಭಿ. ೧೧-೬). (ನಾ). ೨. ರತ್ನಖಚಿತವಾದುದು : ಕರಮಿಂಬಾಗಿರೆ ಚಾಮರಯುಗ್ಮಮದಾಗಳೆ ನಿಲೆ ದಿವ್ಯವಿಷ್ಟರಂ ಮಣಿಖಚಿತಂ (ಆದಿಪು. ೦೪-೦೪೬). [ಸಂ.]

**ಮಣಿಗ** (ನಾ). ಒಂದು ಬಗೆಯ ಪಕ್ಷಿ : ಮಣಿಗನು ಗರುಡ . . . ಪೆರುವರ್ಣವರೊಳೊಪ್ಪಿದವು (ಶಾಸ್ತ್ರಾ. ೫-೨೩). 'ರತ್ನಖಗ' ಪರಾ. [ ? ]

**ಮಣಿಗಂಟು** (ನಾ). ೧. ಕೈ ಹಾಗೂ ಮೊಳಕೈ ಕೂಡುವ ಜಾಗ ; ಮಣಿಯಂತಿರುವ ಸಣ್ಣ ಸಣ್ಣ ಮೂಳೆಗಳು ಕೂಡುವ ಜಾಗ : ಪ್ಯಾಯನ್ನು ಅವಳ ಮಣಿಗಂಟಿಗೆ ಸವರಿ ಮುಖವೆತ್ತಿ ನೋಡಿತು (ಬಿನ್ನಮಾ. ೬೪) ; ಆ ಕೈಕಾಲುಗಳಿಗೂ–ನಡುವೆ ಮಣಿಗಂಟು, ಮೊಣಗಂಟುಗಳ ಸಂದಿದೆ (ಮುಕ್ತಾ. ೦೫೦). ೨. ಬಿಡಿಸುವುದಕ್ಕಾಗದಂತಹ ಬಿಗಿಯಾದ ದಾರದ ಗಂಟು : ಪ್ರಯಾಣದ ಅನುಕೂಲಕ್ಕೆಂದು ಹಾಸಿಗೆಗೆ ಮಣಿಗಂಟು ಹಾಕಿರುವುದು ಈಗ ಬಿಚ್ಚುವುದಕ್ಕೆ ಆಗುತ್ತಿಲ್ಲ (ರೂಢಿ). [ಮಣ್ಣಿ₃ + ಗಂಟು./ತುಳು. ಮಣಿಗಂಟ್]

**ಮಣಿಗಂಭ** (ನಾ). ಬೆಲೆ ಬಾಳುವ ಹರಳುಗಳಿಂದ ಕೂಡಿದ ಕಂಬ ; ರತ್ನಖಚಿತವಾದ ಸ್ತಂಭ : ಶಂಬರವೈರಿಯೆಂದೆಂಬ ಕುಂಭಿಯ ಕಟ್ಟುವಿಂಬಿನ ಮಣಿಗಂಭದಂತೆ ಅಂಬುಜನೇತ್ರೆಯ ಪೊಂಬಾಳೆದೊಡೆಗಳು ತುಂಬಿದುವು ಕಣ್ಗೆ ಕೌತುಕವ (ಕಂಪ. ೯-೨೦). [ಮಣ್ಣಿ₃ + ಕಂಭ]

**ಮಣಿಗಟ್ಟು,** ಮಣಿಕಟ್ಟು₂ (ನಾ). ೧. ಬೆಲೆಬಾಳುವ ಹರಳುಗಳಿಂದ ಮಾಡಿದ ಕಟ್ಟು ; ರತ್ನಖಚಿತವಾದ ಕಟ್ಟು : ಕಡುಗಲಿ ಕಾಮತನ್ನುಭಯಹಸ್ತದ ಗದೆಗಡರ್ಚಿದ ಮಣಿಗಟ್ಟಿನಂತೆ ಬಿಡಯವಿಲ್ಲದೆ ಕುಮರಿಯ ತೋಳ ಭಾಪುರಿ ಕಡಗ ಕಂಕಣವನಿಕ್ಕಿದರು (ಪೋಚಕ. ೨೩-೪೦) ; ಭರದಿ ಪೊಮ್ಮೂಡಿಗೆಯಪೊಂಗರಿಯ ವಿಸಿಖಮಂ ವಿರೂಪ ಮಣಿಗಟ್ಟಿನಿಂದೇಮೊರೆವ ಧನುವಿಗೆ ತೊಡಿಸಿ (ಕಪಪೂ.೦೨-೬೬). **ಮಣಿಕಟ್ಟು₂** : ೨. ಮುಂಗೈಯ ಹರಡು ; ಪಾಣಿಮೂಲ ; ಪ್ರಕೋಷ್ಠ : "ಪಾಣಿಬಂಧ, ಪಾಳಿ[ಣಿ] ಮೂಲ – ಈ ೨ ಮಣಿಕಟ್ಟು" (ಬಾಕಂ. ೦೨೦) ; ಒಸೆದು ಮಣಿಕಟ್ಟಂ ಎಡಗಯ್ಯಿಂ ಪಿಡಿದು (ಬಂಕ. ದೀ. ೦೯೨-೪) ; ಮಣಿಕಟ್ಟಿನಲ್ಲಿ ಯವರೇಖೆಯಿದ್ದರೆ ಯಜ್ಞಾದಿ ಫಲಪ್ರದವಾಗುವುದು (ಸಾಂಗಂ. ೬೩೩-೯). ೩. = ಮಣಿಚೌಕಟ್ಟು : ಚಿಕ್ಕ ಮಕ್ಕಳು ಮಣಿಕಟ್ಟಿನ ಸಹಾಯದಿಂದ ಲೆಕ್ಕವನ್ನು ಸುಲಭವಾಗಿ ಕಲಿಯಬಹುದು (ರೂಢಿ). [ಮಣ್ಣಿ₃+ಕಟ್ಟು₂./ತಮಿ. ಮಣಿಕ್ಕಟ್ಟು; ತೆಲು. ಮಣಿಕಟ್ಟು, ಮನಿಕಟ್ಟು]

**ಮಣಿಗಡಗ** (ನಾ). =ಮಣಿಕಂಕಣ : ನೆಲಹಿನ ಮೊಸರಂತೆ . . . ಮಣಿಗಡಗದ ಕೀಲಿನಂತೆ (ರಾಜಶೇಖ. ೬-೦೪೬ ಅದಿಪ್ಯ). [ಮಣ್ಣಿ₃ + ಕಡಗ₁]

**ಮಣಿಗಣ** (ನಾ). ಬೆಲೆಬಾಳುವ ಹರಳುಗಳ ಗುಂಪು : ರತ್ನಸಮೂಹ : ಅನೇಕನೃಪತಿಮಕುಟತಟಘಟಿತಮಣಿಗಣಕಿರಣಜಳಧಾರಾಧೌತಾವದಾತಪೂತ ಚರಣಾರವಿನ್ದರು[ಂ] (ಶಾಇ. XX. ೪೬-೨೬ ; 1072) : ವಸುಂಧರೆ ಮತ್ತಂ ರತ್ನಗರ್ಭೆಯೆಂಬೀ ಪೆಸರ್ಗಳ್ ದೊರೆವೆತ್ತುವೆಂದೊಡೇನಚ್ಚರಿಯಾದುದೊ ಧನದಜನಿತ ಮಣಿಗಣವರ್ಷಂ (ಚಂದ್ರಪು. ೦೦-೧೨೦). [ಸಂ.]

**ಮಣಿಗಣ್ಣ** (ನಾ). ಒಂದು ಬಗೆಯ ಮೀನು : ಹೆಗ್ಗಟಿ ಗಣೆ ಮಣಿಗಣ್ಣ ತೂತು ಕೆಂತಲು ಸಿಸಿಲು ಬೊಂಪೆ ಸವಿವಾಯ ಗೊದಳೆ . . . ಆನೆಮೊಗ ನೆಂಬ ಪರಿಪರಿಯ ಮೀನ್ಗಳಂ ಗುದಿಗೆಯ್ದರು (ಪಶಾ. ೫-೪೫). [ ? ]

**ಮಣಿಗನ್ನಡಿ** (ನಾ). ರತ್ನಖಚಿತವಾದ ಕನ್ನಡಿ : ಎನ್ನೋರಗೆಯ ಚನ್ನೆಯರೊಲವಿಂ ಮಣಿಗನ್ನಡಿಯಂತಪ್ಪ ಸುತರ ಮನ್ನಿಸಿ ಮೊಲೆಯೂಡುವರ್ಸಖಿ ಸಿರಿಗವರೇಂ ನೋಂಪಿಯನೆಸಗಿದರೊ (ಶ್ರೀಪಾಂ. ೨-೩೪) ; ಹಣ್ಣು ಕಾಯ್ತೋರಿಸುವೆ ಮಣಿಗನ್ನಡಿಯ ನೆಳಲ ಮಾತನಾಡಿಸುವೆ (ಕಂಕ. ೫೬-೦೦).

[ಮಣಿ$_3$ + ಕನ್ನಡಿ$_1$]

**ಮಣಿಗರ್ಭೆ** (ನಾ). ಭೂಮಿ ; ವಸುಂಧರೆ ; ರತ್ನಗರ್ಭೆ : ತನ್ನಂ ಪೊತ್ತ ಮನ್ನಣೆಯಿಂ ಮುನ್ನಂ ಪೊರೆಯೇಱಿಸಿ ಪೊರೆದ ಮಣಿಗರ್ಭೆಗಣಿಯರಂ ಬಾಗಿ ಬಳ್ಕಿ ಮಣಿವ ಮಾಳ್ಕೆಯಿಂ (ಕಬಕಂ. ೨-೪೨ ವ). [ಸಂ. ಮಣಿಗರ್ಭಾ]

**ಮಣಿಗಲ್ಲು** (ನಾ). ಬೆಲೆಬಾಳುವ ಹರಳು ; ರತ್ನ : ಸುತ್ತಣ ಮಣಿಗಲ್ಲ ಹೊಂಗೋಟೆ ನೋಡಲು ತತ್ತಳಗೆಯ್ದುದಕ್ಷಿಗಳ (ಪೋಹಕ. ೩-೬).

[ಮಣಿ$_3$ + ಕಲ್ಲು (< ಕಲ್$_3$)]

**ಮಣಿಗಳಸ** (ನಾ). = ಮಣಿಕಳಶ : ಪೂರ್ವಾದ್ರಿಯೆಂಬ ದೇವಗೃಹದ ಮೇಲಿಟ್ಟ ಮಣಿಗಳಸ ಪೊಂಗಳಸ ರಜತಕಳಶಂಗಳೆನೆ ಚೆಲ್ವಾದುದು (ಚಬಪು. ೯-೦೮). [<ಸಂ. ಮಣಿಕಲಶ]

**ಮಣಿಗಾರ** 'ಮಣಿಗಾಱ' ನೋ.

**ಮಣಿಗಾರ್ತಿ** (ನಾ). ರತ್ನಗಳನ್ನು ಮಾರುವವಳು : ಮಣಿಗಾರ್ತಿ, ಆಳುಗಾರ್ತಿ. ಸುಣ್ಣಗಾರ್ತಿ (ಶಾಶಾಶೂ. ೦೯೪ ಉದಾ) ; ವರಮಲ್ಲಿಗೆ ಮೊಲ್ಲೆಗಳೊಳ್ ಬೆರಸಿದ ಮಧುಕರಕದಂಬದಿಂದಂ ನೀಲೋತ್ಪಲರಮಂ ಮೌಕ್ತಿಕಮಂ ಪೋಲ್ತಿರೆ ಮೆಱೆದಳ್ ಮಾಲೆಗಾರ್ತಿ ಮಣಿಗಾರ್ತಿಯ ಪೋಲ್ (ಗಂಕ. ೨-೮೬). [ಮಣಿಗಾಱ + – ತಿ$_1$ (< – ಇತ್ತಿ)]

**ಮಣಿಗಾಱ, ಮಣಿಗಾರ** (ನಾ). ಬೆಲೆ ಬಾಳುವ ಹರಳುಗಳನ್ನು ಮಾರುವವನು; ರತ್ನಪಡಿವ್ಯಾಪಾರಿ : ಚಲದಂಕರಾಮನುಮಣಿಗಾಱ ನಾಗಿಶೆಟ್ಟಿಯುಮನನ್ತ ಸಮಸ್ತನಗರ ಮುಮ್ಮುರಿದಣ್ಡಮುಂ (ಎಕ. V. ೩೪೨-೦೫; 1093) ; ಅಣಿಯರಮೆಸೆದೊಪ್ಪಿರ್ಪುವು ಮಣಿಗಾಱರ ಕಂಚಗಾಱರೊಱೆಗಾಱರ ಶಿಂತಿಣಿ (ಶಾವ್ಯಪ. ೩೨೮) ; ಮಣಿಯಂ ಮಾಡುವಂ ಮಣಿಗಾಱಂ (ಶಬ್ದಸ. ೨೪೮ ಕೃಸೂ). **ಮಣಿಗಾರ** : "ಮಣಿಗಾರ_ಮಣಿಕಾರ=ರತ್ನವ್ಯಾಪಾರಿ" (ತದ್ಭಕೋ. ೩೩) ; ಬಳೆಗಾರ ಮಣಿಗಾರ ಬಿಚ್ಚೋಲೆಯನ್ನು ಮಾರುವರು (ಪಪಮೋ. ೨-೪೬). [ಮಣಿ$_3$ + – ಕಾಱ]

**ಮಣಿಗಾಱಕೇರಿ** (ನಾ). ರತ್ನಪಡಿವ್ಯಾಪಾರಿಗಳ ಬೀದಿ : ಮಣಿಗಾಱಕೇರಿಯ ೩ ಸೆಟ್ಟಿಕಾಱರೂ ಸಮಸ್ತ ಹಲರೂ . . . ಇ ಧರ್ಮ್ಮವ ನಡಸುವರು (ಶಾಇ. VII. ೩೫೨-೦೮; ?). [ಮಣಿಗಾಱ + ಕೇರಿ]

**ಮಣಿಗುಣ** (ನಾ). ೧. ರತ್ನದ ಗುಣ, – ಲಕ್ಷಣ. ೨. [ಛಂದ] ಅಕ್ಷರ ಛಂದಸ್ಸಿನಲ್ಲಿ ಪ್ರಸಿದ್ಧವಾಗಿರುವ ಇಪ್ಪತ್ತಾರು ಬಗೆಯ ಛಂದಸ್ಸುಗಳಲ್ಲಿ ಹದಿನೈದನೆಯ ಅತಿಶಕ್ವರಿಯೆಂಬ ಛಂದಸ್ಸಿನ ಒಂದು ವೃತ್ತ: ಮನುಲಘುವಿರೆ ಗುರು ಮಣಿಗ[ಗು]ಣಮೆನಿಕುಂ (ಛಂಬು. ೮೪) ; ಇಂಥ ಸಂಸ್ಕೃತವೃತ್ತಗಳಲ್ಲಿ ಕುಮುದ, ರಥೋದ್ಧತ, ಸ್ವಾಗತ, ಮತ್ತಕೋಕಿಲ, ವನಮಯೂರ, ಮಣಿಗ[ಗು]ಣ, ಮಲ್ಲಿಕಾಮಾಲೆ, ತರಳ ಮೊದಲಾದುವುಗಳನ್ನು ಹೆಸರಿಸಬಹುದು (ಛಂದೋಬಿ. ೫೦). [ಸಂ.]

**ಮಣಿಗುರುಜು, ಮಣಿಕುರುಜು** (ನಾ). ರತ್ನಖಚಿತವಾದ ಮಂಟಪ ; ರತ್ನಮಂಟಪ : ಬಾಗಿಲ್ವಾಡದ ಬಹುಮಣಿಗುರುಜಿನ ದೇಗುಲಗಳ ಪಲವುಂ ಶಿಖರಂಗಳ . . . ಮೇಗೆ ಮಿಸುಪ ಮಿಗಗಣ್ಣ ಬಲೆಯುರನುರಾಗದಿ ನಿನಿವಿರಿದುಂ ನೋಡಿದರ್ . . . ವಸುಧಾವಲ್ಲಭನ (ಜಯುಕಾ. ೦೦-೫೦) ; ಕರುಮಾಡ ಮೇಗಣ ಮಣಿಗುರುಜೇಱ ಪರಿವ ಮೇಲಣ ಮುಗಿಲ್ಗೊನೆಯ ಪೊರೆ ಮುತ್ತಾಯ್ದು ಕೇವಣಿಸಿ ಕೊರಳ್ಗಿಟ್ಟು ಪುರವನಿತೆಯರಾಡುತಿಹರು (ಶ್ರೀಪಾಲ. ೦-೮೩). **ಮಣಿಕುರುಜು** : ಗುಡಿ ಕಲಶ ಕನ್ನಡಿಯು ಹೊಂದಳಿಗೆದೋರಣದ ಸಡಗರದ ಪಂತಿಮಣಿಕುರುಜುಗಳ್ ಬಳವಿಡಿದು (ಪರಶು. ೬-೨೦೦). [ಮಣಿ$_3$ + ಕುರುಜು]

**ಮಣಿಗೆ$_1$** (ನಾ). ಬಾಗುವಿಕೆ ; ಬಗ್ಗುವಿಕೆ : ಕುತುಕಿಗೆತ್ತಣ ಬಿಡುವು, . . . ಬಾಳ್ಬಳಿಯ ದಾರಿಗನಿಗೆ ಪಯಣದಾಯಾಸವನು ಮಣಿಗೆಯೊಳು ತೀರಿಸುತ ಮರಳಿ ಕಂತೆಯ ಹೆಗಲಿಗೇರಿಸಿ ನಿಲುವಗೆ ? (ಮಬದೀ. ೨೨-೩). [ಮಣಿ$_1$ + – ಗೆ]

**ಮಣಿಗೆ$_2$** (ನಾ). ಮೂಳೆಯ ಗಂಟು ; ಪೃಷ್ಠಾಸ್ಥಿಯ ಗಂಟು : ಎದೆಯಿಂದ ಎರಡು ರೆಟ್ಟೆಗಳಿಂದ ಕೊರಳ ನಡುವಣ ಮಣಿಗೆಗಳಿಂದ ಶೋಭೆಯು ಚೆನ್ನಾಗಿ ಕಾಣಿಸಲು (ಅಶ್ವಶಾ. ೬೮-೦೦). [ಮಣಿ$_3$ + – ಗೆ]

**ಮಣಿಘಟ್ಟ** (ನಾ). ಒಂದು ಊರಿನ ಹೆಸರು : ಮಣಿಘಟ್ಟಯ ಮಾಣಿಕಾಮೆಣ್ಣಮುದುಳ ಗಾವುಣ್ಡರ ಮಗಂ ಕಸವಯ್ಯ ಆಳ್ದೋನ ಬೆಸದೊಳ್ . . . ಕಾದಿ (ಎಕ. X. ಮುಳಬಾ. ೨೨೯-೪; 909). [ ? ]

**ಮಣಿಚೂಳಿಕೆ** (ನಾ). ರತ್ನಖಚಿತವಾದ ತುದಿ, – ಅಗ್ರಭಾಗ : ಬೆಲೆ ಬಾಳುವ ಹರಳುಗಳಿಂದ ಕೂಡಿದ ಶಿಖರ : ಈಶಾನೇಂದ್ರಂ . . . ಪದ್ಮರಾಗ(ಪ) ಮಣಿಚೂಳಿಕೆಯಿಂದಂ ನಯನಮನೋಹರಮಪ್ಪ ಚಂದ್ರಕಾಂತಧವಳಾತಪತ್ರಮಂ ಪಿಡಿಯೆಯುಂ (ಶಾಂತಿಪು. ೦೦-೦೩ ವ).

[ಸಂ. ಮಣಿಚೂಲಿಕಾ]

**ಮಣಿಚೌಕಟ್ಟು** (ನಾ). "ಮಕ್ಕಳಿಗೆ ಲೆಕ್ಕ ಕಲಿಸುವುದಕ್ಕಾಗಿ ಬಣ್ಣದ ಗುಂಡುಗಳನ್ನು ತಂತಿಯ ಮೇಲೆ ಓಡಾಡುವಂತೆ ಅಳವಡಿಸಿರುವ ಚೌಕಟ್ಟು : ಮಣಿಚೌಕಟ್ಟು " (Abacus. ೨೦೪೭).

[ಮಣಿ$_3$ + ಚೌಕಟ್ಟು]

**ಮಣಿತ$_1$** (ನಾ). ೧. ಬಾಗುವುದು ; ಬಗ್ಗುವುದು : ಮಣಿತಂ, ಮಣಿವುದು ; ಕುಣಿತಂ, ಕುಣಿವುದು (ಶಬ್ದಮ. ೪೫೬ ವಾಖ್ಯ) ; ಈ ಬಿನ್ನಣ ಮಾಯೊಡಲ್ಮಣಿತಂ . . . ಶ್ರೀಚಿಕದೇವನೊಳ್ ಮೆಱೆಗುಂ (ಚಿಕಶು. ೪-೦೪೮) ; ಎನಿತೆನಿತೋ ಮಣಿತಗಳವು ಭಂಗಿಗಳವು ಭಣಿತ (ಕರುಣಾ. ೬೦-೨). ೨. [ವ್ಯಾಕ] ಅಕ್ಷರಗಳಿಗೆ ಕಾಗುಣಿತದಲ್ಲಿ ಸೇರಿಸುವ 'ಉ' ಸಂಕೇತವಾದ ಕೊಂಬು (ು) : ಈ ವರ್ಣಗಳಲ್ಲಿಯ ಒಂದು ಮಣಿತವನ್ನು ತಪ್ಪಿಸಿ . . . ಅನೇಕರು ಬರೆಯುತ್ತಿದ್ದುದನ್ನು ಕಾಣುತ್ತೇವೆ (ಶಾಶಾಶಾ. ೦೦೫). [ಮಣಿ$_1$ + – ತ$_3$]

**ಮಣಿತ$_2$** (ನಾ). ಸುರತಧ್ವನಿ; ಗಳರವ : "ಮಣಿತವೆಂಬುದು ಗಳಧ್ವನಿ" (ಹಠಾದು. ೯೩-೪೦೫); ಸೀತ್ಕೃತಂ ಹೂಂಕೃತಂ ಘೂತ್ಕೃತಂ ಮಣಿತಮುತ್ತ ಘೂತ್ಕೃತಂ . . . ಎನಿಪೀ ಚಮತ್ಕೃತಿಯನಱಿದು ರಮಿಸುವನೆ ಚತುರಂ (ಚಪಪ. ೬-೫೦); ಮಣಿತಂ ತನುಪ್ಪೊಳ್ಗಳದೊಳ್ಮಣಿತಂ ನೆಗಳ್ದಿರೆ ವಿಳಾಸಮು ಮದೊರ್ಪ್ಪಿರೆ ಪೆಣ್ಮಣಿ ತನ್ನವರತಿಚಿಂತಾಮಣಿ ತನ್ನರಪತಿಗೆ ತನ್ನ ಮರಿಜಿನೆ ನೆರೆದಳ್ (ರಾಜಶೇ. ೬-೯೯). [ಸಂ.]

**ಮಣಿತುತ್ತಿ** (ನಾ). ಒಂದು ಬಗೆಯ ಸಸ್ಯ : ಮಣಿತುತ್ತೀಗಿಡ. ಒಂದೀಸೊಪ್ಪು (ವೃಜಿಗ. ೯೩-೬೬೨). 'ಮರತುತ್ತಿ' ಪರಾ.

[ಮಣಿ$_3$ + ತುತ್ತಿ$_1$./ತಮಿ. ಮಣಿತುತ್ತಿ]

**ಮಣಿತೊಂಡೆ** 'ಮಣಿದೊಂಡೆ' ನೋ.

**ಮಣಿತೋರಣ** (ನಾ). ಬೆಲೆಬಾಳುವ ಹರಳುಗಳಿಂದ ಕೂಡಿದ ತೋರಣ; ರತ್ನಖಚಿತವಾದ ತೋರಣ : ರಾಜಭವನದೊಳೆಸೆವ ಮಣಿತೋರಣಂಗಳಿಂ (ಆಪು. ೪-೭ ರಗಳೆ); ಎಳಮಿಂಚಂ ಮಣಿತೋರಣಾಂಶು ಮೊಬಗಂ ವಾಮ್ಯಸ್ವನಂ . . . ಸಿರಾಕುಳದಿಂ ಪೋಲಿಪ್ತು (ಶುಕ್ಕಪು. ೪-೩೭). [ಸಂ.]

**ಮಣಿದರ್ಪಣ** (ನಾ). = ಮಣಿಗನ್ನಡಿ : ಭರತಂ ಕಂಡಂ ಕಿನ್ನೆಯು ನೆರೆಯಂ ತಳದಳಿಸಿ ಪೊಳೆವ ಮಣಿದರ್ಪಣದೊಳ್ (ಆದಿಪು. ೧೭-೭೦); ದೊರೆವೆತ್ತ ವಿಜಯವಾಮೇತರಭುಜದೊಳ್ ನಿಂದ ಬೀರಸಿರಿಯೆಸೆವ ನೆಟಿಲ್ ಸ್ಫುರಿಯಿಸೆ ಮೆಯ್ಯೊಳ್ ಪೋಲ್ತಂ ಹರಿನೀಳೋದ್ಯತ್ತ್ರಸನ್ನ ಮಣಿದರ್ಪಣಮಂ (ಶಾಂತಿಪು. ೨-೧೫). [ಸಂ.]

**ಮಣಿದಾರ** (ನಾ). ಮಣಿಗಳನ್ನು ಪೋಣಿಸಿದ ದಾರ : ಹಣವೇನು ಬಾತೆ ನಿನ್ನಯ ಗುಣವೆಂಬುದು ಮಣಿದಾರವಾಗೆನ್ನ ಮನವ ಕ್ಷಣದಲಿ ಬೀಜು ಗೊಂಡುದು (ಕಂಶಬ. ೬-೧೭೯). [ಮಣ್ $_3$ + ದಾರ $_1$]

**ಮಣಿದಿ** (ನಾ). ಒಬ್ಬಾತನ ಹೆಸರು (?) : ಸ್ವಸ್ತಿಶ್ರೀ ಮಾಣಿಯುರೋ ಮಣಿದಿಯುಂ ಸಿರಿವಚ್ಚನುಂ ಶ್ರೀಪುರುಷನುಂ . . . ಎಱೆದು ಸತ್ತರ್ (ಪ್ಯಾಶಾಂ. ೧೯೪೪, ೭-೧; ೪೦೪). [ ? ]

**ಮಣಿದೀಪ** (ನಾ). ೧. ರತ್ನಖಚಿತವಾದ ದೀಪ ; ರತ್ನದ ದೀವಿಗೆ : ತಳಿರುಯ್ಯಲ್ ಮಣಿದೀಪರಾಜಿ . . . ಲತಾಮಂಟಪವೆಂಬಿವಿಲ್ಲದ ಜನಾವಾಸಂಗಳಿಲ್ಲೆಲ್ಲಿಯುಂ (ಶುಕ್ಕಪು. ೨-೭೩) ; ಮಣಿದೀಪಾವಳಿಯನಮರಿ ಯರು ಪಿಡಿಯಲು (ಬಸಪು. ೧೮-೭೮); ಕತ್ತಲೆಯ ಮನೆಗೆ ಮಣಿದೀಪ ಮಾದಂತೆ . . . ಕುಳಿಂದನ ಬಾಳ್ಕೆಗುತ್ತಮಕುಮಾರನಾದಂ ಚಂದ್ರಹಾಸಂ (ಜೈಮಿಭಾ. ೨೮-೭೩). ೨. ದೀಪದಂತೆ ಬೆಳಗುವ ರತ್ನ. [ಸಂ.]

**ಮಣಿದೆನೆ** (ನಾ). ಬೆಲೆಬಾಳುವ ಹರಳುಗಳಿಂದ ಕೂಡಿದ ಕೋಟೆಯ ತೆನೆ ; ರತ್ನಖಚಿತವಾದ ಬುರುಜು: ಮಣಿದೆನೆಗಳ ಮಾರ್ಪೊಳಪಂ ಫಣಿಪಸ್ಫಟಗೆತ್ತು ನೋಳ್ಪ ಖೇಚರಿಯರ ಕಣ್ಬೊಣರ್ಗಳ್ಮಾರ್ಪೊಳೆವಂದ ಮನಣಕಿಪುವಗಳಮಳಜಳದೊಳಂಬುಚರಂಗಳ್ (ರಾಜಶೇ. ೨-೮೪) ; ಮಣಿದೆನೆ ಗಳೆಡೆಯೆಡೆಯೊಳುಡುಗಣಮಿರುಳೊಳ್ಳುಸುಳ್ದು ಮಾಲ್ಗಡಲ ಕಡೆವಾಗಳ್ಪ ಣಿಪನ ಮಣಿಯೆಡೆಯೆಡೆಯೊಳಗಣಿತಂ ಮುಕ್ತಾಳಿ ನೆಗೆವ ಭಾವಮನಾಳ್ಗುಂ (ವೃಕಶಿ. ೪-೭೩). [ ಮಣ್ $_3$ + ತೆನೆ $_1$ ]

**ಮಣಿದೊಂಡೆ**, ಮಣಿತೊಂಡೆ (ನಾ). ಒಂದು ಬಗೆಯ ತೊಂಡೆಯ ಕಾಯಿ : ಮಣಿದೊಂಡೆ, ಹಾವುಮೆಕ್ಕೆ, ಈ ಎರಡಱ ಬೇರಂ ನಿಂಬೇ ಹುಳಿಯಲ್ಲಿ ಅರೆದು ಗಾಯಕ್ಕೆ ಪೂಸೆ ವಿಷ ಕೆಡುಗು (ವಿಶ್ವವಿ. ೬೧). **ಮಣಿತೊಂಡೆ:** ಮಣಿತೊಂಡೆ, ಕಾಡುಪಾವಟೆಬಳ್ಳಿ (ಪ್ಯಾ ತಿಗ. ೫೩-೧೦೭೪). [ ಮಣ್ $_3$ + ತೊಂಡೆ $_1$ ]

**ಮಣಿದೊಡವು** (ನಾ). ಬೆಲೆಬಾಳುವ ಹರಳಿನ ಒಡವೆ; ರತ್ನಖಚಿತವಾದ ಆಭರಣ : ಎಳಲತೆಯನಿಲನ ಸೋಂಕಿಂದಲರ ತೊಡಂಬೆಯನಿನಿಸುಳಿಯದೆ ಬಿದಿರ್ವಂದದಿ ಮಣಿದೊಡವೆಲ್ಲವನೀಡಾಡಿ (ಶಿಥುಶಾ. ೨-೩೯) ; ನೊಸಲ ನಾಮದ ಗೆಱೆವೆಱೆ ಗಜಕುಂಭದ ಪೊಸಮುತ್ತಿನ ಮಾಣಿಕದೊಡವೆ ಎಸೆವ ತಾರಾಮಾಲೆಯೆನೆ ಬಿಯದಿಯರು ರಂಜಿಸಿದರಿರುಳ್ವೆಣ್ಗಳಂತೆ (ಶ್ರೀಶಾಂ. ೭-೩೪). [ಮಣ್ $_3$ + ತೊಡವು]

**ಮಣಿನೂಪುರ** (ನಾ). ಬೆಲೆ ಬಾಳುವ ಹರಳುಗಳಿಂದ ಮಾಡಿದ ಕಾಲಂದುಗೆ; ರತ್ನಖಚಿತವಾದ ನೂಪುರ : ಮಣಿನೂಪುರ ಮಣಿಕಾಂಚೀ ಮಣಿಹಾರವಿಲಾಸಮೆಸೆಯೆ ಭಾಸುರವಿದ್ಯಾಮಣಿಯಿಂ ಭಾಸ್ವಚ್ಚೂಡಾ ಮಣಿಯಿಂ ಪೋಲ್ತೆಸೆವಳಬಲೆ ಮಣಿಪುತ್ರಿಕೆಯಂ (ಅಪು. ೨-೨೮) ; ಹೊಂಬಳೆಗಳನು ಕೈಗೆ, ಕಿಂಕಿಣಿಗಾನಗೈವ ಮಣಿನೂಪುರಗಳನು ಕಾಲ್ಗೆ . . . ತೊಟ್ಟು (ಶಶಾಂಗ. ೧೯-೫೦೩). [ಸಂ.]

**ಮಣಿಪಾದ** (ನಾ). ಕಣಕಾಲು : ಬಲದ ಮಣಿಪಾದದಲ್ಲಿ ಪಟ್ಟವರ್ಧನನೆಂಬ ಗಣೇಶ್ವರನೆನಿಸಿರ್ಪಿರಿ ಅಯ್ಯ, ಎಡದ ಮಣಿಪಾದದಲ್ಲಿ ಚಂದ್ರಶೇಖರನೆಂಬ ಗಣೇಶ್ವರನೆನಿಸಿರ್ಪಿರಯ್ಯ (ಸಿದ್ಧೇಶ. ೬೪-೧೮೪). [ಸಂ.]

**ಮಣಿಪೀಠ** (ನಾ). ಬೆಲೆ ಬಾಳುವ ಹರಳುಗಳಿಂದ ಅಲಂಕೃತವಾದ ಪೀಠ ; ರತ್ನಖಚಿತವಾದ ಆಸನ : ಚಮರರುಹಬ್ಬಮುಂ ಬೆಳಪ ಬೆಳ್ಗೊಡೆ ಪೂಮ[ಟೆ]ಭಾಪ್ರತಾನಮುತ್ತಮಮಣಿಪೀಠಮಿಂದ್ರಸಭೆಯೆಂಬಿವು ಘಾತಿಚತುಷ್ಕಘಾತದಿಂ ಸಮನಿಸೆ (ಶಾಂತಿಪು. ೪-೭೩) ; ಮಣಿಪೀಠಾರೂಢ ನುದ್ಯತ್ಸಚಿವಚಯಸಮಾಸೇವ್ಯಮಾನಂ . . . ಬಿಜ್ಜಳೇಂದ್ರಂ (ವೃಕಶಿ. ೭-೨). [ಸಂ.]

**ಮಣಿಪುಂಖ** (ನಾ). ರತ್ನಖಚಿತವಾದ ಬಾಣದ ಹಿಳುಕು : ಮಣಿಪುಂಖ ಚಿತ್ರಭಾಸುಪ್ರಣಿತಮಂ ಚಿತ್ರಭಾನುಶರಮಂ ವಿಲಯೋಲ್ಬಣಚಿತ್ರಭಾನು ಶಿಖಿಯೊಳ್ ತೊಣೆಯೆನಿಪುದನಸುರವೈರಿ ತೊಟ್ಟಾರ್ದೆಚ್ಚಂ (ಜಗಬ. ೦೩-೧೧೧). [ಸಂ.]

**ಮಣಿಪುತ್ರಿಕೆ** (ನಾ). ಬೆಲೆಬಾಳುವ ಹರಳುಗಳಿಂದ ಅಲಂಕೃತವಾದ ಬೊಂಬೆ; ರತ್ನಖಚಿತವಾದ ಬೊಂಬೆ : ಒಗೆತರ್ಪ ಘರ್ಮಜಲ ಬಿಂದುಗಳಿಂ ನಮಿತಾನನಾಬ್ಜೆ ಬೆಚ್ಚನೆ ಬಸಿವಿಂದುಕಾಂತಕರಸಂಕುಳವೊಯ್ಯ ನಮ್ಮಂಕಿ ಸೋಂಕೆ ಸೋಂಕಿನೊಳೊಱೆವಿಂದುಕಾಂತಮಣಿಪುತ್ರಿಕೆಯಂದದಿ ನೊಪ್ಪಿ ತೋಱಿದಳ್ (ಅದಿಪು. ೪-೪೯). [ಸಂ. ಮಣಿಪುತ್ರಿಕಾ]

**ಮಣಿಪೂರ** (ನಾ). ೧. ಹೊಕ್ಕುಳು; ನಾಭಿ. ೨. [ಯೋಗ] ಶರೀರದೊಳಗಿನ ಮೂಲಾಧಾರ, ಸ್ವಾಧಿಷ್ಠಾನ, ಮಣಿಪೂರ, ಅನಾಹತ, ವಿಶುದ್ಧ, ಆಜ್ಞಾ ಎಂಬ ಆರು ಚಕ್ರಗಳಲ್ಲಿ ಒಂದು ; P ನಾಭಿಯಲ್ಲಿರುವ ಷಟ್ಚಕ್ರಾಂತರ್ಗತವಾದ ಒಂದು ಪದ್ಮ. ಇದು ಸುಷುಮ್ನಾನಾಡಿಯೊಳಗೆ ಷಟ್‌ಚಕ್ರಗಳ ಮಧ್ಯದಲ್ಲಿ ನಾಭಿಯಲ್ಲಿರು ವುದು : ಆಧಾರ ಸ್ವಾಧಿಷ್ಠಾನ ಮಣಿಪೂರ [ಶಾಶಾಂ. ಪೂರಕ] ಅನಾಹತ ವಿಶುದ್ಧಿ ಆಗ್ನೇಯವೆಂಬ ಷಟ್ಚಕ್ರಂಗಳುಂ (ವಿವೇಕ. ೦೩೪). [ಸಂ.]

**ಮಣಿಪೂರಕ** (ನಾ). = ಮಣಿಪೂರ ೨ : ಆಧಾರ ಸ್ವಾಧಿಷ್ಠಾನ ಮಣಿಪೂರಕ ಸ್ಥಾನವನಱಿಯರು (ಅವಕಾ. ೪೩-೦೮೯); ಸರಿಯಾಗಿಯೆ ಆಧಾರವನು ಬಳಕಲಿ ಮೀರಿ ಸ್ವಾಧಿಷ್ಠಾನವನು ಅದ ಹಾರಿ ಮಣಿಪೂರಕವ ಅನಹತಕ್ಕೆದ ಬೇಕು (ಜ್ಞಾನಸಿಂ. ೦೫-೨೩). [ಸಂ.]

**ಮಣಿಪೂರಕಚಕ್ರ** (ನಾ). = ಮಣಿಪೂರ ೨ : ಅನಾಹತಚಕ್ರದಿಂದೀಯಿತ್ತು ಮಣಿಪೂರಕಚಕ್ರ (ಅಱಂದೇ. ೨೫೯-೧೧೦) ; ಶರೀರದಲ್ಲಿರುವ ಷಟ್ಚಕ್ರಗಳಲ್ಲಿ . . . ಮಣಿಪೂರಕಚಕ್ರದಲ್ಲಿ ಶಿವಲಿಂಗ . . . ಆಧಾರಚಕ್ರದಲ್ಲಿ ಆಚಾರ ಲಿಂಗಗಳು ವಿರಾಜಿಸುತ್ತಿರುವುವು (ಶಾರದ. ೨೫೩). [ಸಂ.]

**ಮಣಿಪ್ರವಾಳ** (ನಾ). ಸಾಮಾನ್ಯವಾಗಿ ಸಂಸ್ಕೃತಪದಗಳ ಜೊತೆಗೆ ಮಲಯಾಳ ಅಥವಾ ಇನ್ನಾವುದೇ ದೇಶೀಯಭಾಷೆಯ ಪದಗಳ ಬೆರಕೆಯಿಂದ ರಚಿತವಾದ ಒಂದು ಬಗೆಯ ಶೈಲಿ; P ಮಲಯಾಳದ ಪ್ರಾಚೀನಸಾಹಿತ್ಯದಲ್ಲಿ ಇದು ಬಹಳ ಕವಿಪ್ರಿಯವಾಗಿದ್ದಿತು : ಪಿಳ್ಳೈಲೋಕಾಚಾರ್ಯರು ಹದಿನೆಂಟು ವೇದಾಂತಗ್ರಂಥಗಳನ್ನು ತಮಿಳು ಸಂಸ್ಕೃತಮಿಶ್ರವಾದ ಮಣಿಪ್ರವಾಳವೆಂಬ ಭಾಷೆಯಲ್ಲಿ ರಚಿಸಿದರು (ಶಾರದ. ೩೯೮) : ಮಲಯಾಳಸಾಹಿತ್ಯದ ಭಾಷೆ ಮಣಿಪ್ರವಾಳವೆಂದು ಹೇಳಬಹುದು (ಶಾರದ. ೪೦೩). [ಸಂ. ಮಣಿಪ್ರವಾಲ]

**ಮಣಿಬಂಧ** (ನಾ). ೧. ( ಅಲಂಕಾರಕ್ಕಾಗಿ ) ಮುತ್ತು, ರತ್ನ ಮುಂತಾದುವನ್ನು ಕಟ್ಟುವುದು. ೨. = ಮಣಿಗಟ್ಟು ೨ : "ಮಣಿಬಂಧ ಎಂಬುದು ಮಣಿಕಟ್ಟು" (ಹಠಾಯು. ೮೮-೩೭೯); ಮಣಿಬಂಧಂ ಮಣಿಯಿಂ ಕಟೀನಿಕಟಮಾ ಚೆಂಬೊನ್ನ ಚೆಲ್ವಪ್ಪ ಕಿಂಕಿಣಿಯಿಂ . . . ಅಲಂಕೃತನಾಗಿಯುಂ (ಶಾಂತಿಪು. ೧೧-೫೮) ; ಮಣಿಬಂಧದಲ್ಲಿ ಹೇಮರೇಖೆ

ಯಿದ್ದರೆ ಬಹುಭೂಷಿತನಾಗುವನು (ಶಿಗಂಧಿ. ೬೩೩-೨೦). ೩. [ನಾಟ್ಯ] ಮುಂಗೈಯನ್ನು ಚಲಿಸುವ ಒಂದು ವಿಧ ; P ಇದರಲ್ಲಿ ನಿಕುಂಚ, ಆಕುಂಚ, ಚಲ, ಭ್ರಮಿತ, ಸಮ ಎಂದು ಐದು ವಿಧಗಳಿವೆ : ಪ್ರಕಟನಿಕುಂಚಿತಮಾಕುಂಚಿಕಚಲಮುಂ ಭ್ರಮಿತಸಮಗಳುಂ ಪರಿಣತಿಯಿಂ ಸಖಿ ಕೇಳ್ ಮಣಿಬಂಧಂ ಕೌತುಕದಿಂದೈದುಂ ವಿಭೇದದಿಂ ರಂಜಿಸುಗುಂ (ಚಾಕ್ಯರಂ. ೨-೦೩೦). [ಸಂ.]

**ಮಣಿಭವನ** (ನಾ). ರತ್ನಖಚಿತವಾದ ಸೌಧ : ಬಳ್ವಳಬಳೆದು ನಿಮಿರ್ವ ಕಾಡಿಗೆಗುಡಿಗಳ ಮಹೇಂದ್ರನೀಲಮರಕತಮಣಿಭವನಂಗಳ ವಿಜಯಕಟಕ ಸಮದಗಜಸಾಮಜಂಗಳ ಕರ್ಪುಗಳೆಲ್ಲಮಂ ನೆರಂಬಡೆದು (ಅಂಕೃ. ೦೨-೪ ವ) : ಮೆಱೆವ ಮಣಿಭವನವನು ರವಿಜಗೆ ತೆಱವು ಮಾಡಿದ (ಕೌಶಿಶಾ. ೪೪-೩೦). [ಸಂ.]

**ಮಣಿಮಕುಟ** (ನಾ). ರತ್ನಖಚಿತವಾದ ಕಿರೀಟ: ಶ್ರೀ ವಿಜಯಾರ್ಧಾಚಲ ಖಚರಾವಲಿ ಮಣಿಮಕುಟಮಕರಿಕಾನಿಕಷಣರೇಖಾವಿಲಸಿತಪದಕಮಲನಿಲಾ ವಂದ್ಯಯಶಂ ಸರಸ್ವತೀಮಣಿಹಾರಂ (ಅಂಕೃ. ೨-೧) ; ಕರೆಸಿದನು ಮಣಿಮಕುಟಕಿರಣದ ಗರುವರನು (ಕುವ್ಯಾಉ. ೬-೨೪). [ಸಂ.]

**ಮಣಿಮಾಡ** 'ಮಣಿವಾಡ' ನೋ.

**ಮಣಿಮಾಲೆ** (ನಾ). ೧. ಬೆಲೆಬಾಳುವ ಹರಳುಗಳ ಹಾರ; ರತ್ನದ ಹಾರ: ನೀರಜಜಾತ ವಿಸ್ತರಿಸಿ ದಂಡಮುಮಂ ಮಣಿಮಾಲೆಯಾಗಿ ವಿಸ್ತಾರಿಸಿ ಹಸ್ತದಿಂ ಪಿಡಿದು . . . ಜಪಿಸುತಿಪ್ಪಳ್ ಇರುಳ್ ಪಗಲ್ ಅವಳೋರ್ವ್ವಳಾ ಭಾರತಿ ನಮ್ಮ ಜಿಹ್ವದಲನಾವಿಳದಿಂದಿರುತಿಕ್ಕೆ ಸಂತತಂ (ಎಕ. XI, ದಾವಣ. ೩೪-೯ ; 1280). ೨. ಲಕ್ಷ್ಮಿ. ೩. ಸೌಂದರ್ಯ ; ಸೊಬಗು. ೪. [ಕಾಮಶಾ] ಒಂದು ಬಗೆಯ ದಂತಕ್ಷತ : ಪಲ್ಲುಜೆ ಮತ್ತು ಗುರೊಳೆಳೆದುಲದು ಬಿತ್ತರದ ಮಣಿಮಾಲೆ ಬಿಂದುಮಾಲೆ (ಜವವ. ೭-೩೧): ಕಂಕುಳು ಪಣೆ ಕೊರಳು ಅದಕ್ಕೆ ಸಮಾನಂ ಮಣಿಯು ಬಿಂದುಮಾಲೆಯುಂ ಮಣಿಬಿಂದು ಮಾಲೆ ಎಲ್ಲಾ ದ್ವಂದ್ವಾಂತದಲ್ಲಿ ಮಾಲಾಶಬ್ದ ಪ್ರತ್ಯೇಕ ಸಂಬಂಧಿಸಿದಡೆ ಮಣಿಮಾಲೆ ಎಂಬುದು (ಕಾಮಶಾ. ೨೨೮).

[ಸಂ. ಮಣಿಮಾಲಾ]

**ಮಣಿಮೇಖಲೆ**, ಮಣಿಮೇಖಳೆ (ನಾ). ರತ್ನಖಚಿತವಾದ ಡಾಬು : ಸತಿಯ ಪೊಱಮಾಱು ಕಾಮನ ಕೇಳೀನಗಮೆಂದೆಂಬನ ನುಡಿಯೇನುಚಿತ ಮಾಯ್ತೊ ಮಣಿಮೇಖಲೆಯಿಂ (ಭುಕ್ತ್ಯಕೃ. ೩-೩೨) ; ನವರತ್ನ ಸುವರ್ಣ ಮಣಿಖಚಿತವಾದ ಮಣಿಮೇಖಲೆಯನ್ನು ನಡುವಿಗೆ ಇಟ್ಟರು (ಶಾಂತರಾ. ೦೦೪). **ಮಣಿಮೇಖಳೆ** : ಪುಳಿನಸ್ಥಳಮಂ ಮಱೆಯಿಸಿ ತೊಳಗುವ ನಕ್ಷತ್ರ ಮಾಲೆಯುಂತಿರೆ ಮಣಿಮೇಖಳೆ ಮದನಕುಂಭಿಕುಂಭಸ್ಥಳಮಂ ನೆನೆಯಿಸು ವುದಸಿಯಳಲಘುನಿತಂಬಂ (ಮಲ್ಲಿಪು. ೩-೭೦). [ಸಂ. ಮಣಿಮೇಖಲಾ]

**ಮಣಿಮೇಖಳೆ** 'ಮಣಿಮೇಖಲೆ' ನೋ.

**ಮಣಿಯ**, ಮಣಿಹ$_1$, ಮಣಿಹ್ಯ, ಮಣೆ$_2$, ಮಣೆಯ (ನಾ). ೧. ದೇವಾಲಯ, ಮಠ, ಅರಮನೆ, ಸುಂಕದ ಕಟ್ಟೆ ಮುಂತಾದುವುಗಳ ಉಸ್ತುವಾರಿಯ ಅಧಿಕಾರ, -ಪಾರುಪತ್ಯ : 'ಮಣಿಯಗಾಱ' ಪರಾ. ೨. ದೇವಾಲಯ, ಮಠ, ಅರಮನೆ, ಸುಂಕದ ಕಟ್ಟೆ ಮುಂತಾದುವುಗಳ ಉಸ್ತುವಾರಿ ಯನ್ನು ನೋಡಿಕೊಳ್ಳುವ ಅಧಿಕಾರಿ, -ಮೇಲ್ವಿಚಾರಕ, -ಪಾರುಪತ್ಯ ಗಾರ : ಗಣರಪ್ಪುಂ ಮಣಿಯಂ ವಶಿಷ್ಟ[ಷ್ಠ]ಕುಲಸಂಭೂತ ದ್ವಿಜನ್ಮೋತ್ತಮಂ (ಎಇ. XIII, ೦೪೯-೬ ; 888) ; ನಾಲ್ಕುವರುಷದಲ್ಲಿ ಬಸವ ಅರಮನೆಯ ಮನೆವಾರ್ತೆಯ ಮಣಿಯ ಆದನು (ಶಿಶರಾ. ೪೪). ೩. (ತಹಸೀಲ್ದಾರನ ಅಧೀನದಲ್ಲಿರುವ) ಕಂದಾಯದ ಕಚೇರಿ : (+). **ಮಣಿಹ$_2$** : ೧. ಶ್ರೀಹರಿಹರದೇವ[ರ] ಚತ್ರದ ಅವಸರದ ನೈವೇದ್ಯದ ತುಪ್ಪಕೆ ಸುಂಕ ತಳವಾಱಿಕೆ ಮಣಿಹ ಪಯಿಕ ಸಹ ಸರ್ವಮಾನ್ಯವಾಗಿ ಸಮರ್ಪಿಸಿ ಕೃತಾರ್ಥನಾದನು (ಎಕ. XI, ದಾವಣ. ೧೮-೨೬ ; 1561). ೪. ತೆರಿಗೆ : ಕಂದಾಯ : ಬಿಂಗಣ ಮಣಿಹ ಸುಂಕ ಪೊಮ್ಮು (ಎಕ. IX, ಪೆಬಮಂ. ೩೦-೦೩ : 1763). **ಮಣಿಹ್ಯ**: ೪. ನಿಮ್ಮ ಕಡೆಯಿಂದಾ ಸರಕಾರಕ್ಕೆ ಸಲ್ಲತಕ್ಕಂಥಾ ಹಣ ಮಣಿಹ್ಯವನ್ನು ಕೊಡಗಿನ ತಾಲೂಕಿಗೆ ಕೊಟ್ಟು (ರಾಜೇಂದ್ರ. ೦೨೩). **ಮಣೆ$_2$** : ೧. 'ಮಣೆಗಾರ' ಪರಾ. **ಮಣೆಯ** : ೧. 'ಮಣಿಯಗಾಱ' ಪರಾ.

[ದೇ.॥ ತಮಿ. ಮಲ. ಮಣಿಯ; ತೆಲು. ಮಣಿಯ, ಮಣಿವ, ಮಣಿಗ]

**ಮಣಿಯಗಾಮುಂಡ** (ನಾ). ಒಬ್ಬಾತನ ಹೆಸರು : ಸೊಕ್ಕಗಾಮುಣ್ಡರುಂ ಎದೆಯಗಾಮುಣ್ಡರುಂ ಮೊಳೆಊದಾ ಮಣಿಯಗಾಮುಣ್ಡರುಂ (ಎಕ. VII, ಶಿಕಾಂ. ೧೩೪-೯ ; 685). [ಮಣಿಯ ? + ಗಾಮುಂಡ]

**ಮಣಿಯಗಾರ** 'ಮಣಿಯಗಾಱ' ನೋ.

**ಮಣಿಯಗಾಱ**, ಮಣಿಯಗಾರ, ಮಣಿಹಗಾಱ, ಮಣಿಹಾಱ, ಮಣಿಹ್ಯಗಾರ, ಮಣೆಗಾರ, ಮಣೆಗಾಱ, ಮಣೆಯಗಾಱ, ಮಣೆಹ ಗಾರ (ನಾ). ೧. ದೇವಸ್ಥಾನ, ಅರಮನೆ, ಸುಂಕದ ಕಟ್ಟೆ ಮುಂತಾದುವುಗಳ ಉಸ್ತುವಾರಿ ನೋಡಿಕೊಳ್ಳುವ ಅಧಿಕಾರಿ, -ಮೇಲ್ವಿಚಾರಕ, -ಪಾರುಪತ್ಯಗಾರ : ಬಣಗು ಕಮಲಜನದಕೆ ತಾನೇ ಮಣಿಯಗಾಱನು (ಹಂಶಾ. ೬೨). **ಮಣಿಯಗಾರ** : ೧. ಮಣಿಯಗಾರನ ಹಂಗು ಹಣಗಾರನಿಗೂ ಬೇಕು (ಗಾದೆ). **ಮಣಿಹಗಾಱ** : ೧. ವೇಸಿ ದಾಸಿ ಸುಂಕಿಗ ಮಣಿಹಗಾಱ ವಿದ್ಯಾವಂತ ಇಂತೀ ಐವರಿಗೆ ಲಿಂಗವ ಕಟ್ಟಿದಡೆ ಗುಡಿಯ ಮುಂದಣ ಸಿಂಗಾರಗಂಟೆ (ತನ್ನವ. ೪. ೯೯-೨೦೯) ; ಮಜ್ಜನ ವಾಳರ ಮಣಿಹಗಾಱರ . . . ಕೇರಿಗಳಿಂದಾ ಪುರ ಪಜ್ಜಳಿಸುತ ಮೆಱೆ ದಿಹುದು (ಕುಶಾಂ. ೪-೧೦೩). **ಮಣಿಹಾಱ** : ೧. ವಾಣಿಜವರನು . . . ಗಂಧರ್ವವತ್ತೆಯ ವರಸ್ವಯಂವರಕೆ ಪೊಳಲಿಗೈತಹುದೆಂದು ಸಾಱಿಸ ಲೊಲಿದು ಮಣಿಹಾಱರನು ಬೇಗದಿ ಕಳುಹಿ ತವನುಜ್ಞೆಯಲಿ ಶೃಂಗರಿ ಸಿದನಾ ಪುರವ (ಜೀವಂಕ. ೭-೨೦) ; ಮುನಿಪತಿಯ ಬಳಿಗೆ ಬಂದರು ಜನಕಭೂಪನ ಬಳಿಯ ಮಣಿಹಾಱರು ಮಹಾಮಂಗಳೆಱು ವಿಮಳವಿವಾಹ ಪತ್ರಿಕೆಸಹಿತ ವಹಿಲದಲಿ (ತೊರರಾ. ೦-೦೨-೨). **ಮಣಿಹ್ಯಗಾರ** : ೧. ಸುಂಕದ ಮಣಿಹ್ಯಗಾರ ಶ್ಯಾನಭಾಗರ ವಹಿತ್ತ (ಮ್ಯಆಂ. ೦೯೩೩, ೩೦-೩೯; 1737); ಸುಂಕದ ಮಣಿಹ್ಯಗಾರು ನರಪರ್ಯ್ಯನವರು (ಎಕ. XVI, ಶಕ್ಯಾ. ೯೦-೩೪; 1802). **ಮಣೆಗಾರ** : ೧. ಸರ್ಕಾರದ ಗೌಡ ಸೇನಬೋವರಾಗಲಿ ಸುಂಕದ ಮಣೇಗಾರನಾಗಲಿ ಆರು ಯಿದಕ್ಕೆ ವಿಗಡ ಆಚರಿಸಿದರು ಅವರು ತಂದೆತಾಯಗಳ ವಾರಣಾಸಿಯಲಿ ಕೊಂದ ಪಾಪಕೆ ಹೋಹರು (ಎಕ. IX, ಚೊತ್ತಾಬ. ೩-೨೩ ; 1586) ; ಕೃಷ್ಣರಾಜವಡೆಯರವರು . . . ಸುಂಕ್ಕದ ಮಣೆಗಾರಗೆ ಬರಶೀ ಕಳುಹಿಸ್ತ ನಿರೂಪ (ಮ್ಯಆಂ. ೦೯೩೮, ೨೦-೩ ; 1816) ; ಈ ಬಾಬುಗಳಲ್ಲಿ ಒಂದೊಂದಕ್ಕೆ ಒಬ್ಬೊಬ್ಬ ಮಣೆಗಾರ, ಶ್ಯಾನಭಾಗ, ಕೋಲುಕಾರ ಮುಂತಾದ ಜನಗಳನ್ನು ನೇಮಕ ಮಾಡಿ . . . ನಿಬಂಧನೆ ಮಾಡಿದರು (ಮಹಾಮಂ. I, ೦೨೪). **ಮಣೆಗಾಱ** : ೧. ಮಣೆಗಾಱರ ಕೇರಿ ಕಂಚುಗಾಱರ ಕೇರಿ (ಗೋಮುಟೀ. ೦-೬೮). ೨. ಸುದ್ದಿ ತರುವವನು ; ದೂತ : "ಸಂದೇಶಹರಃ, ದೂತಃ—ಈ ೨ ಮಣೆಗಾಱನ ಪೆಸರು" (ನಾಚಿರಾ. ೦೩೦). **ಮಣೆಯಗಾಱ** : ೧. ಮಣೆಯಗಾಱರೆಪ್ಪತ್ತೇಳು ಕೋಟಿ (ಕನಕ. ೨೩೦-೬). **ಮಣೆಹಗಾರ** : ೧. ಜವಳಿ ಲಾಭಾ ದಾಯದ ಚಾವಡಿ ಮಣೆಹಗಾರ ಹುದ್ದಾಸಯ್ಯಗೆ . . . ತಾಂಬ್ರಶಾಸನವನ್ನು ಬರೆಸಿ ಕೊಟ್ಟು ಯಿಧೇವೆ (ಮ್ಯಆಂ. ೦೯೨೮, ೪೮-೨ ; 1171).

[ಮಣಿಯ + — ಕಾಱ. / ತಮಿ. ಮಣಿಯಕ್ಕಾರನ್ ; ಮಲ. ಮಣಿಯ ಕಾರನ್ ; ತುಳು. ಮಣಿಗಾರೆ, ಮಣೆಗಾರೆ ; ತೆಲು. ಮಣಿಯಗಾಡು, ಮಣಿಯಕಾಂಡು]

**ಮಣಿಯಮಸೆಟ್ಟಿ** (ನಾ). ಒಬ್ಬಾತನ ಹೆಸರು : ಚಬ್ಬಿಸೆಟ್ಟಿಯ ತಮ್ಮ ಮಣಿಯಮಸೆಟ್ಟಿ ತುಱುಗೊಳೆ ತುಱುವನಿಕ್ಕಿಸಿ ಸತ್ತು ಸಗ್ಗಕ್ಕೆ ಸನ್ದ (ಎಕ. IX, ದೊಡ್ಡಬ. ೧೧-೪ ; 920).

[ಮಣಿ$_?$ + ಅಮ (<ಅಮ್ಮ$_1$) + ಸೆಟ್ಟಿ]

**ಮಣಿಯವರೆ** (ನಾ). ಗುಂಡಾದ ಕಾಳುಗಳಿಂದ ಕೂಡಿರುವ ಒಂದು ಬಗೆಯ ಅವರೆ : ಮಣಿಯವರೆಯ ಕಾಳು ಅಡುಗೆಗೆ ರುಚಿಯಾಗಿರುತ್ತದೆ (ರೂಢಿ). [ಮಣಿ$_3$ + ಅವರೆ$_1$]

**ಮಣಿಯಾಲ** (ನಾ). ಒಂದು ಊರಿನ ಹೆಸರು : ತೆಂಕಾಯ್ ಮಣಿಯಾಲ ಕೊಲ್ಲಿಯ ಪಳ್ಳಮ ಪಡುವಾಯ್ ಪೆಗ್ಗೊಗ್ಗಲ್ಲಿಯ ಸೀಮೆ (ಎಕ. III (R), ಮಗ್ಗಡ. ೯೦-೩೦ ; 760). [ ? ]

**ಮಣಿಯಿಸು**, ಮಣಿಸು (ಕ್ರಿ). ೧. ಸೋಲಿಸು : ಸಗ್ಗುವಂತೆ ಮಾಡು : ಕೊಯ್ಲೆಮಿಂಡರಂ ಪಣಿದದಿಂ ಮಣಿಯಿಸುತ್ತೆ . . . ಎಸೆದುದಬಲಾಜನಂ (ಶಬ್ದಮ. ೬-೮೮) ; ಪಲರಾಯರ ಸಬ್ಬಸವಂ ಕಪರ್ದಜ್ವಲಿಸುವವರ ತಲೆವಣಿಯಂ ಮಣಿಯಿಸಿವಲಘುಭುಜಂ ವಿಕ್ರಮಕೌರವಜಯರಾಜಶಶಾಂಕನೊಳು (ಜಯುಕಾ. ೬-೫). ೨. ನಮಸ್ಕರಿಸುವಂತೆ ಮಾಡು ; ಶರಣಾಗಿಸು : ಮಣಿಮಂತ್ರೌಷಧಿಯಿಂದ ನಿನ್ನಯ ಕಾಲ್ಗೆ ಮಣಿಯಿಸುವೆ ರಾಮನನು (ಶುರಾಸಾಂ. ೨೩-೪೯) ; ಮಣಿಯಿಸುವ ದೈವ ಘನವಾಗಿ ಜಗಕ್ಕೆಲ್ಲ ತ್ರಿಣಯನೆ ದೈವ (ಸರ್ವಜ್ಞ. ೨೩೭). **ಮಣಿಸು** : ೧. ತರುಣ ಹೇಳುವುದೇನು ದಾನವ ಹರನ ಹವಣೇನೆಂದಱಿಯೆ ಮಿಕ್ಕರಿಗಳೀ ದಶಮುಖನ ಮಣಿಸಲು ತಕ್ಕರಿಲ್ಲ (ತೊರರಾ. ೧-೬-೯೨). ೩. ಬಾಗುವಂತೆ ಮಾಡು ; ಬಗ್ಗಿಸು : ಕಣಕಾಲ ಕುಣಿಸುವಳು ಮೊಣಕಾಲ ಮಣಿಸುವಳು (ಸರ್ವಜ್ಞ. ೧೮೯೫) ; ತೊಲೆಯ ಕಟ್ಟಿಗೆ ; ಮಣಿಸಿದರೆ ಮುರಿಯುವದು (ಕಥಾಗ. ೩೪) ; ಹುಬ್ಬನು ಕುಣಿಸುತ ಕೈಯನು ಮಣಿಸುತ ಬಿಸಜಾಕ್ಷಿ ಮಾತನಾಡುವಳು (ಇಂಶಾಕ. ೧೭೬-೨೭). [ಮಣಿ$_1$ + — ಇಸು$_3$]

**ಮಣಿಯೂರ್** (ನಾ). ಒಂದು ಊರಿನ ಹೆಸರು : ವಿಜಯಾದಿತ್ಯಮಙ್ಗಲ ಮಹಾಗ್ರಾಮದೊಳ್ ಕುಡಲ್ಕಣ್ಣನೂರು ಮಣಿಯೂರ ಚತುಸ್ಸೀಮೆ (ಎಕ. X, ಬೌರಿಂಗ್. ೪-೩ ; 950) ; ಭೀಮನದಿಯ ತಡಿಯ ಮಣಿಯೂರ ಅಪ್ಪಯಣವೀಡಿನೊಳ್ (ಇಇ. XIX, ೨೭೩-೩೪ ; 1054).

[ ಮಣಿ$_?$ + ಊರ್ ]

**ಮಣಿಯೋಱು** (ನಾ). ಗಂಟೆಯನ್ನು ಬಾರಿಸುವಾಗ, ಅದರ ನಾಲಗೆಯು ಅದಕ್ಕೆ ಕೊಡುವ ಹೊಡೆತದಿಂದ ಉಂಟಾಗುವ ಸದ್ದು : ಮದನ ಮದಕುಂಜರದ ಮಣಿಯೋಱಿಂ ಮಿಱುವ ರಾಜಹಂಸಕೂಜಿತಮುಂ (ಶಂರಾಪಾ. ೩-೮೦ ವ) ; ಮಣಿಯೋಱು ಚೆಂಬೊನ್ನುಡೆಮಣಿಮುಲಿ ಗೆಲ್ದನಂಗರುಚಿಯಿಂದೈರಾವಣಮಂ ಕುಮಾರಚೂಡಾಮಣಿ ಲೀಲಾಮದದೊಳಂ ಚತುರ್ದಂತದೊಳಂ (ಶಂರಾಪಾ. ೩-೦೩೦).

[ ಮಣಿ$_2$ + ಏಱು$_4$ ( < ಏಱ್$_4$ ) ]

**ಮಣಿರಂಗ** (ನಾ). [ಛಂದ] ಅಕ್ಷರಛಂದಸ್ಸಿನಲ್ಲಿ ಪ್ರಸಿದ್ಧವಾದ ಇಪ್ಪತ್ತಾರು ಛಂದಸ್ಸುಗಳಲ್ಲಿ ಹತ್ತನೆಯ ಪಂಕ್ತಿಯೆಂಬ ಛಂದಸ್ಸಿನ ಒಂದು ವೃತ್ತ : ಪಾದಪಾಶನ ಮಾರುತಯುಗ್ಮಂ ಪಾದದಂತದೊಳೀಶ್ವರನಕ್ಕುಂ ಕಾದಿರಲ್ ಯತಿಭೂತದೊಳಿರ್ದಂದೋದೆ ಕಲ್ಪಮೆಲೇ ಮಣಿರಂಗಂ (ಛಂದೋಂಬು. ೨-೦೦೦). [ಸಂ.]

**ಮಣಿವಚ್ಚ** (ನಾ). ರತ್ನದ ಹರಳುಗಳಿಂದ ಮಾಡಿದ ಒಡವೆ : ರತ್ನಖಚಿತವಾದ ಆಭರಣ : ಅಬ್ಜಾಕ್ಷಿಯರ್ ಸೀತೆಯಂ ಕಮ್ಮೆಣ್ಣೆಯಂ ಪೂಸಿ ಮಿಸಿಸಿ ತುಱುಬಿಕ್ಕಿ ಕುಸುಮಗಳ ಮುಡಿಸಿ ಪೀತಾಂಬರವನುಡಿಸಿ ಮಣಿವಚ್ಚವಂ ತುಡಿಸಿ . . . ಕರೆತಂದರೋಲಗದ ಸಭೆಗೆ (ತ್ರಿಲಾಶ. ೫-೫೦).

[ ಮಣಿ$_3$ + ಪಚ್ಚ$_2$ ]

**ಮಣಿವಟ್ಟು** (ನಾ). ರತ್ನದ ಹರಳುಗಳಿಂದ ಅಲಂಕರಿಸಿದ ರೇಷ್ಮೆಬಟ್ಟೆ ; ರತ್ನಖಚಿತವಾದ ಪಟ್ಟಾವಳಿ : ನಾವು ಪಡೆದೆವು ಮಿಂಡಜಂಗಮದೇವರೆ ಮಗೊಲಿದಿತ್ತ ನವವಸನಾವಳಿಗಳಂ ದಿನದಿನದೊಳಿಂತುಟ್ಟು ಭೋಗಿಸುವ ಮಲಯಜಶ್ರೀ . . . ಚಂದ್ರಾತಪಂ ಭೂತಿಳಕಮುಂ ಮಣಿವಟ್ಟು ಪಿಂಜಾವಳಿಯು (ಬಸಪು. ೧೧-೨೪). [ ಮಣಿ$_3$ + ಪಟ್ಟು$_5$ ( < ಪಟ್ಟ$_2$ ) ]

**ಮಣಿವರೂಥ** (ನಾ). ರತ್ನಗಳಿಂದ ಅಲಂಕೃತವಾದ ರಥ ; ರತ್ನಖಚಿತವಾದ ರಥ : ಬಭ್ರುವಾಹನಂ ತರಹರಿಸುತ್ತಚ್ಚಱಿಕೆಗುಂದದೆ ಮಹಾಹವಕೆ ಬೇಱೊಂದು ಮಣಿವರೂಥವನಡರ್ದು (ಜೈಮಿಭಾ. ೨೨-೩೪). [ಸಂ.]

**ಮಣಿವಸರ** (ನಾ). ರತ್ನಗಳನ್ನು ಮಾರುವ ಅಂಗಡಿ : ಅಗಸಚುಂಬಿತ ಕರುವಾಡ ಗುಡಿಗಳು ಬೇಗಲಲುಗೆ ವಾಯುವಿಂದ ತಾಗಿ ಭಗಣಗಳುದುರಿ ತಿಳಿಗೆಂಬವೊಲಾಗೆಸೆದುದು ಮಣಿವಸರ (ವರ್ಧಕ. ೧-೦೦೭).

[ ಮಣಿ$_3$ + ಪಸರ ]

**ಮಣಿವಾಗಿಲ್** (ನಾ). ರತ್ನಗಳಿಂದ ಅಲಂಕರಿಸಿದ ಬಾಗಿಲು ; ರತ್ನಖಚಿತವಾದ ದ್ವಾರ : ಸಂದಣಿಸಿದ ಮಣಿವಾಗಿಲೊಳೊರ್ವ ಪುಳಿಂದನಿತಂಬಿನಿ . . . ಒಂದರಗಿಳಿಸಹಿತಂ ನಿಂದಿರ್ದಪಳ್ (ಜಯುಕಾ. ೨-೨೦) ; ಕಂತುಕೇಳಿಯಾಂತೆಳೆಯಳೊಱಲ್ದು ಬಂದು ಮಣಿವಾಗಿಲೊಳೀಕ್ಷಿಸಿದಳ್ ಮಹೀಶನಂ (ರಾಜಶೇ. ೭-೯). [ ಮಣಿ$_3$ + ಬಾಗಿಲ್ ]

**ಮಣಿವಾಡ**, ಮಣಿಮಾಡ (ನಾ). ರತ್ನಗಳನ್ನು ಕೆಚ್ಚಿದ ಮಹಡಿ ; ರತ್ನಖಚಿತವಾದ ಸೌಧ : ಎಳವೆಂಡಿರನೊಳಕೊಂಡೆಸೆದಿರ್ಪ ಮಣಿವಾಡಂಗಳ ಸಾಲ್ಗಳಿಂ . . . ರಾಜವೀಧಿ ವಿರಾಜಿಸುತ್ತಿರ್ದುದು (ಉದ್ಭಟ. ೧-೪೯ ವ); ಮದಿಲೊಳು ಮಣಿವಾಡದೊಳು ಪೊಂಬಾಗಿಲ ತುದಿಯೊಳು ಪಟ್ಟಶಾಲೆಯೊಳು ಮದನನ ಪೆಂಡವಾಸವೆನಲಾ ಪುರಸುದತಿಯರವನ ನೋಡಿದರು (ತ್ರಿಲಾಂ. ೦೩-೩೪). **ಮಣಿಮಾಡ** : ರತ್ನಕಂಬಳಿಯಂ ಮಣಿಮಾಡದ ನೆಲೆಯೊಳಿರ್ದಾತ್ಮೀಯಾತ್ಮಜಂಗೆ ಕೆಲದೊಳಿರ್ದ ಪರಿಚಾರಕಿಯ ಕಯ್ಯೊಲಟ್ಟಿದಾಗಳ್ (ಸುಕುಮಾ. ೧೧-೦೦೮ ವ); ಅಡಿಕಲ್ಗೊಂಡೊಪ್ಪುವೇೞುಂ ನೆಲೆಗಳ ಮಣಿಮಾಡಂಗಳಿಂದಂ ವಿಚಿತ್ರಂಬಡೆದಿರ್ದುತ್ತುಂಗಕೂಟಂಗಳಿಂ . . . ಕೌತುಕಕ್ಕಂದೆಡೆಯಾಯ್ತು (ಚಾರಪು. ೧-೦೫೪) ; ಏಕಾರಣಮಾ ಮಣಿಮಾಡಮಿರ್ದಪುದೀ ಕುಧರಾಗ್ರದೊಳು (ತ್ರಿಲಾಂ. ೪-೭೦).

[ಮಣಿ$_3$ + ಮಾಡ$_1$]

**ಮಣಿವಾಳ** (ನಾ). ರತ್ನಗಳನ್ನು ಮಾರುವವನು ; ರತ್ನಪಡಿ ವ್ಯಾಪಾರಿ : ಲಲಿತಯಮುನೆಯೊಳುಡುನಿಕರ ಮಾರ್ಪೊಳೆವವೊಲು ನೀಲಾಂಬರದಿ ಮಣಿಬಳಸಿರಲು ಮಣಿವಾಳರಂಗಡಿಯೆಸೆದುವು (ಜಾವಂಶ. ೨-೨೯).

[ಮಣಿ$_3$ + — ವಾಳ$_3$ (<—ವಳ)]

**ಮಣಿವಿಭೂಷಣ** (ನಾ). ೧. ರತ್ನಖಚಿತವಾದ ಆಭರಣ. ೨. [ಛಂದ] ಅಕ್ಷರಛಂದಸ್ಸಿನಲ್ಲಿ ಪ್ರಸಿದ್ಧವಾದ ಇಪ್ಪತ್ತಾರು ಛಂದಸ್ಸುಗಳಲ್ಲಿ ಹದಿನೈದನೆಯ ಅತಿಶಕ್ವರಿ ಛಂದಸ್ಸಿನ ಒಂದು ವೃತ್ತ : ಪಾವಕೇಂದ್ರು ಶಶಿಯುಗ್ಮದಿನತ್ತ ಹುತಾಶನಂ ಭಾವಿಸುತ್ತಿರೆ ಪದಾಂತದೊಳಿರ್ದೊಡೆ ವಿಶ್ರಮಂ ಪೀವರಸ್ತನಭರಾನತಮಧ್ಯೇ ಕವೀಂದ್ರಸಂಭಾವಿತಂ ಮಣಿವಿಭೂಷಣಮೆಂದಱಿ ನೀನಿದಂ (ಛಂದೋಂಬು. ೨-೦೪೫). [ಸಂ.]

**ಮಣಿವೆಜ್ಜ** (ನಾ). ರತ್ನದ ಹರಳಿನಲ್ಲಿರುವ ತೂತು,–ರಂಧ್ರ : ಮಣಿವೆಜ್ಜದೊಳಡಗುವುದೆಯಾಕಾಶ (ತೊರರಾ. ೬-೫೩-೭೪). [ಮಣಿ$_3$ + ವೆಜ್ಜ ]

**ಮಣಿವೆಸ** (ನಾ). ರತ್ನದ ಹರಳುಗಳಿಂದ ಮಾಡಿದ ಕೆಲಸ ; ರತ್ನಗಳನ್ನು ಕೆಚ್ಚುವ ಕೆಲಸ : ವಿನಿರ್ಮಿಸಿದ ಸುಯ್ಯಾಣವೆಸದ ಕತ್ತರಿವೆಸದ ಮಣಿವೆಸದ ಮೇಲ್ಗಟ್ಟಿನೊಳಂ ಮಕರಪತ್ರೀಯ ಕಂಠಿಕಾಮಾಳಿಗಳಿನಿಪ್ಪ ವಿವಿಧಮಣಿತೋರಣಂಗಳೊಳಂ . . ಅಸದಳಮಾಗಿ (ವರ್ಧಪು. ೭-೩ ವ).

[ಮಣಿ$_3$ + ಬೆಸ$_1$]

**ಮಣಿವೆಳಗು** (ನಾ). ರತ್ನದ ಹರಳುಗಳಿಂದ ಉಂಟಾಗುವ ಬೆಳಕು; ರತ್ನಪ್ರಭೆ : ಬೀಳುಗೊಟ್ಟನು . . . ಜಾಳಿಗೆಯ ಮಣಿವೆಳಗುಗಳ ವೈಹಾಳಿಗಳ ವೈಡೂರ್ಯದೀಪ್ತಿ ನಿವಾಳಿಗಳ ಸುಪತಾಕೆ ಬೆಳಗುವ ಹೇಮರಥ ಸಹಿತ (ಕುವ್ಯಾ.ಅ. ೬-೧೧); ತೊಳತೊಳಗುವ ತೊಡವಿನ ಮಾಣಿಕಮಣಿ ವೆಳಗಿನ ಸೊಡರಾರತಿಯುಮ ಕಲ್ಲಿನ ವಿಜಯಾಗರ್ಜಿಪಂತೆ ಕಿಂಪುರುಷರ ಲಲನೆಯುರತಿರಂಜಿಸಿವರು (ಶ್ರೀಶಾಂ. ೧೪-೬೮); ಮಂಗಳಗೀತೆಯುಂ ಪಾಡಿ ಮಣಿವೆಳಗಿನಾರತಿಯುಂ ಬೆಳಗುವ ಭಾಸುಭಾವೆಯುಂ . . . ಪೆಂಪನಾಳ್ದು (ಕಬಕಂ. ೧-೬೯ ವ). [ಮಣಿ₃ + ಬೆಳಗು₂]

**ಮಣಿವೊರಜೆ** (ನಾ). ಸಣ್ಣ ಸಣ್ಣ ಗಂಟೆಗಳಿಂದ ಅಲಂಕೃತವಾದ ಹಗ್ಗ : ಆ ಕಂದರದೊಳು ಅಂತ ರತ್ನಂಗಳೇ ಮಣಿವೊರಜೆ ಕಳಧೌತಕಾಂತಿ ಪೊಂಜೂಲೆನೆ . . . ತಿರ್ದಿ ತೋರ್ಪ ಪಟ್ಟದ ದಂತಿಯಿಂದೆಸಲ್ ಕನಕಾಚಲಂ ಮೆಚ್ಚಿದುದು (ತಂಜಪು. ೨-೮). [ಮಣಿ₃ + ಪೊರಜೆ]

**ಮಣಿಶಿಲೆ** (ನಾ). ೧. ರತ್ನಗಳಿಂದ ಕೂಡಿದ ಕಲ್ಲು; ರತ್ನಗಳು ಹುದುಗಿರುವ ಶಿಲೆ : "ರತ್ನಶಿಲೆಯೆನಲ್ ಮಣಿಶಿಲೆ" (ಮಂಗರಾ. ೩೦-೬) : ಬೆಳ್ದಾವರೆಗಳಲರ್ದಳೆಯದ ಕೊಳಂಗಳುಂ ಮಣಿಶಿಲಾರೋಚಿಯುಂ ಪೊಳೆಯುದಚಲಂಗಳುಂ . . . ಮುಳಿದಜಸಲಾಂ ಕಾಣೆನಾ ಮಹೀಮಂಡಲದೊಳು (ಕೈಬಾಶಾ. ೩-೯) ; ಚಾರುಮಣಿಶಿಲೆಯ ವಸುಗೆಸರ ಗಾರೆಯಲಿ ವಲವೇರಿ ರಚಿಸಿದರೊಯಿಂಬಂತೆ (ನವಬೋ. ೨-೨೬). ೨. ಔಷಧಿಯಾಗಿಯೂ ಬಾಣ ಬಿರುಸುಗಳಿಗೆ ಸಿಡಿಮದ್ದಾಗಿಯೂ ಉಪಯೋಗಿಸುವ, ಕೆಂಪುಬಣ್ಣದ ಒಂದು ಬಗೆಯ ಖನಿಜ : "ಮನಶ್ಶಿಲಾ, ಮನೋಗುಪ್ತಾ, ಮನೋಹ್ವಾ, ನಾಗಜಿಹ್ವಿಕಾ — ಈ ಮಣಿಶಿಲೆಯ ಪೆಸರುಗಳು" (ಸಿವ್ಯಾಂತಿ. ೩೦೬) : ಹೊಸ ಮಣಿಶಿಲೆ ಮೂಟು ತೂಕ (ಶಾಳ್ವಸಾಂ. ೦೯) ; ಇಂಗಲಿಕವು ಮಣಿಶಿಲೆಯು ಅಂಗಡಿಯೊಳು ಮಾಜುತಿಹ ವ್ಯವಹಾರಿಗಳ್ ಕಂಗೊಳಿಸಿದರು (ಅದ್ಭುರಾ. ೩-೬೬). ೩. ಒಂದು ಬಗೆಯ ಸಸ್ಯ : ಬರಿವದಣೆ ಸುಣ್ಣಗಂದಿಗೆ ನಜುಪಲ್ಗುಳ್ಳಂ ಮಣಿಶಿ[ಶಾಶಾಂ. ಸಿ]ಲೆ ಶಿವನ್ನಿಯುಂ ಶತಾವರಿ ಪುಲಿಗಿಲ್ (ಅಶ್ವಶಾ. ೧೧-೬೦). [ಸಂ. ಮಣಿಶಿಲಾ]

**ಮಣಿಶುಕ್ತಿ** (ನಾ). ಒಂದು ಬಗೆಯ ಸುಗಂಧದ್ರವ್ಯ : ಆ ವೇದೀಸ್ಥಳದೊಳ್ . . . ನವಚಂದ್ರಕಾಂತಚಷಕಂಗಳ್ ಚಂದನಕ್ಷೋದದಿಂ ತೀವಿದುವಂ ಮಣಿಶುಕ್ತಿಗಳ್ ಪರಿಮಳತ್ಕಾಶ್ಮೀರಸಾರಾಂಬುವಿಂ ತೀವಿದುವಂ ಬಜಿದಿರ್ದ ವೋಲೆಸೆದುವಾದಂ ವರ್ಣಸಾಮಾನ್ಯದಿಂ (ಚಂದ್ರಪು. ೬-೩೪). [ಸಂ.]

**ಮಣಿಸರ** (ನಾ). ೧. ರತ್ನಗಳನ್ನು ಪೋಣಿಸಿ ಮಾಡಿದ ಸರ; ರತ್ನಹಾರ. ೨. ಗಾಜು, ಕಲ್ಲು, ಬೀಜ ಮುಂತಾದುವುಗಳಿಂದ ಮಾಡಿದ ಬಣ್ಣ ಬಣ್ಣದ ಮಣಿಗಳ ಹಾರ : ಕಲ್ಲಿನಿಂದ ಮಣಿಸರಗಳನ್ನು ಮಾಡುವ ವಿಧಾನವನ್ನು ಪರೀಕ್ಷಿಸಿದರೆ ಆಶ್ಚರ್ಯವಾಗದಿರಲಾರದು (ಶಾರದ. ೦೪); ಮಣಿಸರಕ್ಕೆ ಗತಿಯಿಲ್ಲದವ ಹಣ ದಕ್ಷಿಣೆ ಕೊಟ್ಟಾನೇ ? (ಗಾದೆ). [ಸಂ.]

**ಮಣಿಸರವಳಿಗೆ** (ನಾ). ಗೋದಿಹಿಟ್ಟು ಅಥವಾ ರವೆಯನ್ನು ಹದವಾಗಿ ಕಲಸಿ ಮಾಡಿದ ಮಣಿಯಾಕಾರದ ಉರುಳೆ ಮತ್ತು ಅದರಿಂದ ಮಾಡಿದ ಪಾಯಸ : ಸರವಳಿಗೆ ಸಣ್ಣಸರವಳಿಗೆ ಮಣಿಸರವಳಿಗೆ ವರಮಧುರ ಪೂಸಣಂಬಂ ಸಮೆದವಂ ಶೊಳಗೆ (ಬಸರ. ೬-೧೪); ಪೊಳೆವ ಶರಚ್ಚಂದ್ರಿಕೆಯೊಳ್ಮುಬಿಂಕಿ ನಸುದೋರ್ಪ ತಾರೆಗಳ ತೆಜದಿಂ ಕಣ್ಗೊಳಿಸಿ ಮಗಮಗಿಪ ಮಣಿಸರವಳಿಗೆಯು ಪಾಯಸಮನಸದಳಂ ಬಡ್ಡಿಸಿದರ್ (ಶಾಂತೀಶ್ವ. ೦೩-೩೬).
[ಮಣಿ₃ + ಸರವಳಿಗೆ]

**ಮಣಿಸಿಂಹಾಸನ** (ನಾ). ರತ್ನಖಚಿತವಾದ ಸಿಂಹಾಸನ : ಮಣಿಸಿಂಹಾಸನ ಮಸ್ತಕಾಭರಣವಿಂದೇಕಾಗದೆಂದಾವ ಕಾರಣದಿಂ ಪೇಚಿನಿತೊಂದು ಪೊಚ್ಚುತಪೆದಿರ್ದಂ (ಕುಸುಮಾ. ೧-೩೬). [ಸಂ.]

**ಮಣಿಸಿಲೆ** (ನಾ). = ಮಣಿಶಿಲೆ ೨ : ಮೈಲಿತುತ್ತು, ಇಂಗಲೀಕ, ಮಣಿಸಿಲೆ ಒಳಗೆ ನೀರು ಹಾಕಿ . . . ಇರಿಸುವುದು (ವಿಶ್ವವಿ. ೦೪). [< ಸಂ. ಮಣಿಶಿಲಾ]

**ಮಣಿಸು** 'ಮಣಿಯಿಸು' ನೋ.

**ಮಣಿಸೊಡರು** (ನಾ). ರತ್ನಖಚಿತವಾದ ದೀವಿಗೆ : ಇಕ್ಕೆಲದ ಮಣಿಸೊಡರುಗಳ ಮಾಣಿಕ್ಯ ಮಣಿಭಿತ್ತಿಗಳ . . . ತನಿವೆಳಗು ತಿಗೆವುದು ಜನದ ಕಣ್ಮನವ (ಕಿಶಾಗ. ೧೧-೯೬-೦೯). [ಮಣಿ₃ + ಸೊಡರು (< ಸೊಡರ್)]

**ಮಣಿಸ್ತಂಭ** (ನಾ). ರತ್ನಗಳಿಂದ ಅಲಂಕರಿಸಿದ ಕಂಬ; ರತ್ನಖಚಿತವಾದ ಸ್ತಂಭ : ಪಸೆಯೊಳ್ ಪಾಸಿದ ಬೊಂಗಮುಲ್ಲವದ ದೇವಾಂಗಂ ಮಣಿಸ್ತಂಭದೊಳ್ ಪೊಸವತ್ಯಂಗಮಪೂರ್ವವಾಗೆ (ಶಾಂತಿಪು. ೧೧-೬೮); ಚಂದ್ರಿಕೆಯುನಿಳಿಪ ಧವಳಾರವೃಂದಂಗ[ಳ]ಂ ಇಂದ್ರನೀಲದ ಮಣಿಸ್ತಂಭ ಸಿಳಯಂಗ[ಳ]ು . . . ತೋಜುತಂ (ನುಶರ. ೯-೯೨). [ಸಂ.]

**ಮಣಿಹ₁** (ನಾ). ೧. ಬಾಗುವಿಕೆ; ನಮನ : ವಂದನೆ : ಮಣಿಹವನು ನಾನೊಲ್ಲೆ ತುಲಸಿಯ ಮಣಿಹವನು ನಾ ಬಲ್ಲೆ ಶೌರಿಯ ಮಣಿಹವನು ನಜಿ ಬಲ್ಲೆ ಗುರುಹಿರಿಯರ ಪದಾಂಬುಜಕೆ ಮಣಿಹವೊಂದಿಹ ಪರದೊಳೆಲ್ಲವು ಮಣಿಹವಾಯ್ತೆನಗೀಗ (ಶ್ರಹಾನ್ವ. ೬-೦೩). ೨. (ಮಾಡಲೇಬೇಕಾದ) ಕೆಲಸ : ಕಾರ್ಯ; ಉದ್ಯೋಗ : ನೀ ಬೈಚಿಟ್ಟ ಬಯಕೆಯ ನಿನಗಿತ್ತೆ ನೀ ಕಳುಹಿದ ಮಣಿಹ ನಿನಗೆ ಸಂದಿತ್ತು (ಶಶವ. II. ೬೪೬-೮೬೪೦); ಪರಿಚರರಿಗೆಯು ನಾವು ಬೆಸಸಿದ ಪರಿಯಲಿ ಪೇಳ್ ನಿನ್ನ ಮಣಿಹಮೋಳರು ಹಮುಳವೆನುತುಂ ಶವಾಸನಂ ಕಳುಹಿದನು ಹರನು (ಬಸಪು. ೪೦-೨೯); ಅನ್ನವಾಟಿಕೆಗಳೊಳ್ಪಾಕಮಂ ಮಾಡಿಸುವ ಮಣಿಹಮಂ ಕೃತವರ್ಮಕಂ ತಾಳ್ದನು (ಕೈಬಾಭಾ. ೩೪-೬). ೩. (ದೇವರು, ರಾಜ ಮುಂತಾದವರಿಗೆ ಮಾಡುವ) ಸೇವೆ; ಕೈಂಕರ್ಯ: ಮಣಿಹದಿಂದುಣಲುಂಟು ಕೇಳ್ವೆ ಮಣಿಹದಿಂದುಡಲುಂಟು ನೋಡ್ವೆ ಮಣಿಹದಿಂದೈಶ್ವರ್ಯವದು ಕೈಸೇರುವುದು ನಿನಗೆ ಮಣಿಹ ಲೇಸೆಲೆ ಮಗನೆ ಬರೆದೀ ಮಣಿಹವನು ಕಲಿ ಬಲ್ಲರಿಳೆಯೊಳು ಮಣಿಹದಿಂದಿನ್ನಿಲ್ಲ ಬದುಕೆಂದನು ಸುರಾರಾತಿ (ಶ್ರಹಾನ್ವ. ೬-೧೨).
[ಮಣಿ₁ + -- ಹ₂ (< — ಪ₂)]

**ಮಣಿಹ₂** 'ಮಣಿಯ' ನೋ.

**ಮಣಿಹಗಾಜಿ** 'ಮಣಿಯಗಾಜಿ' ನೋ.

**ಮಣಿಹರ್ಮ್ಯ** (ನಾ). ರತ್ನಖಚಿತವಾದ ಸೌಧ, — ಭವನ : ಮಣಿಹರ್ಮ್ಯಸ್ಥಳದಿಂ ನರೇಂದ್ರನಿಚ್ಚಿದಂ (ಮಲ್ಲಪು. ೮-೦೬೩) ; ಮಣಿಹರ್ಮ್ಯಶ್ರೇಣಿ ಕೇಳೀವನವಿಳಸಿತಮಾ ನವ್ಯಪುಷ್ಪೋಪಹಾರೋಲ್ಬಣಮೋಕಃಪ್ರಾಂಗಣಂ (ಶಾಂತೀಶ್ವ. ೦೩-೦೬೨) ; ಅಲ್ಲಿ ಮಣಿಹರ್ಮ್ಯಪ್ರಾಸಾದದ ಮೇಲೆ ರೋಹಿಣೀಸಹಿತನಾದ ಚಂದ್ರನ ಪೂಜೆ ನಡೆಯುವುದು (ಸಂಸಾಟಿ. ೦೪೩). [ಸಂ.]

**ಮಣಿಹಾಗಲ** (ನಾ). ಮಣಿಯಾಕಾರದ ಮೃದುವಾದ ಮುಳ್ಳುಗಳಿಂದ ಕೂಡಿದ ಒಂದು ಬಗೆಯ ಹಾಗಲಕಾಯಿ : ಬದನೆ ಪಡುವಲ ಮಣಿಹಾಗಲ (ಸೌಗಂಧಿ. ೩೬-೦೮). [ಮಣಿ₃ + ಹಾಗಲ (< ಪಾಗಲ್₁)]

**ಮಣಿಹಾರ** (ನಾ). = ಮಣಿಸರ ೧ : ಓರೊರ್ವರ ಕೊರಲಿಂ ಮಣಿಹಾರಮುಮಂ ತೆಗೆದು. . .ಓರೊರ್ವರ ಕೊರಲೊಳಿಕ್ಕಿದರ್ ಸಂಭ್ರಮದಿಂ (ಲೀಲಾವ. ೧೧-೪೪); ಮಣಿಹಾರ ಬೇಕೆ ಸೂಕರಗೆ (ಇಂತಾಪ. ೧೧೩-೬೨). [ಸಂ.]

**ಮಣಿಹಾಜಿ** 'ಮಣಿಯಗಾಜಿ' ನೋ.

**ಮಣಿಹೆಂಬೆ** (ನಾ). ಅನಾನಸ್ ಹಣ್ಣು: P ಮಣಿಗಳನ್ನು ಪೋಣಿಸಲು ಅನಾನಸ್‌ಹಣ್ಣಿನ ಗರಿಗಳಿಂದ ತೆಗೆದ ನಾರನ್ನು ಉಪಯೋಗಿಸುತ್ತಾರೆ : ಹಣ್ಣುಹಂಪಲ್ಗಳಂ, ಸೌತೆಪಚ್ಚಡಿಗಳಂ, ಮಣಿಹೆಂಬೆಯಂ . . . ಬೆಣ್ಣೆಯಂ ಬಡಿಸಿ (ಶ್ರೀರಾಮಪ. ೨೬೦-೨೨೨). [ಮಣಿ₃ + ಹೆಂಬೆ₁]

**ಮಣಿಹ್ಯ** 'ಮಣಿಯ' ನೋ.

**ಮಣಿಹ್ಯಗಾರ** 'ಮಣಿಯಗಾಜಿ' ನೋ.

**ಮಣು** 'ಮಣ್' ನೋ.

**ಮಣುಕು** 'ಮಣಕು' ನೋ.

**ಮಣುಗಸಾತ್ತ್ವ** (ನಾ). ಒಬ್ಬಾತನ ಹೆಸರು : ವಿಜ[ಸೆ]ಟ್ಟಿಗರಾ ಧರ್ಮ್ಮ ನಾಯಗನ್ ಮಣುಗಸಾತ್ತ್ವರ್ ಸರ್ವ್ವವನ್ಸು ಪುಲಿಯುರ್ಮ್ಮನ್ ಈ ಒಕ್ಕಲ್ ಪಡೆದುವು (ಎಇ. IX, ೨೩-೧೩; 800). [ ? ]

**ಮಣುದೆರೆ** (ನಾ). ಭೂಮಿಯ ಮೇಲೆ ಹಾಕುವ ಒಂದು ಬಗೆಯ ತೆರಿಗೆ : ಬೇಡಿಗೆ ಬೀಜವತು ಮಣುದೆರೆ ಮಗ್ಗದೆರೆ ಸುಂಕ ಸೊಡಿಗೆ (ಎಕ. X, ಕೋಲಾರ. ೨೯೭-೨೮; ?).

[ ಮಣು (< ಮಣ್) + ತೆರೆ$_3$ (< ತೆಱೆ$^3_3$) ]

**ಮಣೆ$_1$** (ನಾ). ೧. ಮರ, ಲೋಹ ಮೊದಲಾದುವುಗಳಿಂದ ಮಾಡಿದ ತಗ್ಗಾದ ಪೀಠ,-ಆಸನ : "ವಿಷ್ಟರಂ, ಪೀಠಂ, ಆಸನಂ—ಈ ೩ ಮಣೆ" (ಹಲಾಯು. ೫೨-೧೫೫); ಅಗ್ರಾಸನದೊಳುಣಲೆಂದು ಬಂದು ಮಣೆಯನೇಱೆ ದರ್ಪ್ಪಣನಂತೆಂದಂ (ವಡ್ಡಾರಾ. ೦೬೫-೨೫); ಏಱಿದ ಮಣೆಯುದಯನಗಂ ತೋಱಿದ ಮುಖಬಿಂಬವಿಂದುಬಿಂಬಮಪಾಂಗಂ ಬೀಱಿದ ಚಂದ್ರಿಕೆಯೆನೆ . . . ಸೌಂದರಿಯೆಸೆದಳ್ (ಗಿರಿ. ೯-೦೫೬); ಮಣೆಗೆ ಮುಂಡಿಸಿ ಕುಳಿತುಂ ಬೌತಣದ ವಿದ್ಯೆಯ ಬಲ್ಲೆರಿ (ಕುಮಾರ. ೬-೦೨). ೨. ಚದುರಂಗ, ಚೆನ್ನೆ ಮುಂತಾದ ಆಟಗಳನ್ನಾಡುವುದಕ್ಕಾಗಿ ಚೌಕಾಕಾರದ ಮನೆಗಳು ಅಥವಾ ಗುಳಿಗಳನ್ನು ಒಳಗೊಂಡಿರುವ ಲೋಹ, ಮರ ಮುಂತಾದು ವುಗಳಿಂದ ಮಾಡಿದ ಹಲಗೆ : ಮದಕರಿಯ ಪರಿವ ಭರದಿಂದದಿರ್ದೊಡೆ ನೆಲನೊಡ್ಡಿ ನಿಂದ ಚದುರಂಗಮುಮೊರ್ಮೊದಲೆ ನಡುಗಿದುದು ಕೂಡಿದ ಚದುರಂಗದ ಮಣೆಯನಲ್ಲಿ ದಂತಪ್ಪಿನೆಗಂ (ಶಂಕರಾ. ೦೦-೬೦) 'ಚೆನ್ನೆಮಣೆ' ಪರಾ.

**ಮಣೆಹಾಕು** = ೧. ಪೀಠವನ್ನು ಕೊಡು; ಆಸನ ಹಾಕು : ಮಣೆ ಹಾಕಿ ತಟ್ಟೆಯಿಡು (ಜಾಥ). ೨. (ಆಲಂ) ಗೌರವ ಕೊಡು; ಸನ್ಮಾನಿಸು : ಅಸತ್ಯಕ್ಕೆ ಮಣೆಹಾಕುವುದು ನನ್ನ ಜಾಯಮಾನಕ್ಕೆ ಬಂದಿಲ್ಲ (ಮುದ್ದು. ೫೦); ಮುಖ ನೋಡಿ ಮಣೆಹಾಕು (ಗಾದೆ). [ದೇ.॥ ತಮಿ. ಮಣೈ; ತುಳು. ಮಣೆ]

**ಮಣೆ$_2$** 'ಮಣೆಯ' ನೋ.

**ಮಣೆಗಾರ** 'ಮಣೆಯಗಾಱ' ನೋ.

**ಮಣೆಗಾರತನ** (ನಾ). ದೇವಸ್ಥಾನ, ಅರಮನೆ ಮುಂತಾದುವುಗಳ ಉಸ್ತುವಾರಿಯನ್ನು ನೋಡಿಕೊಳ್ಳುವ ಅಧಿಕಾರ : ರುಣವ ಕೊಟ್ಟವ ವರುಂಟು ರುಣಮಾಡಿದವರುಂಟು ಮಣೆಗಾರತನವಿದರೊಳೆಂದಿಗೂ ಬೇಡ (ಜಗನ್ನಾ. ೦೯). [ಮಣೆಗಾರ (< ಮಣೆಯಗಾಱ) + ತನ]

**ಮಣೆಗಾರಿಕೆ** (ನಾ). = ಮಣೆಗಾರತನ : ಅವಳನ್ನು ಬರಾವೃ ಮಣೆಗಾರಿಕೆ ಮಾಡೋದೊಂದು ಬಾಕಿ (ಜುಲೆಮ. ೬೦).

[ಮಣೆಗಾರ (< ಮಣೆಯಗಾಱ) +— ಇಕೆ]

**ಮಣೆಗಾಱ** 'ಮಣೆಯಗಾಱ' ನೋ.

**ಮಣೆಬಾಬು** (ನಾ). ಕಂದಾಯದ ವಸೂಲಿಯ ಬಾಬ್ತು : ಕುಲ್ಲು ಜಮಾ ಬಂದಿ ಐವಜಿಗೆ ಐನು ಸುವರ್ಣಾದಾಯಕ್ಕೆ ಹೊಲಗಂದಾಯವಿಷ್ಟು ಮಣೆ ಬಾಬು ತಪ್ಸೀಲು ಪ್ರಕಾರ ಐವಜು ಇಷ್ಟು (ಮಹಾಶಂ. II, ೬೨).

[ ಮಣೆ$_2$ ( < ಮಣೆಯ ) + ಬಾಬ್ತು$_1$ ]

**ಮಣೆಯ** 'ಮಣೆಯ' ನೋ.

**ಮಣೆಯಗಾಱ** 'ಮಣೆಯಗಾಱ' ನೋ.

**ಮಣೆಹಗಾರ** 'ಮಣೆಯಗಾಱ' ನೋ.

**ಮಣ್ಕುಂದ** (ನಾ). ಒಂದು ಸ್ಥಳದ ಹೆಸರು : ಕೂಡಲೂರ ಬೋದರ ಯೂರ ಮಣ್ಕುನ್ದಕ್ಕೆ ಬಿಟ್ಟ ಸ್ಥಿತಿಕ್ರಮಮಾವುದು ಎನ್ದಡೆ (ಎಕ. IX, ಕನ್ನಪ. ೦೬೦-೫; 913). [ ಮಣ್ + ಕುಂದ$_3$ ]

**ಮಣ್ಕುಡಿಕೆ** (ನಾ). ಮಣ್ಣಿನಿಂದ ಮಾಡಿದ ಕುಡಿಕೆ : ಮುದ್ರಿಡಿದ ಮಣ್ಕುಡಿಕೆ ಕಿಡಿಗೊಂಡು ಸಿಡಿಯೆ ರಾತ್ರಿಯು ನಭೋಭೋಗದಲಿ ಕರೆವಂತೆ ಪೋಲ್ ವರ್ಣಮಯನಕ್ಷತ್ರವೃಷ್ಟಿ ? (ತತ್ತ್ವಂಗ. ೬-೧೬೦).

[ ಮಣ್ + ಕುಡಿಕೆ$_1$ ]

**ಮಣ್ಕುಪ್ಪೆ** (ನಾ). ಸಮಾಧಿಯ ಮೇಲೆ ಕಟ್ಟುವ ಮಣ್ಣಿನ ದಿಬ್ಬ : ನಾನೆನ್ನ ಕಟ್ಟೊಲ್ಮೆಯಣ್ಣಂಗೆ ಮಣ್‌ಕುಪ್ಪೆಯಿಕ್ಕುವೆನ್ (ಅಂತಿಗೂ. ೯-೬೬).

[ ಮಣ್ + ಕುಪ್ಪೆ$_1$ ]

**ಮಣ್ಗಚ್ಚು** (ಕ್ರಿ). ಭೂಮಿಯನ್ನು ಹಿಡಿ ; ನೆಲಕಚ್ಚು : ಸೈನ್ಯಭಾರದಿಂ ಸೀರೆಯುಂ ಸುತ್ತಿದಂತೆ ಸಿವುಡಾದನಹಿರಾಜನಖಿಳದಿಗ್ಗಜರಾಜಿಯುವುಡೂಱೆ ಮಣ್ಗಚ್ಚಿದುವು (ವಿಬಿ. ೯೮-೨೨).

[ ಮಣ್ + ಕಚ್ಚು$_1$ ( < ಕಚ್ಚು$_1$ ) ]

**ಮಣ್ಗಪ್ಪರ** (ನಾ). ಮಣ್ಣಿನಿಂದ ಮಾಡಿದ ಬಕ್ಕರೆ, —ಓಡು : ಮಣ್ಗಪ್ಪರವ ವರಸತ್ಕದಿಂ ಮೆಱೆದ ತಿರುನೀಲಕಂಠಗಳ ಚರಣಾಂಬುಜಕ್ಕೆ ಶರಣು (ಐತಿಂ. ೩೫-೦). [ ಮಣ್ + ಕಪ್ಪರ$_2$ ]

**ಮಣ್ಗೊಡು**, ಮಣ್ಣುಕೊಡು (ಕ್ರಿ). ೧. ನೆಲವನ್ನು ದಾನಮಾಡು ; ಭೂಮಿಯನ್ನು ಕೊಡು : ಎಱೆಯಮೆ ದೇಗುಲ ಮಾಡಿಸಿ ಮಣ್ಗೊಟ್ಟಳ್ (ಎಕ. VII, ಶಿಕಾರಿ. ೯೫(ಬ)-೨೮ ; ಸು. 890 ?). **ಮಣ್ಣುಕೊಡು** : ೨. ಸತ್ತ ವ್ಯಕ್ತಿಯನ್ನು ಸಮಾಧಿ ಮಾಡುವುದಕ್ಕೆ ಮೊದಲು ದೇಹದ ಮೇಲೆ ಮಣ್ಣುಹಾಕು : ನಾನೂ ಬೇಕಾದಷ್ಟು ಮಂದಿಗೆ ಮಣ್ಣು ಕೊಟ್ಟೆ (ಅಮೂ. ೫) ; ಮುದುಕಿಗೆ ಮಣ್ಣುಕೊಡಲು ಹೋಗಿದ್ದ ಗರಿಯ ಆ ದಿನ ಇನ್ನೂ 'ನ್ಯಾರೆ' ಮಾಡಿರಲಿಲ್ಲ (ಮುದ್ದು.ಹ. ೨೫).

[ ಮಣ್ + ಕೊಡು$_1$ ]

**ಮಣ್ಗೊಳ್** (ಕ್ರಿ). (ಆಲಂ) ನೆಲಸಮವಾಗು; ಹಾಳುಬೀಳು : ಮಣ್ಗೊಂಡ ತುತ್ತಲ್ಗಳಿಟ್ಟೆಡೆಯುಂ ಬಿಟ್ಟಬಿದೇಗುಲಂಗಳೆಡೆಯುಂ ಕಾದಿರ್ಪ ಪಾಣ್ಬರ್ಕಳುಂ (ಸುಕು.ಸು. ೮-೦೩೫). [ಮಣ್ + ಕೊಳ್$_1$]

**ಮಣ್ಣಱ** (ನಾ). ಧರ್ಮಕಾರ್ಯಕ್ಕಾಗಿ ಕೊಂಡುಕೊಂಡ ಭೂಮಿ (?): ಪೊನ್ನಱ ಕೊಟ್ಟ ಮಣ್ಣಱಂ ಕೊಣ್ಡುಮ್ (ಎಕ. III (R), ಹೆಗ್ಗಡ. ೩೮-೦೦; 1021); ಪಟ್ಟವಾಳಿಯು ಪೊನ್ನಱ ಕೊಟ್ಟು ಮಣ್ಣಱ ಕೊಣ್ಡು ಬಿಡಿಸಿದಳ್ (ಎಕ. III, ಹಂಜಿಪ. ೦೬೯-೨೨; 1092) ; ಕೆಲವು ದತ್ತಿಯ ಶಾಸನಗಳಲ್ಲಿ 'ಪೊನ್ನಱ ಕೊಟ್ಟು ಮಣ್ಣಱ ಕೊಂಡು' ಎಂಬ ಉಕ್ತಿಯು ಬರುತ್ತದೆ. ಭೂಮಿಯ ಸ್ವಲ್ಪಭಾಗವನ್ನು ಹಣ ಕೊಟ್ಟು ಕೊಂಡದ್ದನ್ನು ಈ ಉಕ್ತಿಯು ಹೇಳುತ್ತದೆ (ಕಶಾಅ. ೦೬೬). **P** ಕನ್ನಡಶಾಸನಗಳಲ್ಲಿ ಅನೇಕ ಕಡೆ 'ಪೊನ್ನಱ', 'ಮಣ್ಣಱ' ಎಂಬ ಶಬ್ದಸಮುಚ್ಚಯವು ಪ್ರಯೋಗ ಗೊಂಡಿದೆ. ಇವೆರಡೂ ಸಾಮಾನ್ಯವಾಗಿ ಜೊತೆಯಾಗಿ ಬರುವುದರಿಂದ 'ಧರ್ಮಕ್ಕಾಗಿ ಕೊಟ್ಟಹಣ','ಧರ್ಮಕ್ಕಾಗಿ ಕೊಂಡ ಭೂಮಿ' ಎಂಬರ್ಥ ವನ್ನು ಸೂಚಿಸಬಹುದೆಂದು ಕಾಣುತ್ತದೆ. [ಮಣ್ + ಅಱ$_2$? ]

**ಮಣ್ಣಾಟ** (ನಾ). ಮಣ್ಣಿನಲ್ಲಿ ಆಡುವ ಆಟ ; ದೂಳಾಟ : ಮಣ್ಣಾಟ ಬಿಟ್ಟು ಮನೆ ಕಟ್ಟಿನೋಡು, ಸಂಸಾರದಲ್ಲಿ ಹೂಡು (ಮುಕ್ತಕಂ. ೨೯-೦೯).

[ಮಣ್ಣು (< ಮಣ್) + ಆಟ]

**ಮಣ್ಣಿ** (ನಾ). ಮೊಲೆ : ಪಾರೋತಿಗೆ ಆ ಕರುಳಿನ ಕರೆಯೇ ಬಾರದು ; ತನ್ನ ಮಗುವಿಗೆ ಮಣ್ಣಿ ಉಣಿಸುವ ಯೋಗವೇ ಕೂಡಲೊಲ್ಲದು (ಜುಲಮ. ೦೬). 'ಅಮ್ಮಣ್ಣಿ$_1$' ಪರಾ.

[ದೇ.॥ ತಮಿ. ಮೊಣ್ಣಿ, ಮೊಣ್ಣಿ ; ತುಳು. ಮುಂಞ, ಮುಂಞ$^3$]

**ಮಣ್ಣಿಗ** (ನಾ). ಬೇಸಾಯದ ಭೂಮಿಯನ್ನು ಹೊಂದಿರುವವನು ; ಜಮೀನುದಾರ : ಕಕ್ಕರಸೆಯ ಮಣ್ಣಿಗಂ ಬೀರದ ಪೋಜಗಂ . . . ನಿರೂಪಿತ ನಾಗಿ ಪೆರ್ಗ್ಗಡೆತನಗೆಯ್ಯುತ್ತಂ (ಎಕ. VIII, ಸೊರಬ. ೯೬೯-೦೯ ; 954) ;

ಕಡೆಕೊಳಂದ ಮಣ್ಣಿಗಪ್ಪೊಂಬ್ಗುಲಂ (ಪ್ಶುಶಂ. ೦೯೩೪, ೩೮-೨೨ ; 11ನೆಯ ಶತ). 'ಅಯ್ಮಣ್ಣಿಗ' ಪರಾ. [ಮಣ್ + — ಇಗ]

**ಮಣ್ಣು** 'ಮಣ್' ನೋ.

**ಮಣ್ಣುಕೊಡು** 'ಮಣ್ಗೊಡು' ನೋ.

**ಮಣ್ಣುಗ** (ನಾ). = ಮಣ್ಣಿಗ : ಉಗ ಪ್ರತ್ಯಯಕ್ಕೆ — ನಾರುಗಂ . . . ಪೆಣ್ಣುಗಂ, ಮಣ್ಣುಗಂ (ಕವುದ. ೨೦೪ ಪ್ರಯೋ); ಪೆಣ್ಗೊಳ್ ಪ್ರವಣಂ ವ್ಯಾಕೃತಂ ಮೇಣ್ ಪೆಣ್ಣುಗಂ ಏವಂ ಮಣ್ಣುಗಂ (ಶಬ್ದಾನು. ೪೨೪ ಪ್ರಯೋ). [ಮಣ್ + — ಉಗ]

**ಮಣ್ಣುಗಾಣಿಸು** (ಕ್ರಿ). ಹೂಳು ; ಸಮಾಧಿಮಾಡು : ಹೆಣವನ್ನು ಮಣ್ಣುಗಾಣಿಸಿ ಬರುವುದರೊಳಗೆ ಸಂಜೆಯಾಯಿತು (ರೂಢಿ).
[ಮಣ್ಣು (< ಮಣ್) + ಕಾಣಿಸು]

**ಮಣ್ಣುಗೂಡು** (ಕ್ರಿ). (ಅಲಂ) ಹಾಳಾಗು ; ನಾಶವಾಗು : ತಪ್ಪು ರೈತ ಕಾಳೇಗೌಡನು ಆಡಿದ ಮಾತನ್ನು ಕೇಳಿ ಇದುವರೆಗೂ ಇದ್ದ ಆಸೆ ಧೈರ್ಯ ಎಲ್ಲಾ ಮಣ್ಣುಗೂಡಿತು ರಂಗರಾಯರಿಗೆ (ಮುಗಮಾಂ. ೦೩೯) : ನಿನ್ನ ಮನೆತನದ ಘನತೆ ಗೌರವಗಳು ಮಣ್ಣುಗೂಡಿದವು (ಮುಂಗಾಮು. ೪).
[ಮಣ್ಣು (< ಮಣ್) + ಕೂಡು₁]

**ಮಣ್ಣುಣ್** (ಕ್ರಿ). (ಅಲಂ) ನಾಶವಾಗು ; ಹಾಳಾಗು : ಪರನ ಶೂಲ ಪ್ರಹಾರಗಳನ್ನು ಗಣಿಸದಿಹ ಧುರವಿಜಯನೀ ಸಮಯದೊಳು ನರನ ಶರದಿಂದ ಮಣ್ಣುಂಡುದೆಂತೊ (ವಂಶಾರಾ. ೬-೬೦-೩೭).
[ಮಣ್ಣು (< ಮಣ್) + ಉಣ್]

**ಮಣ್ಣುಣಿ** (ನಾ). ಮಣ್ಣನ್ನೇ ಆಹಾರವಾಗಿ ಉಳ್ಳುದು ; ಎರೆಹುಳು : (+). [ಮಣ್ಣು (<ಮಣ್) + — ಉಣಿ]

**ಮಣ್ಣುಪಾಲು** (ನಾ). ೧. (ಅಲಂ) ನಾಶ ; ಹಾಳು. ೨. ಸಾವು ; ಮರಣ : ಎಣ್ಣೆ ಬೆಣ್ಣೆಯ ರಿಣವು ಅನ್ನವಸ್ತ್ರದ ರಿಣವು ಹೊನ್ನು ಹೆಣ್ಣಿನ ರಿಣ ತೀರಿದಾಕ್ಷಣದಿ ಮಣ್ಣುಪಾಲು (ಸರ್ವಜ್ಞ. ೪೬೩).

**ಮಣ್ಣು ಪಾಲಾಗಿಸು** = (ಅಲಂ) ಹಾಳುಮಾಡು; ನಾಶಮಾಡು : ಮಕ್ಕಳ ಸುಖಸೌಕರ್ಯಗಳನ್ನು ಅಲಕ್ಷಿಸುವ ರಾಷ್ಟ್ರವು ತನ್ನ ಭವಿಷ್ಯವನ್ನು ಮಣ್ಣುಪಾಲಾಗಿಸುವುದರಲ್ಲಿ ಸಂದೇಹವಿಲ್ಲ (ಮಾಪಶಾ. ೬೨). **ಮಣ್ಣುಪಾಲಾಗು** = (ಅಲಂ) ಹಾಳಾಗು ; ನಾಶವಾಗು : ನನ್ನ ಕೆಲಸ ಮಣ್ಣುಪಾಲಾಗುತ್ತೆ (ಶಿರಾಶ. ೩); ನನ್ನ ಉತ್ಸಾಹವೆಲ್ಲ ಮಣ್ಣುಪಾಲಾದಂ ತಾಯಿತು (ಅಲಹೂ. ೨೪). **ಮಣ್ಣುಪಾಲುಮಾಡು** = ೧. ಮಣ್ಣಿನಲ್ಲಿ ಸೇರಿಸು,–ಬೆರೆಯುವಂತೆ ಮಾಡು : ಮಗುವನ್ನು ಏಕೆ ಮಣ್ಣುಪಾಲು ಮಾಡಿ ಹೋಗುತ್ತೀರಿ ? (ಪತಭಾ. ೩೪೨). ೨. (ಅಲಂ) ಹಾಳುಮಾಡು: ಕುರುಡ ಮುದುಕಿಯೊಬ್ಬಳನ್ನು ಯಾರೋ ಹಾಯ್ದು ಕಾಳು ಚೆಲ್ಲಿ ಅವಳ ಹೊಟ್ಟೆಯ ಕರುಳನ್ನೇ ಮಣ್ಣುಪಾಲುಮಾಡಿ ಮಾಯವಾಗಿದ್ದರು (ಆಪಕ. ೯೯). [ಮಣ್ಣು (<ಮಣ್) + ಪಾಲು₂ (<ಪಾಲ್₂)]

**ಮಣ್ಣುಪ್ಪು** (ನಾ). ಉಪ್ಪಿನ ರುಚಿಯಿರುವ ಮಣ್ಣು ; ಚೌಳುಪ್ಪು : ವಿಜಾಪುರಜಿಲ್ಲೆಯಲ್ಲಿಯೂ ಡೋಣಿಯ ದಂಡೆಯ ಮೇಲೆ ಪೂರ್ವದಲ್ಲಿ ಮಣ್ಣುಪ್ಪು ಬಹಳ ಹುಟ್ಟುತ್ತಿತ್ತು (ಕಭಾಗ. ೨೯).
[ಮಣ್ಣು (< ಮಣ್) + ಉಪ್ಪು₁]

**ಮಣ್ಣುಬೊಂಬೆ** (ನಾ). ಮಣ್ಣಿನಿಂದ ಮಾಡಿದ ಗೊಂಬೆ : ಮಣ್ಣು ಮಣ್ಣಿನೊಳುದಿಸಲದಟಿರಿ ಮಣ್ಣುಬೊಂಬೆಗಳಾಗಿ ರಂಜಿಸಿ ಮಣ್ಣಿನಾ ಹಾರದಲೆ ಜೀವವ ಹೊರೆದವುಪಚರಿಸಿ (ಹಂಶಾ. ೯೩).
[ಮಣ್ಣು (<ಮಣ್) + ಬೊಂಬೆ]

**ಮಣ್ಣುಮುಕ್ಕ** 'ಮಣ್ಮುಕ್ಕ' ನೋ.

**ಮಣ್ಣುರೂಹು** (ನಾ). ಮಣ್ಣಿನಿಂದ ಮಾಡಿದ ಆಕಾರ : ಅಂಗದ ಕುಟುಹಿನ ನೆಮ್ಮುಗೆಯುಪ್ಪ ಲಿಂಗವು ಕಲಸಿದ ಮಣ್ಣುರೂಹಿಂಗೆ ಈಡಾಗದೆಂದಡೆ ಆ ಲಿಂಗ ಭವಪಾಶವ ಗೆಲ್ಲುವುದು (ಬೋಳಬಸಾ. ೫೭-೨೩೭). [ಮಣ್ಣು (<ಮಣ್) + ರೂಹು (<ರೂಪು)]

**ಮಣ್ಣುಹುಳ** 'ಮಣ್ಣುಹುಳು' ನೋ.

**ಮಣ್ಣುಹುಳು, ಮಣ್ಣುಹುಳ** (ನಾ). ಮಣ್ಣಿನಲ್ಲಿ ವಾಸಿಸುವ ಹುಳು ; ಎರೆಹುಳು : ಮಣ್ಣುಹುಳು, ಎರೆಹುಳು (EarthWorm. ಇಂಕಂ). **ಮಣ್ಣುಹುಳ** : ಮಣ್ಣುಹುಳವನ್ನು ರೈತನ ಗೆಳೆಯ ಎಂದು ಹೇಳುತ್ತಾರೆ (ರೂಢಿ). [ಮಣ್ಣು (<ಮಣ್) + ಹುಳು (<ಪುೞು)]

**ಮಣ್ಣುಳಿಗ** (ನಾ). = ಮಣ್ಣುಹುಳು : ಉಳಿಗ ಪ್ರತ್ಯಯಕ್ಕೆ . . . ಮಣ್ಗೊಳ್ ಜೀವಿಸುವ ಪಾವು ಮಣ್ಣುಳಿಗಂ (ಕವುದ. ೨೦೦ ಪ್ರಯೋ) ; ಭೋಗಿ ಬಾಪನ್ನದಿಂಪಿಗಾನಂದಿಪಂತೆ ಮಣ್ಣುಳಿಗನಾನಂದಿಪುದೆ (ಪುದೇಪು. ೧-೦೬); ಬಿಲಜೀವಿ–ಮಣ್ಣುಳಿಗನೀ ನನಗೆ ಸ್ವರ್ಗವೀರದ ವಜ್ರಾಯುಧ ಪ್ರಯೋಗವು ಹೀಗೆ ಅವತರಿಸಿದುದು ನನ್ನ ಭಾಗ್ಯೋದಯವಲ್ಲದಿಲ್ಲ (ಮಂತ್ರಶ. ೦೨೬-೦೬). [ಮಣ್ಣು + —ಉಳಿಗ₃]

**ಮಣ್ಣೂಡಿಸು** (ಕ್ರಿ). (ಅಲಂ) ಮಣ್ಣು ಮುಕ್ಕಿಸು ; ವ್ಯರ್ಥಗೊಳಿಸು : ನನ್ನ ಹೆಸರು ಜಗದಿ ನಿನ್ನಿಂ ಚಿರಸ್ಥಾಯಿಸುವೆನೆಂಬ ಪಂಥಕೇಂ ಮಣ್ಣೂಡಿಸಲೆ ? (ಚಿಮ್ಮರ. ೩೪-೫೪). [ಮಣ್ + ಊಡಿಸು]

**ಮಣ್ಣೆ** (ನಾ). ಒಂದು ಊರಿನ ಹೆಸರು : ಮಣ್ಣೆಗ್ರಾಮಾಧಿಪತಿ (ಎಕ. VI. ಮೂಡಗೆ. ೩೬-೩೭; 749). [?]

**ಮಣ್ಣೆತ್ತು** (ನಾ). ಮಣ್ಣಿನಿಂದ ಮಾಡಿದ ಎತ್ತು ; ಮಣ್ಣುಬಸವ : ಕಾರಹುಣ್ಣಿಮೆ ಕರಿ ಹರಿದು ಮಣ್ಣೆತ್ತು ನೀರನು ಕುಡಿದವು (ಕಂಪು. ೦೨-೩).
**ಮಣ್ಣೆತ್ತಿನ ಅಮಾವಾಸ್ಯೆ** = ಜ್ಯೇಷ್ಠ ಬಹುಳ ಅಮಾವಾಸ್ಯೆ : ಜ್ಯೇಷ್ಠಬಹುಳಅಮಾವಾಸ್ಯೆಯನ್ನು ಮಣ್ಣೆತ್ತಿನ ಅಮಾವಾಸ್ಯೆ ಎನ್ನುವರು (ಜಾಹಬ್ಬ. ೯೫). [ಮಣ್ಣು (< ಮಣ್) + ಎತ್ತು₂ (<ಎಱು₁)]

**ಮಣ್ಣೆಯ** 'ಮನ್ನೆಯ' ನೋ.

**ಮಣ್ಣೊಡಲ** (ನಾ). ಮಣ್ಣಿನಿಂದ ಆದವನು ; ಮರ್ತ್ಯ ; ಮನುಷ್ಯ : ಚೋದ್ಯಮೇನೆಂಬೆನಾ ಮಣ್ಣೊಡಲರಲ್ಲಿ ತೊದಲಲಮ್ಮನಿಬರನಿಬರು ಮೂಗರಲ್ಲೆ (ಗಿಳಿಬಿಂ. ೦೨೩-೪೦).
[ಮಣ್ಣು (< ಮಣ್) + ಒಡಲ್ + — ಅ₇]

**ಮಣ್ಣೊಡ್ಡ** (ನಾ). ಒಡ್ಡರಲ್ಲಿ ಒಂದು ಪಂಗಡ ; ಮಣ್ಣಿನ ಕೆಲಸ ಮಾಡುವವನು : (+). 'ಕಲ್ಲೊಡ್ಡ' ಪರಾ.
[ಮಣ್ಣು (< ಮಣ್) + ಒಡ್ಡ₁]

**ಮಣ್ಣೋಡು** (ನಾ). = ಮಣ್ಗಪ್ಪರ : ಇವರು ನನ್ನ ಕೈಯಲ್ಲಿ ಕೊಟ್ಟ ಮಣ್ಣೋಡು ನಾನಿಟ್ಟ ಸ್ಥಳದಲ್ಲಿಯಿಲ್ಲ (ಪುರಾಪಿ. ೬೦).
[ಮಣ್ಣು (< ಮಣ್) + ಓಡು₂]

**ಮಣ್ಬಡಿ** (ಕ್ರಿ). ಮಣ್ಣಾಗು ; ತುಕ್ಕುಹಿಡಿ : ಭೂಮಿಯೊಳಗೆ ಹೂಳ್ದ ಲೋಹ ಮಣ್ಬಡಿವುದು ಹೇಮ ಮಣ್ಬಡಿವುದೇ (ಶಶಕ. ೨-೩೨).
[ಮಣ್ + ಪಿಡಿ₁]

**ಮಣ್ಬೆಱು** (ಕ್ರಿ). ಭೂಮಿಯನ್ನು ಪಡೆ ; ಜಮೀನನ್ನು ಹೊಂದು : ರಾಗಮೊದವೆ ಬೆಲೆವೆಣ್ ಪೆಣ್ಣಂ ಪೆತ್ತಂತಿರೆ ಪಾರ್ವಂ ಮಣ್ಬೆತ್ತಂತಿರೆ ಓರಿದು ಸಂತಸಂ ಮಿಗೆ (ಧರ್ಮಾಮೃ. ೦-೦೨೭); ಕಣ್ಬೆತ್ತು ಸೂರ್ಯನಂ ಕಾಣದಿರ್ದಂ ಪ್ರಭುವೆ ಮಣ್ಬೆತ್ತು ಬೆಳೆಯಿಲ್ಲದೀಚುವೋದಂ ವಿಭುವೆ (ಪಾಗೀರ. ದೇ. ೨೬೦-೦೬). [ಮಣ್ + ಪೆಱು₁]

**ಮಣ್ಮಣಸು** (ನಾ). ಮಂಕು ; ನಿಸ್ತೇಜ : ಸೈಂಧವರ ಲಾವಣ್ಯ ಮಣ್ಮಣಸು, ಮಣ್ಣುಗೂಡಿತು ಕಣಸು (ಸೂರ್ಯಗಾ. ೪೯-೦೭).
[< ಮಣ್ ?]

**ಮಣ್ಮಳಿ₁** (ಕ್ರಿ). ಕಷ್ಟಪಡು ; ಕೋಟಲೆಗೊಳ್ಳು (?) : ಮಾನಸದ ಗುಣದೊಳುಂ ಮಣ್ಮಳಿದುಪುಸಿರುವತಿಹೀನಂ ಮಹಾದೀನರೊಳಗೆ ಪರಿಪೂಜ್ಯನಿಪನೇನೆಂದು ಕಡೆಗಣ್ಚಿ ನೂಕದೆನ್ನಂ ಪಾಲಿಸು (ಶೃಶಾಃ. ೬-೧೨೮). [?]

**ಮಣ್ಮಳಿ₂** 'ಮಣ್ಮಟಿ' ನೋ.

**ಮಣ್ಮಳಿಗೊಳ್**, ಮುಮ್ಮಳಿಗೊಳ್. ಮುಮ್ಮಳಿಗೊಳು, ಮುಮ್ಮಳಿಗೊಳ್, ಮುಮ್ಮಳಿಗೊಳು (ಕ್ರಿ). ೧. ಭಯಂಕರವಾದ ರೀತಿಯಲ್ಲಿ ಸಾಯು,—ಮರಣಹೊಂದು : ಈಶ್ವರನಿಂ ಮುನ್ನಮೆ ಮಣ್ಮಳಿಗೊಂಡ ಮದನಂಗಾ ಮಱುಪುಟ್ಟುಂ ಪಡೆಯಿಸಲೊಡರಿದ ಜೀವನವಾಯುವಿದು (ಜಯಗಾ. ೦-೩೦); ಮೊದಲೆ ಮೋಹರದೊಳ್ ಮಣ್ಮಳಿಗೊಂಡದೆಟರರಸುಮಕ್ಕಳ ಪೆಟ್ಟುಗೆಯರ್ ಮುಂದದಿಂ ತೋಳ್ಗುಡೆ ಬೇರ ಪಲವು ಕುಂಡಂ ಕಣ್ಗೊಪ್ಪಿದುವು (ಜಯಗಾ. ೬-೨೮). **ಮುಮ್ಮಳಿಗೊಳ್** : ೨. ತಳಮಳಗೊಳ್ಳು ; ಸಂಕಟಕ್ಕೆ ಗುರಿಯಾಗು : ಅಂತಿದಂ ಕೇಳ್ದು ಸಭೆ ಮಱುಗಿ ಮುಮ್ಮಳಿಗೊಂಡು (ತಿರುಶ. ದೇ. ೧೭-೧೭). **ಮುಮ್ಮಳಿಗೊಳು** : ೨. ಕಾಮನಂಬಿಂ ಮುಮ್ಮಳಿಗೊಳುತ್ತೆ ಮಂದಾನಿಲನಿಂ ಮಲ್ಲಳಿಗೊಳುತ್ತೆ . . . ಮನಂ ಕೊರಗುತ್ತಮಿರೆ (ಪಂಬಶ. ೬೨-೧೧೮). **ಮುಮ್ಮಳಿಗೊಳ್** : ೨. ಮುಸುಕಿರ್ದ ಭವಬಂಧನವ ತೆಗೆದು ಕಳೆವಂತೆ ಮುಸುಕಂ ತೆಗೆದನಲ್ಲಿ ನೋಳ್ಪರೆದೆ ನೋವಂತೆ ತೆಗೆದು ಬೆನ್ನಿಂದಲಗುರಕ್ಕೆ ಮೂಡಿರೆ ಕಂಡು ಬೆಗಡುಗೊಳುತಲ್ಲರುಂ ಮಱುಗಿ ಮುಮ್ಮಳಿಗೊಂಡು (ಶೀಶರ. ದೇ. ೬೬-೦೬); ಹಿಂಡೊಡೆದು ಗಜಸೇನೆ ಮುಮ್ಮಳಿಗೊಂಡು ಮುರಿದುದು (ಕುಮಾ.ಭ. ೦೦-೦೮). **ಮುಮ್ಮಳಿಗೊಳು** : ೨. ತಿಳಿಯೆ ತಕ್ಷಕಕುಳಿಕ ಮುಖ್ಯರು ಬಲವದಹಿರಿಪುಭೀತಿಯಲಿ ಮುಮ್ಮಳಿಗೊಳುತ್ತಿಹರು (ಶಿಶಾಗ. ೩-೧೦-೩೨); ರಿಪುಸೇನೆಗಳ್ಳುರಿಯೆ ಶರಕೆ ಭಯಗೊಂಡು ಮುಮ್ಮಳಿಗೊಳು ತಿರಲ್ಪಾರ್ಜುನಂ ಕೋಪಗೊಂಡು ರಥಿತನಯನಂ ತಾಕಿದನು (ಕುರುಗ. ೭೦-೪೪). [ಮಣ್ಮಳಿ₂ (< ಮಣ್ಮಟಿ) ಕೊಳ್₁]

**ಮಣ್ಮಟಿ**, ಮಣ್ಮಳಿ₂, ಮುಮ್ಮಟಿ, ಮುಮ್ಮಳಿ, ಮುಮ್ಮಳಿ, ಮುಮ್ಮಳಿ (ನಾ). ೧. ರೂಪುಗೆಟ್ಟ ಸಾವು : ಭಯಂಕರವಾದ ಮರಣ : "ಮಣ್ಮಟಿ ರೂಪಟಿದ ಸಾವು" (ಶಪಾ. ೭೦. ೦). **ಮಣ್ಮಳಿ₂** : ೧. ಅಣ್ಣಣ್ಣೆಂದೆಂಬರನುಬ್ಬುಪೊಕ್ಕರ ಪೆಣ್ಮಕ್ಕಳ ಪುಲ್ಗೊಡದರ ಮಣ್ಮಳಿಯನು ಮಾಳ್ಪವರ ಧೀರತೆಯಿಂ ಬೆಳ್ಮಾನಿಸರಪ್ಪವರ್ಗೆ (ಶ್ರೀಶಾಂ. ೮-೬೭). **ಮುಮ್ಮಟಿ** : ೧. "ಮುಮ್ಮಟಿ ರೂಪಟಿದಿರ್ದ ಸಾವು" (ಶಬ್ದಾ. ೧೭). **ಮುಮ್ಮಳಿ** : ೨. ತಳಮಳ ; ಸಂಕಟ : 'ಮುಮ್ಮಳಿಕೆ' ಪರಾ. **ಮುಮ್ಮಳಿ** : ೧. "ಮುಮ್ಮಳಿಯೆನೆ ರೂಪಳಿದ ಸಾವು" (ಶಾರಸ. ೩೭). ೨. ನೆಮ್ಮಿ ಕಟ್ಟಾಸುರದ ವೃಷ್ಟಿವಿಕರ್ಮದುಷ್ಬಟೆಯಿಂದ ಉಸಿಗಳ ಮುಮ್ಮಳಿಯುಗೊಳಿಸುವನು ದಿನದಿನಕವನು ಜಿಡವಾಗ (ಅಂಬಿಶಃ. ೭-೦೩). 'ಮುಮ್ಮಳಿಗೊಳ್' ಪರಾ. ೩. ಕೇಡು ; ನಾಶ ; ಹಾನಿ : ಕೋಪದುತ್ತುಂಗತೆಯೊಳೊಪ್ಪದಿರಲಪ್ಪುದೇ ದೇವತಾಸಭೆಗೆಮುಮ್ಮಳಿತಪ್ಪದು (ಪಂಣಾರಾ. ೩-೦೭-೨೯). ೪. ಕ್ಷೋಭೆ ; ಗೊಂದಲ ; ವಿಪ್ಲವ : ಓಡುತದೆ ಆಳೊಡೆಯನನು ಬೀಸಾಡಿ ತಾಯಿಂಗೆ ಮಕ್ಕಳಾಗದೆ ಕೂಡೆ ಮುಮ್ಮಳಿಮಸಗುತದೆ (ಕುಮಾ.ಭ. ೨೪-೧೮). **ಮುಮ್ಮಳಿ** : ೨. 'ಮುಮ್ಮಳಿಗೊಳ್' ಪರಾ.

ಮಣ್ಮಟಿಯಾಗು, ಮುಮ್ಮಟಿಯಾಗು, ಮುಮ್ಮಳಿಯಾಗು, ಮುಮ್ಮಟಿಯಾಗು — ಭಯಂಕರವಾದ ಸಾವಿಗೆ ಈಡಾಗು : ತೇರ್ ತೇರನಾನೆಯುಮಾನೆಯುಂ ಹರಿಹರಿಯುಮಂತಾಗಳ್ ನಿಂದಣ್ಣಿ 'ಮಣ್ಮಟಿಯಪ್ಪುದುಂ (ಶಾಂತಿಪು. ೩-೬೩); ಉತ್ಸಾಹಮನಪ್ಪುಕೆಯ್ದುಱಿದು ಪೋಗದೆ ಮಣ್ಮಟಿಯಾಗೆ ವಾಹಕರಟ್ಟಿಯುಂ ತುರಗದಟ್ಟಿಯುಮಾಡಿಮುವಾಜಿರಂಗದೊಳ್ (ಶಂರಾಪಿ.೦೩-೬೩); ತುರಗಸೇನೆಗಳಂತಿರಡುಂ ಕರಂ ಪರಿಸಿ ಮುಮ್ಮಟಿಯಾಗಿರೆ ಕಂಡು (ನೇಮಿಪು. ೦೦-೦೬೪); ಮಂದಿ ಮುಮ್ಮಳಿಯಾಯಿತೀ ಕಟಿವ್ಯಂದ ಕಂಪಿಸಿತು (ತೊರಗಾ. ೬-೮-೬೦) ; ಅಶ್ವರಸಂಗಳು ತಮ್ಮೊಳಿಱಿದು ಮುಮ್ಮಟಿಯಪ್ಪರ್ (ಅಭಿಮ. ೭-೨೫೩). [?]

**ಮಣ್ಮಟಿವೋಗು**, ಮುಮ್ಮಳಿಯೋಗು (ಕ್ರಿ). ಭಯಂಕರವಾದ ಮರಣಕ್ಕೆ ತುತ್ತಾಗು : ಅಂದಂದು ದೇವರ್ಕಳೊಳಿದಿರ್ದ ಮಣ್ಮಟಿವೋದ ರಕ್ಕಸರೊಳವಗೆಯ ಪಾಪದ ಮೊತ್ತಮೋ ಎನೆ ... ಕರ್ಗಪ್ಪಿಲೆ ಮುಸುಂಕಿದತ್ತು (ರಾಮಾಶ್ವ. ೧೦೯-೨೩). **ಮುಮ್ಮಳಿಯೋಗು** : ಕೂಡೆ ಮುಮ್ಮಳಿವೋದುದೀ ಶರ ಝಾಡಿಯಲಿ ಚತುರಂಗಬಲವಕ್ಕಾಡಿತೇನೆಂಬೆನು ಯುಧಿಷ್ಠಿರ ನೃಪನ ಪರಿವಾರ (ಕುಮಾ.ಗ. ೯-೯೨). [ಮಣ್ಮಟಿ + ಪೋಗು₁ (< ಪೋ₁)]

**ಮಣ್ಮಟಿಸು**, ಮುಮ್ಮಳಿಸು, ಮುಮ್ಮಟಿಸು, ಮುಮ್ಮಳಿಸು (ಕ್ರಿ). ೧. ತಳಮಳಗೊಳ್ಳು; ಸಂಕಟಪಡು : ಶೈಳಮನೆತ್ತುವುದುಂ ಗೋಪಾಳಂ ಫಣಿಮಣಿಗಳಿಸೆಯೆ ಮಣ್ಮಟಿಸುವ ಪಾತಾಳಾಹಿದಿತತಿ ಹಾವಿನ ಪೇಟಿಗೆಯುಂ ತೆಟಿದ ತೆಱದಿನೇಂ ತೋಱಿದುದೋ (ಅರ್ಜನೀ. ೫-೦೩). **ಮುಮ್ಮಳಿಸು** : ೨. ಹೊಯ್ದಾಡು; ಕ್ಷೋಭೆಗೊಳ್ಳು : ಮುಮ್ಮಳಿಪ ನೊರೆ ಬುದಬುದವನೊಡಗಲಿಸಿ ಕದಡಿ ಕಂಗಳವಟ್ಟ ಲಹರಿಗಳ ಲಗ್ಗೆಯಿಂದೆಸೆವ ನದಿಯೊಪ್ಪವನದೇವೊಗಳ್ವೆನು (ಹಶಗಾ. ೮೦-೨೯). **ಮುಮ್ಮಟಿಸು** : ೧. ಮುಮ್ಮಟಿಸಿ ಪಾಂಡವಕೌರವಬಲದ [ಕಲಿಕೆ]ಯ ಪ್ರಧಾನನಾಯಕರ್ಕಳ್ . . . ಕೆಯ್ಮಿಕ್ಕು ಕಾವಲ್ ನಡೆತರ್ಪಾವೇಗದೊಳ್ (ಶಂಶಭಾ. ೨೩-೩೭ ವ). ೨. ಮುಮ್ಮಟಿಸಿದ ಪಲವುಂ ರಾಜಚಿಹ್ನಂಗಳ್ಂ ಬೆಳ್ಗೊಡೆಗಳ್ ತಳ್ತೊಪ್ಪು ದೇಂ ಕಣ್ಗೊಳಿಸಿದುದೊ ವಿಪ[ಕ್ಷ]ತ್ರಕಚ್ಛತ್ರಪಿಂಡಂ (ಶಂಶಭಾ. ೦೩-೩೮). **ಮುಮ್ಮಳಿಸು** : ೧. ನೂತನನಿಳುಹಿ ಹಯಪೋಡಿದವು ಮುಮ್ಮಳಿಸಿ ತನಗುದಿಗುದಿದು ಕೋಟಲೆಗೊಂಡುದರಿಸೇನೆ (ಕುಮಾ.ದ್ರೋ. ೦೯-೩೭).

[ಮಣ್ಮಟಿ + — ಇಸು₃]

**ಮಣ್ಮುಕ್ಕ**, ಮಣ್ಣುಮುಕ್ಕ (ನಾ). ಮಣ್ಣನ್ನು ಆಹಾರವಾಗಿ ಉಳ್ಳ ಒಂದು ಬಗೆಯ ಹಾವು : ಮಣ್ಮುಕ್ಕಹಾವು . . . ಎಂದು ಪಲವು ತರದ ಹಾವುಗಳುಂಟು (ಮುಂಬಯಿ. ೨-೩೩). **ಮಣ್ಣುಮುಕ್ಕ** : ನಿರ್ವಿಷ ಸರ್ಪಗಳಲ್ಲಿ ಹೆಬ್ಬಾವು ಶ್ರೇಷ್ಠ. ಇವಲ್ಲದೆ ಮಣ್ಣುಮುಕ್ಕ . . . ಹಸುರು ಹಾವು ಮುಂತಾದ ಜಾತಿಗಳು ಹಲವುಂಟು (ಕರಾಗ. ೬೭). 'ನೆಲಮುಕ್ಕ' ಪರಾ. [ಮಣ್ + ಮುಕ್ಕ₁]

**ಮತ** (ನಾ). ೧. ಅಭಿಪ್ರಾಯ : ಮನೋಗತ : ಆಶಯ : ಇನ್ನು ಸೇನಾಪತಿಯದಾರ್ಕೆ ನಿನ್ನ ಮತವೇನುದಯವಾಗದ ಮುನ್ನ ಬವರವ ಹಿಡಿಯಬೇಹುದು ವೈರಿರಾಯರಲಿ (ಕುಮಾ.ದ್ರೋ. ೦-೩೪); ಹನುಮನ ಮತವೇ ಹರಿಯ ಮತವು ಹರಿಯ ಮತವೇ ಹನುಮನ ಮತವು (ಪುರಂದ. ಸಾ. ೦-೯೮ ಪಲ್ಲವಿ) ; ನಿರಹಂಕಾರಭಾವದಲ್ಲಿ ನಿಸ್ಸಂಕೋಚಿತ ವಿಕಸಿತ ಸ್ವಭಾವದಲ್ಲಿ ಈ ಜೀವಿಯೇ ಸಮಷ್ಟಿರೂಪಿ, ಇದು ಗೀತೆಯ ಮತ (ಭಾರತ. ೦೦೩). ೨. ಉದ್ದೇಶ : ಗುರಿ. ೩. ಆಲೋಚನೆ ; ವಿಚಾರ : ಚಿಂತನೆ : ನಮ್ಮ ಪಕ್ಷದ ದೇವ ನೀ ಕೇಳಯ್ಯ ಮತವನು ಸುಧೆಯ ತಾ ಸಹಿತ (ಸಂಶಶ. ೩-೦೦೯). ೪. (ಹಿಂದು, ಜೈನ, ಕ್ರೈಸ್ತ, ಬೌದ್ಧ ಮೊದಲಾದ ವಿವಿಧ ಧರ್ಮಗಳಲ್ಲಿ) ಯಾವುದಾದರೊಂದು ಧರ್ಮದ ದೈವವನ್ನು ನಂಬಿ ಅನುಸರಿಸುವ ಮಾರ್ಗ ಮತ್ತು ಆಯಾ ಧರ್ಮಗಳಲ್ಲಿ ವಾಡಿಕೆಯಾಗಿರುವ ಧರ್ಮಸಂಬಂಧವಾದ ಆಚಾರ. — ಸಂಪ್ರದಾಯ : ಇತರ ಮತದವರಲ್ಲಿ ಪರಮತಸಹಿಷ್ಣುತೆ ಇಲ್ಲದುದರಿಂದ ಅವುಗಳ ಬೆಳವಣಿಗೆಗೆ ತಡೆಯುಂಟಾಗಿದೆ (ಭಾರದ. ೩೨೯). 'ಮತಾಂತರ' ಪರಾ. ೫. ತತ್ತ್ವ : ಸಿದ್ಧಾಂತ : ಮತಗಳಾರದೋ ನಾವುದರೊಳಾಗಾವನತಿಭಕ್ತಿಯನು ಮಾಡೆ ಮಗುಳಾ ಹಿತದೊಳಾ ರೂಪಿಂ ಪತಿಕರಿಸುವೆ (ಅಂಬಿಶ. ೦-೦೦೦) ; ಮತಕಾಗಿ ಮಡಿವರು ಮತಕಾಗಿ ಸಿಡಿವರು ಮತಕಾಗಿ ಬದುಕರು ಜನರು (ಇಂಣ್ಣಿಶ. ೦೩೭-೬೩). ೬. ಚುನಾವಣೆ

ಮುಂತಾದ ಸಂದರ್ಭಗಳಲ್ಲಿ ಜನರು ತಮ್ಮ ಆಯ್ಕೆಯನ್ನು ಕುರಿತು ಸೂಚಿಸುವ ಅಭಿಪ್ರಾಯ ಅಥವಾ ಅಂಥ ಅಭಿಪ್ರಾಯವನ್ನು ಗುರುತಿಸಿರುವ ಚೀಟಿ; ಓಟು: ಉಮೇದುವಾರರನ್ನು ತಿಳಿದು ಮತವನ್ನು ಕೊಡಲು ಅನುಕೂಲ (ರಾಯುಳ. ೯೦); ಪ್ರತಿಯೊಬ್ಬನಿಗೂ ಎಷ್ಟೆಷ್ಟು ಮತಗಳು ಬಂದಿವೆಯೋ ಅಷ್ಟನ್ನು ಮಾತ್ರ ಇತರರಿಗೆ ಹಂಚಬೇಕು (ಕವಿಕೋ. VII, ೩೯೯).

**ಮತಕೊಡು** = ಮತವನ್ನು ಚಲಾಯಿಸು; ಓಟುಮಾಡು: ಕೆಲವು ಸಲ ಒಂದು ಪಕ್ಷದವರು . . . ಇತರ ಮತದಾರರು ಮತ ಕೊಡಲು ಸಮಯ ಸಿಗದಂತೆ ಮಾಡಬಹುದು (ಕವಿಕೋ. VII, ೩೩೯). **ಮತಚಲಾಯಿಸು** = ಮತಕೊಡು: ಬಹಿರಂಗವಾಗಿ ಮಾತ್ರ ಬಾಯಿ ಹೇಳಿಕೆಯ ಮೂಲಕ ಮತಚಲಾಯಿಸುವ ಪದ್ಧತಿ . . . ೧೮೩೦ರ ವರೆಗೂ ಇದ್ದುವು (ಕವಿಕೋ. VII, ೩೯೩). **ಮತನೀಡು** = ಮತಕೊಡು: ಇತರ ದೇಶಗಳಲ್ಲಿ ಕೂಡ ಹಲವರು ಮತನೀಡದಿರುವುದು ಅಧ್ಯಯನದಿಂದ ತಿಳಿದು ಬಂದಿದೆ (ಕವಿಕೋ. VII, ೩೩೩). **ಮತಹಾಕು** = ಮತಕೊಡು: ಮತಹಾಕುವ ಸಾಧನಕ್ಕೆ (ಬ್ಯಾಲಟ್) ಶಲಾಕಾ ಎಂದು ಹೆಸರಿತ್ತಂತೆ (ಕವಿಕೋ. VII, ೩೯೩). [ಸಂ.]

**ಮತಂಗ** (ನಾ). ೧. ಆನೆ; ಗಜ: ಇದೆ ಗದಾದಂಡದ ಹತಿಗೆ ಮುಗ್ಗಿದ ಮತಂಗ ಮರೂಥಚಯವಿಲ್ಲಿದೆ (ಕುವ್ಯಾಚಿತ್ರಾ. ೦೩-೨). ೨. ಮೋಡ; ಮುಗಿಲು. ೩. ಒಬ್ಬ ಋಷಿಯ ಹೆಸರು: ಸುಮೇಘಪರ್ವತದಲ್ಲಿ ಅತ್ರಿ . . . ಮತಂಗ . . . ಉಪಮನ್ಯು ಮೊದಲಾದಷ್ಟಾಶೀತಿಸಹಸ್ರಋಷೀಶ್ವರರ್ಗನಂತಾಶ್ರಯಂಗಳುಂ (ಚಿವೇ. ೦೭೩); ಮತಂಗಋಷಿಶಾಪದಿಂ ಬಾರನ್ಯೆಸಲೆ ಗರುಡನಳಿಯ ಮೇಲೆ (ಕೃವಿಶಾ. ೨೯-೨೨). [ಸಂ.]

**ಮತಂಗಜ** (ನಾ). ೧. ಆನೆ: ಗಜ: ಆಕೆಯ ಹಾವಭಾವವಿಳಾಸ ವಿಭ್ರಮ ಕಟಾಕ್ಷೇಕ್ಷಂಗಳ್ ಮನಮನೊನಲಿಸೆಯುಮೆರ್ದೆಯುಂ ಕನಲಿಸೆಯುಮನಂಗ ಮತಂಗಜಕೋಳಾಹಳಾಕುಳೀಕೃತಾಂತರಂಗನಾಗಿ (ಚಂಕಥಾ. ೯-೬೯ ವ); ಸಮನಾಗಿ ಕೂಡಿ ಕಬಿಪೆರಸು ಮತಂಗಜಕಿಕ್ಕೆ ಶೂಲೆ . . . ಅರುಚಿತ್ವಮೆಂಬವಂ ಮಾಣಸುಗುಂ (ಲೋಕೋಪ. ೯-೨೯೭); ಮುಂಗುಡಿಯ ಮುಜಿದೌಕಿ ಘೀಮಂಗಂಘವಿಸಿದನು ಕ್ಷೇಮಧೂರ್ತಿ ಮತಂಗಜದ ಮೇಲೆಸುತ ಬಲುನಾರಾಚಸೋನೆಯುಲಿ (ಕುವ್ಯಾಕ. ೨-೦೭). ೨. ಒಬ್ಬ ರಾಕ್ಷಸನ ಹೆಸರು: ಮತಂಗಜಾಸುರನು ಮುಂದುಗೆಡಸಿದವತ್ತ ವೇತಕೆ (ಬಸ. ೦೬-೨೨). [ಸಂ.]

**ಮತಂಗಿ** (ನಾ). ದುರ್ಗೆಯ ಒಂದು ಹೆಸರು: ಸಮಿತಂ ಕರತಳದೊಳಿಟ್ಟು ಶುಭಮಂತ್ರೋಕ್ತದಿ ಮತಂಗಿಯ ಧ್ಯಾನಿಸುತ ಕೊಂಡು (ಶಂಕರಾ. ೦೯-೦೨). [< ಸಂ. ಮಾತಂಗೀ]

**ಮತಕಟ್ಟೆ** 'ಮತಗಟ್ಟೆ' ನೋ.

**ಮತಕ್ಷೇತ್ರ** (ನಾ). ಓಟಿನ ಹಕ್ಕು ಪಡೆದ ಜನರಿರುವ ಪ್ರದೇಶ: ಚುನಾವಣೆಯ ಕ್ಷೇತ್ರ: ಅಧಿಕಾರಿಗಳ . . . ಆಯ್ಕೆ ಸ್ಥಾನಿಕವಲ್ಲದ, ಎಂದರೆ ವಿವಿಧ ತಂಡಗಳ (ಟ್ರೈಬ್ಸ್) ಮತಕ್ಷೇತ್ರದಿಂದ ಆಗುತ್ತಿತ್ತು (ಕವಿಕೋ. VII, ೩೯೯). [ಸಂ.]

**ಮತಗಟ್ಟೆ**, **ಮತಕಟ್ಟೆ** (ನಾ). ಓಟುಹಾಕಲು ಗೊತ್ತುಮಾಡಿದ ಸ್ಥಳ; ಬೂತು: ಒಂದು ಪಕ್ಷದವರು ತಮ್ಮ ಬೆಂಬಲಿಗರನ್ನೇ ಮೊದಲು ಮತಗಟ್ಟೆಗೆ ತಂದು ನಿಲ್ಲಿಸಿ ಇತರ ಮತದಾರರು ಮತಕೊಡಲು ಸಮಯ ಸಿಗದಂತೆ ಮಾಡಬಹುದು (ಕವಿಕೋ. VII, ೩೩೯). **ಮತಕಟ್ಟೆ**: ಸತ್ತ ದನದಂತೆನ್ನ ಎಳೆಯ ಬೇಡ ಮತಕಟ್ಟೆ ತನಕವೂ ಎಳೆಯಬೇಡ (ಅರರೊ. ೦೩). [ಮತ + ಕಟ್ಟೆ$_1$]

**ಮತಗಣನೆ** (ನಾ). ಓಟುಗಳ ಎಣಿಕೆ: ಮತಗಣನೆಯಾಗುವಾಗಲೂ ಅಕ್ರಮವಾಗಬಹುದು (ಕವಿಕೋ. VII, ೩೩೯). [ಸಂ. ಮತಗಣನ]

**ಮತಘರ್ಷಣೆ** (ನಾ). ೧. ಅಭಿಪ್ರಾಯಗಳ ತಿಕ್ಕಾಟ, – ಚರ್ಚೆ: ಅಂದಂದು ಮತಘರ್ಷಣೆಗಳ ದುರಂತಘಟನೆಗಳು ನಡೆದುಹೋಗುತ್ತಿವೆ (ಕಿಕ್ಷ. ೬೯). ೨. ಜಾತಿ ಅಥವಾ ಧರ್ಮಗಳ ತಾಕಲಾಟ: ಮತಘರ್ಷಣೆಗೆ ಆ ಸ್ಥಳದಲ್ಲಿ ಅವಕಾಶವೇ ಇರಲಿಲ್ಲ (ಕೂ೨). [ಸಂ. ಮತಘರ್ಷಣ]

**ಮತಚೀಟಿ** (ನಾ). ಗುಪ್ತವಾಗಿ ತನ್ನ ಅಭಿಪ್ರಾಯವನ್ನು ಸೂಚಿಸಲು ಚುನಾವಣೆಯಲ್ಲಿ ಉಪಯೋಗಿಸುವ ಪತ್ರ,-ಚೀಟಿ: ಮತಚೀಟಿಗಳ ಮೇಲೆ ನಮೂದಿಸಲಾದ ಪ್ರಥಮಪ್ರಾಶಸ್ತ್ಯ (ಅಧಿಮಾನ) ಮತಗಳಿಗೆ ಅನುಗುಣವಾಗಿ ಮೊದಲು ಅವುಗಳ ಎಣಿಕೆ ಮಾಡಲಾಗುತ್ತದೆ (ಕವಿಕೋ. VII, ೩೯೯). [ಮತ + ಚೀಟಿ$_2$ (< ಚೀಟು$_2$)]

**ಮತದಾನ** (ನಾ). ಓಟುಕೊಡುವುದು.–ಹಾಕುವುದು: ಎಲ್ಲರೂ ಕೂಡಿ ಕಾರ್ಯಕಾರಿಮಂಡಲದಲ್ಲಿ ಇರಬೇಕಾದವರ ಒಂದು ಪಟ್ಟಿ ತಯಾರು ಮಾಡುವ. ಮತದಾನ. ಗುಪ್ತಮತದಾನ ಬೇಡ (ಬಲುಕ. ೦೩೯). [ಸಂ.]

**ಮತದಾರ** (ನಾ). ಚುನಾವಣೆಯಲ್ಲಿ ತನ್ನ ಅಭಿಪ್ರಾಯವನ್ನು ಚೀಟಿಯ ಮೂಲಕ ತಿಳಿಸುವವನು; ಓಟುದಾರ: ಮತದಾರರುಗಳಿಂದ ನೇರವಾಗಿ ನಿರ್ವಾಚಿತರಾದ . . . ಸದಸ್ಯರುಗಳಿರತಕ್ಕುದು (ಕಾದಾಪ. ೯೦); ಇದರಿಂದಲೇ ತಮ್ಮ ಮತದಾರರ ವಿಶ್ವಾಸ ಗಳಿಸಿಕೊಂಡರೆನ್ನಬಹುದು (ಅಜಾ. ೦೦೭). [ಮತ + – ದಾರ$_4$]

**ಮತದಾರಕ್ಷೇತ್ರ** (ನಾ). = ಮತಕ್ಷೇತ್ರ: ರಾಷ್ಟ್ರವ್ಯವಸ್ಥೆಯ ಪ್ರತಿರಂಗದಲ್ಲೂ ಮತದಾರಕ್ಷೇತ್ರದಲ್ಲಿ, ಸಂಸತ್ತಿನಲ್ಲಿ, ಮಂತ್ರಿಸಂಪುಟದಲ್ಲಿ, ಪಕ್ಷಗಳು . . . ನಿರ್ದೇಶನದ ತತ್ತ್ವಗಳನ್ನು ನೀಡುತ್ತ ಬಂದಿವೆ (ರಾಜಕ. ೨). [ಮತದಾರ + ಕ್ಷೇತ್ರ]

**ಮತಪತ್ರ** (ನಾ). = ಮತಚೀಟಿ: ಕಳೆದ ವಾರ ನಡೆದ ಚುನಾವಣೆಯ ಮತಪತ್ರಗಳ ಎಣಿಕೆ ನಡೆಯುತ್ತಿದೆ (ಕೂ೩). [ಸಂ.]

**ಮತಪೆಟ್ಟಿಗೆ** (ನಾ). ಮತಹಾಕಲು ಇಟ್ಟಿರುವ ಪೆಟ್ಟಿಗೆ: ಓಟಿನ ಪೆಟ್ಟಿಗೆ: ಮತಪೆಟ್ಟಿಗೆಗಳನ್ನು ಸಾಗಿಸುವಾಗ ವಿವಿಧ ಹಂತಗಳಲ್ಲಿ ಅವನ್ನು ಬದಲಾಯಿಸಬಹುದು (ಕವಿಕೋ. VII, ೩೩೯). [ಮತ + ಪೆಟ್ಟಿಗೆ]

**ಮತಪ್ರಚಾರ** (ನಾ). (ಯಾವುದಾದರೊಂದು) ಮತದ ತತ್ತ್ವಗಳ ಪ್ರಚಾರ: ಮುಸ್ಲಿಮರು ಹಿಂದಿನ ರಾಜಕೀಯಬಲವನ್ನು ಈಗ ಕಳೆದುಕೊಂಡಿದ್ದರೂ ಮತಪ್ರಚಾರದ ಹುಮ್ಮಸ್ಸು ಏನೂ ಕಡಮೆಯಾಗಿಲ್ಲ (ಇಸ್ಲಾಂಸಂ. ೨೭). [ಸಂ.]

**ಮತಪ್ರವರ್ತಕ** (ನಾ.) (ಯಾವುದಾದರೊಂದು ಮತಕ್ಕೆ ಸಂಬಂಧಿಸಿದ) ತತ್ತ್ವವನ್ನು ನಿರೂಪಿಸುವವನು; ಸಿದ್ಧಾಂತಸ್ಥಾಪಕ: ಈಶ್ವರಸಂಕಲ್ಪವೇ ಪ್ರಕೃತಿನಿಯಮವೆಂದು ಅರಿಯುವ ವಿಚಾರಪರತೆ ಮತಪ್ರವರ್ತಕರಲ್ಲಿರಲಿಲ್ಲ (ಜುಕ್ತಾರ. ೦೦ ಪೀಠಿ). [ಸಂ.]

**ಮತಭೇದ** (ನಾ). ಭಿನ್ನಾಭಿಪ್ರಾಯ; ಅಭಿಪ್ರಾಯಭೇದ: ಮತಭೇದವುಂಟು ಮಾಧವಭಕ್ತಿಗಿದಕಾ ಮತಭೇದವೂ ಮಗುಳಿಲ್ಲ (ಹರಿ. ೨-೯): ಟಿಳಕರ ವೇದಾಂತದ ವಿಷಯವಾಗಿ ಎಷ್ಟೋ ಮತಭೇದವಿರಬಹುದು (ರರ್ಮಕಾ. ೦೭೯). [ಸಂ.]

**ಮತಭ್ರಷ್ಟ** (ನಾ). ತತ್ತ್ವದಿಂದ ದೂರವಾದವನು; ಸಿದ್ಧಾಂತವನ್ನು ಬಿಟ್ಟವನು. [ಸಂ.]

**ಮತಲಪ್** 'ಮತಲಬ್' ನೋ.

**ಮತಲಪು** 'ಮತಲಬ್' ನೋ.

**ಮತಲಬ್**, **ಮತಲಪ್**, **ಮತಲಪು**, **ಮತಲಬು** (ನಾ). ಅಭಿಪ್ರಾಯ: ಅಭಿಮತ: ಮತಲಬ್ ಅಂತ ಎಲ್ಲಿ ಅಂದೆ ಮಾದಲ್ಕ ನಾನು ?

(ದೀಕಪ. II, ೪೪೦). **ಮತಲಪ್ :** ಸರದಾರರವರ ಷಾಹಿಯೊಡನೆ ಕಪಲು ಬರೆದು ಕೊಟ್ಟು ಮತಲಪ್ ಅಲಬತ್ ತಿಳಿಸಿ ಇದ್ದೇನೆ (ತಾಮಾಪಂ. ೨೨೬). **ಮತಲಪು :** ಟೀಪುಸುಲ್ತಾನರು . . . ನಾನಾಪ್ರಕಾರ ವಿರುದ್ಧ ಮಾಡುವ ಮತಲಪಿನಲ್ಲಿ ಇದ್ದಾರೆ (ಠಾಕೀಂಠ್ರ. ೩೪). **ಮತಲಬು :** ಇದಕ್ಕೆ ಮುಂದೆ ಬರೆಯುವ ಮತಲಬು ಸಾಕ್ಷಿ ಇದೆ (ಠಾಕೀಂಠ್ರ. ೦೦೩) : ಈಗಲೆ ಅಪರಾಧಿಗಳ ಅರ್ಜಿಯ ಮತಲಬಿನ ಮೇಲೆ ಭಾರವಿಟ್ಟು ಅವನ ಅರಿಕೆಯನ್ನು ನಡಿಸೋಣ (ವಾಗ್ವಿಬಿ. ೦೬೮).
[← ಅರ. ಮತ್‌ಲಬ್ : ಹಿಂ. ಮರಾ. ಮತಲಬ್]

**ಮತಲಬು** 'ಮತಲಬ್' ನೋ.

**ಮತಸಹಿಷ್ಣುತೆ** (ನಾ). ಬೇರೆಯ ಮತದ ಬಗೆಗೆ ಇರುವ ಸಹನೆ. — ಸ್ಮರಣೆ : ಭಾರತೀಯರಲ್ಲಿ ಮತಸಹಿಷ್ಣುತೆ ಬೆಳೆಯಲು ಮತವಿಚಾರದಲ್ಲಿ ಭಾರತೀಯರು ಅನುಸರಿಸಿರುವ ಸಂಶೋಧನೆಯ ಮನೋಭಾವ ಇನ್ನೊಂದು ಮುಖ್ಯಕಾರಣ (ಭಾರದ. ೩೨೬). [ಸಂ. ಮತಸಹಿಷ್ಣುತಾ]

**ಮತಸ್ಥ** (ನಾ). ಒಂದು ಮತವನ್ನು ನಂಬಿ ಆ ಮತದ ಸಂಪ್ರದಾಯಕ್ಕೆ ಬದ್ಧನಾದವನು : ಆಯಾಯ ಮತಸ್ಥರಿಗೆ ಆಯಾಯ ಆಹಾರವು ಸ್ವಾಭಾವಿಕವೇ ಸರಿ (ಶ್ರಿಚಿಕ್ರ. ೨೬೩) ; ದೇವಾನಾಂಪ್ರಿಯ ರಾಜನು ಸರ್ವ (ಪಾಷಂಡ) ಮತಸ್ಥರನ್ನೂ ಸನ್ಯಾಸಿಗಳನ್ನೂ . . . ಗೌರವಿಸುತ್ತಿರುವನು (ಭಾರದ. ೩೩೦). [ಸಂ.]

**ಮತಸ್ಥಾಪನೆ** (ನಾ). (ಯಾವುದಾದರೊಂದು ಹೊಸ) ತತ್ತ್ವ. ಆಚಾರ. ಸಂಪ್ರದಾಯಗಳನ್ನು ರೂಢಿಗೆ ತರುವಿಕೆ : ಇಂಥ ಮತಸ್ಥಾಪನೆ ಮಾಡುವುದೆಂದರೆ ನಾನೊಬ್ಬ ಸಂತನಾಗಿಯೇ ಮಾರ್ಪಡಬೇಕಾಗಿತ್ತು (ಸ್ವಾಶಿ. ೦೮೧). [ಸಂ. ಮತಸ್ಥಾಪನ]

**ಮತಾಂತರ** (ನಾ). ೧. ಭಿನ್ನಾಭಿಪ್ರಾಯ : ವ್ಯಾಖ್ಯಾನಕಾರನು ಕೇಶಿರಾಜನು ಹೇಳದೆ ಬಿಟ್ಟಿರುವುದನ್ನು ಮತಾಂತರಸೂತ್ರದಿಂದ ಸ್ಪಷ್ಟಗೊಳಿಸಿರುವುದು ಸಂದೇಹಕ್ಕೆಡೆಯಿಲ್ಲದಾಗಿದೆ (ಶಬ್ದಾಶಾಂ. ೬೮). ೨. ಒಂದು ಮತವನ್ನು ಬಿಟ್ಟು ಮತ್ತೊಂದು ಮತವನ್ನು ಸೇರುವಿಕೆ: ಮೊಗ್ಗಲಿಪುತ್ತ ತಿಸ್ಸನು (ಅಶೋಕನನ್ನು ಬೌದ್ಧಧರ್ಮಕ್ಕೆ ಮತಾಂತರಗೊಳಿಸಿದವನು . . . ರಖ್ಖಿತನನ್ನು ವನವಾಸಿಗೂ (ಈಗಿನ ಬನವಾಸಿ) ಬೌದ್ಧಧರ್ಮ ಪ್ರಚಾರಕ್ಕೆ ಕಳುಹಿಸಿಕೊಟ್ಟನು (ಕಶಾಅ. ೦೦೩); ಕ್ರೈಸ್ತ ಮಹಮ್ಮದೀಯ ಮತಗಳಲ್ಲಿ ಮತಾಂತರಹೊಂದಿ ಮದುವೆಯಾಗಲು ಅವಕಾಶವಿದೆ (ಬಂಕಿಮ. ೨೦೩). [ಸಂ.]

**ಮತಾಂಧ** (ನಾ). ತಾನು ನಂಬಿರುವ ಮತವೇ ಎಲ್ಲ ಮತಗಳಿಗಿಂತ ಶ್ರೇಷ್ಠವೆಂಬ ಕುರುಡು ನಂಬಿಕೆಯುಳ್ಳವನು : ಇತರ ಮತಗಳ ಒಳ್ಳೆಯ ಅಂಶಗಳನ್ನು ಕಾಣದವನು : ಭಿನ್ನಮತದವರು ಮಾಡಿದ . . . ಟೀಕೆಗಳನ್ನು ಲಕ್ಷಿಸದಿದ್ದರೆ ಮತಾಂಧರಾಗಿ ನಾವು ತಿಳಿದಿದ್ದೇ ಸತ್ಯ, ಮಾಡಿದ್ದೇ ಧರ್ಮ ಎಂಬ ದುರಹಂಕಾರ ನಮ್ಮಲ್ಲಿ ಬೆಳೆಯಲು ಅವಕಾಶವಾಗುತ್ತದೆ (ಭಾರದ. ೩೩೦). [ಸಂ.]

**ಮತಾಚಾರ** (ನಾ). ಯಾವುದಾದರೊಂದು ಮತದ ಸಂಪ್ರದಾಯದ ಅನುಷ್ಠಾನ.—ಆಚರಣೆ : ಬ್ರಹ್ಮಚಾರಿ ಯತಿ ದೀಕ್ಷಿತರಿಗೆ ಸೂತಕಾದಿ ಹೊಲೆಗಳಿಲ್ಲವೆಂಬುದು ಮೊದಲಾದಾಚಾರಭೇದಮಿರ್ಪುದರಿಂ ಮತಾಚಾರ . . .ಮೊದಲಾದವುಗಳಂ ತಿಳಿದು (ಶಿವೀಳ. ೦೮೬) ; ಧರ್ಮಾಚರಣವು ಕೇವಲ ಕಾಯಕ್ಲೇಶದ ಕಲಾಪವೂ ಅಲ್ಲ ; ಕೆಲವು ಉತ್ಸಾಹಿಗಳು ಹೇಳುವಂತೆ ಬರಿಯ ಮತಾಚಾರವೂ ಅಲ್ಲ (ಆರ್ಯೇಪ. ೪೨). [ಸಂ.]

**ಮತಾಧಿಕಾರ** (ನಾ). ಓಟುಮಾಡುವ ಅಧಿಕಾರ : ಪ್ರಪಂಚದ ಬೇರೆ ಬೇರೆ ದೇಶಗಳಲ್ಲಿ ಮತಾಧಿಕಾರಕ್ಕೆ ಕನಿಷ್ಠ ವಯೋಮಿತಿ ೧೮—೨೫ ವರ್ಷ (ಕೆಒಕೋ. VII. ೩೯೩). [ಸಂ.]

**ಮತಾನುಯಾಯಿ** (ನಾ). (ಯಾವುದಾದರೊಂದು) ಮತದ ಆಚಾರ. ವಿಚಾರ ಸಂಪ್ರದಾಯಗಳನ್ನು ಅನುಸರಿಸುವವನು : ಈ ಮತಾನುಯಾಯಿಗಳನ್ನು ಮಲಾಮತೀಯ (ನಿಂದ್ಯರು) ಎಂದು ಕರೆಯುತ್ತಿದ್ದರು (ಇಸ್ಲಾಂಸಂ. ೨೬೦). [ಸಂ. ಮತಾನುಯಾಯಿನ್]

**ಮತಾಪು** 'ಮಹತಾಪು' ನೋ.

**ಮತಾಯಿ** (ನಾ). (ಕರಾ) ಅಲೆ ; ತರಂಗ : ತೆರೆ : ನಾನು ಜಲ್ದಿ ಇಳಿ. ಲಂಗರು ಬಿಟ್ಟು ದೋಣಿ ನಿಲ್ಲಿಸುತ್ತೇನೆ. ಎಷ್ಟು ಮತಾಯಿ ಬಂದರೂ ಈ ದೋಣಿ ಮುಳುಗದು (ಮ್ಯಂದಿಶಾ. ೪೬). [← ತುಳು. ಮತಾಯಿ]

**ಮತಾವಲಂಬಿ** (ನಾ). (ಯಾವುದಾದರೊಂದು) ಮತವನ್ನು ಅವಲಂಬಿಸಿರುವವನು : ಭಾರತೀಯರು ಇಸ್ಲಾಂಮತಾವಲಂಬಿಗಳನ್ನು ಕುರಿತು ಮಾತನಾಡುವಾಗ ಅವರನ್ನು ತುರುಕರು ಎಂದು ಕರೆಯುವುದುಂಟು (ಭಾರದ. ೪೦೩). [ಸಂ. ಮತಾವಲಂಬಿನ್]

**ಮತಿ** (ನಾ). ೧. ತಿಳಿಯುವ ಶಕ್ತಿ : ಜ್ಞಾನ : ತಿಳಿವಳಿಕೆ : "ಪ್ರೇಕ್ಷಾ . . .ಮತಿಃ. . .ಉಪಲಬ್ಧಿಃ — ಈ ೧೩ ಬುದ್ಧಿ" (ಶಬ್ದಮ. ೩೩-೦೬೪) ; ಕ್ಷಿತಿಯೊಳ್ಮಿಥ್ಯಾಮಾರ್ಗಂ ಸತತಂ ಸನ್ಮಾರ್ಗಮಾವುದೆಂದರಿಯದ ಸಂಸ್ಕೃತಿಯ ಮನುಜಂಗೆ ಕಣ್ಣಿಂ ಮ[ಶಾಶಾಂ. ಗ]ತಿಯಿಂ ಮಂದಂತುಟಲ್ತೆ ಜಿನರಾಜಮತಂ (ಸಪುಶ. ೩-೨೮) ; ಮತಿಯಿಲ್ಲದ ಮರುಳ ನಾನಯ್ಯ (ಬಸವ. ೨೩೬) ; ಮತಿಯು ತಾಂ ಸತ್ಯ ಶುಭಗಳ ನವನವಾಂಶಗಳ ಗತಿಯ ನರಸುತ ನಡೆಯೆ (ಮಂಕುಶ. ೨೨೮). ೨. ಅಭಿಪ್ರಾಯ : ಆಶಯ : ಮೇಲಿನ ಐದು ದರ್ಶನಗಳಲ್ಲಿಯ ಕುಂದುಕೊರತೆಗಳನ್ನು ನಿವಾರಿಸಿಕೊಂಡು ಸರ್ವಸಮ್ಮತವಾಗುವಂತೆ ವಿಚಾರಿಸುವುದರಿಂದ ಅವರ 'ಮತಿ' ಯೇ ಮತವಾಗಿ ಪ್ರಸಿದ್ಧವಾಯಿತು (ಭಾರದ. ೦೩೦). ೩. [ಕಾವ್ಯಮೀ] ಮೂವತ್ತುಮೂರು ಸಂಚಾರಿಭಾವಗಳಲ್ಲಿ ಒಂದು : ಮತಿ ನಿರ್ವೇದಾವಹಿತ್ಥಶ್ರಮ ಮದಜಡತಾಗ್ಲಾನಿ . . . ಇವಿಂತೆಯ್ದೆ ಸಂಚಾರಿಭಾವಂ (ಕಾವ್ಯಾವ. ೬೪೩) : ಮತಿ . . . ಅಪಸ್ಮಾರಗಳೆಂಬ ಮೂವತ್ತುಮೂರು ಸಂಚಾರೀಭಾವಂಗಳಿಂ ಪರಿವರ್ಧಿಸಿ (ಶಿವೀಳ. ೨೨೬) ; ಶಾಸ್ತ್ರಾದಿಗಳ ಸಹಾಯದಿಂದ ಒಂದು ನಿಶ್ಚಯಕ್ಕೆ ಬರುವುದು ಮತಿ (ಭಾರಮೀ. ೩೪೬). ೪. [ಯೋಗ] ಹೃದಯಕಮಲದಲ್ಲಿರುವ ಹನ್ನೆರಡು ದಳಗಳಲ್ಲಿ ಒಂದು : ಹೃದಯಕಮಲದಲ್ಲಿರುವ ೧೨ ದಳಗಳಲ್ಲಿ ೧೨ ರೂಪಗಳು, ಅವು ಶಕ್ತಿ, ಪ್ರತಿಷ್ಠಾ, ಸಂವಿತ್, ಸ್ಫೂರ್ತಿ, ಪ್ರವೃತ್ತಿ, ಪರಾ, ವಿದ್ಯಾ, ಮತಿ, ನಿಯತಿ, ಮಾಯಾ, ಕಾಲ, ಪುರುಷ — ಹೀಗೆ ೧೨ ರೂಪಗಳು (ಹಸಾರ. ೪-೨೩ ತಾತ್ಪರ್ಯ). ೫. [ಜೈನ] ಎಂಟು ವಿಧವಾದ ಜ್ಞಾನಗಳಲ್ಲಿ ಒಂದು ; P "ತಿಳಿದ ವಿಷಯವನ್ನು ಮನನ ಮಾಡುವುದು : ಬಾರಿಬಾರಿಗೂ ಚಿಂತಿಸುವುದು" (ಜೈಪಕೋ. ೦೪೮) : ಕುಮತಿ ಕುಶ್ರುತ ವಿಭಂಗ ಮತಿ ಶ್ರುತಿ ಅವಧಿ ಮನಃಪರ್ಯಯ ಕೇವಲಜ್ಞಾನವಿಕಲ್ಪದಿಂ ಜ್ಞಾನವಷ್ಟವಿಧಂ (ತತ್ತ್ವಸೂ. ೦೬). [ಸಂ.]

**ಮತಿಗಿಡಿಸು** 'ಮತಿಗೆಡಿಸು' ನೋ.

**ಮತಿಗಿಡು** 'ಮತಿಗೆಡು' ನೋ.

**ಮತಿಗೆಡಿಸು, ಮತಿಗಿಡಿಸು** (ಕ್ರಿ). ತಿಳಿವಳಿಕೆಯು ಪ್ರಯೋಜನಕ್ಕೆ ಬರದಂತೆ ಮಾಡು ; ಅರಿವುಗೆಡಿಸು : ಭ್ರಾಂತಿಗೊಳಿಸು : ಬೆಂದ ಮನವೆನ್ನ ಮತಿಗೆಡಿಸಿ ಕಾಡಿತ್ತು (ಬಸವ. ೪೮) ; ಈ ಸತಿ ಮಾಯೆಯಲ್ಲಿ ಮತಿಗೆಡಿಸಿ ಕೆಡಿಸಿದಳುದಿಸಿ ರಕ್ಕಸರ (ತೊರೆರಾ. ೩-೮-೨೨); ಅತಿನಿಡಿಯ ಕಂಗುಡಿಯ ಪೊಯಿಲಿಂ ಮತಿಗೆಡಿಪ ಬೆಲೆವೆಣ್ಗಳೊಪ್ಪಿದ ರತುನನೆಲೆಯುಪ್ಪರಿಗೆ ತರತರದಿ ಮೆರೆದಿಹುದು (ಕಾಳ್ಯಶಾ. ೨-೦೦). **ಮತಿಗಿಡಿಸು :** ಮದ್ದು ಕುಣಿಕೆಯಂತೆ ಪಿತ್ತದಂತೆ ನಾಯ ಹಾಲಂತೆ ಮತಿಗಿಡಿಸುವ ಹೆಂಡಿರುಮು (ರಮಾಕೃ. ೪-೨೩) : ಸೂಸಕದ ಸೂಸರಪಬ್ಬರವಾದಪ್ಪರಂ

ಮತಿಗಿಡಿಸಿತ್ತು ದಿಟ್ಟ ಸಜೆಗೆಯ್ವುದು . . . ಗಾಡಿಕಾರ್ತಿಯು (ಗಿತ್ಯಾವ. ೬೦). [ಮತಿಗೆಡು + — ಇಸು₃]

**ಮತಿಗೆಡು,** ಮತಿಗಿಡು (ಕ್ರಿ). ತಿಳಿವಳಿಕೆಯು ಪ್ರಯೋಜನಕ್ಕೆ ಬರದಂತೆ ಆಗು : **ಅರಿವಿಲ್ಲದಾಗು** : ಮತಿಗೆಟ್ಟು ಮಗಳ ಸಂಸ್ಕೃತಿಲತೆಯೊಳ್ ತೊಡರಲ್ಕೆ ನೀನಿವಂ ನೆಗಳ್ದಾ (ಆದಿಪು. ೩-೩೯) ; ಮತಿಗೆಟ್ಟೆನು ಮನದ ವಿಕಾರದಿಂದ ಧೃತಿಗೆಟ್ಟೆನು ಕಾಯವಿಕಾರದಿಂದ (ಬಸವ. ೯೩). **ಮತಿಗಿಡು :** ಕಳ್ಳುಡಿದರಂತೆ ಮತಿಗಿಡುತ್ತುಂ (ಧರ್ಮಾಮೃ. ೧-೧೬೦). [ಮತಿ + ಕೆಡು₁]

**ಮತಿಗೇಡಿ** (ನಾ). ತಿಳಿವಳಿಕೆಯಿಲ್ಲದಿರುವ ವ್ಯಕ್ತಿ; ಬುದ್ಧಿಗೇಡಿ : **ಅರಿವುಗೇಡಿ** : ಬೇಡವೆಂದು ನಿವಾರಿಸಲು ಮತಿಗೇಡಿ ಛಲದಲಿ ಮೂಗನುಚಿ ಯೋಗಾಡಿದಂತಭಿಮಾನವಂ ನೀಗಿ (ಚಸವು. ೨೨-೪೦) ; ಹೇಯವೀ ಸಂಸಾರ ವೆನ್ನದೆ ಮೋಹಿಸುವ ಮತಿಗೇಡಿ ಮಾನವ ಸಾಹಸಿಯೆ ಸಟೆಮಾತು (ಹಂಸಾ. ೭೯). [ಮತಿ + ಕೇಡಿ₁]

**ಮತಿಜ್ಞಾನ** (ನಾ). "ಇಂದ್ರಿಯಗಳ ಅಥವಾ ಮನಸ್ಸಿನ ಮೂಲಕ ವರ್ತಮಾನಕಾಲದ ಪದಾರ್ಥಗಳನ್ನು ತಿಳಿಯುವುದು. ಜ್ಞೇಯ ಪದಾರ್ಥ ಮತ್ತು ಇಂದ್ರಿಯವಿಶೇಷದ ಸನ್ನಿಕರ್ಷದಿಂದ ಮನಸ್ಸಿನಲ್ಲಿ ಉತ್ಪನ್ನವಾಗುವ ವಸ್ತುಬೋಧ" (ಕೈಪಕೋ. ೧೯೬) : ಇರ್ಪತ್ತೊಂದು ಮತಿಜ್ಞಾನಭೇದಮುಮಂ . . . ಯಥೋಚಿತವಿಧಿಯಿಂ ನೋಂತು (ಆದಿಪು. ೩-೪೦ ವ); ಪಂಚೇಂದ್ರಿಯಗಳಿಂದಲೂ ಮನಸ್ಸಿನಿಂದಲೂ ಆತ್ಮನಿಗೆ ಆಗುವ ಜ್ಞಾನವು ಮತಿಜ್ಞಾನವು (ಕೈಪಹ. ೩೬೬). [ಸಂ.]

**ಮತಿಪ್ರಕಾಶ** (ನಾ). ತಿಳಿವಳಿಕೆಯು ಗೋಚರವಾಗುವಿಕೆ ; ಜ್ಞಾನೋದಯ : ವ್ಯಾಕರಣ ಕಾವ್ಯಾದಿಗಳಂ ಪೇಳುತ್ತೆ ಮಕ್ಕಳ್ಗೆ ಮತಿಪ್ರಕಾಶಕ್ಕಂ ಜ್ಯೋತಿಷ್ಮತೀತೈಲಮಂ ಮಾಡಿ ಕುಡಿಕೆಯೊಳಿಟ್ಟು ಮಂದಮತಿಯಾಗಿರ್ದರಿಗೆ ಅರೆಬಿಂದುಮಾತ್ರಮಂ ಕುಡುತ್ತುಮಿರ್ಪುದಂ (ಆರಾಧ. ೩೨). [ಸಂ.]

**ಮತಿಬವಣೆ** (ನಾ). ತಿಳಿವಳಿಕೆಯು ಕೆಡುವುದು : ಬುದ್ಧಿಭ್ರಮಣೆ : ದಿವಿಜರಿಪುಗಳು . . . ಕವಲುವರಿಯುವ ಚಿತ್ತದಲಿ ಸಂಭವಿಸಿದಿಂದ್ರಿಯ ಭಾವದಲಿ ಮತಿಬವಣೆಗೊಳದಿರ್ದರು ನಿರಾಹಾರದ ಸುನಿಷ್ಠೆಯಲಿ (ಜರಂ. ೪-೦೬). [< ಸಂ. ಮತಿಭ್ರಮಣ]

**ಮತಿಭೂಮ** (ನಾ). ಅತ್ಯಧಿಕ ತಿಳಿವಳಿಕೆಯನ್ನು ಪಡೆದಿರುವವನು ; ಅಪಾರಜ್ಞಾನವುಳ್ಳವನು : ಮತಿಭೂಮನಾ ಶ್ರೀರಾಮನುದ್ದಾಮನಾ ವೀರಲಕ್ಷ್ಮಣನುಮಾ ಅಲ್ಪಮಂ ಕೇಳುತಿರ್ದರ್ (ಶ್ರೀರಾಮಾ. ೧೯೭-೦೯೯). [ ಸಂ. ಮತಿಭೂಮನ್ ]

**ಮತಿಭ್ರಮಣೆ** (ನಾ). = ಮತಿಬವಣೆ : ಆತನಿಗೆ ಮಕ್ಕಳ ಅನಾದರಣೆಯಿಂದ ಮತಿಭ್ರಮಣೆಯುಂಟಾಗಿರುವುದು (ಕಾಪ. ೩೯). [ ಸಂ. ಮತಿಭ್ರಮಣಾ ]

**ಮತಿಭ್ರಷ್ಟ** (ನಾ). = ಮತಿಗೇಡಿ : ಕಾಣುತ್ತ ಕಡೆಗಣಿಸಿ ಕಡಿಸಿಯುಜಿಸುವ ಮತಿಭ್ರಷ್ಟ ನಾನಯ್ಯ (ಬಸವ. ೩೦೫). [ಸಂ.]

**ಮತಿಮಂತ** (ನಾ). ತಿಳಿವಳಿಕೆಯುಳ್ಳವನು ; ಬುದ್ಧಿವಂತ : ರೇವದಾಸ ವೀಸೋತ್ತರದೀಕ್ಷಿತರ ಗುಣಂಗಳನೆಣಿಸುವ ಮತಿಮಂತರ ನಾನದೆಲ್ಲಿಯುಂ [ಕಣ್ಣ]ಜಾಯೆ (ಎಕ. XIII, ೩೩೦-೦೨; ೨೭೨). [ ಸಂ. ಮತಿಮತ್ ]

**ಮತಿಮಂದ** (ನಾ). ಮಂಕುಬುದ್ಧಿಯವನು ; ಅಜ್ಞಾನಿ : ಮತಿಮಂದನಾಗಿ ಗತಿಯ ಕಾಣದೆ ಇರ್ದೆನಯ್ಯಾ ಹುಟ್ಟುಗುರುಡನ ಕಯ್ಯ ಕೋಲ ಕೊಟ್ಟು ನಡೆಸುವಂತೆ ನಡೆಸಯ್ಯಾ ಎನ್ನ (ಬಸವ. ೨೩೫); ಅಹಂಕಾರ ಮಮಕಾರಗಳಿಂದ ಮತಿಮಂದನಲ್ಲಾ ನೋಡಾ ಭಕ್ತನು (ಸಿದ್ಧೇಶ. ೨೦೩-೬೬೯). 'ಮಂದಮತಿ' ಪರಾ. [ಸಂ.]

**ಮತಿಮಣಿ**[2] (ಕ್ರಿ). = ಮತಿಗೆಡು : ಶಾ ಮತಿಮಣಿದನಕಟಾ ಕೆಟ್ಟೆನು (ಕುಮಾಗ. ೧೧-೨೩-೬). [ ಮತಿ + ಮಣಿ₁ ]

**ಮತಿವಂತ** (ನಾ). = ಮತಿಮಂತ : ಪುರಾಣಚೂಡಾಮಣಿಯೆಂದಿಂತು ಪೆಸರಿಡುಗುಮೋ ಮತಿವಂತಂ ಕವಿಚಕ್ರವರ್ತಿ ಸಮೆಯೀ ಕೃತಿಯಂ (ಶಾಂತಿಪು. ೦೨-೫೬) ; ಆನಂದದಿಂ ಭಕ್ತತತಿಗೀವ ಮತಿವಂತನೆನಿತು ಭಕ್ತರ್ಬಂದೊಡನಿತು ಪೊರೆಯೋಜಂವಂ (ಇಳೆಶ. ದೀ. ೯೯-೪).

[ ಸಂ. ಮತಿವತ್ ]

**ಮತಿವಂತೆ** (ನಾ). ತಿಳಿವಳಿಕೆಯುಳ್ಳವಳು; ಬುದ್ಧಿವಂತೆ : ಮತಿವಂತೆಯು ಧರ್ಮಜ್ಞೆಯು . . . ಸತ್ಯಾನ್ವಿತವಚನೆಯು ಕಥೆಯನೆ ಪೇಟ್ಟತಿಶಯದಿಂ ತನ್ನ ವಧುಗೆ (ಮುದಕು. ೯-೦೯). [ಮತಿವಂತ + — ಎ₂]

**ಮತಿವಿಕಲ,** ಮತಿವಿಕಳ (ನಾ). **ತಿಳಿವಳಿಕೆಯು ನಾಶವಾಗಿರುವ ವ್ಯಕ್ತಿ;** ಅರಿವುಗೇಡಿ : ತನ್ನ ತೀರದ **ಚಿಂತೆಯಲ್ಲಿ** ಮತಿವಿಕಲನಾಗಿದ್ದ ವಾಜಶ್ರವಸನಿಗೆ ಆ ಸಣ್ಣ ಮಾತೂ ಅರ್ಥವಾಗದೆ, ಕೆಣಕಿದ ಹುಲಿಯಂತೆ ಹರಿಹಾಯ್ದ (ನಕಂಬಾ. ೨೪). **ಮತಿವಿಕಳ :** ಸಕಲಧರ್ಮದ ಸಾರವನು ಮತಿವಿಕಳನಾಗದೆ ಚಿತ್ತವಿಸು (ಕುವ್ಯಾಉ. ೪-೦೫); ಸುತರ ಪರರೆಡೆಗಿತ್ತು ನಂಬಿದ ಸತಿಯ ತಂದಡವಿಯಲಿ ಮಲಗಿಸಿ ಮತಿವಿಕಳನಾದೆನು (ಹಳಕ. ೬-೩); ಕಾಪಿನ ಭಟರ್. . . ಗತಿಯಂ ಕಾಣದೆ ಮತಿವಿಕಳರಾಗೆ (ರಾಮಾಶ್ವ. ೦೩೫-೩೦).

[ಸಂ.]

**ಮತಿವಿಕಳ** 'ಮತಿವಿಕಲ' ನೋ.

**ಮತಿವಿಕಳತನ** (ನಾ). ತಿಳಿವಳಿಕೆಯಿಲ್ಲದಿರುವುದು : ಅಜ್ಞಾನ : ಬುದ್ಧಿಹೀನತೆ : ಸತ್ತ ನೀನೆಲವೆಲವೊ ಕರದಪೆ ಮೃತ್ಯುವನು ಮತಿವಿಕಳತನ ನಿನಗತ್ಯಧಿಕತರವಾಯ್ತಲಾ ಹೇಳೆವಡೆ ಬುದ್ಧಿಯನು (ಕುಭಾಗ. ೫-೭-೧೦); ಕ್ಷಿತಿಯನೆಲ್ಲವ ಸೋತು ಜೂಜೊಳು ಪತಿ ಬನಕೆ ಬಂದೆನ್ನನಗಲಿದ ಮತಿವಿಕಳ ತನದಿಂದ ತಿರುಗುತ ಬಂದೆ ತಪ್ಪುಡಿಗೆ (ಹಳಕ. ೫-೫೬).

[ ಮತಿವಿಕಳ ( = ಮತಿವಿಕಲ ) + — ತನ ]

**ಮತಿವಿಕಳತೆ** (ನಾ). = ಮತಿವಿಕಳತನ : ಮತಿವಿಕಳತೆಯಿಲ್ಲದೆಯುಂ ಹುತವಹಯುತಮಾಗೆ ಬಗೆದ ಗತಿಯುಂ ಪಡೆಗುಂ ಸತತಮದು . . . ತಪ್ಪುಗುಮೋ (ಹಂಸಕಂ. ೨೬೨-೦೯). [ ಸಂ. ಮತಿವಿಕಲತಾ ]

**ಮತಿವಿದ** (ನಾ). ಬುದ್ಧಿವಂತ : ತಿಳಿದವನ ಮತಿವಿದನ ಭಾಷಾವಳಿ ಲಿಪಿಜ್ಞನ ಸಾಕ್ಷರನ . . . ಸಂಧಿವಿಗ್ರಹರೆನಿಸಬೇಕು (ಕುವ್ಯಾಉ. ೩-೮೯).

[ ಸಂ. ಮತಿವಿದ್ ]

**ಮತಿವಿಹೀನತೆ** (ನಾ). = ಮತಿವಿಕಳತನ ; ಇತರರಂ ಕೂಡಿಪ್ಪುದೆಲ್ಲೆನೆ ಮತಿವಿಹೀನತೆಯಲ್ಲದೇ ಗುರುಮತವಹುದೆ ಕೇಳ್ (ಬಸಪು. ೬೦-೩೭).

[ ಸಂ. ಮತಿವಿಹೀನತಾ ]

**ಮತಿಹೀನ** (ನಾ). = ಮತಿಗೇಡಿ : ಮತಿಹೀನರಪ್ಪ ಮನುಜರ್ ಪತಂಗವೃತ್ತಿಯನೆ ಕೊಂಡು ಕೊನೆಯುತ್ತಿರ್ಪರ್ (ಹಂಸಕಂ. ೨೦೭-೧) ; ಮತಿಹೀನ ನಾನು ಮಹಾಮಹಿಮ ಕೈವಲ್ಯಪತಿ ನೀನು (ಹಂಸಾ. ೪೯) : ಯತಿಗಳೆಂಬವರ ಮತಿಹೀನರ ಮಾಡಿತ್ತು ನೋಡಾ ಮನವು (ಅಜಂಪ. ೨೩೭-೬). [ಸಂ.]

**ಮತೀಯ** (ಗು). ೧. ತತ್ತ್ವಕ್ಕೆ ಸಂಬಂಧಿಸಿದ ; ಸಿದ್ಧಾಂತಕ್ಕೆ ಸಂಬಂಧಿಸಿದ : ಭರತವರ್ಷದ ಮತೀಯ ಇತಿಹಾಸದಲ್ಲಿ ಈ ಸಂಪ್ರದಾಯಕ್ಕೆ ವಿಸ್ತಾರವಾದ ಆಖ್ಯಾಯಿಕೆಯೇ ಇದೆ (ಶಾರದ. ೨೬೨) ; ಸಂಸ್ಕೃತಮಹಾಕಾವ್ಯಗಳಲ್ಲಿ ಸಾರ್ವಜನಿಕ ಮಹಾಕಾವ್ಯ (Secular Poetry) ಐತಿಹಾಸಿಕ ಮಹಾಕಾವ್ಯ (Historical Poetry) ಮತೀಯ ಮಹಾಕಾವ್ಯ (Religious Poetry) ಎಂಬ ಮೂರು ಭಾಗಗಳವೆ (ಶಾರದ. ೪೫೦). ೨. ಜಾತಿಗೆ ಸಂಬಂಧಿಸಿದ ; ಕೋಮುವಾರು : ಹಿಂದೂ ಮುಸ್ಲಿಂ ಸಂಬಂಧಗಳು ಮತೀಯಕ್ಷೇತ್ರದಲ್ಲಿ ಹೇಗೋ ಹಾಗೆ ರಾಷ್ಟ್ರೀಯ ಕ್ಷೇತ್ರದಲ್ಲೂ ಕೂಡಿಕೊಳ್ಳುತ್ತಿವೆ (ಇತ್ಯಾಂಶಂ. ೨೬). (ನಾ). ೩. (**ಯಾವುದಾದರೊಂದು) ಮತಕ್ಕೆ ಸೇರಿದವನು : ಈ ಮತೀಯರ ಸಂಖ್ಯೆ** ನೂರಕ್ಕೆ ಎಪ್ಪತ್ತು (ಇತ್ಯಾಂಶಂ. ೨೯). [ಸಂ.]

**ಮತೈಕ್ಯ** (ನಾ). ಅಭಿಪ್ರಾಯದ ಒಮ್ಮತ ; ಏಕಮತ : ಲಘುಚಿಷ್ಣೆಯುಂಶೂ ನೇರವಾದ ಗೆರೆಯೆಂಬುದು ಮತೈಕ್ಯವುಳ್ಳ ವಿಚಾರವಾಗಿದ್ದು ಅದರ ಸ್ವರೂಪನಿರ್ಣಯದಲ್ಲಿ ತೊಡಕಿಲ್ಲ (ಸಂಕೋಶ. ೧೧೧). [ಸಂ.]

**ಮತ್ಕುಣ** (ನಾ). ೧. ರಕ್ತವನ್ನು ಹೀರಿ ಜೀವಿಸುವ ಒಂದು ಬಗೆಯ ಕೀಟ : ತಗಣೆ : ಪರಿತಂದು ತಿಂದು ಮಂಚಾಂತರದೊಳ್ ತಚ್ಛಿದ್ರ ಭಾಗಮಂ ಪೊಕ್ಕುದತಿತ್ವರಿತಗತಿ ಮತ್ಕುಣಂ (ಶಂಶಕಂ. ೧೩೧-೧೧); ಕುಂಥು ಘುಣ ಮತ್ಕುಣ ದಂಶ ಮಶಕ . . . ಕ್ರಿಮಿಕೀಟಕಾದಿ ತ್ರೀಂದ್ರಿಯಂಗಳ್ (ಕತ್ತ್ವಸ್ರ. ೬೬) ; ತನ್ನ ಕಡಿಯ ಬಂದ ಮತ್ಕುಣಗಳ ಸೊಸಲ ಕಣ್ಣಿನಿಂದು ರುಪಲ್ (ಬಾಸೋಕ. ೧೧-೧೩). ೨. ಗಡ್ಡವಿಲ್ಲದ ಮನುಷ್ಯ. ೩. ಕೋರೆಹಲ್ಲಿಲ್ಲದ ಆನೆ. ೪. ಕೋಣ ; ಮಹಿಷ. ೫. ತೆಂಗಿನ ಮರ. [ಸಂ.]

**ಮತ್ತ₁** 'ಮತ್ತಲ್' ನೋ.

**ಮತ್ತ₂** (ಗು). ೧. ಮದವೇರಿದ : ಅಮಲೇರಿದ : 'ಮತ್ತಕೋಕಿಲ' ಪರಾ. ೨. ಕಾಮಾತುರದಿಂದ ಕೂಡಿದ ; ನಸೆಯೇರಿದ. ೩. ಸಂತೋಷದಿಂದ ಮೈಮರೆತ. ೪. ಕೆರಳಿದ ; ರೋಷಾವೇಶದಿಂದ ಕೂಡಿದ. (ನಾ). ೫. ಮದವೇರಿದವನು ; ಅಮಲೇರಿದವನು ; ಉನ್ಮತ್ತ : ಎಲೆ ಮತ್ತ ನೀನಿಂತು ನಗೆಗೀಡಾದ ನುಡಿಗಳಂ ನುಡಿಯುತ್ತ ಮೆನೆಗೆ ಮುಳಿಸನಾದೊಡಂ ಪುಟ್ಟಿಸಲಿಲ್ಲಂ (ಕಾದಂಅ. ೩೬೪) ; ಮತ್ತನತಿಶ್ರಾಂತನು ಪ್ರಮದೋನ್ಮತ್ತನತಿಕುಪಿತಾನನನು . . . ಕ್ಷುತ್ತು ಘನವಾಗುಳ್ಳ ನಿಂತೀ ಹತ್ತು ಜನವಾವಾಗ ಧರ್ಮದ ತತ್ತ್ವವಣೆಗಳನರಿಯರೈ (ಕುವ್ಯಾಅ. ೩-೭೬) : ಹೋರಾಡುವುದಕ್ಕೆ ಮೊದಲು ಅವರು ಮದ್ಯಪಾನದಿಂದ ಮತ್ತರಾಗುವರು (ಕರ್ಣಾಅ. ೭೦). ೬. ಒಂದು ಬಗೆಯ ಸಸ್ಯ : ಉಮ್ಮತ್ತಿ : ಧತ್ತೂರ. ೭. [ಛಂದ] ಅಕ್ಷರಛಂದಸ್ಸಿನಲ್ಲಿ ಪ್ರಸಿದ್ಧವಾದ ಇಪ್ಪತ್ತಾರು ಛಂದಸ್ಸುಗಳಲ್ಲಿ ಹತ್ತನೆಯ ಪಂಕ್ತಿ ಎಂಬ ಛಂದಸ್ಸಿನ ಒಂದು ವೃತ್ತ : ಮುನ್ನಂ ಧಾತ್ರೀಶಶಿಪವನೇಶೋತ್ಪನ್ನಂ ನಿಲ್ಕುಂ ಯತಿ ಬಗೆದೊಳ್ ಸೇವ್ಯಂ ಸವ್ಯಂ ಭೂತಳಕಿದು ಪೂಜ್ಯಂ ಭಿನ್ನಾಬ್ಜಾಕ್ಷೀ ಪೆಸರಜಾ ಮತ್ತಂ (ಛಂದೋಂಬು. ೨-೧೧೯). [ಸಂ.]

**ಮತ್ತಂ** (ಅ). ೧. ಪುನಃ ; ಮತ್ತೆ : ನುಡಿಯಿಸಿ ಕೇಳ್ವಂ ಹರಿಗನ ಪಡೆಮಾತನೆ ಮಾತು ತಪ್ಪೊಡಂ ಮತ್ತಮದಂ ನುಡಿಯಿಸುಗುಂ ಮೊದಲಿಂದೆ (ಶಂಶಭಾ. ೪-೩೬) ; ಜಘನ್ಯಶರೀರಮಂ ಕೈಕೊಂಡು ಪುಟ್ಟಿ ಮತ್ತಮಾಯೆಡೆ ಯೊಳ್ ಪಲವುಂ ಸೂಟಿಗ್ ಲಘು ಜನ್ಮಾವಗಾಹದಿಂ ಪುಟ್ಟಿ (ಸುಕುಮಾ. ೬-೬ ವ) ; ನಾನಾವಿಧದಿಂ ದೂಷಿಸಿ ಮತ್ತಂ ಸ್ಯೈರಿಸಲಾಜಿದೆ (ರವಾರೆಮ. ೧-೧೧೯). ೨. ಅಲ್ಲದೆ ; ಇನ್ನು : ಕುಱಿತವರಲ್ಲದೆ ಮತ್ತಂ ಪೆಱರುಂ ತಂತಮ್ಮ ನುಡಿಯೊಳ್(ಲ್ಲರ್) ಜಾಣರ್ (ಕವಿರಾ. ೧-೩೯) ; ಮತ್ತಂ ಮತ್ತ ಕುರುಡತಪಸಿಗಳ ಕೈಯುಂ ಪಿಡಿದುಯ್ವವರ ಗುಹೆಗಳಂ ಪುಗಿಪ ಪೊಱಮಡಿಪ ಚಪಳಕಟಿಗಳುಮಂ . . . ನೋಡಿ (ಶಂಶಭಾ. ೧-೧೧೫ ವ) ; ಬಿಟ್ಟ ದತ್ತಿ ತಟ್ಟಿಕೆಱೆ ಸರ್ವ್ವಬಾಧಾಪರಿಹಾರ ಮತ್ತಂ ಬಸದಿಯಿಂ ತೆಂಕಣಕೆಱೆಯ ಕೆಳಗೆ ತಳವೃತ್ತಿ ಗದ್ದೆ (ಎಕ. VII, ಶಿವಮ. ೪-೭೦ ; 1122). [<ಮತ್ತು₂]

**ಮತ್ತಕ** (ನಾ). ೧. ತಲೆ ; ಶಿರ : ರತ್ನಮಣಿಮಕುಟಂಗಳೈದನು ಮತ್ತಕದೊಳಳವಡಿಸಿ (ಪ್ರಭಾಅ. ೩-೪). ೨. ತುದಿ : ಶಿಖರ ; ಅಗ್ರ : ಅಂತವರಂಬೆರಸು ಕರಂ ಸಂತಸದಿಂ ಸಾರ್ದು ಯಾವದಾದ್ರಿಯನೊಡವಂದಿಂತೆಂಬೆಣಿಕೆಗಳದ ದಟಮಂ ತಟ್ಟಲೊಳರಿಸಿ ಪತ್ತಿದಂ ಮತ್ತಕಮಂ (ತಕಪ. ೩-೯೦).
[ < ಪ್ರಾ. ಮತ್ಥಗ, ಮತ್ಥಯ./ ಸಂ. ಮಸ್ತಕ ]

**ಮತ್ತಕಗೊಳ್** (ಕ್ರಿ). ತಲೆಯಲ್ಲಿ ಒಳಗೂಡಿರು : ತಲೆಯಲ್ಲಿರು : ಮತ್ತಕಗೊಂಡ ಬಟ್ಟಕಿಱುಚಂಡಿಕೆ ಸುತ್ತಿದ ಪೊನ್ನ ಮೊಗ್ಗೆಗಳ್ (ತಕಪ. ೩-೪೯). [ಮತ್ತಕ + ಕೊಳ್₁]

**ಮತ್ತಕಾಶಿನಿ** (ನಾ). ಮೋಹವನ್ನುಂಟುಮಾಡುವವಳು ; ಚೆಲುವೆ : ಸುಂದರಿ : "ವರಸ್ತ್ರೀ ಮತ್ತಕಾಶಿ [ ಶಾಕುಂ. ವಿ] ನೀ — ಈ ೨ ಒಳುವೆಂಗೂಸು" (ಹಲಾಯು. ೬೦-೩೩೫); ಮತ್ತೆ ಗೊಳ್ಳೆಂದುದು ನೃಪಾಲನ ಮತ್ತಕಾಶಿನಿಯರು (ಕುವ್ಯಾಸ. ೧೨-೩೯) ; ಮತ್ತಕಾಶಿನಿಯ ನೆಲೆದುನ್ಮತ್ತ ರಾವಣಂ ನೆಗೆದನಂಬರಕೆ (ತ್ರೀರಾಪಟ್ಟಾ. ೨೪೭-೫೦೭). [ಸಂ. ಮತ್ತಕಾಶಿನೀ]

**ಮತ್ತಕಾಸಿನಿ** (ನಾ). = ಮತ್ತಕಾಶಿನಿ : ಉತ್ತರಾಪಥದಲ್ಲಿ ಬಳಿಕ ವಿಯತ್ತರಂಗಿಣಿ ಯಮುನೆ ದಾತನ ಮತ್ತಕಾಸಿನಿ ಕೂಡಿದೆಡೆಯೊಳು ಶ್ರೀಗಿರಿಯ ಜಡೆಯೊಳ್ (ವಿವೇಶ. ೧೩-೧೪); ಉತ್ತಮರಘುಕುಲರಘುರಾಯನಾತ್ಮಜೆ ಮತ್ತಕಾಸಿನಿ ಇಪ್ಪಳು ಕನ್ನಿಕೆಯಾಗಿ (ಕರ್ಣಾಕ. ೨೬೫). [ಸಂ. ಮತ್ತಕಾಸಿನೀ]

**ಮತ್ತಕೋಕಿಲ** (ನಾ). ೧. ಮದವೇರಿದ ಕೋಗಿಲೆ ; ಸೊಕ್ಕಿದ ಕೋಗಿಲೆ: ಬಹಿರುದ್ಯಾನಾಂತರದೊಳ್ ಸಮಸೋದಿತ ಮತ್ತಕೋಕಿಲೋಚ್ಚೈರ್ಧ್ವಾನಂ ಮುಹುರಾಕರ್ಣಿಸೆ (ಕವಿರಾ. ೧-೫೫). ೨. [ಛಂದ] ಅಕ್ಷರಛಂದಸ್ಸಿನಲ್ಲಿ ಪ್ರಸಿದ್ಧವಾದ ಇಪ್ಪತ್ತಾರು ಛಂದಸ್ಸುಗಳಲ್ಲಿ ಹನ್ನೆರಡನೆಯ ಜಗತಿಯೆಂಬ ಛಂದಸ್ಸಿನ ಒಂದು ವೃತ್ತ: ಸುರಪುರೇಂದುದಿವಸಾಧಿಪಾಗ್ನಿಗಳ್ ಬರೆ ದಿಶಾಗಜದೊಳಾ ವಿರಾಮಮುಂತಿರೆ ಪೆಸರ್ಗೆಗಟ್ಟಿ ನಾಕಿಯಂತೆವೊಲ್ ನಿರುಪಮಂ ಕೆಳದಿ ಮತ್ತಕೋಕಿಲಂ (ಛಂದೋಂಬು. ೨-೧೩೦) ; ೧೨ನೆಯ ಜಗತಿಯಲ್ಲಿ . . . ನಭಜರಂಗಳಿರೆ ಮತ್ತಕೋಕಿಲಂ (ಕೈಬಿ. ೬೦). [ಸಂ.]

**ಮತ್ತಗಜ** (ನಾ). ಸೊಕ್ಕಿದ ಆನೆ ; ಮದವೇರಿದ ಗಜ : ಮತ್ತಗಜಂಗಳ ಕೋಡಂ ಕತ್ತರಿವಿಗಮಂ . . . ಕಾಣ್ಕೆಯನಿತ್ತು (ಸೂಕ್ತಿಸು. ೩-೯೯) ; ಸುತ್ತುಬೇಲಿಯ ಮಧ್ಯದಲಿ ಹಯ ಮತ್ತಗಜ ರಥ ಗೋಮಹಿಷಿ ವರ ಸೈರಿಭದ ಚಯಕೆ . . . ಇರವಾಯ್ತು (ಕುವ್ಯಾಸ. ೬-೧೫). [ಸಂ.]

**ಮತ್ತತನ** (ನಾ). ಸೊಕ್ಕು ; ಉನ್ಮತ್ತತೆ : ಸಂಸಾರವೆಂಬ ಡಾಗು ಎನ್ನ ಮತ್ತತನದಲ್ಲಿ ಕೊಂದಿತ್ತು (ಪಶೋಕವಚ. ೪೭-೧೯೩) ; ಅವದಿರ ಕೃತ್ಯವನು ನೀನರಿಯದಕಟಾ ಮತ್ತತನದಲಿ ನುಡಿವೆ ಅವರಾರೆಂದು ಭಾವಿಸದೆ (ಸುಜ್ಞಾಶಂ. ೩-೨೪). [ಮತ್ತ₂ + — ತನ]

**ಮತ್ತತೆ** (ನಾ). = ಮತ್ತತನ : "ಮತ್ತತೆಗೆ ಮಱವೆಂಬ ನಾಮ" (ಕಬ್ಬಿಕೈ. ೬೦); ಧರೆಗೆಸೆದತ್ತು ತಾರಕನ ದುರ್ಗತಿ ತಾರಕನೇಳ್ಗೆ ತಾರಕಾಸುರನ ಪೊಡರ್ಪು ತಾರಕನ ಮತ್ತತೆ (ಗಿಂಕ. ೭-೧೧) ; ಪ್ರಾಯಶಃ ಈಗ ನನಗೆ ಮತ್ತತೆ ಉಂಟಾಗಿರಬಹುದು (ಶಶಿಚಂ. ೧೩೬). [ಸಂ. ಮತ್ತತಾ]

**ಮತ್ತತ್ವ** (ನಾ). = ಮತ್ತತನ : ಸದ್ಭಕ್ತ ದೈವವೆಂದು ಅರ್ಚಿಸುವ ಠಾವಿನಲ್ಲಿ ಮತ್ತತ್ವ ದುಶ್ಚಾರಿತ್ರ ಪಗಡೆ ಪರಿಹಾಸಕತನ . . . ಇವೆಲ್ಲವ ಬಿಡಬೇಕು (ಪಶೋಕವಚ. ೫೫-೨೨೫). [ಸಂ.]

**ಮತ್ತದ್ವಿಪ** (ನಾ). = ಮತ್ತಗಜ : ಕಾಮರ್ಗಿಲ ನೀರ್ಪೊಳಲ್ ಕೋಶದಿಂದಂ ಮದಂ ಸುರಿಯುತ್ತಿರ್ಪುದುಮೊಪ್ಪೆ ಚಕ್ರಿಯ ಮನಂಗೊಂಡತ್ತು ಮತ್ತದ್ವಿಪಂ (ಆದಿಪು. ೧೨-೫೯). [ಸಂ.]

**ಮತ್ತಮದ** (ನಾ). ಅಧಿಕವಾದ ಅಮಲು ಏರಿರುವವನು : ಮದೋನ್ಮತ್ತ : ನಿಜಕುಪಿತಾಂಬುಜಮಧುರಂ ರಜೋಪಮಾಮೂರ್ತಿ ಮತ್ತಮದ ನಂತಿರೆ (ಶಾಂತಿಪು. ೯-೭೦). [ಸಂ.]

**ಮತ್ತಮಯೂರ** (ನಾ). ೧. ಮದವೇರಿದ ನವಿಲು : ಸೊಕ್ಕಿದ ಮಯೂರ : ಅಂಬುದಧ್ವನಿಗೆ ಪೆರ್ಚಿದ ಮತ್ತಮಯೂರದಂತೆ (ಶಾಂತಿಪು. ೫-೩೭). ೨. [ಛಂದ] ಅಕ್ಷರಛಂದಸ್ಸಿನಲ್ಲಿ ಪ್ರಸಿದ್ಧವಾದ ಇಪ್ಪತ್ತಾರು ಛಂದಸ್ಸುಗಳಲ್ಲಿ ಹದಿಮೂರನೆಯ ಅತಿಜಗತಿಯೆಂಬ ಛಂದಸ್ಸಿನ ಒಂದು ವೃತ್ತ : ಎತ್ತಂ ಧಾತ್ರೀವ್ಯೋಮ ಪಯೋವಾಯು ಹರರ್ಕಳ್ ಪತ್ತಿದರ್ಗಗಳ್ಪಿಂದು ವಿರಾಮಂ ನಿಧಿಯೊಳ್ಪೆಯ್ವೆತ್ತೊಪ್ಪುತ್ತುಂ ಬಂದಿರೆ ಸಂದಿರ್ದುದು ವೃತ್ತಂ ಮತ್ತೇಭೇಂದ್ರೋದ್ಯಾಮಿನಿ ಕೇಳ್ ಮತ್ತಮಯೂರಂ (ಛಂದೋಂಬು. ೨-೧೪೪). [ಸಂ.]

**ಮತ್ತಮಾತಂಗ** (ನಾ). ೧. = ಮತ್ತಗಜ. ೨. [ಸಂಗೀತ] ಒಂದು ಬಗೆಯ ತಾಳ : ಚಾಚಪುಟ . . . ಮತ್ತಮಾತಂಗ. . .ಜಯಾಳವೆಂಬವೇ ಮೊದಲಾದ ನೂಱೊಂದು ತಾಳಂಗಳು (ಎವೀಶ. ೦೬೨). [ಸಂ.]

**ಮತ್ತರ್** 'ಮತ್ತಲ್' ನೋ.

**ಮತ್ತರನಱ** (ನಾ). ಒಂದು ಸ್ಥಳದ ಹೆಸರು : ಪೊಂನ್ನೆದೆಱ ಆಳಗನ ಹಳ್ಳ ಎತ್ತುರುಳಿ ಸರಿಗನ ಗಟ್ಟ ಮತ್ತರನಱಯುಂ ನಿಱುಗಲು (ಎಕ. VI· ತರೀಕೆ. ೬೭–೦೩; ೯೪೪). [ ? ]

**ಮತ್ತರು** 'ಮತ್ತಲ್' ನೋ.

**ಮತ್ತರ್ವಣ** (ನಾ). ಭೂಮಿಯ ಮೇಲಿನ ಒಂದು ತೆರಿಗೆ : ಪತ್ತು ಪರಿಸಂಬಱಂ ಮತ್ತರ್ವಣ್ಣಂ ಉಟ್ಕಗೂರ್ವಱಸ್ಸು ಮಾಣಿಸಿಅ (ಕೌಇ. XI–i. ೯೩–೦೯ ; 970). [ಮತ್ತರ್ (< ಮತ್ತಲ್) + ಪಣ್ಣ]

**ಮತ್ತಲ್**, ಮತ್ತು, ಮತ್ತರ್, ಮತ್ತರು, ಮತ್ತಲು (ನಾ). ಭೂಮಿಯ ಒಂದು ಅಳತೆ : ಕೆಳಗೆ ಎಣ್ಬು ಮತ್ತಲ್ ಗಟ್ಟೆ (ಇಆ. XI. ೬೦–೦೯ ; 567) ; ಅಯ್ಮತ್ತಲ್ ಕೆಯ್ಯಂ ಕೊಟ್ಟರ್ (ಎಕ. VIII. ತೀರ್ಥ. ೯೩–೯; 876); ದೇವಾರಕ್ಕೆ ಪಕ್ಕೆಲಿಯೊಳ್ ನಾಲ್ಕು ಮತ್ತಲ್ಕೆಯ್ಯಂ ಕೊಟ್ಟಳ್ (ಎಕ. VII. ಶಿಕಾ. ೨೦೯–೦೬ ; 918). **ಮತ್ತ₁** : ಮಾಳೆರಾಣಿಗನು . . . ಜೀಯರ ಮೆಚ್ಚಿ ೧ ಗುಯ್ಯಲಂ ೩ ಮತ್ತ ಕೆಯ್ಯುಮಂ ಬಿಟ್ಟರ್ (ಎಕ. XI. ಮೊಳಕಾ. ೨೭–೭ ; ೯೬೨) ; ಪಂಚಕೇಶ್ವರಕ್ಕೆ ಮತ್ತ ೬ ಭಳಾರಿಗೆ ಮತ್ತ ೬ ಭಟ್ಟಗೆಯ ಮತ್ತ ೬ ಚಟ್ಟಗೆಯ ಮತ್ತ ೬ (ಕೌಇಇ. IX–i. ೭೯–೮ ; 981) ; ಸ್ವಯಂಪಾಕಿಸ್ವಾಮಿಗಳ್ಗೆ ಮತ್ತ ೧ ದವಸಿಗರಿಗೆ ಮತ್ತ ೧ ಹೂದೋಟದ ಮಾಲೆಗಾರಗೆ ಕಮ್ಮ ೨೦ (ಎಕ. VII. ಶಿಕಾ. ೦೮೫–೬೨ ; 1158). **ಮತ್ತರ್** : ಒರ್ಮಾತ್ರಕ್ಕೆಯುಂ (ಮೈಆ. ೦೯೯೦. ೨೯–೩ ; 797) ; ತಪೋಧನರ ಸತ್ರಕ್ಕೆ ಮತ್ತರ್ಪನ್ನೆರಡು ಅಯ್ಬುಗಾವುಣ್ಡನ ದೇಗುಲಕ್ಕೆ ಮತ್ತರೈದು ಮನೆಯೊನ್ದು ಆದಿತ್ಯದೇವರ್ಗ್ಗೆ ಮತ್ತರೈದು (ಎಇ. XX. ೬–೦೭ ; 1012). **ಮತ್ತರು** : ಸುಗನ್ದಿವರ್ತಿ ಸೀಮೆಯಿನ್ದ ಪಡುವಲು ಪಿರಿಯ ಕೋಲಲು ಮತ್ತರು ೬ (ಕೌಇಇ. XX. ೦೩–೯ ; 875) ; ಪ್ರಭುಗಳ ಮಾನ್ಯದಿಂ ಮೂಡಲು ಪದಿವಱಱ ಗೇಣ ಬೆಂಕೊಳ್ಗನ ಕೋಲ ಮತ್ತರು ನೂಱು (ಎಇ. XXVII. ೦೫–೯೬ ; 1114) ; ಅಳತೆ ಗೋಲುಗಳ ಸಹಾಯದಿಂದ ಹೊಲವನ್ನು 'ಮತ್ತರು' ಮತ್ತು 'ಕಮ್ಮ' ('ಕಂಬ')ಗಳೆಂಬುದಾಗಿ ಅಳೆಯುತ್ತಿದ್ದರು (ಕಆಶ. ೩೯೩). **ಮತ್ತಲು** : ಮೂಱು ಮತ್ತಲು ಕಿಸುಕಾಡು (ಎಇ. XV. ೩೩೨–೨೮ ; 1028) ; ತಳವೃತ್ತಿ ಗದ್ದೆ ಗಳೆಯ ಮತ್ತಲು ಮೂಱು ಬೆದ್ದಲೆ ಗಳೆಯ ಮತ್ತವಾಱು (ಎಕ. VII. ಶಿಕಪೊ. ೯–೬೦ ; 1122). 'ಮಟ್ಟ₁' ಪರಾ.

[ ದೇ. ॥ ತಮಿ. ಮಱ್ಱವ್ = ನದಿಯ ಪಕ್ಕದಲ್ಲಿ ಇಳಿಜಾರಾಗಿರುವ ಪ್ರದೇಶ ; ಮಲ. ಮತ್ತವ್ = ನದಿಯ ಬಳಿಯ ತಗ್ಗುನೆಲ. / ಮರಾ. ಮತ್ತರ್ ]

**ಮತ್ತಲು** 'ಮತ್ತಲ್' ನೋ.

**ಮತ್ತಲ್ಲಿ** (ನಾ.) [ನಾಟ್ಯ] ಹದಿನಾರು ಬಗೆಯ ಮಾರ್ಗಭೌಮಚಾರಿಗಳಲ್ಲಿ ಒಂದು; "ಕಣಕಾಲುಗಳನ್ನು ಸ್ವಸ್ತಿಕ ಮಾಡಿ ಪಾದಗಳನ್ನು ನೆಲದ ಮೇಲೆ ಸಮನಾಗಿರಿಸಿ ಅರ್ಧತ್ರ್ಯಸ್ರದಿಂದ ಚರಣಗಳನ್ನು ಹಿಂದಕ್ಕೂ ಮುಂದಕ್ಕೂ ಚಲಿಸುವುದು" (ಲಾಸ್ಯರಂ. ೪೦೭ ಗದ್ಯಾನುವಾದ) : ಸಮಪಾದ . . . ಮತ್ತಲ್ಲಿ, ಉತ್ಸ್ಯಂದಿತ . . . ಊರೂದ್ವೃತ್ತ ಈ ಹದಿನಾಱು ಮಾರ್ಗಭೌಮಚಾರಿಗಳು (ಲಾಸ್ಯರಂ. ೬–೦೭ ವ). [ ಸಂ. ಮತ್ತಲ್ಲೀ ]

**ಮತ್ತವಾರಣ** (ನಾ). ೧. ಮದವೇರಿದ ಆನೆ : ದೈತ್ಯಕುಲಕದಳೀವನಮತ್ತವಾರಣನಪಜ ಮತ್ತವಾರಣಸ್ಥಿತಿಯುಮಂ . . . ಮೆಚ್ಚಿ (ಜಗಪು. ೯–೬೩ವ) ; ಉತ್ತರೆಯ ಮನೆಯಿಂದ ಶಶಿಕುಲಮತ್ತವಾರಣ ಬಂದನಾಥೀವಾಗ್ರಜನ ಹೊರೆಗೆ (ಕುಮ್ಯಾಭಾ. ೯–೩೨). ೨. ಭವನದ ಸುತ್ತಲಿರುವ ಆವರಣ,– ಬೇಲಿ. ೩. ಕೈಸಾಲೆ : ಜಗಲಿ : ತಂತಮ್ಮ ಮನೆಗಳ ಮುಂದಣ ಪಚ್ಚೆಯ ಜಗಲಿಗಳೊಳಂ ಮಣಿಮಯಮತ್ತವಾರಣಂಗಳೊಳಂ . . . ನೆರೆದಿರ್ದ ಪೆಂಡವಾಸದೊಳ್ಗೊಂಡಿರಂ ಕಂಡು (ಶಾಂತೀ. ೯–೫೯ ವ) ; ಸೇವಕರಾಜಪುತ್ರಂ ಬಂದೊಂದು ಮತ್ತವಾರಣದೊಳ್ ಕುಳ್ಳಿರ್ದು (ಶಬ್ದಮ. ೯–೬೨ ವ). ೪. ರಥದಲ್ಲಿ ಯೋಧನು ಬಿಲ್ಲು ಹಿಡಿದು ಯುದ್ಧಕ್ಕೆಂದು ನಿಲ್ಲುವ ಭಾಗ : ಆ ದಿವ್ಯರಥದ ಸಮೀಪಕ್ಕೆ ಬಂದು . . . ದೈತ್ಯಕುಲಕದಳೀವನಮತ್ತವಾರಣನಪಜ ಮತ್ತವಾರಣಸ್ಥಿತಿಯುಮಂ . . . ನಿಜಾಗ್ರಜಂಗೆ ತೋಱ ನಾಡೆಯುಂ ಮೆಚ್ಚಿ (ಜಗಪು. ೯–೬೩ ವ). ೫. ಗೋಡೆಯಲ್ಲಿ ರಚಿಸಿದ ಶಂಕುವಿನಾಕಾರದ ರಚನೆ ; ಕಪೋತಪಾಲಿಕೆ. ೬. ಒರಗುದಿಂಬು : "ಮತ್ತವಾರಣಮೆಸಲ್ ಮಲಗುವಲೆಗಿಂಬು" (ಮಂಗರಾ. ೬೦–೦೬). [ಸಂ.]

**ಮತ್ತವಾರಣೆ** (ನಾ). = ಮತ್ತವಾರಣ ೩ : ಇದರ ಎರಡು ಪಕ್ಕದಲ್ಲಿಯೂ ರಂಗಶೀರ್ಷದ ಬಾಗಿಲುಗಳಿಗೆ ಎದುರಾಗಿ ೮ ೮ ಹಸ್ತ ಅಳತೆಯುಳ್ಳ ಒಂದೊಂದು "ಮತ್ತವಾರಣೆ" ಅಥವಾ ಮಂಟಪವಿರುತ್ತದೆ (ಸಂಶಾಟಿ. ೨೩). [ < ಮತ್ತವಾರಣ ]

**ಮತ್ತವೂರ್** (ನಾ). ಒಂದು ಊರಿನ ಹೆಸರು ; P ಈಗಿನ ಚಿಕ್ಕಮಗಳೂರು ಜಿಲ್ಲೆಯ ಮತ್ತಾವಾರ : ಸಿದ್ಧಾಯದಲ್ಲಿ ಭತ್ತನೂಱ ನೆಟ ವಿನಯಾಯತನೂ ಪಂಪೆಬಸ್ತಿಗಳ ಮತ್ತವೂರ ಬಸದಿಗೆ ಬಿಟ್ಟಂ (ಮೈಆ. ೦೯೩೨, ೦೬–೨೬; ೧೬(೭)). 'ಮಟ್ಟವುರ' ಪರಾ. [ ? + ಊರ್ ]

**ಮತ್ತಸ್ಖಲಿತ** (ನಾ). [ನಾಟ್ಯ] ಮೂವತ್ತೆರಡು ಅಂಗಹಾರಗಳಲ್ಲಿ ಒಂದು : ಸಲೆ ಮತ್ತಸ್ಖಲಿತಂ . . . ಸ್ವಸ್ತಿಕರೇಚಿತಮೆಂತುಂ ವಿಸ್ತರಮಾದಂಗಹಾರ ಮೂವತ್ತೆರಡುಂ (ಲಾಸ್ಯರಂ. ೫–೫). [ಸಂ.]

**ಮತ್ತಾಕ್ರೀಡ** (ನಾ). [ನಾಟ್ಯ] ಮೂವತ್ತೆರಡು ಅಂಗಹಾರಗಳಲ್ಲಿ ಒಂದು : ಮತ್ತಾಕ್ರೀಡಂ . . . ಸ್ವಸ್ತಿಕರೇಚಿತಮೆಂತುಂ ವಿಸ್ತರಮಾದಂಗಹಾರ ಮೂವತ್ತೆರಡುಂ (ಲಾಸ್ಯರಂ. ೫–೯). [ಸಂ.]

**ಮತ್ತಾಕ್ರೀಡೆ** (ನಾ). [ಛಂದ] ಅಕ್ಷರಛಂದಸ್ಸಿನಲ್ಲಿ ಪ್ರಸಿದ್ಧವಾದ ಇಪ್ಪತ್ತಾರು ಛಂದಸ್ಸುಗಳಲ್ಲಿ ಇಪ್ಪತ್ತುಮೂರನೆಯ ವಿಕೃತಿ ಛಂದಸ್ಸಿನ ಒಂದು ವೃತ್ತ : ಮುನ್ನಂ ಭೂಮಿ ದ್ವಂದ್ವಾಕಾಶಂ ಸುರಪುರಗಣತತಿಯಿನಿರೆ ಬಟಿಕ್ಕೆಸ್ನುತ್ತಂ ಚಕ್ರಧರಂ ಶರ್ವಂ ವಸುವಿರಚಿತ ಮಹಯುತಿ ಲಲಿತಪದೋತ್ಪನ್ನಂ ವೃತ್ತಂ ಭಿನ್ನಾಬ್ಜಾಕ್ಷೀ ಗುರುಜನಮತ ದಿನಿಪತಿಶರಯುನುತಮೀಂತೆನ್ನಿಂದಾಯ್ತು ಮತ್ತಾ[ ಪಾಠಾಂ. ವೃತ್ತಂ ] ಕ್ರೀಡಾಹ್ವಯಮಿದನಱಪುದು (ಛಂದೋಂಬು. ೨–೦೬೬). [ಸಂ. ಮತ್ತಾಕ್ರೀಡಾ]

**ಮತ್ತಾಣ** (ನಾ). ಒಂದು ಸ್ಥಳದ ಹೆಸರು : ಅನ್ತೆ ಬನ್ದು ಎಡಕಱಗಾಲ ಮೂಡಣ ಭಾಗದ ಮತ್ತಾಣಯಿಂ ಅನ್ತೆ ಬನ್ದು ಪನಿಯಾಲ ಕಾಲ ಬಡ[ಗ]ಣ ಬೇಲಿಯಿಂ (ಎಕ. III. ನಂಜನ. ೦೩೯–೦೯ ; 915 ?). [ ? ]

**ಮತ್ತಾಲಂಬ** (ನಾ). (ಸೌಧದ ಸುತ್ತಲೂ ಕಟ್ಟಿರುವ) ಕಟಕಟೆ : ಆವರಣ : ವಿಚಿತ್ರಪುತ್ರಿಕಾಕಲಿತಮತ್ತಾಲಂಬಸಂಭೃತಮುಂ . . . ಎನಿಸಿ . . . ಆ ಕರುಮಾಡಮೊಪ್ಪುಗುಂ (ಮಲ್ಲಿಪು. ೨–೭೯). [ಸಂ.]

**ಮತ್ತಾಳಿ** (ನಾ). ಮದವೇರಿದ ದುಂಬಿ ; ಸೊಕ್ಕಿದ ಅಳಿ : ನವನಿರ್ಯತ್ಸಹಕಾರವಾರಿ ಮದಮುಂ ತತ್ಪಲ್ಲವಂ ಕರ್ಣಪಲ್ಲವಮುಂ ಪೂತೆಳಗೊಂಬು ಕೊಂಬನಳಿ ತದ್ಗಂಡಸ್ಥಳೋದ್ದೇಶಸಂಭವಮತ್ತಾಳಿಯನೆಯ್ದೆ ಪೋಲೆ (ಶಾಂತಿಪು. ೯–೦೯೨). [ಸಂ. ಮತ್ತಾಲಿ]

**ಮತ್ತಿ₁** 'ಮಟ್ಟಿ₁' ನೋ.

**ಮತ್ತಿ₂** 'ಮಟ್ಟಿ₂' ನೋ.

**ಮತ್ರಿಕ** 'ಮಂದ್ರಿಕ' ನೋ.

**ಮತ್ರಿಕಾಯ್** 'ಮತ್ರಿಗಾಯ್' ನೋ.

**ಮತ್ರಿಗಾಯ್, ಮತ್ರಿಕಾಯ್** (ನಾ). ೧. ಮತ್ರಿಯ ಮರದ ಕಾಯಿ. ೨. ಮತ್ರಿಯ ಕಾಯಿಯ ಆಕಾರದಲ್ಲಿ ಮಾಡಿದ ಒಂದು ಬಗೆಯ ಆಭರಣ: ಅರಳೆಲೆ ಮತ್ರಿಗಾಯ್ ಪುಲಿಯುಗುರ್ ನವರತ್ನದ ಕಂಕಣ . . . ಒಪ್ಪಿರೆ (ಶಂಖಪು. ೩-೧೬೦). **ಮತ್ರಿಕಾಯ್:** ೨. ಕೆಂಜೆಡೆ ಮತ್ರಿಕಾಯ್ ಪುಲಿಯುಗುರು ಕಡಗಂ . . . ರಂಜಿಸೆ . . . ಕಣ್ಣೆಸೆದಂ ಭುವನೈಕಮಂಡನಂ (ಪರ್ವಶಪು. ೮೨-೭೯). 'ಮಾಂಗಾಯ್' ಪರಾ.
[ಮತ್ರಿ$_1$ (<ಮಚ್ಚಿ$_1$) + ಕಾಯ್$_4$]

**ಮತ್ರಿನಾಲಿಗೆ** (ನಾ). ಮಚ್ಚೆಯಿರುವ ನಾಲಗೆ; ☞ ಸಾಮಾನ್ಯವಾಗಿ ನಾಲಗೆಯ ಮೇಲೆ ಮಚ್ಚೆಯಿರುವವರು ಆಡುವ ಮಾತುಗಳು ನಿಜವಾಗುತ್ತವೆ ಎಂಬ ನಂಬಿಕೆಯಿದ್ದು, ಅವರ ಬಾಯಿಯಿಂದ ಕೆಟ್ಟ ಮಾತುಗಳು ಬಾರದಂತೆ ಜನರು ಎಚ್ಚರಿಕೆ ವಹಿಸುತ್ತಾರೆ: ಅವಳದು ಮತ್ರಿನಾಲಿಗೆ. ಆಡಿದ್ದು ನಡೆದು ಬಿಡುತ್ತದೆ (ರೂಢಿ).
[ಮತ್ರಿ$_2$ (< ಮಚ್ಚೆ$_2$) + ನಾಲಿಗೆ (< ನಾಲಗೆ)]

**ಮತ್ರಿವಿಡಿ** (ಕ್ರಿ). (?) : ಮುಂತೆ ರಾಜಿಸುವ ಬತ್ತೀಸಾಯುಧಗಳ ಪಂಥದ ಮತ್ರಿವಿಡಿದರು ಸಂತತ ಹಿರಿಯೂರ ತಮ್ಮಣನಾಯಕನೊಂತಾದ ಬಲ ವೈದಿದುದು (ಕಂಠೀರ. ೧೧-೦೩). [ಮತ್ರಿ$_3$ + ಪಿಡಿ$_1$]

**ಮತ್ತು$_1$** (ನಾ). ಅಮಲು; ಮದ; ಸೊಕ್ಕು: "ಪ್ರಮದಂ ಮತ್ತೆಂದು" (ಕಬಗಿ. ೬೩); ಬರವೇಟಬ್. . . ಭರದಿಂ ಸುಬ್ಬುರುವಾಲನಂ ಗಡುಗನಂ ಮತ್ತುಳ್ಳ ಪೆರ್ನಾಯ್ಗಳಂ (ಪಕತಂ. ೬೬): ಇತರರೂ ಮೊಸರನ್ನದ ಮತ್ತಿನಿಂದ ತೂಕಡಿಸಿಕೊಂಡು ಒರಗಿದರು (ಹಸುಕೂ. ೬೬). [<ಸಂ. ಮತ್ತ]

**ಮತ್ತು$_2$** (ಅ). ಅಲ್ಲದೆ: ಜೊತೆಗೆ: ಷಷ್ಠೀವಿಭಕ್ತಿಯ ರೂಪಗಳಿಗೂ ಕೃದಂತನಾಮಗಳ ವಿಶೇಷಣರೂಪಗಳಿಗೂ ಊ-ಊ ಎಂಬುವು ಸೇರುವುದಿಲ್ಲ. ಇವನ್ನು ಕೂಡಿಸಬೇಕಾದರೆ 'ಮತ್ತು' ಎಂಬ ಅವ್ಯಯವನ್ನು ನಡುವೆ ಉಪಯೋಗಿಸಬೇಕು (ಶಬ್ದಶಾ. ೦೬೦); ದಾಸಪ್ಪ, ಕೆಂಪಿ ಮತ್ತು ಮಕ್ಕಳು ಗೋಣಿಚೀಲ ಬಿಚ್ಚಿ ಪಯಣದ ರೊಟ್ಟಿ ಎರಪಿರಡು ತಿಂದರು (ಪಷ್ಣಾರು. ೨೬೩).

**ಮತ್ತಿನ, ಮರ್ತಿನ** = ಉಳಿದ: ಬೇರೆಯ: ಎಲ್ಲರಿಂ ಪಿರಿಯಾಕೆ ನಿನ್ನ ನಲ್ಲದೆ ಪೆಱರನೊಲ್ಲೆನೆಂದಿರ್ದೊಡೆ ಮತ್ತಿನರ್ವರುಮಂ ಮದುವೆಯಂ ಮಾಡಿ (ಶಂಕಪಾ. ೦-೭೯ ವ); ವಿಸ್ತಾರಿತಚಾರುಕೀರ್ತಿ ನಿನಗಾರ್ದೊರೆ ಮತ್ತಿನ ಮಣ್ಡಳೇಶ್ವರರು (ಶಾಸಂ. XI-i, ೦೦೩-೦೩; 1074); ಮತ್ತಿನ ಮರ್ತ್ಯರೇನನಜೆದರ್ . . . ಗುಣಾಗ್ರಣಿ ರೇವದಾಸ ದೀಕ್ಷೋತ್ತರ ಸೋಮಯಾಜಿಗಳಿನೂರ್ಜ್ಜಿತಮಾಯ್ತು ಧರಾಮರಾನ್ವಯಂ (ಎಂ. XIII, ೩೩೦-೦೩; 929). ☞ ಇದು 'ಮತ್ತಿನ' ಎಂಬುದರ ಅಪಲಿಖಿತವಿರಬಹುದು. **ಮತ್ತೊಂದು** = ಬೇರೊಂದು; ಇನ್ನೊಂದು: ಇತ್ತ ಮತ್ತೊಂದು ದಿವಸಮಾ ಸಭಾಮಂಟಪದೊಳ್ ಧರ್ಮರಾಜಂ ತನ್ನ ನಾಲ್ವರ್ ತಮ್ಮಂದಿರೊಡನೆ ದೇವೇಂದ್ರಲೀಲೆಯಿಂದೋಲಗಂಗೊಟ್ಟಿರೆಯಿರೆ (ಶಂಕಪಾ. ೬-೩ ವ); ಪಾಂಡವನಂದನರು ಮತ್ತೊಂದು ದೆಸೆಯಲ್ಲಿ ಮುಂದುವರಿದರು (ಕುಮಾರವ್ಯಾ. ೨-೬೦). **ಮತ್ತೊಮ್ಮೆ** = ಇನ್ನೊಮ್ಮೆ; ಇನ್ನೊಂದು ಸಾರಿ: ತಾನೇ ಶಿವನೆಂದು ಋಜುಹ ತೋಱುವ ಹಾಗೆ ಮರ್ತ್ಯದಲ್ಲಿ ಸುಳಿದನಲ್ಲದೆ ಋಜುಹುಂಟೆ ಶರಣಂಗೆ ಮತ್ತೊಮ್ಮೆ ಅಜ್ಜವು ಮಱಹುಂಟೆ (ಆದಿವ. ಪು. ೦೬೩-೩೦೬); ಪರವೋತ್ಸಾಹದಿಂದುಕ್ಕಿ ಪ್ಪೆಯುಕ್ಕಿ ಇಂದುವಕೌಳೆಯ ಕೃಪೆಗೆ ಮತ್ತೊಮ್ಮೆ ಪ್ಪೆಯುಕ್ಕಿ (ಬಿಸರ. ೦-೩೬).
[ದೇ.೩ ತಮಿ. ಮಱ. ಮಱ್ಱು]

**ಮತ್ತೆ$_1$** (ನಾ). ಮದವೇರಿದವಳು; ಉನ್ಮತ್ತೆ: ಅತ್ರಿತ್ತ ನೋಡದೆ ಅವದಾತಿಗೈಯದೆ ಮತ್ತೆಯಾಗದೆ ಮಱಿತಿರದೆ ಅತ್ತೆ ಮಾಮಂದಿರಾಣತಿಯ ನಾಲಿಪುದು (ಹರಿ. ೯-೦೦). [ಸಂ. ಮತ್ತಾ]

**ಮತ್ತೆ$_2$** (ಅ). ೧. ಬಳಿಕ; ನಂತರ; ಆಮೇಲೆ: ಇನ್ನಂತೆ ಮತ್ತೆ ಬಟಿವಿಗೆ ಮುಂ ನಿಲೆ ತಾಂ ಮೇಣ್ ಪೆಱಂ ಗಡಂ ಗಳಮಾದಂ ಕೆನ್ನನಿಲ್ಲೆಂದಿವನೆಂದುಂ ನಿಜಿಸಲ್ಕಲ್ಲದೆತೆಗಳೊಳ್ ಕಲ್ಲದಿಂ (ಕರಿಣ. ೨-೦೩); ಮತ್ತಾ ಪುರೋಹಿತಂ ನಾಲ್ಕು ವೇದಮುಮಾಱಂಗಮುಂ ಪದಿನೆಂಟುಂಧರ್ಮಶಾಸ್ತ್ರಂಗಳುಮಂ ಬಲ್ಲೊಂ (ವಡ್ಡಾರಾ. ೬೩-೦೯); ಅರಸನ ಕದಪು ಕೈಯಲಿ ಕೀಲಿಸಿತು ಹೇಳಿದನು ಸಂಜಯ ಮತ್ತೆ ಮೇಲಣ ರಣದ ವಾರ್ತೆಯನು (ಕುಮಾರವ್ಯಾ. ೦-೨). ೨. ಪುನಃ; ತಿರುಗಿ: ಜೈನವಮಾರ್ಗವುಂ ಕಾಣದೆ ಮುನ್ನಕಟಕಟ ಕೆಟ್ಟೆ ನೀ ಮತ್ತೆ ಕೆಡದಿರು (ಸಮುಕ. ೩-೩೮); ಭಾವಿಸುವೊಡೆ ತಲೆಯಲ್ಲಿ ಮತ್ತೆ ಪುಲ್ಮೊಳೆದಪುದೇ (ರಜಕಾಕ್ಷು. ೦-೦೩೬); ಜಮದಗ್ನಿ ರಾಮನು ಮತ್ತೆ ಕೊಡಲಿಯ ಮಸೆದು ಹೊಕ್ಕನು ಚಿಕ್ಕವಿಸು ನೆಱೆ ಕಡಿವನಾತನ ಸೈನ್ಯಕಾನನವ (ಗಂಕಶ. ೨೬-೩೦).

**ಮತ್ತೆಮತ್ತೆ, ಮಮ್ಮತ್ತೆ** (ದ್ವಿರುಕ್ತಿ): ಪೊತ್ತು ಪೊತ್ತಿಗೆ ಮತ್ತೆ ಮತ್ತೆ ಬಲವತ್ತರದೊಳೊತ್ತಿಡಿದು ಸುತ್ತಲೆತ್ತೆತ್ತಲುಂ ಕೆತ್ತವೊಲ್ಬಿತ್ತ ಮುಸುಕಿತ್ತು ಕಗ್ಗತ್ತಲೆ ಧರಿತ್ರಿಯಂ (ಕೈಬಿಡ. ೨೬-೬); ಮೊದಮೊದಲು ಭಾಸವಾದ ಗೆಲವೆಂಬುದು ಮಮ್ಮತ್ತೆ ಸೋಲವಾಗಿ ಪರಿಣಮಿಸುತ್ತದೆ (ಚಾತಿಗಸು. ೦೦೩). [ಮತ್ತು$_2$ + — ಎ$_4$]

**ಮತ್ತೇಭ** (ನಾ). ಸೊಕ್ಕಿದ ಆನೆ; ಮತ್ತ ಗಜ: ವಿಜಾಣಾಂಕಮತ್ತೇಭ ಚಾಮರವೋ ನಂದನಲಕ್ಷ್ಮಿಯೊಳ್ಗೆಯೊ ತಾಂ ಮಂದಾನಿಲಂ ಶಂಕೆಣಿ ಬರೆ (ಆದಿಪು. ೭೯೦); ಪರರಾಯರ್ಗಳ ಸೇನೆಯಂ ಗೆಲಿದು ಮತ್ತೇಭಂಗಳಂ ಸೀಳ್ದು ತನ್ನರಿಯೆಂದೆಂಬರನೊಕ್ಕಲಿಕ್ಕುವ ಭಟರ್ಗಂ ಗಂಜೆ ಕೀಲುಗ್ನಾಯ್ಗಳಂ ನಿರುತಂ ಭೋಜ್ಯವಿಶೇಷಮಿತ್ತು ಪೊರೆವರ್ (ಸೂಕ್ತಿಸು. ೬೩). [ಸಂ.]

**ಮತ್ತೇಭವಿಕ್ರೀಡಿತ** (ನಾ). ೧. ಮದಿಸಿದ ಆನೆಯ ಆಟ; ಮತ್ತಗಜದ ಕ್ರೀಡೆ: ಮಸಕಂ ಕಾಯ್ದು ಜವಂ ಜವಂಗವಿಂದಿರೊಳ್ ನೋಡಲ್ಕು ಗುರ್ವಾಗೆ ಮಾಂದಿಸಿಮಾ ವಂದುದು ಕೊಂದುದೇನು ಭಯದಿಂ ವಿಪ್ರರ್ ತರಳ್ಪೋಡೆ. . . ಆಶ್ರಮಕ್ಕಿಂತು ಬೇವಸಮಂ ಮಾಡುವುದಾಯ್ತುದೊಂದು ವಿಭವಂ ಮತ್ತೇಭವಿಕ್ರೀಡಿತಂ (ಶಂಕಪಾ. ೯-೪೬). ೨. [ಛಂದ] ಅಕ್ಷರ ಛಂದಸ್ಸಿನಲ್ಲಿ ಪ್ರಸಿದ್ಧವಾದ ಇಪ್ಪತ್ತಾರು ಛಂದಸ್ಸುಗಳಲ್ಲಿ ಇಪ್ಪತ್ತನೆಯ ಕೃತಿಯೆಂಬ ಛಂದಸ್ಸಿನ ಒಂದು ವೃತ್ತ: ಅಬ್ಧಿವೇಷ್ಟಿತಭೂಚಕ್ರದೊಳಿಂತು ಮೇರುಗಿರಿಯಿಂ ಮತ್ತೊಂದು ಶೈಲೇಂದ್ರ ಮುನ್ನತಮಿಲ್ಲಂತುಟು ನಾಕಿಗಂಗೆನುತುಮಿಾ ಮತ್ತೇಭವಿಕ್ರೀಡಿತಂ ಪ್ರತಿಯಿಂದಿಂತು ತಗುಳ್ದು ಕೊಂಡುಕೊನೆಗಂ ವಿಶ್ವಂಭರಾಮಂಡಲಂ (ಛಂದೋಂಬು. ೦-೨೬); ಶ್ವಸನೇಂದುಜ್ವಲನಾಮರಾವನಿ ಜಲಂ ವ್ಯೋಮಾರಿ ಕಾಮಾಂತಕ ಪ್ರಸರೋಮ್ಮಗ್ನಣದಿಂ ತ್ರಯೋದಶಯತಿಪ್ರಸ್ತಾರ ಮಾಗಿರ್ದೊಡೀ ವಸುಧಾಚಕ್ರದೊಳೆಯ್ದೆ ಸಂದುದು ಕರಂ ಮತ್ತೇಭ ವಿಕ್ರೀಡಿತಂ (ಛಂದೋಂಬು. ೨-೦೬೩); "ಖ್ಯಾತ ಕರ್ಣಾಟಕಂ"ಎಂದು ಪೊಗಳಿಸಿಕೊಳ್ಳುವ ಶಾರ್ದೂಲವಿಕ್ರೀಡಿತ, ಮತ್ತೇಭವಿಕ್ರೀಡಿತ. . . ಎಂಬ ಆರು ವೃತ್ತಗಳೇ ಕರ್ನಾಟಕ ಕಾವ್ಯರಂಗದಲ್ಲೆಲ್ಲ ನರ್ತಿಸಲು ನಿಂತ ಸಂಸ್ಕೃತಜನ್ಯ ವೃತ್ತಗಳು (ಸರಹೊಸ. ೦೬೦). ೧, ೨: ನಿರಿದುಗರ್ಗಳನೇಱುಯನ್ನ ಪುರದೊಳ್ ರತ್ನಾಳಿಕೇರಾಂಬುವಂ ಮರವಾಡ್ಡಿದ್ದಿರೆ ಕೊಂಡು ಬಂದುದ ಪರಾಂಭೋರಾಶಿಯೊಳ್ ಪುಟ್ಟಿಗಪ್ಪುರದೊಳ್ದಿಯುನೊಟ್ಟಿಕೊಂಡು ದದಜಂ ಮತ್ತೇಭವಿಕ್ರೀಡಿತಂ ದೊರೆವೆತ್ತಪ್ಪನ ಗಂಧವಾರಣ ಮಿರೇನನ್ವರ್ಥಮಾಗಿರ್ದುದೋ (ಗದಾಯು. ೦-೨೬). [ಸಂ.]

**ಮತ್ತೋಪಚಾರ** (ನಾ). (ಕಾಮಾತುರದಿಂದ) ಮದಿಸಿದ ವ್ಯಕ್ತಿಗೆ ಮದವಿಳಿಯಲು ಮಾಡುವ ಉಪಚಾರ: ಮದನೇಭಕ್ಕಾವುದೊಂದು ಬಾಜಮರಡು ಕೊಳಂ ಪೂಜು ತೆಂಗಾಳಿ ನಾಲ್ಕುಧ್ಯುದಿತಂ ಹಿಂದೋಳ

ಮಯ್ಯುದ್ವೃತ್ತ ಪಿಕಕುಳವಮಾಚುನ್ನತಾಶೋಕವೇಟುನ್ಮದಕೀರವ್ರಾತಮೆಂಟು ಚ್ಚಳಿತವಕುಳವೊಂಭತ್ತಲರ್ ಪತ್ತು ತತ್ಕಾಮುದಿ ಪನ್ನೊಂಮತ್ತಳಿಂ ಪನ್ನೆರಡಳಿ ಪದಿಮೂಜಿಲ್ತೆ ಮತ್ತೋಪಚಾರಂ (ಶಾಂತಿಪು. ೯-೯೯). [ಸಂ].

**ಮತ್ಥವಟ್ಟಿಗೆ** (ನಾ). ತಲೆಗೆ ಸುತ್ತಿಕೊಳ್ಳುವ ವಸ್ತ್ರ ; ರುಮಾಲು, ಪೇಟ ಮೊದಲಾದ ವಸ್ತ್ರ : ಮತ್ಥವಟ್ಟಿಗೆ, ಕಥಾಯಂ (ಕತ್ಥಾಯಂ) (ಕಮಿದ. ೦೫ ವೃತ್ತಿ). [<ಸಂ. ಮಸ್ತಪಟ್ಟಿಕಾ]

**ಮತ್ವ** (ನಾ). ಮ ಎಂಬ ಅಕ್ಷರ ; ಮಕಾರ : ವಿತತ ನಪುಂಸಕಲಿಂಗ ದ್ವಿತೀಯೆಯೊಳ್ ನತ್ವಮತ್ವವಿಧಿ ಮತ್ವಮೆ ಸಂಗತಿವಡೆಗುಂ ಸಂಸ್ಕೃತದೊಳ್ (ಕಮಿದ. ೦೦೬). [ಸಂ.]

**ಮತ್ಸ** (ನಾ). ಮೀನು : ' ಮತ್ಸಕಲ್ಲು ' ಪರಾ. [ಸಂ.]

**ಮತ್ಸಕಲ್ಲು** (ನಾ). ಮೀನಿನ ಆಕಾರವನ್ನು ಕಂಡರಿಸಿದ ಕಲ್ಲು, ತೊಲೆ, ಕಂಬ ಇತ್ಯಾದಿ : ಬೇಲೂರ ಶ್ರೀಚೆಂನಕೇಶವನಾಥದೇವರ ಶುಕನಾಸಿಕೆಯ ಮತ್ಸಕಲ್ಲುಗಳ ಜೀರ್ಣಕ್ಕೆ ಕೊಟ್ಟು ಉಕ್ಕಂಪದ ನಾಲ್ಕು ಕಂಬವನು ನಿಲ್ಸಿ ಜೀರ್ಣ್ನವನುದ್ಧರ್‍ಸಿದೆನು (ಎಕ. V. ಬೇಲೂರು. ೩೨-೦೫ ; 13೪1).

[ಮತ್ಸ + ಕಲ್ಲು ( < ಕಲ್$_3$) ]

**ಮತ್ಸರ** (ನಾ).೧. ಹೊಟ್ಟೆಕಿಚ್ಚು ; ಕರುಬು: ಮತ್ಸರಮುಪೋರಗಕ್ಕಮಾಗ್ರಹ ಮಹಾಗ್ರಹಕ್ಕಂ ಕೋಪಮದಾನೇಕಪಕ್ಕಂ ಪಕ್ಕಾಗೆ ತನ್ನನೊಪ್ಪಿಸುವುದು ಮತಿವಂತಂಗೆ ಪುರುಷಾರ್ಥಮಲ್ತು (ಶಾಂತಿಪು. ೩-೭೨ ವ); ಮದಮತ್ಸರವುಳ್ಳವಂಗೆ ಹೃದಯಶುದ್ಧಿವೆಲ್ಲಿಯದೊ (ಬಸವ. ೦೦೯). ೨. ವೈರ ; ದ್ವೇಷ: ಮಸೆದುದಿತ್ತಂಡಕ್ಕೆ ಮತ್ಸರವಸಮಸಂಗರವೀಗ ನೀತಿಯನುಸುರಿದರ ಮನಗಾಣನೇ ಕೌರವಮಹೀಶ್ವರನು (ಕುಮಾ. ಉ. ೦೮-೨೩). ೩. ಕೋಪ ; ಕ್ರೋಧ : ' ಮತ್ಸರಿಸು ' ಪರಾ. [ಸಂ.]

**ಮತ್ಸರಿ** (ನಾ). ಇತರರ ಏಳಿಗೆಯನ್ನು ಕಂಡು ಕರುಬುವವನು ; ಹೊಟ್ಟೆಕಿಚ್ಚಿನ ವ್ಯಕ್ತಿ : ಸೀತೆಯ ರೂಪವನ್ನು ನೋಡಿ ಮತ್ಸರಿಗಳೂ ಕುಲಾಂಗಾರರೂ . . . ಆದ ರಾಜರಿಗೆ ಅಭಿಲಾಷೆಯು ಉತ್ಪನ್ನವಾಗಿ, ಅವರು ಸಿಟ್ಟಿಗೆದ್ದರು (ಕುಶಲ. ೭೯) ; ಪರಿಸಲಪ್ಪುದೆ ನರರು ಮತ್ಸರಿಯ ಸಂಕಟವ ? (ಕುಶಲ. ೨೦೦). [ಸಂ. ಮತ್ಸರಿನ್]

**ಮತ್ಸರಿಗ** (ನಾ). = ಮತ್ಸರಿ : " ಮತ್ಸರಿಗನು ದೋಷಗ್ರಾಹಿಯೆನಿಸಿಕ್ಕು" (ಮಂಗರಾ. ೯೯-೬). [ಮತ್ಸರ + — ಇಗ]

**ಮತ್ಸರಿಸು** (ಕ್ರಿ). ೧. ಕರುಬು ; ಅಸೂಯೆ ಪಡು; ಹೊಟ್ಟೆಕಿಚ್ಚು ಪಡು : ಸುರುಚಿರಸಾಲಭಂಜಿಕೆ ಬೆಮಂತ್ರುರದೊಳ್ ಪೊಳೆಯುತ್ತಿರಲ್ಕೆ ಮತ್ಸರಿಸಿದಳ್ . . . ಲತಾಂಗಿಮುಟಲ್ದು ಬಾಡಿದಳ್ (ಕಾದಂಬ. ೩೨) ; ತರುಣಿಯರ ಮೋಹನದಲುಜ್[3] ಮತ್ಸರಿಸದವರಾರರಸ (ಕೊರಶಾ. ೪-೨-೨೫). ೨. ರೇಗು : ರೋಷಗೊಳ್ಳು : ನಡುನಿರುಳಾಕಾಶಮಾರ್ಗದಿ ದೈತ್ಯರು ಮುಂದುಮುಂದು ಹಳಚಿ ಮತ್ಸರಿಸಿ ಕಡಿದಾಡುವ ಖಡ್ಗಧಾರೆಯಿಂದುದಿರ್ವ ಕಿಂಗಿಡಿಗಳ ನೋಡುತೆಯ್ದಿದಳು (ಮೋಹಕ. ೨೯-೦೩). ೩. ಹುರುಡಿಸು ; ಸ್ಪರ್ಧಿಸು; ಪೈಪೋಟಿ ನಡೆಸು: ಇಳಿದರು ನೀರೊಳುಜ್[3] ಮತ್ಸರಿಸಿದರು ಪ್ರಣಯಪ್ರತಾಪವನೊಬ್ಬರೊಬ್ಬರಲಿ (ಕೊರಶಾ. ೨-೭-೫).

[ಮತ್ಸರ + — ಇಸು$_3$]

**ಮತ್ಸ್ಯ** (ನಾ). ೧. ಮೀನು : "ಮೀನಂ ಝಷಂ. . . ವೈಸಾರಿಣಂ ಮತ್ಸ್ಯಮೆನೆ ಮೀನ್ಗೆ ನಾಮಂ" (ಮಂಗರಾ. ೦೨೧-೬); ಹಿರಿದು ಮೊಸಳೆಯ ಮತ್ಸ್ಯ ನುಂಗಿಯು ಬಾಯಿದೋಜದಲ್ಲಾ (ಅವಶಂ. ೩೦೩-೦೩೨೦); ಜಲವ ತಪ್ಪಿದ ಮತ್ಸ್ಯ ಬದುಕುವುದೆ ಸೋಜಿಗ (ಬಸವ. ೩೬೭). ೨. ವಿಷ್ಣುವಿನ ದಶಾವತಾರಗಳಲ್ಲಿ ಮೊದಲನೆಯದು : " ಆ ಮತ್ಸ್ಯನಾ ಕೂರ್ಮನಾ ವರಾಹಂ. . . ಕೃಷ್ಣನೆಂದಾತನವತಾರ ಪತ್ತನಿಕ್ಕುಂ" (ಮಂಗರಾ. ೬-೦೯). ೩. ಒಂದು ದೇಶದ ಹೆಸರು : ಕಮ್ಮಯ್ಯರುಂ. . . ಮತ್ಸ್ಯದೇಶಮುಂ ಪುಗುತಂದರ್ (ಕಂಶಿಖಾ. ೮-೩೦ ವ); ಮಗಧ ಪಾಂಚಾಲ ಮತ್ಸ್ಯ ಕುರಂಗ ವಂಗ ಕಳಿಂಗ ಬಂಗಾಳ (ಬಸವ.೬-೦೨). ೪. ಆ ದೇಶದ ರಾಜ : ವಿರಾಟ : ಪಾಂಡುತನೂಜರ್ ತಲೆದೋಱಿರೆ ರಾಗಮಗುಂದಲೆಯುಂ ಪೊಂಪುಟಿಯುಂ ಮಾಯ್ತು ಮತ್ಸ್ಯಂಗಾಗಳ್ (ಕಂಶಿಖಾ. ೯-೪); ನಿರ್ಮದನು ಮತ್ಸ್ಯನ ಪುರಿಗೆ ಯತಿವೇಷದಲಿ ಬಂದನು (ಕುಮಾ. ೩. ೦-೦೭). ೫. ಪ್ರಸಿದ್ಧವಾದ ಪದಿನೆಂಟು ಮಹಾಪುರಾಣಗಳಲ್ಲಿ ಒಂದು : ಕ್ರಮವಾಗಿ ಹದಿನೆಂಟು ಪುರಾಣಗಳ ಹೆಸರುಗಳು : (೧) ಬ್ರಹ್ಮ. . . (೧೬) ಮತ್ಸ್ಯ, (೧೭) ಗರುಡ, (೧೮) ಬ್ರಹ್ಮಾಂಡ (ಭಾರತ. ೦೩೭). ೬. [ಜ್ಯೋತಿ]ಹನ್ನೆರಡು ರಾಶಿಗಳಲ್ಲಿ ಕೊನೆಯದು ; ಮೀನರಾಶಿ : ಜಾಲದ ಎಡಮಗ್ಗುಲಲ್ಲಿರುವ ರಾಶಿ ಮತ್ಸ್ಯ (ನಕ್ಷತ್ರ. ೩೦). ೭. [ನಾಟ್ಯ]ಸಂಯುತಹಸ್ತಗಳಲ್ಲಿ ಒಂದು ಬಗೆ : ಅಭಿನಯದರ್ಪಣದಲ್ಲಿ—೧. ಅಂಜಲಿ, ೨. ಕಪೋತ . . . ೧೭. ಮತ್ಸ್ಯ, ೧೮. ಕೂರ್ಮ (ಅಭಿನ. ೪೮). [ಸಂ.]

**ಮತ್ಸ್ಯಂಡಿ** (ನಾ). ಬೆಲ್ಲವಾಗುವುದಕ್ಕೆ ಸ್ವಲ್ಪ ಮುಂಚೆ ತೆಗೆಯುವ ಕಬ್ಬಿನ ಹಾಲಿನ ಪಾಕ; ಕಾಕಂಬಿ : "ಮತ್ಸ್ಯಂಡಿ ಖಂಡಸಕ್ಕರೆಯಕ್ಕು" (ಮಂಗರಾ. ೬೪-೪); "ಕಲ್ಲುಸಕ್ಕರೆ ಪುಟಿಕೆ ಆಗುವ ಹಾಗೆ ಕಾಯಿಸಿದ ಕಬ್ಬಿನ ಹಾಲಿಗೆ ಮತ್ಸ್ಯಂಡಿಯೆಂತಲೂ . . . ಹೆಸರುಗಳು" (ಸಿದ್ಧೌಷಧಿ. ೨೮೭).

[ಸಂ. ಮತ್ಸ್ಯಂಡೀ]

**ಮತ್ಸ್ಯಕೃಷಿ** (ನಾ). ಮೀನುಗಾರಿಕೆ; ಮೀನುಸಾಕಣೆ : " (ಕೃತಕವಾಗಿ) ಮೀನು ಬೆಳೆ; ಮತ್ಸ್ಯಕೃಷಿ" (Pisciculture. ಇಂಕೋ). [ಸಂ.]

**ಮತ್ಸ್ಯಕ್ಷೇತ್ರ** (ನಾ). (ನದಿ, ಕೆರೆ, ಸಮುದ್ರ ಇತ್ಯಾದಿಗಳ) ನೀರಿನಲ್ಲಿ ದೊರೆಯುವ ಮೀನು ಮೊದಲಾದ ಜಲಚರ ವಸ್ತುಗಳನ್ನು ಸಂಗ್ರಹಿಸುವ ಸ್ಥಳ : "ಮತ್ಸ್ಯಕ್ಷೇತ್ರ; ಜಲವಸ್ತುಸಂಗ್ರಹ (ಸ್ಥಳ, ಸಂಸ್ಥೆ, ಉದ್ಯೋಗ)" (Fishery. ಶಕ್ತಿ೧. ೮೯). [ಸಂ.]

**ಮತ್ಸ್ಯಧ್ವಜ** (ನಾ). ೧. ಮೀನಿನ ಗುರುತಿರುವ ಪತಾಕೆ. ೨. ಮೀನಿನ ಗುರುತನ್ನು ಪತಾಕೆಯಲ್ಲಿ ಉಳ್ಳವನು; ಮನ್ಮಥ. [ಸಂ.]

**ಮತ್ಸ್ಯನ್ಯಾಯ** (ನಾ). ದೊಡ್ಡಮೀನು ಸಣ್ಣಮೀನನ್ನು ಹಿಡಿದು ನುಂಗುವುದು : ಬಲಿಷ್ಠನಾದವನು ಅಶಕ್ತನನ್ನು ಹಿಡಿದು ಪೀಡಿಸುವುದು ಎಂಬುದಂ ಲೋಕರೂಢಿ : ದಂಡಧರರಿಲ್ಲದಂದು . . . ಅಂತ ದುರ್ಷ್ಟಬಲವಪ್ಪನಗ್ರಸನದಿಂ ದುರ್ಬಲಜನದೊಳ್ ಮತ್ಸ್ಯನ್ಯಾಯಂ ಪ್ರವರ್ತಿಸುಗುಂ (ಅಂತ್ಯ. ೯-೭೪ ವ). [ಸಂ.]

**ಮತ್ಸ್ಯಪಿತ್ತ** (ನಾ). ಒಂದು ಬಗೆಯ ಔಷಧದ್ರವ್ಯ : ಕಟುಕರೋಹಿಣಿ : "ಮತ್ಸ್ಯಪಿತ್ತಮೆನೆ ಕಟುಕರೋಹಿಣಿ" (ಮಂಗರಾ. ೪೨-೩೮) ; "ಕಟುಃ . . . ಮತ್ಸ್ಯಪಿತ್ತಾ, ಕೃಷ್ಣಭೇದೀ, ಚಕ್ರಾಂಗೀ, ಶಕುಲಾದನೀ—ಕಟುಕರೋಹಿಣಿಯ ಹೆಸರುಗಳು . . . ಇದು ಭೇದಿಯಾಗುವ ಗ್ರಂಥಿಕದ್ರವ್ಯ" (ಸಿದ್ಧೌಷಧಿ. ೦೩೦). [ಸಂ. ಮತ್ಸ್ಯಪಿತ್ತಾ]

**ಮತ್ಸ್ಯಪುರಾಣ** (ನಾ). ಹದಿನೆಂಟುಮಹಾಪುರಾಣಗಳಲ್ಲಿ ಒಂದು : ಬ್ರಹ್ಮಪುರಾಣ . . . ಮತ್ಸ್ಯಪುರಾಣ ಗಾರುಡಪುರಾಣ ಬ್ರಹ್ಮಾಂಡಪುರಾಣವೆಂಬವೇ . . . ಹದಿನೆಂಟು ಮೂಲಪುರಾಣಂಗಳ್ (ಚಿವೇಕ. ೯) ; ಮತ್ಸ್ಯಪುರಾಣದಲ್ಲಿ, ಸಾತ್ವಿಕಪುರಾಣಗಳಲ್ಲಿ ವಿಷ್ಣುಮಹಾತ್ಮ್ಯವೂ . . . ನಿರೂಪಿತವಾಗಿದೆ (ಭಾರತ. ೦೩೭). [ಸಂ.]

**ಮತ್ಸ್ಯಬಂಧನ** (ನಾ). ಮೀನು ಹಿಡಿಯುವ ಒಂದು ಸಾಧನ ; ಗಾಳ : "ಬಡಿಶಂ, ಮತ್ಸ್ಯಬಂಧನಂ — ೨ ಗಾಳಕ್ಕೆ ಹೆಸರುಗಳು" (ಸಿದ್ಧೌಷಧಿ. ೬೦).

[ಸಂ.]

**ಮತ್ಸ್ಯಬಂಧಿ** (ನಾ). ಗಾಳಹಾಕುವವನು ; ಬೆಸ್ತ : "ಕೈವರ್ತಃ, ಧೀವರಃ, ದಾಶಃ, ಮತ್ಸ್ಯಬಂಧೀ, ಜಾಳಿಕ — ಈ ೫ ಜಾಲಗಾರಂ" (ಶಬ್ದಮ. ೯೭-೪೪೦). [ಸಂ. ಮತ್ಸ್ಯಬಂಧಿನ್]

**ಮತ್ಸ್ಯಬಂಧಿನಿ** (ನಾ). ಮೀನು ಹಿಡಿಯುವ ಸಾಧನ ; ಮೀನಿನ ಬಲೆ : "ಆನಾಯಃ, ಜಾಳಃ, ಕುವೇಣೀ, ಮತ್ಸ್ಯಬಂಧಿನೀ – ಈ ೪ ಬಲೆ" (ಹಲಾಯು. ೯೭–೪೯೦). [ಸಂ. ಮತ್ಸ್ಯಬಂಧಿನೀ]

**ಮತ್ಸ್ಯಯಂತ್ರ** (ನಾ). ಮಹಾಭಾರತದ ದ್ರೌಪದೀಸ್ವಯಂವರ ಸಂದರ್ಭದಲ್ಲಿ ರಾಜಕುಮಾರರ ಶಸ್ತ್ರಚಾತುರ್ಯವನ್ನು ಅಳೆಯಲು ಏರ್ಪಡಿಸಿದ್ದ ಮತ್ಸ್ಯವೆಂಬ ಲಕ್ಷ್ಯದ ಸಾಧನ: ಮಹಾಭಾರತದ ಕತೆಯಲ್ಲಿ ಮತ್ಸ್ಯಯಂತ್ರದ ಭೇದನವು ಒಂದು ಮುಖ್ಯ ಆಖ್ಯಾನ (ರೂಢಿ). [ಸಂ.]

**ಮತ್ಸ್ಯರೂಪ** (ನಾ). ಮೀನಿನ ಆಕಾರವನ್ನು ಹೊಂದಿದವನು : ಮತ್ಸ್ಯಾವತಾರಿ : ಮತ್ಸ್ಯರೂಪನಾಗಿ ಮನಸು ಕಾಣಿಸಿಕೊಂಡು ಮಕ್ಕಳ ತಿದ್ದಿದ್ದು ಹೇಳಲಿ (ಪುರಂದ. ಭಾ. ೨-೦೧೩-೧). [ಸಂ.]

**ಮತ್ಸ್ಯರೇಖೆ** (ನಾ). [ಸಾಮುದ್ರಿ] ಅಂಗೈಯಲ್ಲಿ ಇರುವ ಮೀನಿನ ಆಕಾರದ ಚಿಹ್ನೆ : P ಇದು ಐಶ್ವರ್ಯಸೂಚಕಚಿಹ್ನೆಯೆಂದು ಹೇಳಲಾಗುತ್ತದೆ : ಯಾವಾತನ ಹಸ್ತದಲ್ಲಿ ಮತ್ಸ್ಯರೇಖೆಯಿರಲು ಲಕ್ಷಾಧಿಪತಿಯಾಗುವನು (ಸಾಮು. ೩೩-೦೩); ಸ್ತ್ರೀಯರ ಹಸ್ತದಲ್ಲಿ ಮತ್ಸ್ಯರೇಖೆಯಿರಲು ಸೌಭಾಗ್ಯವತಿಯಾಗುವಳು (ಸಾಮು. ೦೨೯-೯). [ಸಂ. ಮತ್ಸ್ಯರೇಖಾ]

**ಮತ್ಸ್ಯಸುತ** (ನಾ). ವಿರಾಟರಾಜನ ಮಗ ; ಉತ್ತರಕುಮಾರ : ಸಾರಥಿ ಮಾಡು ಮತ್ಸ್ಯಸುತನುತ್ತರನಂ (ಕಂಕಭಾ. ೮-೯೭). [ಸಂ.]

**ಮತ್ಸ್ಯಾದ** (ಗು). ಮೀನನ್ನು ತಿನ್ನುವ. [ಸಂ.]

**ಮತ್ಸ್ಯಾವತಾರ** (ನಾ). ೧. ವಿಷ್ಣುವಿನ ದಶಾವತಾರಗಳಲ್ಲಿ ಒಂದನೆಯದು : ಬಹುತಾಪಕ್ಕೆ ಬಿಗುರ್ತು ವಿಷ್ಣು ಪಡೆವಂ ಮತ್ಸ್ಯಾವತಾರಕ್ಕನಂ ತುಹಿನಾದ್ರೀಂದ್ರಮನೊತ್ತುಗೊಂಡು ನಡೆವಂ (ಶಂರಾವಿ. ೭-೯೬); ಪರಿಹರಿಸಿ ಮತ್ಸ್ಯಾವತಾರವನುರಗಕಟಕಂ ಸುತ್ತಿದನಲಾ ಶಿರಸಿನಲಿ (ಬಸವ. ೩೪-೪೨) ; ಮತ್ಸ್ಯಾವತಾರದಲ್ಲಿ ವೇದೋದ್ಧಾರದ ಪ್ರಸಂಗವು ವರ್ಣಿತವಾಗಿದೆ (ಭಾರದ. ೦೪೩). ೨. = ಮತ್ಸ್ಯರೂಪ : ಮತ್ಸ್ಯಾವತಾರಗೆ ಮಂದರೋದ್ಧಾರಗೆ . . . ಆರತಿಯೆತ್ತಿರೆ (ಪುರಂದ. ಭಾ. ೦-೦೩೨-೦). [ಸಂ.]

**ಮತ್ಸ್ಯೇಶ** (ನಾ). ಮತ್ಸ್ಯದೇಶದ ಅರಸ: ವಿರಾಟರಾಜ : ಮನದೊಳಗಳುಕಿದರು ಮತ್ಸ್ಯೇಶನರಸಿಯರು (ಕುಮಾ.ವಿ. ೦-೨೭). [ಸಂ.]

**ಮತ್ಸ್ಯೋದ್ಯಮ** (ನಾ). ಮೀನುಗಾರಿಕೆಯ ಉದ್ಯೋಗ: ಮೀನು ಸಾಕಣೆ : "ಮತ್ಸ್ಯೋದ್ಯಮ ; ಮೀನುಗಾರಿಕೆ" (Fishery. ಪಾರಿ. ೩೯). [ಸಂ.]

**ಮಥನ** (ನಾ). ೧. ಕಡೆಯುವಿಕೆ; ಮಂಥನ. ೨. ಪೀಡೆ. ಹಿಂಸೆ. ೩. ಕೊಲೆ: ವಧೆ. ೪. ಕೊಂದುಹಾಕಿದವನು ; ಸಂಹಾರಕ : ರಾವಣಾಸುರಮಥನ . . . ಕಾವುದಾನತಜನವ ಗದುಗಿನ ವೀರನಾರಯಣ (ಕುಮಾ.ಭಾ. ೦-೦). ೫. ತಿಕ್ಕಾಟ; ಘರ್ಷಣೆ : ಮರಮರ ಮಥನದಿಂದ ಅಗ್ನಿ ಹುಟ್ಟಿ ಆ ಮರನೆಲ್ಲವ ಸುಡದಿಪ್ಪುದೆ (ಬಸವ. ೯೯೨). ೬. ಜಗಳ; ಕಾದಾಟ : ಮರ್ತ್ಯರೊಳ್ ಮಥನಂ ಪೆಗ್ಗಳವಲ್ಲವೆ (ಸೋಮೇಶ. ೯೯); ಅತಿಯುಕ್ತಿಯುಳ್ಳವರು ಮಥನಕ್ಕೆಯುಳುಕುವರು (ಶಿವಪೋ. ೨-೪೦). ೭. ಆಲೋಚನೆ: ವಿಚಾರ : ಮಥಿಸಲು ಉದ್ಭವಿಸುವುದು ಮತಿಯುಲೇ ಪರತತ್ವಮುದರಿಂ ಮಥನವನೆ ಪೊರಗೊಳಗೆ ಲಂಬಿಸಿ ಸಿದ್ಧನಾಗು (ಗಗಶಾ. ೦೭-೩೪). ೮. ಚರ್ಚೆ; ವಾದ; ತರ್ಕ : ಮಥನದ ಲೀಲೆಯಲ್ಲಿ ಹುಟ್ಟುವುದೆ ಬ್ರಹ್ಮವು ಶ್ರುತಿ ಸ್ಮೃತಿಗಳಿಗೆ ಅಳವಡದು ನೋಡಾ (ಅವಶಿ. ೨೩೩-೦೮೩೦). [ಸಂ.]

**ಮಥನಿಸು** (ಕ್ರಿ). ೧. ಕಡೆ: ಕಲಕು; ಕದಡು : ಆ ಘಟೋತ್ಕಚನು ಮಥನಿಸುವ ಬಲಜಲಧಿಯ ಗಸ್ಸಗತಕದಿ ಕೊಲುವ ಪರಿಭವದ ವಿಷಮುರಿಗಳನ್ನು ಸೈರಿಸಲಾರದಿವರು ಪಮಘೀತಿಯಿಂ ಕರ್ಣನಂ ಪೊರೆಹೊಕ್ಕರೈ (ತುರಂಗ. ೩೭-೪೩). ೨. ತಿಕ್ಕು: ಉಜ್ಜು : ಮರಮರ ಮಥನಿಸಿ ಕಿಚ್ಚು ಹುಟ್ಟಿ ಸುತ್ತಣ ತರುಮರಾದಿಗಳ ಸುಡಲಾಯಿತ್ತು (ಮಹಾದೇ. ವ. ೭೯-೦೭೦); ಅತಿಮಥನಿಸಿದರೆ ಶ್ರೀಗಂಧದೊಳು ಕಿಚ್ಚು ಪ್ರತಿಫಲಿಸುವುದಲ್ಲೆ (ಶರಶ. ೦೪-೮೭). ೩. ಘರ್ಷಣೆಯಾಗು; ತಾಕಲಾಟವುಂಟಾಗು : ಫಲುಗುಣಂಗೆ ದುಶ್ಶಾಸನಂಗಂ ಮಥನಿಸಿತು ಕಲಿಘಟೋತ್ಕಚನೊಡನೆ ಭಗದತ್ತ ತಾಗಿದನು (ತುರಂಗ. ೪೭-೨೪). ೪. ಕಾಳಗ ಮಾಡು; ಹೋರಾಡು : ದೇವತೆಗಳ ನಂಬುಗೆವಡೆದ ರಕ್ಕಸರ ಕಂಬುಚಕ್ರಾಂಕಿತ ನಿನ್ನೊಳು ಮಥನಿಸಿ ಮುಂಬರಿದರು ಯಮಪುರಿಗೆ (ಮೋಹತ. ೩೭-೩೪); ಮಥನಿಸುತ ಬರೆ ಫಲುಗುಣನ ಮರಳಿ ರಿಪುಸೇನೆ ಪತಿಯೊಳಾಮರಿಸೆ (ತುರಂಗ. ೭೪-೪). ೫. ವಾದ ಮಾಡು; ಚರ್ಚಿಸು : ಮನವ ಮುಖದ ಗಂಟಿಕ್ಕಿಕೊಂಡು ಕಂಡಕಂಡವರೊಡನೆ ಮಥನಿಸುತ್ತಿಪ್ಪವರ ಲಿಂಗೈಕ್ಯಪದವು ಕಾಡುತ್ತಿದ್ದಿತು (ಶವಸೋ. ೭೮-೭). 'ಮಥಿಸು' ಪರಾ. [ಮಥನ + — ಇಸು₃]

**ಮಥಿ** (ನಾ). ಕಡೆಗೋಲು : ಮಂತು. [ಸಂ.]

**ಮಥಿಕ** (ನಾ). ಕಡೆಯುವವನು: ಮಥಿಸುವವನು : ಅಮೃತ ಮೊಳಗುವ ಸಿಂಹನಾದದಲಿ ತೊಡಗಿದರು ಮಥನವನು ಮಥಿಕರು ಬಿಡದೆ ಘೂರ್ಮಿಸಿ ದುಗ್ಧನಿಧಿ ಘೋಳಿಡಲು (ಶಿಖಾಗ. ೮-೯-೦). [ಸಂ.]

**ಮಥಿತ** (ಗು). ೧. ಕಡೆದ ; ಮಥಿಸಿದ : ದಾನವಾಚಳಮಥಿತಸೇನಾಂಭೋನಿಧಿಯ ಪರಿಭವದ ವಿಷಮುರಿಗಾ ನರೇಂದ್ರನಿಕಾಯ ಹೊಕ್ಕುದು ರವಿಸುತನ ಮರೆಯ (ಕುಮಾ.ದ್ರೋ. ೦೩-೦೪). ೨. ನಾಶಗೊಳಿಸಿದ. (ನಾ). ೩. ನೀರು ಬೆರಸದೆ ಕಡೆದ ಮೊಸರು; ತಕ್ರ : "ಮಥಿತಮಾ ತಕ್ರಮೆಂದೊಡಳೆ" (ಮಂಗರಾ. ೩೪-೩); ನೀರನೆರೆಯದೆ ಕೆನೆಯ ತೆಗೆದು ಕಡೆದುದು ಮಥಿತವೆಂಬ ಮಜ್ಜಿಗೆ (ಛಂಮಸೂ. ೨೮). [ಸಂ.]

**ಮಥಿತಾರ್ಥ** (ನಾ). ವಾದವಿವಾದಗಳಿಂದ ಹೊಮ್ಮುವ ತತ್ತ್ವ : ಮುಖ್ಯಾರ್ಥ : ಇದಿಷ್ಟು ಈ ಉಪದೇಶದ ಮಥಿತಾರ್ಥ (ಕೃಪರು. ೩೯೪). [ಸಂ.]

**ಮಥಿಯಿಸು** 'ಮಥಿಸು' ನೋ.

**ಮಥಿಸು, ಮಥಿಯಿಸು** (ಕ್ರಿ). ೧. ಕಡೆ : ಮಂಥನ ಮಾಡು : ಮಂದರಂ ಮಥಿಸಲ್ ಕ್ಷೀರಸಮುದ್ರದೊಳ್ ಬಹುವಿಷಂ ತಾಂ ಪುಟ್ಟದೆ (ಸೋಮೇಶ. ೮೮) ; ತಳಮಳವಿದೇನಿಳೆಗೆ ? ದೇವ ದನುಜರ್ ಮಥಿಸೆ ಜಳನಿಧಿಯೊಳಾದಂತೆ ಸುಧೆಗೆ ಪೀಠಿಕೆಯೆಂ ? (ಮಂಕಾಳ. ೦೭). ೨. ತಿಕ್ಕು : ಉಜ್ಜು ; ಘರ್ಷಿಸು : ಮಾತಿಂಗೆ ಮಾತು ಮಥಿಸಲ್ಕೆ ವಿಧಿ ಬಂದು ಅತ್ತು ಕೊಂಡಿಪುದು (ಸರ್ವಜ್ಞ. ೦೩೪೮); ಮಥಿಸಿ ಮಥಿಸಲು ಪುಟ್ಟುವುದಲ್ಕೆ ಸುತನೆ ಕಾಷ್ಠದಲಗ್ನಿ (ಗಗಶಾ. ೦೭-೩೪). ೩. ವಾದಿಸು ; ವಾಗ್ವಾದ ನಡೆಸು : ನೀನೊಡಯನೆಂದಜಾದೀಶ್ವರ ನಿಮ್ಮ ಚರ್ಚಿಸುತ್ತಿರದಿರದೆಲ್ಲರೊಳ್ ಮಥಿಸಿ ತರ್ಕಿಸಿ ನೋಯಿಸಿ ನೋಯುತ್ತುಂ ವೃಥಾ ನೆರೆಮನೆಗಳು ಕಣ್ಗೆಡುವರೇಂ ಮರುಳ್ಗೊಂಡರೊ (ಶಂಕಾಶ. ೭೩). ೪. ವಿವೇಚಿಸು ; ಆಲೋಚನೆ ಮಾಡು : ಕೃತಿಯನವಧರಿಸುವುದು ಸುಕವಿಯ ಮತಿಗೆ ಮಂಗಳವೀವುದಧಿಕರು ಮಥಿಸುವುದು (ಕುಮ್ಮ ಆ. ೧-೦೭) ; ಇಂತಿವನಾತ್ಮವಿವೇಕಶಕ್ತಿಯಿಂ ಮಥಿಸಿ ಜಡಾಂಗಮಂ ಬಿಸುಟು . . . ಸತ್ವಘಗತನಪ್ಪಂ (ಶತಳ. ೦೪೮-೮೭) ; ಹರೆದುದೀ ವೃತ್ತಾಂತವಿದನಾದರಿಸಿದಳಲ್ಲೆ ಪೂರ್ವಮಾಯಾತರುಣಿ ಮಂಥರೆ ಮಥಿಸಿ ಮನದಲಿ ಪೂರ್ವಸೂಚಿತವ (ತೊರವ. ೨-೦-೨೦). **ಮಥಿಯಿಸು**: ೩. ಪರಸಮಯಸ್ಥರೆಲ್ಲಂ . . . ಮಂಚಣಪಂಡಿತರಂ ಬರಿಸಿ ತಮ್ಮತಮ್ಮ ಶಾಸ್ತ್ರೋಕ್ತಿಯುಕ್ತಿಯುಮರೆ ಬೇಜವೇಜ್ ಮಸಗಿ ಮಥಿಯಿಸೆ (ವೃಷಂ. ೩೭-೩೭ ವ). ೫. ನೋಯಿಸು ; ಪೀಡಿಸು : ಅಪಹರಿಸಿದಳೀ ಕಾಮಿನಿ ಲಪನಶ್ರೀಯಿಂದಮೆನ್ನ ಚೆಲ್ವಂ ತಾನೆಂಬಪಕಾರ

ರೋಷದಿಂ ಶಶಿಯುಪಾರಕರಪಾತದಿಂದೆ ಮಥಿಯಿಸುತಿರ್ಪಂ (ಚಂದ್ರ.ಕೃ. ೩-೧೩೪). 'ಮಥನಿಸು' ಪರಾ.

[ ಮಥನ + — ಇಸು₃ ]

**ಮದ** (ನಾ). ೧. (ಮಾದಕದ್ರವ್ಯಸೇವನೆಯಿಂದುಂಟಾಗುವ) ಅಮಲು : ಮತ್ತು. ೨. ಮಬ್ಬು : ಬುದ್ಧಿಭ್ರಮಣೆ. ೩. ತೀವ್ರವಾದ ಕಾಮದ ಬಯಕೆ; ವಿಷಯಾಭಿಲಾಷೆ. ೪. ಸಂತೋಷಾತಿಶಯ ; ಉತ್ಸಾಹ ; ಉಲ್ಲಾಸ : ರಮಣೀನಿವಹಕ್ಕೆ ಕಾಮಕಾತರತೆಯುಸಂಗಜಂಗೆ ಮದಮುಂ ಜನದೃಷ್ಟಿಗಪೂರ್ವತುಷ್ಟಿಯುಂ . . . ಇತ್ತನಂದು ಚಿತ್ರಿಸಿ ಸನತ್ಕುಮಾರ ನೞಕೂಬರ ಕಂತುಸಿಭಂ ನೃಪಾತ್ಮಜಂ (ಪುಷ್ಪ.ಪು. ೪-೭೦). ೫. ಸೊಕ್ಕು : ದರ್ಪ : "ದರ್ಪಂ ಮದಂ ಬಲಮಹಂಕಾರಮವಲೇಪ ಮೆನೆ ಗರ್ವಮುಂ" (ಮಂಗರಾ. ೧೩೦-೧೭) : ಮದಮಳಿದು ನಿಜವೃಳಿದ ಬಳಿಕ ಅದು ಸತ್ಯ ಕಾಣಾ (ಬಸವ. ೬೭೭): ಸರ್ವಥಾ ಮದ ಮಾನ ಮತ್ಸರ ಕೇಡು ಮರ್ತ್ಯರಿಗೆ (ಅಮೃತ. ೨-೩೮). ೬. ನವಯೌವನ ; ಪರುಜವ್ವನ. ೭. ಮದ್ಯ ಮೊದಲಾದ ಮಾದಕಪೇಯ. ೮. ಜೇನುತುಪ್ಪ. ೯. ಬೆದೆಯೇರಿದ ಆನೆಯ ಗಂಡಸ್ಥಳದಿಂದ ಸುರಿಯುವ ದ್ರವ : ಮದೋದಕ : "ದಾನಮೆನೆ ಮದ ಮೆನಿಸಿಕ್ಕುಂ" (ಮಂಗರಾ. ೯೭-೧); ಕಾಮ್ಗಳಿಂದಮಿಂಬಾಗಿರೆ ಸೋರ್ವ ಸೋನೆ ಮದಮಾಗಿರೆ ಮಾವಿನ ಬಂದ ಕೋಡೆ ಕೋಡಾಗಿರೆ ಕೋಡು ಗೊಂಡು ಪರಿದತ್ತು ವಸಂತಗಜಂ ವಿಯೋಗಿಯುಂ (ಶಂಕಥಾ. ೨-೧೩) ; ಮದಮಂ ಗಂಡಸ್ಥಳೋದೀರ್ಣಕಂಪದೊಳಂ ಸೇವಿಸಿ ತುಂಬಿಗಳ್ ತಣಿದುವು (ಪುಷ್ಪ.ಪು. ೧೧-೦೧). ೧೦. ತುಂಬಿ: ಭ್ರಮರ. ೧೧. ಹತ್ತಿ; ಕಾರ್ಪಾಸ. ೧೨. ನೀರಿನ ತೆರೆ : ಅಲೆ : "ಅಳಿಗಳೊಳು ಪ್ರಾಯದೊಳು ಕಾರ್ಪಾಸ ದೊಳು ಮತ್ತಗಜದ ದಾನದೊಳ್ ಮದವೆಂಬ ನಾಮಮಕ್ಕುಂ" (ಮಂಗರಾ. ೦೩೦-೯೯): "ಅಳಿ ಗಜದಾನ ಪೀಚಿ ವಿಷ್ಟಳಂ ನವಯೌವನಮುಂ ಮದಾಹ್ವಯಂ" (ನಾನಾರ. ೧೦೪). ೧೩. ವೀರ್ಯ : ರೇತಸ್ಸು. ೧೪. ಒಂದು ಬಗೆಯ ಸುಗಂಧ ದ್ರವ್ಯ: ಕಸ್ತೂರಿ : 'ಮದಲೇಖೆ' ನೋ. ೧೫. ಚೆಲುವಾದುದು. ೧೬. ಒಂದು ಬಗೆಯ ಔಷಧೀಸಸ್ಯ : ಕಾಂವಲ್, ಮದ. ಉಪ್ಪಾತಿ (ವೈಶಿಂ. ೦೧-೦೬೩). ೧೭. [ಕಾವ್ಯವಿಮ] ಮೂವತ್ತುಮೂರು ಸಂಚಾರಿಭಾವಗಳಲ್ಲಿ ಒಂದು: "ಮದ್ಯಪಾನ ದಿಂದ ಉಂಟಾಗುವ ಉಲ್ಲಾಸಸಹಿತವಾದ ವ್ಯಾಮೋಹ, ಮದ" (ಭಾರತಿಭಾ. ೩೯೬): ಮತಿಸಿವೇಶಾವಾವಪಿತ್ತಕ್ರಮಮದಜಡತಾಗ್ಲಾನಿ . . . ವ್ಯತಿಗಳಿವಿಂತೆಪ್ಪ ಸಂಚಾರಿಭಾವಂ (ಕಾವ್ಯಾವ. ೭೯೩). ೧೮. [ಗಣಿತ] ಎಂಟು ಎಂಬ ಸಂಖ್ಯೆಯ ಸಂಕೇತ : ದುರಿತಾಷ್ಟಕಕರ್ಮಂ ವಸು ಕರಿ ದಿಬ್ಭಾಗಂ ಮದಪದನುಷ್ಟುಪ್ಪಂದಂ . . . ಆರಯೆಯೆಂಟಕ್ಕೆ ನಾಮಂ (ವ್ಯವಹಾ. ೯-೮).

ಮದಂಕಲಿಗಳ್? = ಒಂದು ಬಿರುದು : ಗುಣರತ್ನಾಕರಂ ಸತ್ಯ ಕಾನೀನಂ ಪರಬಲದಣಮಂ ದ್ರೋಹರ ಸೂಲಂ ಮದಂಕಲಿಗಳ್ಳಂ (ಎಕ. XI, ದಾವಣ. ೦೨೪-೧೩; ಸು. 1042?). **ಮದದಾನೆ, ಮದ್ದಾನೆ** = ಮದವೇರಿದ ಆನೆ; ಸೊಕ್ಕಿದ ಆನೆ : ಮದದಾನೆ ಬನಮಂ ಪಸುಗೂಸು ಮೊಲೆಯಂ ಪೆಣ್ಣಾಸು ತವರ್ಮನೆಯಂ . . . ನೆನೆವಂತು (ಧರ್ಮಾಮೃ. ೩-೦೯೦): ಮದ್ದಾನೆಗೆ ಸಿಂಹ ಮಲೆತಂತೆ ಸುಭಟಾನಿರುದ್ಧ ನಿಂದಿರ್ದ ಭೀತಿಸದೆ (ಶೋಪಶ. ೩೩-೦೮). **ಮದದಾನೆಧವಳ** = ಒಂದು ಬಿರುದು : ಆರೋಹಕ ತ್ರಿನೇತ್ರಂ ಮದದಾನೆಧವಳಂ ಬ್ಯಾಳಗಜಮಲ್ಲಂ (ಎಕ. V, ೦೭-೨೦; 1019).

[ಸಂ.]

**ಮದಕರಿ** (ನಾ). ಮದವೇರಿದ ಆನೆ; ಸೊಕ್ಕಿದ ಆನೆ : ಮದಕರಿಯ ಪರಿವ ಭರದಿಂದದಿರ್ದೊಡೆ ನೆಲನೊಡ್ಡಿ ನಿಂದ ಚದುರಂಗಮುಮೊರ್ವೊಡಲೆ ನಷುಗಿದುದು (ಶಂಕಥಾ. ೧೧-೭೦): ಸಿಂಗಕ್ಕೊಳಿದ ಮದಕರಿಯಂತೆ ಅನು ಜಂಗಮಕ್ಕೊಳಿದೆನಯ್ಯಾ (ಬಸವ. ೩೯೦) : ಸರ್ವಾಸ್ತ್ರಘಾತಸ್ಫುರಣಮದಕರಿ ಮಸ್ತಕಾಸಂಘಾತದಂದದಲಿ ಕೆರಳಿ ಕವಿದನು (ಕುಮಾ.ಕ. ೦೩-೨೨).

ಮದಕರಿದನುಜಹರ=ಆನೆಯ ರೂಪದ ರಾಕ್ಷಸನನ್ನು ಕೊಂದ ವನು; ಶಿವ : ಕರಿಯ ಗೋಪ್ಯತಿ ಮದಕರಿದನುಜಹರಗೆ ಭಿಕ್ಷವ ನೀಡಿ ಮುಂಗಾರ ಸಿರಿಯಂತೆ ಕಣ್ಗೆಸೆದಳು (ರಕ್ಷಾತ. ೩-೨೯). [ಸಂ. ಮದಕರಿನ್]

**ಮದಕಲ** (ಗು). ೧. (ಮತ್ತೇರಿದಂತೆ) ಮೃದುವಾಗಿಯೂ ಮಧುರ ವಾಗಿಯೂ ಧ್ವನಿ ಮಾಡುವ : ಮದಕಲ[ಶಾತಾಂ. ೪]ಹಂಸೆಯ ಏಂಡಿದೆ ಪೊಮಬ್ಬಿ ಜಮರೀಜವಾಗೆ (ಆದಿಪು. ೧೦-೭೩). (ನಾ). ೨. ಮದವೇರಿದ ಆನೆ. [ಸಂ.]

**ಮದಕಾರಿ** (ನಾ). (ಕರಾ) ಹಿರೇಬೇನೆ : ಕುಷ್ಠರೋಗ.

[← ತುಳು. ಮದಕರಿ]

**ಮದಗ** 'ಮದಗ್ಗು' ನೋ.

**ಮದಗಂಧ** (ನಾ). ೧. ಆನೆಯ ಮದೋದಕದ ವಾಸನೆ: ಮದಗಂಧದಿಂದೆ ಸಪ್ತಚ್ಛದಗಂಧಮನೀ ವನೇಭವಾಘ್ರಾಣಿಸಿ ಪೆರ್ಚಿದ ಮಸಕದಿಂದೆ ಪಾಯಲ್ಕೊಡರ್ಪುಗೆಯ್ದುವುದು ನೋಡ ವನವೇದಿಕೆಯಂ (ಆದಿಪು. ೦೦-೬೨) ; ಮದಗಂಧಸಾರಸಪ್ತಚ್ಛದಂಗಳಿಂ ಪುದಿದು ಬೆಳೆದ ತಾಪಿಂಛದ ಪೆರ್ವೊವಟ ಕರಿಶಂಕೆಯಿಂ ಪಾಯ್ದುದಜಿರೊಳ್ ಹರಿವಿತತಿ ಬಂಜೆವಡೆವುದು ಮುಳಿಸಂ (ಚಂದ್ರ.ಕೃ. ೩-೩೦); ಮದಗಂಧಕ್ಕನ್ಯವನ್ಯದ್ವಿರದತತಿ ಬೆನ್ನಿತ್ತು ಮತ್ತೆಲ್ಲಿಯುಂ ನಿಲ್ಲದೆ ಶಂಕೋದ್ರೇಕದಿಂ ದೆಸೆಯ ಕಡೆವರಂ ಪೋದವು (ಪಾರ್ಶ್ವಪು. ೪-೦೩೦). ೨. ಹಿತಕರವಾದ ಸುವಾಸನೆ : ಮದಗಂಧಮನೋಹರಿ ಸಂಮದಕಾರಿಣಿ . . . ಸುಖದಾಯಿನಿಬೆನಿಸಿದ ಮದಿರಾವಧುವಿರ್ದಳಾ ಕದಂಬದ್ರುಮ ದೊಳ್ (ಜಗಂ. ೮-೨೩). [ಸಂ.]

**ಮದಗಂಧಿ** (ನಾ). ಮದೋದಕದ ವಾಸನೆಯುಳ್ಳ ಒಂದು ಬಗೆಯ ಸಸ್ಯ : ಚಂಪಕಸಪ್ತಪರ್ಣಮದಗಂಧಿಯಂ . . . ತರಿಸಿ ದಿಗ್ವಿಜಯಕ್ಕೆ ಜಿನೇಂದ್ರಚಂದ್ರದೇವಂ ಪೂಜಿಪಟ್ಟನೇಜಿ ಜಯಮಂ ಜಯಪರ್ವತಯಾನ ನಾಗಮಂ (ಶಾಂತಿಪು. ೧೦-೦೪೪ ೮). [ಸಂ. ಮದಗಂಧಿನ್]

**ಮದಗಜ** (ನಾ). = ಮದಕರಿ : ಮದಗಜಜೃಂಭಿತಧ್ವನಿ ತುರಂಗಮಹೇಷಿತ ಘೋಷದೊಳ್ ಪೊದಟಿಸ್ತುದವೆ (ಶಂಕಥಾ. ೯-೨೭) : ಮದಗಜದ ರದನಮಂ . . . ಮುಜಿಮಂದದೆ ಮುಜಿಯೆ ಪೊಯ್ದು ನಿಜಖಡ್ಗದೆ ತತ್ಕುಡ್ಗಮಂ (ಜಗಂ. ೭-೯೯) : ಕುದುರೆ ಹಾಯ್ದುವು ಕಂಡ ಮುಖದಲಿ ಮದಗಜಾವಳಿ ಜೋಡಿಸಿದವು (ಕುಮಾ.ರಾ. ೨೦-೨). [ಸಂ.]

**ಮದಗಜಗಮನೆ** (ನಾ). ಮದದಾನೆಯಂತೆ ನಿಧಾನವಾಗಿ ನಡೆಯುವವಳು: ಗೋವರ್ಧನಕಂದರದೊಳ್ ಶಿಖಿನರ್ತನಂಗಳಂ ನೋಡು ಮದನಮದಗಜ ಗಮನೇ [ಶಾತಾಂ. ಲಲಿತಕೇಸರಾನ್ವಿತಮಂ] (ಶಾಂತಿಪು. ೩-೦೩೦) : ಮದಗಜ ಗಮನೆಯಂ . . . ಹಾವಭಾವಲಾವಣ್ಯದ ನೆಲೆಯಂ . . . ಕಂಡು (ಧರ್ಮಾಮೃ. ೧೦-೪೦). [ಸಂ. ಮದಗಜಗಮನಾ]

**ಮದಗಜಗಾಮಿನಿ** (ನಾ). = ಮದಗಜಗಮನೆ : ಮದಗಜಗಾಮಿನಿ . . . ಜಿನಚೈತ್ಯಾಲಯಮಂ ಮುದದಿಂದಂ ಪಲವನರ್ತಿಯಿಂ ಮಾಡಿಸು ನೀಂ (ಧರ್ಮಾಮೃ. ೩-೨೬೪) ; ಮದಗಜಗಾಮಿನಿ ಕಾಮಿನಿ ಬಂದಳು ಲೀಲೆಯಿಂದಲಸ ಭಾವದೊಳು (ಇಂತಾಶ. ೯೮-೬೦). [ಸಂ. ಮದಗಜಗಾಮಿನೀ]

**ಮದಗಡ** (ನಾ). ೧. ಸರ್ಕಾರವು ವ್ಯವಸಾಯದ ಸೌಕರ್ಯಗಳಿಗಾಗಿ ರೈತರಿಗೆ ಬಡ್ಡಿಯಿಲ್ಲದೆ ಕೊಡುವ ಸಾಲ : "ಮದಗಡ-ತಗಾಯಿ" (ಶಾಶಕೋ. ೨೭). ೨. ತೆರ ; ಕನ್ಯಾಶುಲ್ಕ : ಆಗ ಗಂಡಿನವರು ಹೆಣ್ಣಿಗಾಗಿ "ಮದಗಡ"ವನ್ನು ಪಂಚಾಯ್ತರ ಎದುರಿಗೇ ಕೊಡುವರು (ಹಾಲ್ಮಪ. ೯). [? + ಕಡ₁]

**ಮದಗು₁** (ಕ್ರಿ). ಕೆರೆಯಲ್ಲಿ ನೀರುತುಂಬಿ ಕೋಡಿ ಹರಿದುಹೋಗು : ಮಳೆಯಿಂದಾಗಿ ನಮ್ಮೂರ ಕೆರೆ ಮದಗುತ್ತಿದೆ (ಕೊತ).

**ಮದಗು₂**, ಮದಗ (ನಾ). ೧. ಕೋಡಿ ; ತೂಬು : (ಕ). ೨. ಕೆರೆ ; ಕೊಳ ; ತಟಾಕ : ಚನ್ದ್ರಸೂರ್ಯಕಾಲಮ್ಬರಂ ಸಲ್ವನ್ತು ಕೊಟ್ಟರ್ ಮದಗಿನ ಮಣ್ಣ ಮೇಗೆ ಒನ್ದು ಕೊಲಿಮೆಗೆ ಒಕ್ಕಣ್ಣಾಗ ಮಣ್ಣು (ಶಾಇ. IX-i, ೧೯-೦೭ ; 883). **ಮದಗ** : ೧. ಮದಗ ದೊಳಗೆ ನೀರು ಗಳಗಳನಿಳಿವಂತೆ ಮದಗಜಹಯರಥಸೇನೆ ಕದುಬಿ ಮೊತ್ತದಿ ಪೊಜಮಡುತಿಪ್ಪುದಾ ಗುಹೆಯುದರದಿಂದುತ್ತರಥರೆಗೆ (ಶಶಕ. ೩೯-೨೯). ೨. ಗಣ್ಣೆಯ ಮಾದೆಯನಾಯಕ್ಕನು ಮದಗವನು ಮಾಡಿಸಿ ಕೋಡಿಯನು ಕಟ್ಟಿಸಿ ಯಿ ಕೆಱೆಯ ಕಲುಕಟ್ಟೆಯನು ಕಟ್ಟಿಸಿದರು (ಎಕ. XVI, ಗುಬ್ಬಿ. ೧೯-೭; 1366) ; ಆ ಸದಾಶಿವರಾಯನಾಯಕಂ . . . ಮಾದಣವೊಡೆಯರ ಮುಖದಿಂ ಮದಗದ ಕೆಲಸಮಂ ಸಂಪೂರ್ಣಮನಾಗಿಸಿ . . . ಅಧಿಕಸನ್ಮಾನಂಬೆತ್ತಂ (ಕೆಳನೃ. ೨-೩೮) ; ನನ್ನ ಮಾನಸದ ಮದಗವೆ ಮುಳುಗಿ ನೋಡಿದೆ, ದಿಟ್ಟಿಸಿ ನೋಡಿದೆ (ಉದ್ಯಾರಿ. ೦೦೦-೭).

[ದೇ.॥ ತಮಿ. ಮತಕು ; ತುಳು. ಮದಗ ; ತೆಲು. ಮದುಗು, ಮದುವು, ಮದುವು]

**ಮದಗೊಬ್ಬು** (ನಾ). ಅಹಂಕಾರ ; ಸೊಕ್ಕು ; ಗರ್ವ : ಮಕರೇಶ ನೀನಿಂದು ಮುಳಿದು ಮದಗೊಬ್ಬಿನಲಿ ವೈರವ ಬೆಳಸಿ ಕೆಣಕಿದೊಡಾ ನೃಪಾಲಕತಿಲಕ ತೆಕ್ಕುವನೇ ವಿವೇಕಕೆ ಮನವ ಮಾಡು (ಕೂರಂ. ೩-೭-೯೦).

☞ ಇದು ಒಂದೇ ಅರ್ಥದ ಎರಡು ರೂಪಗಳು ಸೇರಿ ಆದ ಶಬ್ದ.

[ ಮದ + ಕೊಬ್ಬು₂ (< ಕೊರ್ವು₂) ]

**ಮದಚಳೆ** (ನಾ). ಮದದಿಂದ ಚಂಚಲೆಯಾಗಿರುವವಳು : ಮದಚಳೆ ಯಾಗಿ ನೀರ್ವೊಗೆವ ಖೇಚರಕಾಂತೆಯ ಹಸ್ತದಿಂ ಬಿಟಲ್ದಿದ ನವರೌಪ್ಯ ಕುಂಭಮೆ ತರಂಗಿತನಾಕತರಂಗಿಣೀಪ್ರವಾಹದೊಳಿದೆ ಕಾಣಲಾದಪುದೆನಲ್ . . . ಪೊಳೆಯುತಿರ್ದುದು ಚಂಡಮರೀಚಿಮಂಡಲಂ (ಜಗಧಿ. ೯-೭೧).

[ಸಂ. ಮದಚಲಾ]

**ಮದಜಲ**, ಮದಜಳ (ನಾ). ಸೊಕ್ಕೇರಿದ ಆನೆಯ ಗಂಡಸ್ಥಳದಿಂದ ಸುರಿಯುವ ರಸ ; ದಾನರಸ ; ಮದೋದಕ : ಮದಜಲಧಾರೆ ಯಿಲ್ಲದ ದಿಶಾಗಜದಂತೆ . . . ಸೀತೆಯಿಲ್ಲದ ರಘುವಂಶರಾಮನಿರೆ ನೋಡಿದ ನಾಕುಲನಾಗಿ ಲಕ್ಷ್ಮಣಂ (ಕಂರಾಪು. ೯-೧೩೨) ; ಶೈಲದೆಡಬಲದೊಱತೆ ಯೆನೆ ಸುಕಪೋಲದಲಿ ದಾರಿಡುವ ಮದಜಲಧಾರೆಗಳ . . . ಶುಂಡಾಲವನು ನೋಡಿದರು (ಕುವ್ಯಾಭಾ. ೦೦-೦೯). **ಮದಜಳ** : ಮದಜಳನಿರ್ಝರ ವಾರಣದಿಂ ಸೊದೆವಳಿದರಮನೆಯುಂ ಬಳಸಿದಾನೆಸಾಲುಗಳೆಸೆಗುಂ (ಪಂಪ್ರತು. ೨-೬೩) ; ಮದಜಳನೀಳಕಂಠಕಳಿತಂ ವಿಷಮಾನಳಫಾಲಲೋಚನಂ . . . ಕಣ್ಗೊಪ್ಪವಿದ ಶೋಭೆಯುಂ ಕುಡುತಮಿರ್ಪುದು (ಪಾರ್ಶ್ವಪು. ೯-೧೩೨). [ಸಂ.]

**ಮದಜಳ** 'ಮದಜಲ' ನೋ.

**ಮದಡ**, ಮಜಡ (ನಾ). ೧. ದಡ್ಡ ; ಬುದ್ಧಿಹೀನ ; ಮಂದಮತಿ : ಮದಡನಿವನೆಂದೆನ್ನ ಗದಜದಿರಿ (ಮನೋಬ. ೭-೬) ; ಮದಡರೆನಿಪೆನ್ನ ಭಕ್ತ ಗಾರ್ಜಿಸ್ಯಿಯುಂ ಮಾಳ್ಪನಯ್ಯಾ (ಸಿದ್ಧೇಪು. ೭-೬೦) ; ಮದಡನೇತಕೆ ಭಾಷೆ ಕಂದುಕುಂದಿಲ್ಲದ ಬಹುಪ್ರಗಲ್ಭಾನ್ವಿತ ಸುಕಂದನಂ . . . ಪಾಲಿಸು (ಶ್ರೀಕೃಪು. ೩-೦೦೯) ; ಉದಯಕಾಲದಿ ಈ ಪದವ ಪಠಿಸಲು ಮದಡನಾದರೂ ಜ್ಞಾನ ಉದಯವಾಹುದೋ (ಜಗದಾ. ೦೩೩). **ಮಜಡ** : ೧. ಗ್ರಂಥದರ್ಥಂಗಳಂ ಶಾಸ್ತ್ರಮನ್ನರಿಯೆ ಮಜಡ ನಾನೂ [ಪಾಠಾಂ. ಶಾಸ್ತ್ರಗಳನರಿಯದಾ ಜಡನೂ] ತಿಳಿಯಲಿದರ ಗುಣಾಗುಣಾಂಗಳಂ (ತುರಂಗ. ೧-೦೨). ೨. ಜಡಸ್ವಭಾವದವನು ; ಅಲಸಿ : ಗಜಬಜವಿದೇನೆನುತ ನಿದ್ರೆಯ ಮಜಡರೊಳಗೊಳಗಱದರೀತನ ಭುಜಬಲಕೆ ಮಲೆತವರ ಕಾಣೆನು ಸೃಂಜಯಾದಿಗಳ (ಕುವ್ಯಾಗ. ೯-೩೩) ; ಆ ಶಂಭುವಱವನು ನಿಜವನಿಂದ್ರಾನಿಲ ಕುಬೇರರು ಮಜಡರೀ ಪವಮಾನವರುಣರದಾವನಱತದಲಿ ವಿಜಿತತಿಮಿರ ವೆನಿಪ್ಪ ಸೋಮಾಂಬುಜಸಖರು ತಾವಱಯರೇತಕೆ (ಕಠಾಗ. ೬-೩-೨೯).

[ಮದಡು + – ಅ₇. / ತಮಿ. ಮಟ್ಟನ್ = ದುಷ್ಟ ; ತುಳು. ಮದಡೆ ; ತೆಲು. ಮದಟ]

**ಮದಡತನ** (ನಾ). ದಡ್ಡತನ ; ಅವಿವೇಕ : ಮದಡತನವಿದು ಬೇಡ ನೀವಿಪ್ಪುದು ವಿಚಾರಿಸೆ ನೀತಿಯಲ್ಲ (ತಿಮ್ಮಭಾಂ. ೪-೬೮) ; ಘನತರೌಷಧಿಯ ಕುಲಕೆ ಶಿವನೇ ಪತಿಯೆನಿಪ್ಪುದಂ ತಿಳಿಯದೇ ಮದಡತನದಿಂದೆ ನವಿದ ಲಲಿತಾನ್ನಸಿಕ್ಥಕಬಳಮದತ್ತಿವಣ್ಣಲ್ತೆ (ಪಾಸೋಪು. ೯-೦೦೭).

[ಮದಡ + –ತನ./ತೆಲು. ಮದಟತನಮು]

**ಮದಡು**, ಮಜಡು (ನಾ). ೧. ದಡ್ಡತನ ; ಅವಿವೇಕ : (ಕ). ೨. ಅವಿವೇಕದಿಂದ ಕೂಡಿದುದು ; ತಿಳಿಗೇಡಿಯಾದುದು : ಗಂಡಸರ ಬುದ್ಧಿ ಬಲು ಮದಡು (ಸ್ತ್ರೀರಾ. ೨೦೪) ; ಅವನ ಬುದ್ಧಿ ಮದಡು (ಪ್ರಪಂ. ೩೦೦). (ಗು). ೩. ಮೂರ್ಖತನದ ; ತಿಳಿಗೇಡಿ ಯಾದ : ಮದಡು ಮಾನವ ನಿನ್ನ ಉದರಚಿಂತೆಯ ಬಿಡು (ಪುರಂಕೃ.೦೩೩-೯). **ಮಜಡು** : ೪. ಕೆಲಸಕ್ಕೆ ಬಾರದುದು ; ಅಪ್ರಯೋಜಕವಾದುದು : ಮಜಡು ಮಣಕನೋದಿಯೋದಿ ಸುಜನರೆಲ್ಲರು ರೀತಿಗೆಟ್ಟರು (ಶಿವಗೀ. ೦೦೬-೩೭೬). ೫. ಜಡಸ್ವಭಾವದ ವ್ಯಕ್ತಿ ; ಅಲಸಿ : ಧಾತುಗಾಣಿಸಿ ಕೊಳದ ಮಜಡುಗಳ್ ಗೊಜಡುಗಳ್ . . . ಸತಿಯರ್ (ಶತಂ. ೨-೩೯).

[ದೇ.॥ ತುಳು. ಮದಡ್, ಮದಡೆ]

**ಮದತು** 'ಮದತ್ತು' ನೋ.

**ಮದತೇಗ** (ನಾ). ಒಂದು ಬಗೆಯ ತೇಗದ ಮರ: ಕೋಲ್ತೇಗ, ಮದತೇಗ, ಕಾಡುಕಣಿಗಲು (ವೃಶಿ. ೩೦-೩೬೯). [ಮದ + ತೇಗ₁ (< ತೇಗು₄)]

**ಮದತ್ತು**, ಮದತು, ಮದದ್, ಮದ್ದತು, ಮದ್ದತ್ತು (ನಾ). ೧. ನೆರವು ; ಸಹಾಯ : ತಾವುಯೆಷ್ಟು ಮೆಹರ್ಬಾನಗಿ ಮದತ್ತು ಮಾಡಲಾದೀತೋ ಅಷ್ಟು ಮದತ್ತು ಮಾಡಬೇಕು (ರಾಕೇಂದ್ರ. ೩೦). ೨. ನೆರವು ನೀಡುವವನು ; ಸಹಾಯಕ : ನಾನು ವಿಪ್ಲವಕಾರರಿಗೆ ಮದತ್ತಾಗಿದ್ದೇನೆಂದೂ ತುಫಾನು ಬಂದರೂ ಬರಬಹುದು (ರಾಂಡ್. ೨೨೩). **ಮದತು** : ೧. ಕಮತಿಗ್ಯಾ ನಿನ್ನ ಮದತಿಗೆ ಇದ್ದೇ ಇರುತ್ತಾನೆ (ರೀಶಹ. II, ೦೦೩). **ಮದದ್** : ೧. ಇಯಜ್‌ಖಾನರು ಸರ್ಕಾರೀ ಹಣವನ್ನು ಅಪಹರಿಸಿಕೊಂಡು ಹೋಗಲು ಮದದ್ ಮಾಡಿರುತ್ತಾರೆ (ರಾಂಡ್. ೬೩). **ಮದ್ದತು** : ೧. ಲೋಕಲ್‌ಫಂಡು . . . ಸರಕಾರೀ ಮದ್ದತು, ಮ್ಯುನಿಸಿಪಾಲಿಟಿಯವರಿಂದ ಬರುವ ಮದ್ದತು . . . ಕೆಲವು ಭೂಮಿಯ ತೆರಿಗೆ ಮುಂತಾದ ಕಿರುಕುಳಬಾಬುಗಳಿಂದ ಜಮೆಯಾಗುತ್ತದೆ (ಕಥಾಗ. ೩೯೩). **ಮದ್ದತ್ತು** : ೧. ಅಪರಾಧ ನಡೆಸಲಿಕ್ಕೆ ಚಂಚಲನೇತ್ರರು ಮದ್ದತ್ತು ಮಾಡಿದರೆಂದು ಬರೆದಿತ್ತು (ಪಾಗ್ಯಾಂ. ೦೨೩) ; ಈ ಅಧಿಕಾರಿ ಗಳಾದರೂ . . . ಅಡ್ಡಿ ಅಡಚಣೆಗಳನ್ನು ಈ ಜಮೀನುದಾರರ ಮದ್ದತ್ತಿ ನಿಂದ ಸರಿಪಡಿಸಿಕೊಳ್ಳುತ್ತಿದ್ದರು (ಪಾವಕ. ೪೨).

[ ← ಅರ. ಹಿಂ. ಮದದ್ ; ಮರಾ. ಮದತ್, ಮದದ್ ]

**ಮದದ್** 'ಮದತ್ತು' ನೋ.

**ಮದದೂಷಿತ** (ನಾ). ಮತ್ತಿನಿಂದ ಭ್ರಷ್ಟನಾದವನು : ಅಪರಾಜಿತನಿಪ ಗಂಧದ್ವಿಪಂ ಮೊಗಂದಿರಿದು ಅನ್ನ ಬಲಮನ ತುಟಿದತ್ತುಪಕಾರಿಗೆ ಮದದೂಷಿತನಪಕಾರಂಗೆಯ್ವನೆಂಬುದೊಂದಚ್ಚರಿಯೇ (ಶಾಂತಿಪು. ೯-೨೦).

[ಸಂ.]

**ಮದದ್ವಿಪ** (ನಾ). = ಮದಕರಿ : ಕಾರ ಮುಗಿಲ್ಗಳಿಂ ಪೊಳೆವ ಮಿಂಚುಗಳಿಂ ಸುರಕಾರ್ಮುಕಂಗಳಿಂ . . . ನೀರದಮಾರ್ಗಮಂಡಲಮದೇನೆಸೆದತ್ತೊ

ಮದದ್ವಿಪಾವೃತಂ ವೀರಭಟಾಸ್ತ್ರರುಕ್ಪರಿವೃತಂ ಮಣಿಭೂಷಣಕಾಂತಿ ಸಂವೃತಂ (ತಂಶ್ರಪು. ೨-೧೧೩). [ಸಂ.]

**ಮದದ್ವಿಲಸಿತ** (ನಾ). [ನಾಟ್ಯ] ಮೂವತ್ತೆರಡು ಅಂಗಹಾರಗಳಲ್ಲಿ ಒಂದು : ಎಸೆವ ಮದಸ್ಖಲಿತಂ ಕೇಳ್ ಮಿಸುಗುವ ಮತ್ತಲ್ಲಿ ನಾಡೆ ತಲಸಂಸ್ಫೋಟಪ್ರಸರಮಿವಂ ಪಲಸೂಳಿಂ ಪಸರಿಸಿ[ರೆ] ನಿಕುಟ್ಟನಾಖ್ಯ ಮೂರೂರ್ಧ್ವವೃತ್ತಂ ಕರಿಹಸ್ತ ಕಟೀಛಿನ್ನದ ಕರಣಂಗಳನೇಳನೊಂದುಗೂಡಲ್ ಮತ್ತಂ ತರಳಾಕ್ಷಿ ಮದದ್ವಿಲಸಿತದುರುತರಮೆನಿಪಂಗಹಾರಮಕ್ಕುಂ ತರುಣೀ (ಲಾಸ್ಯರಂ. ೩-೨೭). [ಸಂ.]

**ಮದನ₁** (ನಾ). ೧. ಅಮಲೇರಿಸುವ ಮದ್ಯ ಮುಂತಾದ ಪಾನೀಯ. ೨. ಕಸ್ತೂರಿ : ಗೊಲ್ಲನು ನದಿಯ ಸ್ನಾನವ ಮಾಡಿಕೊಂಡು ಮದನ ತಿಲಕವ ಫಣೆಯೊಳಿಟ್ಟು (ಗೋಪಾತು. ೩-೨೪). [ಸಂ. ಮದನಾ]

**ಮದನ₂** (ಗು). ೧. ಅಮಲೇರಿಸುವ ; ಮತ್ತು ಬರಿಸುವ. ೨. ಹರ್ಷಗೊಳಿಸುವ ; ಉಲ್ಲಾಸಗೊಳಿಸುವ. (ನಾ). ೩. ಮನ್ಮಥ : ಕಾಮ : "ಅನಿಮಿಷಂ . . . ಮಾರನೆನೆ ಮದನನಕ್ಕು" (ಮಂಗರಾ. ೭-೨೨) ; ಮದನನ ಕೈದುವೆಲ್ಲಿದನಂಗನ ಕೈಪೊಡೆಯೆಲ್ಲಿದಂ (ಆದಿಪು. ೩-೧೩); ಮದನಂ ರೂಪಿಂಗೆ ದಾಸಂ ಮನೆಗೆ ನೃಪನ ಪುಣ್ಯೋದಯಂ ದಾಸನರ್ಕಂ ಮದವತ್ತೇಜಂಗೆ ದಾಸಂ ವಿಧು ವದನಯಶಃಶ್ರೀಗೆ ದಾಸಂ ಕೃತಾಂತಂ ಕದನಕ್ರೋಧಕ್ಕೆ ದಾಸಂ (ಅರ್ಜನೀ. ೧-೭೯) ; ಜನಪ ಶಂತನು ಮರುಳಾಗೊಂಡನು ಮದನನೆಸುಗೆಯಲಿ (ಕುವ್ಯಾಆ. ೨-೨೪). ೪. ಕಾಮ ; ವಿಷಯಾಸಕ್ತಿ. ೫. ವಸಂತಋತು. ೬. ತುಂಬಿ : ಭ್ರಮರ. ೭. ಜೇನುಮೇಣ. ೮. ಉಮ್ಮತ್ತ : ಧತ್ತೂರ : "ದರ್ಪಕನೊಳುನ್ಮತ್ತನುಮ್ಮತ್ತದೊಳವನಿರುಹಮೊಪ್ಪೆ ಮದನಾಖ್ಯವಕ್ಕು" (ಮಂಗರಾ. ೧೩೦-೪೯) : ಖದಿರಂ ಮದನಂ ಕಲಿಕಕ್ಕೆ . . . ಗುಗ್ಗುಳಂ ಮತ್ತಮನೇಕವೃಕ್ಷತತಿಯಿಂದೆಸೆದಿರ್ದುದು ತದ್ವನಾಂತರಂ (ನಳಚಂ. ೬೦). ೯. ಖದಿರವೃಕ್ಷ. ೧೦. ಬಕುಳವೃಕ್ಷ : 'ಮದನಾಕ್ರಾಂತ' ಪರ್ಯಾ. ೧೧. [ಕಾಮಶಾ] ಆಲಿಂಗನದ ಪ್ರಕಾರಗಳಲ್ಲಿ ಒಂದು. ೧೨. [ಛಂದ] ವಿಷ್ಣುಗಣ : ಜಯಕೀರ್ತಿಯು 'ಬ್ರಹ್ಮ' 'ವಿಷ್ಣು' 'ರುದ್ರ'ಗಣಗಳ ಬದಲಾಗಿ 'ರತಿ' 'ಮದನ' 'ಶರ' ಗಣಗಳ ಹೆಸರಿನಲ್ಲಿ ಲಕ್ಷಣ ಹೇಳಿದ್ದಾನೆ (ಛಂದೋಅ. ೦೩೨). ೧೩. [ಜ್ಯೋತಿ] ಜನ್ಮಲಗ್ನದಿಂದ ಏಳನೆಯ ಸ್ಥಾನ.

ಮದನವಿರೋಧಿ=ಶಿವಸ್ವರೂಪನಾದವನು ; ಒಂದು ಬಿರುದು : ಮದನವಿರೋಧಿಯೆಂಬ್ಬನೆ ವಿರೋ[ಧಿ]ಗೆ ಬನ್ಧುಜನಕ್ಕೆ ವಜ್ರಶೈಳದ ನಡೆಗೋಟೆಯೆನ್ನನೆ . . . ಎಂದಪುದೀ ಧರೆ ರಾಚಮಲ್ಲನಂ (ಶಾಇಇ. XVIII, ೪೪-೩೭ ; 1019). [ಸಂ.]

**ಮದನಕದನ** (ನಾ). ಸುರತ : ಮನ್ಮಥಕ್ರೀಡೆ. [ಸಂ.]

**ಮದನಕಯ್**, **ಮದನಕ್ಕೈ**, **ಮದನಗೆಯ್**, **ಮದನಿಕೆ** (ನಾ). ೧. ದೇವಸ್ಥಾನ, ಅರಮನೆ ಮುಂತಾದುವುಗಳ ಕಂಬಗಳ ಬೋದಿಗೆಗೆ ಜೋಡಿಸಿರುವ ಅಲಂಕಾರಮಯವಾದ ಸ್ತ್ರೀವಿಗ್ರಹ : ಲಲಿತಸ್ತಂಭಕದಂಬಮಂ ಮದನಕಯ್ಯಂ ಲೋವೆಯಂ ದ್ವಾರಚಿತ್ರಲತಾಬಂಧಮನುಧೃಭಿತ್ತಿಯನಧಿಷ್ಠಾನಾದಿಯಂ ಬೇಜಿಬೇಜಿಸೂಲಮಿಂ ಬಣ್ಣಿಸಿ ಪೇಳಲಾನಜಿಯೆಂ (ಶಾಇಇ. VII, ೦೪೭-೨೮ ; 1630). **ಮದನಕ್ಕೈ** : ೧. ಚಿತ್ರಮಯದ ಗೋಡೆ ಕಂಭ ಜಾವಡಿ ಪೊನ್ನ ಪುತ್ತಳಿ ಮದನಕ್ಕೈ ರತ್ನ ತೆತ್ತಿಸಿದ ಮಲಬೋದಿಗೆ ಲೋವೆ ಪಲಗೆಯೊಳ್ಕೆತ್ತಿಸ ಕುಚ್ಚುಗಳ್ ಮೆಜೆಯೆ (ವೋಪಕ. ೦೭-೦೪) ; ಬಜ್ಜರದ ಕಂಭಮುಜೆ ತೊಳಪ ವೈಡೂರಿಯದ ಮದನಕ್ಕೈ ಮಿಜುಪ ಗೋಮೇದಕದ ಬೋದಿಗೆಗಳ . . . ಪೊನ್ನ ಪೊದಕೆ ರಂಜಿಸಿತು ಚಾವಡಿಯ ಚೌರಸವೆಡೆಯೊಳು (ಕೈಬಿಙಾ. ೦೭-೨೩) ; ಎನ್ನ ಒಡಲೇ ನಿಮಗೆ ದೇವಾಲಯ ಎನ್ನ ತೋಳುಗಳೆರಡು ಉನ್ನತದ ಮದನಕ್ಕೈ (ಸುಚಾರ. ೦೭-೦). ೨. (ಕರಾ)ನೆಲದಲ್ಲಿ ಹೂತಿಟ್ಟ ನಿಧಿಯನ್ನು ಸೂಚಿಸುವುದೆಂದು ನಂಬಲಾಗುವ ಮರದ ರೆಂಬೆ : ಅದಕ್ಕೆ ಎಷ್ಟು ಮದನ ಕೈಗಳು ಇವೆ ನೋಡು. ಅಷ್ಟಯಲ್ಲಿ ಕೊಪ್ಪರಿಗೆ ಇದ್ದರೆ ಮಾತ್ರ ಮರಗಳಿಗೆ ಮದನಕ್ಕೈ. ಬೇರೆ ಮರಗಳಿಗುಂಟೇನು ಹಾಗೆ ? (ಚಾಳಿ. ೪೭). **ಮದನಗೆಯ್** : ೧. ಮದನಗೆಯ್ಯ [ಪಾಠಾಂ. ಗೈಯ] ಬಾಗಿಲ್ವಾಡದ ಸಿಂಗರದೊಂದು ದೇಗುಲಂ ಕಣ್ಗೆಡ್ಡವಾಗಿ ರಂಜಿಕುಂ (ರಾಜಶೇಖ. ೩೪-೨೩). **ಮದನಿಕೆ** : ೧. ಪಚ್ಚೆಯ ಲೋವೆ ಮಾಣಿಕದ ಮದನಿಕೆ (ಶಬರಶಂ. ೩-೭೩) ; ಬೇಲೂರಿನ ಕಂಬಗಳ, ಮೇಲಿರುವ "ಮದನಿಕೆ" ವಿಗ್ರಹಗಳನ್ನು ಕೆತ್ತಿದವರು ನಿಜವಾಗಿಯೂ ಶಿಲ್ಪಶ್ರೇಷ್ಠರು (ಮೈಪಾಸು. ೪೮).

ಮದನಕೈಬೊಂಬೆ = ಮದನಕಯ್ : ಈ ಸ್ತಂಭಗಳ ಬೋದಿಗೆಯ ಮೇಲೆ ಸೂರಿಗೆ ಊರೆಯಾಗಿ ಸುಂದರವಾದ ಮೂರ್ತಿಗಳು ಕೆತ್ತಿ ನಿಲ್ಲಿಸಲ್ಪಟ್ಟಿವೆ. ಇವುಗಳಿಗೆ ಸಂಸ್ಕೃತದಲ್ಲಿ ಸಾಲಭಂಜಿಕೆಗಳೆಂದೂ . . . ಕನ್ನಡದಲ್ಲಿ ಮದನಕೈಬೊಂಬೆಗಳೆಂದೂ ಹೆಸರು (ಮೈಪಾಸು. ೯೯). [?]

**ಮದನಕಲಹ** (ನಾ). = ಮದನಕದನ : ಮದಗಜಂ . . . ಮದನಕಲಹದೊಳೊಲ್ದು ಕೊಸರಿ ಪೆಣಗುವ ಸತಿಯವೊಲ್ ಪೆಣಗಿದುವು ಶಿವನೊಳು (ಅರಾಶ. ೦-೦೦-೩೮). [ಸಂ.]

**ಮದನಕಲೆ**, **ಮದನಕಳೆ** (ನಾ). ಶೃಂಗಾರ ಕಲೆ ; ರತಿಚಾತುರ್ಯ : ಮಾನಿನಿಗೆ ಮದನಕಲೆಗಳಂ ತೋಜಿಸಿದನವನಂದು ಸಮರತಿಯೊಳು (ಜೈಮಿಭಾ. ೦೦-೨೨). **ಮದನಕಳೆ** : ಮದನಕಳಾಕುಶಳೆಯರಂ ಮದನಮಹೀಪಾಳಭಾಗ್ಯಸೌಭಾಗ್ಯೆಯರಂ ಕನ್ಯಾರತ್ನಮಂ ಕುಡುವುದಕ್ಕಿದುವೆ ಸಂಚರಂ (ಪಾರ್ಶ್ವಪು. ೬-೩೦); ನಯಮಧುರವಂ ಬೀಜೆ ನೀನನ್ವಯಿಪ ಮದನಕಳೆಗಳನೆನ್ನ ತನಯಳ ಮಂಚದ ತುದಿಯ ಕಾಲಲಿ ಕಟ್ಟಿಸು (ಐಸಕೃ. ೪೨-೦೯). [ ಸಂ. ಮದನಕಲಾ ]

**ಮದನಕಳೆ** 'ಮದನಕಲೆ' ನೋ.

**ಮದನಕಾಮೇಶ್ವರಿಲೇಹ** (ನಾ). ಒಂದು ಬಗೆಯ ಕಾಮೋದ್ದೀಪಕ ರಾಸಾಯನಿಕ ಚೂರ್ಣ : ಮದನಕಾಮೇಶ್ವರಿಲೇಹ . . . ಸಕಲ ರೋಗಹರ. ಕಾಮೇಶ್ವರನಿಂದ ನಿರ್ಮಿತವಾದದ್ದು (ಕಾಮಶಾ. ೨೩೬).
[ಮದನಕಾಮೇಶ್ವರಿ₀ (ಪ←ಮರಾ. ಮದನಕಾಮೇಶ್ವರ)+ಲೇಹ]

**ಮದನಕಾಮೇಶ್ವರಿಹೂ**, **ಮದನಕಾಮೇಶ್ವರಿಹೂವು** (ನಾ). ಧತ್ತೂರದ ಹೂವು : (ಪ್ಯಶಿಗ. ೨೯-೩೩೮). **ಮದನಕಾಮೇಶ್ವರಿಹೂವು** : ಮದನಕಾಮೇಶ್ವರಿಹೂವು ಹಾಲಿನಲ್ಲಿ ಮರ್ದಿಸುವುದು (ಕಾಮಶಾ. ೨೬೩).
[ ಮದನಕಾಮೇಶ್ವರಿ₀ + ಹೂ₂ (< ಪೂ₂) ]

**ಮದನಕಾಮೇಶ್ವರಿಹೂವು** 'ಮದನಕಾಮೇಶ್ವರಿಹೂ' ನೋ.

**ಮದನಕಾಯ** (ನಾ). ಮನ್ಮಥನಂತೆ ಸುಂದರವಾದ ದೇಹವುಳ್ಳವನು : ಬದಗಿನಿದಿರಾದನು ಜಯಶ್ರೀಮದನಕಾಯನು ಕಪಟದಾಯನು ವಿದಿತ ಮಾಯನು ರಣದಜೇಯನು ಕೌರವರ ರಾಯ (ಕುವ್ಯಾಶ. ೩-೦೦). [ಸಂ.]

**ಮದನಕೇಳಿ** (ನಾ). ಕಾಮಕ್ರೀಡೆ ; ರತಿಕೇಳಿ : ವಸಂತದೊಳ್ಮದನಕೇಳೀಸೂತ್ರಮಂ ಪಾರದೋದಿದ ಕೀರಂ . . . ಶೀತಾಂಶು ತೀವಿದ ನೆಯ್ದಿಲ್ಗೊಳನಲ್ಲದಿಲ್ಲೆನೆ ಬನಂ ಚಿತ್ತೋತ್ಸವಾಲಂಬನಂ (ಮಲ್ಲಿಕ. ೨-೩೭); ಚಿತ್ರವಾಪ್ಪ ಮದನಕೇಳಿಯಿಂದೆ ಪೆಂಪಿನುದಯದಿಂದೆ ಮಧ್ಯಮೆಯನು ಗೆಲುವುದು (ಜನವ. ೩-೦೦). [ ಸಂ. ಮದನಕೇಲಿ ]

**ಮದನಕ್ಕೈ** 'ಮದನಕಯ್' ನೋ.

**ಮದನಕೈಹಲಗೆ** (ನಾ). (ದೇವಾಲಯಂ ಮುಂತಾದುವುಗಳ ಕಂಬಗಳ ಬೋದಿಗೆಗಳ ಮೇಲೆ ಕೆತ್ತಿರುವ) ಸುಂದರಸ್ತ್ರೀವಿಗ್ರಹದ ಕೆತ್ತನೆಯುಳ್ಳ ಆಧಾರವನ್ನು ಹೊಂದಿರುವ ನಾಗಂದಿಗೆ : ಗಂಗಕ್ಕ . . .

'ಮದನಕೈಹಲಗೆ'ಯಲ್ಲಿರಿಸಿದ್ದ ಹಾಲಿನ ಗಿಂಡಿಗೆ ಕೈಕೊಂಡು ಹೋಗುವಾಗ ಹಾಲೆಲ್ಲ ಚೆಲ್ಲಿಹೋಯಿತು (ಒಡ್ಡ.ಬಾ. ೯೭.).
[ ಮದನಕೈ (< ಮದನಕಯ್) + ಹಲಗೆ (< ಪಲಗೆ) ]

**ಮದನಗಂಟಿ** (ನಾ). ಒಂದು ಬಗೆಯ ಸಸ್ಯ : ಮದನಬುಡಮೆಗಿಡ, ಮೇದನಾಗಿಡ, ಮದನಗಂಟಿ (ವೈ.ಶಿ. ೦೩-೨೩೫).
[ ಮದನ₂ + ಕಂಟಿ₂ ]

**ಮದನಗೃಹ** (ನಾ). ಸ್ತ್ರೀಯ ಜನನೇಂದ್ರಿಯ ; **ಯೋನಿ** : ಮದನಗೃಹದೊಳಲರ್ವುದು ಜನಿವುದು ಪೊದೆವುದು ಪಿಡಿದೇಳ್ವುದೆನಿವುವವನ ಪದವೊದವಿರೆ ಮಾಣದೆ ಹಸ್ತಕ್ಷೋಭದಿನಾಗಿಪುದು (ಜಪವ. ೯-೨೪). [ಸಂ.]

**ಮದನಗೆಯ್** 'ಮದನಕಯ್' ನೋ.

**ಮದನಗೇಹ** (ನಾ). = ಮದನಗೃಹ : ವಿಟರಕ್ಷಿ ಪರಿದಾಡುತಿಹ ವಾರಿಯೋ ಮದನಗೇಹದ ಮೇರೆಯೋ ಎಂಬ ತೆಜದಿ ತ್ರಿವಳಿಗಳೆಸೆದವು (ಶ್ರೀ ಕರಾ. ೯-೮). [ಸಂ.]

**ಮದನಚೇಷ್ಟೆ** (ನಾ). ವಿಷಯಾಭಿಲಾಷೆಯು ಮಾಡುವ ಹಾವಭಾವ; ಶೃಂಗಾರ ಚೇಷ್ಟೆ : ಅರ್ಭಕತನವರಿ ಮದನಚೇಷ್ಟೆಯರಿ ದುರ್ಬುದ್ಧಿ ಮಾಡುವವಳೆ ಶುದ್ಧ ಹೊಲತಿ (ಪುರಂದ. ೧-೦೦೬-೫).
[ ಸಂ. ಮದನಚೇಷ್ಟಾ ]

**ಮದನಚಕ್ರ** (ನಾ). [ಕಾಮಶಾ] ಒಂದು ನಾಡಿಯ ಹೆಸರು : ಮದನಾಂದೋಳನ ಮದನಚ್ಛತ್ರ ಪೂರ್ಣಚಂದ್ರಾದಿ ನಾಡೀಮರ್ಮಜ್ಞರಿಂ (ವಿವೇಕ. ೦೬೪). [ಸಂ.]

**ಮದನಜನಕ** (ನಾ). ಮನ್ಮಥನ ತಂದೆ ; ವಿಷ್ಣು : ಮದನಜನಕನಾಗಿ ಮಹಿಮೆ ತೋಱುವ ಪದುಮನಾಭನಾಗಿ ಮೆಱೆವ ನಮ್ಮ ಪುರಂದರವಿಠಲನ ಹರುಷದಿ ಕರೆವ (ಪುರಂದ. ಚಾ. ೩-೬೯-೩). [ಸಂ.]

**ಮದನಜನಕತ್ವ** (ನಾ). ೧. ಕಾಮಭಾವನೆಯನ್ನುಂಟುಮಾಡುವಿಕೆ. ೨. ಮನ್ಮಥನ ತಂದೆಯಾಗಿರುವಿಕೆ. ೧, ೨ : ವಿಧೃತ ಮದನಜನಕತ್ವಮಾಗಿಯುಂ ಕಮಲೋತ್ಸವಕಾರಿಯಲ್ತು (ತಂಪ್ರಪು. ೯-೪೨ ವ). [ಸಂ.]

**ಮದನಜಲ** (ನಾ). ೧. ವೀರ್ಯ : ರೇತಸ್ಸು. ೨. ಸಂಭೋಗ ಸಮಯದಲ್ಲಿ (ಸ್ತ್ರೀಯು) ಸ್ರವಿಸುವ ದ್ರವ ; ಮನ್ಮಥದ್ರವ : ನೀರೊಳಗಳ್ಕಿದ ನೆವದಿಂದಾ ರೂಪನಿದಾನನಂ ಮೃಗಾಕ್ಷಿಯರಪ್ಪರ್ ಸಾರೆ ಬಿಡುತಂದು ಕೂಡಲ್ ನೀರಂತಿರೆ ಬೆರಸೆ ಮದನಜಲಮುಂ ಜಲಮುಂ (ಶಾಂತಿಪು. ೬-೪೨) ; ಅವಳಾಗಲು ಮದನಜಲವಂ ಬಿಡುವಳು (ಕಾಮಶಾ. ೨೩೨). [ಸಂ.]

**ಮದನಜ್ವರ** (ನಾ). ವಿರಹವ್ಯಥೆಯಿಂದ ಉಂಟಾಗುವ ಜ್ವರ : ಕಾಮಜ್ವರ. [ಸಂ.]

**ಮದನತಾಪ** (ನಾ). = ಮದನಜ್ವರ : ಮಱದೊಱಗಿದಳು ಮದನತಾಪದಿಂದಾಗ ಮಱುಮಾತುಗುಡದಿರ್ದಳವಳು (ಶಂಕಾಸಾಂ. ೨೩-೬೫). [ಸಂ.]

**ಮದನದಹನ** (ನಾ). ಮನ್ಮಥನನ್ನು ಸುಟ್ಟವನು ; ಶಿವ : ಮದನದಹನಂಗಾದುದೆನ್ನ ನಿಮಿತ್ತದಿಂದೀಗ ಇದಱುಪದ್ರವಂ (ಬಸಪು. ೦೩-೨೬). [ಸಂ.]

**ಮದನದ್ರವ** (ನಾ). = ಮದನಜಲ ೨ : ತೆಗೆದಪ್ಪಿದೊಡುನ್ನಿದ್ರಾಂಭೋಜಾಸ್ಯೆಗೆ ಮದನದ್ರವಮುಂ ಕಣ್ಣ ನೀರುಮುಣ್ಮಿದುವಾಗಳ್ (ಆದಿಪು. ೦೨-೪೪). [ಸಂ.]

**ಮದನಧರ್ಮ** (ನಾ). ಮನ್ಮಥನ ಬಿಲ್ಲು : ಬೆದರ್ದೆರಳೆಗಂಗಳ ಮದನಧರ್ಮದೊಲು ಪುರ್ಬಿನ . . . ಬಡಬಾಸೆಯೆಳೆವೆಣ್ಣಳೆಸೆದಿರ್ದರು (ಶ್ರೀ ಕರಾ. ೬-೦೦). [ಸಂ.]

**ಮದನಧ್ವಂಸಿ** (ನಾ). ೧. = ಮದನದಹನ. ೨. [ಛಂದ] ರುದ್ರಗಣದ ಹದಿನಾರು ಪ್ರಭೇದಗಳಲ್ಲಿ ಒಂದು : ರುದ್ರಗಣಮೆಂತೆಂದೊಡೆ : ೧. ಗಂಗಾಧೀಶಂ . . . ೧೧. ಮದನಧ್ವಂಸಿ (ಛಂದೋಂಬು. ೫-೨೪೦ ವ).
[ಸಂ. ಮದನಧ್ವಂಸಿನ್]

**ಮದನಪತತ್ರಿ** (ನಾ). ಮನ್ಮಥನ ಬಾಣ : ಮದನಪತತ್ರಿ ನಿನ್ನ ದೆಸೆಗಾಣದು ಮೋಹಮಹಾಪಿ ನಿನ್ನನಣ್ಮದು (ಶಂರಾಮಾ. ೫-೯).
[ಸಂ. ಮದನಪತತ್ರಿನ್]

**ಮದನಪತಾಕೆ** (ನಾ). ಮನ್ಮಥನ ಧ್ವಜ : ಮದನಪತಾಕೆ ಚುಂಬಿಸೆ ವಿಯನ್ಮಣಿಮಂ ಸ್ಮರಚಾಪಟಂಕೃತಂ ಪುದಿಯೆ ದಿಗಂತಮಂ (ಶಂರಾಮಾ. ೫-೪೮) ; ಮೊದಲೊಳು ಮೇನಕೆಯುದರದೊಳಾಕೆ ಉದಿಸಿದ ಕನ್ಯಕೆ ಮದನಪತಾಕೆ (ಶಾಕುಂತ. ೨೪ ಅಡಿ). [ಸಂ. ಮದನಪತಾಕಾ]

**ಮದನಪಿತ** (ನಾ). ೧. ಮನ್ಮಥನ ತಂದೆ ; ವಿಷ್ಣು. ೨. ಕೃಷ್ಣ : "ಮದನಪಿತನೊಳು . . . ಕಪ್ಪಿನೊಳು ಕೃಷ್ಣಪಕ್ಷ" (ಮುಂಗರಾ. ೦೫೧-೫೫) : ಇದನೆ ಕೃಪೆಮಾಡೆನಗೆ ಮದನಪಿತ ಪುರಂದರವಿಟ್ಠಲರಾಯ (ಪುರಂದ. ಚಾ. ೬೩-೪-೩). [ < ಸಂ. ಮದನಪಿತೃ ]

**ಮದನಫಲ**, ಮದನಫಳ (ನಾ). ಒಂದು ಬಗೆಯ ಮುಳ್ಳುಗಿಡದ ಹಣ್ಣು ; ಮಂಗಾರೆ : ಮದನಫಲಂ ಸೊರೆ ಕಬ್ಬಿತ್ತಿ ದಂತಿ ಪಿಪ್ಪಲಿ ಗುಡಂ ಯವಕ್ಷಾರಮುಮಂ ಮಿದಿದಿಡುಗೆ ಯೋನಿಯೊಳ್ ಕಾದಿಸಿ ದುಗ್ಧದಿಂ ತಾನವಳ್ ರಜಸ್ವಲೆಯಕ್ಕುಂ (ರೋಕರೋಕ್ಕ. ೯-೦೬೩). **ಮದನಫಳ** : ಮದನಫಳಂ ಬಜೆ ರುಜೆ ದೇವದಾರಿಯೆಂಬಿವನೆ ಗಂಧದ ಜಲದೆ ಮೇಣಲ್ಲದೊಡೆ ಶರಪುಂಖಿಯುಜಮೂತ್ರದೆ ಕುಡಿದೊಡಿಲಿಯ ವಿಷಮಾವಿಷಮುಪಶಮಿಕುಂ (ರೋಕರೋಕ್ಕ. ೦೦-೩೪). [ಸಂ.]

**ಮದನಫಳ** 'ಮದನಫಲ' ನೋ.

**ಮದನಬಾಧೆ** (ನಾ). ಕಾಮದಿಂದ ಉಂಟಾಗುವ ತಾಪ : (ಮದನಬಾಧೆಯನ್ನು ಅಭಿನಯಿಸಿ) ಎಲೈ ಪೂಜ್ಯನಾದ ಪುಷ್ಪಾಯುಧನೇ . . . ಕಾಮಿಜನರನ್ನು ನೀವು ಚೆನ್ನಾಗಿ ವಂಚಿಸುವಿರಿ ! (ಶಾಕುಂತ. ೩೨-೦).
[ ಸಂ. ಮದನಬಾಧಾ ]

**ಮದನಬುಡಮೆಗಿಡ** (ನಾ). ಒಂದು ಬಗೆಯ ಔಷಧೀಸಸ್ಯ : ಮದನಬುಡಮೆಗಿಡ, ಮೇದನಾಗಿಡ, ಮದನಗಂಟಿ (ವೈ.ಶಿ. ೦೩-೨೩೫).
[ ಮದನ₂ + ಬುಡಮೆ ( < ಬುಡುಮೆ) + ಗಿಡ ( < ಗಿಡು) ]

**ಮದನಮಂಟಪ** (ನಾ). ಮಲಗುವ ಕೋಣೆ ; ಶಯ್ಯಾಗೃಹ : ಸುಪ್ರಕಾಶದಿ ಬೆಳಪ ಧವಳಾರಸೌಧರತ್ನಪ್ರತತಿಯಿಂ ರಚಿತಭಿತ್ತಿಭವನಹರ್ಮ್ಯಸುಪ್ರೇಮದಿಂ ಕೇಳು ಸಜ್ಜೆ ಗೋಪುರನಿಳಯ ಮದನಮಂಟಪಭವಂತೀ (ಸಪಮೋ. ೦೬-೩೨). [ < ಸಂ. ಮದನಮಂಡಪ ]

**ಮದನಮಂದಿರ** (ನಾ). ೧. = ಮದನಮಂಟಪ : ಮಣಿಮಯದಿ ಬೆಳಗುವ ಮದನಮಂದಿರದಿ ರೂಢಿವೆತ್ತ ಮಳಮೃದುತಳ್ಪದೊಳು ಪವಡಿಸಲು (ನಪಮೋ. ೦೬-೦೮). ೨. = ಮದನಗೃಹ : ಸ್ತ್ರೀಯರ ಮದನಮಂದಿರ ಬಂಧನಕ್ಕೆ — ಮಾಯಿಫಳ ಜಾಯಿಪತ್ರೆ ಅರದು ಪೊಟ್ಟಣಮಂ ಕಟ್ಟಿ ಮರ್ಮಸ್ಥಳಕ್ಕೆ ಮಡುಗೆ ಏಳುದಿನ ಇಟ್ಟರೆ ಬಿಗಿಯಾಗಿ ಬಂಧನವಹುದು (ಕಾಮಶಾ. ೩೬೨). [ಸಂ.]

**ಮದನಮಸ್ತ** (ನಾ). ೧. (ಔಷಧಕ್ಕೆ ಬಳಸಲಾಗುವ) ಅಡವಿಸೂರಣಗೆಡ್ಡೆಯ ಒಣಗಿದ ತುಂಡು : ಮುಂಬಯಿ ಮಣದ ಮೇಲೆ ಧಾರಣೆ ಇರತಕ್ಕ ಜೀನಸಗಳು. ೧, ಅಕ್ರೋಡ . . . ೨೧, ಮದನಮಸ್ತ (ಮುಂಬಯ್ಯ. ೧೦೮). ೨. ಸಂಪಗೆಜಾತಿಯ ಒಂದು ಬಗೆಯ ಪರಿಮಳದ ಹೂವು. [ ← ಹಿಂ. ಮದನಮಸ್ತ್ ]

**ಮದನಮುಷ್ಟಿ** (ನಾ). ಒಂದು ಬಗೆಯ ಪೊದೆಯಾಕಾರದ ಗಿಡ ಮತ್ತು ಅದರ ಹಸುರುಬಣ್ಣದ ಹಾಗೂ ಕಡುಸುವಾಸನೆಯುಳ್ಳ ಹೂವು :

ಮದನಮಸ್ತಿಯ ಪರಿಮಳಕ್ಕೆ ಹಾವುಗಳು ಬರುತ್ತವೆಂದು ಹೇಳುತ್ತಾರೆ (ಠಕಿ). [ < ಮದನಮಸ್ತ ? ]

**ಮದನಯುದ್ಧ** (ನಾ). = ಮದನಕದನ : ಮೋಹನಮೆಂಬುದು ಮದನ ಯುದ್ಧಮೆಂಬುದು ಸುರತಕ್ಕೆ ಪೆಸರು (ಕಾಮಶಾ. ೨೪೦). [ ಸಂ. ]

**ಮದನರಸ** (ನಾ). = ಮದನಜಲ ೨ : ಮದನರಸಂ ಮದನರಸಂ ಪೊದಬ್ಬಿದೆನಿಸುವಿನಮಮರಿ ನರ್ತಿಸೆ ಚೆಲ್ವಂ ಪುದಿದುಜಿಚಲ್ಲಿಯೊಳೆಸೆದುದು ತಮರೋಜಸರೋಜಮುಕುಲಯುಗಸಂಚಲನಂ (ಆದಿಪು. ೬-೧೪) ; ಮದನ ರಸಪ್ಲವಂ ಕವಿಯೆ ತಣ್ಣಸನಾಗದೆ ತೃಷ್ಣೆಗಿಂಬುಕೆಯ್ಯದೆ ಪಗೆಗೊಂಡು ಪೋಷುದು ಸಮುದ್ರದ ಮಧ್ಯದ ಬಾಳೆ ಕೆಯ್ಗೆವರ್ಪುದುಮಂ . . . ಇಚ್ಚೆ ಬುಪನಿಚ್ಚೆಯಿಪೊಂ ಹಯಶೃಂಗಚಾಪಮಂ (ಶಾಂತಿಪು. ೬-೯೭). [ ಸಂ. ]

**ಮದನರಿಪು** (ನಾ). ಮನ್ಮಥನ ಶತ್ರು : ಶಿವ : ಧನುವ ಕೊಂಡನು ಮದನರಿಪು ತಿರುಹಿದನು ಬೆರಳಲಿ ಪಾಶುಪತಶರವ (ಕುಮಾ.ಭಾ. ೭-೩೬). [ಸಂ.]

**ಮದನವತಿ** (ನಾ). [ ಛಂದ ] ಅಂಶಗಣಬದ್ಧವಾದ ದೇಶ್ಯವೃತ್ತಗಳಲ್ಲಿ ಒಂದು : ಮದನವತಿಯ ಲಕ್ಷಣಮಂ ಪೇಳ್ವೆಂ ಮದನನ ತಂದೆಯ ಗಣ ಮವು ವಿಷಯದೊಳರೆ ಗುರು ಮುಂದೊದವಿರೆ . . . ಮದನಹರತ್ರಯದಿಂ ಹರಿ ಕಡೆವಡೆ ಮದನವತೀ (ಛಂದೋಂಬು. ೫-೨೫೫). [ ಸಂ. ಮದನವತೀ ]

**ಮದನವತಿಗ** (ನಾ). ಮದನವತಿ ವೃತ್ತದಲ್ಲಿ ಕೃತಿರಚನೆಮಾಡಿದವನು : ಮದನವತಿಗಂ – ಮದನವತೀತಿ ವೃತ್ತವಿಶೇಷಃ ತತ್ಕರ್ತಾ (ಶಬ್ದಾನು. ೪೧೨ ವ್ಯಾಖ್ಯಾ.). [ ಮದನವತಿ + –ಇಗ ]

**ಮದನವಿಕಾರ** (ನಾ). ಕಾಮದಿಂದ ಮನಸ್ಸಿನಲ್ಲಿ ಉಂಟಾಗುವ ವ್ಯತ್ಯಾಸ : ಮದನವಿಕಾರಮಂ ಮೆಚ್ಚಿದ ಪಾರಿವಮಿಲ್ಲದ ರಾಜಕೀರಮಿಲ್ಲದ . . . ಸೂಳೆವನೆಯಿಲ್ಲದವಿಲ್ಲವು ಸೂಳೆಗೇರಿಯೊಳ್ (ಮಲ್ಲಿಪು. ೨-೩೭). [ಸಂ.]

**ಮದನವೈರಿ** (ನಾ). = ಮದನರಿಪು : ಮದನವೈರಿಯ ಭಕ್ತಿಯಂ ತೋಚಿದವನೋ ಭವಪಾಶಮಂ ಪಚರಿಸಿದವನೋ (ಬಸವ. ೪೦-೪೪). [ ಸಂ. ಮದನವೈರಿನ್ ]

**ಮದನಶರ** (ನಾ). ಮನ್ಮಥನ ಬಾಣ : P ಇಲ್ಲಿ ಕೊಟ್ಟಿರುವ ಪಟ್ಟಿಯಲ್ಲಿರುವ ಶಬ್ದಗಳನ್ನು ಕಾಮನ ಐದು ಬಾಣಗಳೆಂದು ಭಾವಿಸಲಾಗಿದೆ. "ಇಷು–೫ : (ಅ) ಅರವಿಂದ, ಅಶೋಕ, ಚೂತ, ನವಮಲ್ಲಿಕಾ, ನೀಲೋತ್ಪಲ (ಅಮರ. ೧-೧-೨೮-೨೯). (ಆ) ಸಮ್ಮೋಹನ, ಉನ್ಮಾದನ, ಶೋಷಣ, ತಾಪನ, ಸ್ತಂಭನ (ಭಾರತ-ಶಕದ್ರು. IV-೧೫). ದ್ರವಣ, ಶೋಷಣ, ತಾಪನ, ಮೋಹನ, ಉನ್ಮಾದನ (ಶಕದ್ರು. IV-೧೫). ಉನ್ಮಾದನ, ಮದನ, ಮೋಹನ, ಸಂತಾಪನ, ವಶೀಕರಣ (ವಿಚಿಂ. ೪-೩೮೨)" (ಶ್ರೀವತ್ಸ. ೬೪) : ಮೃದುತರಮಾರ್ಗವೆ ಕೆನ್ನಂ ಮದನಶರಾನೀಕಮೊಯ್ಯನೊಲವಂ ಪಡೆಗುಂ (ಕವಿರಾ. ೩-೧೧೦) ; ಭಾಳಾಕ್ಷನಂ ಲಕ್ಷಿಸಿ ನೋಡಿ . . . ಭಲದಿಂದೆಚ್ಚಂ ಪಂಚೇಷು ಮದನಶರದಿಂದಾಗಳ್ (ಗಿರಿಜಾ. ೬-೨೮). [ಸಂ.]

**ಮದನಶಾಸ್ತ್ರ** (ನಾ). ಕಾಮಕಲೆ : ಮದನಶಾಸ್ತ್ರದೊಳಬ್ಜವದನೆ ಕೇಳ್ ನಾಲ್ದೆಸೆಯ ಸುದತಿಯರ ಜಾತಿಯಿಂತೆಂದೊರೆವೆನು (ಜಸಪ. ೨ ಸೂತಪ) ; ಪದುಮನಾಭನು ಪುರದ ಚದುರೆಯರಿಗೆ ತಾನು ಮದನಶಾಸ್ತ್ರವ ಪೇಳುತ ಮುದದೊಳಗಿರಲು (ಭೂರಂದ. ದಾ. ೪-೭೩-೧೦). [ಸಂ.]

**ಮದನಸದನ** (ನಾ). ರತಿಕ್ರೀಡೆಯ ಗೃಹ ; ಶಯ್ಯಾಗೃಹ : ಮದನಸದನೋದ್ಯೋಗಸ್ಥಾನಂಗಳೊಳ್ ಸುಚಿದಂಗನಾವದನಮದಿರಾಮೋದಸ್ವೇದಾಂಬುವಂ ತವೆ ಪೀರ್ದು . . . ನೀಲೋತ್ಪಲಂಗಳ ಕಂಪಿನೊಳ್ ಪುದಿದು ಪುರದೊಳ್ ತೀವಿತ್ತೆತ್ತಂ ಪ್ರಭಾತಸಮೀರಣಂ (ಆದಿಪು. ೬-೭೩). [ಸಂ.]

**ಮದನಸುಖ** (ನಾ). ಕಾಮಸುಖ ; ರತಿಸೌಖ್ಯ : ಮದನಸುಖಕ್ಕೆ ತಾನೆ ನೆಲೆ ಪೆಂಡಿರೊಳೆಂಬಿನಮಂತುಟೊಂದು ನೋಟದ ತೆಜಂ . . . ಸತ್ಯಭಾಮೆ ಗೊಡಗೂಡೆ ಮುರಾರಿಗೆ ಕೂಡಿತುತ್ಸವಂ (ಜಗ. ೧೦-೫೬). [ಸಂ.]

**ಮದನಹರ** (ನಾ). ೧. ಮನ್ಮಥನನ್ನು ಕೊಂದವನು : ಶಿವ : ಮದನಹರ ನಿಮ್ಮಚಲಭಕ್ತಿ ಸುಪದವಿಯಂ ಕೃಪೆಯಿಂ ಪ್ರಸಾದಿಸಿ ಸಲಹು (ಬಸವ. ೨-೨೪) : ಮದನಹರನಿದಿರಿನಲಿ ಕೈಮುಗಿದು ಮೈಚಾಚಿ ಬೇಡಿದಳ್ ಮದನ ಕೃಪೆಯಂ ನಾರಿ (ಶಶ್ರಾಂಗ. ೨೫-೬೯೬). ೨. ಮನ್ಮಥನನ್ನು ನಾಶಗೊಳಿಸಿದವನು : ಜಿನ : ಮದನಹರಂ ತಪೋಗ್ರಹಣದಿಂದೆ ತಗುಳ್ದೆಡೆ ಮಾಡದಂತೆ ನಿಂದುದಜಂ (ಶಾಂತಿಪು. ೧೦-೧೦೪). ೩. [ ಛಂದ ] ರುದ್ರಗಣ : ಮದನಹರತ್ರಯದಿಂ ಹರಿ ಕಡೆವಡೆ ಮದನವತೀ (ಛಂದೋಂಬು. ೫-೨೫೫). [ಸಂ.]

**ಮದನಾಂತಕ** (ನಾ). = ಮದನಹರ ೧ : ಅರಸನಾಕ್ಷಣದೊಳಾ ಮದನಾಂತಕನ ಸದುಭಕ್ತನಂ ಕರೆತರಿಸಿಯಿಂತೆಂದ (ಬಸವ. ೫೩-೪೨) ; ತ್ರಾಹಿ ಮದನಾಂತಕ ಪುರತ್ರಯದಾಹ ಹರಶಂಕರ ಮಹೇಶ (ಕುಮಾ.ಭಾ. ೭-೪೫).[ಸಂ.]

**ಮದನಾಂದೋಳನ** (ನಾ). [ಕಾಮಶಾ] ಒಂದು ನಾಡಿಯ ಹೆಸರು : ಮದನಾಂದೋಳನ ಮದನ ಛತ್ರ ಪೂರ್ಣಚಂದ್ರಾದಿ ನಾಡೀಮರ್ದನಶ್ಚಾರಿಂ (ಶಿವಕ. ೦೮೪). [ ಸಂ. ಮದನಾಂದೋಲನ ]

**ಮದನಾಂದೋಳಿಕ** (ನಾ). = ಮದನಾಂದೋಳನ : ನಾಲಿಗೆಯ ತುದಿಯಿಂ ಮದನಾಂದೋಳಿಕನಾಡಿಯಂ ಹಲವು ಬಾರಿ ಅಲ್ಲಾಡಿಸುವುದು (ಕಾಮಶಾ. ೨೩೯). [ಸಂ.ಮದನಾಂದೋಲಿಕ]

**ಮದನಾಂಬು** (ನಾ). = ಮದನಜಲ ೨ : ಮದನಾಂಬುಪ್ಲವದುರ್ಮಾಗ್ಗದೆ . . . ಸುಸಿಲಿಂದಾ ಪಾಣ್ಬೆಯುರ್ಬಿಂಗಿದರ್ (ಶಾಂತೀಶ್ವ. ೧೦-೨೬). [ಸಂ.]

**ಮದನಾಕ್ರಾಂತ** (ನಾ). ೧. ಕಾಮಬಾಧೆಗೆ ಒಳಪಟ್ಟವನು. ೨. ಬಕುಳ ವೃಕ್ಷಗಳಿಂದ ಆವೃತವಾದುದು. ೧, ೨ : ಅದು . . . ವಿರಹಿಜನದಂತೆ ವಿವಿಧಪಲ್ಲವಾನಿಲವೀಜ್ಯಮಾನಮುಂ ಮದನಾಕ್ರಾಂತಮುಂ . . . ಎಸೆವುದು (ಕಾದಂಪೂ. ೧೧೧). [ಸಂ.]

**ಮದನಾಗಮ** (ನಾ). = ಮದನಶಾಸ್ತ್ರ : ಚತುರರೋದಿಸಿದ ಮದನಾಗಮಂಗಳಂ ಪದಂಗುಟ್ಟಿ ಪರಮಪಂಡಿತಂಗಳೆನಿಪ ಪಂಜರದ ಪಂಡಿತಪಕ್ಕಿಗಳೊಳಂ (ಪುಷ್ಪ. ೨-೭೭ ವ) ; ದಿವ್ಯಾಂಗಿಯೆಂದೆನಿಪ ಸತ್ಕುವರಿ ಯವ್ವನದಿ ತಾ ಪಿಂಗದೆ ಮದನಾಗಮದನುಮಾವಾಗವೋದುತ್ತಿರಲು (ಪಪವೋ. ೯-೨೫). [ಸಂ.]

**ಮದನಾತುರ** (ನಾ). ಕಾಮದ ತೀವ್ರ ಅಭಿಲಾಷೆ ; ಕಾಮಾತುರ : ಮದನಾತುರ ಕೈಮಾಜಿದೊಡದೆಯೊಳೆ ಹದುಳಿಸಬೇಕಲ್ಲದಿಂತು ಇದಿರಿಗೆ ಕಾಣಿಪುದುಚಿತವೆ ರತ್ನಾಜಿ (ಕುರಾಸಂ. ೨೩-೯೩) : ಮೈ ಪುಳಕದಿಂದ ಪೊಣ್ಮೆ ಮದನಾತುರಂ ತಲೆದೋಜಿ. . . ಪೆಣ್ಮಾಂಚದಂಚಿದುಪ್ಪುಳ್ವಾಸಿಗೆಳೆದೊಯ್ದು ಳನಿಯನಂ ಬಲ್ಪಿನಿಂದೆ (ಕ್ಕಬಿಹಾ. ೧೦-೦೪). [ಸಂ.]

**ಮದನಾತುರೆ** (ನಾ). ಕಾಮೋದ್ರೇಕಗೊಂಡವಳು : ಕಾಮಾತುರೆ : ಮದನಾತುರೆಯಪ್ಪನ್ನೀ ಹೃದಯದ ರಾಗವನೆ ಪರ್ಚುಗೊಂಡಂತಿರೆ ಕೆಂಪೊದವಿದ ಪಡುವಣದೆಸೆಗೆಯ್ದಿದನರುಣರುಚಿಪ್ರಕಾಶನಪ್ಪ ದಿನೇಶಂ (ಕಾದಂಪೂ. ೬೦೬). [ಸಂ. ಮದನಾತುರಾ]

**ಮದನಾನಲ, ಮದನಾನಳ** (ನಾ). ಕಾಮದಿಂದ ಉಂಟಾದ ತಾಪ : ಕಾಮಾಗ್ನಿ : ಹೃದಯದೊಳಿರ್ದ ವಲ್ಲಭೆಯನೀಕ್ಷಿಸಲೆಂದೊಳಪೊಕ್ಕು ಮೆಯ್ಗೆ ಪರ್ಬಿದ ಮದನಾನಲಂಗಗಿದು ಭೋಂಕನೆ ಮೆಯ್ಗರೆದಿರ್ದವೆಂಬಿನಂ . . . ಅಡಂಗಿದುವು ಶರೀರದೊಳ್ ವಿರಹದಿಂದಖಿಳೇಂದ್ರಿಯಮಾ ಮುನೀಂದ್ರನಾ (ಕಾದಂಪೂ. ೬೨೪). **ಮದನಾನಳ** : ಮದನಾನಳನೇಟದೆ ಮಾಣದೆಂದು ಮನಮೆಂಬ ಮನೆಯ ಮೇಗಬ್ಜನೆತ್ತಿದ ಕೊಡಗಳಂತಿರೆಸೆದುವು ಸುದತಿಯ ಲಾವಣ್ಯಪರಿಪೂರ್ಣಕುಚಂಗಳ್ (ಲೀಲಾವ. ೭-೭೩). [ಸಂ.]

**ಮದನಾರಾತಿ** (ನಾ). ೧. ಮನ್ಮಥನ ವೈರಿ ; ಶಿವ : ಮದನಾರಾತಿಶಿರಶ್ರೀಪಾವಣೆಯುಂ ... ಯಜ್ಞನೆಯ್ದಿದನುತ್ತುಂಗತರಂಗೆಯುಂ ಶಫರಲೋಲಾಪಾಂಗೆಯುಂ ಗಂಗೆಯುಂ (ಶಂಶತಂ. ೮. ೦೬೭–೯೬೪). ೨. ಮನ್ಮಥನ ಶತ್ರು : ಜಿನ : ಮದನಾರಾತಿಯ ಮುನ್ನಿನುತ್ಸವಕೆ ಬರ್ಪಂದಲ್ಲಮಿಾಯೊಪ್ಪವಿಲ್ಲಿದು ಮತ್ತೊಂದು ಮದೇಭಶೋಭೆ . . . ಎಂಬಂತೆಸೆದುರ್ವಿಗೇಂ ಪಡೆದುದೋ ದೇವಾಗಮಂ ರಾಗಮಂ (ಕುಶ್ವಶು. ೦೪–೪೮). [ಸಂ.]

**ಮದನಾರಿ$_1$** (ನಾ). ಮದವುಳ್ಳ ಹೆಣ್ಣು ; ಸೊಕ್ಕಿದ ಹೆಣ್ಣು : ಮಗ ನಿನ್ನ ಪಾಲಾಕ ಪಾಂಗಿಲ ಮುಟ್ಟಿತ ಜೀವ ಮದನಾರಿ ನನ್ನ ಸೊಸಿ ಬಂದು ನಡಿವಾಗ ಮಗ ನಿನ್ನ ಮನವು ಎರಡಾಗಿ (ಕನ್ನಜಾ. ೦೦೨).

[ಸಂ. ಮದನಾರೀ]

**ಮದನಾರಿ$_2$** (ನಾ). ೧. =ಮದನಾರಾತಿ ೧ : ಆ ರಜತಗಿರಿಶಿಖರದೊಳ್ ಮದನಾರಿಯುಂ ಗೌರಿಯುಂಮುಂಚಿತಲೀಲಾರಚಿತಸುಖಸಂಕಥಾಪ್ರಿಯಕೌತುಕದೊಳಿರಲು (ಬಸಪು. ೦–೫೨) ; ಆರು ಕೊಟ್ಟರು ಶರವನಿವ ಮದನಾರಿಯೋ ನಿಮ್ಮಯ್ಯನಪ ಜಂಭಾರಿಯೋ (ಕುವ್ಯಾಷ್ಟ್ರೀ. ೨೪–೦೫); ಎಲ್ಲಿಗೊಯ್ದು ಪರ್ಣಸುರಥನ ತಲೆಯುಂ ಗರುಡಂ . . . ಕೊಂಡು ಬಾರೆಂಪಂ ಮದನಾರಿ ಬೆಸಸೆ (ಕೃಬಾಶಾ. ೦೪–೦೯). ೨. = ಮದನಾರಾತಿ ೨ : ಮದನಾರಿ ನಾಲ್ವೆರಲ್ ಮುಟ್ಟದೆ ಜಿನಪತಿವರ್ಧಮಾನಂ . . . ಒಪ್ಪುತ್ತಿರ್ದಂ (ವರ್ಧಪು. ೦೫–೦೦೨).

[ಸಂ.]

**ಮದನಾವತಾರ** (ನಾ). ೧. ಮನ್ಮಥನ ರೂಪು,—ಆಕಾರ : ಹಾರಂಗಳೊಳೆಸೆವೀ ಮಣಿಹಾರಂ ಮದನಾವತಾರಮೆನಿಸಿದ ನಿನ್ನಾಕಾರಕೆಣೆಯಕ್ಕುಂ (ಕಾರಂಉ. ೦೦೬). ೨. ಗೌರವಸೂಚಕವಾದ ಒಂದು ಬಗೆಯ ಛತ್ರಿ : ಮದನಾ[ಪಾಠಾಂ. ಮದನನ]ವತಾರವುಂ ಕನಕದಂಡಚಾಮರಮನ್ನ ದೇಭವಮನುತ್ತುಂಗದ ಛತ್ರಗಾವೆಯುಂ ಪಡೆದುದಾತ್ತಕವಿತಿಲಕನೆನಿಸಿದಂ ಕವಿರತ್ನಂ (ಅಜಪು. ೦೨–೫೦). [ಸಂ.]

**ಮದನಾವಸ್ಥೆ** (ನಾ). ಕಾಮಲಾಲಸೆಯಿಂದ ಉಂಟಾಗುವ ಸ್ಥಿತಿ ; ಕಾಮಾವಸ್ಥೆ ; ಮದನಾವಸ್ಥೆಯನೆಯ್ದಿ ತನ್ನ ನೃಪತಿ ಕಂಡಂ ಬಂದನೆಂದಾರುಮೆನ್ನವೆ (ಕುಸುಜಾ. ೯–೯೩); ಆ ತಾಪ್ರುತುಂಡಂ ಮದನಾವಸ್ಥೆಯಿಂದಂ ಮೂರ್ಛೆಪೋಗಿ ವ್ಯಾಪಾಜಿದೊಜಂಗಿರ್ಪ ತತ್ಕುಮಾರಿಯುಂ ಕಂಡು ನುಡಿದುದು (ಅದ್ವಪು. ೭–೭೮ ವ). [ ಸಂ. ಮದನಾವಸ್ಥಾ ]

**ಮದನಾವಾಸ** (ನಾ). ಮನ್ಮಥನ ನಿವಾಸ : ಇದೆ ಸಾರಂ ಸ್ವರ್ಗಲೋಕಕ್ಕೆ . . . ವಿಭವಕ್ಕಾಲಯಂ ಲೀಲೆಗುದ್ಯನ್ಮದನಾವಾಸಂ (ಶಾಂತಿಪು. ೭–೨೪).

[ಸಂ.]

**ಮದನಾವೇಶ** (ನಾ). ಉತ್ಕಟವಾದ ಭೋಗಾಸಕ್ತಿ ; ಕಾಮೋದ್ರೇಕ : ಇದಱೊಳ್ ಖೇಚರಕಿನ್ನರಾಮರಯುಗಂ ನಾನಾವಿನೋದಂಗಳಿಂ ಮದನಾವೇಶಕರಂಗಳಂ ಸಲಿಸುತುಂ . . . ತಳ್ತಿರೆ ಕಾಮರಾಗಮುಮಮಾಯ್ತೀನಿ ನಗಂ ರಮ್ಯಮೋ (ಅದಿಪು. ೯–೦೦೬). [ಸಂ.]

**ಮದನಾಸ್ತ್ರ** (ನಾ). ಕಾಮನ ಬಾಣ : ಮದನಾಸ್ತ್ರಂ [ಕ]ರ ಸಾಣೆಗಾಣಿಸಿದುದೆಂಬಂತಾಗೆ ನಿನ್ನೊಂದು ಕಂದಿದ ಮೆಯ್ಯೆನ್ನಯ ತೋಳೊಳೊಂದೆ ಸಿರಿಯುಂ ನೀನುಯ್ದು ತೊಟ್ಟಾ[ಳ್ದ] ರಾಗದಿನೆನ್ನೊಳ್ ಸುತವಿರ್ಪುದು (ಶಂಶಪಾ. ೦–೬೬) ; ಮದನಾಸ್ತ್ರಂ ನಿಜಮೂರ್ತಿ ಮೋಹನಶರಂ ಸೌಭಾಗ್ಯಸಂಪತ್ತಿ . . . ಆಗೆ ದಿಟಂ ದರ್ಪಕಪಾದದಿಂದೊಲಿಸಿದಂ ವಿದ್ಯಾಧರಸ್ತ್ರೀಯರಂ (ಪಾರ್ಶ್ವಪು. ೬–೨೭). [ಸಂ.]

**ಮದನಿ** (ನಾ). ೧. ಒಂದು ಬಗೆಯ ಮಲ್ಲಿಗೆಯ ಬಳ್ಳಿ, ಮತ್ತು ಅದರ ಹೂವು ; ದುಂಡುಮಲ್ಲಿಗೆ : "ದುಂಡುಮಲ್ಲಿಗೆಯು ಮದನಿಯುಕ್ಕುಂ" (ಶುಂಗಣ. ೩೮ ೨೪) ; ಮದನಿಯ ಹೊಸಮಾಲೆಗಳ ಮೆಳೆಗಳಿಂ . . . ಕಣ್ಗಿತಿಮಂಗಳಮಂ ಮಾಡುತ್ತಂ (ಅಶ್ವಕೆ. ೫–೨೨). ೨. ಇರವಂತಿಗೆ ; ಅತಿಮುಕ್ತ. ೩. ಒಂದು ಬಗೆಯ ಸುಗಂಧದ್ರವ್ಯ ; ಕಸ್ತೂರಿ.

[ ಸಂ. ಮದನೀ ]

**ಮದನಿಕೆ** 'ಮದನಕಯ್ದು' ನೋ.

**ಮದನ್ಕೆ** (ನಾ). ಒಂದು ಊರಿನ ಹೆಸರು : ಎಣ್ಬನೂಱಯ್ವತ್ತೊಮ್ಬತ್ತನೆಯ ವರಿಷದನ್ದು ಮದನ್ಕೆಯೊಳಿಜಿದು ಪರದೇವನು ಪೆರ್ಮ್ಮಡಿಯ ನೊಟಮ್ಬನು ಮೊಟಾಫ' ದಯೆಗೇದ XXX (ಎಕ. X (೩), ಶಂಶಾಸು. ೦೬೫–೫ ; 937). [ ? ]

**ಮದಪಟ್ಟಿಕೆ** (ನಾ). ಆನೆಯ ಗಂಡಸ್ಥಳದಿಂದ ಇಳಿಯುವ ಮದೋದಕದ ರೇಖೆ ; ಮದಲೇಖೆ : ಮಕರಾಂಕದ್ವಿಪಮದಪಟ್ಟಿಕೆಯೆನಿಸಿ ಕಪೋಲಮೂಲಮಂ ಮುಟ್ಟಿದುವಾ ಚಕಿತಾಕ್ಷಿಯ ಹರಿನೀಳಾಳಕಂಗಳ್ (ಶಂಶಾವಶ. ೩–೯೪). [ ಸಂ. ಮದಪಟ್ಟಿಕಾ ]

**ಮದಮನೆ** (ನಾ). (?) : ಶ್ರೀಪುರದಾ ಬಡಗಣ ಪಡುವಣ ಕೋಣಾರ್ಗ್ನೇವಂಗೇರಿ ಮದಮನೆ ಒಂದಂ (ಎಕ. VII (R). ಶಾಗಮುಂ. ೦೪೯–೬೯: 776).

[ ? ]

**ಮದಮುಖಿ** (ನಾ). ಸೊಕ್ಕಿನಿಂದ ಕೂಡಿರುವವನು : ಗರ್ವಿಷ್ಠ : "ಮದಮುಖರೆನಿಸೆ ದರ್ಪಮುಖರು" (ಶಾರಪ. ೨೪) : ಮದಮುಖನೆಡಬಲನ ನೋಡಿದರೆ ರಕ್ಕಸಕೋಟಿ ಜೀಯೆನುತ ಸಿಡಿಲ ಸೆಱೆ ಬಿಟ್ಟಂತೆ ಭುಜವನು ಹೊಡೆದು ಮುಂಚಿತು (ಕುವ್ಯಾಷ್ಟ್ರೀ. ೦೫–೪೭); ಕದಿರವಾನನು ಜಲಹುಖಾನರೆಂದೆಂಬ ಮದಮುಖಿಯಾಸರೇಜಾದರು (ಕುರಾಶಾಂ. ೨೦–೦೯). [ಸಂ.]

**ಮದರಂಗ** 'ಮದರಂಗಿ' ನೋ.

**ಮದರಂಗಬಾಳೆ** (ನಾ). ಕೆಂಪುಬಣ್ಣ ಹಾಗೂ ಸುವಾಸನೆಯಿಂದ ಕೂಡಿದ ಒಂದು ಬಗೆಯ ಬಾಳೆ : (೬).

[ ಮದರಂಗ (< ಮದರಂಗಿ) + ಬಾಳೆ$_1$ (< ಬಾಟ$^3$) ]

**ಮದರಂಗಿ, ಮದರಂಗ, ಮಧುರಂಗಿ** (ನಾ). ೧. ಒಂದು ಬಗೆಯ ಗಿಡ ಮತ್ತು ಅದರ ಎಲೆ : ಗೋರಂಟಿ : ಗೋರಂಟಿ, ಮದರಂಗಿ (ವ್ಯಾಶಿಗಿ. ೪೯–೯೪೪) ; ಮದರಂಗಿಬೀಜ ಒಂದುರೂಪಾಯಿ ತೂಕ (ಕಾಮುಶಾ. ೨೬೭); ಸುತ್ತುಮುತ್ತು ಮದರಂಗಿ, ನಡುವೆ ಮಾಧವಿಯ ಬಳ್ಳಿಮಾಡ (ಕವಿಃಳ. ೨೨–೯). ೨. ಹೆಣ್ಣುಮಕ್ಕಳು ಅಲಂಕಾರಕ್ಕಾಗಿ ಉಗುರು, ಕೈ ಮತ್ತು ಪಾದಗಳಿಗೆ ಹಚ್ಚಿಕೊಳ್ಳುವ ಗೋರಂಟಿಎಲೆಯ ಕೆಂಬಣ್ಣದ ರಸ ; ಮೆಹಂದಿ : ತುಟಿಯ ತಂಬುಲ ಉಗುರ ಮದರಂಗಿಯೋ (ಸಬೀಗೀ. ೯–೫೮) ; ಮದರಂಗಿ ಮುಂಗುರಿನಲಿ ಸಾರಂಗಿ ಬಾರಿಸುತ ಬೋರಂಗಿ ಚಿತ್ರಾಂಗಿ ಭೋರಿಡುತಿರೆ (ಭಾವಜ. ೦೭–೩೨೫). **ಮದರಂಗ** : ೩. ಕೆಂಪುಬಣ್ಣ : 'ಮದರಂಗ ಬಾಳೆ' ಪರಾ. **ಮಧುರಂಗಿ** : ೧. "ರುಧಿರೆಯೆನೆ ಮಧುರಂಗಿ" (ಮಂಗರಾ. ೩೫–೦೫) ; ಓಂಗದೆ ಕಡಲೆಯ ಹುಳಿ (ಮ)ಧುರಂಗಿಯ ಬಿತ್ತುಕ್ಕಿ ಗರ್ಚಿನೀವುದು ಸಿತದಿಂ ತೆಂಗಿಂಗಾ ಕ್ಷೀರವಿಷಕ್ಕಂ ಗಣಜಲೆ ವಜ್ರಿಯೆಸೆವ ಪಾಲಂ ಸಿತದಿಂ (ಐಮುವ. ೨–೯೭).

[ ← ತುಳು. ಮದರೆಂಗಿ, ಮದಿರೆಂಗಿ, ಮದ್ರೆಂಗಿ ]

**ಮದರದನಿ** (ನಾ). ಸೊಕ್ಕೇರಿದ ಆನೆ ; ಮದಗಜ : ಸಾರ್ಚಿದ ಮದರದನಿಗೆ ಹರಿ ನಿಲ್ಲದೆ ನಿಚ್ಚಟಗಲಿಗೆ ಪೆಸರ ಕಲಿ ನಿಂದಪನೇ (ಶಾಂತಿಪು. ೨–೧೦೪) ; ಮದರದನಿ ಕಂಭಮಂ ಕಿಟ್ತಿದಿರೆ ನೆಲಂ ಭೋರನೆಯ್ತರಲ್ (ನೇಮಿಪು. ೫–೦೨೦) ; ಸದಕಿವನು ಬಳಿಕಾತ ರಣಕೊದಗಿದ ಮಹಾರಥಮಂಡಳಿಯ ಮದರದನಿಗಳ ಮಾವುತರ ರಾವ್ತರ ಹಯದ ಕಾಲಾಳ (ಕೂರಣ. ೬–೪೩-೮). [ ಸಂ. ಮದರದನಿನ್ ]

**ಮದರಸ** (ನಾ). ಮದೋದಕ ; ಮದಜಲ : ಮದರಸವೊಕ್ಕುದಿಲ್ಲಿ ಕರಿ ಪೋಯುದು ಸಿಂಗದ ಬಟ್ಟೆ ನೋಳ್ಪೊಡಿಂತಿದು (ಶಂಶಂ. ೬–೪೬). [ಸಂ.]

**ಮದರಾಸ್‌ಮಲ್ಲಿಗೆ** (ನಾ). ಒಂದು ಬಗೆಯ ಸಸ್ಯ ಮತ್ತು ಅದರ ಹೂವು : ಇಬ್ಬನಿ ಪರಲೆ, ಇಟ್ಟೀವು, ಯಿಸಗ, ಮದರಾಸ್‌ಮಲ್ಲಿಗೆ (ಕ್ಕಾ ಶಿಗ. ೨೪-೪೦೬). [ ಮದರಾಸ್$_6$ + ಮಲ್ಲಿಗೆ ]

**ಮದರಿಕಲ್** (ನಾ). ಒಂದು ಊರಿನ ಹೆಸರು : ಶ್ರೀದೇವಿಗೆ ಮುತ್ತರಸರ ಮಗನು ಪೊಲೆಯಮ್ಮನ ಮದರಿಕಲ್ಲನಾಳುತ್ತುಮಪ್ ಬಿಸಮರಸರ ದೇಗುಲಕೆ ಕೊಟ್ಟ ಕೆಯ್ಯ ಪನ್ನಿರ್ಮ್ಮತ್ತು (ಎಕ. XI. ಹಳ್ಳಿ. ೪೪-೨೦; 815). [ ? + ಕಲ್$_3$ ]

**ಮದಲಗಿತ್ತಿ** 'ಮೊದಲಗಿತ್ತಿ' ನೋ.

**ಮದಲಿಂಗ** (ನಾ). ಮದುವೆಯ ಹುಡುಗ; ಮದುಮಗ : ಕೊಟ್ಟವಸು ಪಗ್ಗಮನಂದುಜೀ ಕಿಳ್ತುಕೊಂಡು ತಾಂ ಓಡಿ ಬಂದಿರ್ದು ಕೊಂದುದಾ ಗಾಡಿಕಾಜ ಮದಲಿಂಗನಂ (ಹಾಲಾಸ್ಯ. ೨-೯-೩೩) ; ಮದಲಿಂಗನೇ ಬ್ಯಾಡ ಅಂದ್ರೆ ಮದುವೆ ಯಾರಿಗೆ ಮಾಡಲಿ ? (ಜಂಪಕೋ. ೦೬೬).

[< ಮದುವಳಿಗ]

**ಮದಲಿಂಗಿ** (ಸ್ತ್ರೀ). ಮದುವೆಯ ಹುಡುಗಿ : ಮದುಮಗಳು : ನನ್ನ ಮುದ್ದುಗೌರೀ . . . ಓ ನನ್ನ ಮುದ್ದು ಮದಲಿಂಗೀ (ಜಂಗಮ. ೩೬).

[ಮದಲಿಂಗ + — ಇ$_2$]

**ಮದಲೂರ್** (ನಾ). ಒಂದು ಊರಿನ ಹೆಸರು : ಕಕ್ಕರ ಮದಲೂರೆಡೆಯದು ತೊಱುಗೊಳ್ಗೊಡೆ ತಿಙ್ಗಣಮಾರ ಶ್ರೀಪೋಲ ತಿಙ್ಗಣಿಯೂರುಳ್ಳಗ . . . ಪಲರನೆಱದು ಸಗಪೋಲದನ್ (ಎಕ. X. ಚಿಕ್ಕಬ. ೩೨-೩; ಸು. 870 ?) ; ರಾಮಚನ್ದ್ರಫಳಾರಗ್ಗೆ ಮದಲೂರು ಮಳಗವಾಡಿಯುಮಂ ... ಕೊಟ್ಟರ್ (ಎಕ. XI. ಚಿತ್ರದು. ೬೪-೨೪; 968) ; ಸ್ವಸ್ತಿಶ್ರೀಮನು ಗಗ್ಗರೊಕ್ಕಲಾ ಮದಲೂರ ಕುಪ್ಪನ್ತೊಱುಗೊಳೊಳ್ ಬಿದು ಸತ್ತು ಸಗ್ಗ ಆದನ್ದಪಕ್ಕೆ ಮೂಱೂವ್ಮ್ಮ ಕಱನಿ ಪರಿಹಾರ ಕೊಟ್ಟರ್ (ಎಕ. X. ಕೋಲಾರ. ೦೮೨-೩ : ಸು. 1000 ?). [ಮದಲ್ ? + ಊರ್]

**ಮದಲೇಖೆ** (ನಾ). ೧. ಆನೆಯ ಕಪೋಲದ ಮೇಲೆ ಮದೋದಕವು ಹರಿದುದರಿಂದಾದ ಗೆರೆ, — ಪಟ್ಟೆ : ಮದಲೇಖೆಗೆ ಸದೃಶಂ ಮೃಗ ಮದತಿಳಕಂ ಕರಿಕರಕ್ಕೆ ಸರಿ ಕರಂ (ಶಾಕ್ರೇಶ. ೬-೪೦). ೨. ಕಸ್ತೂರಿ ಮುಂತಾದ ಸುಗಂಧದ್ರವ್ಯಗಳಿಂದ ಹೆಂಗಸರು ತಮ್ಮ ದೇಹದ ಮೇಲೆ ಬರೆದುಕೊಳ್ಳುವ ಚಿತ್ರ ; ಪತ್ರಭಂಗ; ಮಕರಿಕೆ : ಅಭಿನವ ಮದಲೇಖಾಲಾಲಿತಂ . . . ಪ್ರಸ್ಫುರದ್ಭೂರ್ಜಪಾರಿಪ್ರಭವಪಸೆದುದಂತಾ ಕಾಂತೆಗಾ ಕಾಂತಸಂಗಂ (ಜಂಪಾ. ೩-೨೬). [ಸಂ. ಮದಲೇಖಾ]

**ಮದಲೋಲ** (ಗು). ಮತ್ತು ಬರಿಸುವಂತೆ ಚಂಚಲವಾದ : ಮದನ ಮಿದಲ್ತಂಬುರುಹಂ ಮದಲೋಲವಿಲೋಚನಂಗಳಲ್ಲಮಿಪಳಿಗಳ್ (ಕಬಿರಾ. ೪-೨೯). [ಸಂ.]

**ಮದವ** 'ಮದೆವ' ನೋ.

**ಮದವಟ್ಟಿಗೆ** (ನಾ). ಜಡೆಗಟ್ಟಿದ ತಲೆಗೂದಲು : " ಮದವಟ್ಟಿಗೆದು ಕಡ್ಡಣಾ ಎನೆ ತಾನೆ ಜಡೆಗಟ್ಟು " (ಕಲ್ಕಿ. ೪೨). [ ? ]

**ಮದವಟ್ಟೆ** (ನಾ). ೧. = ಮದಲೇಖೆ ೧ : ಕಾರ ತಂದಲ್ತೊಲಲ್ಲುಗು ವೆಂಟುಂ ಮದವಟ್ಟೆ[ಪಾಠಾಂ. ವರ್ಕೆ]ಯಿಂ ... ಏಂ ಜನಕಂಗೆ ಹರ್ಷಜನಕಂ ತಾನಾಯ್ತೊ ಮಸ್ತದ್ವಿಪಂ (ಜಂಗಾಚಾ. ೪-೦೦೯). ೨. = ಮದಲೇಖೆ ೨ : ಪರಿಚೆಯೊಳ್ಪರಿಚಯಿಸಿದ ಮದವಟ್ಟೆಯುಂ ಮದವಟ್ಟೆಯೊಳೊಡಂ ಬಟ್ಟ ವಿಪುಳಕಪೋಳತಳಲಿಖಿತವಿಚಿತ್ರಪತ್ರಲೇಖೆಯುಂ (ಅದಿಪು. ೪-೪೦ ವ); ಆಕೆಯ ಕಪೋಲದೊಳಾ [ನ]ವಧೂಮಲೇಖೆ . . . ಕತ್ತುರಿಯೊಳ್ ಮದ ವಟ್ಟೆಯುಂ ಪಿಸಾಸದೆ ತೆಗೆವಂತೆ ಬಗ್ಗಿಸಿದ ತೋಱದುದಾ ಕದನತ್ರಿಣೇತ್ರನಾ (ಜಂಕಾ. ೩-೩೩). [ಮದ + ಪಟ್ಟೆ$_3$]

**ಮದವಟ್ಟೆದೆಗೆ** (ಕ್ರಿ). ಕೆನ್ನೆಯ ಮೇಲೆ ಕಸ್ತೂರಿ ಮುಂತಾದ ಸುಗಂಧ ದ್ರವ್ಯಗಳಿಂದ ಚಿತ್ರವನ್ನು ಬರೆ. —ಮಕರಿಕಾಪತ್ರವನ್ನು ರಚಿಸು : ಪರಿಚೆಯನೊಗ್ಗುಡಿಸುವ ಕತ್ತುರಿಯಿಂ ಮದವಟ್ಟೆ[ಟ್ಟೆ]ದೆಗೆವ ಜೊಟ್ಟ ಡುವ ಕುಚಾಂತರದೊಳ್ ಹಾರಮನೆಳಸುವ [ಮು]ರವಿಂ ಸ್ವಾಧೀನಪತಿ ಕರಂ ಬಗೆಗೊಂಡಳ್ (ಪರ್ವತಾ. ೬-೬೩); ಮದವಟ್ಟ[ಟ್ಟೆ]ದೆಗೆದಿಟ್ಟ ಕತ್ತುರಿಯ ಚೆಲ್ವ ಕೊರಲೊಳಿಕ್ಕಿದ ಕರಿಯ ದಂಡೆಯೊಳೆರಡೆಡೆ ಬರೆ ಮುಡಿದ ಮಲ್ಲಿಗೆಯ ಪರಿಮಳಕ್ಕಮಡಸಿದ ಕಪ್ಪುರದ ಪಪ್ಪುಕಕ್ಕಂ ಮಱದುಂಬಿವಿಂಡು ಮುಂದೆ ಮಂಡಳಿಸಿ ಕಟ್ಟ ಬರೆ (ಅಜಿಪು. ೨-೨೯ ವ). [ಮದವಟ್ಟೆ + ತೆಗೆ$_1$]

**ಮದವಡಿ** (ನಾ). ಒಂದು ಜಲಾಶಯದ ಹೆಸರು : ಮದವಡಿತಟಾಕಸ್ಯ ದಕ್ಷಿಣಭಾಗ ತತ ಕೊಮರತಟಾಕಸ್ಯ ದಕ್ಷಿಣಭಾಗ (ಮೈ ಅಂ. ೦೯೪೨, ೬೩-೦೦೯ ; 819). [ ? ]

**ಮದವಡೆ** (ಕ್ರಿ). ಸೊಕ್ಕೇರು ; ಮದವೇರು : ಆಬಿಳವ್ಯಾಗ ಮದವಡೆದ ಪಂಚೆಗಳಂಚರವ ಬೀಜಿದವು ಕೊಳಗಳಲಿ (ತೊರವೆ. ೪-೬-೧೦). [ ಮದ + ಪಡೆ$_1$ ]

**ಮದವಣಿಗ** 'ಮದುವಳಿಗ' ನೋ.

**ಮದವಣಿಗತನ** 'ಮದುವಣಿಗತನ' ನೋ.

**ಮದವಣಗಿತ್ತಿ** 'ಮದುವಳಿಗಿತ್ತಿ' ನೋ.

**ಮದವಣಿಗೆ** 'ಮದುವಳಿಗೆ' ನೋ.

**ಮದವಸಲೆ** 'ಮಡಿವಸಲೆ' ನೋ.

**ಮದವಳ್** 'ಮದೆವಳ್' ನೋ.

**ಮದವಳಗಿತ್ತಿ** 'ಮದುವಳಗಿತ್ತಿ' ನೋ.

**ಮದವಳಿಕೆ** 'ಮಡವಳಿಗೆ' ನೋ.

**ಮದವಳಿಗ** 'ಮದುವಳಿಗ' ನೋ.

**ಮದವಳಿಗೆ** 'ಮದುವಳಿಗೆ' ನೋ.

**ಮದವಳಿಗೆಕಲು** (ನಾ). ಮಹಾಸತಿಕಲ್ಲು ; ಮಾಸ್ತಿಕಲ್ಲು : ಗಲುಡ ಮಾಡಿಸಿದ ಮದವಳಿಗೆಕಲು (ಮೈ ಅಂ. ೦೯೨೬, ೬೮-೦೪ ;1399). [ ಮದವಳಿಗೆ ( < ಮದುವಳಿಗೆ ) + ಕಲು$_1$ ( < ಕಲ್$_3$ ) ]

**ಮದವಾದಿ** (ನಾ). ಸೊಕ್ಕಿನಿಂದ ವಾದ ಮಾಡುವವನು ; ಪಾಖಂಡಿ : ಇದ(ದಾ)ನಟಿದೊನ್ ಪಾರ್ಶ್ವನಕ್ಕೆ ಮದವಾದಿ ಅಕ್ಕೆ ಬಾರಣ(ಣಾ)ಸಿವದ ಸಾಸಿರಕವಿಲೆಯಂ ಕೊನ್ದೊನಕ್ಕು (ಎಕ. X. ೦೬೬-೬ ; 17 ಶತಮಾನ). [ಸಂ. ಮದವಾದಿನ್ ]

**ಮದವಾರಣ** (ನಾ). ೧. = ಮದರದನಿ : ಗೈರಿಕರಸಾರ್ದ್ರಮಂ ಸಿಂಧೂರದ ತಲೆವ[ಜೆ]ಮದಂ ಕರಂ ಕಂಡಾಂ ಸಂಧ್ಯಾರಾಗದೊಳಱಯದೆ ಮದವಾರಣಮಂ ಸೋಂಕಿ ಕೆಲದೊಳೊಯ್ಯನೆ ಪೋದಂ (ಕಬಿರಾ. ೪-೯೨) ; ಎನಿತು ಮದವಾರಣಾ ಕ್ರೋಧಿನಿ ಪೊಕ್ಕುಂ ಸಿಂಹಪೋತಮಂ ಗೆಲ್ವುದೆ (ಶಾಂತಿಪು. ೪-೩೦) ; ವೀರರಿಪುಕದಳೀವನಕೆ ಮದವಾರಣನು ಫಲುಗುಣತನ ಯನುದಾರಪದ್ಮವ್ಯೂಹದಲಿ ಗೆಲಿದನು ಕುಮಾರಕರ (ಕುಮಾ ದ್ರೋ. ೫ ಕೊತಕ). ೨. ಸೊಕ್ಕನ್ನು ಇಳಿಸುವವನು ; ಗರ್ವಭಂಗಮಾಡುವವನು : ಅನ್ಯ ನರೇಂದ್ರಗಂಧವಾರಣಮದವಾರಣಂ ವಿಜಯಕಾರಣನಮ್ಮನ ಗಂಧವಾರಣಂ (ಗದಾಯು. ೦-೦೬). ೩. ಪ್ರೀತಿಯಿಂದ ಚಿಕ್ಕವರನ್ನೂ ಅಪ್ತರನ್ನೂ ಕುರಿತು ಸಂಬೋಧಿಸುವ ಒಂದು ಪದ : ಗುಣವಹುದು ನಿನಗಿಂದು ಕಾಲದಿನವಣಿಯ ದೀಕ್ಷಿತನಾಗು ಮದವಾರಣನೆ ದೀಕ್ಷಿತನಾಗು (ಕುಮಾ ಸ. ೬-೨೬) ; ಅಣಕಿಗನ ತೆಗೆದಪ್ಪಿ ಮದವಾರಣನೆ ಕುಳ್ಳಿರೆನುತ್ತ ನೋಡಿದಳು ಸಹೋದರನ (ಕುಮಾ ವಿ. ೨-೪೦). [ಸಂ.]

**ಮದವಾರಿ** (ನಾ). = ಮದರಸ : ಕರೀಂದ್ರಸಂಕುಳಮದವಾರಿಧಾರೆಗಳ ಪೆರ್ಮಟಿಯೊಳ್ ರಣಮೆಂಬ ರಾತ್ರಿಯೊಳ್ ಸಲೆ ಬರುತಿರ್ಪಳೆಂದುಮಭಿ ಸಾರಿಕೆಯುಂದದೆ ರಾಜ್ಯಲಕ್ಷ್ಮಿ ತನ್ನೊಲವಿನೊಳ್ (ಕಾವಂಪು. ೦೪). [ಸಂ.]

**ಮದವಿ** (ನಾ). ಒಂದು ಬಗೆಯ ಬೆಲೆಬಾಳುವ ರೇಷ್ಮೆಬಟ್ಟೆ : ಪಸರಿ ಗಬ್ಬುಳ ನೀಲಿಗಂಧ ಸಂಧ್ಯಾರಾಗ ಕುಸುಮಿ ಯಾವಂಚಿ ದೋರಿಯ ನಾಗ ಪಟ್ಟೆ ಪುಲ್ಲಿ ಸುವರ್ಣಪಟ ಮದವಿ ಮಂಜಿಷ್ಠೆ ದೇವಾಂಗಮೆಂದು ಪಟಭೇದ ಮಕ್ಕುಂ (ಬಸಂಗಲಾ. ೦೦೦-೨೪). [ ← ಮರಾ. ಮದವೀ ]

**ಮದವಿಕಳ** (ನಾ). ಸೊಕ್ಕಿನಿಂದ ಅರಿವುಗೆಟ್ಟವನು ; ಮದಾಂಧ : 'ಮದವಿಕಳತನ' ಪರಾ. [ಸಂ. ಮದವಿಕಲ]

**ಮದವಿಕಳತನ** (ನಾ). ಸೊಕ್ಕಿನಿಂದ ಅರಿವುಗೆಡುವುದು : ಪಮಮನಾಥನೆ ತಾನಲಾ ಹರಹರ ಮಹಾದೇವ ಉದಿಸಿದನು ನರನಾಗಿ ತಾನೀ ಹದನನರಿ ಯದೆ ತಪ್ಪಿದೆನಲಾ ಮದವಿಕಳತನದಿಂದ ಕೆಟ್ಟೆನು (ಶಭಾಗ. ೩-೬-೦೬).
[ಮದವಿಕಳ + — ತನ]

**ಮದವಿಕಾರ** (ನಾ). ಮದ್ಯಸೇವನೆಯಿಂದುಂಟಾಗುವ ಅಮಲು. — ಮತ್ತು : ಪಿಷ್ಟೋದಕಗುಡಧಾತಕೀಸಂಯೋಗದಿಂದಮೆಂತು ಮದ ವಿಕಾರಮೆಸೆದಪ್ಪುದಂತೆ ಕಾಯಾಕಾರಪರಿಣತಪೃಥ್ವ್ಯಪ್ತೇಜೋವಾಯು ಗಳತ್ತಣಿಂ ಬಂದು ಗರ್ಭಾದಿಮರಣಪರ್ಯಂತಂ ತದಾತ್ಮಕಂ ಚೈತನ್ಯಂ ಪುಟ್ಟುಗುಂ (ಅಂತ್ಯ. ೨-೯ ವ). [ಸಂ.]

**ಮದವಿರಹಿತ** (ನಾ). ೧. ಮದಜಲವಿಲ್ಲದಿರುವ ಆನೆ. ೨. ಗರ್ವ ವಿಲ್ಲದಿರುವವನು. ೧, ೨ : ಮದವಿರಹಿತನೆನಿಸಿಯುಮುದಾತ್ತದಾನಿ (ಶಾಂತಿಪು. ೦-೭೦). [ಸಂ.]

**ಮದವಿಹ್ವಳಿತ** (ನಾ). ಸೊಕ್ಕಿನಿಂದ ಉದ್ವಿಗ್ನವಾದುದು ; ಅಮಲೇರಿ ಉನ್ಮತ್ತವಾದುದು: ಅರಸಂ . . . ಆನೆಯನೇಱಿ ಅಡವಿಗೆ ಪೋದೊಡದು ಮದವಿಹ್ವಳಿತನಾಗಿ ಮೆಯ್ಯಱಿಯದೆ ದಿಶಾಪಟ್ಟಂಗೊಂಡೊಂದೆಸೆಗೆ ಕೊಂಡೋಡಿ . . . ಪರಿಯೆ (ವಡ್ಡಾರಾ. ೦೦೦-೦೩). [ಸಂ. ಮದವಿಹ್ವಲಿತ]

**ಮದವೆ** (ನಾ). (?) : ಇ ಠಾಣಾನ್ತರದ ಸೀಮೆಯ ಮದವೆ ಪತ್ತ ಕೊಸ್ಟಱ ಸುಂಕವ ಬಿಟ್ಟರು (ಕಇ. IV, ೩೪-೨೩ : 1100). [ ? ]

**ಮದವೆಳಸು** (ಕ್ರಿ). ಸೊಕ್ಕೇರು ; ಮದೋನ್ಮತ್ತವಾಗು : ಇಪ್ಪತ್ತು ಸಾಸಿರ ಪಾಯ್ದಳ ಮದವೆಳಸಿದ ಕರಿಗಳೈವತ್ತು ಸಲೆ ಕುದುರೆಗಳ ಮೇಳದೆ ರುದ್ರಗಣಭೂಪ ತಳುವದೆ ಬಂದನು (ಕಂಪಾ. ೩-೨೪).
[ ಮದ + ಬೆಳಸು$_1$ (< ಬೆಳೆಯಿಸು) ]

**ಮದವೆಱು** (ಕ್ರಿ). ಮದವನ್ನು ಹೊಂದು ; ಸೊಕ್ಕು : ಸ್ವೇಚ್ಛಾನು ರೋಧೋನ್ಮತ್ತ ಮದವೆತ್ತಾನೆಯಂತನಿವಾರಿತೋದ್ದತಪ್ರವೃತ್ತಿಯಲಿ ಕೊರ್ಬಿ (ಧಕಪು. ೪೦-೬). [ಮದ + ಪೆಱು$_1$]

**ಮದವೇತಂಡ** (ನಾ). = ಮದರದನಿ : ಅಕ್ಷೋಹಿಣೀನಾಯಕಂ . . . ಮದಗಳಿತ ಗಂಡಪ್ರಚಂಡಮದವೇತಂಡಮನಡೆದು ಬಿಟ್ಟಿಕ್ಕಿದಾಗಳ್ (ಕಂಕಥಾ. ೧೨-೫೬ ವ) ; ಕಂಡಡೆದು ನೂಂಕಿ ಮದವೇತಂಡಮಂ . . . ಗೆಲ್ಲಂಗೊಂಡಂ ಬಗೆಗೊಳ್ವ ತೆಱದೆ ವಿಜಯಾಂಗನೆಯಂ (ಶಾಂತಿಪು. ೩-೩೩). [ಸಂ.]

**ಮದವೇರು** ' ಮದವೇಱು ' ನೋ.

**ಮದವೇಱಿಸು** (ಕ್ರಿ). ಸೊಕ್ಕಿಗೇಳುವಂತೆ ಮಾಡು : ಪರನ ಮನೋರಥಮಂ ಮದವೇಱಿಪಂತೆ ಪಾರ್ವತಿಗೆ ಸುವಾಸಿನಿಯರ್ ಸಿಂಗರವಂ ಮಾಡಿ (ಗಿರಿಜಾ. ೦೦-೯೩ ವ). [ಮದವೇಱು + — ಇಸು]

**ಮದವೇಱು**, ಮದವೇರು (ಕ್ರಿ). ೧. ಬೀಗು ; ಹೆಮ್ಮೆಪಡು : ಎನಗೆ ಜಗತ್ರಯಿಜಯಶರಾವಳಿಗೀ ವಿಟಪೀತ್ರಯಿಪ್ರಸೂನನಿಕರವಾದುವೆಂದು ಮದನಂ ಮನದೊಳ್ ಮದವೇಱಿ ಪೇಱಿದತ್ತನುಪಮಸೌರಭಂ . . . ಕುರವಕಂ ತಿಲಕಂ ವಕುಲಂ ನಿರಾಕುಲಂ (ತಂದ್ರಪು. ೭-೩೩) ; ತನಿಮದವೇಱಿ ನಿಮ್ಮಲ್ಲಿ ಸೆಣಸಿದೆನು ಸೇನಾಧಿಪತ್ಯದಲಿ (ಕುಮಾರಾ. ೮-೨೪). ೨. ಉಕ್ಕು ; ಉಬ್ಬರತೋಱು : ಮದವೇಱಿದಂಬುಧಿಯ ಸಲಿಲ ದುಬ್ಬರಕೆನಬರೆ್ವಾರನಳರು ಹೇಳಾ ಹಾಯೆ (ಕುಮಾರಾ. ೩-೬-೩೦).

**ಮದವೇರು** : ೩. ಮತ್ತಿನಿಂದ ಕೂಡಿರು ; ಅಮಲೇರು : ಹೂವಿನ ಬಂಡುಂಡು ಮದವೇರಿದಳಿವಿಂಡು ಮೊರೆಯುವ ನಾದವಿದೆಲ್ಲ (ಬಂಣಾಕ. ೦೪೪-೯). [ ಮದ + ಏಱು$_1$ (< ಏಱು$_1$) ]

**ಮದಸಿಂಧುರ** (ನಾ). = ಮದರದನಿ : ಪರುಜದಲಿ ಹೊಕ್ಕಿರಡುಸಾವಿರ ತುರಗ ಬಿದ್ದವು ನೂಱುಮದಸಿಂಧುರಕೆ ಗುಧನವಾಯ್ತು (ಕುಮಾ. ಗ.೨-೩೩) ; ಅದೊಂದು ನೀಲಪರ್ವತಂ . . . ಸಿಂಧೂರವಿಲಿಪ್ತ ಮದಸಿಂಧುರಗಂಡ ಮಂಡಲದೊಂದು ಪಾಂಗಿನಿಂ ತೋರ್ಪ ತಟ್ಟಲಿಂ . . . ಮನೋಜ್ಞಂ (ರಾಜಶ್ಯ. ೭೨-೩೦). [ಸಂ.]

**ಮದಸ್ಖಲಿತ** (ನಾ). [ನಾಟ್ಯ] ನೂರೆಂಟು ಕರಣಗಳಲ್ಲಿ ಒಂದು : P "ಕಾಲುಗಳನ್ನು ಸ್ವಸ್ತಿಕವಂತಿರಿಸಿ, ಸ್ವಸ್ತಿಕವನ್ನು ಬಿಡಿಸಿ ಕ್ರಮ ವಾಗಿ ಪ್ರಸರಿಸುತ್ತ, ಕೈಗಳಿಂದ ದೋಲಹಸ್ತವನ್ನು ಮಾಡಿ, ತಲೆಯನ್ನು ಪರಿವಾಹಿತದಿಂದ ಸುತ್ತಿಸುವುದು" (ಚಾಸ್ಕರಂ. ೩೦೩ ಗದ್ಯಸೂಚನ) : ಚರಣಂ ಸ್ವಸ್ತಿಕವಂ ಪಡೆದಿರದೆ ಕ್ರಮದಿಂದೆ ಪಸರಿಸುತ್ತಿರೆ ಹುತ್ತಂ ಕರಂಗಳೆರಡುಂ ಡೋಲದೆ ಪರಿವಾಹಿತ ಶಿರದೆ ಕೇಳ್ ಮದ ಸ್ಖಲಿತಾಖ್ಯಂ (ಚಾಸ್ಕರಂ. ೪-೩೩೪). [ಸಂ.]

**ಮದಸ್ಥಾನ** (ನಾ). ಅಮಲುಬರುವ ಸ್ಥಳ : ಹೆಂಡದಂಗಡಿ : ಪಡ ಬಾನೆ : "ಶುಂಡಾ, ಪಾನಂ, ಮದಸ್ಥಾನಂ... ಇ ಮದ್ಯಪಾನ ಮಾಡುವ ಮನೆಯ ಪೆಸರು, ಗಿತ್ತಂಗಡಿ" (ಸಾಕಾಂಡ. ೩೦೪). [ಸಂ.]

**ಮದಹಸ್ತಿ** (ನಾ). = ಮದರದನಿ : ಮದಹಸ್ತಿಯಱವ ಛಾಯಂಗಳ . . . ಜೇಡನಾಯಕರು ನೆರೆದರು (ಹಕಥಾ. ೩-೩) ; ಮದಹಸ್ತಿಬಲಯುತಂ ಹಸ್ತದಿಂ ಮಸ್ತಕದಿಸಂತೆ ಪದಗದೆಯಿಂದೆ ತಳ್ಳಿದನ್ (ಶ್ರೀರಾಮಪಾ. ೨೯೧-೯೦).
[ಸಂ. ಮದಹಸ್ತಿನ್]

**ಮದಾಂಧ** (ಗು). ೧. ಮದದಿಂದ ಕುರುಡಾದ; ಮತ್ತಿನಿಂದ ಮುಂದು ಗಾಣದ : ಕುರುಜಾಳನಂದನಂ ಪವನನಂದನನೆಂಬ ಮದಾಂಧಗಂಧ ಸಿಂಧುರವು ಕಱುತ್ತು ಪಾಯೆ ಪಡಲಿಟ್ಟವೊಲಾದುದು (ಪಂಪಭಾ. ೦೩-೦೨) ; ಅರಸಂ . . . ಮದಾಂಧಸಿಂಧುರಮನೇಱು ಚತುರಂಗಬಲಮನೊಂದು ಮಾಡಿಕೊಂಡು ನಿಂದು (ಶಂತಕಾ. ೨೩೩-೮). (ನಾ). ೨. ಗರ್ವದಿಂದ ವಿವೇಕವನ್ನು ಕಳೆದುಕೊಂಡವನು : ದರ್ಪಾಂಧರುಂ ಮದಾಂಧರುಂ ಧರ್ಮಾ ನುಗನಲ್ಲಂ (ಕಂಪಾಪಾ. ೦೦-೦೭೦) ; ಈ ಮದಾಂಧನನೊಯ್ದು ಕೆಡಹುವ ಭೂಮಿಪತಿಯೆಂತ್ರಿಯಲಿ (ಕುಮಾ. ೮-೨೨-೩೪). [ಸಂ.]

**ಮದಾಂಧಕ** (ನಾ). = ಮದಾಂಧ ೨ : ಅಱಿದಱಿದುಂ ಮತಿಭ್ರಮಿತನಾದ ಮದಾಂಧಕನಾನೆ ಕಂಡುಕಂಡೆಱಗದ ಖೂಳನಾನೆ ಕುಱುವಾನಿಸನಾನೆ (ಕಬಿಶಿ. ೩-೦೯). [ಸಂ.]

**ಮದಾಂಧತೆ** (ನಾ). ಸೊಕ್ಕಿನಿಂದ ಉಂಟಾದ ಅವಿವೇಕ : ಕರಿ ಕೇಸರಿಯುಂ ಕೆಣಕಿದ ಪರಿಯುಂ ಪರುಟವಿಸದಿರ್ ಮದಾಂಧತೆಯಿಂದೆ (ಕಬಿಶಿ. ೪-೨೯).
[ಸಂ. ಮದಾಂಧತಾ]

**ಮದಾತ್ಯಯ** (ನಾ). ಮದ್ಯಪಾನದಿಂದುಂಟಾಗುವ ಒಂದು ಬಗೆಯ ರೋಗ : ಮದಾತ್ಯಯವೆಂಬ ರೋಗವು ದೋಷತ್ರಯದಿಂದಲೂ, ರಕ್ತದ ಹೆಚ್ಚುಗೆಯಿಂದಲೂ, ಮದ್ಯಪಾನದಿಂದಲೂ, ವಿಷಪ್ರಯೋಗದಿಂದಲೂ ಉಂಟಾಗಿಕ್ಕುಂ (ಶಕ್ಯ. ೨೬೦). [ಸಂ.]

**ಮದಾನೇಕಪ** (ನಾ). = ಮದರದನಿ : ಆ ಕಾನನಮಂ ಪುಗುತಂದು ಮದಾನೇಕಪದೊಂದು ಪಿರಿಯ ಕಡುಪಂ ಕಂಡಂ (ಶಂಪಾಪಾ. ೦೦-೦೩೬). [ಸಂ.]

**ಮದಾವ್ಮ** (ನಾ). ಒಬ್ಬಾತನ ಹೆಸರು : ಇದಾ [ಪ]ಡದೊರ್ . . . ಕೊಡಲ್ವೆಟ್ಟಿಯರಾ ಮದಾವ್ಮನ್ ವಿಜ[ಸೆ]ಟ್ಟಿಗರಾ ಧರ್ಮ್ಮನಾಯಗನ್ (ಎಇ. IX, ೨೩-೦೨ ; ಕು. ೮೦೦). [ ಮದ$_1$ + ಅವ್ಮ$_1$ ]

**ಮದಾಲಸ** (ಗು). ೧. ಮಾದಕವಸ್ತು ಸೇವನೆಯಿಂದ ಜಡವಾದ. ೨. (ಯೌವನದ) ಸೊಕ್ಕಿನಿಂದ ಜಡವಾದ, -ಮಂದವಾದ : ಅಮಿತಮದಾಲಸಾಂಗಜಮತಂಗಜಮೋ ನಡೆಗೊಂಡನಂಗ ಜಂಗಮಲತೆಯೋ . . . ಕಾಂತೆ ಬಸಂತಕಾಂತೆಯೋ (ಶಾಂತಿಪು. ೩-೧೯) ; ಮಿಾಂಗಳ ನೊರ್ಮೆ ಕೈರವಮನೊರ್ಮೆ ಚಕೋರಮನೊರ್ಮೆ . . . ಬಾಲೆಯ ಮದಾಲಸಮುಗ್ಧವಿಶಾಲಸಸ್ಮಿತಾಪಾಂಗಮುಗುಟ್ಟುವು (ಮಲ್ಲಿ ೬-೭೦). (ನಾ). ೩. [ನಾಟ್ಯ] ಮೂವತ್ತೈದು ದೇಶೀಯಭೌಮ ಚಾರಿಗಳಲ್ಲಿ ಒಂದು ; "P ಕಾಲುಗಳನ್ನು ಒಂದೇ ಕಡೆ ಸ್ಥಿರವಾಗಿಡದೆ ಮತ್ತನಂತೆ ಚಲಿಸುವುದು" (ಲಾಸ್ಯರಂ. ೩೨೨ ಗದ್ಯಾನುವಾದ) : ಎರಡು ಪದಂಗಳ್ ನಿಲ್ಲದೆ ಕರ ಮದಿಸಿದನಂತಿರಲ್ ಮದಾಲಸನಾಮಂ (ಲಾಸ್ಯರಂ. ೬-೭೬). [ಸಂ.]

**ಮದಾಳಿ** (ನಾ). (ಮಕರಂದ ಪಾನದಿಂದ) ಕೊಬ್ಬಿದ ತುಂಬಿ : ಸೋರ್ವ ಸೊನೆಯುಂ ಸರಿಯೆಂದು ಮದಾಳಿಮಾಳೆಯುಂ ಕಾರ್ಮುಗಿಲೆಂದು . . . ಮಯೂರಕೋಟಿಗಳ್ ಕಾರ್ಮುಕಮೆಂದು ನರ್ತಿಸುವುವು (ಸುಕುಮಾ. ೧೦-೩೮). [ಸಂ. ಮದಾಲಿ]

**ಮದಿಕ** ' ಮದ್ದಿಕ ' ನೋ.

**ಮದಿಪು** (ನಾ). ೧. ಗೌರವ ; ಮರ್ಯಾದೆ : ಸ್ಥಾನಸ್ಥಾನದಿ ನಮಗೆ ಮದಿಪು ಮಾನ ಕೊಟ್ಟರು ಚೌಟರು (ಕಬಿತೆ. ೧೮-೦೩). ೨. ಬೆಲೆ ; ಕಿಮ್ಮತ್ತು : ನಾಡಗೊಡೆಯನು ಚಂದ್ರನಾಥನು ಬೀಡುಮದಿಪನು ಇಡುವನು (ಕಬಿತೆ. ೨೦-೩೮). [ದೇ. II ತಮಿ. ಮಲ. ಮತಿಪ್ಪು ; ತುಳು. ಮದಿಪು ; ತೆಲು. ಮದಿಂಪು, ಮತಿಂಪು]

**ಮದಿಮಾಳು** (ನಾ). ಮದುವೆಹೆಣ್ಣು ; ವಧು : ನಿಮ್ಮೊಡನೆ ಮಾತನಾಡುತ್ತ ಕುಳಿತರೆ ಮಂಗು ಮದಿಮಾಳಾದೀತು (ಬಾಳಗ. ೯).

[ ← ತುಳು. ಮದ್‌ಮಾಳ್ ]

**ಮದಿರ**$_1$ (ನಾ). [ನಾಟ್ಯ] ಸಂಚಾರಿಭಾವಸೂಚಕವಾದ ಇಪ್ಪತ್ತು ಬಗೆಯ ನೋಟಗಳಲ್ಲಿ ಒಂದು ; P ಇದು ತರುಣ, ಮಧ್ಯಮ ಮತ್ತು ತೀವ್ರ ಎಂದು ಮೂರುವಿಧವಾಗಿದೆ : ಪಿರಿದಿರ್ದ ಕಂಗಳತಿ ವಿಸ್ತರವಾಗದ ನೋಟಮುಂಬಿದಾಲಿಗಳಿಂದಂ . . . ಕಿಱುಸೊಕ್ಕಿನಿಂದೆ ರಂಜಿಸೆ ಮದಿರಂ (ಲಾಸ್ಯರಂ. ೩-೩೯). [ಸಂ. ಮದಿರಾ]

**ಮದಿರ**$_2$ (ಗು). ೧. ಅಮಲೇರಿಸುವ ; ಮದವೇರಿಸುವ : ' ಮದಿರಾಕ್ಷಿ ' ಪರಾ. ೨. ಸಂತೋಷಕರವಾದ. (ನಾ). ೩. ಕೆಂಪುಹೂವುಗಳನ್ನು ಬಿಡುವ ಒಂದು ಬಗೆಯ ಖದಿರವೃಕ್ಷ. [ಸಂ.]

**ಮದಿರಾಕ್ಷಿ** (ನಾ). ನೋಡಿದವರಿಗೆ ಮತ್ತೇರಿಸುವಂಥ ಕಣ್ಣುಗಳುಳ್ಳವಳು ; ಸುಂದರವಾದ ಕಣ್ಣುಗಳುಳ್ಳವಳು : ನಿಧಿಯಂ ಕಂಡಂತೊಳಗಿಡೆ ಮದಿರಾಕ್ಷಿಯನಿಂಪ್ರನಿಡಿದ ನನೆಗಣೆಯಿಂ ತೀವಿದ ದೊಣೆಗೆಣೆಯಾಗಿರ್ದ ಕೋಟ್ಟುಗದಿಗೊಳೆ ಸೈರಿಸದುಪೇಂದ್ರನವಳೊಳ್ ನೆರೆದಂ (ಶಾಂತಿಪು. ೬-೭೩) ; ಮದಿರಾಕ್ಷಿ ನಿನ್ನೊಳಲ್ಲದೆ ಹೃದಯ ಪೆರಳಲ್ಲಿ ಸೇರದಿರ್ಪುದು (ಶಾಕುಂತ. ೪೦-೭೦). [ಸಂ. ಮದಿರಾಕ್ಷೀ]

**ಮದಿರಾಪಾಂಗ** (ನಾ). ೧. ಮೋಹಕವಾದ ಕಡೆಗಣ್ಣೋಟ. ೨.= ಮದಿರ$_1$ : ಮದಿರಾಪಾಂಗಂ ತ್ರಿವಿಧಮನೊದವಿರ್ಕುಂ ತರುಣಮೆಂದು ಮಧ್ಯಮಮೆಂದುಂ ಪುದುಗೊಂಡ ತೀವ್ರಮೆಂದುಂ ಸುದತೀ ಕೇಳ್ ಬೇಱೆ ಬೇಱೆ ಭಾವಮೆನಿಕ್ಕುಂ (ಲಾಸ್ಯರಂ. ೩-೩೮). [ಸಂ.]

**ಮದಿರಾಪಾನ** (ನಾ). ಅಮಲೇರಿಸುವ ಮದ್ಯ ಮುಂತಾದ ಪಾನೀಯಗಳ ಸೇವನೆ : ಮದಿರಾಪಾನಕ್ಕೆ ಮೆಯ್ದೂರದೆ . . . ಏಕಾಂತದೊಳ್ ನಿಲ್ಲದಿರಾಂ ಬರ್ಪನ್ನವಾಯಂ ನಿನಗಿದು ವಿಗತಾಪಾಯಮುಪ್ಪೊಂದುಪಾಯಂ (ಜಗ. ೧೩-೧೨೬). [ಸಂ.]

**ಮದಿರಾಮದ** (ನಾ). ಮದ್ಯದ ಅಮಲು : ಆಮಿಾಳನಮಂ ಕಣ್ಗಳೊಳಾಮನದೊಳಗೊಸಗೆಯಂ ಶರೀರದೊಳೆತ್ತಂ ರೋಮಾಂಚಕಂಚುವಂ ಮದಿರಾಮದವಾಗಿಸೆ ತೆಗಟ್ಟನಾಕೆಯ ನುಡಿಯೊಳ್ (ಶಬರ. ೩-೯) ; ಹೃದಯಪ್ರಮೋದಮದಿರಾಮದದಿಂ ಮೆಯ್ಮಱೆದು ಮೇಲುದಂ ಮಱೆದಿರ್ದಡಿಧುದು ಪಱೆ ಮಾಣ್ದೊಡಂ ಮಾಣದೆ ಮೆಚ್ಚಿದ ತೆಱದಿನಾಪ್ತವೃದ್ಧಕದಂಬಂ (ಕೃಷ್ಣಕೃ. ೪-೩೬). [ಸಂ.]

**ಮದಿರಾರಸ** (ನಾ). ಹೆಂಡ ; ಸುರೆ : ಇಂತು ಶೌಂಡಿಕರೆಲ್ಲರುಂ ಶುಂಡಾಸಾಮರ್ಥ್ಯಮಂ ಕೊಂಡಾಡುತ್ತುಮಿರ್ದನವರತಂ ಮದಿರಾರಸದ ಮದವೇಱೆ . . . ಮತಿಗೆಟ್ಟು ಕಳವಳಿಸುತ್ತಿರಲ್ (ಪಾರಶ್ವ. ೧೧-೧೩೯ ವ). [ಸಂ.]

**ಮದಿರೆ**$_1$ 'ಮದುರೆ' ನೋ.

**ಮದಿರೆ**$_2$ (ನಾ). ೧. ಅಮಲೇರಿಸುವ ಮದ್ಯ ಮುಂತಾದ ಪೇಯ : "ಮೈರೇಯಮಾಸವಂ ಮಧು ಮಾಧವಂ ಸೀಧು ಸೀರೆ ಸುರೆ ಮದಿರೆ . . . ಕಲ್ಯಮೆನೆ ಕಳ್ಳೆನಿಕ್ಕುಂ" (ತುಂಗರಾ. ೬೩-೮); ನೀಂ ಕುಡಿವ ಮದಿರೆ ನೀನೊತ್ತುತಿರುವಧರಂ ಮುಗಿವೊಲೆಲ್ಲಂ ಮುಗಿಯೆ ನಾಸ್ತಿಯಲಿ, ಬೆದರಂ ಮಾಣ್ದದಂ ನಂಬು (ಗೀತಾಂ. ೧೨೦-೩೩). ೨. = ಮದಿರ$_1$ : ಒಂದಿನಿಸು ಬಾಗಿದೆವೆಯುಂ ಸಂಧಿಪ ತಡಬಡಿಸಿ ನೋಳ್ಪ ತಿರುಗುವ ತಾರೆಯನೊಂದುವ ಕಣ್ಮಧ್ಯಮಮದು ಬಂದೆಸೆದೊಡೆ ಮಧ್ಯಮೆಂಬ ಮದಿರೆಯೆನಿಕ್ಕುಂ (ಲಾಸ್ಯರಂ. ೩-೪೦). [ಸಂ. ಮದಿರಾ]

**ಮದಿರೇಕ್ಷಣ** (ನಾ). ಮಾದಕವಾದ ನೋಟ : ಕುಣಿಸಿದತ್ತಲ್ಪಲಾಂಗೂಲಮಂ ಶಕ್ರಧನು ರಮಣೀಯಮುಮ್, ವಿಸ್ಮಯೋತ್ಫುಲ್ಲಮಾಗಲ್ಕೆ ರುಚಿರಾನನಾರಾಮದಯಿತೆಯಾ ಮದಿರೇಕ್ಷಣಂ (ಶ್ರೀರಾಮಾ. ೨೩೨-೧೧೩). [ಸಂ.]

**ಮದಿರೇಕ್ಷಣೆ** (ನಾ). ಮೋಹಗೊಳಿಸುವ ಕಣ್ಣುಗಳುಳ್ಳವಳು ; ಸುಂದರಿ : ಅಪ್ಸರಾಂಗನಾನ್ವಯದೊಳ್ ಪುಟ್ಟಿದಳಲ್ಲಿ ಮದನಮದವತಿ ಮದಿರೇಕ್ಷಣೆ ಮದಿರೆಯೆಂಬ ಕನ್ಯಾರತ್ನಂ (ಕಾದಂಬ. ೯೬೨).

[ಸಂ. ಮದಿರೇಕ್ಷಣಾ]

**ಮದಿರೋನ್ಮತ್ತ** (ಗು). ೧. ಮದ್ಯಪಾನದಿಂದ ಮೈಮರೆತ; ಅಮಲೇರಿದ : ಮದಿರೋನ್ಮತ್ತನಿಳಿಂಪ ಕಿಂಪುರುಷ ಕಾಂತಾರಬ್ಧಸಂಗೀತಮೊಪ್ಪಿದುದಲ್ತೇ . . . ಶ್ರೀರಮ್ಯಹೈಮಾಚಳಂ (ಶಂಕರಾ. ೬-೭೨). (ನಾ). ೨. ಸೊಕ್ಕಿನಿಂದ ಮೈಮರೆತವನು : ತಮ್ಮಮನಿಂತಿದಿರುಮನೇನೆಂದಱಿಯರ್ ಮದಿರೋನ್ಮತ್ತರವೊಲವನಿಪಾಲರುಂ (ಚಂದ್ರಕೃ. ೧೦-೧೧೬). [ಸಂ.]

**ಮದಿಲ್**, **ಮದಿಲ**, **ಮದಿಲು** (ನಾ). ೧. (ಮನೆ ಮುಂತಾದುವುಗಳ ಒಳಭಾಗದಲ್ಲಿ ಕೊಠಡಿ, ಹಜಾರ ಇತ್ಯಾದಿಗಳನ್ನು ಪ್ರತ್ಯೇಕಿಸುವಂತೆ ಸೂರಿನವರೆಗೂ ಕಟ್ಟುವ) ಗೋಡೆ ; ಭಿತ್ತಿ : (+). ೨. ಕೋಟೆ ಮುಂತಾದುವುಗಳ ಸುತ್ತಲೂ (ರಕ್ಷಣಾರ್ಥವಾಗಿ) ಕಟ್ಟುವ ಗೋಡೆ; ಪ್ರಾಕಾರ ; ಪೌಳಿ : ಬಳಸಿದ ಕಂಬೊನ್ನ ಮದಿಲ್ಗಳೊಳಗೆ ಮಣಿಮಯ ಭವನಾವಳಿ ತೊಳಗಿ ಬೆಳಗೆ (ಪಂಪಭಾ. ೪-೧೦ ರಗಳೆ) ; ವಸುದೇವನರಮನೆಯ ಮದಿಲಂ ವಿದ್ಯಾಧರಕರಣದಿಂ ಪೊಸಂತಿಲಂ ದಾಂಟುವಂತೆ ದಾಂಟಿ (ಅರ್ಜುನೇ. ೩-೧೮ ವ) ; ಅಗುಟಿ ಮದಿಲ್ ಬಾಗಿಲ್ ಬಿಯ್ಯಗಮೆಂಬಿವಱಿಂದೆ ಕಾವ ಕಾಪೇವುದೊ (ನೀತಿಮಂ. ೨-೨೭) ; ಪೊಗೆ ಅದೇನ್ ಕಾಣ್, ತ್ರಿಜಟೆ ? ಏಳುತಿದೆ ಮದಿಲವೊಲ್ ಮುಗಿಲನ್ನೆಗಂ! (ಶ್ರೀರಾಮಾ. ೬೯೮-೧). ಮದಿಲ : ೨. ಸುಮ್ಮಾನದಿಂದ ಖೇಚರಿಯರು ಮದಿಲವ ಗಮ್ಮನೆ ಬಂದೇಱಿದರು (ಜ್ಞಾನಸ. ೪-೧೩೯). ಮದಿಲು : ೨. ಕರುಪಾಡಗಳನೇಱಿ ಮದಿಲುಗಳನು ಹತ್ತಿ ಮರಗಳ ಕೊನೆಗಳನಡರಿ (ತಂತ್ರಸಾಂ. ೧೩-೧೧೩) ; ಸುತ್ತ ಬಳಸಿದ ಮದಿಲು ವಾಯುಪಥವನು ಒತ್ತರಿಸುವುದನವರತ (ಅಪಂಕ. ೧-೧೪೦).

[ದೇ. II ತಮಿ. ಮಲ. ಮತಿಲ್ ; ತುಳು. ಮದಿಲು, ಮದುಲು ; ತೆಲು. ಮಮತು, ಮಗುಲು]

ಮದಿಲ್' ನೋ.

ಮದಿಲ್' ನೋ.

ನಾ). ಕಳ್ಳು ; ಹೆಂಡ ; ಮದ್ಯ : "ಮೈರೇಯಂ . . . ಕಾದಂಬರಿ ಪರಿಸ್ರವಣಿ ಕಲ್ಯವೆನೆ ಕಳ್ಳಿನಿಕ್ಕುಂ" (ಮಂಗರಾ. ೬೩-೮).

[ಸಂ. ಮದಿಷ್ಠಾ]

). ೧. ಅಮಲೇರು : ಮತ್ತಿನಿಂದ ಕೂಡಿರು : ಮದಿಸಿ ಕಾಣದೆ ಮಡುಹಿದ ಗಜೇಂದ್ರಂ ಸತ್ತುದಾಗಳೆ (ಚಕ್ರಪು. ೨೨-೨೦) ; ಮದಿಸಿ ಹವದ ಗಜ ಹರಿಪದವಿಘಾತಿಗೆ ಕೆಡೆವವೊಲು ಕೆಡೆದೊದೆದು ಕೊಂದ ನಾಕಂಪದಲಿ ಕಳನೊಳಗೆ (ಕೂರಾ. ೬-೦೮-೨೬). ೨. ಗರ್ವಿಸು ; ರಿಸು : ಹಿಮನಗಸುತೇಶನು ಮದಿಸಿದಾತನ ಬಗೆಯನಳಿದು (ಚಕ್ರಪು. . ೩. [ಗಣಿತ] ಕೂಡಿಸು ; ಸಂಕಲಿಸು : ಬೆರಸು, ಮದಿಸು. ಕೂಡು, ಬತಂ ಇಂತಿನಿತುಂ ಕೂಡೂದಕ್ಕೆ ಹೆಸರು (ವ್ಯವಹಾ. ).

[ಮದ + —ಇಸು₃]

(ಗು). ನನ್ನ ; ನನಗೆ ಸಂಬಂಧಿಸಿದ : ವದನಂ ಮದೀಯ ಸಮುದಾವಹಂ (ಕಬಿರಾ. ೩-೬೬) ; ಮದೀಯ ಸವಿಶಾಹಿತ್ರಮುಂ . . . ಇಲ್ಲ (ಕಾದಂಬ. ೩೯೬) ; ಇದು ವಿನೋದವಲೇ ಮದೀಯಾಭ್ಯುದಯ (ಕುಮ್ಮ. ೨-೦೮).

[ಸಂ.]

ನಾ). (ಕರಾ) ಭೂತಾರಾಧನೆಯಲ್ಲಿ ಭಕ್ತನ ಪರವಾಗಿ ನು ಆಡುವ ಮಾತು : ಭೂತಕ್ಕೆ ಗಗ್ಗರವಿಟ್ಟು ನಂತಾಗ ಭಟ್ಟರು 'ಮದು' ಅಥವಾ 'ನುಡಿಗಟ್ಟು' ಹೀಗಿರುತ್ತದೆ (ದಂಬನಾ. ೦೯).

[←ತುಳು. ಮದು]

ನಾ). ೧. ಚೈತ್ರಮಾಸ; ವಸಂತಋತು :" ಮದುವೆನೆ ಚೈತ್ರ" . ೨೦). 'ಮದುರಿತು' ಪರಾ. ೨. ಜೇನುತುಪ್ಪ : "ಮದು— ಜೇನು" (ಕನ್ನಕೋ. ೩೩). [<ಸಂ. ಮಧು]

ನಾ). ಒಂದು ಬಗೆಯ ತೆರಿಗೆ : ಕರಡಿ ಹಳಿಯ ಚತುಃಸೀಮೆ ದ ಬಿಡುಗಳಿಗೆ ಸಲುವ ಗ್ರಾಮ ೧ ಔ ಮಗ್ಗದೆಜು ಮದು ಭಡಗಿ ಅಸಗ ನಾವಿಂದ ಕುಂಭಾರ ಮಾದಿಗ ಕಯ್ಯಿಗಾಣ ಎತ್ತುಗಾಣ (S), ದಂಗಳೂ. ೧೩೨-೯; 1408).

[ ? ]

ಯ (ನಾ). ಒಬ್ಬಾತನ ಹೆಸರು : ಕಣ್ಣಪ್ಪಯ್ಯನ ಮಗ ಯ್ಯನುಂ ಮದುಕಪ್ಪಯನುಂ (ಎಕ. X, ಕೋಲಾರ. ೩೭-೯:

[ ? ]

ನಾ). ಒಂದು ಮನೆತನದ ಹೆಸರು (?) : ಬದಿರಿಯರುಮ್ ನುಮ್ ಕೋನಪ್ಪರುಮ್ ಸಾಕ್ಷಿ (ಪ್ರಾಇಂ. ೦೯೦೬; ೧೩-೦೦; 720).

[ ? ]

(ನಾ). ಮದುವೆಯ ಗಂಡು ; ಮದುವಣಿಗ ; ವರ : ಈ ದುಮಗನ ನಿವಾಸಕ್ಕೊಂದು ಚೊಕ್ಕವಾದ ಒಂದು ಅರಮನೆ ಕಟ್ಟಿಸಿದನು (ಶವತ. ೩೮); ಮದುವೆ ಮುಗಿದರೂ ಮದುಮಗನ್ನ ಲ್ಲ (ಗಾದೆ).

ಮದುಮಕ್ಕಳು, ಮದವಕ್ಕಳ್, ಮದವಕ್ಕಳು, ಮದುವಕ್ಕಳ್ = ಮದುವೆಯಾಗುವ ಗಂಡು ಹಾಗೂ ಹೆಣ್ಣು ; ವಧೂವರರು : ಯ ನಂತರ ಮದುಮಕ್ಕಳನ್ನು ನೆಂಟರಿಷ್ಟರು ಬರಮಾಡಿಕೊಂಡು ಪುದು ವಾಡಿಕೆ (ಜಾತಕ. ೩೮); ಪ್ರೇಮದ ಮಾತಿಗೆ ಹೊಸಮದು ಹೊಸ ಅರ್ಥವನು ವಾಚಿಸುವರು (ಇಂಚಾಪ. ೩೭-೭೧); ನೆಂಬ ಮಂತ್ರಿಯುರ್ಕೆವದಿಂದವರ ಪೇಟ್ಟಿ ಮದವಕ್ಕಳಂ ನಿರಾಕರಿಸಿ . ೯೦-೨೩); ಮದವಕ್ಕಳನಿಂದಿದಿರ್ಗೊಳ್ಳುದೆಂದು . . . ಪೇಟಾರ್ ೮-೯೭); ಪೆಜಿದರ್ ಲೇಸೆನೆ ಮದುವಕ್ಕಳ್ ಸುವಿಲಾಸದಿ ಪೆಟ್ಟಿಕ್ಕಿ ಗೂಡೆಗಳೊಳುತ್ಸವದಿಂ (ಉದ್ಭಟ. ೮-೩೮); ಹೋಮಾನಳನಂ ಮದುವಕ್ಕಳ್ ವಿಸುಪ ಲಾಜೆಯಿಂ ಪೂಜಿಸಿದರ್ (ಜಗಪ. ೦೦-೦೩೩).

[< ಮದುವೆ + ಮಗ]

**ಮದುಮಗಳ್, ಮದುಮಗಳು** (ನಾ). ಮದುವೆಯ ಹೆಣ್ಣು ; ಮದುವಣಗಿತ್ತಿ; ವಧು: ಕಾದಿಪೊಡಲ ಮದುಮಗಳ್ ತೆಣರುತಿಹಳೆಲ್ಲಿ? (ಕಾಂಜಿ. ೦೩೩-೩೩೬). **ಮದುಮಗ್ಗಳು** : ಮದುಮಗಳ ಕಣ್ಣಿನ ಬಗೀ ಚಂದಿರನ ನಗಿಸುತ್ತ ಹರಿದದ (ನಾದರ. ೬೯-೦೩); ಮದುಮಗಳ ಕಾಂತಿ ಅವಳ ಮುಖದಲ್ಲಿ ಮಿನುಗುತ್ತಿತ್ತು (ರಂಗರೋ. ೨೦೯).

[< ಮದುವೆ + ಮಗಳ್]

**ಮದುಮಗಳು** 'ಮದುಮಗಳ್' ನೋ.

**ಮದುಮನೆ** (ನಾ). ಮದುವೆಯ ಮನೆ : ತಡೆಯಲ್ಕಾಜಿನ್ ಕಣ್ಣೀರ್ ಪೊನಲನ್ ನೋಡುತೆ . . . ಮಸಣದ ಮದುಮನೆ ಪುಗುವಾ ಮಗಳನ್ (ಅಂತಿಗೂ. ೩೭-೬೯೬).

[< ಮದುವೆ + ಮನೆ]

**ಮದುರಿತು** (ನಾ). ವಸಂತಋತು : ಮಕ್ಕಳ ಮುದ್ದುವೆರೆದ ನುಡಿ ಮದುರಿತು ಚೊಕ್ಕಳಕೆಯ ನವಚಂದ್ರಿಕೆಯೆನೆ ಹೃದಯಕ್ಕೆ ವಿಲಾಸಮನೀವುದು ಸತ್ಯಘರಾಜನ ಸವಿವಾತು (ಇದುಕಾ. ೧-೭೯).

[ಮದು₂ + ರಿತು (< ಋತು₁]

**ಮದುರೆ, ಮದಿರೆ₁, ಮಧುರೆ₁** (ನಾ). ಹಿಂದೆ ಪಾಂಡ್ಯರ ರಾಜಧಾನಿಯಾಗಿದ್ದ ಒಂದು ಊರಿನ ಹೆಸರು ; P ಈಗಿನ ತಮಿಳುನಾಡಿನ ಮಧುರೆ : ದಕ್ಷಿಣಭಾಗದಾ ಮದುರೆ ಉಯ್ಯಿನಿತಾವ × ಶಾಪದೆ ಪಾವು ಮುಟ್ಟಿದೊನ್. . . ರಮ್ಯಸುರಲೋಕಸುಕಕ್ಕೆ ಭಾಗಿ (ಎಕ. II (R). ೨೯-೦; ಕು. 700). **ಮದಿರೆ₁. ಮಧುರೆ₁** : ಧುರದೊಳು ಮಧುರೆಯ ತಿರುಮಲ ನಾಯಕನಸುರು ವಾಹಿನಿಯ ಮುಜಿದಿಜಿದು ಹರುಷದೆ ಪಿಡಿದಾನೆಗಳ ಶಾಲೆ ಮೆಜಿದುವು (ಕಂಠೀ. ೬-೨೯).

**ಮದಿರೆಗೊಂಡ** = ಮದಿರೆಯೆಂಬ ಪಟ್ಟಣವನ್ನು ಗೆದ್ದವನು; ಒಂದು ಬಿರುದು : ಸ್ವಸ್ತಿಶ್ರೀ ಮದಿರೆಗೊಣ್ಡ ಕೊಪ್ಪರಗೇಸರಿವರ್ಮ್ಮಂಗೆ ಪರಿಷವಿರ್ಪ್ಪತ್ತೊಮ್ಬತ್ತಜೊಳ್ಪಯ್ದ್ಕೂರ ರಾವಿನಾಡ ಮಾಯ್ರ್ಮ್ಮ ಮಮ್ಮ × × ಗಣಿಪ ರಾಮ ತುಜುವನಿಕ್ಕಿಸಿ ಅಟ್ಟಿ ಸತ್ತನ್ (ಎಕ. X, ಮುಳಬಾ. ೨೦೩-೦; 934).

[ ← ತಮಿ. ಮತುರೈ ]

**ಮದುರೆಗಿಳ್** (ನಾ). ಒಂದು ಊರಿನ ಹೆಸರು: ಮದುರೆಗಿಳಾ ವೆಲ್ಲ ಸಮ್ಮಂಗೆ ಕೊಟ್ಟೋದು ಕಣ್ಣಗದಯ್ಯಳ ಕಟನಿಯುಂ (ಎಕ. X, ಮುಳಬಾ. ೮೦-೬; 767).

[ ? ]

**ಮದುವಣ** (ನಾ). ಮದುವೆಯಂ ಮೇಲೆ ಹಾಕುತ್ತಿದ್ದ ಒಂದು ಬಗೆಯ ತೆರಿಗೆ: ಹದಿಕೆ ಸಂಬಳ ಉಳುವರಿ ಆ ಮದುವಣ ಮರ ಮೊಲಕ್ಕಮಬಲಾಳ ದೇವನಾಣೆ ಕಾಹು ಚಂದ್ರಾರ್ಕ್ಕತಾರಂಬರಂ (ಪ್ರಾಇಂ. ೦೯೩೮, ೯೨-೦೨; 1036).

[ < ಮದುವೆ + ಪಣ₃ ]

**ಮದುವಣಗಿತ್ತಿ** 'ಮದುವಳಗಿತ್ತಿ' ನೋ.

**ಮದುವಣಿಗ** 'ಮದುವಳಿಗ' ನೋ.

**ಮದುವಣಿಗತನ, ಮದವಣಿಗತನ** (ನಾ). ಮದುಮಗನಾಗಿರುವಿಕೆ : ದೇಪೋತ್ಸುಂಗಂ . . . ಮದುವಣಿ[ಪಾಠಾಂ. ಮದವನಿ]ಗತನಮನುಜಿ ನಟಯಿಸುತ್ತುಂ (ಗಿರಿಕ. ೦೦-೯೩). **ಮದವಣಿಗತನ** : ಮದವಣಿಗತನದ ದೇಸೆಯಿಂ ವಿಲಾಸಂಬಡೆದ ಬಾಲಸಹಕಾರನಂದನಂ ವನಪಾಲಂ ನೃಪಾಲ ಪರಿಜಾತನನಿತ್ರಲವಧಾರಿಸಿಮೆಂದು ತೋಜಿ (ಅನಂಪು. ೭-೬ ವ).

[ ಮದುವಣಿಗ ( < ಮದುವಳಿಗ ) + — ತನ ]

**ಮದುವಳ್** 'ಮದೆವಳ್' ನೋ.

**ಮದುವಳ** (ನಾ). ಮದುವೆಯ ಹುಡುಗ ; ವರ : 'ಮದುವಳಿಗ' ಪರಾ. [ < ಮದುವೆ + – ವಳ ]

**ಮದುವಳಿಗ**, ಮದವಣಿಗ, ಮದವಳಿಗ, ಮದುವಣಿಗ (ನಾ). =ಮದುಮಗ : ಮದುವೆಗೆ ಕೂಡಿದ ಬಂಧುಗಳೆಲ್ಲರು ಮದುವಳಿಗನ ಮದುವಳಿಗಿತ್ತಿಯ ಕಾಣದೆ ಕದನವಾಯಿತ್ತು ಮದುವೆಯ ಮನೆಯಲ್ಲಿ (ಪೋರವಾ. ೯೦-೩೬೦); ಈ ಮದಹಸ್ತಿಯನೀ ಹಳುವಿನೊಳೇಱಿದಾ ಮಹಿಮನೆ ನಿನ್ನ ಸುತೆಗೆ ಪ್ರೇಮದ ಪೊಸಮದುವಳಿಗನಾಗುವನು (ನೇಮಿಶಂ. ೯-೨೬); ಚಂದ್ರಹಾಸ. . . ಒಪ್ಪುವ ಬಾಸಿಗದ ಮದುವಳಿಗನಾಗಿದ್ದ (ಬಬಾರಿ. ೦೬೯). **ಮದವಣಿಗ** : ಆ ವಿಭು ಜಿನಚಂದ್ರಂ ಲಕ್ಷ್ಮೀಮತಿಯಂ ಮದುವೆನಿಂದು ಪೊಸಮದವಣಿಗಂ ದೇವೇಂದ್ರನ ಶಚಿಯ ವಿಳಾಸಾವಿಷ್ಕೃತ ವಿವಿಧ ವಿಭವಮಂ ಮಸುಳಿಸಿದಂ (ಶಾಂತಿಪು. ೭-೦೨೦); ಮದವಣಿಗನಿಲ್ಲದೆ ದಿಬ್ಬಣಂ ಬೋಪನೆಂಬಂತೆ (ಧರ್ಮಾಮೃ. ೯-೩೦); ಪೊನ್ನಂದಳವಡರಿದ ಮದವಣಿಗನ ಮುಂದೆಯ್ದುವ ನೃಪತಿಲಕರ ಪಲವು ಕೊಡೆಯಾಗಸಮಂ ಪಂದಲಿಸುತ್ತುಂ ನಡೆತರೆ (ಜಗನ್ನಾ. ೬-೨೬). **ಮದವಳಿಗ** : ಮದವಳಿಗನಿಲ್ಲದೆ ಮದುವೆಯಂ ಮಾಡುವೆನೆಂಬ. . . ಪೆರ್ಗಾವಿಲನಂ ಪೋಲ್ವುಂ (ಧರ್ಮಾಮೃ. ೩-೦೦೭ ೩೩); ಲಿಂಗವೆ ಮದವಳಿಗನಾದ ನಾನು ಮದವಳಿಗೆ[ಪಾಠಾಂ. ಮದವಣಗಿತ್ತಿ]ಯಾದೆನು (ಮಹಾದೇ. ವ. ೦೦೩-೨೩೬) ; ನಮ್ಮ ನಾದನಿ ಮದವಳಿಗ ನೀನಾದರೊಡಹುಟ್ಟಿದನು ನೀನಹೆಯೆನಗೆ (ಕುಮಾರ. ೨೨-೧೭) ; ಎಸೆವ ಬಾಸಿಗದ ಮದವಳಿಗನಾಗಿರ್ದಂ ಕುಳಿಂದಜಂ (ಜೈಮಿಭಾ. ೩೦-೫೯). **ಮದುವಣಿಗ** : ಹಸೆಯ ಮೇಲೆ ಮದುವಣಿಗನ ತಂದು ನಿಲಿಸಲೊಡನೆ ಶಶಿವದನೆ ಬಂದು ಕೈವಿಡಿದಳು (ಅವತಂ. ೨೦-೮೭) ; ಮದುವಣಿಗನಾದ ಕುವರ ಹರುಷದಿ ಚಿತ್ರಮಂಟಪವ ನೋಡುತ್ತೈತರಲು (ಸ್ತ್ರೀಧರ. ೨೦-೨೦) ; ಇವನು ಯಾರೋ ಮೆಲ್ಲಗೆ ಮದುವಣಿಗನ ಹಾಗೆ ಬರುತ್ತಿದ್ದಾನೆ (ದಾಕ್ಷಮು. ೯೨). [ ಮದುವಳ್ ( < ಮದೆವಳ್ ) + — ಇಗ ]

**ಮದುವಳಿಗಿತ್ತಿ**, ಮದವಣಿಗಿತ್ತಿ, ಮದವಳಗಿತ್ತಿ, ಮದುವಣಗಿತ್ತಿ, ಮದುವಣಿಗಿತ್ತಿ (ನಾ). ೧. ಮದುವೆಯ ಹೆಣ್ಣು ; ವಧು : ಮದುವಳಿಗನ ಮದುವಳಿಗಿತ್ತಿಯ ಕಾಣದೆ ಕದನವಾಯಿತ್ತು ಮದುವೆಯ ಮನೆಯಲ್ಲಿ (ಪೋರವಾ. ೯೦-೩೬೦). **ಮದವಣಿಗಿತ್ತಿ:** ೧. ಮೊದಲ ದಿನದ ಮದವಣಿಗಿತ್ತಿಯಂತೆ ಕಾವೇರಿ ಮೂಸ್ತರ ಸನಿಯದಲ್ಲಿ ಕುಳಿತಳು (ಕಾವೇರಿ. ೦೦೯). **ಮದವಳಗಿತ್ತಿ** : ೧. ಮದವಳಿಗ ಮದವಳಗಿತ್ತಿಯ ಮುಟ್ಟದೆ . . . ನೋಡುತ್ತ ಬಟ್ಟಬಯಲಾಯಿತ್ತು (ಪೋರವಾ. ೧೯೬-೭೩೭). **ಮದುವಣಗಿತ್ತಿ:** ೧. ಗುಂಡಮಬ್ಬೆ ಮದುವಣಗಿತ್ತಿಯಂತೆ ಸಿಂಗರಿಸಿಕೊಂಡಳು (ದಾನಚಂ. ೦೫೬); ನರ್ಸ್ . . . ಮದುವಣಗಿತ್ತಿಯಂತೆ ಶೃಂಗರಿಸಿಕೊಂಡಿದ್ದಳು (ದೀಕ್ಷದ. ೬೯). ೨. ಹೆಂಡತಿ : ಕನಕವರ್ಷನು ಮಾವನ ಮನೆಯಲ್ಲಿ ಏಳುದಿನವಿದ್ದು ತನ್ನ ಹೊಸಮದುವಣಗಿತ್ತಿಯೊಡನೆ ರಾಜಧಾನಿಗೆ ಹಿಂತಿರುಗಿದನು (ಕಸಂ. ೦೫೬). **ಮದುವಣಿಗಿತ್ತಿ** : ೧. ಹೊಸಮದುವಣಿಗಿತ್ತಿಯಾದ ನಿನಗೆ ಮನವೊಪ್ಪುವಂತೆ ಧರಿಸಲು ಒಳ್ಳೆಯ ಒಡವೆಗಳನ್ನೂ ಸೀರೆಗಳನ್ನೂ ತರುವೆನು (ಕವಿಕ. ೯೯). [ಮದುವಳಿಗ + — ಇತ್ತಿ]

**ಮದುವಳಿಗೆ**, ಮದವಣಿಗೆ, ಮದವಳಿಗೆ (ನಾ). ೧. = ಮದುವಳಿಗಿತ್ತಿ ೧: ಮದುವಣಿಗನಾರೋ ಮದುವಳಿಗೆ ಯಾರೋ ಮದುವೆಯ ನಡುವೆ ಮರಣ ವಡ್ಡಬಿದ್ದಿತ್ತು (ಅವತಂ. ೦೩೭-೬೨೯); ನಾಂದೀಮುಖದೊಸಗೆಗೆ ಕಬ್ಬಿಗಿಯ್ದುದೆಂದು ಮದುವಳಿಗೆಯಲ್ಲಿಗಟ್ಟಿದೊಡೆ (ಬಂಧಂ. ೯-೬ ವ). **ಮದವಣಿಗೆ** : ೧. ಮದವಣಿಗೆಯುಂ ಕಂಡು ಮದುವೆಗೊಡರ್ಚುವಂತೆ (ಧರ್ಮಾಮೃ. ೦೯-೧೩೦). ೨. ಹೆಂಡತಿ ; ಪತ್ನಿ : ಯಿತನ ಮದವಣಿಗೆ ಚಿಂನಮಾಂಬಾ (ಎಕ. XVI, ಕಾಪುಗ. ೦೦೦-೩; 1653). **ಮದವಳಿಗೆ** : ೧. ಪೊಸಮದವಳಿಗೆಯುಪ್ಪದಱಿಂ ತಡಿಸಲೆವೇಟ್ಕುಮೆಂದು ನೆಱೆಯೆ ಪಸದನಂಗೊಳಿಸೆ (ಶಂಕಥಾ. ೩-೯೭ ವ) ; ಐದುಮಾನವ ಕುಟ್ಟಿ ಒಂದುಮಾನವ ಮಾಡು ಕಂಡಾ ಮದವಳಿಗೆ ಇದು ನಮ್ಮ ಬಾಳುವೆ ಮದವಳಿಗೆ ಇದು ನಮ್ಮ ವಿಸ್ತಾರ ಮದವಳಿಗೆ (ಜನಪ. ೯೭೭); ಮದುವೆಯಾಯಿತು ಬಲನ ಜೀಯದಂದದಲಿ ಪೂಡಿದ ರಥವನೇಱಿಸಿ ಮದವಳಿಗೆ ಸಹಿತರ್ಜುನನ ಕಳುಹಿದನು ಮುರವೈರಿ (ಕುಮಾರ. ೦೯-೩೯). ೨. ಆರಾಧ್ಯರು ಸಂಗಯ್ಯ ಆರಾಧ್ಯರ ಮದವಳಿಗೆ ಬೊಪ್ಪವ್ವೆ (ಎಕ. VII, ಶಿಕ್ಕಾರಿ. ೩೨-೨೯೯; 1050); ನಾಗಶರ್ಮನ ಮದವಳಿಗೆ ತ್ರಿವೇದಿ ಬನದೊಳಗಣ ನಾಗರಂ ಪೂಜಿಸಲು . . . ಬರಲ್ (ಭಾಸ್ಕ್ರ. ೬-೨೭ ವ) ; ಪೊಸಮದವಳಿಗೆಯ ರತಿಯಲ್ಲಿ ಜಾಡ್ಯ ರ್ಘಾಡಿಸಿಹೋಯ್ತು ಗೆಲುವಾಯ್ತು ಮನಕೆ (ಧರಣ. ೯೦-೦೭೩). [ ಮದುವಳಿಗ + — ಎ₂ ]

**ಮದುವಾಸು** (ನಾ). ಮದುವೆಯಾದ ನಂತರ ನಿಷೇಕಕ್ಕೆ ಸಿದ್ಧಗೊಳಿಸಿದ ಹಾಸುಗೆ : ಇಲ್ಲೀಗಳ್ ಬಂದನಿದೋ ಹಯ್‌ಮೋನ್ . . . ತನ್ನಿನ್ ಕವರ್ದು ಮದುವಾಸಿಂಗೆ (ಅಂತಿಗೊ. ೨೯-೩೯೨).
[ < ಮದುವೆ + ಪಾಸು₂ ]

**ಮದುವಿ** 'ಮದುವೆ' ನೋ.

**ಮದುವೆ**, ಮದುವಿ (ನಾ). ಗಂಡು ಹೆಣ್ಣನ್ನು ಗಂಡಹೆಂಡಿರೆಂದು ಘೋಷಿಸುವ ಒಂದು ಧಾರ್ಮಿಕವಿಧಿ ಮತ್ತು ಸಮಾರಂಭ ; ವಿವಾಹ ; ಪರಿಣಯ ; ಲಗ್ನ : "ಉಪಯಾಮಃ, ಪರಿಣಯನಂ, ಪಾಣಿಗ್ರಹಣಂ, ವಿವಾಹಃ, ಉದ್ವಾಹಃ — ಈ ೫ ಮದುವೆ" (ಶಬ್ದಮ. ೮೦-೩೯೨) ; ಉತ್ತಮಕುಲದವರ್ಗಳ್ಗೆ ಕುಲಜರಲ್ಲದವರೊಡನೆ ಮದುವೆಯೊಳ್ ತೊಟ್ಟ ನಣ್ಪುಗಳಕ್ಕುಂ (ಪಟ್ಟಾ. ೬೭-೦೭) ; ಮದುವೆಯ ಮಾಡಿದರು ನಮ್ಮವರೆನ್ನ ಮದುವೆಯ ಮಾಡಿದರು (ಮಹಾದೇ. ವ.೩೩-೭೬); ಕಮಲಮುಖಿಯರ ಮೂವರನು . . . ಭೀಷ್ಮನು . . . ತಮ್ಮಂಗೆ ಮದುವೆಯ ಮಾಡಲನುವಾದ (ಕುಮಾರ. ೨-೩೩) ; ಮನೆ ಕಟ್ಟಿನೋಡು, ಮದುವೆ ಮಾಡಿನೋಡು (ಗಾದೆ). **ಮದುವಿ** : ಭಾವ ಶಿವದೇವಕ್ಕಗಳ ಯುವಮಾಣಿಯಂ ಕೈಕೊಣ್ಡು ಪೋಷಿಸಿ ಮದುವಿಯಂ ಮಾಡಿ (ಸೌಇಇ. XI-i, ೭೯-೦೭ ; 1029) ; ಕೂಳಸಮುದ್ರಂ ಪೊಂನಂ ಮಾಣಿಗೆ ಮದುವಿಗೆ ಮಂನಿಸಿ ಕುಡೆ ನಾವುಮಾಯಿತು ದಾನವಿನೋದಂ (ಎಕ. VIII, ಸಾಗರ. ೦೦೯-೭೦; 1042).

**ಮದುವೆ ಮಾಸರಿ** = ಮದುವೆ ಮುಂತಾದ ಸಮಾರಂಭ : ಮದುವೆ ಮಾಸರಿ ಇದ್ದ ದಿನ ಸ್ವಲ್ಪ ಹೆಚ್ಚು ಕಾಸಾದರೆ ಮೂಗಿನವರೆಗೆ ಕುಡಿದೇ ಗುಡಿಸಲನ್ನು ಕಾಣಬೇಕು (ಕಲಕು. ೯೩). [ ದೇ.೩ ತಮಿ. ಮತುವೈ; ತುಳು. ಮದುಮೆ; ಕೋತ. ಮದ್ವ್]

**ಮದುವೆಕಂಕಣ** (ನಾ). ವಿವಾಹಕಾಲದಲ್ಲಿ ಮದುಮಕ್ಕಳ ಕೈಗೆ ಕಟ್ಟುವ ಅರಿಶಿನದ ಬೇರನ್ನೊಳಗೊಂಡ ಹಸಿಯ ದಾರ : (ಕ).
[ಮದುವೆ + ಕಂಕಣ ]

**ಮದುವೆಗಂಡು** (ನಾ). ವಿವಾಹವಾಗುವ ಹುಡುಗ ; ಮದುಮಗ ; ವರ : ಮಲ್ಲಣ್ಣನು . . . ರೇಶಿಮೆಯ ನಿಲುವಂಗಿ, ಷರಾಯಿ, ರುಮಾಲುಗಳನ್ನೂ ವಲ್ಲಿಯನ್ನೂ ಧರಿಸಿ ಮದುವೆಗಂಡಿನ ಹಾಗೆ ಓಡಾಡುತ್ತಿದ್ದಾನೆ (ಮಲ್ಲ. ೯೬). [ ಮದುವೆ + ಗಂಡು ]

**ಮದುವೆಗಟ್ಟಿಪು**, ಮದುವೆಗಟುಪು (ಕ್ರಿ). ವಿವಾಹಕ್ಕೆ ಬಂದ ನಂಟರಿಷ್ಟರನ್ನು ಬೀಳ್ಕೊಡು.— ಕಳಿಸು : ಪರಮಜಿನಸವನಜಳನಿರ್ಝರಮುಂ ಸುರಬಲಪಯೋಧಿಕಳಕಳಮುಂ ಮಾಣ್ದರೆ ನೋಡೆ ಬಿನ್ನನಿದರ್ದು ಸುರಶೈಳಮದೊಂದು ಮದುವೆಗಟ್ಟಿಪಿದ ಮನೆವೋಲ್ (ಆದಿಪು. ೭-೧೦೭) ; ತನ್ನಗಲ್ಕೆಯಿಂ ಗಂಧರ್ವರಾಜನಂದನೆಗೆ ಶೀತೋಷ್ಣಭವನಮದು ಮದುವೆ

ಗಟ್ಟಿದ ಮನೆಯಂತೆ ಸರ್ವತ್ರಮಹೋತ್ಸವಮಾಗಿರ್ದುದು (ಕಾದಂಬ. ೧೯೦). **ಮದುವೆಗಟ್ಟಿಪ್ಪು :** ಜನಪಿತೃಗಳ್ ಜನತನಯಂ ಜಿನೇಂದ್ರ ತಪರ್ಗೆಲ್ಲಮೊಡನೆ ತಳರಲೊಡಂ ಬಿನ್ನನೆಯಾಗಿ ಮದುವೆಗಟ್ಟಿದ ಮನೆಯಂ ದರಿದ್ರನಿರ್ದುದಂದಯೋಧ್ಯಾನಗರಂ (ಆಪು. ೬-೯೦).

[ ಮದುವೆ + ಕಟ್ಟು$_1$ ]

**ಮದುವೆಗಟ್ಟು** 'ಮದುವೆಗಟ್ಟಿಪ್ಪು' ನೋ.

**ಮದುವೆಗುಡು** (ಕ್ರಿ). ವಿವಾಹಮಾಡಿಕೊಡು ; ಲಗ್ನಮಾಡಿಕೊಡು : ಎನ್ನ ಮದುವೆಗುಡುವಂದೇನುವಂ ಬಟ್ಟೆವಟ್ಟೆಯಂ ಕೊಟ್ಟರಿಲ್ಲ (ಕಾಪುಂಕ. ೨೩೮). [ ಮದುವೆ + ಕುಡು$_1$ ( < ಕೊಡು$_1$ ) ]

**ಮದುವೆಗೆಯ್** (ಕ್ರಿ). ಲಗ್ನಮಾಡು ; ಮದುವೆಮಾಡು : ಭೋರನೆ ಮದುವೆಗೆಯ್ದಪರೊ (ಬಸವ. ೩೬-೦೩). [ ಮದುವೆ + ಕೆಯ್$_1$ ]

**ಮದುವೆಚಪ್ಪರ** (ನಾ). ಮದುವೆಯ ಮನೆಯ ಮುಂದೆ ಹಾಕುವ ಹಸಿರುವಾಣಿ ಚಪ್ಪರ : ಮದುವೆಚಪ್ಪರದಲ್ಲಿ ಮದುಮಗನೇ ಜಾಣ (ಗಾದೆ); ಮನೆಯ ಮುಂದೆ ಮದುವೆಚಪ್ಪರವನ್ನು ವಿಶಾಲವಾಗಿ ಹಾಕಿಸಿದ್ದಾರೆ (ಓಬ). [ ಮದುವೆ + ಚಪ್ಪರ ]

**ಮದುವೆದೆರಿಗೆ** (ನಾ). ಮದುವೆಮಾಡುವವರು ತೆರಬೇಕಾದ ಹಣ,- ತೆರಿಗೆ: (೧) ಮನೆದೆರಿಗೆ...(೧೭) ಮದುವೆದೆರಿಗೆ. (೧೮) ಉಪ್ಪಿನ ಮೇಳೆ, (೧೯) ಕೌದಿಯ ತೆರಿಗೆ — ಈ ಮೇರೆಗೆ ಹತ್ತೊಂಬತ್ತು ಬಾಬುಗಳನ್ನು ರೈತರಿಗೆ ನಿಷ್ಕರ್ಷೆಮಾಡಿಸಿ (ಮಹಾಪಂ. I. ೦೨೪).

[ ಮದುವೆ + ತೆರಿಗೆ ( < ತೆಱೆಗೆ ) ]

**ಮದುವೆದೆಱೆ** (ನಾ). = ಮದುವೆದೆರಿಗೆ : ಮಗ್ಗದೆಱೆ ಮದುವೆದೆಱೆ ಪೊಳವಾಱು . . . ಅಡಿದೆಱೆ (ಎಕ. XIV, ಕೃಷ್ಣರಾ. ೬೦-೯ ; 1402).

[ಮದುವೆ + ತೆಱೆ$_3$]

**ಮದುವೆನಾಳ್** (ನಾ). ಮದುವೆಯ ದಿವಸ ; ವಿವಾಹದ ದಿನ : ಸುಗ್ಗಿಯೊಳ್ ಮದುವೆನಾಳ್ (ಕಾಬಾರ. ೭೩-೦೩೩). [ಮದುವೆ + ನಾಳ್$_1$]

**ಮದುವೆನಿಲ್, ಮದುವೆನಿಲ್ಲು** (ಕ್ರಿ). ವಿವಾಹಮಾಡಿಕೊಳ್ಳು ; ಲಗ್ನವಾಗು : ಅರಸಂ ತನ್ನ ಪೆರ್ಗಡೆಗಳಿಂದಂ ಕೂಸಂ ಬೇಡಿ ಪೆತ್ತು ಮದುವೆ ನಿಂದು (ವಡ್ಡಾರಾ. ೧೧೦-೦೪); ಶಾಂತಾತ್ಮ ಮದುವೆನಿಲ್ . . . ಜಗತೀಸಂತತಿ ನಿಲೆ ನಿನ್ನ ಧರ್ಮಸಂತತಿ ನಿಲ್ಕುಂ (ಆಪು. ೬-೦೩) ; ಕುಮಾರನಧಿಕೋತ್ಸಾಹಾವಗಾಹಂ ಪ್ರಭಾವತಿಯೆಂಬಗ್ಗದ ಕನ್ನೆಯಂ ಮದುವೆನಿಂದಂ (ಕಂದ್ರಪ್ರ. ೪-೦೨). **ಮದುವೆನಿಲ್ಲು :** ಅನಂತರಂತರದೊಳು ಮದುವೆ ನಿಂದೆನು ಅಂದು ಭದ್ರಮುಕನುಖದೊಳು ನಂದು (ಇಂಕಾಶ. ೨೦೩-೩೨).

[ಮದುವೆ + ನಿಲ್]

**ಮದುವೆನಿಲಿಸು** (ಕ್ರಿ). ಲಗ್ನಮಾಡು : ವಿವಾಹ ಮಾಡಿಕೊಡು : ಅರಸನು . . . ನೃಪಾತ್ಮಜೆಯರನು ಸುಮುಹೂರ್ತದೊಳು ಕುವರಗೆ ಮದುವೆನಿಲಿಸಿದನು (ಜೈಭಾ. ೪-೭). [ಮದುವೆನಿಲ್ + —ಇಸು$_3$]

**ಮದುವೆನಿಲ್ಲು** 'ಮದುವೆನಿಲ್' ನೋ.

**ಮದುವೆನಿಱಿಸು** (ಕ್ರಿ). = ಮದುವೆನಿಲಿಸು : ಸಕಲವಿಷ್ಟಪಪ್ರಣುತನ ನೀತನಂ . . . ಈ ಮಹೀತಳರಾಜ್ಯದೊಳ್ ನಿಱಿಸುವುದುಂ ಮದುವೆನಿಱಿಸುವುದುಂ ಎನಗಶಕ್ಯಾನುಷ್ಠಾನ (ಆಪು. ೬-೬ ವ). [ಮದುವೆ+ ನಿಱಿಸು$_1$]

**ಮದುವೆನೆರೆ** (ಕ್ರಿ). ವಿವಾಹಸಂಬಂಧದ ಮೂಲಕ ಕೂಡು ; ಪಾಣಿಗ್ರಹಣದ ಮೂಲಕ ಒಂದಾಗು : ಕಾದಂಬರಿಯೊಳ್ ಮದುವೆ ನೆರೆವು . . . ಸಂತೋಷದಿಂ ಬಂದುಜ್ಜಯಿನಿಯಂ ಪುಗುವೆಂ (ಕಾದಂಬ. ೯೩೪) : ಷೋಡಶಸಹಸ್ರಸುರಕನ್ಯೆಯರಂ ದನುಜಪುರಸ್ತ್ರೀಯರಂ ಮದುವೆ ನೆರೆದಪೆಂ (ಜಗಪ. ೧೦-೮೯). [ಮದುವೆ + ನೆರೆ$_1$]

**ಮದುವೆಮಂಟಪ** (ನಾ). ವಿವಾಹ ನಡೆಯುವ ಮಂಟಪ, — ಸ್ಥಳ : ಅಮಲ್ದಾರರು ಮದುವೆಮಂಟಪಕ್ಕೆ ಬಂದು ವಧುವರರಿಗೆ ಆಶೀರ್ವದಿಸಿ. ತಾಂಬೂಲ ತೆಗೆದುಕೊಂಡು ಹೋದರೆ . . . ಸರ್ಟಿಫಿಕೇಟು ಕೊಟ್ಟ ಹಾಗೆ (ಕಂಠ. ೦೯೩). [ಮದುವೆ + ಮಂಟಪ]

**ಮದುವೆಮನೆ** (ನಾ). ವಿವಾಹ ನಡೆಯುವ ಮನೆ : ದೊಡ್ಡಮನೆ ಅಣ್ಣಯ್ಯ ಊಟಕ್ಕೆ ಬರೋದಿಲ್ಲವಂತೆ ಅಂತ ಗೊತ್ತಾದರೆ ಸಾಕು. ಮದುವೆ ಮನೆಯ ಯಜಮಾನ ಯಜಮಾನಿಗೆ ತಾಪತ್ರಯ ಶುರುವಾಯಿತು ಅಂತಲೇ (ಪಪ್ಪರು. ೭೮) ; ಮದುಮೆಮನೆಗಲಾಟೆ ತಡೆಯೋಕಾಗೋದಿಲ್ಲ (ದೂಪಟ್ಟಿ. ೦೭). [ಮದುವೆ + ಮನೆ]

**ಮದುವೆಯಾಯ** (ನಾ). = ಮದುವೆದೆರಿಗೆ : ಮದುವೆಯಾಯ ಮಾನೆ ಣ್ಣೆ(ಣ್ಣೆ) ಪಡಿಯದೆ ತಿಪ್ಪೆಸುಂಕ ಅಷ್ಟಭೋಗ ತೇಜ ಸಾಂಮ್ಯ (ಸಾಮ್ಯ) (ಗೌ)ಡುಗಳಿಗೆ . . .ಕೊಟ್ಟರು (ಎಕ. XXIII, ೦೯೩-೬೦ ; 1365).

[ಮದುವೆ + ಆಯ$_7$]

**ಮದುವೆಹೆಣ್ಣು** (ನಾ). ವಿವಾಹವಾಗುವ ಹುಡುಗಿ ; ಮದುಮಗಳು : ವಧು: ಮದುವೆಹೆಣ್ಣಿನ ಅಥವಾ ಗಂಡಿನ ಅಪ್ಪಅಮ್ಮಂದಿರಿಗೆ ಚಪ್ಪರದ ರಾತ್ರಿಯೆಲ್ಲಾ ನಿದ್ದೆಯಿಲ್ಲ (ಪಪ್ಪರು. ೬೯). [ಮದುವೆ + ಹೆಣ್ಣು(<ಪೆಣ್)]

**ಮದೆ** (ನಾ). ಮರೆ ; ತೆರೆ : ಆಳಸುವ ದನಿ ಬಳಸುವ ಮದೆಕೊಳಿಸುವ ಕೋಡೆಜಿಕೆ ಮೆಱೆಯ ತಳಿರ್ಗೊಂಬುಗಳೊಳ್ ಗಿಳಿ ಮರಳ್ದರಗಿಳಿ ಪೆಣ್ಗಿಳಿ ನೆಳಮಾವಿಟ್ಟಿದುದು ರತಿಯ ಜಕ್ಕಂದೊಟಮಂ (ಅಶಂಕ. ೬-೮೦) ; ನೆರೆಯ ಕಟ್ಟಾಳೊಬ್ಬನೊಲ್ಮೆಯಿಂ ಬಳಿವಿಡಿಯ ಮರದ ಮೇಲ್ಮದೆಕಟ್ಟಿ ಬೇಟೆಯಾಳಿ ಯಾಮುಮ್ತು (ಕಾಬಾರ. ೬೩-೦೬೨). [ದೇ.೩ ತುಳು. ಮದೆ]

**ಮದೆವ, ಮದವ** (ನಾ). ೧. ಮದುವೆಯ ಗಂಡು: ಮದುಮಗ; ವರ: ಸೌಸ್ನಾತಿಕರುಂ . . . ಪುರಂಧ್ರೀವರ್ಗಮುಂ ಬಂದು ಕನಕಪೀಠಸ್ಥಿತರಪ್ಪ ಮದೆವಂಗಂ ಮದೆವಳ್ಗಮಾದ್ರಾಕ್ಷತಾರೋಪಣಂಗೆಯ್ದರ್ (ಶಾಂತಿಪು. ೬-೦೬ ವ). **ಮದವ** : ೨. ಗಂಡ; ಪತಿ: ಕ್ಲೇಶಿಯೆನಿತುಮಾಕೆಯ ಮದವಂ (ಜಾತಿ. ೨೨-೦೭) ; ಮಗಳ ಮದವನಂ ಜಾಮಾತೃವೆಂಬುದು (ಶಬ್ದಮ. ೮೩-೩೫೦). [<ಮದುವೆ + — ಅ$_7$]

**ಮದೆವಳ್, ಮದವಳ್, ಮದುವಳ್** (ನಾ). ೧. ಮದುವೆಯ ಹೆಣ್ಣು ; ಮದುಮಗಳು ; ವಧು : ಆ ಮದೆವಳ್ ರಕ್ಕಸನಲ್ಲಿಗೆ ಬಂದೇನೆನ್ನಂ ನೀ ಮೆಚ್ಚಿದಂತು ಮಾಡೆಂದು ತನ್ನಂ ತೋಱಿದೊಡೆ (ವಡ್ಡಾರಾ. ೦೩-೨೬): ಸೌಸ್ನಾತಿಕರುಂ . . . ಪುರಂಧ್ರೀವರ್ಗಮುಂ ಬಂದು ಕನಕಪೀಠಸ್ಥಿತರಪ್ಪ ಮದೆವಂಗಂ ಮದೆವಳ್ಗಮಾದ್ರಾಕ್ಷತಾರೋಪಣಂಗೆಯ್ದರ್ (ಶಾಂತಿಪು. ೬-೦೬ ವ). **ಮದವಳ್:** ೧. ಪೊಸಮದವಳುಮಾಕೊಳ್ದಗೊವರನುಂ ನಡೆದೇಂ ಪತ್ತಿದರೊ ಪದೆದಾ ಸಖೀಜನಮ್ಯದುಸ್ಮಿತಂ ತಮಗೆ ನೇಸೆಯನೆ ನೂಸುವಿನಂ (ಲೀಲಾವ. ೦೩-೨). **ಮದುವಳ್ : ೨.** ಹೆಂಡತಿ ; ಪತ್ನಿ : ನೊಸೆ ಮದು[ಜಾಕಂ. ದ]ವಳ್ಗಳ್ಜ ಮುತ್ತಬ್ಬೆ . . . ಎಂಬೀ ಮೊಱೆಯ ವನಿತೆಯರ್ ಜನ್ಮಜನ್ಮಂಗಳೊಳ್ ತಾಮ ಗಡಂ ಬೇಱಾಗಿ ಪುಟ್ಟಿದರ್ (ಶಾಂತಿಪು. ೬-೮೭). [ಮದವ + — ಅಳ್$_1$]

**ಮದೇಭ** (ನಾ). = ಮದಕರಿ : ಮದನಮದೇಭಂ ಕಡಿಕೆಯ್ವನ್ನೆಗಂ ಸಲ್ಲಗಮಾದ ಬೀರಂಗಳುಂ (ಆಪು. ೨-೮೭) ; ವಿಭ್ರಾಂತಿಸಿ ತುಳಿವ ಸೀಳುವ ನವಮದೇಭದ ಸಮರ ಸೋಲಿಸಿತಮರದಾಳಿಗಳ (ಕುಮಾವ್ಯಾ. ೪-೭೬). [ಸಂ.]

**ಮದೇಭಗತಿ** (ನಾ). ೧. ಸೊಕ್ಕಿದ ಆನೆಯ ನಡಗೆ. ೨. ಸೊಕ್ಕಿದಾನೆಯಂತೆ ನಡಗೆಯುಳ್ಳವನು : ಹಾ ಮಗನೇ . . . ಹಾ ಮದೇಭಗತಿ (ಕಾಶೀಖ. ೦೩-೦೦೬). [ಸಂ.]

**ಮದೇಭಗಮನೆ** (ನಾ). = ಮದಗಜಗಮನೆ : ಮದೇಭಗಮನೆಯರು ಸರ್ವೇಶ್ವರನ ಸರ್ವಾಂಗಶೋಭನವನೀಕ್ಷಿಸುತ . . . ಬೆಂಬತ್ತಿದರಲಾ (ವೀಶೈಪು. ೩-೦-೦೬). [ಸಂ. ಮದೇಭಗಮನಾ]

**ಮದೇಭಗಾಮಿನಿ** (ನಾ). = ಮದಗಜಗಮನೆ : ರಾಜಮುನೀಶ್ವರಂಗೆ ಮಾದೇವಿ ಮದೇಭಗಾಮಿನಿ ಜಗತ್ತ್ರಿತಯಾಂಬಿಕೆ ನಾಮದಿಂದಮೈರಾವಥು (ಶಾಂತಿಪು. ೯-೦೫೫). [ಸಂ. ಮದೇಭಗಾಮಿನೀ]

**ಮದೋತ್ಕ** (ಗು). ಸೊಕ್ಕಿದ ; ಅಮಲೇರಿದ : ಇತ್ತ ವಸಂತನಿತ್ತ ಮಲಯಾನಿಲನಿತ್ತ ಮಧುವ್ರತಾಳಿ ಮತ್ತಿತ್ತ ಮದೋತ್ಕಕೋಕಿಲ ಕದಂಬಕಮುಯ್ಯೆ ವಿಜೃಂಭಿಸಿತ್ತು (ಶಾದಂಛ. ೬೬೩). [ಸಂ.]

**ಮದೋತ್ಸವ** (ನಾ). ೧. ಪ್ರಣಯದ ಉಲ್ಲಾಸ : ಕಾಮಾಸಕ್ತಿ : ಮದೋತ್ಸವದೆ ಕೋಗಿಲೆವೊಲ್ ಗಬಮಂ ನೆಗಟ್ಟುವಂತನುಮಿಪ ಸೊರ್ಕಿನಿಂ ಪಿಕನಿನಾದೆ ಪೆಣಿಳ್ ಗಬಮಂ ನೆಗಟ್ಟಿದಳ್ (ಕಾವ್ಯಸಾ. ೯೬೪). ೨. ಮಾವಿನ ಹಣ್ಣು. [ಸಂ.]

**ಮದೋದಕ** (ನಾ). = ಮದರಸ : ಮದದಿಂ ಮನೋಹರಮಪ ಕಪೋಲಸ್ಥಳದಲ್ಲಿಯ ಮದೋದಕಲೋಭದಿಂ ಸೊರ್ಕಿ ತಿರುಗುತಿರ್ದ ತುಂಬಿಗಳ್ ಪಾದತಳದಿಂದೊದೆದೊಡಂ ಆ ಹಸ್ತಿ ಅತಿಬಲನಾದೊಡಂ ಕೋಪಮನೆಯ್ದುದು (ಪಂಚತಂ. ಅ. ೪೦-೧೧). [ಸಂ.]

**ಮದೋದಯ** (ನಾ). ೧. (ಆನೆಗೆ) ಮದೋದಕವುಂಟಾಗುವಿಕೆ. ೨. ಅಹಂಕಾರ ಉಂಟಾಗುವಿಕೆ ; ಗರ್ವ ಉಂಟಾಗುವಿಕೆ : ಆದಿಬ್ರಹ್ಮರ ಕೊಟ್ಟೀ ಮೇದಿನಿಗಾನೊಡೆಯನಾತನರಸಿನಿಮಿರಿಂದಾದೊಡಮೇನೆನಗೆಂಬ ಮದೋದಯದೊಳ್ ದೇವ ಬಾಹುಬಲಿ ಬಲಿದಿರ್ದಂ (ಆದಿಪು. ೦೯-೦೮). ೧, ೨ : ಮದೋದಯಂ ಮದನನೊಳಂ ಮತ್ತಗಜದೊಳಂ . . . ಪ್ರಸನ್ನಭಾವಂ ಜಲದೊಳಂ ಜನದೊಳಮಾದ ಶರತ್ಸಮಯದೊಳ್ (ತಗದಿ. ೪-೬೩ ವ). [ಸಂ.]

**ಮದೋದ್ಗಂಧ** (ನಾ). (ಆನೆಯ) ಮದಜಲದ ಅತಿಶಯವಾದ ವಾಸನೆ : ಸ್ಕಂದಾವಾರೇಭ ಮದೋದ್ಗಂಧಾವಿಳೆಯಂ ಕವೇರಕನ್ನಿಕೆಯಂ ತತ್ಸಿಂಧುಪತಿಗಿಂಬಿನಿಂದತಿಸಂಧಿಸಿದಂ ನೃಪತಿ ಬಿಟ್ಟು ತದುಭಯತಟದೊಳ್ (ಶಾಂತಿಪು. ೧೦-೨). [ಸಂ.]

**ಮದೋದ್ಧತ** (ಗು). ೧. ಮದ್ಯಪಾನದಿಂದ ಅಮಲೇರಿದ.—ಮತ್ತೇರಿದ. ೨. ಅಹಂಕಾರದಿಂದ ಉನ್ಮತ್ತವಾದ,—ಉದ್ಧಟವಾದ : ಮದೋದ್ಧತ ಮಕುಟಬದ್ಧ ಚೂಡಾಮಣಿಕಿರಣಚರಣಾಲಕ್ತಕರಾಗಮುಂ . . . ತನಗೆ ಸಹಜಾಭರಣಮಾಗೆ (ಪಂಪಭಾ. ೩-೨೧೮). (ನಾ). ೩. ಮದ್ಯಪಾನದಿಂದ ಅಮಲೇರಿದವನು.—ಮತ್ತೇರಿದವನು : ಮನೋಹರಮೊಳ್ ಮದಿರಪ್ಪರು ಜನದೊಳಗೆ ಮದಿರಾಮದೋದ್ಧತರು (ಕಾವ್ಯಾ. ೨೬-೨೯). ೪. ಅಹಂಕಾರದಿಂದ ಉನ್ಮತ್ತನಾದವನು: ಉದ್ಧಟ. [ಸಂ.]

**ಮದೋದ್ರಿಕ್ತ** (ಗು). ೧. ಕಾಮೋದ್ರೇಕವುಳ್ಳ : ಕಾಮೋದ್ವೇಗವುಳ್ಳ. ೨. ಗರ್ವದಿಂದ ಉಬ್ಬಿದ.—ಉದ್ರೇಕಗೊಂಡ : ಗರ್ವಿಷ್ಠನಾದ. [ಸಂ.]

**ಮದೋದ್ರೇಕ** (ನಾ). ೧. ಮದ್ಯಪಾನದಿಂದ ಉಂಟಾದ ಅತಿಶಯವಾದ ಕಾಮೋದ್ವೇಗ : ಮದಿರಾಪಾನಮಂ ಮಾಡುತುಂ ತನ್ಮದೋದ್ರೇಕದಿಂದುರ್ಕಿ ಸೊರ್ಕಿಮಿಕ್ಕು ಮಿಾಜಿದಂಗನೆಯುರ್ಕಂಗೊಳಿಸಿರ್ದರು (ಅನ್ನಪೂ. ೩-೬೩ವ). ೨. ಅತಿಯಾದ ಗರ್ವ : (೬). [ಸಂ.]

**ಮದೋದ್ರೇಕಿ** (ನಾ). ಅತಿಶಯವಾದ ಕಾಮೋದ್ವೇಗವನ್ನುಳ್ಳವನು : ಮದೋದ್ರೇಕಿಯಾದಾ ಮಹೀವಲ್ಲಭಂಗುರ್ಬಿದುತ್ತುಂಗದೋಷಾಭವಂ . . . ಸೋವಿದಂ ಮೂಡಿ ಚಂದ್ರಂ (ಉದ್ಭ.ಟಿ. ೩-೦೯). [ಸಂ. ಮದೋದ್ರೇಕಿನ್]

**ಮದೋನ್ಮತ್ತ** (ಗು). ೧. ಮದ್ಯಪಾನದಿಂದ ಅಮಲೇರಿದ. ೨. ಗರ್ವದಿಂದ ಅವಿವೇಕಿಯಾದ. ೩. (ಆನೆಯ) ದಾನಜಲ ಹೊಮ್ಮುವುದರಿಂದ ಹುಚ್ಚೆದ್ದ,—ಕ್ರೋಧಗೊಂಡ : ತಿಮಿರಮಂ ಬೆನ್ನಟ್ಟಿ ಪಾವಂಗಳಿಂದೊರಸಿತ್ತೇನತಿಚೋದ್ಯಮೋ ವಿಧು ಮದೋನ್ಮತ್ತೇಭವಿಕ್ರೀಡಿತಂ (ಚಂದ್ರಪ್ರ. ೮-೩೩). (ನಾ). ೪. ಮತ್ತೇರಿದವನು: ಅಮಲೇರಿದವನು : ಮದ್ದುಗುಣಿಕೆಯ ತಿಂದ ಮದೋನ್ಮತ್ತರ ಚಿನ್ನತ್ತ ತೋಚದಿರಯ್ಯ (ಅಬಂತೀ. ೬೪-೨೦). ೫. ಅಹಂಕಾರಿ; ಗರ್ವಿಷ್ಠ : ತಾಂ ಪಿತ್ರವಿತ್ತ ಮದೋನ್ಮತ್ತನಾಗಿ ಧರ್ಮದೊಳ್ ಬಬಮರ್ಣಿಸಿನುಂ. . . ಮೋಕ್ಷದೊಳ್ ನಿರಪೇಕ್ಷಕನುಮಾಗಿ (ಪಂಚತಂ. ೨೮-೬). [ಸಂ.]

**ಮದೋಹರ** (ನಾ). ಒಂದು ಬಗೆಯ ಭಕ್ಷ್ಯ : ಅತಿರಸಕೆ ಗದ ಅಗಲ ೩೫೦ ಉದ ೫೦ ಬೀಜಪು ೦ ೧ ೦ ಬುದಕೆ ನೈರುತ್ಯದಲು ಮದೋಹರಕೆ ಗದೆ ಅಗಲ ೬೨ ಉದ ೧೫ ಬೀಜಪರಿ ೩೦॥ ೦ (ಎಳ. XI. ಹೊಳಲ್ಕೆ. ೬-೨೩: 1528).

[P ಇದು 'ಮನೋಹರ' ಎಂಬುದರ ಅಪಲಿಖಿತವಿರಬಹುದು]

**ಮದ್ಗು** (ನಾ). ೧. ಒಂದು ಬಗೆಯ ಕಾಗೆ; ನೀರುಕಾಗೆ : "ಮದ್ಗುಃ, ಜಳವಾಯಸಃ — ಈ ೨ ನೀರ ಕಾಗೆ" (ಹಲಾಯು. ೯೨-೯೬); ಶುಕ ಶಾರಿಕಾ ಮದ್ಗು ಸುಪರ್ಣಾದಿ ಪಕ್ಷಿಸಮೂಹಗಳಂ (ಚಾರಚಾಂ. ೩೬-೨೬೯). ೨. ಒಂದು ಬಗೆಯ ಮಿಾನು ; ಹೆಮ್ಮಿಾನು : "ಶೃಂಗೀ, ಮದ್ಗುಃ, ಅವಾಗುಃ, ಸಂದ್ಯಾವರ್ತಕಿ — ಈ ೪ ಮೊದಲಾಗುಳ್ಳುವು ಪೆಮ್ಮಿಾನ್" (ಹಲಾಯು. ೦೦೯-೩೬). [ಸಂ.]

**ಮದ್ಗುರ** (ನಾ). ಒಂದು ಬಗೆಯ ಮಿಾನು : "ಮದ್ಗುರಃ—ಮಾಪಾಗಲೂ ಮುಳಗಿಕೊಂಡಿರುವ ಮಿಾನು" (ಶಬ್ದಾ.೦ತಿ.೯೨). [ಸಂ.]

**ಮದ್ದಕ** 'ಮದ್ದಿಕ' ನೋ.

**ಮದ್ದತು** 'ಮದತ್ತು' ನೋ.

**ಮದ್ದತ್ತು** 'ಮದತ್ತು' ನೋ.

**ಮದ್ದಯ್ಯ** (ನಾ). ಒಬ್ಬಾತನ ಹೆಸರು : ಶ್ರೀಮತ್ ಎಚಿಯಮಗಾಮುಣ್ಡನು ಮದ್ದಯ್ಯನು ಬನ್ದಿಲ್ಲಿ ಪ್ರತಕೊಣ್ಡರ್ (ಎಕ. II. ೯೬೮ : 950). [ ? + ಅಯ್ಯ$_1$ ]

**ಮದ್ದರೆ** 'ಮದರ್ೞ' ಪರಾ.

**ಮದ್ದಲಿಸು** (ಕ್ರಿ). ಮದ್ದಲೆಯನ್ನು ಬಾರಿಸಿ ಶಬ್ದವನ್ನುಂಟುಮಾಡು : ಊರೂರ ಮದ್ದಲಿಸಿ ಸಾರಿ ಶಿಷ್ಯರ ಹೆಸರ ವಿರೂತ ಪರವೂತ ಗಿರಿ ಮೇಲೆ ಕಂಬಿಯವರು ನೀರು ನೀಡೂತ ಜನರಿಗೆ (ಸಿದ್ಧಕ. ೩-೩೯). [ ಮದ್ದಲೆ$_1$ + – ಇಸು$_3$ ]

**ಮದ್ದಲೆ$_1$, ಮದ್ದಳಿ, ಮದ್ದಳೆ$_1$** (ನಾ). ಒಂದು ಬಗೆಯ ಚರ್ಮವಾದ್ಯ; ಮೃದಂಗ ; ಮುರಜ : "ಮದ್ದಲೆ(ಳೆ). ಮದಲೆ—ಮರ್ದಲ=ಒಂದು ಚರ್ಮವಾದ್ಯ" (ತದ್ಭಕೋ. ೩೩); ದಣಧಣ್ಣಧಿನ್ತ ಮದ್ದಲೆಯು ಕಿವಿಯೊಳಗೆ ಘನಸೂರು ಹಿಡಿಯೆ ಗುಂಡನಿಗೆ (ಕನ್ನಜಾ. ೦೯೬). ಮದ್ದಳಿ :'ಮದ್ದಳಿಕಾಚಿ' ಪರಾ. ಮದ್ದಳೆ$_1$ : "ಮುರಜಂ ಮೃದಂಗಮೆನೆ ಮದ್ದಳೆಯೆನಿಕ್ಕು" (ಮಂಗರಾ. ೨೪-೬); ಕಾವ್ಯರಚನೆ. . .ಪೀನಂ ಪರುಷತರವಾಕ್ಯವೊತ್ತುಂ ಗರಡೆಯ ಮದ್ದಳೆಯ ಜರ್ಝರಧ್ವನಿಗಳವೊಲ್ (ಕವಿರಾ. ೧-೩೩); ಹುಟ್ಟು ವಾತ ಮದ್ದಳೆಯ ಕಟ್ಟಿದ ನಡೆವಾತ ತಾಳವನೊತ್ತಿದ (ಸರ್ವಜ್ಞ. ೯೯-೨೨೯); ಭೇರಿ ಮದ್ದಳೆ ಸಂಕು ನಗಾರಿ ಹೆಗ್ಗಾಳೆಗಳ್ ಚೀರಿದುವಖಿಳ ದೇಗುಲದಿ (ಮೋಹತ. ೦೮-೬).

ಮದ್ದಳೆಯ ಹಣ=ಮದ್ದಳೆಗರು ತೆರಬೇಕಾದ ತೆರಿಗೆ : ಅಪುತ್ರಿಕ ದ್ರವ್ಯದ ದಶವನ್ಧದೊಳಂ ಪುಟ್ಟಿದ ದ್ರವ್ಯಮುಮಂ ಕಳೆ ಮದ್ದಳೆಯ ಪಣಮುಮಂ ದೇಯಿಂಗೆಚಿಗೆ (ಎಇ. XX. ೬೮-೪೦; 1012).

[<ಪ್ರಾ. ಮದ್ದಲ./ ಸಂ. ಮರ್ದಲ]

**ಮದ್ದಲೆ$_2$** 'ಮದ್ದಾಲೆ' ನೋ.

**ಮದ್ದಳಿ** 'ಮದ್ದಲೆ$_1$' ನೋ.

**ಮದ್ದಳೆಕಾಜಿ** (ನಾ). ಮದ್ದಳೆಯನ್ನು ಬಾರಿಸುವವನು: ತ್ರಿಕಾಲಭೋಗಂ ಮಾಡುವ ಪಾಳವಿಗಳಿರ್ವ್ವರು ಮದ್ದಳೆಕಾಜರು ನಾಲ್ವರ್ಗ್ಗಂ ಮತ್ತರು[ಳೆ]ಂ (ಕೆಎಆ. ೯-೩-೩೨೪; 1062). [ಮದ್ದಳೆ (<ಮದ್ದಲೆ$_1$) + -ಕಾಜಿ]

**ಮದ್ದಳಿಗ** (ನಾ). ಮದ್ದಳೆಯನ್ನು ಬಾರಿಸುವವನು : "ಮದ್ದಳಿಗನೇ ಮಾರ್ದಂಗಿಕನಕ್ಕುಂ" (ಶಶುಸ. ೬೩); ಸಂಗತಿಗಳಂ ಸೂಸುವ ಮದ್ದಳಿಗರಿಂ (ಗಿರಿಶ. ೨-೦೦೫೪); ವೃತ್ತಮದ ಮದ್ದಳಿಗಂಗೆ ಮತ್ತ ೭ (ಕೊಂಡ್ಲ್ಕ ೩೦ ೨-೦೬: 1278); ಮದ್ದಳಿಗಂ ಮದ್ದಳೆಯುಂ ಕರ್ಪೂರ ಸಲ್ಲಕಂತೆ ತೊಡಯೊಳಳವಡಿಸಿ (ರರ್ಮಶ. ೨-೨೩ ಪ). [ಮದ್ದಳೆ$_1$ (< ಮದ್ದಲೆ$_1$) + -ಇಗ]

**ಮದ್ದಳಿಗಿತಿ** (ನಾ). ಮದ್ದಳೆಯನ್ನು ಬಾರಿಸುವವಳು : ಇತಿಗೆ_ಚಾಮರಿಗಿತಿ, ಮದ್ದಳಿಗಿತಿ, ಅವುಜಿಗಿತಿ (ಶಮಶ. ೨೦೮ ಕೃಡೋ).

[ಮದ್ದಳಿಗ + -ಇತಿ$_1$ (<-ಇತ್ತಿ)]

**ಮದ್ದಳೆ$_1$** 'ಮದ್ದಲೆ$_1$' ನೋ.

**ಮದ್ದಳೆ$_2$** 'ಮದ್ದಾಲೆ' ನೋ.

**ಮದ್ದಳೆಗ** (ನಾ). = ಮದ್ದಳಿಗ : ಪಲವು ಕತ್ತರದ ಕಳಾಸವನಜಿದು ಮದ್ದಳೆಗ ಕೇಳಿಸಿ ನಿಂದನೊಡನೆ (ಭರತ. ೦೨-೬೮).

[ಮದ್ದಳೆ$_1$ (< ಮದ್ದಲೆ$_1$) + -ಗ$_2$]

**ಮದ್ದಾನೆ** 'ಮದ' ಪರಾ.

**ಮದ್ದಾಲೆ**, ಮದ್ದಲೆ$_2$, ಮದ್ದಳೆ$_2$ (ನಾ). ಒಂದು ಬಗೆಯ ಸಸ್ಯ ; ಏಳೆಲೆಬಾಳೆ : ಸಪ್ತಪರ್ಣ, ಜಂತಾಲಮರ, ಮದ್ದಾಲೆ, ಏಳೆಲೆಬಾಳೆ, ಕೋಡಾಲೆ, ಬಂತಲೆ (ವೃಕಿಗಿ. ೩-೮೩) ; ಬೆಳ್ಪಾಲೆ, ಮದ್ದಾಲೆ, ನೇರಲು . . . ಗಗನಚುಂಬಿತವೃಕ್ಷಗಳು (ಕಂಜಕಂ. ೨). ಮದ್ದಲೆ$_2$: ಬಳಬೂತಾಳ, ಮದ್ದಲೆ (ವೃಕಿಗಿ. ೬೮-೦೩೯೪). ಮದ್ದಳೆ$_2$ : (ವೃಕಿಗಿ. ೯೭-೯೨೯). [ ? ]

**ಮದ್ದಿಕ**, ಮತ್ತಿಕ, ಮದಿಕ, ಮದ್ದಕ (ನಾ). ಊರೊಟ್ಟಿನ ಆಸ್ತಿ ; ಸಾರ್ವಜನಿಕ ಸ್ವತ್ತು : ಬಿಜಾ ಗ್ರಾಮ ಮದ್ದಿಕದಲ್ಲಿ ಪೂರ ಮುಂದಣ ಹೊಸ್ತಾಗಿ ಕಟ್ಟಿಸಿದ ಮಂಟಪಕ್ಕೆ (ಎಕ. III. ಶ್ರೀರಂಗ. ೦೩-೫೯ : 1663) ; ಗ್ರಾಮಸ್ಥರು ದಂಪದೋಷಗಳಿಂದ ಒಂದ ಮತ್ತನ್ನು ಮದ್ದಿಕದ ಹಣ ಎಂದು ಗ್ರಾಮದ ಯಜಮಾನನಲ್ಲಿಟ್ಟು ಅದನ್ನು ದೇವಸ್ಥಾನ, ಧರ್ಮಛತ್ರ ಮುಂತಾದವುಗಳನ್ನು ಕಟ್ಟುವುದಕ್ಕೆ ಉಪಯೋಗಿಸುತ್ತಿದ್ದರು (ಕಾಕೃಪ. ೦೬). **ಮತ್ತಿಕ** : ಶ್ರೀರಾಮನಾಥನ ಉತ್ಸವದ ಕಟ್ಟೆ ನಡೆಯುವಷ್ಟೆ ಕೂಡ್ಲೂರು ಶಾನಬಾಗ ಕಮಲಿಪತಯ್ಯನವರಿಂದ ಕ್ರಯಲಬ್ಧವಾಗಿ ಬಸ್ತ ಮತ್ತಿಕದ ತೆಂಗಿನ ತೋಟವನ್ನು ಪೊಪ್ಸಿಸಿ ಇದೇನೆ (ಎಕ. IX. ಚನ್ನಪ. ೦೦೬-೦೯ ; 1828). **ಮದಿಕ** : ನಿಂಪು ಪೂರ ಮದಿಕಕೆ ಸಲುವ ಹರಯುವ ಹಂದಿಮನಿಯ ಸರಹಿನ ಭೂಮಿಯನು (ಪ್ರಿ.ಅಂ. ೦೯೩೦, ೬೯-೦೦ : 1396). **ಮದ್ದಕ**: ಅದನ್ನು ಮದ್ದಕದಲ್ಲಿಟ್ಟು ಎಲ್ಲರೂ ಉಪಯೋಗಿಸಿಕೊಳ್ಳಬೇಕು (ಟಾಕತ ೬೬).

**ಮದ್ದಕದ ಗೋಡೆ** = "(ಪ್ರತ್ಯೇಕಿಸುವ, ಎರಡು ಮನೆಗಳ ಮಾಲೀಕರಿಗೂ ಸೇರಿದ) ಮದ್ದಕದ ಗೋಡೆ" (Party-Wall. ಇಂಕಪ). [< ಸಂ. ಮಧ್ಯಕ]

**ಮದ್ದಿಕ್ಕು** (ಕ್ರಿ). ೧. ವಶೀಕರಣಕ್ಕಾಗಿ ಔಷಧಿಯನ್ನು ನೀಡು : ಮರುಳುಗೊಳಿಸು : ಮನಸೋತು ಗೋಪಿಯರು ಮೆಚ್ಚಿ ಮದ್ದಿಕ್ಕಿದರೇ (ಭುರಂದ. ೦-೬೯ ಅಮಜಕ್ಕಬಿ). ೨. ವಿಷಹಾಕು : ಮದ್ದಿಕ್ಕಿ ಕೊಲ್ಲುವವ ಮಾರಿ ಹೊಲೆಯ (ಭುರಂದ. ೦-೦೬೮-೩). [ಮದ್ದು (<ಮರ್ದು) + ಇಕ್ಕು]

**ಮದ್ದಿಡಿ** (ಕ್ರಿ). ಸಿಡಿಮದ್ದು ತುಂಬು ; ಮದ್ದಿನಿಂದ ತುಂಬಿಸು : ಮದ್ದಿಡಿದ ಮಣ್ಣುಡಿಕೆ ಕಿಡಿಗೊಂಡು ಸಿಡಿಯೆ (ತತ್ತ್ವಾಂಗ. ೬-೦೬೦).

[ಮದ್ದು (< ಮರ್ದು) + ಇಡಿ]

**ಮದ್ದಿನಸೊಪ್ಪು** (ನಾ). ಒಂದು ಬಗೆಯ ಔಷಧೀಸಸ್ಯ: ಮರುಗುಮಾತಂಗಿ, ಮದ್ದಿನಸೊಪ್ಪು (ವೃಕಿಗಿ. ೬೯-೦೬೦೬). [<ಮದ್ದು + ಸೊಪ್ಪು$_1$]

**ಮದ್ದಿಮಬಿಸಿಗೆ** 'ಮಧ್ಯಮಬೀಸಿಗೆ' ನೋ.

**ಮದ್ದಿಮೆ** (ನಾ). ನಡುತರವಾದುದು : ಪಟುತ್ವ ಕಡಿಮೆಯಾದುದು : ರ್ಯುಣಿಯಾದ ತಾಯಿ . . . ಮುದುಕಿಯಾದವಳು . . . ಚಣ್ಣು ಮದ್ದಿಮೆ ಯಾಗುತ್ತಾ ನಡೆದವು (ಕಥಾಸ್ತ್ರ. ೬೩) ; ಕಣ್ಣು ಸ್ವಲ್ಪ ಮದ್ದಿಮೆ (ಪೇಟಮ. ೦೯೬). [< ಸಂ. ಮಧ್ಯಮ]

**ಮದ್ದೀಡು** (ನಾ). (ಇತರರಿಗೆ ಕೇಡುಂಟು ಮಾಡಲು) ಆಹಾರದಲ್ಲಿ ಸೇರಿಸಿ ಹಾಕುವ ವಿಷ : ಇಕ್ಕುಮದ್ದು ; ಕೈಮಸಕ : ಗುಣಹೊಂದಿದವರೆಲ್ಲರಿಗೂ ಮದ್ದೀಡಿನ ಚಿಹ್ನೆಗಳು ವಿಕಲೀತಿಯಾಗಿರುತ್ತವೆ. ನಾಲಿಗೆ ರುಚಿಯಾಗಿರುತ್ತದೆ. ಆದರೆ ಹಸಿವಿರುವುದಿಲ್ಲ (ಮನೋಸಂ. ೬೮) ; ಭೈರವ್ವನಿಗೆ ಯಾರೋ ಮದ್ದೀಡುಮಾಡಿದ್ದರಂತೆ (ಮನೋಸಂ. ೦೫೩).

[ಮದ್ದು (< ಮರ್ದು) + ಈಡು$_1$]

**ಮದ್ದು** 'ಮರ್ದು' ನೋ.

**ಮದ್ದುಕತ್ತಿ** (ನಾ). ವಿಷವನ್ನು ಲೇಪಿಸಿದ ಖಡ್ಗ : ಖಾಸಾ ಮದ್ದುಕತ್ತಿ ಒಂದು, ಕಠಾರಿ ಒಂದು, ಬಾಂಕ ಒಂದು (ರಾಜೇಂದ್ರ. ೫೬).

[ ಮದ್ದು (< ಮರ್ದು) + ಕತ್ತಿ ]

**ಮದ್ದುಗಾರ** (ನಾ). ಔಷಧಿಯನ್ನು ಮಾಡುವವನು : ಮದ್ದುಗಾರನ ಹಾಸ್ಯ (ಹಾಸ್ಯಮಂ. ೧೨). [ಮದ್ದು (<ಮರ್ದು) + -ಕಾರ$_1$ (<-ಕಾಜ)]

**ಮದ್ದುಗಾರಿಕೆ** (ನಾ). ಔಷಧವನ್ನು ಮಾಡುವಿಕೆ : ಆಚಾರ್ಯ, ನಮ್ಮ ಪಾಳೆಯದೊಳಪರಾರ್ಯರರಿಯದ ಮದ್ದುಗಾರಿಕೆಯ ಬಲ್ಲ ಮುತ್ತವರು ಕೇಳುಗುರೊಂದವನುಳಿನು ಬೆರಳಿಗೆ ಬೆರಳ ಬೆಳಸಲಾರ್ಪರು (ಪಮ್ಪರ. ೪೫-೨೦೫).

[ ಮದ್ದುಗಾರ + -ಇಕೆ ]

**ಮದ್ದುಗಾರ್ತಿ** (ನಾ). ೧. ಔಷಧಿಯನ್ನು ಮಾಡುವವಳು. ೨. ವಿಷವಿಕ್ಕುವವಳು : ಕೈಮಸಕನ್ನು ಹಾಕುವವಳು : ಬೆಟ್ಟೆಯರು ಮಟಮಾಯೆಗಳು ಬಲು ಮದ್ದುಗಾರ್ತಿ [ಕಾಕಾಂ. ಕಾತಿ]ಯರು (ಬಸಕೃ. ೪೦-೩೬).

[ ಮದ್ದುಗಾರ + -ತಿ$_1$ (< -ಇತ್ತಿ) ]

**ಮದ್ದುಗುಣಿಕೆ** 'ಮರ್ದುಗುಣಿಕೆ' ನೋ.

**ಮದ್ದೂರು** 'ಮಬ್ಬೂರ್' ನೋ.

**ಮದ್ದೆಚ್ಚು** (ಕ್ರಿ). ಔಷಧವನ್ನು ಲೇಪಿಸು : ಸರಳಂತ ಪುಲಿಯೊಂದು ಕಣ್ಪೇನೆಯೊಳು ಬಿರ್ದು ಪೊರಳುತಿರಲು ವೈದ್ಯನೋರ್ವ ಭರದಿ ಮದ್ದೆಚ್ಚ ಲಂದಾ ಪುಲಿ ಮಾಡಿದೊಂದಿರದ ಕೇಳ್ವಜೀವೆಯ ರಾಯ (ನಾಗಕು. ೦೯_೩೮).

[ ಮದ್ದು (< ಮರ್ದು) + ಎಚ್ಚು ]

**ಮದ್ಯ** (ಗು). ೧. ಅಮಲೇರಿಸುವ. (ನಾ). ೨. ಕಳ್ಳು, ಹೆಂಡ, ಮದಿರೆ ಇತ್ಯಾದಿಯಾದ ಅಮಲೇರಿಸುವ ಪಾನೀಯ : "ಮೈರೇಯ ಮಾಸವಂ ಮಧು ಮಾಧವಂ ಸೀಧು . . . ಮದಿರೆ ಮದ್ಯಂ ಕಾಪಿಶಾಯನಂ ವಾರುಣಿ ಮದಿಷ್ಟ ಕಾದಂಬರಿ ಪರಿಸ್ರುತ ಕಲ್ಯಮೆನೆ ಕಳ್ಳೆನಿಕ್ಕುಂ" (ಮಂಗರಾ. ೬೩-೮) ; ಮದ್ಯ ಮಧು ಮಾಂಸವೆಂಬಿವನಾದ್ಯಂತಂ ತೊಜಿಪುದು (ಸುಕಶಿಶಾ. ೫-೪೦) ; ಅಂಗದಿಚ್ಛೆಗೆ ಮದ್ಯ ಮಾಂಸವ ತಿಂಬರು ಕಂಗಳಿಚ್ಛೆಗೆ ಪರವಧುವ ನೆರೆವರು ಲಿಂಗಲಾಂಛನಧಾರಿಯಾದಲ್ಲಿ ಫಲವೇನು (ಬಸವ. ೦೦೬) ; ಮದ್ಯದ ಉಗ್ರವಾಸನೆ ಹೊರಡುತ್ತಿತ್ತು (ಪೋಕಾಂ. ೪೩೨). ೩. ಅಮೃತ : ಕಟ್ಟುಪ್ಪ ವಿಷದ ಮದ್ಯದ ಪುಟ್ಟಿದ ನೆಲೆ, ಜಳಧಿಯಂ ಪೊಗಳದೆ ಸಿಕ್ಕಿ ಮಟ್ಟವಿ[ರು] ರಾಜಮಲ್ಲಂ ಕಟ್ಟಿಸಿದಜಗೆಜೆ ಸಮುದ್ರದಿಂ ಮಿಗಿಲಲ್ತೆ (ಕೆಇಎ. XVIII, ೯೯-೩೬ ; 1019). [ಸಂ.]

**ಮದ್ಯಗೋಷ್ಠಿ** (ನಾ). ಮದ್ಯಪಾನ ಮಾಡುವವರ ಕೂಟ ; ಪಾನಕೂಟ.

[ ಸಂ. ಮದ್ಯಗೋಷ್ಠೀ ]

**ಮದ್ಯಪ** (ನಾ). ಹೆಂಡವನ್ನು ಕುಡಿಯುವವನು ; ಮದ್ಯಪಾನ ಮಾಡುವವನು. [ಸಂ.]

**ಮದ್ಯಪಾನ** (ನಾ). ಹೆಂಡ ಕುಡಿಯುವುದು : ಉಟ್ಟುದನು ಮಱೆದು . . . ನಿಲ್ವೀ ನಿಟ್ಟೆಗೆ ನೆಲೆಯಾದುದು ಬಾಯ್ಬಿಟ್ಟೊದಱುವ ಮದ್ಯಪಾನ ಮತ್ತಜನೌಘಂ (ಚಾರಿತ್ರ. ೧೧-೧೪೧). [ಸಂ.]

**ಮದ್ಯಪಾಯಿ** (ನಾ). = ಮದ್ಯಪ : ಷಂಷರ್‌ಖಾನನು . . . ಮದ್ಯಪಾಯಿಯೂ, ವಿಲಾಸಿಯೂ, ವಿಷಯಾಸಕ್ತನೂ ಆಗಿದ್ದ ನಯಾಜುನಿಗೆ ಆಪ್ತಸೇವಕನಾಗಿ ರಾಜ್ಯದ ಆಗುಹೋಗುಗಳಲ್ಲಿ ಮಹತ್ವದ ಪಾತ್ರವಹಿಸಿದ್ದನು (ರಾಜ್ಯೋದ. ೦೯೩). [ಸಂ. ಮದ್ಯಪಾಯಿನ್]

**ಮದ್ಯಪಿ** (ನಾ). = ಮದ್ಯಪ : ಬಳಿರಿಯ ನೋಂಟಿಗೆ ಬೀದಿಗೆ ಮುಳಿವರ ಮನೆಗಳ್ಗೆ ಮದ್ಯಪಿಗಳಲ್ಲಿಗೆ ಕೋಮಳೆಯಂ ಪೋಗಲ್ಕಿತ್ತಡೆ ಬಳಿರಿಗೆ ಪುಯ್ಯಲಿಡಪೋದ ಕುಱೆಯಂತಕ್ಕು (ಮಲತಿ. ೬-೨೬) ; ಪೊಡವಿಪನ ವಾಕ್ಯದೊಳು ಪುಸಿಯ ನೀಂ ಪಿಡಿದೆಯಾದಡೆ ನಾನು ಮುನಿತನವನುಳಿದು . . . ಮದ್ಯಪಿಯಾಗಿ ತೆಂಕಮುಖವಹೆನು (ಪತಶಾ. ೦೪-೦೪) ; ಚಿಕ್ಕಟಂ ಮಸಗಿ ಕುಣಿದಾಡುತ್ತುಮಿರ್ದ ಮದ್ಯಪಿಗಳ ಮಧುಪಾನಕೇಳೀವಿಜೃಂಭಣ ಬಹಳ ಕೋಳಾಹಳಕುತೂಹಳಮುಂ ಧರ್ಮನಾಥಕುಮಾರಂ ನೋಡಿ ನೋಡಿ ನಗುತ್ತುಂ (ಚಾರಿತ್ರ. ೧೦-೧೪೦ ವ). [ಸಂ. ಮದ್ಯಪಿನ್]

**ಮದ್ಯಮುಬಿಸಿಗೆ** 'ಮಧ್ಯಮಬೀಸಿಗೆ' ನೋ.

**ಮದ್ಯವ್ರತ** (ನಾ). ಹೆಂಡ ಮೊದಲಾದುವನ್ನು ಸೇವಿಸಕೂಡದೆಂಬ ವ್ರತ : ಹುಳಿತವಾದ ಮೊಸರು ಮಜ್ಜಿಗೆಯನು ಅಂಬಲವನು ಬಿಡುವುದು ಬಿಡದೆಯಿದ್ದರೆ ಮದ್ಯವ್ರತಕ್ಕೆ ಅಪಚಾರವಹುದು (ಸಾಗಾರ. ೩೦). [ಸಂ.]

**ಮದ್ಯಸಾಕ್ಷಿಕ** (ನಾ). ಮದ್ಯವನ್ನು ಸಾಕ್ಷಿಯಾಗಿಟ್ಟುಕೊಂಡಿರುವಿಕೆ : ಮದ್ಯಸಾಕ್ಷಿಕವಾಗಿ ನಾವು ಕೆಳೆತನಕ್ಕೆ ಮೊದಲು ಮಾಡಬೇಕು. ಆದುದರಿಂದ ನಡೆ, ಮದ್ಯದ ಅಂಗಡಿಗೆ ಹೋಗೋಣ (ಶಾಕುಂತ. ೭೮). [ಸಂ.]

**ಮದ್ಯಸಾರ** (ನಾ). ೧. ತೀಕ್ಷ್ಣವಾದ ಮದ್ಯ : "ತೀಕ್ಷ್ಣಮದ್ಯ, ಮದ್ಯಸಾರ, ಸಾರಾಯಿ" (spirit. ೩೦೪೩). ೨. (ತೀಕ್ಷ್ಣವಾದ ಮದ್ಯವನ್ನು ಪಯೋಗಿಸಿ ಮಾಡುವ) ಒಂದು ಬಗೆಯ ದ್ರಾವಣ : ಹಚ್ಚಿದ ಕೂಡಲೆ ಇಂಗಿ ಹೋಗುವ ಮದ್ಯಸಾರವನ್ನು ಜೀವಿಶುದ್ಧೀಕರಣ (Sterilization)ಕ್ಕೆ ಉಪಯೋಗಿಸಬೇಕು (ಕಲರೋ. ೭೦) ; ಸರಿಯಾದ ನರಕ್ಕೆ ಮದ್ಯಸಾರವನ್ನು ಚುಚ್ಚಿ ಹೊಗಿಸಿ ತಲೆಯ ಮೇಲಿರುವ ನೋವನ್ನು ಕಳೆಯಬಹುದು (ಶರೀರಾ. I, ೪೯೭). [ಸಂ.]

**ಮದ್ಯಸೇವೆ** (ನಾ). = ಮದ್ಯಪಾನ : ಕೊಲೆಯುಮಸತ್ಯಮುಂ ಕಳವು ಮನ್ಯಸತಿಸ್ಪೃಹೆಯುಂ ವಿನೋದಮುಂ ಸಲೆ ಮಧು ಮದ್ಯಸೇವೆಯುಮಧರ್ಮಂ (ಧರ್ಮಾ. ೩-೯). [ಸಂ. ಮದ್ಯಸೇವಾ]

**ಮದ್ಯಾಂಗ** (ನಾ). [ಜೈನ] ಭೋಗಭೂಮಿಯಲ್ಲಿರುವ ಹತ್ತು ಬಗೆಯ ಕಲ್ಪವೃಕ್ಷಗಳಲ್ಲಿ ಒಂದು ; (ಮದವನ್ನುಂಟುಮಾಡದ) ನಾನಾ ವಿಧವಾದ ಪಾನೀಯಗಳನ್ನು ಕೊಡುವ ಕಲ್ಪವೃಕ್ಷ : ಕುಡಿದೊಡೆ ಸೊರ್ಕಿಸದ್ರವು ನಾಣ್ಗಿಡಿಸದವು ಮನಕ್ಕಲಂಪನೀವುವು ರತಮಂ ನಡೆಯಿಪ್ಪುವೆನಿಸುವ ಮಧುಗಳನೆಡೆಯುಡುಗದೆ ಕುಡುಗುಮುಚಿತ ಮದ್ಯಾಂಗಕುಜಂ (ಆದಿಪು. ೩-೩೨) ; ಮದ್ಯಾಂಗಮೆಂಬುದು ಮದವಿಕಾರಮನಾಗಿಸದೆ ನಾನಾ ವಿಧ ಪಾನವಿಶೇಷಂಗಳನಿತ್ತು ದಂಪತಿಗೆ ರಾಗಮುಂ ಪುಟ್ಟಿಸುವುದು (ಶಾಪುಂಪು. ೯). [ಸಂ.]

**ಮದ್ಯಾರ್ಕ** (ನಾ). = ಮದ್ಯಸಾರ ೨ : ಅದು ಎಣ್ಣೆಯೊಳಗೂ ಮದ್ಯಾರ್ಕದೊಳಗೂ ಬಲುಬೇಗ ಕರಗುವುದು (ಮುಂಬಡು. ೪-೭೨).

[ಮದ್ಯ + ಅರ್ಕ$_1$ (< ಅರಕ$_1$)]

**ಮದ್ರ** (ನಾ). ೧. ಸುಖ ; ಸಂತೋಷ. ೨. ಒಂದು ದೇಶದ ಹೆಸರು : ಮ[ಹಾಶಾಂ. ಮಾ]ದ್ರಮಸುಃಧರೇಂದ್ರರೌದ್ರವಿದ್ರಾವಣ ಪರಾಕು (ಚಿತ್ರಶಾಂ. ೩-೧ ಶ). [ಸಂ.]

**ಮದ್ರಸ** (ನಾ). ಒಂದು ಬಗೆಯ ಔಷಧೀ ಸಸ್ಯ : ಮದ್ರಸ. ಕಾಷರಳ (ವೃ.ಶಿಗ. ೭೭-೭೩೪೩). 'ಮಧುರಸೆ' ಪರಾ. [ ? ]

**ಮದ್ಲೆಮರ** (ನಾ). ಒಂದು ಬಗೆಯ ಮರ : (ವೃ.ಶಿಗ. ೩೫-೭೭೫).

[ ಮದ್ಲೆ$_0$ + ಮರ$_1$]

**ಮಧು** (ಗು). ೧. ಸವಿಯಾದ ; ರುಚಿಯಾದ. ೨. ಸುಖಕರವಾದ : ಆಹ್ಲಾದಕರವಾದ. (ನಾ). ೩. ಜೇನುತುಪ್ಪ : "ಸಾರಘಂ ಮಾಕ್ಷಿಕಂ . . . ಮಧು, ಪುಷ್ಪರಸಃ –ಈ ೫ ಜೇನ ತುಪ್ಪಂ" (ಹಲಾಯು. ೧೧೨-೯೭೭): ರುಚಿಯೊಳು ಮಧುರವು ಮಧುವಹುದದಕಿಂತ ಮಧುರವು ಶಾನಹುದಮೃತ (ಇಂತಾಕ. ೨೨೨-೯೬). ೪. ಹೂವಿನ ರಸ : ಮಕರಂದ : "ಮಕರಂದಃ. ಮಧು__ಈ ೨ ಪೂವಿನ ಬಂಡು" (ಹಲಾಯು. ೩೦-೩೪). 'ಮಧುಕರ' ಪರಾ. ೫. ಅಮಲೇರಿಸುವ ಪಾನೀಯ ; ಕಳ್ಳು : ಮದ್ಯ: ಮಧು ಸೀತುಂ ಕಟು ಸೀಧು ಪೋ ಪುಳಿತ ಕಳ್ಳಲ್ತು (ಶಂಶಭಾ. ೪-೬೬) ; ಕಂಸವಧುಗಳ್ ಮಧುವಂ ಕುಡಿವೊಂದು ಶಾಳಭೂಜಾಳಿಯ ತೀವ್ರ ಘೋರರವ ವಲ್ಲಿಗೆ ಪೋಗಲೆ ಬಾರದು (ಜಗಾ. ೪-೩೯). ೬. ನೀರು. ೭. ಸಕ್ಕರೆ. ೮. ಸವಿ ; ಮಾಧುರ್ಯ. ೯. ಹಾಲು ಮತ್ತು ಹಾಲಿನಿಂದ ಉತ್ಪನ್ನವಾಗುವ ಪದಾರ್ಥ. ೧೦. ಜೇನುಹುಟ್ಟು. ೧೧. ಜೇನು ಮೇಣ. ೧೨. ಚೈತ್ರಮಾಸ : "ಚೈತ್ರಮಾಸವುಂ ಮಧುವೆಂಬುದು" (ಹಲಾಯು. ೦೯-೦೦೪). ೧೩. ವಸಂತ ಋತು : ನೋಟ್ಟಂ ಬೆಲೆಗೊಟ್ಟು ತಾರ ಮಧುವಂ ಮಲಯಾನಿಲನಂ ಮನೋಜನಂ ಕೌಮುದಿಯಂ (ಅರ್ಜನೇ. ೨-೪೫) ; ಅರಸುಮಗಂ ನಹಿದಂ ಮದನಂ ಮಧುಗೂಡಿ ನಡೆವ ತೆಱದಿ (ಜಯಶ್ರೀ. ೪-೧). ೧೪. ವಿಷ್ಣುವಿನಿಂದ ಹತನಾದ ಒಬ್ಬ ದೈತ್ಯ ; P ಇವನು ವಿಷ್ಣುವಿನ ಕರ್ಣಮಲದಿಂದ ಹುಟ್ಟಿದವನೆಂದು ಹೇಳುತ್ತಾರೆ : ಮಧುಕೈಟಭಪ್ರಳಯಸಮವರ್ತಿ ಜಯ (ಜಗಾ. ೩-೦೦೩ ಕಗಳ); ಈತನಾ ಮಧುಕೈಟಭನ ಮುಱಿದಾತ (ಕುಮ್ಯಾ. ೯-೩೪). ೧೫. ಅಶೋಕವೃಕ್ಷ. ೧೬. ಜೀವನಿಯೆಂಬ ಸಸ್ಯ. ೧೭. ತುಂಬಿ : ಭ್ರಮರ. ೧೮. ಹೆಜ್ಜೇನು : ಮಧು ತಾಕಿ ಬಿದ್ದವರಿಗೆ:– ಕಿಱುನೆಲ್ಲಿಯ ಸಮೂಲವಂ ತಂದು ಎಳನೀರಲ್ಲಿ ಅರೆದು ಎಳನೀರಲ್ಲಿ ಕವಡಿ ಕೊಳ್ಳಲು ಉರಿತ ನಿಲ್ಲುವದು (ವಿಷ್ಣವಿ. ೦೩೪). ೧೯. ತವರ : "ತವರ ಪರಾಗ ಭ್ರಮರಂ ತವೆ ದೈತ್ಯರ್ ಕ್ಷುದ್ರ ಚೈತ್ರಮಾಸಂ ಸುರೆ ಜೇನ್ ಪವಣೆಸಲಮೃತಂ ತೀವಿದ ನವಸಂಖ್ಯೆಯ ಪೆಸರುವೊಪ್ಪೆ ಮಧುಶಬ್ದಂಗಳ್" (ನಾನಾರ್ಥ. ೪೨) ; "ದನುಜಾಮೃತವಂಶ ಪರಾಗ ಭೃಂಗ ಕ್ಷುದ್ರಾಸವ ಚೈತ್ರಮಾಸ ಮಧುವೆಂಬಿವಕಂ" (ಚಾಸಾರ. ೦೪). [ಸಂ.]

**ಮಧುಕ** (ಗು). ೧. ಸವಿಯಾದ ; ಮಧುರವಾದ. ೨. ಇಂಪಾದ : ಕರ್ಣಮಧುರವಾದ. ೩. ಜೇನುತುಪ್ಪದ ಬಣ್ಣವುಳ್ಳ. (ನಾ). ೪. ಇಪ್ಪೆಮರ: "ಇಪ್ಪೆ ಮಧುಕಂ" (ಮಂಗರಾ. ೪೨-೩೯); ಎಲವಂ ಸಂಪಗೆ . . . ಮತ್ತಿ ಮಧುಕಂ ಮಗ್ಗಾರೆ . . . ಒಪ್ಪುಗುಮಾ ವನಾಂತದೊಳ್ (ರಾಜಶೇ. ೩-೩೬); ಪಲಾಶ ಪಿಪ್ಪಲ ಮಧುಕ ಹೊನ್ನ ಕದಂಬ ಗುಗ್ಗುಳ ನಾಗ ಪುನ್ನಾಗ (ಉತ್ತರ. ೦೦-೪). ೫. ಅಶೋಕವೃಕ್ಷ. ೬. ಒಂದು ಬಗೆಯ ಪಕ್ಷಿ . ೭. ಒಂದು ಬಗೆಯ ಸಸ್ಯ ; ಜ್ಯೇಷ್ಠಮಧು ; ಯಷ್ಟಿಮಧುಕ : ಅತಿಮಧುರ : "ಆ ಮಧುಕಮೆನೆ ಯಷ್ಟಿಮಧುಕಮೆನಿಸಿಕ್ಕು" (ಮಂಗರಾ. ೪೦-೩೬) ; ಮಧುಕಂ ಮಧೂಕಪುಷ್ಪಂ ಮಧುಶರ್ಕರೆ ಕೋಷ್ಠಮೆಂಬಿವಂ ಮೊದಲೊಳ್ ಪೊಟಿಕ್ಕೆ (ಲೋಕೋಪ. ೬-೪೦). ೮. ತವರ. ೯. ಹೊಗಳುಭಟ್ಟ ; ಸ್ತುತಿಪಾಠಕ. ೧೦. ಅಮೃತಬಳ್ಳಿ. [ಸಂ.]

**ಮಧುಕಮ್ಮೋಜ** (ನಾ). ಒಬ್ಬಾತನ ಹೆಸರು : ಮಧುಕಮ್ಮೋಜರುಂ ಬೆಣ್ಣೆಗೇಸಿಯುಂ ಎಱೆಯಮ್ಮನುಂ ಇನ್ತಿವರಿಬ್ದುಕೊಟ್ಟೋರ್ (ಎಕ. VI, ಶಿಕ್ಮ. ೩-೦೦; ೩೦೯೪). [ಮಧುಕ + ಅಮ್ಮ$_1$ + ಓಜ$_1$ (< ಒವಜ್ಝ)]

**ಮಧುಕರ** (ನಾ). ೧. ದೊಡ್ಡಗಾತ್ರದ ಕಪ್ಪುಬಣ್ಣದ ದುಂಬಿ; ಭ್ರಮರ : "ಷಟ್ಪದಂ ಮಧುಕರಂ ಮಧುಪಮಾ ಭ್ರಮರಮುಕ್ಕುಂ" (ಶುಂಗರಾ. ೩೨-೧೦); ವಲ್ಲಕೀಗೇಯದ ದನಿ ಮಾಣಲ್ಕೆ ಗೀತವವಸಾನದೊಳುನ್ಮದಮಧುಕರಸ್ವನಂ ಮಾಣ್ದಿದ ಕುಮುದಿನಿಯಂತೆ ಕಾಂತೆ ಕಣ್ಗೆಸೆದಿರ್ದಳ್ (ಕಾದಂಸ. ೬೪೭) : ಮಂದೈಸಿ ನೆಗೆದ ಕೆಂಧೂಳಿಯಿಂದೆ ಮುಂದುಗೆಟ್ಟು ಮೊರೆವ ಮಧುಕರಂಗಳುಂ (ಕೃಕೃಕೃ. ೨-೪೯ ವ). ೨. ಕಾಮುಕ; ವಿಟ; ಸ್ತ್ರೀಲಂಪಟ. [ಸಂ.]

**ಮಧುಕರವೃತ್ತಿ** (ನಾ). ತುಂಬಿಯು ನಾನಾವಿಧವಾದ ಹೂಗಳಿಂದ ಮಧುವನ್ನು ಸಂಗ್ರಹಿಸಿ ತರುವಂತೆ, ಬೇರೆ ಬೇರೆ ಮನೆಗಳಿಂದ ಭಿಕ್ಷಾನ್ನವನ್ನು ತರುವ ವೃತ್ತಿ,-ಉದ್ಯೋಗ : ಮಧುಕರವೃತ್ತಿ ನನ್ನದು ಅದು ಬಲು ಚೆನ್ನದು (ಕುರಂರ. ೨-೪ ಕಲ್ಲಾ). [ಸಂ.]

**ಮಧುಕರಿ** (ನಾ). ೧. ಹೆಣ್ಣುದುಂಬಿ; ಭ್ರಮರಿ : ಮಧುಕರಿ ನವಾಮ್ರದೊಳ್ ಪಾಯ್ದುಮೆಲವದೊಳ್ ಪಾಯ್ದುಪುದೇ (ಶಾಂತಿಪು. ೫-೦೫೬): ಹಂಸರುತಿ ಮಧುರಮಧುಕರೀಝಂಕಾರಂ . . . ಇತ್ತುವು ಸುಖಪ್ರಬೋಧಮನಾಗಳ್ (ಪುಲ್ಲಪು. ೪-೩೮). ೨. ನಾನಾಬಗೆಯ ಹೂಗಳಿಂದ ದುಂಬಿ ರಸವನ್ನು ಸಂಗ್ರಹಿಸುವಂತೆ, ಬೇರೆಬೇರೆ ಮನೆಗಳಿಂದ ಭಿಕ್ಷಾನ್ನವನ್ನು ತರುವುದು; ಭಿಕ್ಷೆ : ವಿದ್ಯಾರ್ಥಿಗಳು ಮಧುಕರಿಯಿಂದ ತರುವ ಅನ್ನ ಒಪ್ಪತ್ತಿನ ಊಟಕ್ಕೂ ಸಾಲದು (ಖುಗಮ.೬); ನೀನು ಮಧುಕರಿ ಬೇಡುವಿಯಾ? (ಕಪಲು. ೨೦). ೩. ಒಂದು ಬಗೆಯ ಚರ್ಮರೋಗ; ಕುಷ್ಠರೋಗ : ಪಾಳನಿಗೆ ಮುದಿವಯಸ್ಸಿನಲ್ಲಿ ಮಧುಕರಿ ಬೇನೆ ಬಂದಿತು. ನಾನು ಅವನನ್ನು ಕಾಣುವಾಗ ಆತನ ಬೆರಳೊಂದೂ ಉಳಿದಿರಲಿಲ್ಲ (ಹುಹುಬಾ. ೬೨). ೪. [ಸಂಗೀತ] ಒಂದು ರಾಗದ ಹೆಸರು : ಕೌಶಿಕ ವೇಳಾವಳಿ . . . ಮಧುಕ [ರಾಕಾಂ. ಕರ]ರಿ . . . ಪಯೋಧರೆಯೆಂಬ ಮೂವತ್ತುನಾಲ್ಕು ಭಾಷಾಂಗದಿಂದಾದ ರಾಗಂಗಳು (ಬವೀಳ. ೦೬೮). [ಸಂ. ಮಧುಕರೀ]

**ಮಧುಕೋಶ** (ನಾ). ೧. ಜೇನುಗೂಡು. ೨. ಮದ್ಯಪಾನಮಾಡುವ ಪಾತ್ರೆ; ಮದ್ಯಪಾತ್ರೆ. ೧. ೨ : ಪಾನಪ್ರದೇಶದಂತೆ ಪರಿಗತಮಧುಕೋಶಶತಮುಂ (ಕಾದಂಬ. ೮೨೦). [ಸಂ.]

**ಮಧುಕ್ರಮ** (ನಾ). ೧. ಮಿತಿಮೀರಿ ಕುಡಿಯುವುದು : "ಮಧುವಾರಃ, ಮಧುಕ್ರಮಃ— ೨ ಹಲವು ತಡವೆ ಮದ್ಯಪಾನ ಮಾಡುವ ಕ್ರಮದ ಹೆಸರುಗಳು" (ಸಿದ್ಧಾಂತಿ. ೩೮೮). ೨. ಜೇನುಹುಟ್ಟು. [ಸಂ.]

**ಮಧುಗುಡಿಗ** (ನಾ). ಮದ್ಯಪಾನಮಾಡುವವನು : ಇದನಸುರ ಮಧುಗುಡಿಗ ಯುವ್ವನಿಗ ಮದನಗ್ರಹವ್ಯಾಧಿಗಂ ಮಂತ್ರೌಷಧಿಲ್ಲದೆಂಬುದು ಸಹಜವಾಯ್ತು (ಪಪಪೋ. ೯-೦೭). [ಮಧು : ಕುಡಿ$_1$ + – ಗ$_2$]

**ಮಧುಗುಡುಹಿ** (ನಾ). (ಹೂವಿನ) ಮಕರಂದವನ್ನು ಹೀರುವಂಥದು : ತುಂಬಿ : ಪರಪುಟ್ಟಗಳು ಬಂದುಗಲಸಾತಿಹ ಮಧುಗುಡುಹಿ ಷಟ್ಪದಗಳ ಶಿವನಣುಗನೊರಸಿದಾ ಕುರುಹೀನವೆರೆಯ ಮೂಪದಿಕ್ಕಿವಿಂಡುಗಳ ನೆಲೆಗಟ್ಟು (ಗುಕಕ. ೨-೯೮). [ಮಧು + ಕುಡುಹಿ (< ಕುಡಿಹಿ)]

**ಮಧುಗೋಷ್ಠಿ** (ನಾ). ಮದ್ಯಪಾನಮಾಡುವವರ ಕೂಟ : ಸಂಗ್ರಾಮಧುಗೋಷ್ಠಿಯುಂ ಪರವಿ ಕಾಯು ಗಜೋತ್ಕರಮುಂ ಘಟಾಂಕಿತಂ (ಜಾನಾರ. ೦೦೦). [ಸಂ. ಮಧುಗೋಷ್ಠೀ]

**ಮಧುಗ್ರಂಥಿ** (ನಾ). "ಮಕರಂದ ಸ್ರವಿಸುವ ಅಂಗ : ಮಧುಗ್ರಂಥಿ : ಮಕರಂದಗ್ರಂಥಿ" (Nectary. ಇಂಕಪ). [ಸಂ. ಮಧುಗ್ರಂಥಿನ್]

**ಮಧುಘೃತ** (ನಾ). ಜೇನುತುಪ್ಪ : ಮಧುಘೃತವ ಇಕ್ಕಿ ನೆಕ್ಕಲು ಮಿಡ್ಡಿಗೆ ಸಿಕ್ಕಿ ನಾಲಗೆ ಸೀಳುವಂದದವೊಲಿಕ್ಕಿ ವಿಷಯಸುಖಕ್ಕೆಳಸಿ ಕಡುದುಃಖಬಡುತಿಹರು (ಅಮೃತ. ೨-೩೨). [ಸಂ.]

**ಮಧುಚಂದ್ರ** (ನಾ). ವಿವಾಹವಾದ ತರುಣದಲ್ಲಿ ನವದಂಪತಿಗಳು ಕೈಗೊಳ್ಳುವ ವಿಹಾರ : ನೂತನದಂಪತಿಗಳು ಹಳ್ಳಿಯಲ್ಲಿ ತಮ್ಮ ಮಧುಚಂದ್ರವನ್ನು ಸಂತೋಷವಾಗಿ ಕಳೆದರು (ಅಕಕ. ೦೬೭).

[☞ ಇದು ಇಂಗ್ಲೀಷಿನ 'Honeymoon' ಎಂಬುದರ ಅನುವಾದರೂಪ]

**ಮಧುತೆಂಗು** (ನಾ). ಒಂದು ಬಗೆಯ ತೆಂಗು : "ಮಧುನಾಳಿಕೇರಃ— ಮಧುತೆಂಗು" (೬ಕಂ. ೦೨೨). 'ಮಧುಫಲ' ಪರಾ. [ಮಧು + ತೆಂಗು$_3$]

**ಮಧುದೂತಿ** (ನಾ). ಒಂದು ಬಗೆಯ ಗಿಡ ಮತ್ತು ಅದರ ಹೂವು; ಅದಿರ್ಗಂತಿ; ಅದಿಮುರ್ತೆ; ಮಾಧವಿ : ಮುದದಿಂದಂ ಮಧುದೂತಿಯುಂ ಮೊಗದಲರ್ಚುತ್ತುಂ . . . ವಸಂತರಾಜನೊಸೆದೇಳ್ತೆಂದು (೧೮ಳ. ೭-೪೧); ಮೊಡವೆಗಳಂತೆ ಮೂಡೆ ಪೊಸಮೊಗ್ಗೆಗಳಾ ಮಧುದೂತಿಯಲ್ಲಿ . . . ಜವ್ವನವುನಾಂತವೊಲಾ ವನಲಕ್ಷ್ಮಿ ತೋಜಿದಳ್ (ರಾಜಕೀ. ೯-೪೮).

[ಸಂ. ಮಧುದೂತೀ]

**ಮಧುದ್ರವ** (ನಾ). ೧. ಕೆಂಪುಹೂಗಳನ್ನು ಬಿಡುವ ಒಂದು ಬಗೆಯ ಮರ. ೨. ಕಳ್ಳು; ಮದ್ಯ : ವಿಧುಮುಖಿ ಮೆಲ್ಲಮೆಲ್ಲನೆ ಮಧುದ್ರವಮಂ ಸವಿದೀಂಟುವಲ್ಲಿ ತನ್ನಧರದ ರಾಗದೊಳ್ ಪೊರೆದುದಂ ಮಧುವಂ ಬೆಱಗಾಗಿ ನೋಡುತುಂ ಮಧುರಸಮಲ್ತು ಕುಂಕುಮರಸಂ ದಿಟಮೆಂದು ಬಱಿಕ್ಕೆ ಶಂಕೆ ತನ್ಮಧುರಸುಗಂಧದಿಂ ತೊಲಗೆ ಸೇವಿಸಿದಳ್ ಮಧುವಂ ನಿಜೇಚ್ಛೆಯಿಂ (ಜಗಿಪ. ೦೬-೦೦೬). [ಸಂ.]

**ಮಧುದ್ರುಮ** (ನಾ). ೧. ಹಿಪ್ಪೆಮರ : ಮಧೂಕವೃಕ್ಷ : "ಮಧೂಕಃ, ಗುಡಪುಷ್ಪಃ, ಮಧುದ್ರುಮಃ, ವಾನಪ್ರಸ್ಥಃ. ಮಧುಷ್ಠೀಲಃ — ೫ ಹಿಪ್ಪೇಗಿಡ, ಹಿಪ್ಪೇಮರ" (ಸಿದ್ಧಾಂತಿ. ೦೦೮). ೨. ಮಾವಿನ ಮರ. [ಸಂ.]

**ಮಧುನಾಶ** (ನಾ). ಒಂದು ಬಗೆಯ ಬಳ್ಳಿ : "ಸಣ್ಣಗರಸೆಹಂಬು, ಮಧುನಾಶ, ಹಿರಿಯ ಕಾಗೆದೊಂಡೆ" (ಸಸ್ಯಕೋ. ೬೭); ಸಣ್ಣಗೆರಶಹಂಬು, ಮಧುನಾಶ (ವೃಕ್ಷಿಗ. ೪೧-೮೦೬). [ಸಂ.]

**ಮಧುನಾಳ** (ನಾ). ಒಂದು ಬಗೆಯ ಭಕ್ಷ್ಯ : ಎಪ್ಪಮ ಪೊಂದಟ್ಟೆಗಳೊಳಿನಿದಿಪ್ಪರಿಗೆ ಮಧುನಾಳ ಮಂಡಗೆ ಪೇಣಿ ನಲ್ಗೈದ ಲಡ್ಡುಗೆಯ ಬಿಚ್ಚೋರಿಗೆಗಳಂ ಬಡ್ಡಣೆಸಿದರಂಗನೆಯರು (ಶುರೇಶು. ೦೬-೨೪). [ ? ]

**ಮಧುಪ** (ನಾ). ೧. ತುಂಬಿ; ಭ್ರಮರ : "ಮಧುಕರಃ, ಮಧುಪಃ, ಮಧುವ್ರತಃ . . . ದ್ವಿರೇಫಃ—ಈ ೧೩ ತುಂಬಿ" (ಕಲಾಯು. ೪೩-೦೦೦); ಮೃಗಯಾವ್ಯಾಜದಿನೊರ್ಮೆ ಶಂತನು ತೊಳಲ್ತರ್ಪಂ ಪಳಂಚಲ್ಕೆ ತಸ್ಮೃಗಶಾಬಾಕ್ಷಿಯ ಕಂಪು ತಟ್ಟೆ ಮಧುಪಂಬೋಲ್ ಸೋಲ್ತು (ಕಂಪಶಾ. ೦-೭೦); ಕೆದಱಿದ ಪೂವಲಿಗೆಱಗಿತು ಸುತ್ತುಂ ಮದ ಮಧುಪಾವಳಿಗಾವರಿಸುತ್ತುಂ (ತಂತ್ರಶು. ೪-೬೨ ರಗಳೆ). ೨. ಮದ್ಯಪಾನಮಾಡುವವನು; ಹೆಂಡ ಕುಡಿಯುವವನು : ಆ ಮಧುಪರೆಲ್ಲರು ಹೀಗೆ ಆ ಪಾನೋತ್ಸವದಲ್ಲಿ ನಿಮಗ್ನರಾಗಿರುವಾಗ ಔರಂಗಜೇಬುಸುಲ್ತಾನನು . . . ಮುರಾದನ ತಂಬುವಿನ ಕಡೆಗೆ ಬಂದನು (ಶಿರಂಗ. ೦೪೩). ೧. ೨ : ಎನ್ನ ದಾನವಿಂದಾಗಳುಂ ಮಧುಪಾಶ್ರಯುಂ ಧರೆಗವ್ಯವಚ್ಛಿನ್ನದಾನವಿದಾಗಳುಂ ವಿಬುಧಾಶ್ರಯುಂ ಗಲೆವಂದನೆನ್ನನ್ನಿಜೋನ್ನತಿಯಿಂದಮಿಾ ಪತಿಯೆಂದು ಮೆಚ್ಚಿ ವಿನಾಯಕಂ ಪಾನ್ನಿಮಿರ್ಚಿಗೆ ಕಬ್ಬಮಂ ನಯದಿಂ (ಜಂಕಳಾ. ೦-೭); ಚಿತ್ರಜನ್ಮ ನೋಡ ನಿಜಾಪ್ತವರ್ಗವಳಮಂ ಮಲಯಾನಿಲನಸ್ಥಿರಂ ರಣಕ್ರೀಡೆಗೆ ನಿಲ್ವನೇ ಪರಭೃತಂ ನಿನಗಪ್ಪನೆ ಯುದ್ಧದೊಳ್ಬಗುಷೋಡದೆ ಮಾಣ್ಬನೇ ಮೃಗಧರಂ ಮಧುಪಂ ಕದನಕ್ಕೆ ಯೋಗ್ಯನೇ (ಜಂಜಾಕಾ. ೦-೨೩). [ಸಂ.]

**ಮಧುಪಪ್ರಸಂಗಿ** (ನಾ). ೧. ತುಂಬಿಗಳಲ್ಲಿ ಅನುರಕ್ತವಾದುದು. ೨. ಮದ್ಯಪಾನ ಮಾಡುವವರ ಜೊತೆಗೆ ಸ್ನೇಹವುಳ್ಳುದು. ೧. ೨ : ಜಡಾವಸಥು ಚಃ ಮಧುಪಪ್ರಸಂಗಿ ಖರದಂಡಂ ಮತ್ತೆನುತ್ತಬ್ಜಮಂ ಬಿಸುಟುತ್ಕೃತ್ತಮಮಿಂತುಂಟೆಂದು ಬಿರಿದಂ ಸಂತೋಷದಿಂ ವಾಣಿ ಬಂದು

ಸಮಂತಿರ್ಕೆ . . . ಜಿಹ್ವಾಗ್ರದೊಳ್ ರುಮ್ರನಾ(ಶಗಪ. ೧-೬).
[ ಸಂ. ಮಧುಪಪ್ರಸಂಗಿನ್ ]

**ಮಧುಪರ್ಕ** (ನಾ). ಮೊಸರು, ತುಪ್ಪ, ನೀರು, ಜೇನುತುಪ್ಪ, ಸಕ್ಕರೆ — ಈ ಐದರ ಮಿಶ್ರಣ; P ದೇವತಾರ್ಚನೆಯಲ್ಲಿ ಹೇಳಿರುವ ಷೋಡಶೋಪಚಾರಗಳಲ್ಲಿ ಮಧುಪರ್ಕದ ಅರ್ಪಣೆಯೂ ಒಂದು. ಪೂಜ್ಯರಾದ ಅತಿಥಿಗಳಿಗೆ ಹಾಗೂ ವಿವಾಹಕಾಲದಲ್ಲಿ ವಧುವಿನ ತಂದೆಯ ಮನೆಗೆ ಬರುವ ವರನಿಗೆ ಸತ್ಕಾರಪೂರ್ವಕವಾಗಿ ಇದನ್ನು ಅರ್ಪಿಸುವುದು ಸಂಪ್ರದಾಯ : ನದೀತನೂಜಂ ಭಾರದ್ವಾಜಂಗೆ . . . ಅರ್ಘ್ಯಮೆತ್ತಿ ಮಧುಪರ್ಕ ಪೇತ್ರಾಸನ ತಾಂಬೂಲ ದಾನಾದಿಗಳಿಂ ಸಂತಸಂಬಡಿಸಿ (ಶಂಶಭಾ. ೨-೫೨ ವ); ಅರ್ಘ್ಯಪಾದ್ಯೋತ್ಕರದ ಮಧುಪರ್ಕಾಸನಾದಿಯನರಸ ಮಾಡಿದನು (ಕುಮ್ಯಾ.ಆ. ೧೮-೨೩). [ಸಂ.]

**ಮಧುಪರ್ಣಿ** (ನಾ). ೧. ಅಮೃತಬಳ್ಳಿ : ಅಮೃತಬಳ್ಳಿ, ಮಧುಪರ್ಣಿ (ವೈಶಿಗ. ೬೫-೧೫೨೬). ೨. ನೀಲಿ ಗಿಡ. ೩. ಶಿವನೆ ಮರ.
[ ಸಂ. ಮಧುಪರ್ಣೀ ]

**ಮಧುಪರ್ಣಿಕೆ** (ನಾ). ೧. ಒಂದು ಬಗೆಯ ಮರ; ಶಿವನೆಮರ : "ಗಂಭಾರೀ, ಸರ್ವತೋಭದ್ರಾ, ಕಾಶ್ಮರೀ, ಮಧುಪರ್ಣಿಕಾ, ಶ್ರೀಪರ್ಣೀ, ಭದ್ರಪರ್ಣೀ, ಕಾಶ್ಮರ್ಯಃ–೭ ಶೀವನೆಯ ಮರದ ಹೆಸರು. ಕೆಲವರಿದಕ್ಕೆ ಕುಂಬಳಿಗಿಡವೆಂದು ಅರ್ಥಹೇಳುವರು" (ಸವ್ಯಾಂತಿ. ೧೨೦). ೨. ನೀಲಿಗಿಡ. ೩. ಅಮೃತಬಳ್ಳಿ. [ ಸಂ. ಮಧುಪರ್ಣಿಕಾ ]

**ಮಧುಪಾತ್ರ** (ನಾ). ಮದ್ಯಪಾನ ಮಾಡುವ ಬಟ್ಟಲು; ಮದ್ಯಪಾತ್ರೆ : "ಮಧುಪಾತ್ರಂ ಚಷಕಂ" (ಶಸ್ತ್ರಕೋ. ೪೦-೨೬). [ಸಂ.]

**ಮಧುಪಾತ್ರೆ** (ನಾ). = ಮಧುಪಾತ್ರ : ಮಧುಪಾಲಿಕೆಯೊರ್ವಳ್ ನವ ಮಧುಪಾತ್ರೆಯನೊಲ್ದು ಬಾಯ್ಗೆ ತರಲ್ (ಅರ್ಧ್ನೆ. ೫-೬೬) ; ಮರಕತದ ಮಧುಪಾತ್ರೆ ನೀಲದ ಕರಗ ವೈಡೂರಿಯದ ಪಡಿಗವ ಚರರು ತಂದೊಟ್ಟಿದರು(ಕುಮ್ಯಾ.ಗ. ೪-೧೫). [ ಸಂ. ಮಧುಪಾತ್ರ ]

**ಮಧುಪಾನ** (ನಾ). = ಮದ್ಯಪಾನ : ಗಾಳಿಗೆ ಮಾತನಾಡುವರು ಹಾಜಿದ ಪಕ್ಕಿಗೆ ಪೋಹರೆಂಬರ್ . . . ಉಟ್ಟುದಂ ಕಳೆದು ಸೆತ್ತಿಗೆ ಸುತ್ತುವರಬ್ಬರಿಸದೆ ಕಾಟಕ್ಕೋಟಿಗಳಾಗಿ ಕೂಗುವರದೇಂ ಮಧುಪಾನದ ಸೋಕರ್ಸಾಲದೇ (ಸಶ್ರಸು. ೧೩-೩೦); ಬಿಡದೆ ಮಧುಪಾನವಂ ಮಾಡಿ . . . ಸೊಗಯಿಸಿದರು (ಕೃಬಿಭಾ. ೩೦-೧೬). [ಸಂ.]

**ಮಧುಪಾನಗೋಷ್ಠಿ** (ನಾ). ಮದ್ಯವನ್ನು ಕುಡಿಯುವವರ ಕೂಟ.– ಗುಂಪು : ಇರೆ ಪದ್ಮರಾಗಚಷಕಂ ನಿಜಹಸ್ತತಳಾಗ್ರದೊಳ್ ಮನೋಹರಿ . . . ನವೋದಿತಚಂದ್ರಬಿಂಬಮಂ ಧರಿಯಿಸಿದಿಂದ್ರದಿಗ್ವನಿತೆಯಂತೆಸೆದಳ್ ಮಧುಪಾನಗೋಷ್ಠಿಯೊಳ್ (ಜಗಪ. ೧೩-೦೦೫) ; ಕಾಮಿನಿ ನಯದಿಂ ಕರಂ ನಲಿದು ನರ್ತಿಸಿದಳ್ ಮಧುಪಾನಗೋಷ್ಠಿಯೊಳ್ (ಶೃಂಗಾರ. ೧-೪೫).
[ ಸಂ. ಮಧುಪಾನಗೋಷ್ಠೀ ]

**ಮಧುಪಾಯಿ** (ನಾ). ೧. ತುಂಬಿ. ೨. ಮದ್ಯಪಾನ ಮಾಡುವವನು.
[ಸಂ. ಮಧುಪಾಯಿನ್]

**ಮಧುಪಿಂಗಳ** (ನಾ). ಜೇನುತುಪ್ಪದಂತಹ ಹೊಂಗೆಂಪು ಬಣ್ಣ : ಶಾರದ ನೀರದಾಕೃತಿಯು ಮೆಯ್ ಮಧುಪಿಂಗಳಮಪ್ಪ ದಿಟ್ಟಿ . . . ಒಪ್ಪಿದುದಾ ಗಜೇಂದ್ರದಾ (ತಂದ್ರಪು. ೧೨-೬೮). [ಸಂ. ಮಧುಪಿಂಗಲ]

**ಮಧುಪಿಚ** (ನಾ). ಬೇವಿನ ಮರ ಮತ್ತು ಅದರ ಹಣ್ಣು : ಮಧುಪಿಚದ ಮಧುರಕ್ಕೆ ಸಮಗಟ್ಟುವರೆಯೆನ್ನ ಹೃದಯದಜ್ಞಾನಹಂಕಾರವಂ ತವಿಸುತಂ ಹೃದುವಾಕ್ಯ ಸುಗುಣಿ ನಿರಹಂಕಾರಿಯೆನಿಸು (ಕೃಬಭು. ೭-೨೫೨). [?]

**ಮಧುಪುಷ್ಪ** (ನಾ). ೧. ಒಂದು ಬಗೆಯ ಮರ ಮತ್ತು ಅದರ ಹೂವು ; ಬಕುಳ : ಬಕುಳದ ಹೂವಿಗೂ ಮಂಬಿಗೂ ಗಾಢವಾದ ನಂಟು. ಇದರಿಂದಲೇ ಈ ಹೂವಿಗೆ ಮಧುಪುಷ್ಪವೆಂಬ ಅನ್ವಯನಾಮ(ಶಸುಪೂ. ೪೦೦). ೨. ಅಶೋಕವೃಕ್ಷ. ೩. ಶಿರೀಷವೃಕ್ಷ; ಬಾಗೆ. ೪. ಹಿಪ್ಪೆಮರ. [ಸಂ.]

**ಮಧುಪೂರ** (ನಾ). ಈಚಲಮರ : "ಮಧುಪೂರಮೆಸೆದೀಚಲು" (ಮಂಗರಾ. ೩೫-೧೫). [ಸಂ.]

**ಮಧುಪ್ರಸಂಗ** (ನಾ). ವಸಂತಋತುವಿನ ಸಮಯ : ಆ ಪ್ರಸ್ತಾವದೊಳ್ ಆ ಮಧುಪ್ರಸಂಗರಾಗರಸತರಂಗಿತೆಯಾದ ವನಲಕ್ಷ್ಮೀವಿಲಾಸಮಂ ವನಪಾಲಕನವನಿಪಾಲಕಂಗಱಿಪಲೆಂದು (ಮಲ್ಲಿಪು. ೫-೪೮ವ). [ಸಂ.]

**ಮಧುಪ್ರಿಯ** (ಗು). ೧. ಜೇನುತುಪ್ಪವನ್ನು ಮೆಚ್ಚುವ. (ನಾ). ೨. ತುಂಬಿ ; ಭ್ರಮರ. ೩. ಚೈತ್ರಮಾಸ. ೪. ಆಕರ್ಷಕವಾದ ಕಣ್ಣು. ೫. ವಸಂತನ ಮಿತ್ರ ; ಮನ್ಮಥ. ೬. ವಿಟ. ೭. ಈಶ್ವರ. ೮. ಬಲರಾಮ: "ವಿಟರುಂ ಬಲರಾಮಂ ಧೂರ್ಜಟಿಯಾಜಿಡಿ ಚೈತ್ರಮಾಸ ಪ್ರದ್ಯುಮ್ನನು ತಾ ಚಟುಲಾಕ್ಷಿಗಿದೇಳೆ ಪೆಸರುಂ ಪಟುತರವಾದುದು ಮಧುಪ್ರಿಯಾಹ್ವಯ ನಾಮಂ" (ನಾನಾಶಿಂ. ೬೯) : "ಕಾಮಪಾಲ ಮದನ ನೇತ್ರ ಚೈತ್ರ ಶಿವ ಭೃಂಗಭುಜಂಗ ಮಧುಪ್ರಿಯಾಹ್ವಯಂ" (ಸಾಸಾರ. ೩೦). [ಸಂ.]

**ಮಧುಪ್ರೇಮಿ** (ನಾ). ಕಾಮ : ಮನ್ಮಥ : "ಪುಷ್ಪಾಯುಧಂ ಅನಿಮಿಷಧ್ವಜನನಂಗು ಮಧುಪ್ರೇಮಿ ಪ್ರದ್ಯುಮ್ನನಂ ರತಿಪ್ರಭು . . . ಎನೆ ಮದನನಕ್ಕು" (ಮಂಗರಾ. ೮-೨೨). [ಸಂ. ಮಧುಪ್ರೇಮಿನ್]

**ಮಧುಪ್ಲುತ** (ನಾ). ಜೇನುತುಪ್ಪದೊಡನೆ ಬೆರೆತುದು ; ಮಧುಪರ್ಕ : ಈ ವಿಧದಿ ಮಧುಪ್ಲುತವ ನಿನಗೀವೆವೆಲೆ ಪೃಥ್ವೀಶಯೆಂದು ದ್ವಿಜಾವಳಿಗೆ (ಆರಾಮ. ೨-೯-೪೯). [ಸಂ.]

**ಮಧುಫಲ** (ನಾ). ೧. ಒಂದು ಬಗೆಯ ದ್ರಾಕ್ಷೆ. ೨. ಒಂದು ಬಗೆಯ ತೆಂಗು : "ಮಧುಫಲಃ _ ಮಧುತೆಂಗು, ಹಣ್ಣಿನ ವಾಳೆ" (೬ಶಿ೨. ೧೨೦).
[ಸಂ.]

**ಮಧುಭೇದ** (ನಾ). ಮಧುವೆಂಬ ರಾಕ್ಷಸನನ್ನು ಸೀಳಿದವನು : ವಿಷ್ಣು : ಮಧುಭೇದಮನದಿಷ್ಟದೆಡದ . . . ಸಂಗಮೇಶ್ವರ ರಕ್ಷಿಸನ್ನ ಸತತಂ (ಕ್ರಾಶಿರಾ. ೬-೧). [ಸಂ.]

**ಮಧುಮಂಚ** (ನಾ). ನವದಂಪತಿಗಳ ನಿಷೇಕಕ್ಕಾಗಿ ಸಿದ್ಧಪಡಿಸಿದ ಮಂಚ : ಎಳೆಹರೆಯದ ನವವಧುವಿನ ಪಾಣಿಗ್ರಹಣಮಾಡಿ ಆಗಳೆಯ ಮಧುಮಂಚಕ್ಕೆ ಅವಳನ್ನು ಒಯ್ಯುತ್ತಿಪ್ಪರೊ ಎಂಬಂತೆ, ಮಹಾಋಷಿರ ಮನಸ್ಕರಾಗಿದ್ದರು (ಮಲಿವು. ೪೧೯). [ಸಂ.]

**ಮಧುಮಂಟಪ** (ನಾ). ಚೆಲುವಾದ ಮಂಟಪ : ಬಣ್ಣಕಾಗದದ ಮಧುಮಂಟಪವ ಮಾಡಿ ಮಣ್ಣ ಬೊಂಬೆಯ ದೇವರೆಂದು ಕೊಂಡಾಡಿ,ಅಣ್ಣನನು ಬದುಕಿಸಿಕೊಡೆಂದು ವರ ಬೇಡಿ,ಕಣ್ಣೀರ್ ಮಿಡಿದ ನೆನಹು ಮಿಾಪುದು ನಯನವಾ (ಕಎಪು. ೨೫-೬). [<ಸಂ. ಮಧುಮಂಡಪ]

**ಮಧುಮಕ್ಷಿಕೆ** (ನಾ). ಜೇನುನೊಣ : "ಸರಘಾ. ಮಧುಮಕ್ಷಿಕಾ—ಈ ೨ ಜೇನ ನೊಳ್" (ಶರಾಯು. ೪೩-೦೦೨). [ಸಂ. ಮಧುಮಕ್ಷಿಕಾ]

**ಮಧುಮತಿ** (ನಾ). ೧. ಸವಿಯಾದುದು. ೨. ಪ್ರಿಯವಾದವಳು. ೩. ಒಂದು ಬಗೆಯ ಬಳ್ಳಿ. ೪. [ಯೋಗ] ಸಂಪ್ರಜ್ಞಾತಸಮಾಧಿ ಸಿದ್ಧಿಗಳಲ್ಲಿ ಒಂದು : ಒಂದನೆಯ ಮಧುಮತಿಯೋ ಋತಂಭರಾ ಎಂದು ಹೇಳಲ್ಪಡುವುದು. ಇಲ್ಲಿ ಅಭ್ಯಾಸ ವೈರಾಗ್ಯದಿಂದ ರಜಸ್ತಮಸ್ಸುಗಳು ಪ್ರಾಯಃ ಕ್ಷೀಣವಾಗಿ ಸುಖಪ್ರಕಾಶಮಯವಾದ ಚಿತ್ತದ ಭಾವನೆಯಿಂದ ವಿಶದಪ್ರಕಾಶ ಸ್ವರೂಪಚಿತ್ತ ಸಿದ್ಧಿಯಾಗುವುದು (ಹಿಂವಶಾ. ೦೦೮).
[ಸಂ. ಮಧುಮತೀ]

**ಮಧುಮತ್ತ** (ಗು). ೧. ಮದ್ಯಪಾನದಿಂದ ಅಮಲೇರಿದ : ನಿಮಿರ್ದಕ್ಷಿಗಳ್ಗೆ ರಾಗಮನ್ಮಧುಸೇವೆಯಿಂ ನೆಗಟ್ತೆ ರಂಜಿಸಿದರ್ ಮಧುಮತ್ತಕಾಂತೆಯರ್

(ಜಗು. ೧೭-೦೦೬). (ನಾ). ೨. ಮದ್ಯಪಾನಮಾಡಿ ಮತ್ತೇರಿದವನು : ರಘುನಂದನಂ ನರ್ತಿಸಲ್ ತೊಡಗಿದನು ಭಾವದ ಸಮಾಧಿಯಿಂ ಮಧುಮತ್ತನಂತೆ (ಶ್ರೀರಾಮಾ. ೩೭-೨೯೭). [ಸಂ.]

**ಮಧುಮಥನ** (ನಾ). ೧. ಮಧುವೆಂಬ ರಾಕ್ಷಸನನ್ನು ಸಂಹರಿಸಿದವನು; ಕೃಷ್ಣ: ಅಂತಾ ಬಾಲೆ . . . ಮಧುಮಥನನ ಕಣ್ಣಂ ಬಂಚಿಸಿ . . . ವನಮನೆಯ್ದೆವಂದು (ಹಂಶಾ. ೫-೦೦ ವ). ೨. ವಿಷ್ಣು : ಕಪ್ಪಾದ ವಿಂಧ್ಯವು ಬಿಳಿದೋಡದಿಂದೆಸೆವುದಿದು ಹಾಲ್ಗಡಲ ಕಡೆಹದೊಳೊಗೆದ ತುಂತುರಿನೊಳು ತೊಪ್ಪು ಆ ಮಧುಮಥನನಂತೆ (ಗಾಥಾಸ. ೨-೦೭). [ಸಂ.]

**ಮಧುಮರ್ದನ** (ನಾ). ೧. = ಮಧುಮಥನ ೧ : ಖಳನದಿರಾಗಿ ಮಧುಮರ್ದನನ ಹಳಚಿದನು (ಕುಮಾ.ಸ. ೦೦-೭೭). ೨. [ಜೈನ]ವಾಸುದೇವ; ಕೃಷ್ಣ : ಬಲಭದ್ರಂ ಮಧುಮರ್ದನಂಗೆ ಬಟಿಕಂ ಚಕ್ರೇಶಪಟ್ಟಂ ಜಗತ್ತಿಲಕ ತಾನೆನೆ ಕಟ್ಟಿ (ಅಪಂತಿ. ೦೪-೩೦). [ಸಂ.]

**ಮಧುಮಹೋತ್ಸವ** (ನಾ). ವಸಂತಮಾಸದ ಉತ್ಸಾಹ,–ವಿಜೃಂಭಣೆ: ತೆಂಕಣಗಾಳಿ ಸೋಂಕಿದೊಡಂ . . . ಮಧುಮಹೋತ್ಸವಮಾದೊಡಂ . . . ನೆನೆವುದೆನ್ನ ಮನಂ ವನವಾಸಿದೇಶಮಂ (ಹಂಶಾ. ೪-೩೦). [ಸಂ.]

**ಮಧುಮಾಧವಿ** (ನಾ). ೧. ವಸಂತಕಾಲದಲ್ಲಿ ಅರಳುವ ಹೂವು : ವಸಂತದೊಳ್ ಮಧುಮಾಧವಿ ಮಕರಂದಿಯಾದುದು (ಹರಿಶ್ಚ. ೨-೯೦). ೨. ಒಂದು ಬಗೆಯ ಮಾದಕಪಾನೀಯ. ೩. [ಸಂಗೀತ] ಒಂದು ರಾಗದ ಹೆಸರು : ರಾಗ ಮಧುಮಾಧವಿ (ಸಂಗೋ. ೦೯೫-೭) ; ಮಧುಮಾಧವಿ ಶಂಕರಾಭರಣ . . . ವರಾಳಿ ನಾಗವರಾಳಿ ನಾಗದಿವಿ ಕರ್ನಾಟಕಬಂಗಾಳ ವೆಂಬಿಪ್ಪತ್ತೇ ರಾಗಾಂಗದಿಂದಾದ ರಾಗಂಗಳು (ಶಿವಶ. ೦೬೬).
[ಸಂ. ಮಧುಮಾಧವೀ]

**ಮಧುಮಾಸ** (ನಾ). ವಸಂತಋತು : ನೀಂ ಬರೆ ಭುವನಂಗಳೊಳ್ ನೆಗಟ್ಟುದೀ ಮಧುಮಾಸಂ (ಆದಿಪು. ೦೦-೦೦೦) ; ಜೀವಂ ಮಧುಮಾಸಕೆ ತೋಷಾವಹಮಿದು ಕೋಕಿಲಕ್ಕೆ (ಶಾಕುಂತ. ೭೯-೦೩೩); ಮತ್ತ ಮಧುಮಾಸವಿದು ಬನ್ನಿರೆಂದು ಸಾರುತ (ಕೋಳಲು. ೯೪-೯). [ಸಂ.]

**ಮಧುಮಿತ್ರ** (ನಾ). ೧. ವಸಂತನ ಗೆಳೆಯನಾದ ಮನ್ಮಥ; ಕಾಮ : "ಕಾಮಂ [ಸಿರಿಗುವರಂ] ರತಿಮನೋಹರಂ ಮಧುಮಿತ್ರಂ" (ವಸ್ತುಕೋ. ೫-೨೬) : ಮಧುಮಿತ್ರ ಜಗಜ್ಜೈತ್ರಾಯುಧಗೃಹವೆನೆ ವಿಕಚವಿಚಕಿಳಂ ಸೊಗಯಿಸುಗುಂ (ಹಂಪ್ರಪು. ೬-೫೦) ; ಇದು ಮಧುಮಿತ್ರ ಮತ್ತಗಜರಾಜಿಯೊ ನೋಡಿದು ಪುಷ್ಪಚಾಪಸಾಮ್ರಾಜ್ಯದ ಸುರವಲ್ಲರೀತತಿಯೊ . . . ಪೇಳೆನೆ ಬಂದುದು ಭಾಮಿನೀಜನಂ (ರಾಜಶೇ. ೦೦-೦೨). ೨. ಮಕರಂದಪ್ರಿಯ ; ತುಂಬಿ : ಭ್ರಮರ. ೩. ವಸಂತಋತು : ವಸಂತಮಾಸ. ೪. ಬಲರಾಮ. ೫. ಶಿವ : ಈಶ್ವರ : "ರುದ್ರನೊಳ್ ಸ್ಮರನೊಳೆಯೊಳು ವಸಂತನೊಳ್ ಬಲಭದ್ರನೊಳ್ ಮಧುಮಿತ್ರನಕ್ಕು" (ಮಂಗರಾ. ೦೫೦-೪೬). [ಸಂ.]

**ಮಧುಮಿತ್ರತೆ** (ನಾ). ೧. ಜೇನಿನಂತೆ ಸವಿಯಾಗಿರುವಿಕೆ. ೨. ಕಾಮನ ಅಸ್ತಿತ್ವ. ೧, ೨: ಅತನುತ್ವಂ ಜಘನದೊಳುನ್ನತಕುಚದೊಳನಲ್ಪದರ್ಪಕತ್ವಂ ಮಧುಮಿತ್ರತೆ ವಚನದೊಳಿರೆ ಕಾಂತಾತತಿ ಪಡೆಯದೆ ಕಾಮಿನೀಸಮಾಖ್ಯೆಯನಿಳೆಯೊಳ್ (ರಾಜಶೇ. ೦೨-೫೪). [ಸಂ. ಮಧುಮಿತ್ರತಾ]

**ಮಧುಮೂತ್ರ** (ನಾ). ಸಿಹಿಮೂತ್ರರೋಗ ; ಸಕ್ಕರೆರೋಗ : ವ್ಯಕ್ತಿ . . . ಮೂತ್ರದಲ್ಲಿ ಸಕ್ಕರೆ ಹೋಗುವ ರೋಗ (ಮಧುಮೂತ್ರ) . . . ಲಕ್ವ, ಅರ್ಧಾಂಗವಾತ, ಅದರ ಇತರ ರೂಪಗಳು — ಇವುಗಳಿಗೆ ತುತ್ತಾಗುತ್ತಾನೆ (ಕಂಕೋ. I. ೪೦). [ಸಂ.]

**ಮಧುಮೇಹ** (ನಾ). = ಮಧುಮೂತ್ರ : ಮಧುಮೇಹವುಳ್ಳವರು ಪಥ್ಯಮಾಡಬೇಕು (ರೂಢಿ). [ಸಂ.]

**ಮಧುಯಷ್ಟಿಕೆ** (ನಾ). ೧. ಜ್ಯೇಷ್ಠಮಧು ; ಅತಿಮಧುರ : "ಮಧುಕಂ, ಕ್ಲೀತಕಂ, ಯಷ್ಟಿಮಧುಕಂ, ಮಧುಯಷ್ಟಿಕಾ — ೪ ಅತಿಮಧುರದ ಹೆಸರುಗಳು" (ನಿಘಂಟು. ೦೩೭). ೨. ಕಬ್ಬು. [ಸಂ. ಮಧುಯಷ್ಟಿಕಾ]

**ಮಧುರ** (ಗು). ೧. ಸವಿಯಾದ ; ಸಿಹಿಯಾದ ; ರುಚಿಯಾದ : ಎಲ್ಲಿ ಷಡುರಸಮಯದ ಭೋಜನವೆಲ್ಲಿ ಮಧುರಫಲೌಘದುಬ್ಬರ . . . ಅಲ್ಲಿ ನಿನ್ನುರವಣೆಗಳೊಪ್ಪುವದು (ಕುಮಾರವ್ಯಾ. ೦೩-೭೩). ೨. ಸುಖಕರವಾದ ; ಹಿತವಾದ ; ಆಪ್ಯಾಯಮಾನವಾದ : ಶರತ್ಕಾಲ ಮಧ್ಯಾಹ್ನವೆಂದು ಮಧುರತಾಪದಲ್ಲಿ ದರವಾನನು . . . ನಿದ್ರೆಹೋಗಿಬಿಟ್ಟಿರುವಂತಿದೆ (ಚಿಂದ. II, ೩೭೭). ೩. ಇಂಪಾದ ; ಕರ್ಣಾನಂದಕರವಾದ : ಮಂಗಳಗಾಯಿಕಾಮಧುರಗಾನದಿನೆಬ್ಬಿರನೆಯ್ದು . . . ಅಂಗನೆ ಬಂದಳಂಗಜನ ಮಂಗಳಲಕ್ಷ್ಮಿಯೆನಲ್ (ಪುಷ್ಪಪು. ೩-೦೨೦). (ನಾ). ೪. ಸವಿಯಾದುದು; ಸಿಹಿಯಾದುದು : ಸಣ್ಣಂ ನಡು ತಿಣ್ಣಂ ಮೊಲೆ ಬಣ್ಣಂ ಪಸುರ್ವೆಸಟಿಬಣ್ಣವಧರಂ ಮಧುರಂ . . . ಬಣ್ಣಿಸಲ್ಕರಿದಬ್ಜಜಂಗಮಾಕೆಯ ರೂಪಂ (ಕಾವ್ಯಸಾ. ೨೮೦ ಕೂದ್ರಕ) ; ಬದುಕು ಸಾರ್ಥಕ ಮಧುರಮಾಯ್ತು ಶಿಶುಸನ್ನಿಧಿಯ ಪ್ರೇಮಸೌಂದರ್ಯಮಹಿಮೆಯಲಿ (ಶ್ರೀರಾಮಾ. ೨೭-೬೦). ೫. ತವರ : "ಮಧುರಂ ತ್ರಪುವೆನಲು ವಂಗಮೆನೆ ತವರಂ" (ಕುಂಗರಾ. ೩೦-೫). ೬. ಕೆಂಪುಬಣ್ಣದ ಕಬ್ಬು : ರಸದಾಳಿಕಬ್ಬು : ಹಿಪ್ಪೆಗೆ ರುಚಿಯುಂಟೇ ಮಧುರಕ್ಕಲ್ಲದೆ (ಸೋಮಪು. ೦೨೦-೯೭೨). ೭. ಕಾಕಂಬಿ. ೮. ಒಂದು ಬಗೆಯ ಮಾವು. ೯. ಬಾದಾಮಿಯ ಗಿಡ. ೧೦. ಕಾಡು ಏಲಚಿ; ಅಡವಿ ಬೋರೆ : (ಕ). ೧೧. ಅಕ್ಕಿ : (ಕ). ೧೨. ಒಂದು ಬಗೆಯ ಗೋಧಿ ; ಸಣ್ಣಗೋಧಿ : (ಕ). ೧೩. ಬಡೇಸೋಪು : (ಕ). ೧೪. ಸಿಂದಿಗಿಡ ; ಈಚಲು : (ಕ). ೧೫. ಚನ್ನಂಗಿ : ಕಡಲೆ : (ಕ). ೧೬. ಧರ್ಮನಾಥಪುರಾಣವೆಂಬ ಚಂಪೂಕಾವ್ಯವನ್ನು ಬರೆದ ಒಬ್ಬ ಕನ್ನಡದ ಕವಿ : ಕವಿ ಮಧುರನ ಮಾತುಗಳೇಂ ಸವಿಯೋ (ಧರ್ಮನಾ. ೦-೭೪). ೧೭. [ಕಾವ್ಯಮೀ] ಹತ್ತುಬಗೆಯ ಕಾವ್ಯಗುಣಗಳಲ್ಲಿ ಒಂದು ; P ಇದಕ್ಕೆ 'ಮಾಧುರ್ಯ'ವೆಂತಲೂ ಹೆಸರು : ಅಗ್ರಾಮ್ಯ ವಚನ ವೃತ್ತಿ ಸಮಗ್ರರಸಾಪೂರ್ಣಮಪ್ಪುದದು ಮಧುರಂ (ಕಾವ್ಯಾವ. ೫೦೯). ೧೮. [ಸಂಗೀತ] ರಾಗದ ಲಕ್ಷಣಗಳಲ್ಲಿ ಒಂದು : ಸ್ವರ ಶ್ರುತಿ ಗಮಕಂಗಳಿಂ ಪುಟ್ಟಿದ ಗೀತಮಾದೊಡೆ ಸ್ವರ ಸುಸ್ವರ ಸುರಾಗ ಮಧುರ ಅಕ್ಷರ ಅಲಂಕಾರವೆಂಬಾಱು ಲಕ್ಷಣಮುಳ್ಳುದಾಗಿಹುದು (ಶಿವಶ. ೦೬೭). ೧೯. ಮೂರು ಸ್ವರಭೇದಗಳಲ್ಲಿ ಒಂದು : "ತಾರಮೆನಲುಚ್ಚದಾ ಧ್ವನಿಯಕ್ಕು ಮಧುರಮೆನೆ ಸಾರದಾ ಧ್ವನಿಯಕ್ಕು ಮಂದ್ರವೆಂದೆನಲು ಗಂಭೀರದಾ ಧ್ವನಿಯಕ್ಕು" (ಮಂಗರಾ. ೨೩ ೩) ; ಯಥೋಚಿತ ತಾರ ಮಧುರ ಮಂದ್ರಂಗಳಿಂ ಹಾಡಿ (ಹಕಶಾ ೬-೩); ತಾರ ಮಧುರ ಮಂದ್ರತ್ರಯಂಗಳಿಂ ನಾಭಿ ಉದರಕಂಠವೆಂಬ ತ್ರಿಸ್ಥಾನವಱಿದು . . . ಪಾಡುವ ಗಾಯಕೋತ್ತಮರಿಂ (ದಶಾವ. ೨-೦೦ ವ). [ಸಂ.]

**ಮಧುರಂಗ** (ನಾ). ಒಂದು ಬಗೆಯ ಬಾಳೆ : ರಸವಾಳೆ ಪುಟವಾಳೆ ರಾಜವಾಳೆ ಸಕ್ಕರೆಯೆಸೆವಾ ದೇವಾಳೆ ಕಬ್ಬಾಳೆ ಹಸುರುಗುಂದದ ಪಚ್ಚೆನಾಡವು ಮಧುರಂಗ ಪಸರಿಸಿ ಮೆಱೆದುವರ್ತಿಯಲಿ (ಕಂವಿ. ೫-೮೭) : ಬಾಳೆಯ ಜಾತಿಗಳು — ರಾಜರಸಬಾಳೆ, ಪುಟ್ಟಬಾಳೆ (ಪುಟ್ಟ ಸುಗಂಧಬಾಳೆ). ಮಧುರಂಗ, ಗುಜ್ಜ (ಪಶುಕು. ೨೩೭). [ ? ]

**ಮಧುರಂಗಿ** 'ಮದರಂಗಿ' ನೋ.

**ಮಧುರಕ** (ಗು). ೧. ಸವಿಯಾದ ; ಮಧುರವಾದ. (ನಾ). ೨. ಒಂದು ಬಗೆಯ ಗಿಡ ; ಹಕ್ಕಿಸಿಳ್ಳೆ : "ಕೂರ್ಚಶೀರ್ಷಃ, ಮಧುರಕಃ, ಶೃಂಗಃ, ಹ್ರಸ್ವಾಂಗಃ, ಜೀವಕಃ — ೫ ಜೀವಕವೆಂಬುವ ಔಷಧ, ಹಕ್ಕೀಶಿಳ್ಳೆಗಿಡ" (ನಿಘಂಟು. ೦೪೫). [ಸಂ.]

**ಮಧುರತೆ** (ನಾ). ಸವಿ : ಮಾಧುರ್ಯ : ಮಧುಕಂ ಮಧೂಕಪುಷ್ಪಂ ಮಧು ಶರ್ಕರೆ ಕೋಷ್ಮಪೆಂಬಿವಂ ಮೊದಲೊಳ್ ಪೊಚ್ಚಿಧಿಕಫಲವಾಗಿ ಪಡೆಗುಂ ಮಧುರತೆಯಿ[ಯು]ಂ (ರೋಕೋಶ. ೬-೪೦). [ಸಂ. ಮಧುರತಾ]

**ಮಧುರತ್ವ** (ನಾ). ಸವಿ ; ಮಾಧುರ್ಯ. [ಸಂ.]

**ಮಧುರಧನ್ವ** (ನಾ). ಮನ್ಮಥ ; ಮದನ : ಮನಸಿಜನ ಮುದ್ರೆ ಮನ್ಮಥನಾಣೆ ಮಧುರಧನ್ವನ ಗಾಮಂ (ಶೀ.ತ. ೨-೭).
[ ಸಂ. ಮಧುರಧನ್ವನ್ ]

**ಮಧುರಭಾಷಿಣಿ** (ನಾ). ಸವಿಯಾದ ಮಾತನ್ನಾಡುವವಳು ; ಇಂಪಾಗಿ ನುಡಿಯುವವಳು : ಆ ಭೂರಮಣಂ ಬೆಸಗೊಳೆ ಕರವಾರಿಜಮಂ ಮುಗಿದು ಮಧುರಭಾಷಿಣಿ ನುಡಿದಳ್ (ರಾಜಶೇ. ೩-೬೫) ; ಕೇಳ್ದಳಿತ್ತನ ಸೂಯೆ ಮಧುರಭಾಷಿಣಿ ಜನಕಜಾತೆಯು ವದನದಿಂ ಸ್ವಯಂವರದ ವೃತ್ತಮಂ (ಶ್ರೀರಾಪಟ್ಟಾ. ೧೭೮-೬೨). [ ಸಂ. ಮಧುರಭಾಷಿಣೀ ]

**ಮಧುರರವ** (ನಾ). ಇಂಪಾದ ಧ್ವನಿ : ವಿದಿತ ಸಮಸಂಸ್ಕೃತೋದಿತ ಪದಂಗಳೊಳ್ಪುದಿದು ಬೆರಸಿ ಬರೆ ಕನ್ನಡದೊಳ್ ಮುದಮನವು ತರ್ಕ ಮತಿಶಯ ಮೃದಂಗಸಂಗೀತಕಾದಿ ಮಧುರರವಂಬೋಲ್ (ಶಬ್ದಮ. ೧-೫೫); ಮುಂದೆ ಬಂದೋದುವ ಮಂಗಳಪಾಠಕರ ಜಯಜಯಾದಿ ಮಧುರರವಂಗಳೊಳಮತಿಕ್ಷುಭಿತಮಾದಾಸ್ಥಾನಮಂಟಪದಿಂ ಮನುಜೇಂದ್ರಂ ಪೊಱಮಟ್ಟು (ಕಾದಂಪೂ. ೬೭). [ಸಂ.]

**ಮಧುರರಸ** (ನಾ). ೧. ಕಬ್ಬಿನ ಹಾಲು; ಕಬ್ಬಿನ ರಸ : ಸವಿಪೊಡೆ ಮಧುರ ರಸಂಬೊಲ್ ಕಿವಿಗಿನಿದಾಗಿರ್ಪ ವಚನವಿರಚನೆ ಮಧುರಂ (ಶಬ್ದಮ. ೨-೬೦). ೨. ಸವಿಯಾದ ದ್ರವಾಹಾರ : ಊಟದಲ್ಲಿ ಮೊದಲು ಮಧುರರಸಗಳನ್ನೂ . . . ಅಂತ್ಯದಲ್ಲಿ ಹುಳಿ ಮೊದಲಾದ ಮಿಶ್ರದ್ರವ್ಯಗಳನ್ನೂ ಭುಂಜಿಸಿದರೆ ಶೀಘ್ರವಾಗಿ ಜೀರ್ಣಿಸಿ ಬಲವನ್ನುಂಟುಮಾಡುವುದು (ಸಕವ್ಯ. ೫೦). [ಸಂ.]

**ಮಧುರಸ** (ನಾ). ೧. ಕಬ್ಬು. ೨. ಜೇನುತುಪ್ಪ : ಆಗೊಂದು ಈಗೊಂದು ಹನಿಯನಿತ್ತರೆ ಸಾಕು ಹನಿಸದಿರು ಮಧುರಸವ ನನ್ನ ಮೇಲೆ (ಕರ್ಮ್ಮಲಿ. ೯-೨). ೩. ಕಳ್ಳು ; ಮದ್ಯ : ವಿಧುಮುಖಿ . . . ಮಧುರಸಮಲ್ಲು ಕುಂಕುಮರಸಂ ದಿಟಮೆಂದು ಬಟಿಕ್ಕೆ ಶಂಕೆ ತನ್ಮಧುರಸ ಗಂಧದಿಂ ತೊಲಗೆ ಸೇವಿಸಿದಳ್ ಮಧುವಂ ನಿಜೇಚ್ಛೆಯಿಂ (ಜಗವಿ. ೧೬-೧೦೬). [ಸಂ.]

**ಮಧುರಸೆ** (ನಾ). ೧. ಒಂದು ಬಗೆಯ ಸಸ್ಯ: ಕುರಟಗೆಗಿಡ : "ಮೂರ್ವಾ, ದೇವೀ, ಮಧುರಸಾ, ಮೋರಟಾ, ತೇಜನೀ, ಸ್ರವಾ, ಮಧೂಲಿಕಾ, ಮಧುಶ್ರೇಣೀ, ಗೋಕರ್ಣೀ, ಪೀಲುಪರ್ಣೀ— ೧೦ ಹೆಗ್ಗುರುಟಕೆಯ ಹೆಸರುಗಳು" (ಸಿದ್ಧಾಂತಿ. ೧೩೦). ೨. ದ್ರಾಕ್ಷೆ: "ಮೃದ್ವೀಕಾ. ಗೋಸ್ತನೀ, ದ್ರಾಕ್ಷಾ, ಸ್ವಾದ್ವೀ, ಮಧುರಸಾ—೫ ದ್ರಾಕ್ಷೆ ಪೆಸರುಗಳು" (ಸಿದ್ಧಾಂತಿ. ೧೩೬). ೩. ಹಾಲುತೊಟ್ಟಿನ ಗಿಡ. [ಸಂ. ಮಧುರಸಾ]

**ಮಧುರಾಲಾಪ**, ಮಧುರಾಳಾಪ (ನಾ). ೧. ಸವಿಯಾದ ಮಾತು,— ಸಂಭಾಷಣೆ : ಗಂಭೀರವಾದ ಈತನ ಆಕೃತಿಯನ್ನೂ ಮಧುರಾಲಾಪಗಳನ್ನೂ ನೋಡಿದರೆ ಪ್ರಭುವಿನಂತೆ ಕಾಣುವನು (ಶಾಕುಂತ. ೧೩-೨). **ಮಧುರಾಳಾಪ**: ೧. ವಿದಿತಾಸ್ಪದಮುತ್ತರಮಾರ್ಗವರ್ಗ ಮಧುರಾಳಾಪಂ (ಶಬ್ದಾ. ೨-೬೨); ಈತನನು ಮಧುರಾಳಾಪದಲಿ ಮಾತಾಡಿಸುವೆನು (ತೊರವೆ. ೩-೪-೦೬). ೨. ಸವಿಯಾಗಿ ಮಾತಾಡುವವನು : ಭೂಪಂ ಬೆಸಗೊಳೆ ಮಧುರಾಳಾಪಂ ಬಿನ್ನವಿಕುಂ (ಶಾಂತಿಪು. ೫-೩೦). [ಸಂ.]

**ಮಧುರಾಳಾಪ** 'ಮಧುರಾಲಾಪ' ನೋ.

**ಮಧುರಿಕೆ** (ನಾ). ಒಂದು ಬಗೆಯ ಸೊಪ್ಪು; ಸಬ್ಬಸಿಗೆ : "ಶಾಲೇಯಃ, ಶೀತಶಿವಾ, ಛತ್ರಾ, ಮಧುರಿಕಾ, ಮಿಸಿಃ, ಮಿಶ್ರೇಯಾ—೬ ಸಬ್ಬಸಿಕೆ ಹೆಸರುಗಳು" (ಸಿದ್ಧಾಂತಿ. ೧೩೬). [ಸಂ. ಮಧುರಿಕಾ]

**ಮಧುರಿಪು** (ನಾ). ಮಧು ಎಂಬ ರಾಕ್ಷಸನ ಶತ್ರು: ವಿಷ್ಣು : "ವಿಷ್ಣುಃ . . . ಮಧುರಿಪು . . . ವತ್ಸಲಾಂಛನಃ —ಈ ೩೯ ವಿಷ್ಣುದೇವರ ಹೆಸರುಗಳು" (ಸಿದ್ಧಾಂತಿ. ೦೬). [ಸಂ.]

**ಮಧುರಿಪುಜ** (ನಾ). ವಿಷ್ಣುವಿನ ಮಗ; ಮನ್ಮಥ : ಮಧುಸೇವನೆಯಿಂ ಸೊರ್ಕಿತೆ ಮಧುಪಂ ಸುಮನಃಪ್ರಚಯಮನಲೆದೊಡೆ ಶಿಖಿಯೊಳ್ ಮಧುರಿಪುಜನ ಬೆಸದಿನದಂ ಮಧು ದಂಡಿಪ ತೆಱದೆ ಮುತ್ತವಲರೊಳ ದೆಸೆಗುಂ (ರಾಜಶೇ. ೯-೫೦). [ಸಂ.]

**ಮಧುರೆ**[1] 'ಮದುರೆ' ನೋ.

**ಮಧುರೆ**[2] (ನಾ). ೧. ಒಂದು ಬಗೆಯ ಸಸ್ಯ: ಕಾಡು ಸಬ್ಬಸಿಗೆ : "ಶತಪುಷ್ಪಾ, ಸಿತಚ್ಛತ್ರಾ, ಅತಿಚ್ಛತ್ರಾ, ಮಧುರಾ, ಮಿಸಿಃ, ಅವಾಕ್ಪುಷ್ಪೀ, ಕಾರವೀ—೭ ಕಾಡು ಸಬ್ಬಸಿಕೇ ಹೆಸರು" (ಸಿದ್ಧಾಂತಿ. ೧೪೭). ೨. ಅತಿಮಧುರ : ಮಧುಯಷ್ಟಿಕೆ. ೩. ಹುಳಿತ ಗಂಜಿ. ೪. ಉತ್ತರ ಭಾರತದ ಮಥುರಾಪಟ್ಟಣ; ಶ್ರೀಕೃಷ್ಣನ ಜನ್ಮಸ್ಥಳ : ಮಧುರೆಯೊಳಾ ಜೀವಂಜಸೆ ಕುಧರಧರಂ ತನ್ನ ಕಾಂತನಂ ಕೊಂದೊಡೆ ತನ್ಮಧು ಕೊಂದವನಂ ಕೊಲ್ಲದೊಡಧಮೆಯೆನಾನೆಂದು ಮುಕ್ತಕೇಶದೊಳಿರ್ದಳ್ (ನೇಮಿಪು. ೭-೨) ; ಸೋದರಮಾವನ ಮಧುರೆಲಿ ಮಡುಹಿದ ಯಶೋದೆ ನಂದನ ನೀ ಬಾರೋ (ಪುರಂದ. ೧-೧೩ ಪಲ್ಲವಿ). ೫. [ಸಂಗೀತ] ಋಷಭದಿಂದ ಹುಟ್ಟುವ ಶ್ರುತಿಗಳಲ್ಲಿ ಒಂದು : ಮಧುರೆ, ಯಾಮಳೆ, ಏಕಾಕ್ಷರಿಯೆಂಬ ಮೂಱು ಶ್ರುತಿಗಳೀ ಋಷಭಸ್ವರದಿಂ ಜನಿಸಿದವು (ಬಿವೇಕ. ೦೬೭). ೬. [ಕಾವ್ಯಮೀ] ಅನುಪ್ರಾಸದ ಒಂದು ಪ್ರಕಾರ : ತಂತಮ್ಮ ವರ್ಗದಂತ್ಯದೊಳಂತಾ ವರ್ಗಂಗಳಮಳ್ಗಳಾಗಿರೆ ಮೇಣತ್ಯಂತಂ ಸರೇಫ ಸಂಯೋಗಾಂತರಮುಮದೊದವೆ ಮಧುರೆಯೆಂಬುದದಕ್ಕಂ (ಕಾವ್ಯಾವ. ೫೬೨). [ ಸಂ. ಮಧುರಾ ]

**ಮಧುರೋಕ್ತಿ** (ನಾ). ಸವಿಯಾದ ಮಾತು ; ಇಂಪಾದ ನುಡಿ : ಉತ್ಸವದಿಂದೆ ಹಾಸ್ಯರಸವಾ ಮಧುರೋಕ್ತಿಗಳಿಂದಮಲ್ತೆ (ಶಬ್ದಾ. ೨-೪೮) ; ಅರಸ ವಸುದೇವನನು ಮಧುರೋಕ್ತಿಯಲಿ ಮನ್ನಿಸಿದ (ಕುಮಾ.ಭಾ. ೦೦-೬೦) ; ಮಧುರೋಕ್ತಿಯಿಂದೆ ಮಾವವಕ್ಕಳಂ ಮನ್ನಿಸಿ . . . ಜಾಮಾತನಂ ಮಂತ್ರಿಕರೆದಿಂತೆಂದನು (ಕೃಬಿಖ. ೩೦-೩೭). [ಸಂ.]

**ಮಧುವಲ್ಲಿ** (ನಾ). ೧. ಅತಿಮಧುರ ; ಮಧುಯಷ್ಟಿಕ. ೨. ಒಂದು ಬಗೆಯ ದ್ರಾಕ್ಷೆ. ೩. ಮಾದಲದ ಹಣ್ಣು ; ಸಕ್ಕರೆಗಂಚಿ : "ಮಧುವಲ್ಲಿಮುರಿಮಾದಲಂ" (ತುಂಗರಾ. ೪೧-೩೩). [ ಸಂ. ಮಧುವಲ್ಲೀ ]

**ಮಧುವಿಕಾರಿ** (ನಾ). ವಸಂತಮಾಸದಲ್ಲಿ ಮಾವಿನ ಹೂವಿನ ಮಕರಂದ ಪಾನದಿಂದ ಚಿತ್ತವಿಕಾರವನ್ನು ಹೊಂದಿದುದು : ಮಧುವಿಕಾರಿ ಕೋಗಿಲೆ ಕಿಸುಗಣ್ಣಾವೆ ನೀಂ (ಪುಷ್ಪಕು. ೩-೩೨). [ ಸಂ. ಮಧುವಿಕಾರಿನ್ ]

**ಮಧುವಿಡಿ** (ಕ್ರಿ). ಜೇನನ್ನು ಕೂಡಿಡು : ಅರವಿರಿದ ಕಮಲಗಳನಾರೈದು ಭ್ರಮರಾಳಿ ಹರುಷದಿಂ ತದ್ರಸವ ಸವಿದು ಮಧುವಿಡುವಂತೆ (ವವವಿ.ಶಿ. ೭-೪).
[ ಮಧು + ಇಡು[1] ]

**ಮಧುವಿಹಂಗ** (ನಾ). ಹೂವಿನ ಮಕರಂದದಿಂದ ಬದುಕುವ ಹಕ್ಕಿಯಂತಹ ಕೀಟ : ಅಲರ್ವಕ್ಕಿ ; ತುಂಬಿ : ಮಣಿಕುಟ್ಟಿಮತಳದ ಪೂವಲಿಯಂ ಬಿಟ್ಟು ಪಾಱುವ ಮಧುವಿಹಂಗಂಗಳ ಹುಂಕಾರದೊಳಂ . . . ಅತಿಕ್ಷುಭಿತಮಾದಾಸ್ಥಾನಮಂಟಪದಿಂ ಮನುಜೇಂದ್ರಂ ಪೊಱಮಟ್ಟು (ಕಾದಂಪೂ. ೬೭). [ಸಂ.]

**ಮಧುವ್ರತ** (ನಾ). ತುಂಬಿ ; ಭ್ರಮರ : "ಮಧುಕರಃ, ಮಧುಪಃ, ಮಧುವ್ರತಃ. . .ದ್ವಿರೇಫಃ —ಈ ೧೩ ತುಂಬಿ" (ಹಲಾಯು. ೪೩-೦೦೦) ; ರತಿಗೆ ಮುಡಿಯಲ್ಕೆ ಮದನಂಗೆ ತುಱುಂಬಲ್ಕಿರ್ದುದೆಂದು ವಧು ಸುಟೀವ ಮಧುವ್ರತಮುಮನಲೆದಪೆನೆಂಬೀ ಪ್ರತೀತಿಗಿರುವಂತಿಯಂತೆ ನೋಂತಲ

ರೊಳವೇ (ಆದಿಪು. ೧೧-೧೦೭) ; ಆಸವಾಸಕ್ತಿ ಮಧುವ್ರತದೊಳ್ (ಚಂದ್ರಪ್ರ. ೩-೯೮); ಸುಕವಿ ಮಧುವ್ರತನಿಕರಮನೆಱಗಿಸುವ ಚೂತಮಂಜರಿ ಕುಕವಿಪ್ರಕರ ಮಧುಪಕ್ಕೆ ಕೃತಿ ಚಂಪಕಮಂಜರಿಯೆನಿಸೆ ಪೇೞ್ದಪಂ ಗುಣವರ್ಮಂ (ಪುಷ್ಪ. ೧-೩೧). [ಸಂ.]

**ಮಧುಶಿಗ್ರು** (ನಾ). ಕೆಂಪುಹೂ ಬಿಡುವ ನುಗ್ಗೆಗಿಡ : "ಮಧುಶಿಗ್ರು, ಅಸೌರಕ್ತಃ—ಕೆಂಪುಹುವ್ವುಗಳುಳ್ಳ ನುಗ್ಗೇಗಿಡದ ಹೆಸರು" (ನಿಘಂ.೦೦೬). [ಸಂ.]

**ಮಧುಶ್ರೇಣಿ** (ನಾ). ಕುರಟಿಗೆ ಗಿಡ : "ಮೂರ್ವಾ, ದೇವೀ . . . ಮಧುಶ್ರೇಣೀ, ಗೋಕರ್ಣೀ, ಪೀಲುಪರ್ಣೀ–೧೧ ಹೆಗ್ಗುರುಟಿಕೆಯ ಹೆಸರುಗಳು" (ನಿಘಂ. ೦೩೦). [ಸಂ. ಮಧುಶ್ರೇಣೀ]

**ಮಧುಷ್ಠೀವ** (ನಾ). ಹಿಪ್ಪೆಮರ ; ಮಧೂಕವೃಕ್ಷ : "ಮಧೂಕಃ, ಗುಡಪುಷ್ಪಃ, ಮಧುದ್ರುಮಃ, ವಾನಪ್ರಸ್ಥಃ, ಮಧುಷ್ಠೀವಃ–೫ ಯಿಪ್ಪೆ ಗಿಡ, ಹಿಪ್ಪೇಮರ" (ನಿಘಂ. ೦೦೬). [ಸಂ.]

**ಮಧುಸಂಗ** (ನಾ). ೧. ವಸಂತಮಾಸದ ಸಮಾಗಮ. ೨. ಮದ್ಯದ ಸಂಪರ್ಕ. ೧, ೨ : ತನುಲತೆಗಂಕುರಂ ತಳಿರಲರ್ ಮಧು ಸಂಗದೊಳಾಯ್ತು ಚೋದ್ಯಮೆಂದೆನೆ ಮಧುಪಾನಜಾತಪುಳಕೇಕ್ಷಣ ಶೋಣಿಮ ಘರ್ಮಬಿಂದುಗಳ್ ತನಗೆಸೆಯಲ್ . . . ಪಿಕನಿನಾದ ಪೆಱಳ್ ಗಟಪಂ ನೆಗೞ್ದಿದಳ್ (ಜಗನ್ನಾ.೧೭-೧೦೭). [ಸಂ.]

**ಮಧುಸಂಗತಿ** (ನಾ). ೧. = ಮಧುಸಂಗ ೧. ೨. = ಮಧುಸಂಗ ೨. ೧, ೨ : ಅಬ್ಜಿನಿ ತನ್ನ ಪರಾಗಮೆಂಬ ತಂಬುಲಮುಂಗೆ ನೆಕ್ಕಪಳ್ ವಿಕೃತಿಯುಂ ಮಧುಸಂಗತಿ ಮಾಡದಿರ್ಕುಮೇ (ಜಗನ್ನಾ. ೦೯-೨೩). [ಸಂ.]

**ಮಧುಸಖ** (ನಾ). ವಸಂತಋತುವಿನ ಮಿತ್ರ ; ಕಾಮ ; ಮನ್ಮಥ : ವಿರಹಿಗಳಂ ವೀಗೆ ತೆಗೆದೆಚ್ಚು ಬೞಲ್ದ ಮಧುಸಖನ ಸುಯ್ಯೆಲರ್ವೊಲ್ ಸೊಗಯಿಸಿ ಪೊತ್ತಲರ್ಗಂಪಂ ನೆಗೆದುಱಿ ತಣ್ಣೆಲರದಿನಿಸು ತೀಡಿತ್ತಾಗಳ್ (ಕಾದಂಬ. ೦೩೪). [ಸಂ.]

**ಮಧುಸಾರಥಿ** (ನಾ). ವಸಂತನನ್ನು ಸಾರಥಿಯನ್ನಾಗಿ ಮಾಡಿಕೊಂಡವನು ; ಕಾಮ. [ಸಂ.]

**ಮಧುಸೂದನ** (ನಾ). ೧. ತುಂಬಿ. ೨. ಮಧು ಎಂಬ ರಾಕ್ಷಸನನ್ನು ಸಂಹರಿಸಿದವನು; ಕೃಷ್ಣ : ಮನದ ಪರುಷದಿ ನಗುತ ಮಧುಸೂದನನು ನುಡಿದನು (ಕುಮಾ.ಭಾ. ೬-೩೬); ಯಾದವ ನೀ ಬಾ ಯದುಕುಲನಂದನ ಮಾಧವ ಮಧುಸೂದನ ಬಾರೊ (ಪುರಂದ. ೧-೦೩ ಪಲ್ಲವಿ); ವಾರಣನಗರಿಗೀಗ ನಮ್ಮೊಡನೆ ನಡೆತರಲಿ ದ್ವಾರಕೆಯೊಳಿರ್ದ ಜನರೆಲ್ಲರುಂ. . . ಎಂದು ಮಧುಸೂದನಂ ನೇಮಿಸಿದನು (ಜೈಮಿ. ೭-೧). [ಸಂ.]

**ಮಧುಸೇಕ** (ನಾ). ಮದ್ಯವನ್ನು ಚಿಮುಕಿಸುವುದು ; ಮದ್ಯಸಿಂಚನ ; P ಸುಂದರಸ್ತ್ರೀಯರು ತಮ್ಮ ಬಾಯಿಂದ ಮದ್ಯವನ್ನು ಮುಕ್ಕುಳಿಸಿ ಬಕುಳವೃಕ್ಷದ ಮೇಲೆ ಉಗುಳುವುದರಿಂದ ಅದು ಪುಷ್ಪಭರಿತವಾಗುವುದೆಂಬುದು ಒಂದು ಕವಿಸಮಯ : ಅಣುವ್ರತಮಂ ಮುನಿವರನೊಳ್ ಕೈಕೊಂಡ ತೆಱದೆ ಮಧುಸೇಕಮನಾದರಿಸದೆ ವಕುಳಂ ಮುಕುಳ ಮನರಲಂ ಧರಿಸಿದುದಾ ಕೊಂಬುಕೊಂಬಿನೊಳೆಲ್ಲಂ (ಚಂದ್ರಪ್ರ. ೨-೬೨). 'ದೋಹದ' ಪರಾ. [ಸಂ.]

**ಮಧುಸೇವನೆ** (ನಾ). ೧. ಮದ್ಯಪಾನ ; ಮದಿರಾಸೇವನೆ. ೨. ಮಕರಂದದ ಪಾನ. ೧, ೨ : ಮಧುಸೇವನೆಯಿಂ ಸೊರ್ಕಿತೆ ಮಧುಪಂ ಸುಮನಃಪ್ರಜೆಯುಮನಲೆದೂಡೆ ಶಿಖಿಯೊಳ್ ಮಧುರಿಪುಜನ ಬೆಸದಿನದಂ ಮಧು ದಂಡಿಪ ತೆಱದೆ ಮುತ್ತದಲರೊಳದೆಸೆಗುಂ (ರಾಜಶೇ. ೯-೩೦). [ಸಂ. ಮಧುಸೇವನ]

**ಮಧುಸೇವೆ** (ನಾ). ಮದ್ಯಪಾನ : ಕನ್ನೆವರಂ ನಿಮಿರ್ದಕ್ಷಿಗಳ್ಗೆ ರಾಗಂ ಮಧುಸೇವೆಯಿಂ ನೆಗೞ್ದ ರಂಜಿಸಿದರ್ ಮಧುಮತ್ತಕಾಂತೆಯರ್ (ಜಗನ್ನಾ. ೦೩-೦೦೬). [ಸಂ. ಮಧುಸೇವಾ]

**ಮಧೂಕ** (ನಾ). ಹಿಪ್ಪೆಮರ : ಮಧುಕಂ ಮಧೂಕಪುಷ್ಪಂ ಮಧುಶರ್ಕರೆ ಕೋಷ್ಮಮೆಂಬಿವಂ ಮೊದಲೊಳ್ ಪೂಟ್ಕುಧಿಕಫಲಮಾಗಿ ಪಡೆಗುಂ ಮಧುರತೆಯಿ[ಯ]೦ (ಲೋಕೋಪ. ೬-೯೦) ; ಮಾವು ಮಧೂಕ ಕುಟ ಕಲ್ಲತ್ತಿ . . . ಕರ್ಣಿಕಾರದ ಮೊತ್ತವಿದೆ ನೋಡಬಲೆ (ಕುಮಾರ. ೩-೧-೨೭). [ಸಂ.]

**ಮಧೂಚ್ಛಿಷ್ಟ** (ನಾ). ಜೇನುಮೇಣ : "ಮಧೂಚ್ಛಿಷ್ಟಂ, ಸಿಕ್ಥಕಂ–೨ ಜೇನುಮೇಣದ ಹೆಸರು" (ನಿಘಂ. ೩೦೭). [ಸಂ.]

**ಮಧೂದ್ಗಮ** (ನಾ). ವಸಂತಕಾಲದ ಆರಂಭ : ಸುಗಂಧಬಂಧುರ ಮಲಯಾನಿಲಾಗತಿ ಮಧೂದ್ಗಮಮಂ ವಿಕಸಲ್ಲತಾಂತಮಂಜರಿ ಫಲದೇೞ್ಗೆಯಂ ನೆರೆಯೆ ಪೇೞ್ವವೊಲೀ ಸಮವಸ್ಥೆ ತಾನೆ ದೇವರ ಬರವಂ ನಿರಾಕುಳಮೆ ಪೇೞ್ದಪುದೆನ್ನ ಮನಕ್ಕೆ ನಿಕ್ಕುವಂ (ಕಾದಂಬ. ೩೮೭). [ಸಂ.]

**ಮಧೂಪಚಯ** (ನಾ). ಜೇನನ್ನು ಕೂಡಿಡುವಿಕೆ ; ಜೇನಿನ ಸಂಗ್ರಹ : ಜೇನುನೊಣದ ಮಧೂಪಚಯಮವಕಿಲ್ಲಲೇ ಸರ್ವಾಪಹಾರವು ಪರರಿಗಾ ಕೌರವನ ಸಿರಿ (ಕುಮಾ.ಭಾ. ೯-೧೧). [ಸಂ.]

**ಮಧೂಲಕ** (ನಾ). ೧. ನೀರುಹಿಪ್ಪೆಮರ : "ಮಧೂಲಕಃ, ಜಲಜೇಅತ್ರ–ನೀರುಹಿಪ್ಪೆಮರ" (ನಿಘಂ. ೦೦೬). ೨. ಜೇನುತುಪ್ಪ. ೩. ಸಿಹಿ ಮತ್ತು ಕಹಿ ಮಿಶ್ರವಾದ ಕಷಾಯ. [ಸಂ.]

**ಮಧೂಲಿಕೆ** (ನಾ). ಒಂದು ಬಗೆಯ ಸಸ್ಯ ; ಕುರಟಿಗೆ ಗಿಡ : "ಮೂರ್ವಾ . . . ಮಧೂಲಿಕಾ, ಮಧುಶ್ರೇಣೀ, ಗೋಕರ್ಣೀ, ಪೀಲುಪರ್ಣೀ–೧೧ ಹೆಗ್ಗುರುಟಿಕೆಯ ಹೆಸರುಗಳು" (ನಿಘಂ. ೦೩೦). [ಸಂ. ಮಧೂಲಿಕಾ]

**ಮಧೂಳಿ** (ನಾ). ೧. ಒಂದು ಬಗೆಯ ಮಲ್ಲಿಗೆ; ಇರವಂತಿಗೆ ಹೂವು : ಮಾಳಿಯೊಳುದ್ಭ್ರಮದ್ಭ್ರಮರಭಾರವಿಭಗ್ನಮಧೂಳಿ ಮಾಲತೀ ಮಾಳೆ ಮನಕ್ಕೆಮಂದಸೆದುದು (ಶಾಂತಿಪು. ೩-೩೭). ೨. ಮಾವಿನ ಮರ. ೩. ಒಂದು ಬಗೆಯ ಸಸ್ಯ; ಅತಿಮಧುರ. ೪. ಒಂದು ಬಗೆಯ ನಿಂಬೆ. ೫. ಪರಾಗ. [ಸಂ. ಮಧೂಲೀ]

**ಮಧ್ಯ₁** (ಗು). ೧. ನಡುವಿನ ; ನಡುವೆ ಇರುವ. ೨. ನಡುತರದ ; ಮಧ್ಯಮ ತರಗತಿಯ. ೩. ಯಾವ ಪಕ್ಷಕ್ಕೂ ಸೇರದ ; ನಿಷ್ಪಕ್ಷಪಾತಿಯಾದ. ೪. ನ್ಯಾಯವಾದ ; ಸರಿಯಾದ ; ಸಮರ್ಪಕವಾದ. (ನಾ). ೫. ನಡುವಿನ ಭಾಗ : ಮೊದಲು ಕಡೆ ಮಧ್ಯಗಳ ಬಲ್ಲವ ಮದನಜನಕನು ನೀನು (ಹಂಪಾ. ೯೩) ; ಕಥೆಗೆ ಒಂದು ಆದಿ ಮಧ್ಯ, ಅಂತ್ಯಗಳಿರಬೇಕು (ಅಂಕಾ. ೦೨೬). ೬. ದೇಹದ ಮಧ್ಯಭಾಗ; ಸೊಂಟ ; ಟೊಂಕ ; ನಡು : ನೋಡೆ ಕುಮಾರಿಯ ಬಳ್ಕುವ ಮಧ್ಯಂ ನಾಡೆ ಮನೋಜ್ಞಂ (ಸುಕುಮಾ. ೩-೩೦ ರಗಳೆ) ; ಮೇಲಿಂದನು ಮಧ್ಯಕ್ಕೆ ಸುತ್ತಿ ಕಾಸಿಯ ಬಿಗಿದು (ಪಂಪಭಾ. ೨೯-೩೯) ; ಕ್ಷಾಮವು ಮಧ್ಯವು ಅಕೃಶವು ಜಘನವು . . . ಸುಂದರವೀಕೆಯ ತನುವು (ಇಂತಾಕ. ೦೭೯-೩೭). ೭. ಕೆಳಮಟ್ಟವೂ ಅಲ್ಲದ, ಉತ್ತಮ ಮಟ್ಟವೂ ಅಲ್ಲದ ಸ್ಥಿತಿ. ೮. [ಸಂಗೀತ] ದ್ರುತ, ಮಧ್ಯ, ವಿಳಂಬಗಳೆಂಬ ಮೂರು ಲಯಗಳಲ್ಲಿ ಒಂದು : ಲಯದಲ್ಲಿ ದ್ರುತ (ಹೆಚ್ಚಿನ ವೇಗ), ಮಧ್ಯ (ಹೆಚ್ಚೂ ಅಲ್ಲದ, ನಿಧಾನವೂ ಅಲ್ಲದ) ಮತ್ತು ವಿಳಂಬ (ನಿಧಾನ) ಎಂದು ಮೂರು ವಿಧ (ಸಂಗೀತಂ. ೫೭). ೯. ತಾರ, ಮಧ್ಯ, ಮಂದ್ರಗಳೆಂಬ ಮೂರುಬಗೆಯ ಸ್ವರಸಪ್ತಕಗಳಲ್ಲಿ ಒಂದು : ಕೋಗಿಲೆ ಗಿಳಿ ತುಂಬಿ ಮಹೀಶನ ಕಿವಿಗಾಗಳ್ ಕ್ರಮದಿತ್ತುವು ತಾರಮಧ್ಯಮಂದ್ರಸ್ವರದಿಂ (ಚಂದ್ರಪ್ರ. ೭-೬೨); ಪರ ಮಂದ್ರ ಮಧ್ಯ ತಾರಸ್ವರದಿಂದಂ. . . ಪಾಡಿದನಾ ಗುರು ವಿಶ್ವೇಶ್ವರನ ಮಹಿಮೆಯಂ ಮುನಿತಿಲಕಂ (ವೀರಶೈ. ೬-೯೧).

೧೦. [ಗಣಿತ] ಹದಿನಾರು ಅಂಕೆಗಳಿಂದ ಕೂಡಿದ ಒಂದು ದೊಡ್ಡ ಸಂಖ್ಯೆ : ಅಂಕಗಳ ಶ್ರೇಣಿ ಹದಿನೆಂಟರವರೆಗೂ ಹೋಗುತ್ತದೆ. ಈ ಹದಿನೆಂಟು ಶ್ರೇಣಿಗಳು ಯಾವುವೆಂದರೆ, ಏಕಂ, ದಶ, ಶತ, ಸಹಸ್ರ, ಅಯುತ, ಲಕ್ಷ, ಪ್ರಯುತ, ಕೋಟಿ, ನ್ಯರ್ಬುದ, ಪದ್ಮ, ಖರ್ವ, ನಿಖರ್ವ, ಮಹಾಪದ್ಮ, ಶಂಖ, ಸಮುದ್ರ, ಮಧ್ಯ, ಅಂತ್ಯ, ಪರಾರ್ಧ (ಶ್ರವಾತ. 1, ೨೫೬). [ಸಂ.]

**ಮಧ್ಯ₂** (ಅ). ನಡುವೆ : ನವರಾತ್ರೀ ಮಧ್ಯ ಶಿವರಾತ್ರಿ ಬಂದೀತೇ ? (ಗಾದೆ). [ < ಮಧ್ಯ₁ ]

**ಮಧ್ಯಂತರ** (ನಾ). ೧. ನಡುವಿನ ಕಾಲ ; ಮಧ್ಯಕಾಲ : ಇವುಗಳ ಮಧ್ಯಂತರದಲ್ಲಿ ಅವನ ಮತ್ತೆರಡು ಗ್ರಂಥಗಳು ಪ್ರಕಟವಾಗಿವೆ (ಶ್ರಬಂಧ. ೦೦೨) ; ಮಧ್ಯಂತರದಲ್ಲಿ ಟೀಕರು ಮಿಶನರಿಯ ಕೆಲಸ ಬಿಟ್ಟು ಕೊಟ್ಟು ರಾಹುರಿಯಲ್ಲಿ ಬಂದು ನೆಲಸಿದ್ದರು (ಸ್ಮೃತಿ. ೩೯೯). ೨. ನಾಟಕ, ವಾಕ್ಚಿತ್ರ ಅಥವಾ ಸಂಗೀತಕಚೇರಿಗಳಲ್ಲಿ ನಡುವೆ ಅಲ್ಪವಿಶ್ರಾಂತಿಗಾಗಿ ಕೊಡುವ ಬಿಡುವು ; ವಿರಾಮ : ಮಧ್ಯಂತರವನ್ನೆಲ್ಲ ಮಾತಿನಲ್ಲಿಯೆ ಕಳೆಯುವಿರೋ, ಸ್ವಲ್ಪ ಕಾಫಿ ಗೀಫಿ ಕುಡಿಯುವಿರೋ? (ರಂಗ). P ಇದು ವ್ಯಾಕರಣಶುದ್ಧವಲ್ಲದ ರೂಪ. ಬಹುಶಃ ಇದು ಇಂಗ್ಲಿಷಿನ 'Interval' ಎಂಬ ಶಬ್ದಕ್ಕೆ ಮಾಡಿಕೊಂಡಿರುವ ಭಾಷಾಂತರರೂಪವಿರಬಹುದು. [ ಮಧ್ಯ + ಅಂತರ ]

**ಮಧ್ಯಂದಿನ** (ನಾ). ೧. ಹಗಲಿನ ಮಧ್ಯಭಾಗ : ಮಧ್ಯಾಹ್ನ : ಯುವರಾಜಂ . . . ಮಧ್ಯಂದಿನಸಮಯ ಸಂತಪ್ತತಪನಮಂಡಲಮಂ ನೋಡಿ (ಶಾಂತಿಪು. ೬-೮ ವ); ಆಗಡೆ ಪೂರ್ಣಿಮೆಯಲ್ಲಿ ಮಧ್ಯಂದಿನಸಮಯ ಸಮುದ್ಭೂತಶಂಖಿಪ್ರಣಾದಂ (ಕಾದಂಪೂ. ೬೬): ಮಧ್ಯಂದಿನದ ಬಿಸಿಲೆ ಬೆಳ್ದಿಂಗಳಂತಾಗೆ (ಕಂಠಾವಾ. ೨-೦೯). ೨. ನಡುವೆ ಇರುವಂಥದು ; ಮಧ್ಯಸ್ಥವಾದುದು : "ಮಧ್ಯಮಂ, ಮಧ್ಯಮಿಯುಂ, ಮಧ್ಯಂದಿನಂ— ಈ ೩ ನಡುವಣದು" (ಕಲಾವು. ೦೨೬-೯೦). [ಸಂ.]

**ಮಧ್ಯಕ** (ನಾ). ಸಾಮೂಹಿಕ ಸ್ವತ್ತು; ಉಭಯಸಾಮಾನ್ಯವಾದುದು: ಮೂಡಲು ಮಧ್ಯಕದುಗಡಿಯ (ಶಾಂಕಶಾ. ೦೯೩೦, ಶಾಗೆವಾಡಿ. ೧೦೩-೯೯; 1165). 'ಮದ್ದಿಕ' ನೋಡಿ. [ಸಂ.]

**ಮಧ್ಯಗ** (ಗು). ನಡುವೆ ಇರುವ ; ಮಧ್ಯಸ್ಥವಾದ. [ಸಂ.]

**ಮಧ್ಯಗತ** (ಗು). ೧. = ಮಧ್ಯಗ : ಸಮಾಸಂ ನೆಗಟ್ಟಂ ನೆಜಿ ಪೋಕುಂ ಮಧ್ಯಗತವಿಭಕ್ತಿಗಳವಚಿರೊಳ್ (ಶಮತ. ೧೬೨). (ನಾ). ೨. ತೀರ ಹತ್ತಿರವೂ ಅಲ್ಲದ, ಬಹಳ ದೂರವೂ ಅಲ್ಲದ ಸ್ಥಳದಲ್ಲಿರುವವನು : ಬರಲು ಕಂಡಡೆ ವಂದಿಸುತಲಂತರಿಸಿ ಮಿಗೆ ಹತ್ತಿರವೆನಿಸದತಿ ತರದ ದೂರದ ಸಾರದೀ ಪರಿ ಮಧ್ಯಗತನೆನಿಸಿ . . . ಬೆಸಸಿದನರವರಿಸದಾಕ್ಷಣಕೆ ಮಾಡುವ ನವನೆ ಸೇವಕನು (ಕುಮಾರಾ. ೩-೦೦೬). [ಸಂ.]

**ಮಧ್ಯಗತಿ** (ನಾ). ಮಧ್ಯಮವಾದ ವೇಗ : ತೀವ್ರವೂ ಅಲ್ಲದ, ನಿಧಾನವೂ ಅಲ್ಲದ ವೇಗ : ಪಿತ್ತಕ್ಕೆ ಹಗಲಿರುಳು ಮಧ್ಯಗತಿಯಲ್ಲಿಯೂ ತೆಗೆದುಕೊಂಡಾಹಾರವು ಜೀರ್ಣವಾಗುವುದು (ಶಕಪ್ಪ. ೦೩). [ಸಂ].

**ಮಧ್ಯತ್ರಾಣ** (ನಾ). ಶರೀರದ ಮಧ್ಯಭಾಗವನ್ನು (ಸೊಂಟವನ್ನು) ರಕ್ಷಿಸುವ ಕವಚ : ಬಿಲ್ಲು ತೀರು . . . ಕರತ್ರಾಣ, ಶಿರಸ್ತ್ರಾಣ, ಪದತ್ರಾಣ . . . ಮೇಟಕ ಮುಂತಾದ ಶತ್ರುಜಯಾತ್ಮರಕ್ಷಾದಿ ಸಾಧನವಿಶೇಷಂಗಳಿಂದಲುಂ (ವಿವೇಕ. ೨೬೨). [ಸಂ.]

**ಮಧ್ಯದೇಶ** (ನಾ). ೧. ಮಧ್ಯದಲ್ಲಿರುವ ಪ್ರದೇಶ : ನಡುವಿನ ಜಾಗ. ೨. ಸೊಂಟ ; ನಡು. ೩. ಹೊಟ್ಟೆ : ಉದರ. ೪. ಆಕಾಶದ ನಟ್ಟನಡುವಿನ ಭಾಗ,—ನಡುನೆತ್ತಿ. ೫. ಭರತಖಂಡದ ನಟ್ಟನಡುವಿನ ಭಾಗ ; ಹಿಮಾಲಯ ಮತ್ತು ವಿಂಧ್ಯಪರ್ವತಗಳ ನಡುವಿನ ಪ್ರದೇಶ : ಮಧ್ಯದೇಶನೇತ್ರ ದುರ್ಧರಶೌರ್ಯಮರ್ದನ ಪರಾಕು (ಹಾದಶಂ. ೩-೦ ವ). [ಸಂ.]

**ಮಧ್ಯನಾಡಿ** (ನಾ). ದೇಹದಲ್ಲಿರುವ ಹನ್ನೆರಡು ನಾಡಿಗಳಲ್ಲಿ ಒಂದು : ಮಧ್ಯನಾಡಿಯಲ್ಲಿ ಗೋವಿಂದ (ಹಸಾರ. ೬-೦೯ ತಾತ್ಪರ್ಯ). [ ಸಂ. ಮಧ್ಯನಾಡೀ ]

**ಮಧ್ಯನಾಡಿಕೆ** (ನಾ). = ಮಧ್ಯನಾಡಿ : ಮಹಾಸುಖಸಂಶ್ರಯ ಮಧ್ಯನಾಡಿಕಾ ವಿವರ ಮೃತಪ್ರವಾಹವಾನೆ ಪೀರ್ವ ವಿಳಾಸಮುಳ್ಳುಬಮಾತನೊಳ್ (ಶಬಸಂ. ೨-೯೬). [ ಸಂ. ಮಧ್ಯನಾಡಿಕಾ ]

**ಮಧ್ಯಪ್ರಾಚ್ಯ** (ನಾ). ಅರಬ್ಬೀಗಣರಾಜ್ಯವೇ ಮೊದಲಾದ ದೇಶಗಳುಳ್ಳ ಪ್ರದೇಶ : ಪಾಶ್ಚಾತ್ಯದೇಶಗಳ ದೃಷ್ಟಿಯಿಂದ ಪೂರ್ವಕ್ಕೆ ಇರುವ ದೇಶಗಳೆಲ್ಲ ಪ್ರಾಚ್ಯ (Middle-east. ಶಕ್ತಿ. ೩೩). [ಸಂ.]

**ಮಧ್ಯಬಿಂದು** (ನಾ). ೧. ಕೇಂದ್ರಭಾಗ : ಮಧ್ಯಬಿಂದು ಬೀಸಿದ ಕರಗೆ ಓಗೊಟ್ಟು ಅದರ ಕಡೆಗೆ ಧಾವಿಸುವ ಬಯಕೆ (ಬಿಳಿ. ೦೩೯). ೨. [ರೇಖಾಗ] ವರ್ತುಳದ ಕೇಂದ್ರಬಿಂದು ; ತ್ರಿಜ್ಯಗಳೆಲ್ಲ ಕೂಡಿಕೊಳ್ಳುವ ಬಿಂದು : ವಿಶ್ವದೀ ವರ್ತುಲದ ಮಧ್ಯಬಿಂದುವಿನಲ್ಲಿ . . . ಸೂರ್ಯತೇಜದ ಗೋಲ ತಿರುಗುತಿದೆ ಪರಿಧಿಯಲಿ ಊರುಗೋಲಿಗೆ ಸಾಕ್ಷಿ ನಕ್ಷತ್ರವೀಧಿ (ಪಿಶು. ೨೦-೨೦). [ಸಂ.]

**ಮಧ್ಯಮ** (ಗು). ೧. ನಡುವೆ ಇರುವ : ನಡುವಿನ ; ಮಧ್ಯಸ್ಥವಾದ : ತದ್ಗಿರೀಂದ್ರ ಮಧ್ಯಮಕೂಟದಿಂದಂ ನಿಬ್ಬು ತೆಂಕಮೊಗದೆ ಬಂದು (ಆದಿಪು. ೦೩-೬೯ ವ). ೨. ಎರಡರ ನಡುವೆ ಬರುವ. ೩. ನಡುತರದ : ಉತ್ತಮವೂ ಅಲ್ಲದ ಅಥವಾ ಕೀಳೂ ಅಲ್ಲದ. ೪. ಮಧ್ಯಗಾತ್ರದ ; ತೀರ ದಪ್ಪವೂ ಅಲ್ಲದ ಅಥವಾ ತೀರ ತೆಳುವೂ ಅಲ್ಲದ. ೫. ಯಾವ ಪಕ್ಷಕ್ಕೂ ಸೇರದ. (ನಾ). ೬. ದೇಹದ ಮಧ್ಯಭಾಗ ; ನಡು ; ಸೊಂಟ : "ಅವಲಗ್ನಂ, (ವಿ)ಲಗ್ನಂ, ಮಧ್ಯಂ, ಮಧ್ಯಮಂ—ಈ ೪ ನಡು" (ಕಲಾವು. ೮೩-೩೬೩). ೭. ನಡುವೆ ಇರುವುದು ; ನಡುವಿನದು : "ಮಧ್ಯಮಂ, ಮಧ್ಯಮಿಯುಂ, ಮಧ್ಯಂದಿನಂ — ಈ ೩ ನಡುವಣದು" (ಕಲಾವು. ೦೨೬-೯೦). ೮. ಉತ್ತಮವಲ್ಲದಿದ್ದರೂ ಕಳಪೆಯಲ್ಲವೆನಿಸಿದುದು : ಉತಮನೆಲಕ್ಕೆ ಪಣ ೨ ಮಧ್ಯಮಕ್ಕೆ ಪಣ ೧ (ಶಾಸನ. XVIII, ೪೦-೦೬ : ೨೨೦) ; ತಾ ಮಾಡುವುದು ಉತ್ತಮ, ಮಗ ಮಾಡುವುದು ಮಧ್ಯಮ, ಆಳು ಮಾಡುವುದು ಹಾಳು (ಶೀತಶಂ. VIII, ೭); ಉತ್ತಮವಾದುವು ಹರೆಯದ ದಿನಗಳು . . . ಮುಂದಿನ ದಿನಗಳು ಮಧ್ಯಮಾಧಮಗಳು (ನಂಶಾಕ. ೨೦೨-೪೯). ೯. ಕುಂತೀಪುತ್ರರಲ್ಲಿ ನಡುವಿನವನು; ಭೀಮಸೇನ : ಮಧ್ಯಮನೆಂದರೆ ಪಾಂಡವರಲ್ಲಿ—ಕೌಂತೇಯರಲ್ಲಿ—ಮಧ್ಯಮ. ಭೀಮ (ಸಂಪಾಟಿ. ೯೩). ೧೦. ಮಾಂಡಲಿಕ; ಮಂಡಲಾಧಿಪತಿ : "ಮಧ್ಯಮಂ, ಮಂಡಳೇಶ್ವರಂ— ಈ ೨ ಮಂಡಳಿಕಂ" (ಕಲಾವು. ೭೦-೨೬೮). ೧೧. [ಸಂಗೀತ] ಷಡ್ಜ, ಋಷಭ, ಗಾಂಧಾರ, ಮಧ್ಯಮ, ಪಂಚಮ, ಧೈವತ ಮತ್ತು ನಿಷಾದವೆಂಬ ಏಳುಸ್ವರಗಳಲ್ಲಿ ನಾಲ್ಕನೆಯ ಸ್ವರ : ಷಡ್ಜವೃಷಭ ಗಾಂಧಾರ ಮಧ್ಯಮ ಪಂಚಮ ಧೈವತ ನಿಷಾದಂಗಳೆಂಬ ಸಪ್ತಸ್ವರಮುಮಂ (ಆದಿಪು. ೩-೨೮ ವ). ೧೨. ಮಂದ್ರ, ಮಧ್ಯಮ ಮತ್ತು ತಾರಗಳೆಂಬ ಮೂರು ಬಗೆಯ ಸ್ಥಾಯಿಗಳಲ್ಲಿ ಒಂದು : ಮಂದ್ರ ಮಧ್ಯಮ ತಾರ ಸ್ವರಗರ್ಭ . . . ಪರಾಕು (ಹಾದಶಂ. ೩-೧ ವ). ೧೩. ಷಡ್ಜ, ಮಧ್ಯಮ, ಗಾಂಧಾರಗಳೆಂಬ ಮೂರು ಬಗೆಯ ಗ್ರಾಮಗಳಲ್ಲಿ ಒಂದು : ಷಡ್ಜ ಮಧ್ಯಮ ಗ್ರಾಮಗಳೂ ಅವುಗಳಿಂದ ಉದ್ಭವವಾದ ರಾಗಪದ್ಧತಿಯ ಪೂರ್ವರೂಪವಾದ ಜಾತಿಗಳು . . . ಇವುಗಳನ್ನೆಲ್ಲಾ ವಿವರಿಸಿದ್ದಾನೆ (ಭಾರತ. ೩೩೮). 'ಮಧ್ಯಮಗ್ರಾಮ' ನೋಡಿ. [ಸಂ.]

**ಮಧ್ಯಮಗಾಂಧಾರಿ** (ನಾ). [ಸಂಗೀತ] ಒಂದು ರಾಗದ ಹೆಸರು : **ಗಾಂಧಾರಿ ರಕ್ತಗಾಂಧಾರಿ** ಮಧ್ಯಮಗಾಂಧಾರಿ . . . **ಕೌಶಿಕಿಯೆಂಬ** ಷಡ್ಜ ಮಧ್ಯಮಗ್ರಾಮದಿಂದಾದ ರಾಗಂಗಳು (**ವಿವೇಕ. ೧೪೭**).
[ಸಂ. ಮಧ್ಯಮಗಾಂಧಾರೀ]

**ಮಧ್ಯಮಗ್ರಾಮ** (ನಾ). [ಸಂಗೀತ] ಷಡ್ಜ, ಮಧ್ಯಮ, ಗಾಂಧಾರ ಗಳೆಂಬ ಮೂರುಬಗೆಯ ಗ್ರಾಮಗಳಲ್ಲಿ ಒಂದು : ಆ ರಾಗೋತ್ಪತ್ತಿಗೆ ಷಡ್ಜಗ್ರಾಮಂ ಮಧ್ಯಮಗ್ರಾಮ ಗಾಂಧಾರಗ್ರಾಮವೆಂಬ ಗ್ರಾಮತ್ರಯಂ ಗಳುಂಟು (**ವಿವೇಕ. ೧೪೭**). [ಸಂ.]

**ಮಧ್ಯಮಜ್ವರ** (ನಾ). ಜ್ವರಗಳಲ್ಲಿ ಒಂದು ಪ್ರಕಾರ; ಹತ್ತುರಾತ್ರಿಗಳ ವರೆಗೆ ಮುಂದುವರಿಯುವ ಜ್ವರ : ಏಳುರಾತ್ರಿಪರ್ಯಂತರ ತರುಣ ಜ್ವರವೆನಿಸಿಕೊಂಬುದು. ಹತ್ತುರಾತ್ರಿಪರ್ಯಂತರ ಮಧ್ಯಮಜ್ವರವೆನಿಸಿ ಕೊಂಬುದು. ಅದರ ಮೇಲೆ ಪುರಾಣಜ್ವರವೆನಿಸಿಕೊಂಬುದು (**ವೈದ್ಯಸಾ. ೧, ೩೩**). [ಸಂ.]

**ಮಧ್ಯಮಣಿನ್ಯಾಯ** (ನಾ). [ತರ್ಕಶಾ] ಲೌಕಿಕನ್ಯಾಯಗಳಲ್ಲಿ ಒಂದು ; ಹಾರದ ಮಧ್ಯದಲ್ಲಿರುವ ಮಣಿಯು ಹಾರದ ಎರಡು ಭಾಗಗಳಿಗೂ ಶೋಭೆಯನ್ನು ಉಂಟುಮಾಡುವಂತೆ ಮಧ್ಯದಲ್ಲಿರುವ ಒಂದು ಪದವು ಹಿಂದಿನ ಹಾಗೂ ಮುಂದಿನ ವಾಕ್ಯ ಅಥವಾ ವಾಕ್ಯಾಂಶಕ್ಕೆ ಅನ್ವಯಿಸುವುದು : " ಧರ್ಮಬ್ರಹ್ಮಜಿಜ್ಞಾಸಯೋಃ " ಎಂಬುದು ಮಧ್ಯಮಣಿನ್ಯಾಯದಿಂದ ಹಿಂದಿನ ವಾಕ್ಯಕ್ಕೂ ಈ ವಾಕ್ಯಕ್ಕೂ ಅನ್ವ ಯಿಸುವ ಹಾಗಿದೆ (**ಬ್ರಹ್ಮಸೂ. ೧೦ ೮೩೪**). [ಸಂ.]

**ಮಧ್ಯಮತನು** (ನಾ). ೧. ಸ್ಥೂಲವಲ್ಲದ, ಕೃಶವಲ್ಲದ, ಮಧ್ಯಮ ಗಾತ್ರದ ದೇಹ. ೨. ಸ್ಥೂಲತೆ, ಕೃಶತೆಗಳಿಲ್ಲದ ನಡುವಿನ ಗಾತ್ರದ ದೇಹವುಳ್ಳವನು : ಮೃದುಮಧ್ಯಮತನು ಹಿತಮಿತಮೃದುವಚನಂ ಲಲಿತಮಧುರಸುಂದರವೇಷಂ (**ಅಜಪು. ೧–೨೯**). [ಸಂ.]

**ಮಧ್ಯಮತ್ವ** (ನಾ). ಉತ್ತಮ ಮತ್ತು ನೀಚಗುಣಗಳ ಮಧ್ಯದ ಗುಣ: ಎಬ್ಬಿರೆ ಬೇಗಮಂತದಂ ಕರೆದಿರದೀವುದುತ್ತಮತೆ ಬೇಡಿದೊಡೀವುದು ಮಧ್ಯಮತ್ವಮೆಯ್ದುರೆ ತದಧೀಶ್ವರಂ ಬಟೀಕಮಂತದನೀವುದು ನೀಚವೃತ್ತಿ (**ತಂತ್ರಕೆ. ೯–೦೦೪**). [ಸಂ.]

**ಮಧ್ಯಮಪಾಂಡವ** (ನಾ). ಪಾಂಡುರಾಜನ ಐವರು ಮಕ್ಕಳಲ್ಲಿ ನಡುವಿನವನು ; ಅರ್ಜುನ : ಜನರು ಇವನೇ 'ಮಧ್ಯಮಪಾಂಡವ' ಎಂದರು ; ಮಹೇಂದ್ರನ ಮಗ ಎಂದರು (**ಶತಭಾ. ೨೩**). [ಸಂ.]

**ಮಧ್ಯಮಪಾತ್ರ** (ನಾ). ೧. [ಕಾವ್ಯಮೀ] ರೂಪಕಗಳಲ್ಲಿ ಬರುವ ಉತ್ತಮ, ಮಧ್ಯಮ, ನೀಚ ಎಂಬ ಮೂರುಬಗೆಯ ಪಾತ್ರಗಳಲ್ಲಿ ಒಂದು ; ಪುರೋಹಿತ, ಮಂತ್ರಿ ಮೊದಲಾದ ಪಾತ್ರ : ನಡೆದು ಹೋದ ಮತ್ತು ಮುಂದೆ ನಡೆಯುವ ಕಥಾಂಶಗಳನ್ನು ಮಧ್ಯಮಪಾತ್ರಗಳ ಮೂಲಕ ಸಂಕ್ಷೇಪವಾಗಿ ಸೂಚಿಸುವುದು, ಇದೇ 'ಶುದ್ಧವಿಷ್ಕಂಭ'. ಮಧ್ಯಮಪಾತ್ರಗಳೂ ನೀಚಪಾತ್ರಗಳೂ ಸೇರಿ ಸೂಚಿಸಿದರೆ ಅದಕ್ಕೆ 'ಸಂಕೀರ್ಣವಿಷ್ಕಂಭ' ಅಥವಾ 'ಮಿಶ್ರವಿಷ್ಕಂಭ' ವೆಂದು ಹೆಸರು (**ಕಾವ್ಯ.೨೦೩**). ೨. [ಜೈನ] ದಾನವನ್ನು ಸ್ವೀಕರಿಸಲು ಯೋಗ್ಯವಾದ ಉತ್ತಮ, ಮಧ್ಯಮ ಮತ್ತು ಜಘನ್ಯವೆಂಬ ಮೂರುವರ್ಗಗಳಲ್ಲಿ ಒಂದು ಮತ್ತು ಆ ವರ್ಗಕ್ಕೆ ಸೇರಿದ ವ್ಯಕ್ತಿ : ಪಾತ್ರಮುತ್ತಮ ಮಧ್ಯಮ ಜಘನ್ಯಭೇದದಿಂ ತ್ರಿವಿಧಮಕ್ಕುಮಲ್ಲಿ ದರ್ಶನವಿಶುದ್ಧನುಂ ಶೀಲಸಂಪನ್ನ ನುಮಪ್ಪ ಸಂಯತನುತ್ತಮಪಾತ್ರಂ ಶ್ರೀಸಮ್ಯಗ್ದರ್ಶನವಿಶುದ್ಧನುಮಣು ವ್ರತಧಾರಿಯುಮಪ್ಪ ಶ್ರಾವಕಂ ಮಧ್ಯಮಪಾತ್ರಂ (**ಅಜಪು. ೦೦–೯ ವ**).
[ಸಂ.]

**ಮಧ್ಯಮಪುರುಷ** (ನಾ). [ವ್ಯಾಕ] ಪ್ರಥಮ, ಮಧ್ಯಮ ಮತ್ತು ಉತ್ತಮಗಳೆಂಬ ಮೂರುಬಗೆಯ ಸರ್ವನಾಮಗಳಲ್ಲಿ ಒಂದು ; ನೀನು, ನೀವು ಎಂಬ ಸರ್ವನಾಮಗಳು ; ಯುಗಪದುಕ್ತಿಗುತ್ತಮ ಪುರುಷಂ ಪರಮುದನುಳಿದಿರೆ ಮಧ್ಯಮಪುರುಷಂ (**ಶಮ. ೨೨೩**) : ನೀನು, ನೀವು ಎಂಬುವು . . . ಮಧ್ಯಮಪುರುಷಸರ್ವನಾಮಗಳು (**ಮಧ್ಯಮ. ೨೯**). [ಸಂ.]

**ಮಧ್ಯಮಬೀಸಿಗೆ, ಮದ್ದಿಮಬಿಸಿಗೆ, ಮಧ್ಯಮಬಿಸಿಗೆ** (ನಾ). ಸರ್ವಜಿತು ಸಂವತ್ಸರದಿಂದ ಪರಾಭವಸಂವತ್ಸರದ ವರೆಗೆ ಇರುವ ಇಪ್ಪತ್ತು ವರ್ಷಗಳ ಅವಧಿ ; ಅರುವತ್ತುಸಂವತ್ಸರಗಳಲ್ಲಿ ಮಧ್ಯದ ಇಪ್ಪತ್ತು ಸಂವತ್ಸರಗಳ ಅವಧಿ : ಶಾಲಿವಾಹನ ಶಕವರುಷ ಸಾ ೧೫೭೪ ಕಲಿವರುಷ ಸಾ ೪೭೫೩ ಮಧ್ಯಮಬೀಸಿಗೆ ಸಂವಸ್ತರ ನಂದನಸಂವಸ್ತರದ ಮಾಘ ಶುಧ ೫ ಭಾನುವಾರದಲ್ಲು (**ಎಕ. XI, ಚತ್ರದು. ೬೪–೫; 1653**). **ಮದ್ದಿಮಬಿಸಿಗೆ:** ಮಹೋಜನ ಕಟಿಯ ಹಿಂದೆ ಕಂ ೮೫ ಸಕವರುಸದ ಮದ್ದಿಮಬಿಸಿಗೆಯ ಸುಭ[ಕ್ರಿತು]ಸಂವತ್ಸರ (**ಎಕ. XVI, ತಕ್ಯಾ. ೬೨–೩೭ ; 1242**). P ಈ ಶಾಸನದಲ್ಲಿ ಬಂದಿರುವ 'ಬಸಿಗೆ' ಎಂಬುದು 'ಬಿಸಿಗೆ' ಎಂಬುದರ ಅಪಲಿಖಿತ. **ಮದ್ಯಮಬಿಸಿಗೆ :** ಶಾಲಿವಾಹನಶಖೆಯಲಿ ೧೫೮೨ ವರುಷದ ಮೇಲೆ ನಡವ ಮದ್ಯಮಬಿಸಿಗೆಯಲಿ ಪ್ಲವಸಂವತ್ಸರದ ಭಾದ್ರಪದ ಶುಧ ೨ ಲೂ (**ಎಕ. IX (S), ತನ್ನಕ. ೬೬–೩ ; 1660**). 'ಅಧಮಬೀಸಿಗೆ' ನೋಡಿ. [ ಮಧ್ಯಮ + ಬೀಸಿಗೆ$_3$ (< ಬೀಸಗೆ) ]

**ಮಧ್ಯಮವರ್ತಿ** (ಗು). ೧. ನಡುವೆ ಇರುವ ; ಮಧ್ಯದಲ್ಲಿರುವ. (ನಾ). ೨. ನಡುವೆ ಇರುವುದು : ಶಚೀಮಹಾದೇವಿಯುಂ ಲೋಕಪಾಲರುಂ . . . ಅನುತ್ತರೋತ್ತರಗಳೊಳ್ ಮಧ್ಯಮವರ್ತಿಯಪ್ಪ ಸರ್ವಾರ್ಥಸಿದ್ಧಿಯಹಮಿಂದ್ರರುಂ (**ಶಾಂತಿಪು. ೧೨–೪೩ವ**).
[ಸಂ. ಮಧ್ಯಮವರ್ತಿನ್]

**ಮಧ್ಯಮಾವತಿ** (ನಾ). [ಸಂಗೀತ] ಒಂದು ರಾಗದ ಹೆಸರು : ರಾಮಕ್ರಿ . . . ಮಧ್ಯಮಾವತಿಯೆಂಬ ಮೂವತ್ತಾರುರಾಗಂಗಳೇ ಮುಖ್ಯ ವಾಗಿ . . . ಪ್ರಸಿದ್ಧಿಗೊಂಡಿರ್ಪುವು (**ವಿವೇಕ. ೨೩೪**) ; ಮಧ್ಯಮಾವತಿ:– ೨೮ನೇ ಮೇಳಕರ್ತ ಹರಿಕಾಂಬೋಜಿಯ ಜನ್ಯ . . . ಉಪಾಂಗರಾಗ, ಔಡವರಾಗ. ಸಕಲಸನ್ಮಂಗಳಪ್ರದರಾಗ (**ಸಂಗೀತಂ. ೮೪೩**).
[ಸಂ. ಮಧ್ಯಮಾವತೀ ]

**ಮಧ್ಯಮಾಯ** (ಗು). ೧. ನಡುವಿನ : ಮಧ್ಯದಲ್ಲಿರುವ. (ನಾ). ೨. ನಡುಭಾಗ ; ಮಧ್ಯಭಾಗ ; ಮಧ್ಯ : " ಮಧ್ಯಮಾಯಮೆನೆ ಮಧ್ಯಮೆನೆ ನಡುವಕ್ಕುಂ " (**ಮಂಗರಾ. ೦೩೩–೩೮**). [ಸಂ.]

**ಮಧ್ಯಮೆ** (ನಾ). ೧. ನಡುಬೆರಳು : ಮಧ್ಯದ ಬೆರಳು : "ಮಧ್ಯಮಾ– ನಡುಬೆರಳು " (**ಸಿದ್ಧಾಂತ. ೧೯೩**). ೨. ವಿವಾಹಯೋಗ್ಯಳಾದ ಹೆಣ್ಣು : ಪ್ರಾಯಸ್ಥೆ ; ಮೈನೆರೆದ ಹೆಣ್ಣು : " ಮಧ್ಯಮಾ, ದೃಷ್ಟರಜಾಃ – ೨ ಹೊಸದಾಗಿ ಮೈನೆರೆದ ಹುಡುಗಿಯ ಹೆಸರುಗಳು " (**ಸಿದ್ಧಾಂತ. ೦೬೯**); ಕನ್ನಿಕೆಯರ್ ಮಧ್ಯಮೆಯರ್ ಸನ್ನುತಸುಕುಮಾರಿಯರತಿತರುಣೀನಿವಹಂ ಸನ್ನೆಯೊಳರಸನ ಸಂಗಡಮುನ್ನತಜಲಕೇಳಿಗೆಂದು ನಿಂದರ್ ಕ್ರಮದಿಂ (**ಹಮ್ಮಿರ. ೪–೨೦**). ೩. ತಾವರೆಯ ಬೀಜಕೋಶ. ೪. ಮೂಲಾಧಾರ ದಿಂದ ಹುಟ್ಟುವ ನಾದರೂಪವರ್ಣಕ್ಕೆ ಅರ್ಥಬೋಧಕ ಶಬ್ದನಿಷ್ಪತ್ತಿಯ ವರೆಗೆ ಉಂಟಾಗುವ ನಾಲ್ಕುಸ್ಥಿತಿಗಳಲ್ಲಿ ಮೂರನೆಯದು : ಪರೆ, ಪಶ್ಯಂತಿ, ಮಧ್ಯಮೆ, ವೈಖರಿಗಳು ಶಬ್ದಚತುಷ್ಟಯಗಳು (**ಶಿವಾಕೋ. ೦೩೩–೨೪೦**). ೫. [ಕಾವ್ಯಮೀ] (ಕೋಪ ಅಥವಾ ಪ್ರಸನ್ನತೆಗಳ ವಿಷಯದಲ್ಲಿ) ಉತ್ತಮೆ, ಮಧ್ಯಮೆ ಹಾಗೂ ಅಧಮೆ ಅಥವಾ ಜಘನೆ ಎಂಬ ಮೂರುವಿಧವಾದ ನಾಯಿಕೆಯರಲ್ಲಿ ಎರಡನೆಯವಳು : ಉತ್ತಮೆ ಮಧ್ಯಮೆ ಜಘನೆಯರೆಂಬ ತ್ರಿವಿಧಕೋಪಪ್ರಸಾದಲಕ್ಷಣಲಕ್ಷಿತ

ಲಲನೆಯರಿಂ (ಅವೀಳ. ೨೨೬). ೬. [ಕಾಮಶಾ] ರತಿಭೇದ ದೃಷ್ಟಿಯಿಂದ ವಿಂಗಡಿಸಿದ ಮೂರುಬಗೆಯ ಸ್ತ್ರೀವರ್ಗಗಳಲ್ಲಿ ಒಂದು ವರ್ಗಕ್ಕೆ ಸೇರಿದವಳು : ಸುರತದಲ್ಲಿ ಮಧ್ಯಮವಾದ ವೇಗಾಸಕ್ತಿಯುಳ್ಳವಳು: ಮಧ್ಯವೇಗಿನಿ : ಪೊಂಬಣ್ಣ ಮೊಲೆ ಪಲ್ಲು ಉಗುರು ಕಂಗಳು ದೊಡ್ಡಿತ್ತಾದವಳು . . . ಇವಳು ಪಿತ್ತಪ್ರಕೃತಿಯವಳು ಮಧ್ಯಮೆ (ಅಮಚಿಂ. ೨೦೩). ೭. [ಛಂದ] ಅಕ್ಷರಛಂದಸ್ಸಿನಲ್ಲಿ ಪ್ರಸಿದ್ಧವಾದ ಇಪ್ಪತ್ತಾರುಬಗೆಯ ಛಂದಸ್ಸುಗಳಲ್ಲಿ ಮೂರನೆಯದು : ಅಲ್ಲಿ ಉಕ್ತೆ ಅತ್ಯುಕ್ತೆ ಮಧ್ಯಮೆ[ಅಕಾಂ. ಮಧ್ಯೆ] . . . ಎಂದಿಪ್ಪತ್ತಾಱುಂ ಛಂದಂಗಳಕ್ಕುಂ (ಛಂದೋಂಬು. ೧-೯೬ ವ). [ಸಂ. ಮಧ್ಯಮಾ]

**ಮಧ್ಯರಾತ್ರಿ** (ನಾ). ನಡುರಾತ್ರಿ : ನಟ್ಟಿರುಳು : "ಅರ್ಧರಾತ್ರೆ ನಿಶೀಥಯೆನೆ ಮಧ್ಯರಾತ್ರಿ [ಅಕಾಂ. ತ್ರಿ]ಯಕ್ಕುಂ" (ಮಂಗರಾ. ೨೦-೬) : ಮಧ್ಯರಾತ್ರಿಯಾಗುವಾಗ ಎಲ್ಲರ ಮುಖಗಳು ಸಂಜೆಮಲ್ಲಿಗೆಯಂತೆ ಅರಳಿದ್ದವು (ಮರಳು. ೩೦೦). [ಸಂ.]

**ಮಧ್ಯಲೋಕ** (ನಾ). ಊರ್ಧ್ವ, ಮಧ್ಯ ಮತ್ತು ಅಧೋಲೋಕಗಳೆಂಬ ಮೂರುಲೋಕಗಳ ನಡುವಿನ ಲೋಕ : ಮರ್ತ್ಯಲೋಕ; ಭೂಮಿ : ನೆಲಸಿರ್ದಪ್ಪುದಧಸ್ಥಳಂಬಿಡಿದಧೋಲೋಕಂ ಸಮಂತೆಯ್ದೆ ಸುತ್ತಲುಮಿರ್ದಪ್ಪುದು ಮಧ್ಯಲೋಕಮೆಸೆದಿರ್ದ ಚೂಳಿಕಾಭಾಗದಾದಲಿಯೊಳ್ ನಿಂದಪುದೂರ್ಧ್ವಲೋಕಂ (ಆದಿಪು. ೦-೩೦). [ಸಂ.]

**ಮಧ್ಯವರ್ತಿ** (ಗು). ೧. ನಡುವೆ ಇರುವ : ಮಧ್ಯದಲ್ಲಿರುವ : ಸುರಪರಿಷನ್ಮಧ್ಯವರ್ತಿ ಸುಧರ್ಮೇಂದ್ರಂ ಧರ್ಮನಿರೂಪಣಾಪ್ರವಣನಿಂತೆಂದು (ಶಂರಾಮಾ. ೦೬-೯೩ ವ); ಶ್ರೀಕಾಂತ – ಕಾಮಿನಿಯರು ನನ್ನ ಗತಜೀವನದ ಮಧ್ಯವರ್ತಿ ಬಿಂದುಗಳು (ಮುತ್ತು. ೬). (ನಾ). ೨. ಮಾಧ್ಯಮ : ಅನಾದೃಶವಾದ ಸಂಗೀತಮೇಳವೊಂದನ್ನೇ ಚಿತ್ರಕಲೆಯ ಮಧ್ಯವರ್ತಿಗೆ ಭಾಷಾಂತರಿಸಿದಂತಿದೆ (ಶಾರದ. ೩೨೩); ಶಬ್ದವು ಕಿವಿಗೆ ಕೇಳಬೇಕಾದರೆ ಎಲ್ಲಾದರೂ ಒಂದು ಕಡೆ ಉಂಟಾಗುವ ಸ್ಪಂದನಗಳನ್ನು ಕಿವಿಯ ಬಳಿಗೆ ತಲುಪಿಸಬಲ್ಲ ಮಧ್ಯವರ್ತಿಯೊಂದು (medium) ಅವಶ್ಯಕ (ಭೌತವಿ. ೧೦೩). ೩. ಇಬ್ಬರು ವ್ಯಕ್ತಿ ಅಥವಾ ಎರಡು ಪಕ್ಷಗಳ ನಡುವೆ ಸಂಬಂಧವನ್ನು ಕಲ್ಪಿಸಿ ವ್ಯವಹಾರ ಮಾಡುವವನು ; ದಲ್ಲಾಳಿ : ಮಧ್ಯವರ್ತಿಗಳನ್ನು ಕಡಮೆಮಾಡಿದರೆ ಅದರಿಂದ ರೈತನಿಗೆ ಬಹಳ ಪ್ರಯೋಜನವುಂಟು (ವ್ಯವಮ. ೬೭). ೪. ವ್ಯವಹಾರ ತೀರ್ಪಿಗಾಗಿ ವಾದಿಪ್ರತಿವಾದಿಗಳ ಮಧ್ಯೆ ನಿಲ್ಲುವ ಪಂಚಾಯತದಾರ ; ಮಧ್ಯಸ್ಥ. [< ಸಂ. ಮಧ್ಯವರ್ತಿನ್]

**ಮಧ್ಯವೇಗ** (ನಾ). [ಕಾಮಶಾ] ರತಿಭೇದದೃಷ್ಟಿಯಿಂದ ವಿಂಗಡಿಸಿದ ಮೂರು ಪುರುಷವರ್ಗಗಳಲ್ಲಿ ಮಧ್ಯದ ವರ್ಗಕ್ಕೆ ಸೇರಿದವನು : ಸುರತದಲ್ಲಿ ಮಧ್ಯಮವಾದ ವೇಗಾಸಕ್ತಿಯುಳ್ಳವನು : ವೇಗಗತಿಯನಾಯ್ತು ಮಂದವೇಗ ಮಧ್ಯವೇಗ ಚಂಡವೇಗವೆಂಬ ಪೆಸರು ಪುರುಷರಿಂಗೆ ಸುರತದೊಳ್ (ಜನವ. ೪-೯೬); ಕಾಮುಕಭೇದದಿಂ ಮಂದವೇಗ ಮಧ್ಯವೇಗ ಚಂಡವೇಗನೆಂದು ಪುರುಷರು ಮೂರುಪ್ರಕಾರ (ಕಾಮಚಿಂ. ೨೦೦). [ಸಂ.]

**ಮಧ್ಯವೇಗಿ** (ನಾ). = ಮಧ್ಯವೇಗಿನಿ : ತೂಗಿದಂದದಿಂದೆ ಮಂದವೇಗಿ ಮಧ್ಯವೇಗಿ ಚಂಡವೇಗಿಯೆಂಬುದಾಮದಬಲೆಯರ್ಗೆ ಸಲ್ಲಳೆ (ಜನವ. ೪-೩೭). [< ಸಂ. ಮಧ್ಯವೇಗಿನೀ]

**ಮಧ್ಯವೇಗಿನಿ** (ನಾ). [ಕಾಮಶಾ] ರತಿಭೇದದೃಷ್ಟಿಯಿಂದ ವಿಂಗಡಿಸಿದ ಮೂರು ಸ್ತ್ರೀವರ್ಗಗಳಲ್ಲಿ ಮಧ್ಯದ ವರ್ಗಕ್ಕೆ ಸೇರಿದವಳು ; ಸುರತದಲ್ಲಿ ಮಧ್ಯಮವಾದ ವೇಗಾಸಕ್ತಿಯುಳ್ಳವಳು : ಮಂದವೇಗಿನಿ ಮಧ್ಯವೇಗಿನಿ ಚಂಡವೇಗಿನಿ [ಅಕಾಂ. ಮಂದವೇಗಿ, ಮಧ್ಯವೇಗಿ, ಚಂಡವೇಗಿ] ಯರೆಂಬ ರತಿಭೇದಕಾಂತೆಯರಿಂ (ಅವೀಳ. ೧೯೩). [ಸಂ. ಮಧ್ಯವೇಗಿನೀ]

**ಮಧ್ಯಸಂಚ** 'ಮಧ್ಯಸಂಚು' ನೋ.

**ಮಧ್ಯಸಂಚು, ಮಧ್ಯಸಂಚ** (ನಾ). ೧. [ಸಂಗೀತ] ವಾದ್ಯವಾದನದ ಬೆಡಗುಗಳಲ್ಲಿ ಒಂದು : ತಳಸಂಚು ಮಧ್ಯಸಂಚುಪ್ಪರದ ಸಂಚುಗಳನಳವಡಿಸಿ . . . ತಾಳಾನುಗತವಾಗಿ ಬಾಜಿಸುತೆ (ಶಬ್ದರಾ. ೩-೫೪). ೨. [ನಾಟ್ಯ] ನೃತ್ಯವಿನ್ಯಾಸಗಳಲ್ಲಿ ಒಂದು : ತಳಸಂಚು ಮಧ್ಯಸಂಚುಪ್ಪರದ ಸಂಚು ಮಂಜುಳವಾಗೆ ನಿಡುಗಣ್ಣ ಥಾಳವಾಳವನಾಡಲು . . . ದೇಶಿಯನಾಡಿದಳು ಪರಪೆನಾಚಿ (ಸೌಂದಕ. ೬-೧೦). ಮಧ್ಯಸಂಚ : ೩. ಖಡ್ಗಯುದ್ಧದ ಒಂದು ವರಸೆ: ವಿಜಾ ತಳಸಂಚದೊಳು ಮೊನೆಯನು ತೋಱ . . . ಮಧ್ಯಸಂಚಕೆ ಸಿಲುಕಿ ಕೈಮಾಡಿ ಜಾಱ (ಕುಮಾರರಾ. ೯-೨೨). [ಮಧ್ಯ + ಸಂಚು$_2$]

**ಮಧ್ಯಸಂಧಿ** (ನಾ). [ವ್ಯಾಕ] ಪ್ರಕೃತಿ ಮತ್ತು ಪ್ರತ್ಯಯಗಳನ್ನು ಸೇರಿಸಿದಾಗ ಆಗುವ ಸಂಧಿ ; ಪದಮಧ್ಯಸಂಧಿ : ಮರವು, ಮರವನ್ನು ಎಂಬೀ ರೂಪಗಳ ಮಧ್ಯಸಂಧಿಯನ್ನು ಬೇರ್ಪಡಿಸುವಾಗ ಕೆಲವರು . . . "ವಕಾರಾಗಮ" . . . ಎನ್ನುವುದುಂಟು. ಇದು ಸರಿಯಲ್ಲ (ಸಂಕೋತ. ೯೬). [ಸಂ.]

**ಮಧ್ಯಸಂಧ್ಯೆ** (ನಾ). ಹಗಲು ಹಾಗೂ ಇರುಳು ಎರಡರ ಸಂಧಿಕಾಲ : ಮುಂಜಾವ ಮತ್ತು ಮುಚ್ಚಂಜೆ : "ಇರುಳ ಪಗಲೆರಡಱಡೆ ಮಧ್ಯಸಂಧ್ಯಾಪ್ಯೆಯಕ್ಕು" (ಮಂಗರಾ. ೨೦-೭). [ಸಂ. ಮಧ್ಯಸಂಧ್ಯಾ]

**ಮಧ್ಯಸ್ತ** (ನಾ). ವಾದಿ, ಪ್ರತಿವಾದಿಗಳ ನಡುವೆ ವ್ಯವಹರಿಸುವವನು : ಮಧ್ಯಸ್ತ ಪರಿಕಲ್ಪಿತ ಗ ೩ (ಪ್ರಾಲಂ. ೧೯೩೪. ೨೬-೧೯; 1403); ಮಧ್ಯಸ್ತ ಇಲ್ಲದ ಊರಲ್ಲಿ ಮಧ್ಯಾಹ್ನ ಇರಬಾರದು (ಗಾದೆ).

ಮಧ್ಯಸ್ತಮಾಡು = ರಾಜಿಮಾಡು : ಶೇಷಗಿರಿರಾಯನ ಮುಖಾಂತ್ರ ಮಧ್ಯಸ್ತಮಾಡಿ ಕೆರೆಬಿಡಿಸಿಕೊಂಡು (ಕೃಪಠ. ೨೩). [< ಸಂ. ಮಧ್ಯಸ್ಥ]

**ಮಧ್ಯಸ್ತಿಕೆ** (ನಾ). ಎರಡುಪಕ್ಷಗಳು ಅಥವಾ ಇಬ್ಬರು ವ್ಯಕ್ತಿಗಳ ನಡುವೆ ಸಂಧಾನಮಾಡುವುದು.– ವ್ಯವಹರಿಸುವುದು : ಮನಸ್ಸಿನ ಸಂಕಲ್ಪಕ್ಕಿಂತ ಬೇರೆಯಾದ ಪ್ರೇರಣಾಶಕ್ತಿಯು ಯಾವುದೋ ಒಂದು ರೀತಿ ಮಧ್ಯಸ್ತಿಕೆಯನ್ನು ವಹಿಸದಿದ್ದರೆ ನಮಗೆ ಕೆಲಸವು ತಿಳಿದಿದ್ದರೂ ಮಾಡಲಾರೆವು (ಶಾರದ. ೨೬೦); ಇದರಲ್ಲಿ ನನ್ನ ಮಧ್ಯಸ್ತಿಕೆ ಯಾಕೆ ಬೇಕೋ ಏನೂ (ರಂಗಕೋ. ೦೦೩). [ಮಧ್ಯಸ್ತ + – ಇಕೆ]

**ಮಧ್ಯಸ್ಥ** (ಗು). ೧. ಮಧ್ಯದಲ್ಲಿರುವ ; ನಡುವೆ ಇರುವ : ಮಧ್ಯಸ್ಥ ವಸ್ತುವಿನ ಸಹಾಯವಿಲ್ಲದೆ ನೇರವಾಗಿ ಸರ್ವತಂತ್ರಸಿದ್ಧಾಂತದಂತೆ ಪ್ರತ್ಯಕ್ಷ ಜ್ಞಾನ ಮಾಡಿಕೊಳ್ಳಬಹುದಾದರೆ, ವಿಚಾರಧಾರೆಯೆನ್ನುವುದು ಮನೋವಿಜ್ಞಾನದ ವಿಷಯವೇ ಸರಿ (ಕೀಚಾಕ. ೪೦). ೨. ಮಂದವಾದ; ಕ್ಷೀಣವಾದ. (ನಾ). ೩. ಯಾವ ಪಕ್ಷಕ್ಕೂ ಸೇರದವನು ; ತಟಸ್ಥ; ಉದಾಸೀನ. ೪. ಮಧ್ಯದಲ್ಲಿ ನೆಲಸಿದವನು; ನಡುವೆ ನೆಲಸಿರುವವನು: ಮಹೀತಳಮಧ್ಯಸ್ಥನೆನಿಂತುಮಲ್ಲದೆಯುಮಿಂದ್ರಾವಾಸಮಂ ಮುಟ್ಟಿದಂ (ಸುಕುಮಾ. ೦-೬೩). ೫. ವಾದಿ, ಪ್ರತಿವಾದಿಗಳ ನಡುವೆ ವ್ಯವಹರಿಸುವವನು: ನ್ಯಾಯವಿಚಾರಸಮಯದಲ್ಲಿ ಮಧ್ಯಸ್ಥನಾಗಿ ನಿಂತು ವಿಷಯಗಳನ್ನು ಮಂಡಿಸುವವನು (ಲಾಯರ್) (ಕುಳುವಾ. ೦೯೩). ೬. [ಜೈನ] "ಶ್ರೋತೃಲಕ್ಷಣ—ವಸ್ತುವಿಚಾರದಲ್ಲಿ ವಕ್ತೃ ಹೇಳಿದ ಮಾತಿನ ಗುಣದೋಷಗಳಲ್ಲಿ ಗುಣವನ್ನು ಮಾತ್ರ ಸ್ವೀಕರಿಸುವವನು" (ತ್ರಿಪಕೋ. ೦೯೯) : ಮಧ್ಯಸ್ಥನೆಂಬೊಂ ವಸ್ತುವಿಚಾರದೊಳಾ ವಕ್ತೃ ಪೇಳ್ದ ಗುಣದೋಷಂಗಳೊಳು ದೋಷಮಂ ಕೊಂಡೆಸಗದೆ ಪತ್ತುವಿಟ್ಟು ಗುಣಮನೆ ಕೈಕೊಳ್ವೊಂ (ಧರ್ಮಾಮೃ. ೭). [ಸಂ.]

**ಮಧ್ಯಸ್ಥಗಾರ** (ನಾ). ೧. ಯಾವಕಡೆಗೂ ಸೇರದೆ ನಿಷ್ಪಕ್ಷಪಾತವಾಗಿರುವವನು : ಭಾರತದ ಮುಖ್ಯನ್ಯಾಯಾಧಿಪತಿಯವರಿಂದ ನಿಯುಕ್ತವಾಗತಕ್ಕ ಮಧ್ಯಸ್ಥಗಾರರು ನಿರ್ಧರಿಸತಕ್ಕಂಥ ಅಂಶವಾನವನ್ನು . . .

**ಮನುಜತನ** (ನಾ). ಮನುಷ್ಯತ್ವ : ರೋಮರೋಮದೊಳಿಡಿದಜಾಂಡ ಕೋಟಿಗಳಿಹ ಮಹಾಮಹಿಮ ತಾನೆತ್ತ ನರನ ಸಂಗಡ ತಿರುಗುವೀ ಮನುಜತನವೆತ್ತ (ಕೈಐಚ. ೩೩-೫). [ಮನುಜ + — ತನ]

**ಮನುಜತೆ** (ನಾ). = ಮನುಜತನ : ಅವನ ಮನುಜತೆಯು ತನು ನೋಟ್ಟಿವರೊಳ್ ಮಾಣಿಸಿದುದಾವಮೆಮೆಯಿಕ್ಕುವುದಂ (ತಂಪ್ರಪು. ೯-೬೩). [ಸಂ. ಮನುಜತಾ]

**ಮನುಜತ್ವ** (ನಾ). = ಮನುಜತನ : ತಗುಳ್ದು ನೆಗಟಿದೆ ತಪದೊಳ್ ಮನುಜತ್ವಮಫಲಮಾಯ್ತು (ಕವಿರಾ. ೩-೦೦೦). [ಸಂ.]

**ಮನುಜಪತಿ** (ನಾ). ಮನುಷ್ಯರ ಒಡೆಯ : ಅರಸು ; ರಾಜ : ಶಿವಭಕ್ತಿಪ್ರಯುಕ್ತನು ಮನುಜಪತಿ ವಿದ್ಯಾಯುಧಾನ್ವಿತ ಘನಭುಜಾಯುತ ನಾಗುತ (ಐಸಪು. ೫೦-೫೨). [ಸಂ.]

**ಮನುಜಾತ** (ನಾ). = ಮನುಜ : ಉದ್ವೇಗತ್ವಮುಂ ಕೂಡುಗುಂ ಮನುಜಾ ತಂಗವರೋಹಿಯಂಪ್ಪ ದೆಶೆಯೊಳ್ ಪದ್ಮಪ್ರಿಯಾಪುತ್ರನಾ (ಜಾತಕ. ೯-೩೦). [ಸಂ.]

**ಮನುಜಾಧೀಶ** (ನಾ). = ಮನುಜಪತಿ : ಮನುಜಾಧೀಶಸಮೂಹಸಂಚ ರಣದಿಂ . . . ಅಲಿಯುಮಾಯ್ತುದೊಂದು ಪಿರಿದುಂ ಚೆಲ್ವಿಂಗೆ ರಾಜಾಲಯಂ (ಅಜಿತ. ೬-೩೬). [ಸಂ.]

**ಮನುಜೆ** (ನಾ). ಮಾನವಸ್ತ್ರೀ : ಬೆಸಗೊಳಲು ವನುಜೆಯುಲ್ಲಾಂ ಮನುಜೆಯಾ ನರ್ಥವಿಷಯದಾಪೇಕ್ಷೆಯಿಂ ಕೊಂಡೊಯ್ದು ಕೊಂದೆನು (ಪಶಕಾ. ೦೩-೬). [ಸಂ. ಮನುಜಾ]

**ಮನುಜೇಂದ್ರ** (ನಾ). = ಮನುಜಪತಿ : ಮನುಜೇಂದ್ರಕೋಟಿಕೋಟೀಗಣ ಕೋಟಿಗಾಸ್ವಮಿತಸಾಗರನಾಗರಮಾಗದಿರ್ಪಮೋ (ಶಾಂತಿಪು. ೦-೬೮). [ಸಂ.]

**ಮನುಪೀಳಿಗೆ** (ನಾ). = ಮನುಕುಲ: ಜಾಣಿದುದೇ ಮನುಪೀಳಿಗೆಯು ಸುರಗಿರಿ ದಿಳೀಪಾಸ್ವಯದ ಸುರತರು ಮುಜುದುದೇ (ಕೊರಚ. ೩-೦೨-೩೩). [ಮನು + ಪೀಳಿಗೆ]

**ಮನುಮಂತ**₁, ಮನುಮಥ (ನಾ). ಕಾಮ; ಮದನ; ಮನ್ಮಥ : ಬಿರಯಿ ಗಳಂ ಬೆರ್ಚಿಸಲಿದೆ ಪರಮಾಸ್ತ್ರ ಮನುಮಂತಂಗೆನಿಪ್ಪ ವಸಂತಂ ಬರಲೊಡನೆ (ಕಾದಂಬ. ೭೮೦). **ಮನುಮಥ :** ಅಳುಕಿದರು ಮನುಮಥನ ಗರುಡಿಯ ಬಲುದುಗಾಜರು (ಕುಮಾವಿ. ೦-೨೬) : ವಿಗಡ ನಳಕೂಬರ ಜಯಂತ ವಸಂತ ಮನುಮಥ ಚಾರುಚಂದ್ರಮರ ಮರುಳುಮಾಡುವ . . . ವನಿತೆಯರೊಪ್ಪಿ ದರು (ಕೊರಚ. ೧-೫-೨೬). [ <ಸಂ. ಮನ್ಮಥ ]

**ಮನುಮಂತ**₂ (ನಾ). ಮನುವಿನಿಂದ ರಚಿತವಾದ ಧರ್ಮಶಾಸ್ತ್ರ : ಮನು ಮತಮುಂ ವೇದಾಂತಾದ್ಯನೇಕಧರ್ಮಾಗಮಂಗಳಂ ಕಲ್ತು (ಮದತಿ. ೮-೨೫). [ಸಂ.]

**ಮನುಮಥ** 'ಮನುಮಂತ₁' ನೋ.

**ಮನುಮಥಮಥನ** (ನಾ). ಕಾಮನನ್ನು ನಾಶಮಾಡಿದವನು : ಶಿವ : ಪ್ರಥಿತಮರುಪಿತಚಿತ್ತರಪ ಮನುಮಥಮಥನಪದಭಕ್ತಿವಿತತಿಗೆ ಪೃಥ್ವೀಳ ಭಕ್ತಿಯೊಳಾಗ ವಂದಿಸಿ (ಬಸವ. ೦೮-೦೦೮).
[ಮನುಮಥ ( <ಮನುಮಂತ₁) + ಮಥನ]

**ಮನುಮಾರ್ಗ** (ನಾ). ೧. ಮನುವು ಹಾಕಿ ಕೊಟ್ಟಿರುವ ದಾರಿ : ಮನು ಧರ್ಮಶಾಸ್ತ್ರದಲ್ಲಿ ಹೇಳಿರುವ ಆಚಾರ : ಮನುಮಾರ್ಗದೋಳೇಕಾ ದಶದಿನದೊಳ್ತನಯಂಗೆ ವಿಪ್ರಜನ ಸಮುಚಿತಮಾದೆತ್ತಿನೆ ಸಚಿವಂ ವೈಶಂಪಾ ಯನನೆಂಬೀ ಪೆಸರಿಟ್ಟಂ (ಕಾದಂಬ. ೯೩೨). ೨. ಮನುವಿನ ಹಾದಿಯಲ್ಲಿ ನಡೆಯುವವನು: ಮನುಧರ್ಮಶಾಸ್ತ್ರವನ್ನು ಅನುಸರಿಸುವವನು : ಭೂವಿನುತಮಾತಂ ದ್ವಿಜವಂದ್ಯಂ ಮನುಮಾರ್ಗಂ ಮೇಲ್ವಿದುಯ್ಯನಗ್ರತನೂಜಂ (ಸಂಪಿ.ಸಂಮಾ. ೧-೦೯). [ಸಂ.]

**ಮನುಮಾರ್ಗನಿಪುಣ** (ನಾ). ಮನುಧರ್ಮಶಾಸ್ತ್ರದ ತಿಳಿವಳಿಕೆಯಲ್ಲಿ ಕೋವಿದನಾದವನು : ಮನುಮಾರ್ಗನಿಪುಣನೆನಿಸಿದ ನಿನಗಾವಿಮಾ ರಾಜ ಮಾರ್ಗಮಂ ತೋಜಿ ಜಗಜ್ಜನಕೆ ನಗೆಯಲ್ತೆ (ಅಜಿಪು. ೬-೦೨). [ಸಂ.]

**ಮನುವಂಶ** (ನಾ). = ಮನುಕುಲ : ನೀನೊರ್ಬನೈ ಮನುವಂಶಕ್ಕೆ ಲಲಾಮ ನಪ್ಪ ನುಜನೈ (ಅಜಿಪು. ೦೯-೦೩೨). [ಸಂ.]

**ಮನುವಂಶಧ್ವಜ** (ನಾ). ಮನುಷ್ಯಕುಲದಲ್ಲಿ ಶ್ರೇಷ್ಠನಾದವನು : ಮತ್ತೊರ್ವನುತ್ತುಂಗಸೌಧೋತ್ಸಂಗದೊಳ್ ನಿಂದು ಮನುವಂಶಧ್ವಜನಂ ಮಕರಧ್ವಜನೆಂದು ಬಗೆದು (ಅಜಿಪು. ೦೦-೦೬ ವ). [ಸಂ.]

**ಮನುವೆ** 'ಮನವಿ' ನೋ.

**ಮನುಷ್ಯ** (ನಾ). = ಮನುಜ : "ಮನುಷ್ಯಾಃ, ಮಾನುಷಃ . . . ನರಾಃ — ಇವು ಮನುಷ್ಯನ ಪೆಸರು" (ನಾಚಿರಾ. ೦೦೬); ಮಠಕ್ಕೆ ಬಂದಭ್ಯಾಗತರಲ್ಲಿ ನಡವ ಮನುಷ್ಯರಾಹಾರದಾನಕ್ಕ . . . ಜೋಳ ಕೊಳಗವೊಂದು (ಎಇ. XX, ೦೦೬-೫೦ ; 1167); ಮುಕ್ತಿಯೋಗ್ಯರಲ್ಲಿ ದೇವ- ಮನುಷ್ಯ- ಪಿತೃ- ಚಕ್ರವರ್ತಿ, ಮನುಷ್ಯೋತ್ತಮ ಎಂದು ಐದು ವಿಧಗಳು (ಹಿಂದಸಾ. ೨೮೬). [ಸಂ.]

**ಮನುಷ್ಯಗತಿ** (ನಾ). = ಮನುಜಗತಿ : ಮನುಷ್ಯಾಯುಷ್ಯ ಮನುಷ್ಯಗತಿ ತತ್ಪ್ರಾಯೋಗ್ಯಾನುಪೂರ್ವಿ . . . ಉಚ್ಚೈರ್ಗೋತ್ರ ತೀರ್ಥಕರನಾಮಂ ಗಳೆಂಬ ಪದಿಮೂಱು ಪ್ರಕೃತಿಗಳುಮಂ ನಿಮಿರ್ಲಂ ಕಿಡಿಸಿ (ಅಜಿಪು. ೦೬-೯೯ ವ). [ಸಂ.]

**ಮನುಷ್ಯಜಾತಿ** (ನಾ). = ಮನುಕುಲ : ಬೇಱುಂಟೆ ಮನುಷ್ಯಜಾತಿ ತಾನೊಂದೆ ವಲಂ (ಆದಿಪು. ೦೫-೦೯). [ಸಂ.]

**ಮನುಷ್ಯತ್ವ** (ನಾ). ಮನುಷ್ಯನ ಧರ್ಮ : ಮಾನವಸ್ವಭಾವ : ಮನುಷ್ಯ ನಿಗೆ ಮನುಷ್ಯತ್ವ ಬಂದುದು ಬುದ್ಧಿಯ ಬೆಂಬಲದಿಂದ (ಗ್ರಂಥಾಂ. ೦). [ಸಂ.]

**ಮನುಷ್ಯಧರ್ಮ**₁ (ನಾ). ೧. ಮನುಷ್ಯನ ನಡವಳಿಕೆಯುಳ್ಳವನು. ೨. ಕುಬೇರ. ೧ . ೨ : ಮನುಷ್ಯಧರ್ಮನಾಗಿಯುಂ ಧನಾಧ್ಯಕ್ಷನಲ್ಲು ಕಾಮಧ್ವಂಸಿಯಾಗಿಯುಂ ತ್ರಿಲೋಚನನಲ್ಲು (ಜಗವ. ೬-೦೦ ವ).
[ ಸಂ. ಮನುಷ್ಯಧರ್ಮನ್ ]

**ಮನುಷ್ಯಧರ್ಮ**₂ (ನಾ). ಮನುಷ್ಯನು ಅನುಸರಿಸಬೇಕಾದ ಧರ್ಮ : ನನ್ನ ಪುತ್ರಧರ್ಮ, ಮನುಷ್ಯಧರ್ಮಗಳೆರಡೂ ಸಾಧನೆಯಾಗುವಂತೆ ಮಾಡುವ ದಾರಿ ಯಾವುದಾದರೂ ಇದೆಯೇ ? (ಕಿಕಂಬಾ. ೦೩೬). [ಸಂ.]

**ಮನುಷ್ಯಪ್ರಯತ್ನ** (ನಾ). ಮನುಷ್ಯನ ಶ್ರಮ,– ಯತ್ನ : ಮನುಷ್ಯ ಪ್ರಯತ್ನ ಭಗವಂತನ ಕೃಪೆ ಇವನ್ನು ಮೀರಿ ಗ್ರಹಗಳ ಗತಿ ಜೀವನವನ್ನು ನಡೆಸುವುದಿಲ್ಲ (ಜಕರಾ. ೦೯೦) ; ಮನುಷ್ಯ ಪ್ರಯತ್ನದಿಂದ ಯಾವುದೂ ಆವಲಾಗಲ್ಲ (ಶ್ರಕೃ. ೪೦). 'ಪುರುಷಪ್ರಯತ್ನ' ಪರಾ. [ಸಂ.]

**ಮನುಷ್ಯಯಜ್ಞ** (ನಾ). ಪಂಚಯಜ್ಞಗಳಲ್ಲಿ ಒಂದು : ಅತಿಥಿ ಸತ್ಕಾರ: ವೇದಾಧ್ಯಯನರೂಪ ಬ್ರಹ್ಮಯಜ್ಞ ಅಗ್ನಿಹೋತ್ರರೂಪ ದೇವಯಜ್ಞ ಅತಿಥಿ ಪೂಜಾರೂಪ ಮನುಷ್ಯಯಜ್ಞ ಪಿತೃತರ್ಪಣರೂಪ ಪಿತೃಯಜ್ಞ ಭೂತಬಲಿ ರೂಪ ಭೂತಯಜ್ಞ ಎಂಬೀ ಪಂಚಮಹಾಯಜ್ಞಂಗಳಂ ನಡೆಸುತ್ತ (ವಿವೇಕ. ೦೨೦). [ಸಂ.]

**ಮನುಷ್ಯಲೋಕ** (ನಾ). ಮಾನವರು ವಾಸಿಸುವ ಲೋಕ : ಮರ್ತ್ಯ ಲೋಕ : ಅದು ದಿವಿಜೇಂದ್ರಲೋಕವಿದು ನುನ್ಮಥರೂಪ ಮನುಷ್ಯಲೋಕಂ (ಆದಿಪು. ೯-೦೯). [ಸಂ.]

**ಮನುಷ್ಯವಾಹ್ಯ** (ಗು). ೧. ಮನುಷ್ಯರಿಂದ ಹೊರಲ್ಪಡುವ; ಮಾನವರು ಹೊರುವಂಥ. (ನಾ). ೨. ಮನುಷ್ಯರು ಹೊರುವಂಥದು : ಮನುಷ್ಯ ವಾಹ್ಯಮಪ್ಪ ಚತುರಂತಯಾನವನೇಱಿಸಿ (ಶಾಂತಿಪು. ೯-೪೦ ವ). [ಸಂ.]

**ಮನುಸ್ಮೃತಿ** (ನಾ). ಮಾನವ ವ್ಯವಹಾರವನ್ನು ಕುರಿತ ಧರ್ಮಗ್ರಂಥ : ಕೃತಯುಗದಲ್ಲಿ ಮನುಸ್ಮೃತಿಧರ್ಮವೇ ಮುಖ್ಯವಾಗಿಹುದು (ವಿವೇಕ. ೬);

ಸ್ಮೃತಿಗಳಲ್ಲಿ ಪ್ರಾಚೀನವಾದ ಮನುಸ್ಮೃತಿಯು ಕ್ರಿ.ಪೂ. ೩೦೦ ರಿಂದ ಕ್ರಿ.ಶ. ೨೦೦ ಮಧ್ಯದಲ್ಲಿ ರಚಿತವಾಗಿರಬೇಕೆಂದು . . . ನಿರ್ಧರಿಸಿದ್ದಾರೆ(ಭಾರದ. ೫೦).

[ಸಂ.]

**ಮನೂಕ** (ನಾ). ಒಣಗಿದ ಕಪ್ಪುದ್ರಾಕ್ಷಿ : ಗೋಡಂಬಿ, ಮನೂಕ . . . ಹತ್ತೆಂಟು ಹಣ್ಣುಗಳ ಶೀಕರಣೆಯನ್ನು ತಿನ್ನುವಾಗ ವಸಂತರಾಯನ ಆದರ ವಿನಯಗಳು **ಉಕ್ಕೇರಿದವು** (ಗಂಪಾಹು. ೨೦೩).

[←ಅರೆ. ಮುನಕ್ಕಾ : ಮರಾ. ಮನುಕಾ]

**ಮನೆ** (ನಾ). ೧. ವಾಸಿಸುವ ಜಾಗ : ಆಶ್ರಯಸ್ಥಾನ : ಬೀಡು : ರಾಜಪುರುಷರ್ಮ್ಮನೆಗಳೊಳ್ ಪೀಡಿಲ್ಲಾದುದು (ಎಕ. XIV, ೧೯೦-೬; 725)· ಮನೆಯಿಂದಂ ಮನೆಗೆಂದು ಪೋಪ ತೆಱದಿಂ ಪೋಣ್ ನೂಕಿ ಪಾಸಂಬ ಮಾತಿನ ಪಾಂಗಿಂದೆ (ಆದಿಪು. ೫-೭೦) : ಮನೆ ನೋಡಾ ಬಡವರು ಮನ ನೋಡಾ ಘನ (ಬಸವ. ೩೨೫); ನಾನಾವಿದ್ಯೆಗಳ ಗಟ್ಟಿವಾಳರ ಮನೆಗಳೊಪ್ಪಿದುವು (ಪೋಚತ. ೩-೩೦). ೨. ವಂಶ : ಮನೆತನ : ಅಂದು ದೇವಕಿ ಪಡೆಯೆ ಕೃಷ್ಣನು ನಂದಗೋಪಿಯ ಮನೆಯ ಬೆಳವುತ ಬಂದ ಪೂತನಿ ಮುಖ್ಯರನು ಬಾಲ್ಯದಲಿ ಮರ್ದಿಸಿದ (ಜಾಗ್ಭಾ. ೨೦ ಕ್ಷು೨). ೩. ಸಂಸಾರ: 'ಮನೆಖರ್ಚು' ಪರಾ. ೪. ಪಗಡೆ, ಚೌಕಾಬಾರ, ಕುಂಟೆಬಿಲ್ಲೆ ಮೊದಲಾದ ಆಟಗಳ ಚೌಕಾಕಾರದ ಸ್ಥಳ : ದಾಗ ಬಿದ್ದು ಎರಡು ಮನೆಗಳನ್ನು ನನ್ನ ಕಾಯಿ ದಾಟಿದರೆ ನಾನೇ ಗೆಲ್ಲೋದು (ರೂಢಿ). ೫. [ಸಂಗೀತ] ಹಾರ್ಮೋನಿಯಂ, ಪಿಯಾನೋ ಮೊದಲಾದ ವಾದ್ಯಗಳಲ್ಲಿರುವ, ಬೆರಳಿನಿಂದ ಒತ್ತಿದರೆ ಸ್ವರವನ್ನು ಹೊಮ್ಮಿಸುವ ಸ್ಥಾನ.

**ಮನೆ ತೊಳೆ**=ಮನೆಯನ್ನು ಹಾಳುಮಾಡು,–ನಾಶಮಾಡು: ಅಳಿಯ ಮನೆ ತೊಳೆದು (ಗಾದೆ). **ಮನೆ ತೊಳೆದುಕೊಳ್ಳು**=ಮನೆಯನ್ನು ಹಾಳು ಮಾಡಿಕೊಳ್ಳು,– ನಾಶಮಾಡಿಕೊಳ್ಳು : ನಾನು ಮನೆತೊಳೆದು ಕೊಳ್ಳಲೂ ಸಿದ್ಧ(ಪಾಹುಕ್ತ. ೬೭). **ಮನೆ ಪಾಲಾಗು**=ಕುಟುಂಬದ ಅಣ್ಣತಮ್ಮಂದಿರು ಬೇರೆಯಾಗು ; ಅವಿಭಕ್ತಕುಟುಂಬವು ವಿಭಕ್ತವಾಗು : ದಾನಮ್ಮ ಹೆಗ್ಗಡತಿಯವರು . . . ಮನೆಪಾಲಾಗುವುದನ್ನೂ ಮುಕುಂದಯ್ಯ ಬೇರೆ ಹೋಗುವುದನ್ನೂ ವಿರೋಧಿಸಿದ್ದರು (ಮಲೆಮ. ೭೩೪). **ಮನೆ ಮಾಡು**=೧. ಮನೆಯನ್ನು ಕಟ್ಟು,–ನಿರ್ಮಿಸು: ಪೆರ್ಗಣಮನಿಕ್ಕಿ ಮನೆ ಮಾಡುವಂದದಮಾಕ್ಕುಂ (ಧರ್ಮಾಮೃ. ೩-೦೨೨)· ೨. ನೆಲೆಯಾಗಿ ನಿಲ್ಲು: ನಿಟಿಲಭ್ರೂಮಧ್ಯದಲ್ಲಿ ನಿಟಿಲಾಕ್ಷ ಮನೆ ಮಾಡಿ . . . ಶಿವಯೋಗಿ ನಿಟಿಲಾಕ್ಷನಕ್ಕುಂ (ಸರ್ವಜ್ಞ. ೫೯೪) : ಅದರ ನೋವು ಚಿರಸ್ಥಾಯಿಯಾಗಿ ಹೃದಯದಲ್ಲಿ ಮನೆಮಾಡಿಕೊಂಡಿತ್ತು (ಪರೀಪ. ೭೦೩). **ಮನೆಮಾರು** = ಬೀಡು ಮತ್ತು ಅದಕ್ಕೆ ಸಂಬಂಧಿಸಿದ ಸಾಮಾನು : ಮನೆಮಾರು ಹೆಣ್ಣು ಮಣ್ಣನು ಬಿಟ್ಟು ಬರುವರೆ (ಪಶಾಣ. ೫-೦೫೯): ಬಸವೇಶ್ವರನು . . . ಮನೆಮಾರು ಬಿಟ್ಟು ಕಲ್ಯಾಣಪುರಕ್ಕೆ ಹೋದನು (ಮುಂಜಾಬು. ೬-೦೦೯). **ಮನೆಮುರಿ** = ಕುಟುಂಬವನ್ನು ಹಾಳುಮಾಡು,– ನಾಶಮಾಡು : ಇನ್ನೊಂದು ಸಲ ಇಂಥ ಮನೆಮುರುಕುವ ಕೆಲಸಕ್ಕೆ ಹೋಗಿ ಸಿಕ್ಕರೆ. . . ನಿನ್ನ ವಿಷದ ಹಲ್ಲು ಕೀಳಿಸಿ ಮಾಕಿಬಿಡುತ್ತೇನೆಂದು ಹೇಳಿದೆ (ಕಲಿ. ೨೩೮). **ಮನೆಯಂ ತಿದ್ದು** = ಸಂಸಾರವನ್ನು ಸರಿಪಡಿಸು ; ಮನೆಯ ವ್ಯವಹಾರವನ್ನು ಕ್ರಮಪಡಿಸು : ಇವರ ಮನೆಯಂ ತಿದ್ದಿ ನಮ್ಮ ಕೊನೆಯಂ ಸಾಧಿಪನಿತರೊಳೆ ದೇಹಿಗೇಂ ಗತಿಯಾದುದೊ (ಶ್ರೀರಾಪಾ. ೩೦೧-೦೯)· **ಮನೆಯಳಿಯ** = ಅತ್ತೆಮಾವಂದಿರ ಮನೆಯಲ್ಲಿಯೇ ನೆಲಸಿರುವ ಅಳಿಯ: P ಸಾಮಾನ್ಯವಾಗಿ ಗಂಡುಮಕ್ಕಳಿಲ್ಲದವರು ಮಗಳಿಗೆ ಮದುವೆಮಾಡಿ ಅಳಿಯನನ್ನು ಮನೆಯಲ್ಲಿಯೇ ಉಳಿಸಿಕೊಳ್ಳುತ್ತಾರೆ : ಘೂಕೋಲ ಕೇಳಿಗ್ನಿ ಮನೆಯಳಿಯನಾಗಿಪಂ ನೀಲಧ್ವಜಂಗೆ (ಜೈಮಿಭಾ. ೬-೨೫); ಹೂವಳ್ಳಿ ಮನೆಗೆ ಬೇರೆ ಯಾವ ಗಂಡೂ ದಿಕ್ಕಿಲ್ಲವಾದ್ದರಿಂದ ಮುಕುಂದಯ್ಯನೆ ಮನೆಯಳಿಯನಾಗಿ ಯಜಮಾನ್ಯ ವಹಿಸಬಹುದು (ಮಲೆಮ. ೬೩೮)· **ಮನೆಯಳಿಯತನ** = ಮನೆಯಲ್ಲೇ ಅಳಿಯನನ್ನು ಇಟ್ಟುಕೊಳ್ಳುವ ಸಂಪ್ರದಾಯ : ವೈವಸ್ವತಂ ಮನೆಯಳಿಯತನದೊಳಿರುತಿಹಂ ಭೂಪತಂಗೆ (ಜೈಮಿಭಾ. ೨೭-೩)· **ಮನೆಯಾಕೆ** = ೧. ಮನೆಯ ಯಜಮಾನಿ : ಆ ಮನೆಯಾಕೆ ಭಿಕ್ಷವ ತಂದವನು ನಿಲ್ಲಿಸುತ (ಕುಮಾರ. ೦೫-೪)· ೨. ಹೆಂಡತಿ ; ಮಡದಿ : ಅದನ್ನು ನೋಡಿದ ಕೂಡಲೆ ನಮ್ಮ ಮನೆಯಾಕೆ. . . ತನಗೇ ಬೇಕೆಂದು ಹಟಹಿಡಿದಳು (ಕುಂಗಶ. ೦೨೦)· **ಮನೆಯಾಣ್ಮ** = ೧. ಮನೆಯ ಯಜಮಾನ. ೨. ಗಂಡ : ಇದು ಮನೆಯಾಣ್ಮನಂ ಮಾಱುವಂದ ಮಲ್ಲದೆ ಪೊಮಾಱುವಂದಮಲ್ತು (ಶಂಕಭಾ. ೪-೮೧ ವ) ; ಪದೆಪಿಂದಂ ಮನೆಯಾಣ್ಮ[ಪಾಠಾಂ. ಳ್ಮ]ನಂ ಮಜ್ಜನಂ ಭೋಜನಾಂಘೋಜನಮುಂ ಮನದಿಂದಂ ನಡೆ ನೋಡಿ (ಸವಣ. ೫ ೫೫)· **ಮನೆವಕ್ಕಳ್** = ಮನೆಯ ಆಳು : ಅರಿಬಲದ ಮನೆವಕ್ಕಳ್ ಬಾಕರು ತುಱುಗೊಳೊಳ್ ಸ್ವರ್ಗಸ್ತನಾದಂ (ಎಕ. XI, ಹೊಳಲ್ಕೆ. ೭೭-೫; 975). **ಮನೆಹಾಳ** = ಮನೆಯನ್ನು ನಾಶ ಮಾಡುವಂತಹುದು : ಮತ್ತೇನು ಟಿಪಿನ್ನಾಳಿ–ದಿಲ್ಲಾ ಮನೆಹಾಳು ವಿದ್ಯಾಸೆ (ಸಂಪತೋ. ೬೩). 'ಮನೆಹಾಳ', 'ಮನೆಹಾಳಿ' ಪರಾ. **ಮನೆಹಿಡಿ** = ೧. ಮನೆಯಲ್ಲಿಯೇ ಉಳಿ : ಮನೆ ಬಿಟ್ಟು ಕದಲದಿರು : ಅವರು ಹೊರಗೆ ಓಡಾಡಲು ಶಕ್ತಿಯಿಲ್ಲದೆ ಕೆಲವು ದಿನಗಳಿಂದ ಮನೆಹಿಡಿದು ಬಿಟ್ಟಿದ್ದಾರೆ (ರೂಢಿ). ೨. ವಾಸಿಸಲು ಮನೆಯನ್ನು ಗೊತ್ತು ಮಾಡಿಕೊಳ್ಳು : ಬೇರೆ ಕಡೆಗೆ ಮನೆ ಹಿಡಿಯ ಬೇಕೆಂದರೆ ಇಂಗ್ಲಂಡದ ವರ್ಣದ್ವೇಷ ಅಡ್ಡ ಬರುತ್ತದೆ (ಹೊಸಕ್ಷಿ. ೨೯೦).

[ದೇ.॥ ತಮಿ. ಮನೈ ; ಮಲ. ಮನ ; ಕೊಡ. ತುಳು. ಮನೆ ]

**ಮನೆಕಟ್ಟು** 'ಮನೆಗಟ್ಟು' ನೋ.

**ಮನೆಖರ್ಚು** (ನಾ). ಸಂಸಾರದ ವೆಚ್ಚ : ಮನೆಖರ್ಚಿಗೆ ಹಣ ಕೊಡುವಾಗ ಜಗಳ ತೆಗೆಯುವರು (ಕುಂಕುಮ. ೯೩)·

[ ಮನೆ + ಖರ್ಚು (< ಕರ್ಚು$_3$) ]

**ಮನೆಗಟ್ಟು**, ಮನೆಕಟ್ಟು (ಕ್ರಿ). ೧. ಮನೆಯನ್ನು ನಿರ್ಮಾಣಮಾಡು : ಹಳುವದಲಿ ಮನೆಗಟ್ಟಿದರು ದಿಗಧಿಪರು (ಜಾಗ. ೬-೯-೦೦)· ೨. ನೆಲೆಯಾಗಿ ನಿಲ್ಲು ; ನೆಲಸು ; ಒಕ್ಕಲಾಗು : ಸಿರಿ ನಿಂದಳ್ ಮನೆಗಟ್ಟಿ ಪೇರುರದೊಳ್ (ಪರ್ಮಪು. ೭-೩೭) ; ಮದನಂ ಮನೆಗಟ್ಟಿದನಲ್ಲಿ (ಕಮಲ. ೦೦೯ ಕ್ರಮೋ); ಭೀಷ್ಮನ ಹೃದಯದಲಿ ವೈರಾಗ್ಯ ಮನೆಗಟ್ಟಿತ್ತು ನಿಮಿಷದಲಿ (ಕುಮಾರ. ೦೦-೨). **ಮನೆಕಟ್ಟು**: ೧. ಮೆಚ್ಚಿನಿಂ ಮನೆಕಟ್ಟಿಯೊಕ್ಕಲಾಗದ ಮನ್ನಿ ಕಿಚ್ಚಿಡಿದ ಮನೆಯಾಯ್ತು (ಕಾಲಾರ. ೦೦೭-೭೦೯) ; ಅದನ್ನರಿಯದೆ ನಾವು ಗಾಳಿಯಲ್ಲಿ ಮನೆಕಟ್ಟಿಹೋಗುತ್ತೇವಷ್ಟೆ (ಕುಸುಮ. ೨೫೬).

[ಮನೆ + ಕಟ್ಟು$_1$]

**ಮನೆಗಡೆ** (ಕ್ರಿ). ಮನೆಯಿಂದ ಹಾಯ್ದು ಹೋಗು : ಮನೆಬಿಟ್ಟು ಹೊರಬೀಳು : ಗಂಡನಿಕ್ಕಿದ ಪಡಿಯನುಂಡು ಮನೆಗಡೆಯದಿಪ್ಪವಳು ಪತಿವ್ರತೆಯಲ್ಲದೆ . . . ನೆರೆಮನೆಗೆ ಹೋಗುವ ಬಲ್ಲಾಳಗಿತ್ತಿಗೆ ಪತಿಭಕ್ತಿ ಅಳವಡುವುದೆ ಅಯ್ಯ (ಅಪವ. ೨೦-೦೭). [ಮನೆ + ಕಡೆ$_2$]

**ಮನೆಗಾಪು** (ನಾ). ಮನೆಯ ಕಾವಲು : ಗೃಹರಕ್ಷಣೆ : ತನೂಜೆಯಂ ಕರೆದು . . . ನಿಜಮನೇಹದಿ ನಿರೀಕ್ಷಿಸಿ ಮನೆಗಾಪಿಂಗಿರಿಸಲೆಂದಿತ್ತೇನಂ (ಪ್ರಕರ. ೯·೩೯ ವ). [ಮನೆ + ಕಾಪು]

**ಮನೆಗಾರ್ತಿ** (ನಾ). ಮನೆಯ ಯಜಮಾನಿ ; ಮನೆಯ ಒಡತಿ : ಆಕೆಯೇ ಮನೆಗಾರ್ತಿ. ಪಾದ್ರಿಯವರು ಹೆಂಡತಿಯನ್ನು ಕಳೆದುಕೊಂಡು ಆರು ವರ್ಷಗಳಾಗಿದ್ದವು (ಗಂಪಾಹು. ೮೪).

[ಮನೆ + –ಕಾರ$_1$ (< –ಕಾಱ) + –ತಿ$_1$ (< –ಇತ್ತಿ)]

**ಮನೆಗೆಡು** (ಕ್ರಿ). ಮನೆಯಿಲ್ಲವಾಗು ; ಆಶ್ರಯತಪ್ಪು : ಮನೆಯಿಲ್ಲ ಮಾರಿಲ್ಲ ಮನೆಗೆಟ್ಟು ನೆಲೆಗೆಟ್ಟು ಕಾಡುಬೇಡಾದರೆಂ (ಶ್ರೀರಾಮಾ. ೨೭೦-೧೧). [ಮನೆ + ಕೆಡು$_1$]

**ಮನೆಗೆಡುಕ** (ನಾ). ಮನೆಯನ್ನು ಹಾಳುಮಾಡುವವನು : ಮನೆ ಮುರುಕ : ನಿಮ್ಮ ಅರಸರು ನನ್ನ ಮನೆಗೆಡುಕ ಅಂತ ಹೇಳಿದರು (ಜಳರಾ. ೨೨೨). [ಮನೆ + ಕೆಡುಕ]

**ಮನೆಗೆಲಸ** (ನಾ). ಮನೆಯಲ್ಲಿ ಮಾಡಬೇಕಾದ ಕೆಲಸ ; ಗೃಹಕೃತ್ಯ : ಮನೆಗೆಲಸಮಂ ಮಾಡಲಾಜಿದೆ ತನು ಬಳಲಿ (ಬಸವ. ೨೬-೩೯); ಇನ್ನು ಮೇಲೆ ಸ್ಕೂಲು ಬಿಟ್ಟು ಮನೆಗೆಲಸವನ್ನೇ ಇನ್ನೂ ಚೆನ್ನಾಗಿ ಕಲಿತುಕೊ (ಬಿಕೆಲು. ೫೦). [ಮನೆ + ಕೆಲಸ]

**ಮನೆಗೈ** (ಕ್ರಿ). ಮನೆಯನ್ನಾಗಿ ಮಾಡು ; ಆವಾಸವಾಗಿಸು : ಸೌಧಾವಾಸಕೆಳಸುವಾ ಪುರಜನಂ . . . ವೃಕ್ಷಮೂಲಮಂ ಮನೆಗೈವರ್ (ಕಾಳಿಂತ. ೧೦೬-೦೮೩). [ಮನೆ + ಗೈ (<ಕೆಯ್$_1$)]

**ಮನೆತನ** (ನಾ). ೧. ಕುಲ ; ವಂಶ ; ಸಂತತಿ : ಇರಬೇಕೈ, ಮಕ್ಕಳ ಚೆಲು ಮನೆತನವು (ಕೆವೃ. ೬-೩); ನಮ್ಮ ಮಹಾರಾಜರ ಮನೆತನವನ್ನು ತಣ್ಣಗೆ ಇಟ್ಟಿರಲಿ (ಕಳಮ. ೯೮). ೨. ಸಂಸಾರ; ಗೃಹಕೃತ್ಯ : ಕುರುಡು ಹೆಂಡತಿಯೊಡನೆ ಮನೆತನ ಹೇಗೆ ನಡೆಯಿಸಬೇಕು (ಇಶೃಕ. ೨೦೨).

**ಮನೆತನ ಮಾಡು** = ಸಂಸಾರವನ್ನು ನಿರ್ವಹಿಸು : ಮನೆತನ ಮಾಡುವುದಕ್ಕೆ ತಕ್ಕಷ್ಟು ಹಣವಿಲ್ಲ (ಮುಂಬರು. ೩-೨೮೯). [ಮನೆ + -ತನ]

**ಮನೆತಾಣ** 'ಮನೆದಾಣ' ನೋ.

**ಮನೆತುಂಬಿಸು** 'ಮನೆದುಂಬಿಸು' ನೋ.

**ಮನೆತುಂಬು** 'ಮನೆದುಂಬು' ನೋ.

**ಮನೆದಪ್ಪು** (ಕ್ರಿ). ೧. ಆಶ್ರಯವಿಲ್ಲದಂತಾಗು; ನೆಲೆತಪ್ಪು: ಮನೆದಪ್ಪುವುದೆ ನನ್ನ ಮನೋರಥಂ (ಅಬಿಕೆ. ೫೨-೮). ೨. ಹೆಣ್ಣು ಗಂಡನ ಮನೆ ಬಿಟ್ಟು ತೌರುಮನೆ ಸೇರುವಂತಾಗು : ಮನೆದಪ್ಪಿ ಬಂದ ಮಗಳಿಗೆ ನಾವು ಆಶ್ರಯ ನೀಡಬೇಕಾಗಿದೆ (ರೂಢಿ). [ ಮನೆ+ ತಪ್ಪು$_1$ ]

**ಮನೆದಳ, ಮಂದಳ** (ನಾ). ಮನೆಕಟ್ಟುವ ಸ್ಥಳ ; ನಿವೇಶನ : ಇದಕ್ಕೆ ಸಲುವ ಮನೆದಳ ಹಿತ್ತಲು ತಿಪ್ಪೆಗುಂಡಿ ಹಕ್ಕಲು ಸಹವಾಗಿ (ವೈಆ. ೦೯೨೮, ೬೨-೦೬ : 1708) : ಆತನಿಗೆ ಮನೆದಳ ಬಹಳ ಸುಲಭದರದಲ್ಲಿ ಸಿಕ್ಕಿತಂತೆ (ಅಲಿವು. ೦೯೩). **ಮಂದಳ** : ಭೀಮಣ್ಣನು ಮೊದಲು ತನ್ನ ಮಂದಳದಲ್ಲಿ ಒಂದು ಭಾವಿ ತೆಗೆಸಿದ (ಶ್ರೀಕಥ. ೦೬೪). [ ಮನೆ + ತಳ (=ತಲ) ]

**ಮನೆದಾಣ, ಮನೆತಾಣ** (ನಾ). =ಮನೆದಳ : ಮನೆದಾಣಮುಂ ಪಲಗೆಗಣ್ಮಂ ಮೊದಲಾಗೆ ಕಬನಿಯುಂ ಪಡಗಣ್ಣಾಸೀಮೆ (ಎಇ. XXI, ೦೬೮-೧೧ : ಕನಿಮ ೫೩) ; ಮಾದಣ್ಣನಿಗೆ ಕೋಟೆಹಾಳಿನ ಮನೆದಾಣದಲ್ಲಿ ಗಂಟು ಸಿಕ್ಕಿತಂತೆ ! (ಶಿಳುಮ. ೧೫೬). **ಮನೆತಾಣ** : ಮನೆಯು ಮನೆತಾಣಂ ಅಸ್ಯ ದಾನಸಾಕ್ಷಿಣಃ ಅಷ್ಟಾದಶಪ್ರಕೃತಯಃ (ಎಕ. VII (R). ನಾನಮ೦. ೦೯೯-೬೦ : 776) ; ಮನೆತಾಣವಿಮ್ಮತ್ತರ್ದುಗ್ಗಾದೇವಿಯ ಮನೆಯಿಸ್ತೇಕಮಾ [ಜಬಿ] ಗೆಜಿಯ ತೆಂಕಣ ಕಡೆಗೋಡೆಯಲ್ಲಿ ಒಳಗೆ ಒಮ್ಮತ್ತತ್ತೊರ್ಣದಾ ನೆಲಾ (ಕಇ. II, ೫-೩ ; 859). [ಮನೆ + ತಾಣ ]

**ಮನೆದೀವು** (ಕ್ರಿ). (ಮಕ್ಕಳಿಂದ) ಮನೆಯು ತುಂಬು : ಮನೆದೀ [ವಾಂ. ತೀ]ವಿ ಮಕ್ಕಳಂ ಪಡೆದಬಳಾಜನಂ (ಆದಿಪು. ೨-೩೪). [ಮನೆ + ತೀವು]

**ಮನೆದುಂಬಿಸು, ಮನೆತುಂಬಿಸು** (ಕ್ರಿ). ವಧುವನ್ನು ಹೊಸದಾಗಿ ಮನೆಗೆ ಬರಮಾಡಿಕೊಳ್ಳು; ಗೃಹಪ್ರವೇಶಮಾಡಿಸು : ಒಸಗೆವಾತಂ ಪಾಡುತ ಕಡುಚದುರೆಯರಾಳಿಯರೊಲವಿಂ ಮನೆದುಂಬಿಸಿದರ್ ವಿಭವದೊಳು (ಜಮುಕಾ. ೮-೪೦); ವಿಘ್ನವಿಲ್ಲದೆ ಮನೆದುಂಬಿಸಬೇಕೆಂದು ಲಗ್ನವ ಪೇಳ್ದನು ಜಗೆ (ಪೋಹಚ. ೦೫-೦೩). **ಮನೆತುಂಬಿಸು** : ಮದುವಣಗಿತ್ತಿಯನ್ನು ಮನೆ ತುಂಬಿಸಿಕೊಂಡರು (ಪಃಮುಳಾ. ೨೬). [ಮನೆ + ತುಂಬಿಸು ]

**ಮನೆದುಂಬು, ಮನೆತುಂಬು** (ಕ್ರಿ). ೧. ನವವಧುವು ಹೊಸದಾಗಿ ಮನೆಯನ್ನು ಪ್ರವೇಶಿಸು ; ಗೃಹಪ್ರವೇಶಮಾಡು : 'ಮನೆದುಂಬಿಸು' ಪರಾ. **ಮನೆತುಂಬು** : ೧. ಸೊಸೆ ಬರಲು ಮಹಾದೇವಿಯವರು ಮನೆತುಂಬಿತೆಂದು ಗೊಣಗಿದರು (ಜಯಂತ. ೪೦೫). ೨. (ವಸ್ತುವಿಶೇಷಗಳು) ಮನೆಯಲ್ಲಿ ಭರ್ತಿಯಾಗು : ಜಿಡಿಯನಾಯನಾರ್ಗಂ ಯಸ್ಕಜನ್ಮನಿದೇವಿಯರ್ಗಂ ಸಂತಸದೊಳುಡಲ್ ಕೊಟ್ಟು ಮನೆತುಂಬಿದ ಹೊನ್ನು ಪೊಯ್ಯು (ಸಂಬಿರ. ೨-೯೮). [ಮನೆ + ತುಂಬು$_1$]

**ಮನೆದೆರಿಗೆ** (ನಾ). ಮನೆಯ ಮೇಲೆ ಹಾಕುವ ತೆರಿಗೆ, —ಕಂದಾಯ : ಅದರೊಳು ಮನೆದೆರಿಗೆಯು ಹೆಚ್ಚಿರಲೂ (ಶರಾಶ. ೧೦-೫); ಹೆಚ್ಚಾಗಿ ಮನೆದೆರಿಗೆ ಮೊದಲಾದ ೧೯ ಬಾಬುಗಳನ್ನು ನೇಮಿಸಿದರು (ಶಃಕಾವಂ. I, ೦೨೪); ಗದ್ದೆಕರ ಬೆದ್ದಲುಗಂದಾಯ ಕಾಡಾರಂಬ ಮನೆದೆರಿಗೆ (ಜಟ್ಟ. ೦೫೫-೫ ). [ ಮನೆ + ತೆರಿಗೆ (< ತೆಱಿಗೆ) ]

**ಮನೆದೆಱೆ** (ನಾ). = ಮನೆದೆರಿಗೆ : ತಿಪ್ಪೆಸುಂಕ ಮನೆದೆಱೆ ಪಾರಿಖಾಯ (ಬೊಂಳರಾ. ೦೯೩೬, ಸಿಂದಗಿ. ೪೦-೪೩; 1097); ಆ ಪೊಕಲ ಕದುಲೂ ಮನೆದೆಱೆ ಬಿಟಿ ಬೇಗಾರ ಕಾಣಿಕೆ ಕಡಾಯ (ಎಕ. X. ಮುಳಬಾ. ೦೬೨-೦೮; 1496). [ ಮನೆ + ತೆಱೆ$_3$ ]

**ಮನೆದೇವತೆ** (ನಾ). ವಂಶದ ದೇವತೆ ; ಕುಲದೇವತೆ : ಮನೆದೇವತೆಯ ಮಹಿಮೆಯೊ (ಹಿಗಂ. ೦೬೯-೦೨). [ ಮನೆ + ದೇವತೆ ]

**ಮನೆದೇವರು** (ನಾ). = ಮನೆದೇವತೆ : ಘನವಾದೊಡವೆ ಕೈಸೇರುವ ಪರಿಯಂತ ಮನೆದೇವರೆಂದುಪಚರಿಸು (ಕಂಸವ. ೩-೦೫೦). [ ಮನೆ + ದೇವರು (< ದೇವರ್) ]

**ಮನೆದೈವ** (ನಾ). = ಮನೆದೇವತೆ : ಮನೆದೈವಂಗಳೆನಗೆ ಸನ್ನಿದಮಾದೊಡೆನ್ನ ಮಗು ಮನ್ನಿಸಂತಾಗಲಿ (ಜಂತಂ. ೬೬-೦೨); ಮನೆದೈವ ಕುಲದೈವ ಎನಗೆ ನಿಮ್ಮ ವರಯ್ಯಾ (ಬಸವ. ೩೬೩); ನೀವೆನ್ನ ಕುಲದೈವ ಮನೆದೈವವಲ್ಲದೆ ಮತ್ತೆ ಕುಲದೈವ ಮನೆದೈವ ಇಲ್ಲವಯ್ಯ ಎನಗೆ (ಅಣುದೇ. ೬೨-೬೪). [ ಮನೆ + ದೈವ ]

**ಮನೆದೊಂಡ** (ನಾ). ಮನೆಯ ಸೇವಕ,—ಆಳು : ಅಸವಸದೆ ಮನೆದೊಂಡರೆಲ್ಲರೀ ತೆಱದಿಂದೆ ನಿಸದಮನಿಶಂ ಬರ್ಪರ್ (ಅರಾತ. ೨-೨-೧೧). [ ಮನೆ + ತೊಂಡ$_1$ ]

**ಮನೆದೊತ್ತು** 'ಮನೆದೊಟ್ಟು' ನೋ.

**ಮನೆದೊಟ್ಟು, ಮನೆದೊತ್ತು** (ನಾ). ಮನೆಗೆಲಸಮಾಡುವ ತೊತ್ತು; ಮನೆಯಾಳು : ಪೋದ ಮಾರಿಯನ್ನಳೆ ಮನೆದೊಟ್ಟು ಸೀರ್ಕರಡಿಯನ್ನಳೆ ನಾದುನಿ (ಕಂಕಶಾ. ೪-೯೮). **ಮನೆದೊತ್ತು** : ನಿಮ್ಮ ಮನೆದೊತ್ತಿನ ಮಗಳು ಕೇಳೆಮ್ಮವಂ ಕೇಳ್ಮಾಡಿದಲ್ (ಬಸವ. ೫೫-೩೩); ಏನೆಲವೊ ಮಾರೀಚ ಮಾರಿಯದೇನು ಮನೆದೊತ್ತಲ್ಲವೇ (ತೊರಾ. ೩-೬-೯೯). [ ಮನೆ + ತೊಟ್ಟು ]

**ಮನೆಪಟ್ಟಿ** (ನಾ). = ಮನೆದೆರಿಗೆ : ಇವರ ಆದಾಯದ ಸಾಧನಗಳು ಮನೆಪಟ್ಟಿ, ಛಕಡೀಪಟ್ಟಿ, ಹೊರಗಿಂದ ಬರುವ ಮಾಲಿನ ಮೇಲೆ ಜಕಾತಿ ಮುಂತಾದವುಗಳುಂಟು (ಕಳಾಗಿ. ೪೦೦). [ ಮನೆ + ಪಟ್ಟಿ$_2$ ]

**ಮನೆಪಾಠ** (ನಾ). ವಿದ್ಯಾರ್ಥಿಗಳಿಗೆ (ಮನೆಯಲ್ಲಿ) ಖಾಸಗಿಯಾಗಿ ಹೇಳುವ ಪಾಠ : ಮನೆಪಾಠ ಹೇಳಿ ಜೀವನಯಾಪನೆ ಮಾಡಿಕೊಳ್ಳುತ್ತಿದ್ದನು (ಛಸರು. ೫೨೫). [ ಮನೆ + ಪಾಠ$_2$ ]

**ಮನೆಬದುಕು** (ನಾ). ಮನೆಯ ಕೆಲಸ ; ಗೃಹಕೃತ್ಯ : ಗರತೀ ನೀ ಮನೆಬದುಕ ನೋಡಿ ನೂಲಿನೆಳೆಗಳ ಮಾಟಮಾಡಿ ನೆಯ್ದೆ (ಜಂಗೀ. ೬೪-೧೭).
[ ಮನೆ + ಬದುಕು$_2$ (< ಬರ್ದುಕು$_2$) ]

**ಮನೆಬಾಗಿಲು** 'ಮನೆವಾಗಿಲ್' ನೋ.

**ಮನೆಮಗತಿ** 'ಮನೆಮಗತ್ತಿ' ನೋ.

**ಮನೆಮಗತ್ತಿ**, ಮನೆಮಗತಿ , ಮನೆವಗತಿ (ನಾ). ಮನೆಯಲ್ಲಿ ಹುಟ್ಟಿದವನಂತೆಯೇ ಇದ್ದು, ಕೆಲಸ ಮಾಡಿಕೊಂಡಿರುವ ವ್ಯಕ್ತಿ: ವಂಶಪಾರಂಪರ್ಯವಾಗಿ ಬಂದ ಮನೆಯ ಆಳು : ಸಿಯಗೆಲ್ಲರಾ ಮನೆಮಗತ್ತಿಸ್ಸಲ್ಲಹನಾ ಬೆಸು (ಎಕ. XVI, ತುಮಕೂ. ೯೮-೩; 750); ಪೆರ್ಮಾನಡಿಗಳ ಮನೆಮಗತ್ತಿನ್ ಅಗರಯ್ಯಂ (ಎಇ. VI, ೪೩-೪; 840). **ಮನೆಮಗತಿ :** ಬಿಸಮನೆಂಬೋ ಮನೆಮಗತಿ ಆತ ನಟ್ಟ ಕಲಕೆ ಒಮ್ಮೆತ್ತು ಕೆಯ್ಯ ಕೊಟ್ಟೋರ್ (ಎಕ. XI, ಕಳ್ಳಕೆ. ೩೩-೯; 815); ಸ್ವಸ್ತಿಶ್ರೀ ಗೊಗ್ಗಿಯ ಮನೆಮಗತಿ ಬೋಚಗ ಧರ್ಮ್ಮಸೆಟ್ಟಿ . . . ಸತ್ತಂ (ಪ್ರಕಂ. ೧೯೩೩, ೪೦-೦ : 900). **ಮನೆವಗತಿ :** ಶ್ರೀಮಂತ್ ನಾಗತರನ ಮನೆವಗತಿ ಪೆರ್ಮ್ಮಣಸೆಟ್ಟಿ ಬೆಂಗುಳೂರ ಕಾಳೆಗದೊಳಿಳ್ದಾಗತರನ ಮಗಂ ಬುಟ್ಟಣಪತಿ ಸತ್ತಂ (ಎಕ. IX (ಇ). ಬೆಂಗಳೂ. ೦೮೨-೨; ಸು. 850); ಸ್ವಸ್ತಿ ಶ್ರೀ ಪೆರ್ಮಾಡಿಯ ಮನೆವಗತಿ ನೀಲಬ್ಬೆಯ ಮಗಂ ರಾಚಮ್ಮನ ಧರ್ಮ್ಮಂ (ಎಕ. III (R), ಪಂಜಿಸ. ೨೪೨-೦ ; 970). [ಮನೆ + ?]

**ಮನೆಮಗವು** (ನಾ). = ಮನೆಮಗತ್ತಿ : ಮಾರಿದಾಸಽರಿಯತಮ್ಮನ್ ನಾಗತರಾಸರಾ ಮನೆಮಗವು . . . ಪಣುಸಾಳ್ ಎಱೆದು ಬಿಟ್ಟನ್ (ಎಕ. XVI, ತುಮಕೂ. ೯೩-೯ ; ?). [ಮನೆ + ಮಗವು (< ಮಗು)]

**ಮನೆಮಾತು** (ನಾ). ೧. ಮನೆಯಲ್ಲಿ ಆಡುವ ಭಾಷೆ : ಮಾತೃಭಾಷೆ : ತಾಯಿನುಡಿ : ದಾಸರು ಕನ್ನಡದಲ್ಲಿ ಗ್ರಂಥರಚನೆ ಮಾಡುವುದಕ್ಕೆ ಅವರ ಮನೆಮಾತು ಕನ್ನಡವೆಂಬುದೇ (ಹಗಿರಾ. ೩೩೭) ; ಮನೆಮಾತಿನಲ್ಲಿ ಹೇಳೆಂದು ಬಾರಾದರೂ ಬಲವತ್ತರಿಸಿದರೆ ಅವನಿಗೆ ಮಂಕು ಕವಿದುಬಿಡುತ್ತಿತ್ತು (ಕಮಾಕೋ. ೦೨೦). ೨. ಎಲ್ಲರಿಗೂ ತಿಳಿದ ವಿಷಯ ; ಪ್ರತಿ ಮನೆಯಲ್ಲಿಯೂ ಮಾತನಾಡಿಕೊಳ್ಳುವ ವಿಚಾರ : ರಾಜನರ್ತಕಿಯರು ನಾಡಿಗೆ ಸಲ್ಲಿಸಿದ ಸೇವೆ, ತ್ಯಾಗ ವಿಜಯನಗರರಾಜ್ಯದಲ್ಲೆಲ್ಲಾ ಮನೆಮಾತಾಯಿತು (ಕಂಠಿರಮ. ೪೭) ; ಬಿಡಿಮೊಳೆಗಳಿಂದ ಮುದ್ರಿಸುವುದನ್ನು ಕಂಡುಹಿಡಿದವನು ಗೂಟೆನ್ಬರ್ಗ್ ಎಂಬುದು ಮುದ್ರಣಪ್ರಪಂಚದಲ್ಲಿ ಮನೆಮಾತಾಗಿದೆ (ಮುದ್ರಕ. ೯). [ ಮನೆ + ಮಾತು$_1$]

**ಮನೆಮುಟ್ಟು$_1$** (ಕ್ರಿ). ಮನೆಯನ್ನು ಸೇರು : ಅಲ್ಲಿಂದ ತನ್ನ ಸಿಪಾಯಿ ಯೊಡನೆ ಮನೆಮುಟ್ಟಿದ (ಕಿಶಕಾ. ೬೦). [ಮನೆ + ಮುಟ್ಟು$_1$]

**ಮನೆಮುಟ್ಟು$_2$** (ನಾ). ೧. ಮನೆಯ ಸಾಮಾನು : ಗೃಹೋಪಕರಣ : ಕನಕದ ರಜತದ ಕಾಂಸ್ಯದ ಮನೆಮುಟ್ಟುಗ[ಪಾಠಂ. ಮಟ್ಟುಗ] ಮುಟ್ಟಿ ಕರಗಿ ಕಣ್ಣಿಟ್ಟುವು (ಜಂಶಾಪಿ. ೧೨-೧೫೨). ೨. ಮನೆಯನ್ನು ಕಟ್ಟುವ ಸಾಧನ : ಹೊಸದಾಗಿ ಮನೆ ಕಟ್ಟಿಸಲು ಮನೆಮುಟ್ಟು ಒದಗಿಸಿಕೊಳ್ಳ ಬೇಕಾಗಿದೆ (ರೂಢಿ). [ ಮನೆ + ಮುಟ್ಟು$_2$ ]

**ಮನೆಮುಟ್ಟುಗೋಳು** (ನಾ). ಮನೆಯನ್ನು ಸ್ವಾಧೀನಕ್ಕೆ ತೆಗೆದು ಕೊಳ್ಳುವುದು,-ವಶಕ್ಕೆ ತೆಗೆದುಕೊಳ್ಳುವುದು : ಅರಸನಾಗ್ರಹದಿ ಮನೆ ಮುಟ್ಟುಗೋಳಂ ಕೊಂಡು (ರಾಜಶೇ. ೧೦-೪೫) ; ಧನಂಗಳಂಮನೆಮುಟ್ಟುಗೋಳಾಗಿ ಕಳೆಯುತ್ತ (ಶಾಗಂಧಿ. ೧೯೨-೫).
[ ಮನೆ + ಮುಟ್ಟುಗೋಳು ]

**ಮನೆಮುರುಕ** (ನಾ). ಮನೆಮುರಿಯುವವನು ; ಮನೆಹಾಳ : ಮನೆ ಮುರುಕನಾದಂಥಾ ಪುರುಷನು . . . ಶುಭಗಳನ್ನೈದಲಾರದೆ (ಕೃವಾಂ. ೧೦೭); ಹುಚ್ಚುಹುಚ್ಚಾಗಿ ಮನೆಮುರುಕ, ರಾಕ್ಷಸ . . . ಮುಂತಾದ ಶಬ್ದಗಳಿಂದ ಬೆಳ್ಳೀಗೌಡರನ್ನು ಬಹಳ ಬೈದಳು (ಕಂಜಕಂ. ೫೨).
[ ಮನೆ + ಮುರುಕ$_1$ ( < ಮುರುಕ್ಕ$_2$) ]

**ಮನೆಮುರುಕಿ** (ನಾ). ಮನೆಯನ್ನು ಹಾಳುಮಾಡುವವಳು ; ಸಂಸಾರ ವನ್ನು ಒಡೆಯುವವಳು : ಮನೆಮುರುಕೀ, ಬೆಳ್ಳಿ ಹೋಯಿತು, ಬಂಗಾರಹೋಯಿತು ! ಮಾನಮರ್ಯಾದೆ ಎಂದೋ ಹೋಯಿತು (ತುಂಬಿಕೊ. ೨೫). [ ಮನೆಮುರುಕ + – ಇ$_2$ ]

**ಮನೆಮುರುಕುತನ** (ನಾ). ಮನೆಯನ್ನು ಹಾಳುಮಾಡುವ ಸ್ವಭಾವ : ನೀಗಲಾಡಿಸುತ ಮನೆಮುರುಕುತನವನ್ನು ಬೇಗದಿಂ ಕರುನಾಡ ಹರಕುತನ ವನ್ನು ಕಳೆದು ಹಿರಿದಾಗೋಣ ಸೀಮೆಯಸು ದಾಟ (ನು. ೪೦-೬).
[ ಮನೆ + ಮುರುಕು$_3$ (<ಮುರುಕ್ಕು) + – ತನ ]

**ಮನೆಮೂಳ** (ನಾ). ೧. ಹೊರಗೆ ಓಡಾಡಲು ಶಕ್ತಿಯಿಲ್ಲದೆ ಮನೆ ಯಲ್ಲೇ ಇರಬೇಕಾದ ವ್ಯಕ್ತಿ: ಸೊಸೆ ಗಂಡನ ಸ್ವೈರಾಚಾರಕ್ಕೆ ಬಲಿಯಾಗಿ ಮನೆಮೂಳ ಆಗಿದ್ದಾಳೆ (ಕಕ್ಷಾ. ೩೯). ೨. "ಮನೆಯಲ್ಲೇ ಮೂರು ಹೊತ್ತು ಇರುವ (ಅಭ್ಯಾಸದ ಮನುಷ್ಯ) : ಮನೆಮೂಳ(ಳಿ)" (Stay-at-home. ಇಂಕಕ). [ ಮನೆ + ಮೂಳ$_1$ ( <ಮೂಳ ) ]

**ಮನೆಮೂಳಿ** (ನಾ). ಮನೆಯಲ್ಲೇ ಕುಳಿತಿರುವ ವ್ಯಕ್ತಿ : ಸೋಮಾರಿ : ಇವಳಿಂದಲೇ ಅಲ್ಲವೆ ಕೈಗೆ ಬಂದ ಮಗ ಮನೆಮೂಳಿಯಾಗಿ ಕುಳಿತಿರುವುದು (ಹೊಸತ. ೨೦). [ ಮನೆಮೂಳ + –ಇ$_3$ ]

**ಮನೆಯಟ್ಟು** (ನಾ). ಒಂದು ಬಗೆಯ ತೆರಿಗೆ (?) : ಎಟ್ಟುಮನೆ ಹತ್ತು ಕೊಂಡು ಮನೆಯಟ್ಟು ಯಾಸೂಯಿಪ್ಪಟ್ಟಣದಲಿ (ಎಕ. IX, ಕಾಪಕಾ. ೬-೦೭; 1316 ?). [ ಮನೆ + ? ]

**ಮನೆಯಾಳ್**, ಮನೆಯಾಳು (ನಾ). = ಮನೆದೊತ್ತಿ : ಘನರಾದ ತುರುಕರು ಕಂಠೀರವೇಂದ್ರನ ಮನೆಯಾಳ್ಗಳಿಂದ ಮಡಿದರು (ಕಂಠವಿ. ೨೫-೫೯) . **ಮನೆಯಾಳು :** ಅವರ ಮನೆಯಲ್ಲಿ ನಾಲ್ವರು ಮನೆಯಾಳು ಗಳು ಇದ್ದಾರೆ (ರೂಢಿ). [ ಮನೆ + ಆಳ್$_3$ ]

**ಮನೆಯಾಳು** ' ಮನೆಯಾಳ್ ' ನೋ.

**ಮನೆವಗತಿ** ' ಮನೆಮಗತ್ತಿ ' ನೋ.

**ಮನೆವಣ**, ಮನೆಹಣ (ನಾ). = ಮನೆದೆಱೆ : ಓರಿಯ ಕೆಱೆಗೆ ಮನೆ ವಣಮುಮಂ (ಎಇ. ೦೯೪೭, ಪಾಪುಗಲ್. ೨೩೬-೦೪; 974) ; ಕಾವಾರಂಭ ನೀರಾರಂಭ ಸುಂಕ ಸಿದ್ದಾಯ ಮನೆವಣ ಸಹವಾಗಿ ಶಿವಾರ್ಪಿತ ಮಾಡಿ ಕೊಟ್ಟ ದಾನಶಾಸನ (ಎಕ. XII, ತಕ್ಕನಾ. ೬೮-೩೯ ; 1669 ). **ಮನೆಹಣ :** ಮಗ್ಗ ಮನೆಹಣ ಹೊಗೆಹಣ ಸುಂಕ ಸುವರ್ನಾದಾಯ (ಎಕ. XII, ಕುಣಿಗ. ೪-೧೬; 1671): ಶಾಸನಗಳಲ್ಲಿ ಬರುವ ತೆರುವಣಗಳು :_ ತೆರು . . . ದೇವರ ಧರ್ಮ, ಮನೆಹಣ, ಹೊಗಹಣ (ತುಳುಜಾ. ೨೭೦).
[ ಮನೆ + ಪಣ$_3$ ]

**ಮನೆವಯಸ್** (ನಾ). ಮನೆಯ ವಸು : ನಯಮೆತ್ತಿನನುಡಿಯೆಂ ಜಾಣ್ಮೆಯಿ ನಾವಗಮಿನಿಯಸೆರ್ದೆಯನಿರ್ಕೆಳೆಗೊಳ್ವೀ ಮಯಣನ ಗೆಳೆಯನಿವಳ ಮನೆ ವಯಸೆನಿಕುಂ ಮುಪ್ಪುದಪ್ಪುಗರ ಹಸುವಾಗಲ್ (ಲೀರಂ. ೬-೧೨೩).
[ಮನೆ + ವಯಸ್]

**ಮನೆವಾಗಿಲ್**, ಮನೆಬಾಗಿಲು (ನಾ). ೧. ಮನೆಯ ದ್ವಾರ : "ದ್ವಾರ ಮೆಸಲು ಮನೆವಾಗಿಲಕ್ಕುಂ" (ಮಂಗರಾ. ೫೯-೦೨). **ಮನೆಬಾಗಿಲು :** ೧. ಧನಲಕ್ಷ್ಮಿಪೂಜೆಯಾ ದಿನವಾದುದೆಂದು ಮನೆಬಾಗಿಲಿಗೆ ನಾವು ಬಂದಿರುವೆ ವಿಂದು (ಕಂತು. ೧೫-೨). ೨. ಮನೆಯ ಮುಂಭಾಗ : ಯಿಂತೀ ಚತುಃ ಸೀಮೆಯೊಳಗುಳ್ಳ ಮನೆಬಾವಿ ಮನೆಬಾಗಿಲ ಗದ್ದೆ ಮನೆಯ ಹಿಂದಣ ಬೆಟ್ಟು . . . ಸಹಿತವಾಗಿ . . . ಧಾರೆಯನೆರೆದು ಕೊಟ್ಟರು (ಕೌಇಇ. IX-ii, ೪೨೩-೦೭; 1400). [ಮನೆ + ಬಾಗಿಲ್]

**ಮನೆವಾರ** (ನಾ). = ಮನೆದಳ: ಗುಡಿ ಮುಂದಣ ಮನೆವಾರ ಸಹ ನಡಸ ಹೇ ಶಾಸನಭಾವ ಹಳ್ಳಿ ತಿಂಪಾಪಗೆ . . . ತಾಕಿತಿ ಮಾಡಿಸಿ ನಯನಾಡಿ ಬರುಕೊಟ್ಟ ತಾಂಬ್ರಶಾಸನಾ (ಮೈಆ. ೧೯೨೯, ೬-೨೨; 1673).
[ಮನೆ + ವಾರ್$_1$]

**ಮನೆವಾರತೆ** 'ಮನೆವಾಳ್ತೆ$_3$' ನೋ.

**ಮನೆವಾರ್ತೆ** 'ಮನೆವಾಳ್ತೆ$_3$' ನೋ.

**ಮನೆವಾರ್ತೆಗ** (ನಾ). ಗೃಹಕೃತ್ಯವನ್ನು ನೋಡಿಕೊಳ್ಳುವವನು : ಮೂಜು ಬರವುವಿಲ್ಲ ಮೂಮ್ಮನೆವಾರ್ತೆಗರ ಮನೆ ಪೊಕ್ಕತ ಪನ್ನೆರಡು ಗದ್ಯಾಣ ದಣ್ಡ (ಶಾಇ. IX-i, ೬೬-೪೨: 992).
[ಮನೆವಾರ್ತೆ (< ಮನೆವಾಳ್ತೆ$_3$) + — ಗ$_2$]

**ಮನೆವಾರ್ತೆಗಾರ** (ನಾ). = ಮನೆವಾರ್ತೆಗ : ಬಂದೂಕುಧಾರಿಗಳ ಮನೆವಾರ್ತೆಗಾರ (ಹೋಲ್ಪಠ. ೯೪).
[ಮನೆವಾರ್ತೆ (< ಮನೆವಾಳ್ತೆ$_3$) + — ಕಾರ$_1$ (< — ಕಾಜ)]

**ಮನೆವಾರ್ತೆಗೆಯ್**(ಕ್ರಿ). ಮನೆವಾರ್ತೆಯನ್ನು ನೋಡಿಕೊಳ್ಳು: ಸಂಸಾರ ನಡೆಸು : ಕರಪದ ಸೂಳೆ ಸುತ್ತುವಳೊ ಕುತ್ತುವಳೋ ಮನೆವಾರ್ತೆಗೆಯ್ವ [ಶಾಕಾಂ. ಗೀಪ]ಳೋ (ಸೂಕ್ತಿಸು. ೮-೩೬೬: ಅಪಂಫ. ೮-೯೮ ನೋ).
[ಮನೆವಾರ್ತೆ (< ಮನೆವಾಳ್ತೆ$_3$) + ಕೆಯ್$_1$]

**ಮನೆವಾಳು** 'ಮನೆವಾಟು' ನೋ.

**ಮನೆವಾಳ್ತನ** (ನಾ). ೧. ಮನೆಯ ನಿರ್ವಹಣೆ; ಸಂಸಾರದ ಜವಾಬ್ದಾರಿ: ಮನೆವಾಳ್ತನದೊಳು ಬಲುಬಲು ದಕ್ಷೆ ಅವಳಾಳ್ತನದೊಳ್ ನನ್ನಯ ರಕ್ಷೆ (ಗಕೀಠ. ೩-೩೨). ೨. ಮಗಳಿಗೆ ಮದುವೆ ಮಾಡಿ ಅಳಿಯ. ಮಗಳನ್ನು ಮನೆಯಲ್ಲೇ ಇಟ್ಟುಕೊಳ್ಳುವುದು : P ಸಾಮಾನ್ಯವಾಗಿ ಒಬ್ಬಳೇ ಮಗಳು ಅಥವಾ ಗಂಡುಸಂತಾನವಿಲ್ಲದವರು ತಮ್ಮ ಒಬ್ಬಳೇ ಮಗಳಿಗೆ ಮದುವೆ ಮಾಡಿ ಅಳಿಯನನ್ನು ಮನೆಯಲ್ಲೇ ಇಟ್ಟುಕೊಳ್ಳುತ್ತಾರೆ : ಗಂಡ ಸತ್ತ ಆಕೆ ಇದ್ದ ಒಬ್ಬಳೇ ಮಗಳನ್ನು ಮದುವೆ ಮಾಡಿ ಅಳಿಯನನ್ನು ಮನೆವಾಳ್ತನಕ್ಕೆ ಇಟ್ಟುಕೊಂಡಿದ್ದಳು (ಸಸ್ಕೃರು. ೨೯೨).
[ಮನೆವಾಳು (< ಮನೆವಾಟು) + — ತನ]

**ಮನೆವಾಳ್ತೆ** 'ಮನೆವಾಳ್ತೆ$_3$' ನೋ.

**ಮನೆವಾಟು**, ಮನೆವಾಳು (ನಾ). ಸಾಂಸಾರಿಕ ಜೀವನ : ಗೃಹಸ್ಥ ಜೀವನ : ತತ್ತ್ವವೇದಿಗಳುಂ ಮನೆವಾಟನಾಸೆವಡಲಾಗದು (ಶಾಂತಿಪು. ೯-೬೨ ವ); ಮನೆವಾಟ್ಟಿಲ್ಲದುದು ಕಾವಾಥೇನು ಕಜಿದಂತ (ಅಪಂಫ. ೮-೨೯). **ಮನೆವಾಳು**: ಮನೆವಾಳು ಸಾಕಾಯ್ತು ಮುನಿವಾಳು ಬೇಕಾಯ್ತು (ಚರತ. ೩೨-೦೦೯).

**ಮನೆವಾಟ ದಮ್ಮ** = ಗೃಹಸ್ಥಧರ್ಮ : ಮನೆವಾಟ ದಮ್ಮವುಮೆಲ್ಲದುಂ ನೀನೆ ಬಲ್ಲೆ (ಕಂತಕಂ. ೦೩೦-೬). [ಮನೆ + ಬಾಟು$_3$]

**ಮನೆವಾಳ್ತೆ**. ಮನವಾರತೆ, ಮನವಾರ್ತೆ, ಮನವಾಳ್ತೆ, ಮನೆವಾರತೆ, ಮನೆವಾರ್ತೆ, ಮನೆವಾಳ್ತೆ (ನಾ). ೧. ಮನೆಯ ಕೆಲಸ : ಗೃಹಕೃತ್ಯ: ಪರಿತಣ ಮನೆವಾಳ್ತೆಯುಂ ಮಾಜಿದರ್ (ವಡ್ಡಾರಾ. ೦೩೦-೨೫) ; ಕಿಮ್ಮನಿನ್ನೇನೆತುವೋಂ ಮನೆವಾಳ್ತೆಯುಂ ಬೆಸಸಲೆ ಬಂದೆಮೋಗಾಥಿವಾ (ಕಂಸಠ. ೦೨-೮೯) ; ದೇವತೆಯುಮನ್ನನೆವಾಳ್ತೆಯನ್ನ ನೊಡಪುರ್ಗುಂ (ಶಕಪ. ೩-೦೨೬). **ಮನವಾರತೆ** : ೧. ಕ್ರತುಶತದ ಕೈಗೊಣಕೆಯ ದೀಕ್ಷಿತರ ಸಿರಿಯಂತರವ ಮನವಾರತೆಯದೆಂತುಟೊ ಕಾಣಬೇಹುದು (ಕುಮ್ಮಾಠ. ೭-೯) ; ಮನೆಗೆ ಮನವಾರತೆಗೆ ಪಿತ್ರಕ ವನಿತೆಜಾರಿಗಭಿಲಾಷೆಪಡದೆ (ಕೊಂಗರು. ೨-೧೦). **ಮನವಾರ್ತೆ**: ೧. ನಾನು ಒಂದು ಮನವಾರ್ತೆಗಾಗಿ ಹೋಗಿ ಬರುತ್ತೇನೆ (ಕನಾತ. ೮). **ಮನವಾಳ್ತೆ** : ೧. ಚಿಕದೇವನಾ ಹಿಮಾಚಲ ರಘುವೀರ ಸೇತುವರೆಗಂ ತಿಳಿಗುಂ ಮನವಾಳ್ತೆಯೆಂಬಿನಂ (ಚಿಕಠ. ೯-೦೦೬). **ಮನೆವಾರತೆ** : ೧. ನಿನ್ನಯ ಕಾಂತಿ ತಿರುಗದ ವಾರಿಯ ಹೋದಾತ ಬಹನೆ ಯಾರಿಯಾವಾಡದೆ ಮನೆವಾರತೆಯ ವಿಚಾರಿಪುವೆಂದರಾಳಿಯರು (ಮೋಪಠ. ೯-೦೮). **ಮನೆವಾರ್ತೆ** : ೧. ಒಂದೊಂದು ಮನೆವಾರ್ತೆ [ಮಾಕಾ. ಬೆಸ್ತೆ]ಯಂತಿನ್ನಂ ಕಾಣದೆ ಪೋಗಲೀಯಾಸೀಗಳೆ ಪೋಗಿ ನಿನ್ನಲ್ಲಿಗೆ ಬಂದಪ್ಪೆಂ (ವಡ್ಡಾರಾ. ೦೬-೬) : ನಿನತೊಂದೋಲೆಗೆ ಕೀರ್ಸದೊಂದು ಮನೆವಾರ್ತೆಗಿದೇನೆಂದರಸ ಬಳಿಯೆ ನುಡಿದಪಂ (ಅಂಫ. ೦೯-೩೦) ; ಲೋಕವಿದಸ ಮನೆ ಲೋಕರುದ್ಧಾರಣವೆ ಮನೆವಾರ್ತೆ (ಗುರುಭ್ರಾ. ೨-೯೩) ; ಮಕ್ಕಳಿಲ್ಲ ಮನೆವಾರ್ತೆ ಮಾಡಿದರೆ ಅಪ್ಪಗ್ಯಾಕೆ ಇಬ್ಬರು ಹೆಂಡರು ? (ಗಾದೆ). **ಮನೆವಾಳ್ತೆ** : ೧. ಎನ್ನ ಪರಿಚರ್ಯೆಗೆ ಅನುಕೂಲೆಯಾಗಿರ್ದ ಮನೆವಾಳ್ತೆಯುಂ ಸಾಗಿಪ್ಪುದು (ಕೈರಾಠ. ೦೦-೨೯) ; ಮನೆವಾಳ್ತೆಯಜೆಯುವ ಮರುಳುವೆಣ್ಣೇ ಕೃತಿಯನೆ ಮನವೊಲಿದೋದಿದೊಡೆ . . . ಚಾತುರ್ಯ ಪಡೆವಳು (ಹಾಂ. ೦-೩೯). ೨. ಮನೆಗೆಲಸದವನು ; ಮನೆಯಾಳು ; ಊಳಿಗದವನು : ಪತ್ರಿಕೆಯನ್ನು ತಂದಿದ್ದವನು ತನ್ನ ಪೂರ್ವದ ವೈರಿಯಾದ ಮನೆವಾಳ್ತೆಯೋ ಆಗದ್ದರಿಂದ . . . ಹಿಡಿದುಕೊಂಡು ಚೆನ್ನಾಗಿ ಪ್ರಹರಿಸಿದನು (ಕಪಿಕ. ೩೩). [ಮನೆ + ಬಾಳ್ತೆ]

**ಮನೆವುಗು** 'ಮನೆವೊಗು' ನೋ.

**ಮನೆವೆಂಡತಿ.** ಮನೆಹೆಂಡತಿ (ನಾ). ಮನೆಯ ಹೆಂಗಸು : ಗೃಹಿಣಿ : ಮನೆ ನಿನಗೆ ನಂದಗೋಪಾಲನ ಮನೆ ತುಜುಗಾರ್ತಿ ನಿನಗೆ ಮನೆವೆಂಡತಿ (ಕಂಕಠ. ೬-೩೨) ; ಮನೆವೆಂಡತಿಯೊ ನಾನೊತ್ತೆಸೂಳೆಯೊ ನಿನಗೆ (ಬಸವ. ೯೦-೯೬). **ಮನೆಹೆಂಡತಿ** : ಮಾಲೆಗಾಜರ ಮನೆಹೆಂಡತಿ ಗುಲುಗಜುವೆ (ಶಾಇ. IX-i, ೩೭೦-೯೦ ; 1255). [ಮನೆ + ಪೆಂಡತಿ (<ಪೆಂಡತಿ)]

**ಮನೆವೆಕ್ಕು** (ನಾ). ಮನೆಯಲ್ಲಿ ಸಾಕಿದ ಬೆಕ್ಕು: ಮನೆವೆಕ್ಕಾಗಿ ಜನಿಯಿಸಿ ಕಪೋತಮಿಥುನಮುಂ . . . ಕೊಂದಂ (ಜಗನ್ನಾ. ೦೩-೨).
[ಮನೆ + ಪೆಕ್ಕು (<ಬೆಕ್ಕು)]

**ಮನೆವೆಗ್ಗಡೆ** 'ಮನೆವೆರ್ಗಡೆ' ನೋ.

**ಮನೆವೆಣ್**. ಮನೆವೆಣ್ಣು (ನಾ). = ಮನೆವೆಂಡತಿ : ದೈನ್ಯವೆರೆದ ವಚನಂಗಳನುಸಿರುವ ಮನವೆಣ್ಗಳ್ ಸೊಗಸಿದುವು (ಜಗನ್ನಾ. ೦೨-೦೫). **ಮನೆವೆಣ್ಣು** : ಬಿಡುವೆಣ್ಣು ಬೆಲೆವೆಣ್ಣು ಬೆಸವೆಣ್ಣು ಮನವೆಣ್ಣುತನೆ ಯ್ಯಂದು ರಾಮನನು ಬಿಡದೆ ನೋಡಿದರು (ಕುಮಾರಾಂ. ೩೬-೬೯) ; ಬೆಲೆವೆಣ್ಣು ಬೆಸವೆಣ್ಣು ಮನವೆಣ್ಣು ಬಿಡುವೆಣ್ಣು . . . ಮಿಂಡವೆಂಗಳು ಭೂಲಲನೇಶನ ನೋಡಿದರು (ಗೊಮ್ಮಟ. ೦-೬೫). [ಮನೆ + ಪೆಣ್]

**ಮನೆವೆಣ್ಣು** 'ಮನೆವೆಣ್' ನೋ.

**ಮನೆವೆರ್ಗಡೆ**, ಮನೆವೆಗ್ಗಡೆ (ನಾ). ಮನೆಯ ಮೇಲ್ವಿಚಾರಕ : ಗೃಹಕೃತ್ಯಗಳ ವಹಿವಾಟು ನೋಡಿಕೊಳ್ಳುವವನು : ಅರಸಂಗೆ ಮನವೆರ್ಗಡೆ ಮುದ್ರಾಂಕಿತಮಪ್ಪ ಪಾಪುನದ ಮುದ್ರೆಯಂ ಕಳೆದು (ಶಾಂತಿಪು. ೨-೨೨ ವ) ; ಮನವೆರ್ಗಡೆ ಕೇತಯನಾಯಕ (ಶಾಇ. IX-i, ೯೬-೦೨ : 1034) ; ಮನವೆರ್ಗಡೆಯಂತೆ ಬೇಸಜಂ ಮಾಡದನುಂ (ರಕರಾಶ್ಚು. ೬-೯೮). **ಮನೆವೆಗ್ಗಡೆ** : "ಮನೆವೆಗ್ಗಡೆ ಅಂತರ್ವಂಶಿಕಂ" (ಹಲಾಯು. ೩೦-೨೬೫) ; ವ್ಯವಹಾರವಿಶಾರದಂ ಬಹುವ್ರತಪಥನೆನಿಪಾತನಲ್ತೆ ಮನೆವೆಗ್ಗಡೆ ಭೂಪತಿಗಪ್ಪುದೊಪ್ಪುಗುಂ (ಸೂಕ್ತಿಸು. ೦೬-೨೯). [ಮನೆ + ಪೆರ್ಗಡೆ$_1$]

**ಮನೆವೊಗು**. ಮನೆವುಗು. ಮನೆಹೊಗು (ಕ್ರಿ). ಗೃಹವನ್ನು ಪ್ರವೇಶಿಸು; ಮನೆಯೊಳಗೆ ಹೋಗು : ಪೇಡಿಯಾಗಿ ಮತ್ಸ್ಯನ ಮನೆವೊಕ್ಕ ಪಾರ್ಥನನೆ ಪಾರ್ಥನೆನಲ್ಪೊರೆ ಗಂಡರೆಂಬರೇ (ಗದಾಯು. ೩-೩೨). **ಮನೆವುಗು** : ಪೆಜಸ ಮನೆವುಗುವುದು (ಕಾಆಕ. ೨-೦೫-೯). **ಮನೆಹೊಗು** : ಎಲ್ಲರು ನಕ್ಕರು ನಾಚಿ ಮನೆಹೊಕ್ಕಳು ಧೀರು (ತಿಂತಾಪ. ೦೬೯-೯). [ಮನೆ + ಪೊಗು]

**ಮನೆಸರಕು** (ನಾ). ಸಂಸಾರಕ್ಕೆ ಬೇಕಾದ ವಸ್ತು : ಮನೆಯ ಸಾಮಾನು : ಹೊಸಸಕ್ಕರೆ, ಮನೆಸರಕು (ಕಪ್ಪುಸು. ೬೯ ಶ್ರೀಮೋ). [ಮನೆ + ಸರಕು₃]

**ಮನೆಸುಂಕ** (ನಾ). = ಮನೆದೆರಿಗೆ : ಮನೆಸುಂಕ ನೆಱೆಮುಖವತ್ತ್ಯಿಯ ಸುಂಕವಿನಿತಂ (ಮೈಶಾ. ೦೯೪೦, ೨೯-೪ ; 1173). [ಮನೆ + ಸುಂಕ₁]

**ಮನೆಹಣ** ' ಮನೆವಣ ' ನೋ.

**ಮನೆಹಾಳ** (ನಾ). ೧. ಮನೆಯನ್ನು ಹಾಳುಮಾಡುವವನು ; ಮನೆ ಮುರುಕ : ಮನೆಹಾಳನ ಮನೆಯಲ್ಲಿ . . . ಸೇರಿದ್ದನೆಂಬ ಸಂಗತಿ (ಪುಪರು. ೩೬೦). ೨. ನಾಯಿ : "ಮನೆಹಾಳನೆನಲು ಕುಕ್ಕುರನಕ್ಕು" (ಕಶರ. ೦೨೯). (ಗು). ೩. ಕೆಡುಕುಬುದ್ಧಿಯ ; ದುಷ್ಟತನದ : ಮನೆಹಾಳ ಬುದ್ಧಿಯನ್ನು ಎಷ್ಟುದಿನಗಳಿಂದ ಅಭ್ಯಾಸಮಾಡಿದ್ದಿರಿ (ಪಪ್ಪಪೀ. ೩೪) ; ಮೇಲ್ಮನವಿ ಸಲ್ಲಿಸಿದ್ದ ಮನೆಹಾಳ ಡೈರೆಕ್ಟರ್ ನೀತಿಬಾಹಿರನಾಗಿದ್ದನು (ಪುಪರು. ೩೬೩). [ಮನೆ + ಹಾಳು ( < ಪಾೞ್ ) + — ಅ₇]

**ಮನೆಹಾಳಿ** (ನಾ). ಮನೆಯನ್ನು ನಾಶಮಾಡುವವಳು : ಸಂಸಾರ ಮುರಿಯುವವಳು : ನಿಂಗೋದು ಮೊಗಾನು ಹೆತ್ತುಕೊಡ್ಲಿಲ್ಲ . . . ಮನೆಹಾಳಿ, ಮನೆಹಾಳಿ ಅವ್ವ (ಸರ್ವಪಂ. ೩೩೨). [ಮನೆಹಾಳ + — ಇ₃]

**ಮನೆಹೆಂಡತಿ** ' ಮನೆಪೆಂಡತಿ ' ನೋ.

**ಮನೆಹೊಗು** ' ಮನೆವೊಗು ' ನೋ.

**ಮನೋಗತ** (ಗು). ೧. ಮನಸ್ಸಿನಲ್ಲಿರುವ; ಹೃದಯದೊಳಗಿರುವ : ಎನ್ನಾ ಮನೋಗತಧ್ವಾಂತಬಂಧಮುಳಿಱೆತ್ತಿಲ್ಲಂ (೪೭೦೩. ೨-೬೭). (ನಾ). ೨. ಅಂತರಂಗದಲ್ಲಿರುವ ಆಶಯ,-ಅಭಿಪ್ರಾಯ : ಮನೋಗತಮಂ ವಚೋಗತಂ ಮಾಡಿ (ಶಾಂತಿಪು. ೯-೦೦೭ ವ); ನಿಜಮನೋಗತಮನಿಂತೆಂದು (ಚಂದ್ರಪ್ರ. ೪-೦೪ ವ). [ಸಂ.]

**ಮನೋಗತಿ** (ನಾ). ಮನಸ್ಸಿನ ಗಮನ ; ಮನಸ್ಸಿನ ವೇಗ : ತತ್ಕಾಲ ವೇಳೆಗಳಂ ಮನೋಗ[ಪಾಠಾಂ.ರ]ತಿ ಭಾವನೆಯನಱಿದು (ಬಸಪು. ೪೦-೦೭). [ಸಂ.]

**ಮನೋಗದ** (ನಾ). ಮನಸ್ಸಿನ ಚಿಂತೆ : ಚಿತ್ತದ ವ್ಯಥೆ : ಕಾತುರದು ಭೀತಿವಲ್ಲರಿ ಮನೋಗದಮುಂ ತಱಿಸಂದು ನಿಂದುದು. . . ಚಿಂತಾತುರ ನಾಗಿ ಬೆಳ್ಪಳಿಸಿ ಬೇವಸಮುಂ ತಳೆದಂ ಧನಂಜಯಂ (ಕಾಕಂ. ೪-೦೦೩). [ಸಂ.]

**ಮನೋಗಮನ** (ನಾ). = ಮನೋಗತಿ : ರಣಾಜಿರಂಗದಂತೆ ಮನೋ ಗಮನವಾಜಿರಂಜಿತಮುಂ (ರಾಶಕೀ. ೬-೦೭ ವ). [ಸಂ.]

**ಮನೋಗುಪ್ತಿ** (ನಾ). [ಜೈನ] ಮನೋಗುಪ್ತಿ, ವಚನಗುಪ್ತಿ ಮತ್ತು ಕಾಯಗುಪ್ತಿಗಳೆಂಬ ಗುಪ್ತಿತ್ರಯಗಳಲ್ಲಿ ಒಂದು ; "ಸುಖದುಃಖ ಗಳಿಗೆ ವಶವಾಗದೆ ಸರ್ವರಲ್ಲಿಯೂ ಸಮತಾಭಾವವನ್ನು ತೋರಿ ಆತ್ಮಕಲ್ಯಾಣವನ್ನು ನೆನೆಯುವುದು" (ಕೈಪಕೋ. ೨೦೦) : ವಚನಗುಪ್ತಿ ವಚನಪ್ರವೃತ್ತಿಯನ್ನು ತಡೆಯುವುದು ; ಮನೋಗುಪ್ತಿ (ಮನಃ ಪ್ರವೃತ್ತಿಯನ್ನು ತಡೆಯುವುದು) (ಜೈಪರ. ೬೮). [ಸಂ.]

**ಮನೋಗ್ಲಾನಿ** (ನಾ). ಮನಸ್ಸಿಗೆ ಉಂಟಾಗುವ ದುಃಖ ; ಮನೋ ವ್ಯಥೆ : ಅಂತಃಕಾಂತದೊಳ್ ತಮ್ಮ ತಂದೆಯ ಮನೋಗ್ಲಾನಿಯಂ ಪಱೆವಡೆ ನುಡಿದು (ಸುಕುಮಾ. ೭-೯ ವ); ಜನಿತಜನಮನೋಗ್ಲಾನಿನಿದಾಘಂ ನಿದಾಘಂ (ಚಂದ್ರಪ್ರ. ೯-೬೬); ಬಿಡು ಮನೋಗ್ಲಾನಿಯನು ಸತಿ ಕೆಡೆನುಡಿದು ದೆಲ್ಲವನೆನಗೆ ಸೈರಿಸು ಮಡದಿಯರಲೀಸುಂಟು ಗುಣ (ಕುವ್ಯಾಕ. ೬-೩೦). [ಸಂ.]

**ಮನೋಜ** (ಗು). ೧. ಮನಸ್ಸಿನಲ್ಲಿ ಹುಟ್ಟಿದ. (ನಾ). ೨. ಇಚ್ಛೆ; ಬಯಕೆ. ೩. ಕಾಮ ; ಮನ್ಮಥ : ಮನೋಜವಿನಾಶದಿನಟ್ಟ ತನ್ಮನೋ ಹರಿಯ ಪೊದಟ್ಟ ಕಣ್ಬನಿಗಳಂತಮಲಸ್ಫಟಿಕಾಕ್ಷಮಾಲೆ (ಶಾರಂಪು. ೭೩೭); ತ್ರಿಜಗದೀಶ್ವರನೊಳ್ ಮನೋಜ ಕಲಹಂದಾಳ್ದಗ್ಗಿ ಗೀಡಾದ (ಸೌಂದ. ೪೩). [ಸಂ.]

**ಮನೋಜನಿತ** (ಗು). ಮನಸ್ಸಿನಲ್ಲಿ ಹುಟ್ಟಿದ : ಮನೋಜನಿತ ಮುದ ಸನಿಲತನಯನನನ್ಯತವಚನಪ್ರಪಂಚನಿಂತಿರೆ ನುಡಿದಂ (೪೭೦೩. ೨-೪೨). [ಸಂ.]

**ಮನೋಜಯ** (ನಾ). ೧. ಮನಸ್ಸಿನ ಗೆಲವು. ೨. ಮದುವೆಯ ನಿಶ್ಚಿ ತಾರ್ಥ : ಮನೋಜಯಕ್ಕೆ ಹೋದಾಗ ಶಕುನಗಳು ಸರಿಯಾದರೆ ಹೆಣ್ಣಿನ ಮನೆಯಲ್ಲಿ ಹೆಣ್ಣು ಕೇಳುವ 'ಪರಸ್ತಾಪ'. . . ಆಗುತ್ತದೆ (ಪಜ್ಯರು. ೭೦). [ಸಂ.]

**ಮನೋಜವ** (ನಾ). ಮನಸ್ಸಿನ ವೇಗ : ಜ್ಯೋತಿರ್ವನದಂ ಮನೋಜವ ದಿನೆಯ್ದಿ (ಶಾಂತಿಪು. ೬-೩೪). [ಸಂ.]

**ಮನೋಜಸೂದನ** (ನಾ). ೧. ಮನ್ಮಥನನ್ನು ನಾಶಮಾಡಿದವನು. ೨. ಶಿವ : ನೊಸಲೊಳ್ ಕಣ್ಣುಳ್ಳ ಮನೋಜಸೂದನಂ ಪೆಜನದಾದನಾನೆ ವಲ್ (ಹಗಿ೨. ೩-೪೭). [ಸಂ.]

**ಮನೋಜಹರ** (ನಾ). = ಮನೋಜಸೂದನ ೨ : ಮನೋಜಹರ ಮನೋಹರನೆಂಬ . . . ಕದಂಪಲುಂಗೆಯ ಬಿರುದಿನ ಬಮಿಧದ ಕಪಳಾರಮಂ ದೆಸೆದೆಸೆಗೆ ಪರಿಯೆ (ನಂಬಿಶ. ೯-೨೨). [ಸಂ.]

**ಮನೋಜಾಗಮ** (ನಾ). ಕಾಮಶಾಸ್ತ್ರ ; ಮದನಾಗಮ : ಅಂಬರಚರ ಮಿಥುನರತಾಡಂಬರದೊಡನೊಗೆದ ನಗದ ಮಾರ್ದನಿ ಕಿವಿಗಂ ತಿಂಬಿ ಮನೋಜಾಗಮಗುರುವೆಂಬುದನೊಡನೆಂಬ ಶಿಷ್ಯನಂ ಪೋಲ್ತಿರ್ದಂ (ಶಾಂತಿಪು. ೨-೧೦೨). [ಸಂ.]

**ಮನೋಜಾಡ್ಯ** (ನಾ). ಮನಸ್ಸಿನ ದೌರ್ಬಲ್ಯ ; ಮನೋರೋಗ : ನಮ್ಮಲ್ಲಿಯ ಮನೋಜಾಡ್ಯ, ಸ್ವಾರ್ಥ . . . ನಮ್ಮ ದಾಸ್ಯಕ್ಕೆ ಕಾರಣ ವಾಗಿದೆ (ರಮೇಶಾ. ೫೨). [ಸಂ.]

**ಮನೋಜಾತ** (ಗು). ೧. ಮನಸ್ಸಿನಿಂದ ಹುಟ್ಟಿದ. (ನಾ). ೨. ಕಾಮ ; ಮನ್ಮಥ : ಭರತಜರೂಪಂ ಮನೋಜಾತರೂಪಂ (ಎಕ. VI. ತಕ್ಪ. ೦೬೦-೦೩೯ ; 1137). [ಸಂ.]

**ಮನೋಜ್ಞ** (ಗು). ೧. ಸುಂದರವಾದ : ಚೆಲುವಾದ : ಮಂತ್ರಿ ಕನ್ಯಕೆ ಸುರರಾಜನ ಮುಂದೆ ಮಾಲೆಯೂಡಿದ ಮನೋಜ್ಞಸಿತಸಿಂಧುವಾರ ಮಾಲೆಯನಿಟಿಕುಂ (ಶಾಂತಿಪು. ೦೦-೪೭) ; ಮಮನಾಸದಿ . . . ತೆಗೆವಟ್ಟವೊಲೆ ಮನೋಜ್ಞಾಂಬರಮೆನಿಸಿದುದಂಬುನಿಧಾನಂ (ರಾಶಕೀ. ೦_೪೦). (ನಾ). ೨. ಚೆನ್ನಾಗಿರುವಂಥದು : ಮನೋವೇದ್ಯ ವಾದುದು : " ಸುಂದರಂ . . . ಮನೋಜ್ಞಂ, ಮಂಜು, ಮಂಜುಳಂ ೧೨ ಸೊಗಸಾದದ್ದು, ಚೆನ್ನಾಗಿರುವಂಥಾದ್ದು " (ಸಿದ್ಧಾಂತಿ. ೩೩೭) : ಈ ಎಲ್ಲ ಅನುಭವವೂ ಮನೋಜ್ಞವಾದುದು ಎಂದರೆ ಮನೋವೇದ್ಯವಾದುದು (ಕಾಂದಸ. ೪೭). [ಸಂ.]

**ಮನೋಜ್ಞತೆ** (ನಾ). ಚೆಲುವು ; ರಮಣೀಯತೆ : ಅಭಿಜ್ಞಾರೇಖೆ ಗಳೆನಿಸಿ ಮನೋಜ್ಞತೆಯ ತ್ರಿವಳಿರೇಖೆ ತಳೆದೆಸೆದಿರ್ಕುಂ (ಚಂದ್ರಪ್ರ. ೦೨-೨೩). [ಸಂ. ಮನೋಜ್ಞತಾ]

**ಮನೋಜ್ಞೆ** (ನಾ). ೧. ಚೆಲುವೆ ; ಸುಂದರಿ : ಆತನ ಮನೋಜ್ಞೆ ಸುಮತಿಯುಮಱಿವಂ ಪೊತ್ತುಮಪೊಲಲ್ಪಮಂ ದೊರೆವೆತ್ತಿರೆ ಪರಸೇನನೆಂಬ ಮಗನಂ ಪೆತ್ತಳ್ (ಶಾಂತಿಪು. ೯-೩೮). ೨. ಒಂದು ಬಗೆಯ ಗೈರಿಕ ಧಾತು ; ಮಣಿಶಿಲೆ. ೩. ಮಾದಕಪಾನೀಯ : ಮದ್ಯ. ೪. ಜೀರಿಗೆ. [ಸಂ. ಮನೋಜ್ಞಾ]

**ಮನೋದಯಿತೆ** (ನಾ). ೧. ಪ್ರಿಯೆ; ಮನದನ್ನೆ. ೨. ಹೆಂಡತಿ ; ಪತ್ನಿ : ಶ್ರೀಮದಯಿತನ ಬಾಯಿಕನ ಮನೋದಯಿತೆಗೆ . . . ತಾವಾದರ್ ತನಯರ್ (ಎಕ. II, ೦೩೯-೪; ಕ್ರಿ. ೯೬೦). [ಸಂ. ಮನೋದಯಿತಾ]

**ಮನೋದಾರ್ಢ್ಯ** (ನಾ). ಮನಸ್ಸಿನ ದೃಢತೆ : ಚಿತ್ತದ ಸ್ಥಿರತೆ : ಇಂದ್ರ ಮತ್ತು ಅಗ್ನಿಯು ಶಿಬಿಯ ಮನೋದಾರ್ಢ್ಯವನ್ನು ಪರೀಕ್ಷಿಸುವುದ ಕ್ಕೋಸ್ಕರ ಅವನಿಗೊಂದು ಧರ್ಮಸಂಕಟವನ್ನು ತಂದಿಡುತ್ತಾರೆ (ಶಾಕಿಹ. ೧೦೭). [ಸಂ.]

**ಮನೋದುಃಖ** (ನಾ). ಮನಸ್ಸಿನ ಚಿಂತೆ : ಮನೋವ್ಯಥೆ : ಎನಿತು ಪರಿಗ್ರಹದ ತೊಡರ್ಪಾನಿತೆ ಮನೋದುಃಖಂ (ಆದಿಪು. ೩-೬೨). [ಸಂ.]

**ಮನೋಧರ್ಮ** (ನಾ). ಮನಸ್ಸಿನ ಗುಣಸ್ವಭಾವ ; ಚಿತ್ತವೃತ್ತಿ : ಮನೋಧರ್ಮವೆಂದರೆ ಪ್ರತಿಜೀವಿ ಭಿನ್ನವಾದ ಸ್ವಭಾವ ಸಂಸ್ಕಾರಗಳಿಗೆ ಅನುರೂಪವಾದ ವೃತ್ತಿಪ್ರವೃತ್ತಿಗಳು, ಇಚ್ಛಾನಿಷ್ಟಗಳು (ಆರ್ಯಧ. ೧೨). [ಸಂ.]

**ಮನೋನಂದನ** (ನಾ). ಮನಸ್ಸಿಗೆ ಸಂತೋಷವನ್ನುಂಟುಮಾಡು ವಂಥದು ; ಚಿತ್ತಕ್ಕೆ ಆನಂದಕರವಾದುದು : ಭದ್ರಶಾಲದಿಂ ಸಂಧಿಸಿ ನಿಂದ ನಂದನದಿನೊಪ್ಪುವ ಸೌಮನಸಾಖ್ಯದಿಂ ಮನೋನಂದನಮಪ್ಪ ಪಾಂಡುಕದಿನಾ ಗಿರಿರಾಜವಿಲಾಸಮುಬ್ಬಿಯುಂ ತಂದುದು (ಶಾಂತಿಪು. ೩-೨). [ಸಂ.]

**ಮನೋನಿಗ್ರಹ** (ನಾ). ಮನಸ್ಸನ್ನು ವಶೋಟಿಯಲ್ಲಿಟ್ಟುಕೊಳ್ಳುವುದು: ಪುರುಷನೆದುರು ಸ್ತ್ರೀ ಮಾಯೆ ಸ್ತ್ರೀಯೆದುರು ಪುರುಷ ಮಾಯೆ. ಹೀಗಿದ್ದರೂ ಮನೋನಿಗ್ರಹವೇ ಆತ್ಮಬಲ (ಕಪಾಳ. ೬೬). [ಸಂ.]

**ಮನೋನಿವಾಸ** (ನಾ). ಮನಸ್ಸನ್ನು ನೆಲೆಯಾಗಿ ಉಳ್ಳವನು: ಮನ್ಮಥ: ಮನೆಮನೆದಪ್ಪದೊಪ್ಪಿದುದು . . . ಮನೋನಿವಾಸನಿಂತಿನ ಕಥೆ ಮನ್ಮಥ ಕ್ಷಿತಿಪನಾರ್ಪು ಮನೋಜನ ಮಂಗಳೋತ್ಸವಂ (ರಾಜಶೇ. ೧೦-೭೯). [ಸಂ.]

**ಮನೋನುರಾಗ** (ನಾ). ಮನಸ್ಸಿನ ಪ್ರೀತಿ ; ಅಂತಃಕರಣದ ಅನುರಾಗ: ಈಗೆ . . . ಕಿಂನರಮಂನೆಗಯಕ್ಷರಾಕ್ಷಸ ಪ್ರಭುತುಳಿವಂದಿತಂ ಪರಹರೇಶ್ವರ ನೊಲ್ದು ಮನೋನುರಾಗಮಂ (ಕಇ. IV, ೦-೩; 1204); ಏನು ಬೆಸಸಿಸ ಗೇನು ಹದ ನಿಮಗೀನು ಮಗನುಪಚಾರವೇಕೆ ಮನೋನುರಾಗದಲಹುಹಿ ಯೆಂದನು ಪಾರ್ಥನೂರ್ವಶಿಗೆ (ಕುಮ್ಮಾರ. ೬-೦೯). [ಸಂ.]

**ಮನೋನೈರ್ಮಲ್ಯ** (ನಾ). ಮಾನಸಿಕ ಸ್ವಚ್ಛತೆ : ಚಿತ್ತಶುದ್ಧಿ : ಶಿವನು ಸದ್ಭಕ್ತನಿಗೆ ನೀಡಲು ಸದವಕಾಶವನ್ನು ಕಾಯುತ್ತಿರುವನು. . . ಮನೋ ನೈರ್ಮಲ್ಯ, ಪಾಪಭೀರುತ್ವಗಳೇ ಈ ಅವಕಾಶಗಳು (ಕಕ್ಕ. ೬೬). [ಸಂ.]

**ಮನೋನ್ಮನಿ** (ನಾ). ೧. ಪಾರ್ವತಿ : ಪ್ರಮಥಿನೀ ಮನೋನ್ಮನೀ ನೆರೆ ರಾಜಿಪಂಗುಷ್ಠ ಮಾತ್ರ ಭುವನೇ (ಪಾಕ್ಕಪು. ೬-೪-೦೬); ಮಹೇಶ್ವರಿ ಮನೋನ್ಮನಿ ಜಗನ್ಮಾತೆ (ಶಬ್ದ. ೦-೬-೩). ೨. ಶಕ್ತಿಯರಲ್ಲಿ ಒಬ್ಬಳು: ಅಂಬಿಕೆ ಗಣಾನಿ ಈಶ್ವರಿ ಮನೋನ್ಮನಿ ಎಂಬ ಚತುರ್ದಳ ಶಕ್ತಿಯರಿರ್ಪರು (ಅಟಂತೇ. ೨೦೦-೯೮). ೩. [ಯೋಗ] ಅವಸ್ಥಾತ್ರಯಗಳಲ್ಲಿ ಒಂದು : ಉನ್ಮನಿ ಮನೋನ್ಮನಿ ಸಹಜಾವ್ಯವಸ್ಥಾತ್ರಯಂಗಳಂ (ಏಕೋ. ೦೩೪). [ಸಂ. ಮನೋನ್ಮನೀ]

**ಮನೋಬಲ** (ನಾ). ಮನಸ್ಸಿನ ಶಕ್ತಿ: ಆತ್ಮಬಲ : ತನ್ನ ಚಾತುರ್ವರ್ಣಂತ ಬಲಮುಟಿದೊಡಂ ಮನೋಬಲಮುಟಿಯದೆ (ಶಾಂತಿಪು. ೯-೩೨ ವ). [ಸಂ.]

**ಮನೋಭಂಗ** (ನಾ). ಮನಸ್ಸಿನ ಆಸೆಯ ನಾಶ : ನಿರಾಶೆ : ಸೇನಾ ಭಂಗದುದಂ ಮನೋಭಂಗಮುಮಪ್ಪಂತು ಪುಸಿವಾರ್ತೆಯಂ ಪೇಳ್ದಂ (ಸುಕುಮಾ. ೬-೮ ವ). [ಸಂ.]

**ಮನೋಭವ** (ಗು). ೧. ಅಂತರಂಗದಲ್ಲಿ ಉಂಟಾಗುವ ; ಮನಸ್ಸಿನಲ್ಲಿ ಹುಟ್ಟುವ. (ನಾ). ೨. ಕಾಮ ; ಮನ್ಮಥ : "ಪ್ರದ್ಯುಮ್ನ . . . ಮನೋಭವ—ಈ ೨೦ ಕಾಮ(ದೇವ)ನ ಹೆಸರ್" (ಶಬ್ದಮ. ೨-೩೩) : ದಿವಿಜನೋ ಫಣಿನಾಯಕನೋ ಮನೋಭವನಿವಂ (ಕಬಿರಾ. ೧-೧೪೦); ಮನೋಭವನೊಡಗೆಲಸ ಬಲುಹಾಯ್ತು (ಕುಮ್ಮಾ. ೨-೮೨). [ಸಂ.]

**ಮನೋಭವಿತ್ವ** (ನಾ). [ಶೈವ] ಒಂದು ಬಗೆಯ ಕ್ರಿಯಾಶಕ್ತಿ: ಅತಿಶಯ ವಾದ ಶೀಘ್ರತೆಯನ್ನುಂಟುಮಾಡುವ ಶಕ್ತಿ : ಮನೋಭವಿತ್ವ, ಕಾಮ ರೂಪಿತ್ವ ಮತ್ತು ವಿಕ್ರಮಧರ್ಮಿತ್ವ ಎಂಬಿವೇ ಈ ಮೂರುವಿಧ. ಅತಿಶಯವಾದ ಶೀಘ್ರತೆಯನ್ನುಂಟುಮಾಡುವ ಶಕ್ತಿಯು ಮನೋಭವಿತ್ವ (ಪಾಶು. ೬೨೬). [ಸಂ.]

**ಮನೋಭಾವ** (ನಾ). ಅಂತರಂಗದ ಭಾವನೆ : ಆಲೋಚನೆ : ನೊಳಂ ಬರ ಈ ಸ್ವತಂತ್ರಮನೋಭಾವವು ಅವರು ಪೋಷಿಸಿದ ಸಾಂಸ್ಕೃತಿಕ, ಧಾರ್ಮಿಕಜೀವನಕ್ಷೇತ್ರವಲ್ಲಿ ಎದ್ದುಕಾಣುತ್ತದೆ (ನೊಳಂಬ. ೬೪). [ಸಂ.]

**ಮನೋಭಿಲಷಿತ** (ಗು). ೧. ಬಯಸಿದ : ಇಚ್ಛಿಸಿದ : ಮಹಾಬಲ ಖಚರೇಂದ್ರಂ . . . ಮನೋಭಿಲಷಿತವಿಷಯಸುಖಾನುಭವನಿರತನುಮಾಗಿ (ಆದಿಪು. ೨-೨೩ ವ). (ನಾ). ೨. ಅಪೇಕ್ಷೆ ; ಬಯಕೆ : ಆತನ ಪುಟ್ಟಿದಿಂ ಬಟಿಯಂ ಕಾಮಧೇನು ಮನೋಭಿಲಷಿತಮಪ್ಪುದಂ ಕುಡುವುದು (ಶಾಪುಂತ. ೩೯). [ಸಂ.]

**ಮನೋಭಿಲಾಷೆ** (ನಾ). ಅಪೇಕ್ಷೆ ; ಬಯಕೆ : ನಾನು ಯಾವಾಗಲಾದರೂ ನಿನ್ನ ಮನೋಭಿಲಾಷೆಯನ್ನು ಉಪೇಕ್ಷಿಸಿದ್ದೇನೆಯೆ ? (ಶಾಂತಲಾ. ೨೯೬). [ಸಂ. ಮನೋಭಿಲಾಷ ]

**ಮನೋಭಿವಾಂಛಿತ** (ನಾ). = ಮನೋಭಿಲಷಿತ ೨ : ಹರನಲ್ಲಿಗೆ ಬರಲಿ ಕರುಣಿಸಲಿ ನಿನ್ನ ಮನೋಭಿವಾಂಛಿತವ (ಕುಮ್ಮಾರ. ೪-೪೬). [ಸಂ.]

**ಮನೋಮುಕ್ತ** (ನಾ). ಮನಸ್ಸಿನ ಕೋಟಲೆಗಳಿಂದ ಬಿಡುಗಡೆ ಹೊಂದಿದವನು : ಅಜ್ಞಾನ ಅಂತರಂಗದಲ್ಲಿ ಭರಿತವಾಗಿಪ್ಪುದಾಗಿ ಮನೋ ಮುಕ್ತನು ನೀನು ನೋಡಯ್ಯ (ಅವತಂ. ೨೩೦-೦೦೯೬). [ಸಂ.]

**ಮನೋಮುಕ್ತಿ** (ನಾ). ಮನಸ್ಸಿನ ಕೋಟಲೆಗಳಿಂದ ದೂರವಾಗುವುದು: ಕಲ್ಪಿತಗುಣ ನಾಸ್ತಿಯಾಯಿತ್ತೆ ಬಸವಾ ಮನೋಮುಕ್ತಿಯಾಯಿತ್ತೆ [ಶಾಪಾಂ. ಮುಕ್ತವಾಯಿತ್ತೇ] ಸಂಗಯ್ಯನ ಗುರುಬಸವಾ (ನೀಲಮ. ೨೯-೦೦). [ಸಂ.]

**ಮನೋಮುದ** (ನಾ). ಮನಸ್ಸಿನ ಸಂತೋಷ : ಸಾಹಸಭೀಮಂಗೆ ಮನೋಮುದಂಬೆರಸು ಕೃಷ್ಣಂ ಕಟ್ಟಿದಂ ಪಟ್ಟಮಂ (ಗದಾಯು. ೦೦-೨೨). [ಸಂ.]

**ಮನೋಮೂರ್ತಿ** (ನಾ). ಮನಸ್ಸಿನಲ್ಲಿ ನಿಂತ ಆಕಾರ : ಮನವನಿತ್ತು ನಿಮ್ಮ ಕಂಡಿಸಿಸೆಂದಡೆ ಮನೋಮೂರ್ತಿ ನೀನು (ಮೋಳಿಗೆ. ೨೮೩-೩೨). [ಸಂ.]

**ಮನೋಯೋಗ** (ನಾ). [ಜೈನ] ಯೋಗತ್ರಯಗಳಲ್ಲಿ ಒಂದು : ಭಾವನೆಯ ಉತ್ಪತ್ತಿಗಾಗಿ ಯತ್ನಿಸುವುದು : ಯೋಗತ್ರಯಗಳು ಆತ್ಮನಲ್ಲಿ ಸ್ಪಂದನವನ್ನು ಉಂಟುಮಾಡುವುವು. ಭಾವನೆಯ ಉತ್ಪತ್ತಿಗಾಗಿ ಯಾವ ಪ್ರಯತ್ನ ನಡೆಯುವುದೋ ಅದೇ ಮನೋಯೋಗವು (ಜೈನಧ. ೩೮೮). [ಸಂ.]

**ಮನೋರಂಜನ** (ನಾ). ಮನಸ್ಸನ್ನು ರಂಜಿಸುವುದು.— ವಿನೋದ ಪಡಿಸುವುದು : ಲೋಕದಲ್ಲಿರುವ ಸಮಸ್ತಪ್ರಜೆಗಳ ಮನೋರಂಜನವು ಮಾಡುವುದು (ಕಗೂ. ೦೦೨ ಉತ್ತರರಾಮಚರಿತ್ರಕಥೆ). [ ಸಂ. ]

**ಮನೋರಂಜನಿಹೂಬಳ್ಳಿ** (ನಾ). ಒಂದು ಬಗೆಯ ಹೂವಿನ ಬಳ್ಳಿ : ಮನೋರಂಜನಿಹೂಬಳ್ಳಿ, ಕಂದಾಳಸಂಪಿಗೆ (ವೃಕ್ಷಶಿ. ೪-೦೩೪).
[ ಮನೋರಂಜನಿ + ಹೂ ( < ಪೂ ) + ಬಳ್ಳಿ ]

**ಮನೋರಂಜನೆ** (ನಾ). = ಮನೋರಂಜನ : ಜನರು ಅವನ ಕಥೆಯ ಮನೋರಂಜನೆ ಮಾಡಿಕೊಂಡ ಮೇಲೆ ಮಾದಲಿಸುತ್ತಿದ್ದರು (ಕಂಬಪು. ೩೬). 'ಮನರಂಜನೆ' ಪಠಾ. [ ಸಂ. ಮನೋರಂಜನ ]

**ಮನೋರಥ** (ನಾ). ೧. ಮನಸ್ಸಿನ ಬಯಕೆ, – ಅಪೇಕ್ಷೆ : ದೊರೆವಡೆ ದಿರ್ಪದಿರ್ಪರ ಮನೋರಥಮಂಗಳಂ (ಶಾಂತಿಪು. ೦-೬೯); ಇಂತು ರಮೆಯ

ಮನೋರಥಂಗಳ್ ಸಂತಸಮನೀವುತ್ತ ಲಕ್ಷ್ಮೀಕಾಂತನೆಸೆದಿರೆ (ಶಾಂತಿ. ೧೦-೩೬) ; ತನ್ನ ಆ ಮನೋರಥ ಕೈಗೂಡಬಹುದೆಂದು ನಾಗಕ್ಕನ ಹೃದಯ ಹರ್ಷಿತವಾಯಿತು (ಮೆರು. ೬೧೮). ೨. ಬಯಕೆಯು ಈಡೇರಿದವನು: ಅಪೇಕ್ಷೆಯು ನೆರವೇರಿದವನು : ಸಫಲಮನೋರಥನಾಗಿ ಹಿಂದಿರುಗಿದ ಮಾಜದ್ರುಪಸನನ್ನು ಕಂಡು ವಿಶ್ವಪರಾದೇವಿಗೆ . . . ಸಂತೋಷವಾಯಿತು (ಬಿಕಂಪ. ೩೩). [ಸಂ.]

**ಮನೋರಥಮಹೀರುಹ** (ನಾ). ಇಷ್ಟಾರ್ಥವನ್ನು ಪೂರೈಸುವುದೆಂದೂ ಕೇಳಿದುದನ್ನು ನೀಡುವುದೆಂದೂ ನಂಬಲಾದ ವೃಕ್ಷ : ಕಲ್ಪವೃಕ್ಷ : ತೋಯಜನಾಭಂ . . . ವತ್ಸಕುಲಮಂ ಕಾದಂ ಕಾದು . . . ಮನೋರಥ ಮಹೀರುಹಂ ನಾಕಿಗಳಾ (ಜಗಬ. ೩-೬೬). [ಸಂ.]

**ಮನೋರಥಪಡೆ** (ಕ್ರಿ). ಬಯಸಿದುದನ್ನು ಪಡೆ ; ಇಷ್ಟಾರ್ಥವನ್ನು ಹೊಂದು : ರಥಾಂಗಾವಳಿ ಮನೋರಥಪಡೆದು ರವಿಯುದಯಾಚಲಕೆ ಬಂದ (ಸುಪ್ತಾ.ದ್ರೋ. ೬೨೨. ೧-೪೩ ಅಂತಪ್ಪ). [ಮನೋರಥ + ಪಡೆ₁]

**ಮನೋರಥಸಿದ್ಧಿ** (ನಾ). ಬಯಕೆಯು ಈಡೇರುವುದು ; ಅಪೇಕ್ಷೆಯು ಪೂರ್ಣಗೊಳ್ಳುವುದು : ಏಕೀಕರಣವಾದ, ಸಾಧನೆಯನ್ನು ಮಾಡಿ ಅವರಿಗೆ ಮನೋರಥಸಿದ್ಧಿಯುಂಟಾಯಿತು (ರೂಪ). [ಸಂ.]

**ಮನೋರಮ** (ಗು). ಸುಂದರವಾದ ; ಚೆಲುವಾದ. [ಸಂ.]

**ಮನೋರಮಣ** (ನಾ). ಮನಸ್ಸಿನ ಒಡೆಯ ; ಪ್ರಿಯಕರ ; ಮನದನ್ನ: ಹೂಂಕೃತಪ್ರಣವಮೊಪ್ಪೆ ಶರೀರಮನೊಕ್ಕು ತನ್ಮನೋರಮಣನ ಹೃನ್ನಿಧಾನ ಮನುಪಾರ್ಜಿಪ ಯೋಗಿನಿಯಂತಿರೊಪ್ಪಿದಳ್ (ಕಾವ್ಯಸಾ. ೬೬೩). [ಸಂ.]

**ಮನೋರಮಮುದ್ರೆ** (ನಾ). [ಶೈವ] ಜಪತಪ ಅನುಷ್ಠಾನದ ಸಂದರ್ಭ ದಲ್ಲಿ ಆಚರಿಸುವ ಮುದ್ರೆಗಳಲ್ಲಿ ಒಂದು : ಅಸ್ತ್ರಮುದ್ರೆ . . . ಮನೋರಮಮುದ್ರೆ . . . ಸಂಹಾರಮುದ್ರೆಯೆಂಬ ಸಕಲಮುದ್ರಾ ಲಕ್ಷಣವನರಿದು (ಶಿವ. ೯೩). [ಸಂ. ಮನೋರಮಮುದ್ರಾ]

**ಮನೋರಮೆ** (ನಾ). ಮನಸ್ಸನ್ನು ರಮಿಸುವವಳು ; ಮನದನ್ನೆ : ಪ್ರಿಯೆ : ಪಕ್ಷಿಗಾನದಿಂದೆಸ್ಟರುತೆ ನಿದ್ರಿತ ಮನೋರಮೆಯ ತೋಳ್ತೆಕ್ಕೆಸರೆ ಯಿಂದೆ ಬಿಡಿಸಿಕೊಂಡು (ತತ್ತ್ವಗ. ೩೦-೯೩೩೩).

[ಸಂ. ಮನೋರಮಾ]

**ಮನೋರುಜೆ** (ನಾ). ಮಾನಸಿಕ ಕಾಯಿಲೆ : ಚಿಂತೆ : ಸದ್ಯ ಚಿತ್ತರಿಪ ಶಿಶಿರಕ್ರಿಯೆಯಂ ತನ್ನ ಮನೋರುಜೆಗದಕ್ರಿಯೆಯಾಗೆ ಕಂಡು (ಚಂದ್ರ.ಕ. ೮-೯೯ ವ). [ಸಂ. ಮನೋರುಜಾ]

**ಮನೋರೋಗ** (ನಾ). = ಮನೋರುಜೆ : ತಾಯಿಗಾದ ಮನೋರೋಗಕ್ಕೆ ಕಾರಣ ಯಾರೆಂದು ಅಣ್ಣತಂಗಿಯರಿಗೆ ಗೊತ್ತು (ಕೆವರು. ೨೩) ; ಮನೋರೋಗ _ ಅದೊಂದೆ ; ಹತ್ತುವರ್ಷದಿಂದ . . . ಬೆಂದುಹೋಗಿದೆ ಅವರ ದೇಹ — ಜೀವ ವಿರಹ (ವೀರಮೋ. ೯೯). [ಸಂ.]

**ಮನೋವಲ್ಲಭ** (ನಾ). ಪ್ರಿಯತಮ : ಪ್ರಾಣಕಾಂತ : ಮನೋವಲ್ಲಭ ನಲ್ಲಿಗೆ ವಂದು ತವರ್ಧಾಸನಮನಲಂಕರಿಸಿ (ಆದಿಪು. ೬-೨೬ ವ) ; ಬಂದು ಮನೋವಲ್ಲಭನ ಸಿಂಹಾಸನಾರ್ಧಕ್ಕಲಂಕಾರಮಾಗಿರ್ದ (ಧರ್ಮಾ. ೩-೦೨೨ ವ).

[ಸಂ.]

**ಮನೋವಲ್ಲಭೆ** (ನಾ). ಪ್ರಿಯತಮೆ : ಪ್ರಿಯೆ : ನೀನುಂ ಕುಬೇರಂಗೆ ರತಿಯೆಂಬ ಮನೋವಲ್ಲಭೆಯಾದ್ದೈ (ಶಾಂತಿಪು. ೯-೯೬ ವ) ; ಗೋವಿಂದನ ನೋಟದಲ್ಲಿ . . . ತನ್ನ ಮನೋವಲ್ಲಭೆಯ, ಸಕಲಸೌಂದರ್ಯವನ್ನು ಹೀರಲೇ ಎಂಬ ಅವರ್ಣನೀಯಕಾತರತೆಯಿತ್ತು (ಚಿಣ. ೯೧).

[ಸಂ. ಮನೋವಲ್ಲಭಾ]

**ಮನೋವಿಕಾರ** (ನಾ). ಚಿತ್ತವಿಕಲ್ಪ ; ಬುದ್ಧಿಭ್ರಮಣೆ : ಹುಚ್ಚು: ಹೊಲಬುಗೆಟ್ಟು ಮನೋವಿಕಾರದ ಮಾತುಗಳನಾಡಿಕಾಡಿಸುವದಾದೆ (ಬಸ. ೯೦-೩೩); ಮರುದಿನ ಅವರಿಗೆ ಜ್ವರ ಸ್ವಲ್ಪ ಇಳಿದಿದ್ದರೂ ಮನೋವಿಕಾರ ವೇನೂ ಇಳಿದಂತೆ ತೋರುತ್ತಿರಲಿಲ್ಲ (ಅಂಬಾರ. ೮೩೩). [ಸಂ.]

**ಮನೋವಿಕಾಸ** (ನಾ). ಬುದ್ಧಿಶಕ್ತಿಯ ಅಭಿವೃದ್ಧಿ : ಕ್ರಮವಾದ ಬೌದ್ಧಿಕ ಮತ್ತು ದೈಹಿಕಶಿಕ್ಷಣಗಳಿಂದ ಮನುಷ್ಯನಿಗೆ ಮನೋವಿಕಾಸ . . . ಉಂಟಾಗುವಂತೆ (ಸಂಗೀತ. ೩). [ಸಂ.]

**ಮನೋವಿಜ್ಞಾನ** (ನಾ). = ಮನಶ್ಶಾಸ್ತ್ರ : ಲೇಖಕ ಮನೋವಿಜ್ಞಾನದಲ್ಲಿ ತಾನು ಒಂದು ಅದ್ಭುತಸಿದ್ಧಾಂತವನ್ನು ಸ್ಥಾಪನೆ ಮಾಡಿದ ಬಗೆಯನ್ನೇ ಉದಾಹರಣೆಯಾಗಿ ತೆಗೆದುಕೊಂಡು. ತನ್ನ ಮನೋವಿಶ್ಲೇಷಣೆ ಮಾಡಿದ್ದಾನೆ (ಚಿಣ. ೦೦). [ಸಂ.]

**ಮನೋವಿರತಿ** (ನಾ). ಅಂತರಂಗದ ವೈರಾಗ್ಯ ; ನಿರಾಸಕ್ತಿ : ಸ್ಥಿತಿಸಂತ ತತ್ವದೊಳ್ ಸಂತಿ ಜಿನೇಂದ್ರಪದಾಬ್ಜದೊಳಂಕ್ಕೆ ತದ್ಗುಣಸ್ತುತಿಕಥದೊಳ್ ಮನೋವಿರತಿ ಭೋಗಕದಂಬದೊಳ್ . . . ಸಮಸಂದಿರೆ (ಶಾಂತೀಶ. ೯-೩೦).

[ಸಂ.]

**ಮನೋವಿಶ್ಲೇಷಣೆ** (ನಾ). ಮನಸ್ಸಿನ ಆಲೋಚನೆಗಳನ್ನು ಒಳ ಹೊಕ್ಕು ನೋಡುವುದು ; ಅಂತರಂಗದ ಭಾವನೆಗಳನ್ನು ವಿಶ್ಲೇಷಿಸಿ ನೋಡುವುದು : ಲೇಖಕ ಮನೋವಿಜ್ಞಾನದಲ್ಲಿ ತಾನು ಒಂದು ಅದ್ಭುತ ಸಿದ್ಧಾಂತವನ್ನು ಸ್ಥಾಪನೆ ಮಾಡಿದ ಬಗೆಯನ್ನೇ ಉದಾಹರಣೆಯಾಗಿ ತೆಗೆದು ಕೊಂಡು, ತನ್ನ ಮನೋವಿಶ್ಲೇಷಣೆ ಮಾಡಿದ್ದಾನೆ (ಚಿಣ. ೮೦).

[ಸಂ. ಮನೋವಿಶ್ಲೇಷಣ]

**ಮನೋವೃತ್ತಿ** (ನಾ). = ಮನೋಧರ್ಮ : ವಶ್ಯವೇಶ್ಯಾಚಾರ ಮನೋವೃತ್ತಿಯಪ್ಪ ಕಾಮತಂತ್ರಮುಮಂ (ಶಾಂತಿಪು. ೦೦-೯೦); ಬುದ್ಧಿಶಕ್ತಿ ಯನ್ನು ಮೆಟ್ಟಿ ನಿಲ್ಲುವ ಬೇರೊಂದು ಬಗೆಯ ಮನೋವೃತ್ತಿ ಬೇರಾಗ ಬಹುದು (ಮೋಹಿ. ೯೨). [ಸಂ.]

**ಮನೋವೇಗ** (ನಾ). ೧. ಮನಸ್ಸು ಚಲಿಸುವ ವೇಗ: ಚಿತ್ತವು ಕಾರ್ಯಮುಖವಾಗುವ ಶೀಘ್ರತೆ. ೨. [ಯೋಗ] ರಾಜಸಯೋಗದ ಹತ್ತುಬಗೆಯ ಸಿದ್ಧಿಗಳಲ್ಲಿ ಒಂದು : ಕೇಳನೂರ್ಮಿಯುಂ ಮತ್ತೆಯುಂ ಕೇಳು ದೂರಶ್ರವಣಾಯರಡದು . . . ಮನೋವೇಗ ಕೇಳು ನಾಲ್ಕದು ಕಾಮರೂಪವು ಕೇಳು ತಾನೈದೆಲೆ ಗುಹನೆ ನೀ ಕೇಳು (ಪ್ರಭು. ೨೦-೩೩). [ಸಂ.]

**ಮನೋವೇದನೆ** (ನಾ). ಮನಸ್ಸಿನ ನೋವು ; ಚಿಂತೆ : ನನ್ನ ವ್ಯಾಧಿಗೂ ಮರಣಕ್ಕೂ ಕಾರಣ ನನ್ನ ಮನೋವೇದನೆಯೇ (ಕೃಪಾಕ. ೦೯).

[ಸಂ. ಮನೋವೇದನಾ]

**ಮನೋವೇದ್ಯ** (ನಾ). ಮನಸ್ಸಿಗೆ ತಿಳಿಯುವಂಥದು : ಈ ಎಲ್ಲ ಅನುಭವವೂ ಮನೋಜ್ಞವಾದುದು ಎಂದರೆ ಮನೋವೇದ್ಯವಾದುದು (ಸೌಂದರ. ೯೬). [ಸಂ.]

**ಮನೋವೇಧಕ** (ಗು). ೧. ಮನಸ್ಸಿಗೆ ನೋವುಂಟುಮಾಡುವ : ಮನ ಮುಟ್ಟುವ. (ನಾ). ೨. ಮನಸ್ಸಿಗೆ ನಾಟುವಂಥದು : ಅರ್ಜುನನ ವಿವೇಕವನ್ನು ಚಿತ್ರಾಂಗದೆಗೆ ಹೋಲಿಸಿದ ಗೀತ ಮನೋವೇಧಕವಾಗಿ ಕಾಣಿಸಿತು (ಸ್ವಕ್ಷಪು. ೩೩೬). [ಸಂ.]

**ಮನೋವೈಜ್ಞಾನಿಕ** (ಗು). ಮನೋವಿಜ್ಞಾನಕ್ಕೆ ಸಂಬಂಧಿಸಿದ ; ಮನಶ್ಶಾಸ್ತ್ರಕ್ಕೆ ಸೇರಿದ : ಅದು ಕಾವ್ಯಾತ್ಮಕಪ್ರತಿಭೆಯ ಮನೋ ವೈಜ್ಞಾನಿಕ ಘಟನೆಯನ್ನುಂಟುಮಾಡುವ ದೃಷ್ಟಿಯನ್ನು ಚೆನ್ನಾಗಿ ಗ್ರಹಿಸುವುದು (ಕೃಷಿಂಪ. ೦೩೦). [ಸಂ].

**ಮನೋವೈಶಾಲ್ಯ** (ನಾ). ಮನಸ್ಸಿನ ವಿಶಾಲತೆ. _ ದೊಡ್ಡತನ : ಅಂಥ ಮನೋವೈಶಾಲ್ಯ ಇಂದು ಜನತೆಗೆ ಅನಿವಾರ್ಯವಾಗಿದೆ (ಶಿಕ್ಷಣ. ೨೨).

[ಸಂ.]

**ಮನೋವ್ಯಥೆ** (ನಾ). ಮನಸ್ಸಿಗೆ ಉಂಟಾಗುವ ಅತೀವದುಃಖ,–ವ್ಯಸನ : ಅಂತೆ ಸಂತೈಸುವಳು ಮನೋವ್ಯಥೆಯೆಲ್ಲಮಂ ಧೈರ್ಯವಾಕ್ಯಂಗಳಿಂ (ಶ್ರೀರಾಪಟ. ೨೬೩-೩೦೨). [ಸಂ. ಮನೋವ್ಯಥಾ]

**ಮನೋವ್ಯಾಧಿ** (ನಾ). = ಮನೋರುಜೆ : ಅಲ್ಲೋಲಕಲ್ಲೋಲವಾದ ಮನಸ್ಸಿನ ನೆಮ್ಮದಿ ತಂದೀಯುವ ಗುಣದಿಂದ ಸರ್ಪಗಂಧಿ ಮನೋವ್ಯಾಧಿಗಳಿಂದ ನರಳುವವರನ್ನು ಸೂರೆಗೊಂಡಿತು (ಹಸುಹೂ. ೦೬೭). [ಸಂ.]

**ಮನೋವ್ಯಾಪಾರ** (ನಾ). ಮನಸ್ಸಿನಲ್ಲಿ ನಡೆಯುವ ವ್ಯವಹಾರ.–ಚಟುವಟಿಕೆ : ಕಾವಿಂಗಳ ಮನೋವ್ಯಾಪಾರವು ಚೇಷ್ಟೆಗೆ ಪ್ರತಿರೂಪವಾದುದು (ಕಾಕುಂತ. ೦೬-೩). [ಸಂ.]

**ಮನೋಹರ** (ಗು). ೧. ಸೊಗಸಾದ ; ರಮಣೀಯವಾದ; ಚೇತೋಹಾರಿಯಾದ : ಧರೆ ರಂಗಂ ಗಗನಂ ಮನೋಹರತರಂ ನಾಟ್ಯಾಲಯಂ ನರ್ತಕಂ ಸುರರಾಜಂ (ಆದಿಪು. ೭-೦೨೬); ಮನ್ನಣೆಕಾಜಿ ಮನೋಹರರೂಪ . . . ಸನ್ನುತ ಮತಿದೋಜಿ (ಶರತ. ೪೨-೦). (ನಾ). ೨. ಸುಂದರವಾದುದು ; ಸೊಗಸಾದುದು : ಕಂಡರೆ ಮನೋಹರವಪ್ಪಾ ಕಾಣದಿದ್ದರೆ ಅವಸ್ಥೆ ನೋಡಯ್ಯ (ಬಸವ. ೩೭೦). ೩. ಚೆಲುವ : ಸುಂದರ : ಮನೋಜಹರ ಮನೋಹರನೆಂಬ . . . ಕಡುಸಲುಗೆಯ ಬಿರುದಿನ ಬಹುವಿಧದ ಕಹಳಾರವಂ ದೆಸೆದೆಸೆಗೆ ಪರಿಯೆ (ಸಂಶರ. ೬-೨೨) ; ಮಂದರೋದ್ಧರ ಬಂದ ಮಾಮನೋಹರ ಬಂದ ವೃಂದಾವನಪತಿ ಗೋವಿಂದ ಬಂದ (ಪುರಂದ. ೦-೯೬-೨). ೪. ಕಡಲೆಹಿಟ್ಟು, ಬೆಲ್ಲಗಳಿಂದ ತಯಾರಿಸುವ ಒಂದು ಬಗೆಯ ತಿನಿಸು; ಬೂಂದಿ : ಪಾಯಸಕ್ಕೆ ಮನೋಹರದ ಕಾಳು ಹಾಕಿದ್ದರು (ಕಜಾ). ೬. ಕುಂದವೃಕ್ಷ. ೭. ಸುವರ್ಣ ; ಚಿನ್ನ.

**ಮನೋಹರದುಂಡೆ** = ಬೂಂದಿಯ ಉಂಡೆ ; ಲಾಡು : ಕರಜಿಗೆ ಕಾಯುತಿರಸ ಮನೋಹರದುಂಡೆ ತಜಗು ಚಕ್ಕುಲಿ (ಜ್ಞಾಪತ. ೨-೦೬೭).
[ಸಂ.]

**ಮನೋಹರತೆ** (ನಾ). ಚೆಲುವು ; ಸೌಂದರ್ಯ : ಮೊರೆದು ನೊರೆಗರೆದು ಮಿರುಮಿರುಗಿ ಶಿಲೆಯಿಂ ಶಿಲೆಗೆ ಚಿಮ್ಮಿ ನೆಗೆಯುವ ತೊರೆಯ ಲೀಲೆಯ ಮನೋಹರತೆ . . . ನೆಯ್ಯುಲಿ ಜಗನ್ಮೋಹನಜಾಲಮಂ (ತಿಜ್ಞಾಂಗ. ೨೯-೯೦೪). [ಸಂ. ಮನೋಹರತಾ]

**ಮನೋಹರಿ** (ನಾ). ೧. ಚೆಲುವೆ ; ಸುಂದರಿ : ನೆಲಸುಗೆ ನಿನ್ನ ವಕ್ಷದೊಳೆ . . . ಮನೋಹರಿ ರಾಜ್ಯಲಕ್ಷ್ಮಿ (ಅಜಿತ. ೦೪-೩೭೦); ಇದೆ ನವಪದ್ಮರಾಗಜಷಕಂ ನಿಜಹಸ್ತತಳಾಗ್ರದೊಳ್ ಮನೋಹರಿ ತಳಿರ್ದೊಂಗಲಂ ತಳೆದ ಕೋಮಳವಲ್ಲರಿಯಂತೆ (ಶಗಬ. ೦೬-೦೦೩). ೨. ಹೆಂಡತಿ : ಪತ್ನಿ : ಸಿಂಧುರೇಂದ್ರಮಂ . . . ನರೇಂದ್ರಚಂದ್ರಂ ನಿಜಮನೋಹರಿಯೊಡನಾರೋಹಿಸಿ ರಾಜವೀಥಿಯೊಳ್ಪರ್ಗಗಳ್ (ರಾಜಶೇ. ೦೦-೦೦ ಪ).
[ಸಂ. ಮನೋಹರೀ]

**ಮನೋಹಾರಿ** (ನಾ). ಮನಸೆಳೆಯುವಂಥದು ; ಚಿತ್ತಾಕರ್ಷಕವಾದುದು : ಕ್ಷೀರಾಬ್ಧಿಯ ನೀರಲ್ಲದೆ ಧೀರನ ಮಜ್ಜನಕೆ ಪೇಱವು ನೀರ್ ತಗಲೆಂದಾ ವಾರಾಶಿವರಂ ಸುರಜನದಾರಿ ಮನೋಹಾರಿ ನೀಳ್ದುವೆರಡುಂ ಕೆಲದೊಳ್ (ಅಜಿತ. ೭-೬೨). [ಸಂ. ಮನೋಹಾರಿನ್]

**ಮನ್ನ** (ನಾ). ಮೂಕ : ಮನ್ನಗೆ ತುಟಿ ಸನ್ನೆ ಕಿವ್ಡಗೆ ಕೈ ಸನ್ನೆ ಹೆಡ್ಡಗೆ ಬಡಿಗೆಯ ಸನ್ನೆ (ಇಂಗಾಪ. ೯೦-೩೬). [ ? ]

**ಮನ್ನಣೆ** (ನಾ). ೧. ಗೌರವ ; ಮರ್ಯಾದೆ : ಮೆಲ್ಲನೆ ಬಿಂದಪ್ಪ ಗೌರವದ ಮೈಮೆಯು ಮನ್ನಣೆಯೋಳಿಗಳ್ ಕರಂ ಮನಮನಲರ್ಚೆ (ಸಂಶಬಾ. ೦೪-೯೩); ಇಲ್ಲಿಯೇ ಮನ್ನಣೆಗಾಸೆಪಟ್ಟು ಮುಂದಣ ಫಲಮಂ ಕಿಡಿಸದಿರ್ (ಜೀವಸಂ. ೩೬-೨); ಮನ್ನಣೆಗೆ ಮನವಿಕ್ಕಿದೊಡೆ ಸಂಪನ್ನಸಚ್ಯುತನಾಣೆ ಕೇಳೆನೆ (ಸಂಥಶ. ೦೩-೩೯). ೨. ರಿಯಾಯಿತಿ ; ಮಾನ್ಯ : ಆ ತೋಂಟಕೆ ಸುಂಕಾ ಮನ್ನಾಯ ಸಮಸ್ತವುಂ ಮನ್ನಣೆ (ಶಾಇಇ. XI-i, ೬೯-೪೦; 1033).
[?. / ಪ್ರಾ. ಮಾಣಣಾ. / ಸಂ. ಮಾನನ. / ತೆಲು. ಮನ್ನನ]

**ಮನ್ನಣೆಕಾಜಿ** (ನಾ). ಮನ್ನಣೆಗೆ ಪಾತ್ರನಾದವನು ; ಗೌರವಾನ್ವಿತ ವ್ಯಕ್ತಿ : ಮನ್ನಣೆಕಾಜಿ ಮನೋಹರರೂಪ ಲೋಕೋನ್ನತ ಕೋಮಲ ಚರಿತ ಸನ್ನುತ ಮತಿದೋಜಿ (ಶರತ. ೪೨-೦). [ಮನ್ನಣೆ + — ಕಾಜಿ]

**ಮನ್ನಣೆಗೆಡು** (ಕ್ರಿ). ಗೌರವವು ಹಾಳಾಗು : ಮರ್ಯಾದೆ ಹೋಗು : ಮನ್ನಣೆಗೆಟ್ಟು ಮಾನಾಪಹರಣವಾಗಿ (ಕೃಶಂತ. ೨-೩೦).
[ಮನ್ನಣೆ + ಕೆಡು[1]]

**ಮನ್ನಣೆಗೈ** (ಕ್ರಿ). ಗೌರವಿಸು ; ಮಾನ್ಯಮಾಡು : ಬೀರವ ನುಡಿದ ಮೂವರ ವಾಕ್ಯವ ಕೇಳಿ ಮಾರ ಮನ್ನಣೆಗೈವನವರ (ಮೋಹತ. ೬-೨೪); ಪರಿಪರಿ ಮರಿಯಾದೆಯಿಂದ ಮನ್ನಣೆಗೈಯೆ ಸರಿಮಂಡಲಿಕರಿಗೆಲ್ಲ (ಕಂಶಾ. ೩-೩೪); ಶರನಿಧಿಯು ತುಹಿನಾದ್ರಿಜಾತಪ್ರಿಯಬಾಂಧವನೆನುತ್ತ ಮನ್ನಣೆಗೈವನು (ವಂಕಾರಾ. ೩-೦-೯೬). [ಮನ್ನಣೆ + ಗೈ (< ಕೆಯ್[1])]

**ಮನ್ನಣೆಗೊಳ್** (ಕ್ರಿ). ಸನ್ಮಾನವನ್ನು ಹೊಂದು : ಗೌರವವನ್ನು ಪಡೆ : ಮನ್ನಣೆಯ ಮಂಡಳಿಕರು . . . ಮನ್ನಣೆಗೊಂಬ ಭಟರು ಮೊದಲಾದವರು ತನ್ನ ನೇಮದೊಳೊವಗಿದರು (ಅಂಜತ. ೭-೦೨೦).
[ ಮನ್ನಣೆ + ಕೊಳ್[1] ]

**ಮನ್ನಣೆಯಾಳ್** (ನಾ). ರಾಜನ ಸಭಾಸದರಲ್ಲಿ ಒಂದು ಪದವಿಯುಳ್ಳವನು ; ಮಾನ್ಯವ್ಯಕ್ತಿ : ರಾಯರಾವುತರ ಗಜಾರೋಹಕರ ಮಾವಂತರ ಮನ್ನಣೆಯಾಳ್ಗಳ ದಿಟ್ಟವಾರಿಯ ಧೀರರ ಪಾತಕರ ಗಣಿಕೆಯರ ಇಟ್ಟಣಿಸಿದ ಕಟ್ಟಣಕಾದಾಸ್ಥಾನದೊಳು (ವಿಶರ. ೬-೨೦). [ ಮನ್ನಣೆ + ಆಳ್[3] ]

**ಮನ್ನಣೆವಡೆ** (ಕ್ರಿ). ಗೌರವವನ್ನು ಪಡೆ ; ಮರ್ಯಾದೆಯನ್ನು ಹೊಂದು : ಮನ್ನಣೆವಡೆದ ಕೀರ್ತಿಖ್ಯಾತಿಯಂತೆ (ರವರ್ಣಪ್ಪು. ೩-೦೨೩); ಪೊನ್ನ ಪುತ್ಥಳಿಯಂತೆಸೆವ ಮನ್ನಣೆವಡೆದ ಪಟ್ಟದ ರಾಣಿ (ಹರಿ. ೧-೨೨).
[ ಮನ್ನಣೆ + ಪಡೆ[1] ]

**ಮನ್ನಣೆವೆಱು** (ಕ್ರಿ). = ಮನ್ನಣೆವಡೆ : ಮನ್ನಣೆವೆತ್ತ ಪ್ರೇಳದ ಕೆಳದಿಯರ್ (ಕಪ್ಪಣ. ೩೧೩) : ಮನ್ನಣೆವೆತ್ತ ಪನ್ನಿಬ್ಬರು ಮಹಾಮಾತ್ಯರೊಳಗಗ್ರೇಶ್ವರನೆನಲು ಪಿರಿಯ ಗದ್ದುಗೆಯಲ್ಲಿ ಬಳ್ಳಿರಿಸಿ (ಬಸವ. ೩-೬೩) : ಮನ್ನಣೆವೆತ್ತ ಸಾಧ್ವಿಯರ ಮಹಿಮೆಗಳ ಸನ್ನುತಿಸುವಡೆ ಪನ್ನಗವೆ (ಹರಿಬ. ೨-೦೦). [ ಮನ್ನಣೆ + ಪೆಱು[1]]

**ಮನ್ನಳಿ** 'ಮನ್ನಟಿ' ನೋ.

**ಮನ್ನಳಿಪಟ್ಟು** (ನಾ). ಕುಸ್ತಿಯಲ್ಲಿ ಒಂದು ಪಟ್ಟು: ಕುತ್ತಿಗೆಯ ಮೇಲೆ ಕೈಯನ್ನೂರಿ ಅಮುಕುವುದು : (ಪಟ್ಟೆಯುವನೆತ್ತಿ . . . ತೋಂಡಾಂಗುಟ್ಟೆಯ ಹೆಗ್ಗತ್ತಿಗೆ ದಕ್ಷಿಣಹಸ್ತವನ್ನೆತ್ತಿ ಬಿನ್ನಣದಿಂದವುಂಕಿ, ಹಠಾತ್ತಾಗಿ ಸ್ತಂಭಿತನಾಗಿ ದಿಂಡುಬೀಳುತ್ತಿದ್ದ ಆತನನ್ನು ಕಯ್ಯಿಡುಕಿ ಹಿಡಿದು, ಮೆಲ್ಲಗೆ ಬೆನ್ಗೆ ಮಲಗಿಸಿ, ಎದ್ದ) ಮನ್ನಳಿಪಟ್ಟು ಅದು (ಮಂತ್ರಿಕ. ೦೦೩-೨೨). [ ಮನ್ನಳಿ (< ಮನ್ನಟಿ) + ಪಟ್ಟು[2] ]

**ಮನ್ನಟಿ, ಮನ್ನಳಿ** (ನಾ). ಕೊರಲ ಹಿಂದಿನ ನರಗಳ ಗುಂಪು : ಕ್ಷಳಕ್ಕೆ— . . . ಅರ್ಗಳಂ — ಅಗುಟಿ, ಮನ್ಯಾಳಿ — ಮನ್ನಟಿ (ಶಮದ. ೨೦ ಪ್ರಯೋ). ಮನ್ನಳಿ : "ಮನ್ನಳಿ —ಮನ್ಯಾಳಿ (ಮನ್ಯಳಿ)" (ತನ್ನಕೋ. ೩೪); ಯತ್ವಕ್ಕೆ ನತ್ವಂ–ಕನ್ಯಕಾ—ಕನ್ನಿಕೆ; ಮನ್ಯಾಳಿ—ಮನ್ನಳಿ (ಶಮದ. ೨೬೬ ಪ್ರಯೋ). [ < ಸಂ. ಮನ್ಯಾಲೀ ]

**ಮನ್ನಾ** (ನಾ). ೧. ಅಡ್ಡಿ ; ಪ್ರತಿಬಂಧ. ೨. ವಿನಾಯಿತಿ ; ರದ್ದು : ಕಾಲೇಜಿನಲ್ಲಿ ಅವನಿಗೆ ಫೀ ಮನ್ನಾ ಆಗಿತ್ತು (ಕಜಾ). 'ಮನಾಯಿ' ಪರಾ.

ಮನ್ನಾಮಾಡು, ಮನ್ನಮಾಡು =೧. ರದ್ದುಮಾಡು ; ವಿನಾಯಿತಿ ಕೊಡು : ಆ ಚಿತ್ರಕ್ಕೆ ಮನರಂಜನೆಯ ತೆರಿಗೆಯನ್ನು ಮನ್ನಾ ಮಾಡಿದ್ದಾರೆ

(೬೨೨). ೨. ತಡೆಹಿಡಿ; ಪ್ರತಿಬಂಧಿಸು : ಸ್ಪರ್ಧೆಪರೀಕ್ಷೆಗಳನ್ನು ಮನ್ನಮಾಡುವುದಾಗಿ ತೀರ್ಮಾನಿಸಿದ್ದರಂತೆ (ಕಂಠ. ೨೬೦).

[ ← ಅರ. ಮನ್‌ಅ; ಹಿಂ. ಮರಾ. ಮನಾ ]

**ಮನ್ನಾರು** (ನಾ). ಒಡೆಯ, ಪ್ರಭು ಎಂಬರ್ಥದಲ್ಲಿ (ದೇವರನ್ನು ಕುರಿತು) ಮಾಡುವ ಸಂಬೋಧನೆ : ಮನ್ನಾರು ಕೃಷ್ಣಗೆ ಮಂಗಳ ಜಗವ ಮನ್ನಿಸಿದೊಡೆಯಗೆ ಮಂಗಳ (ಪುರಂದ. ೩-೦೩೯ ಪಲ್ಲವಿ); ಚೆಲುವ ವರದರಾಜ ಮನ್ನಾರು ನರಸಿಂಹ ಕೊಳಲ ಗೋಪಾಲರೊಪ್ಪಿದರು (ಕಂಸಾ. ೬-೯೦).

[<ಸಂ. ಮಾನ್ಯ. / ತಮಿ. ಮನ್ನನಾರ್, ಮನ್ನಾರ್; ತೆಲು. ಮನ್ನನಾರು, ಮನ್ನಾರು]

**ಮನ್ನಾರ್ಥ** (ನಾ). (?) : ಉರುವಿಗೆ ಗ್ರಾಮಸ್ಯ ಮನ್ನಾರ್ಥ [ಂ] ತಸ್ಮಿನ್ನೇವ ಗ್ರಾಮೇ ಪಞ್ಚಾಶನ್ನಿವರ್ತ್ತನ ಪರಿಮಾಣಞ್ಚ ಕ್ಷೇತ್ರಞ್ಚ ದತ್ತಂ (ಕಇ. II, ೩-೩೯; 693). [ ? ]

**ಮನ್ನಿಸು** (ಕ್ರಿ). ೧. ಗೌರವಿಸು ; ಮರ್ಯಾದೆಮಾಡು ; ಆದರಿಸು : ಏನುಂ ತೊದಳಿಲ್ಲದಿತ್ತು ಮನ್ನಿಸಿದಂ ಸನ್ಮಾನಪುರಸ್ಸರಂ (ಆದಿಪು. ೦೩-೦೨) ; ಆಳರಸೆಂಬ ಭೇದಮೆಮ್ಮಿರ್ಬರೊಳಂ ಪಲ್ಲಟಿಸಿತೆಂಬಿನಂ ಮನ್ನಿಸಿದಂ (ಕಾವ್ಯಾವ. ೬೦೩); ಅಸುರನ ಚರನೆಂದಪಮಾನಿಸುಗುಮೊ ಮೇಣ್ ಭಕ್ತನೆಂದು ಮನ್ನಿಸುಗುಮೊ . . . ಕೃಷ್ಣಂ (ಜಗಂ. ೩-೬೩). ೨. (ದುಃಖ, ಕೋಪ ಮೊದಲಾದುವನ್ನು) ಶಮನಗೊಳಿಸು ; ಸಮಾಧಾನಮಾಡು : ರಕ್ತಜಲದಿಂ ಕೋಪಾನಳನಂ ಮನ್ನಿಸದಿನ್ನುಂ ಗಳಗಳಿತ ಸಕೋಪನಿರ್ಪ ತೆಱದಿಂದಿರ್ದ್ದೆ (ಗದಾಯು. ೧-೩೬); ನಯೋಕ್ತಿಯಲಿ ಮುನಿ ಹರಸಿ ಸಂತಾನಾಭಿವೃದ್ಧಿಯ ಸಾರಸೌಖ್ಯತೆಯ ಅರಸನನು ಮನ್ನಿಸಿ . . . ಅಭಯವಿತ್ತನು ಋಷ್ಯಶೃಂಗಮುನಿ (ತೊರರಾ. ೧-೬-೦೭). ೩. ತಪ್ಪನ್ನು ಗಣಿಸದಿರು ; ಕ್ಷಮಿಸು : ಬಾಯ್ಗೆ ಬಂದನಿತುಮಂನವಾರಾರಿ ಬಯ್ಯೆ ಸೈರಿಸಿ ನೂಱೆಂಬನಿತುವರಂ ಮನ್ನಿಸಿ (ಕಂಕಥಾ. ೬-೬೩); ಕುಲದಿಂ ಕೆಟ್ಟವರನಣ್ಣ ನೀಂ ಮನ್ನಿಪುದೇ (ಧರ್ಮಾಮೃ. ೧-೦೦೩); ಆ ನೀಚನಾದ ರಾವಣನೇ ಆದರೂ ನಮಗೆ ಶರಣಾಗತನಾಗಿ ಬಂದಲ್ಲಿ ನಾವು ಮನ್ನಿಸಿ ರಕ್ಷಿಸುವುದೇ ಸಿದ್ಧ (ಕೀಕಿಂ. XIV, ೧೯). ೪. ಒಪ್ಪು ; ಲೆಕ್ಕಿಸು : ಅಂಗೀಕರಿಸು : ಅರಸಿ ನಾರಾಯಣವತ್ತ್ರಿಯ ಮಿಥ್ಯಾವೇಷಮಂ ಕಂಡು [ಮನ್ನಿಸದು]ದಾಸೀಜನಂಗೆಯ್ವ ಪ್ರ್ಭದುಂ (ಧರ್ಮಾಮೃ. ೪-೦೯೬); ಬಸಂತನ ಮಂತಣದ ಮಾತಂ ಸೊರ್ಕಾನೆ ಮಂತಣಿಯ ಮಾವಂತನ ಮಾತಂ ಮನ್ನಿಸುವಂತೆ ಮನ್ನಿಸಿ (ಕನ್ನ. ೦೬೦); ಕರೆದು ಮನ್ನಿಸಿ ಕೂಡಿದೊಡೀ ಕುವರನ ಸುರತದ ಸುಖಮಿನ್ನೆಂತೋ (ಕಂಸಾ. ೯-೦೦೬). ೫. ದಯಾಪಾಲಿಸು ; ಅನುಗ್ರಹಿಸು : ಪಿರಿದುಂ ಮನ್ನಿಸಿ ನಡಪುತ್ತಿರೆ ಪರಮರಹಸ್ಯಭೂಮಿಯೆನಿಸಿದಳಂತೀ ಜಲಚಾರಕೆ (ಕಾದಂಪೂ. ೩೨೨) ; ಮನ್ನಿಸುಗೆ ಕೃತಿಗೆ ಸೌಭಾಗ್ಯೋನ್ನತಿಯಂ (ಪುಲ್ಲಪು. ೦-೨೩) ; ಅವುದೆಮಗ ಭ್ಯುದಯವದ ನೀನಾವ ಪರಿಯಲಿ ಮನ್ನಿಸಿದಪರೆಜ್ಜೀವ ಕೌರವವಂಶವೇ ಸಪ್ರಾಣಿಸುವುದು (ಕುವ್ಯಾಕ. ೩-೦೯).

[ಮನ್ನಣೆ + —ಇಸು₃./ತೆಲು. ಮನ್ನಿಂಚು, ಮನ್ನಿಂಪು]

**ಮನ್ನು** (ನಾ). ಸಿಟ್ಟು ; ಕೋಪ : "ಮನ್ನು—ಮನ್ಯು=ದೈನ್ಯ, ಕೋಪ" (ಶಬ್ದಕೋ. ೩೯); ಅಣ್ಣಂ ಮನವಿಳ್ದು ಮನ್ನು ಮಿಗೆಯುಂ ಬಗೆಗೊಳ್ಳದ ನೀಂ ದೀಕ್ಷೆಗೊಂಡೆ (ಎಕ. II, ೨೩೯-೩೦ ; 1180). [<ಸಂ. ಮನ್ಯು]

**ಮನ್ನೆ** 'ಮನ್ನೆಯ ' ನೋ.

**ಮನ್ನೆಪೇಟ** 'ಮಾನ್ಯಪೇಟ' ನೋ.

**ಮನ್ನೆಪೇಡ** ' ಮಾನ್ಯಪೇಟ ' ನೋ.

**ಮನ್ನೆಗಾಳೆ** ' ಮನ್ನೆಯಗಹಳೆ ' ನೋ.

**ಮನ್ನೆಯ, ಮಣ್ಣೆಯ, ಮನ್ನೆ** (ನಾ). ೧. ಗೌರವ; ಮರ್ಯಾದೆ : ' ಮನ್ನೆಯಗಹಳೆ ' ಪರಾ. ೨. ಗೌರವಕ್ಕೆ ಪಾತ್ರನಾದವನು; ಮನ್ನಣೆಗೆ ಯೋಗ್ಯನಾದವನು: ಮಾನ್ಯ : ಹಗಲಿದಂ ಬೇಗದಿಂ ಮಣಿ ವರೂಥಮಂ ಕೆಲಬಲದ ಮನ್ನೆಯರ ಗಡಣದಿಂದೆ (ಕೈಪಿಯಾ. ೪-೨೭). ೩. ಮಾಂಡಲಿಕ; ಸಭಾಸದ : "ಮನ್ನೆಯ —ಮಾನ್ಯ = ಮರ್ಯಾದಿತ, ಮಾಂಡಲಿಕ" (ಶಬ್ದಕೋ. ೩೯); ಮಣ್ಣ ಕೋಂಟೆಯುಂ ನಂಬಿ ಕಲ್ಲ ಕೋಂಟೆ ಯನೊಡೆವ ಮನ್ನೆಯನುಮಂ (ಧರ್ಮಾಮೃ. ೯-೩೦); ಕೆಲಬಲದ ಮನ್ನೆಯರ ಕೈವೀಸಿ . . . ಪಾರ್ಥನಿದಿರಾದ (ಕುವ್ಯಾದ್ರೋ. ೬-೦೩); ತೋಟ ತೋಟಿಗಾಸೆ ಕೋಟಿ ಮನ್ನೆಯಗಾಸೆ (ಸರ್ವಜ್ಞ. ೦೯೦೬). ೪. ನಾಯಕ ; ಮುಖಂಡ : ಮನ್ನೆಯರಾಳಂತೆ ಕಾದಿಯಲಸದೆ (ಕಂಕಥಾ. ೩-೪೬ ಪ). ೫. ದಾನವಾಗಿ ಕೊಡುವ ಭೂಮಿ ; ಉಂಬಳಿ : ಅನ್ತವರ್ಮನ್ನೆಯದೊಳ್ಸರ್ವ್ವ ನಮಸ್ಯಮಂ . . . ಪಡೆದು (ಸೌಇಇ. XI-i, ೪೩-೪೬; 980); ಮನ್ನೆಯ ಚಟ್ಟಂ ಬಿಟ್ಟಂ ಮನ್ನೆಯಮಂ (ಇಆ. XVIII, ೨೬೪-೪೦; 994); ಕಡಿಗೆರೆಯ ಮನ್ನೆಯಮೊಳಗಾಗಿ ಸರ್ಬ್ಬಾಭ್ಯಂತರಸಿದ್ಧಿಯಿಂದ ಕೊಟ್ಟಂ (ಎಕ. VII, ಶಿಕಾ. ೩೩-೨೬; 1027). ೬. ನಾಡಿನ ಒಂದು ಭಾಗ ; ಮಂಡಲ : ಶ್ರೀ ಮುಳುಗುನ್ದ ಪನ್ನೆರಡಱ ಮನ್ನೆಯಂ ಕೊಱಲಗುನ್ದಂ (ಸೌಇಇ. XI–i, ೪೬-೦೦; 994); ಕೋಗಳಿಯಯ್ನೂಱ ಮಂನೆಯಮನೇಕಾಧಿಷ್ಟಿತಂ ಸುಖದಿ ನಾಳುತ್ತಮಿರೆ (ಸೌಇಇ. IX-i, ೨೪೮-೦೩ ; 1147). **ಮಣ್ಣೆಯ** : ೭. ಒಂದು ಬಗೆಯ ತೆರಿಗೆ : ಮಗ್ಗದೆಱೆ ಮಣ್ಣೆಯ ಕಬಲವದೆಱೆ (ಎಕ. IX, ಕಾವಕಾ. ೬೨-೨೮; 1277). **ಮನ್ನೆ** : ೧. 'ಮನ್ನೆಗಾಳೆ' ಪರಾ. ೫. ಕಱಿಯ ರಾಚಮಲ್ಲ ಮನ್ನೆ ಬೇಡಿದೊಳರೆನೆಲನುಂ ಭಣ್ಡಾರವುಮಂ ಕೊಟ್ಟಾನೆಂದು ಬನ್ದು ಭುವನಾದಿತ್ಯಂ ಬರೆ (ಎಕ. III (R), ಹೆಗ್ಗಡ. ೨೩-೪; ಸು. 10ನೆಯ ಶತ).

**ಮನ್ನೆಯ ಗಂಡ, ಮನ್ನೆಯರ ಗಂಡ**=ಮುಖಂಡರನ್ನು ಮೀರಿಸುವ ಶೂರ; ಒಂದು ಬಿರುದು : ಎಲ್ಲಾ ಕಿರಾತಸಂಕುಲದ ಗುಱಿ ನೆಱೆದು ದಿಂದು ಹದುಳದಿಂದರಸ ಮನ್ನೆಯ ಗಂಡನಾಗು ಬೇಗದೊಳೆಂದಡೆ (ಹಕಾ. ೬-೦೯); ಕೊಂಡು ಬರುತಿದೆ ಘಟಿರು ಮನ್ನೆಯ ಗಂಡನಾಗೈ ಜೀಯ ಎನೆ (ಕುವ್ಯಾದ್ರೋ. ೬-೨೩); ಗಂಡರ ಗಂಡನಾಹವದ ಗಂಡನುಂ . . . ಕೂಡಿ ತಪ್ಪುವ ಮ(ಂ)ನ್ನೆಯರ ಗಂಡನು (ಸೌಇಇ. IX—i, ೨೬೬-೩೩; 1183). **ಮನ್ನೆಯಗೊಡತಿ** = ಒಂದು ಬಿರುದು : ಮ(ಂ)ನ್ನೆಯಗೊಡತಿ ಜಗದ್ದಳ ಹಲುವಾಗಿಲ ಮ(ಂ)ನ್ನೆಯ ನಾಚಿದೇವಪ್ಪರು (ಸೌಇಇ. IX-i, ೩೬೮-೦೦; 1279). **ಮನ್ನೆಯದ ಹೊನ್ನು**=ಮಾನ್ಯವಾಗಿ ಬಿಟ್ಟ ತೆರಿಗೆಯ ಹಣ : ತನಗೆ ನಡೆವ ಮನ್ನೆಯದ ಹೊನ್ನೊಳಗೆ ದೇವರ ನಂದಾದೀವಿಗೆಗೆ ಬಿಟ್ಟ ಗದ್ಯಾಣ ಒಂದು (ಸೌಇಇ. IX–i, ೨೦೬-೪೦; 1122). **ಮನ್ನೆಯ ಬಂಗಾಱ**= ಒಂದು ಬಿರುದು: ಸಹಜಮನೋಜ ಹಯವತ್ಸರಾಜ [ಕೊಂಗ]ಮನ್ನೆಯ ಬಂಗಾಱ ಮಾವನಂಕಕಾಱ (ಸೌಇಇ. XI–i, ೪೬-೨೦; 1062). **ಮನ್ನೆಯ ಬೇಂಟೆಕಾಱ** = ಒಂದು ಬಿರುದು : ಏಕಾಂಗವೀರನಸಹಾಯಸೂರ ಮಂನೆಯ ಬೇಂಟೆಕಾಱ ಅಂಣನ ಗಂಧವಾರಣನು (ಎಕ. XVI, ತಕ್ಕನಾ. ೬೨-೨೮; 1242). **ಮನ್ನೆಯಭೇರುಂಡ** = ಒಂದು ಬಿರುದು : ಮೂವಡಿ ಗಣ್ಡಂ ಮನ್ನೆಯಭೇರುಣ್ಡ ನಾಮಾದಿ ಸಮಸ್ತಪ್ರಸ(ಶ)ಸ್ತಿಸಹಿತಂ (ಎಇ. XII, ೨೬೯-೮; 1040). **ಮನ್ನೆಯ ಸಿಂಗ** = ಮುಖಂಡರಲ್ಲಿ ಸಿಂಹದಂತಿರುವವನು ; ಒಂದು ಬಿರುದು : ಪರಬಳಕೃತಾಸ್ತಂ ಸಾಹಸೋತ್ತುಂಗಂ ಮನ್ನೆಯಸಿಂಗ ನಾಮಾದಿ ಸಮಸ್ತಪ್ರಶಸ್ತಿಸಹಿತಂ . . . ಜಯಕೇಶಿಅರಸರ್ (ಸೌಇಇ. XX, ೪೭-೨೩; 1074).[< ಸಂ. ಮಾನ್ಯ]

**ಮನ್ನೆಯಗಹಳೆ, ಮನ್ನೆಗಾಳೆ** (ನಾ). ಗೌರವಸೂಚಕವಾಗಿ ಊದುವ ಒಂದು ಬಗೆಯ ಕಹಳೆ : ಚಿನ್ನತಿತ್ತಿರಿ. . . ಹೆಗ್ಗಾಳೆ ಮನ್ನೆಯಗಹಳೆ . . . ಮೊಳಗಲು (ರಾಮವಿ. ೯-೬೦); ಮನ್ನೆಯಗಹಳೆ ಚಂಬಕವಱೆ

ಬೊಂಬುಳಿ ಚಿನ್ನಕಿತ್ತಿರಿ (ಶಾಂತಿಪು. ೧೧-೨೯). **ಮನ್ನೆಗಾಳೆ** : ಪೊಡೆವ ತಂಬಟ ಭೇರಿ ಘಂಟೆ ಜಯಘಂಟೆಗಳ ಗಿಡಬಿಡಿ ಬುರುಗು ಮನ್ನೆಗಾಳೆ ಪೆರ್ಗಾಳೆಗಳ (ಶಿವಂ. ೬-೯). [ಮನ್ನೆಯ + ಕಹಳೆ]

**ಮನ್ನೆಯಗೆಱೆ** (ನಾ). ಮಾನ್ಯವಾಗಿ ಕಟ್ಟಿಸಿದ ಕೆರೆ : ರಾಮೇಶ್ವರ ದೇವರ ಹೂದೋಂಟದಿಂ ಮೂಡಹಾದರಿಯ ಮಣಲು ಮತ್ತರೆರಡು ಮನ್ನೆಯಗೆಱೆಯ ಕೋಡಿಯಿಂ ತೆಂಕ ತೋಂಟಗಟ್ಟು ಮತ್ತರೊಂದು (ಎಪಿಕ. IX-i. ೩೨೯-೩೩; 1209). [ಮನ್ನೆಯ + ಕೆಱೆ]

**ಮನ್ನೆಯದೆಱೆ** (ನಾ). ದತ್ತಿಯಾಗಿ ನೀಡಿದ ಭೂಮಿಯ ಮೇಲೆ ಹಾಕುತ್ತಿದ್ದ ತೆರಿಗೆ : ಮನೆಯಸಾಮ್ಯದೊಳ್ ಬಿಟ್ಟ ಮನ್ನಣೆಯೆನ್ನಂ ದೊಡೆ ಮನ್ನೆಯದೆಱೆ ಅಳಿವಸಕಾಯ. . . ಮೊದಲಾಗಿ. . . ಸರ್ವಬಾಧ ಪರಿಹಾರಂ ಕಾದು ನಡೆಯಿಸುವರ್ (ಎಪಿಕ. XI-i. ೬೩-೨೦ ; 1042); × × × ಕರಣಂಗಳ ಕಾಣ್ಕೆಯೆಂದು ಮನ್ನೆಯದೆಱೆಯೆಂದರುವಣವೆನ್ದು . . . ಕೊಣ್ಡುವರ್ತಿಸ್ಪಾಳರ್ (ಎಪಿಕ. IX-i. ೨೯೪-೩೬; 1164). 'ಮಾನ್ಯದೆಱೆ' ಪರ್ಯಾ. [ಮನ್ನೆಯ + ತೆಱೆ₃./ತೆಲು. ಮನ್ನಿಯತೇಱು]

**ಮನ್ನೆಯಪನ್ನಸು** (ನಾ). ಶೇಕಡ ಐವತ್ತರಷ್ಟು ತೆರಿಗೆ ವಿನಾಯಿತಿ ಯುಳ್ಳ ಮಾನ್ಯದ ಜಮೀನು : ಸತ್ರಕ್ಕೆ ಮಲ್ಲರಸ ಬಿಟ್ಟ ಕೆಯಿ ಬೀಳ್ಕುಂಟೆಯ ದಾರಿಯಿಂ ಬಡಗ ಗವಱೇಶ್ವರ ದೇವಗೆಯಿಂ ಪಡುವ ಮನೆಯ ಪಂಸಸು (ಎಪಿಕ. IX-i. ೨೩೨-೪೦; 1148). [ಮನ್ನೆಯ + ಪನ್ನಸು]

**ಮನ್ನೆಯಪಣ** (ನಾ). =ಮನ್ನೆಯದೆಱೆ : ಹೆಬ್ಬಾಳು ಪನ್ನೆರಡಱೊಳಗಣ ಮಣಿಯೂರ ಮನ್ನೆಯಪಣವಂ . . . ಶ್ರೀ ಚೆಂಸಕೇಶವದೇವರ್ಗೆ ಧಾರಾಪೂರ್ಬ್ಬಕಂ ಕೊಟ್ಟರು (ಎಪಿಕ. XV. ೩೩-೩೦; 1147). [ಮನ್ನೆಯ + ಪಣ₃]

**ಮನ್ನೆಯವಳಿ** (ನಾ). ಮಾನ್ಯರ ವಂಶ; ಮಾಂಡಲಿಕರ ಕುಲ : ಮನ್ನೆಯ ವಳಿಯೊಳತಿಸ್ತುತನುಂನತಯಶನಾಶ್ರಿತಾಶ್ರಯಂ ಕ ಲಿ ಕಾ ಲೋ ತ್ಪ ಂ ನ ಲಾಕುಳೀಶನೆನಿಪಂ (ಎಪಿ. XX, ೧೦೬-೩೯ ; 1167). [ಮನ್ನೆಯ + ಬಳಿ₂ (<ಬಳ್ಳಿ₃) ]

**ಮನ್ನೆಯಪೊಲ** (ನಾ). ಮಾನ್ಯವಾಗಿ ಬಿಟ್ಟ ಹೊಲ : ಅಂತು ಹೇಱಿಗೆ [ನಡೆ]ವೆಲೆ ೨೦೦ ಅಲ್ಲಿಯ ಮನ್ನೆಯಪೊಲದೊಳಗೆ ಅರುವಣದಿಱುವ ಅಜ್ಜುನೇಶ್ವರಂ ಬಸದಿಯಂ [ಮೂಡಿಂ] ಬಿಟ್ಟ ಗದ್ಯಾಣ ೨ (ಎಪಿಕ. XX, ೪೩-೩೪; 1071). [ಮನ್ನೆಯ + ಪೊಲ]

**ಮನ್ನೆಯಸಾಮ್ಯ** (ನಾ). ಮಾನ್ಯದ ಒಡೆತನ, – ಸ್ವಾಮ್ಯ : ಅಲ್ಲಿಯ ಬಡಗಪೊಲದ ಮನ್ನೆಯಸಾಮ್ಯದ ಮಾನ್ಯಪೊಲದೊಳಗೆ . . . ಧಾರಾಪೂರ್ವ್ವಕಂ ಮಾಡಿ ಬಿಟ್ಟ ನೆಲಂ ಮತ್ತರು ೧೫೦ಕ್ಕೆ ನಿಬನ್ಧವರು ಪಣಂ ಗದ್ಯಾಣ ೧ (ಎಪಿಕ. XX, ೨೦-೩೯; 1089) ; ಇನ್ತುಱುಪಗ್ರಾಮಂಗಳ್ಗೆ ಬಿಟ್ಟ ಘಂನೆಯಸಾಮ್ಯದೊಳ್ ಬಿಟ್ಟ ಮನ್ನಣೆಯೆನ್ತೆನ್ದೊಡೆ ಮಂನೆಯದೆಱೆ . . . ತಂಬುಲಂ ಮೊದಲಾಗಿ . . . ಕಾದು ನಡೆಸುವರ್ (ಎಪಿಕ. XI-i. ೬೩-೦೯ ; 1042). [ಮನ್ನೆಯ + ಸಾಮ್ಯ₁]

**ಮನ್ಮಥ** (ನಾ). ೧. ಕಾಮ ; ಮದನ : "ಪ್ರದ್ಯುಮ್ನಃ . . . ಮನ್ಮಥಃ . . . ಮನೋಭವಃ — ಈ ೨೮ ಕಾಮ(ದೇವನ) ಪೆಸರ್" (ಹಲಾಯು. ೬-೩೩); "ಬಂಡುಣಿವೆದೆಯುನು . . . ಕಾವ ಜತಿಗಳವಗೆಯನೆನೆ ಮನ್ಮಥನ ನಾಮಮಕ್ಕುಂ" (ಛಂದೋ. ೯); ನಯನಂ ನೀಳಸರೋಜಭಾಸಿ . . . ಬಾಹುಯುಗಂ ಮನ್ಮಥಪಾಶಭಾಸಿ (ಶಬ್ದಮ. ೩-೩೩) ; ಸಂಯಮವ ಸಾಧಿಸಿ ಮತ್ತೆ ನುಡಿದೋರಿದಳ್ ಮನ್ಮಥನ ಶಿಷ್ಯೆ (ಶಶ್ಯಂಗ. ೩೯-೦೦೩೬). ೨. ಅರುವತ್ತು ಸಂವತ್ಸರಗಳಲ್ಲಿ ಇಪ್ಪತ್ತೊಂಬತ್ತನೆಯದು: ಪ್ರಭವ ವಿಭವ . . . ಮನ್ಮಥ . . . ಅಕ್ಷಯವೆಂದಱುವತ್ತು ತೆಱನಾಗಿಪುದು (ಅವೀಳ. ೨೩೬). ೩. ಒಂದು ಮರದ ಹೆಸರು ; ಬೆಳವಲಮರ : ಚಂದನ . . . ಪುನ್ನಾಗ ಇಂದ್ರವಾಣಿಯು ಮನ್ಮಥ ಬಿಲ್ವ ಪಾಲಾಶ ದಿಂದಲಾ ನಂದನವೆಸೆದುದು (ಚಿಂ. ೨೬-೩). [ಸಂ.]

**ಮನ್ಮಥಚಕ್ರ** (ನಾ). [ಕಾಮಶಾ] ಯೋನಿಯ ಒಂದು ಭಾಗ : ಯೋನಿ ಯಂಕುರ : ಭಗದ ಮೇಲೆ ಮೂಗಿನಂತೆ ಯವ್ವನ ಅಂಗಸ್ಥಾನ ಮದ ಗಳಿಂದಾದ ಅನೇಕ ಮದಗಳಿಹವು. ಅವು ಪ್ರತಿದಿನ ತಮ್ಮ ಶ್ಲಥವನುಗಳು ತ್ರಿರೆ ಶುಕ್ಲದಂತೆ ಬೆಣ್ಣೆಯಂತೆ ಸ್ರವಿಸುವದು. ಅದರ ದೊಡ್ಡ ತೀಟೆಗೆ ಕಾರಣವಪ್ಪುವದರಿಂ ಕಾಮಶರೆಗಳೊಡನಿರ್ಪವದರಿಂ ಮನ್ಮಥಚಕ್ರವೆಂಬುದು (ಕಾಮಶಾ. ೨೩೦). [ಸಂ.]

**ಮನ್ಮಥಭೂಮಿ** (ನಾ). [ಕಾಮಶಾ] ಕಾಮಕಲಾಸ್ಥಾನ : ಬೆನ್ನು ಬದಿ ತಿಗಂ ಮೊಲೆಗಳು ನಡುನೆತ್ತಿ ಐದುಂ ಮನ್ಮಥಭೂಮಿಗಳು (ಕಾಮಶಾ. ೨೪೦). [ಸಂ.]

**ಮನ್ಮಥಾರಿ** (ನಾ). ಮನ್ಮಥನ ಶತ್ರು ; ಶಿವ : ನಮಿಸಿದನ್ ಮನ್ಮಥಾರಿಗೆ ಮನ್ಮಥನ ಬಂದಿ (ತ್ರಿಶಿಕಮ. ೩೭೬-೩೨೩). [ಸಂ.]

**ಮನ್ಮಥಾವಸ್ಥೆ** (ನಾ). ಪರಸ್ಪರ ಅನುರಕ್ತರಾದ ಸ್ತ್ರೀಪುರುಷರು ಅಗಲಿದಾಗ ಅನುಭವಿಸುವ ವಿರಹವ್ಯಥೆ : ಇದು ಹತ್ತು ತೆರನಾಗಿರುವುದು : "ತನ್ನ ನಾಯಕನ ವಿರಹದಿಂ ಚಿತ್ರದೊಳು ಅವನ ಪ್ರತಿಮೆಯಂ ನೋಡುವದು ಒಂದು. ಅವನಲ್ಲಿ ಯಾವಾಗಲೂ ಮನಸ್ಸು ಇಟ್ಟು ತಿರುಗುವದು ಎರಡು. ಅವ ಕಾಲದಲ್ಲಿಯೂ ಸಮಾಗಮ ಬಯಸು ವದು ಮೂರು. ಸರ್ವಕಾಲದಲ್ಲಿಯೂ ಅವನ ನೆನಹಿನಿಂ ನಿದ್ರೆಗೆಯ್ಯದೆ ಯಿರುವದು ನಾಲ್ಕು. ಅವನಲ್ಲಿ ವಿರಹದಿಂ ಭೋಜನಾದಿಗಳಿಲ್ಲದೆ ವೇಗದೊಳು ಕಾರ್ಶ್ಯವ ಹೊಂದಿರುವದು ಐದು. ಅವನಲ್ಲಿ ವಿರಹದಿಂ ಗಂಧಮಾಲ್ಯಾದಿ ಗಳಂ ಬಿಡುವದು ಆರು. ದೇಹಾಭಿಮಾನವಂ ಬಿಟ್ಟು ನಾಚಿಕೆ ಇಲ್ಲದೆ ಇರುವದು ಏಳು. ಪ್ರಜ್ಞೆ ಪರಿತಪ್ಪಿ ಮೂರ್ಛೆ ಪೋಪುದು ಎಂಟು. ಹುಚ್ಚು ಹಿಡಿದಂತೆ ವಿಕಾರ ಹೊಂದಿ ಇರುವದು ಒಂಭತ್ತು. ಅತಿವ್ಯಸನದಿಂ ಮೃತಿಯಂ ಹೊಂದುವದು ಹತ್ತು. ಈ ಪ್ರಕಾರ ಹತ್ತು ಬಗೆಯಾ ದಂಥಾ ಮನ್ಮಥಾವಸ್ಥೆಗಳೆನಿಸುವವು" (ಕಾಮಶಾ. ೨೯೬) ; ಎಲೆ ಅನಸೂಯೆ ಇವಳ ಮನ್ಮಥಾವಸ್ಥೆ ಮೀರುತ್ತಾ ಬಂದಿತು (ಶಾಕುಂತ. ೩೬-೦೦). [ಸಂ. ಮನ್ಮಥಾವಸ್ಥಾ]

**ಮನ್ಯ** (ನಾ). ಕೊರಳು : ಹೆಗ್ಗತ್ತು : "ಕೊರಳು ಮನ್ಯಂ ಗಳಂ ಧಮನಿ ಕಂಧರ ಶಿರೋಧರಪುದಾ ಗ್ರೀವಮೆನಿಸಿಕ್ಕು" (ಕಾಂಗರ್ಬ. ೯೩-೬). [ಸಂ. ಮನ್ಯಾ]

**ಮನ್ಯಪಣ** (ನಾ). = ಮನ್ನೆಯದೆಱೆ : ದಂಡವುಂಡಿಗೆ ಪಡರಕಱುಕು × × ಬೆದ್ದಾಯ ಮುಂತಗಿ ಮನ್ಯಪಣ (ಎಪಿ. XIV. ಕೃಷ್ಣರಾ. ೨೬-೩೨; ?). [< ಮನ್ನೆಯ + ಪಣ₃]

**ಮನ್ಯಾಸ್ತಂಭ** (ನಾ). ಕುತ್ತಿಗೆಯನ್ನು ಸರಾಗವಾಗಿ ಆಡಿಸಲಾಗದ ಒಂದು ಬಗೆಯ ವಾಯುರೋಗ ; ಕುತ್ತಿಗೆ ಸೆಡೆತ : ಪರಿಪಕ್ವಮಾದ ಗರ್ದುಗಿನ ತಿರುಳುಂ ಶುಂಠಿಯುಮನರೆದು ನಸ್ಯಂಗೆಯ್ದೊಂದಿರಲೀಗುಮೆ ಮಾನ[ಮನ್ಯಾ]ಸ್ತಂಭರೋಗಮುಂ ಬಾಹುಮೆಂಬಿವಂ ಗ್ರಂಥಿಯುಮಂ (ಲೋಕೋಪ. ೯-೧೦೦) ; ಅಮರದಬಳ್ಳಿ, ಔಡಲದ ಬೇರು . . . ಕಷಾಯ ಹಾಕಿ ಕುಡಿಯೆ ಸಂಧಿಗಸನ್ನಿವಾತ, ಮಾನ್ಯ[ಮನ್ಯಾ]ಸ್ತಂಭ . . . ಸಂದುವಾತ ಸಹ ಪೋಗ್ಗುಂ (ಸಕವೈ. ೦೩೨). [ಸಂ.]

**ಮನ್ಯು** (ನಾ). ೧. ಕೋಪ ; ಸಿಟ್ಟು : ಎಂದರಸಂ ನುಡಿವುದುಮಾ ಸುಂದರಿಗಂತಂತೆ ಮನ್ಯು ಮಿಕ್ಕು ಮನಸ್ತಾಪಂ ದಳ್ಳಿಸೆ (ಮಲ್ಲಿಪು. ೪-೦೨) ; ಬಾಲನೊಳ್ ಮನ್ಯು ತಕ್ಕುದೆ ಪೇಳ್ (ಜಿನ್ನಪು. ೦-೫-೩೬). ೨. ದುಃಖ ; ಅಳಲು ; ವ್ಯಥೆ : ಸಹೋದರಶೋಕದೊಳ್ ಮನ್ಯು ಮಿಕ್ಕು ಸೈರಿಸ

ಲಾಜದೆ (ಕುಶಲ. ೦೪-೯ ಶ) ; ಮನವೊಳದಾಗೆ ಮನ್ಯು ವಿೞಗೆ ತಳ್ತಿವೆಯುಂ ಕರೆಗಣ್ಣ ಸೂಸೆ ಕಣ್ಬನಿ (ಕುರಾಶು. ೯-೦೦೯) ; ಪತ್ತುವಿಡು ಮನ್ಯುವುಂ ದೈನ್ಯವುಂ (ತ್ರಿಲಾಶು. ೨೯೩-೨೩೩). ೩. ದೈನ್ಯ ; ದೀನತೆ. ೪. ಅಹಂಕಾರ; ಗರ್ವ. ೫. ಕುದುರೆಯ ಒಂದು ಅಂಗದ ಹೆಸರು ; ಕಂಠನಾಳದ ಎರಡೂ ಕಡೆಗಳ ಭಾಗದ ಹೆಸರು : ನಡುಕಂಠ ನಾಳಿಯಿರ್ಕೆಲದೆಡೆಗಂ ಮನ್ಯುವದೆನಿಪ್ಪ ಪೆಸರೆಸದಿರ್ಕುಂ (ಅಶ್ವಶಾ. ೯-೨೬). ೬. ಯಜ್ಞದ ಕೊನೆ; ಯಾಗದ ಅಂತ್ಯ: "ದೈವ್ಯದಲಿ ಯಜ್ಞೋತ್ತಾರದಲಿ ಕೋಪದಲಿ ಮನ್ಯುವೆಂದೆಂಬುದು" (ಚುಂಗನಾ. ೦೪೩-೨೮). ೭. ಒಡೆಯ ; ಯಜಮಾನ. ೮. ದೊಡ್ಡ ಸೈನ್ಯ. ೯. ಇಂದ್ರಿಯ. ೧೦. ಮುಖ. ೧೧. ಕಣ್ಣೀರು: "ದೈನ್ಯದಿ ಯಜ್ಞದಂತ್ಯ ಬಾಷ್ಪಜಲಂಗಳೊಳಾಳ್ದನೊಳ್ಪಹಾ ಸೈನ್ಯದೊಳಾಸ್ಯದೊಳ್ಪುಳದೊಳ್ಕಡುಗೋಪದೊಳಿಂದ್ರಿಯಂಗಳೊಳ್ ಮನ್ಯುವೆನಿಕ್ಕುಂ" (ನಾನಾರ. ೩೬). [ಸಂ.]

**ಮನ್ಯೂದ್ಗತ** (ಗು). ದುಃಖಭಾರದಿಂದ ಕೂಡಿದ; ಶೋಕಭರಿತವಾದ : ಮನ್ಯೂದ್ಗತಕ್ಷೋಭದಿಂ ಕಂಪಿಸುತಂ (ಗದಂಅ. ೫೪೨) ; ರಿಪುನೃಪ ಕುಲಾಂಗನಾಜನಮನ್ಯೂದ್ಗತಬಾಷ್ಪಸಲಿಲಧಾರಾಪ್ರತಾನದಿಂ ಕೀರ್ತಿವಲ್ಲಿಯಂ ಬೆಳೆಯಿಸಿದಂ (ಕುರಾಶು. ೦-೦೩೬). [ಸಂ.]

**ಮನ್ವಂತರ** (ನಾ). ೧. (ಪುರಾಣದಲ್ಲಿ ಹೇಳಿರುವ ಹದಿನಾಲ್ಕು ಮನುಗಳಲ್ಲಿ) ಒಬ್ಬ ಮನುವಿನ ಆಳ್ವಿಕೆಯ ಕಾಲ; ☞ ಮನುಷ್ಯರ ನಾಲ್ಕುಯುಗಗಳು ಸೇರಿದರೆ ಒಂದು ದೈವಯುಗ. ಇಂತಹ ಎಪ್ಪತ್ತೊಂದು ದೈವಯುಗಗಳು ಸೇರಿದರೆ ಒಂದು ಮನ್ವಂತರ : ಆತನಿಂ ಬಳಿಯಮಸಂಖ್ಯೇಯವರ್ಷಪ್ರಮಿತಮನ್ವಂತರಾತಿಕ್ರಮದೊಳ್ ಪದಿನಾಲ್ಕನೆಯಮನು ಪುಟ್ಟಿದಂ (ಆದಿಪು. ೬-೩೫ ವ) ; ಆದಿಯ ಮನ್ವಂತರದೊಳಶೀತಿಭಾಗಿಪಲ್ಯದೊಳಾ ಮನ್ವಂತರದಶಮಾಂಶಂ ಮನ್ವಂತರ ವಾಕ್ಯಂ (ಕಂರಾಶು. ೦-೯೯); ಮನ್ವಂತರಗಳ ಭಾಗ್ಯವ ತೆಗೆಸಿ . . . ಹಕ್ಕಿ ಹಾರುತಿದೆ ನೋಡಿದಿರಾ (ಗಂ. ೫೭-೨). ೨. (ಅಲಂ) ಪರಿವರ್ತನೆಯ ಕಾಲ; ಹೊಸಯುಗ : ಬಹುಮಟ್ಟಿನ ಸುಧಾರಣೆಯು ಇಂಗ್ಲಿಷ್ ವಿದ್ಯಾಮನ್ವಂತರದಿಂದ ತೊಡಗಿದ್ದು (ಕಾರುಣಾ. ೨೫) ; ಈ ಸಾಹಿತ್ಯದ ಹೊಸ ಮನುಗಳು ಈ ಯುಗದಲ್ಲಿ ಹೊಸ ಮನ್ವಂತರವನ್ನು ಸ್ಥಾಪಿಸಿದರು (ಕಾಹಿಸ. ೮). [ಸಂ.]

**ಮನ್ವಾದಿ** (ನಾ). ೧. = ಮನ್ವಂತರ ೧ : ಒಂದು ವರ್ಷದಲ್ಲಿ ೯೬ ಶ್ರಾದ್ಧಗಳು ಬರುವುವು. ಅವು ಯಾವುವೆಂದರೆ ಮನ್ವಾದಿಗಳು ೧೪, ಯುಗಾದಿ ೪ (ತಕಾರ. ೪-೨೨ ತಾತ್ಪರ್ಯ). ೨. = ಮನ್ವಂತರ ೨ : ಸಮರ್ಥರ ಆಗಮನದ ದಿವಸವು ಶಿವರಾಯನ ಪರಿವಾರಕ್ಕೆ ದೊಡ್ಡ ಮನ್ವಾದಿಯಂತೆ ಆಯಿತು (ಛತ್ರಪ. ೯). [ಸಂ.]

**ಮನ್ಸಬ್** (ನಾ). ೧. ಅಧಿಕಾರ ; ಹುದ್ದೆ ; ಪದವಿ. ೨. (ಸೈನ್ಯದ) ಅಧಿಕಾರಿ : ಐದುಸಾವಿರಸೇನೆಗೆ ಮನ್ಸಬ್‌ನನ್ನಾಗಿಟ್ಟು . . . ರಾಜನೆಂಬ ಬಿರುದನ್ನೂ ಕೊಟ್ಟನು (ಛತ್ರ. ೨೪).

[ ← ಅರ. ಹಿಂ. ಮರಾ. ಮನ್‌ಸಬ್ ]

**ಮಫ್ತಿ** (ನಾ). ಅಧಿಕಾರದ ಸಮವಸ್ತ್ರವಿಲ್ಲದೆ ಸಾಧಾರಣ ಉಡುಪಿನಲ್ಲಿರುವುದು : ಮಫ್ತಿಯಲ್ಲಿ ಟಿಕೆಟ್ ಇಲ್ಲದ ಪ್ರಯಾಣಿಕರನ್ನು ಪತ್ತೆ ಹಚ್ಚುವ . . . ಶಂಕೆಯೂ ಆಯಿತು (ಕೃದ್ಯಪ. ೨೯).

[ ← ಅರ. ಪಾರ. ಮಫ್ತೀ ]

**ಮಫ್ಲರ್** (ನಾ). ಬೆಚ್ಚಗಿರಲು ಕೊರಳ ಸುತ್ತಲೂ ಸುತ್ತಿಕೊಳ್ಳುವ ಉಣ್ಣೆಯ ಬಟ್ಟೆ ; ಕಂಠವಸ್ತ್ರ : ತಲೆಗೆ ಮಫ್ಲರ್ ಕಟ್ಟಲಾ ಸರಸೂ (ಕೋಪಕಾ. ೨೨). [ ← ಇಂ. Muffler ]

**ಮಬ್ಬಿಗ** ' ಮರ್ಬಿಗ ' ನೋ.

**ಮಬ್ಬಿಡು** (ಕ್ರಿ). ಮಂಕಾಗು ; ಮಬ್ಬು ಆವರಿಸು : ನಿಯೋಗಮುಗುಂದಲಿ ಯಾಯ್ತು ತೇಜ ಮಬ್ಬಿಡಿದುದು (ಕಇ. V. ೦೪-೩೬ ; 1099).

[ ಮಬ್ಬು ( < ಮರ್ವು$_2$ ) + ಇಡು$_2$ ]

**ಮಬ್ಬು** ' ಮರ್ವು$_2$ ' ನೋ.

**ಮಬ್ಬುಗಣ್ಣು** (ನಾ). ಮಸುಕಾದ ದೃಷ್ಟಿಯುಳ್ಳ ಕಣ್ಣು ; ಸರಿಯಾಗಿ ಕಾಣಿಸದ ಕಣ್ಣು : ಅರಿವುಗನ್ನಡಿಯ ಶುದ್ಧೀಕರಣದ ಕಾರ್ಯ ಅಥವಾ ಅರಿವಿನ ಮಬ್ಬುಗಣ್ಣಿಗೆ ಕನ್ನಡಕ (ಸಂಕೋಧ.೦೬೯).

[ಮಬ್ಬು ( < ಮರ್ವು$_2$) + ಕಣ್ಣು (< ಕಣ್) ]

**ಮಬ್ಬುಗತ್ತಲು** ' ಮಬ್ಬುಗತ್ತಲೆ ' ನೋ.

**ಮಬ್ಬುಗತ್ತಲೆ, ಮಬ್ಬುಗತ್ತಲು** (ನಾ). ಮಸುಕುಮಸುಕಾದ ಕತ್ತಲೆ ; ನಸುಗತ್ತಲೆ : ಮಬ್ಬುಗತ್ತಲೆಯಾದರೂ ರಂಗನೂ ಬರಲಿಲ್ಲ (ರಂಗರೋ. ೧೩); ಮಬ್ಬುಗತ್ತಲೆ ಕವಿಯಿತು (ಕಕಹು. ೫). ಮಬ್ಬುಗತ್ತಲು : ದೂರದಲಿ ಯಾರೋ ಮಬ್ಬುಗತ್ತಲಲಿ ಹುಬ್ಬುಗೈಹಚ್ಚಿ ನೋಡುತ್ತಿದ್ದಾರೆ, ಹೊರಳಿ ಹೊರಳಿ (ಕಲಮು. ೦೩-೦೯); ಹಾಗೆಯೇ ಮಬ್ಬುಗತ್ತಲಾಯಿತು (ಅಕಪಾ. ೨೫೦).

[ ಮಬ್ಬು (< ಮರ್ವು$_2$) + ಕತ್ತಲೆ$_1$ ( < ಕಟ್ತಲೆ )]

**ಮಬ್ಬುಚರ** (ನಾ). ನಿಶಾಚರ ; ರಾಕ್ಷಸ : ಮಬ್ಬುಚರನು ಅಲ್ಪದಾನವನ್ನೇ ಇತ್ತು, ಹೆಬ್ಬಾಗಿಲ ಮುಂದೆ ಇಟ್ಟನದಕೊ (ಕೋಳ್ಪರೀ. ೨೩-೩).

[ ಮಬ್ಬು ( < ಮರ್ವು$_2$ ) + ಚರ ]

**ಮಬ್ಬುದಾರಿ** (ನಾ). ಕತ್ತಲೆ ಮುಸುಕಿದ ದಾರಿ : ಮಬ್ಬುದಾರಿಯಲ್ಲಿ . . . ದೊಡ್ಡ ಬಟ್ಟೆಯೊಂದನ್ನು ಹಾಸಿದಂತೆ ಕಂಡುಬಂದಿತು (ಹಸುಹೊ. ೦೯೦). [ ಮಬ್ಬು ( < ಮರ್ವು$_2$) + ದಾರಿ]

**ಮಬ್ಬುವಿಡಿ** (ಕ್ರಿ). ಮಂಕಾಗು ; ಮಸುಕಾಗು : ಒಬ್ಬರ ಕಣ್ಣಿಗೊಂದಾಳು ಸಾವಿರವಾಗಿ ಮಬ್ಬುವಿಡಿದು ಕಾಣಿಸಲು (ಕಂಕಪಿ. ೧೪-೯೧).

[ಮಬ್ಬು ( < ಮರ್ವು$_2$ ) + ಪಿಡಿ$_1$ ]

**ಮಬ್ಬೆದೆ** (ನಾ). ೧. ಮಂಕಾದ ಮನಸ್ಸು. ೨. ಅಜ್ಞಾನ ತುಂಬಿದ ಮನಸ್ಸು: ಏಕನ್ನ ಮಬ್ಬೆದೆಗೆ ಮೂಡೆ ' ಆತ್ಮಾನಂ ವಿದ್ಧಿ ' ಎಂಬೀ ಸತ್ಯದರಿವೆಯ ಮ್ಲಾನಂ ? (ಗಳಿಪಿಂ. ೫೬-೦೦).

[ ಮಬ್ಬು ( < ಮರ್ವು$_2$) + ಎದೆ (< ಎರ್ದೆ) ]

**ಮಮ** (ಗು). ೧. ನನ್ನ : ನನಗೆ ಸಂಬಂಧಿಸಿದ : ಮಮಕರ್ತ ಕೂಡಲಸಂಗನ ಶರಣರು (ಬಸವ. ೫೯೩) ; ಇರೆ ನಿದ್ರಾಸಕ್ತಿಯಿಂದಂ ಮಮ ಭುಜಯುಗದೊಳ್ ಕಾಮಿನೀಯುಗ್ಮವು (ರಮಣೀಶ. ೯-೦೬); ಕೃಪಾಕರ ದಕ್ಷ ಶಿಕ್ಷಣದಕ್ಷ ಮಮರಕ್ಷ (ಶಸಕೃ. ೨-೦೬). (ನಾ). ೨. 'ನನಗೆ ಒಪ್ಪಿಗೆಯಾಗಿದೆ' ಎಂಬುದನ್ನು ಸೂಚಿಸುವ ಪದ : ಈ ವಾದವನ್ನು ಕೈಮುಟ್ಟಿ 'ಮಮ' ಎನ್ನಬಹುದು (ಶಾಕೋಶ. ೦೦೦). ☞ ಇದು ಸಂಸ್ಕೃತದ 'ಅಸ್ಮದ್' ಶಬ್ದದ ಷಷ್ಠೀವಿಭಕ್ತಿಏಕವಚನದ ರೂಪ. ಇದೀ ವಾಕ್ಯಾರ್ಥದಲ್ಲಿ ಒಮ್ಮೊಮ್ಮೆ ಉಪಯೋಗವಾಗುತ್ತದೆ. [ಸಂ.]

**ಮಮಕರಿಸು** (ಕ್ರಿ). ೧. ಅಹಂಕರಿಸು ; ಬೀಗು ; ಗರ್ವಿಸು : ಐಶ್ವದ ಮಾಟದಲಿ ಮಮಕರಿಸಿ ಮಕರಿಸಿ ಮೆಚ್ಚಿದನಲ್ಲಮನು (ಪ್ರಭುಲೀ. ೦೦-೨೪); ಕಾಯಸಿದ್ಧಿಯ ಪಡೆದೆನೆಂದೆಂದಿಗುಂ ಮರಣವಿಲ್ಲೆಂದು ಬಚಿಸದೆ ಮಮಕರಿಸದಿರು ಮೋಹದಿಂದೆ (ಸಿದ್ಧೇಶ್ವ. ೫-೨೯). ೨. ಮಮಕಾರವನ್ನು ತೋರು ; ಪ್ರೀತಿಸು : ನೃಪರೀ ರಾಜ್ಯಸಂಪದವ ಮಮಕರಿಸಿದರು (ಬಭಾಗ. ೯-೦೫-೯) ; ಬಾಹ್ಯಕರ್ಮಕ್ಕೆ ಮಮಕರಿಸದೆ (ಶೀಕ್ರಶು. ೫-೦೩).

[<ಮಮಕಾರ +—ಇಸು$_3$]

**ಮಮಕಾರ** (ನಾ). ೧. ನನ್ನದೆಂಬ ಭಾವನೆ; ಸ್ವಾರ್ಥಪರತೆ. ೨. ಅಹಂಕಾರ ; ಗರ್ವ : ಕೊಂದೆ ನಾನೆನಗಾಯ್ತು ಪಾತಕವೆಂದು ಮನದಲಿ ಮರುಗುವಾತನ ಬಂದಿಯಲಿ ಹೊಕ್ಕೆಗೊಂಬವಹಂಕಾರ ಮಮಕಾರ ಕೆಡು

ಕಲೆ ತನಗೆಷ್ಟೆಣಮು (ಕುಮಾ.ಲೀ. ೩-೪೪); ಅಹಂಕಾರವೃತ್ತಿಯಿಂದ ಮಮಕಾರ ಭಾವದಿಂದ ಜೀವಿಯು ಶಿವನಿಂದ ವಿಭಿನ್ನಸಂಸಾರಿಯಾಗಿದ್ದಾನೆ (ಚಾಶಿರ. ೧೧೪). ೩. ಮೋಹ ; ಪ್ರೀತಿ : ಭೂರಿ ಮಮಕಾರದಲಿ ನೃಪರು ವಿಚಾರಿಸದೆ ಧರೆಯೆಮ್ಮದೆಂದೇ ನಾರಕದ ಸಾಮ್ರಾಜ್ಯಕೈದುವರು (ಕುಮಾ.ಭಾ. ೧-೨೪). [ಸಂ.]

**ಮಮಕಾರಗೈ** (ಕ್ರಿ). ಪ್ರೀತಿಯನ್ನು ತೋರಿಸು : ನವಿರಾಜನಬಲೆಯರ್ ಬಸಿರಿಲ್ಲಿಗವರೊಳು ಮಮಕಾರಗೈದೆಯ್ದಿದೊಂದು ರಮಣಿಯರ್ಗಾಸರಿ ಭೋಜನ ಶಾಲೆಗೆಯ್ದಿದನು (ಕಠ. ೪೨-೬೪).
[ಮಮಕಾರ + ಗೈ (<ಕಯ್$_1$)]

**ಮಮಟಿ**, ಮಮ್ಮಟಿ (ನಾ). ವ್ಯವಸಾಯದ ಒಂದು ಉಪಕರಣ ; ಮಣ್ಣನ್ನು ಅಗೆದು ತೆಗೆದುಹಾಕುವ ಸಾಧನ; ಗುದ್ದಲಿ : (ಎಕಪ್ಪ. ೩೪. ೨೯). **ಮಮ್ಮಟಿ** : ಮಣ್ಣಗೆಲಸದವರಿಗೆ ಕೋಲುಗುದ್ದಲಿ ಮಮ್ಮಟಿಗಳನ್ನು ಕಳಿಸಿಕೊಡಬೇಕು (ಜಾ). [←ತಮಿ. ಮಮ್ಮಟ್ಟಿ]

**ಮಮತತ್ವ** (ನಾ). =ಮಮಕಾರ ೧ : ಕುಲಛಲ ಪೀಠ ನೈಷ್ಠಿಕ ಇದ ದೃಷ್ಟಿಸಿ ಕೊಂಡಿಪ್ಪ ಕಟ್ಟು ಮನುಜರಿಗೆ ನಿಜತತ್ವದ ಮಾತೇಕೆ ಅದರೆತ್ತಿ ಹೋರುವ ಮಮತತ್ವವೈಸೆ ನಿತ್ಯತ್ವವಿಲ್ಲ (ಮೋಕ್ಷ. ೨೩-೧೧೩). [ಸಂ.]

**ಮಮತೆ** (ನಾ). ೧. ನನ್ನದು ಎಂಬ ಅಭಿಮಾನ ; ಮಮಕಾರ : ದೇಹವೆಂಬುದನಿತ್ಯ . . . ಬಿಡು ಸಂದೇಹದನಹಮ್ಮಮತೆಗಳ ಬೀಳ್ಕೊಟ್ಟು ಕೋಡೆಂದ (ಕುಮಾ.ದ್ರೋ. ೭-೨೭); ಮಮತಾಪೇಕ್ಷಿತದ ಪೊರೆಯ ಪರಿದಂದು ಅರಳ್ದುದರಿವಿನ ಕಣ್ಣು (ಶಂಕರ. ೬೪೨). ೨. ಪ್ರೀತಿ ; ವಾತ್ಸಲ್ಯ : ಕರುಣದ ಮಮತೆ ಮಿಗೆ ಮಧುರೋಕ್ತಿಯಲಿ ನುಡಿಸಿದನು ನೃಪವರನ (ಕೋರ. ೧-೯-೩); ಮಂಥರೆಯು ಈ ಮಮತೆಯಾವರ್ತದೊಳ್ .... ಸಿಲ್ಕಿ (ಶ್ರೀರಾಮ. ೨೭-೬೧೨). ೩. ದರ್ಪ ; ಕೊಬ್ಬು. [ಸಂ. ಮಮತಾ]

**ಮಮತ್ವ** (ನಾ). = ಮಮಕಾರ ೧ : ಮೆಯ್ಯ ಮಮತ್ವಂ ಪಡೆವಡೆ ಪಡೆಪಟ್ಟು ಪೋದುದು (ಸುಕುಮಾ. ೧೨-೪೨); ಸ್ವಾರ್ಥವನ್ನು ಕಳೆದುಕೊಂಡು ಮಮತ್ವವನ್ನು ಅಹಂಕಾರವನ್ನು ದೂರಮಾಡು (ವರ್ಣಾ. ೧೩೨). [ಸಂ.]

**ಮಮರೇಜು**, ಮಂರೇಜು (ನಾ). ಕುದುರೆಯನ್ನು ಚೋದಿಸಲು ಸವಾರ ತನ್ನ ಹಿಮ್ಮಡಿಗೆ ಅಳವಡಿಸಿಕೊಳ್ಳುವ ಮುಳ್ಳಿರುವ ಸಾಧನ ; ಹಿಮ್ಮಡಿಮುಳ್ಳು ; ತಿವಿಮುಳ್ಳು : ಮದನನ ಕೈಯಿದ್ದ ಚಾವಟಿಯನ್ನು, ಅವನ ಕಾಲಿನಲ್ಲಿದ್ದ ಮಮರೇಜನ್ನು ಕಂಡು, ಈ ಆಯುಧಗಳ ತಂಟೆಯಿಂದ ಕುದುರೆಯು ಪತೋಟ ತಪ್ಪಿರಬೇಕೆಂದು ತಿಳಿದುಕೊಂಡನು (ಸುಚುತ. ೨೩೪). **ಮಂರೇಜು** : ಅಶ್ವಗಳಿಗೆ . . . ಎಷ್ಟು ಹೊಡದರೂ ಮಂರೇಜಿನಿಂದ ಎಷ್ಟು ತಿವಿದರೂ ಕಾಲ ಎತ್ತಿ ಇರಿಸುವುದೇ ಕಷ್ಟವಾಗಿತ್ತು (ಮುಕುಗ. ೩೫).
[ ← ಪಾರ. ಮಿಹಮೀರ್ಜ್ ; ಮರಾ. ಮುಬರೇಜ್ ]

**ಮಮ್ಮು** 'ಮರ್ಮ$_1$' ನೋ.

**ಮಮ್ಮಕ್ಕಳು** 'ಮೊಮ್ಮಗು' ಪರ್ಯಾ.

**ಮಮ್ಮಗ** 'ಮೊಮ್ಮಗ' ನೋ.

**ಮಮ್ಮಗಳು** 'ಮೊಮ್ಮಗಳು' ನೋ.

**ಮಮ್ಮಗು** 'ಮೊಮ್ಮಗು' ನೋ.

**ಮಮ್ಮಟ** 'ಮಮಟಿ' ನೋ.

**ಮಮ್ಮನೆ** 'ಮಮ್ಮಲನೆ' ನೋ.

**ಮಮ್ಮಲ** 'ಮಮ್ಮಲಂ' ನೋ.

**ಮಮ್ಮಲಂ**, ಮಮ್ಮಲ, ಮಲಮಲ್ಲ, ಮಲಮಲಾ, ಮಲುಮಲ (ಅ). ಅತಿಶಯವಾಗಿ; ವಿಶೇಷವಾಗಿ: ಇಂತು ಮಮ್ಮಲಂ ಮರುಗಿಪರಲ್ತೆ . . . ನೃಪರ್ಧಾತ್ರಿಯೊಳ್ (ಶಾಂತಿಪು. ೩೬೪) ; ಕಳವಳಿಸಿ ಕಂಗೆಟ್ಟು ಮಮ್ಮಲಂ ಮರುಗುತ್ತೆ (ತಿಂಪು.೧೧-೫೨). **ಮಮ್ಮಲ** : ರಾಜ್ಯಂ ನಷ್ಟರಾಜವಾದುದರ್ಕೆ ಮಮ್ಮಲ[ಪಾಠಾಂ. ಮಲುಮಲ]ಮರುಗಿ ಯೋಜನಗಂಧಿ ಸಿಂಧುಪುತ್ರನನಿಂತೆಂದಳ್ (ಕಂಕಥಾ. ೧-೮೦ ವ). **ಮಲಮಲ್ಲ$_1$** : ದುಶ್ಶಳೆ ಕೇಳ್ದು ಮಲಮಲ ಮರುಗಿ ತನ್ನಣ್ಣನಲ್ಲಿಗೆ ಬಂದು (ಕಂಕಥಾ. ೧೧-೧೨೨ ವ) ; ಮಲಮಲ ಮರುಗಿ, ಕರ್ಮಸಂತಾಪದ ಕುಲವ ಕೆಡಿಸಬೇಕೆಂದು (ಕರ್ಣಾ. ೯-೫೫). **ಮಲಮಲಂ** : ನೆನೆಯೆ ಮಲಮಲಂ ಮರುಗುವುದು (ಪಶು.೯-೧೧೮) . **ಮಲುಮಲ** : 'ಮಲುಮಲನೆ' ಪರ್ಯಾ. [ ? ]

**ಮಮ್ಮಲನೆ**, ಮಮ್ಮನೆ, ಮಲಮಲನೆ, ಮಲುಮಲನೆ (ಅ). ಅತಿಶಯವಾಗಿ : ವಿಶೇಷವಾಗಿ : ಆ ವಾಕ್ಯಮಂ ಕೇಳಿ ಮಮ್ಮಲನೆ ಮರುಗುತ್ತೆ (ಅರಾ. ೧-೬-೧೫) : ಅರಿಯದರೆಂದು ಮಮ್ಮಲನೆ ಮರುಗುವೆಯ (ಭೀಗೀ. ೯೭-೨).**ಮಮ್ಮನೆ** : ಎನಲು ಮಮ್ಮನೆ ಮರುಗಿ ಚಿಂತಾಜಲಧಿಯೊಳು ಮೈಮುಳುಗಿ (ಅಪಂಜಾ. ೧-೧೬-೧೬). **ಮಲಮಲನೆ** : ಸಪ್ತಸಾಗರ ಸಲಿಲದೊಳ್ ಮಲಮಲನೆ ಮರುಗುವ ಜಲಚರಚಕ್ರದಿಂ (ಗದಾಯು.೬-೨೦ ವ); ಮಲಮಲನೆ ಮರುಗುತ್ತವನಿಯೊಳು ತೊಳಲಲು (ಪಕಪು. ೧೫-೨೪). **ಮಲುಮಲನೆ** : ಕಲುಬರ್ತಮ್ಮೆ ಜಲನೂಡೆ ದಾಯದತಿಶಯುಬಲೆಯೊಳ್ ಮಲುಮಲನೆ ಮರುಗಿ ಸಿಲ್ಕಿರ್ದವಳಂ ಕಂಡು (ಶಬರಶಂ. ೪-೬೦) : ಸ್ತ್ರೀವೇಷದಿಂ ಜೆಗ್ಗತ್ತೆಯಾಗಿ ಪುಟ್ಟಿ . . . ಮಲುಮಲನೆ ಮರುಗಿ ನಮೊಮುತ್ತಿಕರ್ಮಂ (ಸುಕುಮಾ. ೫-೧೩). [ಮಮ್ಮಲ (< ಮಮ್ಮಲಂ) + –ಅನೆ$_1$]

**ಮಮ್ಮಟ್** 'ಮಣ್ಣಟ್' ನೋ.

**ಮಮ್ಮು**, ಮೊಮ್ಮು (ನಾ). (ಮಕ್ಕಳ ಭಾಷೆಯಲ್ಲಿ) ಊಟ.–ಆಹಾರ : ಸುಮ್ಮನೆ ಇದ್ದೇನು ಅಮ್ಮಿಯ ಬೇಡೆನು ಮಮ್ಮು ಉಣುತೇನೆ ಅಮ್ಮ ಅಳುವುದಿಲ್ಲ (ಪುರಂದ. ೧-೧೬೦ ಅಚ್ಚಿನ್ನಟಿ). **ಮೊಮ್ಮು** : ಮೊಮ್ಮು ಮಾಡಿಸು ತ್ರೀನಿ ಬಾ ಪುಟ್ಟಾ (ಜಾ).

**ಮಮ್ಮುಳಿ** ' ಮಣ್ಣಟ್ ' ನೋ.

**ಮಮ್ಮುಳಿಕೆ** (ನಾ). ತಳಮಳ ; ಸಂಕಟ : ವಿಜಯವಿಠಲ ಎನ್ನ ಮಮ್ಮುಳಿಕೆ ಹರಿಸು (ಹರಿದಾ. ೧೧೩-೧).
[ಮಮ್ಮುಳಿ (< ಮಣ್ಣಟ್) + –ಕೆ]

**ಮಯ$_1$** (ನಾ). ೧. ಒಂಟೆ. ೨. ಕುದುರೆ. ೩. ಹೇಸರಗತ್ತೆ. ೪. ರಾಕ್ಷಸರ ಶಿಲ್ಪಿಯ ಹೆಸರು ; ವಿಶ್ವಕರ್ಮನ ಅಣ್ಣ : ಕಲ್ಯಾಣಮಂಟಪಮಂ ಕೌತುಕಾವಹಮಪ್ಪಂತೆ ಮಯ ಮೊದಲ್ವರಂ ಪಳಿವ ಶಿಲ್ಪವಿದ್ಯಾವಿಶಾರದರಿಂ ರಚಿಸುತಿರ್ದಂ (ರಾಜಶೇ. ೬-೯೯ ವ). ೫. ಒಂದು ಬಗೆಯ ಪಕ್ಷಿ ; ಗರುಡ (?) : "ನೃಪಬಗಮೆನಲ್ ಮಯಮಕ್ಕು" (ಶಂಗರಾ. ೩೨-೯). [ಸಂ.]

**ಮಯ$_2$** (ನಾ). ತುಂಬಿರುವುದು ; ವ್ಯಾಪಿಸಿರುವುದು : ಮಣ್ಣಂ ಪಿಡಿಯೆ ಪೊನ್ನುಗಳ ಮಯವಾಗೆಸೆಯಲಚ್ಚರಿವಡುತ (ಬಸಪು. ೨೯-೩೨) ; ಫಲುಗುಣನ ಮಯವಾಯ್ತುಬಳತಳತಂತ್ರ (ಕುಮಾ.ದ್ರೋ. ೧೦-೬). [P ಇದು ಸಂಸ್ಕೃತದಲ್ಲಿ ಪ್ರತ್ಯಯರೂಪ. ಈ ಪ್ರಯೋಗಗಳಲ್ಲಿ ನಾಮಪದವಾಗಿ ಬಳಕೆಯಾಗಿದೆ]

**–ಮಯ$_3$** (ಪ್ರ). 'ತುಂಬಿದ', 'ವ್ಯಾಪ್ತವಾದ' ಎಂಬ ಅರ್ಥವನ್ನು ಕೊಡುವ ಒಂದು ಸಂಸ್ಕೃತಪ್ರತ್ಯಯ ; P ಕೆಲವುಕಡೆ ಕನ್ನಡ ಶಬ್ದಗಳಿಗೂ ಈ ಪ್ರತ್ಯಯವು ಸೇರಿದೆ: 'ಪೆಣಮಯ' ಪರ್ಯಾ.[ಸಂ.]

**ಮಯೂಕ**, ಮೈಕ (ನಾ). ೧. ಅಸಹಜವಾದ ಮಂಕು, — ಅಲಸಿಕೆ : ಅಸಹಜವಾದ ಅತಿನಿದ್ರೆ, ಅತಿಸುಸ್ತು. ಮಯೂಕ, ಮಂಕು, ಅಲಸಿಕೆ, ಮಾಂದ್ಯ (೧೦ಮಾ: ೩೦೪೩) ; ಅಫೀಮನ್ನು ಸೇವಿಸಿದವ . . . ಮಂಪರಗೊಳ್ಳುವನು. ತೂಕಡಿಕೆಯಿಂದ ನಿದ್ದೆ, ಮಯೂಕ (ಕೋಮ), ಕೊನೆಗೆ ಉಸಿರಾಟವೇ ನಿಂತು ಸಾಯುವನು (ಕಶಕೋ. I, ೩೬೬). **ಮೈಕ** : ೨. ಮೂರ್ಛೆ ; ಬವಳಿ : ಗುರುಗಳು ಮಹಾಶನಾಡುಷದಕೂ ಪ್ರಾಣವಿಲ್ಲದೆ

ಮೈಕದಿಂದ ಸೊಪ್ಪಾಗಿ ಬಿದ್ದಿದ್ದರು (ಜಗಗ. ೬೩) ; ನೀರಿನೊಳಗೆ ಹಾಕಿದುದರಿಂದ ಗುರುಗಳಿಗೆ ಮೈಕವು ಸ್ವಲ್ಪಮಟ್ಟಿಗೆ ನೀಗಿತು (ಜಗಗ. ೬೬).
[ದೇ.॥ ತಮಿ. ಮಲ. ಮಯುಕ್ಕಮ್ : ತೆಲು. ಮಯುಕ, ಮೈಕ]

**ಮಯಣ**, **ಮೇಣ** (ನಾ). ೧. ಜೇನುಹುಟ್ಟಿನಿಂದ ಸಿಗುವ ಒಂದು ಬಗೆಯ ಅಂಟುದ್ರವ್ಯ : "ಸಿಕ್ಥಕಮೆಂಬುದು ಮಯಣಂ" (ಶಬ್ದ. ೯೦-೯೦೦); ಸಂಗೀತ ಸಭಿಕರ ಹೃದಯಗಳನ್ನು ಮಯಣದಂತೆ ಕರಗಿಸಿತು (ಜಕ. ೬೯). ೨. ಧಾನ್ಯಗಳ ಹಿಟ್ಟು ಮೊದಲಾದುವುಗಳಿಂದ ತಯಾರಿಸುವ ಒಂದು ಬಗೆಯ ಅಂಟುದ್ರವ್ಯ; ಸರಿ : ಮೃತ್ತಿಕೆಯ ಶಿಟ್ಟದಿಂದ ಮಯಣದ ಕರುವಿಟ್ಟು (ಪ.ದೇಜ. ೨೬೩-೫೫); ಅಜೀವು ಮಯಣಕ ಭಕ್ತಿ ಮಯರಸವೆಳೆಸಿದ ಪುತ್ಥಳಿಯೆನಲು (ಕುಮಾ.ರಾ. ೬-೦೩). ೩. ಮನ್ಮಥ : "ಕುಡುವಿಲ್ಲ ... ಜೊನ್ನೊಡಲನಳಿಯುಂ ದರ್ಪಕಂ ಮಯಣನೆಂಬಿವಿಂತೊಡವೆ ಮನ್ಮಥನಾಮವು" (ಕಬ್ಬಿ.ಕಂ. ೯); ನಯವೆತ್ತಿನಿನುಡಿಯಿಂ ಜಾಣ್ಮೆಯಿನಾವ ಗಮಿನಿಯುನೆರ್ದೆಯನಿಕ್ಕುಳಿಗೊಳ್ವೀ ಮಯಣನ ಗೆಳೆಯೆವಿವಳ ಮನವಮನಿಸಿಕುಂ ಮುಪ್ಪುದಪ್ಪಗರ ಹುಸುವಾಗಳ್ (ಶೀಕ. ೬-೦೨೩); ಮಾನಿಗಳಂ ಓನವಮಯಣನ ಕಣೆಯು ಕೂರಂಬಿನೇಜಿನೊಳು ಸಾವಂತೆ ಮಾಡು ಮುದದಿಂ (ಕೃಕುಕ. ೯-೩೫). ೪. ಒಂದು ಬಗೆಯ ಹಕ್ಕಿ ; ಮೈನಾ : ದಕ್ಷಿಣದೋಳ್ ನರಿ ವರ್ತಿಸೆ ಗೂಗೆ ಮೇಣ್ ಮಯಣಾಂ ನಯದಿಂದಂ ಸಾರ್ದು ಸರಂಗುಡೆ . . . ಮನಸ್ಸಿದ್ಧಿಯನಾಗಳೆ ಉಂಟುಮಾಡುಗುಂ (ಕೋಕೋಜ. ೦೨-೦೬). **ಮೇಣ** : ೧. "ಸಿಕ್ಥಕಂ ಮೇಣಮದು" (ಕಂಗಣ. ೦೦೩-೦೪); ತಿಳಿದುಪ್ಪದೊಳಗೆ ಯಾಲಕ್ಕಿಯನರೆದು ಕುಡಿಕೆಯೊಳಗೆ ತೊಡೆದಿರಿಸಿವೊಪ್ಪಲ ಜೇನ ಹೊಸ ಮೇಣದೊಳಗದಜ ನಾಲ್ಕಡಿಯ ಬೆರಳಿಯಿಲ್ಲದ ಕುಸುಬೆಯೆಣ್ಣೆಯಂ ಕಾಸಿಕೊಂಡು (ಸೂಶಾ. ೨-೨೦); ಪುಲಿದೊಗಲ ಪೊಜ್ ಜೇನುತುಪ್ಪದ ನಳಿಗೆ ಮೇಣದ ಮುದ್ದೆ (ಸಾಕ್ಷಾ. ೦೬-೬). ೨. ಒರೆಗಲ್ಲ ರಜವ ಮೇಣದೊಳೊತ್ತಿ ತೆಗೆವದ ಕರಗಿ ಸುವರ್ಣಬಿಂದುಗವ ನೆರೆವ ಯಾಚಕರಿಗೆ ಹಂಚಿ ಕುಡುವ ಚಿನ್ನವರದರೊಪ್ಪಿದರು (ಪೋಹಶ. ೩-೨೯); ಪೆಣದು ಮೇಣದ ಬೊಂಬೆಯೆರಡು ಮೈಸೋಂಕಿ ಸಾವಡಗ್ಗೈದ ವಚ್ಚರಿಯೆಂಬೆ (ಛಜ. ೦೦-೯೬). ೩. ಕೆಲವು ಜಾತಿಯ ಮರಗಳಿಂದ ದೊರಕುವ ಒಂದು ಬಗೆಯ ಅಂಟು : ರಾಳ : ಸಾಣ್ಯ ಶಾಲ್ಮಲಿ ಪಿಚ್ಛೆಯಾ - ತುಪ್ಪದೊಡನೆ ಕೂಡಿದ ಬೂರುಗದ ಮೇಣದಿಂದ (ಸಾಹಿ. ೨-೨-೨೯ ಶ); ಓಷ್ಠ, ಹಿಪ್ಪಲಿಮೂಲ . . . ಇದರ ಎಂಟರೊಳೊಂದು ಭಾಗ ಬೇಲದ ಮರದ ಮೇಣ ಇಷ್ಟನೂ ಮರ್ದಿಸಿ . . . ತೆಗೆದುಕೊಳ್ಳಲು ಸಕಲವಾದ ಗ್ರಹಣಿಯೂ ಮಾಣ್ಗುಂ (ಸಕಚ. ೩೯೩).

**ಮಯಣದ ಬಟ್ಟೆ**=ನೀರು ಇಳಿಯದಂತೆ ಮೇಣ ಸವರಿ ಮಾಡಿದ ಒಂದು ಬಗೆಯ ಬಟ್ಟೆ; ತಾಡಪತ್ರಿ; ಮೇಣಗಪ್ಪಡ; ಟಾರ್‌ಪಾಲ್ : ಸಾಮಾನುಗಳನ್ನು ಕಟ್ಟಿ ಅದನ್ನು ಮಯಣದ ಬಟ್ಟೆಯಿದ ಮುಚ್ಚಿ ಬಿಗಿದಿದೆ (ಪ್ರಜಂ. ೩೯). **ಮಯಣದ ಬತ್ತಿ**, **ಮೇಣದ ಬತ್ತಿ** = ಮಯಣದಿಂದ ತಯಾರಿಸಿದ ಬತ್ತಿ ; ಮೋಂಬತ್ತಿ : ನಾನು ತಂದ ಮಯಣದ ಬತ್ತಿಯ ಬೆಳಕಿನಲ್ಲಿ ವಿಪುಲವಾದ ಧನರಾಶಿಯ ಚೀಲಗಳು . . . ಕಣ್ಣಿಗೆ ಬಿದ್ದವು' (ಐಂಶ್ಯ. ೦೩೯) ; ಚರ್ಚ್‌ಗಳಲ್ಲಿ ಹತ್ತಿಸುವ ಮೇಣದ ಬತ್ತಿಗಳ ತಯಾರಿಕೆಯಲ್ಲೂ ಇದರ ಬಳಕೆಯುಂಟು (ಕಂಕೋ. VIII, ೩೩೩).
[< ಸಂ॥ ಮದನ. / ಪ್ರಾ. ಮಯಣ./ತುಳು. ಮಯಣ, ಮಾಯಣ. ತೆಲು. ಮೈನಮು ; ಕೋಲಾ. ಪಾಯ್ಕಿ. ಮೇನಮ್]

**ಮಯಣಾವು**, ಮಯಿಣಾವು (ನಾ). (?) : ಎಡಬಲದ ಮಯಣಾವು ಹೊಳಹಿನ ಕಡಲ ತೆರೆವೆರೆಯುದತಿಬಹುಳಿಯ ಬಿಡೆಯ ಮವ್ವಾಳಿಗಳ ಸೂಟಿಯ ಸರಳ ಸೋಹಿನಲಿ (ಕುಮಾ.ಅ. ೬-೨). **ಮಯಿಣಾವು** : ತರಣಿಯೌರಸಪುತ್ರನೀತನ ಕರಿಯರಳು ಮಯಿಣಾಮದೆಜೀದ ಕರುವಿನಂದವಲಸುರನಿದಿರೊಳಿಂದಾರಿಗಪಮಾನ (ಕುಮಾ.ದ್ರೋ. ಹಿಂ. ೦೬-೩೪ ಅಡಿಟಿಪ್ಪ). [ ? ]

**ಮಯಿ** (ನಾ). (?) : ಬಾಳಿಂಗೆ ತೆಜುವ ತೆಜು ಬಾರಕೂರ ಪರಿವರ್ತನಕೆ ಸಲುವ ಮಯಿಕಾಟಿಗೀ ಯಾ ಬಾಳ ಅಕಿಯ ಒಳಗೆ ಗುಂಮಾನಾಯಕನ ಧರ್ಮ (ಕೌಇ. IX-ii, ೪೩೨-೦೬ : 1450) : ಗೋರಾ ಸೋಜರು ೪,೦೦೦ ಬಾರು ೬,೦೦೦ ಮಯಿ ತೋಪುಖಾನೆ ಸರಂಜಾಮು (ಸ್ವದಶ. ೪೪). [ ? ]

**ಮಯಿಂದ**, ಮಣಿಂದ, ಮಯ್ದ, ಮೆಂದ, ಮೈಂದ (ನಾ). ಒಬ್ಬಾತನ ಹೆಸರು : 'ಮಯಿಂದಡಿ' ಪರಾ. **ಮಣಿಂದ** : ಸ್ವಸ್ತಿಶ್ರೀ ಮಣಿಂದ ನೊಟಿಮ್ಮನ್ ಗಜ್ಜಬಿಸಸಿರಮು ಆಳೆ (ಎಕ. IX (S), ಹೊಸಕೋ. ೯-೧ : 875). **ಮಯ್ದ** : 'ಮಯ್ದಗಾವುಂಡ' ಪರಾ. **ಮೆಂದ** : 'ಮೆಂದಮ್ಮ', 'ಮೆಂದಯ್ಯ' ಪರಾ. **ಮೈಂದ** : 'ಮೈಂದವಾಟಿ' ಪರಾ.
[< ಸಂ. ಮಹೇಂದ್ರ]

**ಮಯಿಂದಡಿ** (ನಾ). ಒಬ್ಬಾತನ ಹೆಸರು : ಸೊಬಿಂಬದತಿಗಂ ರಾಚಮಲ್ಲ[ಂ] ಮಯಿಂದ್ದಡಿ ಗುಂಡಿಗೆಗ[ಳ್] ಎನೆಬರು ಸಮಸ್ತಬಲಂ ಬೆಜಿಸಿ ಬಿಟ್ಟೊಡೆ (ಎಇ. XXIV, ೦೯೦-೬ : 885). [ಮಯಿಂದ + ಅಡಿ$_1$]

**ಮಯಿಂದಮಯ್ಯ** (ನಾ). ಒಬ್ಬಾತನ ಹೆಸರು : ಗಾವುಣ್ಣಗಣ್ಣಯ್ಯನುಂ ಬಿಜ್ಜವರು ಮಯಿಂದ್ದಮಯ್ಯನೆಜಿಯಮ್ಮನುಂ (ಎಕ. XI, ಹೊಳ. ೫೦-೨೨; 964). [ಮಯಿಂದ + ಅಮ (< ಅಮ್ಮ$_1$) + ಅಯ್ಯ$_1$]

**ಮಯಿಂದಮರಸ**, ಮಯ್ದಮರಸ (ನಾ). ಒಬ್ಬಾತನ ಹೆಸರು: ಸ್ವಸ್ತಿಶ್ರೀ ಮಯಿಂದಮರಸ ಪೃಥಿವೀರಾಜ್ಯಂಗೆಯೆ(ಪ್ರ.ಕ. ೦೯೨೬, ೬೩-೦ : ೯ಶತ ಶ). **ಮಯ್ದಮರಸ** : ಮಯ್ದಮರಸರ ಸೂಳೆ ಕಾಡಚ್ಚ (ಎಕ. XI, ಪಾಶಾ. ೦೬-೫ : 886). [ಮಯಿಂದ + ಅಮ (< ಅಮ್ಮ$_1$) + ಅರಸ$_1$]

**ಮಯಿಂದವಾಳೆ**, ಮೈಂದವಾಟಿ (ನಾ). ಒಂದು ಬಗೆಯ ಬಾಳೆ ; ಮಹೇಂದ್ರಬಾಳೆ: ಪಣ್ತು ತಣ್ಣಲೆವ ಮಯಿಂದವಾಳೆ ವನವೊತ್ತದಿಮುರ್ತಿ ಬೆಡಂಗನಾವಗಂ ತಳೆದಿರೆ (ಕೌಇ. XI-ii, ೦೫೨-೦೨ : 1103). **ಮೈಂದವಾಟಿ** : ಗೊನೆಯೊಳ್ಪಣ್ತುದು ಮೈಂದವಾಟಿ (ಅಣ್ಣ. ೦೦-೬೬); ಕರಿಯ ಕರ್ಬಿನ ಕಾವಿನೆಳಮೈಂದವಾಟಿಯೆಲೆಯ ಬಿಜ್ಜಣಿಗೆಗಳಿಂ ಬೀಸಲ್ವೇಡಿ (ಕಂಶಾ. ೫-೬ ಶ) ; ಸಹಜಕವಿಯ ಮಹಾವ ರಚನೆಯಂತೆನಿವಪ್ಪ ಮೈಂದವಾಟಿಗಳುಮಂ (ರಶಾಸು. ೦೩-೨೩). 'ಐಂದವಾಟಿ', 'ಮಹೇಂದ್ರಬಾಳೆ' ಪರಾ. [ಮಯಿಂದ + ಬಾಳೆ$_1$ (< ಬಾಟಿ)]

**ಮಯಿಗಲಿ** 'ಮೆಯ್ಗಲಿ' ನೋ.

**ಮಯಿಗಲಿತನ** 'ಮೆಯ್ಗಲಿತನ' ನೋ.

**ಮಯಿಣಾವು** 'ಮಯಣಾವು' ನೋ.

**ಮಯಿದುನ** 'ಮೆಯ್ದುನ' ನೋ.

**ಮಯಿಭೋಗ** 'ಮೈಭೋಗ' ನೋ.

**ಮಯಿರ** (ನಾ). (?) : ಉದ್ದಂಡನಿವನೆಂದು ನೃಪಸುತರೆಲ್ಲರು ಬಂದೆ ಹೊಯ್ದು ನಗುತಿರಲವರು ಬಿದ್ದನು ನಾನೆಂದು ಮಯಿರನವರುಗಳೊದ್ದನು ಕೈಕಾಲು ಮುರಿಯೆ (ಕಾವಕ. ೪-೪೬). [ ? ]

**ಮಯಿಲತುತ್ತ** 'ಮೈಲತುತ್ತ' ನೋ.

**ಮಯಿಸಾಲ** 'ಮೈಸಾಲ' ನೋ.

**ಮಯೂಖ** (ನಾ). ೧. ಕಿರಣ ; ರಶ್ಮಿ : ನಘಮಣಿದರ್ಪಣ ನರೇಂದ್ರತಾಪಸತಪೋಮಯೂಖಾವಳಿಗಳ್ (ಶಂಶಾ. ೬-೦೯); ಸೋಮಮಯೂಖಸಂಭವೆಯರಪ್ಪ ಅಚ್ಚರಸಿಯರ್ (ಕಾದಂಪು. ೬೦೪); ಮಹೇಂದುಮಯೂಖಮಾನತೋಪಪಾಸಕಪಾಣಿಪದ್ಮವನಮಂ ಮುಗಿಸುತ್ತಿರೆ (ಪುಸ್ರಾ. ೧೫-೦೦೯); ಶ್ರೀಮದಮೃತಮಯೂಖಲೇಖಾವತಂಸಂ . . . ನಂದಿಗೀಶ (ಶಿಕ್ಷಾ. ೧-೦). ೨. ಹೊಳಪು ; ಕಾಂತಿ ; ಪ್ರಭೆ : ಮಣಿಕಿರೀಟಕಿರಣದಿಂ ತದೀಯ ಪದನಖಮಯೂಖಮಂ ಕೊರ್ವಿಸೆ (ಪುಂಸಶ. ೬-೦೬೩ ಶ); ಚರಣಸ್ಫುರನ್ಮಖ

ಮಯೂಖದ ಬೆಳ್ಪುಪಹಾರಪುಷ್ಪಮಂ ದ್ವಿಗುಣಿಸೆ (ಜಗ. ೨-೬೩). ೩. ಉರಿ ; ಜ್ವಾಲೆ : "ಕಿರಣಮುಂ ಕೀಲಂ ಮಯೂಖಾಂಕಿತಂ" (ಶಾಶಾರ. ೯೬); ಕೋಕಪ್ರಸರಂ ಸೀಯಲ್ ಮಯೂಖಂ (ಶಾಶ. ೬-೨೬). [ಸಂ.]

**ಮಯೂರ** (ನಾ). ೧. ನವಿಲು : ಪರಭೃತಮಾಯಮುಂ ಮಯೂರಮಯಮುಮಾಗಿ (ಶಾರಂಘ. ೬೨೬) ; ಮಯೂರನವಬರ್ಹಾಳಂಕೃತಂ . . . ಶೌರಿ ಘನಾಗಮಂಬೊಲೆಸೆದಂ (ಜಗ. ೪-೩೬); ಕೇಗಿ ತನ್ನೊಂದಾಡಂಬರದಿ ಮಯೂರಂ ತಾಂಡವಕ್ಕಾರಂಭಿಸಲೊಡಂ (ರಾಪನಕ. ೪೨-೦೮). ೨. ಓಮ; ಅಜವಾನ. ೩. ಒಂದು ಬಗೆಯ ಸಸ್ಯ: ಉತ್ತರಣೆ ಗಿಡ. ೪. ದೇವತೆಗಳಲ್ಲಿ ಒಂದು ಪಂಗಡ : ಮಯೂರರು . . . ದನುಜರೆಯ್ದೆ ನೆರೆಯಿತು ತಮ್ಮ ಪರಿವಾರ ಸಹಿತ (ಹರಿ. ೧೪-೧): ಗಂಧರ್ವ ವಿದ್ಯಾಧರ ಮಯೂರಾಸುರ ವಿಯಚ್ಚರ ಯಕ್ಷ ರಾಕ್ಷಸರು (ಐಸಭ. ೯-೩೨). ೫. ಸಂಸ್ಕೃತದ ಒಬ್ಬ ಕವಿಯ ಹೆಸರು : ಬಾಣ ಮಯೂರನಂತೆ ಬಣ್ಣಿಸಬಲ್ಲೆನೆ (ಐಸಪ. ೩೦೯). ೬. [ಛಂದ] ಅಕ್ಷರಛಂದಸ್ಸಿನಲ್ಲಿ ಪ್ರಸಿದ್ಧವಾಗಿರುವ ಇಪ್ಪತ್ತಾರು ಬಗೆಯ ಛಂದಸ್ಸುಗಳಲ್ಲಿ ಒಂಬತ್ತನೆಯ ಬೃಹತಿ ಎಂಬ ಛಂದಸ್ಸಿನ ಒಂದು ವೃತ್ತ : ಅಮರಗಣಮಾತತೋಯಂ ಸಮನಿಸಿರೆ ನಾಮದಿಂದಂ ಗಮಿಸಿತಿದು ನಾಕಿಯಿಂದಂ ರಮಣಿಯುಜ್ ನೀಂ ಮಯೂರ (ಛಂದೋಂಬು. ೨-೦೦೩). ೧. ೬ : ಹರಿಣೀ ಮತ್ತೇಭವಿಕ್ರೀಡಿತಂ ಲಲಿತ ಮಯೂರಾನ್ವಿತಂ, ಛಂದಮಂ . . . ಪೋಲ್ವು ಚೆಲ್ವಾಯ್ತುರಣ್ಯಂ (ಶಾಶಶ. ೩-೬೩). [ಸಂ.]

**ಮಯೂರಕ** (ನಾ). ೧. ನವಿಲು. ೨. ಒಂದು ಬಗೆಯ ಸಸ್ಯ: ಉತ್ತರಣೆ. ೩. ಮೈಲುತುತ್ತ : "ಮಯೂರಕಃ—ಮಯೂರತುತ್ತ" (೬ಶಂ. ೦೨೪). [ಸಂ.]

**ಮಯೂರಕಂಠ** (ನಾ). ಮೈಲುತುತ್ತ : "ಮಯೂರಕಂಠಂ ಕರ್ಪರಿಯು ನಿಕ್ಕ" (ಮಂಗನಾ. ೪೩-೪೨). [ಸಂ.]

**ಮಯೂರಕೊಂಡಿ** (ನಾ). ಒಂದು ಸ್ಥಳದ ಹೆಸರು : ತದ್ದಕ್ಷಿಣತಃ ಓಚ್ಚಗೆಗ್ರಾಮಪಥಾನ್ನಿರ್ಗತ ಜಳಪ್ರವಾಹಂ ತತಃ ಪಾವಕದಿಶಿ ಮಯೂರಕೊಂಡಿ (ಶಾಶಾ. XX, ೬-೨೨ ; ೭೩೦). [ಮಯೂರ + ಕೊಂಡಿ]

**ಮಯೂರಗಮನ** (ನಾ). ನವಿಲಿನ ಮೇಲೆ ಸಂಚರಿಸುವವನು: ಷಣ್ಮುಖ. **ಮಯೂರಗಮನ ಪಿತ** = ನವಿಲುವಾಹನನಾದ ಷಣ್ಮುಖನ ತಂದೆ; ಶಿವ : ಘನಮಯೂರಗಮನ ಪಿತಂ ಕರುಣಿಸುವನೆಂದೊ (ಐಸಪು. ೪೩-೪೪). [ಸಂ.]

**ಮಯೂರತುತ್ಥ** (ನಾ). ಒಂದು ಬಗೆಯ ಖನಿಜಲವಣ: ಮೈಲುತುತ್ತ: "ಮಯೂರಿಕಾ—ಮಯೂರತುತ್ಥ" (೬ಶಂ. ೧೦೯) ; ಮಯೂರತುತ್ಥ, ಬಿಳಗಾರ . . . ಇವಿಷ್ಟನು ಮರ್ದಿಸಿ (ವೈವೃಸಾ. 1. ೦೦೩). [ಸಂ.]

**ಮಯೂರಧ್ವಜ** (ನಾ). ೧. ನವಿಲಿನ ಗುರುತಿರುವ ಬಾವುಟ : ದನುಜೋತ್ತಮನ ಮಯೂರಧ್ವಜವು ಕಡುರಮ್ಯಮಾಗಿ (ಶಶಮೋ. ೨-೩೬). ೨. ಷಣ್ಮುಖ. ೩. ವಿಷ್ಣುಭಕ್ತನಾದ ಮಣಿಪುರದ ಒಬ್ಬ ರಾಜನ ಹೆಸರು : ಮಜಗುತೆ ಮಯೂರಧ್ವಜಂ ಮಂತ್ರಿಗಿಂತೆಂದನು (ಜೈಮಿ. ೨೩-೩೯). [ಸಂ.]

**ಮಯೂರನಾಡಿ** (ನಾ). ಶರೀರದಲ್ಲಿನ ಒಂದು ನಾಡಿಯ ಹೆಸರು : ಮಯೂರನಾಡಿ, ಮಂಡಕನಾಡಿ, ಭಲ್ಲುಕನಾಡಿ . . . ಇಂತೀ ನಾಡಿಗಳೊಳಗುದ ಶರೀರ (ಶರಸ. ೪೮೦). [ಸಂ.]

**ಮಯೂರಪದ** (ನಾ). [ಕಾಮಶಾ] ಒಂದು ಬಗೆಯ ನಖಕ್ಷತ : ನವಿಲು ಕಾಲಿನ ಆಕಾರವುಳ್ಳ ಉಗುರುಗಾಯ : ಸುರತಸಮಯದಲೆಳೆಯು ತೊರೆದ ರೇಖೆಗಳ ಚಿತ್ರದಿಂ ಮಯೂರಪದಮೊಸಿಸಿರ್ಪುದು (ಶಶಶ. ೬-೪೦). [ಸಂ.]

**ಮಯೂರಪಿಂಛ** (ನಾ). ನವಿಲುಗರಿ : ಅಂಗರಾಗಪರಿಮಳಪ್ರಬದ್ಧಮಂಡಲಾಳಿರಂಜಿತಮಯೂರಪಿಂಛಾತಪತ್ರನುಂ (ಶಾರಂಘ. ೦೬೬). [ಸಂ.]

**ಮಯೂರಲಲಿತ** (ನಾ). [ನಾಟ್ಯ] ನೂರೆಂಟು ಕರಣಗಳಲ್ಲಿ ಒಂದು : "ಕೈಗಳನ್ನು ರೇಚಿತಮಾಡಿ ಸ್ವಾಭಾವಿಕವಾಗಿರಿಸಿ, ಚೇಳಿನ ಬಾಲದಂತೆ ಕಾಲನ್ನು ಹಿಂದಕ್ಕೆತ್ತಿ ಪೃಷ್ಠವನ್ನೂ ಬಗ್ಗಿಸಿ ಸುತ್ತುವುದು" (ರಾಸ್ಮರಂ. ೩೦೦ ಗದ್ಯಮಾದ) : ಮಯೂರಲಲಿತ: ಕಯ್ಯಿರಡುಂ ರೇಚಿತಮಂ ಗೆಯ್ಯುತ್ತಂ ಬಿಟ್ಟು ಸಯ್ತಿರಲ್ಕಂ ಮತ್ತಂ ರಯ್ಯಮೆನೆ ತೇಳ ಬಾಲದ ಪೆಯ್ಯೊಳ್ ತ್ರಿಕ ಬಾಗಿ ತಿರುಗೆ ಕೇಕೀಲಲಿತಂ (ರಾಸ್ಮರಂ. ೪-೦೪೦). [ಸಂ.]

**ಮಯೂರಶಿಖಿ. ಮಯೂರಸಿಖಿ** (ನಾ). ಒಂದು ಸಸ್ಯದ ಹೆಸರು : ಅರಿಸಿನ, ಮಯೂರಶಿಖಿ, ಶುಂಠಿ . . . ಚೂರ್ಣವ ಮಾಡಿ (ಸಕವೈ. ೨೩೪). **ಮಯೂರಸಿಖಿ** : "ಮಧೂಕಪರ್ಣಿ—ಮಯೂರಸಿಖಿ, ನೆಲಗಡುವ" (೬ಶಂ. ೦೨೦). [ < ಸಂ. ಮಯೂರಶಿಖಾ ]

**ಮಯೂರಸಿಖಿ** 'ಮಯೂರಶಿಖಿ' ನೋ.

**ಮಯೂರಸಿಲೆ** (ನಾ). ಒಂದು ಬಗೆಯ ಧಾತು : ಮಯೂರಸಿಲೆಯುಂ ಒಂದೇ ವರ್ಣದ ಹಸುವಿನ ಹಾಲಲ್ಲಿ ಕುಡಿಯೆ ಗರ್ಭವಾಕ್ಯಂ (ರಿವೈರ. ೬). [ಮಯೂರ + ಸಿಲೆ]

**ಮಯೂರಾಂಡರಸನ್ಯಾಯ** (ನಾ). [ತರ್ಕಶಾ] ಒಂದು ಬಗೆಯ ನ್ಯಾಯ; ☞ ನವಿಲಿನ ಮೊಟ್ಟೆಯಲ್ಲಿ ಸೂಕ್ಷ್ಮರೂಪದಿಂದ ಇದ್ದ ಪಾದ, ಪಕ್ಷ, ವರ್ಣ ವೈಚಿತ್ರ್ಯಾದಿಗಳು ಸ್ಥೂಲವಾಗಿ ವ್ಯಕ್ತವಾಗುವುದು : ಶಿವನು ತನ್ನಲ್ಲಿಯೇ ಸೂಕ್ಷ್ಮವಾಗಿ ಅಡಗಿದ್ದ ವಿಶ್ವವನ್ನು ಹೊರಹೊಮ್ಮಿಸಿ ಪ್ರಕಾಶಪಡಿಸುತ್ತಾನೆ. ಈ ವಿಧವಾದ ಸೃಷ್ಟಿಯನ್ನು ಮಯೂರಾಂಡರಸನ್ಯಾಯಕ್ಕೆ ಹೋಲಿಸುವರು (ಶಾಕಪ. ೨೦೨). [ಸಂ.]

**ಮಯೂರಾಸನ** (ನಾ). ೧. ನವಿಲಿನ ಆಕಾರದ ಮೇಲೆ ಪೀಠವಿರುವಂತೆ ಮಾಡಿರುವ ಆಸನ; ☞ ಹಿಂದೂದೇಶದಲ್ಲಿ ಇದು ಮೊಗಲರ ಕಾಲದಲ್ಲಿ ಸುಪ್ರಸಿದ್ಧವಾಗಿತ್ತು. ೨. [ಯೋಗ] ಒಂದು ಆಸನದ ಹೆಸರು : ಗರುಡಾಸನ ಮಯೂರಾಸನ . . . ಅರ್ಧಾಸನಾದಿ ಎಂಭತ್ನಾಲ್ಕು ಆಸನಭೇದಂಗಳು (ಏಶೀಶ. ೦೪೪): ಮುಖ್ಯವಾದ ಆಸನಗಳು: ೧. ಉತ್ತಾನಾಸನ . . . ೧೬. ಮಯೂರಾಸನ (ಶಾಕಪ. ೦೬೬). [ಸಂ.]

**ಮಯ್ದ** 'ಮಯಿಂದ' ನೋ.

**ಮಯ್ದಗಾವುಂಡ** (ನಾ). ಒಬ್ಬಾತನ ಹೆಸರು : ಶ್ರೀಮದ್ದಿವ್ಯಶಕ್ತಿಪಣ್ಡಿತ ಭಟಾರರ ಮಯ್ದಗಾವುಣ್ಡನುಂ ಪಾದಮೂಲಮುಂ ಪನ್ನಿಕದಬಿಗ ಪಣ್ಡಿಕ್ಕಳು ಬಿಟ್ಟು (ಎಕ. X (೩), ಶಿಗಬ. ೨೬-೬ ; ೯೩೮೬ ೩೩). [ ಮಯ್ದ (<ಮಯಿಂದ) + ಗಾವುಂಡ (< ಗಾಮುಂಡ) ]

**ಮಯ್ದಮರಸ** 'ಮಯಿಂದಮರಸ' ನೋ.

**ಮಯ್ದುನ** 'ಮೆಯ್ದುನ' ನೋ.

**ಮಯ್ದುನತನ, ಮೈದುನತನ** (ನಾ). ೧. ಗಂಡನ ಅಥವಾ ಹೆಂಡತಿಯ ತಮ್ಮನಾಗಿರುವಿಕೆ. ೨. ಸಹೋದರಿಯ ಮಗನಾಗಿರುವಿಕೆ : (೪). **ಮೈದುನತನ** : ೩. ಸೋದರತ್ತೆಯ ಮಗನಾಗಿರುವಿಕೆ : ಅನತನೂಜನ ಕೂಡೆ ಮೈದುನತನದ ಸರಸವನೆಸಗಿ ರಥದೊಳು ದನುಜರಿಪು ಬರಸೆಳೆದು ಕುಳ್ಳಿರಿಸಿದನು ಪೀಠದಲಿ (ಕುಭಾಗಾ. ೦೦-೨). [ಮಯ್ದುನ (< ಮೆಯ್ದುನ) + -ತನ]

**ಮಯ್ಮು, ಮಯ್ಮೆ** (ನಾ). ಗಾಬರಿ ; ಗೊಂದಲ : "ಮಯ್ಮೆಸೆ ತಜತಜಿಸುವ ಭಾವಂ" (ಶಶಾ. ೪. 1. ೬೨): ನಂಬಿ ಬದುಕುವನೆಂದು

ಮಯ್ಮೆನಿಂದುಡೆ ಪರಿದುಮಂಬಲಿಸುತ (ಶಾಂತಿ. ೯೯-೦೯೬). ಮಯ್ಮೆ₂ : ಸುಡದೆದೆಯ ಕೆಚ್ಚುಗಳ ಕಿಚ್ಚಲ್ತೆ ಮಯ್ಮೆ (ಶಾಂತಿ. ೦೦೯-೨೨೩). [?]

**ಮಯ್ಮೆ₁**, ಮೆಯ್ಮೆ, ಮೈಮೆ (ನಾ). ೧. ಶ್ರೇಷ್ಠತೆ ; ಹಿರಿಮೆ ; ಘನತೆ: ಮನ್ನಿಸಿ ಮಯ್ಮೆ [ಶಾಶಾಂ. ಮೆಯ್ಮೆ, ಮೈಮೆ]ಯಿಂ ಮೆಱೆದು ಪುಂಸವನಂ ಮೊದಲಾಗೆ ತಕ್ಕುವಂ ತನ್ನನಿಮಳ್ಗೆ ಮಾಡಿಸಿದಂ (ಪುಣ್ಯ. ೯-೦೦೯). ಮೆಯ್ಮೆ : ೧. ಸಕಳ ಜಗತ್ತಿಳಿಕನುಱಿದಿರ್ದ ಮೆಯ್ಮೆಯು ವಿಳಾಸಮೆಮಾಗಾ ತನಿಲ್ಲದಂತೊವ್ವುಗುಮೋ (ಅಜಿತ. ೬-೧೦೭) ; ಪರಿಜನಪಾರಿಜಾತಲತೆ . . . ಪಯೂರಸವಾರ್ಧಿ ಸುಧಾಂಶುಲೇಖೆಯೆಂಬರ ನುಡಿಗಳ್ಗದರ್ಪಿಸಿಪ ಮೈಳಲದೇವಿಗೆ ಮೆಯ್ಮೆಯೊಪ್ಪದೇ (ಎಕ. XIII, ೩೦೭-೬೫; 1125) ; ನಿನ್ನ ನಿಜಮುಕ್ತಿಗಂ ಮೆಯ್ಮೆಗಂ ತಚ್ಚಾಪಮನುಕೂಲಂ (ಶಬ್ದರಾ. ೫-೩೭). ೨. ಪ್ರಭಾವ ; ಶಕ್ತಿ : ಇವರಜಃಮಿಂತಿವರಾರ್ಪಿಂತಿವರೆಳಸಿಂತಿವರ ಗೆಯ್ಮೆ ಮೆಯ್ಮೆಗಳಿಂತೆಂದವರಿಂಗಿತವಂ ತಿಳಿಮ (ಅಶ್ವ. ೦೯೮-೦೩) ; ಆ ಸಂಜುಗೆಯಿಂ ನಿನ್ನ ಸೂರಾನೆಮೆಯ್ಮೆಯುಂ ತೋಳ್ಕೈಗೈದಿದೆ ಕಣಾ (ಶ್ರೀರಾಮ. ೨೨೧-೨೯೦). ಮೈಮೆ : ೧. "ಮೈಮೆಯೆನಲ್ ಮಹಿಮೆ" (ಶಬ್ದ. ೯೯); ದೋರ್ವಲಕ್ಕಂ ಮೈಮೆಗಂ ಮೋಕ್ಷಕ್ಕಂ ಮಹಾಸಮುದ್ರ ದೊಳ್ ಮಹಾ ನದಿಗಳ್ ಕೂಡುವಂತೇಬಕ್ಷೋಹಿಣೀಬಲಂ ಕೂಡಿ ನಡೆಯೆ (ಕುಶಲ. ೯-೯೫ ಪ) ; ಮೈಮೆಯುನೀತು ಜಗತ್ರಯಕ್ಕೆ ಮಾಡಿಪ್ಪುದು (ಪುಷ್ಪ. ೧-೯೯) ; ದೇವಮಾನವರ ಘಂಗಿ ಬೇರ್ವಡಿಸಿ ತೋರಿಸಿಹುದೆ ಮೈಮೆ (ಅರಳು. ೯೩೫-೨). ೨. ಜಾಗದ ಯಾಗದ ಭೋಗದ ಮೈ [ಶಾಶಾಂ. ಮಹಿ]ಮೆಗೆ ಸುಯೋಧನು ಬೆಱಗಾದಂ (ಕುಶಲ. ೬-೬೭) ; ಮೈಮೆ ಮಡಿ ಯಿತ್ತುತ್ಸಾಹವಿಂಗಿತ್ತು (೧೦೪. ೮-೬೨) ; ಮೆರೆಯುತಿಪ್ಪುವು ನೂರಾರು ಮೈಮೆಗಳು ಸೃಷ್ಟಿಯಲಿ (ಕುಂಭ. ೬೨೦). [ಸಂ. ಮಹಿಮನ್]

**ಮಯ್ಮೆ₂** 'ಮಯ್ಮ' ನೋ.

**ಮಯ್ಲ** 'ಮೈಲಿ₁' ನೋ.

**ಮಯ್ಲತೆಗೆ** 'ಮೈಲಿತ್ತೆಗೆ' ನೋ.

**ಮಯ್ಲ**, ಮೈಲು₁, ಮೈಲ್₁ (ನಾ). ನವಿಲು ; ಮಯೂರ : "ಮಯ್ಲು(ಮೈ)- ಮಯೂರ = ನವಿಲು" (ಶಬ್ದಕೋ. ೩೯). ಮೈಲು₁ : 'ಮೈಲುವಾಹನ' ಪರಾ. ಮೈಲ್₁ : ಮಚ್ಚರದಾಬುಮಂ ಮಱೆದು ಕೈಮುಗಿದು ತೊಱೆದುಟ್ಟು ತೊಟ್ಟು ಪೆಟ್ಟುಪಟ್ಟಮೊಪ್ಪಂಬಡು ಮಡಿದು ಮೈಲೆಮ ನಟ್ಟನೆಯಂತೆ ಸೂಲಮಂ ಬಿಟ್ಟಿಸಿ . . . ಬಾಗಿಲಲ್ಲಿ ಪುಲ್ಗಚ್ಚಿ ಘಗುತ್ತುವಿರ್ಪರ್ (ಅಜಿತ. ೦೩-೯೬).

[ದೇ.॥ ತಮಿ. ಮಲ. ಮಯಿಲ್; ತುಳು. ಮೈರ್ ; ಕೊಡ. ಮಯ್ಲ; ಪರ್ಜಿ. ಮನೀಲ್. / ಸಂ. ಮಯೂರ]

**ಮಯ್ವೞು** 'ಮೆಯ್ವೞು' ನೋ.

**ಮಯೂರ್**, ಮಹಿಶೂರು, ಮಹಿಸೂರು, ಮಹೀಶೂರು, ಮೈಸೂರು (ನಾ). ಒಂದು ನಾಡಿನ ಹೆಸರು ; ಕರ್ನಾಟಕರಾಜ್ಯದ ಈಗಿನ ಪ್ರಸಿದ್ಧವಾದ ನಗರ : ಅನ್ತೆ ಸನ್ದ ಬಳವಗೆಯ ದೀಣೆಯೋ ಅನ್ತೆ ಸನ್ದ ಮಯೂರ ಬಟ್ಟೆಯ ಕಲ್ಪಿಪ್ಪೆಯೋ . . . ಅಂತೆ ಕಗ್ಗಲ್ಲ ಸರದುವಿಡಿದು ಬನ್ದ ಕಗ್ಗಲ್ಲ ಪೊಱಡೆ (ಎಕ. XXXVI. ೦೦೯-೦೬೨; 962). ಮಹಿಶೂರು : ಸಹಜುಲದೊಡನೆ ಬಂದರ್ ಮಹಿಶೂರಿಂ ರಾಜದೇವರ ಜೀಯರ್ (ಕಳಾ. ೨-೯೮) ; ಚಾಮರಾಜನಗರ ಮಹಿಶೂರು ಮುಂತಾದ ಸ್ಥಲಂಗಳಲ್ಲಿ ದೇವರಿಗೆ ಸಮರ್ಪಿಸಿದ ರತ್ನಮಯಂಗಳಾದ ಕೃಷ್ಣರಾಜ ಮುದ್ರೆಗಳೆಂಬ ಭೂಷಾರತ್ನ (ಎಕ. V (R), ಮೈಸೂರು. ೩೬-೦೩ ; 1829). ಮಹಿಸೂರು : ಆ ಪುರದಲ್ಲಿಯೂ ಮಹಿಸೂರ ದೇವ ×× ರಾಜಮಂಡಕಿ ತ್ರಿಯಂಬಕದೇವರಲ್ಲಿ ಪರ್ವತ್ಯೆಯನವರೂ ನಿಲಿಸಿದ ಧಂಮ್ಮಶಿಲಾ ಶಾಸನ (ಎಕ. III (R), ಗುಂಡ್ಲುಪೇ. ೦೩೫-೨೯ ; 1492). ಮಹೀಶೂರು : ಮಹೀಶೂರ ಶ್ರೀಕೃಷ್ಣರಾಜವಡೆಯರೈಯನವರು ವೆಂಕಟರಾಮಯಗೆ ಬರೆಸಿಕೊಟ್ಟ ಕ್ರಯ ಭೂದಾನ ತಾಂಮ್ರದ ಶಾಸನದ ಕ್ರಮವೇತೆಂದರೆ (ಎಕ. III (R), ಕೊಳ್ಳೇ. ೩೦೬-೬ ; 1761). ಮೈಸೂರು : ಮೈಸೂರ ಹೊಯ್ಸಳಗೌಂಡ ಕುಂಬಗೌಂಡ ... ಮೈಸುನಾಡ ಸಮಸ್ತ ಪ್ರಭುಗೌಂಡು ಗಳು ಕುಮಾರನ ಬೀಡಿನ ಶ್ರೀಬೆಂಬೇಸ್ವರದೇವರಿಗೆ ಪೂರ್ಬ್ಬಮರಿಯಾದೆಯಿಂ ನಡವ ದೇವದಾನ(ಮೈಸೂ. ೦೯೩೮. ೯೨-೭; 1178); ಸೃಷ್ಟಿಯೊಳಗೆ ಮೈಸೂರು ಪಟ್ಟಣದ ನೃಪಕುಲದೇವತೆಯೆನಿಸಿದ ಬೆಟ್ಟದ ಚಾಮುಂಡಿಯಾಹಳು (ಕಾಪೂ. ೨-೩೮). ॥ 'ಮಹಿಷ' ಎಂಬುವರ ತದ್ಭವವಾಗಿ 'ಮಯ್ಸ' ಎಂಬ ರೂಪವು ಬೆಳೆದು ಬಂದಿರಬೇಕೆಂದು ಕೆಲವು ವಿದ್ವಾಂಸರ ಅಭಿಪ್ರಾಯವಿದೆ. [ಮಯ್ಸ₁₀ (॥ < ಸಂ. ಮಹಿಷ) + ಊರ್]

**ಮಯೂರ್ನಾಡು**, ಮೈಸುನಾಡು (ನಾ). ಒಂದು ನಾಡಿನ ಹೆಸರು : ಇದರ್ಕೆ . . . ಮಯೂರ್ನಾಡೆಪ್ಪತ್ತು ಬಳ್ಳವಿನಾಡು ಸಾಕ್ಷಿ (ಎಕ. VI, ಕಡೂರು. ೯-೨೨ ; 990). ಮೈಸುನಾಡು : ಮೈಸುನಾಡು ಸಪ್ತತಿ ಮಧ್ಯೆ ಬಱಿಕೋಡು ನಾಮಗ್ರಾಮ (ಇಐ. VIII, ೨೦೩-೭೦ ; 10 ನೆಯ ಶತ ?) ; ಬೃಹವಾರದನ್ದು ಮೈಸುನಾಡ ಬೆಲೂರನ್ದನಾಡ ×× ಮೆಯ . . . ಮಗ ಚಾಮಗಲಣ್ಣನ ××× (ಎಕ. III, ನಂಜನ. ೦೨೫-೬; 1109 ?). [ಮಯೂರ್ + ನಾಡು]

**ಮರ₁** (ನಾ). ೧. ದೊಡ್ಡದಾಗಿ ಬೆಳೆದ ಸಸ್ಯ ; ವೃಕ್ಷ ; ತರು : "ವೃಕ್ಷಃ . . . ದ್ರುಮಃ, ಪಾದಪಃ- ಈ ೧೯ ಮರಂ" (ಹಲಾಯು. ೨೯-೨೩) ; ಆಮೋದಕುಸುಮಸಮಿತಿಯನಾ ಮರಗಳೊಳಾಯ್ದು ಕೊಯ್ದುವಿಲ್ಲಗೆ ಬರ್ಪಂ (ಕವಿರಾ. ೩-೦೩೩); ಪೂವಿನ ಪೊಸಗೊಂಚಲಿಂ ಮರನಿದೇನೆಸೆದಿರ್ದಪೊ (ಕುಶಲ. ೦-೦೦೬); ಸುರತರು ಕಾಡ ಮರನಾಯ್ತು (ಕುಮಾರವ್ಯಾ. ೦೯-೫೨). ೨. (ಸಾಮಾನುಗಳನ್ನು ಮಾಡಲು ಬಳಸುವ) ವೃಕ್ಷದ ತುಂಡು : ಚೌಬೀನೆ : ನೂಲ ತಲೆಯೊಳ್ ಕೀಲಂ ಬೆಟ್ಟಿರ್ದ ಮರನಂ ಕಂಡದಱ ಮೇಲೆ ಕುಳ್ಳಿರ್ದು (ಕುಶಲ. ೩೦-೬); ತಗುಳ್ದು ಮರಂಗಳನ್ನೊಟ್ಟಿ ಕೀಟ ನಿಟ್ಟೇಱಿ (ಸುಕುಮಾ. ೫-೦೬). (ಗು). (ಅಲಂ) ೩. ದಟ್ಟವಾದ : 'ಮರಗಟ್ಟಲೆ', 'ಮರಗಾಡು' ಪರಾ. ೪. ಒರಟಾದ; ಬಿರುಸಾದ : 'ಮರಗಬ್ಬು' ಪರಾ. ೫. ದೊಡ್ಡ : 'ಮರಸರ್ಪ' ಪರಾ. ೬. (ಅಲಂ) ನೀರಸವಾದ : 'ಮರವಾಳ್₁' ಪರಾ.

ಮರಗುಜ್ಜು = (ಅಲಂ) ಬಹಳ ಕುಳ್ಳು : ಸುರಪತಿಯ ತಮ್ಮನಾಗುದಿಸಿ ಮರಗುಜ್ಜಾಗಿ ಹರಿ ಬಲಿಯ ಬಂಧಿಸಿ (ಕಾಪೂ. ೩-೬೩). ಮರದ ಜಡೆ = ಆಲ ಮುಂತಾದ ಮರಗಳ ಕೊಂಬೆಗಳಿಂದ ಇಳಿಬಿದ್ದ ಬೇರು,–ಜಟೆ; ಬೀಳಲು : "ಮರದ ಜಡೆಯೆನೆ ಮರದ ಬೀಳಕ್ಕುಂ" (ಕಶಕ. ೯೭). ಮರದ ಬಟ್ಟಿ, ಮರನ ಬಟ್ಟಿ = ಒಂದು ಬಗೆಯ ತೆರಿಗೆ ; ಹಿರಿಯರ ಮನೆಯಿಂದ ಬಂದ ಬಟ್ಟಿ ಬಿಡಾರ ಮರದ ಬಟ್ಟಿ ಕ್ರಯ ಕಡ್ಡಾಯ (ಎಕ. VII, ಶಿವಮೊ. ೬೨-೨೯ ; 1431) ; ಕ್ರಯ ಕಡ್ಡಾಯ ಬಟ್ಟಿ ಬಿಡಾರ ಸೇಸೆ ಮರನ ಬಟ್ಟಿ ಜೋಡಿ ಗ್ರಾಸ (ಮೈಸೂ. ೦೯೯೦, ೩೬-೯೯; 1399). ಮರಣಾಗು = ಮರ ಗಟ್ಟು ; ಜೋಮು ಹಿಡಿ : ವಾಘೆಯಲಿ ಕೈ ಬಿಗಿದುದಂಕಣೆದೊಡಕಿನಲಿ ಮರನಾದವಂಘ್ರಿಗಳು (ಕುಮಾರ. ೨-೦೩). ಮರಮುಟ್ಟು = ಮರ, ಗಿಡ, ಪೊದೆ ಮೊದಲಾದುವು : ಕಂಗೆಡುತ ಕೆಲರು ಮರಮುಟ್ಟುಗಳನೇಱಿತು (ಕೌಶಿಕಾ. ೨೫-೦೩) ; ರಾಮೇಶ್ವರಲಿಂಗವನ್ನು ಕಂಡು ಅಲ್ಲಿದ್ದ ಮರಮುಟ್ಟು ಗಿಡಗಳನ್ನು ಕಡಿಸಿ ಮೈದಾನ ಮಾಡಿಸಿ (ಕೆಳವ. ೨-೧೯). ಮರಮುಂಡು = ಮರಮುಟ್ಟು : ಉತ್ತರವಾದುವತ್ತಣಿಂ ಕಲ್ಗುಂಡು ಮರಮುಂಡು ಬುಡಪೇರುಕೊಂಬೆಗಳ್ (ಶ್ರೀರಾಮ. ೬೯೬-೯೦೦). ಮರಮುಟ್ಟು = ಮರದಿಂದ ಮಾಡಿದ ಸಾಮಾನು ; ಮರದ ಸಾಮಾನು : ಹೂಡಿದಲು ಮರಮುಟ್ಟು ಮಾಂಸದ ಗೋಡೆ ಚರ್ಮದ ಹೊದಿಕೆ ನರವಿನ ಕೂಡೆ ಹಿಂಡಿಗೆ

ಬಿಗಿದ ಮನೆಯೊಳಗಾತ್ಮನಿರುತಿರಲು (ಹಂಜಾ. ೬೫) ; ಮನೆಯನ್ನು ಕೆಡವಿ ಮರಮುಟ್ಟುಗಳನ್ನೆಲ್ಲಾ ಮಾರಿಕೊಂಡಿದ್ದರು (ಅರಟು. ೦೬೦). **ಮರ ಹೊಡೆ** = ಉತ್ತ ಭೂಮಿಯನ್ನು ಮರದ ಸಾಧನದಿಂದ ಸಮಮಾಡು : ಹೊಲಕ್ಕೆ ನಾಳೆ ಮರ ಹೊಡೆಯಬೇಕು (ಜಾ). [ ದೇ.॥ ತಮಿ. ಮಲ. ಮರಮ್ ; ತುಳು. ಕೊಡ. ಮರ ; ತೆಲು. ಮ್ರಾನು, ಮಾನು ; ಪರ್ಜಿ. ಮೆಂ ; ಗೊಂಡಿ. ಮರಾ. ಕುಇ. ಮ್ರಹ್ನು ; ಕುವಿ. ಮ್ರಾನು ]

**ಮರ೨** 'ಮೊಱ' ನೋ.

**ಮರಂಗಡಿ**, ಮರಗಡಿ (ಕ್ರಿ). ಮರವನ್ನು ಕತ್ತರಿಸು ; ವೃಕ್ಷವನ್ನು ಕಡಿ : ತಮ್ಮ ಮೇಲೆ ತಾವೆ ಮರಂಗಡಿದರೆಂಬಂತೆ (ಹಂತಕಂ. ೨೦೬-೦೦). **ಮರಗಡಿ** : ವಿರೋಧಿಗೆ ಮಾಱೂಪೊ ತನ್ನ ಮೇಲೆ ತಾಂ ಮರಗಡಿಪೊಂ (ಶಾಂತಿಪು. ೨-೪೦). [ ಮರ$_1$ + ಕಡಿ$_1$ ]

**ಮರಂಗಲ್** (ನಾ). ಒಂದು ಸ್ಥಳದ ಹೆಸರು : ಮರಂಗಲ್ಲೊಡೆಯ ಕಣ್ಣಮ್ಮಯ್ಯನಾ ಮಗನ್ ವಿಲಗಣ್ಣಯ್ಯನು . . . ತೊಱುಗೊಳೊಳ್ ಸತ್ತೋ (ಎಕ. X, ಬಾಂಗ್. ೬೪-೩ ; ೯೦೦) ; ಕಳ್ಳಪರಿಯ ಮರಂಗಲ್ಲೊಳ್ ಪನ್ನಿಕೊಳ್ ಗಬ್ದ (ಎಕ. X (೮), ಬಾಗೇಪ. ೯೩-೭ ; 10ನೆಯ ಶತ). [ ? ]

**ಮರಂದ** (ನಾ). ಹೂವಿನ ಬಂಡು ; ಮಕರಂದ : ಪಾದಳಿವ್ರಜಕೆ ಮರಂದದಱಿಸನೂಡಲ್ಪಿಚ್ಚಾಡ್ವುದೆನೆಯಲರ್ವಂಬುಜಾಳಿಯಸೆಗುಂ ಸರದೊಳ್ (ಅಮ್ಮಪು. ೩-೪-೬) ; ಮರಂದಮಂ ಪೀರ್ವ ಮಧುಕರಂ (ಜಿತಪು. ೦೬೩). [ ಸಂ. ]

**ಮರಂದಲೆ** (ನಾ). ಒಂದು ಸ್ಥಳದ ಹೆಸರು : ಶ್ರೀಮತ್ ಮಾರಸಿಂಘದೇವ ಸತ್ಯವಾಕ್ಯಪೆರ್ಮ್ಮಾನಡಿಗಳ್ಮರಂದಲೆಮಯ್ಯಾದಿಯುಳುತ್ತಮಿರೆ (ಎಕ. V, ಅರಸೀ. ೨೩೭-೫ ; 971). [ ? ]

**ಮರಂಬಡು** 'ಮರವಡು' ನೋ.

**ಮರಅಕ್ಕಬುಹುಲ್ಲು** (ನಾ). ಒಂದು ಬಗೆಯ ಸಸ್ಯ : ಮರಅಕ್ಕಬುಹುಲ್ಲು, ಪರಂಗಿ ಅಕ್ಕಿ ಹುಲ್ಲು (ಬ್ಯಾಶಿ. ೬೫-೦೫೩೦). [ ಮರ$_1$ + ಅಕ್ಕಬು$_2$ + ಹುಲ್ಲು (< ಪುಲ್ ) ]

**ಮರಕಟ** (ನಾ). ಕೋತಿ ; ಮರ್ಕಟ : ಮರಕಟ ಕುಣಿವಂತೆ ಮನಸು ಇಂದ್ರಿಯಗಳುಮಕ್ಕಟವಾಗಿ ಕುಣಿದು ಕಂಗೆಡಿಸುತ್ತಿದೆ (ಶೀಲಸು. ೦೩೬). [ < ಸಂ. ಮರ್ಕಟ ]

**ಮರಕಟಧ್ವಜ** (ನಾ). ಕೋತಿಯ ಗುರುತಿರುವ ಬಾವುಟ ; ಕಪಿಧ್ವಜ : ಮರಕಟಧ್ವಜವಿಟ್ಟು ಧರ್ಮದೊಳಿರುವುದು (ಜಪಾ. ೬೪-೫೦). [ < ಸಂ. ಮರ್ಕಟಧ್ವಜ ]

**ಮರಕಟ್ಟು$_1$** 'ಮರಗಟ್ಟು$_1$' ನೋ.

**ಮರಕಟ್ಟು$_2$** 'ಮರಗಟ್ಟು$_2$' ನೋ.

**ಮರಕತ** (ನಾ). ನವರತ್ನಗಳಲ್ಲಿ ಒಂದು ; ಪಚ್ಚೆ : "ಪಸುರ್ವಣಿಯುಂ ಪಾಗವರಲ್ ಪೆಸರಿಂ ಮರಕತಮವಕ್ಕು" (ಶಬ್ದಮ. ೫೨) ; ಕೋಪಾನಳನ ನೆಯ್ದಿ ಪಂದಿಸುವವೊಲಾ ಮರಕತಮಣಿವರ್ಣಂ ಕರಪರಿಘದಿನೊಡನೊಡನೆ ತುಳ್ಳಿದಂ ಶಿಲೆನೀರಂ (ಆದಿಪು. ೦೪-೦೦೬) ; ಅರಗಿಳಿಯ ಪಸುರ್ಪಿಂದಂ ಮರಕತಮಯಮೆನಿಪ ಪೊನ್ನಪಂಜರಮಂ ಪೊತ್ತು (ಕಾದಂಪೂ. ೩೭) ; ಪವಳದ ಪಡಿಯಿಂ ಮರಕತದೊಂದು ಕಳಸದಿಂ ತಾರಗೆವಟ್ಟೆ ಮುಟ್ಟೆ (ರಾಜಶೇ. ೫೪-೨೩). [ಸಂ.]

**ಮರಕತವಟ್ಟೆ** (ನಾ). ಹಸುರು ಬಟ್ಟೆ,—ವಸ್ತ್ರ: ಚರಣದೊಳೆಸೆವ ಚಿವ್ಮಿಯ ಕೆಂಪು ಬಿಗಿದಟ್ಟ ಮರಕತವಟ್ಟೆ ಮಾಂದಳಿರು ಸಿರದಲಿ ಮೆಱಿಯೆ (ಕೋಹಚ. ೦೪-೩೨). [ ಮರಕತ + ಬಟ್ಟೆ$_2$ ]

**ಮರಕತವರ್ಣ** (ನಾ). ಪಚ್ಚೆಯ ಬಣ್ಣ ; ಹಸುರು : ಮರಕತವರ್ಣಮಂ ತರುಣವೇಣುತನುಚ್ಛವಿಯಿಂದೆ ವಜ್ರಮಂ ಸುರುಚಿರಪುಷ್ಪ ಮುತ್ತನಿಜದಂತಚಯಂಗಳದೊಂದು ಕಾಂತಿಯಿಂ ಮರಗಸದೃಶವಪ್ಪ ಕೆಚದಿಂ ಹರಿನೀಳವ ಸೊಪ್ಪೆ ಹೋಲ್ತಳಂತಿರೆ ಸತಿ ರತ್ನದೊಂದೆಣೆಗೆ[ವಂದಳು](ಎಕ. XII, ಕಲ್ಯಾ. ೯೩-೬೪; 1171). [ಸಂ.]

**ಮರಕಬ್ಬು** 'ಮರಗಬ್ಬು' ನೋ.

**ಮರಕಲ**, ಮರಕಾಲ (ನಾ). ೧. ಬೆಸ್ತ: ಮೀನುಗಾರ : ಮೊಗೇರರ ಜಾತಿಯ ಸಾಮಾನ್ಯ ಹೆಸರು ಮರಕಲರು ಎಂಬುದಾಗಿದೆ (ತುಳುಜಾ. ೨೨೪). **ಮರಕಾಲ** : ೧. ಬಲೆ ನೆಯ್ದ ಮರಕಾಲ ಬಟ್ಟೆ ನೆಯ್ದಾನೇ ? (ಗಾದೆ). ೨. ನಾವಿಕ; ಅಂಬಿಗ : ಕಾಸರುಕೋಡಿಂಗೆ ತಗದು ಬಂದಲಿ ಆ ಉಂಮರ ಮರಕಾಲರು. . . ಬಳಿಗೆ ಬಂದು (ಕ್ಷ. I, ೪೮-೬; 1427); ಓರಂತೆ ಮರಕಾಲರು ಹಡಗಿನ ವ್ಯವಹಾರದಿ ಗಳಿಸಿದ ಹಣವ . . . ತೂಗುವರು (ಮೋಹತ. ೩-೨೯); ಮರಕಾಲರಲ್ಲಿ ಹಲವರು ಪಾಂಡಿಗಳಲ್ಲಿ ಪರದೇಶದ ವ್ಯಾಪಾರ ಮಾಡಿ ಪಾಂಡಿ ಎಂಬ ಹೆಸರನ್ನು ಗಳಿಸಿಕೊಂಡಿದ್ದರು(ತುಳುಜಾ.೫೪). [ದೇ.॥ ತಮಿ. ಮರಕ್ಕಲನ್ ; ತುಳು. ಮರಕಲೆ, ಮರಕಾಲೆ]

**ಮರಕಾಲ** 'ಮರಕಲ' ನೋ.

**ಮರಕಾಲು** 'ಮರಗಾಲ್' ನೋ.

**ಮರಕಾಲ್ತಿ** (ನಾ). ಬೆಸ್ತರ ಹೆಂಗಸು ; ಮೀನುಗಾತಿ : ಹೋಯ್ ಮರಕಾಲ್ತಿ, ಮೀನು ಹ್ಯಾಗೆ ? (ಹೊಸಕ್ಷ. ೪೯). [ಮರಕಾಲ( <ಮರಕಲ) + —ತಿ$_1$ (< — ಇತ್ತಿ)]

**ಮರಕಾಳಗ** (ನಾ). ಮರಗಳನ್ನೇ ಆಯುಧವಾಗಿ ಹಿಡಿದು ಮಾಡುವ ಯುದ್ಧ: ಬಕ ಭೀಮರಿಗೆ ಮರಕಾಳಗ ಬಹಳ ಹೊತ್ತು ನಡೆಯಿತು (ವಕಭಾ. ೯೮). [ ಮರ$_1$ + ಕಾಳಗ (<ಕಾಳೆಗ) ]

**ಮರಕಿ** (ನಾ). ಒಂದು ಬಗೆಯ ಭೂಮಿ (?): ಹೊಸ ಉರ ನಾಗಣಹೆಗ್ಗಡೆ ಬೀಜ ಹೊಂನ್ನ ತೆಗೆದುಕೊಂಡು ತಂನ ಮೂಲದ ವೇಲೆ ಕುಳಕ್ಕೆ ಬರಸಿ ಕೊಟ್ಟ ಭೂಮಿ ಮರಕಿ ಗೋಡಲೂ ಕಾತಗದ್ದೆ (ಕ್ಯಾಅ. ೦೯೩೪, ೧೪-೦೭ ; 1516). [ ? ]

**ಮರಕಿಚ್ಚು** 'ಮರಗಿಚ್ಚು' ನೋ.

**ಮರಕು** 'ಮಱುಗು' ನೋ.

**ಮರಕುಟಿಕ** 'ಮರಕುಟಿಕ' ನೋ.

**ಮರಕುಟುವಕ್ಕಿ**, ಮರಕುಟುವಕ್ಕಿ (ನಾ). = ಮರಕುಟಿಕ : ಇಲಿಗಂ ಮರಕುಟುವಕ್ಕಿಗಮುಲಸದೆ ಕರ್ದುಕುತ್ತೆ ಕಡಿಯುತಿರ್ಪುದೆ ಸಹಜಂ (ರವಾಶು. ೦-೪೬). **ಮರಕುಟುವಕ್ಕಿ** : "ಶತಪತ್ರಃ, ದಾರ್ವಾಘಾಟಃ — ಈ ೨ ಮರಕುಟುವಕ್ಕಿ" (ನಾಚರಾ. ೦೦೪). [ಮರ$_1$ + ಕುಟು$_1$ + ಪಕ್ಕಿ]

**ಮರಕುಟಿಕ**, ಮರಕುಟಿಕ, ಮರಕುಟಿಗ, ಮರಕುಟುಗ (ನಾ). ಮರವನ್ನು ಕೊರೆಯುವ ಒಂದು ಬಗೆಯ ಪಕ್ಷಿ : ಪಾಱುವೆಂಡತಿಯಂತೆ ಪೊಱಸು ಬಡಗಿಯಂತೆ ಮರಕುಟಿಕಂ . . . ಎಂದಿಂತುಮನೇಕಪಕ್ಷಿಜಾತಿಗಳಿಂ ತೆಕ್ಕನೆ ತೀವಿದ ಪಟುವಂ (ಐಂಹಂ. ೨-೩೯ ಪ). **ಮರಕುಟಿಕ** : ಮೊಸ್ಸಲಿಗ ಮರಕುಟಿಕ ಚಾಣಾಂಕೆ (ಬಕ್ಕಾಂಗ. ೦೦-೫). **ಮರಕುಟಿಗ** : ಗಿಳಿ ಪರ್ದು ಮರವಂ ಮರಕುಟಿಗಂ ಪುಜಲೆ (ಸೂಕ್ತಿಸು. ೩-೦೪೬); ಮರಕುಟಿಗ ಕಬ್ಬಕ್ಕಿ ಕೊಟ್ಟುಗ . . . ಮೊದಲಾದಖಿಳಖಗಕುಲ ಬಿದ್ದು ಮರಿಯೊಳಗೆ (ಕುಮ್ಮಾರ. ೨೦-೫೯); ಮರಕುಟಿಗ ಚೆಂಬೋತ ಶುಕ (ತೊರರಾ. ೩-೦-೩೨). **ಮರಕುಟುಗ** : ಮರಕುಟುಗ ಕಟ್ಟುಱುಕ ಹಂಸೆ (ಸಾಳ್ವಭಾ. ೫-೩೩). [ ಮರ$_1$ + ಕುಟಿಕ$_1$ ]

**ಮರಕುಟಿಗ** 'ಮರಕುಟಿಕ' ನೋ.

**ಮರಕುಟುಗ** 'ಮರಕುಟಿಕ' ನೋ.

**ಮರಕುಟುವಕ್ಕಿ** 'ಮರಕುಟುವಕ್ಕಿ' ನೋ.

**ಮರಕೂಟವಕ್ಕಿ** (ನಾ). ಒಂದು ಬಗೆಯ ಜಲಚರಪಕ್ಷಿ : "ಉತ್ಕ್ರೋಶಃ,

ಕುರರು —ಈ ೭ ಮರಕೊಟವಕ್ಕಿ" (ಶಬ್ದಮ. ೪೨-೯೩). 'ಸರಕೊಟವಕ್ಕಿ' ಪರಾ. [ ? + ಪಕ್ಕಿ./ಕ್ಷ ಇದು ಟೀಕಾಕಾರನು ರೂಪಿಸಿರುವ ಶಬ್ದ ವಿರಬಹುದೆ ? ]

**ಮರಕೆಸ** (ನಾ). ಕೆಸವಿನಲ್ಲಿ ಒಂದು ಬಗೆ : ದಾರಿಯಲ್ಲಿ ಅಷ್ಟು ಮರಕೆಸ ಕಂಡು "ನೋಡಪ್ಪ ಪತ್ರದಗೆ ಲಾಯಕ್ಕಾಗಿದೆ" ಎಂದರು (ಕ್ರಿಕ್ಕ. ೯೬).
[ ಮರ$_1$ + ಕೆಸ (< ಕೆಸವು) ]

**ಮರಕೊಡಿ** (ನಾ). ದೇವಸ್ಥಾನದ ಮುಂದಿನ ಧ್ವಜಸ್ತಂಭ; ಕೊಡಿಮರ : ದೊಡ್ಡದೊಡ್ಡ ಮರಬಳ್ಳಿಗಳು . . . ಮರಕೊಡಿಗಳ ಜಾಲದಂತೆ ಕಂಡವು (ಹಸುಹೊ. ೬೯).
[ಮರ$_1$ + ಕೊಡಿ$_2$]

**ಮರಕೋತಿ** (ನಾ). ಮರವನ್ನು ಹತ್ತಿ ಇಳಿದು ಆಡುವ ಆಟ ; ಗಿಡ ಮಂಗನಾಟ (ಉಕ) : ಪರಿವರಿಯಾಟಂ ತಿರಿಕಲ್ಗಿರೆ ಮರೆ ಮರಕೋತಿ ಸೆಂಡು ಜಾರುಂಬಳೆ (ಕಂದ್ರಖ. ೬-೯೦) ; ಅಲ್ಲಿ ಮರಕೋತಿ ಆಡುತ್ತಿದ್ದುದು . . . ಜ್ಞಾಪಕವಿದೆ (ತೊಸ್ತ್ರೆ. ೦೨೩).
[ಮರ$_1$ + ಕೋತಿ]

**ಮರಗಟ್ಟು$_1$**. ಮರಕಟ್ಟು$_1$ (ಕ್ರಿ). (ರಕ್ತಚಲನೆ ನಿಂತು) ಕೈಕಾಲು ಮರದಂತಾಗು : ಜೋವು ಹಿಡಿ ; ಜಡವಾಗು : ಕಾಲು ಕೂತು ಕೂತು ಮರಗಟ್ಟಿತ್ತು (ಸಂಣ್ಣ ಕ. ೬೬) ; ಎದೆನಡುಗುತ್ತಿರುವಂತಿದೆ . . . ತೊಡೆ ಮರಗಟ್ಟಿದಂತಿದೆ (ಪಕ್ಷಾ. ೨೯೨). **ಮರಕಟ್ಟು$_1$** : ಬೆದರಿ ಕೈಕಾಲುಗಳೆಲ್ಲ ಒಮ್ಮೆಲೇ ಮರಕಟ್ಟಿದಂತಾದವು (ಹಳ್ಳಹಾ. ೩೦) ; ಈ ನೋಟವನ್ನೆಲ್ಲಾ ನೋಡಿ ಮರಕಟ್ಟಿದವನಂತೆ ತಟಸ್ಥನಾಗಿದ್ದ (ಹಿಣ್ಣಕು. ೬೩) ; ನಮ್ಮ ಕಾಲುಗಳು ಮರಗಟ್ಟಿಹೋಗಿವೆ (ಕ್ಕಲಾ. ೩೯).
[ಮರ$_1$ + ಕಟ್ಟು$_1$]

**ಮರಗಟ್ಟು$_2$**, ಮರಕಟ್ಟು$_2$ (ನಾ). ೧. ಮರದ ಬುಡದ ಸುತ್ತ ನೀರು, ಗೊಬ್ಬರ ಹಾಕಲು ಮಾಡಿದ ಪಾತಿ ; ಆಲವಾಲ : ಮರಗಟ್ಟೆಂಬಂತೆ ಸುತ್ತುಂ ಮೊದಲೊಳಜಗರಂ ಸುತ್ತೆ (ಕಾದಂಪೂ. ೦೨೦). **ಮರಕಟ್ಟು$_2$** : ೨. ಈಚಲು ಮರಕ್ಕೆ ಮಡಕೆಯನ್ನು ಕಟ್ಟಿ ಹೆಂಡವನ್ನು ಇಳಿಸುವ ಕೆಲಸ : ಪತ್ತಾಕ್ಟಿಂದ ಮರಕಟ್ಟು ಕೆಲ್ಸಮಾಡ್ತೆ. ಈಗ ಕಳ್ಳಂಗಡಿ ಕಂತ್ರಾಟು ಮಾತ್ತೆ (ಹಂಡಿ. ೯೦). ೩. ಮರದ ಕಟ್ಟಡ ವಿರುವಂಥದು : ಸಿರಿಗುಪ್ಪೆಯೊಳಾದರದಿಂ ಮರಕಟ್ಟಿನ ಏರಿಯ ಬಾವಿ ಯುಂ ಕೆಱೆಯುಮನಸ್ತರಿಯಿಸಿ ಮಾಡಿ (ಎಕ. XI-ii, ೦೩೯-೨೨; 1087).
[ಮರ$_1$ + ಕಟ್ಟು$_2$]

**ಮರಗಡವ** (ನಾ). ಒಂದು ಬಗೆಯ ಕಡವದ ಮರ : "ಕಾ[ಕಾ]ಕ್ಷ —ನಾಗಲು, ಕಬ್ಬು, ಮರಗಡವ" (ಓಕಂ. ೩೦).
[ ಮರ$_1$ + ಕಡವ$_1$ (< ಕಡಂಬ) ]

**ಮರಗಡಿ** 'ಮರಂಗಡಿ' ನೋ.

**ಮರಗಡೆ** (ನಾ). ಒಂದು ಬಗೆಯ ಸಸ್ಯ : ಅರುಣಪೂರುಗ, ಮರಗಡೆ (ಕ್ಕಶಿಂ. ೨೩-೪೨೫) ; ಮರಗಡೆಸೊಪ್ಪನ್ನು ಅಕ್ಕಿಗಚ್ಚಿನಿಂ ತೊಳೆದು ಆ ರಸವಂ ಪಿಂಡಿ, ಶೋಧಿಸಿಕೊಂಡು ದೇಹಾನುಗುಣವರಿತು ತೆಗೆದುಕೊಳ್ಳುವುದು (ಸಕ್ಕ. ೦೯೬). 'ಮರ್ಕಟಿ' ಪರಾ. [ ? ]

**ಮರಗಡುಬ್ಬುಹುಲ್ಲು** (ನಾ). ಒಂದು ಬಗೆಯ ಹುಲ್ಲು : ಪಕ್ಕಿವಾರ್ಜಿ ಹುಲ್ಲು, ಮರಗಡುಬ್ಬುಹುಲ್ಲು (ಕ್ಕಶಿಂ. ೦೦-೦೩೩). [? + ಹುಲ್ಲು (< ಪುಲ್)]

**ಮರಗತ್ತಲೆ** 'ಮರಗಟ್ಟಲೆ' ನೋ.

**ಮರಗತ್ತಿ** (ನಾ). ಮರದಿಂದ ಮಾಡಿದ ಕತ್ತಿ : ಮರಗತ್ತಿಯಿಂದ ಮಾಂಸ ಕೊಯ್ಯಲು ಸಾಧ್ಯವೇ ? (ಜಾಪ). 'ಮರವಾಳ್$_2$' ಪರಾ.
[ ಮರ$_1$ + ಕತ್ತಿ ]

**ಮರಗಬ್ಬು**, ಮರಕಬ್ಬು (ನಾ). ೧. ಒಂದು ಬಗೆಯ ಬಿರುಸಾದ ಕಬ್ಬು : ವಿಸುಪ ಮರಗಬ್ಬು ಕರಿಯ ಮರಗಬ್ಬುನೊಳೊಸರ್ವ ರಸಮುಂ ಹೀಳವು (ಸೂಕ್ತಿಶು. ೨-೩೦). **ಮರಕಬ್ಬು** : ೨. ಲಾಳಿಕಡ್ಡಿ : "ವೀರಂ, ವೀರತರಂ– ೨ ಮರಕಬ್ಬಿನ ಹೆಸರುಗಳು. ಕೆಲವರು ಲಾಳಿಕಡ್ಡಿಯೆನ್ನುವರು. ಕೆಲವರು ಹುಲ್ಲಾಳೀಕಡ್ಡಿಯೆನ್ನುವರು" (ಸಿಷ್ಟಂಟೆ. ೦೫೦).
[ ಮರ$_1$ + ಕಬ್ಬು$_2$ (< ಕರ್ಬು$_1$) ]

**ಮರಗಯ್**. ಮರಗೈ (ನಾ). ಮರದಿಂದ ಮಾಡಿದ ಕೈ : ಕಯ್ಯಂ ಕಡಿದು ಮರಗಯ್ಯಂ [ಕಟ್ಟಿ]ಕೊಳ್ಳ . . . ಗಾವಿಲನಂತಾಗಿ (ವಡಾರಾಪ್ಟ. ೦೯-೦೦೬). **ಮರಗೈ** : ಮ[ಜಾತಿಂ. ವೊ] ರಗಾಲು ಮರಗೈ (ವೈರಕಂ. I, ೨೦೩) ; ಕರೆದು ಬುಧರ್ಗೀಯುವ ಕೈ ಮರಗೈ ಮರಾಳಿಗೆ (ಅಕತಾ. ೮೯).
[ ಮರ$_1$ + ಕಯ್$_2$ (< ಕೆಯ್$_2$) ]

**ಮರಗಸ** (ನಾ). ದೊಡ್ಡದಾಗಿ ಬೆಳೆದ ಕಳೆ : ಕಯ್ಯ ಮರಗಸಂ ಪುಲ್ಲಸಮೆಂಬೆರಡುಮಂ ಕಳೆದು ಪದದೊಳ್ ಬಿತ್ತಲೊಡಂ ಮನದೊಳುಳ್ಳ ರಾಗದ್ವೇಷಮೆಂಬಿರಡುಮಂ ಕಳೆದು ಶುದ್ಧಚಾರಿತ್ರದೊಳ್ ಪತ್ತದೊಡ ಮಾತಂಗೆ ಬೆಳಸುಮಿಾತಂಗೆ ಸುಗತಿಯುಮೆಂತಕ್ಕುಂ (ಹೀಶಸಂ. ೩೬-೦೩ ಪ).
[ ಮರ$_1$ + ಕಸ ]

**ಮರಗಳ್ಳಿ** (ನಾ). ಒಂದು ಬಗೆಯ ಕಳ್ಳಿ ; ಮರದಂತೆ ಬೆಳೆಯುವ ಕಳ್ಳಿ : ಬೇಲಿಯಲ್ಲಿ ಮರಗಳ್ಳಿ ಬೆಳೆದುಕೊಂಡಿದೆ (ಜಾಪ). 'ಎಲೆಗಳ್ಳಿ' ಪರಾ.
[ ಮರ$_1$ + ಕಳ್ಳಿ$_2$ ]

**ಮರಗಱಿಕೆ** (ನಾ). ಒಂದು ಬಗೆಯ ಗರಿಕೆ : ಕಱಿಕೆ ಮರಗಱಿಕೆ ಕವಲುಂಗಱಿಕೆ ಕವಲ್ಗೊಟ್ಟ ಹಂಬಿ (ಸೂಕ್ತಿಸು. ೩-೨೯) ; ಮರಗಱಿಕೆಯ ಬಳ್ಳಿಯ ಪೆರ್ಗುರುಟಿಗೆಯುಂ ಬ್ರಹ್ಮದಂಡೆಯುಂ (ಜಿಮುತ. ೦೩-೩೮).
[ ಮರ$_1$ + ಕಱಿಕೆ$_1$ (< ಕಱುಂಕೆ) ]

**ಮರಗಟ್ಟಲೆ**. ಮರಗತ್ತಲೆ (ನಾ). ದಟ್ಟವಾದ ಕತ್ತಲೆ ; ಕಗ್ಗತ್ತಲೆ : ತುಱುಗಿವೆಗಣ್ಣ ಕಾಂತಿ ಮರಗಟ್ಟಲೆಯಂ ಬೆದಱಿಟ್ಟಿ ತೋಱಿವಾಯ್ದಱಿ ಕಿಸುಸಂಜೆವೀಱಿ (ಜಗಂ. ೦೩-೨೫). **ಮರಗತ್ತಲೆ** : ಚಲಿಪ ತರಳಾ ಪಾಂಗರೋಚಿಯಲಿ ಮುಳಿದುದಾ ಮರಗತ್ತಲೆಯ ಪ್ರೈಸಿರಿ (ತೊರಾ. ೧-೫-೯೫).
[ ಮರ$_1$ + ಕಟ್ಟಲೆ ]

**ಮರಗಾಡು** (ನಾ). ದಟ್ಟವಾದ ಕಾಡು : ಅರಿನೃಪನಾವ ಜವನಿಕೆ ಮಱಿಯೊಳಡಂಗಿದನೊ ತೃಣವನದೊಳಿಱುಬಿನಲಿ ಮೆಳೆಸಂದಣಿಗಳಲಿ ಮರಗಾಡಿನಲಿ ಮೃಗಗಣದ ನೆಲೆಯಲಿ ಕಾಣೆರಲೆ ನೀವೆಂದನಾ ಭೀಮ (ಕುಮ್ಮಗ. ೯-೩೦) ; ಇಕ್ಕೆಯ ಹಕ್ಕಿಯಾಡುಂಬೊಲನ ಮರಗಾಡುಗಳೊಳಗೆ ಕಟ್ಟುಲುಹುದೋಱದೆ ಪೊಕ್ಕುದಲಗಕೆ ಶಬರಸಂದೋಹ (ತೊರಾ. ೩-೩-೦೦).
[ ಮರ$_1$ + ಕಾಡು$_2$ ]

**ಮರಗಾಣ** (ನಾ). ಮರದಿಂದ ಮಾಡಿದ ಎಣ್ಣೆ ತೆಗೆಯುವ ಗಾಣ: (ಜ). 'ಕಲ್ಗಾಣ' ಪರಾ.
[ ಮರ$_1$ + ಗಾಣ$_1$ ]

**ಮರಗಾಪು** (ನಾ). ಮರದ ರಕ್ಷಣೆ,– ಆಶ್ರಯ : ಹೊಳೆಹೊಳೆದಡಗುವ ಮಿಾಂಬುಳುಗಳು ಕಾವಳಗೊಂಡ ಮರಗಾಪಿ[ಜಾತಿಂ ವಿ]ನೊಳು ಹೊಳೆವವು ಕಾರ ಕಾಮುರ್ಗಿಲೆಡೆಯೊಳು ಥಳಥಳಿಪ ಮಿಂಚಿನ ತೆಱನಾಗಿ (ತ್ರಿಣಾಂ. ೬-೩೬).
[ ಮರ$_1$ + ಕಾಪು ]

**ಮರಗಾಲ್**, ಮರಕಾಲು, ಮರಗಾಲು (ನಾ). ಎತ್ತರದ ನಿಲುವಿನಲ್ಲಿ ಓಡಾಡಲು ಸಾಧ್ಯವಾಗುವಂತೆ, ಮರದಿಂದ ಮಾಡಿದ, ಕಾಲಿಗೆ ಕಟ್ಟಿಕೊಳ್ಳುವ ಒಂದು ಬಗೆಯ ಸಾಧನ : ಜಾತ್ಯಶ್ವಮಂ ಬಿಟ್ಟು ಮರಗಾಲಂ ಕೊಳ್ವ . . . ಗಾವಿಲನಂತಾಗಿ (ವಡಾರಾಪ್ಟ. ೦೯-೦೦೬). **ಮರಕಾಲು** : ಸ್ತ್ರೀವೇಷವು ಆ 'ಮರಕಾಲಿ'ನಿಂದಲೆ ರಂಗದೊಳಗೆ ಪ್ರವೇಶಿಸಿ . . . ಕಾಣಿಸುವುದು (ಜಾತಿಗು. ೩೩). **ಮರಗಾಲು** : ಮರಗಾಲಲಟ್ಟಿ ಸದೆವ ನೋಡಯ್ಯ ಇಂದೆನ್ನ ಒಕ್ಕತನ ಹೋದರೆ ಹೋಗಲಿ ಮರಗಾಲ ಬಿಟ್ಟೆನಾದರೆ ಕೂಡಲಸಂಗಾ ನಿಮ್ಮಾಣೆ (ಬಸವ. ೬೨೦).

**ಮರಕಾಲಿನಾಟ** = ಯಕ್ಷಗಾನದಲ್ಲಿ, ಮರಗಾಲನ್ನು ಕಾಲಿಗೆ ಅಳವಡಿಸಿ ಕುಣಿಯುವ ಒಂದು ಬಗೆಯ ಕುಣಿತ : ಚಪ್ಪರಮಂಚದಾಟ ಎಂಬುದು ಈ ಸ್ತ್ರೀಪಾತ್ರದ ನರ್ತನಗಳೊಳಗೊಂದು. ಈ ಕುಣಿತಕ್ಕೆ ಅಟ್ಟೀಗೆಯಾಟ, ಅರೆಪಾವಿನಾಟ, ಮರಕಾಲಿನಾಟ ಎಂಬ ನಾಮಾಂತರಗಳೂ ಇವೆ (ಜಾಕೀಗಸು. ೩೩). [ಮರ$_1$ + ಕಾಲ್$_1$./ತಮಿ. ಮಲ. ಮರಕ್ಕಾಲ್]

**ಮರಗಾಲು** 'ಮರಗಾಲ್' ನೋ.

**ಮರಗಾವು** (ನಾ). ಮರದಿಂದ ಮಾಡಿದ ಹಿಡಿಕೆ : ಕಯ್ಯಾಡಿ ನೆರೆಯ ಸೈನಿಕನೊಬ್ಬನ ಸಬಳವನ್ನೀಸಿಕೊಂಡು, ಅದರ ಅಲಗಿನಡಿಯೆಡೆಯಲ್ಲಿ ಕಾಲ್ಕಟ್ಟಿ ತಾನೇ ಮುರಿದು, ಉಳಿದ ಮರಗಾವನ್ನು ಕೊಂಡು ಪರೀಕ್ಷಿಸಿ (ಬಕುಗಂ. ೩೪-೦೪). [ಮರ$_1$ + ಕಾವು$_3$]

**ಮರಗಾಳಿ** (ನಾ). ಬಿರುಸಾದ ಗಾಳಿ ; ಚಂಡಮಾರುತ : ಆ ಸಾಮ್ರಾಜ್ಯವು ಪತನ ಹೊಂದಿದ ಮೇಲೆ ಮರಗಾಳಿಯ ಬಿರುಬಿಗೆ ಸಿಕ್ಕ ನೆಲದಲ್ಲಿ ಹಾಳು ಬೀಳುಗಳು ಎಲ್ಲ ಕಡೆಗೆ ಕಾಣುವಂತೆ ಜನಜೀವನ ದಿಕ್ಕೆಟ್ಟಿತು (ಕನಾಹ. ೩೯೩). [ಮರ$_1$ + ಗಾಳಿ$_1$]

**ಮರಗಿ** 'ಮರವಿ' ನೋ.

**ಮರಗಿಚ್ಚು**, ಮರಕಿಚ್ಚು (ನಾ). ೧. ಮರದೊಳಗೆ ಇರುವುದೆಂದು ನಂಬಲಾದ ಮಂದಾಗ್ನಿ : ಕರವೆ ನೀರಡಿಕೆ ಮಿಗೆ ತಟ್ಟಾಡುಸುತ್ತ ಬರೆ ಮರಗಿಚ್ಚಿನಂತೆ ಪಸಿವೊಳಗೊಳಗೆ ಸುಡುತ ಬರೆ (ಜಾಕಂತ. ೪-೦೬೨ ರಗಳೆ). ೨. ಸೌದೆಯಿಂದಾದ ಬೆಂಕಿ : ಇದಜೊಡನೆ ಬಲು ಮರಗಿಚ್ಚನೊಟ್ಟಿದು ಸುಡಿಯೆನುತ ನೇಮಿಸಿದ (ಕೊರಗಾ. ೩-೬-೮). **ಮರಕಿಚ್ಚು** : ೩. ಕಾಡುಕಿಚ್ಚು : ಸಂಚರಿಸುತಿದೆ ವಾಯು, ದಳ್ಳುರಿಯುತಿದೆ ಮರಕಿಚ್ಚು ನಿನ್ನಿಂದಲೇ (ಕಬ್ರು. ೨೬-೪). [ಮರ$_1$ + ಕಿಚ್ಚು]

**ಮರಗಿವಿ** (ನಾ). ಮರಗಟ್ಟಿ ಕೇಳಿಸದಂತಿರುವ ಕಿವಿ ; ಕಿವುಡುಕಿವಿ : ಅವನ ಮರಗಿವಿಗೆ ಈ ಕೀರಲುದನಿ ಕೇಳಿಸುವುದಿಲ್ಲ (ರೂಢಿ). [ಮರ$_1$ + ಕಿವಿ$_3$]

**ಮರಗುದುರೆ** (ನಾ). ಮರದಿಂದ ಮಾಡಿದ ಕುದುರೆ : ಮರಗುದುರೆಯಲಿ ಮರವ ಮರೆತು ಮಕ್ಕಳು ಕುದುರೆಯಾಡುವೊಲು (ಹಕ್ಕರ. ೬-೨) ; ಓಡಿಸುವ ಮರಗುದುರೆಯಲಿ ತೃಪ್ತಿ ದೊರೆತು ಆಡುವಾ ಭರದಲಿ ಅಪಾಯವನು ಮರೆತು (ಕಬ್ರು. ೩೩-೩). [ಮರ$_1$ + ಕುದುರೆ]

**ಮರಗುಬ್ಬಿ** (ನಾ). ಒಂದು ಬಗೆಯ ಗುಬ್ಬಚ್ಚಿ : (೬). [ಮರ$_1$ + ಗುಬ್ಬಿ$_2$]

**ಮರಗುಲಿ** (ನಾ). ಮರವನ್ನು ಕತ್ತರಿಸುವಂಥದು ; ಕೊಡಲಿ : 'ಮರಗುಲಿತನ' ಪರಾ. [ಮರ$_1$ + — ಕುಲಿ$_1$]

**ಮರಗುಲಿತನ** (ನಾ). ಮರಗಳನ್ನು ಕತ್ತರಿಸುವ ಉದ್ಯೋಗ : ರೂಢಿವೆತ್ತಿಹ ರಾಜಕುವರರಿಗೀಡಪ್ಪ ಕಜ್ಜವನು ನೆನೆಯದೆ ಕಾಡ ಮರಗುಲಿ[ಜಾಕಾಂ. ವಿ]ತನವು ಕ್ಷತ್ರಿಯಜಾತಿಗುತ್ತಮವೆ (ಜಾಗತ. ೦೦-೬). [ಮರಗುಲಿ + — ತನ]

**ಮರಗುಳಿ** 'ಮರೆಗುಳಿ' ನೋ.

**ಮರಗೂಡು** (ನಾ). ಮರದಿಂದ ಮಾಡಿದ ಬೋನು ; ಮರದ ಪಂಜರ : ಒಳಪೊಕ್ಕು ಮರಗೂಡಿನಲಿ ಸಿಲುಕಿದ ಹುಲಿಯವೋಲ್ (ಕುವ್ಯಾಅ. ೮-೩೩). [ಮರ$_1$ + ಗೂಡು]

**ಮರಗೂಳ** 'ಮರಗೂಳಿ' ನೋ.

**ಮರಗೂಳಿ**, ಮರಗೂಳ (ನಾ). ಮರವನ್ನೇ ಆಹಾರವಾಗಿ ಉಳ್ಳವನು; ಅಗ್ನಿ : "ಮರಗೂಳಿಂ . . . ಎಲರ್ಗೆಳೆಯಂ - ಈ ೧೩ ಅಗ್ನಿ" (ಕಜಾ. ೪೯-೩೩); ಆ ಬಣ್ಣಿಪ ರತಿಗೆ ಮಿಂದ ಮರಗೂಳಿನೊಂದು ಪೆಯ್ಯೊಗರ್ (ರಾಶುಚ. ೯೯-೦೩). **ಮರಗೂಳ** : "ಮರಗೂಳನೆನಲು ವಹ್ನಿ" (ಕಶಕ. ೯೪); ಜಾಣ್ಮಾತುಗರು ಪೇಳ್ದ ಸೌಂದರನ ಕಥೆಯನೆಳೆವಣ್ಣವೆಗೆ ಮರಗೂಳ ಜೊನ್ನೊಡಲ ನೇಸಱೊಳ್ ಕಣ್ಣಲರನಂ ಕೂರ್ತು (ಶೀಕದು. ೦೦-೨) ; ಅರಲಿಚನಾರಿಂದ . . . ಮರಗೂಳ ಮೆಯ್ಗಣ್ಣಚ್ಚರರು ಮಱುಮಱುಪುಟ್ಟಾಂತು ಮೆಯ್ಮತ್ತರು (ಕಕಾಂ. ೦೩-೬೪).

**ಮರಗೂಳಿ ಮಗ**=ಅಗ್ನಿಯ ಪುತ್ರ; ಸ್ಕಂದ ; ಕಾರ್ತಿಕೇಯ : "ನವಿಲ್ದೇರಂ . . . ಮರಗೂಳಿ ಮಗಂ—ಈ ೪ ಕಾರ್ತಿಕೇಯಂಗೆ ಪೆಸರ್" (ಕಶಾ. ೦-೩). [ಮರ$_1$ + ಕೂಳ್$_1$ + — ಇ$_7$]

**ಮರಗೆ** 'ಮರವಿ' ನೋ.

**ಮರಗೆಡ್ಡೆಸೊಪ್ಪು** (ನಾ). ಔಷಧವಾಗಿ ಬಳಸುವ ಒಂದು ಬಗೆಯ ಸೊಪ್ಪು : ರಕ್ತವಮನಕ್ಕೆ :—ಮರಗೆಡ್ಡೆಸೊಪ್ಪು, ಮರಹುತ್ತಿಸೊಪ್ಪು, ಈ ಎರಡನ್ನೂ ಸಮಾನವಾಗಿ ತೆಗೆದುಕೊಂಡು ಹುಳಿದು ಒಂದು ಸೊಲ್ಲಗೆ ರಸವ ತೆಗೆದುಕೊಂಡು ಶೋಧಿಸಿಕೊಂಡು ಆ ರಸವನ್ನು ಕುಡಿಸುವುದು (ಐವ್ಯಶಿ. ೬೦). [ಮರಗೆಡ್ಡೆ ? + ಸೊಪ್ಪು$_2$]

**ಮರಗೆಣಸು** (ನಾ). ಒಂದು ಬಗೆಯ ಗೆಣಸು ; ಒರಟುಗೆಣಸು : ಕೇರಳೀಯರಿಗೆ ಟಾಪಿಯೋಕವೇ ಆಧಾರಾಹಾರವಾಗಿಬಿಟ್ಟಿದೆ . . . ಕನ್ನಡ ಸೀಮೆಯ ಕೆಲವೆಡೆಗಳಲ್ಲಿ ಇದನ್ನು ಮರಗೆಣಸು ಎಂದೂ ಕರೆಯುತ್ತಾರೆ (ಹಸುಹೂ. ೦೩೦). [ಮರ$_1$ + ಗೆಣಸು (< ಗೆಟಸು)]

**ಮರಗೆತ್ತನೆ** (ನಾ). ಮರದಲ್ಲಿ ಕೊರೆಯುವ ಕೆಲಸ : ಗ್ರಂಥವೊಂದು . . . ಕ್ರಿ. ಶ. ೯೫೩ರಲ್ಲಿ ಈ ಮರಗೆತ್ತನೆಯ ಮುದ್ರಣದಿಂದ . . . ಹೊರಬಿದ್ದಿತು (ಮುದ್ರಇ. ೦೦). [ಮರ$_1$ + ಕೆತ್ತನೆ (<ಕೆತ್ತಣ)]

**ಮರಗೆರಸಿ** (ನಾ). ಮರದ ಸುತ್ತ ಒಂದು ಎಲ್ಲೆಯನ್ನು ಕಟ್ಟಿಕೊಂಡು ಮರದ ಮೇಲೆ ಹತ್ತಿ ಇಳಿದು ಆಡುವ ಆಟ (?) : ಅಂತಾ ಕೂಸುಗಳ್ ಕೂಸಾಟವಾಡುತ್ತಿರ್ದೊಂದುದಿವಸಂ ಮರಗೆರಸಿಯಾಡಲೆಂದು . . . ಆಲದ ಮರದ ಮೊದಲ್ಗೆ ವಂದು (ಕುಜಾ. ೨-೩೦ ಶ) ; ಮರಗೆರಸಿ ಕುಳಿರ್ಸೆಂಡು ಬಟ್ಟು ತಿಱಿಕಲ್ಲಟ್ಟುಂಗರೆ ಹೊಣೆಗುಂಡೆಂಬಿವನಾ ಮುಕಹರನಲ್ಲಲ್ಲಿಗಾಡುತುಂ ಬರಲ್ (ಜಗು. ೪-೪೪). [ಮರ$_1$ + ಕೆರಸಿ]

**ಮರಗೆಲಸ** (ನಾ). ಮರದಿಂದ ಸಾಮಾನುಗಳನ್ನು ತಯಾರಿಸುವಿಕೆ ; ಬಡಗಿಯ ಕೆಲಸ: "ಮರಗೆಲಸ ; ಬಡಗಿಯ ಉದ್ಯೋಗ" (Carpentry. ೩೦೪೩); ಮರಗೆಲಸಕ್ಕೆ ಅಸದೃಶವಾಗಿ ಒಗ್ಗಿ ಹೋಗಿರುವ ಚೌಬೀನೆ ತೇಗ (ಹಸುಹೂ. ೨೪೦). [ಮರ$_1$ + ಕೆಲಸ]

**ಮರಗೇಡಿ** (ನಾ). ಮರೆವು ಸ್ವಭಾವದ ವ್ಯಕ್ತಿ : ಬಹಳ ಮರಗೇಡಿ ನೀನು (ಲಕ್ಷ್ಮ. ೬೬). [< ಮರವು + ಕೇಡು + — ಇ$_3$]

**ಮರಗೈ** 'ಮರಗಯ್' ನೋ.

**ಮರಗೊಂಬು** (ನಾ). ೧. ಮರದ ಕೊಂಬೆ,—ರೆಂಬೆ : ಮರಗೊಂಬ ನೊತ್ತಿನೊಳವೊಂಕಿದ ಸೆಲ್ಲದ ಮುಚ್ಚು (ಹರಶ್ರು. ೬-೩೦) ; ಮರಗೊಂಬಿನಿಂ ಬಡಿಯಲಡಗುವರ್ ನಡುಗುವರ್ (ಕಶು. ೨೯-೨೬) ; ಮರಗೊಂಬಂ ಮುಱಿದಾಂತು ನೀಳ್ದ ಕರದಿ (ಕಶಂ. ೩-೩೬). ೨. = ಮರಕೋತಿ : ವಿನೋದರಸದ ಬಸದಿಂ ಮರಗೊಂಬನಾಡುತಿರ್ದ ವೀರಜನಕುಮಾರನಂ . . . ಕಂಡು (ಹರಶ್ರು. ೦೪-೬೬ ಶ); ವಿಶಾಲ ಆಲದ ಮರದೊಳು ಮರಗೊಂಬ ನಾಡುತ ಲೀಲೆಯೊಳಿರ್ದನು (ಹರಶ. ೦೦-೧೨). [ಮರ$_1$ + ಕೊಂಬು$_1$]

**ಮರಗೊನೆ** (ನಾ). = ಮರಗೊಂಬು ೧ : ಮುಂದೆ ಬರುಬರಲೋದು ತರುವಿನ ಕೆಳಗೆ ರಾಜರ ವೃಂದ ಕುಳ್ಳಿರ್ದ ಛಂದವನು ತಾನಱಿದು ಮರಗೊನೆಯ ನರಸು ಕಂಡನು (ಸಂಕಶ. ೦೬-೦೦). [ಮರ$_1$ + ಕೊನೆ$_2$]

**ಮರಗೊರಲೆ** 'ಮರಗೊಳಲೆ' ನೋ.

**ಮರಗೊಳಲೆ**, ಮರಗೊರಲೆ (ನಾ). ಒಂದು ಬಗೆಯ ಪಕ್ಷಿ : ಹರಡೆ ಗೀಜಗ ಮರಗೊಳ[ಜಾಕಾಂ. ದ]ಲೆ ಕಾಬುರಲೆ ಲಾವುಗೆ ಗಾಜು ಪಾರಿವ . . .

ಮೊದಲಾದಖಿಳಖಗಕುಲ ಬಿದ್ದುದುರಿಯೊಳಗೆ (ಕುವ್ಯಾಅ. ೨೦-೫೩) ; ವಲಿಯ ಭಾರದ್ವಾಜ . . . ಶಿಖಿ ಮದ[ರ]ಗೊಳಲೆ ಮುಖ್ಯವಿಹಂಗವಿವೆ ವೈದೇಹಿ ನೋಡೆಂದ (ತೊರರಾ. ೩-೦-೩೩). ಮರಗೊರಲೆ : ಸಾಳುವಂ ಮರಗೊರಲೆ . . . ಚಲಿವಿಲಿಗ ಕಂಬೂತ . . . ಕಬ್ಬಕ್ಕಿಗಳು ಮುಂತಾದ ಪ್ರಾಣಿಗಳನುರಿ ದಹಿಸಿತು (ತುರಂಗ. ೦೭-೩೭).

[ ಮರ$_1$ + ಕೊಳಲೆ$_2$ ]

**ಮರಗೋಡು** (ನಾ). ೧.=ಮರಗೊಂಬು ೧ : ತೊಲಗೆ ಬಿಸಿಲ್ ನೆಟಲ್ಗೆ ತಲೆಯುಂ ಮರಗೋಡಲೆ ಕೂಡೆ ಕುತ್ತಿ ಕಟ್ಟಲೆ ಕವಿದಂದದಿಂ ಕವಿಯೆ (ಲೀಲಾವ. ೭-೮೯) ; ತನಿಗಂಪನೀಯುದಿವೆ ಮರಗೋಡಿನೊಳ್ ಮಲರ್ (ಶ್ರೀಲಾಪು.೩೭-೨೦೭). ೨. ಕುದುರೆಯ ಜೀನಿನ ಮುಂಭಾಗದಲ್ಲಿ, ಮರದಿಂದ ಮಾಡಿದ ಕೊಂಬಿನಾಕಾರದ, ಎತ್ತರಿಸಿರುವ ಭಾಗ: ಚಕ್ರವರ್ತಿ ಮಿಥ್ಯಾತ್ವಮೆಂಬ ಕುದುರೆಯನೇಱಿ ರಾಗದ್ವೇಷಮೆಂಬ ಕೀಲಿಂ ಪಿಡಿದು ಬಹುಕಾಂಕ್ಷೆಯೆಂಬ ಕವಣೆಯಂ ಮೆಟ್ಟಿ ಸದ್ಧರ್ಮದ್ವೇಷಮೆಂಬ ಮರಗೋಡಂ ಮಲಗಿ (ಧರ್ಮಾಮೃ. ೦೦-೬೭ ಅಧಿ) ; ಲಾಯದಲಿ ಲಂಬಿಸಿದ ಪೊಲು ಪಾಣಾಯುಜದ ಸಾಲೆಸೆದುದೊಱಗಿದ ರಾಯರಾವ್ತರ ಮಣಿಮಕುಟ ಮರಗೋಡನೋಲೈಸೆ (ಕುವ್ಯಾದ್ರೋ. ೦೭-೯) ; ಹೊನ್ನ ಮರಗೋಡುಗಳ ಮೇಲಡಗೆಡೆದು ನಿದ್ರಾಮುಗುದುರಿದರು ರಾವುತರು ತೂಕಡಿಸಿದವು ತುರಗ (ಕುವ್ಯಾವಿ. ೬-೮೯). [ಮರ$_1$ + ಕೋಡು$_5$]

**ಮರಚಟ್ಟೆ** (ನಾ). ಬಿದಿರಿನಿಂದ ಹೆಣೆದ ತಟ್ಟೆ : ಸಿಬ್ಬಲ ಮರಚಟ್ಟಿಗಳನ್ನು ಚರಿಗೆಯ ಬಾಯಿಗೆ ಆನಿಸಿ ಒತ್ತಿ, ಅನ್ನ ಬಸಿಯಲು (ಮರಿಮ. ೩೦೦).

[ಮರ$_1$ + ಚಟ್ಟಿ$_1$]

**ಮರಚಪ್ಪರಿಕೆ** (ನಾ). ಒಂದು ಬಗೆಯ ಸಸ್ಯ ; (ವೈಶಿಗಿ. ೭೯-೦೨೯೩).

[ಮರ$_1$ + ಚಪ್ಪರಿಕೆ$_0$]

**ಮರಚಲು** 'ಮುಱುಚಲು' ನೋ.

**ಮರಜ** (ನಾ). ಒಬ್ಬಾತನ ಹೆಸರು : ದುಗ್ಗಬ್ಬೆ ತುಮ್ಬು ಮಾಡಿಸಿದಾಳ್ ಮರಜನ್ ಬೆಸಗೆಯ್ದು (ಎಕ. X (S), ಮುಳಬಾ. ೩೦೬-೭ ; ೯ನೆಯ ಶತ).[?]

**ಮರಡಿ** 'ಮೊರಡು'$_2$ ನೋ.

**ಮರಣ** (ನಾ). ೧. ಜೀವಹೋಗುವಿಕೆ ; ಸಾವು ; ಮೃತ್ಯು: ಮರಣದ ಜನ್ಮದ ನಿಗಳಂ ನಿರಾಕುಳಂ ಪತ್ತುವಿಡುವಿನಂ (ಆದಿಪು. ೦೦-೫೯) ; ಹಾಳು ಗೆಟ್ಟೋಡುವ ಆಳು ನಾನಲ್ಲಯ್ಯಾ ಕೇಳು . . . ಮರಣವೆ ಮಹಾನವಮಿ (ಬಸವ. ೭೯೮) ; ಮರಣವಾಯಿತು ಮಾವ ಮಾರೀಚಂಗೆ (ತೊರರಾ. ೦೯-೨೨); ಮಾನವನಿಗೆ ಮರಣ ತಪ್ಪಿದ್ದಲ್ಲ (ನಸಂ. ೩೬). ೨. ವತ್ಸನಾಭಿಯೆಂಬ (ಉಗ್ರವಾದ) ಒಂದು ಬಗೆಯ ವಿಷ : "ಮರಣಂ — ವತ್ಸನಾಭಿ" (೬ಕಂ. ೦೦೫). ೩. [ಕಾಮಶಾ] ವಿರಹದ ಹತ್ತುಅವಸ್ಥೆಗಳಲ್ಲಿ ಕೊನೆಯದು : ಅಭಿಲಾಷೆ ಚಿಂತೆ ಸಂಸ್ಮೃತಿ ವಿಭುಗುಣನುತಿ ಸಂತಾಪನ ಕ್ರಿಯಾದ್ವೇಷ ವಿಕಳ ಮೌನ ಮೂರ್ಛೆ ಮರಣಮೆಂಬ ದಶಾವಸ್ಥಾದಿ ವಿಚಾರಪರರಿಂ (ವಿವೇಕ. ೦೬೯). ೪. [ಕಾವ್ಯಮಿ] ಮೂವತ್ತುಮೂರು ಸಂಚಾರೀಭಾವಗಳಲ್ಲಿ ಒಂದು : ಲಜ್ಜೆ ಆವೇಗ ಶಂಕೆ ಮರಣ . . . ಅಪಸ್ಮಾರಗಳೆಂಬ ಮೂವತ್ತುಮೂಱು ಸಂಚಾರೀಭಾವಂಗಳಿಂ ಪರಿವರ್ಧಿಸಿ (ವಿವೇಕ. ೨೨೭). [ಸಂ.]

**ಮರಣಂಗೆಯ್** (ಕ್ರಿ). ಸಾಯು ; ಅವಸಾನಹೊಂದು : ಜೀಯ ನಿಮಗಂ ನಿನ್ನೆ ನಮಿಸಿದ ತೋಯಜಾನನೆ ಇಂದು ಮರಣಂಗೆಯ್ದಳು (ಬಸಪು. ೩೨-೯೨). [ ಮರಣ + ಕೆಯ್$_1$ ]

**ಮರಣಕಾಲ** (ನಾ). ಸಾಯುವ ಸಮಯ ; ಜೀವ ಹೋಗುವ ಹೊತ್ತು : ಕಂದರ್ಪನಾಶ್ರಯ ವಸಂತಕಾಲಕ್ಕೆ ಗೋವಿಂದನಾಶ್ರಯವು ಮರಣಕಾಲದೊಳು (ಕುರಂದ. ೫೩೩-೦). [ಸಂ.]

**ಮರಣಗಾಲ** (ನಾ).=ಮರಣಕಾಲ : ಕೇಡುಗಾಲಕ್ಕೆ ಬುದ್ಧಿ ಇಲ್ಲ. ಮರಣಗಾಲಕ್ಕೆ ಮದ್ದು ಇಲ್ಲ (ಗಾದೆ). [ ಮರಣ + ಕಾಲ ]

**ಮರಣದಂಡನೆ** (ನಾ). ಪ್ರಾಣ ತೆಗೆಯುವ ಶಿಕ್ಷೆ ; ಗಲ್ಲು : ಭಗತ್‌ಸಿಂಗ್ ಅವರಿಗೆ ಮರಣದಂಡನೆ ನೀಡಲಾಯಿತು (ಆತ್ಮಾರ್ಥ. ೦೯೯); ಐಗುಪ್ತೇಯನು ಹಿಂತಿರುಗದಿದ್ದರೆ ಮರಣದಂಡನೆಯಾಗುವುದು (ಮುಡಿಸ. ೪೭).

[ಸಂ. ಮರಣದಂಡನ]

**ಮರಣದೀಕ್ಷಿತ** (ನಾ). ಜೀವ ನೀಗಿಕೊಳ್ಳಲು ವ್ರತ ಆಚರಿಸುವವನು ; ಸಾಯಲು ಸಿದ್ಧನಾದವನು : ಅರಸ ನೀ ಪ್ರಾಯೋಪವೇಶದಿ ಮರಣದೀಕ್ಷಿತನಾದೆ ಗಡ (ಕುವ್ಯಾಅ. ೨೦-೭೯). [ಸಂ.]

**ಮರಣದೇವತೆ** (ನಾ). ಸಾವಿನ ಅಧಿದೇವತೆ ; ಮೃತ್ಯುದೇವತೆ : ಮಿತ್ತು ಮಾರಿಯು ಮರಣದೇವತೆಯೆತ್ತಲಡಗಿದೆ (ತೊರರಾ. ೩೭-೦೦).

[ಸಂ. ಮರಣದೇವತಾ]

**ಮರಣಧರ್ಮ** (ನಾ). ಸಾಯುವುದು ಸ್ವಭಾವವಾಗಿರುವುದು : ಜೀವಾತ್ಮನು . . . ತಾನು ಮಾತ್ರ ಮರಣಧರ್ಮವಿಲ್ಲದೆ . . . ತೃಪ್ತನಾಗಿ ಸಂಚರಿಸುತ್ತಾನೆ (ಮುಕ್ತಾರ. ೨೭೩). [ಸಂ. ಮರಣಧರ್ಮನ್]

**ಮರಣಮೂಢ** (ನಾ). ಸಾಯುವ ಕಾಲ ಸಮೀಪಿಸಿದುದರಿಂದ ಬುದ್ಧಿಯು ಮಂಕಾದ ವ್ಯಕ್ತಿ : ಮನದಿ ವಚನದಿ ತಪ್ಪು ಮಾಡಿದ್ದರೆನ್ನನ್ನು ವನಿತೆ, ಕುವರಿಯು, ಮಗಳು, ಮರಣಮೂಢಳು ಎಂದು ಮನದಿ ತಿಳಿಯುತ ಮನ್ನಿಸುವುದು (ಕೃಷ್ಣಾಕು. ೭-೦೭). [ಸಂ.]

**ಮರಣವಡು** (ಕ್ರಿ). ಸಾಯು ; ಗತಿಸು : ಮರಣವಟ್ಟರು ಮಾರಿಗಿಷ್ಟರು ಧರ್ಮಭ್ರಷ್ಟರು (ತೊರರಾ. ೦೨-೦೩). [ಮರಣ + ಪಡು$_1$]

**ಮರಣವಡೆ** (ಕ್ರಿ). = ಮರಣವಡು : ಮರಣಪಡದಂಗೆ ಬಲಿಗೊಟ್ಟ ಕೆಂಗೂಳು ಹರಹಿರೆ ಕೆಂಪಿನ ಹೂವು . . . ತರುಣಿ ಕಂಡಳು ಸುಡುಗಾಡ (ಜೀವಂಗಾಂ. ೭-೫). [ ಮರಣ + ಪಡೆ$_1$ ]

**ಮರಣವಾರ್ತೆ** (ನಾ). ಸಾವಿನ ಸುದ್ದಿ ; ನಿಧನದ ವರ್ತಮಾನ : ಕೋಲಗುರುವಿನ ಮರಣವಾರ್ತಾಕಾಲಸರ್ಪನ ತಂದು ಸಂಜಯ ಹೇಳಿಗೆಯ ನೀಡಾಡಿದನು ಧೃತರಾಷ್ಟ್ರನಿದಿರಿನಲಿ (ಕುವ್ಯಾಕ. ೦-೦).

[ಸಂ. ಮರಣವಾರ್ತಾ]

**ಮರಣಶಾಸನ** (ನಾ). ೧. ಸಾಯಿಸಲು ನೀಡುವ ಅಪ್ಪಣೆ ; ಕೊಲ್ಲಲು ಮಾಡುವ ಆಜ್ಞೆ: ನೀವು ಅವನ ಮರಣಶಾಸನವನ್ನೇ ಬರೆಯತೊಡಗಿದ್ದೀರಿ (ರಂಗರೂ. ೨೦೦); ಮನಸ್ಸಿನಲ್ಲೇ ಅವನ ಮರಣಶಾಸನವನ್ನು ಬರೆದೆ (ವೀರಯೋ. ೫೩). ೨. ಉಯಿಲು ; ಮೃತ್ಯುಪತ್ರ. [ಸಂ.]

**ಮರಣಸಂಕಟ** (ನಾ). ಸಾಯುವ ಕಾಲದಲ್ಲಿ ಉಂಟಾಗುವ ತಳಮಳ,— ವೇದನೆ : ಅಯ್ಯಾ ಧರ್ಮಾತ್ಮನೇ ನನಗೆ ಕ್ಷುತ್ತಿನಿಂದ ಮರಣಸಂಕಟ ಉಂಟಾಗಿದೆ (ಸೀತಿಪಂ. X, ೦೦). [ಸಂ.]

**ಮರಣಹೊಂದು** (ಕ್ರಿ). = ಮರಣವಡು : ಸ್ವಾತಂತ್ರ್ಯಕ್ಕಾಗಿ ಹೋರಾಡಿದ ಅನೇಕ ಜನ, ಅದು ಲಭ್ಯವಾಗುವ ಮುಂಚೆಯೇ ಮರಣಹೊಂದಿದರು (ರೂಢಿ). [ಮರಣ + ಹೊಂದು$_1$ (< ಪೊರ್ದು) ]

**ಮರಣೋತ್ತರ** (ಗು). ಸಾವಿನ ನಂತರದ ; ಸತ್ತ ಮೇಲಿನ : ಮೃತ್ಯು, ಮರಣೋತ್ತರ ಜೀವನ ಇತ್ಯಾದಿ ವಿಷಯಗಳೂ ' ಗೀತಾಂಜಲಿ 'ಯಲ್ಲಿ ಬಂದಿವೆ (ಶ್ರಬಂಧ. ೦೦೦). [ಸಂ.]

**ಮರಣೋತ್ತರಪರೀಕ್ಷೆ** (ನಾ). ಸತ್ತ ನಂತರ ಮಾಡುವ (ವೈದ್ಯಕೀಯ) ತಪಾಸಣೆ ; ಶವಪರೀಕ್ಷೆ : ಮರಣೋತ್ತರಪರೀಕ್ಷೆಯಲ್ಲಿ ಅದು ಕೊಲೆಯೆಂಬುದು ಸಾಬೀತಾಯಿತು (ರೂಢಿ). [ಸಂ. ಮರಣೋತ್ತರಪರೀಕ್ಷಾ]

**ಮರತಾಟೆ** (ನಾ). ಅಂತಸ್ತು ; ಸ್ಥಾನ ; ಪದವಿ : ಆ ಪುತ್ರರ ಮರತಾಟೆಗೆ ಸರಿಯಾಗಿ ಉತ್ತರದರಬಾಜೆ ಪೇಷ್ ಬತೇರಿಯ ಮೇಲೆ ೨೧

ತೋಪುಗಳನ್ನೂ ರಾಜಾಂಗಕ್ಕೆ ತಕ್ಕ ಮರ್ಯಾದೆಗಳನ್ನೂ ನಡೆಸಿದ ನಂತರ (ಕುಹಾಸಂ. II, ೦೨೦). [← ಅರ. ಮುರಾತಿಬ್; ಮರಾ. ಮರಾತಬ್]

**ಮರತುಗುರುವಣಿ** (ನಾ). ಒಂದು ಬಗೆಯ ಸಸ್ಯ : ಗುರುಮಣಿ, ಮರತುಗುರುವಣಿ (ವೃ ಶಿಂ. ೩೩-೬೬೨). [ ? + ಗುರುವಣಿ]

**ಮರತುತ್ತಿ** (ನಾ). ಒಂದು ಬಗೆಯ ಸಸ್ಯ : ಸಣ್ಣಸೊಪ್ಪು, ತೊರತಿ, ಮರತುತ್ತಿ (ವೃ ಶಿಂ. ೯೩-೬೬೦). [ಮರ$_1$ + ತುತ್ತಿ$_1$]

**ಮರತುಳಸಿ** (ನಾ). ಒಂದು ಬಗೆಯ ತುಳಸಿ: ಹೆದ್ದುಂಬೆಗಿಡ, ಮರತುಳಸಿ (ವೃ ಶಿಂ. ೩೭-೦೦೯೯). [ಮರ$_1$ + ತುಳಸಿ (=ತುಲಸಿ)]

**ಮರದಣಬೆ** (ನಾ). ಒಂದು ಬಗೆಯ ಅಣಬೆ ; ಮರಗಳ ಮೇಲೆ ಬೆಳೆಯುವ ಅಣಬೆ : (*). [< ಮರ$_1$ + ಅಣಬೆ (< ಅಳಂಬೆ)]

**ಮರದರಸಿನ** ' ಮರದರಿಸಿನ ' ನೋ.

**ಮರದರಿಸಿನ**, ಮರದರಸಿನ (ನಾ). ಒಂದು ಬಗೆಯ ಅರಿಸಿನ : " ಪೀತದ್ರುಃ, ಕಾಲೇಯಃ, ಹರಿದ್ರುಕಃ . . . ಪರ್ಜನೀ – ಈ ೭ ಮರದರಿಸಿನ " (ಶಾಶಂ. ೦೦೦) ; ನೆಲಗುಳ್ಳ, ಮರದರಿಸಿನ, ಕರ್ಪೂರ ಶುಂಠಿ . . . ಮುಳ್ಳುಕೊಗ್ಗೀಬೇರು ಇವಿಷ್ಟನೂ . . . ಕಷಾಯ ಕಾಸಿ . . . ಕುಡಿಸಲು ತ್ರಿದೋಷದಿಂದುಂಟಾದ ಸ್ವರಭಂಗ ಶಮನ (ವೈದ್ಯಸಾ. I. ೦೬೬). **ಮರದರಸಿನ** : " ಮರದರಸಿನಂ ದಾರ್ವೀಸಾಹ್ವಂ ಪಚಂಪಚಿ ದಾರುಕಂ " (ಕನ್ನಿಘಂ. ೩೭-೨೩). [<ಮರ$_1$ + ಅರಿಸಿನ]

**ಮರದಾನಿ** (ನಾ). ಗಂಡಸರ ಗುಂಪು.–ಸಮೂಹ : ಒಳಗೆ ಹೋದರೆ ರಾಣಿವಾಸದವರ ಜನಾನಿ, ಹೊರಗೆ ಬಂದರೆ ಶಿವಸ್ವಾಮಿಯ್ಯನವರ ಮರದಾನಿ (ಮುಸುಮ. ೩೯). [← ಹಿಂ. ಮರ್ದಾನಾ = ಪುರುಷರಿಗೆ ಸಂಬಂಧಿಸಿದ, ವೀರೋಚಿತವಾದ; ಮರಾ. ಮರ್ದಾಣೀ, ಮರ್ದಾನೀ = ಪುರುಷರಿಗೆ ಸಂಬಂಧಿಸಿದ]

**ಮರದಾವರೆ** (ನಾ). ಒಂದು ಬಗೆಯ ತಾವರೆ: ಬೆಟ್ಟದಾವರೆ : " ಮರದಾವರೆಯುಮೆಂದು ಕೊಸಗೆಂದು ಬೆಟ್ಟದಾವರೆ " (ಕಪ್ರಕ. ೦೯). [ ಮರ$_1$ + ತಾವರೆ ( <ತಾಮರೆ) ]

**ಮರದಿಗುಡು** (ನಾ). ಮರದ ತೊಗಟೆ.–ಸಿಪ್ಪೆ : ಇದೆ ವನವುಹಿಂಷನುದ್ದಿಕೊಂಡ ಮರದಿಗುಡು (ಕೈಬಂಥಾ. ೨೬-೯೯). [ ಮರ$_1$ + ತಿಗುಡು$_1$ ]

**ಮರದುದಿ** (ನಾ). ಮರದ ತುದಿ.– ಕೊನೆ : ಪೆಳವಂ ಮರದುದಿಯ ಮಹಾಫಳವಂ ಮಿಗೆ ಬಯಸುವಂತೆ (ಕಬಕಂ. ೨-೮೭). [ಮರ$_1$ + ತುದಿ]

**ಮರದುಱುಗಲ್** (ನಾ). ಮರಗಳ ಸಮೂಹ ; ತೋಪು : ಪರ್ವತದ ಮೇಲೆ ಕಱಂಗಿ ಕಬ್ಬಲಿಸಿದ ಮರುದುಱುಗಲ ನಡುವೆ (ಶಂಕರಾ. ೩-೦೩ ವ) ; ಕೊಸಗಿನ ಮರದುಱುಗಲರಲ್ದೆಸೆವಂತೆಸೆದಿರ್ಪುದಲ್ಲಿ ಬಜ್ಜರಮಸುರಾ (ಜಗಂ. ೯-೦೦೭) ; ಒತ್ತರಿಸಿ ಬೆಳೆದ ಮರದುಱುಗಲ್ಗಿರದೆಱಗಿ ಮುಱಿವ ಕರಿಕರಕಂಚಿ (ಶಾಶೇ. ೬-೨೯ ವ). [ಮರ$_1$ + ತುಱುಗಲ್ (< ತುಱುಂಗಲ್)]

**ಮರದೆ** (ನಾ). ಗಂಡಸು ; ಪುರುಷ : ನಾಲ್ಕುಜಾತಿ ಮುಸಲ್ಮಾನರ ಮರದೆ ಆದ್ಮಿ ಶಿಪಾಯಿಗಳ ಬೇರು ಕೊಡಗಿನ ಶೀಮೆವಳಗೆ ನೆಟ್ಟು (ರಾಜೇಂದ್ರ. ೮೩೦). [ ← ಪಾರ. ಮರ್ದ್; ಹಿಂ. ಮರದ್ ಮರ್ದ್]

**ಮರದೇರಣ** (ನಾ). ಒಂದು ಬಗೆಯ ಸಸ್ಯ : "ಬಧಿರಃ —ಮರದೇರಣ, ಭೂತೃಣಭೇದ" (ಚಿಂಧಿ. ೦೦೩) : ಮರದೇರಣಸೊಪ್ಪಿನ ರಸ, ಬೋಳ ತರದ ಸೊಪ್ಪಿನ ರಸ (ಸಳಕ್ಕ. ೨೦೭). [ಮರ$_1$ + ತೇರಣ$_1$]

**ಮರನ** (ನಾ). ಒಬ್ಬಾತನ ಹೆಸರು (?) : ಮರನಾನು ಪೊಹುಂಯಾನು ಕೊಡಂಗಿಯಾನು ಪೊಜಿಗಾಗಲೆ ಸಲೆಪ್ಪಿಗೆಯ ಧಾಗ ಕಂಮರ ಮಸನ್ತಕುವರ (ಎಕ. VIII, ಸೊರಬ. ೫೭೦-೨೯; 692). [ ? ]

**ಮರನಾಯಿ** (ನಾ). ತನ್ನನ್ನು ಒರಗಿದವರ ರಕ್ತವನ್ನು ಹೀರುವುದೆಂದು ನಂಬಲಾದ ಒಂದು ಬಗೆಯ ಮರ; ೨ ಇದು ಮಾಂಸಾಹಾರಿ ಸಸ್ಯವಿರಬಹುದು : ' ಒರಗಿಕೊಂಡ ಕೂಡಲೇ ಪ್ರಾಣಹೀರುವ ಮರನಾಯಿ ' ಎಂಬ ಮರಗಳು ಇರುತ್ತವೆಯಂತೆ ಕಾಡಿನಲ್ಲಿ (ಚೆಲುಪು. ೨೨೬). [ಮರ$_1$ + ನಾಯಿ$_1$]

**ಮರನೆಲ್** (ನಾ). ಒಂದು ಬಗೆಯ ಬತ್ತ ; ದಪ್ಪನೆಲ್ಲು : ಬೀದಪ್ಪ ನೆಲ್ ಬರಲುಮಾಧೀಶಂಗೆ ಅಲ್ಲಿ ಬಂದೋಗರದ ನೆಲ್ಲಲ್ಲವೀಶಂಗೆ ಮರನೆಲ್ಲ ನೀಯಸದ ನೆಲ್ ಬಜಲ್ ಸೆಲ್ಬರಲು ತರುಣೇಗಂ ತನಗಂ ಪ್ರಸಾದಸುಖವಾಗಿರಲು (ಅಂಕ. ರೇ. ೦೬೨-೦೩). [ಮರ$_1$ + ನೆಲ್]

**ಮರನೆಲ್ಲಿ** (ನಾ). ಒಂದು ಬಗೆಯ ನೆಲ್ಲಿ : ಅಲ್ಲಿಂ ಪಡುವ ಮರನೆಲ್ಲಿಯ ಗುಂಡು ಅಲ್ಲಿಂ ಪಡುವ ಮೆಟ್ಟಬ್ . . . ಅಲ್ಲಿಂ ಮೂಡಲ್ಕೆಂಬರಯ ಹಳ್ಳಮುಂ ಸೀಮೆ ಕೊಡಿತ್ತು (ಎಕ. II, ೩೨೭-೭೭; 1181). [ಮರ$_1$ + ನೆಲ್ಲಿ]

**ಮರಪಟ್ಟಡಿ** (ನಾ). ಬಡಗಿಯು ಮರಗೆಲಸಮಾಡಲು ಅಡಿಯಲ್ಲಿ ಇಟ್ಟುಕೊಳ್ಳಲು ಬಳಸುವ ಮರದ ಹಲಗೆ : "ಉದ್ಘನಃ . . . ಬಡಗಿಯವನು ಮರಕೆಲಸ ಮಾಡುವದಕ್ಕಾಗಿ ತನ್ನ ಮುಂದೆಯಿಟ್ಟುಕೊಂಡಿರುವ ಮರಪಟ್ಟಡಿಯೆಂಬ ಅಡಿತುಂಡು" (ಸಿದ್ಧಾಂತಿ. ೩೬೭). ' ಪಟ್ಟಡಿಮರ ' ಪರಾ. [ಮರ$_1$ + ಪಟ್ಟಡಿ$_1$]

**ಮರಪ್ಪ** (ನಾ). ಒಬ್ಬಾತನ ಹೆಸರು : ಕಱಗಾಲೆ ಮದವ ಮುತ್ತರಸರ ಮರಪ್ಪನ್ ಪರಮಿಳ್ಳಿ ಎಱಿತು ವೀರಸ್ವರ್ಗಂ ಪೊಕ್ಕಂ (ಎಕ. XII, ಕುಣಿಗಲ್. ೯೭-4; 750). [ಮರ$_1$ + ಅಪ್ಪ$_1$]

**ಮರಫ**, ಮರ್ಫ (ನಾ). ಒಂದು ಬಗೆಯ ಚರ್ಮವಾದ್ಯ ; ಡೋಲು : ಕೊಂಬು, ತಮಟೆ, ತಾಸು, ಮರಫ, ತಾಸಾ ಓಲಗದವರು (ಮೈಸೂರಾ. ೬೯). ಮರ್ಫ : ಕಹಳೆ, ಭೂರ್ಗ, ತುತೂರಿ, ನೌಬತು, ತಾಸು, ಮರ್ಫ, ಬಾಜಾ ಭಜಂತ್ರಿ (ಗುರುಚ. ೦೦). [ ← ಪಾರ. ಮರಾ. ಮರ್ಫಾ]

**ಮರಬಾಳೆ** 'ಮರವಾಟಿ$^3$' ನೋ.

**ಮರಬಿಲ್ಲು** 'ಮರವಿಲ್' ನೋ.

**ಮರಮರ** (ನಾ). ಒಂದು ಅನುಕರಣ ಶಬ್ದ: ಅವಸರಅವಸರವಾಗಿ ಮುಂದೆ ನಡೆದನು. ಆದರೆ ಆತನ ಜೀವ ಮರಮರ ಅಂದಿತು (ಕಜ. ೩).

**ಮರಮರನೆ** (ಅ). ಒಂದು ಅನುಕರಣಾವ್ಯಯ : ಕಾಯಮುದು ಭರದಿಂದ ಮುರಿಯುತಿರೆ ಮರಮರನೆ ಮರುಗುತ್ತ (ಮುರಶ. ೨೯-೦೦); ಇರುವ ಎರಡು ಹೊಲಗಳಲ್ಲಿ ಒಂದನ್ನು ಕೊಟ್ಟು ಮರಮರನೆ ಮರುಗುತ್ತ ಮನೆಗೆ ನಡೆದಳು ಮಹುಮತಿ (ಮುಕ್ತಬ. ೬). [ಮರಮರ + — ಅನೆ$_1$]

**ಮರಮಲ್ಲಿಗೆ** (ನಾ). ಒಂದು ಬಗೆಯ ಮಲ್ಲಿಗೆ : ಮರಮಲ್ಲಿಗೆ ಅಲ್ಲಿ ಸಣ್ಣಮಲ್ಲಿಗೆ ಮೊದಲಾದವು ... ಕೊಂಬೆಗಳಂ ನೆಟ್ಟಾಗ್ಯೂ ಹುಟ್ಟುವುವು (ಶಾಸಂ. ೯೨೩-೦೨). [ಮರ$_1$ + ಮಲ್ಲಿಗೆ]

**ಮರಮಸಕ** (ನಾ). ಅತ್ಯಧಿಕವಾದ ಆವೇಶ, — ರಭಸ : ಮನಮಂ ಪೊಕ್ಕಂ ಮರಮಸಕದಿಂ ಮರವಾಯ್ದು ಮರದುಱುಗಲಂ ಕಿಬ್ಬೀಡಾಡುವಲ್ಲಿ (ಅರಗಶೇ. ೩-೦೦೬ ವ). [ಮರ$_1$ + ಮಸಕ$_1$]

**ಮರಮಳೆ** (ನಾ). ದೊಡ್ಡಮಳೆ; ಭಾರಿಮಳೆ : ದಿವಿಜಪತಿ ಮರಮಳೆಯಂ ಕಱೆಯುತ್ತಿರೆ (ತ್ರಿಶಂ. ೦೦-೨೭); ಒಂದು ಪಕ್ಷದಲ್ಲಿ ಮರಮಳೆಯಾಗಿ ಪುನಃ ಜಡಿಮಳೆಯಾದರೆ ಸ್ವಲ್ಪ ಹಸಿಯಾಗುತ್ತದೆ (ಕೃಶಾಸ್ತ್ರ. ೩೭). [ಮರ$_1$ + ಮಳೆ (< ಮಱೆ$^3$)]

**ಮರಮಿಟಿಲ** (ನಾ). ಒಂದು ಬಗೆಯ ಸಸ್ಯ: ತುಳಸಿಸೊಪ್ಪು, ಮರಮಿಟಿಲದ ಸೊಪ್ಪು, ಹತ್ತಿಯ ಎಲೆ ಇವಿಷ್ಟನು ಹಸುವಿನ ಹಾಲಿಂದ ಅರೆದು ಕಪ್ಪೆ ಕಚ್ಚಿದ ಗಾಯಕ್ಕೆ ಪೂಸಲು ಕ್ಷಣಾರ್ಧದಲ್ಲಿ ಅದಱ ವಿಷ ಪರಿಹರವಹುದು (ವೈದ್ಯಸಾ. II. ೨೨೦). [ಮರ$_1$ + ಮಿಟಿಲ (< ಮಿಟಿಲಿ)]

**ಮರಮೆಣಸು** (ನಾ). ಒಂದು ಬಗೆಯ ಮೆಣಸು; ದೊಡ್ಡ ಮೆಣಸು : (*). [ಮರ$_1$ + ಮೆಣಸು (< ಮೆಳಸು)]

**ಮರಮೊಗ** (ನಾ). ಮರದಿಂದ ಮಾಡಿದ ಮುಖದ ಆಕಾರ; ಮರದ ಮುಖವಾಡ : ಎನಿತಾನುಂ ತೆಱದ ರೂಪುಗಳಂ ಕೈಕೊಂಡು ಮರಮೊಗಂಗಳನಿಟ್ಟು ಬಂದು ಮುಂದೆ ಆಡಿಯುಂ (ವಡ್ಡಾರಾ. ೦೦೬-೦೪).
[ಮರ$_1$ + ಮೊಗ]

**ಮರಮೊದಲ್** (ನಾ). ೧. ಮರದ ಅಡಿ; ಮರದ ಕೆಳಗಿನ ಪ್ರದೇಶ : ಲಲನೆಯ ಕಪೋಲಮಂ ಪೋಲಲೆಂದು ಕುಸಿದಿಂದ್ರಿಯಂಗಳಂ ಮರಮೊದಲೊಳ್ ನೆಲಸಿ ವನವಾಸದೊಳ್ ನವೆದಲ್ಲವಳ್ಳಿಗಳೆಲೆಗಳೆಂತುಮೇಂ ಪೋಲ್ತಪುವೇ ? (ಮಲ್ಲಿಪು. ೩-೭೭); ಮುನೀಂದ್ರಂ ಬೇರೂಱಿದ ಬೀಬಲಂತೆ ಮರಮೊದಲಿರ್ದಂ (ಚಂದ್ರಪ್ರ. ೦೦-೦೪). ೨. ಮರದ ಬೊಡ್ಡೆ,–ಕಾಂಡ: ಮಿನುಗುವ ಪೊಸಮಣಿಗಂಬಮೆ ಮರಮೊದಲೆನೆ ಬಲ್ದೊಲೆಯೆಲ್ಲಂ ಬಹುಶಾಖೆಗಳೆನೆ . . . ಕೃತ್ರಿಮವಿಹಗಾವಳಿ ಶುಕಪಿಕಮೆನಲಾ ಮಂಡಪಮಾತಿಶೋಭಿಸಿದುದು (ಶಬುಶಾ. ೪-೩೦). [ಮರ$_1$ + ಮೊದಲ್$_1$]

**ಮರಮ್ಮ** (ನಾ). ಒಬ್ಬಾತನ ಹೆಸರು : ಮಲಗಾಱರ ಕುನ್ದವಾಸಿಯ ಮಗಂ ಮರಮ್ಮ ಬರೆದ ಲಿಕಿತಂ (ಎಕ. VIII, ಸೊರಬ. ೨೨-೦೦; 800).
[ಮರ$_?$ + ಅಮ್ಮ$_1$]

Δ **ಮರರ್ಚು** 'ಮರಲ್ಚು' ನೋ.

**ಮರಲ್$_1$, ಮರಳ್, ಮರಳು$_1$, ಮಲರ್$_1$** (ಕ್ರಿ). ೧. ಹಿಂದಕ್ಕೆ ಬರು ; ಹಿಂತಿರುಗು : "ಮರಲ್ – ಪರಾಙ್ಮುಖೇ, ಪೃಷ್ಠೇ ಚ" (ಶಮುದಾ); ಪೆರ್ದೆರೆಗಳೆಯ್ದೆ ಕುಲಾದ್ರಿಗಳೊಳ್ ಪಳಂಚಿ ತೂಳ್ದೊಡನೆ ಮರಲ್ದವೋಲ್ ಕಿಡೆಯೆ (ಶಂಶಪ. ೬-೯೦) ; ಭೂತಪಿಶಾಚಕೋಟಿಯುಂ ನೆಱೆ ತಣಿಯುಣ್ಡು ಚೆಣ್ಡು ಮರಲ್ದಿನ್ನುಮದಕ್ಕಿಸಲಾಱಿವೆನ್ದೊಡೆನ್ನನಱಿಯಿರೆ ವಿಕ್ರಮಮಂ (ಎಕ. XVI, ಶಿಕ್ಕನಾ. ೯೬-೨೭; 1170); ಕಿಱಿದುದಿನ ಮಿರ್ದು ಮರಲ್ದು ಬರಲಕ್ಕುಂ (ರಾಮಾಶ್ವ. ೨೦-೨೪). ೨. ಹೊರಳು; ತಿರುಗು : ದೇಸೆ ವಿಳಾಸಮಂ ಪುದುಂಗೊಳಿಸೆ ಮರಲ್ದು ಕನ್ನೆ ನಡೆನೋಡಿ (ಶಂಶಪ. ೪-೪೦) ; ಚಂಚುವಿಂ ಚಲ್ಲೆವೊಯ್ದು ನಖದಿಂ ನಲಿಗೆದಱಿ ಕೋಡಗಱೆಯಿನಿಡಱಿದು ಮುಡಿಯಿಂ ಮರಲೆವಾಯ್ದು ತಿಱಿಗದಿರಂ ಮಱಿವಕ್ಕಿಗೆ ನೂಂಕಿ (ಅಪಂಪು. ೭-೬೦ ವ). ೩. ಮನಸೋಲು : ಜನಪ್ರತತಿ ಮರಲ್ದು ನೋಡಿದುದು ನಿಂದು ವಿವಾಹಗೃಹೈಕದೇಶದೊಳ್ (ಚಂದ್ರಪ್ರ. ೬-೭೭) ; ನೆನೆಯುತ್ತುಂ ಪೂಜಿಸುತ್ತುಂ . . . ಮರಲ್ದೀಕ್ಷಿಸುತ್ತುಂ (ರಕ್ಷಾಶ. ೭೩). ೪. ಹಿಮ್ಮೆಟ್ಟು ; ಹಿಂದೆಗೆ : ಮರಲ್ದ ಮೋಲ್ದರಿವ . . . ಬಿನ್ನಣಮೊಪ್ಪೆ ಪಗಲ್ತು ಕಾದಿದರ್ (ಕಬಿಶಂ. ೪-೭೪) ; ಸುತ್ತಿ ಬರ್ಪ ಮೋಣ್ಮಣಿವ ಮರಲ್ದ ಕೀರ್ತಿಸುವ . . . ಭಕ್ತವೃಂದಮೆಸೆದಿರ್ದುದು (ವೃಷಪು. ೦೭-೯೬). ೫. ಜೋಲು : ಎಱಕೆ ಮರಲ್ದು ಗೋಣ್ಮುರಿದು ಚಂಚುಪುಟಂ ತೆಱೆದಳ್ಳಿವಾಱೆ ಬಂದೆಱಗುವುವಲ್ಲಿ . . . ಲಂಬಣದ ಮುತ್ತುಗಳಂ ಮುಟ್ಟಿಗೆತ್ತು ಚಾತಕಂ (ಅಪಂಪು. ೬-೯೩). **ಮರಳ್** : ೧. ನವ್ಮರಸಂ ಮರಳ್ದಿಂಬುಕೆಯ್ಗಂ (ಗದಾಯು. ೦-೩೭); ಪ್ರಜಾಪ್ರಶಂಸಾಶೀರ್ವಚನನಿಚಯಂಗಳನಂಗೀಕರಿಸಿ ಮರಳ್ದು ಬರುತ್ತಂ (ವರ್ಧಪು. ೩-೪೪ ವ); ವೇದವ್ಯಾಸಮುನಿ ಧರ್ಮಪುತ್ರನಂ ಬೋಧಿಸಿ ಮರಳ್ದನಾ ರಾತ್ರಿಯೊಳ್ (ತ್ರಿಪುಶಾ. ೨-೯೭). ೪. ಪರಮಜ್ಞಾನಿ ಮರಳ್ವನೇ ಪೆಱರ್ಗೆ (ಧರ್ಮಪು. ೦೩-೯೦). ೬. (ಗಿರಿಗಿರಿ) ಸುತ್ತು ; ತಿರುಗು : ಎರ್ದೆಗೆಟ್ಟೆನೀಗಳೀ ದಿಟ್ಟ ಮರಳ್ದು ನಂದಿದಪುದೆನ್ನುಮನಾನಱಿದಪ್ಪೆನಿಲ್ಲ (ಕಾದಂಪೂ. ೦೪೭) ; ಮಸ್ತಕಗಳೆರಡುಂ ಕೆಯ್ಯೊಳಂ ಮರಳ್ವನಮೊತ್ತೆ (ಮುಹಾಪೇ. ೭-೯೬ ವ); ಮಂದರಗತಿಯಿಂ ಮರಳ್ದು ಸುೞಿದಾಡುಗುವಲ್ಲಿ ಮರಾಳಮಂಡಳಂ (ಕಾವ್ಯಸಾ. ೦೦೪). ೭. (ನೀರು ಮೊದಲಾದ ದ್ರವಪದಾರ್ಥಗಳು) ಕುದಿ : ಬಲ್ಬಿಸಿಲಿಂದೆ ಕಡುಗಾದ ಬಾಣಲಿಯೆಣ್ಣೆಯೊಳಬುಧಿ ಹೂಣಿಸಿ ಕುದಿಗೊಂಡು ಮರಳ್ದುದು (ಮೋಹತ. ೦೯-೪೩). **ಮರಳು$_1$**: ೧. ಅದು ಶುದ್ಧಿಯ ಮಾಡ ಹೋದಾತನಿನ್ನೂ ಮರಳನು (ಅಪಕಂ. ೦೮೦-೬೦೦) ; ತುಂಬಿ ತುಳುಕದ ಬಸವ ತಾಗಿ ಮರಳದ ಬಸವ (ಬಸರ. ೯-೬೯) ; ಱೆಕ್ಕೆಯ ಕೊಡಹಿ ಹಾಱಿತುವೊಡನೆ ಮರಳಿತು ಧರೆಗೆ (ಪಳಕ. ೨-೨೦); ತಿಂಗಳಾರಕೆ ಮರಳಿ ಬಹೆನೆಂಬ ಭಾಷೆಯಂ ಭಾವಿಸುತೆ, ಭಾಮಿನಿ . . . ನಡೆದಳ್ ಶಿಬಿರದೆಡೆಗೆ (ಶತ್ರುಂಗ. ೩೭-೦೩೩೩). ೬. ತಲೆ ತಿರುಗಿ ತುಟಿಯೊಣಗಿ ಕಂಗಳ ಬೆಳೆ ಮರಳಿ ಬಸವಳಿಯೆ (ಕುವ್ಯಾದ್ರೌ. ೩-೩೩); ಆಲದೆಲೆಯೊಳ್ ಮಲಗಿಯೊಪ್ಪೆ ಮುಳುಗುತ್ತೊಡನೆ ತೇಲುತೊರ್ವನೆಯುಗುಳ್ನೀರನುಗುಳುತ್ತೆ ಕಣ್ಣಾಲಿಗಳ್ ಮರಳಲ್ ಮಹಾವಿಷ್ಣು ಮನದೊಳ್ ಭಯಂಗೊಳುತ (ಕಬಿಪು. ೪೭-೩೦). ೭. ಕಾಫಿಗೆ ನೀರು ಮರಳುತ್ತ ಇದೆ (ಪಶ್ಚಗದ. ೦೪೯). **ಮಲರ್$_1$** : ೧. "ಮಲರ್ – ಪರಾಙ್ಮುಖೇ (ಹಿಂದಿರುಗು), ಪೃಷ್ಠೇ ಚ" (ಶಮುದಾ).

ಮರಳಿಮರಳಿ, ಮರಮರಳಿ (ದ್ವಿರುಕ್ತಿ) : ನೆರೆದ ಪುಣ್ಯದಿನಪ್ಪ ಸರಸೀಜಜಪ್ರಮುಖರುರುಳ್ವರಾ ನರಕದೊಳು ಮರಳಿಮರಳಿ (ಸಾನಂಚ. ೩-೪೯) ; ಮರಳಿಮರಳಿ ಯುಧಿಷ್ಠಿರನ ಮನದಿರವ ಭೀಮನ ಖತಿಯ . . . ಅಡಿಗಡಿಗೆ ಕೇಳಿದು ಮಱುಗಿದನು ನೃಪತಿ (ಕುವ್ಯಾಅ. ೧೭-೭); ಹೊರಳಿ ನೋಡು ಮರಮರಳಿ ನೋಡು ಒಳಗರಳಿ ನೋಡು ನೋಟ (ಅರಳು. ೪೦೪-೦೦). **ಮರಳಿ** = ಪುನಃ ; ತಿರುಗಿ : ಆಳ್ದನ ಬೆಸನಂ ಮರಳಿ ಕೇಳದ ಬೆಸಗಲಿಗಳುಮಂ (ಗದಾಯು. ೯-೩೪ ವ) ; ಮರಳಿ ಬಿಜಯಂಗೆಯ್ವುದು ಶರಣಾಶರಣಾರ್ಥಿ (ಮುಹಾದೇ. ಬ. ೩೩-೦೪೮); ಮರಳಿ ತನ್ನರಮನೆಗೆ ಬಂದು ರಾಜಾಂಗಣದೊಳ್ನಿಂದು (ಬಾಧಪು. ೨-೭೬ ವ) ; ಮರಳಿ ನೀ ಯತ್ನಿಸು ಕಾರ್ಯವು ಫಲಿಸುವುದತಿಸುಲಭದೆ ಜಯವಹುದು (ಇಂಶಾಶ. ೦೩೪-೩೯).
[ದೇ.॥ ತಮಿ. ಮಱಙ್ಙು; ಮಲ. ಮಱಿಯು ; ಕೊಡ. ಮರಿ ; ತೆಲು. ಮರಲು, ಮಳ್ಳು, ಮಱಲು]

**ಮರಲ್$_2$** 'ಮಲರ್$_2$' ನೋ.

**ಮರಲ್$_3$** 'ಮಲರ್$_3$' ನೋ.

**ಮರಲ್ಚು, ಮರರ್ಚು, ಮರಳಿಚು, ಮರಳ್ಚು, ಮಲರ್ಚು** (ಕ್ರಿ). ೧. ಹಿಂತಿರುಗಿಸು; ಹಿಮ್ಮೆಟ್ಟಿಸು: "ಮರಲ್ಚು–ಪರಾಙ್ಮುಖೀಕರಣೇ" (ಶಮುದಾ); ತೊಲಗದ ಜವ್ವನಂ ತವದ ಮೆಚ್ಚು ಮರಲ್ಚುವ ನೋಟಂ (ಆದಿಪು. ೩-೪೨); ಬಿಚ್ಚತಂ ನಲಿವ ನಿಳಿಂಪನಿಕರಮಂ ಮರಲ್ಚಿ (ವರ್ಧಪು. ೦೪-೪೭ ವ) ; ನಿನ್ನ ಮಾತುಗಳ್ ಎನ್ನನ್ ಮನೆಗೆ ಮರಲ್ಚುವುದು ಸ್ಪಷ್ಟಮೋ (ಶಿಶ್ವಶ್ರ. ೨೦-೪೪೪). ೨. ತಿರುಗಿಸು ; ಹೊರಳಿಸು : ಆತ್ಮಚಂಚುವಂ ನಿಡುಗೊರಲಿಂ ಮರಲ್ಚಿ ನಿಜಪಕ್ಷದೊಳೊಯ್ಯನೆ ಸಾರ್ಚಿ (ರಾಜಶೇ. ೭-೯). Δ **ಮರರ್ಚು** : ೧. ಬಿನ್ನಲಗೆಱೆಯ ದನವ ಕೊಣ್ಡು ಹೋಹಲ್ಲಿ ಆರಿಯರೊಡನೆ ಕಾದಿ ಮರರ್ಚಿದನು (ಎಕ. XI, ದಾವಣ. ೦೨೩-೨;?). **ಮರಳಿಚು** : ೧. ಮುರಹರ ರಥವ ಮರಳಿಚು ಮರಳಿಚ್ಚೈ ರಥ ಮುಂಚುವುದೋ ಮನ ಮುಂಚುವುದೊ ಎಂದ (ಕುವ್ಯಾಕ. ೦೪-೦೨). **ಮರಳ್ಚು** : ೧. ಇಚ್ಚೆಯಣಮಿಲ್ಲದೊಡಂ ತೆಗೆದಲ್ ಕರಂ ಮನಂ ಕಿಡೆ ಪೊಸತಪ್ಪುದೊಂದು ಪಿಡಿಗಂಕುಶಮಿಟ್ಟು ಮರಳ್ಚುವಂದದಿ (ಕಾದಂಪೂ. ೭೭೨) ; ಮರಳ್ಚಿ ಸಿಂಹಮನೆನಿಪ್ಪ ಘನಧ್ವನಿಯಾಯ್ತರಣ್ಯದೊಳ್ (ಗಂಕ. ೦-೮೩). **ಮಲರ್ಚು** : ೩. ಮುಖ ಮೇಲಾಗುವಂತೆ ಮಾಡು; ಅಂಗಾತವಾಗಿರಿಸು: ನೆಲದೊಳೋರಂತಾಗೆ ಮಲರ್ಚಿಕ್ಕಿಯುಂ ಆದಿಂ ತಗುಳ್ದು ನಾಭಿವರೆಗಂ ಬಸಿಱಿಂ ಪೋೞ್ದು (ವಡ್ಡಾರಾ. ೩೦-೪) ; "ಮಲರ್ಚಿಕ್ಕಿ–ಹೊಟ್ಟೆಯಡಿಯಾಗಿ ಮಲಗಿಸಿ" (ವಡ್ಡಾರಾ. ೨೨೦ ಟಿಪ್ಪಣಿಗಳು). [ಮರಲ್$_1$ + – ಚು$_1$]

**ಮರಲ್ವಿಲ್ಲ** (ನಾ). ಹೂವಿನ ಬಿಲ್ಲುಳ್ಳವನು ; ಮನ್ಮಥ : ಅಮರ್ದುಗೊರಲೀಸರಂ ಮೆಯ್ಯಮರ್ದ ಮರಲ್ವಿಲ್ಲನಿಱಿತವಿಲಿ ತಣ್ಗದಿರಂ ಸಮಸಂದು ಬಾಱ್ವ ಜಗಮಂ ಸಮೆವಲರಿಚನೇಱಿದಾಱ್ಗ ಚಿಕದೇವೇಂದ್ರಂ (ಅಶ್ವತಿ. ೪೩-೦೯). [ಮರಲ್$_3$ (<ಮಲರ್$_3$) + ಬಿಲ್ಲು$_1$ (<ಬಿಲ್$_2$) + – ಅ$_7$]

**ಮರಲ್ಸರವಿ** (ನಾ). ಹೂವಿನಿಂದ ಕಟ್ಟಿದ ಹುರಿ ; ಹೂವಿನ ದಂಡೆ : ಆಗಸಕ್ಕೇಣಿಯಕ್ಕುಮೆಂಬರಂಬುಧಿಯು ಬೇಗ ದಾಂಟುಮೆಂಬರಾ ಮರಲ್ಸರವಿಯಲಿ ನಾಗಗಳ ಕಟ್ಟಿ ಮೆಟ್ಟುವೆವೆಂಬ ದುಷ್ಟವಂಚಕರ ಮಾತಂ ಕೇಳಿ (ಅಶ್ವ.ಶಾ. ೫-೨-೬). [ಮರಲ್$_3$ (< ಮಲರ್$_3$) + ಸರವಿ$_2$]

**ಮರವ** (ನಾ). ಒಂದು ಬಗೆಯ ಪಕ್ಷಿ : ದುರಿಸೆ ಗಿಳಿ ಪರ್ದು ಮರವಂ ಮರಕುಟಿಗಂ ಪುಜಿಲೆ . . . ಮುನ್ನೀ ಗಿರಿವರದೊಳ್ಪುಟ್ಟಿ ನೆಗಟ್ದುವು (ಸುಕು.ಸು. ೩-೧೯೬). [ ? ]

**ಮರವಜ್ರ** (ನಾ). (ಮರಮುಟ್ಟುಗಳಲ್ಲಿ ಬಿರುಕುಂಟಾದ ಕಡೆಯಲ್ಲಿ, ಅದನ್ನು ಮುಚ್ಚಲು ಉಪಯೋಗಿಸುವ) ಒಂದು ಬಗೆಯ ಅಂಟು : ಅವನ ರೆಪ್ಪೆಗಳು ಮರವಜ್ರದ ಸರಿಯನ್ನು ಬಳಿದಂತೆ ಬಿಗಿದುಕೊಂಡಿವೆ (ಹುಚ್ಚಾಯ. ೫೭). [ಮರ$_1$ + ವಜ್ರ]

**ಮರವಡ** (ನಾ). ಅಮೇಧ್ಯವನ್ನು ಹಾಕುವ ಸಾಧನ (?) : ಕಕ್ಷೆಯೆಂಬುದು ಕವುಚಿನ ತವರುಮನೆ ಅಮುಳೋಕ್ಯವೆಂಬುದು ಬಾಯ ಬಗದಳ ಮುಖಸಜ್ಜೆಯೆಂಬುದು ಪಾಂಡುರೋಗ ಕರಸ್ಥಳವೆಂಬುದು ಮರವಡದ ಕುಳಿ (ಅನಂ. ೧೯೬-೯೪೨) ; ಮಲದ ಮರವಡ ಮೂತ್ರದಾಗರವೆಲು ತೊಗಲು ನರಮಾಂಸಮಯ ಕ್ರಿಮಿಕುಲದ ಜನ್ಮಸ್ಥಾನ ಕಾಯವಿದು (ಏಕಾಗ. ೧೦-೧೦-೬). [ಮರ$_1$ + < ಪಡುಕು$_?$ ]

**ಮರವಡು**, ಮರಂಬಡು (ಕ್ರಿ). ೧. ಚಲನೆಯಿಲ್ಲದಿರು ; ನಿಶ್ಚಲವಾಗಿರು ; ಸ್ತಬ್ಧವಾಗಿರು : ಮರವಟ್ಟು ಕುಡದೆ ಕಲ್ಪಮಹೀಜಂ ನಿಂದುವು (ಆದಿಪು. ೬-೭೯) ; ಅತ್ತ ಸುಭದ್ರೆಯುಮೊಡಲುರಿಯುತ್ತಿರೆ ಮರವಟ್ಟು ವಿಜಯನಿರ್ದತ್ತಲೆ ನೋಡುತ್ತಿರೆ ಸುಸಾಳಭಂಜಿಕೆಗೆತ್ತುದು ಕೆಳದಿಯರ ತಂಡವಾಕೆಯ ರೂಪಂ (ಶಂಕಶಾ. ೫-೫೯) ; ಸರಸವಾಡುವುದು ಸರಿಯಲ್ಲೆಂದುಳಿದರೆ ಮರವಡುವಳು ಮರದ ಬೊಂಬೆಯ ಮಾಟದೊಳು (ಹರಿಶ. ೬-೩೦). ೨. ಜೋಮು ಹಿಡಿ : ಮೆಯ್ ಮರವಟ್ಟಂತಿರೆ ನೋಡೆ ಪೇಟು ನರಡಿಯಾಯ್ತೆಂದು ನಿಶ್ಚೈಸಿ (ಲೋಕೋಪ. ೯-೨೦೭). **ಮರಂಬಡು** : ೧. ಕಂಡು ಕಣ್ ನಟ್ಟು ಕಾಲ್ ನಟ್ಟು ನಿಂದನು ಮರಂಬಟ್ಟು (ಶ್ರೀರಾಮಪ. ೯-೦೯೭). 'ಮಱವಡು' ಪರಾ. [ಮರ$_1$+ಪಡು$_1$]

**ಮರವಡೆ** (ನಾ). ವೃಕ್ಷಗಳ ಆದಾಯದ ಮೇಲೆ ಹಾಕುವ ಒಂದು ಬಗೆಯ ತೆರಿಗೆ : ಮಾವಡೆ ಮರವಡೆ ಕುಳವಡೆ ಸಾರಡೆ . . . ಸಂತೆ ಉಂಟಾದ ಹಲ ಉಪಾಧಿಗಳೂ ಸಹ ಸೇರ್‍ಸಿ ಕೊಟ್ಟೆವು (ಸೌಇಇ. IX-ii, ೯೬೩-೯ ; 1470) ; ತೋಟ ತುಡಿಗೆ ಗದೆ ಬೆದಲು ಮಾವಡೆ ಮರವಡೆ ನಿಧಿ ನಿಕ್ಷೇಪ (ಎಕ. X, ಕುಳಬಾ. ೦-೩೬ ; 1541). 'ಮಾವಡೆ' ಪರಾ. [← ತಮಿ. ಮರವಟ್ಟೆ]

**ಮರವಣೆ** (ನಾ). ಮರದಿಂದ ಮಾಡಿದ ಆಸನ, – ಪೀಠ : ಪೊಸಮೆಸು, ಎಳವಿದಿರ್, ಮರವಣೆ (ಕಾಶಾಕೂ. ೩೦ ಉದಾ) ; ಮರವಣೆ[ಪಾಠಾಂ. ಣಿ]ಗಂ ಬೀಣೆಗಮಂತರಮಾವುದೊ (ಕಾವ್ಯಾವ. ೬೫). [ಮರ$_1$ + ಮಣೆ$_1$]

**ಮರವಲಗೆ** (ನಾ). ಮರದ ಹಲಗೆ : ಶರಧಿಮಧ್ಯದಿ ಹಡಗೊಡೆದು ಮುಳುಗಲಾ ಮರವಲಗೆಯ ಪಿಡಿದವನು ಭರದಿ ತಡಿಯ ಸಾರ್ದು (ಜೈಮಿಂಸಾಂ. ೯-೯). [ಮರ$_1$ + ಪಲಗೆ]

**ಮರವಳಿ** (ನಾ). ಮರಗಳಿಂದ ಬರುವ ಉತ್ಪನ್ನ ; ಮರದಿಂದ ದೊರಕುವ ಹಣ್ಣು, ಕಾಯಿ, ಎಲೆ ಮುಂತಾದುವು : ಸೊಪ್ಪಿನ ತೋಟ ತಿಪ್ಪೇಹಳ್ಳ ಶ್ರೀಗಂಧ ಹೊರತಾದ ಮರವಳಿ (ಹುಬ್ಬಹ. ೩) ; ಆ ಊರುಗಳ ನೆಲಕರ ಮರವಳಿಗಳನ್ನು ಬಿಟ್ಟದ್ದು ಹಾಗಿರಲಿ (ಸಪತ. ೬೩). [ಮರ$_1$ + — ವಳಿ$_3$]

**ಮರವಳಿಕಂದಾಯ** (ನಾ). ಮರಗಳ ಉತ್ಪನ್ನದ ಮೇಲೆ ಹಾಕುವ ಒಂದು ಬಗೆಯ ತೆರಿಗೆ : ಹೊಲದಲ್ಲಿರುವ ಹುಣಸೆ ಹಲಸಿನ ಮರಗಳಿಗೆ ಮಾತ್ರ ಫಲವಿದ್ದಂತೆ ೧ ಹಣದಿಂದ ೨ ಹಣದ ವರೆಗೆ ಮರವಳಿಕಂದಾಯವನ್ನು ನಿಷ್ಕರ್ಷೆಮಾಡಿದರು (ಹುಹಾಶಂ. I, ೦೨೩). [ಮರವಳಿ+ಕಂದಾಯ]

**ಮರವಳಿವಟ್ಟ** (ನಾ). = ಮರವಳಿಕಂದಾಯ : ಕಾಡಾರಂಬ ಮನೆದೆರಿಗೆ ಮರವಳಿವಟ್ಟ . . . ಎನ್ನುತ . . . ಕೊನೆಮೊದಲಿಲ್ಲದೆ ಹಣ ಹೊನ್ನು ತೆರುತಿರಬೇಕು (ಪಟ್ಟಿಕ. ೦೫೫-೬). [ಮರವಳಿ + ವಟ್ಟ]

**ಮರವಾನಸ**, ಮರವಾನಿಸ (ನಾ). ಮರದಿಂದ ಮಾಡಿದ ಗಂಡಸಿನ ವಿಗ್ರಹ : ಪೊಯ್ಸು ಸಿಡಿಲ್ ಕಾರಿರುಳೊಳಗುರ್ವಂ ಪಡೆದಿರೆ ಮರವಾನಸನೆನೆ ತಪಸ್ವಿ ಮರಮೊದಲಿರ್ದಂ (ಆದಿಪು. ೬-೩೨); ದುಃಖಿಂಗೆಯ್ವರ ನಡುವಿರ್ದುಂ ಧರ್ಮಕಥಾಶ್ರವಣದಿಂ ನಿಶ್ಚಳನಾಗಿರ್ದರಸನಂ ಕಂಡದೇನೀಯರಸಂ ಮರವಾನ [ಪಾಠಾಂ. ನಿ] ಸನೊ ಮೇಣ್ ಲೆಪ್ಪದರಸನೊ ಪೇಟಿಂ (ಜೀಪಸಂ. ೨೫-೯೬ ಪ). **ಮರವಾನಿಸ** : ನಿನಗಿನಿತುಂ ಕರುಣಮಿಲ್ಲ ಮರವಾನಿಸನೈ (ಳಾಂ. ೨-೯೩) ; ಅಗಲ್ದು ಪೋದಂ . . . ಎನಸುಂ ಮರವಾನಿಸನಾದ ನೆಂಬಿನಂ (ಕುಶ್ಯಶ. ೦೩-೯೩). [ಮರ$_1$ + ಮಾನಸ$_1$ (< ಮಾನುಸ)]

**ಮರವಾನಸಿ** (ನಾ). ಮರದಿಂದ ಮಾಡಿದ ಹೆಂಗಸಿನ ವಿಗ್ರಹ : ನೋಡ ಮಾನಸೆಯಣಮಲ್ಲಳೀಕೆ ಮರವಾನಸಿ[ಪಾಠಾಂ. ಸೆ]ಯಾಗಿಯುಮಾದುದೊಂದು ಮಾನಸಿಕೆ (ಆದಿಪು. ೦೨-೩೯). [ಮರವಾನಸ + —ಇ$_2$]

**ಮರವಾನಸೆ**, ಮರವಾನಿಸೆ (ನಾ). = ಮರವಾನಸಿ : ಆ ನುಡಿಯೆಂದೆಂಬ ಶೂಲ . . . ಮಾನಸವನು ಕೀಲಿಸಲಂದವಳು ಮರವಾನಸೆಯಂತಿರ್ದಳಾಗ (ಳಾರಾಶಾಂ. ೩೬-೦೦೫). **ಮರವಾನಿಸೆ** : ಅರವಿಂದವಕ್ತ್ರೆ ಕೋಮಳೆ ಕಡುಗಾಡಿಕಾರ್ತಿ ಮರವಾನಿಸೆಯೆಂಬುದನುಂಟುಮಾಡಿದಾ (ರಪರಾಕ್ಕು. ೩-೦೯೦) ; ಮರವಾನಿಸೆಯಂದಮನನುಕರಿಸಿದಳೋ ಎನಲಸಿಯಳ್ ಮೆಯ್ಮಱೆದುಱೆ ಬೆಱಗಾದಳ್ ನೃಪಸುತನಂ ನೋಡಿ (ಜಯಾಶಾ. ೯-೨೨). [ಮರವಾನಸ + —ಎ$_2$]

**ಮರವಾನಿಸ** 'ಮರವಾನಸ' ನೋ.

**ಮರವಾನಿಸೆ** 'ಮರವಾನಸೆ' ನೋ.

**ಮರವಾಯ್** (ಕ್ರಿ). ೧. ರಭಸದಿಂದ ನುಗ್ಗು; ಜೋರಾಗಿ ಡಿಕ್ಕಿ ಹೊಡೆ: ದೆಸೆಗಳ್ಗೆ ಬೆರ್ಚಿ ಮೂಂಕಿಱಿವ ವನಮಹಿಷಗಳಿಂ ಮದಹಸ್ತಿಯಂತೆ ಮರವಾಯ್ವ ಪುಲಿಗಳನತಿಭಯಂಕರಾಕಾರಮಪ್ಪ ದ್ವೈತವನಕ್ಕೆ ಬಳದು (ಶಂಕಶಾ. ೬-೨೯ ಪ); ವನಮಂ ಪೊಕ್ಕು ಮರಮುಸಕದಿಂ ಮರವಾಯ್ದು ಮರದುಱುಗಲಂ ಕಿಱಿಸೀಡಾಡುವಲ್ಲಿ (ಅರ್ಜಶೇ. ೫-೦೦೩ ಪ). ೨. ಮರವನ್ನು ಹತ್ತು: ಕುಳಿಲೆಂದು ಮರವಾಯ್ದು ಬಿನದಿಪ್ಪುದು (ಳಕಶಾ. ೬೯-೫೫೬). [ಮರ$_1$ + ಪಾಯ್$_1$]

**ಮರವಾಲೆ**, ಮರಹಾಲೆ (ನಾ). ಒಂದು ಬಗೆಯ ಮರ: "ಜೀವವೃಕ್ಷ—ಮರವಾಲೆ" (ಓಶಧಿ. ೬೩). **ಮರಹಾಲೆ**: "ಯಶಸ್ಕರೀ—ಮರಹಾಲೆ" (ಓಶಧಿ. ೦೩೦). [ಮರ$_1$ + ಪಾಲೆ$_2$]

**ಮರವಾವು** (ನಾ). (ಮರದಲ್ಲಿ ವಾಸಿಸುವ) ಒಂದು ಬಗೆಯ ಹಾವು: ಅರಗಿಳಿಗಳೆರಡು ತಮ್ಮಯ ಶಿಶುವಂ ಮರವಾವು ಪಿಡಿಯೆ ಸಾಯಲ್ ಪರಿದುಂ ದುಃಖದೊಳುಳುತ್ತಮಿರಲ್ (ತ್ರಿಶುಂ. ೦೦-೯೦) ; ನರಿ ಪೂತಿವೆಕ್ಕು ನಕುಲಂ ಮರವಾವುಗಳೆಂಬಿವಾಗಳುಂ ಕರಮೆಸೆದಿರ್ಪನಂ ಮೆಱೆದುದಾ ವಿಪಿನಂ ವಿಪಿನದ್ಧ ಕಂದರಂ (ಕಬಕಂ. ೩-೩೯). 'ಅರವಾವು' ಪರಾ. [ಮರ$_1$ + ಪಾವು$_1$]

**ಮರವಾಳ್$_1$** (ನಾ). ೧. ಮರದ ಜೀವನ; ವೃಕ್ಷದ ಬಾಳು. ೨. (ಅಲಂ) ನೀರಸವಾದ ಬಾಳು,—ಜೀವನ : ನಲ್ಮೆ ಹೂ ಹಣ್ಣಲ್ತೆ ಮರವಾಳ್ಗೆ ಗೆಲ್ಲಂ (ಕಾಂಬಕ. ೬೩-೦೩೦). [ಮರ$_1$ + ಬಾಳ್$_2$ (<ಬಾೞ್$_3$)]

**ಮರವಾಳ್$_2$** (ನಾ). ಮರದ ಕತ್ತಿ, — ಖಡ್ಗ : ಕರವಾಳಂ ಮಸೆವಂದದೆ ಮರವಾಳಂ ಮಸೆಯೆ ಕೂರಿತಕ್ಕುಮೆ (ಗದಾಯು. ೨-೩೩) ; ಸುರಿಗೆ[ಯಿ]

ನಾಡು[ಗುಮಂಶಾ] ಮರವಾಳಂ ಕೊಂಡು ಬೀಸುತಿರ್ಪುಂ (ಬಂಹಂ. ೩-೨೬)·
[ಮರ$_1$ + ಬಾಳ್$_3$]

**ಮರವಾಟಿ**³, ಮರಬಾಳೆ (ನಾ). ಒಂದು ಬಗೆಯ ಬಾಳೆ; ಕಾಡುಬಾಳೆ : "ಕಾಷ್ಠಕದಳೀ-ಮರವಾಟಿ³" (೬೫ಧಿ. ೩೨). **ಮರಬಾಳೆ** : ಆ ರಾಮ ನಾಮದಿಂ ಕಂಗೊಳಿಸಿ . . . ಮರಬಾಳೆ ಕಲ್ಯಾಣ ಬೂದಿಬಾಳೆಗಳೆಂದಲೆಸೆದಿರ್ದುದು (ಪಪಪೂ. ೨೫-೯೯). [ಮರ$_1$ + ಬಾಟಿ³]

**ಮರವಿ**, ಮರಗಿ, ಮರಗೆ, ಮರಾಯಿ, ಮರಿಗೆ (ನಾ). (ಮರ, ಬಳಪದ ಕಲ್ಲು ಅಥವಾ ಮಣ್ಣಿನಿಂದ ಮಾಡುವ) ಅಗಲವಾದ ಬಾಯಿಯುಳ್ಳ ಪಾತ್ರೆ : ಲಂಕರೊಕ್ಕಲಲ್ಲಿ ಆಱುತಿಂಗಳ್ಗೆ ಮಣಿಕಿವಿಗೆ ಮರವಿಯೆಂಬ ಪೊಂದಕ್ಕಂ ವರ್ಷಕ್ಕೆ ಮಂಚವೊಂದಕ್ಕಂ ಅಲ್ಲವರಸಿನಂ ಶುಂಠಿ ಬೆಳ್ಳುಳ್ಳಿ ಬಜೆ ಭದ್ರಮುಸ್ತೆಯೆಂಬಿವು ಮೊದಲಾಗಿ ತೂಗಿ ಮಾಱುವ ಭಣ್ಡಂಗಳ್ಗೆ ಹೇಱಿಂಗಯ್ವಲಂ (ಎಇ. XIX, ೩೩-೨೮ ; 1135). **ಮರಗಿ** : "ಅವಗಾಹಮೆನೆ ಮರಗಿಯಕ್ಕು" (ಮಂಗನಾ. ೩೩-೨೬). **ಮರಗೆ** : ಯದುವಿನ ತಾಯಿ ಕಲ್ಲಿನ ಮರಗೆಯಲ್ಲಿ ಮಸಾಲೆ ಕುಟ್ಟುತಾ ಇರುತ್ತಾಳೆ (ಸಾಹೇಬ್. ೫೯೫). **ಮರಾಯಿ** : ನೀರು ಅಕ್ಕಚ್ಚು ಕುಡಿಯಲು ಅಲ್ಲಲ್ಲಿ ಮಣ್ಣಿನ ಮರಾಯಿಗಳನ್ನು ಕುತ್ತಿಗೆಯ ವರೆಗೆ ಹೂಳಿರುವರು (ಬಾಳಿ. ೯೦). **ಮರಿಗೆ** : ಎತ್ತುಗಳು ಮರಿಗೆ ಕಡೀತಾ ಅದಾವೆ! . . . ಮೇವು ಹಿರಕೊಂಡು ಬಂದು ಹಾಕ್ರಿ (ಸೀಬು. ೦೫೬); ಎಲ್ಲರೂ ಹೆಣ್ಣು ಹೆತ್ತರೆ ಮಾರವ್ವ ಮರಿಗೆ ಹೆತ್ತಳು (ಗಾದೆ). [ದೇ.॥ ತಮಿ. ಮರವ್ವೈ ; ಮಲ. ಮರವಿ ; ತುಳು. ಮರಾಯಿ]

**ಮರವಿಲ್**, ಮರಬಿಲ್ಲು (ನಾ). ಒಂದು ಬಗೆಯ ಬಿಲ್ಲು; ಬಿದಿರಿನ ಬಿಲ್ಲು : ತೊಟ್ಟಿಕ್ಕುವಡಂ ಮರವಿಲ್ ಕಟ್ಟಿದ ಪಣಿಕಟ್ಟು ಬೇಂಟೆವಱಿ³ (ಸಂಕಥಾ. ೫-೩೬) ; ಕರಿಂಕುವಱೆದ ಬಿಂಜದಡವಿಯಂತೆ ಕರ್ಗನೆಗನಿತು ಕೊಳು ವೇಱಿಸಿದ ಮರವಿಲ್ಲುಂ ಪಿಡಿದ ದೊಣೆಯುಂ (ಪರ್ವಪು. ೯-೯೨ ವ). **ಮರಬಿಲ್ಲು** : ಮರಬಿಲ್ಲು ಬಾಣ ಬಡಿಕೋಲುವಲೆಯು ಜಾಯಿಲಗಳಂ ಪಿಡಿದು . . . ಅಗಣಿತದ ಲುಬ್ಧಕರು ಬಂದು ನಿಂದು (ಪಪಪೂ. ೦೩-೦೨) ; ಕಾವಲ ಮಂದಿಗಳು ಇವರನ್ನು ಕಂಡು ಬಾಗಿಲ ಕದಗಳ ಹಾಕಿ ಹಗೆಗಳನ್ನು ಮರಬಿಲ್ಲಿನಲ್ಲಿ ಇಟ್ಟು ಗುಲ್ಲು ಮಾಡಿದರು (ಕನ್ನಶಾ. ೨೦). [ಮರ$_1$+ಬಿಲ್$_2$]

**ಮರವೀಣೆ** (ನಾ). ಮರದಿಂದ ಮಾಡಿದ ವೀಣೆ : ಕುಣಿದಿಲ್ಲ ಕೊರಳು ಮಣಿದಿಲ್ಲ ಬೆರಳು ಮರವೀಣೆ ಮಿಡಿಸಲಹುದೇ (ಹೃದಯ. ೩೯-೯).
[ಮರ$_1$ + ವೀಣೆ$_1$]

**ಮರವು** 'ಮಱವು' ನೋ.

**ಮರವುಟ್ಟು** (ನಾ). ಮರದಿಂದ ಮಾಡಿದ ಹುಟ್ಟು : ತೆಗೆ ಹಿಮುವನೆಂದು ಮರವುಟ್ಟನಿಂ ತೆಗೆಯಿಸಲ್ (ಮಲ್ಲಿನ. ಹ. ೦೬೫-೦೦). [ಮರ$_1$ + ಪುಟ್ಟು$_3$]

**ಮರವುಣಿ** (ನಾ). ಮರವನ್ನು ದಹಿಸುವಂತಹುದು; ಬೆಂಕಿ: ತಳಿರಂಬನಂ ಮರವುಣಿಗೆ ಬೇಳ್ದಂ (ಶಂಖಪು. ೨೦-೫೯). [ಮರ$_1$ + —ಉಣಿ]

**ಮರವೂರ್**, ಮಱವೂರ್ (ನಾ). ಒಂದು ಊರಿನ ಹೆಸರು: ನಗರೂರ ಬೆಳ್ಳಿಯರುಂ ಮರವೂರ ವಣ್ಣಾಕರುಂ. . . ನರಸಾಕ್ಷಿ (ಪ್ಕ ಅಂ. ೦೯೨೬. ೦೦೮-೯೫; 726). **ಮಱವೂರ್**: ನೀತಿಮಾರ್ಗ್ಗ ಪೆರ್ಮ್ಮನಡಿಗಳ್ ಸ್ವರ್ಗ್ಗಮೇಱಿದನ್ದು ಮಱವೂರ ಬಪಿಯಮ್ಮಂ ಕಿಚ್ಚುವೊಕ್ಕಂ (ಎಕ. V, ಅರಕ. ೨೬-೦೦; 915). 'ಮರೂರ್' ಪರಾ. [ಮರ$_1$ + ಊರ್]

**ಮರವೆ** 'ಮಱವೆ' ನೋ.

**ಮರವೈ** (ನಾ). (ಕೆರೆ, ಕಟ್ಟೆಗಳ) ನೀರು ಹೋಗುವ ಕಂಡಿ; ತೂಬು : ಶ್ಯಾಮಣ್ಣನವರು ಊರಿನ ದೊಡ್ಡಕೆರೆಯನ್ನು ದುರಸ್ತು ಮಾಡಿಸಿ, ಅದಕ್ಕೆ ಒಂದು ಮರವೆಯನ್ನು ಕಟ್ಟಿಸಿದರಷ್ಟೆ (ಊರುಕ. ೬೩).
[ದೇ.॥ ತೆಲು. ಮರವ, ಮರುವ]

**ಮರವೆಗೊಡು** (ಕ್ರಿ). (ರುಚಿ ಕಂಡುಹಿಡಿಯಲು ಅಶಕ್ತವಾಗಿ) ಮರಗಟ್ಟಿದಂತಾಗು; ಜಡ್ಡುಗಟ್ಟು: ಬಾಯಿಯಲ್ಲಿ ಅಂಟುಗೂಡಿ, ಕಹಿಯಾಗಿ, ಮರವೆಗೂಡಿ . . . ಅಡಿಗಡಿಗೆ ಶೀತವೂ ತೋರುತ್ತ ಈ ಲಕ್ಷಣಗಳೊಡಗೂಡಿ ಪ್ರದೇ ಶ್ಲೇಷ್ಮಪಿತ್ತಜ್ವರವೆನಿಸಿಕೊಳ್ಳುವುದು (ಸಕವ್ಯ: ೯೦).
[ಮರವೆ$_1$ ( < ಮಱವೆ) + ಕೊಡು$_1$]

**ಮರವೆಸ**, ಮರವೆಸನ (ನಾ). ಮರದಿಂದ ಯಾವುದಾದರೂ ವಸ್ತುವನ್ನು ತಯಾರಿಸುವುದು ಮತ್ತು ಹಾಗೆ ತಯಾರಿಸಿದ ವಸ್ತು; ಮರಗೆಲಸ ಮತ್ತು ಅದರಿಂದ ತಯಾರಿಸಿದ ವಸ್ತು: ಅಯ್ಯಣಂ ಮರವೆಸದೊಪ್ಪವಿಟ್ಟಗೆಯ ದನ್ತದ ಚಿತ್ರದ ಶಾಸ್ತ್ರಯುಕ್ತಮಾಗಿರೆ ಬೆಸಗೆಯ್ದು (ಕಿಇಎ. XI-ii, ೦೨೬-೫೫; 1082); ಕರು ಕರುವಿಂಗೆ ಕಣ್ದೆಱವಿ ಕಲ್ಪಿಸದೋಱೆಗೆ ನಚ್ಚನಚ್ಚು ಕಂಡರಣೆಗೆ ಮಂಡನಂ ಮರವೆಸಕ್ಕೆ (ಮಲ್ಲಿಕ. ೨-೬೬). **ಮರವೆಸನ** : ಜೀರ್ನ್ನವಾದ ಮರವೆಸನನು ಬಲಿಯಿಸೆಂದು ಹೇಳಿದಲ್ಲಿ (ಎಕ. V, ಬೇಲೂರು. ೨೯-೩; 1298). [ಮರ$_1$ + ಬೆಸ$_1$]

**ಮರವೆಸನ** 'ಮರವೆಸ' ನೋ.

**ಮರಸಕಾಗೆ** (ನಾ). ಒಂದು ಬಗೆಯ ಸಸ್ಯ : ಮರಸಣಿ, ಮರಸಕಾಗೆ, ಮುಂಡಿಗಿಡ (ವೃ ಕಿಂ. ೫-೭೮). [ ? + ಕಾಗೆ ]

**ಮರಸಣಿ** (ನಾ). ಒಂದು ಬಗೆಯ ಸಸ್ಯ : ಮರಸಣಿ, ಮರಸಕಾಗೆ, ಮುಂಡಿಗಿಡ (ವೃ ಕಿಂ. ೫-೭೮). [ ? ]

**ಮರಸಣಿಗೆ** (ನಾ). ಒಂದು ಬಗೆಯ ಸಸ್ಯ; ಕೆಸುವಿನ ಜಾತಿಯ ದೊಡ್ಡಗಿಡ; ಇದರ ಗೆಡ್ಡೆಯನ್ನು ಮೇಲೋಗರಕ್ಕೆ ಬಳಸುತ್ತಾರೆ : ಮರಸಣಿಗೆಯ ಗಡ್ಡೆಯ ತಿಂದೇ ತಿಂದು ಗಂಟಲೆ ಕಟ್ಟಿಹುದು (ಜಾನಗೀ. ೬೬); ಎರಡುಕೋಲುದ್ದದ ಮರಸಣಿಗೆ ಅವರ ಮನೆಗೆ ಮುಟ್ಟಿಸಿ (ಹಹಸ. ೯೯).
[ <ಮರಸಣಿ ? ]

**ಮರಸದ** (ನಾ). ಒಂದು ಬಗೆಯ ಸಸ್ಯ : ಮರಸದ, ಬಗುಲಿ, ಹಂಜರಿಕೆ ಕುಚ್ಚು, ಮರಸುತ್ತುಬಳ್ಳಿ (ವೃ ಕಿಂ. ೦೬-೨೯೨). [ ? ]

**ಮರಸರಿಗೆ** (ನಾ). ಮರದ ಪಾತ್ರೆ (?) : ಅಂತಾಕಿಗಳ್ ತೂಗಿ ತೊನೆವ ತೊನೆಪಂಗಳುಮಂ ಮರಸರಿಗೆವಿಡಿದು ಬಿಲ್ವಿಡಿದಾಡುವ ಬೂತಾಟಂಗಳುಮಂ ನೋಡಿ (ಶಂಕಥಾ. ೯-೯೦ ವ); "ಮರಸರಿಗೆವಿಡಿದು—ದೊಡ್ಡ ಚೆಂಬನ್ನು ಹಿಡಿದುಕೊಂಡು (?)" (ಶಂಕಟೀ. ೦೬೯). [ ಮರ$_1$ + ಚರಿಗೆ$_1$ ]

**ಮರಸರ್ಪ** (ನಾ). (ಆಕಾಶದಲ್ಲಿ ಕಾಣಿಸುವ ಉತ್ಪಾತಸೂಚಿಯಾದ) ದೊಡ್ಡಹಾವು; ರಾಹು ! ಮರಸರ್ಪಂ ಮೂಡೆ ಮೂಡಲ್ ನೃಪತಿಗೆ . . . ಅಪಾಯಂ ( ಲೋಕೋಪ. ೯-೯೦ ) ; ಮರಸರ್ಪನೊಗೆಯೆ ಕಾಳೆಗ ಮಕ್ಕುಂ (ಲೋಕೋಪ. ೯-೯೨). [ಮರ$_1$ + ಸರ್ಪ]

**ಮರಸಲ್ಲು** (ಕ್ರಿ). ಚಲನೆಯಿಲ್ಲದಾಗು : ಮೈಯೊಳಗೆ ಮರಸಂದು ಮಸಗಾಡಿದೆನು ಮಿಡುಕಿಗೆ ನಾನು (ಕೃದಾ. ೦೯-೫).[ಮರ$_1$ + ಸಲ್ಲು(<ಸಲ್$_1$)]

**ಮರಸು**$_1$ 'ಮಱೆಯಿಸು' ನೋ.

**ಮರಸು**$_2$ 'ಮಱಸು$_2$' ನೋ.

**ಮರಸುಕಟ್ಟು** (ಕ್ರಿ). ಕಾಡಿನಲ್ಲಿ ಪ್ರಾಣಿಗಳನ್ನು ಬೇಟೆಯಾಡಲು ಮರದ ಮೇಲೆ ಅಡಗಿ ಕುಳಿತುಕೊಳ್ಳಲು ಅಟ್ಟವನ್ನು ಕಟ್ಟು : ಮರವನ್ನು ಹತ್ತಿ ಮರಸುಕಟ್ಟಿ ಕುಳಿತು ಹೊಡೆಯುವುದು (ಎಸಕ. ೩೩).
[ಮರಸು$_2$ (< ಮಱಸು$_2$) + ಕಟ್ಟು$_1$]

**ಮರಸುಕೂರು** (ಕ್ರಿ). ಕಾಡಿನಲ್ಲಿ ಪ್ರಾಣಿಗಳನ್ನು ಬೇಟೆಯಾಡಲು, ಮರದ ಮೇಲೆ ಕಟ್ಟಿರುವ ಮರಸಿನ ಮೇಲೆ ಕುಳಿತುಕೊಳ್ಳು : ಪಣ್ಮರಕೆ ಮರಸುಕೊತವರಂತೆ, ಮೋನದಿಂದೆಲ್ಲರಿಂ ರಾಮಾದಿಗಳ್ ನಿಟ್ಟಿಸಿರೆ (ಶ್ರೀರಾಪು. ೭೦೩-೬೨); ಕಾಡಿನಲ್ಲಿದ್ದ ಒಂದು ಹಣ್ಣಿನ ಮರಕ್ಕೆ ಮರಸು ಕೂರಲು ಹೋಗಿದ್ದನು (ಕಾಪೂರು. ೯೯).
[ಮರಸು$_2$ (< ಮಱಸು$_2$) + ಕೂರು$_2$ ( < ಕೂರ್$_3$)]

**ಮರಸುತ್ತು**, ಮಲಸುತ್ತು, ಮಲಸೂತ್ರ (ನಾ). ೧. ತಿರುಪಿನಾಕಾರದ ಒಂದು ಬಗೆಯ ಬಾಣ (?) : ಮರಸುತ್ತನಿಸಲೊಡಂ ಭೋರ್ಗರೆದೈತರ್ಪಾ ಸರಲ್ಗಳಂ ಖಂಡಿಸುತಂ ಬರುತಿರ್ದುವು . . . ನಿಶಿತವಿಶಿಖಾವಳಿಗಳ್ (ಕಂಠೀ. ೬–೫೩) ; ಮರಸುತ್ತನೆಚ್ಚು ತತ್ಖಚರರ ಶರಸಂಘಾತಮೆಲ್ಲಮಂ ಖಂಡಿಸಿ (ಕುಶಾಲೀ. ೦೦–೫೩). ೨. ತಿರುಪು ; ತಿರುಗಣೆ : ಇದಕ್ಕೆ ಮರಸುತ್ತಿನ ನಿಯಮವೆಂದು (cork screw rule) ಹೆಸರು (ಭೌತಶಾ. ೩೬೨). **ಮಲಸುತ್ತು** : ೨. ಮೊಳೆ ಮಾಡಲಿಕ್ಕೆ ತಿಳಿಯದ ಕಮ್ಮಾರ ಮಲಸುತ್ತು ಮಾಡಿಯಾನೇ ? (ಗಾದೆ). **ಮಲಸೂತ್ರ** : ೨. ಈ ಕೊತ್ತಳಗಳ ಬಳಿಯಲ್ಲಿ ಪೊಳಮ್ಮೆಯಲ್ಲಿ ಮಲಸೂತ್ರದಂಥ ಜಿನೆಯಲ್ಲಿ ಮೇಲೆ ಯೇರಲಿಕ್ಕೆ ಪಾವಟಗೆಗಳಿರುತ್ತವೆ (ಕಶಾಗೆ. ೫೫೦) ; ಮಲಸೂತ್ರದೊಳಗಿಂದ ಕೊಳವೆಯನ್ನು ತಿರುವಿ (ಮುಂಜಾ. ೩–೬೨).
[ದೇಶ್ಯ. ತೆಲು. ಮರಚುಟ್ಟು, ಮಲುಚುಟ್ಟು. / ಮರಾ. ಮಳಸುತ್ರ, ಮಳಸ ಊತ್ರ, ಮಲಸೂತ್ರ]

**ಮರಸುತ್ತುಬಳ್ಳಿ** (ನಾ). ಒಂದು ಬಗೆಯ ಸಸ್ಯ : ಮರಸದ, ಬಗುಲಿ, ಹುಪರಿಕೆಕುಚ್ಚು, ಮರಸುತ್ತುಬಳ್ಳಿ (ಸ್ವ್ಯಶಿ. ೦೩–೨೯೨).
[ಮರ$_1$ + ಸುತ್ತು$_1$ + ಬಳ್ಳಿ]

**ಮರಸುಬಾಗಿಲು** (ನಾ). "ಗೋಡೆಯಲ್ಲಿ ಪ್ರತ್ಯೇಕವಾಗಿದ್ದಂತೆ ತೋರದ ಹಾಗೆ . . . ಬಣ್ಣ ಹಾಕಿದ, ಗೋಡೆಯ ಮುಖಕ್ಕೆ ಸಮನಾಗಿಟ್ಟಿರುವ ಬಾಗಿಲು : ಮರಸುಬಾಗಿಲು" (Jibdoor. ೩೦೯೩).
[ಮರಸು$_2$ (< ಮಱಸು$_2$) + ಬಾಗಿಲು (< ಬಾಗಿಲ್)]

**ಮರಸುಬೇಟೆ** (ನಾ). ಮರೆಯಲ್ಲಿ ಅಡಗಿಕೊಂಡು ಮಾಡುವ ಬೇಟೆ : ಮರಸುಬೇಟೆ : ಇದರಲ್ಲಿ ಬೇಟೆಗಾರನು ಕಾಡಿನಲ್ಲಿ ಪ್ರಾಣಿಗಳು ತಿರುಗಾಡುವ ಕಡೆಯಲ್ಲಾಗಲೀ, ಯಾವುದಾದರೊಂದು ಹಣ್ಣಿನ ಮರದಲ್ಲಾಗಲೀ ಮರೆ ಮಾಡಿಕೊಂಡು ಕುಳಿತು ಪ್ರಾಣಿಗಳನ್ನು ಕಾಯುತ್ತಾನೆ (ಮಲೆಶ. ೬) ; ಹತ್ತಾರು ಜನರನ್ನು ಬಲಿ ತೆಗೆದುಕೊಂಡಿದ್ದ ಹುಲಿ . . . ಮರಸುಬೇಟೆಯಲ್ಲಿ ನಿಷ್ಣಾತನಾಗಿದ್ದ ಸಂಕಪ್ಪನ ರಕ್ತ ಹೀರಿತ್ತು (ಕಕದಾ. II, ೬೨೨೯).
[ಮರಸು$_2$ (< ಮಱಸು$_2$) + ಬೇಟೆ (< ಬೇಂಟೆ)]

**ಮರಸೌತೆ** (ನಾ). ಒಂದು ಬಗೆಯ ದೊಡ್ಡಜಾತಿಯ ಸೌತೆ : (ಸ್ವ್ಯಶಿ. ೫೦–೦೬೨೬). [ಮರ$_1$ + ಸೌತೆ (< ಸವುತೆ)]

**ಮರಹಟ್ಟಿ** 'ಮರಾಟ' ನೋ.

**ಮರಹತ** 'ಮರಾಟ' ನೋ.

**ಮರಹತ್ತಿ** (ನಾ). ಮರವಾಗಿ ಬೆಳೆಯುವ ಒಂದು ಬಗೆಯ ಹತ್ತಿ ; ದೊಡ್ಡಹತ್ತಿ : ಮರಹತ್ತಿಯ ಬೇರನು ಅಗಿದು ಕಿವಿಯಲ್ಲಿ ಉರುವಲು ವೃಶ್ಚಿಕ ಹರಾ (ಆಚಶ. ೦೬–೨) ; ಇದರಲ್ಲಿ ಮತ್ತೊಂದು ಪ್ರಕಾರದ ಮರಹತ್ತಿ ಎಂದು, ಕರಿ ಹತ್ತಿ ಎಂದು ಎರಡು ವಿಧಗಳುಂಟು (ಕೃಷಿಶಾ. ೩೯).
[ಮರ$_1$ + ಹತ್ತಿ$_1$ (< ಪಟ್ಟಿ)]

**ಮರಹಮ್ಮತ್** 'ಮರಾಮತ್ತು' ನೋ.

**ಮರಹಮ್ಮತ್ತು** 'ಮರಾಮತ್ತು' ನೋ.

**ಮರಹರಳು** (ನಾ). ಒಂದು ಬಗೆಯ ಔಡಲ ಗಿಡ ; ದೊಡ್ಡಹರಳು : ದೊಡ್ಡಹರಳು, ಬೆಟ್ಟಹರಳು, ತುರುಕಹರಳು, ಮರಹರಳು, ಕಾಡುಹರಳು (ಸ್ವ್ಯಶಿ. ೯೬–೯೯೩) ; ತಂಗಡಿ, ಕಕ್ಕೆ, ಮರಹರಳು, ಕಸ್ತೂರಿ ಜಾಲಿ, ಬನ್ನಿ (ಕಮ್ಯುಕು. ೨೩೬). [ಮರ$_1$ + ಹರಳು (< ಪರಲ್)]

**ಮರಹಱುವೆ** 'ಮರಹಱುಹೆ' ನೋ.

**ಮರಹಱುಹೆ**, ಮರಹಱುವೆ (ನಾ). ಒಂದು ಬಗೆಯ ಹರುವೆಸೊಪ್ಪು : "ಮರಹಱುಹೆ ಆಕುಕರ್ಣಿಕೆಯಕ್ಕು" (ಮೂಗಶಾ. ೩೨–೦೯). ಮರಹಱುವೆ: (೩). [ಮರ$_1$ + ಹಱುಹೆ]

**ಮರಹಾಟ** 'ಮರಾಟ' ನೋ.

**ಮರಹಾಟಮೊಗ್ಗೆ** 'ಮರಾಟಿಮೊಗ್ಗು' ನೋ.

**ಮರಹಾಲೆ** 'ಮರವಾಲೆ' ನೋ.

**ಮರಹು** 'ಮಱವು$_2$' ನೋ.

**ಮರಹುಣಿಸೆ** (ನಾ). ಒಂದು ಬಗೆಯ ದೊಡ್ಡಜಾತಿಯ ಹುಣಿಸೆ : "ತಿಂತ್ರಿಡೀಕಂ, ಚುಕ್ರಂ, ವೃಕ್ಷಾಮ್ಲಂ — ೩ ಮರಹುಣಿಸೇಹಣ್ಣು, ಹುಳಿಹಣ್ಣು" (ಸಿದ್ಧಾಂತಿ. ೨೬೯). [ಮರ$_1$ + ಹುಣಿಸೆ (< ಪುಳಿಸೆ)]

**ಮರಳ್** 'ಮರಲ್$_1$' ನೋ.

**ಮರಳಚ್ಚು** (ನಾ). ಮರಳಿನಲ್ಲಿ ಬರೆದು ಹೂಡಿದ ಒಂದು ಬಗೆಯ ಅಚ್ಚು : ಕಂಟ ಅಥವಾ ಚೂಪಾದ ಮರಗಡ್ಡಿಯಿಂದ ಕೊರೆದ ಮರಳಚ್ಚಿನಲ್ಲಿ ಎರಕ ಹೊಯ್ದು ಈ ಶಾಸನವನ್ನು ತಯಾರಿಸಲಾಗಿದೆ (ಜಾರಶ. ೦೬).
[ಮರಳು$_2$ (< ಮಣಲ್) + ಅಚ್ಚು$_3$]

**ಮರಳಿ** (ನಾ). ಒಂದು ಬಗೆಯ ಸಸ್ಯ : ಕೊಗ್ಗಲಿ, ಮರಳಿ, ಕೋಲಂಜಿ, ವಜ್ರನೀಲಿ (ಸ್ವ್ಯಶಿ. ೬೯–೦೩೦೬). 'ಮರಳೆ' ಪರಾ. [ ? ]

**ಮರಳಿಚು** 'ಮರಲ್ಚು' ನೋ.

**ಮರಳಿಸು** (ಕ್ರಿ). ೧. ಹಿಂತಿರುಗಿಸು ; ವಾಪಸ್ಸು ಬರುವಂತೆ ಮಾಡು : ಚಿತ್ರಮೆನಗೊಬ್ಬನಲಿ ಸಿಲುಕಿತು ಮರಳಿಪೊಡೆ ಕಮಲಾಕ್ಷಗಳವಲ್ಲ (ಕಳಶ. ೩–೩೩); ಬಸವಣ್ಣಸುಪೋಗಲದನುಸಿರೆ ಮರಳಿಸಿ ಚೆನ್ನಬಸವಣ್ಣನೊಪ್ಪಿರ್ದನು (ಕಂಶ್ಯ. ೬ ಸೂಚಿತ). ೨. ಸಂತೈಸು ; ತಿರುಗಿಸು : ಶಂಕಿನಿಯೆಂಬ ದೇವತೆ ಓಡಿದೊಡಾ ಕೂಸು . . . ಬೆಚ್ಚುಗುಂ, ಕಣ್ಣ ಮರಳಿಸುಗುಂ, ವಿಕಾರಮೆರಸಿ ನೋಡುಗುಂ (ಬಾಲಗ್ರ. ೦೩೨–೬). ೩. (ನೀರು ಮೊದಲಾದ) ದ್ರವ ಪದಾರ್ಥಗಳನ್ನು ಕುದಿಸು : ಸ್ವಾ ಹುತ್ತಿಸಿದವರು ಒಂದು ಕೊಳಗ ನೀರು ಮರಳಿಸಿ . . . ಎಂದರು (ಕಂಯಾತ್ರೆ. ೯).
[ಮರಳು$_1$ (<ಮರಲ್$_1$) + — ಇಸು$_3$]

**ಮರಳು$_1$** 'ಮರಲ್$_1$' ನೋ.

**ಮರಳು$_2$** 'ಮಣಲ್' ನೋ.

**ಮರಳುಉಮ್ಮತ್ತಿ** 'ಮರುಳುಮ್ಮತ' ನೋ.

**ಮರಳುಗಲ್ಲು** (ನಾ). ಕೆಂಪು ಮರಳಿನಿಂದಾಗುವ ಒಂದು ಬಗೆಯ ಕಲ್ಲು: ಈ ಹಜಾರವು ಸುಮಾರು ೮೦ ಮರಳುಗಲ್ಲುಕಂಬಗಳಿಂದ ಕೂಡಿ ಮರದ ಮೇಲ್ಛಾವಣಿಯನ್ನು ಹೊಂದಿತ್ತು (ಕಾರದ. ೯೯೯); ಇಂಥ ಪ್ರದೇಶವು ಒಂದು ಕಾಲದಲ್ಲಿ ಮೇಲಕ್ಕೆ ತಳ್ಳಲ್ಪಟ್ಟರೆ, ಅದೇ ಮರಳುಗಲ್ಲಿನ (Sandstone) ಬೆಟ್ಟವೆನಿಸುವವು (ಕಾಂಶ್ರ. I, ೦೯೬).
[ಮರಳು$_2$ (<ಮಣಲ್) + ಕಲ್ಲು (<ಕಲ್$_2$)]

**ಮರಳುಗಾಡು** 'ಮರಳ್ಗಾಡು' ನೋ.

**ಮರಳುಚಿಗಟ** (ನಾ). ಒಂದು ಬಗೆಯ ಸಣ್ಣ ರೆಕ್ಕೆ ಹುಳು, —ಚಿಗಟ : ನೀರಿನ ಅಂಚಿನಲ್ಲಿರಬಹುದಾದ ಸಣ್ಣನಳ್ಳಿ, ಸೊಳ್ಳೆಮರಿಗಳು, ಮರಳುಚಿಗಟ ಮತ್ತಿತರ ಕೀಟಗಳನ್ನು ಆರಿಸಿ ತಿನ್ನುತ್ತವೆ (ಪಕ್ಷಿ. ೩೦).
[ಮರಳು$_2$ (<ಮಣಲ್) + ಚಿಗುಟು (<ಚಿಕ್ಕುಟ)]

**ಮರಳುದಲೆ** (ನಾ). ಹಿಂದಿರುಗುವಿಕೆ ; ವಾಪಸ್ಸಾಗುವಿಕೆ : ಕಸಾಧಿಯ ವಡಬಾನಳನ ದಳ್ಳುರಿಯ ಮರ್ಮವ ತಿವಿವ ತುಂಬಿಗೆ ಮರಳುದಲೆಯುಂಟಾದಡದು ಭವಭವದ ಪುಣ್ಯಫಲ (ಕುಮಾವ್ಯಾಸ. ೯–೯೬); ಕಂಗಳ ಮರಳುದಲೆಯನು ಮಾಣಿಸುವ ಬಹುಶಿಲ್ಪಕೌಶಲದ ಪುರವಿಭವಲಕ್ಷ್ಮಿಯನು ಕಂಡು (ಜೈಮಿಗ. ೩–೦೦.೦೦). [ಮರಳು$_1$ (<ಮರಲ್$_1$) + — ತಲೆ$_2$]

**ಮರಳುದಿಣ್ಣೆ** 'ಮಣಲ್ದಿಣ್ಣೆ' ನೋ.

**ಮರಳುಪಾಡಿ** (ನಾ). (?) : ತಿಳ ೨ ಮರಳುಪಾಡಿ ಬಿಡಿಸಾರಾ ಮೂ ೩ (ಶೌಶಾ. ೦೯೩೦, ಶುಂಗಳಶಾ. ೩೩೪–೯ ; 1228). [ ? ]

**ಮರಳುಮತ್ತ** 'ಮರುಳುಮ್ಮತ್ತ' ನೋ.

**ಮರಳೆ** (ನಾ). ಒಂದು ಬಗೆಯ ಸಸ್ಯ ಮತ್ತು ಅದರ ಹೂವು : ಆಗಿನ ಕಾಲದ ತೋಟಗಳಲ್ಲಿ ಅವರು ಹೆಚ್ಚು ಪ್ರೀತಿಯಿಂದ ಬೆಳೆಸುತ್ತಿದ್ದ ಹೂಗಳೆಂದರೆ ಪಾದರಿ . . . ಮರಳೆ, ಮಲ್ಲಿಗೆ, ಸಂಪಿಗೆ, ಕೇತಕಿ ಮುಂತಾದವು (ಶಾಚೀ. ೩೩). 'ಮರಳಿ' ಪರಾ. [ ? ]

**ಮರಳೊತ್ತು** (ಕ್ರಿ). ಹಿಂದಕ್ಕೆ ಒತ್ತು; ಹಿಮ್ಮೆಟ್ಟಿಸು : ಮೇರುಗಿರಿಯಂ ಮರಳೊತ್ತುವ ವಜ್ರಮಣಿಯಂ ತಳದೊಳಗಿರ್ದಿಲಾಗೆ ಪೊಸೆದಿಕ್ಕುವ . . . ಅಳವಂ ಸಮಂತು ತಳೆದಂ (ಶಂಕ್ರಸ. ೬-೨೮).

[ಮರಳ್ (< ಮರಲ್$_1$) + ಒತ್ತು$_1$]

**ಮರಳ್ಗಾಡು**, ಮರಳುಗಾಡು (ನಾ). ಉಸುಕು ತುಂಬಿದ ಪ್ರದೇಶ; ಮರುಭೂಮಿ : ನಿನ್ನ ಮೈಯ ಮರಳ್ಗಾಡಿನಲ್ಲಿ . . . ಅರಸಿ ನೋಡು ! (ಕಲ್ಕೊಂ. ೨-೦೩); ಮರಳ್ಗಾಡಿನಲ್ಲಿ ಬಿಸಿಲ್ಗುದುರೇನೇ ನಿಜವಾದ ನೀರೂಂತ ನಂಬಿ . . . ಪ್ರಾಣಬಿಟ್ಟೋಗಿದ್ದಾರೆ (ಪೀಠಕೋ. ೦೯). **ಮರಳುಗಾಡು** : ಮರಳುಗಾಡಿನಲ್ಲಿ ತಣ್ಣೀರಿನ ಕೊಳ ಗೋಚರಿಸುವಂತೆ ಮುಂದೆ ಒಂದಾನೊಂದು ಕಾಲಕ್ಕೆ ಆ ಸಂಪತ್ತೂ ದೊರೆಯಬಹುದು (ಸಂಟಿರು. ೦೯); ನಿರ್ಜನವಾದ ಮರಳುಗಾಡನ್ನು ನಮ್ಮ ಸ್ಮೃತಿಪಥದಲ್ಲಿ ಎಳೆದು ತಂದು ನಿಲ್ಲಿಸಬಲ್ಲಷ್ಟು ಶಕ್ತಿಯುಕ್ತವಾಗಿದ್ದು (ರೂಪಮ. ೦೯).

[ಮರಳು$_2$ (<ಮಣಲ್) + ಕಾಡು$_3$]

**ಮರಳ್ಚು** 'ಮರಲ್ಚು' ನೋ.

**ಮರಾಟ**, ಮರಹಟ್ಟ, ಮರಹತ, ಮರಹಾಟ, ಮರಾಠ, ಮಾರಾಟ$_2$ (ನಾ). ಮಹಾರಾಷ್ಟ್ರವೆಂಬ ಒಂದು ದೇಶ ಮತ್ತು ಅಲ್ಲಿಯ ಜನ : ಪೊಣರ್ದು ಪೊಣರ್ದಾ ಮರಾಟರ್ ತಣಿದಾ ತಳ್ಳಿಯನೆ ಬಿಟ್ಟು ತಟ್ಟನೆ ತಳರ್ದರ್ (ಅಕ್ರತಿ. ೩೫-೩೮). **ಮರಹಟ್ಟ**: ನರ್ಮದಾ ಗೋದಾ ಪರಿಸರದವರೆಗೂ ಅಲ್ಲಲ್ಲಿ ನೆಲಸಿರಬೇಕೆಂಬುವನ್ನು ಸೂಚಿಸುವ ವಿದರ್ಭದ 'ಮರಹಟ್ಟ' ಎಂಬ ದೇಶೀಯ ಪರ್ಯಾಯನಾಮವು ಐತಿಹಾಸಿಕ ಮಹತ್ವದ್ದಾಗಿದೆ (ಕರ್ನಾಟಿ. ೩೨). **ಮರಹತ** : ಮರಹತನಜೀಕೆಯ ಕಡುಗಲಿ (ಜಯಕಾ. ೭-೪). **ಮರಹಾಟ** : 'ಮರಹಾಟಮೊಗ್ಗೆ' ಪರಾ. **ಮರಾಠ** : ಮರಾಠರಲ್ಲಿ ಪೇಷ್ವೆಮನೆತನ ಪ್ರಸಿದ್ಧವಾದುದು (ಕೂಶ). **ಮಾರಾಟ$_2$** : ಲಾಟ ಪಾಂಚಾಳ . . . ಸ್ತ್ರೀರಾಜ್ಯ ಕೊಂಗು ಮಾರಾಟ ಮೊದಲಾದ ದೇಶದ ಶರಣಸಂಕುಲಂ ಬರುತಿರ್ದುದುತ್ಸವದೊಳು (ಶಶಿ. ೬-೩೦); ಹಿರಿಯರ ಕಲೆಯಿಂ ದೊರಕಿತು ಮಾರಾಟರ ರಾಜ್ಯೋದಯವು (ಹಂಶಿಶ.೦೭೩). [← ಮರಾ. ಮರಾಠಾ; ಹಿಂ. ಮರಹಟಾ, ಮರಹತಾ, ಮರಾಠಾ./ಪ್ರಾ. ಮರಹಟ್ಟ, ಮರಟ್ಟ./ಸಂ. ಮಹಾರಾಷ್ಟ್ರ]

**ಮರಾಟ**, ಮರಾಠಿ (ಗು). ೧. ಮಹಾರಾಷ್ಟ್ರದೇಶಕ್ಕೆ ಸಂಬಂಧಿಸಿದ; ಮಹಾರಾಷ್ಟ್ರದ: (೬). (ನಾ). ೨. ಮಹಾರಾಷ್ಟ್ರದ ಜನ ಮತ್ತು ಅವರ ಭಾಷೆ: ಆ ಕಾಲದಲ್ಲಿ ಮರಾಟಿಯವರು ಓದುಬರೆಹವನ್ನು ಕಲಿವುದರಲ್ಲಿ ಅಷ್ಟು ಅಕ್ಕರೆಯುಳ್ಳವರಾಗಿರಲಿಲ್ಲ (ಚಕ್ರತಿ. ೨೭). ೩. ಹಳದಿಬಣ್ಣದ ಹೂವುಗಳನ್ನು ಬಿಡುವ ಒಂದು ಬಗೆಯ ಔಷಧೀಸಸ್ಯ : 'ಮರಾಟಿಮೊಗ್ಗು' ಪರಾ. **ಮರಾಠಿ** : ೧. ಲಗ್ನದ ವಿಧಾನಗಳು ಮರಾಠೀಜನರಂತೆ ಆಗುತ್ತವೆ (ಕಥಾಗ. ೦೭೩). ೨. ಮರಾಠಿಯಲ್ಲಿ ಪತ್ರ ವ್ಯವಹಾರ ಮಾಡಿ ಮರಾಠಿ ಪಟ್ಟಿಗಳನ್ನು ಬೇಡಿಸುವವರಿಗೆ ನೂರಕ್ಕೆ ಒಂದು ರೂಪಾಯಿ ಅಡತಿ ಬಿದ್ದೀತು (ಮುಂಬಿಪ್ರ. ೨೭); ಅರ್ಥಾತ್ ಮಾತೆಲ್ಲ ಮರಾಠಿಯಲ್ಲಿತ್ತು (ಸಪಾಕೀ. ೩೦೮).

[← ಮರಾ. ಮರಾಠೀ; ಹಿಂ. ಮರಹಟೀ, ಮರಹಠೀ, ಮರಾಠೀ./ಪ್ರಾ. ಮರಹಟ್ಟೀ]

**ಮರಾಟಿಮೊಗ್ಗು**, ಮರಹಾಟಮೊಗ್ಗೆ (ನಾ). (ಮಸಾಲೆ ಅಥವಾ ಔಷಧಿಗೆ ಬಳಸುವ) ಒಂದು ಬಗೆಯ ಸಸ್ಯದ ಮೊಗ್ಗು ; ಒಂದು ಬಗೆಯ ಸಂಬಾರಪದಾರ್ಥ : ಮರಾಟಿಮೊಗ್ಗು, ಚೀನಾಸೋಂಪು (ಪ್ರಶಿಪ. ೪೩-೬೯೦). **ಮರಹಾಟಮೊಗ್ಗೆ** : ಕರ್ಪೂರಚೂರ್ಣ ಮತ್ತೆ ಮರಹಾಟಮೊಗ್ಗೆಯು . . . ಮರ್ದಿಸಿದ ತಾಂಬೂಲವುಮನಿತ್ತು (ಪಪಮೋ. ೨೭-೮೩).

[ಮರಾಟ + ಮೊಗ್ಗು$_3$ (< ಮೊಗ್ಗೆ)./ತಮಿ. ಮರಾಟ್ಟಿಮೊಕ್ಕು; ತೆಲು. ಮರಾಟಿಮೊಗ್ಗ]

**ಮರಾಠ** 'ಮರಾಟ' ನೋ.

**ಮರಾಠಿ** 'ಮರಾಟ' ನೋ.

**ಮರಾಮತ್ತು**, ಮರಹಮ್ಮತ್, ಮರಹಮ್ಮತ್ತು (ನಾ). ೧. ಸರಿಪಡಿಸುವಿಕೆ; ದುರಸ್ತಿ; ಜೀರ್ಣೋದ್ಧಾರ: ತ್ರಿಕೂಟಾಚಲದ ಮೂರು ಶಿಖರಗಳು . . . ಮರಾಮತ್ತು ತತ್ತ್ವಗಳಿಂದ ನೋಡಿದರೆ ಅಷ್ಟು ಭದ್ರವೆಂದು ಕಂಡುಬರುವುದಿಲ್ಲ (ಹೊಯ್ಸಳಾ. ೦೭). **ಮರಹಮ್ಮತ್**: ೨. ಕಟ್ಟಡ ನಿರ್ಮಾಣ ; ವಾಸ್ತುರಚನೆ : ರುರ್ಕಿ ಎಂಬ ಊರಿನಲ್ಲಿ ಇಂಜನೀರಿಂಗ್‌ಕಾಲೇಜ್ ಅಂದರೆ ಮರಹಮ್ಮತ್ ವಿಷಯಗಳನ್ನು ಬೋಧಿಸುವ ಪ್ರಖ್ಯಾತ ಪಾಠಶಾಲೆ ಇದೆ (ಭೂಗೋಳ. ೩೩). **ಮರಹಮ್ಮತ್ತು** : ೧. ನೀ ಬೇಗ ಮರಹಮ್ಮತ್ತು ಮುತ್ಸದ್ದಿಯನು ಕರದುಕೊಂಡ್ಹೋಗಿ (ಅರ್ಕಾಶಿ. ೩೦-೪೦) ; ಮುಜರಾಯಿ, ಮರಹಮ್ಮತ್ತು ಇವು ಆ ಕಾಲದಲ್ಲಿ ಖರ್ಚಿನ ಮುಖ್ಯವಾದ ಬಾಬುಗಳು (ಮಹಾಶಂ. II. ೬೧).

ಮರಾಮತ್ತು‌ಇಲಾಖೆ, ಮರಹಮ್ಮತ್‌ಇಲಾಖೆ=ಲೋಕೋಪಯೋಗಿ ಇಲಾಖೆ : ಮರಾಮತ್ತು ಇಲಾಖೆಗೂ ಕಾರ್ಮಿಕ ಇಲಾಖೆಗೂ ಪತ್ರಗಳನ್ನು ಬರೆದು . . . ವಿಚಾರಿಸಿದರು (ಹಸುಹೂ. ೩); ರಸ್ತೆಯ ಉದ್ದವನ್ನು ಎಷ್ಟು ಜಾಗರೂಕತೆಯಿಂದ ಮರಹಮ್ಮತ್‌ಇಲಾಖೆಯವರು ಅಳೆದಿರುವರೋ . . . ಯಾರೂ ಇಲ್ಲವೆನ್ನುವ ಹಾಗಿಲ್ಲ (ಕಾಶ್ಮೀರ. ೨೭೪).

[← ಅರ. ಹಿಂ. ಮರಮ್ಮತ್]

**ಮರಾಯಿ** 'ಮರವಿ' ನೋ.

**ಮರಾಲ**, ಮರಾಳ$_1$ (ಗು). ೧. ಮೃದುವಾದ ; ಕೋಮಲವಾದ. (ನಾ). ೨. ಹಂಸಪಕ್ಷಿ. ೩. ಕಾಡಿಗೆ ; ಅಂಜನ. ೪. ಕುದುರೆ. ೫. ಮೋಡ ; ಮೇಘ. ೬. ಖಳ ; ಕಪಟಿ. ೭. ಕಾರಂಡದ ಪಕ್ಷಿ. ೮. ದಾಳಿಂಬೆಗಿಡಗಳಿರುವ ವನ. **ಮರಾಳ$_1$** : ಅಪರಾಬ್ಧಿಗೆ ಬರ್ಪ ಜರನ್ಮರಾಳವೋ ಪಿರಿದುಮೆನಲ್ಕೆ ಮೆಲ್ಲನಿಳಿದತ್ತು . . . ಶಶಾಂಕಮಂಡಲಂ (ಕಾದಂಪೂ. ೦೩೭) ; ಮೆಲ್ಲಡಿಯಿಡುವ ಮೃದುಗತಿಗೆ ಮರಾಳಂಗಳ್ ಮನವಿಕ್ಕೆ (ಸಂಬರ. ೦೪-೨೩); ಮಯೂರ ಮರಾಳ . . . ಕುರರೀಪ್ಲವ ಪ್ರಕರದಿಂದೆ ವಿರಾಜಿಕುಮುನ್ನತಂ ವನಂ (ಹಮ್ಮಿರ. ೪-೭೨). ೪. "ಮರಾಳಂ ಹುಯ್ಯಂ" (ಕರ್ನಾಶಿ. ೬). ೯. [ನಾಟ್ಯ] ನೃತ್ಯದ ಒಂದು ಗತಿ : ದೇಶೀಯ ಭೌಮಚಾರಿಗಳಲ್ಲಿ ಒಂದು ; ☞ "ನಂದ್ಯಾವರ್ತಸ್ಥಾನಕದಲ್ಲಿ ನಿಂತುಕೊಂಡು ಒಂದು ಕಾಲಿನ ಮುಂಗಾಲನ್ನೂ ಇನ್ನೊಂದು ಕಾಲಿನ ಹಿಮ್ಮಡಿಯನ್ನೂ ರೇಚಿತ ಮಾಡಿ ನಡೆಯುತ್ತ ಪಾದಗಳನ್ನು ಮುಂದಕ್ಕೆ ಪ್ರಸರಿಸುವುದು" (ನಾಸ್ಯರಂ. ೬೨೦ ಗದ್ಯಾನುವಾದ) : ಪದಮೆರೆಡುಂ ನಂದ್ಯಾವರ್ತದ ಠಾಣದೆ ನಿಂದು ಮಡಮನಗ್ರಮನೊಳ್ಪಿಂದೊಡವಿ ರೇಚಿತದೆ ನಡೆಯಲ್ ಪದಬಂ ಮುಂತಣ್ಗೆ ನೀಡಲದುವೆ ಮರಾಳಂ (ನಾಸ್ಯರಂ. ೬-೬೩). [ಸಂ.]

**ಮರಾಲಕ** (ನಾ). ಹಂಸ ; ಮರಾಲ : ಚಣಮರಾಲ [ಶಾಶಾಂ. ೪]ಕಗಮನೆ ಬಂದಳು (ಬಸಪು. ೩೦-೦೦). [ಸಂ.]

**ಮರಾಲಪದಿ**, ಮರಾಳಪದಿ (ನಾ). ಒಂದು ಬಗೆಯ ಸಸ್ಯ; ಹಂಸಪಾದಿ: "ಹಂಸಪಾದಿ . . . ಮರಾಲಪದಿ, ಘೃತಮಂಡಲಿ" (ಸಸ್ಯಶಿ. ೬೪).

**ಮರಾಳಪದಿ:** "ತ್ರಿಪದಿ ಧೃತಪಮುಂಡಳಿ ಮರಾಳಪದಿಯೆನೆ ಹಂಸಪಾದಿ" (ಛಂಗಣಾ. ೫೨-೩೮). [ ಸಂ. ಮರಾಲಪದೀ]

**ಮರಾಲಯಾನೆ,** ಮರಾಳಯಾನೆ (ನಾ). ಹಂಸದಂತೆ ಮಂದಗತಿಯಲ್ಲಿ ನಡೆಯುವವಳು ; ಮೃದುವಾದ ನಡಿಗೆಯುಳ್ಳವಳು : (೧). **ಮರಾಳಯಾನೆ** : ಸುಟಿವ ಮರಾಳಯಾನೆಯರಪಾಂಗಮರೀಚಿಚಯಂ ತ್ರಿವರ್ಣಾಮಕ ಗಟೀಯಿಸೆ (ಶಂಶ್ರಕ. ೬-೦೦೬). [ಸಂ. ಮರಾಲಯಾನಾ]

**ಮರಾಳ₁** 'ಮರಾಲ' ನೋ.

**ಮರಾಳ₂** 'ಮಲಾರ₂' ನೋ.

**ಮರಾಳಗತಿ** (ನಾ). = ಮರಾಲಯಾನೆ : ಮರಾಳಗತಿಗಳ್ ಚಕ್ರಾಂಕ ವಕ್ಷೋಜಮಂಡಳೆಯರ್ ವರ್ತಿಸಿದರ್. ಕುವರಾರನ ಮನಸ್ಸಿಂಸಾರಕಾಸಾರ ದೊಳ್ (ಪುಷ್ಪಕ. ೦೨-೦೦೨). [ಸಂ. ಮರಾಲಗತಿ]

**ಮರಾಳಗಾಮಿನಿ** (ನಾ). = ಮರಾಲಯಾನೆ : ವಾರಿಜಾನನೆಗೆ ಮರಾಳ ಗಾಮಿನಿಗೆ . . . ಸೀಮೆಯಾಯ್ತು ಜೀವನದಘಲಾಪೆ ಕಂತುಪರಿತಾಪದೊಳ್ (ಪುಷ್ಪಕ. ೯-೬೮). [ಸಂ. ಮರಾಲಗಾಮಿನೀ]

**ಮರಾಳತೂಳ** (ನಾ). ಹಂಸದ ತುಪ್ಪುಳ : ಹಂಸತೂಲ : ಶಯನ ಸ್ಥಾನದೊಳ್ ದುಕೂಲಪ್ರಚ್ಛದಾಚ್ಛಾದಿತ ಮರಾಳತೂಳಶಯ್ಯಾತಳ ಮನಲಂಕರಿಸಿದಲ್ಲಿ (ಖಗ. ೦೦-೫೪ ಪ). [ಸಂ. ಮರಾಲತೂಲ]

**ಮರಾಳನ್ಯಾಯ** (ನಾ). [ತರ್ಕಶಾ] ಲೌಕಿಕನ್ಯಾಯಗಳಲ್ಲಿ ಒಂದು ; ಹಂಸವು ನೀರು ಬೆರೆತ ಹಾಲಿನಲ್ಲಿ, ಹಾಲನ್ನು ಮಾತ್ರ ಹೀರಿಕೊಂಡು ನೀರನ್ನು ತೊರೆಯುವ ಕ್ರಮ ; ಹಂಸಕ್ಷೀರನ್ಯಾಯ : ಪಾಪ ಪುಣ್ಯಂಗಳಂ ನೆರೆ ಮರಾಳನ್ಯಾಯಮಾಗ್ಯೆದೆ ವಿಂಗಡಿಪ . . . ಸಾಗರದ ಪಯೋಳಿಹ ಗಂಭೀರ ಗುಣ್ಮೆನಿಂ ತಷ್ಪೆನಿಂ ಕೇಳವನಿಪಾಲತಿಲಕ (ಪಂಗಾಣ. ೨-೦-೩೦). [ಸಂ. ಮರಾಲನ್ಯಾಯ]

**ಮರಾಳಪದಿ** 'ಮರಾಲಪದಿ' ನೋ.

**ಮರಾಳಯಾನೆ** 'ಮರಾಲಯಾನೆ' ನೋ.

**ಮರಾಳಿ** (ನಾ). ಹೆಣ್ಣುಹಂಸ : ಅಗಟಿತ್ ವಾರ್ಧಿಯಂ ಕೀಟ್ಟಡಿಕಂ ನಾನಾಮರಾಳೀಟಪುಳಕಳಕಳಧ್ವಾನಸಂತಾನದಿಂದಂ (ಖಗ. ೨-೦೪); ಸರಸಿ ರುಹಂಗಳಿಂದಿಚಿವ ಮತ್ತಮರಾಳಿಗಳಂತೆ (ಅಪಂಕ. ೬-೩). [ಸಂ. ಮರಾಲೀ]

**ಮರಿ** 'ಮಱಿ' ನೋ.

**ಮರಿಗಂಜಿ** (ನಾ). ಮದುವೆಯಲ್ಲಿ ನಡೆಸುವ ಒಂದು ಸಂಪ್ರದಾಯದ ಆಚರಣೆಯ ವಿಧಿ ; ಕಿರಿಗಂಜಿಯ ಮಾರನೇದಿನ ನಡಸುವ ಶಾಸ್ತ್ರ : ಇಲ್ಲಿಗೆ ಕಿರಿಗಂಜಿ ಮುಗಿಯಿತು. ಮಾರನೆಯ ದಿನ ಮರಿಗಂಜಿ. ಹೆಣ್ಣಿನ ಮನೆಯಲ್ಲಿ ಗಂಡಿಗೆ . . . ಆರತಿಎತ್ತುವುದು ಮುಂತಾದ ಶಾಸ್ತ್ರಗಳು ನಡೆಯುತ್ತವೆ (ವಪ್ಪಕು. ೦೦೩). 'ಕಿರಿಗಂಜಿ' ಪರಾ. [ ? ]

**ಮರಿಗಜಮರ** (ನಾ). ಒಂದು ಬಗೆಯ ಮರ : " ಚರ್ಮರಂಗಾ- ಮರಿಗಜಮರ" (೬೫೦. ೫೩). [ ? + ಮರ₁ ]

**ಮರಿಗೆ** 'ಮರವಿ' ನೋ.

**ಮರಿಚ** (ನಾ). ಒಂದು ಬಗೆಯ ಸಂಬಾರಪದಾರ್ಥ ; ಮೆಣಸು : " ವೇಲವ್ಣಂ, ಮರಿಚಂ, ಊಷಣಂ– ಈ ೩ ಮೆಣ (ಬ)ಸು " (ಪಣಾಯು. ೦೦೦-೪೩೨) ; ಕುರರಕುಲತುಂಡಖಂಡಿತಮರಿಚಲತಾಪ್ರಚಯರುಚಿರನವ ಪಲ್ಲವದಿಂ . . . ಸೊಗಯಿಸುಗುಂ (ಕಾದಂಪೂ. ೬೩); ಮರಿಚವ್ಯಾಕೀರ್ಣ ವರ್ಣಾಂ ಕುರರತನುವಂ . . . ಕೊರ್ವಿಸೆ ಸೊಗಯಿಪ್ಪುದೀ ಕಾನನೋದ್ದೇಶಂ (ಕುಷ್ಪಕ. ೫-೬೮). [ಸಂ.]

**ಮರಿದುಂಬಿ** 'ಮಱಿದುಂಬಿ' ನೋ.

ಮರಿಪಿಟ್ಟು (ನಾ). ಒಂದು ಬಗೆಯ ಆಭರಣ (?) : ಮುಡಿಯೊಳಿಡುವ ಮಾಲೆಗಳುಂ ಕಿವಿಯೊಳಿಡುವೋಲೆಗಳುಂ ಮರಿಪಿಟ್ಟು [ಶಾಶಾಂ. ಮರೆವ ಪಟ್ಟಿ. ಅರುಪಿಂಗಳ]ಗಳಂವಿಟ್ಟುಕೊಳ್ಳ ಬೊಟ್ಟುಗಳಂ ವಿಡಿವ ಕಾಡಿಗೆಗಳಂ . . . ಮರಿಪಿಟ್ಟುಗಳಂ ತೀವುವ ನನೆಯಕ್ಕಿಗಳಂ . . . ಎಸೆಯ (ಅಣಾಪ. ೬-೬೮ ಪ). [ ? ]

**ಮರಿವುಗೊಳ್** (ಕ್ರಿ). ಸುವಾಸನೆಯನ್ನು ಪಡೆ : ಕಂಪಿನ ಕಣಿಯ ನೊಡೆದಂತೆ ಕೆಂಪಿನ ಕಂಪಿನ ಮಂಜರಿಯಂತೆ ಮಂಜರಿಸಿ ಮಗಮಗಿಸಿ ಮರಿವುಗೊಂಡು ಸೊಬಗು ಕೋಂಬುಗೊಂಡರಿಸಿನದ ಕೊಂಬುಗಳಂ ಸೊಪ್ಪು ಗಟ್ಟಿ (ಅಣಾಪ. ೦೨-೬೬ ಪ). [ <ಮರು₂ + ಕೊಳ್₁]

**ಮರಿಮಗ** 'ಮಱಿಮಗ' ನೋ.

**ಮರಿಮಗಳು** (ನಾ). ಮೊಮ್ಮಗನ ಮಗಳು ; ಪ್ರಪೌತ್ರಿ : ಇವಳು ಅವರ ಮರಿಮಗಳು (ರೂಢಿ). [ಮರಿ (<ಮಱಿ)+ ಮಗಳು(<ಮಗಳ್)]

**ಮರಿಮಿಂಚು** (ನಾ). ಮಿಂಚಿನ ತುಂಡು : ಚಿಮ್ಮಿದುದು ಜಿಂಕೆಮರಿ ಯೊಂದು . . . ಕರಿಮುಗಿಲ್ಗಿಲ್ಬಿದ್ದೀದೋಗೆವ ಮರಿಮಿಂಚಿನಲ್ (ಕಶ್ಯಾಂಗ. ೩-೬೩). [ ಮರಿ (<ಮಱಿ) + ಮಿಂಚು₂ ]

**ಮರಿಮಿಾನು** 'ಮಱಿಮಿಾನ್' ನೋ.

**ಮರಿಮೊಮ್ಮ** (ನಾ). ಮೊಮ್ಮಗನ ಮಗ: ನಿನ್ನಪ್ಪ ಮುತ್ತಜ್ಜ ಮುಱಜ್ಜ ರೆಲ್ಲರುಂ . . . ನಿನ್ನ ಮಗ ಮೊಮ್ಮ ಮರಿಮೊಮ್ಮರೊಳು ಜೀವಿಪ್ಪರ್ (ಶಂಕುಚ. ೩೪೮). [ಮರಿ (< ಮಱಿ) + ಮೊಮ್ಮ ( <ಮೊರ್ಮ₁)]

**ಮರಿಯಸೆ** (ನಾ). ಒಂದು ಊರಿನ ಹೆಸರು : ಸ್ವಸ್ತಿಶ್ರೀ ಬಿಜಯಿತನು ಮರಿಯಸೆಯೊಳ್ ಭಗವತಿಯಂ ಪತಿಷ್ಠೆಗೆಯ್ದುದೊಡೆ (ಪ್ರಾಙ. ೦೫೨೯, ೩೯-೨; ಪಡು ೫೩). [ ? ]

**ಮರಿಯಾದಿ** 'ಮರಿಯಾದೆ' ನೋ.

**ಮರಿಯಾದೆ,** ಮರಿಯಾದಿ (ನಾ). ೧. ಎಲ್ಲೆ; ಗಡಿ; ಸೀಮೆ : ಮರಿಯಾದೆ ಗಿಕ್ಕಿದ ಬೆಟ್ಟವಿದ್ದುದು ಮಾಲ್ಯವಂತಗಿರಿ (ಕವ್ಯಾಕ. ೩-೫೨). ೨. ಗೌರವ; ಮನ್ನಣೆ : ಭೂತಳಾಧಿಪ ಮುನಿದು ಪೇಳೆನಿರ್ದಾದನೇಜೋನೀತಗಿದು ಮರಿಯಾದೆಯೆನೆ (ಹಪಾ. ೦೦-೯); ನಿಮ್ಮೊಳಿಹುದೆಮಗಾವ ಮರಿಯಾದೆಗಳು ದೂರದ ಸೇವೆ ತಾ ನಮಗುಚಿತವೆಂದಮ (ಶ್ರಕುಊ. ೫-೩೨). ೩. ಅರ್ಹತೆ; ಯೋಗ್ಯತೆ; ಔಚಿತ್ಯ : ಆವರವರ ಮರಿಯಾದೆ ವೇರಯೊಳವರವರ ಸತ್ಕರಿಸಿ (ಪಳಕ. ೩-೩೦). ೪. ಮಾನ್ಯ; ಕೊಡುಗೆ : ಹಂನೆರಡು ಹೊಂನ ಮರಿಯಾದೆ ಕೋಲುಕೊಳಗ ದೇವರಿಗೆ. . . ಕೊಟ್ಟರು (ಕಾ. XXIII, ೦೯೩-೬೦; 1256). ೫. ಪದ್ಧತಿ ; ನಿಯಮ ; ಸಂಪ್ರದಾಯ : ಈ ಮರಿಯಾದೆಯನಳಿವೊರ್. . . ಕೊನ್ದಾರ್ (ಎಕ. VI, ಕೊಪ್ಪ. ೩೬-೦೯; 675); ವಿಟ್ಟು [ಬಿ]ದಿರೂರ್ಸ್ವರ್ಗಗ್ಗಸ್ತಿಜೀಯ ಮರಿಯಾದೆ ಕೊಟ್ಟರ್ (ಎಕ. III (೩). ಶಿಂಪಿಪ. ೦೨೯-೯; ೩10); ಆ ಮರಿಯಾದೆಯಲ್ಲಿ ಜಬದೊಳಂ ಕುಳದೊಳಂ ಕ್ಷಳದೊಳಂ ಲಕಾರದೊಳಂ ಪ್ರಾಸಕ್ಕೆ ಸಲ್ಲದು (ಕಮಹಾಂ. ೯೦). ೬. ರೀತಿ ; ತರಹ : ಎಲಚಿಯ ತನಿವಣ್ಣಿನ ಮರಿಯಾದೆಯ ಕದರುಗಳ . . . ಕಣ್ಣುವಲ್ಲಯೆಂಬರು (ಅಶ್ವಕ. ೨-೨೦ ಪಟು); ಗುಲುಗಂಜಿಯ ಮರಿ ಯಾದೆಯಲ್ಲಿ ಒಳಗೆ ವಿಷವ ತುಂಬಿಕೊಂಡು, ಹೊರಗೆ ರಮ್ಯವಾದಂಥಾ ಸ್ತ್ರೀಯರುಗಳಲ್ಲಿ ಮನುಷ್ಯನು ಹೇಗೆ ವಿಶ್ವಾಸವ ಮಾಡಬೇಕು ? (ಅಶ್ವಕ. ೬೬-೦೪). **ಮರಿಯಾದಿ** : ೫. ಬಣಾಗಾವುಣ್ದ ಬಾಳ್ಗಟ್ಟು ಮರಿಯಾದಿಯೊಳೆ ಸಲ್ವುದು (ಎಕ. IV (೩). ಹಾಸುಕು. ೨೩೬-೦೦; ೯). [< ಸಂ. ಮರ್ಯಾದಾ]

**ಮರಿಯಾನೆ** 'ಮಱಿಯಾನೆ₁' ನೋ.

**ಮರಿಯಿಕ್ಕು** (ಕ್ರಿ). ೧. (ಪ್ರಾಣಿ ಪಕ್ಷಿಗಳು) ಮರಿಯನ್ನು ಹಾಕು,— ಈಯು : ಹಲವು ಹಾಡಿನ ಹಕ್ಕಿ ಹಲವು ಭಾವದ ಹಕ್ಕಿ ಬಂದಿಲ್ಲಿ ಬೀಡನು ಬಿಟ್ಟು ಚಿಲಿಪಿಲಿಯೆನುತಿವೆ ಮರಿಯಿಕ್ಕಿ ಮುದವುಕ್ಕಿ (ಇಂಚಾಪ. ೬೬-೪). ೨. (ಅಲಂ) ಮುಂದುವರಿ; ಸಾಗು : ಮುಂದೆ ಮಾತು ಮರಿಯಿಕ್ಕಿದವು (ಕಂದುಬಿ. ೬೩). [ಮರಿ (< ಮಱಿ) + ಇಕ್ಕು₁]

**ಮರಿಹಕ್ಕಿ** 'ಮಱಿವಕ್ಕಿ' ನೋ.

**ಮರೀಚ** (ನಾ). = ಮರಿಚ : ಪಲ್ಲವಿಕೆಯಿಂ ಭವನಹರಿಣಂಗಳ್ಗೆ ಮರೀಚ ಪಲ್ಲವದಳಂಗಳಂ ನೀಡಲುಂ. . . ಪೇಟ್ವ ಮನೋಹರಾಲಾಪಂಗಳಂ ಕೇಳುತ್ತುಂ (ಆದಿಪು. ೧೦೦೬). [ಸಂ.]

**ಮರೀಚಿ** (ನಾ). ೧. ಕಿರಣ ; ರಶ್ಮಿ : ''ಉಸ್ರಃ . . . ಮರೀಚಿಃ . . . ಗೌಃ—ಈ ೩೨ ರಶ್ಮಿಗಳ ಪೆಸರ್'' (ಜಲಾಯು. ೯-೩೯) ; ಪ್ರಚಂಡ ಮಾರ್ತಾಂಡನಲರ್ಚಿಗೆನ್ನ ಹೃದಯಾಂಬುಜಮಂ ನಿಜಪಾಜ್ಮರೀಚಿಯಿಂ (ಶಂಶಖಾ. ೦-೪); ದಿನಕರಮರೀಚಿಯಿಂದಾದಪ್ಸರಸಿಯೊಳುದಿಸಿದ ಗೌರಿಗಂ . . . ಹಂಸಂಗಂ ಮಗಳಾಗಿ ಮಹಾಶ್ವೇತೆಯೆಂಬ ಪೆಸರಿಂ ನೆಗಟ್ತೆವೆತ್ತಳ್ (ಆದಿಪು. ೬೯೪). ೨. ಬೆಳಕು ; ಕಾಂತಿ : ತೋರಮುತ್ತಿನೈಸರದ ಮರೀಚಿಯಿಂ ಸಿರಿಯ ತಾಯ್ವನೆ ರಾಮನ ಪೇರುರಂ ಮನೋಹರ ಮೆನಿಸಿತ್ತು (ಶಂರಾಪು. ೪-೦೫೪). ೩. ಬಿಸಿಲುಗುದುರೆ ; ಮೃಗಜಲ : ಬಯಲ ಮಱಿಯಲಡಗಿರ್ದ ಮರೀಚಿಯಂ[ಪಾಠಾಂ. ಮರೀಚನಂ, ಮರೀಚಕನಂ]ತೆ . . . ಗುಹೇಶ್ವರಾ ನಿಮ್ಮ ನಿಲವು (ಅಪಶಂ. ೦-೪); ಬಾಂಬೊಳೆ ಬತ್ತಿತ್ತು ಮರೀಚಿ ಪೊಣ್ಮದುದರಣ್ಯಂ ಬೆಂದುದಾ ಗ್ರೀಷ್ಮದೊಳ್ (ರಾಶಶೇ. ೩-೩೬). ೪. ಕೃಪಣ; ಜಿಪುಣ. ೫. ಸ್ವಾಯಂಭುವಮನುವಿನಿಂದ ಸೃಷ್ಟಿಯಾದ ದಶಪ್ರಜಾಪತಿಗಳಲ್ಲಿ ಅಥವಾ ಬ್ರಹ್ಮನ ಮಾನಸ ಪುತ್ರರಲ್ಲಿ ಒಬ್ಬ ಮಹರ್ಷಿಯ ಹೆಸರು : ''ಕಪಿಲಂ ಮರೀಚಿ . . . ಸುಮಾಂಡವ್ಯರೆಂದು ತಪಗೆಯ್ವ ಮುಖ್ಯಋಷಿಯರೆನಿಕ್ಕು'' (ಶುಂಗರಾ. ೬೬-೦೦); ಅತ್ರಿ . . . ಮರೀಚಿ . . . ಉಪಮನ್ಯು ಮೊದಲಾದಷ್ಟಾಶೀತಿಸಹಸ್ರಋಷೀಶ್ವರರ್ಗನಂತಾಶ್ರಯಂಗಳುಂ (ಶಪೀಳ. ೨೦೬). [ಸಂ.]

**ಮರೀಚಿಕಾಜಲ** (ನಾ). ಸೂರ್ಯನ ಕಿರಣಗಳಿಂದುಂಟಾಗುವ ನೀರಿನ ಭ್ರಮೆ ; ಬಿಸಿಲುಗುದುರೆ : ''ಬಿಸಿಲ್ಗುದುರೆಯುಮಿರದೆ ಬಯಲ್ದೊಱೆ ಮರೀಚಿಕಾಜಲಮಕ್ಕುಂ'' (ಕಶಕಂ. ೪೨); ಮರೀಚಿಕಾಜಲದ ಪಳಿಯಂತೆ . . . ಆ ಸಂಗ ನಿಃಸಂಗ ಐಕ್ಯಸ್ಥಲ (ಪಶೀಳಪಾ. ೦೦೪-೪೪೬); ಪರಿವೃತ್ತಿರ್ಪ ಮರೀಚಿಕಾಜಲ . . . ತೋಱುವೈಸಿರಿ ಪುಲ್ಲಗ್ರದ ತುಂತುಱಿ (ಜೋಮಂಶ. ೪೦). [ಸಂ.]

**ಮರೀಚಿಕೆ** (ನಾ). = ಮರೀಚಿಕಾಜಲ : ನೀರಡಿಕೆಗೆ ಮರೀಚಿಕೆಯಿಂದ ತಣಿವಹುದೆ (ಶೌಶಿರಾ. ೩೯-೨೦); ಜಳಜಸುಖಂ ಜಳಕಿರಣಾವಳಿಯುಂ ಪಿಳಿದಂತೆ ಪೋಲ್ ಮರೀಚಿಕೆ[ಪಾಠಾಂ. ಕಿ] ಮೆಱೆಗುಂ (ರಾಶಶೇ. ೩-೩೯).

[ಸಂ. ಮರೀಚಿಕಾ]

**ಮರೀಚಿಪುರಾಣ** (ನಾ). ಹದಿನೆಂಟು ಉಪಪುರಾಣಗಳಲ್ಲಿ ಒಂದು : ಸನತ್ಕುಮಾರಪುರಾಣ . . . ಮರೀಚಿ[ಪಾಠಾಂ. ಮರೀಚ, ಮಾರೀಚ, ಮಾರೀಚ್ಯ]ಪುರಾಣ ಭಾರ್ಗವಪುರಾಣಮೆಂಬವೇ ಆಯಾಯ ನಾಮಧೇಯ ಮುಳ್ಳವರಿಂ ನಿರೂಪಿತಂಗಳಾದ ಹದಿನೆಂಟು ಉಪಪುರಾಣಂಗಳು (ಶಪೀಳ. ೯). [ಸಂ.]

**ಮರೀಚಿಮಾಲಿ** (ನಾ). ಕಿರಣಗಳಿಂದ ಆವೃತನಾದವನು ; ಸೂರ್ಯ : ದ್ವಾದಶಗಣಸರಸ್ಸರೋಜವಿದಳನಶೋಭಾಪ್ರಭಾವಪ್ರಸವಪಾರೀಣದಿವ್ಯವಚನ ಮರೀಚಿಮಾಲಿರೋಚಿರ್ನಿಚಯತ್ರಿಜಗಜ್ಚೂಡಾಮಣಿ (ಶಜಂಶಿ. ೯-೬೯ ವ).

[<ಸಂ. ಮರೀಚಿಮಾಲಿನ್]

**ಮರು**$_1$ 'ಮಱು$_1$' ನೋ.

**ಮರು**$_2$ (ನಾ). ಸುವಾಸನೆಯ ಎಲೆಗಳನ್ನುಳ್ಳ ಒಂದು ಬಗೆಯ ಸಸ್ಯ ; ಮರುಗ : "ಮರು ಮರುವಕಂ ಫಣಿರ್ಜಕವಕ್ಕು" (ಶುಂಗರಾ. ೩೯-೨೬).

[< ಸಂ. ಮರುವ./ತಮಿ. ಮರು]

**ಮರು**$_3$ (ನಾ). ೧. ನೀರಿಲ್ಲದ ಪ್ರದೇಶ ; ಮರಳುಗಾಡು : ''ಮರುಃ, ಧನ್ವಾ—ಈ ೨ ನೀರಿಲ್ಲದ ಭೂಮಿ'' (ಜಲಾಯು. ೨೬-೩) ; ಸಂಕಷ್ಟಗಳ ಮರುವ ದಾಂಟಿಸಿ ಪಾರಗಾಣಿಸುವ ಒಂಟೆ ಇವನು (ಗೋಕ್ಲೂಕಾ. ೨-೪೬) ; ಜೀವನದ ದೃಶ್ಯ ಮರುವಿನ ಬಿಸಿಲ್ಗುದುರೆ (ಮುಂಕುಳ. ೯೧೯). ೨. ಶಿಲೆ; ಬಂಡೆ. ೩. ಕೆಂಪುಗೋರಂಟಿ ಗಿಡ. ೪. ಒಂದು ದೇಶ ಮತ್ತು ಅಲ್ಲಿ ವಾಸಿಸುವ ಜನ : ಹಮ್ಮೀರ ಡೊಕ್ಕರ ತುರುಷ್ಕ ಮರುಪ್ರಭೃತಿ ಭೂಪಾಲಕರಿಂ ಭಯಾನಕರಸಮುಂ . . . ನೆಗಟುತ್ತುಮಿರೆ (ಜಗಂ. ೨-೩೯ ವ) ; ವಿದರ್ಭ ಸೌರಾಷ್ಟ್ರ ಕುರು ಮರು ಪಂಚಪಾಂಚಾಳ (ಎಳ. V. ಬೇಲೂರು. ೩-೯೩; 1397 ?). [ಸಂ.]

**ಮರುಂಗುಳಿ** (ನಾ). (?) : ಹುಲಿಗಿಲ ಬೇರ್ . . . ಕಡಸಿಗೆಯ ಬೇರ್ ಮರುಂಗುಳಿಯೊಳಗ್ಗಲಿಸಿರೆಯುರುಜೆಮಕ್ಕು ಬಲವರ್ಧಮಕ್ಕುಮಗ್ನಿದೀಪನ ಮಕ್ಕುಂ (ಕಲ್ಯಾಕಾ. ೪-೨೨). [ ? ]

**ಮರುಕ** 'ಮಱುಕ' ನೋ.

**ಮರುಕಗೊಳ್ಳು** (ಕ್ರಿ). ಕನಿಕರವನ್ನು ತೋರು ; ದಯಮಾಡು : ನಮ್ಮ ಸ್ಥಿತಿಯನ್ನೂ ಅಂತಸ್ತನ್ನೂ ಕಂಡುಕೊಂಡು ಅವರು ನಮ್ಮ ಮೇಲೆ ಮರುಕಗೊಂಡರು (ಕೃಶಾಶ. ೦೦೬).

[ಮರುಕ (< ಮಱುಕ) + ಕೊಳ್ಳು$_1$ (< ಕೊಳ್$_1$)]

**ಮರುಕರ** (ನಾ). ಒಂದು ದೇಶದ ಹೆಸರು : ಮರುಕರವಿಷಯೇ ಗ್ರಾಮಂ ಕೂಡಲೂರನ್ನಾಮಸಂಜ್ಞಿತಮ್ (ಮ್ಯಆ. ೦೯೩೦, ೯೯-೧೦ ; 475). 'ಮಱುಗರೆ' ಪರಾ. [ ? ]

**ಮರುಕಲುಗಿಡ** (ನಾ). ಒಂದು ಬಗೆಯ ಸಸ್ಯ : (ಮ್ಯಶಿಗ. ೫೬-೦೦೦೯).

[ಮರುಕಲು$_2$ + ಗಿಡ (< ಗಿಡು)]

**ಮರುಕಳಿ** 'ಮಱುಕಳಿ' ನೋ.

**ಮರುಕಳಿಕೆ, ಮರುಕೊಳಿಕೆ** (ನಾ). ಮತ್ತೆ ಬರುವಿಕೆ ; ಪುನರಾವರ್ತನೆ : ಮೊದಲ ಚರಣದಲ್ಲಿ ಮೂಲದ ಪ್ರಾಸದಿ ಮರುಕಳಿಕೆ ಹೋಯಿತು (ಪಾಶಗೀ. ೪೯). **ಮರುಕೊಳಿಕೆ :** ಗತಜೀವನ ಅದೆಷ್ಟೇ ಸಹಜವಾಗಿರಲಿ . . . ಪ್ರಸಕ್ತ ಪರಿಸ್ಥಿತಿಯಲ್ಲಿ ಅದರ ಮರುಕೊಳಿಕೆಯೇ ಸಾವಿಗೆಣೆಯಾಗುವಂತಿತ್ತು (ಕುಪರು. ೩೯೩).

[ ಮರುಕಳಿಸು (< ಮಱುಕಳಿಸು) +—ಇಕೆ ]

**ಮರುಕಳಿಸು** 'ಮಱುಕಳಿಸು' ನೋ.

**ಮರುಕು**$_1$ 'ಮಱುಗು' ನೋ.

**ಮರುಕು**$_2$ 'ಮಱುಕ' ನೋ.

**ಮರುಕೊಳೆ** 'ಮಱುಕೊಳೆ' ನೋ.

**ಮರುಕಿದೆ** 'ಮರುಗೆರ್ದೆ' ನೋ.

**ಮರುಕೊಳಿಕೆ** 'ಮರುಕಳಿಕೆ' ನೋ.

**ಮರುಕೊಳಿಸು** 'ಮಱುಕಳಿಸು' ನೋ.

**ಮರುಗ, ಮರುಗು**$_3$ (ನಾ). ಸುವಾಸನೆಯ ಎಲೆಗಳುಳ್ಳ ಒಂದು ಬಗೆಯ ಸಸ್ಯ : "ಸಮೀರಣಃ, ಮರುವಕಃ . . . ಜಂಬೀರಃ — ಈ ೫ ಅಜ್ಜಗೆ. ಕೆಲಕಬರು ಮರುಗವೆಂಬರು'' (ಪಾಶರಾ. ೦೦೯); ಮರುಗ ಮಲ್ಲಿಗೆ ಪಚ್ಚೆ ಮುಡಿವಾಳಕ್ಕೆ ಪರಿಮಳದುದಕಪನೆಱೆದವರಾರಯ್ಯ (ಶುಹಾದೇ. ೩೯ ೦೦-೩); ಮರುಗ ಮಾಲತಿ . . . ಕರವೀರಾದಿ ಗಿಡುಲತೆಯ ಪರಿಪರಿಯ ಹೂದೋಟಗಳ ಹೊಯ್ದೊಱೆಸಿದನು (ಕೆಜರಾ. ೩-೪-೧೩); ಮರುಗವೂ ನಮ್ಮ ದೇಶದ ಗಿಡವಲ್ಲ (ಪಾಶಗಿ. ೩೯). **ಮರುಗು**$_3$ **:** ದವನಂ ಮರುಗಿನ ಮಡಿಯೊಂದೊಂದಱಲಯ್ದು ಈ ಧರ್ಮ್ಮವನಯ್ನುತ್ತಱುವರುಂ ಕಾದು ನಡೆಯಿಸುವರ್ (ಶೌಇಇ. XI-i, ೦೦೯-೨೦; 1069).

[< ಪ್ರಾ. ಮರುಅಗ, ಮರುಅಅ./ ಸಂ. ಮರುವಕ]

**ಮರುಗಳಿಗೆ** 'ಮಱುಗಟಿಗೆ' ನೋ.

**ಮರುಗಿಸು** 'ಮಱುಗಿಸು' ನೋ.

**ಮರುಗು₁** 'ಮಱುಗು' ನೋ.

**ಮರುಗು₂** 'ಮಱುಕ' ನೋ.

**ಮರುಗು₃** 'ಮರುಗ' ನೋ.

**ಮರುಗೆರ್ದೆ, ಮರುಕೆದೆ** (ನಾ). ಕನಿಕರವುಳ್ಳ ಮನಸ್ಸು; ದಯಾರ್ದ್ರ ಹೃದಯ : ಸಂತೈಸಿದನ್ ಮರುಗೆರ್ದೆಯ ರಾಘವೇಂದ್ರಂ (ಶ್ರೀರಾಪ. ೪೦೫-೩೮). **ಮರುಕೆದೆ:** ಆ ಮರುಕೆದೆಯ ಬಿಸಿಲ್ಬಸುಳೆ ತನ್ನ ಕೋಮಲಕರದ ಕಿಸಲಯೋಪಮಮೃದುಲರೋಚಿಯ ಬೆರಲ್ಗಳಿಂ ಸೋಂಕಿ ಸಂತಯ್ಸಿದುದೊ ಸೀತೆಯ ತಪಃಕ್ಲಾಂತಚರಣಾರವಿಂದಗಳಂ (ಶ್ರೀರಾಪ. ೯೮೩-೭).
[ಮರುಗು₂ (<ಮಱುಕ) + ಎರ್ದೆ]

**ಮರುಚಣ** (ನಾ). ಮುಂದಿನ ಕ್ಷಣ ; ತಕ್ಷಣ : ಬಂದು ಈ ಚಣದೊಳು ಸಂದು ಮರುಚಣದೊಳು ಪ್ರತಿಭೆಯು ನೀ ಕಾಡಬಹುದೆ (ತಂತಾಪ. ೨೦೦-೩೬); ಹೇಸಿ ಜನ್ಮಕೆ ರೋಸಿ ಆತ್ಮಹತ್ಯೆಗೆ ಒಲಿವೆ ಮರುಚಣವೆ ಕೇಳುವೆನು ಜೀವನದ ಗಾನ (ಬಿಣಾ ೩.೩-೬). [ಮರು₁ (<ಮಱು₁) + ಚಣ₁]

**ಮರುಚಲು** 'ಮಱುಚಲು' ನೋ.

**ಮರುಚುನಾವಣೆ** (ನಾ). ಸಾರ್ವತ್ರಿಕ ಚುನಾವಣೆಯ ನಂತರ ಕೆಲವು ಸಲ ಬೇರೆಬೇರೆ ಕಾರಣಗಳಿಗಾಗಿ ಮತ್ತೆ ನಡೆಯುವ ಚುನಾವಣೆ : ಒಬ್ಬ ಸದಸ್ಯ ತೀರಿಕೊಂಡುದರಿಂದ ಮರುಚುನಾವಣೆ ನಡೆಯಬೇಕಾಗಿದೆ (ಆಪ). [ಮರು₁ (<ಮಱು₁) + ಚುನಾವಣೆ]

**ಮರುಚ್ಚಾಪ** (ನಾ). ಗಾಳಿಯಂತೆ ಘನಸ್ವರೂಪವಿಲ್ಲದ ಬಿಲ್ಲು; ಇಂದ್ರಚಾಪ : ಮದನವೇಗೆ ತತ್ಕೃತಿಗೆ ಮರುಚ್ಚಾಪದೊಳಮಾಧಿವ ಮಿಥ್ಯಾರೂಪದೊಳಂ ಮಾಡದಿರ್ ಗುಣಾರೋಪಣಮುಂ ಎನೆ (ಕಂಠಾಪ. ೬-೫೮); ಮರುಚ್ಚಾಪಮೆಂಬ ವಿಚಿತ್ರಾಂಬರದೊಂದು ಚೆನ್ನಮಿಳಿಯುಂ ಮಿಂಚೆಂಬ ಕೊಂಬುಂ ಕರಾಳಮೆನಲ್ ಗರ್ಜಿಸಿದತ್ತಗಲ್ದಿನಿಯರಂ ಕಾರೆಂಬ ಮಾರದ್ವಿಪಂ (ಜಗಪ. ೯-೨೨). [ಸಂ.]

**ಮರುಚ್ಛಿಲ್ಪಿ** (ನಾ). ದೇವತೆಗಳ ಶಿಲ್ಪಿ : ಕಲ್ಪಜಪತಿ ಬೆಸಸೆ ಮರುಚ್ಛಿಲ್ಪಿಗಳುದ್ಯಾನಗೇಹಮಂ ಸಮೆದರತಿಸ್ವಲ್ಪಸಮಯದೊಳೆ (ಶಾವೃಕ. ೧೩-೩೬).
[ಸಂ. ಮರುಚ್ಛಿಲ್ಪಿನ್]

**ಮರುಜ** (ನಾ). ೧. ಒಂದು ಬಗೆಯ ಪರಿಮಳದ್ರವ್ಯ : ನಖಿ ಎಂಬ ಗಂಧದ್ರವ್ಯ. ೨. ಒಂದು ಬಗೆಯ ಮರ : (?). [ಸಂ.]

**ಮರುಜನ್ಮ** (ನಾ). ಇನ್ನೊಂದು ಹುಟ್ಟು ; ಪುನರ್ಜನ್ಮ : ಹೊಸಬನಾದನು ಕರಣತಪನೆಗಳಳಿಯೆ, ಕಾರಣವದೇನಿರಲಿ ಮರುಜನ್ಮವಾತ್ಮಂಗೆ (ಪುಂಕಾಳ. ೬೬೬). [ಮರು₁ (<ಮಱು₁) + ಜನ್ಮ]

**ಮರುಜೀವಣ** 'ಮಱುಜೀವಣ' ನೋ.

**ಮರುಜೀವಣೆ** 'ಮಱುಜೀವಣೆ' ನೋ.

**ಮರುಜ್ಜವ** (ನಾ). ಗಾಳಿಯ ರಭಸ; ವಾಯುವೇಗ : ಮರುಜ್ಜವದಿನಬ್ಧಾಸುರಂ ಮಸಗಿ ರಾಸಭಂ ಬಂದುಮಾ ವಾಸವಸೈನ್ಯಮಂ . . . ಪಡಲ್ವಡಿಸುತ್ತುಮಿರೆ (ಜಗಪ. ೯-೩೯ ಪ). [ಸಂ.]

**ಮರುಟಪಾಲು** (ನಾ). ಪತ್ರ ಮುಟ್ಟಿದ ತಕ್ಷಣವೇ ಬರೆಯುವ ಕಾಗದ ; ಮಾರೋಲೆ : ಮರುಟಪಾಲಿಗೆ ಬರೆದು ತಿಳಿಸಿ (ಪುಷ್ಪಪ. ೯೦).
[ಮರು₁ (<ಮಱು₁) + ಟಪಾಲು]

**ಮರುತ** (ನಾ). ೧. ಗಾಳಿ ; ವಾಯು ; ಮರುತನುರುಬನು ತಾಳು ತೀಳುತೋಲಾಡುತ್ತ ವಿರಮಿಸಾ ಲೀಲೆಯಲಿ (ಪುಂಕಾಳ. ೯೦೯). ೨. ಗಾಳಿಯ ಅಧಿದೇವತೆ ; ವಾಯುದೇವ : "ಸುರರಾಜನಗ್ನಿ . . . ಮರುತಂ ಕುಬೇರನೀಶಂ ದಿಶಾಧಿಪರು" (ಪುಂಗಪಾ. ೦೭-೦೬). ೩. ಒಂದು ಬಗೆಯ ವಾಹನ ; ೫ ಭರತನ ವಾಹನಕ್ಕೆ ಇದ್ದ ಹೆಸರು ಇರಬಹುದು : ಮರುತವನೇಜ ಬಪ್ಪವನಿಗೆ ತಳುವೆಂಟೆ (ಶಕಾ. ೯೯-೩೦). ೪. [ಛಂದ] ಒಂದು ಗಣದ ಹೆಸರು ; ಸಗಣ (∪∪–) : "ಗುರು ಕಡೆಯೊಳಿರಲು ಮರುತನಕ್ಕು" (ಪುಂಗಪಾ. ೦೦೭-೨೦).
[ಸಂ.]

**ಮರುತಕ** (ನಾ). = ಮರುತ ೧ : ನಭದೊಳ್ ಪೂಮಳೆ ಭೂಮಿಯೊಳ್ ಮರುತಕಂ . . . ಒಪ್ಪುತ್ತಿರೆ ಬಂದಂ ಲೋಕನಾಥಂ ಸ್ವಯಂಪ್ರಭ ತೀರ್ಥೇಶ್ವರಂ (ಶಾಂತಿಪು. ೦-೯೦). [ಸಂ.]

**ಮರುತಜ** (ನಾ). ಗಾಳಿಯ ಅಧಿದೇವತೆಯಾದ ವಾಯುವಿನ ಪುತ್ರ ; ಹನುಮಂತ : ಬಾಗುರೇ ಪೂತು ಮರುತಜ (ತೊರೆರಾ. ೨೬-೩೯).
[ಸಂ.]

**ಮರುತದಂಡಾವರ್ತ** (ನಾ). ವರ್ತುಲಾಕಾರವಾಗಿ ಸುತ್ತಿಬರುವ ಗಾಳಿ ; ಸುಂಟರಗಾಳಿ : ಅಪ್ಪುದೇನಿರದ ಬಯಲಿನೊಳೊಂದು ಮರುತದಂಡಾವರ್ತ ತೋರುವಂತೆ (ಪುಬೋಧ. ೨-೦೨). [ಸಂ.]

**ಮರುತಪಂಚಕ** (ನಾ). ಪ್ರಾಣ, ಅಪಾನ, ವ್ಯಾನ, ಉದಾನ ಮತ್ತು ಸಮಾನ ಎಂಬ ಪಂಚವಾಯುಗಳು ; ಪಂಚಪ್ರಾಣಗಳು : ಧರಣಿ ಮೊದಲೆನೆ ಭೂತಪಂಚಕ ಮರುತಪಂಚಕ ವಿಷಯಮಿಂದ್ರಿಯ ಕರಣ ವಿಪ್ಪತ್ತೈದು ತತ್ವಾತ್ಮಕನ ಚಿಂತಿಸಿದ (ಉಬ್ರಾ. ೫-೦). [ಸಂ.]

**ಮರುತಾಸ್ತ್ರ** (ನಾ). ವಾಯುಮಂತ್ರವನ್ನು ಅಭಿಮಂತ್ರಿಸಿ ಬಿಡುವ ಬಾಣ : ಖಳ ಮರಳಿ ಮರುತಾಸ್ತ್ರವನು ಬಿಟ್ಟನು (ತೊರೆರಾ. ೩೬-೫೭).
[ಸಂ.]

**ಮರುತ್ಕುಜ** (ನಾ). ದೇವತರು ; ಕಲ್ಪವೃಕ್ಷ : ವಿಜಗೀಷುವೆನಿಸಿದಾ ಭೂಭುಜವಲ್ಲಭೆ ಮೇರುಮೇಖಲಾಲಕ್ಷ್ಮಿ ಮರುತ್ಕುಜಮಂ ಪಡೆದುದೊ ಪೇಟ್ನೆ ವಿಜಯಾಂಬಿಕೆ ಪಡೆದಳಜಿತಭಟ್ಟಾರಕರಂ (ಕಂಠಾಪ. ೦೦-೩೯).
[ಸಂ.]

**ಮರುತ್ತನಯ** (ನಾ). ೧. ಗಾಳಿಯ ಅಧಿದೇವತೆಯಾದ ವಾಯುವಿನ ಮಗ. ೨. ಹನುಮಂತ. ೩. ಭೀಮಸೇನ : ತತ್ತನಯಂ ಘನಶೌರ್ಯಮರುತ್ತನಯಂ ವಿತರಣಾಂಶು ಮಾತ್ತನಯಂ . . . ಬೊಪ್ಪದೇವಭೂಪಂ ನೆಗಟ್ದಂ (ಎಕ. XI. ದಾವ. ೩೫-೫೭ ; 1160). [ಸಂ.]

**ಮರುತ್ತರಂಗಿಣಿ** (ನಾ). ದೇವಲೋಕದ ನದಿ ; ದೇವಗಂಗೆ : ಮೃಡಂ ಪಾರ್ವತೀಸ್ಪೃಹೆಯಂ ಬಿಟ್ಟು ಮರುತ್ತರಂಗಿಣಿಯನಪ್ಪಾಲಿಂಗನಂ ಮಾಡುವಂ (ಕಂಠಾಪ. ೭-೯೮) ; ಮಂದೇಭೋತ್ಕರಮಾಂಟ ಮರುತ್ತರಂಗಿಣೀಜಳಮಂ ಪೂತ್ಕರಿಸೆ (ರಾಜಶೇ. ೬-೦೦೯). [ಸಂ. ಮರುತ್ತರಂಗಿಣೀ]

**ಮರುತ್ತ್ರಿಕ** (ನಾ). [ಜೈನ] ಘನೋದಧಿ, ಘನವಾತ ಮತ್ತು ತನುವಾತ ಎಂಬ ಮೂರು ವಾತಗಳು : ಅಧನಾದ್ಯನಿಧನಗುಣಯುತಮುವೆಳ್ಳತ್ರಿಮಮದು ಮರುತ್ತ್ರಿಕಾವೇಷ್ಟಿತಂ (ಆದಿಪು. ೦-೯೯). [ಸಂ.]

**ಮರುತ್ಪಥ** (ನಾ). ವಾಯುಮಾರ್ಗ ; ಆಕಾಶ : ಮರುತ್ಪಥದೊಳ್ ಮಿಳ್ಳಿಸೆ ಪಟಯುಗೆ ರಥಂ ರಥಗಳೊಳದಿರ್ಚಿ ತಾಗಿದುವಾಗಳ್ (ಕಂಠಾಪ. ೦೩-೬೯) ; ಶರಧಿಯಲ್ಲಿ ವೃಕ್ಷತತಿಯಲ್ಲಿ ಮರುತ್ಪಥದಲ್ಲಿ ಪಂಕಜಾಕರದೆಡೆಯಲ್ಲಿ ತಳ್ತ ತಿಳಿಜೊನ್ನಮುಂ (ರಾಜಶೇ. ೦೩-೯೩). [ಸಂ.]

**ಮರುತ್ಪಾಲಕ** (ನಾ). ದೇವತೆಗಳನ್ನು ಕಾಪಾಡುವವನು; ದೇವೇಂದ್ರ : ತ್ರೈಲೋಕ್ಯಪಾಲಕಂ ಗೋಪಾಲಕನಾಗಿರ್ದ ಲೀಲೆಯಂ ಕಂಡು ಮರುತ್ಪಾಲಕ ನೆನಗಕ್ಷಿಸಹಸ್ರಾಲಂಬನಮಿಂದು ಸಫಲಮೆಂದೀಕ್ಷಿಸಿದಂ (ಜಗಪ. ೯-೦೦೦). [ಸಂ.]

**ಮರುತ್ಸಖ** (ನಾ). ೧. ವಾಯುವಿನ ಗೆಳೆಯ ; ಅಗ್ನಿ. ೨. ದೇವೇಂದ್ರ : "ಬಿಡೌಜಃ . . . ಪುಲೋಮಾರಿಃ, ಮರುತ್ಸಖಃ– ಈ ೧೬ ಇಂದ್ರನ ಹೆಸರು" (ಕಶಂಪ. ೫೬-೩೦). [ಸಂ.]

**ಮರುದಂಪಟ್ಟೆ** (ನಾ). ಒಂದು ಬಗೆಯ ಔಷಧೀ ಸಸ್ಯ : ಕುಟ್ಟಲ, ಮರುದಂಪಟ್ಟೆ (ಬ್ರಶಿಗ. ೫೭-೦೦೦೩). 'ಮರುದು' ಪರಾ. [?]

**ಮರುದಶನ** (ನಾ). ಗಾಳಿಯನ್ನು ಆಹಾರವಾಗಿ ಉಳ್ಳುದು ; ಹಾವು : ಶರಣಗಣಹರಣ ಮರುದಶನಭರಣ (ಶ್ರೀತಿಅ. ೨೦-೯೨). [ಸಂ.]

**ಮರುದಿಂಡಲು** (ನಾ). ಶೋಭನದ ಮರುದಿವಸ ಮಾಡುವ ಸಮಾರಂಭ : ನಾಳಿನ ಮರುದಿಂಡಲು ಮುಗಿಸಿಕೊಂಡು ಹೋಗುವಿರಂತೆ (ಚೂತ). [ಮರು₁ (< ಮಱು₁) + ದಿಂಡಲು₂]

**ಮರುದಿನ** 'ಮಱುದಿನ' ನೋ.

**ಮರುದಿಬ್ಬಣ** (ನಾ). ಮದುವೆಯಿಂದ ಹಿಂತಿರುಗುವ ಬಂಧುಮಿತ್ರರ ಗುಂಪು ; ವಿವಾಹಾನಂತರ ಹಿಂತಿರುಗುವ ದಿಬ್ಬಣ : ದುಗ್ಗಮ್ಮನಿಲ್ಲದ ಪ್ರಯಾಣ ಮದುವಳಿಗೆಯಿಲ್ಲದ ಮರುದಿಬ್ಬಣದಂತೆ (ಗಂಗಾಳ. ೩). [ಮರು₁ (< ಮಱು₁) + ದಿಬ್ಬಣ (< ಬಿರ್ದಿನ)]

**ಮರುದಿವಸ** 'ಮಱುದಿವಸ' ನೋ.

**ಮರುದಿಷ್ಟ** (ನಾ). ೧. ವಾಯುವಿಗೆ ಆಪ್ತನಾದವನು ; ಅಗ್ನಿ. ೨. [ಛಂದ] ಒಂದು ಗಣದ ಹೆಸರು ; ಸಗಣ (UU–) : ಆಱು ಮಾತ್ರೆಗಳಕ್ಕುಮೋಜೆಯೊಳ್ ಕರಿ ಸಂಖ್ಯಾತದ ಮಾತ್ರೆ ಯುಗ್ಮದೊಳ್ ಮರುದಿಷ್ಟಲಗಂ ತದಂತದೊಳ್ ಬರೆ ವೈತಾಳಿ (ಛಂದೋಂಬು. ೩-೨೦೯). [ಸಂ.]

**ಮರುದು** (ನಾ). ಒಂದು ಬಗೆಯ ಮರ ; ಅರ್ಜುನವೃಕ್ಷ : ಇವರ ದಕ್ಷಿಣಕ್ಕಿರುವ ಮರುದು (ಅರ್ಜುನ) ಮರ (ಚಾಕಿ. ೬). 'ಮರುದಂಪಟ್ಟಿ' ಪರಾ. [ದೇ.೫ ತಮಿ. ಮರುತು]

**ಮರುದೂರ್** (ನಾ). ಒಂದು ಊರಿನ ಹೆಸರು : ಸಮಣರು ಮರುದೂರ ಮಾರನ್ದಿಯಂ ವೆದಿಜ್ಞ(?)ದರ್ (ಎಚ. XIV. ೨೩೨-೫೭ ; ೨ ಏಱು ೫೫). [? + ಊರ್]

**ಮರುದ್ಗಣ** (ನಾ). ಪ್ರಾಣ, ಅಪಾನ, ವ್ಯಾನ, ಉದಾನ ಮೊದಲಾದ ನಲವತ್ತೊಂಬತ್ತು ವಾಯುಗಳ ಸಮೂಹ : ಪ್ರಾಣಾಪಾನವ್ಯಾನೋದಾನ ಮುಖ್ಯೈಕೋನಪಂಚಾಶನ್ಮರುದ್ಗಣ . . . ಘನಪಾಪ್ಮನಿಮಿಷರನು ಸದಾನುರಾಗದಿ ಧೇನಿಪುದು (ಹಪಾರಿ. ೫-೭೦). [ಸಂ.]

**ಮರುದ್ಗಿರಿ** (ನಾ). ದೇವತೆಗಳ ಬೆಟ್ಟ ; ಮೇರು : ಮರುದ್ಗಿರಿಯುಳ್ಳಿ ಘನಘಟಾಳಿ ಸುರಿದುದು ಪಯಮಂ ಮೃದಂಗನಿನದಸ್ತನಿತಂ (ಶಂಪ್ರಶು. ೦೨-೦೫೪). [ಸಂ.]

**ಮರುದ್ದಿಶೆ** (ನಾ). ವಾಯುದೇವತೆಯ ದಿಕ್ಕು ; ವಾಯುವ್ಯ : ಎಸೆವಂ ಮರುದ್ದಿಶೆಯ ಬಾಗಿಲೊಳೊಲ್ದು ಕಪಾಲಿಪ್ಪೆರವಂ (ಕಬಿಕಂ. ೦-೬೨). [ಸಂ. ಮರುದ್ದಿಶಾ]

**ಮರುದ್ವರ** (ನಾ). ದೇವೇಂದ್ರ : ಅನತಿಶಯಪುಣ್ಯಪುಣ್ಯಾರ್ಜಿತತತ್ವರನಾ ಮರುದ್ವರಂ . . . ಇಂತೈತಂದಂ (ಶಂಪ್ರಶು. ೯-೩೭). [ಸಂ.]

**ಮರುದ್ವಾದ್ಯ** (ನಾ). ಊದುವ ವಾದ್ಯ ; ಸುಷಿರವಾದ್ಯ : ನಾಡೀ, ತುರುವ, ಬಕುರ ಮುಂತಾದ ಮರುದ್ವಾದ್ಯಗಳೂ ಹೆಸರಿಸಲ್ಪಟ್ಟಿವೆ (ಸಂಗೀತ. ೦೦೩). [ಸಂ.]

**ಮರುಧರೆ** (ನಾ). ಮರುಭೂಮಿ ; ಮರಳುಗಾಡು : ಮಳೆ ಹೊಯ್ದು ತೆರನಾಯ್ತು ಮಂಥರೆಯ ಮರುಧರೆಗೆ (ಶ್ರೀರಾಮಪ. ೨೩-೬೦೭). [ಸಂ. ಮರುಧರಾ]

**ಮರುನುಡಿ₁** (ಕ್ರಿ). ಪ್ರತ್ಯುತ್ತರ ಕೊಡು ; ಜವಾಬು ನೀಡು : ತಿರಸ್ಕಾರ ವನ್ನೆಲ್ಲ ಸ್ವೀಕರಿಸಿಕೊಂಡು ಮರುನುಡಿಯದೆ . . . ಆಲೋಚಿಸುತ್ತಿದ್ದನು (ಕಳಿ. ೦) ; ಆಕೆ ಮರುನುಡಿಯದೆ ಒಪ್ಪಿದಳು (ಹಳ್ಳಿಚಾ. ೨೫). [ಮರು₁ (< ಮಱು₁) + ನುಡಿ₁]

**ಮರುನುಡಿ₂** (ನಾ). ಪ್ರತ್ಯುತ್ತರ ; ಜವಾಬು : ಒಂದುದಿನ ಅವನು ಮರುನುಡಿಯಿತ್ತ (ಹುಸಕೂ. ೦೦). [ಮರು₁ (< ಮಱು₁) + ನುಡಿ₂]

**ಮರುನುಡಿಸು** (ಕ್ರಿ). ತರ್ಜುಮೆಮಾಡು ; ಅನುವಾದಮಾಡು : ಮುಸ್ಲಿಂತತ್ವಗಳನ್ನು ಪಾಶ್ಚಾತ್ಯಭಾಷೆಗಳಿಗೆ ಮರುನುಡಿಸಿ ಹರಡಿದರು (ಇಸ್ಲಾಂಸಂ. ೨೬೩). [ಮರು₁ (< ಮಱು₁) + ನುಡಿಸು(< ನುಡಿಯಿಸು)]

**ಮರುನ್ನದಿ** (ನಾ). ದೇವನದಿ ; ಗಂಗೆ : ಕಣ್ಗೊಂಬಾವ ಚಾಂದ್ರಪ್ರಭಂ ರೂಪಂ ದಿವ್ಯವಟೋಮರುನ್ನದಿಯುಮೊಸ್ಮೊಳ್ ಮಾಟ್ಕೆ ನೈರ್ಮಲ್ಯಮಂ (ಶಂಪ್ರಶು. ೦-೦). [ಸಂ. ಮರುನ್ನದೀ]

**ಮರುನ್ನಿಷೇವಣ** (ನಾ). ಗಾಳಿಯನ್ನು ಮಾತ್ರ ಸೇವಿಸುವುದು : ಶಿವ ಶಿವ ಸತ್ತ್ವಮೆಂತಟೋ ತಪಸ್ವಿಗಿವಂಗೆ ಮರುನ್ನಿಷೇವಣಂ ಸವನಿಸೆ ದಂಡಿಸಿರ್ದೊಡಲೊಳೆದ್ವೃಶಂ (ಕಾಕಂ. ೯-೮೩). [ಸಂ.]

**ಮರುನ್ಮಾರ್ಗ** (ನಾ). = ಮರುತ್ಪಥ : ಪುಂಡರೀಕಂ ಕಪಿಂಜಲಕಂ ಕೈಗಂಡಲಿಪ್ಪವಿತ್ರನೆ ಬರುತ್ತಿರ್ದಂ ಮರುನ್ಮಾರ್ಗದಿಂ (ಕಾದಂಬ. ೬೮೨). [ಸಂ.]

**ಮರುಪತ್ರ** (ನಾ). ಪ್ರತಿಯಾಗಿ ಬರೆದ ಕಾಗದ ; ಮಾರೋಲೆ : ಐತಾಳರು ಮರುಪತ್ರ ಬರೆದ ಮೂರನೆಯ ದಿನವೇ ಸೋಮಯಾಜಿಯವರು ಕೋಟೇಶ್ವರಕ್ಕೆ ಬಂದರು (ಬೇಚಹೊ. ೬೯). [ಮರು₁ (< ಮಱು₁) + ಪತ್ರ]

**ಮರುಪಾಠ** (ನಾ). (ಕರಾ) ಒಂದು ಬಗೆಯ ಗೇಣಿ : ಕಡಗೆ ಮುನ್ನೋಟು ಎಂಬಲ್ಲಿ ಮರುಪಾಠಕ್ಕೊಂದು ಜಾಗ ಕೊಡುವದದೆಯೆಂದು ತಿಳಿದುಬಂತು (ಜಗುಬ. ೭೭). [?]

**ಮರುಪು** (ನಾ). ಖಡ್ಗಯುದ್ಧದ ಒಂದು ವರಸೆ (?) : ರಥದಿಂ ಧುಮುಕಿ ನಿಮಿಷಾರ್ಧದಲಿ ಕೊಂಡನು ಹರಿಗೆ ಖಂಡಯವ ಗಮನದಿಂ ಮರುಪಾಡು ನಿಂದು ಭ್ರಮಿಸಿ ತಿರುಹಿನ ಮಲುಹಿನಂದದ ಸಮತೆಯಿಂ ಪುಟನೆಗೆದು ತಿಳಿದನು ಪವನನಂದನನ (ಕಪಂಪ. ೬-೯-೨೨). [?]

**ಮರುಪ್ರಯಾಣ** (ನಾ). ಪ್ರಯಾಣದಲ್ಲಿ ಮಧ್ಯೆ ಸ್ವಲ್ಪಕಾಲ ತಂಗಿ ಮತ್ತೆ ಮುಂದುವರಿಸುವ ಪಯಣ ; ಮಧ್ಯೆ ನಿಂತು ಮತ್ತೆ ಬೆಳೆಸುವ ಪ್ರಯಾಣ : ಈ ಸಹೋದರರು . . . ತಮ್ಮ ಮರುಪ್ರಯಾಣವನ್ನು ಆರಂಭಿಸಿದರು (ಕೃಚಾ. II. ೩) ; ತಂಗಿದೆಡೆಯಲ್ಲೆಲ್ಲ . . . ದಾನಧರ್ಮ ಮಾಡಿ ಮರುಪ್ರಯಾಣ ಮಾಡುತ್ತಿದ್ದಳು (ದಾಸಚಿ. ೦೬೫). [ಮರು₁ (< ಮಱು₁) + ಪ್ರಯಾಣ]

**ಮರುಪಾಳು** 'ಮಱುಪಾಳ್' ನೋ.

**ಮರುಬೆಳೆ** (ನಾ). ಮತ್ತೆ ಬೆಳೆಯುವಿಕೆ ; ಎರಡನೆಯ ಬೆಳೆ : ಪರವು ತತ್ತ್ವಜ್ಞಾನಿಯೊಡರಿಸುವ ಕರುಮಗಳು ಮರುಬೆಳೆಗೆ ಬಿತ್ತಲ್ಲ (ಮಂಕುತಿ. ೬೯೬). [ಮರು₁ (< ಮಱು₁) + ಬೆಳೆ₂]

**ಮರುಭೂಮಿ** (ನಾ). ನೀರಿಲ್ಲದ ಪ್ರದೇಶ ; ಮರಳುಗಾಡು ; ಹುದಿದ ಮರುಭೂಮಿಯಲಿ ಮಾನ್ಯನು ಖದಿರನು (ಕುಮಾವ್ಯಾ. ೦೦-೪೯) ; ರಸವಿಲ್ಲದಿಹ ಬಾಳಿಗರಮನೆಯು ಮರುಭೂಮಿ (ಶ್ರೀರಾಮಪ. ೦೪೯-೬೩). [ಸಂ.]

**ಮರುಮಾತು** 'ಮಱುಮಾತು' ನೋ.

**ಮರುಮೈ** 'ಮಱುಮೆಯ್' ನೋ.

**ಮರುವ₁** 'ಮುರುವ' ನೋ.

**ಮರುವ₂** (ನಾ). = ಮರುಗ : ಮದನರಾಗವರ್ಧನಕರಮಾ ಮರುವಂ ಕರ್ಣಾಕಮುಮಿದೆ ಮರುಳಲ್ಲವೆ ಕುಸುಮನಿಚಯದೊಳ್ ಪಾಮ್ಮಗಳ್ (ಅಭಿಪು. ೦೦-೦೨೪). [ಸಂ.]

**ಮರುವಂದನೆ** (ನಾ). ವಂದನೆಗೆ ಪ್ರತಿಯಾಗಿ ಮಾಡುವ ವಂದನೆ ; ಪ್ರತಿನಮಸ್ಕಾರ : ರಾಜಾಗಂಗಾಧರರಾಯನು . . . ಪ್ರಜೆಗಳ ವಂದನೆಗಳನ್ನು ಸ್ವೀಕರಿಸುತ್ತಾ, ಅವರಿಗೆ ಮರುವಂದನೆಗಳನ್ನು ಅರ್ಪಿಸುತ್ತಾ . . . ತೆರಳುತ್ತಿದ್ದನು (ಕೃಷ್ಣಕು. ೩೭). [ಮರು₁ (< ಮಱು₁) + ವಂದನೆ]

**ಮರುವಕ** (ನಾ). = ಮರುಗ : ಮಾಲ್ಯಾಂಗಮೆಂಬುದು ಜಾತಿಕೇತಕಿಮರುವಕಪ್ರಭೃತಿ ಸರ್ವತರ್ಕಥಾಮವಿಶೇಷಂಗಳನೀವುದು (ಜಾವುಂಕೃ. ೯). [ಸಂ.]

**ಮರುವಗಲ್** 'ಮಱುವಗಲ್' ನೋ.

**ಮರುವರ್ಷ** (ನಾ). ಮಾರನೆಯ ವರ್ಷ ; ತರುವಾಯದ ವರ್ಷ : ಮರುವರ್ಷ ಸಂಸಾರಿಯಾದೆನು ನಾನೆನೆ ಅಂಕುರಿಸಿತು ಹೊಸ ಕುತ್ತ (ಇಂಜಾಕ. ೪೩-೩೩). [ ಮರು$_1$ ( < ಮಱು$_1$ ) + ವರ್ಷ ]

**ಮರುವಸತಿ** (ನಾ). ಪುನಶ್ಚೈತನ್ಯವನ್ನು ಪಡೆಯಲು ಒದಗಿಸುವ ವಸತಿ ; ಪುನರ್ವಸತಿ : "ಪುನರ್ನಿವೇಶನ ; ಮರುವಸತಿ" (Rehabilitation. ಶಕ್ರಿ.ಶಿ. ೬೯). [ ಮರು$_1$ ( < ಮಱು$_1$ ) + ವಸತಿ ]

**ಮರುವಸಲ** 'ಮಱುವಸಲ' ನೋ.

**ಮರುವಳಿ** (ನಾ). ಮದುವೆಯ ನಂತರ ಗಂಡಿನ ಕಡೆಯವರು ತಮ್ಮ ಮನೆಯಲ್ಲಿ ಬೀಗರಿಗೆ ಮಾಡುವ ಔತಣ ; ಗಂಡಿನ ಕಡೆಯವರು ಹೆಣ್ಣಿನ ಕಡೆಯವರಿಗೆ ಮತ್ತು ಕುಲಸ್ಥರಿಗೆ ಕೊಡುವ ಭೋಜನ : (ಎಸವ್ಯ. XII, ೯). [?]

**ಮರುವಾಚಲುಮರ** (ನಾ). ಒಂದು ಬಗೆಯ ಮರ : ಚೆಲ್ಲ, ಚೆಳ್ಳ, ಮರುವಾಚಲುಮರ, ಹೊಳೆದಾಸವಾಳ (ಪ್ಯಶಿಗ. ೯೯-೯೬೩). [ ಮರುವಾಚಲು ? + ಮರ$_1$ ]

**ಮರುವಾಳು** 'ಮಱುವಾೞ್' ನೋ.

**ಮರುವುಟ್ಟು** 'ಮಱುವುಟ್ಟು' ನೋ.

**ಮರುಸರಸ್ಸು** (ನಾ). ಬಿಸಿಲುಗುದುರೆ ; ಮರೀಚಿಕೆ : ಕಾಮರೂಪಿಯ ಕಾಣಲೆಳಸಿದ ಕಪಿಧ್ವಜರ ದೃಷ್ಟಿಯು ತೃಷೆಗೆ ನಭದ ನೀಲವೆ ಮರುಸರಸ್ಸಾಯ್ತು ! (ಶ್ರೀಣಾಪೂ. ೩೩೨-೧೦೨). [ ಸಂ. ಮರುಸರಸ್ ]

**ಮರುಸವಾಲು** (ನಾ). ೧. ಸವಾಲಿಗೆ ಪ್ರತಿಯಾಗಿ ಹಾಕುವ ಸವಾಲು ; ನಾನು ನಕ್ಕು ಮರುಸವಾಲಿಟ್ಟೆ (ತಂದುಬಿ. ೮೩) ; ತಾಯಿಯು ಮರುಸವಾಲು ಹಾಕಿದರು (ಮಸೋಸಂ. ೨೦೯). ೨. ಪಾಟೀಸವಾಲು ; ಅಡ್ಡವಿಚಾರಣೆ : ಪಾಟೀಸವಾಲು, ಮರುಸವಾಲು, ಅಡ್ಡ ವಿಚಾರಣೆ (Cross-eXamination. ಶಕ್ರಿ.ಶಿ. ೨೮). [ ಮರು$_1$ ( < ಮಱು$_1$ ) + ಸವಾಲು ]

**ಮರುಸ್ಥಳ** (ನಾ). = ಮರುಭೂಮಿ : ಮರುಸ್ಥಳದ ಮಾಳದೊಳ್ . . . ಬೇವರ್ಗೆ ಜೋಂಪವಿಮ್ಮಾವು ನಿರ್ಝರಾಂಬು ದೊರೆಕೊಳ್ವವೊಲ್ (ಆದಿಪು. ೧೪-೯೬); ಮರವಟ್ಟಿದೆ ಮೈ, ಮನವು ಮರುಸ್ಥಳ, ಮರುಗುತ್ತಿರುವೆ ಜಾರ್ಯೆ (ಕ್ರೌಂಚಗ್ರ. ೪೬-೧೬). [ಸಂ. ಮರುಸ್ಥಲ]

**ಮರುಹುಟ್ಟು** 'ಮಱುವುಟ್ಟು' ನೋ.

**ಮರುಳ್$_1$** (ಕ್ರಿ). ೧ ಭ್ರಾಂತಿಗೊಳ್ಳು ; ಭ್ರಮೆಗೊಳ್ಳು : ಇಂದುಕಳಾಮರೀಚಿರುಚಿರೋಜ್ವಲಬಾಲಮೃಣಾಳಮಂ ಮರುಳ್ದೊಂದನೆ ಕರ್ಚಿ ತದ್ವಿವರದಿಂದೆರಡುಂ ಬರೆ ಪೀರ್ವವೋಲ್ (ಕಾದಂಪೂ. ೮೦೦). ೨. ಮೋಹಕ್ಕೊಳಗಾಗು ; ಮರುಳಾಗು : ಎರೆದಿಂತಪ್ಪುಲೆವೇಟ್ಟ ಕನ್ನೆ ಬಟ್ಟೆಯುಂ ಬಂದಳ್ ಮರುಳ್ದು (ಶಂಕಶಾ. ೩-೨೯); ಅನ್ಯನಾರಿಗೆ ಮರುಳ್ದುಡಮಾಹವದೊಳ್ ಮರಲ್ದುಡಂ (ಎಕ. VII. ಶಿಕಾ. ೦೪೬-೩೦; 1070); ಕಿನ್ನರದರ್ಪಶರಥಕ್ಷಿತಿನಾಥನ ಬೀರದೇಟ್ಗೆಯುಂ ಪಾಡೆ ಮರುಳ್ದು. ಕೇಳ್ವ ಪದದೊಳ್ . . . ಈಡಾಡುವನಾ ನವೀರುಕುಸುಮಸ್ತಬಕಂಗಳ ಕರ್ಣಪೂರಮಂ (ಶಂಕಪೂ. ೩-೦೬). [ದೇ.॥ ತಮಿ. ಮರುಳ್; ಮಲ. ಮರಿಳು; ತುಳು. ಮರ್ಲ್]

**ಮರುಳ್$_2$**, ಮರುಳು (ನಾ). ೧. ಭ್ರಮೆ ; ಭ್ರಾಂತಿ: 'ಮರುಳ್ಗೊಳ್' ಪರಾ. ೨. ಬುದ್ಧಿಭ್ರಮೆ ; ಹುಚ್ಚು : ಪಗೆಗಳನ್ ಪಗೆವುದು ಮರುಳೆನಲ್, ನಾನ್ ಮರುಳನೆನ್ (ಐದ್ಯಕ್ರ. ೩೨-೧೦೨೬). 'ಮರುಳ್ತನ' ಪರಾ. ೩. ಪ್ರೀತಿ ; ಮೋಹ : 'ಮರುಳ್ಗೊಳ್' ಪರಾ. ೪. ದಡ್ಡತನ ; ಅಜ್ಞಾನ; ಮೌಢ್ಯ: ಪುರುಳರದುರನ್ ಮಱೆದುಂ ಸೊಲ್ಲರ್ ಮರುಳರವಮಾಸಜಿತ ಕಾಣ್ಕೆಯವರ್ (ಕುಜಿಲ್. ೦-೨೦-೯). ೫. ಬುದ್ಧಿಭ್ರಮಣೆಯಾದ ವ್ಯಕ್ತಿ : ಕೊಳದೊಳಗುಬ್ಬಿದಿರ್ದು ಮರುಳೆ ಬದುಕಲ್ ಬಗೆವಾ (ಗದಾಯು. ೬-೧೦); ಮರುಳಂತೆ ಮರುಳೆ ತಲೆಯುಂ ಜರಪಿರದೆ ಮನೋಜಾರಾಗದಿಂ ಮುಡಿ ಮುಡಿಯುಂ (ರಪುರಾಣ. ೩-೧೨೬). ೬. ದಡ್ಡ ; ತಿಳಿಗೇಡಿ: ಮೂರ್ಖ: ಗಗನತಳಕುಸುಮಮನೆ ಬಯಸಿ ಮರುಳ್ಗೊಂಡು ಮಱುಗುವ ಮರುಳಂತೆ . . . ಸ್ವಯಂಪ್ರಭೆಯುಂ ನೆನೆನೆನೆದು (ಆದಿಪು. ೩-೧೦ ವ); ಸೋರ್ಕೆ ಮೂರ್ಖತನದಿಂ ಕಾಣಂ ಹೊರಸೇಱಿದಂತೆ ನುಡಿವೈ ಮರುಳಂ ಪೆಜರೊಳರೆ ಲೋಕದೊಳ್ ನಿನ್ನಿಂದಂ (ರಪುರಾಣ. ೯-೦೪೩); ಕೇರಿಲ್ಲದೆ ಕಣ್ದೆಱೆವಿನೆಗಂ ಬರವೆನೆಂಬ ಮರುಳಂ ಪೋಲ್ತೈ (ಕಬ್ಬಿಕಾ. ೦೮೦). ೭. ಬುದ್ಧಿಯನ್ನು ಮಂಕಾಗಿಸುವ ಮದ್ದು : 'ಮರುಳಿಕ್ಕು', 'ಮರುಳೂಡ್' ಪರಾ. ೮. ಭೂತ ; ದೆವ್ವ ; ಪಿಶಾಚಿ : "ಪಿಱಿತಿನಿಯೆನಲ್ ಮರುಳ್" (ಕಬ್ಬಿಕೈ. ೯೦) ; ಮರ್ರುಳ್ಗೆ ಧೂಪಮಂ ತೋಱಿದ ಮಾಟ್ಕೆಯಿಂ (ಶಂಕಶಾ. ೬-೧೦); ಬೇವ ಪೆಣಕೆ ಕೋಪದಿಂ ಪೋರ್ವ ಮರುಳ್ಗಳಂ . . . ಈಕ್ಷಿಸಿದಂ ಪ್ರತಿರೂಪಶೂದ್ರಕಂ (ಕಾವ್ಯಸಾ. ೩೩೯); ಮರುಳ್ಗಳ ತಂಡದಲಿ ತಱಿದೊಟ್ಟಿದನು ಮಿಕ್ಕಾದ ನಾಯಕರ (ಕೊರಣಾ. ೬-೧೭-೨೨). ೯. ವಿರುದ್ಧವಾದುದು; ಪ್ರತಿಯಾದುದು : 'ಮರುಳಾಟ' ಪರಾ. **ಮರುಳು** : ೨. ಲೋಕವೆಂಬ ಮಾಯೆಗೆ ಶರಣಚಾರಿತ್ರ ಮರುಳಾಗಿ ತೋಱುವುದು (ಮಪಾದೇ. ಶಿ. ೩೯-೦೯೬); ದಿನದಿನಕೆ ಬಾಲಕನ ಮರುಳದು ಘನಕೆ ಘನವಾಯಿತ್ತು (ಶಿಶಾಗ. ೫-೬-೧೦); ಕಂಡುದನೆ ನಾ ಕಂಡು ಕೇಳದ ಕೇಳಿ ಮರುಳಿಗೆ ಕುಣಿದೆ (ಅರಳು. ೦೯-೦). ೩. ಕರುಳು ಒಂದಾದರೇನು ಮರುಳು ಒಂದೋ ? (ಗಾದೆ). ೫. ಮರುಳು ಕಂಡ ಕನಸಿನ ಪರಿಯಂತೆ ಶಿವಾಚಾರ (ಬಸವ. ೯೩೯). ೬. ಲಿಂಗಾಂಗಸಮರಸದ ನಿರ್ಗುಣಪೂಜೆಯ ನೆಸಗಲಱಿಯದ ಭಿನ್ನಜ್ಞಾನ ಭಿನ್ನಪೂಜೆಯನೆಸಗುವ ಮರುಳುಗಳಿಗೆ ಆರು ಮೆಚ್ಚುವರು (ಷುಡಿವಚ. ೪೮-೩೯); ದೊರೆಕೊಂಡ ನಿಧಿಯನೊದೆದು ಕಳೆವ ಮರುಳಿನಂತೆ ಗರ್ವದಿನವಜ್ಞೆಗೆಯ್ದು (ಪರ್ವಪು. ೧೦-೩೯ ವ). ೮. "ಮರುಳೆನಲ್ ಭ್ರಮೆ ಪಿಶಾಚಿಗಳಕ್ಕುಂ" (ಕಕರ. ೮೬); ಹರನ ಕೊರಳಲ್ಲಿಪ್ಪ ಕರೋಟಿ ಮಾಲೆಯ ಶಿರದ ಲಿಖಿತವ ಕಂಡು ಮರುಳುತಂಡಗಳು ಓದಿ ನೋಡಲು (ಬಸವ. ೩೪೯); ಕುಣಿವುತಿರ್ದುವು ಮರುಳುಗಳು ಮದಿರಾವಿಕಾರದಲಿ (ಕೊರಣಾ. ೬-೩೬-೪೬); ಸಂತಸದಿ ರಣಭೂಮಿಯೊಳು ಕುಣಿದಾಡುತಿರ್ದುವಾ ಮರುಳ ಪಡೆ (ಸಾಳ್ವಭಾ. ೨೫-೨೩). (ಗು). ೧೦. ದಡ್ಡತನದಿಂದ ಕೂಡಿದ; ತಿಳಿಗೇಡಿಯಾಗಿರುವ : ಅಂಡಜ ಉದ್ಭಿಜ ತಾರಾಮಂಡಲದೊಳಗೊಂದು ನಾದವ ಕಂಡೆನು ಅಖಂಡಿತನಿರ್ಣಯವಱಿಯದ ಲೋಕದ ಮರುಳು ಮಾನವರೆತ್ತ ಬಲ್ಲರು (ಶಿವಗೀ. ೭೮-೩೬೬).

**ಮರುಳ ಕಯ್, ಮರುಳ ಕೈ** = ೧. = ಮರುಳ್ಗೆಯ್$_2$ ೧ : ಬಿತ್ತರಿಸಲೇಂ ಮರುಳ ಕಯ್ಯುವಣಿಯಿಡುಗಲ್ಲ ಮೊತ್ತವಾ ಪುರದೊಳಿಲ್ಲ (ಶಬ್ದಮ. ೩-೨೧) ; ತೊಲೆ ತಳಿವರ ಸೂಲ ಹರಿಗೆ ಬದ್ದರಬಂಡಿ ಬಲೆ ಹಗ್ಗ ಮರುಳ ಕೈ . . . ಸಲೆ ಮೆಱೆದವು ದುರ್ಗದೊಳಗೆ (ಕುಮಾರಾಂ. ೯೨-೪೬). ೨. = ಮರುಳ್ಗೆಯ್$_2$ ೨ : ಕಯ್ಯಂದೊಡೆ ಮಂದಾರದ ಕಯ್ಯುಂ ಮಂತ್ರೀಂದ್ರಲಕ್ಷ್ಮಣಾಂಕನ ಕಯ್ಯುಂ ಕಯ್ಯಲ್ಲದುಳಿದ ಮನುಜರ ಕಯ್ಯೆಂಬುಬು ಮರುಳ ಕೈಗಳೆೀತಱ ಕೈಗಳ್ (ಶಾಇಇ. IV. ೨೬೬-೯೬; 1360). **ಮರುಳಾಗಿಸು** = ಮೋಹಗೊಳಿಸು ; ಆಕರ್ಷಿಸು : ಲಾಸ್ಯರಸದಿಂ ಮರುಳಾಗಿಸುವಳ್ (ರಕಕು. ೮-೩೩); ಈ ತಲ್ಲೀನತೆಗೆ ಕಲಾಕೃತಿ ನಮ್ಮನ್ನು ಮರುಳಾಗಿಸುವುದೇ ಕಾರಣ (ಶಾಂದಸ. ೬೩). **ಮರುಳಾಗು** = ೧. ಭ್ರಮೆಗೊಳ್ಳು ; ಭ್ರಾಂತಿಗೊಳ್ಳು : ಮರಳಿದನ್ ಪಾಳೆಯಕೆ ಮರುಳಾಗುತಾನರಂ ಸಂದೇಹಮಂ ತಮಿಸಿ, ತನ್ನದೆಯ ಸಂತೈಸುತೆ (ಶಶ್ರಾಂಗ. ೬೯-೨೦೩೯). ೨. ಮೋಹಗೊಳ್ಳು; ಆಕರ್ಷಣೆಯನ್ನು ಹೊಂದು : ನವಯೌವನೆ

ಮರುಳಾದೆಂಬಾತಂಗೆ (ಕಾದಂಬ. ೯೬೨ ರಗಳೆ) ; ಪರಸತಿಗೆ ಮರುಳಾದೆ ನೀನು (ಶಾಂತಿ. ೧೯-೧೯). ೩. ಬುದ್ಧಿಗೇಡಿಯಾಗು ; ತಿಳಿಗೇಡಿಯಾಗು : ಮರುಳಾಗದೆನ್ನ ನುಡಿಗುತ್ತರಮಂ ಮುನ್ನಿತ್ತು ಕುಡಿಯೆ ಕಜ್ಜಂ ನಿ ನ ಗು ತ್ತ ರಿ ಸು ಗು ಮ ಂ ತ ಲ್ಲ[ದಿವಂದಿ]ರಂತೆ ನೀನುಂತೆ ಮೂರ್ಖ ನಾಗದಿರರಸಾ (ಶಂಶಬ. ೬-೯೭) ; ಮಾಯೆಯ ಮದ್ದಿನಲ್ಲಿ ಮರುಳಾಗಿ ಮದನನ ಹೊದ್ದಿದನು . . . ಮುನಿಪ (ತೊರರಾ. ೧-೩-೩೭) ; ಅತಿ ಘೋರತಪವೆಮ್ಮದದನು ನೀನಱಿಯದೆ ಮತಿಗೆಟ್ಟು ಮರುಳಾಗದಿರು (ಹರಿಶ. ೨-೯೦). ೪. ಹುಚ್ಚಾಗು : ಓದಿ ಓದಿ ಮರುಳಾದ ಕೂಚು ಭಟ್ಟ (ಗಾದೆ). ಮರುಳುಜಡೆ = ಹಸುಗೂಸುಗಳ ತಲೆಯಲ್ಲಿ, ಮಾಯಾಶಕ್ತಿಯುಳ್ಳ ಅತಿಮಾನುಷವ್ಯಕ್ತಿಯು ಬಂದು ಹೆಣೆ ಯುತ್ತದೆಂದು ನಂಬಲಾದ ಜಡೆ ; ಸಣ್ಣಸಣ್ಣದಾಗಿ ಹೆಣೆದು ಕೊಂಡಿರುವ ಕೂದಲಿನ ಗಂಟು : ಇಷ್ಟಾಗಿ ಶಾಸ್ತ್ರಕ್ಕೆ ಹತ್ತು ಕೂದಲು ; ಒಂದು ಮರುಳುಜಡೆ, ಅದೂ ಬ್ರಹ್ಮಗಂಟು ! (ದೀಕವು. ೯೦-೨೯). ಮರುಳ್ಗಳೆಱೆಯ = ಭೂತಗಳ ಒಡೆಯ : ಈಶ್ವರ ನಾದೊಡಮೇಂ ಮರುಳ್ಗಳೆಱೆಯನೆ (ತಳಬಿ. ೦-೩೮). ಮರುಳ್ಮಾಡು, ಮರುಳುಮಾಡು = ೧. ಮೋಹಗೊಳಿಸು ; ಮರುಳುಗೊಳಿಸು : ಕಾಮದೇವನಯ್ದಲರಂಬಿನ ಶಕ್ತಿಗಳುಮನೊಂದುಮಾಡಿ ಲೋಕಮೆಲ್ಲಮಂ ಮರುಳ್ಮಾಡಲೆಂದು ಪೆಣ್ಮಾಡಿದನಕ್ಕುಂ (ಶಂಶಬಾ. ೮-೬೩ ವ) ; ರುದ್ರಗಣ ಪ್ರಮಥಗಣರೆಂಬರ ಮಾಯೆ ಮರುಳ್ಮಾಡಿ ಕಾಡುವಂದು . . . ನಾನು ಮಾಯಾಕೋಳಾಹಳನಾಗಿರ್ದೆ ಕಣಾ (ಅವಶಂ. ೨೬೨-೦೨೩೦) ; ಸರ್ವಬುದ್ಧಿ ಗಳೊಳಾತನ ಮರುಳ್ಮಾಡುತ್ತಿರಿ ಹೋಗಿ (ಹಕಣ. ೭-೨) ; ವಿಟವಿದೂ ಷಕರ ಕಣ್ಪೇಟಿಐ ಮರುಳುಮಾಡುವರು (ಪೋಹಕ. ೧೮-೯೮). ೨. ಮಂಕಾಗಿಸು ; ಮಂಕುಗೊಳಿಸು : ಆ ಅಪರಿಚಿತನು ಬಂದು ನನ್ನನ್ನು ಮರುಳ್ಮಾಡಿ ನನ್ನ ಆಸ್ತಿಯನ್ನೆಲ್ಲಾ ಸೆಳಕೊಂಡನು (ಪುಪಸ. ೨೮).

[ < ಮರುಳ್$_1$. / ತಮಿ. ಮಲ. ಮರುಳ್ ; ತುಳು. ಮರುಳು ; ತೆಲು. ಮರುಲು, ಮರ್ಲು ]

**ಮರುಳ, ಮಳ್ಳ** (ನಾ). ೧. ತಿಳಿಗೇಡಿ ; ದಡ್ಡ ; ಅಜ್ಞಾನಿ : ಸರೋಜಾತಾದಿ ನಿಸ್ಸಾರವಸ್ತುಗಳೊಳ್ ಪೋಲಿಸುವಂತುಟೇಂ ಮರುಳನೇ ರೂಪಂ ವಿಚಿತ್ರಾಂಗಿಯಾ (ಅಬಪು. ೭-೬೩) ; ಮಾಯದ ಬಲೆಯಲ್ಲಿ ಸಿಲುಕಿದ ಮರುಳ ನಾನೆಂದಱಿದ ಪರಿಯ ನೋಡಾ (ಅವತಂ. ೯-೦೦) ; ಸುಯೋಧನಾದಿ ಮರುಳರ ಮಾತು ಗ್ರಾಹ್ಯವಲ್ಲ (ರಾಜಸೂ. ೬೩). ೨. ಹುಚ್ಚುಹಿಡಿದವನು ; ಬುದ್ಧಿಭ್ರಮಣೆಯಾದವನು : ಮರುಳನಂತ ತನ್ನೊಳ್ತಾನೆ ನುಡಿಯುತ್ತುಂ (ರವರ್ಣಮ್ಮ. ೦-೦೬೦) ; ಪಗೆಗಳನ್ ಪಗೆವುಥು ಮರುಳೆನಲ್, ನಾನ್ ಮರುಳನೆನ್ (ಬದ್ಧಕ್ರ. ೯-೦೦೨) ; ವನ್ಯೂಷನು ದ್ರಾಕ್ಷಾರಸವನ್ನು ಒಲೆನಿನ್‌ಗೆ ತಂದು ಕೊಟ್ಟು ಮರುಳನಂತೆ ನಗುತ್ತಾ ಹೊರಗೆ ಹೋದನು (ಪುರಿಷಾ. ೬೮). ೩. ಒಬ್ಬಾತನ ಹೆಸರು : ಸಂಪ್ರಾಪ್ತೋ ಮರುಳ ಇತಿ ಪ್ರಸಿದ್ಧನಾಮಾ (ಪ್ಯೆಆಂ. ೦೯೨೦. ೦೦-೯೩ ; 967) ; ಪೆಸರ್ವೆತ್ತಾ ಮರುಳಂ ತನ್ನ ೃಪತಿಲಕನ ಪಿರಿಯ ಮಗಂ (ಎಕ. VII, ಶಿವಪೂ. ೩೯-೦೯ ; 1122). **ಮಳ್ಳ** : ೧. ಕೇಳೋ ಕಳ್ಳಾ, ಮುದ್ದಿನ ಮಳ್ಳಾ (ಕಶಪು. ೨-೦೨) ; ನಾ ಏನು ಅಷ್ಟ ಮಳ್ಳ ಇದ್ದೀನ್ಯಂತ ತಿಳದಿರೇನು ? ; (ದೀಕಹ. II, ೦೨೦). (ಗು). ೪. ತಿಳಿಗೇಡಿ ಯಾದ ; ಏನೂ ಅರಿಯದ : ದಾದಲ್ಯಾ ತೀರ ಮಳ್ಳ ಗಿರಾಕಿ ಎಂದು ಭಾವಿಸಿ . . . ಅಂತರವನ್ನು ಕಂಡಿರಬಹುದಾಗಿತ್ತು (ದೀಕಹ. II, ೧೯). [ಮರುಳ್$_2$ + — ಅ$_7$]

**ಮರುಳಡೆ** (ಕ್ರಿ). ಭ್ರಾಂತಿಯನ್ನು ಹೊಂದು : ಮರುಳಡೆದು ನಡೆವಿರಬ್ ನೀಂಗಳ್ (ಬದ್ಧಕ್ರ. ೫೭-೦೨೯೭). [ಮರುಳ್$_2$ + ಅಡೆ$_3$]

ಮರುಳಮತ್ತ 'ಮರುಳುಮ್ಮತ' ನೋ.

**ಮರುಳಯ್ಯ** (ನಾ). ೧. ದಡ್ಡ ; ತಿಳಿಗೇಡಿ : ಉಯ್ಯ ಕೈವಿಡಿದು ತಂಡುಲವ ಬಿಸುಟ ಮರುಳಯ್ಯರ ಮಾರ್ಗವೇನಲ್ತೆ (ಛಪತ. ೩-೮೦). ೨. ಭೂತಗಳ ಒಡೆಯ ; ಶಿವ : ಮರುಳಯ್ಯ (ಮರುಳುಗಳ ಅಯ್ಯನಾದ ಶಿವನು) (ಪಾಡೋಜ. ೯೯). ೩. ಒಬ್ಬಾತನ ಹೆಸರು : ಆತನ ಮರ್ಮಂದಿರ್ ಮರುಳಯ್ಯಂ ಬೂತುಗ ಪೆರ್ಮಾಡಿ (ಎಕ. VII, ಶಿವಪೂ. ೯-೯೭ ; 1122). [ಮರುಳ್$_2$ + ಅಯ್ಯ$_1$]

**ಮರುಳಾಟ** (ನಾ). ೧. ಭ್ರಮೆಯಿಂದ ಮಾಡುವ ಕೆಲಸ ; ಹುಚ್ಚಾಟ : ಮಾಸಿದ ಹೇಮಕುಂಭದಂತೆ ಸಾಧಕನ ಮರುಳಾಟದಂತೆ (ರವರ್ಣಮ್ಮ. ೮-೯೯); ಮಂಕುಹೆಣ್ಣಿನ ಮರುಳಾಟವು ನಿಂತಾಗ ಗಂಡಿಗೆ ದೊರೆವುದು ಸಿದ್ಧಿ (ಇಂಜಾಶ. ೨೦೭-೨೩). ೨. ಅವಿವೇಕದ ವರ್ತನೆ ; ಬುದ್ಧಿಗೇಡಿತನ : ನೀಸವರುಮನವರ ದೈವಮುಮಂ ಕೋಡಾಡುವ ಮರುಳಾಟಕ್ಕನಗೆ ಪಿರಿದುಂ ವಿಸ್ಮಯಮಾದಪುದು (ರವರ್ಣಮ್ಮ. ೦-೮೦೯); ನಿನ್ನಯ ಮೈದುನರ ಮರುಳಾಟಕೆನ್ನನು ಕಾಯ್ದುಕೊಳ್ಳೈ ಕೃಷ್ಣ (ಕುಮ್ಯಾಸ. ೦೯-೦೦೯) ; ಮರುಳಾಟವೇಕೋ ಮನುಜ ಕೂಗಾಟವೇಕೋ (ಪುರಂದ. ೦-೩೦ ಪಲ್ಲವಿ). ೩. ಪಿಶಾಚಿಗಳ ಆಟ,–ಲೀಲೆ : ಕೊಳ್ಗುಳವೊಳ್ ಮರುಳಾಟವಾಡುವಾಂ ಮರುಳೆನೊ ವಿಕ್ರಮಾರ್ಜುನನೊಳೊಲ್ಲದೆ ಸಂಧಿಯನುರ್ಕಿ ಕೆಟ್ಟ ನೀಂ ಮರುಳಯೊ ಪೇಟ (ಶಂಶಬಾ. ೧೩-೩೩); ವಿವಿಧನೃತ್ಯವ ನೋಡುವಕ್ಷಿಗೆ ಸಮಸಿಸಿತೆ ಮರುಳಾಟ (ಜಲವಂಶ. ೩-೩). ೪. ವಿರುದ್ಧವಾಗಿ ನುಡಿ ಯುವಿಕೆ ; ವ್ಯತ್ಯಾಸವಾಗಿ ಹೇಳುವಿಕೆ : "ವಿಪ್ರಲಂಭಃ , ವಿಷವಾದಃ– ಈ ೨ ಮರುಳಾಟದ ಹೆಸರು'' (ನಾತರಾ. ೯೮). [ಮರುಳ್$_2$ + ಆಟ]

**ಮರುಳಾಟಿಕೆ** (ನಾ). ಹುಚ್ಚಾಟ ; ಮರುಳುತನ : ಲಕ್ಷ್ಮಿಗೆ ಇವೆಲ್ಲವೂ ಒಮ್ಮೊಮ್ಮೆ ಮರುಳಾಟಿಕೆ ಎಂದೆನಿಸುತ್ತದೆ (ಪುಗಿಡು. ೦೦).

[ಮರುಳ್$_2$ + ಆಟಿಕೆ]

**ಮರುಳಾಡು** (ಕ್ರಿ). ೧. ಮೂರ್ಖತನಕ್ಕಾಗಿ ಹಾಸ್ಯಮಾಡು, –ಗೇಲಿ ಮಾಡು : ಬಿಯಗರ ಮನೆಯೊಳಿದಂ ಕಂಡೊಡೆ ಮರುಳಾಡುವರದಱಿಂ ಕಿಱಿದಾಗಿಯುಣ್ಬುದು (ರವರ್ಣಶ. ೯-೨೩ವ) ; ಹೊಜಗೆ ಕೃಷ್ಣನ ಕರೆದಿವೆಲ್ಲವ ನಱುಹಿದಡೆ ಮರುಳಾಡಿದನು (ಕುಮ್ಯಾಶ. ೦೯-೩೩). ೨. ಹೀಯಾಳಿಸು ; ನಿಂದಿಸು ; ಜರೆ : ಸಖಿಯನು ಮರುಳಾಡುತಿರ್ದಳು ಮೋಹಿನೀದೇವಿ (ಶ್ರಬುಂ. ೩-೬೦). [ಮರುಳು (<ಮರುಳ್$_2$) + ಆಡು$_1$]

**ಮರುಳಾಣ್ಮ** (ನಾ). ಭೂತಗಳ ಒಡೆಯ ; ಶಿವ : ''ಮರುಳಾಣ್ಮಂ ಶೂಲಿಯಲ್ಲುಂಟು'' (ಕರ್ಣಾಟ. ೯೦). [ಮರುಳ್$_2$ + ಆಣ್ಮ (<ಆಳ್ಮ)]

**ಮರುಳಿ, ಮಳ್ಳಿ$_1$** (ನಾ). ೧. ಅವಿವೇಕಿಯಾದವಳು ; ಬುದ್ಧಿಗೇಡಿ : ಮುನೀಶ್ವರನ ಮಂತ್ರಮೇದೊರೆಯೆಂದಾ[ಂ] ಮರುಳಿಯೆನೆಯಱಿದು ಮಱಿಯದೆ ಬರಿಸಿದೆಂ (ಶಂಶಬಾ. ೧-೯೩). ೨. ಮರುಳಾದವಳು: ಮೋಹ ಗೊಂಡವಳು : ನಾನು ಈಗ ಶ್ರೀಗುರುಕಾರುಣ್ಯವನ್ನು ಪಡೆಯುವುದಕ್ಕೆ ಕಾತರಳಾಗಿರುವ ಮರುಳಿ (ತುಂಗಭ. ೯೩); ಧೈರ್ಯವ ಕಳದಾನ, ನನ್ನೊಂದ ತೀರ ಮರುಳಿಯ ಮಾಡ್ಯಾನ (ಪುಣ್ಯಕೋಶಾ. ೯೭-೩). ೩. (ವಶೀಕರಣಕ್ಕೆ ಬಳಕೆಯಾಗುವ) ಒಂದು ಬಗೆಯ ಸಸ್ಯ : ''ಪಿಶಾಚಿಕಾ–ಕಾಸರಿಕೆ, ನಸುಗುನ್ನಿ, ಮರುಳಿ'' (ಓಷಧಿ. ೯೮) ; ಮರು [ಶಾಕಾಂ. ರು]ಳಿಯ್ಯೆದೆಲೆನಾಗ . . . ಇವಱ ತಿರುಳೆಣ್ಣೆಯುಮಮೂತ್ರಮುರಗದಂಷ್ಟ್ರಂ ಕೂಡಿದುದತ್ತೈಲ ಮಿನಿತು ಸೋಂಕಲ್ಕೆ ಪಶ್ಯಂ (ಜಪವ. ೦೩-೯೮). ೪. ಒಂದು ಬಗೆಯ ಪಕ್ಷಿ. ೧, ೪ : ಬಡಗಿಯಂತೆ ಮರಕುಟಿಕಂ ಬುದ್ಧಿಗೆಟ್ಟಳಂತೆ ಮರು [ಶಾಕಾಂ. ರ]ಳಿ . . . ಎಂದಿಂತುಮನೇಕಪಕ್ಷಿಜಾತಿಗಳಿಂ (ಬಂಹರಿ. ೨-೩೮ವ). **ಮಳ್ಳಿ$_1$** : ೫. ಜಾಣತನವಿದ್ದೂ ಇಲ್ಲದಂತೆ ನಟಿಸುವವಳು ; ಅಮಾಯಕತನ ತೋರ್ಪಡಿಸುವವಳು : ನಿಮ್ಮ ಮುಂದೆಲ್ಲ ಆಕೆಯು

ಅರಿಯದ ಮಳ್ಳಿಯಂತೆ ಸುಮ್ಮನೆ ಕೂಡ್ರುತ್ತಾಳೆ (ಕೋಟಿಜೀ. ೨೯) ; ಮತ್ತೆ ಅವನ ಮನೆಗೆ ಯಾಕೆ ಹೋಗುತ್ತೀಯೆ ಮಳ್ಳಿ! (ರಂಗಭೋ. ೬೪).

[ಮರುಳ + —ಇ]

**ಮರುಳಿಕ್ಕು** (ಕ್ರಿ). ಬುದ್ಧಿಯನ್ನು ಮಂಕುಗೊಳಿಸುವ ಮದ್ದನ್ನು ಆಹಾರದಲ್ಲಿ ಸೇರಿಸು.– ಬೆರಸು : ನೀವೆತ್ತಾನುಂ ಮರುಳ್ಗೊಂಡಿರೋ ಮರುಳಿಕ್ಕಿ ಅಟ್ಟುದನುಂಡಿರೋ ಪೇಟಿಂ (ಶಬ್ದಮ. ೧೯೭-೧೯).

[ ಮರುಳ್$_2$ + ಇಕ್ಕು ]

**ಮರುಳಿಸು** (ಕ್ರಿ). ಮೋಹಗೊಳಿಸು; ಮರುಳುಗೊಳಿಸು : ಧೃತಯೌವನಂ ಮರುಳಿಸಲ್ತಾನಾರ್ತುಮತ್ಯಂತಸೌಂದರಕಾಂತಾಜನಮುಂ ಮರುಳ್ವುದಣಮಿಲ್ಲ (ಅಜಿತ. ೬-೩) ; ಮುತ್ತಂ ಮುಕ್ಕುಳಿಸಿದ ಪವಳದಂತೆ ಮರುಳಿಸುವಂಗಂ (ಅಶೇಷ. ೪-೭೬). [ ಮರುಳ್$_2$ + —ಇಸು$_3$ ]

**ಮರುಳು** 'ಮರುಳ್$_2$' ನೋ.

**ಮರುಳುಗುಟ್ಟು** (ಕ್ರಿ). = ಮರುಳಾಡು ೧ : ಮರುಳೆ ಕಾದದ ಕಟ್ಟಿದಮ್ಮನು ಬಣದೆ ಬಯಸಿದೆಯಿದನು ಕೇಳ್ದೊಡೆ ಮರುಳುಗಟ್ಟುದೆ ಮಾಣ್ಬರೇ ನಿಮ್ಮಣ್ಣತಮ್ಮದಿರು (ಕುಮಾ.ಅ. ೦-೪೦).

[ ಮರುಳು (< ಮರುಳ್$_2$) + ಕುಟ್ಟು$_1$ ]

**ಮರುಳುಗೈ** 'ಮರುಳ್ಗೆಯ್$_2$' ನೋ.

**ಮರುಳುಗೊಳ್** 'ಮರುಳ್ಗೊಳ್' ನೋ.

**ಮರುಳುಗೊಳಿಸು** 'ಮರುಳ್ಗೊಳಿಸು' ನೋ.

**ಮರುಳುಣ್** (ಕ್ರಿ). ಬುದ್ಧಿಯನ್ನು ಮಂಕುಗೊಳಿಸುವ ಮದ್ದನ್ನು ಬೆರಸಿದ ಆಹಾರವನ್ನು ಸೇವಿಸು : ಮರುಳುಂಡ ಮನುಷ್ಯನ ಇರವಿನ ಪರಿಯಂತೆ ವಿವರವನರಿಯಬಾರದು ನೋಡಾ ಶಿವಜ್ಞಾನ (ಅಷಮ. ೯೬-೪೯೨). [ ಮರುಳ್$_2$ + ಉಣ್ ]

**ಮರುಳುತನ** 'ಮರುಳ್ತನ' ನೋ.

**ಮರುಳುನುಡಿ** (ನಾ). ತಿಳಿಗೇಡಿತನದ ಮಾತು : ಮರುಳುನುಡಿಗಳು ವಮ್ಮವಿನ್ನ ನೀವ್ ಪರಮನೀತಿಯ ಧರ್ಮಶಾಸ್ತ್ರದ ನಿರುತರು (ಕೊರಟ. ೨-೦-೨೯). [ ಮರುಳು (< ಮರುಳ್$_2$) + ನುಡಿ$_2$ ]

**ಮರುಳುಮಾತು** (ನಾ). ಮರುಳುಗೊಳಿಸುವ ಮಾತು : ಭ್ರಮೆಯನ್ನುಂಟುಮಾಡುವ ಮಾತು : ಬಲುದಿನಕೆ ಬಂದಿಹನು. . . ನಾಲ್ಕು ದಿನ ನಿಲ್ಲಿಸಮ್ಮಾ ಮರುಳುಮಾತುಗಳಾಡಿ ನುಸುಳಿ ಪೋಗುವನಮ್ಮ (ಶಶಿರೇ. ೨೭-೩). [ ಮರುಳು (< ಮರುಳ್$_2$) + ಮಾತು$_1$ ]

**ಮರುಳುಮ್ಮತ, ಮರಳುಉಮ್ಮತ್ತಿ, ಮರಳುಮತ್ತ, ಮರುಳಮತ್ತ** (ನಾ). ಒಂದು ಬಗೆಯ ಸಸ್ಯ ; ಮದ್ದುಗುಣಿಕೆ ಗಿಡ ; ದತ್ತೂರ : ಜಡಮತಿಗೆ ಮರುಳುಮ್ಮತವನಿಕ್ಕಿದೊಡೆ ಸುಕಲೆಯಪ್ಪುದೆ (ಕೃಬಣ. ೨-೩೩). **ಮರಳುಉಮ್ಮತ್ತಿ** : (ಕ್ಷುಶಿಗ. ೬೯-೦೬೦೩). **ಮರಳುಮತ್ತ** : ಮರಳುಮತ್ತ ; ಈ ಸೊಪ್ಪಂ ಚೂರ್ಣವಂ ಮಾಡಿ ಸಕ್ಕರೆಯಂ ಬೆರಸಿ ದಿನ ಒಂದಕ್ಕೆ ಮೂಱು ಬೆರಳಂ ಸೇವಿಸಲು ಹೊಟ್ಟೆಯೊಳಗಿನ ಗಡ್ಡೆ ಗುಣ (ಬಿಪ್ಪಿ. ೬). **ಮರುಳಮತ್ತ** : ಕರಿಉಮ್ಮತ್ತದ ಬೇರು, ಮರುಳಮತ್ತದ ಬೇರು, ಮರುಳಮತ್ತದ ಬೀಜ. . . ಇಷ್ಟನ್ನೂ ಬೇಜಿ ಬೇಜಿ ಚೂರ್ಣವ ಮಾಡಿ . . . ಆಮಲಕಪ್ರಮಾಣ ಜೇನುಕೂಡಿ ಕೊಳ್ಳಲು ಮದ ತಿಳಿವುದು (ಬಿಪ್ಪಿ. ೯೬). [ ಮರುಳು (< ಮರುಳ್$_2$) + ಉಮ್ಮತ (<ಉಮ್ಮತ್ತ). / ತೆಲು. ಮರುಲುಮ್ಮೆತ ]

**ಮರುಳುವೆಣ್ಣು** (ನಾ). ಅವಿವೇಕಿಯಾದ ಹೆಣ್ಣು ; ದಡ್ಡಿ : ಮನೆವಾಳ್ತೆಯಱಿಯದ ಮರುಳುವೆಣ್ಣೀ ಕೃತಿಯನೆ ಮನವೊಲಿದೋದಿದೊಡೆ . . . ಚಾತುರ್ಯವಡೆವಳು (ಹರಿ. ೦-೪೩).

[ ಮರುಳು( < ಮರುಳ್$_2$) + ಪೆಣ್ಣು ( < ಪೆಣ್ ) ]

**ಮರುಳ್ಗವಿ** (ನಾ). ತಿಳುವಳಿಕೆಯಿಲ್ಲದ ಕವಿ ; ಅವಿವೇಕಿಯಾದ ಕವಿ : ಕಾಮಮ್ಮಗವಿತೆಯಂ ಮಾಡಿ ಮಹಾವ್ಯವಸಾಯಂಗೆಯ್ವ ಮರುಳ್ಗವಿಗಳ್ಮಾಣೆಂ ಗುಣಾರ್ಥ್ಯರಂ ಮಸುಳಿಸರೇ (ಗದಾಯು. ೪-೪೦). [ಮರುಳ್$_2$ + ಕವಿ$_1$]

**ಮರುಳ್ಗಡೆ** (ಕ್ರಿ). ಅವಿವೇಕದ ಮಾತನ್ನಾಡು ; ದಡ್ಡತನದ ಮಾತನಾಡು : ಕೇಳೆಲೆ ನಿನ್ನದೇ ಧರ್ಮವೆಂದು ನಿನ್ನದೊಂದು ರೂಪೆಂದು ಮುಂದಱಿಯದೆ ಮರುಳ್ಗಡೆವರೆ (ಬಸವ. ೯-೦೩೦). [ಮರುಳ್$_2$ + ಕಡೆ$_1$]

**ಮರುಳ್ಗೆಯ್$_1$** (ಕ್ರಿ). ಮೋಹವನ್ನುಂಟುಮಾಡು : ಆಕರ್ಷಿಸು : ನಾಗೊಸರ್ವ ಮರುಳ್ಗೆಯ್ವ ಚಿತ್ತಿನಿಯರುಗಳೊಪ್ಪಿದರು (ಮೋಹತ. ೦೯-೪೦). [ಮರುಳ್$_2$ + ಕೆಯ್$_1$]

**ಮರುಳ್ಗೆಯ್$_2$, ಮರುಳುಗೈ, ಮರುಳ್ಗೈ** (ನಾ). ೧. ಹಿಂದೆ ಕೋಟೆ ಕಾಳಗದಲ್ಲಿ ಬಳಸುತ್ತಿದ್ದ ಕೈಆಕಾರದ ಒಂದು ಬಗೆಯ ಆಯುಧ : ಅಂಕಕ್ಕೆ ಬರ್ಪ ರಾಯರ ಗಂಡನೆಂಬೆಬ ಡೆಂಕಣಿ ಮರುಳ್ಗೆಯ್ಗಳೊಡನೆ ಭೋಂಕನೆ ವಿಡಿವ ಲಾಳಿಯ ಬಿಲ್ಲು ಬಿಟ್ಟಲ್ಗಳ ಸಂಕುಲವಿದಣದಲ್ಲಲ್ಲಿ (ಮೋಹತ. ೨೦-೯). **ಮರುಳುಗೈ** : ೧. ಝುಗಝುಗಿಸುವ ಪೇರಟ್ಟೆ ಮರುಳುಗೈಗಳುಗುಳುತಿರ್ದುವು ಕೆಂಗಿಡಿಗಳ (ಶಂಕರ. ೦೦-೦೩೦). **ಮರುಳ್ಗೈ** : ೧. ಡೆಂಕಣಿ ಮರುಳ್ಗೈಯಿಂದಿರ್ದ ಕೋಟೆ ಮಿಗಿಲಾಗಿ ಮನಕೆ ರಂಜಿಸಿತು (ಅಶ್ವಮ. ೩-೭೩). ೨. ಕೃತ್ರಿಮವಾದ ಕೈ : ಬರೆಯುವ ಕೈ ಬಂಧುಗಳಂ ಪೊರೆಯದ ಕೈ . . . ಮರಗ್ಗೈ ಮರುಳ್ಗೈಗಳಂತೆ (ಶಿತಿಶಾ. ೦೯). [ಮರುಳ್$_2$ + ಕೆಯ್$_2$]

**ಮರುಳ್ಗೈ** ' ಮರುಳ್ಗೆಯ್$_2$ ' ನೋ.

**ಮರುಳ್ಗೊಳ್, ಮರುಳುಗೊಳ್** (ಕ್ರಿ). ೧. ಭ್ರಮೆಗೊಳಗಾಗು ; ಭ್ರಾಂತಿಗೊಳ್ಳು : ಎಲ್ಲಿರ್ದಯೆಂದಱುತ್ತಂ ಮರುಳ್ಗೊಂಡು ಪ್ರಳಾಪಂಗೆಯ್ಯುತ್ತಂ (ಪಂಪಭಾ. ೩೯-೦೭) ; ಗಗನತಳಕುಸುಮಮನೆ ಬಯಸಿ ಮರುಳ್ಗೊಂಡು ಮಱುಗುವ ಮರುಳಂತೆ . . . ಸ್ವಯಂಪ್ರಭೆಯಂ ನೆನೆನೆನೆದು (ಆದಿಪು. ೩-೦೦೫) ; ಪಂಚಬಾಣನ ರೂಪ ಜರೆಂದು ಮರುಳ್ಗೊಂಡು ಚಂಚಲಾಕ್ಷಿಯ ತುಡುಕಿದಳ್ (ಮೋಹತ. ೨೭-೩೦). ೨. ಪರವಶಗೊಳ್ಳು : ಪತ್ರಲೇಖೆ ತತ್ಪ್ರಭಾಮಂಡಲಗಳತಿಹಿಮ ಸ್ಪರ್ಶದಿಂ ಲಬ್ಧಸಂಜ್ಞೆಯಾಗಿ ಮರುಳ್ಗೊಂಡಂತೆ ಇಂದ್ರಾಯುಧಮಿರ್ಪೆಡೆಗೆ ಪರಿತಂದು (ಕಾದಂಬ. ೩೦೩). ೩. ಒಲಿ ; ಮೋಹಗೊಳ್ಳು : ನಿನ್ನಯ ಚಿತ್ರಪಟವ ಕೊಂಡುಯ್ದು ತೋಱದ ಮುನ್ನ ಮರುಳ್ಗೊಂಬನವನು (ಮೋಹತ. ೩೦-೨೦). ೪. ಸಂಭ್ರಮಗೊಳ್ಳು ; ಸಡಗರಿಸು : ಜಾತಕರ್ಮೋತ್ಸವದೊಳ್ ಪರಿಜನಮುಂ ಪುರಜನಮುಮೊಸಗೆ ಮರುಳ್ಗೊಂಡು ನಿರ್ಭರಕ್ರೀಡಾರಸಪರವಶರಾದಾಗಳ್ (ಆದಿಪು. ೬-೦೦೨ ವ) ; ನೃತ್ಯಪ್ರವೃತ್ತಚಾರಣಗಣಮುಮೊಸಗೆ ಮರುಳ್ಗೊಂಡು ಘೋರ್ಗರೆದು ನಲಿದು ನರ್ತಿಸುತ್ತವೊಡನೆ ಬರವರೆ (ಕಾದಂಬ. ೪೨೯) : ಒಸಗೆ ಮರುಳ್ಗೊಂಡಾಡುವ ರಸಭಾವಾತ್ಮೆಯರ ನೂಪುರಂಗಳ ದನಿಯುಂ . . . ಒದವಿಸಿತು ಮದನಚಾಪಧ್ವನಿಯಂ (ಕುಸುಮ. ೦೨-೨೨). **ಮರುಳುಗೊಳ್** : ೧. ಮರುಳುಗೊಂಡನು ರಾಮ ನೋಡಾ (ಕೌಶಿಕ. ೪೩-೪೦). ೩. ಲೋಕದೊಳು ವಿಖ್ಯಾತಕೀರ್ತಿಯು ನಾಕಿ ಯೋಗ್ಯನು ಸೂರ್ಯಪುತ್ರಿಗೆ ಮರುಳುಗೊಂಡಿರಲು (ಸಂಕರ. ೦೨-೦೬) ; ಅರರೆ ಮನ್ಮಥನೀ ಸತಿಯಲವ ತರಿಸಿದನೊ ಶಿವ ಎನುತ ಮನದಲಿ ಮರುಳುಗೊಂಡನು . . . ಅಸುರೇಂದ್ರ (ಕೊರಟ. ೩-೯-೨೬) ; ಪತಿಕೆ ಮರುಳುಗೊಂಡರ್ಥಿಸದೆ ತನ್ನನು ಧರಣಿಪಾಲಕುಮಾರಿ ಕಾಣದೆ ನಿಜವನು (ಚಾಗ. ೦೦-೬೬-೦೪). ೫. ಹುಚ್ಚು ಹಿಡಿ ; ಬುದ್ಧಿಭ್ರಮಣೆಯಾಗು : ಕುರುಡರು ಕಾಣ್ಬರು ಮೂಕರು ನುಡಿವರು ಮರುಳುಗೊಂಡವರು ತಿಳಿವರು (ಶಾಂತೀಶ. ೦೦-೬೯); ಮರುಳುಗೊಂಡು ಸತ್ತ ನಾಯು ಬಲದ ಬದಿಯೊಲುದಿನ ಮೇಲೆ ಸಾಧ್ಯವಾಗುವ ಸ್ತ್ರೀ

ಸಾಮಮುಮಂ ಬರೆದು ಬಿಳಿಎಕ್ಕೆಯ ಕಟ್ಟಿಗೆಯ ಕೆಂಡದಿಂ ಕಾಸಲು ವಶಮಪ್ಪಳು (ಕಾಮಶಾ. ೨೬೨). [ಮರುಳ್$_2$ + ಕೊಳ್$_1$]

**ಮರುಳ್ಗೊಳಿಸು.** ಮರುಳುಗೊಳಿಸು (ಕ್ರಿ). ೧. ಭ್ರಾಂತಿಗೊಳಗು ಮಾಡು; ಭ್ರಮೆಗೊಳಿಸು: ಮದಹಿಡಿಸಿ, ಮರುಳ್ಗೊಳಿಸಿ, ಇರುಳುಗವಿಸಿ, ಮುಚ್ಚುವಳು, ಕಣ್ಣಳಿಸಿ, ಮಣ್ಗೊಳಿಪಳು (ಜಾತಿ. ೬-೦೯೩); ಅಗಲೆನ್ನ ಮನ ಮನೊಲ್ದು ಇನಿದು ಸೊಲ್ಲ ಸೆಳೆಯುವೇನ್ ಇನಿಸುವೆಸ್ನ ಮರುಳ್ಗೊಳಿಸ ಲಾಜದಯ್ (ಅದ್ಭ.ಕ್ರ. ೦೦-೨೦೩). ೨. ಮೋಹಗೊಳಿಸು ; ಆಕರ್ಷಿಸು: ರೂಪೆ ಗಡಂ ನೋಡಲೊಡಂ ಮರುಳ್ಗೊಳಿಸುಗುಂ ವಿದ್ಯಾಧರಸ್ತ್ರೀಯರಂ (ಅಂಪು. ೦-೬೯) ; ಗಿಳಿಯುಂ ಮೊದಲಾಗಿ ನಡೞದರನಱಿದು ಮರುಳ್ಗೊಳಿಸುವುದವಱಚ್ಚಿಸುವ ಘಳಮಿಂತಂತನಿತುಮಾದುದಿಲ್ಲಾ ಖಳನೊಳ್ (ಕಾಮಂಕಾ. ೪೮೩) ; ಕಟಾಕ್ಷರೋಚಿಯಿಂ ರಾಜಪುತ್ರರಂ ಮರುಳ್ಗೊಳಿಸಿ ಸಾಲ್ಗೊಂಡು ನಿಂದ ವಾರಾಂಗನೆಯರಿಂ (ರಾಜಶೇ. ೫-೦೯ ವ). **ಮರುಳು ಗೊಳಿಸು :** ೨. ಚಲುವ ನರ್ತನದ ಹೆಣ್ಗಳು ಸಭಾಸ್ಥಳವ ಮರುಳುಗೊಳಿಸಿ ದರೇನೆಂಬೆ (ಕಂಶಬ. ೨೦-೦೦೩). [ಮರುಳ್ಗೊಳ್ + — ಇಸು$_3$]

**ಮರುಳ್ಚು** (ಕ್ರಿ). ಮೋಹಗೊಳಿಸು ; ಆಕರ್ಷಿಸು : ನಾಗಶಯ್ಯೆಯೊಳ್ ನಾಗಿಣಿ ನಾಗಬಂಧದೊಳೆ ತಳ್ತು ಗುಣಾರ್ಣವನಂ ಮರುಳ್ಚಿದಳ್ (ಕಂಶಕಾ. ೪-೦೩); ವನಿತೆಯರಂ ಮರುಳ್ಚುವ ಸಮಾಕೃತಿಯಿಂ ಸುಮನೋಭಿವೃದ್ಧಿಯಿಂ ಜನಿಯಿಪ ಶೀಲದಿಂ . . . ವಿಭು ಲಕ್ಷ್ಮೀದೇವನೆಸೆವಂ (ಎಕ. XIII, ೨೯-೦೦ ; 1204) ; ನೀಂ ಕುಮರಿಯನಿಂತು ಮಚ್ಚಿಸಿ ಮರುಳ್ಚಿ ಧನಂಗೊಡದಿಪ್ಪುದೊಪ್ಪವೇ (ಕೃಶಿ. ೨೯-೦೯). [ಮರುಳ್$_1$ + — ಚು$_1$]

**ಮರುಳ್ತನ,** ಮರುಳುತನ, ಮಳ್ಳತನ (ನಾ). ೧. ಹುಚ್ಚು; ಬುದ್ಧಿ ಭ್ರಮೆ : ಮರುಳ್ತನಂ ನಿನತು ಬಲ್ಬೆಳೆದ ಕಾತ್ರಮೆನೆ ತೋರ್ಪುದೆನಗೆ (ಅದ್ಭ.ಕ್ರ. ೫೨-೦೦೨೩). ೨. ದಡ್ಡತನ ; ಮೌಢ್ಯ : ಈತನೊಳ್ ಇದಿರ್ಚಿ ಕಾದುವ ಮರುಳ್ತನಂ ಬೇಡ (ಅಂಪು. ೦೩-೫೩ ವ); ನಿಮ್ಮೊಳ್ ಕೂಡಿದೆನ್ನ ಮರುಳ್ತನಮಲ್ಲದೆ ನಿಮ್ಮೊಳನಿತುಂ ದೋಷಮಿಲ್ಲ (ಕಂಶಕಂ. ೯೫-೯). ೩. ಪಿಶಾಚಿಯಾಗಿರುವಿಕೆ : ಬಂಧುಮತ್ಸರದೊಳೆ ಪೈರಮಂ ಪಡೆದು ಭೀಮನನಿನ್ನಿನಿತರ್ಕೆ ತಂದ ನೀಂ ಮರುಳನೊ ಭೂತಕೋಟಿವೆರಸಾಹವರಂಗದೊಳಾಡುತಿರ್ಪ ತಾಂ ಮರುಳನೊ ನೋಟ್ಪಿವಿರ್ವರ ಮರುಳ್ತನವುಂ ಘೋರಾಜಕೀತನಾ (ಗದಾಯು. ೯-೫೫). **ಮರುಳುತನ :** ೨. ಮರುಳು ತನದಲಿ ವ್ಯರ್ಥನಾದೆನಲಾ ಮಹಾದೇವ (ಕುಮಾ.ರ. ೬೦೩. ೬-೦೦೩); ಏಕೆ ನಿನಗೀ ಮರುಳುತನದವಿವೇಕ (ಕೂಡಲ. ೫-೩-೫೦); ಆತನ ನುಡಿಗೇಳಿ ಈ ತನಕ ಇಲ್ಲಿ ಕುಳಿತುದೇ ನಮ್ಮ ಮರುಳುತನ (ಕಾಂಯು. ೦೯). **ಮಳ್ಳತನ :** ೨. ಮುದ್ದಾಂ, ಮಳ್ಳತನವನ್ನು ಪ್ರದರ್ಶಿಸುವ ಡಾವಿನಿಂದ, ನಾನೂ. . . ದಾತಮಿಾ ಒಪ್ಪಿಸಿದ್ದೆ (ಶೀಕಹ. II, ೦೯). [ಮರುಳ್$_2$ + — ತನ]

**ಮರುಳ್ನಗೆ** (ನಾ). ದೆವ್ವದ ನಗೆ; ಪಿಶಾಚಿಯ ನಗು : ಇಂಚಱದ ಕೊರಲು ಧರಿದು ಕಠೋರಭೇರಿಯಾಗುತಿದೆ ! ಚೆಲುವೆಯರ ಮುಗುಳ್ನಗೆಯು ಮರುಳ್ನಗೆಯದಾಗುತಿದೆ ! (ಕಾಂಶಜ. ೩೫-೦೦). [ಮರುಳ್$_2$ + ನಗೆ]

**ಮರುಳ್ಪಡೆ** 'ಮರುಳ್ವಡೆ' ನೋ.

**ಮರುಳ್ಬೂದಿ** (ನಾ). ಬುದ್ಧಿಯನ್ನು ಮಂಕುಗೊಳಿಸುವ ಬೂದಿ ; ಮಂಕುಬೂದಿ : ಮನ್ಮಥಾಂಕನೆಂದೆಂಬ ಕೌಳಿಕಂ ಜನವಶ್ಯದಾ ಮರುಳ್ಬೂದಿ ಕವಿಸಿದಂತಿರುತಿರ್ಪ ಚೊನ್ನದೊಳ್ (ಶಠಕು. ೬-೩೦).
[ಮರುಳ್$_2$ + ಬೂದಿ]

**ಮರುಳ್ಮಸಗು** (ಕ್ರಿ). ಹುಚ್ಚು ಕೆರಳು ; ಹುಚ್ಚೇರು : ಒರ್ವರೊರ್ವರಂ ನಂಬದ ಬಗೆಯಿಂ ಕನಕಾಸ್ವಾದಮಿಲ್ಲದೆಯುಂ ಮರುಳ್ಮಸಗಿ ಮಸುಗೆಟ್ಟು ಮಸಿಯ ಬಡಿಗೆಗಳನೆತ್ತಿಕೊಂಡು (ಅರ್ಕಶೀ. ೪-೦೦೯ ವ).
[ಮರುಳ್$_2$ + ಮಸಗು]

**ಮರುಳ್ವಡೆ,** ಮರುಳ್ಪಡೆ (ನಾ). ೧. ದೆವ್ವಗಳ ಗುಂಪು ; ಪಿಶಾಚಿಗಳ ಸಮೂಹ : ವಾಜಿಯುಂ ವಾಹಕರುಂ ಮರುಳ್ವಡೆಯುಮಾಗಡೆ ತಮ್ಮೊಡನಾಡೆ ರಾಗದಿಂ (ಕಂಶಾಪು. ೦೩-೬೩). ೨. ಶಿವನ ಪರಿವಾರ; ಪ್ರಮಥ ಗಣ : ಕರಮೆಸೆದಂ ಪಲತೆಱದ ಮರುಳ್ವಡೆಯ ನಡುವುಮಾಪತಿರುದ್ರಂ (ಕಾವ್ಯಾ.ಶ. ೬೦೦). **ಮರುಳ್ಪಡೆ :** ೧. ಗಜಮಾಂಸಮನುರ್ಚ್ಚಿ ತಿಂದು ಕೂಗಿಡುವ ಮರುಳ್ಮರುಳ್ಪಡೆಯನಟ್ಟುವ ಸಿದ್ಧಗಣಂ (ಎಕ. VIII, ಸೊರಬ. ೦೯೯-೦೦; 1033 ?); ಪಂದಲೆಯ ತಿಱಿಕಲ್ಲಾಟದಿಂ ಮರುಳ್ಪಡೆಗೆ ನಲವೇರ್ಚೆಸುತುಂ (ರಾಮಾಶ್ವ. ೯೯-೦೯). [ಮರುಳ್$_2$ + ಪಡೆ$_2$]

**ಮರುಳ್ಮಣಗು** (ನಾ). ತುಚ್ಛವಾದ ಪಿಶಾಚಿ : ಸೊಣಗಂಗಳ ಸೊಣವುತ ಮರುಳ್ಮಣ [ಶಾಕಾಂ. ಳಗೂ]ಗುಗಳು ಒಣದಲೆವೋಡ ಹಿಡಿದು ರಕ್ಕಸರುಂಬ ಹೆಣನ ಭಿಕ್ಷವ ಬೇಡುತಿಹರು (ಶ್ರೀಹಾಂ. ೬-೦೬). [ಮರುಳ್$_2$ + ಮಣಗು$_2$]

**ಮರುಳ್ವೋಗು** (ಕ್ರಿ). ಭ್ರಮೆ ಹೊಂದು ; ಭ್ರಾಂತಿಗೊಳ್ಳು ; ಮರುಳಾಗು : ಸವಿನುಡಿಯ ಕಳ್ಳಂಟೆ ಮರುಳ್ವೋಗೆಯಮ್ಮ ನೀನಾತಂಗೆ (ಶ್ರೀರಾಮಾ. ೬೦-೨೦೦). [ ಮರುಳ್$_2$ + ಪೋಗು$_1$ (<ಪೋ$_1$) ]

**ಮರೂರ್** (ನಾ). ಒಂದು ಊರಿನ ಹೆಸರು : ಮರೂರು ಕುಷ್ಪಾಡಿಯು ನೆಟಲ ಗುಡಿಸಿದ ತ್ರೈಲೋಕ್ಯವೀರಕೆ ಕೊಟ್ಟ ಮಣ್ಣು ಇರ್ಖಂಡುಗ (ಎಕ. IX, ಬೆಂಗಳೂ. ೯೦-೬; 820). [ ? + ಊರ್ ]

**ಮರೆ$_1$** 'ಮಱೆ$_1$' ನೋ.

**ಮರೆ$_2$** 'ಮಱೆ$_2$' ನೋ.

**ಮರೆ$_3$** (ನಾ). ಒಂದು ಬಗೆಯ ಜಿಂಕೆ : "ನ್ಯಂಕುಃ, ರಂಕುಃ—ಈ ೨ ಮರೆ" (ಶಬ್ದಾಯು. ೩೯-೬೬); ಪರಿವ ಕಡವಿನ ಕಾಡೆಮ್ಮೆಯ ಮರೆಯ ಪಿಂಡುಗಳುಮಂ . . . ಪಾಯ್ವ ಸಿಂಗಂಗಳುಮಂ ಕಂಡು ( ಕಂಶಪು. ೫-೯೮ ವ ) ; ಕರಡಿ ಕಡವೆ ಕಾಡೆಮ್ಮೆ ಸೊಣಗ ಮೊಲ ಮರೆ . . . ಎರಡು ತಲೆಯ ಪಕ್ಕಿಯಿನೊಪ್ಪಿದುದಾ ದಾರುಣಮಪ್ಪಡವಿ (ಜಯುಕಾ. ೦೫-೨೯).
[ದೇ.; ತಮಿ. ಮರೈ]

**ಮರೆಕನ್ನಡ** 'ಮಱೆಗನ್ನಡ' ನೋ.

**ಮರೆಗರೆ** (ಕ್ರಿ). ೧. ಅಡಗಿರು ; ಬಚ್ಚಿಟ್ಟುಕೊಂಡಿರು : ಪಲಾಯನಕ್ಕಾಗಿ ಮರೆಗರೆದು ಹೊಂಚುತ್ತಿರುವ ವೀರಶತ್ರು ( ಕಬ್ಬಿ. ೦೨೩-೦೯ ). ೨. ಮುಚ್ಚು ; ಮರೆಮಾಡು : ಅರುಣಕಿರಣದ ಜವನಿಕೆಯ ಮರೆಗರೆದು ಬಹ ದಿನಕರನ ಬಿಜಯದ ಭರವನರಿದುಲಿಯುತ್ತಿಹುವು ಕಲರವದ ಖಗನಿಕರ (ಕಬಿ. III, ೦೬೬ ಕುಶಕುರಾಜ:ಚಾರಿತ). [ ಮರೆ$_2$ (< ಮಱೆ$_2$) + ಕರೆ$_3$ ]

**ಮರೆಗುಳಿ.** ಮರಗುಳಿ (ಗು). ಮರೆಯುವ ; ಸ್ಮರಣೆಯನ್ನು ಕಳೆದು ಕೊಳ್ಳುವ : ಮರೆಗುಳಿ ಸ್ವಭಾವದವನು ನನ್ನ ಕೈಗೆ ಈ ಹಳೆಕೊಡೆಯನ್ನು ಅರ್ಪಿಸಿ ಹೋಗಿರುವುದೂ ಸಾಧ್ಯವಿದೆ (ಜೀಕಸ್ವ. ೬೩); ಮರೆಗುಳಿ ಸ್ವಭಾವದವರೂ, ಮರೆವಿನ ಸೋಗಿನವರೂ ರೇಲ್ವೆಯ ಪತ್ರಿಕೆಗಳನ್ನು ಶಿರಸ್ತ್ರಾಣದ ಒಡಲಲ್ಲಿಯೊ, ಕೋಟಿನ ಒಳಕಿಸೆಯಲ್ಲಿಯೊ, ತುರುಕಿಬಿಡುವ ಸಂಭವವುಂಟು (ಗಾಳಿಕ. ೩೯). **ಮರಗುಳಿ :** 'ಮರೆ' ಧಾತುವಿಗೆ—ಆ ಸ್ವಭಾವವುಳ್ಳ—ಎನ್ನುವ ಅರ್ಥದಲ್ಲಿ'ಗುಳಿ' ತದ್ಧಿತಪ್ರತ್ಯಯ ಸೇರಿದಾಗ—'ಮರಗುಳಿ' —ಎನ್ನುವ ಶಬ್ದ ಸಿದ್ಧವಾಗುತ್ತದೆ (ಶಾಪಾಶಾ. ೦೩೫).
[ಮರೆ$_1$ (<ಮಱೆ$_1$) + — ಕುಳಿ$_3$]

**ಮರೆಗೆಯ್** (ನಾ). ಕಣ್ಣಿಗೆ ಕಾಣದ ಕೈ : ಇನಿವೊಳ್ಪಂ ಸಡಿಲ್ವಿಟ್ಟು ಬನ್ನನಿರ್ದರಿವ ಮರೆಗೆಯ್ಗಳ್ದು ವಾಗೆವೋಲಲುಗುಗೊಂಡೆನ್ನನಿಂಗಿತದಿಂದ ಮುಂಬಡಿಪೆ (ಸಂಕಕ. ೩೨-೦೬೫). [ಮರೆ$_1$ (< ಮಱೆ$_1$) + ಕೆಯ್$_2$]

**ಮರೆಗೊಡು** (ಕ್ರಿ). ಆಶ್ರಯವನ್ನು ಕೊಡು : ಬೆಟ್ಟಪ್ಪನ ಹಸುಳೆಗಳನ್ನು ಕರೆತರಿಸಿಕೊಂಡು ಮರೆಗೊಟ್ಟು ಅಕ್ಕರಿಂದ ನಡಪಿ (ಕುಂಕ್ರಿಶ. ೦೬-೬).
[ಮರೆ$_2$ (< ಮಱೆ$_2$) + ಕೊಡು$_1$]

**ಮರೆಗೊಳ್** 'ಮಱೆಗೊಳ್' ನೋ.

**ಮರೆಗೊಳು** 'ಮಱೆಗೊಳ್' ನೋ.

**ಮರೆಗೋಡು** (ನಾ). ಜಿಂಕೆಯ ಕೊಂಬು : ಪುರುಷಾಕಾರದ ರೂಪಂ ಮರೆಗೋಡಂ ಕಾಣಲೊಡನೆಯಾ ಮರೆವೆಣ್ಣಚ್ಚರಸೆಯ ರೂಪಂ ತಳೆದು (ಕಇ. I. ೨೫-೨೦; 1186). [ಮರೆ$_3$ + ಕೋಡು$_5$]

**ಮರೆದೆಗೆ** 'ಮಱೆದೆಗೆ' ನೋ.

**ಮರೆನುಡಿ** 'ಮಱೆನುಡಿ' ನೋ.

**ಮರೆಪಡೆ** (ಕ್ರಿ). ಆಶ್ರಯವನ್ನು ಹೊಂದು ; ಶರಣುಹೊಗು : ಮಲ್ಲಿಕಾರ್ಜುನದೇವರ ಶ್ರೀಪಾದದಲ್ಲಿ ಪದ್ಮಸಂನಿಧಿಗಾಗಿ ಮರೆಪಡೆಯ ಬೇಕೆಂದು ಮಾಡಿದಂಥಾ ಧರ್ಮ (ಎಕ. XII. ಗುಬ್ಬಿ. ೨೯-೪೦; 1420). [ಮರೆ$_2$ (< ಮಱೆ$_2$) + ಪಡೆ$_1$]

**ಮರೆಬೀಳು** (ಕ್ರಿ). = ಮರೆಪಡೆ : ಮೃಡನ ಮರೆಬಿರ್ದಡಂ ಪಿಡಿದೆಳೆದು ತಹೆವು (ಶಶಪೋ. ೧೨-೩೯); ನಾ ನಿಮ್ಮ ಮರೆಬಿದ್ದೆ ಗುರುವೆ (ವ್ಯಲಾರ. ೪೩-೪೪); ಮರೆಬಿದ್ದವನನ್ನು ಬೆನ್ನಿಗೆ ಕಟ್ಟಿಕೊಳ್ಳುವುದು ಸ್ವಭಾವ (ಹುಬ್ಬಿಹ. ೧೯೩).
[ಮರೆ$_2$ (<ಮಱೆ$_2$) + ಬೀಳು$_1$ (<ಬೀೞ್$_1$)]

**ಮರೆಮಾಚು** 'ಮಱೆಮಾಜು' ನೋ.

**ಮರೆಮಾಜು** 'ಮಱೆಮಾಜು' ನೋ.

**ಮರೆಮೈ** 'ಮಱೆಮೆಯ್' ನೋ.

**ಮರೆವಲೆ** (ನಾ). ಜಿಂಕೆಯನ್ನು ಹಿಡಿಯುವ ಒಂದು ಬಗೆಯ ಬಲೆ : ಎರಳೆವಲೆ ಹಂದಿವಲೆ . . . ಮರೆವಲೆಗಳು . . . ನೇಣ್ವಲೆ ಮೊಕರವಲೆ ಬೇಡರ ಸಿರದೊಳೊಪ್ಪಿದುದು (ಶಾಳ್ವಭಾ. ೫-೧೯). [ಮರೆ$_3$ + ಬಲೆ$_1$]

**ಮರೆವಿಡಿ** (ನಾ). ಹೆಣ್ಣುಜಿಂಕೆ ; ಹರಿಣಿ : ಮುನೀಂದ್ರಂ . . . ಪೊಱಪೊಣ್ಮುವ ರೇತಸ್ಕಳನೆಗೆ ನಾಣ್ಚುತತಿದುಃಖಾಂನ್ವಿತನಬ್ಜದಳದೊಳಂತದನಾಂತಂ ಮರೆವಿಡಿಯಾಘ್ರಾಯಿಸೆ . . . ಮರೆವೆಣ್ಣ ಗರ್ಭದಿಂದವತರಿಸಿದನೊರ್ವಂ ಕುಮಾರಕಂ (ಕಇ. I. ೨೫-೨೦; 1186).
[ಮರೆ$_3$ + ಪಿಡಿ$_3$]

**ಮರೆವು** 'ಮಱವು' ನೋ.

**ಮರೆವುಗೇಡಿ** (ನಾ). = ಮರೆಗುಳಿ : ಅವನೊಬ್ಬ ಮರೆವುಗೇಡಿ. ಈಗ ಹೇಳಿದ್ದನ್ನು ಇನ್ನೊಂದು ಕ್ಷಣದಲ್ಲಿ ಮರೆತುಬಿಡುತ್ತಾನೆ (ರೂಢಿ).
[ಮರೆವು (<ಮಱವು) + ಕೇಡಿ$_1$]

**ಮರೆವುಗೇಡಿತನ** (ನಾ). ಮರೆಯುವಿಕೆ ; ಜ್ಞಾಪಕವಿಲ್ಲದಿರುವುದು : ವಿಚಾರಮಗ್ನತೆಯಲ್ಲಿ ಕೊಂಚಕೊಂಚ ಮರೆವುಗೇಡಿತನವೂ ಕೂಡಿರುತ್ತದೆ (ಋಯಂಗಾಕೃ. ೮೨). [ಮರೆವುಗೇಡಿ + — ತನ]

**ಮರೆವೆಣ್** (ನಾ). = ಮರೆವಿಡಿ : ಆ ಮರೆವೆಣ್ಣಚ್ಚರಸೆಯ ರೂಪಂ ತಳೆವಂಬರಕ್ಕೆ ಪಾಱಿದುದೆ(ದು) (ಕಇ. I. ೨೫-೨೦; 1186).
[ಮರೆ$_3$ + ಪೆಣ್]

**ಮರೆವೋಗು, ಮರೆಹೋಗು, ಮೊರೆಹೋಗು, ಮೊಱೆಯೋಗು** (ಕ್ರಿ). ಆಶ್ರಯಿಸು : ಗೌರಿ ಕೋಕಿಲೆಯಾಗಿ ಬಂದು ಯಜ್ಞಕುಂಡದ ಸಮೀಪದಲ್ಲಿ ತನುಮನೋಧನಂಗಳಂ ಬೇಡಿದ ಬ್ರಾಹ್ಮಣರ್ಗೀವೆನೆಂಬನ ಮರೆವೋಗೆ (ಕಾಕಕ್ಕ. ೧೦೩). **ಮರೆಹೋಗು :** ವಿದ್ಯಾರ್ಥಿಗಳು ಗೈಡುಗಳಿಗೆ ಮರೆ ಹೋಗುವುದನ್ನು ತಪ್ಪಿಸಬೇಕು (ರೂಢಿ). **ಮೊರೆಹೋಗು :** ಅರಿಯದ ವೈರಾಗ್ಯ ಹರಹಿಕೊಂಬುದಕಿಂತ ಅರಿತು ಮೊರೆಹೋಗಿರೊ ಗೋಪಾಲ ವಿಠಲನ್ನ (ಜಗದಾ. ೬೯) ; ಅರ್ಜುನನು . . . ಶ್ರೀ ಕೃಷ್ಣನ ಮೊರೆಹೋಗುತ್ತಾನೆ (ರರ್ಜುಸಾ. ೦೩೮). **ಮೊಱೆಯೋಗು :** ಅಗ್ನಿ ಹರಿಯ ಮೊಱೆಯೋಗೆ ಕರುಣಾದಿಂದಲಿ ಕೇಳಿ ಹರಿ ಬಂದ (ತೀರ್ಥಪು. ೨೮೦).
[ ಮರೆ$_2$ (< ಮಱೆ$_2$) + ಪೋಗು$_1$ (< ಪೋ$_1$) ]

**ಮರೆಸಲ್** (ಕ್ರಿ). ಆಶ್ರಯವನ್ನು ಹೊಂದು, — ಪಡೆ : ಇದ್ದೆಸೆಯ ನಿದ್ರೊರೆಗಳೆದ್ದು ಮುಂಬೆರೆಯೆ ಒಂದನಿನ್ನೊಂದು ಮರೆಸಂದು ಹರಿವಂತೆ (ಗೀಶಿಂ. ೫೮-೩೮). [ಮರೆ$_2$ (< ಮಱೆ$_2$) + ಸಲ್$_1$]

**ಮರೆಸು** ' ಮಱೆಯಿಸು ' ನೋ.

**ಮರೆಹುಯಿಲು** ' ಮಱೆವುಯಿಲ್ ' ನೋ.

**ಮರೆಹೊಗು** ' ಮಱೆವೊಗು ' ನೋ.

**ಮರೆಹೋಗು** 'ಮರವೋಗು' ನೋ.

**ಮರೇ** ' ಮರ್ಯೋ ' ನೋ.

**ಮರೋ** ' ಮರ್ಯೋ ' ನೋ.

**ಮರೋಲಿ** (ನಾ). (?) : ಮರೋಲಿ, ಚೀಳಂಗಟ್ಟದ — ಮರೆ, ಮರಸು, ತಪ್ಪಲುಕಿಬ್ಬೆ (ಶತ್ರಶಾ. ಅನುಬಂಧ II. ೫). [ ? ]

**ಮರ್ಕಟ** (ನಾ). ೧. ಒಂದು ಬಗೆಯ ಪ್ರಾಣಿ ; ಕೋತಿ ; ಮಂಗ : ಜರದಂಧತಾಪಸರ ಕಯ್ಯಂ ಪಿಡಿದೆಡಪಲೀಯದೆ ನಡೆಯಿಸುವ ಚಪಳ ಮರ್ಕಟಂಗಳಿಂ . . . ಸೊಗಯಿಸುವುದು (ಕಾದಂಪೂ. ೨೨೨) ; ಮರನನೇಱಿದ ಮರ್ಕಟನಂತೆ ಹಲವು ಕೊಂಬೆಗೆ ಹಾಯುತಲಿದೆ ಬೆಂದ ಮನವ ನಾನೆಂತು ನಂಬುವೆನಯ್ಯಾ (ಬಸವ. ೩೩) ; ಉರಿವ ಕಿಚ್ಚನು ಬಿಚ್ಚಿ ಬೀಸಿದ ತೆಱವಲುಱಿ ಅಟ್ಟಿದನು ಮರ್ಕಟರ (ಕೌಶಿರಾ. ೨೦-೩೪). ೨. ಜೇಡರ ಹುಳು. ೩. ಒಂದು ನರಕದ ಹೆಸರು : ಮರ್ಕಟ . . . ಗಂಡಕವೆಂಬೈದು ಮಂತ್ರಿನರಕಂಗಳ ಸಪಾಯದಿಂ ಮಹಾಪದ್ಮವೆಂಬರಸುನರಕವಿಹುದು (ಏವೀಕ. ೦೮೦). ೪. (ಆಲಂ) ಮಂಕ ; ತಿಳಿಗೇಡಿ : "ಮರ್ಕಟಗೆ ಮಂಕನೆನಿಕುಂ" (ಕಕರ. ೧೨೦) ; ಇಂತೀ ಗುಣ ಸತ್ಯವಂತರಿಗಲ್ಲದೆ ಮಿಕ್ಕಿನ ಮರ್ಕಟ[ಪಾಠಾಂ. ಮಂಕ್ಕಟನಾಥ]ರಿಗೆಲ್ಲಿಯದೋ (ವೋಳಪು. ೫೫-೨೨೬). ೫. [ಕಾಮಶಾ] ಒಂದು ಬಗೆಯ ರತಿಬಂಧ : ಕಾಲ ನೀಡಿ ಕುಳ್ಳಿರ್ದ ಬಾಲೆಯೊಪ್ಪುವೆರಡುತೊಡೆಯ ಮೇಲೆ ಪುರುಷನಂತೆ ಕುಳ್ಳಿತಿರ್ದು ತನ್ನಯ ಕಾಲನಿಟ್ಟು ಸಮ್ಮುಖದೊಳು ಲಾಲಿಸುತ್ತೆ ರಮಿಸಲದುವೆ ಲೋಲನೇತ್ರ ಕೇಳು ಮರ್ಕಟಾಖ್ಯವೆನಿಪ್ಪದು (ಜಶವ. ೯-೪೪). [ಸಂ.]

**ಮರ್ಕಟಕ** (ನಾ). = ಮರ್ಕಟ ೧ : "ಬಲೀಮುಖಃ, ಮರ್ಕಟಕಃ . . . ವಾನರಃ — ಈ ೧೧ ಕೋಡಗಂ" (ಹಲಾಯು. ೩೯-೬೮). [ಸಂ.]

**ಮರ್ಕಟಕಿಶೋರನ್ಯಾಯ** (ನಾ). [ತರ್ಕಶಾ] ತಾಯಿಕಪಿಯನ್ನು ಮರಿ ಕಪಿಯು ಅಪ್ಪಿಕೊಂಡಿರುವಾಗ, ತನ್ನ ತಾಯಿ ತನ್ನನ್ನು ರಕ್ಷಿಸುತ್ತದೆ ಎಂಬ ಭಾವನೆಯುಳ್ಳ ದೃಷ್ಟಾಂತ ; P ಹಾಗೆಯೇ ಪರಮಾತ್ಮನನ್ನು ದೃಢವಾಗಿ ನಂಬಿದ ಭಕ್ತನನ್ನು ಆಶ್ರಯದಾತನಾದ ದೇವರು ಕೈಬಿಡುವುದಿಲ್ಲ ಎಂಬುದಕ್ಕೆ ದೃಷ್ಟಾಂತ : ದೃಷ್ಟಾಂತಗಳ ಮೂಲಕ ಜೀವಾತ್ಮ ಪರಮಾತ್ಮರ ಸಂಬಂಧವನ್ನು ವಿವರಿಸುವಾಗ ಮರ್ಕಟ-ಕಿಶೋರ ನ್ಯಾಯ, ಮಾರ್ಜಾಲ-ಕಿಶೋರ ನ್ಯಾಯ ಎಂದು ಹೇಳುವುದುಂಟು (ಶಾರದ. ೨೬೪). 'ಮಾರ್ಜಾಲಕಿಶೋರನ್ಯಾಯ' ಪರಾ. [ಸಂ.]

**ಮರ್ಕಟಚಿಹ್ನ** (ನಾ). ಕೋತಿಯ ರೂಪ (?) : ಧ್ವಜ ಮಕುಟ ಸಿತಾತಪತ್ರಾದಿಗಳೊಳ್ ಮಣಿಮಯಮಪ್ಪ ಮರ್ಕಟಚಿಹ್ನದೊಳ್ ಮುನಿವರನಂ ಪೂಜಿಸಿ (ಪಚ್ಚಾರಾ. ೦೬೩-೪). [ಸಂ.]

**ಮರ್ಕಟತನ** (ನಾ). ಕಪಿಯ ಸ್ವಭಾವ ; ಚಂಚಲಚಿತ್ತ : ಮನದ ಮರ್ಕಟತನವೆಂತು ಮಾಣ್ಬುದೆನ್ನಾ (ಬಸವ. ೪೦) ; ಬಾಲಬುದ್ಧಿಗೆ ಪ್ರಶ್ನಾಸ್ವಾತಂತ್ರ್ಯ ಕೊಡುವುದು ಮರ್ಕಟತನಕ್ಕೆ ಪಟ್ಟ ಕಟ್ಟಿದಂತೆಯೇ (ಶಿಕಂದಾ. ೪೯). [ ಮರ್ಕಟ + — ತನ ]

**ಮರ್ಕಟಧ್ವಜ** (ನಾ). ೧. ಕೋತಿಯ ಚಿಹ್ನೆಯಿರುವ ಬಾವುಟವನ್ನು ಹೊಂದಿದವನು. ೨. ಅರ್ಜುನ : ಪೊಣರ್ದರುರ್ಬಿ ವೃಷಧ್ವಜ ಮರ್ಕಟಧ್ವಜರ್ (ಶಬಶಂ. ೪-೬೨). [ಸಂ.]

**ಮರ್ಕಟನಾಡಿ** (ನಾ). ಒಂದು ನಾಡಿಯ ಹೆಸರು : ಮಯೂರನಾಡಿ . . . ಮರ್ಕಟನಾಡಿ . . . ಸಂತೋಷನಾಡಿ ಇಂತೀ ಪ್ರಥಮನಾಡಿಯೊಳಗಾದ ಶರೀರದಲ್ಲಿ ತೋಱುವ ನಾಡಿ ಜೀರ್ಣಪರ್ಣದಂತೆ (ಸಕಪ. III, ೨೮೬-೩೦೩). [ಸಂ.]

**ಮರ್ಕಟಬಂಧ** (ನಾ). ಸ್ವಲ್ಪವೂ ಅಲ್ಲಾಡದಂತಹ ಬಿಗಿಯಾದ ಬಂಧನ; ಕೋಡಗಗಟ್ಟು; ಹೆಡಮುರಿಗೆ : ತದೀಯಶೌರ್ಯಮನೆತ್ತುಂಗೋಲ್ಗೊಳ್ವಂತೆ ಮೇಗಣಿಂ ಮೇಗೆ ಪಿಡಿದೆತ್ತಿಕೊಂಡು ಮರ್ಕಟಬಂಧದಿಂ ಕಟ್ಟಿ ತಂದು (ಶಾಂತಿಪು. ೧೦-೧೬೪ ವ). [ಸಂ.]

**ಮರ್ಕಟವಿಲಾಸ** (ನಾ). ಕಪಿಯಂತೆ ಚೇಷ್ಟೆಮಾಡುವ ವ್ಯಕ್ತಿ : ದುರುಳರುರವಣಿಸಿದರು . . . ಮರ್ಕಟವಿಲಾಸರು ಧುರರಚಿತಪರಿಹಾಸರಭಿಜನಕರುವಿನಾಶಕರು ತಾವಕರು (ಕುಮಾ ರಾಮ. ೦೨-೨೬). [ಸಂ.]

**ಮರ್ಕಟಿ** (ನಾ). ೧. ಒಂದು ಬಗೆಯ ಸಸ್ಯ; ನಸುಗುನ್ನಿಗಿಡ: "ನಸುಕುನ್ನಿ ಮರ್ಕಟಿಯಾತ್ಮಗುಪ್ತೆಯುಕ್ಕು" (ಮಂಗರಾ. ೪೩-೪೩); "ಷಡ್ಗ್ರಂಥಿ — ಬಜೆ, ಮರ್ಕಟಿ" (ಓಷಂ. ೦೬೩). ೨. ಹೆಣ್ಣುಕಪಿ. ೩. ಓಮ; ಅಜವಾನ. [ಸಂ. ಮರ್ಕಟೀ]

**ಮರ್ಕೂಂ** (ನಾ). ಬರವಣಿಗೆ ಅಥವಾ ಲಿಖಿತದ ಸಂಖ್ಯೆ : ಅವನ್ನು ದಾಖ್ಲೆ ಮಾಡದೆ ಇಟ್ಟುಬಿಡುತ್ತಿದ್ದರು. ದಾಖ್ಲೆ ಮಾಡಿದರೂ ಯಾವ ಮರ್ಕೂಂನ ಹುಕುಂ ಎಂದು ಬರೆಯುತ್ತಿರಲೇ ಇಲ್ಲ (ಶಮ್ಮರು. ೦೫೩); "ಮರ್ಕೂಂನ ಹುಕುಂ : ಇಂಥ ನಂಬರಿನ (ಮರ್ಕೂಂನ) ಆರ್ಡರು (ಹುಕುಂ)" (ಶಮ್ಮರು. ೩೦೬). [← ಅರ. ಮರಾ. ಮರ್ಕೂಂ=ಲಿಖಿತ]

**ಮರ್ಗಿಸು** 'ಮಟ್ಗಿಸು' ನೋ.

**ಮರ್ಗು** 'ಮಟ್ಗು' ನೋ.

**ಮರ್ಚಿಸು** 'ಮೆಚ್ಚಿಸು' ನೋ.

Δ **ಮರ್ಚು**$_1$ 'ಮೆಚ್ಚು$_1$' ನೋ.

Δ **ಮರ್ಚು**$_2$ 'ಮೆಚ್ಚು$_2$' ನೋ.

**ಮರ್ಚುಗೆ** 'ಮೆಚ್ಚುಗೆ' ನೋ.

**ಮರ್ಜಿ** (ನಾ). ೧. ಇಷ್ಟ; ಆಸಕ್ತಿ : ಈ ಯಾವ ಕಾರ್ಯಕ್ಕೂ ದೊಡ್ಡ ಸರಕಾರದ ಮರ್ಜಿಯೂ ತಮ್ಮ ಮರ್ಜಿಯೂ ಯಾವ ಮೇರೆ ಇದೆಯೋ ಆ ಮೇರೆ ಹಾಜರು ಇದ್ದೇವೆ (ರಾಜೇಂದ್ರ. ೦೨೬); ಯಕ್ಷಗಾನದ ಮೇಲೆ ಮರ್ಜಿಯಿದ್ದ ಶ್ರೀಪತಿಗೆ ಈ ನಾಟಕದಲ್ಲಿ ಪಾತ್ರವಿರದಿದ್ದರೂ . . . ಅವನಿಗೆ ಖಯ್ಯಾಲಿ (ಸಂಸ್ಕಾರ. ೬೩); ಮದುವೆ ಮಾಡಿಕೊಡುವವರ ಮರ್ಜಿ, ಮಾಡಿಕೊಳ್ಳುವವರ ಮರ್ಜಿ (ಗಾಳಿಪ. ೨೫). ೨. ಸ್ವಭಾವ : ಅವರದ್ದು ಮುಟ್ಟಿದರೆ ಮುನಿಯುವ ಮರ್ಜಿ (ಕರ್ನಾ. XVIII, ೬೬೮೪); ಕುಮಾರಿಗೂ ಸರ್ದಾರನಿಗೂ ಪರಸ್ಪರ ಮರ್ಜಿ ಗೊತ್ತಿರಬೇಕು (ರಾಜ್ಯಕಾ. ೨೫೭); ನನಗೆ ಹಳ್ಳಿಯ ಹುಡುಗಿಯ ಮರ್ಜಿಯ ಪರಿಜ್ಞಾನವಿಲ್ಲ (ಕಂಠಿ. ೯೬). ೩. ಅನುಗ್ರಹ; ಪ್ರಭಾವ : ಫಕೀರನು ಆವರ ಮರ್ಜಿ ಸಂಪಾದಿಸಿ ಅವರಲ್ಲಿಯೆ ನೌಕರಿಗಾಗಿ ನೆಲಸಿದನು (ಶಂಕಂ. ೩೩); ಮೇಲಿನವರ ಮರ್ಜಿಪಡೆದು ತುಸುದಿನದಲ್ಲಿಯೇ ಕಾಯಂ ಆದನು (ಗ್ರಂಥಾಯ. ೨೯೭). ೪. ರೀತಿ; ಗತ್ತು : ಕೊಳಗದಲ್ಲಿ ಅಪ್ಪಯ್ಯ ಭತ್ತವನ್ನು ಅಳೆಯುವಾಗ ಎಣಿಸುವ ಮರ್ಜಿಯಲ್ಲಿ ಅವರ ಲೆಖ್ಖ ನಡೆದಿತ್ತು! (ಸಂಸ್ಕಾರ. ೫೫).

[←ಅರ. ಮರ್ಝೀ; ಹಿಂ. ಮರಜೀ, ಮರ್ಜೀ; ಮರಾ. ಮರ್ಜೀ]

**ಮರ್ತಬೆ** (ನಾ). ೧. ಸಲ; ಬಾರಿ. ೨. ಸಂದರ್ಭ; ಅವಕಾಶ; ಸಮಯ : ಅದರ ವಡಂಬಡಿಕೆ ಸಂತೋಷದ ಮರ್ತಬೆ ದೋಸ್ತಿ ಕಲಮಿನಿಂದಾ ಬಹಳ ಸಲಾ ಬರದು ಇದ್ದೇವೆ (ರಾಜೇಂದ್ರ. ೦೨೦).

[←ಅರ. ಮರ್ತಬಹ್; ಹಿಂ. ಮರ್ತಬಾ]

**ಮರ್ತ್ಯ** (ಗು). ೧. ಸಾವಿಗೊಳಗಾಗುವ; ಮರಣಹೊಂದುವ. (ನಾ). ೨. ಮನುಷ್ಯ; ಮಾನವ : "ಮನುಷ್ಯಃ, ಮಾನುಷಃ, ಮರ್ತ್ಯಃ . . . ಈ ೧೨ ಮಾನಸರ್" (ಹಲಾಯು. ೫೫-೧೬೬); ಜಗಜ್ಜನಕನಂ ಶಿಶುವೆಂಬುದೊ ಮರ್ತ್ಯನೆಂಬುದೊ (ಶಾಂತಿಪು. ೧೦-೬೨); ಮರ್ತ್ಯರೊಳ್ ಮಥನಂ ಪೆರ್ಗ್ಗಳವಲ್ಲವೈ (ಸೋಮೇಶ. ೬೮); ಇಳೆಯ ಮರ್ತ್ಯರು . . . ಫಲುಗುಣಗೆ ಸರಿಯೆಂಬವರ ಬಾಯ್ ಹುಳಿವುದೋ (ಕುಮಾ ವಿ. ೮-೩೭). ೩. ಮಾನವರು ವಾಸಿಸುವ ಲೋಕ; ಭೂಲೋಕ : ಈಗಳೀ ಮರ್ತ್ಯದೊಳಗೊರ್ವ ಪೊಸಮಗನಂ ಪಡೆದೆವು (ಸಂಬರ. ೧೨-೦೨೪); ಮರ್ತ್ಯವನೋವಿ ಮನುಜರೆಲ್ಲರಂ ನಿಜಭಕ್ತಿಯುಕ್ತಿಯಲಿ ಪಾವನತ್ವವನಿತ್ತು ಪಾಲಿಸಿ ಕಾವುದು (ಬಸಪು. ೦-೬೦); ಶಿವಶರಣೆಯರಾಗಿ ಮರ್ತ್ಯಕ್ಕೆ ಬಂದು ಪವಾಡಗಳನ್ನು ಮೆರೆಯುವಂಥವರು (ಕರ್ನಾಕ. ೭೦). [ಸಂ.]

**ಮರ್ತ್ಯಜನ್ಮ** (ನಾ). ಮನುಷ್ಯನಾಗಿ ಹುಟ್ಟುವುದು; ಮಾನವಜನ್ಮ : ದುರ್ಲಭಂ ಮರ್ತ್ಯಜನ್ಮಂ (ಸಂಕುಮಾ. ೫-೩೪). [ಸಂ. ಮರ್ತ್ಯಜನ್ಮನ್]

**ಮರ್ತ್ಯದೇಹ** (ನಾ). ಮನುಷ್ಯಶರೀರ : ಮರ್ತ್ಯದೇಹದೊಳಲ್ಲಿ ಸುಳಿವುದು ಭಾರವೆಂದರು ಚರರು ಫಲುಗುಣಗೆ (ಕುಮಾ ಸ. ೩-೬೪). [ಸಂ.]

**ಮರ್ತ್ಯಲೋಕ** (ನಾ). ಮಾನವಲೋಕ; ಭೂಲೋಕ : ಮರ್ತ್ಯಲೋಕವೆಂಬುದು ಕರ್ತಾರನ ಕಮ್ಮಟವಯ್ಯ (ಬಸವ. ೦೫೫). [ಸಂ.]

**ಮರ್ದಕ** (ನಾ). ಘಾತಿಸುವವನು; ನಾಶಮಾಡುವವನು : ಕೃತಾಂತಮರ್ದಕನೊಳಲ್ಪಧನುರ್ವಿಶಿಖಂಗಳಿಂ ಜಯೋತ್ಸುಕತೆಯೊಳೆಚ್ಚು ಗೆಲ್ವಬಗೆಯಾಂತನು (ಶಬಸಂ. ೪-೦೨೬). [ಸಂ.]

**ಮರ್ದನ** (ನಾ). ೧. ಪುಡಿಮಾಡುವುದು; ಚೂರ್ಣಮಾಡುವುದು. ೨. ಉಜ್ಜುವುದು; ತಿಕ್ಕುವುದು. ೩. (ಕೈಕಾಲು, ಮೈಯನ್ನು) ಒತ್ತುವುದು; ಹಿಸುಕುವುದು : ಪಾದಗಳನ್ನು ಮರ್ದನಮಾಡಿಸಿಕೊಳ್ಳುವುದರಿಂದ ಶ್ರಮಪರಿಹಾರವೂ . . . ಶರೀರಪುಷ್ಟಿಯೂ ಇವೆಲ್ಲಾ ಉಂಟಾಗುವುವು (ಸಕಪ್ರ. ೫೯). ೪. ನಾಶಮಾಡುವುದು : ಆ ಮಧುಕೈಟಭಮದಮರ್ದನರುಧಿರಾರುಣಚಕ್ರಿಚರಣಮಂ ನೆನೆಯಿಸುಗುಂ (ಕಾದಂಪೂ. ೨೬). ೫. ಹಿಂಸಿಸುವುದು; ನೋಯಿಸುವುದು : ಮರ್ದನ . . . ದುರ್ಭೋಗ್ಯ ನಾನಾವಿಧಾಸಂಖ್ಯಾತತೀವ್ರವೇದನಾರೂಪಂಗಳಾಗಿ (ವಿವೇಕ. ೦೪೦). ೬. ನಾಶಮಾಡುವವನು : 'ಮಲ್ಲಮರ್ದನ' ಪರಾ.

ಮರ್ದನಮಾಡು = ಕೊಲ್ಲು; ಸಾಯಿಸು : ಅವರು ನೂರೊಂದು ಜನವಿದ್ದರೂ ಅವನೊಬ್ಬನೇ ಎಲ್ಲರನ್ನೂ ಮರ್ದನಮಾಡಿಬಿಡುವನು (ವಚಕಾ. ೦೬). [ಸಂ.]

**ಮರ್ದನಿಗ** (ನಾ). ಮೈ ಒತ್ತುವವನು : "ಸಂವಾಹಕಂ ಮರ್ದನಿಗಂ" (ಮಂಗರಾ. ೦೦೦-೨). [ಮರ್ದನ + — ಇಗ]

**ಮರ್ದಲ, ಮರ್ದಳ** (ನಾ). ಒಂದು ಬಗೆಯ ಚರ್ಮವಾದ್ಯ; ಮದ್ದಳೆ; ಮೃದಂಗ : ವನಗಜಧ್ವನಿ ಮರ್ದಲಸ್ವನಂ ಪೇಲಾವಿಪಿನಕೀಚಕವೆ ಸುಷಿರವು (ಶಬ್ದಮ. ೧೦-೦೬೫). ಮರ್ದಳ : ಆ ವಾದ್ಯವಿದ್ಯಾಧಿಕರ್ ಮರ್ದಳಮನುರ್ದಿ ಮಯೂರಮಾರ್ಜನೆಯಿಂದನಿಬರ ಮಾನಮಾನಾವರ್ಜಿಸಿ . . . ಪಾಡಿದರ್ (ಕಕಂ. ೬-೦೫೪ ವ). [ಸಂ.]

**ಮರ್ದಳ** 'ಮರ್ದಲ' ನೋ.

**ಮರ್ದಳೆ** (ನಾ). ಒಂದು ಬಗೆಯ ಚರ್ಮವಾದ್ಯ : ಮೃದಂಗ : ಪಟುಪಟಹತುಣವಭಂಭಾಮರ್ದಳೆಝಲ್ಲರಿ . . . ವಂಶವೀಣಾಸ್ವರಂಗಳೆಸೆಯೆ (ಪಡ್ಮರಾ. ೯೩-೨೬). [ಸಂ. ಮರ್ದಲ]

**ಮರ್ದಳೆಕಾಱ** (ನಾ). ಮದ್ದಳೆಯನ್ನು ನುಡಿಸುವವನು : ತ್ರ್ಯಂಕ್ಯ ಆಲಿಂಗ್ಯ ಊರ್ಧ್ವಕವೆಂಬ ತ್ರಿವಿಧಕ್ರಮವಱಿದು ನುಡಿಸುವ ಕಡುಜಾಣರಪ್ಪ ಮರ್ದಳೆಕಾಱರಿಂ (ವಿವೇಕ. ೦೯೦). [ಮರ್ದಳೆ + — ಕಾಱ]

**ಮರ್ದಿತ** (ಗು). ೧. ಪುಡಿಪುಡಿಮಾಡಿದ. ೨. ತಿಕ್ಕಿದ ; ಉಜ್ಜಿದ. (ನಾ). ೩. [ನಾಟ್ಯ] ಒಂದು ನೃತ್ಯಭೇದ; p "ಅಡಿಯನ್ನು ಅಡ್ಡ ಮಾಡಿ ನೆಲವನ್ನು ಒರಸುವುದು" (ಶಾಸ್ತ್ರರಂ. ಗದ್ಯಾನುವಾದ. ೨೩೮) ; ಮೇದಿನಿಯನಡ್ಡಪಾದದಿನಾದರದಿಂದೊರಸೆ ಮರ್ದಿತಾಖ್ಯಮೆನಿಕ್ಕುಂ(ಶಾಸ್ತ್ರರಂ. ೨-೧೦೯). [ಸಂ.]

**ಮರ್ದಿಸು** (ಕ್ರಿ). ೧. ಒತ್ತು ; ಅಮುಕು : ತುಟಿಇದಂ – ಕಾಲೊಳ್ ಮರ್ದಿಸಿದಂ (ಚಪುಚ. ಶಂ. ೨). ೨. ನಾಶಮಾಡು : ಕೊಂಕಣ ಮಲೆಯಾಳ ಕೊಡಗುಭೂಪಾಲರ ಬಿಂಕವ ಮರ್ದಿಪ ಶೂರ (ಕಂಸಬ. ೦-೨೩). ೩. ಕೊಲ್ಲು ; ಸಾಯಿಸು : ಭೂತಳಾಧೀಶ್ವರನಪ್ರಿಯರಂ ಮರ್ದಿಸಿ ಧರೆಯಂ ಜಯಲಕ್ಷ್ಮೀಧಾಮನಾಗಿ ಪರಿರಕ್ಷಿಸುಗುಂ (ಶಂಕಶಂ. ೨೦೨-೦೭) ; ತಲವಜ್ರಾಘಾತದಿಂ ಮರ್ದಿಸಿ ರಜಕನಂ . . . ಪೊಕ್ಕಂ ದನುಜನ ಪೊಟಿಲಂ ಸಾಗ್ರಜನ್ಮಂ ಮುಕುಂದಂ (ಜಗಂ. ೬-೧೧) ; ಶಂಬರಾಸುರನ ಮರ್ದಿಸಲಾಗಿ . . . ಜಂಭಾರಿಮುಖ್ಯನಿರ್ಜರರೈತಂದು ದಿವ್ಯಾಂಬರಗಳನಿತ್ತರೊಲಿದು (ವೋಹಚ. ೦೩-೪). [ಮರ್ದನ + – ಇಸು₃]

**ಮರ್ದು**, ಮಂದ್ದು, ಮದ್ದು (ನಾ). ೧. ಔಷಧ : "ಮರ್ದೆಂದೌಷಧಿ" (ಶಬ್ದಮ. ೦೭) ; ಮರ್ದುಂ ಮಂತ್ರಮುಮಿಷ್ಟದೇವತೆಗಳುಂ ದಿವ್ಯಾಸ್ತ್ರಮುಂ . . . ಮಿತ್ರರ್ಕಳುಂ ಮಿಟ್ತು ಮೇಲೆರ್ದಾಗಳ್ ಶರಣಪ್ಪುದೇಕೆ ಮಡಿದರ್ ಮನ್ನಿರ್ವರುಂ ಚಕ್ರಿಗಳ್ (ಪಶಾರಾ. ೦೯೩-೦೫) ; ಎಮಗುಂ ನಿಮಗಂ ಮೂಡುವ ಮುಟುಗುವ ದಂದುಗಮೂಡಿದ ಹೊಲನುಂಡ ಮರ್ದು ಕಂಡ ವಿಚಾರಂ (ಯಕೋಚ. ೦-೫೨). ೨. (ಆಹಾರದೊಡನೆ ಬೆರಸಿ ಕೊಡುವ) ಒಂದು ಬಗೆಯ ನಂಜು ; ಕೈಮಸಕು : ಮರುಳೋ ಮರ್ದೋ ಮಾಟವೋ ನಿರವಿಸಿ ನೆಲೆಗೆಯ್ದು ಕಾವುಗೊಳಿಪುದು ಭರದೊಳ್ (ಜಶಬ. ೬-೬೨). ೩. ನಿವಾರಣೋಪಾಯ ; ಪರಿಹಾರ : ನೀರಡಿದಂಗೆ ತುಪ್ಪಂ ಮರ್ದೇ (ಕುಕ್ಷ್ಮಪು. ೬-೫೬); ಮರ್ದಲ್ತು ಪೊಲೆಗೆ ಪೊಲೆ (ಅಕ್ಷಕಾ. ೦೫-೩೦೨). **ಮಂದ್ದು** : ೧. ಓಡಬೇಕೆಂದು ಮಂದು ತಿಂದು ತೂಕಡಿಸಿ ಬಿದ್ದೆಯಲ್ಲವೆ (ಕಥಾಮಂ. IV. ೯೭). **ಮದ್ದು** : ೧. ಕುತ್ತಕ್ಕೆ ಮದ್ದನಿಕ್ಕದೆ [ಪಾಠಾಂ. ಮದ್ದುಮಾಡದೆ] ಕುತ್ತಂ ಪೋಗೆಂದೊಡಂತೆ ಪೋಕುಮೆ (ಸಮುಚ. ೦೦-೮೭) ; ಒಡಲಿನೊಳು ಮುಚ್ಚಿದ್ದ ಸಬಳವನುಡಿಯಲೀಯದೆ ಕೀಳ್ವ ಮದ್ದನು ಗಿಡವ . . . ಹಸ್ತಿವೈದ್ಯರ ಗಡಣವುಭಯದೊಳೆಸೆವವು (ಕುವ್ಯಾಶೀ. ೫-೪೦) ; ಮದ್ದ ನಾವ್ ತರಹೇಳಿದರೆ ಕಿತ್ತದ್ರಿಯನು ತಂದೀ ವಿವೇಕದ ಮುದ್ದುತನವನು ನೋಡಿದೈ (ತೊರರಾ. ೬-೩೭-೬೨). ೨. ಮಕ್ಕಳಿಗೆ ಬೆಣ್ಣೆಯೊಳ್ ಮದ್ದಿಕ್ಕುವವೊಲ್ (ಸಮುಚ. ೫-೩೮) ; ಈತನ ಸುಳಿವು ತೋಚುವದಿಲ್ಲ ಮಾಯಾಲಲನೆಯಿಕ್ಕದ ಮದ್ದು ಜೀವರಿಗೆಂದನಾ ಭೀಷ್ಮ (ಕುವ್ಯಾಸ. ೯-೫). ೩. ಅನ್ಯಾಯವಾಯಿತು ಇದಕೇನು ಮದ್ದು (ಕುರಂಚ. ೨-೩೫-೨) ; ಗುಳಿಗೆಯಿದು ಆ ಖಗನ ಕಟ್ಟನು ಕಳೆದ ಮದ್ದಾದಪುದು (ಸಾಕ್ಷಶಾ. ೦೭-೦೩); ಇದಕ್ಕೆಲ್ಲ ಒಂದೇ ಮದ್ದಿದೆ (ಮುಂಗಾಮು. ೦೦೮). ೪. ವಶೀಕರಣಗೊಳಿಸುವ ಸಾಧನ : ನುಡಿಯ ಮಾತಿನ ಮುದ್ದು ಶಿವನನೊಲಿಸುವ ಮದ್ದು ತಾನೆನಲ್ ಶಿವೆ ಮೆಚ್ಚಿದಳು (ಚಂಪು. ೩೭-೨೨). ೫. ಅಗ್ನಿಸ್ಫೋಟಕ ; ಸಿಡಿಮದ್ದು : ಹಾಯ್ಯು ಮರುವುರಿವ ಮದ್ದಿನ ತಿತ್ತಿಯಂ (ಚಂಪು. ೪೨-೪೩); ಕರಿಯ ಮದ್ದಿನ ಪೊಟ್ಟಣಗಳ ಹೊತ್ತಿಸಿ ಭರದಿಂದ ಮೇಲಿಡುತಿರಲು (ಕಂಸಬ. ೦೪-೬೫). ೬. ಪಟಾಕಿ : ಅನೇಕರು ದೀಪಾವಳಿಯಲ್ಲಿ ಮದ್ದು ಸುಡಲು ಬಹಳ ಹಣ ಖರ್ಚುಮಾಡುತ್ತಾರೆ (ರೂ).

ಮದ್ದರೆ = (ಅಲಂ) ಪ್ರತೀಕಾರೋಪಾಯವನ್ನು ಮಾಡು : ಪರಶುರಾಮನ ಪಟುತನಕೆ ಮದ್ದರೆದೆನೆಂಬೀ ನಿಟಿಲನೇತ್ರನ ಭುಜಬಲಕೆ ಸವಜೋಳಿ ಗಡ ನೀವು (ಕುವ್ಯಾಶೀ. ೯-೩೭) ; ಮಾಯಾಪುಳಿಂದತತಿ ಮದ್ದರೆದುದಖಿಳಮೃಗಸಂತತಿಗೆ (ಚಂಪು. ೫೫-೨೭). ಮದ್ದಿನ ತಿಲಕ = ವಶೀಕರಣಗೊಳಿಸುವ ಬೊಟ್ಟು,–ತಿಲಕ : ನಿನ್ನ ಹೊದ್ದಿ ತಳ್ಪಂಕದಿಂ ತವಕಿಸಬೇಕೊಂದು ಮದ್ದಿನ ತಿಲಕದಿಂದವನ (ಕುಂಚಾಶಾಂ. ೨೫-೫೮). ಮದ್ದು ಹಾಕು = ಕೈಮಸಕು ಹಾಕು : ಆರೋ ಏನೋ ಮದ್ದು ಹಾಕಿರಬೇಕು. ಮದ್ದುಗುಣಿಕೆಯಿಕ್ಕಿರಬೇಕು (ಪಟ್ಟಿ. ೯೩-೨). ಮರ್ದಿನ ಕೂಟ್ = ಔಷಧಿಯನ್ನು ಸೇರಿಸಿ ಬೇಯಿಸಿದ ಅನ್ನ; ಪಥ್ಯದ ಆಹಾರ: ತನಗುಳ್ಳ ವ್ಯಾಧಿಯುಮಗುರ್ಂಟೆಂಬುದನಱಿದು ತನಗೆಂದು ಮಾಡಿದ ಮರ್ದಿನ ಕೂಟನವರ್ಗೆ ಬಡ್ಡಿಸಿದೊಡೆ (ಪಶಾರಾ. ೦೬೦-೦೯).

[ದೇ.೩ ತಮಿ. ಮರುನ್ತು ; ಮಲ. ಮರುನ್ನು ; ತುಳು. ಮುರ್ದ್ ; ಕೊಡ. ಮದ್ದ್ ; ತೆಲು. ಮಂದು ; ಕೋಲಾ. ನಾಯ್ಕಿ. ಮಂದ್ ; ಪರ್ಜಿ. ಮರುದೆ ; ಕುಡುಕ್. ಮಂದರ್ ; ಮಾಲ್ತೊ. ಮಂದ್ರು]

**ಮರ್ದುಂಗೂಟ್**, ಮರ್ದುಗೂಟ್ (ನಾ). ಔಷಧಿಯನ್ನು ಸೇರಿಸಿ ಬೇಯಿಸಿದ ಅನ್ನ ; ಪಥ್ಯದ ಆಹಾರ : ಮರ್ದುಂಗೂಟ್, ಮರ್ದುಗೂಟ್ (ಶಬ್ದಮ. ೩೬೯ ಪ್ರಯೋ). **ಮರ್ದುಗೂಟ್** : ಮೇಲಿನ ಪ್ರಯೋಗವನ್ನು ನೋಡಿ. [ಮರ್ದು + ಕೂಟ್₁]

**ಮರ್ದುಗುಣಿಕೆ**, ಮದ್ದುಗುಣಿಕೆ (ನಾ). ಒಂದು ಬಗೆಯ ಸಸ್ಯ ; ದತ್ತೂರ ; ಉನ್ಮತ್ತ : "ಮರ್ದುಗುಣಿಕೆಯೆಂದು ಉನ್ಮತ್ತಂ" (ಕಕಾ. ೬೭-೩೨೪). **ಮದ್ದುಗುಣಿಕೆ** : "ತಚಿಸಂದುಮ್ಮತ್ತ ಮದ್ದುಗುಣಿಕೆಯುಮಕ್ಕುಂ" (ಕರಕಂ. ೨೦೯) ; ಉರಗನ ವಿಷಮೇಱಿದರುಂ ಸಿರಿಯುಳ್ಳರು ಮದ್ದುಗುಣಿಕೆಯಂ ತಿಂದವರುಂ . . . ಧರೆಯೊಳ್ ಮೆಯ್ಯಱಿಯರು (ರಹಸ್ಯ. ೪-೦೯೮) ; ಮದ್ದುಗು [ಪಾಠಾಂ. ಮತ್ತಿಕು] ಣಿಕೆಯ ತಿಂದು ಸೊಕ್ಕಿದಂಗೆ ಕಾಷ್ಠ ಲೋಹಾದಿಗಳೆಲ್ಲಂ ಪೊಂಬಣ್ಣಮಾಗಿ ತೋರ್ಪಂತೆ (ಜೀವಸಂ. ೦೨೫-೬ ಪ); ಮದ್ದುಗುಣಿಕೆಯ ತಿಂದ ಮದೋನ್ಮತ್ತರ ಎನ್ನುತ್ತ ತೋಱದಿರಯ್ಯ (ಶಬಂಧ. ೬೪-೨೦). [ಮರ್ದು+ಕುಣಿಕೆ₆]

**ಮರ್ದುಗೂಟ್** 'ಮರ್ದುಂಗೂಟ್' ನೋ.

**ಮರ್ದುಣಿಸು** (ನಾ). ಪಥ್ಯದ ಊಟ ; ಮದ್ದಿನ ಊಟ : ಬಿರ್ದುಣಿಸಂ ಮರ್ದುಣಿಸೆಂಬಂತಿರುಂಡು ಸಜ್ಜೆವನೆಗೆ ಪವಡಿಸಲ್ಕೆಂದು ಪೋದಂ (ರಾಪಾಶ. ೬೫-೦೩). [ಮರ್ದು+ಉಣಿಸು₁]

**ಮರ್ದುಮಿ** 'ಮರ್ದುಮಿಾ' ನೋ.

**ಮರ್ದುಮಿಾ**, ಮರ್ದುಮಿ (ನಾ). ಗಂಡುತನ ; ಪೌರುಷ : ಕೋಟೆ ಕೆಡವಿ ಹಲ್ಲಾ ಮಾಡಿದಾಗ್ಯೂ ಪಾಳೆಗಾರನು ಮರ್ದುಮಿಾಯಿಂದ ನಿರ್ವಹಿಸಲಾರದೆ (ಹೈದರ. ೫೩). **ಮರ್ದುಮಿ** : ತಮ್ಮ ಮರ್ದುಮಿ, ತಮ್ಮ ಲಡಾಯಿ, ತಮ್ಮ ಪರಾಕ್ರಮವನ್ನು ನೋಡಿ ಬಹಳ ಸಂತೋಷಪಟ್ಟೆವು (ಚಿತ್ರಚಾ. ೮೭). [←ಪಾರ. ಹಿಂ. ಮರಾ. ಮರ್ದುಮಿಾ]

**ಮರ್ದುವೇಟ್** (ಕ್ರಿ). ಔಷಧಿಯನ್ನು ಸೂಚಿಸು: ಅರ್ಜುನ ತೆಱನಱಿಯದೆ ಮರ್ದುವೇಟ್ಟ ಬೆಜ್ಜನ ತೆಱದಿಂ (ಆದಿಪು. ೩-೦೫೦). [ಮರ್ದು+ವೇಟ್]

**ಮರ್ದೂರ್** 'ಮಜ್ದೂರ್' ನೋ.

**ಮರ್ಫ** 'ಮರಫ' ನೋ.

**ಮರ್ಬಿಗ**, ಮಬ್ಬಿಗ (ನಾ). ಕತ್ತಲೆಯಲ್ಲಿ ಸಂಚರಿಸುವವನು; ನಿಶಾಚರ ; ರಾಕ್ಷಸ : "ರಕ್ಕಸರ್ ಮರ್ಬಿಗರ್, ಚುಕ್ಕಿಗುವರರ್, ಪೊದಲ ಸಗ್ಗಿಗರ್ —ಈ ೪ ರಕ್ಕಸರ ಪೆಸರ್" (ಕಕಾ. ೪೬-೨೨) ; ಮರ್ಬಿಗರುರ್ಬಿನಿಂ ಜರ್ಬುತೆಬ್ಬಟ್ಟ . . . [ಒರ್ಬ ರಣಾಂಗದೊಳ್ಮನ್ನೊಮಿ]ದಂಗಮನಾ ಬರ್ಣ್ಣಿಪರು (ಕಸಾಂ. ೦೪-೬೭) ; ನಡೆಮಾಡಮಿನಡರ್ದು ಹಯುಮನುಯ್ದು ಮರ್ಬಿಗನಂ ತಱಿಬಿ (ರಾಪಾಶ. ೦೦೦-೦೬). **ಮಬ್ಬಿಗ** : "ಮಬ್ಬಿಗರ್ ಶಿಲೆಯುಲಿಳಿಗೆ ರಕ್ಕಸರಕ್ಕು" (ಕನ್ನಕ. ೦೦) ; ಭರದೆ ಮಬ್ಬಿಗ ಮಬ್ಬಿಸುರುಬಾಣಮಂ ಬಡಲ್ ಹರಸೂನು ರವಿಯ ಬಾಣದಲಿ ಸಂಹರಿಸಿ

. . . ಶರವೆಂಟಱಿಂದಿಟ್ಟನು (ಕಸುಕ್. ೩-೬-೬೭) ; ಬಿಡುಗಣ್ಣವರ್ ಮಬ್ಬಿಗರ ನೊಂಕ ಸೆಣಸುಡ (ಶಾಂತಿ. ೧೪೦-೩೦೩).

[ ಮರ್ಬು ( < ಮರ್ಮ$_2$ ) + — ಇಗ ]

**ಮರ್ಬು** 'ಮರ್ಮ$_2$' ನೋ.

**ಮರ್ಬುದಿಂಗಳ್** (ನಾ). ಕಾಂತಿಹೀನವಾದ ಚಂದ್ರಬಿಂಬ : ಪರ್ಬಿದ ತ್ರಿಂಬುಧಿಯ ಮೇಲೆ ಮರ್ಬುದಿಂಗಳ್ ಮುಂಜುಜೊನ್ನಂ (ಶ್ರೀರಾಪಟ್ಟಾ. ೬೦೦-೪೪೪). [ ಮರ್ಬು ( < ಮರ್ಮ$_2$ ) + ತಿಂಗಳ್ ]

**ಮರ್ಬುವೆಳಗು** (ನಾ). ಮಂಕಾದ ಬೆಳಕು ; ಮಸುಕಾದ ಬೆಳಕು : ಜವದಿನುಷಃಕಾಲವೃಷಂ ತವೆ ಕದಡಿದುದೆನಿಸಿ ಮರ್ಬುವೆಳಗಂ ಕಳೆದೊಪ್ಪುವ ಬಾಂಗೆಱೆಯೊಳ್ (ರಾಜಶೇ. ೦೨-೦೨).

[ ಮರ್ಬು (< ಮರ್ಮ$_2$) + ಬೆಳಗು$_2$ ]

**ಮರ್ಮ$_1$**, ಮಮ್ಮ, ಮೊಮ್ಮ (ನಾ). ಮಗನ ಅಥವಾ ಮಗಳ ಮಗ ; ಮೊಮ್ಮಗ : ಶ್ರೀವತ್ಸಗೋತ್ರಂ ಗಙ್ಗಕಚ್ಚ ನಿಡುಂಗೊಣ್ಡೆಯಭಿಮಾನ ಚನ್ದ್ರನ ಮಮ್ಮಂ (ಶಾಸಸಂ. ೯-೦ ; ಸು. 950) ; ಮಾಹುಮಸೆಟ್ಟಿಯ ಮಗನತಿಸಾಹಸಿಕಂ ನೆಗಟ್ದ ಧೋಯಿಪಯ್ಯನ ಮಮ್ಮಂ (ಎಇ. XIX. ೨೨೦-೨೬ ; 1037). ಮಮ್ಮ : ಶ್ರೀಕಿಬ್ಬಲಿಯ ಮಮ್ಮ ಅಣ್ಣಂಗರಸರ ಮಗ ಕಲಿಗಂಗಂ ಅಯಪ್ಪದೇವನೊಳ್ಕಾದಿ ಕಳಿಕಟ್ಟಯೊಳ್ಸತ್ತ (ಎಕ. VI. ಕಡೂರು. ೧೪೦-೦ ; ಸು. 919) ; ಅಮ್ಮ ನೀಂ ಮಮ್ಮನೆಯಪ್ಪೆ (ಆದಿಪು. ೨-೨೦) ; ಕೊಂಗಣಿಗಾವುಣ್ಣನ ಮಮ್ಮ ಮಾರವಡೆಯನ ಮಗಂ (ಎಕ. VI (R), ಗುಂಡ್ಲುಪೇ. ೩೬-೦೩ ; 1049). ಮೊಮ್ಮ : ನವನಿಧಿವಲ್ಲಭ ನಾನತದಿವಿಜಗಣಂ ನೆಗಟ್ದ ನಾಭಿರಾಜನ ಮೊಮ್ಮಂ (ಆದಿಪು. ೦೩-೬೩) ; ಬಕಾಸುರನ ಮೊಮ್ಮನಪ್ಪ ಜಟಾಸುರನ ಮಕ್ಕಳಪ್ಪ ಹಲಾಯುಧ ಮುಸಲಾಯುಧ ಕಾಲನೀಲರೂಕ್ಷರಾಕ್ಷಸರುಮಂ . . . ಕಂಡು (ಗದಾಯು. ೪-೬೩ ವ); ವಜ್ರಾಯುಧನ ಮೊಮ್ಮನ ರಥವ ನಿದರ್ಶಯದಲಿ ಮುತ್ತಿದರು ಕುರುಸೇನಾಮಹಾರಥರು (ಕುಮಾವ್ಯಾ. ದ್ರೋ. ೩-೨೪).

[ ದೇ.₃ ತಮಿ. ಮರುಮಾನ್, ಮರುಕನ್ = ವಂಶದಲ್ಲಿ ಹುಟ್ಟಿದವನು ; ತುಳು. ಮರ್ಮಾಯಿ = ಒಡಹುಟ್ಟಿದವಳ ಮಗ ; ಕೋಲಾ. ನಾಯ್ಕಿ. ಮರ್ಗೆ ; ಪರ್ಜಿ. ಮೆರ್ಮ, ಮೆರಿಯ ]

**ಮರ್ಮ$_2$** (ನಾ). ೧. ದೇಹದ ಆಯಕಟ್ಟಿನ ಸ್ಥಳ : ಶರೀರದ ಸೂಕ್ಷ್ಮವಾದ ಭಾಗ : "ಆಯುಃ – ಮರ್ಮಂ" (ಶಾಕ್ಯ. ೦೦೯) ; ಕಯ್ದುವುಳ್ಳುಗುಂ ಮರ್ಮಮಂ (ಶಾಂತಿಪು. ೬-೯೪). ೨. ಅವಯವಗಳ ಕೀಲು ; ಅಸ್ಥಿಸಂಧಿ. ೩. ಅಂತರಂಗ ; ಹೃದಯ ; ಮನಸ್ಸು : ಮೂದಲಿಸಿ ಮರ್ಮವನಿಱಿವ ಸುರಗಿ ಕಣಾ ಸದಾ ಪಾಂಚಾಲೆ ಪವನಜರು (ಕುಮಾವ್ಯಾ. ಆ. ೨೦-೨೪) ; ನನ್ನ ಮಾತಿನ ಸಿಡುಕು ಅವನ ಮರ್ಮ ಮುಟ್ಟಿತು (ಅಂಕೂ. ೦೦೬). ೪. ರಹಸ್ಯ ; ಗುಟ್ಟು : ಲೋಗರ ಮರ್ಮವನ್ನೆದೆ ಭೇದಿಪೊಂದಿರವೆ ಪೊದಳ್ದ ಜಾನಮನೆ (ರಾಜಶೇ. ೦-೪೦) ; ಭಕ್ತಿಯ ಮರ್ಮವನಱಿಯೆ . . . ನಾನು (ಅಂಕೆಶೇ. ೫೦-೬೯) ; ಗುಣವಂತನೊಡನೆ ನಿನಗಿರುವ ಕೆಲಸದ ಮರ್ಮವನ್ನು ನಾನು ಬಲ್ಲೆ (ಅರ್ಜುನ. ೦೦೩). ೫. ಅಂತರಾರ್ಥ ; ಗೂಢಾರ್ಥ : ಕಾವ್ಯದ ಮರ್ಮ ತಿಳಿಯಬೇಕಾದರೆ ಚೆನ್ನಾಗಿ ಮನನ ಮಾಡಬೇಕು (ಕೂಡಿ). ೬. ರಹಸ್ಯವಾಗಿ ಕಾರ್ಯ ನಿರ್ವಹಿಸುವವನು ; ಇತರರಿಗೆ ತಿಳಿಯದಂತೆ ಮರೆಯಲ್ಲಿದ್ದು ಪ್ರಭಾವ ಬೀರುವವನು : ಕೃತಘ್ನನು ಘಾತಕನು ಮರ್ಮನು . . . ದೈವದ್ರೋಹಿಯೆಂಬುದು ಭೂತಳದೊಳೇ ನರಕ ಚಿತ್ರ್ಯಸು (ಕುಮಾವ್ಯಾ. ಅ. ೪-೪೦) ; ತತ್ಪುರದ ಮರ್ಮರುಂ ನಿರ್ಮೂಲನಂಗೆಯ್ದು . . . ಪೊರಮಟ್ಟು ಪುರವನುಂ ನಡೆಗೊಂಡನು (ಕಕಟು. ೩೬-೦೬). [ಸಂ. ಮರ್ಮನ್]

**ಮರ್ಮಕೆಣಕು** (ಕ್ರಿ). ಅಂತರಂಗವನ್ನು ಚುಚ್ಚು : ಮೃದುವಾಗಿ ಆಡಿದ ಮಾತುಗಳಾದರೂ ಅವುಗಳಲ್ಲಿ ಮರ್ಮಕೆಣಕುವ ಅರ್ಥ ಕಂಡ ಜೋಶಿಯವರು . . . ಕಿಡಿಕಿಡಿಯಾಗಿ (ಮೂಕಜ್ಜಿ. ೪೦). [ಮರ್ಮ$_2$ + ಕೆಣಕು$_1$]

**ಮರ್ಮಘಾತ** (ನಾ). ದೇಹದ ಸೂಕ್ಷ್ಮಭಾಗಕ್ಕೆ ಬೀಳುವ ಹೊಡೆತ ; ಶರೀರದ ಆಯಕಟ್ಟಿಗೆ ಬೀಳುವ ಏಟು : ಮದವೆತ್ತಿ ಮೆಟ್ಟಿದರೋರೊಬ್ಬರ ಮರ್ಮಘಾತದಲಿ (ಕುಮಾವ್ಯಾ. ಸ. ೨-೦೦೦). [ಸಂ.]

**ಮರ್ಮಘಾತಕ** (ನಾ). ಅಂತರಂಗಕ್ಕೆ ಬೀಳುವ ಪೆಟ್ಟು, —ಆಘಾತ ಧರ್ಮವಾಗಲಿ ಮೇಣು ರಣದಲಧರ್ಮವಾಗಲಿ ಜಾತಿಯಲಿವರ ಮಮಘಾತಕವಾಯ್ತು (ಕುಮಾವ್ಯಾ. ಗ. ೦೦-೩೬). [ಸಂ.]

**ಮರ್ಮಘಾತುಕ** (ನಾ). ಅಂತರಂಗಕ್ಕೆ ಹೊಡೆತ ನೀಡುವವನು ವಿಶ್ವಾಸಘಾತಕ : ಎಲವೊ ಕೃಷ್ಣಾ ! ಮರ್ಮಘಾತುಕಾ ! (ಅಶ್ವತ್ಥಾ. ೦೩-೩೦೬). [ಸಂ.]

**ಮರ್ಮಜ್ಞ** (ನಾ). (ಬಾಳಿನ) ಗುಟ್ಟನ್ನು ಅರಿತವನು ; (ಜೀವನದ) ರಹಸ್ಯವನ್ನು ತಿಳಿದವನು : ಮರ್ಮಜ್ಞಂ ವ್ಯವಸಾಯಿನಂ . . . ಎಂಬುದರ್ಥಶಾಸ್ತ್ರಸದ್ಭಾವಂ (ಪಂಚತಂ. ೨-೯೦ ವ) ; ಲೋಕಸ್ಥಿತಿಯನು ಲ್ಲಂಘಿಸುವ ಮರ್ಮಜ್ಞರ ವಿರೋಧಿಸುವ . . . ಕ್ಷಿತಿಪನವ ಮೂಢಾತ್ಮನೈ (ಕುಮಾವ್ಯಾ. ಉ. ೩-೪೬) ; ಅಂತಹ ವಾತಾವರಣವನ್ನು ಕಲ್ಪಿಸುವುದರಲ್ಲಿ ಸಂಯಮಿಗಳಾದ ತತ್ತ್ವಜ್ಞರೂ ಮರ್ಮಜ್ಞರೂ ಬಹುಗಂಭೀರವಾಗಿ ಯೋಚಿಸುತ್ತಿದ್ದಾರೆ (ಶೀರಾಕ್ಯ. ೩೬೬೪). [ಸಂ.]

**ಮರ್ಮಭೇದ** (ನಾ). ರಹಸ್ಯವನ್ನು ಭೇದಿಸುವಿಕೆ : ಅರಿಗೆ ತಮ್ಮ ವಿಭೀಷಣಾಂಕನು ಒರೆದು ಕೊಡುವನು ಮರ್ಮಭೇದವ (ತೊರವೆರಾ. ೨೩-೮). [ಸಂ.]

**ಮರ್ಮಭೇದಕ** (ನಾ). ಮನಸ್ಸಿಗೆ ತಾಗುವಂಥದು ; ಮಾರ್ಮಿಕವಾದುದು : ಮರ್ಮಭೇದಕವಾದ ಈ ಮಾತನ್ನು ಕೇಳಿ ಧೃತರಾಷ್ಟ್ರನು ಶಕುನಿಯ ಸಲಹೆಗೆ ಸಮ್ಮತಿಸಿದನು (ಪಕಥಾ. ೪೦). [ಸಂ.]

**ಮರ್ಮಭೇದಿ** (ಗು). ೧. ಅಂತರಂಗವನ್ನು ಭೇದಿಸುವ ; ಮಾರ್ಮಿಕವಾದ. ೨. ಗುಟ್ಟನ್ನು ಹೊರಗೆಡಹುವ ; ರಹಸ್ಯವನ್ನು ಭೇದಿಸುವ. (ನಾ). ೩. ಅಂತರಂಗವನ್ನು ಚುಚ್ಚುವಂಥದು ; ಮಾರ್ಮಿಕವಾದುದು : ನಾನು ಮನೆಯ ಕಡೆ ಬಂದರೆ ಮರ್ಮಭೇದಿಯಾದ ಆಲೋಚನೆಗಳು ಎದುರಿಗೆ ಬಂದು ನಿಲ್ಲುವುವು (ಸಾವಿತ್ರಿ. ೩). ೪. ಗುಟ್ಟನ್ನು ಹೊರಗೆಡಹುವಂಥದು ; ರಹಸ್ಯವನ್ನು ಕಂಡುಹಿಡಿಯುವಂಥದು : ಅವಳ ಕಟಾಕ್ಷವು ಸ್ಥಿರವಾದುದು ಹಾಗೂ ಮರ್ಮಭೇದಿಯಾದುದು (ಕಪಾಕುಂ. ೪೪). ೫. ಬಾಣ. [ಸಂ. ಮರ್ಮಭೇದಿನ್]

**ಮರ್ಮರ** (ನಾ). ವಸ್ತ್ರ, ಎಲೆ ಮುಂತಾದುವು ಅಲುಗಾಡುವುದರಿಂದ ಉಂಟಾಗುವ ಶಬ್ದ : " ತಱಗೆಲೆಗಳ ದನಿಯಂ ಮರ್ಮರಮೆಂಬುದು " (ಶಬ್ದಮ. ೨೩-೦೩೦) ; ಕೇಳಿಸಿತು ಕಡಲ ಮೊರೆ ಹಕ್ಕಿಯಿಂಚರಮಂತೆ ತರುಮರ್ಮರಂ (ಶ್ರೀರಾಪಟ್ಟಾ. ೩೩೪-೪೬) ; ಇರುಳ ಮೋಡ ಮರ್ಮರದಲಿ ನಿನ್ನ ನಲ್ಮೆನುಡಿಯನೆಣಿಸಿ (ಕವಿಶ. ೦೨೦-೦೩). [ಸಂ.]

**ಮರ್ಮರಪತ್ರ** (ನಾ). ಮರ್ಮರ ಎಂದು ಸದ್ದುಮಾಡುವ ಎಲೆ : ಮರ್ಮರಪತ್ರಮಂಬುತಳಮಂ ನಡುವಂತಿರೆ ನಟ್ಟೊಡೆ (ಶಾಂತಿಪು. ೬-೯೪). [ಸಂ.]

**ಮರ್ಮರಿಸು** (ಕ್ರಿ). ಮರ್ಮರ ಎಂದು ಸದ್ದುಮಾಡು : ಸ್ವರ್ಗದ ನಂದನವೃಕ್ಷಗಳೆಲ್ಲ ಮಧುರನಾದದಿಂದ ಮರ್ಮರಿಸುತ್ತವಂತೆ (ಇಜ್ಞಾಂಸೆ. ೨೬೪). [ಮರ್ಮರ + — ಇಸು$_1$]

**ಮರ್ಮರೋಗ** (ನಾ). ದೇಹದ ಸೂಕ್ಷ್ಮಸ್ಥಳಕ್ಕೆ ತಗುಲುವ ರೋಗ ; ಗುಹ್ಯರೋಗ : ಧರ್ಮಸ್ಥಳಕ್ಕೆ ಯಾತ್ರೆ ಹೋಗಿದ್ದಾಗ . . . ಆಡಿದ ಆಟಗಳ ಪರಿಣಾಮವಾಗಿ ಹೆಗ್ಗಡೆಯವರಿಗೆ ಮರ್ಮರೋಗ ಪ್ರಾಪ್ತವಾಗಿತ್ತು (ಮರಳಿಮ. ೩೬೩). [ಸಂ.]

**ಮರ್ಮಸ್ಪರ್ಶಿ** (ನಾ). ಅಂತರಂಗಕ್ಕೆ ತಾಕುವಂಥದು; ಹೃದಯಸ್ಪರ್ಶಿಯಾದುದು : ಗಾಯತ್ರಿ ತನ್ನ ವಿಕಲತೆಯನ್ನು ಮರ್ಮಸ್ಪರ್ಶಿಯಾಗಿ ಬರೆದಿದ್ದಳು (ಶ್ರೀಪಡ್ರೆ. ೨೦೩). [ಸಂ. ಮರ್ಮಸ್ಪರ್ಶಿನ್]

**ಮರ್ಮಳ್** (ನಾ). ಮಗನ ಅಥವಾ ಮಗಳ ಮಗಳು ; ಮೊಮ್ಮಗಳು: ಬೆಳ್ಳೊಲವಣ್ಣೆಗೆಱೆಯ ಜೋಯಿಸಸಿಂಘನ ಮರ್ಮಳಬ್ಬಣಬ್ಬೆಯ ಮಗಂ (ಶಾಸಸಂ. ೯-೦ ಸು. 950) ; ಚಕ್ರವರ್ತ್ತಿತಿಲಕಂ ತೈಲಂಗೆ ಮರ್ಮ್ಮಳ್ ಪೊಡೆರ್ಪ್ಪಿನ ಸತ್ಯಾಶ್ರಯಚಕ್ರವರ್ತ್ತಿಯ ಮಗಳ್ (ಎಇ.XVI, ೨೬-೦ ; 1010). [ಮರ್ಮ₁ + — ಅಳ್₅]

**ಮರ್ಮಾಹತ** (ನಾ). ೧. ಅಂತರಂಗಕ್ಕೆ ಉಂಟಾಗುವ ವೇದನೆ,— ಆಘಾತ : ಅದು ಅತ್ಯಂತ ಕ್ರೂರ ಮತ್ತು ಮರ್ಮಾಹತವಾಗಿರಲೂ ಎಡೆ ಇದೆ (ಪ್ರಸಂ. ೦೯೭). ೨. ಅಂತರಂಗಕ್ಕೆ ಪೆಟ್ಟು ಬಿದ್ದ ವ್ಯಕ್ತಿ: ಅಂದಿನ ನೆನಪಿಗೆ ಯಶೋಧರೆ ಮರ್ಮಾಹತಳಾಗುವಳು (ಶ್ರೀಯಶ. ೩೭-೦೩): ಮರ್ಮಾಹತನಾದ ಆ ಮಾಣಿ ಅಲ್ಲಿ ನಿಲ್ಲದಾದ (ಹೊಸಕ್ಕೆ. ೩೨). [ಸಂ.]

**ಮರ್ಮಿ** (ನಾ). ಗುಟ್ಟಿನ ವ್ಯಕ್ತಿ : ಸಾಗರನ ಬಗೆಹು ಮಹಾತಿಶಯಮೈಯಿವನನಂಜಿಸಲಾತಗಳು ಮರ್ಮಿಗಳು (ಕಾವ್ಯಾಉ. ೦-೨೦). [ಸಂ. ಮರ್ಮಿನ್]

**ಮರ್ಮಿಗ** (ನಾ). ರಹಸ್ಯವನ್ನು ಬಲ್ಲವನು : "ಮರ್ಮಿಕ (ಮರ್ಮಿಗ)— ಮಾರ್ಮಿಕ = ರಹಸ್ಯ ಬಲ್ಲವ" (ತರ್ಕಕೋ. ೩೯) ; ಪ್ರಖ್ಯಾತಪೂತತ್ರಿವಿಧ ಭಕ್ತಿಸ್ಥಲದ ಮರ್ಮಿಗನ . . . ನುಂಗಿಕೊಂಡಿಂತುಗುಳದಿದ್ದಹನಿನ್ನು ಸೈರಿಸನು (ಬಸಪು. ೩೭-೯೦). [ಮರ್ಮ₂ + — ಇಗ]

**ಮರ್ಮೋದ್ಘಾಟನ** (ನಾ). ೧. ಅಂತರಂಗದ ಆಳಕ್ಕೆ ಚುಚ್ಚುವುದು; ಮನಸ್ಸನ್ನು ನೋಯಿಸುವುದು : ನಿನ್ನ ಮಹಿಮೆಗಿದು ನಡೆವಳಿಯೇ ಎಂದು ಮರ್ಮೋದ್ಘಾಟನಂಗೆಯ್ದು (ಶಂಕಾಪಪಾ. ೯-೦೪೩ ಪ). ೨. ರಹಸ್ಯವನ್ನು ಭೇದಿಸುವುದು; ಗುಟ್ಟನ್ನು ರಟ್ಟು ಮಾಡುವುದು. [ಸಂ.]

**ಮರ್ಮೋದ್ಘಾಟನೆ** (ನಾ). = ಮರ್ಮೋದ್ಘಾಟನ ೧ : ಯಾವ ಕೆಲಸ ಮಾಡಿದರೂ ಆಕ್ಷೇಪಣೆಮಾಡಿ ಮರ್ಮೋದ್ಘಾಟನೆ ಮಾಡುವ ಚಾಳಿ ಬರು ಬರುತಾ ಹುಟ್ಟುಗುಣವಾಗುತಾ ಬಂತು (ಪಾಪಮರಾ. ೦೦೩). [ಸಂ. ಮರ್ಮೋದ್ಘಾಟನ]

**ಮರ್ಯಾದಸ್ತ** (ನಾ). ಗೌರವವುಳ್ಳ ವ್ಯಕ್ತಿ; ಮಾನ್ಯ ವ್ಯಕ್ತಿ : ಮರ್ಯಾದಸ್ತ ಹೆಂಗಸರೊಡನೆ ಹೇಗೆ ವರ್ತಿಸಬೇಕೆಂಬುದೂ ತಿಳಿಯುವುದಿಲ್ಲವೆ ನಿಮಗೆ ? (ಆಸುಸಂ. ೯೨). [<ಮರ್ಯಾದೆ + — ಸ್ತ]

**ಮರ್ಯಾದಸ್ಥ** (ನಾ). = ಮರ್ಯಾದಸ್ತ: ನಿನ್ನ ತಂದೆ ಮಾಂಬ್ಳಾರಿಗಳು ತುಂಬಾ ಮರ್ಯಾದಸ್ಥರು (ಮುಂಗಾಪು. ೪). [<ಮರ್ಯಾದೆ + — ಸ್ಥ]

**ಮರ್ಯಾದಿತ** (ನಾ). ಪರಿಮಿತವಾದುದು : ಸೀಮಿತವಾದುದು : ಒಟ್ಟಾರೆ ಸಾಗುವಳಿಗೆ ಯೋಗ್ಯವಾದ ನೆಲದ ಪ್ರಮಾಣವು ಮರ್ಯಾದಿತವೇ ಸರಿ (ಪೂವಾಧ. ೦೩೯); ಭಾರತೀಯವೆಂದು ಮರ್ಯಾದಿತವಾಗಿ ಕೆಲವರು ತಿಳಿದುಕೊಂಡ ಸಂಸ್ಕೃತಿಗೆ ಬೌದ್ಧರೂ ಜೈನರೂ ತಂತಮ್ಮ ರೀತಿಯಲ್ಲಿ ಇದಿರುಬಿದ್ದಂತೆ ವೀರಶೈವರೂ ಸ್ವತಂತ್ರವಾಗಿ ಬಂದು ಕೂಡಿದರು (ಕವಪ. ೦೩). [ಸಂ.]

**ಮರ್ಯಾದೆ** (ನಾ). ೧. ಮೇರೆ; ಎಲ್ಲೆ; ಗಡಿ : ಅಬ್ಧಿಯುಮೊರ್ಮೆ ಕಾಲವಶದಿಂ ಮರ್ಯಾದೆಯಂ ದಾಂಟದೇ (ಶಂಕಾಪಪಾ. ೯-೯೭); ಶ್ರೀ ಮನುಮಹಾಮಂಡಳೇಶ್ವರಂ . . . ರಾಜ್ಯಂಗೆಯ್ಯುತ್ತಂ ಕೋಗಳಿಯಲಿರ್ದ್ದು ಮರಂದಲೆ ಮರ್ಯ್ಯಾದೆಯಾಗೆ ನಾಡನಾಳುತ್ತುಮಿರೆ (ಕ್ಶಇ. IX-i, ೨೯೦-೯; 11ನೆಯ ಶ). ೨. (ಕಾಲ, ಅವಧಿ ಇತ್ಯಾದಿಗಳ) ಗಡು; ಪರಿಮಿತಿ : ಈ ಪ್ರಸರಣಕ್ಕೆ ಮರ್ಯಾದೆಯುಂಟು, ಕೆಲವು ಮರ್ಯಾದೆಯವರೆಗೆ ಪ್ರಸರಣವಾಗುತ್ತ ನಡೆದು ಮುಂದೆ ಮೊದಲಿನ ರೂಪ ಬದಲಾಗುತ್ತದೆ (ಪ್ರಬಂಧು. ೩-೦೨೦). ೩. ದಡ ; ತೀರ : "ಮರ್ಯಾದಾ, ಕೂಲದೇಶಃ — ಈ ೨ ತಡಿ" (ಹಲಾಯು. ೦೦೮-೩೨). ೪. ಗೌರವ ; ಮನ್ನಣೆ : ಪ್ರತಿನಿಮಿಷವನ್ನೂ ಉಪಯುಕ್ತವಾದ ಕೆಲಸದಲ್ಲಿ ವೆಚ್ಚ ಮಾಡುವುದರಿಂದ ವಾಸ್ತವಿಕಸುಖವೂ ಮರ್ಯಾದೆಯೂ ದ್ರವ್ಯವೂ ದೊರೆಯುವವು (ಮುಂಬಯಿ. ೯-೦೯೦); ನನ್ನ ಪ್ರಯೋಗದ ವಿಚಾರ ಬೇರೆಯವರಿಗೆ ಗೊತ್ತಾದರೆ ನನ್ನ ಮರ್ಯಾದೆ ಮೂರುಕಾಸಾಗುತ್ತದೆ (ಶಂಜಕಂ. ೦೭೯). ೫. ಪದ್ಧತಿ ; ನಿಯಮ ; ಕ್ರಮ : ಮೂಱುಜನೆಯ ಶ್ರಾಹೆಗೆ ತೆಱಿನೆಱೆದು ಮೂಱುಗದ್ಯಾಣಮಂ ಪತ್ರಿಗೆ ತೀಱುವರೆಲ್ಲಾ ಕಾಲಕ್ಕಮಿದುವೆ ಮರ್ಯ್ಯಾದೆ (ಕ್ಶಇ. IX-i, ೭೭-೨೩; 992); ವಾಸುದೇವಯ್ಯನುಂ ಮಲ್ಲಯ್ಯನುಂ ಪೂರ್ವಸಾಸನಮರ್ಯಾದೆ ಕೊಟ್ಟರ್ದುದೆಂದು ಬನ್ನಪಂಗೆಯ್ಯಲು (ಕ್ಶಇ. XX, ೬೦-೨೦; 1088); ಈಗಲೀ ಮರ್ಯಾದೆಯಲಿ ಶರಣಾಗತರ ಸೇವೆಯೊಳು ಹೊಂಪುಳಿಯಾಗಿ ಬಾಳುವರೇಸು ಧನ್ಯರೋ (ಹಂಸಾ. ೦೭).

**ಮರ್ಯಾದೆ ಕಳೆ** = ಗೌರವವನ್ನು ಹಾಳುಮಾಡು ; ಅವಮಾನವಾಗುವಂತೆ ಮಾಡು : ತಾಯಿ ಹೀಗೇಕೆ ಮರ್ಯಾದೆ ಕಳೆಯುವ ಕೆಲಸ ಮಾಡಿದಳು (ಹೊಸಕ್ಕೆ. ೬೦). [ಸಂ. ಮರ್ಯಾದಾ]

**ಮರ್ಯೋ, ಮರೇ, ಮರೋ** (ಅ). (ಉಕ) ಖಂಡಿತವಾಗಿ : ಮರ್ಯೋ ಬ್ಯಾಡ ಮಾರಾಯಾ (ಗ್ರಾಮಾದು. ೨೬೦); ಗಂಗಕ್ಕಾ, ನೀ ಮರ್ಯೋ ಹೋಗಬ್ಯಾಡ (ಶೆಂದಯು. ೨೦). **ಮರೇ** : ಸುದಾಸ ಶಾಫಿಭವನದ ತನಕ ನನ್ನಿಂದ ಬರೋದು ಮರೇ ಆಗುವಂತಿಲ್ಲ (ಕೆಂದುಬು. ೬೯). **ಮರೋ** : ಅದರ ವಾಸನೆ ತಡೆಯಲಾಸಲ್ಲ ! ಮರೋ ಒಲ್ಲೆ (ಬಿಲಂ. ೯೦). [ ? ]

**ಮರ್ವು₁** (ಕ್ರಿ). ಕತ್ತಲೆಯನ್ನುಂಟುಮಾಡು ; ಮಸುಕಾಗಿಸು : ಪರ್ವಿತ್ತು ನೇಮಿಸಲ್ಪದರಜಂ ದೆಸೆದೆಸೆಗೆ ಮರ್ವಿತ್ತು ಪರಕಲಿಸೆ ಚತುರಂಗಸೇನೆ (ಹರಿಚ. ೯-೦೩). [ < ಮರ್ವು₂ ]

**ಮರ್ವು₂, ಮಂಪರ, ಮಂಪರು, ಮಬ್ಬು, ಮರ್ಬು, ಮೊಬ್ಬು** (ನಾ). ೧. ನಸುಗತ್ತಲೆ; ಮಸುಕು : "ಮರ್ವೆನೆ ತಮಂ" (ಕರ್ನಾಶ. ೩೭); ತಮಾಲವನಂಗಳ ಮರ್ವು ಪರ್ವಿ ಕರ್ವುಡುಗಳೊಳೆಯ್ದೆ (ಕಾದಂಪೂ. ೬೩೯): ಮೆಯ್ಯಂ ಜಳೂಕಾವಳಿಗಳ್ ಪೀರ್ವಲ್ಲಿ ಮರ್ವುರ್ವಿಸೆ ಸಿಡಿದು ಸಿಡಿಲ್ ಬಂದು ಪೊಯ್ವಲ್ಲಿ ಹೈಮಾಚಳಮಿರ್ಪಂತಾಗಳಿರ್ದ[೦]. . . ಯೋಗಿನಾಥಂ (ಸುಕುಮಾಚ. ೯-೯); ಘೋರತರಂ ಮರ್ವು ನಾಡೆ ಪರ್ವಿದುದಾಗಳ್ (ಪುಣ್ಯಾಸ್ರ. ೦೦-೦೯). **ಮಂಪರ** : ೨. ಅರೆನಿದ್ದೆಯ ಸ್ಥಿತಿ; ಜೊಂಪು : ನಿದ್ರೆ ಬಾರದು . . . ಬರಿಯ ಕಳವಳದ ಮಂಪರ (ಪವರಾ. v, ೭೩); ಮಧ್ಯಾಹ್ನದ ಹೊತ್ತು ನನಗೆ ಸ್ವಲ್ಪ ಮಂಪರ ಬಂದ ಹಾಗಿತ್ತು (ಪಿಸ್ತುಹಿಂ. ೬೦). **ಮಂಪರು** : ೨. ನನಗೆ ಸ್ವಲ್ಪ ಮಂಪರು ಕವಿದಂತೆ ಆಗುತ್ತಿತ್ತು (ಧರ್ಮಶ್ರೀ. ೦೨೩); ರೋಗಿಯು ಕಣ್ಣುಮುಚ್ಚಿ ಮಲಗಿದ್ದರು. ಅವರಿಗೆ ಮಂಪರು ಹತ್ತಿತ್ತು (ಪಂಕಪ್ರ. ೩೨೯). **ಮಬ್ಬು** : ೧. "ಮ[ಶಾಕಾಂ. ಮೊ]ಬ್ಬೆನಲ್ ಕತ್ತಲೆ" (ಶಾರಪ. ೬) ; ಕೋಕಮಿಥುನಂ ಪಾರ್ಶ್ವಿಸಿರಲ್ ಮಬ್ಬು ಪಿಂಗುವುದೇ (ಪಳಸಂ. ೩೯೭): ಫಲುಗುಣನಾದೊಡದ ಕೊಳ್ಳಿನುತ ಕೊಳ್ಳಿಯೊಳಿಟ್ಟನಗ್ನಿಯ ನೆನೆದು ಮಂತ್ರಿಸಲುರಿಮುಖದ ಕಾರ್ಬೊಗೆಯು ಮ[ಶಾಕಾಂ. ಮೊ]ಬ್ಬಿನಲಿ . . . ಮುತ್ತಿತು ರಥವನು (ಶಾವ್ಯಾಆ. ೦೦-೩೩); ಸಾಯಂಕಾಲ ಮಬ್ಬಾದರೆ ಮನೆಯಿಂದಾಚೆಗೆ ಹೋಗುವುದಕ್ಕೆ ಹೆದರುವ ನೀನು ದಳವಾಯಿ ಆಗ್ತೀಯೊ (ಶಿಂಗಾಳ್ಕ. ೩). ೩. ಒಂದು ಬಗೆಯ ಜೂಜಿನ ಆಟ : ರಾತ್ರಿ ಹಗಲು ಅವನಿಗೆ ನಿದ್ರೆಯೋ ಇಲ್ಲ, ಮಬ್ಬು ಆಡುತ್ತಾನೆ, ಲೆಕ್ಕಮುಕ್ಕಿ ಆಡುತ್ತಾನೆ (ಪೋಚಹಿಶೀ. ೩೩). ೪. (ಆಲಂ) ಮಂಕ; ತಿಳಿಗೇಡಿ : ನಾ ಯಾರಿಗೆ ಮತ ಕೊಟ್ಟರೂ ತನಗೇ ಕೊಟ್ಟೇನೀ ಅಂತ ತಿಳೀತದ ಈ ಮಬ್ಬು (ಅಕ್ಕಪೂಇ. ೯೩).

**ಮಬ್ಬು :** ೧. "ಮಬ್ಬು ತಮಂಧದೊಳ್" (ಕರ್ಣಾ. ೨೦); ಪುದಿದೆತ್ತಂ ಮಬ್ಬಿನುಬ್ಬು ಪರ್ಬಿತ್ತುಗಳ್ (ಕಾದಂಬ. ೦೯೦); ಪುಳಿಂದ ಬಲಂ. . . ಮಬ್ಬು ಮಸಗಿದಂತೆ ಸಡಗರಿಸಿ (ಗಂಕ. ೦-೬೮ ವ). ೫. ಜಡತೆ; ಮಂಕು : ಒದವಿದ ಚಿಂತೆ ಪೆರ್ಚೆ ಪಸಿವಿಲ್ಲದೆ ಮಬ್ಬೆರ್ದೆಯುಬ್ಬೆ ನಿದ್ರೆಯಿಲ್ಲದೆ ಬಗೆ ಬೆರ್ಚೆ. . . ಕನಲ್ದು (ಆದಿಪು. ೦೨-೩೩). **ಮೊಬ್ಬು :** ೧. ಹಬ್ಬಿದಾಲತಮಾಲತರುಗಳ ಮೊ [ಪಾಠಾಂ, ನೊ] ಬ್ಬುಗಳ ಹೆಮ್ಮೆಳೆಯ ಹರಹುಗಳ . . .ಕಾಂತಾರದೊಳಗಿವರಬ್ಬರಿಸುತ್ತೈದಿದರು (ಕೊರಠಾ. ೩-೦-೬). ೫. ನಿದ್ರೆಯ ಮೊಬ್ಬಿನಿಂ ಮಲಗಿರಲು (ಸೌಗಂಧಿ. ೨೯೮-೦೦); ನಿದ್ರೆಯ ಮೊಬ್ಬಿನಲ್ಲಿ ಕೈಗೆ ಆಯುಧಗಳು ಸಿಕ್ಕದೆ ಅವುಗಳನ್ನು ಹುಡುಕುವುದರಲ್ಲಿದ್ದರು (ದೇವೀಭಾ. ೬೦). ೬. ಅಜ್ಞಾನ ; ಮಾಯೆ : ಜ್ಞಾನದಿಂ ಮೊಬ್ಬೆಲ್ಲ ಕಿಡುಗು (ಸರ್ವಜ್ಞ. ೪೫೮) ; ಪರರ ಅನ್ನವನುಂಡು ಮೊಬ್ಬಿನಲಿ ದಿನಗಳೆದೆ (ಏಕಾಕ್ಷ. ೦೦೪-೫).

[ದೇ.॥ ತಮಿ. ಮಪ್ಪು; ತುಳು. ಮಪ್ಪು, ಮಬ್ಬು, ಮಬ್ಬು; ತೆಲು. ಮಬ್ಬು, ಮ್ರುಬ್ಬು]

**ಮರ್ಷ** (ನಾ). ಸಹಿಸಿಕೊಳ್ಳುವುದು ; ತಾಳ್ಮೆ : "ಮರ್ಷಃ, ಕ್ಷಮಾ . . . ಸಹಿಷ್ಣುತಾ—ಈ ೫ ಸೈರಣೆ" (ಹಲಾಯು. ೦೨೦-೪೦). [ಸಂ.]

**ಮರ್ಷಿ** (ನಾ). ಸಹಿಸುವವನು ; ತಾಳಿಕೊಳ್ಳುವವನು.

[ಸಂ. ಮರ್ಷಿನ್]

**ಮಲ್** 'ಮಲ್ಲು' ನೋ.

**ಮಲ₁, ಬಲ₂** (ಗು). ಎರಡನೆಯ ಅಥವಾ ಬೇರೆಯ : 'ಮಲದಾಯ್', 'ಮಲಮಗ' ಪರಾ. **ಬಲ₂ :** 'ಬಲತಾಯಿ' ಪರಾ. 'ಮಱು₁' ಹೋ.

**ಬಲಅಕ್ಕ** = ತನಗಿಂತ ದೊಡ್ಡವಳಾದ, ತಂದೆಯ ಬೇರೆ ಹೆಂಡತಿಯ ಮಗಳು : ಅವನಿಗೆ ಒಬ್ಬಳು ಬಲಅಕ್ಕ ಇರುವಳು (ರೂಢಿ). **ಬಲಅಣ್ಣ** = ತನಗಿಂತ ದೊಡ್ಡವನಾದ, ತಂದೆಯ ಬೇರೆ ಹೆಂಡತಿಯ ಮಗ : ವೀರರಾಜರವರ ಬಲಅಣ್ಣನ ಚಿಕ್ಕಕುಮಾರರು ಒಬ್ಬರು ಕೆಲವು ಕುಟುಂಬ ಮಕ್ಕಳು ಸಹ ಉಳಕೊಂಡು ಪಿರಿಯಾಪಟ್ಟಣದಲ್ಲು ಇರುತ್ತ ಇದ್ದರು (ರಾಜೇಂದ್ರ. ೨೯). **ಬಲತ್ತೆ** = ತನ್ನ ಮಾವನ ಬೇರೆಯ ಹೆಂಡತಿ ; ಗಂಡನ ಬಲತಾಯಿ : ಮೈಸೂರವರ ಮನೆತನದಲ್ಲಿ ಪುಟ್ಟಿದ ತನ್ನ ಬಲತ್ತೆ ದೇವಾಜಮ್ಮಣ್ಣಿಯವರ ಒಬ್ಬ ಪುತ್ರನ ವಂಶವು ನಡೆಯಲಿ (ಮಹಾಶಂ. I. ೪೭). **ಬಲಸೊಸೆ** = ತನ್ನ ಗಂಡನ ಬೇರೆಯ ಹೆಂಡತಿಯ ಸೊಸೆ ; ಬಲಮಗನ ಹೆಂಡತಿ : ಆಕೆ ಬಲಸೊಸೆಯನ್ನು ತುಂಬ ವಾತ್ಸಲ್ಯದಿಂದ ಕಂಡುಕೊಂಡಿದ್ದಾರೆ (ರೂಢಿ). [ದೇ.॥ ತೆಲು. ಮಲು]

**ಮಲ₂** (ನಾ). ಒಂದು ಬಗೆಯ ಸಸ್ಯ : "ದೂರಾನುಗತಃ—ಮಲ. ನೆಲಬೇವು. ಹೆದ್ದುಱುಚೆ" (ಓಷಧಿ. ೨೮). [ಸಂ. ಮಲಾ]

**ಮಲ₃, ಮಳ** (ನಾ). ೧. ಕೊಳೆ ; ಹೊಲಸು : ಮಲಮಂಗರಾಗಮಂಬರವಲಯಂ ದಿವ್ಯಾಂಬರಂ . . . ಎನೆ ಮುಕ್ತಿಲಲನೆಯನೊಲಿಸಲ್ ಕೈಗೈದು ನಿಂದನಜಿತಮುನೀಂದ್ರಂ (ಅಜಿತ. ೭-೪) ; ಮಲಮಂ ಧರಿಯಿಸಿ . . . ಪಲ್ಲಂ ಸುಲಿಯದೆ ಮಿಾಯದೆ ಮಿಳ್ಳದೆ ಕುಲದಿಂ ಕೆಟ್ಟವರನಣ್ಣ ನೀಂ ಮನ್ನಿಪುದೇ (ಧರ್ಮಾಮೃ. ೦-೦೦೩). ೨. ಶರೀರದಿಂದ ಹೊರಬರುವ ಹನ್ನೆರಡು ಅಶುಚಿದ್ರವ್ಯಗಳಲ್ಲಿ ಒಂದು; ಹೇಲು ; ಅಮೇಧ್ಯ; P ಕೊಬ್ಬು, ವೀರ್ಯ, ರಕ್ತ, ಮಜ್ಜೆ, ಮೂತ್ರ, ಪುರೀಷ, ಕಿವಿಯ ಗುಗ್ಗೆ, ಸಿಂಬಳ, ಕಫ, ಕಣ್ಣೀರು, ಕಣ್ಣಿನ ಪಿಸುರು, ಬೆವರುಗಳೆಂಬಿವು ಹನ್ನೆರಡು ಅಶುಚಿದ್ರವ್ಯಗಳು : "ವರ್ಚಃ, ಉತ್ಸರ್ಗಃ . . . ಪುರೀಷಂ, ಮಲಂ-ಈ ೧೨ ಪಿಷ್ಟೆ" (ಹಲಾಯು. ೦೦೫-೦೫) ; ಮಲವು ಪುರುಷನಿಗೆ ಅನಾದಿಯಾಗಿರುವ ಅಶುದ್ಧಿ (ಹಿಂದಶಾ. ೨೯೬). ೩. ತುಕ್ಕು; ಜಂಗು. ೪. ಪಾಪ ; ಪಾತಕ : ಇಲ್ಲಿ ಮನದ ಮಲ ಹರಿವಂತೆ ಅಲ್ಲಿ ಮೆಯ್ ಶುದ್ಧಿಯಾಗದು (ಮಕೋಧ. ೦೬). ೫. ಕಳಂಕ ; ದೋಷ : ಮಲ ಎಂದರೆ ದೋಷ (ಶಾಕ್ತ. ೬೨೯). ೬. ಧಾರ್ಮಿಕಕಾರ್ಯಗಳ ಆಚರಣೆಗೆ ಅಶುಭವಾಗಿರುವುದು : 'ಮಲಮಾಸ' ಪರಾ. ೭. ವಜ್ರದ ಒಂದು ದೋಷ : ಮಲವು ಎಂದರೆ ವಜ್ರದಲ್ಲಿ ಹಳ್ಳ ಬೀಳುವುದು (ಸೌಗಂಧಿ. ೩೬೪-೩೩). ೮. ಶರೀರದ ವಾತ, ಪಿತ್ತ ಮತ್ತು ಕಫಗಳೆಂಬ ಮೂರು ರಸಧಾತುಗಳು. ೯. [ವೀಶೈ] ಐದುವಿಧವಾದ ಪಾಶಗಳಲ್ಲಿ ಒಂದು : 'ಮಲಪಾಶ' ಪರಾ. ೧೦. ಜೀವನಿಗೆ ಅಂಟಿಕೊಳ್ಳುವ ಮೂರು ಬಗೆಯ ದೋಷ : 'ಮುಮ್ಮಲ' ಪರಾ. **ಮಳ :** ೧. ಆ ಇರುಳ್ ಪಿರಿದೊಂದು ಮಟೆ ಕೊಂಡು ಮೆಯ್ಯ ಮಳಮೆಲ್ಲಮಂ ಕರ್ಚಿ ಕಳೆದು ಪಾಷಾಣಮೆಂಬ ಮಡುವಂ ನೀರ್ ಪೊಕ್ಕಾಗಳ್ (ವಡ್ಡಾರಾ. ೦೦೭-೨); ಖಳೇರ್ವರಾಜನೊದವಿದ ಬಳಮಂ ಕಿಡಿಸಲ್ಕೆವೇಡಿ ತೊಟ್ಟಿರ್ದಾ ಕತ್ತಳೆಮಂ ಪೋಲ್ತುದು ನೋಡಲ್ ಮಳಮೋರಂತಮರ್ದು ಕೂಡೆ ಸರ್ವಾಂಗಮುಮಂ (ಧರ್ಮಾಮೃ. ೩-೨೭೬). ೨. ''ಅಮೇಧ್ಯಮವಸ್ಕರಂ ಶಕೃದ್ಗೂಥಂ ವಿಷ್ಟೆ ಮಳಂ ಪುರೀಷಮುಚ್ಚಾರಮುದಕ್ಕುಂ'' (ಪಮ್ಪಕೋ. ೭೨-೩೦). ೪. "ದುರಿತಂ ಪಾಪಂ. . . ಮಳಂ ದುಷ್ಕರ್ಮಂ" (ಪಮ್ಪಕೋ. ೨೦-೦೨). ೫. ಈ ವರಧರ್ಮದಿಂದಘಕುಲಂ ಕಿಡುಗುಂ . . . ಮಳಂ ಕಿಡುಗುಂ (ಧರ್ಮಾಮೃ. ೭-೬೦). [ಸಂ.]

**ಮಲಂಗಿಸು,** ಮಲಗಿಸು (ಕ್ರಿ). ೧. ಶಯನಗೊಳ್ಳುವಂತೆ ಮಾಡು; ಶಯನಗೊಳಿಸು : ಪೊಳೆವ ತಣ್ಣದಿರ್ಗಲ್ಲ ಪಸೆಯೊಳೇಳೆಲೆವಾಳೆಯೆಳೆಯೆಲೆಯ ಪಚ್ಚಡಿಸಿ. . . ಕಾಂತೆಯ ಮಲಂಗಿಸಿ (ಶಬ್ದರಾ. ೬-೯೨). ೨. ಹಸ್ತಾವಲಂಬನವನ್ನು ಪಡೆ; ಹಸ್ತಾವಧಾನ ಹೊಂದು : ಕೆಳದಿಯರ ಕೆಯ್ಯೊಳ್ ಮೆಯ್ಯಂ ಮಲಂಗಿಸಿ ಮೆಲ್ಲಮೆಲ್ಲನಡಿಯಿಡುವಾಗಳ್ (ಗಂಕ. ೫-೭೭ ವ). ೩. ನಾಶವಾಗುವಂತೆ ಮಾಡು; ನಾಶಗೊಳಿಸು : ಚೋಳನ ಮೇಲೆ ನೀಡಿ ಕರಮಂ ಪದಪಲ್ಲವಮಂ ಕಳಿಂಗಭೂಪಾಲನ ಮೇಲೆ ನೀಡಿ ಮಗಧಾವನಿಪಾಲಕನಂ ಮಲಂಗಿಸಲ್ ಲೀಲೆಯೊಳಿರ್ಪೆನೆಂಬ ಮನಮುಳ್ಳೊಡೆ ಪೂಜಿಸು. . . ಚತುರ್ಮುಖಶಾಂತಿನಾಥನಂ (ಧರ್ಮಾಮೃ. ೫-೬೪). **ಮಲಗಿಸು :** ೧. ಕರ್ಪುರದ ಕವಳದ ಯಂತ್ರುರಕ್ಷೆಯಲವನಿಪನ ಸಂತೈಸಿ ಮಲಗಿಸುತ (ಕುವ್ಯಾಕ. ೦೦-೫೬); ಮಜ್ಜನಂಗೈಸಿ ಮಡಿಯಂ ಪೊದಿಸಿ ಮೆಶ್ವಾಸಿನೊಳ್ಮಲಗಿಸುವರಳ್ತಿಯಿಂ (ಕೈವಲ್ಯ. ೨೮-೨೦); ಮಲಗಿಸು ಬಾ ಅಪ್ಪ ಹಾಗಾದರೆ (ಕಂಗಾಳ. ೦೫೫). ೪. ಓರೆಯಾಗಿ ಇಡು; ಒರಗಿಸು : ಬಸಿದ ಬಲುದಸಿಗಳಂ ಮಲಗಿಸಿ ಮರಂಗಳನಿರಿಸಿ ಎಡೆಗೆಡೆಗೆ . . . ಪೊಸದುರ್ಗಮಂ ಪಾಟಿಸಿ ಪಿರಿಯ ಸಡಬಾವಿಗಳನಗುಳಿಸಿದನದಱೊಳಗೆ (ಬಸವ. ೦೬-೦೦). [ಮಲಂಗು₁ + — ಇಸು₃]

**ಮಲಂಗು₁,** ಮಲಗು₁ (ಕ್ರಿ). ೧. ಒರಗು; ಆತುಕೊಳ್ಳು : "ಮಲಗು, ಮಲಂಗು—ಉಪಧಾನಾವಲಂಬೇ, ಉಪಧಾನೇ ಚ (ತಲೆದಿಂಬು)" (ಶಮಂದ) ; ಖುರಮಣಿಕೆಯೊಳ್ ಕಾಲನಿಕ್ಕಿ ಮಂದುರದ ಮುಂಡಿಗೆಯಂಮಲಂಗಿ ಕೌತುಕಂಬೆರಸು ಕೇಯೂರನನಿಂತೆಂದಂ (ಕಾದಂಬ. ೦೯೬); ಪಳಿಕಿನ ಚೌಪಳಿಗೆಯ ನೀಲಶಿಲಾಸ್ತಂಭಮಂ ಮಲಂಗಿ . . . ನಿಖಿಲಜನಮನಃಪೀಠದೊಳ್ಮನಸಿಜಂ ಪ್ರತಿಷ್ಠೆಗೆಯ್ದು ರತಿಯಂತೆ ನಿರತಿಶಯಮಾಗಿ ರ್ಪುದುಂ (ಶಂಠಾಮಾ. ೫-೫೭ ವ). ೨. ಶಯನಗೊಳ್ಳು; ಶಯನಿಸು : ಅಲರ್ದಪ್ಪಂ ನಿಮಿರ್ದ ಲತೆಯ ಮೇಲೆ ವಿಳಾಸಂ ನಿಲೆ ನೀಡಿ ಕಾಲನರೆಬರ್ ಮಲಂಗಿದರ್ ಪೊಳೆವ ತಳಿತ ಬೊಂದರಿಗೆಗಳೊಳ್ (ಆದಿಪು. ೦೨-೭೬). ೩. ನಿದ್ರಿಸು ; ನಿದ್ದೆಮಾಡು : ಅತ್ತ ಮಲಂಗಿದಳೇ ಮನೆಯತ್ತಲ್ ಸುಟಿವವನುಪೊರ್ವನಿಲ್ಲಮೆನುತ್ತುಂ . . . ಅರಳಿಗಂಗೆ ಮಿಗೆ ಸೂಚಿಸಿದಳ್ (ಉದ್ಭಟ. ೦೦-೦೦೦) ; ಭೃಂಗಮಿಥುನಮಂಭೋರುಹದೊಳಗೆ ಮಲಂಗಿ ಬಳಿಕ್ಕಾ ನಿದ್ರೆತಿಳಿಯೆ ಪಕ್ಷಂಗೆದಱುವ ಭಂಗಿಯ

ಕಡುಚಲ್ವಂ ನೆನೆಯಿಸುತೊಪ್ಪಿದುವು (ಶಬರಾ. ೨-೪೩). ೪. ಕೂಡು ; ಸಂಭೋಗಿಸು : ಇನಿಯಳ ಮೇಲೆ ಕಾಮಸುಖಮಂ ಕೊಳಲೆಂದು ಮಲಂಗಿ (ಧರ್ಮಾಮೃ. ೬-೦೬೧). ೫. ತಬ್ಬು ; ಆಲಿಂಗಿಸು : ಮಾವಂ ಮಲಂಗಿದ ಮಲ್ಲಿಕಾಲತೆಯು ಪೂಗತರು ಕೈಗೊಟ್ಟ ನಾಗಲತೆಯು . . . ಬಾಳ್ಗೊಂಪವ ಬಳಸು ವಿಳಸವಾದ ರತ್ನರಚಿತಕೃತಕಾಚಲಂಗಳೊಳ್ (ಅನಂಪು. ೧೧-೨೪ ವ). ೬. ಕ್ರಿಯಾಶೂನ್ಯವಾಗು ; ನಿಷ್ಕ್ರಿಯವಾಗು : ಹರಿಣಾಂಬಕಿ ಮತ್ತ್ರಿಯೆ ಪರಿಪರಿಯಿಂ ಬೋಧಿಸಿದೊಡಂ ಮಲಂಗಿದು ದಾಗಳ್ ಒರೆವಪೆಸೇನಂ ಹತಮನಂ (ಶಾಕುಂತ. ೮೨-೧೩೮). ೭. ನಿಲ್ಲು ; ಸ್ಥಗಿತಗೊಳ್ಳು ; ಅಡಗು : ನಿಡುಸುಯ್ ಮಲಂಗಿ [ಶಾಕಾಂ. ಮಲಗಿ] ಸರ್ವಾಂಗಂ ಸಡಿಲ್ದು . . . ಮೂರ್ಛಿತರಾಗಿ (ನಂಚರ. ೦೪-೩೦). **ಮಲಗು$_1$** : ೧. "ಮಲಗು, ಮಲಂಗು ... ಉಪಧಾನಾವಲಂಬೇ, ಉಪಧಾನೇ ಚ (ತಲೆದಿಂಬು)" (ಶಮಧಾ) ; ಕುಳ್ಳಿರ್ದನು ಮಹೀಪತಿ ಮಾನಿನಿಯ ಮಲಗಿ (ಕುಮಾ.ಭಾ. ೦೬-೧೧). ೨. ವಿಷಯವೆಂಬ ರಸವ ಕುಡಿದು ಅಜ್ಞಾನವೆಂಬುದೊಂದ ಹಾಸಿಗೆಯಲ್ಲಿ ಮಲಗಿ ಮೂರ್ಛೆ ತಿಳಿಯದೆ ಇಪ್ಪುದ ಕಂಡು (ಅದಪ. ೦೩-೨೬) ; ಆಲದೆಲೆಯ ಮೇಲೆ ಮಲಗಿದ ಶಿಶುವೇ (ಪುರಂದ. ೦-೨-೨೮) ; ಅಚ್ಚ ಪೂರಾಯಗಾಯದೊಳ್ ಮೈಮಱೆದು ಕಣ್ಮುಚ್ಚುತೆ ಪರೂಥದೊಳ್ಮಲಗಲ್ಕೆ ಕಂಡು (ಕೃಬಾಕ. ೬-೪೫). ೩. ಕಂದನೇಕೆ ಮಲಗನೆ ಕೇಳೆಲೆ ಸಖಿ (ಪುರಂದ. ೨-೫೪ ಪಲ್ಲ). ೮. ಬಾಗು ; ಓಲು ; ಜೋತುಬೀಳು : ತಳಿತ ಚೂತದ ಸಸಿಗಳವನಿಗೆ ಮಲಗುವಂತಿರೆ ರಾಜಪುತ್ರರು . . . ಎಸೆದರು ಸಾಲ ಶಯನದಲಿ (ಕುಮಾ.ದ್ರೋ. ೫-೬೪). ೯. (ಅನಾರೋಗ್ಯದಿಂದ) ಹಾಸುಗೆ ಹಿಡಿ; ಅಸ್ವಸ್ಥವಾಗು : ಬರಬರುತ್ತಾ ಖಾಯಿಲೆ ಹೆಚ್ಚಾಗಿ ಅವರು ಪೂರ್ತಿ ಮಲಗಿಯೇ ಬಿಟ್ಟರು (ರೂಢಿ).

[ದೇ.॥ ತುಳು. ಮಲಗು, ಮಲೆಂಗು ; ಕೊಡ. ಮಲಂಗ್ ; ಕುಇ. ಮಲ್ಗ, ಮಲ್ಗಿ]

**ಮಲಂಗು$_2$, ಮಲಗು$_2$** (ನಾ). ಒರಗಿಕೊಳ್ಳುವ ಸಾಧನ : ಒರಗು ದಿಂಬು ; ಲೋಡು : ಅವನಿಪಾಳಕನಲರ್ಗಳ ತಲೆಗಿಂಬಿನಿಂದ ಮಲರ ಮಲಂಗಿಂದಲರ ದಳಂಬದಿನಿಂಬಾದಲರ್ವಾಸಿನ ಮೇಲೆ ಲೀಲೆಯಿಂ ಕುಳ್ಳಿರ್ದಂ (ಪಾರ್ಶ್ವ. ೯-೩೦) ; ಮಂಟಪದ ನಡುವೆ ಚಂದ್ರಿಕೆಯು ಚಂಪೆಯುಮನೆತ್ತಿದಂತೆ ಸೊದೆವಟ್ಟಯದ ಲೋವೆಯು ಮುತ್ತಿನ ಲಂಬಣದ ಮಲಂಗು (ಅನಂಪು. ೫-೬ ವ) ; (ಕಣ್ಮುಚ್ಚಿ, ಹಿಂದಣ ಮಲಂಗಿಗೆ ಒರಗಿಕೊಳ್ವನು) (ಚಿಟ್ಟಿ. ೦೬-೦೬). **ಮಲಗು$_2$** : ಸಂಜಯನರಸನನು ಕುಳ್ಳಿರಿಸಿ ಬೆನ್ನಿಗೆ ಚಾಚಿದನು ಮಲಗ (ಕುಮಾ.ಭಾ. ೦-೯) ; ಮಿನಾಂಕನಿದ್ದನು ಮಲಗ ಹಾಸೊಳಗಿ ಸುಮ್ಮಾನದೊಳು (ಭರತ. ೪೬-೬೪) ; (ಶಾಂತನಾಗಿ ಕಟ್ಟಾಸರಿಂದ ಕಣ್ಮುಚ್ಚಿ ಮಲಗನ್ನು ನೆಮ್ಮಿರುವನು) (ಚಿಟ್ಟಿ. ೦೮೩-೦೦). [<ಮಲಂಗು$_1$]

**ಮಲಂಗುಮೂಡೆ, ಮಲಗುಮೂಡೆ** (ನಾ). = ಮಲಂಗು$_2$ : ಕಮಳ ಕಂಚಿಕಸೂಚಿಯಿಂ ಕಮಳಸೂತ್ರಮಂ ಕೋದು ಪೊಲದಿರಿಸಿದ ಮಲಂಗುಮೂಡೆಯುಂ ಮೋಡಿಯೊಳೊಱಗಿ (ರಾಜಶೇ. ೦-೦೩೫ ವ). **ಮಲಗುಮೂಡೆ** : ಸೊಗಯಿಸುವ ರಂಗಮಂಟಪದೊಳೆಡೆವಡೆದ ಗದ್ದುಗೆ ಮಲಗುಮೂಡೆಗಳ ನಡುವೆ ಕುಳ್ಳಿರ್ದು (ಸೌಂದರ್ಯ. ೬-೫೫) ; ಶಾಸೆಸೆವ ಮಂಡಲಾದ್ರಿಯೆ ಮಲಗುಮೂಡೆ . . . ಗಗನವೇ ಸತ್ತಿಗೆಯುದಾಯಿತು (ಚಿಕ್ಕಪು. ೨-೦೦-೦೫) ; ಮುತ್ತಿನ ಗದ್ದುಗೆ ಮಲಗುಮೂಡೆಯೊಳು ಬೆನ್ನೊತ್ತಿ ಮಂಡಿಸಿದಳಾ ಕುಮರಿ (ಪೋಚಹ. ೨೬-೯). [ಮಲಂಗು$_2$+ಮೂಡೆ]

**ಮಲಕಟ್ಟು** 'ಮಲಗಟ್ಟು' ನೋ.

**ಮಲಕಾಡುಹತ್ತಿ** (ನಾ). ಒಂದು ಬಗೆಯ ಸಸ್ಯ : (ವೃಕ್ಷ ನಿ. ೪೩-೮೪೯). [ಮಲ ? + ಕಾಡುಹತ್ತಿ]

**ಮಲಕಿಸು** (ಕ್ರಿ). ಅಲುಗಾಡಿಸು; ಆಡಿಸು : ಕುಲುಕಿಸಿ ಕೈಕೈ ಮಲಕಿಸಿ ವೈ ವೈ (ನಂ. ೦೨೨-೦೦). [ಮಲಕು$_1$ + —ಇಸು$_3$]

**ಮಲಕು$_1$, ಮಲುಕು$_1$** (ಕ್ರಿ). ೧. ಚಲಿಸು; ಅಲ್ಲಾಡು : ದೊಡ್ಡಪ್ಪ ಗುಡಿ ಮುಂದೆ ಕಬ್ಬಿಣದುಯ್ಯಾಲೆ ಕಳ್ಳರು ತೂಗಿದರೆ ಮಲಕೊಲ್ಲ (ಜಗೀಕ. ೦೩); ಹಾರುವರ ಕೇರಿಯ ತೇಗದ ತೇರು ಯಾರ್ಯಾರು ನೂಕಿದ್ರು ಮಲಕೊಲ್ಲ ಯಾರ್ಯಾರು ನೂಕಿದ್ರೂ ಮಲಕದ ತೇರು ಗೊರವ್ನೂರ ಹೊಲೆಯರು ಮುಟ್ಟಿದ್ರೆ ನಲಿಯುವ ತೇರಿಗ್ಹೋಗೋಣ ಬನ್ನೀರೆ (ಗರುಜಾ. ೬೩). **ಮಲುಕು$_1$** : ೨. ಚಂಚಲವಾಗು: ಮಲುಕಿ ಸೂಳೆಯ ನೆಚ್ಚಿ ಮನೆಯೊಳು ಸಲುವ ಹೆಂಡಿರ ಬಿಟ್ಟು ಪೋಪುದು ಚೆಲುವೇಸ್ಯೆಯು (ಕಂಕ. ೩೬-೬).

[ದೇ.॥ ತೆಲು. ಮಲಯು ; ಪರ್ಜಿ. ಮೆಲ್ ; ಗೊಂಡಿ. ಮುಶ್ಕಾನಾ, ಮುಲ್ಕಾನಾ]

**ಮಲಕು$_2$, ಮಲುಕು$_2$** (ನಾ). ೧. ಜೋಡಣೆ ; ಹೆಣಿಗೆ : ಮಾತಿಗೆ ಮಲಕಿಲ್ಲ ನೀತಿಗೆ ತೊಡಕಿಲ್ಲ (ಜನಗೀ. ೫೩); ಮುದುಕಿಯ ಮಾತಿನ ಮಲಕಿನಲ್ಲಿಯೇ ಆತ ಸುತ್ತುತ್ತ ಬಂದಿದ್ದ (ಅಕಾಲೀಕ. ೦೫೮); ವಿಚಾರವು ಮಾತಿನ ಮಲಕೂ ಅಲ್ಲ . . . ವಿಚಾರವು ವಿಚಾರಿಯ ಅನುಭೂತಿಯನ್ನೂ ವಿಷಯದ ಗುಣವನ್ನೂ ಏಕಜೀವ ಮಾಡುವ ಕಲೆಯು (ವಿಚಾಮಂ. ೬೦). ೨. ಗಂಟು ; ಕುಣಿಕೆ : ದಾರವನ್ನು ಕೈಯಲ್ಲಿ ತೆಗೆದುಕೊಂಡು ಎಳೆದರು ಮಲಕು ಬಿಡಲೇ ಒಲ್ಲದು (ಕಶಪು. ೫-೯); ಮಲಕು ಬಿಡಲಿ ನಿನ್ನ ಸೂತ್ರಾ (ಮುಕ್ತಕಂ. ೬೩-೨). 'ಮುರಿಮಲಕು' ಪರಾ. ೩. ಮಣಿ ಮುಂತಾದುವನ್ನು ಪೋಣಿಸಿ ಹೆಣೆದಿರುವ (ತೋರಣದಂಥ) ಒಂದು ಬಗೆಯ ಅಲಂಕಾರ ವಸ್ತು : ಉಟ್ಟ ಪೀತಾಂಬರವಲೆಸೆವ ಮಲಕಿನ ಚಾರುಕಟ್ಟನಂ ಬಿಗಿದ ಮಣಿಮೇಖಲೆಯ ಕಿರಣದಿಂ (ತುರಂಗ. ೫೬-೨೮). ೪. ತಲೆಯ ಮೇಲೆ ಧರಿಸುವ ಒಂದು ಬಗೆಯ ಆಭರಣ ; ಶಿರೋಭೂಷಣ : ರಂಗನ ಶಿಖಿಗೆ ಸುತ್ತಿದ ಮುತ್ತುಮಲಕಿನ ಸಿಂಗರಗಳನೇನನೆಂಬೆ (ಕೃಷ್ಣಗೋ. ೨-೪೪); ಕಡಗ ಸರಪಣಿ ಸಾರಸನ ಶಿರಕಿಡುವ ಮಲಕುಗಳಿಂದ . . . ಪದ ನಡನಡುಗುತಲಿ ನಡೆತರುವ ಶಿಶುಗಳ ಬೆಡಗ ನೋಡುತಲೆಸೆದಳು (ಜನಕಾ. ೬-೦೯) ; ತಲೆಯ ಮೇಲೆ ಮಲಕು : ಸೊಗಸಾಗಿ ಕಟ್ಟಿರುವ ತುರುಬಿಗೆ ಒಂದು ಜಡೆಬಿಲ್ಲೆ (ಮಲ್ಲಿ. ೪೦). ೫. ಒಂದು ಬಗೆಯ ಕಂಠಾಭರಣ ; ಸರ ; ಹಾರ : ಕಂದುಗೊರಲನ ಬೆಳ್ಗೊರಲೊಳ್ ಜಾಗವರಲ ಮಲಕನವರ್ಜಿ (ರಾಜಾಶ್ಚ. ೧೩೦-೦೦). ೬. (ಮಣಿ ಮುಂತಾದುವುಗಳನ್ನು ಪೋಣಿಸಿ ಇಳಿಬಿಟ್ಟ) ತೋರಣ: ಮುತ್ತಿನ ಮಲಕಿನ ಜಾಲಂದರದ ಗವಾಕ್ಷದೊಳ್ ಮೆಲ್ಲಮೆಲ್ಲನೆ ನೋಡುತ್ತ . . . ಈರ್ವರ್ ಪುರುಷರಂ ಕಂಡು (ಸೌಗಂಧಿ. ೩೩೯-೬). ೭. [ನಾಟ್ಯ] ಒಂದು ಬಗೆಯ ನೃತ್ಯಭಂಗಿ : ಮಲಕು ಕತ್ತರಂ ತುಳಿಲನಿಪ್ಪವು ಲೇಸು ವಡೆಯೆ ತಾಂಡವಮನಾಡುತಿರ್ದಳೀಶ್ವರನ ಸಮ್ಮುಖದೊಳು (ರೇವಣ. ೩೨-೪೮). **ಮಲುಕು$_2$** : ೮. ಹಿಡಿತ ; ಪಟ್ಟು : ಈ ಮಲುಕಿಗೂ ಮಣಿಯಲಿಲ್ಲ ಈ ಪಂಡಿತಪುಂಗವ ! (ತುಂಗಭ. ೬).

ಮಲಕಿನ ತೆನೆ = ಹೆಣಿಗೆಯ ರೀತಿಯಲ್ಲಿರುವ ಕೋಟೆಯ ಗೋಡೆಯ ಮೇಲುಭಾಗದ ರಚನೆ,– ತೆನೆ : ಮೂಡಣ ನಿಟ್ಟು ೧೬೩ ನೀಳ ೨೬೭ ಮೂರು ಮಲಕಿನ ತೆನೆ ೩೩೦ . . . ಈ ಮೇರೆಗೆ ಅಳತೆಯಂ ಮಾಡಿ (ಮಹಾಪಂ. I, ೯೦); ಬಿರುಕುಬಿಟ್ಟಿರುವ ಮಲಕಿನ ತೆನೆಗೆ ಸ್ವಲ್ಪ ಪಶ್ಚಿಮವಾಗಿ_ಇದಕ್ಕಿಂತ ದೊಡ್ಡ ಕೊರಕಲಾಗಿ ಹೋಗಿದೆ (ಚಿಟ್ಟಿ. ೬೮-೦೬). ಮಲಕು ಬೀಳು = ಜೋಡಣೆಯಾಗು : ಮಾತಿಗೆ ಮಾತು ಮಲಕು ಬಿದ್ದು ಬಾಬಣ್ಣ ಮನೆಯಲ್ಲಿ ಉಳಿವ (ಅಕಾಲೀಕ. ೬೮).

[ದೇ.॥ ತಮಿ. ಮಲುಕ್ಕು ; ತುಳು. ಮಲಕ್ ; ತೆಲು. ಮಲುಗು, ಮಲ್ಕು ]

**ಮಲಕುಗೊಳ್** (ಕ್ರಿ). ಗಂಟಾಗು ; ತಿರಿಚಿಕೊಳ್ಳು : ಮಲಕುಗೊಂಡ ಸುರತ್ನಹಾರಂಗಳನು ಸರಿಸಕೆ ತಂದು (ಅನಂತಾ· ೬-೦-೬೩).

[ಮಲಕ್ಕು$_2$ + ಕೊಳ್$_1$]

**ಮಲಕುಟ** (ನಾ). ಗುದದ್ವಾರ : ನಮುವಣದೇಶದ ನಿಟ್ಟೆಲುವಿಂಗಂ ಆಸರಿಸುಗು ಮಲಕುಟಂ ತಿಕಂ ತಾಮೆಂದುಂ (ಅಕ್ಷರಾ. ೯-೯೯). [ ? ]

**ಮಲಗಟ್ಟು, ಮಲಕಟ್ಟು** (ನಾ). ಮಲವಿಸರ್ಜನೆಯಾಗದಿರುವುದು : ಮಲಬದ್ಧತೆ : ಅಜೀರ್ಣ, ಮಲಗಟ್ಟು, ನರಗಳ ಹಿಮ್ಮುರಿಗೆಗಳು (ರಿಫ್ಲೆಕ್ಸಸ್) ಅತಿಯಾಗಬಹುದು (ಶರೀಕೋ. I, ೯೯೩). **ಮಲಕಟ್ಟು** : ಅಜೀರ್ಣ, ಮಲಕಟ್ಟು . . . ಈ ಬೇನೆಯನ್ನು ಕೆರಳಿಸುತ್ತವೆ (ಶರೀಕೋ. I, ೯೯೬). [ಮಲ$_3$ + ಕಟ್ಟು$_2$]

**ಮಲಗದೆ** (ನಾ). ಒಂದು ಬಗೆಯ ಭೂಮಿ : ಬಯಲುಗದೆ ಒಂದಕಂ ಬಿತ್ತುವದು ನಾಲ್ವತ್ತರಲಿ ಮು ೯ ಮನೆ ಮಲಗದೆ ಅನುಭಸಹಿತ ಯಾ ಬಾಳಗೇಣಿ (ಶಾಇಇ· IX-ii, ೯೩೨-೨೦; 1450). 'ಮಲ್ಲಗದ್ದೆ' ಪರಾ.

[ ? ]

**ಮಲಗಿಸು** ' ಮಲಂಗಿಸು ' ನೋ.

**ಮಲಗು$_1$** ' ಮಲಂಗು$_1$ ' ನೋ.

**ಮಲಗು$_2$** ' ಮಲಂಗು$_2$ ' ನೋ.

**ಮಲಗು$_3$** (ನಾ). ಒಂದು ಬಗೆಯ ಮೀನು : ಬಿಳಿಚ ಚಿಪ್ಪಲು ಮಲಗು ಹೆಮ್ಮಲಗು . . . ಗಿಜಿಲುಗಳೆಂಬ ಹೊಳೆವಳಿಯ ಮೀನ್ಗಳಂ ತವಿಸುತಿಹ ಬೇಡರಂ ನೋಡಿದಂ ಭೂಪಾಲನು (ಹತಶಾ· ೩-೪೬).

[ ದೇ.॥ ತಮಿ. ಮಲಜ್ಕು ; ತೆಲು. ಮಲಗು ]

**ಮಲಗುದಾಣ** (ನಾ). ಮಲಗುವ ಸ್ಥಳ,—ಜಾಗ : ಮಲಗುದಾಣಂ ತೊಯ್ದರೆಯ ಸಜ್ಜೆ ! (ಶ್ರೀರಾಮಾ. ೬೯-೩೦೦).

[ಮಲಗು$_1$ (< ಮಲಂಗು$_1$) + ತಾಣ]

**ಮಲಗುಮಾಡ** (ನಾ). ಮಲಗುವ ಮಹಡಿ,—ಉಪ್ಪರಿಗೆ : ಪೂಗಳಂ ಸಮೆದು ತೋರ್ಪ ಚಾವಡಿ ಮಲಗುಮಾಡಂಗಳು . . . ಕಣ್ಗೆಸೆದುದೇನೆಂಬೆನು (ಕಂಠೀ· ೪೩-೨೬). [ಮಲಗು$_1$ (< ಮಲಂಗು$_1$) + ಮಾಡ$_1$]

**ಮಲಗುಮೂಡೆ** 'ಮಲಂಗುಮೂಡೆ' ನೋ.

**ಮಲತಂಗಿ,** ಬಲತಂಗಿ (ನಾ). ತನಗಿಂತ ಚಿಕ್ಕವಳಾದ, ತಂದೆಯ ಬೇರೆಯ ಹೆಂಡತಿಯ ಮಗಳು : ಗೋಪಾಲ . . . ರಾಧಕ್ಕನ ಮಲತಂಗಿಯಾದ ಯಮುನೆಗೆ ದೂರದ ಮೈದುನನಾಗಬೇಕು (ಅಜೋಲೀ. ೬೧). **ಬಲತಂಗಿ** : ಅವಳ ಬಲತಂಗಿ ಇನ್ನೂ ಚಿಕ್ಕವಳು (ರೂಢಿ).

[ಮಲ$_1$ + ತಂಗಿ$_1$ (< ತಂಗೆ)]

**ಮಲತಂದೆ** 'ಮಲದಂದೆ' ನೋ.

**ಮಲತಮ್ಮ,** ಬಲತಮ್ಮ (ನಾ). ತನಗಿಂತ ಚಿಕ್ಕವನಾದ, ತಂದೆಯ ಬೇರೆಯ ಹೆಂಡತಿಯ ಮಗ : ಕೃಷ್ಣವರ್ಮನು ಅವನ ಮಲತಮ್ಮನಾಗಿರ ಬಹುದು (ಕದಾಂಲ· ೨೨). **ಬಲತಮ್ಮ** : ಅವನ ಬಲತಮ್ಮ ಒಳ್ಳೆಯ ಹುಡುಗ (ರೂಢಿ). [ಮಲ$_1$ + ತಮ್ಮ]

**ಮಲತಾಯ್** 'ಮಲದಾಯ್' ನೋ.

**ಮಲತಾಯಿ** 'ಮಲದಾಯ್' ನೋ.

**ಮಲತ್ರಯ** (ನಾ). ೧. ಶರೀರದಿಂದ ಹೊರಬೀಳುವ ಸ್ವೇದ, ಮೂತ್ರ ಮತ್ತು ಪುರೀಷಗಳೆಂಬ ಮೂರುಬಗೆಯ ಅಶುಚಿದ್ರವ್ಯಗಳು ; P "ಮಲ–ಸ್ವೇದ, ಮೂತ್ರ, ಪುರೀಷ (ಚರಕ. III, ಮುನ್ನುಡಿ)" (ಶ್ರೀವತ್ಸ· ೩೨೪). ೨. [ವೀಶೈ] ಆಣವ, ಮಾಯಾ ಮತ್ತು ಕಾರ್ಮಿಕ ವೆಂಬ ಮೂರು ಬಗೆಯ ಮಲಗಳು : ಆಣವ ಮಾಯಾ ಕಾರ್ಮಿಕವೆಂಬ ಮಲತ್ರಯವನುಳಿದು (ಅವವ.ಶು. ೦೬೯-೨೯೭) ; ಆಣವಮಲ ಮಾಯಾಮಲ ಕಾರ್ಮಿಕಮಲವೆಂಬ ಮಲತ್ರಯಂಗಳನೆ ಘಂಜಿಸಿ (ಅಣಂಡೇ. ೬೩-೪೮).

[ಸಂ.]

**ಮಲದಂದೆ,** ಮಲತಂದೆ (ನಾ). ಯಾರನ್ನಾದರೂ ದತ್ತುಸ್ವೀಕಾರ ಮಾಡಿ ಕೊಂಡಿರುವ ವ್ಯಕ್ತಿ ; ಪಾಲಕಪಿತೃ : "ಮ[ಪಾಠಾಂ. ಬ]ಲದಂದೆ ದ್ವಿಪಪ್ರ [ಪ್ರ್ಯ]ವಕ್ಕುಂ" (ಮಂಗರಾ· ೯೨-೦೨). **ಮಲತಂದೆ:** (೯). [ಮಲ$_1$ + ತಂದೆ]

**ಮಲದಾಯ್,** ಬಲತಾಯಿ, ಬಲದಾಯಿ, ಮಲತಾಯ್, ಮಲತಾಯಿ, ಮಲದಾಯಿ (ನಾ). (ತಂದೆಯ) ಎರಡನೆಯ ಅಥವಾ ಬೇರೆಯ ಹೆಂಡತಿ ; ತಾಯಿಯ ಸವತಿ : "ಉಪಮಾತೆಯೆನೆ ಮ[ಪಾಠಾಂ. ಪ]ಲ ದಾಯೆನಿಕ್ಕುಂ" (ಮಂಗರಾ. ೯೨-೦೨) ; ಹಳೆಯ ವರವನು ಬೇಡಿ ಪಟ್ಟವನುಳುಹಿ ಮಲದಾಯ್ಮಗನನಡವಿಗೆ ಕಳುಹೆ (ಕೌಶಿರಾ· ೯-೦೦). **ಬಲತಾಯಿ** : ಅವನ ಬಲತಾಯಿ ತಗಡೂರು ಚೆನ್ನಾಜಮ್ಮಯ್ಯನ ಪುತ್ರರು . . . ಆ ಲಕ್ಷ್ಮೀಕಾಂತಯ್ಯನಂ ಹೊಡೆದು ಹಾಕಿ (ಮಹಾಪಂ· I, ೯೬). **ಬಲದಾಯಿ** : ಬಂಜೆ ಬೇನೆಯನಜಿವಳೇ ಬಲದಾ[ಪಾಠಾಂ. ತಾ]ಯಿ ಮುದ್ದ ಬಲ್ಲಳೆ (ಮಹಾದೇ. ೨. ೦೯೦-೩೦೯). **ಮಲತಾಯ್** : ಮಲತಾಯ್ಗಳಾತ್ಮಜ ರೆಂಬುದಿಲ್ಲದೆ ಸರ್ವರೆಳಸಿ ನಿನ್ನೊಡನಿರುತಿಹರ್ಕೆ (ಭರತ. ೯೩-೦೨೨). **ಮಲತಾಯಿ** : ಬೈದು ಮಲತಾಯಿಯಡವಿಗೆ ನೂಕಲು (ಕುರಂಡ. ೨-೬೦-೦); ಮಂಗಲೇಶನು ದುರ್ಲಭದೇವಿಯನ್ನು ಸ್ವಗುರುಪತ್ನೀ ಎಂದು ಕರೆದುದರಿಂದ ಆಕೆಯು ಅವನ ಮಲತಾಯಿಯಾಗಿರಬಹುದು (ಕದಾಂಲ· ೩೨) ; ತಂದರಲ್ಲ ನನಗೆ ಸವತಿಯನ್ನೂ ಮಕ್ಕಳಿಗೆ ಮಲತಾಯಿಯನ್ನೂ (ಕುಂಕುಮ· ೯೦). **ಮಲದಾಯಿ** : ಮಲದಾಯಿ ಮನೆ ಹೊಜವಡಿಸಲೆಂದಾ ನಿನ್ನ ಪೆತ್ತನೆ (ಕೌಶಿರಾ· ೩-೩೮).

ಮಲತಾಯಿಧೋರಣೆ = (ಆಲಂ) ಪಕ್ಷಪಾತ ; ವಂಚನೆ : ಈ ಕಚೇರಿಯ ವಿಭಾಗಕ್ಕೆ ಸಂಬಂಧಿಸಿದ ಮುಖ್ಯಸಂಸ್ಥೆ ಮೊದಲಿನಿಂದಲೂ ಈ ವಿಭಾಗವನ್ನು ಮಲತಾಯಿಧೋರಣೆಯಿಂದಲೇ ನಡೆಸಿಕೊಂಡಿದೆ (ರೂಢಿ).

[ ಮಲ$_1$ + ತಾಯ್ ]

**ಮಲದಾಯಿ** ' ಮಲದಾಯ್ ' ನೋ.

**ಮಲದೇಹಿ** (ನಾ). ಕೊಳೆಯಾದ ದೇಹವುಳ್ಳವನು : ನಿನಗೆ ಮಜ್ಜನವ ಮಾಡುವಲ್ಲಿ ನಾನು ಮಲದೇಹಿ ನೀನು ನಿರ್ಮಲದೇಹಿ (ಪೋಲವಾ·೩೬-೦೩೦).

[ ಸಂ. ಮಲದೇಹಿನ್ ]

**ಮಲಧರ** (ನಾ). [ಜೈನ] ಸ್ನಾನ ಮಾಡದೆ ದೇಹದಲ್ಲಿ ಕೊಳೆಯನ್ನು ಹೊಂದಿರುವ ಸಂನ್ಯಾಸಿ : " ಜೈನರ್ ದಿಗಂಬರರ್ ಜೀವಕರ್ ಮಲಧರರ್ ತಾನಜೀವರ್ ಕ್ಷಪಣರೆನೆ ಗುರುಗಳಕ್ಕು" (ಮಂಗರಾ.೬೬-೦). [ಸಂ.]

**ಮಲಧಾರಿ** (ನಾ).=ಮಲಧರ : " ನಗ್ನಾಟಃ . . . ಮಲಧಾರೀ. . . ಸಾಧುಃ– ಈ ೧೦ ಸವಣನ ಪೆಸರ್ " (ಹಲಾಯು· ೩೬-೦೯೯) ; ಎಮಗೆ ಮಲಧಾರಿಸಿದ್ಧಾಂತಮುನೀಶ್ವರಚರಣಸರಸೀಜಾತಂ . . . ಜಯನಂದಿಮುನಿ ಕ್ರಮಕಮಳಮಾಗೆ ಬೋಧೋದಯಮಂ (ಆದಿಪು. ೦-೧೩) ; ತಜಟು ದಲೆಗಳ . . . ತಟ್ಟುಗಳ ಹಗರಣಿಗರೊ ಎನಲು ಮಲಧಾರಿಗಳು ಗಜಬಜಿಸಿ ನೆರೆಪುತ್ತ (ಬಸವು. ೩೦-೩೩). [ ಸಂ. ಮಲಧಾರಿನ್ ]

**ಮಲನಾಗರು** ' ಮಲರೋಗ ' ನೋ.

**ಮಲನೀರು** ' ಪೊಲೆನೀರು ' ನೋ.

**ಮಲನೂರ್** (ನಾ). ಒಂದು ಊರಿನ ಹೆಸರು : ಶ್ರೀ ಮಲನೂರ ಪಟ್ಟನಿಗುರವಡಿಗಳ ಶಿಷ್ಯರ್ ಉಗ್ರಸೇನಗುರವಡಿಗಳ್ ಒಸ್ಸುತಿಙ್ಗಳ್ ಸಂನ್ಯಾಸನಂ ನೋನ್ತು ಮುಡಿಪ್ಪಿದಾರ್ (ಎಕ. II, ೨೩-೦ ; ಸು· 700).

[ ? + ಊರ್ ]

**ಮಲಪ** (ನಾ). ಒಂದು ಬಗೆಯ ವಾದ್ಯಪ್ರಬಂಧ ; ವಾದ್ಯಗಳ ವಾದನದಲ್ಲಿ ಬರುವ ಒಂದು ಬಗೆಯ ಸಂಯೋಜನೆ : ಕಪುತಂದೇಕಾರಂ

ಮಲಪವದೆ[ಶಾಶಾಂ.ಫೆ] ತುತುಂಕೊತ್ತು ಜೋಕೆಯಂತರಿ ಜತಿ ರಿಗ್ಗವಣಿ ಪಹರಣೆಯೆನಿಪ್ಪ ಪ್ರಬಂಧಮಂ (?) ಶ್ರೋತ್ರಬಂಧುಪೆನೆ ಬಾಜಿಸಿದರ್ (ಶಾರ್ಙ್ಗ್ವ. ೧೨-೨೦). [ಸಂ.]

**ಮಲಪಾಶ** (ನಾ). ಪಂಚಪಾಶಗಳಲ್ಲಿ ಒಂದು : ಪಾಶಪದಾರ್ಥವು . . . ಮಲಪಾಶ ಮಾಯಾಪಾಶ ಕರ್ಮಪಾಶ ಬಿಂದುಪಾಶ ತಿರೋಧಾನ ಪಾಶಮೆಂದು ಪಂಚಪ್ರಕಾರವಾಗಿರ್ಪುದು (ಶಿವೇಶ. ೦೬೩). [ಸಂ.]

**ಮಲಪು₁** (ನಾ). ಕೆಸರು : ಬಾವಿಗೋ ಕೆರೆಗೋ ಒಂದು ಪಾತ್ರವಾಗಲಿ ವಿಶಿಷ್ಟವಾದೊಂದು ವಸ್ತುವಾಗಲಿ ಬಿದ್ದಿರುವಾಗ ಅನ್ವೇಷಣಕಾರನು ಅದಕ್ಕಿಳಿಯುತ್ತಾನೆ. ಮೊದಲು 'ಮಲಪು' (ಕೆಸರು)ನೆಡೆಯಲ್ಲಿ ಕಾಲ ಬೆರಳಿನಿಂದ 'ಪರಡಿ' ಅದರ ಗುರಿಯನ್ನು ಪ್ರತೀಕ್ಷಿಸುತ್ತಾನೆ (ನಾಕೋಶ. ೨೫೩). [←ತುಳು. ಮಲಂಪು, ಮೊಲಂಪು]

**ಮಲಪು₂**, ಮಲೆಪು₂ (ನಾ). = ಮಲಪ : ಪಾಡು ಪದಂ ಪರಿವಡಿ ಪೊತ್ತು ಕೌತಂ ಮಲಪೆಂಬೀ ಮಾರ್ಗಶಬ್ದಂಗಳುಂ . . . ಜತಿಜೋಕೆಯೆಂಬ ದೇಸೆಯ ಶಬ್ದಂಗಳೆಸೆಯೆ ಬಾಜಿಸುತ್ತಿರೆಯುಂ (ಶಾಂತೀಶ್ವ. ೦೬-೬೬ ವ) ; ಪಾಡುಗಳ ನಡಪು ಬೀಳದಂತೆ ನುಡಿಸಿ ಮಲಪು ರಿಗ್ಗ ವಣಿ ಒಡ್ಡಾಸರ ಪಡಿಸಣ ಚಮತ್ಕಾರ ಶಬ್ದ ಶೃಂಗಾರ ಝೇಂಕಾರಂ ಮೊದಲಾದ ವಾದ್ಯಪ್ರಬಂಧಗಳಲ್ಲಿ (ಚಿಕೂಪಾ. ೬೦ ವ). **ಮಲೆಪು₂** : ಮಲೆಪು ಪಬ್ಬಿರಣೆ ಕೌತುಕಳಕೋತ್ತರಂಗಳಿಂ ಕೌತುಕದ ಬಾಜನೆಯೊಳೆಸಗಿದುವೆನಿಸಿ ಬಾಜಿಸುತ್ತಿರೆಯುಂ (ಶಾಂತೀಶ್ವ. ೬-೯೩ ವ). [<ಸಂ. ಮಲಪ. /-ತಮಿ. ಮಲ್ಲೈಪ್ಪು = ಒಂದು ಬಗೆಯ ನೃತ್ಯ; ತೆಲು. ಮಲಪು = ನರ್ತನ]

**ಮಲಬತ್ರ** (ನಾ). (?) : ಈ ಸಂತೆಯ ಸ್ಥಳಗಳಿಂದ ಹೇರಳವಾಗಿ ಮೆಣಸನ್ನೂ ಮಲಬತ್ರವನ್ನೂ (ವೀಳೆಯದೆಲೆ ?) ತೆಗೆದುಕೊಂಡು ಹೋಗಲು ದೊಡ್ಡ ದೊಡ್ಡ ಹಡಗುಗಳು ಬರುತ್ತವೆ (ಕ್ರಪಾಇ. I, ೯೮). P 'ತಮಾಲ' ಮತ್ತು 'ತಾಂಬೂಲ' ಎಂಬ ಶಬ್ದಗಳ ಉಚ್ಚಾರಣೆಯಲ್ಲಿ ಪಾಶ್ಚಾತ್ಯರಿಗೆ ಉಂಟಾದ ಗೊಂದಲದಿಂದ ಈ ಶಬ್ದವು ಬಂದಿದೆ. [←ಇಂ. Malabathrum]

**ಮಲಬದ್ಧತೆ** (ನಾ). ಸರಿಯಾಗಿ ಮಲವಿಸರ್ಜನೆಯಾಗದಿರುವ ರೋಗ : ನಾರು ಹೆಚ್ಚಾಗಿರುವ ಹಣ್ಣುಹಂಪಲು . . . ಸೇವಿಸುವುದರಿಂದ ಗರ್ಭಿಣಿಗೆ ಮಲಬದ್ಧತೆ ತಪ್ಪುತ್ತದೆ (ಗೃಹಾ. ೯೯) ; ವೀರ್ಯ(ಧಾತು)ನಾಶದಿಂದ ರಕ್ತವು ಕ್ಷಯಿಸುವುದು . . . ಈ ಮೇರೆಗೆ ಮಲಬದ್ಧತೆಯೆಂಬ ದುರ್ಧರ ರೋಗವು ಬಂದು ಸೇರುವುದು (ಶ್ರಿಹ್ಯಶು. ೦೪೩). [ಸಂ. ಮಲಬದ್ಧತಾ]

**ಮಲಬದ್ಧರೋಗ** (ನಾ). ಸರಿಯಾಗಿ ಮಲವಿಸರ್ಜನೆಯಾಗದಿರುವ ಒಂದು ಬಗೆಯ ರೋಗ : ಕೊಡಸಿನೆಲೆಯ ಗುಣ . . . ವಿಶೇಷವಾದ ಮಲಬದ್ಧರೋಗ, ಕುಷ್ಠರೋಗ ಮೊದಲಾದವುಗಳನ್ನು . . . ನಾಶ ಮಾಡುವುದು (ಕಶವ್ವ. ೯೬). [ಸಂ.]

**ಮಲಬಾಧೆ** (ನಾ). ೧. ಮಲವಿಸರ್ಜನೆ ಮಾಡಬೇಕೆಂಬ ದೈಹಿಕ ಸೂಚನೆ. ೨. ಮಲವಿಸರ್ಜನೆ : ಈ ಮಧ್ಯೆ ಗುರುವಿಗೆ ಮಲಬಾಧೆಗೆ ಅವಸರವಾಯಿತು (ಶೀಕಿಶಂ. IV, ೨೮). [ಸಂ. ಮಲಬಾಧಾ]

**ಮಲಮಗ** (ನಾ). ಪುರುಷನ ಬೇರೆಬೇರೆ ಪತ್ನಿಯರ ಮಕ್ಕಳಲ್ಲಿ ಯಾರಾದರೂ ಒಬ್ಬ.

**ಮಲಮಕ್ಕಳು** (ಬಹುವ) : ಸಾವಿರದ ಮೇಲೆ ಐನೂರ ಕೊಟ್ಟರು ಮಲಮಕ್ಕಳಿರುವ ಮನೆ ಬೇಡ (ಜ್ಞಾನ. ೮೪) ; ಕುಟುಂಬದೊಳಗೆ ಒಬ್ಬರಿಗೊಬ್ಬರು ಅಸೂಯೆಪಡುವವರು ಮಲತಾಯಿ ಮಲಮಕ್ಕಳು (ಕನ್ನಪಾ. ೦೦೪). [ಮಲ₁ + ಮಗ]

**ಮಲಮಗಳು** (ನಾ). ಪುರುಷನ ಬೇರೆಬೇರೆ ಪತ್ನಿಯರ ಮಕ್ಕಳಲ್ಲಿ ಯಾರಾದರೂ ಒಬ್ಬ ಮಗಳು ; ಬಿಲಮಗಳು : ಉಪವಾಸ ಕೆಡವಿ ಮಲಮಗಳ್ನ ಮನ್ಯಾಗ ಕೊಲ್ಲತಿದೀ ಅಂತ ಆ ಹುಡಿಗೀ ಅಪ್ಪ ಅಕಿನ್ನ ತಂದು ನಮ್ಮ ಮನೀಗೆ ಅಟ್ಟಿದ (ಕಮಹ. ೨೦೯). [ಮಲ₁ + ಮಗಳು (<ಮಗಳ್)]

**ಮಲಮಲ₁** 'ಮಮ್ಮಲಂ' ನೋ.

**ಮಲಮಲ₂** 'ಮಲಮಲಿ' ನೋ.

**ಮಲಮಲಂ** 'ಮಮ್ಮಲಂ' ನೋ.

**ಮಲಮಲನೆ** 'ಮಮ್ಮಲನೆ' ನೋ.

**ಮಲಮಲಿ**, ಮಲಮಲ₂, ಮಲಮಲ್ಲು (ನಾ). ಒಂದು ಬಗೆಯ ನವಿರಾದ ಬಿಳಿಯ ಬಟ್ಟೆ ; ಮಲ್ಲು ; ಮಸ್ಲಿನ್‌ಬಟ್ಟೆ : ಬಂಗಾಳ ದೇಶದೊಳಗಿನ ಡಾಕ ಎಂಬ ಪಟ್ಟಣದಲ್ಲಿ ಹುಟ್ಟುವ ಜಿನುಗಾದ ಮಲಮಲಿಯು ದಿಗ್ದೇಶಕ್ಕೆ ಹೆಸರಾಗಿದೆ (ಮುಂಬಯಿ. ೪-೨೬) ; ಗೌಡರು . . . ಬಿಳಿಯ ಮಲಮಲಿಯ ಅಂಗಿಯೊಂದನ್ನು ಹಾಕಿಕೊಂಡಿದ್ದಾರೆ (ಕಡಿದಾ. I, ೨೩೯). **ಮಲಮಲ₂** : ಬಂಗಾಲದ ಮಲಮಲಬಟ್ಟೆಗಳು ದೇಶದಲ್ಲಿ ಸರ್ವೋತ್ಕೃಷ್ಟವಾಗಿ ಮೆರೆಯುತ್ತಿದ್ದವು (ಬಾರಿಶಾ. ೨೦). **ಮಲಮಲ್ಲು** : ಉಣ್ಣೆಯ, ರೇಶಿಮೆಯ, ಮಲಮಲ್ಲಿನ, ಸುತ್ತೂ ಹರವಿಕೊಳ್ಳುವ ಅಂಗಿಗಳು . . . ಕಣ್ಮುಂದೆ ಬಂದುಬಂದು ಹೋದವು (ಇಕ್ಷ್ವ. ೦೮೩). [← ಹಿಂ. ಮರಾ. ಮಲ್‌ಮಲ್]

**ಮಲಮಲ್ಲು** 'ಮಲಮಲಿ' ನೋ.

**ಮಲಮಜುಗು** (ಕ್ರಿ). ಬಹಳವಾಗಿ ಕನಿಕರಿಸು,— ಮರುಗು : ಬುಹಿಯೆರಂ ಪೊರ್ದಿದನಪ್ಪೊಡೆ ನಮಗಲ್ಲನೆಂದು ಮನದೊಳ್ ಮಲಮಜುಗಿ (ಧರ್ಮಾಮೃ. ೯-೩೩) ; ಸಭಾಜನಮೈದೆ ಮಲಮಜುಗಲಾಯೆಂದಳು (ಶಾಪಶಂ. ೯-೩೩). [< ಮಮ್ಮಲ + ಮಜುಗು]

**ಮಲಮಾತಂಗಿ** (ನಾ). ಕೆಂಪುಹಣ್ಣುಗಳನ್ನು ಬಿಡುವ ಒಂದು ಬಗೆಯ ಪೊದೆ : (೬). [?. / ತೆಲು. ಮರುಲುಮಾತಂಗಿ, ಮರ್ಲು ಮಾತಂಗಿ = ಉನ್ಮತ್ತ]

**ಮಲಮಾಸ** (ನಾ). ರವಿಸಂಕ್ರಮಣ ಬರದಿರುವ ತಿಂಗಳು ; ಅಧಿಕ ಮಾಸ ; P ಧಾರ್ಮಿಕಕ್ರಿಯೆಗಳನ್ನು ಆಚರಿಸದಿರುವ ಅಶುಭವಾದ ತಿಂಗಳು : ಅಶುಭಮಾಸ. [ಸಂ.]

**ಮಲಯ**, ಮಳಯ (ನಾ). ೧. ಬೆಟ್ಟ; ಪರ್ವತ : "ಮಲಯಃ, ಮಲಯಃ — ಈ ೨ ಬೆಟ್ಟ" (ಕಾಶಕ್ಕ. ೦೦೩). ೨. ಭಾರತದೇಶದ ದಕ್ಷಿಣದಿಕ್ಕಿನಲ್ಲಿರುವ, ಶ್ರೀಗಂಧದ ಮರಗಳಿಂದ ಆವೃತವಾಗಿರುವ ಬೆಟ್ಟದ ಸಾಲು ; P ಇದು ಜಂಬೂದ್ವೀಪದ ಸಪ್ತಕುಲಪರ್ವತಗಳಲ್ಲಿ ಒಂದು : ಮಲಯಮೇಖಲೆಯಂತೆ ಚಂದನಪಲ್ಲವಾವತಂಸೆಯುಂ . . . ಎನಿಸಿದೆ(ಜಂಜಪ್ಪನೆಯ ರೂಪಾತಿಶಯಮನೆಮೆಯಿಕ್ಕದೆ ನೋಡುತ್ತುಂ (ಕಾದಂಪೂ. ೯೯) ; ಮಲಯಕ್ಷ್ಮಾಧರಮೇಖಲಾಪರಿಗತಶ್ರೀಖಂಡಷಂಡಂಗಳೊಳ್ ನಲವಿಂದೊಂದಿ ಬೞಲ್ದ ಭೋಗಿಮಿಥುನಂಗಳ್ (ಚಂದ್ರಕ. ೬-೪೦) ; ಚಂದನವಲ್ಲದೆ ಮಿಕ್ಕಿನ ತರುಗಳಿಲ್ಲದ ಮಲಯಭೂಧರದ ಪೆಂಪೆನಿತು (ಐಕಥ. ೦೯-೨೬). ೩. ಮಲಯಪರ್ವತದ ಸಮೀಪದ ಒಂದು ದೇಶದ ಹೆಸರು ; ಮಲಬಾರುಪ್ರಾಂತ ; ಮಲಯಾಳಸೀಮೆ : ಪಾಂಡ್ಯ ತುಳುವ ಮಲಯ ಮಲಯಾಳ . . . ಕೇರಳ ಮುಖ್ಯವಾದ ದೇಶಂಗಳೊಳೆಸೆವ ಜಂಗಮವು (ಬಸವ. ೬-೦೬). **ಮಳಯ : ೨.** ಮಳಯೋತ್ತುಂಗಾಗ್ರದಿಂ ತೆಂಬೆಲರ್ವೆಲರಿಂ . . . ವಸಂತೋಚ್ಚಳಿತಂ ಕಂದರ್ಪನೊಪ್ಪಂಬಡೆವ ತೆಜದಿನಾ ಮಂತ್ರಿಧಾರಣಿಕ್ಕನಿಂ ಭೂತಳದೊಳ್ ಸಂಸೇವ್ಯನಾದಂ ಸರಸಕೃತಿಕಲಾನರ್ತಕೀನೃತ್ಯರಂಗಂ (ಅಜಿತಪು.೦-೦೦೬) ; ಮಳಯಾಯಾತಸಮೀರಸಂಚಳಲತಾಸಂತಾನಕಂ ತಮ್ಮುರಲ್ಗಳನೊಂದೊಂದಱ ಮೇಲೆ ಕೆಂದಳಿರ್ಗಳಿಂ ಸೂಸಿತ್ತೆನಲ್ ಕೇಳಿಸಂಚಳಿಯರ್ ತುಳ್ಕಿದರೊರ್ವ-

ರೊರ್ವರೊಳೆತ್ತಿಸ್ವಚ್ಛಾಂಬುವಂ (ಶಗವ. ೦೯-೯೭). ೩. ಮಳಯಾಂಧ್ರಾರ್ಬುವ ಮಾಗಧ . . . ಸಿಂಹಳದೇಶಾಧಿಪರಂ ಭಯಂಗೊಳಿಸಿದಂ ವಿಕ್ರಾಂತದಿಂ ರೇಚಿಗಂ (ಮಜಿತ. ೦-೦೦) ; ಮಳಯ ಮಹೇಂದ್ರ ವಿಂಧ್ಯ . . . ನಿರ್ಮಳ ನಿಷಧಪ್ರದೇಶದ ಮಹೀಭುಜರಂ ಬರವೇಟ್ಟು (ಪಳತಂ. ೨೨೩). P ಇದು ದ್ರಾವಿಡಶಬ್ದವಾಗಿದ್ದು ಪ್ರಾಕೃತದ ಮೂಲಕ ಸಂಸ್ಕೃತಕ್ಕೆ ಹೋಗಿರ ಬೇಕೆಂದು ಭಾಷಾವಿಜ್ಞಾನಿಗಳು ಅಭಿಪ್ರಾಯಪಡುತ್ತಾರೆ. [ಸಂ.]

**ಮಲಯಜ**, ಮಳಯಜ (ನಾ). ೧. ಮಲಯಪರ್ವತಪ್ರದೇಶದಲ್ಲಿ ಹುಟ್ಟುವ ಮರ ; ಶ್ರೀಗಂಧದ ಮರ ; ಚಂದನವೃಕ್ಷ. ೨. ಶ್ರೀಗಂಧ; ಚಂದನ : "ಮಲಯಜವಿರದದು ಬಾವನ್ನಮೆಂದು ಸಿರಿಕಂಡಮೆನಲ್" (ಕಬಕಂ. ೩೩) ; ಕಾಡ ತರುವಿಗೆ ಪರಮಗಂಧವನೂಡದೇ ಮಲಯಜವು (ಕೌಶಿರಾ. ೩೬-೯೬); ಮಲಯಜದ ಮರದೊಳಗೆ ಸಲೆ ಗಂಧವಿಪ್ಪಂತೆ (ಸರ್ವಜ್ಞ. ೦೩೯). ೩. ಶ್ರೀಗಂಧದ ಕೊರಡು ; ಚಂದನದ ಕೊರಡು : ಕರಿದಾದೊಡೆ ಕತ್ತುರಿಯಂ ಮುರುಡಾದೊಡೆ ಮಲಯಜಂಗಳಂ . . . ಇಟ್ಟಿಕೆಯ್ವರೆ ಮರುಳೇ (ಧುಕೋಆ. ೨-೯೨). **ಮಳಯಜ** : ೧. "ಚಂದನಂ, ಮಳಯಜಂ, ಶ್ರೀಖಂಡ(೬)ಂ, ರೋಹಿಣೀದ್ರುಮಃ— ಈ ೪ ಸಿರಿಗಂಧಂ" (ಪಡಾಯು. ೬೯-೬೯೦). ೪. ಶ್ರೀಗಂಧದ ಕೊರಡನ್ನು ತೇದು ತೆಗೆದ ಗಂಧ : ವಾರಿಜ ಮಳಯಜ ಮಳಯಸಮೀರಣಂ . . . ಬಾಧಿಸ ಲಜಿವೆ ದಲವನ ದಾಹಜ್ವರವಂ (ಆದಿಪು. ೨-೦೩) ; ಮಳಯಜಮಿಶ್ರ ತೀರ್ಥಜಲಧಾರೆಗಳಿಂ ಶಶಿಕಾಂತಕಾಂತಮಂಗಳಕಲಶಾಂಶುಧಾರೆಗಳನಿರ್ವಾಡಿ ಸಿತ್ತು ವಿವಾಹಮುಖ್ಯಮಂಗಳಸವನಂ ವಿಳಾಸವತಿ ಸೀತೆಗೆ (ಕಂರಾಪು. ೩-೩೯) ; ಮಳಯಜದ ಮೊಲೆಯ ಕುಂಕುಮದಳಕದ ಕತ್ತುರಿಯ ಬಣ್ಣವಣ್ಣಗೆ ಕೊಳದೊಳ್ ತಳರ್ದಿರೆ ಜಳರುಹಮುಖಿಯರ್ ಜಳಕೇಳಿಯ ನೆವದಿಂ ದೂಳಿಚಿತ್ರಂ ಬರೆದರ್ (ಧುಕೋಆ. ೯-೬). [ಸಂ.]

**ಮಲಯರುಹ**, ಮಳಯರುಹ (ನಾ). ೧. ಶ್ರೀಗಂಧದ ಮರ ; ಚಂದನವೃಕ್ಷ : ಹರಿಣಧರನೊಳ್ವಿಷಂ ಮಲಯರುಹದೊಳನಲಾರ್ಚಿ ನಿನ್ನ ವದನೋದರದೊಳ್ ಪರುಷತರವಚನಮಪ್ಪುದು ದುರವಾಪಂ (ಕಬರಾ. ೩-೭೯) ; ತುರಗಗಳಂ ಕಾನನಮಲಯರುಹಗತಂ . . . ಸೂಕರವದನಂ ಕರ್ಕಟಾದಿಮಪ್ರೇಕ್ಷ್ಯಾಣಂ (ಜಾತಿ. ೦೯-೦೦). **ಮಳಯರುಹ** : ೨. ಚಂದನದ ಕೊರಡು : ಮಳಯರುಹಂ ಬೇಳ್ಪನಿತುಂ ತಿಳಿಯಲ್ಕೊಲ ಛಾಂಡಮೂರ್ತಿ ನಿನ್ನಯ ಮೊಳಕ್ಕೆಯೊಳಗಿದೆ ತೇದರ್ಪಿಸು (ಕೃಕೃಶಿ. ೩೯-೦೦). ೩. ತೇದ ಚಂದನ ; ಚಂದನಗಂಧ : ಮಳಯರುಹದ ಕರ್ಪೂರದ ಪಳಿಕಿನ ಪನ್ನೀರ ಕದಳಿದಳದಿಚಿಸಿಲ ತಣ್ಣಳಸದ ತಿಳಿನೀರ್ಗಳ ಶೀತಳತೆಯುನವನಿಪನನಾಪ್ತರುಜ್ಜೀವಿಸಿದರ್ (ಅನಂಪು. ೦೦-೬೬). [ಸಂ.]

**ಮಲಯಾಚಲ** (ನಾ). = ಮಲಯ ೨: "ಮಲಯಾಚಲಮಿನ್ನುಂ . . . ಬಾವನ್ನಮೆಟ್ಟುಮೆನಲದು ಸಲ್ಗುಂ" (ಕಬಕಂ. ೩೦) ; ಹೇಗೆ ಮಲಯಾಚಲ ಗಂಧಸಂಸರ್ಗದೆ ಚಂದನವಪ್ಪುದಿಂಧನವು (ಇಂಜಾಪ. ೭೬-೬೯). [ಸಂ.]

**ಮಲಯಾನಿಲ**, ಮಳಯಾನಿಲ, ಮಳಯಾನಿಳ (ನಾ). ಮಲಯಪರ್ವತ ದಿಂದ ಬೀಸುವ ಸುಗಂಧಪೂರಿತವಾದ ತಂಗಾಳಿ : ಮಲಯಾನಿಲನುಂ ಮಲಯಜಜಲಮುಂ ಶಶಿಕಿರಣಮುಂ ವಿಯೋಗಿಗಳೆರ್ದೆಯೊಳ್ಳೆಲಸಿರ್ದುವು (ಕಬರಾ. ೩-೩೨) ; ನೋಟ್ಟಿಂ ಬೆಲೆಗೊಟ್ಟು ತಾರ ಮಧುವಂ ಮಲಯಾ ನಿಲನಂ ಮನೋಜನಂ ಕೌಮುದಿಯಂ (ಅರ್ಜನಿ. ೦-೯೩) ; ಮಾರಿ ಮಲಯಾನಿಲಂ ನವನೀರಜವನಮೆಂಬ ಕೆಂಡದೊಳ್ ದಂಡನಮಸ್ಕಾರಂ ಬಂದಪಂ (ಧುಕೋಆ. ೦-೩೦). **ಮಳಯಾನಿಲ**: ಮಳಯಾನಿಲನಿಂದಲುಗುವ ಸೆಳೆಗೊಂಬಿನ ಪಣ್ಣನಂತುಮಿಂತುಂ ಕರ್ದುಕಲ್ಕುಳವಳಿಪರಗಿಳಿ ಪೋಲ್ಕುದು ಮುಳಿದೋಪಳ ಪವನಚುಂಬನೋತ್ಸುಕವಿಟನಂ (ಸೂಕ್ತಿಸು. ೦೦-೩೯).

**ಮಳಯಾನಿಳ** : ತೊಳಪೆಳವೆಜಿಯುಂ ಮೊರೆವಳಿಕುಳಂಗಳುಂ ಮೆಲ್ಲನೆಸಪ ಮಳಯಾನಿಳನುಂ ಮುಳಿಸಂ ಕಟಲ್ಚಿ ಕಳೆದುವು . . . ಕಾಮಿಗಳಾ (ಕಬರಾ. ೨-೭೦) ; ಏನಾಡಿಸಿದನೋ ಮಳಯಾನಿಳನರ್ತಕಂ ಲತಾನರ್ತಕಿಯಂ (ಆದಿಪು. ೦೦-೯೦). [ಸಂ.]

**ಮಲಯಾಳ** 'ಮಲೆಯಾಳ' ನೋ.

**ಮಲಯೋದ್ಭವ**, ಮಳಯೋದ್ಭವ (ನಾ). = ಮಲಯರುಹ ೩ : ಅಂತು ತನ್ನೋರೆಗಳ್ವೆರಸು ಮಧುಮಿಶ್ರದೋಲಾಡುವಲ್ಲಿ . . . ಬೆಳರ್ವಟ್ಟು ನಿಂದುದೊಂದೆಡೆ ಮಲಯೋದ್ಭವಪ್ರಸರದಿಂ . . . ಸರಸೀವಿಭಾಗದೊಳ್ (ಶಾಂತಿಪು. ೬-೨೯). **ಮಳಯೋದ್ಭವ** : ಮಳಯೋದ್ಭವ ಶೈಲೋದ್ಭವ ಸಲಿಲಂ ಸಿತಮಗರು ಕುಪ್ಪಚೂರ್ಣದಿನಿಂಬಾಗಿರೆ ಮಾಡಿ ಬತ್ತಿಯುಂ ಸೊಡರ್ವೆಳಗುಗೆ ಮನೆಯೊಳಗೆ ಕಂಪು ಪೊಂಪುಳಿಯಕ್ಕುಂ (ಲೋಕೋಪ. ೬-೩೯); ವಿದಳಿತಪುಷ್ಪಮಾಲಿಕೆಗಳಿಂ ಮಳಯೋದ್ಭವದಿಂ ತೊಳಪ್ಪ ರನ್ನದ ತೊಡವಿಂದಳಂಕರಿಸಿ . . . ಬಾಯಿನಂಗಳಂ ಮುದದೊದವಿಂದಮಿತ್ತು ಮೆಚಿಸಿದರ್ (ಚಂದ್ರಪು. ೬-೯೦). [ಸಂ.]

**ಮಲಯ್ಯ** (ನಾ). ಒಬ್ಬಾತನ ಹೆಸರು : ಶ್ರೀನಾಗತಿಯಮ್ಮನ ಮಗಂ ಮಲಯ್ಯಂ (ಎಕ. IV (R), ಎಳಂದೂ. ೦೯೬-೨; 1000). [ಮಲೆ$_{1}$+ಅಯ್ಯ$_{1}$]

**ಮಲರ್$_{1}$** 'ಮರಲ್$_{1}$' ನೋ.

**ಮಲರ್$_{2}$**, ಮರಲ್$_{2}$, ಮಲರು$_{1}$ (ಕ್ರಿ). ೧. ಹೂವು ಅರಳು, – ವಿಕಾಸ ವಾಗು : ಪುಲ್ಲಶರಂಗಿಸುವೆಡೆಗವೆ ನಲ್ಲಂಬುಗಳೆನಿಸಿ ತುಱುಗಿ ಮಲರ್ದಲ ರ್ದೆಸೆವೀ ಮೊಲ್ಲೆಯುಮೊಲಿಸಿದ ನಲ್ಲರ ಲಲ್ಲೆಯುಮೋಪರ ಮನಮುಮಂ ಸೋಲಿಸದೇ (ಆದಿಪು. ೦೨-೦೦೦); ತನ್ನಂ ತಾನಾಜದೊಯ್ಯನೆ ಕಣ್ಮಲರ್ಮಲರೆ ನೃಪನಂ ಭೋಂಕಲ್ ಮೇಲ್ವಾಯ್ದು ತಳ್ತಿರದಪ್ಪಿದರ್ (ಕಾದಂಬ. ೭೬೬) ; ವದನವು ಮಲರ್ದ ಹೊಂದಾವರೆಯು (ಜಾಗಪ. ೦೨-೩೯). **ಮರಲ್$_{2}$** : ೧. ಆದಿಮೂರ್ತ್ತಿ ಮರಲ್ದರಲ್ದ ಮಲ್ಲಿಗೆ ನನೆಗರ್ಚಿ ಕಾಕಲಿಯೊಳಾಣತಿಗೆಯು ಮದಾಳಿ ಪೋ ಪ[ಗ]ಲ್ಪು[ಗ]ಲೆನುತಿರ್ಪ ಪಕ್ಕಿ ಮಾನವಂ ಕವರುತ್ತಿರೆ (ಕಂಶಭಾ. ೩-೩೩) ; ಎಳೆಯೊಳ್ಳೆದಡರ್ದು ದಿಶಾವಳಿಯಂ ದಾಂಗುಡಿ ಮರಲ್ದು ಪಲ್ಲವಿಸಿ (ಎಕ. VII, ಶಿಕಾ೦. ೦೩೦–೯೭ ; 1047). ೨. ಉಬ್ಬು ; ಉತ್ಸಾಹಗೊಳ್ಳು : ದಿವ್ಯಮುನಿಯುಂ ವ್ಯಗಮಾಗಿ ಮರಲ್ದು ಕೂಡೆ (ಕಂಶಭಾ. ೦-೦೦೦) ; ಮುಂಡಾಡುಗೆ ಮುದ್ದಿಸುಗೆ ಮರಲ್ದಪ್ಪುಗೆ ಕೆಯ್‌ಕೊಂಡೀ ಕಾವ್ಯಮಂ (ಗಂಧ.೦-೦೦). **ಮಲರು$_{1}$** : ೧. ಅಃ ಇಂತ್ರ ನಾನರಳದರೆ ಧನ್ಯನಲ್ಲೆ ? ಬೆಳಕು ಮೂಡೆ ಮಲರಿ, ಮುಳುಗೆ ಮುಗುಳಿ (ಅಶೀ. ೨೩-೦೩) ; ಇದ್ದಂತೆ ಇರುವಿಪ್ಪುದಪ್ಪುದಾಯಿತು ಮಲರಿ (ಕರುಣ್ಯಾ. ೬-೦೨). [ದೇ.II ತಮಿ. ಮಲರ್ ; ಮಲ. ಮಲರು ; ಬ್ರಾಹೂಈ. ಮಲಿಂಗ್]

**ಮಲರ್$_{3}$**, ಮರಲ್$_{3}$, ಮಲರು$_{2}$ (ನಾ). ಹೂವು ; ಪುಷ್ಪ : "ಮಲ ರೆಂದು ಮೇಣರಲೆಂದು ಪುಷ್ಪಕ್ಕೆ ನಾಮಮಕ್ಕುಂ" (ಕಬ್ಬಿಕೈ. ೨೦) ; ಗಟಪುವ ಗಿಳಿ ಬಗ್ಗಿಪ ಪಿಕ ಮಲರೊಳ್ ಮೊರೆವಳಿ . . . ಸುಟುವ ಹಂಸೆಯುಮಳುಂಬಮೆನೆ ರಯ್ಯಮೆಂತುಮಾರಯ್ಯೆ ಬನಂ (ಕೇಬಿಪು. ೭-೩೨) ; ಪಿಕನಿನಾದೆಯರೊಲ್ದು ಸುರಗಿಯ ಮಲರ್ಗಳಂ . . . ತಿಱಿವರ್ (ಉದ್ಭಟಿ. ೯-೩೩). **ಮರಲ್$_{3}$** : "ಅಲರ್, ಅರಲ್, ಮರಲ್, ಮಲರ್ —ಈ ೪ ಪುಷ್ಪಂ" (ಕಪಾ. ೩೯-೦೬೮) ; ಪೊಂಬಟ್ಟೆಯಂ ತವಮುಂದಲ ಮೆಲ್ಪೊಂಗಲ್ಮರಲಾ ತುಱುಂಬರ್ . . . ದೇವಿಯರ್ (ಶಾಂತಿ. ೩-೩೯) ; ಕಣ್ಮರಲ್ ಕೆಂಪಾದುವೇಕೆ (ರಾಜಶೇ. ೨-೨) ; ಮರಲಂ ನೋಯಿಸದನಿಸುಂ ಮರಂದಮಂ ಪೀರ್ವ ಮಧುಕರಂಬೋಲ್ (ಜೀತಸಂ. I. ೦೬೩). **ಮಲರು$_{2}$** : ಹೂ ಹೋಗಿ ಮಿಡಿಯಾಗಿ ಹಣ್ಣಾ ದೊರೆತಾಗ ಮರಕ್ಕೆ ಮಲರು ಬಿರಿದುದು ಸಾರ್ಥಕ (ವಕ್ಷಿಪ. ೨೯) ; ಮಲರು ಅರಳಿದ ಒಂದೆರಡು

ಗಂಟೆಗಳಲ್ಲಿ ದಳವಲಯ ಉದುರಿ ಹೋಗುತ್ತದೆ (ಹಸುಹೂ. ೧೯೦).
[<ಮಲರ್$_2$. / ತಮಿ. ಮಲ. ಮಲರ್]

**ಮಲರ್$_4$** 'ಮಣಲ್' ನೋ.

**ಮಲರಂಬು** (ನಾ). ಹೂವಿನ ಬಾಣ ; ಪುಷ್ಪಶರ : ಈ ಮಾಟ್ಕೆಯಿನಾ ರ್ದೆಚ್ಚ ಮಲರಂಬುಗಳ್ ಗೋಚಿಬುಗಳ್ಗೆ ತೆತ್ತಿಸಿದ ಕಲ್ಲಂಬುಗಳಪ್ಪುದುಂ (ರಾಜಶೇಖ. ೩೯-೩). [ಮಲರ್$_3$ + ಅಂಬು$_2$]

**ಮಲರಗ** (ನಾ). ಒಂದು ಬಗೆಯ ಸಸ್ಯ : ಮಲರಗ, ನಗತ್ತೆ (ವೈ.ನಿ. ೯೦-೭೬೮). [ ? ]

**ಮಲರಹಿತ**, ಮಳರಹಿತ (ಗು). ೧. ಕೊಳೆಯಿಲ್ಲದ ; ನಿರ್ಮಲವಾದ. ೨. ದೋಷವಿಲ್ಲದ ; ನಿಷ್ಕಳಂಕವಾದ. (ನಾ). ೩. ಪಾಪರಹಿತ ನಾದವನು ; ನಿಷ್ಕಳಂಕ ವ್ಯಕ್ತಿ : ಪೆಱತೊಂದೆಡೆಯೊಳ್ ಮಲ ರಹಿತರ್ ಬಂದು ಧರಾಲಲನಾಧೀಶಂಗೆ ವಿನತಮಸ್ತಕರಾದರ್ (ಅಂಕು. ೦೩-೦೦); ಮಲರಹಿತನನೂನದಯಾನಿಲಯಂ . . . ಶಿವಭೂತಿಯೆಂಬ ಪಾರ್ವಂ ಬರುತಂ (ಕಂತಕಂ. ೦೦೬-೨೦). **ಮಳರಹಿತ :** ೨. ಮಳರಹಿತ ಪಂಚಗುರುಗಳ ವಿಳಸಿತವೆನಿಸಿರ್ಪ ಪಂಚಪದಸಂಚಯನಿರ್ಮಳಿನಮಣಿ ದೀಪಕಳಿಕಾವಳಿ ಬೆಳಗುತಿರ್ಕೆ ಮನ್ಮನೋಮಂದಿರದೊಳ್ (ಶಾಂತೀಶ. ೦-೬). ೩. ಮಳರಹಿತನೊರ್ವ ವಿಳಸನ್ಮಳನೊರ್ವ ಪೆಱಂ ಸದಾಚ್ಛನ್ನೈ ನೀಂ ಬೇಗಂ ತೀವುದುಮಾ ಕದಡುವುದುಂ ಕುಳುಂಪೆಯೊಳ್ ನೆಗಟ್ಟುಮುದಧಿಯೊಳ್ ನೆಗಟ್ಟಪುದೇ (ಶಾಂತಿಕ. ೦೦-೯೩). ೪. ದೋಷರಹಿತವಾದುದು; ನಿರ್ಮಲ ವಾದುದು : ಮಳರಹಿತಮಪ್ಪ ತಪಮುಂ ತಳೆದಪವರ್ಗಕ್ಕೆ ಸಲ್ವ ಮಾನವಗತಿಯಂ ತಳೆವೊಡೆ ದಿವಿಜಾಯುಷ್ಯಂ ಗಟ್ಟಯಿಪ ತೆಱನಾವುದು (ಕಂಠೀಜಾ. ೦೬-೪೩). [ಸಂ.]

**ಮಲರಿಸು** (ಕ್ರಿ). (ಹೂವು) ಅರಳುವಂತೆ ಮಾಡು ; ವಿಕಸಿಸುವಂತೆ ಮಾಡು : ಭಕ್ತಜೀವನಲತೆಯಂ ಒಲವಿಂ ಮಧುಪೊಲ್ ಕೊನರಿಸಿ ಮಲರಿಪುದೀ ನಖವಿರಾಜಿತಾರುಣಹಸ್ತಂ (ಪತ್ತಪಂ. ೨೨-೯೦).
[ ಮಲರ್$_3$ + – ಇಸು$_3$ ]

**ಮಲರು$_1$** 'ಮಲರ್$_2$' ನೋ.

**ಮಲರು$_2$** 'ಮಲರ್$_3$' ನೋ.

**ಮಲರೋಗ**, ಮಲನಾಗರು, ಮಲ್ಲಾಗರು, ಮಲ್ಲೋಗರ, ಮೊಲ ನಾಗರ, ಮೊಲನಾಗರು, ಮೊಲೆನಾಗ, ಮೊಲೆನಾಗರ, ಮೊಲೆನಾಗರು, ಮೊಲ್ಲಾಗರ (ನಾ). ೧. ಸೆಳವು ಬಂದು, ಬಾಯಲ್ಲಿ ನೊರೆಯು ಉಂಟಾಗಿ, ಪ್ರಜ್ಞೆ ತಪ್ಪಿ ಬೀಳುವ, ನರಗಳಿಗೆ ಸಂಬಂಧಿಸಿದ ಒಂದು ಬಗೆಯ ಕಾಯಿಲೆ ; ಅಪಸ್ಮಾರ : ಶೀತೋಷ್ಣ ಮಲರೋಗ ಭೀತಿ (ಐಚ್ಛಿಕ. ೩೯-೪) ; ಲಾಂಗಮನ್ನನಿನ್ನೂ ಸತ್ತಿರುವದಿಲ್ಲವೆಂದೂ ಇವನಿಗೆ ಮಲರೋಗ ಬರುತ್ತಿರುವದೆಂದೂ ತರ್ಕಿಸಿದನು (ಅಂಬಿಕೆ. ೬೦) ; ಅವರಿಗೆ ಆಗಾಗ್ಗೆ ಹೀಗೆ ಆಗ್ತದೆ ! ಮಲರೋಗ ! (ಮಲಮು. ೨೪). **ಮಲ ನಾಗರು** : ೧. ಲಲನೆಯರೊಲುಮೆ ತನಗೆಂಬ ಮನುಜಂಗೆ ಮಲನಾಗರೆಂದ (ಸರ್ವಜ್ಞ. ೦೬೬೦). **ಮಲ್ಲಾಗರು :** ೧. ಇವನಿಗೆ ಮಲ್ಲಾಗರು ಬರ (ಪಷ್ಪೂರು. ೨೪೬). **ಮಲ್ಲೋಗರ :** ೧. ಕರೆದು ಹೆಣ್ಣ ಕೊಟ್ಟರೆ ಮಲ್ಲೋ ಗರ ಬಂತು ಎಂಬ ಗಾದೆಗೆ ಸರಿಯಾಯಿತು (ಅರೂಟಿ. ೪೦) ; ಕರೆದು ಹೆಣ್ಣು ಕೊಟ್ಟರೆ ಮಲ್ಲೋಗರ ಬಂತಂತೆ (ಗಾದೆ). **ಮೊಲನಾಗರ :** ೧. ಹರಿಣಾಂಕಶರ್ಕಜರಿರ್ದೊಡೊಂದೆ ಗೃಹದೊಳ್ ನೋಟ್ಪಂದು ಧಾತ್ರೀ ಸುತಂ ದೊರೆಕೊಳ್ಗುಂ ಮೊಲನಾಗರ (ಜಾತಕ. ೨೦-೨೩) . **ಮೊಲನಾಗರು:** ೧. ಮಹಾಮೋಹವೆಂಬ ಮೊಲ(ಮೊಲೆ)ನಾಗರು ಹಿಡಿದು ಬಿಡದು ನೋಡಾ (ಸಿದ್ಧೇಪ. ೦೬೮-೬೩) ; ಚೋಳಭೂವರನಣುಗಿಯಂ ಹಿಡಿದ ಮೊಲನಾಗರಂ ಬಿಡಿಸಿ (ಬಾಸೋಪು. ೯-೦೦೬). **ಮೊಲೆನಾಗ :** ೧. ಇಪ್ಪೆಯ ಕೆಚ್ಚಂ ನಸ್ಯಂಗೆಯ್ಯೆ ವದನರೋಗಂ ಮೊಲೆನಾಗಂ ನಾಗವಿಷಂ ಕಿಡುಗುಂ (ಲೋಕೋಪ. ೯-೨೮). ೨. ಒಂದು ಬಗೆಯ ಗ್ರಹ; ಅಪಸ್ಮಾರಗ್ರಹ : ಲೋ ೯ ಗ ರ ಬಗೆಗೋದಿನೊಳನುರಾಗವಾನಾಗಿಸೊಡೋದಿದಂಗೋದಿ ದೊಡೋದಾಗದು ಪೇಟಿಕ್ಕುವೆ ಮೊಲೆನಾಗಂ ಕಿವಿಗಿವುಡುವೀಬ್ಬಿನಂ ಗಟಪದುದೇ (ಲೀಲಾವ. ೦-೨೦) ; ಮೆಟ್ಟಿದ ಮೊಲೆನಾಗಂ [ಪಾಠಾಂ. ನಾಗಾಸುರಂ, ಮೊಲನಾಗಂ] ಪಾದರಕ್ಷೆಗಳಾಗೆ (ಸಂಬರ. ೬-೨೦); ಕಲೆವಂತ ನಲ್ಲದ ವಿಟನಿಂದ ಕಾಡುವ ಮೊಲೆನಾಗ ಲೇಸು (ಶರಶ. ೪೮-೩೩). **ಮೊಲೆನಾಗರ:** ೧. ಬೇವಿನ ಹರಳು, ಇಂಗು . . . ಅರೆದು ಗುಳಿಗೆಯಂ ಮಾಡಿ ಭೂನಾಗರ ಹಣ್ಣಿನ ರಸದಲ್ಲಿ ನಸ್ಯವಂ ಮಾಡೆ ಹದಿನಾಲ್ಕುತೆಱದ ಮೊಲೆನಾಗರ ಮಾಣ್ಗುಂ (ವಿಷ್ಣು. ೦೬೬). **ಮೊಲೆ ನಾಗರು :** ೧. ಆ ನಾಡ ಚೋಳನಣುಗಿಯ ಹಿಡಿದ ಹಿರಿಯ ಮೊಲ ನಾಗರಂ ಬಿಡಿಸಿ (ಪಿಶ್ವ.ಕು. ೪-೯-೦೦). **ಮೊಲ್ಲಾಗರ :** ೧. ಅರತಲೆಬೇನೆ . . . ಮೊಲ್ಲಾಗರದ (ಫಿಟಿಲೆಪ್ಸಿ) ರೋಗಿಗಳಲ್ಲೂ ಕಾಣಿಸಿಕೊಳ್ಳಬಹುದು (ಕವಕೋ. I,೪೯೬). **P** ೧೧ನೆಯ ಶತಮಾನದ 'ಜಾತಕತಿಲಕಂ' ಎಂಬ ಗ್ರಂಥದಲ್ಲಿ 'ಅಪಸ್ಮಾರ' ಎಂಬ ಅರ್ಥದಲ್ಲಿ 'ಮೊಲನಾಗರ' ಎಂಬ ಶಬ್ದರೂಪ ಪ್ರಯೋಗವಾಗಿದ್ದರೂ ರೋಗದ ಸಂಬಂಧವನ್ನು ಎತ್ತಿತೋರಿಸುವ ಉದ್ದೇಶದಿಂದ ಇಲ್ಲಿ 'ಮಲರೋಗ' ಎಂಬ ಶಬ್ದರೂಪವನ್ನು ಮುಖ್ಯೋಲ್ಲೇಖವನ್ನಾಗಿ ಪರಿಗಣಿಸಿದೆ.
[ಮಲ$_1$ + ರೋಗ]

**ಮಲರೋಗಿ** (ನಾ). ಮೂರ್ಛೆರೋಗ ಬರುವವನು ; ಅಪಸ್ಮಾರ ರೋಗಿ : ಮಾತುಮಾತಿಗೆ ಮೂರ್ಛೆಹೋಗುವ ಈ ಮಲರೋಗಿಯನ್ನೇಕೆ ನನ್ನ ಕೊರಳಿಗೆ ಕಟ್ಟುವಿರಿ (ಹುಚ್ಚಾಟಿ. ೬೨). [ಮಲರೋಗ + –ಇ$_3$]

**ಮಲರ್ಚು** 'ಮರಲ್ಚು' ನೋ.

**ಮಲರ್ವಿಲ್ಲು** (ನಾ). ಹೂವಿನ ಬಿಲ್ಲು ; ಪುಷ್ಪಚಾಪ : ಎಲೆ ಚೂತಾಂಕುರ ನಿನ್ನಂ ಮಲರ್ವಿಲ್ಲಂ ತಳೆದ ಕಾಮದೇವಂಗಿತ್ತಂ (ಚಾಕಂಚ. ೮೦-೦೩೪).
[ಮಲರ್$_3$ + ಬಿಲ್ಲು$_1$ (<ಬಿಲ್$_2$)]

**ಮಲವ** 'ಮಲೆಪ' ನೋ.

**ಮಲವದಿಕೆ** (ನಾ). ಹೇರಿನ ಮೇಲೆ ಹಾಕುವ ಒಂದು ಬಗೆಯ ತೆರಿಗೆ(?): ಬಿಟ್ಟಿ ಕೊಟ್ಟಣವನುಪಸುಂಕ ಮಲವದಿಕೆ ಸೊಲ್ಲಗೆ ಕವಣ ಕಡ್ಡಾಯದಂಕ ತಳವರಿಕೆ (ಸಿಂಗಿರಾ. ೨೨-೨೬). [<ಮಳವ$_1$ ? + ಪದಿಕೆ (<ಪೊದಕ್ಕೆ$_1$)]

**ಮಲವಿಸರ್ಜನೆ** (ನಾ). ಶರೀರದ ಒಳಗಿರುವ ಹೇಸಿಗೆಯನ್ನು ದೇಹಾಂಗ ವೊಂದರ ಮೂಲಕ ಹೊರಹಾಕುವ ಕ್ರಿಯೆ : ಎಷ್ಟೋ ರಾತ್ರಿ ಮಲ ವಿಸರ್ಜನೆಗೆ ಅದೇ ಮರದಡಿ ಕುಳಿತಿದ್ದೇನೆ (ದೇಪಪಂ. ೩೩).
[ಸಂ. ಮಲವಿಸರ್ಜನ]

**ಮಲವೇಗ** (ನಾ). ಅನೇಕಸಲ ಮಲವಿಸರ್ಜನೆ ಆಗುವ ರೋಗ ; ಭೇದಿ ; ಅತಿಸಾರ : ಕರಿಎಮ್ಮೆಹಾಲನ್ನು . . . ಸ್ವಲ್ಪ ಸೈಂಧವ ಲವಣವನ್ನು ಸೇರಿಸಿ ಮೂರುವೇಳೆ ಕೊಟ್ಟರೆ ಗ್ರಹಣೀ, ಮಲವೇಗಗಳು ಬಹಳವಾಗಿ ಹೋಗುವುದು (ಸಕವೈ. ಶಂ. ೪೬೬). [ಸಂ.]

**ಮಲವೇಱು** (ಕ್ರಿ). ಕೊಳೆಯಾಗು : ಮೈ ಮಲವೇಱುತ್ತೆಂದು ಮೀಯ ಲಾಗದು (ರಕರಾಷ್ಟ್ರ. ೦-೦೩೪). [ಮಲ$_3$ + ಏಱು$_1$ (< ಏಱ್$_1$)]

**ಮಲವೊರಲ್** (ನಾ). (?) : ನೆಲವಿನೊಳ್ ಮೊಸರ್ಗಂದಲಂಕಂಡು . . . ಮಣೆಯಂ ಮಲವೊರಲಂ ಮಕ್ಕಳಂ ಕುಳ್ಳಿರಿಸಿ ಪೆಗಲೇಱ್ ನಿಂದು ಕಂದಲಂ ಕುಟುಂಕೆ (ಶಕಪಂ. ೬೯-೦೦). [**P** ಇದು 'ಮರವೊರಲ್' ಎಂದಿರಬಹುದು]

**ಮಲಶುದ್ಧಿ** (ನಾ). = ಮಲವಿಸರ್ಜನೆ : ಬಸ್ತಿಯ ನಿತ್ಯಪ್ರಯೋಗದಿಂದ ವಿಲಕ್ಷಣ ಮಲಶುದ್ಧಿಯಾಗಿ ಅವಳ ಹುಚ್ಚು ಕಡಿಮೆಯಾಗಹತ್ತಿತು (ಬೃಹತ್ಕಥೆ. ೦೪೬). [ಸಂ.]

**ಮಲಶೂಲೆ** (ನಾ). ಮಲಬದ್ಧತೆಯಿಂದ ಮಲವಿಸರ್ಜನೆಯಾಗುವಾಗ ಗುದದಲ್ಲಿ ಉಂಟಾಗುವ ನೋವು : ಹಿಂಗ್ವಾದಿಚೂರ್ಣ . . . ಕೊಳ್ಳೆ ಮಲಶೂಲೆ, ಗುಲ್ಮಶೂಲೆ, ಮಹೋದರ, ಮಲಬಂಧ . . . ಎಲ್ಲಾ ಮಾಣ್ಗುಂ (ವಿಶ್ವ.ಬಿ. ೫೮). [ಸಂ. ಮಲಶೂಲ]

**ಮಲಶೋಧನೆ** (ನಾ). ೧. = ಮಲವಿಸರ್ಜನೆ. ೨. ಭೇದಿಗೆ ತೆಗೆದು ಕೊಳ್ಳುವ ಔಷಧ ; ವಿರೇಚನ : ತಲೆಸಿಡಿತಕ್ಕೆ ಮಲಶೋಧನೆ ಕೊಂಡ ಹಾಗೆ (ಗಾದೆ). [ಸಂ. ಮಲಶೋಧನ]

**ಮಲಸಂಬಂಧ** (ನಾ). ಎರಡನೆಯ ಸಂಬಂಧ : ಮಲಸಂಬಂಧದ ಹುಡುಗಿಯನ್ನೂ ಕೊಟ್ಟಿರಬೇಕು. ಅವಳಿಗೆ ತಂದೆ ತಾಯಿ ಯಾರೂ ಇಲ್ಲವೇ ? (ಶೀಶ್ರಿಕೃ. ೨೪). [ಮಲ$_1$ + ಸಂಬಂಧ]

**ಮಲಸೀಮೆ** (ನಾ). ಬೆಟ್ಟಗುಡ್ಡಗಳ ಪ್ರದೇಶ ; ಮಲೆನಾಡು : ಮಲಸೀಮೆ ಹೆಣ್ಣಿಗೆ ಮಂಡೇ ಸೀಗೇಕಾಯಿ (ನಾಶದ. ೧೫); ಮಲಸೀಮೆಯಿಂದ ಒಂದು ಕಂತೆ ಬೆತ್ತವನ್ನೂ ತರುತ್ತಿದ್ದರು(ಕಳಹು. ೫೪). 'ಬಯಲುಸೀಮೆ' ಪರಾ. [< ಮಲೆ$_3$ + ಸೀಮೆ]

**ಮಲಸುತ್ತು** 'ಮರಸುತ್ತು' ನೋ.

**ಮಲಸೂತ್ರ** 'ಮರಸುತ್ತು' ನೋ.

**ಮಲಹ** 'ಮಲೆಪ' ನೋ.

**ಮಲಹರ** (ನಾ). ಪಾಪವನ್ನು ಪರಿಹರಿಸುವವನು ; ಶಿವ : ಮಲಹರಾತ್ಮಕಮಂತ್ರಮಂ ನೆಱೆ ಕಲಿತು ಬಹುಮಂತ್ರಂಗಳಂ ತಾಂ ಕಲಿವುದುತ್ಕಟಪಾಪವಲ್ಲಾ ಸಹಜಭಕ್ತರ್ಗೆ (ಬಸಪು. ೩-೪೭) ; ತಿಳಿವು ನೀನೆನಗೆ . . . ಮಲಹರನಾ ಶರಣರಾ ಕಥೆಯುಮಂ (ಶ್ರೀಶರಾ. ೦-೫೦). [ಸಂ.]

**ಮಲಹರಾದ್ರಿ** (ನಾ). ಶಿವನ ವಾಸಸ್ಥಾನ ; ಕೈಲಾಸಪರ್ವತ : ದಶಮುಖನಲುಗಿಸಿದ ಮಲಹರಾದ್ರಿಯು ಗುಂಪೆನಿತು ಘನ (ಬಸಪು. ೦೯-೨೭). [ಸಂ.]

**ಮಲಹರಿ$_1$** (ನಾ). [ಸಂಗೀತ] ಒಂದು ರಾಗದ ಹೆಸರು : ನಿರ್ಮಲನಿತ್ಯನನಾದಿಜಿನನ ಮಲಹರಿಯಿಂದ ಪಾಡಿದರು ಕೇಳ್ವರ ಕರ್ಮಮಲ ಹಱಿವಂತೆ ಗಾಯಕರು (ಧರ್ಮ. ೦-೭೮); ಮಲಹರಿ-೧೫ನೇ ಮೇಳಕರ್ತ ಮಾಯಾಮಾಳವಗೌಳದಲ್ಲಿ ಜನ್ಯ. ಉಪಾಂಗರಾಗ. ಹೆಸರಿನಲ್ಲೇ ಸೂಚಿತವಾಗುವಂತೆ ಸಕಲಪಾಪಪರಿಹಾರಕರಾಗ (ಸಂಗೀತಂ. ೦೩೯). [ಸಂ. ಮಲಹರೀ]

**ಮಲಹರಿ$_2$** 'ಮಲಾರ$_3$' ನೋ.

**ಮಲಹಾರಿ** (ನಾ). = ಮಲಹರಿ$_1$ : ಶಂಕರಾಭರಣದೊಳ್ ಸೌರಾಷ್ಟ್ರ ಭೈರವಿಯಾಗಿರ್ಕು . . . ಕಾಳಿಂದಿಯೊಳ್ ಮಲಹಾರಿ ಕಲ್ಯಾಣಿಯಾದಪ್ಪುದು (ಹರಿಶ್ಚ. ೨-೯೦ ವ). [< ಸಂ. ಮಲಹರೀ]

**ಮಲಾ** (ನಾ). ಒಂದು ಅಳತೆ (?) : ಗಾಣ ೧ ಪಡಿಯದೆ ೧ ಹಟ್ಟಾ ೧ ಮಲಾ ೧ ಗೃಹ ಹಸ್ತ ೨೪ ಜಿನಾಲೇ ಭೂಮಿ ೪೦೦ (ಎಕ. XIV, ೦೪೦-೨೮; 12ನೆಯ ಶತ). [ ? ]

**ಮಲಾಪಹ** (ನಾ). ದೋಷನಿವಾರಣೆ ಮಾಡುವವನು : ಪ್ರೋದ್ಯತ್ ತಮೋಹರ ಚಿತ್‌ಪ್ರಭಾಂಗನು ಕಲಿಮಲಾಪಹನು (ಬಸಪು. ೩-೬). [ಸಂ.]

**ಮಲಾಮತ್** 'ಮಲಾಮತ್ತು' ನೋ.

**ಮಲಾಮತಿ** 'ಮಲಾಮತ್ತು' ನೋ.

**ಮಲಾಮತು** 'ಮಲಾಮತ್ತು' ನೋ.

**ಮಲಾಮತ್ತು**, ಮಲಾಮತ್, ಮಲಾಮತಿ, ಮಲಾಮತು (ನಾ). ೧. ತೊಂದರೆ ; ವಿಪತ್ತು : ಈ ಮಲಾಮತ್ತು ಬಂದು ಇದ್ದಂಥಾದ್ದು ಮಹಾದೇವನ ಕಟಾಕ್ಷದಿಂದ ಪರಿಹಾರವಾಯಿತು (ರಾಜೇಂದ್ರ. ೫೯) ; ಒಳ್ಳೆ ಮಲಾಮತ್ತಾಯ್ತಲ್ಲಪ್ಪಾ ! ಇದೇನು ಬಂತು ಗಿರಾಚಾರ ನನಗೆ (ಮುಲಿಹು. ೦೨೭). ೨. ಸೊಕ್ಕು ; ಗರ್ವ : ಅವನ ಮಲಾಮತ್ತು ಸೀಮೆಗಾಗಿ ಮೀಗುತ್ತೆ (ರೂಢಿ). **ಮಲಾಮತ್** : ೧. ಮಾಡುವುದು ಕುಶಾಮತ್, ಆಗುವುದು ಹಜಾಮತ್, ಇದೆಲ್ಲಿಯ ಮಲಾಮತ್ ? (ಗಾದೆ). **ಮಲಾಮತಿ** : ೧. ಇದೆಂತಹ ಮಲಾಮತಿ ಬಂತಪ್ಪ, ಇವತ್ತು ಯಾರ ಮೋರೆ ನೋಡಿ ಎದ್ದಿದ್ದೆನೋ (ಮುಖರುದಾ. ೦೭೭) ; ಈಗಲೇ ಮೈತುಂಬ ಸಾಲ ಮಾಡಿಕೊಂಡು ಮಲಾಮತಿ ಮಾಡಿಕೊಂಡಿದ್ದಾನಂತೆ (ಮುಗಿಯು. ೨೮೯). ೩. ಸೋಜಿಗ ; ಆಶ್ಚರ್ಯ : ದೀವಿಗೆಯ ಕೆಳಗೆ ಕತ್ತಲೆಯೆಂಬ ಗಾದೆಯಂತೆ ಏನೋ ಮಲಾಮತಿ (ಸೋಜಿಗ) ಆಗಿರುತ್ತದೆ (ಬೀರಬ. ೪೨). **ಮಲಾಮತು** : ೧. ಹೋಯಿತು ಒಂದು ಮಲಾಮತು, ಇದ್ದವರು ಸಲಾಮತು (ವಿಧಿಶ್ಮ. ೦೫೮).
[← ಅರ. ಹಿಂ. ಮಲಾಮತ್, ಮಲಾಮತೀ]

**ಮಲಾಮೆ** (ನಾ). ೧. ಬೆಲೆ ಇಳಿದು ಹೋಗುವುದು ; ಅಗ್ಗ : ಅದು ಕೊಳ್ಳುವವರಿಲ್ಲದೆ ಮಲಾಮೆಯಾಗಿತ್ತು (ಮಾಮರಾ. ೦೨೫). ೨. ಜಂಭ : ಅಹಂಕಾರ : ಈಗೀಗ ಅವನಿಗೆ ತುಂಬಾ ಮಲಾಮೆ (ರೂಢಿ).
[← ಪಾರ. ಮಲಾಮತ್]

**ಮಲಾರ$_1$**, ಮಲ್ಲಾರ (ನಾ). ಬಳೆಗಳನ್ನು ಒಟ್ಟಾಗಿ ಕಟ್ಟಿದ ಗೊಂಚಲು; ಬಳೆಸರ : ಬಳೆಯ ಮಲಾರಕ್ಕೆ ಶರಣುಮಾಡಿ, ಹೆಣ್ಣು . . . ಬಳೆ ತೊಡಿಸಿಕೊಳ್ಳುತ್ತಾಳೆ (ಜನ್ನೂರು. ೭೭). **ಮಲ್ಲಾರ** : ಮದುವೆಯ ಹೆಣ್ಣು ಮೊದಲು ಬಳೆಯ ಮಲ್ಲಾರವನ್ನು ಪೂಜಿಸಿದ ನಂತರ ಐದುಜನ ಮುತ್ತೈದೆಯರಿಗೆ ಬಳೆ ತೊಡಿಸುತ್ತಾರೆ (ರೂಢಿ).

ಮಲ್ಲಾರಪೂಜೆ = ಮದುವೆ, ಗೌರಿಪೂಜೆ ಮೊದಲಾದ ಮಂಗಳ ಪ್ರಸಂಗಗಳಲ್ಲಿ ಬಳೆಗಾರನ ಬಳೆಯ ಗೊಂಚಲನ್ನು ಮುತ್ತೈದೆಯರು ಪೂಜಿಸಿ ಹೊಸಬಳೆಗಳನ್ನು ತೊಟ್ಟುಕೊಳ್ಳುವ ಒಂದು ಸಾಂಪ್ರದಾಯಿಕ ವಿಧಿ : ಬೇಗ ಬೇಗ ಮಲ್ಲಾರಪೂಜೆಯನ್ನು ಮಾಡಿಸಿ (ರೂಢಿ).
[ದೇ. ॥ ತಮಿ. ಮಲಾರ; ತೆಲು. ಮಲಾರ, ಮಲ್ಲಾರ./ಸಂ.ಮಾಲಾಹಾರ ?]

**ಮಲಾರ$_2$**, ಮರಾಳ$_2$, ಮಳಾರ (ನಾ). ೧. ಕುದುರೆ ಮೊದಲಾದ ಪ್ರಾಣಿಗಳ ಜೀನನ್ನು ಬಿಗಿಗೊಳಿಸಲು ಅವುಗಳ ಒಡಲಿಗೆ ಬಿಗಿಯುವ ತೊಗಲಿನ ಅಥವಾ ಬಟ್ಟೆಯ ಪಟ್ಟಿ ; ತಂಗುಪಟ್ಟಿ : (∗). **ಮರಾಳ$_2$** : ೧. "ಮರಾಳಂ (ಮಳಾರಂ) = ಕುದುರೆಯ ಪಟ್ಟಿ" (ಶಮದ. ಶಂ. ೨). **ಮಳಾರ**: ೧. "ಮಳಾರಮೆನೆ ಕುದುರೆಗಳ ವ[ಪ]ಟ್ಟೆಯಕ್ಕುಂ" (ಕಬ್ಬಿಕೈ. ೭೭). ೨. ಕುದುರೆಯ ಕಡಿವಾಣ : "ಮಳಾರಮೆನಲ್ಕೆ ಕುದುರೆಕಡಿವಾಣ" (ಕಕರ. ೮೫). [ ? ]

**ಮಲಾರ$_3$**, ಮಲಹರಿ$_2$ (ನಾ). ಒಂದು ಬಗೆಯ ವಾದ್ಯ : ಮಲಾರ ಸಾರಿ ಹೊಡೆವ ಜಯಭೇರಿ . . . ಭೋರಿಭೋರಿಡುತ ಮೊರೆದವು (ಸೌಂದರಾ. ೬-೮). **ಮಲಹರಿ$_2$** :ವೀರರ ಮೂಗಿಗೆ ಕವಡೆಯ ನೀರ್ತರಿಸಿ ಡವುಡೆ ಜೀಗಟೆ ಮಲಹರಿಯ ಜಾಡಿಸಿಕೊಂಬ ಪ್ರವುಡೆಯರಿರ್ದರಿಕ್ಕೆಲದಿ (ಮೋಹತ. ೨೦-೩೯). [ ? ]

**ಮಲಿನ**, ಮಳಿನ (ಗು). ೧. ಕೊಳೆಯಾದ ; ಮಲಿನವಾದ ; ಕೊಳಕಾದ : 'ಮಲಿನಾಂಬರ' ಪರಾ. ೨. ದೋಷದಿಂದ ಕೂಡಿದ ; ಕಳಂಕಿತವಾದ. ೩. ಕಪ್ಪಗಿರುವ ; ಮಸುಕಾದ. ೪. ಮಂಕಾದ ; ಮ್ಲಾನವಾದ : ಅಶ್ರುಮಲಿನಾಸ್ಯನಾತನುಂ ನೆಲದಿಟ್ಟಿಯಾಗಿ . . . ಎನಲ್ (ಶ್ರೀರಾಮಾ. ೩೦೪-೩೯೫). (ನಾ). ೫. ಕೊಳೆ ; ಕಲ್ಮಶ ; ಹೊಲಸು : ಮಲವೇನೊ, ಹೊಲೆಯೇನೊ ! ಮಲಿನದಲಿ ನೆನೆಶುಚಿಯ (ಮಂಕುತ. ೮೩೦). ೬. ದೋಷ ; ಪಾಪ : ಸೃಷ್ಟಿಯೊಳಾವ ಬೆಟ್ಟಗಳೆನ್ನ ತೆಱನೊಳು ಬಿಟ್ಟು ಮನದ ಮಲಿನವನು[ವಾಕಾಂ. ತೆಯ] ಇಷ್ಟದೇವಗೆ ಮನೆಯಾಯ್ತೆಂದು ನಿರ್ಮಲವಟ್ಟಿಹುದಾ ರಜತಾದ್ರಿ (ಶ್ರೀಕೃಸಾ. ೭-೭೨) ; ಮಲಿನವಿಲ್ಲದ ಮನದಿಂದಾ ನಿಷ್ಕಲನ

ನಿರ್ಮಲನಿತ್ಯನನಾದಿಜಿನನ ಮಲಹರಿಯಿಂದ ಪಾಡಿದರು (ಧರಕ. ೦-೭೮). ೭. ಕೊಳಕುಬಟ್ಟೆ : ವರನ ಬಳಿಗೈತರುತ ಮಲಿನವ ಧರಿಸಲಾಗದು (ಕೌಶಿರಾ. ೪೩-೦೩). ೮. ದೋಷಿ ; ಪಾಪಿ : ಮಲಿನರನೆ ಪೊರ್ದುವೈ ನಿರ್ಮಲರತ್ತಲೊರ್ದಲೊಲ್ಲೆ (ಗದಾಯು. ೯-೧೦). **ಮಳಿನ :** ೨. ಆಗಳೆ ಮಳಿನಾತ್ಮಪದಾಭಾಗವುನಿರದಲಸದಲೆದು ಶಿಲೆಯೊಳ್ ಪೊಯ್ದುದ್ಯೋಗದಿ ನರ್ಹದ್ದೀಕ್ಷೆಗೆ ಪೋಗದೆ ಮೆಯ್ದುಂದಂ (ಶಾಂತಿಪು. ೭-೪೭). ೯. ಕಪ್ಪು ಬಣ್ಣ ; ಕರಿದು : ಅಳಿಮಳಿನಂ ಶಶಿಕಳಂಕಮೇಂ ರಂಜಿಸಿತೋ (ರಾಜಶೇ. ೦೦-೫೭). [ಸಂ.]

**ಮಲಿನತೆ**, ಮಳಿನತೆ (ನಾ). ೧. ಕೊಳೆಯಾಗಿರುವಿಕೆ ; ಹೊಲಸಾಗಿರುವಿಕೆ : "ಮಲಿನತೆ ಜರಾಯುಗಳು ಮಾಸು" (ಶಬ್ದವು. ೦೦೦). ೨. ಕಪ್ಪು ಛಾಯೆ ; ಕತ್ತಲು : ಬೆಳ್ಪಂ ಬೆಳಗುವುನಾಗಸಕ್ಕೆ ನಿಜಮಲಿನತೆಯಂ ಮುಂ ಬಿಡಿಸಿ ಮತ್ತಸಂಗನುಮಂ ಬೇಚಿ ಜನಕ್ಕೆ ತೋಜಿದುದು ಬೆಳ್ದಿಂಗಳ್ (ಚಂದ್ರಪು. ೬-೪೨). **ಮಳಿನತೆ :** ೩. ಕಳಂಕ ; ದೋಷ : ನಿರ್ಮಲನಲ್ಲದೊರ್ವನಿಂದಂ ಮಳಿನತೆ ಪೊರ್ದುವುದೆ ವಿಮಳಸದ್ಧರ್ಮಕ್ಕಂ (ಧರ್ಮಾಮೃ. ೬-೨೪೦) ; ಮಳಿನತೆಯುಂ ತಳೆಯಲ್ ನಿರ್ಮಳಮುನಿಯುಂ ಪೊರ್ದಿ ಸೇವೆಗೆಯ್ದುದು ಶಶಿಮಂಡಲಮೆನೆ ತಪಸಿಯ ಕೆಲದೊಳ್ ತೊಳಗುವ ಪಳುಕಿನ ಕಮಂಡಲಂ ಕರಮೆಸೆಗುಂ (ತ್ರಿಷ. ೦-೭೩). [ಸಂ. ಮಲಿನತಾ]

**ಮಲಿನತ್ವ**, ಮಳಿನತ್ವ (ನಾ). ೧. ದೋಷ ; ಕುಂದು ; ಕಳಂಕ : ಕ್ಷಯಿತ್ವ, ವಿಲಾಸಶೂನ್ಯತ್ವ, ಮಲಿನತ್ವ ಮುಂತಾದ ಅವಗುಣಗಳಿಂದ ನಿಕೃಷ್ಟನೇ ಸರಿಯೆಂಬ . . . ಅರ್ಥ ಹೊರಡುತ್ತದೆ (ಧ್ವನ್ಯಾಲೋ. ೧೦೯). **ಮಳಿನತ್ವ :** ೨. ಕಪ್ಪುಬಣ್ಣ. ೧, ೨ : ಪಟು ವಸ್ತ್ರಾವಳಿಯೊಳ್ ಪರಾಭವಮುಮಾ ಸಂವತ್ಸರವ್ರಾತದೊಳ್ ಮಳಿನತ್ವಂ ಪರಪುಷ್ಪಸಂತತಿಗಳೊಳ್ . . . , ವರ್ತಿಪುವಂತವಿಲ್ಲ ನರರೊಳ್ ತದ್ದೇಶದೊಳ್ (ಶಬಪು. ೦-೫೭). [ಸಂ.]

**ಮಲಿನದೃಷ್ಟಿ** (ನಾ). [ನಾಟ್ಯ] ನೃತ್ಯಮಾಡುವಾಗ ತೋರುವ ಒಂದು ಬಗೆಯ ನೋಟ ; P "ದೃಷ್ಟಿಸಿ ನೋಡಿ ರೆಪ್ಪೆಗಳನ್ನು ಅರ್ಧ ಮುಚ್ಚಿ ಪುನಃ ರೆಪ್ಪೆಯ ರೋಮಗಳನ್ನು ಅದಿರಿಸುತ್ತ ಕಡೆಗಣ್ಣನ್ನು ಕೆಂಪಗೆ (ಮಬ್ಬು) ಮಾಡಿ ನೋಡುವುದು" (ಅಸ್ಕರಂ. ೨೬೯ ಗದ್ಯಾನುವಾದ) : ಮಿಗೆ ನೋಡಿ ಮರಳ್ದು . . . ಕಟಾಕ್ಷರಾಗದಿನೊಗುವಿಗೆ ನೋಡಲ್ಕೆ ಮಲಿನದೃಷ್ಟಿಯೆನಿಕ್ಕುಂ (ಅಸ್ಕರಂ. ೩-೨೭). [ಸಂ.]

**ಮಲಿನಾಂಬರ** (ನಾ). ಮಾಸಿದ ವಸ್ತ್ರ : ಕೊಳಕುಬಟ್ಟೆ : ಮಲಿನಾಂಬರವೇಷ್ಟಿತೆ . . . ತಳೆವಳ್ ಘಟಮುಂ (ಜಾತಕ. ೦೯-೩೨) ; ಮಲಿನಾಂಬರವನೊಗೆವರಾರ್ (ಹಕಲಾ. ೦-೨೨) ; ಧರಿಸಿದ ಮಲಿನಾಂಬರದಿಂ ಕೊರಗಿದ ಮೊಗದಿಂದೆ . . . ಎನ್ನಯ ಚಿರವಿರಹವ್ರತಮಂ ಸುಶೀಲೆ ತಾಂ ತಳೆದಿರ್ಪಳ್ (ಶಾಕುಂತ. ೦೦೬-೧೮೪). [ಸಂ.]

**ಮಲಿನಿ** (ನಾ). ಮುಟ್ಟಾದ ಹೆಂಗಸು ; ರಜಸ್ವಲೆ : "ಮಲಿನೀ, ಪುಷ್ಪವತೀ, ಋತುಮತೀ . . . ಹೊಲೆಯಾದವಳ ಹೆಸರುಗಳು. ಮುಟ್ಟಾದವಳು" (ಸಿದ್ಧಾಂತಿ. ೧೭೨). [ಸಂ. ಮಲಿನೀ]

**ಮಲಿಮ್ಲುಚ**, ಮಳಿಮ್ಲುಚ$_1$ (ನಾ). ೧. ಕಳ್ಳ ; ತಸ್ಕರ : "ಚೋರಃ . . . ಮಲಿಮ್ಲುಚಃ — ೧೦ ಕಳ್ಳನ ಪೆಸರುಗಳು" (ಸಿದ್ಧಾಂತಿ. ೩೦೪). ೨. ಪಂಚಮಹಾಯಜ್ಞಗಳನ್ನು ಮಾಡದ ಬ್ರಾಹ್ಮಣ. ೩. ರಾಕ್ಷಸ. ೪. ಸೊಳ್ಳೆ. ೫. ಗಾಳಿ. ೬. ಅಧಿಕಮಾಸ ; ಮಲಮಾಸ. **ಮಳಿಮ್ಲುಚ$_1$ :** ೧. "ಏಕಾಗಾರಿಕಃ . . . ಚೋರಃ, ಮಳಿಮ್ಲುಚಃ . . . ಸ್ತೇನಃ — ಈ ೧೦ ಕಳ್ಳಂ" (ಹಲಾಯು. ೫೭-೦೮೩). [ಸಂ.]

**ಮಲೀಮಸ**, ಮಳೀಮಸ (ಗು). ೧. ಕೊಳಕಾದ ; ಹೊಲಸಾದ. ೨. ಕಪ್ಪಾದ. ೩. ಕಳಂಕದಿಂದ ಕೂಡಿದ ; ದೋಷಪೂರ್ಣವಾದ. ೪. ಕ್ಷುದ್ರವಾದ ; ನೀಚತನದ : ವದನಸುಧಾಂಶುಬಿಂಬದ ಕಳಂಕದ ಬಿತ್ತುಗಳೆಂತೆ . . . ನೀಳ್ದವಾ ಸುದತಿಸಮಗ್ರನಗ್ರಜನಿರಲ್ ಪಟಿಗಂಜದೆ ಪಾಪಭೀರುವಾಗದೆ ಭರತಂಗೆ ರಾಜ್ಯಭರಮಂ ಕುಡವೇಚ್ಚಿ ಮಲೀ[ಮಾ‌ಂ. ೪೯] ಮಸೋಕ್ತಿಗಳ್ (ಪಂಪರಾ. ೬-೯೭). (ನಾ). ೫. ಕೊಳೆ ; ಹೊಲಸು : "ಮಲೀಮಸಂ ಕಿಲ್ಬಿಷಂ" (ಮಂಗರಾ. ೧೩೦-೨೩). **ಮಳೀಮಸ :** ೩. ನಿಜದಿಂ ಜಟಮಟಕಂ ಜ್ವಳನಜಟಿ ಕರಂ ಕುಟಿಳವೃತ್ತನಾತನಸದಳಂ ಸುಜನರೆನೆ ನೆಗ[ಟ್ದ್ದಾ] ವಿನು[ತ]ಜನರೊಳಂ ಮಾಡುಗುಂ ಮಳೀಮಸಮತಿಯುಂ (ಪರ್ವಪಾ. ೪-೦೦). ೬. ಕಳಂಕ ಹತ್ತಿದವನು ; ದೋಷಿ : ವಿಷಯಾಮಿಷಕಾಂಕ್ಷೆಯೆ ತಿಣ್ಣಮಾಗೆ ಮತಿಗೆಟ್ಟು ಮಳೀಮಸನಾದಂ (ಸುಕುಮಾ. ೬-೩೭). [ಸಂ.]

**ಮಲುಕು$_1$** 'ಮಲಕು$_1$' ನೋ.

**ಮಲುಕು$_2$** 'ಮಲಕು$_2$' ನೋ.

**ಮಲುಮಲ** 'ಮುಮ್ಮಲಂ' ನೋ.

**ಮಲುಮಲನೆ** 'ಮುಮ್ಮಲನೆ' ನೋ.

**ಮಲುವು** (ನಾ). ಪ್ರವಾಹದ ಎಳೆತ : ಸೆಳವು : ಪ್ರವಾಹದ ಮಲುವನ್ನು ನೋಡಿಕೊಂಡು ಅದರ ಗುಂಟ ತಾಳ್ಮೆಯಿಂದ ಈಸುತ್ತ . . . ದಡಕ್ಕೆ ಹತ್ತಿದ (ಗ್ರಾಮಾಯು. ೫೯೪). [ ? ]

**ಮಲೂಲು** (ನಾ). ಉದಾಸೀನ ; ನಿರುತ್ಸಾಹ.

**ಮಲೂಲತನ** = ಉತ್ಸಾಹವಿಲ್ಲದಿರುವಿಕೆ ; ನಿರುತ್ಸಾಹ : ನಿನ್ನ ಮಲೂಲತನಕ್ಕೇನೆನ್ನಲಿ ನನ್ನನೆ ರಾಧಾಸರ್ತಕಿಯೆನ್ನುವೆ ನೀನಲ್ಲವೆ ರಾಧೆ ? (ನವಲ್ಲ. ೪೪-೦೦). [ ← ಅರ. ಮರಾ. ಮಲೂಲ್]

**ಮಲೆ$_1$** (ಕ್ರಿ). ೧. ಉದ್ಧಟತನದಿಂದ ಕೂಡಿರು ; ಬೀಗು ; ಗರ್ವಿಸು : "ಮಲೆ-ಔದ್ಧತ್ಯೇ(ಅತಿಗರ್ವಪಡು), ದನೇ ಚ" (ಕಮಧಾ) ; ಅದಿರದಿದಿರ್ಚಿ ತಳ್ತಜೀಯಲೀ ಮಲೆದೊಡ್ಡಿದ ಚಾತುರಂಗಮೆಂಬುದು ನಿಸಗೊಡ್ಡಿನಿಂದುದು (ಪಂಪಭಾ. ೦೦-೬೪) ; ಮಲೆವ ದೈತ್ಯರ ಗಂಡ . . . ಕೊಲಲೊಡರ್ಚುವ ಮಿತ್ತುವಿನ ಗಂಡನ ಪಾವಜಲರುಹಯುಗವ ನೋಡಿದರು (ಮೋಹತ. ೪೨-೪೦). ೨. ಕೊಬ್ಬು ; ಮದಿಸು : ಮಲೆಯುತ್ತೊಲೆಯುತ್ತೆ ಸುತ್ತಿ . . . ಬರುತಿರ್ದುದು ಭೀಕರನೊಂದು ಸೂಕರಂ (ಕಾವ್ಯಸಾ. ೦೦೦೨). ೩. ಎದುರಿಸು ; ಪ್ರತಿಭಟಿಸು ; ಇದಿರುಬೀಳು : ಹುಲಿಗೆ ಮಲೆ ವಳ್ಳುರಿಯೊಳಡಗು ಹೋಗೆಂದೊಡೆಯುನು ಬೆಸಸಿದಡೆ ನಾನಾಜಿನೆನಬಾರದು (ಹಕಲಾ. ೦೦-೩೪) ; ಅಕಟ ಸಿಂಹಕೆ ಮಲೆತುದೋ ಜಂಬುಕನು (ಕುವ್ಯಾದ್ರೋ. ೨-೪೦) ; ಭ್ರಮೆಯಿಂ ಮಲೆತೆಯಾದರೆ ನಿನ್ನ ಗಂಟಲ ಬಳೆಯ ಕಳಚುವೆನು (ಅಂಬಿಗಾ. ೦೪-೩೨).

**ಮಲಪರ್**, **ಮಲೆದರ್**, **ಮಲೆವರ್** (ಬಹುವ) = ಎದುರು ಬಿದ್ದವರು ; ಪ್ರತಿಭಟಿಸಿದವರು : ಮಲಪರ ತಲೆಯೊಳ್ ಬಾಳಿಡುವಂ (ಎಕ. II, ೦೩೨-೦೨ ; 1123) ; ಮಲೆವರಂ ಕೊಂದುಗ್ರಮತ್ತೇಭಸಂಘಮನಾದಂ ಪಿಡಿದಂ (ಎಇ. XX. ೦೧೩-೨೨ ; 1167) ; "ಮಾರ್ಪರ್ = ಮಲೆವರ್" (ಶಮದ. ಕಂ. ೨). **ಮಲಪರೊಳುಗಂಡ**, **ಮಲಪರೊಳ್ಗಂಡ**, **ಮಲೆಪರೊಳುಗಂಡ** = ಪ್ರತಿಭಟಿಸುವವರಿಗೆ ಮಹಾಶೂರನಂತಿರುವವನು ; ಒಂದು ಬಿರುದು : ಸಮರಪ್ರಚಂಡ ಮಲಪರೊಳುಗಂಡ (ಎಕ. VI, ಕಡೂರು, ೨-೪; 1110) ; ಮಲರಾಜರಾಜಂ ಮಲಪರೊಳ್ಗಂಡಂ ಕದನಪ್ರಚಂಡಂ (ಪ್ರಕಶಿ. ೦೯೩೫, ೪೯-೫೪ ; 10ನೆಯ ಶತ ?) ; ಮಲೆಪರೊಳುಗಂಡಂ . . . ಶ್ರೀವೀರಬಲ್ಲಾಳದೇವರು (ಎಕ. VII. ಶಿಕಾರಿ. ೫-೦೯; 1217). **ಮಲವರ ಮಾರಿ ನಿಷ್ಕ** = ಒಂದು ಬಗೆಯ ನಾಣ್ಯ : ಪ್ರತಿವತ್ಸರಂ ಷಡ್ವಿಂಶತಿ ಮಲವರ ಮಾರಿ ನಿಷ್ಕಂ ? (ಮುಂಬಯಿ. IX. ೨೪೩-೬ ; 1186). **ಮಲೆತಿರ್**, **ಮಲೆದಿರ್** = ಉದ್ಧಟತನದಿಂದಿರು ; ಸೊಕ್ಕಿನಿಂದ ಕೂಡಿರು : ಜಂಗಮವಸತಿ

ಮನ್ನಿಸದೆ ಮಲೆತಿರ್ದನಾದೊಡೆ ನಿನ್ನ ಪಾದಕೆ ದೂರನಾದಪೆ (ಪ್ರಭುಲೀ. ೧೬-೪೭) ; ಇಡು ಕಲ್ಲಿಂ ಮಲೆದಿರ್ದ ಪೆರ್ಗರಡಿಯುಂ . . . ಪಿಡಿ ಸಾರಂಗಮಂ (ತ್ರಿಷಷ್ಟಿ. ೨೭-೩೨). **ಮಲೆಪರ ಮಾರಿಯ ಕೋಲ್** = ಒಂದು ಆಳತೆಯ ಕೋಲು : ಅದರ್ಕೆ ಬಿಟ್ಟ ಮಲೆಪರ ಮಾರಿಯ ಕೋಲೊಳ್ನಾಲ್ಕು ಮತ್ತರು (ಸೌಇ. XI-I, ೬೩-೪೪ ; 1028). **ಮಲೆವರ ಮಾರಿ**=ಪ್ರತಿಭಟಿಸುವವರಿಗೆ ಮಾರಿಯಂತೆ ಉಗ್ರನಾಗಿರುವವನು: ಮುನಿದೆನಾದರೆ ಕೋಟಿಕೃಷ್ಣಾರ್ಜುನರ ಕೊಂಬೆನೆ ರಣಕೆ ದುರ್ಯೋಧನಗೆ ಮಲೆವರ ಮಾರಿ ಪಾಂಡವಮೋಘಪವಮಾನ ತನಗೆ ಸರಿ ಯಾರಿಲ್ಲ (ಕುಮಾ.ಕ. ೯-೧೮). **ಮಲ್ಲಹರ ಮಾರಿಯ ಕೋಲ್**=ಮಲೆಪರ ಮಾರಿಯ ಕೋಲ್ : ಮುಳುಗುಂದದ ಮಲ್ಲಹರ ಮಾರಿಯ ಕೋಲೊಳ್ಸರ್ವ್ವನಮಶ್ಯಂ ಬಿಟ್ಟ ಕೆಯ್ಮತ್ತರ್ ೨ (ಸೌಇ. XI-ii, ೦೫೨-೩೮ ; 1103). P ಇದು "ಮಲೆಪರ ಮಾರಿಯ ಕೋಲ್" ಎಂಬುದರ ಅಪಲಿಖಿತ.

[ದೇ.॥ ತಮಿ. ಮಲೈ ; ತೆಲು. ಮಲಯು]

**ಮಲೆ$_2$** (ಕ್ರಿ). ಬಗ್ಗಡವಾಗು ; ರಾಡಿಯಾಗು : ಬಾವಿಯೊಳಗಿನ ನೀರು ಮೇಲೆಮೇಲೆ ವೆಚ್ಚಾಗುತ್ತಿದ್ದರೆ ಅದು ಮಲೆಯುವುದಿಲ್ಲ, ಸ್ವಚ್ಛವಿರುತ್ತದೆ (ಮುಂಬಯು. ೩-೦೫೮) ; ಕಳೆದ ಬಟ್ಟೆ ತೊಳೆದಂತೆ ಹರಿದುಹೋಗುವುದು ಮಲೆತ ಕೊಳಕು (ಸೂರ್ಯಶಾ. ೧೩-೬). [ದೇ.॥ ಮಲ. ಮಲೆಕ್ಕ]

**ಮಲೆ$_3$** (ನಾ). ೧. ಬೆಟ್ಟ ; ಪರ್ವತ : ಮಲೆಗಳ ಮೇಲಿರ್ದುಂ ಪೆರ್ವೊಲೆಗಳ ಮೇಲಿರ್ದರಧಿಕದುಶ್ಚಾರಿತ್ರರ್ (ಧರ್ಮಾಮೃ. ೬-೭೨) ; ಪೆರ್ವುರನೊಳ್ ಸೆಲೆಯೊಳ್ ಮಲೆಯೊಳ್ ಮಲೆದು ಕಾದಿದಂ (ರಾಮಾಶ್ವ. ೦೩೦-೨೩). ೨. ಬೆಟ್ಟವನ್ನು ಆವರಿಸಿರುವ ಕಾಡು : ಅವನಿಯೊಳ್ ಕಾಳಹಸ್ತಿಯ ಮಲೆಯೊಳೆಯ್ದೆ ನೀವವತರಿಸಿ ಮೃಗಗಳಾಗಿರೆ ನಿಮ್ಮ ದೇಹಮಂ ತಂದರ್ಚಿಪಂ ಸಾದರಂ ತಪದಿಂದೆಮ್ಮ ಕಿಂಕರಂ (ಮುಷಾವ. ೬-೪೨). ೩. ಬೆಟ್ಟಸೀಮೆಯ ಪ್ರದೇಶ ; ಮಲೆನಾಡಿನ ರಾಜ್ಯ : ಮಲೆಯುಂ ಮಂಡಲಮುಂ ಬೆಳರ್ಚುವಂತು ಕೊಂಡಾಡುವ ನಾಲ್ವರು ಮನುಜರೊಳಗೆ ನೆಗಬ್ದರಿಗನ ತೇಜಮ ತೊಳಗಿ ಬೆಳಗೆ (ಶಂಕರಾ. ೪-೦೦ ರಗಳೆ) ; ಪರಚಕ್ರಭೈರವಂ ರಾಯದಣ್ಡಗೋಪಾಳಂ ಮಲೆಯ ಮಣ್ಡಳಿಕ ಮೃಗಶಾರ್ದ್ದೂಳಂ (ಸೌಇಇ. XI-i, ೦೦೩-೯ ; 1074) ; ಒಡನೆ ನಿಟ್ಟಿಸಿ ನೋಡುವರಿಗಗೋಚರವಿಡಿದಾಗ ಬಲುಮಲೆಯೊಳಗೆ ಅಡಗಿಕೊಂಡಿಹ ಪಾಲು ಪರೆಯ ಸಾಧಿಸುವೊಡೆ ಮೃಡನಿಗಸಾಧ್ಯವೇವೇಳ್ವೆ (ಕಂಪವಿ. ೦೮-೩೪). ೪. ಬೆಟ್ಟದಲ್ಲಿ ವಾಸಿಸುವ ಜನ : ಮಲೆ ತಲೆದೋಱದೆಂದುದನೆ ಕೊಟ್ಟು ದಡಂಗಪಾಡಂಗಿ ಬಂದೊಡೆ (ಶಂಕರಾ. ೨-೯೦). ೫. ಒಂದು ಊರಿನ ಹೆಸರು : ಮಲೆಸಾಸಿರ್ವ್ವರುಮಱುವ್ವರ್ಗೂ ಮಯ್ಯಾಮರಿಗರುಂ ಇದಕ್ಕೆ ಕಾಪು ಇದನಱಿದೊಂ . . . ಪಞ್ಚಮಹಾಪಾತಕನಕ್ಕುಂ (ಎಕ. I (R), ೯೬-೦೦ ; 888).

**ಮಲರಾಜರಾಜ** = ಬೆಟ್ಟಪ್ರದೇಶದ ರಾಜರಿಗೆ ರಾಜನಾದವನು ; ಒಂದು ಬಿರುದು : ಸಮ್ಯಕ್ತ್ವಚೂಡಾಮಣಿ ಮಲರಾಜರಾಜಂ ಮಲಪರೊಳ್ಗಂಡಂ ಕದನಪ್ರಚಂಡಂ (ಪ್ಕಆರ. ೦೯೩೩, ೪೯-೩೩ ; 10ನೆಯ ಶತ ?).

[ದೇ.॥ ತಮಿ. ಮಲೈ; ಮಲ. ತೆಲು. ಮಲ ; ಕೊಡ. ತುಳು. ಮಲೆ ; ಕೋಲಾ. ಮೂಲೆ, ಮಾಲೇ ; ಪರ್ಜಿ. ಮಲಂಗ್ ; ಗಡಬ. ಮರೆ]

**ಮಲೆಕೋಡು** (ನಾ). ಬೆಟ್ಟದ ತುದಿ ; ಶಿಖರ : ಬಾನಾಡಿಯುಲಿವ ಮಲೆಕೋಡಿನಿಂದ ಕೆಳಗುರುಳಿ ಸೂಲು — ನೀರು (ಶಿರಾಂ. ೩೦-೦೩).

[ಮಲೆ$_3$ + ಕೋಡು$_5$]

**ಮಲೆಗ** (ನಾ). ಬೆಟ್ಟಸೀಮೆಗೆ ಸೇರಿದವನಂ ; ಮಲೆನಾಡಿನವನು : ಒಂದುಕಿಲದೊಳ್ಮಲೆಗರೊನ್ದುವೆರೆದೆಲ್ಲರ್ ಸನ್ನಣಿಸಿ ಕಾಳಗಕೆ ಮುನ್ದು ಪರಿವನ್ನುಂ (ಎಕ. VI, ಶ್ರೀರಂಗ-೬೪-೭೮ ; 722). [ಮಲೆ$_3$ + —ಗ$_2$]

**ಮಲೆಗಾಳಿ** (ನಾ). ಬೆಟ್ಟದ ಮೇಲಿಂದ ಬೀಸುವ ಗಾಳಿ ; ತಂಗಾಳಿ : ಪ್ರಾಣದ ಒಗರಷ್ಟು ಹಿಂಡಿತು ಹಿಂದಲಿಗೆ ಮಾಗದದ ಮಲೆಗಾಳಿ ಮುಂದೆಳೆದಿತು (ಸಖಗೀ. ೩೦-೩೭೦). [ಮಲೆ$_3$ + ಗಾಳಿ$_1$]

**ಮಲೆಗೊಡಗೆ** (ನಾ). ಬೆಟ್ಟದ ಪ್ರದೇಶದ ಜಮೀನಿನ ಮೇಲೆ ಹಾಕುವ ತೆರಿಗೆ (?) : ಮಲೆಗೊಡಗೆಗಳಿಂದ ತೆಱುವ ವರಹ ಗದ್ಯಾಣ ೨೦ ಹೊನ್ನೂ ಹ ೬ (ಪ್ಕಆರ, ೦೯೩೩, ೨೪-೪೭ ; 1387).

[ ಮಲೆ$_3$ + ಕೊಡಗೆ (< ಕೊಡಂಗೆಯರ್$_2$) ]

**ಮಲೆಜೇನ್** (ನಾ). ಒಂದು ಬಗೆಯ ಜೇನಂ ; ಬೆಟ್ಟದ ಜೇನು : ಪುಲಿಗಾಗಿ ಕೆಲರೇಳೆ ಕೆಲರಡಗಿಗೆನೆ ನಡೆಯೆ ಕೆಲರು . . . ಮಲೆಜೇನ್ಗೆ ಪೊರಟ ಹರ್ ಬಗೆಯುತೊಂದೊಂದಂ (ಕಾಂಚೀ. ೯೦-೦೭೭). [ಮಲೆ$_3$ + ಜೇನ್$_1$]

**ಮಲೆತರ್** (ಕ್ರಿ). ಮದಿಸಿ ಬರು : ಪುಲ್ಲೆಗಾಟಿಸಿ ಮಲೆತರ್ಪರಲೆಯ ಸೋಲವುನಟ್ಟಿಯೊಳರಿಕೇಸರಿ ನಿಂದು ನೋಟ್ಪುದೊಂದರಸಲ್ತೇ (ಶಂಕರಾ. ೩-೪೪). [ಮಲೆ$_1$ + ತರ್]

**ಮಲೆದುರ್ಗ** (ನಾ). ಬೆಟ್ಟದ ಮೇಲಿರುವ ಕೋಟೆ : ಮುಡಿಯೆಂಬ ಮಲೆದುರ್ಗ ಜಲದುರ್ಗ ತನುರುಚಿಯುವಱ ನೆಲೆಯಾದ ಯುವತಿಯರಂಗ ದೇಶದ ದಿವ್ಯಬಲಮಿರ್ದ ನಿನಗಳಿವಾಯ್ತು (ಶರ್ಕ. ೦೨-೦೯).

[ ಮಲೆ$_3$ + ದುರ್ಗ ]

**ಮಲೆನಾಡಿಗ** (ನಾ). ೧. ಬೆಟ್ಟಗಾಡಿನಲ್ಲಿ ವಾಸಿಸುವವನು ; ಮಲೆನಾಡಿನವನು. ೨. (ಆಲಂ) ಕೋತಿ ; ಮರ್ಕಟ : ಮಲೆನಾಡಿಗನೆಂದೊಡಾವಂ ? . . . ಮಲೆಯೊಳೆ ನೆಲೆಗೊಂಡಿರ್ದ ನಾಲ್ಗೆಯ ದೇವರ್ (ರಾಮಾಶ್ವ. ೮೯-೨೦). [ ಮಲೆನಾಡು +— ಇಗ ]

**ಮಲೆನಾಡು** (ನಾ). ಬೆಟ್ಟಗುಡ್ಡಗಳಿಂದ ಕೂಡಿದ ಪ್ರದೇಶ; ಬೆಟ್ಟದ ಸೀಮೆ : ಮಲೆನಾಡಂ ಪೋಲ್ವ ನಾಡುಗಳ್ (ಶಬ್ದಮ. ೩೨೬ ವ್ಯಾಖ್ಯಾ) ; ಅಲ್ಲವರಿಷಣವುಂಟು ಬೆಲ್ಲ ಬಿಳಿಯೆಲೆಯುಂಟು ಒಳ್ಳೆ ಹಲಸುಂಟು ಮೆಲ್ಲಲ್ಕೆ ಮಲೆ[ಪಾಠಾಂ. ಲ]ನಾಡನಲ್ಲೆನ್ನಬಹುದೆ (ಸರ್ವಜ್ಞ. ೦೬೨೩) ; ಹದಿನಾಡ ಮೊದೆನಾಡ ಮಲೆನಾಡ ಮನ್ನರ ಬೆದರಿಸಿ . . . ಮೈಸೂರಯೆಲ್ಲೆಯ ಮೆಟ್ಟಿ ಒದಗಿ ಬಂದನು ಕಡೆಗಡಿಗೆ (ಸೌಂದರಾ. ೩-೦೯). [ ಮಲೆ$_3$+ ನಾಡು ]

**ಮಲೆನಾಡುಗ** (ನಾ). = ಮಲೆನಾಡಿಗ ೧ : ಪೊಯ್ದುಱಿದರ್ ಮಹಿಶೂರರೆನಿಸಿ ಮಲೆನಾಡುಗರಂ (ಅಪ್ರತಿ. ೩೨-೩). [ ಮಲೆನಾಡು + — ಗ$_2$]

**ಮಲೆಪ, ಮಲವ, ಮಲಹ** (ನಾ). ೧. ಬೆಟ್ಟಗಾಡಿನ ಅರಸು ; ಬೆಟ್ಟಸೀಮೆಯ ರಾಜ : ಕಾವನ್ನಾರ್ಲ್ವಮ್ಮಲೆಪರುಂ (ಇಆ. VI. ೦೦೨-೦೪ ; 777?) ; ನಕುಳನುಂ ತೆಂಕಣದೆಸೆಯ ಮಲೆಪರಂ ಮಂಡಳಿಕರುಮನಸಿಯರಾಗೆ ಕಪರ್ದಕೊಂಡು (ಶಂಕರಾ. ೬-೩೨ ವ) ; ಮಲೆವ ಮಲೆಪರ್ಕಳಕ್ಕಮ ಬಲ್ಲಿದ ಬಳಾನ್ವಿತರ್ ಮಹೀಪರಕ್ಕಮ (ಸುಕುಮಾ. ೯-೭೨) ; ಈ ಸಮಯವನ್ನೇ ಕಾಯುತ್ತಿದ್ದ ಕೆಲವು ಮಲೆಪರು. . . ದ್ವಾರವತಿಯನ್ನು ಸೂರೆ ಮಾಡಲು ಬಂದರು (ಶಾಂತಲಾ. ೦೩೬). **ಮಲವ**: ೨. ಮಲೆಯಾಳದೇಶಕ್ಕೆ ಸೇರಿದವನು : "ತೆಲುಗನಾಂಧ್ರನೆನಿಕ್ಕು ತಿಗುಳ ದ್ರಾವಿಡನಕ್ಕು ಮಲಹ ಮಲವನೆನಿಕ್ಕು" (ಮುಂಗರಾ. ೦೦೨-೭). ೩. ಒಂದು ವಂಶದ ಹೆಸರು ಮತ್ತು ಆ ವಂಶಕ್ಕೆ ಸೇರಿದ ಅರಸು : ಕೆಳದಿಯ ಅರಸರು ಮಲವರೆಂದು ಹೇಳುವುದುಂಟು. ಮಲವರು ಹಟ್ಟಿಕಾರರಲ್ಲಿ ಅಗ್ರೇಸರರು (ಕರ್ನಾಪೂ. ೦೩೩). **ಮಲಹ** : ೨. "ಮಲಹ ಮಲವನೆನಿಕ್ಕು" (ಮುಂಗರಾ. ೦೦೨-೭); ಮಲಹರ ತಲೆಯುಂ ಧಾಳಿಯಿಟ್ಟೆಯ್ದಿ. . . ಪಾಣ್ಡ್ಯನಂ ಖಣ್ಡಿಸಲ್. . . ಬಂದನೇ ತಾನೆಂಬಂತೆ ಬಂದಂ (ಸೌಇಇ. XX, ೪೯-೦೯; 1076?) ; ಚೋಳ ಬಾ ಮಲಹ ಬಾ ಹವ್ವ ಬಾ ಕುಂತಳಪಾಲಕ ಬಾ ಕಳುಹಿಸಿಕೊ . . . ನಿರ್ಜರ ಬರ್ಬರಪತಿ ನಡೆಯೆಂದು ವಿಸರ್ಜಿಸಿದರು ಸರ್ವನೃಪರ (ಶರಷ. ೩೩-೦೦೦). [ ಮಲೆ$_3$ + — ಪ$_2$ ]

**ಮಲೆಪ್ಪು₁** (ನಾ). ೧. ಸೊಕ್ಕು ; ಅಹಂಕಾರ : ಅಲರ್ದಲೆಗಟಿಗೆಯ ಜಾಡಿಯ ಮಲೆಪ್ಪುಂ ಮಲ್ಲಿಗೆಯ ಪೊಂಕಮುಂ ಬಟಿಕವನಾರ್ತಲೆಯೊಳ್ ತಾಳ್ದುವರ್ (ಆದಿಪು. ೧೧-೧೦೯) ; ಮುಖವೆತ್ತಿ ಮುಡುಹು ಎದೆಗಳನ್ನಗಲಿಸಿ ಮೆಯ್ಯುಬ್ಬಿಸಿ ಮೋಡಿಯ ಮಲೆಪ್ಪಿನಿಂದ ನೆಟ್ಟಗೆ ನಿಲ್ಲು (ಪಟ್ಟಕ. ೧೧೬-೨೧). ೨. ಪ್ರತಿಭಟನೆ ; ವಿರೋಧ : ತಂಗಿಗೊದಗಿದಪಮಾನವೆಮ್ಮಯ ಕುಲಕೆ ನಾಣ್ಗೇಡು; ಬಡಗಲೆಸೆದಿಹ ಮಲೆಪ್ಪು, ತೆಂಕಣದ ಗೌರವಕೆ (ಶ್ರೀರಾಮಾ. ೨೨೦-೨೯೩). [ಮಲೆ₁ + – ಪ್ಪು₂]

**ಮಲೆಪ್ಪು₂** 'ಮಲಪ್ಪು₂' ನೋ.

**ಮಲೆಪೊಡವಿ** (ನಾ). = ಮಲೆನಾಡು : ಹಬ್ಬಿ ಹಸರಿಸಿತುಬ್ಬಿತವಿ ದಟ್ಟಯ್ಸಿದಾ ದಿಟ್ಟ ಮಲೆಪೊಡವಿ (ಶ್ರೀರಾಮಾ. ೮೪೦-೪೩೨).

[ಮಲೆ₃ + ಪೊಡವಿ (< ಪೃಥುವಿ)]

**ಮಲೆಯ** (ನಾ). ೧. ಬೆಟ್ಟಗಾಡಿನಲ್ಲಿ ನೆಲಸಿದವನು; ಮಲೆನಾಡಿನವನು : ಕಿರಿಗೊಟ್ಟನಾ ಕಲಿ ಮಲೆಯನುಲಿಗೆ (ಶ್ರೀರಾಮಾ. ೨೯೯-೧೦೬). ೨. ಮಲಯ ದೇಶಕ್ಕೆ ಸೇರಿದವನು ; ಮಲೆಯಾಳದವನು : ಒಂದಿರದೆನಿಸೊಳ್ಕೊಡಗರೊಂದುಕೆಲದೊಳ್ಮಲೆಯರೊಂದುಪೆರೆದು (ಅಕ್ರೂ. ೬-೭). ೩. ಒಂದು ವಂಶದ ಹೆಸರು ಮತ್ತು ಆ ವಂಶಕ್ಕೆ ಸೇರಿದ ವ್ಯಕ್ತಿ: ನೆಲ್ಲೂರ ಮಲೆಯರ ಕೆಚಿಯಮನ ಮಗ . . . ದೇಗುಲಮುಂ ಮಾಡಿಸಿ ಸಾಸನಮುಂ ನಿಱಿಸಿದಂ (ಎಕ. VIII, ಸೊರಬ. ೪೭೦-೯; 1012). [ಮಲೆ₃ + – ಅ₇]

**ಮಲೆಯರಸ** (ನಾ). ಪರ್ವತರಾಜ; ಹಿಮವಂತ : ಒರಿದು ಸಂಗಡ ಮಲೆಯರಸನ ಮಗಳೊಳಗೆನ್ನ ಸರಕುಮಾಡನೆನುತ್ತ ಗಂಗಾಭವಾನಿ ಮುಸಿದಿರಲು (ಭಿಕ್ಷಾಕ. ೨-೧). [ಮಲೆ₃ + ಅರಸ₁]

**ಮಲೆಯರಾಜಕ್ಕ** (ನಾ). ಒಬ್ಬಾತನ ಹೆಸರು : ಮಲೆಯರಾಜಕ್ಕಂ ಮಾವನಂ ಕೊನ್ದನಮ್ ಕಣ್ಡು ಕಾದಿ ಇಬ್ಬರಮ್ ಕೊನ್ದು (ಎಕ. VIII, ಸೊರಬ. ೩೨೯-೩; 985). [ ? ]

**ಮಲೆಯಾವರಿಕೆ** (ನಾ). ಒಂದು ಬಗೆಯ ಸಸ್ಯ : ಮಲೆಯಾವರಿಕೆ, ಸೊಗಡುತಗಚೆ (ವೈ ಶಿ. ೭೦-೧೪೩೪). [ಮಲೆ₃ + ಆವರಿಕೆ]

**ಮಲೆಯಾಳ**, ಮಲಯಾಳ, ಮಲೆಯಾಲ, ಮಳೆಯಾಳ (ನಾ). ೧. ಒಂದು ದೇಶದ ಹೆಸರು; ಈ ಇಂದಿನ ಕೇರಳರಾಜ್ಯ : ಚೋಳಿಕ ಲಾಳ ಗೌಳ ಮಲೆಯಾಳ ತೆಲುಂಗ ಕಳಿಂಗ . . . ಆದಿ ಭೂಪಾಳಕರ್ ಅಂಜಿ ಬೆಚ್ಚಿ ಬೆಸಕೆಯ್ಯೆ (ತ್ರಿಇ. XX, ೮೧೨-೯; 1165); ತುಳುವ ಮಲಯ ಹುಲೆಯಾಳ ಕರ್ಣಾಟ . . . ದೇಶಂಗಳೊಳೆಸೆವ ಜಂಗಮವು (ಬಸವ. ೬-೧೯) ; ಕೊಂಕಣ ಮಲೆಯಾಳ ಕೊಡಗು ಭೂಪಾಲರ ಬಿಂಕವ ಮರ್ದಿಪ ಶೂರ (ಕಂಪಾ. ೦-೨೩). ೨. ದ್ರಾವಿಡಭಾಷೆಗಳಲ್ಲಿ ಒಂದಾದ, ಆ ದೇಶದ ಭಾಷೆ : ದ್ರಾವಿಡ ಭಾಷೆಗಳಲ್ಲಿ ಸಂಸ್ಕೃತದ ಪ್ರಭಾವ ಮಲೆಯಾಳದಲ್ಲೇ ಹೆಚ್ಚು (ದ್ರಾ.ಶಿ. ೦೦೬). **ಮಲಯಾಳ** : ೧. ಮಲಯಾಳಧರಾಧಿಪ ಶಿರೋಚ್ಚಯಕುಲಿಶದಂಡ ಪರಾಕು (ಜಾನಕಿ. ೩-೦೨). ೩. ಕೇರಳದೇಶಕ್ಕೆ ಸೇರಿದವನು : "ನಾಯಃ—ಕುಕ್ಕುರನು; ಮಲಯಾಳನು" (ಕಾಕಕ. ೦೫೮). **ಮಲೆಯಾಲ** : ೩. ಮಲೆಯಾಲರು ತೆರುವ ಗ ೩.೨ (ಎಕ. XV, ಬೇಲೂರು. ೨೯೮-೭೨; 1279). **ಮಳೆಯಾಳ** : ೩. ಬೇಡರ ರೂಢಿ ತಗ್ಗಿತು ಮಳೆಯಾಳರು ಪ್ರಾಪಳಿದಿರ ದೋಡಿದರು (ಕಂಪಾ. ೦೯-೨೩).

[ದೇ.॥ ತಮಿ. ಮಲೈಯಾಳಮ್ ; ಮಲ. ಮಲಯಾಳ; ತುಳು. ಮಲಯಾಳ, ಮಲೆಯಾಳ; ತೆಲು. ಮಳಯಾಳಮು]

**ಮಲೆಯಾಳಿ** (ನಾ). ೧. = ಮಲೆಯಾಳ ೨ : ಇವರು. . . ಮಲೆಯಾಳೀ ಭಾಷೆಯನ್ನಾಡುವರು (ಕಥಾಗ. ೨೯೪). ೨. = ಮಲೆಯಾಳ ೩ : ಈ ಊರಿನಲ್ಲಿ ಮಲೆಯಾಳಿಗಳೂ ನೆಲಸಿದ್ದಾರೆ (ಊಹ).

[ದೇ.॥ ತಮಿ. ಮಲೈಯಾಳಿ; ತುಳು. ಮಲಯಾಳಿ]

**ಮಲೆಯಾಳು** (ನಾ). ಗುಡ್ಡಗಾಡಿಗೆ ಸೇರಿದವನು ; ಪರ್ವತವಾಸಿ : ಆ ವೀರಮಾರ್ತಾಂಡನು ಗುತ್ತಗಾಡುಪ್ರದೇಶದಲ್ಲಿರುವ ಮಲೆಯಾಳುಗಳನ್ನು ಕಲೆಹಾಕಿ ತನ್ನ ಸುತ್ತಲು ಬಿಲ್ಲಾಳುಗಳ ಸಮೂಹವನ್ನು ಬಳಸಿಕೊಂಡನು (ಕವೀರ. ೪). [ಮಲೆ₃ + ಆಳು₃ (<ಆಳ್₃)]

**ಮಲೆಯಿಸು** (ಕ್ರಿ). ಪ್ರತಿಭಟಿಸುವಂತೆ ಮಾಡು ; ಎತ್ತಿಕಟ್ಟು : ಮಲೆಯುದುದಂ ಮಲೆಯಿಸಲುಂ ಮಲೆದುದಂ ತೊಲಗಿಸಲುಂ . . . ಆನೆ ಬಲ್ಲೆಂ (ಕಂಶಭಾ. ೩-೪೩ ವ). [ಮಲೆ₁ + – ಇಸು₃]

**ಮಲೆಯೆರಲ್** 'ಮಲೆಯೆಲರ್' ನೋ.

**ಮಲೆಯೆಲರ್**, ಮಲೆಯೆರಲ್ (ನಾ). ಬೆಟ್ಟದ ಕಡೆಯಿಂದ ಬೀಸುವ ಗಾಳಿ; ಮಲಯಮಾರುತ : ಮಲೆಯೆಲರಲೆಪ್ಪು. . . ಕೋಗಿಲೆಯ ಜಡಿಪು ಮೊದನೆಗೞ್ವಿನಂ (ಆದಿಪು. ೨-೧೪). **ಮಲೆಯೆರಲ್** : ತಣ್ಪಿನಿಯಂ ಚಂದನ ಗಂಧಮುಂ ಮಲೆಯೆರಲ್ತಂದೀಯೆ (ಅರ್ಜನೀ. ೨-೩೬). [ಮಲೆ₃ + ಎಲರ್]

**ಮಲೆವಕ್ಕಿ** (ನಾ). ಬೆಟ್ಟದಲ್ಲಿ ವಾಸಿಸುವ ಹಕ್ಕಿ; ಮಲೆನಾಡಿನ ಹಕ್ಕಿ : ಇತರ ವನಗಳಲ್ಲಿ ಜೇನೆ, ಕಾಜಾಣ, ಗಿಳಿ, ಕಾಮಳ್ಳಿ, ಪಿಕಳಾರಿ, ಕೋಗಿಲೆ, ಮಾಲೆವಕ್ಕಿಗಳ ಉಲ್ಲೇಖ ಬರುತ್ತಿದೆ (ಸಾಸಮಾ. ೯೬). [ಮಲೆ₃ + ಪಕ್ಕಿ]

**ಮಲೆಸೇನ** (ನಾ). ಬೆಟ್ಟಗಾಡಿನಲ್ಲಿರುವ ಗಿಡುಗ. — ಡೇಗೆ : ಅರಣ್ಯದಲ್ಲಿರುವ . . . ಕಡವೆ ಸಾರಂಗ ಕಪಿ ಗಿಣಿ ಮಲೆಸೇನ . . . ಮುಂತಾದ ಅನೇಕ ಮೃಗಪಕ್ಷಿಗಳನ್ನು ಚೆನ್ನಾಗಿ ಕಾಪಾಡುತ್ತಿದ್ದರು (ಪಂಚಾಮಂ. I, ೦೬೨).

[ಮಲೆ₃ + ಸೇನ₂]

**ಮಲೆಸೌತೆ** (ನಾ). ಒಂದು ಬಗೆಯ ಸೌತೆ : "ಕಂದಾರುಃ— ಮಲೆಸೌತೆ, ದರಿಕಂದ, ರಕ್ತಪಿಂಡಾಲು" (ಓಷಂ. ೨೦). [ಮಲೆ₃ + ಸೌತೆ (<ಸವುತೆ)]

**ಮಲೆಹ** (ನಾ). ಪ್ರತಿಭಟನೆ ; ವಿರೋಧ: ಮಾರಿಪೊಡನೆಯೆ ಮಲೆ[ಹಾಂ. ಲ]ಹ ಸುಖಿವ್ಯೆ (ಶಿಭಾಗ. ೩-೦-೦೨).

[ಮಲೆ₁ + – ಹ₂ (< – ಪ್ಪು₂)]

**ಮಲೆಹೆಗ್ಗ** (ನಾ). ಒಂದು ಬಗೆಯ ಸಸ್ಯ : ಹೆಗ್ಗ, ಮಲೆಹೆಗ್ಗ (ವೈ ಶಿ. ೪೪-೬೭೩). [ಮಲೆ₃ + ಹೆಗ್ಗ]

**ಮಲೇರಿಯ** (ನಾ). ಒಂದು ಬಗೆಯ ಸೊಳ್ಳೆಯ ಕಡಿತದಿಂದ ರೋಗಾಣುಗಳು ರಕ್ತದಲ್ಲಿ ಸೇರಿ ಉಂಟಾಗುವ ಜ್ವರ : ಚಳಿಜ್ವರ : ಮಲೇರಿಯಪರತಂತ್ರಜೀವಿಯು ಕೆಂಪುರಕ್ತಕಣಗಳ ಒಳಗೆ ಜೀವಿಸುತ್ತವೆ (ಕರಜೀ. ೦೩). [← ಇಂ. Malaria]

**ಮಲ್ತೊ** (ನಾ). ದ್ರಾವಿಡಭಾಷೆಗಳ ಗುಂಪಿಗೆ ಸೇರಿದ ಒಂದು ಭಾಷೆ : ದ್ರಾವಿಡಭಾಷೆಗಳ ಗುಂಪಿಗೆ ಸೇರಿದ ಮತ್ತೊಂದು ಮುಖ್ಯವಾದ ಭಾಷೆಯೊಂದರೆ ಮಲ್ತೊಭಾಷೆ (ದ್ರಾ.ಶಿ. ೦೯೩).

**ಮಲ್ನೀರು** 'ಪೊಲೆನೀರು' ನೋ.

**ಮಲ್ಫೂಫ**, ಮಲ್ಫೂಫಿ (ನಾ). ಲಕೋಟೆಯ ಒಳಗಿಡುವ ಪತ್ರ ಮತ್ತು ಅದರೊಡನೆ ಲಗತ್ತಿಸಿದ ಇತರ ಪತ್ರ : ನನ್ನ ಲಕೋಟೆಯೊಳಗಿನ 'ಮಲ್ಫೂಫ ನಮ್ಮ ಧನಿಯ ವಿಳಾಸಕ್ಕೆ ಇತ್ತು. ಅದನ್ನು ಅವರ ಬಳಿಗೆ ಕಳುಹಿಸಿದ್ದೇನೆ (ಪತ್ರಾ.ಮು. ೦೬೧). **ಮಲ್ಫೂಫಿ** : ಮಲ್ಫೂಫಿ ಹಾಕಿದರೆ ಹಾಕಿದರು, ಬಿಟ್ಟರೆ ಬಿಟ್ಟರು (ಪಮ್ಮೂರು. ೦೫೩).

[← ಅರ. ಹಿಂ. ಮರಾ. ಮಲ್ಫೂಫ್]

**ಮಲ್ಫೂಫಿ** 'ಮಲ್ಫೂಫ' ನೋ.

**ಮಲ್ಲ** (ಗು). ೧. ದಕ್ಷವಾದ; ಸಮರ್ಥವಾದ : 'ಮಲ್ಲಗಿಳಿ' ಪರಾ. (ನಾ). ೨. ಬಾಹುಬಲದಿಂದ ಕಾದುವವನು; ಕುಸ್ತಿಪಟು; ಜಟ್ಟಿ : "ಕೆಸಜುಂಕರೆನಲ್ಕೆ ಮಲ್ಲರೊಳ್" (ಶಬ್ದಮ. ೨೭) ; ಸುಯೋಧನನ ಮಲ್ಲಂ ವಿಷುರ್ಪರನೆಂಬಂ ತನ್ನ ಮಲ್ಲರೆಲ್ಲರುಮಂ ಕೊಂಡೊಡೆ (ಕಂಶಭಾ. ೯-೩೭ ವ); ಅಖ್ಖಡದೊಳ್ ಪೊಕ್ಕು ಬಾಹಪ್ಪಳಿಸಿ ಬಲ್ಪುದೋಱಿಸಿದ ಮಲ್ಲನ

ನುಬರ್ಜತ್ತೊಬ್ಬಯ್ಯನೊಳಪೊಕ್ಕು ಮಿಕ್ಕು ಪರಿದಿಕ್ಕಿ (ಗಂಕ. ೨-೧೦೫ ವ); ತಗರ ಕಾದಿಸುವ ಮಲ್ಲರ ಹೋರಿಸುತ್ತಿಹ . . . ರಾಜಪುತ್ರರು ಸೊಗಸಿದರು (ಕಂವಪ. ೨-೬೭). ೩. ಬಲಶಾಲಿ; ಬಲಾಢ್ಯ: ಮುಂದಾಂಪರಾರುಮಿಲ್ಲ ದಿಕ್ಕಿ ಗೆಲ್ದ ಮಲ್ಲನಿರ್ದಂತಿರ್ದಾಗಳ್ (ಶಂಶಘ. ೧೨-೨೪ ವ): ಮಲ್ಲ ಭೀಷ್ಮನು ಪುರಕೆ ತಂದವರೆಲ್ಲರನು ತಮ್ಮಂಗೆ ಮದುವೆಯ ಮಾಡಲನುಗೈದ (ಸಂಭಶ. ೦೩-೩೫). ೪. ಗಟ್ಟಿಗ ; ದಕ್ಷ : 'ಪರಟೆಮಲ್ಲ' ಪರಾ. ೫. ಒಬ್ಬಾತನ ಹೆಸರು : ಮಲ್ಲ ಪರಿಯೊಡನೆ ತಾಗಿ ಕಾದಿ ಸಗ್ಗಿಯಾದವನ್ (ಎಕ. IX, ಶ್ರೀಐವಾ. ೦೯-೩; ಸು. 800). ೬. ಮಲ್ಲಿಕಾರ್ಜುನನೆಂಬ ಒಬ್ಬ ಕನ್ನಡ ಕವಿಯ ಹೆಸರು : ಮಲ್ಲಬುಧನಿಂದಂ ಕಾವ್ಯಸಾರಂ ಜಗನ್ನುತವಾಯ್ತು (ಸೂಕ್ತಿಸು. ೦-೨೪). [ಸಂ.]

**ಮಲ್ಲಂತಿಗೆ** (ನಾ). ದ್ವಂದ್ವಯುದ್ಧಮಾಡುವವನು ಸೊಂಟಕ್ಕೆ ಕಟ್ಟಿಕೊಳ್ಳುವ ವಸ್ತ್ರದ ಪಟ್ಟಿ; ಕಾಸೆ : ಸಾಹಸಭೀಮಂ ಮಲ್ಲಂತಿಗೆಯ ನಪ್ಪೊಡಂ ಸಡಲಿಸದವನನವಯವದೊಳಿಂತೆಂದಂ (ಶಂಶಘ. ೩-೦೭ ವ) ; ಪಾಸಿದ ಪಸೆಯ ಮೇಲೆ ಮಲ್ಲಂತಿಗೆಜಿಁದಜಿಁದು ಕುಳ್ಳಿರ್ದು ಕಯ್ಯಿಕ್ಕಿಕೊಂಡಿರ್ದವಂ (ಅರ್ಜನೇ. ೫-೨೬ ವ); ನಿನ್ನನೀ ಮನೆಯೊಳಗೆ ದಿಟದ ದೇವತೆಯಂತೆ ಮಲಗಿ ಮಲ್ಲಂತಿಗೆಯಿಾದು ಕುಳ್ಳಿರಲೀಯೆಂ (ಅರ್ಜನೇ. ೭-೫೦ ವ).

[< ಸಂ. ಮಲ್ಲವಸ್ತ್ರಿಕಾ]

**ಮಲ್ಲಕಂಭ** 'ಮಲ್ಲಗಂಭ' ನೋ.

**ಮಲ್ಲಕಳ** 'ಮಲ್ಲಗಳ' ನೋ.

**ಮಲ್ಲಕಾಳಗ** 'ಮಲ್ಲಗಾಳೆಗ' ನೋ.

**ಮಲ್ಲಖಂಡ** (ನಾ). ಒಂದು ಬಗೆಯ ಔಷಧಿ : ಕರ್ಪೂರಶಿಲಾಜಿತುಭಸ್ಮ, ಅತಿಮಧುರ . . . ಮಲ್ಲಖಂಡ ಇವನ್ನು ಸಮವಾಗಿ ಮರ್ದಿಸಿ ಜೇನು ತುಪ್ಪದೊಡನೆ ಕೊಡಲು ಬಹುಮೂತ್ರ ನಿಲ್ಲುವುದು (ಸಕವೈ. ಶಂ. ೪೯೬).

[ ? ]

**ಮಲ್ಲಗ** (ನಾ). ಒಂದು ಕ್ಷುದ್ರದೇವತೆಯ ಹೆಸರು : ಎಲ್ಲಾಯಿ ಯಕನಾತಿ ಬನದ ಶಂಕರಿ ಮಲ್ಲಗ ಜಟ್ಟಿಂಗ (ವಿಜಾಸು. ೫೬-೨). [ ? ]

**ಮಲ್ಲಗಂಟು** (ನಾ). ದ್ವಂದ್ವಯುದ್ಧ ಮಾಡುವವನು ತನ್ನ ಸೊಂಟಕ್ಕೆ ಕಟ್ಟಿಕೊಳ್ಳುವ ನಡುಕಟ್ಟು : ಉಟ್ಟ ಮಲ್ಲಗಂಟಿನ ತೊಡರ್ಚಿದುಡೆಗಂಟೆಯ . . . ಕಟ್ಟಣಕದ ಸಿಂಗರಂಬೆರಸಿ ಬೀರಸಿರಿಯಂ ಬೀಱೆ (ಗಂಕ. ೭-೫೫ ವ); ನಿಱಿಯುಡಿಗೆಯಲಿ ಮಲ್ಲಗಂಟಿನ ಸೆಱಗ ಮೋಹಿಸಿ ಬೆರಳ ದರ್ಭೆಯ ಹಱಿದು ಬಿಸುಟನು (ಕುವ್ಯಾದ್ರೋ. ೯-೦೫); ಮಗಧ ರಾಜನನ್ನು ಮಲ್ಲಗಂಟನಲ್ಲಿ ತುಡುಕಿ ಹಿಡಿದು ರಭಸದಿಂದ ತಿರುವಿ ಎಸೆದನು (ರಾಜಸೂ. ೨೫). 'ಮಲ್ಲಂತಿಗೆ' ಹೋ. [ಮಲ್ಲ + ಗಂಟು]

**ಮಲ್ಲಗಂಡಿಕೆ** (ನಾ). ಜಟ್ಟಿಯ ಪರಾಕ್ರಮ, –ಶೌರ್ಯ : ಕಲಿಯುಗದ ಈ ಭೀಮನ ಮಲ್ಲಗಂಡಿಕೆಯ ಮೆಯ್ಸಿರಿಯಲ್ಲಿ ಅಳೆವಂಕೆಗೊಳ್ಳಬಹುದಹುದು (ಮಂತ್ರಕ., ೬೬-೦೫). [ಮಲ್ಲ + ಗಂಡಿಕೆ$_1$]

**ಮಲ್ಲಗಂಬ** 'ಮಲ್ಲಗಂಭ' ನೋ.

**ಮಲ್ಲಗಂಭ**, ಮಲ್ಲಕಂಭ, ಮಲ್ಲಗಂಬ (ನಾ). ೧. ಜಟ್ಟಿಗಳು ಕಸರತ್ತು ಮಾಡಲು ಗರಡಿಮನೆಯಲ್ಲಿ ನೆಟ್ಟಿರುವ ಕಂಬ. ೨. ಆನೆಗಳನ್ನು ಕಟ್ಟುವ ಕಂಬ: ಮದಕರಿಗಳು ಕಟ್ಟಿದ ಮಲ್ಲಗಂಭವನೊಡೆದು ಕೆಡಹಿಕೊಂಡಾಗ . . . ದೆಸೆದೆಸೆಗೈದಿ ಹದಗೆಟ್ಟೋಡಿಯಾಡಿದುವು (ಕಂವಪ. ೧೫-೯೨). **ಮಲ್ಲಕಂಭ** : ೨. ಒಂದು ಮೂಲೆಗೆ ಮಲ್ಲಕಂಭವಿದ್ದು ಅದರ ಬುಡಕ್ಕೊಂದು ಬೆಳ್ಳಿಯ ಸರಪಳಿಯನ್ನು ಭದ್ರವಾಗಿ ಬಂಧಿಸಿದ್ದರು (ರಕ್ತರ್ಧ. ೩೩೦). ೩. ಮಲ್ಲಗಂಬದ ಮೇಲೆ ಮಾಡುವ ಕಸರತ್ತು : ಎಲ್ಲಿಯ ಬಾಲಕ ? ನನಗಿಂತ ಹಿರಿಯನು. ಮಲ್ಲಕಂಭ, ಕುಸ್ತಿ ಇತ್ಯಾದಿಗಳನ್ನು ಮಾಡುತ್ತಾನೆ (ಪೂಂಕಿ. ೦೭). **ಮಲ್ಲಗಂಬ** : ೧. ಶಂಬರ ವೈರಿಯೆಂದೆಂಬ ಮಲ್ಲನ ಮಲ್ಲಗಂಬವನಿರದಿಳಿಕೆಯ್ವ ಇಂಬುವಡೆದ ತೊಡೆಗಳ ನೀಱನವನಾರು (ಕುಂಆಸಾಂ. ೨೨-೫೨). ೩. ಮುಂಜಾನೆ ಮಾಡುವ ವ್ಯಾಯಾಮದಲ್ಲಿ 'ದಂಡ', ಉಟಾಬಸಿ, ಓಡುವದು, ಮಲ್ಲಗಂಬ, ಲೋಡು ತಿರುವುವದು ಮುಂತಾದವುಗಳೂ . . . ಬರುತ್ತವೆ (ಬ್ರಹ್ಮಜೀ. ೨೦೦).

[ಮಲ್ಲ + ಕಂಭ]

**ಮಲ್ಲಗಚ್ಚೆ** (ನಾ). (ದ್ವಂದ್ವಯುದ್ಧ ಮಾಡುವವನಂತೆ) ನಿರಿಯನ್ನು ಹಿಂದಕ್ಕೆ ಹೊರಳಿಸಿ ಬಿಗಿದು ಕಟ್ಟುವ ಕಚ್ಚೆ; ವೀರಗಚ್ಚೆ : ಕರದಿ ಬಿಲ್ಲಂ ಪಿಡಿದು ಮೇಣುಟ್ಟು ಮಲ್ಲಗಚ್ಚೆಯ ಪೀತವಸನಮಂ, ತಿರುಗುತಿರೆ ಚಿತ್ರಾಂಗಿ, ಕಾನನದ ರಾಣಿ ತಾನೆಂಬವೊಲ್ (ಚಿತ್ರಾಂಗ. ೩-೬೯).

[ಮಲ್ಲ + ಕಚ್ಚೆ]

**ಮಲ್ಲಗದ್ದೆ** (ನಾ). ಒಂದು ಬಗೆಯ ಭೂಮಿ : ಯೀ ನಾಲ್ಕುಗಡಿಯಿಂದೊಳಗೆ ಮನೆ ಠಾಉ ಮಲ್ಲಗದ್ದೆ ಮತ್ತಗದ್ದೆ ಪಕ್ಕಿ ಸಹಾ ನಾಗಂಡು ಗದ್ದೆ ಮು ೧೦ (ಸಾಇಇ. IX–ii, ೪೭೫-೦೦; 1472).

[ಮಲ್ಲ ? + ಗದ್ದೆ (< ಗಬ್ದೆ)]

**ಮಲ್ಲಗಳ**, ಮಲ್ಲಕಳ (ನಾ). ದ್ವಂದ್ವಯುದ್ಧ ನಡೆಯುವ ಸ್ಥಳ ; ಅಖಾಡ; ಕುಸ್ತಿಕಣ : ಇಂದ್ರಧನುವೆ ಪೋಗವೆ ನಿಂದತ್ತನೆ ಪಂಚರತ್ನಮಯಮಂದನಮಾಲಿಕೆ ಮಲ್ಲಗಳದ ಬಾಗಿಲೊಳೆಸೆಗುಂ (ಜಗಪ. ೬-೪೦). **ಮಲ್ಲಕಳ** : ಆ ಊರ ಮಲ್ಲಕಳದಲ್ಲಿ ಹೋರಿ ಹೊಯ್ದಾಡಿ (ಶಿಗಕ. ೪೫-೦೩).

[ಮಲ್ಲ + ಕಳ$_3$]

**ಮಲ್ಲಗಾಸೆ** (ನಾ). = ಮಲ್ಲಗಚ್ಚೆ : ಮಲ್ಲಗಾಸೆಯ ತೆಗೆದುಟ್ಟು ನಲಿದು ಭರದಲ್ಲಿ ವಜ್ರಾಂಗಿಯ ತೊಟ್ಟು . . . ನಡೆತಂದರು ನಿಲ್ಲದೆ ಕಲಿವೀರ ಭಟರು (ಜೀವಂಸಾಂ. ೫-೩೫); ಕಪ್ಪಿನ ಭುಜಂಗಚರ್ಮದ ಮಲ್ಲಗಾಸೆಯಿಂದೆಸೆದ ವನಚರರೆಱೆಯಂತಂ ಕಂಡಳು (ಮರೇಪು. ೩೦-೨೩); ಜಗಜಟ್ಟಿಗಳ ತೆರದಿಂದೆ ಮಲ್ಲಗಾಸೆಯ ಬಿಗಿದು (ನವಮೋ. ೨೪-೫೫). [ಮಲ್ಲ + ಕಾಸೆ$_1$]

**ಮಲ್ಲಗಾಳಗ** 'ಮಲ್ಲಗಾಳೆಗ' ನೋ.

**ಮಲ್ಲಗಾಳೆಗ**, ಮಲ್ಲಕಾಳಗ, ಮಲ್ಲಗಾಳಗ (ನಾ). ಜಟ್ಟಿಗಳು ಮಾಡುವ ಯುದ್ಧ; ಬಾಹುಯುದ್ಧ; ದ್ವಂದ್ವಯುದ್ಧ : ಮಲ್ಲಗಾಳೆಗ ಮಲ್ಲಘಾತ . . . ಎಂದು ಸೊಬಗಿಡದ ತತ್ಸಮಕೆ ಕನ್ನಡ ಸಕ್ಕದಂಗಳಲಿ ಕ್ರಮದಿಂದ ತೋರ್ಪುದಾಹರಣೆಯಕ್ಕುಂ (ಶಬ್ದಕ್ಕ. ೯೯); ಇಂತಿರ್ವರುಂ ಸೋಲುಗೆಲುವುಗಾಣದೆ ಗದೆಗಳಂ ತೊಱೆದು ಮಲ್ಲಗಾಳೆಗಕೆಳಸುತಿರಲು (ಜೈಪು. ೦೭-೩೫). **ಮಲ್ಲಕಾಳಗ** : ಆ ಕಾಲದಲ್ಲಿ ಮಲ್ಲಕಾಳಗ ಮೊದಲಾದ ಪ್ರದರ್ಶನಪಂದ್ಯಗಳು ನಡೆಯುತ್ತಿದ್ದುದು ಆ ಬಯಲುರಂಗಭೂಮಿಯಲ್ಲಿಯೇ (ಕಕಪ್ರ. ೫-೦೪೪). **ಮಲ್ಲಗಾಳಗ** : ಮಲ್ಲ – ಮಲ್ಲಗಾಳೆಗ (ಮಲ್ಲಗಾಳಗ), ಮಲ್ಲಮುರಾಂತಕ, ಮಲ್ಲಘಾತ (ಕಮದ. ೨೯೬ ಪ್ರಯೋ).

[ಮಲ್ಲ + ಕಾಳೆಗ]

**ಮಲ್ಲಗಿಳಿ** (ನಾ). (ಮಾತನಾಡುವುದರಲ್ಲಿ) ಸಮರ್ಥವಾದ ಗಿಳಿ : ಕಲ್ಲದಾಡುವ ತೆಲ್ಲಯಿಸಿದ ಮಲ್ಲಗಿಳಿಯ ಸವಿನುಡಿಗೆ . . . ಬೆಲ್ಲಂಗೋಲ್ವಿಲ್ಲನ ಮಲ್ಲಿಗೆಸರಲ ಜಲ್ಲಣೆಗೆ ತಲ್ಲಣಂಗೊಂಡು (ರಾಮಾಶ್ವ. ೬೩-೪). [ಮಲ್ಲ + ಗಿಳಿ]

**ಮಲ್ಲಡಿ** (ನಾ). ಒಬ್ಬಾತನ ಹೆಸರು : ಲೋಕಾದಿತ್ಯ ಎಳಅರಸರ್ಮ್ಮಗಂದಿರ್ಮ್ಮಲ್ಲಡಿಯುಂ ಕದಂಬೂರಾ ನಾಲ್ವದಿಂಬರು (ಎಕ. X, ಕೋಲಾರ. ೭-೫; 760). [ಮಲ್ಲ + ಅಡಿ$_1$]

**ಮಲ್ಲಣಿ** 'ಮಲ್ಲಟಿ' ನೋ.

**ಮಲ್ಲಣಿಗೊಳ್** 'ಮಲ್ಲಟಿಗೊಳ್' ನೋ.

**ಮಲ್ಲಣಿಸು** 'ಮಲ್ಲಳಿಸು' ನೋ.

**ಮಲ್ಲತುಂಬಿ** (ನಾ). ಗೋಡೆಗಳಿಗೆ ಮಣ್ಣು, ಸಿಮೆಂಟು ಮುಂತಾದುವುಗಳನ್ನು ಮೆತ್ತಿ ನಯಮಾಡುವುದು ; ಗಿಲಾವು : ಹರಕುಮುರುಕಾಗಿ,

ಬೀಳಲಿದ್ದ ಮನೆಗೆ ನಲವತ್ತುರೂಪಾಯಿ ವೆಚ್ಚಮಾಡಿ, ಹೋದ ತಿಂಗಳವೇ ಮಲ್ಲತುಂಬಿ ಮಾಡಿಸಿದ್ದಳು (ಕಳರು. ೬೩). [ ? ]

**ಮಲ್ಲದಾಳ** (ನಾ). ಮಲ್ಲಯುದ್ಧದಲ್ಲಿ ಜಟ್ಟಿಗಳು ತೊಡೆ ಮತ್ತು ತೋಳುಗಳನ್ನು ತಟ್ಟಿ ಸದ್ದು ಮಾಡುವುದು : ಪಳುಕಿನ ಕೋಡುಗಲ್ಗಳೊಳ್ ಪೊಳೆವ ತಮ್ಮ ನೆಟಿಲೆ ನೆರೆದ ಮಲ್ಲರ ನೆರವಿಯಾಗಿಯುಂ ನಿಕುಂಜೋಪಾಂತಜರ್ಝರನಿರ್ಝರಧ್ವನಿಯೆ ಮಲ್ಲದಾಳಮಾಗಿಯುಂ (ಶಂಪ್ರಕೃ. ೫-೭೭ ವ).

[< ಸಂ. ಮಲ್ಲಶಾಲ =ಸಂಗೀತದಲ್ಲಿಯ ಒಂದು ಬಗೆಯ ತಾಳ]

**ಮಲ್ಲಪ** (ನಾ). ಒಬ್ಬಾತನ ಹೆಸರು : ಕಾವಳಿಯರಣುಗಯ್ಯ ತನ್ನ ತಮ್ಮನೊಟಪ್ಪುರಸನ ಮಲ್ಲಪ [ಮ]ನ್ನಟಿ ಕಾದು ಮನ್ನಟಿ ಕೊನ್ದು ಬಾ × × × (ಎಕ. IX, ಹೊಸಕೋ. ೪೬-೩; ಸು. 980 ?).

[ಮಲ್ಲ + ಅಪ (<ಅಪ್ಪ₁)]

**ಮಲ್ಲಪಡಿ** (ನಾ). (?) : ಬೆರಕವೆಳಗಿಂ ಸುರಧನುವಿನ ಹೊರಜೆ ಹತ್ತಿದೈರಾವತಕ್ಕೆ ವೈರಮನೊಡರ್ಚೆ ಮಲ್ಲಪಡಿಯ ಪಟಿಯ ದತ್ತಿಗುಲ್ಲಾಳದಿಂ ನಡೆದು ತೋಟಿ ಹಿಂಗಾಲ್ನಿಂದ ಸೂಟಾನೆಗಳ ತಾಳವಟ್ಟಮಂ ಪಿಡಿದು ಪಿಂದಣ್ಗೆ ಚಿಗಿದು (ಅಪಂಕೃ. ೨-೨೬ ವ). [ ? ]

**ಮಲ್ಲಪಳಿ** (ನಾ). ಜಟ್ಟಿಯು ಧರಿಸುವ ಉತ್ತಮವಾದ ವಸ್ತ್ರ : ಕಟ್ಟಿದ ದಟ್ಟಿ ಚಲ್ಲಣದ ಉಟ್ಟ ಮಲ್ಲಪಳಿಯ ಈ ವೇಷದಿಂದ ಕೆಮ್ಮಣ್ಣುಮಟ್ಟಿಯಲ್ಲಿ ವೀರಾಸನದಲ್ಲಿ ಕುಳ್ಳಿರುತ್ತ (ಏಗಡ. ೩೦-೨೨). [ಮಲ್ಲ + ಪಳಿ₄ (<ಪಟಿ₅)]

**ಮಲ್ಲಮರ್ದನ** (ನಾ). (ಚಾಣೂರನೆಂಬ) ಜಟ್ಟಿಯನ್ನು ನಾಶಪಡಿಸಿದವನು ; ಕೃಷ್ಣ : ನಿಲ್ಲಬೇಕಯ್ಯ ನೀ ಮಲ್ಲಮರ್ದನ ಸಿರಿವಲ್ಲಭ ಎನ್ನ ಹೃದಯದಲ್ಲಿ ಸತತ (ಪುರಂದ. ಧಾ. ೧-೧೧೬ ಪಲ್ಲವಿ). [ಸಂ.]

**ಮಲ್ಲಯುದ್ಧ** (ನಾ). = ಮಲ್ಲಗಾಳೆಗ : ಒಂದುದಿವಸಂ ವಿರಾಟಂ ನೆಲದೊಳುಳ್ಳ ಮಲ್ಲರೆಲ್ಲರುಮಂ ಬರಿಸಿ ಮಲ್ಲಯುದ್ಧಮಂ ನೋಡೆ (ಪಂಭಾ. ೮-೫೭ ವ); ಕುಹುರದ ಕಲಿಗಳೊಡವೆರಸಿ ಹೊಯ್ದಾಡಿದರ್ಬಾಹುನಖಿಮುಷ್ಟಿಕೇಶಾಕೇಶಿಮಲ್ಲಯುದ್ಧದ ಹತಾಹತಿಗಳಿಂದೆ (ಜೈಮಿಭಾ. ೨೭-೬); ಕಾಳಗಕ್ಕೆ ಸಿದ್ಧನಾಗು ಎಂದು ನುಡಿದು ಮಲ್ಲಯುದ್ಧಕ್ಕೆ ಮಾತು ಕೊಟ್ಟನು (ರಾಜಸೂ. ೨೩). [ಸಂ.]

**ಮಲ್ಲರಂಗ** (ನಾ). ಮಲ್ಲಯುದ್ಧ ಮಾಡುವ ಸ್ಥಳ ; ಕುಸ್ತಿಕಣ ; ಅಖಾಡ : ಅನ್ನೆಗಂ ಮಲ್ಲರಂಗಕ್ಕವತರಿಸಿ ನಿಂದು (ಜಗಪು. ೬-೫೮ ವ). [ಸಂ.]

**ಮಲ್ಲಲ್** (ನಾ). ಮಧ್ಯಭಾಗವು ಹಳ್ಳವಾಗಿರುವ (ಮಣ್ಣಿನ) ಪಾತ್ರೆ : ಅನಿಬರುಮಂ ನೆಲಮನೆಯೊಳಿಕ್ಕಿ ಮಲ್ಲಲ್ ಪುಗುವಣಿತು ಬಾಗಿಲಂ ಮಾಡಿ ಪ್ರತಿದಿನಕ್ಕೊಂದು ಮಲ್ಲಲ ಕೂಟುಮನೊಂದು ಮೊಗವೆ ನೀರುಮಂ . . . ನೀಡಿದೊಡೆ (ವಡ್ಡಾರಾ. ೧೬೨-೧೧).

[ದೇ.॥ ತಮಿ. ಮಲ್ಲವ್, ಮಲ್ಲೈ; ಮಲ. ಮಲ್ಲ, ಮಲ್ಲಿಕ; ತೆಲು. ಮಲ್ಲ; ಗೊಂಡಿ. ಮಾಲ್ಕೀ ; ಪರ್ಜಿ. ಮಲ್ಲಕ]

**ಮಲ್ಲವಜಿ** (ನಾ). ಒಂದು ಬಗೆಯ ರಣವಾದ್ಯ; ಜಟ್ಟಿಕಾಳಗ ನಡೆಯುವಾಗ ಬಾರಿಸುವ ಹರೆ : ಮಲ್ಲವಜಿಗಳು ಮೊಳಗಲಪ್ರತಿಮಲ್ಲರೋಲಗದಿದ್ದೆಸೆಗೆ ಜನವೆಲ್ಲ ಕುಳ್ಳಿರಲೆಸೆವ ಮಂಚಗಳಲಿ (ಏಭಾಗ. ೧೧-೩೮-೩೫). [ಮಲ್ಲ + ಪಜಿ₁]

**ಮಲ್ಲವಾತು** (ನಾ). ಜಟ್ಟಿಕಾಳಗದಲ್ಲಿ ಮಲ್ಲರು ಮಾಡುವ ವೀರೋದ್ಗಾರ, ಮೂದಲಿಕೆ ಮುಂತಾದುವು : ಮಲ್ಲ—ಮಲ್ಲಗಾಳೆಗ (ಮಲ್ಲಗಾಳಗ), ಮಲ್ಲಮುರಾಂತಕ, ಮಲ್ಲವಾತು (ಶಮದ. ೨೯೮ ಪ್ರಯೋ).

[ಮಲ್ಲ + ಮಾತು₁]

**ಮಲ್ಲವಿದ್ಯೆ** (ನಾ). ಜಟ್ಟಿಕಾಳಗವನ್ನು ಮಾಡುವ ಕಲೆ ; ಕುಸ್ತಿವಿದ್ಯೆ : ಕೇಸರಿಗೆ ಶೌರ್ಯ್ಯದೊಳ್ ದೊರೆ ಕೇಸರಿ ಬಿರುಬಂಧ ಮಲ್ಲವಿದ್ಯಾಬಲದೊಳ್ ಶಾಸಿತಮುಷ್ಟಿಕ ಚಾಣೂರಾಸುರನೊರ್ಬ್ಬನೆ ಸಮಾನಂ (ಎಕ. V. ಅರಸೀ. ೧೮-೨೫; 1140); ಭುಜಬಲವಜಿವೆನಗ್ಗದ ಮಲ್ಲವಿದ್ಯೆಯಲಿ (ಕುಮಾ.ಪಿ. ೧-೨೨). [ಸಂ. ಮಲ್ಲವಿದ್ಯಾ]

**ಮಲ್ಲವೋರ್** (ಕ್ರಿ). ಜಟ್ಟಿಕಾಳಗ ಮಾಡು ; ಕುಸ್ತಿ ಮಾಡು : ಮಲ್ಲವೋರ್ವೊಡೆ ಬಲ್ಲಿದರೆನಗಿಲ್ಲ ಮಲ್ಲರವನಿಪ ಪೆಸರಿಂ ವಲ್ಲಲನೆಂ (ಪೇಬಿಪು. ೧೧-೦೨೪); ಗಜಮಲ್ಲನೊಳ್ ಪ್ರತಿಮಲ್ಲಂ ಮಲ್ಲವೋರ್ದು ಸಿಂಹನಾದದಿನಾರ್ದು (ಅರ್ಧನೇ. ೬-೮೪ ವ). [ಮಲ್ಲ + ಪೋರ್₁]

**ಮಲ್ಲವೋರ್ಕೆ** (ನಾ). ಕುಸ್ತಿ ; ಮಲ್ಲಯುದ್ಧ : (ಮಲ್ಲವೊ[ ವೋ ]ರ್ಕೆ) ಮೊದಲಾದ ರಾಗದ್ವೇಷಹೇತುಗಳಂ ನೆಗಟ್ಚುದುಂ ಕಾಯಗತನುಮಕ್ಕುಂ (ಕಕಾರ. ೩೦೪). [ಮಲ್ಲ + ಪೋರ್ಕೆ]

**ಮಲ್ಲಶಾಲೆ** (ನಾ). ಕುಸ್ತಿಯನ್ನು ಕಲಿಸುವ ಮನೆ ; ಗರಡಿ : ಮನವಿದೊಂದು ಮಲ್ಲಶಾಲೆ (ವಿಜ್ಞ. ೪೮-೧). [ಸಂ. ಮಲ್ಲಶಾಲಾ]

**ಮಲ್ಲಶ್ರಮ** (ನಾ). ಜಟ್ಟಿಕಾಳಗ : ಸಾಕಿದೇತಕೆ ಮಲ್ಲಶ್ರಮದಲಿ ನೂಕಿ ನೋಡುವೆವಿನ್ನು ಕೈದುಗಳೇಕೆ ದೃಢಮುಷ್ಟಿಪ್ರಹಾರಪ್ರಕಟಸತ್ವರಿಗೆ (ಕುಮಾ.ಭ. ೦೯-೩೯). [ಸಂ.]

**ಮಲ್ಲಸಾಲೆ** (ನಾ). = ಮಲ್ಲಶಾಲೆ : ಬಣ್ಣಬಣ್ಣದ ಜೀವ ಕತಕತನೆ ಕುದಿಯುವವು ಮನೆಯಾಯ್ತು ಮಲ್ಲಸಾಲೆ (ಗಂ. ೫೦-೦೬).

[< ಸಂ. ಮಲ್ಲಶಾಲಾ]

**ಮಲ್ಲಳಿ** ' ಮಲ್ಲಟಿ ' ನೋ.

**ಮಲ್ಲಳಿಕಾಟಿ** ' ಮಲ್ಲಟಿಗಾಟಿ ' ನೋ.

**ಮಲ್ಲಳಿಗಡಲ್** (ನಾ). ಕ್ಷೋಭೆಗೊಂಡ ಸಮುದ್ರ : ಅಡಕಿಲುದೆರೆಗಳುಲಿದು ಹಳಚಲು ಮೊಜಿಹು ಮೊಜಿದು ಕಡೆದು ಮಲ್ಲಳಿ [ಪಾಠಾಂ. ಣಿ]ಗಡಲನೊಡೆಗಲಸಿ ಕುಡಿದು ಮೊಜಿವಡಸಿ . . . ಮೊಜಿದುದರರೆ ಪಶ್ಚಿಮಾವಸನಿಧಿ (ಸೋಮಶ. ೧-೬೦). [ಮಲ್ಲಳಿ (< ಮಲ್ಲಟಿ) + ಕಡಲ್₂]

**ಮಲ್ಲಳಿಗಾರ್ತಿ** ' ಮಲ್ಲಟಿಗಾರ್ತಿ ' ನೋ.

**ಮಲ್ಲಳಿಗಾಟಿ** ' ಮಲ್ಲಟಿಗಾಟಿ ' ನೋ.

**ಮಲ್ಲಳಿಗೊಳ್** ' ಮಲ್ಲಟಿಗೊಳ್ ' ನೋ.

**ಮಲ್ಲಳಿಸು, ಮಲ್ಲಣಿಸು** (ಕ್ರಿ). ೧. ವೃತ್ತಾಕಾರವಾಗಿ ಚಲಿಸು; ಸುತ್ತು; ತಿರುಗು : ನಡೆಗುಂ ಕುಲಾಲಚಕ್ರದ ಕಡೆಯೊಳ್ ಮಲ್ಲಳಿಪ ಕೀಲದಂತೆ (ಏಪ್ಪ.ಕೃ. ೨-೨-೭೦). ಮಲ್ಲಣಿಸು : ೨. (ಮೃಗವು ಬೇಟೆಗಾರನಿಂದ ತಪ್ಪಿಸಿಕೊಳ್ಳಲು) ಸುತ್ತಾಡು ; ಅಲೆದಾಡು : ಮಲ್ಲೆಯ ಹಿಂಡು ಮಲ್ಲಣಿಸಿ ತಲ್ಲಣಗೊಂಡವು (ಸೂಕ್ತಿಸು. ೩-೦೦೭). ೩. ಹಿಂಸಿಸು ; ಪೀಡಿಸು : ಮಲ್ಲಣಿಪ ಜಾಡ್ಯಮುಂ ಜಕ್ಕುಲಿಪ ತೊದಲುಮಂ ನಿಲ್ಲಲೀಯದು (ರಂಗಪು. ೮-೪೭). [ಮಲ್ಲಳಿ (< ಮಲ್ಲಟಿ) + — ಇಸು₃]

**ಮಲ್ಲಟಿ, ಮಲ್ಲಣಿ, ಮಲ್ಲಳಿ** (ನಾ). ೧. ತಿರುಗಾಟ ; ಸುತ್ತಾಟ : " ಮಲ್ಲಟಿ = ಶರೀರವ್ಯಾಕುಲತೆ ; ಸುತ್ತಿ ಬರ್ಪುದು " (ಕಮದ. ಕಂ. ೦). ' ಮಲ್ಲಟಿಗಾರ್ತಿ ' ಪರಾ. ೨. ದೇಹಕ್ಕೆ ಉಂಟಾಗುವ ರೋಗ ಮುಂತಾದ ತೊಂದರೆ : " ಮಲ್ಲಟಿ—ಶರೀರವ್ಯಾಕುಲತೆ ; ಸುತ್ತಿ ಬರ್ಪುದು " (ಕಮದ. ಕಂ. ೦). ೩. ಭಯ ; ಹೆದರಿಕೆ ; ಅಂಜಿಕೆ : " ಅಗುರ್ವು . . . ಮಲ್ಲಟಿ, ತಲ್ಲಟಿಂ, ಅದಿರ್ಪು— ಈ ೧೦ ಭಯಂ " (ಕರಾ. ೫೬-೨೨೩); " ಮಲ್ಲಟಿ ಬೆಜ್ಜರ ಬೆಬ್ಬಳ ತಲ್ಲಟ . . . ನಿಲ್ಲದೆ ಭಯನಾಮ " (ಕವಿಸಂ. ೦೦೮). ೪. ಗುಂಪು ; ಸಂದಣಿ : ಲಸತ್ಪ್ರಭಾತಸಮಿರಾರಂ . . . ಪೊವಟ್ಟ ಪೊಂಪುಟಿಯೊಳುಂ ಪೊಂಗಿ ಝೇಂಕರಿಪ ಮಜಿಯ ಮಲ್ಲಟಿಗಳಟಿಂಕೆಗಳಲ್ಲಿ . . . ಪೊಕ್ಕು (ಅನ್ವೃಟಿ. ೦೦-೦೨೪). ' ಮಲ್ಲಟಿಗೊಳ್ ', ' ಮಲ್ಲಟಿದಿರಿ ' ಪರಾ. ೫. ತುಂಬಿ ; ಭ್ರಮರ : " ಅಲರ್ವಕ್ಕಿ, ಬಂಡುಣಿ, ಪಜಮೆ, ಮಲ್ಲಟಿ . . .

ಮುಯ್ಯೆರಪಡಿ – ಈ ೭ ಫ್ರವುರಂ " (ಕಶಸಾ. ೩೩-೧೯೬). **ಮಲ್ಲಣೆ.** ೨. 'ಮಲ್ಲಣೆಸು' ಪರಾ. ೬. ಮಂಡಲಾಕಾರವಾಗಿ ಸುತ್ತಿ ಮಾಡುವ ನೃತ್ಯ : ರಾಸಕ್ರೀಡೆ : ಗೊಲ್ಲಗೊಲ್ಲತಿಯರಲ್ಲಿಯ ಸಾಕೆಸೆ ಸಲ್ಲಿಸಿದೆಯೊ ಮಲ್ಲಣೆಯೆಲ್ಲ ? (ಗೀಶಬಂ. ೪೪-೭). ೭. ಗೊಂದಲ : ಗಜಿಬಿಜಿ : ತತ್ಪುರೀಜನದ ಪೊದಟ್ಟು ತಲ್ಲಣದ ಮಲ್ಲಣೆ ಬೀದಿಯೊಳಾದುದದ್ಭುತಂ (ಶರ್ಶಕೃ. ೩-೩). ೮. ಅಲ್ಲೋಲಕಲ್ಲೋಲ ; ಕ್ಷೋಭೆ : ಘುಲ್ಲವಿಸಿ ನೀಪೀಗ ಕರ್ಮದ ಮಲ್ಲಣೆ[ಣಿ]ಯ ಕಡುಗಡಲ ಬಿಟುಹೊಯ್ಲಲ್ಲಿಗೆಸ್ನಸು ಸಲಿಸುವರೆ (ಸದ್ಭರು. ೦-೨೦). **ಮಲ್ಲಳಿ :** ೧. ಇಂತಿಲ್ಲಿಬಿಹಾ ಮಲ್ಲಳಿಯ ವಂದುಗಕೆ ಸಿಲ್ಕಿ ದುಃಖಿಸಿದಪರ್ (ಸಂಸಶ. ೩೪_೨೦೨). ೮. 'ಮಲ್ಲಳಿ ಗಡಲ್' ಪರಾ. ೯. ಆಶ್ಚರ್ಯ ; ಬೆರಗು : "ಸಮೂಹ ಬೆರಗುಗಳು ಮಲ್ಲಳಿಯೆನಿಪ್ಪವು " (ಕಶರ. ೮೭). [ದೇ.॥ ತೆಲು. ಮಲ್ಲಡಿ]

**ಮಲ್ಲಟಿಗಾರ್ತಿ**, ಮಲ್ಲಳಿಗಾರ್ತಿ (ನಾ). (ಕೆಲಸವಿಲ್ಲದೆ) ಅಲೆದಾಡುವವಳು; ತಿರುಗಾಡುವ ಸ್ವಭಾವದ ಹೆಂಗಸು: " ಮಲ್ಲಟಿಗಾರ್ತಿಯೆನೆ ಸುತ್ತಿಬರ್ಪಾಕೆಯೆಂದು ಪೇಟ್ವರ್ ಸುಗುಣರು " (ಕದ್ಮಕ್ಕ. ೨೭). **ಮಲ್ಲಳಿಗಾರ್ತಿ :** "ಮಲ್ಲಳಿಗಾರ್ತಿಯೆನಲು ತಿರುಗಾಡುವ ಸ್ತ್ರೀಯುಕ್ಕುಂ" (ಕಶರ. ೮೭).

[ ಮಲ್ಲಟಿಗಾಜ + – ತಿ₁ (< – ಇತ್ತಿ) ]

**ಮಲ್ಲಟಿಗಾಜ**, **ಮಲ್ಲಳಿಕಾಜ**, **ಮಲ್ಲಳಿಗಾಜ** (ನಾ). ೧. ಸುತ್ತಾಡುವವನು; ಅಲೆದಾಡುವವನು : 'ಮಲ್ಲಟಿಗಾರ್ತಿ' ಪರಾ. **ಮಲ್ಲಳಿಕಾಜ:** ೨. ಕ್ಷೋಭೆಯನ್ನುಂಟುಮಾಡುವವನು ; ತಳಮಳವನ್ನುಂಟು ಮಾಡುವವನು : ಜವ್ವನದ ಸೂಜಿಕಾಜಂ ಮನಸ ಮಲ್ಲಳಿ[ಪಾಠಾಂ. ಣಿ] ಕಾಜಂ ಚಿಸ್ತ್ರದ ದೆಸೆವುಳಿಕಾಜಂ ಬಾದಂ (ಸಂಬರ. ೦೨-೩೯). **ಮಲ್ಲಳಿಗಾಜ:** ೩. (ದಟ್ಟಿಹೆಜ್ಜೆಯಿಟ್ಟು) ನಡೆದಾಡುವವನು : ನಳನಳಿಸಿ ಬೆಳೆವುತಿಪ್ಪ ಅರಳೆಲೆಯರಸಂ ಮಾಗಾಯ್ಗಳ ಮಲ್ಲಳಿಗಾಜಂ ಪೊಂಗಡಗದ ಲಿಂಗವಂತಂ (ಬಸರ. ೧೦-೦೧೩). [ ಮಲ್ಲಟಿ + – ಕಾಜ ]

**ಮಲ್ಲಟಿಗೊಳ್**, ಮಲ್ಲಣೆಗೊಳ್, ಮಲ್ಲಳಿಗೊಳ್ (ಕ್ರಿ). ೧. ಭಯಗೊಳ್ಳು; ತಲ್ಲಣಗೊಳ್ಳು : ಮುಳಿದಪ ವಾಯ್ಗಳ ಮಲ್ಲಟಿಗೊಂಡೊಳಸಾರ (ಕದ್ಮಕಾ. ೩೦೧). ೨. ಗುಂಪುಗೂಡು ; ಒಟ್ಟಾಗು : ಕಲ್ಲ ಗವಿಯೊಳಗೆ ಕಟ್ಟಿಲೆ ಮಲ್ಲಟಿಗೊಂಡಿರ್ದ ತೆಜದಿನಿರ್ಪುವು (ಸೂಕ್ತಿಸು. ೩-೦೩೨). ೩. ಪಕ್ಕಕ್ಕೆ ಸರಿ,—ಚಲಿಸು : "ಮಲ್ಲಟಿಗೊಂಡುದು ಸರಿದು ದೋಸರಿಸಿದುದು" (ಕಶಕಂ. ೨೩೨). **ಮಲ್ಲಣೆಗೊಳ್ :** ೧. ದೇವದೇವ ಜನನಮರಣಕ್ಕಂಜಿದೆಂ ಮಾಯೆಗೆ ಮಲ್ಲಣೆ [ಪಾಠಾಂ. ಳಿ]ಗೊಂಡೆಂ ತಾಪತ್ರಯಕ್ಕೆ ತಲ್ಲಣಿಸಿದೆಂ (೬೩ಕ. ಹ. ೨೦೭-೬). ೪. ಕ್ಷೋಭೆಗೊಳ್ಳು: ತಳಮಳಗೊಳ್ಳು : ಬಸವರಾಜಂ ಪೊಗಳ್ತೆಗೆ ತಲ್ಲಣಿಸಿ ತಗ್ಗಿ ಮಲ್ಲಣೆಗೊಂಡಾಗಳಾಗಳಸ ಸಂಗತಿಗೆ ಪೊಸಹೊಸಗೀತಮಂ ಕೇಳಿಸುತ್ತಿರ್ದ ಸಮಯದೊಳು (ಬಸರ. ೯-೭೦): ಮನದೊಳ್ ಮಲ್ಲಣೆಗೊಂಡು ದುಶ್ಶಾಸನಾದಿ ದುರ್ಯೋಧನಸಹೋದರರ್ . . . ಪಾಂಚಾಲರಾಜ ಬಾಲಕನನೊತ್ತರಿಸುತ್ತುಂ ಮುತ್ತುವುದಂ ಕಂಡು (ಮಹಾಸೇ. ೦೨-೨೦೩ ವ). **ಮಲ್ಲಳಿಗೊಳ್ :** ೧. ತಲ್ಲಣಿಸಿ ಮಲ್ಲಳಿಗೊಂಡು ಪೋಳಲೊಳಗಣ ಬಾಲವಿಹಂಗಂಗಳನೆಟುಕಿಯೊಳಿಜಿುಕಿಕೊಂಡು ಪಾಱಲನುವಾಗಿ ತೂಱಲ್ಲೊಂಬಿಸೋಳಿರ್ಪ ವಿಹಂಗಸಂಕುಳದಿಂದ (ಗಿರಿಕ. ೦-೦೨೯ ವ); ತೀವ್ರ ಕಂಪನವೆರ್ದೆಗಾಗೆ ತಲ್ಲಳಿಸಿ ಮಲ್ಲಳಿಗೊಳ್ವರರಾತಿಭೂಪರರ್ (ರಾಜಶೇ. ೩-೦೩). ೨. ಸಂಪಗೆಯ ಕಂಪಿಂಗೆ ಕಂಪಿಸಿ ಮಲ್ಲಳಿಗೊಂಡೊಲ್ಲದೆ ಪೊಗಂದಿರುವಿ ಪರಿತಂದು ಸಾಗರದಿಂ ಪೊದೋಂಟಿವ ಪ್ರಸೂನರಲ ಮಸಂಡಲೆದು ಬಂದುಣ್ಬಲ್ಲಿ (ಗಿರಿಕ. ೨-೭೦ ವ); ಕಣ್ಣೊಳು ಮಯ್ಯೊಳಂ ತುಪ್ಪುಂ ಚಿಲ್ಲೆ ಎಲ್ಲರೆರ್ದು ಮಲ್ಲಳಿ[ಪಾಠಾಂ. ಣಿ]ಗೊಂಡು ಪೊಳ್ಳಿಂದು ಬಿಳ್ದು ವೃದ್ಧಮಹೇಶ್ವರನಂ ಮುತ್ತಿಕೊಂಡೆತ್ತಲ್ (ಸಂಜ್ಞ. ೬-೪೩).

[ ಮಲ್ಲಟಿ + ಕೊಳ್₁ ]

**ಮಲ್ಲಟಿದಿರಿ** (ಕ್ರಿ). ಗುಂಪಾಗಿ ಸುತ್ತಾಡು : ಅಲ್ಲಿಗಲ್ಲಿಗೆ ಮಲ್ಲಟಿದಿರಿವ ಪಲ್ಲ ಬಲ್ಲುಲಿಗೆ ಕಲ್ಲದಾಡುವ ತೆಲ್ಲಯಿಸಿದ ಮಲ್ಲಿಗೆಯ ಸವಿಸುಯ್ಗೆ . . . ಬೆಲ್ಲಂಗೋಲ್ವಿಲ್ಲನ ಮಲ್ಲಿಗೆಸರಲ ಜಲ್ಲಣೆಗೆ ತಲ್ಲಣಂಗೊಂಡು (ರಾಮಕಥ. ೭೩-೩). [ ಮಲ್ಲಟಿ + ತಿರಿ₁ ]

**ಮಲ್ಲಾಗರು** 'ಮಲರೋಗ' ನೋ.

**ಮಲ್ಲಾಚಾರಿ** (ನಾ). ಒಬ್ಬಾತನ ಹೆಸರು : ಬರೆದಂ ಇಳ್ವಡೆ ಮಲ್ಲಾಚಾರಿ (ಎಕ. XIV, ಎಡತೊ. ೯೪-೪೩ : ಸು. 910). [ಮಲ್ಲ + ಆಚಾರಿ]

**ಮಲ್ಲಾಮಲ್ಲಿ** (ನಾ). ೧. ಜಟ್ಟಿಗಳು ಮಾಡುವ ಯುದ್ಧ : ಭೀಮಸೇನ ಸಹದೇವ ನಕುಲ ಯುಧಿಷ್ಠಿರ ಘಟೋತ್ಕಚಾದಿಗಳೊಡನೆ ಮಲ್ಲಾಮಲ್ಲಿಯಾಗಿ ಕಾದುವ ದುಂಘಸಂಭವನಲ್ಲಿಗೆ ದುರ್ಯೋಧನಂ ಬಂದು (ಕಂಪಕಾ. ೧೦-೪೭ ವ): ಮಲ್ಲಾಮಲ್ಲಿಯೊಳಾಸ್ತರಿಮಲ್ಲರನಾಹವದೊಳೊತ್ತಿ ಗೋಳ್ಳುರಿಗೊಳ್ಳೆ ಬಲ್ಲಾಳ್ತನದಿನ್ನಾಹವಮಲ್ಲನ ಭುಜಾವಣ್ಣವೆನಿಸಿ ಧ(ಂ)ಲ್ಲಂ ನೆಗಟ್ಟಂ (ಸೌಇಂ. XI-i. ೩೨-೭ : 1007) ; ಮಲ್ಲಾಮಲ್ಲಿ ಸಹಾಸಗಳ ಮಾಡಿ ನಲ್ಲಡಿವಳು ಬಿಡಳೆನ್ನ (ಕುರಾಕಾಂ. ೩೨-೧೨೦). ೨. ಹುರುಡು ; ಸ್ಪರ್ಧೆ : ಪೈಪೋಟಿ : ಅಂತುಭಯಾವರೂಥಿನಿಯ ವರೂಥಂಗಳ್ ಮಲ್ಲಾಮಲ್ಲಿಯಾಗೆ ಕಾದುವಾಗಳ್ (ಕಂಪಕಾ. ೧೦-೪೦ ವ) ; ಸಿಂಗಣನೃಪನ ಹಯಶ್ರೇಣಿ ಕಲ್ಪಾಂತಧಾರಾಧರ ಮಲ್ಲಾಮಲ್ಲಿಯೊಳು ಯಾದವಗಜಘಟೆಯೊಳು ತಳ್ತುದು (ಸೌಇಂ. IX-i. ೩೪೭-೨೩ ; 1226) ; ಈ ದೇಶದಲ್ಲಿ ಅಧಿಕಾರಲಾಲಸೆಯ ಮಲ್ಲಾಮಲ್ಲಿಯಲ್ಲಿ ಶಿಷ್ಟರಾರು ? ದುಷ್ಟರಾರು ? (ಕಂಜಕಂ. ೭ ಮುಖ್ಯ ಶ). ೩. ದುಃಖದ ತೀವ್ರತೆಯಿಂದ ಮಾಡುವ ಗೋಳಾಟ : ಕರ್ಣಂಗಳಗ ಮಂಗಲಧ್ವನಿಗಳು ನೆರಪುವಬಲೆಯರ ಮಲ್ಲಾಮಲ್ಲಿಯಂ ಪಿಂಗದೊ ತ್ರೋತ್ರಯುಂ ಮೆಯ್ಯನೊತ್ತುವ ಜನದ ಜಂಗುಳಿಯ ಕಾಲೂಱಲರಿದೆನಿಸಿ ನೆರೆದ ಹಲವಂಗದಸ್ಥಿಗಳನಾರಯ್ಯುತ್ತ ಹೊಕ್ಕನಾ ಸುಡುಗಾಡನವನೀಶನು (ಹಶಾ. ೦೦-೪೧). [ಸಂ.]

**ಮಲ್ಲಾರ** 'ಮಲಾರ₁' ನೋ.

**ಮಲ್ಲಾರತೋರಣ** (ನಾ). ಬಳೆಮಲ್ಲಾರದ ಆಕಾರದ ಕುಚ್ಚುಗಳಿರುವ ತೋರಣ : ಮೇಲೆ ಪುಷ್ಪತೋರಣ, 'ಮಲ್ಲಾರ' ತೋರಣಗಳವೆ (ಹೂಮುವಾ. ೪೭). [ಮಲ್ಲಾರ (< ಮಲಾರ₁) + ತೋರಣ]

**ಮಲ್ಲಾಳಿ** (ನಾ). ಒಂದು ಬಗೆಯ ಮರ : ಮಲ್ಲಾಳಿ, ಅಬನಾಸಿ, ತುಂಬುರುಸು (ವ್ಯಶಿಗ. ೩೦-೭೦೦) : ಮರಗಳು :— ಹೆಬ್ಬಲಸು, ಕರೇ, ಮಲ್ಲಾಳಿ, ಕೂವೆ (ನಮ್ಮನು. ೨೩೭). [ ? ]

**ಮಲ್ಲಿ** (ನಾ). ೧. ಮಲ್ಲಿಗೆಜಾತಿಯ ಒಂದು ಬಗೆಯ ಬಳ್ಳಿ ಮತ್ತು ಸುಗಂಧಯುಕ್ತವಾದ ಅದರ ಹೂವು : ಜಾದಿ ಪೊಸಪಾದರಿ ಕೇದಗೆ ಪೊಲ್ಸೆ ಮಲ್ಲಿ ಮಂದಾರಮಂದಾರಚೂತಲತೆಯೂಥಿಕೆ ಸಂದ ವಸಂತದೂತಿ (ಶರ್ಶಕೃ. ೦೩-೯೭) ; ಮಲ್ಲೀಕುಸುಮಾಮೋಳಿತಧಮ್ಮಿಲ್ಲೆ (ರಾಜಶೇ. ೪-೦೨) ; ಮಲ್ಲೀವಲ್ಲೀಕುಂಜಪುಂಜರಂಜಿತಮಾದೊಂದು ಮುನಿಗಳಾಶ್ರಮದ ಪೊಱವಳಯದ ತೋಂಟದೊಳಾಟದ ಕಿಱುಪರೆಯದ ಕುಮರರಿರ್ವರವಟೆಂ ತಡೆದು ಹಬ್ಬುಮಂ ಕಟ್ಟಿದರ್ ಗಡ ! (ರಾಮಕಥ. ೦೪೯-೩). ೨. ಒಂದು ಬಗೆಯ ಸಸ್ಯ : "ಅಮಾಸ್ತುರ್ಣ – ಮಲ್ಲಿ. ಹಬ್ಬುಕಜುಕೆ" (೬೩ಧಿ. ೯). ೩. ಒಂದು ಬಗೆಯ ಮಣ್ಣಿನ ಪಾತ್ರೆ : "ಕಳಸಿಗೆ ಕೌಶಿಕೆ ಮಲ್ಲಿಯೆನಿಸಿಕ್ಕು [ಪಾಠಾಂ. ಮಲ್ಲಿಗೆಯೆನಿಕ್ಕು]" (ಶಬ್ದಮಣಿ. ೭೨-೨೩). ೪. ಒಬ್ಬಾಕೆಯ ಹೆಸರು : ವಿದ್ಯಾಧರಯ್ಯ ಮಲ್ಲಿ ಪೊಸವ್ವೆಗ್ಗೆ ಕೊಟ್ಟ ಸ್ಥಿತಿಕ್ರಮಂ (ಎಕ. VI. ಕಡೂರು. ೯-೩ ; ಸು. ೪೦೦ ?) ; ಅಲ್ಲೀ ನ್ಯಾಯ ಇಲ್ಲೀ ಕಂಡಿತು. ಕೊಳ್ಳೀ ಮಲ್ಲಿ ಕೊಂಕುಳ ಕೂಸ (ಗಾದೆ).

೫. ದೀಪವನ್ನು ಹಿಡಿದಿರುವ ಹೆಂಗಸಿನ ವಿಗ್ರಹ : ಎಲೆಲೆ ! ದೀಪದ ಮಲ್ಲಿ . . . ನೀನೆ ಕಂಚಿನ ಬೊಂಬೆ ? ಅಲ್ಲ, ಮಿಂಚಿನ ಹಂಬೆ ! (ದೀಪವು. ೦೯-೦). 'ದೀಪ್ತ' ಪರಾ. ☞ ಈ ಅರ್ಥದ ಪ್ರಯೋಗದ ವ್ಯುತ್ಪತ್ತಿ ದೇಶ್ಯವೇ ಎಂಬುದು ವಿಚಾರಣಾರ್ಹ. ೬. [ಜೈನ] ಒಬ್ಬ ತೀರ್ಥಂಕರನ ಹೆಸರು : ಮಲ್ಲಿನಾಥ : ವೃಷಭ ಅಜಿತ . . . ಮಲ್ಲಿ ಮುನಿ ಸುವ್ರತ ನಮಿ ನೇಮಿ ಪಾರ್ಶ್ವ ವರ್ಧಮಾನರೆಂಬಿಪ್ಪತ್ತುನಾಲ್ವರ್ ತೀರ್ಥಂಕರರ್ (ತಾಪುಂತ. ೯೦೩) ; ಗಂಧಕುಟಿಯೊಳ್ ಕರಮೆಸೆದಂ ಭುವನವಲ್ಲಭಂ ಮಲ್ಲಿಜಿನಂ (ಮಲ್ಲಿಪು. ೦೪-೨೦೩). [ಸಂ. ಮಲ್ಲಿ, ಮಲ್ಲೀ]

**ಮಲ್ಲಿಕ** (ನಾ). ಕೆಂಪುಬಣ್ಣದ ಕೊಕ್ಕು ಮತ್ತು ಕಾಲುಗಳಿರುವ ಒಂದು ಬಗೆಯ ಹಂಸ : "ಕಾಲ್ಗೊಗಂ ಮಾಸೆ ಮಲ್ಲಿಕಾಖ್ಯಂ" (ಪಂಗರಾ. ೫೦-೭). [ಸಂ.]

**ಮಲ್ಲಿಕಾಕ್ಷ** (ನಾ). ೧. ಒಂದು ಬಗೆಯ ಕುದುರೆ ; ಬಿಳಿಯ ಕಣ್ಣಿರುವ ಕುದುರೆ : "ಬಿಳಿಯ ಕಣ್ಣಿರೆ ಮಲ್ಲಿಕಾಕ್ಷನಕ್ಕುಂ" (ಪಂಗರಾ. ೬೨-೦೫) ; ನಯನಂಗಳ್ ತೊಳಗುವ ಬೆಳ್ಳಿಯ ಕಣ್ಣಂ ಪೋಲೆ ಮಲ್ಲಿಕಾಕ್ಷಂ (ಅಶ್ವಶಾ. ೨-೩೭). ೨. = ಮಲ್ಲಿಕ : "ಮಾಸಿದ ಕಾಲ್ಗೊಗಂಗಳಿಂ ಮಲ್ಲಿಕಾಕ್ಷಂ ಗಳೆಂಬುದು" (ಹರಾಯು. ೪೨-೯೯). [ಸಂ.]

**ಮಲ್ಲಿಕಾಮಾಲೆ** (ನಾ). ೧. ಮಲ್ಲಿಗೆ ಹೂವಿನ ಹಾರ. ೨. [ಛಂದ] ಅಕ್ಷರ ಛಂದಸ್ಸಿನಲ್ಲಿ ಪ್ರಸಿದ್ಧವಾದ ಇಪ್ಪತ್ತಾರು ಛಂದಸ್ಸುಗಳಲ್ಲಿ ಹದಿನೆಂಟನೆಯ ಧೃತಿ ಎಂಬ ಛಂದಸ್ಸಿನ ಒಂದು ವೃತ್ತ : ಸಂಪುದಿಂತಿದು ಮಲ್ಲಿಕಾಮಾಲೆಯೆಂಬುದು (ಛಂದೋಂಬು. ೨-೦೩೮) : ಸಂಸ್ಕೃತವೃತ್ತಗಳಲ್ಲಿ ಕುಸುಮದ . . . ಮಲ್ಲಿಕಾಮಾಲೆ ತರಳ ಮೊದಲಾದವುಗಳನ್ನು ಹೆಸರಿಸಬಹುದು (ಛಂದೋಲಿ. ೫೦). [ಸಂ. ಮಲ್ಲಿಕಾಮಾಲಾ]

**ಮಲ್ಲಿಕಾಮೋದ** (ನಾ). ಮಲ್ಲಿಗೆಯ ಸುವಾಸನೆಯು ಹರಡುವಂತೆ ಹರಡುವ ಕೀರ್ತಿಯುಳ್ಳವನು: ☞ ಚಾಳುಕ್ಯರಾಜನಾದ ಎರಡನೆಯ ಜಯಸಿಂಹನ ಒಂದು ಬಿರುದು : ಮಾರ್ಪ್ಪಡೆಘೇಮಂ ಮಲ್ಲಿಕಾಮೋದಂ ಕೀರ್ತ್ತಿವಿದ್ಯಾಧರಂ (ತಾಇಶಾ. XX, ೨೦-೮ ; 1019) ; ಚಾಳುಕ್ಯಾಭರಣಾ ಮಲ್ಲಿಕಾಮೋದಂ ಮಾರ್ಪ್ಪಡೆಘೇಮಂ ರಾಯಗಜಕೇಸರಿ (ಎಕ. VII, ಶಿಕಾ. ೦೨೭-೭ ; 1030). [ಸಂ.]

**ಮಲ್ಲಿಕಾರ್ಜುನ** (ನಾ). ೧. ಶಿವನ ಒಂದು ಹೆಸರು : ರಾಚವಟ್ಟಿ ವೀರಾಭದ್ರ ಬರೆಚಹಳಿ ಮಲ್ಲಿಗವಡ ಇವರ ಕುಲದೇವರು ಮಲ್ಲಿಕಾರ್ಜುನ (ಎಕ. III (R), ಗುಂಡ್ಲುಪೇ. ೬೦-೭೩ ; 1126) ; ಕಲ್ಲರಳಿ ಹೂವಾಗಿ ಎಲ್ಲರಿಗೆ ಬೇಕಾಗಿ ಮಲ್ಲಿಕಾರ್ಜುನನ ಶಿವಿರಕ್ಕೆ ಬೇಕಾಗಿ ಬಲ್ಲವರು ಹೇಳಿ (ಸರ್ವಜ್ಞ. ೨೦೨೭). ೨. ಈಗಿನ ಆಂಧ್ರಪ್ರದೇಶದ ಕರ್ನೂಲು ಜಿಲ್ಲೆಯ ಶ್ರೀಶೈಲದಲ್ಲಿ ಸ್ಥಾಪಿತವಾಗಿರುವ ಶಿವಲಿಂಗದ ಹೆಸರು : ಶ್ರೀಶೈಲಕ್ಕೆ ಹೋಗಿ ಮಲ್ಲಿಕಾರ್ಜುನನ ದರ್ಶನಮಾಡಿಕೊಂಡು ಬರಬೇಕೆಂದಿದ್ದೇನೆ (ರೂಢಿ). ೩. ಒಬ್ಬಾತನ ಹೆಸರು : ಮಲ್ಲಿಕಾರ್ಜ್ಜುನಜಿಗ್ಗ ಯುದ್ಧಪ್ರಬದ್ಧವೈರಿ × × × ನಿಜ್ವಂ ಸಹಿತವಿಧ್ವಂಸಕಂ (ಎಕ. IV (R), ಎಳಂದೂ. ೦೬೩-೯ ; 919). [ಸಂ.]

**ಮಲ್ಲಿಕಾವಸಂತ** (ನಾ). [ಸಂಗೀತ] ಒಂದು ರಾಗದ ಹೆಸರು : ಮಲ್ಲಿಕಾವಸಂತರಾಗದಲ್ಲಿ ಕೃತಿರಚನೆಮಾಡಿದವರಲ್ಲಿ ಮೊತ್ತಮೊದಲಿಗರು ಪಲ್ಲವಿ ಶೇಷಯ್ಯರ್ ಅವರು (ಸಂಗೀತ. ೯೮). [ಸಂ.]

**ಮಲ್ಲಿಕೆ** (ನಾ). ೧. ಒಂದು ಬಗೆಯ ಬಳ್ಳಿ ಮತ್ತು ಅದರ ಸುಗಂಧಯುಕ್ತವಾದ ಬಿಳಿಯ ಹೂವು : "ತೃಣಶೂಲ್ಯಂ, ಮಲ್ಲಿಕಾ, ಭೂಪದೀ, ಶೀತಭೀರುः–ಈ ೪ ಮಲ್ಲಿಗೆ" (ನಾಪರಾ. ೦೦೮). ೨. ಮಣ್ಣಿನಿಂದ ಮಾಡಿದ ಒಂದು ಬಗೆಯ ಪಾತ್ರೆ : "ಕಳಸಿಗೆ ಕಾಶಿಕೆ ಮಲ್ಲಿಕೆ ಮಲ್ಲಿ ಮಲ್ಲಿಗೆಯೆನಿಕ್ಕುಂ" (ಪಂಗರಾ. ೬೨-೨೩). ೩. ದೀಪಸ್ತಂಭ. [ಸಂ. ಮಲ್ಲಿಕಾ]

**ಮಲ್ಲಿಕ್ಕು** (ಕ್ರಿ). ಮಲ್ಲನಂತೆ ದ್ವಂದ್ವಯುದ್ಧಕ್ಕೆ ಆಹ್ವಾನಿಸು : ಚಾಣೂರ ಮಲ್ಲನೊಳ್ ಮಲ್ಲಿಕ್ಕುವುದಕ್ಕೆ ಶ್ರಮಮಂ ಮಾಡುವಂತೆ ಗಜಮಲ್ಲನೊಳ್ ಪ್ರತಿಮಲ್ಲಂ ಮಲ್ಲಪೋರ್ದು (ಅರ್ಥನೀ. ೬-೫೯ ವ). [ಮಲ್ಲ + ಇಕ್ಕು]

**ಮಲ್ಲಿಗೆ** (ನಾ). ೧. = ಮಲ್ಲಿಕೆ ೧ : "ಮಲ್ಲಿಗೆ ವಿಚಕಿಳಂ" (ಪಂಗರಾ. ೩೮-೨೪); ಬಿರಿದ ಮಲ್ಲಿಗೆಗಂಡೊಡಂ . . . ಮಧುಮಹೋತ್ಸವಮಾದೊಡ ಮೋಸಸೆಂಬೆನಾರಂಕುಸವಿಟ್ಟೊಡಂ ನೆನೆವುದೆನ್ನ ಮನಂ ವನವಾಸಿದೇಶಮಂ (ಪಂಭಾ. ೯-೩೦) ; ಮರುಗ ಮಲ್ಲಿಗೆ ಪಚ್ಚೆ ಮುಡಿವಾಳಕ್ಕೆ ಪರಿಮಳದುದಕವ ನೆಚಿಸಿದವರಾರಯ್ಯ (ಬಸವ. ಬ. ೧೦-೩); ಮರುಗ ಮಲ್ಲಿಗೆ ಕೆಂಜಾಜಿ ಸಂಪಿಗೆಗಳ ಪರಿಮಳಪುಷ್ಪದ ಮಾಲೆ ಮೆಚಿಸಿದುವು (ಕಂಸವಿ. ೨೦-೩೩). ೨. = ಮಲ್ಲಿಕೆ ೨ : "ಕಳಸಿಗೆ ಕಾಶಿಕೆ ಮಲ್ಲಿಗೆಯೆನಿಸಿಕ್ಕು [ಪಾಠಾಂ. ಮಲ್ಲಿಯೆನಿಸಿಕ್ಕು]" (ಪಂಗರಾ. ೬೨-೩೨).

[< ಪ್ರಾ. ಮಲ್ಲಿಆ./ಸಂ. ಮಲ್ಲಿಕಾ]

**ಮಲ್ಲಿಗೆಗೋಲ** (ನಾ). ೧. ಮಲ್ಲಿಗೆಯ ಹೂವನ್ನು ತನ್ನ ಬಾಣವನ್ನಾಗಿ ಮಾಡಿಕೊಂಡವನು ; ಮನ್ಮಥ : ಮೃಗಪಕ್ಷಿಗಳಿರಾ ಮಲ್ಲಿಗೆಗೋಲನ ಕಂಡರೆ ತೋಱಿಂದು ಸೊಲ್ಲಿಸಿದಳು (ಮೋಹತ. ೯-೩೫). ೨. [ಜೈನ] ಬಾಹುಬಲಿ : ಸಲ್ಲದು ನನಗೀಗ ಬಹುವಕೆ ಹೋಗೆಂದು ಮಲ್ಲಿಗೆಗೋಲನಾಡಿದನು (ಭರತ. ೯೬-೨೨). [ಮಲ್ಲಿಗೆ + ಕೋಲ್₁ + — ಅ₇]

**ಮಲ್ಲಿಗೆಬಾಣ** (ನಾ). = ಮಲ್ಲಿಗೆಗೋಲ ೧ : ಸೊಗಯಿಸುವ ಶಕುನಿ ಮಂಚವ ನೋಡಿರಯೊಳಿದು ಮಲ್ಲಿಗೆಬಾಣನದನು ಪೆಲ್ಲನೆಯೇರಿ (ಪಪವೋ. ೦೯ ೦೮). [ಮಲ್ಲಿಗೆ + ಬಾಣ₁]

**ಮಲ್ಲಿಗೆವಾವಿ** (ನಾ). ಒಂದು ಊರಿನ ಹೆಸರು : ಮಲ್ಲಿಗೆವಾವಿ ಅಂತೆ ಬರೆ ಪಾಲ್‌ಗೊವ್ವು ಎಂಬ ಪೂಣಸೆ ಅಂತೆ ಬರೆ (ಪ್ರ್ಯಾಲಿ. ೦೯೨೦, ೦೦-೦೭೭; 967). [ಮಲ್ಲಿಗೆ + ಬಾವಿ]

**ಮಲ್ಲಿನಾಥ** (ನಾ). [ಜೈನ] ಇಪ್ಪತ್ತುನಾಲ್ಕುಜಿನ ತೀರ್ಥಂಕರರಲ್ಲಿ ಒಬ್ಬ : ರಾಗದ ಪೆರ್ಚಿಂದಭಿಷೇಕಮಂ ದಿವಿಜನಾಥಂ ಮಲ್ಲಿನಾಥಂಗೆ ಮಾಡಿದನೆಂಟುಂದೆಸೆಯುಂ ಪಳಂಚಲೆವಿನಂ ಗಂಭೀರಭೇರೀರವಂ (ಮಲ್ಲಿಪು. ೦೩-೦೭೭). [ಸಂ.]

**ಮಲ್ಲಿನಾಥಿ** (ನಾ). ೧. ಮಲ್ಲಿನಾಥನೆಂಬ ಪ್ರಸಿದ್ಧವಿದ್ವಾಂಸನು ಸಂಸ್ಕೃತಕಾವ್ಯಗಳಿಗೆ ಬರೆದ ವ್ಯಾಖ್ಯಾನ.– ಟೀಕೆ. ೨. (ಆಲಂ) ವಿವರಣೆ ; ವ್ಯಾಖ್ಯಾನ : ಕಂಡ ಏತಕ್ಕಂಬ ಟಿಗ್ಗ ಪೆಚ್ಚಿನ ಮಲ್ಲಿನಾಥಿ ಬೇಕಾಗಲಿಲ್ಲ (ಅಕಿ. ೨೩೪); ನಗೆಯ ಮಾತಿಗೆ ಮಲ್ಲಿನಾಥಿ ಏಕೆ ? (ತಿಂಪತ. ೦ ಮುನ್ನು ೩). [<ಸಂ. ಮಲ್ಲಿನಾಥೀಯ]

**ಮಲ್ಲಿಯೂರ್** (ನಾ). ಒಂದು ಊರಿನ ಹೆಸರು : ಪಶ್ಚಿಮಭಾಗಾವಸ್ಥಿತ ಮಲ್ಲಿಯೂರ್ಗ್ರಾಮಮಧಿವಸತಿ (ಪ್ರ್ಯಾಲಿ. ೦೯೩೯, ೩೦-೨೦; 670). [ಮಲ್ಲಿ + ಊರ್]

**ಮಲ್ಲಿಸೇನ** (ನಾ). ಒಬ್ಬಾತನ ಹೆಸರು : ಮಲ್ಲಿಸೇನಭಟಾರರ ಗುಡ್ಡಂ ಚಱಿಪ್ಪ್ಯಂ ತೀರ್ತ್ಥಮಂ ಬನ್ದಿಸಿದಂ (ಎಕ. II, ೯-೦ ; ಸು. 900). [ಸಂ.]

**ಮಲ್ಲು**, **ಮಲ್** (ನಾ). ಒಂದು ಬಗೆಯ ತೆಳುವಾದ, ಬಿಳಿಯ ಹತ್ತಿ ಬಟ್ಟೆ : ಮೈಯಲ್ಲಿ ಬಿಳಿಯ ಮಲ್ಲಿನ ಷರ್ಟು, ಉಟ್ಟುದು ಮರ್ಸ್‌ರೈಜ್ ಧೋತರ (ಜನಪ. ೩೪). **ಮಲ್** : ಲಾಂಗ್‌ಕ್ಲಾತ್, ಚೀಟಿ, ವಾಯಿಲ್, ಮಸ್ಲಿನ್, ಮಲ್ — ಇವನ್ನು ಸಾಧಾರಣವಾಗಿ ಉಪಯೋಗಿಸಿ ನೇಯುವರು (ಗೃಹಶಿ. ೭೩). 'ಮಸ್ಲಿನ್' ಪರಾ.

[← ಇಂ. Mull· / ☞ ಇದು ಹಿಂದಿಯ 'ಮಲ್‌ಮಲ್' ಎಂಬುದರ ಸಂಕ್ಷಿಪ್ತರೂಪ]

**ಮಲ್ಲುಕ₁** 'ಮಲ್ಲುಗ' ನೋ.

**ಮಲ್ಲುಕ₂** (ನಾ). ಅಧಿಪತಿ : ಆ ನರಲೋಕಪಾಲಕನ ಖಾನ ವಜೀರ ಮಲ್ಲುಕರ ಲೆಕ್ಕಿಸಬಾರದೇನೆಂಬೆನವನ ಸಂಪದವ (ಕುಣಾಸಾಂ. ೦೭-೨೩); ತೊಟ್ಟ ಜೋಡಿಟ್ಟೊಡವೆ ಪಿಡಿದ ಬಾಳೆಲ್ಲಮಂ ಮಲ್ಲುಕರ್ ಬಿಟ್ಟಾಟ್ಟರ್ಷಾಂ ತಾಮೆ ಪಂತಂದಳೆದು (ಸಕಿವಿ. ೨-೦೦೬).
[ ← ಅರ. ಹಿಂ. ಮಲಿಕ್ ; ಮರಾ. ಮಲೀಕ]

**ಮಲ್ಲುಕಪದವಿ** (ನಾ). ಅಧಿಪತಿಯ ಸ್ಥಾನ : ಸುರುತಾಳನು ಬಾದುರನನ್ನು ಸನ್ಮಾನಿಸಿ, ಅವನಿಗೆ ಮಲ್ಲುಕಪದವಿಯನ್ನು ಕಟ್ಟಿದನು (ಕುವಜಾಸಾಂ. ೯೭).
[ಮಲ್ಲುಕ₂ + ಪದವಿ]

**ಮಲ್ಲುಗ, ಮಲ್ಲುಕ₁** (ನಾ). ೧. ಒಬ್ಬಾತನ ಹೆಸರು : ದೋರಬ್ಬೆಯ ಮಗಂ ಮಲ್ಲುಗ ಕೊಟ್ಟುಯಲ್ಲರಿದು ತುಱುವಂ ಸೆಱೆಯುಮನಿಕ್ಕಿಸಿ ಕಾದಿ ಸತ್ತಂ (ಎಕ. XII, ತಿಪಟೂ. ೩೩-೩; ೯೮೦). **ಮಲ್ಲುಕ₁** : ೨. ಶ್ರೇಷ್ಠನಾದ ಮಲ್ಲ,– ಜಟ್ಟಿ: ಆ ಪಟ್ಟಣದೊಳಗೆ ಅತಿರಥರು ಮಹಾರಥರಿಹರು ಸಾಮಂತ ಮಲ್ಲುಕರಿಹರು (ಸರ್ವವ. ೨೦೩-೯೨೬). [ಮಲ್ಲ + – ಉಗ]

**ಮಲ್ಲೆ** 'ಮೊಲ್ಲೆ' ನೋ.

**ಮಲ್ಲೋಗರ** 'ಮಲರೋಗ' ನೋ.

**ಮವಕಂಫ್** 'ಮೋಕೂಫ್' ನೋ.

**ಮವಲಂಗಮರ** (ನಾ). ಒಂದು ಬಗೆಯ ಮರ : ಅದಿರಾಜ . . . ಮವಲಂಗಮರ, ಹೊಳೆನೆಕ್ಕಿ, ನೆರವಂಬಳೆ, ತುಡೆಮದಿರಂಗಿ, ಹೊಡ್ಡೆಲೆಸಗೆ (ಪ್ರಾಚಿನಿ. ೨೫-೯೭೭). [ಮವಲಂಗ ? + ಮಳ₁]

**ಮವಾಳ** (ನಾ). ಸರಕಾರದ ಧೋರಣೆಗಳನ್ನು ವಿರೋಧಿಸದೆ ಹೊಂದಾಣಿಕೆಯಿಂದಿರುವ ರಾಜಕೀಯಪಕ್ಷ ; ಮಂದಗಾಮಿಪಕ್ಷ : ಒಂದು ದೃಷ್ಟಿಯಿಂದ ಮನುಕುಲವೆಂಬ ಶಾಸನಸಭೆಯಲ್ಲಿ ಅವಳು 'ಮವಾಳ' ಇಲ್ಲವೆ ಲಿಬರಲ್‌ಪಕ್ಷದವಳು (ಸವಾಜಿ. ೦೩೩೦). [ ←ಮರಾ. ಮವಾಳ]

**ಮವಾಳಿತನ** (ನಾ). ನಯ ; ನಾಜೂಕು : ಒಕ್ಕಲುತನದಿಂದ ಔದ್ಯೋಗಿಕ ಕೆಲಸಗಾರಿಕೆಗೆ ಹಳ್ಳಿಯ ಮಂಕುತನದಿಂದ ಪಟ್ಟಣದ ಮವಾಳಿತನಕ್ಕೆ ಹೊರಡುವ ಹೊಲಗೇಡಿ ಒಕ್ಕಲ ವರ್ಗ (ಶಾಪಾದ. ೦೯೩).
[ಮವಾಳಿ₀ ( P ← ಮರಾ. ಮವಾಳೀ) + – ತನ ]

**ಮವಿಂದಿ** (ನಾ). ಒಂದು ಸ್ಥಳದ ಹೆಸರು : ತನ್ನನಾಳ್ವ ಪ್ರಭುಮೋರು ಬೆಸಸೆ ಮವಿಂದಿಯೂಱುಗೊಟ್ಟಾಮವಟ್ಟಿಯ ಸಮಸ್ತಬಲಮು ಮೋಗೆಟ್ಟಿರೆ . . . ಇಱಿದೋಡಿಸಿ ಬಿಟ್ಟನ್ (ಎಕ. X, ಶ್ರೀನಿವಾ. ೬-೬, ಸು. ೯೮೦). [ ? ]

**ಮವುಜೆ** 'ಮೌಜೆ' ನೋ.

**ಮವುರಿ** 'ಮೌರಿ₁' ನೋ.

**ಮಶಕ** (ನಾ). ಸೊಳ್ಳೆ : ಬಿತ್ತಂಡವವನಮೆಲ್ಲಮುಂ ತಟ್ಟಿ ಮೆಯ್ವಱೆ ಮಶಕ ಮಾತ್ರಮುಮೊಪ್ಪೊಡಂ ಮಿಸುಕಲ್ ಭಿದಿಮಿಲ್ಲದಂತಾಗೆ ಶರಪಂಜರದೊಳ್ ಮುಚ್ಚಿ ಮುಸುಕಿದಾಗಳ್ (ಕಂಕಚಾ. ೩-೯೩ ವ) ; ಪತ್ತಿದ ನೆತ್ತರ ಪೊಲಸಿಂ ದೆತ್ತಂ ಮೊಱೆದಿಱಿವ ಮಶಕ ಮಕ್ಷಿಕಮುಂ ಸೋವುತ್ತುಂ (ಜಗಪಿ. ೯-೩೯) ; ಅಖಿಲಸಾಮ್ರಾಜ್ಯಮಮ್ಮ ರಕಕಣೆಗೆಂಡು ಬಿಟ್ಟಮಲಪ್ರತ್ತಿಯಿಂ ಶಿವನೊಳೊ ಡೆವೆರೆದರ್ (ಶಬ್ದಣಾ. ೨-೩೭). [ಸಂ.]

**ಮಶಕಾರಿ** (ನಾ). ಸೊಳ್ಳೆಯ ಶತ್ರು : ಜೇಡ : "ಮಶಕಾರಿ ಗುಣ ಪೃಷ್ಠಮೆಸೆ ಜೇಡನೆನಿಸುಕ್ಕು" (ಮಂಗರಾ. ೯೯-೦೯). [ಸಂ.]

**ಮಶವಾಳ** 'ಮಸಿವಾಳ' ನೋ.

**ಮಶಾಣ** 'ಮಸಣ' ನೋ.

**ಮಶಾಲು, ಮಷಾಲ್, ಮಷಾಲು** (ನಾ). ದೀವಟಿಗೆ ; ಕಕ್ಕಡ : ಪಂಜು : ಜ್ವಲಿಸುವ ಮಶಾಲು ಯಾವ ಮದುವೆಗೆ ಹಾದಿ ತೋರುವುದೊ (ಹಂಂಪ. I, ೩೭೯) ; ಆ ಮಶಾಲುಬೆಳಕಿನಲ್ಲಿ ಖಾನನು ಆ ಇಬ್ಬರು ರಾಣಿಯರನ್ನೂ ನೋಡಿದನು (ವೌಲತ್. ೩೯೨). **ಮಷಾಲ್.** **ಮಷಾಲು** : ಮಷಾಲು ಕಿಡಿಯಿಟ್ಟು ಆರಿತು (ಸಕಕ. ೬೨) ; ದೇವಸ್ಥಾನದಿಂದ ಮಷಾಲುಗಳನ್ನೂ ತರಿಸಿ, ಹೊಳೆಯ ಕರೆಯನ್ನು ಬೆಳಕಾಗಿ ಮಾಡಿಸಿ, ತೆಪ್ಪಗಳನ್ನು ತಿರಮಕೂಡ್ಲಿಗೆ ಬಿಡಿಸಿದೆ (ಕಂಕ. ೩೩೦)."

**ಮಷಾಲ್‌ಚೋರಿ** = ಪಂಜುಗಳ್ಳರು ಮಾಡುವ ಪರೋಡೆ ; ಪಂಜುಗಳ್ಳತನ : (ಕೃಕಗ. II. ೩೩೩).
[ ← ಅರ. ಮಶ್‌ಅಲ್ ; ಹಿಂ. ಮರಾ. ಮಶಾಲ್ ]

**ಮಶಿ** 'ಮಸಿ' ನೋ.

**ಮಶಿಕಾಣಿಕೆ** 'ಮಸಿಕಾಣಿಕೆ' ನೋ.

**ಮಶೀತಿ** 'ಮಸೀದಿ' ನೋ.

**ಮಶೀದಿ** 'ಮಸೀದಿ' ನೋ.

**ಮಶೀಪ** (ನಾ). (?) : ಪಕ್ವವೆಂದರೆ ಮಶೀಪ ಅವಕ್ಕಾಧಾರವು ಉತ್ತರ ಗರ್ಭವು (ಶಾಕಟಿ. ೨-೩-೦೩ ವ). [ ? ]

**ಮಶ್ರು** (ನಾ). ಒಂದು ಬಗೆಯ ರೇಷ್ಮೆಬಟ್ಟೆ : ರೇಶಿಮೆ, ಊರ್ಣ, ಮಶ್ರು, ಕಿನಕಾಫ ಮೊದಲಾದ ಅಂಗಡಿಗಳು ಅಂದವಾಗಿ ಕಾಣುತ್ತಿವೆ (ಹಂಮಳಕ. ೮). [ ← ಅರ. ಮಶರೂಅ; ಹಿಂ. ಮಶರೂ, ಮಸರೂ ; ಮರಾ. ಮಶರೂ, ಮಶ್ರೂ, ಮಸರೂ ]

**ಮಷಾಲ್** 'ಮಶಾಲು' ನೋ.

**ಮಷಾಲಚಿ** 'ಮಷಾಲ್ಜಿ' ನೋ.

**ಮಷಾಲು** 'ಮಶಾಲು' ನೋ.

**ಮಷಾಲ್ಜಿ, ಮಷಾಲಚಿ** (ನಾ). ದೀವಟಿಗೆಯನ್ನು ಹಿಡಿಯುವವನು ; ಪಂಜಿನವನು : ಬೋಯಿ, ಮಷಾಲ್ಜಿ . . . ಸಂಗೀತಗಾರ ಮೊದಲಾದವರು ಅಲಾಹಿದವಾಗಿರ್ದ್‌ಪೇಷಾಕಚೇರಿ ದಾಖಿಲ್ (ಮಹಾಪ್ರ. I, ೨೨೮). **ಮಷಾಲಚಿ** : ನೀನೊಂದು ಮೇಣದ ಬತ್ತಿಯನ್ನು ಹಿಡಿದು ಮಷಾಲಚಿಯಾಗಿ ಬೆಳಕನ್ನು ತೋರುತ್ತ ನನ್ನ ಹಿಂದೆ ಬಾ (ರೇಮಿಕಾ. ೦೫೦).
[← ಪಾರ. ಹಿಂ. ಮಶಾಲ್‌ಚೀ ; ಮರಾ. ಮಶಾಲಚೀ, ಮಶಾಲಜೀ]

**ಮಷಿ** (ನಾ). ೧. ಶಾಯಿ; ಮಸಿ. ೨. = ಮಷಿವಿದ್ಯೆ : ಮಷಿಯೆಂಬ ಲಿಪಿಕರ್ಮದಿಂ ಜೀವಿಸುವವರೇ ಕರಣಿಕರು(ಪುರುಷ. ೭೯). ೩. ಇದ್ದಿಲು : ಅಸಿ ಮಷಿ ಕುರಿ(ಷು) ಪಿಡಿ ಪಿಡಿಕಲ್ ಕುಸಿಯುಂ ಪುರಿಯೋಡು ಕೋಡು ಕಾವಲಿ ಸುಲಿಯುಂ ಬೆಸಗೊಂಬರ್ ಪಿಡಿದಿರೆಯುಂ ಪುಸಿವರ ಶೂಲಂ ಜಗಕ್ಕೆ ಮಱೆಯಿಲ್ಲೆಂದು (ಅಬ್ಬಿಕು. ೦-೯೯). 'ಮಷೀಚಿತ್ರ' ಪರಾ. ೪. ದೀಪದ ಕಪ್ಪು ; ಕಾಡಿಗೆ. 'ಮಸಿ' ಪರಾ. [ಸಂ.]

**ಮಷಿವಿದ್ಯೆ** (ನಾ). ಶಾಯಿಯಿಂದ ಬರೆಯುವ ವಿದ್ಯೆ : ಕರಣಿಕ ವೃತ್ತಿ : ಅಸಿಮಷಿಕೃಷಿವಣಿಗ್ವಿದ್ಯಾಶಿಲ್ಪಕರ್ಮಂಗಳಿಂ . ಶುದ್ಧವೃತ್ತಿಯಿಂದರ್ಥೋಪಾರ್ಜನಂಗೆಯ್ವ ವಾರ್ತೆಯುಂ (ಆದಿಪು. ೦೫-೦೩ ವ). [ಸಂ. ಮಷಿವಿದ್ಯಾ]

**ಮಷೀಚಿತ್ರ** (ನಾ). ಇದ್ದಿಲಿನಿಂದ ಬರೆದ ಚಿತ್ರ ; ಮಸಿಯಿಂದ ಬರೆದ ಚಿತ್ರ : ಹುಲಿಯು ಅಲ್ಲಿಯೆ ಕುಳಿತು ತನ್ನ ಹಿಂಗಾಲಿನಿಂದ ಕುತ್ತಿಗೆ ತುರಿಸಿಕೊಳ್ಳುತ್ತಿರುವುದು ಬೆಂಕಿಗೆ ಎದುರಾಗಿ ಮಷೀಚಿತ್ರದಂತೆ ಕಾಣುತ್ತಿದೆ (ಮಲೆಮ. ೨೩೬). [ಸಂ.]

**ಮಷ್ಕರಿ** 'ಮಸ್ಕರಿ₂' ನೋ.

**ಮಷ್ಟು** (ನಾ). ಗಸಿ ; ಗಷ್ಟು : ಮಡ್ಡಿ : ದೃಷ್ಟಿಚುಕ್ಕೆಯದೊಂದನೆಲ್ಲ ಚೆಂದಂಗಳ್ಗಿಟ್ಟಿಹನು ಪರಮೇಷ್ಠಿ . . . ಮಷ್ಟು ಸೃಷ್ಟಿಗೆ ಬೊಟ್ಟು (ಮಂಕಳಕ. ೯೯೭); ಮಳೆ, ನದಿಗಳಿಂದ ಕೊಚ್ಚಲ್ಪಟ್ಟಾಗ ಇವು (ಅದುರುಗಳು) ಈಗಿನ ನದಿಗಳ . . . ಪಾತ್ರಗಳಲ್ಲಿ ಒಟ್ಟುಗೂಡುತ್ತವೆ. ಇಂತಹ ಬಂಡು (ಮಷ್ಟು)ಗಳಿಗೆ ಮೆಕ್ಕಲು ಮಣ್ಣಿನ ಬಂಡುಗಳು ಎಂದು ಹೆಸರು (ಕಾಪಿಪ. ೦೩೭). 'ಮಡ್ಡಿ₁' ಪರಾ.
[←ತೆಲು. ಮಷ್ಟು, ಮಸಟು, ಮಸಡು, ಮಸ್ಸು]

**ಮಸ** (ನಾ). ಕೋಪ : ರೋಷ : ನಾಲ್ಕುದೆಸೆಗಳಿಗೆ ಮಸದಿಂದ ನೋಡಿ ಹಲು ಮಣಿಸಲು (ಅಕ್ಕಬೀ. ೭-೦೨ ಟೀಕೆ) ; ಅಸಮಸಮರಂಗಳೊಳ್ ಮಿಗೆ ಮಸಂ ಪೆಸಂಗಿಡಿಸಿ ಕುತುಪಶಾಹನ ಪೌಜಂ ಪೆಸರ್ವಡೆದಿರ್ಪಂ ರಾಯಂ (ಶಶಿಪ. ೩-೭೭). [<ಸಂ. ಮಶ]

**ಮಸಂಗು** 'ಮಸಗು' ನೋ.

**ಮಸಕ**₁. ಮಸಕು₁ (ನಾ). ೧. ಅಧಿಕ್ಯ : ಹೆಚ್ಚಳ : ಅತಿಶಯ : ಎನಗೀವುದು ನಿನ್ನಸಕದ ಮಸಕಮನೆ ಪೋಲ್ವ ಮಗನಂ ಮಘವಾ (ಶಂಕಪಾ. ೧-೦೩೯) : ಪುಸಿನುಡಿಯ ವಿಷವಿಪಾಕದ ಮಸಕದೆ ಮುಖರೋಗಮಾದವೋ ಲಿನಿತಾನುಂ ಬಸವಲ್ಲದುಸಿರ್ವರೆಂದುಂ ಪೊಸಸಿರಿಯಿಂ ಮೈಮೆವೆತ್ತ ಮಾಯ್ದ ಮನುಷ್ಯರ್ (ಕಾದಂಕೊ. ೩೭೨); ಬಸಿವ ರಕುತವ ಬಳಿದು ಖಾತಿಯ ಮಸಕ ವಲಿ ಕೈಮಚಿದು ಮಿಗೆ ದಳ್ಳಿಸುತ ಹೊಗರಿಡುತ . . . ಪುನರಪಿ ಕಚಿದ ನಂಬುಗಳ (ಕುಮ್ಮಾಶಿ. ೯-೩೯). ೨. ರಭಸ ; ವೇಗ : ಭೀಮನ ಧಾಳಿ ಹೆಚ್ಚಿತು ಹೊಸತು ದಶಕದ ಮಸಕ ಮಿಗಿಲಾಯ್ತು (ಕುಮ್ಮಾಶ. ೦೯-೧); ಕುಸುಮಸಾಯಕನ ಕೋದಂಡಟಂಕಾರದ ಮಸಕಮನಿಂಚರದಿಂದ ಮಸುಳಿಪ ಮಚಿದುಂಬಿಗಳಾ ಬನದೊಳಗೆಸೆದಿಹವು (ಕುಂದಸಾಂ. ೩-೨೭). ೩. ಅಬ್ಬರ ; ಆರ್ಭಟ : ಗುರುಲಿಂಗಜಂಗಮವಶದಲಿಂತಿರುತಿರಲಿಕೆ . . . ಮಾಯೆಯ ಮಸಕವೆಲ್ಲವು ಮಾದು ಪೋಹುದು (ಪ್ರಭುಲಿ. ೦೮-೩) ; ಮೊಚಿದುದಿದಿರಲಿ ನಿಖಿಳನದಿಗಳ ಮಚಿಚಕವನು ಮಸುಳಿಸುವ ಮಸಕದ ನಿಚಿಸಿನಲಿ ನೀರುಬ್ಬು ಗಳ ನಿರ್ಘೋಷದಬ್ಬರದ . . . ಗೋದಾವರಿ (ತೊರರಾ. ೩-೦-೪೭). ೪. ಉಗ್ರತೆ : ತೀಕ್ಷ್ಣತೆ : ಮಸಕದ ಹಾಲಾಹಲದೊಡನೆಸವಿಂದುವಲೇವೆ ಪುಟ್ಟುವಂದದಿನಾ ರಾಕ್ಷಸನೊಡನೆ ಪುಟ್ಟಿ ದೇವಕಿ ವಸುದೇವಂಗರಸಿಯಾಗಿ ಸುಖದಿಂದಿರ್ದಳ್ (ಜಗಂ. ೨-೩೯). ೫. ಉತ್ಸಾಹ ; ಹುರುಪು : "ಮಸಕಂ ವಿಜೃಂಭಣಂ" (ಶಬ್ದಮ. ೭೭) ; ಉಚಿದವರಾರಾತನ ಮಸಪ ಮಸಕದೆಸಕಮನಿಚೀಪರ್ (ಕಾವ್ಯಸಾ. ೨೩೯ ಕೂಡ್ರ) ; ಒಂದುದೆವಸವೊಂದು ಮಾಯಾಮತ್ತಹಸ್ತಿ ಮಸಕಂ ಕಾಯ್ದು ಜವಂ ಜವಂಗಮಿದಿರೊಳ್ ನೋಡಲ್ಕಗುರ್ವಾಗೆ ಮಾಂದಿಸಿಮಾವಂದುದು ಕೊಂದುದೆಂದು ಭಯದಿಂ ವಿಪ್ರರ್ ತೆರಳ್ದೋಡೆ (ಶಂಕಪಾ. ೮-೩೭) : ಮಸಕದಿನೆಯ್ದಿ ಕೇಸರಿಯನಿಕ್ಕಿದ ತಕ್ಕನವಾರ್ಗೆ ಮೆಚ್ಚಿ ಬಣ್ಣಿಸಿದಪಿರ್ (ವರ್ಧಶ. ೯-೭೯). ೬. ತಳಮಳ ; ಕ್ಷೋಭೆ : ಸಾಗರದ ಮಸಕದಿಂದುದಯಿಸಿದ ಬೊಬ್ಬುಳಿಗಳು (ಶಬಕ. ೦೨-೨೦). ೭. ಸಿಟ್ಟು ; ರೋಷ : ಉಡಿಯಿ ರಥಂ ಕೀಲಿಸೆ ಕುದುರೆ ಮುಚಿಯೆ ಪಟುವಿಗೆ ಮಸೇದಿನೆಚ್ಚೆಚ್ಚನೊಂದೆ ಸರಲೊಳ್ ನೊಸಲಂ (ಶಂಕಪಾ. ೧೧-೯೯): ಹಲಧರನ ಮಸಕವನು . . . ಬಲಿಮಘನನೀಕ್ಷಿಸುತ . . . ಇದಿರಲಿ ನಿಂದು ಹಿಡಿವನು ಬಲನ ಬಲಗಯ್ಯ (ಕುಮ್ಮಾಗ. ೮-೨೮) : ನಿಷ್ಠುರದ ಸಿಂಹದ ಮಸಕವನು ಸೈರಿಸುವುದೆ ಬಳಹುಲ್ಲೆ (ಅಂಬಿಕಾ. ೩-೨೦). ೮. ಕಾಂತಿ ; ತೇಜಸ್ಸು : ಮುಸುಕುವುದು ಮುಗಿಲೊಮ್ಮೆ ಸೂರ್ಯನ ಮಸಕ ಮಿಗಿಲಹುದೊಮ್ಮೆ (ಕುಮ್ಮಾಶ. ೧೧-೩೭). 'ಮಸ ಕಂಗುಂದಿಸು' ಪರಾ. ೯. ಆಹಾರದೊಡನೆ ಬೆರಸಿ ಕೊಡಬಹುದಾದ ಒಂದು ಬಗೆಯ ಮಂದವಿಷ ; ಇಕ್ಕುಮದ್ದು: 'ಕೆಯ್ಮಸಕ' ಪರಾ. ಮಸಕು₁ : ೯. ಮಸಕಿಗೆ : – ತುಜುಪೆಯ ಸೊಪ್ಪನ್ನು ಹಿಸುಕಿ ಮೂಸಿದರೆ . . . ಎಂತಹ ಕೈಮಸಕು ಸಹ ಮಾಣ್ಗುಂ (ವಿಷ್ಣುವಿ. ೭೮). [< ಮಸಗು]

**ಮಸಕ**₂. ಮಸಗೆ (ನಾ). ೧. ಸೊಳ್ಳೆ: ಮಸಕಮನಾಂತಿಘಕುಳಿಮಂ ಮಸಕ ಮನೊರಸುವವೊಲೊರಸುವುದು ನಿಜಕರದಿಂ (ಕಾರ್ಕಳಶ. ೪-೧೩೪). **ಮಸಗೆ** : ೨. ಸಸ್ಯವನ್ನು ಹಾಳುಮಾಡುವ ಒಂದು ಬಗೆಯ ಶಿಲೀಂಧ್ರ : ಬೂಪ್ಪು ; ಕಾಡಿಗೆರೋಗ : ಮಸಗೆ ಮೂಡಿದ ಹೊಲನು ದುಷ್ಟಪ್ರಸರ ದೇಳಿಗೆ ಪಾಪಿಯೋಲಗ ಹುಸಿಯ ಬಾಳುವೆ . . . ಹಸನ ಕೊಡುವುದೆ (ಕುಮ್ಮಾಅ. ೬-೪೮) ; ಮೂರ್ಖನೃಪನ ಸಿರಿ ಮಸಗೆಯು ಬೆಳೆಯಂತಾಗ ದೇನಿಹುದೆ (ರಾಮಚ. ೧೪-೧೪೭). [<ಸಂ. ಮಶಕ]

**ಮಸಕಂಗುಂದಿಸು** (ಕ್ರಿ). ಕಾಂತಿಗುಂದಿಸು : ಕಳಾಹೀನವಾಗಿಸು : ಚೋಳೆಯ ನಾಡು ಸೂಚಿಗೊಂಡಾತನಂ ಮಸಕರಿಗುಂದಿಸಿ ಪಾರ್ಥಿವರಂ ಪುಗಿಸಿದಂ ಶ್ರೀಬ್ರಹ್ಮದಂಡಾಧಿಪಂ ( ಶಾಶಾ. IX-i, ೨೭೭-೦೭ : 1154 ). [ಮಸಕ₁ + ಕುಂದಿಸು]

**ಮಸಕಂಗುಂದು** (ಕ್ರಿ). ೧. ರಭಸವು ಕುಗ್ಗು ; ಆವೇಶವು ಕಡಿಮೆ ಯಾಗು : ಮಸಕಂಗುಂದದೆ ಪಾಯ್ದುರಾತಿಶರಸಂಘಾತಂಗಳಂ ಕೂಡೆ ಖಂಡಿಸಿ (ಶಂಕಪಾ. ೧೨-೧೪೩) ; ಮಸಕಂಗುಂದದರಾತಿಪಾರ್ಥಿವರ ಕಾಂತಾ ನೇತ್ರನೀರೇಜದೊಳ್ ಬಿಸುನೀರಂ . . . ನೋಡಿ (೮೧ರಾವ. ೧-೯೮). ೨. ತೀವ್ರತೆಯು ಕಡಮೆಯಾಗು; ಉಗ್ರತೆಯನ್ನು ಕಳೆದುಕೊಳ್ಳು: ವಸುಧೆಯೊಳೆ ಶಿವದ್ರೋಹಮನೆಸಗಿದನಂ ಕಂಡು ಸೈರಿಸುವನಾವನವಂ ಮಸಕಂಗುಂದದ ಪಾಪಪ್ರಸರಕೆ ಪಕ್ಕಾಗಿ ಭವಸರೋಧಿಯೊಳಾಳ್ಗುಂ (ವೃಷಭ. ೪೨-೦೨). [ಮಸಕ₁ + ಕುಂದು₁]

**ಮಸಕಂಗೊಳ್** (ಕ್ರಿ). ೧. ಅಧಿಕಗೊಳ್ಳು ; ಅತಿಶಯವಾಗು : ತಣ್ಣುಸುಣ್ಪುಂಪುಗಳ್ ಮಸಕಂಗೊಂಡಿರೆ (ಶಶಿಪ. ೧-೧೧). ೨. ಉತ್ಸಾಹ ಗೊಳ್ಳು : ಸುರತಾಲಯದೊಳ್ ಮಸಕಂಗೊಂಡಮರ್ದಪ್ಪಿ ಚಪ್ಪಲರ್ದ ವಕ್ಷೋಜದ್ವಯಂ (ಹಸ್ತಮ. ೧೭-೩೭). ೩. ಕೋಪಗೊಳ್ಳು : ದಾಸವರಿಪು ಮಸಕಂಗೊಂಡಂ (ಜಗಪ. ೩-೭೩). [ಮಸಕ₁ + ಕೊಳ್₁]

**ಮಸಕಂಬೆಜು** (ಕ್ರಿ). ಆವೇಶಗೊಳ್ಳು : ಅಮಳ್ಗಳ್ ಕರಂ ಮಸಕಂ ಬೆತ್ತಡೆಪೊಕ್ಕು ಮಿಕ್ಕದಟರಾರ್ದಾರ್ದೆಚ್ಚರಾ ಕರ್ಣನಂ (ಪೇಬಿಪು. ೦೨-೦೦೩): ಪಶುವಂದುಂ . . . ಮಸಕಂಬೆತ್ತವನೀಶಪೆರ್ಬುಲ ಬರಲ್ಕಂಡೋಡಲ್ (ಶೃರಪ್ರ. ೯-೭೮). [ಮಸಕ₁ + ಪೆಜು₁]

**ಮಸಕು**₁ 'ಮಸಕ₁' ನೋ.

**ಮಸಕು**₂ 'ಮಸುಕು' ನೋ.

**ಮಸಗ** (ನಾ). ಆಯುಧಗಳನ್ನು ಹರಿತಮಾಡುವವನು : ಮಸಗಿ ಮುಂದಣ ಬಡಗಿ ಕಮ್ಮಟಿ . . . ಮಸಗ ಮುಚ್ಚಿಗ . . . ಹರದರ ಕೇರಿಗಳಲುಬ್ಬಿಸಿದನುಬ್ಬಿಚಿದಬ್ಬರಿಸಿ ಕಪಿ ಹವ್ಯವಾಹನನ (ತೊರರಾ. ೩-೮-೫೨). [< ಮಸೆ₁ + – ಗ₂]

**ಮಸಗಿಸು** (ಕ್ರಿ). ರೇಗಿಸು ; ಕೆರಳಿಸು : ದುರ್ಜನರಂ ಮಸಗಿಸಲಾಗದು (ನೀತಿವಾ. ೨೮-೮೨). [ಮಸಗು + – ಇಸು₃]

**ಮಸಗು**, ಮಸಂಗು (ಕ್ರಿ). ೧. ಹೆಚ್ಚಾಗು ; ಅತಿಯಾಗು ; ಅಧಿಕ ಗೊಳ್ಳು : ದಿವಿಜಗಣಂ ಕಾರೊಕ್ಕಲೆಂದೊಡುಚಿದವರಾರಾತನ ಮಸಪ ಮಸ ಕದೆಸಕಮನಿಚೀಪರ್ (ಕಾವ್ಯಸಾ. ೨೩೯ ಕೂಡ್ರ) ; ಮಸಗಿದುದು ಬೇನೆಯುಂ ಮಾಣಿಸು ದೇವತೆಯೆಂದು ಪರಕೆಯಂ ನುಡಿದೊಡೆ ಮಾಣಿಸುವಳೆ ದೇವತೆ ವೇದನೆಯ (ಸಮಪ. ೯-೧೦೪) ; ವಿಸ್ತರದ ಗುಜುಗುಜು ಮಸಗಿದುದು ಕಾಂತಾ ಕದಂಬದಲಿ (ಕುಮ್ಮಾಅ. ೦೪-೩೩) : ಇಂತು ನನ್ನನು ಕವಿದ ದುಃಖ ನಿನ್ನೆಯ ಇರುಳು ಮರಳಿ ಮಸಗಿತು, ನನ್ನ ಆತ್ಮವನು ಮುಳುಗಿಸಿತು (ಮಹೋಪ. ೪). ೨. ಹರಡು ; ಆವರಿಸು : ಅದಂ ಕೇಳಲೊಡನೆನ್ನ ನೆತ್ತಿಯೊಳುರಿ ಮಸಗಿದಂತಾಗೆ (ಕಾದಂಬ. ೩೭೦) ; ಹೊತ್ತಿ ಹೊಗೆದು ದಳ್ಳುರಿ ಮಸಗೆ (ಚಿದ್ರಾ. ೭-೨೨) ; ತಪಃಪ್ರಭಾವಮೊಂದೇಚಿಗೆವೆತ್ತು ದೆಸೆ ದೆಸೆಯೊಳಂ ಮಸಗೆ ಕಂಡು (ರಾಮಾಶ್ವ. ೩೩-೧೯). ೩. ಪ್ರಕಟವಾಗು ; ಹೊರಹೊಮ್ಮು : ದೈತ್ಯಬಲವುಲಿದಡಿಯಿಡಲು ಮೇಲುಸುರು ಮಸಗಿತು ಫಣಿಪ ಕಮಠರಿಗೆ (ಕುಮ್ಮಾದ್ರೋ. ೦೫-೪೭) ; ಖಳ ಕಿಡಿ ಮಸಗೆ ಕಿತ್ತಿತ್ತಿವನು ಮೃತ್ಯುಂಜಯನ ಗಿರಿಯ (ತೊರರಾ. ೦ ೮-೩೨) ; ಉರಿ ಮಸಗಿತು ನಾಸಿಕ ದಲ್ಲಿ ಕೆಂಗಿಡಿ ಸುರಿವಕ್ಷಿಯಿಂದೆ ನಂದೀಶ . . . ಗರುಡನ ನೆತ್ತಿ ಬಿರಿವಂತೆ ಶಿವಿಸು ಬೊಬ್ಬಿಜಿದ (ಪೋಃಪತ. ೩೮-೩೫). ೪. ರಭಸವನ್ನು ಹೊಂದು ;

ತೀವ್ರಗೊಳ್ಳು : ಮಸಗಿದಮದತ್ಸಾಮೃತತರಂಗಿಣಿ ಪೌರಜನಾಂತ ರಂಗದೊಳ್ (ಧರ್ಮಾಮೃ. ೯-೧೨೯); ನೆಲನನುಗ್ಗುಡಿವ ಕಂಚುಕಿಗಳಬ್ಬರ ಮಸಗಿತಾ ಸಭೆಯೊಳು (ತಬಿತ. ೬-೧೮). ೫. ಆತುರಪಡು ; ಉದ್ವೇಗಗೊಳ್ಳು: ಪಸದಿಪಲಾಜದೆ ಪಣ್ಣಂ ಮಸಗಿ ಜತರ್ಕಿಂದು ಸಾಯೆ ಕಂಡು (ರಹಸ್ಯ. ೨-೦೮೬) ; ಅಪ್ರತಿಮಲ್ಲದೈವದ ನೆಲೆಯುನರಿಯದ ಮಲ್ಲಭೂಪರು ಮಸಗಿದರು ಗುಜುಗುಜಿನ ಗಾಢವಲಿ (ಶಬ್ದಾಸ. ೯-೬೩). ೬. ಉತ್ಸಾಹ ಗೊಳ್ಳು ; ಹುರುಪೇರು : "ಮಸಗು – ವಿಜೃಂಭಣೇ" (ಶಬುಧಾ) ; ಆರ್ ಮಿಕ್ಕು ಬರ್ದುಂಕುವನ್ನರಿವರ್ಗೆಂಬಿನೆಗಂ ಮಸಗಿತ್ತು ರಾಜಕಂ (ಶಂಶಿಕಾ. ೩-೬೬) ; ಎಸಗುವ ವಾವಮಸುಖಂಗಳ ದೆಸೆಗೆಸಗದೆ ಮಸಗದೆ ಸಗದಿರ್ದಡೆಯಿಂದಿರ್ದಸಡ್ಡತದಿವಿಜಸುಖಾಮೃತರಸದಿಂ ತನ್ನಿಂದೆ ತಾನೆತಣ್ಣನೆ ತಣಿದಂ (ಸುಕುಮಾರ. ೦೨-೯೮) ; ತ್ರೈಲೋಕ್ಯಮಲ್ಲಂ ಮಸಗಿ ಮುಳಿದು ಮೇಲೆತ್ತಿದಂ (ಎಕ. VII, ಶಿಕಾ. ೧೦೦-೦೨; 1070). ೭. ಕ್ಷೋಭೆಗೊಳ್ಳು; ಉಕ್ಕೇರು : ಅನಿಬರುಮುತ್ಪ್ಲುತಮರುದಾಭಿಘಾತೋದ್ಧೃತ ಪಯೋನಿಧಿ ಗಳಂತೆ ಮಸಗಿದರಾಗಳ್ (ಆದಿಪು.೦೯-೬) ; ಮರ್ಚು ಪೂತು ಭಾಪೆನುತ . . . ಭಟರುಲಿಯೆ ಲಹರಿಯ ಸಾಗರದ ಸೌರಂಭದಂತಿರೆ ಮಸಗಿತಾಸ್ಥಾನ (ಶಬ್ದಾರ್ದ್ರೋ. ೦-೩೬) ; ಗೊಳ್ಳೆಂದು ನಗೆಯ ತೆರೆ ನೊರೆಯುಕ್ಕಿ ಮಸಗಿ ತುತ್ಸಾಹದಿಂ ಪಾಂಡವದಳದ ಜಳಧಿ (ತತ್ತ್ವಂಗ. ೬೬-೨೦೨೦). ೮. ಕೆರಳು ; ರೇಗು; ಉದ್ರೇಕಗೊಳ್ಳು : ಪ್ರತ್ಯಂತವಾಸಿಗಳಪ್ಪರಸುಗಳ್ ಮಸಗಿದೊಡೆ ಮಂತ್ರಿಯ ಗುಣವಂ ನೆನೆದು ಬೆಸಗೊಂಡಂ (ಪಂಪಭಾ. ೦೮೨-೨೦); ಮಸಗಿದ ಮದಾಂಧಗಂಧಸಿಂಧುರದಂತೆ ಧೆಸೆಗೆ ಮಸಗಿದ ವಾಯುಪುತ್ರನಂ ಧರ್ಮ ಪುತ್ರಂ ಸಂತೈಸಿ (ಶಂಶಿಕಾ. ೯-೨೯ ಪ) ; ವಿಗಡಬಸವಂ ಮಸಗಿ ಲಳಿಯೆದ್ದು ತತ್‌ಕ್ಷಣಂ ಚಿಗಿಯಲ್ ತೊಡರ್ದ ದಾಮಂಗಳೆಲ್ಲಂ ಪರಿದುವು (ತಂಪು. ೯೯-೦೬). ೯. ಎದುರುಬೀಳು ; ಮೇಲೆಬೀಳು : ಮಸಗಿ ಬಳಾಹಕಾವರ್ತರ ಬೆಸದಿಂದಂ ಬಂದ ಮೇಘಮುಖರಂ ತೂಳ್ದೋಡಿಸೆ (ಆದಿಪು.೦೯-೩೮) ; ಹಸಿದ ಹೆಬ್ಬುಲಿ ಮಸಗಿದರೆ ಮೃಗವಿಸರವೇನಹುದರಸ (ಶಬ್ದಾರ್ದ್ರೋ. ೦೬-೨೬). ೧೦. ಕಾಂತಿಯುಕ್ತವಾಗು ; ಶೋಭಿಸು : ಚಂದ್ರೋ ದಯಮಿನ್ನೆಸೆದಪುದೆನೆ ನಸುವೆಳಗಿಂ ಮಸಗಿದುದಿನಿಸಿಂದ್ರದಿಗ್ವಧೂಮುಖ ಬಿಂಬಂ (ಕಾದಂಪು. ೬೬೮). ಮಸಂಗು : ೭. ಪೊಸಲ್ ಮಸಂಗಿ ಸುರಿ ತರ್ಪರುಣಾಂಬುಸುವೃಷ್ಟಿ(ಯ ?) ಬಲ್ಪು ಪೆರ್ಚೆಳಸನೆ . . . ಪಳಂಚಿದರಿ ರ್ವಲದುರ್ವರಾಧಿಪರ್ (ದಶಕು. ೨-೨೨). ☞ ಇದು ಛಂದಸ್ಸಿಗಾಗಿ ಮಾಡಿಕೊಂಡ ರೂಪ.

ಮಸಮಸಗು (ದ್ವಿರುಕ್ತಿ) : ಈ ಇಂದಿನ ಮಹಾರಾಜನು . . . ಶ್ರೀಮನ್ಮಹೀಶೂರಯಾದವಪ್ರಭುವಂಶಕ್ಕೆ ಕೊಡಲಿಯು ಕಾವೆ ಆಗಿ, ಮಸಮಸಗುತ್ತಿದ್ದಾನೆ (ಮುಂತ್ರಕ. ೬೬-೦). [ದೇ.॥ ತೆಲು. ಮಸಗು]

ಮಸಗೆ ' ಮಸಕ₂ ' ನೋ.

ಮಸಜೀದ ' ಮಸೀದಿ ' ನೋ.

ಮಸಜೀದಿ ' ಮಸೀದಿ ' ನೋ.

ಮಸಣ, ಮಶಾಣ, ಮಸ್ಣಾಣ, ಸ್ಮಶಾನ (ನಾ). ಶವಗಳ ಅಂತ್ಯಸಂಸ್ಕಾರ ವನ್ನು ನಡೆಸುವ ಸ್ಥಳ ; ಸುಡುಗಾಡು ; ರುದ್ರಭೂಮಿ : "ಮಸಣ ಪೆಸಲು ಸ್ಮಶಾನಂ" (ಕಶರ. ೦೨೮); ಆಕೆಯಂ ಬೆಳ್ಳಾಡೊಳ್ ಮಸಣದೊಳ್ ಕೊಂಡುಪೋಗಿಕ್ಕಿ (ಪಂಪಭಾ. ೦೦೨-೯); ನರಕದ ನೆಲೆ . . . ಮಸಣದ ಪುಟ್ಟು ಪಾಪದೆಡೆ ಘಾತಕದಾಗರಮದು ನೆನೆವರ್ಗೆ ಭಯಂಕರಂ (ಕಾದಂಕಾ. ೬೯೬) ; ಮಸಣದ ದಾರಿಯುಳಲು ಪುಟ್ಟಿಸಿದುದು (ತ್ರಿಷಷ್ಟಿ. ೮-೪). ಮಶಾಣ : ಮಕ್ಕಳಿಲ್ಲದ ಮನೆ ಮಶಾಣ ಎಂಬ ಹಾಗೆ ಬರೀ ಮನೆ ಆಯಿತು (ಕಥಾಸಂ. IV, ೭೫). ಮಸಾಣ : ಕಟ್ಟೀ ಕೆಳಗೆ ಹೋದ ನೀರೂ ಮಸಾಣಕ್ಕೆ ಹೋದ ಹೆಣ್ಣೂ ಹಿಂತಿರುಗಿ ಬರುತ್ತವ್ಯೋ ? (ಹುಬ್ಬಹ. ೧೩೩). ಸ್ಮಶಾನ : "ಮಸಣ (ಮಸಾಣ)—ಸ್ಮಶಾನ = ಸುಡುಗಾಡು" (ಕನ್ನಕೊ. ೩೯) : ಬಂಧು ಜನಗಳು ಸ್ಮಶಾನದವರೆಗೆ ಬರುವರು (ತತ್ವಶಿ. ೦೯-೬) ; ಮನೋಭಾವ ವಿಲ್ಲದ ವ್ಯಕ್ತಿಗೆ ಅವೆಲ್ಲ ಸ್ಮಶಾನಸದೃಶ (ಶಿಕ್ಷರ. ೩೮೮).

ಮಸಣದೊಡೆಯ = ಸುಡುಗಾಡಿನ ಅಧಿಪತಿ; ಶಿವ: ಮಸಣದೊಡೆಯನ ಸೇರ್ದನಾ ಬಸವಪ್ಪಶಾಸ್ತ್ರಿ (ಶಾಕುಂತ. ೬ ಅಭಿಪ್ರಾಯ). ಮಸಣಮೌನ, ಸ್ಮಶಾನಮೌನ = ೧. ಸ್ಮಶಾನದಲ್ಲಿ ಆವರಿಸಿರುವ ನಿಶ್ಶಬ್ದತೆ. ೨. (ಅಲಂ) ಜೀವಂತಿಕೆಯಿಲ್ಲದೆ ನಿಶ್ಶಬ್ದವಾಗಿರುವ ವಾತಾವರಣ : ತಾವು ಅನ್ಯೋನ್ಯವಾಗಿರದೆ, ಮಾತುಕಥೆ ಕೂಡ ಇಲ್ಲದೆ, ಮಸಣಮೌನದಿಂದ ದಾರುಣಜೀವನವನ್ನು ಜೀವಿಸುವುದು ಸಾವಿಗಿಂತ ಕಡೆ ! (ಶಂಕರು. ೨೦೨) ; ಮಸಣಮೌನ ಎಲ್ಲವನ್ನೂ ನುಂಗಿ ನೊಣೆದಿದೆ (ಹಂಗಿಕ. ೨೩); ಸಾಮರಸ್ಯ ವಿಲ್ಲದ ಅವರ ಸಂಸಾರವನ್ನು ಸ್ಮಶಾನಮೌನ ಆವರಿಸಿಕೊಂಡಿದೆ (ಕಶು).

[<ಪ್ರಾ. ಮಸಾಣ. / ಸಂ. ಶ್ಮಶಾನ]

ಮಸಣಕಬ್ಬೆ 'ಮಸಣಿಕಬ್ಬೆ' ನೋ.

ಮಸಣಗಾಡು (ನಾ). ಸುಡುಗಾಡು ; ರುದ್ರಭೂಮಿ : "ಶ್ಮಶಾನಂ, ಪಿತೃವನಂ—ಈ ೨ ಮಸಣಗಾಡು" (ಹಲಾಯು. ೦೦೫-೦೬) ; ತಾಯಿ ಯಿದ್ದಡೆ ಮಸಣಗಾಡಿಗೆ ಕಳುಹುವಳೆ ಮಗನ (ಬಸವ. ೦೫-೯).

[ಮಸಣ + ಕಾಡು₂]

ಮಸಣಗಾಹಿ (ನಾ). ಶ್ಮಶಾನವನ್ನು ಕಾಯುವವನು ; ಶಿವ : ತಿರುಕಂ ಮಸಣಗಾಹಿ ಹಾವಾಡಿಗನೆಲುವಾಲೆಗೊರಲ ಗೊರವಂ ನೋಡಲೆನಗೆ ಪಾಸಟಿಯೆ (ಕಿಬಪು. ೩೦-೩೩) . [ಮಸಣ + ಕಾಹಿ]

ಮಸಣಬಟ್ಟೆ ' ಮಸಣವಟ್ಟಿಗೆ ' ನೋ.

ಮಸಣಬ್ಬೆ (ನಾ). ಒಂದು ಕ್ಷುದ್ರದೇವತೆಯ ಹೆಸರು : ಕರೆಯದೆ ಕಾಡಿ ಕಂಟಿಸುವ ಕೂಂಟಣಿಯಂ ಮಸಣಬ್ಬೆ[ಪಾಠಾಂ. ನೊಣೆಗಬ್ಬೆ, ನೊಣಗಜ್ಜಿ]ತಿಂಗೆ (ಕಾವ್ಯಸಾ. ೯೯೦ ; ಅಲಾಪ. ೨-೦೦೬ ನೋ). ' ಮಸಣಿಕಬ್ಬೆ ' ಪಾ.

[<ಮಸಣ + ಅಬ್ಬೆ₁]

ಮಸಣಯಾತ್ರೆ (ನಾ). ಹೆಣವನ್ನು ಶ್ಮಶಾನಕ್ಕೆ ಕೊಂಡೊಯ್ಯುವುದು ; ಅಂತಿಮಯಾತ್ರೆ : ಮಣಿಪುರದರಮನೆಯ ಕನಕವಪ್ರದಿಂ ಪೊರಮಟ್ಟು ನಡೆದುದು ಮಸಣಯಾತ್ರೆ (ಕನ್ನಂಗ. ೬೮-೨೯೩೬). [<ಸಂ. ಶ್ಮಶಾನಯಾತ್ರಾ]

ಮಸಣವಟ್ಟಿ 'ಮಸಣವಟ್ಟಿಗೆ' ನೋ.

ಮಸಣವಟ್ಟಿಗೆ, ಮಸಣಬಟ್ಟೆ, ಮಸಣವಟ್ಟಿ, ಮಸಣವಟ್ಟೆ, ಮಸವಟಿಗೆ (ನಾ). ಶವಗಳ ಅಂತ್ಯಸಂಸ್ಕಾರವನ್ನು ಮಾಡುವ ಸ್ಥಳ; ಸುಡುಗಾಡು; ಶ್ಮಶಾನ : "ಸೊಡಬಲಿಯೆಂದೆನರ್ ಮಸಣವಟ್ಟಿಗೆಯೊಳ್" (ಕರ್ಣಕ. ೬೬); ಊರ ಹೊಜಗಣ ಮಸಣವಟ್ಟಿಗೆಯೊಳಿರಲು (ಶಂಬರ. ೬-೫೫); ವಾಣ್ಪನಂ ಕೊಂಡುಪೋಗಿ ಪುರದ ಪೊಜಪೊಟಲ ಮಸಣವಟ್ಟಿಗೆಯ ಮಧ್ಯದೊಳು ವಧಿಯಿಸುವುದು (ಧರ್ಮಾಸ್ತ್ರ. ೫-೨೯ ಪ); ಮಸಣವಟ್ಟಿಗೆಯೊಳಗೆ ಮಿಾರಿ ಕಾವಲು ಕಾಯ್ದ ಚೆನ್ನಿಗನಹನು (ತುರಂಗ. ೩೨-೩೨). ಮಸಣಬಟ್ಟೆ, ವೇತಾಳ ತನ್ನ ಮಸಣಬಟ್ಟೆಗೆ ಪೊರಟಂತೆ ಕೇಶವಭಟ್ಟರು . . . ಹೊರಟು ಹೋದರು (ಶಿರಾಕ. ೫೯). ಮಸಣವಟ್ಟಿ : ಮಾದಿಗವೇಷದೊಳಂ ದಿನದಿನಂ ಮೊದಲಾಗಿಯಾ ಮಸಣವಟ್ಟಿ[ಪಾಠಾಂ. ವಟ್ಟಿಗೆ]ಯಂ ಕಾದಿರ್ದಂ (ಧರ್ಮಾಸ್ತ್ರ. ೨-೪೪ ಪ). ಮಸಣವಟ್ಟೆ : ಶಿಶುವನಿರಿಸಿ ಮುಚಿಯಾಗಲಿವರು ಸಟ್ಟಿ ಮಸಣವಟ್ಟೆಯುಲಿ ಶಬವನು ಬಿಸುಟಲ್ಲಿ ನೋಡಲು ತಳಿರ ಹಾಸಿನ ಮೇಲೆಸೆವ ಬಾಲಕನನು ಕಂಡ (ಹರಿಶ್ಚಂದ್ರ. ೬-೨೮); ಮಿಸುವ ನಾಟಕಶಾಲೆ ಗಳನು ಮಸಣವಟ್ಟಿಗೆ ಸಟಿಮನೆಗೆಣೆಗಂಡು ಯೋಚಿಸಿದೆನು (ಕರಕ. ೮೦-೦೯); ಜನಾನಖಾನೆ ಮಸಣವಟ್ಟೆಯಾಯಿತು (ಘೋಷಾ. ೦೦೦). ಮಸವಟಿಗೆ : ಕಳ್ಳರಿಂ ಕಡಿವಡೆದ್ದು ಭೂಸುರಂ ಮಸವಟಿಗೆಯಲ್ಲಿ ಬಿದ್ದಸು ಗಳೆವ ಕಾಲದೊಳು ಶುನಿ ಬೂದಿಯಲ್ಲಿ ಪಟ್ಟಿರ್ದ ಬಂದವನ ಪಣೆಯಂ

ಮೆಟ್ಟಿಲು (ರಾಳಶ. ೯-೩೩). P ಇದು ಛಂದಸ್ಸಿಗಾಗಿ ಮಾಡಿಕೊಂಡ ರೂಪ. 'ಮುಸಣವಾಟಿ' ಪರಾ. [<ಸಂ. ಶ್ಮಶಾನವಾಟಿಕಾ]

**ಮುಸಣವಟ್ಟೆ** 'ಮುಸಣವಟ್ಟಿಗೆ' ನೋ.

**ಮುಸಣವಾಟಿ** (ನಾ). = ಮುಸಣವಟ್ಟಿಗೆ : ಅದನ ದಾಟಿ ಆ ಮುಸಣವಾಟಿ, ಎಡಕಾಗಿ ಅದರ ಆಚೆ ಕಾಮು ತನ್ನ ಪಚ್ಚೆಂಗಿ ಹಾಸಿಧಾಂಗೆಲ್ಲಿ ನೀರ ಪಾಚಿ (ಗಂಗಾಕ. ೬೭-೩). 'ಮುಸಣವಟ್ಟಿಗೆ' ಪರಾ. [<ಸಂ. ಶ್ಮಶಾನವಾಟೀ]

**ಮುಸಣವಾಡಗೆ** (ನಾ). ಶ್ಮಶಾನದಲ್ಲಿ ಹೆಣವನ್ನು ಸಂಸ್ಕಾರಮಾಡಲು ಕೊಡಬೇಕಾದ ಬಾಡಿಗೆ,–ಶುಲ್ಕ : ಹೆಣನುಟ್ಟುವಂ ಮುಸಣವಾಡಗೆಯ ಹಾಗವನು ಕೊಟ್ಟಲ್ಲದೇನೆಂದಡಂ ಬಿಡೆನು (ಹರಿಶ. ೦೨–೩೭).
[ಮುಸಣ + ಬಾಡಗೆ]

**ಮುಸಣಿ** (ನಾ). ಒಂದು ಕ್ಷುದ್ರದೇವತೆಯ ಹೆಸರು : ಗಂಡ ಶಿವಲಿಂಗ ದೇವರ ಭಕ್ತ, ಹೆಂಡತಿ ಮಾರಿ ಮುಸಣಿಯ ಭಕ್ತೆ (ಬಿಸಪ. ೦೦೯); ಮುಸಣದಾ ಮಾತಮ್ಮನೆಂಬವಂ ಮುಸಣಿಯುಂ ಕುಣಿಸೆ (ತಂಪ್ರ. ೩೬-೨೦); ರೋಗಾದಿಗಳ ಪೀಡೆಯಾದರೆ ಮಾರಿ, ಮುಸಣಿ ಮೊದಲಾದ ದೇವತೆಗಳೂ ಬೇಕು (ಕನ್ನಡ. ೦). [ಮುಸಣ + – ಇ₂]

**ಮುಸಣಿಕಬ್ಬೆ**. ಮುಸಣಾಕಬ್ಬೆ (ನಾ). = ಮುಸಣಿ : ಮುಸಣಿಕಬ್ಬೆಯ ಗೋಪುರದಿಂ ತೆಂಕ (ಮುಂಬರಾ. XII. ೦೬-೩೯; 1023). **ಮುಸಣಾಕಬ್ಬೆ** : ಬಡಗಲು ಮುಸಣಾಕಬ್ಬೆಯ ಕೊಂಡದ ತೆಂಕಣಗಡ (ಕರ್ನಾ. IV, ೯೨-೮೯; 1239); ಮಾರಿಕಬ್ಬೆ ಮುಸಣಾಕಬ್ಬೆ . . . ಮೊದಲಾದ ವ್ಯಂತರಂಗಳುಂ (ಧ್ರುವಶ. ೦೦೯-೨೨). 'ಮುಸಣಬ್ಬೆ' ಪರಾ. [< ಮುಸಣಿ + ಅಬ್ಬೆ₁]

**ಮುಸಣಿಗೆ** (ನಾ). = ಮುಸಣಿ : ಮರವೀಗುಮೆ ಮೈಲಾರಂ ಕೇತಂ ಕಾಟಂ ಮಾರಿಗೆ ಮುಸಣಿಗೆಯೆನಿಪ್ಪ ಕೊಟಿ³ದೆಯ್ವಂಗಳ್ (ಸಮುಕ. ೯-೦೨೬).
[ < ಮುಸಣಿ ]

**ಮುಸಣಿಸು** 'ಮುಸುಳಿಸು' ನೋ.

**ಮುಸಬು** (ನಾ). ಕೆಂಪುಮಣ್ಣಿನ ಭೂಮಿ : ಕೆಬ್ಬೆ : ಮುಸಬು ಸೌಳು ಮಾಡಿಯೊ (ಶಂಬರೀ. ೦-೩೬); ಕೆಂಪು, ಮುಸಬು, ಸವಳು, ಕರಲು, ಕರಕಿಯ ಪಡ್ಡ ಮುಂತಾದವಾದರೂ. . . ಬಾವಿಗಳು ಇದ್ದಲ್ಲಿಯಾಗಲಿ ನೆಲ್ಲುಗದ್ದೆಗಳನ್ನು ಮಾಡಿಕೊಳ್ಳಬೇಕು (ಕೃಷಿಶ್ರ. ೩೩). [ ? ]

**ಮುಸಮುಸ** (ನಾ). ಮಬ್ಬು; ಮುಸುಕು : "ಮುಸಮುಸವಾದುದೆಂದು ಬೆಳಗಬೇಡುದು" (ಕವಿಶ. ೩೬-೨೦೬). 'ಮುಸಮುಸನೆ' ಪರಾ.
[ < ಮುಸುಕು₂ ? ]

**ಮುಸಮುಸನೆ** (ಅ). ಒಂದು ಅನುಕರಣಾವ್ಯಯ: ಮಬ್ಬಾಗಿ: ಮುಸುಕಾಗಿ: ಪಾಂಸುಪಟಲಂ ಮುಸುಳಿಸೆ ಮುಸಮುಸನೆ ತೋಱುವವಸರದೊಳ್ ಪೋಲ್ತಿಸಿದುದು ಧುರಿತ್ರಿ ಪೊಗೆ ಪೊಗೆ ಪಸುಮಾಸಿದ ಪೊಗೆಯ ಚಿತ್ರಭಿತ್ತಿಯ ತೆಱದಿಂ (ಪುಷ್ಪಪು. ೩-೪೦).

**ಮುಸಮುಸನಾಗು** = ೧. ಮಬ್ಬಾಗು ; ಮಂಕಾಗು : ಮುಂಬಗಲೊಳಗೆ ಮುಸಮುಸನಾದ ತಾರೆಯ ಬೆಳಗದಂದದಿ (ಕಂಜಕ. ೨-೨). ೨. ಕಡಮೆಯಾಗು: ಕುಗ್ಗು : ತನ್ನೊಳಾದೊಲವಿನೆಸಕಂ ಮುಸಮುಸನಾಗೆ ಮತ್ತೊರ್ವನೊಳ್ ಮನಕ್ಕೆಡೆಮಾಡುವಳ್ . . . ಒಲ್ಲೆನೆಂದು ರೋಷದಿಂ ಪುಸಿಮಾಟ್ಟುದು (ಕಂಪ್ರಪು. ೮-೩೯ ಪ). [ ಮುಸಮುಸ + – ಅನೆ₁ ]

**ಮುಸರಾವ್ಯಾಪಾರ** (ನಾ). ವಜ್ರ ಮುಂತಾದ ರತ್ನಗಳ ವ್ಯಾಪಾರ ; ರತ್ನಪಡಿವ್ಯಾಪಾರ : ಮುಸರಾವ್ಯಾಪಾರದೀವ ಅವರು ಶ್ರೀಮಂತರಾದರು (ದಾಶಿ). [ಮುಸರಾ₀ (P < ಸಂ. ಮುಸಾರ = ಮರಕತ) + ವ್ಯಾಪಾರ]

**ಮುಸಲ** 'ಮುಸಲಾ' ನೋ.

**ಮುಸಲತ್** 'ಮುಸಲತ್ತು' ನೋ.

**ಮುಸಲತಿ** 'ಮುಸಲತ್ತು' ನೋ.

**ಮುಸಲತ್ತು**. ಮುಸಲತ್, ಮುಸಲತಿ, ಮುಸಲಿಯತು (ನಾ). ಒಳಸಂಚು ; ಪಿತೂರಿ ; ಹಂಚಿಕೆ : ಜನರಾಲ್ ಸಾಹೇಬರ ಸಂಗಡ ಮುಸಲತ್ತು ಮಾಡಿ ಟೀಪುಸುಲ್ತಾನರಿಗೆ ಜವಾಬು ಬರೆದ ವಿವರ (ರಾಜೇಂದ್ರ. ೪೦); ಎಲ್ಲಾ ಮಿನೋ ಒಂದು ಮುಸಲತ್ತಿಗೆ ಸೇರಿಕೊಂಡ ಹಾಂಗೆ ಕಾಣ್ತದೆ (ಮುಳಿಯ. ೬೯೬). **ಮುಸಲತ್** : ಕೆಂಪೀನ ಓಡಿಸ್ಬಿಡಬೇಕೂಂತ ಮುಸಲತ್ ಮಾಡಿದ್ರು (ಅಣ್ಣಬ. ೬೯). **ಮುಸಲತಿ** : ಗ್ರಾಮದ ಮುಸಲತಿಯೊಳ್ನಿಸ್ಸೀಮ ಪ್ರತಿಭಟರನಲೆದು ತತ್ಕೋಂಟೆಯುಮಂ ಭೂಮಿಪತಿಲಕಂ ರಿಪುಕುಲಭೀಮಂ ಶಿವಭೂಪನಾಜಿಯೊಳ್ಸಾಧಿಸಿದಂ (ಕೆಳದಿನೃ. ೭-೪೩). **ಮುಸಲಿಯತು**: ಇಬ್ಬರೂ ಜನರಾಲ್‌ಸಾಹೇಬರು ಮುಸಲಿಯತು ಮಾಡಿದರು (ರಾಜೇಂದ್ರ. ೯೨).
[← ಅರ. ಹಿಂ. ಮುಸಲಹತ್; ಮರಾ. ಮುಸಲತ್, ಮುಸ್ಲತ್]

**ಮುಸಲಾ**. ಮುಸಲ (ಅ). ಒಂದು ವೇಳೆ, ಅಕಸ್ಮಾತ್, ಎಂಬರ್ಥಗಳಲ್ಲಿ ಬಳಸುವ ಒಂದು ಅವ್ಯಯ : ಮುಸಲಾ ಒಬ್ಬ ರೈತನು ಪ್ರಾರಂಭ್ಯ ನಾಲ್ಕುವರಹ ಕಂದಾಯ ಕೊಡುವಂಥಾವನು . . . ಒಂದು ವರಹಾ ಎರಡು ವರಹ ಕಮ್ಮಿಮಾಡಿಸಿಕೊಂಡು ಇದ್ದಲ್ಲಿಯೂ (ಮುಹಾಹು. II, ೬೦); ಒಂದ್ವೇಳೆ ಹೂವಳ್ಳೀಲಿ ಮುಸಲಾ ನಾನೆ ನಿಂತು ಗದ್ದೆತೋಟದ ಕೆಲಸ ಎಲ್ಲಾ ಮುಗಿಸಬೇಕಾಗಿ ಬಂದರೆ ಅಲ್ಲೀಗೆ ಬರ್ತಿರೇನೊ (ಮುಳಿಯ. ೬೦೬). **ಮುಸಲ** : ಮುಸಲ ದೊಡ್ಡ ಆನೆ . . . ಬಂದಿತು ಎಂದುಕೋ ಆಗ್ಗ (ಮುರುಕ. ೦೦೯); ಮುಸಲ ಇವು ಯಾವುದಕ್ಕೂ ಸೇರದೆ ಉದಾಸೀನರಾಗಿರತಕ್ಕವರು ಇದಕ್ಕೆ ಸೇರಲೇ ಇಲ್ಲ (ಶಾಂಪುರ. ೩೯).
[← ಅರ. ಹಿಂ. ಮುಸಲ್ಲ, ಮುಸಲನ್, ಮುಸಲಾ]

**ಮುಸಲಿಯತು** 'ಮುಸಲತ್ತು' ನೋ.

**ಮುಸವಟಿಗೆ** 'ಮುಸಣವಟ್ಟಿಗೆ' ನೋ.

**ಮುಸವರಿ** (ನಾ). ಒಂದು ಬಗೆಯ ತೆರಿಗೆ : ನೆರೆವರಿ ಮರಾಡ ಕಡ ಮುಸವರಿ . . . ಸಂಜಾಯಿತನಿಲಗಳ ಪರಿವಿಡಿಯಂ ನಿಲಿಸಿ ಸೀಮೆಯುಂ ರಕ್ಷಿಸಿದಂ (ಕೆಳದಿನೃ. ೬-೨೯). 'ನೆರೆವರಿ' ಪರಾ. [ಮುಸ ? + ವರಿ₁]

**ಮುಸಾಣ** 'ಮುಸಣ' ನೋ.

**ಮುಸಾರಿ**. ಮುಸಾರೆ (ನಾ). ಕೆಂಪುಮಣ್ಣಿನ ಭೂಮಿ : ಕೆಬ್ಬೆ : ಮುಸಾರಿ ಕೇಸರಿ ಮೊರಡಿಯ ಜಮೀನುಗಳಾದರೂ ಅಂಥ ಹೊಲಗಳಿಗೆ ನಟ್ಟು ಕಡಿಸಿದ ಮರ್ಷ ಬಿಳಿಯ ಎಳ್ಳು ಬಿತ್ತಬೇಕು (ಕೃಷಿಶ್ರ. ೨೭); ಸೀಗೆಹುಣ್ಣಿಮೆಗಾ ಮುಸಾರಿಯು ಹಸುರು ಪುಷ್ಪದ ತೆರೆಯಿತು (ಶಂಬರು. ೦೨-೦೦). **ಮುಸಾರೆ** : (೬). [← ಮರಾ. ಮುಸಾರ್ = ಉತ್ತಮ ಬೆಳೆಯನ್ನು ನೀಡುವ, ಮರಳುಮಿಶ್ರಿತಭೂಮಿ]

**ಮುಸಾರಿಭೂಮಿ** (ನಾ). = ಮುಸಾರಿ : ಗುಡ್ಡಗಳ ನೆರೆಪ್ರದೇಶವು ಕೆಂಪು ಮಣ್ಣಿನದಿರುತ್ತದೆ. ಇದಕ್ಕೆ ಮುಸಾರಿಭೂಮಿ ಎಂದೆನ್ನುತ್ತಾರೆ (ಮುಂಬಭೂ. ೨೯); ಇಲ್ಲಿ ಎಲ್ಲ ಕಡೆಗೂ ನಾವು ಕಾಣುವುದು ಕರೆಯ ನೆಲವನ್ನಲ್ಲ; ಕೆಂಪುನೆಲ ಇಲ್ಲವೆ 'ಮುಸಾರಿ' ಭೂಮಿ (ಶಾಶಾಶ. ೯೦). [ಮುಸಾರಿ + ಭೂಮಿ]

**ಮುಸಾರಿಸು** (ಕ್ರಿ). ಹರಡು ; ವ್ಯಾಪಿಸುವಂತೆ ಮಾಡು (?) : ಕಡೆಗಣ್ ನುಣ್ಬೆಳಗಂ ಮುಸಾರಿಸುವಿನಂ ಬೆಳ್ದಿಂಗಳಂ ಜೋಲ್ದು ಪೂಮುಡಿ ಮಂದಾನಿಳನಂ ದಳಂಗೊಳಿಪಿನಂ . . . ಕುಳ್ಳಿರ್ದ ತನ್ವಂಗಿಯಂ ಕಂಡು (ಅಸಂಪು. ೯-೮). [P ಇದು 'ಪ್ರಸಾರಿಸು' ಎಂಬುವರ ಅಪಲಿಖಿತ ಪಿರಬಹುದು]

**ಮುಸಾರೆ** 'ಮುಸಾರಿ' ನೋ.

**ಮುಸಾಲೆ** (ನಾ). ಆಹಾರಪದಾರ್ಥಗಳನ್ನು ರುಚಿಗೊಳಿಸಲು ಉಪಯೋಗಿಸುವ ಮೆಣಸು, ಜೀರಿಗೆ, ಧನಿಯ, ಚೆಕ್ಕೆ ಮುಂತಾದ ಸಂಬಾರವಸ್ತು ಮತ್ತು ಇವುಗಳನ್ನು ಹುರಿದು ಕುಟ್ಟಿದ ಪುಡಿ : ಕೇರಿಕೇರಿಯೊಳು ಗಂದಿಗೆ ಮುಸಾಲೆದ್ರವ್ಯಂಗಳುಂ ಮಾರುತಿರ್ದಪನು (ಶರೀ.

೧೯೦-೩ ವ) ; ಅಡುಗೆಮನೆಗಳಲ್ಲಿ . . . ಮಸಾಲೆ ಅರೆಯುವ ಕಲ್ಲು. ಪೊರಕೆ, ಬ್ರಶ್ಶುಗಳನ್ನಿಡಲು ನಾಗೊಂದಿಗೆ ಇತ್ಯಾದಿ ಸೌಲಭ್ಯಗಳಿರುತ್ತವೆ (ಅಡುಸ್. ೨೬) ; ಜೀವನದ ಪಾಕದಲ್ಲಿ ವಿನೋದವು ಮಸಾಲೆಯಂತಿದೆ (ಕಥೆ. ೨೪) ; ಕೋಳಿ ಕೇಳಿ ಮಸಾಲೆ ಅರೆಯುತ್ತಾರೆಯೆ? (ಗಾದೆ).

**ಮಸಾಲೆದೋಸೆ** = ಚಟ್ನಿ, ಈರುಳ್ಳಿ, ಆಲೂಗಡ್ಡೆ ಪಲ್ಯವನ್ನು ಒಳಗಡೆ ಇಟ್ಟು ಬೇಯಿಸಿ ಮಡಿಚಿದ ಒಂದು ಬಗೆಯ ದೋಸೆ: ಅಮ್ಮ, ನನಗೆ ಮಸಾಲೆದೋಸೆ ಬೇಕು (ಕಶಕ್ಕ. ೩-೫); ಉಪಾಧ್ಯಾಯರೊಬ್ಬರು ಮಸಾಲೆದೋಸೆಯನ್ನು ಕಟ್ಟಿ ತಂದಿದ್ದರಂತೆ (ಶಿಕ್ಷರ. ೨೯೪). **ಮಸಾಲೆಪುಗ್ಗೆ** =ಮಸಾಲೆ ದ್ರವ್ಯಗಳನ್ನು ಹಾಕಿಮಾಡಿದ ಪಕೋಡ : ಆತ ಹೆಂಡದಂಗಡಿಯಲ್ಲಿ ಮಸಾಲೆಪುಗ್ಗೆಗಳನ್ನು ತಿಂದ ಸಂಗತಿ . . . ಹೇಗೆ ಗೊತ್ತಾಗಬೇಕು (ಹೊಂಬಲು. ೦೩೯). **ಮಸಾಲೆವಡೆ** = ಈರುಳ್ಳಿ ಮುಂತಾದುವನ್ನು ಸೇರಿಸಿ ತಯಾರಿಸಿದ ಒಂದು ಬಗೆಯ ವಡೆ: ಇಂದು ಮಾಡಿದ್ದ ಮಸಾಲೆವಡೆ ತುಂಬ ರುಚಿಯಾಗಿತ್ತು (ಲೂಪ).

[← ಅರ. ಮಸಾಲಿಹ್; ಪಾರ. ಮಸಾಲಹ್; ಹಿಂ. ಮರಾ. ಮಸಾಲಾ]

**ಮಸಿ, ಮಶಿ (ನಾ).** ೧. ಕರಿಯ ಬಣ್ಣ : ಕಪ್ಪು : ಮೆಯ್ಯೆಲ್ಲಂ ಮಸಿಯಂ ಪೂಸಿ ಬೋಟಿದರೆವೆರಸು . . . ಬರ್ಪೊನನರಸಂ ಕಂಡು (ಪಂಪರಾ. ೦೦೬-೦೬) ; ಮಸಿಯಂ ಪುಂಜಿಸಿದಂತುಟಪ್ಪ ತನು . . . ಉಗ್ರವಿಲೋಚನಂ (ಕಂಪಾ. ೬-೨೬) ; ನರೆ ಮುಸುಂಕಿದ ತಲೆಗಿರದೆ ಮಸಿಯ ಪೂಸಿ (ಅಂಜಕ. ೩-೧೫೨). ೨. ಇದ್ದಿಲು ; ಕರಿ : ಪೊನ್ನಂ ಬಿಟ್ಟು ಮಸಿಯಂ ಕಟ್ಟುವೆಗ್ಗನಂ ಪೋಲ್ವಂ (ಧರ್ಮಾಮೃ. ೩-೨೧) ; ಮಸಿಯನೇಸುಕಾಲ ಬೆಳಗಿದರೇನು ಬಿಳಿದಾಗಬಲ್ಲುದೆ (ಬಸವ. ೩೮೨) ; ಪಿಡಿವಡೆ ಕೈಗೆ ಪೊನ್ನು ಮಸಿಯಪ್ಪುದೆನಿಪ್ಪ ದರಿದ್ರನೊಪ್ಪೆ ಪೆಂಪುಡುಗದ ದಾನದೊಂದು ಫಲದಿಂ . . . ಧನ್ಯವೆಸರಂ ತಳೆದಿರ್ದಂ (ಪುಣ್ಯಾಸ್ರ. ೦೨-೧೨). ೩. ಒಲೆಯ ಮೇಲಿಟ್ಟ ಪಾತ್ರೆಯ ತಳಕ್ಕೆ ಅಂಟಿರುವ ಅಥವಾ ಒಲೆ, ದೀಪದ ಹೊಗೆ ಮುಂತಾದುವುಗಳಿಂದ ಕಟ್ಟುವ ಕಪ್ಪು ಕಲೆ; ಕರಿಕು : ಕಡುಲೇಸೆಂದೋಡಂ ಪಿಡಿದೊಡೆ ಕೈ ಮಸಿಯಪ್ಪ ಮಾರ್ಗದಿಂ ದುರ್ಜನರಂ ಕಡುಮೋಪದಿನೊಳಕೊಂಡಿರ್ದೊಡೆ ಕೆಡುಗುಂ ತನ್ನೊಳಾದ ಗುಣಮೆನಿತನಿತುಂ (ಧರ್ಮಾಮೃ. ೨-೯೬) ; ಮಸಿಯೆಂಬುದು ಹುರಿಯೋಡಿಂಗೆ (ಅಪಂಕ್ತ. ೨-೨೮ ವ) ; ವದನಕ್ಕೆ ಮಸಿ ಸುಣ್ಣವ ಬರೆಯಿಸಿಕೊಂಡ ಚದುರೆವೆಣ್ಣಲ್ಲವೆ ನೀನು (ಕಂನವಿ. ೬-೦೮೬). ೪. ಅಂಜನ : ಕಾಡಿಗೆ : ಮಸಿಯಿಂದಂ ಜಗಮೆಲ್ಲಮಂ ದಿತಿಸುತಂ ಮುಂ ಪೊಟ್ಟೆನೋ . . . ಎಂಬ ಬಗೆಯಿಂ . . . ಕವಿದತ್ತುದ್ದಾಮಧೀಮಂ ತಮಂ (ಕಂಬ್ರಾ. ೪-೪೯). ೫. ಇದ್ದಿಲು ಅಥವಾ ಕಾಡಿಗೆಯಿಂದ ಬರೆದ ಚುಕ್ಕೆ ಅಥವಾ ಗೆರೆ : ಸಾವಿರ ಚಿತ್ತಾರ ಒಂದು ಮಸಿ ನುಂಗಿತು (ಗಾದೆ). ೬. ಬರೆಯಲು ಬಳಸುವ ಕಪ್ಪು, ನೀಲಿ ಮೊದಲಾದ ಬಣ್ಣದ ದ್ರವ; ಶಾಯಿ: ಉಪಾಧ್ಯಾಯಂಗೆ ಕಲಪೆಯ ಕೂಟಿಂ ಮಸಿಯುಂ ತುಪ್ಪಮುಮನುಣಲೊಟ್ಟು (ಪಂಪರಾ. ೬೫-೨೦) ; ಮದನಂ ಮಸಿಯೊಳ್ ಬರೆದಿಟ್ಟ ತನ್ನ ತಕ್ಕಿನ ಪೆಸರಕ್ಕರಂಗಳೆನಿಸಿರ್ದುವು ಮತ್ತಮಧುವ್ರತಾಳಿಗಳ್ (ಶಾಂತಿಪು. ೭-೦೨೫) ; ಮಸಿ ಯೆಂಬುದು ಬರೆವುದು (ಶಬರ. ೬೯೮). ೭. ಬಂದೂಕಿಗೆ ಹಾಕುವ ಮದ್ದು, – ಇದ್ದಿಲುಪುಡಿ : ಸಿಟ್ಟರು ಕೋವಿಗೆ . . . ಮಸಿಯನ್ನು ಹಾಕಿ, ಅದರ ಮೇಲೆ ಕತ್ತವನ್ನು ಗಜದಲ್ಲಿ ಇಡಿಯುತ್ತಿದ್ದಾಗ . . . ಹುಂಜವು ಲಿಬಿಲಿಬಿ ಒದ್ದಾಡಿಕೊಂಡಿತು (ಕಾನೂರು. ೪೬). ೮. ಮಾಸಿದುದು ; ಕೊಳೆಯಾದುದು : ಮಸಿಯಮುವೆಯಾವರಿಸಿ ಬೆಳಗುವ ನೂತ್ನರತ್ನದ ಪರಿಯೊಳು . . . ಶಬರಚರ್ಮಾವೃತಮೆನಿಸಿ ಮೆಱೆದು (ಬಸವ. ೪೪-೦) ; ಮಸಿಯ ಕಪ್ಪಟದಿಂದ ಮಾಸಿದ ಕುಸುಮಕೇಶಗಳೊಡನೆ ದೇವೋತ್ತಮರೊಳಪದೆಶಯ ಪಸಿಸಿಯಿರೆ (ಕಂಭಕ. ೫-೬೯). 'ಮಸಿಗಪ್ಪಡ' ಪರಾ. **ಮಶಿ :** ೧. ದೃಷ್ಟಿಚುಕ್ಕೆಯದೊಂದನೆಲ್ಲ ಜೀವಂಗಳ್ಗೆ ದಿಟ್ಟಿಪನು ಪರಮೇಷ್ಠಿ, ಶಶಿಗೆ ಮಶಿಯವೊಲು (ಮಂಕುತ. ೪೪೬). ೭. 'ಮಶಿಕಾಣಿಕೆ' ಪರಾ. ೯. (ಆಲಂ) ಕಳಂಕ : 'ಮಸಿಹೆಣ್ಣು' ಪರಾ.

**ಮಸಿ ನುಂಗಿಹೋಗು** = (ಆಲಂ) ಹಾಳಾಗು : ಈ ಶಾಲೆಯಿಂದರೆ ಮೊದಲು ಗುಡಿಯೂರಿನಲ್ಲಿ ಎಷ್ಟು ಹೆಸರುವಾಸಿಯಾಗಿತ್ತು . . . ಎಲ್ಲಾ ಮಸಿನುಂಗಿಹೋಯ್ತು (ಕಾವೇರಿ. ೮೮). **ಮಸಿ ಬಳಿ** =(ಆಲಂ) ಅಪಮಾನ ಮಾಡು : ಕಳಂಕವುಂಟುಮಾಡು : ಶಿಕ್ಷಕರು ತಮ್ಮ ವಕ್ಷತೆಗಳ್ಲಿ ಮಸಿಬಳಿಯುವರೋ ಎಂಬ ಭೀತಿ (ಶಿಕ್ಷದ. ೬೬೬) ; ನೀನು ಈ ಸ್ಥಿತಿಗೆ ಬಂದು ನಕ್ಕವರ ಮುಖಕ್ಕೆ ಮಸಿ ಬಳಿದೆಯಲ್ಲಾ ಅಷ್ಟೇ ಸಾಕು (ಅಶಮಾ. ೦೮೨). **ಮಸಿಯ ಗುಳ್ಳೆ** = ಮಸಿಯ ಕುಡಿಕೆ : ಬಟ್ಟತರ ಮಸಿಯ ಗುಳ್ಳೆಯ ಲೆಕ್ಕಣಿಕೆ ಬಿಳಿಯ ಪತ್ರಗಳನ್ನು ಪಿಡಿದು (ನವಮೋ. ೨೬-೦೪). **ಮಸಿಯಾಗು** = ೧. ಒಲೆಯ ಮೇಲಿಟ್ಟ ಪಾತ್ರೆಯ ತಳ ಮುಂತಾದುವುಗಳ ಕರಿಕು ಹತ್ತಿಕೊಳ್ಳು : ಅಭ್ಯಾಸವಿಲ್ಲದೆ ಅಡಿಗೆಯ ಕೆಲಸಕ್ಕೆ ತೊಡಗಿ ಅವಳ ಸೀರೆಯೆಲ್ಲ ಮಸಿಯಾಗಿದೆ (ರೂಪ). ೨. ಇದ್ದಿಲಾಗು : ಪಿಡಿವಿಡಿಯೆ ಕರಗುವುದು ಬಯ್ತೊಡೆ ಮಸಿಯಾಗಿರ್ಪುದಲ್ಲದಿರ್ದೊಡೆ ಪೆಚಿಗಾರ್ಗಡೆ ಬಂದಪೆನೆಂಬುದು ಗಡ ನುಡು ಧನಮೆ ಜಗಕ್ಕೆ ದುಃಖಸಾಧನಮಲ್ತೇ (ತಂದ್ರಪು. ೯-೦೨). **ಮಸಿಯಿಡು** : ೧. ಕಪ್ಪು ಬೊಟ್ಟನ್ನು ಹಚ್ಚು : ಮನಸಿಜಮಂತ್ರಾಕ್ಷರಮಂ . . . ಬರೆಯಲ್ಕೆಂಬಲಗೆಗೆ ಮಿನುಗುವ ಮಸಿಯಿಡುವಂದದೆ ನೊಸಲೊಳ್ ಮೃಗಮದ ದಿಂಕ್ಕುವಳು (ಜಯಿನಾ. ೨-೩೯). ೨. (ಆಲಂ) ಕಳಂಕಗೊಳಿಸು : ತಾನೇ ತನ್ನನ್ನು ಮಸಿಯಿಡಲೀ ನಯವನು ಗೈವನು (ಕಸಾಪಾ. ೦೫-೩೫). **ಮಸಿಯುರುಳೆ** = ಮುದ್ರಣಯಂತ್ರದಲ್ಲಿ ಅಚ್ಚುಮೊಳೆಗಳ ಮೇಲೆ ಉರುಳಿ ಮಸಿಯನ್ನು ಸವರುವ ಸಾಧನ : ಆ ಭಾಗಗಳು ಮಾತ್ರ ಮುದ್ರಣಯಂತ್ರದ ಮಸಿಯುರುಳೆಗಳಿಗೆ (Rollers) ತಾಗಿ . . . ಯಂತ್ರದಒತ್ತಡದಿಂದ ಕಾಗದದ ಮೇಲೆ ಮುದ್ರಿಸಲ್ಪಡುತ್ತವೆ (ಮುದ್ರಕ. ೨). **ಮಸಿಯೂಟ** = ಮದುವೆಯಲ್ಲಿ ಬೀಗರಿಗಾಗಿ ಏರ್ಪಡಿಸುವ ಭೋಜನ; ಬೀಗರೂಟ(?): ಮದುಮಗಳ ಅಣ್ಣ ತರತಾನ ಮಸಿಯೂಟ (ಲೋಕಗೀ. ೪೩). **ಮಸಿಹಚ್ಚು** = ಮಸಿಬಳಿ : ಆ ಹೆಸರಿಗೆ ಗುಮಾಸ್ತರು ಮಸಿ ಹಚ್ಚುತ್ತಿದ್ದಾರೆ (ಜವಿಶಾ. ೬೨). P ಸಂಸ್ಕೃತಕೋಶಗಳಲ್ಲಿ 'ಮಸಿ', 'ಮಷಿ' ಮತ್ತು 'ಮಾಸಿ' ಎಂಬ ಮೂರು ರೂಪಗಳು ಇದ್ದರೂ ಜ್ಞಾಶಿಪದಗಳು, ಪ್ರಯೋಗಗಳು ಮತ್ತಿತರ ಆಧಾರಗಳಿಂದ 'ಮಸಿ', 'ಮಶಿ' ರೂಪಗಳನ್ನು ದೇಶ್ಯ ಮತ್ತು ಅವರ ಪರ್ಯಾಯರೂಪಗಳೆಂದೂ 'ಮಷಿ' ರೂಪವನ್ನು ದ್ರಾವಿಡದಿಂದ ಸಂಸ್ಕೃತಕ್ಕೆ ಹೋಗಿರುವ ಸಾಧ್ಯತೆಗಳಿದ್ದರೂ ಸಂಸ್ಕೃತದಲ್ಲಿ ಪ್ರಾಚೀನ ಪ್ರಯೋಗಗಳಿರುವುದರಿಂದ ಸಂಸ್ಕೃತವೆಂದೂ ತೀರ್ಮಾನಿಸಿ ಪ್ರತ್ಯೇಕ ಉಲ್ಲೇಖಗಳಾಗಿ ಕೊಟ್ಟಿದೆ.

[ದೇ.॥ ತಮಿ. ಮಲ. ಮೈ; ತುಳು. ಮಜಿ, ಮೈಯಿ; ಕೊಡ. ಮಸಿ; ತೆಲು. ಮಸಿ. / ಸಂ. ಮಷಿ]

**ಮಸಿಕಟ್ಟು** 'ಮಸಿಗಟ್ಟು' ನೋ.

**ಮಸಿಕಡ್ಡಿ** (ನಾ). ಶಾಯಿಯಲ್ಲಿ ಅದ್ದಿಕೊಂಡು ಬರೆಯುವ ಒಂದು ಬಗೆಯ ಸಾಧನ ; ಲೆಕ್ಕಣಿಕೆ ; ಲೇಖನಿ : ಶಾನುಭೋಗರು ಮಸಿಕಡ್ಡಿಯಿಂದ ಬರೆಯುತ್ತಿದ್ದರು (ರೂಪ). [ ಮಸಿ + ಕಡ್ಡಿ ]

**ಮಸಿಕಪ್ಪಡ** 'ಮಸಿಗಪ್ಪಡ' ನೋ.

**ಮಸಿಕಾಣಿಕೆ, ಮಶಿಕಾಣಿಕೆ** (ನಾ). ಶಾನುಭೋಗರು ಹೊಲದ ಲೆಕ್ಕಪತ್ರಗಳನ್ನು ಬರೆದುಕೊಟ್ಟುದಕ್ಕಾಗಿ ರೈತರಿಂದ ವಸೂಲು ಮಾಡುವ ಕಾಣಿಕೆ, – ಸಂಭಾವನೆ : ಅವಿದ್ಯಾವಂತರಾದ ರೈತರು

ಶಾನುಭೋಗರಿಗೆ ಮಸಿಕಾಣಿಕೆಯನ್ನು ಕೊಟ್ಟು ಲೆಕ್ಕಪತ್ರಗಳನ್ನು ಬರೆಸಿ ಕೊಳ್ಳುತ್ತಿದ್ದರು (ಕೂ೩). **ಮಶಿಕಾಣಿಕೆ:** ಎಲ್ಲಾ ಶಾನುಭೋಗರೂ ರೈತರಿಂದ "ಮಶಿಕಾಣಿಕೆ" ಎಂಬುದಾಗಿ ವಸೂಲ್ಮಾಡುತ್ತಾರೆ (ಗರುಡಾ. ೧೦೩).
[ ಮಸಿ + ಕಾಣಿಕೆ (< ಕಾಣ್ಕೆ) ]

**ಮಸಿಕುಡಿಕೆ** (ನಾ). ಶಾಯಿಯನ್ನು ತುಂಬಲು ಉಪಯೋಗಿಸುವ ಗಾಜು ಅಥವಾ ಪಿಂಗಾಣಿಯ ಭರಣಿ : ಪವುತಿ : ತಳುವ ಕೆರೆ ತರೆದ ಮಸಿಕುಡಿಕೆಯಂತೆ (ಪಶಂ೦. ೨೭-೬). [ ಮಸಿ + ಕುಡಿಕೆ$_1$ ]

**ಮಸಿಗಟ್ಟು**, ಮಸಿಕಟ್ಟು (ಕ್ರಿ). ಕೊಳೆಯಾಗು ; ಮಾಸು : ಮೋತೀಬಾಯಿಯು ತನ್ನ ಮಸಿಗಟ್ಟಿದ ಹಸ್ತಗಳಿಂದ ಕಣ್ಣೀರನ್ನು ಒರಸಿಕೊಳ್ಳುತ್ತಾ . . . ಉತ್ತರವಿತ್ತಳು (ಘೂರಾತ. ೩೯೦). **ಮಸಿಕಟ್ಟು :** ತನ್ನ ಪತ್ನಿಯ ಮುಖ ದಿನದಿನಕ್ಕೆ ಮಸಿಕಟ್ಟಿದ ಕನ್ನಡಿಯಂತಾಗುತ್ತಿದ್ದುದು ಆತನ ಕಣ್ಣಿಗೂ ಕಂಡಿತ್ತು (ಪಿಕಂಬಾ. ೧೮). [ ಮಸಿ + ಕಟ್ಟು$_1$ ]

**ಮಸಿಗತ್ತಲೆ** (ನಾ). ಕಪ್ಪನೆಯ ಕತ್ತಲು ; ಕಗ್ಗತ್ತಲೆ : ಚೆನ್ನೆ . . . ಮಸಿಗತ್ತಲೆಯ ಕೊಳದ ಕಟ್ಟನೊಡೆಯುತ್ತೆ ಕಬ್ಬೊಗಸಲ ಪರಿಯಿಸುವಂತೆ ತುರುಬು ಸಡಿಲಿಸಿ ಬೀಸಿದಳ್ ಕೇಶಪಾಶಮಂ (ಶತ್ರುಂಗ. ೩೩-೮೯೬).
[ಮಸಿ + ಕತ್ತಲೆ$_1$ ( < ಕಟ್ಟಲೆ) ]

**ಮಸಿಗಪ್ಪಡ.** ಮಸಿಕಪ್ಪಡ (ನಾ). ಮಾಸಿದ ಬಟ್ಟೆ ; ಕೊಳೆಯಾದ ವಸ್ತ್ರ : ಮಸಿಗಪ್ಪಡವ ಪೊದೆದು ತುಱುಬಿಕ್ಕಿ ನರೆದಲೆಗೆ ಮುಸುಕಿಟ್ಟು... ಮುದುಪಾರ್ವರ್ಗಳೊಂದಸೆಯೊಳು (ಪಶಕಾ. ೪-೨೭) ; ಮುಸುಳ್ದಿರೆ ಕಾಂತಿ ನೀಳಪಟದಿಂ ಮಸಿಗಪ್ಪಡದಿಂದೆ ರತ್ನಮಂ ಮುಸುಕುವ ಭಂಗಿಯಿಂ ಮುಸುಕನಿಕ್ಕಿ (ಶಾರ್ಙ್ಗಪು. ೧೧-೧೯). **ಮಸಿಕಪ್ಪಡ :** ಒಡಲ ಹತ್ತಿರದ ಮಣ್ಣು ಮಸಿಕಪ್ಪಡದ ಕಂದಿದ ಜನ್ನಿವಾರದ . . . ಅವಧೂತ (ನಿಶಾಗ. ೩-೬-೧೩). [ ಮಸಿ + ಕಪ್ಪಡ ]

**ಮಸಿದೊಡೆ** (ಕ್ರಿ). ಕಪ್ಪನ್ನು ಬಳಿ ; ಕಪ್ಪುಬಣ್ಣವನ್ನು ಹಚ್ಚು : ನೆರೆದಲೆಗೆ ಮಸಿದೊಡೆದು ತೆರೆಗೋಂಡೊಡಲನು ಕತ್ತಲೆಯ ಮಱಿಗೆಯ್ದು ಬಾ...ಜಾಣಯೆಂಬಾ ಹಣ್ಣುಮುದುಕಿಸೂಳೆಯುರೆಸೆದರು (ತಬಕು. ೧೦-೬೬).
[ ಮಸಿ + ತೊಡೆ$_1$ ]

**ಮಸಿದೌತಿ** (ನಾ). = ಮಸಿಕುಡಿಕೆ : ನೆರೆಹೊರೆಯ ಮಕ್ಕಳು ಕೂಡಿ ಅವರ ಮಸಿದೌತಿಯನ್ನು ಉರುಳಿಸಿದರು (ಸ್ವಪ್ರತ. ೩೯).
[ ಮಸಿ + ದೌತಿ (< ದವುತಿ) ]

**ಮಸಿಪಾತ್ರೆ** (ನಾ). ೧. ಸೀದು ಕರಿಕಾದ ಪಾತ್ರೆ ; ಕಪ್ಪು ಹಿಡಿದ ಪಾತ್ರೆ : ಕೆಲಸದವಳು ಮಸಿಪಾತ್ರೆಗಳನ್ನು ಚೆನ್ನಾಗಿ ತೊಳೆದಿಲ್ಲ (ಕೂ೩). ೨. = ಮಸಿಕುಡಿಕೆ : "ದೌತಿ ಮಸಿಪಾತ್ರೆಯುಕ್ಕು" (ಪಂಗರಾ. ೧೦೩-೧೩).
[ಮಸಿ + ಪಾತ್ರೆ]

**ಮಸಿಬುದ್ಡಿ** 'ಮಸಿಬುರುಡೆ' ನೋ.

**ಮಸಿಬುರುಡೆ.** ಮಸಿಬುದ್ಡಿ (ನಾ). = ಮಸಿಕುಡಿಕೆ: (೪). **ಮಸಿಬುದ್ಡಿ :** ಕೈಲಿದ್ದ ಸಾಮಾನುಗಳನ್ನು—ಕಂಚಿನ ತಂಬಿಗೆ, ಮಸಿಬುದ್ಡಿ . . . ಇತ್ಯಾದಿ ಹೆಂಡತಿಯ ಮೈಮೇಲಿಕ್ಕೆ ಗುರಿಯಿಟ್ಟು ಬೀಸಿ ಎಸೆಯುವ ಬಹದ್ದೂರರೂ ಇದ್ದಾರೆ (ಹುತ್ತುಹು. ೧೨). [ಮಸಿ + ಬುರುಡೆ]

**ಮಸಿಮುಸುಡ** (ನಾ). ಕಪ್ಪುಮುಖವುಳ್ಳವನು ; ಕರಿಯ : ಅಸ್ಖಲಿತ ರಣಘಾತಮದೀ ಮಸಿಮುಸುಡನ ಜೀವ ಕಪ್ಪಿನಿಂ ಕಂದಿದೊಡೆತ್ಸೆಯ ನಡರ್ದನ್ನ ಕೀರ್ತಿಪ್ರಸರದ ಕುಡಿ ಕೈಪೆಸೊರೆಯ ಕುಡಿಯವೊಲಕ್ಕುಂ (ಮುಕೋಟ. ೨-೩೩). [ಮಸಿಮುಸುಡು + —ಅ$_7$]

**ಮಸಿಮುಸುಡು** (ನಾ). ಕಪ್ಪನೆಯ ಮುಖ : ಮಸಿಮುಸುಡಿನ ಮಾಳಿ ಮನೆಯ ಗಂಡನು ಬಿಡೆ (ಕಂಕ. ೯೭-೧).
[ಮಸಿ + ಮುಸುಡು (<ಮುಸುಂಡು)]

**ಮಸಿವಣ್ಣ** (ನಾ). ೧. ಕರಿಯ ಬಣ್ಣ : ಕಪ್ಪು : ಪೆತ್ತಮರಸಗಲಿ ಕಾಕಾಲಿಯದೊಳಗೊಡಲಂ ಪೊರೆದುಂ ಮೆಯ್ಮಸಿವಣ್ಣಮನಾಂತನವರತಂ ನುಡಿವಡೆಯದೆ ಪಿಕಮಿರ್ದುದು (ಜಯುಕಾ. ೩-೩೪) ; ನಿನ್ನ ಮಸಿವಣ್ಣದೀ ಚೆಲುವಿನೆಡೆಗೆ ಸೋಲ್ವರು ಗೊಲ್ಲತಿಯರು (ಶಾಕುಶಾ. ೨೩-೨೭) ; ತತ್‌ಕ್ಷಣದೊಳಗೆ ಮಸಿವಣ್ಣಮಾಯ್ತು ಬ್ರಹ್ಮಾಂಡಂ (ತಬಕು. ೪೦-೨೯). ೨. (ಆಲಂ) ವ್ಯರ್ಥವಾದುದು : ನಿರರ್ಥಕವಾದುದು : ಹುಸಿವವನ ಬೇಹಾರ ಕಸ ಹತ್ತಿದಾರಂಬ ವಿಷಯವುಳ್ಳವನ ಗುರುತನವು ಇವು ಮೂಱು ಮಸಿವಣ್ಣ (ಸರ್ವಜ್ಞ. ೪೩). [ಮಸಿ + ಬಣ್ಣ]

**ಮಸಿವಾವಾಳ** 'ಮಸಿವಾಳ' ನೋ.

**ಮಸಿವಾಳ**, ಮಶವಾಳ, ಮಸಿವಾವಾಳ, ಮಸ್ಸಿವಾಳ, ಮಸ್ಸೀವಾರ, ಮಸ್ಸೀವಾಲ (ನಾ). ಒಂದು ಬಗೆಯ ಮರ : ಬೈಲುಸೀಮೆಯ ಅಡವಿಯಲ್ಲಿ ಸಾಧಾರಣವಾಗಿ ಎಲ್ಲ ಕಡೆಯಲ್ಲಿಯೂ ಜಾಲಿ . . . ಮಸಿವಾಳ, ಮಲಗಲಿ, ದಿಂಡಲ. ಅತ್ತಿ ಮುಂತಾದವುಗಳು ದೃಷ್ಟಿಗೆ ಬೀಳುತ್ತವೆ (ಶೀವ. ೩೦). **ಮಶವಾಳ :** ಮಶವಾಳ (ಪಾಂಥರಿ). . .ಬೆಳಗಾವಿ, ವಿಜಾಪುರ ಜಿಲ್ಲೆಗಳಲ್ಲಿ ಬೆಳೆಯುತ್ತದೆ (ಕರಾಗ. ೪೬). **ಮಸಿವಾವಾಳ :** (೪). **ಮಸ್ಸಿವಾಳ :** ಮರಗಳು . . . ಬೇವು, ಹುಚ್ಚುಬೇವು, ಹೆಬ್ಬೇವು, ಮಸ್ಸಿವಾಳ, ಸುಗ್ಗಿ (ಶಮ್ಮಪು. ೨೩೬). **ಮಸ್ಸೀವಾರ :** ಮಸ್ಸೀವಾಲ, ಮಸ್ಸೀವಾರ, ಕಂಚಿದೊಗ್ಗಿ (ಪ್ರುತಿಗ. ೩೩-೧೧೬೧). **ಮಸ್ಸೀವಾಲ :** 'ಮಸ್ಸೀವಾರ' ಉಲ್ಲೇಖಿದ 'ಪ್ರೈಡಿಗ' ಪ್ರಯೋಗವನ್ನು ನೋಡಿ. 'ಅಂಟುವಾಳ', 'ಕಂಚುವಾಳ' ಪರಾ. [ ? ]

**ಮಸಿಹೆಣ್ಣು** (ನಾ). (ಆಲಂ) ನೀತಿಗೆಟ್ಟವಳು : ಕಳಂಕಿನಿ : ವ್ಯಸನದ ದೆಸೆಯಿಂದ ಮಸಿಹೆಣ್ಣೆನೊಶವಾಗಿ ಮಸಿದು ಹೋಗುವಳ ಒಡನಾಡಿ ತಾನುಗ್ಗು ನುಸಿಯಾದ ಕಾಣಕೊ (ಸರ್ವಜ್ಞ. ೦೬೯೦).
[ಮಸಿ + ಹೆಣ್ಣು (<ಪೆಣ್)]

**ಮಸೀತಿ** 'ಮಸೀದಿ' ನೋ.

**ಮಸೀದಿ**, ಮಶೀತಿ, ಮಶೀದಿ. ಮಸಜೀದ, ಮಸಜೀದಿ. ಮಸೀತಿ, ಮಸೀದೆ. ಮಸುದಿ, ಮಸೂತಿ, ಮಹಜಿದಿ (ನಾ). ಮುಸಲ್ಮಾನರ ಪ್ರಾರ್ಥನಾಮಂದಿರ : ಭುವನಗಿರಿ ದುರ್ಗದಲ್ಲು ಕಟಿಸ್ತ ಮಸೀದಿಗೆ ಕೊಟ ಧರ್ಮಶಾಸನ (ಎಕ. VII. ತೀರ್ಥಹ. ೩೮-೯; 1627); ಅವಳನ್ನು ನಗರ ಪ್ರಾಂತದಲ್ಲಿದ್ದ ಒಂದು ಸಣ್ಣ ಮಸೀದಿಗೆ ಕರೆದುಕೊಂಡು ಹೋಗಿ ಮೌಲ್ವಿ ಸಾಕ್ಷಿಗಳ ಮುಂದೆ ಕುರಾನಿಗೆ ಅನುಸಾರವಾಗಿ ಮದುವೆಯಾಗಿ ಅವಳ ಶಯ್ಯಾಗೃಹಕ್ಕೆ ತಂದು ಬಿಟ್ಟುಹೋದನು (ಬಂಕಿಮು. ೨೨೪). **ಮಶೀತಿ :** ಬನಾರೀಸ್ . . . ಗಂಗಾನದಿಯ ಮೇಲಿದೆ. ಅನೇಕ ದೇವಾಲಯಗಳೂ ಮಶೀತಿಗಳೂ ಇವೆ (ಭೂಗೋಳ. ೩೪). **ಮಶೀದಿ :** ಕೂಡಿದವರೆಲ್ಲರೂ ಮಶೀದಿಯಲ್ಲಿ ಭೋಜನ ಮಾಡಿಕೊಂಡು ಮನೆಗೆ ಹೋಗುತ್ತಾರೆ (ಮುಂಬಯಿ. ೬-೨೭). **ಮಸಜೀದ :** ಮುಸಲಮಾನರ ಮಸಜೀದಗಳಿಗೆ ಸೋಪಾನಗಳು ಕಟ್ಟಲ್ಪಡುತ್ತಿದ್ದವು (ಕೋಟಿಪೂ. ೬). **ಮಸಜೇದಿ :** ಗುಡಿ ಚರ್ಚು ಮಸಜೇದಿಗಳ ಬಿಟ್ಟು ಹೊರಬನ್ನಿ (ಕೋಗಿರಿ. ೨೮-೧). **ಮಸೀತಿ :** ನಮಾಜಿಗೆ ಹೋಗಿ ಮಸೀತಿ ಮೇಲೆ ಬಿದ್ದ ಹಾಗಾಯಿತು (ಹುಟ್ಟಿಹ. ೧೪೦). **ಮಸೀದೆ :** ಆ ಹೊತ್ತು ಮಸೀದೆಗಳೆಲ್ಲ ಗಮಗಮಿಸಿದವು (ಹನ್ನಿಬ. ೦೩) ; ಮಸೀದೆಯಿಂದ ಮುಂಗ್ರಿಗಳು ನಿನಗೆ ಆದೇಶ ಕಳಿಸಿದರೂ ನೀನು ಕೇಳಲಿಲ್ಲ (ಮುಂಗಾರು. ೧೧). **ಮಸುದಿ :** ಆ ತುರುಕರು . . . ಗರುಡನ ಕಂಬಮಂ ಮುಱಿದು ಮಸುದಿಯಂ ಕಟ್ಟಿಸುವರು (ಕಾಕು. ೬೨-೪೪). **ಮಸೂತಿ :** ತಾವರೆಗೆರೆ ಹೊಂದಿ ಕಟಿಸಿದ ಮಸೂತಿಯ ಧರ್ಮಕೆ ಕೊಟ (ಎಕ. VIII. ಸಾಗರ. ೧೦೮-೧೧; 1631); ಆಗ ಆ ಬಾದಶಹನು ಮಸೂತಿಯೊಳಗೆ ನಮಾಜ ಮಾಡುತ್ತಿದ್ದನು (ರಾಶಹಂ. ೪೪). **ಮಹಜಿದಿ :** ಕಾಜಿಮಹಮ್ಮದಿನ್

ಯೆಂಬವಗೆ ಪೂರ್ವಾರಭ್ಯವಾಗೆ ಮಹಜಿದಿಗೆ ಯಿನಾಮವಾಗಿ . . . ಕಲು ನೆಟ್ಟಿ ಹೊಲ ೨ (ಎಕ. VII (8), ಶಿಕ್ಕಗಿ. ೬೩–೪; 1821).

[← ಪಾರ. ಮಸ್ಜಿದ್ ; ಹಿಂ. ಮಸಜಿದ್, ಮಸೀತ್, ಮಸೀದ್ ; ಮರಾ. ಮಶೀದ್, ಮಸೀದ್]

**ಮಸೀದೆ** ' ಮಸೀದಿ ' ನೋ.

**ಮಸುಕು**, ಮಸಕು$_2$ (ನಾ). ಮಬ್ಬು : ನಮ್ಮೂರಿನ ಪಣೆಯಲ್ಲಿ ವಿದ್ಯಾಭ್ಯಾಸದ ಬರಹವು ಮಸುಕಾಗಿ ಕಾಣುತ್ತಿತ್ತು (ಮುಟ್ಟಪ. ೭); ಕಿಲುಬು ಮಾಯವಾಗಿ ಬರಹ ಮಸುಕಾಗಿ ಕಾಣತೊಡಗಿತು (ಹಾಘುಕ. ೦೦೩). **ಮಸಕು$_2$** : ಮಸಕು ಮುಂಜಾವದಲಿ ನಿದ್ರೆತಿಳಿವೆದ್ದು (ವಿಸಗಿ. ೨೯–೧೦); ಮೊದಲಿನ ನಿಜವಾದ ಆಧ್ಯಾತ್ಮ ಮಸಕಾಯಿತು (ಕಕ್ಕಶಾ. ೩೫೯).

ಮಸುಕುಮಸಕು, ಮಸಕುಮಸಕು (ದ್ವಿರುಕ್ತಿ) : ಶಿಶಿರಋತು, ಸಂಜೆ . . . ಹಜಾರದಲ್ಲಿ ಮಸುಕುಮಸಕಾದ ಕತ್ತಲೆ (ರಾವಹಾಪ. ೦೦೦) ; ಒಂದೆ ಸಮಗೆ ಮಸಕುಮಸಕಾಗಿ ಕಾಣುತ್ತಿದ್ದ ನಕ್ಷತ್ರ, ಈಗ . . . ಸ್ಥಿರವಾಗಿ ನಿಲ್ಲುವುದು ಸಾಧ್ಯವಾಗುತ್ತದೆ (ಆಕಾಶ. ೭). [ದೇ.॥ ತಮಿ. ಮಚಙ್ಕಲ್ ; ಮಲ. ಮಯಕ್ಕು, ಮಯಲ್, ಮಯಿಮ್ಪು, ಮಯ್ಯಲ್ ; ತುಳು. ಮಸಕು, ಮಸುಕು, ಮಸ್ಕ್ ; ತೆಲು. ಮಸಕ]

**ಮಸುದಿ** 'ಮಸೀದಿ' ನೋ.

**ಮಸುರ** (ನಾ). ಒಂದು ಬಗೆಯ ದ್ವಿದಳಧಾನ್ಯ : ಕಡಲೆ : ಯಜುರ್ವೇದದ ಕಾಲಕ್ಕೆ ಬತ್ತ, ಮಸುರ (Pulses) ಇವು ಹೇರಳವಾಗಿದ್ದುವು (ಶಿಲ್ಪನಾ. ೪೯). [ಸಂ.]

**ಮಸುರಿಗೆ** ' ಮಸೂರಿಗೆ ' ನೋ.

**ಮಸುಳ್**, ಮಸುಳು (ಕ್ರಿ). ಕಾಂತಿಹೀನವಾಗು ; ಮಂಕಾಗು : "ಮಸುಳ್-ವಿಗತಪ್ರಭಾಯಾಂ (ಕಳೆಗುಂದು)" (ಶಮದ) : ವಿಭೂಷಣಂಗಳೊಳ್ ತೀಡುವ ರಶ್ಮಿಗಳ್ ಮಸುಳ್ದುವು (ಆದಿಪು. ೩–೩) ; ಕೆಂಪೇರಿದ ರಳ್ಗಣ್ಣ ಕಡೆಪರೆದ ಕುರುಳಾಂತ ನುಂಪುವಣೆ ಮಸುಳ್ದ ತಿಲಕಂ (ಶಬ್ದ. ೦೯–೨೭) : ತೊಡೆಯಡಗಿನಿಂದೆ ನೊರೆದೊಸರುತ್ತೆ. ಕೆಟಸುರಿದು. ಕೆಂಡದಿನ್ ಪೊಗೆಯುಟ್ಟು ಚಟಚಟಿಸಿ ಮಸುಳ್ದತ್ತು (ಶಂತಿಗು. ೪೩–೯೩೦). **ಮಸುಳು** : ಮಸುಳಿದವು ತಾರೆಗಳು (ಕುಮಾರರಾ. ೨–೦೩) ; ತಮಿಸ್ರೆಯ ತಾರಕೆಯ ಮೈವೆಳಗು ಮಸುಳಿದವು (ಕೃಷ್ಣರಾ. ೦–೦೯೦). [ದೇ.॥ ತಮಿ. ಮಚಙ್ಕು ; ಮಲ. ಮಯಙ್ಙು ; ತುಳು. ಮಜಕು, ಮಯುಕು, ಮಸ್ಕು]

**ಮಸುಳ** (ನಾ). ಕಪ್ಪುಬಣ್ಣದವನು : ಕವಿವ ಮದಾಳಿಯಿಂ ಮಸುಳನಾಗಿ ಪಯೋಜರಜಂಗಳೊಳ್ ಕವಿಲ್ಗವಿಲನುಮಾಗಿ ಬಂದ ಮಲಯಾನಿಲಂ (ಶಂಖಾ. ೨–೦೯). [ಮಸುಳ್ + — ಅ$_7$]

**ಮಸುಳಿಸು**, ಮಸಣಿಸು (ಕ್ರಿ). ೧. ಮಂಕಾಗು : ನಿಸ್ತೇಜಗೊಳ್ಳು : ಮಸುಳಿಸದ ತೇಜ ಮಾಸದ ಕೀರ್ತಿ . . . ಸಹಜವೆನಿಸಿ ರಾಜಸುತರ್ ಹರಿಶ್ಚಂದ್ರಭೂಭುಜನ ಸುಖದೊಳಿರಲು (ಹರಿಶ್ಚ. ೦–೪೯) ; ಪಗಲ ಸುಧಾಸೂತಿ ಮಸುಳಿಸಿರ್ಪಂತವರೊಳ್ ಸೊಗಸುವ ಶರೀರಕಾಂತಿಯೊಳೊಗೆದಿರ್ದಂ ನವಕುಮಾರಕಂ ನೃಪನದಿರೊಳ್ (ವಕಳು. ೨–೦೨೩) ; ಮೈಯ್ಯದೀಧಿತಿ ಮಸುಳಿಸದು (ಕುಮಾರರಾ. ೬೦೩. ೬–೬೦ ಅನಿಕಿನ್ನ). ೨. ಮಂಕಾಗುವಂತೆ ಮಾಡು ; ನಿಸ್ತೇಜಗೊಳಿಸು : ತೊಟ್ಟ ತುಡುಗೆಗಳ್ ಕೌಸ್ತುಭರತ್ನಮನೋರೊಂದೆ ಮಸುಳಿಸೆ (ಶಂಖಾ. ೫–೨೭) ; ಬಿಸುಗದಿರನ ಕಡುಗಾಯ್ಪಂ ಮಸುಳಿಸಿದವು . . . ಕಾವನೆಚ್ಚಲರ್ಗಣೆಗಳ್ (ಕಬ್ಬಿಗ. ೩೦೦) : ಇನಕಿರಣಂಗಳ ಮಸುಳಿಪ ರತ್ನಕಾಂಚನಮಂಚಮೃದುತಲ್ಪದಲಿ ವನಜದಳಾಯತೇಕ್ಷಣೆ ಮಂಡಿಸಿದಳು (ಕೋಹಕ. ೨೭–೩೨). ೩. ಅಡಗು ; ಕಾಣದಾಗು : "ಮಸುಳಿಸಿತೆಂದಡಂಗಿತಕ್ಕುಂ" (ಶಬ್ದಸ. ೬೦) ; ತೆಳುವಸುಬು ಪೊರೆಯೇಱದ . . . ತ್ರಿವಳಿಯ ರೇಖೆ ಮಸುಳಿಸದು (ಕಾವ್ಯಾ. ೩೨–೩೯);

ಮುನಿಗಳ ಪ್ರಾಸಮಂತ್ರಾದಿಗಳ್ ಮಸುಳಿಸಿದವು (ತರಂಗ. ೭–೧೦). ೪. ಕುಗ್ಗು ; ಕಡಮೆಯಾಗು : ಇನ್ನಾಂ ಮುಳಿದೊಡೆನ್ನ ಜಸಂ ಮಸುಳಿಸುಗುಂ (ಶಂಕಂ. ೦೮೦–೦೩) ; ಕುಂಡವ ನಿಟ್ಟಿಸಿ ಬಿಸಿ ಮಸುಳಿಸಿ ಒಬಿನಡುಗಲು (ವೀರೇಶ. ೦–೬೮) ; ಲೋಕಂಗಳೊಳ್ಪರಮಶಿವಭಕ್ತಿ ಮಸುಳಿಸಿದುದಲ್ಲಿಗೆ ಪೋಗಿ ನಿರುತದಿಂದುದ್ಧರಿಸು (ಬಸವಪು. ೪–೪). ೫. ಕುಗ್ಗಿಸು ; ಕಡಮೆಮಾಡು : ಅವರ ವಾಗ್ಗರ್ವಮಂ ಮುಱಿದು ಜಿಹ್ವಾಸ್ತಂಭನಂಗೆಯ್ದು ಖರ್ವಮತಿಶಕ್ತಿಯಂ ಮಸುಳಿಸಿ (ಶಬ್ದಶಾ. ೯–೨೪). ೬. (ಆಲಂ) ನಾಶಮಾಡು : ಬಲಿಮುಖರ ಬಲದಿ ಸೀತಾಲಲನೆಯ ನೊಯ್ದಸುರನಸುವ ಮಸುಳಿಸಿ . . . ಸಲಹಿದನವರಂ (ಪಮ್ಪಶಾ. ೬–೨೦೮).

**ಮಸಣಿಸು** : ೧. ನಾನು ಈ ತೊಡಕಿನೊಳಗೆ ಬಿದ್ದಿದ್ದೇನೆ, ಬುದ್ಧಿ ಮಸಣಿಸಿದೆ (ಶಂಖಾ. ೬೮). ೨. ಅವನ ಹವಣಿಕೆಯು ಅವನ ಅರಿವನ್ನು ಮಸಣಿಸಿದ್ದಲ್ಲದೆ ಪ್ರತ್ಯಕ್ಷವಾದರೂ ಪ್ರಮಾಣಿಸಿ ನೋಡಬೇಕೆಂಬ ನಾಣ್ನುಡಿಯನ್ನು ಅವನ ಕಣ್ಣಿನಿಂದ ಮರೆಮಾಡಿತು (ಬೀರಬ. ೩೯). [ಮಸುಳ್ + — ಇಸು$_3$]

**ಮಸುಳು** ' ಮಸುಳ್ ' ನೋ.

**ಮಸುಳ್ಕೆ** (ನಾ). ಕಾಂತಿಹೀನತೆ ; ಮಬ್ಬು : ' ಮಸುಳ್ಕೆವೆಱು ' ಪರಾ. [ಮಸುಳ್ + — ಕೆ]

**ಮಸುಳ್ಕೆವೆಱು** (ಕ್ರಿ). ಮಬ್ಬಾಗಿರು ; ಪ್ರಕಾಶವಿಲ್ಲದಿರು : ಪಸರಿಪ ತಮದಿಂ ರಜದಿಂ ಮಸುಳ್ಕೆವೆತ್ತಿರದೆ ದೆಸೆಗಳುಂ ದಿಗ್ದೇವೀವಿಸರದ ಮೊಗದೊಡನೆನಸುಂ ಪ್ರಸನ್ನಭಾವಮನದೇಂ ಪುದುಂಗೊಳಿಸಿದುದೋ (ಶಂಪ್ರಕ. ೦೭–೪೭). [ಮಸುಳ್ಕೆ + ಪೆಱು$_1$]

**ಮಸುಳ್ಚು** (ಕ್ರಿ). = ಮಸುಳಿಸು ೨ : ಮಾಜಿಪಾಂತ ವಿಶ್ರಾಂತರಾಜಪುತ್ರನಂ ಸರಲ ಸೋನೆಯಿಂ ಕಿವುಳ್ಚಿ ಮಸುಳ್ಚಿ . . . ತಡೆದಂ (ರಾಮಾಶ್ವ. ೯೦–೧೨). [ಮಸುಳ್ + — ಚು$_1$]

**ಮಸೂತಿ** ' ಮಸೀದಿ ' ನೋ.

**ಮಸೂದೆ** (ನಾ). (ಶಾಸನಸಭೆ ಮೊದಲಾದುವುಗಳಲ್ಲಿ) ಸಭೆಯ ಅಂಗೀಕಾರಕ್ಕಾಗಿ ಇಡುವ ಠರಾವು : ಗೊತ್ತುವಳಿ : ಕೇಂದ್ರಶಾಸನಸಭೆಯಲ್ಲಿ . . . ಒಂದು ಮಸೂದೆಯನ್ನು ತಂದರು (ಶಿಕ್ಷರ. ೭೩೩); ಬಹುಪತ್ನೀತ್ವವನ್ನು ಜಾರಿಗೆ ತರುವ ಮಸೂದೆ ಬಿದ್ದುಹೋಯಿತೂನ್ನು (ಕಂಕಣ. ೦೦೨)). [←ಅರ. ಮುಸ್ವದ್, ಮುಸವ್ವಿದಾ ; ಹಿಂ. ಮಸವಿದಾ, ಮಸೌದಾ ; ಮರಾ. ಮಸುದಾ, ಮಸೋದಾ, ಮುಸ್ವಿದಾ]

**ಮಸೂರ** (ನಾ). ೧. ಒಂದು ಬಗೆಯ ದ್ವಿದಳಧಾನ್ಯ ; ಕಡಲೆ : "ಮಾಂಗಲ್ಯಕಃ, ಮಸೂರಃ — ಈ ೨ ಚಣಗೆ" (ಹಲಾಯು. ೯೩–೪೨೭) ; ಶ್ರಾದ್ಧಕ್ಕೆ . . . ರಾಜಮಾಷಂ ಮಸೂರಮುಲಸಂದೆ ಕಡಲೆಯಿವನರ್ಪಂಗಳ್ (ವಿಶ್ವಪು. ೩–೩–೦೭೫) ; ಮಸೂರಾದಿ ಶಿಂಬಿಧಾನ್ಯಂ (ಅಶ್ವಶಾ. ೦೦೫–೦೩). ೨. ಬೇಳೆಯ ಆಕಾರದಂತೆ ಹೊರಉಬ್ಬುಳ್ಳ ಗಾಜು ; ಲೆನ್ಸು : ಮೇರೆಗಳು ಗೋಳದ ಭಾಗಗಳಾಗಿದ್ದರೆ ಅಂತಹ ಮಧ್ಯವರ್ತಿಭಾಗಗಳನ್ನು ಮಸೂರಗಳೆಂದು (Lenses) ಕರೆಯುತ್ತಾರೆ (ಭೌತಶು. ೦೮೩); ವಿವಿಧ ಕನ್ನಡಿಗಳು ಮತ್ತು ಮಸೂರಗಳು ಉಪಯೋಗದಲ್ಲಿದ್ದವು (ಕಶ್ಯಶಾ. ೫೦೦). [ಸಂ.]

**ಮಸೂರಿಕ** (ನಾ). = ಮಸೂರ ೧ : "ಮಸೂರಿಕಂ ಪೇಟಿಲ್ ಚಣಂಗಿ ಮಿಂಡಿಕಮೆಂಸಲು ಕಡಲೆ" (ಮಂಗರಾ. ೦೦೦–೪). [ಸಂ. ಮಸೂರಿಕಾ]

**ಮಸೂರಿಕೆ** (ನಾ). ೧. ಒಂದು ಬಗೆಯ ದ್ವಿದಳಧಾನ್ಯ : ಕಡಲೆ : ನೀವಾರಶಿಲಾತಸೀಮಸೂರಿಕಾಕುಲತ್ಥ . . . ವಿವಿಧಧಾನ್ಯಭೇದಂಗಳುಂ (ಆದಿಶ. ೬–೬೨ ವ). ೨. ಶರೀರದ ಮೇಲಿನ ಕಪ್ಪುಮಚ್ಚೆ ; ಸಂಗಾತಿ : ತಿಳುವಸೂರಿಕಾದಿ ಶುಭವ್ಯಂಜನರಂಜಿತಪ್ರಶಸ್ತಾವಯವಂಗಳುಮಂ . . . ನೋಡಿ (ಶಂಖಾವಾ. ೩–೦೯೫ ವ) : ಪರಮನ ಪರಮಶೈವಾಂಗಿಕಶರೀರಮೊಪ್ಪಿ

ದುದು . . . ತಿಲಮಸೂರಿಕಾಪ್ರಮುಖಸವಶತವ್ಯಂಜನಂಗಳೊಳ್ ಕೂಡಿ (ಕಪ್ರಪು. ೦೨-೬೮ ವ). ೩. ಸಿಡುಬು ; ಮೈಲಿ : ಮಸೂರಿಕೆಯ ಪೂರ್ವಚಿಹ್ನಂಗಳ ಕಂಡಾಗಲೇ ಲಂಘನವನೂ ವಮನವನೂ ಮಾಡಿಸುವುದು (ವೃಕ್ಷಶಾ. I. ೩೬೩). ೪. ಪರದೆ ; ತೆರೆ : ಸೊದೆವಟ್ಟಿಯುದ ಲೋವೆಯ ಮುತ್ತಿನ ಲಂಬಣದ ಮಲಂಗು ಭಂಗಿವಡೆದ ಕುಸುಮದೆಸಟ ಮಸೂರಿಕೆಯ ಮೇಲೆ (ಅನಂಪು. ೯-೭ ವ). ೫. ಸೊಳ್ಳೆಯ ಪರದೆ. ೬. ತಲೆಹಿಡುಕಿ ; ಕುಂಟಣಿ. [ಸಂ. ಮಸೂರಿಕಾ]

**ಮಸೂರಿಗೆ**, ಮಸುರಿಗೆ (ನಾ). ೧. =ಮಸೂರಿಕೆ ೧: ತೊವರಿ ಗೋದುವೆ ಜೋಳಮುದ್ಗ ಪೆಸಱ್ ಮಸೂರಿಗೆ ಗುಂಜಿಯೆಂಬಿವಱೊಳೊಂದಱೊ ಳಾದ ತೈಲಮಂ . . . ತಂದು ಪೂಸುವುದು (ಲೋಕೋಪ. ೯-೦೦೬).
**ಮಸುರಿಗೆ** : ೨. = ಮಸೂರಿಕೆ ೪ : ಅಲರ ಮಸುರಿಗೆಯೊಳಗಿಸಿ ರ್ದಳ್ಳಿಲರ್ದಪ್ಪಂ ನಿಮಿರ್ದ ಲತೆಯ ಮೇಲೆ ವಿಳಾಸಂ ನಿಲೆ ನೀಡಿ ಕಾಲಂ (ಆದಿಪು. ೦೦-೭೬) ; ಎಸೆವ ಪಸರಂಗಳ ಮಸುರಿಗೆಗಳಾಗೆಯುಂ ಕಂದಳಿರ ಗೊಂದಳಂಗಳ ಜೊಂದರಿಗೆಗಳಾಗೆಯುಂ (ಚಂಪ್ರಪು. ೬-೮೭ ವ).
[<ಸಂ. ಮಸೂರಿಕಾ]

**ಮಸೃಣ** (ಗು). ೧. ಮೆತ್ತನೆಯ ; ಮೃದುವಾದ : ಅವಱೊಳತಿ ಮಸೃಣಕುಸುಮಪ್ರವಾಳದ ಪೊಳೆವ ಗೊಂಚಲಂ ಸಂಚಳಿಸಿ ಪೊಳೆವ ಮಿಂಚಿನ ಗೊಂಚಲೆಂದುಂ . . . ಅಭಿಶಂಕೆಯನುಂಟುಮಾಡುಗುಂ (ಸುಕುಮಾ. ೦೦-೩೭ ವ) ; ಮುನಿಪದರಾಜೀವದ ಕೆಲದೊಳ್ ವೇತ್ರಲತಾವೃತಪೆಸೆದತ್ತು ಮಸೃಣಪೀಂಭಗಳಪ್ಪಂ (ಚಂಪ್ರಪು. ೯-೨೬). ೨. ಸಯವಾದ ; ನುಣುಪಾದ : ಏಕೇಂದ್ರನೀಲಶಿಲಾತಲಘಟಿತಮಸೃಣತಳಮುಂ (ಆದಿಪು. ೦೦-೨೨ ವ); ವಿಂಶತಿಸಹಸ್ರಸೋಪಾನಪಂಕ್ತಿವಿಭ್ರಾಜಿತಮುಮಪ್ಪ ಮಸೃಣರುಚಿರಭೂತಳ ಮಾದುದಲ್ಲಿ ಜಾತರೂಪಗೋಪುರಂಗಳ ನಾಲ್ಕಱಿಂ ಪರಿನಿಷ್ಕೃತವಾಗಿ(ವರ್ಧಮಾ. ೦೩-೩೭ ವ). ೩. ಸ್ನಿಗ್ಧವಾದ ; ಮನೋಹರವಾದ : ಅದಱ ಬಾಹ್ಯ ದಬ್ಬಾಯಾಸುಕಾರಿಯಪ್ಪ ಮಸೃಣವರ್ಣಪ್ರಸರವೇಳಾಪವೈಚಿತ್ರ್ಯಮಂ ಚಿತ್ರಕಳಾವಿಶಾರದಂ ಪರಿಭಾವಿಸುತ್ತುಮಿರ್ಪನ್ನೆಗಂ (ಚಂಪ್ರಪು. ೪-೫೦ ವ). ೪. ಪ್ರೇಮಪೂರ್ಣವಾದ ; ಅನುರಾಗದಿಂದ ಕೂಡಿದ : ಮಸೃಣ ಕಟಾಕ್ಷದಿಂ ಕುಮುದದೊಳ್ಸೆಟಂ ಕಱೆವಂತಿರಂಘ್ರಿವಿನ್ಯಸನದಿನಬ್ಜಮಂ ಕೆಡಱುವಂತಿರೆ . . . ಬರ್ವಳಾಡಿದಳ್ (ಜಗಂ. ೫-೦೬). [ಸಂ.]

**ಮಸೃಣಿತ** (ಗು). ಮೃದುವಾದ ; ಮೆತ್ತನೆಯ : ಅನೇಕಮಕುಟಬದ್ಧ ಮಣಿಮಕುಟಮಣಿಕರ್ಷಣಮಸೃಣಿತಚರಣಂ (ಆದಿಪು. ೯-೭೨ ವ) ; ಸಕಲಸಾ ಮಂತಮಣಿಮಕುಟಮರೀಚಿಮಸೃಣಿತಚರಣಾರವಿಂದನಪ್ಪ ಧರ್ಮನಂದನನಂ ಕಂಡು (ಪಂಪಭಾ. ೯-೮೮ ವ). [ಸಂ.]

**ಮಸೆ₁** (ಕ್ರಿ). ೧. (ಹೊಳಪು ಬರುವಂತೆ) ಉಜ್ಜು : ತಿಕ್ಕು : "ಮಸೆ-ಘರ್ಷಣೇ, ಸ್ವಲ್ಪಕ್ಷತೇ ಚ (ಸಣ್ಣಗಾಯ)" (ಶಮದ) ; ಪಗೆ ಸುಗಿವನ್ನೆಗಂ ಮಸೆವ ವೀರಭಟರ್ಕಳ ರೌದ್ರಮಪ್ಪ ಕಯ್ದುಗಳಂ . . . ಕೆಂಗಿಡಿಗಳ್ ಪಳಂಚಿ (ಪಂಪಭಾ. ೦೦-೩೩) ; ರೇಣುಹತ್ತಿದ ರವಿಯ ಮಸೆಯಲು ಸಾಣೆಗಿಕ್ಕಿತೊ . . . ಬಿಲುಜಾಣರುರವಣೆ ಲಜ್ಜಿಸಿತು ಲೋಕದ ಧನುರ್ಧರರ (ಕುಮಾ.ಭಾ. ೪-೦೭). ೨. ಹರಿತಗೊಳಿಸು ; ಚೂಪುಮಾಡು : ಬೆಳ್ಪಸೆಯೆ ಮಸೆದ ಮದನನ ಬಾಳಂತಾದುವು ಪೊಳೆವೊಳ್ದೊಡೆ (ಪಂಪಭಾ. ೨-೯೨) ; ತಮೋವೈರಿವಿಜಯಕ್ಕೆ ಮಸೆದಸಿಧಾರೆಪೊಲಪರಾಜಿತಂ ವಿರಾಜಿತನಾದಂ (ಶಾಂತಿಪು. ೪-೦೦೯) ; ತೊಂಡ ಗಿಳಿಗಳು ಚಂಚುವಂ ಮಸೆಯೆ (ಹರಿಶ. ೩-೦೪) ; ಜಮದಗ್ನಿರಾಮನು ಮತ್ತೆ ಕೊಡಲಿಯ ಮಸೆದು ಹೊಕ್ಕನು (ಸಂಜಯ. ೨೬-೫೦). ೩. ಸ್ಪರ್ಧೆಹೂಡು : ಹುರುಡಿಸು : ಕ್ಷೋಣೀಶ್ವರ ರಿರ್ವರುಮಂ ಪೊಣಿಸಿ ಮಸೆಯಲ್ಕೆ ಬಗೆದು . . . ಪೋದ ಕೆಯ್ಯೊಳ್ ಮಗುಳ್ಚಿ (ಅಜಿಂಪು. ೦೩-೨೩) ; ಫಲ್ಗುಣನೊಡನೆ ಕದನವ ಮಸೆವರೇ (ಕುಮಾ.ಸ. ಭೀಷ್ಮ. ೦೫-೪೦) ; ಪೊಸಮಾವಶೋಕೆಯೊಳ್ ಮಱಿದುಂಬಿ ಕೋಗಿಲೆಯೊಳೆಸೆವ ಸಂಪಗೆ ಪೊಚ್ಚಪೊಂದಾವರೆಯೊಳ್ . . . ಗಿಳಿವಿಂಡು ಬನಸಿರಿಯೊಳು ಮಸೆದುವು (ಶ್ರೀವಿಭಾ. ೮-೪). ೪. ತೀವ್ರಗೊಳ್ಳು ; ರಭಸಗೊಳ್ಳು : ಯದುಮಗಧಸೈನ್ಯಯುಗದೊಳ್ ಕದನಂ ಮಸೆದೊತ್ತೆ (ಜಗಂ. ೭-೪೮) ; ಮಸಪಳಿಪಿ ಪ್ರಿಯಾನನಮನೀಕ್ಷಿಸಲುದ್ಯತೆಯಾಗಿ (ಚಂಪ್ರಪು. ೬-೭೬) ; ಪರಿಕರರು ಪರಿಕರರೊಡನೆಯಿರಲೊರಸೊರಸು ಬಿಗೆ ಮಸೆವುದು ಕಣಾ (ಕುಮಾ.ಆ. ೮-೫೦). ೫. ದ್ವೇಷಿಸು : ಬಸವ ಬಸವಾಯೆಂದಡೆ . . . ಮಸೆವ ಹಗೆಗಳು ನಂಟರಪ್ಪರು (ಬಸವ. ೮-೨೫). ೬. ನಾಶಮಾಡು : ನಾಸೇ ಸೈನ್ಯ ತೆಗೆದುಕೊಂಡುಹೋಗಿ ಮೂರೇದಿನಗಳಲ್ಲಿ ಮಸೆದು ಬರುತ್ತೀನೆ (ಬಾಂಕದ. ೦೯೨).

ಮಸೆದಾಟ, ಮಸವಾಟ = ೧. ಘರ್ಷಣೆ ; ತಿಕ್ಕಾಟ : ನಮ್ಮ ಸಂಸ್ಕೃತ ನಾಟಕಗಳ ಕಡೆ ತಿರುಗಿದರೆ . . . ವ್ಯಕ್ತಿ ಶಕ್ತಿಗಳ ಮಸೆದಾಟವಿಲ್ಲದೆ ಇಲ್ಲ (ಕಾವ್ಯಸ. ೨). ೨. ಕಲಹ ; ಹೋರಾಟ : ಯೋಹಾಮ್ಮರೊಡನೆ ತನಗೀ ಮನ್ನವಾದ ಮಸದಾಟವಂ ನೆನೆದು (ಗೊರೂರುಭಾ. ೭-೦೯೦).

[ದೇ.॥ ತಮಿ. ಮಾಯ್ ; ತುಳು. ಮಸೆ, ಮಸಿ ; ಕೋಲಾ. ನಾಯ್ಕ. ಮಯ್ : ಪರ್ಜಿ. ಮಯ್ಪ್ : ಗೊಂಡಿ. ಮಶೀತಾನಾ, ಮೆಸಿಯನ]

**ಮಸೆ₂** (ನಾ). ೧. ಹರಿತ : ಚೂಪು : ಪೊಸಮಸೆಯ ಬಾಳ ಪೊಳೆಪುಂ ಪಸುಪೊನ್ನಾ[ರ]ತಿಯ ತೊಳಗಿ ಬೆಳಗುವ ಮಿಂಚುಂ ದೆಸೆದೆಸೆಗ[ಳೊ]ಳೆಸದಿರೆ (ವರ್ಧಮಾ. ೪-೪೩) ; ಪೊಸಮಸೆಯ ಕೂರಲಗಾತನ ಕಂಠದಲಿ ಹಾರಮಾಗಿ ಪೀಱೆ (ಭಿಕ್ಷಾಕ್ರ. ೭-೦೧ ವ) ; ಎಪ್ಪತ್ತೇಳುಕೋಟಿಯ ಭಟರ ದೇಹವ ಕೀಲಿಸಿದ ಹೊಸಮಸೆಯ ಸರಳಿಂದಸುರ ಕಡುಮುಳಿದು (ಕೌಶಿಕಾ. ೦೯-೦೬). ೨. ಹೊಳಪು ; ಕಾಂತಿ : "ತೊಳಗು, ಬೆಳಗು . . . ಮಸೆ — ಈ ೧೪ ಕಾಂತಿ" (ಶಶಸಾ. ೫೫-೨೦೨) ; ಗಗನಚರಗಜಾರೋಹಕರಂಕುಶದ ಮಸೆಗಳ್ ಗಗನತಲಮನಾವರಿಸೆ ರಣಕ್ಷೋಣಿಗೆ ನಡೆದರ್ (ಪಂಪರಾಮಾ. ೦೩-೨೯ ವ) ; ಪೊವಟ್ಟೆ ಬೆಳ್ಮಸೆವಿಸಿಲ್ ರಣದೇವತೆಯಟ್ಟಹಾಸದಂತೊಗೆಯೆ (ಜಗಂ. ೩-೭೮). ೩. ಉದ್ರೇಕ ; ಆವೇಶ : ಬಲಿದ ದಂಡೆಯ ಮಸೆಯ ಬಯಸಿಕೆ ಲುಳಿಯ ಮೈಗಳ ಲವಣಿಸಾರರು . . . ಕಾದಿದರು (ಕುಮಾ.ದ್ರೋ. ೦೪-೦೬); ಕರ್ಣಾರ್ಜುನರೊಳಗಿನ ಮನಕತದ ಮಸೆ ಏರಿತಪ್ಪ (ನಾಡೋಜ. ೦೭೦). ೪. ದ್ವೇಷ : ಹಗೆ : ಹುಸಿನುಸುಳಟಮಟಕಾಂಕ್ಷೆ ಹದಿರು ಗನ್ನಮಸೆವಾಟ ಮಾಜಿವೆಡಗ್ಗಳಿಕೆ ಮುಸುಕುವ ಕಸಕಳೆಗಳ ಕಿತ್ತು ಗುರುರಾಯ ಸಸಿಗಳ ಸಲಹುವ ಕಾಂತೆ (ಅಮುಶಾಂ. ೪-೦೩೯). ೫. (ಸಣ್ಣ) ಗಾಯ : ಇಸು ವಿಡುವ ಪೊಯ್ಲ ಕುತ್ತುವ ಮಸೆಯುಂ ಪತ್ತಿಸುವ ಕೈದುವಿನ್ನಣಮಂ ಬಿಸಾಕ್ಷಿಸಲಾಗ ಸುತರನಾ ದುರ್ವ್ಯಸನಂ ದೋಷಕರನೆಂಬನುತ್ತಮಚ್ಯೆನಂ (ಶಮಶ. ೫-೦೨೫) ; ಸಬಳದ ಮಸೆಗಳು ಪಿಂಗದೆ ಪೋಲ್ತೆಸೆದಿರ್ದುವು . . . ಸಾಸನಲಿಪಿಯಂ (ಎಕ. XVI, ತಕ್ಕಿ. ೯೮-೩೫ ; 1170) ; ಮಸೆಯ ಮೈಗಳೊಳೊಱೆವುತಿರ್ದುವು ಬಿಸಿರಕುತ (ಕುಮಾ.ದ್ರೋ. ೦೪-೯). [<ಮಸೆ₁]

**ಮಸೆಕಲ್**, ಮಸೆಕಲ್ಲು (ನಾ). ಆಯುಧಗಳನ್ನು ಹರಿತಗೊಳಿಸಲು ಬಳಸುವ ಉಜ್ಜುವ ಕಲ್ಲು : ಮಸೆಕಲ್ಲ ಕುಮರೆ ಬಾಚಿಯ ಪೊಸತನಿಸುವ ಕೊಡಲಿಯುಳಿಯನೊರ್ಕಂದದೊಳಂ ಉಸಿರೆಂದಾ ಗುಣಕಂತಿಕಗಸಮಸವು ಸ್ಯಮನೆ ಕೊಟ್ಟನಭಿನವಪಂಪಂ (ಕಶಶ. I. ೦೨೪). **ಮಸೆಕಲ್ಲು** : ಕುಡು ಗೋಲು, ಮಚ್ಚು ಮುಂತಾದ ಆಯುಧಗಳನ್ನು ಘಳಿಸಿ, ಮಸೆಕಲ್ಲಿನ ಮೇಲೆ ಮಸೆದು ಇಟ್ಟುಕೊಳ್ಳುತ್ತಾರೆ (ಜಪಮ್ಮರು. ೪೯). [ ಮಸೆ₁ + ಕಲ್₃ ]

**ಮಸೆಕಲ್ಲು** 'ಮಸೆಕಲ್' ನೋ.

**ಮಸೆಗಣೆ** (ನಾ). ಹರಿತವಾದ ಬಾಣ : ತುದಿವೆರಳುಂಬುಗೊರಳೇಱಿಸಿದ ಬಿಲು . . . ಮಸೆಗಣೆಯು ಬತ್ತಳಿಕೆ (ಕುಮಾ.ಭೀ. ೩-೯) ; ಪೆಣ್ಮಾಲುಗೆಯ ನೋಡೆ ಮಸೆಗಣೆಯ ದೊಣೆಯಲ್ಲಿ (ಕಾ.ಬ.ರ.೦೨೯-೨೭೫). [ಮಸೆ₂ + ಕಣೆ₁]

**ಮಸೆಗಾಣ್** (ಕ್ರಿ). (ಸಣ್ಣ) ಗಾಯವನ್ನು ಹೊಂದು : ರವಿಯ ಮಗ ಮಸೆಗಂಡನಶ್ವತ್ಥಾಮ ವ್ಯೆಮಬಿದ (ಕುಮಾ.ಭಿ. ೯-೧೧) : ಮಸೆಗಂಡ ಕ್ರೋಡನಂತಸುರನುರೆ ಘರ್ಜಿಸುತೆ (ಶೋಣಸು. ೧೮).
[ ಮಸೆ$_2$ + ಕಾಣ್ ]

**ಮಸೆಗಾಣಿಸು** (ಕ್ರಿ). ಗಾಯಗೊಳಿಸು ; ಕ್ಷತಗೊಳಿಸು : ಮೂಜಕ್ಷೋಣಿ ಸ್ಯೆನ್ಯವನೊರಸಿದನು ಮಸೆಗಾಣಿಸಿದನಗ್ಗದ ಮಹಾರಥರ (ಕುಮಾ.ದ್ರೋ. ೯-೨೮) ; ಸಾವಿರ ಬಲುಸರಳ್ಗಳನೆಚ್ಚು ಮಸೆಗಾಣಿಸಿದನನಿಬರನು (ಕರ್ಣಗದು. ೨೨-೨೫). [ ಮಸೆಗಾಣ್ + — ಇಸು$_3$ ]

**ಮಸೆಗೆಡು** (ಕ್ರಿ). ತೀಕ್ಷ್ಣತೆಯನ್ನು ಕಳೆದುಕೊಳ್ಳು ; ಹರಿತವಿಲ್ಲದಾಗು ; ಮೊಂಡಾಗು : ಮಸೆಗೆಟ್ಟ ಕೊಡಲಿಯ ಹೊಯಿಲಂತೆ ಕರ್ಮವ ನಸುದಟಿ ಮಾಳ್ಪುದು ಧರ್ಮ ಮಸೆಯುಳ್ಳ ಕೊಡಲಿಯ ಹೊಯಿಲಂತೆ ಕರ್ಮವ ಕುಸುರಿದರಿವುದೀಗ ಶುಕ್ಲ (ಅರ್ಹ. ೬೯-೪೪). [ಮಸೆ$_2$ + ಕೆಡು$_1$]

**ಮಸೆಗೊಳ್** (ಕ್ರಿ). ಹರಿತವಾಗು ; ಚುರುಕಾಗು : ನ್ಯಾಯಶಾಸ್ತ್ರದ ಅಧ್ಯಯನ ಹಾಗೂ ಅದರ ಪ್ರಯೋಗದಿಂದ ಆ ಬುದ್ಧಿಶಕ್ತಿಯು ಮಸೆಗೊಂಡು ಅತ್ಯಂತ ತೀಕ್ಷ್ಣವಾಯಿತು (ರಾಜಪ. ೭೯). [ಮಸೆ$_2$ + ಕೊಳ್$_1$]

**ಮಸೆಗೋಲು** (ನಾ). = ಮಸೆಗಣೆ : ರಕ್ಕಸನು . . . ಪರಿಘದಲಿಟ್ಟನಿನಕುಲನ . . . ಮಸೆ [ಪಾಠಾಂ. ಸಮ]ಗೋಲ್ಯೆದಬಿಲಿ ಶತಚೂರ್ಣವಾಗಲು ಕಡಿದನಾ ರಾಮ (ತೊರವೆ. ೬-೨೮-೪೦) ; ಹಸಗೆಟ್ಟನು ಧೃತಿ ಕುಂದಿತು ಕಾವನ ಮಸೆಗೋಲು ನಾಂಟಿದುವೆದೆಯ (ಕಂಪರಿ. ೯-೧೬೦).
[ಮಸೆ$_2$ + ಕೋಲು$_1$ (< ಕೋಲ್$_1$)]

**ಮಸೆತ** (ನಾ). ೧. ತೀಕ್ಷ್ಣತೆ; ಚುರುಕು : ತಾನು . . . ನೂರು, ಸಾವಿರ, ಆಡುವ ನಾಲಿಗೆಯ ಮಸೆತವನ್ನು ಎದುರಿಸಿ ಬದುಕಬೇಕಾಗಿದೆ (ಬೀಹಹ. II. ೧೪೦). ೨. ಉದ್ರೇಕ; ಆವೇಶ : ವನಚರನ ಸುಡುವಂತೆ ನೋಡಿದ ಮನದ ಮಸೆತದಲಿ (ಕೌಶಿಕ. ೪೪-೯೨). [ಮಸೆ$_1$ + — ತ$_2$]

**ಮಸೆದೋಱು** (ಕ್ರಿ). ಗಾಯಗೊಳಿಸು : ಮದನ ಮಸೆದೋಱಿದನು ಹೂಗಣೆ ಹೃದಯವನು ತಾಗಿದುದು (ಕುಮಾ.ಭಿ. ೨-೬). [ಮಸೆ$_2$+ತೋಱು]

**ಮಸೆಪ** (ನಾ). = ಮಸೆತ ೧ : ಬಾದರಾಯಣನವರೆಚ್ಚ ಹೊಸಮಸೆಪದ ಬಾಣಗಳನು ಕುಸುರಿದರಿದು (ಕುರಾಶಾಂ. ೧೮-೦೯೩). [ಮಸೆ$_1$ + — ಪ$_2$]

**ಮಸೆಪು** (ನಾ). ಉಜ್ಜುವಿಕೆ; ತಿಕ್ಕಾಟ : ಗಗನಿಸದಕ್ಕೆ ಕಾತರಿಪ ಕಂಠ ಮನೊಯ್ಯನೆ ಸಂತವಿಟ್ಟು ಪ್ಯೆಗಳ ಮಸು [ ಸೆ ] ಪಿಂಗೆ ಪ್ಯೆಮಾಱಿಪ . . . ಪಾಣ್ಬೆಯ ಜಾಣ್ಮೆ ಸಾಲದೇ (ರಾಜಶೇ. ೧೦-೫೩). [ಮಸೆ$_1$ + — ಪು$_2$]

**ಮಸೆಯ** (ನಾ). (?) : ಕೊಣ್ಡುಪೋಗೆ ಮಸೆಯರ ಗಡಿ ತಱಿಮಸಳಿಸಿದೋ ರಣದೊಳ್ಬಿಟ್ಟು ಸಂಗತಿಗೆ ತನ್ನೊನ್ (ಎಕ. VIII. ಸೊರಬ. ೨೦೨-೩; 955).
[ ? ]

**ಮಸೆಯಂಬು** (ನಾ). = ಮಸೆಗಣೆ : ಪೊಸಮಸೆಯಂಬುಗಳ್ ದೆಸೆಗಳಂ ಮಸುಳ್ವನ್ನಗಮೆಯ್ದೆ ಪಾಯೆ (ಶಂಕರಾ. ೧೧-೬೫) ; ಮಸೆಯಂಬು ಪೆಟಲ ಗುಂಡುಗಳ ಎಸೆವ ಪೆರ್ಮಳೆಗಱೆಯುತ ಬೊಬ್ಬಿಱಿದು (ಕಂಪರಿ. ೦೪-೪೮).
[ಮಸೆ$_2$ + ಅಂಬು$_2$]

**ಮಸೆಯಿಸು**, ಮಸೆಸು (ಕ್ರಿ). ಹರಿತಗೊಳಿಸು; ಚೂಪುಮಾಡು : ಮಸೆಯಿಸುಗುಳ್ಳ ಕೆಯ್ದುಗಳಂ (ಶಂಕರಾ. ೧೦-೫೨); ಉಗುರಂ ಮಸೆಯಿಸಿ (ರಜಪಾರಿಶು. ೫-೯೪); ಕ್ಯೆದುಗಳ ಘಾಸಿಯಾಗದೆ ಮಸೆಯಿಪ ಭಟರಿಂದ ವಿಲಾಸವಡೆದುದುಭಯಬಲ (ಕುರಾಶಾಂ. ೦೯-೧೦೭). **ಮಸೆಸು** : ಅಸಿಯ ಮಸೆಸುವ ಮಾಱಿದ ಲೌಡಿಯ ಬೆಸುವ . . . ವೀರಭಟರೊಪ್ಪಿದರು ಕಟಕದಲಿ (ಕುಮಾ.ಭೀ. ೫-೩೮); ಅಸಮಾಕ್ಷನೊಳು ವ್ಯೆರವ ತೊಟ್ಟು ರ್ಝಷಕೇತು ಮಸೆಸಿದ ಮಾರ್ಗಣೆಯಂತೆ . . . ನನೆಗಳೊಪ್ಪಿಹವು (ಅಂಜಕ. ೨-೯೦). [ ಮಸೆ$_1$ + — ಇಸು$_3$ ]

**ಮಸೆವಡು** (ಕ್ರಿ). ಪೊಳಪನ್ನು ಹೊಂದು; ಕಾಂತಿಯನ್ನು ಪಡೆ : ಮಸೆವಟ್ಟುಜ್ವಲದರ್ಪಣಂ ಪೊಸದಳಿರ್ ಪೂಮಾಲೆ ಶೇಷಾಕ್ಷತಂ ಬಿಸಸೂತ್ರಂ . . . ತನ್ನೊಳೊಪ್ಪೆ (ಜಗಪ. ೧೦-೯೭). [ಮಸೆ$_2$ + ಪಡು$_1$]

**ಮಸೆವು** (ನಾ). ಸಾಣೆಹಿಡಿಯುವಿಕೆ : ಸಹಿಸಿದ ಹಸಿವು ಆಯಿತು ಆತ್ಮದ ಖಡ್ಗಕೆ ಮಸೆವು (ಸುಜೀತ. ೫-೬). [ಮಸೆ$_1$ + — ವು]

**ಮಸೆವೆಳಗು** (ನಾ). ಆಯುಧಗಳನ್ನು ತಿಕ್ಕುವುದರಿಂದುಂಟಾಗುವ ಕಾಂತಿ, — ಹೊಳಪು : ವಸುಧೇಶರನಾತ್ಮಭೂರಿಭಾಂಕೃತರವದಿಂ ಮಸೆವೆಳಗಿಂ ನಗುತಿರ್ಪಂತೆಸೆದುವು ಪೆನ್ನಟ್ಟುತಿರ್ದ ಕೃಷ್ಣಶರಂಗಳ್ (ಜಗಪ. ೭-೧೧೪). [ ಮಸೆ$_1$ + ಬೆಳಗು$_2$ (< ಬೆಳಕು$_2$) ]

**ಮಸೆವೆಱು** (ಕ್ರಿ). ಹರಿತವಾಗು; ಚೂಪಾಗು : ಹೊಸಮಸೆವೆತ್ತ ಖಡ್ಗದಲಿ ಕುಸಿವೆತ್ತು ಖಳನ ಮಸ್ತಕವ ಕೀಳ್ಪಡಿಸಿ ರಂಜಿಸೆ (ಮೋಹತ. ೧೧-೬೬); ಪೊತ್ತ ಮಸೆವೆತ್ತ ಬಲ್ಗತ್ತಿಗಳ ಕಿತ್ತು ಭಟರೆತ್ತಿ ಜಡಿಯುತ್ತಿರಲ್ಕೆ (ಕೃಬಿಲಾ. ೪-೦೯).
[ ಮಸೆ$_2$ + ಪೆಱು$_1$ ]

**ಮಸೆವೊಗರ್** (ನಾ). = ಮಸೆವೆಳಗು : ಕರ್ಣಜನ ಕಣೆಗಳಂ ಕತ್ತರಿಸಿ ಪೊಸಮಸೆವೊಗರ್ನಭೋಮಂಡಲವನಡಲೆಯಲು (ಕೃಬಿಲಾ. ೭-೬೦).
[ ಮಸೆ$_1$ + ಪೊಗರ್ ]

**ಮಸೆಸು** 'ಮಸೆಯಿಸು' ನೋ.

**ಮಸ್ಕರ** (ನಾ). ಬಿದಿರು ; ಬೊಂಬು : "ತ್ವಚಿಸಾರಃ, ಚಪಃ ... ಮಸ್ಕರಃ — ಈ ೬ ಬಿದಿರ್" (ಹಲಾಯು. ೩೪-೫೦). [ಸಂ.]

**ಮಸ್ಕರಿ$_1$** (ನಾ). ಬಿದಿರಿನ ದಂಡವನ್ನು ಹಿಡಿದ ಸಂನ್ಯಾಸಿ,— ಯತಿ : "ತಾಪಸಂ ಕರ್ಮಂದಿ ಮಸ್ಕರಿ ವ್ರತಿ ಭಿಕ್ಷುವಾ ಪರಾಶರಿ ತಪಸ್ವಿಯೆನಿಕ್ಕು" (ಮಂಗರಾ. ೬೬-೯). [ ಸಂ. ಮಸ್ಕರಿನ್ ]

**ಮಸ್ಕರಿ$_2$**, ಮಷ್ಕಿರಿ (ನಾ). ತಮಾಷೆ ; ಗೇಲಿ : ಎಲ್ಲಿ ಕೂತ ಮರಯೇರಿ ಮಾಡಲಿಕ್ಕೆ ಮಸ್ಕರಿ . . . ಗೋವಿಂದ ಅನಿಸಿದ ಗೋವರ್ಧನಾ (ಜಾಪಗೀ. ೧೧೦); ಎಂಥ ಮಸ್ಕರೀ ಮಾತ ಇದು (ಕಂಠ. ೨೦೦). **ಮಷ್ಕಿರಿ**: ಇದೇನು ಕ್ಲೀಷೆಯೋ ಮಷ್ಕಿರಿಯೋ ! (ಅರಿಪು. ೫೩) ; ನನ್ನ ಜೊತೆ ಮಷ್ಕಿರಿ ಮಾಡಬೇಡ (ರೂಢಿ).
[←ಅರ. ಮಸ್ಖರಾ; ಹಿಂ. ಮಸ್ಕರೀ, ಮಸಖರೀ; ಮರಾ. ಮಸ್ಕರೀ]

**ಮಸ್ಕರಿಮಾರ್ಗ** (ನಾ). ಸಂನ್ಯಾಸಿಯ ಸಂಪ್ರದಾಯ : ಆ ದ್ವಿಜಾನ್ವಯ ಸಜೀವುಂ ವಿನಯಮುಂ ತನ್ನೊಡವುಟ್ಟೆ ಪುಟ್ಟೆ ಬಳೆದು ಪೂರ್ವಸ್ಥಿತಿಯೊಳ್ ಮಸ್ಕರಿಮಾರ್ಗದೊಳೆಸಗಿ (ಪಾರ್ಶ್ವಪು. ೬-೧೮ ವ). [ಸಂ.]

**ಮಸ್ಕರಿಸಮಯ** (ನಾ). = ಮಸ್ಕರಿಮಾರ್ಗ : ಆತನ ಪೆಂಡತಿ ದುರ್ಮನಸ್ಕೆ ಮಸ್ಕರಿಸಮಯಮಂ ಪಿಡಿದಿರ್ಪಳ್ (ಶಾಂತಪು. ೯-೩ ವ). [ಸಂ.]

**ಮಸ್ಕಾ** (ನಾ). ಬೆಣ್ಣೆ; ನವನೀತ.

**ಮಸ್ಕಾಹೊಡೆ** = (ಆಲಂ) ಬೆಣ್ಣೆಹಚ್ಚು : ಓಲೈಸು : ಯಾವ ಕೆಲಸವಾಗಬೇಕಾದರೂ ಅವನಿಗೇ ಮಸ್ಕಾಹೊಡೆಯಬೇಕು (ರೂಢಿ).
[←ಪಾರ. ಮಸ್ಕ್, ಮಸ್ಕಹ್; ಹಿಂ. ಮಸ್ಕಾ, ಮಸಕಾ; ಮರಾ. ಮಸಕಾ]

**ಮಸ್ತ** (ನಾ). ತಲೆ ; ಶಿರಸ್ಸು : ನಾಭಿಯಿಂದುರಂಬರೆಗಂ ಪಿತ್ತದ ತಾಣಮುರದಿನಾ ಮಸ್ತದ ವರೆಗಂ ಕಫದ ತಾಣಮಕ್ಕುಂ ನಿರುತಂ (ಲೋಕೋಪ. ೯-೨) ; ಪ್ರಥಿತಗುಣಗಣಾವಾಸಸುರ್ವೀಶಮಸ್ತನ್ಯಸ್ತಾಂಘ್ರಿದ್ವಂದ್ವನೇಂ ರಾಜಿಸಿದನೋ (ಕಇಚ. ೭೪-೦೨-೪ ; 1170) ; ತತ್ಪುಣ್ಯಾಂಬುವಂ ಪೊತ್ತು ಮಸ್ತದೊಳ್ (ಅಪಂಪು. ೯-೯೬). [ಸಂ.]

**ಮಸ್ತಕ** (ನಾ). ೧. ತಲೆ ; ಶಿರಸ್ಸು : "ಮುಂಡಃ, ಉತ್ತಮಾಂಗಃ, ಮಸ್ತಕಃ . . . ಮೂರ್ಧಾ, ಕಂ— ಈ ೮ ಮಂಡೆ" (ಹಲಾಯು. ೮೫-೬೬೪); ತೀರ್ಥೋದಕಂಗಳಿಂದಯ್ವರುಂ ಪವಿತ್ರೀಕೃತಮಸ್ತಕರಾಗಿರ್ದ (ಶಂಕರಾ. ೬-೧೧ ವ); ರವಿಕುಲದ ರಾಯಂ . . . ನಿಜಸತಿಯ ತೋರ

ದೊಡೆಗಳ ಮೇಲೆ ಲಲಿತಮಣಿಮಕುಟಮಂಡಿತಮಸ್ತಕವನಿಳುಹಿ ಮಗ್ಗುಲಿಕ್ಕಿದನಾಗಳು (ಹಶಕಾ. ೬-೩೦); ಅವನ ಮಸ್ತಕ ಬಿರಿದು ಬೀಳಲಿ (ಕುಮಾ.ವ್ಯಾ. ೦೯-೯೨); ಪುಸ್ತಕದಿ ದೊರೆತರಿವು ಮಸ್ತಕದಿ ತಳೆದ ಮಣಿ (ಮಂಕುತಿ. ೬೩). ೨. ತುದಿ; ಶಿಖರ: ಸಂಜೆಯೊಳಿನನಸ್ತಾದ್ರಿಯ ಮಂಜುಳಮಸ್ತಕದೊಳೊಪ್ಪುವಂತತಿಶಯದಿಂ ಕಂಜಾಕ್ಷಿಯ ಮಂಡೆಯೊಳ್. . . ಮಾಣಿಕಮಣಿ ನೆಲೆಸಿರ್ದುಂ (ಹರಿಶ್ಚ.ಕ. ೨-೩೩); ನೋಡುತ ನಡದ ವಿಪುಲಾಚಲದ ಮಸ್ತಕದಿ (ಮುಲಾ.ಚ. ೨-೯). [ಸಂ.]

**ಮಸ್ತಕಸ್ನೇಹ** (ನಾ). ೧. ಮೆದುಳು: "ತಲೆಯ ಮೆದುಳಿಂಗೆ ಮಸ್ತಿಷ್ಕಮಾ ಮಸ್ತಕಸ್ನೇಹಮೆಂಬಾಖ್ಯಮಕ್ಕುಂ" (ಶಬ್ದಮ. ೦೬೬-೬). ೨. ಮೆದುಳಿನಲ್ಲಿರುವ ನೆಣ. [ಸಂ.]

**ಮಸ್ತಕಾಭಿಷೇಕ** (ನಾ). [ಜೈನ] ಜಿನವಿಗ್ರಹದ ತಲೆಯ ಮೇಲೆ ನೀರು, ಹಾಲು ಮುಂತಾದ ದ್ರವಪದಾರ್ಥಗಳನ್ನು ಎರೆದು ವಿಧಿಪೂರ್ವಕವಾಗಿ ಮಾಡಿಸುವ ಸ್ನಾನ: ಶ್ರವಣಬೆಳ್ಗೊಳದಲ್ಲಿ ಗೋಮಟೇಶ್ವರನ ಮಸ್ತಕಾಭಿಷೇಕವು ಹನ್ನೆರಡುವರ್ಷಗಳಿಗೆ ಒಂದು ಬಾರಿ ನಡೆಯುವುದು (ಮಧ್ಯಕು.೬೯). [ಸಂ.]

**ಮಸ್ತಿ** (ನಾ). ೧. ಸೊಕ್ಕು: ಗರ್ವ: ಮದ: ಇಷ್ಟು ಮಸ್ತಿ ತುಂಬಿದ ಹೆಣ್ಣಿಗೆ ಅಂತಿಂತಹ ಹುಡುಗ ಉಪಯೋಗದವನೆ? (ಮುರುದಾ. ೨೨೦); ಅವನ ಮಸ್ತಿ ಎಷ್ಟಿದೆಯೆಂಬುದನ್ನು ನಾಳೆಯೇ ನೋಡುತ್ತೇನೆ (ಶರಾಷ. ೬೬). ೨. ಆನೆ, ಒಂಟೆ ಮೊದಲಾದ ಪ್ರಾಣಿಗಳ ಮದಾವಸ್ಥೆ: ಮಗನೇ ಮಸ್ತಿಯ ಹಸ್ತಿ ಮಮತೆಯ ಮಗನೆ ಶಿವನಿಂದೊಗೆದ ಸಿಂಹದ ಮರಿಯ ಕೇಳು (ಮರೇಶ. ೩-೯೦); ಮಸ್ತಿಳಿದ ಹಸ್ತಿಯೊಲು ಕಣ್ಣರೆದು (ಶಕಟ. ೨೩-೦). [←ಪಾರ. ಹಿಂ. ಮರಾ. ಮಸ್ತೀ]

**ಮಸ್ತಿಷ್ಕ** (ನಾ). ಮೆದುಳು: "ತಲೆಯ ಮೆದುಳಿಂಗೆ ಮಸ್ತಿಷ್ಕಮಾ ಮಸ್ತಕಸ್ನೇಹಮೆಂಬಾಖ್ಯಮಕ್ಕುಂ" (ಶಬ್ದಮ. ೦೬೬-೬); ಗಜಮಸ್ತಕಮಸ್ತಿಷ್ಕದಿನಜೀರ್ಣಮಾಯ್ತೆಂದು ಲಂಘನಂಗೆಯ್ದವೋಲೇಂ ಗಜರಿಪು ಲಂಘಿಸಿದುದೊ (ಅಜಿತ. ೯-೨೬); ಲಕ್ಷ್ಮಣಂ ರಾಷ್ಟ್ರಕಂಟಕನಂ ಬಾಟ್ದಲೆ ಗೊಂಡನುಯ್ವನಿಭಮಂ ಪಂಚಾನನಂ ಹಸ್ತಿಮಸ್ತಕಮಸ್ತಿಷ್ಕರಸಾನುರಕ್ತರಸನಂ ಮಾರ್ಕೊಂಡು ಕೊಂಡುಯ್ವವೋಲ್ (ಪಂಪರಾ. ೬-೬೨). [ಸಂ.]

**ಮಸ್ತು$_1$** (ನಾ). ಮಜ್ಜಿಗೆ: "ದಧಿಮಂ(ತ)ಥಃ, ಮಸ್ತು—ಈ ೨ ಮಜ್ಜಿಗೆ" (ಹಲಾಯು. ೩೩-೦೬೬). [ಸಂ.]

**ಮಸ್ತು$_2$** (ನಾ). ವಿಪುಲ; ಅಧಿಕ; ಹೇರಳ: ಕೈದುಗಳ ಮಸ್ತಾಗಿ ಮೊಸಪಾದುದಂ ತರಿಸಿ ಸುಗ್ಗಾದುದಂ ಕಳುಪಿ ಹಸಮಾಡಲು (ಕುರಂಗ. ೩೬-೯೨); ಮಸ್ತಾಗಿ ಹಣ ಉಂಟಾ? (ಅಭಿಪಾ. ೬); ಮಳೆಯ ಜೋರಿಗೆ ಕಣಿಗೆ ಮಸ್ತಾಗಿ ಬಿದ್ದಿದ್ದುವು ಹತ್ತು ಮಿಾನು! (ಮಲೆಮ. ೬೩೬). [←ಪಾರ. ಮರಾ. ಮಸ್ತ್]

**ಮಸ್ಲಿನ್** (ನಾ). ಒಂದು ಬಗೆಯ ತೆಳುವಾದ ಬಟ್ಟೆ: ಬಹು ಸೂಕ್ಷ್ಮ ನೆಯ್ಗೆಯ ಹತ್ತಿಯ ಬಟ್ಟೆ: P ಹಿಂದೆ ಮೆಸೊಪೊಟೋಮಿಯಾ ದೇಶದ ಮೊಸಲ್ ಎಂಬಲ್ಲಿ ಈ ಬಟ್ಟೆ ನೇಯುತ್ತಿದ್ದುದರಿಂದ ಈ ಹೆಸರು ಬಂದಿದೆ: ಏನು ಬೆಳ್ಳಗೆ ಎಷ್ಟು ತೆಳ್ಳಗೆ ಮಳೆಯ ಮಸ್ಲಿನ್ ಪರದೆಯು (ಕಲಕು. ೦೦-೯); ಚೀಟಿ, ವಾಯಿಲ್, ಮಸ್ಲಿನ್, ಮಲ್ ಇವನ್ನು ಸಾಧಾರಣವಾಗಿ ಉಪಯೋಗಿಸಿ ನೇಯುವರು (ಗೃಹಾ. ೬೩). 'ಮಲ್ಲು' ಪರಾ. [←ಇಂ. Muslin]

**ಮಸ್ಸಿ** (ನಾ). ಒಂದು ಬಗೆಯ ಮರ: ಮಸ್ಸಿ, ಕರುವಾಡಿ, ನೇರಲುತಾರೆ (ಮ್ಯಾಶಿಗ. ೩-೮೨). [?]

**ಮಸ್ಸಿವಾಳ** 'ಮಸಿವಾಳ' ನೋ.

**ಮಸ್ಸೀವಾರ** 'ಮಸಿವಾಳ' ನೋ.

**ಮಸ್ಸೀವಾಲ** 'ಮಸಿವಾಳ' ನೋ.

**ಮಹ$_1$** (ನಾ). ಏಳು ಲೋಕಗಳಲ್ಲಿ ನಾಲ್ಕನೆಯದು: "ಬಿತ್ತರದ ಭೂರ್ಭುವಂ ಸ್ವರ್ಮಹಂ ಜನ ತಪಂ ಸತ್ಯಮೆಂದೇಟು ಮೇಲಣ ಲೋಕಮಕ್ಕು" (ಶಬ್ದಮ. ೦೦-೩೨). [ಸಂ. ಮಹಸ್]

**ಮಹ$_2$** (ನಾ). ೧. ಒಸಗೆ; ಉತ್ಸವ; ಹಬ್ಬ: "ಉತ್ಸವಃ. ಮಹಃ, ಕ್ಷಣಃ—ಈ ೩ ಒಸಗೆ" (ಹಲಾಯು. ೦೨೬-೬೮); ಸಕಲವಿನೇಯಜನಂಗಳ್ ಮಾಟ್ಪ ಮಹಮೆಂಬ ಪೂಜೆಯುಮಂ (ಸುಕುಮಾ. ೬-೨೩ ಪ); ಗೋಪವೃದ್ಧರ್ ಮಹೇಂದ್ರಮಹಮಂ ಮಾಣ್ದು ಗಿರೀಂದ್ರಮಹಮನೊಡರ್ಚಿಟ್ಟರ್ (ಜಗನ್ನಾ. ೯-೬೯ ಪ). ೨. ಯಾಗ; ಯಜ್ಞ. ೩. ತೇಜಸ್ಸು; ಕಾಂತಿ. ೪. ಎಮ್ಮೆ; ಮಹಿಷ. ೫. ಶ್ರೇಷ್ಠವಾದ ತತ್ತ್ವ; ಪರತತ್ತ್ವ: ಅರಿವು ಮಹದಲ್ಲಿ ಬೆರಸುವಾಗ ಹಾರಿಸಿಲೆ ನೋಡನೋಡಲಿಕ್ಕೆ ನೀರಾದಂತೆ (ಪೋಳಬಾ. ೨೬೦-೩); ಮನವು ಮಹದಲ್ಲಿ ನಿಂದುದೆ ಲಿಂಗ (ಲಿಂಗವ. ೦೩-೩೦). [ಸಂ.]

**ಮಹಂತ** (ನಾ). ೧. ಆದರಕ್ಕೆ ಪಾತ್ರನಾದ ವ್ಯಕ್ತಿ: "ಮಹಂತಃ = ಪೂಜ್ಯಂ" (ಕಾರಕ. ೨೮೩); ಭಾಸುರತೇಜ[ರು] ಮಹಂತರೆನಿಸಿದ ಸೂರ್ವ್ವರು ಕೇಶವಮಹೇಶದೇವರ ಲೇಸೆನಿಸಿದ ಪೂಜೆಗಿತ್ತರುಪೂರ್ಜ್ಜಿತ ಧರೆಯಂ (ಎಕ. XVIII. ೦೮೩-೯೦; 1097); ನಿಜಮನಜಿದ ನಿಶ್ಚಿಂತನೆ ಮರಣವ ಗೆಲಿದ ಮಹಂತನೆ (ಅಕಕಂ. ೦೩೯-೬೩೬); ಅಖಿಳರಿಗಜಿವನೀವ ಮಹಾಂತನೆನಿಸಿದ ಸಿದ್ಧರಾಮಯ್ಯಂಗೆ ಶರಣಾರ್ಥಿ (ಶ್ರಕುಲ. ೦-೯). ೨. ದೇವಸ್ಥಾನ, ಮಠ ಮೊದಲಾದುವುಗಳ ಮೇಲ್ವಿಚಾರಕ; ಧರ್ಮಾಧಿಕಾರಿ: ಈ ವೃದ್ಧಮಹಾಪುರುಷನಾರು ಎಂಬುದಾಗಿ ದೇವಾಲಯದ ಮಹಂತರನ್ನು ಕೇಳಿದನು (ಶ್ರೀರಾಮ. ೬). 'ಮಹಾಂತ' ಪರಾ. P ಸಂಸ್ಕೃತದ 'ಮಹತ್' ಶಬ್ದವು ವ್ಯಾಕರಣಸೂತ್ರಗಳ ಪ್ರಭಾವದಿಂದ ಅನೇಕ ಬೇರೆ ಬೇರೆ ರೂಪಗಳನ್ನು ಪಡೆಯುವುದರಿಂದ ಇಲ್ಲಿ ಅನುಕೂಲಕ್ಕಾಗಿ ಅವೆಲ್ಲವನ್ನೂ ಬೇರೆ ಬೇರೆ ಮುಖ್ಯ ಉಲ್ಲೇಖಗಳಾಗಿ ಕೊಡಲಾಗಿದೆ. ಉದಾ: 'ಮಹಂತ', 'ಮಹತಿ$_1$', 'ಮಹತ್ತು', 'ಮಹಾ', 'ಮಹಾಂತ' ಇತ್ಯಾದಿ. [ < ಸಂ. ಮಹತ್]

**ಮಹಂತು**. ಮಾಹತ್ತು (ನಾ). = ಮಹಂತ ೧: 'ಮಹಂತುಬೋಗು' ಪರಾ. **ಮಾಹತ್ತು**.

**ಮಾಹತ್ತಿನ ಮಠ** = ವೀರಶೈವಮಹಾನುಭಾವಿಗಳಿರುವ ಮಠ: ಶಿವನಸಮುದ್ರದ ವೀರೇಶ್ವರನ ಗುಡಿ ಯತಿಮಠವನು ಮಾಹತ್ತಿನ ಮಠವ ಮಾಡಿ (ಎಕ. XIV. ಮಳವ. ೦೦೧-೮; 1604). [ < ಮಹಂತ]

**ಮಹಂತುಬೋಗು** (ಕ್ರಿ). ಮಹಂತನಾಗು; ಪೂಜ್ಯನಾಗು: ಮಾಂಸ ಉಂಡವರೆಲ್ಲಾ ಮಹಂತುಬೋದರು ದೇಹ ಉಂಡವರೆಲ್ಲಾ ದೇವರ ಪೂಜಿಸಿದರು (ಸರ್ವಜ್ಞ. ೨೯-೦೯೩). [ಮಹಂತು + ಪೋಗು$_1$ ( < ಪೋ$_1$)]

**ಮಹಂತೆ** (ನಾ). ಶ್ರೇಷ್ಠಳಾದವಳು; ಪೂಜ್ಯಳಾದವಳು: ಅತ್ಯಾಯತ ಪತಿಭಕ್ತಿ ನಾಗಿಕಬ್ಬೆ ವಿಶೇಶಶ್ರೀಯುತೆ ಮಹಂತೆ ನಿ[ಚ್ಚಂ] ಶ್ರೀಯ[ಸ್ಕರ] ಮೂರ್ತ್ತಿ (ಶಾಇಸ. V. ೮೯೬-೦೯; 1097). [ಮಹಂತ + — ಎ$_2$]

**ಮಹಚ್ಚರಿ** (ನಾ). ಅತಿಯಾದ ಸೋಜಿಗ; ಅತ್ಯಾಶ್ಚರ್ಯ: 'ಮಹಚ್ಚರಿಪಡು' ಪರಾ. [ < ಮಹಾ + ಅಚ್ಚರಿ$_3$]

**ಮಹಚ್ಚರಿಪಡು** (ಕ್ರಿ). ಅತಿಯಾಗಿ ಸೋಜಿಗಪಡು; ಅತ್ಯಾಶ್ಚರ್ಯಪಡು: ಸುದತಿ ಬಳಿಕಾ ವೃದ್ಧನನು ಕಾಣದೆ ಮಹಚ್ಚರಿಪಡಲು (ಶೀಲಂಶ. ೦೯-೩೦). [ಮಹಚ್ಚರಿ + ಪಡು$_1$]

**ಮಹಜರ್** 'ಮಹಜರು' ನೋ.

**ಮಹಜರು**, ಮಹಜರ್, ಮಾಜರು (ನಾ). (ಕೊಲೆ, ಕಳವು ಮುಂತಾದ ಅಪರಾಧಗಳ ವಿಚಾರದಲ್ಲಿ) ತಪಾಸಣೆ ಮಾಡಿದವರೆಲ್ಲರೂ ಸಹಿ ಮಾಡಿದ ವಿವರವಾದ ವರದಿ; ಪಂಚನಾಮೆ: ಆ ಮಹಜರಿಗೆ

ಪಟೇಲನು ದಸ್ತಐತ್ತನ್ನು ಹಾಕಿ ಅಲ್ಲಿ ಹಾಜರಿದ್ದವರ ದಸ್ತಐತ್ತುಗಳನ್ನು ಹಾಕಿಸಿ . . . ರವಾನಿಸಬೇಕು (ಗ್ರಾಮಶಿ. ೫೯) ; ಶವದ ಮಹಜರುಕ್ರಮ ನಡೆಯಬೇಕಾಗಿತ್ತು (ಶಾಕ್ಷೋಲ. ೨೦೩). **ಮಹಜರ್** : ಈ ದಿನ ಮಹಜರ್ ನಡೆಸುತ್ತಾರೆ (ತಕ್ಕಿಟ. ೦೩೦). **ಮಾಜರು** : ಮಹಜರು ಮಾಡಲು ಪೋಲೀಸಿನವರು ಬರುತ್ತಾರೆಂಬ ಸುದ್ದಿ ಕಾಗೆಗೊಡಿಗೆಸದ ಕಲ್ಲಾಗಿತ್ತು (ಚಾಮರು. ೯೬).

[ ←ಅರ. ಮಹಜರ್, ಮಹರ್ಝರ್; ಹಿಂ. ಮರಾ. ಮಹಜರ್ ]

**ಮಹಜಿದಿ** 'ಮಸೀದಿ' ನೋ.

**ಮಹಡಿ** 'ಮಾಡ₁' ನೋ.

**ಮಹಡಿಮನೆ** 'ಮಾಡಿಮನೆ' ನೋ.

**ಮಹತಾಪು,** ಮತಾಪು (ನಾ). ೧. ಪ್ರಕಾಶಮಾನವಾಗಿ ಕಿಡಿಗೆದರಿ ಉರಿಯುವ ಒಂದು ಬಗೆಯ ಸುಡುಮದ್ದು: ಬೆಳಗಿದವು ಶತಕೋಟಿ ಪಂಜಿನ ಹೊಳಪಿನೊಳು ಮಹತಾಪುಗಳ ಸದ್ದೆಳಗಿನೊಳು (ಕರು. ೦೩–೨೯); ಹಗಲುಬತ್ತಿಯು ಬಾಣ ಬಿರಿಸು ಮಹತಾಪುಗಳು ಬಗೆಬಗೆಯುಲಾಲುಗಳು ಸಾಲುದೀವಟಿಗೆ (ಕೃಷ್ಣಪಿ. ೩–೦೦). **ಮತಾಪು** : ೧. ಹೊರಗೆ ಮತಾಪಿನ ಬೆಳಕಿನ ಜತೆಯೊಳು ಹೊಳೆದುವು ತಾರೆಗಳೊಳಗೆ (ಶಂಪ್ರ೬೬. ೬–೪೦). ೨. ಒಂದು ಬಗೆಯ ಯುದ್ಧದ ಸಾಧನ : ಸಣ್ಣ ತೋಪುಗಳು, ರಾಮಚಂಗಿಗಳು, ರಾಮಬಾಣಗಳು, ಮತಾಪುಗಳು, ತಾರಾಮಂಡಲ, ಭೂಚಕ್ರ, ರಣಗಾಡಿಗಳು ಮೊದಲಾದ ಯುದ್ಧೋಪಕರಣಗಳೆಲ್ಲ ಎಣಿಸಿದುದಾಯಿತು (ಐಚ್ಛರು. ೦೩).

[←ಪಾರ. ಹಿಂ. ಮಾಹತಾಬ್; ಮರಾ. ಮಹತಾಪ್, ಮಾಹತಾಬ್]

**ಮಹತಿ₁** (ನಾ). ೧. ಹಿರಿಮೆ ; ಘನತೆ ; ಮಹತ್ವ: ಕಡುತಪವನ್ನು ಮಾಡಿದ ಪುಣ್ಯಫಲವಿಂದು . . . ಮೂಜಗದೊಡೆಯನೇ ನಿನ್ನಡಿಯ ದರುಶನ ಪಡೆದ ಮೂಲಕ ನಮಗೆ ದೊರೆಯಿತು ಮಹತಿ ಪೆರ್ಚಿದುದು (ಶಾರ್ದಕ. ೩–೦೬) ; ಕಾಯಕದ ಮಹತಿಯೂ ಇದೇ ಮಾತನ್ನು ಹೇಳಿದೆ (ಶರ್ಣಕ. ೪೨೨). ೨. ಒಂದು ಬಗೆಯ ಬಿಕ್ಕುಳುರೋಗ : ಬಿಕ್ಕುಳು ರೋಗವು ಅನ್ನಜೆ, ಕ್ಷುದ್ರಜೆ, ಮಹತಿ, ಯಮಳೆ, ಗಂಭೀರೆ ಎಂದು ಐದು ತೆರನು . . . ಮಹತಿ ಎಂಬ ಬಿಕ್ಕುಳು ಬರುತ್ತಲೆ ಎಚ್ಚರಮಂ ತಪ್ಪಿಸಿ ವಾಕ್ಯನು ಸ್ತಂಭಿಸುವುದು (ಸಳವ. ೨೯೦). [<ಸಂ. ಮಹತ್]

**ಮಹತಿ₂** (ನಾ).೧.ಒಂದು ಬಗೆಯ ವೀಣೆ. ೨.ಏಳುತಂತಿಗಳುಳ್ಳ ನಾರದನ ವೀಣೆ : ಮಹತೀ–೧ ನಾರದನ ವೀಣೆ. ಅಧಿಕವಾದ್ದು ೨ (ಸಿದ್ಧಾಂತಿ. ೩೯೦) : ಸರಸ್ವತಿ 'ಕಚ್ಛಪಿ' ಎಂಬ ವೀಣೆಯನ್ನೂ ನಾರದರು 'ಮಹತೀ' ಎಂಬ ವೀಣೆಯನ್ನೂ ನುಡಿಸುತ್ತಿದ್ದರೆಂದು ಇತಿಹಾಸ ಪುರಾಣಗಳು ತಿಳಿಸುತ್ತವೆ (ಸಂಗೀತಂ. ೩೦೦). ೩. ಒಂದು ಬಗೆಯ ಸಸ್ಯ ; ಹೆಗ್ಗುಳ್ಳದ ಗಿಡ. [ಸಂ. ಮಹತೀ]

**ಮಹತೋಮಹೀಯ** (ನಾ). ಪೂಜ್ಯರಲ್ಲಿ ಪೂಜ್ಯನಾದವನು ; ಸರ್ವಶ್ರೇಷ್ಠ: ಅವನೊಬ್ಬನಣೋರಣೀಯನದಾವನುರುಮಹತೋಮಹೀಯನು (ಶುಭ್ರಾ೦. ೬–೬೬) ; ಅಣೋರಣೀಯನ ಮಹತೋಮಹೀಯನ ಅಪ್ಪ ಮೇಯನ ಆಡಿಸಿದಳೆಶೋದೆ (ಪುರಂದ. ೪–೦೬೬–೨).

[ಸಂ. ಮಹತೋಮಹೀಯಸ್]

**ಮಹತ್ಕಾರ್ಯ** (ನಾ). ದೊಡ್ಡಕೆಲಸ ; ಭಾರಿಕಾರ್ಯ : ಅವನ ಮಹತ್ಕಾರ್ಯಗಳೆಲ್ಲವನ್ನೂ ಪಟ್ಟಿಮಾಡಿ ಹೇಳುವುದು ಸಾಧ್ಯವಿಲ್ಲ (ದೀಕ್ಷ. ೨೯). [ಸಂ.]

**ಮಹತ್ತತ್ತ್ವ** (ನಾ). ೧. [ತತ್ತ್ವಶಾ] ಸಾಂಖ್ಯರು ಹೇಳಿರುವ ಇಪ್ಪತ್ತೈದು ಪದಾರ್ಥಗಳಲ್ಲಿ ಎರಡನೆಯದು ; ಮೂಲಪ್ರಕೃತಿಯಿಂದ ಹುಟ್ಟುವ ತತ್ತ್ವ : ತತ್ತ್ವಿನಿಪ ವಾಚ್ಯದಲಿ ಶಬಲತೆವೆತ್ತ ಬ್ರಹ್ಮದಲಾಯ್ತು ಸದಸದ್ವ್ಯಕ್ತಿಯಾದವ್ಯಕ್ತವದಜಿಂದೀ ಮಹತ್ತತ್ತ್ವ (ಅಪ್ಪಕ. ೯–೦೦) ; ಅಹಂಕಾರತತ್ತ್ವಮುಂ ಮಹತ್ತತ್ತ್ವಮುಂ ಕೂಡಿ ಇರ್ಪತ್ತುಮೂಜುಂ ತತ್ತ್ವಂಗಳುಂ ಪ್ರಕೃತಿಯೊಳಡಂಗಿ (ಶಳಬ. ೦೦). ೨. [ವಿಶಿಷ್ಟಾ] ಇಪ್ಪತ್ತುದ್ರವ್ಯಗಳಲ್ಲಿ ಒಂದು : ಗುಣತ್ರಯ, ಮಹತ್ತತ್ತ್ವ, ಅಹಂಕಾರ . . . ಪ್ರತಿಬಿಂಬ ಎಂದು ದ್ರವ್ಯಗಳು ಇಪ್ಪತ್ತು (ಹಿಂದಣ. ೨೮೩). [ಸಂ.]

**ಮಹತ್ತಮ** (ನಾ). ೧. ಅತ್ಯಧಿಕವಾದುದು : ಇದು ಚಕ್ರಯುಗಕ್ಕಗಲ್ಲುಲಿಕ್ಕಿದ ಕಿಸುರ್ವಕ್ಕಿ ಕರ್ವೂಗೆಯೆನಿಪ್ಪನಮಾಯ್ತು ಮಹತ್ತಮಂ ತಮಂ (ಕಂಪ್ರಪು. ೬–೦೯). ೨. ಹಿರಿಯ : ಶ್ರೇಷ್ಠ : ಪ್ರತ್ಯಯವನಿನ್ನುಜಸಲೇಕೆ ಮಹತ್ತಮರಿವರ ಪುಣ್ಯನಾಮದ ಕೀರ್ತನದ ಮಹಾತ್ಮ್ಯವನು ದಿಟ ನೀವೆ ಕಂಡಿರಲ್ಲೆ (೬ಭಾಗ. ೬–೩–೩೦).

ಮಹತ್ತಮಸಾಮಾನ್ಯಅಪವರ್ತನ = [ಗಣಿತ] ಎರಡು ಅಥವಾ ಅಧಿಕ ದತ್ತಸಂಖ್ಯೆಗಳೆಲ್ಲವನ್ನೂ ಭಾಜಿಸತಕ್ಕ ಅತ್ಯಧಿಕ ಅಪವರ್ತನ : ಎರಡು ಅಥವಾ ಅಧಿಕ ದತ್ತಸಂಖ್ಯೆಗಳೆಲ್ಲವನ್ನೂ ಭಾಜಿಸತಕ್ಕ ಅತ್ಯಧಿಕ ಅಪವರ್ತನಕ್ಕೆ ಅವುಗಳ ಮಹತ್ತಮ ಸಾಮಾನ್ಯ ಅಪವರ್ತನ (ಮ.ಸಾ.ಅ.) ಎಂದು ಹೆಸರು (ಕಲಿಕೋ. I, ೩). [ಸಂ.]

**ಮಹತ್ತರ** (ಗು). ೧. ಅತಿಶಯವಾದ ; ಮಿಗಿಲಾದ : ವಾಕ್‍ಸೀಮೆಯ ದಾಟುತಾ ಮಹಾಕಾಂಕ್ಷೆಯ ಮಹತ್ತರಪ್ರಾರ್ಥನಾಹೃದಂ ದೀರ್ಘಭಾವ ಪ್ರವಾಹದ ಮೌನಮಾತ್ರದಲಿ ಪರಿಣಮಿಸಿದತ್ತು! (ಶಶ್ರಾಂಗ. ೨೬–೨೦೦); ಪತಿಯ ಮಹತ್ತರ ಬದಲಾವಣೆ ಅವಳಿಗೊಂದು ದೊಡ್ಡ ಸಮಸ್ಯೆ (ಕಣ್ವತಿ.೬೩). (ನಾ). ೨. ಹಿರಿದಾದುದು ; ಶ್ರೇಷ್ಠವಾದುದು : ದೇಶವ್ಯಾಪ್ತಿಯಿಂದ ಅಣು, ಮಹತ್, ಮಹತ್ತರ ಮೊದಲಾದ ವ್ಯವಹಾರಗಳು ಕೂಡುವುವು (ಹಿಂದಣ. ೬೦); ಅವರು ಸಾಧಿಸಿದ ಕಾರ್ಯ ಅತಿ ಮಹತ್ತರವಾದುದು (ದರ್ಪಣ. ೦೩೯). ೩. ಗೌರವಕ್ಕೆ ಪಾತ್ರನಾದವನು ; ಶ್ರೇಷ್ಠ ; ಹಿರಿಯ : ಸುಮತಿಯೆಂಬ ಮಂತ್ರಿಮಹತ್ತರನಿಂತೆಂದಂ ( ಶಾಂತಿಪು. ೩–೬೨ ವ ) ; ಕೂಡೆ ಶಾಶಾಂಕಿಮಂದಿರದೊಳ್ ಪೂರ್ಣಸುಹೃತ್ತನೂಜ ಪರಿವಾರಂ ಸೌಖ್ಯಯುಕ್ತಂ ಮಹತ್ತರಂ . . . ಅಕ್ಕುಂ ನರಂ (ಜಾತಕ. ೦೬–೨೬). ೪. ಮುಖ್ಯಾಧಿಕಾರಿ ; ಹೆಗ್ಗಡೆ : 'ಮಹತ್ತರಿಕೆ₁' ಪರಾ. [ಸಂ.]

**ಮಹತ್ತರದೇವಿ** (ನಾ). [ಜೈನ] ಹದಿನಾರು ಕಲ್ಪಗಳಲ್ಲಿದ್ದು, ಆಯಾ ವಿಮಾನಗಳಲ್ಲಿ ಹುಟ್ಟುವ ಭವ್ಯಜೀವಿಗಳಿಗೆ ತಿಳಿವಳಿಕೆಯನ್ನು ಕೊಡುವ ಹದಿನಾರು ಜನಸಾಮಾನಿಕದೇವತೆಯರಲ್ಲಿ ಪ್ರತಿಯೊಬ್ಬಳು : ಬಿಡುಮುತ್ತಿನ ಸೇಸೆಗಳುಂಬೆರಸು ಮಹತ್ತರದೇವಿಯರ್ ಬಂದು ಪೊಡೆವಟ್ಟು (ಆದಿಪು. ೩–೬೬ ವ). [ಸಂ. ಮಹತ್ತರದೇವೀ]

**ಮಹತ್ತರಿ** (ನಾ). ಆಶೀರ್ವಾದ, ಸ್ವಸ್ತಿವಾಚನಗಳನ್ನು ತಿಳಿದಿರುವ ವೃದ್ಧಸ್ತ್ರೀ : ಕೆಲರಂ ದೌವಾರಿಕಸ್ಥಾನದೊಳ್ ಕೆಲರಂ ಜಾಣ್ನುಡಿಯೊಳ್ ಮಹತ್ತರಿಯರಂ ಮಾದೇವಿಯಪ್ಪೈಸಿದಳ್ (ಚಾರಪು. ೬–೬೩).

[ಸಂ. ಮಹತ್ತರೀ]

**ಮಹತ್ತರಿಕೆ₁** (ನಾ). ಮುಖ್ಯಾಧಿಕಾರಿಯ ಪದವಿ ; ಹೆಗ್ಗಡೆತನ : ದಂಡನಾಯಕಂಭೂಮಂತನನ್ನಪುರ ಮಹತ್ತರಿಕೆಯ ಸಮ್ಮರಸಂ (ಶಾಸಕ. ೯೯–೦೩; ೧೧೬೪). [ಮಹತ್ತರ + –ಇಕೆ]

**ಮಹತ್ತರಿಕೆ₂** (ನಾ). = ಮಹತ್ತರದೇವಿ : ವಿಜಟಕೂಟಾಧೀಶೆಯರಪ್ಪ ರುಚಕರುಚಕಾಸ್ಯೆ ರುಚಕಾಂತೆರುಚಕಪ್ರಭೆಯೆಂಬೀ ನಾಲ್ವರುಂ ದಿಕ್ಕುಮಾರಿಕಾ ಮಹತ್ತರಿಕೆಯರುಮಂ ಧರ್ಮಾನುರಾಗದಿಂ ಸೌಧರ್ಮೇಂದ್ರಂ . . . ಮಹತ್ತರಿಯರಾಗಲು ಬೆಸಸುವುದುಂ (ಆದಿಪು. ೬–೩ ವ).

[ಸಂ. ಮಹತ್ತರಿಕಾ]

**ಮಹತ್ತು** (ಗು). ೧. ಹಿರಿಯದಾದ ; ಶ್ರೇಷ್ಠವಾದ. (ನಾ). ೨. ಹಿರಿದು ; ಶ್ರೇಷ್ಠವಾದುದು : ಅಣುವಿಂಗೆ ಅಣು ಮಹತ್ತಿಂಗೆ ಮಹತ್ತಾದ ಮಹಾಲಿಂಗದೊಳಗೆ ಶರಣನಿರ್ದನು (ಅಬಂಡೀ. ೩೩೭-೪೭) ; ಮಹತ್ತು ಮಹತ್ತನ್ನು ಗುರುತಿಸುತ್ತದೆ (ಕಾವ್ಯಕು. ೦೦೮). ೩. ಶಾಕ್ತ ಮತದ ಇಪ್ಪತ್ತುನಾಲ್ಕು ತತ್ತ್ವಗಳಲ್ಲಿ ಒಂದು : ಐದು ಭೂತಗಳು . . . ಅಹಂಕಾರ, ಮಹತ್ತು, ಮೂಲಪ್ರಕೃತಿ – ಇವೇ ಇಪ್ಪತ್ತನಾಲ್ಕು ತತ್ತ್ವಗಳು (ಕಾರಿಕ. ೨೨೨). [ಸಂ. ಮಹತ್]

**ಮಹತ್ತ್ವ** (ನಾ). ೧. ಹಿರಿಮೆ ; ಘನತೆ ; ಶ್ರೇಷ್ಠತೆ : ಅಜಂಗಂ ಜನಕಂ ರಕ್ಷಕನಂತಕನೆನಿಸಿದೆ ಕೇಳ್ ಪೊಗಟ್ಟರಳವೆ ನಿನ್ನ ಮಹತ್ತ್ವಂ (ಜಗ. ೩-೯೭). ೨. ಸಾಮರ್ಥ್ಯ. ೩. ಪ್ರಾಮುಖ್ಯತೆ : ಆ ಸಣ್ಣ ವಿಷಯಕ್ಕೆ ಯಾಕೆ ಮಹತ್ತ್ವ ಕೊಡಬೇಕು ? (ರೂಢಿ). [ಸಂ.]

**ಮಹತ್ಪಂಚಮೂಲ** (ನಾ). [ವೈದ್ಯಶಾ] ಬೆಲ್ಲವತ್ತ, ನರುವಲ, ಶಿವನಿ, ಪಾದರಿ ಮತ್ತು ಹೆಮ್ಮರ ಈ ಐದು ಬಗೆಯ ಮರಗಳ ಔಷಧೀಯ ಗುಣವುಳ್ಳ ಬೇರುಗಳು : ಬೆಲ್ಲವತ್ತದ ಬೇರು, ನರುವಲದ ಬೇರು, ಶಿವನಿಬೇರು, ಪಾದರಿಬೇರು ,ಹೆಮ್ಮರದ ಬೇರು ಇವು ಮಹತ್ಪಂಚಮೂಲ ವೆನಿಸಿಕೊಂಬುವು (ವೈದ್ಯಶಾ. ೧. ೩೩). 'ಮಹಾಪಂಚಮೂಲ' ಪರ್ಯಾ. [ಸಂ.]

**ಮಹತ್ವ** (ನಾ). ೧. = ಮಹತ್ತ್ವ ೧ : ವೇದೋಪನಿಷತ್‌ಕಾಲದ ಸಂಸ್ಕೃತಕ್ಕೂ ಅನಂತರದ ಸಂಸ್ಕೃತಕ್ಕೂ ಹೋಲಿಸಿದಾಗ, ಈ ಮಾತಿನ ಮಹತ್ವ ಮನವರಿಕೆಯಾಗುತ್ತದೆ (ದ್ರಾಶಿಶಿ. ೯೩೩). ೨. ದೊಡ್ಡದು ; ಹಿರಿದು : ನಾವೊಂದು ಮಹತ್ವದ ಕೆಲಸದಲ್ಲಿ ತೊಡಗಿದ್ದೇವೆ (ರೂಢಿ). ೩. = ಮಹತ್ತ್ವ ೨ : ದೇವತಾತ್ಮನಾದ ಸವಿತೃವಿನ ಸಂಚಾರಮಾರ್ಗ ವನ್ನೇ ಅನುಸರಿಸಿ ಇತರ ದೇವತೆಗಳೆಲ್ಲರೂ ಶಕ್ತಿಯೊಡಗೂಡಿದ ಮಹತ್ವ ವನ್ನು ಪಡೆಯುತ್ತಾರೆ (ಋಕ್ಸಾರ. ೦೭೦). ೪. ಪ್ರಾಮುಖ್ಯತೆ : ಅವರು ಅವಳ ಮಾತಿಗೆ ಹೆಚ್ಚಿನ ಮಹತ್ವ ಕೊಡಲಿಲ್ಲ (ಕಲ್ಯಾಣ. ೦೦೮). [<ಸಂ. ಮಹತ್ತ್ವ]

**ಮಹತ್ವತೆ** (ನಾ). ಹಿರಿಮೆ ; ಘನತೆ : ದೇವ ನಿಮ್ಮ ಮಹತ್ವತೆಯನಾ ದೇವದೇವನೆ ಬಲ್ಲನು (ಬಸವ. ೩೯-೭೨). [<ಸಂ. ಮಹತ್ತ್ವತಾ]

**ಮಹತ್ವಾಕಾಂಕ್ಷಿ** (ನಾ). ಹಿರಿದಾದ ಆಸೆಯುಳ್ಳವನು ; ಮಹತ್ತರ ವಾದ ಆಕಾಂಕ್ಷೆಯುಳ್ಳವನು : ಅವರನ್ನೆಲ್ಲಾ ನಾನು ಅರಿಯಬೇಕು ಎನ್ನುವಷ್ಟು ಮಹತ್ವಾಕಾಂಕ್ಷಿ ನಾನಲ್ಲ (ಮೂಕಜ್ಜಿ. ೨೬೧). [<ಸಂ. ಮಹತ್ವಾಕಾಂಕ್ಷಿನ್]

**ಮಹತ್ವಾಕಾಂಕ್ಷೆ** (ನಾ). ಮಹತ್ವಪೂರ್ಣವಾದ ಆಸೆ ; ದೊಡ್ಡ ಅಪೇಕ್ಷೆ : ನನ್ನ ಮಹತ್ವಾಕಾಂಕ್ಷೆಯು ಇಷ್ಟು ದೂರ ಎಂದೆಂದಿಗೂ ಓಡಲಾರದು (ನೃಶಿಹ. ೦೨). [< ಸಂ. ಮಹತ್ತ್ವಾಕಾಂಕ್ಷಾ]

**ಮಹದುದ್ಯಮ** (ನಾ). ೧. ದೊಡ್ಡಪ್ರಯತ್ನ ; ಮಹಾಯತ್ನ. ೨. ಮಹಾಸಾಹಸಿ ; ಮಹಾಪ್ರಯತ್ನಶೀಲ : ಆಕೆಯ ಸುತರು ಮಹದುದ್ಯಮರು (ಕುವ್ಯಾ.ಉ. ೬-೨೦). [ಸಂ.]

**ಮಹದ್ಬ್ರಹ್ಮಚರ್ಯ** (ನಾ). ೧. ಶ್ರೇಷ್ಠವಾದ ಬ್ರಹ್ಮಚರ್ಯ. ೨. [ಜೈನ] ಉಪಾಸಕಗುಣಸ್ಥಾನಗಳೆಂದು ಪ್ರಸಿದ್ಧವಾಗಿರುವ ಹನ್ನೊಂದು ಬಗೆಯ ಸಾಧನೆಗಳಲ್ಲಿ ಒಂದು : ಸಮ್ಯಕ್ತ್ವಂ ಸದ್ವ್ರತೌಘಂ . . . ಮಹದ್ಬ್ರಹ್ಮಚರ್ಯಂ . . . ಭೂಮ್ಯುದ್ದಿಷ್ಟಪ್ರದೇಶ ತ್ಯಜನಮುಮಿವುದೇಕಾದಶಂ ಪೇಚರೇಂದ್ರಾ (ಶಾಂತಿಪು. ೭-೩೦). [ಸಂ.]

**ಮಹನವಮಿ** 'ಮಹಾನವಮಿ' ನೋ.

**ಮಹನೀಯ** (ಗು). ೧. ಗೌರವಕ್ಕೆ ಪಾತ್ರವಾದ ; ಸುಪ್ರಸಿದ್ಧ ವಾದ : ಅಂತಮೇಯುಮಹನೀಯುಮಹಿಮನುಂ ಕುಂತಳರಾಜ್ಯಲಕ್ಷ್ಮೀ ಲತಾವಸಂತನುಂ . . . ಎನಿಸಿದ . . . ಮಧುವಪರಸಂ ನಿಜಜನಕನೆನಿಸಿದ (ಕಶಿಶ. ೩-೨-೦೯೨ ; 1058) ; ನಿನ್ನ ಮಹನೀಯಪ್ರಬಲಿತೋತ್ಸನ್ನನಿಜ ಗುರುಭಕ್ತಿಯುತಮಹಿಮೋನ್ನತಿಕೆಯನದಾರು ಬಲ್ಲರು (ಬಸವ. ೩೯-೬೭). (ನಾ). ೨. ಮನ್ನಣೆಗೆ ಪಾತ್ರನಾದವನು ; ಕೀರ್ತಿವಂತ. [ಸಂ.]

**ಮಹನೃಪತಿ** (ನಾ). ಮಹಾರಾಜ ; ದೊಡ್ಡಅರಸ : ಆ ನಾಚಿದಣ್ಣ ನಾಥನನೂನಗುಣಾ ಚಕ್ರವರ್ತ್ತಿ ದಯೆಯಿಂ ಬೆಸಸಲು ತಾನೇಯು[ಮಾ] [ಮಹ]ನೃಪತಿಗೆ ಮಾನಸನೆನೆ ನಿಖಿಳಮಂತ್ರಿಪದಮಂ ತಳೆದ (ಎಂ. XXVIII. ೩೯-೨೯; 1082). [< ಸಂ. ಮಹಾನೃಪತಿ]

**ಮಹಬೂಬಿ** (ನಾ). ಒಂದು ಚಿನ್ನದ ನಾಣ್ಯ : "ಐದುಸಾವಿರ ಮಹ ಬೂಬಿ, ಕೊಡುವೆಯಾ ?" ಎಂದನು. (ಮಹಬೂಬಿ ಎಂದರೆ ಚಿನ್ನದ ನಾಣ್ಯ. ಸುಮಾರು ಹತ್ತು ರೂ. ಬಾಳುವುದು) (ದೇಶಾಂತ. ೯೯). [← ಅರ. ಹಿಂ. ಮಹಬೂಬಾ = ಪ್ರೇಯಸಿ]

**ಮಹಮನೆ** 'ಮಹಾಮನೆ' ನೋ.

**ಮಹಮೇರು** (ನಾ). ದೊಡ್ಡದಾದ ಮೇರುಪರ್ವತ ; ಮಹಾಮೇರು : ಅಂದು ಮಹಮೇರುಶೃಂಗದ ಕೆಳಗಣಂತರದೊಳೊಂದುಗುಹೆಯೊಳಗಿರ್ದು ಮಾತಾಡುತಿರೆ ಪಂಚಸುರವರರು ತಂತಮ್ಮೊಳು (ತುರಂಗ. ೯೩-೦೩). [< ಸಂ. ಮಹಾಮೇರು]

**ಮಹಮ್ಮದೀಯ** 'ಮುಹಮ್ಮದೀಯ' ನೋ.

**ಮಹರಾಜ** (ನಾ). ೧. ದೊಡ್ಡರಾಜ : (೬). ೨. ಅಡುಗೆಮಾಡುವವನು ; ಅಡುಗೆಭಟ್ಟ : ದೇಸಾಯರಿಗಾಗಿ ವಿಮಲೆಯು ಮಹರಾಜನನ್ನು ಕರೆದು ಅಡಿಗೆ ಮಾಡಿಸಿದಳು (ಸಮಾಜ. ೩೦೯). [←ಹಿಂ. ಮಹರಾಜ್, ಮಹಾರಾಜ್. / ಸಂ. ಮಹಾರಾಜನ್]

**ಮಹರಾಯ** 'ಮಹಾರಾಯ' ನೋ.

**ಮಹರಾಯಿತಿ** 'ಮಹಾರಾಯಿತಿ' ನೋ.

**ಮಹರ್ಧಿಕ** (ನಾ). ತುಂಬ ಪ್ರಭಾವವುಳ್ಳವನು : ಭಾಸುರದೇವಕೋಟಿ ವಿಭುವಪ್ಪ ಮಹರ್ಧಿಕನಪ್ಪ ವಾಸವಂಗಾಸನಕಂಪಮಂ ಪಡೆದು (ಆದಿಪು. ೦೬-೬೦) ; ನಿಡಿಗನುಂ ರಾಜಕಪೋತಮುಂ . . . ಮುಡುಪಿ ಭವನಾಮರ ಲೋಕದೊಳ್ ಮಹರ್ಧಿಕರಮರರಾದರ್ (ಶಾಂತಿಪು. ೯-೯೯ ವ). [ಸಂ.]

**ಮಹರ್ಲೋಕ** (ನಾ). ಏಳು ಊರ್ಧ್ವಲೋಕಗಳಲ್ಲಿ ನಾಲ್ಕನೆಯದು : ಪರಮಜಂಗಮದಲ್ಲಿ ಹದಿನಾಲ್ಕುಲೋಕಂಗಳಡಂಗಿದವು. . . ವಕ್ಷದಲ್ಲಿ ಮಹರ್ಲೋಕ (ಅಬಂಡೀ. ೦೯೨-೦೨೯). [ಸಂ.]

**ಮಹರ್ಷಿ** (ನಾ). ಶ್ರೇಷ್ಠನಾದ ಋಷಿ : ಮಹಾತಪಸ್ವಿ : ಶ್ರೀರಾಮ ಕಥೆಯಂ ಮಹರ್ಷಿ ನಾರದವೀಣೆಯಿಂ ಕೇಳ್ದು (ಶ್ರೀರಾಮಾ. ೦-೦); ಮಹರ್ಷಿ ಗಳ ಸಂದೇಶವನ್ನು ಲೋಕಕ್ಕೆ ಪ್ರಕಾಶಪಡಿಸುವವರಾದ್ದರಿಂದ ವ್ಯಾಖ್ಯಾ ಕಾರರ ಪ್ರಭಾವವೂ ಅತಿಶಯವಾದದ್ದೆ (ಋಕ್ಸಾರ. ೯೯ ಪೀಠಿ). [ಸಂ.]

**ಮಹಲ್** 'ಮಹಾಲು' ನೋ.

**ಮಹಲಕರಿ** 'ಮಹಾಲಕರಿ' ನೋ.

**ಮಹಲದಾರ** (ನಾ). ಮಹಲಿನ ಮೇಲ್ವಿಚಾರಣೆಯನ್ನು ನೋಡಿ ಕೊಳ್ಳುವ ಅಧಿಕಾರಿ : ಚೋಪದಾರ, ಮಹಲದಾರ, ನಕೀಬ . . . ಸಂಗೀತಗಾರ ಮುಂತಾದವರು (ಮಹಾಮಂ. I. ೨೨೮) ; ಒಂದು ದಿನ ಅಲಿಆದಿಲ್‌ಷಾಹನ ಮಹಲದಾರನು . . . ತಾನು ಬಂದಿರುವ ವಿಷಯ ವನ್ನು ಅರಸರಿಗೆ ಹೇಳಿ ಕಳುಹಿಸಿದನು (ಐಕ್ಯರು. ೦). [ಮಹಲ್ (< ಮಹಾಲು) + – ದಾರ್]

**ಮಹಲು** 'ಮಹಾಲು' ನೋ.

**ಮಹಪುರುಮೆ** (ನಾ). ಒಂದು ಬಗೆಯ ದೊಡ್ಡವಾದ್ಯ : ಸುಸ್ವರಪೂರಿತ ಮಹಪುರುಮೆಗಳಜಿಟ್ಟಿಮವಾಗ (ಕೋಳಶ. ೬-೦೭). [< ಮಹಾ + ಉರುಮೆ]

**ಮಹಸೂಲು** (ನಾ). ೧. ಕಂದಾಯ ; ತೆರಿಗೆ ; ಸುಂಕ : ಈ ಮಹಸೂಲಿನಲ್ಲಿ ಸ್ಥಳ ಖರ್ಚು ಹೋಗಲಾಗಿ ಬಾಕಿ . . . ವಸೂಲು ಮಾಡಿಕೊಂಡು (**ಮಹಾಪಂ. II, ೬೬**); ಸರಕುಗಳ ಮೇಲೆ ಸುಂಕ ತೆಗೆದುಕೊಳ್ಳಬೇಕೆಂಬ ಅರ್ಥವುಳ್ಳ ರೆವಿನ್ಯೂ—ಆಕ್ಟು (ಮಹಸೂಲು ಖಾತೆಯ ಸಂಬಂಧದ ಆಕ್ಟು) (**ಇಂಗ್ಲಂಡ. ೨೦೬**). ೨. ಜಮೀನಿನಿಂದ ಬರುವ ಆದಾಯ,–ಹುಟ್ಟುವಳಿ: ಕೋರುಪಾಲನ್ನು ಗೌಡರಿಗೆ ಪಂಚಿಟ್ಟಿಸಿ ತನ್ನ ಪಾಲಿನ ಮಹಸೂಲಿನಲ್ಲಿ ಮಿತವ್ಯಯದಿಂದ ಜೀವನ ಸಾಗಿಸಿ ಪಾಯಪ್ಪ . . . ಖಾತೇದಾರನಾಗಿದ್ದ (**ಮಳೆಪ. ೦೦೯**). [←ಅರೆ. ಹಿಂ. ಮರಾ. ಮಹಸೂಲ್]

**ಮಹಸೂಲುದಾರ** (ನಾ). ಕಂದಾಯವನ್ನು ವಸೂಲು ಮಾಡುವವನು : (*). [ಮಹಸೂಲು + –ದಾರ್,/ ಹಿಂ. ಮಹಸೂಲದಾರ್=ಕಂದಾಯವನ್ನು ತೆರುವವನು]

**ಮಹಳ, ಮಾಹಳ, ಮಾಳ್ಯ, ಮಾಳಯ** (ನಾ). ೧. ಭಾದ್ರಪದ ಕೃಷ್ಣ ಅಮಾವಾಸ್ಯೆ ಮತ್ತು ಅಂದು ಸರ್ವಪಿತೃಗಳಿಗೆ ಮಾಡುವ ಶ್ರಾದ್ಧ : "ಮಹಳ—ಮಹಾಲಯ = ಒಂದು ಪಿತೃಹಬ್ಬ" (**ಕಿಟ್ಟೆಲ್ ಕೋ. ೩೯**) ; ಮಹಳದ ಪಕ್ಷದೊಳೊಂದುದಿವಸಂ . . . ಆಕಂಠೋಷ್ಣಂಬರ ಮುಂಡೊಯ್ಯನೆ ಪಾರ್ವಂ ಬಂದಾ ಕೊಡನ ಕೆಲಗೆ ಪಟ್ಟಿರ್ದಾಗಳ್ (**ಕಂಕಕಂ. ೦೮೩–೨೩**) ; ಏರ್ವೆಯ ಪೋರಿಯನಿಕ್ಕಿದನೂರ್ವಾರಿಗೆ ಮತ್ತಮದನೆ ಮಹಳಕ್ಕಿತ್ತಂ (**ಮಕೋಶ. ೩–೫೬**). **ಮಾಹಳ** : ೧. ಮಾಹಳಪಿತೃಕಾರ್ಯಂ ಮೊದಲಾದ ನಿಮಿತ್ತಂಗಳಂ ಮಾಡುವಲ್ಲಿ (**ಶಬ್ದಾರ. ೪**). ೨. **ಅಮಾವಾಸ್ಯೆಯ ಸಮಯ (?)** : ನೆಟಿಲೊಳ್ ತಲೆಗಾಣದೊಡಂ ನೆಟಿಲೊಳ್ ರೌ(ಧಿ)ದ್ರುಂಗಳಾಗಿ ತೋಱುವೊಡಂ ಮಾಹಳವಲ್ಲದೆ ಕುಂದುವೊಡಂ ಕಟಿಯೆ ಕರಂ ರೂಪುಗೆಟ್ಟಿರಲ್ ಮರಣಭಯಂ (**ಅಕ್ಷರಾ. ೬–೪೩**). **ಮಾಳ್ಯ** : ೧. "ಮಾಳ-ಮಹಾಲಯ" (**ಕಿಟ್ಟೆಲ್ ಕೋ. ೪೩**); ಸೂಳೆಯ ಮಗ ಮಾ[**ಪಾಠಾಂ.** ಮಹ]ಳವ ಮಾಡಿದರೆ ತಾಯ ಹೆಸರಾಯಿತಲ್ಲದೆ ತಂದೆಯ ಹೆಸರಿಲ್ಲ (**ಬಸವ. ೨೨೬**) ; ಹಾರುವ ಮಾಳ್ಯವ ಕಂಡಂತೆ . . . ತಾನು ಚನ್ನಬಸವಣ್ಣನ ಪಾದಕಮಲವ ನೋಡಿ ಹರುಷಿತನಾದ (**ಸಿದ್ಧೇಶ. ೨೦–೦೦೯**) ; ಮರುಳುಹಾರುವರು . . . ಮಾಳದ ಮನೆಯ ಹಿರಿದು ಚೌಕದ ಮಣೆಯ ಕುಳಿತುಂಬ ವಿದ್ಯೆಯನ್ನರಿವಿರಲ್ಲದೆ ನಿಮಗೆ ತಿಳಿಯದೀ ಸಂಗರದ ಮಾತು (**ತರಂಗ. ೪೬–೦೩**). **ಮಾಳಯ** : ೧. ಛಟನಲ್ಲು ಛಟ್ಟಂ ; ಕೊಂದುದು ಬಿಲ್ಲುಲ್ಲು ಫುಲ್ ; ಬಂದುದು ಕಾಳೆಗದ ಮೊನೆಗಲ್ಲು ಮಾಳಯದ ಮನೆಗೆಂದಂ (**ರಾಮಾಶ್ವ. ೬೨–೦೩**). [< ಸಂ. ಮಹಾಲಯ]

**ಮಹಳಪಕ್ಷ, ಮಾಳಪಕ್ಷ** (ನಾ). ಭಾದ್ರಪದ ಬಹುಳಪಕ್ಷ,– ಕೃಷ್ಣಪಕ್ಷ: ಮುನ್ನಮೆ ಸತ್ತರಂ ಪಿತರ ಪಿತಾಮಹರ್ಕಳೆಂದವರ್ಗೆ ಮಹಳ [**ಪಾಠಾಂ.**ಮಹಾ] ಪಕ್ಷದೊಳ್ಪಂಚಭಕ್ಷ್ಯ ಪಾಯಸತುಪ್ಪಮಂ ಪೆರ್ಚಿಗಿಕ್ಕೆ ಸ್ವರ್ಗಮಾದನೇಕ ಗತಿಗಳೊಳಿರ್ದ ಪಿತಾಮಹಾಪಿತರ್ಕಳ ಬಸಿರ್ತೀವಲಕ್ಕು ಗಡಂ (**ಧರ್ಮಾಮೃ. ೯–೬೨ ವ**) ; ಬೌದ್ಧಂ . . . ಯಜ್ಞವಿಧಿಯೊಳಂ ಮಹಳಪಕ್ಷದೊಳಂ ಪಿತೃಕಾರ್ಯದೊಳಂ ವಿವಾಹೋತ್ಸವದೊಳಂ ಪಶು ಮೊದಲಾಗೊಡೆಯ ಪ್ರಾಣಿಗಳಂ ಕೊಂದವಶ್ಯಂ ತಿನಲಕ್ಕುಂ (**ರತ್ನಕ. ೦–೦೦ ವ**). **ಮಾಳಪಕ್ಷ** : ಭಾದ್ರಪದಕೃಷ್ಣಪಕ್ಷವನ್ನು 'ಮಾಳಪಕ್ಷ' ಎಂದು ಕರೆಯುವರು (**ಹುಬ್ಬಿಹ. ೬೨**). [ಮಹಳ + ಪಕ್ಷ]

**ಮಹಾ** (ಗು). ೧. ದೊಡ್ಡ ; ಹಿರಿಯ : 'ಮಹಾಪರಿಷೆ', 'ಮಹಾಮಂಗಳಾರತಿ' ಪರಾ. ೨. ಶ್ರೇಷ್ಠ ; ಉತ್ಕೃಷ್ಟ : 'ಮಹಾಪಾರುವ' ಪರಾ. ೩. ಸಮೃದ್ಧವಾದ ; ಹೆಚ್ಚಾದ : 'ಮಹಾಬೆಳಗು' ಪರಾ. (ನಾ). ೪. ದೊಡ್ಡದು ; ಮಹತ್ತ್ವವಾದುದು : ಇದೇನು ಮಹಾ ! ಅಷ್ಟು ಹೋಗುವುದಕ್ಕೆ ಆಗದಿದ್ದರೆ ನಾನೇ ಹೋಗುತ್ತೇನೆ (**ಕಂಠಾಪು. ೦**); ಅದೇನು ಮಹಾ ! ಯಾರು ಬೇಕಾದರೂ ಆ ಕೆಲಸವನ್ನು ಮಾಡಬಹುದು (**ರೂಶಿ**). ೫. ಬಹಳ ; ತುಂಬ ; ಹೆಚ್ಚು : P ಈ ರೂಪವು ಕೆಲವು ಸಲ ಕನ್ನಡಶಬ್ದಗಳೊಡನೆ ಕೂಡಿದಾಗ ಅವ್ಯಯದಂತೆ ಪ್ರಯೋಗವಾಗುತ್ತದೆ : ತಾನು ಮಹಾ ತಿಳಿದವಳು ಅಂತ ಅವಳು "ಅಂದುಕೊಂಡಿದ್ದಾಳೆ (**ರೂಶಿ**). ೬. ದೊಡ್ಡ ಮನುಷ್ಯ ; ಶ್ರೇಷ್ಠ ವ್ಯಕ್ತಿ : ಅವನು . . . ಮೇಷ್ಟರುಗಳಿಗೆ ಕಾಕಹೊಡೆದು ಪ್ರಶ್ನೆಗಳನ್ನೆಲ್ಲ ಮೊದಲೇ ತಿಳಿದುಕೊಂಡು ಬಿಟ್ಟು ಮಹಾ ಅಂತ ನಮ್ಮೆದುರಿಗೆಲ್ಲ ಜಂಬ ಮಾಡ್ತಾನೆ (**ಸ್ವಾಮಿಸ್ಕೇ. ೯**). P ಸಂಸ್ಕೃತದ 'ಮಹತ್' ಎಂಬ ಶಬ್ದವು ಸಮಾಸಗಳ ಮೊದಲಲ್ಲಿ ಕೆಲವು ಸಲ 'ಮಹಾ' ಎಂಬ ರೂಪವನ್ನು ಹೊಂದುತ್ತದೆ. [< ಸಂ. ಮಹತ್]

**ಮಹಾಂಗ** (ನಾ). ೧. ಒಂಟೆ : "ಉಷ್ಟ್ರಃ . . . ಮಹಾಂಗಃ ವಂಟೆಯ ಹೆಸರುಗಳು" (**ಸಿದ್ಧಾಂತ. ೨೯೬**). ೨. ಒಂದು ಬಗೆಯ ಇಲಿ. ೩. ಶಿವನ ಒಂದು ಹೆಸರು. [ಸಂ.]

**ಮಹಾಂತ** (ಗು). ೧. ಅಧಿಕವಾದ ; ಹೆಚ್ಚಿನ ; ಅತಿಶಯವಾದ : ಅಭಿಮನ್ಯು ಮಹಾಂತಪರಾಕ್ರಮದಿ . . . ಸೂರೆಗೊಂಬೆನು ನಿಮ್ಮ ಪಾರ್ಥದಿ ದುರ್ಗವ ಪೌರುಷದ ನೋಡೆಂದಾ (**ಅಭಿಕಾ. ೯**). ೨. ವಿಶಾಲವಾದ ; ವಿಸ್ತಾರವಾದ : ಅಂತಹೀನಮಹಾಂತಸಂತತಮವಿಶ್ರಾಂತ ಜಲಧಿಯ ಬೃಹನ್ನೀಲಿಮಾವಿರಾಡ್‌ರಂಗದೊಳ್ . . . ಗಿರಿಯ ಪಂಕ್ತಿಗಳ್ ಪರ್ವಿದುವು (**ಶ್ರೀರಾಪಪ. ೦೯೦–೯೨೯**). (ನಾ). ೩. ವಿಶಾಲವಾದುದು : ವಿಸ್ತಾರವಾದುದು : ನಿಶ್ಚಲಮುಂ ಮಹಾಂತಮುಮಮಗಾಹಿತ ಸಮಸ್ತಪದಾರ್ಥಮುಮಾದ ಗಗನಮಂಡಲಮಂ . . . ನೋಡುತ್ತಿರ್ದನ್ನೆಗಂ (**ಕಂಪ್ರತಿ. ೯–೪ ವ**). ೪. ಹೇರಳ ; ಯಥೇಚ್ಛ ; ಸಮೃದ್ಧಿ : ಧೃತರಾಷ್ಟ್ರನ ಮಹಾಂತವಾದ ಭೋಗವನ್ನು ನೋಡು. ನಮ್ಮ ಬದುಕನ್ನೂ ನೋಡು (**ಶಿಕ್ಷಣಕ. ೦೯೩**). ೫. ಮಹಾತ್ಮ ; ಶ್ರೇಷ್ಠ ; ಪೂಜ್ಯವ್ಯಕ್ತಿ : ಇದು ಕಾರಣ ಗುಹೇಶ್ವರಲಿಂಗವ ತನ್ನೊಳಗರಿದೆನೆಂಬ ಮಹಾಂ[**ಪಾಠಾಂ.** ಹಂ]ತಂಗೆ ಸತ್ಕ್ರಿಯಾಚರಣೆಯೇ ಸಾಧನೆ ಕಾಣ ಭೋ (**ಅವತಂ. ೦೬೯–೬೬೧**) ; ಕೇಶಿರಾಜಯ್ಯಂ ಮಹಾಂತನು ಮಾದಿರಾಜಯ್ಯಂ ಮೊದಲೆನಿಪ್ಪಾ ಕಟಕದೊಳಗಿರುತಮಿಹ ಸರ್ವಲಿಂಗವಂತರು . . . ಬಿರೆ (**ಬಸವಪು. ೬೦–೯**) ; ಎನ್ನಯ ಭಾಗ್ಯಮೇ ತನುವ ಮಟಿಂತೆ ಕೈಕೊಂಡವೊಲು ಬಂದೆ ಮಹಾಂತ (**ಶಿಶಾಗ. ೪–೬–೩೬**). [<ಸಂ. ಮಹತ್]

**ಮಹಾಂತು** (ನಾ). ಅತ್ಯಂತ ಶ್ರೇಷ್ಠವಾದುದು : ನಾದಬಿಂದುಕಳಾತೀತವಾದ ಪರವಸ್ತುವೆ ಮಹಾಂತು ನೋಡಾ ಶ್ರುತಿತತಿಗಸಾಧ್ಯವಾದ ಪರವಸ್ತುವೆ ಮಹಾಂತು ನೋಡಾ (**ಅಖಂಡೇ. ೪೦೦–೬೬**). [<ಮಹಾಂತ]

**ಮಹಾಂಧಕಾರ** (ನಾ). ಕಗ್ಗತ್ತಲೆ ; ಗಾಢಾಂಧಕಾರ : ಕಲ್ಪಾಂತದಲಿ ಬಿಡಬಿರುದುದೀ ಬ್ರಹ್ಮಾಂಡ . . . ಇನಶಶಿಕಿರಣವಿಲ್ಲ ಮಹಾಂಧಕಾರ ಸಘೂರವಾಯ್ತು (**ಕುಮಾರ. ೦೯–೨೨**) ; ದಿಕ್ಚಕ್ರದೊಳ್ ಕಾಳಾಭೀಳಮಹಾಂಧಕಾರವೆಸೆಗುಂ ಕಣ್ಗಾಲ್ಗೆ ತಾವೀಯದೇ (**ಹುಮ್ಮಾರ. ೩–೦೬**). [ಸಂ.]

**ಮಹಾಂಬುಜ** (ನಾ). ೧. ಒಂದು ನರಕದ ಹೆಸರು : ರೌರವ ಧ್ವಾಂತ . . . ಮಹಾಂಬುಜ ಕಾಲಸೂತ್ರಗಳೆಂಬವೇ ಎಂಟು ನರಕಂಗಳು (**ಶಿವತ. ೦೬೯**). ೨. [ಗಣಿತ] ಒಂದು ದೊಡ್ಡ ಸಂಖ್ಯೆ ; ಒಂದು ಲಕ್ಷಕೋಟಿ. [ಸಂ.]

**ಮಹಾಕಂದ** (ನಾ). ಬೆಳ್ಳುಳ್ಳಿ, ಹಸಿಶುಂಠಿ ಮುಂತಾದ ಗಡ್ಡೆ ಮತ್ತು ಅದರ ಸಸ್ಯ : "ಮಹಿಷೀಕಂದಃ—ಮಹಾಕಂದ" (**೬೩೦. ೦೨೨**). [ಸಂ.]

**ಮಹಾಕಲ್ಪ** (ನಾ). ೧. ಅತಿದೀರ್ಘವಾದ ಒಂದು ಕಾಲಚಕ್ರ ; ಬ್ರಹ್ಮನ ಆಯುಸ್ಸಿನ ನೂರು ವರ್ಷಗಳಷ್ಟು ಕಾಲ. ೨. ಶಿವನ ಹೆಸರುಗಳಲ್ಲಿ ಒಂದು. ೩. [ದ್ವೈತ] ಸೃಷ್ಟಿಕಾಲದ ಒಂದು ಭಾಗ ; ಅಣುವಿನಿಂದ ಹಿಡಿದು ಮಹತ್ತಿನ ವರೆಗೆ ಸೃಷ್ಟಿಸುವ ಕಾಲ : ಸೃಷ್ಟಿ

ಪಿಶಂಗಿತಾರುಣಿತದಿಙ್ಮುಖಿಮಾದುದು ತನ್ನಮಹೋತ್ಸವಂ (ಆದಿಪು. ೬-೧೦೩); ಆ ಮಹೋತ್ಸವವೇಳುದಿನವಭಿರಾಮರಂಜಿತವಾಯ್ತು (ಕುಮ್ಯಾಸ. ೦-೧೯). ೨. ಅತಿಯಾದ ಸಂಭ್ರಮ,- ಉತ್ಸಾಹ ; ಅಧಿಕವಾದ ಸಡಗರ,- ವಿಜೃಂಭಣೆ : ಸರ್ವತೋಭದ್ರಮೆಂಬ ಮಹಾಮಹಿಮೆಯಿಂ ಮಹೋತ್ಸವ ದಿಂದೆಂಟುದಿವಸಂಬರಂ ಮಾಡಿ (ಆದಿಪು. ೧೬-೬೨ ವ) ; ಪ್ರೇಮಂ ಪ್ರೀತಿ ಮಹೋತ್ಸವಂ ಪ್ರಮೋದಂ ಸಮಗತಿಯಿಂದೊಂದಿ ಕುಂದದಿರ್ಕನವರತಂ (ವಸ್ತುಕೋ. ೯೬-೨) ; ಅತಿಮನೋಹರಮೆನಿಪ ವಾಜಿಯಂ ಕಂಡು ಹರ್ಷಿತನಾಗಿ ನೋಡುತಿರ್ದಂ ಕಲಾವಿದನಪ್ಪ ಮಾರುತಿ ಮಹೋತ್ಸವದೊಳು (ಜೈಮಿಭಾ. ೯-೬). ೩. ಅತಿಯಾದ ಸಂತೋಷ ; ಅಧಿಕವಾದ ಹಿಗ್ಗು : ನಿಜನಾಥನ ಮಾತಂಬಿಡುರೋಚಿ ಕುಡೆ ಹೃತ್ಕುಮುದಶ್ರೀಗೆಂದುಮಿಲ್ಲದ ಮಹೋತ್ಸವಮಂ (ಪುಷ್ಪಪು. ೯-೧೦೨). [ಸಂ.]

**ಮಹೋತ್ಸಾಹ** (ನಾ). ೧. ಅತಿಯಾದ ಉತ್ಸಾಹ,- ಪುರುಷ : ಶಾಂತಿನಾಥಕಥೆಯಂ ಲೇಸಪ್ಪಿನಂ ಸರ್ವದೇವಕವೀಂದ್ರಂ ಬರೆವಂ ಬುಧರ್ ಪೊಗಳ್ವಿನಂ ತನ್ನಂ ಮಹೋತ್ಸಾಹದಿಂದಂ (ಶಾಂತಿಪು. ೦೨-೮೦); ಮುರಾರಿ ವತ್ಸಕುಲವಂ ಕಾದಂ ಮಹೋತ್ಸಾಹದಿಂದಂ (ಜಗವಿ. ೩-೬೦). ೨. ಅತಿಯಾದ ಉತ್ಸಾಹವುಳ್ಳವನು ; ಅತ್ಯುತ್ಸಾಹಿ : "ಮಹೋತ್ಸಾಹಃ, ಮಹೋದ್ಯೋಗಃ, ಮಹೇಚ್ಛಃ, ಮಹಾಮನಾಃ- ಈ ೪ ಪೆಚ್ಚಾಳು" (ಹಲಾಯು. ೩೬-೨೧೦). [ಸಂ.]

**ಮಹೋದಧಿ** (ನಾ). ದೊಡ್ಡ ಸಮುದ್ರ ; ವಿಸ್ತಾರವಾದ ಕಡಲು : ಶ್ವವ್ವಚನಮಹೋದಧಿಯೊಳ್ ಕಿಱಿದನಱಿವುದಂ ನುಡಿವೆಂ (ಶಾಂತಿಪು. ೨-೩೭); ಗಂಗೆಯು ಮಹೋದಧಿಯಂತೆ ವಿಸ್ತಾರವಾಗಿ ಹರಿಯುತ್ತಿತ್ತು (ವಶಭಾ. ೩೨೭). [ಸಂ.]

**ಮಹೋದಯ** (ನಾ). ೧. ಅಧಿಕವಾದ ಏಳಿಗೆ,-ಅಭಿವೃದ್ಧಿ, ಮಹೋನ್ನತಿ : ವಿದ್ಯಾನಂದಸ್ವಾಮಿಯ ಮಹೋದಯಂ ಕೇವಳಮೇ (ಪುಷ್ಪಪು. ೦-೨೩). ೨. ಅತ್ಯಂತ ಹಿರಿಮೆಯಿಂದ ಕೂಡಿರುವುದು ; ಘನತೆಯುಳ್ಳದು : ಅಸಹಾಯಸಾಹಸವಿನೋದಿ ವಿವಿಕ್ತಚಿತ್ರಪ್ರಸವಪ್ರಕಾಶಿತ ಮಹೋದಯತತ್ತ್ವಸತ್ವ . . . ನಿರ್ಮಲಯಶೋವಿವಿಧಾವತಂಸಂ (ಕವಿರಾ. ೩-೨೨೯). ೩. ಒಳ್ಳೆಯ ಅದೃಷ್ಟ ; ಸುದೈವ. ೪. ಹಿರಿಮೆ : ಶ್ರೇಷ್ಠತೆ. ೫. ಅಧಿಕವಾದ ಸಂತೋಷವನ್ನು ಹೊಂದಿರುವುದು ಅಥವಾ ಕೊಡುವಂಥದು. ೬. ಮೋಕ್ಷ ; ಕೈವಲ್ಯ. ೭. ಪ್ರಭು ; ಒಡೆಯ : ಮಹಿತಮಹೋದಯಂ ಕಮಳಬಂಧುರಸಸ್ಮಿತವಕ್ತ್ರಭಾಸುರಂ (ರಾಜಶೇ. ೦-೬). ೮. ಸುದೈವಿ ; ಪುಣ್ಯಶಾಲಿ ; ಭಾಗ್ಯವಂತ : ಮಹೋದಯನೆಂಬುದು ದೇವಭಕ್ತನೆಂಬುದು ಪತಿಭಕ್ತನೆಂಬುದು ಜಗದ್ವಳಯಂ ಪಡೆವಳ್ಳೆತ್ಸಲಪನು (ಅಜಿಪು. ೦೨-೨೩). ೯. ಗಣ್ಯವ್ಯಕ್ತಿ ; ಮಹಾಶಯ : ಉಪನಿಷತ್ತುಗಳನ್ನು ಕುರಿತು ಮಾಡಿದ ಭಾಷಣಮಾಲೆಯನ್ನು ಕೇಳಿ ಮ್ಯಾಕ್ಸ್‌ಮೂಲರ್ ಮಹೋದಯನ ಗಮನ ಆ ಕಡೆಗೆ ಹರಿಯಿತು (ಶಾರದ. ೯೭) ; ಗವ್ಹರ್ನರ್ ಮಹೋದಯರು ಸ್ವಯಂ ರಾಜ್ಯತಿಲಕವನ್ನಿಡಲು ಬರುವವರಿದ್ದಾರೆ (ಪ್ರೇಮಾಶ್ರ. ೨೩೩). ೧೦. ಮೊಸರು ಮತ್ತು ಜೇನುತುಪ್ಪಗಳ ಮಿಶ್ರಣ.

**ಮಹೋದಯಪುಣ್ಯಕಾಲ** = ಮಾಘ ಅಥವಾ ಪುಷ್ಯಮಾಸದ ಸೋಮವಾರದಂದು ಸೂರ್ಯೋದಯದಲ್ಲಿ ಅಮಾವಾಸ್ಯೆಯು ಆರಂಭವಾದಾಗ ಶ್ರವಣನಕ್ಷತ್ರವು ಮಧ್ಯ ಮತ್ತು ವ್ಯತೀಪಾತದ ಕೊನೆ ಇವುಗಳ ಯೋಗವಾಗುವ ಒಂದು ಪುಣ್ಯಕಾಲ,- ಪವಿತ್ರವಾದ ಸಮಯ. [ಸಂ.]

**ಮಹೋದರ** (ಗು). ೧. ದೊಡ್ಡಹೊಟ್ಟೆಯುಳ್ಳ ; ಬೊಜ್ಜುಹೊಟ್ಟೆಯಿಂದ ಕೂಡಿದ. (ನಾ). ೨. ದೊಡ್ಡಹೊಟ್ಟೆ : ಮಾತಿಯುಳ್ಳೊಡಿವನಸುರಬಲಿಗೊದಗಿಸಿದ ಕೂಳನತಿಮಹೋದರಕಡಸಿಕೊಂಬನೇ (ಜೈಮಿಭಾ. ೨-೩೬). ೩. ಹೊಟ್ಟೆ ಉಬ್ಬಿಕೊಳ್ಳುವ ಒಂದು ಬಗೆಯ ರೋಗ ; ಜಲೋದರ : ಮಹೋದರ, ಕಾಮಾಲೆ ಮುಂತಾದ ರೋಗಗಳು ಕಾಣಿಸಿದಲ್ಲಿಯೇ . . . ಪ್ರತೀಕಾರವಂ ಮಾಡಬೇಕು (ಸಕಪ್ರ. ೨೨) ; ಯಜ್ಞದಲ್ಲಿ ಮಗನನ್ನು ಅರ್ಪಿಸದೆ ಇದ್ದದ್ದರಿಂದ ವರುಣನ ಶಾಪದ ಫಲವಾಗಿ ಹರಿಶ್ಚಂದ್ರನಿಗೆ ಮಹೋದರವುಂಟಾಯಿತು (ಶಾರದ. ೪೦). ೪. ರಾಮನಿಂದ ಹತನಾದ ಒಬ್ಬ ರಾಕ್ಷಸನ ಹೆಸರು : ಪರಸೈನ್ಯದ ಸುದರ್ಶನಗಜವ ಮುಱಿದು ಮಹೋದರನ ಕೆಡಹಿದನು ಕಲಿನೀಲ (ತೊರರಾ. ೬-೩೭ ಸೂಚನೆ). [ಸಂ.]

**ಮಹೋದ್ಯಮ** (ನಾ). ೧. ಅತಿಯಾದ ಪ್ರಯತ್ನ ; ಉದ್ಯೋಗಶೀಲತೆ. ೨. ದೊಡ್ಡ ಉದ್ಯಮ : ವ್ಯಾಪಾರ ಕೈಗಾರಿಕೆಗಳ ಮಹೋದ್ಯಮಗಳೂ, ಆಹಾರ ಅಭಯ ಔಷಧ ಶಾಸ್ತ್ರದಾನಗಳೂ . . . ಒಂದೇ ಕೊರಳಿನಿಂದ ಸಾರುತ್ತಿವೆ (ಶಿಪಾ. ೦೦೯). ೩. ಅತಿಯಾದ ಉತ್ಸಾಹ : "ಮಹೋದ್ಯಮ ಮುತ್ಸಾಹವೃತ್ತಿ" (ವಸ್ತುಕೋ. ೦೦೩-೨೩). ೪. ಹೆಚ್ಚು ಕ್ರಿಯಾಶಕ್ತಿಯುಳ್ಳವನು ; ಕಠಿಣಕಾರ್ಯಗಳಲ್ಲಿ ತೊಡಗುವವನು : "ಮಹೋತ್ಸಾಹಃ, ಮಹೋದ್ಯಮಃ- ೨ ದುಷ್ಕರವಾದ ಪ್ರಯೋಜನಗಳಲ್ಲೇ ಉದ್ಯೋಗವುಳ್ಳವನ ಪೆಸರು" (ಸಿದ್ಧಾಂತಿ. ೩೨೩). [ಸಂ.]

**ಮಹೋದ್ಯಮಿ** (ನಾ). ಉದ್ಯೋಗಶೀಲಪ್ರವೃತ್ತಿಯುಳ್ಳವನು ; ಯಾವಾಗಲೂ ಕಾರ್ಯತತ್ಪರನಾಗಿರುವವನು : ನಿಪುಣಂ ಮಹೋದ್ಯಮಿ ನಿಗೂಢಾಂಸಂ ಧನುರ್ಗ್ರಹಂ (ಜಾತಿ. ೦೭-೯). [ಸಂ. ಮಹೋದ್ಯಮಿನ್]

**ಮಹೋದ್ಯೋಗ** (ನಾ). ೧. = ಮಹೋದ್ಯಮ ೧ : ಆಹವ ಮಹೋದ್ಯೋಗಕ್ಕೆ ಬೆಱಗಾಯ್ತು ಸುರಕಟಕ (ಕುಮ್ಯಾಭಾ. ೯-೦). ೨. = ಮಹೋದ್ಯಮಿ : "ಮಹೋತ್ಸಾಹಃ, ಮಹೋದ್ಯೋಗಃ, ಮಹೇಚ್ಛಃ, ಮಹಾಮನಾಃ — ಈ ೪ ಪೆಚ್ಚಾಳು" (ಹಲಾಯು. ೩೬-೨೦೦). [ಸಂ.]

**ಮಹೋನ್ನತ** (ಗು). ೧. ಅತ್ಯಂತ ಎತ್ತರವಾದ ; ಬಹು ಔನ್ನತ್ಯದಿಂದ ಕೂಡಿದ. (ನಾ). ೨. ಬಹುಶ್ರೇಷ್ಠವಾದುದು : ಬೇಲೂರಿನಲ್ಲಿ ವಿಜಯನಾರಾಯಣನನ್ನು ಪ್ರತಿಷ್ಠಿಸಿದ ಮಹೋನ್ನತವಾದ ದಿನ ಅದು (ಸಕಪ್ರ. ೩). ೩. ಉತ್ತಮ ವ್ಯಕ್ತಿ; ಉದಾತ್ತ ವ್ಯಕ್ತಿ : ಇನ್ನೊಬ್ಬರನ್ನು ಪ್ರಶಂಸಿಸುವುದು ಮಹೋನ್ನತರ ಲಕ್ಷಣ (ಶಾಂತಲಾ. ೯೯). ೪. ತಾಳೆಮರ. [ಸಂ.]

**ಮಹೋನ್ನತಿ** (ನಾ). ೧. ಅಧಿಕವಾದ ಹಿರಿಮೆ,- ಶ್ರೇಷ್ಠತೆ : ನಿನ್ನ ವಯಿವೆರಸು ನೋಟ್ಪ ಮಹೋನ್ನತಿಯುಂ ಸತ್ಪ್ರಸಾದಮುಂ ಕಿಱುಕುಳನಪ್ಪೆನ್ನೊಂದಿಗನ್ನೊಳನುಚಿತಂ (ಶಾಂತಿಪು. ೩-೯); [ರಾ]ಜಲದೇವಿಯ ಮಹೋನ್ನತಿಯಂತೆನೆ (ಶಾಇಇ. XX, ೨೦೩-೨೦ ; 1247). ೨. ಅತ್ಯುಚ್ಚಸ್ಥಾನ ; ಪರಮಪದವಿ. [ಸಂ.]

**ಮಹೋನ್ನತಿಕ್ಕೆ** (ನಾ). ಅಧಿಕವಾದ ಹಿರಿಮೆ ; ಮಹೋನ್ನತಿ : ಜಲಜಾತವಿರೋಧಿಗೆ ಶೀತಳಮೊಪ್ಪುಗುಮಿಾಗಳಿಂತು ತಾನಂತೆ ಮಹೀತಳದೊಳುಪಾಸಕನಪ್ಪಂಗಳ ವಟ್ಟೊಪ್ಪುಗು ಮಹೋನ್ನತಿಕ್ಕೆಯು ದಾನಂ (ಧರ್ಮಾಮೃ. ೬-೨೨೩). [ ಮಹೋನ್ನತ + – ಇಕ್ಕೆ$_2$ (< –ಇಕೆ ) ]

**ಮಹೋಪಕಾರ** (ನಾ). ಅಧಿಕವಾದ ಸಹಕಾರ,- ನೆರವು ; ದೊಡ್ಡ ಉಪಕಾರ : ಸಿಂಹಾಸನವು . . . ತಮ್ಮ ಸ್ವೀಕೃತಪುತ್ರರಿಗೆ ವಂಶಪಾರಂಪರ್ಯವಾಗಿ ಲಭಿಸುವಂತೆ ಮಾಡಿದ ಮಹೋಪಕಾರಕ್ಕೆ ತಾವು ಗೌರವಪೂರ್ವಕವಾಗಿ ಕೃತಜ್ಞರೆಂಬುದನ್ನು ಅವರ ಸನ್ನಿಧಿಯಲ್ಲಿ ಬಿನ್ನವಿಸುವುದು (ಮಹಾವಂ. II, ೦೨೨). [ಸಂ.]

**ಮಹೋರಗ** (ನಾ). ದೊಡ್ಡಹಾವು; ಮಹಾಸರ್ಪ : ಒಡನೆ ಸುರಾಸುರರ್ ಕನಕಪರ್ವತಮಂ ಕಡೆಗೋಲ ಮಾಡಿ ಪೇಣ್ ಪೆಡೆ ಪಲವಪ್ಪ ವಾಸುಕಿಮಹೋರಗನಂ ಕಡೆಗಣ್ಣಿಮಾಡಿ ಪಾಲ್ಗಡಲನುಪಾಯದಿಂ ಕಡೆಯೆ (ಕಾವ್ಯಸಾ. ೯೩೮ ಓದ್ರ್ಯ) ; ಮತ್ಸರಮಹೋರಗಕ್ಕಮಾಗ್ರಹಮಹಾಗ್ರಹಕ್ಕಂ . . . ತನ್ನನೊಪ್ಪಿಸುವುದು ಮತಿವಂತಂಗೆ ಪುರುಷಾರ್ಥಮಲ್ತು (ಶಾಂತಿಪು. ೩-೭೨ ವ). [ಸಂ.]

**ಮಹೌಷಧ** (ನಾ). ೧. ಶ್ರೇಷ್ಠವಾದ ಔಷಧಿ. ೨. ಒಂದು ಬಗೆಯ ಬೇರು ; ಶುಂಠಿ : "ಶುಂಠೀ, ನಾಗರಂ, ಮಹೌಷಧಂ, ವಿಶ್ವಭೇಷಜಂ· ವಿಶ್ವಾ — ಈ ೫ ಶುಂಠಿ" (ಶಬ್ದಮ. ೦೦೦-೯೭೦). ೩. ಒಂದು ಬಗೆಯ ವಿಷಸಸ್ಯ : "ಮಹೌಷಧಂ — ವತ್ಸನಾಭಿ" (೬ಶಂ. ೦೦೬). ೪. ಬೆಳ್ಳುಳ್ಳಿ. ೫. ಅತಿಬಜೆ. ೬. ಹಿಪ್ಪಲಿ. [ಸಂ.]

**ಮಹೌಷಧಿ** (ನಾ). ೧=ಮಹೌಷಧ ೧. ೨. ಶ್ರೇಷ್ಠವಾದ ಸಸ್ಯ : ಫಲಪಾಕವಿರಾಮಂಗಳಪ್ಪ ಗರ್ಭಷಷ್ಟಿವ್ರೀಹಿಯವಗೋಧೂಮಾದಿ ಮಹೌಷಧಿ [ಶಾಕಾಂ. ಧ]ಗಳುಂ (ಆದಿಪು. ೬-೭೦ ವ) ; ಮಹೌಷಧಿಗಳ್ಕಂಗೊಳಿಸಿರೆ ಪಲ್ಲವತತಿ ಸಂಗಳಿಸಿರೆ ಮಣಿಪೂರ್ಣಕುಂಭಮೊಪ್ಪಿದುದು (ರಾಜಶೇ. ೬-೦೦). ೩. ಗರಿಕೆ ; ದೂರ್ವೆ. [ಸಂ.]

**ಮಳ** 'ಮಲ$_3$' ನೋ.

**ಮಳಗವಾಡಿ** (ನಾ). ಒಂದು ಊರಿನ ಹೆಸರು : ರಾಮಚನ್ದ್ರಭಟಾರರ್ಗ್ಗೆ ಮಡಲೂರು ಮಳಗವಾಡಿಯುಮಂ ಕಾಲಂ ಕರ್ಚ್ಚಿ . . . ಕೊಟ್ಟರ್ (ಎಕ. XI, ಚಿತ್ರದು. ೭೯-೨೯; 968). [ಮಳಗ$_0$ + ಪಾಡಿ$_2$]

**ಮಳಬಿಯ**, ಮಳಬ್ರಿಯ, ಮಳವೆಯ (ನಾ). ಒಂದು ಬಗೆಯ ತೆರಿಗೆ : ಅಂತು ಅಯ್ವುದಶಕಕ್ಕಂ ಮಳಬಿಯ ಸಿದ್ಧಾಯ ಸುಂಕ ಪಾಣ ಆಗಾಂತುಕ ಸರ್ವ್ವಬಾಧೆ ಪರಿಹಾರವಾಗಿ ಅಯ್ವತ್ತುಹೊನ್ನಂ . . . ಧಾರಾಪೂರ್ವಕಂ ಮಾಡಿ ಕೊಟ್ಟ ದತ್ತಿ (ಎಕ. V, ಹಾಸನ. ೭೦-೫೭ ; 1173) ; ಎರಡು ಮನೆಗೆ ಹಣ ಅಯ್ದು ಊರಿಂಗೆ ಮಳಬಿಯ ಹಣ ಮೂಱು (ಎಕ. II, ೩೩೫-೫೭ ; 1195). **ಮಳಬ್ರಿಯ** : ಇದಱ ಮಳಬ್ರಿಯಕ್ಕೆ ಹತ್ತು ಗದ್ಯಾಣ ಪೊನ್ನ ವ್ರಿದ್ಧಿಯಿಂ ನಡೆವನ್ನಾಗಿ (ಪ್ಯಾಆ. ೦೯೯೦, ೩೬-೯೩; 1103); ಮಳಬ್ರಿಯ ಏನು ಬಂದಡಂ ಆ ಸ್ಥಳದಾಚಾರ್ಯ್ಯರು ತಾವೇ ತೆತ್ತು ನಿರ್ನ್ನಯಿಸುವರು (ಎಕ. II, ೩೩೩-೦೬; 1206); ಆ ಸೋಮನಾಥಪುರಕ್ಕೆ ಉರುತ್ಕವಾಗಿ ಬಂದ ಪದಿಕೆ ಹೊರಣೆ ಹೊದಿಕೆ ಮಳಬ್ರಿಯವೊಳಗಾಯಿತ್ತು ಯೇನು ಬಂದಡಂ (ಎಕ. III, ತಿರುಮ. ೯೬-೯೩ ; 1300). **ಮಳವೆಯ** : ಕುದುರೆಸುಂಕ ಪುರದ ಪದಿಕೆ ಕಿಱುಕುಳ ಮಳವೆಯ . . . ಯಿವನು . . . ಮಹಾಪ್ರಭು ಗೌಡಗಳು ಆಚಂದ್ರಾರ್ಕ್ಕ ಸರ್ವಮಾನ್ಯವಾಗಿ ಬಿಟ್ಟ ಸರ್ವ್ವ ಬಾಧಾಪರಿಹಾರವಾಗಿ ಧಾರಪೂರ್ವ್ವಕಂ ಮಾಡಿಕೊಟ್ಟ ಶಾಸನ (ಎಕ. V (R). ಮೈಸೂರು. ೦೦೯-೩೫ ; ಸು. 13ನೆಯ ಶ). 'ಮಳವರಿ'ಹೋ.

[ಮಳ ? + ಬಿಯ]

**ಮಳಬ್ರಿಯ** 'ಮಳಬಿಯ' ನೋ.

**ಮಳಮಳ$_1$** 'ಮಟಮಟ' ನೋ.

**ಮಳಮಳ$_2$**, ಮಳಮಳಿ (ನಾ). ೧. ಬೇಗುದಿ ; ತಳಮಳ : ಆತನ ಮನಸ್ಸಿನಲ್ಲಿ ಮಳಮಳವು ನಡದೇ ಇತ್ತು (ಶಶಿವ. ೩೦). **ಮಳಮಳಿ** : ೨. ಓಕರಿಕೆ ಬರುವ ಸ್ಥಿತಿ ; ಉಬ್ಬಳಿಕೆ ; ಹೊಟ್ಟೆತೊಳಸು : ಗಟಗಟ ಸೋಡಾ ಕುಡಿದ. ಆದರೆ ಅದರಿಂದ ನೆಮ್ಮದಿ ಎನ್ನಿಸಲಿಲ್ಲ. ಬದಲು ಹೊಟ್ಟೆಯಲ್ಲಿಯ ' ಮಳಮಳಿ' ಹೆಚ್ಚೇ ಆಯಿತು (ಮೂರುದಾ. ೦೬೩).

[←ಮರಾ. ಮಳಮಳ, ಮಳಮಳೀ]

**ಮಳಮಳಿ** 'ಮಳಮಳ$_2$' ನೋ.

**ಮಳಮಳಿಕೆ** (ನಾ). ತಳಮಳ ; ಬೇಗುದಿ : ಮನಸ್ಸಿನ ಮಳಮಳಿಕೆ ಆಕೆಗೆ ಓಡೆ ಕೊಡತೊಡಗಿತು (ಇಕ್ಷ್ಯ. ೩೫೯). [ಮಳಮಳ$_2$ + — ಇಕೆ]

**ಮಳಮಳಿಸು$_1$** 'ಮಟಮಟಿಸು' ನೋ.

**ಮಳಮಳಿಸು$_2$** (ಕ್ರಿ). ೧. ತಳಮಳವಾಗು ; ಸಂಕಟವಾಗು : ಆಗಳಿಂದು ನನಗೆ ನೆನಸಿದರ ಮಳಮಳಸ್ತದ (ಹೊಸಂಸಾ. ೦೩೫). ೨. ಓಕರಿಕೆ ಬರುವಂತಾಗು ; ಹೊಟ್ಟೆತೊಳಸು : ನಿಮ್ಮ ಸಂಗೀತವು ಆರಂಭವಾದ ಕೂಡಲೇ ನನ್ನ ಹೊಟ್ಟೆಯಲ್ಲಿ ಮಳಮಳಿಸತೊಡಗುತ್ತದೆ (ಸೀತಾಹ. ೯೦).

[ಮಳಮಳ$_2$ + — ಇಸು$_3$]

**ಮಳಯ** 'ಮಲಯ' ನೋ.

**ಮಳಯಜ** 'ಮಲಯಜ' ನೋ.

**ಮಳಯಮಹೀಜ** (ನಾ). ಗಂಧದ ಮರ ; ಚಂದನವೃಕ್ಷ : ನೆಗಟ್ದೀ ಕರ್ಪೂರ ಕಾಳಾಗರು ಮಳಯಮಹೀಜಂಗಳ್ (ಶಂಕಪಾ. ೯-೨೩).

[ಸಂ. ಮಲಯಮಹೀಜ]

**ಮಳಯರುಹ** 'ಮಲಯರುಹ' ನೋ.

**ಮಳಯಸಮೀರಣ** (ನಾ). ಮಲಯಪರ್ವತದಿಂದ ಬೀಸುವ ತಂಗಾಳಿ : ವಾರಿಜ ಮಳಯಜಮಳಯಸಮೀರಣ . . . ಮೃಣಾಳಾದಿಗಳುಂ ಬಾರಿಸ ಲಾಱವೆ ದಲವನ ದಾಹಜ್ವರಮಂ (ಆದಿಪು. ೨-೦೩).

[ಸಂ. ಮಲಯಸಮೀರಣ]

**ಮಳಯಾನಿಲ** 'ಮಲಯಾನಿಲ' ನೋ.

**ಮಳಯಾನಿಳ** 'ಮಲಯಾನಿಲ' ನೋ.

**ಮಳಯೋದ್ಭವ** 'ಮಲಯೋದ್ಭವ' ನೋ.

**ಮಳರಹಿತ** 'ಮಲರಹಿತ' ನೋ.

**ಮಳಲ್** 'ಮಣಲ್' ನೋ.

**ಮಳಲಕಂತೆ** (ನಾ). ಒಂದುಬಗೆಯ ಬತ್ತ : ಕೊಡಗು ಮಳಲಕಂತೆ ಹರಹಿನ ಡುಣ್ಣಗಳೊಡನೊಪ್ಪುತಿಹ ಬೈರಾವಳಿಯ ಕಡುಸೊಬಗಾಂತಿಹ ಚಂದ್ರೋದಯಶಾಲಿಯೆಡೆವಿಡದೆಸೆದುವರ್ತಿಯಲಿ (ಕೆಂಪಂ. ೫-೭೦). P ಮರಳಕಾಂತಿ ಅಥವಾ ಮಣಲಕಾಂತಿ ಎಂಬ ಹೆಸರಿನ ಕೆಂಪು ಬತ್ತವು ರೂಢಿಯಲ್ಲಿದೆ. [ ? ]

**ಮಳಲತ್ತಿ** (ನಾ). ಒಂದು ಬಗೆಯ ಅತ್ತಿಮರ : ''ಅಜೋಕ್ಷ— ಮಳಲತ್ತಿ'' (೬ಶಂ. ೨). [ಮಳಲ್ (<ಮಣಲ್) + ಅತ್ತಿ$_1$]

**ಮಳಲದರಸಿ** (ನಾ). ಔಷಧಕ್ಕಾಗಿ ಬಳಸುವ ಒಂದು ಬಗೆಯ ಗಿಡ ಮೂಲಿಕೆ : ''ಗಿರಿಜಾನುಜಾ_ಮಳಲದರಸಿ'' (೬ಶಧಿ. ೯೬).

[< ಮಳಲ್ + ದರಸಿ]

**ಮಳಲವಾಡಿ** 'ಮಣಲೆವಾಡಿ' ನೋ.

**ಮಳಲಸೌತೆ** (ನಾ). ಒಂದು ಬಗೆಯ ಸೌತೆ : ''ವಾಲುಕೀ—ಮಳಲಸೌತೆ'' (೬ಶಂ. ೦೫೦). [< ಮಳಲ್ + ಸೌತೆ (< ಸವುತೆ)]

**ಮಳಲಹುಚ್ಚತ್ತಿ** (ನಾ). ಒಂದು ಬಗೆಯ ಅತ್ತಿಮರ : ''ಲಘುಸದಾಫಲಃ__ಮಳಲಹುಚ್ಚತ್ತಿ'' (೬ಶಂ. ೦೯೩). [< ಮಳಲ್ + ಹುಚ್ಚತ್ತಿ]

**ಮಳಲಿ** (ನಾ). ಒಂದು ಬಗೆಯ ಮೀನು : ಬಿಳಿಯಾನೆ ಮಳಲಿ ಕೂಡಿಲು ಚಕ್ರ ಗೇಡ . . . ಗಿಱಿಲುಗಳೆಂಬ ಹೊಳೆವಳಿಯ ಮೀನ್ಗಳಂ ತವಿಸುತಿಹ ಬೇಡರಂ ನೋಡಿದಂ ಭೂಪಾಲನು (ಹತ್ತಕ. ೫-೯೭). [ ? ]

**ಮಳಲು$_1$** 'ಮಟಲ್' ನೋ.

**ಮಳಲು$_2$** 'ಮಣಲ್' ನೋ.

**ಮಳಲು$_3$** (ನಾ). ಒಂದು ಬಗೆಯ ಸಸ್ಯ : ''ಮಹಾಶ್ಲಕ್ಷ್ಣ — ಮಳಲು'' (೬ಶಂ. ೦೦೭). [ ? ]

**ಮಳಲ್ಗೊಳ** (ನಾ). ಕೊಳದಂತೆ ಕಾಣುವ ಮರಳಿನ ರಾಶಿ; ಮರೀಚಿಕೆ: ಕರೆದುದು ನಿರಾಶೆಯ ನಡುವೆ ದೂರದಾಶೆಯ ತೆರದಿ, ಪಳುಕು ತಿಳಿನೀರ್ಗಳಿಂ

ಕಣ್ಗೊಳಿಸಿ ನಂಬಿಪಾ ಬಿಸಿಲಿಚ ಮಳಲ್ಗೊಳಂ (ಶ್ರೀರಾಮಾ. ೩೭೮-೪೩೦).
[ಮಳಲ್ (< ಮಣಲ್) + ಕೊಳ್$_2$]

**ಮಳಲ್ದಿಂಟೆ** 'ಮಣಲ್ದಿಂಟೆ' ನೋ.

**ಮಳವ$_1$** 'ಮಳವೆ' ನೋ.

**ಮಳವ$_2$, ಮಱವೆ$_2$** (ನಾ). ಒಂದು ಪ್ರದೇಶದ ಹೆಸರು : ಬಾದುಂಬೆಯ ಹಳ್ಳದಿಂ ಮೂಡಲು ಮಳವದ ಮಕ್ಕಿ ಗುಣಿಗನ ಮತ್ತರ್ ೧ (ಸೌಇಇ. IX-i. ೦೭೫-೫೮; 1099); [ಮಗರ] ಸೋಮನಾಥದೇವರ ಮಳವದಿಂ ತೆಂಕಲು ಮತ್ತರು ೧ (ಸೌಇಇ. XX. ೨೦೮-೪; ?). **ಮಱವೆ$_2$** : ಕಲಿದೇವರಿಗೆ ಪಾಲುಮಂಡಗೆಗೆ ಕೊಟ್ಟ ಮತ್ತರು ೬ ತೋಟ ಮತ್ತರು ಕೆಳಗಣ ಮಱವೆ ಸಹಿತ . . . ಕೊಟರು (ಸೌಇಇ. XX. ೨೦೮-೦೪; ?). [ ? ]

**ಮಳವರಿ** (ನಾ). ಒಂದು ಬಗೆಯ ತೆರಿಗೆ : ಕೋಣಿಗೋತ ಗ್ರಾಮ ೧ಕೆ ಪ್ರಾಕುರೇಪೆ ಸಿದ್ಧಾಯದಿಂದ ಗ . . . . ಮಳವರಿಯಿಂದ ಗ (ಮ್ಯಆಆ. ೦೪೩೭. ೨೭-೨೦ : 1708). 'ಮಳಬಿಯ' ಹೋ. [ಮಳ$_?$ + ವರಿ$_1$]

**ಮಳವಿ** 'ಮಳವೆ' ನೋ.

**ಮಳವೆ, ಮಳವ$_1$, ಮಳವಿ, ಮಱವೆ$_1$** (ನಾ). ೧. (ಸರಕಿನ) ಮೂಟೆ : ಗಂಟು ; ಪೆಂಡಿ : ಮಳವೆಗೆ ಪಱ್ ಪದಿನಾಱು ಪಲಂ (ಎಇ. IX, ೨೨-೭; ಸು. 800) ; ನೂಲ ಮಳವೆಗೆ ವಿ ೨ ॥ (ಕಇಆ. ೦೦೪-೮-೩೭ : 1076); ಹತ್ತಿಯ ಮಳವೆಯಲು ವೀಸ ಸೀರೆಯ ಮಳವೆಯಲು ಬೇಳೆ (ಎಕ. XI, ಹಳ್ಳಿ. ೨೦-೩೮ ; 1087). ೨. ರಾಶಿ ; ಒಟ್ಟಿಲು : ಬಿಡು ಮುತ್ತಿನ ಪೇಱುಗಳಂ ತಡೆಯದೆ ಕರ್ಪೂರದ ಪಿರಿಯ ಮಳವೆಗಳಂ ತಂದಿಡು (ಸುಕುಮಾ. ೧೦-೯೦) ; ಶಿಲೆಯ ಮಳವೆ ಹಡವಿನ ಮಳವೆ ಅರಿಷಣ ಮಳವೆ ಅಲ್ಲದ ಮಳವೆ (ಶಾಸಪ. ೩೭-೪ ; ಸು. 1200) ; ಬಿಗಿದ ಮಳವೆಯನೆಣ್ಣ ಗೊಪ್ಪರಿಗೆಗಳೊಳದ್ದಲಿ ಗಳಿಗಳಲಿ ಸೀರೆಗಳ ಸುತ್ತಲಿಯೆಂದು ಕೈವೀಸಿದನು ಕಲಿದ್ರೋಣ (ಕುಮ್ಯಾದ್ರೋ. ೦೫-೩೨). **ಮಳವ$_1$** : ೧. × × × ತ್ರಿಯ ಮಳವಕೆ ಅ × × × ಹತ್ತಿ (ಸೋಕಶಾ. ೦೪೩೦. ಶಾಗವಾಡ. ೩೬-೭ : 1148). **ಮಳವಿ** : ೧. ಬಿಳಿಜವಳಿ ಎಂಭತ್ತಱ ಮಳವಿ ಒಂದಕ್ಕೆ ಅಡ್ಡಪಟ ನೂಲ ತೊಲೆ (ಎಕ. V, ಬೇಲೂರು. ೬೫-೮೬ ; 1382). **ಮಱವೆ$_1$** : ೧. ಅರಿಸಿನ ಹೇರಿಂಗೆ ಪಲ ೨ ಸೀರೆಯ ಮಱವೆಗೆ ವೀಸ × (ಎಕ. XII, ಶಾಪುಗ. ೪೩-೪೩; ಸು. 1150). [ ? ]

**ಮಳವೆಯ** 'ಮಳಬಿಯ' ನೋ.

**ಮಳಹಿಗ** (ನಾ). ಸೇವಕ (?) : ನಿಮ್ಮ ಪಶು ನಿಮ್ಮ ಮಳಹಿಗ ನಿಮ್ಮ ಕೆರ್ಪ ತಹ ನಿಮ್ಮಂಗಳವನುಡುಗುವಂ (ಲಿಂಗಪು. ೨೩-೮). [ ? ]

**ಮಳಾರ** 'ಮಲಾರ$_2$' ನೋ.

**ಮಳಿ, ಮಳ್ಳಿ$_2$** (ನಾ). ಚಿಪ್ಪುಳ್ಳ ಒಂದು ಬಗೆಯ ಜಲಚರಪ್ರಾಣಿ : ಮಳಿಯು ಒಮ್ಮೆ ಹತ್ತಿಯಿಟ್ಟರೆ ಸಾವಿರಾರು ಇಡುವುದು (ಪ್ರಾಂಕ್ರ. II-೯೩೭); ನಾನು ಆ ದಿನ ರಾತ್ರಿ ಮಳಿಯ ಓಡು ಬೀಸಾಡುವುದಕ್ಕೆ ತೆಂಗಿನ ಕಟ್ಟೆಯ ಹತ್ತಿರ ಬಂದಿದ್ದೆ (ಶಠ್ಯಕ. ೦೫). **ಮಳ್ಳಿ$_2$** : ಇದೇ ಜಾತಿಯ ಇನ್ನೊಂದು ತರದ ಹುಳಕ್ಕೆ ನಮ್ಮ ದೇಶದಲ್ಲಿ ನಾವು ಮಳ್ಳಿ ಎಂದೆನ್ನುತ್ತೇವೆ (ಮುಂಬರು. ೫-೦೦). [ ? ]

**ಮಳಿಗೆ** 'ಮಱಿಗೆ' ನೋ.

**ಮಳಿನ** 'ಮಲಿನ' ನೋ.

**ಮಳಿನತೆ** 'ಮಲಿನತೆ' ನೋ.

**ಮಳಿನತ್ವ** 'ಮಲಿನತ್ವ' ನೋ.

**ಮಳಿಮ್ಲುಚ$_1$** 'ಮಲಿಮ್ಲುಚ' ನೋ.

**ಮಳಿಮ್ಲುಚ$_2$** (ನಾ). ಕಪ್ಪಾದುದು : ಮೇಚಕ ಸರಸಿಜವಿಜಯವಿಲೋಚನ ಮತಿವಿಭ್ರಮಂ [ತಳೆದ] ಪೂರ್ವ[ಮ]ದಾಲೋಚಿರ್ದಳರುಚಿನಿಟಿಳಂ ಕಾಚ ಮಣಿದ್ಯು[ತಿ] ಮಳಿಮ್ಲುಚಂ ಕಚಮುವಳಾ (ವರ್ಧಮಾ. ೦೧-೨೪).
[P ಇದು 'ಮಳೀಮಸ' ಎಂಬುದರ ಅಪಲಿಖಿತವಿರಬಹುದು]

**ಮಳಿಷ್ಠ** (ನಾ). ಬಹುಹೊಲಸಾಗಿರುವವನು,— ಕೊಳಕ : ರವಿಜಂ ವೃಶ್ಚಿಕಸಂಸ್ಥನಾಗೆ ಚಪಲಾಂಗಂ . . . ಶನಿಗೇಹದೊಳ್ ನಿಲೆ ಮಳಿಷ್ಠಂ (ಜಾತಕ. ೦೭-೩೩). [ಸಂ. ಮಲಿಷ್ಠ]

**ಮಳೀಮಸ** 'ಮಲೀಮಸ' ನೋ.

**ಮಳೆ** 'ಮಱೆ$^3$' ನೋ.

**ಮಳೆಗರೆ** 'ಮಳೆಗಱೆ$^3$' ನೋ.

**ಮಳೆಗಱೆ$^3$, ಮಳೆಗರೆ** (ಕ್ರಿ). ೧. ಮೋಡವು ಕರಗಿ ಆಕಾಶದಿಂದ ನೀರು ಸುರಿ : ಮಳೆ ಬರು : ಮಳೆಗಱೆವುದು ಬೆಳೆ ಪೆರ್ಚುವುದು . . . ಪಳಿವಿಲ್ಲದ ಪತಿವ್ರತೆಯರ ನಡತೆಯು ಬಳದೊಳೆಂಬರು ಬಲ್ಲವರು (ಪದಿಬ. ೨-೪); ವರ್ಷರ್ತು ಹರ್ಷಮನೆರೆಚುವಂತೆ ಕಾರ್ಮುಗಿಲ್ ಮುತ್ತಿ ಗಗನವನ್ನೆಡೆ ಮಳೆಗರೆಯೆ (ಚಿತ್ರಾಂಗ. ೭೦-೦೪೫೮). ೨. ಧಾರಾಕಾರವಾಗಿ ಸುರಿ ; ಅಧಿಕವಾಗಿ ವರ್ಷಿಸು : ನಟ್ಟಡವಿಯಲ್ಲಿ ಕೆಂಡದ ಮಳೆಗಱೆದು ಊರಡವಿಯನೊಂದಾಗಿ ಸುಟ್ಟಿತ್ತು ನೋಡಾ (ಅವಾ. ೪೧-೦೦೭); ದೇವಾವಳಿ ಗಳಾಕಾಶದಿಂದವೆ ಹೂವಿನಲಿ ಮಳೆಗಱೆದರಾ ಕುಂತೀಕುಮಾರರಿಗೆ (ಸಂಶಪ. ೨೦-೦೪೦). **ಮಳೆಗರೆ** : ೧. ಎಮ್ಮೆ ಮೇಲೆ ಮಳೆಗರೆದ ಹಾಗೆ (ಗಾದೆ). ೨. ಅವನ ಮೇಲೆ ಪ್ರಶಂಸೆಯ ಮಾತುಗಳೂ ಮಳೆಗರೆದುವು (ಕಥಾ.ಹ. ೪೦). [ ಮಳೆ (< ಮಱೆ$^3$) + ಕಱೆ$^3_1$ ]

**ಮಳೆಗಾಡು** (ನಾ). ಒಂದೇಸಮನೆ ಸುರಿಯುವ ಮಳೆಯಿಂದ ಬೆಳೆಯುವ ದಟ್ಟವಾದ ಕಾಡು : ಆಗುಂಬೆಯ ಸುತ್ತುಮುತ್ತಲಿನಂಥ ಅರಣ್ಯಕ್ಕೆ rain forest —ಮಳೆಗಾಡು—ಎಂಬ ಪರಿಭಾಷೆಯನ್ನು ಉಪಯೋಗಿಸುತ್ತೇವೆ (ಹಸುಹೂ. ೨೮೩). [ ಮಳೆ (< ಮಱೆ$^3$) + ಕಾಡು$_2$ ]

**ಮಳೆಗಾಲ** 'ಮಱೆಗಾಲ' ನೋ.

**ಮಳೆಗುಟಕ** (ನಾ). ಮಳೆನೀರನ್ನು ಕುಡಿದು ಬದುಕುವುದೆಂದು ನಂಬಲಾದ ಒಂದು ಬಗೆಯ ಹಕ್ಕಿ ; ಚಾತಕ : "ಸಾರಂಗಃ, ಸ್ತೋಕಕಃ, ಚಾತಕಃ—ಇ ಮಳೇಗುಟಕನ ಹಕ್ಕಿ, ಚಾತಕಪಕ್ಷಿ" (ಸಿದ್ಧಾಂತ. ೦೫೮).
[ ಮಳೆ (< ಮಱೆ$^3$) + ಕುಟುಕ$_3$ ]

**ಮಳೆನಕ್ಷತ್ರ** (ನಾ). [ಜ್ಯೋತಿ] ಮಳೆ ಬರಲು ಸಹಾಯಕವಾಗುವಂತೆ ಸೂರ್ಯನು ತನ್ನ ಸಂಚಾರದಲ್ಲಿ ಬಂದು ಸೇರುವ ನಕ್ಷತ್ರಪ್ರದೇಶ, P "ಮಳೆನಕ್ಷತ್ರಗಳು—೧೬ : ಅಶ್ವಿನಿ, ಭರಣಿ, ಕೃತ್ತಿಕೆ, ರೋಹಿಣಿ, ಮೃಗಶಿರ, ಆರ್ದ್ರ್ರ, ಪುನರ್ವಸು, ಪುಷ್ಯ, ಆಶ್ಲೇಷ, ಮಘೆ, ಪುಬ್ಬೆ, ಉತ್ತರೆ, ಹಸ್ತ, ಚಿತ್ತೆ, ಸ್ವಾತಿ, ವಿಶಾಖ (ಪಂ)" (ಶ್ರೀವತ್ಸ. ೩೩೭) : ಮಹಾನಕ್ಷತ್ರವನ್ನು ಮಳೆನಕ್ಷತ್ರವೆಂದು ಕರೆಯುವುದೂ ವಾಡಿಕೆಯಾಗಿದೆ (ನಕ್ಷತ್ರ. ೪೯). [ ಮಳೆ (< ಮಱೆ$^3$) + ನಕ್ಷತ್ರ$_1$ ]

**ಮಳೆನೀರು** 'ಮಱೆನೀರ್' ನೋ.

**ಮಳೆಬಿಲ್ಲು** 'ಮಳೆವಿಲ್ಲು' ನೋ.

**ಮಳೆಮರ** (ನಾ). ಒಂದು ಬಗೆಯ ಮರ : (ಮ್ಯಶಿಗ. ೩೪-೬೫೩).
[ ಮಳೆ (< ಮಱೆ$^3$) + ಮರ$_1$ ]

**ಮಳೆಮಾಡು** (ನಾ). ಮಳೆಗೆ ಮರೆಯಾಗಿ ಕಟ್ಟಿರುವ ಮೇಲ್ಹಾವಣಿಯ ಚಪ್ಪರ : ಒಂದು ಮಳೆಮಾಡನ್ನು ಹಾಕಿಸಿ, ಒಂದು ಕಾಫಿ ಹೋಟೆಲು ತೆರೆದು ಕೊಡಬೇಕು (ಸ್ವಸ್ವಹೂ. ೩೭) ; ಮಳೆಗಾಲ ಬಿಟ್ಟಿಲ್ಲ . . . ಅಷ್ಟು ತೊಂದರೆಯಾದರೆ ಹೆಣ್ಣಿನ ಕಡೆಯವರು ಒಂದು ಮಳೆಮಾಡನ್ನು ಕಟ್ಟಿಸಲಾರರೇ ? (ಜಗುಆ. ೫೯). [ ಮಳೆ (< ಮಱೆ$^3$) + ಮಾಡು$_2$ (< ಮಾಡ$_1$) ]

**ಮಳೆಮುಗಿಲು** (ನಾ). ಮಳೆಯನ್ನು ಸುರಿಸುವ ಮೋಡ ; ಕಾರ್ಮುಗಿಲು : ಮಳೆಮುಗಿಲ ಮುಟ್ಟುವುವು ಬೆಟ್ಟಗಳು ನೆಗೆದು (ಇಂಗೀತ. ೪೮-೦೦);

ಮಳೆಮುಗಿಲ ಮೇಣಮುಱಿ ಮಳೆಬಿಲ್ಲ ಹಾರಂ (ಕಬ್ಬಿ. ೩೦-೩).

[ಮಳೆ (< ಮೞೆ³) + ಮುಗಿಲು (< ಮುಗಿಲ್⁶) ]

**ಮಳೆಮೋಡ** (ನಾ). = ಮಳೆಮುಗಿಲು : ವಿರಹಿಗಳೆಡೆಯನು ಬಿರಿಸುವ ಮಳೆಮೋಡ ಗಗನದೊಳಿದ್ದಿದೆ ನೋಡ (ಇಂದಾಶ. ೯೦-೯೦).

[ಮಳೆ (< ಮೞೆ³) + ಮೋಡ₁]

**ಮಳೆಯಂಗಿ** (ನಾ). "ಮಳೆಯ ನೀರಿಳಿದು ಒದ್ದೆಯಾಗದ ಬಟ್ಟೆಯಲ್ಲಿ ಹೊಲಿದಿರುವ ಉದ್ದನೆಯ ಅಂಗಿ ; ನೀರಿಳಿಯದ ಬಟ್ಟೆಯ ಅಂಗಿ ; ಮಳೆಯಂಗಿ" (Rain-Coat. ಇಂಕಿಟ) : ಒಳಗೆ ಮಳೆಯಂಗಿಯಲಿ ಹುಟ್ಟುಬತ್ತಲೆ ಹೆಣ್ಣು (ಶಿಶಾಂ. ೬೯-೦೫). [ಮಳೆ (< ಮೞೆ³) + ಅಂಗಿ₂]

**ಮಳೆಯಾಲ** 'ಮಲೆಯಾಳ' ನೋ.

**ಮಳೆಯಾಳ** 'ಮಲೆಯಾಳ' ನೋ.

**ಮಳೆರಾಯ** (ನಾ). ಮಳೆಯ ಅಧಿದೇವತೆ ; ಇಂದ್ರ : ಬೋರೆನ್ನು ಮಳೆರಾಯ (ತಂಬಿ. ೦೫೯-೪) : ಬರಗಾಲ ಬಂದಾಗ ನಮ್ಮ ಜನಪದ ಭಕ್ತಿಯಿಂದ ಮಳೆಯ ಅಧಿಪತಿಯಾದ ಮಳೆರಾಯನನ್ನು ಆರಾಧಿಸುತ್ತದೆ (ಕಜಕ. ೦೯೩) ; ಹುಯ್ಯೋ ಹುಯ್ಯೋ ಮಳೆರಾಯ ಹೂವಿನ ತೋಟಕ್ಕೆ ನೀರಿಲ್ಲ (ಜಾಪ.).

**ಮಳೆರಾಯನ ಪೂಜೆ** = ಮಳೆಯನ್ನು ಬಯಸಿ ಇಂದ್ರನನ್ನು ಕುರಿತು ಮಾಡುವ ಪೂಜೆ, — ಉತ್ಸವ : ನಮ್ಮ ಜನರಲ್ಲಿ ಮಳೆರಾಯನ ಪೂಜೆಯಲ್ಲಿ ನಂಬಿಕೆ ಉಳಿದುಕೊಂಡಿದೆ (ಕಜಕ. ೦೯೩).

[ಮಳೆ (< ಮೞೆ³) + ರಾಯ]

**ಮಳೆವನಿ** 'ಮೞೆವನಿ' ನೋ.

**ಮಳೆವಿಲ್ಲು**, **ಮಳೆಬಿಲ್ಲು** (ನಾ). ಕಾಮನ ಬಿಲ್ಲು ; ಇಂದ್ರಧನುಸ್ಸು : ಪರಮಾತ್ಮನಾರೆಂದು ತಿಳಿಯಲೆಳಸುವೆಯಾ . . . ಮಳೆವಿಲ್ಲಿನುಯ್ಯಾಲೆಯಲಿ ತೂಗುತಿಹನು (ಗೀತಿಂ. ೩-೦೦) ; ಮಳೆವಿಲ್ಲ ಓಡಿಮುಡುಗಿ ಸೆಳೆಮಿಂಚ ಮುಸಿಮುಸಿದು (ಕಾರಿಂಗ. ೪೫-೬೦). **ಮಳೆಬಿಲ್ಲು** : ಅರ್ಜುನನು . . . ಮಿಂಚು ಮಳೆಬಿಲ್ಲುಗಳಿಂದೊಡಗೂಡಿದ ಮೇಘದಂತೆ ಕಾಣಿಸಿಕೊಂಡನು (ವಚಭಾ. ೨೩) ; ಮಧುರಮೋಹನಮಾಯೆ ಮುಂಗಡೆ ಮಳೆಬಿಲ್ಲಿನ ಬಣ್ಣದ ಹಾಸನಲಿ ಕಟ್ಟಿ ಚುಂಬಿಸಿ ಸೆಳೆದಿತ್ತು (ಕಾಂಚಜ. ೩೩-೮). P ಇದು ಇಂಗ್ಲೀಷಿನ 'Rain-bow' ಎಂಬುದರ ಅನುವಾದ.

[ ಮಳೆ (< ಮೞೆ³) + ಬಿಲ್ಲು₁ (<ಬಿಲ್₂) ]

**ಮಳೆಸಗಡೆ** (ನಾ). ಒಂದು ಬಗೆಯ ಸಸ್ಯ : "ವಾಲುರ್ಸಿ, ಮಳೆಸಗಡೆ . . . ಲೈಸಾಬ್ರ" (ಸಸ್ಯಶಿ. ೦೩೭) ; ವಾಲುರ್ಸಿ, ಮಳೆಸಗಡೆ (ವೈದ್ಯಶಿ. ೭೮-೧೭೦೪).

[ ? ]

**ಮಳೆಹನಿ** 'ಮೞೆವನಿ' ನೋ.

**ಮಳೆಹುಳು** (ನಾ). ಮಣ್ಣುಹುಳು ; ಎರೆಹುಳು : ಮಳೆಹುಳುಗಳಂತೆ ಎರಡೆರಡು ಮುಖಗಳುಳ್ಳ ರಾಜ ರಾಣಿಯರನ್ನು ಕಂಡು ನನಗೇನು ಪ್ರೀತಿ ಹುಟ್ಟದಿದ್ದರೂ . . . ಮೆಚ್ಚಿಕೆಯಾಯಿತು (ನಾಕೆ. ೨೦).

[ ಮಳೆ (< ಮೞೆ³) + ಹುಳು (< ಪುೞು) ]

**ಮಳೆಟುತ್ತಯ್ಯ** (ನಾ). ಒಬ್ಬಾತನ ಹೆಸರು : ತೊಣ್ಡ ವಾಡಿಯಪಳ್ಳಿಯ ಮಳೆಟುತ್ತಯ್ಯನ ಮಗ ಅಯ್ಯಪಯ್ಯ ×ಣರ ಸತ್ತ ಹಾಲೆಯರೆಕಣ ವೊಂಗೆ ಕೊಟ್ಟ ಮಣ್ಣು ಖ ೧ (ಎಕ. III (R), ಗುಂಡ್ಲುಪೇ. ೩೯-೩; 975).

[? + ಅಯ್ಯ₁]

**ಮಳ್ಗಿಸು** 'ಮೞ್ಗಿಸು' ನೋ.

**ಮಳ್ಗು** 'ಮೞ್ಗು' ನೋ.

**ಮಳ್ತ** 'ಮೞ್ತ₁' ನೋ.

**ಮಳ್ವಗಿರಿ** (ನಾ). ಒಂದು ಬೆಟ್ಟದ ಹೆಸರು : ವಾಯವ್ಯಾಂ ಮಳ್ವಗಿರಿ . . . ತತಃ ಪೂರ್ವಃ ವಟವೃಕ್ಷಂ ಪ್ರಾಪ್ಯ (ಮೈಶಾ. ೦೯೩೫. ೪೦-೬೯ : 1951).

[? + ಗಿರಿ₁]

**ಮಳ್ಳ** 'ಮರುಳ' ನೋ.

**ಮಳ್ಳತನ** 'ಮರುಳ್ತನ' ನೋ.

**ಮಳ್ಳಪೂರ** (ನಾ). ಒಂದು ಸ್ಥಳದ ಹೆಸರು : ಬೆಣ್ಣೆಯೂರ ದೇವಗಣನುಂ ಮಳ್ಳಪೂರದ ಪೆರ್ಮಾಡಿಗಾವುಣ್ಡನುಂ (ಎಕ. VI. ಕಡೂ. ೩-೦೫; 899?).

[ ? ]

**ಮಳ್ಳಿ₁** 'ಮರುಳಿ' ನೋ.

**ಮಳ್ಳಿ₂** 'ಮಳಿ' ನೋ.

**ಮಳ್ಳಿಯ** (ನಾ). ಒಬ್ಬಾತನ ಹೆಸರು : ದೋಣಗಾವುಣ್ಡರುಂ ಎಳಗಾವುಣ್ಡರುಂ ಮಳ್ಳಿಯರುಂ ಉಜ್ಜುರಾಧಾ(?ವಾ)ಸವೆೞಿಯರುಂ ಹ × × × ಕರಣಸಹಿತವಾಗಿ (ಇಕ. XI. ೬೦-೦೭: 567).

[ ? ]

**ಮಱ** 'ಮೊಱ' ನೋ.

**ಮಱಕೆಂದು** (ಕ್ರಿ). ಮೈಮರೆತು ಮಲಗು ; ಗಾಢವಾಗಿ ನಿದ್ರಿಸು : ಪುರೋಹಿತನುಮಾ ಮನೆಯೊಳೊಂದೋವರಿಯೊಳ್ ಮಱಕೆಂದಿದಂ (ಶಂಕರಾ. ೩-೪ ವ); ಮಹಾಟವಿಯೊಳ್ ಮಱಕೆಂದಿ ನೀಮುಮಾ ಮರದಡಿಯೊಳ್ ಶಿವಾಶಿವರವಂಗಳಿನೆಚ್ಚಱುವಂತುಟಾದುದೇ (ಶಂಕರಾ. ೩-೦೦); ಮಱಕೆಂದಿದರನೆತ್ತುವಂತೆ ನಾಲ್ವರುಮನೆತ್ತಿ ತಾಂ ಮುನ್ನಂ ತಂದರಣಿಯಂ ಕೊಟ್ಟು ಕೃತಾಂತನಂತರ್ಧಾನಕ್ಕೆ ಸಂದು (ಶಂಕರಾ. ೬-೯೯ ವ). 'ಮಱುಂದು', 'ಮಱಸುಂದು₁' ಪರಾ. [< ಮೞ³₁ + ಕೆಂದು₁]

**ಮಱಪಿಕ್ಕು**, **ಮಱಹಿಕ್ಕು** (ಕ್ರಿ). ೧. ಮರೆಮಾಡು ; ಮುಚ್ಚಿಡು ; ಅಡಗಿಸು : ದೈನ್ಯಮಂ ಗಳಪಲೊಡರ್ಚೆ ಗದ್ಗದಿಪ ಮಾತುಗಳಂ ಮಱಪಿಕ್ಕಿ . . . ಕೂಡುವ ಪಾಣ್ಬೆಯ ಜಾಣ್ಮೆ ಸಾಲದೇ (ರಾಜಶೇ. ೦೦-೩೫). ೨. ವಂಚಿಸು ; ಮೋಸಗೊಳಿಸು : ಮಱಪಿಕ್ಕಿ ನಿಮ್ಮರಸನಂ ಜವನೊಯ್ದುದನಿತ್ತ ಕೇಳಿರೇ (ವರ್ಧಪು. ೯-೬೦); ವಿಶ್ವಾಸಘಾತಕರೊಯ್ದರ್ ಮಱಪಿಕ್ಕಿ ನಮ್ಮರಸನಂ ನಮ್ಮಲ್ಲಿಗಿನ್ನೇವೆವೋ (ಪುಷ್ಪಪು. ೦೩-೮೯). ೩. ಪರವಶಗೊಳಿಸು ; ಮೈಮರೆಯುವಂತೆ ಮಾಡು : ತುಂಬಿಯಿಂದದಿಂ ಚುಂಬಿಸಿ ಸೊಕ್ಕನಿಕ್ಕಿ ಮಱಪಿಕ್ಕಿ ಪದಂ ಬಿಡೆ . . . ಬಾಲೆಯಭಯಂಗಳೆದಂ ನವಸಂಪ್ರಯೋಗದೊಳ್ (೦೯ಲಾವ. ೦೩-೦೭) ; ಮಱಪಿಕ್ಕಿ ನೋಡುವ ಮರಿಯ ತುಱುಗಿದೆಂಗಣ್ಬೆಳಗು ಬಳೆಯೆ ಚಾಮರದೆಲರಿಂ ನೆಱೆ ಮಿಳಿರ್ದು ಮಿಱುಪ ದುಗುಲದ ಸೆಱಗೆಂದೆಂದೀಡು ತೆಗೆಯಲಾತಂ ಬಗೆದಂ (ಚಂದ್ರಪು. ೯-೬೫). **ಮಱಹಿಕ್ಕು** : ೨. ಎನ್ನ ಮಱಹಿಕ್ಕಿ ರಾತ್ರಿಯೊಳು ಸುಟ್ಟರಾದಡೆ ತೆಱೆಯನು ಕೊಡದಿರ್ದಡೆನ್ನಾಣೆ (ಪತಣ. ೦೦-೩೮). ೪. ಅಡಗಿರು ; ಅದೃಶ್ಯವಾಗು : ಮಱಪಿಕ್ಕಿ ಪಿಡಿದು ಕಟ್ಟಿದ ಮಱುಕಮನೀನಿಂತು ತೋರ್ಪೆಯಪ್ಪೊಡೆ ನೀನೀ ನೆಱೆದ ಚತುರ್ವಲಸಹಿತಂ ತಱಿಸಂದನ್ನೆದಿರೊಳಾಂತು ತೋರ್ಪುದು ಛಲಮಂ (ಬಿಂಪು. ೦೦-೩೦). [ಮಱಪು₂ + ಇಕ್ಕು]

**ಮಱಪಿಡು**. **ಮಱಹಿಡು** (ಕ್ರಿ). ೧. ಮೋಸಮಾಡು ; ವಂಚಿಸು : ಮನೆಯವರ ಮಱಪಿ [ಪಾಠಾಂ. ಪಿ]ಟ್ಟು ಮುಸುಕಿಟ್ಟು ಪೊಱಮಟ್ಟು ಸುಳಿವ ಜನಕೆ ಶಂಕಿಸುತ (ಹಕರಾ. ೯-೨೯). **ಮಱಹಿಡು** : ೨. ಮರೆಮಾಡು; ಅಡಗಿಸು; ಗುಟ್ಟಾಗಿಡು: ಬಿಸಜಾಕ್ಷಿಯಾ ಮಾತ ಮಱಹಿಟ್ಟು ಮನದೊಳಾರೈವುತಿರಲು (ಜೈಭಾ. ೨-೨೯). [ಮಱಪು₂ + ಇಡು₁]

**ಮಱಪು₁** (ಕ್ರಿ). ಮರೆಯುವಂತೆ ಮಾಡು ; ಮರೆಸು : ಇನಿಯನ ಚಿಲ್ವನಿಕ್ಷಿಪ ಸೊಕಂ ನುಡಿಗೇಳ್ವಳಿಪಂ ನಿಮಿರ್ಚಿದು . . . ಅಪ್ಪಿನದೊಂದು ಸೇರ್ಪೆ ಚುಂಬನಮನವಜ್ಞೆ ಮಾಡುವುದು ಚುಂಬನದಿಂಪು ರತಕ್ಕನಿತ್ತು ಸಮ್ಮನಿಸದು ತದ್ರತಂ ಮಱಪುದೇನುಮನೊರ್ಮೆ ದಲವಗಳೇಗುಮೆಂ (ಚಂದ್ರಪು. ೮-೮೨).

[ಮಱ³₁ + - ಪು₁]

**ಮಱಪ್ಪು₂**, ಮರಹು, ಮಱಹು (ನಾ). ೧. ಮರೆಯಾಗುವಿಕೆ; ಅದೃಶ್ಯವಾಗುವಿಕೆ ; ಅಡಗುವಿಕೆ : ಕ್ರಮದಿಂದ ಪಗಲರಸಿಗೆಸೆವ ಜವ್ವನದ ಸಿರಿಯುಮುಮಂ ಜಾಱಿದೊಡೆ ಮಱಪಾಗಿ ಕೆಂದಳಿರ್ಗ್ಗೆಯೊಳಮರ್ದಿರ್ದ ಜಗುಳ್ದ ಮಂತ್ರಿಸ ಮಣಿಯುದಬ್ಧಿಯೊಳು ಬಿಳ್ದುದೊಯ್ದೆನಲ್ . . . ವಿಮಲಸಾಗರದೊಳ್ ಮುಳುಂಗಿದನಹೊ ಸೂರ್ಯಂ (ನೇಮಿಪು. ೩-೦). ೨. ಮರೆಮಾಚುವಿಕೆ ; ಅಡಗಿಸಿಡುವಿಕೆ : 'ಮಱಪಿಕ್ಕು' ಪರಾ. ೩. ಮೋಸ ; ವಂಚನೆ : 'ಮಱಪಿಕ್ಕು' ಪರಾ. ೪. ತನ್ಮಯತೆ; ಪರವಶತೆ ; ಮೈಮರೆಯುವಿಕೆ : ಮುಸುಂಕನೋಪನೋಸರಿಸೆ ಮುಸುಂಕಿದಳ್ ಮಗುಟಿ ಮೆಯ್ನ್ನತೆಯುಂ ಪುಳಕಾಂಕುರಂಗಳಿಂ ದರಹಸಿತಂಗಳಿಂ ವದನಪಂಕಜಮುಂ ಮಱಪೆಂಬ ಮುಚ್ಚುಳಿಂದರೆಮುಗುಳ್ವಚ್ಚಿಯುಂ ಸವಿಯು ಮುಚ್ಚಿದ ಮುಚ್ಚಿಯಿನಾಕೆ ಚಿತ್ರಮುಂ (ಲೀಲಾವ. ೦೩-೦೨) ; ಸಾಂಧ್ಯ ಮಯೂಖಂ ಪೆರ್ಚೆ ಮುಬ್ಬುಂ ಸುಸಿಲ ಮಱಪು ಪಕ್ಷಿಸ್ವನಂ ಭೈರವೀರಾಗ ಮಗುರ್ವಂ ಬೀಱಿ (ಸೂಕ್ತಿಸು.೯-೦). **ಮರಹು :** ೫. ಮರವೆ ; ಮರೆವು ; ವಿಸ್ಮೃತಿ : ನೋಡುತಲಿದ್ದರು ಕಾಣದು ಆಲಿಸುತಿದ್ದರು ಕೇಳದು ಸರ್ವೇಂದ್ರಿಯವಿದಕಾಗಿರೆ ಪ್ರತ್ಯಕ್ಷವೆ ಮರಹು (ಗಣೇಶ. ೨೪-೨೪). **ಮಱಹು:** ೪. ಸ್ಮೈವೆಱಗಿನ ಮಱಹಿನ ಕುಱುಹಿನ ಕಱಿಗೊರಲಂ ನಿಜಸಮಾಧಿಯೊಳ್ ಸೇದಿರ್ದಂ (ಗಿರಿಜಾ. ೩-೩೯) ; ಸಂತತಂ ಲಿಂಗಪ್ರಸಾದದ ಸಂತಸದ ಮಱಹಿಂದಲಿಪ್ಪವೊಲಂತು ಜನನಿಯು ಮೊಲೆಯನುಣ್ಣದೆ ಗುಮ್ಮನಿರುತಿಹನು (ಬಸವು. ೩-೩೪). ೫. ಎನಗೆ ನಿಮ್ಮ ನೆನಹಾದಾಗಲೆ ಉದಯ ಎನಗೆ ನಿಮ್ಮ ಮಱಹಾದಾಗಲೆ ಅಸ್ತಮಾನ (ಬಸವ. ೪೯೯) ; ಕಾವ್ಯಮುಂ ನಡೆಸುವಾತಂ ರಸಾವೇಶಮಱಹಾಲಸ್ಯವೆಡೆಗೊಳಲು ತಪ್ಪುಗಲ್ಲದೆ ಕಾವ್ಯಕರ್ತೃ ತಪ್ಪುವನೆ (ಪಶಾ. ೦-೨೩). ೬. ಪ್ರಜ್ಞೆತಪ್ಪುವಿಕೆ ; ಮೂರ್ಛೆ : ಮಱಹ ಪಡೆಯುರು ಘಾಯ ಖಂಡಿಗೆ ತೆಱಹುಗಾಣರು . . . ಹೊಗಳುವಡಱಿಯೆನಗ್ಗದ ಭೀಮ ದುರಿಯೋಧನರ ರಣರಸವ (ಕುಮಾ.ಗ. ೬-೨೬). ೭. ತಿಳಿವಳಿಕೆಯಿಲ್ಲದಿರುವುದು ; ಅಜ್ಞಾನ : ಮಱಹುಳ್ಳವಂಗೆ ನೂಱುಬುದ್ಧಿಯುಂ ಪೇಱಿದೊಡಂ ಕಿಡುವುದು (ಕುಶಲಂ. ೦೩೭-೩) ; ಶುಭಕರ ಸತ್ಕ್ರಿಯೆಗಳೆಂಬ ಬೀಜಮುಂ ಬಿತ್ತಿ ಮಱಹೆಂಬ ಕಳೆದೆಗೆದು (ಧರ್ಮಾ. ೦೩-೦೪) ; ಮಱಹುಳ್ಳ ಮನುಜರಿಗೆ ತೆಱನಾವುದಱಿವುದಕೆ (ನಟರಾ. ೬೬). ೮. ಅಲಕ್ಷ್ಯ ; ಉಪೇಕ್ಷೆ : " ಪ್ರಮಾದಃ, ಅನವಧಾನಂ – ಈ ೨ ಮಱಹು " (ಹಲಾಯು. ೦೨೪-೬೯).

[ಮಱ³₁ + – ಪು₂]

**ಮಱಲ್** (ನಾ). ಸಾವು ; ಮರಣ : 'ಮಱಲಿಱಿ' ಪರಾ.

[ದೇ.॥ ತಮಿ. ಮಲ. ಮಱಲ್]

**ಮಱಲಿಱಿ** (ಕ್ರಿ). ಸಾಯುವಂತೆ ಹೊಡೆ,–ಚುಚ್ಚು : ಗೊಜ್ಜಿಗನೆಂಬ ಸಕಲಚಕ್ರವರ್ತಿ ಬೆಸಸೆ ದಂಡುಮಂದ ಮಹಾಸಾಮಂತರಂ ಮಱಲಿಱಿದು ಗೆಲ್ದ ಸಾಮಂತಚೂಡಾಮಣಿಯ ಬೀರಮುಮಂ (ಶಂಶಾ.೯-೫೨ ಪ)

[ಮಱಲ್ + ಇಱಿ₁]

**ಮಱಲುಂದು** (ಕ್ರಿ). ಮೈಮರೆತು ಮಲಗು : ಪ್ರಿಯದರ್ಶನನೊಂದು ದಿವಸಂ ತನ್ನ ಭಾರ್ಯೆವೆರಸು ಕದಳೀವನದೊಳ್ ಮಱಲುಂದಿದಲ್ಲಿಗೆ ಕಾಳಿಂಗನಾಗಂ ಬಂದೊಡದಱ ಮೇಗೆ ಕಾಲಂ ನೀಡಿದೊಡೆ ಕರ್ಚಿತ್ತು (ವಡ್ಡಾರಾ. ೩೬-೨೫); ದಿವ್ಯಮೂರ್ತಿ ಸಹಜಾಂಬರಭೂಷಣ ದಿವ್ಯಮಾಲೆಗಳ್ ನೆಱೆದೊಡವುಟ್ಟೆ ಮುನ್ನೆ ಮಱಲುಂದಿದನೆಚ್ಚಱುವಂತೆ ಪುಟ್ಟಿದಂ (ಆದಿಪು. ೨-೬೨) ; ಈ ಮಱಲುಂದಿದರನೆತ್ತಿನಿಬರುಮ...ೂರ್ವೆಯ ಪೊಸೆದು ಮುಕ್ಕುವೆಂ (ಕುಶಲಾ. ೩-೦೬ ಪ) ; (ಪೆರೆಯುರ್ಚೆ) ದಾಂಟೆ ಕೋಳ್ದ (ಲ್ದ)ಪ್ಪಿರೆ ಪಗೆಗೊಳೆ ಸೋರ್ಕೆ ಶಂಕೆ ದೊರೆಕೊಳೆ ವಿಷಮುಬ್ಬರಿಸೆ(ಸಿ) ಮಱಲುಂದೆ ತಮ್ಮೊಳ್ ನೆರೆದೆಡೆಯೊಳ್ ಕಾ(ನಾ)ಡೆ ಪಾವು ಕೊಳ್ಗುಂ ನರನಂ (ಲೋಕೋಪ. ೦೦-೨). 'ಮಱಕೆಂದು', 'ಮಱಸುಂದು₁' ಪರಾ.

ಮಱಲುಂದುವೋವರಿ = ಮಲಗುವ ಮನೆ ; ಶಯ್ಯಾಗೃಹ : ವಿದ್ಯುಚ್ಚೋರಂ . . . ಅರಮನೆಯಂ ಪೊಕ್ಕರಸನ ಮಱಲುಂದುವೋ[ಪಾಠಾಂ. ಪವಡಿವೋ]ವರಿಯಂ ಪೊಕ್ಕು (ವಡ್ಡಾರಾ. ೦೨೩-೦೦).

[< ಮಱ³₁ + ಉಂದು₁]

**ಮಱವ** (ನಾ). ಒಂದು ಬಗೆಯ ತೆರಿಗೆ (?) : ತಿಪ್ಪೆಸುಂಕ ಮನೆದೆಱೆ ಪಾರಿಪಾಯ ಹೊಲೆಗೊಱೆ ಮಱವ ಈಂತಿನಿತುಮಂ . . . ಧಾರಾಪೂರ್ವ್ವಕಂ ಮಾಡಿ ಕೊಟ್ಟರು (ಶಾಸಂ. XX ೦೫೯-೯೩; 1176). [ ? ]

**ಮಱವಡು** (ಕ್ರಿ). ಮೈಮರೆ ; ಪರವಶವಾಗು : ಅತ್ಯಾಸಕ್ತಿಯಿಂ ಮಱವಟ್ಟರಂತೆಯುಂ ಚಿತ್ರಿಸಿದರಂತೆಯುಂ ಮೂರ್ಛೆವೋದರಂತೆಯುಂ . . . ಮಿಡುಕದೆ ನೋಡುತಿರ್ದಂ (ಕಾದಂಪೂ. ೭೪೭) ; ಸಭೆ . . . ತನತನಗೆ ಬೆಱಗಾಗಿ ಮಱವಟ್ಟು ಕೇಳುತಿರೆ (ತಿರುಕ. ದೇ. ೦೬-೦೪). 'ಮರವಡು' ಪರಾ.

[ಮಱವು + ಪಡು₁]

**ಮಱವಣೆ** (ನಾ). ಮರೆಯುವಿಕೆ ; ವಿಸ್ಮೃತಿ : ಗತಿಮತಿ ಚೈತನ್ಯ ಶಬ್ದವುಳ್ಳನ್ನಕ್ಕ ಕ್ರಿಯೆಂತಂತೆ ನಡೆವುದು ಮಱವಣೆ ಬೇಡ ಕಂಡಾ ಮನವೆ (ಶದಗೋ. ೨೪-೦೦೯); ಹಸಿವು ತೃಷೆಯು ಶೋಕ ಮೋಹ . . . ವಿಷಸಮಾನವಾದ ಬಹಳವ್ಯಸನ ಮಱವಣೆ ಮುಸುಕಿ ಕವಿವ ವ್ಯಾಘ್ರನಂತೆ ಅಡಗಿ ಮುಪ್ಪುಗೊಂಬ ರೋಗ (ಭಪಕ. ೦೯೯-೦). [< ಮಱವು]

**ಮಱವಿ** (ನಾ). ೧. ಅಜ್ಞಾನ ; ತಿಳಿಗೇಡಿತನ : ನಿಮ್ಮವನ ಮಱವಿಯನು ನೀಗಾಡಲೊಲ್ಲದೆ ಬಱಿದೆ ನಾನೆನ್ನಜ್ಞಭಾವದೊಳಱಿದೆನೆಂದರೆ ಸಾಧ್ಯವೇ (ಕರ್ನರು. ೩-೦೦). ೨. ಅಲಕ್ಷ್ಯ ; ಉಪೇಕ್ಷೆ : " ನಪ್ರಮಾದ್ಯೇತ– ಮಱವಿಯಂ ಮಾಡದಿರ್ಕೆ " (ಶೀತಿವಾ. ೨೪-೬೨).

[ಮಱ³₁ + — ವಿ₁./ತಮಿ. ಮಱವಿ]

**ಮಱವು**, ಮರವು, ಮರೆವು (ನಾ). ೧. ಎಚ್ಚರವಿಲ್ಲದಿರುವ ಸ್ಥಿತಿ ; ಜಾಗೃತವಾಗಿರದ ಸ್ಥಿತಿ : ಅಱಿವಿಗೂ ಮಱ[ಱ]ವಿಗೂ ಒಡಲಾಯಿತ್ತೆ ಲಿಂಗ (ಪೋಲಮು. ೩-೭). ೨. ಮೂರ್ಛೆ ; ಬವಳಿ : ಮಱವು ಮಗುವಿಗೆ ಹೊಲ್ಲ ಕುರುವು ಕುಂಡೆಗೆ ಹೊಲ್ಲ (ಸರ್ವಜ್ಞ. ೭೨೪). **ಮರವು :** ೧. ಮರವು ತೆರವಿಲಿ ದುಷ್ಟಸ್ವಪ್ನವೇ ತೋರಿದುದೊ (ಪಂಪಾರಾ. ೫-೦೦-೦೪). ೩. ನೆನಪನ್ನು ಕಳೆದುಕೊಂಡ ಸ್ಥಿತಿ ; ಜ್ಞಾಪಕವಿಲ್ಲದಿರುವುದು : ಅಕಸ್ಮಾತ್ತಾಗಿ ಸಿಕ್ಕಿಬಿದ್ದರೆ ಮರವಿನ ನೆಪದಲ್ಲಿ ಅವನು ತನ್ನ ಸಜ್ಜನಿಕೆಯನ್ನು ಕಾಪಾಡಿಕೊಳ್ಳಬಲ್ಲನು (ದೇಶಪ್ರ. ೬೨). **ಮರೆವು :** ೩. ನಮ್ಮ ಅನುಭವಕ್ಕೆ ಬಂದ . . . ಕೆಲವನ್ನು ಸ್ಮರಿಸಿಕೊಳ್ಳಲಾರೆವು. ಮನಸ್ಸಿನ ಈ ಸ್ಥಿತಿಯೇ ಮರೆವು (ಶಿಕ್ಷಣ. ೩೩೦).

**ಮಱವುಮಾರದೆ** = ವಿವೇಕಶೂನ್ಯತೆ ; ಅಜ್ಞಾನ : ಅಱಿವಿನೊಳಗೆ ಅಱುಹಿನ ತಿರುಳಾಗಿ ಮಱವುಮಾರದೆಯಿಲ್ಲದೆ ನಿಜಪದವು ಸಾಧ್ಯವಾದ ಬಳಿಕ ಆವುದು ಪರ್ವ ಆವುದು ಕರ್ವ (ಅನಕಪು. ೨೫೨-೦೦೫೦).

[ಮಱ³₁ + —ವು]

**ಮಱವುಡಿ** (ನಾ). ವಿಸ್ಮರಣೆಯನ್ನುಂಟು ಮಾಡುವ ಒಂದು ಬಗೆಯ ಔಷಧಿಚೂರ್ಣ (?) : ಮಱು[ಱ]ವುಡಿ ಮದ್ದು ಮೈಯ್ಯಾವರಿಸಿದಂತೆ. . . ಮನೆವೆಣ್ಣಳು ಮಱೆವರು ಮನೆಗೆಲಸವನು (ಕೇಶಿರಾಜ. ೯_೯೨) ; ಅನ್ನಯದ ಮದ್ದು ಮಱುವ[ಱವು]ಡಿಯಿಂದ ಮಡಿಯುವರೊ (ವೀರಶೈ. ೫-೨೫-೯೯).

[< ಮಱವು + ಪುಡಿ]

**ಮಱವೂರ್** 'ಮರವೂರ್' ನೋ.

**ಮಱವೆ**, ಮರವೆ₁ (ನಾ). ೧. ಮರವು ; ಜ್ಞಾಪಕವಿಲ್ಲದಿರುವುದು : ಮಱವೆಯಿಂ ಜಾಡ್ಯಭಾವದಿಂದೀ ನವ್ಯದಿವ್ಯಕೃತಿಯೊಳ್ ದೋಷಮಿರ್ದೊಡಂ . . . ತಿರ್ದುಗೆ (ಧರ್ಮಾ. ೦-೯೩). ೨. ಎಚ್ಚರವಿಲ್ಲದಿರುವ ಸ್ಥಿತಿ ;

ನಿದ್ರಾವಸ್ಥೆ : "ಶ್ಲೋಕಾಂಬುಜಿತೆನ್ನಲ್ ಮಱವೆಯುಮಂ" (ಕಸಿಕಂ. ೧೮೦) ; ಅಱಿವು ಮಱವೆಗಳೆನಿಪ್ಪೆರಡಱ ಮಧ್ಯಾವಸ್ಥೆಯೊಳ್ ಮನಂ ಪಿರಿದಾನುಂ ತಱಿಸಂದು ನೃಪಮನೋಜಂ ಬೆಱಗಿಂ ಕರಂವಿಟ್ಟು ಪುರುಷನಂತಿರುತಿರ್ದಂ (ಕುಸುಮಾ. ೯-೧೦೯) ; ತಳೆತ ಮಱವೆಯು ಪಾಳೆಯುದ ಕಗ್ಗೊಲೆಗೆ ಕವಿವ ಗುರೂಪದೇಶಾವಳಿಯುಪೊಲು ಮೈದೋಱಿದವು ಹಿಮರುಚಿಯ ರಶ್ಮಿಗಳು (ಕುವ್ಯಾದ್ರೌ. ೧೭-೦೩). ೩. ವಿವೇಕಶೂನ್ಯತೆ ; ತಿಳಿವಳಿಕೆಯಿಲ್ಲದಿರುವುದು ; ಅಜ್ಞಾನ : ತೆಱನಱಿದು ಮಱವೆಯ ಕಳೆದು ಮಾತಿನಂತೆ ನೀತಿಯೊಳ್ಗೊಡೆ ಅವರನಜಾತರೆಂಬೆ (ದೇಪಾವ. ೨೨-೩೯) ; ಸುಜ್ಞಾನಪ್ರಭೆ ಯುಱಿದುಪಮಿಸಲಳವಡದ ಮಱವೆಯುಪ್ಪಿದುದಾಗಳ್ (ಅಪ್ಪಟ. ೬-೩). ೪. ಭ್ರಾಂತಿ ; ಭ್ರಮೆ : ಕಂಡೆನೆಂಬುದು ಕಂಗೆ ಮಱವೆ ಕಾಣೆನೆಂಬುದು ಮನದ ಮಱವೆ ಕೂಡಿದೆನೆಂಬುದು ಅಱುವಿನ ಮಱವೆ (ಅವಕಂ. ೨೦೦-೯೪೫) ; ನೀವು ನಿಮ್ಮ ಕರುಣದಿಂದೆ ಎನ್ನ ಒಡಲ ಮಱವೆಯ ಒಡೆದು . . . ಸತ್ತ್ವ ರಜ ತಮದ ಪರದೆಯ ಹಱಿಯಲೊಡನೆ ನಿಮ್ಮ ನಿತ್ಯದ ನಿಲವ ಕಂಡೆನಯ್ಯ (ಅಬಂದೇ. ೪-೫). ೫. ಜಡತೆ ; ಆಲಸ್ಯ : ಮನದ ಮಱವೆಯ ರ್ಘೂರ್ಮ್ಮನಲಿ ಕಪಿ ತನುವ ಸಂತೈಸುವ ರಣಶ್ರಮದನಿತಱೊಳ್ ನೂಕಿದನು ತುರಗವ ತರಣಿವಂಶಜನ (ತೊರರಾ. ೬-೩೦-೩೦). ೬. ಪ್ರಜ್ಞಾಹೀನ ಸ್ಥಿತಿ ; ಮೂರ್ಛೆ : ಪಸಿಅರಿಸಿನದ ರಸದಲ್ಲಿ ಬಿಳಿಯ ಗಣಜಿಲೆಯ ತೇದು ಜೇನುತುಪ್ಪದಲ್ಲಿ ನಸ್ಯಂಗೈಯಲು ಮಱವೆ ಮಾಣ್ಗುಂ (ಐಪ್ಪಿ. ೮೦) ; ಸನ್ನಿಪಾತವಾಗಿ ನೆಡಿಯಿಲ್ಲದೆ ಮಱವೆಯಾಗಿದ್ದವರಿಗೆ ಕಾಲ ಹಿಮ್ಮಡಿಯಲ್ಲಿಯೂ ಲಲಾಟದಲ್ಲಿಯೂ ರಕ್ಷೆಯ ಹಾಕಲು ಮಱವೆ ತಿಳಿವದು (ವೈದ್ಯಸಾ. ೧. ೬೩). ೭. (ಕಣ್ಣು ಕಾಣಿಸದಂತೆ ತೆರೆಯು ಬರುವ) ಒಂದು ಬಗೆಯ ಕಣ್ಣಿನ ರೋಗ : ದುವರ್ಣಾಂಸದೋಷವೊ ನೀಲಿ ಗಣ್ಣೋ ಮಱವೆಯೋ [ಪಾಠಾಂ. ಮಾಱವೆಯೊ] ಕಣ್ಮಟಲವೋ ಅರಿಯೋ (ಬಸಪು. ೧೮-೭೬). ೮. [ಕಾಮಶಾ] ದಶಾವಸ್ಥೆಗಳಲ್ಲಿ ಒಂಬತ್ತನೆಯದು ; ಮೂರ್ಛೆ : ತಱಿಸಂದು ಮಱವೆಯಿಂದಂ ಕಿಱಿದಾನುಂ ಪೊಱ್ತುಮಲ್ಲಿ ದೇವಿಯರಿಂತೆಚ್ಚಱಿಸೆಯ್ದಿದಿರೆಯುಂ (ಕುಸುಮಾ. ೦೩-೫೭) ; ನೆಱೆ ನೋಟ ಚಿಂತೆ ಸಂಕಲ್ಪ ಜಾಗರ ಕೃಶ ಅರತಿ ಲಜ್ಜಾ ಹೀನೋನ್ಮಾದ ಮಱವೆಯನಿತು ಒಂಬತ್ತವಸ್ಥೆಗಳೆಯ್ದಲು (ಶೀವಂಸಾಂ. ೦೨-೪೯). ಮರವೆ$_1$ : ೧. ಈ ವಯಸ್ಸಿಗೇ ಈ ಮರವೆಯಾದರೆ ಎಂಭತ್ತು ವರ್ಷ ಆದ್ಮೇಲೆ ಹೇಗೆ ಇರ್ತೀಯೊ ? (ದೂಪಟ್ಟ. ೯) ; ನೋಡು ಕಂಡಕ್ಟರು ಕೊಡುವನು ಚಿಲ್ಲರೆ ತೆಗೆದುಕೊ ಮುಸುಕಿತೆ ಮರವೆ (ಇಂಜಾಶ. ೦೦೯-೬೩). ೨. ಮಾತಿನಲಿ ಮರವೆಯಲಿ . . . ಅತಿಶಯ ಮೂರ್ತಿಯನು ನೆನದು (ಜ್ಞಾಪಸಿಂ. ೦೭-೩೦). ೩. ಗುರುಕಟಾಕ್ಷೇಕ್ಷಣದಿ ಮುನ್ನಿನ ಮರವೆಯಿಲ್ಲವು ಸರಿಯಲು (ಗಗಪಾ. ೨-೨೩). ೪. ಉಗ್ರಮರವೆಯ ತೊಲಗಿಸಲು ನೃಪವಿಗ್ರಹವ ನಲುಗೆದ್ದು ಸಚಿವರೊಳಗ್ರಸುಮತಿಯು ಕರಸೆ (ಬಜ್ಞಕೃ. ೩-೦೪).

**ಮರವೆಯತಿಲಕ** = ಮತ್ತೊಬ್ಬರ ಕಣ್ಣಿಗೆ ಬೀಳದಂತೆ, ಅದೃಶ್ಯವಾಗಿರುವಂತೆ ಮಾಡುವ ಅಂಜನದ ತಿಲಕ : ಮೂಲೋಕದವರುಗಳ ಮರವೆಯ ತಿಲಕವಿಟ್ಟು ಫಣಿಯೊಳು ಗಗನಪಥಮಡರ್ದು ನೆಗದು ಮನೋಗಮನದಿಂ (ನವವೋ. ೨೭-೦೪). **ಮರವೆಯೌಷಧಿ** = ಮೈಮರೆವನ್ನುಂಟುಮಾಡುವ ಮದ್ದು ; ಅರಿವಳಿಕೆಯ ಔಷಧಿ : ಶಾವು ಬಹ ಪರಿಯಂತರ ಪುರುಷ ಮಾತಾಡದೇಳದ ಪರಿಯ ಮದ್ದುಗಳ ಮರವೆಯೌಷಧಿಗಳನು ನಿದ್ರಾಚರದಲಿಹ ಕಾಮುಗಳ ಬಲಿದಚ್ಚರಿಯ ಜಾರೆಯರೈದಿದರು ಸಂಕೇತದೆಡೆಗಳಿಗೆ (ಕೋಗಯ. ೪-೯). **ಮಱವೆಯೌಷಧ** = ಮರವೆಯೌಷಧಿ : "ಕಿಸುರ್ವೇರಿನೆ ಮಱವೆಯೌಷಧಂ" (ತತುಶ. ೦೦೮).

[<ಮಱ$^3{}_1$ + – ವೆ]

**ಮಱವೆಗೊಳಿಸು** (ಕ್ರಿ). ಎಚ್ಚರ ತಪ್ಪುವಂತೆ ಮಾಡು ; ಮೂರ್ಛೆಗೊಳಿಸು : ಇರ್ವರಂ ಘಾತಿಸದೆ ಸಮ್ಮೋಹನಾಸ್ತ್ರದೊಳ್ ಮಱವೆಗೊಳಿಸಿ ತನಗೆ ತಂದೊಪ್ಪಿಸುವ ತೆಱದೊಳತಿ ಜಲಚರರನನುಜನೆಡೆಗಟ್ಟಿ (ಕೈಮಿಭಾ. ೨೦-೨).

[ಮಱವೆ + ಕೊಳ್$_1$ + – ಇಸು$_3$]

**ಮಱಿಸನ ?** (ನಾ). (?) : ಮಱಿಸನಮುಂ ಬಿಟ್ಟೊಳಗಣ ಪೊಱಗಣ ಕೆಲಸಂಗಳೆಲ್ಲಮಂ ದೇವಿಯ ಕಣ್ಣಱಿದುಂ ಮನಮಱಿದುಂ ಬಿಡದೆ ಱಿದಿಂಗಳ್ ದೇವಕಾಂತೆಯರ್ ನಡೆಯಿಸಿದರ್ (ಶಂತ್ರಕೃ. ೦೦-೧೪೭). [ ? ]

**ಮಱಿಸು$_1$** 'ಮಱಿಯಿಸು' ನೋ.

**ಮಱಿಸು$_2$, ಮರಸು$_2$** (ನಾ). ೧. ವಂಚನೆ ; ಮೋಸ : ನಿದ್ರೆಯನುಳಿದು ಬೆದಱಿ ಬೇಗದೊಳು ತನ್ನರ್ಥಶಯ್ಯೆಯೊಳೊಱಗಿರ್ದ ಮಂಗ್ಧೆಯಂಜುವಳೆಂದು ಮಱಿಸಿನಿಂದವಳೆಲೊ ಪೊರ್ದದಿರಾರು ನೀನೆನಲು (ಶಂಜತ. ೬-೬). ಮರಸು$_2$ : ೨. ಪ್ರಾಣಿಗಳನ್ನು ಹಿಡಿಯಲು ಮರೆಯಲ್ಲಿ ಅಡಗಿಕೊಂಡು ಮಾಡುವ ಬೇಟೆ ; ಮರಸುಬೇಟೆ : ಅವತ್ತು ಮರಸಿಗೆ ಕೂತಿದ್ದೆ (ಮುಲಪು. ೫೩). ೩. ಬೇಟೆಯಲ್ಲಿ ಪ್ರಾಣಿಗಳನ್ನು ಹಿಡಿಯಲು ಹೊಂಚುಹಾಕಿ ಕುಳಿತುಕೊಳ್ಳುವುದಕ್ಕಾಗಿ ಕಟ್ಟಿರುವ ಮರೆ,– ರಕ್ಷಣೆಯ ಸ್ಥಳ : 'ಮರಸುಕಟ್ಟು' ಪರ್ಯಾ. [ಮಱ$^3{}_1$ + – ಸು$_3$]

**ಮಱಿಸುಂದು$_1$, ಮಱಿಸೊಂದು** (ಕ್ರಿ). ಮೈಮರೆತು ಮಲಗು : ಮುಗುಳೊಳ್ ಮಱಿಸುಂದಿದ ತುಂಬಿ ಪಾಱೆ ಕೋಕನವಕುಲಂಗಳುಳ್ಳಲರ್ದುವೆಂಬಿನಮುಂದೊಗೆದಂ ದಿವಾಕರಂ (ಶಂಪಭಾ. ೩-೮೪) ; ಮಱಿಮಾತುಗುಡದೆ ರವಿಸುತ ಮಱಿಸುಂ[ಪಾಠಾಂ. ಮಿಂ]ದಿರ್ದಪೆಯೊ ಮೋಣ್ಬಟಲ್ದಿರ್ದಪೆಯೊ (ಗದಾಯು. ೫-೦೫) ; ನೆಱಿಗೊಂಡು ತೊನೆವ ಸರಲಿಂ ನೆಱಲ್ದು ರಥದೊಳಗೆ ಬಿಟ್ಟು ಚಕ್ರಧರಂ ಮೆಯ್ಮಱೆದು ಗುಹಾಂತರದೊಳ್ ಮಿಗೆ ಮಱಿಸುಂ[ಪಾಠಾಂ. ಸೊಂ]ದಿದ ಪುಲಿಯನಾಗಳೆನಿಸಂ ಪೋಲ್ತಂ (ಕಾವ್ಯಾವ. ೪೪೮). ಮಱಿಸೊಂದು : ಮೆಲ್ಲಗೆ ಮಱಿಸೊಂದಿದಂದದೊಳೆ ಜೋಲ್ದ ನಿಜೇಶನನಾಲತಾಂಗಿ ತೊಟ್ಟಗೆ ಕೂಳೆ ನೋಡಿ ಕಟ್ಟನಿನಿಯಂ ಮಱಿಸೊಂದಿದನೋ ಬಱಲ್ದನೋ ಎಂದು. . . ಪಳಯಿಸುವ ಮಾದ್ರಿಯ ಸರಮಂ ಕುಂತಿ ಕೇಳ್ದು (ಶಂಪಭಾ. ೨-೦೯) ; ಪೊಱಮೊಱಲ ಮರದ ಕೆಳಗೆ ಮಱಿಸೊಂದಿದ ಭೀಮನನಡಸಿ ಪಿಡಿದು . . . ಮಹಾಗ್ರಾವವಮನುಱದಡಸಿ ಕಟ್ಟಿ ಕೊರಲೊಳ್ ಗಂಗಾದೇವಿಯ ಮಡುವಿನೊಳಟ್ಟಿದರ್ (ಶಂಪಭಾ. ೨-೩೦ ವ).

[< ಮಱ$^3{}_1$ + ಸುಂದು$_1$]

**ಮಱಿಸುಂದು$_2$** (ನಾ). (ವಂಚನೆಯ) ಕೂಟ,–ಸಂಭೋಗ : ಮಱಿಸುಂದು ಸೂಟಿಸುಂದೆನೆ ಪಿಱಿತಿನಿಯೆನೆ ಪೂಱಿಯೆನೆ ಪದಾಂತರದಿಂದಂ ನೆಱೆದು ನಿಲೆ ದುಷ್ಪ್ರತೀತಿಯನಱಿವುವ ಪೆಱಪೆಱವುಮಿನ್ನವೇ ಗ್ರಾಮ್ಯಂಗಳ್ (ಕಾವ್ಯಾವ. ೪೯೭). [<ಮಱ$^3{}_2$ + ಸುಂದು$_2$]

**ಮಱಿಸುಹ** (ನಾ). ಮರೆಮಾಡುವುದು ; ಮುಚ್ಚಿಡುವುದು : "ಅಪಹ್ನವಃ, ಅಪಲಾಪಃ, ಅಪಜ್ಞಾನಂ, ಅಪವ್ಯಯಃ—ಈ ೪ ಮಱಿಸುಹ" (ಶಬ್ದಾಯ. ೧೨೦-೪೫). [ಮಱಿಸು$_1$ (<ಮಱಿಯಿಸು) + – ಹ$_2$ (< – ವ$_2$)]

**ಮಱಿಸೊಂದು** 'ಮಱಿಸುಂದು$_1$' ನೋ.

**ಮಱಿಹಿಕ್ಕು** 'ಮಱಿಪಿಕ್ಕು' ನೋ.

**ಮಱಿಹಿಡು** 'ಮಱಿಪಿಡು' ನೋ.

**ಮಱಿಹಿಸು** (ಕ್ರಿ). ಮರೆಮಾಚು ; ಅಡಗಿಸು : ಭಾವವನು ಮಱಿಹಿಸಲು ಬಹುಸಂಭಾವನೆಯಲನ್ನವ ಕೊಡಲು ಬಳಿಕಾವ ಸುಖಿಗಳನಿತ್ತವು (ಖಭಾಗ. ೦೦-೦೭-೩೨). [ಮಱಿಹು (< ಮಱಿವು$_2$) + – ಇಸು$_3$]

**ಮಱಿಹು** 'ಮಱಿವು$_2$' ನೋ.

**ಮಱಹುಗೊಳ್** (ಕ್ರಿ). ಅಜ್ಞಾನದಿಂದ ಕೂಡಿರು ; ಭ್ರಾಂತಿಯನ್ನು ಹೊಂದಿರು : ತೆಱಹುಗಾಣದಱುಹುಗುಂದಿ ಮಱಹುಗೊಂಡೆನೆನ್ನ ಗುರುವೆ (ಶಂಪರ. ಪ. ೫೦೦-೦೨). [ಮಱಹು (< ಮಱಿವು$_2$) + ಕೊಳ್$_1$]

**ಮಱಹೊಂದು** (ಕ್ರಿ). ಮೂರ್ಛೆಹೊಂದು ; ಪ್ರಜ್ಞೆತಪ್ಪು : ಅಂದು ಕಾಮೋದ್ರೇಕದಿಂ ಮಱಹೊಂದಿ ತನ್ನುವನಱಿಯದಿಪ್ಪರವಿಂದಗರ್ಭನ ಮಸ್ತಕವನುದ್ದಂಡಚಾಪದಲಿ ಸಂಧಿಸಿದ ಸರಳಿಂ ಪಱಿಯಲೆಸ ಬಂದ ಶಬರೇಶ್ವರನೊ (ಬಸವು. ೪೪-೩). [ಮಱಹು (< ಮಱಪ್ಪು₂) + ಒಂದು₁]

**ಮಱಿ**, ಮರಿ (ನಾ). ೧. (ಪ್ರಾಣಿ, ಪಕ್ಷಿ ಮುಂತಾದುವುಗಳಲ್ಲಿ) ಎಳೆಯದು ; ಪಿಳ್ಳೆ ; ಶಾಬ : "ಶಿಶು ಶಾಬಂ ಪೋತಂ ಮಱಿ ಕಿಶೋರಕಂ" (ಚಸ್ತುಕೋ. ೬೭-೨೩) ; ಸೋಮದತ್ತೆಯೆಂಬೊಳ್ . . . ಪೆಣ್ಣರಿಯಾಗಿ ಪುಟ್ಟಿ ತನ್ನ ನಾಲ್ಕುಮಱಿಗಳ್ವೆರಸಾಹಾರಮನಱಸಿ ತೊಟಲುತ್ತುಂ ಬರ್ಪುದನ್ನೆಗಂ (ವಡ್ಡಾರಾ. ೨೯-೩) ; ಸುರಭಿಗಳ ತೊರೆದ ಮೊಲೆಗಳನುಣ್ಬವಱ ಮಱಿಗಳಂ ಪೋಗೆ ನೂಂಕಿ ಒಂಕಿ ಮೊಲೆಗಳನುಣ್ಬ ಕಿಶೋರಕೇಸರಿಗಳುಮಂ... ನೋಡಿ (ಶಂಕರಾ. ೦-೦೧೩ ಪ) ; ಕಾಗೆಯ ಮಱಿಯೆಂದಱಿಯದೆ ಕೋಗಿಲೆ ಕೈಗೊಂಡು ಒರ್ಮೆಯಿಂ ನಡಪಿದೊಡಂ ಕಾಗಾಯೆಂದುದು (ಧರ್ಮಾಮೃ. ೨-೦೦೪). ೨. ಎಳೆಯ ಮಗು ; ಕೂಸು ; ಶಿಶು : ಮಕ್ಕಳ ಮಱಿಗಳ ಸುಖದುಃಖಕ್ಕಾದಂ ಮಱುಗಲಾಗದಂತ ವರ್ಗಱಿಂದಕ್ಕುಂ ಸೌಖ್ಯಂ ಪಾಪದಿನಕ್ಕುಂ ದುಃಖಂ (ಸಮಃಶ. ೩-೦೩೩) ; ಮಱುಗದಿರಿ ಪಾಂಚಾಲರಾಯನ ಮಱಿಗಳಿರ ಭೀಮಂಗೆ ತಪ್ಪೇನುಱುವ ದೊರೆ ಸೊಪ್ಪಾಗದಂತಿರೆ ನೀವು / ಕಾದುವಿರೆ (ಕುಮಾ.ಕ. ೦೦-೨೦). ೩. ಹಾವು ; ಸರ್ಪ : ಕೂಟಂ ಪತ್ತೆಸಾರ್ದು ಕೊಡನ ಮಱಿಯ ಪೆಡೆಯುಂ ತುಡುಕುವೆಗ್ಗನಂತಿರೆ ಸತಿಯ ನಿಡುಜಡೆಯುಂ ಪಿಡಿದೀಟ್ಬುದ್ಯುಕ್ತು ಮಿರ್ದಂ (ರಾಮಾಶ್ವ. ೬೪-೨೬). 'ಪೆರ್ಮಱಿ' ಪರಾ. ೪. (ಬಲಿ ಕೊಡುವ) ಟಗರು, ಆಡು, ಕುರಿ ಇತ್ಯಾದಿ : ಕುಱಿ ಬೇಡ ಮಱಿ ಬೇಡ ಬಱಿಯ ಪತ್ರಿಯ ತಂದು ಮಱಿಯದೆ ಪೂಜಿಸು ನಮ್ಮ ಕೂಡಲ ಸಂಗಮದೇವನ (ಬಸವ. ೩೬೦). ೫. ಚಿಕ್ಕದು ; ಸಣ್ಣದು : 'ಮಱಿ ಮುಗಿಲ್' ಪರಾ. **ಮರಿ** : ೧. ಹೆಣ್ಣುಸಿಂಹವು ಗರ್ಬ್ಬಾಗಿ ಐದು ತಿಂಗಳಿಗೆ ಈಯುವುದು. ಸರ್ಕಿಗೆ ಮೂರು ನಾಲ್ಕು ಮರಿಗಳು ಆಗುವವು (ಪುಂಬಂಧು. ೪-೨೦೪) ; ಬೆಕ್ಕಿನ ಮರಿ ಚೆಂಗನೆ ನೆಗೆಯುತ್ತಿತ್ತು (ಬಾಶಿಕ. ೨). ೨. ಇದಾವುದೂ ನಿನಗೆ ಕೊಡಾಕಿಲ್ಲ ಮರೀ (ಬೆಂಗಬಿ. ೦೬೩). ೩. ಏಗಾಲಮಿಂತು ವೆಂಟಣಿಸಿ ನೀ ಮುದಿಯ ಮರಿಯಂತೆ ಕಾವೆಪಳನಸಿನೀ ನಿಧಿಯ ? (ಗೀತಾಂ. ೨೬-೦೦). ೪. ಒಮ್ಮೊಮ್ಮೆ ಗೌಡರು ತಂಗಳು ಹಬ್ಬದ ದಿನವೂ ಮರಿ ಹೊಡೆಸುವುದುಂಟು (ಜನಪ್ಪರು. ೬೮). ೬. ಎಳೆಯ ವಯಸ್ಸು ; ಚಿಕ್ಕಂದು ; ಎಳಮೆ : ಇವನ ಚೆಲುವಿನ ಪುಂಜ ಹೋಯ್ತು ಮರಿಯಲ್ಲೆ ! (ಕುಂತು. ೪೩-೮). ೭. [ವೀಶೈ] ಮಠದ ಉತ್ತರಾಧಿಕಾರಿಯಾಗುವ ಶಿಷ್ಯ : ತಮ್ಮ ಕಡೆ ಕಂಟ್ಲೆಬಸವಲಿಂಗೈಯ ಸಹಾ ಎರಡು ಜನ ಮರಿಗಳ ಕಳುಹಿಸಿ ಇದ್ದರು (ರಾಜೇಂದ್ರ. ೨೦೪); ಮಠದ ಮರಿ ಹರಿಣಶಿಶುವಿಗೆ ಧಾನ್ಯ ತಿನಿಸುತ್ತಿರುವುದನ್ನು ನೋಡುತ್ತ ಕುಳಿತಿದ್ದರು (ದೀಶಜ. II. ೯೯).

**ಮರಿಹಬ್ಬ** = ಸಾಮಾನ್ಯವಾಗಿ ಹಳ್ಳಿಗಳಲ್ಲಿ ಗ್ರಾಮದೇವತೆಯ ಜಾತ್ರೆಮಾಡಿ ಕುರಿ, ಮೇಕೆ ಮುಂತಾದ ಪ್ರಾಣಿಗಳನ್ನು ಬಲಿಕೊಟ್ಟು ಮಾಡುವ ಹಬ್ಬ : ಗೌಡರುಗಳೆಲ್ಲಾ ಮರೀಹಬ್ಬಕ್ಕೆ ಬೇಕಾಗುವ ಮರಿಗಳನ್ನು ಅಂದರೆ ಟಗರು ಮತ್ತು ಹೋತಗಳನ್ನು ತರುತ್ತಾರೆ (ಜನಪ್ಪರು. ೪೯).

**ಮರಿಹಾಕು** = ೧. (ಪ್ರಾಣಿಗಳು) ಮರಿಯನ್ನು ಪ್ರಸವಿಸು ; ಈಯು : ಬರಹದಲ್ಲಿದ್ದ ಕರಿ ಮರಿಹಾಕೀತೇ ? (ಗಾದೆ) ; ನಮ್ಮ ಮನೆಯಲ್ಲಿ ಬೆಕ್ಕು ಮರಿಹಾಕಿದೆ (ರೂಢಿ). ೨. (ಆಲಂ) ಮರುಕಳಿಸು ; ಮತ್ತೆಬರು : ಅನಂತರ ತಿರುಗಿ ಹುಳಿತೇಗು ಮರಿಹಾಕುತ್ತದೆ (ಪಃಶೋಃಪಂ. ೦೦೬). [ದೇ.॥ ತಮಿ. ಮಲ. ಮಱಿ; ತುಳು. ತೊದ. ಮರಿ ; ತೆಲು. ಮಱಿಕ ; ಕೋತ. ಮಯ್ರ್]

**ಮಱಿದಿಂಗಳ್** (ನಾ). ಎಳೆವೆರೆ ; ಬಾಲಚಂದ್ರ : ಮಱಿದಿಂಗಳನು ಮುಡಿದನೆಲ್ಲಿರ್ದಪನೊ . . . ಕಂಡಿರೇನಮ್ಮ (ಸಿದ್ಧರಾ. ೨-೬೨).

ಮಱಿದಿಂಗಳ ಹಚ್ಚಂ = ಎಳೆಯ ಚಂದ್ರನನ್ನು ಆಭರಣದಂತೆ ಧರಿಸಿದವನು ; ಚಂದ್ರಶೇಖರ; ಶಿವ : ಕುಳಿರ್ವೆಟ್ಟುಮಗಳ್ವೆರಸೆಳಸುವ ಮಱಿದಿಂಗಳ ಹಚ್ಚಂ ಹೆಮ್ಮೆಯ ಸಮ್ಮಂಗುಡುಗೆಮಗೆ (ಉದ್ಭಟೇ. ೬-೩). [ಮಱಿ + ತಿಂಗಳ್]

**ಮಱಿದುಂಬಿ**, ಮರಿದುಂಬಿ (ನಾ). ಎಳೆಯ ತುಂಬಿ ; ದುಂಬಿಮರಿ : ಬಿರಯಿಗೆ ಮೊರೆವಂತೆ ಮೊರೆವ ಮಱಿದುಂಬಿ . . . ಸೊಗಯಿಸುಗುಂ (ಅಂತು. ೬-೦೦೦) ; ಮಱಿದುಂಬಿಯಾಗಿ ವೇಣ್ ಕೋಗಿಲೆಯಾಗಿ ಪುಟ್ಟುವುದು ನಂದನದೊಳ್ ವನವಾಸಿದೇಶದೊಳ್ (ಶಂಕರಾ. ೪-೨೯) ; ಇಬ್ಬರತಿಗಳಗಳನೆ ನವವನಾಂತರದ ಕೊಳನೊಳಗೆ ಮಱಿದುಂಬಿಯುಂ ಸಣ್ಣನೆಯುಂ ಬೆಳೆವವೋಲ್ ಬೆಳೆದರು (ಸಿದ್ಧರಾ. ೦-೬೨). **ಮರಿದುಂಬಿ** : ಉಳ್ಳಲರ ಜೇನ್ ಗುಡಿದು ಮರಿದುಂಬಿ ಒಗಿ (ಕುಂತು. ೪೪-೬). [ಮಱಿ + ತುಂಬಿ₁]

**ಮಱಿಪನ್ನಾಯ** (ನಾ). ಚಿಗುರುವೀಳೆಯದೆಲೆಯ ಮೇಲೆ ಹಾಕುತ್ತಿದ್ದ ಒಂದು ಬಗೆಯ ತೆರಿಗೆ : ಮೆಳಸು ಹೇಱಿಂಗೆ ಬಳ್ಳ ೧ ಹಸುಬೆಗೆ ಮಾನ ೧ ಮಱಿಪನ್ನಾಯದಲ್ಲಿ ಎಲೆಯ × × × (ಎಕ. II, ೩೪೯-೬೬ ; 1159). [ಮಱಿ + ಪನ್ನಾಯ]

**ಮಱಿಮಗ**, ಮರಿಮಗ (ನಾ). ಮೊಮ್ಮಗನ ಅಥವಾ ಮೊಮ್ಮಗಳ ಮಗ : ಏನೆಲವೊ ನಿನಗಿನಿತು ಹೊಗಳುವಡೇನಹನೊ ನೀನಾ ನರೇಂದ್ರನ ಸೂನುವೋ ಮೊಮ್ಮಗನೊ ಮಱಿಮಗನೋ (ತೊರರಾ. ೬-೨-೩೪). **ಮರಿಮಗ** : ಸಿಂಹಪೋತನು ತನ್ನ ಮರಿಮಗನೊಡನೆ ಕಾದಿರುವುದು ಅಸಂಭವ (ಕರ್ಣಾಟ. ೦೨೨).

**ಮರಿಮಕ್ಕಳು** = ಮೊಮ್ಮಗನ ಅಥವಾ ಮೊಮ್ಮಗಳ ಮಕ್ಕಳು : ತನ್ನ ಮರಿಮಕ್ಕಳು ದಾರಿಪಾಲಾಗಬಾರದೆಂಬ ವಿಚಾರ ಮನೆತನದ ಅಸ್ತಿವಾರವನ್ನು ಬಲಪಡಿಸಿತು (ಪಾತಕ. ೩). [ಮಱಿ + ಮಗ]

**ಮಱಿಮೀನ್**, ಮರಿಮೀನು, ಮಱಿಮೀನು (ನಾ). ಎಳೆಯ ಮೀನು ; ಮೀನಿನ ಮರಿ : "ಕ್ಷುದ್ರಾಂಡಮೆನೆ ಮಱಿಮೀನ ಮೊತ್ತಕ್ಕೆ ನಾಮಂ" (ಮಂಗರಾ. ೦೨೦-೬) ; ಕಂಗಳು ಹೊಳೆಯೆ ಮಱಿಮೀನೆಂದು ಹಕ್ಕಳಿಸಿದರು ಹಿಡುಹಿನಲಿ . . . ತುಂಬಿಗಳೆಂದು ಕುರುಳಂಗಳುಕಿ ಕೈಗಳ ತೆಱಿದರತಿ ಮುಗುದೆಯರು ಖೇಚರಿಯರು (ಕುಮಾ.ಭ. ೦೦-೨೮) ; ಪೆಚ್ಚಿದಿಂಗುಡಲೂರ್ವಿ ಮಾಲೆ ಮಾಲೆಗಳೆಡೆಯೊಳುಚ್ಚಳಿಸಿ ಹೊಳೆಹೊಳೆವ ಮಱಿಮೀನ್ಗಳೆನೆ . . . ಎಳವೆಂಗಳ ಕಟಾಕ್ಷದ ಮರೀಚಿಗಳ್ ಸೊಗಯಿಸಿದುವು (ಕೃಪಿಶಾ. ೬-೦೦). **ಮರಿಮೀನು** : ಹೊಳೆಯಲ್ಲಿರುವ ಮರಿಮೀನುಗಳು ಬಿಸಿಲಿನಲ್ಲಿ ಹೊಳೆಯುತ್ತಿವೆ (ರೂಢಿ). **ಮಱಿಮೀನು** : ಅಗಿದು ಹೊಳೆವಕ್ಷಿಗಳ ಮಱಿಮೀನುಗಳ ವಿಕಸಿತವದನಕಂಜಾಳಿಗಳ . . . ಕಾಂತಾಸರಸಿ ರಂಜಿಸಿತು (ತೊರರಾ. ೦-೦೩-೩) ; ಎಳೆವೆಣ್ಣುಗಳ ಸೋಗೆಗಣ್ಮಱಿಮೀನು ಸುಳಿದಾಡುವ ಜನಸಾಗರದೊಳಗೊಪ್ಪುತಿಹುವು (ಕಂಪಬಿ. ೭-೯). [ಮಱಿ + ಮೀನ್₂]

**ಮಱಿಮೀನು** 'ಮಱಿಮೀನ್' ನೋ.

**ಮಱಿಮುಗಿಲ್** (ನಾ). ಮೋಡದ ತುಣುಕು : ಸಣ್ಣಮೋಡ ; ಬಂದ ಳೂರ್ವಶಿ ಬಳ್ಳಿಮಿಂಚಿನ ಮುಂದಿಯಲಿ ಮುರಿದಿಳಿವ ಮಱಿಮುಗಿಲಂದದಲಿ (ಕುಮಾ.ಭ. ೬-೦೩) ; ಮಂಡಳಿಸಿ ಮಱಿಮುಗಿಲಂತೆ ಪಾರ್ವ ಮದಮಧುಕರ ಪ್ರಕರದಿಂದಂ . . . ಸರ್ವಪರ್ವತಸಾರ್ವಭೌಮನಖರ್ವ ಸಂಪದಂ ಮಿಗೆ ಮೆಱೆವುತಿರ್ದುದು (ರಾಜಶೇ. ೧-೦೩೩ ಪ). [ಮಱಿ + ಮುಗಿಲ್]

**ಮಱಿಯಾಚಿಗೂಡಲೂರ್** (ನಾ). ಒಂದು ಸ್ಥಳದ ಹೆಸರು : ಎಳಜ್ಜುಗಡಲೂರ್ಪ್ಪುಮಱಿಯಾಚಿಗೂಡಲೂರ್ಪ್ಪುಱುವಿ ಶ್ರೀಪುರಮಿತಿ ಚತುರ್ಪುಗ್ರಾಮೇಷು (ಎಕ. X, ಗೋಲಬಿ. ೪೬-೪೬ ; 762). [ ? + ಊರ್ ]

**ಮಱಿಯಾನೆ$_1$**, ಮರಿಯಾನೆ (ನಾ). ೧. ಆನೆಯ ಮರಿ : "ಕಳಭಃ. ಕರಿಶಾಬಃ — ಈ ೨ ಮಱಿಯಾನೆ" (ನಾಕರ್ಣ. ೬) ; ಮಱಿಯಾನೆಗಳಂ ಪರಿಭವಮನದರ್ಕೆ ಕಂಡು (ಪಶ್ಚಾರಾ. ೩೭-೦೮) ; ಮೆಱೆವ ಗಜಹಯಶಾಲೆ ಯಲಿ . . . ಮಱಿಗುದುರೆ ಮಱಿಯಾನೆ ತೆಗೆದವು ಲಕ್ಕಸಂಖ್ಯೆಯಲಿ (ಕುಪ್ಪಾಗ. ೪-೦೩). ೨. ಮಕ್ಕಳನ್ನು ಮುದ್ದಿನಿಂದ ಕರೆಯುವಾಗ ಬಳಸುವ ಮಾತು : ಕಂದ ನೀನಚ್ಯುತಪರಾಯಣಂ . . . ಮೋಸದಿಂದ ಳಿವುದುಚಿತವೆ ಮದನ ತನ್ನ ಮಱಿಯಾನೆ ಹಾಯೆಂದೊಱಲ್ದನು (ಕೃಬಿಭಾ. ೩೦-೬೦). 'ಅರಗಿಳಿ' ಹೋ. ಮರಿಯಾನೆ : ೧. ಈ ಸಾರಿಯ ದಸರಾಮೆರವಣಿಗೆಯಲ್ಲಿ ನಾಲ್ಕುಮರಿಯಾನೆಗಳೂ ಇದ್ದುವು (ಲೂಪ).

[ ಮಱಿ + ಆನೆ$_1$ ]

**ಮಱಿಯಾನೆ$_2$** (ನಾ). ಒಂದು ಬಗೆಯ ಸಸ್ಯ : "ವ್ಯಾಘ್ರನಖಿಃ – ಮಱಿ ಯಾನೆ" (ಓಷಧಿ. ೦೫೨). [ ? ]

**ಮಱಿವಕ್ಕಿ**, ಮರಿಹಕ್ಕಿ, ಮಱಿಹಕ್ಕಿ (ನಾ). ಹಕ್ಕಿಯ ಮರಿ ; ಎಳೆಯ ಪಕ್ಷಿ : ಕಡುವಿಸಿಲ ಮಱಿವಕ್ಕಿಯಂತೆ ಗಂಟಲ್ ಮಿಡುಕಿ (ತಬಳ. ೦೯-೯೩). **ಮರಿಹಕ್ಕಿ :** ಮರಿಹಕ್ಕಿ ಹಾರಲು ಪ್ರಯತ್ನಿಸುತ್ತಿದೆ (ಲೂಪ). **ಮಱಿ ಹಕ್ಕಿ :** "ಕಿಶೋರಕಃ – ಮಱಿಹಕ್ಕಿ" (ಓಷಧಿ. ೩೩). [ಮಱಿ + ಪಕ್ಕಿ]

**ಮಱಿವಾಲು** (ನಾ). ಎಮ್ಮೆ, ಹಸು ಮುಂತಾದ ಪ್ರಾಣಿಗಳು ಕರು ಹಾಕಿದ ಸುಮಾರು ಮೂರುದಿವಸಗಳವರೆಗೆ ಕೊಡುವ ಹಾಲು ; ಗಿಣ್ಣುಹಾಲು : ಮದೆಗಜದ ಹೃದಯದಲ್ಲಿ ಮಱಿವಾಲಿಪ್ಪುದ ಕಂಡೆ ನಮ್ಮ ಹುಲ್ಲೆ ಅಱಿಯದೆ ಹುಲಿಯ ಬಾಯ ತುತ್ತಾಯಿತ್ತಲ್ಲಾ ಬಲ್ಲವರ ಕಡೆಯಿಂದ ಭಾಸ್ಕರನು ಉದಯಿಸಲು ಹುಲಿ ಬಿಟ್ಟು ಹುಲ್ಲೆ ಮಱಿವಾಲ ನುಂಡು ಮರಣವನು ಅಳಿಯಿತ್ತಲ್ಲಾ (ಸಿದ್ಧೇವ. ೦೫೦-೪೯೮).

[ ಮಱಿ + ಪಾಲು$_1$ ( < ಪಾಲ್$_1$ ). / ತೆಲು. ಮುರ್ರುಪಾಲು ]

**ಮಱಿವಾವು** (ನಾ). ಹಾವಿನ ಮರಿ ; ಎಳೆನಾಗರ ; ಮಿಡಿನಾಗರ : ಖಡೆಯ ಸರಪಣಿ ತೋಳಬಂದಿಗೆ ಪೆಡೆವಣಿಯ ಮಱಿವಾವುಗಳನಳವಡಿಸಿ ದನು (ಕುಪ್ಪಾಕ. ೭-೦೨) ; ಪೊಳೆವ ಮಱಿವಾವಿನಿಂ ಕೆಂಜಡೆಗಳಂ ಬಿಗಿದು (ಕಿರು. ೩೦-೯೭). [ ಮಱಿ + ಪಾವು$_1$ ]

**ಮಱಿವುಲ್ಲೆ**, ಮಱಿಹುಲ್ಲೆ (ನಾ). ಜಿಂಕೆಯ ಮರಿ : ತರಳಿಕೆಯೆಂಬ ನಮ್ಮ ಮಱಿವುಲ್ಲೆಯನೊಂದು ತಪೋವನಕ್ಕೆ ನೀಂ ನಿರವಿಸು (ಕಾದಂಬ. ೩೯೯) ; ಮಱಿವುಲ್ಲೆಗಳಾರ್ದೆಸಗುವ ಬಿಱುಗಾಳಿಗೆ ಬೆದಱುವಂತೆ ಕಾಂತೆಯ ರೆನ್ನಂ ನೆಱೆ ಕಂಡು . . . ತಳವೆಳಗಾದರ್ (ದಶಕು. ೯-೧೨೧). **ಮಱಿ ಹುಲ್ಲೆ :** ಅಂಗವಿಸಿ ಮಱಿಹುಲ್ಲೆ ಖುರದಲಿ ಸಿಂಗವನು ಹೊಯ್ವಂತೆ ನೃಪರುತ್ತುಂಗಸಹಸಿಯ ಮೇಲೆ ಕೈಮಾಡಿದರು ಖಡ್ಗದಲಿ (ಕುಪ್ಪಾಶೀ. ೯-೨೦). [ ಮಱಿ + ಪುಲ್ಲೆ$_1$ ]

**ಮಱಿಸಸಿ** (ನಾ). = ಮಱಿದಿಂಗಳ್ : 'ಮಱಿಸಸಿದಲೆಯ' ಪರಾ. [ ಮಱಿ + ಸಸಿ$_2$ ]

**ಮಱಿಸಸಿದಲೆಯ** (ನಾ). ಬಾಲಚಂದ್ರನನ್ನು ತಲೆಯಲ್ಲಿ ಧರಿಸಿದವನು: ಶಿವ : ಮಱಿಸಸಿದಲೆಯ ಕುಡುಗೆ ಮತಿಯ ಸುಪುಸಿರನಸವಸದೊಳು (ಉದ್ಭಟೀ. ೬-೨). [ ಮಱಿಸಸಿ + ತಲೆ$_1$ + – ಅ$_7$ ]

**ಮಱಿಸೂಳೆ** (ನಾ). ಎಳೆಹರೆಯದ ವೇಶ್ಯೆ ; ಚಿಕ್ಕಪ್ರಾಯದ ಸೂಳೆ : ಮತ್ತೊರ್ವಳ್ ನೆರೆಮನೆಯ ಮಱಿಸೂಳೆಯ ಸೊಬಗಿಂಗಟಲ್ದು ತನ್ನಂತೆ ಪಡಪುಡುಗಿ ಗಡಣಕ್ಕೆ ಬಂದ ಹಡಣಗಿತ್ತಿ ಸೂಳೆಗಿಂತೆಂದಳ್ (ಅಪಂಪು. ೬-೦೬ ಪ). [ಮಱಿ + ಸೂಳೆ$_1$]

**ಮಱಿಹಕ್ಕಿ** 'ಮಱಿವಕ್ಕಿ' ನೋ.

**ಮಱಿಹುಲ್ಲೆ** 'ಮಱಿವುಲ್ಲೆ' ನೋ.

**ಮಱು$_1$**, ಮರು$_1$ (ಗು). ೧. ಎರಡನೆಯ ; ದ್ವಿತೀಯ : ಪೂರವಱ ಗೊಸಾಸಿಗರು ಮಱುಧರ್ಮ್ಮ ತುಸವನಿನ್ ಪಡೆದು (ಇಕ. VIII, ೨೮೩-೩ ; ೭೦೬). ೨. ಬೇರೆಯ : (೬). ೩. ಮುಂದಿನ ; ಭವಿಷ್ಯದ : ' ಮಱುಭವ ' ಪರಾ. ೪. ಪ್ರತಿಯಾದ ; ವಿರುದ್ಧವಾದ ; ಎದುರಾದ : 'ಮಱುಗಣೆ' ಪರಾ. **ಮರು$_1$ :** ೧. ನಾನು ಬಂದ ಮರುದಿನವೇ ಅವರು ಊರಿಗೆ ಹೊರಟರು (ಲೂಪ). 'ಮರುಚಲು' ಪರಾ. ೩. 'ಮರುಜನ್ಮ' ಪರಾ ೪. 'ಮರುಮಾತು' ಪರಾ. 'ಮಲ$_1$' ಹೋ.

**ಮಾರನೆಯ, ಮಾರನೇ** = (ಕಾಲಕ್ಕೆ ಸಂಬಂಧಿಸಿದಂತೆ) ಮುಂದಿನ ; ಆಮೇಲಿನ ; ಅನಂತರದ : ಮಾರನೆಯ ದಿವಸದಿಂದ ರಾಯರ ಕಾರ್ಯ ಕಲಾಪಗಳಿಗೆ ಪ್ರಾರಂಭವಾಯಿತು (ರಾಜುಕ. ೯೦) ; ಮಾರನೆಯ ದಿನದ ಧಾರೆಯ ಊಟಕ್ಕೆ ಬಹಳ ತರಮೂದು ಬೇಕು (ಪಮ್ಮರು. ೨೨೬) ; ನಾನು ಹೋದ ಮಾರನೇ ದಿನವೇ ನನ್ನ ತಂಗಿಯೂ ಊರಿಗೆ ಬಂದಳು (ಲೂಪ).

[ದೇ.॥ ತಮಿ. ಮಲ. ಮಱು ; ತುಳು. ಮರು ; ತೆಲು. ಮರಿ, ಮಱಿ ; ಕೋತ. ಮರ್ ; ಕೊಡ. ಮಱ್ ; ಕೋಲಾ. ನಾಯ್ಕಿ. ಪರ್ಜಿ. ಮರಿ]

**ಮಱು$_2$** (ಅ). ಪ್ರತಿಯಾಗಿ : ಈಗಳಿದೊ ಕೀರ್ತ್ತಿವೆಣ್ ಜಯಲಕ್ಷ್ಮಿ ಬಂದಳ್, ಪಲತೇರ ಥೇಬಾಯ್ಗೆ ಮಱುನಲಿದು ಬಂದಳ್ (ಅಂತಗೊ. ೬-೦೩೭). [< ಮಱು$_1$]

**ಮಱುಂಕ** 'ಮಱುಕ' ನೋ.

**ಮಱುಕ**, ಮರುಕ, ಮರುಕು$_2$, ಮರುಗು$_2$, ಮಱುಂಕ (ನಾ). ೧. ತಾಪ: ಉರಿ : ಆ ತೇಟ್ಟ(ರುಗ)ಳುಬ್ಬರದಿಂದಂ ಮಿಡಿದಂದು ಲೋಳೆ ಮಱುಕಂ ಶೋಕಂ ಬೆಮರ್ ತೋಱುಗುಂ (ಲೋಕೋಪ. ೦೦-೨೩). ೨. ಅಳಲು ; ಬೇಗುದಿ ; ಸಂತಾಪ : ಮಱುಕಮಾಮಯಮಪ್ಪಪಮೃತ್ಯುವೆಂಬಿವಲ್ಲಿಗೆ ಪೊಱಗೆಂದೊಡಂ ಸುಖಮುದೇವೊಗಟ್ಟುವುದೊ ಭೋಗಭೂಮಿಯಾ (ಆದಿಪು. ೩-೩೦) ; ಮನದ ಮಿಡುಕಿನ ಮಱುಕ ಮುಂದಲೆಗೊಟ್ಟುದಱವಿನ ಸ್ವೆಱಗು ಹಾಱಿತು (ಕುಪ್ಪಾಸ. ೦೯-೨೮). ೩. ಚಿಂತೆ ; ದುಗುಡ : ಎನಗೆ ಮನದ ಮಱುಕಂ ಜಱಿದುಪಾಹಾರಕ್ಕಂತು ಚಿಂತೆಗೆಯ್ವಂ (ಶಂಕಕಂ. ೦೭೩-೦೯) ; ಅಱಿತು ನಿನ್ನನು ಹೊಗಳಲಱಿಯೆವು . . . ಬಱಿಯ ಬಾಯಿಯಲಿ ನಿನ್ನ ಹೊಗಳುವ ಭಟ್ಟರಾರೆಂದು ಮಱುಕವಿಲ್ಲಲೆ ನಿಮ್ಮ ಕೂಡೆಮಗೞಿತ ಮುನ್ನವೆ ಶೂನ್ಯ (ಸಂಕಶ. ೯-೨೦) ; ಮುನಿನಾಥ ನುಡಿದುತ್ತರಕೆ ಮಱುತ್ತರವ ಕಾಣದೆ ಮನದ ಮಱುಕದಲಿ ಗುರು ಮುಖಾಂಬುಜವನು ನಿರೀಕ್ಷಿಸಿ (ತೊರಾ. ೦-೯-೯೦). ೪. ತಳಮಳ ; ಸಂಕಟ : ಮನದ ಕಾಂಕ್ಷೆಯಿಂ ಮುನ್ನಿನಂತುಂಡು ಮುನ್ನಿನ ಮಱುಕ ದಿಂದಿಮ್ಮಡಿ ಮಱುಕಮಾಗೆ ಮಱುದಿವಸಂ ಭಕ್ಷ್ಯದ ದೆಸೆಗೆ ಪಕ್ಷಂಗೆಟ್ಟು . . . ಒಲ್ಲೆನೆಂಬುದುಂ (ರಪರ್ವಮ್ಮ. ೦-೦೬೨) ; ವಿಷಸಮ್ಮಿಶ್ರಿತಮೋದಕ ಪ್ರಕರಮಂ ತತ್ಪಾಪಿ ತಂದಿಕ್ಕೆ ತದ್ವೃಷಮಾರ್ಗಿಪ್ರಭು ಮೆಲ್ದು ಪೋಗಿ ಮಱುಕಂ ಕೆಯ್ಗಣ್ಮೆ ಪೊಣ್ಮಲ್ (ವೀಬಿರು. ೦೯-೦೨೨). ೫. ಅಕ್ಕರೆ; ಪ್ರೀತಿ: ಎನ್ನವರನ್ನಿಗರೆನುತುಂ ಮಱುಕಂ ಮಚ್ಚರಗೊಳ್ಳದ ಸತ್ಯಕ್ಕೆಱವೆಟ್ಟೆನಿಸುವ ಸಾಧುಸಮಿತಿಗತಿಸಮಿತಿಯೊಳೆಱಗುವೆನು (ಶಚು:ಕಾ. ೧-೩) ; ವಾಯಸಪ್ರತತಿ . . . ಕೋಗಿಲೆ ಮಱಿಗಳಂ ಮೈಯೊಳ್ಪುದುಗಿಕೊಂಡು ಮಱುಕದಿಂದ್ಯದೆ ಪಾಲಿಸುತಿರ್ದುವು (ಕೃಬಿಭಾ. ೨೮-೯); ತನ್ನ ಪೆತ್ತವರಿಗೆ ಮಿಗಿಲು ತನ್ನನಿಯನ ಪೆತ್ತವರೆಂದವರನು ಮನ್ನಿಸುವುದು ಮಱುಕದೊಳು (ಹರಿಶ. ೪-೪). ೬. ದಯೆ; ಕರುಣೆ : ವಾಸರಪತಿ ಬಿಸುಗದಿರಿಂ ಪೇಸದೆ ತವೆ ಪೀರ್ಗುವೆಂಬ ಮಱುಕದೊಳಂಭೋಜಾಸನನಂಬುಜವನಮಂ ಟಾಸಣಿಸಿದನೆನಿಪುವಿಡಿದ ತಾವರೆಯೆಲೆಗಳ್ (ಕಾವ್ಯಾಪ. ೨೩೭); ತನಯಂ ನಿನಗಾಗಲೆಂದು ತಪಮಂ ಮಾಟಿಪ್ಪಾತನ ಮಱುಕಮೆ ಸಾಲದೆ (ಅರ್ಜಪೀ. ೦-೦೦೯); ಆಡಿದೊಡೆ ಹಾವಿಂಗೆ

ಹದ್ದಿನ ಕೂಡೆ ಮಱುಕವೆ (ಕುವ್ಯಾಕ. ೧೯-೩೦). ೭. ಅತಿಶಯವಾದ ಮೋಹ; ವ್ಯಾಮೋಹ : ಅಱಿವುಗೆಡಿಸುತ್ತಮೆಲ್ಲಾ ತೆಱದಿಂ ದೆಸೆಗೆಡಿಸ ದಿರದು ವಿಷಯಸಮೂಹಕ್ಕೆಱಗಿ ಬಿಡದಂತೆ ಪತ್ತುವ ಮಱುಕಂ ದಿಱ್ಮೋಹದಂದದಿಂ ಮಾನಿಸರಂ (ಕಾದಂಪೂ. ೫೩೮); ಅರ್ಥದ ಮಱುಕಕ್ಕೆಣೆ ಮಱುಕಮೊಳವೆ ಬಗೆವೊಡೆ ಜಗದೊಳ್ (ರವರ್ಣಾವ. ೦೨-೨೩೩); ಎನ್ನೊಡಲ ಮಱುಕಮಂ ಬಿಟ್ಟೆಸು (ಕೈವಿಂಶಾ. ೦೦-೪). ೮. ಕಷ್ಟ ; ಬವಣೆ ; ತೊಂದರೆ (?): ಇಱಿಯದೆ ಕೆಮ್ಮನುಂತೆ ಭುವನಂಗಳನುಂಗೊಳಿ ತಕ್ಕುದೆಂದೊಡೇಮಱುಕಮನೆಂಬುದೇವಿರಿದೆನ್ನ ಭುಜಾಸಿಗೆ (ಕಾವ್ಯಸಾ. ೪೦೦ ಕೂದ್ರಕ). ಮಱುಕ : ೨. ಬಾಯ್ನುಡುಗೆ ಮಱುಕದಿಂ ಮಾತನಾಡಿದಳು (ಕಾಲೂರ. ೦೭೪-೩೯೯). ೫. ಧ್ವನಿಯಲ್ಲಿ ನಡುಕ, ಅದಕ್ಕಿಂತ ಅಧಿಕವಾಗಿ ಮಱುಕ ತುಂಬಿತ್ತು (ಕೃಜಸ. ೨). ೬. ಬೀದಿಯಲ್ಲಿ ಸಾಯಲು ಬಿದ್ದಿದ್ದ ಈ ಹುಡುಗನನ್ನು ಕಂಡು ಮಱುಕವೆನಿಸಿತು (ಕೀವೋಶ. ೭೦); ನನಗೆ ಅವಳ ಮೇಲೆ ಅತಿಶಯವಾದ ಮಱುಕ ಉಂಟಾಗಿತ್ತು (ಜಾಡಿ. ೩೩೭). ಮಱುಕು₂: ೨. ತನ್ನ ಮಱುಕಿಗೆ ಮಱುಗಿ ಆಣೆಕಲ್ಲೊಲು ಕರಗಿ ಬಿಟ್ಟ ನಿಟ್ಟುಸಿರೆ ಚಂದನದ ತಂಪು (ಗಂ. ೬೪-೦೯). ೫. ಗಿರಿಜೆ ತಪದಾರಂಭಕಾಲಕೆ ಮಱುಕಿ ನಿಂದೂರಿರ್ದ ತರುಗಳು ಭರದಿ ಪೆರ್ಮರಗಳಿಗೆ ಸರಿಯಾಗೀಗ ಫಲಗಳನು ಧರಿಸಿ ಮೆರೆಯುತ್ತಿರಲು (ಶಾರ್ವಶ. ೨-೬೦); ತನ್ನಯ ತರಳನಿಗೆ . . . ರಾಜ್ಯವನು ಮಱುಕಿನಿಂದರ್ಪಿಸಿದ ಮಹೀಲಕ ಸರಪತಸಯುನಿಗೆ . . . ಭೋಗಿಪ್ರದೊಂದೆಯುಳಿದಿಹುದು (ರಘುವಂ. ೦೯-೩). ಮಱುಗು₂ : ೪. ಮಱುಗು ಮಱುಕವು ಕೂಡಿ ಎರಡಲ್ಲ ಒಂದಹುದು ಎರಕ ಹೊಯ್ದಂತಹ ರಾಮರಾಮಾ (ಕೂರ್ಯಶಾ. ೬೨-೫). ಮಱುಂಕ : ೨. ನನೆಗಣೆಯೇಕೆ ಕಾವ ಪೆಱಸಾರ್ ಮುಳಿಸೇಕೆ ಜಯಂತ . . . ಮನದ ಮಱುಂಕಮೇಕೆಲೆಲೆ ಭದ್ರಕ ಮೆಲ್ಲನೆ ಜಾಱು (ಕವಿತ. III, ೩೩ ವಿಶ್ವೇಶ್ವರವೃತ್ತ ೪೫). ℗ ಇದು ಛಂದಸ್ಸಿಗಾಗಿ ಮಾಡಿಕೊಂಡಿರುವ ರೂಪ.

[<ಮಱುಗು./ತಮಿ. ಮಱುಕ್ಕಮ್]

**ಮಱುಕಂದೋಱು** (ಕ್ರಿ). ಕನಿಕರಿಸು ; ದಯೆತೋರು : ಬಱಿದೆ ಮಱುಕಂದೋರ್ದ ತಳ್ವದೇತರ್ಕೆ? (ಐವ್ಯಕ್ರ. ೨-೪೨).

[ ಮಱುಕ + ತೋಱು (< ತೋಱು) ]

**ಮಱುಕಂಬಡೆ**, ಮಱುಕವಡೆ (ಕ್ರಿ). ೧. ಪ್ರೀತಿಯಿಂದ ಕೂಡಿರು; ಅಕ್ಕರೆಯಿಂದಿರು: ಪೆಡೆಯಂ ಕೊಡೆಯಂತಿರೆ ಪಿಡಿದಡಿಯೊಳ್ ಸೆಱೆ ನಿಂದ ಮಱುಯನಾನನದೆಲರಿಂ ಬಿಡದಾಶ್ವಾಸಿಸಿ ಮಱುಕಂಬಡೆದೋವುತ್ತಿರ್ದು ದುರಗಿ ಪರ್ಬಿದ ಬಿಸಿಲೊಳ್ (ರಾಜಶೇ. ೫-೪೪). ೨. =ಮಱುಕಂದೋಱು: ಈ ಬುದ್ಧಸಮಯಮಂ ಪರಿಪಡಿಸಿ ಮನಗೊಂಡು ನಿನ್ನ ಬೆಂಬಳಿಯಲ್ಲಿ ಬಂದು ದೇಸಿಗನಾದನೀಗಲೆನ್ನಾ ಮನದಾಣ್ಮನೆಂದು ಮಱುಕಂಬಡೆಯವೇ ನಿನ್ನ ತನುಜನಂ ಕೊಂಡೆಯಲ್ಲಾ (ಸಮ್ಯಕೌ. ೯-೮೭). ಮಱುಕವಡೆ : ೨. ಹಡೆದ ಮಗನಂ ಪೆತ್ತ ತಂದೆತಾಯ್ಗಳು ಮಱುಕವಡೆಯದರ್ಥವ ಬಯಸಿ ಕಯ್ಯಾರೆ ತಲೆಯ ಹರಿಗಡಿದು (ಸಮ್ಯಕೌ. ೨-೭೫). [ಮಱುಕ + ಪಡೆ₁]

**ಮಱುಕಣಿಸು** 'ಮಱುಕಳಿಸು' ನೋ.

**ಮಱುಕವಡೆ** 'ಮಱುಕಂಬಡೆ' ನೋ.

**ಮಱುಕಳಿ**, ಮಱುಕಳಿ (ನಾ). ಹಿಂತಿರುಗಿದುದು : ಮತ್ತೆ ಕಾಣಿಸಿ ಕೊಂಡುದಂ: "ಮಱುಕು[ಕ]ಳಿಯೊಂದು ಮರಳ್ವುದು" (ಳಶಾ. ೭೦-೬೨೫); "ಮಱುಕು[ಕ]ಳಿ ಮರಳ್ವುದಕಕ್ಕುಂ" (ಕೀಳಂ. ೨೪೦). ಮಱುಕಳಿ : ನನ್ನ ಕಣ್ಮನಗಳಿವು ಸ್ವಲ್ಪಮಟ್ಟಿಗೆ ಮನ್ದವೇಗಕ್ಕಾಗಿ ಮೋಡದ ಮಱುಕು[ಕ]ಳಿಯಲ್ಲಿ ಹಮ್ಮಯ್ಸಿರಬೇಕು (ಮಂತ್ರಶ. ೬೦೯-೫).

[ ದೇ.॥ ತಮಿ. ಮಱುಕಲ್ ]

**ಮಱುಕಳಿಸು**, ಮಱುಕಳಿಸು, ಮಱುಕೊಳಿಸು, ಮಱುಕಣಿಸು, ಮಱು ಕೊಳಿಸು (ಕ್ರಿ). ೧. (ದುಃಖ, ರೋಗ, ನೆನಪು ಮುಂತಾದವುಗಳು) ಪುನಃ ಕಾಣಿಸಿಕೊಳ್ಳು ; ಮತ್ತೆಬರು : ನೀಂ ಬಱಿದೆ ಬಂದುದನಱಿ ದಾಗಳೆ ಮಱುಕಳಿಸಿ ಮನವಿಕ್ಕಿದಳಪ್ಪೊಡೆ ಬಱಿಕ್ಕಸಾಧ್ಯಮಕ್ಕುಂ (ಶಂತಕಂ. ೨೬೦-೦೮); ಮಱುಕಳಿಸಿ ಬಂದ ಜ್ವರವುಳ್ಳವರು ಬೇವಿನ ಸೊಪ್ಪಿನ ಕಡ್ಡಿ . . . ಪರ್ಪಾಟಕ ಇವಱ ಕಷಾಯವ ಪಾನವ ಮಾಡುವುದು (ವೈದ್ಯಸಾ. I, ೦೨೮). ಮಱುಕಳಿಸು : ೧. ಭೀತಿಯಿಂದ ನಿರ್ವಿಣ್ಣವಾದ ಮೋರೆಯ ಬಣ್ಣ ಇನ್ನೂ ಮಱುಕಳಿಸಿರಲಿಲ್ಲ (ಶುಣರುದಾ. ೨೫೩); ಅವನ ಬೇನೆ ದಾರುಣವಾಗಿ ಮಱುಕಳಿಸಿದ್ದನ್ನು ನೋಡಿ ಡಾಕ್ಟರರು ತೀರ ಚಿಂತಿತ ರಾದರು (ಇಶ್ರಕ. ೩೯೪); ಗುರುತಿನ 'ಆಭರಣ'ವನ್ನು ಅರಸನು ಕಂಡಾಗ ನೆನಪು ಮಱುಕಳಿಸುವದು (ರವರ್ಣಾ. ೬೯). ೨. ಪುನರಾವೃತ್ತಿಮಾಡು : ಅವಳು ಕೂಡ ವಿದೇಶಗಳಲ್ಲಿ ಏನೇನು ಮಾತನಾಡಿದ್ದಾಳೆಂಬುದು ಆ ಪ್ರಚಾರ ಪತ್ರಗಳಲ್ಲೇ ಇದೆಯಲ್ಲ; ಅವಳ ಮಾತುಗಳನ್ನೇ ಅವರು ಮಱುಕಳಿಸಿದಂತಿದೆ (೭೦ಬಿದ. ೦೨). ಮಱುಕೊಳಿಸು : ೧. ಕಾಗದಗಳು ಸೇರಿ ಮೈಸೂರಿನಲ್ಲಿ ಹಿಂದಿನ ಕಥೆಯೆಲ್ಲ ಮಱುಕೊಳಿಸಿತು (ಮುಹಾಗ. ೫೦೯); ಅವನ ವೇದನೆ ಮಱುಕೊಳಿಸಿತು (ರಂಗರೋ. ೦೮). ೩. ಪುನಃ ಉಂಟುಮಾಡು ; ಮತ್ತೆ ಒದಗಿಸು,–ತರು : ಇಲ್ಲಿಗೈತಹ ಯಾತ್ರಿಕರ ಎದೆಯ ಮೂಷೆಯಲಿ ಹಾಳಾದ ಐಸಿರಿಯ ಕಿಚ್ಚ ಮಱುಕೊಳಿಸು ! (ಕೋಗಿಲೆ. ೪೦-೪). ೪. ಮತ್ತೊಮ್ಮೆ ಹುಟ್ಟು; ಪುನಃ ಮೂಡು : ಎಳೆವಗೆಯಲಿ ಇಳೆ ಜಗಿಯಲಿ ಮಱುಕೊಳಿಸಲಿ ಹೂವು (ಅರಳು. ೩೮೪-೦೩); ಎಲ್ಲೆಲ್ಲಿ ಹುಲ್ಲನ್ನು ಕೆತ್ತಿರಲಿಲ್ಲವೊ ಅಲ್ಲೆಲ್ಲ ಅದು ಮಱುಕೊಳಿಸಿ ನಳನಳಿಸುತ್ತಿತ್ತು (ಕೃಷರು. ೩). ಮಱುಕಣಿಸು : ೧ ಬಂಧುಜನನಿರೀಕ್ಷಣದಿಂ ಶೋಕಂ ಮಱುಕಣಿ [ಪಾಠಾಂ. ಕೊಳಿ]ಸೆ ಬಾಯುಱಿದು ಪಳಯಿಸುವ ಕುಂತಿಯುಮಂ. . . ಸಂತೈಸಿ (ಕಂಶಭಾ. ೨-೨೯ ವ); ನಿಜಪ್ರಿಯತನುಜಾನುಜರ ಶೋಕದಿಂ ವಿಹ್ವಲೀಕೃತನಪ್ಪ ಭೂತಳೇಶ್ವರಂಗೆ ನಿಜಪ್ರಿಯಸಖನಪ್ಪ ಕರ್ಣನ ದರ್ಶನದಿಂ ದುಃಖಂ ಮಱುಕಣಿ[ಪಾಠಾಂ. ಕೊಳಿ]ಸುಗುಂ (ಗದಾಯು. ೫-೯ ವ); ಬಱಿ ದಱಿವ ಕಿಚ್ಚಿನೊಳು ತುಪ್ಪವನೆಱೆವ ತೆಱನಾಯ್ತುವರ್ಗೆ ದುಃಖಂ ಮಱು ಕಣಿಸಿ ನೋಯಿಸಿತು ವಿನಯಾರ್ಣವನಮಳವಚನಂ (ಶಾಸುಕ. ೭-೪೭). ಮಱುಕೊಳಿಸು : ೧. ಪಾಂಚಾಲಸುತೆಯ ವಿವಾಹವಾರ್ತೆಯ ಕೇಳಿದರಲ್ಲಿ ಕೌರವರು ಮಱುಗಿದರು ಮಱುಕೊಳಿಸಿ (ಕುವ್ಯಾಆ. ೦೭-೦); ಸಾವುವನು ಬೆಳಸದೆ ವೃಥಾ ಸುತ್ರಾಮತನದಲಿ ಬೆೞತೆನಿದಕೆ ವಿರಾಮವಾಗದೆ ಮಾಣ ದೆಂದಳಲಿದನು ಮಱುಕೊಳಿಸಿ (ಐರಾಗ. ೬-೭-೯). ೫. ಪುನಃ ಪುನಃ ಪ್ರಯತ್ನಿಸು : ಅಳಲಿಸಿದನೇ ಧರ್ಮಪುತ್ರನ ಬಳಿಚಬಿಟ್ಟೆನು ನಾಯ ಕೊಲ್ಲದೆ ಕಳುಹಿದರೆ ಬೆಂಬಿಡನಲಾ ಮಱುಕೊಳಿಸಿ ಮಱುಕೊಳಿಸಿ (ಕುವ್ಯಾಕ. ೦೩-೩೦); ಅಱಿಸಿದರು ತಾವಿದ್ದ ತಾಣದ ತೆಱಪುಗಳ . . . ಮಱುಕೊಳಿಸಿ ಮತ್ತೊಮ್ಮೆ ಮನೆಯೊಳಗಱಸಿ ಕಾಣದೆ ಕಂಬನಿಯ ಕಟ್ಟೊಱತೆಯಲಿ ಕರೆಕರೆ ಪುತ್ತೈತಂದರು ವನಾಂತದಲಿ (ಕೋರಣಾ. ೩-೦೦-೩೦). [ಮಱುಕಳಿ + – ಇಸು₃]

**ಮಱುಕುಳಿ** (ನಾ). ಮಱುಗುವ ಸ್ವಭಾವದವನು : ಇಳದಳಿಯನೇಳದಂ ಸೂಕುಳಿಯೋಕುಳಿ ಕಳಱು ಪೆಳಱು ಮಱುಕುಳಿಯುಳಿಯುಂ . . . ಇಱಿ ಕುಳಿಯುಮಾದಿಯಾಗೞಿ ಕುಳನಂ (ಶಮದ. ೨೬); ಕುಳಿ ಪ್ರತ್ಯಯಕ್ಕೆ– ಪೋರ್ಕುಳಿ . . . ಮಱುಕುಳಿ (ಶಮದ. ೨೦೩ ಕ್ರಯೋ). "ಪ್ರೀತಿ" (ಶಮದ. ವ. ೨೦೩ ಅವಿ). [<ಮಱುಗು + – ಕುಳಿ₃]

**ಮಱುಕೂಳೆ**, ಮಱುಕೂಳೆ (ನಾ). ಪೈರನ್ನು ಕೊಯ್ದ ಬಳಿಕ ತಳದಲ್ಲಿ ಪುನಃ ಚಿಗುರುವ ಮೊಳಕೆ : ಒಗೆದ ಮಱುಕೂಳೆಯೊಳ್ ತೆನೆಗಳಂ ಕೊಯ್ದನುಱಿ ಸುಗುಣನಿಳೆಹಾಳಬೊಮ್ಮಯ್ಯನುಂ (ಐಶವು. ೫೭-೨೬). ಮಱು ಕೂಳೆ : ಈ ಸಲ ಮಱುಕೂಳೆ ಫಸಲು ಬಂದಿದೆ (ರಾಬ).

[ಮಱು₁ + ಕೂಳೆ₂]

**ಮಱುಕೊಳಿಸು** 'ಮಱುಕಳಿಸು' ನೋ.

**ಮಱುಗಣೆ** (ನಾ). ಬಾಣಕ್ಕೆ ಪ್ರತಿಯಾದ ಬಾಣ ; ಎದುರುಬಾಣ : ಅಸಮಸಾಹಸಿಯೆಚ್ಚೆಡೆಚ್ಚನು ಭೀಮ ಮಱುಗಣೆಯು (ಕುಮಾ.ದ್ರೋ. ೧೩-೨೪); ಆ ದಾನವಂ ವೇಗದಿನದಂ ಪಿಡಿದು ಮುಱಿದು ಮಱುಗಣೆಯುಂ ತಲೆದೂಗಿ ಸೆಳೆದಿಡುವುದುಂ (ಅದ್ಭು.ಶ. ೫೦-೦೭). [ಮಱು$_1$ + ಕಣೆ$_1$]

**ಮಱುಗರೆ** (ನಾ). ಒಂದು ಸ್ಥಳದ ಹೆಸರು : ಸೂರ್ಯಗ್ರಹಣೇ ಮಱುಗರೆವಿಷಯೇ ಎಡೆದಿಣ್ಣೇ ಸಪ್ತತಿ ಪ್ರತಿಬದ್ಧಃ (ಮೈ.ಆ. ೧೯೪೨, ೭೫-೧೧೧ ; 819) ; ಮಱುಗರೆಯರ್ ಚಿತ್ತಪ್ಪಱಿಕ್ಕೆಱೆಯುಂ ಕಟ್ಟಿಸಿ ನಾಲ್ಕಳವೆಯು ಭಾಗಂ ಬಿತ್ತುವಟ್ಟಂ ಕೆಱೆಗೆ ಕುಡುವುದು (ಎಕ. XI. ಹಿರಿಯೂ. ೩೩-೩; ಸು. ೫೯೦). 'ಮರುಕರ' ಹೋ. [ ? ]

**ಮಱುಗರೆನಾಡು** (ನಾ). = ಮಱುಗರೆ : ಸ್ವಸ್ತಿಶ್ರೀಪುರುಷಮಹಾರಾಜ ಪೃಥುವೀರಾಜ್ಯಂಗೆಯೆ ಸಿಯುಗೆಲ್ಲರ್ ಮಱುಗರೆನಾಡು ಮೂನೂಱು ಮಾಳೆ (ಎಕ. XVI. ತುಮುಕೂ. ೬೭-೩; ಸು. 750). [ಮಱುಗರೆ + ನಾಡು]

**ಮಱುಗಳಿಗೆ, ಮರುಗಳಿಗೆ** (ನಾ). ಮುಂದಿನ ಗಳಿಗೆ; ಮರುಕ್ಷಣ: ನೀನ್ ಪೋದ ಮಱುಗಳಿಗೆ ಅಡಗಿದ್ದ ಶೂರರೆಲ್ಲರ್ ಬಂದು . . . ಉಯ್ಯರೇ ನಿನ್ನ ಮಗನೊಡನೆ! (ಅಕ್ಷಾ. ೨೦-೧); ಜಳಧಿಗಳೊಂದೆನೆ ಸೇರಿಯುಮಱಿಯಿಸದೊಂದೊಡಲ ಬೇಗೆಯಿಂ ಘನಮಹಿಮಂ ಕೆಳೆಗೊಂಡು ವರ್ತಿಸಲ್ ಮಱುಗಳಿಗೆಯೊಳಱಿಗುಂ ಕುಳಿರ್ಮೆ ಸಾಧಾರಣಮೇ (ವಸ್ತು.ಕಂ. ೭-೫೦). **ಮರುಗಳಿಗೆ :** ಈ ಗಳಿಗೆಗೆ ಒಂದು, ಮರುಗಳಿಗೆಗೆ ಮತ್ತೊಂದು ಮಾತನಾಡುವುದೇ ಅವನ ಸ್ವಭಾವ (ರೂಢಿ).

[ಮಱು$_1$ + ಗಳಿಗೆ]

**ಮಱುಗಿಸು, ಮರುಗಿಸು** (ಕ್ರಿ). ೧.(ಹಾಲು, ನೀರು ಮುಂತಾದುವನ್ನು) ಚೆನ್ನಾಗಿ ಕುದಿಸು,– ಅಟ್ಟುವಂತೆ ಮರಳಿಸು : ತುಱುವೆಯ ಬೇರನಿಕ್ಕಿ ತಱುಪೆರ್ಮೆಯ ಪಾಲುಮರ್ಧಮಪ್ಪಿನಂ ಮಱುಗಿಸಿ (ಲೋಕೋಪ. ೬-೧೧); ಅಂಬುವಿನಿಂದಷ್ಟಗುಣಮದರ್ಕೆಂಬುದಱಿಂ ಮಱುಗಿಸಿ ಪದಾವಶೇಷದೊಳ್ ಎಱೆವುದು ಗೋಘೃತಮುಂ (ಶಾಳಿಸಂ. ೨೭). ೨. ಸುಡು ; ದಹಿಸು : ಮಹಾವಿಷದ ಸುಂಕಳೊಳಿಕ್ಕಿ ಕಾಯ್ಸಿ ತನುವಂ ಮಱುಗಿಸುವುದುಂ (ಕಾಂತೀಕ. ೯-೧೧೧ ವ). ೩. ಬೇಯಿಸು : ನೀರೊಳ್ ಮಱುಗಿಸಿ ಕುಡು ಕಾಳ್ವೇಡೆಯ ಬೇರಂ ಸಮಾಕ್ಷಿಕಂ ಘೃತದಿಂ ಸಂಹಾರಿಸುಗುಂ ವಮನಂ ವಿಷದಾರುಣಮುಂ ತತ್‍ಕ್ಷಣಂ (ಖಸುದ. ೨-೧೫). ೪. ಕ್ಲೇಶಕ್ಕೆ ಒಳಪಡಿಸು ; ಹಿಂಸೆಪಡಿಸು : ಪಾಯ್ದುಱುಕೆಯ ಪಾರೆಯುಂಬುಗಳ ತಂದಲಗುರ್ವಿಸಿ ಸಿಂಧುರಾಜನಂ ಮಱುಗಿಸೆ . . . ಪೊಕ್ಕನಭಿಮನ್ಯು ವಿರೋಧಿಬಳಾಂಬುರಾಶಿಯಂ (ಹಂಪಭಾ. ೧೧-೯೩); ಮನವ ಗೆದ್ದೆಹೆನೆಂದು ತನುವ ಕರಗಿಸಿ ಕಾಯುವ ಮಱುಗಿಸಿ ನಿದ್ರೆಯ ಕೆಡಿಸಿ ವಿದ್ಯೆಯ ಕಲಿತಹೆನೆಂಬ ಬುದ್ಧಿಹೀನರಿರಾ ನೀವು ಕೇಳಿರೋ (ಲಿಂಗವ. ೪. ೪೭-೧೧). ೫. ಸಂಕಟಪಡಿಸು ; ಬವಣೆಗೊಳಿಸು ; ಗೋಳಾಡಿಸು : ಮಱುಗಿಸಿ ನಿನ್ನನೀ ಪದಕೆ ತಂದುದು ಮುನ್ನಿನ ಗೆಯ್ದ ದೋಷಂ (ಅದಿಪು. ೩-೪೦); ಅಣಂ ದೆಸೆಗಾಣದ ನೋಟಮಾತುಮಂ ಮಱುಗಿಸೆ ಬಂದುದಂದು ಕರುಣಂ ಬರೆ ವೈರಿನೃಪಾಂಗನಾಜನಂ (ಹಂಪಭಾ. ೧೪-೫); ಮನಮಂ ಮಱುಗಿಸಿ ಚಿತ್ತಮಂ ಚಿವ್ವುಂಟಿ ಕರಣಂಗಳಂ ಖಂಡಿಸಿ . . . ಹೋದಂ (ಪಂಪರ. ೧೭-೨೯). ೬. ಹಾತೊರೆಯುವಂತೆ ಮಾಡು ; ಅಪೇಕ್ಷೆಪಡುವಂತೆ ಮಾಡು : ಸರ್ವಸಂಗಪರಿತ್ಯಾಗಿ ಎಂದೊಡೆ ಭೋಗಕ್ಕೆ ಮಱುಗಿಸುವೆ (ಸಮಾವ. ೧೨-೧೪); ಒಲಿದು ಬಂದವರಾವು ಸೊಬಗಿನೊಳೊಲಿಸಿ ಮಱುಗಿಪ ಮಿಂಡ ನೀನು (ಕುಮಾ.ಆ. ೬-೪೦). **ಮರುಗಿಸು :** ೧. ಪೊತ್ತರೆ ಹಾಲಂ ಮರುಗಿಸಿ ಉತ್ತರಣೆಯ ಬೆಣ್ಣೆಗರಗವೆರಡರ ಬೇರಂ ಬಿತ್ತರದೊಳಿಕ್ಕಿ ಹೆಪ್ಪಿಟ್ಟಳ್ತಿಯೊಳಂ ಕಡೆಯೆ ಬೆಣ್ಣೆ ಮೂವಡಿಯಕ್ಕುಂ (ಗೋವೈದ್ಯ. ೧೯೯).

[ಮಱುಗು + –ಇಸು$_3$]

**ಮಱುಗು, ಮಱಕು, ಮರುಕು$_1$, ಮರುಗು$_1$** (ಕ್ರಿ). ೧. (ನೀರು, ಹಾಲು ಮುಂತಾದುವು) ಚೆನ್ನಾಗಿ ಕುದಿ,–ಮರಳು : ಮಱುಗುವ ಪಾಲ್ಗಳೆಯು ಪನಿಗಳಂ ಬೆರಸಿದವೋಲ್ (ಕವಿರಾ. ೧-೫೬); ಕಾಮಶರಂಗಳ ವರ್ಗಳೆರ್ದೆಯನುರ್ಚಿ ಪೋಗಿ ಪರವಸೆಯರಾಗಿ ಮಱುಗಿದಱುನೀರ ಮೀಂಗಳ್ವೊಲಾದರ್ (ವದ್ಯಾ.ರಾ. ೫೭-೧೩); ಗುರುಪುತ್ರನಿದಿರ್ಚೆ ಭೀತಿಯಿಂ ಮಱುಗಿ ತೆರಳ್ದು ತೂಳ್ದು ಸುಱಿಗೊಂಡುದು ಪಾಂಡವಸೈನ್ಯಸಾಗರಂ (ಹಂಪಭಾ. ೧೨-೩೦); ಮಱುಗಿದುದಾ ಕೊಳದ ಜಲಮೆಯ್ದೆ ಕಾಯ್ದಸರೊಳೆ ಕೊಬ್ಬಿದಿವಂತೆ ಕುದಿದುವನಿಮಿಷತತಿಗಳ್ (ಗದಾಯು. ೭-೨೦). ೨. (ಮೋಹ, ಉದ್ವೇಗ ಮುಂತಾದುವುಗಳಿಂದ) ತಪಿಸು; ತಾಪಗೊಳ್ಳು: ನೆನೆದಿರುಳುಂ ಪಗಲುಂ ನಿನ್ನನೆ ಪೀನಮೊಱಲ್ದು ಮಱುಗಿ ಕಾತರಿಸುತ್ತುಂ ಮನದೊಳ್ ಸೈರಿಸಲಾಱೆಂ (ಕವಿರಾ. ೨-೬೩); ವಿಯೋಗಾಕುಳತೀವ್ರಾವಸ್ಥೆಯಿಂದಂ ನೆಱೆ ಮಱುಗುವುದಂ ನೋಡಲೇವೈಸಿದಂತಾಗಳೆ . . . ಅಪರಾಂಭೋಧಿಯಂ ಪೊಕ್ಕನರ್ಕಂ (ಕುಸುಮಾ. ೪-೨೩); ಸಂಗಸುಖಿಮಂ ಪಿಂಗಲಾಱದೆ ಕಾಮನ ಬಾಣಕ್ಕೆ ಗುಱಿಯಾಗಿ ಮಱುಗಿ (ಗಿರಿ. ೨-೧೧೫ ವ). ೩. ತವಕಗೊಳ್ಳು ; ಹಾತೊರೆ ; ಕಾತರಪಡು : ಪಾಱಲ್ ಮತ್ತಂ ಮಱುಗುತ್ತಿರ್ದಪೆಯಿನಿಸಂ ಗಱಿಮೂಡಿದ ಬಱಿಕ ನೀನೆ ದಲ್ ಪೋದಪ್ಪೈ (ಕಾದಂಬ. ೭೯೭) ; ಇನ್ನಪ್ಪ ಕಜ್ಜಕ್ಕೆ ಮುನ್ನಮೆ ಮಱುಗುವುದಿದಾವ ಕಾರಣಂ (ಹಂಪಶಂ. ೧೫೬-೧೨). ೪. ಕೊರಗು ; ಪರಿತಪಿಸು; ತಳಮಳಿಸು : "ಮಱುಗು — ಸಂತಾಪೇ" (ಶಮ.ದ); ಒಡಲುರಿಗುಂ ಮನಂ ಮಱುಗುಗುಂ ಕಿವಿ ಗಿಱ್ಱನೆವೋಕುಂ(ಆದಿಪು. ೧೨-೪೦); ಅಱನ ಮಗಂ ಪ್ರಾರ್ಥಿಸೆ ಬಾಂದೊಱೆಯ ಮಗಂ ಮಾಡೆ ಸಂಧಿಯಾವಪುದೆನುತುಂ ಮಱುಗದಿರ್ (ಗದಾಯು. ೧-೭೨); ಕುರುರಾಯರಾಜ್ಯಶ್ರೀಯ ಮುಂದಲೆ ಹೋಯಿತೋ ಹಾ ಎನುತ ಮಱುಗಿತು ಕೂಡೆ ಕುರುಸೇನೆ (ಕುಮಾ.ಕ. ೧೨-೨೮). ೫. ಹೆಣಗು; ತಿಣುಕು ; ಕಷ್ಟಪಡು : ಮಱುಗಿ ಕುದಿದು ಶಾಸ್ತ್ರದ ಬಲದಿಂದಳಿಪಿಂ ಪೇೞ್ದೊಡಮದು ಕೋಮಳಮಕ್ಕುಮೆ ಸಹಜಮಿಲ್ಲದಾತನ ಕಬ್ಬಂ (ರಸರ್ತಾವು. ೧-೪೯). ೬. ಕನಿಕರಿಸು ; ಅನುಕಂಪವನ್ನು ತೋರಿಸು ; ಕರುಣೆ ತೋರು : ಕಂಡು ಮಱುಗದೆ ಸೂನೆಗಾಱನ ದಂಡಿಯುಲಿ ಮಗನಂ ವಧಿಸಿ (ಬಸವು. ೨೪-೨೦); ಸುಧನ್ವಂಗೆ ಮಱುಗುತೆ ಸಚಿವನಿಂತೆಂದಂ (ಜೈಮಿಭಾ. ೧೧-೩೦); ನೆಱೆ ಗಾಯುವಡೆದಿಹರ್ಕಲರು ನೊಂದವರಿಗೆ ಮಱುಗಿ ಮುಂಗೆಟ್ಟಿಹರ್ಕಲರು (ಹಂಪಶ. ೧೫-೭). ೭. ಪ್ರೀತಿಸು : ಮಱುಗಿದಂ–ಕೂರ್ತಂ (ಶಮದ. ಕಂ. ೨). **ಮರಕು:** ೪. 'ಇಷ್ಟೆಲ್ಲ ಮಾಡಿದೆ . . . ಯಾರು ಹೆಣ್ಣು ಕೊಡುವವರು ಹೇಳಿ ಜಾತಿಗೆಟ್ಟವಳ ಮಕ್ಕಳಿಗೆ ?' ಎಂದು ಮರಕಿದಳು (ಮೂಕಜ್ಜ. ೨೩೭). **ಮರುಕು$_1$ :** ೪. ಒಡತಿ, ಏನು ಮರುಕುತ್ತಿದ್ದೀರಿ ? ಈ ಗಳಿಗೆಯಲ್ಲಿ ಕಣ್ಣೀರು ಬಿಡಲಿಕ್ಕೆ ನಿಮಗೇನಾಯಿತು ? (ಮಾರವ. ೭೩). **ಮರುಗು$_1$ :** ೫. ಮಾರುತಿಯ ಬೆರಳ ಲೀಲಾಮಾತ್ರದಿಂದೆ ಭೂತಳಕುರುಳಿ ಮರುಗುತಿರೆ (ತಂಕಾರಾ. ೫-೩-೧೭). ೬. ಆ ಬಡವನ ಕಷ್ಟವನ್ನು ಕೇಳಿ ಅವರು ಮರುಗಿದರು (ರೂಢಿ).

[ದೇ.॥ ತಮಿ. ಮಱುಕು; ತುಳು. ಮರ್ಕುನಿ; ತೆಲು. ಮಱುಗು, ಮರಗು, ಮರುಗು]

**ಮಱುಗುತ್ತ** (ನಾ). ವಾಸಿಯಾದ ಮೇಲೆ ಪುನಃ ಬಂದ ಕಾಯಿಲೆ ; ಮರುಕಳಿಸಿದ ರೋಗ : 'ಮಱುಗುತ್ತಂಬಡು' ಪರಾ.

[ಮಱು$_1$ + ಕುತ್ತ$_1$]

**ಮಱುಗುತ್ತಂಬಡು** (ಕ್ರಿ). ವಾಸಿಯಾದ ಕಾಯಿಲೆಯು ಪುನಃ ಬರು ; ರೋಗವು ಮರುಕಳಿಸು : ಆ ಸಿಂಹಂ ಮಱುಗುತ್ತಂಬಟ್ಟು ಗೊಂಕಱ ಕಟ್ತಿಯಂ ಬಯಸಿ ಬಾಯೊಱೆತು ತನಗನುಚರನಪ್ಪುದೊಂದು ನರಿಗೆ ಪೇೞ್ವುದುಂ (ಪಂಚತಂ. ೨೬೨-೧೪). [ಮಱುಗುತ್ತ + ಪಡು$_1$]

**ಮಱುಗುಹ** (ನಾ)· (ಮಾಡಿದ ಪಾಪಕಾರ್ಯಕ್ಕೆ ಪಶ್ಚಾತ್ತಾಪ ಪಟ್ಟು) ದುಃಖಿಪಡುವಿಕೆ ; ಪರಿತಪಿಸುವಿಕೆ : ದೋಷವನಾರೋಪಿಸುವುದು ಮಾಡಿ ಮಾಡಿ ಮಱುಗುಹ (ಪಶ್ಚಾತ್ತಾಪ, ಅನುತಾಪ) (ಶಾಶರಾ. ೬).

[ ಮಱುಗು + – ಹ$_2$ (< – ಪ$_2$) ]

**ಮಱುಚಲು**, ಮರಚಲು, ಮರುಚಲು (ನಾ)· ೧. ಮೊದಲ ಮಗುವಿನ ನಂತರ ಹುಟ್ಟಿದ ಮಗು ; ಎರಡನೆಯ ಮಗು : ಮಱುಚಲಾತನನವನ ನೀವೆನು ನೆರಹಲಾಟಿನು ಕೂಳನೆಂದಳು ಕುಂತಿ ನಸುನಗುತ (ಸಂಭಶ. ೨೩-೩೯)· **ಮರಚಲು** : ೧. ನಾನು ಚೊಚ್ಚಲು, ನಮ್ಮ ನೀಲಕಂಠನೇ ಮರಚಲು (ಮಾಕುರಾ. ೦೦೮). **ಮರುಚಲು** : (ಗು)· ೨. ಎರಡನೆಯ; ದ್ವಿತೀಯ: ಬಿಸಿಗೆ ಬೆಚ್ಚಿದ ಎದೆಯು ಮರುಚಲ ಬಸಿರಿಯು ಬಯಕೆಗೆ ತಗುಬಗೆ ಯಾಗುತಿರೆ ಕನಸಿಗು ಹೊಳೆಯುದ ಬರಸಿಡಿಲೆರಗಿತು (ಸಖೀಗೀ. ೦೦-೯೦) ; ವಸುಮತಿ ಈಗ ಮರುಚಲ ಬಸಿರನ್ನು ಹೊತ್ತು ಗಾಸಿಯಾದಳು (ಮಹ್ಷಿಕು. ೩೦) ; ಈ ಮಗುವನ್ನು ಹೆತ್ತ ಎರಡನೇ ವರ್ಷದಲ್ಲಿ ಮರುಚಲು ಹೆರಿಗೆಯಲ್ಲಿ ಆಕೆ ತೀರಿಕೊಂಡಿದ್ದಳು (ಮನೋಪಂ. ೩೯).

**ಮಱುಚಲು ಮಗ, ಮರುಚಲ ಮಗ** = ಎರಡನೆಯ ಮಗ : ಹಿರಿಯನಲಿ ಜನಕಂಗೆ ಮೋಹವು ಕಿಱಿಯನಲಿ ಕಡುಮೋಹ ಜನನಿಗೆ ನಿರುತ ಮಱುಚಲು ಮಗನು ದೇಸಿಗನಾಗಿ ಚರಿಸುವನು (ಸಂಭಶ· ಶಂ· ೩೦೦-೩೯); ಇವುಗಳಲ್ಲಿ ಎರಡರಲ್ಲೊಂದು ಪಾಲು ಚೊಚ್ಚಲು ಮಗನು, ಮೂರ ರಲ್ಲೊಂದು ಪಾಲು ಮರುಚಲ ಮಗನು . . . ತಕ್ಕೊಂಡು (ಮುಂಬಯಿ. ೩-೦೭); ನನ್ನ ಮರುಚಲ ಮಗ ಇದೇ ವರುಷ ಮುಲ್ಕೀ ಆದ (ರಕ್ತಶ್ಯ. ೪).

[ಮಱು$_1$ + < ಸೂಲ್]

**ಮಱುಜವಣಿ** 'ಮಱುಜೀವಣಿ' ನೋ.

**ಮಱುಜೀವಣಿ**, ಮರುಜೀವಣಿ, ಮರುಜೀವಣಿ, ಮಱುಜವಣಿ, ಮಱು ಜಿವಣಿ, ಮಱುಜೀವಣಿ, ಮಱುಜೀವಣೆ (ನಾ)· ಸತ್ತವರನ್ನು ಪುನಃ ಬದುಕಿಸುವುದೆಂದು ನಂಬಲಾದ ಒಂದು ಬಗೆಯ ಔಷಧೀ ಸಸ್ಯ ; ಸಂಜೀವಿನಿ : ಹೋದ ಜೀವಕ್ಕೆ ತನ್ನ ಕರುಣವೆಂಬ ಮಱುಜೀ [ಪಾಠಾಂ.ಜ] ವಣಿಯ ಹಿಂಡಿ ಎತ್ತಿದನು (ಬಸವ. ಕ. ೪೭೭-೦೦೩೭) ; ಪಂಚಾಕ್ಷರಿ ಮಱು ಜೀವಣಿಯು ಚಿತ್ತ ಶ್ರೋತ್ರದೊಳು ಧಾರೆಯನೆಱೆಯಲು ಆತ ನಿನ್ನಂತೆ ಕಾಣಾ (ದೇರಾತ. ೯೦-೦೫) ; ಈ ಸುಷೇಣನು ಹಿಂದೆ ಪನ್ನಗಪಾಶದಲಿ ರಾಘವನ ರಣದಲ್ಲಿ ವಾಸವಾಂತಕ ಬಿಗಿದ ದಿನ ಮಱುಜೀ[ಪಾಠಾಂ. ಜೀ] ವಣಿಗಳೆಂಬ ಔಷಧವ ಹೇಳಿದನು (ತೊರರಾ. ೬-೩೭-೩೫)· **ಮರುಜೀವಣಿ** : ಹೊರಗಿಗೆ ಬರಿಮಳೆ ಸಂಜೀವಿನಿಯು ಒಳಗಾ ಕರುಣೆಯೆ ಮರುಜೀವಣಿಯು (ಕರುಣಾ. ೯೪-೦೦) ; ಅಕ್ಕನಿಗೆ ಶ್ರೀಶೈಲದ ಕಲ್ಲು, ಮರ, ಗಿಡಗಳೆಲ್ಲ ಪರುಷ, ಕಲ್ಪತರು, ಮರುಜೀವಣಿಗಳಾಗಿ ತೋರಿದವು (ಕರ್ನಾಕ. ೭೯) ; ಮರು ಜೀವಣಿಯು ಮರಗಳ ಸಾಲುಗಳು ಮರಣಬಾಧೆಯು ದೂರ (ಸಿದ್ಧಪು. ೬-೬೨). **ಮರುಜೀವಣಿ** : ಮರ ಜಗನ್ಮೋಹನೆಮ [ ಯ ] ನಂಗಸ್ಮರಣ ಬೀಜಾಕ್ಷರಿ ವಸಂತನ ಹರಣ ಮರುಜೀವಣಿ ಜಯಂತನ ವಿಜಯ ನಿಜಲಕ್ಷ್ಮಿ ವೆರೆ ನಿರೀಕ್ಷಿಸಿ ನಲಿದು ಕುಳಿತಳು (ಅಂಬಿಕಾ· ೧೦-೩೬). **ಮಱುಜವಣಿ** : ಮರಣವುಳ್ಳವರಿಗೆ ಮಱುಜವಣಿ ಸಿಕ್ಕುವುದೇ (ಅವಶಂ. ೨೨೮-೦೦೩೨) ; ಇಂದ್ರಜಿತುವಿಂ ರಾಮನೊಳಗಾಗಿ ಮಡಿದೊಡಾ ಜಾಂಬುವಂ ಹನುಮರಗ್ಗಳದ ಮಱುಜವಣಿಯಂ ತಂದೆಬ್ಬಿಸಿದ ಬಳಿಕ ಮರಳಿ ಯುದ್ಧಂಗೆಯ್ದರು (ಶೀಕೃಕು. ೩-೦೦-೫೦) ; ಮರಣವುಳ್ಳರ್ಗೆ ಮಱುಜ ವಣಿ ಕಾಣಿಸದವೊಲು . . . ಬೊಂತಲಾದೇವಿಯರು ನನ್ನ ಕಣ್ಗೆ ಕಾಣಿಸದೆ ಗುಪ್ತದಿಂದಿರ್ದ್ (ಶ್ರಕುಕು· ೮-೯೮) ; ಮಱುಜವಣಿ ಮಾಣಿಕದ ಪಾಸಱೆ . . . ಸಸಿಗಲ್ಲೋಡು ಮೆಱೆಗುಮಾ ಗಿರಿತಟದೊಳ್ (ಶಬಶಂ· ೩-೩೦). **ಮಱುಜಿವಣಿ** : ಸುರಭೂಜಾರಾಮದಿಂದಂ ಮಱುಜಿವಣಿಯ ಪುಂಜಂಗಳಿಂ . . . ರಾಜಿಸಿತ್ತಾ ನಿರುಪಮವರಶೈಲಂ (ಉದ್ಭಟ· ೦೫-೧೨೦). **ಮಱು ಜೀವಣಿ** : ನಾನೇನು ಅಮೃತವ ಸೇವಿಸಿದೆನೆ ಆನು ಮಱುಜೀವಣಿಯ ಕೊಂಡೆನೆ (ಬಸವ. ೯೯೭) ; ಮಱುಜೀವಣಿಯುನಱೆ ಸವಿದಮೃತಮಂ ಕುಡಿದಂತೆ . . . ಭಾಸುರ ವಾರಣಾಸಿಯಂ ಹೊಕ್ಕನುತ್ತಮನೃಪಂ (ಹತಲಾ· ೦೦-೩೩); ಸುರಭಿಗಳ ನೆರವಿಯುಂ ಪರುಷದ ಸಱೆಯು ಮಱು ಜೀವಣಿಯ ಮಡಲ . . . ತೋಱೆದಂ ವೃಶ್ಚಿಕಾರೂಢನು (ಸಿದ್ಧರಾ· ೩-೪); ಆರೂಢದಕ್ಷರದ ಮಱುಜೀವಣಿಯ ಹಿಂದೆ ನೀರು ವಪ್ರವೆಯಕ್ಕು (ಎಂಗಲೀ. ೩೦೮-೭೦). **ಮಱುಜೀವಣೆ** : ೧. ರಣದೊಳಳಿದ ಸಮಸ್ತ ವಾನರಗಣವನಪರಬ್ರಹ್ಮ ಮಱುಜೀವಣೆಯ ತಂದೆಬ್ಬಿಸಿದನು (ತೊರರಾ. ೬-೩೭ ಸೂಚನೆ); ಮರಣವುಳ್ಳವರಿಗೆಯು ಮಱುಜೀವಣೆ ಸಿಕ್ಕದಂತೆ . . . ಶರಣರ ನಿಲುಗಡೆ ಆರಿಗೂ ಸಿಕ್ಕದಲಾ (ಶೈರಸೂ· I, ೨೩೭)· 'ಜೀವಣಿ$_2$' ಪರಾ.

**ಮಱುಜೀವಣಿಯ ಹಣ್ಣು, ಮಱುಜಿವಣಿಯ ಹಣ್ಣು** = ಸತ್ತವರನ್ನು ಬದುಕಿಸುವುದೆಂದು ನಂಬಲಾದ ಒಂದು ಔಷಧೀಸಸ್ಯದ ಫಲ : ಮಱುಜೀ [ಪಾಠಾಂ· ಜ]ವಣಿಯ ಹಣ್ಣ ಮೆದ್ದು ಮರಣವಾಯಿತ್ತ ಕಂಡೆ (ಅವಶಂ. ೦೦೦-೪೩೭); ಕರಿ (ಕರಿಯ) ದಾನವನ ಶಿರದಲ್ಲಿ ಮಱುಜಿವಣಿಯ ಹಣ್ಣಪ್ಪುದ ಕಂಡೆನಯ್ಯ (ಸಿದ್ಧೇವ· ೦೯೪-೫೯೦). P ಈ ಉಲ್ಲೇಖ ಅನುಮಾನಾಸ್ಪದವಾಗಿದೆ. ಮೇಲೆ ಕೊಟ್ಟಿರುವ ಬಹುಪಾಲು ಪ್ರಯೋಗಗಳಲ್ಲಿ ಸಾಮಾನ್ಯರೇಫವೇ ಇದ್ದು ಕಾಲದೃಷ್ಟಿಯಿಂದ ಶಕಟರೇಫವನ್ನಾಗಿ ತಿದ್ದಿದೆ. ಈ ಶಬ್ದದ ಸ್ವರೂಪದಲ್ಲಿ ಜೀವನಿ, ಜೀವಿನಿ ಎಂಬ ಸಸ್ಯದ ಹೆಸರಿನ ಶಬ್ದಗಳು, ಮಣಿ (ಗರುಡಮಣಿ ಎಂಬಲ್ಲಿರುವಂತೆ) ಎಂಬ ಔಷಧದ್ರವ್ಯದ ಒಂದು ರತ್ನವೂ ಕವಿಗಳ ಮನಸ್ಸಿನಲ್ಲಿದ್ದು ಭ್ರಮೆಯಿಂದ ಈ ಶಬ್ದಗಳಲ್ಲಿ ಕೆಲವು ಸೃಷ್ಟಿಯಾ ಗಿರಬಹುದು. ಆದುದರಿಂದ ಅವುಗಳನ್ನು ನೆನಪಿನಲ್ಲಿಟ್ಟು ಈ ಕೆಳಗೆ ಕೊಟ್ಟಿರುವ ವ್ಯುತ್ಪತ್ತಿಯನ್ನು ಸೂಚಿಸಲಾಗಿದೆ.

[ ಮಱು$_1$ + < ಸಂ. ಜೀವನೀ ]

**ಮಱುಜೀವಣಿಗೆ**, ಮಱುಜೀವಣಿಗೆ (ನಾ)· = ಮಱುಜೀವಣಿ : ಮಡಿವವಗೆ ಮಱುಜೀವಣಿಗೆ ದೊರೆಯಲೊಲ್ಲದೇ ಬಿಡುವನೇ (ಪ್ರಾಶರಾ· ೦೯-೮). **ಮಱುಜೀವಣಿಗೆ** : ಜೀವವಿಯೋಗ ತನುವಿಗೆ ಮುಟ್ಟ ಮಱುಜೀವಣಿಗೆ ಬಂದಂತೆ . . . ಗೋರಕ್ಷನಲ್ಲಿಗೆ ಬಂದ ಪ್ರಭುರಾಯ (ಶ್ರಶುಲೀ· ೦೯-೦೪); ಆ ಪುರದ ಗುಲ್ಮಗಳೆಲ್ಲ ಮಱುಜೀವಣಿಗೆ (ಗುರುಚಾ. ೦-೨೭); ಅಂಧಕಂಗೆ ಕಣ್ಣು ಬಂದಂತೆ . . . ಮರಣುಳ್ಳವಂಗೆ ಮಱು ಜೀವಣಿಗೆ ದೊರೆಕೊಂಡಂತೆ . . . ನೀವೆನ್ನ ಕರಸ್ಥಲಕ್ಕೆ ಬಂದ ಫಲವು ಇಂತುಂಟಯ್ಯಾ (ಅಜಂಡೇ. ೨೯-೭)· 'ಜೀವಣಿಗೆ$_2$' ಪರಾ.

[ ಮಱುಜೀವಣಿ + – ಗೆ ]

**ಮಱುಜಿವಣಿ** 'ಮಱುಜೀವಣಿ' ನೋ.

**ಮಱುಜೀವಣಿ** 'ಮಱುಜೀವಣಿ' ನೋ.

**ಮಱುಜೀವಣಿಗೆ** 'ಮಱುಜೀವಣಿಗೆ' ನೋ.

**ಮಱುಜೀವಣೆ** 'ಮಱುಜೀವಣೆ' ನೋ.

**ಮಱುತ್ತರ** (ನಾ). ಎದುರುಮಾತು ; ಪ್ರತ್ಯುತ್ತರ ; ಎದುರು ಜವಾಬು: ಎಲವೊ ನೀನೆಮ್ಮೊಳ್ ಮಱುತ್ತರವನಾಡಿದ್ಯ (ಶೀಕೃಕು· ೪-೨೨-೦೦)· 'ಮಾಱುತ್ತರ' ನೋ.

[ P ಇದು ಛಂದಸ್ಸಿಗಾಗಿ ಮಾಡಿಕೊಂಡಿರುವ ರೂಪ ]

**ಮಱುದಲೆ** (ನಾ)· ಮತ್ತೊಂದು ರೂಪ ; ಬೇರೊಂದು ರೂಪ : ಮೃಗಾಂಕನ ಮಱುದಲೆಯೊ ಮೇಣೆನಲು ರಥ ಹೊಳೆದಿಳಿದುದಂಬರದಿ (ಕುಮಾರ. ೭-೦೨). [ಮಱು$_1$ + ತಲೆ$_1$]

**ಮಱುದಿನ,** ಮರುದಿನ (ನಾ). ಮಾರನೆಯ ದಿವಸ ; ಮುಂದಿನ ದಿವಸ : ಮಱುದಿನಮಾ ಪೊತ್ತಪ್ಪಿನಮಱುಕೆಯ ನೀರೂಟ ತಂಬುಲಂಗಳ ಮಾತಂ ತೊಱೆದು . . . ಓದುತ್ತಮಿರ್ಪುದು (ಧರ್ಮಾಮೃ. ೧-೦೭೭); ಮಱುದಿನವು ಆದಿನಂದಿಗೆ . . . ಕುಸುಮನವಮಾಲೆಗಳನಿತ್ತು (ಬಸವ. ೨-೫೦); ನಿಗಮಪವಿತ್ರಜಲಪಾವನನು ಮಱುದಿನ ಯಜ್ಞದೀಕ್ಷಿತನಾದನು (ಕುಮ್ಯಾ. ೨-೨೭). **ಮರುದಿನ :** ಹಿಂದಿನ ರಾತ್ರಿ ಬಂದು ಇಳಿದುಕೊಂಡಿದ್ದ ಅತಿಥಿಯನ್ನು ಮರುದಿನ ಬೆಳಗ್ಗೆ ಹೀಗೆ ಕುಶಲಪ್ರಶ್ನೆ ಕೇಳಿ ಮಾತಾಡಿಸುವುದು ಅನೂಚಾನವಾದ ಪದ್ಧತಿ (ಪಂಚಿರು. ೪೦) ; ಮರುದಿನಂ ಬೆಳಗಿನಲಿ ಚಿತ್ರಯಾಣತಿಯಂತೆ ಬೀಡಾತಗೆದುದು ಕಟಕಮೆಳ್ದು ನಡೆದುದು (ತತ್ತ್ವಾಂಗ. ೫೭-೦೫೪೦). [ಮಱು₁ + ದಿನ]

**ಮಱುದಿವಸ,** ಮರುದಿವಸ (ನಾ). = ಮಱುದಿನ : ಮಱುದಿವಸ ಮಿರ್ವರುಂ ಪುಳ್ಳಿಗೆ ಪೋದಲ್ಲಿ (ವಡ್ಡಾರಾ. ೭೭-೦೦); ಮಱುದಿವಸಂ ನೇಸಱುಮ್ ಮೂಡೆ (ಆದಿಪು. ೦೨-೭೪ವ); ಮಕ್ಕಳಂ ಪಡೆವೆನೆಂದು ಮರ್ದಂ ಕುಡಿದ ಮಱುದಿವಸಕ್ಕೆ ಗಂಡಂ ಸತ್ತಂ (ಧರ್ಮಾಮೃ. ೨-೯೭). **ಮರು ದಿವಸ :** ಮರದಿವಸ ಎಂದಿಗಿಂತ ಮುಂಚೆ ಎದ್ದು . . . ಹೋದವನು ಹಿಂದಿರುಗಿದ್ದು ಸಂಜೆಯೇ (ಸತಾ. ೪೭). [ಮಱು₁ + ದಿವಸ]

**ಮಱುದೆವಸ** (ನಾ). = ಮಱುದಿನ : ಇರುಳ್ ಕಂಡ ಕನಸಂ ಮಱು ದೆವಸಂ ನೆನೆವಂತೆ (ಆದಿಪು. ೪-೫ ವ); ಮಱುದೆವಸಂ ಯಾಮಿನೀವಿರಾಮ ಮಪ್ಪುದುಂ ಪ್ರಯಾಣಭೇರಿಯುಂ ಪೊಯ್ಸಿದಾಗಳ್ (ಶಂತಶಂ. ೦೨೭-೧೯); ಆ ಮಱುದೆವಸದಲಿ ಮಕ್ಕಳುಗಳೆಲ್ಲರ ಕರೆಸಿ . . . ನುಡಿದನು ಕುಮಾರರಿಗೆ (ಸಂಶಕ. ೦೮-೮೪). [ಮಱು₁ + ದೆವಸ]

**ಮಱುದೊತ್ತು** (ನಾ). ಎಲ್ಲರಿಗಿಂತ ಕೀಳಾದ ತೊತ್ತು ; ದಾಸಾನು ದಾಸ : ದಾಸಿಯ ವರ್ಗದಲ್ಲಿಪ್ಪೆನು ಶಿವಶರಣರ ಮನೆಯಲ್ಲಿ . . . ಅವರ ತೊತ್ತಿನ ತೊತ್ತಿನ ಮಱುದೊತ್ತಿನ ಮಗನೆಂದು ಕೂಡಲಸಂಗಮದೇವ ಇತ್ತ ಬಾಯೆಂದೆತ್ತಿಕೊಂಡನು (ಬಸವ. ೯೭೨); ಪ್ರಭುದೇವರ ತೊತ್ತಿನ ತೊತ್ತಿನ ಮಱುದೊತ್ತಿನ ಮಗಳಾದ ಕಾರಣ ಜ್ಞಾನಪ್ರಸಾದವ ಕೊಟ್ಟನು (ಮಹಾದೇ. ಬ. ೭೬-೦೯೯). [ಮಱು₁ + ತೊತ್ತು (<ತೊಟ್ಟು₁)]

**ಮಱುಭವ** (ನಾ). ಮುಂದಿನ ಜನ್ಮ ; ಪುನರ್ಜನ್ಮ : ಬಸಂತದೊಳ್ ಕಳಿಕೆಗರ್ಚಿದ ಕೋಗಿಲೆಯಂತೆ ಬಿಚ್ಚತಂ ನಲಿವುದು ಕಂಡರಾರ್ ಮಱುಭವಂಗಳನಿಲ್ಲಿ ವಿಯಚ್ಚರೇಶ್ವರಾ (ಆದಿಪು. ೨-೯) ; ಬೆಕ್ಕು ಪಾಲಸಲ್ಲದೆ ಮೇಲಣ ಬಡಿಯುಂ ಕಾಣದೇಬಂತಿಲ್ಲಿಯ ಸುಖಮನೆ ಬಗೆದಯಲ್ಲದೆ ಮಱುಭವದೊಳಾದ ಮಹಾದುಃಖಮಂ ಬಗೆದಯಿಲ್ಲಂ (ಧರ್ಮಾಮೃ. ೬-೦೨೯). [ಮಱು₁ + ಭವ]

**ಮಱುಮಾತು** ' ಮಱುವಾತು ' ನೋ.

**ಮಱುಮಾತುಗುಡು** ' ಮಱುವಾತುಗುಡು ' ನೋ.

**ಮಱುಮಾತುಗೊಡು** ' ಮಱುವಾತುಗುಡು ' ನೋ.

**ಮಱುಮೆಟ್ಟು** (ನಾ). ಮತ್ತೊಂದು ಹೆಜ್ಜೆ; ಮುಂದಿನ ಹೆಜ್ಜೆ : ಕಂಡವಂ ಮಱುಮೆಟ್ಟ ಮೆಟ್ಟಲೀಯದೆಯೆಸುವ ಕಂಡವಂ ಹುಟ್ಟಿ ಹೋದಲ್ಕೀಯದಂತೆಸುವ ಕಂಡ ಮೃಗಮೊಂದುಮಂ ತಪ್ಪವಾತನ ಮಾಂದೆ (ಕಣ್ಣರ. ದೇ. ೦೨೯-೦೦). [ಮಱು₁ + ಮೆಟ್ಟು₂]

**ಮಱುಮೆಯ್**, ಮರುಮೈ (ನಾ). = ಮಱುಭವ : ಈ ಭವದಿಂದಮಾದ ವಾಸನೆ ಮಱುಮೆಯ್ಗಮಕ್ಕುಂ (ಆದಿಪು. ೪-೫೨); ಮಱುಮೆಯ್ಯೊಳಾದೊಡಂ ಪತಿಯೆನಗಕ್ಕೆ ಲಕ್ಷ್ಮಣಾ (ಕುಂರಾಮಾ. ೬-೬); ಮಱುಮೆಯ್ಯೊಳೀ ಬನ್ನಮಂ ಕಾಣಲ್ಬಾರದಂತು ಕರುಣಿಸಯ್ ! (ರಾಮಾಶ್ವ. ೭೭-೩). **ಮರುಮೈ :** ಪ್ರೇಮವು ಹತವಾಗಿರೆ ವಿಕಲ ಮರುಮೈ ಮಾಡುವುದೇ ಸಫಲ ? (ಅರಳು. ೦೪೭-೦೦). [ಮಱು₁ + ಮೆಯ್₂]

**ಮಱುಮೊನೆ** (ನಾ). ದೇಹಕ್ಕೆ ಒಂದು ಕಡೆಯಲ್ಲಿ ನಾಟಿ, ಮತ್ತೊಂದು ಕಡೆಯಿಂದ ಹೊರಗೆ ಕಾಣಿಸಿಕೊಳ್ಳುವ ಬಾಣ ಮುಂತಾದ ಆಯುಧಗಳ ತುದಿ : ಮದನನ ಸರಳ ಮಱುಮೊನೆಗಾವನಂತಃಕರಣ ನೆಱೆ ಕಳವಳಿಸದು (ಕುಮ್ಯಾಅ. ೦೫-೧೭); ಮುಳುಗಿದಂಬಿನ ಮಱುಮೊನೆಯ ಮೈಗಳ ಮಹಾರಥರಾಜಿ (ಕುಮ್ಯಾದ್ರೋ. ೫೪೨೭). [ಮಱು₁ + ಮೊನೆ₁]

**ಮಱುಮೊನೆಗಾಣ್** (ಕ್ರಿ). ದೇಹಕ್ಕೆ ಬಾಣ ಮುಂತಾದ ಆಯುಧಗಳ ತುದಿಯು ಒಂದು ಪಾರ್ಶ್ವದಲ್ಲಿ ನಾಟಿ, ಮತ್ತೊಂದು ಪಾರ್ಶ್ವದಿಂದ ಹೊರಗೆ ಕಾಣಿಸಿಕೊಳ್ಳು : ಅಂಬನೆ ತೆಗೆದು ಪೊಸಗಾಯದಿ ಬಸವಳಿದು ಮತ್ತಪನಂಗವನಿಱಿದಳು ಮಱುಮೊನೆಗಾಬುತಲ್ಲಿ (ಶಿವಗೀ. ೦೭೯-೮೦೯); ಮಱುಮೊನೆಗಂಡ ಬಾಣಂಗಳೆದೆಯಿಂದ ಸುರಿವ ಬಿಸಿನೆತ್ತರೇಱುಗಳ . . . ಹಂದಿಯನು ಕೌಶಿಕ ಕಂಪನು (ಹಕಾ. ೬-೬೦); ಮಱುಮೊನೆಗಂಡ ಪುಷ್ಪಶರದೊಂದು ಸುಘಾಯದ ನೋವಿನಿಂದವಂ ಮೊಱೆಯನು (ಸಸ್ಯಶಾ. ೭-೯೦). [ಮಱುಮೊನೆ + ಕಾಣ್]

**ಮಱುಮೊನೆಗೊಳ್** (ಕ್ರಿ). = ಮಱುಮೊನೆಗಾಣ್ : ಭೂಪತಿ ಕೋಲು ಮಱುಮೊನೆಗೊಂಡವೋಲ್ ಮುಱುಗಿದನು ಚಿತ್ತದಲಿ (ಕುಮ್ಯಾಅ. ೨೫-೩೦) ; ಕಾಮನ ಕೋಲು ಮಱುಮೊನೆಗೊಂಡುದೆಂಬೊಂದೊಳಗದ ಮಾತುಗಳ ಶಿವಶಿವ ಮನದ ಬಯಕೆಯನು ಪಾಲಿಸುವೆ (ಶಿಭಾಗ. ೩-೪-೭). [ಮಱುಮೊನೆ + ಕೊಳ್₁]

**ಮಱುಮೊನೆದೋಱು** (ಕ್ರಿ). = ಮಱುಮೊನೆಗಾಣ್ : ತನ್ನ ನೂಱುಂಬನೊಂದುಬಾಣದಲಿ ಹಾಱಲಿಕ್ಕಿದನು ಪೇರುರದಲ್ಲಿ ಮಱುಮೊನೆದೋಱಲೆಚ್ಚಾಡುವನಹುದೋ (ಬೋಹಕ. ೩೫-೩೪). [ಮಱುಮೊನೆ + ತೋಱು]

**ಮಱುವಂಕ** ' ಮಱುವಕ್ಕ ' ನೋ.

**ಮಱುವಕ್ಕ,** ಮಱುವಂಕ (ನಾ). ೧. ಎದುರುಪಕ್ಷ; ಪ್ರತಿಪಕ್ಷ; ಶತ್ರು ಪಕ್ಷ : "ಮಱುವಕ್ಕಂ ಶತ್ರುಸೈನ್ಯಾಭ್ಯುದಯದೊಳ್" (ಕರ್ಣಾಟಿ. ೪೦); ಮಱುವಕ್ಕದವರ ಮೆಯ್ಮೆಯ್ಯುಮ್ಮಾಗೆ ಎಚ್ಚೋಡಿಸಿ ಆ ಕಯ್ಯಂ ಗೆಲ್ದು (ಎಕ. VIII: ಸೊರಬ. ೦೦-೬; ಕ. 800); ಗುರು ಗುರುಪುತ್ರ . . . ನದೀಸುತರೆಂಬ ಸಂದ ಬೀರರೆ ಮಱುವಕ್ಕಮಣ್ಣನೊಡನಿರ್ವರೆ ಕೂಸುಗಳೆಂಬ ಶಂಕೆಯುಂ ಪಿರಿದೆನಗೀಗಳಾದಪುದು (ಶಂಶಭಾ. ೦೦-೦೨); ಬಱುಗಯ್ಯೊಳೊಂದೆ ಮೆಯ್ಯೊಳ್ ಮಱುವಕ್ಕಮನಿಕ್ಕಿ ಗೆಲ್ದು ಸಿಂಹೋದರನಂ ಸೆಱೆಗೊಂಡುಯ್ದಂ ಕೃಷ್ಣಂ (ಶಂರಾಮಾ. ೭-೭೯). ೨. ಶತ್ರು ; ಹಗೆ ; ಪ್ರತಿಸ್ಪರ್ಧಿ : ತಿಂಗಳ ಪಡಿಚಂದ್ರಂ ಕಮಲಂಗಳ ಮಱು [ವಕ್ಕಮಮರ್ದ] ತಿಳಿಗೊಳನಾ ಚೆಲ್ವಿಂಗಿದೆ ದಾಯಿಗಮೆನೆ ಲಲಿತಾಂಗಿಯ ನಗೆಮೊಗದ ಪೋಲ್ವೆಗೆಣೆ ಪೆಱವೊಳವೇ (ಗದಾಯು. ೮-೫೩); ಕೊಗ್ಗಿಯೊಳಿಡಿದ ಕತ್ತುರಿಯ ಪರಿಮಳಕ್ಕಳಿಸಿ ಕರ್ಣಪೂರದೊಳ್ ಬಳಸುವಳಿಗಳೊಳ್ ತಡಂಗಲಿಸಿ ಮಂಡಳಿಸುವ ಕಟಾಕ್ಷಕಿರಣಮಂಜರಿಗೆ ಮಱುವಕ್ಕಮಾಗೆ ನೀಲಮುತ್ತಿನೋಲೆಯುಂ ತುಡಿಸಿಯುಂ (ಪರ್ಶ. ೭-೯ ವ). **ಮಱುವಂಕ.**

ಮಱುವಂಕಭೈರವ = ಶತ್ರುಪಕ್ಷಕ್ಕೆ ಭೈರವನಂತಿರುವವನು : ಒಂದು ಬಿರುದು : ಮಾರ್ಬಲಮಲ್ಲ ಮಱುವಂಕಭೈರವ ಅಯ್ಯಣಪುತ್ರ (ಎಕ. VIII, ಸೊರಬ. ೪೦೩-೦೨ ; 986). **ಮಱುವಕ್ಕದಲ್ಲಟಂ** = ಶತ್ರುಸೈನ್ಯಕ್ಕೆ ಭಯವನ್ನುಂಟುಮಾಡುವವನು : ಚಾಲುಕ್ಯ ಅರಿಕೇಸರಿಯ ಒಂದು ಬಿರುದು : ಚಾಳುಕ್ಯವಂಶೋದ್ಭವಂ ಶ್ರೀಮದರಿಕೇಸರಿ . . . ಸಂಸಾರ ಸಾರೋದಯಂ ಮಱುವಕ್ಕದಲ್ಲಟಂ ನೋಡುತ್ತೆ ಗೆಲ್ವಂ (ಶಂಶಭಾ. ೦-೦೯೬ ಶ). **ಮಱುವಕ್ಕಮಾರಿ** = ಶತ್ರುಗಳಿಗೆ ಮಾರಿಯಂತಿರುವವನು ; ಒಂದು ಬಿರುದು : ಮಱುವಕ್ಕಮಾರಿಗಳುಂ ಪರಸ್ತ್ರೀಪರಧನವರ್ಜಿತರುಂ (ಎಕ. XIX, ೩೩-೦೩; 1135 ). **ಮಱುವಕ್ಕರಾಮ** = ಎದುರುಪಕ್ಷಕ್ಕೆ ಪರಶುರಾಮನಂತಿರುವವನು : ಒಂದು ಬಿರುದು : ಮಱುವಕ್ಕರಾಮ

ಕಾಯ್ದರೆ ಭೀಮಂ ದುರದೆಡೆ ರಾಮಂ (ವ್ಯಕಿಂ. ೦೧೩೮, ೩೦–೦೯ ; 1056).
[ಮಱು$_1$ + ಪಕ್ಕ]

**ಮಱುವಗಲ್.** ಮರುವಗಲ್(ನಾ). = ಮಱುದಿನ: ಆ ಪಗಲಂ ಕಳೆದಂದಿನ ಮಱುವಗಲಂ ನಡೆದೆತ್ತಿ ಬರುತ್ತುಮಿರ್ದಂ ಕಾಮಂ (ಕನ್ನಕಾ. ೦೯೯); ಮಱುವಗಲುದಯದೊಳರಸಂ ತುಱುಗಿರೆ ಕಡುಹರಿಸಮಿರುಳ ಕನಸಂ ನೆನೆಸೆಂದಱಿಪಲ್ (೩೪೦. ೩–೦೦೦). **ಮರುವಗಲ್ :** ಹುಲಿ ಮರುವಗಲ್ ಹೂವೀಡ ತೊಡವಿನಿಂ ಗಾಡಿಯುಂ ನಡೆಯುತಿಪ್ಪುದಾಳನೊಡವೆರೆದು (ಕಾಲೂರ. ೯೯–೦೭೩). [ಮಱು$_1$ + ಪಗಲ್]

**ಮಱುವರಸ** (ನಾ). ಪ್ರತಿಪಕ್ಷದ ಅರಸ ; ಶತ್ರುರಾಜ : ಚಲದಿಂ ಮಲೆವ ಮಱುವರಸರ ಪೊಸನೆತ್ತರೊಳ್ ಪೊರೆದ ನಿನ್ನ ಬಾಳಂತೆ ಒಳ್ಪುವಡೆದ ಕೆಂದಳಿರ್ಗಳಿಂ ಮಿಸುಗುವ ಅಸುಗೆಗಳೊಳಂ . . . ಬಿಸವಕ್ಕಿ ಪಕ್ಕಾದ ಬನಮಂ ನೋಡಲ್ವೇೞ್ಕುದು (ಕನ್ನಕಾ. ೬೯). [ಮಱು$_1$ + ಅರಸ$_1$]

**ಮಱುವಲಗೆ** (ನಾ). ೧. (ಪಗಡೆಯ ಹಾಸಿನಲ್ಲಿ) ಮತ್ತೊಂದು ಬಾರಿ ಆಡುವ ದ್ಯೂತ, –ಜೂಜು. ೨. (ಅಲಂ) (ಯುದ್ಧದಲ್ಲಿ ಮಾಡುವ) ಮತ್ತೊಂದು ಅದೃಷ್ಟ ಪ್ರಯತ್ನ : ಫಲುಗುಣನ ಕೊಡಾಡು ನಡೆ ಮಱುವಲಗೆಯುಸು ಭೀಮನಲಿ ಬೇಡಿನ್ನೆಂದನಾ ಶಲ್ಯ (ಕುವ್ಯಾಕ. ೦೩–೯೯). [ಮಱು$_1$ + ಪಲಗೆ]

**ಮಱುವಸಲ,** ಮರುವಸಲ (ನಾ). (ಜಿದ್ದುಳ್ಳ) ಶತ್ರು ; ಹಗೆ ; ವೈರಿ : "ಮಱುವಸಲಂ, ಬೇರಂ, ಪಗೆ– ಈ ೩ ಶತ್ರು" (ಕಕಸಾ. ೩೬–೩೩೮) ; "ಮಱುವಸಲನೆಂದು ಮೂರಡಿಯೇಂದು ಪಗೆಯುಕ್ಕು" (ಕಬ್ಬಿಕ್ಕ. ೩೯). **ಮರುವಸಲ :** "ಮರುವಸಲನೆನೆ ವೈರಿ" (ಕಕರ. ೮೬). [ದೇ.೩ ತೆಲು. ಮಾಱುಮಸಲು, ಮಾರ್ಮಸಲು = ಎದುರಿಸು, ದ್ವೇಷಿಸು]

**ಮಱುಮಾತು,** ಮರುಮಾತು, ಮಱುಮಾತು (ನಾ). ೧. ಜವಾಬು ; ಮಾರುತ್ತರ ; ಪ್ರತ್ಯುತ್ತರ : 'ಮಱುಮಾತುಗುಡು' ಪರಾ. **ಮರುಮಾತು :** ೧ : ಆ ಗೆಳೆಯರೆನ್ನ ಕೇಳೆ, ಮರುಮಾತು ನಾನೇನು ಕೊಡಲಮ್ಮ ನಾಳೆ ?(ಕಎಫ್. ೧೩–೦೦); ಓಡ ಓಡೆಂದರಚಿ ಕರೆದೆ . . . ಇಲ್ಲ ಮರುಮಾತಿಲ್ಲ ಬರಿದೆ, ನನ್ನ ಕರೆ ಮೋಣಾಂ ವಿನಾ (ಗೆ೫೦. ೩೩–೩೨). ೨. ಪ್ರತಿಯಾಗಿ ಹೇಳುವ ಮಾತು ; ಎರಡನೆಯ ಮಾತು ; ಬೇರೆಯ ನುಡಿ : ಅವರಲ್ಲಿರುವುದನ್ನೆಲ್ಲ ಮರುಮಾತಿಲ್ಲದೆ ಒಪ್ಪಬೇಕೆಂದಿಲ್ಲ (೩ಕ್ಷರ. ೨೩೩) ; ಬೇಕಾದಷ್ಟುದ್ದದ ಹೇಳಿಕೆಗಳನ್ನು ಹೊರಡಿಸಿ . . . ಮರುಮಾತಿಲ್ಲದೆ ಮಂಕುಜನತೆ ಒಪ್ಪಿಕೊಳ್ಳುತ್ತದೆ (ರೂಕಸಂ. ೨೩). **ಮಱುಮಾತು :** ೧. ಎನ್ನ ಮಾತಿಂಗೆಲೆ ಕೌಂತೇಯ ಮಱುಮಾತನಿತ್ತು ಮದೀಯ ಸರೋವರದ ತೋಯಮಂ ಕುಡಿ ಕೊಂಡುಯ್ (ಕಂಕಶಾ. ೬–೩೯); ಈತನ ಮಾತಿಂಗೆ ತಕ್ಕ ಮಱುಮಾತಂ ನುಡಿದೊಡಂಬಡಿಸಿ ಕಟಿಪುವೆಂ (ಕಂಕಕಂ. ೩೦–೨೦); ಏನನಂಗನೆ ನುಡಿದಳೇನನಾಲಿಸಿದೆನಿದಕೇನು ಮಱುಮಾತು (ಷಕಶಾ. ೬–೩೬). ೨. ಮಱುಮಾತಿಂಗೆಡೆಯಿಲ್ಲದಂತಿರೆ ನುಡಿದ ಪಡೆ ಮೆಚ್ಚಿ ಗಂಡನ ಗಂಡಮಾತುಮಂ ನನ್ನಿಮಾತುಮಂ ಮುರಾಂತಕ ಮೆಚ್ಚಿ (ಕಂಕಶಾ. ೩–೬೩ ಪ); ಒಂದೆ ನುಡಿ ಸಾಕು ಹುಸಿಯಿಲ್ಲ ವೃದ್ಧರೊಳದೇತೆಂದಡಱುವತ್ತು ತುಂಬಿದೊಡೆ ಮಱುಮಾತು ಬೇಡೆಂದು ನಾಣ್ಣುಡಿಗಳುಂಟು (ಸಿದ್ಧರಾ. ೦–೯೩).

**ಮರುಮಾತಾಡು** = ಪ್ರತಿಯಾಗಿ ಹೇಳು,– ಮಾತನಾಡು : ಶಾಸ್ತ್ರಿಗಳು ತಲೆ ತಗ್ಗಿಸಿದರು, ಮರುಮಾತಾಡಲಿಲ್ಲ (ಶ್ರೀರಾಮು.೮೦); ಆ ಮಾತಿನಿಂದ ಕಕ್ಕಾಬಿಕ್ಕಿಯಾಗಿಯೊ ಅಥವಾ ನಂಬಲಾರದೆಯೊ ರೈತರು ಮರುಮಾತಾಡಲಿಲ್ಲ (ಪುಷರು. ೨೬೯). [ಮಱು$_1$ + ಮಾತು$_1$]

**ಮಱುಮಾತುಗುಡು,** ಮಱುಮಾತುಗುಡು, ಮಱುಮಾತುಗೊಡು (ಕ್ರಿ). ೧. ಪ್ರತ್ಯುತ್ತರವನ್ನು ಕೊಡು ; ಜವಾಬುಹೇಳು : ಆ ಮಾತಿಂಗೆ ಮಱುಮಾತುಗುಡಲಱಿಯದೆ ಪಂದೆಯಂ ಪಾವಡರ್ದಂತುಮ್ಮನೆ ಬೆಮರುತ್ತುಮಿರ್ದ ಕರ್ಣನಂ ದುರ್ಯೋಧನಂ ಕಂಡು (ಕಂಕಶಾ. ೨–೬೨ ಪ) : ಅಜಯಿನಿದಂ ನಿನ್ನಿಂದಿನ ತೇಜನಂ ನೀನೆನಗೆಯೇಕೆ ಮುಳಿದಿರ್ದೆಯೊ ಮೇಣ್ಮಱುಮಾತುಗುಡದೆ ರವಿಸುತ ಮಱವಿಂದಿರ್ದಪೆಯೊ (ಗದಾಯು. ೩–೦೫). **ಮಱುಮಾತುಗುಡು:** ೧. ಕೆಳದಿಯರುಂ . . . ಮೂರ್ಛೆಯಿಂದೆ ಬ್ಬಱಿಸಿ ಬೆಸಗೊಳೆ ಮಱುಮಾತುಗುಡದೆಯುಂ ಮನಂಗುಡದೆಯುಮಿರೆ (ಕಂಪು. ೩–೨೩ ಪ) ; ಕಂದ ನಿಜಾನುಜರಿಲ್ಲದರೆಂದೆನ್ನಂ ಜನನಿ ಬಂದು ಬೆಸಗೊಂಡೊಡದೇನೆಂದು ಮಱುಮಾತುಗುಡುವೆಂ (ಗದಾಯು. ೩–೬೬). **ಮಱುಮಾತುಗೊಡು :** ೧. ಆ ಭಟ್ಟನೀ ದುಷ್ಟಂಗೆ ಮಱುಮಾತು ಗೊಟ್ಟೊಡೇನಪ್ಪುದೆಂದುಸಿರದೆ ನಡೆವುದಂ (ಕಂಕಕಂ. ೦೯೬–೦೩). ೨. ಹೇಳಿದುದಕ್ಕೆ ಪ್ರತಿಯಾಗಿ ಹೇಳು ; ಮರುಮಾತಾಡು : ಅಂತೆಗೆಯ್ವೆ ಮೆಂದು ಮಱುಮಾತುಗೊಟ್ಟರ್ವರಂ ಪೃಳ್ಳಿಯ ಪೊಱಿಯುಂ ಮನೆಗೆ ತಂದ ಬೞಿಕ್ಕೆ ಕಾಷ್ಠಕೂಟಂ ಪೆಂಡತಿಯನೆಂದಂ (ವಡ್ಡಾರಾ. ೬೬–೦೨); ಮಱುಮಾತುಗೊಡದೀತನಂ ಕಾಡಬೇಕು (ಶಾಂತಪು. ೦೩–೦೦). [ಮಱುಮಾತು + ಕುಡು$_1$ (< ಕೊಡು$_1$)]

**ಮಱುಮಾನಿಸ** (ನಾ). ಎದುರುಪಕ್ಷಕ್ಕೆ ಸೇರಿದವನು ; ಹಗೆ ; ವೈರಿ : ಮಱುಮಾನಿಸಂ ಮೆಯ್ಯೇಱಿ ಕಂಡಗಿದು ಜೋಲೆ ಕೊಂದನದೊರ್ವಂ (ಕಬ್ಬಿಕಾ. ೨೯೩). [ಮಱು$_1$ + ಮಾನಿಸ$_1$ (< ಮಾನುಸ)]

**ಮಱುವಾರ್ತೆ** (ನಾ). ತಿರುಗಿ ಬಂದು ಹೇಳುವ ಸಮಾಚಾರ : ಈ ವಾರುವಂಗಳಾರವೆಂದಾರಯಲೊರ್ವನಂ ಕಟಿಪಿ ಮಱುವಾರ್ತೆಗೇಳಲೆಂದು . . . ಅತಿಕುತೂಹಲನಾಗಿ ನಿಂದು (ಕಾದಂಬು. ೩೩೭). [ಮಱು$_1$ + ವಾರ್ತೆ]

**ಮಱುವಾರ್ತೆಗೊಳ್** (ಕ್ರಿ). ಬೇರೆ ಬಗೆಯ ಬದುಕನ್ನು ಅಂಗೀಕರಿಸು : ತನ್ನೆಯ ತಾಯ್ವಿರಾ ಸನ್ಯಾಸನಮ(ಂ)ನುಳಿದು ಬಿಸುಟೋಂ ಮಱುವಾರ್ತೆಗೊಳ್ಳ [ನ್] (ಶಾಸಾ. XI–i, ೦೦–೬ ; ೫೬೮). [ಮಱು$_1$ + ವಾರ್ತೆ + ಕೊಳ್$_1$]

**ಮಱುವಾಳು** 'ಮಱುವಾೞ್' ನೋ.

**ಮಱುವಾೞ್,** ಮರುಬಾಳು, ಮರುವಾಳು, ಮಱುವಾಳು (ನಾ). ೧. (ವಿಧವೆಯಾದವಳು ಮಾಡಿಕೊಳ್ಳುವ) ಎರಡನೆಯ ಮದುವೆ ; ಪುನರ್ವಿವಾಹ : ರಜನೀನಾಥನೊಳೊಂದಿ ನಿಂದ . . . ಭಾಸ್ಕರಾತ್ಮಜ ನಿಂದಂ ಮಱುವಾೞ ಶಾಯ ಬಸಿಱೊಳ್ ಬಂದಂ ವಿನೀತಂ (ಜಾತಕ. ೦೩–೨); ಕುಲವೆಣ್ಗೆಂ ಮಱುವಾೞ್ (ಕಾವ್ಯಸಾ. ೯೩೯). ೨. (ವಿಧವೆಯಾಗಿದ್ದು) ಎರಡನೆಯ ಮದುವೆಯನ್ನು ಮಾಡಿಕೊಳ್ಳುವವಳು, –ಪುನರ್ವಿವಾಹವಾಗುವವಳು : ಅದಿದುವೆನ್ನದೆ ಸೂಳೆಮದುವೆಗಂ ಮಱುವಾೞ ಮದುವೆಗಂ ಕುಜನ ಕುಳಿಕನ ರಾಹುವಿನುದಯಮಭ್ಯುದಯಂ (ಲೋಕೋಪ. ೨–೨೦). **ಮರುಬಾಳು :** ೧. "ಮರುಬಾಳು — ಎರಡನೆಯ ಲಗ್ನ" (ಜಾಪಕೋ. ೩೭). **ಮರುವಾಳು. ಮಱುವಾಳು :** ೩. ಪುನರ್ಜನ್ಮ : ಮಧ್ಯಸ್ಥಾನದ ಲೋಕಕೆ ಹೋಗಿ ಮಱುವಾಳನಱಿಯುದ ಪರಿಯ ನೋಡಿರೇ (ಅಪಕಂ. ೨೬೯–೦೩೦೮).

**ಮರುವಾಳನಿಲ್** = ಮರುಮದುವೆಯಾಗು ; ಪುನರ್ವಿವಾಹವನ್ನು ಮಾಡಿಕೊಳ್ಳು : ಮುದಿಯ ಗೊಡ್ಡಿಯ ಮತಿಯ ಬಾಗಿಲಿಂದಟ್ಟಿ, ದ್ರಾಕ್ಷಿಯಣುಗಿಗೆ ಮೆಚ್ಚಿ ಮರುವಾಳ ನಿಂದೆ (ಗೆ೫೦. ೦೨೦–೩೦).

**ಮಱುವಾೞಕಾಂತೆ** = ಪುನರ್ವಿವಾಹವಾದವಳು ; ಮರುಮದುವೆಯಾದವಳು : "ದಿಧಿಷೂ ಪುನರ್ಭೂವೆನಲು ಮಱುವಾೞ ಕಾಂತೆಯುಕ್ಕುಂ" (ಚಂಗರಾ. ೯೯–೩). [ಮಱು$_1$ + ಬಾೞ್$_1$]

**ಮಱುವಾೞ್ತಿ** (ನಾ). ೧. ಇನ್ನೊಂದು ಬಾಳು; ಬೇರೊಂದು ಬದುಕು. ೨. (ವಿಧವೆಯಾಗಿದ್ದು) ಮರುಮದುವೆ ಮಾಡಿಕೊಂಡವಳು ; ಪುನರ್ವಿವಾಹ ಮಾಡಿಕೊಂಡವಳು : ಮಱುವಾೞ್ತಿ ತಾನೆನಿಸುಗುಂ

ಘರ್ಮಾಂಶುಪುತ್ರಾಂಶದೊಳ್ (ಜಾತಿತಿ. ೨೨-೪); ಕನಿಷ್ಠಿಕೆ ಸಮಂತು ಮುಟ್ಟಿದಿರೆ ಪೃಥ್ವಿಯುಂ ರಂಡೆ ಮತ್ತನಾವಿಕೆಯುದುದ್ದಮಾಗೆ ಮಱುವಾಟಿ$_3$ (ಲೋಕೋಪ. ೧೦-೩೦). [ಮಱು$_1$ + ಬಾಟಿ$_3$]

**ಮಱುವಿಡಿ** (ನಾ). ಪ್ರತಿಬಂಧ ; ತಡೆ : ತೊಡರ ಬಗಿ ಮದನಂಗೆ ಮದವನು ತೊಡೆ ವಸಂತನ ಮಾರ್ರುತಗೆ ಮಱುವಿಡಿಯನಿಕ್ಕು (ಶೂರಲಾ. ೩-೪-೦೬). [ಮಱು$_2$ + ಪಿಡಿ$_1$]

**ಮಱುವುಟ್ಟಿಗ** (ನಾ). ಬೇರೆ ಜನ್ಮವನ್ನು ಹೊಂದಿರುವವನು : ಮಱುವುಟ್ಟಿಗನಾದನನೇನಱಿವೋ ನೀನೆನ್ನಂ (ಕಾದಂಜಾ. ೬೦೬). [ಮಱುವುಟ್ಟು + -ಇಗ]

**ಮಱುವುಟ್ಟು**, ಮರುವುಟ್ಟು, ಮರುಹುಟ್ಟು, ಮಱುಹುಟ್ಟು (ನಾ). ಮತ್ತೊಂದು ಹುಟ್ಟು ; ಪುನರ್ಜನ್ಮ : ಮಱುವುಟ್ಟಿನೊಳಂ ನಿನ್ನೊಡನೆ ಕೂಟವೆನಗಕ್ಕೆ (ಕಾದಂಜಾ. ೩೦೨) ; ಈಶ್ವರನಿಂ ಮುನ್ನಮೆ ಮಣ್ಮಳಿಗೊಂಡ ಮದನಂಗಾ ಮಱುವುಟ್ಟಿಂ ಪಡೆಯಿಸಲೊದವಿದ ಜೀವನವಾಯುವಿದು (ಶಮುಶಾ. ೦-೩೦); ಶುಭಗುಣವಾಂತ ನೀ ಮಱುವುಟ್ಟೊಳು ಪ್ರಾಣವಿಭುವಾಗಿ ಬಂದೆ(ಪೋಹಿತ. ೦೬-೩೮). **ಮರುವುಟ್ಟು**: ಮರುವುಟ್ಟುವಡೆದಂತೆ ಮೂಡಿದೀ ಕಾವ್ಯಮಂ ವಿಶ್ವವಾಣಿಗೆ ಮುಡಿಯ ಮಣಿ ಮಾಡಿಪೆನ್ (ಶ್ರೀರಾಮಾ. iii,೦೬); ಪುಲಿಯ ಕೈಯಿಂ ಮಡಿಯೆ ಪೆರ್ಮೆ ಸಾವದು ಕಣಾ ! ಮರುವುಟ್ಟಿನಲ್ಲವಗೆ ದೊರಕುವುದು ದೊರೆತನಂ! (ಶಂಪ್ರಸ. ೩೦-೦೬). **ಮರುಹುಟ್ಟು** : ಒಬ್ಬ ದಿವ್ಯಪುರುಷನ ಮರುಹುಟ್ಟು ಈ ಕುದುರೆಯ ರೂಪವನ್ನು ತಾಳಿರಬೇಕು (ವಾಗಣಾ. ೦೬) ; ಜ್ಞಾಪಿಸಿಕೊಟ್ಟಿದ್ದು ಮರೆತುಹೋಗಿದ್ದರ ಜೊತೆಗೆ ಒಂದಾಗಿ ಮರುಹುಟ್ಟನ್ನು ಪಡೆಯಿತು (ಶಾರದ. ೨೦೬). **ಮಱುಹುಟ್ಟು** : ಕೋರಂಟನಂದೊಡೆದ ಕಱಿಯಲ್ಲಿ ಹೂಳಿಸಿಕೊಳನೆಯ್ಗುಗ್ನಿಯಿಂದಳವ ಮಱುಹುಟ್ಟ ಕಾಣದಿರ್ಪನಲಾ (ಪೀಕ್ಷ ತಿ. ೪-೦೦-೨೬). [ಮಱು$_1$ + ಪುಟ್ಟು$_1$]

**ಮಱುಪೆಸರು** (ನಾ). ಬೇರೊಂದು ಹೆಸರು ; ಅದೇ ಅರ್ಥದ ಮತ್ತೊಂದು ಶಬ್ದ : ನೆಱಿ ಪತತ್ರಿಗಳಿವೆ ಪತತ್ರಿಯ ಮಱುಪೆಸರು ನಿನಗಿವರ ಕೇಣಿಗೆ ತೆಱುಗೊಡು ನೀನು (ಕುಪ್ಪಾ,ಗ. ೨-೨೬). [ಮಱು$_1$ + ಪೆಸರು$_1$ ( < ಪೆಸರ್) ]

**ಮಱುಬೆಳಸು** (ನಾ). ಎರಡನೆಯ ಬೆಳೆ ; ಮತ್ತೊಂದು ಫಸಲು : ಆ ಫಲಂ ಕಳಿತುದುಱೆ ತತ್ತರುವಿಗೆ ಮಱುಬೆಳಸು ಮೊದಲಂತೆ ಪರುಷ ಪರುಷಕೆ ಒಪ್ಪ ತೆಱದೆ ಬ್ರಹ್ಮಾಂಡಂಗಳಳಿದುದಿಸುತಿರ್ಪುವು (ಚಕಪು. ೪೬-೩೬). [ ಮಱು$_1$ + ಬೆಳಸು$_2$ ]

**ಮಱುಹುಟ್ಟು** 'ಮಱುವುಟ್ಟು' ನೋ.

**ಮಱಿ$^{3}_{1}$**, ಮರೆ$_1$ (ಕ್ರಿ). ೧. ನೆನಪಿನಿಂದ ದೂರಮಾಡು ; ಜ್ಞಾಪಕದಲ್ಲಿಟ್ಟುಕೊಳ್ಳದಿರು : "ಮಱಿ-ವಿಸ್ಮರಣೇ " (ಶಮಣಿ) ; ನೀಂ ಮಮ್ಮನೆಯಪ್ಪೆಲ ನೋಡು ನಣ್ಪಂ ನಿಮಗಮೆಮಗಮಾಮ್ನಾಯದಿಂ ಬಂದುದಿಂತೀ ಜಿನಧರ್ಮಂ ಪ್ರಾಣೆಗಾರ್ಮಂ ಮಱಿಯದಿರಿದಂ (ಅಂಪು. ೨-೨೦) ; ಮಱಿಯಂ ಕಾಲನಿದೇಕೆ ಮೈಮಱಿವಿರೆಂದೂರ್ಧ್ವಂಗುರಂ ಪೊಯ್ಯುಪೊಲ್ಪಱಿ ಪೊಯ್ಯು (ಅಪಂಪು. ೬-೩೦); ಎಲೆಗೆ ಭಜಿಸಾ ಕೌರವಾನ್ವಯ ತಿಲಕನನು ನಿನ್ನವರ ಮಱಿ (ಕುಪ್ಪಾಸ. ೦೫-೦೩). ೨. ಪರಿವೆಯಿಲ್ಲದಿರು ; ಬಾಹ್ಯಜ್ಞಾನವಿಲ್ಲದಿರು : ಅಪ್ರತಿರಥಂ . . . ದುಗ್ಧಾಬ್ಧಿಧವಳ ಶಯ್ಯಾತಳದೊಳ್ ಮಱಿದೊಱಗಿದ ಮಧುಮಥನನನೆತ್ತಲಣ್ಮದೆ ಕಾಲದೆಸೆಯೊಳುಸಿರದೆ ಕುಳ್ಳಿರೆ (ಶಂಪಜಾ. ೯-೦೦ ಪ) ; ತರಳಿಕೆ ಮಱಿದು ನಿದ್ರೆಗೆಯ್ದಳ್ (ಕಾದಂಜಾ. ೩೫೯) ; ಶೋಕಾಕ್ರಾಂತದಿಂದಂ ತನ್ನ ತಾ ಮಱಿದಿಂತು ಧೊಪ್ಪನೆ ಕೆಡೆದು ನೆಲದಲ್ಲಿ ಪೊರಳುತ (ಬಸಪು. ೪೩-೩) ; ಮಱಿದು ನಿದ್ರಾಲೋಲನಾಗಿ ಮಲಗಿಹ ಚಂದ್ರಹಾಸನಂ ಕಂಡು ಸೈಪೆಱಗಾದಳು (ಕೈಪಿಜಾ. ೩೦-೦೯). ೩. ಎಚ್ಚರತಪ್ಪು ; ಅರಿವನ್ನು ಕಳೆದುಕೊಳ್ಳು : ಇತರಪ್ರತೀಶವರನಂ ಮಱಿದುಂ ಪೆಸರ್ಗೊಳ್ವುದೇ ಜನಂ (ಸಪುಶ. ೪-೪೪); ಕೂಡಲಸಂಗನ ಶರಣರೊಡನೆ ಮಱಿದು ಸರಸವಾಡಿದರೆ ಸುಣ್ಣದ ಕಲ್ಲ ಮಡಿಲಲ್ಲಿ ಕಟ್ಟಿಕೊಂಡು ಮಡುವ ಬಿದ್ದಂತೆ (ಬಸವ. ೬೬೦ ಅ); ಮಱಿದಪ್ಪೊಡಂ ತೊಡಳ ನುಡಿದಱಿಯಂ (ಪುಷ್ಪಪು. ೦-೮೨ ಪ). ೪. ಪರವಶಗೊಳ್ಳು ; ತಲ್ಲೀನತೆಯನ್ನು ಹೊಂದು : 'ಮಱಿಗಣ್', 'ಮಱಿಯಿಸು' ಪರಾ. ೫. ಪ್ರಜ್ಞೆಯನ್ನು ಕಳೆದುಕೊಳ್ಳು ; ಮೂರ್ಛೆ ಹೊಂದು : ಮಱಿವುತೆಚ್ಚಱುತವನಿಪತಿ ಕರೆ ತರುಣನಾವೆಡೆ ರಾಯಗಜಕೇಸರಿಯದಾವೆಡೆ ಕಂದ ಬಾಯೆನುತಪ್ಪಿದನು ಬಯಲ (ಕುಪ್ಪಾದ್ರೋ. ೭-೯). ೬. ಬಿಡು ; ತೊರೆ ; ತ್ಯಜಿಸು : ಇದೊಂದವಸ್ಥೆ ನಿಮಗೆನ್ನಯ ಕರ್ಪಿನಿನಾದುದೆಂದೊಡಂ ಮಱಿವುದು ಕಂದ ಪಾಂಡವರ ವೈರಮಂ (ಪಂಪಭಾ. ೦೦-೪೯) ; ಆ ಪವನಾತ್ಮಜನೊಳ್ಮಱಿ ಬದ್ಧವೈರಮಂ (ಗದಾಯು. ೩-೩೪). ೭. ಲಕ್ಷ್ಯ ಕೊಡದಿರು ; ಕಡೆಗಣಿಸು ; ತಿರಸ್ಕರಿಸು : ತಾನಿತರಕನ್ಯಕೆಯಂತೆ ನಾಣ್ಗೆಟ್ಟು . . . ನಿಜಾಚಾರಮಂ ಮಱಿದು ಶೀಲಮಂ ತೊಱದು (ಕಾದಂಪೂ. ೬೬೪) ; ನೃಪಾಚಾರಮೆಲ್ಲಮಂ ಮಱಿದೊಡನುಂಡೋಡಾಡಿ ಕೆಟ್ಟು ದೂರ್ತಿಂ ನಾಡೆಯುಮವರೆಡೆಗೆ ತಾನೆ ಮಿಕ್ಕಂ ಧರೆಯೊಳ್ (ಧರ್ಮಾಮ್ಮ. ೨-೦೦೬) ; ಪ್ರಸಾದಮಂ . . . ವರ ಮುನಿಜನಕ್ಕೆ ಮನುನಿವಹಕ್ಕೆ ನಲಿದಿತ್ತು ಶಿವಪುತ್ರನಂ ಸ್ಕಂದದೇವನಂ ಮಱಿವುತಂ (ಬಸವ. ೦-೪೩). ; ಹೆಕ್ಕಳಿಸಿ ರಾಜ್ಯಮಂ ಕೊಟ್ಟೊಡೆನ್ನಂ ಮಱಿದು ಸೊಕ್ಕಿ (ಕೈಪಿಜಾ. ೩೦-೨೬). ೮. ಮನ್ನಿಸು ; ಕ್ಷಮೆಯನ್ನು ತೋರು : ಮಱಿವುದೆನ್ನ ದುರ್ವಿಳಸನಮಂ (ಅದಿಪು. ೦೪-೦೩೦) ; ಅವಗುಣ ಕೋಟಿಯಂ ಮಱಿದು (ಚಕಳು. ೧-೦೦); ಕರ್ಣನ ದುರುಳತನವನು ಮಱಿದು ಮೆಱಿವುದು ನಿಮ್ಮ ಸದ್ಗುಣವ (ಕುಪ್ಪಾದ್ರೋ. ೦-೨೦). ೯. ಕಾಣದಾಗು ; ಮಾಯವಾಗು ; ಇಲ್ಲವಾಗು : ಚಿಂತೆ ಮಱಿದುದು ತಂಗಿಮಕ್ಕಳ ಸಂತತಿಯ ಸಂತೋಷವಾರ್ತೆಗೆ (ಸಂಭಶ. ೦೫-೯೩) ; ಅಱಿವು ಮಱಿದಪ ಕೀರ್ತಿನಾರಿಯ ಸೆಱಗ ಹಿಡಿದರು (ಕುಪ್ಪಾದ್ರೋ. ೬-೨೬). ೧೦. ಮುಚ್ಚು ; ಅಡಗಿಸು : ಕಾಯಗುಣವ ಕರ್ಮದಿಂದ ಕಳೆದು ಜೀವಗುಣವ ಅಱಿವಿನಿಂದ ಮಱಿದು ಭಾವ ನಿರ್ಭಾವವಾದಲ್ಲಿ ನಿಃಕಳಂಕಮಲ್ಲಿಕಾರ್ಜುನ ತಾನು ತಾನೆ (ಪೋಸವಾ. ೨-೨). **ಮರೆ$_1$** : ೧. ಮರೆಯಲೊ ನೀ ಮಾಡಿದ ಅನಿಮಿತ್ತೋಪಕಾರ (ಜಗಂಜಾ. ೩೯); ಮುಂದಾವಾಗಂ ಮಣಿಪುರದ ದೊರೆಗಳಂ ಮರೆಯದಂದದಿ ಮಾಳ್ಪೆನೆಂದುರಿದು ನುಡಿಯೆ (ಚತ್ರಾಂಗ. ೭೦-೦೪೦) ; ತರತರವಾಗಿ ಹೇಳಿದ್ದು ಮರೆತರೆ ಮರಕ್ಕಿಂತ ಕಡೆ (ಗಾದೆ). ೫. ಬೋಳಂ ತಾನೆ ಬಿದ್ದು ಮರೆದೊಡಲ ಮಲಗಿರಲ್ ಕಯ್ಪಿಡಿಯುತಾರಯ್ದು ಮರುಕದಿಂ ಬದುಕಿಸಿದೆ (ಕಾಪೋರ. ೦೬೪-೩೬೪). ೭. ನಿನಗೆ ಈ ಸ್ಥಳದಲ್ಲಿ ಮಹಾಪದವಿ ಬರುವುದು. ಅರಿತು ನಡೆದರೆ ಆರುಪಟ್ಟು, ಮರೆತು ನಡೆದರೆ ಮೂರು ಪಟ್ಟು (ಚತ್ರಜಾ. ೭) ; ನಿಂದುದು ಸೃಷ್ಟಿ ದೃಷ್ಟಿಸುತ್ತಾ ಮಧುರ ಮನ್ಮಥಮುಹೂರ್ತಮಂ, ಕರ್ತವ್ಯಮಂ ಮರೆತು ತನ್ಮಯತೆಯಿಂದೆ (ಚತ್ರಾಂಗ. ೪೦-೦೦೦೬). [ದ್ರಾ.॥ ತಮಿ. ಮಱಪ್ಪು ; ಮಲ. ಮಱಿ ; ತುಳು. ಮರೆ, ಮರ ; ಕೊಡ. ಮರೆ ]

**ಮಱಿ$^{3}_{2}$**, ಮರೆ$_2$, ಮೊರೆ$_5$, ಮೊಱಿ$_3$ (ನಾ). ೧. ಪರಿವೆಯಿಲ್ಲದಿರುವಿಕೆ; ಬಾಹ್ಯಜ್ಞಾನವನ್ನು ಕಳೆದುಕೊಂಡಿರುವಿಕೆ : 'ಮಱಿವಡು' ಪರಾ. ೨. ಕಾಣದಾಗುವಿಕೆ; ಅದೃಶ್ಯ ; ಮಾಯ : 'ಮಱಿಗೊಳ್' ಪರಾ. ೩. ಗುಟ್ಟು ; ಗೌಪ್ಯ ; ರಹಸ್ಯ : ಈ ನುಡಿ ಬೆಂಗೊಂಡುದು ಸಜ್ಜನರನೊಂದು ಮಾತಿನ ಮಱಿಯಂ (ಪುಷ್ಪಪು. ೦-೩೫) ; ಚಿತ್ರಭಿಯ ಮಾಯೆಯ ಮಱಿಯ ಜವನಿಕೆಯೇಕೆ (ಕೊಪಲಾ. ೨-೩-೦೬). 'ಮಱಿಕಾಣಿ' ಪರಾ. ೪. ಯಾರಿಗೂ ಕಾಣದಿರುವ ಎಡೆ; ರಹಸ್ಯಸ್ಥಾನ : ಇರುಳೀ ಮಱಿಯೊಳು ವಿವೇಕವಿಲ್ಲದೆ ತನ್ನ ತಂಗಿಗಭಿಲಾಷೆಯಾದ

ರಕ್ಷಕ (ಧಾರದೆ)ನೆಂಬವಂಗೆ ಅಂಗಚ್ಛೇದಂಗೆಯ್ವುದುವುಂ (ಶಾವುಂಕ. ೬೮) ; ಈ ಪಾಂಚಾಲಭೂಪತಿಯ ತನುಜನವರ ಪರೀಕ್ಷೆಗೋಸುಗ ಮುನಿಕಶ್ಯಪ ಗೂಡಿ ಕೇಳಿದನನಿತು ಮಾತೆಲ್ಲವನು ಮಱೆಯಲಿ ನಿಂದು ರಜನಿಯಲಿ (ಕುವ್ಯಾಆ. ೧೬-೨೦). ೫. ಹಿಂಭಾಗ ; ಹಿಂಬದಿ ; ಹಿನ್ನೆಲೆ : ತಳ ತಳಿಸಿ ತೊಳಗಿ ಬೆಳಗುವ ಪಳಿಕಿನ ಸಱಯೊಂದು ಮಱೆಯೊಳಿರ್ದ್ದರಲೆ ಮಹೋಜ್ಜ್ವಳತುಹಿನಕಿರಣಮಂಡಲದೊಳಗಣ ಹರ್ಣಿಣಂಬೊಲೊಪ್ಪಿ ತೋಱಿತ್ತು (ಅಕ್ಕಸಾ. ೧೦೫೦ ಸೂದ್ರಕ) ; ಈ ಮರಗಳ ಗಿಡುಗಳ ಪೊದಱು ಗಳ ಮಱೆಗಳೊಳೀ ಪೊಟಲಂ ಕಂಡೆಂ (ಪಶ್ವಾರಾ. ೯೯-೨೨) ; ನಿಲ್ವುವು ರಸಂಗಳಿಲ್ಲಿ ಮಡಲ್ತನೆ ಭಂಗಿಯೊಳನಂಗಜಂಗಮಲತೆವೊಲ್ ನಿಲ್ವು ಜವನಿಕೆಯ ಮಱೆಯೊಳ್ ಪೊಲ್ತುಳವಳ್ ಮುಗಿಲ ಮಱೆಯ ವಿದ್ಯುಲ್ಲತೆಯಂ (ಅಚಿಪು. ೯-೨೦) ; ಬೆಳ್ಳಿತ್ತಿನ ಮಱೆಯಲಿರ್ದು ಹುಲ್ಲೆಗಂಬ ತೊಡುವಂತೆ (ಬಸವ. ೬೪೬). ೬. ಒಳಗು ; ಒಳಭಾಗ : ಮಣ್ಣ ಮಱೆಯ ದೇಗುಲದೊಳಗೊಂದು ಮಾಣಿಕ್ಯವ ಕಂಡ ಬಳಿಕ ಇನ್ನು ಮುನ್ನಿನಂತಪ್ಪುದೇ ಗುಹೇಶ್ವರ (ಅಶಕಂ. ೨೦೬-೯೩೨) ; ನೆಲದ ಮಱೆಯ ನಿಧಾನದಂತೆ . . . ಭಾವದ ಮಱೆಯ ಬ್ರಹ್ಮವಾಗಿಪ್ಪ ಚೆನ್ನಮಲ್ಲಿಕಾರ್ಜುನನ ನಿಲವನಾರೂ ಅಱಿಯಬಾರದು (ಶುಕಾದೀ. ಬ. ೯-೨) ; ಮೇದಿನಿಯ ಮಱೆಯೊಳಿಹ ನವನಿಧಿಗಳಂತೆ (ಶಬಕು. ೩-೦೩). ೭. ಹೊದಿಕೆ ; ಮುಸುಕು ; ಆಚ್ಛಾದನೆ : ಮುನಿದೊಡೆ ಭಸ್ಮವಾದಪುದು ಲೋಕವೆನಲ್ ನೊಸಲೊಳ್ ತೃತೀಯಲೋಚನಮೆಮಗುಂಟು ತೋಲ ಮಱೆಯಿಂದದು ತೋಱುಪುದಿಲ್ಲ (ಕಾವಂಪೂ. ೫೬೮) ; ಮಱೆಯ ನೂಲು ಸರಿಯೆ ನಾಚು ವುದು ನೋಡಾ ಗಂಡು ಹೆಣ್ಣೆಂಬ ಜಾತಿ (ಶುಹಾದೀ. ಬ. ೫೨-೦೨೮) ; ಪೇಳು ಹೇಳೆನ್ನಾಣೆ ಮಾತಿನ ಜಾಳಿಗೆಯ ಮಱೆ ಬೇಡ (ಕುವ್ಯಾಕ. ೦-೦೦). ೮. ಮೈಜೋಡು ; ಕವಚ ; ತನುತ್ರಾಣ : ತಿದಿಯುಗಿದು ಕೊಟ್ಟೆನೊಡವುಟ್ಟಿದ ಕವಚಮನಮರಪತಿಗೆ ಮುನ್ನೆನ್ನನಗೊಪ್ಪದು ಮಱೆಯನಾಸೆವಡಲೆಂದದಟನಣಂ ತಾಡನೆ ಕವಚಮಂ ರಾಧೇಯಂ (ಶಂಪಭಾ. ೦೨-೦೦೯) ; ಇಹಲೋಕದ ಪರಲೋಕದ ಮರಣದ ಕುತ್ತದ ಪೆಱರೆನಗಿಲ್ಲೆಂಬ ಮಯ್ಗೆ ಮಱೆಯಿಲ್ಲೆಂಬ ತೊಟ್ಟನೆಡಸುವ ಸಪ್ತಭಯಂಗಳ್ಗೆ ನಡುಗದುದುಂ (ಧರ್ಮಾಮೃ. ೫-೦೨೫). ೯. ರಕ್ಷಣೆಯ ಸಾಧನ ; ಕಾಪು : 'ಧೂಳುಮಱೆ' ಪರಾ. ೧೦. ಮಾರುವೇಷ; ಪ್ರಚ್ಛನ್ನ ರೂಪ : ತಪನಸುತಂ ಬೇಱಾಂ ಬೇಱೆ ಪೊಲ್ಲದಂ ನುಡಿದನಾತಂ ಬಿಸುಟಂ ತಕ್ಕಿಪ ನುಡಿಯ ನುಡಿವನೇ ಮಱೆಯ ಪಾಂಡವಂ ಬಗೆದು ನೋಱೊ್ಪಡಶ್ವತ್ಥಾಮಂ (ಗದಾಯು. ೨-೨೦). ೧೧. ಆಸರೆ ; ಆಶ್ರಯ : ಎಲವೊ ದೇವೇಶನನೇಂ ಸೆಱೆವಿಡಿದೆ ತೊಲಗು ದೇವನ ಮಱೆಯಂ ಬಱಿಕಱಿಯಲಕ್ಕುಮೆನಗಂ ನಿನಗಂ (ಶಂಶಭಾ. ೦೦-೦೨೦); ಬಡಬಾನಲಂಗೆ ಸಾಸಿರ್ಮಡಿಯೆನಿಸಿದ ರೌದ್ರಕೋಪಮಂ ತಳೆದೆನ್ನೊಳ್ ತೊಡರ್ದುಮಕಾರಣವೈರವು ನೊಡರ್ಚಿಯುಂ ಕಡಲದಾರ ಮಱೆಯಂ ಪುಗುವಂ (ಶಂತಶಂ. ೦೫೦-೨) ; ಬಱಿಯ ಕಾರ್ಪಣ್ಯದಲಿ ಮೇಘದ ಮಱೆಯ ಹೊಕ್ಕರೆ ರಾಹು ಬಿಡುವನೆ ಉರಿವ ರವಿಮಂಡಲವನು (ಕುವ್ಯಾದ್ರೋ. ೨-೪೪). ೧೨. ಅಡ್ಡಿ ; ತಡೆ : ತದ್ವಕ್ತ್ರೇಂದುಬಿಂಬಂ ಮಱೆಯೆನಿಸಿದುದೆಂಬಂದದಿಂದೇನುವಂ ಕಾಣದೆ . . . ಮೂಢನಾದಂತಿರಿರ್ದಂ (ಅದಂಅ. ೩೫೦); ನಿನ್ನವಯವಂಗಳ ಚೆಲ್ವಂ ಗಾಭರಣಂ ಮಱೆ ನಿನ್ನ ಸೌಕುಮಾರ್ಯಕ್ಕೆ ಹೂದೊಡಿಗೆ ಹೊಱೆ (ಪಂಬಿರ. ೦೪-೦೨) ; ಬಾಣನಂದನೆಯೆಂಬ ತಡಿಕೆಯ ಮಱೆಯ ಸುಜಾಣಮನ್ಮಥನು ರಾಳ್ಗಣೆಯ ಕೇಣವಿಲ್ಲದೆ ನೀಡಿ ಸುರರೆರ್ದೆಯೊಳಗಿರ್ದ ಪ್ರಾಣಹಂಸಗಳ ಬಂಧಿಸಿದ (ಮೋಹತ. ೨೫-೦೬). 'ಮಱೆಗಾಣ್' ಪರಾ. ೧೩. ಕಪಟ ; ಮೋಸ ; ವಂಚನೆ : ಪೆಱರೇಗೆಯ್ದೊಡಮೇಂ ತಾಂ ಕಱೆ ಮಱೆಯಣಮಿಲ್ಲದಂತು ನೆಗಟ್ವುದು ಮುನಿಪಂ (ಧರ್ಮಾಮೃ. ೫-೦೦೨) ; ಮಱೆಬೇಡಾ ತ್ರಿಜಸತ್ಕಳತ್ರಸಖರೊಳ್ ನ್ಯಾಯಂಗಳೊಳ್ ಸತ್ಯದೊಳ್ (ಸೋಮೇಶ. ೯೨). 'ಮಱೆಗಾಳಗ' ಪರಾ. ೧೪. [ಆಲಂ] ಮಾಯೆ : ಮಱೆಯ ಮನೆಯ ಮಧ್ಯದಲ್ಲಿ ಮನೋವಿಕಾರದ ಮಾನಿನಿ ಹುಟ್ಟಿದಳು (ಕೋಲಶಾಂ. ೦೪-೨೨). ಮರೆ₂ : ೩. ತಿಳಿಯದಿದ್ದೇನು ಮರೆಯೆನಗೆ (ಗಗಶಾ. ೨-೨೩); ಮರೆಯ ಬಗೆಯಿಂ ತನ್ನ ಎಣಿಕೆಗದ ಬರೆಯುವಳ್ (ಕಾಊಶ. ೬೦-೦೦೨). ೪. ಈ ಸಂಗತಿಯನ್ನು ಜನಾರ್ದನನು ತನ್ನ ಹೆಂಡತಿಯೊಡನೆ ಗುಟ್ಟಾಗಿ ಹೇಳುತ್ತಿರುವಾಗ ಮನೋರಮೆಯು ಮರೆಯಲ್ಲಿ ನಿಂತು ಕೇಳಿದಳು (ಬಂಕಿಮ. ೦೮೨). ೫. ಸೊಪ್ಪಿಯ ಮರೆಗೆ ಸಾರಂಗವಿದ್ದಂತೆ ತೋರುತ್ತದೆ (ಮುಂಬಿಬು. ೪-೪೩) ; ಅಂದುಗೆಯ ಧ್ವನಿಸುತ್ತ ನೀ ಮರೆಗೆ ಸೇರು (ನಡಾ. I, ೪೨೬). ೭. ಶ್ರೀಗುರುವರನು ಶಿಷ್ಯನ ಮನದ ಸಂಶಯ ಮರೆಯ ಪರಿಯುವೆನೆಂಬ ವಾತ್ಸಲ್ಯದಲಿ ಪೈದೋರೆ (ಗಗಶಾ. ೨-೮). ೧೧. ನಾಯಿಯು ತನ್ನ ಯಜಮಾನನ ಕಾಲುಗಳ ಮರೆಯನ್ನು ಹೊಗುತ್ತದೆ (ಕ್ರೋಡಿರ್. ೨೪೬) ; ಎಲೆಗೆ ಕಾಯಿ ಮರೆ, ಕಾಯಿಗೆ ಎಲೆ ಮರೆ (ಗಾದೆ). ೧೨. "ಅಡ್ಡ – ಅಭಿಯೋಗೇ, ಮರೆಯೊಳ್ . . . ಅಡ್ಡಂ = ಮರೆ" (ಶಾಕಕ್ಕ. ೨೩) ; ಮುಂದೆ ಇರುವ ಮರ ನನಗೆ ಮರೆ, ಏನೂ ಕಾಣುತ್ತಿಲ್ಲ (ರೂಢಿ). ಮೊರೆ₅ : ೧೧. 'ಮೊರೆಹೊಗು' ಪರಾ. ಮೊಱೆ₃ : ೧೧. 'ಮೊಱೆಯೊಗು' ಪರಾ. ೧೫. ಶರಣಾಗತಿಯನ್ನು ಸೂಚಿಸುವ ಒಂದು ಅನುಕರಣಶಬ್ದ : ಉಡುಪಶೇಖರ ಮೊಱೆಯೊ ಪಾರ್ವತಿಯೊಡೆಯ ಮೊಱೆಯೋ (ಶಾವಂಶ. ೭-೫೮) ; ಒಬ್ಬಾನೊಬ್ಬ ಮೊಱೆಯೋ ಎಂದು ರಾಯಗೆ ಮೊಱಿಡಲು (ಕಂಕದಾ. ೦೦-೩೦).

ಮರೆಮುಸುಕು = ಮುಚ್ಚುಮರೆ ; ವಂಚನೆ ; ಕಪಟ : ಮರೆ ಮುಸುಕು ಕುಹಕ ಯಾತಕೆ ಜನ್ಮಿಸಿದೆನೋ (ಬಿಕ್ಕೃ. ೯-೯೯) ; ಮರೆ ಮುಸುಕಿಲ್ಲದ ಮಾತು, ನಕ್ಕುನಗಿಸುವ ಹಾಸ್ಯ – ಇವು ಸರ್ವಜ್ಞನ ಕವಿತ್ವದ ಮುಖ್ಯ ತತ್ವಗಳು (ಶಾಹಿಶ. ೦೦೦). ಮಱೆಗೆ ವರ್, ಮಱೆಗೆ ಬರು = ಶರಣಾಗತಿಯನ್ನು ಪಡೆ ; ಆಶ್ರಯಿಸು : ಅದಟಂ ಕೊಂಡಾಡದೆ ಬೇಡಿದರ್ಗೀಯದೆ ಮಱೆಗೆ ವಂದರಂ ಕಾಯದೆ . . . ಅಧಮನದೇತರ್ಕೆ ಬಾರ್ತೆ ಜೀವನ್ಮೃತಕಂ (ಆದಿಪು. ೦೨-೯೮); ಮಱೆಗೆ ವಂದರಂ ಕಾಯದೆ ಬಾಲ್ವರಮಗನ ಬಾಹುದಂಡಂ ನಿರರ್ಥಕಂ (ಕಂಠಾವಾ. ೦೨-೭೯); ಎರೆದರ್ಗಿಲ್ಲೆನ್ನದೀವಗ್ಗಳಿಕೆ ಮಱೆಗೆ ಬಂದಾತನಂ ಕಾವ ಪೆಂಪು (ರಾಜಶೇ. ೬-೦೩೬). ಮಱೆಮಾಡು, ಮರೆಮಾಡು = ಕಣ್ಣಿಗೆ ಬೀಳದಂತೆ ಮಾಡು ; ಮುಚ್ಚಿಡು : ಮರಗೆರಸಿಯಾಡಲೆಂದು ಮುಂದೆ ತಮ್ಮ ಪೆಗೆ ಪರ್ವುವಂತೆ ಪನ್ನಿರ್ವರ್ತ್ತರ್ ಪರ್ವಿದಾಲದ ಮರದ ಮೊದಲ್ಗೆ ವಂದು ಭೀಮನಂ ಮಱೆಮಾಡಿ (ಪೂಕಶಾ. ೨-೩೦ ಪ); ಹಣೆಯ ಕಣ್ಣಂ ನೊಸಲ ಭಸಿತದಿಂ ಮಱೆಮಾಡಿ (ಇಹರ. ದೇ. ೩೦-೨೦); ಮದುಮಗಳ್ ತನ್ನೆಲ್ಲ ಚೆಲ್ವಿಕೆಯ ಮರೆಮಾಡೆ ಮದುಮಗಂ ಕಾಣಿಸಂ (ಕಾಲಿಊ. ೦೬೯-೪೦೪). ಮಱೆಮೋಸ, ಮರೆಮೋಸ = ಒಳಗೊಳಗೇ ಮಾಡುವ ಮೋಸ ; ನಂಬಿಕೆದ್ರೋಹ : ನೃಪವರ ಯುಧಿಷ್ಠಿರನಾಳ್ವ ದೇಶದೊಳ್ಳಳವು . . . ಅನ್ಯಾಯ ಮಱೆಮೋಸ . . . ಮೊಳೆದೋಱವು (ಕೈಶಿಶಾ. ೨-೫); ವಂಚನೆ ಮರೆಮೋಸಗಳನು ಮರೆಯು (ಕಂತ್ರಿ. ೬-೨). ಮಱೆಯ ಮಾತು, ಮರೆಯ ಮಾತು = ಅಭಿಪ್ರಾಯವನ್ನು ಮುಚ್ಚಿಟ್ಟು ಆಡುವ ಮಾತು ; ಸುತ್ತುಬಳಸಿನ ನುಡಿ : ಮಱೆಯ ಮಾತುಗಳೇಕೆ ಪಾಂಡವರೆಱಕ ನಿಮ್ಮಲಿ ಹಿರಿದು ಪಾರ್ಥಗೆ ಮಱುಗುವಿರಿ ಹಿರಿದಾಗಿ (ಕುವ್ಯಾಉ. ೦-೩೬) ; ಮಱೆಯ ಮಾತೇಕೀ ಕುವರನ ಸವಿಕೂಟಕೆಱಗಿದ ಮನದ ದೀಪನವ ನೆಱೆಯಾತನ ಸುರತದೆ ತೃಪ್ತಿಪಡಿಸು (ಕಂಪಾ. ೯-೦೨೬); ಮರೆಯ ಮಾತಲ್ಲ (ಶೋಣಾಕು. ೬-೯೬). [<ಮಱೆ₁./ತಮಿ. ಮಱೈ; ಮಲ. ತೆಲು. ಮಱ; ತುಳು. ಕೊಡ. ಮರೆ]

**ಮಱೆ³ಕಾಱ** (ನಾ). ಗುಟ್ಟನ್ನು ಬಿಟ್ಟುಕೊಡದಿರುವವನು ; ರಹಸ್ಯವನ್ನು ಕಾಪಾಡುವವನು : ಅಱಿಯೆಯಾ ನೀನಿದ ನಗೆಕಾಱ ಬಗೆಕಾಱ ಮಱೆಕಾಱ ಬಲುಟಾಳಿಕಾಱ ಅಱಿಯದಂದದೊಳೆನ್ನ ಕೇಳ್ವೆ (ಛಶ. ೬-೨೩).
[ಮಱೆ$^3_2$ + — ಕಾಱ]

**ಮಱೆ³ಗಡೆ** (ನಾ). ಯಾರ ಕಣ್ಣಿಗೂ ಬೀಳದಿರುವ ಜಾಗ; ರಹಸ್ಯ ಸ್ಥಾನ : ಮುಸುಕಿಟ್ಟೊಂದುಮರದ ಮಱೆಗಡೆ ನಿಂದು (ಶ್ರಶಂಜ. ೨-೧೪೦); ಪೆಡಮೆಟ್ಟಿವನಾಂಧ್ರಂ ಮಗಧಂ ಮಱೆಗಡೆಗೆ ಜಗುಳ್ದಂ (ಜಯಶಾ. ೭-೪).
[ಮಱೆ$^3_2$ + ಕಡೆ$_3$]

**ಮಱೆ³ಗಣ್** (ನಾ). ಪರವಶತೆಯನ್ನು ಸೂಚಿಸುವ ಕಣ್ಣು : ತುಱುಗಿತು ತುಂಬಿ ಕತ್ತಲೆ ಭಾಸ್ಕರಗಂಜಿ ಮುಱಿದೋಡಿ ಬನವ ಹೊಕ್ಕಂತೆ ಮುಱುಗಿದುವೆಳಜೊನ್ನವಕ್ಕಿ ಕಾಸಾರದೆ ಮಱೆ[ಱೆ³]ಗಣ್ಣ ವಿಹಗ ಕೂಡಿಮುವು (ವೋಹಶ. ೨೨-೩೩). [ಮಱೆ$^3_1$ + ಕಣ್]

**ಮಱೆ³ಗನ್ನಡ**, ಮರೆಕನ್ನಡ (ನಾ). ಕೆಲವರನ್ನು ಬಿಟ್ಟು ಬೇರೆಯವರಿಗೆ ಅರ್ಥವಾಗದಿರುವಂತೆ ರೂಪಿಸಿಕೊಂಡ ಸಾಂಕೇತಿಕವಾದ ಕನ್ನಡ ಭಾಷೆ : ನುಡಿದು ತಲೆದೂಗಿಸುವ ಮಱೆಗನ್ನಡಕೆ ಪಾಹಾಯೆನಿಸಿ ಮೆಚ್ಚನು ಪಡೆವ ವಾಗ್ಮಿಗಳೋದಿ ಹೊಗಳಿಸಿಕೊಂಬ ಗಮಕಿಗಳು . . . ಒಪ್ಪಿದರು (ಕುಮ್ಯಾಅ. ೮-೩೬); ತಿಳಿಯತಿಗೂಢಗನ್ನಡವನಾ ಮಱೆಗನ್ನಡ ಸಾರಗನ್ನಡಂಗಳು ಮೊದಲಾದ ಸಾಸಿರದ ಮೇಲೆರಳ್ನೂಱುಮಿವಾದಿಯಾದವಂ (ಕಱ. ೪-೪). **ಮರೆಕನ್ನಡ** : ಮರೆಕನ್ನಡವಾಗಿ ದೊರೆಗಳ ಸನ್ನಿಧಾನಕ್ಕೆ ಅಪ್ಪಾಜೈಯ್ಯನು ಬಿನ್ನವತ್ತಳೆಯನ್ನು ಬರೆದು ಕಳುಹಿದನು (ರಾಜೇಂದ್ರ. ೨೭೦).
[ಮಱೆ$^3_2$ + ಕನ್ನಡ$_1$]

**ಮಱೆ³ಗಳೆ** (ಕ್ರಿ). ೧. ಆವರಣವನ್ನು ತೆಗೆದುಹಾಕು ; ಮುಸುಕನ್ನು ಸರಿಸು : ವೇದವ್ಯಾಸನಂತರ್ಜಾತಜಾಡ್ಯದ ಜವನಿಕೆಯ ಮಱೆಗಳೆದು (ಕಭಾಗ. ೧-೪-೧). ೨. ಮಾಯೆಯನ್ನು ಹೋಗಲಾಡಿಸು : ಎಚ್ಚಱಿಯದಾನಂದಾನುಭವದಲಿ ಮಱೆಗಳೆದ ಪರಿಪೂರ್ಣಮಯನಾಗಿರ್ದನವಧೂತ (ಕಭಾಗ. ೩-೬-೨೭).
[ಮಱೆ$^3_2$ + ಕಳೆ$_1$]

**ಮಱೆ³ಗಳ್ಳ** (ನಾ). ಅಡಗಿಕೊಂಡಿರುವ ಕಳ್ಳ : ತಳವಱರದಿರ್ಗೋಲುಲಿಗೇಳ್ದ ಮಱೆಗಳ್ಳರಂತೆಯುಂ . . . ಬೆದಱಿ ಬೀದಿವರಿದು ಸರಿಯುತ್ತೆ (ಶಶಮ. ೪೦-೬).
[ಮಱೆ$^3_1$ + ಕಳ್ಳ$_1$]

**ಮಱೆ³ಗಾಣ್** (ಕ್ರಿ). ಅಡ್ಡಿಯನ್ನು ಪಡೆ ; ತಡೆಯನ್ನು ಹೊಂದು : ನೀನೆನ್ನ ಕಿರಳಸಲ್ ನಾಂಟಿದೆನ್ ನಿನ್ನಿರ್ದೆಗೆ, ಬಿಲ್ಗಾಱನಂತೆವೋಲ್ ಗುಱಿಕೆಡದ ಕಣೆಗಳನ್, ಕೂರಿಱಿತದಿಂದೆ ಮಱೆಗಾಣದಾ ಕಣೆಗಳನ್ (ಅಂತಿಗೂ. ೪೬-೧೦೦೬).
[ ಮಱೆ$^3_2$ + ಕಾಣ್ ]

**ಮಱೆ³ಗಾಳಗ** (ನಾ). ಮೋಸದ ಯುದ್ಧ : "ಕೂಟಯುದ್ಧಂ=ಮಱೆಗಾಳಗಮೆಂಬುದು. ಒಂದೆಸೆಗೆ ನಡೆವಂತೊಂದೆಸೆಗೆ ನಡೆದು ಕಿಡಿಸುವುದು ವಂಚನೆಯು ಕಾಳಗಮೆಂಬುದು ತಾತ್ಪರ್ಯ" (ಶಿತಿವಾ. ೨೯-೯೦).
[ ಮಱೆ$^3_2$ + ಕಾಳಗ ( < ಕಾಳೆಗ ) ]

**ಮಱೆ³ಗುಳಿ** (ನಾ). ಕಣ್ಣಿಗೆ ಕಾಣದಂತಿರುವ ತಗ್ಗು, – ಹಳ್ಳ : ನಡೆವುತ ನಡವುತಿಳಿಯೆ ತಾಂ ಮುಣಾಗಿ ಪೋಪಾ ನೆಲದ ಮಱೆಗುಳಿಗಳಿಂ . . . ಎಸೆವ ದಾರಿಯೊಳು ಪಾಪಿಗಳು ನಡೆಯಬೇಕು (ಶೀಕೃಷ್ಣ. ೪-೦೬-೦೩).
[ ಮಱೆ$^3_2$ + ಕುಳಿ$_2$ ( < ಕುಱಿ$_2$ ) ]

**ಮಱೆ³ಗೆಯ್** (ಕ್ರಿ). ೧. ಮರೆಮಾಡು ; ಅಡ್ಡವಾಗಿರಿಸು : ಪರಭೃತಪಕ್ಷದಿಂ ರತಿಯ ಕಣ್ಮಲರಂ ಮಱೆಗೆಯ್ವನಂಗನೊಲ್ದಿರೆಯ (ಅನಂಪು. ೭-೦೦) ; ಹಿಮಗಿರಿಸುತೆಯ ನಿದ್ರೆಯೆಚ್ಚಱದಂತೆ ಮೆಲ್ಲನಾರೈದೆದ್ದು . . . ಫಣಿಯು ಮಱೆಗೆಯ್ದು ಬಾಂದೊಱೆಯ ಸವತಿಯನಪ್ಪಿ (ಗಾಂದಪು. ೭-೦). ೨. ಮುಚ್ಚಿಡು ; ಅಡಗಿಸು : ತಪ್ಪಟಮಂ . . . ಉರ್ವಿಯೊಳ್ನಿಲ್ಲದಂ ದೊಡೆಯಿಕ್ಕುತೋಡುಗಳಂ ಶುಚಿಸ್ಥಲದಿಂಬಿನೊಳ್ ಮಱೆಗೆಯ್ದು (ಪ್ರಕಶ. ೩೬-೩೦). ೩. ಮರವಮಾಡಿಕೊಳ್ಳು ; ಮರೆಸು : ನೆರೆದಲೆಗೆ ಮಸಿದೊಡೆದು ತೆರೆಗೊಂಡೊಡಲನು ಕತ್ತಲೆಯ ಮಱೆಗೆಯ್ದು . . . ಹಣ್ಣುಮುದುಕಿಸೂಳೆಯರೆಸೆದರು (ತರಪು. ೦೦-೭೭). [ಮಱೆ$^3_2$ + ಕೆಯ್$_1$]

**ಮಱೆ³ಗೇಳ್** (ಕ್ರಿ). ಇತರರಿಗೆ ಕಾಣದಂತೆ ಅಡಗಿಕೊಂಡು ಬೇರೆಯವರ ಮಾತನ್ನು ಕೇಳು; ಕದ್ದು ಕೇಳು: ಬಜ್ಜೆಗುಂಟಣಿ ಸಜ್ಜವನೆಯ ಬಾಗಿಲರಪತ್ತಿ ಮಱೆಗೇಳುತ್ತಿರ್ದು (ತಂದ್ರಪು. ೬-೩೯ ವ). [ ಮಱೆ$^3_2$ + ಕೇಳ್ ]

**ಮಱೆ³ಗೊಳ್**, ಮರೆಗೊಳ್, ಮರೆಗೊಳು (ಕ್ರಿ). ೧. ಕಾಣದಾಗು ; ಅದೃಶ್ಯವಾಗು : ಅಸಿಯುಳಿನಗಸವಸದೊಳೆ ಬೆಸೆದು ಪೋಗಿ ಮಱೆಗೊಳೆ ಪೂತ ಕಲ್ಪಲತೆಯಂ ಲಲಿತಾಂಗಿಯೆ ಗೆತ್ತು (ಆದಿಪು. ೪-೦೩). ೨. ಅಡಗಿರು ; ಮರೆಯಾಗಿರು : ಸಂಭ್ರಮದಿಂ ಮಱೆಗೊಂಡು ನೋಡಿದಳ್ (ಕಾದಂಬ. ೦೩೩) ; ಪೊಡವಿಯೊಳು ಮಱೆಗೊಂಡ ಭಕ್ತಿಯನೊಡನೆ ತಲೆವಿಡಿದೆತ್ತುವಂದದಿ ತಲೆಯನೆತ್ತುವನು (ಬಸಪು. ೩-೩೬). ೩. ಬಚ್ಚಿಡು ; ಮುಚ್ಚಿಡು : ಅಲರಲರ್ಗಣ್ ಮುಗುಳ್ ನಗೆ . . . ಪದವಣ್ ಬೆಳವಾರ್ಯಯ್ ಪೆಱತಲ್ಲಿದೆಂತೊ ಕೋಮಲಲತೆ ಪೇಱಿಮೆನ್ನಿನಿಯಳಂ ಮಱೆಗೊಂಡುದೊ ಸೂಱಿಗೊಂಡುದೋ (ಶಂಶಾ. ೩-೦೨). ೪. ಆಸರೆಯನ್ನು ಪಡೆ ; ಶರಣಾಗು : ಬಂದ ಮಾವನೆ ಮಱೆಗೊಂಡು ಬಗ್ಗುಸುವ ಕೋಗಿಲೆ (ಆದಿಪು. ೦-೬೩) ; ವಿನವರ ದಂಡಿಸದೆ ಬಿಡುವೆನೆ ಜವನ ಮಱೆಗೊಂಡಡಂ (ಬಸಪು. ೦೦-೬) ; ಪೊಡವಿಯೊಳಾನಿರೆ ಪರಿಮಳವನು ವಾಯು ಬಿಡದೆ ಕೊಂಡೊಯ್ವನೆಂದೊಡನೆ ಪಾತಾಳವ ಮಱೆಗೊಂಡು ಲಾಮಂಚ ಮುಡಿವಾಳಬೇರ್ಗಳೊಬ್ಬುದುವು (ಕಂಪಾ. ೩-೯೭). ೫. ತೆರೆಯನ್ನಾಗಿ ಮಾಡಿಕೊಳ್ಳು ; ಜವನಿಕೆಯಂತೆ ಬಳಸು : ಮಿಱುಗುವ ಬೆಳ್ಮುಗಿಲಂ ಮಱೆಗೊಂಡು ನಿಂದ ಬಿಜ್ಜೋದರಿವೋಲ್ (ಕಬ್ಬಿಕಾ. ೩೩೪) ; ಮುರಾಂತಕ ಮರಳಿ ಚಕ್ರವ ತುಡುಕದಿರನೆಂದಸ್ತಗಿರಿಯನು ಸೂರ್ಯ ಮಱೆಗೊಂಡ (ಕುಮ್ಯಾದ್ರೋ. ೬-೯೬). ೬. ಹಿಂಭಾಗಕ್ಕೆ ಸರಿ, – ಜರುಗು; ಹಿಂದುಗಡೆಗೆ ಹೋಗು : ನಾರಿಯರ ಮಱೆಗೊಂಡು ಸಭೆಯಲಿ ಸಾರಥಿಯ ಕುಬ್ಜಾವತಾರನೋರೆಗಣ್ಣನೊಳೀಕ್ಷಿಸುತ (ಪಳಶ. ೬-೪೩); ವಿಟರ್. . . ನುಡಿಸೆ ನುಡಿಯದೆ ಕೂಡೆ ಬೆಣ್ಣೆವೊಲ್ ಬೆಮರಿ ಸಾರ್ ಸಾರೆಂದು ಸಖಿಯ ಮಱೆಗೊಂಬ ಬಾಲೆಯರೆಸೆದರು (ತರಪು. ೦೦-೦೯). ೭. ರಕ್ಷಣೆಯಾಗಿಡು ; ಅಡ್ಡವಾಗಿ ಹಿಡಿ : ನೇಱೆಯದಿಱಿತಕೆ ಹರಿಗೆಯ ಮಱೆಗೊಂಡು ಮಾಱದೇಱುವ ರಿಪುಭಟರ ಸೋಜಿಗಬಡೆಯೆ ನೋಳ್ಪರು (ಕಂಪಾ. ೦೪-೭೩). ೮. ವೇಷವನ್ನು ಮರೆಸಿಕೊಳ್ಳು ; ಮಾರುವೇಷ ಹಾಕಿಕೊಳ್ಳು : ಮತ್ಸ್ಯ ಮಱೆಗೊಂಡೈದಿ ಹೊಕ್ಕನು ವೃತ್ರರಿಪು (ಕಭಾಗ. ೪-೦೩-೬). **ಮರೆಗೊಳ್**: ೪. ಖಚರನು ಶತ್ರುವಿನ ಭಯದಿಂದ ಮರೆಗೊಳೆ ಕ್ಷಾತ್ರಧರ್ಮದಿ ಕೈವಿಡಿದೆನು (ಕೋಗಯು. ೦೬-೪೯) ; ಅಂಬರಮಣಿಯು ಬೆಚ್ಚಿ ಘನವ ಮರೆಗೊಂಡನು (ಮಕಾಅ. ೩-೦-೨೩) ; ಹುದಗಿ ಅಲ್ಲಲ್ಲಿ ಛಾಯಾವಿರೂಪಗಳ್ ಹದುಗಿದುವು, ದಿನಮಣಿಯು ಬೆದರಿಕೆಗೆ ಕಾನನವ ಮರೆಗೊಂಡ ಕತ್ತಲೆಯ ಕುಲದಂತೆವೋಲ್ (ಶಕ್ರಾಂಗ. ೩-೭೭). **ಮರೆಗೊಳು** : ೧. ತೋತೋರಿ ಮರೆಗೊಳುವ ಭೂತಭಾವಂಗಳೀ ಅನಿಕೇತಕೇತನದಿ ಪಡೆಯುವವು ಸ್ಥಿರತೆ (ಮಲದೇ. ೩೭-೭). [ಮಱೆ$^3_2$ + ಕೊಳ್$_1$]

**ಮಱೆ³ಗೋಟೆ** (ನಾ). ರಕ್ಷಣಾಸ್ಥಾನ : ಅಱಿಯೊಡಲೆಂಬ ಮಣ್ಣ ಮಱೆಗೋಟೆಯೊಳಿಂದ್ರಿಯದುಃಪರಿಗ್ರಹಂಗಳನೊಳಕೊಂಡು ಜೀವ ನಿಲಲಾರ್ತಪ ನಾಳೆಯೆ ಲಗ್ಗೆಗೆಯ್ದು ತೊತ್ತಳದುಳಿದಿಪ್ಪನುದ್ದಮಱಿಯಿಂ ಜವಂ (ಸಮಶ. ೦೩-೯೩). [ಮಱೆ$^3_2$ + ಕೋಟೆ$_1$ (<ಕೋಂಟೆ)]

**ಮಱೆ³ಜಾಣ** (ನಾ). ಇತರರಿಗೆ ಕಾಣದಂತಿರುವ ಬುದ್ಧಿವಂತಿಕೆಯುಳ್ಳವನು : ನುಡಿಜಾಣ ನಡೆಜಾಣ ನೆಱಿಜಾಣ ಮಱೆಜಾಣ

ಕಡುಜಾಣ ಜಗಕೆ ಸುಜಾಣ ಎಡೆಬಿಡದೆನ್ನಂತರಂಗದೊಳಿರು ಜಾಣರೊಡೆಯ ಚಿದಂಬರಪುರುಷಾ (ಶಠಶ. ೭-೬೬). [ಮಱೆ$_2$ + ಜಾಣ]

**ಮಱೆದೆಗೆ,** ಮರೆದೆಗೆ (ಕ್ರಿ). ಆವರಣವನ್ನು ತೆಗೆ ; ಮುಸುಕನ್ನು ಸರಿಸು : ವೀರನಾಹವಕೆ ಹೊಗುವರಾರುಗಿಗೊಂಡವೋಲ್ಮಱೆದೆ [ಶಾಣಂ. ತೆ]ಗೆದ ಕಾಲನ ಕುಂಡವೋ ನೆಱೆ ಬಿಗಿದ ನೃಪಕೋದಂಡವೋ (ಜಿಹಾಗ. ೯-೯-೦೬). **ಮರೆದೆಗೆ :** ತೊಡೆಯೊಳು ಕುಳಿತು ಮೊಲೆಯ ನೀಯೆಂದು ಕಂಚುಕಮಂ ಮರೆದೆಗೆದುಂಡು ತಾಯ ಮೊಗಮಂ ನೋಡಿ ಗಹಗಹಿಸುತೆ (ವಿವಮೋ. ೦೩-೩೬). [ಮಱೆ$_2$ + ತೆಗೆ$_1$]

**ಮಱೆನುಡಿ,** ಮರೆನುಡಿ (ನಾ). ೧. ಗುಟ್ಟಿನ ಮಾತು ; ರಹಸ್ಯವಾದ ನುಡಿ : ಮಱೆನುಡಿ ಯಾವಾಗ ಸೂಳ್ನುಡಿ ಯಾವಾಗ ಮೊಱೆಗೆಟ್ಟ ನುಡಿಗಳಾವಾಗ (ಕ೨ಶ. ೦೦-೬೨). ೨. ಮರೆಯಲ್ಲಿ ನಿಂತು ಹೇಳುವ ಮಾತು ; ಅಶರೀರವಾಣಿ : ನಿನಗೆ ಸೀತೆಯೊಳ್ ಪುಟ್ಟಿದರಿವರನೊಪ್ಪುಗೊಳ್ಳೆಂದು ಮಱೆನುಡಿ ಪುಟ್ಟಲೊಡಂ ಸುರರ್ ಪೂಮಱೆಗಱೆದರ್ (ರಾಮಾಶ್ವ. ೦೬೨-೦೬). ೩. ನೇರವಾಗಿ ಅರ್ಥವಾಗದ ಮಾತು : ಕೇಳ್ದಿ ನಾನ್ ಪಕ್ಕಿಗಳ್ ಕಿರಳ್ದುಱುಬಿ ಪುರ್ಚಿಂದೆ ಚೀಱಿಡುವ ಬರ್ಬರದ ಮಱೆನುಡಿಯನ್ (ಅಂತಿಗೂ. ೯೩-೯೨೩). **ಮರೆನುಡಿ :** ೨. ಸಂಹರಿಪ ಸಾಧನಮದಾವುದೆತ್ತಣದು ತಳ್ವುಗುಮೆಂದು ಮುಳಿದಾರ್ದು ತುಡುಕುವೊಡೆ ಕೆಲಬಲನನೀಕ್ಷಿಸಿದನಾ ಚಣದೊಳೊಂದು ಮರೆನುಡಿಯೆನಗೆ ಕಿವಿಗೊಂಡುದು (ಸಂಶಕ. ೨೩-೬೩). ೪. ಮುಚ್ಚುಮರೆಯ ಮಾತು : ವಂಚನೆಯ ಮಾತು : ನಿಡುಸುಯ್ದನಾ ಮರೆನುಡಿಗಳೀಟ್ಟಿಯಿರಿತವಂ ತಾಳಲಾರದೆ ತಾಳ್ದು (ಶ್ರೀರಾಪಹಾ. ೩೦೯-೨೪೩). ೫. ಸುಳ್ಳು ; ಹುಸಿ : ಮರೆನುಡಿಯಿದಲ್ಲ ಬೋಳಂ ತಾನೆ ಬಿದ್ದು ಮರೆದೊಡಲು ಮಲಗಿರಲ್ . . . ಬದುಕಿಸಿದೆ (ಕಾಲೂರ. ೦೬೯-೬೬೯). [ಮಱೆ$_2$ + ನುಡಿ$_2$]

**ಮಱೆಮಾಂಜು** 'ಮಱೆಮಾಜು' ನೋ.

**ಮಱೆಮಾಜು,** ಮರೆಮಾಚು, ಮರೆಮಾಜು, ಮಱೆಮಾಂಜು (ಕ್ರಿ). ಅಡಗಿಸು ; ಬಚ್ಚಿಡು ; ಮುಚ್ಚಿಡು : ಇನಿಯನೇಕಾಂತದೊಳೆಸಗಿದುದನು ತನ್ನ ಮನದೊಳ್ ಮಱೆಮಾಜುವುದು (ಹದಿ. ೩-೩೬). **ಮರೆಮಾಚು :** ಪ್ರಯತ್ನಪೂರ್ವಕವಾಗಿ ಜನಗಳಿಂದ ಇದುವರೆಗೂ ಈ ಕಥೆಯನ್ನು ನಾನು ಮರೆಮಾಚಿದ್ದೇನೆ. ಆದರೆ ಹಲವಾರು ಕಾರಣಗಳಿಂದ ಇನ್ನು ಮುಂದೆ ಮರೆಮಾಚಲಾರೆ (ಶಾಶ. ೯) ; ಅವಿದ್ಯೆ ಎಂಬುದು ಬ್ರಹ್ಮನನ್ನು ಮರೆಮಾಚುವ ಮುಸುಕಲ್ಲ (ಕತ್ಮಶ್ರಾ. ೩೨೬). **ಮರೆಮಾಜು :** ಆ ಅಂಶವನ್ನು ಮರೆಮಾಜುವುದು ಅಪರಾಧವಾಗುತ್ತದೆ (ರಾಕ್ಷಸು. ೨೩) ; ಅವನ ಮೋಹಜ್ವರವು ದಿನದಿನಕ್ಕೆ ಬೆಳೆದು . . . ಕಡೆಗೆ ಮರೆಮಾಜಲು ಕೂಡ ಕಷ್ಟವಾಗುವುದು (ಕಾವ್ಯಸ. ೬೬). **ಮಱೆಮಾಂಜು :** ಮಱೆಮಾಂಜಿದೊಡಂ ಮೆಯಿನಱೆತರುಪೇಂದ್ರಾವತಾರ[ನೆಂದು ಪೊಗಟ್ದರ್] (೩೯ಪ. ೯-೮೬). [ಮಱೆ$_2$ + ಮಾಜು$_1$]

**ಮಱೆಮಾತು** 'ಮಱೆವಾತು' ನೋ.

**ಮಱೆಮೆಯ್,** ಮರೆಮೈ (ನಾ). ಮರೆತು ಹೋದ ಹಿಂದಿನ ಜನ್ಮ ; ವಿಸ್ಮರಣೆಗೊಳಗಾದ ಜನ್ಮ : ಮಱೆಮೆಯ್ಯುಂ ಪಲವಾದ ಪೋದ ಭವಮಂ ಜಾತಿಸ್ಮರರ್ಕಂಡೊಡಂ ಮಱೆದಿರ್ಪರ್ಗದ (ಅನಂಪು. ೯-೨೦). **ಮರೆಮೈ :** ಪೆಣ್ಣ ಮರೆಮೈಯಿಂದ ಬಂದಿರ್ಪ ಸಾಲಮಲೆ ತಿಣ್ಣಂ (ಕಾಲೂರ. ೩೩-೩೩). [ಮಱೆ$_2$ + ಮೆಯ್$_2$]

**ಮಱೆಯಿಸು,** ಮರಸು$_1$, ಮರೆಸು, ಮಱಸು$_1$, ಮಱೆಸು (ಕ್ರಿ). ೧. ನೆನಪಿನಿಂದ ಹೋಗಲಾಡಿಸು ; ವಿಸ್ಮೃತಿಯುಂಟಾಗುವಂತೆ ಮಾಡು ; ಮರೆಯುವಂತೆ ಮಾಡು : ನಾಣ್ಗೆಡೆಗುಡದಿರ್ಪುದೊಂದು ನುಡಿಗಳ್ ಮೊಱೆಯಂ ಮಱೆಯಿಪ್ಪುದೊಂದು ಕಳ್ಗುಡಿದವರಂದಮಿಂತು (ಸಂಶಖಾ. ೨-೯೯) ; ಅತಿಕಷ್ಟಮಪ್ಪವಸ್ಥಾಂತರಿಯುಂ ಮಱೆಯಿಸಿ ಜಳಾಭಿಲಾಷೆಯುಮಂ ಜೀವಿತತೃಷ್ಣೆ ಮಾಡಿತು (ಕಾದಂಪೂ. ೦೯೩) ; ಆತನ ಕೆಯ್ಗಳ್ ಕುಱುಗಣ್ಣ ಕೂನ ಬೆನ್ ಕಾಲ್ ಮಱೆಯಿಸುವುದು ಟೊಂಕಮುಱಿದ ಕತ್ತ್ರಿಯ ಕಾಲಂ (ದುಶೋಕ. ೨-೩೯). ೨. ಇತರರ ಕಣ್ಣಿಗೆ ಬೀಳದಂತೆ ಮಾಡು ; ಮುಚ್ಚಿಡು ; ಅಡಗಿಸು : ಜನದೇವನ ಬಯಕೆಯಂ ಮಱೆಯಿಸಿ ಪುಸಿನುಡಿದ ಧನದೇವನ ಜಿಂಹ್ವೋತ್ಪಾಟನಂಗೆಯ್ವುದುಮಂ (ಶಾಪುಂತ. ೩೬) ; ಸೌಂದರ್ಯಸಂಪತ್ತಿಯುಂ ಮಱೆಯಿಸಲಲ್ಲದೆ ಮೆಱೆಯಿಸಲ್ ನಿಮಿತ್ತಮಲ್ತು (ಕುಸ್ಮತಿ. ೦೧-೬೨ ವ). ೩. ಮೈಮರೆಯುವಂತೆ ಮಾಡು ; ಪರವಶಗೊಳಿಸು ; ಎಚ್ಚರ ತಪ್ಪಿಸು : ಅಖಿಲಭುವನಜನನಿಯನಾಗಳ್ ಮಱೆಯಿಸಿ ಮಾಯಾನಿದ್ರೆಯಿಂ ಸುಱೆ ಮಾಯಾಶಿಶುವನಿರಿಸಿ (ಆದಿಪು. ೭-೯೩) ; ಮನದೊಳಲಂಪು ಪೊಣ್ಮೆ ನುಡಿದುಂ ನಡೆನೋಡಿಯುಮಾಟಪಾಟಮುಂ ಬಿನದಮುಮಾರುಮಂ ಮಱೆಯಿಸುತ್ತಿರೆ (ಸಂಶಖಾ. ೨-೯೯). ೪. ರೂಪಾಂತರಗೊಳಿಸು ; ಸ್ವರೂಪವನ್ನು ಬೇರೆಮಾಡು ; ವೇಷವನ್ನು ಬದಲಾಯಿಸು : ಕಳಶಜನನಿಂತು ಕೊಲಿಸಿದ ಖಳನೆ ಗಡಂ ಧರ್ಮನಂದನಂ ಕ್ರೂರದಿನಂಗಳ ಪೆಸರಂ ಮಱೆಯಿಸಿ ಮಂಗಳವಾರಂ ಕಡ್ಡವಾರಮೆಂಬಂತೆ ವಲಂ (ಗದಾಯು. ೩-೨೬). **ಮರಸು$_1$ :** ೧. ತಾಯಿಯ ಮಾತು ಮಗುವಿನ ದುಃಖವನ್ನು ಮರಸಿತು (ಸೂತಿ). ೨. ಕಂಗಳಿಂ ಕರೆವುದೆನ್ನದೆಯುಂಕ್ಕುವಳಲು ! ಕಣ್ದೆರೆಯಾ, ನಿನ್ನ ಕಣ್ಣಿಂದುಮಿನಿದೆ ರಸಂ ಮರಸದೆನ್ನಲಿ ಎನ್ನು ! (ಗಿರಿಪಂ. ೩೦-೦೯) ; ತನ್ನ ತಪ್ಪನ್ನು ಮರಸುವುದಕ್ಕಾಗಿ ಒಂದು ಪೆಟ್ಟಿಗೆಯಲ್ಲಿ ಶಿಶುವನ್ನಿಟ್ಟು ಭದ್ರವಾಗಿ ಮುಚ್ಚಿ ನೀರಿನಲ್ಲಿ ಬಿಟ್ಟುಬಿಟ್ಟಳು (ವ್ಯಾಸಪಿ. ೯೨). **ಮರೆಸು :** ೧. ನವಗ್ರಹದಾನದ ಸಂಭ್ರಮ . . . ಕುಪ್ಪೀಮಾತ್ರೆಯನ್ನೇ ಮರೆಸಿದ್ದವು (ಶಂಗಾಳ್ವ. ೦೬೬). ೫. ಕಣ್ಣುತಪ್ಪಿಸು : ಇದ್ದ ಕಾವಲ ಮರೆಸಿ ಮುದ್ದು ಕಣ್ಮರಿಯೊಳ್ಪ ಹದ್ದಿನಲ್ ದೊಡ್ಡನುಂ ಪದುಪಿನಿಂ ನೋಳ್ಪಂ (ಕಾಲೂರ. ೬೩-೦೦೭). **ಮಱಸು$_1$ :** ೧. ಭರತನ ಕಣ್ಗೆಱಕಮನೆಪಡೆದು ಚೆಲ್ವಿಂ ಮಱ [ಶಾಣಂ. ಱೆ]ಸಿದುವುದ್ಯಾನಲತೆಗಳಂ ವನಲತೆಗಳ್ (ಆದಿಪು. ೦೦-೯೩) ; ನೆನಸುವೆ ಮಱಸುವೆ ನೀನೆನ್ನ ತಂದೆ ಎನ್ನ ಗುಣದೋಷ ನಿನ್ನದು (ಸಿದ್ಧಪ. ೪. ೦೨೬-೯೨೩) ; ಯುಧಿಷ್ಠಿರನರಸುತನ. . . ಭರತಾದಿ ಭೂಮಿಪರ ಮಱಸಿತು (ಕುಮ್ಯಾಸ. ೨-೩). ೨. ಇರ್ದುದೊಂದು ವಸ್ತುಸ್ಥಿತಿಯುಂ ಮಱಸಿ ಪೆಱತೊಂದು ಮಾಟ್ಕೆಯಿನಱೆಪುವುದುತ್ಪ್ರೇಕ್ಷೆಯೆಂಬುದು (ಕವಿರಾ. ೩-೦೦೯) ; ಅಂತು ಬೃಹಂದಳೆಯಾಗಿ ಗಾಂಡೀವಜ್ಯಾಘಾತದೊಳಿಂದ್ರನೀಲಂಗಳನಡಸಿದಂತಿರ್ದರಡುಂ ಮುಂಗೆಯ್ಗಳ ಕರ್ಪಂ ತೀವೆ ತೊಟ್ಟ ಬಳೆಗಳ್ ಮಱಸೆ (ಪಂಪಭಾ. ೬-೩೩ ವ) ; ಹುಣ್ಣುಗಲೆಯ ಸೀರೆಯಲಿ ಮಱಸಿದ ಮುದಿಪಣ್ಯಾಂಗನೆಯರೊಪ್ಪಿದರು (ಕಂಪಪ. ೭-೦೯೨). ೫. ತರತರವಿಡಿದು ಥಾಳಿಸುತಿಹ ದೀರ್ಘಚಾಮರಗಳ ಸಾಲೊಳೆಸೆದನು ಹರಿವ ಬೆಳ್ಮುಗಿಲೊಳು ತೋಱೆ ಮಱಸುವ ಚಂದಿರನೋ ಭಾಸ್ಕರನೋಯೆಂಬಂತೆ (ಶಠಶ. ೦-೩೭) ; ಪುರದ ಸಂವರಣೆಯ ನೋಡಲಮ್ಮದೆ . . . ಉರಗೇಂದ್ರ ಪಾತಾಳದೆ ಮಱಸಿದ ಮಿಕ್ಕ ಕಿಱುಮಾನಿಸರ ಪಾಡೇನು (ಕುಪಪ. ೭-೨೩). ೬. ಮೋಸಮಾಡು ; ವಂಚಿಸು : ನೆರೆಹೊರೆಯಱಿಯದಂತೆ ಪತಿಯಂ ಮಱಸಿ ಮನೆಯವರನೆಲ್ಲರಂ ಟೊಣೆದು . . . ಇರಬಲ್ಲರವರೆ ಜಾರೆಯರವರನೋವಬಹುದೆ (ಕ್ಮವಿಭಾ. ೩-೩೯). ೭. ಹೊದೆಸು ; ಆಚ್ಛಾದಿಸು : "ಮಱಸು—ಆಚ್ಛಾದನೇ" (ಶಮದ). ೮. ಹೊದೆದುಕೊಳ್ಳು ; ಧರಿಸು : ಮಱಸಿರ್ದಂ ಬರಮೆಯ್ದೆ ನಾಂದ ತನುವಂ ಪತ್ತಿರ್ದ ಕಣ್ಗೆಲ್ಲಿಯುಂ ತೆಱಪಂ ಮಾಡೆ. . . ಮೆಱೆದರ್ ಚಕ್ರಿಯ ಮುಂದೆ (ಆದಿಪು. ೦೦-೦೩೩). **ಮಱೆಸು :** ೧. ಆ ಸಕಲಸಾಮ್ರಾಜ್ಯಲಕ್ಷ್ಮೀವಿಳಾಸದರಮನೆಗಳನು ಮಱೆಸಿದುದೀ ಶರಭಶಾರ್ದೂಲಸೇವಿತ ಘೋರಕಾಂತಾರ (ಕುವ್ಯಾಅ. ೦-೩೬). ೨. ಅಱೆದುಂ

ಕಂಡುಂ ನಂಟರ್ ಮಱೆಸುವರೆಂತಪ್ಪ ತಪ್ಪುಮಂ ಸಾಮಾನ್ಯರ್ ಮಱೆಸದಿರೆ ಬೆರ್ಚಿ ನಡೆವಯ್ (ಜೀವಸಂ. ೭೦-೦೭); ನಮ್ಮ ಯಥಾರ್ಥಮಂ ಮಱೆಸಿ ಮತ್ತಿನ ಸುತ್ತಿನ ಮಾತನಾಡುವೈ (ಕೃಷ್ಣಶು. ೫-೪). [ಮಱೆ$^{3}_{1}$ + — ಇಸು$_{3}$]

**ಮಱೆ³ಯಿಱಿಗಾಱ** (ನಾ). ೧. ಮರೆಯಲ್ಲಿ ನಿಂತು ಕಾದುವವನು; ಮೋಸದಿಂದ ಯುದ್ಧ ಮಾಡುವವನು : ಅದು ಪಾಂಡವರ ಕೃತ್ರಿಮ ತಂತ್ರ ಮಱೆಯಿಱಿಗಾಱರವರು (ಕುವ್ಯಾಪ. ೪-೭). ೨. (ಅಲಂ) ಕಣ್ಣಿಗೆ ಕಾಣಿಸಿಕೊಳ್ಳದೆ ತಾಪವನ್ನುಂಟುಮಾಡುವವನು; ಮರೆಯಲ್ಲೇ ಇದ್ದು ಹಿಂಸಿಸುವವನು : ರಾಯನ ಚಿತ್ತಚೋರನ ಮಱೆಯಿಱಿಗಾಱನಾಯಕನನು ಕಾಣ್ಬೆನಿನ್ನೆಂತೊ (ಕೊಂಡಕೋ. ೨೫-೩೨).

[ಮಱೆ$^{3}_{2}$ + ಇಱಿಗಾಱ]

**ಮಱೆ³ಯುಗು** 'ಮಱೆ³ವೊಗು' ನೋ.

**ಮಱೆ³ಯೇಱು** (ನಾ). = ಮಱೆ³ಗಾಳಗ : ಕಳ್ಳರ ಭಯಂ ಮುನ್ನಿಲ್ಲ ಬೆರ್ಚಿಲ್ಲ ದಲ್ ಮಱೆಯೇಱಿಲ್ಲ ವಿಪತ್ತಿಯಿಲ್ಲ ರುಜೆಯಿಲ್ಲುತ್ಪಾತಮಿಲ್ಲಾವಗಂ . . . ಆ ಪೂರ್ವವಿದೇಹದೊಳ್ (ಶಾಂತಿಪು. ೪-೭).

[ಮಱೆ$^{3}_{2}$ + ಏಱು$_{5}$ (< ಏಱ್$_{5}$)]

**ಮಱೆ³ಯೊಗು** 'ಮಱೆ³ವೊಗು' ನೋ.

**ಮಱೆ³ಯೊಡ್ಡು** (ಕ್ರಿ). ಮರೆಮಾಡು ; ಅಡ್ಡವಾಗಿ ಹಿಡಿ : ಮಿಂಚುಗುರ ಮಿಸುಪನುಣ್ಪೆಳಗಿನಸುಂ ಪಸರಿಸೆ ಪುರಲ್ದು ಕರವೊಂದೆಸೆದುದು ಚಂದ್ರಾತಪಕ್ಕೆ ಮಱೆಯೊಡ್ಡಿದವೋಲ್ (ಕಾದಂಪೂ. ೯೦೬) ; ರವಿಮಂಡಲಕೆ ಮಱೆಯೊಡ್ಡಿದನು ಪುರರಿಪು ವರಸುದರ್ಶನವ (ಕುವ್ಯಾದ್ರೋ. ೧೪-೩೫).

[ಮಱೆ$^{3}_{2}$ + ಒಡ್ಡು$_{1}$]

**ಮಱೆ³ರೂವು** (ನಾ). ಬದಲಾಯಿಸಿದ ರೂಪು; ಮಾರುವೇಷ : ನಾಡಿಗರಿರವನಾರಯ್ವೆಡೆಂದು ರಾಯನಟ್ಟಿದ ಬೇಹಿನವರ್ ಮಱೆರೂವಿ ಬೀದಿಗಳೊಳ್ ಬರೆಪರೆ (ರಾಮಾಶ್ವ. ೩೩-೪).

[ಮಱೆ$^{3}_{1}$ + ರೂವು (< ರೂಪು)]

**ಮಱೆ³ವಟ್ಟೆ** (ನಾ). ಗುಪ್ತಮಾರ್ಗ ; ಕಳ್ಳದಾರಿ : ಕುಱುಂಬರೊಡವೆರಸಿ ಸಚಿವಂ ಸಹಿತ ಮಱೆವಟ್ಟೆಯೊಳ್ಬಂದು ಹರಭವನಮಂ ಕಂಡು ಪಟ್ಟದಾನೆಯನಿಳಿದು ರಂಗಮಂಟಪವ ಪೊಕ್ಕು (ಸೌಂದಪು. ೧೫-೬). [ಮಱೆ$^{3}_{2}$ + ಬಟ್ಟೆ$_{1}$]

**ಮಱೆ³ವಡು** (ಕ್ರಿ). ಪರಿವೆಯಿಲ್ಲದೆ ನಿದ್ರಿಸು ; ಮೈಮರೆತು ಮಲಗು : ಎರೆಯನೆರೆಗೊಂಡು ಮಱೆವಟ್ಟಿರೆಯಿರೆ ಕಾಯ್ಬುರಿವ ಸೂರ್ಯಕಾಂತದಿ ನೆಟ್ಟಿತ್ತಿರದೋಡಿದುವಜಗರ (ಜಗಪಿ. ೦೭-೩೦); ಆತ್ಮವಲ್ಲಭೆಯುಮಾನುಂ ವಿಶ್ರಮಿಸಲೆಂದಲ್ಲಿಗೆ ವಿಮಾನಮನಿೞಿಪಿದೆವನ್ನೆಗಮುವಂದಿರೆನ್ನ ಬೆನ್ನನೆ ಬಂದು ಮಱೆ[ಕಾಣಾಂ. ಚ]ನ್ನಟ್ಟಲ್ಲಿಯೆನ್ನ ಛಿದ್ರಿಸೆ (ಬಂಹಂ. ೩-೦೪ ವ).

[ಮಱೆ$^{3}_{2}$ + ಪಡು$_{1}$]

**ಮಱೆ³ವಾತು,** ಮಱೆ³ಮಾತು (ನಾ). ಅಭಿಪ್ರಾಯವನ್ನು ಮುಚ್ಚಿಟ್ಟು ಆಡುವ ಮಾತು; ಸುತ್ತು ಬಳಸಿನ ನುಡಿ : ಒಡೆದು ಕಳೆ ಭವವ ಸದ್ಗುರುಚರಣಕೃಪೆಯಿಂದ ಏಕೆ ಮಱೆವಾತುಗಳು ಸಾಕಿನ್ನು ಸದ್ಗುರುವೆ ಸೂಕಬೇಡಿನ್ನೆನ್ನ ಸ್ವೀಕರಿಸು ಮದ್ಗುರುವೆ (ದೀಕ್ಷಾಬೋ. ೦೯-೦೧). **ಮಱೆ³ಮಾತು :** ಮಱೆಮಾತೇಂ ಸಿಡಿಲಂತೆ ಕೂರಸಿ ಕಱುತ್ತುಗ್ರಾಜಿಯೊಳ್ ವ್ಯಗ್ರದಿಂದೆಱಪಲ್ಲಿಂದೊಳಗಟ್ಟಿ ಬಂದೆಱಪ ಭೂಭೃತ್ಕೋಟಿ ಕೋಟಿರದೊಳ್ ಮಿಱುಗುತ್ತಿರ್ಪುದು . . . ಪದಪದ್ಮಚ್ಛಾಯೆ ಭೂಪಾಲನಾ (ರಮಣಾ. ೩-೦೭) ; ಸುರರು ಮುನಿದರೊ ಧರ್ಮದೇವತೆ ಪರಿಭವಿಸಿದಳೊ ಭಾಗ್ಯವಧು ಮೊಗದಿರುಹಿದಳೊ ಮಱೆಮಾತದೇಕೆಂದರಸ ಬಿಸುಸುಯ್ದು (ಕುರಗಾ. ೦-೫-೦೬). [ಮಱೆ$^{3}_{2}$ + ಮಾತು$_{1}$]

**ಮಱೆ³ವಾರ** (ನಾ). ಸಮುದ್ರದ ದಡದಲ್ಲಿ ನಿರ್ಮಿಸಿರುವ ಹಡಗುಗಳ ರಕ್ಷಣೆಯ ಸ್ಥಾನ ; ಬಂದರಿನಂಥ ಸ್ಥಳ : ಮಱೆವಾರದೊಳ್ ಬ್ರಹಿತ್ರಮನಿರಿಸಿ ವಣಿಕ್ಪತಿಗಳ್ ಪೊಟಲಂ ಪೊಕ್ಕು ತಮ್ಮ ತಂದ ಸಾರವಸ್ತುಗಳಂ ನಾರಾಯಣಂಗೊಪ್ಪಿಸಿದೊಡೆ (ಬಂಹಂ. ೦೦-೪೯ ವ); "ಮರೆಯಾದ ಸ್ಥಳ" (ಬಂಹಂ. ಕೋಶ). [ಮಱೆ$^{3}_{2}$ + ಪಾರ$_{2}$]

**ಮಱೆ³ವಾಳ್** 'ಮಱೆ³ವಾೞ್$_{2}$' ನೋ.

**ಮಱೆ³ವಾಳಿ** (ನಾ). ಶರಣಾಗತರಾದವರನ್ನು ರಕ್ಷಿಸುವ ಕರ್ತವ್ಯ : ಮಱೆವಾಳಿಯುಂ ನೆಱಪುವೆನೆನ್ದು ತೆಂಕಣಸಮಸ್ತನಾಯಿಕರುಂ ತಾವರೆಹಳ್ಳಿಯ ಸೋವಿಸೆಟ್ಟಿಯುಂ ತುಱುವಂ ಕೊಂಡು ಪೋಪಲ್ಲಿ (ಎಕ. VIII, ಸೊರಬ. ४೭-೦೦; 1187). 'ಜೋಳವಾಳಿ' ಪರಾ.

[ಮಱೆ$^{3}_{2}$ + ಪಾಳಿ$_{3}$ (< ಪಾೞಿ$_{2}$)]

**ಮಱೆ³ವಾಳ್ತನ** (ನಾ). ವ್ಯಭಿಚಾರ; ಹಾದರ : ನೆರೆದಡೆ [ಕೀಱಿ]ಗೇಳ್ದಲ್ಲರು ಪೊಱಗಿಕ್ಕೆ ಪುರಜನ ವೀಧಿಯೊಳ್ ನೆರೆಯೆ ಹರುಷದಿ ಕಂಕಿಲ್ದು ಕೂಕಿಱಿದೊಡಸಾವೊಲು ನೆರೆಯದೆ ಮಱೆವಾಳ್ತನ (ಅನಂತ. ೦೦-೦೩೫).

[ಮಱೆ³ವಾಳ್ (< ಮಱೆ³ವಾೞ್$_{2}$) + — ತನ]

**ಮಱೆ³ವಾೞ್$_{1}$** (ಕ್ರಿ). ೧. ಮರೆಹೊಕ್ಕು ಬದುಕು ; ಶರಣಾಗು : ಎಮ್ಮೊಳ್ ಪಗೆಗೊಂಡು ನಿರ್ನಿಮಿತ್ತದಿನರಿರಾಬಿಂಗೆ ತಲೆಯಂ ಮಾಱುಗುಡದೆ ಮಱೆವಾೞ್ವುದೊಳ್ಳಿತು (ರಾಮಾಶ್ವ. ೫೭-೨೫). ೨. ವ್ಯಭಿಚಾರ ನಡೆಸು ; ಹಾದರ ಮಾಡು : ನಾಗಸೂರನೆಂಬೊನಾತಂಗೆಣ್ಬರ್ ಪೆಂಡಿರ್ ತನ್ನ ಪೆಂಡಿರೊಳ್ ಸಂತೋಸಂಬಡೆಯದೆ ಮೋದಾಳಿಯೊಳ್ ಮಱೆವಾೞುತ್ತಿರ್ಕುಂ (ವಡ್ಡಾರಾ. ೨೦-೦೬) ; ಆಕೆಯೊಡನಾ ಪುರದ ವಸುಭೂತಿವೆಸರ ವಸುಧಾಮರಂ ಮಱೆವಾೞುತ್ತುಮಿರಲ್ (ಶಂರಾವಶಾ. ೬-೩೦ ವ) ; ತನ್ನ ನಾದುನಿಯೊಳೇ ಖಳಂ ಮಱೆವಾೞ್ದನ್ಯಾಯವರ್ತಿಯೆಂದು ಡಂಗುರಂ ಬೊಯ್ಸುತ್ತಂ ನಾಡಿಂದಮೆತ್ತಿ ಕಳೆವುದುಂ (ಪಾರ್ಶ್ವಪು. ೪-೨೯ ವ).

[ಮಱೆ$^{3}_{2}$ + ಬಾೞ್$_{1}$]

**ಮಱೆ³ವಾೞ್$_{2}$,** ಮಱೆ³ವಾಳ್ (ನಾ). ವ್ಯಭಿಚಾರ : ಹಾದರ : ಮಱೆವಾೞೊಲಿವ ಕುಲವಧುಗೆ ಬಯಸಿದೊಡಲಂಘ್ಯಪುರುಷವ್ರತಕ್ಕೆ ಬನ್ನಂ ಬರ್ಕುಂ (ಜೀವಸಂ. ೫೭-೩೫) ; ದುಷ್ಟಚೇಷ್ಟೆಯುಂ ಮೆಱೆಯಿಪ ತಮ್ಮ ಭಂಗಿ ಮಱೆವಾೞ ಮನುಜಸುಖಕ್ಕೆ ಸಂತತಂ ಮಱುಗುವ ಚಿತ್ತದಿಂ ರಜನಿರಂಜನಮಾದುದು ಬಂಧಕೀಜನಂ (ಸೂಕ್ತಿಸು. ೬-೯೫). **ಮಱೆ³ವಾಳ್ :** 'ಮಱೆ³ವಾಳ್ತನ' ಪರಾ.

[ಮಱೆ$^{3}_{2}$ + ಬಾೞ್$_{3}$]

**ಮಱೆ³ವಿಡಿ** (ಕ್ರಿ). ೧. ತೆರೆಯನ್ನು ಹಿಡಿ ; ಆವರಣವನ್ನು ಹಿಡಿ : ಮುಸುಕಿ ಹರಿಕಾಂತಿ ನೀಲೀವಸನಂ ಸ್ಪರ್ಶಾನುಮೇಯಮಾದುದು ರಾಮಂಗಸಿತಾಂಬರಮಂ ಮಱೆವಿಡಿದ ಸುವರ್ಣದ ವಿದ್ಧದಂತಿರುದ್ಧವಸೆಸೆದಂ(ಜಗಪಿ. ೦೫-೪೬) ; ಮೊಗಕೆ ಮುತ್ತುಗದೆಲೆಯ ಮಱೆವಿಡಿದಗಲಿದುಮ್ಮಹದಿಂದ ಜನಕನ ಮಗಳ ನಡೆಸುತ ತಂದರು (ತೊರರಾ. ೨-೪-೦೯). ೨. ಅಡ್ಡಿಯನ್ನುಂಟುಮಾಡು : ಅಪಕೀರ್ತಿ ಹೊಱುವುದು ಬಲ್ಲೆನೆನುತುರವಣಿಸಿದನು ಮುಂಗೈಯ ಮಱೆವಿಡಿದು (ಕುವ್ಯಾದ್ರೋ. ೦೩-೦೦). ೩. ಆಶ್ರಯಿಸು ; ಅವಲಂಬಿಸು : ಆವನ ಪಾದಪಂಕಜವ ಮಱೆವಿಡಿದು ಮರ್ತ್ಯಾವತಾರದಲುಱುವ ದೈವವದೆಂತು ಜನಿಸಿದ ತೆಱನನೆಲೆ ಮುನಿನಾಥ ಕೃಪೆ ಮಾಡುವುದು ತನಗೆ (ಶಿಭಾಗ. ೦೦-೦-೨). [ಮಱೆ$^{3}_{2}$ + ಪಿಡಿ$_{1}$]

**ಮಱೆ³ವುಗು** 'ಮಱೆ³ವೊಗು' ನೋ.

**ಮಱೆ³ವುಯಿಲ್,** ಮರೆಹುಯಿಲು (ನಾ). = ಮಱೆ³ಗಾಳಗ : ಆ ಮೈಸೂರ ಚಾಮರಾಜನೆಸಗುವ ಮಱೆವುಯಿಲುಪಟಳದಿಂ . . . ಬಂದಗೆದು ಪೋಪುದರ್ಕಂ ದಾರಿಯಿಲ್ಲದೆ (ಕಕವಂ. ೩೬-೦೨). **ಮರೆಹುಯಿಲು :** ಮರೆಹುಯಿಲಿನ ಪ್ರಯತ್ನವು ಕೈಗೂಡಲಿಲ್ಲ (ಶಾರಪೀ. ೧೯೩). [ಮಱೆ$^{3}_{2}$ + ಪುಯಿಲ್ (< ಪೊಯಿಲ್)]

**ಮಱೆವೆಱು** (ಕ್ರಿ). ಆಸರೆಯನ್ನು ಹೊಂದು : ಆಶ್ರಯವನ್ನು ಪಡೆ ; ಅವಲಂಬಿಸು : ವಿಳೋಚನಮರೀಚಿಗಳಂ ಮಱೆವೆತ್ತು ಚಂದ್ರಿಕಾಚಯ ಮೆಳಸಿತ್ತು ವಾಸರಮುಮಂ (ಚಂದ್ರ ಪು. ೨-೧೫). [ಮಱೆ$_2$ + ಪೆಱು$_1$]

**ಮಱೆವೊಗಿಸು** (ಕ್ರಿ). ಆಸರೆ ದೊರಕುವಂತೆ ಮಾಡು ; ಆಶ್ರಯವನ್ನು ಹೊಗುವಂತೆ ಮಾಡು : ಕಂತುಪಿತನಾತನಂ ಮಱೆವೊಗಿಸಿಕೊಂಡು ಮುನಿಯೊಡನೆ ಯುದ್ಧಂಗೈದನು (ಚಂಪು. ೨೭-೫).

[ಮಱೆವೊಗು + — ಇಸು$_3$]

**ಮಱೆವೊಗು**, ಮರೆಹೊಗು, ಮಱೆಯುಗು, ಮಱೆಯೊಗು, ಮಱೆವುಗು, ಮಱೆಹುಗು, ಮಱೆಹೊಗು, ಮೊರೆಹೊಗು, ಮೊಱೆಯೊಗು, ಮೊಱೆವುಗು, ಮೊಱೆಹೊಗು (ಕ್ರಿ). ಆಶ್ರಯಿಸು; ಆಸರೆಯನ್ನು ಪಡೆ ; ಶರಣಾಗು : ಮಱೆವೊಕ್ಕರ ಕೊಲಲಾಗದು (ಮೈಆರ. ೧೯೨೮, ೩೩-೭ ; 900) ; ತನ್ನ ಮಱೆವೊಕ್ಕೊಡೆ ಕಾಯದೆ . . . ಮೂಣ್ದು ಬಾಲ್ವಿ ಪುಱುವಾನಸನೆಂಬವನಜಾಂಡಮೆಂಬುದೊಂದತ್ತಿಯ ಪಣ್ಣೊಳಿರ್ಪ ಪುಱುವಲ್ಲದೆ ಮಾನಸನೇ (ಶಂಶಭಾ. ೫-೭೫); ಇಂದು ನಿಮ್ಮಂಘ್ರಿಗಳ ಮಱೆವೊಗಬಂದೆನೆನ್ನನು ಪಱಿಕರಿಸಬೇಕು (ಕುವ್ಯಾ. ೨೭, ೨-೩೮). **ಮರೆಹೊಗು:** ಮರೆಪೊಕ್ಕರೆ ಕಾಪ ಮಾರ್ರಾಂತರ ವೈರಿ (ಇಕ. v, ೪೦-೭; 1587). ಭಾಷೆಗೆ ತಪ್ಪುವ ನಾಯಕರ ಗಂಡ ಮರೆಹೊಕ್ಕರೆ ಕಾಯುವ . . . ಬಸವಪ್ಪ ನಾಯಕರವರು (ಮೈಆರ. ೧೯೩೩, ೩೫-೧೫; 1785) ; ಸಂಸಾರದಲ್ಲಿ ಸೋತು ಕಂಗಾಲಾಗುವಾಗ, ಯಾರಿಗಾದರೂ ಕಣ್ಣೀರಿಟ್ಟು ಮರೆಹೊಗಬೇಕಲ್ಲ (ಮೂಕಜ. ೨೨೦). **ಮಱೆಯುಗು. ಮಱೆಯೊಗು:** ನಿಮ್ಮ ಚರಣಸಾರಸದ ಮಱೆಯೊಕ್ಕನಗೆ ಶಿವದೀಕ್ಷೆಯಿತ್ತು ರಕ್ಷಿಸು (ಪದ್ಮರಾ. ೦೨-೬) ; ನಾನಜ್ಞನಾಗೆ ಪಿನಾಕಿ ಮಾಡುವುದೇನು ಮಱೆಯೊಗುವೆನು ಮಹೇಶ್ವರನ (ಕುವ್ಯಾಕ. ೭-೯೨); ಸೀತಾದೇವಿಯರನೊಯ್ದಿತ್ತು ಮಱೆಯೊಗು ರಾಘವೇಶ್ವರನ (ತೊರರಾ. ೬-೬-೪೮). **ಮಱೆವುಗು :** ಕೆಟ್ಟ ಜಪಮುಂ ತಪಮುಂ ನಿನಗೇಕೆ ಬೆಚ್ಚರಂ ಮಱೆವುಗೆ ಸಾಲ್ಗುಮಾಗ ಮರುಳಾಗದೆ ಪೋಗಿ ಜನೇಂದ್ರಧರ್ಮಮಂ (ಸಮಶ. ೧೫-೯೪) ; ಹರಿವಜ್ರಹತಿಗೆ ಸುರ್ಕಿದ ಗಿರಿ ಮಱೆವುಗೆ ಕಾದು ವಾರ್ಧಿ ಮರ್ಯಾದೆಯನೀ ಧರಣಿಗೆ ಮಾಡಿದಂದಂತೆನೆ ಧುರದೊಳ್ ನೀರ್ವೊಕ್ಕವಂಗೆ ಮುನಿಯರ್ ಪಗೆವರ್ (ಸೂಕ್ತಿಸು. ೨-೧೭) ; ವಜ್ರಪಂಜರವಾಗಿ ಮಱೆವುಗಲು ಓವುದು . . . ನಿಮ್ಮಂ ನೆನೆವ ಮಾನವರ (ಬಸಪು. ೬೦-೯೦). **ಮಱೆಹುಗು :** ಪೊರೆಯನೇ ದಂಡಿಯನುಮೇಶನು ತನ್ನ ಮಱೆಹು [ಪಾಠಾಂ. ಮೊಱೆಯೊ]ಗಲು (ಬಸಪು. ೫೪-೭೦). **ಮಱೆಹೊಗು :** ಮ[ಪಾಠಾಂ. ಮೊ]ಱೆಹೊಕ್ಕಡಂ ಕಾರುಣ್ಯದಲಿ ನೋಡಿ ಕಾಯಲುಂ ಸಭಯಾತ್ಮರಾದೆಮಗೀ ಯುಗಕೆ ನೀವಲ್ಲದೇ ದೀರ್ಘಾಯುಮಂ ಕೊಡುವವನದಾವಂ (ಬಸಪು. ೪೬-೪೦) ; ರವಿಯು ಮಱೆಹೊಗಲಿ . . . ನಾಳೆ ಪಡುವಣ ತರಣಿ ತೊಲಗದ ಮುನ್ನ ಕೊಲುವೆನು ವೈರಿ ಸೈಂಧವನ (ಕುವ್ಯಾದ್ರೋ. ೬-೩೫) ; ಎದೆಗೆಟ್ಟು ಮಱೆಹೊಕ್ಕರಿಗೆ ಮುದದೊಳಭಯದಾನವನಿತ್ತು ನಂಜೇಂದ್ರ ಪದುಳದೆ ಕೊಂಡನಾ ಪುರವ (ಕಂನಾ. ೦೬-೫೦). **ಮೊರೆಹೊಗು:** ಇಂದು ಮೊರೆಹೊಗಲು ಯಾರನ್ನೂ ಕಾಣೆ (ಬದುಕಿ. ೫೫); ಸೋತು ಸೊರಗಿದ ಜನತೆ . . . ಕಾಣದ ಶಕ್ತಿಯೊಂದಕ್ಕೆ ಮೊರೆಹೊಗುವ ಗತಿಗೆ ಇಳಿದರು (ಶಾರದ. ೪೫೮) **ಮೊಱೆಯೊಗು :** ನೀ ಕೈ ನೀಡಿ ನಿನ್ನವನೆಂದು ತೆಗೆ ಮೊಱೆಯೊಕ್ಕೆ ತಾನು (ಶಿಶಾಗ. ೭-೯-೨೪). **ಮೊಱೆವುಗು :** ಇಂದು ಮೊಱೆವುಗುವೊಡಾರಂ ಕಾಣೆನಕಟ ಗೋವಿಂದ ನೀನಲ್ಲದೆ (ಕೃಬಾಭಾ. ೦೦-೩೫). **ಮೊಱೆಹೊಗು :** ದಂಡಧರನುಪಟಲದಿ ಮಿಗೆ ಮುಂಕೊಂಡು ಮೊಱೆಹೊಗುವವರ ಕಾಣೆನು (ಹಂಸಾ. ೭೨) ; ಬಲ್ಲಿದರ ಮೊಱೆಹೊಗಲು . . . ವಿಧಿ ಬಂದು ಕೊಲ್ಲದೆ ಬಿಡದು (ಸರ್ವಜ್ಞ. ೮೭೭).

**ಮಱೆವೊಕ್ಕರ ವಜ್ರಪಂಜರ**=ತನ್ನನ್ನು ಆಶ್ರಯಿಸಿದವರನ್ನು ವಜ್ರಪಂಜರದಂತೆ ಭದ್ರವಾಗಿ ಕಾಪಾಡುವವನು ; ಒಂದು ಬಿರುದು : ಮಱೆವೊಕ್ಕರ ವಜ್ರಪಂಜರಂ ಗೋತ್ರಪವಿತ್ರ ಸುಜನಪ್ರಸಂನ ಕಲಿಗಳಾದಿತ್ಯ (ಕಇ. IV, ೪೮-೩೦; 1247). **ಮಱೆವೊಕ್ಕರಾಶ್ರಯ**=ಶರಣು ಬಂದವರಿಗೆ ನೆಲೆಯಾಗಿರುವವನು ; ಒಂದು ಬಿರುದು : ಕಲಿಯುಗನೀಜನ್ ಮಱೆವೊಕ್ಕರಾಶ್ರಯಂ (ಮೈಆರ. ೧೯೧೭, ೦೩-೧೦; 900). **ಮಱೆವೊಗೆ ಕಾವ, ಮಱೆಯುಗೆ ಕಾವ, ಮಱೆವುಗೆ ಕಾವ** = ತನ್ನನ್ನು ಆಶ್ರಯಿಸಿದವರನ್ನು ರಕ್ಷಿಸುವವನು ; ಒಂದು ಬಿರುದು : ಭುಜಬಳಭೀಮ ಮಱೆವೊಗೆ ಕಾಪ ಶರಣಾಗತವಜ್ರಪಂಜರಂ (ಎಕ. XVI, ಚಳ್ಳಕೆ. ೫೮-೦೩ ; 1161) ; ಬಂಟರ ಭಾವನುಂ ಮಱೆಯುಗೆ ಕಾವನುಂ . . . ಶ್ರೀಮಂನುಮಹಾಮಂಡಳಿಕ ಬಂಮರಸದೇವ (ಎಕ. VI, ಕಂಕೆ. ೬೦-೩೭; 1154); ಮಱೆವುಗೆ ಕಾವಂ ಯುದ್ಧಧುರನ್ಧರಂ ಧೈರ್ಯಧರಾಧರಂ (ಸೌಇಇ. XI-i, ೯೨-೮ ; 1054). [ಮಱೆ$_2$ + ಪೊಗು]

**ಮಱೆಸನ್ನೆಗೆಯ್**, ಮಱೆಸನ್ನೆಗೈ (ಕ್ರಿ). ಗುಟ್ಟಾಗಿ ಸೂಚಿಸು ; ರಹಸ್ಯಸಂಕೇತವನ್ನು ನೀಡು. — ಕೊಡು : ವಸಂತದೂತಿ ಮಱೆದುಂಬಿಗಳಿಂ ಮಱೆಸನ್ನೆಗೆಯ್ವ (ಅಪಂಪು. ೭-೦೦). **ಮಱೆಸನ್ನೆಗೈ :** ಒಱಗುವಮೋಡೆಯ ನೆವಿಲ್ಲ ಕುಳಿತನು ಚಕ್ರೇಶ ನಱುಗೋಲ ನಿಲೆ ಬಿಸಿಲಲ್ಲಿ ಮಱೆಸನ್ನೆಗೈದು ಸತ್ತಿಗೆವಿಡಿಸಿದನೇನು ಮಱುಕವೊ ತಮ್ಮನ ಮೇಲೆ (ಭರತ. ೫೦-೦೨೯). [ಮಱೆ$_2$ + ಸನ್ನೆಗೆಯ್]

**ಮಱೆಸನ್ನೆಗೈ** 'ಮಱೆಸನ್ನೆಗೆಯ್' ನೋ.

**ಮಱೆಸು** 'ಮಱೆಯಿಸು' ನೋ.

**ಮಱೆಹಿಡಿಕೆ** (ನಾ). ಎಚ್ಚರವಿಲ್ಲದಿರುವುದು ; ಮೂರ್ಛೆ; ವಿಸ್ಮೃತಿ : ಇಂತಿವಱಿಂ ಮಱೆಹಿಡಿ[ಕೆ]ಯ ಭ್ರಾಂತಿನೊಳದಟಱಿದು ಕಾಲ್ಗಳುಂ ಕೆಟ್ಟೊಡವಂಗಂ ತಳುವಿಲ್ಲದೆ ತತ್ಕ್ರಿಯೆಯುಂ ತಾಂ ಮಾಡಲಿಱಿಗುವುದು ಮುನ್ನಿನವೋಲ್ (ಜಮಜ. ೦೭-೦೩೫). [ಮಱೆ$_2$ + ಹಿಡಿಕೆ (< ಪಿಡಿಕೆ)]

**ಮಱೆಹುಗು** 'ಮಱೆವೊಗು' ನೋ.

**ಮಱೆಹೊಗು** 'ಮಱೆವೊಗು' ನೋ.

**ಮಱಮಱ**, ಮಳಮಳ$_1$ (ನಾ). ಮಬ್ಬು; ಅಸ್ಪಷ್ಟತೆ; ಮಸುಕು : 'ಮಱಮಱಿಸು' ಪರಾ. **ಮಳಮಳ$_1$** : 'ಮಳಮಳಿಸು' ಪರಾ. 'ಮಱಲ್' ಹೋ.

[ದೇ.॥ ತಮಿ. ಮಱಮಱಪ್ಪು = ಮಾತು ಅಥವಾ ಕೃತಿಯಲ್ಲಿ ಕಂಡು ಬರುವ ಅಸ್ಥಿರತೆ,– ಅಸ್ಪಷ್ಟತೆ; ಮಱ=ಮಾನಸಿಕ ಗೊಂದಲ ]

**ಮಱಮಱಿಸು**, ಮಳಮಳಿಸು$_1$ (ಕ್ರಿ). ೧. (ಪರವಶತೆ, ಕಣ್ಣೀರು, ಮುಂತಾದುವುಗಳಿಂದ) ಕಣ್ಣು ಮಂಜಾಗು; ದೃಷ್ಟಿ ಮಸುಕಾಗು.– ಅಸ್ಪಷ್ಟವಾಗು : "ಮಱಮಱಿಸಿತ್ತು = ಕಣ್ಕಡಿದ ಭಾವಂ" (ಶಮದ. ಶಂ. ೦); ಅಂತು ಕುಡಿಯೆ ಕಕ್ಕರಗೆಯ್ತದಿಂ ತುದಿನಾಲಗೆಯೊಳ್ ತೊದಳ್ವೆರಸು ನುಡಿವ ನುಡಿಗ[ಳುಂ]. . . ಮಱಮಱಿಪ ರೂಪು ಕಣ್ಗಳೊಳ್ ಬೆಳ್ಪನಱಿಯೆ ಸೋಂಕುವ ಕೆಂಪುಗಳುಂ (ಶಂಶಭಾ. ೪-೮೮ ವ); ಕಳ್ಳ ಸೊರ್ಕಿನೊಳಂ . . . ಉಂತೆ ಪೊಳೆವ ನಿಡಿಯಲರ್ಗಣ್ಗಳ್ಗೆ ಮಱಮಱಿಪ ನೋಟಮುಮನುಂತೆ ತೊದಳಿಸುವ ನುಡಿವ ನುಡಿಗಳ್ಗೆ ತೊದಳುಮನೆಕ್ಕಯಿಂ ತಳೆಯೆ (ಶಂಶಭಾ. ೭-೮೦ ವ) ; ಬೆಳರ್ತ ದೋಱೆವಾಯ್ ಮಱಮಱಿಸುತ್ತುಮಿರ್ಪ ನಗೆಗಣ್ ನಸುಜೋಲ್ವೊಡೆ (ಸೂಕ್ತಿಸು. ೯-೬೦). ೨. (ಆಯಾಸದಿಂದ) ಕಣ್ಣನ್ನು ಮುಚ್ಚಿಕೊಳ್ಳು : ಅಡಿಗಡಿಗಾಗುಳಿಸುವೊಡಂ ನುಡಿಗಳನಿನಿಸಲಸಿ ಕೇಳ್ವೊಡಂ ನಿಜತನುವಂ ಸಡಲಿಸಿ ಕಣ್ಣಂ ಮಱಮಱಿಪೊಡಮಱಿ ನಿದ್ರಾಂಗಿತಂ ಮನೋಜಲತಾಂಗಿ (ಶಬ್ದಶಿ. ೦೦-೩೭). **ಮಳಮಳಿಸು$_1$**: ೧. ದಿಟ್ಟಿಗಳ್ ಮಳಮಳಿಸಲಿಂತೆಂದನು (ಭೋರಾಸು. ೭-೯೯). [ ಮಱಮಱ + — ಇಸು$_3$ ]

**ಮೞಲ್**, ಮಳಲು$_1$ (ಕ್ರಿ). = ಮೞಿಮೞಿಸು ೧ : "ಮೞಲ್ವ[ಲ್ವ] ದೆಸೆ ದೃಷ್ಟಿಕ್ಷೋಭದಲ್ಲಾಯ್ತು" (ಕರ್ಣನೀ. ೬೪); "ಮೞಲ್ವುದು (ಕೞಲ್ವುದು), ಮೞಮೞಿಸಿತ್ತು = ಕಣ್ಕದಡಿದ ಭಾವಂ" (ಕವಿರಾ. ಶಂ. ೧). **ಮಳಲು$_1$** : ಮಳಲುತಿಪ ಕಣ್ಗಳಿಂದೊರಲ್ವ ಮಗಳಂ ನೋಡಿ ಗಳಗಳನೆ ಬಾಷ್ಪೈರೆದು ತಾಯಿಯುಳುತಿಹಳು (ಶಾಂತೀಶ ೧೭೭-೩೮೩).

[ದೇ.॥ ಮಲ. ಮೞಲ್ = ಉನ್ಮತ್ತತೆ ]

**ಮೞವೆ$_1$** 'ಮೞಪೆ' ನೋ.

**ಮೞವೆ$_2$** 'ಮೞವ$_2$' ನೋ.

**ಮೞವೆಳ್ಳೂರ್** (ನಾ). ಒಂದು ಸ್ಥಳದ ಹೆಸರು : ವರಾವೀಜಿಸ್ತ್ರಜ್ಬರಂ ವಿಸ × ತ್ತಿ ನಿಮ್ಮಡಿ ಮೞವೆಳ್ಳೂರಾಳೆ (ಎಕ. IV (R), ಎಳಂದೂ. ೦೩೬-೩; ೩ನೆಯ ಶತ). [ ? + ಊರ್ ]

**ಮೞಿಗೆ**, ಮಳಿಗೆ (ನಾ). ೧. ಅಂಗಡಿ : ಮಿಗೆ ಬೆಲೆಯೇೞದ. . . ಬಟ್ಟೆಯ ಮೞಿಗೆಗಳಿಂ ಸೋಲಿಪುವು ಸೀರೆವರದರ ಪಸರಂ (ಕಬ್ಬಿಗ. ೩೬); ಆಕಾರಕ್ಕೆ ೞಕಾರಂ. . . ಮಣಿಕಾ-ಮೞಿಗೆ (ಶಬ್ದ. ೨೫೭ ಪ್ರಯೋ). ೨. ಸರಕುಗಳನ್ನು ಶೇಖರಿಸಿಡುವ ಸ್ಥಳ ; ಕೋಠಿ ; ಗುದಾಮು ; ಮೞಿಗೆಯು ಮಾಳಿಗೆಯು ಮನಂಗೊಳಿಸುವ ನಾನಾ ಪ್ರಕಾರದಂಗಡಿಯುಂ . . . ನೋಟ್ಟಡಂ ರಮಣೀಯಂ (ಸುಕುಮಾ. ೯-೬೪). **ಮಳಿಗೆ** : ೧. × × × ಸದಿಂ ಮಳಿಗೆಗಳಂ ತರದಿಂ (ಬೊಂಕಶಾ. ೧೯೩೩, ಹಾವೇರಿ. ೧೮೯-೯೪; 986); ಕೊಟ್ಟ ಗಟಿ³ದ್ದ ಮತ್ತರೆರಡು ದೇವರ ಪುರದೆರಡುಮಳಿಗೆ ವಜ್ಜದ ಕೇರಿಗೆ ಮೂಡಲು (ಪ್ರಾಇಂ. ೦೯೨೯,೬೩-೯; 1024 ?); ಅಲ್ಲಿ ದೊಡ್ಡದೊಡ್ಡ ಮನೆಗಳೂ ಮಹಲುಗಳೂ ಮಳಿಗೆಗಳೂ ತುಂಬಿದ್ದುವು (ಕೃಗಂಬ. ೦೦). ೨. ಯೆಣ್ಣೆ ಅರಮನೇ ಮಳಿಗೆಯಿಂದ ಕೊಡಬೇಕು (ಎಕ. IX, ದೇವನ. ೦೬-೦೪; 1698); ಇಂಗ್ಲಿಷು, ಫ್ರೆಂಚು, ಡಚ್ಚು ವರ್ತಕರು ತಮ್ಮ ಮಳಿಗೆಗಳನ್ನು ಕಾಪಾಡಿಕೊಳ್ಳಲು ಸಿದ್ಧರಾದರು (ಛತ್ರಪಿ. ೦೦೯); ಹಡಗಿನ ನೌಕರರು ನೀರು ನುಗ್ಗಿದ ಮಳಿಗೆಯಿಂದ ಸಾಮಾನುಗಳನ್ನೆಲಾ ಹೊರಕ್ಕೆ ತೆಗೆದು ಹಾಕುತ್ತಾರೆ (ಕ್ರಜಾಇ. II. ೦೪). ೩. (?) : ಶ್ರೀ ಶ್ವಾಮಿದೇವರ ಪಟ್ಟಣಾ ಕೊಟ್ಟ ತ್ರೋಣೆಯ ಮಳಿಗೆಯ ಭಗವತೀದೇವಿಯರ್ಗ್ಗೆ ಮುನ್ನ ಪರಮೇಶ್ವರ ದತ್ತಿಯಾಗಿ ಪಡದ ವ್ರಿತ್ತಿ (ಸೌಇಇ. XI-i, ೦೬೬-೦೭ ; 1099); ದೀಪಾವಳಿಯ ಪರ್ವ್ವದಲ್ಲಿಯೊಕ್ಕಲೊಳಿಂಕೆ ಮಾನವೊಂದು ಮಳಿಗೆಯೊಳಗೈ ನೂರ್ವ್ವಸ್ವಾಮಿಗಳ್ ಬಿಟ್ಟಾಯಂ (ಎಇ. XX, ೦೦೭-೫೨ ; 1167); ಈ ಮಳಿಗೆಯ ಕೋಲು ಕೊಳಗ ಸಕಲಸಾಂವ್ಯವೆಲ್ಲವೂ [ಶ್ರೀ] × × ಚಲಿಂಗ ದೇವರವು (ಕಇ. I, ೩೦-೬೩; 1222).

[< ಸಂ. ಮಣಿಕಾ./ತಮಿ. ಮಳಿಕೈ; ತುಳು. ಮಳಿಗೆ; ತೆಲು. ಮಳಿಗ./ ಮರಾ. ಮಳಗೀ, ಮಳಘೀ]

**ಮೞೂರ್** (ನಾ). ಒಂದು ಊರಿನ ಹೆಸರು; P ಈಗಿನ ಚಾಮರಾಜ ನಗರ ತಾಲ್ಲೂಕಿನ ಮಳೂರು : ಮೞೂರ ಸಾಸಿರ ಒಬ್ಬಾಬ್ಬರುಂ ಮಲ್ಲಯ್ಯನುಂ ಮಾಡಿಸಿದ ದೇಗುಲಕ್ಕೆ ಕೊಟ್ಟ ಮಣ್ಣೂರಗಾಲಲ್ಲ ದಿರ್ಕ್ಕಣ್ಣಗಂ (ಎಕ. IV(R), ಚಾಮರಾ. ೨೯೦-೨; 982). [? + ಊರ್]

**ಮೞೆ³**, ಮಳೆ (ನಾ). ಮೋಡವು ಕರಗಿ ಆಕಾಶದಿಂದ ಸುರಿಯುವ ಹನಿಹನಿಯಾದ ನೀರು; ಸರಿ; ವೃಷ್ಟಿ : "ಧಾರಾಸಂಪಾತಃ, ಆಸಾರಃ— ಈ ೨ ಮೞೆ³" (ಹಲಾಯು. ೦೦-೫೬); ದೆಸೆಗಳ್ಗೆ ಕೆಪ್ಪನೆ ಮೊೞಗುವಿರೇ ಮೊೞಗಿದಂತೆ ಕೊಳ್ವುವೆ ಮೞೆ³ಗಳ್ (ಕಾವ್ಯಸಾ. ೪೩೭ ಪೂರ್ವ್ರಕ); ಪದನಂ ಕಾಣಿಸಿಕೊಳ್ವವಲ್ಲಿ ಮೞೆ³ಗಳ್ (ಆದಿಪು. ೧-೩೦); ಮೞೆ³ಯಿಲ್ಲದೆ ಪೊಯ್ಮ್ಲಾರಿಂ ಬೆಳೆಗುಮೆ ಧರೆ (ರಾಮಾಶ್ವ. ೦-೪೯) ; ಮೞೆ³ಯೇ ಸರ್ವಜನಾಶ್ರಯಂ (ಸೂಕ್ತಿಸು. ೦೪). **ಮಳೆ** : "ಮಳೆಯೆನಲ್ ವೃಷ್ಟಿ" (ಕಕರ. ೬೭); ಕಾಳ್ಕಿಚ್ಚಿನಿಂ ಬೇವಂಗೆ ತಂಪಿನ ಸೋನೆಯ ಮಳೆಯಾಗುತ್ತೆ ಮಾಣ್ಬರೆ (ಐಕರ. ೪-೩೦) : ನೀಲಗಿರಿಗಳ ನೆವ್ವಿ ಘನಮೇಘಾಳಿ ಸುರಿದವು ಮಳೆಯನೆಸಿ ಶರಜಾಳ ಕವಿದುದು ಗಜದ ಜೋಧರ ರ್ಘಾಡಿಯಿಸುಗೆಯಲಿ (ಕುವ್ಯಾಕ. ೦೦-೮೭) ; ಮಳೆಗೆ ಹೆದರಿ ಹೊಳೇಲಿ ಹಾರಿದ ಹಾಗೆ (ಗಾದೆ).

**ಮಳೆ ಕುಡಿವ ಹಕ್ಕಿ**=ಕೇವಲ ಮಳೆಯ ನೀರನ್ನೇ ಕುಡಿದು ಬದುಕುವುದೆಂದು ನಂಬಲಾದ ಒಂದು ಬಗೆಯ ಪಕ್ಷಿ; ಚಾತಕ : ಮಳೆಕುಡಿವ ಹಕ್ಕಿವೊಲು ಕುಡಿಯುತಿರೆ ಕನ್ನಡದ ಕಲಿಗಳಾ ಸಿರಿಯ (ಹೊಂಗಳು. ೦೩-೧). **ಮಳೆಯ ನಕ್ಷತ್ರ**=ಮಳೆ ಬರಲು ಸಹಾಯಕವಾಗು ವಂತೆ ಸೂರ್ಯನು ತನ್ನ ಸಂಚಾರದಲ್ಲಿ ಬಂದು ಸೇರುವ ನಕ್ಷತ್ರ ಪ್ರದೇಶ : ಮಹಾನಕ್ಷತ್ರವನ್ನೇ ಮಳೆಯ ನಕ್ಷತ್ರವೆಂದೂ ಹೇಳುತ್ತಾರೆ (ರೂಢಿ). **ಮಳೆಯ ಪುಳ** = ಮಳೆಗಾಲದ ಆರಂಭದಲ್ಲಿ ಕಂಡು ಬರುವ. ಇರುವೆಯ ಜಾತಿಗೆ ಸೇರಿದ, ರೆಕ್ಕೆಗಳುಳ್ಳ ಒಂದು ಬಗೆಯ ಹುಳು ; ಈಚಲುಹುಳು : ನೆಲದೊಳಗಿಂದಲೇಳುವ ಮಳೆಯ ಪುಳ ಕವಿವಂದದಲಿ (ದೇವೀಕ್ರ. ೫೯). **ಮಳೆಯ ಬಿಲ್ಲು**=ಮಳೆಯ ನೀರಿಗೆ ಸೂರ್ಯನ ಬಿಸಿಲು ಎದುರಾಗಿ ಬಿದ್ದಾಗ ಏಳುವ ಏಳು ಬಣ್ಣಗಳ ಬಿಲ್ಲಿನಂಥ ಆಕೃತಿ ; ಕಾಮನ ಬಿಲ್ಲು; ಇಂದ್ರಚಾಪ : ಬೆನ್ನನು ಕೋದು, ಕೈಕಾಲ್ಗಳನು ತೇಲಿಸಿ, ಹೊಳೆದಳು—ಮಳೆಯ ಬಿಲ್ಲಿನ ಹಾಗೆ (ಕಂಪು.೩೬-೦೩). **ಮೞೆ³ಕೊಳ್** = ಮಳೆಬೀಳು ; ಮಳೆಯಾಗು : ಪ್ರಜೆಗಳು ಮೆಚ್ಚಿದಂತೆ ಮೞೆ³ಕೊಳ್ವವು (ಪಂಪಭಾ. ೬೭-೦೫).

[ದೇ.॥ ತಮಿ. ಮೞೈ ; ಮಲ. ಮೞ ; ತುಳು. ಕೊಡ. ಮಳೆ]

**ಮೞೆ³ಗಟ್ಟಲೆ** (ನಾ). ಆಕಾಶದಲ್ಲಿ ಮೋಡ ಮುಚ್ಚಿಕೊಂಡು ಸೂರ್ಯನು ಕಾಣದ ದಿವಸ ; ದುರ್ದಿನ : "ಮೞೆ³ಗಟ್ಟಲೆಯುಂ ದುರ್ದಿನಮೆಂಬುದು" (ಹಲಾಯು. ೦೦-೫೯). P 'ಮೇಘತಿಮಿರ' ಎಂಬ ಶಬ್ದಕ್ಕೆ ಹಲಾಯುಧದ ಟೀಕಾಕಾರನು 'ಮೞೆ³ಗಟ್ಟಲೆ' ಎಂದು ಕೊಟ್ಟಿರುವ ವಿವರಣೆ ವಿಚಾರಣೀಯವಾಗಿದೆ. [ಮೞೆ³ + ಕಟ್ಟಲೆ]

**ಮೞೆ³ಗಾಲ**, ಮಳೆಗಾಲ (ನಾ). ಮಳೆ ಬರುವ ಋತು ; ಕಾರ್ಗಾಲ : "ವರ್ಷಾಃ, ಪ್ರಾವೃಟ್, ತಪೋತ್ಯಯಃ—ಈ (ಮೂರು) ೩ ಮೞೆ³ಗಾಲಂ" (ಹಲಾಯು. ೨೦-೦೦೭); ಕಾಲಮಲ್ಲದ ಕಾಲದೊಳ್ ಮೞೆ³ಗಾಲಮನೆಂತು ಪಡೆಯಲಕ್ಕುಂ (ಪಂಪಭಾ. ೦೫೭-೦೭); ಅಂಬಿನ ಮೞೆ³ಗಾಲವಾಯ್ತು ಕುರು ಭೂಮಿಗೆ ಭೀಮನದೇಂ ಪ್ರತಾಪಿಯೋ (ಗಂಪಶಾ. ೦೨-೬೭); ಮೞೆ³ಗಾಲಂ ಬರೆಯುಂ ಪರ್ವಟುವಿನೊಳಂ ಯಕ್ಷವಿಕ್ರಿಯಾಜನಿತಮದೇಂ ಪೊೞಲಾ ದುದೊ ರಘುರಾಮನ . . . ಪುಣ್ಯೋದಯದಿಂ (ರಾಮಾಶ್ವ. ೭-೦೩೦). **ಮಳೆಗಾಲ** : ಬೆಳೆವುದು ಬೆಳ್ದಂದಡೆ ಬಳಿಕುಳಿದೆಡೆಯುಂ ಪೊಗಳವೇಡ ಮಳೆಗಾಲದೊಳಾಗಳು ಮುಳಿಯದು ಬೆಟ್ಟದ ಸರಿವಳೆಯದ × × × ದುವಿಲ್ಲ ಪಸವಿನಾಡೊಳ್ (ಎಕ. VIII, ಸಾಗರ. ೦೦೯-೪೯ 1042); ಕಳೆದು ಮಳೆಗಾಲ ವನು ಬಲಿಮುಖಬಲಸಹಿತ ಬಂದಿನಜನಾ ದಶಗಳವಿರೋಧಿಯು ಕಂಡು ಕದನೋದ್ಯೋಗಮನನಾದ (ತೊರರಾ. ೪-೬ ಸೂಚನೆ) ; ಭರಿತಕಬರೀಬರ್ಹಿ ಲೀಲೆಯಿಂ ಮಳೆಗಾಲದಿರವನೆಚ್ಚರಿಪರಸಿಯುಂ ಕಂಡು ರಾಮನ ಮನಶ್ಚಾತಕಂ ನಲಿದುದು (ಕೃಪಿಚಾ. ೦೬-೨೭). [ಮೞೆ³ + ಕಾಲ]

**ಮೞೆ³ನೀರ್**, ಮಳೆನೀರು (ನಾ). ಆಕಾಶದಿಂದ ಸುರಿಯುವ ಹನಿ ಹನಿಯಾದ ನೀರು ; ಮಳೆ : ನೆಲನಜಿ³ದೂಡುವ ಪೊೞೆ³ನೀರಲಂಪಿನಿಂ ಪವಕೆ ಪೊಯ್ದ ಮೞೆ³ನೀರೊಲವಿಂ ಪಲಗೆಯ್ಗಳ್ ಪೊಲಗಳೆನಲ್ ಮಲೆನಾಡಂ ಪೋಲ್ವ ನಾಡುಗಳ್ ಪೆಱವೊಳವೇ (ಶಬ್ದಾನು. ೩೨೭ ವ್ಯಾಖ್ಯಾ). **ಮಳೆನೀರು** : ಮಳೆ ನೀರು ಬಿಟ್ಟು, ಮಂಜಿನ ನೀರಿಗೆ ಕೆಯ್ಯೊಡ್ಡಿದ ಹಾಗೆ (ಗಾದೆ). [ಮೞೆ³ + ನೀರ್]

**ಮೞೆ³ವನಿ**, ಮಳೆವನಿ, ಮಳೆಹನಿ (ನಾ). ಮಳೆಯ ನೀರಿನ ತೊಟ್ಟು,—ಬಿಂದು : ನೀಲಾದ್ರಿಯ ಮೇಲಶಿಖರದಿಂ ಪಡಲಿಟ್ಟು ಸಿಡಿವ ಮೞೆ³ವನಿಗಳ

ಪೋಲ್ (ಉದ್ಭಟ. ೪-೬೪); ಮುಟಿಪನಿಯುಂ ಧರಾತಳದೊಳೊಂದೆರಡೆಂದೆಣಿಸಲ್ಕೆ ಶಕ್ಯಮುಂ ತಳೆದೊಡೆ ತಾಳಲಕ್ಕುಂ . . . ಜಿನೇಶಸದ್ಗುಣಾವಳಿಗಳನೆಯ್ದೆ ಪೇೞಲರಿದು (ಶಾಂತಿಪು. ೧-೩೩). ಮುಳಿವನಿ : ಕಱಿಕಱಿದ ತಮ್ಮ ಮುಳಿವನಿಗಳಿಂ ಶಶಿಕಾಂತದೊಱತೆವೊನಲ್ಜಱಿ ಪೆರ್ಗ್ಗಳಿಸೆ ನಾಚಿ ಬೆಳ್ಪಾದ ತೆಱದಿಂ ಮುಗಿಲ್ಗಳಿರ್ದ್ದೆಬೆಳ್ದಿಂಗಳೊಪ್ಪಿದುವು (ಕೈವಲ್ಯ. ೨೩.೩) : ಮುಳಿವನಿಗಳ ಖುರಪುಟದಲಿ ಮುಗಿಲಂಚನು ಸೀಳಿ ಆಗೊ ಮಿಂಚಿನ ದಾಳಿ (ನಲವು. ೭-೦೦). ಮುಳಿಹನಿ : ಮುಳಿಹನಿ ಬಿಟ್ಟರೂ ಮರದ ಹನಿ ಬಿಡಲಿಲ್ಲ (ಗಾದೆ).

[ಮುಟ್ + ಪನಿ]

**ಮುಟ್ಟಿಸು, ಮುಗ್ಗಿಸು, ಮುರ್ಗಿಸು, ಮುಳ್ಗಿಸು** (ಕ್ರಿ). ೧. ಕಳೆ; ನಿವಾರಿಸು ; ಹೋಗಲಾಡಿಸು : ನೀನೆನ್ನೀ ನಿಡುದೋಳ್ಗಳ ತೀಂಟಂ ಮುಟ್ಟಿಸ್ಸು ಪೆಯಪ್ಪೊಡಾನೊಲ್ಲದನೇ (ಪಂಪಭಾ. ೨-೮೦); ಪಣ್ಪಲದಿಂದಂ ನೆಗೆದ ನಿಜೋದರಕ್ಲೇಶಾನುಬಂ ಮುಟ್ಟಿಸಿದರ್ (ನೇಮಿಪು. ೦-೬೩); ದೋರ್ದಂಡಕಂಡೂಯನಮುಂ ಚಂಡಾಸಿಸಂಘಟ್ಟದಿನೊಗೆವುರಿಯಿಂ ಮುಟ್ಟಿಪೆಂ (ರಕಚ. ೩-೦೩೨). ೨. (ತಾಪ, ದುಃಖ ಮೊದಲಾದುವುಗಳನ್ನು) ಆರಿಸು ; ಶಾಂತಗೊಳಿಸು ; ಶಮನಗೊಳಿಸು : ಆರೊರ್ವರರಸಿಯುಟ್ಕೆಯುಂ ಮುಟ್ಟಿಸಿ ದುಃಖಮುಂ ಮುಱಿಯಿಸುವೊರವರ್ಗೊಸಗೆಯುಂ ಮಾಡುವೆಂ (ವಡ್ಡಾರಾ. ೦೦೬-೧೨) ; ತನ್ನೊಳ್ ಮದನಪರಿತಾಪಮುಂ ಕೋಪದೆ ಮುಟ್ಟಿಸೆ ಕಿಱಿದು ಸುಖಿದೆ ಮುಱಿದೊಱಗಿವನೋ (ಕಾದಂಪೂ. ೯೦೭); ವಿಳದುಶ್ಶಾಸನವಕ್ಷಸ್ಥಳೋಚ್ಛಲಿತ್ಕಲ್ಪರಕ್ತಜಲದಿಂ ಕೋಪಾನಳನಂ ಮುಟ್ಟಿ[ಪಾಠಾಂ. ನ್ನಿ]ಸದಿನ್ನುಂ ಗಳಗಳಿತಸಕೋಪನಿರ್ಪ ತೆಱದಿಂದಿರ್ದ್ದೆ (ಗದಾಯು. ೦-೩೭); ಅಳುರ್ವಂಗತಾಪಮುಂ ಮುಟ್ಟಿಸಲಾಱದೆವಿತಳವ. ಮಳಯಜಂ ಸೂಸುವಾಲಿನೀರ್ (ಪರ್ಶಪು. ೮-೯೭). ೩. ವಾಸಿಯಾಗುವಂತೆ ಮಾಡು ; ಗುಣಪಡಿಸು : ಲಾಂಗಲಿ ದೇಪಮುಂಬೆಸುರದಾಳಿಯೆಂಬಿವಂ ಕಟಿಯಿಂದಂ ಪೂಸಿದೊಡಂತದಾವೇಗಂ ಪೆರ್ಚಿದ ಕಿರ್ಚುಪೋಲುರಿವ ಊತಿಯುಂ ಮುಟ್ಟಿಸುಗುಂ (ಲೋಕೋಪಕ. ೯-೦೩೦). ೪. ಧ್ವಂಸ ಮಾಡು ; ನಾಶಗೊಳಿಸು : ಶ್ರೀಮದಾಹವಮಲ್ಲದೇವರ್ ಚೋರರಾರಿಮಾರಿ ಡಾಮರೋಪಸರ್ಗ್ಗಂಗಳ ಮುಟ್ಟಿಸಿ (ಸೌಇಇ. IX-i, ೭೭-೨ ; 992) ; ಅಭೀಳಕಾಳಿಯಂ ತವೆ ಕೊಂದೀ ಧರೆ ಮೆಚ್ಚೆ ಮುಟ್ಟಿಸುವೆನುಗ್ರಾಟೋಪಮಂ (ಪಂಪಕಂ. ೨೩೯-೨೨); ಸ್ವಕೀಯನಿಷ್ಠುರಭುಜಾಸ್ಫಾಲನದಿನೀ ಗೋಪಾಲಬಾಲಕರಂ ಮುಟ್ಟಿಸುವೆಂ (ಜಗಂ. ೭-೯ ವ). ೫. ಕೊಲ್ಲು : ಸಾಯಿಸು ; ಸಂಹಾರಮಾಡು : ಅರಸುತನಂಗೆಯ್ವುಳಿಪಿಂ ಧುರದೊಳ್ ಮಾಱಾಂತರೆಲ್ಲರುಂ ಮುಟ್ಟಿಪುದುಂ ದೊರೆಕೊಳ್ಗುಂ ಪಾತಕಂ (ಪಂಪಭಾ. ೦೦-೦೭೩). ೬. ಕೆಡವು ; ಬೀಳಿಸು : ಮಱಿಸಿಂಗಮುಂಗವಿಸಿಯುಂಡಲಿದಾನೆಯುಸಟ್ಟಿಪಂತೆವೋಲ್ ತನು ತನು ಸೋಂಕಿ ಮುಟ್ಟಿಸುಗುಮಿರ್ಬಡಿಮೂಡಿ ಬಲ್ಲಿಗಾಜರಂ . . . ಈ ಚಿಕದೇವಭೂವರಂ (ಚಿಕವಿ. ೪-೦೭೯). **ಮುಗ್ಗಿಸು** : ೧. ಜನಪಂ ಪೊಸ ಕದಳೀ ದ್ರಾಕ್ಷಾದಿಗಳಿಂದಾ ಕ್ಷುಧೆಯನು ಮುಗ್ಗಿಸಿ (ಜ್ಞಾನಚಂ. ೩-೯೭). ೨. ಮುಗ್ಗಿಸಲಿನ್ನಾರಾರ್ಪರೀ ಶೋಕಮುಂ (ಕಾದಂಪೂ. ೭೦೦) ; ಅಸುಹೃದುವರ್ಗಭೂಭುಜರ ತೇಜದ ದಳ್ಳುರಿಯಂ ಸಮಂತದೆ ಮುಗ್ಗಿಸೆ (ಎಕ. VII, ಶಿಕಾ. ೦೦೨-೯; 1162) ; ನನೆಯಿಂ ನೆಯ್ದಿಲಿನಾಲಿನೀರ್ದಳಿಪದಿಂ ಕಾಮಾಗ್ನಿಯಂ ಮುಗ್ಗಿಸಲ್ (ಲೀಲಾವ. ೨-೪); ಧರಣೀಗಣಿಕೆ ಯಶೌಘನ ವಿರಹದ ಪರಿತಾಪಮಂ ಯಶೋಧರನ ಯಶೋಪರಿಚಂದನಚರ್ಚೆಯಿಸುದ್ಧುರದಾನಾಸಾರಾರಸೇಕದಿಂ ಮುಗ್ಗಿಸಿದಳ್ (ಯಶೋಚ. ೨-೦೪). ೪. ಧರ್ಮಮೆ ಸಲೆ [ತಲೆ]ಗಾಗುಂ ಧರ್ಮಮೆ ಸಂಸಾರದುಃಖಮಂ ಮುಗ್ಗಿಸುಗುಂ (ಪರ್ಶಪು. ೩-೨೩) ; ನಿನ್ನ ಹೆಮ್ಮೆಯನ್ನು ಮುಗ್ಗಿಸುವ ನಿಮಿತ್ತದಿಂದ ನಾನು ಕಠಿಣವಾದ ಮಾತನಾಡಿದೆ (ಪಕಭಾ. ೨೭೭). ೬. ಎಕ್ಕೆಯ ನಿರ್ಪ ಪುಲ್ಲೆಗಳನಿಲ್ಲಿಯೆ ಮುಗ್ಗಿಸು (ಪಲವಂ. ೭೪); ಅಸುರರು ತುಡುಕಲು. . . ದೇಡಿ ಕೈಕಾಲಿಂದೆ ಹೊಡೆದುರ್ವಿಯೊಳು ಮುಗ್ಗಿಸಿದ (ಮೋಹಪತ. ೦೨-೩೭) ;

ಈ ಚಾಣೂರನತ್ಕಲ್ಪಬಲನು . . . ಶೀಘ್ರದಿಂದವನಂ ಮುಗ್ಗಿಸಿ ವಿಮಗಂ ನಿಮ್ಮ ಬಂಧುಜನಕಂ ಹರ್ಷವನ್ನುಂಟುಮಾಡು (ಕಗಸಿ. ೭೯ ವಿಷ್ಣುಪುರಾಣ). ೭. ಸೋಲಿಸು : ಆ ವರುಣನು ಹಗ್ಗದಿಂದಸುರನಾಯಕರಂ ಮುಗ್ಗಿಸಿ ದಶಶಿರನನು ಪಿಡಿತಹೆನೆಂದುಗ್ರದೆ ನಡೆತಂದನು (ಕಂಜಕ. ೬-೦೬೮); ಕೆಗ್ಗನಿಮ್ಮ ಕತ್ತಲೆಯೊಳೆಮ್ಮನು ಮುಗ್ಗಿಸಿದ ಫಲಕಿದೆ ಕೊ ಸಾವಿನ ಸುಗ್ಗಿ ನಿನಗೆ (ತೊರವೆರಾ. ೬-೪೯-೦೩); ಬರ್ಪನ . . . ಮದನಾಗಮದೊಳು ಮುಗ್ಗಿಸಿ ಹಣಗಳನುದಿರದೆಗೆ ದಳವನಿಂದ (ಕಂಪವಿ. ೨-೯೭). ೮. ಕಳೆದುಕೊಳ್ಳು ; ಹೋಗಲಾಡಿಸಿಕೊಳ್ಳು : ತಮ್ಮ ಸ್ವಾರ್ಥವನ್ನೂ ಅಹಂಕಾರವನ್ನೂ ಮುಗ್ಗಿಸಿ ಅವನಿಗೆ ಸುಖ ತಂದರು (ಬಂಕಿಪು. ೨೯೩). **ಮುರ್ಗಿಸು** : ೪. ಮಾರಿಡುವನೌರ್ವ್ವಜ್ವಾಲೆಯುಂ ಮುರ್ಗ್ಗಿಪಂ ತವಿಪಂ (ಎಕ. VIII, ಸೊರಬ. ೦೯೦-೨೬ ; 1198); ಸ್ವರ್ಗನಿಳಯರ್ಗಿಸುತ ಮುರ್ಗಿಸುವ ನರ್ಗಿನಿಂ ಸಾಗ್ರುಡೆಡೆ ನಿರ್ಗಮಿಸಿ (ಕವನಂ. ೩೨-೮). **ಮುಳ್ಗಿಸು** : ೧. ಮದಜಳದಿಂದೆ ಮುಳ್ಗಿಪುದು ಭೂರಜಮುಂ ಗಜರಾಜಿ (ರಾಜಶೇ. ೬-೦೭). ೨. ಮೂಜಗಕ್ಕಂ ಪಲಂ ತಾನೇ ಮಾತ್ಯಖ್ಯಾತೆಯಾಗಿರ್ಪಳ ಮನದಳಲಂ ಮುಳ್ಗಿಸಿರ್ದೊಳ್ಪವೆತ್ತಿರ್ದಾ ಮೈಮಾರಕ್ಷಿಸೆಮ್ಮಂ (ಬೀರಕ. ೦). ೯. (ವ್ರತ, ಉಪವಾಸ ಮುಂತಾದುವುಗಳಿಂದ) ಸೊರಗಿಸು ; ನವೆಯುವಂತೆ ಮಾಡು ; ಬಡವಾಗಿಸು : ಕಾಯಮಂ ನಂತು ಮುಳ್ಗಿಸಲೊಡರ್ಚುಗುಮಾ ಮುನಿಸಂಘಂ (ಕವಮಪ. ೩-೦೦೦).

[ಮುಟ್ಟು + –ಇಸ್ಸು]

**ಮುಟ್ಟು, ಮುಗ್ಗು[1], ಮುರ್ಗು, ಮುಳ್ಗು** (ಕ್ರಿ). ೧. ಕುಂದು ; ತಗ್ಗು ; ಕಡಮೆಯಾಗು : ತ್ರಿದಶಸ್ತ್ರೀಜನದೊಳಮೃತದೊಳಮುಣಂ ಮುಟ್ಟದುರಿವ ಮದನಾಗ್ನಿಯ ಕೊರ್ಬುದರಾಗ್ನಿಯ ಪೆರ್ಚಿಕೆ ಮುಟ್ಟಿದಪುದೇ ಲಲನೆಯರೊಳಶನದೊಳ್ ಮಾನವರಾ (ಅಂತ್ರಿ. ೯-೩೭); ಉಲಿವ ವಿಮಾನಕಿಂಕಿಣಿಯ ಮೆಲ್ಲುಲಿಗಳ್ ಕಿವಿಗೆಯ್ದಿ ಮುಟ್ಟದಗ್ಗಲಿಸೆ ಗೇಯರಸವಚ್ಚಱಿದಂತಿರೆ (ಶಾಂತಿಪು. ೪-೬೮); ಗರಟಿಗೆಯ ಜಾವದುಕ್ಕಡದಾಳಿ ಮುಟ್ಟಿ[ಪಾಠಾಂ. ಗ್ಗಿ]ದ ಪೊತ್ತು ಸೂಟಿಗ್ಗೆ ಕರುಮಾಡದ ಪಕ್ಕದೊಳಿರ್ದ ಪಟ್ಟದಾನೆಯ ಬಿದಗಂ ಬಿನದಕೆ ಪಾಡುತ್ತಿರೆ (ಯಶೋಚ. ೨-೨೭). ೨. ಕಾಣದಾಗು ; ಮರೆಯಾಗು : ನಿತಾಂತಂ ಬಿಡುವಾಲಿನೀರ್ವನಿಯ ತಂದಲ್ ಗಾತ್ರಮಂ ತಾಗಿ ಕೊಟ್ಟನೆ ಮುಟ್ಟಿತ್ತು ಮಹೀಶ ಕಂತುವಿನ ದೇಹೋದ್ದಾಹಮಿನ್ನೆಂತುಟೋ (ಕುಸುಮಾ. ೦೦೦-೨೭). ೩. ಶಮನವಾಗು ; ಶಾಂತವಾಗು: ಸ್ಫುರದಾಶಾಜ್ವಳನಂ ದುರ್ಧರಸುತಪಸ್ತೀರ್ಥವಾರಿ ಪರಿಷೇಕದಿನೆಂತಿರೆ ಕಿಡುಗುಂ ಭೋಗಾಜ್ಯೋತ್ಕರಪಾತದಿನೆಂತುಮಂತದೇಂ ಮುಟ್ಟುಗುಮೋ (ಚಂದ್ರಪ್ರ. ೨-೯೩). ೪. ವಾಸಿಯಾಗು ; ಗುಣಹೊಂದು : ಶೂಲೆ ತೋಱಿತೆಂದಿರದೊಡಗೂಡಿ ಶುಂಠಿ ಲಶುನಂ ಗಜಪಿಪ್ಪಲಿ ಚವ್ಯ ಹಿಂಗು ಮುಂಗುರ . . . ಇಕ್ಕೆ ಮುಟ್ಟು[ಪಾಠಾಂ. ತಗ್ಗು]ಗುಂ (ಲೋಕೋಪಕ. ೯-೨೦೪). ೫. ನಾಶಹೊಂದು ; ಧ್ವಂಸವಾಗು ; ನಿರ್ನಾಮಗೊಳ್ಳು : ಅರಿಭೂಪಾಳದವಾನಳಂ ಹರಿಗ ನಿನ್ನುಗ್ರಾಸಿಧಾರಾಂಬುಶೀಕರದಿಂ ಮುಟ್ಟುಗೆ (ಪಂಪಭಾ. ೦೪-೩೭). ೬. ಸಾಯು ; ಮರಣಹೊಂದು : ಗತಿಸು : ಆ ರಣದಲ್ಲಿ ಮುಟ್ಟಿ[ಪಾಠಾಂ.ಗ್ಗಿ]ದೊಡೆ ಸಗ್ಗಮದಾಗದೆ ಪೇೞ್ (ಕುಸುಮಾ. ೦೦-೨೨); ಜಿನದಾಸಾಹ್ವಯನೊಳ್ ವಿವಾದಿಸಿ ಕರಂ ಸೋಲ್ತಲ್ಲಿ ತದ್ಭಂಗಚಿತ್ತನಮಂ ಮುಟ್ಟಿ ಲಲಾಯಮಾಗಿ ಜನಿಸಿರ್ಪ (ಶಾಂತೀಶ್ವ. ೩-೬೩). ೭. ಸುಟ್ಟುಹೋಗು; ದಹನವಾಗು: ವನದೊಳ್ ಕೂರದ ಪಾಂಡುರಾಜಸುತರುರಿ ಲಕ್ಷಾಗೃಹೋಗ್ರಾಗ್ನಿ[ಯಾ]ನನದೊಳ್ ಮುಟ್ಟಿದರ್ (ಪಂಪಭಾ. ೩-೩೨). ೮. ನಮಸ್ಕರಿಸು ; ಅಡ್ಡಬೀಳು. ೯. ಬೀಳು ; ಕೆಡೆ : "ಪೊಡವಡಿಕೆಯೊಳ್ ಪತನವಲ್ಲಿ ಮುಟ್ಟಿನಿಸುಗುಂ" (ಶಂಶಪ. ೦೩). ೧೦. ಮಂಕಾಗು ; ಬಣ್ಣಗೆಡು ; ನಿಸ್ತೇಜವಾಗು: ಪ್ರದಿದಿನಾದಿಮಿಥ್ಯಾತ್ವದೆ ಮುಟ್ಟಿದ ಮತಿಯದು ನಿನ್ನಿಂದಲ್ಲದೆ ಪಜ್ಜಳಿ

ಸುಗುಮೇ (ಚಂದ್ರಪ್ರ. ೭-೯) ; ಆ ವೈರಿಗಳಂಬು ದಿವ್ಯಪೊನೆ ಪೊಕ್ಕಂ ತುದ್ಯತ್ಕೌಕ್ಷೇಯಕೋಜ್ವಳಧಾರಾಜಳದಲ್ಲಿ ಮ[ಪಾಠಾಂ. ಮು]ಟ್ಟುವುದು ನಿಚ್ಚಂ ತದ್ಧರಾಧೀಶನಾ (ಪಾರ್ಶ್ವಪು. ೨-೬). **ಮುಗ್ಗು₁** : ೧. ಅಟ್ಟ ಪೆಡಿರುಲಿ ಮುಗ್ಗದು ಬೆಚ್ಚನೆ ಸುಯ್ದು ನೋವುಗಳ್ ತೊಲಗಿದುದಿಲ್ಲ (ಬಂಹಂ. ೯-೩೩); ಕ್ಷೌರಕ್ಷೌರಕು ಇದರ ಪಾಳಿಯುಪಟ್ಟಿನೆಲ್ಲೆಯು ಮುಗ್ಗಿತು (ಗಜೇಶ. ೬೪-೯). ೨. ನೀಸದೆತ್ತ ಮುಗ್ಗಿ[ಪಾಠಾಂ. ಳ್ಗಿ]ದೆ ಮುಧುವಿತ್ರ (ಗಂಳ. ೯-೭೯) : ಎಲ್ಲಿ ಮುಗ್ಗಿದೆ ನೃಪಶಿರೋಮಣಿಯೆಲ್ಲಿ ಹೋದುದು ನಿನ್ನ ಸಿರಿ (ತೀವಂತ. ೫-೦೨). ೪. ಕುಸುಂಬೆಯುತ್ಫುಲ್ಲಶಿಖಿ ಪ್ರಶಸ್ತತರುವುೂಲಮುನಿಂತು . . . ವಟಕಂಗಳನಾಗಿಸಿ ಗುಂಜೆಯುಂತಿರೊಂದಲ್ಲದೊಡೆರಬ್ಬಿಲಮನೀಕ್ಷಿಸಿ ಕೊಳ್ಳಲಿನಂಜು ಮುಗ್ಗುಗುಂ (ಬಮವ. ೦೨-೨೬). ೫. ಅರಿಭೂಪರ ತೇಜದ ದಳ್ಳುರಿ ಮುಗ್ಗುವುದೊಮ್ಮೆ ತನ್ನ ಪೊಸಗೊರ್ಳಲ್ (ಎಕ. VII. ಶಿಕಾಂ. ೦೦೦-೨೯ ; 1129); ಮಡಿಯೆ ಸಾರಥಿ ಮುಗ್ಗಿದವು ರಥ ನಡದು ಕಾದಿ ಮಹಾರಥರು ಮೆದೆಗೆಡೆದುದು (ಕುಮಾ.ಗ. ೦-೩೯); ತಳತಂತ್ರಪೊಡನೊಡನೆ ಮುಗ್ಗಿದುದು ಮುಗ್ಗಿದುದು ಬಹಳಕೋಲಾಹಲದೊಳು (ಕೃಬಿಶಾ. ೨೭-೭) ; ಪದುಳಕೆ ತೊಣೆ ಅವನಿರದಿರೆ ತಿರೆ ಪೋಪುದು ಮುಗ್ಗಿ (ಅಹಲ್ಯ. ೨೦-೦೬). ೬. ಪದದೊಳಗೆ ಮುಗ್ಗಿದಾ ಪ್ರಾಣಿಸಂತತಿ ಕೂಡೆ ಪದವಿಯುಂ ಪಡೆದು ಸಗ್ಗಕ್ಕೆ ನಡೆದುವು ಕೂಡೆ (೬೩ರ. ಹ. ೨೦೪-೦೩); ಬಾಳ್ಗಿತ್ತು ಬಸಿಜಿಸ ತೊಡೆ ನಡು ತೋಳ್ಗಂಟಲುರಂ ಕರಂಗಳ್ಗಂ ಪಜಿವಿನೆಗಂ ತೋಳ್ಗಡಿಯದಿಜಿಯೆ ಬಿಡೆ ಬಿಲ್ಲಾಳ್ಗಳ್ ಸರಿಗೆಪಜಿ ಮುಗ್ಗಿದರ್ ಕಡುಪಿಂದಂ (ಪಾರ್ಶ್ವಪು. ೩-೧೪೬) ; ಕಡುಗಲಿಗಳುಜಿ ಮುಗ್ಗಿದರು ತಗ್ಗಿದುದು ಯಮಲೋಕ (ಕುಮಾ.ಭೀ. ೪-೩೯). ೭. ಮದನಾಗ್ನಿಜ್ವಾಲೆಯಿಂ ಮುಗ್ಗಿದುದೊ ಬಹುಳಬಾಷ್ಪಾಂಬುಪೂರಂಗಳಿಂದಟ್ಟುದೊ . . . ಪೇಟಿಮೆಂಬಂದದೆ ಲಜ್ಜಾ ಮುಗ್ಗಿಗೇನುಂ ನುಡಿ ಪೊಜಮಡದಾಯ್ತು (ಕಾದಂಬ. ೨೯೧). ೮. ರಾಗದಿಂದಿದಿರ್ವಾಯ ಕೋಕನದನಾಭನೆ ಗೆತ್ತು ಪಾದಯುಗಕ್ಕೆ ಮುಗ್ಗಿದನಾ ಖಳಂ (ಧರ್ಮಾಮೃ. ೪-೨೦೯). ೯. ಇಕ್ಕೆಯಿಂ ದಿಂಕಿಕ್ಕಲಾಜಿದಲ್ಲಿಯೆ ಮುಗ್ಗುವ ಹುಲ್ಲೆವಿಂಡುಗಳಂ . . . ಅಗುರ್ಬುವೆತ್ತುವು (ವಳಕಂ. ೩೯೯ ವ); ಮುಗ್ಗಿದುದು ಕುದುರೆ ಸಾರಥಿ ಮಡಿದನಾ ರಥಂ ನೆಗ್ಗಿದುದು (ಕೃಬಿಶಾ. ೭-೪೬). ೧೦. ನಂದುವ ಚಿತಾಗ್ನಿ ... ಮುಗ್ಗುವ ಚಿತಾಗ್ನಿ ಕಟಿಲ್ದ ಚಿತಾಗ್ನಿಯಲ್ಲಿಗಲ್ಲಿಗೆ ಪುದಿದಿರ್ದುವಾ ಮಸಣದೊಳ್ (ಅರ್ಥನೇ. ೫-೨೩). ೧೧. ಹಿಮ್ಮೆಟ್ಟು ; ಹಿಂದೆಗೆ : ಅಗಿದು ಮುಗ್ಗಿತು ಚೂಣಿ ಬಲುಕಾಳೆಗವನೊಯ್ಯಾರಿಸುತ (ಕುಮಾ.ಭೀ. ೪-೦೦); ಒಗ್ಗೊಡೆದೋಡಿತು ಖಾನರ ಮೋಹರ ಮ [ಪಾಠಾಂ. ನು, ಮು]ಗ್ಗಿತು ಮಲೆತ ರಾವುತರ ಮೊಗ್ಗರ (ಕುರಾಶಾಂ. ೦೯-೦೫೦); ಇಂತಪ್ಪ ಟಕ್ಕು ಕಲಿತವ ಕೃಷಿಗೆ ಮುಗ್ಗುವೆಯ ಶೋಣಿತವ ಯಿಕ್ಕಬೇಕೀ ಭೂಮಿಗಂ ಎನ್ನ ನಿನ್ನ ದೇಹದ ಪಿಣಿಲ ನೋಡು (ತ್ರಿಕುಕ್ಷ. ೭-೦೦೯). ೧೨. ಉತ್ಸಾಹವಿಲ್ಲದಾಗು : ಏಂ ನಿಮ್ಮಯ ಚಿತ್ತವೃತ್ತಿಯಿತರವ್ಯಾಪಾರದೊಳ್ ಮುಗ್ಗಿತೋ (ಧನ್ಯಕ. ೯-೪). ೧೩. ಬಳಲು ; ದಣಿ : ಕಾಮದೊಳ್ಕಂದಿದೆಂ ತಾಮಸದೊಳೊಂದಿದೆಂ ಮೋಹದಿಂ ಮುಗ್ಗಿದೆಂ ದೇಹದಿಂ ತಗ್ಗಿದೆಂ (ಶಿಷ್ಯರ. ಹ. ೩೨೯-೦೨); ಸಾರಸಾಳಿ ಮುಗ್ಗಿದುದೆನಸುಂ (ಕಮವಸಾ. ೫-೩೩): ಆ ಪುರುಷ ಬೈದಗ್ಗಳೆದ ಕೋಪದಿಂದಾತ್ಮವೇದನೆಯೊಳಂ ಮ[ಪಾಠಾಂ. ಮು]ಗ್ಗುತ್ತಲಿ (ವಂಕಾರಾ. ೨-೩೬-೪೭). ೧೪. ಮುಂದುಡೆಯಾಗಿರ್ದು ; ಮುಂದುರಿಕೊಳ್ಳು : ತಾಯ ಗರ್ಭದೊಳಗೆ ತಗ್ಗಿ ಕುಗ್ಗಿ ಮುಗ್ಗುಲೊಳಗೆ ಮುಗ್ಗಿ ಹೇಯುವೆನ್ನದುದರರಸಮುನುಂಡು (ಹಂಪರ. ಹ. ೩೦೦-೨೦). ೧೫. ವೀರಮಂಡಿಯಲ್ಲಿ ಕುಳಿತುಕೊಳ್ಳು : ಕಾರಣಿಕಮೃಗಮುಮನೆಲ್ಲ ಕಂಡು ನೀಡಡಿಯಟ್ಟು ಕುಸಿದು ಕುಬುಜಿಸಿ ಕುಗ್ಗಿ ದಂಡೆನೋಟಂ ಶರಂಸಂಧಾನದೊಳು ಮುಗ್ಗಿ ಕಿವಿಗೆ ಬಲಗಯ್ಯ ಕೆಳನಾರಿಯುಂ ತರುತ್ತಮಿರೆ (ಕಣ್ಣರ. ದೇ. ೦೨೭-೨೪). P ಪ್ರಾಚೀನಕಾವ್ಯಗಳಲ್ಲಿ ಒಬ್ಬನೇ ಕವಿಯು 'ಮುಟ್ಟು' ಮತ್ತು 'ಮುಗ್ಗು' ಎಂಬ ಎರಡು ರೂಪಗಳನ್ನೂ ಉಪಯೋಗಿಸಿರುವುದನ್ನು ಮೇಲೆ ಕೊಟ್ಟಿರುವ ಪ್ರಯೋಗಗಳಲ್ಲಿ ಕಾಣಬಹುದು. ಒಬ್ಬನೇ ಕವಿ ಎರಡು ರೂಪಗಳನ್ನೂ ಉಪಯೋಗಿಸಿರುವನೇ ಎಂಬುದು ಪರಿಶೀಲನಾರ್ಹ. **ಮುರ್ಗು** : ೫. ತೀವಿದ ಭಂಡದಿನೊಪ್ಪುವ ನಾವೆ ಮರುದ್ಘಾತದಿಂದ ಮುರ್ಗಿದುದಾಗಳ್ (ಬಂಹಂ. ೪-೦೫). ೧೦. ತೆರಳ್ದೋಡಿ ಪೋದಂ ಮರುಭೂಪಂ ಮಾಳವಂ ಮುಗ್ಗಿರ್ದನತಿಭಯದಿಂ (ಸೌಇಇ. IX–i ೦೦೯-೦೯; 1057). ೧೩. ಪೊಯ್ಕೆ ಪೊರಳ್ಚಿ ತುತ್ತಿ . . . ಕೊಳ್ಗುದಿ ಮಳ್ಗುದಿಗೊಂಡು ಮುರ್ಗು [ಪಾಠಾಂ. ಗ್ಗು]ವರ್ (ಅನಂಪು. ೯-೪೦). **ಮುಳ್ಗು** : ೫. ಅಯ್ಯೋ ಸಂಸಾರ ಸಂಗಕ್ಕಜಿಯದೆಜಿಗಿದೆಂ ಮುಳ್ಗಿದೆಂ (ರಕ್ಷಾಶ. ೨೫). ೮. ರಾಜಶೇಖರಂ . . . ಆ ಸತ್ಯೇಂದ್ರಚೋಳೇಂದ್ರಸತ್ವವಪದ್ಮಕ್ಕೆ ಮರಂದಮಂ ಪಡೆದು ಮೌಲಿದ್ಯೋತಿಯಿಂ ಮ[ಪಾಠಾಂ. ಮೊ]ಳ್ಗಿದಂ (ರಾಜಶೇ. ೪-೦೦೩).

ಮುಟ್ಟಿ ಪೋಗು, ಮುಗ್ಗಿ ಹೋಗು, ಮುರ್ಗಿ ಪೋಗು = ೧. ಸಾಯು ; ಅಳಿ ; ಗತಿಸು : ಜನಿತ ನಿದಾಘದುಗ್ರತರತಾಪದಳುರ್ಕೆಯೊಳೆಯ್ದೆ . . . ತವೆ ಮುಟ್ಟಿ ಪೋದ ಶಫರಾದಿ ಪಯಸ್ಥರ ಜಂತುಜಾಲ ಜೀವನದೊಡನಾಗಳಂತೆ ಗತಜೀವನಮಾಯ್ತು ಸರೋವರೋತ್ಕರಂ (ಕುಸುಮಾ. ೯-೦೩೦); ಇದು . . . ಬ್ಯಾಳಕಕೇಸಿಮಯ್ಯ ವಿಜಯಪ್ರಾರಂಭದೊಳ್ಮುರ್ಗಿಪೋದದಟಕ್ಷ್ಮಾಪನಿಕಾಯಪುಚ್ಛಕಟಮುಂ (ಎಕ. VII, ಶಿಕಾಂ. ೯೨-೨೪; 1168). ೨. ಅಡಗು : ಆರಿಹೋಗು : ದೇವ ಮನದ ವಿಕಾರವೆಂಬ ಚಂಡಮಾರುತ ಹೊಕ್ಕು ಸತ್ಯ . . . ಸತ್ಕೃತ್ಯವೆಂಬ ದೀಪಗಳು ಮುಗ್ಗಿ ಹೋದವು (ಜ್ಯೋತಿಶಾಂ. ೦೫).

[ದೇ.॥ ತಮಿ. ಮುಟಿಕು, ಮುಟಿಕ್ಕು, ಮುಜಿಙ್ಕು, ಮುಕ್ಕು; ಮಲ. ಮುಙ್ಙುಕ; ತುಳು. ಮುರ್ಗ್; ತೆಲು. ಮುಗ್ಗು, ಮುಕ್ಕು, ಮ್ರುಕ್ಕು, ಮ್ರುಗ್ಗು; ಮಲ್ತೊ. ಮುರ್ಗ್ರೆ]

**ಮುಟ್ಟಿವುರ, ಮುಟ್ಟಿವೂರ** (ನಾ). ಒಂದು ಸ್ಥಳದ ಹೆಸರು : ಮುಟ್ಟಿವುರಾ ಊರಟಿವಿನೊಳ್ ಇಜಿದು ಸತ್ತು ಸ್ವರ್ಗಾಲಯಕೇಜಿದೊರ್ (ಎಇ. VI, ೦೭೦-೩; 765). **ಮುಟ್ಟಿವೂರ** : ಮುಟ್ಟಿವೂರದಪೆಮ್ಮಾಡಿಗಾವುಣ್ಡನುಂ (ಎಇ. VIII. ೫೯-೦೫; 1000). [? + ಪುರ₂]

**ಮುಟ್ಟಿವೂರ** 'ಮುಟ್ಟಿವುರ' ನೋ.

**ಮುಟ್ಟಿ₁, ಮತ್ತಿ₁, ಮಳ್ತಿ** (ನಾ). ಒಂದು ಬಗೆಯ ಮರ: ಅರ್ಜುನ ವೃಕ್ಷ : "ಮುಜ್ಟಿಯೆಂದರ್ಜುನಂ" (ಕಕಶಾ. ೫೦-೭೫) ; ಶ್ರೀ ಪುರುಷ ನಾಯಿಗಗೆ ಪಟ್ಟಂಗಟ್ಟಿ ಕೊಟ್ಟ ಕಟನಿಲಿ ಮುಟ್ಟಿಯೆನ್ತೆಂಕ ಬಿಟ್ಟಂ ಮೂವತ್ತುಗುಳ ಅಯ್ಗುಳ ಪಾಟಿಂ (ಎಕ. IX, ಹೊಸಕೋ. ೮೭-೯ ; ಸು. 720) ; ಬೇರ್ಕೊಟಿದ ಮುಟ್ಟಿಯುಂ ನೀಂ ಕಿಟ್ಟಿ . . . ಮುಂದುಗಟ್ಟಿಯನಿಟ್ಟು ಕೆಡಪಿದ್ಯೆ ಬಲ್ಲಿದನ್ಯೆ (ಜಗಾಂ. ೦೭-೪೩); ಮುಟ್ಟಿಯ ಮುಟ್ಟಿಗದರಳಿಯ ಸವುದೆಗಳನಳತೆಯೊಳ್ ಕೊಯ್ದುರ್ಪೆನಾರಿಂ ತಲೆಪೊಜಿಗಟ್ಟಿ ತರ್ಪ ಮಟುಗಳಿಂದೆಯುಂ . . . ಪುಣ್ಯಾಶ್ರಮಂ ಮನೋಹರಮಾಯ್ತು (ರಾಮಾಶ್ವ. ೪೩-೦೫). **ಮತ್ತಿ₁** : "ಅರ್ಜುನಃ, ಕಕುಭಃ — ಈ ೨ ಮತ್ತಿ" (ಹಲಾಯು. ೩೨-೪೨); ಕರ್ಪೂರತರುಮಾತಂಗಳೊಳ್ಮತ್ತಿ . . . ಚಂಪೊಂಗಳೊಳ್ನೆರೆದಿರ್ಪಂತಿರೆ ಕರ್ಬುನಂ ಸಕಲಭೂಪಾಲೀಶರೊಳ್ಕೇಲಿಗಳ್ ಇರ್ಪಂತಿರ್ದು (ಧರ್ಮಾಮೃ. ೭-೨೨೦) ; ಮತ್ತಿಯೋ ಹೇಳೆನ್ನ ದುಃಖಿಕೆ ಮತ್ತೆ ಪರಿಹರವಾವುದೋ (ಜಿಸತು. ೪೫-೩೯) ; ಮತ್ತಿಯ ಮರನಲೂ ನಟ್ಟ ವಾಮನ ಮುದ್ರೆಯ ಕಲ್ಲು ೧ (ಎಕ. VIII, ತೀರ್ಥಹ. ೦೯೦-೪೨ ; 1407); ಮತ್ತಿ ಮೊಳಗರನೆಲ್ಲಿ . . . ಕರ್ಣಿಕಾರದ ಮೊತ್ತವಿದೆ ನೋಡಬಲೆ (ಕೊರಗಾ. ೩-೦-೨೭). **ಮಳ್ತಿ** : ಮುಳ್ತುಗ ಮಳ್ತಿ ಕಜ್ಜುರ ಕಕ್ಕೆ . . . ಬೆಳೆದಿರಲಾ

ಬಿಂಜಂ ಘೀಕರತರಮಾಯ್ತು (ಜಯಕಾ. ೧೩-೨೪); ಮೞ್ತಿ ವನಸಂಪಗೆ ಸಂಪಗೆ ಬಿಕ್ಕೆ ಕಕ್ಕೆ (ಶ್ರೀಪುಷಾ. ೦-೪೭).

[ದೇ.॥ ತಮಿ. ಮಲ. ಮರುತು ; ತುಳು. ಮತ್ತಿ ; ತೆಲು. ಮದ್ದಿ : ಕೋಲಾ. ನಾಯ್ಕಿ. ಮದ್ದಿ; ಗೊಂಡಿ. ಕುೞ. ಮರ್ದೀ]

**ಮೞ್ತಿ₂**, ಮತ್ತಿ₂ (ನಾ). ಹುಟ್ಟಿನಿಂದಲೇ ಮೈಮೇಲಿರುವ ಕಪ್ಪು, ಬಿಳಿ, ಕೆಂಪು ಮುಂತಾದ ಗುರುತು, – ಮಚ್ಚೆ : ಸರವುಲಿ ಕಾರೆಳ್ಮೞ್ತಿ . . . ಬಲದೊಳ್ ಪುರುಷಂಗೆಡದೊಳ್ ಲಲನೆಗೆ ಸಮನಿಸಿದೊಡಿಷ್ಟ ಫಲಮಂ ಕುಡುಗುಂ (ಲೋಕೋಪ. ೧೧-೬೪). **ಮತ್ತಿ₂** : ನಿನ್ನ ಮೊಲೆಗೆಲದೊಳ್ ಚಿನ್ನದಗಲದ ಪೊನ್ನ ಬಣ್ಣದ ಮತ್ತಿ ಮತ್ತೆನಿಸದೆ ಮೂಡಿದುದು (ಅರ್ಧನೇ. ೨-೩ ವ); ಪಿಮ್ಮಡಿ ಬಳಿಯ ಮತ್ತಿಯಿದ್ದರೆ ಸೌಭಾಗ್ಯವಂತನಾಗುವನು (ಸೌಗಂಧಿ. ೭೪೯-೧೪); ಹೆಗಲಿನ ಬಳಿಯಲ್ಲಿ ಗುಂಡಗಿರುವ ಕರಿಯ ಮತ್ತಿಯೊಂದಿತ್ತು (ಕೃಗಂಬ. ೦೦೦). 'ಮಚ್ಚೆ₁' ಪರಾ.

[ದೇ.॥ ಕೋತ. ಮಾಶ್; ತೊದ. ಮಶ್ತ್]

**ಮೞ್ತಿಕಾಲ್?** (ನಾ). ಒಂದು ಕಾಲುವೆಯ ಹೆಸರು ; ಮತ್ತಿ ಮರಗಳ ಬಳಿಯ ಕಾಲುವೆ (?) : ಅವರ್ಕ್ಕೆಯಾತುಕೂರೊಳ್ ಚಲ್ಲೇಶ್ವರದ ಮುನ್ದೆ ಕಲ್ಲನ್ನಡಿಸಿ ಪಿರಿಯ ಕೆಱೆಯ ಕೆಟಗೆ ಮೞ್ತಿಕಾಲಜ್ಗ ಳೊಳಕ್ಕರ್ಣನ್ದುಗ ಮಣ್ಣ ಕೊಟ್ಟರ್ (ಎಕ. VII (R), ಮದ್ದೂರು. ೪೨-೦೨; 950). [ ಮೞ್ತಿ₁ ? + ಕಾಲ್₂ ]

**ಮೞ್ತೂರ್** 'ಮೞ್ದೂರ್' ನೋ.

**ಮೞ್ದಿ** (ನಾ). ಒಬ್ಬಾತನ ಹೆಸರು : ಮೞ್ದಿಂ ತನ್ನ ಭಾಗಮಂ ಕುಡೆ (ಎಇ. VII, ೨೦೩-೦೩; 874). 'ಮೞ್ದಿಯ್ಯ' ಪರಾ. [ ? ]

**ಮೞ್ದಿಯ್ಯ** (ನಾ). ಒಬ್ಬಾತನ ಹೆಸರು : × × × ಲ್ಲಹ ಜೋಟಿನ ಮೇಲಟ್ಟಿಯ್ಯನ ಮಕ್ಕಳ್ ಮೞ್ದಿಯ್ಯನು ಬೆಸೆಗೆಯ್ದೊ (ಎಕ. IX, ಹೊಸಕೋ. ೮೩-೩; ಸು. 750). [ ಮೞ್ದಿ + ಅಯ್ಯ₆₁ ]

**ಮೞ್ದೂರ್**, ಮದ್ದೂರು, ಮದರ್ೂರ್, ಮೞ್ತೂರ್ (ನಾ). ಒಂದು ಊರಿನ ಹೆಸರು ; ಕರ್ನಾಟಕದಲ್ಲಿ ಈ ಹೆಸರಿನ ಅನೇಕ ಊರುಗಳಿವೆ : ಶ್ರಾವಣಮಾಸದ ಸುದ್ಧದಶಮಿಸೋಮವಾರದನ್ದು ಮೞ್ದೂರ ಸಾಯಿರಬೞ್ಬೞ್ಬರುಂ ಪೊಲ್ಲಯ್ಯನ ಮಾಡಿಸಿದ ದೇಗುಲಕ್ಕೆ ಕೊಟ್ಟ ಮಣ್ (ಎಕ. IV (R), ಎಳಂದೂ. ೪೦-೨; 982). **ಮದ್ದೂರು** : ಮದ್ದೂರ ಸುಭಟರು ಮಾರ್ಗವ ಕಟ್ಟಿಕೊಂಡುದ್ಧತವಿಳರ ಮಾರ್ಬಲವ ಹೊದ್ದಯಿಬಿದು (ಕಂಪಂ. ೦೩-೩೭). **ಮದರ್ೂರ್** : ಕೆಸುಗೊಳ ಮೊಡೆಯ ಮಹಾಜನಕ್ಕೆ ಪೆರ್ವ್ವಟ್ಟಿಯೂರುಂ ಮದರ್ೂರುಮಂ ಬ್ರಹ್ಮದೇಯಂ ಪೊಯ್ದುಮ್ (ಎಕ. III (R), ಹೆಗ್ಗಡ. ೪೦-೨೦; ಸು. 750). **ಮೞ್ತೂರ್** : ಪಾರ್ವಲ್ಮಣ್ಣರಾರಿದಮರ್ೞ್ತೂರರೊ ದಾಳ್ವಯಿಗ ಪೆರ್ವಾಣರ್ಷಾ × × × ದರ್ಕವಿಲವಾಣಿಗರ್ಮೊರಿದರೀ ಸಿಲತೊರ್ಲೆಂಟೆಯ ತಿನವಕಟ್ಟಿ × × × (ಎಕ. III (R), ಹೆಗ್ಗಡ. ೦೦೨-೩; ಸು. ೯ನೆಯ ಶತ).

[ ? + ಊರ್ ]

**ಮಾ₁** (ನಾ). ಆನೆ : ಹಸ್ತಿ : 'ಮಾವಟಿಗ' ಪರಾ. [ದೇ.॥ ತಮಿ. ಮಾ]

**ಮಾ₂** (ನಾ). ಕೊಂಡಾಟದ ಅಥವಾ ಆಶ್ಚರ್ಯಸೂಚಕವಾದ ಒಂದು ಮಾತು : "ಅರರೇ . . . ಭಲರೇ ಲೇಸು ಜಾಗು ಮಾ ಧಣು ಧಿರುರೇ ಪುರೆಯೆನೆ ಕೊಂಡಾಟಂ" (ವಿಕ್ರಾಪ. ೩೩).

**ಮಾಮಾ₁** (ದ್ವಿರುಕ್ತಿ): ತನುವನಿತ್ತ ಮಹಾತ್ಮ ಬಸವಂಗನಿತಜೀವಳು ಪ್ರಭು ಮೆಚ್ಚಿ ಮಾಮಾಯೆನುತ . . . ಕೀರ್ತಿಸಲು (ಬಸಪು. ೯-೦೭); ಮಾಮಾ ರಾಮ ರಣಗಲಿ ಭೀಮ ಭಾಪು (ತೊರರಾ. ೬-೨೯-೦೯).

[< ಅಮಮ. / ತಮಿ. ಮಲ. ತೆಲು. ಮಾ]

**ಮಾ₃** 'ಮಾಂ' ನೋ.

**ಮಾ₄** (ಗು). ೧. ದೊಡ್ಡ ; ಹಿರಿಯ : 'ಮಾಗಡಲು' ಪರಾ. ೨. ಶ್ರೇಷ್ಠವಾದ ; ಮಹತ್ತಾದ : ಸುಮನಿಸುವುದೆಲ್ಲ ಶಬ್ದಕ್ಕೆ ವಿಕಲ್ಪದೆ ದೀರ್ಘವಿಧಿ ಮಹಚ್ಛಬ್ದಕ್ಕುದ್ಭವಿಕುಂ ಮಾದೇಶಂ ದೋಷವಿಲ್ಲ ಸಂಸ್ಕೃತಪದಂ ಪರಕ್ಕೊದವಲೊಡಂ (ಕಮದ. ೧೭೩). 'ಮಾತಾಯಿ' ಪರಾ.

**ಮಾಮಾ₂** (ದ್ವಿರುಕ್ತಿ) : ಮಾಮಾ ಕರ್ಮವ ಮಾಡಿದ ಮನುಜಗೆ ಕಾಣಿಸೆನುವಿಯೇನು ನೀ ಮಾಡಿಸಿದರೆ ಮಾಡಿದೆನಲ್ಲದೆ ನನಗಿಲ್ಲಿತ್ತೇನು ? (ಪವಲ್ಲಿ. ೩೦-೦೦). [ < ಮಹಾ ]

**ಮಾ₅** (ನಾ). ೧. ತಾಯಿ ; ಜನನಿ. ೨. ಸಂಪತ್ತಿನ ಅಧಿದೇವತೆ ; ಲಕ್ಷ್ಮಿ : "ಲಕ್ಷ್ಮೀಃ, ಶ್ರೀಃ . . . ಮಾ, ಇಂದಿರಾ . . . ಈ ೯ ಲಕ್ಷ್ಮಿಯ ಪೆಸರು" (ಹಲಾಯು. ೬-೩೨). 'ಮಾಕುವರ' ಪರಾ. [ಸಂ.]

**ಮಾ₆** (ಅ). ಬೇಡವೆಂಬುದನ್ನು ಸೂಚಿಸುವ ಒಂದು ಅವ್ಯಯ : "ಮಾ — ಬೇಡೆಂಬವ್ಯಯಂ" (ಕಾಶಕ. ೦೨೮) ; ಮುನಿಮಯ್ಯ ಜವಂಗಂ ಮಾಯೆನಲಮ್ಮರಿಲ್ಲ (ಅಜಿತ. ೨-೩೭) ; ನಿರ್ದೋಷನಿವನೆಂಬ ಮೂಕ ಸಾಕ್ಷಿಯೊ ಎನಲು ನೆತ್ತರೊಡಮೂಡಿದೊಡಮವನೊಂದು ಮಾತನೆತ್ತಿಲ್ಲ ! ಮಾ ಎಂದಿಲ್ಲ ! (ಗೊಲ್ಗೊಥಾ. ೯-೨೩೦). [ಸಂ.]

**ಮಾಂ**, ಮಾ₃ (ಸಪೂರೂ). 'ಮಾವು' ಎಂಬ ನಾಮಪದಕ್ಕೆ ಸಮಾಸಗಳಲ್ಲಿ ಬರುವ ಆದೇಶರೂಪ : 'ಮಾಂಗಾಯ್', 'ಮಾಂದಳಿರ್' ಪರಾ. **ಮಾ₃** : 'ಮಾಮರ' ಪರಾ.

**ಮಾಂಕರಣೆ** (ನಾ). ತಿರಸ್ಕಾರ ಮಾಡುವಿಕೆ ; ಉಪೇಕ್ಷೆ ; ಅವಜ್ಞೆ : ಅಂಕಂಗಾಱನ ಗಂಡುತನಂ ಕೂರಿತೆ ತುಮುಲಯುದ್ಧದೊಳ್ ಪಟುಭಟರಂ ನೂಂಕುವ ಸಮರಂಗಾಱನ ಮಾಂಕರಣೆಯೆ ಗಂಡುತನದ ತಿರುಳೆನೆ ಮೇಟ್ಟುಂ (ಶಬ್ದಾಮ. ೩೮೪ ವ್ಯಾಖ್ಯಾ). [< ಮಾ₆ + < ಕರಣ]

**ಮಾಂಕರಿಸು**, ಮಾಕರಿಸು (ಕ್ರಿ). ೧. ತಿರಸ್ಕರಿಸು ; ಅವಹೇಳನ ಮಾಡು ; ಕಡೆಗಣಿಸು : "ಮಾಂಕರಿಸು (ಮಾಕರಿಸು) – ಅವಜ್ಞಾಯಾಂ (ಅಲ್ಲಗಳೆ)" (ಕಮರಾ) ; ಸಿರಿಸದ ಬಾಸಿಗಮಂ ಮಾಂಕರಿಸುವ ನಳಿತೋಳ ಪಿಂಡುಗಂಕಣದ ಸರಂ ಮೊರೆವಳಿಗಳ ಸರಮಂ ಚಪ್ಪರಿಸುವಿನಂ ಚೆನ್ನೆ ಪೊನ್ನೆಯರಲಂ ಕೊಯ್ದಳ್ (ಆದಿಪು. ೦೦-೦೦೨ ಅಡಿಶಬ್ದ) ; ಸಿದ್ಧವಿದ್ಯಾಧರ ದಿವಿಜಕುಮಾರರ್ಕಳಂ ಚೆಲ್ವಿನಿಂ ಮಾಂಕರಿಸುತ್ತುಂ ಬಂದನಾಸಾದಿತನಿರುಪಮ ಶೃಂಗಾರಸಾರಂ ಕುಮಾರಂ (ಚಂದ್ರಪು. ೬-೭೦) : ಬಾಳೆಗಂಬಮಂ ಮಾಂಕರಿಸುತ್ತೆ ತೋರ್ಪ ತೊಡೆ ಮೆಲ್ಲಡಿ ರಂಜಿಕುಮಾ ಕುಮಾರನಾ (ರಾಜಶೇ. ೯-೪೭). **ಮಾಕರಿಸು** : ೧. ಸೊರ್ಕ್ಕಿ ಮಾಕರಿಸುತ್ತಿರ್ಪ್ಪ ಮದಾಂಧನಪ್ಪ ಖಳನಾಯುದ್ದೀಪಮಂ ತಂನ ಚಾಮರದಿಂ ತೊಟ್ಟಗೆ ನಂದೆ ಬೀಸಿ ಕಳೆವಳು (ಶಾಸಕ. ೩೩-೩೦ ; 1178) ; ಹೀಗೆ ಗಂಡ ಹೆಂಡಿರಿಬ್ಬರೂ ಒಬ್ಬರನ್ನು ಒಬ್ಬರು ಮಾಕರಿಸಿ ಮಾತನಾಡುತಾ ಇರುವಾಗ (ಮುಕುಂಗ. ೦೩೦) ; ಲೋಕವ ನಚ್ಚದ ಮುನಿಯಿವನೆಂದು ಮಾಕರಿಸದಿರಲೆ ದಾರಿಗ ನೊಂದು (ನಕ್ಕ. ೭೩-೦೦). ೨. ಅಲ್ಲವೆಂದು ಹೇಳು : ಆಕಾರ ನಿರಾಕಾರ ಸ್ವಮತ ತಾನಾಗಿ ಮಾಕರಿಸುವನಲ್ಲ ಮನದಿಚ್ಛೆಗೆ (ಕೂಷ್ಮಸಂ. ೦೦೩-೩). ೩. ಉದ್ಧಟತನದಿಂದ ವರ್ತಿಸು ; ಗರ್ವಿಸು ; ಬೀಗು : ಕೂರಸಿಯಿಂದೆ ಕೊಂಕಿ ರ್ಝುಂಕಿಸುವ ಕುಮಾರಿ ಮಾಂಕರಿಪ ಪೊಸ ಹೂಂಕೃತಿಗೆಯ್ವ ಭೈರವಂ (ಪಾರ್ಶ್ವಪು. ೦೩-೦೦೩). [ಮಾಂಕರಣೆ + – ಇಸು₃]

**ಮಾಂಕೊಳ್** (ಕ್ರಿ). ೧. ಬೇಡವೆನ್ನು : ತಡೆ : ಸುರತಸಂಭ್ರಮದ ಲೀಲಾವಿನೋದದ ಬಗೆಯ ಹೇಳಲಂಜುವೆನಯ್ಯ ಹೇಳುವೆ ನೀನು ಮಾಂಕೊಳದಿರಯ್ಯ (ಭಸವ. ೩೩-೬೨). ೨. ಎದುರಿಸು : ಅಂಕುಸ ನೋಡದಿನ್ನೊರೆಮೋಱೆಯೊಳಿಪ್ಪ ಮಾಂಕೊಂಡು ಜಯಿಸೆಂದಳವಳು ಕೊಂಕುಮೋಱೆಯ ಪೆಣ್ಣೊಳಾನು ನುಡಿವನಲ್ಲ ಕುಂಕುಮವರ್ಣೆ ಕೇಳೆಂದ (ಭರತ. ೦೪-೦೦೭). [< ಮಾ₆ + ಕೊಳ್₁]

**ಮಾಂಗದಿರ್** (ನಾ). ಮಾವಿನ ಚಿಗುರು : ಮಾಂಗದಿರ್, ಮಾಂಗೊನರ್, ಮಾಂಜೆಳೆ, ಮಾಂಜೊಂಪಂ (ಶಬ್ದಾನು. ೩೯೬ ವ್ಯಾಖ್ಯಾ).
[ಮಾಂ (< ಮಾವು) + ಕದಿರ್$_1$]

**ಮಾಂಗಲಿಕ, ಮಾಂಗಳಿಕ** (ಗು). ೧. ಮಂಗಳವನ್ನು ಸೂಚಿಸುವ ; ಶುಭಕರವಾದ : ಮಾಂಗಲಿಕಕರ್ಮಾಭಿಯೋಗಕ್ಕುಲಾಂಗನಾರತಿಯಾತ್ಮ ಚಿಂತೆ ಪರಾಂಗನಾಪ್ರೈಮುಖ್ಯವಿವು ಸದ್ಧರ್ಮಗತಿ (ಕುವ್ಯಾಕ. ೦೩-೦೩). **ಮಾಂಗಳಿಕ :** (ನಾ). ೨. ಮಂಗಳಕರವಾದ ಶ್ಲೋಕ,-ಗೀತೆ : ಪುಣ್ಯಪಾಠಕರ ಮಾಂಗಳಿಕಪಠನಪಟುರವಂಬೆರಸು . . . ವಧೂವರರ್ ನಡೆತಂದರ್ (ಅಪಂಪು: ೬-೩೩ ವ) ; ಪಾಡುವ ಮಾಂಗಳಿಕದ ಆಡುವ ನರ್ತನದ . . . ಸೂಟ್ಸಿಡೆಪ ಕಹಳೆಗಳ ಕೋಳಾಹಳಮೆಸೆದು (ಅನಂಪು. ೯-೩೯ ವ). [ಸಂ.]

**ಮಾಂಗಲ್ಯ, ಮಾಂಗಳ್ಯ** (ಗು). ೧. ಮಂಗಳಕರವಾದ ; ಶ್ರೇಯಸ್ಕರವಾದ. (ನಾ). ೨. ಮಂಗಳಕರವಾದುದು; ಶುಭ; ಒಳಿತು: ಸಾಧುಪದಂಗಳ್ ಸಮಗೀಗೆ ಸಾಧುಪದಮುಂ ಕೈವಲ್ಯಮಾಂಗಲ್ಯಮುಂ (ಶಂಕಾಪು. ೧-೩) : ರಾಮನಸ್ನಲ್ಲು, ಕೇಳ್ ಕೈಕೆ, ನೀನಡವಿಗಟ್ಟುತಿಹೆ ನಿನ್ನ ಮಾಂಗಲ್ಯಮಂ (ಶ್ರೀರಾಮಪಾ. ೭೧-೯೩೮). ೩. ಮಂಗಳಕರವಾದ ಕೆಲಸ ; ಶುಭಕಾರ್ಯ : ಅರಸಿಯರು ದೂರ್ವಾಕ್ಷತೆಯ ದಧಿವಿರಚಿತದ ಮಾಂಗಲ್ಯವನು ವಿಸ್ತರಿಸೆ ಬಹುವಿಧವಾದ್ಯದಲಿ ಹೊಳಿವಂಟರರಮನೆಯ (ಕುವ್ಯಾಸ. ೩-೦೩). ೪. ವಿವಾಹಸಮಯದಲ್ಲಿ ವರನು ವಧುವಿನ ಕೊರಳಿಗೆ ಕಟ್ಟುವ ಮಂಗಳಕರವಾದ ಚಿನ್ನದ ಬೊಟ್ಟು ; ತಾಳಿ : ಅವರು ಮಾಂಗಲ್ಯವನ್ನು ಮಾತ್ರ ಕಟ್ಟಿರಲಿಲ್ಲ (ಜೂರಸ. ೨೬೩) : ರಾಧಾಬಾಯಿ ಹಾರವನ್ನು ಹರಿದು ಅವನ ಮುಖದ ಮೇಲೆ ಎಸೆದಳು, ಕರಿಮಣಿ ಹರಿದು ಮಾಂಗಲ್ಯ ಕೆಳಗೆ ಬಿತ್ತು ! (ಹೇಮಾಕು. ೩೩). **ಮಾಂಗಳ್ಯ :** ೧. ದಿಗ್ಭಾಗಂ ಮಾಂಗಳ್ಯತೂರ್ಯಸ್ವನದೊಳ್ ಬಧಿರೀಭೂತಮಪ್ಪನ್ನೆಗಂ ಪೌತ್ರೀಗಳ್ ಬರ್ಕೆಂಬುದುಂ . . . ಜ್ಯೋತಿಃಪ್ರಭಾಕನ್ನಿಕೆ ಮಸಕದೆ ಕೊಲ್ವಾನೆ ಬರ್ಪಂತೆ ಬಂದಳ್ (ಶಾಂತಿಪು. ೩-೯೭). [ಸಂ.]

**ಮಾಂಗಲ್ಯಕ** (ನಾ). ಒಂದು ಬಗೆಯ ದ್ವಿದಳಧಾನ್ಯ : ಕಡಲೆ : "ಮಾಂಗಲ್ಯಕಃ, ಮಸೂರಃ— ಈ ೨ ಚಣಗೆ" (ಹಲಾಯು. ೯೩-೯೨೭). [ಸಂ.]

**ಮಾಂಗಲ್ಯಕೈಶಿಕಿ** (ನಾ). [ಸಂಗೀತ] ಒಂದು ರಾಗದ ಹೆಸರು : ಛಾಯಾಗೌಳ, ನಂತರ ಮಾಂಗಲ್ಯಕೈಶಿಕೀ, ಮೇಘರಂಜನೀ, ಗುಮ್ಮಕಾಂಭೋಜಿ (ಷಕುಶ್ರ. ೦೨೯). [ಸಂ. ಮಾಂಗಲ್ಯಕೈಶಿಕೀ]

**ಮಾಂಗಲ್ಯಗೇಯ** (ನಾ). ಮಂಗಳಗೀತೆ : ಮಾಂಗಲ್ಯಗೇಯಧ್ವನಿಯಿಂ ದಾಶಾಂತರಂ ಘೂರ್ಣಿಸಿ ಸೊಗಯಿಸೆ. . . ಅಂಗಂಗಾಯ್ತು ರಾಜ್ಯಾಭಿಷೇಕಂ (ಪ್ರಂಶಕಾ. ೧೯-೨೮). [ಸಂ.]

**ಮಾಂಗಲ್ಯಮಜ್ಜನ** (ನಾ). ಶುಭಕಾರ್ಯಕ್ಕಾಗಿ ವಿಧಿಪೂರ್ವಕವಾಗಿ ಮಾಡುವ ಸ್ನಾನ : ಮಂಗಳಸ್ನಾನ : ಅರಿವಿದಾರರು ಮಾಡಿದರು ಮಾಂಗಲ್ಯಮಜ್ಜನವ (ಕುವ್ಯಾವಿ. ೧೦-೪). [ಸಂ.]

**ಮಾಂಗಲ್ಯಸೂಕ್ತ** (ನಾ). ಮಂಗಳಕರವಾದ ಸ್ತೋತ್ರ ; ಶುಭಪ್ರದವಾದ ಮಂತ್ರ : ಒಡನೆ ವಂಟಣಿಸಿದರು ವಿಪ್ರರು ತೊಡಗಿದರು ಮಾಂಗಲ್ಯಸೂಕ್ತವ ಅಡಕಿದರು ಪಡಿಚರರು ಕುಶಸಮಿಧೆಗಳ ಹೊಚಿಗೆಗಳನು (ಭಾಶಿರಾ. ೦-೬೦) ; ಮಾಂಗಲ್ಯಸೂಕ್ತಗಳನ್ನು ಹೇಳುವ ಬ್ರಾಹ್ಮಣರಿಂದಲೂ ಮನೋಹರವಾಗಿದ್ದ ಅಯೋಧ್ಯಾಪಟ್ಟಣವನ್ನು ಕಂಡು ಮಂಥರೆಯು ಆಶ್ಚರ್ಯಪಟ್ಟು . . . ಕೇಳಿದಳು (ಕಗಾವಿ. ೬೨ ಕಾಮರಾಜೋಕ್ತಿವಿಲಾಸ). [ಸಂ.]

**ಮಾಂಗಲ್ಯಸೂತ್ರ** (ನಾ). ತಾಳಿ ಮತ್ತು ಕರಿಮಣಿಗಳನ್ನು ಪೋಣಿಸಿದ ನೂಲು,- ಎಳೆ ; ಮಂಗಳಸೂತ್ರ : ಮುಹೂರ್ತದ ದಿವಸ ಬೆಳಗ್ಗೆ ಸುಂದರಿಯ ಕೊರಳಲ್ಲಿ ಮಾಂಗಲ್ಯಸೂತ್ರವು ಅಲಂಕೃತವಾಯಿತು (ಸುಂದರಿ. ೩). [ಸಂ.]

**ಮಾಂಗಳಿಕ** 'ಮಾಂಗಲಿಕ' ನೋ.

**ಮಾಂಗಳ್ಯ** 'ಮಾಂಗಲ್ಯ' ನೋ.

**ಮಾಂಗಾಯ್**, ಮಾಂಗಾಯಿ, ಮಾಗಾಯ್, ಮಾಗಾಯಿ (ನಾ). ೧. ಮಾವಿನಕಾಯಿ : ಶೃಂಗಾರನದಿಯನೆಳವೆಱೆ ಮಾಂಗಾಯನೆ ಮಱಿಸಿ ಪೇಟಿವೇಟ್ಟುದೆ ರಸಭಾವಂಗಳನಾಗಮುಮಂ (ಅಜಪು. ೦-೯೨) ; ಕಂಪುದೀವಿರ್ದ ಪೂಮಂ ಮಾಂಗಾಯುಂ . . . ಪಣ್ತ ದಾಳಿಂಬಗಳನೊಲವಿನಿಂ ತೋಂಟಿಗಂ ಕೊಟ್ಟನೊರ್ವಂ (ಕಬ್ಬಿಗ. ೬೮). ೨. ಮಾವಿನಕಾಯಿಯ ಆಕಾರದ ಚಿನ್ನದ ಆಭರಣ ಅಥವಾ ಅಲಂಕಾರಸಾಧನ : ಬಳಸಿದ ಚೆಂಬೊನ್ನ ಮಾಂಗಾಯ ಗೊಂಚಲ್ಗಳ ಪೊಂದಳಿರ ತೊಂಗಲ್ಗಳ ಸುತ್ತುಂಗೊಂಡ ಸುರಿಗೆಯ ಮುತ್ತಿನ ಬುಂಭುಕಂಗಳ ನಡುವೆ (ಅಂಪು. ೬-೦೩ ವ): ಮಾಂಗಾಯ್ ಕದಪಂ ಚುಂಬಿಸೆ ಪೊಂಗವಡಿಕೆ ನೊಸಲೊಳಲೆಯೆ ಗೆಜ್ಜೆಗಳುಲಿಪಂ ಸಂಗಳಿಸೆ ಚಲನದೊಳ್ ಭವನಾಂಗಣದೊಳ್ ಕಂದನೆಂದು ದಟ್ಟಡಿಯಿಡುವಂ (ಚಂದ್ರಪು. ೩-೯೮) ; ಅಳರೆಲೆಗಳಲುಗೆ ಮಾಂಗಾಯ್ಗಳ್ ಚಳಿಯಿಸೆ ಕಿಂಕಿಣಿಗಳುಲಿಯೆ ಶಿಶು ನಡೆಗಲ್ತಂದು (ಪುಷ್ಪಪು. ೦೨-೭೭). **ಮಾಂಗಾಯಿ :** ೧. ಮಂತ್ರಿಗಳ ಮಂತ್ರಕ್ಕೆ ಉದುರುವದೆ ಮಾಂಗಾಯಿ ? ಮಂತ್ರಶಕ್ತಿಯು ದೈವಪಂಚಾಯತ (ನೆಂಪು. ೦೯-೦೩). ೨. ತಳೆದ ಸಹಜಚ್ಛೇದ್ರಕರ್ಣಂಗಳಿಗೆ ಮಣಿಮಾಂಗಾಯನಿಟ್ಟಳು ಅಲರೆಲೆಯ ಶಿಖಿಯಲಿ ತೊಡರ್ಚಿ ವಿಮುಕ್ತದೋಷಂಗೆ (ಸಾಳ್ವಭಾ. ೩೩-೭೩); ಪೊಳೆವ ಪೊಂಗವಡಿಗೆ ಮಾಂಗಾಯಿಯುಡಿಮಣಿ ಪುಲಿಸಿಂಗದುಗುರ್ಪೊನ್ನ ಬಂದಿ (ಶ್ವಾನಕ. ೩-೦೬೩). **ಮಾಗಾಯ್ :** ೧. ಉಪ್ಪು ಸಾಸವೆಯ ಮಾಗಾಯ ಸೆಳ್ಳಂಬಟೆಯ . . . ಹುರಿಸಂಡಗೆಯ ಬಾಳಕವನು ತಪ್ಪದೆಲ್ಲಾ ಸಾಧನವನು ಸಂಪರಿಸಿ (ಸಿದ್ಧರಾ. ೬-೩೨). ೨. ಅಭವವಲ್ಲಭೆಯ ಕಿವಿಗೂಡಿದವತಿಸಫಲವಾದೆವೆನುತಂ ಕುಣಿವಂತಾಡುವ ಗಿರಿಜೆಯ ಮೊಗದೊಡನಾಡುವ ಹೊಸ್ನೋಲೆವಿಡಿದು ಪೊಸ ಮಾಗಾಯ್ಗಳ್ (ಗಿರಿಕ. ೩-೯೨) : ರೆಕ್ಕೆಮಣಿ ಪುಲಿಯುಗುರ್ ಗೆಜ್ಜೆ ಮಾಗಾಯ್. . . ಪಣೆಯೊಳಿಕ್ಕಿದ ಸುಭಸಿತಮುರಳೆಲೆಯೆನಿಪ ಪರಿಪರಿಯ ಬಾಲದೊಡಿಗೆಗಳ ನಾಂತು (ತೆಂಪು. ೩-೩೭). **ಮಾಗಾಯಿ :** ೧. ಒಂದು ಮಡಕೆಯೊಳರ್ಧ ಮಡಕೆ ನೀರಂ ಪೊಯ್ದು . . . ನೀರುಳ್ಳಿ ಮಾ[ಪಾಠಾಂ. ಮಾಂ]ಗಾಯಿ ಹಸಿಯುಲ್ಲಮಂ ಬೆರಸಿಕೊಂಡು (ಸೂಶಾ. ೩-೩೪). ೨. ಅರಳೆಲೆ ಮಾಗಾಯಿ ಕೊರಳ ಮುತ್ತಿನ ಹಾರ (ಪುರಂದ. ೨-೭೭-೩); ಕಳೆವೆತ್ತ ಮುತ್ತಿನ ಕಡಕು ಮಾಗಾಯ ಪಜ್ಜಳಿಪ ಬಜ್ಜರದ ಬಾವುಲಿಯನಿಟ್ಟು (ಗೀತಗೋ. ೭-೨).
[ಮಾಂ (<ಮಾವು) + ಕಾಯ್$_4$]

**ಮಾಂಗಾಯಿ** ' ಮಾಂಗಾಯ್ ' ನೋ.

**ಮಾಂಗುಳೂರ್** (ನಾ). ಒಂದು ಊರಿನ ಹೆಸರು : ಮಾಜ್ಗುಳೂರ್ಪರ ದಿವಾರದ ಮಾಪ್ಪುರ್ (ಇಆ. XIV, ೨೩೨-೩೩ ; ಸು. ೭ನೆಯ ಶತ).
[ಇದು 'ಮಂಗಳೂರು' ಎಂಬುದರ ಅಪಲಿಖಿತವಿರಬಹುದು]

**ಮಾಂಗೊನರ್** (ನಾ). ಮಾವಿನ ಚಿಗುರು,-ತಳಿರು : ಮಾಂಗೊನರಂ ನಸುಗರ್ಚಿ ಸೊರ್ಕಿನಿಂ ತನು ದಳವೇಱೆ . . . ಪುಗಲ್ ಪುಗಲೆಂದುದು ಕೋಕಿಲವ್ರಜಂ (ಜಗಪು. ೦೪-೩೮); ವನಪಾಲಂ ಕಾಣ್ಕೆಗೈದಂ ವಿಚಕಿಲದರಲಂ . . . ಮಾಂಗೊನರಂ ಮಾಧೂಫಳಶ್ರೇಣಿಯುಂ (ರಾಜಶೇ. ೦೦-೨).
[ಮಾಂ (<ಮಾವು) + ಕೊನರ್$_2$]

**ಮಾಂಜರಪಾಟ** ' ಮಾಂಜರಪಾಟು ' ನೋ.

**ಮಾಂಜರಪಾಟು, ಮಾಂಜರಪಾಟ** (ನಾ). ಒಂದು ಬಗೆಯ ಬಟ್ಟೆ : ಅವನ ಮೈಮೇಲೆ ಮಾಂಜರಪಾಟಿನ ಹೊದಿಕೆ (ಮುಂಗಾರು. ೮೭). **ಮಾಂಜರಪಾಟ :** ನಾನು ಉಟ್ಟ ಈ ದೋತರ ನೋಡಿರಿ. ಇದು ಮಾಂಜರಪಾಟವಲ್ಲ (ನಮಕೀ. ೭೬೦). [← ಮರಾ. ಮಾಂಜರಪಾಟ್. ಮಾಜರ್‌ಪಾಟ್, ಮಾಂದರಪಾಟ್, ಮಾದರಪಾಟ್]

**ಮಾಂಜರಿ** (ನಾ). ಒಂದು ಬಗೆಯ ಮಣ್ಣು : ಹಾಳುಭೂಮಿ, ಮಾಂಜರಿ, ಕೇಸರಿ ಮೊದಲಾದ ಸ್ಥಳಗಳಲ್ಲಿ ಗಿಡಗಳನ್ನು ಹಚ್ಚಬೇಕಾದರೆ ಕೆಂಪುಮಣ್ಣನ್ನು ಹಾಕಿ ಗಿಡಗಳನ್ನು ಹಚ್ಚಬೇಕು (ಕೃಷಿಶ್ರ. ೯೯).
[?/ತುಳು. ಮಂಜಿರ್ = ಬರಡಾದ]

**ಮಾಂಜಿ** (ನಾ). [ಸಂಗೀತ] ಒಂದು ರಾಗದ ಹೆಸರು : ಚಿಂತಾಮಣಿ, ಕಲ್ಗಡ, ಮಾಂಜಿ, ಘರಜು ಮುಂತಾದ ಕಷ್ಟರಾಗಗಳಲ್ಲಿ ಕೃತಿರಚನೆ ಮಾಡಿ ಶಾಸ್ತ್ರಿಗಳು ಆ ರಾಗಗಳ ಸ್ವಷ್ಟಪರಿಚಯ ಮಾಡಿ ಮಾರ್ಗದರ್ಶಕರಾಗಿದ್ದಾರೆ (ಸಂಗೀತಂ. ೨೯೯) ; ಹಂಬೀರು . . . ಮಾಂಜಿ, ಪೂರ್ವಿ ಎಂಬಿವುಗಳು ದೇಶೀಯರಾಗಗಳು (ಚತುಶ್ರ. ೦೩೦). [ಸಂ. ಮಾಂಜೀ]

**ಮಾಂಜಿಷ್ಠ** (ನಾ). ಕೆಂಪು ; ಕೆಂಬಣ್ಣ : "ಅರುಣಃ, ಶೋಣಃ, ರಕ್ತಃ, ಮಾಂಜಿಷ್ಠಃ, ಪಾಟಲಃ, (ಅ)ತಾಮ್ರಃ, ಲೋಹಿತಃ—ಈ ೭ ಕೆಂಪು" (ಹಲಾಯು. ೦೨೦-೯೬); ಶ್ವೇತಪೀತಕಪೋತಹರಿತಕೃಷ್ಣಮಾಂಜಿಷ್ಠವೆಂಬ ಷಡು ವರ್ಣವೆಂದೆನ್ನ (ಅವತು. ೦೨೨-೩೩೯) ; ಶ್ವೇತಪೀತಂ ಕಪೋತಂ ಹರಿತಂ ವಿಮಲ ನೂತನದ ಮಾಂಜಿಷ್ಠ ಮೊದಲಾದ ವರ್ಣಗಳೊಳೋತು ಮಾಡಿದ ವಿಲಸದಕ್ಷತೆಯು ಶಂಕರಂಗರ್ಪಿಸಲು ಕೋಟಿಫಲವೌ (ಗುರುಚಾ. ೬-೯). [ಸಂ.]

**ಮಾಂಜಿಸು** 'ಮಾಜಿಸು' ನೋ.

**ಮಾಂಜು₁** 'ಮಾಜು₁' ನೋ.

**ಮಾಂಜು₂** 'ಮಾಜು₂' ನೋ.

**ಮಾಂಜೆಳೆ** (ನಾ). ಮಾವಿನ ಎಳೆಯ ಕೊಂಬೆ : ಮಾಂಜೆಳೆ, ಮಾಂಜೊಂಪಂ (ಕಬ್ಬಾಸು. ೩೯೮ ವ್ಯಾಖ್ಯಾ).
[ಮಾಂ (< ಮಾವು) + ಸೆಳೆ₄]

**ಮಾಂಜೇಮೂಟ** (ನಾ). ಒಬ್ಬಾತನ ಹೆಸರು : ಮಾಲಗಾಜ ಶ್ರೀಮಾಂಜೇ ಮೂಟ ಇನಿಥೂ ಇರ್ಪ್ಪತ್ತೆಯ್ದು ಮುಮ್ಮೊದಲಾಗೆ [ಯ್ಯಾ] ಡಿ ವೀಸಾಭಾಗಂ ಪುಲ್ಲರು × × (ಶಾ. I. ೨-೦೯; 699). [?]

**ಮಾಂಜೊಂಪ** (ನಾ). ಮಾವಿನ ಗೊಂಚಲು,_ಗುಚ್ಛ : ಮಾಂಜೆಳೆ, ಮಾಂಜೊಂಪಂ (ಕಬ್ಬಾಸು. ೩೯೮ ವ್ಯಾಖ್ಯಾ).
[ಮಾಂ (< ಮಾವು) + ಜೊಂಪ₁]

**ಮಾಂಟಬೆಕ್ಕು** 'ಮಟಬೆಕ್ಕು' ನೋ.

**ಮಾಂಟೆ** 'ಮಾಡ₂' ನೋ.

**ಮಾಂಡಲಿಕ, ಮಾಂಡಳಿಕ** (ಗು). ೧. ಒಂದು ಪ್ರಾಂತಕ್ಕೆ ಸಂಬಂಧಿಸಿದ. ೨. ಒಂದು ಪ್ರಾಂತವನ್ನು ಆಳುವ. (ನಾ). ೩. ಒಂದು ಪ್ರಾಂತವನ್ನು ಆಳುವವನು ; ಮಂಡಲಿಕ : ವಿಜಯವರ್ಮರಾಜನ ತರುವಾಯದಲ್ಲಿ ಸೇಂದ್ರಕರು ಸುರತಪ್ರಾಂತದಲ್ಲಿ ಚಾಲುಕ್ಯರ ಮಾಂಡಲಿಕರಾಗಿದ್ದರು (ಕರ್ನಾಇ. ೫೦) ; ಚಂದ್ರನೇಂಬ ಒಬ್ಬ ಅರಸನು . . . ಧಾರಾಪುರದ ಪರಮಾರ ಭೋಜರಾಜನ (ಕ್ರಿ.ಶ. ೧೦೦೦-೧೦೫೪) ಮಾಂಡಲಿಕನಾಗಿದ್ದನು (ಸಾಹಿತ. ೩೦). **ಮಾಂಡಳಿಕ** : ೩. ನೊಳಂಬರು ಕಾಲಕ್ರಮೇಣ ರಾಷ್ಟ್ರಕೂಟರು, ಕಲ್ಯಾಣಿ ಚಾಳುಕ್ಯರು ಇವರ ಮಾಂಡಳಿಕರಾಗಿಯೂ ಸಹ ಆಳ್ವಿಕೆ ನಡೆಸಿದರು (ನೊಳಂಬ. ೨೦). [ಸಂ.]

**ಮಾಂಡಲೀಕ, ಮಾಂಡಳೀಕ** (ನಾ). ಮಾಂಡಲಿಕ ೩ : ಕರೆಸಿ ದಾನವ ಮಾಂಡಲೀಕರ ಹರುಷದಿಂದುದ್ಯೋಗಿಸುತ್ತಿದ್ದನು (ಕೌರವಾ. ೯೦-೫). **ಮಾಂಡಳೀಕ** : ಕ್ರಿ. ಶ. ೧೦೦೦ ದ ಅನಂತರ ನೊಳಂಬರು ಸಂಪೂರ್ಣವಾಗಿ ತಮ್ಮ ಸ್ವತಂತ್ರವನ್ನು ಕಳೆದುಕೊಂಡು ಕಲ್ಯಾಣಿಚಾಳುಕ್ಯರ ಮಾಂಡಳೀಕರಾಗಿ ಆಳುವುದನ್ನು ನಾವು ಕಾಣಬಹುದು (ನೊಳಂಬ. ೩೯).
[< ಸಂ. ಮಾಂಡಲಿಕ]

**ಮಾಂಡಳಿಕ** 'ಮಾಂಡಲಿಕ' ನೋ.

**ಮಾಂಡಳೀಕ** 'ಮಾಂಡಲೀಕ' ನೋ.

**ಮಾಂಡುಕೆ** (ನಾ). ಒಂದು ಬಗೆಯ ಗಿಡ ; ಮಂಜಿಷ್ಠೆ : "ಅದಿತ್ಯಭಕ್ತನುವುದು ಮಾಂಡುಕೆ" (ಮಂಗರಾ. ೩೯-೨೬). [< ಸಂ. ಮಂಡೂಕ]

**ಮಾಂತ₁** (ನಾ). ಮಕಾರದಲ್ಲಿ ಕೊನೆಗೊಳ್ಳುವ ಶಬ್ದ : ಮಾಂತಕ್ಕೆ—ಅಣ್ಮು (ಶಮಂದ). [ಸಂ.]

**ಮಾಂತ₂** (ನಾ). ೧. ಹಿರಿಯ ; ಪೂಜ್ಯ ; ಮಹಂತ : ರಾಜರು ರಕ್ಕಸ ಮಾಂತರು ಲಾಳಿ ಬಿಲ್ಲೋಜರು ಪೆಟಲಂಬಿನವರು ತೇಜೋಮಯ ಬಾಣ ಗಾಜರೇಜಾತು ಖಗರಾಜನೇಜಂಕೆಯಿಕ್ಕೆಲದಿ (ನೇಮಿಚಶ. ೩೬-೯೨). ೨. ಮಠ, ದೇವಸ್ಥಾನ ಮುಂತಾದುವುಗಳ ಮುಖ್ಯಸ್ಥ; ಮಠಾಧಿಕಾರಿ : "ಮಾಂತ (ಮಾತ) — ಮಹಂತ = ಮಠಾಧಿಕಾರಿ, ದೊಡ್ಡಮನುಷ್ಯ" (ತದ್ಭಕೋ. ೩೫). [< ಮಹಂತ]

**ಮಾಂತನ** (ನಾ). ದೊಡ್ಡಸ್ತಿಕೆ ; ಘನತೆ ; ಹಿರಿಮೆ : ಜನಿತಪ್ರಗಲ್ಭದೊಳ್ ಮಾಂತನದೊಳ್ . . . ಅನುಪಮಗುಣದೊಳ್ ಶ್ರೀಶಂ ಘನಂ (ಕಬಿರಾ. ೩-೬೨) ; ಅಪರಿರ್ವರ ಮಾಂತನದಳವನಳೆಯಲಜನಾಜಿಂ (ಅಜಿತ. ೧-೩೫) ; ಮಾನ್ತನಕ್ಕಾಗರಪ್ಪನೆ ನೆಗಟ್ದಂ (ಎಕ. XVI. ೫೫-೧೦ ; 1053).
[< ಮಾಂತ₂ + — ತನ]

**ಮಾಂತರು** (ನಾ). ಮಾವಿನ ಮರ : ಚೂತವೃಕ್ಷ : ಕಾಂತಾರದೊಳು ಲಕ್ಷ್ಮೀಕಾಂತನಾಡುತ ತನ್ನೇಕಾಂತಭಕ್ತರನೊಡಗೂಡಿ ಮಾಂತರುವಿನ ನೆಳಲೊಳು ಕೊಳಲೂದುತ (ಕೃಷ್ಣಗೀ. ೨-೬೦).
[ಮಾಂ (<ಮಾವು) + ತರು₂]

**ಮಾಂತ್ರಿಕ** (ನಾ). ಮಂತ್ರಗಾರ ; ಗಾರುಡಿಗ; ಯಕ್ಷಿಣಿಗಾರ : ಆತನೇ ಶೂರತ್ವವುಳ್ಳವನಾತನೇ ಮಾಂತ್ರಿಕನು ತಪಸಿಯುಮಾತನೇ ವಿದ್ವಾಂಸನಾತನೆ (ಐಸಪು. ೩೯-೬೯); ಕೆಲವರು ಬೈರಾಗಿಗಳೂ ಮಾಂತ್ರಿಕರೂ ನಾವು ಚಿನ್ನ ಮಾಡಬಲ್ಲೆವೆಂದು ಹೇಳುತ್ತಾರೆ (ಮುಂಬಯಿ. ೯-೦೦೩). [ಸಂ.]

**ಮಾಂದಳಿ** (ನಾ). ಒಂದು ಊರಿನ ಹೆಸರು : ಶ್ರೀಚಾಸರಾಳ್ ಪೊನ್ನಾಕವಳಗೆ ಕಾಳಮ್ಮನ್ ಮಾನ್ದಳಿಯ ಬೀರಿಯದುಳ್ಳೆ ಬಲಮೆಮ್ಮರಸರ ಕಾಳಗದುಳ್ಳೆ ಎಚಿದು ಸತ್ತನ್ (ಎಕ. XVI. ಕುಮುಕೂ. ೦೦೦-೨; ಸು. 812). [?]

**ಮಾಂದಳಿರ್, ಮಾಂದಳಿರು, ಮಾದಳಿರ್** (ನಾ). ಮಾವಿನ ಚಿಗುರು,_ಕುಡಿ : ಕಾಮದೇವನುಕ್ಕೆಮದಲ್ಲಿ ಮುನ್ನಮೆ ಕಟ್ಟಿದ ಮಾಂದಳಿರ ತೋರಣಂಗಳೊಳಮೆತ್ತಿದಶೋಕಪಲ್ಲವಪತಾಕೆಯೊಳಂ (ಕಾದಂಬ. ೭೮೦) ; ಮಾಂದಳಿರ್ಗಳ ತೋರಣಂ ವಿರಾಜಿಸಿತೆನಸುಂ (ಕುಸುಮಾ. ೬-೭೯). **ಮಾಂದಳಿರು** : ಚಂದ್ರಿಕೆಯ ಮಾಂದಳಿರೆ . . . ಕಲುಷರಹಿತೆಯ ಖಳ ಕುಲಾಧಮ ಬಲುಕರಿಸಿ ಕೋಡೊಯ್ದನೆಂದುಸುರುವುದು ರಾಮಂಗೆ (ತೊರವೆ. ೩-೦೦-೬) ; ಪರಪುಟ್ಟಗಳಿರಾ . . . ಓರಿದು ಮಾಂದಳಿರ ಗುಟುಕನಿತ್ತು ಮಸಕತಿಹರುಷವ ಮಾಡುವೆ ನಿಮಗೆ (ಕಂಠೀರ. ೯-೨೦೦) ; ಮಾಂದಳಿರು ಆಗ ತಾನೆ ಅಲ್ಲಲ್ಲಿ ಎದ್ದು ಕಾಣುತಿತ್ತು (ಕಾಂತಲಾ. ೨೯೯). **ಮಾದಳಿರ್** : ಮಾದಳಿರ ಪಳಿವ ಚೆಂಮುಟಿಯ ಸವಿಗೆ . . . ಎಸೆವ ಮೈಗಂಪಿಂಗೆ ಬಯಸಿ ಬಯಸಿ (ಕೃಪಿಬಾ. ೩-೦೦). [ಮಾಂ (< ಮಾವು) + ತಳಿರ್₂]

**ಮಾಂದಳಿರು** 'ಮಾಂದಳಿರ್' ನೋ.

**ಮಾಂದಾಪು ?** (ನಾ). ಒಂದು ಊರಿನ ಹೆಸರು (?) : ಮಾನ್ದಾಪುದ ಕಾಳೆಗದುಳ್ ಪಗೆ ಕಲಿಯಾರು ಮಗನ್ ಬೆಜ[ಯಿ]ತ್ತನ್ ಗಣ್ಡಪ್ರಕರನ್ . . . ಪಲರನಿರ್ಜುದು ಸತ್ತೊಡೆ (ಎಕ. X. ಮುಳಬಾ. ೨೨೮-೬; ಸು. ೮೯೦ ?).
[?]

**ಮಾಂದಿಸು** (ಕ್ರಿ). ೧. ತಡೆ ; ನಿಲ್ಲಿಸು ; ಅಡ್ಡಗಟ್ಟು : ಮಸಕಂ ಕಾಯ್ದು ಜವಂ ಜವಂಗಮಿದಿರೊಳ್ ನೋಡಲ್ಕಗುರ್ವಾಗೆ ಮಾಂದಿಸಿಮಾ ವಂದುದು ಕೊಂದುದೆಂದು ಭಯದಿಂ ವಿಪ್ರರ್ ತೆರಳ್ದೋಡೆ (ಶಂಕರಾ. ೮-೩೭) ; ದಾನವವರಂ ನಿದ್ರ್ದೆಯ್ವವಕ್ಕೆಂದು ಯಾಚಿಪುದಂ ಮಾನ್ದಿಸಿ ನಿಂದು ನಾಲಗೆಯೊಳೆಂದುಂ ನಿದ್ರೆಯಕ್ಕೆಂದು ಯಾಚಿಪುದಂ ಮಾಡಿಸಿಯನ್ನಸಂ ಕಿಡಿಸಿದಳ್

ಬಲ್ಪಿಂತುಟೋ ಜ್ಯೇಷ್ಠೆಯ (ಶಾಸಸ. ೩೩-೪೦ ; 1178). ೨. ಕಳೆ : ನಿವಾರಿಸು : ಅವರ್ಗಳ ಭಯಮಂ ಮಾಂದಿಸುವೊಡೆ ಸುಜನಸಂಸ್ತವಂ ಕರಣೀಯಂ (ಕೃಕೃಕ. ೦-೫೩); ಒಂದೊಂದೆಸೆಯೊಳ್ ಮೆಱೆದಿಹವೆಂದುಂ ವಿಂಶತಿಸಹಸ್ರಸೋಪಾನಂಗಳ್ ಇಂದೂಪಳರಚಿತಂಗಳ್ ಮಾಂದಿಸುವುದು ಜನದ ಮನದ ಸಂತಾಪತೆಯುಂ (ಕೃಕ್ಕಸ್ರ. ೦೦-೨೪). ೩. ಆರಿಸು ; ನಂದಿಸು : ಕುಂದದಲಧವಲನೃಪದಶನೇಂದುಜ್ಯೋತ್ಸ್ನಾಮೃತಾಚ್ಛಜಲ ಪರಿಷೇಕಂ ಮಾಂದಿಸುವಂತಾದುದು ನೃಪನಂದನೆಯೆರ್ದೆಯೊಳಗೆ ಬಳೆದ ಶೋಕಾನಳನಂ (ಅಂಚಿ. ೩-೯೯). [ಮಾಂದು₁ + — ಇಸು₃]

**ಮಾಂದು₁** (ಕ್ರಿ). ೧. ನಿಲ್ಲಿಸು ; ಪ್ರತಿಬಂಧಿಸು : ''ಮಾಂದು—ಪ್ರತಿಷೇಧೇ (ತಡೆ), (ಪ್ರಸಿದ್ಧೇ)'' (ಕಮಾ). ೨. ಕುಗ್ಗು; ಕಡಮೆಯಾಗು : ಪೊಸಮಕರಂದದ ಮಾಂದದ ರಸಕ್ಕೆ ಮಂದಲರೊಳೆಱಗಿದರಗಿಳರಚನೆಯು ಕರ್ಪೆಸೆವಂತೆಸೆವಿನಮೇಂ ಸೊಗಯಿಸಿದುದೊ ವನಯುವತಿವದನತಿಲಕಂ ತಿಲಕಂ (ಶಾಂತಿಪು. ೭-೦೩೩). ೩. ಹಿಂದೆಗೆ ; ಹಿಮ್ಮೆಟ್ಟು : ಮಾಂದದೆ ಕುಂದದೆ ಬಣ್ಣಂಬಂದಂ ತದ್ರಿಪುವೆನುತ್ತೆ ಬೀಭತ್ಸಲತಾಕಂದಮನೆ ತರ್ಪ ತೆಱದಿಂ ತಂದಿಱಿಪಿದನಿದಿರೊಳೊರ್ವನಾ ಪಂದಲೆಯಂ (ಚಂದ್ರಪ. ೦೦-೦೦೭). [ದೇ.॥ ತಮಿ. ಮಾನ್ರು : ತುಳು. ಮಾದು]

**ಮಾಂದು₂** 'ಮಾಣ್' ನೋಡಿ.

**ಮಾಂದುರಿಗ** (ನಾ). ಕುದುರೆಯ ಲಾಯವನ್ನು ನೋಡಿಕೊಳ್ಳುವವನು; ಕಾಸ್ತಾರ : (?). [< ಸಂ. ಮಾಂದುರಿಕ]

**ಮಾಂದೋಪು** (ನಾ). ಮಾವಿನ ಮರಗಳ ಗುಂಪು,—ತೋಪು : ಮಾಂದೋಪಿನೊಳ್ ಸುರಿವ ಪೂಜೇನ ಸರಿಯೊಳ್ ನನೆದೊಯ್ಯನೆ ಕೀಡುವ ತೆಂಗಾಳಿಯ ಸೋಂಕಿನಂತೆಯುಂ (ಚಕವಂ. ೦೭೦-೩) ; ಈಯೆಳಮಾಂದೋಪಿನೊಳ್ ಬಸಂತಸಿರಿಯಂ ನೋಡಾ (ಚಿತ್ರಗೋ. ೦೩-೦೭) ; ಮಾಂದೋಪಿನಲ್ಲಿ ಸೇರಿ ನೀವೆಲ್ಲರೂ ನಿಶ್ಶಬ್ದರಾಗಿರಬೇಕು (ಶಿಗತ. ೩೩-೦೭). [ಮಾಂ (< ಮಾವು) + ತೋಪು₁]

**ಮಾಂದ್ಯ** (ನಾ). ೧. ಚುರುಕುತನವಿಲ್ಲದಿರುವುದು ; ಜಡತೆ ; ಆಲಸ್ಯ : ಎಂದಿಲ್ಲದಾವುದೊ ಮಾಂದ್ಯವು ಬಂದಿದೆ (ಇಂಶಾಶ. ೦೩೭-೨೩). ೨. ವೇಗವಿಲ್ಲದಿರುವಿಕೆ ; ನಿಧಾನ ಗತಿ : ''ಮೆಲ್ಲನೆನೆ ಮಾಂದ್ಯನಾಮಂ'' (ಕವಿಕಂ. ೨೩೬) ; ಸಾರಸದ್ಗುಣೋಪಚಯದೊಳಿಲ್ಲ ಮಾಂದ್ಯಮದು ಯಾನದೊಳಲ್ಲದೆ ತಲ್ಲತಾಂಗಿಯಾ (ಚಂದ್ರಪ. ೦೦-೦೦೬) ; ಕುಟಿಲಚಂಚಲ ಕಠಿನಕೃಶಮಾಂದ್ಯಮೆಂಬಿವುತ್ಕಟಯೌವನಸ್ತ್ರೀವಿಲಾಸಿನಿಯರಳಕಾಳಿ ಚಟುಲ ಕಟಾಕ್ಷ ವಕ್ಷೋಜಾತ ಮಧ್ಯಗತಿಗಳ ವಿಲಾಸದೊಳಲ್ಲದೆ ಘಟಿಸದು (ಕೃಮಿಶಾ. ೨-೭). ೩. ಮೂರ್ಖತನ ; ಗಡ್ಡತನ. ೪. ಬಲಹೀನತೆ ; ನಿಶ್ಶಕ್ತಿ; ದೌರ್ಬಲ್ಯ. ೫. ಆಸಕ್ತಿ ಇಲ್ಲದಿರುವಿಕೆ ; ನಿರುತ್ಸಾಹ. ೬. ಅನಾರೋಗ್ಯ ; ಜಾಡ್ಯ : "ರೋಗಃ . . . ಮಾಂದ್ಯಂ, ಅಪಾಟವಂ . . . ರುಜಾ—ಈ ೧೨ ವ್ಯಾಧಿ'' (ಹಲಾಯು. ೯೬-೪೪೭) ; ಮದಮಾಂದ್ಯೋತ್ಪಾದನಾಪಹರಣಮಾರಣವಶೀಕರಣದ್ವೇಷಣಾದಿಗಳ್ಗೆ . . . ಪಿರಿದುಮಾಗಮಂಗಳೆ ಪ್ರಮಾಣಂಗಳ್ (ಕಾದಂಬ. ೭೪೭) ; ಶ್ಲೇಷ್ಮಕ್ಕೆ ಆಧಿಕ್ಯ ವಾತ ಪಿತ್ತಂಗಳಿಗೆ ಮಧ್ಯಮ ಮಾಂದ್ಯಗಳ ವ್ಯತ್ಯಾಸದಿಂದೆರಡು ಸನ್ನಿದೋಷ (ಸಕವೈ. ೦೩೦). [ಸಂ.]

**ಮಾಂಬನ** (ನಾ). = ಮಾಂದೋಪು : × × × ವಳ್ಳಿಯ ಕತ್ತಲೆ ಮಾಂಬನ ದಳದಳಿತ ಸಂಪೆಮಲ್ಲಿಗಳ ಪೂವೆಂಬಿನ ಬೆಳದಿಂಗಳೆಂದೆನೆ ಕಣ್ಬಯಲ ಚಲುವನೀವುದರಸಿಯ ಕೆಱೆಯೊಳು (ಪ್ಕಎಂ. ೦೯೨೬. ೯-೩೦ ; 1183). [ಮಾಂ (< ಮಾವು) + ಬನ₁]

**ಮಾಂಬಳ** (ನಾ). ೧. ಮಾವಿನಹಣ್ಣು : ತನ್ನ ಮಗು ಪೋದುದುಂ ಕೋಗಿಲೆ ಬರ್ಪುದುಂ ಮಾಂಬಳಂ ಬೀಟ್ಟಂತಾಕಸ್ಮಿಕಮಾದುದು (ಅಶ್ರತಿ. ೩೬-೯) ; ಸೋರ್ವ ಜೇಂಜರಿ ಸವಿಮಾಂಬಳಂ ಪದೆದು ಕಾಸಿ ಪದಂಬಡೆದಿಟ್ಟ ಬಟ್ಟವಾಲ್ (ಶಕಪಿ. ೪-೦೦೭). ೨. (ಕರಾ) ಮಾವಿನ ಚೆಟ್ಟು : ಸೀತಮ್ಮನವರು . . . ನಾಲ್ಕು ಕಟ್ಟು ಥಪ್ಪಳ ಮಾಂಬಳಗಳನ್ನು ತಂದಿಟ್ಟರು (ಜಾಳಗ. ೨೩). [ಮಾಂ (< ಮಾವು) + ಪಳ₂(<ಪಲ₂). / ತುಳು. ಮಾಂಬಲ, ಮಾಂಬಳ]

**ಮಾಂಬೂ** (ನಾ). ಮಾವಿನ ಹೂವು : ಮಾಂಗದಿರ್ ಮಾಂಗೊನರ್ . . . ಮಾಂಬೂಗಳ್ (ಶಬ್ದಾಸು. ೩೪೬ ವ್ಯಾಖ್ಯಾ). [ಮಾಂ (< ಮಾವು) + ಪೂ₂]

**ಮಾಂಬೊಣರ್** (ನಾ). ಮಾವಿನಹಣ್ಣುಗಳ ಜೋಡಿ : ಮಾಂಗದಿರ್ ಮಾಂಗೊನರ್ . . . ಮಾಂಬೂಗಳ್, ಮಾಂಬೊಣರ್ (ಶಬ್ದಾಸು. ೩೪೬ ವ್ಯಾಖ್ಯಾ). [ಮಾಂ (< ಮಾವು) + ಪೊಣರ್₂]

**ಮಾಂಸ** (ನಾ). (ಮನುಷ್ಯ ಅಥವಾ ಪ್ರಾಣಿಪಕ್ಷಿಗಳ ಶರೀರದ) ಬಾಡು ; ಅಡಗು ; ಖಂಡ : "ಪಲಲಂ, ಜಾಂಗಲಂ, ಮಾಂಸಂ . . . ತರಸಂ – ಈ ೮ ಮಾಂಸಂ'' (ಹಲಾಯು. ೦೦೪-೯) : ಮಾಂಸಮಧುಮದ್ಯಸೇವನೆ . . . ಕುಲಟಾಸಂಸರ್ಗಮೆಂಬಿವಲ್ಲದೆ ಸಂಸಾರಭ್ರಮಣಕಾರಣಂ ಪೆಱವೊಳವೇ (ಅದಿಪು. ೩-೮೦) ; ಧಾತುಗಳು ರಸಧಾತು, ರಕ್ತಧಾತು, ಮಾಂಸಧಾತು . . . ಶುಕ್ಲಧಾತು ಎಂದು ಏಳು ತೆರನಾಗಿವೆ (ಸಕವೈ. ೯೬) ; ಜನ್ನಮಂ . . . ಮಾಂಸರುಧಿರೌಘದಿಂ ಕಿಡಿಸಿ ಕಾಡುವರ್ ತಾಟಕಿಯ ಮಕ್ಕಳ್ (ಶ್ರೀರಾಕಥಾ. ೨೮-೦೩). [ಸಂ.]

**ಮಾಂಸಕಲ್ಯಾಣ** (ನಾ). [ಬೌದ್ಧ] ಸ್ತ್ರೀಯ ಸೌಂದರ್ಯಕ್ಕೆ ಸಂಬಂಧಿಸಿದ ಐದು ಬಗೆಯ ಕಲ್ಯಾಣಗಳಲ್ಲಿ ಒಂದು : ಬಾಯಿಗೆ ತೆರೆಯಾದ ತುಟಿ ಬಿಂಬಫಲಕ್ಕೆ ಸದೃಶವಾಗಿ, ಚೆನ್ನಾ ಬಣ್ಣವಾಗಿ, ಸಮವಾಗಿ ಸ್ಪರ್ಶಕ್ಕೆ ಮೃದುವಾಗಿ ಇರುತ್ತದೆ. ಇದು ಮಾಂಸಕಲ್ಯಾಣ (ಹಕ್ರುಕು. ೨೦). 'ಕೇಶಕಲ್ಯಾಣ', 'ಛವಿಕಲ್ಯಾಣ' ನೋಡಿ. [ಸಂ.]

**ಮಾಂಸಕವಳ** (ನಾ). ಬಾಡಿನ ಊಟ, – ಆಹಾರ : ಕುಬೇರಪ್ರಿಯಂ . . . ಪೂರ್ವಭವಮಂ ನೆನೆದು ಮಾಂಸಕವಳ(ಪಿಂಡ)ಮನೊಲ್ಲದಿರೆ (ಜಾವುಂಕ. ೭೦). [ಸಂ. ಮಾಂಸಕವಲ]

**ಮಾಂಸಗಣ್ಣು** (ನಾ). ದುರ್ಮಾಂಸ ಬೆಳೆದಿರುವ ಕಣ್ಣು : ನೀರುಗಣ್ಣು ಜಾರುಗಣ್ಣು ಪಲಗಣ್ಣು ಕಾಚಗಣ್ಣು ರಕ್ತಗಣ್ಣು ಮಾಂಸಗಣ್ಣು (ಶಾಳಿಕ. ೩೨೬). [ಮಾಂಸ + ಕಣ್ಣು (< ಕಣ್)]

**ಮಾಂಸಗ್ರಂಥಿ** (ನಾ). ಮಾಂಸದ ಗಡ್ಡೆ ; ದುರ್ಮಾಂಸ : ಶ್ಲೇಷ್ಮದಿಂದ ಕಟಿವಾಯು ಪ್ರದೇಶವಲ್ಲಿ ಮಾಂಸಗ್ರಂಥಿಗಳುಂಟಾಗಿಹವು (ವೈದ್ಯಶಾ. II, ೧೦೩). [ಸಂ.]

**ಮಾಂಸಚ್ಛದೆ** (ನಾ). ಒಂದು ಬಗೆಯ ಸಸ್ಯ : "ಮಾಂಸರೋಹೀ, ಮಾಂಸರೋಹಾ. ಮಾಂಸಚ್ಛದಾ – ಈ ಮೂಱುಂ ಮಾಂಸರೋಹಿಣೆ'' (೭ಕಧ. ೦೨೪). [ಸಂ. ಮಾಂಸಚ್ಛದಾ]

**ಮಾಂಸಜ** (ನಾ). ೧. = ಮಾಂಸಗ್ರಂಥಿ. ೨. ಮೇದಸ್ಸು : "ಅಸ್ರಜಂ – ಮಾಂಸಜಂ'' (೭ಕಧ. ೩). [ಸಂ.]

**ಮಾಂಸಜೀವಿ** (ನಾ). ೧. ಮಾಂಸಾಹಾರದಿಂದ ಜೀವಿಸುವವನು ; ಮಾಂಸಾಹಾರಿ. ೨. ರಕ್ಕಸ ; ರಾಕ್ಷಸ : ''ಯಮಂ ಸರುಜಂ ಕಿಂಕರ ಮಾಂಸಜೀವಿ ಕೃಪಣಂ ಕೀನಾಶಶಬ್ದಂ'' (ನಾಶಾರ. ೯೩). [ಸಂ. ಮಾಂಸಜೀವಿನ್]

**ಮಾಂಸತಾನ** (ನಾ). ಗಂಟಲಿನಲ್ಲಿ ಉಂಟಾಗುವ ಮಾಂಸದ ಗಡ್ಡೆ : ಬಹಳ ತಾಪ ಉಂಟಾಗಿ ಕೊರಳಬಿಗಿದು ಹಿಡಿವದು. ಆ ಗ್ರಂಥಿ . . . ಮಾಂಸತಾನವೆನಿಸಿಕೊಂಬುದು (ವೈದ್ಯಶಾ. II. ೦೦೯). [ಸಂ.]

**ಮಾಂಸದ್ರಾವಿ** (ನಾ). ಒಂದು ಬಗೆಯ ಸಸ್ಯ: ''ಮಾಂಸೀ, ಮಾಂಸರೋಹಿಣೀ — ಜಟಾಮಾಂಸಿ, ಮಾಂಸದ್ರಾವಿ'' (೭ಕಧ. ೦೨೩). [ಸಂ. ಮಾಂಸದ್ರಾವಿನ್]

**ಮಾಂಸನಿವೃತ್ತಿ** (ನಾ). ಮಾಂಸಾಹಾರಸೇವನೆಯನ್ನು ನಿಲ್ಲಿಸುವಿಕೆ : ಮಾಂಸನಿವೃತ್ತಿಯೇಕೆಂದೊಡೆ . . . ಪಾಪಬಂಧಕರಮಪ್ಪ ಮಾಂಸಮಂ ತಿಂಬಂಗೆ ದಯೆಯುಂ ಪುಟ್ಟದು ದರ್ಪಮಧಿಕಮಕ್ಕುಂ (ಕಸಾರ. ೨೯೩). [ಸಂ.]

**ಮಾಂಸಪಿಂಡ** (ನಾ). ೧. ಮಾಂಸದ ಮುದ್ದೆ,– ಉಂಡೆ : ಮಾಂಸಪಿಂಡವೆನಲೊಲ್ಲದೆ ಮಂತ್ರಪಿಂಡವೆಂದನು ಬಸವಣ್ಣನು (ಬಸ್ವಪ. ೪. ೨೩–೩೭); ಲಿಂಗಧಾರಣವಿಲ್ಲದ ಮಾನವನ ಶರೀರವು ಮಾಂಸಪಿಂಡವೆನಿಸಿತು (ಶಾರದ. ೨೩೩). ೨. ದಷ್ಟಪುಷ್ಟವಾದ ದೇಹ : ಭೈರವಿಯ 'ಪೂಜೆಗೆ ಸಲುವಾಗಿ ನಿನ್ನ ಮಾಂಸಪಿಂಡವು ಅರ್ಪಿತವಾಗುವುದು (ಕಪಾಕುಂ. ೨೩). [ಸಂ.]

**ಮಾಂಸಭಕ್ಷಕ** (ನಾ). =ಮಾಂಸಜೀವಿ ೧ : ಮಾಂಸಭಕ್ಷಕರೂ ಸೆರೆಬಡಕರೂ ಸಿದ್ಧಗೊಳಿಸಿದ್ದೂ ಆದ ಇಂಥ ಯಾವ ಆಹಾರಪದಾರ್ಥವನ್ನೂ ಸೇವಿಸಬಾರದು (ಶ್ರಾವಣ. ೨೦೭). [ಸಂ.]

**ಮಾಂಸಭಕ್ಷಣ** (ನಾ). ಬಾಡನ್ನು ತಿನ್ನುವಿಕೆ ; ಮಾಂಸಾಹಾರದ ಸೇವನೆ : ತೊಗಲಿನ ಚೀಲವನ್ನು ದನಗಳ ಚರ್ಮದಿಂದ ಮಾಡಿರುತ್ತಾರೆ . . . ಇಂಥ ಚೀಲದೊಳಗಿನ ಎಣ್ಣೆ ತುಪ್ಪಗಳನ್ನು ತಿನ್ನುವುದು ಮಾಂಸಭಕ್ಷಣ ಮಾಡಿದಂತೆಯೇ ಇರುತ್ತದೆ (ಶ್ರಾವಣ. ೨೦೯). [ಸಂ.]

**ಮಾಂಸಭೇದಿ** (ನಾ). ಒಂದು ಬಗೆಯ ಔಷಧೀಸಸ್ಯ : ಮಾಂಸಭೇದಿ ಅಜಮೂತ್ರದಲ್ಲಿ ಶುದ್ಧಿಮಾಡಿ . . . ಗುಳಿಗೆ ಮಾಡಿ ತ್ರಿಫಲೆಪುಡಿ ಅನುಪಾನದಲ್ಲಿ ಕೊಡುವುದು (ಶಿವ್ಮಶಿ. ೨೩).

[ಸಂ. ಮಾಂಸಭೇದಿನ್=ಮಾಂಸವನ್ನು ಕತ್ತರಿಸುವ]

**ಮಾಂಸಭೋಜನ** (ನಾ). ಬಾಡಿನಿಂದ ತಯಾರಿಸಿದ ಆಹಾರ,—ಊಟ : ದಾನವರ ದಂಪತಿಸಹಸ್ರಮಂ ಪ್ರತಿದಿನಂ ಮಾನವರ ಮಾಂಸಭೋಜನದಿಂದೆ ತಣಿಸಬೇಕು (ಕೈಬಿಶಾ. ೦೬–೩೦) ; ನಾಯಕನು ಬರುವ ವೇಳೆಗೆ . . . ಅಲ್ಪಾಹಾರವಾಗಿ ಮಾಂಸಭೋಜನವು ಬಂದಿತ್ತು (ಮಲ್ಲಿ. ೬೨). [ಸಂ.]

**ಮಾಂಸಮೇಹ** (ನಾ). ಮಾಂಸಗತವಾಗಿರುವ ಮೇಹರೋಗಗಳಲ್ಲಿ ಒಂದು ವಿಧ : ಅಡಿಕೆ ಹಗಿನು, ಮುತ್ತುಗ ಹಗಿನು, ಬೇಲದ ಹಗಿನು . . . ಚೂರ್ಣವ ಮಾಡಿ ಶ್ರೀಎಲೆ ಕಷಾಯದಲ್ಲಿ ಸಣ್ಣವಾಗಿ ಅರೆದು ಕಡಲೆಯ ಪ್ರಮಾಣ ಗುಳಿಗೆಯಂ ಮಾಡಿ ಒಂದು ಗುಳಿಗೆ ಜೇನುತುಪ್ಪದಲ್ಲಿ ಕಲಸಿ ಕೊಡಲು . . . ಮಾಂಸಮೇಹ, ಅಸಾಧ್ಯಮೇಹ ಮೊದಲಾದವು ಗುಣ (ಶಿವ್ಮಶಿ. ೦೨೨). [ಸಂ.]

**ಮಾಂಸರೋಹಿ** (ನಾ). ಒಂದು ಬಗೆಯ ಸುಗಂಧಸಸ್ಯ : "ಮಾಂಸರೋಹೀ, ಮಾಂಸರೋಹಾ, ಮಾಂಸಚ್ಛದಾ— ಈ ಮೂಱುಂ ಮಾಂಸರೋಹಿಣಿ" (ಓಕಧಿ. ೦೨೯). [ಸಂ. ಮಾಂಸರೋಹೀ]

**ಮಾಂಸರೋಹಿಣಿ** (ನಾ). = ಮಾಂಸರೋಹಿ : "ಮಾಂಸರೋಹೀ, ಮಾಂಸರೋಹಾ, ಮಾಂಸಚ್ಛದಾ — ಈ ಮೂಱುಂ ಮಾಂಸರೋಹಿಣಿ" (ಓಕಧಿ. ೦೨೯). [ಸಂ. ಮಾಂಸರೋಹಿಣೀ]

**ಮಾಂಸರೋಹೆ** (ನಾ). =ಮಾಂಸರೋಹಿ : "ಮಾಂಸರೋಹೀ, ಮಾಂಸರೋಹಾ, ಮಾಂಸಚ್ಛದಾ_ಈ ಮೂಱುಂ ಮಾಂಸರೋಹಿಣಿ"(ಓಕಧಿ. ೦೨೯). [ಸಂ. ಮಾಂಸರೋಹಾ]

**ಮಾಂಸಲ**, ಮಾಂಸಳ (ಗು). ೧. ಮಾಂಸದಿಂದ ಕೂಡಿದ ; ಪುಷ್ಟವಾದ. ೨. ಶಕ್ತಿಯುತವಾದ ; ದೃಢವಾದ : ಕಂಬಳಿಹುಳು – ಎದೆಯ ಕೆಳಗೆ ಮೂರು ಜೊತೆ ಕೀಲು ಕಾಲುಗಳಲ್ಲದೆ ಹೊಟ್ಟೆಯ ಕೆಳಗೆ ೨ – ೮ ಜೊತೆ ಹೊಟ್ಟೆಯ ಪ್ರಲಂಬ ಮಾಂಸಲ ಕೀಲುಗಳಿಲ್ಲದ ಬದಲು ಕಾಲುಗಳಿವೆ (ಕೀಟಬಿ. ೦೩) ; ರೋಣೆಯಿಂದ ಆಚ್ಛಾದಿತವಾದರೂ ಕೆಳಗಿನ ಚರ್ಮದ ಆರೋಗ್ಯವಂತ ಕಾಂತಿ ಅಡಗಿರದ ಮಾಂಸಲ ಕೈ—ತೋಳುಗಳು (ಮೂರುಬಾ. ೨೯೬). (ನಾ). ೩. ಮಾಂಸಭರಿತವಾದುದು ; ಪುಷ್ಟವಾದುದು : ಮಾಂಸಲಂ ರಕ್ತಾರ್ದ್ರಮಾಗಿರ್ದುದಾ ಶವಂ ಪಾಲಿ ಬಿಸುಟಂದು ! (ಶ್ರೀರಾಮಾ. ೨೯೮–೩೬೩). ೪. ಬಲವುಳ್ಳವನು ; ಶಕ್ತಿವಂತ : "ಬಲವಾನ್, ಮಾಂಸಲಃ, ಅಂಸಲಃ _ ೩ ಬಲಿಷ್ಠ, ಶಕ್ತಿಯುಳ್ಳವನು" (ಸಿದ್ಧಾಂತಿ. ೦೯೦). **ಮಾಂಸಳ** : ೧. ಅಗ್ರವಿಶೀರ್ಣವಿಷಾಣನಾತ್ತಮಾಂಸಳತನು ಬಂದುದಂದು . . . ಪುಂಗವಂ (ಶಂಖ್ಸಕೃ. ೨–೩೮). ೩. ಅತಿದೀರ್ಘಮಾಂಸಳಂ ಹೃತ್ತತರಂ ಧೃತವಿಜಯಲಕ್ಷ್ಮಿ ಮಾಡಿದುದ್ದೈರಾವತ ಪುಂಡರೀಕಕರಯುಗವಿಡಂಬಮಂ ಭುಜಯುಗಂ ನಭಶ್ಚರಪತಿಯಾ (ಶಾಂತಿಪು. ೩–೪೪). [ಸಂ.]

**ಮಾಂಸವಿಕ್ರಯಿ** (ನಾ). ಬಾಡನ್ನು ಮಾರುವವನು ; ಮಾಂಸದ ವ್ಯಾಪಾರಿ : "ವೈತಂಸಿಕಂ, ಸೌನಿಕಂ, ಕೌಟಿಕಕ, ಮಾಂಸವಿಕ್ರಯಿಯಾ – ಈ ೪ ಸೂನೆಗಾಱಂ" (ಹಲಾಯು. ೯೭–೪೪೦). [ಸಂ. ಮಾಂಸವಿಕ್ರಯಿನ್]

**ಮಾಂಸವಿದಾರಿ** (ನಾ). ಗಂಟಲಿನಲ್ಲಿ ಉಂಟಾಗುವ ಮಾಂಸದ ಗಡ್ಡೆ : ಕೊರಳೊಳಗೆ ಪಿತ್ತದಿಂದ ಉಂಟಾಗಿ ಅಡ್ಡಲಾಗಿ ದೇಹದಲ್ಲಿ ಸೆಖೆ, ಬಾಯಾರಿಕೆ, ಬಹಳ ವೇದನೆ, ಇವುಗಳ ಉಂಟುಮಾಡುವುದು. ಹೀಗಿದ್ದುದು ಮಾಂಸವಿದಾರಿ ಎನಿಸಿಕೊಂಬುದು (ವೈದ್ಯಸಾ. II. ೦೨೦). [ಸಂ. ಮಾಂಸವಿದಾರಿನ್ ?]

**ಮಾಂಸಸಂಘಾತ** (ನಾ). ಗಂಟಲಿನ ಮೇಲುಭಾಗದಲ್ಲಿ ಮಾಂಸದ ಗಡ್ಡೆಗಳುಂಟಾಗುವ ಒಂದು ಬಗೆಯ ರೋಗ : ಶ್ಲೇಷ್ಮದಿಂದ ಕಟವಾಯ ಪ್ರದೇಶದಲ್ಲಿ ಮಾಂಸಗ್ರಂಥಿಗಳುಂಟಾಗಿಹವು. ಈ ರೀತಿಯಲ್ಲಿ ಇದ್ದುದು ಮಾಂಸಸಂಘಾತವೆಂಬ ತಾಲುರೋಗವೆಂದಱಿವುದು (ವೈದ್ಯಸಾ. II. ೦೦೩). [ಸಂ.]

**ಮಾಂಸಸೇವನ** (ನಾ). ಬಾಡನ್ನು ತಿನ್ನುವುದು ; ಮಾಂಸಾಹಾರ ಸೇವನೆ: ಬಲ್ಲಡಗಿಲ್ಲದೊಡುಣಿಸಣಮಿಲ್ಲೀ ಪ್ರಭುಗೆನುತುಮುವನ ತೊಡೆಯಡಗನೆ ತಳ್ವಿಲ್ಲದವಂಗಿಕ್ಕುವರೇಂ ಪೊಲ್ಲದುದೋ ಮಾಂಸಸೇವನಪ್ರತಿಪಾಪಂ (ಶಾಂತಿಪು. ೬–೯೬). [ಸಂ.]

**ಮಾಂಸಳ** 'ಮಾಂಸಲ' ನೋ.

**ಮಾಂಸಳಿತ** (ಗು). = ಮಾಂಸಲ ೧ : ಕುಳಶೈಲೋನ್ನತನುಗ್ರಶಾತ್ರವಶಿರೋಮಾಣಿಕ್ಯಮಾಳಾಂಶುಮಾಂಸಳಿತಶ್ರೀಪದಪೀಠರತ್ನಕಿರಣಂ ಚಕ್ರೇಶ್ವರಂ (ಆದಿಪು. ೦೨–೦೨೦). [ಸಂ. ಮಾಂಸಲಿತ]

**ಮಾಂಸಾದ** (ಗು). ೧. ಮಾಂಸವನ್ನು ತಿನ್ನುವ. (ನಾ). ೨. ಒಂದು ನರಕದ ಹೆಸರು : ಲಾಕ್ಷಾಪ್ರಲೇಪ ಮಾಂಸಾದ . . . ಕ್ರಿಮಿಕುಲಂಗಳೆಂಬವೇ ರಾಜನರಕಂಗಳು (ಶಿವೇಕ. ೧೩೦). [ಸಂ.]

**ಮಾಂಸಾಶನೆ** (ನಾ). ಮಾಂಸಾಹಾರವನ್ನು ತೆಗೆದುಕೊಳ್ಳುವವಳು ; ಅಡಗು ತಿನ್ನುವವಳು : ಸುರತಪ್ರಿಯೆ ಮಾಂಸಾಶನೆ ಸರೋಷೆ . . . ಮ್ಲೇಚ್ಛವಿಷಯದಾಕೆ ವಿನೂತೆ (ಶುರತಿ. ೪–೩). [ಸಂ. ಮಾಂಸಾಶನಾ]

**ಮಾಂಸಾಶಿ** (ನಾ). ೧. ಅಡಗು ತಿನ್ನುವವನು ; ಮಾಂಸಾಹಾರಿ. ೨. ದಾನವ ; ರಾಕ್ಷಸ : ದೇವಿ ! ಈ ನಿನ್ನ ಕಣ್ಣುರಿಯಿನೆ ಮಾಂಸಾಶಿಗಳೆಲ್ಲರಟಿದರ್ (ಅದ್ಭುತ. ೩೨-೦೬). [ಸಂ. ಮಾಂಸಾಶಿನ್]

**ಮಾಂಸಾಹಾರ** (ನಾ). ಬಾಡಿನಿಂದ ತಯಾರಿಸಿದ ಆಹಾರ,—ಪದಾರ್ಥ: ಜೊಮ್ಮಣ್ಣ ಕೇಶಿರಾಜ ಶಂಕಿಸಿದ್ದಂತೆ ಮಾಂಸಾಹಾರವನ್ನೇನೂ ನೀಡಲಿಲ್ಲ (ಚಚಕ. ೦೦೦). [ಸಂ.]

**ಮಾಂಸಾಹಾರಿ** (ನಾ). = ಮಾಂಸಾಶಿ ೧ : ಮದ್ಯಮಾಂಸಾಹಾರಿಗಳಂ ದೇವರೆಂಬುದು ಮೊದಲಾದುದಱಿಂ. . .ದರ್ಶನಮೋಹನೀಯಕರ್ಮದಾಸ್ರವಮಕ್ಕುಂ (ಕಸಾರ. ೯೬) ; ಮಾಂಸಾಹಾರಿಗಳು ನಿತ್ಯವೂ ಒಂದು ಮೊಟ್ಟೆ ೩ ಔನ್ಸ್ ಮಾಂಸವನ್ನು ಆಹಾರದಲ್ಲಿ ತೆಗೆದುಕೊಳ್ಳತಕ್ಕದ್ದು(ಗೃಹಪಿ. ೯೭). [ಸಂ. ಮಾಂಸಾಹಾರಿನ್]

**ಮಾಂಸಿ** (ನಾ). ಒಂದು ಬಗೆಯ ಔಷಧೀಸಸ್ಯ ; ಜಟಾಮಾಂಸಿ : ಸಲೆ ಮಾಂಸಿ ನೆಲ್ಲಿ ನೀಲೋತ್ಪಲ ಕಂಜಂ ಕೋಷ್ಠಮೆಂಬಿವಂ ಕಟಿಯಿಂದಂ ತಲೆಯಂ ಪೂಸಲೊಡಂ ಪಱಿದಲೆ ನಿಱಿದಲೆಯಕ್ಕುಂ (ಲೋಕೋಪ. ೬-೩೨) ; ಮಾಂಸಿ = ಜಟಾಮಾಂಸಿಯುಂ . . . ಉಪಯೋಗಿಸಲು (ಖಗೇಶಿ. ೦೬೬).

[ಸಂ. ಮಾಂಸೀ]

**ಮಾಂಸಿಕ** (ನಾ). = ಮಾಂಸವಿಕ್ರಯಿ : "ಮಾಂಸಿಕ – ಮಾಂಸವನ್ನು ಮಾರಿಕೊಂಡು ಹೊಟ್ಟೆ ತುಂಬಿಕೊಳ್ಳುವವ" (ಗಂಗಾಟು. ೨೩೩). [ಸಂ.]

**ಮಾಕಂದ** (ನಾ). ಮಾವಿನ ಮರ : "ಮಾಕಂದಮೆನೆ ರಸಾಲದ್ರುಮಂ" (ಕಕಅ. ೬೬) ; ನೀನುಮಾಮುಮೊಡನಿರ್ದಿರವಂ ನೆನೆ ಬಾಳಚೂತಮೇ ಎಂದು ಮಾಕಂದಮಹೀರುಹಮನಪ್ಪುಕೆಯ್ದು (ಅಂಕೃ. ೦೦-೦೨೬ ವ) ; ಎಳವಳ್ಳಿಗಳೆಡೆಯೊಳ್ಕಂಗೊಳಿಸುವ ಮಾಕಂದದದಂತೆ . . . ಎಸೆದಂ . . . ಚಿದಂಗಮುನೀಂದ್ರಂ (ಅದ್ಭುಟಿ. ೩-೯೨) ; ಕುಲತಿಲಕ ಬಾ ಕಂದ ಭರತಾ ವಳವನದ ಮಾಕಂದ . . . ಬಾ (ಶುಕ್ಷಾಸ. ೦೩-೬).  [ಸಂ.]

**ಮಾಕರಪ್ಪಿ** (ನಾ). ಒಂದು ಊರಿನ ಹೆಸರು : ಕದಪ್ಪಗ್ರಾಮ ದಕ್ಷಿಣತಃ ಮಾಕರಪ್ಪಿನ್ನಾರ್ಮಗ್ರಾಮಃ (ಇಇ. VI, ೭೩-೦೭ ; ಸು. 613). [?]

**ಮಾಕರಿಸು** 'ಮಾಂಕರಿಸು' ನೋ.

**ಮಾಕಾಳ** (ನಾ). ೧. ಶಿವನ ಹೆಸರುಗಳಲ್ಲಿ ಒಂದು : "ಮಾಕಾಳ– ಮಹಾಕಾಲ" (ಶಬ್ದಕೋ. ೩೪). ೨. ಶಿವನ ಪ್ರಮಥಗಣದಲ್ಲಿ ಒಬ್ಬ: ಗಟಪದಿರ್ ನೀನೆಂದು ಮುಕ್ಕಣ್ಣನೋಲಗದೊಳ್ ತೆನ್ನೊಡನಾಡಿಗೂಡಿ ಜಡದಂ ಮಾಕಾಳನೋರೊರ್ವರಂ (ಶಬ್ಧಾ/ ೦೬೬) ; ಎಲೆ ನಂದಿ ಮಾಕಾಳ ರುದ್ರರಿರ ನಾನಾವ ಕಾಲದೊಳದ್ರಿಜೇಶನ ಪದಯುಗವನುದ್ದಬ್ಯತಿಯೊಳ ರ್ಚಿಸಿ ಬದುಂಕುವ ಪುಣ್ಯಪಾದವುದೊ (ಐಕಸ್ತ. ೪೩-೯೬).

[< ಸಂ. ಮಹಾಕಾಲ]

**ಮಾಕಾಳಿ** (ನಾ). ಪಾರ್ವತಿಯ ಹೆಸರುಗಳಲ್ಲಿ ಒಂದು : "ಮಾಕಾಳಿ, ಮಾದೇವಿ, ಸಬ್ಬಾಣಿ, ಐಕಿಲ್ವೆಟ್ಟಣಾಗಿ, ಸಿಂಗದೇರಳ್ — ಈ ೫ ಪಾರ್ವ ತಿಯ ಪೆಸರ್" (ಕಕಪಾ. ೧-೨) ; ಕಾಳಧ್ವಜನಿಱಿಪೆಡೆಯೊಳ್ ಲೀಳೆಯಿನಂ ದಾಯ್ದು ಕೋದು ತೊಟ್ಟಿರ್ದ ಶಿರೋಮಾಳೆಯೆ ದಲ್ ಮಾರಿಯ ಮಾಕಾ ಳಿಯ ಚಂಡಿಕೆಯ ಕೊರಲ ಮಾಲೆಗಳಲ್ಲಿಂ (ಚಗು. ೬-೯೩) ; ಚೋಳನನಟ್ಟಿ ತಿಂಬ ಮಾಕಾಳಿ (ಎಕ. VI. ಕಳ್ಳಮ. ೦೦೪-೦೩ ; 1202) ; ಹೆಸರುಳ್ಳ ಮಾಕಾಳಿಯುಂಟು ಚಾಮುಂಡಿಯುಂಟೊಸೆದೇನ ಬೇಡಿದೊಡೀವ ಬೆಸನುಳ್ಳ ಕುಟಿಲದೇವತೆಗಳುಂಟು (ಕುರಾಶಾಂ. ೨೪-೩೪). [< ಸಂ. ಮಹಾಕಾಲೀ]

**ಮಾಕಿ** (ನಾ). ಒಬ್ಬಾತನ ಹೆಸರು : ತುಱುವ ಮೊಱಕರ್ಕ್ಕೊಳೆ ಬೆಣ್ಣರ ಮಾಕಿ ಕಾದಿ ಇಕ್ಕಿಸಿ ಸತ್ತು ಸರ್ಗ್ಗಸ್ತನಾದಂ (ಎಕ. X (s), ಮುಳಬಾ. ೩೦೭-೩ ; ಸು. 950). [?]

**ಮಾಕಿಮಯ್ಯ** (ನಾ). ಒಬ್ಬಾತನ ಹೆಸರು : × × × ಮಾಕಿಮಯ್ಯ ನಾಯಕಂ [ಬ]ರೆದಂ (ಶಾಇ. XI-i, ೨೨-೩೦: 897). [<ಮಾಕಿ + ಅಯ್ಯ$_1$]

**ಮಾಕುವರ** (ನಾ). ಲಕ್ಷ್ಮಿಯ ಪುತ್ರ ; ಮನ್ಮಥ : ಶೋಕವನು ನಿಲಿಸಿ ಶಿವಶರಣಶವಮಂ ತರಿಸಿ ಮಾಕುವರ ಹರರೂಪಜಂಗಮುವನಾಕ್ಷಣದಿ ತಾ ಕರೆಸಿ ಉನ್ನತಾಸನದಿ ಕುಳ್ಳಿರಿಸಿ ಜಲ ತಂದು ಚರಣವನು ತೊಳೆದು (ಪ್ರಾಶಂ. ೦೬-೦೩). [ಮಾ$_6$ + ಕುವರ$_2$]

**ಮಾಕ್ಷಿಕ** (ಗು). ೧. ಜೇನುಹುಳುವಿನ : ವಾತಪಿತ್ತಶ್ಲೇಷ್ಮದೋಷ ದೂಷಿತಮುಂ ಅಪ್ಪ ಶರೀರಮುಂ ಮಾಕ್ಷಿಕಪತ್ರಸನ್ನಿಭಚರ್ಮಾವರಣಮಿಲ್ಲ ದೊಡೆ ನೋಡಲುಂ ತೀಡಲುಂ ಕಾಕೋಲೂಕಮಕ್ಷಿಕಾದಿಕೃತಪೀಡೆಯುಂ ಕಾಯಲುಮಂ ಬಾರದು (ಕಕ್ಷಶ್ರ. ೩೨೯). (ನಾ). ೨. ಜೇನುತುಪ್ಪ ; ಮಧು : "ಸಾರಘಂ, ಮಾಕ್ಷಿಕಂ, ಕ್ಷೌದ್ರಂ, ಮಧು, ಪುಷ್ಪರಸಃ — ಈ ೫ ಜೇನುತುಪ್ಪಂ" (ಪಳಾಯು. ೦೦೨-೪೬೭) ; ಮಾಗಧ ಲೋಧ್ರಂ ಮಾಕ್ಷಿಕ ನಾಗರಮುಸ್ತಾ ಪ್ರಿಯಂಗುವಂ ಕಣ್ಣೊಳ್ ಸಂಯೋಗಂಗೆಯ್ದುದು ಹೇಮಂತಾಗಮದೊಳ್ ಕುಡೆ ಮನೋಹರಂ ಪ್ರತಿಪಾನಂ (ಅಕ್ಷಶಾ. ೭-೬೩); ಆ ಕಪಿಪ್ರವರ ಮನದೊಲವಿಂದ ಮಧುಪಾನಹರ್ಷದಿಂದೀ ಪರಿಯ ನಲಿವು ತೃತಂದು ಮನಬಂದಂತೆ ಮಾಕ್ಷಿಕವನುಣಲು (ವಂಶಾಂರಾ. ೩-೨೦-೩). ೩. ಜೇನುಹುಟ್ಟಿನಿಂದ ಸಿಗುವ ಮೇಣ ; ಜೇನುಮೇಣ : "ಮಾಕ್ಷಿಕಂ, ಮಾಕ್ಷಿಕಾ – ಈ ಯೆರಡುಂ ಜೇನ ಮೇಣ" (೬ಕಧಿ. ೦೨೪). ೪. ಕಬ್ಬಿಣ ಮತ್ತು ಗಂಧಕದ ಸಂಯುಕ್ತಧಾತು ; ಸೋನಾಮುಖಿ : ತ್ರಿಕಟುಕ, ತ್ರಿಫಲ, ಕೊನ್ನಾರಿಗೆಡ್ಡೆ, ವಾಯುವಿಳಂಗ, ಚವ್ಯ, ಚಿತ್ರಮೂಲ ಲವಂಗ ಚಕ್ಕೆ, ಏಲಕ್ಕಿ, ಮೋಡಿ, ಮಾಕ್ಷಿಕಭಸ್ಮ . . . ತೆಗೆದುಕೊಳ್ಳಲು ಕಾ . . . ಶ್ವಾಸ . . . ವಾತಗಳೂ ಸಹ ಮಾಣುವುವು (ಕಶಪ್ಯ. ಶಂ. ೪೩೭). ೫. (ಆಲಂ) (ನೊಣದಂತೆ) ಹೆಚ್ಚು ಪ್ರಯೋಜನವನ್ನು ಪಡೆಯದ ವ್ಯಕ್ತಿ : ದ್ರಾಕ್ಷಿರಸವೇನಲ್ಲ ಜೀವನದ ತಿರುಳಾರ್ಗಂ ಇಕ್ಷುದಂಡದವೊಲದು ಕಷ್ಟಭೋಜನವೆ ದಕ್ಷತೆಯಿನಿಡಿಯುವಂಗೊಂದೆರಡುಗುಟುಕುರಸ ಮಾಕ್ಷಿಕರು ಮಿಕ್ಕಿಲ್ಲ (ಮಂಕಳಕ. ೨೬೦). [ಸಂ.]

**ಮಾಖಂಡಭಟಾರ** (ನಾ). ಒಬ್ಬಾತನ ಹೆಸರು : ಶ್ರೀಮತ್ತದ್ವಯ್ಯ ಮಾಖಣ್ಣಭಟಾರರ್ಗ್ಗೆ ವಿದ್ಯಾದಾನಗೊಟ್ಟ ಮಣ್ಣು ಬಟ್ಟಮಾಳಯ್ಯಣ್ಣಾಗಂ (ಎಕ. V, ಅರಕ. ೨೪-೭; ಸು. ೯೦೦). [ಮಾಖಂಡ ? + ಭಟಾರ]

**ಮಾಗ**, ಮಾಗಿ, ಮಾಗೆ (ನಾ). ಚಳಿಗಾಲ ; ಶಿಶಿರಋತು ; **ಮಾಘ** ಮಾಸ : "ಮಾಗ (ಗೆ, ಮಾಗಿ) — ಮಾಘ = ಒಂದು ಮಾಸ" (ಶಬ್ದಕೋ. ೩೪) ; ಒಗೆದಾಗಳ್ ಮಾಗದುರ್ಕಂ ಮೊದಲೊಳೆ ತವೆ ತೂಳ್ದಿಕ್ಕಿ . . . ಬಂದತ್ತದೊಂದದ್ಭುತಮೊದವಿಪಮೋಘಂ ವಿಮೇಘಂ ನಿದಾಘಂ (ಶಂಸುಪಶಾ. ೬-೦೦೩) ; ಮಾಗದಲಿ ಮಿಂದಿಹನು ಚೂಗ ತಾ ಪಿಡಿದಿಹನು ಯೋಗ ಧ್ಯಾನಗಳ ತೊಱೆದಿಹನು ಹಾರುವನು ಭೋಗಿಯಾಗಿಹನು (ಸರ್ವಜ್ಞ. ೯೦೩); ಮಾಘ, ಮಾಗ (ಕಶಾಸಂ. ೦೯೩ ಶ್ರಧೋ). **ಮಾಗಿ** : "ಹೇಮಂತಮೆನೆ ಮಾಗಿಯಕ್ಕು" (ಮಂಗರಾ. ೨೩-೦೩) ; ಇಂದುಕಿರಣಂಗಳಿಂದಂ ಚಂದನರಸ ದಿಂದೆ ಮಾಗಿಯಾ ನೀರಿಂದು ನಂದದು ಪರಿತಾಪಾನಳಂ (ಶಶಿಶಾ. ೩-೦೬೩) ; ಉದಯದ ಮಾಗಿಯ ಬಿಸಿಲು ಅಂಗಕ್ಕೆ ಹಿತವಾಯಿತ್ತು (ಐಸಪ. ೨೦೪) ; ಅಂಚೆಗಳುಡುಗವು ಮಳೆಗಾಲದೊಳ್ಕೋಗಿಲೆಗಳಿಂಚರವನುಳಿದಿರವು ಮಾಗಿ ಯೊಳ್ (ಕ್ಷಮಿಶಾ. ೦೩-೦೬). **ಮಾಗೆ** : ಕಿಚ್ಚು ಸಾರ್ದಂಗೆ ಮಾಗೆಯೊಳ್ಳ ಕೆಯ್ದಂತೆ ಬೇಸಗೆಯೊಳ್ಳಿಕೆಯ್ಗುಮೆ (ಜೀವಸಂ. ೦೩-೨೩ ವ) ; ಸೋರದ ನಿವಾತಮಪ್ಪಾಗಾರಂ ಮಳೆಗಾಲದಂತು(ದು) ಮಾಗೆಯ ದಿವಸಕ್ಕೋರಂತಿ ರಾತಪಚ್ಛಾಯಾಗಾರಂ ತಾಂ ಗ್ರೀಷ್ಮಕಾಲದೊಳ್ ಸುಸ್ಥಾನಂ (ಅಕ್ಷಶಾ. ೭-೭) ; ಮಾಗೆಯ ಬೆಳ್ಳುಗಿಲಾಗಸದಂತಿರೆ ಭಸಿತೋದ್ಧೂಳಿತಲಸಿತಲಲಾಟಂ ಕಣ್ಗೊಳಿಸೆ (ರಾಮಾಶ್ವ. ೪೦-೦೭). [<ಸಂ. ಮಾಘ]

**ಮಾಗಡಲು** (ನಾ). ದೊಡ್ಡ ಕಡಲು ; ಮಹಾಸಮುದ್ರ : ಮರೆವಿನ ಮಾಗಡಲಿನಲ್ಲಿ ತೇಲುತಿಹುದು ವೇದವು ಆ ಅನಂತಭೇದವು (ಸೂರ್ಯಶಾ. ೪೦-೦೦). [ಮಾ$_4$ + ಕಡಲು (<ಕಡಲ್$_2$)]

**ಮಾಗಣಕಾಜ** (ನಾ). ಒಂದು ಹೋಬಳಿಯ ಅಧಿಕಾರಿ : ಶ್ರೀಮತು ಮಲ್ಲಿಕಾರ್ಜುನದೇವರಿಗೆ ವಿರುಪಣ್ಣವೊಡೆಯ × ದರ್ಮ್ಮವಾಗಿ ತಳಕಾಡ ಮಾಗಣಕಾಜ ಲಿಂಗರಸರು ಸೋಮನ ಹಳಿಯ ಮಾಳಿಗೆಯ ಮಾರನ ಮಗನು ಆಚಂದ್ರಾರ್ಕಸ್ಥಾಯಿಯಾಗಿ ದೀಪಾರಾಧನೆಯ ನಡಸುವರು (ಎಕ. XIV, ತಿರುಮ. ೨೯೩-೩ ; ಸು. 1384). [P ಇದು 'ಮಾಗಣಿಕಾಜ' ಎಂಬುದರ ಅಪಲಿಖಿತವಿರಬಹುದು]

**ಮಾಗಣೆ$_1$**, ಮಾಗಣೆ (ನಾ). ೧. ತಾಲ್ಲೂಕಿನ ಒಂದು ಭಾಗ ; ಹೋಬಳಿ : ಶ್ರೀವೀರಕೃಷ್ಣರಾಯರು ನಮಗೆ ಮಾಗಣೆಆಗಿ ಕೊಟ್ಟ ಆದವಾನಿಯ ದುರ್ಗಕ್ಕೆ ಸಲುವ ಕರಿಯ ಬೆಳುಗಲ್ಲ ಗ್ರಾಮದಲ್ಲು ಕೃಷ್ಣ

ಭೂಮಿ ಖಂ ೧೦ (ಶಾಶಾ. IX – ii, ೪೯೮-೦೨; 1514) ; ಕೆಳದಿಯಿಕ್ಕೇರಿ . . . ಲಾತವಡಿಯೆಂಬೀ ವಿಲಸನ್ಮಾಗಣಿಗಳೆಟುವಂ ನಿಮಗೀವೆಂ (ಕೆಳನೃ. ೦-೯೬) ; ಮುಮ್ಮಡಿಯ ಬೆಟ್ಟದ ಚಾಮರಾಜಂ . . . ನಿಜಕುಟುಂಬಂ ಬೆರಸು ತೆರಕಣಾಂಬಿಯೆಂಬ ಮಾಗಣೆಯನೆಯ್ದಿ ಬಂದು (ಮಂಶಾತ. ೦-೮೨ ವ).

**ಮಾಗಣೆ** : ೧. ಕಳಸಾಪುರದ ಮಾಗಣೆಗೆ ಸಲುವ ದೇವಶಾಪುರದ ಗ್ರಾಮದಲ್ಲೂ (ಶಾಶಾ. IV. ೨೯೩–೦೮ ; 1541) ; ಕೆಲವು ಮಾಗಣೆಗಳು ಯುದ್ಧದಲ್ಲಿ ಸಹಾಯಮಾಡಿದ ಕೊಡಗುರಾಜನಿಗೆ ಕೊಡಲ್ಪಟ್ಟವು (ರಕಕ. ೨೦) ; ನನ್ನ ಹೆಣ್ಣಿನ ಮೇಲೆ ದಿಟ್ಟಿನಡುವ ಧಿಮಾಕು ಈ ಮಾಗಣೆಯಲ್ಲಿ ಯಾವ ಗಂಡೆದೆಗೆ ಇದೆ ಎಂತೇನೆ (ಹೂಕಕ್ಕಿ. ೫೦). ೨. ಹರಹು ; ವಿಸ್ತಾರ : ಕಡಲ ಮಾಗಣೆಯಾಯ್ತು ಪಾರಿಯ ಕಡಿತ ಮನ್ಯಥಸಲಗುಗೊಂಡನು ನುಡಿಸಿದನು ವಿಶಿಹಿಣಿಯರಂಗದಲಂತರವ್ಯಥೆಯ (ಜೈಭಾಗ. ೧೦-೨೯-೨೬).

**ಮಾಗಣೇಮಣೆಗಾರ** = ಹೋಬಳಿಯ ಅಧಿಕಾರಿ : ಇನ್ನೊಮ್ಮೆ ಅಲ್ಲಿಗೆ ಹೋಗಿ ಮಾಗಣೇಮಣೆಗಾರರ ಹಾಗೆ ಸ್ಥಳತನಿಖೆ ಮಾಡಿಕೊಂಡು ಬರಬೇಕು (ಮೂಳಕ್ಕ. ೦೭೬).

[ದೇ.॥ ತಮಿ. ಮಾಕಾಣ ; ಮಲ. ಮಾಕಣ ; ತುಳು. ಮಾಗಣೆ ; ತೆಲು. ಮಾಗಾಣಿ]

**ಮಾಗಣಿ₂** 'ಮಾಗಣೇ' ನೋ.

**ಮಾಗಣಿಕಾಜಿ** (ನಾ). ಹೋಬಳಿಯ ಅಧಿಕಾರಿ : ಮಾಗಣಿಕಾಜಿರ ಬಡಹನಿಗೆ ಕಾಣಚಿ × × × ಲ್ಲಿಯ ಮಹಾರಾಯರು ಕೇಳಿ . . . ಯಿಾ ಧರ್ಮ್ಮವ ಆಚಂದ್ರಾರ್ಕವಾಗಿ ನಡೆವ ಹಾಗೆ ಬಿಡಿಸಿ ಕೊಟ ಗ್ರಾಮಂಗಳ ಶಿಲಾಶಾಸನ (ಎಕ. III(R). ನಂಜನ. ೯೩-೦೨; 1529) ; ಕನಕರತ್ನಾಂಚಿತದುಪಕರಣಗಳ ಸನ್ನಿನಿಯೋಗದವರ ಚಿತ್ತೈಸು ಧನದತ್ತ ಮಾಗಣಿಕಾಜಿ ನಿಯೋಗಸಜ್ಜನರ ಚಿತ್ತೈಸು (ಪೋಹಕ. ೨೦-೫೭).

[ಮಾಗಣಿ₂ + –ಕಾಜಿ]

**ಮಾಗಣೇ**. ಮಾಗಣಿ₂ (ನಾ). ೧. ಕೋರಿಕೆ ; ಬೇಡಿಕೆ : ಎರಡರ ಪೈಕೀ ಬೇಕಾದ್ದು ಒಂದ ಮಾಗಣೇಗೆ ಶ್ಯಾಮರಾಯ ಕಬೂಲ ಆದರ ಬಂದ ತಿಳಿಸರಿ (ರೀಕಹ. II. ೬೦೬). ೨. ಲಗ್ನದ ನಿಶ್ಚಯಕ್ಕಾಗಿ ವಧುವನ್ನು ವರಪಕ್ಷದವರು ಕೇಳುವುದು. **ಮಾಗಣಿ₂** : ೧. ಹುಡುಗನು ಮುಂದೆ ಕೆಲನಿಮಿಷಗಳಲ್ಲಿಯೇ ತಂದೆಗೆ ದುಂಬಾಲುಬಿದ್ದು ೬–೮ ನಯೆಪೈಸಗಳ ಪೆಪ್ಪರಮೆಂಟ ಇಲ್ಲ ಚಾಕಲೇಟ್‌ಗಳ ಮಾಗಣಿ ಮುಂದರಿಸುವನು (ಹುತ್ತುಹು. ೫೭).

**ಮಾಗಣಿಹಾಕು** = ಮದುವೆಗಾಗಿ ಹೆಣ್ಣನ್ನು ಕೇಳು: ಅವನ ಮಾಲ್ಕೀ_ಜಹಾಗೀರೀಮನಾದ ಬಸವಂತಿಗೇ ಮಾಗಣಿಹಾಕಿದ (ರೀಕಹ. II. ೬೨೦).

[ ←ಹಿಂ. ಮಾಂಗನ್ ; ಮರಾ. ಮಾಗಣೀ, ಮಾಗಣೇ. / ಪ್ರಾ. ಮಗ್ಗಣ. / ಸಂ. ಮಾರ್ಗಣ]

**ಮಾಗಣೆ** ' ಮಾಗಣಿ₁ ' ನೋ.

**ಮಾಗತೆ** ' ಮಾಗದಿ ' ನೋ.

**ಮಾಗದಿ**, ಮಾಗತೆ, ಮಾಗದೆ (ನಾ). ಹೊಗಳುವವಳು ; ಸ್ತುತಿ ಮಾಡುವವಳು : ಕೇರಿಕೇರಿಯೊಳು ಮಾಗದಿಯರುಂ [ಶಾಶಾಂ. ತಿಯರು, ಧಿಯರುಂ, ಧರುಗಳ್] ಭಲರೆ ಭಲರೇ . . . ಪುರುಷರ ಭಾಗಧೇಯ ಎನುತ್ತ ಕೈವಾರಿಸುತ ಬರೆ ಮುಂದೆ (ಬಸಪು. ೨೬-೬). **ಮಾಗತೆ** : ಶ್ರುತಿಗಳೇ ಕೈವಾರಿಸುವ ಮಾಗತೆಯರಖಿಳಾಗಮಪುರಾಣಪ್ರತತಿಯೇ ಪಾಠಕರು . . . ಆ ತ್ರಿಯಂಬಕನ (ಕೂರಿರಾ. ೦-೨-೫). **ಮಾಗದೆ** : ಸುರವಾಗದೆಯರುಟಿ ಕೊಂಡಾಡುವರು (ಕೂರಿರಾ. ೬-೫೦-೬೨).

[< ಸಂ. ಮಾಗಧೀ]

**ಮಾಗದೆ** ' ಮಾಗದಿ ' ನೋ.

**ಮಾಗಧ₁** (ನಾ). ಒಂದು ಬಗೆಯ ಸಸ್ಯ ಮತ್ತು ಅದರ ಬೇರು : ಹಿಪ್ಪಲಿ : " ಮಾಗಧಂ ಕೃಷ್ಣಮೆನಲು ಹಿಪ್ಪಲಿಯೆನಿಕ್ಕು " (ಮಂಗರಾ. ೪೦-೩೬) ; ಸುರಕುಜದ ಬೀಜಂ ಮದ್ಯಂ ರಜನಿ ಮಾಗಧ . . . ಗುಂಜಾಫಳವಿಂವಂ ಪರಿಕ್ಷಿನ್ನಂ ಮಾಡಿಟ್ಟೊರಸಿ ಮೊದಲೊಳ್ ಪಾಲನೆರೆ ಗೊಯ್ದಿರ್ದುಳೆ ಪೂಗೊಂಚಲಿಂದೆಸೆಗುಗುಂ ಚಂಪಕಕುಜಂ (ಲೋಕೋಪ. ೬-೪೫).

[ಸಂ. ಮಾಗಧಾ]

**ಮಾಗಧ₂** (ಗು). ೧. ಮಗಧದೇಶಕ್ಕೆ ಸಂಬಂಧಿಸಿದ ಅಥವಾ ಮಗಧದೇಶದಲ್ಲಿ ಜೀವಿಸುವ. (ನಾ). ೨. ಮಗಧದೇಶದ ದೊರೆ : ನಿಜವಾಕ್ಸೌಂದರ್ಯದೆ ಪೋಲ್ತಂ ಪುರುನಂದನನಂ ಪೊಗಟ್ಟ ಮಾಗಧಂ ಮಾಗಧನಂ (ಅಂಪು. ೦೨-೦೦೫) ; ಕೌಸಲ ಚೈದ್ಯ ಮಾಗಧರು ಅರಸುಗಳು ನಾನಾದಿಗಂತದ ಧರಣಿಪರು ಸಚಿವರು ಪಸಾಯ್ತರು ನೆರೆದುದು (ಕುಭಾಶ. ೦೩-೪೦). ೩. ಜರಾಸಂಧ : ಮಾಗಧನಾಯುಸ್ತಮಮಂ ಬೇಗಂ ಬೆದಱಿಪ ಹಿಮಾಂಶುರುಚಿಗಳವೆನಲಂತಾಗಳೆ ದಶನೇಂದುದ್ಯುತಿಯಾಗಲೆ ಸಭೆಯೊಳಗೆ ಕೃಷ್ಣನವರ್ಗಿಂತೆಂದಂ (ನೇಮಿಪು. ೦೦-೦೦೬) ; ಮಾಗಧನ ಮಂದಿರದ ರಾಜಾಂಗಣದೊಳವನೀಸುರರು ನೋಟಕರಾದರಿಲ್ಲಿ ಮುರಾರಿ ಫಲುಗುಣರು (ಕುಭಾಸ. ೨-೯೯). ೪. (ಸಾಮಾನ್ಯವಾಗಿ ಸ್ಮೃತಿಪಾಠಕನ ವೃತ್ತಿಯನ್ನು ಅವಲಂಬಿಸುವ) ವೈಶ್ಯಪುರುಷನಿಗೆ ಕ್ಷತ್ರಿಯಸ್ತ್ರೀಯಲ್ಲಿ ಜನಿಸಿದವನು. ೫. ಹೊಗಳುಭಟ್ಟ ; ಸ್ತುತಿಪಾಠಕ : "ಪ್ರಬೋಧಕಾಃ, ಮಾಗಧಾಃ . . . ಮಂಗಳಪಾಠಕಾಃ–ಈ ೬ ಮಂಗಳಪಾಠಕರ್" (ಹಲಾಯು. ೭೦–೨೯೦); ದೆಸೆಗೆ ಪೊಣ್ಮುವ ನಿಜವಾಕ್ಸೌಂದರ್ಯದೆ ಪೋಲ್ತಂ ಪುರುನಂದನನಂ ಪೊಗಟ್ಟ ಮಾಗಧಂ ಮಾಗಧನಂ (ಅಂಪು. ೦೨-೦೦೫); ಕಂಸಂ . . . ವಂದಿಗಳ್ ನಿಂದ್ಯಮೆನೆ ಮಾಗಧರಾಗದೆನೆ . . . ಪಾಸಱಿಯೊಳ್ ಕೂಸನ ಪ್ಪಳಿಸಿ (ಜಗು. ೨-೫೩ ವ); ಮಾರವೀರನ ಕಟ್ಟೋಲಗದ ವಂದಿಗಳ ಮಾಗಧರ ಗಾಯಕರ ಪಸುರ್ವಟ್ಟೆಯು ಗೂಡಾರದ ಬೀಡಾರಂ (ರಾಜುಕ್ಕ. ೫೩-೦೦). [ಸಂ.]

**ಮಾಗಧಿ** (ನಾ). ೧. ಮಗಧದೇಶದ ರಾಜಕುಮಾರಿ : ಘುಡುಘುಡಿಸಿ ಮಾಗಧಿಯ ಮಗನಲಿ ಜಡಿದವಿಳಿಗಶ್ರುಗಳು (ಕೂರಿರಾ. ೫-೯-೨೫). ೨. ವೈಶ್ಯಪುರುಷನಿಗೆ ಕ್ಷತ್ರಿಯಸ್ತ್ರೀಯಲ್ಲಿ ಜನಿಸಿದವಳು. ೩. ಹೊಗಳುವವಳು; ಸ್ತುತಿಸುವವಳು : ಮಹಾಶ್ವೇತೆಯ ಕಣ್ಣಱುದು ವೇಣುರವಂಗಳುಮಂ . . . ಮಾಗಧಿಯರ ಜಯಶಬ್ದಂಗಳುಮಂ ಪ್ರತೀಹಾರಿಯರ್ ನಿವಾರಿಸುತ್ತಮಿರ್ದರ್ (ಕಾದಂಉ. ೪೬). ೪. ಒಂದು ಬಗೆಯ ಸಸ್ಯ ಮತ್ತು ಅದರ ಬೇರು; ಹಿಪ್ಪಲಿ: "ಕೃಷ್ಣಾ, ಉಪಕುಲ್ಯಾ, ವೈದೇಹೀ, ಮಾಗಧೀ, ಚಪ್ಪಲೀ ಕಣಾ–ಈ ೬ ಹಿಪ್ಪಲಿ" (ಹಲಾಯು. ೦೦೦-೪೬೦). ೫. ಪ್ರಾಕೃತಭಾಷಾವರ್ಗಕ್ಕೆ ಸೇರಿದ ಒಂದು ಭಾಷೆ : ಈ ದೃಶ್ಯಕಾವ್ಯದಲ್ಲಿ . . . ಬೇಡರ ಜಾತಿ ಸ್ತ್ರೀಯರು ಮುಂತಾದವರಿಗೆ ಮಾಗಧೀಭಾಷೆಯೂ . . . ವ್ಯವಹಾರಾರ್ಹವಾಗಿ ವಿಹಿತವಾಗಿರುವುದು (ಶಾಕದ. ೯೩೫). ೬. ಒಂದು ಬಗೆಯ ಕಾಡುಮಲ್ಲಿಗೆ ; P ಇದನ್ನು ಸೇವಂತಿಗೆಯೆಂದೂ ಕೆಲವರು ಹೇಳುತ್ತಾರೆ : "ಮಾಗಧೀ, ಯೂಥಿಕಾ_ಈ ೨ ಸೇವಂತಿಗೆ" (ಹಲಾಯು. ೩೪-೫೩). ೭. [ಕಾವ್ಯಮಿಾ] ಕಾವ್ಯದ ರೀತಿಗಳಲ್ಲಿ ಒಂದು : ಕೆಲವರು 'ಲಾಟ', 'ಆವಂತಿ', 'ಮಾಗಧಿ' ಈ ಮೂರನ್ನೂ ಸೇರಿಸಿ ರೀತಿಗಳು ಆರೆಂದೂ ಹೇಳುತ್ತಾರೆ (ಕೈಶಿಶಿ. ೨೨೦). [ಸಂ. ಮಾಗಧೀ]

**ಮಾಗಧೀಲತೆ** (ನಾ). ಒಂದು ಬಗೆಯ ಕಾಡುಮಲ್ಲಿಗೆಯ ಬಳ್ಳಿ : ವರ್ಣಮೂಱಱ ಯೋಗವೆಂದೆನೆ ತೋಱುತಿರ್ದ್ದುವು ಮಾಗಧೀಲತೆ ಕುಸುಮಕೇಸರದಿಂದ ಜನಮನವ (ಶಾಶಿರಾ. ೦-೯೬). [ಸಂ. ಮಾಗಧೀಲತಾ]

**ಮಾಗರಯ್ಯ** (ನಾ). ಒಬ್ಬಾತನ ಹೆಸರು : ಮಾಗರಯ್ಯ ಪಣ್ಣೆ ಪೆಣ್ದಿರನುಡಯುಟ್ಟಿಲುಮೆಟ್ಟಿನ ತಾಱುಗಳೊಳುಮುಟ್ಟಿ ಸತ್ತನ್ (ಎಕ. X. ಮುಳಬಾ. ೦೬೦-೦ ; ಕಿ. 950). [ಮಾಗರ₆ + ಅಯ್ಯ₆₁]

**ಮಾಗಳಿ**, ಮಾಗುಳಿ (ನಾ). ಒಂದು ಬಗೆಯ ಸಸ್ಯ ಮತ್ತು ಅದರ ಬೇರು; P ಈ ಬೇರನ್ನು ಕೆಲವು ಔಷಧದ್ರವ್ಯಗಳಿಗೂ ಉಪ್ಪಿನ ಕಾಯಿ ಮಾಡಲೂ ಬಳಸುತ್ತಾರೆ: ದೇವದಾರು, ಮಾಗಳಿ, ಕಾಡುಮಾಗಳಿ . . . ಮುಡಿವಾಳ ಇವಿಷ್ಟನು ಪ್ರತ್ಯೇಕ ಎರಡುವರಹ ತೂಕ ಮಜ್ಜಿಗೆ ಯಲ್ಲರೆದು (ವೈದ್ಯಸಾ. I, ೦೨೬) ; ಅಗರಡಕೆ ಎಲೆ ಕಡಲೆ ಕಬ್ಬಿಹ ರಾಜ್ಯ ಮಾಗಳಿಭೂಮಿ ಎಂಬುವರು (ಶಶಿಲೀ. ೫೭೭). **ಮಾಗುಳಿ :** ಎಳಮಾವಿನ ಮಿಡಿ ಮಾಗುಳಿ ಮೆಟಸಿನ ಕರೆ ಬೆತ್ತಲಟ್ಟೆಯಿಯಳೆಯ ಗೊಲೆಯಿಂದಳವಟ್ಟಿರೆ ಲಾವಣಕಂಗಳನಿಕ್ಕಿದರಾಗಳುಪ್ಪಿನಿಯಿಂದಂಗನೆಯರ್ (ಸುಕುಮಾ. ೦೦-೩೦) : ಬೆಳರ್ಗುಂಪಂ ತಳೆದಲ್ಲ ಮಾಗುಳಿಗಳಂ ಕೂಷ್ಮಾಂಡ ವೃಂತಾಕಕೋಮಳನಾನಾ ಫಳಶಾಕಪಾಕದುಪದಂಶಾನೇಕವಂ ತಂದು. . . ಬಡ್ಡಿಸಿದರ್ (ಶಾಂತೀಶ್ವ. ೦೫-೩೦) ; ಅದಕುತ್ತಮದ ಕಂಪ ಮಾಗುಳಿ [ಪಾಠಾಂ. ಳ್ಳಿ]ಯ ಬೇರಿನೊಳು ಪೊಡೆವೆರಸಿಡುವುದು (ಸೂಪಶಾ. ೩-೨೭).

**ಮಾಗಳಿಬೇರು, ಮಾಗುಳಿಬೇರ್, ಮಾಗುಳಿವೇರ್** = ಮಾಗಳಿಸಸ್ಯದ ಬೇರು : ಮಾಗಳಬೇರು, ಕಾಡುಮಾಗಳಿಬೇರು . . . ಮುಡಿವಾಳ ಇವುಗಳನ್ನು ಪ್ರತ್ಯೇಕ ಎರಡು ವರಹ ತೂಕವನ್ನು ಚೂರ್ಣಿಸಿ ಮಜ್ಜಿಗೆ ಯಲ್ಲರೆದು (ಸಶಿವೈ. ೦೦೫); ಸೈದಲೆವಿಸಳು ಸಹದೇವಿಯಂ ಬಿಳಿಜಾಲ ಮಾಗಳಿಬೇರಂ ಇವೆಲ್ಲವಂ ಚೂರ್ಣವಂ ಮಾಡಿ ಎಣ್ಣೆಯೊಳಟ್ಟು ಆಯೆಣ್ಣೆ ಕಣ್ಣೊಳ್ ಪೂಸಲು ವಶೀಕರಣಂ (ಕಾಪುಶಾ. ೨೬೩); ಮಾವಿನ ಕಾಯ್ಗಳೊಪ್ಪ ವೆಳಗಪ್ಪುರ ಮಾಗುಳಿಬೇರ್ ಸುಧಾರಸಂ ತೀವಿರೆ ಕಂಪು ಪೊಂಪುಳಿಸುವುಪ್ಪಿನ ಕಾಯ್ಗಳನೇಕವಂ ಕಳಾಕೋವಿದೆಯರ್ ಕಲಂಬಿಡಿಯಲಿಕ್ಕಿದರ್(ಪಳಶಾಂ. ೯೬೩); ಪಿಪ್ಪಲಿ ಚಲ್ಲಗಾಯ್ ಮೆಟಸು ಮಾಗುಳಿವೇರ್ಮೊಳೆಯಲ್ಲವೇಲೆ . . . ಅರೆಮಾದುಫಲಂಗಳಾದಿಯಾದುಪ್ಪಿನ ಕಾಯ್ಗಳಂ ಮಿಗಮಿಗಿಪ್ಪವನಿಕ್ಕಿದನಬ್ಜ ಪತ್ರದೊಳ್ (ರೀಅಚ. ೩-೬೩). [ದೇ.॥ ತಮಿ. ಮಾಕಾಳಿ, ಮಾವಲಿ]

**ಮಾಗಳಿಗೆಣಸು** (ನಾ). ಮಾಗಳಿಸಸ್ಯದ ಬೇರು : ಮಾಗಳಿಗೆಣಸು. ನೆಲಮಾಗಳಿಬೇರು , . . ತಿಗಡೆ, ಪದ್ಮಕ, ಶ್ರೀಗಂಧ, ಇವಿಷ್ಟನೂ. . ಪ್ರತ್ಯೇಕ ನಾಲ್ಕು ವರಹ ತೂಕವ ಸೇವಿಸಲು ಬಿಕ್ಕಳನುಡಿ, ನೆನಹು ಇವೆಲ್ಲವೂ ಪರಿಹರವಹವು (ವೈದ್ಯಸಾ. II, ೫೩). [ಮಾಗಳಿ + ಗೆಣಸು (< ಗೆಟಿಸು)]

**ಮಾಗಟಿನಾಡು** (ನಾ). ಒಂದು ಊರಿನ ಹೆಸರು : ಶ್ರೀಮನ್ನೊಟಮ್ಮ ಕುಳಾನ್ತಕ ಪೆರ್ಮ್ಮಾನಡಿಗಳ್. . . ಮಾಗಟಿನಾಡ ರಾಜಪೊಳಲ ಬೀಡಿನೊಳ್ ಸುಖಸಂಕಥಾವಿನೋದದೊಳ್ ಪ್ರಿಥುವೀರಾಜ್ಯಂಗೆಯುತ್ತುಮಿರೆ (ಎಕ. VII (R), ಶಾಗಮಂ. ೯೯-೬ ; 972). [ಮಾಗಟ್ಟು + ನಾಡು]

**ಮಾಗಾನ** (ನಾ). ದೊಡ್ಡ ಕಾಡು; ಮಹಾರಣ್ಯ : ಹೈಮಪೆತೀಸಪ್ಮೇಳದಿನಾ ಮಾಗಾನಂ ಮಹೇಶನಂತೆಸೆದಿರ್ಕುಂ (ವೀರಶ. ೪-೩೪).

[ಮಾ$_4$ + ಕಾನ$_1$ (< ಕಾನ್)]

**ಮಾಗಾಯ್** 'ಮಾಂಗಾಯ್' ನೋ.

**ಮಾಗಾಯಿ** 'ಮಾಂಗಾಯ್' ನೋ.

**ಮಾಗಿ** 'ಮಾಗ' ನೋ.

**ಮಾಗಿಣಿ** (ನಾ). ಒಂದು ಬಗೆಯ ಬಳ್ಳಿ; ಗೋಪವಲ್ಲಿ : "ಮಾಗಿಣಿ ಗೋಪವಲ್ಲಿ ಮಾಗಧಿಯೆನಿಸಿಕ್ಕು" (ವಂಗರಾ. ೩೪-೨೯). [ ? ]

**ಮಾಗಿಸು** (ಕ್ರಿ). ೧. ಹಣ್ಣು ಪಕ್ವವಾಗುವಂತೆ ಮಾಡು : ಮಾವಿನ ಹಣ್ಣನ್ನು ಚೆನ್ನಾಗಿ ಮಾಗಿಸಬೇಕು (ರೂಢಿ). ೨. (ಅಲಂ) ಪಕ್ವಗೊಳಿಸು ; ಹದಗೊಳಿಸು : ಇತ್ತೀಚೆಗೆ ನಡೆದ ಘಟನೆಗಳು ಮನಸ್ಸನ್ನು ಚೆನ್ನಾಗಿ ಮಾಗಿಸಿದವು (ರೂಢಿ). [ಮಾಗು + —ಇಸು$_3$]

**ಮಾಗು** (ಕ್ರಿ). ೧. ಕಾಯಿ ಮೊದಲಾದುವು ಪಕ್ವವಾಗು ; ಹಣ್ಣಾಗು ; ಕಳಿ : ಕಾಯಿ ಮಾಗಿದ ಮೇಲೆ ತಾನಾಗಿಯೇ ಉದುರುತ್ತದೆ (ಹಸುಹೊ.೩೩೦); ಹಣ್ಣುಗಳು ಗಿಡದಲ್ಲೇ ಮಾಗಿದಾಗ ಅವುಗಳಲ್ಲಿ ಜೀವಾತುಗಳ ಅಂಶ ಹೆಚ್ಚು (ಆರುಆ. ೭೭). ೨. ಗಾಯ, ಹುಣ್ಣು ಮೊದಲಾದುವು ಒಣಗು : ಮಾಗಿದ ಗಾಯದ ಗುರುತನು ಕಂಡರೆ ನಗುವುದಿದೇತಕೆ ನೀನು ಗಾಯ ಗಳಿಲ್ಲದೆ ರಣವನು ಗೆಲುವಡೆ ವಜ್ರಕಾಯನೆ ಹೇಗೆ ನೀನು (ಇಂದಾಶ. ೬೨-೦೦೦). ೩. ಪ್ರಭಾವವು ಕಡಮೆಯಾಗು : ಶಕ್ತಿಯು ಕುಗ್ಗು : ಮುಸುಕಿದ ಕುಳಿರೊಳ್ ದೆಸೆಯಾಗಸಮಿಳೆ ಬೆಟ್ಟಡವಿಯೆಂಬಿವೆಂತಾನುಂ ಕಾಣಿಸಲಾರ್ತು ವಿಲ್ಲಮೆನೆ ಮಾಮಸಗಿರ್ದುದು ಮಾಗೆ ಮಾಗೆಸೆಕೆವೆಸರಿಳೆಯೊಳ್ (ಕಹ್ಯಾಕು. ೬೩ ಕೃಶಿಸ). ೪. (ಅಲಂ) ಪಕ್ವಗೊಳ್ಳು ; ಹದವಾಗು : ಸುಖದುಃಖದ ಏರಿಳಿತದ ಜೀವನದೀ ಚಂಚಲತೆಯ ಕಂಡು ಮನವು ಮಾಗಿದೆ (ಸ್ವರ್ಣಸ. ೩೪).

[ದೇ.॥ ತುಳು. ಮಾಗು; ತೆಲು. ಮಾಗು, ಮಗ್ಗು]

**ಮಾಗುಂಡ** (ನಾ). ೧. ದೊಡ್ಡಕೊಳ್ಳ,— ತೀರ್ಥ : ಆಗತವ ಮಾಡಿ ಮಾಗುಂಡ[ಪಾಠಾಂ. ಗುಡ]ವ ಮಿಂದರೆ ತಾ ಕೊಡಬಲ್ಲನೆ ಕೂಡಲಸಂಗಮ ದೇವ (ಬಸವ. ೬೯೫). ೨. ಒಂದು ಊರಿನ ಹೆಸರು : ಕಿರಿಯಮುಗುಳಿ ಮುಟಿಪಳ್ಳಿ ನಲ್ಲೂರು ಮಾಗುಂಡ ತೇಗುರು ಆರ ಮಣ್ಣಂ ಬಿಟ್ಟ ಮಂಗಳಂ (ಎಕ. VI, ತಕ್ಕಮ. ೯೨-೨೨ ; 959). [ಮಾ$_4$ + ಗುಂಡ$_2$]

**ಮಾಗುಂಡಿ** (ನಾ). ಒಂದು ಊರಿನ ಹೆಸರು : ಭುವನಾಯ್ಯನ ಮಾಗುಣ್ಡಿಯೊಳ್ಕಾದಿದನ್ದು (ಎಕ. III (R), ಹೆಗ್ಗಡ. ೨೩-೮; ಸು. 930) ; ಉಪ್ಪವಳ್ಳಿಯ ಪೋಚಿಗಾವುಂಣ್ಡ ವಳಿಯೆಜಿ ಮುಂದ್ದ ಮಾಗುಣ್ಡಿಯೆಜಿಗ (ಎಕ. V, ಬೇಲೂರು. ೩೦೬-೦೩; 971). [ ? ]

**ಮಾಗುಟ್ಟು** (ನಾ). ಪರಬ್ರಹ್ಮನ ವಿಚಾರವಾದ ರಹಸ್ಯ ; ಪರತತ್ತ್ವ : ಅರಿವರಿವುಗಳ ಹರಳಿನೊಡವೆಗಳ ಹೊಳಿಸುತ್ತ ಆಗಸದ ಬಾಗಿಲಡಿ ಮಾಗುಟ್ಟು ಮೆರೆಯೆ (ಮುರಿಬೀ. ೨೬-೮). [ಮಾ$_4$ + ಗುಟ್ಟು$_1$]

**ಮಾಗುಳಿ** 'ಮಾಗಳಿ' ನೋ.

**ಮಾಗೆ** 'ಮಾಗ' ನೋ.

**ಮಾಘ** (ನಾ). ೧. ಚಾಂದ್ರಮಾನದ ಹನ್ನೊಂದನೆಯ ತಿಂಗಳು : ಆ ಮಾಸವೇ ಚೈತ್ರ . . . ಮಾಘ ಫಾಲ್ಗುಣವೆಂದು ಹನ್ನೆರಡು ತೆಜಿನಾಗಿಹುದು (ಏಕೋ. ೨೬೩) : ಪಂಚಾಕ್ಷರಾದಿಯಲಿರುವಖಿಳಮಂತ್ರಗಳ ಜಪ . . . ಮಾಘದಲ್ಲಿ ತದಂಗ ಪ್ರಾಜ್ಞಾಭೃದ್ಧಿ (ಗಣಶಾ. ೯-೭೪). ೨. ಸಂಸ್ಕೃತದಲ್ಲಿ 'ಶಿಶುಪಾಲವಧ' ಎಂಬ ಕಾವ್ಯವನ್ನು ರಚಿಸಿದ ಮಹಾಕವಿಯ ಹೆಸರು : 'ಸ್ತುತಿಗೆಯ್ವೆಂ . . . ಶತಪತ್ರಾಕ್ಷಕಥಾಮೃತ ಚ್ಯುತಬುಧಸ್ತೋಮಾಘನಂ ಮಾಘನಂ (ಜಗವ. ೦-೮) ; ಮಾಘ ಓದಿ ಮಗಾ ಕೆಟ್ಟ (ಗಾದೆ). [ಸಂ.]

**ಮಾಘಮಾಸ** (ನಾ). =ಮಾಘ ೧ : ದೊರೆಕೊಂಡ ಮಾಘಮಾಸಂ ಬರೆ ಕೃಷ್ಣಚತುರ್ದಶೀದಿನಂ ಸಮನಿಸೆ (ಅದಪು. ೦೬-೩೦) ; ಮಾಘಮಾಸದ ನವಿಲಿನಂತೆ ಆದೆ ನೋಡಾ ಅವ್ವಾ (ಸಶವ. II. ೦೬೮-೩೨೬) ; ಆ ದುಃಖ ಸುಖವಾಯ್ತು ; ಮಾಘಮಾಸವು ಹೋಗಿ ಚೈತ್ರವಾಯ್ತು ! (ಶಾಂತಶ. ೬೪ ೨೩). [ಸಂ.]

**ಮಾಘಸ್ನಾನ** (ನಾ). ಮಾಗಿಕಾಲದಲ್ಲಿ ಪವಿತ್ರತೀರ್ಥಗಳಲ್ಲಿ ಮುಳುಗು ಹಾಕಿ ಮಾಡುವ ಸ್ನಾನ : ಮಾಘಸ್ನಾನಕ್ಕೆ ಹೋಗಿ, ನಿತ್ಯಸ್ನಾನ ಪೂಜ್ಯ (ಗಾದೆ). [ಸಂ.]

**ಮಾಘ್ಯ** (ನಾ). ಒಂದು ಬಗೆಯ ಮಲ್ಲಿಗೆ ; ಕೋಲುಮಲ್ಲಿಗೆ : "ಮಾಘ್ಯಂ, ಕುಂದಂ — ೨ ಮೊಲ್ಲೆಗಿಡದ ಹೆಸರು. ಇದು ಮಲ್ಲಿಗೆ ಭೇದ, ಕೋಲುಮಲ್ಲಿಗೆ" (ಸಿದ್ಧಾಂತಿ. ೦೨೮). [ಸಂ.]

**ಮಾಚಪತ್ರೆ** 'ಮಾಚಿಪತ್ರೆ' ನೋ.

**ಮಾಚಯ್ಯ** (ನಾ). ಒಬ್ಬಾತನ ಹೆಸರು : ಪೆರ್ಗ್ಗಡೆ ಮಾಚಯ್ಯ ಮಜ್ಜಿಗಲದ ಗಾವುಣ್ಡ ಗಜಿಯ ಮೆಟ್ಟಿಟ್ಟಡೆ ಬಾಟಿಸಿದ ಸ್ಥಿತಿಕ್ರಮಮಾವುದ ನ್ನೊಡೆ (ಎಕ. IV (H), ತಾವರ. ೦೫೯-೭; 965). [ಮಾಚ್ಚ$_6$ + ಅಯ್ಯ$_1$]

**ಮಾಚಿ** (ನಾ). ಸುವಾಸನೆಯ ಎಲೆಗಳಿಂದ ಕೂಡಿದ ಒಂದು ಬಗೆಯ ಔಷಧೀಸಸ್ಯ ; ಮಂಚಿಪತ್ರೆ : "ಮಿಟಲೆ ಮಾಚಿಯೆನಿಕ್ಕು" (ಮಂಗರಾ. ೪೦-೩೦). 'ಮಾಚಿಪತ್ರೆ' ಪರಾ. [ಸಂ. ಮಾಚೀ]

**ಮಾಚಿಗ** (ನಾ). ಒಬ್ಬಾತನ ಹೆಸರು : ಎಚಿಯಂಗಪ್ಪನ ಮಗಂ ಮಾಚಿಗಂ (ಎಕ. III (R). ಹೆಗ್ಗಡ. ೨೬-೦೦; 900 ?). [ಮಾಚ₀ + – ಇಗ]

**ಮಾಚಿಪತ್ರೆ**. ಮಾಚಿಪತ್ರೆ (ನಾ). = ಮಾಚಿ : ಪಶ್ಚಿಮಘಟ್ಟಪ್ರದೇಶ ಮಾಚಿಪತ್ರೆಯು ತೌರು . . . ಸುಮಾರು ಅಗಲವಾದ ಎಲೆಗಳಲ್ಲಿ ಸುವಾಸನೆಯ ಎಣ್ಣೆಯನ್ನು ಸ್ರವಿಸುವ ಕಣಗಳಿರುತ್ತವೆ (ಶಾಸಗಿ. ೩೮). **ಮಾಚಪತ್ರೆ** : ಮಾಚಪತ್ರೆ, ಹೀರೆತೊಕ್ಕು ಇವುಗಳೆರಡನ್ನೂ ಉಂಡೆಮಾಡಿ, ಕೆಂಡದ ಮೇಲೆ ಇರಿಸಿ ರಸ ತೆಗೆದುಕೊಂಡು ಸಕ್ಕರೆವೆರೆಸಿ ಕೊಡಲು ಜ್ವರತಾಪ ಮತ್ತು ದಾಹ ಇವೆರಡೂ ನಿಲ್ಲುವುವು (ಸಕವ್ಯ. ೧೦೪). 'ಮಂಚಿಪತ್ರೆ' ಪರಾ. [<ಸಂ. ಮಾಚೀಪತ್ರ]

**ಮಾಚು** 'ಮಾಜು₁' ನೋ.

**ಮಾಜನ** (ನಾ). ಮಹಾಜನ : ಸ್ವಸ್ತಿಶ್ರೀ ಸಬೆಣ್ಣಾತ ಮಾಜನ ಮುವತ್ತೀರ್ಚ್ಛರ ಅಳಿವ್ದಾಡುಗೆಯುನ್ ಕೇಸರಿ ತೊಱುವಾಳ್ಳನಾ ಮಗನ್ ಆಲನ ತೊಱು ಇಕ್ಕಿಸಿ ಬಿಟ್ಟಾನ್ (ಎಕ. X (S), ಮುಳಬಾ. ೦೩೬-೨ : 8ನೆಯ ೬೪); ಮಹಾಜನ – ಮಾಜನ, ಮಹಾದಾನಿ – ಮಾದಾನಿ (ಕವುರ. ೨೯೦ ಕ್ರಯೋ); ಈ ಪುಣ್ಯಕಥೆಯ ಕೇಳಿದ ಮಾಜನ[ಪಾಠಾಂ. ಮನುಜ]ರಿಗೆಲ್ಲ ಪಾಪ ವಿಮೋಚನಾಗುವುದು (ಅಭ್ಯರೂ. ೦-೨೩). [<ಸಂ. ಮಹಾಜನ]

**ಮಾಜರು** 'ಮಹಜರು' ನೋ.

**ಮಾಜಾತ** (ನಾ). ಲಕ್ಷ್ಮಿಯ ಪುತ್ರ ; ಮನ್ಮಥ : ಜಿಱಗಾಗಿ ನಿಶಾತಪೋಗಾತ್ರಧರನನೆಸಲೆಱದ ಮಾಜಾತನನೀಕ್ಷಿಸಿ ಗಗನದೊಳಾತುರಿಸುವ ಹುಯಜರ್ಗೆ ನಾರದನೆಂದಂ (ಗಿರಿಕ. ೬-೩೮). [ಸಂ].

**ಮಾಜಾರಿ** (ನಾ). ಲಕ್ಷ್ಮೀಪುತ್ರನಾದ ಮನ್ಮಥನ ವೈರಿ : ಶಿವ : ರಾಜನ ಮೋಹದ ಪೂಜಾಗಜವನೋರ್ವ ಮಾಜಾರಿಜಕುತ ಬೇಡಿವಡೆ (ಶೈರವೇ. ೪-೧೭೦). [ಸಂ.]

**ಮಾಜಿ** 'ಮಾಜೀ' ನೋ.

**ಮಾಜಿಕಾಲ** (ನಾ). ಹಿಂದಿನ ಕಾಲ : ಪೂರ್ವಕಾಲ : ಬೀಜಗಳ ಕೊಡು ನಮಗೆ ಮೋಜಲ್ಲ ಬೊಮ್ಮಯ್ಯ ಮಾಜಿಕಾಲಲ್ಲ ಬರಗಾಲ (ಕವ್ಯಶಾ. ೨೨೭). [ಮಾಜಿ (<ಮಾಜೀ) + ಕಾಲ]

**ಮಾಜಿಸು**. ಮಾಂಜಿಸು (ಕ್ರಿ). ೧. ನಿವಾರಿಸು : ಇಲ್ಲದಂತೆ ಮಾಡು : ಸಾವಂ ಮಾ[ಪಾಠಾಂ. ಮಾಂ]ಜಿಸು ಜೀವರ ನೋವಂ ಪರಿಹರಿಸು (ವೃಷಭ. ೩೪-೦೦೭). ೨. ತೋರಗೊಡದಿರು : ಮರೆಮಾಡು : ಕ್ಷತ್ರಿಯ ಬೀಜಪ್ರತಾಪನಾದಡೆ ಬಲಿವನವನವನಿಯನರಿದು ಆಗಮನಾ ರೂಪ ಮಾಜಿಸ ಬಹುದುಱು ಸಂತಾಪವ್ಯಾಕೆ (ಜಕಣ. ೨೦-೦೪); ನೀತಿವಿನಯಂಗಳ ಮಾಜಿಸಿ (ಅಜುಕ. ೨೦-೦೪). **ಮಾಂಜಿಸು** : ೨. ಅಂತು ನರರ್ಗೆ ಮೊದಲೊಳಂತು ಚಿಂತೆಯೊದವಿದೊಡಂ ಮಾಂಜಿಸಲ್ಕೆಂದು ಪೊಸನುಡಿಯ ಬಿನ್ನಣಮಂ ಪುಸಿನಗೆಯ ಸನ್ನಣಮಂ ತೋರ್ಪಡಿಸುತಮುದಂ ಮಜಿಗೈವುದುಂಟು (ರಾಮಾಶ್ವ. ೧೦-೦೮). [ಮಾಜು₁ + – ಇಸು₃]

**ಮಾಜೀ**, ಮಾಜಿ (ಗು). ೧. ಹಳೆಯ; ಹಿಂದಿನ : ಮತ್ತೂ ಅವೇ ಮಾಜೀ ಹಾಡು ಹಾಡತಾರೆ. ಮತ್ತೆಲ್ಲಿಯಾದರೂ ದೂರದೇಶದಿಂದ ನಾಯಕಿಣಿಯರನ್ನು ತರಿಸಿದ್ದರೆ ನೆಟ್ಟಗಾಗುತ್ತಿತ್ತು (ವೇಯಶಾ. ೧೩೪). **ಮಾಜಿ** : ೨. ಅಧಿಕಾರ. ಪದವಿ ಮುಂತಾದುವುಗಳಿಂದ ನಿವೃತ್ತಿಹೊಂದಿದ ; ವಿಶ್ರಾಂತ : ಮಾಜಿ ಆಮಿಲ ಲಕ್ಷ್ಮೀನರಸೈಗೆ ಹೇಳಿದ್ದರಿಂದಾ (ಪತ್ರ ಅಂ. ೦೬೨೯, ೯೪-೦೦, 1813); ಮಾಜಿ ಆಮಿಲರ ಕಾಲದಲ್ಲಿ ಶೆಟ್ಟಿ ವರ್ತಕರು ಮೊದಲಾದವರು ಸರ್ಕಾರಕ್ಕೆ ಬಾವತಿ ಮಾಡಿದ್ದು (ಮಹಾವಂ. II, ೩೭); ಮುಖಭಂಗಿತರಾದ ಕೆಲವು ಮಾಜಿ ಸಭಾಸದರು ತೊಂದರೆ ಕೊಟ್ಟರೆ ಹೇಗೆ ? (ಅಪಶಾ. ೨೩೦). [←ಅರ. ಮಾಝಿ; ಹಿಂ. ಮರಾ. ಮಾಜೀ]

**ಮಾಜು₁**, **ಮಾಂಜು₁**, ಮಾಚು (ಕ್ರಿ). ೧. ಕಾಣದಂತಾಗು : ಮರೆಯಾಗು ; ಅಡಗು : ಜೂಜಾಟಕೆ ಸೂಳೆಬಂಟಕೆ ರಣದ ಸಂಪಾಜ ಪೆರ್ಗುಡಿಗಳ ಚರ್ಚೆ ರಾಜವೀಧಿಯೊಳಿಱಿದಾಡುವ ಸಂದಣಿ ಮಾಜದು ನಿತ್ಯಕೃತ್ಯದಲಿ (ಕೋಹಶ. ೨೦-೨೭); ವಳಿಗಳುಂ ಮಾಜಿದುವು ಒಪ್ಪದಿಂದಾಸ್ಯ ಶಶಿಕಳೆಯನಂಗೀಕರಿಸೆ . . ಮನಂ ಮಾಂದ್ಯತೆಯನಾಂತುದಾ ತನ್ವಿಯುಳಿ ಗತುಳಗರ್ಭೋದಯದೊಳು (ವಂಶಾರಾ. ೦-೯-೩). ೨. ನೆಸಪಿನಲ್ಲಿ ಉಳಿಯದಿರು ; ಮರೆತುಹೋಗು : ಈ ಜಗದೊಳಹೊರಗೆಲ್ಲಲ್ಲಿ ತುಂಬಿಹ ತೇಜವಾನೆಂದರಿದರಿವನು ಮಾಜಿ ಮೈಮರೆದಿರೆ ನಿಃಶ್ರೇಯುವಹುದೆಂದು ರಾಜಯೋಗವ ತಿಳಿಸಿದರಿಂದೆ (ಕೃಕವ. ೪-೦-೪) ; ಮಾಜದೇ ಸ್ಟೇಷನ್ನಿನಲ್ಲಿ ರಸಗುಲ್ಲಾ ತಗೊಂಡಿದ್ದೆ (ಸಾಹೇಬ್. ೩೩). ೩. ವಾಸಿಯಾಗು ; ಮಾಯು : ಓರಿಯರಸಿಯ ಮನಸ್ಸಿನ ಗಾಯ ಮಾಜುವಂತಹ ಮಾತು ಬಮ್ಮಲದೇವಿಯತ್ತಣಿಂದ ಅಪರೂಪವಾಯಿತು (ಸವಶಿ. ೨೦೭). ೪. ಅಡಗಿಸು ; ಮುಚ್ಚು ; ಮರೆಮಾಡು : ರವಿ ಮುಗಿಲ ಮಱೆಗೊಂಡೊಡಂ ಬೆಳಗು ಲೋಕಮಂ ಧವಳಿಸುವ ತೆಱದಿ ನಿಜಮಂ ಮಾಜಿ ಕೃತಕದೊಳಗವಿರ್ದೊಡಂ ಹಳಹಳನೆ ಹೊಳೆಹೊಳೆದು ದೇವಕಳೆ ಮಸಕೆ ಮಂಗಳವಿತ್ತುದು (ಸಿದ್ಧರಾ. ೨-೨೪) ; ಬಿಸರುಹದಳಲೋಚನೆ ಕೇಳು ನಿನ್ನಯ ಪೆಸರಾವುದೆಲ್ಲಿಂದ ಬಂದೆ ಅಸಮಾಕ್ಷನಾಣೆ ಮಾಜದೆ ಪೇಳು (ಮೋಹಶ. ೦೦-೦೩) ; ಏಳಂಜಬೇಡಿನ್ನು ಮಾಜದಿರ್ತನ್ನಾಣೆ ಹೇಳು (ಕೈವಲ್ಯ. ೦೮-೪೩). ೫. ಅಳಿಸು ; ತೊಡೆದು ಹಾಕು : ಧರ್ಮಮಾರ್ಗವ ಪೊಳ್ದು ಸಾರಿ ನಿರ್ಲಜ್ಜೆಯುಂ ಸಾಧ್ವಿಯರ ಪಜ್ಜೆಯುಂ ಮಾಜಲಸುಗೈದ ಬರಿದೆ (ವಂಶಾರಾ. ೨-೦೨-೩೦). ೬. ತಪ್ಪಿಸಿಕೊಳ್ಳು ; ನುಣುಚಿಕೊಳ್ಳು : ನೇಜೆಯುದಿಱಿತಕೆ ಚಿಗಿದು ಕುದುರೆಯಿಂದ ಮಾಜದೆ ಬೀಳ್ವ ರಾವುತರ ವಾಜಿಯ ಪಿಡಿದು ಮೂಗರಿದವರನು ಯಮರಾಜನಾಲಯಕಟ್ಟಿದರು (ಕಂಸವ. ೩-೭೯). ೭. ಹಿಂದೆಗೆ ; ಹಿಂಜರಿ : ತೇಜಿಗಳನು ಕುಣಿಸುವರು ಕಲಭವನು ಮಾಜದೆ ಬೀದಿವರಿಸುವ ರಾಜಕುಮಾರರ ಸೌಭಾಗ್ಯ ನೆಱೆ ವಿಭ್ರಾಜಿಸಿತ್ತಾ ಕೇರಿಯೊಳಗೆ (ಕಂಸವ. ೭-೦೦). **ಮಾಂಜು₁** : ೧. ಸುಕೃತಂ ಸ್ವರ್ಗಸುಖಕ್ಕೆ ಕಾರಣಮೆನಲ್ಕತ್ಸೌಖ್ಯಮೇಂ ನಿತ್ಯಮೋ ವಿಕೃತಂಗೊಂಡಱವಂದ ಬಲ್ಪನಿಸದೋ ಸ್ವಪ್ನಂಬೊಲೇಂ ಮಾಂಜದೋ ಪ್ರಕೃತಿ ಪ್ರಾಪ್ತಿಗೆ ನೋಂತದೊ ಬರಿವದೇಂ (ರತ್ನಾಶ. ೩೭) ; ತೋಡುಂಬೆಟ್ಟಿನ ಕಾರ್ಸ್ಸೊನಲ್ ಗೊಹೆಯೊಳೇ ಮಾಂಜಿರ್ಪ ಮಾರಾಂತಿರಲ್ (ಪ್ರಸೂಭು. ೦-೪೯). ೪. "ಮಾಂಜು— ಅಪಲಾಪೇ(ಮರೆಮಾಚು)"(ಶಬ್ದಾ); ಅದನೆಲ್ಲಂ ಮಾಂಜದಿರ್ ಚಿತ್ರದೊಳ್ (ಅಪ್ಪಕೃ. ೩-೩-೨೩೦) : ಮಂಜುಳೆ ನಿನ್ನ ಪೊಂಜೆಳೆಯೊಡಲ್ ಕಡುಬಾಡಿದೆ ಬಂಜೆ ಮಾಂಜದಿರ್ (ಶಶಿ. ೩-೩೦) : ಮುನಿಯ ಬೆಸುವುದೆನಗೆ ತಮ್ಮಾ ಘನಪದಾಂಬುಜವಿಲ್ಲಿಗೈತಂದನುವನಿನಿಸುಂ ಮರೆಯ ಮಾಂಜದೆ (ರಾಜಶಾಸಂ. ೦-೩-೬). ೫. ತರಳೆಯ ತ್ರಿವಳಿಯ ಪೋಲ್ವೆಯ ತರಂಗಮಂ ಪಡೆವೆನೆಂದು ಸುರನದಿ ಪಲವುಂ ತೆರೆಗಳನೆ ಪಡೆದು ಪಡೆಯದೆ ಸರಿದೆರೆಯುಂ ಮಾಂಜಿ ಪೆಗುಳ್ದು ಪಡೆದಪುದಿನ್ನುಂ (ರಾಜಶೇ. ೭-೩೭) ; ಈ ಶಾಸನವು ನಮ್ಮ ಭಯದಂತೆ ಅದೇ ಆಗಿದ್ದರೆ, ಇವನ್ನು ಮಾಂಜಿ ಲಯಮಾಡಿ ಇಲ್ಲವೆನಿಸಿ ಬಿಟ್ಟರೆ ಸಾಕು (ಶಾಂತ್ರಕ. ೦೬-೪). ೬. ಪಂಜರದೊಳಗಿದ್ದು ನಿನಗಿಷ್ಟೆ ಯೆನದಿರು ಮಾಂಜಿ ನೀನಗಲ್ವಾಗ ನಿನ್ನ ಹೊಂಬಾಳೆಮೈಯುಳ ದಂತಕಾಂತಿಯ ಹೊನ್ನ ಪಂಜರದೊಳು ಕೂಡಿಸುವೆನು (ಶಕಕ. ೯-೪೭). **ಮಾಚು** : ೪. ಎಲೆ ಮಿನಲೋಚನೆ ವಿತರ ಯೋಚನೆ ಏನೆಂಥ ಯಾಚನೆ ದೀನೆ ಮಾಚದೆ ಮನವನು ಹೇಳು ನಿನ್ನಿನಿಯನು ಬಹನೆಂದು ಬರಲಿಲ್ಲವೇನು (ಅಂಜಾಶ. ೦೩೦-೪೪). ೮. ಅಡಗಿಸಿಕೊಳ್ಳು ; ಕಾಣದಂತೆ ಮಾಡು : ಮಂಡಿಗೆ

ಬೆತ್ತ ಹಿಡಿಯುವುದಕ್ಕೆ ಮಂಡೆ ಮಾಜಿ ನಾಚುತಿದ್ದೆ ಹೆಂಡತಿಸಂತತಿ ಸಾವಿರ ವಾಗಲು ದಂಡಿಗೆ ಬೆತ್ತ ಹಿಡಿಸಿದಳಯ್ಯ (ಕೈರಂದ. ೦-೯೩-೦) ; ಹಿಗ್ಗನ್ನು ಮಾಜುವುದು ಹೆಣ್ಣಿನ ಸ್ವಭಾವ (ಅಂಜೂ. ೦೦೯).

[ದೇ.॥ ತಮಿ. ಮಾಯ್ ; ತುಳು. ಮಾಜಾವು, ಮಾಜು ; ತೆಲು. ಮಾಪು =ಹಾಳಾಗು, ನಾಶವಾಗು ; ಕೋತ. ಮಾಂಜ್ ; ತೊದ. ಮೋಜ್, ಮೋರ್ಝ್]

**ಮಾಜ್ಕು**, ಮಾಂಜು₂ (ನಾ). ಮರೆಮಾಚುವಿಕೆ ; ಮೋಸ ; ಠಕ್ಕು : "ವಂಚನೆಗೆ ಮಾಜೆಂದು ಪೆಸರಕ್ಕು" (ಶಬ್ದಕೈ. ೫೭). **ಮಾಂಜು₂** : "ಮಾಂಜೆಂದು ವಂಚಿಸಿದುದು" (ಕಕಶಾ. ೬೭-೩೦೩). [< ಮಾಜು₁ ]

**ಮಾಟ₁** (ನಾ). ೧. ಮಾಡಿದ ಕೆಲಸ ; ಕೈಗೊಂಡ ಕಾರ್ಯ : ಕೆರಕಂ ತುಱಿಯುಂ ತೊನ್ನುಂ ಶರೀರದೊಳ್ತೋಱೆ ತಂತ್ರದಿಂ ಕಿಡಿಸದೆ ನಾಗರ ಮಾಟಮೆಂದು ಕಿವಿಯೊಳು ಮುಂದಿಟ್ಟುಂ ಪಲರುಮಾರ್ಚಿಪರ್ಪುತ್ತುಗಳಂ (ಸಮುಕ. ೯-೭೬) : ಪಿಡಿಪುದು ಕರ್ಪುವಿಲ್ ತುಡುವುವೈದಲರಂಬಿವನೇಕೆ ನಚ್ಚಿ ನೀಂ ತೊಡರ್ವೆ ರತಿಪ್ರಿಯೋಪಕರಣಂಗಳಿವೇಂವೊ ಕಾಳಿಗಕ್ಕೆ ನೀಂ ವ್ಯಾಡನೋಳಿದಿರ್ಚಿ ರೂಪುಗಿಡುವಂದಿವು ಮಾಡಿದ ಮಾಟಮಾವುದು (ಜಗು. ೦೬-೩೬) : ಮಾತು ಕಿರಿದಾದೊಡಂ ಮಾಟವಪ್ಪುದು ಪಿರಿದು (ಜಪ್ಪರ. ೦೩-೮). ೨. ರಚನೆ ; ನಿರ್ಮಾಣ : ಲಲಿತೋನ್ನತಮಣಿ ಮಯಕೂಟದಂದಮುದು ಪಲವುಂ ದೇಸೆಯ ಮಾಟದಂದಂ (ಅಂಪು. ೯-೩೦ ಕಗಳ). ೩. ಬಟ್ಟೆಯ ಎಳೆಗಳ ರಚನೆ ; ನೆಯ್ಗೆ : ಸೀರೆ, ಬಟ್ಟೆಗಳ ಬಣ್ಣ ಮತ್ತು ಮಾಟ ನಮಗೆ ಒಪ್ಪುತ್ತದೆಯೋ ಇಲ್ಲವೋ ಎಂದು ವಿಮರ್ಶೆ ಮಾಡಬೇಕು (ಗೃಹಶಾ. ೬೮). ೪. ಆಕಾರ ; ಸ್ವರೂಪ ; ಆಕೃತಿ : ಆ ಮೊಗದ ಮಾಟ, ಕಣ್ಣುಗಳ ಹೊಳಪು . . . ಇವೆಲ್ಲಾ ರೇವಕ್ಕನವು (ಹಾಕುತ್ತ. ೦೦೨) ; ಅಸ್ತವ್ಯಸ್ತವಾದ ತಲೆಸೀರೆಯಲ್ಲಿ ಅವಳ ಮೈಯ ಮಾಟ ಎದ್ದು ಕಾಣುತ್ತಿತ್ತು (ಕೂಕಗ. ೩). ೫. ಚೆಲುವು ; ಅಂದ ; ಶೋಭೆ : ವರದಿಗ್ವನಿತೆಗೆ ಮಾಟದ ಕುರುಹಾ ತ್ರ್ಯಭುವನಕಾಂ[ತೆಗಂ] ವರ್ ಕಂಠಾಭರಣಮೆನೆ ಪರೆದ ತನ್ನಧ್ವರಧೂಮದೆ ಕರಿದು ಮಾಡಿದು ನಿಜಯಶಮಂ (ಕಂಕಚಾ. ೦೯-೧೪) ; "ಮಾಟದ _ ಕೃತಕ" (ಕಂಕಂ. ೫೬೯). ೬. ಅಲಂಕಾರ: ಈ ದೇವರ್ಗೆ ನಿವೇದ್ಯಕ್ಕಂ ದೇಗುಲದ ಮಾಟಕ್ಕಂಮಾಱನುಮನುಕೂಳರಪ್ಪವರ್ ಮುಂಜೇಶ್ವರದೇವರ ಪುನಃ ಪ್ರತಿಷ್ಠೆಗೆಯ್ದುನಿತು ಪಲಮಾನೆಯುಂ ಬಿಟ್ಟವರ್ (ಎಕ. VII (S). ೩೪೦. ೫೩೩-೯; 1069). ೭. ಒಯ್ಯಾರ ; ಒನಪು ; ವಿಲಾಸ : ತವೆ ಸಾಪತ್ನ್ಯ ದುರ್ಮಾಟ ಸಾಲ ಮಧುಪಾನಂ ಬೇಟದಾ ಜಾರಿಣೀನಿವಹಂ ಮಾಡುವ ಮಾಟ . . . ಇಂತೆಲ್ಲ ಮುಂ ಸವಿಯಾಗಂತ್ಕಿದಿ ಕಪ್ಪವೈ (ಸೋಮೇಶ. ೩೯) ; ನಾಟಕಲಿದುದು ಚಿತ್ರವೀ ನಟನಾಟಕನ ಸಿಕ್ಕಿಸುವ ಬಗೆಯುಲಿ ಮಾಟ ಮಾಕರಿಸಿ ಕಾಣಲಾದುದು ಮತ್ತೆ ಮಾಯೆಯುಲಿ (ಕೃಕುರಂ. ೬-೩೬). ೮. ಪ್ರಮಾಣಬದ್ಧವಾದುದು ; ಔಚಿತ್ಯಪೂರ್ಣವಾದುದು : ವ್ಯಾಯಾಮಕ್ಕೆ ತಕ್ಕಂತೆ ಮಾಟವಾದ ಎದೆ ಮತ್ತು ನಡು (ಶೀಪುಶಾ. ೩) ; ಅವರ ಪ್ರತಿಯೊಂದು ಅಂಗವು ಮಾಟವಾಗಿ ಸುಂದರವಾಗಿ ಸದೃಢವಾಗಿತ್ತು (ಕಂಹೇ. ೦೦). ೯. ರೀತಿ ; ಬಗೆ ; ವಿಧಾನ : "ವಿಧಿಃ, ವಿಧನಂ, ವಿದಧಃಣೀಯಂ, ವಿಧಾನಂ, ಈ ೪ ಮಾಟಂ" (ಕಾಕಶ್ಯ. ೨೨೦) ; ಎನ್ನ ಮಾಟ ಕುರುಡ ಸಭೆಯಲ್ಲಿರ್ದ ನಗೆಯ ನಕ್ಕಂತಾಯಿತ್ತು (ಪೋಳವಿವ. ೦೦-೩೩) ; ಪಲವು ಬಗೆಯುಂ ಮಾಡಿ ಬೆಂದ ಕುಂಬಳಕಾಯ ಕೆಲವ ನಾಲ್ಕೆಂಟು ಮಾಟದ ಕೊಣಬ ಮಾಡುವುದು (ಸೂಶಚಾ. ೫-೩೯) ; ಎತ್ತ ಬಲ್ಲರ್ಜನರಿಲೆ ಪಾರ್ಥ ಕಪಟಿಗಳ ಚಿತ್ರದೊಳ್ಪುದುಗಿರ್ದ ಮಾಟಮಂ (ಕೃಪಚಾ. ೨೯-೩೬). ೧೦. ನಡವಳಿಕೆ ; ಆಚರಣೆ ; ವರ್ತನೆ : ನುಡಿಯೊಂದು ಮಾಟವೊಂದೆನಿಸಿದ ಮಾನವಂಗೆನಗೆ ದೇವಿ ಹಸಾಪವ ನೇಕೆ ಮಾಡಿದಳ್ (ಕಾದಂಶಾ. ೨೬೦) ; ಒಲವಿಲ್ಲದ ಪೂಜೆ ನೇಹವಿಲ್ಲದ ಮಾಟ ಆ ಪೂಜೆಯೂ ಆ ಮಾಟವೂ ಚಿತ್ರದ ರೂಪು ಕಾಣಿರಣ್ಣಾ (ಬಸವ. ೦೨೩) : ಭೂತದಯೆಯಿಲ್ಲದನ ಮಾಟಂ . . . ಪ್ರವರ್ಧನೆವಹುದೆ ಲೋಕದೊಳು (ಬಸವು. ೩೭-೩೯). ೧೧. ಕಣ್ಕಟ್ಟು ; ಇಂದ್ರಜಾಲ : ತಲೆ ನೆಲದೊಳು ರುಳ್ದೊಡಂ ಮೆಯ್ಗುಲಿಯೊರ್ವಂ ಪಿಡಿದು ತಲೆಯನಿಟ್ಟಟ್ಟೆಯೊಳಗ್ಗಲಿಸಿದ ಮುಳಿಸಿಂ ಮಾಟದ ತಲೆಯಿಟ್ಟಾಡುವನನಿನಿಸು ಪೋಲ್ಪನುಗೆಯ್ದಂ (ಕಂಕಚಾ. ೦೦-೬೫) ; ಭವದೀಯ ಪ್ರಸಾದದಿನೆನಗೆ ಬಲ್ಲಲಮುಪ್ಪ ಬವರ ವಿಲ್ಲದಾವನಾನುಮೊರ್ವಂ ಮಾಯಾವಿಯ ಮಾಟಮಕ್ಕುಮುದು ಕಾರಣಂ ಬೇಗಂ ಬಿಜಯಂಗೆಯ್ವುದು (ಕಂರಾಮಾ. ೯-೦೦೪ ವ). ೧೨. ಕೃತಕವಾದುದು : ಕೃತ್ರಿಮವಾದುದು : ಮಾಟದ ಮುಡಿಯಂತೆ ಕಟ್ಟಿದ ಪಲ್ಲಂತೆ ಪೀಲಿಯ ಕಣ್ಣಂತೆ . . . ಮರುಳ ಕೋಡಿನಂತೆ (ರವರ್ತಾವ್ಯ. ೮-೯೪). ೧೩. ಮಂತ್ರತಂತ್ರಗಳಿಂದ ಇತರರಿಗೆ ಕೇಡನ್ನು ಬಯಸಿ ಮಾಡುವ ಹಿಂಸಾಕರ್ಮ ; ಅಭಿಚಾರ : ದಾಯಾದಿಗಳು ಮಾಡಿಸಿರುವ ಮಾಟದ ದೆಸೆಯಿಂದ ಮೂವರು ಮಕ್ಕಳಿಗೂ ಒಂದೇ ಸಾರಿ ಖಾಯಿಲೆಯಾಗಿದೆ (ಕಂಕಕಂ. ೩೯) ; ಈ ಅಯೋಗ್ಯದೊರೆಗೆ ಮಾಟವನ್ನು ಮಾಡಿಸಿಯೋ ವಿಷವನ್ನಿಡಿಸಿಯೋ ಕೊಲ್ಲಿಸಿದರೆ ಮುಂದೆ ಇವ್ಮಡಿರಾಜಒಡೆಯರಿಗೆ ಪಟ್ಟವಾಗುವುದು (ಬಡಕ. ೩೩).

**ಮಾಟಕುಟಿಲ**, **ಮಾಟಕುಟ್ಲೆ** = ಅಭಿಚಾರಕ್ರಿಯೆ : ನೀನು ಮಾಟ ಕುಟಿಲಗಳನ್ನು ಬಲ್ಲೆಯಾ ? (ಅರ್ಚಕ. ೯೭) ; ನಿಮ್ಮ ತಂದೆ . . . ಕಾಡಿನ ಯಕ್ಷಿಣಿಯ ಜೊತೆಯಲ್ಲಿ, ತನಗೆ ಜಯವಾಗಲೆಂದು, ಮಾಟಕುಟ್ಲೆ ನಡೆಯಿಸಿದನಂತೆ (ಅರ್ಚಕ. ೫೬). **ಮಾಟಪೋಟ** = ಇತರರ ಕೇಡನ್ನು ಬಯಸಿ ಅಭಿಚಾರಕ್ರಿಯೆಯನ್ನು ಮಾಡುವ ದುಷ್ಟ : ಘಾತಕನುಯುವನಲ್ಲ ಜಗದೊಳು ಕೂಟಸಾಕ್ಷಿಯ ಪೇಳ್ವನಲ್ಲವು ಮಾಟಪೋಟನು ಅಲ್ಲ ಇವನಿಗೆ ಸಾಟಿ ಯಾರಿಲ್ಲ (ಕಮುಕ. ೦೦೯). **ಮಾಟ ಮಾಡಿಸು** = ಮಾಯಾಮಂತ್ರಗಳಿಂದ ಇತರರಿಗೆ ಕೆಟ್ಟದಾಗುವಂತೆ ಮಾಡು ; ಅಭಿಚಾರ **ಮಾಡಿಸು** : ಅವನಿಗೆ ಆಗದವರು ಬೇಕಾದಷ್ಟು 'ಮಾಟ' ಮಾಡಿಸಿದರಂತೆ (ಕಮ್ಮೂರು. ೦೯೬) ; ಮೋಹನನ ಮೇಲೆ . . . ಮಾಟ ಮಾಡಿಸಿ ಆಗಲೇ ಕೆಲವು ತಿಂಗಳಾದವು (ಕಂಕಕಂ. ೦೬೬). **ಮಾಟಮಾಡು** = ೧. ಕಣ್ಕಟ್ಟುಮಾಡು ; ಇಂದ್ರಜಾಲವನ್ನು ಹೂಡು : ಆ ದಂಡೆಯು ಮಾಟ ಮಾಡಿದಂತೆ ಕ್ಷಣಕ್ಷಣಕ್ಕೆ ಬದಲಾಗುವ ಹಾಗೆ ಅವುಗೆ ಕಾಣಿಸಿತು (ದುಃಖಿ. ೬-೦೫೩) ; ಮಂತ್ರಿಗಳೇನು ಮಾಟಮಾಡಿ ಆಹಾರ ಒದಗಿಸೋಕೆ ಸಾಧ್ಯವೇ ? (ಕಂರಕೂ. ೦೩). ೨. ಮಂತ್ರತಂತ್ರಗಳಿಂದ ಇತರರಿಗೆ ಕೇಡುಂಟುಮಾಡು ; ಶೂನ್ಯ ಮಾಡು : ಕೇರಳದ ಮಾಂತ್ರಿಕರು ಮಾಟ ಮಾಡುವುದರಲ್ಲಿ ಹೆಸರುವಾಸಿ ಎಂಬ ಭಾವನೆ ಇದೆ (ಕಜಿ).

[< ಮಾಡು₁ / ಮಲ. ಮಾಟ್ಟು, ಮಾಟ್ಟು ; ತುಳು. ಮಾಟ]

**ಮಾಟ₂** 'ಮಾಡ₁' ನೋ.

**ಮಾಟಕ** (ನಾ). ಕಣ್ಕಟ್ಟು ಮಾಡುವವನು ; ಐಂದ್ರಜಾಲಿಕ : ನೋಟಕ, ಬೂಟಕ, ಮಾಟಕ ಏನೇನೋ ಮಾಡಿ ಸೂತ್ರವ ಹಿಡಿದು ರಂಗವ ತುಂಬಿದೆ ಹೇ ಧೀರಾ ! (ಸೂರ್ಯಕಾ. ೯-೭). [ಮಾಟ₁ + –ಕ₃]

**ಮಾಟಕೂಟ₁** (ನಾ). [ವೀಶೈ] ಸೇವಾಕಾರ್ಯದಿಂದ ಹೊಂದುವ ಸಂಯೋಗ ; ಮಾಟಕೂಟವೆಂಬ ಕೀರ್ತಿಗೆ ಸಿಲುಕಿ ಜಂಗಮವೆ ಲಿಂಗವೆಂಬುವ ಮಹಿಮೆಯಲ್ಲಾ (ಶಪತಂ. ೨೨೪-೦೦೦೪) ; ಮಾಟಕೂಟ ಬಸವಣ್ಣಂಗಾಯಿತ್ತು ನೋಟಕೂಟ ಪ್ರಭುದೇವರಿಗಾಯಿತ್ತು ಭಾವಕೂಟ ಅಜಗಣ್ಣಂಗಾಯಿತ್ತು (ಶುಹಾರ. ೨. ೬೭-೦೪೩) ; ನಿನ್ನ ಮನದಲಿ ಮಾಟಕೂಟದ ಬುದ್ಧಿ ಮುಮಕರಿಸೆ ನನ್ನ ಹಸು ಹಡುಂಡಿತು (ಕೃಕುರಂ. ೨೩-೫೦). 'ನೋಟಕೂಟ' ಪರಾ. [ಮಾಟ₁ + ಕೂಟ₁]

**ಮಾಟಕೂಟ$_2$** (ನಾ). ಅಂದವಾದ ಗೋಪುರ, – ಶಿಖರ ಆ ಮಣ್ಣಿಂದಂ ಬಳಸಿಯುಂ ಕೋಂಟೆಯುಂ ಮಾಡಿ ಮಾಟಕೂಟಪ್ರಾಸಾದಸಹಿತಂ ಪೊೞಲಂ ಮಾಡಿ (ಪಶ್ಪಾರಾ. ೦೬೬-೭); ಮರಿದಿಲ ಮಾಳಿಗೆಗಳ ಮಾಟಕೂಟದ ಶಾಲೆಗಳೊಳ್ ಕೂಡೆ ನಿಂದು ನೋಡಲ್ ನೆರೆದ ಪುರಜನದ ಸಂಭ್ರಮಂಗಳಿಂ (ಆದಂಪು. ೯-೩೯ವ) ; ತೋರಣಧ್ವಜ ಮಾಟಕೂಟಗಳ ಚಾರುಹರ್ಮ್ಯದ ಶೋಭೆ (ಸಾಳ್ವಭಾ. ೩೦-೨) ; ವಿಸ್ತರದರಾಜಭವನದ ಮಾಟಕೂಟದಯುತ ಸ್ತಂಭದಿಂದೆಸೆವ ಸಭೆಯ ನವರತ್ನದ ಗಭಸ್ತಿಗಳ ಕೋಟಾವಲಯದ ಮಣಿಪುರವಂ . . . ತೋಱ (ಕೃಎಂಭಾ. ೨೪-೯೮).

[ಮಾಟ$_1$ + ಕೂಟ$_3$./ತಮಿ. ಮಾಟಕೂಟಮ್ = ಮಹಡಿಮನೆ]

**ಮಾಟಗಾತಿ** (ನಾ). ಮಂತ್ರತಂತ್ರಗಳನ್ನು ಬಲ್ಲವಳು ; ಮಾಯಾವಿ : ನನ್ನನ್ನು ಮಾಟಗಾತಿಯೆಂದು ಕರೆದಿರುವಿರಿ (ಜೆಂಡಾಬ. ೩೩) ; ನೀವು ಬಂದಾಗಲೇ ಗೊತ್ತಾಯಿತು. ಇದೆಲ್ಲಾ ಆ ಮಾಟಗಾತಿಯ ಮಾಯ ಅಂತ (ಬೆಳುವು. ೭೨). [ ಮಾಟ$_1$ + — ಕಾತಿ$_5$ ]

**ಮಾಟಗಾರ** (ನಾ). ೧. ಇಂದ್ರಜಾಲವಿದ್ಯೆಯನ್ನು ಬಲ್ಲವನು ; ಐಂದ್ರಜಾಲಿಕ : ಸಹನಿಯೂ ಅಂಕಸಂಖ್ಯೆಗಳ 'ಮಾಟಗಾರ' ನೆಂದು ಖ್ಯಾತಿವೆತ್ತ ಗಣಿತಶಾಸ್ತ್ರಜ್ಞ ಶ್ರೀನಿವಾಸರಾಮಾನುಜನ್ ಎಂಬಾತನೂ ಇಬ್ಬರೂ ಕೂಡಿ ಕಲಿಯುತ್ತಿದ್ದರು (ಸಕ್ಕಳ. ೦೩೧) : ಬಿಳಿಯ ಮರಳು ಮಾಟಗಾರನ ಅಪ್ಪಣೆಯಂತೆ ಅಪ್ಸರೆಯರು ನೆಯಿದ ಅಮೃತದ ಜಮಖಾನದಂತೆ ತೋರುವುದು (ಶಿವರಾ. ೧೦೯). ೨. ಮಾಟ ಮಾಡುವವನು : 'ಮಾಟಗಾರಿಕೆ' ಪರಾ. [ ಮಾಟ$_1$ + — ಗಾರ ( < — ಕಾಱ ) ]

**ಮಾಟಗಾರಿಕೆ** (ನಾ). ೧. ಇಂದ್ರಜಾಲ ; ಗಾರುಡಿ : (+). ೨. ಮಾಟ ಮಾಡುವುದು ; ಅಭಿಚಾರಕ್ರಿಯೆ : ನನ್ನ ಶಕ್ತಿಯ ವೈಭವ ತಡೆಯದೆ ನೀನು ಮಾಟಗಾರಿಕೆ ಮಾಡಿರುವೆ! (ಅಶ್ವಮೇ. ೩೩).

[ ಮಾಟಗಾರ + —| ಇಕೆ ]

**ಮಾಟಗಾರ್ತಿ** (ನಾ). = ಮಾಟಗಾತಿ : (+).

[ ಮಾಟಗಾರ + — ತಿ$_1$ ( < — ಇತ್ತಿ ) ]

**ಮಾಟಗೂಲಿ** (ನಾ). ಮಾಡಿದ ಕೆಲಸಕ್ಕೆ ಕೊಡುವ ಕೂಲಿ,–ಮಜೂರಿ : ಗೌಡರು . . . ನಾನೆ ಮಾಟಗೂಲಿ ಕೊಡುತ್ತೇನೆ ಎಂದು ಅಲ್ಲಿಂದ ಮನೆಯ ಹಾದಿ ತುಳಿದರು (೧೦ಬಾ. ೦೬). [ ಮಾಟ$_1$ + ಕೂಲಿ$_1$ ]

**ಮಾಟಮಾಯ** 'ಮಾಯ' ಪರಾ.

**ಮಾಟೆ** 'ಮಾಡ$_2$' ನೋ.

**ಮಾಠರ** (ನಾ). ೧. ವ್ಯಾಸನ ಹೆಸರುಗಳಲ್ಲಿ ಒಂದು. ೨. ಬ್ರಾಹ್ಮಣ ; ದ್ವಿಜ. ೩. ಸೂರ್ಯನ ಸೇವಕವರ್ಗದಲ್ಲಿ ಒಬ್ಬ: "ಮಾಠರಃ. . . ಪಾರಿಪಾರ್ಶ್ವಕಾಃ–ಪಾರ್ಶ್ವದೊಳಗಿರುವ ಅಂಗದೇವತೆಗಳ ಹೆಸರುಗಳು" (ಸಿದ್ಧಾಂತ. ೩೨). ೪. ಒಂದು ಗೋತ್ರದ ಹೆಸರು : ನಾನು . . . ಮಾಠರಸಗೋತ್ರದ ಕಲ್ಪಶಾಖೆಯ . . . ಬ್ರಾಹ್ಮಣನು (ಶಾಸನಾ. ೦೬).

[ಸಂ.]

**ಮಾಠಾಪತ್ಯ** (ನಾ). ಮಠದ ಉಸ್ತುವಾರಿ: (+). 'ಪಾರುಪತ್ಯ' ಹೋ.

[ < ಸಂ. ಮಾಠಪತ್ಯ ]

**ಮಾಡ$_1$**, ಮಹಡಿ, ಮಾಟ$_2$, ಮಾಡಿ$_1$, ಮಾಡು$_2$ (ನಾ). ೧. ಉಪ್ಪರಿಗೆ ಮನೆ : ಭವನ ; "ಹರ್ಮ್ಯ" (ಶಶುಶಿ. ೬. II, ೬೭) ; ಚರಿಗೆಪೊಕ್ಕಾಗಳೊರ್ವಳ್ ದಿವ್ಯಸ್ತ್ರೀ . . . ತನ್ನ ಮಾಡಕ್ಕೊಡಗೊಂಡು ಪೋಗಿ ಕಾಲಂ ಕರ್ಚಿಯರ್ಚಿಸಿ ಗುರುಭಕ್ತಿಗೆಯ್ದು ವಂದಿಸಿ (ವಡ್ಡಾರಾ. ೮೯-೨೪) ; ಪಿರಿಯ ಮರಂಗಳೆ ಮಾಡಮಾಗೆ ಪೊಳೆವೆಳದಳಿರ್ಗಳೆ ಸೆಜ್ಜೆಯಾಗೆ . . . ಪಣ್ಗಳ ಮೆತ್ತಿದ ಬೋನಮಾಗೆ ಸಿರಿಯ ಮಹಿಮೆಯುಂ ಮೆಱೆಯಲೇನಾರ್ತುದೊ ಬನದೊಳಿರ್ದರವಾ ಪಾಂಡವರಾ (ಪಂಪಭಾ. ೭-೨೮). ೨. ಮನೆ ; ನಿವಾಸ : ರತ್ನಗ್ರೀವನೆಂಬೊರ್ವಂ . . . ತನ್ನೊಂದೇಱುಂಜಸದೆಸಕದಿಂ ದೆಸೆವಳರ್ಗೆ ಪೊಸಮಾಡಮಂ ನೇರ್ಪಡಿಸುತುಂ (ರಾಮಾಶ್ವ. ೭೪-೨೪). 'ಮಾಡಗೆಲ' ಪರಾ. ೩. ಮನೆಯ ಮೇಲಿನ ಉಪ್ಪರಿಗೆ,—ಅಂತಸ್ತು : ಬೆಳೆವ ಕೌಂಗಿನ ಗೊನೆ ತಳ್ತೆಱಗಿರೆ ಮಾಡದೊಳಲ್ಲಿಯೆ ತಿಱಿದುಕೊಳಲ್ಕಿಂಬಿನೆಸಕಮೆಸೆವ ದುಪವನಂ (ಶಂಕರಾ. ೩-೪೦) ; ಮುಗಿಲೇಱೆಯ ನೆಱೆ ನೋಡುತ್ತಿರ್ಪರು ಮುಗಿಲಂ ಮುಟ್ಟುವ ಮಾಡದೊಳಿರ್ಪರು (ತಿರುಪಾ. ದೇ. ೨೨೩-೦೬) ; ನೆಲೆಮನೆಯ ಮಾಡದಲಿ ರತ್ನಾವಳಿಯ ಸುಣ್ಣಗಳಿನಲಿ ಹಂಸೆಯ ತೂಳಿಯ ಮೇಲ್ಪ್ಪಸಿನಲಿ ಪವಡಿಸುವೀಕೆ . . . ಈ ಕಲುನೆಲದೊಳೊಱಗಿದಳೆನುತ ಮಱುಗಿದನು ಧರಣೀಶ (ಕುವ್ಯಾಅ. ೯-೩೦). ೪. ಮನೆಯ ಇಳಿಜಾರಾದ ಛಾವಣಿಯ ತುದಿ,– ಸೂರಿನ ಕೊನೆ : 'ಮಾಡಸಂದಿ' ಪರಾ. ೫. (ಬಾಗಿಲಿನ) ಚೌಕಟ್ಟು : 'ಬಾಗಿಲುವಾಡ' ಪರಾ. ೬. ಗುಡಿಸಲು ; ಜೋಪಡಿ. ೭. ಹೆಣವನ್ನು ಕುಳಿತಿರುವ ಸ್ಥಿತಿಯಲ್ಲಿ ಹೊತ್ತೊಯ್ಯುವುದಕ್ಕೆ ಅನುಕೂಲವಾಗಿರುವಂತೆ ಮಾಡಿದ ಚಟ್ಟ ; ಸಿದಿಗೆ ; ವಿಮಾನ : ಊರ ಮಧ್ಯದ ಕಣ್ಣು ಕಾಡಿನೊಳಗೆ ಬಿದ್ದೈದಾವೆ ಐದು ಹೆಣನು . . . ಹೆಣನೂ ಬೇಯದು ಕಾಡೂ ನಂದದು ಮಾಡ ಉರಿಯಿತ್ತು (ಅವಶಂ. ೭-೨೬) ; ಹೊತ್ತು ಬಹ ಮಾಡದೊಳಗಿಹ ಪೆಣನತ್ತಲತಿದೂರದೊಳು ಕಾಣುತ ಚಿತ್ತದೊಳಗದು ಸ್ವತಕಶಬವೆಂದಱಿದು ಗಹಗಹಿಸಿ (ಐಸಕ್ಕೊ. ೩೨-೩೬). ೮. ದೇಗುಲ (?) : ಸೀಮೆ ಮೂಡಾಯ್ತೊಱೆವಿ ತೆಂಕಾಯ್ಬಟ್ಟರ ಮಾಡಮ ಪೇರೋಣಿವಿ ಸನ್ನು (ಎಕ. IV, ಎಡತೊ. ೬೦-೬೩ ; ಸು. 890). ಮಹಡಿ: ೩. ಹೋಗಿ ನೋಡಲಾಗಿ . . .ಬಿದ್ದುಹೋದ ದೊಡ್ಡ ಮಹಡಿಯು ಕಂಡು ಬಂದಿತು (ದೇಶೀಕಾ. ೩೪) ; ಮಹಡಿಯ ಮೆಟ್ಟಿಲುಗಳನು ಶುಚಿಗೈವಂದು ಮೇಲಿನಿಂದುಡುಗುವರು (೩೦ಕಾಶ. ೨೦೪-೮). ಮಾಟ$_2$: ೯. (?). ಟಕಾರಕ್ಕೆ ಡಕಾರಂ . . . ಮಾಟ–ಮಾಡ ; ಲಕುಟ–ಲಗುಡ (ಶಮತ. ೨೩೩ ಪ್ರಯೋ) ; ಮಾಟ, ಮಾಡ (ಶಬ್ದಾಮ. ೦೪೩ ಪ್ರಯೋ). ಮಾಡಿ$_1$ : ೩. ಮಾಡಿವೇ[ಯೇ]ರಿ ಗವಾಕ್ಷದೆಡೆಗೈದಿದಳು ವಹಿಲದಲಿ (೬ ಶತ. ೨-೬) ; ಮಾಡಿಯ ಮೇಲೆ ಮಲಗಿರುವ ಮಲ್ಲಿಗೆಯ್ಯ ಓಲೆ ಬಂದಾವೇ ಓದೇಳೋ (ಹುಟ್ಟಿಹ. ೩೬). ಮಾಡು$_2$ : ೨. ಅವರು . . . ಮಾಡಿನ ಹೊರಗೆ ಹೋಗಿ ಕುಳಿತರು (ಮೂರುದಾ. ೯). ೧೦. ಮನೆಯ ಮೇಲುಛಾವಣಿ ; ಸೂರು : ಮಾಡು ಸಿಕ್ಕವಲ್ಲಾ ಮಾಡಿನ ಗೂಡು ಸಿಕ್ಕದಲ್ಲಾ (ಪುರಂದ. ೦-೩೪ ಪಲ್ಲವಿ) ; ಮಾಡುಗಳ ಮೇಲೆ ಪಾರಿವಾಳಗಳು ಗುಬ್ಬೇನುತ್ತಲೂ ಇವೆ (ಹಳ್ಳಿರ. ೦-೩): ಮಾಡಿನ ಹೆಂಚುಗಳ ಮೇಲೆ ನೆಟ್ಟ ದೃಷ್ಟಿಯಿಟ್ಟು ಯೋಚಿಸತೊಡಗಿದೆ (ಸೀತಾರ. ೬೩). ೧೧. ಚಾಚಿದ ಭಾಗ ; ಪರಹು : ಸಾಕಷ್ಟು ಒಳಗಿನ ತನಕವೂ ಮೇಲಣ ಬಂಡೆಯ ಮಾಡು ಚಾಚಿದ್ದುದರಿಂದ ಆ ತಾವಿನಲ್ಲಿ ನೂರಾರು ಮಂದಿ ಕುಳಿತಿರುವಷ್ಟು ಜಾಗ ಕಾಣಿಸಿತು (ಮೂಕಜ್ಜಿ. ೩೬).

[ದೇ.॥ ತಮಿ. ಮಾಟ, ಮಾಟೆ ; ಮಲ. ಮಾಡ ; ತುಳು. ಮಾಡ್, ಮಾಡು ; ಕೊಡ. ಕೋಲಾ. ಮಾಡಿ ; ತೆಲು. ಮಾಡುಗು, ಮಾಡುವು./ ಮರಾ. ಮಾಡಾ./ ಸಂ. ಮಾಡ]

**ಮಾಡ$_2$**, ಮಾಂಟೆ, ಮಾಟೆ, ಮಾಡು$_3$ (ನಾ). ೧. (ವಸ್ತುಗಳನ್ನು ಇಡಲು ಅನುಕೂಲವಾಗುವಂತೆ) ಗೋಡೆಯಲ್ಲಿ ಮಾಡಿದ ಗೂಡು : ಬನವೆಂಬ ಮದನನೃಪನರಮನೆಯೊಳ್ ಪೊತ್ತಿಸಿದ ದೀಪಮಾಲೆಯ ಮಾಡಕ್ಕನುರೂಪಮಾಗಿ ಪಣೆಯಿಂ ಕೊನೆವರೆಗಂ ಪೂತುವರರೆ ಚಂಪಕನಿಕರಂ (ಶಂಪ್ರಕು. ೭-೩೪); ಮಹಾಯಾನದಲ್ಲಿ ಚಿತ್ರ ಮತ್ತು ಮೂರ್ತಿಗಳಿಗೆ ಅವಕಾಶ ದೊರೆತದ್ದರಿಂದ ಬದಿಯ ಅಂಕಣಗಳಲ್ಲಿ ಮಾಡಗಳನ್ನು ಕೊರೆಯುವ ಮತ್ತು ಹೆಚ್ಚು ಹರವಾದ ಒಳಗೋಡೆಗಳನ್ನು ನಿರ್ಮಿಸುವ ಅವಶ್ಯಕತೆ ಉಂಟಾಯಿತು (ಕರಿಕೋ. I, ೦೯೮) ; ದೇವರ ಮಾಡದಲ್ಲಿ ಗಂಗಾಜಲವಿದೆ ನೋಡು (ಮುತ್ತೈದೆ. ೪೯). ೨. ರಂಧ್ರ ; ತೂತು : 'ಮಾಡಬಲೆ' ಪರಾ.

**ಮಾಂಟೆ:** ೩. ಗವಿ; ಗುಹೆ: ಮಾಂಟೆಯಲ್ಲಿದ್ದ ಹುಲಿಯೂ ಇದರ ಗರ್ಜನೆಗೆ ಮಾರುತ್ತರವಿತ್ತಿತು (ಕರಾವ. ೫೭) ; ಸುತ್ತಲೂ ಹತ್ತಾರು ಕಡೆಗಳಲ್ಲಿ ಹುಲಿಗಳ ಮಾಂಟೆಗಳು ಇದ್ದವು (ಕೃಷಾಂಕ. ೭೫). **ಮಾಟೆ :** ೩. ಬೆಟ್ಟದ ಮೈಯಲ್ಲಿ ಮಳೆ ಬಿದ್ದು, ಬಿದ್ದು, ನೆಲ ಮಾಟೆಯ ಹಾಗೆ ಕಾಣಿಸಿದರೆ ಅದೊಂದು ಆಶ್ಚರ್ಯದ ಸಂಗತಿಯಲ್ಲ (ಕುಶೆಕ. ೫೬). **ಮಾಡು$_3$ :** ೧. ಅಚ್ಚು ಕಾಣದ ಆ ಗ್ರಂಥವು ಗಚ್ಚುಹಾಕಿದಂತೆ ಗಣೇಶನ ಮಾಡಿನಲ್ಲಿಯೇ ಕುಳಿತಿತ್ತು (ಮುಂಗಾಪು. ೧೪); ಇದನ್ನು ಮನೆಗಳ ಮಾಡುಗಳಲ್ಲೂ ಸೇತುವೆಗಳಲ್ಲೂ ಉಪಯೋಗಿಸುವುದೇ ಹೆಚ್ಚು (ಕರ್ಕಜ. II, ೯೯).

[ದೇ.II ಮಲ. ಮಾಳ ; ತುಳು. ಮಾಟೆ ; ಕೊಡ. ಮಾಳಿ ; ಗೊಂಡಿ. ಮಾಂಡೊ ; ಕುರುಖ್. ಮಾಣ್ಡಾ]

**ಮಾಡಗುಳ್ಳು** (ನಾ). (?) : ಪಿತ್ತಾಶಯವು ಆಕಾರದಲ್ಲಿ ಮಾಡಗುಳ್ಳಿನ ಹಾಗೆ, ಬಣ್ಣ ಕಪ್ಪು (ಮುಂಜಬು. ೬-೩೦೦). [ ? ]

**ಮಾಡಗೆಲ** (ನಾ). ಮನೆಯ ಪಕ್ಕ : ಬಲುವೃದ್ಧ ರಾತ್ರಿಯೊಳೆತ್ತ ಬೀಳುತೇಳುತ ಪೋದಪೆ ಮಾಡಗೆಲದಲಿ ಮಲಗು (ಜೀವಂಕಾಂ. ೦೬-೯೯).

[ಮಾಡ$_1$ + ಕೆಲ$_1$]

**ಮಾಡಬಲೆ** (ನಾ). (ಕರಾ) ಸಣ್ಣ ಸಣ್ಣ ರಂಧ್ರಗಳುಳ್ಳ ಬಲೆ.

[ಮಾಡ$_2$ + ಬಲೆ$_1$]

**ಮಾಡವೃಕ್ಷ** (ನಾ). ಒಂದು ಬಗೆಯ ಮರ: ಬಗನಿ: "ಮಾಡದ್ರುಮಃ – ಮಾಡವೃಕ್ಷ" (೬ಕಂ. ೦೨೫). [ಸಂ.]

**ಮಾಡವೆಟ್ಟು** 'ಮಾಡುವೆಟ್ಟು' ನೋ.

**ಮಾಡಶಾಲೆ** (ನಾ). ಭವನದ ಪಜಾರ, – ಮೊಗಸಾಲೆ : ಆಶಾಕರೀಂದ್ರಂಗಳ್ಗೆಂದು ಸುಪ್ರತೀಕಪತಿ ಸಮೆಯಿಸಿದ ವಿಶಾಲಕ್ರೀಡಶಾಲೆಗಳೆನಿಸಿದ ಚಿಂಬೊನ್ನ ಕಲಶದ ಮಾಡಶಾಲೆಗಳುಮಂ ನೋಡಿ (ಶಾಂತಿಪು. ೩-೦೯ ವ).

[ಮಾಡ$_1$ + ಶಾಲೆ$_3$]

**ಮಾಡಸಂದಿ** (ನಾ). ಅಕ್ಕಪಕ್ಕದಲ್ಲಿರುವ ಎರಡುಮನೆಗಳ ಸೂರುಗಳ ಅಂಚುಗಳ ನಡುವಿರುವ ಕಿರಿಯ ಓಣಿ : ಹಿತ್ತಲುಕಡೆಯ ಹಿಂಬಾಗಿಲು ತೆಗೆದು, ಮಾಡಸಂದಿಯ ಕಡೆಗೆ ಕೈದೋರಿದಂತೆ ಮಾಡಿದಳು (ಮರಳು. ೬೩೬).

[ಮಾಡ$_1$ + ಸಂದಿ (< ಸಂದು$_1$)]

**ಮಾಡಾಟ** (ನಾ). ಕೆಲಸವನ್ನು ನಿರ್ವಹಿಸುವಿಕೆ: ದಣೀ ಹೇಳಾಟ, ಬಡಗೀ ಮಾಡಾಟ (ಗಾದೆ). [ಮಾಡು$_1$ + ಆಟ]

**ಮಾಡಿ$_1$** 'ಮಾಡ$_1$' ನೋ.

**ಮಾಡಿ$_2$** (ನಾ). ಬಂಡಿ ; ಗಾಡಿ ; ವಾಹನ : "ಮಾಡಿಬಿನಲ್ ಬಂಡಿಯೆಂದು ತಿಳಿಗೆ" (ಶಾರು. ೩೯). [←ತೆಲು. ಮಾಡಿ]

**ಮಾಡಿ$_3$** (ನಾ). ತೆಂಗಿನ ಮರದಿಂದ ಒಸರುವ ಒಂದು ಬಗೆಯ ಮಾದಕರಸ, – ಸಾರಾಯಿ : ಭಂಡಾರೀ, ಹಳೆಪೈಕರು ಮುಂತಾದವರು ತೆಂಗಿನಮರಕ್ಕೆ ಕಚ್ಚುಹಾಕಿ ಮಾಡೀರಸವನ್ನು ತೆಗಿಯುವರು (ಕಶಾಗ. ೩೯).

[←ಮರಾ. ಮಾಡೀ]

**ಮಾಡಿಕೆ** (ನಾ). ನಿರ್ವಹಿಸಿದುದು ; ಮಾಡಿದುದು ; ಕಾರ್ಯ : ಮಾತಿನಲ್ಲಿ ಮಾಡಿಕೆಯಲ್ಲಿ ಅವನ ಕೀರ್ತಿ ಗುಡಿಗಟ್ಟುತ್ತಿತ್ತು (ನಾಹೋಜ. ೦೨); ಮನಸ್ಸು ಮಾತು ಮಾಡಿಕೆ ಎಂಬವು ತ್ರಿಕರಣಗಳಷ್ಟೆ (ನಾಹೋಜ. ೨೩೬).

[ಮಾಡು$_1$ + – ಇಕೆ]

**ಮಾಡಿತು.** ಮಾಡಿತ್ತು (ನಾ). ಕಾರ್ಯಗತಗೊಳಿಸಿದುದು : ಯಿಂತೀ ಧರ್ಮ್ಮವಂನಜುವಗ್ಗಾಗವುಂಡುಗಳಜುವಣಮನಪರೆಯ ಮತ್ತರಿಂಗೆ ಹಣವೊಂದು × × × ರಳ ಮತ್ತರಿಂಗೆಯಡ್ಡವಂ ಮಾಡಿತಕ್ಕೆ ನೋಡಿಕೊಂಡು ಸ್ವಧರ್ಮ್ಮದಿಂ ಪ್ರತಿಪಾಳಿಪರು (ಕೊಲ್ಲಾಶಾ. ೦೫-೯೦; 1186) ; ನೋಡಿತೆ ಮಂಗಳಂ ನೆನಪೆ ಮಂಗಳವಿರ್ದೆಡೆ ಮಂಗಳಂ . . . ಮಾಡಿತೆ ಮಂಗಳಂ (ಕಂಷಾಕ. ೫೩). **ಮಾಡಿತ್ತು:** ಮಾಡಿತು, ಮಾಡಿತ್ತು (ಕಚ್ಚಾಸು. ೯೨ ಕ್ರಿಯೋ).

[<ಮಾಡು$_1$]

**ಮಾಡಿತ್ತು** 'ಮಾಡಿತು' ನೋ.

**ಮಾಡಿಮನೆ,** ಮಹಡಿಮನೆ (ನಾ). ಅಂತಸ್ತುಳ್ಳ ಮನೆ : ಉಪ್ಪರಿಗೆ ಮನೆ : ರಸ್ತೆಯ ಕೊನೆಯಲ್ಲಿ ಕಾಣುವ ಮಾಡಿಮನೆಯೇ ನಮ್ಮದು (ರೂಢಿ). **ಮಹಡಿಮನೆ :** ಅವರೋ . . . ಮಹಡಿಮನೆಯಲ್ಲಿ ಅಟ್ಟಹಾಸದಿಂದ ನಲಿಯುತ್ತಿದ್ದಾರೆ (ಮುಂಗಾಜು. ೦೦೬). [ಮಾಡಿ$_1$ (<ಮಾಡ$_1$) + ಮನೆ]

**ಮಾಡಿಸು,** ಮಾಡ್ಸು (ಕ್ರಿ). ೧. ಏನನ್ನಾದರೂ ಕಾರ್ಯರೂಪಕ್ಕೆ ತರಿಸು ; ತೊಡಗುವಂತೆ ಮಾಡು : ಬೀಡುಬಿಡುವಿಂಬು ಕದಳಿ ತೆಂಗಿನ ತಾಣಂ ಜಾಣಂ ನೀದಾರ್ಣಮೆಂದೆಡೆಯಲೀದುಂ ಮಾಡಲ್ ಮಾಡಿಸಲ್ ಪಡೆ ಮೆಚ್ಚೆ ನೀಂ ಬಲ್ಲೆ ನೀಂ ಮೆಚ್ಚೆ ಹರಿಗ ಕೇಳಾನೆ ಬಲ್ಲೆಂ (ಪಂಪಭಾ. ೩-೯೭) ; ಮಾಡಿದೊಡಂ ಮೆಚ್ಚಿದೊಡಂ ಮಾಡಿಸಿದೊಡಮಮಿತಸೌಖ್ಯಮೆನೆ ಕಮ್ಮನೆ ಕೆಟ್ಟೋಡದೆ ಜಿನಪೂಜೆಗಳಂ ಮಾಡದೊಡಂ ನೋಡಿ ಪಡೆಯಮುತ್ತ್ರಮ ಸುಖಮಂ (ಕಮುಕ. ೧-೯೯). ೨. ಜರುಗಿಸು ; ನಡೆಯುವಂತೆ ಮಾಡು ; ನೆರವೇರಿಸು : ಅವರ್ಗೆಲ್ಲಂ ಸಂಸ್ಕಾರವಿಧಿಯಂ ನಾನೆ ಪಕ್ಕದೊಳಿರ್ದು ಮಾಡಿಸುವೆಂ (ಪಂಪಭಾ. ೦೪-೮ ವ) ; ಅಭಿಷೇಕವನು ಕೌರವರಾಯ ಮಾಡಿಸಿ ಪತಿಕರಿಸಿದನು ಕುಂಭಸಂಭವನ (ಕುಮಾರವ್ಯಾ. ೦ ಸೂಕದ) ; ಭೂಲೋಲ ಚಾಮರಸೇಂದ್ರ ವಿವಾಹವ ಲೀಲೆಯೊಳಗೆ ಮಾಡಿಸಿ (೪ಂಪಶಿ. ೩-೦೦). ೩. ಕಟ್ಟಿಸು ; ನಿರ್ಮಾಣಗೊಳಿಸು ; ನಿರ್ಮಿಸು : ಪೊಲೆಕೇಸಿಅರಸರ × × × ಮಾಡಿಸಿದ ದೇಗುಲ (ಎಕ. VII, ಶಿಕಾ. ೦೦-೩; ಸು. 640?) ; ಅರಸನುಮಾತನ ಮಾತನೊಡಂಬಟ್ಟು ಸ್ವಯಂಬರಸಾಲೆಯಂ ಮಾಡಿಸಿ ಅರಸುಗಳ್ಗೆಲ್ಲಂ ಬಟ್ಟಿಯನಟ್ಟಿ ಬರಿಸೆ (ವಡ್ಡಾರಾ. ೯೦-೨೯) ; ಜಿನೇಂದ್ರರುಂದ್ರ ಮಂದಿರಮನದೊಂದನೀ ದೊರೆತು ಮಾಡಿಪೆಂ (ಆದಿಪು.೯-೩೩) ; ಪ್ರಜಾಪಾಲಂ . . . ಜಲಕೇಳಿನಿಮಿತ್ತಂ ಕ್ರೀಡಾಸರೋವರಮಂ ಮಾಡಿಸಿ ನೀರಂ ತೀವಿ (ಶಂಕಕಂ. ೦೨೩-೮೬). ೪. ಒದಗಿಸು ; ಉಂಟುಮಾಡು : ಕೊಡೆ ದಡದಡಿಸೆ ನಡೆಗೆಟ್ಟು ಕಟಿಲಲಿಗೆ ಬಟಿಸಲ್ವ ಕಳಹಂಸಮಂಡಲಕ್ಕಯಶಮಂ ಮಾಡಿಸಿಯುಂ (ಗಾದಂಕಾ. ೩೬) ; ಬಿರುದರ್ಗರಿದೆನಿಸುವ ಬಾಧೆಯಂ ಮಾಡಿಸುವಂ (ಧರ್ಮಾಮೃ. ೨-೬೭): ಮಂಗರಸರ ಕಾವ್ಯಗಳ ಪರಿಚಯ ಮಾಡಿಸದೆ ಪ್ರೌಢವಿದ್ಯಾರ್ಥಿಗಳನ್ನು ಆಶ್ರಮದಿಂದ ಕಳುಹಿಸಿಕೊಡುತ್ತಿರಲಿಲ್ಲ (ಕಂಗಾಳ್ವ. ೯೯). ೫. ಸಿದ್ಧಪಡಿಸು ; ಸಜ್ಜುಗೊಳಿಸು : ಕೊಂಡವ ತೋಡಿಸಬೇಡ ಶುಷ್ಕವ ಸುಟ್ಟು ಕೆಂಡವ ಮಾಡಿಸಬೇಡ ಖಂಡೇಂದುಶೇಖರ ಕಣ್ಗೆಚ್ಚಿನಿಂದೆನ್ನ ಗಂಡನನುರುಹಿದಂತುರುಹು (ಸೋಹಕ. ೮-೩೭). ೬. (ಧಾನ್ಯವನ್ನು) ಶುದ್ಧಗೊಳಿಸುವಂತೆ ಮಾಡು ; ಹಸನುಗೊಳಿಸು : ಕೆಲಸದವಳ ಕೈಯಲ್ಲಿ ರಾಗಿಯನ್ನು ಮಾಡಿಸಬೇಕು (ರೂಢಿ). **ಮಾಡ್ಸು :** ೨. ರಿಶ್ಯಶ್ರಿಂಗಮಹಾರಿಶಿಯಂ ತಂನಲ್ಲಿಗೆ ಬರಿಸಿ ಪುತ್ರಕಾಮೇಷ್ಟಿಯಂ ಮಾಡ್ಸಿ (ಕಾ. I. ೨೫-೩೩; 1186). **P** ಈ ಧಾತುವು ಅನೇಕ ನಾಮಪದಗಳ ಮುಂದೆ ಸೇರಿದಾಗ ಬೇರೆ ಬೇರೆ ಅರ್ಥಗಳನ್ನು ಕೊಡುತ್ತದೆ. ಉದಾ : ಊಟಮಾಡಿಸು, ಒಡವೆಮಾಡಿಸು ಇತ್ಯಾದಿ. [ಮಾಡು$_1$ + – ಇಸು$_3$]

**ಮಾಡು$_1$** (ಕ್ರಿ). ಮಾರ್ಪ, ಮಾಳ್ಪ, ಮಾಟ್ಪಿ (ಭೂತಕೃ). ೧. ಏನನ್ನಾದರೂ ಎಸಗು ; ಕಾರ್ಯರೂಪಕ್ಕೆ ತರು : "ಮಾಡು– ಕರಣೇ, ಕುಡ್ಯವಿಶೇಷೇ ಚ (ಗೂಢ–)" (ಶಬ್ದಾ) ; ಕೇಡಡಸಿದೊಡಂ ಬಗೆಯುಂ ಕೂಡದು ಕೂಡಿದುದುಮಟೀದು ವಿಪರೀತಮುಮಂ ಮಾಡುಗುಂ (ಕಬರಾ. ೦-೬೪) ; ಶ್ರೀಮತು ಕಲಿದೇವಗ್ಗೆ . . . ಪುಟ್ಟಮನಿಕ್ಕುವ ಗಡುಗೆಯಂ ಕುಡುವ ಜಪಂ ಮಾಪ್ಪರ್ವಮಾರ್ವರು (ಸೌಇಇ. IX-೧, ೨೫೫-೦೭; 1148) ; ಸುಕೃತದುಷ್ಕೃತಭೋಗವದು ಮಾಡಿದರಿಗಪ್ಪುದು

ತೋದ ನಮಗೇಕೆ (ಕುಮಾ.ದ್ರೋ. ೧-೧೧) : ಮಾಡಿದ್ದುಣ್ಣೊ ಮಹರಾಯ (ಗಾದೆ). ೨. ನಡೆಸು ; ಜರುಗಿಸು ; ನೆರವೇರಿಸು : ಪ್ರಶಸ್ತದಿವಸವಾರ ನಕ್ಷತ್ರಮುಹೂರ್ತದೊಳ್ ಮುಂಜಿಬಂಧನಕ್ರಿಯೆಯುಂ ಮಾಡಿದ ಬಳಿಕ್ಕೆ (ಶಬ್ದ.ಶಾ. ೭೩-೨೧); ಮಾಟ್ಟಂ ಮನೋಹರಮಪ್ಪಂತು ವಿವಾಹಮಂಗಳಮಂ (ಹಂಪಾ. ೫-೩೯) ; ವೇದೋಕ್ತವಿಧಿಮಾರ್ಗದಲಿ ಮಾಡಿದರಮಲಮುಖಪುರುಷ ಪ್ರತಿಷ್ಠಕವ (ಕೌರಶಾ. ೧-೭-೯೨). ೩. (ದೇವಾಲಯ ಮುಂತಾದುವು ಗಳನ್ನು) ಕಟ್ಟಿಸು ; ನಿರ್ಮಿಸು : ಮೆಟ್ಟುವಿಡುವಿನೊಳನ್ದ್ರವಿಮಾನ ಸಮಾನಮಪ್ಪ [ದೇಗು]ಲಮಂ ಮಾಡಿ (ಎಪಿ.ಕ. XI-i, ೨೨-೯ ; 897) ; ಕೌಶಲಾದಿ ದೇಶಂಗಳುಮಂ ರಾಜಧಾನಿಗಳುಮಂ ಸಮಕಟ್ಟಿ ಪುರಂಗಳನಾದಿ ಬ್ರಹ್ಮನ ಬೆಸದೊಳು ಮಾಡಿ ಪುರಂದರವೆಸರಂ ಪಡೆದಿಂದ್ರಂ ಪೋದಂ (ಶಾಪುಂಪು. ೪೭) ; ಮಾಡಿದ ತೋರವೆಟ್ಟುಗಳ್ ಪೊಸಮನೆ . . . ಎಂಬೆಸಕ ಮಸಾಳ್ದು ಪೂಗಣೆಯನಿರ್ಪ ಪೊಬಲ್ಗೆಣೆಯಾದುದೀ ಜನಂ (ಶಬ್ದ.ಶಾ. ೧೧೧). ೪. ಸೃಷ್ಟಿಸು ; ರಚಿಸು : ಜಗತ್ಪ್ರಪಂಚವ ಮಾಡಿ ಆ ಜಗದಲ್ಲಿ ಜೀವ ರೂಪಿಂದ ಬಳಸಂದನೆಂದು ಹೇಳುವ ಶ್ರುತಿಯಂತಿರಲಿ (ಅವಕ. ೩-೧೧) ; ಒಮ್ಮೆ ಸಂಹರಿಸುವನು ಸೃಜಿಸುವನೊಮ್ಮೆ ಮಾಡುವನೊಮ್ಮೆ ಕೆಡಹುವ ಬೊಮ್ಮಮುಖ್ಯರಿಗಜಯಲಾಜಿದು ಕಪಟನಾಟಕವು (ಕೌಶಾ. ೨೩-೧೭) ; ನಾ ಪದವಿಟ್ಟು ಕಡಿತದೊಳ್ ಬರೆದು ಮಾಡಿದ ಕೃತಿಯಲ್ಲ (ಮೋಹತ. ೧-೨೧). ೫. ಉಂಟಾಗಿಸು ; ಒದಗಿಸು : ಮನಕ್ಕಾಹ್ಲಾದಮಂ ಮಾಟ್ಟ ತತ್ಸತಿಯಿಂ ನೆಟ್ಟನೆ ಸಾರಮಾದುದು ಗಡಂ (ಅಪು. ೨-೭೭) ; ಸಮ್ಯಕ್ತ್ವ ಮಾರ್ಗಮಂ ಕೇಳ್ದು ಮನೋಮುದದಿಂ ಕೈಕೊಳು ನಿನಗದು ತುದಿಯೊಳು ಮಾಡುಗುಮನಂತಮುಕ್ತಿಶ್ರೀಯುಂ (ಸುಕುಮಾ. ೫-೭೮); ಪಂಚೇಂದ್ರಿಯಂಗಳ ವಿಷಯಮಪ್ಪ ಶಬ್ದ ಸ್ಪರ್ಶ ರೂಪ ರಸ ಗಂಧಂಗಳೊಳ್ಪಂ ಶ್ರೋತ್ರೇಂದ್ರಿಯ ಮೊಂದಜಿಲ್ಲಿಯೆ ಶಬ್ದಮುಖದಿನಭಿವ್ಯಕ್ತಿಯುಂ ಮಾಟ್ಟ ವಿಮಲಸ್ವರೂಪೆಗೆ . . . ನಮಸ್ಕರಿಸುವೆಂ (ಶಮದ. ಶೀಕೆ. ೧ ವೃತ್ತಿ). ೬. ಆಚರಿಸು ; ನಡೆಮಕೊಳ್ಳು ; ವರ್ತಿಸು : ಕೆಲವಂ ಬಲ್ಲವರಿಂದ ಕಲ್ತು ಕೆಲವಂ ಶಾಸ್ತ್ರಂಗಳಂ ಕೇಳುತಂ ಕೆಲವಂ ಮಾಟ್ಟವರಿಂದ ಕಂಡು . . . ಸರ್ವಜ್ಞ ನಪ್ಪಂ ನರಂ (ಕೋಟೀಶ. ೧) ; ವಚನಿಸಿ ಮಾಡದಿಹ ಬಾಹಿರರು ನಾವಲ್ಲ (ಕುಮಾ.ದ್ರೋ. ೧-೯೧) ; ಮಾಡಿದವರ ಪಾಪ ಆಡಿದವರ ಬಾಯಲ್ಲಿ (ಗಾದೆ). ೭. ಸಾಧಿಸು ; ಸಿದ್ಧಿಯನ್ನು ಹೊಂದು : ಕೊಳಚೆನೀರೊಳಗಾಳುತೇಳುತ ಜಲಧಿ ಕಾಲ್ಹೊಳೆಯೆಂಬ ಭಂಡರ ಮುಳಿದು ಮಾಡುವುದೇನು (ಕುಮಾ.ದ್ರೋ. ೫-೯೯) ; ಮಾಡದ ಮಾಟವ ಮಾಡಿ ನೀ ಮುನ್ನೊಂದು ಕೋಡಗವನು ಬೀಳಲೆಚ್ಚ ಪಾಡನನ್ನೊಳು ತೋಜಿಸು (ಮೋಹತ. ೪೯-೩೦) ; ಒಳಗಿರ್ಪನ್ ಇಲ್ಲಮೆಂದಾರಯ್ದುದೇನ್ ಮಾಟ್ಟಿ ? (ಅಶ್ವಶಾ. ೧-೫). ೮. (ಧಾನ್ಯ ವನ್ನು) ಶುದ್ಧಪಡಿಸು : ಹಸನುಮಾಡು : ಪಾಡುವರ್ ಕೆಲರು ಪೆರ್ಮೊಜಿದೊಳಕ್ಕಿಯನಿಕ್ಕಿ ಮಾಡುವರ್ ಕೆಲರು (ಮೋಹತ. ೧೯-೭೦). ೯. ಸಲ್ಲಿಸು ; ಅರ್ಪಿಸು : ನಿರ್ಮಲಪಂಚಪದಾಸಚಾರ್ಯಪದಕ್ಕಾಂ ಪಂಚವಿಧವಿರಾಜಿತ ಮುಷ್ಟಿಯೊಳಭಿವಂದನೆಯುಂ ಮಾಳ್ಪೆಂ (ಜಮುಶಾ. ೧-೩).

☞ ಈ ಧಾತುವು ಅನೇಕ ಶಬ್ದಗಳ ಮುಂದೆ ಸೇರಿದಾಗ ಸಂಯುಕ್ತ ಧಾತುಗಳ ರೂಪವನ್ನು ಪಡೆದು ಬೇರೆ ಬೇರೆ ಅರ್ಥಗಳನ್ನು ಕೊಡುತ್ತದೆ. ಉದಾ : ಅಭ್ಯಾಸಮಾಡು, ನಿಮ್ಮಂತೆ ಮಾಡು, ಪ್ರಭುಮಾಡು, ಹಣಮಾಡು ಇತ್ಯಾದಿ.

[ದೇ.೫ ಮಲ. ಮಾಡು ; ತುಳು. ಮಾಡಾವು ; ಕೊಡ. ಮಾಡ್]

**ಮಾಡು₂** ' ಮಾಡ₁ ' ನೋ.

**ಮಾಡು₃** ' ಮಾಡ₂ ' ನೋ.

**ಮಾಡುಗೇಡಿ** (ನಾ). ಕೆಲಸವನ್ನು ನಿರ್ವಹಿಸದೆ ಇರುವವನು ; ಕೆಲಸಗೇಡಿ : ಮಾಡಬೇಕಾದದ್ದನ್ನು ಮಾಡದೇ ಬಿಡುವ ಮಾಡುಗೇಡಿಯಾಗಿದ್ದಾನೆ ಅರ್ಜುನ (ಕಾರಕ. ೧೧೧). [ಮಾಡು₁ + ಕೇಡಿ₁]

**ಮಾಡುವೆಟ್ಟು, ಮಾಡವೆಟ್ಟು, ಮಾಡುವೆಟ್ಟು** (ನಾ). ಕ್ರೀಡೆಗಾಗಿ ರಚಿತವಾದ ಬೆಟ್ಟ ; ಕೃತಕಾದ್ರಿ : ರತಿದೇವಿ ನಲಿದಾಡುವ ಮಾಡುವೆಟ್ಟದುನ್ನತಜಘನದ ನೀಜನಾರೆ (ಕಂವಶಿ. ೨೫-೭೩). **ಮಾಡವೆಟ್ಟು :** ನುಣ್ಮಳಲ ಮಾಡವೆಟ್ಟಿನ ಪೆಂಪಿನ ವಿಚಿತ್ರದ ರಚನೆಯಿಂದಿರ್ಪ ವಸಂತ ಮಂಟಪದ ಸೊಂಪಂ ಕಂಡು (ಹರಿಶ್ಚ.ಕ. ೪-೧೯ ವ). **ಮಾಡುವೆಟ್ಟು :** ಬೆಳ್ವಳಗನುಗುಳ್ವೆಳೆಮುತ್ತಿನ ಮಾಡುವೆಟ್ಟುಗಳಿಂ ವಿರಾಜಿಪುದ್ಯಾನಮಂ . . . ಅವಲೋಕಿಸುತ್ತುಂ ಮೆಲ್ಲಮೆಲ್ಲನೆ ಬರೆವರೆ (ಉದ್ಭಟ. ೯-೩೦ ವ) ; ನೋಡಿವಂಗನೆಯರ ಕಣ್ಣಜೀಜನಾನೆಗಳಾಡುವ ಮಾಡುವೆಟ್ಟುಗಳ ಕೋಡುಗಳೋ ಭುಜಗಳೋ (ಕುಂದಾನಂ. ೨೨-೯೮). [ಮಾಡು₁ + ಬೆಟ್ಟ]

**ಮಾಡುವೆಟ್ಟು** ' ಮಾಡುವೆಟ್ಟ ' ನೋ.

**ಮಾಡುವೊಚ್ಚ** (ನಾ). ಕೃತಕವಾಗಿ ಹರಿಯುವಂತೆ ಮಾಡಿದ ನದಿ.-ಹೊಳೆ : ತುಂಬಿ ತುಳುಕ್ಕಾಡುವ ಮಾಡುವೊಚ್ಚಗಳ ಕೋಡುವ ನೀರ್ಗಳ ನೀಂಟಿ ಮಿಂದು ಮುಟ್ಟುಮಾಡಿ ಬಟಲ್ಕೆಯುಂ ಕಳೆವರಾವಗಮಿಟ್ಟಳಮಲ್ಲಿ ಬಟ್ಟೆಗರ್ (ಶಬ್ದ.ಮ. ೭೫ ಪ್ರಯೋ). [ಮಾಡು₁ + ಪೊಚ್ಚ₃]

**ಮಾಡುಹ** (ನಾ). ಮಾಡುವ ಕ್ರಿಯೆ : ಮಾಡುವಿಕೆ : ವಿವಾದಮಂ ಮಾಡುಹವುಂ ನುಡಿಯದಿರುಹವುಂ ವಿಸ್ಮಯವಿಲ್ಲದಿರುಹವುಂ ಇಂತಿಹವು ಸ್ನೇಹವಿಲ್ಲದ ಜನರ ಲಕ್ಷಣವೆಂದರಿವುದು (ಕಂತತಂ. ೩೦೩-೦೯); ಹೆಸರಿನಲ್ಲಿ ಮಾಂಸವ ಮಾಡುಹ (ಶೀಮುಸೂ. ೨). [ಮಾಡು₁ + -ಹ₂ (<-ಪ₃)]

**ಮಾಡ್ಸು** ' ಮಾಡಿಸು ' ನೋ.

**ಮಾಣ್, ಮಾಣು** (ಕ್ರಿ). ಮಾಣ್ದ (ಭೂತಕೃ), ಮಾಣ್ಬ, ಮಾಬ (ಭವಿಕೃ). ಮಾಂದು₃, ಮಾದು₂ (ಭೂತನ್ಯೂ). ೧. ನಿಲ್ಲಿಸು; ಬಿಟ್ಟುಬಿಡು : ತ್ಯಜಿಸು : ಮಾಣಿಸಿದೊಡೆ ಮಾಣದೆ ರಣವುಂ ತೋಜಿಯುಂ ಮೊತ್ತಮುಸುಗ್ಗಡಿಸಿಯುಮಾಡುವೆಂನೆ (ಕಂಪಶಾ. ೭-೩ ವ) ; ಲಿಂಗಾರ್ಚನೆಯ ವಸರಕ್ಕೆ ಜಂಗಮ ಮನೆಗೆ ಬಂದರೆ ಲಿಂಗಾರ್ಚನೆ ಮಾದು ಜಂಗಮಕ್ಕೆ ಇದಿರೆದ್ದು ವಂದಿಸಿ ಭಕ್ತಿಯ ಮಾಡಬಲ್ಲಾತನೆ ಭಕ್ತ (ಅಶಸಂ. ೨೨೯-೧೧೧೨); ಕಾಳ್ಕಿಚ್ಚಿನಿಂ ಬೇವಂಗೆ ತಂಪಿನ ಸೋನೆಯ ಮಳೆಯಾಗುತ್ತೆ ಮಾಣ್ಬರೆ (ಬಸರ. ೪-೩೦). ೨. ನಿಲ್ಲು ; ನಿಂತುಹೋಗು ; ಸ್ಥಗಿತಗೊಳ್ಳು : ಈ ತಪದ ಧರ್ಮದ ಫಲವಿಲ್ಲಿಯೆ ಪ್ರತ್ಯಕ್ಷಮಾಯ್ತಿನ್ನುಂ ಮುಂದೆ ಏರಿದಾಗದೆ ಮಾಣದು (ವಡ್ಡಾರಾ. ೭೯-೨೩); ಮುನಿವೃಂದಾರಕವಂದ್ಯ ನಿಮ್ಮ ಚರಣಾಂಭೋಜಂಗಳಂ ಕಂಡು ಕಣ್ಬನಿಗಳ್ ಮಾಣ್ದಪುವಿಲ್ಲ ಕಾರಣಮಿದೇಂ (ಆದಿಪು. ೫-೯೭): ರಥಮಾಣೆಯಿಟ್ಟಂತೆ ಮಾಣೆ ಕಂಡು (ಅಪು. ೯-೧೭ ವ) ; ಗೊಹೇಶ್ವರನ ಲೀಲೆ ಮಾಬನ್ನಕ್ಕರ ಉರಿಯೊಳಗಣ ಕರ್ಪೂರದಂತಿರಬೇಕು ಕಾಣಾ (ಅಶಸಂ. ೨೨೦-೧೧೧೩). ೩. ಸುಮ್ಮನಿರು ; ನಿಷ್ಕ್ರಿಯವಾಗು : ಸುಮ್ಮನೆ ಉಳಿ : ಮಾಣಲಿನ್ನೆನಸುಂ ಬಾರದು ನಿನ್ನೊಳಾತ್ಮಹಿತಮಂ ನಿಶ್ಚೈಸು (ಆದಿಪು. ೨-೯೮) ; ಮರನುಳ್ಳನ್ನಕ್ಕರ ಎಲೆ ಉಲಿವುದ ಮಾಬುದೆ ಶರೀರ ಉಳ್ಳನ್ನಕ್ಕರ ವಿಕಾರ ಮಾಬುದೆ (ಅವಶಂ. ೧೧೭-೯೬೭) ; ಮಾಜಿಣಾಂತವರ ನುಂಗದೆ ಮಾಣ್ಬನಾದರೆ ದಿವಿಜಪತಿತನಯಂಗೆ ತಾ ಜನಿಸಿವವನಲ್ಲ (ಕುಮಾ.ದ್ರೋ. ೯-೩೯) ; ಗಾವಿಲಂ ಕಜುಬಿಂ ಪೇಟ್ದೊಂದು ನಿಷ್ಠುರೋಕ್ತಿಯುಂ ದೇವರ್ಗೆ ನಿವೇದಿಸುವುದನನುಚಿತವೆಂದು ಮಾಣ್ದವೈಸೆ (ರಾಮಾಶ್ವ. ೨೯-೧೩). ೪. ತಡಮಾಡು ; ಸಾವಕಾಶಮಾಡು : ತಂಗೆ[ಯ] ಮಾಣ್ಬುದರ್ಪಮಂ ಮೊಟಗಿ ಸಿಡಿಲ್ದದೊಂದು ಸಿಡಿಲೇಟ್ಗೆಯಿನೆಯ್ದರೆ ವಂದು (ಕಂಪಶಾ. ೩-೧೭). ೫. ಇಲ್ಲವಾಗು ; ನಿವಾರಣೆಯಾಗು ; ಪರಿಹಾರವಾಗು : "ಮಾಣ್-ನಿವಾರಣೇ" (ಶಮದ) ; ಮದನನ ಕಾಯ್ಪು ಮಾಣ್ಗೆ ಸರಸೀರುಹಜನ್ಮನ ಮೆಚ್ಚು ತೀರ್ಗೆ (ಕಂಪಶಾ. ೫-೧೮) ; ಹಲವು ಗುಜುಗುಜು ಮಾಮ ಕಂಡೆವು ಬಳಿಕ ಕಾಣೆವು ಕೇಳದೆವು ಮೇಣ್ ಕೆಲರು ಕೇಳ್ದವು

ಇದ್ದೆವಿರೆವೆಂದೆಂಬ ನುಡಿ ಬೇಡ (ಬಸವ. ೩೯-೬೪) ; ಐತೆಜದಲಿ ಮಾಣ್ಬುದು ನಿನ್ನಾಯಾಸ ನಾ ತಂದುಕೊಡುವೆ ನಿನ್ನವಸ (ಕೋಹಕ. ೨೯-೨೨). ೬. (ರೋಗ ಮುಂತಾದುವು) ಗುಣವಾಗು ; ವಾಸಿಯಾಗು : ಕೇಳ ಜೀವಸಂಬೋಧನೆಯುಂ ಬೇಗಂ ಮಾಣ್ಗುಂ ದುಸ್ಸಹರೋಗಂ (ಸಮಚ. ೦-೩೦) ; ಜೀರಿಗೆಯನ್ನೂ ಬೆಲ್ಲವನ್ನೂ ಬೇಸಿನೀರಿನಿಂದರೆದು ಕೊಡಲು ಶೀತಜ್ವರಂ ಮಾಣ್ಗುಂ (ಸಳಪ. ೬೩). ೭. (ತೆರಿಗೆ ಮುಂತಾದುವುಗಳಲ್ಲಿ) ರಿಯಾಯಿತಿ ತೋರು : ವಿಕ್ರಮಪುರದ ಬ್ರಹ್ಮಪುರಿಯ ನಾ[ಲ್ವ]ತ್ತಿ ವ್ರ್ನಗ್ರ್ಗ ಸುಂಕವುಂ ಮಾಣ್ದು ಮಾಡಿದ ಮಾರ್ಗ್ಗಮೆನ್ತೆನೆ (ಕ್ರಾ. XI-i ೯೬-೭ ; 1061). ೮. ತಪ್ಪಿಹೋಗು ; ಕಳೆದುಕೊಳ್ಳು : ಹೀನಬಲನನಧಿಕಬಲಂ ತೊತ್ತಬದುಟಿದನೆಂಬ ಲೋಕದ ಪಟಿ ಪೊರ್ದದೆ ಮಾಣಂ ಧರ್ಮಯುದ್ಧದೊಳಸಗಿಂ (ಆದಿಪು. ೦೪-೦೦೨) ; ನೀ ನಾನೆಂಬುದು ಮಾದು ತಾನೆಯಾಗಿ ಸಾಧ್ಯವಾಯಿತ್ತು (ಅವಸ. ೨೦೯-೯೩೮) ; ಪೊಂದುವ ಪಟ್ಟುವಾರ್ತೆಪರಿಣಾಮದೆ ವರ್ತಿಸುತಿರ್ಪ ದಂದುಗಂ ಮಾಂದುದು (ಚಂದ್ರ. ೦೩-೯೦). ೯. ತಪ್ಪಿಸಿಕೊಳ್ಳು ; ಜಾರಿಕೊಳ್ಳು ; ನುಣುಚಿಕೊಳ್ಳು : ಭದ್ರಂಗೆ ಕುಡಲ್ವೇಡಿರ್ದ ಕೂಸನೆನಗೆ ಮದುವೆಯಾಗೆಂಬುದುಂ ಭದ್ರನುಂ ನಂದಂಗೆಂದು ಬಳೆದ ಕೂಸನಗೆ ಮೊಟಿಯಲ್ಲೆಂದಿರ್ವರುಮೋರೋರ್ವರ ಮೇಲೆ ನೆವವಿಟ್ಟು ಮಾಣ್ಬುದುಂ (ಸುಕುಮಾ. ೭-೩೨ ವ). ೧೦. (ಮಾತು, ಶಪಥ ಮುಂತಾದುವುಗಳನ್ನು) ಮೀರು ; ನಡೆಸದಿರು ; ಈಡೇರಿಸದಿರು : ವನಮುಂ ಕೇಳ್ದುವು ಭೂತಮುಮ್ಮುಮಜಿಗಂ ಕೊಟ್ಟುರ್ದದಾನಂತಜಿಂದೆನಗಿಂ ಮಾಣ್ಬದು ಸೂಟ[3] (ಪಂಪಭಾ. ೫-೬೪) ; ನುಡಿವುದಜಿೊಳ್ ತೊದಳ್ನುಡಿದರೆಂದೊಡಮೀಯದೆ ಪೂಣ್ದು ಪೂಣ್ಕೆ ಮಾಣ್ದೊಡಮಿಜಿವಲ್ಲಿ ಮೆಯ್ದೆಗೆದರೆಂದೊಡಮುಮ್ಮನೆ ನಾಣ್ಚುವರ (ಗದಾಯು. ೦೦-೬). ೧೧. ಹೊಳಪು ಕಡಮೆಯಾಗು : ಮಸುಕಾಗು ; ಮಂಕಾಗು : ಮಾಣ್ಗುಟೀದರ ಮೆಯ್ಮೆಗನೆ ಕಣ್ಗಳ್ ಕೋರ್ಯೆಸೆ ತೊಳಗಿ ಬೆಳಗುತ್ತಂ ಮುಂದಣ್ಗಾಗಿ ನಡೆದು ನೃಪನರಜಾಣ್ಗೊಂಡ ನಿಜಪ್ರಗಲ್ಭವಚನದೆ ನುಡಿದಳ್ (ಕಾದಂಬ. ೬೬೦). ೧೨. ಮೆರೆ ; ವಿಜೃಂಭಿಸು : ಅಮಿತತೇಜನುಪವನದೊಂದೆಡೆಯೊಳ್ ಬೀಡುವಿಡುವುದುಂ ಶ್ರೀವಿಜಯುಂ ಬಂದನಿದಿರಂ ಹಿಮಾಂಶುಗೆ ಮಾಂದಿರ ದಿದಿರಪ್ಪ ತಜದಿನಂಬುಧಿಸಲಿಲಂ (ಶಾಂತಿಪು. ೫-೬೬) ; ವರಸೌಧಾಗ್ರ ಮನೋಜಕೇಳಿವಿಲಸತ್ಕಾಂತಾಂಗಸೌರಭ್ಯಮಾಂತುರುಹಸ್ತ್ಯವ್ರಜದಾನಗಂಧ ರುಚಿಯುಂಡುತ್ಸಾಹದಿಂ ಮಾಂದು ಪುಷ್ಪರಸಂಗೊಂಡುರೆ ಸೊರ್ಕೆ ರ್ಝಂಕರಿಪ ರೋಲಂಬಾಳಿಯುಂ ರಾಜಿಕುಂ ತರಣೇಂದುಸ್ಫುಟವೀಥಿಯುಂ ಯುವಜನಾಪಾಂಗಪ್ರಭಾಭಾಸುರಂ (ಶಬ್ದ. ೦೦-೫೦). **ಮಾಣು** : ೧. ಮಾಳವ ಮಾತಂ ಮಾಣು ಗೌಳ ತೆಜಹುಗುಡು (ಬಸವ. ೬-೨೭) ; ಶಾನಾಗಿ ಗಾಳಿವೊಲ್ ಬಂದ ಸುಖವೆ ಸುಖ ನೀನೆ ಕೈಬೀಸಿಕೊಳೆ ನೋವು ಬೆವರುಗಳೆ ಫಲ ಮಾಣು ಮನದುಬ್ಬಸವ (ಮುಕು. ೬೨೦). ೨. ಅರಸನನುಜನ ಕಡಿದ ನೆತ್ತರ ಬರಿಸುವೆನು ಮೂಗಿನಲಿ ಮಾಣೆ ನುತರಿಯ ರಥದುರವಣೆಗೆ ಕರ್ಣನ ಸೂನುವಿದಿರಾದ (ಕುಮಾ. ೨೦-೩). ೩. ಚಕ್ರಚೀತ್ಕೃತಿ ಮದನಮಂತ್ರವೆನೆ ಮುಳಿದು ವನದೇವಿಯರು ಜಪವನೆಣಿಸದೆ ಮಾಣರೆನಿಸಿ ಜಾಟಳ ಮೆಜಿದುವು (ಹರಿಶ. ೩-೨೯); ಪುತ್ರಲಾಭಫಲಾಳಿ ದೊರಕದೆ ಮಾಣದಿದು ತಾ ಸುಪ್ರಸಿದ್ಧವಲೆ (ಕೊರಡಾ. ೦-೫-೬) ; ಎಲೆ ತರುಣ ನೀನೆನ್ನನೀ ಪರಿಯೊಲಿದು ಹಿಡಿದಪೆನೆಂಬ ಮನದಾ ಛಲವಿಂದೇತಕೆ ಮಾಣು ನಾವಂಬರದ ಪಕ್ಷಿಗಳು (ಪಳಕ. ೨-೪೫). ೪. ಮನಸಿಜನ ಬಾಣದಲಿ ಬಸವಳಿಯೆ ಬಿದ್ದುದು ಕ್ಷೋಣಿಯಲಿ ರೇತಸ್ಸು ಬಳಿಕದು ಕಾಣುತಲಿ ತನ್ನಾತ್ಮಪತ್ನಿಗದೆಯ್ದಬೇಕೆನುತ ಮಾಣದಾ ಪಾಂಚಾಲನೊಂದಬಿ.ಗೋಣನಲಿ ತಾ ಕಮಲದೆಲೆಯೊಳು ಕ್ಷೋಣಿಪತಿಯುದ ಕೊಟ್ಟು ಕಳುಹಿದೊಡೆ (ಸಂಶಪ. ೦೩-೪) ; ಮಾಣದೆ ಮಣಿದೀಪ್ತಿಯು ಹಿಡಿದಾವಾವ ತಾಣದೊಳಜಿಸಿ ನಂದನನ ಕಾಣದೆ ಕಂಗೆಟ್ಟು ಹೊರಳ್ದಳು (ಪೋಹಕ. ೪-೬೯). ೮. ನೆಜಿ ನಿರ್ಭಾವದಂಗವನಜಿಯದನ್ನಕ ಸಾವುದಾದರೆ ಮಾಣದ್ಯ (ಪ್ರಭು. ೦೦-೦೫). ೧೩. ನಿರೋಧಿಸು ; ನಿಗ್ರಹಿಸು : ಪ್ರಾಣಾನಿಲಂಗಳಂ ಮಾಣಾತ್ಮನೆಂಬುದಂ ಜಾಣನಿಂದೊದ್ರುತಿಹ ವಾಸದುಸುರಂತೆ ಕಾಣಸುತ್ತೊಡಲೊಳಹವಾಗಿ (ಅಮು. ೪-೩-೦೨). ೧೪. ತಪ್ಪು ; ಹೊರತಾಗು : ತೋಳನಾಗಿ ಪದ್ಗಾಗಿ ಮಾಣದೆ ಕಾಗೆಯಾಗಿ ಮೇಣ್ ನವಿಲಾಗಿರಲ್ಕೆ (ಶಬ್ದ. ೦೦-೧೬೩). ೧೫. ಸಾಧ್ಯವಾಗು ; ಶಕ್ಯವಾಗು (?) : ಪಟ್ಟಣದೊಳಾರುಮಿಲ್ಲೆನಿಸಿ ತನ್ನೊಡನೆ ಪೊಜಮಟ್ಟುವಖಿಳಪ್ರಜೆಗಳವರ ನಡೆಸಲ್ ದಿನಂ ತಟ್ಟತಲ್ಲದೆ ಮಾಣದು (ಕೃ. ೪-೬೯).

[ದೇ.ಶ ತಮಿ. ಮಾಣ್, ಮಾಣು, ಮಾಳ್ ; ತುಳು. ಮಾಣಾವು, ಮಾನಾವು; ತೆಲು. ಮಾನು, ಮಾನುಗು, ಮಾನುವು]

**ಮಾಣವ** (ನಾ). ೧. ಹುಡುಗ; ಬಾಲಕ. ೨. ವಿದ್ಯಾರ್ಥಿ. [ಸಂ.]

**ಮಾಣವಕ** (ನಾ). ೧. ಹುಡುಗ ; ಬಾಲಕ : "ವಟು ಮಾಣವಕಾರ್ಭಕ ಬಾಳಂ" (ಶಬ್ದ. ೫೪-೦೫); ಮಾಣವಕನತ್ತಣಿಂ ಕಾರ್ಯಮಂ ಬೆಸಗೊಂಡನೆಂಬಲ್ಲಿ ಮಾಣವಕನಂ ಕಾರ್ಯಮಂ ಬೆಸಗೊಂಡನೆಂದಾಯ್ತು (ಶಮದ. ೦೩೫ ಪ್ರಯೋ) ; ಕಡುಹರಿಸವಡೆದು ಹೃದಯದೊಳಿನಿಸು ದಬ್ಬುದಲೆಯಿಲ್ಲದೆ ನುಡಿಯುತೊಳ್ನುಡಿಯು ನಸುನಗೆಯಿಡುವ ಮಾಣವಕನಂ ಕಂಡು (ಸಪ್ತ. ೨-೬೫). ೨. ಶಿಷ್ಯ ; ವಿದ್ಯಾರ್ಥಿ : ಉಪಾಧ್ಯಾಯಂ ಮಾಣವಕನಂ ವೇದಮಂ ಪಠಿಸಿದಂ (ಶಬ್ದ. ೨೦೬ ಪ್ರಯೋ). ೩. ಹದಿನಾರು, ಇಪ್ಪತ್ತು ಅಥವಾ ನಲವತ್ತೆಂಟು ಎಳೆಗಳ ಮುತ್ತಿನ ಹಾರ : "ದೇವಚ್ಛಂದಂ ಯಷ್ಟಿ ಶತಾವಚ್ಛನ್ನಂ ತದರ್ಧವದು ಮಾಣವಕಂ" (ಶಬ್ದ. ೬೫-೩) ; ಮಾಣವಕಾರ್ಧಮಾಣವಕಂಗಳೆಂಬ ಪನ್ನೊಂದು ನಾನಾರತ್ನಸುವರ್ಣಪದಕವಿರಚನಾದಿ ಭೇದದಿಂ . . . ಪಂಚಪಂಚಾಶತ್ಪ್ರಮಾಣಂಗಳೊಳಾದಹಾರಂಗಳುಮಂ . . . ಪಡೆದು (ಆದಿಪು. ೯-೫೪ ವ) ; ಮಾಣವಕಮನೊಯ್ಯನೆ ಕಣ್ಣಾಣ್ಮಂ ಪಜನೂಂಕಿ ಗುರುಕುಚಾಗ್ರದೊಳಾದಂ ಮೇಣೊಂದಿಸಿ ಸೋರೆಯನದೊರ್ವೇಣಾಕ್ಷಿ ಪಳಂಚಿದಳ್ಪಸುವ ಕಿನ್ನರಿಯಂ (ಅನಂ. ೦೦-೪೯). ೪. [ಛಂದ] ಅಕ್ಷರಛಂದಸ್ಸಿನಲ್ಲಿ ಪ್ರಸಿದ್ಧವಾದ ಇಪ್ಪತ್ತಾರು ಬಗೆಯ ಛಂದಸ್ಸುಗಳಲ್ಲಿ ಎಂಟನೆಯಂದಾದ ಅನುಷ್ಟುಪ್ ಎಂಬ ಛಂದಸ್ಸಿನ ಒಂದು ವೃತ್ತ : ಕಾಂತಶಶಿ ಪ್ಯೋಮಲಗಂ ಮುಂತಿರಲಂತುಂ . . . ಮಾಣವಕಂ (ಛಂದೋಂಬು. ೨-೯೩). ೫. [ಜೈನ] ನವನಿಧಿಗಳಲ್ಲಿ ಒಂದು : ಶ್ರೀಗೃಹದೊಳ್ ಪುಟ್ಟಿದ ಕಾಳ ಮಹಾಕಾಳ ನೈಸರ್ಪ ಪಾಂಡುಕ ಪದ್ಮ ಪಿಂಗಳ ಮಾಣವಕ ಶಂಖ ಸರ್ವರತ್ನಂಗಳೆಂಬ ನವನಿಧಿಗಳುಂ (ಆದಿಪು. ೦೫-೩ ವ) ; ಕಾಳ ಮಹಾಕಾಳ ಪದ್ಮ ಪಾಂಡುಕ ನೈಸರ್ಪ ಮಾಣವಕ ಪಿಂಗಳ ಶಂಖ ಸರ್ವರತ್ನಂಗಳೆಂಬೊಂಬತ್ತುನಿಧಿಗಳುಮನನುಕ್ರಮದೊಳ್ಪ್ರ್ಚಸಿ (ಚಂದ್ರ. ೬-೦೦೦ ವ). 'ನವನಿಧಿ' ಪರಾ. [ಸಂ.]

**ಮಾಣವ್ಯ** (ನಾ). ಹುಡುಗರ ಗುಂಪು ; ಬಾಲಕರ ಸಮೂಹ : "ಮಾಣವ್ಯಂ . . . ಹುಡುಗರ ಗುಂಪು" (ಶಬ್ದ. ೬೬೪). [ಸಂ.]

**ಮಾಣಾಕ್ಯ** (ನಾ). ಶಿಷ್ಯ ; ಗುಡ್ಡ : ಶ್ರೀ ವೆಟ್ಟೆಡೆಗುರವಡಿಗಳ್ಮಾಣಾಕ್ಯಸ್ಸರ್ಜ್ಜಣನ್ದಿಗುರವಡಿಗಳ್ನೋನ್ತು ಕಾಲು ಕೆಯ್ದಾರ್ (ಎಕ. II, ೩೨; ಸು. 700). [< ಸಂ. ಮಾಣವಕ]

**ಮಾಣಿ** (ನಾ). ೧. ಹುಡುಗ ; ಬಾಲಕ : " ವಟುಃ, ಮಾಣವಕಃ — ಈ ೨ ಮಾಣಿ " (ಹಲಾಯು. ೬೩-೩೪೪) ; ತನ್ನೋರಗೆಗಳಪ್ಪ ಪಲಂಬರ್ ಮಾಣಿಗ [ಶಾಸಂ. ಮಕ್ಕ]ಳ್ವೆರಸು ಪೊಜಪೊಟಲೊಳ್ ಬಟ್ಟಾಡುತ್ತಿರೆ (ವಡ್ಡಾ. ೬೩-೨೨) ; ವಿದ್ಯಾಭ್ಯಾಸಂಗೆಯ್ದು ಬಂದಲ್ಲದೆ ನಿಮ್ಮ ಮೊಗಮಂ ನೋಡೆನೆಂದು ಪೊಱಮಟ್ಟು ಪೋಪ ಮಾಣಿಗಳನಿನಿಸಾನುಂ ಮಾಣಿಮೊಂದು

ಕಾಶ್ಯಪಿಯಿಂತೆಂದಳ್ (ಕುಕುವಾ. ೨-೬೭ ವ) ; ಅವನು ಮಾಣಿ, ನೀನು ಹೆಣ್ಣಲ್ಲವೇ ? ದೊಡ್ಡದಾದರೆ ಅವನನ್ಯಾರೂ ಕೇಳುವವರಿಲ್ಲ (ಸ್ವಪ್ನಹೊ. ೦೪). ೨. ವಟು ; ಬ್ರಹ್ಮಚಾರಿ : ಸಹದೇವ ಮಾಣಿ (ಎಕ. II, ೭೮; ಸು. 800) ; ವಿದ್ಯಾರ್ತ್ಥಿ ಮಾಣಿಯರ್ಗ್ಗಂ ಬಿಟ್ಟ ಗಟಿ (ಎಕ. XI, ಚಿತ್ರದು. ೬೭-೦೩ ; 940) ; ಮೂಱಿಡಿ ನೆಲವನು ಕೊಟ್ಟನೆಲೆ ಮಾಣಿಯಳೆಯೆಂದು ಧಾರೆಯನೆಱೆಯೆ (ವೀರಭಿಸಂ. ೦೦-೬೯). ೩. ಶಿಷ್ಯ ; ವಿದ್ಯಾರ್ಥಿ : ಓದಲಿಕ್ಕಿದೊಡೋದುವನು ಮಾಣಿಯರಿಂಗೆ ಬೋಧಾರ್ಜನ ಸುಶಿಕ್ಷೆಯಲಿ ಸಾಧನೆಗೈವ ಸದ್ಗುರುಡಿಯೊಳ್ ಭೇತಾಳನಾದಂತೆ ನೃಪಕುಮಾರರಿಂಗೆ (ಸೋಹಕ. ೦೭-೭೮) ; ಓದಿಸುವ ಮಾಣಿಗಳ ಕೂಡೆಯೋದುತ್ತ ಬಸವಯ್ಯನಿರೆ (ಗುರುಚಾ. ೮-೩). ೪. ಉಪಾಹಾರಗೃಹದಲ್ಲಿ ತಿಂಡಿ, ತೀರ್ಥಗಳನ್ನು ಒದಗಿಸುವ ಹುಡುಗ : ನಮ್ಮ ಆಶ್ರಯ ಹೋಟಲುಗಳಿಗೆ ದೊರಕುವುದಕ್ಕೆ . . . ಅಲ್ಲಿಯ ಮಾಣಿಯ ಯೋಗ್ಯತೆಯೂ ಒಂದು ಮುಖ್ಯ ಕಾರಣ (ಕ್ರಿಲಿಕು. ೦೦) ; ಜನಾರ್ದನಯ್ಯ . . . ಕಾಮತರ ಹೋಟಲಿನಲ್ಲಿ ಮಾಣಿಯಾಗಿ ಸೇರಿಕೊಂಡ (ಚುಚಾಂ. ೩೯). ೫. ಉಪನಯನ ; ಮುಂಜಿ : "ಮುಂಜಿಃ—ಮಾಣಿ" (ಶಾಕಶ. ೦೩) ; ವಿಪ್ರರ ವಿವಾಹಮು ಮಾಗಪ್ಪನಿತಱೊಳೆಲ್ಲಮೊಸಗೆ ದ್ರಮ್ಮಮ್ಮೂಱಂ ತಪ್ಪಾ[ದೆ] ಮಾಣಿಯೊಳೆರಡಂ ಕೆಪ್ಪಿದರ್ (ಕಾ. II, ೪-೮ ; 918) ; ಯಜ್ಞದಲೊನ್ದುಗದ್ಯಾಣಂ × × × ಅಯ್ದುವಣಂ ಮದುವೆಯಲೆರಡುವಣಂ ಮಾಣಿಯಲೊನ್ದುವಣಂ ಬಾ[ದು]ಬೇಕಾರ ಪುಣ್ಣಮಿ ದೀಪಾಳಿಗೆ ಮೂಱುಪರ್ವ್ವದೊಳಂ ಪ್ರತ್ಯೇಕವೊನ್ದುಗದ್ಯಾಣ ಇನ್ನಿನ್ತಿವು ಊರೊಡೆಯರ್ಗ್ಗೆ (ಎಇ. XX, ೬೮-೩೩ ; 1017). ೬. ಎಳೆಯ ಪ್ರಾಯದ ಹೆಣ್ಣು ; ಕನ್ಯೆ : ಅಲರುವಟ್ಟೆಯ ಬಳಿವಿಡಿದೈತಂದು ಕಮ್ಮಲರಿಡಿದಿರ್ದ ನಂದನದಿ ಕೆಲರು ಮಾಣಿಯರು ಪೂಗೊಯ್ಯುದ ಗುರು ಕಂಡ ಜಲರುಹದಳನೇತ್ರೆ ಕೇಳು (ಸೋಹಕ. ೩-೩೦). 'ತರುವಲಿ' ನೋ. ೭. ಗಂಡಸಿನ ಜನನಾಂಗ : ಶಿಶ್ನ : "ಮೇಢ್ರಃ, ಮೇಹಃ, ಮೇಹನಂ, ಈ ೩ ಮಾಣಿ" (ಶಾಕಶ. ೬೪). 'ಮಾಣಿದ್ವಾರ' ನೋ. ೮. (?) : × × × ಪೊಡವಿಯೊಳಕ್ಕೆ ಪ್ರಜ್ವಲಿಸಿ ತೋರ್ಪ ಶಾಣದಿಂ ? ಪಜ್ಜಲಿಸುವ ಪುತ್ತಿನಿಂ ಪಡುವ ಮಾಣಿಗಳೊಂದಿರೆ ಮೂಱುಕೆಯ್ಗಳಿಂ ಜಲಮುದಯಿಕ್ಕುಂ (ಅಟ್ಟಸು. ೦೦-೨೮).

[ದೇ.॥ ತಮಿ. ಮಲ. ಮಾಣಿ ; ತುಳು. ಮಾಣಿ, ಮಾಣಿ. / ಸಂ. ಮಾಣವಕ]

**ಮಾಣಿಕ** (ನಾ). ೧. ನವರತ್ನಗಳಲ್ಲಿ ಒಂದು ; ಕೆಂಪು ; ಮಾಣಿಕ್ಯ : "ಅರುಣಾಶ್ಮವೆನೆ ಪದ್ಮರಾಗವೆನೆ ಮಾಣಿಕಂ" (ಶಂಗಣಿ. ೩೦-೬) ; ಮಾಣಿಕದ ಮುತ್ತಿನ ಪಿಂಡುಗುಂಕಣಮುಂ ತೊಟ್ಟ ಕೈಯಿಂದಂ ಪೊನ್ನಸುಣ್ಣಗಮುಂ ತೀವಿ (ಪಶ್ಚಾರಾ. ೯೯-೭) ; ಮುತ್ತಿನ ಮಾಣಿಕದ ಪಡಲಿಗೆಗಳೊಳ್ ಪಸರಿಸಿದ ವಿಚಿತ್ರವಸ್ತ್ರಾಭರಣಂಗಳುಂ . . . ಬೆರಸು ಮಹತ್ತರದೇವಿಯರ್ ಬಂದು (ಆದಿಪು. ೨-೬೭ ವ) ; ವಿಜೆಯಪ ಮಾಣಿಕನೀಲಮೌಕ್ತಿಕಗಳ ಕಾಂತಿ ಪೊಱೆಯಲು (ಕಂಪಾ. ೭-೭೭). ೨. ಮುಟ್ಟು ; ರಜಸ್ಸು : "ಮುಟ್ಟುವೆ, ಮಾಣಿಕಂ, ಮುಟ್ಟಲ್ —ಈ ೩ ಸೂತಕಂ" (ಕಕಸಾ. ೭೧-೬೦೪). 'ಮಾಣಿಕಂಗಾಣ್' ನೋ.

[<ಸಂ. ಮಾಣಿಕ್ಯ. / ತಮಿ. ಮಾಣಿಕ್ಕ ; ತುಳು. ಮಾಣಿಕ]

**ಮಾಣಿಕಂಗಾಣ್**, ಮಾಣಿಕಗಾಣ್ (ಕ್ರಿ). ಮುಟ್ಟಾಗು ; ರಜಸ್ವಲೆಯಾಗು : ಮುಂದಾ ಸ್ತ್ರೀರತ್ನಮನೊಲವಿಂದಂ ಪಡೆದಪ್ಪೆನೆಂಬುದಂ ಸೂಚಿಸುವಂತೊಂದೆರಡುದಿನದೊಳತ್ಕಾನಂದದೆ ಕಡುಜಾಣೆ ಮಾಣಿಕಂ ಗಂಡಿರ್ದಳ್ (೧೦೪. ೩-೨೦) ; ಮಾಣಿಕಂಗಂಡಳಂತಾ ನೃಪನ ರಾಣಿ ಗುರು ಮಂತ್ರವಾಣಿ (ಶಾಕಸಂ. ೩-೩೬). **ಮಾಣಿಕಗಾಣ್** : ಅನುರಾಗರಸವೆ ಪೊಱಪೊಣ್ಮಿದುದೆನೆ ಮಾಣಿಕಗಂಡ ಬಡನಡುವಿನ ಭಾಮಿನಿ ತಳರ್ಗ್ಯೆಯೊಳ್ ಪಿಡಿವಪರಂಜಿಯ ಸಳೆ . . . ವಿರಾಜಿಸಿತು (ಜಯುಕಾ. ೨-೯೭) ; ಮೂಲೋಕವನೆಯ್ದೆ ಪರಮಪ್ರಕಾಶದಿಂ ಬೆಳಗುವ ಪರಸುತರತ್ನವ ಪಡೆದ ಸೂಚನೆಗಾಂಬ ಪರಿಯಿಂದೆ ಮಾಣಿಕಗಂಡಳು (ತ್ರಿಭುತಿ. ೭-೩೬).

[ ಮಾಣಿಕ + ಕಾಣ್ ]

**ಮಾಣಿಕಗಾಣ್** 'ಮಾಣಿಕಂಗಾಣ್' ನೋ.

**ಮಾಣಿಕಗೆಂಟು** (ನಾ). ರಜಸ್ವಲೆಯಾದುದರಿಂದುಂಟಾದ ದೂರದಲ್ಲಿರಬೇಕಾದ ಸ್ಥಿತಿ ; ಮೈಲಿಗೆಯಾಗಿರುವುದು : ಆ ಪೆಣ್ಮಾಣಿಕಂ ಮಾಣಮಾಣಿಕಗೆಂಟೆಂ [ಪಾಠಾಂ. ಗೆಟ್ಟೆಂ]ದೊಡೆ ಮಾಣ್ದನಂದರಸಂ (ಅರ್ಜುನಪೀ. ೨-೦೨). [ ಮಾಣಿಕ + ಗೆಂಟು ]

**ಮಾಣಿಕಚಟ್ಟ** (ನಾ). ರತ್ನಗಳ ಗುಣದೋಷಗಳನ್ನು ತಿಳಿಯುವ ನೈಪುಣ್ಯವುಳ್ಳವನು ; ರತ್ನಪರೀಕ್ಷಕ : "ಮಾಣಿಕಚಟ್ಟನೆಂಬು ರತ್ನಪರೀಕ್ಷಕಂ" (ಕಕಸಾ. ೯೦-೩೩೦) ; ಹಾರಾದ್ಯಾಭರಣಂಗಳನಾ ರೂಪಾಶ್ಚರ್ಯಮಾಗೆ ಮಾಣಿಕಚಟ್ಟಂ ನೀರಂಜಿಸಿ ದಳವಿಡಿದ ಮಹಾರತ್ನದ ದೊರೆಗೆ ವಂದುದಾ ಸ್ತ್ರೀರತ್ನಂ (ಆದಿಕೃ. ೪-೪೨) ; ನೆಗಟ್ದ ಸಗ್ಗದ ಮಾಣಿಕಚಟ್ಟರೊಳಮಮರಮಂಡಳಿಯೊಳಮಿಾ ಮಾಣಿಕ್ಯದ ಬೆಲೆಯಿಡಲಾರ್ ಜಾಣರ್ (ಶಾಂತಿಕೃ. ೨೦-೩೭). [ ಮಾಣಿಕ + ಚಟ್ಟ$_{3}$ ]

**ಮಾಣಿಕಬಂಡಾರ** 'ಮಾಣಿಕಭಂಡಾರ' ನೋ.

**ಮಾಣಿಕಭಂಡಾರ**, ಮಾಣಿಕಬಂಡಾರ (ನಾ). ಕೆಂಪುರತ್ನಗಳನ್ನು ಶೇಖರಿಸಿರುವ ಸ್ಥಳ : ತಂದಿಡು ಮಾಣಿಕಭಂಡಾರದ ಪುಡಿಕಗಳಂ (ಸುಕುಮಾ. ೦೦-೯೦) ; ತರವೇಟ್ಮಾಣಿಕ್ಯಭಂಡಾರದ ಪುಟಕೆಗಳಂ. ಇಲ್ಲಿ ಮಾಣಿಕ್ಯಶಬ್ದ ಮನುಬೀದು ಮಾಣಿಕಭಂಡಾರಮೆನೆ ಶುದ್ಧಂ (ಶಮದ. ೨೪೯ ಪ್ರಯೋ). **ಮಾಣಿಕಬಂಡಾರ** : "ಮಾಣಿಕಬಂಡಾರ = ಮಾಣಿಕ್ಯಭಾಂಡಾಗಾರ" (ಕರ್ನಕೋ. ೩೩). [ ಮಾಣಿಕ + ಭಂಡಾರ ]

**ಮಾಣಿಕವಟ್ಟೆ** (ನಾ). ಕೆಂಪುರತ್ನಗಳನ್ನು ಅಳವಡಿಸಿದ ರೇಷ್ಮೆಬಟ್ಟೆಯ ಪಟ್ಟಿ : ಅಳ್ಳಿವಾಱ ಬಂದೆಱಗುವುವಲ್ಲಿ ಚಂಚುಗಳ ಲೋವೆಗಳೊಳ್ ಕಡೆಯಿಕ್ಕೆ ಸಾ[ದಾ]ರಮುಂ ಕೆಱುಮಿಡಿಗೆತ್ತು ಸಾರಿಕೆ ಟಕಾರಿಯ ಮಾಣಿಕವಟ್ಟೆ [ಪಾಠಾಂ. ಟ್ಟಿ]ಯುಂ ಪಿಕಂ ನಿಱಿದಳಿರ್ಗೆತ್ತು ಲಂಬಣದ ಮುತ್ತುಗಳಂ ಮಟ್ಟಿಗೆತ್ತು ಚಾತಕಂ (ಅನಂತಪು. ೬-೪೩) ; ಭಿತ್ತಿಯೊಳ್ ಪೊಱಮಟ್ಟ ಚಾವಡಿಮದನಕೈಯೆತ್ತಿದ ಪದೆಪುದಂಡೆಗಳು ಕೆತ್ತಿದ ನಿಖಿಳಮಾಣಿಕಪಟ್ಟೆ ಮೇಲ್ಕಟ್ಟು ಮುತ್ತಿನ ಕುಚ್ಚು ರಂಜಿಸಿತು (ಸೋಹಕ. ೨೨-೭). [ ಮಾಣಿಕ + ಪಟ್ಟೆ$_{3}$ ]

**ಮಾಣಿಕವತ್ತಿಗೆ** (ನಾ). ಕೆಂಪುರತ್ನವನ್ನು ಕೂರಿಸಿದುದು : ಅರಲಸರಲ ಸೊನ್ನಾರಂ ಪಲ ಪೂ ಪರಕಲಿಸಿದ ಪಾಸಂಬಗ್ಗಟದೊಳಗಿರಿಸಿ ವಿಸುನಿಗರುಗಳನುಗುರಿಱಿತದ ಮಾಣಿಕವತ್ತಿಗೆಯ ಬೆರಸಿಯಲಂಪಿನ ಬೆಳುಗಾರಮನಿಟ್ಟುರುಪಿ ರತೋದ್ದೀಪನದಾರಿಯಿಂ ಕಡುವಿರಿದುಂ ಬೆಚ್ಚಂದದಿನಮರ್ದಪ್ಪಿದರೊಲ್ಮೆಯೊಳಾ ಪ್ರಿಯರು (ಜಯುಕಾ. ೮-೯೭).

[ ಮಾಣಿಕ + ವತ್ತಿಗೆ$_{1}$ ( < ಪತ್ತುಗೆ ) ]

**ಮಾಣಿಕವರಿಗೆ** (ನಾ). ಕೆಂಪುಮಣಿಯನ್ನು ಹುದುಗಿಸಿದ ಗುರಾಣಿ,—ಢಾಲು : ಕುಱುಪಿನ ಮಾಣಿಕವರಿಗೆಯ ತೆಱಪುಗಳೊಳ್ ಪೊಳೆವ ಬಾಳಬೆಳ್ವೆಳಗಂದೇಂ ಮೆಱೆದುವೊ ಕೆಮ್ಮುಗಿಲೆಡೆಯೊಳ್ ವಿಱುಗುವ ಮಿಂಚೆಂಬತೆಱದಿನೆರಡುಂ ಪಡೆಯೊಳ್ (ಕಬ್ಬಿಗ. ೨೩೯). [ ಮಾಣಿಕ + ವರಿಗೆ ]

**ಮಾಣಿಕವೆಸ** (ನಾ). ಕೆಂಪುರತ್ನಗಳನ್ನು ಅಳವಡಿಸಿರುವಂಥದು ; ಮಾಣಿಕ್ಯಗಳನ್ನು ಹುದುಗಿಸಿರುವಂಥದು : ಮಾಣಿಕವಸದ ಹೊನ್ನಂದಣದೊಳು ಕಂತುರಾಣಿಯ ಮುಚ್ಚಿ ಬೈತಿಟ್ಟು ಓಣಿಯೊಳ್ ಮೆಱೆಸುತ ಕರಕೊಂಡು ಬಂದಾಗ ಕಾಣಿಸಿದರು ಶಂಬರಗೆ (ಸೋಹಕ. ೦೦-೦೦). [ ಮಾಣಿಕ + ವೆಸ$_{1}$ ]

**ಮಾಣಿಕಾಚಾರಿ** (ನಾ). ಒಬ್ಬಾತನ ಹೆಸರು: ಅಕ್ಕರಂಬೊಯ್ದ ಕೊವರಾಚಾರಿಯ ಮಗಂ ಮಾಣಿಕಾಚಾರಿಗೆ ಕಣ್ಣುಗಳಟ್ಟಿ ಕೊಡಂಗೆಗೊಟ್ಟರ್ (ಎಕ. IX. ಹೊಸಕೋ. ೦೦೦-೪; 997); ಐದುದೇಗುಲಂಗಳ ಬಡಗಿವೆಸದೊಳ್ ಹಡಿಸಲಿಸುವ ಮಂಡಳಿಕ ಮಾಣಿಕಾಚಾರಿ ಹೊನ್ನೋಜ ××× (ಎಕ. VIII, ಸಾಗರ. ೦೦೯-೬೯; 1042). [ಮಾಣಿಕ + ಆಚಾರಿ]

**ಮಾಣಿಕ್ಕಬ್ಬೆ** (ನಾ). ಒಬ್ಬಾಕೆಯ ಹೆಸರು : ಮಾಣಿಕ್ಕಬ್ಬೆಯಾ ದೇಗುಲಕ್ಕೆ ಕೊಟ್ಟೊದೂರ ಪೊಲ ಮೇರೆ (ಎಕ. X (8). ಶಿಕ್ಕ. ೦೦೬-೬೨; 850). [< ಮಾಣಿಕ + ಅಬ್ಬೆ₁]

**ಮಾಣಿಕ್ಯ** (ನಾ). ೧. ನವರತ್ನಗಳಲ್ಲಿ ಒಂದು ; ಪದ್ಮರಾಗ ; ಕೆಂಪು ಹರಳು : "ಶೋಣಾಶ್ಮ, ಪದ್ಮರಾಗः—ಈ ೨ ಮಾಣಿಕ್ಯಂ" (ಕಬಡು. ೨೯-೨೦) ; ಭೂಪತಿಪ್ರಕರನಾನಾವಳೀಮಾಣಿಕ್ಯಸಂಕುಳದೊಳ್ ಮಾರ್ಪೊಳೆ ವೃತ್ತಮೊಯ್ಯನೆ ಬರುತ್ತಿರ್ದಳ್ ಪ್ರತೀಹಾರಿ (ಆದಿಪು. ೨೯); ಪೊನ್ನಿಂ ಪಳುಕಿಂ ಮಾಣಿಕ್ಯದಿಂ ತೀವಿದ ಕೃತಕನಗೇಂದ್ರಾಳಿ. . . ಸೊಗಯಿಸಲೆಸಗುಂ ತತ್ಪುರೋದ್ಯಾನವೆಂದುಂ (ಜಗ. ೨-೦೬); ಮಂಗನ ಕೈಗೆ ಮಾಣಿಕ್ಯ ಕೊಟ್ಟ ಹಾಗೆ (ಗಾದೆ). ೨. [ಛಂದ] ಅಕ್ಷರಛಂದಸ್ಸಿನಲ್ಲಿ ಪ್ರಸಿದ್ಧವಾದ ಇಪ್ಪತ್ತಾರು ಬಗೆಯ ಛಂದಸ್ಸುಗಳಲ್ಲಿ ಹತ್ತನೆಯದಾದ ಪಂಕ್ತಿ ಎಂಬ ಛಂದಸ್ಸಿನ ಒಂದು ವೃತ್ತ : ಕ್ಷೋಣೀವಾಯುಶಂಭುಧಿನೇಶ ಯುಗ್ಮಂ ಮೇಣೊಂದಾಗಿರೆ ಬಂದು ನಿಂದೊಡೆತ್ತಂ. . . ಮಾಣಿಕ್ಯಂ ಪೆಸರೆಂಬುದಾಯ್ತು (ಛಂದೋಂಬು. ೨-೦೨೨). [ಸಂ.]

**ಮಾಣಿಕ್ಯಭಂಡಾರ** (ನಾ). = ಮಾಣಿಕಭಂಡಾರ : ಅಗಳ್ ಮಡಿಯ ಭಂಡಾರದ ಮಾಣಿಕ್ಯಭಂಡಾರದ ನಿಯೋಗಿಗಳ್ ತಂದು ಮುಂದಿಟ್ಟ ಪೊನ್ನ ಪಡಲಿಗೆಗಳೊಳೊಟ್ಟಿದ ದೇವಾಂಗವಸ್ತ್ರಂಗಳುಮಂ . . . ಇತ್ತು (ಶಂಕರ. ೩-೬೬ ಪ). [ಮಾಣಿಕ್ಯ + ಭಂಡಾರ]

**ಮಾಣಿಕ್ಯಭಂಡಾರಿ** (ನಾ). (ಅರಮನೆ, ದೇವಾಲಯ ಮುಂತಾದ ಕಡೆಗಳಲ್ಲಿರುವ) ಕೆಂಪುಹರಳು ಮೊದಲಾದ ಅಮೂಲ್ಯರತ್ನ ಭಂಡಾರವನ್ನು ನೋಡಿಕೊಳ್ಳುವ ಅಧಿಕಾರಿ : ಹಿರಿಯ ಮಾಣಿಕ್ಯಭಂಡಾರಿ ರಾಮದೇವನಾಯಕರ ಸನ್ನಿಧಿಯಲು ಶ್ರೀಮನ್ನಯಕೀರ್ತಿದೇವರು ಕೊಟ್ಟ ಶಾಸನವತ್ತಳೆಯ ಕ್ರಮವೆಂತೆಂದಡೆ (ಎಕ. II. ೩೩೩-೦೨; 1206 ?). [ಮಾಣಿಕ್ಯ + ಭಂಡಾರಿ]

**ಮಾಣಿಗೆ** 'ಮಾಳಿಗೆ₁' ನೋ.

**ಮಾಣಿದ್ವಾರ** (ನಾ). ಮೂತ್ರದ್ವಾರ : ಮೊದಲಾ ತಂದೆಯ ಮಾಣಿದ್ವಾರದಿಂದ ಪೊಳ್ದಮಟ್ಟು ತಾಯಿಯ ಯೋನಿಯ ಕಮಲಗರ್ಭಮಧ್ಯದೊಳ್ ಬೆಳೆದು ಸರ್ವಾಂಗಪೂರ್ಣನಾಗಿ. . . ಉದಯಿಸಿದನು (ಕೃಷಿಕ್ರ. ೩೩೭). [ಮಾಣಿ + ದ್ವಾರ]

**ಮಾಣಿಬಂಧ** (ನಾ). ಒಂದು ಬಗೆಯ ಉಪ್ಪು; ಸೈಂಧವಲವಣ : "ಸೈಂಧವಂ, ಶೀತಶಿವಂ, ಮಾಣಿಬಂಧಂ. . . ಸೈಂಧವಲವಣದ ಹೆಸರುಗಳು" (ಸಿದ್ಧಾಂಶಿ. ೨೬೩). [ಸಂ.]

**ಮಾಣಿಮಂಥ** (ನಾ). = ಮಾಣಿಬಂಧ : "ಲವಣೋತ್ತಮಂ ಮಾಣಿಮಂಥಂ ಸೈಂಧವಂ" (ಶಬ್ದಮ. ೩೦-೭). [ಸಂ.]

**ಮಾಣಿಮಂಥರ** (ನಾ). = ಮಾಣಿಬಂಧ : "ಮಾಣಿಮಂಥರಂ ಸಿಂಧೂತ್ಥಂ" (ಚು. ೩೯-೩೩). [< ಮಾಣಿಮಂಥ]

**ಮಾಣಿವೆಣ್** (ನಾ). ಮದುವೆಯಾಗದ ಹೆಣ್ಣು ; ಕನ್ಯೆ : ಮಾಣಿವೆಣ್ಗಳ ಶಿರೋಮಣಿಯ ಸ್ತೋತ್ರಕ್ಕೆ ಮೆಚ್ಚಿ ದಾನಿಗಳರಸ ಕುಸ್ತುರಿಸಿ ಏನು ಸಲ್ಲಿಗೆ ಯ್ಯಂದಿರಿಯೆನಲು (ಸೋಮಕ. ೨೫-೦೦). [ಮಾಣಿ + ಪೆಣ್]

**ಮಾಣಿಸು, ಮಾಣ್ಚು, ಮಾನಿಸು₁** (ಕ್ರಿ). ೧. ನಿಲ್ಲಿಸು ; ನಿಲ್ಲುವಂತೆ ಮಾಡು : ಕರಿಸಂಘಾತಮುಮಂ ಹಯವ್ರಜಮುಮಂ ಪಿಂತಿಕ್ಕಿ ತೂರ್ಯಸ್ವನೋತ್ಕರಮಂ ಮಾಣಿಸಿ . . . ಪ್ರಶ್ರಯಾಕರವೇಷೋಚಿತರ್ಫ್ಕೆ ಹಸ್ತರಿರ್ದಿರಂ ಬಂದರ್ (ಆದಿಪು. ೦೨-೬೯) ; ನೀನುಸಿರದಿರೆಂದು ವಲ್ಲಭೆಯಂ ಕಲ್ಲ ಸರದಿಂ ನುಡಿದು ಮಾಣಿಸುವುದುಂ (ಶಂಕರ. ೦೬೦-೨) ; ಶಿವಲಿಂಗದೊಳಗೆ ಶ್ರೀಹಸ್ತವುದ್ಭವಿಸುತಿರೆ ಭವಿ ಮುಟ್ಟಬೇಡ ಬೇಡೆಂದು ಮಾಣಿಸುತಮಿರೆ (ಪಾಗಿಲ. ೮೮. ೨೭೦-೬) ; ಏಳುದಿನಪರಿಯಂತ ಮೊರೆಡಿಯ ಮೇಲುಗೊಡೆಯಷ್ಟು ಹಿಡಿದು ಬಲುಮಳೆಗಾಲವನು ಮಾಣಿಸಿದ ಗಡ (ಕುಮಾ. ೦೦-೦೬). ೨. ಅಡಗಿಸು ; ಕುಗ್ಗಿಸು ; ತಗ್ಗಿಸು : ಪವನಸುತಂಗೆ ಪಾಸಟಿಗಳೊರ್ವರುಮಿಲ್ಲದಱಿಂದಮಾಂತ ಕೌರವಬಲದುರ್ಕನೊಂದಿನಿಸು ಮಾಣಿಸಿ ಪೋಪಮಿಳೇಶನಲ್ಲಿಗೆ (ಶಂಕರ. ೦೨-೦೨೦). ೩. ಸುಮ್ಮನಿರಿಸು ; ನಿಷ್ಕ್ರಿಯಗೊಳಿಸು : ನೀನೆಮ್ಮ ಗುಡ್ಡನೈ ಪೆಱತೇನೆಂಬುದು ಪೆರ್ಗೆ ಭಕ್ತಿಮಾಡಲ್ವೇಡೆಂದೇನೊ ಬಿಡೆ ಜಡಿದು ಮಾಣಿಪ ಹೀನಗುಣಂಗೆಱಗಲಾಗದಱಿವುಳ್ಳ ನರಂ (ರಶಾಸ್ತ್ರ. ೩-೯೩). ೪. ಕಳೆ ; ನೀಗು ; ಹೋಗಲಾಡಿಸು ; ಇಲ್ಲವಾಗಿಸು : ಅಂತನೇಕಶೀತಲಕ್ರಿಯೆಗಳಿಂ ಶರೀರಸಂತಾಪಮನೆಂತುಂ ಮಾಣಿಸಲಾಱದೆ ಪುಣ್ಯಕ್ಷಯದೊಳ್ ತನ್ನ ವಿದ್ಯೆಗಳುಂ ಬೆಸಕೆಯ್ಯದಿರೆ (ಆದಿಪು. ೨-೦೯ ಪ) ; ಎನ್ನ ಮನದ ದುರಾಶೆಯ ಮಾಣಿ[ಪಾಠಾಂ. ಬಿಡಿ]ಸಿ ನಿಮ್ಮತ್ತ ತೋಱಾ ಚೆನ್ನಮಲ್ಲಿಕಾರ್ಜುನ (ಮಹಾದೇ. ೩. ೦೩-೦೭) ; ನಂಬಿದ ಸುತಂ ಸಂಸಾರದೊಳ್ ನೋಯಲಿರ್ದಪರಾಧಂಗಳ ನೆಯ್ದೆ ಮಾಣಿಸಿಯಜಸ್ರಂ ನಂಬಿಯಂ ತೊತ್ತುಗೊಂಡು ಪದಾಂಭೋಜ ಮನಲ್ಲಿ ತೋಱಿ ಶಿವಲಿಂಗಾಂತ[ː]ಸ್ಥನಾದಂ (ಸಂಶಿರ. ೬ ಸೋಹಪಾತ್ರ) ; ಸಾಲಱಿದು ನಿಜಸೇನೆಯನು ಪಾಂಚಾಲಸುತ ಮೋಹರಿಸಿದನು ಕೆಂಧೂಳಿ ಮಾಣಿಸಿತನಿಮಿಷತ್ವವನಮರಸಂತತಿಯ (ಕುಮಾರವ್ಯಾ. ೯-೨೯). ೫. ಗುಣಪಡಿಸು ; ವಾಸಿಮಾಡು : ಅಲವ ಬೀಟಲೊಳ್ ಸಿಕ್ಕಿದ ಗಾಲಿಯಂ ತೆಗೆದರಸನಂ ರತ್ನಾಚಲಕ್ಕೆ ಕೊಂಡು ಬಂದು ಸಕಲೌಷಧಿಗಳಿಂ ಶಸ್ತ್ರವ್ರಣಮಂ ಮಾಣಿಸಲ್ (ರಜಕು. ೨-೬೦ ಪ). ೬. ಸಂತೈಸು ; ಸಮಾಧಾನಗೊಳಿಸು : ಧರ್ಮಪುತ್ರಂ ಕೋಪಕಾಪದಿಂ ಮಸಗಿದ ಮದಗಜಮನೆ ಮಾಣಿಸುವಂತೆಂ ತಾನುಂ ಮೃದುವಚನಂಗಳಿಂ ಮುಳಿಸನಾಱಿಸುತಿರ್ದಂ (ಶಂಕರ. ೭-೩೬ ಪ); ಕಡುನೋವಿಂದಮಟುತ್ತುಮಿರ್ಪ ತಂಗೆಯಂ ಧರ್ಮಶ್ರವಣದಿಂದೆಂತಾನುಂ ಮಾಣಿಸಿ (ರಶಾಸ್ತ್ರ. ೩-೨೩೮) ; ಕಾಲತನಯನ ಸತ್ತ್ವವನು ನೀವ್ ಪಾಲಿಸು ವೊಡೀ ಭ್ರಾತುರಂಗದ ಮೇಳನವು ಬೇಡೆಂದು ಮಾಣಿಸಿ ಮರಳಿದನು ಮುನಿಪ (ಕುಮಾ. ೬೦೩. ೦೩-೬೦). ೭. ಮೋಸಗೊಳಿಸು ; ವಂಚಿಸು : ಪೆಱರಿಂತಲ್ಲದೆ ಬಂದೆನಗೆಱಗಲ್ ಕಡುಭಕ್ತಿಯಿಂದಮೆಂದುಕೈವದಿಂ ಬಱಿದೇಂ ಮಾಣಿಸಿ ನೀನೊಳಗಱಿಯದರಂ ವಚನರಚನೆಯಿಂ ಸೋಲಿಸುವೈ (ರಶಾಸ್ತ್ರ. ೯-೦೨೬). **ಮಾಣ್ಚು** : ೮. ಹಸು ಅಥವಾ ಎಮ್ಮೆ (ಗರ್ಭಧಾರಣೆ ಮಾಡಿ) ಹಾಲು ಕೊಡುವುದನ್ನು ನಿಲ್ಲಿಸು: ಅಶ್ವತ್ಥಕ್ಕೆ ಕೊಂಡು ಕೊಟ್ಟ ಎಂಮೆ ಮಾಣ್ಚಿಕೊಂಡಡೆ ××× ಎಂದೂ ಎಂದೂ [ಬಿಟ್ಟು] ಬಯನಾಗಿ ಒಂದು ಎಂಮೆಯನೂ ಮಠಕ್ಕೆ ನಡಸಿ ಬಹನು (ತಾಕಿಶ. IX-ii, ೯೦೭-೯೩ ; 1377). **ಮಾನಿಸು₁** : ೮. ಹಸು ಮಾನಿಸಿಕೊಂಡದ್ದರಿಂದ ಮನೆಯಲ್ಲಿ ಹಾಲು ಇಲ್ಲ (ಕೊಂ). [ಮಾಣ್ + — ಇಸು₂]

**ಮಾಣಿಸುಹ** (ನಾ). ನಿಲ್ಲಿಸುವಿಕೆ : (+). [ಮಾಣಿಸು + — ಹ₂ (< — ಪ₂)]

**ಮಾಣು** 'ಮೊಣ್' ನೋ.

**ಮಾಣ್ಕೆ** (ನಾ). ನಿಲ್ಲಿಸುವಿಕೆ ; ತಡೆಯುವಿಕೆ : ಕಾಣ್ಕೆ, ಪೂಣ್ಕೆ, ಮಾಣ್ಕೆ (ಶಬ್ದಾನು. ೩೩೭ ಪ್ರಯೋ). [ಮಾಣ್ + — ಕೆ]

**ಮಾಣ್ಬು** (ಕ್ರಿ). ಕಳೆ ; ನೀಗು ; ಪರಿಹರಿಸು : ಕಾವೇರಿ ಮೈಗೊಗೆದ ಮೂರ್ಛೆಯ ಮಾಣ್ಚೆತು ಆನಂದಾವೇಶದಿಂ ಮಗುಳೆ ಮೂರ್ಛ್ವವ ತರ್ಪುದನ್ನೋಳ್ (ಅಶಾಕ. ೯೭). [ಮಾಣ್ + — ಚು₁]

**ಮಾಣ್ದ** 'ಮಾಣ್' ಪರಾ.

**ಮಾಣ್ಬ** 'ಮಾಣ್' ಪರಾ.

**ಮಾಣ್ಸು** 'ಮಾಣಿಸು' ನೋ.

**ಮಾತಂಗ** (ನಾ). ೧. ಆನೆ; ಗಜ : "ಮಾತಂಗಃ ದ್ವಿರದಃ . . . ಸಿಂಧುರಃ – ಈ ೧೪ ಆನೆಯ ಪೆಸರ್" (ಶಬ್ದಮ. ೩೬-೬೦); ಸಿಂಗದ ಮುಪ್ಪಂ ನೆಗಟ್ದೀ ಗಾಂಗೇಯರ ಮುಪ್ಪುಮಿಟಿಕೆವಡೆಗುಮೆ ವನಮಾತಂಗಂ ಗಳಿನಸುಹೃಚ್ಚತುರಂಗಬಲಂಗಳಿನದೆಂತುಮಂಗಾಧಿಪತೀ (ಪಂಪಭಾ. ೧೦-೦೯); ಮಾತಂಗದ ಬಲಂ, ಸಿಡಿಲ ಪೊಡರ್ಪು, ಕಡಲ ಗಾಂಭೀರ್ಯಂ, ಪಡಿಗೊಳೆ ದಶರಥಕುಮಾರಂ ರಾಜ್ಯಮನಾಳುತಿರ್ದಂ (ರಾಮಾಶ್ವ. ೭-೦೫). ೨. ಮಾದಿಗ ; ಶ್ವಪಚ : "ಅಂತಾವಸಾಯಿ ಚಂಡಾಳಂ ತಾಂ ಹೊಲೆಯಂ ಜನಂಗಮಂ ಮಾತಂಗಂ" (ಅಭಿ. ಕೋ. ೬೬-೮೭); ಮಾತಂಗನಾಗಿರ್ದುಮೇಂ ನಿಷ್ಠುರಮಲ್ಲ್ಯಾಕಾರಮಿಾತಂಗೆ (ಕಾದಂಪೂ. ೩೬); ಲಿಂಗಪೂಜಕರಾಗದವರಿಗೆ ಹಂಗೆ ಕೂಡಿರ್ದನಿಕಟಿಸೊಳು ಮಾತಂಗಸಂಗತಪಾತ್ರದೋಷವು ಪ್ರಾಪ್ತಿಸು ವುದಾಗಿ (ಬಸವ. ೩೦-೦೦). ೩. ಬೇಡ ; ಕಿರಾತ ; ಶಬರ. ೧, ೩ : ಅರಣ್ಯಂ . . . ಮಾತಂಗಸಂಗಿಯಾಗಿಯುಂ ಸದ್ವಂಶವಿರಹಿತಮಲ್ತು (ಪುಷ್ಪ. ೩-೬೯ ವ). ೪. ಆನೆಯ ರೂಪದ ಒಬ್ಬ ರಾಕ್ಷಸ; ಗಜಾಸುರ: 'ಮಾತಂಗಹರ' ಪರಾ. ೫. ಒಂದು ಬಗೆಯ ಸಸ್ಯ : ಮಾತಂಗ ಹರಪತ್ರಿ ಮಾರತಿಲಕಂಗಳವರ ತಿರುಳಿಣ್ಣಿಯಜಮೂತ್ರಮುರಗದಂಷ್ಟ್ರಂ ಕೂಡಿದುರುತೈಲಮಿನಿತು ಸೋಂಕಲ್ಕೆ ವಶ್ಯಂ (ಚಿಕಿ. ೦೩-೪೯). ೬. [ಸಂಗೀತ] ಒಂದು ತಾಳದ ಹೆಸರು : ಧ್ರುವ ಮಟಯ ರೂಪಕ . . . ಮಾತಂಗ[ಪಾಠಾಂ. ಮತ್ತಮಾತಂಗ] . . . ಜಯಾಳಮೆಂಬವು ಮೊದಲಾದ ಮೂಜಿಸೊಂದುತಾಳಂಗಳೊಡೊಡೆ (ಬಸವ. ೦೯೨). [ಸಂ.]

**ಮಾತಂಗಕ** (ನಾ). = ಮಾತಂಗ ೨ : ಮಾತಂಗಕಂ ಕೃತಾಂತ ವಿಕೇತನಮಂ ಪೊಕ್ಕಂ (ಧರ್ಮ. ೯-೪೪). [ಸಂ.]

**ಮಾತಂಗಕನ್ನಿಕೆ** (ನಾ). ಮಾದಿಗರ ಹುಡುಗಿ : ದಕ್ಷಿಣದೇಶದಿಂದ ಮಾತಂಗಕನ್ನಿಕೆಯೊಬ್ಬಳು . . . ಸಣ್ಣವನ ಕೈಯಲ್ಲಿ ಗಿಣಿಯ ಪಂಜರವನು ಹೊರಿಸಿಕೊಂಡು ಬಂದು (ಕಾದಂ. ೦). [< ಸಂ. ಮಾತಂಗಕನ್ಯಕಾ]

**ಮಾತಂಗಕುಲ** (ನಾ). ೧. ಆನೆಗಳ ಗುಂಪು. ೨. ಚಂಡಾಲಜಾತಿ. ೧, ೨ : ಅರಣ್ಯಕಮಲಿನಿಯಂತೆ ಮಾತಂಗಕುಲದೂಷಿತೆಯುಂ ಅಮೂರ್ತೆಯಂತೆ ಸ್ಪರ್ಶವರ್ಜಿತೆಯುಂ . . . ಎನಿಸಿದೀಜಂಜವ್ವನೆಯ ರೂಪಾತಿಶಯಮನೆವೆಯಿಕ್ಕದೆ ನೋಡುತ್ತಂ (ಕಾದಂಪೂ. ೪೯). [ಸಂ.]

**ಮಾತಂಗಚರಿತ** (ನಾ). ೧. ಆನೆಯ ಸ್ವಭಾವದಂತೆ ಗಾಂಭೀರ್ಯವನ್ನುಳ್ಳವನು. ೨. ಚಂಡಾಲನ ಸ್ವಭಾವವುಳ್ಳವನು. ೧, ೨ : ಆ ನೃಪಂ ಸಪ್ತಾಂಗಸಂಗಿಯಾಗಿಯುಂ ಸಪ್ತಾಂಗಸಂಗಿಯಲ್ತು . . . ಮಾತಂಗಚರಿತನಾಗಿಯುಂ ಮಾತಂಗಚರಿತನಲ್ತು (ಪುಷ್ಪ. ೯-೩೯ ವ). [ಸಂ.]

**ಮಾತಂಗದಾನ** (ನಾ). ೧. ಆನೆಯ ಮದಜಲ : ಮಾತಂಗದಾನಲೋಭಿಗಳಿರದೆ ಮಧುವನತಿಪ್ರೀತಿಯಿಂದುಂಬ ಚಂಡಾಳಿಗಳ್ ಶಿವೆಯ ಮುಖಜಾತಪರಿಮಳಕಿಜಗಬೇಡೆಂದು ಪೊಡೆವಂತೆ ಛತ್ರಚಾಮರಮೆಸೆದುವು (ಶಬ್ದ. ೩೭-೩೯). ೨. ಚಂಡಾಲನು ಮಾಡುವ ದಾನ. ೧, ೨ : ಮಾತಂಗದಾನವಿಭವಂ ಮಾತೇನೆನಿವಿರಿದಾದೊಡಂ ಚೇತಸ್ಸಂಪ್ರೀತಿಯನತೀವ ಮಳಿನವಿಜಾತಿಗೆ ಮಧುಪವ್ರಜಕ್ಕೆ ಮಾಬ್ಪುದೆ ಸಹಜಂ (ಪಾರ್ಶ್ವ. ೪-೦೨೨). [ಸಂ.]

**ಮಾತಂಗಪ್ರಸೂತ** (ನಾ). ೧. ಆನೆಯಲ್ಲಿ ಹುಟ್ಟಿದುದು ; ಮದಜಲ. ೨. ಚಂಡಾಲಸಂತಾನ. ೧, ೨ : ಇದು ಜಾತಿಭಂಗವುಂ ತಳೆದುದು. ಮಾತಂಗಪ್ರಸೂತಮುನ್ನದಮಧುಪಾಸ್ಪದಮೇವುದೆಂದದಂ ಮುಟ್ಟದ ತೆಜದಿಂ ತೊಜೆದನಂದು ಗಜವಾಹನಮಂ (ಶಬ್ದ. ೦೦-೨೦). [ಸಂ.]

**ಮಾತಂಗಹರ** (ನಾ). ಗಜಾಸುರನನ್ನು ಸಂಹರಿಸಿದವನು ; ಶಿವ : ಪಿಂಗಳಾಕ್ಷ ಮುಕುಂದಹರ ಮಾತಂಗಹರ ಮೃಗರಾಜಹರ ಧೂಮಾಂಗ . . . ಪಾವಕಹರ ಮಹಾತೇಜ (ಬಸವ. ೦೯-೦೭). [ಸಂ.]

**ಮಾತಂಗಿ** (ನಾ). ೧. ಚಂಡಾಲಕನ್ಯೆ ; ಮಾದಿಗಿತ್ತಿ : ಕಮಲಭವಂ ಮೊದಲೊಳ್ ಮಾತಂಗಿಯೆಂದು ತಾಂ ಪುಟ್ಟದೆ ಮಾಡಿದನಕ್ಕುಂ ಕಯ್ಯೊಳ್ ಮುಟ್ಟದೊಡಿಂತಗ್ಗಳಿಸಿ ತೋರ್ಕುಮೇ ಲಾವಣ್ಯಂ (ಕಾದಂಪೂ. ೩೦) ; ಮಾತಂಗಿಯನತಿಶೋಕಾನ್ವಿತೆಯಂ . . . ಇದಿರೊಳೆ ಕಂಡಂ (ಸುಕುಮಾ. ೪-೩೬) ; ವ್ಯಾಸ ಬೋಯಿತಿಯ ಮಗ ಮಾರ್ಕಂಡೇಯ ಮಾತಂಗಿಯ ಮಗ (ಬಸವ. ೩೯೦). ೨. ಬೇಡಿತಿ ; ಶಬರಿ : ಮಾತಂಗಿಯೊಲೆ ಪಸಲೆಯುಂ ಪಾದರ್ದನೆ ನಿಡುಬಯಸಿ. ನಿಡುಸುಯ್ದು ರಿರ್ವರುಮೊಂದುಗೂಡಿ (ಶ್ರೀರಾಮಾ. ೨೬೮-೦೩೯). ೩. ಒಬ್ಬ ಕ್ಷುದ್ರದೇವತೆಯ ಹೆಸರು : ಬಿಲ್ಲಿಯಾ ಮಹಕೇಂಚಿ ಮಾತಂಗಿ ಬಕ್ಕಾಯಿ ಎಲ್ಲ ನಾನಾಕದಾ ಕಳ್ಳದೇವತೆಗಳ ನಿಲ್ಲದೆ ಒಲಿಸಿದರು (ಬಸವ. ೩೮-೨). ೪. ದುರ್ಗೆ ; ಪಾರ್ವತಿ : ಶಾಕ್ತೇಯರು . . . 'ಮಾತಂಗಿ'ಯ ಭಕ್ತರಾಗಿದ್ದರು (ಸಂಕೋಶ. ೨೪೮). ೫. [ಜೈನ] ಪತ್ತು ಮಹಾವಿದ್ಯೆಗಳಲ್ಲಿ ಒಂದು : ಮಾತಂಗಿ ಗೌರಿ. . . ಭ್ರಾಮರಿ ಆಭೋಗಿನಿಯೆಂಬಿವು ಮೊದಲಾಗೆ ಕುಲವಿದ್ಯೆ ಜಾತಿವಿದ್ಯೆ ಸಾಧಿತ ವಿದ್ಯೆಗಳೊಳ್ ಸಂಪನ್ನನಾಗಿರ್ದು (ಶಾಂತಿಪು. ೦೯೬).

[ಸಂ. ಮಾತಂಗೀ]

**ಮಾತಟ್ಟು** (ಕ್ರಿ). ಸುದ್ದಿಯನ್ನು ಹೇಳಿಕಳುಹಿಸು ; ಸಮಾಚಾರವನ್ನು ಮುಟ್ಟಿಸು : ಪಲದಿವಸಂ ಸೂಟ್ಟಿಡೆಯುದೆ ಕರೆವುದರ್ಕಾಸೆವಟ್ಟು ಮಾತಟ್ಟಿದ ಕೆಳೆಯನನೆಮ್ಮಬ್ಬೆಯನೊಡಂಬಡಿಸಲಕ್ಕೆನೆಂದು ಪೋಗಲ್ವೇಟ್ದು (ಶಾಂತಿಪು. ೯-೭೭ ವ). [ಮಾತು$_1$ + ಅಟ್ಟು$_2$]

**ಮಾತಡಕು** (ಕ್ರಿ). ವಿಷಯವನ್ನು ಒಯ್ಯು; ಸಂದೇಶವನ್ನು ತಲುಪಿಸು : ಒದವಿದ ಬೇಟವಪ್ಪೊಡೆನಗತ್ತಳಗಂ ಬಗೆವೇಟಿಪ್ಪೊಡೆನ್ನ ಮೇಳದ ಕೆಳೆಯರ್ಕಳಿಲ್ಲ . . . ಓತುಮಾತಡಕಲೊಂದಿದ ದೂದವರಿಲ್ಲ ನೆಟ್ಟನೆ (ಪಂಪಭಾ. ೪-೭೯). [ಮಾತು$_1$ + ಅಡಕು$_1$ (< ಅಡುಕು)]

**ಮಾತಬರ** 'ಮಾತ್ಬರ್' ನೋ.

**ಮಾತಬರಿ** 'ಮಾತ್ಬರ್' ನೋ.

**ಮಾತರ** (ನಾ). ತಾಯಿ ; ಜನನಿ : ಸರಿ ನಾಯ್ ಪರ್ದೆಂಬಿವಜಸ್ವರೂಪದಿಂ ಶಾಲ್ಮಲೀಮಹೀರುಹದೊಳ್ ಮಾತರಪಿತರರಂ ಬಿಸುಟ್ಟತಿ ಭರದಿಂದೊಳ್ಪಂ ಮೃಗಾಧಿಪಾಬತ್ರ್ಯಂಶಂ (ಜಾತಿ. ೦೯-೦೩) ; ಮಾತರರುಂ ಪಿತರರುಮಾ ಭ್ರಾತರರುಂ . . . ಎಲ್ಲರುಂ ಸಲೆ ಸೈತಿರ್ಪರ್ ಜವನನಾರುಮೇಂ ಬಾರಿಪರೇ (ಶಬ್ದಾ. ೦೨೨ ಪ್ರಯೋ). 'ಪಿತರ' ಪರಾ. [ಸಂ. ಮಾತೃ]

**ಮಾತರಿ** (ನಾ). = ಮಾತರ : ಹ್ಯಾಗಿಹುದೊ ಮಾತರಿಯ ಮನವು (ಜೈಮಿ. ೯೯-೪೦) ; ಎಲವೊ ನಿಜಮಾತರಿಯ ಗಮನನೆ ಎಂದು ಖಡ್ಗವ ಸೆಳೆಯೆ ಬಿಜ್ಜಣನು (ಬಸವ. ೦೦೨-೩೨). [<ಸಂ. ಮಾತೃ]

**ಮಾತರಿಶ್ವ** (ನಾ). ೧. ಗಾಳಿ ; ವಾಯು : "ಪವಮಾನಂ . . . ಮಾತರಿಶ್ವಂ . . . ವಾತ್ಯೆ ವಾತಮಂಡಳಿಯುಕ್ಕುಂ" (ಅಭಿ. ಕೋ. ೬-೪೪) ; ಲತಿಕಾಲಾಸ್ಯೋಪದೇಶವ್ಯಸನಿ ವನಲತಾಂದೋಳಿತಾಮೋದಪೂರ್ತಭ್ರಮಚ್ಚಂಚರೀಕಂ . . . ತೀಡಿತ್ತೆಸಗಿ ಸುರಭಿವೈಭಾತಿಕಂ ಮಾತರಿಶ್ವಂ (ಕಾದಂಪೂ. ೦೯೬). ೨. ಗಾಳಿಯ ಅಧಿದೇವತೆ; ಮಾರುತ: ಮಾತರಿಶ್ವಂಗ ದ್ವಿರಾಜಂಗೇತಬಲಿ ಪಲ್ಲಟವು ಕೇಳೆಂದಾತನನು ಮನ್ನಿಸದನುಚಿತದಲಂಜನಾಸೂನು (ಕೊರಟಾ. ೩-೦-೦೩). [ಸಂ. ಮಾತರಿಶ್ವನ್]

**ಮಾತರಿಶ್ವಮಿತ್ರ** (ನಾ). ವಾಯುವಿನ ಮಿತ್ರ ; ಅಗ್ನಿ : ಈಶ್ವರಾಜ್ಞೆಯನುಳಿಯಬಾರದೆಂಬುಕ್ತಿಯಂ ಶಾಶ್ವತಂ ಮಾಡಬೇಕಲ್ಲದುಳಿದರೆ ಮಾತರಿಶ್ವಮಿತ್ರಂಗಾಹುತಿಯನೀಯಬೇಕು (ಕಬ್ಬಿ. ೪೬-೦೫). [ಸಂ.]

**ಮಾತಾಟ** (ನಾ). ೧. ಮಾತಾಡುವಿಕೆ : ಅವರ ಮಾತಾಟವಂ ಕಿವಿಯಳತೆಯೊಳೆ ಕೇಳ್ವ (ಹಮ್ಮಿರ. ೨೨-೦೦೩). ೨. ಸರಸವಾದ ಮಾತುಕತೆ : ನೋಟದೆ ಬೇಟಮಂಕುರಿಸಿದಪ್ಪುದು ಮೇಳದೊಳಿಂಪುವೆತ್ತ ಮಾತಾಟದೆ ಮತ್ತೆ ಪಲ್ಲವಿಸಿದಪ್ಪುದು (ಚಂದ್ರಶೇ. ೬-೫೨). [ಮಾತು$_1$ + ಆಟ]

**ಮಾತಾಡಿಸು** (ಕ್ರಿ). ೧. ನುಡಿಸು : ಆತನಂ ಮೆಲ್ಲಮೆಲ್ಲನೆ ಮಾತಾಡಿಸಿ (ಅಶ್ವ. ೦೦-೦೯ ಪ) ; ಈತನನು ಮಧುರಾಳಾಪದಲಿ ಮಾತಾಡಿಸುವೆನು (ಕೂರಾ. ೩-೯-೦೬) ; ಆ ಪ್ರಮೀಳೆ . . . ಮಣಿರಥದೊಳೊಪ್ಪುವ ಕಿರೀಟಿಯಂ ನಗುತೆ ಮಾತಾಡಿಸಿದಳು (ಕೃಬಾ. ೦೬-೯). ೨. ಮಾತನಾಡುವಂತೆ ಮಾಡು ; ಹೇಳಿಸು : ಹಲವು ಮಾತೇನೊಂದು ಪದ್ಯದೊಳೊಲಿಸಿ ಮಾತಾಡಿಸುವೆನೆಮ್ಮೊಡನೆಳವೆಣ್ಣಿಯ ತಲೆಯುಭವನಂ ಸಂಕೀರ್ತನಂ ಮಾಡಿ (ಬಸವ. ೯೨-೩೬). [ಮಾತಾಡು + — ಇಸು$_3$]

**ಮಾತಾಡು** (ಕ್ರಿ). ೧. ಅಭಿಪ್ರಾಯವನ್ನು ಅಥವಾ ವಿಷಯವನ್ನು ಮಾತಿನ ಮೂಲಕ ತಿಳಿಸು ; ನುಡಿ : ಚೆನ್ನಾಗಿ ತಿಳಿದುಕೊಂಡು ಮಾತಾಡಬೇಕು (ಪುಂಬಯು. ೯-೯೬); ಕಾಣಿಸಿದ್ದನ್ನು ಕುರಿತು ಮಾತಾಡುತ್ತೇನೆ (ಮೂಕಜ. ೨೯). ೨. ಪ್ರತಿಯಾಗಿ ನುಡಿ; ಉತ್ತರಿಸು : ಎಮಗೆ ಮಾತಾಡಸಲ್ಲೆಂಬನ್ನೋಲ್ಲೋಜಿದೆ ನೀಂ ನಿನ್ನೊಂದು ವಾಕ್ಕೌಶಲಗುಣಮನಿದಂ ನಿನ್ನ ಸೌಜನ್ಯಜಾಲಂ ಪ್ರದಿರ್ದತ್ತು (ಕಾದಂಬ. ೦೨೩). ೩. (ಆಲಂ) ಅಭಿವ್ಯಕ್ತಿಗೊಳಿಸು ; ಪ್ರಕಟಪಡಿಸು : ದಿಟವೀರನೇ ಕೂರಲಗಿನಲಿ ಮಾತಾಡು ಬಜೆನುಡಿ ಭಂಡತನ (ಕುಮಾದ್ರೋ. ೦೯-೩) ; ನೋಟದಲಿ ಮಾತಾಡಿ ಪುಬ್ಬಿನ ಬೇಟದಲಿ ಬೆಳ್ಮಾಡಿ . . . ಸರ್ವಸ್ವವನು ನೆಟಿ ಕವರಿಗೋಟುಗೊಳಿಸುವ . . . ಬಹುವಿಧದ ಮಾಯೆಯ ಬೇಟಕಾತಿಯರೊಪ್ಪಿದರು (ಕೂರಾ. ೦-೫-೩೦).

**ಮಾತಾಡುವ ಪಕ್ಕಿ, ಮಾತಾಡುವ ಹಕ್ಕಿ** = ನುಡಿಯುವ ಪಕ್ಷಿ ; ಗಿಣಿ : ಮಾತಾಡುವ ಪಕ್ಕಿಗಳ್ಗೆ ದನಿದೋಱುವ ಕೊಂಚೆಗೆ ಸಣ್ಣಗಾಯ್ಗಳಿಂ ಮೂಡುವ ಮಾಮರಕ್ಕಗಿವಳಾಕೆಯೊಳೀ ಮುಳಿಸೇಕೆ ಸಾಲದೇ (ಕಬ್ಬಿಗ. ೬೭); "ನಿಹತಃ-ಮಾತಾಡುವ ಹಕ್ಕಿ" (ಓಹಂ. ೬೭). [ಮಾತು$_1$ + ಆಡು$_1$]

**ಮಾತಾಮಹ** (ನಾ). ತಾಯಿಯ ತಂದೆ ; ಅಜ್ಜ ; ತಾತ : "ತಾಯ ತಂದೆ ಮಾತಾಮಹಂ" (ಪಸ್ತುಕೋ. ೫೫-೨೦); ಪೊಗಟ್ಟಿ ಪಲತೆಱದಿಂ ಪರಸಿದ ಮಾತಾಮಹಂಗೆ ಮಾರುತಿ ಕೈಗಳಂ ಮುಗಿದು (ಶಂರಾಪಾ. ೦೦-೫೩ ಪ); ಬಂದ ಮಾತಾಮಹನ ಮಾತೆಯ ಮಂದಹರುಷವನಱಿದು ಧಿಮ್ಮನೆ ನಿಂಮ ಕೈಮುಗಿದೇನು ಬಂದಿರಿಯೆಂದು ಬೆಸಗೊಳಲು (ಕೂರಾ. ೬-೦೨-೨). [ಸಂ.]

**ಮಾತಾಮಹಿ** (ನಾ). ೧. ತಾಯಿಯ ತಾಯಿ; ಅಜ್ಜಿ. ೨. ಹಿರಿಯಳು: ಮಾಂಟೆಸೋರಿ ಆಧುನಿಕಶಿಕ್ಷಣಪದ್ಧತಿಗಳಿಗೆ ಮಾತಾಮಹಿಯೆನಿಸಿರುವರು (೨ಕ್ಷದ. ೬೯೦). [ಸಂ. ಮಾತಾಮಹೀ]

**ಮಾತಾಮಾತ** (ನಾ). ಅಳಲು ; ಕಷ್ಟ ; ದುಃಖ : ಭಕ್ತರ ಸಲುವಾಗಿ ರಾಮನು ಮನುಷ್ಯದೇಹಧಾರಣ ಮಾಡಿ ಬಗೆಬಗೆಯ ಮಾತಾಮಾತಗಳನ್ನು ಸಹಿಸಿ ಸಾಧುಸಂತರನ್ನು ಸುಖಿಗಳಾಗಿ ಮಾಡಬೇಕಾಯಿತು (ತುಳಸೀ. ೬).
[← ಅರ. ಮಅತಮ್; ಪಾರ. ಹಿಂ. ಮಾತಮ್: ಮರಾ. ಮಾತಮ್, ಮಾತಮಿ]

**ಮಾತಾಯಿ** (ನಾ). ೧. ಮಹಾತಾಯಿ : ತುತ್ತೊಂದು ನೀಡಿರಮ್ಮಾ—ಮಾತಾಯಿಗಳಿರಾ (ಪಿಸೀಗೀ. ೦೯-೨). ೨. ದುರ್ಗೆ : (೬). [ಮಾ$_4$ + ತಾಯಿ (< ತಾಯ್)]

**ಮಾತಾಳಿ** (ನಾ). ೧. ಅತಿಯಾಗಿ ಮಾತನಾಡುವ ವ್ಯಕ್ತಿ; ಗಳಹುವ ವ್ಯಕ್ತಿ : "ಮಾತಾಳಿಯೆನಲ್ ಗಳಪಂ" (ಕಾರ್ಕ. ೬); ಆದಿತ್ಯನ ಸಾರಥಿ ಬೆಱಗಾದಂ ಮಾತಾ[ಪಾಠಾಂ. ಟಾ]ಳಿ ಮಾತುಗೆಟ್ಟಂ ಧುರದೊಳ್ ಚೋದಿಸೆ ಹರಿಯುಂ ಶಲ್ಯನುಮಾದರದಿಂ ನರನ ದಿನಪತನಯನ ರಥಮಂ (ಶಂಪಾ. ೨-೦೬೨); "ಮಾತಾಳಿ — ಮಾತಿನ ಮಲ್ಲನು ಎಂದರೆ ಇಂದ್ರನ ಸಾರಥಿ ಮಾತಲಿ, ಮಾತುಗೆಟ್ಟಂ — ಮೂಕನಾದನು ; ಇಲ್ಲಿ ಮಾತಲಿಗೆ ಮಾತಾಳಿಯೆಂದು ಮಾಡಿರುವ ಪ್ರಯೋಗ ರಮ್ಯವಾಗಿದೆ" (ಶಂಶಬ್ದ. ೯೯೯) : ನೀಱಂ ಜೂದಾಳಿ ಕರಂ ನೀಱಂ ಮಾತಾಳಿ ಕರೆಯೆ ಸಿಗ್ಗಾಳಿಯಿವಳ್ (ಕಾವ್ಯಾವ. ೩೫೩) ; ಸೋಲಿಸಿದ ಗೆಲವಿಂದ ಬಲು ಮಾತಾಳಿಯಿವನೆನ್ನದಿರು (ಕುಮಾವಿ. ೨-೩೬) ; ಅವಳು . . . ಎಲ್ಲ ಹೆಣ್ಣು ಮಕ್ಕಳಂತೆ ಬಹು ಮಾತಾಳಿ (ಕಂಗಾಳ. ೯೬). ೨. ಅತಿಶಯವಾದ ಶಬ್ದ ಪ್ರಯೋಗವುಳ್ಳುದು ; ಹೋಲಿಕೆಗಳು ಅತಿ ಪ್ರಸಿದ್ಧವಾಗಿಯೂ ಸಾಮಾನ್ಯವಾಗಿಯೂ ಇದ್ದಾಗ ಕಾವ್ಯವು ಮಾತಾಳಿಯಾಗಿಯೂ ಮಾರ್ದನಿಯಾಗಿಯೂ ಕಾಣುವುದು (ತವಿ. ೦೬೯). [ಮಾತು$_1$ + — ಆಳಿ$_3$]

**ಮಾತಾಳಿತನ** (ನಾ). ಅತಿಯಾಗಿ ಮಾತನಾಡುವಿಕೆ ; ಗಳಹುವಿಕೆ ; ಹರಟೆ ಕೊಚ್ಚುವಿಕೆ : ಆಳುತನಕಾಭರಣವೇ ಮಾತಾಳಿತನ ಕೈದೋಱಿದಹಿತನ ಮೇಲಣೇಱಿನ ಬಾಯ ಸುಭಟರ ಹೊಗಳಬೇಡ (ಕುಮಾಕ. ೯-೩೦). [ಮಾತಾಳಿ + — ತನ]

**ಮಾತಿ, ಮಾದಿ$_1$** (ನಾ). ಒಂದು ಬಗೆಯ ಮರ ಮತ್ತು ಔಷಧಕ್ಕೆ ಬಳಸುವ ಅದರ ಕಾಯಿ : ಪ್ರಮೇಹಕ್ಕೆ . . . ಕೆಸುವಿನ ಸೊಪ್ಪು, ನರುವಲಸೊಪ್ಪು, ಹೆಬ್ಬಜೆಯ ಕಾಯಿ, ತಗರಿನ ಕೋಡಿನ ಹಾಗೆ ಇರುವ ಮಾತಿಯ ಕಾಯಿ . . . ಕೊಡುತ್ತಾ ಬರುವುದು (ಬಿಷ್ವಿ. ೦೫೬). **ಮಾದಿ$_1$**: ಚಿಲಕಧೂಪ . . . ಮಾದಿ, ಚಿತ್ತ, ಧೂಪ (ವ್ಯಾಪಿಗ. ೦೩-೨೩೬).
[? . / ತೆಲು. ಮಾಡಿ = ಕಾಡುಹುರುಳಿ]

**ಮಾತಿಗ** (ನಾ). ಚೆನ್ನಾಗಿ ಮಾತನಾಡಬಲ್ಲವನು ; ವಾಗ್ಮಿ : ಬಾಬರನು ತುಸು ದೊಡ್ಡಾಳೂ ನಗಮೋರೆಯವನೂ ಮಾತಿಗನೂ ಕಸುವುಳ್ಳವನೂ ಆಗಿದ್ದನು (ಮೋಬಾರ. ೩೩). [ಮಾತು$_1$ + — ಇಗ]

**ಮಾತಿಲಿ** (ನಾ). ನುಡಿಯದೆ ಸುಮ್ಮನಿರುವ ವ್ಯಕ್ತಿ ; ಮೌನಿ : ಹಮ್ಮೈಸಿ ಕುಳಿತಾ ಮಾತೆ ಕಂಬನಿಯ ಕರೆದು ಮಾತಿಲಿಯಾಗಿ ರೋದಿಸಿರೆ; ಬೆರಗುಹೊಡದುತಿರ್ದನಾ ಬಭ್ರುವಾಹನು (ಶತ್ರಾಂಗ. ೬೫-೨೦೫೬) ; ಮನೆಯಲ್ಲಿ ಸಂಜೀವಿನಿಯು ಒಂದು ಮಾತಿಲಿ (ಸಂಜೀವಿ. ೬೮).
[ಮಾತು$_1$ + — ಇಲಿ$_3$]

**ಮಾತು$_1$** (ನಾ). ೧. ಮನಸ್ಸಿನ ಭಾವನೆಗಳನ್ನು ಬಾಯಿಯ ಮೂಲಕ ವ್ಯಕ್ತಗೊಳಿಸುವ ಮಾಧ್ಯಮ ; ನುಡಿ ; ಸೊಲ್ಲು : ತೀರ್ಥಂಕರ ಪರಮದೇವರ ಮಾತಂ ಕೇಳ್ದು ಬೇಗಂ ಗಂಗಾದೇವತೆ . . . ತಣ್ಣತಪ್ಪ ಗಾಳಿಯುಂ ಸುಗಂಧಜಲವರ್ಷಮುಮಂ ಮಾಡಿದೊಡೆ (ವಡ್ಡಾರಾ. ೦೦೯-೦೦); ನಿನ್ನ ಮಾತುಗಳ್ ಕೀಲಿಸಿದಂತೆಪೊಲ್ ಪುನದೊಳಿರ್ದುವು (ಆದಿಪು. ೩-೨೩) ; ಮಾತೆಂಬುದು ಜ್ಯೋತಿರ್ಲಿಂಗ (ಅವತಂ. ೨೦೦-೯೫೦) ; ಮಾತು ಮನೆ ಕೆಡಿಸಿತು, ತೂತು ಒಲೆ ಕೆಡಿಸಿತು (ಗಾದೆ). ೨. (ಬರಹದ ಮೂಲಕ ವ್ಯಕ್ತಪಡಿಸುವ) ಉಕ್ತಿ ; ಹೇಳಿಕೆ : ನೆನೆನೆನೆದು ಪೆರರ ಮಾತುಗಳನೆ ನೆಗಟ್ದಿರೆ ಕೃತಿಯೊಳದು ವರಂ ನಗದ ಗುಹಾಧ್ವನಿಯುಪೊಲಸರ್ಥವಚನಂ (ಕವಿರಾ. ೦-೦೯). ೩. ಒಂದು ಜನಾಂಗವು ಉಪಯೋಗಿಸುವ ಎಲ್ಲ ಶಬ್ದಗಳ ಸಮುಚ್ಚಯ ಮತ್ತು ಅವನ್ನು ಉಪಯೋಗಿಸುವ ಕ್ರಮ; ಭಾಷೆ : ನುಡಿಗಳ್ಗೊಡಂಬಡಲ್ ಬಗೆದಪೋಲ್ ಬಗೆಯಂ ಮಿಗಲೀಯದೊಂದೆ ನಾಟ್ನುಡಿಯ ಬೆಡಂಗ ಕನ್ನಡದ ಮಾತಿನೊಳಾ ವಿಕಟಾಕ್ಷರಂಗಳೊಳ್ ತೊಡರದೆ ಸಕ್ಕದಂಗಳ ಪದಂ ಪವಣಾಗಿರೆ ಮೆಲ್ಪುವೆತ್ತು ದಾಂಗುಡಿವಿಡು

ವಂತೆ ನೀಳ್ದು ನಿಲೆ ಪೇಟ್ವುದು ನೀತಿನಿರಂತರಕ್ರಮಂ (ಶಬರ. ೧-೧೯೯); ನವರಸಮುಣ್ಮೆ ಮಾತು ಪೊಸತಾಗಿರೆ ದೇಶಿಯು ದೇಸೆವೆತ್ತುದೆಂಬವೊಲಿರೆ . . . ಪೇಟಲೊಡರ್ಚಿದನೀ ಪ್ರಬಂಧಮಂ (ಛಂದೋಂಬು. ೧-೧೧). ೪. ಪ್ರಾಚೀನವಾದ ನುಡಿ; ಪಳಮಾತು: ಗೀತವ ಬಲ್ಲಾತ ಜಾಣನಲ್ಲ ಮಾತ ಬಲ್ಲಾತ ಜಾಣನಲ್ಲ ಜಾಣನು ಜಾಣನು ಆತ ಜಾಣನು ಲಿಂಗವ ನೆಜೆ ನಂಬಿದಾತ (ಬಸವ. ೦೩೩). ೫. ಸಂಗತಿ; ವಿಷಯ: ವೃತ್ತಾಂತ: ಕಿತ್ತಯ್ಯಂಗಳ್ ಸಂನ್ಯಸನಂಗೆಯ್ದರೆಂಬಾ ಮಾತನರಸನಾದಿಯಾಗಿ ಪೊಟಲ ಜನಂಗಳೆಲ್ಲಂ ಕೇಳ್ದು (ವಡ್ಡಾರಾ. ೬೩-೯); ಅಂತು ಸುಯೋಧನನ ಮಲ್ಲನಂ [ಕೊಂದು] ವಲಲಂ ವಿರಾಟನ ಮನೆಯೊಳ್ ತನ್ನ ಮಾತೇ ಮಾತಾಗಿರ್ದಂ (ಪಂಪಭಾ. ೮-೩೮ ವ); ಈತನಿರೆ ಕಲ್ಪಾಂತರುದ್ರನ ಮಾತು ಜಗಕೇಕೆ (ಕುಮಾವ್ಯಾ. ೬-೩೭). ೬. ಸಂಭಾಷಣೆ: ಪಾತ್ರದ ಮಾತನು ಗೀತದ ನುಡಿಯನು ಕಟ್ಟಿಕೊಟ್ಟರು ನಮ್ಮ ತಂದೆ (ಇಂಶಾಕ. ೧೧-೯೩). ೭. ಆಣೆ; ಪ್ರತಿಜ್ಞೆ; ಪ್ರಮಾಣ: ಆ ಬ್ರಾಹ್ಮಣನಿಗೆ ಹೇಳಿ ಅವನಿಂದ ಮಾತು ತೆಗೆದುಕೊಳ್ಳಬೇಕು (ವಚಪ್ರ. ೯೭); ಅವಳು ಪಶುಪತಿಯ ಹೆಂಡತಿಯೆಂಬ ಸಂಗತಿಯನ್ನು ಅವಳಿಗಾಗಲಿ ಪಶುಪತಿಗಾಗಲಿ ತಿಳಿಸಬಾರದೆಂದು ಮಾತುತೆಗೆದುಕೊಂಡನು (ಬಂಕಿಮ. ೦೬೨). 'ಮಾತುಕೊಡು', 'ಮಾತುಗಳ್ಳ' ನೋ. ೮. (ಲಗ್ನದ) ನಿಶ್ಚಯ; ನಿಷ್ಕರ್ಷೆ: ಕೊನರೆಣಿಕೆ ಬೇಡವಳ್ಗೆ ಆಗಿಲ್ಲ ಮಾತು (ಕಾರೂರ. ೩೯-೬೩). ೯. ಅಪವಾದ; ದೂರು; ನಿಂದೆ: ಮನೆಗೆ ಬಂದಳಿಯ ಮಗನಲ್ಲ ತವರಿಗೆ ಮಾತು ತಂದೋಳು ಮಗಳಲ್ಲ (ಹಳ್ಳಿಪಾ. ೬೩). ೧೦. ಜಗಳ; ವಾಗ್ವಾದ: ಮಾತಿನಲಿ ಸೋತವನೆ ಜಾಣ (ಸರ್ವಜ್ಞ. ೦೩೯೨); ಮಾತು ಬಂದಾಗ ಸೋತು ಹೋದವನೇ ಜಾಣ (ಗಾದೆ).

**ಮಾತುಮಾತು, ಮಾತೋಮಾತು** (ದ್ವಿರುಕ್ತಿ): ಮಾತುಮಾತೇ ಕಲಹ, ಕೂತುಕೂತೇ ಕಾಯಿಲೆ (ಕಾದಿಗ್ಗಾ. ೮೬); ಅವನು ಮಾತುಮಾತಿಗೆ ಹಟ ಮಾಡುತ್ತಿದ್ದನು (ಮುರಿಬಿದ್ದ. ೨-೩೦); ದಾರಿಗುಂಟ ನಡೆಯುತ್ತಿದ್ದಾಗ ಮಾತೋಮಾತು ನಡೆಯಿತು (ಹೊಸಕ್ಷಿ. ೩೯). **ಮಾತಱಿವಂ** = ಮಾತನ್ನು ಬಲ್ಲವನು: ಕುಱಿತಂತು ಪೆಱರ ಬಗೆಯಂ ತೆಱೆದಿರೆ ಪೆಱಿರ್ಗಱಿಪಲಾರ್ಪವಂ ಮಾತಱಿವಂ (ಶಬರ. ೧-೦೩); ಪ್ರವರರ ಪಂಡಿತರ ನೆಗೞ್ದ ಮಾತಱಿವರ ಸಬ್ಬವದವರೊಡನಂತೊಸೆದನ್ನವಾಸದೋಲಗದೊಳಿರ್ದನಾಗಳ್ ಹರಿಗಂ (ಪಂಪಭಾ. ೩-೮೦). **ಮಾತಾಗು** = ೧. ಮದುವೆ, ವ್ಯಾಪಾರ ಮುಂತಾದ ಕೊಡುಕೊಳ್ಳುವ ವ್ಯವಹಾರದ ನಿಷ್ಕರ್ಷೆಯಾಗು,— ನಿಶ್ಚಯವಾಗು: ಆತನು, ಬೆಳಗೆ ಎಲ್ಲಿಯೂ ಮಾತಾಗಿಲ್ಲವೆಂದೂ ಆ ಮನೆ ನಿಮಗೆ ಹೊಂದಬಹುದೆಂದೂ ತಿಳಿಸಿದನು (ಕಾರೂರ. ೩ ಕಥಾಸಾರ). ೨. ಜಗಳವಾಗು: ಅವರಿಬ್ಬರಿಗೂ ಕೆಲಸಕ್ಕೆ ಬಾರದ ಯಾವುದೋ ವಿಷಯಕ್ಕೆ ಮಾತಾಗಿ ಪರಸ್ಪರ ಮನೆಗೆ ಹೋಗುವುದನ್ನೇ ನಿಲ್ಲಿಸಿಬಿಟ್ಟರು (ರೂಢಿ). **ಮಾತಿಗೆ ತಪ್ಪು** = ವಚನಭಂಗ ಮಾಡು: ನೀನು ಮಾತಿಗೆ ತಪ್ಪಿದಂತಲ್ಲವೇ ಆಯ್ತು (ಜೀವನ. ೦೬೩); ಮಾತಿಗೆ ತಪ್ಪಿದವ ಮಾದಿಗ (ಗಾದೆ). **ಮಾತಿಗೆ ನಿಲುಕು** = ನುಡಿಗಳಲ್ಲಿ ಹೇಳುವುದಕ್ಕೆ ಬರು,— ಸಾಧ್ಯವಾಗು: ಸುಬ್ಬಮ್ಮನವರ ಆ ಸೌಜನ್ಯವೆನುವುದು ಮಾತಿಗೆ ನಿಲುಕದಂತಹುದು (ಇಂಶಾಕ. ೩೭-೭೮). **ಮಾತಿಗೆ ಬಾರದ ವಸ್ತು** = ಉಪಯುಕ್ತವಾಗದುದು: ಅಪ್ರಯೋಜಕವಾದುದು: ಮಾತಿಗೆ ಬಾರದ ವಸ್ತು ಬಹಳಿದ್ದರೇನು ಹೋತಿನ ಕೊರಳೊಳಗೆ ಮೊಲೆ ಇದ್ದರೇನು (ಪುರಂದ. ೧-೦೩೯ ಕಲ್ಲವ). **ಮಾತಿಗೆ ಮಾತು ಬೆಳೆ** = ಜಗಳವುಂಟಾಗು: ಅತ್ತೆ ಅಳಿಯಂದಿರಿಗೆ ಮಾತಿಗೆ ಮಾತು ಬೆಳೆದು ಎಲ್ಲಿ ರಂಪವಾಗುವುದೋ ಎಂದು ಎದೆ ಬಡಿದುಕೊಳ್ಳುತ್ತಿದೆ (ಜೀವನ. ೬೦). **ಮಾತಿನ ಮಲ್ಲ** = ಅತಿಯಾಗಿ ಮಾತಾಡುವವನು; ಹರಟೆಮಲ್ಲ: ಅವರನ್ನು ಮಾತಿಗೆ ಬಿಟ್ಟೀಯಾ ನೀನು? ಮಾತಿನ ಮಲ್ಲ (ಕುಂಗಳ. ೯). **ಮಾತಿನ ಮಲ್ಲಿ** = ಅತಿಯಾಗಿ ಮಾತನ್ನಾಡುವವಳು; ಹರಟೆಮಲ್ಲಿ: ಆ ಮಾತಿನ ಮಲ್ಲಿಯ ಭಂಡಾರದಲ್ಲಿ ಅದೆಷ್ಟು ವಿಷಯ ತುಂಬಿತ್ತೋ? (ರೂಪಕ. ೨೯೨). **ಮಾತಿನ ಪಾಸಿ** = ಆಡಿದ ಮಾತನ್ನು ಉಳಿಸಿಕೊಳ್ಳುವ ಛಲ,— ಹಟ: ಆಸೆಯೋ ಜೀವದಲಿ ಕುರುಧರಣೀಶ ಬಿಡು ರಾಜ್ಯವನು ಮಾತಿನ ಪಾಸಿಯೋ ಕೊಡು ಕದನವನು (ಕುವ್ಯಾಕ. ೦೩-೬೩). **ಮಾತುಕತೆ** = ಲೋಕಾಭಿರಾಮವಾದ ಸಂಭಾಷಣೆ; ಹರಟೆ: ಈಚೆ ಬಂದಾಗ ನನ್ನ ಹೆಂಡತಿಯ ಮಾತುಕತೆ ನಡೆಯುತ್ತಲೇ ಇತ್ತು (ಮುಳಕಜ್ಜ. ೩೭). **ಮಾತುಮೀರು** = ಹೇಳುವ ಮಾತನ್ನು ಉಲ್ಲಂಘನೆ ಮಾಡು,— ಉಲ್ಲಂಘಿಸು: ತಾಯಿ ತಂದೆಗಳ ಮಾತು ಮೀರಿ ಆಕೆಯಾದರೂ ಹೊರಟಾಳೆ? (ಜೀವನ. ೬೦). **ಮಾತುಹಿಡಿ** = ಸಂಭಾಷಿಸು; ಮಾತನಾಡಲು ತೊಡಗು: ಭಟ್ಟ ದಕ್ಷಿಣೆಗಾದರೆ ಮಾತು ಹಿಡಿದಾನು, ಮಂತ್ರಕ್ಕಾದರೆ ಬೆನ್ನು ತೋರಿಸ್ಯಾನು (ಗಾದೆ). **ಮಾತೆಱೆಯಳ್** = ನುಡಿಯ ಅಧಿದೇವತೆ; ಸರಸ್ವತಿ: "ನುಡಿವೆಣ್, ಬಾಸೆವೆಣ್, ಸೊಲ್ವೆಣ್, ಮಾತೆಱೆಯಳ್, ಸಾರದೆ, ಸರಸತಿ – ಈ ೬ ಸರಸ್ವತಿಗೆ ಪೆಸರ್" (ಕರಣಾ. ೯೮-೦೭).

[ದೇಶಿ. ತಮಿ. ಮಾಟ್ಟು, ಮಾಱ್ಱಮ್; ಮಲ. ಮಾಱ್ಱು; ತುಳು. ಮಾತ್; ತೆಲು. ಗೊಂಡಿ. ಮಾಟ; ಕೋತ. ಮಾಂಟ್]

**ಮಾತು$_2$** (ನಾ). [ಸಂಗೀತ] ಹಾಡಿನ ಸಾಹಿತ್ಯದಲ್ಲಿ ಬಳಕೆಯಾಗುವ ಅಕ್ಷರ; P "ಹಾಡಿನಲ್ಲಿರುವ ಮಾತುಗಳಿಗೆ ಮಾತು ಎಂದೂ ನಾದಾಂಶ ಮತ್ತು ಲಯಾಂಶಗಳ ಸಮಷ್ಟಿಗೆ ಧಾತುವೆಂದೂ ಸಂಗೀತಶಾಸ್ತ್ರದಲ್ಲಿ ಪರಿಭಾಷೆ. ಮಾತು ಎಂಬ ಕನ್ನಡಶಬ್ದವು ಈ ಶಾಸ್ತ್ರದಲ್ಲಿ ಪಾರಿಭಾಷಿಕಸಂಜ್ಞೆಯನ್ನು ಪಡೆದಿದೆ" (ಕಕುಶ್ರ. ೬೦ ಅಡಿಟಿ): ಆ ಖಂಡಗಳಲ್ಲಿ ಧಾತುವು ಒಂದೇ; ಆದರೆ ಮಾತುವು ಬೇರೆಯಾಗಿರುತ್ತದೆ. ಧಾತುವೆಂದರೆ ಸ್ವರವೆಂದು ಹೇಳಿದೆ. ಮಾತು ಎಂದರೆ ಅಕ್ಷರವೆನ್ನಲಾಗಿದೆ (ಕಕುಶ್ರ. ೦೦೨). [ಸಂ.]

**ಮಾತು$_3$** (ನಾ). ೧. ಅದ್ಭುತವಾದ ಕೆಲಸ,— ಕಾರ್ಯ: (*). ೨. ವಿಷವನ್ನಾಗಲೀ ರೋಗವನ್ನಾಗಲೀ ನಿವಾರಿಸುವ ಮದ್ದು: ವಿಷಹಾರಿ.

[← ಅರ. ಹಿಂ. ಮರಾ. ಮಾತ್]

**ಮಾತುಂಗುಟ್ಟು, ಮಾತುಗುಟ್ಟು** (ಕ್ರಿ). ಪರಸ್ಪರ ಸಂಭಾಷಿಸು,— ಆಲಾಪಿಸು: ಪುದುಂಗೊಳಿಸಿದಂ. ಪುದುಗೊಳಿಸಿದಂ; ಮಾತುಂಗುಟ್ಟಿದಂ, ಮಾತುಗುಟ್ಟಿದಂ (ಶಮದ. ೦೩೭ ಪ್ರಯೋ). **ಮಾತುಗುಟ್ಟು**: ಬೂತುತನಂ ಪೆಱಗಾಗೆ ಮಾತುಗುಟ್ಟಿದಪಳೆ (ಲೀಲಾವ. ೨-೧೦೦); ಹುಸಿವನ ಮಾತುಗುಟ್ಟದಿರು ಲೋಬನ ಮಾತನಡಂಗಿಸಾಜಿಯೊಳ್ಮುಸಿವನ ಮಾತುಗೇಳದಿರು (ಕಇ. I. ೨೩-೯೭; 1186); ಇಂತರಸನರಸಿವೆರಸು ಸಂಸೃತಿಯೊಂದು ಬಾಟಿಗ್ಗೇಡಂ ಕುಱಿತು ಮಾತುಗುಟ್ಟುತಿರ್ದಂ ಬಿದುರ್ಣಣಸಂ ಪುದುರ್ಣಿಸೆಂಬಂತಿರುಂಡು ಸೆಜ್ಜೆವನೆಗೆ ಪವಡಿಸಲ್ಕೆಂದು ಪೋದಂ (ರಾಜಶೇಖ. ೬೩-೦೨); ಸಂತೋಷೋತ್ಸಾಹಗಳಿಂದ ಮಾತುಗುಟ್ಟುತ್ತಿರುವ ಯುವರಾಜ ಶ್ರೀರಾಜಬಿಡೆಯನನ್ನೊಡಗೂಂಡು. ಬೆಟ್ಟದ ಅರಸುವಿನ ಪ್ರವೇಶ (ಬೆಟ್ಟಅ. ೦೮-೦೮). [ಮಾತು$_1$ + ಕುಟ್ಟು$_1$]

**ಮಾತುಕೇಳು** 'ಮಾತುಗೇಳ್' ನೋ.

**ಮಾತುಕೊಡು, ಮಾತುಗುಡು** (ಕ್ರಿ). ಭಾಷೆಯನ್ನು ಕೊಡು: ವಾಗ್ದಾನ ಮಾಡು: ಆಚಾರ್ಯರಿಗೆ ನಾನೇ ತಮ್ಮ ಪರವಾಗಿ ಮಾತು ಕೊಟ್ಟು ಬಂದಿರುವೆನು (ದಾಪಬಿಂ. ೦೩೮); ಅಪೂರ್ವನ ಮದುವೆಯ ಸಂಬಂಧವಾಗಿ ನೀನು, ಯಾರಿಗೂ ಮಾತುಕೊಡಬೇಡ (ಭಾರತಿ. ೦). **ಮಾತುಗುಡು**: ಅವರ್ ಮಾತುಗುಡದಿರೆ ಕುಮಾರಿ ಪ್ರಿಯದತ್ತನೆಟ್ಟ

ಮೊದಲಾಗೆ ಬಂಧುಗಳೆಲ್ಲರುಮನೊಡಂಬಡಿಸಿ . . . ಜಿನದೀಕ್ಷೆಯಂ ಕೈಕೊಂಡು (ಧರ್ಮಾಮೃ. ೩-೨೮೨). [ಮಾತು$_1$ + ಕೊಡು$_1$]

**ಮಾತುಗ** (ನಾ). = ಮಾತಿಗ : ಮಾತುಗಂ, ಬೂತುಗಂ (ಶಬ್ದಮ. ೨೦೦ ಕ್ರ ಯೋ); ಏವಂ ಮಾತುಗಂ, ಮಾತುವಣಿಗಂ (ಶಬ್ದಾ ಮ. ೪೦೫ ಕ್ರ ಯೋ). [ಮಾತು$_1$ + – ಗ2]

**ಮಾತುಗಂಟ$_1$** (ನಾ). ಅತಿಯಾಗಿ ಮಾತನಾಡುವವಳು ; ಹರಟೆಮಲ್ಲಿ : ಮಾತುಗಂಟಿಯಾದ ಅವಳನ್ನು ಮಾತನಾಡಿಸಲು ಎಲ್ಲರೂ ಹಿಂಜರಿಯುತ್ತಾರೆ (ರೂಢಿ). [ಮಾತು$_1$ + – ಗಂಟು$_2$ + – ಇ$_2$]

**ಮಾತುಗಂಟ$_2$** (ನಾ). ೧. ಅತಿಯಾಗಿ ಮಾತನಾಡುವವನು ; ಹರಟೆ ಮಲ್ಲ: ಪಶು ಪಾಷಂಡಿ ಚಾರ್ವಾಕ ಮಾತುಗಂಟಿ ವಿಷ್ಣುನಾಡಿದರೂ ಶಿವಯೋಗಸಂಬಂಧಸಂಪನ್ನನೊಪ್ಪುವನೆ (ಸಕಪ. II. ೩೦೦–೬೦). (ಗು). ೨. ಅತಿಯಾಗಿ ಮಾತನ್ನಾಡುವ : 'ಮಾತುಗಂಟಿತನ' ಪರಾ. [ಮಾತು$_1$ + – ಗಂಟು$_2$ + – ಇ$_3$]

**ಮಾತುಗಂಟಿತನ** (ನಾ). ಅತಿಯಾಗಿ ಮಾತನ್ನಾಡುವ ಸ್ವಭಾವ: ಯಾಚಕ ಮಾತುಗಂಟಿತನದಿಂದ ವಸ್ತುಭಾವದ ನಿಹಿತವನರಿಯದೆ ವಾಗ್ವಾದಕ್ಕೆ ಗೆಲ್ಲ ಸೋಲಕ್ಕೆ ಹೋರುವಲ್ಲಿ ಇಹಪರ ಉಭಯದಲ್ಲಿಗೆ ದೂರವಿ (ಪೋಶಪಾ. ೧೩೬–೩೩೨); ಮಾತುಗಂಟಿತನದಿಂದ ಎಷ್ಟು ಮಾತನಾಡಿದಡೇನು (ಸಕಪ. I. ೩೬೮–೨೩). [ಮಾತುಗಂಟ$_2$ + – ತನ]

**ಮಾತುಗಳ್ಳ** (ನಾ). ಕೊಟ್ಟ ಭಾಷೆಗೆ ತಪ್ಪುವವನು; ಸುಳ್ಳ : ನಾನು . . . ಆಡಿ ತಪ್ಪುವ ಕ್ಷುದ್ರಬುದ್ಧಿಯ ಕಿರುಕುಳನಲ್ಲ–ಮಾತುಗಳ್ಳನಲ್ಲ (ಮಂತ್ರಶ. ೪೦–೦೬). [ಮಾತು$_1$ + ಕಳ್ಳ$_1$]

**ಮಾತುಗಾತಿ** (ನಾ). ಬಹಳ ಮಾತನ್ನಾಡುವವಳು ; ಹರಟೆಮಲ್ಲಿ : ಓಹೋಹೋ. ಮಾತುಗಾತಿ. ಮಾಟಗಾತಿ. ಬಾ ಊಟಕ್ಕೆ ಬಡಿಸು (ಶಿಲಾವು. ೧೨೩). [ಮಾತು$_1$ + – ಕಾತಿ$_1$]

**ಮಾತುಗಾರ** 'ಮಾತುಗಾಱ' ನೋ.

**ಮಾತುಗಾರಿಕೆ** 'ಮಾತುಗಾಱಿಕೆ' ನೋ.

**ಮಾತುಗಾರ್ತಿ** (ನಾ). ಮಾತು ಬಲ್ಲವಳು ; ವಾಚಾಳಿ : (*). [ಮಾತುಗಾರ (< ಮಾತುಗಾಱ) + – ತಿ$_1$ (< – ಇತ್ತಿ)]

**ಮಾತುಗಾಱ**, ಮಾತುಗಾರ(ನಾ). ೧. ಅತಿಯಾಗಿ ಮಾತನ್ನಾಡುವವನು; ಹರಟೆಮಲ್ಲ : 'ಮಾತುಗಾಱತನ' ಪರಾ. ೨. ಚೆನ್ನಾಗಿ ಮಾತನ್ನಾಡುವವನು ; ವಾಗ್ಮಿ : (*). **ಮಾತುಗಾರ** : ೧. ಆ ಮಾತುಗಾರನ ಹತ್ತಿರ ಕುಳಿತುಕೊಳ್ಳಲು ಯಾರೂ ಇಷ್ಟಪಡುವುದಿಲ್ಲ (ರೂಢಿ). ೨. ಅವನು ಒಳ್ಳೆಯ ಮಾತುಗಾರ (ರೂಢಿ). [ಮಾತು$_1$ + – ಕಾಱ]

**ಮಾತುಗಾಱತನ** (ನಾ). ಅತಿಯಾಗಿ ಮಾತನ್ನಾಡುವಿಕೆ ; ಗಳಹುವಿಕೆ ; ಮಾತುಗಾ[ಪಾಠಾಂ. ರಾ]ಱತನದಲುಲಿವ ಪಲಮಾತವೇತಕೆ ನಾವು ಹೇಳಿದ ಮಾತನಾಲಿಸಿ ಮಾಡಬೇಹುದು ಮಕ್ಕಳಾದವರು (ಐಸಪು. ೩–೩೬). [ಮಾತುಗಾಱ + – ತನ]

**ಮಾತುಗಾಱಿಕೆ**, ಮಾತುಗಾರಿಕೆ (ನಾ). ೧. = ಮಾತುಗಾಱತನ : ಪೇತೆ ನೀನೇನು ದೊಡ್ಡಿತು ನನ್ನ ಸರಲ ಮುಯ್ಯಾತುಕೊಂಬೊಡೆ ರುದ್ರ ಗರಿದು ಮಾತುಗಾಱಿಕೆ ಬೇಡ ಹಿಡಿಯೆಂದು ಭಾಳದೆ ತೂತೇಳಲೆಚ್ಚು ಬೊಬ್ಬಿಱಿದ (ಪೋಹಶ. ೦೨–೩೯). ೨. ವಾದ ; ತರ್ಕ ; ಚರ್ಚೆ: ಮಾತುಗಾಱಿಕೆಯಿಂದಲವರಿವರ ಸೋಲಿಸಿದ ಗೌತಮನ ಬರಹೇಳೊ (ಬೀಕೈಪು. ೮–೦೨–೨೮) . **ಮಾತುಗಾರಿಕೆ** : ೩. ಮಾತಾಡುವ ರೀತಿ: ಅವಳು ಮಾತುಗಾರಿಕೆಯಲ್ಲಿ ಬಹಳೇ ನಿರ್ಭಿಡೆ ಸ್ವಭಾವದವಳು (ಕಶವಾ.೨೩೯); ಇವರ ಮಾಮೂಲಿಯ ಮಾತುಗಾರಿಕೆಯು . . . ರಸವರ್ಜ್ಯ ಸತ್ಯಲೋಕದ ಶುಭ್ರತೆಯನ್ನು ಸೇರುವವು (ಬಿಕ್ರಾಪಂ. ೯೯). [ಮಾತುಗಾಱ + – ಇಕೆ]

**ಮಾತುಗಿ** (ನಾ). = ಮಾತುಗಾರ್ತಿ: ಮಾತುಗಿ, ಮಾತುಗಿತಿ; ಬೂತುಗಿ, ಬೂತುಗಿತಿ (ಶಬ್ದಾ ಮ. ೦೯೩ ಕ್ರಯೋ). [ಮಾತುಗ + – ಇ$_2$]

**ಮಾತುಗಿತಿ** (ನಾ). = ಮಾತುಗಾರ್ತಿ : ಮಾತುಗಿ, ಮಾತುಗಿತಿ ; ಬೂತುಗಿ, ಬೂತುಗಿತಿ (ಶಬ್ದಾ ಮ. ೦೯೩ ಕ್ರಯೋ). [ಮಾತುಗ + – ಇತಿ$_1$ (< – ಇತ್ತಿ)]

**ಮಾತುಗುಟ್ಟು** 'ಮಾತುಂಗುಟ್ಟು' ನೋ.

**ಮಾತುಗುಡು** 'ಮಾತುಕೊಡು' ನೋ.

**ಮಾತುಗುಳಿ**, ಮಾತುಗೂಳಿ (ಗು). ಚೆನ್ನಾಗಿ ಮಾತನ್ನಾಡುವ,– ಸಂಭಾಷಿಸುವ : ಮಾತುಗುಳಿ ತರುಣ ನೆಕ್ಕಲ್ದೋವನ ಪಕ್ಕದಲ್ಲಿ ಮೆಟ್ಟಲಿಳಿಯುತ್ತ . . . ನುಡಿದನು (ಕೃಶರು. ೨೪೪) ; ಆತ ಒಳ್ಳೆ ಮಾತುಗುಳಿ ಚತುರ (ಕ್ರೀಡಾಕ್ಷ. ೨೩). **ಮಾತುಗೂಳಿ**: ಅವನ ಕರುಣೆ ಯಿರದ ಮಾತುಗೂಳಿ ಜಿಹ್ವೆಯಿದ್ದು ಇಲ್ಲದಂತೆ ಉಗ್ಗುತಿರುವನು (ತಂತಪ. ೩೦–೧೪). [ಮಾತು$_1$ + – ಗುಳಿ$_2$ (< – ಕುಳಿ$_3$)]

**ಮಾತುಗೂಳಿ** 'ಮಾತುಗುಳಿ' ನೋ.

**ಮಾತುಗೆಡು** (ಕ್ರಿ). ನುಡಿಯದಂತಾಗು ; ಮೂಕವಾಗು : ಆದಿತ್ಯನ ಸಾರಥಿ ಬೆಱಗಾದಂ ಮಾತಾಳಿ ಮಾತುಗೆಟ್ಟಂ ಧುರದೊಳ್ ಚೋದಿಸೆ ಹರಿಯುಂ ಶಲ್ಯನುಮಾದರದಿಂ ನರನ ದಿನಪತನಯನ ರಥಮಂ (ಕಂಪಶಿ. ೦೨–೦೭೨). [ಮಾತು$_1$ + ಕೆಡು$_1$]

**ಮಾತುಗೇಳ್**, ಮಾತುಕೇಳು (ಕ್ರಿ). ನುಡಿಗೆ ಒಡಂಬಡು ; ಸಮ್ಮ ತಿಸು : ಪೊಂದರುತಿರೆ ಗಂಡಂ ಸಾಯೆಂದಡೆ ಜೀಯೆಂದು ಪೇಟ್ದೊಡಂ ಮಾಡುವರಿಂತೊಂದುದಿನ ಬೀಯುವಿಲ್ಲದೊಡಂದಾಗಳ್ಮಾತುಗೇಳರಜನಂ ಮಱವರ್ (ಸಮುಕ. ೩–೦೦೦). **ಮಾತುಕೇಳು** : ಕೈಮಿಱಿ ಹೋದ ಮಾತಿಗೆ ಹುಡುಕಾಡಬಾರದು ಮಾತುಕೇಳದ ಮಕ್ಕಳ ಹೆಸರ ತೆಗೆಯ ಬಾರದು (ಕುರಂಪ. ೨–೩೬ ಪಲ್ಲವಿ). [ಮಾತು$_1$ + ಕೇಳ್]

**ಮಾತುದೆಗೆ** (ಕ್ರಿ). ಸಂಭಾಷಣೆಗೆ ತೊಡಗು : ಇಂದಿನಿರುಳೊಳಾ ಮಹೇ ಶ್ವರಪೂಜಾಮಹೋತ್ಸವಮಂ ನೋಡಲ್ವೇಟ್ಕುಮೆಂದು ಪೋಗಿವಂದಪೆನೆ ನಗನುಜ್ಞೆಯಂ ಕುಡಿಮೆಂಬ ನೆವದೆ ಮಾತುದೆಗೆಯೆ (ಜಗಿಂ. ೦೩–೩ ವ). [ಮಾತು$_1$ + ತೆಗೆ$_1$]

**ಮಾತುದೋಱು** (ಕ್ರಿ). ೧. ಸಂಭಾಷಿಸು ; ಮಾತನಾಡು : ಹಾ ತರುಣಿ ನಳಿನಾಕ್ಷಿ ನಯಸುಪ್ರೀತಿಪೂರ್ವಕದಿಂದ ಕನಸಲಿ ಮಾತುದೋಱದೆ ಬಂದು ನನ್ನಲಿ ಕರುಣದಿಂ ನೀನು (ಪಲಕ. ೭–೯). ೨. ಅಭಿವ್ಯಕ್ತಿಗೆ ತಕ್ಕ ಶಬ್ದಗಳು ತೋರು : ಮಾತುದೋಱದು ಹೆಚ್ಚಿದಾನಂದಾತಿರೇಕಕ ಚಿತ್ತ ನೆಱೆಯದು (ಕುಮ್ಮಾರ್ದ್ರೌ. ೦೩–೨). [ಮಾತು$_1$ + ತೋಱು]

**ಮಾತುಪರ** 'ಮಾತ್ಬರ್' ನೋ.

**ಮಾತುಬರಿ** 'ಮಾತ್ಬರ್' ನೋ.

**ಮಾತುಭಾರ** 'ಮಾತ್ಬರ್' ನೋ.

**ಮಾತುಭಾರಿ** 'ಮಾತ್ಬರ್' ನೋ.

**ಮಾತುಭಾರಿಕೆ** (ನಾ). ದೊಡ್ಡಸ್ತಿಕೆ ; ಪ್ರತಿಷ್ಠೆ : ಅವರ ಮಾತುಭಾರಿಕೆ, ಜಬರ್ಗಳು ಅಂಥದಿರಬೇಕು (ಪುರೂಕಶ. . ೩೦). [ಮಾತುಭಾರ (<ಮಾತ್ಬರ್) + – ಇಕೆ]

**ಮಾತುರ** (ನಾ). ೧. ಅಳತೆ ; ಪ್ರಮಾಣ : ಮಾತ್ರ – ಮಾತುರ, ಮುಕ್ತಿ – ಮುಕುತಿ (ಶಬ್ದಮ. ೨೩೪ ಕ್ರಯೋ) ; ಎರಡು ಎಂಟು ಪರಿಮಿತ ವಾದ ಮಾತುರತನಕ ರೇಚಕ ಆ ತರುವಾಯದಲಿ ಮೂವತ್ತೆರಡು ಮಾತುರತನಕ ವರಪೂರಕ (ಏಕಾಸು. ೨–೨). ೨. ಅಷ್ಟು ; ಆ ಪರಿ ಮಾಣ : ಎನ್ನ ಮೇಲಪರಾಧ ಲೇಶಮಾತುರಯಿಲ್ಲ ಅನ್ಯಾಯದವನಲ್ಲ ನಾನು ದೇವ (ಪೋಕ್ಷದೀ. ೨೦–೪) ; ಭಂಗ ಬಂದಡಶಿತೀ ನಗರಕ್ಕೆ ಕೇಳು ಕಪಿ

ಪುಂಗವನೆ ನಿನ್ನಿಂದವಮಾನಳಿದ ಮಾತುರದಿ ಮುಂಗಡೆಯುಲೀ ರಾಜಧಾನಿ ವಶ ಮಾಯ್ತು ನಿನಗೆ (ಪಂಪಭಾ. ೫-೦೯-೨೫). [<ಸಂ. ಮಾತ್ರಾ]

**ಮಾತುಲ, ಮಾತುಳ** (ನಾ). ೧. ತಾಯಿಯ ಸಹೋದರ ; ಸೋದರ **ಮಾವ** : "ಮಾತುಲಃ, ಮಾತುಭ್ರಾತಾ – ಸೋದರಮಾವನ ಹೆಸರು" (ಸಿದ್ಧಾಂತಿ. ೦೭೭); ಅರ್ಜುನನು ಆ ಸೈನ್ಯಗಳಲ್ಲಿ ಪಿತೃಗಳು, ಪಿತಾಮಹರು, ಆಚಾರ್ಯರು, ಮಾತುಲರು . . . ಆಪ್ತರು ಇವರನ್ನು ನೋಡಿದನು (ಶಾತತ್ತ್ವ. ೦೦೨); ಮಾತುಲಗೃಹದಿ, ಲಲಿತಸುಖದ ನಿದ್ರಾರತಿಯು . . . ವಕ್ಷದೊಳ್ ಪಟ್ಟಿರ್ದ ಭರತದೇವಂ ದುಃಖಸ್ವಪ್ನಭೀತಿಯಿಂ ಬೆಚ್ಚಿ ಬೆಬ್ಬಳಿಸಿದ್ದು ನೋಡಿದನ್ (ಶ್ರೀರಾಮಪ. ೦೦೪-೭೯). ೨. ದತ್ತೂರದ ಗಿಡ : "ಉನ್ಮತ್ತಃ . . . ಮಾತುಲಃ , ಮದನಃ — ೭ ಉಮ್ಮತ್ತೀಗಿಡದ ಹೆಸರುಗಳು" (ಸಿದ್ಧಾಂತಿ. ೦೪೦). **ಮಾತುಳ** : ೧. "ಮಾತುಳನೆನಲ್ಕೆ ಸೋದರಮಾವನಕ್ಕು" (ಮಂಗರಾ. ೯೨-೧೪) ; ಕುಶಳಮೆ ಮಾತುಳಂಗೆ ಜಯವರ್ಮನೃಪಂಗೆ (ಧರ್ಮಾಮೃ. ೭-೩೮) ; ನಿನಗೆ ಮಾತುಳರಾವು ಮಾಣಲಿ ಮುನಿಜನಮಗೆ ಮೊಜಿರುವಲ್ಲ ದುಶ್ಯಾಸನ ಜಯದ್ರಥರಲ್ಲಲಾ ಸಂಬಂಧಿಗಳು ನಿನಗೆ (ಕುಮಾವ್ಯಾ.ಕ. ೩-೩೩). [ಸಂ.]

**ಮಾತುಲಂಗ, ಮಾತುಳಂಗ** (ನಾ). ಒಂದು ಬಗೆಯ ಮರ ಮತ್ತು ಹುಳಿಹಣ್ಣುಗಳ ಜಾತಿಗೆ ಸೇರಿದ, ದಪ್ಪತಿರುಳೂ ದೊಡ್ಡ ಗಾತ್ರವೂ ಇರುವ ಅದರ ಹಣ್ಣು ; ಮಾದಳ ; ಸಕ್ಕರೆನಿಂಬೆ : "ಲುಂಗ – ಮಾತುಲಂಗ" (ಚತು. ೦೯೩). **ಮಾತುಳಂಗ** : "ಕೊರಳೊಳಾಭರಣದೊಳು . . . ಮಾತುಳಂಗದೊಳು ನಿರುತದಿಂ ರುಚಕವುಕ್ಕು" (ಮಂಗರಾ. ೦೩೨-೫೯); ಒಂದು ಫಲವದು ಮಾತುಳಂಗವದೊಂದು ಫಲವದು ತಿಂತ್ರಿಣೀಕವು (ಜಸಪು. ೦೯-೭೭). 'ಮಾತುಲುಂಗ' ಪರಾ. [ಸಂ.]

**ಮಾತುಲಂಗಕ** (ನಾ). = ಮಾತುಲಂಗ : ಗುಡ ಮಾತುಲಂಗಕವು ಪೊಡವಿಯೊಳಗೆಸೆದಿಕ್ಕು ಒಡಗೂಡೆ ಬಿಸಿನಿರಸದೊಡನೆ ಬಡತನವಡಗಿ ಸಿರಿ ಬಕ್ಕು (ಸರ್ವಜ್ಞ. ೦೯೭೫). 'ಮಾತುಲುಂಗಕ' ಪರಾ. [ಸಂ.]

**ಮಾತುಲಕ** (ನಾ). = ಮಾತುಲ ೧ : "ಅಂಬಿಕೆಯ ಸೋದರಂ ಮಾತುಲಕಂ" (ವಸ್ತುಕೋ. ೫೫-೨೦). [ಸಂ.]

**ಮಾತುಲಪುತ್ರಕ** (ನಾ). ೧. ತಾಯಿಯ ಒಡಹುಟ್ಟಿದವನ ಮಗ ; ಸೋದರಮಾವನ ಮಗ. ೨. ದತ್ತೂರದ ಕಾಯಿ : ಮಾತುಲಪುತ್ರಕಃ . . . ಮದ್ದುಗಳಿಗೂ ಶಕುನಕ್ಕೂ ಉಪಯೋಗಿಸಲ್ಪಡುತ್ತ (ಸಿದ್ಧಾಂತಿ. ೦೪೦). [ಸಂ.]

**ಮಾತುಲಾನಿ, ಮಾತುಳಾನಿ** (ನಾ). ೧. ತಾಯಿಯ ಒಡಹುಟ್ಟಿದವನ ಹೆಂಡತಿ ; ಸೋದರತ್ತೆ : "ಮಾತುಲಾನೀ, ಮಾತುಲೀ–೨ ಸೋದರ ಮಾವನ ಹೆಂಡತಿಯ ಹೆಸರುಗಳು" (ಸಿದ್ಧಾಂತಿ. ೦೭೫). ೨. ಸೆಣಬಿನ ಗಿಡ. ೩. ಒಂದು ಬಗೆಯ ದ್ವಿದಳಧಾನ್ಯ. **ಮಾತುಳಾನಿ** : ೧. ಮಾತುಳಂಗಂ ಮಾತುಳಾನಿಗಂ ತುಟಿಲ್ಗೆಯ್ವುದುಂ (ಧರ್ಮಾಮೃ. ೬-೯೯ ವ) ; ಮಾತುಳಾನಿಯ ಸುತಗೆ ವೈವಾಹಮಾಡಿತ್ತರವಳ ತಾಯ್ತಂದೆಗಳು ಪುರುಷನಾಥನು ಎಂಬಗೆ (ಶ್ರೀರಾಮಾ. ೦೨-೦೨). ೪. ತಂದೆಯ ತಂಗಿ : "ಪಿತನ ಸಹಜಾತೆ ನಿಜಮಾತುಳಾನಿಯೆನಿಕ್ಕು" (ಮಂಗರಾ. ೯೨-೦೪). [ಸಂ. ಮಾತುಲಾನೀ]

**ಮಾತುಲಾಹಿ** (ನಾ). ೧. ಒಂದು ಬಗೆಯ ಹಾವು : "ಕೇರೆ" (ನಾಚಿರಾ. ೯). ೨. ಹಾವಿನ ಜಾತಿಗೆ ಸೇರಿದ ಒಂದು ಬಗೆಯ ಹುಳು : "ಮಾಲುಧಾನಃ, ಮಾತುಲಾಹಿಃ–೨ ಊಸರವಳ್ಳಿಹಾವು, ವಿಷಗಿಡದ ಹುಳ, ಉಮ್ಮತ್ತದ ಹುಳ. ಇದು ಖಟ್ವಾಂಗದ ಆಕಾರವಾಗಿಯೂ ದೀರ್ಘದೇಹವಾಗಿಯೂ ಉದ್ದವಾದ ಬಾಲವುಳ್ಳದ್ದಾಗಿಯೂ ನಾಲ್ಕುಕಾಲುಗಳುಳ್ಳದ್ದಾಗಿಯೂ ಇರುವದು" (ಸಿದ್ಧಾಂತಿ. ೭೨). [ಸಂ.]

**ಮಾತುಲಿ** (ನಾ). = ಮಾತುಲಾನಿ ೧ : "ಮಾತುಲಾನೀ, ಮಾತುಲೀ–೨ ಸೋದರಮಾವನ ಹೆಂಡತಿಯ ಹೆಸರುಗಳು" (ಸಿದ್ಧಾಂತಿ. ೦೭೫). [ಸಂ. ಮಾತುಲೀ]

**ಮಾತುಲುಂಗ, ಮಾತುಳುಂಗ** (ನಾ). = ಮಾತುಲಂಗ : ಸಿತದೂರ್ವಾಂಕುರ ಮಾತುಲುಂಗ ಸಳಿನೀಭೃಂಗಾರಗೋರೋಚನಾಕ್ಷತದಧ್ಯಾದಿ ವಿಡಂಬ ಮಂಗಳದೊಳೇಂ (ಆದಿಪು. ೦೩-೦೦); ನವಫಲಂಗಳಿಂ ನೆಟಿದೊಪ್ಪುವ ಮಾತುಲುಂಗದ ಪೊದಱುಗಳುಮಂ . . . ಕ್ರೂರಮೃಗನಿವಹಮುಮಂ ಕಂಡು (ಶಂಕರಾ. ೦೦೭-೧೩): ಹುಡುಗನು ಮಾತುಲುಂಗವನ್ನು ಹಿಡಿದು ಶುಕದ ಕಡೆ ತೋರಿಸುತ್ತಿರುವವನು (ಹೊಯ್ಸಳಶಾ. ೨೮). **ಮಾತುಳುಂಗ** : ದೂರ್ವಾಂಕುರ ಮಾತುಳುಂಗ ಶೃಂಗಾರದರ್ಪಣ ಪೂರ್ಣಕಳಶ ಕಳಮಾವೃತಕರ ಪಲ್ಲವೆಯರಪ್ಪ ಪುರಂಧ್ರಿಯರುಂ . . . ಇದಿರ್ವಂದು ಮೆಯ್ಮಿಕ್ಕಿ (ಶಂಕರಾ. ೩-೨ ವ) ; ಪಸಿಯುಡಕೆಗಳುಂ ಮಾವಿನ ರಸವಣ್ಣ ಳನತುಳಮಾತುಳುಂ [ಶಾಕಾಂ. ೪೦]ಗದ ಫಳಮುಂ ವಸುಧೀಶಂಗೊಲಿದಿತ್ತಂ ವಸಂತಚರನಂತೆ ಋಷಿನಿವೇದಕನೊರ್ವಂ (ಪುಷ್ಪದಂ. ೧-೯೦). [ಸಂ.]

**ಮಾತುಲುಂಗಕ** (ನಾ). = ಮಾತುಲಂಗ : "ಫಲಪೂರಕಃ, ಬೀಜಪೂರಕಃ, ರುಚಕಃ, ಮಾತುಲುಂಗಕಃ – ೪ ಮಾದೀಗಿಡ, ಮಾದಾಳದ ಗಿಡ" (ಸಿದ್ಧಾಂತಿ. ೦೪೦). [ಸಂ.]

**ಮಾತುವಣಿಗ** (ನಾ). ಮಾತುಗಂಟಿ ; ಹರಟೆಮಲ್ಲ : ಮಾತುಗಂ, ಮಾತುವಣಿಗಂ ; ಬೂತುಗಂ, ಬೂತುವಣಿಗಂ (ಶಬ್ದಾನು. ೪೧೫ ಪ್ರಯೋ).
[ಮಾತು₁ + –ವಣಿಗ₂ ]

**ಮಾತುವಲ್ಲಹ** (ನಾ). ನುಡಿಯ ಅಧಿದೇವತೆಯಾದ ಸರಸ್ವತಿಯ ಒಡೆಯ ; ಬ್ರಹ್ಮ : ಆಗಮವಿಭಕ್ತಿಗಳ ಲೋಪಕ್ಕೆ – ಮಾತುವಲ್ಲಹಂ ; ನೂಱ ಪತ್ತು ; ತೆಂಕವಕ್ಕಂ (ಶಮದ. ೦೭೩ ಪ್ರಯೋ).
[ಮಾತು₁ + ಬಲ್ಲಹ₁]

**ಮಾತುವೆಣ್** (ನಾ). ನುಡಿಯ ಅಧಿದೇವತೆ: ಸರಸ್ವತಿ : 'ಮಾತುವೆಣ್ಣರಸ' ಪರಾ. [ಮಾತು₁ + ಪೆಣ್]

**ಮಾತುವೆಣ್ಣರಸ** (ನಾ). ಸರಸ್ವತಿಯ ಒಡೆಯ ; ಬ್ರಹ್ಮ : ಮಾತುವೆಣ್ಣರಸ ಮುನಿನಿಕರ ದಿಕ್ಪಾಲ ಗಿರಿಜಾತೆಯಾಣ್ಮನ ಸುಳುಹ ಸ್ವಪ್ನದೊಳ್ ಕಾಣ್ಬುದಿಪರೀತವೆಂದುಚ್ಚರಿಪ ವೇದಸಾಕ್ಷಿಗಳದಂತಿರಲಿ (ಶ್ರೀರಾಮಾ. ೬-೩೨).
[ಮಾತುವೆಣ್ + ಅರಸ₁]

**ಮಾತುವೆಣ್ಣೞಿಯ** (ನಾ). = ಮಾತುವೆಣ್ಣರಸ : ಪಲಗಣ್ಣ ಕಾರೊಡಲ ಮಾತುವೆಣ್ಣೞಿಯರುಂ . . . ರಕ್ಷಿಸುಗೆ ಬಿಡದೆಮ್ಮನು (ರಾಜಶೇ. ೦-೪).
[ಮಾತುವೆಣ್ + ಎೞಿಯ]

**ಮಾತುಹಾರಿಸು** (ಕ್ರಿ). ಮಾತಿನ ಜಾಡನ್ನು ಬಿಟ್ಟುಹೋಗು ; ವಿಷಯವನ್ನು ಬದಲಿಸು, – ಮರೆಮಾಡು : ಕ್ಷೇಮ ವಿಚಾರಿಸಿದಾಗ ಬಾಯಿಗೆ ಬಂದಂತೆ ಏನೇನೊ ಮಾತುಹಾರಿಸಿದರು (ಕಾವೇರಿ. ೯೯) ; ರಾಮಣ್ಣನಿಗೆ ಬಾಯಾರಿಕೆ ಕೊಟ್ಟಿಯೇನು ? . . . ಎಂದು ಮಾತುಹಾರಿಸಿದ್ದರು (ವಾತ್ಸಲ್ಯ. ೪). [ಮಾತು₁ + ಹಾರಿಸು ( < ಪಾಱಿಸು)]

**ಮಾತುಳ** 'ಮಾತುಲ' ನೋ.

**ಮಾತುಳಂಗ** 'ಮಾತುಲಂಗ' ನೋ.

**ಮಾತುಳಾನಿ** 'ಮಾತುಲಾನಿ' ನೋ.

**ಮಾತುಳುಂಗ** 'ಮಾತುಲುಂಗ' ನೋ.

**ಮಾತೃ** (ನಾ). ೧. ತಾಯಿ ; ಜನನಿ : "ಜನನಿ ಸವಿತ್ರಿ ಮಾತೃ ಸುಮ ತಾಯಲ್" (ವಸ್ತುಕೋ. ೫೪-೦೭) ; ಮಾತೃಪಿತೃಬಂಧುಗೋತ್ರಜಭೀತಿಯೊಳಬ್ಜಾಕ್ಷಿ ಕಾಂತಿಮತಿ ಪೆತ್ತ ತನೂಜಾತನಂ . . . ಶ್ಮಶಾನದೊಳ್ ಬಿಸುಟ್ಟು ಬಾಯೆಂದೊಡೆ (ದಶಕು. ೯-೪೦). ೨. ಹಸು ; ಗೋವು. ೩. = ಮಾತೃಕೆ₁ ೨. ೪. ಲಕ್ಷ್ಮಿ. ೫. ದುರ್ಗೆ. ೬. ಆಕಾಶ. ; ಗಗನ.

೭. ಭೂಮಿ. ೮. ಪುಷ್ಯಮಾಸದ ಹುಣ್ಣಿಮೆ. ೯. 'ಅ' ಕಾರ ಮೊದಲಾದ ಅಕ್ಷರ. [ಸಂ.]

**ಮಾತೃಕ** (ನಾ). ಜೀವಕಣಗಳ ನಡುವೆ ಇರುವ ದ್ರವ್ಯ : ಈ ಕಣಧಾತುವಿನ ಜೀವಕಣಗಳಿಂದ ಸ್ರವಿಸುವ ಒಂದು ಬಗೆಯ ಮಾತೃಕದಲ್ಲಿ (Matrix) ಜೀವಕಣಗಳು ಹುದುಗಿರುತ್ತವೆ (ಪ್ರಾಣಿಶಾ. ೯೦). [ಸಂ. ಮಾತೃಕಾ]

**ಮಾತೃಕಾಕ್ಷರ** (ನಾ). ೧. 'ಅ' ಕಾರದಿಂದ 'ಅಃ' ವರೆಗಿನ ಸ್ವರವರ್ಣ; ಮೂಲವರ್ಣ. ೨. (ಆಲಂ) ಮೊದಲನೆಯವನು : ಭೀತಿಗೊಂಡನು ದ್ರೋಣ ಸೋಲಿಕೆ ಕೇತುವಾದನು ಶಲ್ಯನಪಜಯ ಮಾತೃಕಾಕ್ಷರನಾದನಶ್ವತ್ಥಾಮನಿಂದಿನಲಿ (ಕುಮಾವ್ಯಾದ್ರೋ. ೦೬-೦೩). [ಸಂ.]

**ಮಾತೃಕೆ$_1$** (ನಾ). ೧. ತಾಯಿ ; ಜನನಿ. ೨. ಸ್ಕಂದನನ್ನು ಲಾಲಿಸಿದ ಬ್ರಾಹ್ಮೀ, ಮಾಹೇಶ್ವರೀ, ಕೌಮಾರೀ, ವೈಷ್ಣವೀ, ವಾರಾಹೀ, ಇಂದ್ರಾಣೀ, ಚಾಮುಂಡಾ ಎಂಬ ಏಳುಜನ ಮುಖ್ಯದೇವತೆಯರು: "ಚಾಮುಂಡಿ ಕರ್ಣಮೋಟಿ ಮಹಾಮಾಯಾಮೂರ್ತಿ ಚರ್ಚಿಯುಂ ಭೈರವಿಯಾ ನಾಮಮಿವಕ್ಕುಂ ಬ್ರಹ್ಮಾಣೀಮುಖ್ಯರೆನಿಪ್ಪರೇಳ್ವರುಂ ಮಾತೃಕೆಯರ್" (ವಸ್ತುಕೋ. ೪-೦೯) ; ಜಲಧಿ ಮಾತೃಕೆ ವಾರ ಕುಲಗಿರಿಗಳು ವಿಭಕ್ತಿ ದ್ವೀಪ ಸರ್ಪಾವಳಿ ಮುನೀಶ್ವರರುಗಳ ಧಾತುಗಣದ ವೇದಿಗಳ ತಿಳಿದು . . . ನಡೆವವರುಗಳು ನಿರ್ಮಳದಲೆಡಹದೆ ಬೆರೆಸಿಕೊಂಬರು ಮುಕ್ತಿರಾಜ್ಯವನು (ಕುಮಾಭಾ. ೪-೩೪). ೩. ಅಜ್ಜಿ. ೪. ದಾದಿ. ೫. ನೆಲೆ : ಆಗರ : ಮೂಲ : ಸಚ್ಚರಿತಕ್ಕೆ ಮಾತೃಕೆಯೆನಿಸಿ ಮೆಱೆವ ಕಾಂತಾಶಿರೋಮಣಿ ಮಹಾದೇವಿಯರ್ ಸಹಿತಮಂತಕಾರಿಯ ಪದಾಂಭೋಜಮಂ ಪರಮಾನುರಾಗದಿಂದರ್ಚಿಸುತ್ತೆ (ಶಮ್ಮರಾ. ೩-೬೦); ಪ್ರಳಯಮೋಘದ ಮಾತೃಕೆಯೊ ಕರಿಕುಲವೊ . . . ಜಗಂಗಳನಳಿವ ಜಲಧಿಯೊ ಸೇನೆಯೋ ನಾವರಿಯೆವು (ಕುಮಾವಿ. ೬-೪) ; ಅಚ್ಚಗನ್ನಡದ ಕಚ್ಚಿದೆಯ ಪ್ರತಿಜ್ಞೆಯು ಅವನ ಸುಕ್ಷೇಪವೃತ್ತಿಗೆ ಮಾತೃಕೆಯಾಗಿರಬೇಕು (ಶಾಹಿಸ. ೦೭೦). ೬. [ವ್ಯಾಕ] ವರ್ಣಮಾಲೆಯ ಮೂಲಾಕ್ಷರ ; ಅಕ್ಷರಮಾಲೆಯ ಹದಿನಾಲ್ಕು ಸ್ವರಸಮೂಹ. ೭. ಗ್ರಂಥದ ಮೂಲಪ್ರತಿ : ದಕ್ಷಿಣ ಭಾರತದಲ್ಲಿ ಅಂದು ಪ್ರಚಾರದಲ್ಲಿದ್ದ ಭಾರತದ ಮಾತೃಕೆಗಳು . . . ಅವನಿಗೆ ಆಕರವಾಗಿರಬೇಕು (ಕಶಾತ. ೯೪) ; ಈಗ ದೊರೆತಿರುವ ಓಲೆಗರಿಯ ಮಾತೃಕೆಯಲ್ಲಿ ಪಂಪ – ರಂಶಿಯರ ಸಮಸ್ಯೆಗಳು ಇಪ್ಪತ್ತೊಂರು ಇವೆ (ಕರ್ಣಕ. ೭೨). [ಸಂ. ಮಾತೃಕಾ]

**ಮಾತೃಕೆ$_2$** (ನಾ). [ಮುದ್ರಕ] ಮುದ್ರಣದ ಅಕ್ಷರಗಳನ್ನು ಎರಕ ಹೊಯ್ಯುವ ಅಚ್ಚು : ಅಚ್ಚುಮೊಳೆಗಳನ್ನು ತಯಾರಿಸಲು ಪ್ರತಿ ಅಕ್ಷರ ಅಥವಾ ಚಿಹ್ನೆಗೂ ಬೇರೆಬೇರೆಯ ಮಾತೃಕೆಯನ್ನು (Matrix) ತಯಾರಿಸಿ ಅದರಲ್ಲಿ ಕರಗಿಸಿದ ಮಿಶ್ರಲೋಹವನ್ನು ತುಂಬಿ ಮೊಳೆಯನ್ನು (ಎರಕ ಹುಯ್ದು) ತಯಾರಿಸುವರು (ಮುದ್ರಕ. ೦೦) ; ಮೊದಲ ಮೆಟ್ಟಿಲಿನಲ್ಲಿ ದುರೇನಿಯಮ್ ಗ್ರಾಫೈಟ್ ಮಾತೃಕೆಗಳ (Matrix) ಪಟ್ಟಿಯನ್ನು ತಯಾರಿಸುತ್ತಾರೆ (ಶಿಂಪ್ರಾ. ೨೭೨). [← ಇಂ. Matrix]

**ಮಾತೃಗಾಮಿ** (ನಾ). ತಾಯಿಯೊಡನೆ ಅನೈತಿಕಸಂಬಂಧವನ್ನು ಹೊಂದಿರುವವನು ; ತಾಯಿಗಂಡ : ಇನ್ನೇನು ಮಾಡಬೇಕೆಂದಿರುವೆ? ಬದಮಾಸ, ಮಾತೃಗಾಮಿ ? (ಅಶವಾ. ೦೭). [ಸಂ. ಮಾತೃಗಾಮಿನ್]

**ಮಾತೃತ್ವ** (ನಾ). ತಾಯಿಯಾಗಿರುವಿಕೆ ; ತಾಯಿತನ : ವೀರಪುತ್ರನ ಮಾತೃತ್ವ ಪರಮಪವಿತ್ರವಾದದ್ದು (ವೀರಯೋ. ೧೦೦). [ಸಂ.]

**ಮಾತೃದೀಕ್ಷೆ** (ನಾ). ತಾಯಿಯ ಮರಣದ ನಂತರ ಒಂದುವರುಷದವರೆಗೆ ಮುಂಡನ ಮಾಡಿಕೊಳ್ಳದೆ ಇರುವುದು. ಸಂಭೋಗಿಸದೆ ಇರುವುದು ಮುಂತಾದ ವ್ರತಗಳ ಪಾಲನೆ : (೬). [ಸಂ. ಮಾತೃದೀಕ್ಷಾ]

**ಮಾತೃಭಾಷೆ** (ನಾ). ಶೈಶವದಲ್ಲಿ ತಾಯಿಯು ಮಗುವಿಗೆ ಕಲಿಸುವ ಭಾಷೆ ; ತಾಯಿನುಡಿ ; ಮನೆಮಾತು : ಮಾತೃಭಾಷೆಗೆ ಇಷ್ಟು ತಿರಸ್ಕಾರವಿರುವ ಸ್ಥಳದಲ್ಲಿ ಮಾನವಜೀವನದ ಶುಷ್ಕತೆ, ಶೂನ್ಯತೆ, ದೀನತೆಗಳನ್ನು ಯಾರೂ ಹೋಗಲಾಡಿಸರು (ಡಂಕಿಮು. XI ಮುನ್ನುಡಿ). [ಸಂ. ಮಾತೃಭಾಷಾ]

**ಮಾತೃಭೂಮಿ** (ನಾ). ಹುಟ್ಟಿದ ನೆಲ ; ತಾಯಿನಾಡು: ಇಂಗ್ಲಿಷರು ತಮ್ಮ ಮಾತೃಭೂಮಿಯಲ್ಲಿದ್ದುದನ್ನೇ ಇಲ್ಲಿಯೂ ತಂದು ನಿಲ್ಲಿಸಿದ್ದಾಗಿದೆ (ಶಿಕ್ಷರ. ೦೩೩) ; ವಿವೇಕಾನಂದರು ಕ್ರಿ.ಶ. ೧೮೯೭ ಡಿಸೆಂಬರ್ ೧೬ರಂದು ಮಾತೃಭೂಮಿಗೆ ಮರಳಿದರು (ಧರ್ಮಶಾ. ೩೦). [ಸಂ.]

**ಮಾತೃಮುಖಿ** (ನಾ). ತಿಳಿಗೇಡಿ ; ದಡ್ಡ : ಮೂರ್ಖ : "ಅಜ್ಞಃ, ಮಾತೃಮುಖಿ – ಈ ೨ ಯೇನುಮರಿಯದವಂ" (ಹಲಾಯು. ೭೨-೩೨೨). [ಸಂ.]

**ಮಾತೃಮೂಢ** (ನಾ). = ಮಾತೃಮುಖಿ : ನಿನಗೇನು ಬೇಕು ಅದು ನನಗೆ ಬೇಕು, ಬೇಡಾದುದೆನಗೆ ಬೇಡ. ಈ ಜ್ಞಾನಪಿಂಡ ಬೆಳೆಯುತ್ತ ಬರಲಿ ಹುಟ್ಟಾನೆ ಮಾತೃಮೂಢ (ಹ್ಯದಶ. ೬೩-೨೦). [ಸಂ.]

**ಮಾತೃವಾಹಿ** (ನಾ). ಮರಗಳಿಗೆ ಜೋತುಬೀಳುವ ಒಂದು ಬಗೆಯ ಹಕ್ಕಿ ; ತೊಗಲುಬಾವಲಿ : ಶಂಬೂಕ ಮಾತೃವಾಹಿ . . . ಪಾದೋದರ ಕ್ರಿಮ್ಯಾದಿ ದ್ವೀಂದ್ರಿಯಗಳ್ ಸ್ಪರ್ಶನರಸನೇಂದ್ರಿಯಜ್ಞಾನೋಪೇತಂಗಳಪ್ಪುವು (ಶತ್ರ್ಯ. ೯೮). [< ಸಂ. ಮಾತೃವಾಹಿನೀ]

**ಮಾತೃಷ್ವೆ** (ನಾ). ತಾಯಿಯ ಒಡಹುಟ್ಟಿದವಳು ; ಚಿಕ್ಕಮ್ಮ ಅಥವಾ ದೊಡ್ಡಮ್ಮ : "ಮಾತೆಯೊಡಹುಟ್ಟಿದಳು ಮಾತೃಷ್ವೆಯಕ್ಕು" (ಮಂಗರಾ. ೯೨-೦೩). [ಸಂ. ಮಾತೃಷ್ವಾ]

**ಮಾತೃಶಾಸಿತ** (ನಾ). = ಮಾತೃಮುಖಿ : "ವೈಧೇಯಃ, ಬಾಲಿಶ . . . ಮೂರ್ಖಃ, ಮಾತೃಶಾಸಿತಃ– ಈ ೧೧ ಅಱಿಯದವಂ" (ಹಲಾಯು. ೩೭-೦೮೦). [ಸಂ.]

**ಮಾತೃಷ್ವಸೃ** (ನಾ). = ಮಾತೃಷ್ವೆ. [ಸಂ.]

**ಮಾತೃಷ್ವಸೇಯ** (ನಾ). ತಾಯಿಯ ಸಹೋದರಿಯ ಮಗ : ಚಿಕ್ಕಮ್ಮ ಅಥವಾ ದೊಡ್ಡಮ್ಮನ ಮಗ. [ಸಂ.]

**ಮಾತೃಷ್ವಸೇಯಿ** (ನಾ). ತಾಯಿಯ ಸಹೋದರಿಯ ಮಗಳು : ಚಿಕ್ಕಮ್ಮ ಅಥವಾ ದೊಡ್ಡಮ್ಮನ ಮಗಳು. [ಸಂ. ಮಾತೃಷ್ವಸೇಯೀ]

**ಮಾತೃಷ್ವಸ್ರೀಯ** (ನಾ). = ಮಾತೃಷ್ವಸೇಯ. [ಸಂ.]

**ಮಾತೃಸ್ಥಾನ** (ನಾ). ೧. ತಾಯಿಯ ಸ್ಥಾನ : ಅತ್ತಿಗೆ ಮಾತೃಸ್ಥಾನದಲ್ಲಿ ವಿರಾಜಮಾನಳಾಗಿ ನನ್ನ ಹೊಟ್ಟೆಗೆ ಅನ್ನಪೂರ್ಣೆಯಂತೆ ಅನ್ನ ನೀಡುತ್ತಿರುವಾಗ (ವೃಶಿ. ೦೮೨). ೨. ಮೂಲಸ್ಥಳ ; ಉಗಮಸ್ಥಾನ : ಸಪ್ತಕೋಟಿಮಹಾಮಂತ್ರಂಗಳು ಉಪಮಂತ್ರಂಗಳು ಅನಂತಕೋಟಿಗಳನೂ ಗರ್ಭೀಕರಿಸಿಕೊಂಡಿಪ್ಪ ಇವಕೆ ಮಾತೃಸ್ಥಾನವಾಗಿ ಇವಕೆ ಉತ್ಪತ್ತಿಸ್ಥಿತಿಲಯ ಕಾರಣಂಗಳಿಗೆ ಕಾರಣವಾಗಿಪ್ಪ . . ಶ್ರೀಮೂಲಮಂತ್ರವು (ಉಂಶಿ. ೪ ೮೦೦-೦೯೩). [ಸಂ.]

**ಮಾತೃಹತ್ಯೆ** (ನಾ). ತಾಯಿಯನ್ನು ಸಂಹರಿಸುವುದು. – ಕೊಲೆ ಮಾಡುವುದು. [ಸಂ. ಮಾತೃಹತ್ಯಾ]

**ಮಾತೆ** (ನಾ). ತಾಯಿ ; ಜನನಿ : ಮಾತೆ ಗೌರಿ ಪಿತನಲ್ತೆ ರುದ್ರನೀ ಖ್ಯಾತಮಾದ ಭುವನತ್ರಯಕ್ಕೆ (ಶ್ರೀಕಾ. ೩೯-೬೩) ; ತಾಯೆ ಬಾರ, ಮೊಗವ ತೋರ, ಕನ್ನಡಿಗರ ಮಾತೆಯೆ ! (ಕನ್ನಬಾ. ೯೭೦). [ಸಂ. ಮಾತಾ]

**ಮಾತ್ಬರ್**, ಮಾತಬರ, ಮಾತಬರಿ, ಮಾತುಬರ, ಮಾತುಬರಿ, ಮಾತುಭಾರ, ಮಾತುಭಾರಿ (ಗು). ೧. ಪ್ರತಿಷ್ಠೆಯುಳ್ಳ ; ಗಣ್ಯತೆಯಿಂದ ಕೂಡಿದ : ಆರುಮಂದಿ ಮಾತ್ಬರ್ ಜನರನ್ನೂ ಸಹ ಜಾಮೀನಾಗಿ ಇವರನ್ನು ಕವಿಟಿಪಾಲಾ ಹಕೀಂ ಅಥವಾ ಪಂಚಾಯತರು ಎಂದು ಹೊರಕರ್ಮಾಡಿದರು

(ಪಚಾಪು. II. ೨೮). **ಮಾತಬರ :** ೧. ಉಭಯಕಡೆಯಲ್ಲು ಇರುವ ಮಾತಬರ ಮನುಷ್ಯರ ಸಾಕ್ಷಿಯಿಂದಲೂ ಮಡಂಬಡಿಕೆಯಿಂದಲೂ (ಶಕೇಂದ್ರ. ೫೬೯) ; ಆ ಬಳಿಕ ಬೆಂಗಳೂರುಪ್ಯಾಟಿ ಮಾತಬರ ವರ್ತಕರ ಕರಸಿ ಸಮ ಜಾಯಿಷೀಯಿಂದ ಪತ್ರಗಳ ಬರಕೊಟ್ಟು (ಸ್ವರಶ. ೦೦೯). **ಮಾತಬರಿ :** (ನಾ). ೨. ಪ್ರತಿಷ್ಠಿತನಾದ ವ್ಯಕ್ತಿ ; ಗಣ್ಯ : ಯಿವರಲ್ಲಿ ಮಾತಬರಿಗಳೂ ಅವರಲ್ಲಿ ಮಾತಬರಿಗಳೂ . . . ಗ್ರಾಮಾಧಿಪತಿಗಳನ್ನು ಕೇಳಿದರು (ಎಕ. IX. ಕಾಶಾಸ. ೯೦-೦೦ ; 1700). **ಮಾತುಪರ :** ೨. ತನ್ನ ಪ್ರಾಂತದಲ್ಲಿ ಮಾತುಪರನಾಗಿದ್ದ ಕಾರಣದಿಂದ ಇವನು ರಾಜರ ಕಣ್ಣಿಗೆ ಬೀಳುವ ಮನುಷ್ಯನಾಗಿದ್ದನು (ಚಕಣ ೫೦). **ಮಾತುಬರಿ :** ೧. ಹಜಾಮರಲಿ ಮಾತುಬರಿ ರಾಂಪುರಿ ವೆಂಕಟಾಚಲುವನು . . . ಕೇಳುವಲಿ (ಎಕ. IX. ಕಾಶಾಸ. ೯೦-೦೭ ; 1700). ೩. ಗೌರವ ; ಮಾನ್ಯತೆ : (೯).

**ಮಾತುಭಾರ :** ೨. ಅಂಥ ಮಾತುಭಾರರು ದಿವಾಳಿ ತೆಗೆದು. ಊರು ಬಿಟ್ಟು ಹೋದ ಕತೆಯನ್ನು ಕೇಳಿದಾಗ ನಾಗಿಯ ಹೊಟ್ಟೆ ಎಷ್ಟು ತಂಪಾಯಿತೋ ! (ಮಹಿಕ. ೫೦). **ಮಾತುಭಾರಿ :** ೨. ತನ್ನ ಕಾರ್ಯಗಳ ಸುಲಭಸಾಧನೆಗಾಗಿ ಮಾತುಭಾರಿಗಳ ಕಡೆ ಸೇರಿಕೊಂಡನು (ಬಿಕಸ. ೨೩) ; ನೀವು ಸ್ವತಃ ತುಂಬ ಘನಸ್ಥಿಕೆ ಹೊಂದಿನ ಮನೆತನವಲ್ಲಿ ಜನಿಸಿದ ದೊಡ್ಡ ಮಾತುಭಾರಿಗಳು (ಕುರುಕಾ. ೭೭).

[←ಅರ. ಮುಅತಬರ್. ಮೋತಬಿರ್; ಹಿಂ. ಮಾತಬರ್, ಮಾತಬರೀ; ಮರಾ. ಮಾತಬರ್, ಮಾತಬ್ಬರ್. ಮಾತಬರೀ. ಮಾತಬ್ಬರೀ]

**ಮಾತ್ರ₁** (ನಾ). ೧. ಯಾವುದಾದರೂ ವಸ್ತುವಿನ ಉದ್ದ, ಅಗಲ, ಎತ್ತರ, ಗಾತ್ರ, ದೂರ ಮುಂತಾದುವುಗಳಿಗೆ ಸಂಬಂಧಿಸಿದಂತೆ ಇರುವ ಪರಿಮಾಣ. ೨. ಅಷ್ಟು ; ಆ ಪರಿಮಾಣ : ಎನ್ನ ಕಠಿಣದ ಶಿರವುಮಂ ಮುಟ್ಟಿಸಿದ ಮಾತ್ರದಲಿ ನಿನ್ನ ಹಸ್ತಂ ನೊಂದಿತಯ್ಯೋ (ಬಸಪು. ೬೯-೬೭) : ಕಪ್ಪೆ ಕೂಗಿದ ಮಾತ್ರಕ್ಕೆ ಕೆರೆತುಂಬೀತೇ ? (ಗಾದೆ). [ಸಂ.]

**ಮಾತ್ರ₂** (ಅ). ಬರಿಯ : ಕೇವಲ : ವಿದ್ಯೆ ಬುದ್ಧಿಗಳನ್ನು ದಡ್ಡರು ಮಾತ್ರ ಹಳಿಯುತ್ತಾರೆ (ಮುಂಬಯು. ೬. ೦-೯) ; ಸಿಟ್ಟು ಬಂದಾಗ ಮಾತ್ರ ತನ್ನ ತಡವಿದವರನ್ನು ಚಿವರಿಕೊಳ್ಳಲಿಕ್ಕೆ ಉಗುರುಗಳನ್ನು ಹೊರಗೆ ಕಳೆಯುತ್ತದೆ (ಮುಂಬಯು. ೬. ೦-೨೭). [< ಮಾತ್ರ₁]

**ಮಾತ್ರಾಂಗುಲ** (ನಾ). [ಶಿಲ್ಪಶಾ]ದೇವತಾಪ್ರತಿಮೆಗಳನ್ನು ಕಡೆಯುವಾಗ ದೇಹದ ಪ್ರಮಾಣವನ್ನು ನಿರ್ಣಯಿಸುವ ಒಂದು ಅಳತೆ; ಬಲಗೈ ನಡುಬೆರಳಿನ ಮಧ್ಯದ ಗೆಣ್ಣಿನ ಭಾಗಕ್ಕೆ ಸಮವಾಗುವ ಒಂದು ಅಳತೆ : ಕರ್ತೃವಿನ ಮಧ್ಯಮಾಂಗುಲಿಯ ನಡುವಣ ಪರ್ವದ ದೀರ್ಘಮೇ ಮಾತ್ರಾಂಗುಲಮೆನಿಸುಗುಂ (ಶಿಪೀಕ. ೨೫೦); ಮಾನಾಂಗುಲ, ಮಾತ್ರಾಂಗುಲ, ದೇಹಲಬ್ಧಾಂಗುಲವೆಂಬ ಅಳತೆಗಳಿಂದ . . . ಮೂರ್ತಿಗಳನ್ನು ರಚಿಸುವ ವಿಧಾನಗಳನ್ನೂ . . . ಶಿಲ್ಪಶಾಸ್ತ್ರ ಮತ್ತು ಆಗಮ ಶಾಸ್ತ್ರಗಳು ತಿಳಿಸುತ್ತವೆ (ಭಾರಶ. ೯೦). [ಸಂ.]

**ಮಾತ್ರಾಕಾಲ** (ನಾ). ಒಂದು ಹ್ರಸ್ವಾಕ್ಷರವನ್ನು ಹೇಳುವಷ್ಟು ಕಾಲಾವಧಿ : ಅತ್ಯಲ್ಪಕಾಲ : ನಿದ್ರೆಮಾಡುವ ಆರೋಗ್ಯಶಾಲಿಪುರುಷನು ಉಸಿರೆಳೆಯುವ ಕಾಲ ೧ ಮಾತ್ರಾಕಾಲ (ಭಾರಶ. ೦೬೦ ಅಡಿಟಿ). [ಸಂ.]

**ಮಾತ್ರಾಗಣ** (ನಾ). [ಛಂದ] ಅಕ್ಷರಗಳನ್ನು ಉಚ್ಚಾರ ಮಾಡುವ ಕಾಲಮಾನದಿಂದ ಅಳೆಯುವ ಒಂದು ಘಟಕ : ಇಂತಾದೌಪಚ್ಛಂದಸಿಕಂ ಮೊದಲಾಗೆ ವೈತಾಳೀಯುಮುದೀಚ್ಯವೃತ್ತಿಯುಂ ಪ್ರಾಚ್ಯವೃತ್ತಿಯುಮ ಪರಾಂತಿಕೆಯುಮೆಂದು ಮಾತ್ರಾಗಣಂಗಳಿಂ ವೈತಾಳಿಗಳ್ ಬೇಱಿಬೇಱಿ ಮೊಸರ್ವಡೆಗುಂ (ಛಂದೋಂಬು. ೩-೨೨೦ ವ); ಗಣವೆಂದರೆ ಕೆಲವು ನಿಯಮಗಳ ಗನುಸಾರವಾಗಿ ವಿಂಗಡಿಸಿದ ಅಕ್ಷರಗಳ ಗುಂಪು. ಅದು ವರ್ಣಗಣ, ಮಾತ್ರಾಗಣವೆಂದು ಎರಡು ವಿಧವು (ಕೃಬಿ. ೬೯). 'ಅಂಶಗಣ' ಪರಾ. [ಸಂ.]

**ಮಾತ್ರಾನಿಯಮ** (ನಾ). [ಛಂದ] ಪದ್ಯದ ಪಾದಗಳಲ್ಲಿಯೂ ಗಣಗಳಲ್ಲಿಯೂ ಎಷ್ಟೆಷ್ಟು ಮಾತ್ರೆಗಳು ಇರಬೇಕೆಂಬ ನಿಯಮ : ಮೊದಲೊಳ್ಪನ್ನೆರಡೆರಡನೆಯದಱೊಳ್ ಪದಿನೆಂಟು ಮೂಱಱೊಳ್ ಪನ್ನೆರಡಂತ್ಯದ ಪಾದದಲ್ಲಿ ಪದಿನೈದು ಮಾತ್ರಾನಿಯಮಮಾರ್ಯೆಯೊಳ್ (ಛಂದೋಂಬು. ೯-೨೬೦); ಮಾತ್ರಾವಿವಕ್ಷೆಯಿಲ್ಲದೆ ಅಂಶವಿವಕ್ಷೆ ಮಾತ್ರ ಉಳ್ಳ ವಿಷ್ಣುಗಣಗಳು ಮುಂಚೆ ಇದ್ದು, ಅನಂತರ ಮಾತ್ರಾನಿಯಮವೂ ಉಂಟಾಯಿತೋ ಎಂಬ ಊಹೆಯೂ ಏಳುತ್ತದೆ (ಕೃಬಿ. ೦೯೯). [ಸಂ.]

**ಮಾತ್ರಾಬಂಧ** (ನಾ). [ಛಂದ] ಮಾತ್ರಾಗಣನಿಯಮಕ್ಕೆ ಒಳಪಟ್ಟು ರಚಿತವಾದ ಬಂಧ,–ರಚನೆ : 'ಜಾತಿ'ಯ ಮಾತ್ರಾಬಂಧಗಳಲ್ಲಿ ಅಷ್ಟಮಾತ್ರಿಕ, ಸಪ್ತಮಾತ್ರಿಕ, ಷಣ್ಮಾತ್ರಿಕ ಮತ್ತು ಪಂಚಮಾತ್ರಿಕ ಗಣಗಳು ಆವರ್ತನೆ ಹೊಂದುತ್ತವೆ (ಛಂದೋವಿ. ೫೦). [ಸಂ.]

**ಮಾತ್ರಾರ್ಯೆ** (ನಾ). [ಛಂದ] ಮಾತ್ರಾನಿಯಮಬದ್ಧವಾದ ಆರ್ಯಾವೃತ್ತ : ಅವಱಿಂ ಪೊಱಗೆ ಪುಟ್ಟುವುವೆಂದೊಡೆ ದಂಡಕ ರಘಟೆ ಮಾತ್ರಾರ್ಯಾ ತ್ರಿಪದಿ ಷಟ್ಪದಿ ಅಷ್ಟಪದಿ ಗಣನಿಯಮ ಕಂದ ಶಂಖಾವೃತ್ತ ತಾಳವೃತ್ತಾದಿ ಜಾತಿಗಳುಂಟು [ರಘಟೆ ಮಾಳಾವೃತ್ತ ದಂಡಕಂಗಳ್ ಮಾತ್ರಾನಿಯಮ ಸ್ಕಂಧಕಾದಿ ಜಾತಿಗಳೆಂಬಿವಕ್ಕುಂ] (ಛಂದೋಂಬು. ೦-೯೬ ವ). 'ಆರ್ಯೆ' ಪರಾ. [ಸಂ. ಮಾತ್ರಾರ್ಯಾ]

**ಮಾತ್ರಾವೃತ್ತ** (ನಾ). [ಛಂದ] ಮಾತ್ರಾಗಣನಿಯಮಕ್ಕೆ ಒಳಪಟ್ಟು ರಚಿತವಾದ ಪದ್ಯ : ಮಾತ್ರಾಗಣನಿಯಮಕ್ಕೊಳಗಾದ ಪದ್ಯವು ಮಾತ್ರಾವೃತ್ತವು (ಕೃಬಿ. ೬೯); ಇಂಥ ವೃತ್ತಗಳು ಸಂಸ್ಕೃತದಲ್ಲಿ ವರ್ಣವೃತ್ತಗಳೆಂದು ಗಣ್ಯವಾಗಿವೆಯೇ ಹೊರತು ಮಾತ್ರಾವೃತ್ತಗಳೆಂದು ಗಣ್ಯವಾಗಿಲ್ಲ (ಛಂದೋವಿ. ೫೦). [ಸಂ.]

**ಮಾತ್ರಾಸಮಕ** (ನಾ). [ಛಂದ] ಮಾತ್ರಾವೃತ್ತದ ಒಂದು ಪ್ರಭೇದ; P ಮಾತ್ರಾಸಮಕದಲ್ಲಿ ನಾಲ್ಕುಪಾದಗಳಿದ್ದು ಪ್ರತಿಯೊಂದು ಪಾದದಲ್ಲೂ ಹದಿನಾರುಮಾತ್ರೆಗಳಿರುತ್ತವೆ. ಸಾಮಾನ್ಯವಾಗಿ ಒಂಬತ್ತನೆಯ ಅಕ್ಷರ ಲಘುವಾಗಿಯೂ ಕೊನೆಯ ಅಕ್ಷರ ಗುರುವಾಗಿಯೂ ಇರುತ್ತದೆ. ಇದರಲ್ಲಿ ಅನೇಕ ಭೇದಗಳುಂಟು. ಉಪಚಿತ್ರಾ, ವಿಶ್ಲೋಕ, ಚಿತ್ರಾ, ವಾನವಾಸಿಕಾ, ಪಾದಾಕುಲಕ ಮುಂತಾಗಿ ಬೇರೆಬೇರೆ ಲಕ್ಷಣಗಳುಳ್ಳ ವೃತ್ತಗಳಿವೆ : ಸಂಸ್ಕೃತ, ಪ್ರಾಕೃತ ಗ್ರಂಥಗಳಲ್ಲಿರುವ ಮಾತ್ರಾಸಮಕಗಳಂತೆ ರಗಳೆಗಳನ್ನು ನಾಗವರ್ಮನು ಸಂಸ್ಕೃತ ಛಂದಸ್ಸಿಗೇ ಸೇರಿಸಿರುವುದು ಸ್ಪಷ್ಟವಾಗುತ್ತದೆ (ಕೃಬಿ. ೦೫೭). [ಸಂ.]

**ಮಾತ್ರಿಕೆ** (ನಾ). [ಛಂದ] ಒಂದು ಮಾತ್ರೆಯಷ್ಟು ಉಚ್ಚಾರಣೆಯ ಬೆಲೆಯುಳ್ಳುದು : ಸ್ವರಮೆಂದುಂ ವ್ಯಂಜನಮೆಂದೆರಡಕ್ಕುಂ ವರ್ಣಭೇದಮಾದ್ಯಕ್ಷರದಿಂ ಬರೆ ಪದಿನಾಲ್ಕುಂ ಸ್ವರಮಿಂ ಪರಿಶೇಷಂ ವ್ಯಂಜನಗಳೆರೆ ಮಾತ್ರಿಕೆಗಳ್ (ಕಾವ್ಯಾ.ಶ. ೭). [ಸಂ. ಮಾತ್ರಿಕಾ]

**ಮಾತ್ರೆ** (ನಾ). ೧. ಉದ್ದ, ಅಗಲ, ಎತ್ತರ, ಗಾತ್ರ, ದೂರ, ಕಾಲ ಅಥವಾ ಸಂಖ್ಯೆ ಮುಂತಾದುವುಗಳಿಗೆ ಸಂಬಂಧಿಸಿದಂತೆ ಇರುವ ಅಳತೆ,–ಪರಿಮಾಣ. ೨. (ಸ್ವಲ್ಪ) ಭಾಗ ; ಅಂಶ. ೩. ಆಸ್ತಿ ; ಐಶ್ವರ್ಯ. ೪. (ಮನೆಯ) ಉಪಕರಣ ; ಸಾಮಗ್ರಿ : " ಪರಿಚ್ಛದದಲ್ಲಿಯುಂ ಮಾತ್ರಾ ಎಂಬುದುಂ " (ಶಬಾಪು. ೦೩೨-೦೦). ೫. ಹೊರೆ : (೯). ೬. ಗೆರೆ ; ಗೀಟು : ರೇಖೆ : " ಅಕ್ಷರವಿಶೇಷ ರೇಖೆ ಗೃಪ ಮುಟ್ಟುಗಳುಂ ಪೊರೆ ಮಾತ್ರೆಯುಕ್ಕು " (ನಾಷಾರ. ೦೫೯). ೭. ಔಷಧಿಯ ಗುಳಿಗೆ: ಕಾಲಕಾಲವರಿತು ಸಂಗ್ರಹಿಸಿದಂಥಾ ವಸ್ತುಗಳೊಡನೆ ಕೂಡಿದ್ದಾಗಿ, ಸ್ವಲ್ಪ ಮಾತ್ರೆಯುಳ್ಳದ್ದಾಗಿ . . . ಸೇವನಮಾತ್ರದಿಂದಲೆ ಸಕಲರೋಗಗಳನ್ನೂ ಪರಿಹರಿಸುವಂಥಾ ಪರಮೌಷಧವ ಔಷಧವನಿಸಿಕೊಂಬುದು (ಸಕವೃ. ೨೩); ತಾಯಿಯು ನೋಡಿ ಮಗನಿಗೆ ಮಂದವಾಗ್ನಿಯಾಗಿದೆ ಎಂದು

ಒಳ್ಳೊಳ್ಳೆ ಜೀರ್ಣಕಾರಿ ಮಾತ್ರೆ ಲೇಹಗಳನ್ನು ಮಾಡಿಸಿ ಕೊಟ್ಟಳು (ದೇಶೀಕಾ. ೫೬); ಅನಂತಯ್ಯನ ಮಾತ್ರೆ ವೈಕುಂಠಯಾತ್ರೆ (ಗಾದೆ). ೮. ನಾಗರೀಲಿಪಿಯ ಏ, ಓ ಮುಂತಾದ ದೀರ್ಘಾಕ್ಷರಗಳ ಮೇಲುಭಾಗಕ್ಕೆ ಹಾಕುವ ಓರೆಯಾದ ಗೆರೆ. ೯. [ಛಂದ] ಒಂದು ಹ್ರಸ್ವಾಕ್ಷರವನ್ನು ಉಚ್ಚರಿಸುವ ಕಾಲಾವಧಿ: ಸಂಬಂಧಾಕ್ಷರದೊಳೆಲ್ಲ ಮಾತ್ರೆಗಳುಂ ತಬ್ಬಿಂಬಾಗೆ ಬೆರಸಿ ಶೋಭಾಡಂಬರಮಂ ಪಡೆಗುಮುಚಿತಕಾವ್ಯೋಕ್ತಿಗಳೊಳ್ (ಛಂದೋಂಬು. ೧-೬); ಸಮಾನಾಕ್ಷರಮೊಂದುಮನಣಿಯಿಂದುಚ್ಚರಿಸಿದೊಡಂ ಮಾತ್ರೆಯೆಂಬ ಪೆಸರಂ ಪಡೆಗುಂ (ಶಬ್ದಶಾ. ೩-೩೯); ಮಾತ್ರಾಗಣವನ್ನು ಮಾತ್ರೆಗಳಿಂದ ತಿಳಿಯಬೇಕು. ಒಂದು ಲಘುವಿಗೆ ಒಂದು ಮಾತ್ರೆಯೆಂದೂ ಒಂದು ಗುರುವಿಗೆ ಎರಡು ಮಾತ್ರೆಗಳೆಂದೂ ಸಂಕೇತವು (ಛಂದಃ. ೭೦). ೧೦. [ಸಂಗೀತ] ಕಾಲದ ಅಳತೆ: ೩೫ ಸೂಳಾದಿ ತಾಳಗಳಲ್ಲಿ ಬರುವ ಚತುರಶ್ರಲಘುವೇ ಒಂದು ಮಾತ್ರೆಯಾಗುತ್ತದೆ (ಸಂಗೀಸಂ. ೫೩). [ಸಂ. ಮಾತ್ರಾ]

**ಮಾತ್ಸರಿಯ** (ನಾ). ಹೊಟ್ಟೆಕಿಚ್ಚು; ಅಸೂಯೆ: ಗುರುವಿರೋಧ ಮಹೀಸುರರ ಮಾತ್ಸರಿಯ ಬಂಧುದ್ವೇಷ . . . ಶರಣಜನದಂಡಿತ್ವವೆಂಬಿವನರವರಿಸದಂಗೈಪ ಭೂಪನ ಸಿರಿಗೆ ಮೂಡುಗು ಕೇಡು ನಿಮಿಷಕೆ (ಕುಮಾವ್ಯಾ. ೬೦೭ ೧-೬೩). [< ಸಂ. ಮಾತ್ಸರ್ಯ]

**ಮಾತ್ಸರ್ಯ** (ನಾ). ೧. ಕಾಮ. ಕ್ರೋಧ. ಲೋಭ, ಮೋಹ, ಮದ ಮತ್ತು ಮಾತ್ಸರ್ಯಗಳೆಂಬ ಅರಿಷಡ್ವರ್ಗಗಳಲ್ಲಿ ಒಂದು; ಅಸೂಯೆ; ಹೊಟ್ಟೆಕಿಚ್ಚು: ಅವನಿಯುಮರರ ಕಳಕಳವ ಪಾಂಡವರ ಸುಮ್ಮಾನವನು ನೃಪಕೌರವರ ಮಾತ್ಸರ್ಯೋಪಲಾಲಿತಹರುಷ ವಿಭ್ರಮವ ಅವನಿಪಾಲರು ಕಂಡರು (ಕುಮಾವ್ಯಾ. ೬-೧೧). ೨. ಅತೃಪ್ತಿ; ಅಸಂತೋಷ. ೩. [ಜೈನ] ಪ್ರದೋಷ, ನಿಹ್ನವ, ಮಾತ್ಸರ್ಯ, ಅಂತರಾಯ, ಆಸಾದನ ಮತ್ತು ಉಪಘಾತಗಳೆಂಬ ಆರು ಆಸ್ರವಗಳಲ್ಲಿ ಒಂದು; ತನ್ನ ಶಿಷ್ಯನೇ ತನ್ನನ್ನು ಸರಿಗಟ್ಟುವನೆಂಬ ಅಸೂಯೆಯಿಂದ ಗುರುವು ಶಿಷ್ಯನಿಗೆ ಸರಿಯಾಗಿ ಕಲಿಸದಿರುವುದು: ಯತಿಗಳ ಚರಿಗೆಗೆಯೋಗ್ಯಕಾಲವನತಿಕ್ರಮಿಸುವುದೆ ಅಸ್ಮರಣೆ ಅತಿಶಯವೆನಲೊಪ್ಪ ಮಾಡೆ ಮತ್ಸರಿಸುವುದತಿಚಾರ ಮಾತ್ಸರ್ಯಮಿ (ಧ್ಯಾದಶಾ. ೧೧-೬೮). [ಸಂ.]

**ಮಾತ್ಸ್ಯನ್ಯಾಯ** (ನಾ). [ತರ್ಕಶಾ] ದೊಡ್ಡ ಮೀನು ಚಿಕ್ಕಚಿಕ್ಕ ಮೀನುಗಳನ್ನು ನುಂಗುವುದು; P ಬಲಿಷ್ಠನಾದವನು ಅಶಕ್ತನನ್ನು ಹಿಡಿದು ಪೀಡಿಸುವುದು ಎಂಬುದು ಲೋಕರೂಢಿ: ಪರಚಕ್ರಕ್ಕೆಡೆಮಾಡಿ ಭೂವಲಯಮಂ . . . ತಪಕ್ಕೆ ಪೋಪುದನಯಂ ಭೂಪಾಲ ನಿನ್ನಂ ಪುರಂದರನೀ ರಾಜ್ಯಭರಕ್ಕೆ ಯೋಜಿಸಿ ತಪೋರಾಜ್ಯಕ್ಕೆ ಮೆಯ್ವೊಂದನಂತಿರೆ ನೀನಾಚರಿಸಲ್ಲದಂದು ಧರೆ ಮಾತ್ಸ್ಯನ್ಯಾಯಮೇನಾಗದೇ (ಶಂಶಾಪಾ. ೨-೩೨). 'ಮತ್ಸ್ಯನ್ಯಾಯ' ಪರಾ. [ಸಂ.]

**ಮಾದ**$_1$ 'ಮಾದರ' ನೋ.

**ಮಾದ**$_2$ (ನಾ). ಒಬ್ಬಾತನ ಹೆಸರು: ಕೇಚೆತ್ತಚ್ಚನೃಗನೆಳೆಯೊನ್ಮಾದತ್ತಚ್ಚನವನ್ ಪೆಸಜಿಜ್ಜನಿಧಾನಬೆಯಲ್ × × × (ಎಕ. X, ಮಾಲೂರು. ೯೬-ए; ಸು. 750); ಎಜಿನಾಗನುಂ ಕುಪ್ಪನುಂ ಮಾದನುಂ ಒಕ್ಕಲ್ಗನಂಗೆಯ್ಯೆ (ಎಇ. XXVI, ೬೨-೧೬; 906). [ ? ]

**ಮಾದಕ** (ಗು). ೧. ಅಮಲೇರಿಸುವ; ಮತ್ತು ಬಳಿಸುವ: ಅವಳ ಮಾದಕಸೌಂದರ್ಯದಿಂದ ನಗರವೆಲ್ಲವೂ ಮುಗ್ಧವಾಯಿತು (ಅಶ್ರಮು. ೬೬). ತೆಳುನಡುವಿನ ಮೇಲ್ಭಾಗದ ಮಾಟವಾದ ಎದೆಕಟ್ಟು ಮಾದಕ ನೋಟವಾಗಿತ್ತು (ಛಾಯಾ. ೩೮). 'ಮಾದಕಪಾನೀಯ', 'ಮಾದಕವಸ್ತು' ಪರಾ. ೨. ಸಂತೋಷಕರವಾದ; ಉಲ್ಲಾಸಗೊಳಿಸುವ. [ಸಂ.]

**ಮಾದಕತೆ** (ನಾ). ೧. ಅಮಲು; ಸೊಕ್ಕು: ಮುಚುಕುಂದಪುಷ್ಪದ ಗಂಧವು ವಸಂತದ ಆಕಾಶದಲ್ಲಿ ನಿಬಿಡಮಾದಕತೆಯನ್ನು ಪಸರಿಸಿಬಿಟ್ಟಿದೆ (ಇಕ್ಷು. ೪೦೬). ೨. ಅಮಲಿನಿಂದ ಕೂಡಿದುದು; ಮತ್ತೇರಿಸುವ ಗುಣವುಳ್ಳದು: ಅವಳ ಕಣ್ಣುಗಳು ಮಾದಕತೆಯ ಪ್ರೇಮಜ್ಯೋತಿಯಂತೆ ಮಿನುಗುತ್ತಿದ್ದವು (ಬಂಗಾಪ. ೦೯). [ಸಂ. ಮಾದಕತಾ]

**ಮಾದಕದ್ರವ್ಯ** (ನಾ). ಗಾಂಜಾ, ಅಫೀಮು ಮುಂತಾದ ಮತ್ತೇರಿಸುವ ಗುಣವುಳ್ಳ ವಸ್ತು: ಇನ್ನಾವುದಾದರೊಂದು ಮಾದಕದ್ರವ್ಯವನ್ನೋ ತಿನ್ನಬಹುದು (ಜಯಂತ. ೦೦೫). [ಸಂ.]

**ಮಾದಕಪಾನೀಯ** (ನಾ). ಮದ್ಯ ಮುಂತಾದ ಅಮಲೇರಿಸುವ ಪೇಯ. ಮಾದಕಪಾನೀಯದ ವಿಷಯ ನಿನಗೆ ಗೊತ್ತಿರುವಷ್ಟು ನನಗೆ ಗೊತ್ತಿಲ್ಲ (ಹಸುಹೂ. ೨೦೦); ಮಾದಕಪಾನೀಯಗಳ ಮತ್ತು ಆರೋಗ್ಯಕ್ಕೆ ಹಾನಿಕರಗಳಾದ ಪದಾರ್ಥಗಳ ಸೇವನೆಯನ್ನು ಪ್ರತಿಷೇಧಿಸಲು ರಾಜ್ಯವು ಪ್ರಯತ್ನಿಸತಕ್ಕದು (ಶಾಧಾಪ. ೨೯). [ಸಂ.]

**ಮಾದಕಪೇಯ** (ನಾ). = ಮಾದಕಪಾನೀಯ: ನನ್ನ ದುರಹಂಕಾರಿ ಮನಸ್ಸಿಗೆ ಅವಳಿಗುಂಟಾಗುವ ಅಸಂತೋಷವೇ ಮಾದಕಪೇಯಪಾನದಿಂದ ಉಂಟಾಗುವ ಉನ್ಮತ್ತಗ್ಲಾನಿಯಂತೆ ಆಗಿದ್ದಿತು (ಹೇಮಂತ. ೨೬೯); ನಿಮ್ಮನ್ನು ಎತ್ತಿಕೊಂಡು ಬಂದು ಮಾದಕಪೇಯವನ್ನು ಕುಡಿಸಿ ರಾತ್ರಿ ಎಂಟುಗಂಟೆಯ ಸುಮಾರಕ್ಕೆ ಇಲ್ಲಿ ಹಾಯ್ದುಹೋಗುತ್ತಿರುವಾಗ ನಮ್ಮ ಜನರು ನಿಮ್ಮನ್ನು ಬಿಡಿಸಿಕೊಂಡರು (ಮೇರಿಮ. ೦೦೯). [ಸಂ.]

**ಮಾದಕವಸ್ತು** (ನಾ). = ಮಾದಕದ್ರವ್ಯ: ಹಲವಾರು ಹದಿಹರೆಯದ ಹುಡುಗ ಹುಡುಗಿಯರು ಮಾದಕವಸ್ತುಗಳ ಸೇವನೆಯಿಂದ ಹಾಳಾಗುತ್ತಿದ್ದಾರೆ (ಕೂಡಿ). [ಸಂ.]

**ಮಾದಕ್ಷಿಣಾಪಥ** (ನಾ). ಭರತಖಂಡದ ವಿಶಾಲವಾದ ದಕ್ಷಿಣಭಾಗ; ವಿಂಧ್ಯಾದ್ರಿಯ ದಕ್ಷಿಣಕ್ಕಿರುವ ದೇಶಭಾಗ: ಅಳಪಗಣಪಶುಪತಿ ಮಾದಕ್ಷಿಣಾಪಥ ಬಹುಶತಹವನಾಹವದು[ಳ್]ಪಶುಪ್ರದಾನಶೌರ್ಯೋದ್ಯಮ ಭರಿತೋ[ನ್ನಾ]ನಪಶುಪತಿಯೆನ್ನು ಪೊಗಟೆ (ಮೈಆ. ೦೯೩೬, ೦೬-೭; 450). [ಮಾ$_1$ + ದಕ್ಷಿಣಾಪಥ]

**ಮಾದಗ** 'ಮಾದೆಗ' ನೋ.

**ಮಾದಪ್ಪ** (ನಾ). ಒಬ್ಬಾತನ ಹೆಸರು: ಅಕ್ಕ ಕೈಲೂರ ಮಕನ್ದಿರ್ ಮಾದಪ್ಪನ್ನ (ಎಕ. III (R), ಗುಂಡ್ಲುಪೇ. ೬೬-೩; ಸು. 8ನೆಯ ೫೮); ಸ್ವಸ್ತಿಶ್ರೀ ಬೇಲೂರರಾಮಗಂ ಮಾದಪ್ಪನ್ ಪ್ರಭುಗೌಡ ಬೇಟೂರಾ ಎಮ್ಮೆಯ ತೊಕೊಳೊಳೆ ಗುದ್ದಿ ಆನ್ತಿಜಿದು ಸತ್ತನ್ (ಎಕ. X. ಕೋಲಾರ. ೨೨೬-೧; ಸು. 950). [ಮಾದ$_2$ + ಅಪ್ಪ$_1$]

**ಮಾದಮಂಗಲ** (ನಾ). ಒಂದು ಊರಿನ ಹೆಸರು: × × × ರೋಡೆ ದಿರ್ಮಾದಮಂಗಲಮೊಡೆದಿರ್ಗೊಂಟೆ ಮಡಿದಿಡೆದಿವೆಳತ್ತೂರೊ × × × (ಎಕ. III (R), ಹೆಗ್ಗಡ. ೦೦೨-೯: ಸು. ೯ನೆಯ ೫೮). [ಮಾದ$_2$ + ಮಂಗಲ]

**ಮಾದಮ್ಮ** (ನಾ). ಒಬ್ಬಾತನ ಹೆಸರು: ಕೊಡಲ್ ಸೆಟ್ಟಿಯರಾ ಮಾದಮ್ಮನ್ . . . ಸವ್ವ್ಗವಂದು ಪುಲಿಯುಮ್ಮರ್ಗನ್ ಯಾ ಒಕ್ಕಲ್ ಪಡೆ[ದು]ವು (ಎಇ. IX, ೨೩-೦೨; ಸು. 800). [ಮಾದ$_2$ + ಅಮ್ಮ$_1$]

**ಮಾದರ, ಮಾದ**$_1$, **ಮಾದಾರ, ಮಾದಿರ** (ನಾ). ಕೀಳುಜಾತಿಯವನು; ಮಾದಿಗ: ಇಸೆ ಪಶುಮಜಿ ಯೋನಿಮುಖಪ್ರಸವಕ್ಕಲಸಿದ್ದಪೊಲೀಜಿಬಾಯಿಂ ತಾನೊಂದಸುವೆರಸು ಬೀಟ್ವುದುಂ ಕರುಣಿಸಿ ಮತ್ತಂ ಮಾದರಂಗೆ ಸಲಹೆಂದಿತ್ತಂ (ಚಿಕೋತೆ. ೩-೫೬); ಸನ್ನುತಾಮಳಕೀರ್ತಿ ಮಾದರ ಚೆನ್ನಯಂ ಕಟ್ಟಿಂಬಿಕಳವಂ ತನ್ನ ನಿಜಜಿಹ್ವಾಗ್ರವೇ ಪಾಧಿಯಾಣವಾಗಿರಲು ಪನ್ನಗಾಭರಣಂ ನಿಷೇಧವದೆನ್ನದಾರೋಗಿಸಿದನು (ಬಸವ. ೫೨-೧೪೦). **ಮಾದ**$_1$: ಚಮಗಾರನು ತೊಗಲಿನ ಚೂರಿನ ತೋರಣವನ್ನು ಕಟ್ಟುವನು.

ಮಾದರು ಎಲುಬಿನ ತೋರಣವನ್ನು ಕಟ್ಟಿಸಿಹರು (ಕಾಕಸಂ. ೬೮); ಆಕೆ ಹೆಚ್ಚಿನವುಸ್ಕಾರವನ್ನು ಹಾಕಿದ ಸೀರೆಯನ್ನು ಮಾದರಿಗೆ ಮುಟ್ಟಿಸಿದಳು (ಗುಣಾಶಾ. ೮೮). **ಮಾದಾರ** : ಸೆಟ್ಟಿ ಎಂಬೆನೆ ಸಿರಿಯಾಳನ . . . ಮಾದಾರ ಸೇಂಬೆನೆ ಚೆನ್ನಯ್ಯನ ಆನು ಹಾರುವನೆಂದರೆ ಕೂಡಲಸಂಗಯ್ಯ ನಗುವನಯ್ಯಾ (ಬಸವ. ೩೪೪). **ಮಾದಿರ** : ವಿಭಾಗಿಸಲ್ಪಡದ ಜಾತಿಗಳು . . . ಕ್ಷೇತ್ರ ವಾಸಿ, ಮಾದಿರ (ಕಳಾಮಾ. ೦೬೪). 'ಮಾದಿಗ' ಪರಾ.

**ಮಾದರಿ** (ನಾ). ೧. ರೀತಿ ; ಬಗೆ ; ಪ್ರಕಾರ : ನಾನು ಆ ಲೆಖ್ಖವನ್ನು ನನ್ನದೇ ಮಾದರಿಯಲ್ಲಿ ಸ್ವಲ್ಪ ಸುಲಭವಾಗಿ ಬರೆಯಲು ಹೊರಟೆ (ಜಾಕೆಹು. ೯೯) ; ಯಾರು ಜೀವವನ್ನು ಪ್ರತಿಬಿಂಬ ಎಂದು ಭಾವಿಸುವರೋ ಈಶ್ವರನನ್ನು ಆ ಪ್ರತಿಬಿಂಬದ ಒಂದು ಮಾದರಿ, ಪ್ರತಿಬಿಂಬವಲ್ಲ ಎಂದು ಭಾವಿಸುವರೋ ಅವರಿಗೆ ಮುಕ್ತಿ (ತತ್ವಶಾ. ೩೦೩). ೨. ನಮೂನೆ : ರಚನೆ : ಅವರ ವೇಷವೂ . . . ಹಳೆಯ ಮಾದರಿಯ ಅಂಗಿ, ಅಂಥದೇ ಕೋಟು, ಒಂದು ಧೋತರ (ಕನ್ನಗೋ. ೩) : ನಮ್ಮ ಜೀವನಸ್ಥಿತಿಗೆ ಹೊಂದಿಕೆಯಾಗುವಂತೆ ರಚಿಸಿದ ಅನೇಕ ಮಾದರಿಯ ಹೊಗೆ ಬಾರದ ಒಲೆಗಳಿವೆ (ಅಹುಜ. ೦೩). ೩. ಆದರ್ಶ ; ಮೇಲ್ಪಂಕ್ತಿ : ತಿಲಕರ ಉದಾಹರಣೆಯಿಂದ ಧೈರ್ಯ, ಕಷ್ಟಸಹಿಷ್ಣುತೆ, ಹೋರಾಟಗಳು ಜನಕ್ಕೆ ಮಾದರಿಯಾದವು (ಜ್ಞಾ೬೬೮. ೬೩) ; ಪ್ರಪಂಚದಲ್ಲಿ ಹೆಣ್ಣಿನ ಸೌಂದರ್ಯದ ಮಾದರಿಯೆಂದರೆ ಯಮುನೆಯೆಂದು ನನ್ನ ಭಾವನೆ (ಅಂಹೂ. ೩೩).

[ದೇ.॥ ತಮಿ. ಮಾತಿರಿ ; ತುಳು. ಮಾದರಿ, ಮಾದಿರಿ, ಮಾದ್ರಿ : ತೆಲು. ಮಾದಿರಿ ; ಮಾದ್ರಿ./ಮರಾ. ಮಾದರೀ, ಮಾದ್ರೀ]

**ಮಾದರಿಕೆ**, ಮಾದಳಿಕೆ, ಮಾದಾರಿಕೆ, ಮಾದಾಳಿಕೆ (ನಾ). ಮಾದಿಗರು ಕೊಡುತ್ತಿದ್ದ ಸುಂಕ,–ತೆರಿಗೆ : ಮಾದರಿಕೆ (ಶ್ಯಾಎಂ. ೦೯೩೩, ೦೩೬ : ?). **Δಮಾದಳಿಕೆ** : ಬೋವಾಳಿಕೆ ಮಾದಳಿಕೆ ಮುಂತಾದ ಘನುಳ್ಳ ಸಕಲ ಸ್ವಾಮ್ಯವನು ಆಗುಮಾಡಿ (ಎಕ. III (R). ಗುಂಡ್ಲುಪೇ. ೩೯-೬ ; 1507). **ಮಾದಾರಿಕೆ** : ಕಂಮಾಳಿತೆಅಗೆ ಕುರಿತೆರಿಗೆ ಮಾದಾರಿಕೆ ಉಪ್ಪಿನ ಕಾವಲಿಸುಂಕ . . . ಬೆಟ್ಟದ ಕಾವಲು ಯಿಪ್ಪಸು ಸರ್ವಮಾನ್ಯವಾಗಿ ಬಿಟ್ಟದು (ಎಕ. III (R). ಗುಂಡ್ಲುಪೇ. ೦೫೦-೬೯; 1521). **Δ ಮಾದಾಳಿಕೆ**: ಹದಿಕ ಜೋಡಿಗ್ರಾಸ ನೊಟಗೂಲಿ ಮಾದಾಳಿಕೆ ವಟ್ಟ ಕಟ್ಟಿಗೆ (ಎಕ. VII. ಶಿಕಾರಿ. ೦೯೬-೩೦ ; 1404) ; ಮಾದಾಳಿಕೆ ಅಧಿಕಾರಿಯ ಉಡುಗೊರೆ ಸೇಸಭೋಯಿಕೆ ಬಾದಿನ ವರ್ತನೆ ಅಧಿಕಮಾಸ ಮುಂತಾಗಿ ಯೇನುಳ ಸರ್ವಸ್ವಾಮ್ಯವನೂ ನೀಉ ಆಗುಮಾಡಿಕೊಂಡು . . . ಭೋಗಿಸಿ ಬಹುದು (ಶಾಶಾ. IX-ii. ೪೯೦-೨೬ ; 1419). [ಮಾದರ + – ಇಕೆ]

**ಮಾದರಿಪಾಠ** (ನಾ). ಉಪಾಧ್ಯಾಯವೃತ್ತಿಯನ್ನು ಆರಿಸಿಕೊಳ್ಳಬೇಕೆಂದು ತರಬೇತುಹೊಂದುವ ಶಿಕ್ಷಣವಿದ್ಯಾರ್ಥಿಗಳಿಗೆ ಪಾಠ ಕಲಿಸುವಾಗ ಹೇಗೆ ಪಾಠಮಾಡಬೇಕೆಂದು ದೃಷ್ಟಾಂತಕ್ಕಾಗಿ ಶಿಕ್ಷಕರು ಮಾಡಿ ತೋರಿಸುವ ಪಾಠ : ಪ್ರಾಥಮಿಕಶಾಲೆಯ ಮುಖ್ಯೋಪಾಧ್ಯಾಯರೊಬ್ಬರು ಗಣಿತದಲ್ಲಿ ಮೂರನೆಯ ತರಗತಿಗೆ ಮಾದರಿಪಾಠವನ್ನು ಮಾಡಿ ತೋರಿಸಿದರು (ಶಂಗಕ. ೮೨).

[ಮಾದರಿ + ಪಾಠ₂]

**ಮಾದರ್ಚೋತ್** (ನಾ). ತನ್ನ ತಾಯಿಯೊಡನೆ ಅನೈತಿಕಸಂಬಂಧ ಇಟ್ಟುಕೊಂಡವನು ಎಂಬ ಅರ್ಥದಲ್ಲಿ ಬಳಸುವ ಒಂದು ಬಯ್ಗುಳು. 'ಬಾಂಚೋತ್' ಪರಾ. [ ←ಹಿಂ. (ಮಾದರ್ + ಚೋತ್) ]

**ಮಾದಲ**, /ಮಾದಲು, ಮಾದವಾಳ, ಮಾದಳ, ಮಾದಾಳ (ನಾ). ಹುಳಿಹಣ್ಣುಗಳ ಜಾತಿಗೆ ಸೇರಿದ (ಗಾತ್ರದಲ್ಲಿ ನಿಂಬೆಗಿಂತಲೂ ದೊಡ್ಡದಾಗಿದ್ದು ಕಡಮೆ ಹುಳಿ ಹಾಗೂ ದಪ್ಪವಾದ ತಿರುಳುಳ್ಳ) ಹಣ್ಣುಗಳನ್ನು ಬಿಡುವ ಮರ; ಮಾತುಲುಂಗ; ಸಕ್ಕರೆನಿಂಬೆ: "ಮಧುರಾಮ್ಲಫಲಃ–ಮಾದಲ" (೬ಕಧ. ೦೨೨) : ಈಳೆ ನಿಂಬೆ ಮಾವು ಮಾದಲಕ್ಕೆ ಹುಳಿನೀರನೆರೆದವರಾರಯ್ಯ (ಷಣ್ಮುಖ. ೩. ೨೦-೩) ; ತುಱುಗಿದ ಕಾಯ್ಗಳ ಭರದಿಂ ನೆಱೆತಗ್ಗಿ ವಿಲಂಬಿಸಿರ್ದ ಮಾದಲಂ (ಶಾರ೯. ೦-೦೦೬) ; ಮತ್ತಿಮೊಳಗರನೆಲ್ಲಿ ಮಾದಲ ... ಕರ್ಣಿಕಾರದ ಮೊತ್ತವಿದೆ ನೋಡಬಲೆ (ಕೊರಾ. ೩-೦-೨೬). **ಮಾದಲು**: ರಾಮಚಂದ್ರನು ಮಾದಲುಹಣ್ಣಾಗಿ ಬರುವನೆಂಬ ಸುದ್ದಿ ಬೇರೆ ಇತ್ತು (ಕಕಹು. ೩೮). **ಮಾದವಾಳ** : ಮಾದಳ, ಅರೆಮಾದಳ, ಮಾದವಾಳ, ಮಹಾಫಲ (ವ್ಯಕಿ. ೨೨-೪೦೬). **ಮಾದಳ** : "ಮಾತುಳುಂಗಃ —ಮಾದಳ" (೬ಕಧ. ೦೨೪) ; ಮಾದಳ . . . ಸುಖಾರ್ಹ ಸಾರ್ವರ್ತುಕಮಾದ ಫಲಂಗಳುಳ್ಳ ತರುನಿಕರಂಗಳುಂ (ಪವೇಕ. ೨೦೦); ಮಾದಳದ ಬೇರು, ಅಮರದ ಬಳ್ಳಿ . . . ಕಷಾಯ ಮಾಡಿ ತೆಗೆದುಕೊಳ್ಳಲು ಶ್ಲೇಷ್ಮಜ್ವರ ಪರಿಹಾರವಾಗುವುದು (ಸಕಕ. ೯೯) ; ಬಡವನು ಆ ಮಾದಳದ ಹಣ್ಣನ್ನು ತೆಗೆದುಕೊಂಡು ಹೋದನು (ಕಸಂ. ೦೦). **ಮಾದಾಳ** : "ಫಲಪೂರಕಃ, ಬೀಜಪೂರಕಃ, ರುಚಕಃ, ಮಾತುಲುಂಗಕಃ —ಈ ೪ ಮಾದೀಗಿಡ, ಮಾದಾಳದ ಗಿಡ" (ಸಿದ್ಧಾಂತಿ. ೦೬೦).

[ದೇ.॥ ತಮಿ. ಮಾತಳೈ, ಮಾತುಳಮ್, ಮಾತುಳೈ: ಮಲ. ಮಾದಳ: ತುಳು. ಮಾದಲ, ಮಾಪಲ ; ತೆಲು. ಮಾದಿಫಲಮು ; ಗೊಂಡಿ. ಮಾತ್ರ]

**ಮಾದಲು** 'ಮಾದಲ' ನೋ.

**ಮಾದವ** (ನಾ). ಒಬ್ಬಾತನ ಹೆಸರು : ಬೆಳ್ವಮಾಣೆಯ ಶ್ರೀಯು ಗಾವುಂಣ್ಡರುಂ ಕುಪ್ಪಾಲ್ಮಾದವರುಂ . . . ರಿಪುರಾಮಗಾವುಣ್ಡನುಂ ಎನೆಬ್ಬರುಂ ನಡಸಾಕ್ಷಿಯಾಗೆ ಪಡೆದಾಮ್ (ಎಕ. VI (R). ಶ್ರೀರಂಗ. ೬೬-೨೦ ; ಸು. ೮೦೦). [<ಮಾಧವ₂]

**ಮಾದವರೆ** (ನಾ). ಒಂದು ಬಗೆಯ ಅವರೆ : ಮಾದವರೆ ಹಾಕಿದರೆ ಅದನ್ನು ಕಾಯುವುದಕ್ಕೆ ಒಂದು ಆಳು ಬೇರೆ ಆಗಬೇಕು (ಶೇಷು. ೦೬೬).

[ ? + ಅವರೆ₁]

**ಮಾದವಾಳ** 'ಮಾದಲ' ನೋ.

**ಮಾದವೆ** (ನಾ). ಒಬ್ಬಾಕೆಯ ಹೆಸರು : ಶ್ರೀಪೃಥಿವೀವಲ್ಲಭಸಿಂಘಪೋತರಸರ ಮಗಳ್ದಿರ್ ಶ್ರೀಮಹಾದೇವಿಅರಸಿ ಪೆರ್ಮ್ಮಾನಡಿಗಳ ಅರಸಿಯರ ತಾಯಿ ನೊಟಿಮ್ಬಮಾದವೆ ಆಳೆ (ಎಕ. XI, ಶಕ್ಕಿ. ೩೩-೬ ; ಸು. 815).

[ಮಾದ₂ + ಅವೆ₀ (<ಅಬ್ಬೆ₁)]

**ಮಾದಳ** 'ಮಾದಲ' ನೋ.

**ಮಾದಳಿ** (ನಾ). ಒಂದು ಬಗೆಯ ನಸುಗೆಂಪುಬಣ್ಣದ ವಸ್ತ್ರ : ಹಳದಿ ಸಂಧ್ಯಾರಾಗ ಮಾದಳಿ ಬಿಳಿದು ಪೊಪ್ಪಳಿ ಚಂದ್ರಗಾವಿಗಳೆಳೆಗೆ ಪೊಸತಹ ಮಂಚಿಟಿಕೆ ಗುಜ್ಜರಿ ದುಕೂಲಗಳ ಅಳವಡಿಸಿ (ಕೋಗಯ. ೩-೩೬).

[← ತೆಲು. ಮಾದಳಿ, ಮಾದವಳ, ಮಾದಾವಳ, ಮಾದಾವಳಿ]

**ಮಾದಳಿರ್** 'ಮಾಂದಳಿರ್' ನೋ.

**Δ ಮಾದಳಿಕೆ** 'ಮಾದರಿಕೆ' ನೋ.

**ಮಾದಾನಿ** (ನಾ). ಧಾರಾಳವಾಗಿ ನೀಡುವವನು : ಮಹಾದಾನಿ : ಮಾದಾನಿ ಬಮ್ಮಿಸೆಟ್ಟಿ ತಳ್ಳೋದರು ದೆಲಿಕವ್ವೆಗೊಲ್ದು ವಲ್ಲಭನಾದಂ (ಕೊಪ್ಪಶಾ. ೯-೦೯: 1147) ; ಮಹಾದಾನಿ–ಮಾದಾನಿ (ಶಮದ. ೨೯೦ ಕ್ರಹೋ) ; ಶ್ರೀಪತಾರ್ಜುನಮಿವ ನಿನ್ನನೊಲವಿಂ ಮಾದಾನಿಯೆಂದ್ವೆದೆ (ಜಾವಕ. ೬೯). [<ಸಂ. ಮಹಾದಾನಿನ್]

**ಮಾದಾಮತ್ತರಸ** (ನಾ). ಒಬ್ಬಾತನ ಹೆಸರು : ಬಿಜಯಿತ್ತಯ್ಯಂ ಮಾದಾಮತ್ತರಸರು ಪೊಟಲಮ್ಮನಾ ಮೇಗೆಟ್ಟು ಮೂದೆಕಲ್ಲಾ ಕಾಳೆಗದುಳ್ ಗಾರವರಾಳ್ ಅವಧೀರರಾ ಮಗನ್ ಜಾತಗುದ್ದಿಯಾರುಂ . . . ಸತ್ತರ್ (ಎಕ. X, ಶ್ರೀನಿವಾ. ೪೦-೦ ; ಸು. ೯೦೦). [ ? + ಅರಸ₁ ]

**ಮಾದಾರ** 'ಮಾದರ' ನೋ.

**ಮಾದಾರಿ** (ನಾ). ದೊಡ್ಡ ಬೀದಿ ; ರಾಜಮಾರ್ಗ : ಅಂದು ಮಾದಾರಿಯೊಳು ಬಪ್ಪರಂ ಸಿದ್ಧರಾಮಾ ಎಂದು ಕರೆದು ಕರೆದು (ಸಿದ್ಧರಾ. ೩-೪೬). [ಮ್ಹಾ + ದಾರಿ]

**ಮಾದಾರಿಕೆ** 'ಮಾದರಿಕೆ' ನೋ.

**ಮಾದಾಳ** 'ಮಾದಲ' ನೋ.

Δ **ಮಾದಾಱಿಕೆ** 'ಮಾದರಿಕೆ' ನೋ.

**ಮಾದಿ**₁ 'ಮಾತಿ' ನೋ.

**ಮಾದಿ**₂ (ನಾ). ಒಬ್ಬಾತನ ಹೆಸರು : ಶ್ರೀಮಾದಿ ಅಬಲದಲಸ್ಪಲದ ಚಟಾನ್ಯಾ ತುಱುಪರಗೋಳುಗಳಲ್ಲಾದಿ ಸತ್ತಂ (ಪ್ರ.ಕಂ. ೦೯೩೨, ೩೯-೭ ; ೨೫ನೆಯ ೫೩). [ ? ]

**ಮಾದಿಗ** 'ಮಾದೆಗ' ನೋ.

**ಮಾದಿಗಾಮುಂಡ**, ಮಾದಿಯಗಾವುಂಡ (ನಾ). ಒಬ್ಬಾತನ ಹೆಸರು : ಕೋಟಗಾವುಂಡನುಂ [ಮಾದಿ]ಗಾ[ವು]ಣ್ಡನ ಸಹಿತ ದಿರ್ಬಲ್ಲು ಮಾದರ [ನುಂ] (ಕ್ಸೈಇ. XI-i, ೭-೨೨ ; 837). **ಮಾದಿಯಗಾಮುಂಡ** : ಸ್ವಸ್ತಿಶ್ರೀಮಾದಿಯಗಾಮುಣ್ಡರೀ ಪಯಿಯೂರು . . . ಆಳೆ (ಎಕ. IX. ಬೆಂಗಳೂ. ೩೬-೦ ; ಸು. 1000). [ಮಾದಿ₂ + ಗಾವುಂಡ]

**ಮಾದಿಗಾವರಿಕೆ** (ನಾ). ಒಂದು ಬಗೆಯ ತಂಗಡಿಗಿಡ : ರಕ್ತಾತಿಸಾರದಲ್ಲಿ ಕೈಯಿಂದ ಕೊಡಹಿದ ಹಸುವಿನ ಮಜ್ಜಿಗೆಯಲ್ಲಿ . . . ಮಾದಿಗಾವರಿಕೆಯ ತೊಕ್ಕನಾದರೂ . . . ದಾಳಿಂಬದ ಹೂವನಾದರೂ ಅರೆದು ಕುಡಿಯಿಸಲು ಹಿತವಹುದು (ವೈದ್ಯಸಾ. I, ೨೨೦) ; ಮಾದಿಗಾವರಿಕೆಬೇರಿನ ತೊಕ್ಕು ಏಲಕ್ಕಿ, ಜೀರಿಗೆ ಪೊನ್ನ ತೂಕವಂ ಹಸುವಿನ ಹಾಲಲ್ಲರೆದು . . . ತೆಗೆದುಕೊಳ್ಳೆ ಹೆಣ್ಣಿತ್ತ್ರರು ಮಾಣ್ಗುಂ (ಸಕಪ್ಪ. ೦೯೬). [ ? + ಆವರಿಕೆ]

**ಮಾದಿಗಾವರೆ** (ನಾ). = ಮಾದಿಗಾವರಿಕೆ : "ಚರ್ಮಕಸಾ—ಮಾದಿಗಾವರೆ, ಹೊಮ್ಮಿಟಲ" (೬ಶಂ. ೩೩). [? + ಅವರೆ]

**ಮಾದಿಗಿತ್ತಿ** 'ಮಾದೆಂಗಿತಿ' ನೋ.

**ಮಾದಿಯಗಾಮುಂಡ** 'ಮಾದಿಗಾಮುಂಡ' ನೋ.

**ಮಾದಿರ** 'ಮಾದರ' ನೋ.

**ಮಾದಿವರ್ಮ** (ನಾ). ಒಬ್ಬಾತನ ಹೆಸರು : ಗಂಗಾನ್ವಯಮೂಳಸ್ತಂಭಂ ಗಂಗರ ವಂಶಾಧಿಪತಿ ಮಾದಿವರ್ಮ್ಮಪಟ್ಟಕ್ಕರ್ಹನಪ್ಪ ಸಯ್ಗಾಂತ ಎಱೆಯಂಗಪ್ಪನ ಮಗಂ ಮಾಱಗಂ . . . ನೊಳಂಬಾಧಿರಾಜರಾಜರೊಳ್ಳಾದಿ ಸತ್ತಂ (ಎಕ. III (R), ಹೆಗ್ಗ.ಡ. ೨೬-೯ ; 900 ?). [ ಮಾದಿ₂ + ವರ್ಮ₁ ]

**ಮಾದೀಗ** 'ಮಾದೆಗ' ನೋ.

**ಮಾದು**₁ 'ಮಾಯಿರ್' ಪರಾ.

**ಮಾದು**₂ 'ಮಾಣ್' ಪರಾ.

**ಮಾದು**₃ (ನಾ). (ಕರಾ) ಜಲಾಶಯಗಳಲ್ಲಿ ಹೆಚ್ಚಿನ ನೀರು ಹರಿದು ಹೋಗಲು ಮಾಡಿರುವ ದಾರಿ ; ಕೋಡಿ. [ ← ತುಳು. ಮಾದ್ = ಸುತ್ತಲೂ ತಿರುಗುವಿಕೆ, ಸಣ್ಣ ಸೇತುವೆ ]

**ಮಾದುಫಳ** (ನಾ). ಒಂದು ಬಗೆಯ ಹಣ್ಣು ; ಮಾದಳ : ತೆಗಟ ಮೊದಲಲ್ಲಿ ಮತ್ತಾ ಕಂಟು ಗವಾಮಿಷವಾಗುರು ಖಿಂಡಿಯೊಂಬಿನಿತುವನಿಕ್ಕುಗೆ ಜಂಬುಕವಾಂಸಮನಿಕ್ಕುಗೆ ಮೊದಲೊಳ್ ಮಾದುಪಳದ ಕಾಯ್ ತುಱುಗಿರ್ಕುಂ (ಲೋಕೋಪ. ೬-೩೪) ; ಎನಿತೊಳವವಾಯಕೋಟಿಗಳನಿತರ್ಕಾ ಗೇಹಮಲ್ತೆ ದೇಹಮಿದಂ ನೆಟ್ಟನೆ ಪೊತ್ತು ಸುಖಿಮಾಸಜುಪ ಮನುಜಂ ಮೊರಡಿಯೊಳ್ ಮಾದುಪಳಮಜಸದಿರಂ (ಧುಕೋಕ. ೦-೩೦). [<ಮಾದಲ + ಪಳ₂ (<ಪಲ್₂). / ತೆಲು. ಮಾದಿಫಲಮು]

**ಮಾದುಫಲ**, ಮಾದುಂಫಲ (ನಾ). = ಮಾದುಪಳ : ಸುವರ್ಣಪೂರ್ಣಕಳಶಮುಂ ಕನ್ನಡಿಯುಂ ಪೂಪುಮಕ್ಕಿಯುಂ ಮಾದುಫಲಮುಂ ಮೊದಲಾಗೊಡೆಯನೇಕಾರ್ಚನೆಯಿಂದಿದಿರಂ ಬಂದು ನಿಜೇಶ (ಪಕ್ಷಾಣ. ೬೮-೭) : ಭಾವಿಸಲೇನಂಟೆ ಮೊರಡಿಯೊಳ್ಮಾದುಫಲಂ (ಜಜಜ. ೦-೦೨೩) ; ಪ್ರಷ್ಟ ಕಪಾಲಮಂ ನಿಲಲೀಯದೆ ಪುಣ್ಯಪವಿತ್ರಮನಿಟ್ಟು ಖಟ್ವಾಂಗವಂ ಪಿಡಿಸಿ ಮಾದುಫಲಮನಿಂಬುಗೊಳಿಸಿ . . . ಶಾಶ್ವತಪ್ರತಾಪನಿಧಿಯೆನಿಪ ಶಂಕರಂಗೆ ನಂದೀಶಾದಿಗಣನಾಯಕರ್ ಸಿಂಗರಮಂ ಮಾಡಿ (ಗಿರಿಜೆ. ೦೦-೬೦ ವ). **ಮಾದುಂಫಲ** : ದಧಿ ಮಧು ಸುಧೆ ಮಾದುಂಫಲಂ ದೂರ್ವೆ . . . ಘುಸೃಣಂ ಮಾಣಿಕ್ಯದೀಪಂ ಮಿಸುಗೆ ಬಗೆಗೆ ಚೆಲ್ವಾದುದುದ್ವಾಹಗೇಹಂ (ಕೃಷ. ೩-೪). P ಇದು ಛಂದಸ್ಸಿಗಾಗಿ ಮಾಡಿಕೊಂಡಿರುವ ರೂಪ ವಿರಬಹುದು. [ < ಮಾದಲ + ಫಲ₁ ]

**ಮಾದುರ**₁ (ನಾ). ದೊಡ್ಡ ಯುದ್ಧ—ಕಾಳಗ ; ಮಹಾಸಮರ : ಮುಳಿಸೆಂಬುದೆನಗೆ ಕೌರವರೊಳೆ ಪಿರಿ[ದಾ]ಬಲಿ[ದ] ಬಯಕೆಯಂ ಮಾದುರದೊಳ್ ಕಳೆವಂತನ್ನೆಗಮಿವನೊಳ್ ಕಳೆವಂ ನಿನ್ನೊಂದು ಮುಳಿಸನಬ್ಜದಳಾಕ್ಷೀ (ಪಂಪಭಾ. ೯-೭೨). [ ಮ್ಹಾ + ದುರ ]

**ಮಾದುರ**₂ (ನಾ). = ಮಾದಲ (?) : ಕಲಸಗೂಳ ಮೊಸರಿಂಗೆ ನಿತ್ಯ ವೀಸದ ಲೆಕ್ಕ ಗ ೨ . . . ಮಾದುರಕಾಳಗೆ ವರುಷಕ್ಕೆ ಗ ೧ ಪ ೨ (ಎಕ. XV, ಬೇಲೂರು. ೨೫೨-೦೦ ; 1298). [ < ಮಾದಲ ? ]

**ಮಾದುವರ** (ನಾ). ಒಬ್ಬಾತನ ಹೆಸರು : ಶಾಬಯ್ಯಂಗೆ ಶಾಮಾದರ್ ತನಯರ್ ಪೇಟಲ್ ಮಾದುವರಂ ದೋಯಿಲಮ್ಮನೆಂಬರ್ ಪೆಸುಂ (ಎಕ. II, ೦೪೯-೩ ; ಸು. 950). [ ? ]

**ಮಾದೂಫಲ** 'ಮಾದುಫಲ' ನೋ.

**ಮಾದೆ** (ನಾ). ಮಸಣ ; ಶ್ಮಶಾನ : "ಮಾದೆ ಮಸಣಂ" (ಕಶಬ್ದ. ೬೪). [ ? ]

**ಮಾದೇಂಗ** 'ಮಾದೆಗ' ನೋ.

**ಮಾದೆಂಗಿ**. 'ಮಾದೆಗಿ' ನೋ.

**ಮಾದೆಂಗಿತಿ**, ಮಾದಿಗಿತ್ತಿ (ನಾ). ಮಾದಿಗರ ಹೆಂಗಸು ; ಮಾತಂಗಿ : ವಿದ್ಯೆ ಜಾತಿ ಮಾದೆಂ[ಪಾಠಾಂ. ದಂ]ಗಿತಿಯಾಗಿ ಪೊನ್ನ ತಳಿಗೆಯೊಳ್ ಮಾಣಿಕಂಗಳಂ ಪೊಯ್ದು ಪಿಡಿದು ಬಂದ ರ್‍ಗ್ನಿಣನಂ ಕಂಡು ಮುಂದಿಟ್ಟು ಪೊಡೆವಟ್ಟು (ಶಂಶಂ. ೯-೬೩ ವ). **ಮಾದಿಗಿತ್ತಿ** : ಮಾದಿಗಿತ್ತಿಯನಿಲ್ಲಿ ಜಯಿಸದಿರ್ದೊಡೆ ಮುಂದೆ ಮೇದಿನಿ ನಮಗಹುದಿಲ್ಲ (ಕಂಹಾಕಾಂ. ೬೨-೦೩) ; ಮಾದಿಗಿತ್ತಿ ಮಂಗಳವಾರ ಮಾಡಿದ ಹಾಗೆ (ಗಾದೆ). [ಮಾದೆಂಗ (< ಮಾದೆಗ) + —ಇತಿ₁ (<— ಇತ್ತಿ)]

**ಮಾದೆಗ**, ಮಾದಗ, ಮಾದಿಗ, ಮಾದೀಗ, ಮಾದೆಂಗ (ನಾ). ೧. ಹರಿಜನರ ಒಂದು ಒಳಪಂಗಡ ಮತ್ತು ಆ ಪಂಗಡಕ್ಕೆ ಸೇರಿದವನು ; ಚಮ್ಮಾರ ; ಶ್ವಪಚ : ಪೆಣ್ಣಾಯಾಗಿ ಮಾದೆಗರ [ಪಾಠಾಂ. ಮಾದರ, ಮಾದಿಗರ, ಮಾದೇಂಗರ] ಮನೆಯೊಳ್ ಪುಟ್ಟಿ ಸತ್ತು . . . ನೀಳನೆಂಬ ಮಾದೆಗಂಗಂ ಕೇಶಿಯೆಂಬ ಮಾದೆಗಿಗಂ ಮಗಳ್ . . . ಪೊಲತಿಯಾಗಿ ಪುಟ್ಟಿ (ಪಣ್ಯಾ.ಆ. ೯-೪) ; ಮನೋಜ್ಞರಲ್ಲದರ ಮನೆಯೊಳ್ ಕೂಸುಗುಡುವುದಱಿಂ ಮಾದೆಗರ ಮನೆಯೊಳ್ ಕುಡುವುದು ಲೇಸು (ಪಂಪಾಶ. ೮-೨೫ ವ). **ಮಾದಗ** : ೧. ಹುನುವಲ್ಲಿಳ್ಳಿಯ ಮಾದಗರ ಕಮ್ಮಯನಂ ಮಗಂನ್ ಅರಿವಮ್ಮ ಗಾವುಣ್ದುಗೆಯ್ದು (ಎಕ. VIII, ಸೊರಬ. ೩೩೨-೪ ; 964). **ಮಾದಿಗ** : ೧. "ಶ್ವಪಚಃ, ಪುಲ್ಕಸಃ, ಮಾತಂಗಃ, ಪ್ಲವಕಃ — ಈ ೪ ಮಾದಿಗಂ" (ಕಠಾಯು. ೧೯-೪೪೪) ; ಮಾದಾರನಂ ಕರೆಯಲಟ್ಟುವುದುಮೆಯ್ದುಪ್ಪವನಂ ಮಾದಿ[ಪಾಠಾಂ. ತ]ಗಂ ಕಂಡು ತನ್ನ ಪೆಂಡತಿಗಿಂತೆಂದಂ (ಪುಣ್ಯಾಸ್ರ. ೭-೪೦ ವ) ; ಅದಿದೈವವನು ಶಾ ಭೇದಿಸಲಿ ಕಱಿಯದಲೆ ಹಾದಿಯ ಕಲ್ಲಿಗೆಮಾಡಿ ನಮಿಸುವ ಮಾದಿಗರ ನೋಡು

(ಸರ್ವಜ್ಞ. ೦೯೮) ; ಜೀತಗಾರರಾದ ಹೊಲೆಯರ ಕರಿಯನೂ ಮಾದಿಗರ ಕಾಳನೂ ಬಂದರು (ಕಂಗಾಳ್. ೬). ೨. (ಅಲಂ) ನೀಚಬುದ್ಧಿಯುಳ್ಳವನು ; ಹೀನಗುಣದಿಂದ ಕೂಡಿದವನು : ಲಂಚಂ ಬೇಪ್ಪರ್ ಘಳಿಲನೆ ತಾಯ್ಗಂ ತಂಗೆಗವಳಿಪಿದವಂ ಲೆಕ್ಕವಿಡುವವಂ ಮಾದಿಗಂ (ಶ್ರೀಪ. IX-i, ೦೦೬-೨೬ ; 1050) ; ಚೆನ್ನಮಲ್ಲಿಕಾರ್ಜುನಯ್ಯನ ಭಕ್ತನಾಗಿರ್ದು ಜೀವಹಿಂಸೆಯ ಮಾಡುವ ಮಾದಿಗರನೇನೆಂಬೆನಯ್ಯ (ಮಹಾದೇ. ಪ. ೯೬-೦೦೯): ಮಾತಿಗೆ ತಪ್ಪಿದವ ಮಾದಿಗ (ಗಾದೆ). **ಮಾದೀಗ :** ೧. ಓಂಗದೆ ನಾನಾ ಮಾದೀಗಂಗೆ ಮಹಾನಿಷ್ಠುರಂಗೆ ಪಲವಂ ಪೊನ್ನಂ ಭಂಗಿಯೊಳೆ ಕೊಟ್ಟು . . . ಬೇಗಂ ಶಿರುವಂ ಕೊಲ್ವೆಂದಟ್ಟಿದೊಡೆ (ಧರ್ಮಾಮೃ. ೧೦-೦೫೩). ☞ ಇದು ಛಂದಸ್ಸಿಗಾಗಿ ಮಾಡಿಕೊಂಡಿರುವ ರೂಪ. **ಮಾದೆಂಗ :** ೧. ಚಂಪಾಪುರದೊಳು ಮಾದೆಂಗಕುಲದೊಳು ಜಾತ್ಯಂಧಕಿಯಾಗಿ ಪುಟ್ಟಿ (ಸುಕುಮಾ. ೬-೦ ವ) : ಆ ಪುರದೆ ನಿರಯನೆಂಬೊರ್ವ ಮಾದೆಂಗನಿರ್ಪಂ (ಶೀಲಪು. ೦೪-೦೨೬). 'ಮಾದರ' ಪರಾ.

[ದೇ.# ತುಳು. ಮಾದಿಗೆ ; ತೆಲು. ಮಾದಿಗ : ನಾಯ್ಕಿ. ಮದಿಗ್ /ಸಂ. ಮಾತಂಗ]

**ಮಾದೆಗಿ, ಮಾದೆಂಗಿ** (ನಾ). = ಮಾದೆಂಗಿತಿ : ನೀಳನೆಂಬ ಮಾದೆಗಂಗಂ ಕೇಶಿಯೆಂಬ ಮಾದೆಗಿ [ಶಾಕಾ. ಮಾತಂಗಿ]ಗಂ ಮಗಳ್ . . . ಪುಟ್ಟುಂಗುರುಡಿ ಪೊಲತಿಯಾಗಿ ಪುಟ್ಟ (ವಡ್ಡಾರಾ. ೯-೬). **ಮಾದೆಂಗಿ :** ನೀಳನೆಂಬ ಮಾದೆಗಂಗಂ ಕೌಶಂಬಿಯೆಂಬ ಮಾದೆಂಗಿಗಂ ಮಗಳಾಗಿ . . . ಸುಖಿಗಾಣದೆ ಹಾಹಾ ಭೂತಚೇತಸ್ಕೆಯಾಗಿರ್ಪಳಂ ನೀಮಿಗಳ್ ಕಂಡಿರ್ (ಸುಕುಮಾ. ೩-೨೦ ವ). [ಮಾದೆಗ + — ಇ₂./ಸಂ. ಮಾತಂಗೀ]

**ಮಾದೆಯ, ಮಾದೆಯ್ಯ** (ನಾ). ಒಬ್ಬಾತನ ಹೆಸರು : ನಾಗಚಂದ್ರದೇವರ ಪುತ್ರ ಮಾದೆಯ ಸೇನಬೋವ ×× ಸ ×× ಪುನಪ್ರತಿಷ್ಠೆಯಂ ಮಾಡಿದನು (ಎಕ. VIII, ಸಗರ. ೯೩-೦೬ : ಸು. 950). **ಮಾದೆಯ್ಯ :** ಆತನ ತಮ್ಮ ರಾಯನ್ಸ ಅಳಿಯ ಮಾದೆಯ್ಯನುಮಿ ಕಲ್ಲ ನೆಟ್ಟರ್ (ಎಕ. VIII, ಸೊರಬ. ೨೪೯-೦೨ ; 999). [< ಮಾದ₂ + < ಅಯ್ಯ₁]

**ಮಾದೆಯೂರ್** (ನಾ). ಒಂದು ಊರಿನ ಹೆಸರು : ಮಾದಯೂರ ಸಾನ್ನಿಧ್ಯದಲ್ಲಿ ಬರಿಯೂರನಿಜೀಯ (ಎಕ. VIII. ಸೊರಬ. ೩೩೦-೩ ; 979). [ಮಾದ್ದ + ಊರ್]

**ಮಾದೆಯ್ಯ** 'ಮಾದೆಯ' ನೋ.

**ಮಾದೇವ** (ನಾ). ಶಿವ ; ಈಶ್ವರ ; ಮಹಾದೇವ : "ಎಣ್ಣಿಯ್ಯಂ . . . ಕಂದುಗೊರಲಂ. ಮಾದೇವಂ . . . ಅಯ್ಯೊಗಂ – ಈ ೩೩ ಈಶ್ವರಂಗೆ ಪೆಸರ್" (ಶಬ್ದಮ. ೦-೦) ; ಅವಳಪ್ಪೊಡಮುಕ್ಕ ಪೋ ತಲೆಯಿಂದೆ ಪೋದೊಡ ಮಿಂದೆ ಮಾದೇವನನ್ಗರ್ಡಿಗೋದಡಂ . . . ನೆರೆದಲ್ಲದಿನ್ನಿರೆನೇಕಿಯೊಳ್ (ಶಂಕಭು. ೬-೬೩) ; ಮಾಗೆ _ ಮಹಾಕಾಳಿ _ ಮಾಕಾಳಿ . . . ಮಹಾದೇವ _ ಮಾದೇವ (ಶಮದ. ೨೯೦. ಕೃಯೋ) ; ಆ ದೇವ ಈ ದೇವ ಮಾದೇವನೆನಬೇಡ ಆ ದೇವರ ದೇವ ಭುವನದ ಪ್ರಾಣಿಗಳಿಗಾದವನೆ ದೇವ (ಸರ್ವಜ್ಞ. ೦೯೦). [ಮಾ₁ + ದೇವ./ಸಂ. ಮಹಾದೇವ]

**ಮಾದೇವಿ** (ನಾ). ೧. ದುರ್ಗೆ ; ಪಾರ್ವತಿ : "ಮಾಕಾಳಿ, ಮಾದೇವಿ, ಸರ್ವಾಣಿ. ಐಕಿಲ್ವೆಟ್ಟಣುಗಿ, ಸಿಂಗದೇರಳ್ — ಈ ೫ ಪಾರ್ವತಿಯ ಪೆಸರ್" (ಶಬ್ದಮ. ೦-೩) ; ಶ್ರೀವನಿತೆಯೆನಿಸಿದಕ್ಕಾದೇವಿಗೆ ವಾಗ್ದೇವಿಗಳಿಳ ಜನನುತ ಸೀತಾದೇವಿಗೆ ಮಾದೇವಿಗೆ ಭೂದೇವಿಗೆ ಸಮನೆಂಬ ನೃಪಸುತಾ ಸಮುದಯಮಂ (ಇಕ. XVIII, ೨೬೩-೬ : 1021) ; ಗಡಣದೆ ಮಾದೇವಿಯ ಬಗೆಯೊಡೆಯನ ನೊಸಲೊಳ್ . . . ತೋಳೆಡೆಯೊಳ್ ಬಿಡೆ ನಟ್ಟುವು ಕಾವನಂಬುಗಳ್ ತಾವ್ವೆಡಂ (ಶೃಂಗಾ. ೪೦೬). ೨. (ರಾಜನ) ಪಟ್ಟದ ರಾಣಿ ; ಪಟ್ಟಮಹಿಷಿ ; ಮಹಾರಾಣಿ : ಎನ್ನ ಮಾದೇವಿ ತಪ್ಪದಿರ್ದ

ಲಲನೆ ತತ್ಸ್ವಯಂಪ್ರಭೆಯ ನೋಟಕ್ಕೊಡೀ ಚಿತ್ರಮಿಂತಿದಾಕೆಯದೆ ಬಳ್ಳಿ ಪೇಟಜ್ ಪೆಜರ್ಗಮಿಂತುಟೊಂದಕ್ಕುಮೋ (ಆದಿಪು. ೯-೬) ; ದುರ್ಯೋಧನನ ಮಾದೇವಿಯರಪ್ಪ ಭಾನುಮತಿಯುಂ ಜಂದ್ರಪುತಿಯುಂ ಮೊದಲಾದ ಅತಿರಥ ಮಹಾರಥಾರ್ಧರಥ ಪ್ರಮುಖಸಾಮಂತಮಾಂಡಲಿಕಾಂತಃಪುರಕಾಂತೆಯರೊಂದಾಗಿ ತಂತಮ್ಮ ಜೀವಿತೇಶ್ವರರಂ ಸಂಗ್ರಾಮರಂಗದೊಳಜಿ ಸುತ್ತಂ ಬಂದು ಕಾಣದೆ (ಗದಾಯು. ೧೦-೦೨ ವ).

[ಮಾ₁ + ದೇವಿ./ ಸಂ. ಮಹಾದೇವೀ]

**ಮಾದ್ರ** (ಗು). ಮದ್ರದೇಶಕ್ಕೆ ಸಂಬಂಧಿಸಿದ ; ಮದ್ರದೇಶದ : ಧರ್ಮಸುತ ಮುಂಕೊಂಡು ರಣದಲಿ ಕಾದಿ ಗೆಲಿದನು ಮಾದ್ರಭೂಪತಿಯ (ಕುಮಾ. ೭. ೨ ಸೂಚನೆ). [ಸಂ.]

**ಮಾದ್ರಿ** (ನಾ). ಕ್ರೈಸ್ತ ಧಾರ್ಮಿಕ ಸ್ತ್ರೀಸಂಸ್ಥೆಗಳಲ್ಲಿದ್ದುಕೊಂಡು ಸಂನ್ಯಾಸದೀಕ್ಷೆ ಸ್ವೀಕರಿಸಿದವಳು : ಈಗ ಒಂದು ತಿಂಗಳಿನಿಂದ ಹಿಲ್ಡಾ ದಿನಾಲು ನನ್ನ ಹತ್ತಿರ ಬಂದು ತಾನು ಮಾದ್ರಿ (Mother) ಆಗುವ ನಿರ್ಧಾರಕ್ಕೆ ಬಂದಿದ್ದೇನೆ ಎಂದು ಹೇಳುತ್ತಿದ್ದಾಳೆ (ಶೀಮೋತ. ೨೬) ; ಆಕೆ ಕ್ರಿಸ್ತ ಮಾದ್ರಿಯ ಹಾಗೆ ವೇಷ ಧರಿಸಿ ರೈಲಿನಲ್ಲಿ ಪ್ರಯಾಣ ಮಾಡುತ್ತಿದ್ದಳು (ಹಾಯು. ೨೪೮). 'ಪಾದ್ರಿ' ಪರಾ. [← ಇಂ. Mother./ ಸಂ. ಮಾತೃ]

**ಮಾಧವ₁** (ಗು). ೧. ಜೇನಿನಿಂದ ಮಾಡಿದ ; ಸಿಹಿಯಾದ. (ನಾ). ೨. ಹೆಂಡ : ಮದ್ಯ. ೩. ವಸಂತಋತು ; ಮನಃಪ್ರಿಯತಮನ ಬರೆದ ಸಾಭಿಜ್ಞಾನಪಟಮನೀವುದುಮಾಕೆಯುಮದಂ ನಿಮಿರ್ಚಿ ನೋಡಿ . . . ಮಾಧವಸಮಯದೊಳಲರ್ದ ಚೂತಲತೆಯನೆ ಪೋಲ್ತಳ್ (ಆದಿಪು. ೪-೨೩). ೪. ವಸಂತಋತುವಿನ ಒಡೆಯ ; ಮಧುಮಾಸದ ರಾಜ ; ವಸಂತರಾಜ : ನೆಗಟ್ದಾ ನೃಪೋತ್ತಮನ ಮಂತ್ರಿಶಿಖಾಮಣಿ ವಂದಿಬೃಂದನಂದನವನಮಾಧವಂ ವಿರಕರಪ್ರತಿಮೋರ್ಜಿತತೇಜಂ ಕುವರ ಲಕ್ಷ್ಮನನಿಂದಿತವೀರವಂಶಜಂ (ಶಾಶಸಂ. ೦೨೨೬; ಎಕ. V. ಬೇಲೂರು. ೦೦೨; ಸು. 1220) ; ಮಾಧವನೋಲಗದ ಸಾಲೆಯೆಂಬಂತಿರೆ ಕರಂ ಸಿಂಗರಂಬೆತ್ತ ತೋಂಟದೊತ್ತಿನೊಳ್ . . . ಮದನನ್ಯೆಯ ಬಾಗಿಲ್ವಾಡದ ಸಿಂಗರದೊಂದು ದೇಗುಲಂ ಕಣ್ಗೆ ಸ್ವಮಾಗಿ ರಂಜಿಕುಂ (ರಾಮಾಶ್ವ. ೩೯-೦೨). ೫. ವೈಶಾಖ ಮಾಸ : "ಮಧುಗಳೊಳು ಕೃಷ್ಣನೊಳು ಧರಣಿಪತಿಯೊಳು ಮದ್ಯದೊಳು ವಸಂತದೊಳು ವೈಶಾಖದೊಳು ಮಾಧವಾಖ್ಯಂ" (ಮಂಗರಾ. ೦೯೯-೯೩).

[ಸಂ.]

**ಮಾಧವ₂** (ನಾ). ೧. ಲಕ್ಷ್ಮಿಯ ಒಡೆಯ ; ವಿಷ್ಣು : ಸಾಧುಗೆ ಸಾಧು ಮಾಧೂ(ಧು)ರ್ಯ್ಯನ್ಗೆ ಮಾಧೂ(ಧು)ರ್ಯ್ಯಂ ಬಾಧಿಪ್ಪ ಕಲಿಗೆ ಕಲಿಯುಗವಿಪರೀತನ್ ಮಾಧವನೀತನ್ನೆಱಸಲ್ಲ (ಇಕ. X, ೬೦-೩ ; ಸು. 700). ೨. ಕೃಷ್ಣ : ವಿವಿಧಬ್ರಹ್ಮಾಂಡಂ ಮಾಧವ ನಿನ್ನವಕಾಶಂ (ಜಗಮ. ೩-೦೦೬) ; ಯಾದವರು ಹಿಂದೆಮ್ಮೊಡನೆ ಹಗೆಯಾದವರು ಬಳಿಕವರೊಳಗೆ ತುಱುಗಾದವನ ಕಱುಗಾದವನ ಮಾಧವನ ಮಾತೇನು (ಕುಮಾ. ೩-೬೬). ೩. ಇಂದ್ರ. ೪. ಕುಬೇರ. ೫. ಪರಶುರಾಮ. ೬. ರಾಜ; ಅರಸು : "ಮಧುಗಳೊಳು ಕೃಷ್ಣನೊಳು ಧರಣಿಪತಿಯೊಳು ಮದ್ಯದೊಳು ವಸಂತದೊಳು ವೈಶಾಖದೊಳು ಮಾಧವಾಖ್ಯಂ" (ಮಂಗರಾ. ೦೯೯-೯೩).

[ ಸಂ. (ಮಾ + ಧವ) ]

**ಮಾಧವಕ** (ನಾ). (ಹಿಪ್ಪೆ ಹೂವಿನ) ಹೆಂಡ : ಮದ್ಯ : "ಮಧು, ಆಸವಃ . . . ಮಾಧವಕಃ, ಹಾಲಾ. ಕಲ್ಯಂ . . . ಮಧು – ಈ ೨೪ ಕಳ್ಳು" (ಹಲಾಯು. ೩೩-೦೬೪); ಪಿರಿದೆನಿಸಿ ಮಾಧವಕ ಮಾಧ್ವೀಪಾನ ರಚಿತಮೈರೇಯಮೇಧಕಸುರೆಗಳನು . . . ಬೆರಸಿ ಕುಡಿವುತ ನಗುತ ಕಲೆವುತಲಿರದೆ ಕುಣಿವುತಲಿದ್ದರಂದಾ ಸಕಲ ಯಾದವರು (ತಿಮ್ಮಕವಿ. ೦-೪೦).

[ಸಂ.]

**ಮಾಧವತ್ತಿ** (ನಾ). ಒಬ್ಬಾತನ ಹೆಸರು : ಮಾಧವತ್ತಿಯರಸರ್ಗ್ಗೆ [ವಿಜ್ಞಪನಂಗೆ]ಯ್ದು ದೋಣಗಾವಮುಣ್ಣ ಎಳಗಾವಮುಣ್ಣರುಂ ಮಳ್ಳಿಯರುಂ . . . ಎಂಟುಂ ಮತ್ತಲ್ ಗಟ್ಟಿ ರಾಜಮಾನಂ ಜಿನೇಂದ್ರ ಭವನಕ್ಕೆತ್ತೂರ್ (ಎಕ. XI. ೬೦-೦೬ ; 567). P ಇದು 'ಮಾಧವಸತ್ತಿ' ಯೆಂಬುದರ ಅಪಲಿಖಿತವಿರಬಹುದು.

[ ಮಾಧವ$_2$ + < ಸತ್ತಿ$_1$ ]

**ಮಾಧವಮನೋಹರಿ** (ನಾ). [ಸಂಗೀತ] ಒಂದು ರಾಗದ ಹೆಸರು : ಮಾಧವಮನೋಹರಿಯು (೧೩) ಸಂಪೂರ್ಣ, ಸ – ಗ್ರಹದಿಂದ ಕೂಡಿದೆ, ಆರೋಹದಲ್ಲಿ ಧ – ವು ವಕ್ರವಾಗಿದೆ, ಅವರೋಹದಲ್ಲಿ ಪ – ಇಲ್ಲ (ತತುಪ್ರ. ೦೩೯). [ಸಂ. ಮಾಧವಮನೋಹರೀ]

**ಮಾಧವಯ್ಯ** (ನಾ). ಒಬ್ಬಾತನ ಹೆಸರು : ಮಾಧವಯ್ಯಂ ಬರೆದಂ ನಾಗಂ ಬೆಸಗೆಯ್ದಂ (ಎಕ. VIII. ಸೊರಬ. ೩೩೦-೦೨; 979).

[ ಮಾಧವ$_2$ + ಅಯ್ಯ$_1$ ]

**ಮಾಧವಿ** (ನಾ). ೧. ಕಲ್ಲುಸಕ್ಕರೆ. ೨. ಜೇನಿನಿಂದ ಮಾಡಿದ ಒಂದು ಬಗೆಯ ಪಾನೀಯ. ೩. ಒಂದು ಬಗೆಯ ಬಳ್ಳಿ ಮತ್ತು ಅದರ ಬಿಳಿಯ ಬಣ್ಣದ, ಸುವಾಸನೆಯಿಂದ ಕೂಡಿದ ಹೂವು : "ಅತಿಮುಕ್ತಕಃ, ವಾಸಂತೀ, ಮಾಧವೀ – ಈ ೩ ಅದಿಮುರ್ತ್ತಿ" (ಹಲಾಯು. ೩೩-೩೩); ಇದಿರೊಳ್ ನನೆದೋಱಿ ವಸಂತದೂತಿಯೆನೆ ತಾನೆ ನೆಗಟ್ದ ಮಾಧವಿಯೆನೆ ಸಂದಮೂರ್ತ್ತಿಯ ಪೂಗೊಂಚಲ ಪುದುವಿನೊಳೆಱಗಿದ ಮದಾಳಿಗಳ್ ಮಱೆದಪ್ಪುವೇ (ಆದಿಪು. ೦೦-೦೦೬); ಪಱಿಯೆ ಮದಮಂ ಮಾಗಿ ಕಱಿಯೆ ಸೊಗಸಂ ಮಾವು ನೆಱೆಯೆ ಕಳೆ ಪೆರ್ಚೆ ಸಸಿ ಮೊಱೆಯೆ ಮಾಧವಿ ಪೂತು ತೊಱೆಯೆ ಲಜ್ಜೆಯನವನಿ . . . ಕಣ್ದೆಱೆದುದು ವಸಂತಮಾಸಂ (ಪದ್ಮಚ. ೬-೩): ಅದಿರ್ಗಂತಿಯುಂ ತಾಟಿ ಮಾಲತಿಯುಂ ಮುಟ್ಟಿ ಮಾಧವಿಯುಂ ಕಿಟ್ಟಿ ಬಸಗಾಳಿ ತಣ್ಣನೆ ತೀಡುಗುಂ (ರಾಮಾಶ್ವ. ೩೪-೦). ೪. ಭೂಮಿ : "ಭೂಮಿಃ — ಮಾಧವಿ" (ಓಕಥಿ. ೦೦೦). ೫. ತಲೆಹಿಡುಕಿ : ಕುಂಟಣಿ. [ ಸಂ. ಮಾಧವೀ ]

**ಮಾಧುಕರ** (ಗು). ದುಂಬಿಯನ್ನು ಹೋಲುವ : 'ಮಾಧುಕರವೃತ್ತಿ' ಪರಾ. [ಸಂ.]

**ಮಾಧುಕರವೃತ್ತಿ** (ನಾ). ದುಂಬಿಯು ಹೂವಿನಿಂದ ಹೂವಿಗೆ ಅಲೆದಾಡಿ ಮಧುವನ್ನು ಸಂಗ್ರಹಿಸುವಂತೆ, ಮನೆಯಿಂದ ಮನೆಗೆ ಸುತ್ತಾಡಿ ಆಹಾರವನ್ನು ಸಂಗ್ರಹಿಸುವಿಕೆ; ಭಿಕ್ಷಾವೃತ್ತಿ: ಪ್ರಕಟಿತಾತ್ಮಭ್ಯಾಸದಲಿ ಮಾಧುಕರವೃತ್ತಿಯಲಿರ್ದು ಕೈವಲ್ಯಕೆ ನಡೆವ ಬಗೆಯುಳ್ಳಡದು ಯತಿಧರ್ಮವಹುದು (ವಿಮ್ನುಕಾಂ. ೨೦). [ಸಂ.]

**ಮಾಧುಕರಿ** (ನಾ). ೧. = ಮಾಧುಕರವೃತ್ತಿ. ೨. ಮಾಧುಕರ ವೃತ್ತಿಯಿಂದ ಪಡೆದ ಆಹಾರ; ಭಿಕ್ಷೆ : ನಾರಾಯಣನೂ ನೆರೆಹೊರೆಯ ಕೆಲವು ಮನೆಯಿಂದ ಮಾಧುಕರಿಯನ್ನು ತಂದು ಶ್ರೀರಾಮನಿಗೆ ನೈವೇದ್ಯ ಮಾಡಿ ಒಪ್ಪೆತ್ತು ಊಟ ಮಾಡುತ್ತಿದ್ದನು (ಭಕ್ತೋತಿ. ೯೦).

[ ಸಂ. ಮಾಧುಕರೀ ]

**ಮಾಧುರ** (ನಾ). ೧. ಸಿಹಿಯಾದುದು ; ಮಧುರವಾಗಿರುವುದು. ೨. ಒಂದು ಬಗೆಯ ಮಾದಕಪಾನೀಯ : ದ್ರಾಕ್ಷಾರಸ : ವರಸುಧಾರೋಗಣೆಗೆ ಮಾಧುರದ [ಶಾಕಾಂ. ಮಧುರದಾ, ಪಾಯುಸದ] ಹಂಗೇಕೆ (ಸಿದ್ಧರಾ. ೦-೯); ಪಾವನಜ್ಯೋತಿರ್ಮಯಾಂಗಿಗೆ ದೀಪಿಗೆಯ ಹಂಗುಂಟೆ ಪರಶಿವಭಾವನಾಮೃತದನುಭವಿಗೆ ಮಾಧುರದ ಹಂಗುಂಟೆ (ಬಸವು. ೦೦-೦೩). ೩. ಮಲ್ಲಿಗೆಯ ಹೂವು. [ಸಂ.]

**ಮಾಧುರಿ** (ನಾ). ೧. ಸವಿ ; ರುಚಿ : ದರ್ಮರಾಮೇಂ ಮಕರಂದ ಮಾಧುರಿಯನಱಿದಪುದೇ ! (ಶೀತಿವಂ. ೦-೩೬೬). ೨. ಇಂಪು ; ಹಿತ ; ಆಹ್ಲಾದ : ಎದೆಯ ಮಾಧುರಿಯನರುಹೆಮಗೆ (ಗೀತಾಂ. ೭-೬೪). ೩. ಮಾದಕಪಾನೀಯ; ಮದ್ಯ. [ ಸಂ. ಮಾಧುರೀ ]

**ಮಾಧುರ್ಯ$_1$** (ನಾ). ಯುದ್ಧದಲ್ಲಿ ಮಹಾಪರಾಕ್ರಮಿಯಾದ ವ್ಯಕ್ತಿ : ಸಾಧುಗೆ ಸಾಧು ಮಾಧೂ(ಧು)ರ್ಯ್ಯಂಗೆ ಮಾಧೂ(ಧು)ರ್ಯ್ಯಂ ಬಾಧಿಪ್ಪ ಕಲಿಗೆ ಕಲಿ ಯುಗವಿಪರೀತನ್ ಮಾಧವನೀತನ್ನೆಣಿಸಲ್ಲ (ಇಸಿ. X. ೩೦-೩; ಸು. 700). [ < ಸಂ. ಮಹಾಧುರ್ಯ ]

**ಮಾಧುರ್ಯ$_2$** (ನಾ). ೧. ಸಿಹಿ ; ಸವಿ : ನವಯೌವನಮಾದಂತುನ್ನತ ಪಂಚವಿಂಶತಿಪ್ರಾಯಮಾಗಿ. . . ಸವಿಯಲಿರ್ದಮೃತಫಳದಂತೆ ಮಾಧುರ್ಯ ಭರಿತನಾಗಿ (ಶಂಬರ. ೦೦-೬). ೨. ಇಂಪು; ಹಿತ : ಭುವನಸ್ವರ ಮೇಲನದಿ ನಿಯಮಸಂಯಮಪೂರ್ಣಮಾಧುರ್ಯವುಕ್ಕುತಿದೆ (ಶತ್ರಾಂಗ. ೦-೦೩ ); ಅಶ್ವವಿದ್ಯೆಯೇ ಈಗ ಅವನ ಮನಸ್ಸನ್ನು ಹಿಡಿದಿತ್ತು, ಸಹವಾಸಮಾಧುರ್ಯದ ಮೂಲಕ (ಸವಜೀ. ೪೩೦). ೩. ಕೋಮಲತೆ ; ಮೃದುತ್ವ : ಮಾತಿನಲ್ಲಿ ಮಾಧುರ್ಯವಿತ್ತು, ತೀವ್ರತೆಯಿರಲಿಲ್ಲ (ಮಹಾಭಾ. ೦೩೬). ೪. ಅಂತಃಕರಣ; ಅನುಕಂಪ. ೫. [ಕಾವ್ಯಮೀ] ಕಾವ್ಯದ ಹತ್ತುಗುಣಗಳಲ್ಲಿ ಒಂದು; ಕೇಳಿದ ಕೂಡಲೆ ಮನಸ್ಸನ್ನು ಆಹ್ಲಾದಗೊಳಿಸುವ ಶಬ್ದದ ಒಂದು ಗುಣ; ದೀರ್ಘ ಸಮಾಸಗಳಿಲ್ಲದೆ ಪ್ರತ್ಯೇಕಪದಗಳಿಂದ ಕೂಡಿರುವುದು : ಅಸಮಸ್ತ ಪದನ್ಯಾಸಂ ಪ್ರಸಾದಮಾಧುರ್ಯಗುಣಸಮಗ್ರಮುದಾರಂ ರಸಭಾವ ಭಾವಿತೋಕ್ತಿಪ್ರಸರಂ ವೈದರ್ಭರೀತಿಯೆನೆ ಪೆಸರ್ವಡೆಗುಂ ( ಕಾವ್ಯಾವ. ೬೩೫ ); ಸಮಾಸ ಪ್ರಾಸದೇಶೀಸರಣಶಬ್ದಾರ್ಥೌಪಮಾಚಾತುರ್ಯಮಾಧುರ್ಯ. . . ನಿಯಮಾಕ್ಷರಸಲಕ್ಷಣಭಾವಮಾಗಿರೆ ರಚಿಸುವೆಂ ಕೃತಿಯ (ಬಸವ. ೦-೦೯); ಶ್ಲೇಷ ಪ್ರಸಾದ ಸಮತೆ, ಮಾಧುರ್ಯ. . . ಸಮಾಧಿ ಈ ಹತ್ತು ಗುಣಗಳೇ ವೈದರ್ಭಕಾವ್ಯದ ಪ್ರಾಣ (ಕಾರಕಾ. ೩೯). [ಸಂ.]

**ಮಾಧುರ್ಯೆ** (ನಾ). ೧. ಸಿಹಿಯಾದುದು : ಮಧುರವಾದುದು. ೨. ಒಂದು ಬಗೆಯ ಮರ ; ಸಿಹಿಹಾಲೆ ; ಜೇವಣಿಗೆ : "ಜೀವಣಿಕೆ(ಗೆ) ಮಾಧುರ್ಯೆಯುಕ್ಕು" (ಮಂಗರಾ. ೪೨-೩೬). [ ಸಂ. ಮಾಧುರ್ಯಾ ]

**ಮಾಧೂಕರ** (ನಾ). = ಮಾಧುಕರಿ ೨ : ಮಾಧೂಕರ ಅಸಂಕ್ಲುಪ್ತ ಪ್ರಾಕ್ಪ್ರಣೀತ ಅಯಾಚಿತ ತಾತ್ಕಾಲಿಕಮೆಂಬ ಪಂಚವಿಧಭಿಕ್ಷಂಗಳನಾದೊಡಂ . . . ಭೋಜನಂಗೈದು (ಶಿವೇಕ. ೦೨೮). [ < ಸಂ. ಮಾಧುಕರ]

**ಮಾಧೂಕರವೃತ್ತಿ** (ನಾ). = ಮಾಧುಕರವೃತ್ತಿ : ಓರ್ವಳೆ ಮಾಧೂಕರ ವೃತ್ತಿಯಿಂದೆ ಪೊರೆವುತ್ತಾ ದೇಹಮಂ ಸಂತತಂ (ದಿವ್ಯಸ. ೬-೩೨).

[ < ಸಂ. ಮಾಧುಕರವೃತ್ತಿ ]

**ಮಾಧೂಕರಿ** (ನಾ). = ಮಾಧುಕರಿ ೨ : ತುಂಬಿ ಪುಷ್ಪರಸವನ್ನು ತೆಗೆದುಕೊಳ್ಳುತ್ತಿರ್ದು ಹಂಗೆ ಹೂವನ್ನು ಬಾಧಿಸದಿಹುದು ಹಾಂಗೆ ಮನೆಯೊಡೆಯನ ದೆಸೆಯಿಂದಮಧುಕರವೃತ್ತಿಯಿಂದ ಸಿದ್ಧಿಸಿದುದಾದ ಮಾಧೂಕರಿಯೆಂಬ ಭಿಕ್ಷೆಯನ್ನು ತೆಗೆದುಕೊಂಬುದು (ಕೈವಲ್ಯ. ೩೬). [ < ಸಂ. ಮಾಧುಕರೀ ]

**ಮಾಧ್ಯಂದಿನ** (ನಾ). ೧. ದಿನದ ಮಧ್ಯದ ಸಮಯ ; ಮಧ್ಯಾಹ್ನ; ನಡುಹಗಲು. ೨. ನಡುಭಾಗ ; ಮಧ್ಯದ ಭಾಗ. ೩. ಶುಕ್ಲ ಯಜುರ್ವೇದದ ಒಂದು ಶಾಖೆ. [ಸಂ.]

**ಮಾಧ್ಯಮ** (ಗು). ೧. ಮಧ್ಯಭಾಗಕ್ಕೆ ಸಂಬಂಧಿಸಿದ; ನಡುಭಾಗದ. (ನಾ). ೨. ಮತ್ತೊಬ್ಬರಿಗೆ ತಿಳಿಸಲು ಮಧ್ಯವರ್ತಿಯಾಗಿ ಬಳಕೆಯಾಗುವ ಭಾಷೆ ಮೊದಲಾದ ಸಾಧನ : ಅವರಿಗೆ ಕನ್ನಡಭಾಷೆಯೊಂದೇ ಏಕೈಕ ಮಾಧ್ಯಮ (ಕೂಸ್ವಕು. ೦೩೬); ಮಾಧ್ಯಮ ಏನಿದ್ದರೂ ಭಾವಪ್ರವಹಣಕ್ಕಾಗಿ ಹೊರಗಿನಿಂದ ತಂದು ಜೋಡಿಸಿಕೊಂಡ ಒಂದು ಉಪಕರಣ ಎಂದು ಅರ್ಥ ಮಾಡುವುದುಂಟು (ಕಾಂದ್ವಸ. ೬೨). P ಇಲ್ಲಿ ಕೊಟ್ಟಿರುವ ಎರಡನೆಯ ಅರ್ಥ ಮತ್ತು ಪ್ರಯೋಗಗಳು

ಇಂಗ್ಲಿಷಿನ 'Medium' ಎಂಬ ಪದಕ್ಕೆ ಸಂಬಂಧಿಸಿದವುಗಳು. ಈ ಅರ್ಥ ಸಂಸ್ಕೃತದಲ್ಲಿ ಇಲ್ಲವಾದರೂ, ಸಂಸ್ಕೃತದ 'ಮಾಧ್ಯಮ' ಎಂಬುದರ ಮೂಲಾರ್ಥದಿಂದಲೇ ಅರ್ಥವಿಸ್ತಾರವನ್ನು ಹೇಳುವ ಸಾಧ್ಯತೆಯಿದ್ದು, ಇಂಗ್ಲಿಷಿನ 'Medium' ಎಂಬುದರ ಸಂವಾದಿಯಾಗಿ, ಸಂಸ್ಕೃತದ 'ಮಾಧ್ಯಮ' ಎಂಬ ಶಬ್ದವೇ ಬಳಕೆಯಾಗಿದೆ. [ಸಂ.]

**ಮಾಧ್ಯಮಿಕ** (ಗು). ೧. ಮಧ್ಯದಲ್ಲಿರುವ ; ಮಧ್ಯಭಾಗದ. (ನಾ). ೨. [ಬೌದ್ಧ] ಬೌದ್ಧಮತದ ಒಂದು ಶಾಖೆ ; ಗೋಚರಿಸುವ ವಸ್ತುಗಳೆಲ್ಲ ಸತ್ತ್ವಾವಭಾಸಿಗಳು ಎಂದು ಪ್ರತಿಪಾದಿಸುವ ವಾದ; ಶೂನ್ಯವಾದ : ಧರ್ಮಪ್ರಭಾವಮುಮಂ ತತ್ಪಲಸ್ವಭಾವಮುಮಂ ತಿಳುಪುವವಸರದೊಳುಬೀಳ್ದ ಮಹಾಮತಿ ಸಂಭಿನ್ನಮತಿ ಶತಮತಿಗಳ್ ಲೋಕಾಯತಿಕ ಯೋಗಾಚಾರ ಮಾಧ್ಯಮಿಕಮತವಿತಥಾಭಿಧಾಯಿಗಳ್ ಜೀವಾಭಾವಮನೆ ಪಿಡಿಯುಚ್ಚುವಿಡಿದು (ಆಪು. ೨-೬ ಪ); ಈ ಮೂಲತತ್ತ್ವಾನ್ವೇಷಣರೂಪದಲ್ಲಿ ಚಾರ್ವಾಕ .... ಯೋಗಾಚಾರ, ಮಾಧ್ಯಮಿಕ, ಜೈನದರ್ಶನಗಳೆಂಬ ಆರು ನಾಸ್ತಿಕದರ್ಶನಗಳೂ . . . ಆವಿರ್ಭವಿಸಿರುತ್ತವೆ (ಕಾರಿಚ. ೨೨೪); ಲೋಕಾಯತಿಕ (ನಾಸ್ತಿಕ) ಯೋಗಾಚಾರ (ವಿಜ್ಞಾನವಾದ) ಮಾಧ್ಯಮಿಕ ( ಶೂನ್ಯವಾದ )ಗಳೆಂಬ ಮತಗಳನ್ನು ಬೋಧಿಸುವ ಮಹಾಮತಿ – ಸಂಭಿನ್ನಮತಿ–ಶತಮತಿಗಳೆಂಬ ಮಂತ್ರಿಗಳು ಸ್ವಯಂಬುದ್ಧನ ಹೇಳಿಕೆಗಳನ್ನೆಲ್ಲ ಖಂಡಿಸಲು ಸೊಂಟಗಟ್ಟಿದರು (ಪಾಕೋಶ. ೩೬೦). ೩. ಮಾಧ್ಯಮಿಕಮತವನ್ನವಲಂಬಿಸಿದವನು ; ಶೂನ್ಯವಾದಿ : 'ಅಭಿಧರ್ಮವಿಭಾಷಾ' ಸಂಪ್ರದಾಯಕ್ಕೆ ಸೇರಿದವರು. ಯೋಗಾಚಾರರೂ ಮಾಧ್ಯಮಿಕರೂ ಆಗಿರುವರು (ಹಿಂದಶಾ. ೨೪): ಸ್ವಚ್ಛವಾದ ಸಂವಿತ್ತೆಂಬ ಜ್ಞಾನವೇ ಮಾಧ್ಯಮಿಕರಿಗೆ ಸಮ್ಮತ (ಕಾರಿಚ. ೨೦೪). [ಸಂ.]

**ಮಾಧ್ಯಮಿಕಶಾಲೆ** (ನಾ). ಪ್ರಾಥಮಿಕ ವಿದ್ಯಾಭ್ಯಾಸ ಮತ್ತು ಪ್ರೌಢ ವಿದ್ಯಾಭ್ಯಾಸಗಳ ನಡುವಿನ, ವಿದ್ಯಾಭ್ಯಾಸವನ್ನು ಮಾಡುವ ಪಾಠಶಾಲೆ : ಉಪನಯನವಾದ ಐದು ವರ್ಷಗಳಲ್ಲಿ ಚೀನಿ ಮಾಧ್ಯಮಿಕ ಶಾಲೆಯನ್ನು ಪೂರೈಸಿದ್ದ (ವಂಶವೃ. ೩೦೨). P ಇದು ಇಂಗ್ಲಿಷಿನ 'Middle School' ಎಂಬುದರ ಅನುವಾದ.

ಸಂ. ಮಾಧ್ಯಮಿಕಶಾಲಾ]

**ಮಾಧ್ಯಸ್ಥ** (ಗು). ೧. ಮಧ್ಯೆ ಇರುವ ; ನಡುವೆ ಇರುವ. ೨. ಯಾವ ಪಕ್ಷಕ್ಕೂ ಸೇರದ. [ಸಂ.]

**ಮಾಧ್ಯಸ್ಥವೃತ್ತಿ** (ನಾ). [ಜೈನ] ವಿನಯರಹಿತರೂ ತಮ್ಮ ಧರ್ಮದಿಂದ ವಿಮುಖರೂ ಹಟಮಾರಿಗಳೂ ಆದ ಜನರ ಬಗ್ಗೆ ಪ್ರತ್ಯಸ್ಥರಾದಂಥವರು ಇರಿಸಿಕೊಳ್ಳುವ ರಾಗದ್ವೇಷರಹಿತವಾದ ಭಾವನೆ: ಸತ್ತ್ವಗುಣಾಧಿಕಕ್ಲಿಶ್ಯಮಾನಾವಿನಯರೊಳ್ ಮೈತ್ರೀಪ್ರಮೋದ ಕಾರುಣ್ಯಮಾಧ್ಯಸ್ಥವೃತ್ತಿಯುಂ ಭಾವಿಸುತ್ತುಂ (ಸುಕುಮಾ. ೪-೨೨ ಪ). [ಸಂ.]

**ಮಾಧ್ಯಸ್ಥಿಕೆ** (ನಾ). ಎರಡು ಪಕ್ಷಗಳ ಅಥವಾ ವ್ಯಕ್ತಿಗಳ ನಡುವೆ ಸಂಧಾನ ನಡೆಸುವುದು ; ಮಧ್ಯಸ್ಥಿಕೆ : ಇಂಥ ಸಂದರ್ಭಗಳಲ್ಲಿ ಹುಡುಗಿಯರಿಗೂ ಉಪಾಧ್ಯಾಯ–ಗಂಡಸರಿಗೂ ಮಾಧ್ಯಸ್ಥಿಕೆಗೆ (Liaison) ಯಾರಾದರೂ ಇದ್ದರೆ ಅನುಕೂಲವಾಗುತ್ತದೆ (ಹಸುಹೊ. ೩೨೭).

[ಮಾಧ್ಯಸ್ಥ + — ಇಕೆ]

**ಮಾಧ್ಯಾಹ್ನಿಕ** (ಗು). ೧. ಮಧ್ಯಾಹ್ನ ಕಾಲದಲ್ಲಿ ಆಚರಿಸಬೇಕಾದ : ಸ್ನಾನ ಮಾಧ್ಯಾಹ್ನಿಕಜಪ ವೈಶ್ವದೇವ ದೇವತಾರ್ಚನೆ ಭೋಜನಾದಿಗಳಾದ ಮೇಲೆ (ಶಕಾಕ. ೪). (ನಾ). ೨. ಮಧ್ಯಾಹ್ನದಲ್ಲಿ ಮಾಡುವ ಸಂಧ್ಯಾವಂದನೆಯೇ ಮುಂತಾದ ನಿತ್ಯಕರ್ಮ : ಈ ನದಿಯೊಳಗೆ ಮಾಧ್ಯಾಹ್ನಿಕ ಮಾಡಿ ಬಂದವನು (ಶಿಬಾಗ. ೧೧-೪೩-೪): ಮಾಧ್ಯಾಹ್ನಿಕಾದಿ ನಿತ್ಯಸಂಧ್ಯಾಕರ್ಮಂಗಳನ್ನು . . . ಮಾಡಿದವನಾಗಿ . . . ಭೋಜನ ಮಾಡಬೇಕೆಂದು ಬಲ್ಲವರ ಮತವು (ಕಚನ್ಯ. ೪೪). [ಸಂ.]

**ಮಾಧ್ವ** (ಗು). ೧. ಮಧ್ವಮತಕ್ಕೆ ಸೇರಿದ : ಈ ಪ್ರಾಂತದ ಮಾಧ್ವ ಬ್ರಾಹ್ಮಣರು ಪೊಳ್ಳೆ ವರ್ಚಸ್ಸುಳ್ಳವರಾಗಿದ್ದಾರೆ (ಕಚಾಗ. ೬೩); ಮಾಧ್ವಯತಿಗಳು ಸ್ಮಾರ್ತಪಂಡಿತನಾದ ತನ್ನನ್ನು ಸನ್ಮಾನಿಸುವರೇ ಎಂಬ ಸಂಶಯವಿವನಿಗಿದ್ದಂತೆ ತೋರುತ್ತದೆ (ಕಚು. ೪೩). (ನಾ). ೨. ಮಧ್ವಾಚಾರ್ಯರ ಮತದ ಅನುಯಾಯಿ ; ವೈಷ್ಣವಸಂಪ್ರದಾಯದವನು: ಮಾಧ್ವರು ಚೆಲುವರೂ, ಕಸುವುಳ್ಳವರೂ, ಪೊಳ್ಳೇ ಮೈಕಟ್ಟುಳ್ಳವರೂ ಇರುತ್ತಾರೆ (ಕಚಾಗ. ೬೩). ೩. ಮಧ್ವಾಚಾರ್ಯರ ತತ್ತ್ವ,–ಸಿದ್ಧಾಂತ. [ಸಂ.]

**ಮಾಧ್ವಮತ** (ನಾ). ಮಧ್ವಾಚಾರ್ಯರು ಸ್ಥಾಪಿಸಿದ ಮತ ; ದ್ವೈತಮತ : ಈ ಮತಕ್ಕೆ ಮಾಧ್ವಮತ, ದ್ವೈತಮತ, ವೈಷ್ಣವಮತ ಎಂದೂ ಹೆಸರು . . . ಮಧ್ವಾಚಾರ್ಯರು ಅಥವಾ ಆನಂದತೀರ್ಥರು ತಮ್ಮ ವಿಶಿಷ್ಟಶಕ್ತಿಯಿಂದ ಮಾಧ್ವಮತವನ್ನು ಬಳಕೆಗೆ ತಂದುದಲ್ಲದೆ ದೇಶ ಸಂಚಾರ ಮಾಡಿ ಅದನ್ನು ನಾನಾ ಕಡೆಗೆ ಹರಡಿದರು (ಚಾಕಿಚ. ೨೬೬). [ಸಂ.]

**ಮಾಧ್ವಿ** (ನಾ). ೧. ಅಮಲು ಬರಿಸುವ ಪಾನೀಯ ; ಮದ್ಯ. ೨. = ಮಾಧವಿ ೩. [ಸಂ. ಮಾಧ್ವೀ]

**ಮಾಧ್ವೀಕ** (ಗು). ೧. ಅಮಲು ಉಂಟಾಗುವ ; ಮತ್ತುಬರುವ : ಮುಗ್ಧನಾಗದೆ ಭುಜಿಸು ಭುಜಿಸಲಿಹುದನು ಜಗದಿ ಮಾಧ್ವೀಕ ಭಯವಿರದು ಜಾಗರೂಕನಿಗೆ (ಮಂಕುತಿ. ೬೩೯). (ನಾ). ೨. ಹಿಪ್ಪೆಹೂವುಗಳನ್ನು ಭಟ್ಟಿಯಿಳಿಸಿ ತಯಾರಿಸುವ ಒಂದು ಬಗೆಯ ಮಾದಕಪಾನೀಯ. ೩. ದ್ರಾಕ್ಷೆಹಣ್ಣು. ೪. ದ್ರಾಕ್ಷಾರಸ : ''ಮಾಧ್ವೀಕಂ – ದ್ರಾಕ್ಷೇಹಣ್ಣಿನ ಹೆಂಡದ ಹೆಸರು'' (ಸಿದ್ಧಾಂತಿ. ೩೦೬). [ಸಂ.]

**ಮಾನ** (ನಾ). ೧. ಮರ್ಯಾದೆ : ಗೌರವ : ಮಾನಿಸರೊಳ್ಪಂ ಬಾಟುಮ ದೇನೊಪ್ಪಮದೇನಸಾರವಿಸ್ತಾರಮದೇಂ ಮಾನಮದೇಂ ವಿಪುಳಮದೇಂ ದೀನಮದೇಂ ಸ್ತೋಕಸುಖಮದೇನಧ್ರುವಮೋ (ಶಾಂತಿಪು. ೪-೧೦೨) ; ಮಾನಂ ಸದ್ಧೈರ್ಯ ದೀಕ್ಷಾಗುರು ಸುರಗಿರಿಗಂ ಕಲ್ಪವೃಕ್ಷಕ್ಕೆ ಹಸ್ತಂ ದಾನೋಪಾಧ್ಯಾಯಂ . . . ಎಂಬನ್ನಮಾದಂ ಜಗಮನೆಣಿಸಲ್ ಸುಪ್ರತಿಷ್ಠಂ ಗರಿಷ್ಠಂ (ಅರ್ಜನ. ೪-೩೩). ೨. ಆತ್ಮಗೌರವ ; ಅಭಿಮಾನ : ಪರಿಭವಕೆ ಗುರಿಯಾಯ್ತೆ ನಿನ್ನ ಮಾನಂ ? (ಶ್ರೀರಾಮಪ. ೬೬-೩೬೪). ೩. ಜಂಭ ; ಗರ್ವ ; ಅಹಂಕಾರ : "ದರ್ಪಃ, ಮದಃ, ಅವಲೇಪಃ, ಮಾನಃ, ಗರ್ವಃ, ಅಹಂಕಾರಃ — ಈ ೬ ಗರ್ವಂ'' (ಹಲಾಯು. ೦೦೪-೩೬); ಮಾನಮನೆಂತುಂ ಮಿಥ್ಯಾಜ್ಞಾನಿಗಳೆರ್ದೆಯೊಳಗೆ ನೆಲಸಲೀಯದೆ ನಾಲ್ಕುಂ ಮಾನಸ್ತಂಭಗಳ್ ರತ್ನಾನದ್ಧಂಗಳ್ ನಿರಂತರಂ ಸೊಗಯಿಸುಗುಂ (ಆದಿಪು. ೧೦-೨೪); ಸರ್ವಥಾ ಮಾನ ಮತ್ಸರ ಕೇಡು ಮರ್ತ್ಯಂಗೆ (ಅಕ್ರೂ ಕ. ೨-೩೬). ೪. ಅಭಿಪ್ರಾಯ; ತಿಳಿವಳಿಕೆ; ಭಾವನೆ. ೫. ಅಳೆಯುವುದು: ಅಳೆಯುವಿಕೆ. ೬. ಒಂದು ಅಳತೆಯ ಪ್ರಮಾಣ; ನಾಲ್ಕು ಸೊಲಿಗೆ; ಅರ್ಧಸೇರು : "ನಾಲ್ಕು ಸೊಲ್ಲಗೆಗೆ ಮಾನಂ'' (ಮಂಗರಾ. ೦೦೪-೦೦); ×× ತುಪ್ಪ ಮಾನವೊನ್ದು (ಶಾಇ. XI-i, ೪೦-೦೪; 965); ಐದು ಮಾನವ ಕಟ್ಟಿ ಒಂದು ಮಾನವ ಮಾಡು ಕಂಡಾ ಮದವಳಿಗೆ (ಜಕವ. ೬೬೬); ಉಪ್ಪು ಹೇಜಿಂಗೆ ಮಾನ ೨ ಅಕ್ಕಿ ಏತ್ತ ಹೇಜಿಂಗೆ ಮಾನ ೨ (ಎಕ. VII, ಶಿಮೊ. ೬೬-೫೦; 1203). ೭. ಜಮೀನಿನ ಒಂದು ಅಳತೆ; ಕ್ಷೇತ್ರವಿಸ್ತೀರ್ಣ; ಕ್ಷೇತ್ರವಿಸ್ತಾರ : ಬಡಗಣ ತೋಂಟದ ಕಮ್ಮಂ ಕಡೆಯೊಳು ಮೂವತ್ತು ಮೆರಸಿದಬೂಸೂಜಲ್ಲಿಂ ಪಡುವಣ ಬಡಗಣ ಕೋಣೆಯೊಳ್ಗಡಿಂಬದಿರ್ಮತ್ತರಿಬ್ಬ ಗಟ್ಟಿದ್ದಿಯ ಮಾನಂ (ಶಾಇ. IX-ii, ೦೩೬-೫೦; 1090). ೮. ಕಾಲದ ಒಂದು ಅಳತೆ,—ಪರಿಮಿತಿ : ನೀವಿವನಹವ ಮುರಿಯಲು ನಿಮ್ಮ

ಮಾನಕೆ ನಿಮಿಷ ತಾನಿಲ್ಲ (ಕೋಗಹು. ೯–೯೭) ; ವರುಷ ೧ನ್ನು ದಿನ ೬ನ್ನು ದಿನವ ಮಾಡಲು . . . ಮಾನವ ಮಾಡಲು ೪೨೭೦ರಿಂದ ಗುಣಿಸಲು (ಶಾಸ್ತ್ರಕ. ೨೭–೨). ೯. ಅಳತೆ ಮಾಡಲು ಉಪಯೋಗಿಸುವ ಒಂದು ಸಾಧನ; ಅಳೆಯಲು ಬಳಸುವ ಪಾತ್ರೆ : ಮಾನದ ತೋರಿಹ ಅವಿಂಗೆ ಕೊಳಗದ ತೋರಿಹ ಕೆಚ್ಚಲು (ಅಚಂ. ೦೨–೯೬): ಆನೆಯು ಮಾನದೊಳಿಕ್ಕಿದ ಡಡಗುವುದೆ ದರ್ಪಣದೊಳಡಗುವುದಲ್ಲದೆ (ತತ್ವಪ. ೪. ೩೯೬–೯೯೦); ಮಾನದಲ್ಲಿ ಆನೆ ಹಿಡಿದೀತೇ ? (ಗಾದೆ). ೧೦. ಗಣನೆ ; ಎಣಿಕೆ : ಈ ಮಾನದಿಂದ ಅವನಿಗಿರುವಂಥ ತಿಳಿವು, ಚುರುಕು . . . ಆಜನ್ಮಸಿದ್ಧವಾದ ಹಕ್ಕನ್ನು ಕೊಟ್ಟಂತಿದೆ (೬೦ಬಿದ. ೨೭). ೧೧. ಸತ್ಕಾರ; ಆದರ : (೪). ೧೨. ಜನನೇಂದ್ರಿಯ; ಗುಹ್ಯ : ಹಸಿವನ್ನು ಹೋಗಲಾಡಿಸುವುದಕ್ಕೆ ಸ್ವಲ್ಪ ಅನ್ನ, ಮಾನವನ್ನು ಮುಚ್ಚಿಕೊಳ್ಳುವುದಕ್ಕೆ ಸ್ವಲ್ಪ ಬಟ್ಟೆ ಏನಾ ಮತ್ತೇನು ಬೇಕಾಗಿದೆ ? (ಶೀತಕಾ. XII, ೨೦). ೧೩. ಶೀಲ ; ಚಾರಿತ್ರ್ಯ : ನಿನ್ನ ಮಾನವ ಕೊಂಬ ದಕ್ಕಡಿಗರಾರು ನೀ ನರಳಲ್ಲ ಮೂಲೋಕದಾದಿಶಕ್ತಿ ಸ್ವರೂಪಿ (ಶಶಕೋ. ೯–೩೬). 'ಮಾನಂಗಳೆ' ಪರಾ. ೧೪. ಮನೆ; ಕಟ್ಟಡ. ೧೫. [ಕಾವ್ಯಮಿಾ] ವಿಪ್ರಲಂಭಶೃಂಗಾರದಲ್ಲಿ ಒಂದು ಬಗೆ; ಸ್ತ್ರೀಯ ಪ್ರಣಯಕೋಪ : ಅಱಿಯದೆ ಗೆಯ್ದನಬ್ಜಮುಖಿ ವೀನಿದನೊರ್ಮೆಗೆ ಸೈರಿಸೆಂದು ಕಾಲ್ಗೆಱಗಿರೆಯುಂ ಪ್ರಿಯಂ ಸುಡು ಸುಡೇಂ ಗಡ ಸೈರಿಪುದೆಂದು ಕೋಪದಿಂ ಪೞಿಪಡೆ ಪೋಗೆ ನೂಂಕಿ ಕಳೆದಂದಿನ ದುಷ್ಕೃತಮೊನ್ನನಾವಗಂ ಮಱುಗಿಪಿ ಮುಚ್ಚಿ ಸುಟ್ಟಪುವು ನೋಡಿರೆ ಶೀತ ಮರೀಚಿಮಾಲೆಗಳ್ (ಇದು ಮಾನಾವ್ಯಂ) (ಕಾವ್ಯಾಶ. ೬೦೬); ಲತೆಯಾದಳ್ ವಿದ್ಯೆಯಿಂದಾ ಖಚರಿ ಚರಣದೊಳ್ ಬಿರ್ದ ಚಿತ್ತೇಶನುಗ್ರಂ ವಾಕ್ಷರಂ ಬಂದೆನ್ನನೆಂದುಂ ಬಿದಿಱಿಸಲಣಮಿನ್ನಾಱೆನಾನೆಂದುಮುಲ್ಲಾಡುತುಮಿರ್ಕುಂ ಮಾನಮಿಾ ಚೇತನೆ ತನುವಿನೊಳಿರ್ಪನ್ನವೆಂದುಂ ಸ್ಮರಾರ್ತೆಯಿಂದಾ ಮುಗ್ಧೆಯಿಂದೇನವಧರಿಪವರ್ಗಂ ಕೋಪಮಾಪತ್ತನೀಗುಂ (ಲೀಲಾವ. ೦೪–೯೬). ೧೬. = ಮಾನಕಷಾಯ : ಅಪ್ರಮತ್ತಗುಣಸ್ಥಾನಂಗಳೊಳಧಃಪ್ರವೃತ್ತಪೂರ್ವಾನಿವೃತ್ತಿಕರಣಪರಿಣಾಮಂಗಳಿಂದಮನಂತಾನುಬಂಧಿ ಕ್ರೋಧಮಾನಮಾಯಾಲೋಭಂಗಳಂ ವಿಸಂಯೋಜಿಸಿ (ಅಂಕ್ರ. ೦೦-೦೪ ಪ). ೧೭. = ಮಾನಸಂಜ್ವಲನ : ಕಿಱಿಕಿಱಿದು ಬೇಗದಿಂ ಕ್ರಮಕ್ರಮದಿಂದಂ ಕ್ರೋಧಮಾನಮಾಯಾಲೋಭಸಂಜ್ವಲನಂಗಳಂ ಮೂಱುತೆಱದ ಕೃಷ್ಟಿಗಳಂ ಬೇಱೆ ಬೇಱೆ ಕಿಡಿಸಿ (ಅಂಕ್ರ. ೦೦–೦೬೩). ೧೮. [ಶಿಲ್ಪಶಾ] ದೇವತಾವಿಗ್ರಹಗಳನ್ನು ಕಡೆಯಲು ಉಪಯೋಗಿಸುವ ಒಂದು ಅಳತೆ: ಪ್ರತಿಮೆಯ ದೈರ್ಘ್ಯದ ಅಳತೆಗೆ " ಮಾನ " ವೆಂದೂ . . . ಗಾಂಭೀರ್ಯದ ಅಳತೆಗೆ " ಲಂಬಮಾನ '' ವೆಂದೂ ವ್ಯವಹಾರ (ಶಾಶಿದ. ೩೦೬). ' ಮಾನಕ್ರಿಯೆ ', ' ಮಾನಾಂಗುಲ ' ಪರಾ.

**ಮಾನ ಉಳಿಸು** = ಮರ್ಯಾದೆಯನ್ನು ಉಳಿಸು ; ಅವಮಾನವನ್ನು ತಪ್ಪಿಸು : ಇದೊಂದು ಸಾರಿ ಹ್ಯಾಗಾದರೂ ಮಾಡಿ ನನ್ನ ಮಾನ ಉಳಿಸು (ಹುಂಬಿದು. ೯–೪೩); ನಾನೇ ಪಂಚಾಯ್ತಿ ಮಾಡಿ ಅವನ ಮಾನ ಉಳಿಸಿದೆ ನೋಡಿ (ದೀಪಹಂ. ೬೩). **ಮಾನ ಕಾಯು** = ಮಾನ ಉಳಿಸು : ಎಂತೆಂತಹ ಸಮಯಗಳಲ್ಲಿ ಅವರು ಇತರರ ಮಾನ ಕಾದಿದ್ದಾರೆ ಗೊತ್ತೇ ? (ಕೂ). **ಮಾನ ಕೊಡು** = ಗೌರವಿಸು ; ಮರ್ಯಾದೆ ಮಾಡು : ಅಧಿಕಾರಿಗಳು ಆತನಿಗೆ ಮಾನ ಕೊಡುತ್ತಿದ್ದರು (೩೩ಂಶಾ. ೦೬). **ಮಾನ ತೆಗೆ** = ಗೌರವವನ್ನು ಕಳೆ ; ಅವಮಾನಗೊಳಿಸು : ಮನೆತನದ ಮಾನ ತೆಗೆಯಬೇಡ (ಕಟ್ಟಿಹೂ. ೩೨). **ಮಾನ ಮರ್ಯಾದೆ** = ಗೌರವಪೂರ್ವಕವಾದ ಸತ್ಕಾರ : ತಮ್ಮ ಪಂಚಿಯದ ಗೃಹಸ್ಥರು ಯಾರಾದರೂ ಮನೆಗೆ ಬಂದರೆ ಅವರ ಯೋಗ್ಯತಾನುಸಾರವಾಗಿ ಮಾನಮರ್ಯಾದೆ ಮಾಡಿ . . . ಕ್ಷೇಮಸಮಾಚಾರ ಕೇಳಿ ಬಳಿಕ ಬಂದ ಕೆಲಸದ ಪ್ರಸಕ್ತಿ ತೆಗೆಯಬೇಕು (ಹುಂಬಿದು. ೯–೩೪): ಇಷ್ಟು ಕಷ್ಟಬಟ್ಟು ಅವರನ್ನು ಬೆಳೆಸಿದ ಅತ್ತೆ ಈಗ ಅವರ ಮಾನ ಮರ್ಯಾದೆಗೆ ಕುಂದಾಗುವಂತೆ ಏಕೆ ನಡೆಯುತ್ತಾಳೆ (ಗಂಟೂಯು. ೨೩೨). **ಮಾನಾಪಮಾನ** = ಗೌರವ ಮತ್ತು ಅವಮಾನ : ಮಾನಾಪಮಾನವನು ಜ್ಞಾನ ತನಗಾದುದನು ಮಾನಿನಿಯು ಒಲಿದ ರತಿಸುಖವ ಪರರಲ್ಲಿ ಮಾನಿಸುವ ನೆಗ್ಗ (ಸರ್ವಜ್ಞ. ೦೩೯೬). **ಮಾನಾಪಹಾನಿ** = ಗೌರವಕ್ಕೆ ಉಂಟಾದ ಹಾನಿ ; ಅಪಮಾನ : ಅವಮರ್ಯಾದೆ : ಭೀಮ ಬಲವದರಾತಿಸೇನಾಭೀಮ ಕುರುಕುಲಕುಸುಮಮಾರ್ಗಣಭೀಮ ಮಱೆದೈ ಮಾನಿನಿಯ ಮಾನಾಪಹಾನಿಗಳ (ಕುವ್ಯಾಅ. ೬–೨೩). [ಸಂ.]

**ಮಾನಂಗಳೆ**, ಮಾನಕಳೆ (ಕ್ರಿ). ೧. (ಸ್ತ್ರೀಯ) ಶೀಲಗೆಡಿಸು : ಶೀಲಗುಂದುವಂತೆ ಮಾಡು : ಕಡೆಗೆ ಯಾ ರಕ್ಕಸನ ಕೈಗೆ ವಶಮಾಡಿ ಮಾನಂಗಳೆವ ಯತ್ನಗೈದೆ (ಶಶಕೋ. ೯–೩೭). **ಮಾನಕಳೆ** : ೨. ಅಗೌರವದಿಂದ ಕಾಣು; ಅವಮಾನ ಮಾಡು ; ಅವಮಾನಿಸು : ಯಾವುದನ್ನೂ ಸರಿಯಾಗಿ ವಿಚಾರಿಸದೆ ಗ್ರಾಮದವರ ಎದುರಿಗೆ ಹೀಗೆ ಮಾನ ಕಳೆಯುವುದಾದರೆ ಸಂತೋಷ (ಕೆಳಹು. ೯೬). ೩. ಅವಮಾನವಾಗು; ಅಗೌರವವುಂಟಾಗು: ಒಬ್ಬರಿಂದ ಇಡೀ ಗುಂಪಿಗೆ ಮಾನಕಳೆಯುವಂಥ ಪರಿಸ್ಥಿತಿಯುಂಟಾಯಿತು (ಕೂ). [ಮಾನ + ಕಳೆ$_1$]

**ಮಾನಂಗಿ** (ನಾ). ಸಣ್ಣ ಬಾವಿ : " ಚುರಿ ಚುಂಡಿ ಮಾನಂಗಿ " (ಹುಂಗಣ. ೦೨೩–೦೪). [ ? ]

**ಮಾನಂಗೆಡಿಸು** (ಕ್ರಿ). ಗೌರವವನ್ನು ಹಾಳು ಮಾಡು ; ಹಿರಿಮೆಯನ್ನು ಕೆಡಿಸು : ಹೋರಿ ಮಾನಂಗೆ [ಶಾಕಾಂ. ನವ ಕೆ]ಡಿಸಿಕೊಳದಿರು ಭೂರಮಣ ಇವರಲ್ಲಿ (ಬಸಪು. ೨೦–೩೬). [ಮಾನ + ಕೆಡಿಸು$_1$]

**ಮಾನಂಗೆಡು** (ಕ್ರಿ). ಗೌರವವನ್ನು ಕಳೆದುಕೊಳ್ಳು : ಅವಮಾನ ಹೊಂದು : ಮಾನಂಗೆಡಬೆಡ್ಕೆಂದಂ ನೀನತಿಶಯಬುದ್ಧಿಶಾಲಿಯಾದೊಡೆ ತೊಲಗು (ವೃಪಪ. ೩೬–೯೪). [ಮಾನ + ಕೆಡು$_1$]

**ಮಾನಂದನ** (ನಾ). ಲಕ್ಷ್ಮಿಯ ಪುತ್ರ ; ಮನ್ಮಥ. [ಸಂ.]

**ಮಾನಕ$_1$** (ನಾ). ೧. ಅಳತೆಯ ಒಂದು ಪ್ರಮಾಣ : " ಪ್ರಮಾಣ, ಮಟ್ಟ ; ಮಾನದಂಡ, (ಪ್ರ:ರಿ) ಮಾನಕ " (Standard. ಟೆಕ್ರಿಪ. ೬೭). ೨. ಅಳತೆಯ ಒಂದು ಸಾಧನ ; ಅಳತೆಯ ಪಾತ್ರೆ. [ಸಂ.]

**ಮಾನಕ$_2$** (ನಾ). ಒಂದು ಬಗೆಯ ಸಸ್ಯ : "ಮಾನಕ, ಕರೆಮಣಸಂಗಿ. ಬಲರಕ್ಕಸಿ, ಬಾಳರಾಕ್ಷ" (ಸಸ್ಯಪ. ೯). [ ? ]

**ಮಾನಕರಿ** (ನಾ). ಗೌರವಾನ್ವಿತ ವ್ಯಕ್ತಿ : ಈ ಸಮಾರಂಭವನ್ನು ನೋಡುವುದಕ್ಕೆ ಮುತ್ಸದ್ದಿಗಳೂ, ಮಾನಕರಿಗಳೂ . . . ನೆರೆದಿದ್ದರು (ಹುಂಬಿಳ. ೪೮). [ ← ಮರಾ. ಮಾನಕರೀ ]

**ಮಾನಕಷಾಯ** (ನಾ). [ಜೈನ] ಕ್ರೋಧ, ಮಾನ, ಮಾಯಾ ಮತ್ತು ಲೋಭಗಳೆಂಬ ನಾಲ್ಕುವಿಧವಾದ ಕಷಾಯಗಳಲ್ಲಿ ಒಂದು ; "ತೀವ್ರಮನೋವಿಕಾರರೂಪಕಷಾಯಗಳ ಯೋಗದಿಂದ ಜನಿಸುವಂತಹುದು" (ಕೃಕಕೋ. ೨೦೩) : ಎಮ್ಮೊಳಪ್ಪ ಮಾನಕಷಾಯಮಂ ಕಾರಣಮಾಗಿ ಸತ್ತು ಬೆಳ್ಗತ್ತೆಯುಂ ಪೇಪಂದಿಯುಂ ನಾಯುಂ ಪೊಲೆಯರ ಕೂಸುಮಾಗಿ . . . ಈಗಳ್ ನಾಗಶ್ರೀಯಾದಳ್ (ಪಪ್ಯಾಶಾ. ೨೪–೪) ; ಮಾನಕಷಾಯಮವರ್ಗಿನ್ನುಂ ಪತ್ತುವಿಟ್ಟುದಲ್ತದಱಿಂ ಕೇವಲಜ್ಞಾನೋತ್ಪತ್ತಿಯಾಗದಿರ್ದುದು (ಅಂಕ್ರ. ೦೪–೦೯೩ ಪ) ; ಮಾನಕಷಾಯಕ್ಕೆ ತಕ್ಕ ನೆಡೆಗೊಟ್ಟಪನೇ (ಕಂಠಾಪಾ. ೬–೨೦). [ಸಂ.]

**ಮಾನಕಳೆ** ' ಮಾನಂಗಳೆ ' ನೋ.

**ಮಾನಕಾತಿ** (ನಾ). ಗೌರವವುಳ್ಳವಳು ; ಮರ್ಯಾದಸ್ಥೆ : ನೀವೇನಿಂತಹ ಟಿರವುಗಾಣುವರ ಮಾನಕಾತಿಯರಿರ ಕೊಳ್ಳಿರೆಂದೆನೆ ನಗುತಾ ನಾರಿಯರು ಕೊಂಡರೆಲ್ಲ (ಶಕ. ೩೩–೭೯). [ಮಾನ + — ಕಾತಿ$_1$]

**ಮಾನಕ್ರಿಯೆ** (ನಾ). [ಶಿಲ್ಪಶಾ] ಶಿಲ್ಪಶಾಸ್ತ್ರಕ್ಕೆ ಸಂಬಂಧಿಸಿದ ಅಳತೆ, ಪ್ರಮಾಣಗಳಿಗೆ ಅನುಸಾರವಾಗಿ ಮಾಡಿದ ಕೆಲಸ : ಮೊತ್ತದಿನಿಂದ್ರ ಮತ್ತಮತಂದ್ರಂ ಗುರುಮತದಿಂದಂ ಕರ ಸೊಗಸಿಂದಂ ಜ್ಞಾನಾತ್ಮತೆಯಿಂ ಮಾನಕ್ರಿಯೆಯಿಂ ಸೊಗಯಿಸೆ ಲಿಂಗಂ ನಿಗಮತುರಂಗಂ (ಹಾಟಾಸ್ತ. ೦-೨-೮೦ ೮೧೪). [ಸಂ. ಮಾನಕ್ರಿಯಾ]

**ಮಾನಗಂಬ** (ನಾ). [ಜೈನ] ತುದಿಯಲ್ಲಿ ಚಿಕ್ಕಮಂಟಪವನ್ನೊಳಗೊಂಡ, ಬಸದಿಯ ಮುಂದಿನ ಕಂಬ : ವಿಳಿರ್ವ ಪತಾಕೆಗಳು ಮಕರತೋರಣಮಂಡಳಿ ಮಾನಗಂಬಮುಗ್ಗಳಿಸಿರೆ (ಎಕ. VIII, ಸೊರಬ. ೨೬೨-೦೯; 1077). 'ಮಾನಸ್ತಂಭ' ಪರಾ. [ಮಾನ + ಕಂಬ₁ (<ಕಂಭ)]

**ಮಾನಗಟ್ಟು** (ನಾ). ತನ್ನ ಅಧಿಕಾರವನ್ನು ಸೂಚಿಸುವ ಹಸ್ತಾಕ್ಷರ: ಅಧಿಕೃತವಾದ ಸಹಿ,–ಒಪ್ಪ : ಕಪ್ಪುರಹದ ಸಾಕ್ಷ್ಯಗಳನ್ನೂ ಅವರವರ ರಾಜಮುದ್ರೆಯ ಮಾನಗಟ್ಟನೊಡನೆ ಹಾಯ್ಕಿಸಿ ನಮಗೆ ತೋರುವವನಾಗು (ಅರುಗ. ೩೬-೩). [ಮಾನ + ಕಟ್ಟು₂]

**ಮಾನಗರ್ವ** (ನಾ). ದುರಭಿಮಾನ ; ಜಂಭ ; ಸೊಕ್ಕು : ಪಾಪದ ಫಲದಿಂದಿನಿಪಿರಿದು ದುಃಖಮಂ ನೆಟ್ಟನೆಯ್ದಿದೈ ಮಾನಗರ್ವಮೇನಾಗಿಸದೋ (ಸುಕುಮಾ. ೩-೨೮); ವಿನಯಪ್ರಾಗ್ಭಾರದಿಂ ಮಾನಗರ್ವಮನೊಟ್ಟಿಯ್ಯ. . . ಮಿಥ್ಯಾತ್ವಮಂ ನೆಟ್ಟನುತ್ತಮಸಮ್ಯಕ್ತ್ವಶಿತಾಸಿಯಿಂದಮಿಱಿ (ಪಾರ್ಶ್ವ. ೦೩೯-೬); ಭಾನುರಶ್ಮಿಗಳಂಧಕಾರದ ಮಾನಗರ್ವವ ಮುಱಿವವೊಲು ಗುರುಸೂನುವಿನ ಶರ ಸವಱಿದವು ಕರಿಘಟೆಯ ಬಲುಮೆಳೆಯ (ಕುಮಾ. ೪-೦೩). ☞ ಇದು ಒಂದೇ ಅರ್ಥದ ಎರಡು ಶಬ್ದಗಳು ಸೇರಿ ಆಗಿರುವ ರೂಪ. [ಸಂ.]

**ಮಾನಗರ್ವಿತೆ** (ನಾ). ಗೌರವವುಳ್ಳವಳು; ಸ್ವಾಭಿಮಾನಿ : ದೇವಿ ಬರುವಳು; ಆಕೆ ಬಹಳ ಮಾನಗರ್ವಿತೆ (ಶಾಕುಂತ. ೯೨-೦೩). [ಮಾನ + ಗರ್ವಿತೆ]

**ಮಾನಗೆ**, ಮಾನಿಗೆ (ನಾ). ೧. ಅಳೆಯುವ ಸಾಧನ; ಅಳತೆಯ ಪಾತ್ರೆ: ಮಾನಕ : ಅಂಗನೆಯ ನಾಭಿಕೂಪದ ಶೃಂಗಾರಜಲಕ್ಕೆ ಬಾಸೆ ನೀರ್ವಾರಿ ವೃತ್ತೋತ್ತುಂಗಕುಚಂ ಮಾನಗೆ ಮದನಂ ಗಡ ಯೌವನವನಕ್ಕೆ ತೋಂಟಿಗನಾದಂ (ಅಜಿತ. ೨-೩೦). **ಮಾನಿಗೆ** : ೨. ಒಂದು ಅಳತೆಯ ಪ್ರಮಾಣ: ಅವನ ಹತ್ತಿರ ಇದ್ದುದು ಒಂದೇ ಒಂದು ಮಾನಿಗೆ ಅಕ್ಕಿ ! (ಹಳ್ಳಿ.ಹೋ. ೯೯); ಆಗ ಅಕ್ಕಿಗೆ ಮಾನಿಗೆ ಮೂರುರೂಪಾಯಿಯಿತ್ತು ದರ (ತಗುಳ. ೦೦೬). [ < ಸಂ. ಮಾನಕ ]

**ಮಾನಗೇಡಿ** (ನಾ). ಮರ್ಯಾದೆಯನ್ನು ಕಳೆದುಕೊಂಡವನು ; ನಾಚಿಕೆಗೇಡಿ : ಮಾನಹಾನಿಯೆ ಮರಣವೆಂದು ಮಾನವರೆಲ್ಲ ಮಾನಿಸುತ್ತಿರಲು . . . ಬದುಕಿರುವನೇತಕೋ ? ಛೀ ಮಾನಗೇಡಿ ಜೀವಾ ! (ಕೃಷ್ಣಾ.ಕು. ೯-೬); ಹದ್ದುಮೀರಿ ಅಡಿಯಿಟ್ಟುದಕ್ಕೆ ಮಾನಗೇಡಿಗಳಾಗಿ ಹೊರಬೀಳುವರು (ಚಾಖ್ಯಾ. ೨೩); ಮಾನಗೇಡಿಗೆ ಬುದ್ಧಿಗೇಡಿ ಗೆಳೆಯ (ಗಾದೆ). [ಮಾನ + ಕೇಡಿ₁]

**ಮಾನಗೇಡು** (ನಾ). ಅವಮಾನ ; ಅವಮರ್ಯಾದೆ ; ಅಗೌರವ : ನುಡಿಯದಿರಿ ನೀವಿನ್ನು . . . ನುಡಿಸಿದರೆ ಶಿವನಾದರಾಗಲಿ ಮಾನಗೇಡಹುದು (ಕೌರವ. ೨೩-೨೦) ; ಈ ಯಾವತ್ತು ಮಾನಗೇಡನ್ನು ವ್ಹೇನಿಸದವರು ಸುಮ್ಮನೆ ತಾಳಿಕೊಳ್ಳಬೇಕಾಯಿತು (ಕುಂಠಿತ. ೩-೦೩೩). [ಮಾನ + ಕೇಡು]

**ಮಾನಚಿತ್ರ** (ನಾ). ಭೂಪಟ ; ನಕ್ಷೆ : ಇದೋ ಎದುರಿಗಿನ ಈ ಮಾನಚಿತ್ರವನ್ನು ನೋಡಬಾರದೆ; ಇಟಾಲಿಯ ಹತ್ತರ ಸಮುದ್ರವಿದೆಯಲ್ಲ, ಅದೇ (ಕುಂಹಿ. ೬೨೬). [← ಹಿಂ. ಮಾನಚಿತ್ರ]

**ಮಾನಚ್ಯುತಿ** (ನಾ). ಗೌರವವನ್ನು ಕಳೆದುಕೊಳ್ಳುವುದು ; ಅವಮರ್ಯಾದೆ: ಅತಿದಾರಿದ್ರ್ಯಂ ಮಾನಚ್ಯುತಿ ದುಃಖಂ ಪೆರ್ಚಲ್ (ದಶಕು. ೮-೧೯೨). [ಸಂ.]

**ಮಾನಜ** (ನಾ). ಗರ್ವದಿಂದುಂಟಾದುದು : ಅಸ್ನೇಹ ಜೀವಜ ಮಾನಜಭೀತಿಗಳಂ ನಿರ್ಧರಿಸಲೆ ಬಾಲಕ (ಯೋಗಾಂ. ೩-೩೦). [ಸಂ.]

**ಮಾನತೆ** (ನಾ). ದುಮ್ಮಾನ ; ದುಃಖಿ : ಏನವ್ವ ಬಿಡದೆ ಚಿಂತಿಸಿ ಮಾನತೆವೆತ್ತಿರ್ಪೆ ನಿನ್ನ ಮನದುಮ್ಮಳವಂ ಮೀನಾಕ್ಷಿ ಪೇಟೆನುತ್ತ . . . ಬೆಸಗೊಂಡಳ್ (ಶ್ರೀಕೃಷ್ಣ. ೩-೩೦). [ಸಂ. ಮಾನತಾ]

**ಮಾನದಂಡ** (ನಾ). ಅಳತೆಗೋಲು : ಶೀನೂಗೆ ಥಾಮ್ಸನ್ನರನ್ನು ಯಾವ ಮಾನದಂಡದಿಂದ ಅಳೆಯಬೇಕೆಂಬುದು ಕೂಡಲೆ ಗೊತ್ತಾಯಿತು (ಸಮಾಜ. ೬೦೬); ಇದೇ ಸುಖದುಃಖಗಳನ್ನು ಅರಿಯುವ ಮಾನದಂಡ (ಶಾರದ. ೩೯). [ಸಂ.]

**ಮಾನದಿ** (ನಾ). ದೊಡ್ಡನದಿ : ಬಾಲೆಗೆ ಗುಣಕಾಂತಿ ಮಹೋಲೀಲೆಗೆ ವಿನಯಪ್ರಧಾನಗುಣಗಣಗೆಣೆ ಭೂಪಾಲಂ ನಿನಗವಜೀವನಾಕೂಲಂ ಬದಿಬಿಸುಗೆ ಸಿಂಧುಪೂರ [ಳ್] ಮಾನದಿಯೊಳ್ [ಲ್] (ಶಾಂತಿ. ೩-೦೩೩). [ಮಾ₄ + ನದಿ. / ಸಂ. ಮಹಾನದೀ]

**ಮಾನದೆ** (ನಾ). ಚಂದ್ರನ ಹದಿನಾರು ಕಲೆಗಳಲ್ಲಿ ಒಂದು : ಅಮೃತಾ ಮಾನದಾ ಪೂಷಾ ತುಷ್ಟಿ ಪುಷ್ಟಿ ರತಿ ಧೃತಿ ಶಶಿನಿ ಚಂದ್ರಿಕಾ ಕಾಂತಿ ಜ್ಯೋತ್ಸ್ನಾ ಶ್ರೀ ಅಂಗದಾ ಪೂರ್ಣಾ ಪೂರ್ಣಾಮೃತಾ ಕಾಮದಾಯಿನಿಯೆಂಬ ಷೋಡಶಕಲಾಭರಿತನಾಗಿ (ವಿವೇಕ. ೨೦೯). [ಸಂ. ಮಾನದಾ]

**ಮಾನಧನ** (ನಾ). ಗೌರವವನ್ನೇ ಸಂಪತ್ತೆಂದು ಗಣಿಸುವವನು ; ಆತ್ಮಗೌರವವನ್ನು ಹೊಂದಿರುವವನು ; ಸ್ವಾಭಿಮಾನಿ : ಮಾನಧನನೆನಿಸಿ ನಿನ್ನಭಿಮಾನಕ್ಷತಿ ಮಾಡಿದರ್ಗೆ ಸುಯೋಧನ ನೀಂ ಮತ್ತೀ ನೀರೊಳಗೆಸ ಡಿಕರ್ಗಂ ಮಿನಿಕರ್ಗಂ ಕಪ್ಪೆಯಿಕರ್ಗಮಿರ್ಪರೆ ಗಂಡರ್ (ಗದಾಯು. ೬-೬); ಮಾನಧನರಿಗೆ ವಧೆಯೆನಿಪುದಭಿಮಾನಭಂಜನವು (ಕುಮಾ. ೨೨-೯೦). [ಸಂ.]

**ಮಾನಧರ** (ನಾ). ಮರ್ಯಾದಸ್ಥ ; ಮಾನವಂತ : ಬಂದ ಬರವಂ ನಿಮ್ಮಂ ಬಿಡಿಸಲುಮೊಡಂಬಡಿಸಲುಮೆಂದೆ ಬಂದೆನೆನ್ನಂ ಬಿಡುವುದೇದು ದಾಕ್ಷಿಣ್ಯಾಪಪ್ರಯೋಗಂಗಳಿಂತಜ್ಞತೆಯುನಾ ಮಾನಧರರ ಮುಂದಿಡೆಯುಂ (ಶಾಂತಿ. ೯-೬೨ ವ). [ಸಂ.]

**ಮಾನನಷ್ಟ** (ನಾ). ಆತ್ಮಗೌರವಕ್ಕೆ ಉಂಟಾಗುವ ಧಕ್ಕೆ, – ಹಾನಿ.

ಮಾನನಷ್ಟಮೊಕದ್ದಮೆ= ಆತ್ಮಗೌರವಕ್ಕೆ ಉಂಟಾಗುವ ಹಾನಿಗಾಗಿ ಹೂಡುವ ದಾವೆ : ಆ ದಿನ ಮಾನನಷ್ಟಮೊಕದ್ದಮೆಯೊಂದು ವಿಚಾರಣೆಯಾಗಬೇಕಾಗಿತ್ತು (ಕ್ಷಪರು. ೬೩೯). [ಸಂ.]

**ಮಾನನಿಧಾನೆ** (ನಾ). ಗೌರವವನ್ನೇ ಸಂಪತ್ತಾಗಿ ಉಳ್ಳವಳು ; ಆತ್ಮಗೌರವವನ್ನು ಹೊಂದಿರುವವಳು ; ಸ್ವಾಭಿಮಾನಿ : ಮಾನನಿಧಾನೆ ನಿಳಿಂಪವಿಮಾನಕಮನಹೀನಮತಿಯ ಹೀನಾಲಯಮಂ ಜೈನಮತರತ್ನದೀಪಿಕೆ ನಾನಾವಿಧರತ್ನರಾಶಿಯಂ ಪೇಶಲಮಂ . . . ಕಂಡಳ್ (ಧರ್ಮಾ. ೦೩-೬೨). [ಸಂ. ಮಾನನಿಧಾನಾ]

**ಮಾನನಿಧಿ** (ನಾ). ಗೌರವವನ್ನೇ ಸಂಪತ್ತಾಗಿ ಉಳ್ಳವನು : ಆತ್ಮಗೌರವವನ್ನು ಹೊಂದಿರುವವನು ; ಸ್ವಾಭಿಮಾನಿ : ಮಾನನಿಧಿಯೆಂದು ಮನ್ನಿಪೆ ನೀನೆನ್ನಂ (ಜಗನ್ನಾ. ೦೨-೯೬) ; ನೀನೀ ಪ್ರಸಾದವಂ ಶರಣತತಿಗೀಯೆನುತೆ ಮಾನನಿಧಿ ವೃಷಭಮುಖಗಿಂದೀಯೆ (ಬಸವ. ೦-೩೯) ; ತಾನೆ ತನ್ನನೆ ಹೊಗಳಿಕೊಂಬರೆ ಮಾನನಿಧಿಯಾದವರು (ಕುಮಾರರಾಮ. ೦೬-೩೩). [ಸಂ.]

**ಮಾನನೀಯ** (ಗು). ೧. ಗೌರವಕ್ಕೆ ಅರ್ಹವಾದ ; ಮನ್ನಣೆಗೆ ಪಾತ್ರವಾದ : ದಾನಶೂರನಪವಾದಭೀರು ವಿಜ್ಞಾನಮೂರ್ತಿ ಭುವನೈಕವತ್ಸಲಂ ಮಾನನೀಯಗುಣನೆಂಬ ಪೆಂಪಿನುದ್ಯಾನಿಯಂ ತಳೆದ ದುರ್ಗನನ್ನರಾರ್

(ಶಂತಕಂ. ೩೦೦-೩). (ನಾ). ೨. ಗೌರವಕ್ಕೆ ಅರ್ಹವಾದುದು ; ಮನ್ನಣೆಗೆ ಪಾತ್ರವಾದುದು : ಈ ಬಗೆಯ ಮತಭೇದವು ರಾಜತಂತ್ರವನ್ನು ಅರಿತವರಿಗೆ ಮಾನನೀಯವಾದುದು (ಬಿತ್ಸಾತ. ೩೭). ೩. ಗೌರವ ; ಮನ್ನಣೆ : "ಮಾನಂ . . . ಮಾನನಂ, ಮಾನನೀಯಂ, ಈ ೭ ಮನ್ನಣೆ" (ಅಕನ್ಯ. ೧೩೦). ೪. ಗೌರವಾರ್ಹ ವ್ಯಕ್ತಿ ; ಮನ್ನಣೆಗೆ ತಕ್ಕ ವ್ಯಕ್ತಿ : ದ್ರಾನಧರ್ಮಪರೋಪಕಾರವಿಧಾನದೀಕ್ಷಾಕರ್ಮನಿಷ್ಠರು ಮಾನನೀಯರಲೇ (ಶುಶ್ಕಾಊ. ೯-೨೯). [ಸಂ.]

**ಮಾನಪತ್ರ** (ನಾ). ಅಭಿನಂದನೆಯ ಪತ್ರ ; ಬಿನ್ನವತ್ತಳೆ : ನೀನಿಷ್ಟು ಮಾಡಿದರೆ, ನಿನ್ನ ಮೇಲೊಂದು ಪದ್ಯವ ಬರೆದು, ಕನ್ನಡಿಕಟ್ಟು ಹಾಕಿ ತುಂಬುಸಭೆಯೊಳು ಮಾನಪತ್ರ ಸಲಿಸುವೆವು (ಪಂಕು. ೨೩-೦೯). [ಸಂ.]

**ಮಾನಭಂಗ** (ನಾ). ೧. ಅವಮಾನ ; ತೇಜೋವಧೆ ; ಮಾನಹಾನಿ : ಭರತಂಗೆಜಗುವರೆಂಬಿದೆ ಪರಿಭವಮೆಮಗಿಂತು ಮಾನಭಂಗಂ ಬರೆ ಬರ್ಪರ ಸೇವುದೆಂದು ಪೂಣ್ದಾರ್ ಪರಮತಪೋಭರವಮನನಿಬರುಂ ಪುರುತನಯರ್ (ಆಪು. ೦೯-೩೯); ಮಿಸಲುಗಳೆದ ಬರುದಿನ ಮಾನಭಂಗದ ಕಳವಳದ ಕನಸುಗಳಲಿದ್ದುದು ರಾಯನಾಸ್ಥಾನ (ಕುಮಾ. ೦-೨೦) ; ಮಾನಭಂಗವ ಮಾಡಿ ಮತ್ತೆ ಉಪಚಾರಗಳನೇನ ಮಾಡಿವರಲ್ಲಿ ಇರಬಾರದಯ್ಯ (ಪುಕಂಚ. ೯-೯೨ ಪಲ್ಲ). ೨. ಸ್ತ್ರೀಯ ಶೀಲಹರಣ ; ಶೀಲಭಂಗ ; ಅತ್ಯಾಚಾರ : ತುರುಕರವನು ಮಾನಭಂಗ ಮಾಡಲು ಯತ್ನಿಸಿದ್ದೂ ಇವಳನ್ನೇ (ಮುಸಂಗ. ೩೦) ; ದ್ರೌಪದಿಯ ಮಾನಭಂಗದ ಸಮಯದಲ್ಲಿ ಗಾಂಧಾರಿಯು ನಡುಗಿ ಹೋದಳು (ಶಾರದ. ೯೬೩). [ಸಂ.]

**ಮಾನಭಂಗಿತ** (ನಾ). ಅವಮಾನವನ್ನು ಹೊಂದಿದವನು ; ತೇಜೋಭಂಗಿತನಾದವನು : ಜೈನರವರಿವರೆನ್ನದೆಲ್ಲರು ಮಾನಭಂಗಿತರಾಗಿ ನುಡಿದರು (ಬಸಪು. ೫೨-೦೯). [ಸಂ.]

**ಮಾನಭಾವಿತನ** (ನಾ). ಮನಸ್ಸಿನಲ್ಲಿ ಕಪಟವಿದ್ದರೂ ಹೊರಗೆ ಸಂಭಾವಿತನಾಗಿ ಸವಿಮಾತನ್ನಾಡುವ ಸ್ವಭಾವ : ಕಿಟ್ಟಿ ಅವಮಾನದ ಒಳಗೇ ಮಾನಭಾವಿತನವನ್ನು ತೋರಲು ಯತ್ನಿಸಿದನು (ಗಂತಹಾ. ೩೨).
[ಮಾನಭಾವಿ (ಪ ← ಮರಾ. ಮಾನಭಾವ, ಮಾನಭಾವೀಣ) + — ತನ]

**ಮಾನಮಠಯ** (ನಾ). [ಸಂಗೀತ]ಒಂದು ತಾಳದ ಹೆಸರು : ಆದಿಮಠಯ ಜಂಪಕಮಠಯ ಸರಮಠಯ ತೆಗೆದ ಮಾನಮಠಯ . . . ಸಪ್ತಮುದ್ರಿಕ ಜಯಾಳವೆಂಬಿವೇ ಮೊದಲಾದ ನೂಱೊಂದು ತಾಳಂಗಳು (ಶಿವಕೌ. ೦೯೨). [< ಸಂ. ಮಾನಮಠ್ಯ ?]

**ಮಾನಮರ್ದನ** (ನಾ). ೧. ತೇಜೋವಧೆ; ಅವಮಾನ ; ಮಾನಭಂಗ : ರಣಬಿನ್ನಾಣ ಮಸುಳಿದ ಮಾನಮರ್ದನದೂಱೆಯುದ ಸವ್ಯಥೆಯ ಭಟ ಸಂತೈಸಿದನು ತನುವ (ಕುಮಾಗ. ೭-೯೯). ೨. ತೇಜೋಭಂಗವನ್ನು ಮಾಡುವವನು ; ಅವಮಾನ ಮಾಡುವವನು : ಮಸ್ತುಕಕವಿಮುಷ್ಕನ್ನಸ್ತ್ರಂ ಅಧುಟಕವಿಮಾನಮರ್ದನಂ ಗರ್ವಿತಕವಿಗಿರಿವಜ್ರಬಂಡಂ (ಶಶಸಾ. ೨೩೦ ೩೦). [ಸಂ.]

**ಮಾನವ** (ಗು). ೧. ಮನುವಿಗೆ ಸಂಬಂಧಿಸಿದ ; ಮನುವಿನಿಂದ ಉಂಟಾದ. (ನಾ). ೨. ಮನುಷ್ಯ ; ಮರ್ತ್ಯ : "ಮನುಷ್ಯಃ . . . ಮಾನವಃ, ನರಃ, ಪುಮಾನ್, ಪಂಚಜನಃ, ನಾ, ಪುರುಷ, ಪೂರುಷಃ, ವಿಟ್- ಈ ೧೨ ಮಾನಸರ್" (ಶೇಷಯು. ೩೩-೦೩೬) ; ಮಾನವರ್ಗಂಗ ಸ್ವರವಾ ಮಾನಂ [ರುಚಿ] ಪ್ರಕೃತಿಭಾವಗತಿ . . . ಕ್ಷೇತ್ರದಶಾನುಗತಂ ದ್ವಾದಶಾಂಗಲಕ್ಷಣಗುಣಮಂ (ಲೋಕೋಪ. ೦೦-೨); ನಿನಗಾರ್ ಬೇರೆ ಮಾನವರೀ ಧಾತ್ರಿಯೊಳ್ (ಕೃಷ್ಣಕೃ. ೦-೯೦). [ಸಂ.]

**ಮಾನವಂತ** (ನಾ). ಗೌರವಯುಕ್ತ ವ್ಯಕ್ತಿ ; ಮರ್ಯಾದಸ್ಥ : ತುಂಬ ಮಾನವಂತ, ಸಜ್ಜನನಾದ ಕೈತಾನ ಈ ಮದುವೆಯನ್ನು ಮನಸ್ಸಿಗೆ ಹಚ್ಚಿಕೊಂಡದ್ದು ಅಚ್ಚರಿಯಲ್ಲ (ಅಪೋಲೀ. ೦೦) ; ಎದುರುಪಕ್ಷದವರು ಸಕಲ ಸಿದ್ಧತೆಗಳನ್ನೂ ಮಾಡಿಕೊಳ್ಳುತ್ತಿರುವಾಗ ಮಾನವಂತ, ಶೀಲವಂತ ಶಾಂತಪ್ಪನಾಯಕರು ಸುಮ್ಮನೆ ಕುಳಿತುಕೊಳ್ಳುವುದಕ್ಕಾದೀತೆ ! (ಲಸಜು. ೦೦೩). [ಸಂ. ಮಾನವತ್]

**ಮಾನವಂತೆ** (ನಾ). ಗೌರವವುಳ್ಳ ಹೆಂಗಸು ; ಮರ್ಯಾದಸ್ಥೆ : ಮಾನವಂತೆಯರಾದ ಮಾನಿನಿಯರ ಮಾನವನ್ನು ಮಾರಿಸುವುದು ಇದೂ ಒಂದು ಆರ್ಟ್ ಅಲ್ಲವಷ್ಟೆ ? (ಮ್ಯಾಪ್ರಂ. ೮೩). [ಮಾನವಂತ + — ಎ]

**ಮಾನವಜನ್ಮ** (ನಾ). ಮನುಷ್ಯನ ಹುಟ್ಟು.—ಜೀವಿತ : ಮಾನವಜನ್ಮದೊಳ್ ಜನಿಸಿ ನಿತ್ಯಮನಿಂದ್ಯಪರೋಪಕಾರಮಂ ದಾನಮುನರ್ಘಪಾಲನಮು ನಟ್ಟಿ ಮಿಗಲ್ ಮಿಗೆ ಮಾಡದಿರ್ಪವಂ ಮಾನವನಲ್ಲವಂ ತೊವಲ ಬೊಂಬೆ (ಬಕಸ. ೩-೩೦); ಮಾನವಜನ್ಮ ದೊಡ್ಡದು ಇದ ಹಾನಿ ಮಾಡಲುಬೇಡಿ ಹುಚ್ಚಪ್ಪಗಳಿರಾ (ಪುರಂದ. ೦-೦೯ ಪಲ್ಲ). [ಸಂ. ಮಾನವಜನ್ಮನ್]

**ಮಾನವತಾವಾದಿ** (ನಾ). ಮನುಷ್ಯತ್ವದಲ್ಲಿ ನಂಬಿಕೆಯುಳ್ಳವನು ; ಮಾನವಹಿತದಲ್ಲಿ ಆಸಕ್ತಿಯುಳ್ಳವನು : ಮಾನವತಾವಾದಿ ಕೂಡ ಒಂದು ದಶೆಯಲ್ಲಿ ವಿಶ್ವದ ಇಂದ್ರಿಯಾತೀತ (ಅಲೌಕಿಕ, ಅಪರೋಕ್ಷ) ದರ್ಶನವನ್ನು ಬಗೆಗೆ ತಳ್ಳಿ ದೂರ ಸರಿಯುವನು (ಪನ್ನಕಾ. ೦೨೬). [ಸಂ.ಮಾನವತಾವಾದಿನ್]

**ಮಾನವತಿ** (ನಾ). ೧. ಗೌರವಯುಕ್ತಳಾದ ಹೆಂಗಸು ; ಸಂಭಾವಿತೆ ; ಮರ್ಯಾದಸ್ಥೆ : ರಾಜಕೀರಂ ನುಡಿಯ ಕಲಿತುದು ಮಾನವತಿಯೊಳು ನುಡಿಗಳಂ ಕೇಳಿ (ಬಕಪ್ಪ. ೦೦-೯೦). ೨. ಸೊಕ್ಕಿನಿಂದ ಕೂಡಿದವಳು ; ಗರ್ವಿಷ್ಠೆ : (೬). [ಸಂ. ಮಾನವತೀ]

**ಮಾನವತೆ** (ನಾ). ಮನುಷ್ಯನಿಗೆ ಸಹಜವಾಗಿ ಇರಬೇಕಾದ ಧರ್ಮ ; ಮನುಷ್ಯತ್ವ : ಮಾನವೀಯತೆ : ಬ್ರಾಹ್ಮಣರೇನು ಶ್ರಮಣರೇನು, ಮಾನವತೆ ಎಲ್ಲಿಯೂ ವಿರಳ (ಬಾಬಾಕ. ೮೩) ; 'ಮಮ ಶತ್ರು ಹಿತಾರ್ಥಾಯ' ಎನ್ನುವವರಿಗಿಂತಲೂ ಹೆಚ್ಚಿನ ಮಾನವತೆಯುಂಟೆ ? (ಹೊಸಸ್ವ. ೯೦). [ಸಂ. ಮಾನವತಾ]

**ಮಾನವಧರ್ಮ** (ನಾ). ಮನುಷ್ಯತ್ವ ; ಮನುಷ್ಯಧರ್ಮ ; ಮಾನವೀಯತೆ : ನಿಜಕ್ಕೂ ಸತ್ಯ, ಪ್ರೇಮ . . . ದಯೆ, ಮಮತೆ ಇವೇ ಮಾನವಧರ್ಮದ ಮೂಲತತ್ತ್ವಗಳು (ಧರ್ಮಸಾ. ೩); ಮಾನವಧರ್ಮದ ಬಗ್ಗೆ ಅವಳದೇ ಒಂದು ಕಲ್ಪನೆಯಿತ್ತು (ಭುವಬು. ೦೯೬). [ಸಂ.]

**ಮಾನವಪುರಾಣ** (ನಾ). ಹದಿನೆಂಟು ಉಪಪುರಾಣಗಳಲ್ಲಿ ಒಂದು : ಸನತ್ಕುಮಾರಪುರಾಣ ನಾರಸಿಂಹಪುರಾಣ ನಂದಿಪುರಾಣ ಶಿವಧರ್ಮಪುರಾಣ ದೂರ್ವಾಸಪುರಾಣ ನಾರದೀಯಪುರಾಣ ಮಾನವಪುರಾಣ . . . ಭಾರ್ಗವಪುರಾಣವೆಂಬವೇ ಆಯಾಯ ನಾಮಧೇಯಮುಳ್ಳವರಿಂ ನಿರೂಪಿತಂಗಳಾದ ಹದಿನೆಂಟು ಉಪಪುರಾಣಂಗಳು (ಶಿವಕೌ. ೯). [ಸಂ.]

**ಮಾನವಮಿ** 'ಮಾನಾಮಿ' ನೋ.

**ಮಾನವಲೋಕ** (ನಾ). ಮನುಷ್ಯ ವಾಸಿಸುವ ಜಗತ್ತು ; ಭೂಲೋಕ : ಮಾನವಲೋಕದೊಳ್ ಪುರಮಿದರ್ಕೆಣೆ ಯಾವುದೆನಿಪ್ಪ ಕೀರ್ತಿಯಂ ತಾನೊಳಕೊಂಡು . . . ಚೆಲ್ವಿನುದ್ದಾನಿಯನಾಂತು ಕಣ್ಗೆ ಕರಮೊಪ್ಪುಗು ಮೂರ್ಜಿತರಾಜಧಾನಿಯುಜ್ಜೇನಿ (ಸುಕುಮಾ. ೯-೯೩); ಮಾನವಲೋಕದವರೆಲ್ಲರೂ ಮರದ ಲಿಂಗವ ಪೂಜಿಸುವರಯ್ಯಾ (ಸಕವ. II· ೩೬೯-೦ಅಣಿ) ; ಶಾಪಗ್ರಸ್ತಳಾಗಿ ಮಾನವಲೋಕಕ್ಕೆ ನಾನು ಬರಲಿಲ್ಲವಾಗಿ ನನ್ನ ಪ್ರಭಾವಗಳನ್ನು ನಾನೂ ಬಿಟ್ಟುಬಂದಿಲ್ಲ (ಕುಹಾಬ. ೦೩೩). [ಸಂ.]

**ಮಾನವಶಾಸ್ತ್ರ** (ನಾ). "ಮನುಷ್ಯನಿಗೆ ಸಂಬಂಧಪಟ್ಟ ವಿಷಯಗಳನ್ನು ಕುರಿತ ಶಾಸ್ತ್ರ ; ಶಾರೀರಿಕ ಮತ್ತು ಮಾನಸಿಕವಿಚಾರಗಳನ್ನು ಕುರಿತ ಮನುಷ್ಯಶಾಸ್ತ್ರ ; ಮನುಷ್ಯನನ್ನು ಪ್ರಾಣಿದೃಷ್ಟಿಯಿಂದ ವಿಚಾರ ಮಾಡುವ ಶಾಸ್ತ್ರ; ಮಾನವಶಾಸ್ತ್ರ" (Anthropology· ೩೦ಕಿಪ). [ಸಂ.]

**ಮಾನವಶಾಸ್ತ್ರಜ್ಞ** (ನಾ). ಮಾನವಶಾಸ್ತ್ರವನ್ನು ಅಭ್ಯಾಸಮಾಡಿದವನು ; ಮಾನವಶಾಸ್ತ್ರವನ್ನು ಬಲ್ಲವನು : ಮಾನವಶಾಸ್ತ್ರಜ್ಞರು (Anthropologists) ಎರಡು ಶಬ್ದಗಳಿಗೂ ಒಂದೇ ಅರ್ಥವನ್ನಾಗಲಿ, ವಿರೋಧವಾದ ಅರ್ಥವನ್ನಾಗಲಿ ಕಲ್ಪಿಸದೆ ಸಂಸ್ಕೃತಿಯೆಂಬ ವಿಶಾಲವಾದ ವರ್ಗದಲ್ಲಿ ನಾಗರಿಕತೆಯನ್ನು ಒಂದು ವಿಭಾಗವಾಗಿ ಪರಿಗಣಿಸುತ್ತಾರೆ (ಶಿಲ್ಪಶಾ. ೦೭). [ಸಂ.]

**ಮಾನವಾತೀತ** (ಗು). ೧. ಮನುಷ್ಯನಿಗೆ ಮೀರಿದ, — ಅತೀತವಾದ. (ನಾ). ೨. ಮನುಷ್ಯನಿಗೆ ಮೀರಿದುದು, — ಅತೀತವಾದುದು : ಏನಾದೊಡೇನು . . . ಮಾನವೇನಭ್ಯುದಯವೇನು ? ಮಾನವಾತೀತವೊಂದೆಲ್ಲವನು ನುಂಗುವುದು ಜಾನಿಸದನಾವಗಂ (ಮಂಕುತಿ. ೪೩೩). [ಸಂ.]

**ಮಾನವಾಹಿತ** (ನಾ). ೧. ಮರ್ಯಾದೆಯನ್ನು ಹೊಂದಿದವನು ; ಮರ್ಯಾದಸ್ಥ. ೨. ಮನುಷ್ಯರಿಗೆ ಹಿತನಲ್ಲದವನು. ೧, ೨ : ಆ ನೃಪಂ ಸಪ್ತಾಂಗಸಂಗಿಯಾಗಿಯುಂ ಸಪ್ತಾಂಗಸಂಗಿಯಲ್ತು . . . ಮಾನವಾಹಿತನಾಗಿಯುಂ ಮಾನವಾಹಿತನಲ್ತು (ಶಿಶ್ನಶ. ೯-೩೯ ವ).

[ ಸಂ. (ಮಾನ + ಅಹಿತ ; ಮಾನವ + ಅಹಿತ) ]

**ಮಾನವಿ** (ನಾ). ಮಾನವಸ್ತ್ರೀ : ಅಸುರ ಮಾನವಿಯರಿಗೆ ಮೇಳವೆ ಪತಿಯು ಬಿಡು ಸತಿಯು (ಗೌತಿಶಾ. ೩೮-೦೦). [ಸಂ. ಮಾನವೀ]

**ಮಾನವಿಕ** (ಗು). ೧. ಮಾನವನ ಬಾಳಿಗೆ ಸಂಬಂಧಿಸಿದ. (ನಾ). ೨. ಮಾನವನ ಬಾಳಿಗೆ ಸಂಬಂಧಿಸಿದ ಸಮಾಜಶಾಸ್ತ್ರ. ಅರ್ಥಶಾಸ್ತ್ರ ಮುಂತಾದ ವ್ಯಾಸಂಗವಿಷಯ : ಈಚೆಗೆ ವಿಶ್ವವಿದ್ಯಾನಿಲಯಗಳಲ್ಲಿ ಮಾನವಿಕಗಳ ಅಧ್ಯಯನಕ್ಕೆ ಹೆಚ್ಚು ಪ್ರಾಧಾನ್ಯತೆ ಸಿಕ್ಕಿದೆ (ರೂಢಿ). [ಸಂ.]

**ಮಾನವೀಯ** (ಗು). ೧. ಮನುಷ್ಯನಿಗೆ ಸಂಬಂಧಿಸಿದ. ೨. ಮನುಷ್ಯತ್ವದಿಂದ ಕೂಡಿದ ; ಅಂತಃಕರಣಪೂರ್ವಕವಾದ : ಬೋಧನಕ್ರಮದಲ್ಲಿ ಮಾನವೀಯಬಾಂಧವ್ಯ (ಶಿಕ್ಷಣ. ೨೯೯). [ಸಂ.]

**ಮಾನವೀಯತೆ** (ನಾ). = ಮಾನವತೆ : ಇದೆಲ್ಲ ನಿಯಮವಿರುದ್ಧ. ಆದರೂ ಮಾನವೀಯತೆಯಿದೆಯಲ್ಲ (ಶಿವರು, ೩೦೯) ; ಯಾರು ಭಗವಂತನನ್ನು ಎಲ್ಲರಲ್ಲಿಯೂ, ಎಲ್ಲೆಲ್ಲಿಯೂ ಕಾಣಬಲ್ಲರೋ ಅವರೇ ನಿಜವಾದ ಮಾನವೀಯತೆಯಿಂದ ಕೂಡಿದವರು (ರಮಣಗಾ. ೩೨).

[ಸಂ. ಮಾನವೀಯತಾ]

**ಮಾನವ್ಯ** (ನಾ). ೧. ಮನುಷ್ಯವರ್ಗ ; ಮಾನವಸಮೂಹ : "ಮಾನವ್ಯಂ ಮಾನವತತಿ" (ಶಬ್ದಮಣಿ. ೦೦೩-೩೦). ೨. ಮನುಷ್ಯನಿಗೆ ಇರಬೇಕಾದ ಅಂತಃಕರಣ ; ಮನುಷ್ಯಧರ್ಮ ; ಮಾನವತೆ : ಮಾನವ್ಯವನ್ನು ಮಡಿಮಾಡುತ್ತಿರುವ ಮಡಿವಾಳ ಮಾಚಿದೇವ (ಪೋಲಿಸಾ. ೨೯ ಕ್ರಮ ಪಠ) ; ಇದರಲ್ಲಿ ವಿಚಾರಿಯನ್ನು ಜಿಜ್ಞಾಸೆಗೆ ಗುರಿಮಾಡುವ ಸಮಸ್ಯೆಯೆಂದರೆ ಪಿತೃವಾತ್ಸಲ್ಯದಿಂದ ಮಾನವ್ಯವನ್ನು ಪೋಷಿಸಬೇಕಾದ ವಿಶ್ವಪ್ರಭುವಿಗೆ ಈ ಕಠೋರವರ್ತನೆ ಉಚಿತವೇ ಎನ್ನುವುದು (ಅಪ್ರಕ್ರ. XXXI, ೩೬೪೯).

[< ಮಾನವ]

**ಮಾನವ್ಯಗೋತ್ರ** (ನಾ). ರಾಜಮನೆತನಗಳು ಒಪ್ಪಿ ಅಂಗೀಕರಿಸಿದ್ದ ಮೂಲದಲ್ಲಿ ಬ್ರಾಹ್ಮಣಗೋತ್ರಕ್ಕೆ ಸಂಬಂಧ ಹೊಂದದೆ ಇದ್ದ ಒಂದು ಗೋತ್ರದ ಹೆಸರು. [ಮಾನವ್ಯ + ಗೋತ್ರ$_2$]

**ಮಾನಶಾಲಿ** (ನಾ). = ಮಾನವಂತ : ತಾನು ಮಾನಶಾಲಿಯಾದುದರಿಂದ ಆಧಿಪತ್ಯವನ್ನಾದರು ತ್ಯಜಿಸಾನು (ಕಗದ್ಯ. ೩). [ಸಂ. ಮಾನಶಾಲಿನ್]

**ಮಾನಸ$_1$** 'ಮಾನುಸ' ನೋ.

**ಮಾನಸ$_2$** (ಗು). ೧. ಅಂತರಂಗದ ; ಮನಸ್ಸಿಗೆ ಸಂಬಂಧಿಸಿದ. (ನಾ). ೨. ಅಂತರಂಗ ; ಮನಸ್ಸು ; ಚಿತ್ತ : "ಚೇತಃ, ಚಿತ್ತಂ, ಮನಃ . . . ಮಾನಸಂ — ಈ ೬ ಮನಂ" (ಹಲಾಯು. ೧೪-೩೮೦) ; ಮಾನಸದೊಳ್ ಹಂಸೆಯವೊಲ್ ಮಾನಸವಾಗ್ವನಿತೆ ತನ್ನ ಮಾನಸದೊಳಮಮಾನಸನೆಂದಗಲದೆ ನಿಲೆ ಮಾನಸನಾದಂ ಸರಸ್ವತೀಕಳಹಂಸಂ (ಕುಸುಮಾ. ೨-೩೬); ಮಾನಸದೋಳದು ಬೇಕೆಂದವೇಕ್ಷಿಸನು (ಭರತೇ. ೧೭-೩೨); ಅಂತರಂಗದೊಳೇನಿಹುದು ಪೇಳೆನ್ನ ಮಾನಸಮೆ (ವಿಜಯಗೀ. ೩-೦೦). ೩. ಮನಸ್ಸಿಗೆ ಸಂಬಂಧಿಸಿದುದು ; ಅಂತರಂಗಕ್ಕೆ ಸೇರಿದುದು : ಮಾನಸಮೆನಿಸಿದ ಶುಕ್ಲಧ್ಯಾನಂ ಪ್ರತ್ಯಕ್ಷಮಾಗಿ ತಾನಲ್ಲಿ ಸುಖಾಸೀನತೆ ಪಡೆವವೊಲಿರ್ದಂ ಮೌನಸುಧಾಸೂತಿ ಮಣಿಶಿಲಾಪಟ್ಟಕದೊಳ್ (ಅಜಿಂಪು. ೩-೧೭) ; ತುಟಿಯನ್ನು ಮತ್ತು ನಾಲಿಗೆಯನ್ನು ಅಲ್ಲಾಡಿಸದೆ ವಾಕ್ಯಾರ್ಥವನ್ನು ಅಂತರಂಗದಲ್ಲಿ ಭಾವಿಸುವುದೇ ಮಾನಸವೆನಿಸುವುದು (ಅಷ್ಟಾವಿ. ೦೦೬). ೪. ಹಿಮಾಲಯಪರ್ವತದ ಒಂದು ಸರೋವರ : ಮಾನಸದಿಂ ಸಿತಾಂಬುಜಶತಂ ತಳರ್ವಂತವೊಲೆಯ್ದಿ . . . ಬಂದೆಚಿಗಿತ್ತು ಕೊಳಂಗಳೊಳ್ ತಟೀಫೇನವಿತಾನವಾತ್ಮರುಚಿಯೊಳ್ ತಡಮಾಗೆ ಮರಾಳಮಂಡಳಂ (ಜಗಂ. ೯-೬೪) ; ಮಾನಸದ ಹೊಂದಾವರೆಯ ಸೆಳೆದು ಭಂಗಿಸುತದನು ಪೊರಮಟ್ಟು ಪರಿಮಳವನೆಲ್ಲ ಪೊತ್ತು ದಾನರಾಜಿಯನಂತೆ ಸಂತತವು ಮೆರೆಯುತಿಹ ಬಾಹುದಂಡಗಳವನ ಗಜಪತಿಗಳು (ರ್ಗಾಮ್ಯಕೋ. ೦೯). ೫. [ತತ್ತ್ವಶಾ] ಚಾಕ್ಷುಷ, ಶ್ರಾವಣ, ಜಿಹ್ವಾ, ಘ್ರಾಣ, ಸ್ಪರ್ಶನ ಮತ್ತು ಮಾನಸಗಳೆಂಬ ಆರುವಿಧವಾದ ಪ್ರತ್ಯಕ್ಷಜ್ಞಾನಗಳಲ್ಲಿ ಒಂದು ; ಮನಸ್ಸಿನ ವಿಚಾರದಿಂದ ಉಂಟಾಗುವ ತಿಳಿವು : "ಪ್ರತ್ಯಕ್ಷಜ್ಞಾನ — ೬ ವಿಧ : ಘ್ರಾಣಜ, ರಾಸನ, ಚಾಕ್ಷುಷ, ಸ್ಪಾರ್ಶನ, ಶ್ರೌತ್ರ, ಮಾನಸ (ನ್ಯಾಯ.ವ) ೧೮೭" (ಶ್ರೀತತ್ತ್ವ. ೨೭೬). 'ಮಾನಸಜ್ಞಾನ', 'ಮಾನಸಪ್ರತ್ಯಕ್ಷ' ಪರಾ. ೬. [ಜೈನ](ಶಾರೀರ, ಮಾನಸ, ಕ್ಷೇತ್ರಜ, ಪರಸ್ಪರೋದೀರಿತ, ದನುಜೋದೀರಿತಗಳೆಂಬ) ಐದು ವಿಧವಾದ ದುಃಖಗಳಲ್ಲಿ ಒಂದು ; "ಮನಸ್ಸಿಗೆ ಹತ್ತುವಂತಹ ಮಾತುಗಳಿಂದ ಮತ್ತು ವಿಚಾರಗಳಿಂದ ಉಂಟಾಗುವ ದುಃಖ" (ಕೈಪಕೋ. ೨೦೩) : ಶಾರೀರ ಮಾನಸ ಕ್ಷೇತ್ರಜ ಪರಸ್ಪರೋದೀರಿತ ದನುಜೋದೀರಿತಂಗಳೆಂಬ ಯ್ದುಂತೆಱದ ದುಃಖಂಗಳೊಳರ್ದು ನಿಮಿಷಮಾತ್ರಮುಪ್ಪೊಡಮುಸಿರ್ವೊತ್ತಂ ಪಡೆಯದೆ (ಆದಿಪು. ೩-೬೬ ವ) ; ಶಾರೀರಂ ಮಾನಸಂ ಕ್ಷೇತ್ರಜಂ ಪರಸ್ಪರೋದೀರಿತಂ ಸಂಕ್ಲಿಷ್ಟಾಸುರೋದೀರಿತಗಳೆಂಬ ಪಂಚಪ್ರಕಾರದುಃಖಂಗಳನನೇಕ ಪ್ರಕಾರದಿನನುಭವಿಸುತ್ತಂ (ಸುಕುಮಾ. ೦೦-೯೭ ವ). [ಸಂ.]

**ಮಾನಸಂಜ್ವಲನ** (ನಾ). [ಜೈನ] ಚಾರಿತ್ರ್ಯದ ಪೂರ್ಣತೆಗೆ ತಡೆಯನ್ನುಂಟುಮಾಡುವ ಕ್ರೋಧ, ಮಾನ, ಮಾಯಾ, ಲೋಭಗಳೆಂಬ ನಾಲ್ಕು ವಿಧವಾದ ಕಷಾಯಗಳಲ್ಲಿ ಒಂದು : ಕ್ರೋಧಸಂಜ್ವಲನಂ ಮಾನಸಂಜ್ವಲನಂ ಮಾಯಾಸಂಜ್ವಲನಂ ಲೋಭಸಂಜ್ವಲನಂ (ಗೊಮ್ಮಟಸಾ. ೩-೯). [ಸಂ.]

**ಮಾನಸಗಬ್ಬ** (ನಾ). ಮನುಷ್ಯನಿಂದ ರಚಿತವಾದ ಕಾವ್ಯ : ಕಕಾರ ತೃತೀಯೆಗೆ ... ಮಾನುಷಕಾವ್ಯ — ಮಾನಸಗಬ್ಬ (ಶಮದ. ೨೯೩ ಪ್ರಯೋ).

[ಮಾನಸ$_1$ (< ಮಾನುಸ) + ಕಬ್ಬ$_1$]

**ಮಾನಸಗಮನ** (ನಾ). ಮನಸ್ಸಿನ ವೇಗ ; ಮನೋವೇಗ : ವರಗೃಹಾಕ್ಷಿಯಲಿ ಪೊರಮಟ್ಟು ಮಾರುತಮಾರ್ಗಮಂ ಪರ್ದು ಮಾನಸಗಮನದಿ ಬರುತ (ಪಪಕೋ. ೦೦-೩೬). [ಸಂ.]

**ಮಾನಸಗೋಲ** (ನಾ). ಮಲ್ಲಯುದ್ಧದ ಒಂದು ವರಸೆ : ವಿಕ್ರಮದು ವಜ್ರಪಾತಮುಮನೆಂಬಿನಮುಬ್ಬಸಮಾದ ತೋರಹತ್ತಕ್ಕೆ ತಗುಳ್ದು ಪತ್ತಿಸುವ ಮಾನಸಗೋಲ[ಪಾಠಾಂ. ೧]ಮೆನಿಪ್ಪ ಡೊಕ್ಕರಕ್ಕಿಕ್ಕಿದ ವಜ್ರಲೇಪಮೆನೆ . . . ಬೆರ್ಚಿದನವಂ ಕುವರಂಗೆನಸುಂ ನಿಯುದ್ಧದೊಳ್ (ಸಂಪ್ರತಿ. ೩-೮೦). [ ? ]

**ಮಾನಸಜ** (ನಾ). [ತತ್ತ್ವಶಾ] ಇಂದ್ರಿಯಜ, ಸಮನಂತರಪ್ರತ್ಯಯಜ, ಮಾನಸಜ, ಭಾವನಾಬಲಜಗಳೆಂಬ ನಾಲ್ಕು ಪ್ರಕಾರದ ಪ್ರತ್ಯಕ್ಷ

ಗಳಲ್ಲಿ ಒಂದು ; ಮನಸ್ಸಿನ ಯೋಚನೆಯಿಂದುಂಟಾಗುವ ಜ್ಞಾನ : ಪ್ರತ್ಯಕ್ಷವು ನಾಲ್ಕುಪ್ರಕಾರ–ಇಂದ್ರಿಯಜ, ಸಮನಂತರಪ್ರತ್ಯಯಜ, ಮಾನಸಜ, ಭಾವನಾಬಲಜ ಎಂದು . . . ಮನಸ್ಸಿನ ಯೋಚನೆಯಿಂದ ಬರುವ ಜ್ಞಾನವು ಮಾನಸಜವು (ಹಿಂದಶಾ. ೨೮). 'ಪ್ರತ್ಯಕ್ಷ' ಪರಾ. [ಸಂ.]

**ಮಾನಸಜ್ಞಾನ** (ನಾ). = ಮಾನಸ$_2$ ೫ : ಬ್ರಾಹ್ಮಣತ್ವಾದಿ ವಿಜ್ಞಾನವು ಅನಾದಿಕಾಲದ ವ್ಯವಹಾರಮೂಲಕವಾಗಿ ಬರುವ ಮಾನಸಜ್ಞಾನವೇ ವಿನಾ ಇಂದ್ರಿಯಗಳಿಂದ ಬರುವ ಪ್ರತ್ಯಕ್ಷವಲ್ಲ (ಹಿಂದಶಾ. ೦೫೫). [ಸಂ.]

**ಮಾನಸದಟ್ಟಿಸು** (ಕ್ರಿ). ಮನಸ್ಸಿಗೆ ತಾಕುವಂತೆ ಮಾಡು; ಮನದಟ್ಟು ಮಾಡು : ತಾನನುಭವಿಸಬಹುದು ನುಡಿದನ್ಯರ್ಗೆ ಮಾನಸದಟ್ಟಿಸಲರಿದು (ಶಶಕ. ೬೦–೦೮). [ಮಾನಸ$_2$ + ತಟ್ಟಿಸು]

**ಮಾನಸದೇರ, ಮಾನಿಸದೇರ** (ನಾ). ಮನುಷ್ಯನನ್ನು ವಾಹನವಾಗಿ ಉಳ್ಳವನು : ಕುಬೇರ : "ಮಾನಸದೇರನುಂ ಪಿಚ್ಚವುಣಿಗನೆಂದೊಡೆ ನಿರುತಿವೆಸರಕ್ಕು" (ಕಬ್ಬಿಕ. ೦೪). ಮಾನಿಸದೇರ : "ಮಾನಿಸದೇರನೆಂದು ನೈಋತ್ಯಂ" (ಕಶಾ. ೪೯–೩೬).

[ಮಾನಸ$_1$ (< ಮಾನುಸ) + ತೇರ್$_2$ + — ಅ$_7$ ]

**ಮಾನಸಪುತ್ರ** (ನಾ). ಮನಸ್ಸಿನ ಸಂಕಲ್ಪದಿಂದ ಹುಟ್ಟಿದ ಮಗ : ಸನಕಃ, ಸನಾತನಃ, ಈ ೨ ಬ್ರಹ್ಮನ ಮಾನಸಪುತ್ರರ್ (ಕಾಶಕ. ೩೮); ದೇವರ್ಷಿಯಾದ ನಾರದ, ಪರಮಾತ್ಮನ ಮಾನಸಪುತ್ರ (ಹೇವಾಕಂ. ೭). [ಸಂ.]

**ಮಾನಸಪೂಜೆ** (ನಾ). ದೇವತಾವಿಗ್ರಹ, ಪೂಜಾಪರಿಕರ ಮುಂತಾದ ಬಹಿರಂಗದ ಉಪಕರಣಗಳ ಸಹಾಯವೇ ಬೇಕಾಗದೆ ಅಂತರಂಗದಲ್ಲಿಯೇ ಮಾಡುವ ಪೂಜೆ ; ಮನಸ್ಸಿನಿಂದ ಮಾಡುವ ಪೂಜೆ : ಮಾನಸಪೂಜೆಯನ್ನು ನೀ ಮಾಡೆ ದಾನವಾಂತಕ ರಂಗನು ಮೆಚ್ಚಿ ತಾನೆ ಬಂದ ಗೋಪಾಲಕೃಷ್ಣ (ಪುರಂದ. ದಾ. ೦–೬–೯): ತಮ್ಮ ಕುಲದೇವತೆಯಾದ ಮಹಾಲಕ್ಷ್ಮಿಯನ್ನು ಪ್ರತೀಕವಾಗಿಸಿ ಆದಿಶಕ್ತಿಯ ಮಾನಸಪೂಜೆಯನ್ನು ಪ್ರಾರಂಭಿಸಿದರು (ಸಮಾಜೀ. ೫೦೫). [ಸಂ. ಮಾನಸಪೂಜಾ]

**ಮಾನಸಪ್ರತ್ಯಕ್ಷ** (ನಾ). = ಮಾನಸ$_2$ ೫ : ಮನಸ್ಸಿನೊಳ್ ಭಾವಿಸೆ, ತನಗೀಗಳ್ ಸುಖಮಾಗಿರ್ಕುಂ ಈಗಳ್ ದುಃಖಮಾಗಿರ್ಕುಂ ಎಂಬಿವು ಮೊದಲಾಗಿ ಪುಟ್ಟುವ ತಿಳಿವು ಮಾನಸಪ್ರತ್ಯಕ್ಷಮೆನಿಪುದು (ಶಕಂ. ೩ ವ) : ಆತ್ಮನೂ ಅವನ ಸುಖದುಃಖಾದಿಗಳೂ ಜ್ಞಾನರೂಪವಾಗಿ ಸ್ವಯಂಪ್ರಕಾಶವಾಗಿರುವುದರಿಂದ ಮಾನಸಪ್ರತ್ಯಕ್ಷವೆಂಬುದಿಲ್ಲ (ಹಿಂದಶಾ. ೨೪೦). [ಸಂ.]

**ಮಾನಸವಾಟು, ಮಾನಿಸವಾಟು** (ನಾ). ಮನುಷ್ಯನ ಬದುಕು.— ಜೀವನ : ಮಾನಸವಾಟೆಂಬುದು ಪನಿ ಪುಲ್ಲ ಮುಗಿಲ ಸಂಜೆಯೊಳೋರಂತಪ್ಪುದಱಿಂದಾರ್ ಬಾರಿಸಿದೊಡಂ ನಿಲ್ವುದಲ್ಲೆಂದು ಸ್ವಯಂಪ್ರಭೆಯೆಂಬೊಳ್ . . . ಮನೆಯಿಂದಂ ಪೊಱಮಟ್ಟು (ವಡ್ಡಾರಾ. ೪೭–೬); ಇನ್ನೀತನಿಲ್ಲದೆ ಪೇಟು ಮಾನಸವಾಟ ಮೋಹಮೆನಗಿನ್ನೇವಾರ್ತೆ (ಆದಿಪು. ೩–೫೨) : ಘನರುಚಿಯೆಂದೊಡಂ . . . ಜಲಧರೋಪಲವರ್ತುಲಮೆಂದೊಡಂ ಜಡಾತ್ಮನುಮಱಿದಿಕ್ಕಿ ಮಾನಸರ ಮಾನಸವಾಟ್ಗಭಿಧಾನಮನ್ನರೇ (ಅಜಿತಪು. ೯–೨೦). ಮಾನಿಸವಾಟು: ತಾನಱಿದು ತೋ[ಱಿ]ದು ನೆಟ್ಟನೆ ಮಾ[ನಿ]ಸವಾಟಾವುದೆಂದು ಸ[ಂ]ನ್ಯಾಸನದೊ[ಳ್] (ಎಇ. X, ೦೫೨–೪೯; 905); ಮಾನಿಸವಾಟ ಮೋಹಕ್ಕೆ ಸಂಸಾರದೊಳಾದ ಭೋಗಕ್ಕಳಿಪಿ ಪಿರಿದಪ್ಪ ಸುಖಮಂ ಮಾಱಿ ತಪಮಂ ಕಿಡಿಸಿ ನರಕದೊಳಾದ ಮಹಾದುಃಖಕ್ಕೊಳಗಾಗಬೇಡ (ಧರ್ಮಾಮೃ. ೭–೦೫೦).

[ಮಾನಸ$_1$ (<ಮಾನುಸ) + ವಾಟು$_3$]

**ಮಾನಸವೇಗ** (ನಾ). ೧. ಮನಸ್ಸಿನ ವೇಗ ; ಮನೋವೇಗ. ೨. ಮನಸ್ಸಿನ ವೇಗಕ್ಕೆ ಸಮವಾಗಿ ಚಲಿಸುವ ವ್ಯಕ್ತಿ : ಉಸುರೆ ದಿವಿಜೇಶ್ವರು ಪರಿವೆಸದಮರರ್ ದಾದಿತಾಱಿವೆಸದಮರರದೇಂ ಬೆಸಗಲಿಗಳ್ ಬರ್ಪರೊ ಮಾನಸವೇಗರ್ ಪವನವೇಗರಿರುಳುಂ ಪಗಲುಂ (ಅಜಿಪು. ೫–೬೬).

[ಸಂ.]

**ಮಾನಸಪೊತ್ತಗೆ** (ನಾ). ಮನುಷ್ಯನಿಂದ ರಚಿತವಾದ ಪುಸ್ತಕ : ಮಾನುಷಪುಸ್ತಕ – ಮಾನಸಪೊತ್ತಗೆ (ಕಶದ. ೨೯೨ ಪ್ರಯೋ).

[ಮಾನಸ$_1$ (< ಮಾನುಸ) + ಪೊತ್ತಗೆ]

**ಮಾನಸಶಾಸ್ತ್ರ** (ನಾ). ಚಿತ್ತ ಅಥವಾ ಅಂತರಂಗದ ವ್ಯಾಪಾರಗಳಿಗೆ ಸಂಬಂಧಿಸಿದ ಶಾಸ್ತ್ರ ; ಮನಶ್ಶಾಸ್ತ್ರ : ವೇದಾಂತ . . . ಮಾನಸಶಾಸ್ತ್ರ, – ಇವೇ ಮುಂತಾದ ಶಾಸ್ತ್ರಗಳ ಮಾರ್ಗವಾಗಿಯೂ ಕಾವ್ಯವನ್ನು ಪರಿಶೀಲಿಸುವವರು ಉಂಟು (ಪಶ್ಚಕಾ. ೬೫). [ಸಂ.]

**ಮಾನಸಶಾಸ್ತ್ರಜ್ಞ** (ನಾ). ಮನಶ್ಶಾಸ್ತ್ರವನ್ನು ಅಭ್ಯಾಸ ಮಾಡಿದವನು ; ಮನೋವಿಜ್ಞಾನಿ : ಮಾನಸಶಾಸ್ತ್ರಜ್ಞರ ಅಭಿಪ್ರಾಯದಲ್ಲಿ ಮೇಲೆ ಹೇಳಿದ ಮಾತುಗಳೆಲ್ಲ ಸರಿಯಾಗಿವೆ (ಪಶ್ಚಕಾ. ೮೩). [ಸಂ.]

**ಮಾನಸಸಿದ್ಧಿ** (ನಾ). ಮಾನಸಿಕವ್ಯಾಪಾರಗಳ ಮೇಲೆ ಹತೋಟಿಯನ್ನು ತರಲು ಶಕ್ಯವಾಗುವಂತಹ ಸಿದ್ಧಿ : ಯಥಾಕಾಮೋಪಲಬ್ಧಿ ಯಥಾಕಾಮವಿನಿರ್ಗಮನ ಸರ್ವತಿರಸ್ಕರಣ ಸಕಲಗುಹ್ಯಾರ್ಥದರ್ಶನ ಕರ್ಮಾನುಗುಣನಿರ್ಮಾಣವಶಿತ್ವ ಪ್ರಿಯದರ್ಶನ ಸಂಸಾರದರ್ಶನವೆಂಬಿವೆಂಟು ಮಾನಸಸಿದ್ಧಿಗಳು (ವಿವೇಕ. ೨೨೫). [ಸಂ.]

**ಮಾನಸಸೃಷ್ಟಿ** (ನಾ). ಮನಸ್ಸಿನಿಂದ ಮಾಡಿದ ಸೃಷ್ಟಿ ; ಮನಸ್ಸಿನ ಸಂಕಲ್ಪದಿಂದ ಉಂಟಾದುದು : ವತ್ಸ ನಾರದನೆ ಇದೆಲ್ಲಿಂದ ಬಂತು ? . . . ಇದೇನು ಮಾನಸಸೃಷ್ಟಿಯೋ ? (ಶಾಕುಂತ. ೫೦–೬). [ಸಂ.]

**ಮಾನಸಸ್ನಾನ** (ನಾ). ದಿವ್ಯ, ವಾರುಣ, ವಾಯುವ್ಯ, ಮಾನಸ ಮತ್ತು ಆಗ್ನೇಯಗಳೆಂಬ ಐದು ವಿಧವಾದ ಸ್ನಾನಗಳಲ್ಲಿ ಒಂದು ; ಮನಸ್ಸಿನ ಶುದ್ಧತೆ, ಪರಿಶುದ್ಧಿ : ದಿವ್ಯಸ್ನಾನ ವಾರುಣಸ್ನಾನ ವಾಯುವ್ಯಸ್ನಾನ ಮಾನಸಸ್ನಾನ ಆಗ್ನೇಯಸ್ನಾನವೆಂಬ ಪಂಚವಿಧಸ್ನಾನಂಗಳೊಳಗೆ ಆಗ್ನೇಯವೆಂಬ ಭಸ್ಮಸ್ನಾನವೇ . . . ಗುಣಾಧಿಕವಪ್ಪುದು (ವಿವೇಕ. ೦೨೭). [ಸಂ.]

**ಮಾನಸಾತ್ಮಜ** (ನಾ). = ಮಾನಸಪುತ್ರ : ಮಾನಸಾತ್ಮಜರ ನೇಮಿಸಿದನ್ನೈಕೇಳ್ವುದಾ ಸನಕನಾ ಸನಂದನನಾ ಸನತ್ಕುಮಾರಂ ಪ್ರೇಮದ ಸನತ್ಸುಜಾತಂ ಸನಾತನರೆಂಬ ನಾಮದ್ವೈವರನು (ಜೈಕೃ. ೨–೦–೦೪). [ಸಂ.]

**ಮಾನಸಾಹಾರ** (ನಾ). [ಜೈನ] ನೋಕರ್ಮಾಹಾರ, ಕರ್ಮಾಹಾರ, ಲೇಪ್ಯಾಹಾರ, ಓಜಾಹಾರ, ಕಬಳಾಹಾರ ಮತ್ತು ಮಾನಸಾಹಾರವೆಂಬ ಆರುಬಗೆಯ ಆಹಾರಗಳಲ್ಲೊಂದು; (ದೇವತೆಗಳು) ಮಾನಸಿಕವಾಗಿ ಪಡೆಯುವ ಆಹಾರ : ದೇವರ್ಕಳ್ಗೆ ಮಾನಸಾಹಾರಮಕ್ಕುಂ (ಶ್ರಾವಕಾ. ೬೨–೭) ; ನೋಕರ್ಮಾಹಾರಮುಂ ಕರ್ಮಾಹಾರಮುಂ ಕಬಳಾಹಾರಮುಂ ಲೇಪ್ಯಾಹಾರಮುಂ ಓಜಾಹಾರಮುಂ ಮಾನಸಾಹಾರಮುಮೆಂದಕ್ಕುಂ . . . ದೇವನಿಕಾಯದೊಳ್ಮಾ[ನಾಕಾಂ. ಳ್]ನಸಾಹಾರಮಕ್ಕುಂ (ಪಾಕೆ. ೫೦೩). [ಸಂ.]

**ಮಾನಸಿ** (ನಾ). ಮನುಷ್ಯಸ್ತ್ರೀ : ಮಾನವ ಹೆಂಗಸು: ಮಾನಸಿಯರ್ಗೀ ಪರಿ ಚೆಲ್ವಿನತುಂಟೆ ಸಗ್ಗದಾಕೆಯೆ ದಿಟಂ (ಕಬ್ಬಿಕಾ. ೦೦೪) ; ಶ್ರವಣಕುಲವಂ ನಿಬ್ಬರದಿ ತಾಗುವ ಹೊಯಿಲುಗಳು ಮಾದವಾ ವೈಜವೆ ವಿನಿರ್ಮಳಭಕ್ತಿ ಮಾನಸಿ[ನಾಕಾಂ. ಸೆ]ಯಾದ ಕಾರಣವು (ಬಸಪು. ೫೨–೨೦).

[ಮಾನಸ$_1$ (< ಮನುಸ) + – ಇ$_2$]

**ಮಾನಸಿಕ** (ಗು). ೧. ಮನಸ್ಸಿಗೆ ಸಂಬಂಧಿಸಿದ ; ಮನಸ್ಸಿನಲ್ಲಿ ಉಂಟಾದ : ಭ್ರಾಂತಿಯು ಹಾವು ಎಂಬುದು ಅಖಂಡವಾದ ಒಂದು ಮಾನಸಿಕ ಗ್ರಹಿಕೆ (ತತ್ವಶಾ. ೩೦೪) : ಮನೆಗೆ ಬೇಕಾದ ಸಾಮಾನುಗಳನ್ನು ಕೊಂಡುಕೊಂಡು ಅನುಭವಿಸಿ ಪಡೆಯುವ ತೃಪ್ತಿ, ಸಂತೋಷ, ಸುಖಕ್ಕೆ

ಮಾನಸಿಕ ಆದಾಯ (psychic– income) ಎಂದು ಕರೆಯಲಾಗುತ್ತದೆ (ಗೃಹಹ. ೦೯೪). (ನಾ). ೨. [ತತ್ತ್ವಶಾ] ಕರ್ಮಯೋಗದ ಮೂರು ಪ್ರಕಾರಗಳಲ್ಲಿ ಒಂದು ; ಮನಸ್ಸಿನಿಂದ ಮಾಡುವ 'ಕರ್ಮ'; ಮಾನಸಿಕ ಕ್ರಿಯೆ : ಇವುಗಳು ಶಾರೀರ, ವಾಚಿಕ, ಮಾನಸಿಕವೆಂದು ಮೂರು ಪ್ರಕಾರ (ಹಿಂದಶಾ. ೯೯). [ಸಂ.]

**ಮಾನಸಿಕದೂರ** (ನಾ). [ಕಾವ್ಯಮೀ] ಸೌಂದರ್ಯಾನುಭವದಲ್ಲಿ ಕಲಾವಸ್ತು, ಕಲಾವಿದ, ಪ್ರೇಕ್ಷಕಾದಿಗಳಿಗೆ ಇರಬೇಕಾದ ಒಂದು ವಿಶಿಷ್ಟವಾದ ಸಂಬಂಧಾಂತರ: ಯಾವ ಒಂದು ನೆಲೆಯಲ್ಲಿ ಕಲಾಕೃತಿಯಿಂದಾಗಲಿ, ಲೋಕವಸ್ತುವಿನಿಂದಾಗಲಿ ನಾವು ಸೌಂದರ್ಯಾನುಭವವನ್ನು ಪಡೆಯಲು ಸಾಧ್ಯವೋ ಅಂತಹ ಒಂದು ನಿಲುವಿನಲ್ಲಿ ನಮ್ಮನ್ನು ಹಾಗೂ ವಸ್ತುವನ್ನು ನಿಲ್ಲಿಸಿಕೊಳ್ಳುವ ಈ ಕೌಶಲವೇ ಮಾನಸಿಕದೂರ (ಕಾಂತಪ. ೬೬). [ಸಂ.]

**ಮಾನಸಿಕರೋಗ** (ನಾ). ಮನಸ್ಸಿಗೆ ಸಂಬಂಧಿಸಿದ ಕಾಯಿಲೆ; ಮನೋರೋಗ : ಮಾನಸಿಕರೋಗಗಳಿಂದ ಬಳಲುತ್ತಿರುವವರನ್ನು ಉಪಚರಿಸಿ ಸರಿಗೊಳಿಸುವ ಶಾಸ್ತ್ರಕ್ಕೆ ಮಾನಸೋಪಚಾರಶಾಸ್ತ್ರ (Psychotherapy) ವೆಂದು ಹೆಸರು (ಮನೋರೋ. ೩೭). [ಸಂ.]

**ಮಾನಸಿಕವೇದನೆ** (ನಾ). ಮನಸ್ಸಿಗೆ ಉಂಟಾಗುವ ದುಃಖ,-ವ್ಯಸನ : ಮಾನಸಿಕವೇದನೆಯು ಅವರ ದೇಹದ ಮೇಲೂ ತನ್ನ ಪ್ರಭಾವವನ್ನು ಬೀರಿ ಅವರ ಶಕ್ತಿಯನ್ನು ಕುಗ್ಗಿಸಿತು (ಕೂಕ). [ಸಂ. ಮಾನಸಿಕವೇದನಾ]

**ಮಾನಸಿಕೆ, ಮಾನಸಿಕ್ಕೆ** (ನಾ). ೧. ಮಾನವೀಯತೆ ; ಒಳ್ಳೆಯತನ : ಮಾನಸಿಕೆಯುಳ್ಳಂ ಪೆಱರ ದೋಷಮಂ ಕೇಳನೆಂಬುದು ತಾತ್ಪರ್ಯಂ (ಚೀತಿವಾ. ೨೬–೨೪); ಮಾನಿತಮಪ್ಪ ಮಾನಸಿಕೆ ಮೆಯ್ಯೊಳೆ ಕೂಡಿರೆ ಧಾತ್ರನೆಂದೆನಲ್ ತಾನೆಸೆದಿರ್ದ ಮಾನಿನಿಯರಂ . . . ಹೀನರೆನಿಪ್ಪವಂದಿರೊಳೆ ಕೂಡಿ ವಿವೇಕವಿಹೀನನಾಗಿ ಚೀ ಮಾನವಿದೂರನಕ್ಕಟಜನೆಂದಭಿಧಾನಮನಾಂತನಾಗದೇ (ಶೀಖಪು. ೩–೦೬೩). ೨. ಆತ್ಮಗೌರವ ; ಸ್ವಾಭಿಮಾನ : ಮಾನಸಿಕೆಯ ದೊರೆಗಿಡೆ ನೀಂ ಮಾನಸನೆನೆ ನೀರೊಳೆಲವೂ ನೀನುಂ ಮಿನೆಂಬೀ ನೆವದಿರ್ದೆಯಿದೇಂ (ಕಃಶಶಾ. ೦೪–೭೯); ದೊರೆವೆತ್ತ ತಮ್ಮ ಮಾನಸಿಕೆಯ ಕೇಡನುನ್ನತಿಯ ಬನ್ನಮಂ . . . ವ್ಯಸನಿಗಳಾರು ಮೆತ್ತಲಜೀವರ್ ವಿಷಯಾಸವಮತ್ತಚೇತಸರ್ (ಶಂಣವಪು. ೦೯–೦೨೬) ; ಕಡುಗಲಿತನಮುಂ ಚಾಗದ ಪೊಡವೆರ್ಮೊಳ್ಳುಡಿಯೊಳಾದ ಮಾನಸಿಕೆಯುಂ . . . ಪೆರ್ಮೆವಡೆದುಮವನಿಂದಿಲೆಯೊಳ್ (ಕಾವ್ಯಾವ. ೩೪೪). ೩. ಆತ್ಮೀಯಭಾವನೆ ; ಅಂತಃಕರಣ ; ಪ್ರೀತಿ : ಮಾನಸೆಯುಣಮಲ್ಲಳೀಕೆ ಮರವಾನಸೆಯಾಗಿಯುಮಾದುದೊಂದು ಮಾನಸಿಕೆ (ಅಂಕು. ೦೨–೩೬).

**ಮಾನಸಿಕ್ಕೆ** : ೨. ಒದವಿದ ಮಾನಸಿಕ್ಕೆ ತಲೆದೋಱಿದ ಮುನ್ನಮೆ ಮುಂಬಮೂರ್ತಿಗೊಂಡುದು ಸಿರಿ ಕೆಚ್ಚುಗೊಂಡುದು ಮನಂ . . . ರಾಸಿಗೊಂಡುದು ನೆಗರ್ತೆಯ ತೇಜವನನ್ನಪಾಳನ (ಕಶಾಇ. IX – i, ೨೦೩–೯೬, 1126) ; ಅಱಿತದ ಮಾತು ನಾಲಗೆಯ ಬಣ್ಣಿಗೆ ಬಾರದ ದೀನಮಾನಸರ್ಮಱಿವುಗೆ ಕಾವ ಮಾತು ಮನದೊಳ್ ಪೊಱವೊಣ್ಣದ ಮಾನಸಿಕ್ಕೆಯುಂ ನೆಱಪುವ ಮಾತು ನೀತಿನಿಲಯಕ್ಕೊಳಸಲ್ಲದಮಾತ್ಮವೃತ್ತಿಯುಂ ಜಱಿವುದು ತಂತ್ರಪಾಳಕಶಿಖಾಮಣಿ ಪೆರ್ಮ್ಮನ ಕೀರ್ತಿಡಿಂಡಿಮಂ (ಎಕ. V, ಶೀಂಚಕು. ೮೬–೯೩; 1177). ೪. ಹಿರಿಮೆ; ಘನತೆ : ನೆಗಟ್ತೆವೆತ್ತ ಪತಿಭಕ್ತಿಯ ಮೈಮೆಯ ಮಾನಸಿಕ್ಕೆಯುಗ್ಗಲದ ಪೊಗಟ್ತೆ ತನ್ನದೆನೆ ಪೆಂಪು ಮನೋಹರಿಗಲಿದಕ್ಕುಮೇ (ಅಂಕು. ೦–೬೨). [ಮಾನಸ$_2$ + – ಇಕೆ]

**ಮಾನಸಿಕೆಗಿಡು** (ಕ್ರಿ). ಆತ್ಮೀಯತೆಯನ್ನು ಕಳೆದುಕೊಳ್ಳು: ಸ[ಂ]ನ್ಯಾಸನದೊ[ಳ್] ಮಾನಸಿಕೆಗಿಡದೆ ಕೊಕ್ಕೊನನೂನಸುಖಾಸ್ಪದಮನಟ್ಟಿಯೊಳ್ ಶ್ರೀವಿಜಯಂ (ಎಕ. X, ೦೫೨–೩೦; 915). [ಮಾನಸಿಕೆ + ಕೆಡು (< ಕೆಡು$_1$)]

**ಮಾನಸಿಕ್ಕೆ** 'ಮಾನಸಿಕೆ' ನೋ.

**ಮಾನಸಿಗ** (ನಾ). ೧. ಮನುಷ್ಯ; ಮಾನವ : 'ಪೆಲ್ಮಾನಸಿಗ' ಪರಾ. ೨. ಒಂದು ವಂಶದ ಹೆಸರು : ಇನ್ದಾಪಾಯ್ಯಂ (ಇನ್ದಪಯ್ಯಂ) ನಾಡಾನಾಳುತ್ತಿರೆ ಪುರಿಗೆಱೆ ನಾಡ ಸರಟವುರದಾಯ್ವದಿವ್ಬುರುವಿಬ್ಬು ನಾಡಯಿಸೆ ಮಾನಸಿಗರ ಚಿದಾ(ದ)ಣ್ಣ[ಂ] ಗೋಸಾಸವಿಂಬಿಟ್ಟೊ[ಂ] (ಎಇ. XXI, ೨೦೬–೩ ; 883). [ಮಾನಸ$_1$ (< ಮಾನುಸ) + – ಇಗ]

**ಮಾನಸೂತ್ರ** (ನಾ). ಅಳತೆಯ ದಾರ : ಕಮಳಜನಳೆಯಲ್ಕಾಡಿರ್ದ ಮಾನಸೂತ್ರಂಬೊಲೊಪ್ಪುಗುಂ ಕಟಿಸೂತ್ರಂ (ಅಕು. ೨–೨೪). [ಸಂ.]

**ಮಾನಸೆ, ಮಾನಿಸೆ** (ನಾ). = ಮಾನಸಿ : ಮಾನಸೆಯುಣಮಲ್ಲಳೀಕೆ ಮರವಾನಸೆಯಾಗಿಯುಮಾದುದೊಂದು ಮಾನಸಿಕೆ (ಅಂಕು. ೦೨–೩೬); ಚರಿಗೆವೋಗುತ್ತುಂ ನಾನಾಸೂನದುಃಖಪೀಡಿತಮಾನಸೆಯಾಗುತ್ತುಮಿರ್ದ ಪೊಲವಾನಸೆಯುಂ ಕರುಣಂ ಕೈಮಿಗೆ ಕಂಡು (ಸುಕುಮಾ. ೩–೨). 'ಪೊಲವಾನಸೆ' ಪರಾ. **ಮಾನಿಸೆ :** ಅನಪ್ಪೊಡೆ ದೇವತೆಯುಂ ನೀನಱಿಯದೆ ಕೊರ್ವಿ ಚಪಳತನದಿಂದೆನ್ನಂ ಮಾನಿಸೆಯೆ ಗೆತ್ತು ನುಡಿದೈ (ಧರ್ಮಾಮೃ. ೩–೦೦೨); ಮೆಯ್ಮುಸುಮಿಮಿಸುಕಿದೊಡೆ ದಿಟದ ಮಾನಿಸೆಯೆಂದೇ ಬಗೆದಂಗಭವಂ ಇಸದೆನ್ನಂ ಬಿಡನೆನುತವೆ ಮರವಾನಸೆಯಂದಮನನುಕರಿಸಿದಳೊ (ಜಗಂಚ. ೯–೨೨). [ಮಾನಸ$_1$ (< ಮಾನುಸ) + – ಎ$_2$]

**ಮಾನಸೌಕಸ** (ನಾ). ಮಾನಸಸರೋವರದಲ್ಲಿ ವಾಸಿಸುವುದೆಂದು ನಂಬಲಾದ ಪಕ್ಷಿ; ಹಂಸ : "ಹಂಸಃ, ಶ್ವೇತಚ್ಛದಃ, ಚಕ್ರಾಂಗಃ, ಮಾನಸೌಕಾಃ (ಕಸಃ) — ಈ ೪ ಹಂಸಂ" (ಹಲಾಯು. ೯೨–೯೬); "ಮಾನಸೌಕಸಂ ಶುಭ್ರಚ್ಛದಂ ಮರಾಳಂ ಹಂಸೆ" (ಚುಂಗಶಾ. ೩೦–೭). [ಸಂ. ಮಾನಸೌಕಸ್]

**ಮಾನಸ್ತ** (ನಾ). ಆತ್ಮಗೌರವವುಳ್ಳವನು ; ಸ್ವಾಭಿಮಾನಿ : ಮಾನಸ್ತರ ಮಾನವನ್ನು ಕಾಪಾಡುವ ಭಾರ (ಕಂಪ. ೨೨೦). [ಮಾನ + – ಸ್ತ]

**ಮಾನಸ್ತಂಭ** (ನಾ). [ಜೈನ] ಬಸದಿಯ ಮುಂದೆ ನಿಲ್ಲಿಸಿರುವ ಕಂಬ; ▶ "ಮಾನವನ್ನು ಸ್ತಂಭನ ಮಾಡುವಂತಹ ಕಂಬ. ಸಮವಸರಣ ಮಾರ್ಗಗಳಲ್ಲಿ ನಟ್ಟನಡುವೆ ಗೋಳಾಕಾರದಲ್ಲಿರುವ ಕಂಬ. ಇದು ಕ್ರಮವಾಗಿ ಚಿಕ್ಕಚಿಕ್ಕದಾಗುತ್ತ ಹೋಗುವ ಮೂರು ಗೋಳಾಕಾರದ ಪೀಠಗಳ ಮೇಲೆ ಸ್ಥಾಪಿತವಾಗಿರುತ್ತದೆ. ಇದರ ಎತ್ತರ ತೀರ್ಥಂಕರರ ಶರೀರಾಕೃತಿಯ ಹನ್ನೆರಡು ಪಟ್ಟು ಇರುತ್ತದೆ. ಇದು ಮೂರು ಖಂಡಗಳಲ್ಲಿ ವಿಭಾಗಿತವಾಗಿರುತ್ತದೆ. ಘಂಟೆ, ಚಾಮರ, ಧ್ವಜಗಳಿಂದ ಅಲಂಕೃತವಾಗಿ ಮೂರುಲೋಕಕ್ಕೂ ಮಾನ್ಯವಾಗಿರುತ್ತದೆ. ಇದರ ದರ್ಶನದಿಂದ ನೋಡಿದವನ ಅಹಂಕಾರ ದೂರವಾಗಿ ಧಾರ್ಮಿಕಶ್ರದ್ಧೆ ಮೂಡುತ್ತದೆ" (ಜೈಪಕೋ. ೨೦೩): ಮಾನಮನೆಂತುಂ ಮಿಥ್ಯಾಜ್ಞಾನಿಗಳೆರ್ದೆಯೊಳಗೆ ನೆಲಸಲೀಯದೆ ನಾಲ್ಕುಂ ಮಾನಸ್ತಂಭಂಗಳ್ ರತ್ನಾನದ್ಧಂಗಳ್ ನಿರಂತರಂ ಸೊಗಯಿಸುಗುಂ (ಆಪು. ೦೦–೨೪) ; ಮಿಥ್ಯಾಜ್ಞಾನಿಯ ಮಾನಮಂ ಸ್ತಂಭಿಸುವ ಮಾನಸ್ತಂಭಂಗಳಂ (ಶಾಪುಂಪು. ೯೯) ; ಮಾನಸ್ತಂಭದ ತುದಿಯಲ್ಲಿ ಒಂದು ಸಣ್ಣ ಮಂಟಪವೂ ಅದರಲ್ಲಿ ಒಂದು ಜೈನವಿಗ್ರಹವೂ ಇರುತ್ತವೆ (ಮೈವಾಸ್ತು. ೩೬). [ಸಂ.]

**ಮಾನಸ್ತೆ** (ನಾ). ಆತ್ಮಗೌರವವುಳ್ಳವಳು ; ಸ್ವಾಭಿಮಾನಿ : ಈಕೆ ಬಹು ಮಾನಸ್ತೆ (ಜಾಗಹ. ೨೩–೩೦). [ಮಾನಸ್ತ + – ಎ$_2$]

**ಮಾನಸ್ತೋಕ** (ನಾ). ('ಮಾನಸ್ತೋಕೇತನಯೇ' ಎಂದು ಪ್ರಾರಂಭವಾಗುವ) ಒಂದು ಮಂತ್ರದ ಹೆಸರು : ಚಾರುತರ ಶ್ರೀಮದ್ವಿಭೂತಿ ಘುಟಿಕೆಯನೊಲಿದು ಭೂರಮಣ ತನ್ನ ವರ ಕರದ ಸುಕುರಂಗವುದ್ರುರುಚಿರದಿಂ ಪಿಡಿದು ವಿಮಳಮಾನಸ್ತೋಕಮಂತ್ರದಿಂದೆತ್ತಿ (ಪಪಮೋ. ೦೯–೦೦). [ಸಂ.]

**ಮಾನಸ್ಥಾನ** (ನಾ). ಗುಹ್ಯಾಂಗ : ಮಾನನಾಯಕರು ತಮ್ಮ ಮಾನಸ್ಥಾನದ ಏರ್ಪಾಡುಗಳನ್ನೆಲ್ಲ ಪೂರೈಸಿಕೊಂಡಾದ ಮೇಲೆ . . . ಬೆಟ್ಟಳ್ಳಿಯ ಕಮಾನುಗಾಡಿ . . . ತೀರ್ಥಹಳ್ಳಿಯ ಕಡೆಗೆ ಹೊರಟಿತು (ಮಲೆಮ. ೩೧೬). [ಸಂ.]

**ಮಾನಹಾನಿ** (ನಾ). ಅಪಮಾನ ; ಅವಮಾನ : ವೇಸಿಯ ಸಂಗ ದ್ರವ್ಯದ ಕೇಡು ದಾಸಿಯ ಸಂಗ ಮಾನಹಾನಿಗೆ ಮೊದಲು (ಸಳಕ-ಕೈ.I. ೨೩-೬೩); ಎನಗೆ ನಿಮ್ಮಯ ದೂಸಜೀಂದಾಯ್ತಿನಿತು ಸಭೆಯಲ್ಲಿ ಮಾನಹಾನಿಗಳು (ಕುಮಾ.ಭಾ. ೦೦-೬). [ಸಂ.]

**ಮಾನಹೀನ** (ನಾ). ಗೌರವವಿಲ್ಲದವನು ; ನಾಚಿಕೆಗೆಟ್ಟವನು : ಮಾನಹೀನಗಭಿಮಾನವೇಕೆ (ಪುರಂದ. ೨-೬೨ ಪಲ್ಲವಿ) ; ಸಿರಿವಂತರ ಮನೆಗೆ ಹೋಗಿ ಒಂದು ಸೇರು ಅಕ್ಕಿಯನ್ನು ಯಾಚಿಸುವುದು ಮಾನಹೀನನ ಕಾರ್ಯವೆಂದು ಅವನಿಗೆ ಗೋಚರಿಸಿತು (ಕಾವೇಂ. ೨೯) ; ಮಾನಹೀನಗೆ ಬೇರೆ ಮಾನಹಾನಿ ಆಗುವುದುಂಟೇ ? (ನಾಡಿ). [ಸಂ.]

**ಮಾನಾಂಗುಲ** (ನಾ). [ಶಿಲ್ಪಶಾ] ದೇವತಾಪ್ರತಿಮೆಗಳನ್ನು ಕಡೆಯುವಾಗ ದೇಹದ ಪ್ರಮಾಣವನ್ನು ನಿರ್ಣಯಿಸುವ ಒಂದು ಅಳತೆ : ಮಾನಾಂಗುಲ, ಮಾತ್ರಾಂಗುಲ, ದೇಹಲಬ್ಧಾಂಗುಲವೆಂಬ ಅಳತೆಗಳಿಂದ ಪಂಚತಾಲ, ನವತಾಲಾದಿ ವಿವೇಚನೆಯಿಂದ ಮೂರ್ತಿಗಳನ್ನು ರಚಿಸುವ ವಿಧಾನಗಳನ್ನೂ . . . ಶಿಲ್ಪಶಾಸ್ತ್ರ ಮತ್ತು ಆಗಮಶಾಸ್ತ್ರಗಳು ತಿಳಿಸುತ್ತವೆ (ಭಾರದ. ೬೦). [ಸಂ.]

**ಮಾನಾಗ** (ನಾ). ದೊಡ್ಡ ನಾಗರಹಾವು : ಭೂನಾಗಕಮಮ ಮಾನಾಗಗಳ ಸಂಗತಿಯಿ ? (ಚನ್ನಬ. ೯-೩೩). [ಮಾ₄ + ನಾಗ./ಸಂ. ಮಹಾನಾಗ]

**ಮಾನಾನ್ವಿತ** (ನಾ). ಗೌರವದಿಂದ ಕೂಡಿರುವವನು : ಘನಾನ್ವಿತಂ ವೇಷಜಂ (ಶಾಕು. ೦೫೦). [ಸಂ.]

**ಮಾನಾಮಿ**, ಮಹನವಮಿ, ಮಹಾನಾವಿ, ಮಾನವಮಿ, ಮಾನೋಮಿ (ನಾ). ೧. ಆಶ್ವಯುಜ ಶುದ್ಧ ನವಮಿ ಮತ್ತು ಅಂದು ಆಚರಿಸುವ ಹಬ್ಬ ; ಕನ್ನಡಕ್ಕೆ-ಮಾಸಾಮಂತಂ, ಮಾಲಕುಮಿ, ಮಾನಾಮಿ (ಶಬ್ದಮ. ೦೬೩ ವೃತ್ತಿ). ೨. (ಅಲಂ) ಶಿಕ್ಷೆ ; ದಂಡನೆ : ಓಪಳೆ ಕೂರ್ಮೆಗೆಟ್ಟನಗೆ ನೀನೇ ನಾನುಮೊಂದೇವಮಂ ಮನದೊಳ್ ಮಾಡಿದೊಡಂದೆ ದೀವಳಿಗೆಯಂ ಮಾನಾಮಿಯುಮಂ ಮಾಡೆನೇ (ಸಂಕಾ. ೯-೯೩). ಮಹನವಮಿ : ೩. ಅಂತ್ಯ; ನಾಶ: ಅರಮನೆಯೊಳಗೆ ಪಸರಿಸಿತತುಳಶೋಕದ ಜಲಧಿ ಭೂಪಾಲಕನ ಸೈರಣೆ ಗಾಯ್ತು ಮಹನವಮಿ (ಕುಮಾ.ದ್ರೋ. ೬-೮). ℙ ಇದು ಛಂದಸ್ಸಿಗಾಗಿ ಮಾಡಿಕೊಂಡ ರೂಪವಿರಬಹುದು. ಮಹಾನಾವಿ : ೪. ದೊಡ್ಡ ಹಬ್ಬ : ರೇವಣ ಮೂಡಣ ಬಟ್ಟೆಯೊಳ್ ಮೊಳನಾಗಟ್ಟಿಯ ಕೊಂದಪಗೆ ಸಂಣನಾತಾನೆಂಬ ಬೇಡನನಿಱದುದೆ ಮಹಾನಾವಿಯಾಗೆ (ಎಕ. IV. ೩೩-೦೭ ; 1000 ?). **ಮಾನವಮಿ :** ೧. ಮಾನವಮಿಯ ಹಬ್ಬದ ದಿನದಿ ಬಾಲಕರೆಮ್ಮಯ ಪೂಬಸದಿ ಆಡಲು ಬಂದು ನುಡಿವರು (ಗೀತಾಂ. ೦೯-೩೩) ; ಇವರು ಕೂಲಿಮಠದಲ್ಲಿ ಇರುವವರೆಗೆ ಮಾನವಮಿ ಹಬ್ಬ ಬಹಳ ಚೆನ್ನಾಗಿ ನಡೆಯುತ್ತಿತ್ತಂತೆ (ಪನ್ನೂರು. ೦೦೩). **ಮಾನೋಮಿ :** ೧. ಮಾನೋಮಿಯಮುಕ್ಕಿವದೊಳಿಂದೀ ನಿಮ್ಮಡಿಯೋಲಗಕ್ಕೆ ಬಂದರಸರಪ್ಪೋಲ್ ಮಾನಾಂಕನುಮೆಯ್ದುರೆ ತನ್ನೇನೆಯೊಸಲ್ ಮೆಱೆದುದಮಮ ಪಲವೆಲೆವೆಣ್ಗಳ್ (ಶಬ್ದ. ೩-೦೬೯).

**ಮಾನೋಮಿಯ ದಿಬ್ಬ** = ಹಂಪೆಯಲ್ಲಿ ಆಯುಧಪೂಜೆಯನ್ನು ಮಾಡುತ್ತಿದ್ದ ಒಂದು ಸ್ಥಳ : ಕ್ಷಾತ್ರವೃತ್ತಿಯ ವೀರದೃಶ್ಯಗಳು ನಡೆಯುತ್ತಿದ್ದ (ಮಹಾನವಮಿ) ಮಾನೋಮಿಯ ದಿಬ್ಬ ಈಗಲೂ ಮೂಕಮಾತುಗಳಿಂದ ಆ ಗತವೈಭವವನ್ನು ಬಿತ್ತರಿಸುವ 'ಪಳವಾನಿಸ' ದಂತಿವೆ (ಕಾ.ಹಬ್ಬ. ೦೬೬). [<ಸಂ. ಮಹಾನವಮಿ]

**ಮಾನಾಯ** (ನಾ). ಧಾನ್ಯ ಅಳೆಯುವವನಿಗೆ ಕೊಡುವ ಧಾನ್ಯರೂಪದ ಕೂಲಿ ; ಪಡಿ : ಊರಲ್ಲಿ ಚಾವಡಿಯ ಕಾವಲ್ಗಾರರು, ನೀರುಗಂಟಿ, ದೀವಟಿಗೆಯವ, ಸ್ವಾಮಿಯದವರು . . . ಕಳ್ಳಬಂಟರು. ಅವರು,ಇವರು — ಎಲ್ಲಾಗೂ ರ್ಗವೆ, ಸೇನಾಯಮುದ್ರೆ, ಕಡತದ ಕಾಣಿಕೆ, ಮಾನಾಯ, ಹೊರೆಹೊರೆ ತೆನೆಹುಲ್ಲು, ಕಣದಲ್ಲಿ ಕೊಳಗಕೊಳಗ ದವಸ . . . ಸಲ್ಲಿಸಿಕೊಳ್ಳುತ್ತಾರೆ (ಚಿಕ್ಕಬ. ೦೩೩-೨೩). [ಸಂ.]

**ಮಾನಿ₁** (ನಾ). ಒಂದು ಅಳತೆ : ಷೋಡಶಿಕೆ ಕುಡುಬ ಪ್ರಸ್ಥ ಆಢಕ ದ್ರೋಣ ಮಾನಿ ಖಾರಿಗಳಿವು ಚತುರ್ಗುಣತಂಗಳು ಇವು ಮೊದಲಾದುವು ಮಾನಪ್ರಮಾಣಮಕ್ಕುಂ (ಕನಕ. ೯೯). [<ಸಂ. ಮಾನ]

**ಮಾನಿ₂** (ನಾ). ದಾನವಾಗಿ ನೀಡಿದ ಭೂಮಿ ; ಉಂಬಳಿ : ಹಿರಿಯ ಕೆಱೆಯ ಕೆಳಗೆ ಗರ್ದೆ ಸಲಗೆ ೩ ಮಾನಿಯಲು ಗರ್ದೆ ಸಲಗೆ ೩ (ಎಕ. XII. ತುಮಕೂ. ೩೩-೯೩ ; 1151); ಹಿರಿಯಊರೊಡೆಯರ ಮೊದಲ ಹಸುಗೆ ಕೊಡೆಯಾಲದಲ್ಲಿ ಮಾನಿಯೊಳಗೆ ಕೇಗ್ಗಾಡು ಮತ್ತರೊಂಭತ್ತು (ಸೌಇಇ. IX-i. ೩೩೬-೯೩ ; 1215) ; ಯೀ ಉಭಯಗ್ರಾಮಗಳ ಮಧ್ಯದಲ್ಲಿ ಯಿರುವ ಅಗಚಿಗದ್ದೆ ಮಾನಿಯಲ್ಲಿ ಮಠಾ ಕಟ್ಟಿಸಿ (ಎಕ. V. ಹಾಸನ. ೦೬-೦೩ ; 1774). 'ಪುನ್ನೆಯ' ಪರಾ. [<ಸಂ. ಮಾನ್ಯ]

**ಮಾನಿ₃** (ನಾ). ಗೌರವಯುಕ್ತನಾದವನು ; ಮಾನವಂತ ; ಮರ್ಯಾದಸ್ಥ : ಅಲ್ಲಿಂ ಮುನ್ನ ಮಾನಿಗಳರಸಂ ನೆಬಿಯಣ್ಣನಿಂಬಜೀವ ಮಂತ್ರಿಯಪ್ಪ ತುಂಬುರನಂ ಕರೆದು (ಸಂಬರ. ೦೨-೩) ; ಅವರನು ಕರೆದನು ತತ್ವಜ್ಞಾನಿ ಸೈರಣೆ ಸಮತಾಭಾವದ ಮಾನಿ (ಚಿದಸೋ. ೦೦-೨). [ಸಂ. ಮಾನಿನ್]

**ಮಾನಿ₄** 'ಮಾನುವೆ' ನೋ.

**ಮಾನಿಕಪ್ಪ** (ನಾ). ಮಾನ್ಯವಾಗಿ ಕೊಟ್ಟ ಕಾಣಿಕೆ : [ಜೊಂ]ಮಂಣ ಒಡೆಯರ ನಿರೂಪದಿಂ ದೇವರಾಯಒಡೆಯರ ಅನವೇರಿಯದ ಉಭಯ ಮಾರ್ಗ್ಗದ ಸುಂಕದ ಮಾನಿಕಪ್ಪ ಮೂಗವಾಡಿಯ ಪುರದ × × ದ ನಾಯನಾರದೇವರಿಗೆ ಸ್ಥಳ × ಕಪ್ಪವ × × × ಜೊಂಮಣಒಡೆಯರು ವಿಜಯನಗರಕ್ಕೆ ಬಿಜಯಮಾಡುವಾಗ ದಣ್ಣಾಯಕ ಕೊಟ್ಟ ಪಾಗ ಚಿಕೂರು ಆ ದೇವರಿಗೆ ಯೆರಡು (ಸೌಇಇ. IX – ii. ೪೨೮-೦೨ ; 1405). [ಮಾನಿ₂ + ಕಪ್ಪ₁]

**ಮಾನಿಕೆ** (ನಾ). ಹಿರಿಮೆ ; ಘನತೆ : ನೀವೆಲ್ಲ ಮಾತೃಕೆಯರ ಯೋನಿಯೊಳ್ ಪೂಜಿಪಟ್ಟು ಬರುತೆ ಸೂನಿತವಸನದಿಂದೇಕೆ ಬಂದಪವಹ ಮಾನಿಕೆಗಳ ನೋಡಿದಬಿರಿ (ಪೋಹಕ. ೩೯-೩). [ ಮಾನ + _ ಇಕೆ ]

**ಮಾನಿಗೆ** ' ಮಾನಗೆ ' ನೋ.

**ಮಾನಿತ** (ಗು). ೧. ಗೌರವಕ್ಕೆ ಪಾತ್ರವಾಗಿರುವ ; ಪೂಜ್ಯವಾಗಿರುವ: ಮಾನಿತತತ್ತ್ವಾರ್ಥಶ್ರದ್ಧಾನದಿನಾ ಸೂರ್ಯಮಿತ್ರಮುನಿಪತಿಗವಧಿಜ್ಞಾನಂ ತೊಟ್ಟನೆ ಪುಟ್ಟಿದುದು (ಸುಕುಮಾ. ೩-೯೭) ; ಮಾನಿತಗುಣತತ್ತ್ವಪರಿಜ್ಞಾನಮೆ ತಾಂ ಬೋಧಿತತ್ತ್ವಮೊಬುದು (ಜೀವಸಂ. ೦೬೩-೦) ; ಮಾನಿತೋತ್ತಮಭಕ್ತಿನಿಷ್ಠಾನೂನಮಾನಸನಂ ಭವತ್ತತಿಮಾನವಪ್ಪ ಸುಪುತ್ರನಂ ಕೊಟ್ಟೆನ್ನನುದ್ಧರಿಸು (ಚಿತಪು. ೨-೦). (ನಾ). ೨. ಗೌರವಕ್ಕೆ ಪಾತ್ರವಾದುದು, – ಅರ್ಹವಾದುದು : ನಾನಾರ್ಥಮೇಕರೂಪಾಧೀನವಚೋರಚಿತಮಪ್ಪೊಡಕ್ಕುಂ ಶ್ಲೇಷಂ ಮಾನಿತಮಳಂಕ್ರಿಯಾನುವಿಧಾನಂ ಮತ್ತಿಂತು ತದುಪಲಕ್ಷ್ಯವಿಕಲ್ಪಂ (ಕವಿರಾ. ೩-೦೦೬) ; ಮಾನಿತಮಪ್ಪ ಮಾನಸಿಕೆ ಮೆಯ್ಯೊಳೆ ಕೂಡಿರೆ ಧಾತ್ರನೆಂದೆನಲ್ ತಾನೆಸೆದಿರ್ದ ಮಾನಿನಿಯರಂ . . . ಹೀನರೆನಿಪ್ಪವಂದಿರೊಳೆ ಕೂಡಿ ವಿವೇಕವಿಹೀನನಾಗಿ ಚೀ ಮಾನವಿದೂರ ನಕ್ಕಟಜನೆಂದಭಿಧಾನಮನಾಂತನಾಗದೇ (ಜೀವಂಧ. ೩-೦೬೩) ; ಗುರುಕೃತಂ, ಮಾನಿತಂ, ಪೂಜಿತಂ ತಾನಲ್ಲ (ವೈಶಾಖ. ೬೩-೩೦೨). ೩. ಗೌರವಾನ್ವಿತ ವ್ಯಕ್ತಿ ; ಮರ್ಯಾದಸ್ಥ. [ಸಂ.]

**ಮಾನಿನಿ** (ನಾ). ೧. ಆತ್ಮಗೌರವವುಳ್ಳವಳು ; ಸ್ವಾಭಿಮಾನಿಯಾದ ಹೆಂಗಸು. ೨. ಹೆಂಗಸು ; ಸ್ತ್ರೀ : ಮಲ್ಲಿಗೆಯುಂ ನಗೆಯುಂ ಕರಪಲ್ಲವದಿಂದರುಣಸರಸಿರುಹಮುಂ . . . ತೋರ್ಪರ್ ಸಲ್ಲಲಿತಾಂಗದ ಲತಾಂಗಿಯರ್ ಮಾನಿನಿಯರ್ (ಜಗಪು. ೨-೨೮) : ಭರತಭೂಮಿ . . . ಯಾರನ್ನು ಉಚ್ಛ್ವಾಸನದ ಮೇಲೆ ಕುಳ್ಳಿರಿಸಬೇಕೋ ಆ ಮಾನಿನಿಯರು ಅನೇಕರಿದ್ದಾರೆ (ರಮಣಿಶಾ. ೭೮). ೩. ಹೆಂಡತಿ : ಮಡದಿ ; ಪತ್ನಿ : ಮಾನಿನಿ ನಾಲ್ಕುಂ ನಿಯಮವಿಧಾನದ,ಬಟೀಸಂದು ನಿಟ್ಟೆಯಿಂ ಚರಿಯಿಸಿ ಸಂತಾನಾರ್ಥಮೆನೆ ಚತುರ್ವಿಧದಾನವ್ಯಸನದೊಳೆ ದಿವಸಮಂ ನಡೆಯಿಸುವಳ್ (ಪುಣ್ಯಪು. ೪-೯೭) : ಕುಳ್ಳಿರ್ದನು ಮಹೀಪತಿ ಮಾನಿನಿಯು ಮಲಗಿ (ಕುವ್ಯಾ. ೧೭-೧೧) ; ಸಾನಂದದಿ ನಿನ್ನಯ ವರರೂಪದನೂನಲಸಚ್ಚಿತ್ರಂ ಬರೆದೆನ್ನಯ ಮಾನಿನಿಯಿಂದಾಕೆಯು ಬಳಿಗಟ್ಟಿದೆನತಿಸಂತೋಷದೊಳು (ಜಯುಕಾ. ೩-೭೪). ೪. ಪ್ರಿಯನ ಅವಿನಯವರ್ತನೆಯಿಂದ ಕುಪಿತಳಾಗಿ ಅವನಿಂದ ದೂರವಿರಲು ಬಯಸುವವಳು ; ಪ್ರಣಯಕೋಪವುಳ್ಳ ಹೆಂಗಸು. [ ಸಂ. ಮಾನಿನೀ ]

**ಮಾನಿಭದ್ರಗೌಡ** (ನಾ). ಒಬ್ಬಾತನ ಹೆಸರು : ತಂನ ಅನುಜ ಮಾನಿಭದ್ರಗೌಡರ ಮಕ್ಕಳು (ಎಕ. VII. ಶಿಮೊ. ೧೦೪-೦೪ ; 950). [ ಮಾನಿಭದ್ರ₀ + ಗೌಡ₁ ( < ಗಾವುಂಡ ) ]

**ಮಾನಿಷ್ಠ** (ನಾ). ಮರ್ಯಾದಸ್ಥ ; ಮಾನವಂತ : ಮಾನಕೆ ಮಾನಿಷ್ಠ ರಂಜಿ ಹಿಂಜರಿದರೆ . . . ತನಗೆಯೆ ಅಂಜಿ ಹಿಂಜರಿದರು ಭಾಪುರೆ ಎಂದುಬ್ಬಿ ಮೆರೆವನು ಖೋಡಿ (ಶಿಂಶಾಶ. ೯೪-೩೪) : ಅದು ಮಾನಿಷ್ಠರ ಮನೆಯೊಳಗೆ ಬರಲು ತಕ್ಕ ಮರ್ಯಾದೆಯನ್ನು ಕಲಿತಿಲ್ಲ (ಶಿಂಗಿಂ. II. ೧೯೦). [ಸಂ.]

**ಮಾನಿಷ್ಠೆ** (ನಾ). ಆತ್ಮಗೌರವವುಳ್ಳವಳು ; ಸ್ವಾಭಿಮಾನಿ : ಮಾನಿಷ್ಠೆಯಾದ ಶಕುಂತಲೆಗೆ ಇದರಿಂದ ತುಂಬ ಅವಮಾನವಾಯಿತು (ವಶಶಾ. ೩೯೭) : ಸರೋಜ ಬಹಳ ಮಾನಿಷ್ಠೆ (ಮುಜಾಗ. ೭೩). [ಮಾನಿಷ್ಠ + _ಎ₂]

**ಮಾನಿಸ₁** ' ಮಾನುಸ ' ನೋ.

**ಮಾನಿಸ₂** (ನಾ). ಮನಸ್ಸು ; ಚಿತ್ತ : 'ಮಾನಿಸಗಳ್ಳಿ' ಪರಾ. [<ಮಾನಸ₂]

**ಮಾನಿಸಗಳ್ಳಿ** (ನಾ). ಮನಸ್ಸಿನಲ್ಲಿ ವಂಚನೆಯುಳ್ಳವಳು : ನಳನಳಿಸುವ ತೋಳುಗಳಿಂದ ಪತಿಯನಾಲಿಂಗಿಸಿ ಮನದ ನೇಹದಲ್ಲಿ ಜಾರಪುರುಷನನ್ನು ಬಿಗಿಯಪ್ಪಿದ 'ಮಾನಿಸಗಳ್ಳಿ'ಯ ಜಾರೆಯ ಆಟ ! (ಮೋಳಿಮಾ. ೧೦೩ ಕೃತ್ಯಾ ಪಟ). [ಮಾನಿಸ₂ + ಕಳ್ಳಿ₁]

**ಮಾನಿಸಗಳ್ಳೆ** (ನಾ). = ಮಾನಿಸಗಳ್ಳಿ : ಕಂಗಳೊಳೊಬ್ಬನ ಕರೆವಳು ಮನದಲ್ಲೊಬ್ಬನ ನೆರೆವಳು ಕೂಡಲಸಂಗಮದೇವ ಕೇಳಯ್ಯಾ ಮಾನಿಸಗಳ್ಳೆಯ ನಂಬದಿರಯ್ಯಾ (ಬಸವ. ೧೦೦). [ಮಾನಿಸ₂ + ಕಳ್ಳಿ₁]

**ಮಾನಿಸದೇರ** 'ಮಾನಸದೇರ' ನೋ.

**ಮಾನಿಸವಾಟಿಶ್** 'ಮಾನಸವಾಟಿಶ್' ನೋ.

**ಮಾನಿಸು₁** 'ಮಾಣಿಸು' ನೋ.

**ಮಾನಿಸು₂** (ಕ್ರಿ). ೧. ಗೌರವಿಸು ; ಆದರಿಸು ; ಸತ್ಕರಿಸು : ಭೂಸುರರ ಮಾನಿ[ಪಾಠಾಂ. ಮನ್ನಿ]ಸು ದೇಶಮಂ ನೋಡಿ ಪಾಲಿಸು (ಹಶಕಾ. ೮-೨೮) ; ನಡೆಯ ಮನೆಗೆಂದವರ ಕೈಗಳ ಪಿಡಿದು ತಂದನು ತನ್ನ ಭವನಕೆ ತಡದಿರದೆ ಮಧುಪರ್ಕವಿಷ್ಟರದಿಂದ ಮಾನಿಸಿದ (ಸಂಭಶ. ೩-೭೩). ೨. ಒಪ್ಪು ; ಅಂಗೀಕರಿಸು : ಸಾಮಾಜಿಕಪ್ರಪಂಚದಲ್ಲಿ ಅವರು ಬೋಧಿಸಿದ ಸುಧಾರಣೆಗಳು ಎಲ್ಲರೂ ಮಾನಿಸತಕ್ಕುವೇ ಆಗಿವೆ (ಶಾರದ. ೩೨೦). ೩. ಹೊಂದಿಕೊಳ್ಳು ; ಒಗ್ಗು : ವಿಶೇಷವಾಗಿ ಹೆಂಗಸರಿಗೆ ಘಟ್ಟದ ಕೆಳಗಿನ ಹವೆಯು ಬಹು ಚನ್ನಾಗಿ ಮಾನಿಸುತ್ತದೆ (ಕಶಾಗ. ೨೨) : ಬೆಳಗಾವಿಯ ಹವೆಯು ಯೂರೋಪಿಯನ್‌ಜನರಿಗೆ ಹೊಳಿತಾಗಿ ಮಾನಿಸುವದರಿಂದ . . . ಇಲ್ಲಿ ಮನೆ ಮಾಡಿದ್ದಾರೆ (ಕಶಾಗ. ೯೯). ೪. ಅಳತೆ ಮಾಡು : ಅಳೆ : (?). ೫. (ಮತ್ತೊಬ್ಬರೊಡನೆ) ಯೋಚಿಸು : ಸಮಾಲೋಚಿಸು : ಮಾನಾಪಮಾನವನು ಜ್ಞಾನ ತನಗಾದುದನು ಮೌನಿನಿಯು ಒಲಿದ ರತಿಸುಖವ ಪರರಲ್ಲಿ ಮಾನಿಸುವನೆಗ್ಗ (ಸರ್ವಜ್ಞ. ೧೩೯೮). ೬. ಗಣನೆಗೆ ತರು ; ಲಕ್ಷಿಸು : ಲೆಕ್ಕಿಸು : ಮಾನಿನಿಯರುಪಭೋಗಕಾಲವ ಮಾನಿಸರು ಘನಕಾಮುಕರು (ಕುವ್ಯಾಆ. ಪಿಂ೨. ೩-೩೪). [ಮಾನ + —ಇಸು₃]

**ಮಾನಿಸೆ** 'ಮಾನಸೆ' ನೋ.

**ಮಾನೀಶ** 'ಮಾನುಸ' ನೋ.

**ಮಾನು** (ನಾ). ಒಂದು ಬಗೆಯ ಭೂಮಿ (?) : ಕೆರೆ ದಾರಿ ಮಾನು ಮರಡುವರು ಯೇನುವುಳ್ಳದ್ದನ್ನು ಸ್ವಾಮ್ಯವನ್ನು ಗಂಡಿಗೆ ಮೂಲಿ ಹೆಣ್ಣಿಗೆ ಕಂನ್ಯಾದಾನವಾಗಿ ಸುಖದಿಂ ಭೋಗಿಸುವಂತಾಗಿ (ಮ್ಯಆ. ೧೯೩೪. ೨೩-೨೦ ; 1394) ; ತಂಮ ದಾನಮೂಲಕೆ ಸಲುವ ಭೂಮಿಮಾನುಗಾಜನು ಆ ವಿಷ್ಣುಭಟ್ಟರಿಗೆ . . . ನಿಧಿ ನಿಕ್ಷೇಪ ಜಲಪಾಷಾಣ ಅಕ್ಷೀಣಿ ಆಗಾಮಿ ಸಿದ್ಧಸಾಧ್ಯಅಷ್ಟಭೋಗತೇಜಸ್ವಾಮ್ಯಸಹಿತವಾಗಿ . . . ಸಲಿಸಿ (ಎಕ. VI. ಶೃಂಗೇರಿ. ೨೩-೧೧; 1408). [< ಮಾನ್ಯ ?]

**ಮಾನುವೆ**, **ಮಾನಿ₄** (ನಾ). ಒಂದು ಬಗೆಯ ಹುಲ್ಲು : "ಮಾನುವೆ [ಪಾಠಾಂ. ಮಾನವ, ಘಾಣವೆ, ಮಾಣುವೆ] ಸಿತೆಯೆಸಿಕ್ಕು (ಪುಂಗಶಾ. ೩೩-೮). ಮಾನಿ₄ : ಎತ್ತುಗಳು ಕಾವಲಿನಲ್ಲಿ ತಲೆ ಎಟ್ಟಿ ಮಾನಿಹುಲ್ಲು ಮೇಯುತ್ತಿರುವಾಗ ಅವುಗಳನ್ನೇ ಪ್ರೇಕ್ಷಕರೆಂದು ಭಾವಿಸಿ ಕುಣಿಯುತ್ತಿದ್ದ (ಪಮ್ಮರು. ೩೦೪). [ ? ]

**ಮಾನುಷ** (ಗು). ೧. ಮನುಷ್ಯನಿಗೆ ಸಂಬಂಧಿಸಿದ. (ನಾ). ೨. ಮನುಷ್ಯ; ಮಾನವ : "ಮನುಷ್ಯಃ, ಮಾನುಷಃ, ಮರ್ತ್ಯಃ . . . ಪೂರುಷಃ, ವಿಟ್—ಈ ೧೨ ಮಾನಸರ್" (ಹಲಾಯು. ೩೩-೦೭೭); ಧರೆಗೆ ಮಾಯಾಗೂಢಮಾನುಷನಾಗಿ ಮೆರೆದನು ಗೋಕುಲದಲಿ (ಶಿಭಾಗ. ೩-೨-೦೪). ೩. ಮನುಷ್ಯನಿಂದ ಮಾಡಲು ಸಾಧ್ಯವಾದುದು,—ಶಕ್ಯವಾದುದು; ಮನುಷ್ಯಪ್ರಯತ್ನ : ಮಾನುಷವನ್ನು ಮೀರಿದುದಕ್ಕೆ ವ್ಯಥೆ ಪಡಬಾರದು (ಅಗ್ರಹ. ೯೯). [ಸಂ.]

**ಮಾನುಷತ್ವ** (ನಾ). ಮನುಷ್ಯನಂತೆ ಇರುವಿಕೆ ; ಮನುಷ್ಯನಾಗಿರುವಿಕೆ : ಇನಿತೇಕೆ ಮಾನುಷತ್ವಮನೆನಸುಂ ನಟಿಯಿಸುವೆ ಕೃಷ್ಣ ಪೊಣಮಡುವುದುವಿಂ (ಜಗಪು. ೩-೯೮). [ಸಂ.]

**ಮಾನುಷಸಿದ್ಧಿ** (ನಾ). ಮನುಷ್ಯಪ್ರಯತ್ನದಿಂದ ಸಾಧಿಸಿದುದು : ದೇವಸಿದ್ಧಿ ಮಾನುಷಸಿದ್ಧಿಯೆಂಬೆರಡುಂ ಸಿದ್ಧಿಯುಮಂ . . . ಪಾತ್ರಸಂಕ್ರಮಣದೊಳ್ ನೆಱೆಯೆ ತೋಱೆ (ಅತಪು. ೩-೩೦ ವ). [ಸಂ.]

**ಮಾನುಷಿ** (ನಾ). ಮಾನವಸ್ತ್ರೀ : ನೀನು ಯಾರು ಸುಂದರಿ . . . ಯಕ್ಷಿಯೋ ಮಾನುಷಿಯೋ ? (ವಶಶಾ. ೧). [ಸಂ. ಮಾನುಷೀ]

**ಮಾನುಷೋತ್ತರಗಿರಿ** (ನಾ). [ಜೈನ] ಮಧ್ಯಮಲೋಕದ ಒಂದು ಪರ್ವತ; **P** "ಈ ಪರ್ವತವು ಪುಷ್ಕರದ್ವೀಪದ ನಟ್ಟನಡುವೆ ಗೋಲಾಕಾರವಾಗಿರುತ್ತದೆ. ಈ ಪರ್ವತವನ್ನು ದಾಟಿ ವಿದ್ಯಾಧರರು ಮತ್ತು ಋದ್ಧಿಪ್ರಾಪ್ತಮುನಿಗಳು ಹೋಗಲಾರರು. ಆದುದರಿಂದ ಇದಕ್ಕೆ ಮಾನುಷೋತ್ತರವೆಂಬ ಹೆಸರು" (ಅಭಿಪ್ರ. ಜೈನಪಾರಿಭಾಷಿಕ ಶಬ್ದಕೋಶ) : ವಂದೇ ಪಂಚಸುಮಂದರಾದ್ರಿಷು ವನಾಂತಭ್ರಾಜಿನಃ . . . ಸೀಮನಿ ಮಾನುಷೋತ್ತರಗಿರೌ ಚತ್ವಾರಿಚತ್ವಾರಿಚ (ಅಭಿಪ್ರ. ೦೭-೭೭). [ಸಂ.]

**ಮಾನುಷ್ಯ** (ನಾ). ೧. ಮನುಷ್ಯಧರ್ಮ; ಮಾನವಸ್ವಭಾವ. ೨. ಮನುಷ್ಯ : ತಂಗಿ ಕೇಳವನೆನ್ನ ಮಗನೊಂದಂಗದಿಂ ಮಾನುಷ್ಯಭವವೀತಗೆ ನಿನ್ನೊಳು ಜನಿಸಲ್ಲಾಯಿತು ಲೋಕಹಿತಕಾಗಿ (ಬಸವು. ೩-೨೮). [ಸಂ.]

**ಮಾನುಸ**, ಮಾನಸ$_1$, ಮಾನಿಸ$_1$, ಮಾನೀಶ (ನಾ). ೧. ಮನುಷ್ಯ; ಮಾನವ. **ಮಾನಸ$_1$** : ೧. ಮುಂದಣ ಮಾನಸರಂ ಪಡಿಯಜಿರ್ ತೊಲಗಿಸುತ್ತುಂ ಬರೆ (ಪಡ್ಮ. ರಾ. ೬೦-೦೩) : ಜಾಗದ ಭೋಗದಕ್ಕರದ ಗೇಯದ ಗೊಟ್ಟಿಯುಲಿಂಪಿನಿಂಪುಗಳ್ಗೆ ಗರಮಾದ ಮಾನಸರೆ ಮಾನಸರ್ (ಶಂಕರಾ. ೪-೨೯) ; ಎಗ್ಗಮಾನಸರ ಕುಲಗುರುವೆಯಾಗಳೆ ನಿಂದ ನಿಲವಿನಿಂ ಭೂತವಾಗು (ಪುಂಪು. ೨೦-೨೬). **ಮಾನಿಸ$_1$** : ೧. ಅವರ ಮೃಗಂ ತಿಪ್ಪೆಯ್ಯ ನೆಂಬಾ ಪದಿನೇಟ್ಮಾನಿಸಂಬೆರಸಿ ಕಾಳೆಗದೊಳ್ಸತ್ತಲ್ಲಿ (ಎಕ. V, ಅರಸೀ. ೩೦-೬; ೯೨೦) ; ಮುರವಿರೋಧಿಯು ಬಲುಹ ಹೇಳಾ ಪಾರ್ಥನೆಂಬವನಾವ ಮಾನಿಸನು (ಕುಮ್ಯ. ೩-೬); ಜೇನಶಾಲೆಗಳಲ್ಲಲ್ಲಿ ಏನೆಂಬೆ ನೂತನವಡೆದಿಹು ವುದಿ ನೋಳ್ಪ ಮಾನಿಸರುಗಳ ಕಣ್ಮನಕೆ (ಸಂಕರ. ೨-೭೩). ೨. ಆಳು; ಸೇವಕ : ಶ್ರೀಮ(ಂ)ನ್ಮಹಾಪ್ರಧಾನಂ ಮುದ್ದೆಯದಂಣಾಯಕ್ಕರ ಮಾನಿಸನು ಆಗಿ ಕುಡುಹೂರ ಕೋಟೇಶ್ವರದೇವರಲ್ಲಿ ಆಚಂದ್ರಾರ್ಕವಾಗಿ ನಡೆ ಸುವ ಧರ್ಮ್ಮದ ಕಟ್ಟಳೆ (ಶಾಇ. IX–ii, ೪೦೭-೨೪; 1377): ಮಾನಿಸರ ಕಳು ಹಿದರೆ ಸಾಲದೆ (ಕುಮ್ಯ. ೪-೭). **ಮಾನೀಶ** : ೧. ನೀನೀಶನೀಯದೆ ಮಾನೀಶ ನೀವನೆ (ದೇಪಾಂ. ೪೦-೭೭); ಈಶತ್ವವಿಲ್ಲವಲೆ ಈಶ್ವರನು ಎನಿಸಿಹನೆ ಈಶ ನಾನೀಶನೆನದೇಡ ಜಗದಿ ಮಾನೀಶನೇ ಈಶ (ಸರ್ವಜ್ಞ. ೦೨೨೩). ☞ ಇದು ಪ್ರಾಸಕ್ಕಾಗಿ ಮಾಡಿಕೊಂಡಿರುವ ರೂಪ.

**ಮಾನುಸಗಂಡ** = ಒಂದು ಬಿರುದು : ಬಲ್ಲಹಸು(ಶೂ)ದ್ರಕನ್ . . . ಕಟ್ಟಾಣ್ಮಾನುಸಗಣ್ಡ ಮನ್ನವಣ್ಣನಂ ಬೀಟಿಪೋಂ ಪೆಡಯಂ ಬೆ[ಳ]ವ ಬಿರುದಪ್ಪವರ ಬಿರುದಸೊಡ್ಡಟಿಪೊನ್ (ಎಇ. XXIV, ೧೯೩-೯; ಸು. 885). [<ಪ್ರಾ. ಮಾಣುಸ. / ಸಂ. ಮಾನುಷ]

**ಮಾನೆ** (ನಾ). ಮೇಲ್ಪಂಕ್ತಿ ; ನಕಲು ; ಮಾದರಿ : ಇವಲ್ಲದೆ 'ಮಾನೆ' ಗಳನ್ನು ಬರೆಯುವುದಕ್ಕೆ ಒಣಗಿದ ಎಕ್ಕದೆಲೆಗಳನ್ನು ಉಪಯೋಗಿಸುವರು (ಗುಪಾ. ೪). 'ಮಾನೆಪುಸ್ತಕ' ಪರಾ. [ ? ]

**ಮಾನೆತಿದ್ದು** (ಕ್ರಿ). ಮೇಲ್ಪಂಕ್ತಿಯನ್ನು ಅನುಸರಿಸಿ ಬರೆ,–ತಿದ್ದು : (೬). [ಮಾನೆ + ತಿದ್ದು$_1$ (<ತಿರ್ದು$_2$) ]

**ಮಾನೆಪುಸ್ತಕ** (ನಾ). "(ಬರಹ ಕಲಿತುಕೊಳ್ಳುವವರು) ಮೇಲ್ಪಂಕ್ತಿ ನೋಡಿಕೊಂಡು ಬರೆಯುವ ಪುಸ್ತಕ : ಮೇಲ್ಪಂಕ್ತಿಪುಸ್ತಕ ; ಮಾನೆ ಪುಸ್ತಕ" (copy book. ಇಂಕಿ). [ಮಾನೆ + ಪುಸ್ತಕ]

**ಮಾನೋನ್ನತ** (ಗು). ೧. ಹಿರಿದಾದ ಗೌರವದಿಂದ ಕೂಡಿದ : ಮಹಾಮಾತ್ಯಪದಸ್ಥೀ ವಿರಾಜಮಾನಮಾನೋನ್ನತಪ್ರಭುಮಂತ್ರೋತ್ಸಾಹ ಶಕ್ತಿತ್ರಯಸಂಪನ್ನರಪ್ಪ ಶ್ರೀಮಾತ್ ಪೆರ್ಮ್ಮಡಿಂಕದ ಪೆರ್ಗ್ಗಡೆ ವಾಮಣಯ್ಯಂಗಳ ಬೆಸದೆ (ಶಾಇ. XX, ೩೪-೯; 1053). (ನಾ). ೨. ಹಿರಿದಾದ ಗೌರವ ದಿಂದ ಕೂಡಿದವನು ; ಶ್ರೇಷ್ಠವ್ಯಕ್ತಿ: ನಿನ್ನ ಮಡಗೂಟಿನಿಲಂ ಮಾನೋ ನ್ನತ ನೀನೀಯು ಬಂದುದೆನಗೆ (ಅದಿಪು. ೦೪-೦೪೪); ಮಾನೋನ್ನತ ನಿರವದ್ಯ ಕುಲೀನ ಮಹಾಪುರುಷ ಪರಧನಂಗಳ ದತ್ತಾದಾನಂಗಳ್ ನಿನಗಾಗವು (ಶಾಂತಿಪು. ೩-೭೭). [ಸಂ.]

**ಮಾನೋನ್ನತಿ** (ನಾ). ಹಿರಿದಾದ ಗೌರವ : ಮಾನೋನ್ನತಿ ವರ್ಧಮಾನ ಮುಮುಕ್ಷುಜ್ಞಾನೋದಯಂ ವರ್ಧಮಾನಂ . . . ಎನಲ್ ತಾಂ ದೊರೆ ವರ್ಧ ಮಾನಮುನಿಯೊಳ್ ಶ್ರೀವರ್ಧಮಾನಾಹ್ವಯಂ. (ಸುಕುಮಾ. ೧-೨೩). [ಸಂ.].

**ಮಾನೋಮಿ** ' ಮಾನಾಮಿ ' ನೋ.

**ಮಾನ್ಗರಿ ?** (ನಾ). ಮಾವಿನ ಎಲೆಯಾಕಾರದ ಧ್ವಜ (?) : ಮಾನ್ಗರಿ ಭಾರಿ ನಗಾರಿ ಮೇಕುಮಂಗುಲಿಪ ಸುರಾಂತ ಸತ್ತಿಗೆ ನಿಶಾನೆಯು . . . ಶಂಖ ಸುಚಕ್ರವು ರಾಜರಾಜನಿಂದಲಿ ಪಡೆದಾತ ಘಂಟೆಯ ನರೇಶ್ವರ (ಬೀಳಸಂ.೧-೦೩೬).[☞ ಇದು 'ಮಾಂಗರಿ' ಎಂಬುದರ ಅಪಲಿಖಿತವಿರಬಹುದು]

**ಮಾನ್ಯ** (ಗು). ೧. ಗೌರವಕ್ಕೆ ತಕ್ಕ; ಮನ್ನಣೆಗೆ ಯೋಗ್ಯವಾದ : ನಾನಾಮಾನ್ಯಜನಾಂತರಂಗನಿಹಿತಾನಂದೋದಯಂ . . . ಪಾಲಿಸಿದಂ ಮಹೀ ವಲಯಮಂ ಸಂಸಾರಸಾರೋದಯಂ (ಅಂಪು. ೬-೭೭). ೨. ಹೊಂದ ತಕ್ಕ : ಒಪ್ಪತಕ್ಕ. (ನಾ). ೩. ಮನ್ನಣೆ ; ಗೌರವ : ಮನೆಯ ಜಾಮಾತೃವಿಗೆ . . . ಅನುದಿನವು ಗಳಹುವ ಪಾಪಿಗುಂಟೇ ಮಾನ್ಯ (ಕೌಶಿಕಾ. ೦೩-೩೦). ೪. ಗೌರವಯುಕ್ತವಾದುದು ; ಮನ್ನಣೆಗೆ ಪಾತ್ರ ವಾದುದು : ತನಗೆ ತಂದೆ ಬೋಧಿಸಿದ ವರಸನಾತನಧರ್ಮವೇ ಮಾನ್ಯವೆಂದ ದನು ಧರಿಸಿ ತಲೆಯಲ್ಲಿ (ಕುಮ್ಯ. ೦೩-೩); ರಾಜಾಜ್ಞೆಯು ಸರ್ವಥಾ ಮಾನ್ಯವೇ ಆದರೂ ಮಾಡಬಾರದ ಆಜ್ಞೆಯನ್ನು ಮಾಡಿದರೆ ಅದಕ್ಕೆ ಕಟ್ಟುಬೀಳುವು ದೆಂತು ? (ಮುಹಾಇ. ೨೪). ೫. ಗೌರವಯುಕ್ತನಾದವನು ; ಪೂಜ್ಯ ನಾದವನು : "ಮಾನ್ಯಂ ಪ್ರಕೃಷ್ಟಂ" (ಶಬ್ದಕೋ. ೦೦೦-೦೪); ಸವಿಗೆಟ್ಟನ್ನ ವದೂಟವೇ ಕುಜನರೊಳ್ ಕೂಡಿರ್ಪವಂ ಮಾನ್ಯನೇ (ಸೋಮೇಶ. ೨೨); ನೀವು ಮಾನ್ಯರು ನಿಮ್ಮ ದಾಸಿ ಮಹಾಮಿಗಡೆ (ಬಸಪು. ೩೩-೩೭) ; ಮಾನ್ಯರೆ ಮಾನ್ಯರ ಹಿರಿಮೆಯನರಿವರು ಅರಿಯರು ನೀಚರಾದವರು (ತಿಂತಿಣ. ೨೨೩-೨). ೬. ಇನಾಮು ; ಬಹುಮಾನ ; ಉಡುಗೊರೆ : ಇತರರು ಐದುರೂಪಾಯಿ ಸಂಬಳ ಕೊಡುವ ಕಡೆ, ನಾನು ಎಂಟುರೂಪಾಯಿ ಕೊಡುತ್ತೇನೆ . . . ಹಬ್ಬ ಹುಣ್ಣಿಮೆ ಅಂದರೆ ಅದಕ್ಕಾಗಿ ಬೇರೆ ತಸ್ತೀಕು ಕೊಡುತ್ತೇವೆ. ಅವರಿಗೆ ಮಾನ್ಯಗಳು ಇವೆ (ಬುಳ್ಳಿ. ೦೪೪). ೭. ದಾನವಾಗಿ ನೀಡಿದ ಭೂಮಿ ; ಉಂಬಳಿ : ಅಯ್ಚಕಬ್ಬೆ ತಮ್ಮ ಮಾನ್ಯದೊಳಗೆ ಮಟ(ತ)ಕ್ಕೆ ಕೊಟ್ಟ ಕಯ್ಮತ್ತ ೫೦ (ಎಇ. XVII, ೬-೨೭ ; 1004) ; ತನ್ನ ಮಾಂನ್ಯದೊಳಗೆ ಕೊಟ್ಟ ಹರಳ ಕೆಯ ಕಂಭ ೧೦೦ (ಎಇ. XIX, ೨೭-೭೩ ; 1245) ; ಪ್ರಭುಗಳು . . . ತಾವೂ ದೇವರ ಅಖಂಡದೀಪಕ್ಕೆ ಶಾಶ್ವತ ಮಾನ್ಯಗಳನ್ನು ಕೊಂಡುಕೊಟ್ಟು, ದೇವ ದೇವಿಯರಿಗೆ ಮಸ್ತಾಲಂಕಾರ ಭೂಷಣಗಳನ್ನು ಅರ್ಪಿಸಿದ ಮೇಲೆ (ಶಂಕರಾ. ೦೨). ೮. (ತೆರಿಗೆಯನ್ನು) ರದ್ದುಗೊಳಿಸುವಿಕೆ ; (ತೆರಿಗೆಯ) ವಿನಾಯಿತಿ,— ರಿಯಾಯಿತಿ : ದಣ್ಣಾಯಕರು ಸಾಮ್ಯ ತರಬಾಳಿಕೆ ಅನುವು ಮಾನ್ಯವಾಗಿ ವೊಕ್ಕಲಿದ್ದರು (ಎಕ. XII, ತಿಪ. ೭೭-೦೭; 1379). ೯. ಒಪ್ಪಿಗೆಯಾದುದು ; ಸಮ್ಮತಿ ಪಡೆದುದಂ : ಆದರೆ ಈ ಹೇಳಿಕೆ ಮಾನ್ಯವಾಗಲಿಲ್ಲ (ಪ್ರಾಚಿ. ೦೩೭). ೧೦. ಸಾಮಂತರಾಜ ; ಮಾಂಡಲಿಕ. ೧೧. (ಪತ್ರ ಬರೆಯುವಾಗ) ಗೌರವಸೂಚಕವಾಗಿ ಸಂಬೋಧಿಸುವ ಶಬ್ದರೂಪ.

**ಮಾನ್ಯದಂಗಡಿ** = ದಾನವಾಗಿ ಪಡೆದ ಅಂಗಡಿ : ದೇವರಂಗಡಿ ಮಾನ್ಯ ದಂಗಡಿಯೆಂನದುಡಿಸುರಿಯಂ ಕೊಂಡು ಹಸರಂಗೆಯ್ದು ಮಾಱುವಂಗಡಿ ಗಳೊಳಿಲ್ಲ . . . ಪ್ರತ್ಯೇಕ ಬರಿಸಕ್ಕೆ ಹಾಗವೊಂದು (ಕಇ. II, ೨೦-೨೪; 1147). [ಸಂ.]

**ಮಾನ್ಯಂಗುಡು** (ಕ್ರಿ). (ಭೂಮಿಯನ್ನು) ದಾನವಾಗಿ ನೀಡು ; ಉಂಬಳಿ ಕೊಡು : ಪನ್ನಿಮ್ಮರ್ತ್ತಕ್ಕೆರ್ಯ್ಯಂ ಮಾನ್ಯಂಗುಡುಗೆಸ್ದು ಪೇಟ್ ಧೋರನ ಬೆಸದೊಳ್ ನನ್ನಿವೆಡೆಂಗಂ ತನ್ನಟ್ಟಿಯ ಕೊಟ್ಟು ಕಜ್ಜೆಗೆ ಯಶಮುಂ ಪಡೆದಂ (ಕಇ. II, ೪-೩; 918). [ ಮಾನ್ಯ + ಕುಡು$_1$ (< ಕೊಡು$_1$) ]

**ಮಾನ್ಯಕರಣ** (ನಾ). ಮನ್ನಣೆ ಪಡೆದ ಅಧಿಕಾರಿ; ಪಟೇಲ : ಪಟೇಲನಿಗೆ ಪಟೇಲ, ಗೌಡ, ನಾಡುಗೌಡ, ಎಜಮಾನ, ರೆಡ್ಡಿ, ಪೆದ್ದಕಾಪು, ಮಾನ್ಯ ಕರಣಂ, ಮಣೆಗಾರ. . . ವಗೈರೆ ಹೆಸರುಗಳುಂಟು (ಗ್ರಾಮಾಜೀ. ೦). [ಸಂ.]

**ಮಾನ್ಯಕಾಜಿ** (ನಾ). ಉಂಬಳಿಯನ್ನು ಪಡೆದವನು ; ಭೂಮಿಯನ್ನು ದಾನವಾಗಿ ಪಡೆದವನು : ಸೆಟ್ಟಿಯರ್ಪನ್ನಿಸಿಗರ್ಗಾವುಣ್ಡಗಳೊಡಲಾಗಿ ಮಾನ್ಯಕಾಜಿಮಾರ್ಗ್ಗಜುಶಾಪ್ರಹೆಗೆ ವರಿಯರ ಗದ್ಯಾಣವನ್ನಿಟುವರ್ (ಶಾಇ. IX–i, ೭೭-೨೯; 992) ; ಕೋಗಳಿಯು ಬದ್ದೆಗನ ವೃತ್ತಿಯು ಮಾನ್ಯಕಾಜಿರುಂ ತೊಲಗಿಸುವ ಧರ್ಮ್ಮಮಂ ಮಜಿದು ದೆಯ್ವಕೆ ಕಾಳು ಕಾಜಿಯಿಕ್ಕಿದವ

ಪ್ಪೊರ್ಲೆಯುರ್ (ಸೌಇಇ. IX – i, ೦೦೭–೩೭; 1055).

[ಮಾನ್ಯ + – ಕಾಜಿ ]

**ಮಾನ್ಯಖೇಟ,** ಮನ್ನೆಖೇಟ, ಮನ್ನೆಖೇಡ (ನಾ). ಒಂದು ಊರಿನ ಹೆಸರು ; ℙ ಈಗಿನ ಗುಲ್ಬರ್ಗಜಿಲ್ಲೆಯ 'ಮಳ್‌ಖೇಡ್' ಎಂಬ ಹಳ್ಳಿ. ಇದು ರಾಷ್ಟ್ರಕೂಟ ಅರಸರ ರಾಜಧಾನಿಯಾಗಿದ್ದಿತು : ಮಾನ್ಯಖೇಟಪುರವರಮುಂ ಗೋನೂರುಮುಚ್ಚಂಗಿಯುಂ ಬನವಾಸಿದೇಶಮುಂ . . . ಕಾದಿ ಗೆಲ್ದು (ಎಕ. II, ೩೯–೯೯; 974). **ಮನ್ನೆಖೇಟ :** ಮನ್ನೆಖೇಟದಿ ತೆಂಕ ನಿನ್ನ ದೇಗುಲ (ಎಕ. VIII, ಶಿಕಾ. ೩೨–೩; 800). **ಮನ್ನೆಖೇಡ :** ಶ್ರೀಪೃಥ್ವೀವಲ್ಲಭಮಹಾರಾಜಾಧಿರಾಜ. . . ಚಲದಂಕಕಾಱಂ ಮನ್ನೆಖೇಡದೊಳ್ ಪೃಥ್ವೀರಾಜ್ಯಂಗೆಯುತ್ತಮಿರೆ (ಎಕ. XI, ಚಿತ್ರದು. ೩೦–೩; 968). [ℙ ಇದು 'ಮಳ್‌ಖೇಡ್' ಎಂಬುವರ ಸಂಸ್ಕೃತೀಕರಣ ರೂಪ]

**ಮಾನ್ಯಗಾಣಿಕೆ** (ನಾ). ಉಂಬಳಿ ಪಡೆದವರು ಕೊಡುವ ಕಾಣಿಕೆ : ಹತ್ತುವರಹದ ಹೊಲ ಮಾನ್ಯದ ಹೊಲವನ್ನು ಪಾಲಿಸಿಯಿರ್ಧೇವೆ . . ಜೋಡಿ ಮಾನ್ಯಗಾಣಿಕೆ ಸಹ ಪೊಳಗಾಗಿ ಪಾಲಿಸಿದ್ದೇವೆ (ಎಕ. XI, ಹೊಳಲ್ಕೆ. ೩೯–೨೨; 1755). [ ಮಾನ್ಯ + ಕಾಣಿಕೆ (< ಕಾಣ್ಕೆ) ]

**ಮಾನ್ಯತನ** (ನಾ). ಗೌರವ ; ಹಿರಿಮೆ ; ಘನತೆ : ಮಾತಿನಲ್ಲಿ ಮಾನ್ಯತನ ಮನದಲ್ಲಿ ಆಶೆ ಎಂಬ ತೊಱೆಯು ಹಾಯಬಾರದೆ ಹರಿವುತ್ತಿದೆ (ಬೋಳಬಸ. ೩೯–೦೩೭). [ ಮಾನ್ಯ + – ತನ ]

**ಮಾನ್ಯತೆ** (ನಾ). = ಮಾನ್ಯತನ : ಆ ಮುನೀಶ್ವರನಿದಿರುಗೊಂಡೀ ರಾಮಚಂದ್ರನ ಸಕಲಸುಗುಣಸ್ತೋಮಸಾಂದ್ರನನಧಿಕಮಾನ್ಯತೆಯಿಂದ ಸತ್ಕರಿಸಿ (ತೊರರಾ. ೩–೦–೦೭); ಯಾವುದಾದರೊಂದು ಉಪಭಾಷೆ ಅನೇಕ ಕಾರಣಗಳಿಂದಾಗಿ ಮಾನ್ಯತೆಯನ್ನೂ ಜನಪ್ರಿಯತೆಯನ್ನೂ ಪಡೆದು . . . ಆದರ್ಶಭಾಷೆಯಾಗಿ ಹಬ್ಬಬಹುದು (ದ್ರಾಭಾ. ೩೮೦). [ ಸಂ. ಮಾನ್ಯತಾ ]

**ಮಾನ್ಯದರೆ** 'ಮಾನ್ಯದೆಱೆ' ನೋ.

**ಮಾನ್ಯದೆಱೆ,** ಮಾನ್ಯದರೆ (ನಾ). ದತ್ತಿಯಾಗಿ ನೀಡಿದ ಭೂಮಿಯ ಮೇಲೆ ಹಾಕುತ್ತಿದ್ದ ತೆರಿಗೆ : ಸಯಂಭುದೇವರ ಎಂಭತ್ತು ಮತ್ತರು ಕೆಯ್ಯ ಮಾನ್ಯದೆಱೆಯುಂ ಧಾರಾಪೂರ್ವಕಂ ಮಾಡಿ ಸರ್ವ್ವನಮಸ್ಯಮಾಗಿ ದೇವರ್ಗ್ಗೆ ಬಿಟ್ಟರು (ಸೌಇಇ. XX, ೭೦–೩೨; 1109). **ಮಾನ್ಯದರೆ :** ಶ್ರೀನರಸಿಂಘ ದೇವರ್ಗ್ಗೆ ಬಿದಿರ್ಪಳ್ಳಿಯೂರೊಡೆಯರ ಮಾನ್ಯದರೆಯು ಕೆಯ್ಯ ಮೂಡಣ ಪತುಗೆಯಲಿಪ್ಪತು ಮತದರೆಯು ಕೆಯ್ಯ ತೆಱಯಂ ತೆತ್ತು ಮಿಕ್ಕುದು ... ಮಣಲ ಕೆಯಿ ಮತ್ತ ೬ (ಸೌಇಇ. IX–i, ೦೨೦–೦೨ ; 1058).

[ಮಾನ್ಯ + ತೆಱೆ₃]

**ಮಾನ್ಯದ್ವಿಷತೆ** (ನಾ). ಗೌರವಸ್ಥರಾದವರಲ್ಲಿ ಉಂಟಾಗುವ ದ್ವೇಷ : ಮಾನ್ಯದ್ವಿಷತೆ ಪತಿತಸಮೇತವಾತ್ಮಸ್ತುತಿಯೆನಿಪ್ಪವನು ಬಿಸುಟು ತದ್ವಿಪರೀತದಲಿ ವರ್ತಿಸುವನವನೇ ರಾಜನು (ಕುಮಾ. ೩–೭೦).

[ಸಂ. ಮಾನ್ಯದ್ವಿಷತಾ]

**ಮಾನ್ಯವಂತ** (ನಾ). ಗೌರವಸ್ಥ ; ಮಾನ್ಯನಾದವನು : ನೀ ಮಾನ್ಯವಂತರವೋಲು ಬೋಸರಿಪೆ (ಅಜಿತಾ. ೦೯–೯೮). [ಸಂ. ಮಾನ್ಯವತ್]

**ಮಾನ್ಯಪೊಲ** (ನಾ). ದತ್ತಿಯಾಗಿ ಬಂದ ಜಮೀನು ; ಮಾನ್ಯದ ಭೂಮಿ : ಬಡಗಪೊಲದ ಮನ್ನೆಯಸಾಮ್ಯದ ಮಾನ್ಯಪೊಲದೊಳಗೆ . . . ಒರಿಯ ಕೋಲೊಳ್ ಧಾರಾಪೂರ್ವ್ವಕಂ ಮಾಡಿ ಬಿಟ್ಟ ನೆಲಂ ಮತ್ತರು ೧೫೦ಕ್ಕೆ ನಿಬದ್ಧದರುವಣಂ ಗದ್ಯಾಣ ೧ (ಸೌಇಇ. XX, ೨೦–೩೦; 1019).

[ಮಾನ್ಯ + ಪೊಲ]

**ಮಾನ್ಯೆ** (ನಾ). ಗೌರವವುಳ್ಳವಳು ; ಮರ್ಯಾದಸ್ಥೆ. [ಸಂ. ಮಾನ್ಯಾ]

**ಮಾಪ₁** (ನಾ). ಲಕ್ಷ್ಮಿಯ ಪತಿ ; ವಿಷ್ಣು ; ಮಾಧವ : ಮಾಪ ವಿಧಿ ಶಕ್ರಮುಖ್ಯರುಗಳ ವರಮನೋರಥಸಿದ್ಧಿಯಿತ್ತು ರಕ್ಷಿಸುವ ಶಂಕರ ಎನಗೆ ಚಂಪಕದ ಪೂವ ಪೂಜೆಗೆ ಕೊಟ್ಟು ಪೊರೆವುದಾಗದೆ (ಶ್ರೀಕರಾ. ೦೦–೩೦) ; ಮಾಪನಂ ನೋಡಿ ನತಿಗೆಯ್ಯದಿಲ್ಲಿಹರೆಯನಲಾ ಪದ್ಮನಾಭ ಬೇದುದು (ರಾಶಕ. ೦೯–೭೮). [ಸಂ.]

**ಮಾಪ₂** 'ಮಾಪ್ಯ₂' ನೋ.

**ಮಾಪಕ** (ಗು). ೧. ಅಳತೆಮಾಡುವ ; ಅಳೆಯುವ. (ನಾ). ೨. ಅಳೆಯುವ ಸಾಧನ ; ಮಾನದಂಡ : ಇತರ ಎಲ್ಲ ಕಲಾಕೃತಿಗಳನ್ನು ಪರಾಮರ್ಶಿಸಲು ರಜಪೂತಕಲೆಯನ್ನೂ ನಾನು ಮಾಪಕವಾಗಿಟ್ಟುಕೊಂಡಿದ್ದೇನೆ (ಕಾರಡ. ೩೨೨). [ಸಂ.]

**ಮಾಪಡಿ** (ನಾ). ದೊಡ್ಡ ಅಳತೆಯ ಪರಿಮಾಣ ; ದೊಡ್ಡಪಡಿ : ಏಸು ಕೆಲಸವನಱಿಯದಂತೆ ಹೇಳ್ದಡೆ ಮಾಡಿ ಬೇಸಱಕೆಯುಳಲುದೋಱದ ಭಕ್ತಿಭಾವಮಂ ಲೇಸೆಂದು ಮೆಚ್ಚಿ ರಾತ್ರಿಯಲಿ ಮಾ[ಪಾಠಾಂ. ಮಹ]ಪಡಿಯ ಪರಿಯಾಣ ಪಾತ್ರೆಯನಿತ್ತನು (ಸಿದ್ಧರಾ. ೯–೨೯). [ಮಾ₄ + ಪಡಿ₁]

**ಮಾಪಥ** (ನಾ). ದೊಡ್ಡಬೀದಿ ; ರಾಜಮಾರ್ಗ ; ಹೆದ್ದಾರಿ : ಮಹಾಪಥ — ಮಾಪಥ (ಶಬ್ದ.೨೯೦ ತ್ರಯೋ). [< ಸಂ. ಮಹಾಪಥ]

**ಮಾಪತಿ** (ನಾ). = ಮಾಪ₁ : ವಿತರಣಗುಣದೊಳಪ್ರತಿಮನಾಗಿರುತ ಮಾಪತಿ ಬೇಡೆ ಕವಚವನಿತ್ತು ನುತಕೀರ್ತಿವಡೆದನೀ ಕ್ಷಿತಿಯೊಳಗತಿತ್ಯಾಗಿ ಹತ ಕರ್ಣನೆಂಬುದೆ ತಥ್ಯ (ಕೃಕಹೂ. I, ೯೪) ; ಮಾಪತಿ ಕಳಂಬ ಕರಾಳ ಕರ್ಕಶ ಕಾಲವೈರಿ ಪುರಾರ್ದನಾಜಿತಸುರಾಧ್ವರ ಧೀರ ಶಂಕರ ಚಂದ್ರಶೇಖರ ಪಾಲಯಾ (ಹಮ್ಮಿರ. ೬–೪೭). [ ಸಂ. ]

**ಮಾಪನ** (ನಾ). ಅಳತೆಮಾಡುವಿಕೆ ; ಅಳೆಯುವಿಕೆ : ಹಾಲಿನೊಳು ಬೆಣ್ಣೆ ಕಡಲೊಳಗೆ ನೀರ್ಗಲ್ಲವೊಲು ತೇಲುವುದವೋಯುಸತ್ತ್ವದಲಿ ವೇದು ಜಗಮೂಲದಶೆಯೊಳಗೊಂದು, ಮಾಪನದ ಬಗೆಗೆರಡು ಗಾಳಿಯುಸಿರುಗಳಂತ (ಶುಂಕುಳ. ೦೦೦); ಅವರು ಸಂಗೀತಶಾಸ್ತ್ರಕ್ಕೆ ಸಲ್ಲಿಸಿದ ಸೇವೆಯ ವಿಮರ್ಶೆಯು ಮಾಪನವನ್ನು ಇಲ್ಲಿ ಕಾಣಬಹುದು (ಸಂಗೀತ. VI, ೨೯೬೪). [ಸಂ.]

**ಮಾಪಳ₁** 'ಮಾಪಿಳ್ಳೆ' ನೋ.

**ಮಾಪಳ₂** (ನಾ). ದೊಡ್ಡಹಣ್ಣು ; ಭಾರಿಹಣ್ಣು : "ಮಾಪಳ (ಲ) — ಮಹಾಫಲ" (ಕರ್ನಕೋ. ೩೩). [ಮಾ₄ + ಪಳ₂ (<ಪಲ₂)]

**ಮಾಪಳ₃** 'ಮಾಪಾಳ' ನೋ.

**ಮಾಪಾರಿ** (ನಾ). ಒಂದು ದೇಶ ಮತ್ತು ಆ ದೇಶದ ಕುದುರೆ : ಮಾಪಾರಿ ಹುರುಮಂಜಿ ಯಾಸುಸಾಂಬ್ರಾಣಿ ಕಲಹತಿ ಚೇರಮಾನಿಯೆಂಬೀ ಸಜಿಳು ಪುಟ್ಟಲಾ ದೇಶವೆಸರಿಂದಲಾ ಕುದುರೆಗಭಿಧಾನಮುಕ್ಕುಂ (ಮಂಗರಾ. ೬೩–೨೦). [ ? ]

**ಮಾಪಾಳ,** ಮಾಪಳ₃ (ನಾ). ಔಷಧಕ್ಕೆ ಬಳಸುವ ಒಂದು ಬಗೆಯ ಕಾಯಿ ; ℙ ಸಾಮಾನ್ಯವಾಗಿ ಎಳೆಯ ಮಕ್ಕಳ ನಾಲಿಗೆಯ ಮೇಲೆ ಮಡು ಬಂದಿದ್ದರೆ, ಮಿಾಯಿಸುವಾಗ ಈ ಕಾಯನ್ನು ತೇದು ನಾಲಿಗೆಗೆ ಹಚ್ಚಿ ಮಡು ತೆಗೆದು ಬಾಯನ್ನು ತೊಳೆಯುತ್ತಾರೆ : ದಾಳಿಂಬೆ ತೊಗಟೆ, ಮಾವಿನ ಬೀಜ, ಸೈಂಧವಲವಣ, ಮಾದಳ ತುಣ್ಣು (ಮಾಪಾಳದ ಕಾಯಿ) . . . ಇವನ್ನು ಸಮಭಾಗ ಹಾಕಿ ಚೂರ್ಣ ಮಾಡಿ ಮಜ್ಜಿಗೆಯೊಡನೆ ಸೇವಿಸಲು ಆಮಾತಿಸಾರ, ರಕ್ತಾತಿಸಾರ ಮತ್ತು ಅಜೀರ್ಣಶೂಲೆ ಇವೆಲ್ಲಾ ಗುಣವಾಗುವುವು (ಸಳಪ್ಪ. ೯೭೩ ೩೦). **ಮಾಪಳ₃ :** ಸೂರ್ತಿಮಣದ ಮೇಲೆ ಕಿಮ್ಮತ್ತು ಆಗಶಕ್ಕ ಜಿನಸುಗಳು, ೧ ಅಕ್ಕಲಖಾರ . . . ೧೯ ಮಾಪಳಕಾಯಿ (ಶುಂಠಿಶಾ. ೦೨೨).

[ ?./ತುಳು. ಮಾಪಲ = ದೊಡ್ಡ ಮಾದಳಹಣ್ಣು]

**ಮಾಪಿ** (ನಾ). ೧. (ದ್ರವ್ಯ, ಧಾನ್ಯ ಮುಂತಾದುವನ್ನು) ಅಳತೆ ಮಾಡುವ ಒಂದು ಸಾಧನ. ೨. ಅಳತೆ : ೨ ಮಣದವು ೩೨ ಚೀಲ

ಗಳಾಗುತ್ತವೆ. ಅಂದ ಮೇಲೆ ವಜನಿ (ತೂಕದ್ದು) ಮತ್ತು ಮಾಪಿ (ಅಳತೆ) ಇದ್ದರೂ ಒಂದು ೧ ಟನ್ನಿನ ಭರತಿ ಇರಬೇಕು (ಮುಂಬವ್ಯಾ. ೧೯೦).

[ಸಂ. ಮಾಪಿನ್]

**ಮಾಪಿಜಿನಿಸು**, ಮಾಫಿಜಿನಸು (ನಾ). (ತೂಕಕ್ಕೆ ಸಂಬಂಧಿಸದ) ಘನ ಅಳತೆ ಅಥವಾ ಘನಪರಿಮಾಣದ ಪದಾರ್ಥ; ಕಾಳು, ಧಾನ್ಯ ಮುಂತಾದುವು : (೯). **ಮಾಫಿಜಿನಸು** : ಅಕ್ಕಿ ಮುಂತಾದ ಮಾಫಿಜಿನಸು ತುಪ್ಪ ಮುಂತಾದ ವಜನೀಜಿನಸು . . . ಖರೀದಿ ಮಾಡಿ (ವ್ಯಆ. ೦೯೩೯. ೨೫-೬ ; 1826). [ಮಾಪಿ + ಜಿನಿಸು (<ಜಿನಸು)]

**ಮಾಪಿಸು** (ಕ್ರಿ). ೧. ಅಳತೆಮಾಡು ; ಅಳೆ. ೨. ಬೆಲೆಕಟ್ಟು ; ಮೌಲ್ಯ ನಿರ್ಧರಿಸು : ವಿಧಿಯಿಂ ಗುರುವಿಂ ಸೋಮಂ ಮಾಪಿಸಂ ಕಾಲದಲ್ಲದಂ ತಪೋತೇಜಂಗಳಿಂ ಶತ್ರುಸೈನ್ಯಂಗಳನು ಮಳ್ಗಿಪಂ (ಸಾಶಂಶ. ೨-೩೬). [ಮಾಪನ + -ಇಸು$_3$]

**ಮಾಪಿಳ್ಳ** 'ಮಾಪಿಳ್ಳೆ' ನೋ.

**ಮಾಪಿಳ್ಳೆ**, ಮಾಪಳ$_1$, ಮಾಪಿಳ್ಳ, ಮಾಪ್ಲಾ (ನಾ). ಭಾರತದ ಪಶ್ಚಿಮ ಸಮುದ್ರತೀರದಲ್ಲಿ ವಾಸಿಸುವ, ಬಹುಶಃ ಅರಬ್ಬೀ ಪುರುಷ ಮತ್ತು ಭಾರತೀಯ ಸ್ತ್ರೀ ಸಂಬಂಧದಿಂದ ಜನಿಸಿದ ಮುಸಲ್ಮಾನರ ಒಂದು ಜನಾಂಗ : ವಿಸ್ತಾರವಾಗಿ ಮಡಗಿ ಮಾರುವ ಮಾರುವಾಡಿಯರು ಮಾಪಿಳ್ಳೆಯರು (ಸಾಗಂ. ೦೩೫-೩) : ಕೆಲವು ಮಾಪಿಳ್ಳೆಯರನ್ನು ಆ ದಳವಾಯಿ ಬಳಿಗೆ ಕಳುಹಿಸಿ ಚಿರಕಲ್ಲ ರಾಜರು ನಿಮಗೆ ಕರಾರು ಮೀರಿ ಹಣ ಕೊಡುವುದು ಇಲ್ಲ . . . ಎಂತ ತಿಳಿಸಿದ್ದರಿಂದ (ರಾಜೇಂದ್ರ. ೦೦) ; ಮಲಬಾರ್ ಡಿಸ್ಟ್ರಿಕ್ಟು ದಕ್ಷಿಣಕೆನರಾ ಡಿಸ್ಟ್ರಿಕ್ಟಿಗೆ ದಕ್ಷಿಣದಲ್ಲಿದೆ. ಮಾಪಿಳ್ಳೆಗಳು ಎಂಬ ಮಹಮ್ಮದೀಯರು ವಿಶೇಷವಾಗಿದ್ದಾರೆ (ಭೂಗೋಳ. ೯೬). **ಮಾಪಳ$_1$** : ಕೊಲ್ಲಂತ ಮಾಪಳವುರ್ಗಂತಾದ ಕೇರಳಮಂಡಲದ ಮನ್ನೆಯರ್ಕಳನೆರ್ದೆಗೆಡಿಸಿ ಮರಳ್ದಂ (ಕೇನ್ನ. ೬-೦೦). **ಮಾಪಿಳ್ಳ** : ಮಾಪಿಳ್ಳರು ಶ್ರಮಕ್ಕೆ ಮೆಚ್ಚಿದವರಾದಾಗ್ಯೂ ಉದ್ಧಟ ಸ್ವಭಾವದವರು (ಕಣಾಗ. ೨೯೯) ; ಬಜಿಲ . . . ಮಣಿ ಸರ್ಕಾರ-ಮಾಪಿಳ್ಳ (ತುಳುನಾ. ೦೬೨). **ಮಾಪ್ಲಾ** : ಕ್ರಿ. ಶ. ಏಳನೆಯ ಶತಮಾನದ ಹೊತ್ತಿಗೆ ಮುಸ್ಲಿಮರು ಹೆಚ್ಚುಸಂಖ್ಯೆಯಲ್ಲಿ ಮಲಬಾರಿನಲ್ಲಿ ನೆಲಸಿದ್ದರಿಂದ ಮಾಪ್ಲಾಗಳಲ್ಲೂ ಲಬ್ಬಿಗಳಲ್ಲೂ ಐತಿಹ್ಯವಿದೆ (ಭಾರತ. ೩೨೫).

[ದೇ.೫ ತಮಿ. ಮಾಪ್ಪಿಳ್ಳೈ : ಮಲ. ಮಾಪಿಳ್ಳ : ತುಳು. ಮಾಪ್ಪಿಳೆ, ಮಾಪಿಳ್ಳೆ, ಮಾಪ್ಪಳೆ, ಮಾಪ್ಳೆ]

**ಮಾಪು$_1$** (ನಾ). ಅಳಿವು ; ನಾಶ : 'ಮಾಪುಗೈ', 'ಮಾಪುಗೊಳ್ಳು' ಪರಾ.

[← ತೆಲು. ಮಾಪು = ಇಲ್ಲದಂತೆ ಮಾಡು ; ನಾಶಗೊಳಿಸು]

**ಮಾಪು$_2$**, ಮಾಪ$_2$ (ನಾ). (ದ್ರವ, ಧಾನ್ಯ ಮುಂತಾದುವನ್ನು) ಅಳತೆ ಮಾಡುವ ಸಾಧನ : ಕೃಷ್ಣೆಯ ಉತ್ತರದಲ್ಲಿ ೮೦ ರೂಪಾಯಿ ತೂಕ ಶುದ್ಧನೀರು ಹಿಡಿಯುವಷ್ಟು ಮಾಪಿಗೆ ಒಂದು ಶೇರೆಂದೆನ್ನುವರು (ಕಣಾಗ. ೨೯೯) ; ಅವನು ಮಾಪನ್ನಿಡುವುದನ್ನೂ ತುಂಬುವುದನ್ನೂ ಲಕ್ಷಿಸಿ ನೋಡಿ, ನಾಲ್ಕುಜನ ಕೂಡಿದವರಲ್ಲಿ ಅವನನ್ನು ಕೊಂಡಾಡಿಬಿಟ್ಟಿರುವರು (ಶೀಳ. ೨). **ಮಾಪ$_2$** : ಇಲ್ಲಿಯ ವಜನ ಮಾಪಗಳ ನಿಯಮಗಳು ಎರಡನೇ ಸ್ಥಳಗಳಂತೆ ಇರದೆ (ಮುಂಬವ್ಯಾ. ೬ ಪ್ರಸ್ತಾವನೆ). 'ಮಾಪಿ' ಪರಾ.

[← ಮರಾ. ಮಾಪ್ / ಸಂ. ಮಾಪಕ]

**ಮಾಪುಗೈ** (ಕ್ರಿ). ಇಲ್ಲದಂತೆ ಮಾಡು ; ನಾಶಗೊಳಿಸು : ಕರದ ಚಾಪವನ್ನು ನೆಗಪಿ ಶರದ ಕೋಪದಿಂದ ಬಿಡಲು ರಾಮ ಮಾಪುಗೈದು ತಿರುಗಿ ನೋಡಿದ (ವಾಲಕಾ. ೦೨). [ಮಾಪು$_1$ + ಗೈ (<ಕೆಯ್$_1$)]

**ಮಾಪುಗೊಳ್ಳು** (ಕ್ರಿ). ಇಲ್ಲವಾಗಿಸು ; ನಾಶಗೊಳಿಸು : ಆ ಪಾಪಿ ವಿಲ್ವೈರೋಚನಿಶಂಬರಾದ್ಯರು ಮಾಪುಗೊಂಡೆನ್ನ ಪಟ್ಟಣವಾಳುತಿಹರು (ಸಮುಪು. ೯). [ಮಾಪು$_1$ + ಕೊಳ್ಳು$_1$ (<ಕೊಳ್$_1$)]

**ಮಾಪುಗೋಲು** (ನಾ). ಅಳತೆಮಾಡುವ ಸಾಧನ ; ಅಳತೆಗೋಲು ; ಮಾನದಂಡ : ಇದು ಅಮೆರಿಕದ ಹೆಗ್ಗಳಿಕೆ, ಅವರ ಸಂಸ್ಕೃತಿಯ ಮಾಪುಗೋಲು (ವಾಡಿಗೇ. ೬೩). [ಮಾಪು$_2$ + ಕೋಲು$_1$ (<ಕೋಲ್$_1$)]

**ಮಾಪುತ್ರ** (ನಾ). ಲಕ್ಷ್ಮಿಯ ಪುತ್ರ ; ಮನ್ಮಥ : ಮಾಪುತ್ರಶರಮಿತ್ರ ಸುದಯವಾಗಲ್ಕೆದ್ದು ತಾ ಪುಷ್ಪ ತರ ಪೋಗೆ (ಪ್ರಶರಾ. ೦೦-೯೯). [ಸಂ.]

**ಮಾಪುರುಷ** (ನಾ). ದೊಡ್ಡಮನುಷ್ಯ ; ದೊಡ್ಡ ವ್ಯಕ್ತಿ : ಮಹಾಪುರುಷ --ಮಾಪುರುಷ (ಕಮರ. ೨೯೦ ಪ್ರಯೋ). [ಮಾ$_4$ + ಪುರುಷ]

**ಮಾಪ್ಲಾ** 'ಮಾಪಿಳ್ಳೆ' ನೋ.

**ಮಾಫ್** 'ಮಾಫು' ನೋ.

**ಮಾಫ** 'ಮಾಫು' ನೋ.

**ಮಾಫಿ** 'ಮಾಫು' ನೋ.

**ಮಾಫಿಜಿನಸು** 'ಮಾಪಿಜಿನಿಸು' ನೋ.

**ಮಾಫಿರಹದಾರಿ** (ನಾ). ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ಸರಕನ್ನು ಸಾಗಿಸಲೆಂದು ಮುಂಚೆಯೇ ಪಾವತಿ ಮಾಡಲಾದ ಹಣಕ್ಕೆ ಪ್ರತಿಯಾಗಿ ನೀಡುವ ಒಪ್ಪಿಗೆ ಪತ್ರ : (ಕೈಸಗ. II, ೬೩೩).

[ಮಾಫಿ (< ಮಾಫು) + ರಹದಾರಿ]

**ಮಾಫೀ** 'ಮಾಫು' ನೋ.

**ಮಾಫು**, ಮಾಫ್, ಮಾಫ, ಮಾಫಿ, ಮಾಫೀ (ನಾ). ೧. ತಪ್ಪನ್ನು ಮನ್ನಿಸುವುದು ; ಕ್ಷಮೆ : ಮಹಾರಾಜಶ್ರೀ ಕರಾಚೂರಿನಂಜರಾಜೈಯ್ಯ ಅರಶಿನವರು ಅಣ್ಣನವರಿಗೆ ಹೇಳಿ ಮಾಫು ಮಾಡಿಸ್ತರು (ಹೈದ. ೨೬). ೨. ರಿಯಾಯಿತಿ ; ಸೋಡಿ : ಆ ದಂಡಿನಲ್ಲಿರುವಂಥ ಸಾಮಾನು ಸರಂಜಾಮು ಏನು ಇದ್ದಾಗ್ಯೂ ಲಡಾಯಿ ಮಾಡುವ ಮಂದಿಗೆ ಮಾಫು ಕೊಡಿಸಬೇಕು (ರಾಜೇಂದ್ರ. ೬೦). ೩. (ತೆರಿಗೆ, ಶುಲ್ಕ ಮುಂತಾದುವುಗಳ) ರದ್ದು ; ವಜಾ : ಪಾಳುಭೂಮಿಯಲ್ಲಿ . . . ಸಾಗುವಳಿಮಾಡತಕ್ಕ ರೈತರು ವಾರಕ್ಕೆ ದರಖಾಸ್ತುಮಾಡಿದರೆ ಮೊದಲ ವರ್ಷ ಏನು ಹುಟ್ಟುವಳಿ ಆಗುತ್ತಾ ಇದೆಯೋ ಯಾವತ್ತೂ ರೈತರಿಗೆ ಮಾಫುಮಾಡಬೇಕು (ಮಹಾಶಂ. II. ೬೦). **ಮಾಫ್** : ೧. ಮಾಫ್ ಮಾಡಬೇಕು ತಪ್ಪಿದ್ದರೆ ! (ನಶ್ಯ. ೩೩) : ಇದೊಂದು ಸಾರಿ ಮಾಫ್ ಮಾಡಿಬಿಡಿರಿ (ಪಾಳೋ. ೦೦೦). ೩. ನಿಮ್ಮ ಜುಲ್ಮಾನೆಯನ್ನು ಮಾಫ್‌ಮಾಡುತ್ತೇನೆ (ಕಮಳ. ೦೬೬). **ಮಾಫ** : ೧. ಸಾಬರು 'ಮಾಫ' ಮಾಡಿದರು. ಬೇಡಿ ಸಡಿಲಾದವು (ಸಿಕೂರ. ೩೯). ೨. ಸರಕಾರೀತೆರಿಗೆಯನ್ನು ಅಂಶತಃ ಅಥವಾ ಪೂರ್ಣವಾಗಿ ಮಾಫ ಮಾಡಿರುತ್ತದೆ (ಬಿಜಾಭೂ. ೩೯). **ಮಾಫಿ** : ೧. ಕಾಲೇಜಿನಲ್ಲಿ ಅವರು ಏನು ಮಾಡಿದರೂ ಮಾಫಿ (ಸ್ವಪ್ನಹೊ. ೯೬೬). ೩. ಯಾವ ಸ್ಥಳಕ್ಕೆ ಈ ಪತ್ರಿಕೆಯನ್ನು ಕಳುಹಿಸಿದಾಗ್ಯೂ ಟಪಾಲು ಹಾಸಲು ಮಾಫಿ ಮಾಡಿ ಇದ್ದಾರೆ (ಶಾಶ್ವಿ. ೪೯೦). **ಮಾಫೀ** : ೨. ಯಾವುದಾದರೂ ಕರವನ್ನು ಹಾಕುವುದು, ವಜಾ ಮಾಡುವುದು, ಮಾಫೀ ಬಿಡುವುದು (ಕಾರಾವ. ೩೫). ೩. ನನ್ನ ಫೀ ಏನು ? ಇಂದಿನ ತನಕಾ ಅಂತೂ ಮಾಫೀನ ! (ರೀಶಹ. II, ೦೦).

[← ಅರ. ಮುಆಫ್, ಮುಆಫೀ ; ಹಿಂ. ಮರಾ. ಮಾಫ್, ಮಾಫೀ]

**ಮಾಬ** 'ಮೊಣ್' ಪರಾ.

**ಮಾಬಲ** (ನಾ). ೧. ದೊಡ್ಡಸೈನ್ಯ,-ದಳ : ಬಮ್ಮರಸಂ ಮಾಬಲವಂ ಕಾದಿ ಸ್ವರ್ಗಸ್ಥ [ನಾ]ದಂ (ಸಾಇಇ. IX- i, ೩೦೨-೦೩ ; 1057). ೨. ಒಬ್ಬಾತನ ಹೆಸರು : 'ಮಾಬಲಯ್ಯ' ಪರಾ. [ಮಾ$_4$ + ಬಲ$_3$]

**ಮಾಬಲಯ್ಯ** (ನಾ). ಒಬ್ಬಾತನ ಹೆಸರು : ರಾಜ್ಯಕ್ಕೀತಂ ಕೆತ್ತಿಗನೆನಿಪುದು ಮಂತ್ರಿಮಹೋತ್ತಮನಂ ಮಾಬಲಯ್ಯನೆಂದೊಗಟಿದರಾರ್ (ಎಕ. VII (R). ನಾಗಮಂ. ೯೯-೦೫ ; 972). [ಮಾಬಲ + ಅಯ್ಯ$_1$]

**ಮಾಭೈರವ** (ನಾ). ಶಿವನ ಒಂದು ರೂಪ : ಮಹಾಭೈರವ : ಚಂಡಿಕೆಯಾಗಿ ಪೀರ್ವ ಮಾಭೈರವನಾಗಿ ನುಂಗುವ ಮಹಾಸ್ಮಶಾನದೊಳ್ ಮೃಡಾರಿ ಕಾದಿದಂ (ಜಗ. ೧೩-೨೦). [ಮಾ$_{1}$ + ಭೈರವ]

**ಮಾಮ, ಮಾವ** (ನಾ). ೧. ಸೋದರಿಕೆಯ ಸಂಬಂಧದಲ್ಲಿ ಮಾವನಾಗಿರುವವನು ; **ಸೋದರಮಾವ** : ಶ್ರೀಮತ್ಪೆರ್ಮಾನಡಿಗಳಾ ತಮ್ಮಂ ಬೂತರಸ ತಮ್ಮ ಕುದಿರೂರೊಳ್ಕವಿ × × × ಬವರದೊಳ್ಕಿಚ್ಚು ಜುಬಿ ಸತ್ತೊ ಅವರ ಮಾವು ತಿಪ್ಪುವೆಂದೆಯು ಮಾದವಾಡಿಯ ಬಾಳ್ಗಚ್ಚು ಕೊಟ್ಟೊ (ಮೈ ಆಂ. ೧೯೩೦, ೯೯-೪ ; 886) : ನೀಮೆನಗಿನಿತಂ ಕೆಮ್ಮನೆ ಮಾಮನಂ ನೊಂದು ಬೆಸಸಿದಿರ್ (ಶಂಶಭಾ. ೦೨-೯೯) ; ಬಲಕ್ಷಾವುಂ ಮಾವಂ ನಿಮಗೆ ಪೊಡೆವೇಟ್ಟಿಟ್ಟಿದ[ನಿದಂ] (ಕೃಷ್ಣಕೃ. ೭-೮೦). **ಮಾವ** : ೧. ನೀಮುಂ ಪೋಗಿ ನಿಮ್ಮ ಮಾವನ ಪಕ್ಕದೊಳೋದಿಮೆಂದೋಲೆಯುಂ ಬರೆಯಿಸಿ ಕೊಟ್ಟೊಡೆ (ಪಶ್ಚಾ.ರಾ. ೩-೬) ; ಎನ್ನ ಕನ್ನಿಕೆಯಾ ಕಾಲದೊಳ್ ನಾನೆನ್ನ ಮಾವಂ ಕುಂತಿಭೋಜನ ಮನೆಯೊಳ್ ಬಳೆವಂದು ದುರ್ವಾಸಮಹಾಮುನಿ . . . ವರವಿತ್ತರ್ (ಶಂಶಭಾ. ೦-೦೦೬ ವ) ; ಮಾವನಲ್ಲಿಗೆ ಬಂದಡಾ ಮಾದ್ರಾವನೀಪತಿ ಶಲ್ಯ ಮಿಗೆ ಸಂಭಾವಿಸಿದನೊಲಿದಿತ್ತನೀತಂಗಖಿಳವಸ್ತುಗಳ (ಕುಮ್ಮಾಸ. ೬-೬). ೨. ಗಂಡನ ಅಥವಾ ಹೆಂಡತಿಯ ತಂದೆ : "ಶ್ವಶುರ ಶ್ವಶ್ರೂನಾಮವದೆಸಗುಂ ಕೂಸಿತ್ತ ಮಾವನೊಳಮತ್ತೆಯೊಳಂ" (ಮಮ್ರಕೋ. ೩೬-೨೪) ; ಈತಂ ನಿಮ್ಮ ಮಾವನೆಂದಾಗಳ್ ಕುಮಾರನುಮಿದಿರೆಟ್ಟು ತದ್ಯೋಗ್ಯಮಪ್ಪ ವಿನಯಮುಂ ಗೆಯ್ದು ದ್ರೋಣನಂ ವಿದ್ಯಾಧರೇಂದ್ರಂ ಕುಮಾರನಂ ನೋಡಿ ... ಸಂತುಷ್ಟಚಿತ್ತನಾಗಿ (ಪಶ್ಚಾ.ರಾ. ೩೬-೦೦) ; ನೀಂ ಲಲಿತಾಂಗಚರನೆಯಪ್ಪುದಱಿಂದಂ ಸ್ವಕೀಯಪ್ರಾಣೇಶ್ವರಿ ತತ್ಸ್ವಯಂಪ್ರಭಾದೇವಿ ನಿಮ್ಮ ಮಾವಂ ವಜ್ರದಂತಚಕ್ರವರ್ತಿಗಂ ನಿಮ್ಮತ್ತೆ ಲಕ್ಷ್ಮೀಮತಿಮಹಾದೇವಿಗಂ ಶ್ರೀಮತಿಯೆಂಬ ಮಗಳಾಗಿ ಪುಟ್ಟಿದಳ್ (ಆಪು. ೪-೦೬ ವ); ರಾಯನಾವೆಡೆ ಜೀಯ ಕಲಿ ರಾಧೇಯನಾವೆಡೆ ಸೂಜುಮಕ್ಕಳು ಬೀಯವಾದರೆ ಮಾವ ಎಂದರು ಸೊಸೆಯರಡಗೆಡೆದು (ಕುಮ್ಮಾಶ. ೧-೩). ೩. ಗೌರವಾರ್ಥವಾಗಿ ಹಿರಿಯರನ್ನು ಸಂಬೋಧಿಸುವಾಗ ಬಳಸುವ ಮಾತು : ಎಮ್ಮಯ್ಯಂ ಮಾವನೆಮ್ಮ ಮುತ್ತಯ್ಯಂ ಮತ್ತೆಮ್ಮ ಗುರುವೆಂದು ಮಱಿಯುವನಮ್ಮೊಱಿಯುವನಾಗೆ ಜಾರೆಯರ್ವಂಚಿಸುವರ್ (ಸಮಶ. ೩-೩೦).

**ಮಾವನಂಕಕಾಱ** = ಮಾವನ ವಶವರ್ತಿಯಾಗಿ ಯುದ್ಧಮಾಡುವ ವೀರ ; ಒಂದು ಬಿರುದು : ಮಾವನಂಕಕಾಱ ಶ್ರೀಮಾದಿ ಮಹಾಪ್ರಳಯಕಾಲಭೈರವಪಣ್ಡಿತದೇವರ ಪಾದಾರಾಧಕಂ ಪರಬಳಸಾಧಕಂ ನಾಮಾದಿ ಸಮಸ್ತಪ್ರಸಸ್ತಿಸಹಿತಂ (ಕೌಇಇ. XI-i, ೯೭-೨೦ ; 1062) : ವೈರಿಮಣ್ಡಳಿಕ ವಿಭ್ರಗಬೇಂಟೆಕಾಱಂ ಚೋಳಕಟಕಸರ್ವ್ವಸ್ವಸೂಱೆಕಾಱಂ ಮಾವನಂಕಕಾಱಂ (ಎಕ. VI, ಕೊಪ್ಪ. ೪೩-೧೭ ; 1090). **ಮಾವನಗಂಧವಾರಣ** = ಒಂದು ಬಿರುದು : ಅಭಿಮಾನಗಳ್ಕನಪಿತರಗಣ್ಡಂ ಮಾವನಗನ್ಧವಾರಣಂ (ಮೈ ಆಂ. ೧೯೩೩, ೪೦-೩೦; 951); ಶ್ರೀಮದಾಹ[ವ]ಮಲ್ಲದೇವ ಪಾದಪಂಕಜಭ್ರಮರಂ ಮಾವನ ಗನ್ಧವಾರಣಂ (ಕೌಇಇ. XI-i, ೫೭-೦೪ ; 1020).

**ಮಾವನಮನೆ** = ೧. ಸೋದರಮಾವನ ಮನೆ : ಪದೆಪುಗೆಡ[ಲ]ಪ್ಪೆಯೊಡವುಟ್ಟಿದ ಮಾವನಮನೆಯೊಳುಂಡುಟ್ಟುಂ ನೀಪೊದೆದೊಡಗೆಯ್ದಿಯೊ ನಾಯುಣ್ಣದ ದೋಣಿಯೊಳೂಡಿದೊಂಗೆ ಪವಯಿದನೆ ಕರ್ಮ (ಸುಕುಮಾ. ೨-೩೯). ೨. ಗಂಡನ ಅಥವಾ ಹೆಂಡತಿಯ ತಂದೆಯ ಮನೆ : ಸೊಸೆ "ನಮ್ಮ ಮಾವನ ಮನೆ ಥಾಲುಕ್ಕಿದಂಗೆ ಉಕ್ಕಲಿ" ಎನ್ನುತ್ತಾಳೆ (ನಮ್ಮೂರು. ೦೦೩); ಈ ಅಳಿಯದೇವರುಗಳು ಮಾವನ ಮನೆ ಬಿಡದೆ ಭದ್ರವಾಗಿ ಹೆಂಡಂದಿರ ಜೊತೆ ಇದ್ದುಬಿಟ್ಟರು (ಮಾಮನೆ. ೨೦೦). ೩. (ಆಲಂ) ಊಟಉಪಹಾರಗಳ ಮಂದಿರ ; ಹೋಟೆಲು : ಊಟ ತಿಂಡಿಗಳಿಗೆ ಹೇಗೂ ಮಾವನ ಮನೆ ಇದ್ದೇ ಇದೆ. ಮುಲಗುಪ್ಪಕ್ಕೊಂದು ರೂಪು ಮಾಡಿ ಕೊಂಡರೆ ಸಾಕು (ಶೂ೨). ೪. ಸೆರೆಮನೆ : ಕಾರಾಗೃಹ : ಅವನು ಕಳ್ಳತನ ಮಾಡಿ ಮಾವನ ಮನೆ ಸೇರಿದ (ಶೂ೨). 'ಅತ್ತೆಮನೆ' ಪರಾ. **ಮಾವನಸಿಂಗ** = ಮಾವನ ವಶವರ್ತಿಯಾಗಿ ಸಿಂಹದಂತೆ ಪರಾಕ್ರಮದಿಂದ ಹೋರಾಡುವವನು ; ಒಂದು ಬಿರುದು : ಪರಾಂಗನಾಪುತ್ರ ಸಗಳಗುಣಗಣೋತ್ತುಂಗ ಮಾವನ ಸಿಂಗ ಜಿತವೈರಿ . . . ಶ್ರೀಮತ್ ಕಲಿಯಮ್ಮರಸಂ (ಕಕುಂ. ೬-೨೧; 1039).

[ದೇ.॥ ತಮಿ. ಮಾಮನ್, ಮಾಮಾ, ಮಾಮಾಣ್; ಮಲ. ಮಾಮನ್; **ಕೋತ.** ಮಮನ್; **ತೊದ.** ಮುಮುನ್; **ಕೊಡ.** ಮಾವೆನ್; **ತುಳು.** ಮಾಮೆ. ಮಾವೆ; **ತೆಲು.** ನಾಯ್ಕಿ. **ಪರ್ಜಿ.** ಕುಇ. ಮಾಮ; ಕುವಿ. ಮಮ, ಮಾಮ ; **ಕುರುಖ್.** ಮಮುಸ್ ; **ಮಲ್ತೊ.** ಮಮ; **ಬ್ರಾಹುಈ.** ಮಾಮಾ./ಹಿಂ. ಮರಾ. ಮಾಮಾ./ಪ್ರಾ. ಮಾಮ, ಮಾಮಗ, ಮಾಮಾ./ ಸಂ. ಮಾಮ]

**ಮಾಮಂಡಿ** (ನಾ). ಒಂದು ನದಿಯ ಹೆಸರು : ಮಾದದೀಮೀನದೀ ಮಾಮಣ್ಡಿ[ನ]ದೀ (ಇಆ. XIV, ೨೩೨-೩೩ ; ೪ನೆಯ ಶತ). [ ? ]

**ಮಾಮಂದಿರ** (ನಾ). ದೊಡ್ಡದೇವಾಲಯ : ಮಲ್ಲಿಕಾರ್ಜುನ ಮಾ[ಪಾಠಾಂ. ಮಹ]ಮಂದಿರಕ್ಕಾಗ್ನೇಯದಲ್ಲಿ ಜಲಜನಿತಸಲೆಯುಂ ನೋಡಿ ಕಱಯಗಲವಿಲ್ಲಿತ್ತನಕೆಂದು ಸೀಮಾರೇಖೆಯುಂ ಕಟ್ಟಿ (ಸಿದ್ಧರಾ. ೪-೦೬).

[ಮಾ$_{4}$ + ಮಂದಿರ]

**ಮಾಮಕ** (ನಾ). ೧. ನನ್ನದು ; ನನಗೆ ಸೇರಿದುದು : ಮಾಮಕವಿದೆಂದಾವುದಕೊ ತಾನೆ ಬಲಿಪೋಗಿ ಶಾಮನವನೊಂದುವುದು (ಮಂಕುತಿ. ೯೨೬). ೨. ನಮಸ್ಕರಿಸುವ ಒಂದು ರೀತಿ : ಸಾಮಾನ್ಯ ನಮಸ್ಕಾರಕೆ ಭಾವಿಸಿಯರ ಪುದರ ತ್ರಿವಳಿಗಡ್ಡಿರೆ ಕೈಯಾ ಮೈಗೆ ಮುಖದ ಮೇಲಿಡೆ ಮಾಮಕವೆಂದಕ್ಕು (ಶಪ್ತಾಸಿ. ೩೩). [ಸಂ.]

**ಮಾಮಕಾಚಿ** (ನಾ). ಒಂದು ಸ್ಥಳದ ಹೆಸರು (?) : ಅತುಂಬಿಗ ಭಟಾರರ್ ಮೆಚ್ಚಿ ಕೊಟ್ಟ ಕೊಡಜ್ಗಿ ಪದಿಕ್ಕೊರ್ಳ ಕಳನಿ ಮಾಮಕಾಚಿಯ ಕೆಳಗೆ ಪದಿಕ್ಕೊರ್ಳ ಪಾಟಿ (ಎಕ. X, ಮುಳಬಾ. ೯೩-೪ ; ಸು. 970). [ ? ]

**ಮಾಮನಿ** (ನಾ). ಮದುವೆಯಾದ ಬಳಿಕ ಬೀಗರನ್ನು ಕಳುಹಿಸಿ ಕೊಡುವಾಗ ನೀಡುವ ಔತಣ : ಆದುದಲ್ಲಿಂ ಮೇಲೆ ಮಾಮನೆ[ನಿ] ಮೇದಿನೀಪತಿ ಜನಕರಾಯಂಗಾ ದಿವಾಕರಕುಲಬಲಾಮಂಗಖಿಳವಿಭವದಲಿ (ತೊರರಾ. ೦-೦೬-೩೩) ; ಮೂರನೆ ದಿನ 'ಮಾಮನಿ' ಇತ್ಯಾದಿ ಕಾರ್ಯಗಳನ್ನು ತೀರಿಸಿಕೊಂಡು ಗಾಳಿಪುರಕ್ಕೆ ಬಂಡಿಕಟ್ಟಿದರು (ಬೆಂದು. ೪೦) ; ಮರುದಿನ ಗಂಡಿನವರ ಮಾಮನಿಯ ಊಟಕ್ಕೆ ಅಕ್ಕನ ಜೊತೆಗೆ ನಾನೂ ಹೋಗಿದ್ದೆ (ವೃಶಿ. ೨೩).

**ಮಾಮಾನೀಪ್ರಸ್ಥ** = ಬೀಗರ ಊಟ : ಮಾಮಾನೀಪ್ರಸ್ತ ಒಂದುಳೀತ ದಲ್ಲಾ (ಹಿತುಗು. ೩೪) ; ಒಂಭತ್ತನೇ ದಿವಸ ವರಪಕ್ಷದವರ ಮಾಮಾನೀಪ್ರಸ್ತ ನಡೆಯಿತು (ಮಂಜುಕ. ೧೯೦). [←ಹಿಂ. ಮೆಹಮಾನೀ = ಆತಿಥ್ಯ]

**ಮಾಮನೆ** 'ಮಹಾಮನೆ' ನೋ.

**ಮಾಮರ** (ನಾ). ಮಾವಿನ ಮರ : ದಂಡಕರಿಸಿಯರ್ . . . ಮಾ[ಪಾಠಾಂ. ಮಾವಿನ]ಮರದ ಕೆಳಗೆ ಸ್ವಾಧ್ಯಾಯಂಗೆಯ್ಯುತ್ತಿರ್ದರ್ (ಪಶ್ಚಾ.ರಾ. ೧೬೨-೦೩); ಸೊಗಯಿಸಿ ಬಂದ ಮಾಮರನೆ ತಳ್ತಿಲೆವಳ್ಳಿಯೆ ಪೂತ ಜಾತಿಸಂಪಗೆಯೆ . . . ನೋಟ್ಪೊಡಾವ ಬೆಟ್ಟುಗಳೊಳಮಾವ ನಂದನವನಂಗಳೊಳಂ ಬನವಾಸಿ ದೇಶದೊಳ್ (ಪಂಪಭಾ. ೪-೨೮); ಎತ್ತಣ ಮಾಮರ ಎತ್ತಣ ಕೋಗಿಲೆ ಎತ್ತಣಿಂದೆತ್ತ ಸಂಬಂಧವಯ್ಯ (ಅಪಸಂ. ೦೩-೩೯). [ಮಾ$_{3}$ (<ಮಾವು) + ಮರ$_{1}$]

**ಮಾಮಲತಿ, ಮಾಮಲೇತಿ, ಮಾಮಿಲತ್ತು** (ನಾ). ೧. ತಹಸೀಲ್ದಾರನ ಕೆಲಸ : ತಹಸೀಲುದಾರಿಕೆ : ಮಾಮಲತಿ ಮುನಸಫಿ ಮಾಡುವ

ಮನುಷ್ಯನ ಸಂಬಳವನ್ನು ಬಿಟ್ಟು ಕಿರಾಣಿ ಅಂಗಡಿಕಾರನು ಗಳಿಸುತ್ತಿರುವನು (ಚಿತ್ರಾ. ೩೯). **ಮಾಮಲೇತಿ :** ೧. ನಮ್ಮ ಶೇಷಣ್ಣ ಆಗ ಬಿ.ಎ. ಆಗಿದ್ರ ಆಗ ಬೇಕಾದಂಥಾ ಪ್ರೊಬೆಶನರ ಮಾಮಲೇತಿ ಮಾಡುತಿದ್ದಾ ಇಷ್ಟೊತ್ತಿಗೆ (ವೃಶಿ. ೦೩) ; ನಿಮ್ಮ ಮಕ್ಕಳ ಬುದ್ಧಿ ನೋಡಿದರ ಅವರು ಮಾಮಲೇತಿ ಮಾಡಬಹುದು (ಕುಗಹು. ೬೭). **ಮಾಮಿಲತ್ತು :** ೨. ವ್ಯವಹಾರದ ಮಾತು ; ಕಾರುಭಾರು : ಸರಪದ್ದ ಏನಾದರೂ ಹೆಚ್ಚು ಕಡಿಮೆ ಆದರೆ, ನಮ್ಮ ಜಿಹ್ವೆಯಿಂದಾ ನಾವು ಹೇಳದೆ ಇದ್ದಾಗ್ಯೂ ಉಭಯಕಡೆ ಜನರು ಹೇಳ್ತಾರಷ್ಟೆ. ತಾವು ಮಾಮಿಲತ್ತು ತಿಳಿಯುವಂಥಾದ್ದು ರಾಸ್ತಿ ತೂಕ ಮಾಡುವಂಥಾದ್ದೂ ತಮ್ಮ ಹಸ್ತದ ಆಟವಿದೆ (ಶಾಕೇಂದ್ರ. ೨೬೨).

[← ಅರ. ಮುಆಮಲತ್, ಮುಆಮಿಲತ್ ; ಮರಾ. ಮಾಮಲತ್, ಮಾಮಲೀಯತ್ ; ಹಿಂ. ಮಾಮಲತ್, ಮಾಮಲತೀ]

**ಮಾಮಲೆ, ಮಾಮ್ಲೆ** (ನಾ). ೧. ಉದ್ಯೋಗ ; ಕೆಲಸ ; ದಂಧೆ : ಇಬ್ಬರು ಮಕ್ಕಳೂ ತಮಗಿಂತಲೂ ಹೆಚ್ಚಾಗಿ ಓದಿ ತಮ್ಮ ಮಾಮಲೆಗಿಂತ ಹೆಚ್ಚಿನ ಹುದ್ದೆಗೆ ಬರಬೇಕೆಂದು ಭೀಮರಾಯರಿಗೆ ಬಹಳ ಆಸೆ (ಕುರಾಯ. ೯೯). ೨. ವ್ಯಾವಹಾರಿಕ ಅಥವಾ ವಿವಾದಾಸ್ಪದವಾದ ವಿಷಯ : ಝಾನ್ಸಿ ರಾಜ್ಯದ ಮಾಮಲೆಯನ್ನು ನಿರ್ಣಯಿಸಲು ಒಂದು ಸಮಿತಿಯು ಏರ್ಪಟ್ಟಿತು (ಝಾನ್ಸಿ. ೭). ೩. ತಾಲ್ಲೂಕಿನ ಕಂದಾಯವನ್ನು ನಿಗದಿಮಾಡಿ ವಸೂಲುಮಾಡುವ ಕೆಲಸ,– ಉದ್ಯೋಗ : ತಹಸೀಲುದಾರಿಕೆ : 'ಮಾಮಲೇದಾರ' ಪರಾ. **ಮಾಮ್ಲೆ :** ೩. ಮಾಮ್ಲೆ ಮಾಡೋರು ನಿನ್ನ ಅಷ್ಟು ಅಕ್ಕರೆಯಿಂದ ಮಾತಾಡಿಸಿ ಬುದ್ಧಿಹೇಳಿ ಕಳ್ಸಿದ ಮ್ಯಾಲೆ . . . ಎಚ್ಚರಿಕೆಯಿಂದಿರೋದು ಒಳ್ಳೇದು (ಸಂಗ್ಯಾ. ೧೮೦).

[← ಅರ. ಮುಆಮಿಲಾ ; ಹಿಂ. ಮರಾ. ಮಾಮಲಾ]

**ಮಾಮಲೆದಾರ** 'ಮಾಮಲೇದಾರ' ನೋ.

**ಮಾಮಲೇತಿ** 'ಮಾಮಲತಿ' ನೋ.

**ಮಾಮಲೇದಾರ, ಮಾಮಲೆದಾರ, ಮಾಮ್ಲೆದಾರ** (ನಾ). ತಾಲ್ಲೂಕಿನ ಕಂದಾಯವನ್ನು ನಿಗದಿಮಾಡಿ ವಸೂಲುಮಾಡುವ ಅಧಿಕಾರಿ; ತಹಸೀಲುದಾರ : ಹುನಗುಂದದಿಂದ ಮಾಮಲೇದಾರರು ವಕೀಲರು ಆ ಸಮಾರಂಭಕ್ಕೆ ಬಂದಿದ್ದರು (ಹೋಬಮ. ೦) ; ಮಾಮಲೇದಾರರ ಉಪದೇಶದಂತೆ ಮನೆಯಲ್ಲಿ ತನ್ನ ಕಾಯಿದೆಯನ್ನು ಹಾಗೂ ಇತರ ಕೇಸುಗಳನ್ನು ಅಭ್ಯಸಿಸತೊಡಗಿದನು (ಗಂಪೂಯ. ೭೬). **ಮಾಮಲೆದಾರ :** ಅತಿಕುಪಿ ಕಾಲ್ಕು ಮಾಮಲೆದಾರ ಸುಬ್ಬರಾಯನ ಸೇವೆ (ಎಕ. VI (R), ಕಾಂಡಪ. ೨೦೩–೫; 1867); ಗಂಡನಿಗೊಂದು ಎಂಜಲು ತೊಳೆಯುವ ಕೆಲಸವಿದ್ದುಕೊಂಡೇ ಇಷ್ಟು ಆಡುತ್ತಾಳೆ. ಇನ್ನು ಅವನೇನಾದರೂ ಮಾಮಲೆದಾರನಾಗಿದ್ದರೆ ಇನ್ನೆಷ್ಟು ಮಾಡುತ್ತಿದ್ದಳೊ ? (ಶತಂಗ. ೦೨). **ಮಾಮ್ಲೆದಾರ :** ನಾ ಈವತ್ತು ಕಚೇರಿಗೆ ಬರೂದುಲ್ಲ ಅಂತ ಮಾಮ್ಲೆದಾರ ಸಾಹೇಬರಿಗೆ ಹೇಳಿ ಬಾರೋ (ಧವಂತ. ೨೩).[ ← ಮರಾ. ಮಾಮಲೇದಾರ್]

**ಮಾಮಸಕ** (ನಾ). ೧. ಅತಿಯಾದ ಸಿಟ್ಟು,–ರೋಷ : ಧಗಲು ಭುಗಿಲೆನುತೆ ಮಾಮಸಕದಿಂ ಮಸಗಿ ತೊಸೆದು ಬಸುಜಿಂ ಪೊಸೆದು ಹೊಯ್ದು ನೆಲನಂ ತಿರುಗಿ (ತಿರುಕ. ರೇ. ೦೬–೩): ಮಾಮಸಕದಿನೆಟ್ಟಿಂದು ರಕ್ಕಸಂ ಬಿಲ್ಲಿಡೆಯುಂ ಪೊಸ ನೆತ್ತರ ಪೂರಂಗಳ್ ಮಸಗುವಿನಂ ಕುಸುರಿದಜಿದು ಕೆಡಪಿದನಾಗಳ್ (ಉತ್ತರಾ. ೯–೭೦); ಮಾಮಸಕಂ ನಿಷ್ಠುರವಚನಮೆಂಬಿವಂ ಪರಿಹರಿಸುವದು (ಶೀತಿಮಂ. II. ೦೫). ೨. (ಅಧಿಕವಾದ) ವಿಜೃಂಭಣೆ,– ಸಂಭ್ರಮ,– ಸಡಗರ : "ಸಂಭ್ರಮವೇ ಮಾಮಸಕಂ" (ಶಕುಶಿ. ೪೦); ಎಡವರಿಯದಡಿಯಿಡುವ ಮಾಮಸಕಕಂಜಿ ಮಣಿಕಟ್ಟಿಮತ್ತಳದ ಪೂವಲಿಯಂ ಬಿಟ್ಟು ಪಾಜುವ ಮಧುವಿಹಂಗಗಳ ಹುಂಕಾರದೊಳಂ (ಕಾವ್ಯಲ. ೬೭); ರಥದ ಕೂಡೆ ಮಾಮಸಕದಿಂ ಕುಣಿವ ಕುದುರೆಗಳ ಬಳಗದಿ ಭೂಮಿ ಬೆಸಲಾದುದೆಂಬಂತೆ ಪರಿಜನದ ತಿಂತಿಣಿಯೊಳಿ ದಿಗೋರ್ಣಂಡರವನಿಪನನು (ಹತಕ. ೦೯–೨೯); ಪೊಸ ಮಾಗಿ ಮದವಾಜ಼ಿ ಮಾಪಂಕುರಂದೋಜಿ . . . ವಿರಹಿಗಳ ಬಾಯಾಜಿ ಮಾಮಸಕದಿಂ ಬಂದನು ವಸಂತನು (ಸಿದ್ಧರಾ. ೪–೬೭).

**ಮಾಮಸಕಂಮಸಗು, ಮಾಮಸಮಸಗು** = ಅತಿಯಾದ ಕೋಪದಿಂದ ಕೆರಳು : ಮುರಾಂತಕನಂತಕನಂತೆ ಮಾಮಸಕಂ ಮಸಗಿ ದುರ್ಯೋಧನನನಿಂತೆಂದಂ (ಸಂಶಾ. ೯–೯೮ ವ); ಕುರುಕುಲಕೃತಾಂತಕನಂತಕನಂತೆ ಮಾಮಸಕಂ ಮಸಗಿ ಪ್ರಳಯಕಲ್ಪಸಂಕಲ್ಪಂಗೆಯ್ದು (ಗದಾಯು. ೬–೦೯ ವ); ಮನಮಂ ಮುನಿಸಿಂ ಮುಸುಂಕೆ ಮಾಮಸ ಮಸಗಿ . . . ಕಳವಳಿಸಿ ಪೋಪ ಕೆಳದಿಯು ಬಜಿಸಂದು (೦ಳಾವ. ೦೯–೩೩ ವ); ದೆಸೆದೆಸೆಗೆ ಹರಿಹುದು ಮಾಮಸ ಮಸಗಿ ಬಾದಣಗೊರೆದು ಕೆಡಹುವ ಪಿಷಮವೀರರು ಘಾಡಿಸಿತು ಡೊಂಕಣಿಯ ತುದಿಗಳಲಿ (ಕುಪ್ಪಾಶಿ. ೯–೪೫). [ಮಾ₄ + ಮಸಕ₁]

**ಮಾಮಸಕಂಗೊಳ್** (ಕ್ರಿ). ಅತಿಯಾದ ಕೋಪವನ್ನು ತಾಳು ; ಹೆಚ್ಚಾದ ರೋಷದಿಂದ ಕೆರಳು : ದೆಸೆಯಂ ಬಿಡಾಗಂಶುಜಾಲಂ ಬೆಳಗೆ . . . ದಿಗ್ವೇತಂಡಮಂ ಡಿಂಡಿಮರುತಿ ಚಕಿತಂ ಮಾಡೆ ದೃಪ್ಯದ್ಬಳಂ ಮಾಮಸಕಂಗೊಂಡೆತ್ತಿ ಬಂದಂ ಬಗೆಯದೆ ಪೃಥಿವೀಪಾಲನುಗ್ರಾಜಿರೋಲಂ (ಸಂದ್ರಪ್ರ. ೦೦–೫೯). [ಮಾಮಸಕ + ಕೊಳ್₁]

**ಮಾಮಸಗು** (ಕ್ರಿ). ೧ = ಮಾಮಸಕಂಗೊಳ್ : ಮುಸಲ ಮುಸುಂಡಿ . . . ಮುದ್ಗರಗಳ ವಿಸರದಿಂ ಹೊಯ್ದಿಜಿದಾಡಿವರಂದು ಮಾಮಸಗಿ ಮಹಾರಾವೃತರು (ಕುಮಾಸಾಂ. ೦೩–೯೯). ೨. ವಿಜೃಂಭಿಸು ; ಸಂಭ್ರಮಿಸು: ಉತ್ಸಾಹದಿಂದ ಕೂಡು : ಮುಸುಜಿದ ಕುಳಿರೊಳ್ ದೆಸೆಯೂಗಸವಿಳೆ ಬೆಟ್ಟಿಡಮಿಯೆಂಬಿವೆಂತಾನುಂ ಕಾಣಿಸಲಿರ್ತರ್ವಿಲ್ಲವೆನೆ ಮಾಮಸಗಿರ್ದುದು ಮಾಗೆ ಮಾಗೆಸಕೆವೆಸರಿಳೆಯೊಳ್ (ಕಬ್ಬಿಪು. ೬೫ ಕ್ರಯೋ). ೩. ಹೆಚ್ಚಾದ ಕಾಂತಿಯನ್ನು ಹೊಂದು ; ಪ್ರಕಾಶಿಸು: ಕಜಿದೊಂದುದ ಚಂದುಮಟ್ಟು ಮಾಮಸಗಿತ್ತೊ ಗಂಡುಮೇಳಗರ ಕೈ ಬೆಮರೊಂದದ ಸೂಳೆಮೇಳಮೇಂ (ಶಳಶಿ. ೬–೦೫೫). [ಮಾ₄ + ಮಸಗು]

**ಮಾಮಳೆ** (ನಾ). ಜೋರಾಗಿ ಬೀಳುವ ಮಳೆ; ಭಾರಿಮಳೆ: ಮಾಮಳೆ ಸಮುದ್ರದೊಳ್ ಕಜಿದಂದವ್ಯೆಸೆ ನಿಮ್ಮಾ ಮನಃಪ್ರೀತಿ ಕೈಗೂಡು ವಂತೊರೆವೆನಾ ಶ್ರೀಮಹಾನಂದಿಯ ಮಹಾತ್ಮೆಯ ಕಥಾಕುತೂಹಲವನಾಲಿಪುದು (ನಂದಿಮಾ. ೨–೩೩). [ಮಾ₄ + ಮಳೆ (< ಮಟ₃)]

**ಮಾಮಾ₁** 'ಮಾ₂' ಪರಾ.

**ಮಾಮಾ₂** 'ಮಾ₄' ಪರಾ.

**ಮಾಮಾಯೆ** (ನಾ). ಒಂದು ವಸ್ತುವು ಮತ್ತೊಂದರಂತೆ ತೋರುವುದಂ : ಅವಿದ್ಯೆ; ಮಹಾಮಾಯೆ : ನೀಸೊಲವಿನ ಸಾಮ್ರಾಟ, ಮಾಮಾಯೆಯ ಕಣ್ಕಟ್ಟೀಟ (ಶಂತವ. ೨೫–೨೦). [ಮಾ₄ + ಮಾಯೆ]

**ಮಾಮಾರಿ** (ನಾ). ದುರ್ಗೆಯ ಒಂದು ಅವತಾರ : ಮಹಾಮಾರಿ : ಆ ರೂಪಿನಿಂ ಮೃತ್ಯುರೂಪಿನಿಂ ಕಾಲನಾ ರೂಪಿನಿಂ ಕೃತಾಂತಾಖ್ಯನಲ್ಲಿ ಮಾರಿಯಲ್ಲತ್ಯುಗ್ರಮಾರಿಯಂತಲ್ಲಿ ಮಾಮಾರಿಯಾ ಚಿತ್ರಗುಪ್ತಾಧಿಕರಣಂ (ಶಾಪಂಶ. ೫–೦೦). [ಮಾ₄ + ಮಾರಿ₂]

**ಮಾಮಿ** (ನಾ). ಸೋದರಮಾವನ ಪತ್ನಿ; ಅತ್ತೆ : ಈವರೆಗೆ ಮಾಮಾ ಮತ್ತು ಮಾಮಿ ತನ್ನನ್ನು ಮಗನೆಂದೇ ನೋಡಿರಬಹುದೆಂಬ ವಿಚಾರದಿಂದ ಅವನು ಪುಳಕಿತನಾದನು (ಗಂಪೂಯ. ೦೨೩). [ದೇ. ತಮಿ. ತುಳು. ಹರ್ಜ. ಮಾಮಿ. / ಮರಾ. ಮಾಮಿ, ಮಾಮೀ ; ಹಿಂ. ಮಾಮೀ. ಪ್ರಾ. ಮಾಮಿಯಾ, ಮಾಮೀ. / ಸಂ. ಮಾಮೀ]

**ಮಾಮಿಡಿ** (ನಾ). ೧. ಮಾವಿನ ಹೀಚು : ಮಾವಿನ ಕಸುಗಾಯಿ : ನಡೆಗಲಿಸುತ್ತುಮಂಚೆಗಳನೋದಿಸುತಂ ಗಿಳಿಯಂ ಪಿಕಕ್ಕೆ ಮಾಮಿಡಿಗಳ

ನಿಕ್ಕುತುಂ . . . ನಿರಂತರಂ ತೊಲಗದಿರ್ಪುದು ಪೌರಪಿಲಾಸಿನೀಜನಂ (ಮಲ್ಲಿಕೃ. ೨-೩೯); ಅಳಿಗಲರ್ಗೊಂಚಲ ಗಿಳಿಗೆ ಮಾಮಿಡಿಗಳ . . . ಈಕ್ಷುವಿಶಾ ಬನದೊಳಗಿಹತಂಬುಜಾಕ್ಷಿಯರು (ಕುಮಾಸಾಂ. ೪-೬೩). ೨. (ಉಪ್ಪಿನ ಕಾಯಿಗೆ ಬಳಸುವ) ಚಿಕ್ಕಗಾತ್ರದ ಒಂದುಬಗೆಯ ಮಾವಿನ ಕಾಯಿ : ಮಾಗುಳಿವೇರ್ಪೊಳೆಯಲ್ಲವೇಲಿ ಕಮ್ಮಿಪ್ಪ ಸುಭದ್ರೆ ಮಾಮಿಡಿ . . . ಅರೆಮಾದುಫಲಂಗಳಾದಿಯಾದುಪ್ಪಿನಕಾಯ್ಗಳಿಂ ಮಗ ಮಗಿಪ್ಪ ವನಿಕ್ಕಿದನಪ್ಪಪತ್ರದೊಳ್ (ಲೀಲಾವ. ೩-೬೩).

[ಮ್ಹಾ₃ (<ಮಾವು) + ಮಿಡ್ಡಿ₂]

**ಮಾಮಿಲತ್ತು** 'ಮಾಮಲತಿ' ನೋ.

**ಮಾಮುಗುಳ್** (ನಾ). ಮಾವಿನ ಮೊಗ್ಗು : ಮಾಮರಂ. ಮಾಮಿಡಿ. ಮಾಮುಗುಳ್ (ಶಬ್ದಾನು.೩೩೨ ಕೃ.ಮೋ). [ಮ್ಹಾ₃ (<ಮಾವು)+ಮುಗುಳ್₂]

**ಮಾಮೂಲ್** 'ಮಾಮೂಲು' ನೋ.

**ಮಾಮೂಲಿ** 'ಮಾಮೂಲು' ನೋ.

**ಮಾಮೂಲು**, ಮಾಮೂಲ್, ಮಾಮೂಲಿ (ನಾ). ೧. ರೂಢಿ : ಅಭ್ಯಾಸ : ರಾತ್ರಿ ಕೆಲಸವೆಲ್ಲಾ ಮುಗಿದ ಮೇಲೆ ಅಣ್ಣಾತಂಗಿಯರಲ್ಲಿ ಮಾಮೂಲಿನಂತೆ ಮಾತಿಗಾರಂಭವಾಯಿತು (ವಾಣಿಪ. ೦೫); ಪೈಪೋಟಿಯ ಕಾಲದಲ್ಲಿ ಹಾಲಿಗೆ ನೀರನ್ನು ಸೇರಿಸುವುದು, ಗೋಧಿಯ ಹಿಟ್ಟಿಗೆ ಬೆರಕೆ ಮಾಡುವುದು—ಇವು ಮಾಮೂಲಾಗಿ ಬಿಟ್ಟವು (ಶಿಲ್ಪಿನಾ. ೦೬೦). ೨. ಸಂಪ್ರದಾಯ ; ಪರಿಪಾಠ : ಈಗ ತತ್ವರಕ್ಷೆಯು ಬೆಳಕಿಲ್ಲದೆ ಮಾಮೂಲುಗಳ ಕುರುಡುಕತ್ತಲಲ್ಲಿ ಮುಳುಗಿವೆ (ಶಿಕ್ಷದ. ೭೫೦) ; ಸಂತೋಷದಿಂದ ನಗುವುದೂ ಮಾಮೂಲು ಮೀರಲಾರದೆ ವಿಸ(ಹಾ) ನಿಜವಾದ ಸನ್ನಿವೇಶದಿಂದ ಇರಲಿಲ್ಲ (ಹುಟ್ಟಿಹ. ೬). ೩. ರೀತಿ ; ರಿವಾಜು : ಕ್ರಮ : ಈ ವಾಯಿದೆ ಕಳೆದ ನಂತರ ಮಾಮೂಲಾಗಿ ಕೊಡಬೇಕಾದ ಗೇಣಿಯನ್ನು ಕೊಡಬೇಕಾಗುತ್ತದೆ (ಪ್ರವಾ. II, ೯೭೭). ೪. ದಿನನಿತ್ಯದ್ದು : ನಿಯತವಾದುದು : ಶ್ರೀಮಹಾಬಳೇಶ್ವರದೇವರ ಸಂನಿಧಿಯ ಬ್ರಾಹ್ಮಣರಿಂಗೂ ಮಾಮೂಲಿನಂತೆ ಶ್ರೀವೀರಕಾವದೇವರಸರು ಆಚಂದ್ರಾರ್ಕವಾಗಿ ಮಾಲೂರ ಗ್ರಾಮಾನುಮಾತ್ರದಿಂದಾ ರಾಜರು ಕೊಟ್ಟರು (ಎಇ. XXVII, ೦೬೨-೬೫: 1256) ; ಮಾಮೂಲಾಗಿ ಈ ಮನೆಗೆ ಇವಳದೇ ಹಾಲು ಸಪ್ಲೈ (ದೂಪಸಂ. ೦೦). ೫. ಲಂಚ : ಹೊಸದಾಗಿ ನೌಕರಿ ಹಿಡಿಯಬಯಸುವವರೆಲ್ಲಾ ಹೆಡ್‌ಕ್ಲಾರ್ಕರಿಗೆ ಇಪ್ಪತ್ತೈದು ರೂಪಾಯಿ 'ಮಾಮೂಲು' ಕೊಡಬೇಕಾಗುತ್ತದ (ಹಾಳೂರಿಲ. ೩೦) ; ತಾವು ಭಿಂದಾ ಲಾಗಾಯಿತು ಅವನಿಗೆ ಆಳುಕಾಳುಗಳ ಸಂಬಳದಲ್ಲಿ ಬರುತಾಯಿದ್ದ ಒಂದು ಭಾಗ ಮಾಮೂಲು ಬಂದಾಗಿ ಹೋಗಿತ್ತು (ಸಾಹೇಬ್. ೨೧೨); ಬರೆದ ಪತ್ರ ರಿಜಿಸ್ಟರಾಗಬೇಕಾದರೆ 'ಆಫೀಸಿಗೆ' ಮಾಮೂಲು ಸಲ್ಲಿಸಬೇಕು (ಗಂನಾಳ. ೬೦). **ಮಾಮೂಲ್** : ೪. ರಾತ್ರಿಯೂಟದ ನಂತರ ಒಂದು ಸುತ್ತು ನಡೆದಾಡಿ ಬರುವುದು ಅವರ ಮಾಮೂಲ್ ಪರಿಪಾಠ (ಕೂಂ). **ಮಾಮೂಲಿ** : ೧. ಇವರ ಮಾಮೂಲಿಯ ಮಾತುಗಾರಿಕೆಯು, ಕತೆಗಾರನ ಸರಸತೆಯನ್ನು ನಗೆಯಾಡುವಂತೆ, ತಾತ್ತ್ವಿಕನ ನೀರಸ-ವಿರಸಗಳ ಮಾರ್ಗವಾಗಿ ರಸಪರ್ಯ ಸತ್ಯಲೋಕದ ಶುಭ್ರತೆಯನ್ನು ಸೇರುವುದು (ವಿಚಾರಮಂ. ೯೯).

[← ಅರ. ಮಅಮೂಲ್ ; ಹಿಂ. ಮಾಮೂಲ್, ಮಾಮೂಲೀ : ಮರಾ. ಮಾಮೂಲ್, ಮಾಮೂಲೀ]

**ಮಾಮ್ಲೆ** 'ಮಾಮಲೆ' ನೋ.

**ಮಾಮ್ಲೆದಾರ** 'ಮಾಮಲೇದಾರ' ನೋ.

**ಮಾಯ್**, ಮಾಯು₁ (ಕ್ರಿ). ಮಾಯ್ದ (ಭೂತಕೃ), ಮಾದು₁, ಮಾಯ್ದು (ಭೂತನ್ಯೂ). ೧. ಕ್ಷಯಿಸು ; ಕ್ಷೀಣಿಸು : ತಪ್ಪಶೇಷಮಾಗಿ ಮಾಯ್ದಿನ್ನ ಶರೀರಮಂ ಪ್ರಿಯತಮಶರೀರಸಂಯೋಗಾಹ್ಲಾದದಿ ನಾಜಿಸಿದಪ್ಪೆಂ (ಕಾದಂಬ. ೫೯೭); ಸುಪದೆ ಕನಲ್ದ ಕಿಚ್ಚಿನೊಡನಾಡಿದ ತಂಬೆಲರಾತಪಂಗಳಂ ಕುಡಿದ ಸರೋರುಹಂ ಸುಡದೆ . . . ಹಿಮವುಂಡು ಬಾಟ್ಟಿ ತಣ್ಮಡುವಿನ ಪೂವೆ ಸುಟ್ಟಪುವು ಮಾಯ್ದು ವಿಯೋಗಿಗಳೆಂತು ಬರ್ದಪರ್ (ಅರ್ಧನೇ. ೪-೬೨). ೨. ಕಾಣೆಯಾಗು : ಮರೆಯಾಗು : ಮುಗುಳಂ ಮಾದ [ಶಾಶಾಂ.ಮ್ದ]ಲರಾಯ್ತು ಮೊಮ್ಮರಿಸಿನಂ ಕಂಪೋಡಿತೀ ಬೆಂದ ದೀಪಿಕೆಯುಂ ಕರ್ಗುಡಿವಟ್ಟುದೆನ್ನಿನಿಯನಿನ್ನುಂ ಬಾರನೇಕೆಂದು . . . ಸುಯ್ದುಂಬಿಕಾಂಬುಕಣಾನೀಕವನಿಕ್ಕಿದಳ್ (ಲೀಲಾವ. ೨-೫೪). ೩. ಕಾಂತಿಗುಂದು : ಬಣ್ಣಗೆಡು : ಮಂಕಾಗು : (೬). ೪. ಕಳೆದು ಹೋಗು ; ಇಲ್ಲವಾಗು : ಎನಗರಸುತನ ಮಾಯ್ದು [ಶಾಶಾಂ. ಮಾದು] ಹೋಗಿ ವಿಶ್ವಾಮಿತ್ರಮುನಿಗಾದುದು (ಹರಿಶ್ಚ. ೮-೭೩). ೫. (ಗಾಯ. ಹುಣ್ಣು. ಮುಂತಾದುವು) ಗುಣವಾಗು ; ವಾಸಿಯಾಗು : ಕೆಲವು ದಿವಸಕ್ಕೆ ಪುಣ್ಣೆಲ್ಲಂ ಮಾಯ್ದು ಲೇಸಪ್ಪುದುಂ (ಧರ್ಮಾಮೃ. ೦೨-೩೫); ಅದೇನು ದೊಡ್ಡ ಗಾಯವಲ್ಲ. ತನ್ನ ತಾನೇ ಮಾಯ್ದು ಹೋಗುತ್ತದೆ (ಮುಕ್ತಿಮ. ೦೮೨). ೬. ಸಾಯು ; ಮರಣಹೊಂದು : ನೆಟ್ಟನಿನ್ನೇಳಾಬಾಯ್ಯೆಮುನೀನ್ದ್ರಾದರದಜೀಂನ್ವಾಶ್ಚರ್ಯಮೇರುಂಜಗು ಒನ್ದು ತಿಂಗಳ್ವಾಸಮಂ ಭಾವಿಸಿ ಸಮಾಧಿಮರಣದಿನ್ದ ಮಾಯ್ದು ನೋನ್ತು ಸಗತಿಗೆ ಸನ್ದರ್ (ಎಕ. XIV. ಎಡತೊ. ೯೪-೦೫ ; 910). ೭. ಕೆಡು : ಹಾಳಾಗು ; ನಾಶವಾಗು : ಬಹುವರ್ಣ್ಣವಾಜಿರಾಜಿಗಳುಮನೆಯ್ದೆ ನೋಡಿ ಮನಮಿಕ್ಕಿ ಗಟಿಲ್ಲೆನೆ ಸತ್ತು ಮಾಯ್ದ ಲೋಭಿಗಳ ಪಪಣ್ಡೊಳಲ್ (ಎಕ. VII. ಶಿಕಾ. ೦೩೦-೩೯; 1047). ೮. ದುಷ್ಟತನವನ್ನು ಹೊಂದಿರು : ತೆಜಪನೆ ಪಾರ್ದಿರ್ಪಂ ಮಾಯ್ದುಜಗುಳಿ ಜವಂ (ಅಂತ್ಯ. ೪-೬೬); ಜನಪದವೆನಿತೊಳವನಿತಜಿಳೊಳೆನಿತೂರೊಳವನಿತುಮಂ ಪಲರ್ದೆಯುಮುದು ತಿಟ್ಟನೆ ತಿರಿದು ಮಾಯ್ದು ಡೊಂಬನ ಮನೆಯೊಳ್ ಮಲುಮಲನೆ ಮುಳುಗಿ ನಮೆಯುತ್ತಿರ್ಕುಂ (ಸುಕುಮಾ. ೫-೦೩); ಮಾಯ್ದು ವಿಧಾತ್ರನೆನ್ನಣುಗಿನಗ್ರುತನೂಜನೊಂತಗಲ್ಚಿ ಕೊಂಡುಯ್ದುಂ(ಚಂದ್ರಕೌ. ೫-೦೦).

**ಮಾಯು₁** : ೩. ಕಂಪಿನಲಿ ಸಾಮಾನ್ಯಮಾದಡೆ . . . ಇಂಪನೊಡಲಿಂಗೀಯದಿರ್ದಡೆ ಕೆಂಪು ಮಾದಡೆ ಗಂಧಕಾಂತಿಯ ಸೊಪ್ಪು ಬಜಿತಡೆ ಬಳಿಕಲಾ ಎಸಗೀಶನೊಡನಂಕ (ಬಸವು. ೨೭-೫). ೪. ಒಳಗೊಂದು ಅನಿಮಿಷಲಿಂಗವ ಕಂಡು ಎನ್ನ ಮನೋಪುಷ್ಪದಲ್ಲಿ ಪೂಜೆಯ ಮಾಡಿದಡೆ ನಾಚಿಕೆ ಮಾದು ನಿಸ್ಸಂದೇಹಿಯಾದೆನು (ಅವಹಂ. ೯೯-೧೦೭). ೫. ಕಂಚಿನ ಹರಿವಾಣದಲ್ಲಿ ಹಾಕಿ ತಾಮ್ರದ ಚೊಂಬಿನಿಂದ ಮರ್ದಿಸಿ ಅವೀಲಿ ಸುಣ್ಣಾ ಪವಡಗೆ ಹಾಕಿ ಹೋಂ[ಹೊಂ]ಗೆ ಹತ್ತಿಸುವದು. ಕಾಲುಮಂಡಲದೊಳಗೆ ಯಂತಾದ್ದು ಮಾಯುವವು (ಕೌತುಕಂ. ೩೪-೭) ; ವಿಜಯ ದುರ್ಯೋವನ ದಂಡು ಹಿಂದೆಗೆಯಿತು ಕಲೆಯುಳಿಯಿತು ಗಾಯ ಮಾದು (ಬಂಕಾಶ. ೭೨-೯೬); ಗಾಯ ಬೇಗ ಮಾಯುವುದಿಲ್ಲ (ನವಜೀ. ೦೬೫). ೯. ಪರಿಹಾರವಾಗು : ನಿವಾರಣೆಯಾಗು : ವಿಂಧ್ಯವಡವಿಯೊಳನಂತಕೋಟಿವ್ಯಂಗಂಗಳಿರ್ದಪ ವಪೆಲ್ಲವಂ ಕೊಂದಾ ನೆತ್ತರಿಂ ಪೇಡಕುಳಿಯಂ ಮಾಡಿಯಲ್ಲಿ ನೀಡುಮೋಲಾಡಿ ದೇಹದ ದಾಹಂ ಮಾದು ಸುಖಮಕ್ಕು (ಪುಣ್ಯಾಸ್ರ. ೯-೩೭ ವ) : ಶಿಶುವಿನ ವೇದನೆ ಮಾಯಿತ್ತು ನೋಡಾ (ಸಿದ್ಧೇಶ. ೫೦-೦೯೫). ೧೦. ಮುಗಿ: ತೀರು : ಮುಂದಣ ಕಾಳೆಗದ ಕರ್ಣಾಮೃತದ ಮಳೆಗಾಲ ಮಾದು ವಿಲೋಚನದ ಮಳೆಗಾಲವಾಯ್ತು (ಕುಮಾ.ಭಾ. ೨೭-೦). ೧೧. ಪಕ್ವವಾಗು: ಕಳಿ : ಮಾದಿಹ ಬಾಳೆ ಕಾಬಾಳೆ ಮೋದ ಸಕ್ಕರೆ ಮಾವು ನೇರಿಲೆವಣ್ಗಳ ಮಾನವರಿತ್ತರಾಳ್ಗನಿಗೆ (ಪೋತಹ. ೮೯ ೫೩). [ದೇ.॥ ತಮಿ. ಪರ್ಜಿ. ಗೊಂಡಿ. ಮಾಯ್ ; ಮಲ. ತುಳು. ತೆಲು. ಮಾಯು]

**ಮಾಯ** (ನಾ). ೧. ಗಾರುಡಿ ; ಇಂದ್ರಜಾಲ ; ಕಣ್ಕಟ್ಟು : ಮಾಯಮನೆಬೀಸಿ ಪೆಜರನುಪಾಯದೆ ತಕ್ಕಿಕ್ಕಿ ದೇವಕಾರ್ಯದೊಳಿನಿಸುಂ ನೋಯದೆ

ಸ್ವಾಮಿಯಿಂ ಸವಣರುಪಾಯಮುಮಂ ನಿನ್ನೊಳ್ ಕಣ್ಣ ಭಾವಿಸಿ ನೋಡಾ (ಧರ್ಮಾಮೃ. ೦-೦೦೨); ಮೃದುತಳಕಾಂತಿಯಿಂ ಮಿಳಿರ್ವ ಪೂಗುಡಿ ಕೆಂದಳಿರ್ದೊಂಗಲಂತೆ ತೋಱಿದೊಡದನೊಲ್ಲದೆ . . . ಮಾಮರನಲ್ಲಿದೊಂದು ಮಾಯದ ಮರನೆಂದು ಸಾರ್ದಳತಿಮುಗ್ಧೆ ಕುಜಾಂತರಮಂ ವನಾಂತದೊಳ್ (ಚಂದ್ರಪ್ರ. ೬-೦೦೬). ೨. ಮಿಥ್ಯೆ : ಭ್ರಾಂತಿ ; ತೋರಿಕೆ : ಭ್ರಮೆ : ಬಂದಪೆನೆಂದಱಿಯಲಿಕ್ಕಿಲ್ಲಾಗಿ ಸಂದೇಹ ಬಿಡದು ಮುಂದುಗಾಣದು ಲೋಕಬೆಂದ ಮಾಯಕ್ಕಂಜಿ ನಿಮ್ಮ ಮಱೆಹೊಕ್ಕೆ (ಬಸವ. ೪೨); ಇದು ಪಶುಪತಿಯು ಮಾಡಿದ ಮಾಯದ ವಿಧಿಯೆಂದು ತಿಳಿಯದೆ ಹಸಗೆಟ್ಟು ಹೋಯಿತ್ತು ನೋಡಾ ಮೂಜಗವೆಲ್ಲ (ಅಖಂಡೇ. ೭-೩). ೩. ಮೋಸ ; ವಂಚನೆ : ಕಪಟ : ಮಾಯದ ಟಕ್ಕಿನ . . . ಕಪಟೋಪಾಯದ ಕಲೆಗಳ್ ಸೇರಿದ ಸ್ತ್ರೀಯರ್ಕಳ್ ವಲಂ ಸರ್ವಜನವಂಚಕಿಯರ್ (ಧರ್ಮಾಮೃ. ೬-೦೫೬) : ಮಾಯದಬಲೆಯರು ಕಾಣುತ್ತ ಮರ್ಖು ಭಾವಧಟರಾಯ . . . ಎಂದು ಕೀರ್ತಿಸಿ ಗಾಣನಾಯಕಿಯರೆಂದು ದಂಡಿಗೆವಿಡಿದು ಪೊಡಮಟ್ಟು ಹಾಡಲುದ್ಯೋಗಿಸಿದರು (ಹಕಾ. ೬-೩) ; ಮಾಯವನನುಗೊಳಿಸದೆ ಮೈಮಱೆಸದೆ ಕಾಯಮನೋವಚನಗಳ ಆಯಸದಿಂದವಳವಳಿಯದೆ ಪತಿಯನುಪಾಯದಿಂದುಪಚರಿಸುವುದು (ಷಡಕ್ಷ. ೪-೯). ೪. ಪ್ರೀತಿ ; ವ್ಯಾಮೋಹ : ಬಾಯೊಳಗೆ ಬ್ರಹ್ಮಾಂಡಕೋಟಿಯ ದಾಯವನು ತೋರಿಸಿಯೆ ತಾಯಿಗೆ ಮಾಯದಲಿ ಮಗುವಾಗಿ (ಜಗನ್ನಾ. ೩-೨೪). ೫. ಗಾರುಡಿಗಾರ : ಐಂದ್ರಜಾಲಿಕ : ಇನ್ನೇನಹುದೆಂಬೆ ಇನ್ನೇನುಮಲ್ಲೆಂಬೆ ಎಲ್ಲಾ ಮಾಯವನು ನೀನಾಗಿ ಹಿರಿದಹ ಗಿರಿಯ ಹತ್ತಿ ಬಿದಿರ ತಱಿದವನಂತೆ ಒಂದ ಬಿಟ್ಟೊಂದು ಹಿಡಿವಡೆ ಅಲ್ಲಿಯೇ ಚೆಂದ (ಮೋಹನತ. ೨-೪). ೬. ಲಕ್ಷ್ಮಿ. ೭. ದುರ್ಗೆ.

**ಮಟಮಾಯ, ಮಟಾಮಾಯ, ಮಾಟಮಾಯ** (ದ್ವಿರುಕ್ತಿ) : ೧. ಇದಕ್ಕಿದ್ದಂತೆ ಪೂರ್ತಿಯಾಗಿ ಅದೃಶ್ಯವಾಗುವಿಕೆ.– ಕಾಣದಂತಾಗುವುದು : ಗಾಳಿಯೋ ಮಟಮಾಯ ಮಾತಾಡ ಮಳೆರಾಯ (ಅರಳು. ೪೯೯-೩) ; ಮಳೆಯಿರದಿರೆ ಎಲ್ಲವು ಮಟಮಾಯ (ಮುಕ್ತಕೆಂ. ೭೦-೦೪) : ಆ ಗಂಡ ಗಾಬರಿ ಆಗಿ ಪರಾರಿ, ಮಟಾಮಾಯ (ಪಡೆದ. ೧. ೩೩೮). ೨. ಅಸ್ಪಷ್ಟವಾದುದು : ಆ ಅಟ್ಟಂಬಟ್ಟಂ ಅರಣ್ಯದ ನಟ್ಟನಡುವೆ ಬೆಟ್ಟಗೋಟೆಯೊಂದನ್ನು ಕಟ್ಟಿದ್ದು . . . ಅದರ ಸುತ್ತಿನದೆಲ್ಲ ಮಾಟಮಾಯವಾಡು (ಬಣಾಮಂ. ೬೪). ☞ ಇವು 'ಕಟ್ಟಕಡೆ', 'ಬಟ್ಟಬಯಲ್' ಎಂಬುವುಗಳ ರೂಪಸಾಮ್ಯದಿಂದ ಮಾಡಿಕೊಂಡಿರುವ ರೂಪಗಳು. **ಮಟಮಾಯಗೆಯ್** = ಇದ್ದಕ್ಕಿದ್ದಂತೆ ಅದೃಶ್ಯಗೊಳಿಸು ; ಮಂಗಮಾಯಮಾಡು : ಮುದ್ದುಮುಖಾನ್ವಿತೆ ಶಿಶು ನಿನ್ನ ಮಗ್ಗುಲೊಳಿದ್ದುದ ಮಟಮಾಯಗೆಯ್ದು ಕದ್ದು ಕೊಂಡುಯ್ದು ಶಂಬರ ಶರಧಿಯೊಳಿಡೆ ಬಿದ್ದುದು ಮೀನ ಬಾಯೊಳಗೆ (ಕೋಹತ. ೦೩-೪೦). **ಮಟಮಾಯವಾಗು** = ಇದ್ದಕ್ಕಿದ್ದಂತೆ ಅದೃಶ್ಯವಾಗು,– ಕಾಣೆಯಾಗು : ಕಟಕಟ ಪುಟ್ಟಿದಾಕ್ಷಣ ಶಿಶು ನೋಡಲ್ಕೆ ಮಟಮಾಯವಾದುದಾಶ್ಚರ್ಯ (ಕೋಹತ. ೩-೦); ಶ್ರೀಪಾದನೂ ಎಷ್ಟೂ ತಿಳಿಯದಂತೆ ಮಟಮಾಯವಾಗಿದ್ದನು (ಆವಳ. ೩೦); ಸಣ್ಣ ಕೈ ಪಕ್ಕಿ ಮಟಮಾಯವಾಗಿ ನಿನ್ನ ತೊಡೆಯಲ್ಲಿತ್ತು ನೀನೆ ತಾಯಾಗಿ (ಗಂಗಾತ. ೩೦-೯). **ಮಾಯಮಾಗು, ಮಾಯವಾಗು** = ೧. ಇಲ್ಲವಾಗು; ನಾಶವಾಗು : ದನುಜನ ಮಾಯೆಯೊಂದಿನಿಸು ಬೇಗದಿನೊರ್ಮೆಯೆ ಮಾಯಮಾಗೆ ಚೇತನವಡೆದು . . . ತಜ್ಜನಮುನಿತುಂ ಮನಂಬುಸುತುಂ ಮಿರ್ದುದು ನಿಟ್ಟಿಸಲಾಱದೇನುಮಂ (ಚಂದ್ರಪ್ರ. ೩-೬). ೨. ಸಾಯು : ಮರಣಹೊಂದು : ಸಿಡಿಲಂತೊರ್ಮೆಯೆ ಪೊಯ್ಕೆ ಪೊಯ್ದು ಭರದಿಂದೊಂದಾನೆ ತೋಲ್ ನೆತ್ತರೆಲ್ಲಮಗೊಂದೊಂದಱೊಳೊಂದುಮೊಂದದೆ ಗದಾನಿರ್ಘಾತದಿಂ ಮಾಯಮಾದೊಡೆ (ಚಂಡಶಾ. ೦೦-೦೦೩). ೩. ಕಾಣೆಯಾಗು ; ಅದೃಶ್ಯವಾಗು : ಮರೆಯಾಗು : ನಿರುತ್ತರವೆಂದೆನಸುತ್ತ ಮಾಯವಸರದೊಳಾತನು ಮಾಯವಾಗಲು (ಬಸವ. ೩೩-೦೮): ಸರ್ವೇಂದ್ರಿಯಕೆ ಮೋಹದ ಶಿಶುವದೊಂದೆ ಮುದ್ದಿನ ವಿಷಯವಾಯ್ತು ಮಾಯವಾದತ್ತಳಿದುದನಿತುಮುಂ ಪ್ರಜ್ಞೆಯುಂ ಜಗುಳ್ದು ಬಯಲ್ಗೊಂದಿ (ಶ್ರೀಚಂದ್ರಪ್ರ. ೦೭-೪೪೩). **ಮಾಯ ಮಾಡು** = ನೀಗು : ಇಲ್ಲವಾಗಿಸು : ಈಗ ಬಂದಿರುವ ಹೊಸ ಮಾತ್ರೆ ತಲೆನೋವನ್ನು ಒಂದೇ ನಿಮಿಷಕ್ಕೆ ಮಾಯ ಮಾಡಿಬಿಡುತ್ತದೆ (ರೂಢಿ). [ಸಂ. ಮಾಯಾ]

**ಮಾಯಂಬೋಗು** (ಕ್ರಿ). ಕಾಣೆಯಾಗು : ಇಲ್ಲವಾಗು : ಪಾಲ್ಗಂದಲಿಂ ಮಾಯಂಬೋದುದು ಬೆಣ್ಣೆಯಲ್ಲಿ ಯೆಂಲೆ ಕೃಷ್ಣಾ (ವಸ್ತುವಂ. ೪-೨೦). [ಮಾಯ + ಪೋಗು$_1$ (< ಪೋ$_1$)]

**ಮಾಯಕ** (ಗು). ೧. ಮೋಸದ : ಕಪಟದ : ವಂಚನೆಯ. (ನಾ). ೨. ಕೃತ್ರಿಮವಾದುದು : ಕೃತಕವಾದುದು : ಛಾಯೆಯಿಲ್ಲದ ಮಾಣಿಕಕ್ಕೆ ಮಾದಳರಸದಿ ಪ್ರಿಯದಿಂದಲತಿಗೆಯು ರಸದಿ ಭಾವನೆಗೆಯ್ಯಲಾಯ್ತದಿ ಗಜನಿಂಬೆಹುಳಿಯ ಲೇಳ್ಯಂ ವೇಳೆ ಭಾವನೆಗೈಯ್ಯಲದನೂ ಮಾಯಕದ ರತ್ನವಾಗಿರೆ ತೋರ್ಪುದಲ್ಲದಡೆ ಛಾಯೆ ವರ್ಧಿಪುದದಕೆ (ರತ್ನಶಾ. ೩೩-೦); ಹವಳದ ದ್ವೀಪವೆಂದರೆ ಅಸಂಖ್ಯಾತ ಹವಳದ ಹುಳುಗಳ ಒಂದು ಕೋಟೆಯೇ ಸರಿ. ಈ ಮಾಯಕದ ದ್ವೀಪಗಳು ಕೋಟ್ಯಾವಧಿ ಪ್ರಾಣಿಶರೀರಗಳಿಂದ ಆದುವು (ಪ್ರಾಣಿಶಾ. II. ೯೬೬). ೩. ಕಣ್ಕಟ್ಟು ; ಇಂದ್ರಜಾಲ : ಸಿನೆಮಾ ಉಡುಗೆಯ _ ರಾಮಲಕ್ಷ್ಮಣರು, ಆ ಉಡುಗೆಯಲ್ಲಿ ಇಂಥ ಮಾಯಾಕವನ್ನೆಂದಿಗೂ ಕಲ್ಪಿಸಲಾರರು (ಯಕ್ಷಾ. ೦೦೯): ಅಯ್ಯೋ, ಯಾವ ಮಾಯಕದಾಗೆ ಬಂದು ಬಿಟ್ರಿ ಈಟು ಹತ್ರ ? (ಪುರಿಮ. ೩೬). ೪. (ದೇವರ) ಲೀಲೆ : ಆಟ : ಎಲ್ಲಾ ಅವನ ಮಾಯಕ. ದೇವರ ಮಾಯಕ (ಪುರಮ. ೨೦). [< ಸಂ. ಮಾಯಿಕ]

**ಮಾಯಕಾತಿ** 'ಮಾಯಗಾತಿ' ನೋ.

**ಮಾಯಕಾರ** 'ಮಾಯಕಾಱ' ನೋ.

**ಮಾಯಕಾರ್ತಿ** (ನಾ). ಮೋಸಗಾತಿ ; ಕಪಟಿ : ರಾಘವಂ ಮಾಡಿದುಪಹತಿಯಿಂ ದಶಾನನಂಗೆ ದಾಯಮಂ ಪೇಳ್ದವನ ವಂಶಮಂ ಸವಱಿಸಿದ ಮಾಯಕಾರ್ತಿ[ಕಾಕಾಂ.ತಿ]ಯುಪೊಲೆನ್ನಲಯ್ಕೆ ಬಂದೆನಗಪಾಯಮಂ ತಾರದಿಲ್ಲಿಂದೆ ಪೋಗೆಂದವಳನುಸ್ಮಿಖಿಂ ಕೋಪಿಸಿದನು (ಕೈಪಿಭಾ. ೯-೨೨). [ಮಾಯಕಾಱ + –ತಿ$_1$ (< – ಇತ್ತಿ)]

**ಮಾಯಕಾಱ, ಮಾಯಕಾರ** (ನಾ). ೧. ಗಾರುಡಿಗ ; ಯಕ್ಷಿಣೀ ವಿದ್ಯೆಯನ್ನು ಬಲ್ಲವನು : ಜೇಯ ವಿಗಡ ಬ್ರಹ್ಮಶರವಿಂದ್ರಾಯುಧದ ಮುಂಗುಡಿಯಲಿಱಿದುದು ಮಾಯಕಾಱರ ಮೋಹರವನುಬ್ಬಟೆ ಚತುರ್ಬಲದ ಹೋಯಿತು (ಕುಮಾವ್ಯಾಶ. ೦೨-೩೨). ೨. ಮೋಸಗಾರ ; ಕಪಟಿ : ರಾಯ ತಕ್ಕನ ನಿಧಿಯು ತೌಳಿಯ ಮಾಯಕಾಱನ ತಂದು ಮನ್ನಿಸಿ ರಾಯರಭಿಮಾನದ ವಿಭಾಡಿಸಿಕೊಂಡೆ ನೀನು (ಕುಮಾವ್ಯಾಸ. ೮-೩೦); ಎಲೆ ಮಾಯಕಾಱ ನಿನ್ನಂ ಮಹಾಮುನಿಗಳೊಡಗೊಂಡು ಬರವೇಳ್ದರ್ (ಶೆಬಪು. ೨೦-೨೩). **ಮಾಯಕಾರ** : ೨. ನಾರಿಯರು ತಿರಿಗೀಕ್ಷಿಸುತ್ತೆ ಸರಸಿಯಂ ತಲ್ಲಣಂಗೊಳುತ್ತೇರಿ ಮಾಯಕಾರನು ಕೃಷ್ಣಯೆಲ್ಲಿ ಪೋದನು ಯೆನುತ್ತೆ (ಜಪಮೋ. ೦೦-೩೪). [ಮಾಯ + –ಕಾಱ]

**ಮಾಯಗಾತಿ, ಮಾಯಕಾತಿ** (ನಾ). ಮೋಸಗಾತಿ; ಕಪಟಿ : ಮಾಯಗಾತಿ ಹಸಾದವೆನುತ ಹಿಡಿಂಬಿ ಗಮಿಸಿದಳು (ಕುಮಾವ್ಯಾಆ. ೯-೭೦); ಆ ಮಾಯಗಾತಿಯರು ಅವಳನ್ನು ಕೋಪದೃಷ್ಟಿಯಿಂದ ನೋಡಿ. . . ಪರಿಹಾಸ ಮಾಡಿದರು (ಕಲಿ. ೨೬). **ಮಾಯಕಾತಿ** : ಮಾಯಕಾತಿಯ ಪರಿಬಿಕಡಮಿಯಲಿ ಬಂದು ಕಾದಿಯೆ ನಿಮ್ಮ ಕೈಯಲಿ ಹೊಂದಿದಾ ಖರತನುಜನೀತನು (ಕೌಶಿಭಾ. ೩೩-೦೨); ಮಾಯಕಾತಿಯ ಸಂಗ ಅಭಿಮಾನಭಂಗ (ಪುರಂದ. ರಾ. ೩-೧೦೯-೪). [ಮಾಯ + – ಕಾತಿ$_1$]

**ಮಾಯಗಾವುಂಡ** (ನಾ). ಒಬ್ಬಾತನ ಹೆಸರು : ಎಲವರದ ಕಥವ ಬೂರ ಮಾಯಗಾವುಣ್ಡರ ಮಗ . . . ಊರಟ್ವಿನೊಳ್ ಕಾದಿ ಸತ್ತಮ್ (ಎಕ. X, ತುರುಗಾ. ೨೩೬-೭; ಸು. 1000).

[ಮಾಯ + ಗಾವುಂಡ (< ಗ್ರಾಮುಂಡ)]

**ಮಾಯಾಕೋವಿದ** (ನಾ). ಗಾರುಡಿವಿದ್ಯೆಯಲ್ಲಿ ಪರಿಣತನಾದವನು: ಇಂದ್ರಜಾಲವಿದ್ಯೆಯಲ್ಲಿ ಪಾಂಡಿತ್ಯವನ್ನು ಪಡೆದವನು : ರಾವುತರು ಶಿಲ್ಪಿಗರು ಮಾಯಾಕೋವಿದರು. . . ಮೃಗಜೀವಿಗಳು ಶಾಕುನಿಕರೆಸೆದರು ರಾಜಸಭೆಯೊಳಗೆ (ಕುಮ್ಮಾರ. ೨. ೨೭). [ಸಂ.]

**ಮಾಯಾಚಾರ** (ನಾ). ಡಂಭಾಚಾರ: ಕಪಟ : ಮಾಯಾಚಾರ ಪರಿಣತರ್ ಮಪ್ಪಪಾತ್ರದಾನಿಗಳುಂ ತಿರ್ಯಗ್ಗ್ಯಾತಿಕ್ತಮುಂ ಪೂರ್ದಿದ ಮಿಥುನಂ ಗಳಾಗಿ ಪುಟ್ಟಿ ಪರಸ್ಪರ ವೈರಂಗಳಿಲ್ಲದೆ . . . ರಮಿಯಿಸುವುವು (ಆದಿಪು. ೩-೯೦ ೭). [ಸಂ.]

**ಮಾಯಾಜಡ** (ನಾ). ಅಜ್ಞಾನದಿಂದ ಉಂಟಾಗುವ ಮೂರ್ಖತೆಯುಳ್ಳವನು : ಬಾಯೆತ್ತದಂತೆ ನುಡಿವುತ ಕಾಯಜರಿಪುಭಕ್ತನೆಲ್ಲರಂ ಗೆಲೆ ಸೋಲ್ತು ಮಾಯಾಜಡರೆಲ್ಲರ್ಗೆಲಲಾಮುಂಗಾಣದೆ ಬಳಲ್ಕೆಯಿಂದಿಂತೆಂದರ್ (ಪ್ರಭು. ೩೭-೩೩). [ಸಂ.]

**ಮಾಯಾಜಾಲ** (ನಾ). ೧. ಗಾರುಡಿ : ಇಂದ್ರಜಾಲ : ಇವರು ತಮ್ಮ ನಾಟ್ಯಗಳಲ್ಲಿ ರೇಖಿಸುವ ರಂಗ ನಮೂನೆಗಳು. . . ಅವರ ವಿವಿಧವಿಚಿತ್ರವಾದ ವಾದ್ಯಗಳು ಇವೆಲ್ಲ ಒಂದು ವಿಶಿಷ್ಟ ಮಾಯಾಜಾಲವನ್ನು ಬೀಸುತ್ತವೆ (ಭಾರತ. ೩೭೪). ೨. ಮೋಸದ ಬಲೆ : ಮೋಸಗಾರಿಕೆ : ತಾನು ಮನಸ್ಸಿನಲ್ಲಿ ದ್ವೇಷಿಸುತ್ತಿರುವ ಶತ್ರುವು ತನ್ನ ಮಾಯಾಜಾಲದಲ್ಲಿಯೇ ಸಿಕ್ಕಿ ಜೀವನವನ್ನು ಕಳೆದುಕೊಂಡಿರುವುದನ್ನು ನೋಡಿಯೂ ತೃಪ್ತಿಹೊಂದದೆ. . . ತನ್ನ ಹಗೆಯನ್ನು ಸಂಪೂರ್ಣವಾಗಿ ನಾಶಗೊಳಿಸಬೇಕೆಂದು ನಿಶ್ಚಯಿಸಿ ಕೊಂಡನು (ಕಶ. ೪೦). [ಸಂ.]

**ಮಾಯಾಜೀವಿ** (ನಾ). ಗಾರುಡಿವಿದ್ಯೆಯಿಂದ ಬದುಕುವವನು : ಇಂದ್ರಜಾಲವಿದ್ಯೆಯಿಂದ ಜೀವಿಸುವವನು. [ಸಂ. ಮಾಯಾಜೀವಿನ್]

**ಮಾಯಾತೀತ** (ನಾ). ಅವಿದ್ಯೆಯನ್ನು ಮೀರಿದವನು ; ದೇವರು ; ಪರಮಾತ್ಮ : ಸತ್ಯಜ್ಞಾನಮಯ ನಿರ್ಧೂತ ಮಾಯಾತೀತನೀ ಹರಿ (ಕುಮ್ಮಾಸ. ೯-೧೬); ಈಯಖಿಳಜಗವನುೞಿ ಹೊದ್ದಿ ಹೊದ್ದದೆ ಭವಾಬ್ಧಿಯು ತದೆ ಜೂಟಳವ ತಿರುಗಿಸುತ್ತಿಹನು ಮಾಯಾತೀತನಪ್ಪ ಶಿವನು (ವೀಕ್ಷಪು. ೧-೫-೩೩); ಮಾಯೆಯು ನಾನು. ಮಾಯಾತೀತನು ನಾನು (ಶಾಂತಜ.೦೭-೦೩).

[ಸಂ.]

**ಮಾಯಾತ್ಮ** (ನಾ). ಅಜ್ಞಾನಕ್ಕೆ ಒಳಗಾಗಿರುವ ವ್ಯಕ್ತಿ : ಮಾಯಾತ್ಮನು ಮಾಯವೆಂಬ ಭವಜಾಲದಲ್ಲಿ ಬಂದು ಘೋರಸಂಸಾರವ ಕಂಡು ನಾಚ ದೇಕೆನ್ನ ಮನ (ಪೋಕವಚ. ೯೭-೦೯೩). [ಸಂ. ಮಾಯಾತ್ಮನ್]

**ಮಾಯಾದಂಡ** (ನಾ). ಇಂದ್ರಜಾಲದಲ್ಲಿ ಬಳಸುವ ಕೋಲು : ಮಂತ್ರ ದಂಡ: ಈ ಒಂದು ಸಣ್ಣ ಬಾಲಕನುಹರಲಾಲನ ಹೃದಯದ ಉದ್ಬೋಧನಕ್ಕೆ ಸ್ವರ್ಣಮಯ ಮಾಯಾದಂಡವಾಗಿ ಪರಿಣಮಿಸಿದನು (ಇಶ್ವಕ. ೩೦೩). [ಸಂ.]

**ಮಾಯಾದೀಪ** (ನಾ). ಕತ್ತಲೆಕೋಣೆಯಲ್ಲಿಯ ಬಿಳಿಯ ಪರದೆಯ ಮೇಲೆ, ಗಾಜುಹಲಗೆಯ ಮೇಲಿನ ಚಿತ್ರದ ಪ್ರತಿಬಿಂಬವು ದೊಡ್ಡದಾಗಿ ಬೀಳುವಂತೆ ಮಾಡುವ ಒಂದು ಬಗೆಯ ದೀಪಯಂತ್ರ .– ವೈಜ್ಞಾನಿಕ ಉಪಕರಣ: ಇಂಗ್ಲಿಷ್ ಶಬ್ದಗಳ ಸ್ವೀಕರಣದ ನಾಲ್ಕನೆಯ ರೀತಿಯೆಂದರೆ, ಆ ಶಬ್ದಗಳನ್ನು ತದ್ವತ್ತಾಗಿ ಕನ್ನಡದಲ್ಲಿ ಭಾಷಾಂತರಿಸುವುದು. ಈ ರೀತಿಯಾಗಿ . . . **walking stick** ನಡೆಗೋಲು : **Magic-lantern** ಮಾಯಾದೀಪ: ಇತ್ಯಾದಿ (ಲಾಕಾಶಾ. ೧೭೭). 'ಮಾಯಾ ಲಾಂದ್ರ' ಪರಾ. [ಸಂ.]

**ಮಾಯಾದೇವಿ** (ನಾ). ೧. ದುರ್ಗೆ : ಆದಿಶಕ್ತಿ : ಮಾಯೆ ; ಎಲೆ ಮಾಯಾದೇವಿ ಲೋಕತ್ರಯಜನನಿ ಮದಾಜ್ಞಾಸಮುತ್ಪನ್ನೆ . . . ಪೂಜಿಕ್ಕೆ ಮಾಂಸಾದಿ ನಾನಾಬಲಿಯಿಂ ದೇವರ್ ನರರ್ ತ್ವಚ್ಚರಣಕಮಲಮಂ (ಜಗಾಪಿ. ೨-೩೬). ೨. ಗೌತಮಬುದ್ಧನ ತಾಯಿ: ಸರ್ವಾರ್ಥಸಿಂಹಃ . . . ಅರ್ಕಬಂಧುಃ ಮಾಯಾದೇವೀಸುತಃ – ೬ ಶಾಕ್ಯರಿಗೆ ಯಾರು ಪೂಜ್ಯನೋ ಅಂತಾ ಬುದ್ಧದೇವರ ಹೆಸರು (ಸಿದ್ಧಾಂತಿ. ೦೭). [ಸಂ. ಮಾಯಾದೇವೀ]

**ಮಾಯಾನಿದ್ರೆ** (ನಾ). ಮಂತ್ರಶಕ್ತಿಯಿಂದ ಉಂಟಾಗಿಸುವ ನಿದ್ದೆ ; ಮಾಯಾಶಕ್ತಿಯಿಂದ ಬರಿಸುವ ನಿದ್ರೆ : ಅಖಿಳಭುವನಜನನಿಯುಮಾಗಳ್ ಮಱಿಯಿಸಿ ಮಾಯಾನಿದ್ರೆಯಿಂದುೞಿ ಮಾಯಾಶಿಶುವನಿರಿಸಿ ಮುಂದೆಂಬಿಕೆಯಾ (ಆದಿಪು. ೭-೪೩); ಮಾಯಾನಿದ್ರೆಯಿಂದ್ರನ ಜಾಯೆ ಜಿನಾಂಬಿಕೆಗೆ ಪಡೆದು ತಡೆಯದೆ ಭುವನಜ್ಯಾಯನನೆತ್ತಿ ಬಟಿಕ್ಕಂ ಮಾಯಾಶಿಶುವೊಂದ ನಿರಿಸಿ ಮುಂದೆಂಬಿಕೆಯಾ (ಶಾಂತಿಪು. ೮-೦೦೪). [ಸಂ. ಮಾಯಾನಿದ್ರಾ]

**ಮಾಯಾಪಾಶ** (ನಾ). ೧. ಮೋಹದ ಬಂಧನ. – ಪಾಶ : ಮಾಯಾ ಪಾಶ ಹಿಂಗಿ ಮನದ ಗಂಟು ಬಿಡವನ್ನಕ್ಕ ಕೂಡಲಸಂಗಮದೇವನೆಂತೊಲಿ ವನಯ್ಯಾ (ಬಸವ. ೨೦೨) : ದೇವ ನೀ ಮಾಯಾವಿ ಮಾಯಾಪಾಶಬದ್ಧರು ನಾವು ಬಲ್ಲೆವೆ ನಿಮ್ಮನು (ಕುಮ್ಮಾಗ. ೮-೩೨) : ಆಶಾಪಾಶ ಎಂಬೊ ಪರಮಾಬ್ಧಿಯೊಳಗೆ ಮುಳುಗಿ ಮಾಯಾಪಾಶಕ್ಕೊಳಗಾಗದೆ ಮಾನ್ಯನಾಗೊ ನೀ ಧನ್ಯನಾಗೋ (ಪುರಂದ. ೩-೩-೧). ೨. [ವೀಶೈ] ಪಂಚಪಾಶ ಗಳಲ್ಲಿ ಒಂದು : ಪಾಶಪದಾರ್ಥವು . . . ಮಲಪಾಶ ಮಾಯಾಪಾಶ ಕರ್ಮಪಾಶ ಬಿಂದುಪಾಶ ತಿರೋಧಾನಪಾಶವೆಂದು ಪಂಚಪ್ರಕಾರ ಮಾಗಿರ್ಪುದು (ವಿವೇಕ. ೦೬೩) : ಮಾಯಾಪಾಶ(ಮೋಹ)ನಿವೃತ್ತಿಯೇ ಪರಮಪುರುಷಾರ್ಥ (ಶಾರದ. ೨೦೭). [ಸಂ.]

**ಮಾಯಾಫಲ** (ನಾ). ಒಂದು ಬಗೆಯ ಸಸ್ಯ ಮತ್ತು ಅದರ ಹಣ್ಣು : "ಛಿತ್ರಲಾಫಲಂ – ಮಾಯಾಫಲ(ಮಾಪಾಳ ?)" (೬ಕಾ. ೩೯) : "ಮಾಯಿಕಾ- ಮಾಯಾಫಲ" (೬ಕಾ. ೦೨೩). [ಸಂ.]

**ಮಾಯಾಬಜಾರ** 'ಮಾಯಾಬಾಜಾರ' ನೋ.

**ಮಾಯಾಬಾಜಾರ, ಮಾಯಾಬಜಾರ** (ನಾ). ಇಂದ್ರಜಾಲದಿಂದ ಸೃಷ್ಟಿಸಿದ ಪೇಟೆ : ಭಟ್ಟರು ಈ ಮಾಯಾಬಾಜಾರವನ್ನು ನೋಡಿ ಆನಂದ ಪುಳಕಿತರಾದರು (ತಮ್ಮಾ. ೭೦). **ಮಾಯಾಬಜಾರ** : ಒಬ್ಬ ರಾಕ್ಷಸ ಬರುವ ; ಯಾವುದಾದರೂ ಒಂದು ಹೆಣ್ಣನ್ನು ಓಡಿಸಿಕೊಂಡು ಹೋಗುವ ; ಆಮ್ಯಾಲೆ ಯುದ್ಧ. ಶಾಪ. ಮಾಯಾಬಜಾರ (ಪತ್ರಾ. I, ೩೦೮): ಈ ಪ್ರಪಂಚವೆಂದರೆ ಮಾಯಾಬಜಾರವು (ಶದ್ರಾಯು.೦೨).

[ (ಸಂ. ಮಾಯಾ) + ಬಾಜಾರ ]

**ಮಾಯಾಭ್ರಾಂತಿ** (ನಾ). ತೋರಿಕೆಯಿಂದ ಉಂಟಾದ ಭ್ರಾಂತಿ : ಮಿಥ್ಯೆಯಿಂದ ಕೂಡಿದ ಭ್ರಮೆ : ಮಾಯಾಭ್ರಾಂತಿ ಕವಿದ ಗೀತಜ್ಞರ ಹಿರಿಯರೆನ್ನೆ (ಬಸವ. ೭೦೩) : ದೇವ ಮಱೆವೊಕ್ಕೆನು ಭವತ್ಪದಪಾದ ನಾಂಭೋಜವನು ಭವತಾಪಾವಳಿಯಲುೞಿ ಬೆಂದು ಮಾಯಾಭ್ರಾಂತಿಯುಳಿ ಸಿಲುಕಿ (ಕಿಭಾಗ. ೩-೦೨-೨). [ಸಂ.]

**ಮಾಯಾಮರತಾಪು**, ಮಾಯ್ಮುರುತಾಪು (ನಾ). (ರಾಜ, ಮಂತ್ರಾಧಿಪತಿ ಮೊದಲಾದವರು ಇಟ್ಟುಕೊಳ್ಳುವ) ಗೌರವಸೂಚಕವಾದ ಲಾಂಛನಗಳಲ್ಲಿ ಒಂದು : ಮೀನಿನ ಆಕಾರದ ಚಿಹ್ನೆಯಿಂದ ಕೂಡಿದ ಧ್ವಜ. – ಬಾವುಟ : (ಸಾಧಾರಣ ಬಿರುದುಗಳು) . . . ಬಂದೂಕುಗಳು ೨೫. ಹುಕ್ಕಾರುಗಳು. ಕತ್ತಿ ವಗೈರೆ ೫೦, ಮಾಯಾಮರತಾಪು, ಪಂಚ ನಿಶಾನಿ (ಗುರುದ. ೩೦). **ಮಾಯ್ಮುರುತಾಪು** : ಭಾರಿ ನಗ್ಗಾರಿ ಮೇಕು ಮಂಗುಲಿಪ ಸುರಾಂತ ಸುತ್ತಿಗೆ ನಿಶಾನೆಯು ಮಾಯ್ಮುರುತಾಪು (ಮೈಸೂ. ೮-೦೩೭)

[ ←ಪಾರ. ಮಾಹೀಮುರಾತಿಬ್ ; ಮರಾ. ಮಾಹೀಮುರಾತಬ್ : ಮಾಹೀಮೋರ್ತಬ್ ]

**ಮಾಯಾಮರ್ದನ** (ನಾ). ಅಜ್ಞಾನವನ್ನು ನಾಶಪಡಿಸುವವನು : ಮಾಯಾಮರ್ದನ ಗುರುವೆ ಕಾಯೊ ಪಾಮರರ ಕೃಪಾಳುದೇವನೆ (ಸಿದ್ಧಕೃ. ೨೨–೪). [ಸಂ.]

**ಮಾಯಾಮಲ** (ನಾ). ೧. [ವೀಶೈ] ಜೀವನಿಗೆ ಅಂಟಿಕೊಳ್ಳುವ ಆಣವ, ಮಾಯಾ ಮತ್ತು ಕಾರ್ಮಿಕಗಳೆಂಬ ಮಲತ್ರಯಗಳಲ್ಲಿ ಒಂದು ; (ಪರಮಾತ್ಮನನ್ನು ಮರೆತು) ದೇಹಸಂಬಂಧಿಗಳನ್ನು ಮೋಹಿಸುವಿಕೆ ; ವ್ಯಾಮೋಹ : ಆಣವಮಲ ಮಾಯಾಮಲ ಕಾರ್ಮಿಕಮಲವೆಂಬ ಮಲತ್ರಯಂಗಳ ಕಳೆದುಳಿದು ನಿರ್ಮಲವಾದ ಶಿಷ್ಯನು ಕಾಯಜೀವದ ಭ್ರಾಂತಿಸೂತಕವ ವಿವರಿಸಿ ಕಳೆದು ನಿಶ್ಶಂಕನಾದ ಗುರುವು (ಶಿವತಂ. ೨೭೩–೦೨೩೩) ; ಆ ಶಿಷ್ಯನ . . . ತನುತ್ರಯಂಗಳಲ್ಲಿ ಮುಸುಕಿದ ಆಣವಮಲ ಮಾಯಾಮಲ ಕಾರ್ಮಿಕಮಲವೆಂಬ ತನುತ್ರಯಂಗಳ ಕಳೆದು (ಅನಂಶೀ. ೨೮೦–೧೪) ; ಕಳೆದು ಆಣವಮಲ ತೊಳೆದು ಮಾಯಾಮಲ ಉಳಿಯದಂತೆ ಕಾರ್ಮಿಕಮಲ ಮಾಡಿದ ಕಳಾತೀತ ಚೆನ್ನಬಸವಣ್ಣನು (ಸಿದ್ಧಕೃ. ೩೪–೭೨). ೨. ಜೀವನಿಗೆ ಅಂಟಿಕೊಳ್ಳುವ ರೋಧಮಲ, ಬಿಂದುಮಲ, ಕರ್ಮಮಲ, ಮಾಯಾಮಲ ಮತ್ತು ಆಣವಮಲ ವೆಂಬ ಪಂಚಮಲಗಳಲ್ಲಿ ಒಂದು : ಜನ್ಮಾಂತರಗಳಿಗೆ ಕಾರಣ ವಾದುದು : ಅಷ್ಟಭೋಗಂಗಳ ಶಕ್ತಿ ಕೆಟ್ಟಲ್ಲಿ ರೋಧಮಲ ನಷ್ಟ . . . ಕಾಯಭಾವವಳಿದಲ್ಲಿ ಮಾಯಾಮಲ ನಷ್ಟ ಮದವಸ್ತುವಿನ ಕಳೆ ತನ್ನಲ್ಲಿ ಬೆಳಗಿದಲ್ಲಿ ಆಣವಮಲ ನಷ್ಟ ಇಂತೀ ಪಂಚಮಲಂಗಳು ನಷ್ಟವಾದಲ್ಲಿ ಸೌರಾಷ್ಟ್ರಸೋಮೇಶ್ವರಲಿಂಗ ಸಮ್ಯಕ್‌ದೃಷ್ಟ (ಆದಯ. ವ. ೦೦೬–೧೯೩). ಮಲ, ರೋಧಶಕ್ತಿ, ಕರ್ಮ, ಮಾಯಾ, ಬಿಂದು ಅಥವಾ ಮಹಾಮಾಯ ಎಂಬಿವೇ ಪಾಶದ ವಿಭಾಗಗಳು . . . ಮಾಯಾಮಲವು ಭೇದಜ್ಞಾನ ವನ್ನುಂಟುಮಾಡಿ ಸ್ವಸ್ವರೂಪವನ್ನು ಮರೆಮಾಡಿ ಜನ್ಮಾಂತರಗಳಿಗೆ ಕಾರಣವಾಗುತ್ತದೆ (ಶಾಶವ. ೨೦೦). 'ಮಾಯೀಯ' ಪರಾ. [ಸಂ.]

**ಮಾಯಾಮಸ್ತಕ** (ನಾ). (ರಾಜ, ಮಠಾಧಿಪತಿ ಮೊದಲಾದವರ ಬಳಿ ಇರುವ) ಗೌರವಸೂಚಕವಾದ ಲಾಂಛನಗಳಲ್ಲಿ ಒಂದು : ಒಂದು ಬಗೆಯ ಮುಖವಾಡ : ಸಾಧಾರಣ ಬಿರುದುಗಳು . . . ಕನಕಚಾಮರ ೨ ವಾಲಗಳು ೨ ನೃಸಿಂಹಮುಖ ಉಡಾಸ್‌ಪಾವಡ ಮಾಯಾಮಸ್ತಕ ಘಾತಾರ ಜಯಘಂಟೆ (ಗುರುವ. ೦೦). [ಸಂ.]

**ಮಾಯಾಮಾರ್ಗ** (ನಾ). ಅಜ್ಞಾನದಿಂದ ಕೂಡಿದ ದಾರಿ: ಮಿಥ್ಯಾ ಮಾರ್ಗ : ಜಿನೇಂದ್ರಭಕ್ತಸೆಟ್ಟಿ . . . ತನ್ನ ದೇಹಾರದೊಳಿರ್ದ ಬ್ರಹ್ಮಚಾರಿಗೆ ವಂದು ತಾನವರ್ಗತಿಭಕ್ತನಪ್ಪ ದಜಿಂದವನೊಳಾದ ಮಾಯಾ ಮಾರ್ಗಮನಜಿಯದೆ ಜಿನಮಾರ್ಗದೊಳ್ ವೃಷಸೆಂದು ಕಯ್ಯಂ ಮುಗಿದು (ಧರ್ಮಾಮೃ. ೬–೭೪). [ಸಂ.]

**ಮಾಯಾಮಾಲವಗೌಲ, ಮಾಯಾಮಾಳವಗೌಳ** (ನಾ). [ಸಂಗೀತ] ಒಂದು ರಾಗದ ಹೆಸರು : ರೂಪಾವತಿ, ಹಾಗೆಯೇ ಗೇಯಹೆಜ್ಜೆಜ್ಜಿರಾಗ, ವಾಟೀ, ವಸಂತಭೈರವೀ ಮಾಯಾಮಾಲವಗೌಲ (ಕ) (ತತುಶ್ರ. ೧೨೮). **ಮಾಯಾಮಾಳವಗೌಳ** : ಉತ್ತರೀಯಸಂಗೀತ ಪದ್ಧತಿಯಲ್ಲಿರುವ 'ಭೈರವಿ' ರಾಗವನ್ನು ಬಹುವಾಗಿ ಹೋಲುತ್ತದೆ, ನಮ್ಮ ಮಾಯಾಮಾಳವ ಗೌಳ (ಹೀಮುಕೂ. ೦೦೪) ; ಮಾಯಾಮಾಳವಗೌಳ . . . ಭಕ್ತಿಕರುಣಾರಸ ಪ್ರಧಾನರಾಗ (ಸಂಗೀತಂ. ೦೩೪). [ಸಂ.]

**ಮಾಯಾಮಾಳವಗೌಳ** 'ಮಾಯಾಮಾಲವಗೌಲ' ನೋ.

**ಮಾಯಾಮುಖಿ** (ನಾ). ಮಾಯೆಗೆ ಒಳಗಾದವನು : ಅಜ್ಞಾನದ ದವಡೆಗೆ ಸಿಕ್ಕಿದವನು : ಕಾಮಕ್ರೋಧಲೋಭಮೋಹಮದಮಾತ್ಸರಬಿಜ್ಜಿಗೆ ಹರಿದು ಹಿಂದುಗೊಡಿಸಾಡಿದ ಕಂದಿನಂತಾದರು ಇನ್ನು ಬಲ್ಲರೆ ಗುಹೇಶ್ವರ ಮಾಯಾಮುಖಿರು ನಿಮ್ಮವನು (ಅಪಶಂ. ೭೪–೩೨೪). [ಸಂ.]

**ಮಾಯಾಮೃಗ** (ನಾ). ಮೋಸದ ಜಿಂಕೆ : ಕಂಡಳುದತದ ನೆಳಲಿನಲಿ ಕೈಕೊಂಡ ಮಾಯಾಮೃಗದ ಮೂರ್ತಿಯು (ತೊರರಾ. ೩–೮–೨೪). [ಸಂ.]

**ಮಾಯಾಯುದ್ಧ** (ನಾ). ಇಂದ್ರಜಾಲ ಮುಂತಾದ ವಿದ್ಯೆಗಳ ಸಹಾಯ ದಿಂದ ಮಾಡುವ ಯುದ್ಧ : ಮಾಯಾಯುದ್ಧದೊಳಂ ದಿವ್ಯಾಯುಧ ಯುದ್ಧದೊಳಮಧಿಕಬಲರುಭಯಬಲಂ ಜೀಯೆಂಬಿನೆಗಂ ಕಾದಿದರಾಯತಿ ನಿಲೆ ಕುಂಭಕರ್ಣನುಂ ಮಾರುತಿಯುಂ (ಕಂಪನವಾ. ೦೩–೦೪೩) ; ಘಟೋತ್ಕಚನು ಹೊರಟು ಅಲಾಯುಧ ಮುಂತಾದವರನ್ನು ಕೊಂದು ಕರ್ಣನನ್ನು ಎದುರಿಸಿ ಮಾಯಾಯುದ್ಧ ಮಾಡುತ್ತ ಅದೃಶ್ಯನಾದನು (ವಕಥಾ. ೨೮೪). [ಸಂ.]

**ಮಾಯಾರಿ** (ನಾ). ಅಜ್ಞಾನವನ್ನು ನಾಶಪಡಿಸುವವನು : ಶ್ರೀಯುಮಾ ವರನಿಂದುಧರನಭಯಂಕರನುಗ್ರಮಾಯಾರಿ ಭಕ್ತಭವಹಾರಿ . . . ಪಂಪಾ ವಿರೂಪಾಕ್ಷನೆಮಗೀಗೆ ಭಕ್ತಿಜ್ಞಾನಸಂಪದವನು (ಹರಿಶಾ. ೦–೮) ; ಈರ್ವರು ಬಳಿಕ್ಕಾ ಓದಾರದಿಂದ ಪೊನ್ನಾಂಬಲಕೆ ಬರೆ ಮುನ್ನ ಮಾಯಾರಿಯಾಜ್ಞೆಯಿಂ ನಡೆತಂದು (ವೀಕ್ಕೃತ. ೪–೯–೪); ಮಾರಾರಿ ಮಾಯಾರಿಯೆಂಬರ್ಗಳ ಚಂಚತ್ಕ್ಯಾ ಹಳೀಸಂಕುಳಮೆಸೆದನವಂ ಮಾದಿರಾಜಾಭಿಧೇಯಂ (ವೃಷಭ. ೩೨–೯). [ಸಂ.]

**ಮಾಯಾರ್ಭಕ** (ನಾ). [ಜೈನ] ಮಾಯೆಯಿಂದ ಸೃಷ್ಟಿಸಿದ ಮಗು: ಕೃತಕವಾದ ಶಿಶು : P ತೀರ್ಥಂಕರನಾಗುವ ಶಿಶು ಹುಟ್ಟಿದಾಗ ಜನ್ಮಾಭಿಷೇಕಕಲ್ಯಾಣವನ್ನು ನೆರವೇರಿಸುವುದಕ್ಕಾಗಿ ಸೌಧ ರ್ಮೇಂದ್ರನ ಅಪ್ಪಣೆಯಂತೆ ಇಂದ್ರಾಣಿಯು ತೀರ್ಥಂಕರನ ತಾಯಿಗೆ ಮಾಯಾನಿದ್ರೆಯನ್ನು ಬರಿಸಿ, ಅವಳ ಪಕ್ಕದಲ್ಲಿ ಮಾಯಾ ಶಿಶುವನ್ನಿಟ್ಟು ನಿಜವಾದ ಮಗುವನ್ನು ತಂದು ಇಂದ್ರನ ಕೈಗೆ ಕೊಡುತ್ತಾಳೆ : ಐರಾದೇವಿಯ ಮುಂದೆ ಮಾಯಾರ್ಭಕನನಿರಿಸಿ, ಜಿನಾರ್ಭಕ ನನೆತ್ತಿಕೊಂಡು ಬರೆ (ಶಾಂತಿಪು. ೧೦–೯೩). [ಸಂ.]

**ಮಾಯಾಲಾಂದ್ರ** (ನಾ). = ಮಾಯಾದೀಪ : ಸಿನಿಮಾ, ಮಾಯಾಲಾಂದ್ರ ಮೊದಲಾದುವುಗಳಿಲ್ಲ ಬೆಳಕಿನ ಲೀಲೆಗಳು (ಶಾಂಕೃ. II, ೯೩೯).
[(ಸಂ. ಮಾಯಾ) + ಲಾಂದ್ರ (< ಲಾಂದರ)]

**ಮಾಯಾವಾದ** (ನಾ). [ವೇದಾಂತ] ಮಿಥ್ಯಾವಾದ ; P ಪ್ರಪಂಚವು ಮಾಯೆ, ಅದು ನಿಜವೆಂದು ಕಾಣುವುದು ಭ್ರಮೆ – ಎಂಬುದಾಗಿ ಶಂಕರಾಚಾರ್ಯರು ಬೋಧಿಸಿ ಅವರ ಅನುಯಾಯಿಗಳು ಅನು ಸರಿಸಿದ ವಾದ ; ಇದು ಬೌದ್ಧರ ವಾದವೂ ಆಗಿದೆ : ಅಧ್ಯಾತ್ಮ ಮತಭೇದ ಭಾಸ್ಕರೀಯ ಮಾಯಾವಾದ ಶಬ್ದಬ್ರಹ್ಮವಾದ ಕ್ರೀಡಾಬ್ರಹ್ಮ ವಾದವೆಂದು ನಾಲ್ಕುತೆಜನಾಗಿ ಪ್ರಚುರಗೊಂಡಿರ್ಕುಂ (ವಿವೇಕ. ೦೩) ; ಶ್ರೀಶಂಕರಾಚಾರ್ಯರು ಬೋಧಿಸಿದ ಮಾಯಾವಾದವು ಅದೇ ಅರ್ಥವನ್ನು ಸೂಚಿಸುವುದಲ್ಲವೆ? (ಶಾಂಕೃ. III, ೦೩೬೬). [ಸಂ.]

**ಮಾಯಾವಾದಿ** (ನಾ). [ವೇದಾಂತ] ಮಿಥ್ಯಾವಾದವನ್ನು ಬೋಧಿಸುವ ವನು ; ಅದ್ವೈತತತ್ತ್ವವನ್ನು ಬೋಧಿಸುವವನು : ಅದ್ವೈತಿ : ಮಾಯಾವಾದಿಗಳ ಗೆದ್ದಿತು ಕೂಸು ದ್ವೈತಮತವನುದ್ಧರಿಸಿತು ಕೂಸು ಮಧ್ವರಾಯರೆಂಬ ಪೆಸರಿನ ಕೂಸು (ಪುರಂದ. ೧–೦೯೩–೩) : 'ಮಾಯಾ'ವಾದಿ ಯಾದ ಈ ದಿವ್ಯಪುರುಷ ಜಗತ್ತಿನ ಮಾಯೆಯನ್ನು ನಾಶಮಾಡಿ ಪಾರ್ಥಿವ ಜೀವನದ ಸಾರ್ಥಕ್ಯವೇನೆಂಬುದನ್ನುಪದೇಶಿಸಿದರು (ಜುಕ್ಕಾರ. ೧೦೬ ಪೀಠಿಕೆ).

**ಮಾಯಾವಾದಿಕೋಲಾಹಳ** = ಅದ್ವೈತತತ್ತ್ವಕ್ಕೆ ವಿಶಿಷ್ಟವಾದ ಅರ್ಥವನ್ನು ನೀಡಿ, ಆ ತತ್ತ್ವವನ್ನು ವಿರೋಧಿಸಿದ ವ್ಯಕ್ತಿ : ಶ್ರೀರಾಮಾನುಜಾಚಾರ್ಯರ ಒಂದು ಬಿರುದು : ಮಾಯಾವಾದಿ ಕೋಲಾಹಳ . . . ಶ್ರೀರಾಮಾನುಜಾಚಾರ್ಯರ ಪ್ರಥಮಶಿಷ್ಯರು (ಎಕ. VI (R), ಶಾಂತವ. ೦೩೩–೩ ; 1519). [ಸಂ. ಮಾಯಾವಾದಿನ್]

**ಮಾಯಾವಿ** (ನಾ). ೧. ಮಂತ್ರ, ಮಾಟ ಮೊದಲಾದ ಮಾಯಾವಿದ್ಯೆಗಳನ್ನು ಬಲ್ಲ ವ್ಯಕ್ತಿ ; ಮಂತ್ರಗಾರ : "ದಾಂಡಾಜನಿಕಃ, ಕುಹಕಃ . . . ಮಾಯಾವೀ, ಮಾಯಿಕಃ, ಮಾಯಿೀ — ಈ ೧೧ ಮಾಯಾವಿ" (ಹಲಾಯು. ೩೮-೧೯೪) ; ಮಾಯಾವಿಗಳ ವಿದ್ಯೆಗಳ ಪರಿಹರಿಸುವುದು ಮಾಯೆಯಿಂ (ಕುವ್ಯಾಗ. ೩-೬) ; ಮಗನೆ ಕೇಳ್ ರಾಕ್ಷಸರು ಮಾಯಾವಿಗಳು (ತೊರರಾ. ೩-೩-೧೧೩). ೨. ಮೋಸಗಾರ : ಕಪಟಿ ; ಕುತಂತ್ರಿ : ಅಂತು ಮಾಯಾಕೃತಕದಿಂದ ವಿಮುಕ್ತನಾಗಿ ಪೊಣ್ಮೆಂದೊಡೆ ಕಿವಿಯಂ ಮತ್ತೆನ್ನದೆ ಮಾಯಾವಿ ಮುಚ್ಚಿಕೊಳ್ವಂ (ಧರ್ಮಾಮೃ. ೬-೫೯); ಅದು ಕಾರಣದಿಂ ಕೃಷ್ಣನೊಳ್ ಕುಟಿಲೋಪಾಯಮೆ ಶರಣೀಯಂ ಆ ಮಾಯಾವಿಯುಂ ಧನುರ್ಮಹೋತ್ಸವಾಮಂತ್ರಣವ್ಯಪದೇಶದಿಂ ವಿನಾಶಮನೆಯ್ದಿಸುವೆಂ (ಜಗಪು. ೩-೬೧ ವ) ; ಭದ್ರಪ್ಪನಾಯಕಂ ಪಡೆವೆರಸಶಿತ್ವರೆಯಿಂ ದಾಳಿವರಿದಾ ಮಾಯಾವಿಗಳ ನಾಡೊಳಗಣ . . . ಸೀಮೆಗಳಂ ಕೊಂಡವರ ರಾಜ್ಯರಾಷ್ಟ್ರಮಂ ಪುಡಿಗೈಸಿ (ಕೆಳನೃ. ೮-೩ ವ). [ಸಂ. ಮಾಯಾವಿನ್]

**ಮಾಯಾವಿಗ** (ನಾ). = ಮಾಯಾವಿ ೧ : ಜಗವನೇಡಿಸಿ ಕಾಡುವಾ ಮಾಯೆಗೆ ಸವೀನವೆನಿಪ್ಪ ಮಾಯಾವಿಗನು ತಾನೆಂಬಂತಿರಲ್ಲದ ಬಯಲ ಬಗೆಗೊಳಿಸಿ (ಕೃಭುಲೀ. ೩-೩೯೮). [ಮಾಯಾವಿ + —ಗ₂]

**ಮಾಯಾವಿತನ** (ನಾ). ಮೋಸಗಾರಿಕೆ : ಸಂಚು ; ಕುಟಿಲತೆ : ಮಕ್ಕಳೊಡನೆ ಮಾಯಾವಿತನವಿದಮ್ಮ ತಕ್ಕುದೆ ಕೌತನರ್ಥಾಂಗಿ ಉಕ್ಕೆವವನು ಬಿಟ್ಟು ಚೆಂಡು ತರಿಸಿಕೊಟ್ಟು ದಿಕ್ಕನೆ ಕಳುಹೇಕೆ ತಡವು (ಕುರಾಶಾಂ. ೩೨-೩೦). [ಮಾಯಾವಿ + —ತನ]

**ಮಾಯಾವಿದ** (ನಾ). = ಮಾಯಾವಿ ೧ : ರಾವಣನ ಪರಿ ನೆಲೆಸಿತಿಪನಲಿ ಸಾವಿಗಂಜುವನಲ್ಲ ವಿಳಮಾಯಾವಿದನು ನಮ್ಮ ಕುತಿ ಕೊಳ್ಳದು (ಕುವ್ಯಾಅ. ಓಂಡ ೮-೬೭). [ಸಂ. ಮಾಯಾವಿದ್]

**ಮಾಯಾಶಕ್ತಿ** (ನಾ). ಅಜ್ಞಾನದಿಂದ ಉಂಟಾದ ಶಕ್ತಿ ; ಮಿಥ್ಯಾಶಕ್ತಿ : ಶಕ್ತಿಯೆಂಬುದು ಮಾಯೆ ಮಾಯಾಶಕ್ತಿಯುದು ತನುವಿನಲಿ ನೀ ನಿಜಮುಕ್ತಿದಾಯಕನಿರಲು ಸುಖದುಃಖಾದಿಗಳಿಗಾರು ಯುಕ್ತಿಯೊಳಗಿವನಜಿತು ಮನನ ವಿರಕ್ತಿಯುಲಿ ಭಜಿಸುವಗೆ ಮುಕ್ತಿಗೆ ಭಕ್ತಿಯೇ ಕಾರಣವು (ಹಂಶಾ. ೭೩) ; ಘನತಮಸ್ಸತ್ತ್ವಪ್ರಧಾನಗಳೆನಿಸಿ ಧೂಮಜ್ವಾಲೆಗಳವೊಲ್ ಜನಿಸಿ ಮಾಯಾಶಕ್ತಿ ಚಿಚ್ಛಕ್ತಿಗಳವೆನಿಸಿಹವು (ಅಮೃಕ. ೩-೪೦). [ಸಂ.]

**ಮಾಯಾಶಲ್ಯ** (ನಾ). [ಜೈನ] ವ್ರತಗಳನ್ನು ಆಚರಿಸುವವನಿಗೆ ಉಂಟಾಗುವ ಮೂರು ಬಗೆಯ ಅಡ್ಡಿಗಳಲ್ಲಿ ಒಂದು : ಪೊಲ್ಲಮೆಯಂ ಮಾಡುವ ಮಿಥ್ಯಾಶಲ್ಯಂ ಮಾಯಾಶಲ್ಯಂ ನಿಧಾನಶಲ್ಯಮೆಂಬ ಮೂಱುಂ ಶಲ್ಯಗಳಿಂ ಪಿಂಗಿದಂ (ಧರ್ಮಾಮೃ. ೩-೧೩೦). [ಸಂ.]

**ಮಾಯಾಶಿಶು** (ನಾ). = ಮಾಯಾರ್ಭಕ : ಮಾಯಾಶಿಶುವುಮನೊರ್ಮೆಯೆ ಮಾಯಾನಿದ್ರೆಯುಮಮತ್ತಳೆಂಬಿಕೆಗೆ ಜಗಜ್ಜಾಯುನನುಯ್ದು ನಿಜಾಭಿಪ್ರಾಯದೆ ಶಚಿ ಶುಚಿಗಳಾರೊ ಕಾರ್ಯೋತ್ಕಂಠರ್ (ತಂಪ್ರಕೃ. ೧೨-೫೫). [ ಸಂ. ]

**ಮಾಯಾಸಂಜ್ವಲನ** (ನಾ). [ಜೈನ] ಚಾರಿತ್ರಮೋಹನೀಯಕರ್ಮದ ಅಣುವ್ರತಿಯಾದ ಗೃಹಸ್ಥನಿಗೆ ಪ್ರತ್ಯಾಖ್ಯಾನಾವರಣದಲ್ಲಿ ಉಂಟಾಗುವ ಕ್ರೋಧ, ಮಾನ, ಮಾಯೆ ಮತ್ತು ಲೋಭ ಎಂಬ ನಾಲ್ಕು ಬಗೆಯ ಕರ್ಮಪ್ರಕೃತಿಗಳಲ್ಲಿ ಒಂದು : ಕ್ರೋಧಸಂಜ್ವಲನಂ ಮಾನಸಂಜ್ವಲನಂ ಮಾಯಾಸಂಜ್ವಲನಂ ಲೋಭಸಂಜ್ವಲನಂ × × × ಅನಂತಾನುಬಂಧಿಲೋಭಮಾಯಾಕ್ರೋಧಮಾನಂ (ಗೊಮ್ಮಸಾ. ೩-೪). [ಸಂ.]

**ಮಾಯಾಳು** (ಗು). ೧. ಮಮತೆಯುಳ್ಳ : ತನ್ನನ್ನು ಅಗಲದೇ ಇರುವ ಮಾಯಾಳು ತಂದೆಯು ಒಮ್ಮೆಂದೊಮ್ಮೆ ಗತಿಸಿದ್ದರಿಂದ ಕೃಷ್ಣೆಗಾದ ದುಃಖವನ್ನು ಹೇಳಲಳವಲ್ಲ (ಐತ್ರಗ್ಗ. ೪). (ನಾ). ೨. ವಾತ್ಸಲ್ಯವುಳ್ಳವನು ; ಮಮತೆಯುಳ್ಳವನು : ಇಂಥಾ ಮಾಯಾಳುವಾದ ತಂದೆಯು ತೀರಿದನೆಂಬ ಹಂಬಲವಿಲ್ಲದೆ (ಮುಂಬಯು. ೩-೩೦೮).

[ ← ಮರಾ. ಮಾಯಾಲು, ಮಾಯಾಳೂ = ಮಮತೆಯುಳ್ಳ./P ಇದು ಸಂಸ್ಕೃತದ 'ಕೃಪಾಲು', 'ದಯಾಲು' ಮುಂತಾದ ಶಬ್ದ ಗಳ ಸಾದೃಶ್ಯದಿಂದ ರೂಪುಗೊಂಡಿರಬಹುದು]

**ಮಾಯಿ** (ನಾ). ೧. ಗಾರುಡಿಗ ; ಐಂದ್ರಜಾಲಿಕ ; ಮಂತ್ರಗಾರ : "ದಾಂಡಾಜನಿಕಃ, ಕುಹಕಃ . . . ಮಾಯಾವೀ, ಮಾಯಿಕಃ, ಮಾಯೀ — ಈ ೧೧ ಮಾಯಾವಿ" (ಹಲಾಯು. ೩೮-೧೯೪) ; ಆ ತತ್‌ಕ್ಷಣ ಮಾಯಿಗಳು ಮಯನೋತು ಕಬುವಾಗಲ್ಕೆ ಕಜಿದರು ಸೂತ್ರಸಂತರ್ಧಾನಧಾರಣೆಯೆಂಬ ವಿದ್ಯೆಗಳ (ಪಭಾಗ. ೪-೧೨-೩೦). ೨. ಮೋಸಗಾರ ; ಕಪಟಿ ; ಕುತಂತ್ರಿ : ಕರವ ಮುಗಿದನು ಮುಖ್ಯಪ್ರಾಣ . . . ಜೀವೇಶರೈಕ್ಯವು ಜಗತು ಮಿಥ್ಯವೆಂದು ಈ ವಿಧ ಪೇಳುವ ಮಾಯಿಗಳಳಿಯೆಂದು (ಪುರಂದ. ೧-೧೯೯-೧) ; ಆ ಮಾಯಿ ಮರುಟರ ಗಂಡಂ ಮಾಯಾತೀತಂಗೆ ಮಣಿದು ಬಿನ್ನತಿಗೆಯ್ದಂ (ಚಕಬ. ೩೪-೪೬). ೩. ಬ್ರಹ್ಮ. ೪. ಶಿವ. ೫. ಅಗ್ನಿ. ೬. ಕಾಮ. ೭. ಒಂದು ಬಗೆಯ ಸಸ್ಯ : "ಬುಸಃ — ಮಾಯಿ" (ಓಕಧಿ. ೧೧೯). [ ಸಂ. ಮಾಯಿನ್ ]

**ಮಾಯಿಕ** (ಗು). ೧. ಮೋಸದ : ಕಪಟದ. ೨. ತೋರಿಕೆಯ ; ಭ್ರಾಂತಿಯ : ಈ ಮಾಯಿಕಸಂಬಂಧವಾದ ದೇಹವ ತಾನೆಂದೆಂಬ ಮೂಢಾತ್ಮರನೇನೆಂಬೆನಯ್ಯ (ಸಿದ್ಧೇವ. ೪೬-೧೩೪). (ನಾ). ೩. ಮೋಸದಿಂದ ಕೂಡಿದುದು ; ಕಪಟದಿಂದ ಕೂಡಿದುದು : ಮಾಯಿಕಕ್ಕೆ ದೇವತ್ವವುಂಟೇ ಮರುಳುಮಾನವಾ ಮಹಾದೇವನೇ ದೇವನಲ್ಲದೆ (ಸಿದ್ಧೇವ. ೪೦-೧೧೮) ; ಮನದಿಂದ ಮಾಯಿಕಂ ಮನದಿಂದ ಮಂಗಲಂ ಮನದಿಂದ ಸಕಲಸಂಶಯಾದಿಗಳೆಲ್ಲ ಮನದಿಂದ ನರಕಕಿಳಿವರು (ಗುರುಬೋ. ೨-೧೬೨) ; ಮಾಯಿಕವಿದು, ಮಾಧವನಿನಲ್ಲದೆ ಪೆಱರಿನಾಗದು (ಅದ್ಭುಕ. ೧೨೯). ೪. ತೋರಿಕೆ ; ಭ್ರಾಂತಿ ; ಭ್ರಮೆ : ದೇವ ಹುಟ್ಟುವಾಗ ಮಾಯಿಕವ ಕೌತುಕವ ಧರಿಸಿ ಬಂದನೆಂಬರು ಅದು ಬಣ್ಣದ ಬಚ್ಚಣೆಯ ಮಾತು (ಮೋಹಮಾ. ೪-೧೨) ; ನಾನಾವಿಧವಾಗಿ ತೋಱಿದ ಮಾಯಿಕವಳಿಯಿತ್ತು ಮಾಯಿಕವಳಿಯಿತ್ತಾಗಿ ನಿರ್ಮಾಯನಾದೆನು ಕಾಣಾ (ಸಿದ್ಧೇವ. ೧೮೮-೩೬೩). ೫. ಭ್ರಾಂತಿಯಿಂದ ಕೂಡಿದುದು ; ಭ್ರಮೆಯಿಂದ ಕೂಡಿದುದು : ಪುಣ್ಯಪಾಪಫಲಾನುಭವಕ್ಕಾಗಿ ಈಶ್ವರನಿಗೆ ಶರೀರವಿಲ್ಲದಿದ್ದರೂ ಉಪಾಸಕರ ಅನುಗ್ರಹಕ್ಕಾಗಿ ಮಾಯಿಕವಾದ ಶರೀರವನ್ನು ಅವನು ಸ್ವೀಕರಿಸುವನು (ಭಾರದ. ೨೩೭). ೬. ಮಾಯೆಯನ್ನುಂಟುಮಾಡುವವನು : ಅದ್ವೈತ ವೇದಾಂತದಲ್ಲಿ . . . ಜಗದ್ವ್ಯಾಪಾರಕ್ಕಾಗಿ ಕಲ್ಪಿತನಾದ ಸಗುಣಮೂರ್ತಿ ಎನಿಸಿದ ಈಶ್ವರನು ಮಾಯಿಕನೂ ಅವನಿಂದ ನಿರ್ಮಿತನಾದ ಪ್ರಪಂಚ . . . ಸ್ವಪ್ನಸದೃಶವೂ ಆಗಿವೆ (ಕಕ್ತಾಪಿ. ೩೨). ೭. ಮಾಯೆಗೆ ಒಳಗಾದವನು ; ಮಾಯಾಶಕ್ತಿಗೆ ಒಳಪಟ್ಟವನು : ಮುಳುಗುವಾತ ಮುಳುಗುವವನನೆತ್ತಬಲ್ಲನೆ ತಾ ಮಾಯೆಯೊಳಗಾಗಿ ಮಾಯಿಕರ ತಪ್ಪ ಪಾದಾಂಬುವಿಂ ಪರಿಹರಿಪೆನೆಂಬವ ತೆಗೆದುಕೊಂಬವ ಇವರಿರ್ವರೂ ಮುಳುಗಿ ಯಮಪಾಶಕ್ಕೊಳಗಾದರು ನೋಡಾ (ಸಿದ್ಧವ. ೬೧-೨೩೦). ೮. ಗಾರುಡಿಗ; ಐಂದ್ರಜಾಲಿಕ ; ಮಾಯಾವಿ : "ದಾಂಡಾಜನಿಕಃ, ಕುಹಕಃ . . . ಮಾಯಾವೀ, ಮಾಯಿಕಃ, ಮಾಯೀ — ಈ ೧೧ ಮಾಯಾವಿ" (ಹಲಾಯು. ೩೮-೧೯೪). ೯. ಮೋಸಗಾರ ; ಕಪಟಿ. ೧೦. = ಮಾಯಾಮಲ ೧: ತಾ ಮಾಡಿದೆನೆಂದಡೆ ತನ್ನ ಕೆಳಗಣವೆ ಆಣವ ಮಾಯಿಕ ಕಾರ್ಮಿಕಮಲಂಗಳು (ಮೋಹಮಾ. ೩೩-೧೩೭). [ ಸಂ. ]

**ಮಾಯಿಕಮಲ** (ನಾ). = ಮಾಯಾಮಲ ೧ : ಧರ್ಮವ ನುಡಿವಲ್ಲಿ ಕ್ರಿಯಾಧರ್ಮ ನಿರ್ಮಲವ ನುಡಿವಲ್ಲಿ ಮಾಯಿಕಮಲಂ ನಾಸ್ತಿ ಕಾಯ

ಉಳ್ಳನ್ನಕ್ಕ ಪೂಜೆ ಜೀವವುಳ್ಳನ್ನಕ್ಕ ನೇಹ (ಸಕವ. ೪. ೭೭೪-೦೯೩೯).
[ಸಂ.]

**ಮಾಯಿಮರ್ಮ** (ನಾ). ಒಬ್ಬಾತನ ಹೆಸರು : ಬೆಳ್ವೊಲಂ ಮೂನೂಱುಮಂ ಮಹಾಸಿರಿವಸ್ತಿನಾಳೆ ಮುಳ್ಗುನ್ದ (ದ) ಪನ್ನೆರಡುಮಂ ಮಾಯಿಮರ್ಮನಾಳೆ ೩೦ವುರಕೆ ಬಗೆಗ ಪೆರ್ಗ್ಗಾವುಣ್ಡ ಮಾಗುತ್ತಿರೆ (ಎ೩. XXVI, ೬೨-೦೦ ; ೯೦೧).
[ಮಾಯಿ + < ಮರ್ಮ₃]

**ಮಾಯಿಸು** (ಕ್ರಿ). ಗಾಯ, ಹುಣ್ಣು ಮೊದಲಾದುವುಗಳನ್ನು ವಾಸಿ ಮಾಡು, — ಗುಣಪಡಿಸು : ಮಾಯೆಯೊಮ್ಮೊಮ್ಮೆ ತೋರುವಳು ಮಿಗಿಲಕ್ಕರೆಯ ಮಾಯಿಪಳು ಗಾಯಗಳನ್ನು (ಮಂಕುತಿ. ೦೯೭).
[ಮಾಯು₁ ( < ಮಾಯ್) + — ಇಸು₃]

**ಮಾಯಿಯಾ** (ನಾ). = ಮಾಯಾಮಲ ೧ : ಯಾವ ಪುರವು . . . ಆಣವ. ಮಾಯೀಯ, ಕಾರ್ಮಿಕವೆಂಬ ಮೂರು ಮಲಗಳನ್ನು ನಾಶ ಮಾಡುವ ತೀರ್ಥವೆಂದು ಪ್ರಸಿದ್ಧವಾದ ಮಲಾಪಹಾರೀನದಿಯ ತೀರದ ಕ್ಷೇತ್ರವಾಗಿರುವುದೊ . . . ಆ ಐವರಿಯನ್ನು ವಂದಿಸುವೆನು (ಶಿವಾಸೂ. ೩_೬ ೮೩೪) ; ಆಣವ ಮಾಯೀಯಮಲಗಳಿಂದಲೂ ಅಂತಃಕರಣ ಇಂದ್ರಿಯ ದೇಹಗಳಿಂದ ಕೂಡಿದ ಜೀವಾತ್ಮನು ಸುಖದುಃಖಗಳನ್ನನುಭವಿಸುತ್ತಾನೆ (ಭಾರತ. ೨೦೪). [ ಸಂ. ]

**ಮಾಯು₁** 'ಮಾಯ್' ನೋ.

**ಮಾಯು₂** (ನಾ). ೧. ಮಾಟ : ಅಭಿಚಾರ. ೨. ಪಿತ್ತ : "ಮಾಯುಃ. ಪಿತ್ತಂ- ಈ ೨ ಪಿತ್ತಂ" (ಪರ್ಯಾಯ. ೯೯-೪೩೦). ೩. ಸೂರ್ಯ. [ಸಂ.]

**ಮಾಯುಚ್ಚವ** (ನಾ). ದೊಡ್ಡ ಉತ್ಸವ ; ಮಹಾಸಮಾರಂಭ : ಲೇಸ ಮಾಡಿದೆ ನಿನ್ನ ದೆಸೆಯಿಂದ ಕಿಚ್ಚು ನಂದಿದ ತ್ರಿಜನವೊಲು ಮಾಯುಚ್ಚವಕೆ ಮಿಗಿಲಾಯ್ತು ಪೂತುಜ³ ನಿಚ್ಚಟವ ಸಾಹಸಿಕ ನೀನು (ಕುಮ್ಮಾರಾ. ೬೦೩. ೪-೬೨). [ಮಾ₄ + ಉಚ್ಚವ]

**ಮಾಯೂರ** (ಗು). ೧. ನವಿಲಿಗೆ ಸಂಬಂಧಿಸಿದ. ೨. ನವಿಲುಗರಿಯಿಂದ ಮಾಡಿದ. (ನಾ). ೩. ನವಿಲುಗಳ ಗುಂಪು. ಸಮೂಹ. [ಸಂ.]

**ಮಾಯೂರಧ್ವಜ** (ನಾ). ನವಿಲಿನ ಗುರುತಿರುವ ಬಾವುಟ; ಮಯೂರದ ಚಿಹ್ನೆಯಿರುವ ಧ್ವಜ; ☞ ಇದು ಚಾಳುಕ್ಯರಾಜರಿಗೆ ಸಲ್ಲುತ್ತಿದ್ದ ಒಂದು ಬಿರುದು : ಎನೆ ಸಂದಿರ್ದ್ದ ಚಳುಕ್ಯರುನ್ನತಿಯದಾರ್ಗ್ಗಂ ಬಣ್ಣಿಸಲ್ಬಾರದೆಂಬಿನೆಗಂ ತಾರಕವೈರಿಯೊಳ್ಪಡೆದ ಮಾಯೂರಧ್ವಜಂ ಪದ್ಮಲೋಚನನಿಂ ಪೆತ್ತ ವರಾಹಮುದ್ರೆ. . . ಛತ್ರದಿಂ ಪೊಪ್ಪೆ ಭೂತಳಮನಾಳ್ದರ್ಬ್ಬಾಹು ವಿಕ್ರಾಂತದಿಂ (ಕ೩೮. ೨-೨-೨೪; 1058). [ಸಂ.]

**ಮಾಯೂರಿ** (ಗು). ೧. ನವಿಲಿಗೆ ಸಂಬಂಧಿಸಿದ. (ನಾ). ೨. ನವಿಲಿನ ಚಿತ್ರವುಳ್ಳ ಒಂದು ಬಗೆಯ ಆಯುಧ : ಬಿಲ್ಲು ತೀರು ಮಾಯೂರಿ ಖೇಟಕ ಮುಂತಾದ ಶತ್ರುಜಯಾತ್ಮರಕ್ಷಾದಿ ಸಾಧನವಿಶೇಷಂಗಳಿಂದಲುಂ (ವಿವೇಕ. ೨೬೩). [ಸಂ. ಮಾಯೂರೀ]

**ಮಾಯೆ** (ನಾ). ೧. ಗಾರುಡಿ ; ಇಂದ್ರಜಾಲ : ಮಾಯೆಯೊಳೆ ಗೆಲ್ದ ದಾನವನಾಯಕನಂ ನಗುವ ಮದನಸುತನುಪಹಾಸಚ್ಛಾಯೆ ಬೆಡಂಗಾಯ್ತು ಯಶಶ್ರೀಯ ಮನೋಹರಸಿತಪ್ರಸಾಧನರುಚಿವೋಲ್ (ಜಗಾ. ೦೭-೦೩೨). ೨. ಮೋಸ ; ವಂಚನೆ ; ಕಪಟ : "ಮಾಯೆಯಿ[ಶಾಕಾಂ. ಯುವೆ]ನೆ ಮುಚ್ಚಕ್ಕ" (ಮುಂಗರಾ. ೦೦೨-೫); ಸರ್ವಸ್ವವನು ನೆಜ³ ಕವರಿ ಗೋಟಿ ಗೊಳಿಸುವ ಬಲ್ಮೆಗಳ ಬಲ್ಲಾಟಿಕ ಬಹುವಿಧದ ಮಾಯೆಯ ಬೇಟಕಾತಿಯೆ ರೊಪ್ಪಿದರು ನರನಾಥನಿದಿರಿನಲಿ (ಕೂರಗ. ೦-೫-೩೦). ೩. ಮಿಥ್ಯೆ : ಭ್ರಮೆ : ಭ್ರಾಂತಿ : ಯುವತಿಯಾಲಿ ನೋಟಬೇಟದಿ ಕೂಟವನು ಪಡೆದು ಕಾಯುವವಳಿಗಧೀನವಾಗಿರೆ ಗಾಯವಡೆದು ಗಜನ ಬಾಣಕೆ ಬಾಯ ಕಿಸಿ ದಾಯಾಸಗೊಂಬುದೆ ಮಾಯೆ (ಅಮೃತ. ೨-೭೮): ಮಾಯೆಯನು ನೀಗಿ ! ನನ್ನಂತೆ ಲಾಂಗೂಲಯಜ್ಞದಿಂ ನವತೇಜಪ್ಪುಣ್ಯಗಳ ಗಳಿಸಿ ಜೀವನ್ಮುಕ್ತರಾಗಿ (ಕಂತ್ರಿ. ೪೩-೦೦). 'ಮಾಯೆವಿಡಿ' ನೋ. ೪. ಅಜ್ಞಾನ; ತಮೋಗುಣ : ಕೂಡಲಸಂಗನ ಕೂಡಿಹೆನೆಂದೊಡೆ ತಾನೆನ್ನ ಮುಂದುಗೆಡಿಸಿತ್ತು ಮಾಯೆ (ಬಸವ. ೦೪). ೫. ದಿಗ್ಭ್ರಮೆ : ನಮ್ಮದಿದೊಂದು ಕುಟುಂಬ ಮರು ದಿನ ಮುರಿಯುವದಿತ್ತು. ಪ್ರತಿಯೊಬ್ಬರಿಗೂ ಮಾಯೆ ಆವರಿಸಿತ್ತು. (ನ್ಯಾಕ೩. ೩೦೭). ೬. ಮರುಕ ; ಅನುಕಂಪ. ೭. ಅತಿಯಾದ ಪ್ರೀತಿ : ವ್ಯಾಮೋಹ : ಧನದ ಮೇಲಿನ ಅವರ ಮಾಯೆ ವಿಪರೀತ ಹೆಚ್ಚು (ಇಶ್ಕ. ೩೦೭). ೮. ಮನುಷ್ಯನಿಗೆ ಅಜ್ಞಾನವನ್ನುಂಟುಮಾಡಿ ವ್ಯಾಮೋಹವನ್ನು ಬರಿಸುವ ಶಕ್ತಿ : ಜನಿತಕ್ಕೆ ತಾಯಾಗಿ ಹೆತ್ತಳು ಮಾಯೆ ಮೋಹಕ್ಕೆ ಮಗಳಾಗಿ ಹುಟ್ಟಿದಳು ಮಾಯೆ. . . ಈ ಮಾಯೆ ಕಳೆವೊಡೆಯೆನ್ನಳವಲ್ಲ (ಬಸವ. ೦೫). ೯. ಪಾರ್ವತಿ ; ದುರ್ಗೆ. ೧೦. ಲಕ್ಷ್ಮಿ. ೧೧. ಪಾರ್ವತಿಯ ತಾಮಸಕಳೆಯ ಒಂದು ರೂಪ : ಅಂಬಿಕೆ ತನ್ನ ತಾಮಸಕಳೆಯ ಮೂರುತಿಯಾದ ಮಾಯೆಯನಿಳೆಯೊಳುದಯಿಸಿಯಲ್ಲಮನ ನೋನಜಿಸು ಬಾಯೆನಲು (ಶ್ರಕುಂ. ೨-೪೧). ೧೨. ಬ್ರಹ್ಮನಿಂದ ಭಿನ್ನವಾಗಿರುವಂತೆ ಮತ್ತು ಸತ್ಯವಾಗಿರುವಂತೆ ತೋರುವುದು : ಪ್ರಪಂಚದ ಪೂರ್ವಸ್ಥಿತಿ ; ಪ್ರಕೃತಿ : ಪ್ರಕೃತಿಯೆಂದರೆ ಮೂಲಾಜ್ಞಾನ, ಮಾಯೆ, ಅವಿದ್ಯೆ ಮೊದಲಾದ ಶಬ್ದಗಳಿಂದ ಹೇಳಲ್ಪಡುವ ಪ್ರಪಂಚದ ಪೂರ್ವಸ್ಥಿತಿ (ಹಿಂದಸಾ. ೦೯೪). ೧೩. ಬುದ್ಧಿ ; ಪ್ರಜ್ಞೆ. ೧೪. ದರ್ಪ ; ಸೊಕ್ಕು. ೧೫. ಮೂರ್ಖತನ. ೧೬. [ಶೈವ] ಐದು ಬಗೆಯ ಪಾಶಗಳಲ್ಲಿ ಒಂದು ; ಮನುಷ್ಯನಿಗೆ ಅನಾದಿಯಾಗಿರುವ ಅಶುದ್ಧಿ : ಮಲ, ಕರ್ಮ, ಮಾಯೆ, ಮಹಾಮಾಯೆ, ತಿರೋಧಶಕ್ತಿಯೆಂದು ಪಾಶ ಐದುವಿಧ (ಹಿಂಪಾ. ೨೯೬). ೧೭. [ದ್ವೈತ] ಹೃದಯಕಮಲದಲ್ಲಿರುವ ಹನ್ನೆರಡುದಳಗಳ ಹನ್ನೆರಡುರೂಪಗಳಲ್ಲಿ ಒಂದು :ಹೃದಯಕಮಲದಲ್ಲಿರುವ ೧೨ ದಳಗಳಲ್ಲಿ ೧೨ ರೂಪಗಳು. ಅವು ಶಕ್ತಿ. ಪ್ರತಿಷ್ಠಾ, ಸಂವಿತ್, ಸ್ಫೂರ್ತಿ, ಪ್ರವೃತ್ತಿ, ಪರಾ, ವಿದ್ಯಾ, ಮತಿ, ನಿಯತಿ, ಮಾಯಾ ಕಾಲ, ಪುರುಷ ಹೀಗೆ ೧೨ ರೂಪಗಳು (ಹಕಾರ. ೪-೨೩ ತಾತ್ಪರ್ಯ). ೧೮. [ಜೈನ] ಇಪ್ಪತ್ತೈದು ವಿಧವಾದ ಕ್ರಿಯೆಗಳಲ್ಲಿ ಒಂದು : ಪಂಚವಿಂಶತಿಕ್ರಿಯೆಗಳು. ೧. ಸಮ್ಯಕ್ತ್ವಕ್ರಿಯೆ (ದೇವಗುರುಶಾಸ್ತ್ರಾದಿ ಪೂಜೆ . . . ೨೩. ಮಾಯೆ (ಜ್ಞಾನ ದರ್ಶನಾದಿಗಳಲ್ಲಿ ಕಪಟೋಪಾಯ). ೨೪. ಮಿಥ್ಯಾದರ್ಶನ (ಪರರ ಮಿಥ್ಯಾತ್ವ ಕ್ರಿಯೆಗೆ ಉತ್ತೇಜನ). ೨೫. ಅಪ್ರತ್ಯಾಖ್ಯಾನ (ಸಂಯಮದಲ್ಲಿ ಉದ್ಯುಕ್ತನಾಗದಿರುವುದು) (ಜೈವರ. ೬೪).' ಪಂಚವಿಂಶತಿಕ್ರಿಯೆ ' ನೋ.

ಮಟಮಾಯೆ = ಮೋಸಗಾತಿ ; ವಂಚಕಿ : ದಿಟ್ಟೆಯರು ಕುಟಿಲೆಯರು . . . ಚೆಟ್ಟಿಯರು ಮಟಮಾಯೆ [ಶಾಕಾಂ. ಯ]ಗಳು ಬಲು ಮುದ್ದು ಕಾತಿಯರು (ಐಕತ್ರಿ. ೪೦-೫೭). [ಸಂ. ಮಾಯಾ]

**ಮಾಯೆವಿಡಿ** (ಕ್ರಿ). ಭ್ರಾಂತಿಗೆ ಒಳಗಾಗು : ಮಾಯೆವಿಡಿದು ಜೀವಿಸುವ ಜೀವಕನಲ್ಲ ಅದೇನು ಕಾರಣವೆಂದಡೆ ಆತ ಘನಲಿಂಗವಿಡಿದು ಜೀವಿಸುವ ಜೀವಕನಾಗಿ (ಶನ್ಯವ. ೪. ೫೬೨-೧೨೩೨). [ಮಾಯೆ + ಪಿಡಿ₁]

**ಮಾಯ್ಟ** ' ಮಾಯ್ ' ನೋ.

**ಮಾಯ್ದು** ' ಮಾಯ್ ' ನೋ.

**ಮಾಯ್ಮರುತಾಪು** ' ಮಾಯಾಮರತಾಪು ' ನೋ.

**ಮಾರ್** (ಸಪೂರೂ). 'ಮಾಱು' ಎಂಬ ನಾಮಪದಕ್ಕೆ ಸಮಾಸಗಳಲ್ಲಿ ಬರುವ ಆದೇಶರೂಪ : ' ಮಾರ್ತಲೆ ', ' ಮಾರ್ದನಿ', ' ಮಾರ್ಪಡು ' ನೋ. [< ಮಾಱು₂]

**ಮಾರ** (ನಾ). ೧. ಕೊಲ್ಲುವಿಕೆ ; ವಧೆ. ೨. ಸಾವು : ಮರಣ. ೩. ವಿಘ್ನ ; ತಡೆ ; ಅಡ್ಡಿ. ೪. ಮನ್ಮಥ ; ಕಾಮ : " ಪ್ರದ್ಯುಮ್ನಃ . . .

ಮದನಃ, ಮಾರಃ, ಸ್ಮರಃ . . . ಮನೋಭವಃ—ಈ ೨೮ ಕಾಮ(ದೇವ)ನ ಪೆಸರ್ " (ಹಲಾಯು. ೭-೩೩); ಮಾರಂ ಬಿರಯಿಗೊಡರ್ಚಿದ ಮಾರಣ ಹೋಮಾಗ್ನಿಧೂಮಪಟಲಂಗಳವೋಲ್ ಕಾರ ಮುಗಿಲ್ ನೆಗೆದುವು ರತಿ ನೀರೆಱೆದೋವಿದ ತಮಾಲಷಂಡಂಗಳವೋಲ್ (ಶಂರಾಪ. ೭-೧೬೦); ವಿಷಯಾಭಿಲಾಷೆಯಲ್ಲಿ ವಿರಾಗವು ನೆಲೆಯಾಗಿ ಅಷ್ಟಾವರಣದ ಆಚಾರವೆ ಅಂಗವಾದಡೆ ಮರುಳುಗೊಳಿಪ ಮಾರನ ಮಾಟವು ದೂರಾಗುವುದಯ್ಯಾ (ತವ್ವತ. ೪. ೪೬೩-೦೦೪೨); ಪಡೆದು ಮಾರನ ದಾಳಿ ಬಂದುದು ಕಾವರಿಲ್ಲ ಕಟಾ (ಹಎಸ್ಕಾರ. ೨-೭೮). ೫. [ಬೌದ್ಧ] ಪಾಪಪುರುಷ; ದುಷ್ಟ : ಪರಿನಿರ್ವರ್ತಿಸೆ ಮಾರ, ಬದುಕಿಂದ ತೊಲಗೆನೀ ಬ್ರಹ್ಮಚರ್ಯದ ಧರ್ಮ ಋದ್ಧಿಸವ ಮುನ್ನ (ವ್ಯಶಾಪ. ೬೩-೧೭).

**ಮಾರನಯ್ಯ** = ಮನ್ಮಥನ ತಂದೆ; ವಿಷ್ಣು : ಆರು ವರ್ಣಿಸ ಬಹುದು ಮಾರನಯ್ಯನ ಭಕ್ತಿ ಸೂರೆಗೊಂಡವರ ಕಥೆ ಧಾರುಣಿಗೆ ಹೊಸದು (ಜಗವಾ. ೦೩೩). [ಸಂ.]

**ಮಾರಂಕ** 'ಮಾಱಂಕ' ನೋ.

**ಮಾರಂದೆಯ** (ನಾ). ಒಬ್ಬಾತನ ಹೆಸರು : ಸಮಣರು ಮರುದೂರ ಮಾರನ್ದೆಯರ್ ವೆದಿಜ್ಜ(?)ದರ್ ಕಿತ್ತೂರ ಮಯ್ಸರು . . . ಸಾಕ್ಷಿ (ಇಅ. XIV, ೨೩೨-೩೮; ಸು. ೯ನೆಯ ಶತ). [ ? ]

**ಮಾರಂಬು** 'ಮಾಱಂಬು' ನೋ.

**ಮಾರಕ** (ಗು). ೧. ನಾಶಕಾರಕವಾದ ; ಹಾನಿಕಾರಕವಾದ. (ನಾ). ೨. ನಾಶವನ್ನುಂಟು ಮಾಡುವಂಥದು ; ಹಾನಿಕಾರಕವಾದುದು : ಈ ವಸ್ತುಗಳೆಲ್ಲವೂ ಮೋಹಕವಾಗಿರುವಷ್ಟು ಮಾರಕವಾಗಿರುತ್ತವೆ (ಶೀಮಂತ. ೪೨೯); ಸಾಹಿತ್ಯವನ್ನು ಪಾಂಡಿತ್ಯಸಿದ್ಧಾಂತದ ಹಾಗೂ ನಿರ್ಜೀವ ಅನುಕರಣೆಯ ಕಿರುದಾರಿಗೆ ತಳ್ಳಿ ಎಷ್ಟರೆ ಮಟ್ಟಿಗೆ ಮಾರಕವಾಗಿದೆ ಯೆಂಬುದನ್ನೂ ಪರಿಗಣಿಸಬೇಕು (ಸಾಹಿಶ್ರ. ೪೨). ೩. ಕೊಲ್ಲುವವನು; ನಾಶಮಾಡುವವನು : ತಾರಕನು ಮಾರಕನಾದಾಗ ರತಿಯಲ್ಲದೆ ಇನ್ನಾರು ಅವನನ್ನು ಸಂತಪಿಸಬಲ್ಲರು ? (ಅಶ್ವಮೇ. ೩೯). ೪. ಪ್ರಾಣಹಾನಿ ಯನ್ನುಂಟು ಮಾಡುವಂಥ ಕಾಲರಾ, ಪ್ಲೇಗು, ಸಿಡುಬು ಮುಂತಾದ ಭಯಂಕರರೋಗ. ೫. ಗಿಡುಗ; ಡೇಗೆ. ೬. ಪ್ರಳಯ ಕಾಲದಲ್ಲಿ ಆಗುವ ಸರ್ವಪ್ರಾಣಿಗಳ ನಾಶ. ೭. [ಜ್ಯೋತಿ] ಜಾತಕದಲ್ಲಿ ಎರಡು ಮತ್ತು ಏಳನೆಯ ಸ್ಥಾನಗಳ ಅಧಿಪತಿ ; ☞ ಎರಡು ಮತ್ತು ಏಳನೆಯ ಸ್ಥಾನಗಳು ಹಾನಿಕಾರಕವಾದುವೆಂಬ ನಂಬಿಕೆ ಇದೆ. [ಸಂ.]

**ಮಾರಕತ** (ಗು). ೧. ಮರಕತಮಣಿಗೆ ಸಂಬಂಧಿಸಿದ. (ನಾ). ೨. ನವ ರತ್ನಗಳಲ್ಲಿ ಒಂದು; ಪಚ್ಚೆ : ಚಿಕುರಂ ಪ್ರಜ್ವಲಿಪಿಂದ್ರನೀಲನಿಕರಂ ಬಾಯ್ವಿದ್ರುಮಂ ಛಾಯೆ ಮಾರಕತಚ್ಛಾಯೆ ನಖಾಳಿ ವಜ್ರಮಮಳಂ ದಂತೋತ್ಕರಂ ವ್ಯಕ್ತಮೌಕ್ತಿಕಂ (ಅರ್ಧನೇ. ೨-೦೩). [ಸಂ.]

**ಮಾರಕಾಣಿಕೆ** (ನಾ). ಒಂದು ಬಗೆಯ ತೆರಿಗೆ : ಅಡಿಕೆಸುಂಕ ಮಗ್ಗವು ಮಾರಕಾಣಿಕೆ × × × ಟು ಹೊಜಿವಾಜು ಪೊಟ್ಟುಸುಂಕ . . . ದೇವರಿಗೆ ವಸಂತೋತ್ಸವ ತಿರುನಾಳ ಬಿಜಯಂಗೆಯುವದಕ್ಕೆ ಆಚಂದ್ರಾರ್ಕಸ್ಥಾಯಿ ಯಾಗಿ ಬಿಟ್ಟೆವು (ಎಕ. VI (R), ಶ್ರೀರಂಗ. ೩-೦೯; 1431).

[ಮಾರ, + ಕಾಣಿಕೆ (< ಕಾಣ್ಕೆ)]

**ಮಾರಕೇಳಿ** (ನಾ). ಕಾಮಕೇಳಿ; ರತಿಕ್ರೀಡೆ : ನೀನವಳ ಮನೆಗೆ ಬಂದು ಮಾರಕೇಳಿಯ ಬಿಟ್ಟು ಪೋದ ಕಾರಣವನು ಪೇಳು (ತೀವಂಸಾಂ. ೩-೩೨).

[ಸಂ. ಮಾರಕೇಲಿ]

**ಮಾರಕ್ಕ ಅರಸ** (ನಾ). ಒಬ್ಬಾತನ ಹೆಸರು : ಮಾರಕ್ಕಅರಸರ್ಬ್ಬನವಾ [ವಾ]ಸಿ ಪನ್ನಿಚ್ಛಾಸಿರಮುನಾಳೆ (ಎಇ. VI, ೦೬೩-೦; ಸು. 780); ಸ್ವಸ್ತಿಶ್ರೀ ದೋರಪ್ಪರಸರ್ ಪೃಥಿವೀರಾಜ್ಯಂಗೆಯೆ ಮಾರಕ್ಕಅರಸರ್ ಬನವಾಸಿ ನಾಡಾಳೆ (ಕೌಇಇ. XX, ೧೦-೦; ?). [ಮಾರಕ್ಕ + ಅರಸ$_1$]

**ಮಾರಗ, ಮಾರುಗ** (ನಾ). ಒಬ್ಬಾತನ ಹೆಸರು : ಅಯ್ಯಂಗನುಂ ಮಾಳನುಂ ಮಾರಗನುಂ ನಾಗ × × × ಮುದ್ದನು ಒಡನೆ ಸಿದ್ಧಿಸಿದರ್ (ಎಕ. VII, ಶಿವಮೊ. ೨೪-೬; 970 ?). **ಮಾರುಗ** : ಸುಗ್ಗಗಾವುಣ್ಡನ ಮಗ ಬಸವನ × × × ಮಂದಜ್ಜರ ಮಾರುಗಂ ತಲೆಗಡಿದ (ಎಕ. V, ಅರಸೀ. ೦೬೩-೩; 908). [ < ಮಾರ ]

**ಮಾರಗವುಂಡ** 'ಮಾರಗಾಮುಂಡ' ನೋ.

**ಮಾರಗಾಮುಂಡ, ಮಾರಗವುಂಡ, ಮಾರಗಾವುಂಡ** (ನಾ). ಒಬ್ಬಾತನ ಹೆಸರು : × × × ಕಜು ಪ್ರಥನಿಗಗಾಮುಣ್ಡ ಮಾರಗಾಮುಣ್ಡ × × × ಪ್ಪಯ್ಯ ಬರೆದ ಬದಿಯ್ಯಮ್ಮಾ × × × (ಎಕ. III (R), ಪಂಜನ. ೩೦೪-೬; ಸು. ೯ನೆಯ ಶತ). **ಮಾರಗವುಂಡ** : ಮಾರಗವುಣ್ಡ ಸನ್ತಿ ಗವುಣ್ಡಗಂ ಏಚ್ಚದಿ ಬೊಗ್ಗ ಪಳ್ಳಿ ಮರಿಗಕುಮ್ಬಣ್ಣಗಂ ಎಳಮಕ್ಕಳ್ಗೆ ಮೆಚ್ಚಿ ಪೊಗೆವೆಗ್ಗಯ ತೆಱೆಯ ಬಿಟ್ಟ ಇ × × × (ಎಕ. III (R), ಪಂಜನ. ೩೦೩-೭ ; ಸು. ೯ನೆಯ ಶತ). **ಮಾರಗಾವುಂಡ** : ಗೆಲ್ಲೂರ ಮಾರಗಾವುಣ್ಡ × × × ಕೆಱೆಯ ಗಾವುಣ್ಡ ಪಸಿದು ದೇಗುಲವ ಮಾಡಿಸಿದೊಡೆ (ಎಕ. VII, ಶಿವಮೊ. ೨೨-೩; 963). [ ಮಾರ + ಗಾಮುಂಡ ]

**ಮಾರಗಾವುಂಡ** 'ಮಾರಗಾಮುಂಡ' ನೋ.

**ಮಾರಗೊಟ್ಟೆಱಿ** (ನಾ). ಒಬ್ಬಾತನ ಹೆಸರು : ಮಾರಗೊಟ್ಟೆಱರೊಂದು ತೋಟ್ಟಂ ಪೊಯ್ದಾರ್ (ಮ್ಯಆಂ. ೦೯೨೩, ೦೦೬-೨೩; ೮ನೆಯ ಶತ).

[ ಮಾರ + < ಗೊಟ್ಟೆಱೆಯ ]

**ಮಾರಜನಕ** (ನಾ). ಮನ್ಮಥನ ತಂದೆ ; ವಿಷ್ಣು : ಮಾರಜನಕನ ಮೋಹ ನಾಂಗನ ಸೇರಿ ಸುಖಿಸಲು ಹಾರೈಸಿ ಬಂದೆವು (ಕೃಕಂದ. ೨-೦೦೨ ಅವಾಶ್ಯಕ). ಮಾರಜನಕಂ ವಿಪುಳಸಾರಸಭವಂ ದಿವಿಜವಾರವರನುಂ . . . ಸಮದ ವಾರಣಮುಖಂ ನವಮಯೂರಪತಿವಾಹಂ ಸೇರಿ ನೆರೆದೊಪ್ಪಿರೆ (ರಾಜಶೇ. ೦೪-೬೮). [ಸಂ.]

**ಮಾರಜನಕಿ** (ನಾ.) ಮನ್ಮಥನ ತಾಯಿ ; ಲಕ್ಷ್ಮಿ : ಕ್ಷೀರವಾರಿಧಿಕನ್ನಿಕೆ ಮಾರಜನಕಿ ಈರೇಳು ಲೋಕನಾಯಿಕೆ ವಾರವಾರಕೆ ನಿನ್ನಾರಾಧಿಪುದಕೆ ಚಾರುಮನಸು ಕೊಡು (ಏರಾಕ್ಕ. ೩೩ ಪಲ್ಲವಿ). [< ಸಂ. ಮಾರಜನಿಕಾ]

**ಮಾರಟಬೋಯ** (ನಾ). ಒಬ್ಬಾತನ ಹೆಸರು : ಮಾರಟಬೋಯಸ್ಯ ಕೌಣ್ಡಿಲ್ಯಗೋತ್ರ ವೆಣ್ಣಶರ್ಮ್ಮಣ (ಇಅ. VII, ೧೮೮-೪೦ ; 668).

[ ☞ ಇದು 'ಮಾರಟ್ಟಬೋಯ' ಎಂದಿರಬಹುದು ]

**ಮಾರಡಿ$_1$** (ನಾ). ಒಬ್ಬಾತನ ಹೆಸರು : ಆನೆಸಾಸಲಾ ಬೀರಡಿಗಳುಂ ಮಾರಡಿಗಳುಂ ಕೊತ್ತನೂರಾ ಕುನ್ದಪ್ಪಣಿಗಳುಂ . . . ಇ ಪೊಲಸಂ ನಡಯಿಸಿದೋರ್ (ಎಕ. XVI, ಗುಬ್ಬಿ. ೭೩-೩೩; 733). [ ಮಾರ + ಅಡಿ$_1$]

**ಮಾರಡಿ$_2$** (ನಾ). ಸತ್ಕಾರ ; ಉಪಚಾರ : ಭೋಜನಕೆ ವಿಂಗಿ ಲಿಂತಿದುವೆ ಮಾರಡಿಯಾಯ್ತು ನಮಗಿನ್ನೇನು ಸಾಲದೆಲೇ (ಜವಜಾ. ೨೨-೨೦); ಆ ಸಾಧನೆಗೆ ಆದಿಮಂಗಳವಾಗಿ ಅಣ್ಣಾಜಿಯುವರ ದಳವಾಯ್ತನಕ್ಕೆ ಬಿಡುಗೆ ವೀಳೆಯದ ಮಾರಡಿಯೇಳುವುದು (ಚಿಬ್ಯಅ. ೦೬೪-೬). [ ? ]

**ಮಾರಣ** (ನಾ). ೧. ಕೊಲೆ ; ವಧೆ ; ಸಂಹಾರ : "ಮಾರಣಂ, ನಿಶರಣಂ, ನಿಬರ್ಹಣಂ . . . ಪ್ರಮಯಾ, ಹಿಂಸಾ, ಸಂಜ್ಞಪನಂ — ಈ ೨೧ ಕೊಲೆ" (ಹಲಾಯು. ೭೮-೩೨೩); ಅಪಹರಣ ಮಾರಣ ವಶೀಕರಣ ದ್ವೇಷಣಾದಿಗಳ್ಗೆ ಪೆಱವೃಮಿ ದೊರೆಯುವರ್ಕೆ ಱಿದುಮಾಗಮಂಗಳೆ ಪ್ರಮಾಣಂಗಳ್ (ಕಾದಂಬ. ೭೪೬) ; ಆರು ಬಣ್ಣಿಸಬಹುದು ದೈತ್ಯನ ಮಾರಣದ ಹೋಮ ವನು (ಕೌಶಿರಾ. ೩೮-೨೮). ೨. ಅಳಿವು ; ನಾಶ : ದುರ್ಮತಿಯಪ್ಪ ರಾವಣಂಗೀ ರಣಕೇಳಿ ಮಾರಣಮನೀಯದೆ ಕೆಮ್ಮನೆ ಸೈತೆ ಪೋಕುಮೇ

(ಕುಂತಾಪು. ೧೦-೦೭೬) ; ನೇರಿದುವು ಸ್ನಿಗ್ಧಮುಮುಂತೋರನ್ನಮುಂಮುಪ್ಪ ನಾಲ್ಕುರೇಖೆಯು ತುರಗಂ ಮಾರಣಮುಂ ವಿಣ್ಮೂತ್ರವಿಶಾರದಿನಿರ್ವತ್ತು ವರ್ಷದೊಳ್ ಗತಮಕ್ಕುಂ (ಅಶ್ವಶಾ.೩-೨೬). ೩. ವೈರಿನಾಶಕ್ಕಾಗಿ ನಡೆಸುವ ಮಾಟ, ಮಂತ್ರ ಮುಂತಾದುವು : ಅವರು ಕುಪಿತರಾಗಿ ಮಂತ್ರ, ಮಾಟ, ಮಾರಣಗಳನ್ನು ಮಾಡಿದರೆ ಇನ್ನೂ ಪಾಡುಪಡಬೇಕಾದೀತಲ್ಲ ಎನಿಸತೊಡಗಿತ್ತು (ಮಂಬಣಾ. ೩೨೬). ೪. ಒಂದು ಬಗೆಯ ವಿಷ. [ಸಂ.]

**ಮಾರಣಮಂತ್ರ** (ನಾ). ವೈರಿನಾಶಕ್ಕಾಗಿ ಪ್ರಯೋಗಿಸುವ ಮಂತ್ರ : ಮಾರಣಮಂತ್ರನಾದಮೆನಿಸಿತ್ತು ವಿರೋಧಿಗೆ ಶಾಂತಿಕಕ್ರಿಯಾಕಾರಣಮಂತ್ರ ನಾದಮೆನಿಸಿತ್ತು ಧರಿತ್ರಿಗೆ . . . ಅಚ್ಚರಿ ನಿನ್ನ ಚಾಪಟಂಕಾರನಿನಾದಮೊಂದೆ ಫಲವುಂ ತೆಜನಂ ತಳೆದಂದದಮಾಪುದೋ (ಕುಂತಾಪು. ೪-೭೭) ; ಜಪಿಸಬಾರದು ಜಪಿಸಬಾರದು ಮಾರಣಮಂತ್ರಗಳ (ಸಿದ್ಧವ. ೪-೦೪೦-೪೭೩). [ಸಂ.]

**ಮಾರಣಹೋಮ** (ನಾ). ೧. ಶತ್ರುನಾಶಕ್ಕಾಗಿ ಮಾಡುವ ಹೋಮ : ಮಾರಂ ಬಿರಯಿಗೊಡರ್ಚಿದ ಮಾರಣಹೋಮಾಗ್ನಿಧೂಮಪಟಲಂಗಳವೋಲ್ ಕಾರ ಮುಗಿಲ್ ನೆಗೆದುವು ರತಿ ನೀರಜಿಸಿದೋವಿದ ತಮಾಲಪಂಡಂಗಳವೋಲ್ (ಕುಂತಾಪು. ೭-೦೭೦) ; ಕಾಮುಕಾದಿಯೆ ಜನಕೆ ಮಾರಣಹೋಮವನು ತನ್ನಾಭಿಕುಂಡದಿ ಕಾಮುಕಿದ್ರನು ಮಾಡಲೊಗೆದಾ ಧೂಮರೇಖೆಯೊಲು ರೋಮ ರಾಜಿಸುತಿರ್ಕು (ನಾಗಕು. ೨೬-೦೭). ೨. ನಾಶ : ಅಳಿವು : ದಾಸ ಕೂಟದವರಿಂದ ಧರ್ಮದ ಮಾರಣಹೋಮವಾಯಿತೆಂದು ಗಳಹುತ್ತಿದ್ದರು (ಕಥಾ. ೪೭೭). [ಸಂ.]

**ಮಾರಣ್ಣ** (ನಾ). ಒಬ್ಬಾತನ ಹೆಸರು : ಕಾದ × × ದೊಳಿ ಸತ್ತ ಇಟ್ಟಮ್ಮಣ್ಣಂ ಕಂಬಣ್ಣನ ತಮ್ಮ ಮಾರಣ್ಣಂಗೆ ಪೆರ್ಮಾಡಿಗಾವು (ಎಕ. III (R), ಗುಂಡ್ಲುಪೇ. ೧೦೮-೪ ; 10ನೆಯ ಶತ). [ಮಾರ + ಅಣ್ಣ$_1$]

**ಮಾರಥ** (ನಾ). ೧. ದೊಡ್ಡ ರಥ. ೨. ರಥದಲ್ಲಿದ್ದುಕೊಂಡೇ ತನ್ನನ್ನೂ ತನ್ನ ಸಾರಥಿಯನ್ನೂ ಕುದುರೆಗಳನ್ನೂ ರಕ್ಷಿಸಿಕೊಂಡು ಏಕಾಂಗಿಯಾಗಿ ಹತ್ತುಸಾವಿರಯೋಧರೊಡನೆ ಯುದ್ಧ ಮಾಡುವವನು ; ಮಹಾರಥ: ಉತ್ತರಕೋಸಲದ ಬಲುಚಂದವಾದ ಪ್ರದೇಶವನು ಮಾರಥನು ದಶರಥನು ತಂದು . . . ತೊಂದಿವನು ದೇವೇಂದ್ರನಂದದೆ ವಿಮಲಕೀರ್ತಿಯನು (ರಾಮಾಶ್ವ. ೬೯-೦). [< ಸಂ. ಮಹಾರಥ]

**ಮಾರನೆಯ** 'ಮಱು$_1$' ಪರಾ.

**ಮಾರನೇ** 'ಮಱು$_1$' ಪರಾ.

**ಮಾರಪುಲಿ** (ನಾ). ಒಬ್ಬಾತನ ಹೆಸರು : ಕೊಮರಪೆಯ ಚಿಂಪಯ್ಯನುಂ ಲೋಕಯ್ಯನುಂ ಕೊಟ್ಟಾರದ ಮಾರಪುಲಿಯುಂ (ಎಕ. XII, ತಿಪ. ೨೮-೩೨; 943). 'ಮಾದಪುಲಿ' ನೋ. [ಮಾರ + ಪುಲಿ]

**ಮಾರಫತಿ** 'ಮಾರಿಫತ್ತು' ನೋ.

**ಮಾರಬ್ಬೆ**, ಮಾರಿಬೆ, ಮಾರಿಬ್ಬೆ (ನಾ). ೧. ಒಂದು ಕ್ಷುದ್ರದೇವತೆಯ ಹೆಸರು : ಮಾರಮ್ಮ : ಮಾರಬ್ಬೆ ಮಸಣಿ ಮಾಸಣಿ ಬೀರಂ ಮೈಲಾರ ನೆಂಬಿವರ ನೋಂಪಿಗಳೊಳ್ ಪೋರುವರಂ ಪೊಲೆಯರ್ಮಂಧೋರಂತಿರೆ ಮುಟ್ಟಲಕ್ಕುಮೆಂಬರ್ಪಾರ್ವರ್ (ಸಮಯ. ೪-೪೩). ೨. ಒಬ್ಬಾಕೆಯ ಹೆಸರು : ವಿಶ್ವಾಮಿತ್ರಗೋತ್ರದ ತೊಡಕ ಕೇಸಮಯ್ಯ ತನ್ನ ಪತ್ನಿ ಮಾರಬ್ಬೆ ಧರ್ಮಕ್ಕನುಕೂಲವಾಗುತ್ತಿರಲು (ಎಕ. VII, ಶಿಕಾ., ೨೬೭-೦೦; 1012). **ಮಾರಿಬೆ** : ೧. ಆರಾ ತೋಣ್ಬದಿಂ ಮೂಡಣ ತೋಣ್ಬಕಣ್ಣಮುಂ ಮಾರಿಬೆಜೆಯಿಂ ಬಡಗಣ ಮಣ್ಣು ಮೊಳವೆಡೆ ಪಿಟ್ಟಿಣ್ಣಗುಂ (ಎಕ. IV (R), ಎಳಂದೂ. ೦೭೪-೬; 10ನೆಯ ಶತ). **ಮಾರಿಬ್ಬೆ**: ೨. ಮಾರಮ್ಮಯ್ಯನ ಪೆಣ್ಣಮ್ಮಾರಿಬ್ಬೆ . . . ಸಂನ್ಯಾಸನಂಗೆಯ್ದು ಮುಡಿಪಿದರ್ (ಎಕ. III (R), ಮಂಜನ. ೨೦೦-೦; 10ನೆಯ ಶತ). [< ಮಾರಿ$_2$ + ಅಬ್ಬೆ$_1$]

**ಮಾರಮಣ** (ನಾ). ಲಕ್ಷ್ಮೀಪತಿ; ವಿಷ್ಣು : ಮಧುಸೂದನ ಮಾರಮಣ ಮನೋಹರ ವಿಧಿ ಪಿಪಮದ್ಯ . . . ಕುಶಲವಿಡನ್ನ (ಶತಕಾ. ೬೨-೭). [ಸಂ.]

**ಮಾರಮಥನ** (ನಾ). ೧. ಮನ್ಮಥನನ್ನು ನಾಶಮಾಡಿದವನು: ಶಿವ : ಎಲೆ ಖಳ ಮಾರಮಥನನ ನೆರೆಯ ಹೊಕ್ಕರು ಬಿಡುವೆನೇ ನಿನ್ನ (ಗಿರಿಜಾ. ೩೭-೭೦); ಆ ರಾಕ್ಷಸಂ ಪರಂಬಡದು ಲೋಕಗಳ ಸಂಹಾರಮಂ ಮಾಡುತಿರೆ ಸರ್ವಜನಮೆಯ್ತಂದು ಮಾರಮಥನಂಗೆ ಮೊಱೆಯಿಡೆ (ಶಿವಕೃತಿ. ೩-೩-೯). ೨. [ಜೈನ] ಅರ್ಹಂತ ; ಜಿನ : ತ್ರಿಕರಣಶುದ್ಧಿಯೊಳಾ ರಾಜಕುಮಾರಂ ಮಾರಮಥನನಂ ಸ್ತುತಿಯಿಸಿ (ಅದಿಪು. ೪-೨). [ಸಂ.]

**ಮಾರಮಯ್ಯ** 'ಮಾರಮ್ಮಯ್ಯ' ನೋ.

**ಮಾರಮಾರಣ** (ನಾ). ಮನ್ಮಥನನ್ನು ಸಂಹರಿಸಿದವನು ; ಶಿವ : ವೀರಭಕ್ತಿಗೆ ಬೀರುವಲ್ಲಾ ಮಾರಮಾರಣ ನೀವು ಬಸವಕುಮಾರನಂ ಕೇತಯ್ಯ ನೊಡನೀಗಳೆ ಕಳುಹು ಕಳುಹು ಧಾರುಣಿಗೆ (ಬಸವ. ೩೭-೪೭). [ಸಂ.]

**ಮಾರಮ್ಮ$_1$**, ಮಾರ್ಯಮ್ಮ (ನಾ). ಒಬ್ಬಾತನ ಹೆಸರು : ಶೋ(ಸೋ)ಮವಂಶೋದ್ಭವ ಶ್ರೀಮಾರಮ್ಮಾಳ್ವರಸರ್ (ಎಕ. IX, ೨೨-೪; ಸು. 800). **ಮಾರ್ಯಮ್ಮ** : ಮದಿರೆಗೊಣ್ಡ ಕೊಪ್ಪರಗೇಶರಿವರ್ಮ್ಮಂಗೆ ಪರಿಪ ವಿಂಪ್ಪರ್ಕೆತ್ತೊಮ್ಮತ್ತಜೆಜ್ಜೆಯ್ದು ಕೂರ ರಾವಿನಾಡ ಮಾರ್ಯಮ್ಮ ಮಮ್ಮ ಗಣಿಪರಾಮ ತುಱುಮಸಿಕ್ಕಿಸಿ ಅಟ್ಟಿ ಸತ್ತನ್ (ಎಕ. X, ಕುಳಗ. ೨೦೩-೨; 934). [ಮಾರ + ಅಮ್ಮ$_1$]

**ಮಾರಮ್ಮ$_2$** (ನಾ). ೧. ಕಾಲರಾ, ಪ್ಲೇಗು ಮುಂತಾದ ಭಯಂಕರ ಸಾಂಕ್ರಾಮಿಕವಾದ ರೋಗ ; ಪಿಡುಗು : (ಆ). ೨. (ಕಾಲರಾ, ಪ್ಲೇಗು ಇತ್ಯಾದಿ ಸಾಂಕ್ರಾಮಿಕರೋಗಗಳ ಅಧಿದೇವತೆಯೆಂದು ನಂಬಿರುವ ಒಂದು ಕ್ಷುದ್ರದೇವತೆಯ ಹೆಸರು : ಬಸವನ ಮಗ ಸೇರೂಗಾರ ನಂಜುಂಡನು ಹತ್ತುಮಂದಿ ಸೇವಾರ್ಥವಾಗಿ ಯಿಾ ಬಂಗಿಮಾರಂಮನ ಗುಡಿ ಮುಂದಣ ಪಕ ಅಂಕಣ ೧ ಮುಂದಣ ಪಾಶಾಳಂಕಣ ೩ ಸಹ ಯಿಾ ಮಾರಂಮನವರಿಗೆ ಉತ್ಸವವಿಗ್ರಹ . . . ಅರ್ಪಿತ (ಎಕ. III (R), ಮಂಜನ. ೩೪೦-೦೩; 1766). [ಮಾರಿ$_2$ + ಅಮ್ಮ$_2$]

**ಮಾರಮ್ಮಯ್ಯ**, ಮಾರಮಯ್ಯ (ನಾ). ಒಬ್ಬಾತನ ಹೆಸರು : ಮಾರಮ್ಮಯ್ಯನ ಪೆಣ್ಡಮ್ಮಾರಿಬ್ಬೆ ಅಪ್ಪೋಪವಾಸರಾಸಿಯರ ಬಾಚಯ್ಯನ ಅತ್ತಯ್ಯನ ಅಬ್ಬೆಗಳ್ ಸನ್ಯಸನಂಗೆಯ್ದು ಮುಡಿಪಿದರ್ (ಎಕ. III (R), ಮಂಜನ. ೨೦೦-೩; 10ನೆಯ ಶತ). **ಮಾರಮಯ್ಯ** : ಕುಪ್ಪಸೆಯಂ ಕಟ್ಟಿಜಿಗ್ನಿಸ್ದರನುಂ ಮಾರಮಯ್ಯನು ಕಿಬಿಲಸುಂಗೊಂದೊಳ್ ರಾಜಮಾರವ್ ಅಯ್ಮತ್ತಲ್ಕೆಯ್ಯಂ ಕೊಟ್ಟರ್ (ಎಕ. VIII, ಸೊರಬ. ೯೩-೭ ; 876). [ಮಾರಮ್ಮ$_1$ + ಅಯ್ಯ$_1$]

**ಮಾರಯ್ಯ**, ಮಾರೆಯ, ಮಾರೆಯ್ಯ (ನಾ). ಒಬ್ಬಾತನ ಹೆಸರು : ಶ್ರೀ ಕಾವದೊಱ ಮಾರಯ್ಯನ ಮಗ ಶ್ರೀ ತೇರರಲಿಯ ತುಱುಗೊಳಲ್ ಕಾದಿ ಸತ್ತಂ (ಎಕ. III (R), ಗುಂಡ್ಲುಪೇ. ೨೦೭-೨; 9ನೆಯ ಶತ). **ಮಾರೆಯ** : ರಾಚಮಲ್ಲಗಾಮುಣ್ಡನು ಸಿಱನುಂ ಗಂಗಗಾಮುಣ್ಡನುಂ ಮಾರೆಯನುಂ ಬೆಳ್ಗೆಱೆಯೊಡೆಯರುಂ . . . ಸಾಕ್ಷಿಯಾಗೆ ಕೊಟ್ಟತ್ತು (ಎಕ. XVI, ಗುಬ್ಬಿ. ೭೦-೪೭; 812). **ಮಾರೆಯ್ಯ** : ನಾಗಯಬ್ಬೆಯ ಮಗ ಮಾರೆಯ್ಯ ಕೊಟ್ಟೂರ ತುಱುಗಳೊಳೆ ಅಣ್ಮಿ ಸತ್ತ (ಎಕ. XI, ಹಳ್ಳಿ. ೪-೪; 974). [ಮಾರ + ಅಯ್ಯ$_1$]

**ಮಾರವ** (ಗು). ೧. ಮರುಭೂಮಿಗೆ ಸಂಬಂಧಪಟ್ಟ. (ನಾ). ೨. ಮರುಭೂಮಿ ; ಮರಳುಗಾಡು : ಮಾರವಕೂಪಜಲಂಗಳ್ಗಾಪ್ಪವಿ ಯಂಬುವಿನಂತೆ ತೃಷೆಯನೇಂ ಕಳೆದಪುವೆ (ವ್ಯಕಥಾ. ೩-೭೦). [ಸಂ.]

**ಮಾರವಳಿ** 'ಮಾರುಳಿ' ನೋ.

**ಮಾರವಾಡಿ**, ಮಾರುವಾಡಿ, ಮಾರ್ವಾಡಿ (ನಾ). ರಾಜಸ್ಥಾನದ ಮಾರವಾಡಪ್ರದೇಶದ ವ್ಯಕ್ತಿ ; ಒಡವೆ, ವಸ್ತುಗಳನ್ನು ಅಡವು

ಇಟ್ಟುಕೊಂಡು ಸಾಲಕೊಡುವ ವ್ಯವಹಾರವೇ ಇವರ ಮುಖ್ಯ ಕಸುಬು : ಮಾರವಾಡಿಗಳು ತಾಳ್ಮೆಯಿಂದ ಶ್ರಮ ಮಾಡುವವರೂ, ಬಹಳ ಕೃಪಣರೂ, ಧೈರ್ಯಶಾಲಿಗಳೂ ಇರುತ್ತಾರೆ (ಕರಾಗ. ೦೦೩); ಮಾರವಾಡಿಗೆ ವ್ಯಾಪಾರ ಮಾಡುತ್ತಿದ್ದರೆ ಇನ್ನೇನೂ ಬೇಕಾಗುವುದಿಲ್ಲ (ದಾಪತಂ. ೦೯೬). **ಮಾರುವಾಡಿ :** ವಿಸ್ತಾರವಾಗಿ ಮಡಗಿ ಮಾರುವ ಮಾರುವಾಡಿಯರು (ಕಾಗಂ೦. ೦೬೩-೩). **ಮಾರ್ವಾಡಿ:** ಈ ಬೀದಿಯು ಕೊನೆಯಲ್ಲಿ ಮಾರ್ವಾಡಿಯು ಅಂಗಡಿ ಇದೆ(೬೩೨). 'ಮಾರವ' ಪರಾ.

[← ಹಿಂ. ಮರಾ. ಮಾರವಾಡೀ. / ತೆಲು. ಮಾರುವಾಡಿ]

**ಮಾರವಾಳಿ** ' ಮಾರುಳಿ ' ನೋ.

**ಮಾರವಿ** (ನಾ). [ಸಂಗೀತ] ಒಂದು ರಾಗದ ಹೆಸರು : ರಾಗ ಮಾರವಿ ಏಕತಾಳ (ತೀಂಕ್ತ. ೪೩). [ಸಂ. ಮಾರವೀ]

**ಮಾರಸಂಹರ** (ನಾ). ಮನ್ಮಥನನ್ನು ಕೊಂದವನು ; ಶಿವ : ಮಾರ ಸಂಹರನ ನೆನೆದಿಹರೆ ಮೃತ್ಯು ತಾ ದೂರಕ್ಕೆ ದೂರ (ಸರ್ವಜ್ಞ. ೨೪೩). [ಸಂ.]

**ಮಾರಸಾಲ** (ನಾ). ಮನ್ಮಥವೃಕ್ಷ : ಮಾವು : ಕವಿಕೃತನುತಿಶೋಲಂ ಪ್ರಿಯುಗ್ರೀಷ್ಮಕಾಲಂ ಧರಣೀವಿಕ್ಷಿಪ್ತಮೂಲಂ ಪಡೆದುದು ಸೊಗಸಂ ಮಾರಸಾಲಂ ರಸಾಲಂ (ಚಾರಿತ್ರ. ೦-೦೦೩). [ಸಂ.]

**ಮಾರಸಿಂಗ** (ನಾ). ಒಬ್ಬಾತನ ಹೆಸರು : ಸಿರಿಜೂರರಾ ಮಗನು ಮಾರಸಿಙ್ಗ ಇನ್ನತೂರ ತುಱುಗೊಳೆ ಸತನ್ (ಎಕ. IX, ಬೇಂಗಳೂ. ೩೯-೩; ಸು. 1000). [ಮಾರ + ಸಿಂಗ$_1$]

**ಮಾರಸಿಂಗಗಾಮುಂಡ** (ನಾ). ಒಬ್ಬಾತನ ಹೆಸರು : ಪೊಂಮುಗುಪ್ಪೆಯ ಮಾರಸಿಙ್ಗಗಾಮುಣ್ಡರುಂ ಎಱಿಗಙ್ಗಗಾಮುಣ್ಡರುಂ. . . ಸರಸಾಕ್ಷಿಯಾಗೆ ಪಡೆದಾವರ್ (ಎಕ. VI (R), ಶ್ರೀರಂಗ. ೬೬-೧೪; ಸು. 800).

[ ಮಾರಸಿಂಗ + ಗಾಮುಂಡ ]

**ಮಾರಸಿಂಗಯ್ಯ** (ನಾ). ಒಬ್ಬಾತನ ಹೆಸರು : ಶ್ರೀಮಾರಸಿಂಗಯ್ಯ (ಎಕ. II, ೪೭೨; ಸು. 1000). [ ಮಾರಸಿಂಗ + ಅಯ್ಯ$_1$ ]

**ಮಾರಸಿಂಹ** (ನಾ). ಒಬ್ಬಾತನ ಹೆಸರು : ×× ಸ್ವಂ ಪ್ರತಿ ಮಾರಸಿಂಹ ನೃಪತಿರ್ವ್ವಿಕ್ರಾನ್ತಕ ×× ಸೌಯೌತ್ರ ×× ಸ್ಥಿತಿ (ಎಕ. II (R), ೬೯-೬೩; 10ನೆಯ ಶತ). [ಸಂ.]

**ಮಾರಸ್ಸಟ್ಟ** (ನಾ). ಒಬ್ಬಾತನ ಹೆಸರು : ಶ್ರೀಮಾರಸ್ಸಟ್ಟಮಹಾರಾಜನ್ ಪ್ರಿಥುವೀರಾಜ್ಯಂಗೆಯ್ಯೆಯೆ (ಎಕ. VI, ೨೩೬-೦; 800). [< ಮಾರ + ಸಟ್ಟ ?]

**ಮಾರಹರ** (ನಾ). = ಮಾರಸಂಹರ : ಮಾರಹರಭಕ್ತರ್ಗಿಳೆಯೊಳಪ ಕಾರಮಂ ಮಾಡುವವದಿರನವಿಚಾರದಿಂ ಕೊಲುವುದು (ಬಿಸಪು. ೨೨-೩) : ಮಾರಹರನೆ ಬಲ್ಲ ಎನ್ನ ಸಾಮರ್ಥ್ಯಕ್ಕೆ ದಾರಿದ್ರ್ಯವು ಬರಬಹುದ (ಸಿಜಸಂ೦. ೦-೩೩).

**ಮಾರಹರಪ್ರಿಯ** = ಶಿವನಿಗೆ ಪ್ರಿಯನಾದವನು ; ಕುಬೇರ : ಮೃಗವುಂ ಪವನಂ ವಿಮಾನಮುಂ ಮಾರಹರಪ್ರಿಯುಂ ವೃಷಭನಂ ಘರನೇಜ್ಯ ನಥಕ್ಕೆ ಸಲ್ವುದುಂ (ಶಗಂ. ೦-೩೭). [ಸಂ.]

**ಮಾರಾಟ$_1$** ' ಮಾಱಾಟ ' ನೋ.

**ಮಾರಾಟ$_2$** ' ಮರಾಟ ' ನೋ.

**ಮಾರಾಟತೆರಿಗೆ** (ನಾ). ಮಾರಾಟವಾದ ಸಾಮಾನುಗಳ ಮೇಲೆ ವಿಧಿಸುವ ತೆರಿಗೆ ; "ಮಾರಾಟ ತೆರಿಗೆ, ಮಾರಾಟಕರ" (Sales tax ಕಶ್ರಿ. ೭೨) : ಸಿದ್ಧ ಪಡಿಸಿದ ಉಡುಪುಗಳ ಮೇಲೆ ವಿಧಿಸಿರುವ ಮಾರಾಟತೆರಿಗೆ ಹೆಚ್ಚು ಎನ್ನಿಸುತ್ತದೆ (ದೂತ).

[ ಮಾರಾಟ$_1$ (< ಮಾಱಾಟ) + ತೆರಿಗೆ (< ತೆಱಿಗೆ) ]

**ಮಾರಾಟ್ಟ** (ನಾ). (?) : ದೇವೇನ್ದ್ರರು ಪೆಲಕೊಣ್ಣು ಮಾಣಿಗತೋಟ್ಟುಂ ನ್ನಾರ್ಕ್ಕರುಂ ಮಾರಾಟ್ಟ ತೆನ್ನನಾರ್ಕ್ಕರುಂ ಅವರ ಬಂಬು ಪೊಯ್ದಾರ್ಪ್ಪ ನ್ನಿರ್ವ್ವರಾ ಏಟ್ಟರಾ ಪೊಯ್ಯು ನಮ್ಮ೯ಂ (ಎಕ. IV (R), ಚಾಮರಾ. ೦೪೭-೮; ಸು. 750). [ ? ]

**ಮಾರಾಡು** ' ಮಾಱಾಡು ' ನೋ.

**ಮಾರಾಣಿ** (ನಾ). ಮಹಾರಾಣಿ : ಪುರಮಾವುದರೊಳ್ಸವಿ ಕೇಳ್ ಗಿರಿಶನ ಮಾರಾಣಿ ಕನಲ್ದು ಮಹಿಷಾಸುರನಂ ತರಿದಿಹಳಾ ಪುರಮಿದನಿಃ ನರಪತಿ ಸಂಪ್ರೀತಿಯಿಂದೆ ಸಲಹುತ್ತಿರ್ಪಂ (ನರಚ. ೦೦೬-೭೦೩) ; ಮಾರಾಣಿ ಬೆಸಸಿಹಳು, ತನಗಿನಿತು ಬೇಕೆಂದು (ತಂವ್ರಸ. ೩೦-೨೦). [ಮಾ$_4$ + ರಾಣಿ]

**ಮಾರಾನ್** ' ಮಾಱಾನ್ ' ನೋ.

**ಮಾರಾಪು** (ನಾ). ಬೆನ್ನಿನ ಮೇಲೆ ಹೊರೆ ಇಟ್ಟು, ಎದೆಯ ಮೇಲೆ ಗಂಟು ಬರುವಂತೆ ಬಂಧಿಸುವ ಪಟ್ಟಿ : ಅವನ ಕೈಯ ಕೋಲು, ಬೆನ್ನ ಮೇಲಿನ ಮಾರಾಪು, ಅವನ ಮೈಕೈಗಳಲ್ಲಿದ್ದ ದೂಳು ಅವನು ಬಹುದೂರದ ದಾರಿ ನಡೆದವನೆಂದು ಸಾರುತ್ತಿದ್ದವು (ಕುಚಿಕ. ೦). [ ← ತಮಿ. ಮಾರಾಪ್ಪು ]

**ಮಾರಾಮಾರಿ** (ನಾ). ಪರಸ್ಪರ ನಡೆಯುವ ತೀವ್ರ ಹೊಡೆದಾಟ ಅಥವಾ ಜಗಳ : ಅಂಗಡಿಯವನಿಗೂ ಆ ಬಿದ್ದ ಬಕರನಿಗೂ ಮಾರಾಮಾರಿ ಯಾಯಿತು (ಕೃವ್ಯಕಿ. ೬೯); ನಾಯಕನಿಗೂ ಖಳನಾಯಕನಿಗೂ ಮಾರಾಮಾರಿ (ಜಾಹಿಗೀ. ೩೬).

[ ←ಹಿಂ. ಮಾರಾಮಾರ್ ; ಮರಾ. ಮಾರಾಮಾರ್. ಮಾರಾಮಾರೀ]

**ಮಾರಾಯ** ' ಮಹಾರಾಯ ' ನೋ.

**ಮಾರಾಯಿತಿ** ' ಮಹಾರಾಯಿತಿ ' ನೋ.

**ಮಾರಾಯ್ತಿ** ' ಮಹಾರಾಯಿತಿ ' ನೋ.

**ಮಾರಾರಿ** (ನಾ). ೧. ಮನ್ಮಥನ ಶತ್ರು ; ಶಿವ : ಮಾರಾರಿ ನೀಂ ಬರೆ ವಿಚಾರವುಂಟೇ ತಂದೆ (ಸಂಚಿರ. ೭-೦೩೯) ; ಹಾರವಂ ವಿಕ್ರಯಿಸಿ ಎನ್ನ ಕುಮಾರಿಯಾ ಶಿವರಾತ್ರಿಯಲಿ ಮಾರಾರಿಭಕ್ತರಿಗೀಯಲೀ ಆರಾಧನೆಗಳನು (ಬಸಪು. ೪೨-೦೦) ; ಮಾರಾರಿಯ ಮಂಗಳಸಭೆಯ ಕಂಗಳು ನುಂಗಿತ್ತು ನೋಡಾ (ಅಬಂಡೀ. ೨೦೩-೪೩). ೨. [ಜೈನ] ಜಿನ : ಮಾರಾರಿಗಭಿಷವಂ ಜಂಭಾರಿಯಿನಾದತ್ತು ಘೃತಸಮುದ್ರದ ಘೃತದಿಂ ಕ್ಷೀರಸಮುದ್ರದ ವಿಮಲ ಕ್ಷೀರದಿಂ (ಆಪು. ೯-೭೩). [ಸಂ.]

**ಮಾರಾರ್ದನ** (ನಾ). = ಮಾರಾರಿ ೧ : ಶಾರಾಪೀಡನ ಗುಣಪತಿ ಮಾರಾರ್ದನ ವಿಶ್ವನಾಥನಿಂದಂ ಪಡೆನಳ್ ಸಾರಸುತ ಚಂದ್ರಪೀಡನನಾರಯೆ ಮಹದೇವಿ ಪಡೆವ ವರಕದು ದೊರೆಯೇ (ಹಮ್ಮಿ. ೨-೦೯). [ಸಂ.]

**ಮಾರಾವುತ** (ನಾ). ಶ್ರೇಷ್ಠನಾದ ಕುದುರೆಯ ಸವಾರ : ಮಲ್ಲರು ಮಾರಾವುತ ರಮ್ಯಲಸಿಕರು ಬಲ್ಲಿದ ಗಜವಾಹಕರು ಬಿಲ್ಲಿನಜ್ಞಾನದವರು ಮುಂತಾದವರೆಲ್ಲರೊಪ್ಪಿದರೊಡ್ಡೋಲಗದಿ (ಸೋಹಕ. ೨೦-೩೬).

[ಮಾ$_4$ + ರಾವುತ]

**ಮಾರಾಶರ್ವ** (ನಾ). ಒಬ್ಬಾತನ ಹೆಸರು : ಮಾರಾಶರ್ವ್ವಮಹಿಪತೀ ದುರ್ಗ್ಗತಮಗಾದಪ್ರಾಪ್ತಪೂರ್ವಂ (ಎಕ. III (R), ತಂಜನ. ೨೭೬-೩೮; 808). [ p ಇದು ' ಮಾರಶರ್ವ ' ಎಂಬುದರ ಅಪಲಿಖಿತವಿರಬಹುದು ]

**ಮಾರಾಳ್** ' ಮಾಱಾಳ್ ' ನೋ.

**ಮಾರಾಳ** (ನಾ). ೧. ಶ್ರೇಷ್ಠನಾದ ಸಂನ್ಯಾಸಿ ; ಪರಮಹಂಸ : ಮಾರಾಳನಂತೆ ತೋರುತ್ತ ಜಗವ ಸಂಚರಿಸಿ . . . ಮಾರಾಳಜನಕನಂತ್ರಿ ಮನದೊಳು ಧೇನಿಸುತ್ತ ಪೂರಭಕ್ತಿಯಲಿಂದು ಸುಖವುಂಡ ಮನಗಂಡ ಸರಹರಿಯ ತೋಂಡ (ಹರಿದು. ೬-೦). ೨. ಹಂಸವಾಹನನಾದ ಬ್ರಹ್ಮ : ' ಮಾರಾಳಜನಕ ' ಪರಾ. [< ಸಂ. ಮರಾಲ]

**ಮಾರಾಳಜಪ್ಪಕ** (ನಾ). ಬ್ರಹ್ಮನ ತಂದೆ ; ವಿಷ್ಣು : ಮಾರಾಳನಂತೆ

ಘೇನಿಸುತ್ತ ಪೂರ್ಭಕ್ತಿಯೊಳಿಂದು ಸುಖಿಕುಂಡ ಮನಗಂಡ ನರಹರಿಯ ತೋಪ್ದ (ಶಿಪದು. ೬-೧). [ಮಾರಾಳ + ಜನಕ]

**ಮಾರಾಳಿ** 'ಮಾಜಾಳಿ' ನೋ.

**—ಮಾರಿ₁** (ಪ್ರ). ಯಾವುದಾದರೂ ವಿಷಯಕ್ಕೆ ಸಂಬಂಧಿಸಿದಂತೆ, ತೀವ್ರವಾದ ಸ್ವಭಾವವುಳ್ಳವನು ಎಂಬರ್ಥದಲ್ಲಿ ಸೇರುವ ಒಂದು ತದ್ಧಿತಪ್ರತ್ಯಯ : 'ಹಡಮಾರಿ', 'ಹಟಮಾರಿ' ಪರಾ.

**ಮಾರಿ₂** (ಗು). ೧. ಹಿರಿದಾದ ; ದೊಡ್ಡದಾದ : 'ಮಾರಿಬಲೆ' ಪರಾ. ೨. ಕೆಟ್ಟ ; ನೀಚ : 'ಮಾರಿಕಣ್ಣು' ಪರಾ. ೩. ಭಯಂಕರವಾದ : 'ಮಾರಿಮುಖ' ಪರಾ. (ನಾ). ೪. ಕೊಲ್ಲುವಿಕೆ : ನಾಶಮಾಡುವಿಕೆ. ೫. ಸಾವು ; ಅಳಿವು : ಒಂದು ದಿನಮಾ ಸಿಂಗಕ್ಕೆ ಮಾರಿ ಬರ್ಪಂತೆ ದೀರ್ಘಕರ್ಣನೆಂಬ ಮೊಲಕ್ಕೆ ಬಾರಿ ಬರ್ಪುದುಂ (ಪಂತಕಂ. ೬೬-೧೩); ಎನಗೆ ಬಂದುದು ಮಾರಿ ನಾಳಿನ ದಿನದವುದಯಕೆ (ಸಂಶಕ. ೨೨-೩೭). ೬. ಕೇಡು ; ಹಾನಿ ; ಆಪತ್ತು : ಮೆಲ್ಲನೆ ಮೃಗಮೆಂದು ಸಾರ್ದು ನೆಲಸಂ ನಡೆನೋಡಿ ನರೇಂದ್ರನೆಚ್ಚು ಭೋಂಕನೆ ಮೃಗಚಾರಿಯುಂ ತನಗೆ ಮಾಣದ ತಂದನದೊಂದು ಮಾರಿಯುಂ (ಪಂಶಕಾ. ೦-೦೦೦); ಆದಿಪುರಾಣ ಅಸುರರಿಗೆ ಮಾರಿ ವೇದಪುರಾಣ ಹೋತಿಂಗೆ ಮಾರಿ (ಬಸವ. ೩೬೨); ಹೋದ ಮಾರಿಯು ಕರೆದು ಮನೆಯೊಳಗಾದರಿಸಿದವರುಂಟೆ (ಕುಮ್ಮಾ.ಕ. ೨೦-೩೨); ಬೀದಿಯಲ್ಲಿ ಹೋಗೋ ಮಾರೀನ ಮನೆಗೆ ಕರೆದಂತೆ (ಗಾದೆ). ೭. ಸಾವು ತರುವಂಥ ಪ್ಲೇಗು, ಕಾಲರಾ, ಸಿಡುಬು ಮುಂತಾದ ಭಯಂಕರವಾದ ಸಾಂಕ್ರಾಮಿಕರೋಗ : ಕಳ್ಳರಾಯಿಲ ಮಚಿಯೊಳು ಮಾರಿ ಪಸವಿಟ್ಟು ಬಜಂ ಪೆಜಪೂ ಭಯಂಗಳಾಕುಲಿತಗಳಲ್ಲ (ಅದಿಪು. ೦-೩೨); ಬಜಂ ಪಸವು ಮಾರಿ ಬಂದೀಗ್ರಹಣಂ ಮಂಚಲ್ ಕಳವಾಜಿದ ಭಯಸಂಚಯಮೆಂಬಿ ಪಜ ಪೆಸರುಮಿಲ್ಲಾ ನಾಡೊಳ್ (ಕ್ಷೃತ. ೨-೩). ೮. ಮಾರಕರೋಗಗಳನ್ನುಂಟು ಮಾಡುವುದೆಂದು ನಂಬಲಾದ ಒಂದು ಕ್ಷುದ್ರದೇವತೆ : ಮಾರಿಯು[ಪಾಠಾಂ. ಬಳಯಿಯು] ಮನೆಯುಂ ಪರಕೆಯ ಕುಚಿಯುಂ ಪುಗಿಸುವಂತೆ ವಟವಿಟಪಿಕೋಟರಕುಟೀರಾಂತರಮುಂ ಪುಗಿಸಿ (ಪಂಶಕಂ. ೬೭೩-೦೦) ; ಮಾರಿ ಮಲಯಾನಿಲಂ ಸವನೀರಜವನಮೆಂಬ ಕೆಂಪದೊಳ್ ದಂಡನಮುಸ್ಸಾರಂಬಿದವನಿತ್ರವಧಾರಿಪುದೆಂಬಂತೆಯುಲಿದುಪರಗಿಳಿ ಬನ ದೊಳ್ (ಮುಕೋತ. ೦-೩೬); ದಂಗೆ ಮಾರಿಯು ಚೆಡಿಯುಗ್ಗದ ಶಕ್ತಿಗಳು ಸದ್ಗುಣಸತ್ಯ ಮುಸುಕಿಪರ ಮುಟ್ಟವಿದು ಸದ್ಗುರುವಿನಾಜ್ಞೆ (ಸರ್ವಜ್ಞ. ೯೦). ೯. ಮೃತ್ಯುದೇವತೆ : ಇಂತಪ್ಪ ಪಂಚಮಹಾಪಾತಕನ ಮನೆಯೊಳ್ ಮಾರಿ ಮಿರ್ಕೆ (ಪಶ್ಚಾ.ರಾ. ೩೬-೦೯) : ಇದು ಮನೆಯುಂದಮಲ್ಲು . . . ಬಗೆವಲ್ಲಿ ನೋಡುವೊಡವಿಟ್ಟಿಗೆ ಕಲ್ಮರಸೆಂಬುದಿಲ್ಲ ಕೂರವನಿದನೊಡ್ಡಿದಂ ಪಗೆಗೆ ಸಂತಸಮಾಗಿರೆ ಮಾರಿ ಸುಯ್ಯುವೇ (ಪಂಶಪಾ. ೩-೪); ಭೀಮನ ತೋರ ಗರ್ವಿನ ದಂಡೆಯನು ಕೈಯಾರೆ ಮಾರಿಗೆ ಮುಡಿಸುವೆನು (ಕುಮ್ಮಾ.ಕ. ೩-೦೭). ೧೦. ಪ್ರಳಯಕಾಲದಲ್ಲಾಗುವ ಸಕಲಜೀವರಾಶಿಗಳ ಅಳಿವು.—ನಾಶ. ೧೧. (ಅಲಂ) ಕೇಡು : ತೊಂದರೆ ; ಧಾಡಿ : ಕೆಲಸ ಮಾಡಲು ಮಾರಿ ಇವನಿಗೆ ! ಬಲುಹು ಮೈಯಲಿ ತುಂಬಿದೆ ! (ಕಂಪು. ೦೯-೦೯).

**ಮಾರಿಯ ದೇವ** = ಶಿವ; ಈಶ್ವರ : ಮಾರಿಯ ದೇವನು ಮಸಣದ ದೇವನು ತಿರುಕ ಗೊರವನೆಂದು ಅಲ್ಲಳೆ ಒಂದೊಂದನಾಡುತಿಪ್ಪರಯ್ಯ (ಅಪಕಾಂ. ೦೨೦-೩೯೩). **ಮಾರಿಯ ಮಾರಿ** = ಮಾರಿದೇವತೆಯ ತೆರೆದ ಬಾಯಿ.—ಉಗ್ರಸ್ವರೂಪ (?) : ನಾಡರಸಂ ತಗುಳ್ದು ಕಡೆಗಾಲದ ಮಾರಿಯ ಮಾರಿಯಂತೆ ಕಣ್ಣಾಡದೆ ಬಾಲವೃದ್ಧವನಿತಾಪಥಿಗೆಯ್ದು . . . ನಾಡನವಂ ಕಡಿದಿಕ್ಕಿ ಮೆಟ್ಟಿದಂ (ಪಂರಾಜಾ. ೯-೩೬) ; ಮಾರಿಯ ಮಾರಿ ಪಕ್ಷಸನ ರೌದ್ರತೆ ನಂಜಿನ ಪುಂಜ . . . ಸಾಹಣಿಮಲ್ಲನ ಬಾಹುವಿಕ್ರಮಂ (ಎಕ. XV. ೩೩-೦೭ ; 1180). **ಮಾರಿಯ ಹುಣ್ಣು** = ಸಿಡುಬು; ದೇವಿ : ಅಮ್ಮ : ಅಂಬುಳುವಾದಡೆ ಷಣ್ಮುಖನೆಂಬರು ಸೀವಳಿಗೆಯಾಗೆ ಸಲೆ ಮಾರಿಯ ಹುಣ್ಣೆಂಬರು ತುಜಾಯಾದಡೆ ಫಣಿಮೈಪೆರ್ ಮತಿಹೀನಜನರ ದೇಸಂ ಮಾಡರ್ (ಸಪುಷ. ೯-೨೬). [ಸಂ. ಮಾರಿ. ಮಾರೀ. /p ಈ ಶಬ್ದವು ದ್ರಾವಿಡಮೂಲದ್ದಿರಬೇಕೆಂದು ಭಾಷಾಶಾಸ್ತ್ರಜ್ಞರ ಅಭಿಪ್ರಾಯವೊಂದಿದೆ]

**ಮಾರಿಕಣ್ಣು** (ನಾ). ೧. ಮಾರಿಯ ಕ್ರೂರದೃಷ್ಟಿ : ಮಾರಿಕಣ್ಣು ಹೋತನ ಮೇಲೆ (ಗಾದೆ). ೨. ಕೆಟ್ಟದೃಷ್ಟಿ ; ಕ್ರೂರದೃಷ್ಟಿ: ಹೆಗಡೆಯ ಮಾರಿ ಕಣ್ಣು ನನ್ನ ಮೇಲೆ ಬಿದ್ದಿದೆ (ದೇವಶಂ. ೦೩೨). [ಮಾರಿ₂ + ಕಣ್ಣು (<ಕಣ್)]

**ಮಾರಿಕಬ್ಬೆ** (ನಾ). ಒಂದು ಕ್ಷುದ್ರದೇವತೆ ; ಮಾರಮ್ಮ : ಪಿಟ್ಟಾಪುರದ ಮಾರಿಕಬ್ಬೆ ಶಾಕಿನಿಯುಂ ಪೊಣರ್ಮಾಲೆಯ ಮಂಗಳಾದೇವಿಯುಂ ಮೈಲಾಪುರದ ಕಾಮಾಕ್ಷಿಯುಮೆಂಬಿವರ್ಮೊದಲಾದ ಮಹಾವ್ಯಂತರಂಗಳ್ ಮೋನದಿಂ ಮುಟ್ಟುಪಡಂ ಬೆರಸಿರ್ಪೊಡಂ . . . ಉಣ್ಬರ್ (ರಾಜಾಪು. ೯-೦೦೦) ; ಮಾರಿಕಬ್ಬೆ ಮಸಣಕಬ್ಬೆ . . . ಮೊದಲಾದ ವ್ಯಂತರಂಗಳುಂ (ಪ್ರಭಾವ. ೦೦೯-೨೨). 'ಮಾರಿಕವ್ವೆ' ಪರಾ. [ಮಾರಿ₂ + ಅಬ್ಬೆ₁]

**ಮಾರಿಕವ್ವೆ** (ನಾ). = ಮಾರಿಕಬ್ಬೆ : ಮಾರಿಕವ್ವೆಯ ನೋಂತು ಕೊರಳಲ್ಲಿ ಕಟ್ಟಿಕೊಂಬರು ಸಾಲಬಟ್ಟರೆ ಮಾಜಾಕೊಂಬರಯ್ಯಾ (ಬಸವ. ೩೩೯); ವೀರಭದ್ರನ ಕೆಣಕಿ ಹೊಗುವರೆ ಮಾರಿಕವ್ವೆಯ ಮಚಿಯನು (ಶಾಂತಿರಾ. ೩೬-೬೦). [ಮಾರಿ₂ + ಅವ್ವೆ]

**ಮಾರಿಕಾಜಾಡ್ಯ** (ನಾ). ಪ್ಲೇಗು, ಸಿಡುಬು ಮುಂತಾದ ಭಯಂಕರವಾದ ಸಾಂಕ್ರಾಮಿಕರೋಗ : ಈ ಯುದ್ಧ ನಡೆದ ಕಾಲದಲ್ಲಿ ಒಂದೆ ಎಂದೆಂದಿಗೂ ಅರಿಯದ ಕಾಲರಾ (Cholera) ಎಂಬ ಮಾರಿಕಾಜಾಡ್ಯವು ಸಂಪ್ರಾಪ್ತವಾಗಿ ಮೈಸೂರಿಗೆ ವ್ಯಾಪಿಸಿ ಜನರಿಗೆ ಕಷ್ಟನಷ್ಟಗಳು ಸಂಭವಿಸಿದುವು (ಕುಪಾವಂ. II, ೫೦). [ಸಂ.]

**ಮಾರಿಕಾರೋಗ** (ನಾ). = ಮಾರಿಕಾಜಾಡ್ಯ : ದೇವಪ್ಪಾಜಿ . . . ಒಂದೆರಡು ವರುಷದಲ್ಲಿ ಮಾರಿಕಾರೋಗದಿಂದ ತೀರಿಕೊಂಡಳು (ಕಳಾ. ೬೩). [ಸಂ.]

**ಮಾರಿಕೆ₁** (ನಾ). ೧. ಮಾರುವುದು ; ಮಾರಾಟ : 'ಮಾರಿಕೆಹುಂಡಿ' ಪರಾ. ೨. ಮಾರಾಟದ ಮೇಲೆ ಹಾಕುವ ಒಂದು ಬಗೆಯ ತೆರಿಗೆ : ಇವು ಪೂರ್ವಕಾಲದ ತೆರಿಗೆಗಳು : ಮನೆತೆರಿಗೆ, ಹುಲ್ಲ ಹಣ . . . ಮಾರಿಕೆ ; ಉಪ್ಪಿನ ಮಾಳ ; ಉಬ್ಬೆಕಾಣಿಕೆ (ಪಪ್ರಸು. ೨೯೩). [ಮಾರು₁ (<ಮಾಜು₁) + — ಇಕೆ]

**ಮಾರಿಕೆ₂** (ನಾ). = ಮಾರಿಕಬ್ಬೆ : 'ಮಾರಿಕಬ್ಬೆ', 'ಮಾರಿಕವ್ವೆ', ಪರಾ. [ಸಂ. ಮಾರಿಕಾ]

**ಮಾರಿಕೆಹುಂಡಿ** (ನಾ). "ತನ್ನ ಆಸ್ತಿಯನ್ನು ಮತ್ತೊಬ್ಬನಿಗೆ ಮಾರಿ ವರ್ಗಾಯಿಸಿದ ಪತ್ರ : ಮಾರಾಟ ಮಾಡಿದ ಬಗ್ಗೆ ಬರೆದು ಕೊಟ್ಟ ಹುಂಡಿ" (Bill of Sale. ಶಾಂಬ. ೯). [ಮಾರಿಕೆ₁ + ಹುಂಡಿ₁]

**ಮಾರಿಕೇಸಿ** (ನಾ). ಒಬ್ಬಾತನ ಹೆಸರು : ಕಂಪೂರಕುಲನ್ ಮಾರಿಕೇಸಿ ಲಿಖಿತಂ (ಎಕ. IV. ಎಡಕೊ. ೬೦-೯೦; ಸು. ೮೯೦). [ ? ]

**ಮಾರಿಕ್ಕು** (ಕ್ರಿ). ಎದುರಿಸಿ ಹೊಡೆ : ಪ್ರತಿಭಟಿಸಿ ತಾಗು : ಕಾಲ್ಪಿನಿಂ ಸಿಡಿಲಂ ಮಾರ್ಪೊಯ್ದಮಂ ಕಳದ್ದ್ವಾರಗನಂ ಮಾರಿಕ್ಕುವಂ ಸಿಂಗವಂ ಕಡಿವಂ ಭಾವಿಸೆ ಪೃಥ್ವಿಸೆಟ್ಟಿ ಹರಿಷಂ ವೆಣ್ಣಾಂಬಿಕಾನಂದನಂ (ಕಡ. IV. ೧-೬೬; 1204). [ಮಾರು₁ (<ಮಾಜು₁) + ಇಕ್ಕು]

**ಮಾರಿಗ** (ನಾ). ಮಾರಿದೇವತೆಯನ್ನು ಪೂಜಿಸುವವನು : ಮಾರಿಯಂ ಪೂಜಿಸುವಂ ಮಾರಿಗಂ (ಕಶ್ಮಾಸು. ೪೦೩ ಕ್ರಿಯೋ). [ಮಾರಿ₂ + — ಗ₂]

**ಮಾರಿಗಾಲ** (ನಾ). ಯುಗಾಂತರದಲ್ಲಿ ನೀರುಕ್ಕಿ ಜಗತ್ತನ್ನು ಮುಳುಗಿಸುವ ಕಾಲ ; ಜಲಪ್ರಳಯದ ಸಮಯ : ಮಾರಿಗಾಲದ ಮೃತ್ಯು

ವೆಸ್ನಸು ಮಾಜುಗೊಳುತಿದೆ ಕರುಣವನು ನೆಜಿ ತೋಟಿ ಶಾಸಿದಕೇನ ಹೇಳು ವೆನು (ಕಿಶಾಗ. ೮-೨೩-೬೯).

[ಮಾರಿ₂ + ಕಾಲು/ತಮಿ. ಮಾರಿಕ್ಕಾಲವ್ = ಮಳೆಗಾಲ]

**ಮಾರಿಗುಡಿ** (ನಾ). ಮಾರಿದೇವತೆಯ ವಿಗ್ರಹವನ್ನು ಪ್ರತಿಷ್ಠಾಪಿಸಿರುವ ದೇವಾಲಯ : ಮಾರೀಗುಡಿಗೆ ಬಡಗಲು ಕೊಂಗನ ಘಣೆಯಾಲದ ಮರದ ಜಗಲಿಗೆ ಮೂಡಲು ಮೂಡ ಮುಖವಾಗಿ ನೆಟ್ಟ ಕಲ್ಲು ೧ (ಎಕ. V (೫). ತಿರುಮ. ೦೬-೬೫೦: 1749): ಆಸಾಡಿಯ ಜಡಿಮಳೆಯಲ್ಲಿ ಒಂದುರಾತ್ರಿ ಊರಿನ ಮಾರಿಗುಡಿಯಿಂದ ಮಾರಿಯನ್ನು ಓಡಿಸುವ ಒಂದು ಕ್ರಮವಿದೆ (ದೇಜಪಂ. ೩೨). [ಮಾರಿ₁ + ಗುಡಿ₂]

**ಮಾರಿಗುತ್ತ** (ನಾ) = ಮಾರಿಕಾಜಾಡ್ಯ : ಎಮ್ಮ ಪುರಕ್ಕೆ ಮಾರಿಗುತ್ತಂ ಮೊದಲಾಗೆ ಪೆಱವುಮಾಗುತುಕಂಪೀಡೆಗಳಪ್ಪುದುಮೂನವರ್ಕೀನುಂಗೆಯ್ಯ ಲಱಯಿಯದುಮ್ಮಳಿಸುತ್ತಿರ್ಪುದುಂ (ಕಂಚಾಪಜ. ೧೯-೯೯ ವ): ಕವತೆಯ ಮೇಲೆ ಕೊಲೆಯುಂಬಂತೆ ಬಡತನದ ಮೇಲೆ ಮಾರಿಗುತ್ತಮಾಗೆ (ಧರ್ಮಾಮ. ೬-೦೬೦). [ಮಾರಿ₁ + ಕುತ್ತ]

**ಮಾರಿಗೆ** (ನಾ). ಮಾರಿದೇವತೆ : ವರವೀಗುವೆ ಮೈಲಾರಂ ಕೇತಂ ಕಾಟಂ ಮಾರಿಗೆ ಮುಸಣೆಗೆಯೆನಿಪ್ಪ ಕೊಟಿದೆಯ್ವಂಗಳ್ (ಸಮಶ. ೯-೦೩೬).

[ಸಂ. ಮಾರಿಕಾ]

**ಮಾರಿಡು₁** (ಕ್ರಿ). ಪ್ರತಿಭಟಿಸಿ ನಿಲ್ಲು : ಎದುರಿಸು : ಫಣಿಕುಲಮ × × × ಪನೊಪ್ಪೆ ಮಾರಿಡುವಂ ಜಕ್ಕುಲಿಪಂ ಜವನಂ ನಿಚ್ಚಟಗಲಿ . . . ವೀರವಿಕ್ರಮಭೂಪಂ (ಎಇ. XX, ೦೦೬-೭; 1187).

[ಮಾರು₁ (< ಮಾಱು₁) + ಇಡು₁]

**ಮಾರಿಡು₂** (ಕ್ರಿ). ಮಾರಿನಿಂದ ಅಳತೆಮಾಡು ; ಮಾರುಹಾಕು : ರವಿ ಮಾರಿಟ್ಟಳೆದಂ ವಿಯತ್ತಳವನಾಶಾಸೀಮೆಯಂ ದಾಂಟುವನ್ನೆವರಂ (ಕಂಚಾಪಜ. ೦-೩೯): ಘೀಕರಕಾನನದಲೋಧ್ದಾಲವಿರ್ದುದು . . . ಅವನಿಯ ಮಾನವನು ಮಾರಿಡುವವೊಲು ಪಸರಿಸಿತು ಶಾಖೆಗಳ (ಸಾಶ್ವಚಾ. ೪೩-೩೩).

[ಮಾರು₃ + ಇಡು₁]

**ಮಾರಿಡೋಲು** (ನಾ). ದೊಡ್ಡ ಡೋಲು : ಭಾರಿ ಡೋಲು : ಅವನ ಪರಿವಾರದವರು ಮಾರಿಡೋಲು ಡುಡಿ-ಎಲ್ಲಾ ಬಾರಿಸಿ ಭಾರೀ ಕುಣಿದಾಡು ವುದುಂಟು (ಕಂಪಾ. ೦೩). [ಮಾರಿ₂ + ಡೋಲು]

**ಮಾರಿತ** (ಗು). ಕೊಲ್ಲಲ್ಪಟ್ಟ : ಸಂಹಾರಗೊಂಡ : ಜಯಜಯ ಕುಮಾರ ಮಾರಿತ ದಿವಿಜರಿಪುಜಾಲ ಜಯಜಯ ವಿಳಾಸಕೃತವಿದಿತ್ಯಕ ಪದಲೀಲ (ರಾಜಶೇ. ೦೯-೨೬೯ ರಗೆ). [ಸಂ.]

**ಮಾರಿತನ** (ನಾ). ದುಷ್ಟತನ ; ಕೆಟ್ಟತನ : ಥೂ ನಾರಿಯರ ಮಾರಿತನಕೆ ಮೋರೆಯ ಗುಣಕೆ, ಥೂ ನರರ ಬೆದಿಗುದಿಗೆ ಷಂಡಗಂಡಸುತನಕೆ (ಕೃಶಾಕು. ೨-೨). [ಮಾರಿ₂ + — ತನ ]

**ಮಾರಿದಾಸ** (ನಾ) ( ? ) : ಶ್ರೀ ಕಡ್ಡಾಣೆ ಪೃಥುವೀರಾಜ್ಯಂಗೆಯೆ ಸಿಯಕಲ್ಲ ಕೆಸುವಣ್ಣ ನಾಡಾಳೆ ಮೂಟಿಸ್ತಿ ಅರಸರಾಳ್ ಮಾರಿದಾಸ ಕರಿಯತಮ್ಮನ್ ನಾಗಶರಾಸರಾ ಮನೆದುಗವು ಬಾಗೆಯೂರುಳ್ ಬಲ್ಲಪನ್ ಎಱಸುಳ್ ಎಱೆದು ವಿಟ್ಟನ್ (ಎಕ. XVI. ತುಮಕೂ. ೯೩-೩ ; ಸು. 780). [ ? ]

**ಮಾರಿಪತ**, ಮಾರಿಫತ್ತು ನೋ.

**ಮಾರಿಪತ್ತು** ಮಾರಿಫತ್ತು ನೋ.

**ಮಾರಿಫತ** ಮಾರಿಫತ್ತು ನೋ.

**ಮಾರಿಫತಿ** ಮಾರಿಫತ್ತು ನೋ.

**ಮಾರಿಫತು** ಮಾರಿಫತ್ತು ನೋ.

**ಮಾರಿಫತ್ತು**, ಮಾರಫತಿ. ಮಾರಿಪತ. ಮಾರಿಪತ್ತು, ಮಾರಿಫತ, ಮಾರಿಫತಿ. ಮಾರಿಫತು. ಮಾರೀಪತು. ಮಾರೀಫತ್ತು. ಮಾರೀಫತ, ಮಾರೀಫತ್ತು, ಮಾರ್ಫತ. ಮಾರ್ಫತು (ಅ). ಮೂಲಕ ವಾಗಿ ; ಮುಖಾಂತರ : ಯಾ ವೆಂಕಟಗಿರ್ಯಮ್ಮನ ಮಾರಿಫತ್ತು ವಿಚಾರಸಾಬರಿಗೆ ವಳಬಿದ್ದು . . . ದುಡಿದುಕೊಟು (ಕೈರು. ೩೫): ಶ್ರೀತ್ರಿರಪತ್ತಿಗಿರಿ ಮೇಲೆ ಬ್ರಹ್ಮೋತ್ಸವದಲ್ಲಿ ಸದರಿ ಮಠದ ಮಾರಿಫತ್ತು ಆಗತಕ ಬ್ರಾಹ್ಮಣಸಂತರ್ಪಣೆ ಜನ ೧೮೦೦ ಸಾವಿರಕ್ಕೆ . . . ಸರಕಾರದ ಸತ್ರದಿಂದಾ ಅಪ್ಪಣೆ ಪ್ರಕಾರ ಕೊಡುತ್ತಿದ್ದ ಪದಾರ್ಥದ ಕ್ರಯ (ಶಿಸ್ಸಾಲಂ. ೦೯೭೬, ೨೬-೦೩: 1830). **ಮಾರಫತಿ** : ಇಲ್ಲಿ ಇರುವ ಶಾಖೆಗಳ ಮಾರ ಫತಿಯಿಂದ ಮಾಲ ತರಿಸಿಕೊಟ್ಟರೆ. ಎರಡು ಆಡತಿಗಳು ಬೀಳುವವು (ಮುಂಬಯ್ವಾ. ೬೬). **ಮಾರಿಪತ** : ನಮ್ಮ ಕಡಿಗೆ ಬರುವವರು ನಮ್ಮ ಮಾರಿಪತ ಮಾಲ ಖರೀದಿ ಮಾಡಿದರೆ. ಅವರ ಕಡಿಯಿಂದ ಬಿಲಕುಲ ಅಡತಿ ತಕ್ಕೊಳ್ಳದೆ ಬರೇ ಕೂಲಿಯ ಖರ್ಚಿನ ಮೇಲೇ ಜೀನಸುಗಳು ಕಳುಹಿಸುವ ತಜವೀಜಿಯನ್ನು ಮಾಡುವೆವು (ಮುಂಬಯ್ವಾ. ೩೫೨). **ಮಾರಿಪತ್ತು** : ಸರಕಾರ ಕುಂಪನಿ ಕಡೆಯಿಂದ ತಲಚೇರಿಕೋಟೆ ಮಿಸ್ಟರ್ ರಾಬರ್ಟ್ ಟೈಲರ್ ಸಾಹೇಬರ ಮಾರಿಪತ್ತಿನಿಂದ ತಹನಾಮೆಯನ್ನು ಬರೆಸಿ. ತಲಚೇರಿ ಸರಕಾರದ ದಫ್ತರದಲ್ಲು ಮಡಗಿ ಇವೆ (ರಾಜೇಂದ್ರ. ೦೦೦). **ಮಾರಿಫತ** : ದಲಾಲಜನರ ಮಾರಿಫತ ಖರೀದಿಮಾಡಿ . . . ರವಾನೆ ಮಾಡುವ ತಜವೀಜಿಯನ್ನು ನಡಿಸುವರು (ಮುಂಬಯ್ವಾ. ೩೫೨). **ಮಾರಿಫತಿ** : ದೊಡ್ಡ ದೊಡ್ಡ ವ್ಯಾಪಾರಿಜನರು ಬಹಳ ಮಾಡಿ ಇಲ್ಲಿಂದ ಅಡತೆಯವರ ಮಾರಿಫತಿಯಿಂದಲೇ ತರಿಸುತ್ತಾರೆ (ಮುಂಬಯ್ವಾ. ೩೫೨). **ಮಾರಿಫತು** : ಯಾರ ಪರಿಚಯವಿರಲಿಕ್ಕಿಲ್ಲವೋ ಅಂಥವರು ಅಲ್ಲಿಯ ನಮ್ಮ ದುಕಾನಿನ ಮಾರಿಫತು ದುಕಾನಿನ ಹೆಸರಿನಿಂದ ಜೀನಸು ಕಳುಹಿಸಿ ರಶೀದಿಯನ್ನು ಇಲ್ಲಿಯ ದುಕಾನಿಗೆ ಕಳುಹಿಸಿದರೆ . . . . ರಕಮು ಕೊಡೋಣದರಲ್ಲಿ ಬಂದೀತು (ಮುಂಬಯ್ವಾ. ೨೦). **ಮಾರೀಪತು** : ಕಾಮಗಾರಿ ನೀನ ಮಾರೀಪತು ಮಾಡಿದ ವಡರ ಯಾರನ ಬೋವಿಗೆ ಕಡಗಸ ೧ ಸರಪಣೆ ಸ ೧ (ಎಕ. XI, ಹಿಂದುಪ. ೩೬-೦೨: 1533 ?). **ಮಾರೀಪತ್ತು** : ಬಾಕಿ ಐವಜಿಗೆ ಆಗಿಂದಾಗ್ಗೆ ಅಮಿಲುನ ರುಜು ತನ್ನ ಮೊಹರಿನಿಂದ ಶಿರಸ್ತೇದಾರರ ದಾಖಲೆಯಿಂದ ಸಹ ಶೇಕದಾರ ಮಾರೀಪತ್ತು ಹೋಬಳಿ ಶೇಕದಾರರಿಗೆ ರಶೀದಿ ಕೊಡಬೇಕು (ಮುಹಾಪಂ. II, ೬೬). **ಮಾರೀಫತ** : ಆ ಅಂಗಡಿಗಳ ಮಾರೀಫತ ಬದಕಿನ ರಶೀದಿ ಕಳುಹಿಸಿ ಅತ್ತಕಡೆಯ ಅಂಗಡಿಗಳೊಳಗಿಂದ ಪರಭಾರೇ ರಕಮು ತೆಗೆದುಕೊಳ್ಳುವ ಬಗ್ಗೆ (ಮುಂಬಯ್ವಾ. ೨೦ ಕ್ರಶಾ.ಪಿ). **ಮಾರೀಫತ್ತು** : ನಿನ್ನ ಮಾರೀಫತ್ತು ಹೇಳಿ ಕಳಿಸೋಕೆ ಕಾರಣವೇನಪ್ಪ ? (ಕಂತ. ೩೨೦). **ಮಾರ್ಫತ** : ನಮ್ಮ ಮುಂಬಾಯಿ ಅಂಗಡಿಯ ಮಾರ್ಫತ ಉಪ್ಪು ಬೇಡಿಸಿದರೆ ಅಡತ ಬಿದ್ದೀತು (ಮುಂಬಯ್ವಾ. ೨೭): ಅಂದಾ ತಕರಾರು ಅಷ್ಟ ನೋಡಿ ಇಟ್ಟರಲಿ . . . ದಾದರ್ಸಾನ ಮಾರ್ಫತ ಅವರ ಧೋರಣಾ ತಿಳಕೋಳಿಕ್ಕೆ ಅನಕೂಲಸೂ ಆಗತದ (ಶಿತಪ. II, ೦೧೮). **ಮಾರ್ಫತು** : ಅಂವ ಯಾರೋ ಇದ್ದಾನಂತಲ್ಲ — ಅವಳ ಪಾಲಕ — ಚೈತನ್ಯ ಅಂತ, ಅವನ ಮಾರ್ಫತು ಅವಳ ಭೆಟ್ಟಿಯಾಗ್ತೀವಿ (ಜಾಕು. ೨೨).

[ ← ಅರ. ಹಿಂ. ಮರಾ. ಮಾರಫತ್‌. ಮಾರ್ಫತ್]

**ಮಾರಿಬಲೆ** (ನಾ). (ಸಮುದ್ರದಲ್ಲಿ ಮೀನುಗಳನ್ನು ಹಿಡಿಯಲು ಹಾಕುವ) ದೊಡ್ಡ ಬಲೆ ; ಹೆಬ್ಬಲೆ : ನಮ್ಮ ಮೊಗೇರ ಮಕ್ಕಳನ್ನು ಮಾರಿಬಲೆ ದಿವಸ್ಸ ಮಾತನಾಡಿಸಬಾರದು ಅಷ್ಟೇ (ತಕ. ೬೯) : ಹಾಯಿ ದೋಣಿಯಲ್ಲಿ ಮಾರಿಬಲೆ ಬಿದ್ದಿತ್ತು (ಮೂಕಜ್ಜಿ. ೩೭). [ ಮಾರಿ₂ + ಬಲೆ₁ ]

**ಮಾರಿಬೆ** ಮಾರಬ್ಬೆ ನೋ.

**ಮಾರಿಬೇನೆ** (ನಾ). = ಮಾರಿಕಾಜಾಡ್ಯ : ಮಾರಿಬೇನೆ ಬಂದು ಅತ್ತೆ- ಮಾವ ಕಣ್ಣು ಮುಚ್ಚಿದರು (ಅಪ. ೧೮೨) [ ಮಾರಿ₂ + ಬೇನೆ ]

**ಮಾರಿಚ್ಚೆ** 'ಮಾರಚ್ಚೆ' ನೋ.

**ಮಾರಿಮಳೆ** (ನಾ). ಭಾರಿ ಮಳೆ: ಅತಿವೃಷ್ಟಿ : ಒಂದು ಮಾರಿಮಳೆಗಾಲದಲ್ಲಿ ತುಂಗಾನದಿಯ ಪ್ರವಾಹವು ಮೇರೆದಪ್ಪಿ ತೀರ್ಥಹಳ್ಳಿಯ ಕೆಲವು ಮನೆಮಠಗಳನ್ನು ಕೊಚ್ಚಿಬಿಟ್ಟಿತು (ಕಂಪಾಳ. ೯೩); ಮಾರಿಮಳೆ ಮುಸಲಧಾರೆಯಂತೆ ಓರೆಕೋರೆಯಾಗಿ ಸುರಿಯುತ್ತಿತ್ತು. (ಶೃಪರು. ೪೭೭).
[ಮಾರಿ$_2$ + ಮಳೆ ( < ಮಱೆ$^3$) ]

**ಮಾರಿಮುಖ** (ನಾ). ಭಯಂಕರವಾದ ಮುಖ; ಉಗ್ರಮುಖ : ಮಾರಿಮುಖದವ ಕಠಿನಮನ ನಿಸ್ಸಾರಹೃದಯನು ಭೀಮನವನೊಳು ಮೋರಿದವರೇನಹರು ಕೇಳ್ಳೈ ನಿನ್ನವರ ವಿಧಿಯು (ಕುಮ್ಯಾದ್ರೋ. ೧೩-೪೭).
[ ಸಂ. ]

**ಮಾರಿಮೊಗ** (ನಾ). = ಮಾರಿಮುಖ : ಘೋರಿಭೀಕರವರಾಹನ ತಲೆ ಸಿಲುಕಿಟ್ಟು ಪೂರೈಪ ವಿಷದ ಜೀಕರ್ಣಳವೆ ಮಾರಿಮೊಗದ ಡೆಂಕಣಿ ಮಸೆವಲಗುಗಳ್ವೋಲ್ಜೀದುವತಿಭಯಾಂಕುರವ (ಕಂಮ. ೧೧-೦೩೨).
[ ಮಾರಿ$_2$ + ಮೊಗ ]

**ಮಾರಿರೋಗ** (ನಾ). = ಮಾರಿಕಾಜಾಡ್ಯ : ಪ್ಲೇಗು, ಕಾಲರಾ ರೋಗಗಳು ಮಾರಕವಾದುದರಿಂದ ಮಾರಿರೋಗವೆಂದೇ ಕರೆಯುತ್ತಾರೆ (ರೂಢಿ). [ ಸಂ. ]

**ಮಾರಿವುಪದ್ರ** (ನಾ). = ಮಾರಿಕಾಜಾಡ್ಯ : ಸರ್ವಜಿತುಸಂವತ್ಸರದಲ್ಲಿ ಮಾರಿವುಪದ್ರವುಂಟಾಗಿ ಬಹುಜನಗಳು ಹತರಾಗುತ್ತಾಯಿರುವ ಕಾಲದಲ್ಲು (ಎಕ. V (R). ಮೈಸೂರು. ೩-೯; 1843). [ಮಾರಿ$_2$ + ಉಪದ್ರ]

**ಮಾರಿಷ** (ನಾ). (ವಿಶೇಷವಾಗಿ ನಾಟಕದಲ್ಲಿ ಪಾತ್ರಗಳು ಪರಸ್ಪರ ಗೌರವದಿಂದ ಸಂಬೋಧಿಸುವಾಗ ಬಳಸುವಂತೆ) ಪೂಜ್ಯ : ಮಾನನೀಯ : "ಹಿರಿಯನಂ ಮಾರಿಷನೆಂಬುದು" (ಹರಿಯು. ೦೭-೯೯) : "ನರ್ತನದ ಹಿರಿಯನಾ ಮಾರಿಷನೆನಿಕ್ಕು" (ಮಂಗರಾ. ೨೩-೧೦). [ಸಂ.]

**ಮಾರಿಸು** (ಕ್ರಿ). ೧. ಮಾರುವಂತೆ ಮಾಡು : ವಿಕ್ರಯಿಸುವಂತೆ ಮಾಡು : × × × ವಂಶದವರಗಳಿಂದ ಮಾರಿಸಿಕೊಂಡು ಹೊಲವ ಕೊಡದವನು ನಮ್ಮ ವಂಶದಲಿ ಹುಟ್ಟಿತಕವನಲಾ (ಮೈಲಾ. ೦೯೨೯. ೯೯-೬ : 1553). ೨. ಬದಲಾವಣೆ ಮಾಡು ; ಮಾರ್ಪಡಿಸು : ದೇಶಾಂತರದವರಾದ ಪಾತ್ರಗಳ ನಾಮಧೇಯ ವೇಷಭೂಷಾದಿಗಳನ್ನು ಅಸ್ಮದ್ದೇಶೀಯರ ರುಚಿಗೆ ತಕ್ಕಂತೆ ಮಾರಿಸಿದರೂ . . . ಈ ಗ್ರಂಥವನ್ನು ಕನ್ನಡಿಸಿರುವುದು ಅಲ್ಪಗೌರವದ ಕಾರ್ಯವಲ್ಲ (ರಾಜಾಪು. ೭ ಪೀಠಿ).
[ಮಾರು$_1$ (<ಮಾಱು$_1$) + — ಇಸು$_3$]

**ಮಾರೀ** (ಕ್ರಿ). ಪ್ರತಿಯಾಗಿ ಕೊಡು,—ನೀಡು : ಹೆಸರಿಸಿ ದೇವ ದಕ್ಷಿಣೆಯ, ತಮ್ಮಲಿ ಕಲಿತ ವಿದ್ಯೆಗೀ ಜೀವವನೆ ಮಾರಿತ್ತೆ (ಪದ್ಮರ. ೩೬-೧೦೭).
[ಮಾರು$_2$ (<ಮಾಱು$_2$) + ಈ$_2$]

**ಮಾರೀಚ** (ಗು). ೧. ಮರೀಚಋಷಿಗೆ ಸಂಬಂಧಿಸಿದ. (ನಾ). ೨. ಮರೀಚಋಷಿಯ ಮಗ: ಕಶ್ಯಪ. ೩. ಒಬ್ಬ ರಾಕ್ಷಸನ ಹೆಸರು : ಮಾರೀಚಂ ಮೊದಲಾಗೆ ಮಹಾರಥರೊಡನೇಱಿ ಸಿಂಹರಥಮಂ ರಥಿಗಳ್ . . . ಲಂಕೆಯಂ ಪೊಱಮಟ್ಟರ್ (ಕಂರಾಪು. ೦೩-೦೩). ೪. ಮೆಣಸಿನ ತೋಟ. ೫. ಯಾಗವನ್ನು ಮಾಡಿಸುವ ಪುರೋಹಿತ. ೬. ಪಟ್ಟದ ಆನೆ. ೭. ಒಂದು ಬಗೆಯ ಸಸ್ಯ : ಕಕ್ಕೋಲ. [ಸಂ.]

**ಮಾರೀಚತೆ** (ನಾ). ಮಾರೀಚರಾಕ್ಷಸನ ಗುಣ : ವಂಚನೆ : ನರನೀಚತೆ ಮಾರೀಚತೆ ದೇಷಪ್ರೇಮದ ನೆಮದಿ (ಅಗ್ನಿಹಂ. ೮೨). [ಮಾರೀಚ + — ತೆ$_3$]

**ಮಾರೀಚಿ** (ನಾ). ೧. ಮೆಣಸಿನ ತೋಟ. ೨. ಮೆಣಸಿನಿಂದ ತಯಾರಿಸಿದ ಒಂದು ಬಗೆಯ ಮದ್ಯ (?) : ಮಧು ಸೀತುಂ ಕಟು ಸೀದು ಪೋ ಪುಳಿತ ಕಳ್ಳಲ್ತುಂ ಕರಂ ಕಯ್ತು ಬರ್ಪುದು ಮಾರೀಚಿ ತೊಡರ್ಪುಳಿಂದೆ ಸರದಿಂ ಕಂಪಿಲ್ಲ . . . ಎಂದು ಕುಡಿದರ್ ಕಾಮಾಂಗಮಂ ಕಾಂತೆಯರ್ (ಪಂಶಳ. ೪-೮೮). [ಸಂ. ಮಾರೀಚೀ]

**ಮಾರೀಪತ** 'ಮಾರಿಫತ್ತು' ನೋ.

**ಮಾರೀಪತ್ತು** 'ಮಾರಿಫತ್ತು' ನೋ.

**ಮಾರೀಫತ** 'ಮಾರಿಫತ್ತು' ನೋ.

**ಮಾರೀಫತ್ತು** 'ಮಾರಿಫತ್ತು' ನೋ.

**ಮಾರು$_1$** 'ಮಾಱು$_1$' ನೋ.

**ಮಾರು$_2$** 'ಮಾಱು$_2$' ನೋ.

**ಮಾರು$_3$** (ನಾ). ಅಡ್ಡವಾಗಿ ನೀಡಿದ ಎರಡು ಕೈಗಳ ಮಧ್ಯದ ಬೆರಳುಗಳ ನಡುವಿರುವ ಅಳತೆ : ನಾಲ್ಕುಮೊಳಗಳಷ್ಟು ಉದ್ದ : ಶ್ರೀಪ್ರಣಮೇಶ್ವರದೇವರ ಗಡಿಂಬದ ಗಳೆಯ ಪ್ರಮಾಣು ಮಾರು ಹನ್ನೆರಡು (ಎಕ. VII. ಶಿಕಾ. ೦೭೭-೦೭ : 1029 ?) : ಹತ್ತುಮಾರು ಘಳೆಯಲಳೆದ ಭೂಮಿ (ಎಕ. VI. ತರೀ. ೭೦-೯೯; 1154) : ಪೊಳಲೊಳಿದ್ದವರಾಗ ಸಾವಿರಮಾರಿನಷ್ಟಳತೆಯೊಳರಮನೆಯುತ್ತ ಸುಳಿಯದೆ ದನಿದೋಱದಿದ್ದರೊಡೆಯನ ಮಂಗಲದಾನ ಸಮಯಮನಱಿದು (ಛಂದ. ೩-೨೯).

**ಮಾರುಂಚಿತೋಳುಘಳೆ** = ಒಂದು ಬಗೆಯ ಅಳತೆಯ ಕೋಲು : ಹದಿನಯ್ದುಮಾರುಂಚಿತ್ರೋಳುಘಳೆಯಲುಳಕನ್ನುಂ ಗೌಡುಗೆಱೆಯ ಪಡುವ ಗೋಡಿಯ ತುಂಬಿನ ಹಳ್ಳಿಯ ಹೊಲ (ಎಕ. XI, ದಾವಣ. ೩-೪೭ : 1121).
[ದೇ.॥ ತಮಿ. ಮಲ. ಕೊಡ. ಮಾರ್ : ತುಳು. ಮಾರ್, ಮಾರು]

**ಮಾರು$_4$** (ನಾ). ಒಂದು ಬಗೆಯ ಮರ (?) : ಎಲವಂ ಪಾದರಿ ಹಾಲೆ . . . ನೆಲ್ಲಿ ಕಡವೀಚಲ್ ಮಾರು ತುಂಬುರ್ವೆಳಲ್ವಲಸಂ ಬಾಟ$^3$ (ಸೂಕ್ತಿಸು. ೩-೨೩). [ ? ]

**ಮಾರುಕಟ್ಟೆ** 'ಮಾರ್ಕಟ್ಟೆ' ನೋ.

**ಮಾರುಕಾಣ್** (ಕ್ರಿ). ಇದ್ದುದಕ್ಕಿಂತ ಬೇರೆ ಬಗೆಯ ಸುಖವನ್ನು ಅನುಭವಿಸು : ಮಾರುಕಂಡವಳು ಮಕ್ಕಳ ಸಾಕಿಯಾಳೇ ? (ಗಾದೆ).
[ ಮಾರು$_2$ ( < ಮಾಱು$_2$ ) + ಕಾಣು ( < ಕಾಣ್ ) ]

**ಮಾರುಗ** 'ಮಾರಗ' ನೋ.

**ಮಾರುಗಾಲು** (ನಾ). ಒಂದು ಮಾರಿನಷ್ಟು ದೂರಕ್ಕೆ ಹಾಕುವ ಹೆಜ್ಜೆ : ದಾಪುಗಾಲು : ನೀನು ಮಾರುಗಾಲು ಹಾಕುತ್ತಾ ನಡೆದರೆ ನಾನು ನಿನ್ನ ಜೊತೆ ಬರಲಾರೆ (ರೂಢಿ). [ ಮಾರು$_3$ + ಕಾಲು$_1$ ( < ಕಾಲ್$_1$ ) ]

**ಮಾರುಗೈ** (ನಾ). ಮಾರಿನಷ್ಟು ನೀಳವಾಗಿ ಚಾಚಿದ ಕೈ : ರಂಗನು ಎರಡೇ ಮಾರುಗೈಹೊಡೆತಗಳಿಂದ ಸಾಬಿಯ ಸಮೀಪಕ್ಕೆ ಬಂದು ನೀರು ಉಗ್ಗಹತ್ತಿದನು (ದಾಕಹು. ೩) ; ಅವನೆಷ್ಟು ದಿವ್ಯತೇಜಸ್ಸಿನ ವ್ಯಕ್ತಿ ! ಅಂಗಾಂಗಗಳು ಎಷ್ಟು ತುಂಬಿವೆ ! ಮಾರುಗೈಯಿಂದ ಅವನೆಡೆಗೆ ಸಾಗಿ ಬಂದಂತೆನಿಸಿತು (ಶೂಬಿತಾ. ೯೭).

**ಮಾರುಗೈಹಾಕು** = ಮಾರಿನಷ್ಟು ನೀಳವಾಗಿ ಕೈಚಾಚು : ಗಂಗೆ . . . ಆ ಮುತ್ತೈದೆಯನ್ನು ಅಂಗಲಾಚಿ ಬೇಡಿಕೊಳ್ಳುತ್ತಿದ್ದಾಳೆ. ಮಾರುಗೈಹಾಕಿ ಅಡ್ಡಗಟ್ಟಬಿಟ್ಟಿದ್ದಾಳೆ (ಸುಪಸಂ. ೩೯).
[ ಮಾರು$_3$ + ಕೈ$_2$ ( < ಕಯ್$_2$ ) ]

**ಮಾರುಗೊಡು** 'ಮಾಱುಗೊಡು' ನೋ.

**ಮಾರುಗೊಳ್** 'ಮಾರ್ಕೊಳ್' ನೋ.

**ಮಾರುಡ, ಮಾರುಡು$_2$** (ನಾ). ಒಂದು ಬಗೆಯ ಮರ ಮತ್ತು (ಉಪ್ಪಿನಕಾಯಿಗೆ ಬಳಸುವ) ಅದರ ಕಾಯಿ ; ಬಿಲ್ವಪತ್ರೆ ; ಬೆಲ್ಲ ಪತ್ರೆ : ಎರನುಂ ಮುತ್ತಮುಮೊಡವೆಳೆದಿರ್ದ ಪಡುವಲದಲ್ಲದೆಂದು ಮಾರುಡ ಮೌದುಂಬರಮುಂ ಪೆಣೆದಿರೆ ಬಡಗಲ್ ದೊರೆಕೊಳ್ಗುಂ (ಪುರುಷ) ಪ್ರಮಾಣದೊಳ್ ಬಹುಳಜಳಂ (ಲೋಕೋಪಕ. ೩-೦೯). **ಮಾರುಡು$_2$** : ಕಾಡಿ

ಬದಿರಕುಡಿಯು ಮಾವಿನ ಮಿಡಿಯು ಮಾರುಡಿನ [ಶಾಕಾಂ. ತಿನ,ದಿನ]ಮೆಣಸು ಗಡಲೆಯ ಪುಡಿಯೊಳಡಸಿದಲ್ಲವಲ್ಲಣೆಗೆಯು ಚಕ್ಕಣಂಗಳಂ ಸವಿಸವಿದು (ಶಂಕರ. ೯-೬೭ ವ). [ದೇ.॥ ತೆಲು. ಮಾರೆಡು, ಮಾರೇಡು]

**ಮಾರುಡು₁** (ಕ್ರಿ). ಇನ್ನೊಂದು ಬಟ್ಟೆಯನ್ನು ಧರಿಸು ; ಬೇರೆಯ ವಸ್ತ್ರವನ್ನು ಉಡು : ಮಿಂದಲ್ಲಿಲ್ಲಾಕೆ . . . ಮಾರುಟ್ಟಲಿಲ್ಲಾಕೆ (ಶ್ರೀರಾಮ. ೩೨೫-೦೮೨). [ ಮಾರು₂ ( < ಮಾಱು₂ ) + ಉಡು₁ ]

**ಮಾರುಡು₂** ' ಮಾರುಡ ' ನೋ.

**ಮಾರುತ** (ಗು). ೧. ವಾಯುವಿಗೆ ಸಂಬಂಧಿಸಿದ ; ಗಾಳಿಯ. (ನಾ). ೨. ಗಾಳಿ ; ವಾಯು : "ಪವನಃ, ಶ್ವಸನಃ, ವಾಯುಃ, ಮರುತ್, ಅನಿಲಃ, ಮಾರುತಃ . . . ಮಹಾಬಲಃ — ಈ ೨೦ ಗಾಳಿಯ ಪೆಸರ್" (ಕರಾಯು. ೦೯-೬೭) ; ಮಾರುತಘಾತಸಂಚಲಿತಕೇತುಸಮೂಹಮುದಗ್ರಚಕ್ರ ಚೀತ್ಕಾರಂ . . .ಅಂಬರಾಂತರಮನಳ್ಳಿಱಿದವ್ವಳಿಪನ್ನೆಗಂ ಶರಾಸಾರದಗುರ್ವು ಪರ್ವಿ ನಿಲೆ ತಾಗಿದುವುಗ್ರರಥಂ ರಥಾಳಿಯೊಳ್ (ಶಂಕರ. ೦೦-೬೩) ; ಮಾರುತದಿನಕರಕರಸಂಚಾರಕ್ಕಗಮ್ಯಮೆಂಬಿನಂ ವಿದ್ಯಾಪ್ರಾಕಾರಮನೀಗಳೊಡರ್ಚಿದನಾ ರಾಕ್ಷಸಪತಿಯ ಪುರವಂ (ಶಂರಾಪೂ. ೦೦-೨೩) ; ಆ ಮಾರುತನ ಗುದ್ದಿ ಅಂಗ ನೋಯಿಪುದುಂಟೆ (ಪುರಂದ. ೩-೦೦೯-೩). ೩. ಗಾಳಿಯ ಅಧಿದೇವತೆ ; ವಾಯುದೇವತೆ : ತಾತ ಮಾರುತ ಕೇಳ್ ಮಾರುತ ಮಾರ್ಗ ಕೇಳ್ ಪಗೆವರಂ ಕೊಂದೆನ್ನ ಕೋಪಾಗ್ನಿಗಾಹುತಿ ಮಾಟ್ಪೆಂ (ಗದಾಯು. ೬-೨೩) ; ಕೊಟ್ಟ ಸಂಬುಗೆಯುಂ ನೆನೆದು ಕಾಮಾರಿ ಕರುಣದಿಂ ಮಾರುತನಂ ನೆನೆಯೆ (ಪಂಪರ. ೦೯-೬೯) ; ಹಿರಿಯರೆನಗಿಬ್ಬರು ಯುಧಿಷ್ಠಿರ ಧರಣಿಪತಿ ನೀನೊಬ್ಬನಯ್ಯಂದಿರುಗಳಿಬ್ಬರು ಮಾರುತನು ನೀನೊಬ್ಬನು . . . ಎಂದುಪಚರಿಸಿದನು ಪವಮಾನನಂದನನಂಜನಾಸುತನ (ಕುಮ್ಮಾಕು. ೦೦-೨೯). ೪. ಒಂದು ಬಗೆಯ ರೋಗ ; ಸಂಧಿವಾತ ; ವಾತ ರೋಗ : ವನಿತಾಸೇವನೆ ರೂಕ್ಷವಾಕ್ಯ ಪಸಿವಾಗುಟ್ಟೆ ಚಿಂತೆ ವಿಣ್ಮೂತ್ರ ವೇಗನಿರೋಧಂ ಶ್ರಮಮತ್ಯಜೀರ್ಣಮಿವಱಿಂ ಕಾರ್ಗಾಲದೊಳ್ ಮಾರುತಂ ಜನಿಯಿಕ್ಕುಂ (ಲೋಕೋಪ. ೯-೪). ೫. ಉಸಿರು ; ಶ್ವಾಸ. ೬. ಶರೀರದ ಮೂರುಬಗೆಯ ಮುಖ್ಯವಾದ ವಾಯುಗಳಲ್ಲಿ ಒಂದು. ೭. ವಿಷ್ಣು. ೮. ರುದ್ರ; ಶಿವ. ೯. ಆನೆಯ ಸೊಂಡಿಲು. ೧೦. [ಛಂದ] ಒಂದು ಅಕ್ಷರಗಣದ ಹೆಸರು ; ಸಗಣ : ಗುರುಮೂಱಾಗಿರೆ ಧಾತ್ರಿ ಮುಂತೆರಡು ಬಣ್ಪಿಂ ತೋಯಮಾದ್ಯಂತದೊಳ್ ಬರೆ ವಹ್ನಂ ಶಿಖಿಯೊಂದು ಕೊಂಕು ಕಡೆಯಿಂದಾ ಮಾರುತಂ (ಛಂದೋಂಬು. ೦-೩೮). [ಸಂ.]

**ಮಾರುತಪಥ** (ನಾ). ವಾಯುಮಾರ್ಗ ; ಆಕಾಶ: ಆಗಳೆ ಬರಿಸೆ ವಿದ್ಯೆಯಿಂ ನಾರದನಂ ಮಾರುತಪಥದಿಂದಾಗಳ್ ಭೋರೆನೆ ಬರೆ ಕಂಡು (ಪೇಬಾಪು. ೬-೦೬೩). [ಸಂ.]

**ಮಾರುತಬಂಧು** (ನಾ). ವಾಯುವಿನ ಆಪ್ತ ; ಅಗ್ನಿ : ಮೇಷಮಂ ಮಾರುತಬಂಧು ಸೈರಿಭಮನುಂಬುಜಮಿತ್ರಸುತಂ . . ವೃಷಭನಂ ಹರನೇಱೆ ನಭಕ್ಕೆ ಸಲ್ವದುಂ (ಜಗಪು. ೦-೩೬) ; ಮಾರುತಬಂಧು ಮೇಷಮಂ . . . ಗಿರಿಶಂ ವೃಷೇಂದ್ರನಂ ಮಮತೆಯೊಳೇಱೆ ಪಾಲ್ಗಡಲ ಸಾರಿದರ್ (ದಶಾಕ. ೨-೩). [ಸಂ.]

**ಮಾರುತಭುಗು** (ನಾ). ಗಾಳಿಯನ್ನು ಆಹಾರವಾಗುಳ್ಳದು ; ಹಾವು: ಅತಿಜಡಭಾವಿಯಾಗಿ ಕಡಲಲ್ತು ನಿಜಶ್ರುತಿಶೂನ್ಯನಾಗಿ ಮಾರುತಭುಗುವಲ್ತು . . . ಎನೆ ವೃದ್ಧನಿದೇಂ ವಿರುದ್ಧನೋ (ಪುಕ್ಕಳ. ೦೩-೪೩). [<ಸಂ. ಮಾರುತಭುಜ್]

**ಮಾರುತಮಂಡಲ**, ಮಾರುತಮಂಡಳ (ನಾ). ವಾಯುಮಂಡಲ ; ಆಕಾಶ : ಮಾರುತವೇಳೆಯೊಳ್ ದಹನಮಂಡಲವೊಂದಿದ ವಹ್ನಿವೇಳೆಯೊಳ್ ಮಾರುತಮಂಡಲಂ ನೆಗೞೆ ಮಾರಿ ಬಱಿ ಪಸಮೆಂಬಿವಕ್ಕುಂ (ಲೋಕೋಪ. ೯-೬೬). **ಮಾರುತಮಂಡಳ** : ಮಾರುತಮಂಡಳಮನಿತುಂ ತಾರಾಪಥದಂತೆ ಮಂದಚಾರಂಬಡೆದೇಂ ರಾರಾಜಿಸಿತ್ತೊ ವನಲಕ್ಷ್ಮೀ ರಮಣಿಯ ವದನಸುರಭಿನಿಶ್ವಾಸದವೊಲ್ (ಮಲ್ಲಿಕಾ. ೦೯-೦೦೦). [ಸಂ.]

**ಮಾರುತಮಂಡಳ** ' ಮಾರುತಮಂಡಲ ' ನೋ.

**ಮಾರುತಮಾರ್ಗ** (ನಾ). = ಮಾರುತಪಥ : ತಾತ ಮಾರುತ ಕೇಳ್ ಮಾರುತಮಾರ್ಗ ಕೇಳ್ ಪಗೆವರಂ ಕೊಂದೆನ್ನ ಕೋಪಾಗ್ನಿಗಾಹುತಿ ಮಾಟ್ಪೆಂ (ಗದಾಯು. ೬-೨೩) ; ಆಪಾರ್ಮುಕನಿರ್ಗತಮಾರ್ಗಣೋತ್ಕರಂ ಮಾರುತ ಮಾರ್ಗಮಂ ಪುದಿಯೆ (ಜಗಪು. ೧೨-೦೫). [ಸಂ.]

**ಮಾರುತಸುತ** (ನಾ). ೧. ವಾಯುವಿನ ಮಗ. ೨. ಹನುಮಂತ ; ಮಾರುತಿ : ಜವದಿಂ ಸೌಪರ್ಣನಂ ಮಾರುತಸುತನಂ . . ಕೀಟ್ಟಾಟ್ಟ ಸಲ್ಲಕ್ಷಣಗುಣನಿಧಿಗಳ್ ಪಲ್ಲಣಂಗಟ್ಟಿ ಬಂದಿರ್ದುವು ಹೇಷಾಘೋಷವಿದ್ರಾವಿತ ರಿಪುಮಹಿಭೃಚ್ಚಾತುರಂಗಂ ತುರಂಗಂ (ಪುಕ್ಕಳ-೩-೦೦). ೩. ಭೀಮ : ಹೈಡಿಂಬಿ ತೋರಗದೆಯಿಂದವರ ತೇರ್ಗಳಂ . . ಅಪ್ಪಳಿಸಿ ವಾರುವಂ ವೆರಸಿ ಕಡುವೇಗದಿಂದೈತಂದು ಮಾರುತಸುತನ ಮುಂದೆ ನಿಲುತಿರ್ದಂ (ಕೃಬಿಚಾ. ೯-೨೩). [ಸಂ.]

**ಮಾರುತಾಪ್ತ** (ನಾ). = ಮಾರುತಬಂಧು : ಮಾರುತಾಪ್ತನು ದೈವ ವೆಂದು ವಿಚಾರಿಪಡೆ ಭಂಗಂಬಡುವುದೇ ಧಾರುಣಿಯೊಳಗೆ ಸರ್ವಭಕ್ಷಕನಾಗಿ ಚರಿಸುವನೇ (ಬಸವ. ೩೯-೦೦) ; ತಲೆಯ ಕೂದಲ ಕಕ್ಕಡವ ಮಾಡಿ ಮಾರುತಾಪ್ತನ ಮುಟ್ಟಿಸುತ ಪ್ರಜ್ವಲಿಪ ಕಲಿಯಾರಿಗೀಶ್ವರನೊಲಿದನು (ಗುರುಚಾ. ೬-೯೩). [ಸಂ.]

**ಮಾರುತಾಶನಿ** (ನಾ). = ಮಾರುತಭುಗು : ಧಾರುಣೀರುಹತತಿಯೊಳಾ ಕಲ್ಪವೃಕ್ಷವಾ ಮಾರುತಾಶನಿಗಳೊಳು ಶೇಷನು . . . ಎಂತಧಿಕವಂತಾ ರಯ್ಯಲಿಲ್ಲ ಶೈವದೊಳು ಮಿಗಿಲೆನಿಸುವಿ ವೀರಶೈವವದು (ಶೀಕೃಪ. ೭-೩-೨). [< ಸಂ. ಮಾರುತಾಶನ]

**ಮಾರುತಿ** (ನಾ). ೧. ವಾಯುವಿನ ಮಗ : ಅನುಪಮಕೀರ್ತಿ ಮೂಱನೆಯ ಮಾರುತಿ ನಾಲ್ಕನೆಯುಗ್ರವಹ್ನಿಯಯ್ದನೆಯ ಸಮುದ್ರಂ . . . ಪತ್ತನೆಯ ನಿಧಾನಮೂರ್ತಿಯೆನೆ ಪೋಲ್ವವರಾರೆಱೆಯಂಗದೇವನಂ (ಎಕ. II (R), ೫೬೯-೦೭; 1094). ೨. ಹನುಮಂತ; ಆಂಜನೇಯ: ಮಾರುತಿ ಬುದ್ಧಿಪೇಟ್ದೊಡಮದಂ ಬಗೆಗೊಳ್ಳನೆ (ಶಂರಾಪೂ. ೦೦-೦೬೩); ಸರಸಿಯೆತ್ತಲು ಗಂಧವೆತ್ತಲು ಒರವಿದೆತ್ತಣದೆತ್ತ ಘಟಿಸಿದುದರರೆ ಮಾರುತಿ ತಂದೆ ನೀನೆಂದೆನುತ ಬಣ್ಣಿಸಿದ (ಕುಮ್ಮಾಕು. ೦೦-೨೭); ಗುರುರಾಯರ ನಂಬಿರೊ ಮಾರುತಿಯೆಂಬ ಗುರುರಾಯರ ನಂಬಿರೊ (ಪುರಂದ. ೦-೨೦೬ ಪಲ್ಲವಿ). ೩. ಭೀಮ : ಮಾರುತಿ ನಿಜವೇಣೀಸಂಹಾರಂ ಮಾಡಿದೊಡೆ ಮಾಱ್ಪುದೆನಗಂ ನಿನಗಂ ಪೂರಣೆಗೆ ಜಠರಪಿಠರಕಪೂರಣೆಗೇಂ ಮಾಡದೆಂತು ಕರೆವೆಂ ನಿನ್ನಂ (ಗದಾಯು. ೨-೦೦); ಮತ್ತೆ ಮಾರುತಿ ಹರಿಸಿದನು ನಿಜರಥ ವನತಿರಥರೊಡ್ಡು ಲಟಕಟಿಸೆ (ಕುಮ್ಮಾದ್ರೋ. ೨-೬೬); ಮಾರುತಿಗೆ ಪಟ್ಟವಂ ಕಟ್ಟುವೆವು ನಾವು (ಕೃಬಿಚಾ. ೨-೨೨). ೪. ಆಂಜನೇಯನ ಅವತಾರವೆನಿಸಿದ ಮಧ್ವಾಚಾರ್ಯ : ' ಮಾರುತಿಮತ ' ಪರಾ. [ಸಂ.]

**ಮಾರುತಿಮತ** (ನಾ). ಮಧ್ವಾಚಾರ್ಯರಿಂದ ಸ್ಥಾಪಿತವಾದ ಮತ ; ದ್ವೈತಮತ : ತಾರತಮ್ಯ ಪಂಚಭೇದ ಸತ್ಯವೆಂಬ ಮಾರುತಿಮತ ಪೊಂದಿದವರನು ಸಲಹು (ಪುರಂದ. ೦-೦೯೯-೩). [ಸಂ.]

**ಮಾರುತೇಷ್ಟ** (ನಾ). ೧. = ಮಾರುತಬಂಧು. ೨. [ಛಂದ] ಒಂದು ಅಕ್ಷರಗಣದ ಹೆಸರು ; ರಗಣ : ಮಾರುತೇಷ್ಟ ದಿವಿಜಾಗ್ನಿಯುಂ ಲಗಂ ಸಾರೆಯಾಗೆ ರಸದಲ್ಲಿ ವಿಶ್ರಮಂ ದೂರವಲ್ಲದಿರೆ ಕೇಳ್ರಥೋದ್ಧತೋ ದಾರನಾಮಮೆಸೆಗುಂ ರಥೋದ್ಧತೆ (ಛಂದೋಂಬು. ೩-೦೦೭). [ಸಂ.]

**ಮಾರುತ್ತರ** ' ಮಾಱುತ್ತರ ' ನೋ.

**ಮಾರುತ್ತರಕೊಡು** ' ಮಾಱುತ್ತರಂಗೊಡು ' ನೋ.

**ಮಾರುತ್ತರಿಸು** (ಕ್ರಿ). ಪ್ರತ್ಯುತ್ತರವನ್ನು ಕೊಡು ; ಜವಾಬು ನೀಡು : ಹುಡುಗಿ "ಬಾ ಸೋನ್ಯಾ" ಎಂದು ಮಾರುತ್ತರಿಸಿದಳು (ಕನ್ಯಾ.ಕ. ೯೯). [ಮಾರುತ್ತರ (< ಮಾಱುತ್ತರ) + — ಇಸು$_{3}$]

**ಮಾರುದನಿ** ' ಮಾರ್ದನಿ ' ನೋ.

**ಮಾರುದನಿಗೊಡು** ' ಮಾರ್ದನಿಗೊಡು ' ನೋ.

**ಮಾರುದನಿತೋರು** ' ಮಾರ್ದನಿದೋಱು ' ನೋ.

**ಮಾರುದ್ರ** (ನಾ). ಮಹಾರುದ್ರ ; ಶಿವ : ದಂಡಿಸಿ ದೈತ್ಯರನು ರುಂಡವ ಧರಿಸಿ ಹರ ತಾಂಡವನೃತ್ಯ ಮಾಡುವಾಗ ಮಾರುದ್ರ ಕಂಡಂತೆ ಕಾಂಬುವನು ಶಿವಸಿದ್ಧ (ಸಿದ್ಧ.ಪು. ೦೪-೬೦). [ಮಾ$_{4}$ + ರುದ್ರ]

**ಮಾರುನುಡಿ$_{1}$** ' ಮಾರ್ನುಡಿ$_{1}$ ' ನೋ.

**ಮಾರುನುಡಿ$_{2}$** ' ಮಾರ್ನುಡಿ$_{2}$ ' ನೋ.

**ಮಾರುಮಾತು** ' ಮಾಱುಮಾತು ' ನೋ.

**ಮಾರುಲಿ** (ನಾ). ಪ್ರತಿಯಾದ ಶಬ್ದ ; ಪ್ರತಿಧ್ವನಿ : ಹೆಲನರಿನ್ ಮೊದಲೆ ದ್ದುದೊಂದಾರ್ಪು—ಬಿಲ್ಲುಲಿಯು, ನಲ್ಲುಲಿಯು ಪಾಡು, ದೀವಿಕರೆಯುರೆಗಳಿನ್ ಮೊಳಗೆ ಮಾರುಲಿಗಳ್ (ಶಾಕು. ೦೫-೩೯೯).

[ಮಾರ್ (< ಮಾಱು$_{2}$) + ಉಲಿ$_{2}$]

**ಮಾರುವ** (ನಾ). [ಸಂಗೀತ] ಒಂದು ರಾಗದ ಹೆಸರು : ಮಾರುವವು (೨೨) ಸ–ಗ್ರಹಯುತವಾದುದು, ಆರೋಹದಲ್ಲಿ ರಿ–ಇಲ್ಲ, ಗಾನತತ್ತ್ವವನ್ನು ತಿಳಿದವರು (ಇದನ್ನು) ಸದಾಕಾಲದಲ್ಲಿಯೂ ಹಾಡುತ್ತಾರೆ (ತತುಶ್ರ. ೦೪೩).

[ಸಂ.]

**ಮಾರುವಾಡಿ** ' ಮಾರವಾಡಿ ' ನೋ.

**ಮಾರುವೆ** (ನಾ). ಮಾರಾಟ; ವಿನಿಮಯ : ಇಲ್ಲಿಗೆ ಹಣವನ್ನು ತರುವವರು ಹೆಚ್ಚುಮಂದಿಯಾಗುವುದರಿಂದ ಈ ಹಣದ ಬೆಲೆ ಹೆಚ್ಚಾಗಿ ದೇಶದ ಮಾರುವೆ ಏರುವುದು (ಹಣಶ್ರ. ೦೯೬). [ಮಾರು$_{1}$ (< ಮಾಱು$_{1}$)+ —ವೆ]

**ಮಾರುವೆಹುಂಡಿ** (ನಾ). ಅಂತರ್ರಾಷ್ಟ್ರೀಯವ್ಯಾಪಾರದಲ್ಲಿ ಒಂದು ದೇಶವು ತರಿಸಿಕೊಂಡ ಸಾಮಾನಿಗೆ ಕೊಡಬೇಕಾದ ಹಣಕ್ಕಾಗಿ ಕಳುಹಿಸುವ ಅಪ್ಪಣೆಪತ್ರ : ಚೆಕ್ಕಿಗೂ ಮಾರುವೆಹುಂಡಿಗೂ ಒಂದೆರಡು ವ್ಯತ್ಯಾಸಗಳಿವೆ (ಹಣಶ್ರ. ೯೯). [ಮಾರುವೆ + ಹುಂಡಿ$_{1}$./p ಇದು ' Bill of Exchange ' ಎಂಬ ಇಂಗ್ಲೀಷ್ ಪದದ ಕನ್ನಡಭಾಷಾಂತರ]

**ಮಾರುವೇಷ** (ನಾ). ಬೇರೆ ವೇಷ ; ಛದ್ಮವೇಷ : ಯುಧಿಷ್ಠಿರಮಹಾರಾಜನು ಮತ್ಸ್ಯರಾಜನೆಂಬ ಅರಸನ ಬಳಿ ಮಾರುವೇಷವನ್ನು ಧರಿಸಿ ಸೇವಕತನದಲ್ಲಿ ಸೇರುವಂತೆ ಆಯಿತೇ ! (ಬ್ಯಾಸತ. ೨೦೬); ಮಾರುವೇಷದಿಂದ ಶಿವನು ತನ್ನ ಹೆಂಡತಿಯ ಶೀಲವನ್ನು ಪರೀಕ್ಷಿಸಿದ ಘಟನೆಯನ್ನು ಈ ಕಥೆ ನಿರೂಪಿಸುತ್ತದೆ (ಕಿಸಾ. ೩೯ ಕ್ರ.ಶಾ.ಪೂ). [ಮಾರು$_{2}$ (< ಮಾಱು$_{2}$) + ವೇಷ]

**ಮಾರುವೋಗು** ' ಮಾಱುವೋಗು ' ನೋ.

**ಮಾರುಹೇಳು** (ಕ್ರಿ). ಜವಾಬು ಕೊಡು ; ಉತ್ತರವನ್ನು ನೀಡು : ಇಬ್ಬರಲ್ಲಿಯು ಒಬ್ಬನು ಮಾರುಹೇಳಿದ (ರಾಜಯೋ. ೦೩೦).

[ಮಾರು$_{2}$ (< ಮಾಱು$_{2}$) + ಹೇಳು (<ಪೇೞ್)]

**ಮಾರುಹೋಗು** ' ಮಾಱುವೋಗು ' ನೋ.

**ಮಾರುಳಿ, ಮಾರವಳಿ, ಮಾರವಾಳಿ** (ನಾ). ಒಂದು ಬಗೆಯ ಹುಲ್ಲು : " ವಕ್ರಿ ಮಾರುಳಿ ಕಂಬು ಕಸವೆ ಸಂದಂ ಕರಡೆಯುಕ್ಕುಂ " (ಶುಂಗರಾ. ೩೩-೯). **ಮಾರವಳಿ** : " ಮಾಲಾತೃಣಕಂ, ಭೂಸ್ತೃಣಂ – ೨ ಮಾರವಳೀಹುಲ್ಲಿನ ಹೆಸರು " (ಸಿದ್ಧಾಂಶಿ. ೦೩೦). **ಮಾರವಾಳಿ** : ' ದೊಡ್ಡಮಾರವಾಳಿ ' ಪರಾ. [ ←ತೆಲು. ಮಾರುವೆಲ್ಲಿ ]

**ಮಾರೆತ್ತಿ** (ನಾ). ಒಬ್ಬಾತನ ಹೆಸರು : ಮಾರೆತ್ತಿಗಳ ಮಗನ್ ಧೂಲ ಅವನ್ ವಿಜಸಿತ್ತಿರಾ ಕಾಳೆಗದುಳ್ ಕಾದನಗುರುಳ್ ಏಱಿದು ಸಗ್ಗ ಪುಕ್ಕದುನ್ (ಎಕ. X (೩), ೩೦ಶಾಸ. ೦೬೬-೯; ೩೩ಯ ೫೩). [ ? ]

**ಮಾರೆಯ** ' ಮಾರಯ್ಯ ' ನೋ.

**ಮಾರೆಯ್ಯ** ' ಮಾರಯ್ಯ ' ನೋ.

**ಮಾರೇಶ** (ನಾ). ಮನ್ಮಥನ ಒಡೆಯ ; ಶಿವ : ಕವಿದು ಕತ್ತಲೆ ಬನದೊಳ್ ಧೀರನು ಹೆದರದೆ ಮನದಲಿ ಮಾರೇಶನ ಧ್ಯಾನದೊಳಗೆಯಿರುತಿರೆ ಭೂಪಂ (ಹಪುತ. ೩೬). [ಸಂ.]

**ಮಾರೊಡ್ಡು** ' ಮಾಱೊಡ್ಡು$_{1}$ ' ನೋ.

**ಮಾರೋಲೆ** ' ಮಾಱೋಲೆ ' ನೋ.

**ಮಾರ್ಕಂಡಿ** (ನಾ). ಮೃಗಗಳು ಒಂದು ಕಾಡಿನಿಂದ ಮತ್ತೊಂದು ಕಾಡಿಗೆ ಹೋಗುವ ಅಥವಾ ಬರುವ ಸ್ಥಳ; ಎದುರುಕಂಡಿ: ಮೃಗಮಂ ಗಾಳಿಯುನಿರ್ಕೆಯುಂ ಪಕ್ಕೆಯುಂ ಗಣಿದವಂ ಕಂಡಿಯುಂ ಮಾರ್ಕಂಡಿಯುಂ . . . ಬಗೆದಾಗಳರಸರೊಳೆಲ್ಲ ಕೇಳ್ ನೀಂ ಬಲ್ಲೆ ಬೇಂಟೆಕಾಱರೊಳೆಲ್ಲವಾನೆ ಬಲ್ಲೆಂ (ಕಂಶಕಾ. ೩-೯೩). [ಮಾರ್ (< ಮಾಱು$_{2}$) + ಕಂಡಿ$_{1}$ ]

**ಮಾರ್ಕಟ್ಟಳೆ** (ನಾ). ಪ್ರತಿಯಾದ ಆಜ್ಞೆ,–ಅಪ್ಪಣೆ : ಱಕಾರಾದೇಶಮಾದ ರೇಫೆಗೆ ಪರಮಾದ ಕಕಾರಕ್ಕೆ– ಮಾಕೆರ್ರೊರಲ ಭೈರವಂ, ಮಾರ್ಕಟ್ಟಳೆ (ಶಮಿತ. ಸು. ೬೬ ಪ್ರಯೋ). [ಮಾರ್ (< ಮಾಱು$_{2}$) + ಕಟ್ಟಳೆ$_{1}$]

**ಮಾರ್ಕಟ್ಟೆ, ಮಾರುಕಟ್ಟೆ** (ನಾ). ಸರಕುಗಳನ್ನು ಮಾರುವ ಸ್ಥಳ ; ವ್ಯಾಪಾರಮಾಡುವ ಸ್ಥಳ : ತುರುಗಳಂ ಕೊಲ್ಲ ಮಾರ್ಕಟ್ಟೆಗಳ ಪೊಂದಿ ಮುಲುಕಿಂ ಪೊಳಲ್ ಪರ್ವರಿಕ ಬೀಗರ್ಗಂ (ಶಾಂತಿಕ. ೦೦೩-೨೦೬). **ಮಾರುಕಟ್ಟೆ** : ಮಾರುಕಟ್ಟೆಯಲ್ಲಿ ಕೂಲಿಮಾಡುವುದೂ ಅಷ್ಟೊಂದು ಸುಲಭಕೆಲಸವಾಗಿರಲಿಲ್ಲ (ಶಾಪೋರೀ. ೨೩) ; ಪ್ರೀತಿಯ ವ್ಯವಹಾರದ ಮಾರುಕಟ್ಟೆಯಲ್ಲಿ ಸವಕಲುನಾಣ್ಯಕ್ಕಷ್ಟೆ ಬೆಲೆ (ಶಾಸ್ತ್ರಿ. ೨೬೯). ' ಮಾರ್ಕೆಟ್ಟು ' ಪರಾ. [ <ಮಾರು$_{1}$ (< ಮಾಱು$_{1}$ ) + ಕಟ್ಟೆ$_{1}$/. p ಇದು ಇಂಗ್ಲಿಷಿನ ' Market ' ಶಬ್ದದ ರೂಪಸಾಮ್ಯದಿಂದಲೂ ಆಗಿರಬಹುದು]

**ಮಾರ್ಗಣೆ** ' ಮಾರ್ಗಣೆ$_{1}$ ' ನೋ.

**ಮಾರ್ಕರೆ** (ನಾ). ಪ್ರತಿಯಾದ ಕೂಗು ; ಮರುದನಿ : ಎಳಗರುವು ! ಕರೆಕರೆದು ಹಾಲುಂಬೆನೆನ್ನುವುದು ತಿಳಿಯದೇಂ ಬಿಡಿಸುತಿದೆ ಮಾರ್ಕರೆಗೆ ಕಿವಿಯಂ (ಕಾಲಾಕ. ೯೩-೦೩೯). [ಮಾರ್ (< ಮಾಱು$_{2}$) + ಕರೆ$_{6}$]

**ಮಾರ್ಕವ** (ನಾ). ಒಂದು ಬಗೆಯ ಗಿಡ ; .ಕಾಡಿಗೆಗರಗು : "ಭೃಂಗಂ ಮಾರ್ಕವ" (ವಸ್ತುಕೋ. ೩೬-೨೭). [ಸಂ.]

**ಮಾರ್ಕವಿ** (ಕ್ರಿ). ಪ್ರತಿಯಾಗಿ ಮುತ್ತು,–ಆವರಿಸು: ಕವಿವ ಶರಾಳಿಯಂ ನಿಜಶರಾಳಿಗಳಿಟ್ಟು ತೆರಳ್ಚಿ ತೂಳ್ದಿ ಮಾರ್ಕವಿದು ಪಳಂಚಿ ಪಾಯ್ದೊರಸೆ (ಕಂಶಕಾ. ೦೨-೦೯೮). [ಮಾರ್ (< ಮಾಱು$_{2}$) + ಕವಿ$_{1}$]

**ಮಾರ್ಕಾಡು** (ನಾ). (ಮೃಗಗಳಿಗೆ ಆಶ್ರಯವಾಗಿರುವ) ಎದುರುಕಾಡು: ಅಡಲಾಡಿಸಲ್ ಪಾಟಿಸಿಯುಂ ನಿಱಿಸಲುಂ ಪರಿಗೊಳಲ್ ತೊವಲಿಕ್ಕಲೊಳಗಂ ಬರಲ್ ಕಾಡ ಬೇಲಿಯುಂ ಮಾರ್ಕಾಡನಱಿಯಲುಂ . . . ಪಡೆ ಮೆಚ್ಚೆ ನೀಂ ಬಲ್ಲೆ ನೀಂ ಮೆಚ್ಚೆ ಹರಿಗ ಕೇಳಾನೆ ಬಲ್ಲೆಂ (ಕಂಶಕಾ. ೩-೯೦).

[ಮಾರ್ (< ಮಾಱು$_{2}$) + ಕಾಡು$_{2}$]

**ಮಾರ್ಕಿಡಿ** ' ಮಾರ್ಗಿಡಿ ' ನೋ.

**ಮಾರ್ಕಿಡಿವಿಡು** (ಕ್ರಿ). ಎದುರುಕಿಡಿಯನ್ನು ಸೂಸು ; ಪ್ರತಿಯಾಗಿ ಕೆಂಡವನ್ನು ಉಗುಳು : ಸಿಡಿಲೊಳೆ ತಳ್ತು ಪೋರ್ವ ಸಿಡಿಲಂತಿರೆ ಬಾಳೊಳೆ ಬಾಳ್ ಪಳಂಚಿ ಮಾರ್ಕಿಡಿ[ಪಾಠಾಂ. ಕಿಡಿ, ಕಿಡು]ವಿಡೆ ನೋಡಲಂಜಿ ದೆಸೆದೇವತೆಗಳ್ ಪೆಱಪಿಂಗೆ (ಕಂಶಕಾ. ೦೦-೯೨).

[ಮಾರ್ಕಿಡಿ (< ಮಾರ್ಗಿಡಿ) + ಬಿಡು$_{1}$]

**ಮಾರ್ಕೆಟ್** 'ಮಾರ್ಕೆಟ್ಟು' ನೋ.

**ಮಾರ್ಕೆಟ್ಟು, ಮಾರ್ಕೆಟ್** (ನಾ). ಹಣ್ಣು, ಹೂವು, ತರಕಾರಿ, ದಿನಸಿ, ಜಾನುವಾರು ಮೊದಲಾದುವನ್ನು ಕೊಳ್ಳುವುದಕ್ಕೂ ಮಾರುವುದಕ್ಕೂ ಸೇರುವ ಜನಸಂದಣಿಯ ಜಾಗ ; ಪೇಟೆ : ಅಂದು ಮಾರ್ಕೆಟ್ಟಿನಲ್ಲಿ ನೋಡಲಿಲ್ಲ (ಕಂಡುಬ. ೬೮); ಮಾರ್ಕೆಟ್ಟಿಗೆ ಹೋಗಿ ಏನೇನು ಬೇಕೋ ಎಲ್ಲಾ ತೆಗೆದುಕೊಂಡು ಬಾ (ರೂಪಟ್ಟ. ೯೩). **ಮಾರ್ಕೆಟ್** : ಮಾರ್ಕೆಟ್‌ಜಾಕದ ಬಳಿಯ ಗಲಾಟೆಗಳನ್ನು ದಾಟಿಕೊಂಡು ದೊಡ್ಡ ಪೇಟೆಯ ಇಕ್ಕಟ್ಟು ರಸ್ತೆಯಲ್ಲಿ ಜನಸಂದಣಿಯಲ್ಲಿ ನುಸುಳಿಕೊಂಡು ಹೋಗುತ್ತಿದ್ದಾನೆ (ರಂಗಳ. ೨). 'ಮಾರ್ಕೆಟ್ಟೆ' ಪರಾ. [←ಇಂ. Market]

**ಮಾರ್ಕೆಳರ್** (ಕ್ರಿ). ಪ್ರತಿಯಾಗಿ ವ್ಯಾಪಿಸು. –ಪಟ್ಟು : ಚಪಳರ್ ಪೂರ್ಣೇಸ್ಸುಗಾ ತಾರೆಗಳ್ ಭ್ರಾಮಂ ಚೋದಿಸೆ ಮಾರ್ಕೆಳರ್ವ, ಮಿಸುಗೆಂತಂತಾಗೆ ತೇಜಸ್ವಿಯಂ ತಾಮೇರಿಪ್ಪ ಪೊಲ್ಲಾಳ್ದ ದೇವನೊಸೆಗೀಗುದ್ವೃದ್ಯಶಶ್ವತ್ರೀಯುಮಂ (ಐರುಗಂ. ೦೦-೩). [ಮಾರ್ (< ಮಾಱು$_2$) + ಕೆಳರ್]

**ಮಾರ್ಕೊರಲ್** (ನಾ). ಮರುದನಿ : ಮಾರ್-ಕೊರಲ್, ಮಾರ್ಕೊರಲ್ : ಮಾರ್_ತಲೆ, ಮಾರ್ತಲೆ (ಶಾಸಛಂ. ೨೯ ಪ್ರಯೋ). 'ಮಾರ್ಕೊರಲ್ವಡೆ' ಪರಾ. [ಮಾರ್ (< ಮಾಱು$_2$) + ಕೊರಲ್]

**ಮಾರ್ಕೊರಲ್ವಡೆ** (ಕ್ರಿ). ಪ್ರತಿಯಾಗಿ ಧ್ವನಿಯನ್ನು ಹೊರಡಿಸು; ಮರುದನಿಯೆತ್ತು : ದೆಸೆಯಾನೆ ಮಾರ್ಕೊರಲ್ವಡೆಯದೆ ತಟ್ಟಿಮುಟ್ಟಿದುವು (ಶಂರಾಶೂ. ೬-೯೩). [ಮಾರ್ಕೊರಲ್ + ಪಡೆ$_1$]

**ಮಾರ್ಕೊಳ್, ಮಾರುಗೊಳ್, ಮಾರ್ಕೊಳ್ಳು, ಮಾಱುಂಗೊಳ್, ಮಾಱುಕೊಳ್, ಮಾಱುಗೊಳ್** (ಕ್ರಿ). ೧. ಎದುರಾಗು ; ಸಮ್ಮುಖಕ್ಕೆ ಬರು: "ಮಾರ್ಕೊಳ್ (ಮಾಱು+ಕೊಳ್) ಸಮ್ಮುಖೀ(ಇದಿರಾಗು)" (ಶಬ್ದಾ). ೨. ಪ್ರತಿಘಟಿಸು; ವಿರೋಧಿಸು : "ತಳ್ತೊಯ್ದ್, ತಡಂಬರೆ, ಪೊಣರ್ಚೆ, ತೊಡರ್ದುದು, ಮಾರ್ಕೊಂಡುದು ... ಮಿಗು, ತಡಂಬೊಯ್ದ್ –ಈ ೨೫ ಪ್ರತಿಪತಕ್ಕೆ ಪೆಸರ್" (ಕಶಸಾ. ೫೯-೨೯೬) ; ಬನ್ದು ತಾಗಲಾಕ್ಷಣದೊಳೆ ಮಾರ್ಕೊಣ್ಡು ಪೊಣರ್ದು ತಳ್ತಿಱಿದು ಮಡಿದನೀ ಗೋಗ್ಗಿ (ಎಕ. XI, ತಳ್ಕ. ೬-೮; ಸು. 925); ಪವನಸುತಂ ಗದೆಗೊಳೆ ಗಾಂಡಿವಿ ಬಿಲ್ಗೊಳೆ ಕೆಯ್ದುಗೊಳ್ವ ಮಾರ್ಕೊಳ್ವದಟರ್ ಭುವನದೊಳಿಲ್ಲ (ಗದಾಯು. ೩-೦೬): ಗಂಡುಗೆಡಿಸಿದರಿಲ್ಲ ದಾನವದಿಂಡೆಯರು ಹಲರೆಪ್ಪೊಡನೆ ಮಾರ್ಕೊಂಡವರು ಮಾಮಾಪ್ರತಿಜ್ಞೆಯ ತೊಡಕು ಬೇಡ (ಕುವ್ಯಾಶಿ. ೬-೨೭); ಬಲ್ಲಾಳ್ಗಳ್ ಕಟ್ಟಿದೊಡೆ ಮೊನೆಯೊಳ್ ಮಾರ್ಕೊಳ್ವುದುಂ, ಸೋಲ್ತು ಕಪ್ಪಮನಿತ್ತೊಡೆ ಕೈಕೊಳ್ವುದುಂ, ಕಾವಲ್ಗೆ ನೆಱೆಗುಂ (ರಾಮಾಶ್ವ. ೦೩-೦೬). ೩. ಆಕ್ಷೇಪಣೆಮಾಡು ; ಆಕ್ಷೇಪಿಸು : ಎನ್ನ ಕೊಟ್ಟುದರ್ಕೆ ಮಾರ್ಕೊಳ್ಳದೆ ಕೊಳ್ಳಿಮೆಂದೊಡಂತೆ ಗೆಯ್ವೆಮೆಂದು ನಿಶ್ಚಯಿಸೆ (ಶಂಶಚ. ೬-೩ ವ) ; ಆ ನುಡಿಯ ಮಾರ್ಕೊಂಡು [ಶಾಕಾಂ. ನೊಳಕೊಂಡು] ಶಿವಶಿವದೇನನಾಡಿದೆ ತಾಯಿ . . . ತಾವು ಹೊಳ್ಳ ನಿಧಾನ ತಮಗಹುದೇನು ವಿಸ್ಮಯವೆಂಬ ವೃಷಭೇಂದ್ರ (ಪ್ರಭುಲಿ. ೯-೨೩). ೪. ತಡೆ ; ನಿಲ್ಲಿಸು ; ತಡೆಗಟ್ಟು : ನಿಮ್ಮನೆ ಪೋಡಿ ಮದ್ದುಗುರುವಿಯೋಗ ಮನಾಱಿಪೆವಿಮಾಗಳೀ ತಪಕ್ಕಮ್ಮ ಮನಂಮರಲ್ ನಿಮಗೆ ಸಲ್ಲದೊಡಂ ಒಡಮೆಂದು ಕಾಲ್ಗಳಂ ತಮ್ಮಯ ನೆತ್ತಿಯೊಳ್ ನಿಱಿಸಿ ಮಾರ್ಕೊಳೆ ಮಾಣದೆ ಪೋದ ಮಕ್ಕಳಂದೇಮ್ಮನದೊಳ್ ಪಳಂಚಿದರೊ ಚಕ್ರಿತನೂಜೆಯ ವಪ್ರುಪಂಘನಾ (ಆದಿಪು. ೯-೬೮); ಅಕ್ಕ ಮಾರ್ಕೊಳಲೆ ಬೇಡ ಗಮನೋಪ್ಯಮಮಂ (ಕಾದಂಬ. ೪೪೯); ದುರ್ಯೋಧನಂ . . . ಅನಿತಱೊಳಂ ಮಾಣ್ದು ಸೈರಿಸಲಾಱದೆ ಸಮರೋದ್ಯೋಗಂಗೆಯ್ಯೆ ಸಂಜಯನಂಜದೆ ಮಾರ್ಕೊಂಡು . . . ನುಡಿದ ಸಂಜಯನ ನುಡಿಗೆ ದುರ್ಯೋಧನಂ ನಿರ್ವೆಗಸಿ (ಗದಾಯು. ೩-೪೪ ವ). ೫. ಎದುರುಮಾತನಾಡು ; ಪ್ರತಿಯಾಗಿ ನುಡಿ : ಇದು ನಿನ್ನ ಕೊಟ್ಟ ತಲೆ ನಿನಗಿದನಿತ್ತಪೆನೆಂದು ನುಡಿಯಲಾಗದು ಮಾರ್ಕೊಳ್ಳದಿರೆಂದು ಗಳಿಯ ಬಿಲ್ಲಾಣ ಕುದುರೆಯನೊಪ್ಪಿಸಿತ್ತನಗಡಪರ್ಣಂ (ಶಂಶಚ. ೩-೩೩); ಕಾವ್ಯನಾಟಕಪ್ಪರಿಣಾಂಗಳನೋದಿಸುವೆಮೆಂದೊಡಾ ಮಹಾಸತಿ ನಿಜಪತಿಯುಂ ಮಾರ್ಕೊಂಡಿಂತೆಂದಳ್ (ಶಂತಕಂ. ೦೬೪-೨೦); ಆನೊಂದಂ ಬೇಡಿದಪೆಂ ನೀನದನೆನಗೀವುದಣ್ಣ ಮಾರ್ಕೊಳ್ಳದೆ (ರಮ್ಯಾಪ್ಪು. ೨-೦೬೮). ೬. ಮೀರು ; ಅತಿಶಯಿಸು : ನವಯವ್ವನರಾಗಂ ಚಿತ್ತವನೆಂದುಂ ಪುಗಲೆ ಪದೆಯದಿರ್ದುದೊ ಪೊಱಗೆಂಬವೊಲೆಸೆದು ಪಕ್ವಬಿಂಬಚ್ಛವಿಯಂ ಮಾರ್ಕೊಳ್ವುದಧರಮಣಿ ಮುನಿವರನಾ (ಶಾರಂಪು. ೭೩೩); ಮಡದಿಯ ಮುಡಿ ಮಾರ್ಕೊಂಡುದು ಕಾರ್ಮುಗಿಲಡಿಯೊಳ್ ತಾಂಡವಮಂ ಮೆಱೆವ ಸೋಗೆನವಿಲ ಬೆಡಂಗಂ (ಶಶಿಕೃ. ೩-೩೩). **ಮಾರುಗೊಳ್** : ೭. ಬೆಲೆಕೊಟ್ಟು ಕೊಂಡುಕೊಳ್ಳು ; ಖರೀದಿಸು: ಗೋಪತಿನಾಯಕನಂನ ದಾನನಿಮಿತ್ತದಿ . . . ಒಂದು ಮನೆಯುಮಂ ಸರ್ವನಮಸ್ಯವಾಗಿ ಮಾರುಗೊಂಡಂ (ಮೈಶಿಂ. ೦೯೪೦, ೩೯-೪೩; 1103). **ಮಾರ್ಕೊಳ್ಳು** : ೨. ಮಂಗಳೇಶನೂ ಮಾರ್ಕೊಂಡು ಬಂಧು ಪುಲಕೇಶಿಯನ್ನು ತಾಗಿದನು (ಕರ್ಣಾರ. ೭); ರಾಜಾದಿತ್ಯನು ಕುಳಿತ ಆನೆಯು ಆತನನ್ನು ಮಾರ್ಕೊಂಡಿತು ; ಬೂತುಗನಿಗೆ ಹಬ್ಬವಾದಂತಾಯಿತು (ಕರ್ಣಾರ. ೩೦). **ಮಾಱುಂಗೊಳ್** : ೭. ಮಂಜೇಶ್ವರನೊರ್ವಂ . . . ಎನ್ನಯ ಮನಮಂ ತನ್ನ ವಿಲಾಸದ ಬೆಲೆಗುತ್ತರವೆ ಮಾಱುಂಗೊಂಡಂ (ಜಯುಕಾ. ೪-೨೩). ೮. ಅಧೀನಮಾಡಿಕೊಳ್ಳು ; ವಶಪಡಿಸಿಕೊಳ್ಳು : ನೀಱೆಯ ಕೊರಳತಿಶಯಿತು ಮಾಱುಂಗೊಂಡುದು ನೃಪಾಳತಿಳಕನ ಮನಮಂ (ಶಾರಪು. ೨-೪೩); ಅಲರ್ವಿಲ್ಲನ ಮಡದಿಯ ಮಾಱುಂಗೊಂಡ, ಮನೋಹರರೂಪದ ನೀಱೆಯ ನವಲಾವಣ್ಯದ ಸಿರಿಯ ನದೇಂ ಬಣ್ಣಿಪೆನು (ಜಯುಕಾ. ೩-೭೩). P ಇದು ಛಂದಸ್ಸಿಗಾಗಿ ಮಾಡಿಕೊಂಡ ರೂಪ. **ಮಾಱುಕೊಳ್**: ೪. ತುಱುವ ಮಾಱುಕೊಳೆ (ಮೈಶಿಂ. ೦೯೨೩, ೩೩-೨; ೧). **ಮಾಱುಗೊಳ್** : ೭. ನಾಗಯ್ಯಂ ತನ್ನ ಮಾಡಿಸಿದ ದೇಗುಲಕ್ಕನ್ನು ನಾಗವುಲಿಗಾವುಣ್ಣನ ಕೆಯ್ಯೊಳು ಪನ್ನಿರ್ವರ್ತ್ತಕರ್ಮ ಮಾಱುಗೊಣ್ಡು ಬಿಟ್ಟನ್ (ಶಾಇಕ. XI-i. ೩೪-೦೨; 925); ಯಜ್ಞನಿಮಿತ್ತಂ ಒಂದಾಡಂ ಬೇಱೂರಿಂ ಮಾಱುಗೊಂಡು ಪೆಗಲೊಳಿಕ್ಕಿ ಪೂಜಿಪನಂ . . . ಕಂಡು (ಶಂತಕಂ. ೦೪೬-೧೦); ಹರಿಶ್ಚಂದ್ರಭೂವರನ ತನಯನಂ ಮಡದಿಯಂ ಮಾಱುಗೊಂಬಧಿಕರಿಲ್ಲ (ಪತಕಾ. ೦೦-೩). ೮. ಎನ್ನ ಮನವ ಮಾಱುಗೊಂಡನವ್ವ (ಮಹಾದೇ. ೩. ೪೧-೯೯); ಪುಷ್ಪಲಾವಿಯರೆತ್ತಿದ ಪಾಟಲದಾಮವುಮಂ ಮಾಱುಗೊಳ್ವ ನೀಱರ ಕಣ್ಣೆ ಮಂಕ್ಷಿಕಾಕಾಸುಮಮೆನಿಸಿಯುಂ . . . ಪಪ್ಪಳಿಪ ಸಾಂದ್ರಚಂದ್ರಾತಪಾಡಂಬರಮಂ ಕಂಡು (ಕುಸುಮಾ. ೪-೩೩ ವ) ; ಮಾರಿಗಾಲದ ಮತ್ಸ್ಯವೆನ್ನನು ಮಾಱುಗೊಳುತಿದೆ (ಶಿಶುಗ. ೯-೨೩-೦೯). ೯. ವಿನಿಮಯ ಮಾಡು ; ಅದಲುಬದಲು ಮಾಡು : ತಮ್ಮ ಕೆಂಪಂ ಕಣ್ಗಳ್ಗೆ ಕೊಟ್ಟು ಕಣ್ಗಳ ಬೆಳ್ಪಂ ತಮಗೆ ಮಾಱುಗೊಂಡಂತೆ (ಶಂಶಚ. ೪-೯೯ ವ). ೧೦. ಅರ್ಪಿಸಿಕೊಳ್ಳು ; ಒಪ್ಪಿಸಿಕೊಳ್ಳು ; ಸ್ವೀಕರಿಸು : ಮಾಡಿದ ಕರ್ಮವ ನೋಡಯ್ಯ ಎನ್ನ ಮನದಣಿವನ್ನಕ್ಕ ಬೇಡೆನ್ನನು ಮಾರ್ಕೊಳ್ಳೆನ್ನನು ಮೇಲೆ ರೂಢಿಗೀಶ್ವರನ ಕೂಡುವೆನು ನೀರಡಿಸಿದಂತೆ (ದೇರಾಶ. ೭-೦೨) ; ಮಾಱುಗೊಳ್ಳೆ ತನ್ನನೀಗಲು ತೋಱಿಸದೆ ಹೀನಿದ್ದೆಯಾದೊಡೆ ಭಕ್ತ ತಾನಲ್ಲ (ಸಂಶಶ. ೯-೭೭). ೧೧. ಜಗಳವಾಡು; ಕಾದಾಡು : ಪರಿಕಿಪಡೆ ಕೋಪಪ್ರಸಾದವಿವೆರಡು ಉಂಟಲ್ಲಾ ಶಿವನೊಳಂ ಧರೆಯೊಳೊಮ್ಮನ ಧಾನ್ಯಕಾದಡೆ ಮಾಱುಗೊಂಬುವರು (ಬಸಪು. ೨೨-೬೪).

**ಮಾರ್ಕೊಳ್ವರ ಗಂಡ, ಮಾರ್ಕೊಳುವರ ಗಂಡ** = ಪ್ರತಿಭಟಿಸುವವರನ್ನು ಪರಾಕ್ರಮದಿಂದ ಎದುರಿಸುವವನು; ಕದಂಬವಂಶದ ತೈಲಪದೇವನ ಒಂದು ಬಿರುದು : ಮಾರ್ಕೊಳ್ವರ ಗಣ್ಡಂ ಪ್ರತಾಪ

ಮಾರ್ತ್ತಣ್ಡಂ ನಾಮಾವಳೀವಿರಾಜಿತರಪ್ಪ . . . ತೈಲಪದೇವರ್ (ಸೌ. X. ೨೮೨-೨೯; 1108): ಕಾದಂಬರಾಜರಾಭರಣಂ ಮಾರ್ಕ್ಕೊಳ್ವರ ಗಂಡ ಮಂಡಳಿಕರ ಗಂಡ . . . ನಾಮಾವಳಿ ವಿರಾಜಿತಮಪ್ಪ ಶ್ರೀಮಂನ್ಮಹಾಮಂಡಳೇಸ್ವರಂ ತೈಲಪದೇವರಸರು ಬನವಾಸೆಪಂನಿಚ್ಛಾಸಿರಮುಮಾನಾಳುತ್ತಮಿರೆ (ಕಾ. IV. ೯೮-೦೬; 1247) : ಪ್ರತಾಪಮಾರ್ತ್ತಂಡ ಮಾರ್ಕೊಳುವರ ಗಂಡ ನಾಮಾದಿ ಸಮಸ್ತಪ್ರಸಸ್ತಿಸಹಿತಂ ಶ್ರೀಮನುಮಹಾಮಂಡಳೇಶ್ವರ ತೈಲಹದೇವರಸರು . . . ರಾಜ್ಯಂಗೆಯುತ್ತಮಿರೆ (ಸೌಇಇ. XX. ೬೬-೦೨ ; 1118). **ಮಾರ್ಕೊಳ್ವರ ಭೀಮ** = ಪ್ರತಿಭಟಿಸುವವರಿಗೆ ಭೀಮನಂತೆ ಭಯಂಕರನಾದವನು; ಒಂದು ಬಿರುದು : ವೈರಿಸಂಹಾರಿ ಮಾರ್ಕೊಳ್ವರ ಭೀಮಂ ಭೀಮಶೌರ್ಯ್ಯಂ ವಿರಟಪಟಹಕೋಟಾಘರಟ್ಟಂ (ಎಕ. VIII. ಸಾಗರ. ೨೦೬(b)-೬; 1042). [ಮಾರ್ (< ಮಾಱು$_2$) + ಕೊಳ್$_1$]

**ಮಾರ್ಕೊಳ್ಳು** 'ಮಾರ್ಕೊಳ್' ನೋ.

**ಮಾರ್ಕೋಲ್, ಮಾರ್ಕೋಲು, ಮಾಱುಗೋಲು** (ನಾ). (ವೈರಿಯ ಬಾಣಕ್ಕೆ) ಪ್ರತಿಯಾಗಿ ಬಿಡುವ ಬಾಣ.— ಸರಳು : ಮಾಱು + ಕೋಲ್. ಮಾರ್ಕೋಲ್ (ಶಬ್ದ.ಸು. ೯೦ ಪ್ರಯೋ). **ಮಾರ್ಕೋಲು :** ಆ ಗ್ರಾಮದ ತುಱುವಂ ತೊಱೆಪರ ಕಾಳೆಯು ಆ ಪುಯ್ಯಲಿಂಗೆಱಗಿ ಮೇಲ್ವಾಳಂನಿಱಿದು ಕುದುರೆಯಂ ಪಿಡಿದು ತಂಮ ಕೂಸನ ಕಯ್ಯ ಮಾರ್ಕೋಲು ಮಗುಳೆ ಅಳೆವರಿದು . . . ತುಱುವಂ ಮಗುಱ್ಚಿ ತೆಲ್ಲಿಗ ಬಮ್ಮಣಂಣ ಸುರಲೋಕಪ್ರಾಪ್ತನಾದ (ಎಕ. VII. ಶಿಕಪು. ೩೬-೮ : 1140): ಕುರುಭೂಪಾಲ ಸಮ್ಮುಖನಾಗು ಹಿಡಿ ಮಾರ್ಕೋಲನು (ಕುವ್ಯಾಭಾ. ೬-೩೯). **ಮಾಱುಗೋಲು :** ಶರಣರೊಡನೆ ಶ್ರವದ ಮಾಡಿ ಮಾಱುಗೋಲ ಬಿಡುವೆನಯ್ಯಾ (ಬಸವ. ೬೦೨). 'ಮಾರ್ಸರಲ್' ಪರ್ಯಾ.

**ಮಾರ್ಕೋಲ ಬಱಸಿಡಿಲು** = ಪ್ರತಿಯಾಗಿ ಬರುವ ಬಾಣಕ್ಕೆ ಬರಸಿಡಿಲಿನಂತಿರುವವನು : ಒಂದು ಬಿರುದು : ವೈರಿಮನೋಭಂಗ ನಯ್ಯಸ ಸಿಂಘಂ ಮಾರ್ಕ್ಕೋಲ ಬಱಸಿಡಿಲು ನಾಮಾದಿಸಮಸ್ತಪ್ರಶಸ್ತಿ ಸಹಿತಂ ಶ್ರೀಮನ್ಮಹಾಸಾಮನ್ತಂ ಸಿಂಗರಸಂ . . . ಬಿಟ್ಟ ತೋಂಟ (ಸೌಇಇ. IX-i. ೦೮೬-೨೬; 1111). **ಮಾರ್ಕೋಲ ಭೈರವ** = ಎದುರಾಗಿ ಬರುವ ಬಾಣಕ್ಕೆ ಭೈರವನಂತೆ ನಾಶಕಾರಕನಾದವನು : ಒಂದು ಬಿರುದು : ವಿಜಯಲಕ್ಷ್ಮೀಕಾಂತ ಶೌರ್ಯ್ಯಕಂಠೀರವಂ ಮಾರ್ಕೋಲ ಭೈರವಂ ಚೋಳಬಳಜಲಧಿವಡಬಾನಳಂ . . . ಶ್ರೀಮದ್ದೇಮರಸರ್ (ಸೌಇಇ. IX-i. ೦೦೮-೯೬ ; 1057); ಬಂಟರ ಬಾವ ಸತ್ಯರಾಧೇಯ ಮಾರ್ಕೋಲ ಭೈರವ ಸಿತಗರ ಗಂಡ . . . ನಾಮಾದಿ ಸಮಸ್ತಪ್ರಶಸ್ತಿ ಸಹಿತ ಶ್ರೀಮನ್ಮಹಾಸಾಮನ್ತನ್ ಆದಿತ್ಯ ಗಂಜೀಯಾತ್ (ಎಕ. VI. ಕಡೂರು. ೪೩-೫೦; 1136). [ಮಾರ್ (< ಮಾಱು$_3$) + ಕೋಲ್$_1$]

**ಮಾರ್ಕೋಲು** 'ಮಾರ್ಕೋಲ್' ನೋ.

**ಮಾರ್ಗ** (ನಾ). ೧. ದಾರಿ ; ಹಾದಿ : "ಅಧ್ವಾ, ಪಂಥಾಃ, ಪದ್ಧತಿಃ . . . ಮಾರ್ಗಃ, ಪದ್ಯಾ, ನಿಗಮಃ– ಈ ೧೨ ಬಟ್ಟೆ" (ಪಲಾಯು. ೯೩-೦೦೫); ಹೊಳಲಮಯವಾ ಮಾರ್ಗ ಮಂದಾನಿಲನ ಮಯ ದಿಗುವರ್ಗ ಸಿರಿಯೊಬ್ಬಳಿಯ ಮಯವಾ ವಿಷಯವೀಥಿ ಕುಬೇರಸಹಭವನ (ತೊರರಾ. ೬-೬-೦೯); ಮಾರ್ಗದೊಳ್ ಸುರಸೆಯಂ, ಕಡಲಿನಿಂದೆದ್ದು ಬಾಯ್ದೆರೆದಡ್ಡನಿಂದಳಂ, ಮುರಿದು . . . ಐತರುತಲಿರ್ದ ಹನುಮನಂ . . . ತಿಳಿದಳಾ ಸಿಂಹಿಕೆ (ಶ್ರೀರಾಪಟ. ೯೦೦-೨೦೦). ೨. ಕಾಡಿನಲ್ಲಿ ಪ್ರಾಣಿಗಳು ಓಡಾಡುವ ಜಾಡು ; ಸರುವು. ೩. ರೀತಿ : ಕ್ರಮ : ವಿಕ್ರಮಪುರದ ಬ್ರಹ್ಮಪುರಿಯ ನಾ[ಲ್ವ]ತ್ತಿರ್ವ್ವರ್ಗ್ಗೆ ಸುಂಕಮಂ ಮಾಣ್ದು ಮಾಡಿದ ಮಾರ್ಗ್ಗಮೆನ್ತೆನೆ ಅಡಕೆ ತೋಂಟಕ್ಕೆ ಪಣವೊಂ[ದು] ಅಡಕೆ ನೂಱು (ಸೌಇಇ. XI-i. ೯೩-೬: 1061): ವೇದಶಾಸ್ತ್ರಮಾರ್ಗವೆಲ್ಲವು ಹೊಗಳಿ ಕಾಣದೆಂಬುದ ಗೊಹೇಶ್ವರ ಸಾಕ್ಷಿಯಾಗಿ ಮೂಱುಲೋಕ ಬಲ್ಲುದು ಕಾಣಾ ಸಿದ್ಧರಾಮಯ್ಯ (ಅಪರಂ. ೨೧೬-೯೭೬); ನರಹರಿಯನಾ ವೀರಗಣನಂಬರಕೆ ಹಾಯ್ಕುವ ತೆಱದೆ ಹಾಯ್ಕುತ . . . ಹರನಿಭದೈತ್ಯನಂ ಸಂಹರಿಸಿ ಸೀಳುವ ಮಾರ್ಗದಿಂದೊಡೆ ಸೀಳ್ದನುರ್ಬಿನಲಿ (ಬಸಪು. ೨೧-೯೩). ೪. ಸಂಪ್ರದಾಯ : ಪದ್ಧತಿ. ೫. ಅರಸುವಿಕೆ ; ಹುಡುಕುವಿಕೆ ; ಶೋಧನೆ ; "ಅಱಸುವಲ್ಲಿಯುಂ ಮಾರ್ಗಮೆಂಬುದು" (ಹಲಾಯು. ೦೩೯-೨೦). ೬. ಚಾಂದ್ರಮಾನ ವರ್ಷದ ಒಂಬತ್ತನೆಯ ತಿಂಗಳು ; ಮಾರ್ಗಶಿರ : "ಮಾರ್ಗಶೀರ್ಷಃ, ಸಹಾಃ, ಮಾರ್ಗಃ, ಆಗ್ರಹಾಯಣಿಕಃ – ೪ ಮಾರ್ಗಶೀರ್ಷಮಾಸದ ಹೆಸರುಗಳು" (ಸಿದ್ಧಾಂತ. ೩೯). ೭. ನೃತ್ಯ, ಸಂಗೀತ ಮೊದಲಾದುವುಗಳಲ್ಲಿಯ ಪ್ರೌಢವಾದ ಸಾಂಪ್ರದಾಯಿಕ ರೀತಿ,–ಧಾಟಿ : ಸರಸಂ ಸಂಗತಮಾರ್ಗ ದೇಸಿಯನೆ ರಾಗಪ್ರೌಢಿಯಂ ಬೀಱಿ ಬಿತ್ತರದಿಂ ಪಾಡಿದರೋಜೆಯಿಂ ಶ್ರುತಿಸುಖಶ್ರೀದಾಯಕರ್ ಗಾಯಕರ್ (ಛಂಪು. ೦೨-೨೯). ೮. ಉಪಾಯ; ಅನುಕೂಲ ; ಧಾನ್ಯಾದಿ ಜೀನಸು ಚೀಲಗಳಲ್ಲಿಯೇ ತುಂಬಿ ಬರುವುದರಿಂದ, ಅದರ ತೂಕದ ಅಂದಾಜು ನಮಗೆ ತಿಳಿದು ಬರುವಂತೆ ಖರೇದಿ ಜೀನಸಿನ ವಿಷಯದಲ್ಲಿ ತಿಳಿಯುವದಕ್ಕೆ ಮಾರ್ಗವಿಲ್ಲ (ಮುಂಬಯಿ. ೬). ೯. (ಗಾಯದಿಂದಾದ) ಕಲೆ; ಗುರುತು. ೧೦. ಮಾರ್ಗಶೀರ್ಷ ನಕ್ಷತ್ರ. ೧೧. ವಿಷ್ಣು: ನಾರಾಯಣ. ೧೨. ಕಸ್ತೂರಿ. ೧೩. [ಕಾವ್ಯಮೀ] ಸಾಹಿತ್ಯದ ಪರಿಭಾಷೆಯು ಮೇರೆಗೆ ಸಂಸ್ಕೃತ ಭಾಷೆಯ ಶಬ್ದಗಳನ್ನು ಬಳಸಿ ರಚಿಸುವ ಪ್ರಾಚೀನ ಲಕ್ಷಣಬದ್ಧವಾದ ಕಾವ್ಯ ರಚನಾಕ್ರಮ; P ಬೇರೆ ಬೇರೆ ದೇಶಭಾಗಗಳಲ್ಲಿ ರಚಿತವಾಗಿರುವ ಕಾವ್ಯಗಳ ವಿಶಿಷ್ಟಲಕ್ಷಣಗಳನ್ನು ಆಧರಿಸಿ ವೈದರ್ಭೀ. ಗೌಡಿ. ಪಾಂಚಾಲಿ ಎಂಬುದಾಗಿ ಶೈಲಿಗಳನ್ನು ವಿಂಗಡಿಸಲಾಗಿದೆ: ಕ್ಷಿತಿಪತಿಯಂ ಬರಿಸಿ . . . ಕುಶಲವಾರ್ತಾಂತರಮಂ ಮಿತವಚನಂ ಬೆಸಗೊಂಡತಿವಿತೀರ್ಣಮುದನಾದನಾತನೆಂಬುದು ಮಾರ್ಗಂ (ಕವಿರಾ. ೨-೩); ಆದಿಪುರಾಣವಸ್ತುಕೃತಿಯಂ ಪೇೞ್ದಂ ಬೆಡಂಗಪ್ಪ ಮಾರ್ಗದೊಳಂ ದೇಸಿಯೊಳಂ ಪೊದಳ್ದಿಸೆವಿನಂ ಸಂಸಾರಸಾರೋದಯಂ (ಆದಿಪು. ೦೬-೬೯). 'ದೇಸಿ' ಪರ್ಯಾ. ೧೪. [ನಾಟ್ಯ] ಭಾವಾಶ್ರಯವಾದ ನೃತ್ಯ: ಈ ನಾಟ್ಯದೊಳತಿಶಯದಿಂ ಭೂನುತವಹ ಮಾರ್ಗ ದೇಸಿಯೆಂಬಭಿಧಾನಂ ತಾನೆಂತಾದುದೆನಲ್ಕೆ . . . ವಿಧಿ ಸುರಪ ಮುಖ್ಯರಾದ ವಿಬುಧರಿದಸುಸಿರಿದುದಱಿಂದೆ ಮಾರ್ಗಮೆನಿಕ್ಕುಂ (ಲಾಸ್ಯರು. ೧-೨೦): ಭಾವಾಶ್ರಯವಾದ 'ನೃತ್ಯ'ಕ್ಕೆ ಮಾರ್ಗವೆಂದೂ ತಾಲಲಯಾಶ್ರಯವಾದ 'ನೃತ್ತ'ಕ್ಕೆ ದೇಶಿ (ದೇಸಿ) ಯೆಂದೂ ಹೆಸರಿರುವಂತೆ ದಶರೂಪಕದಿಂದ ತಿಳಿಯಬರುತ್ತದೆ (ಕೈಪಿ. ೨೨೩). ೧೫. [ದ್ವೈತ] ಕರ್ಮಕ್ಷಯ, ಉತ್ಕ್ರಾಂತಿ, ಮಾರ್ಗ ಮತ್ತು ಭೋಗ ಎಂಬ ನಾಲ್ಕು ಬಗೆಯ ಮುಕ್ತಿಭೇದಗಳಲ್ಲಿ ಒಂದು: ಸಾಯುಜ್ಯಪ್ರಾಪ್ತಿ : ಇದರಿಂದ ಬರುವ ಮೋಕ್ಷ, ಕರ್ಮಕ್ಷಯ, ಉತ್ಕ್ರಾಂತಿ, ಮಾರ್ಗ, ಭೋಗ ಎಂದು ನಾಲ್ಕುಪರ್ವಗಳುಳ್ಳದ್ದು (ಹಿಂದಸಾ. ೨೯೨). ೧೬. [ಬೌದ್ಧ] ದುಃಖ, ಆಯತನ, ಸಮುದಯ ಮತ್ತು ಮಾರ್ಗ ಎಂಬ ನಾಲ್ಕು ಬಗೆಯ ಧರ್ಮಸಾಧನೆಯ ತತ್ತ್ವಗಳಲ್ಲಿ ಒಂದು: ಸರ್ವವಸ್ತುಗಳು ಕ್ಷಣಿಕ ಎಂದು ತಿಳಿಸುವ ತತ್ತ್ವ: ಆರ್ಯಸತ್ಯವಸ್ತುಗಳು — ದುಃಖ, ಸಮುದಯ, ಮಾರ್ಗ, ನಿರೋಧ ಎಂಬುದಾಗಿ ನಾಲ್ಕುವಿಧ (ಹಿಂದಸಾ. ೨೯) : ಸರ್ವವಸ್ತುಗಳೂ ಕ್ಷಣಿಕ ಎಂಬ ಸ್ಥಿರವಾದ ಭಾವನೆಯೇ ಮಾರ್ಗ (ಶಾರದ. ೨೦೯) [ಸಂ.]

**ಮಾರ್ಗಂಟಿ** (ನಾ). ಮಾರಾಟಕ್ಕೆ ಇರುವ ಆಕಳು : ಕಿಱು + ಕೋಲ್ = ಕಿಱುಗೋಲ್; ಪಿವಂ ತುಱುಗಾಡು, ಕುಱುಗೆಂಟು . . . ತೋಕ್ಕಾಗಂ. ಮಾರ್ಗಂಟಿ (ಶಬ್ದ.ಪು. ೬೬ ಪ್ರಯೋ).

[ಮಾರ್ (< ಮಾಱು$_3$) + ಗಂಟು$_1$]

**ಮಾರ್ಗಂದಪ್ಪು** (ಕ್ರಿ). ೧. ದಾರಿತಪ್ಪು ; ಹಾದಿತಪ್ಪು : ಒಂದು ನೊಗ ನಿಕ್ಕುವನಿತಂ ಮುಂದೀಕ್ಷಿಸಿ ಮೆಲ್ಲನಡಿಯುನಿಡುತುಂ ಮುನಿಮಾರ್ಗಂದಪ್ಪದಡವಿಯೊಳ್ ಮಾರ್ಗಂದಪ್ಪಿ ಬರುತ್ತುಮಿರ್ದೊಡೆ (ವರ್ಧಪು. ೧೦–೩೦). ೨. ಸನ್ಮಾರ್ಗದಿಂದ ದೂರವಾಗು : ಧರ್ಮವನ್ನು ಕೈಬಿಡು : ಮಾರ್ಗಂದಪ್ಪಿದ ಕುರುಡರನಜದ ಬಟ್ಟೆಗುಯ್ವರೆ ಪಿರಿಯರ್ (ಶಾಂತಿಪು. ೪–೧೦೦); ಮಾರ್ಗಂದಪ್ಪಿದರನಾರುಮೇಂ ಮೆಚ್ಚುವರೇ (ಕೃಂಗಾರ. ೧–೩).

[ ಮಾರ್ಗ + ತಪ್ಪು$_1$ ]

**ಮಾರ್ಗಕಾರ** (ನಾ). ಹೊಸಪ್ರಕಾರದ ಬರವಣಿಗೆಯ ದಾರಿಯೊಂದನ್ನು ರಚಿಸಿ ಮುಂದಿನ ಪೀಳಿಗೆಯವರಿಗೆ ಆ ರೀತಿಯ ರಚನೆಗೆ ದಾರಿಮಾಡಿಕೊಡುವ ವ್ಯಕ್ತಿ: ಶ್ರೀಯುವರು ಮಾರ್ಗದರ್ಶಿಗಳು, ಮಾರ್ಗಕಾರರು (ವಿಚಾರಮಂ. ೧೦೭).

[ಸಂ.]

**ಮಾರ್ಗಕ್ರೀ** (ನಾ). [ವೀರಶೈ] ಧಾರ್ಮಿಕವಾಗಿ ಷಟ್‌ಸ್ಥಲಮಾರ್ಗವನ್ನು ಹಿಡಿದು ಬಾಳುವ ಕ್ರಮ : ಮಾರ್ಗಕ್ರೀಯು ಸಂಪಾದಿಸನಾಗಿ ದ್ವೈತಿಯಲ್ಲ ಜ್ಞಾನಾದೇವ ತು ಕೈವಲ್ಯಂ ಎಂಬುದ ಸಂಪಾದಿಸನಾಗಿ ಅದ್ವೈತಿಯಲ್ಲ (ತತ್ವಶ. ೪. ೧೦೯–೨೪೭); ಮಾರ್ಗಕ್ರೀಯಲ್ಲಿ ಸಂಬಂಧವಾದ ಭಕ್ತ ಮಾಹೇಶ್ವರ ಪ್ರಸಾದಿಗಳೆಂಬುದೀಗ ಈ ಧರೆಯವರು ಹೋಗಿ ಎಂಬ ಶಬ್ದಕ್ಕರ್ಥ (ಷೋಡಶಪು. ೨೩೮–೬೦೯ ಟೀಕೆ). [ಮಾರ್ಗ + ಕ್ರೀ (< ಕ್ರಿ)]

**ಮಾರ್ಗಗ** (ನಾ). ದಾರಿಹೋಕ ; ಪಥಿಕ : ಸಾರಸೌರಭಂ ಸೊಗಯಿಪ ಸುಯ್ಯೆಲರ್ಕರಕಮಾರಿಯೊಳಾಗಿಸೆ . . . ಮೃದುಸುಗಂಧಮನೀಯುನಿಭಾಸ್ಯೆ ಸೂಸೆ ಮಾರ್ಗಗನೆರ್ದೆ ತಣ್ಪನಾನೆ ತನು ರೋಮಾಂಚಿಸಿ ಕಂಪಿಸೆ ನೀರನೀಂಟುವಂ (ರಾಜಶೇ. ೨–೨೩). [ಮಾರ್ಗ + ಗ$_2$./ಸಂ. ಮಾರ್ಗಿಕ]

**ಮಾರ್ಗಜಱು** (ಕ್ರಿ). ಪ್ರತಿಯಾಗಿ ಬೆದರಿಸು : ಸಹಪಾಂಸುಖೇಳರೆನಿಸಿದ ಬಹುನೃಪದಾರಕರ ನಡುವೆ ದಾಸೇರಕರಿಂ ಪ್ರಹಿತಮಣಿಕನಕಮಂಡನ ಸಹಿತಂ ಮಾರ್ಗಜಱಿ ನೂಂಕಿ ಪೊಕ್ಕುಪವನವಂ (ಪುಷ್ಪಪು. ೪–೩೨).

[ಮಾರ್ (< ಮಾಱು$_2$) + ಗಜಱು$_1$]

**ಮಾರ್ಗಡೆ** (ನಾ). ಪ್ರತಿನಾಯಕ (?) : ನೊಕ್ಕನಂ ಪೆರ್ಗ್ಗಡೆಯೆಂಬುದೇ ಧುರಕೆ ಮಾರ್ಗ್ಗಡೆಯುಂ ಪತಿಗೇಕಸಾಧನಂ (ಎಕ. VII, ಶಿಕಾಪು. ೧೦–೪೨: 1085); ಪೆಡೆವಣಿಯು ಫಣೆಗಳಂತಿರೆ ಸೊಡರಂ ಪೊತ್ತಿರಡುಕೋಡು ಕಲಿದೇಂ ಮುಂದಂ ನಡೆದುದು ಧವಳವೃಷಂ ಮಾರ್ಗಡೆಯಂತಿರೆ ನಾಲ್ಕುಕಾಲ ಫಣಿಭೀಷಣಮಂ (?) (ಅರ್ಜುನೀ. ೭–೪೩). 'ಪೆರ್ಗಡೆ$_1$' ಪರಾ.

[ಮಾರ್ (< ಮಾಱು$_2$) + ಕಡೆ$_3$]

**ಮಾರ್ಗಣ** (ನಾ) ೧. ಹುಡುಕುವಿಕೆ : ಶೋಧನೆ: ಅನ್ವೇಷಣೆ : "ಅನ್ವೇಕ್ಷಣಂ, ವಿಚಯನಂ, ಮಾರ್ಗಣಾಂ, ಮೃಗಣಾ, ಮೃಗಃ—ಈ ಹುಡುಕಿನೋಡುವಿಕೆ" (ಕರ್ಣಾಟಕ. ೩೬೭). ೨. ಯಾಚನೆ; ಬೇಡುವುದು. ೩. ಭಿಕ್ಷೆ ಬೇಡುವವನು; ಯಾಚಿಸುವವನು : "ಯಾಚಕವರ್ಗಕ್ಕಂ ನಾರಾಚಕ್ಕಂ ಮಾರ್ಗಣಾಂಕಮಂದು" (ಪಂಚತಂ. ೦೨೭–೩೯); ಅರಸನೀ ಪರಿ ಯಜ್ಞಶಾಲಾಕರಣ ಮೊದಲಾದುಚಿತಕೃತ್ಯವ ವಿರಚಿಸುತ್ತಲಿರೆ. . . ಪರಮಸಂಪ್ರೀತಿಯನು ತಾಳ್ದರು ನೆರೆದ ಭೂಪರು ಸಂಯಮಿಗಳುರುತರದ ವಿಪ್ರರು ಸಕಲದಿಗ್ದೇಶಗಳ ಮಾರ್ಗಣರು (ಜೈಮಿನಿ. ೭–೭೭). ೪. ಬಾಣ ; ಶರ : "ಕಂಕಪತ್ರಃ, ಶರಃ, ಮಾರ್ಗಣಃ, ಬಾಣಃ. . . ಶಿಲೀಮುಖಃ, ರೋಪಃ — ಈ ೧೬ ಅಂಬು" (ಕರ್ಣಾಟಕ. ೭೭–೩೦೨); ಉಗ್ರಮಾರ್ಗಣಮಾ ವೀರನಿನಾದ ಸಿಂಹನಿನದಂ ತಮ್ಮಂ ಪಳಂಚಲ್ಕೆ ತತ್ಪಣವೃಂದಂ ಮಾಣದೋಡೆ ಮಾಣದೆ ಚಿಲಾತಾವರ್ತರಳ್ಕುತ್ತೆ. . . ಎಱಗಿದರ್ ಚಕ್ರೇಶಪಾದಾಬ್ಜದೊಳ್ (ಆದಿಪು. ೦೩–೩೭); ದೈತೇಯನುಮೆಚ್ಚಂ ವಾರುಣಮಾಯುವ್ಯಕುಬೇರರುದ್ರಮಾರ್ಗಣದಿಂದಂ (ಜಗನ್ನಾ. ೦೨–೪೦); ಒರ್ಮೊದಲೊಳೆ ದೇವರನಾಡಿದ ಪರುಷತರವಾಕ್ಯಮಾರ್ಗಣಾಂ ಕರ್ಣಕೋಟರಮಂ ನಾಂಟೆ (ರಾಮಾಶ್ವ. ೩೩–೭).

೧. ೪ : ಪ್ರಜಾಪ್ರತಿಪಾಳನಮಂ ಧರ್ಮಪ್ರೀತಿಯಿನ್ನೆದೆ ಮಾಡಿದಂ ಸುಕರತೆಯಿಂದಾ ಪ್ರಭುಮಾರ್ಗಣಕುಶಲಾಭಿಪ್ರಾಯನೆನಿಪ್ಪವಂಗೆ ಶಾಸನಚಿತ್ರಮೆ ದಲ್ (ಚಂದ್ರಪ್ರ. ೨–೬೩). ೫. ಸರಿಯಾದ ರೀತಿಯನ್ನು ಪಾಲಿಸುವವನು : ಕಂಸಂ ತದೀಯ ಬಾಲಹಿಂಸಾಪರನಾಗಿ ಸೂತಿಕಾಸದನಮಂ ಪೊಕ್ಕು. . . ಪಾರ್ಥಿಕರಕೀರ್ತಿಯೆನೆ ಮಾರ್ಗಣರಮಾರ್ಗಮೆನೆ ಬಂಧುಗಳಬಂಧುರಮೆನೆ . . . ಸಮುದ್ರಕ್ಷೋಭದಂತೆ ಘೂರ್ಣಿಸುವ ಜನಕ್ಷೋಭಮಂ ಕೈಕೊಳ್ವದೆ . . . ಕೂಸನಪ್ಪಳಿಸಿ (ಜಗನ್ನಾ. ೨–೩೩ ವ). ೬. ಶತ್ರು : ವೈರಿ. ೭. ನರಕದಲ್ಲಿರುವವನು; ನಾರಕಜೀವಿ. ೮. ಬಿದಿರು : "ಅಸಿಯಿಂ ವೇಟ್ಟುನೊಳು ನಾರಾಚದೊಳು ಕೀಚಕದೊಳಂ ಮಾರ್ಗಣಮೆನಿಕ್ಕುಂ" (ಮಂಗರಾ. ೦೩೦–೩೪): "ಅರಾತಿ ಯಾಚಕಾಜನ ಶರ ಕೀಚಕಾವನಿಜ ನಾರಕರೆಂಬಿವು ಮಾರ್ಗಣಾಹ್ವಯಂ" (ನಾನಾರ. ೭೦). ೯. [ಜೈನ] ಜೀವಿಗಳು ಹಾದುಹೋಗಬೇಕಾದ ಅಥವಾ ಹುಡುಕಿಕೊಂಡು ಕಂಡುಕೊಳ್ಳಬೇಕಾದ ಮಾರ್ಗ ಹಾಗೂ ಈ ಹಂತದಲ್ಲಿನ ಜೀವದ ಅವಸ್ಥಾ ವಿಶೇಷ: ಮಾರ್ಗಚತುಷ್ಟಯಮಂ ಭಿನ್ನವಮಾರ್ಗದೊಳಳವಟ್ಟು ಮಕರಕೇತನನುಮನೋಮಾರ್ಗಣಮೆನಿಸೆ ಸೋಲಿಸೆ ಸಫಿ ಮಾರ್ಗಣಮೆನೆ ಪೊಗಬ್ದುದೊಂದೆ ಕೊರಲಿಂದಾಗಳ್ (ಪುಷ್ಪಪು. ೮–೩೨). [ಸಂ. ಮಾರ್ಗಣ, ಮಾರ್ಗಣಾ]

**ಮಾರ್ಗಣಕ** (ನಾ). ಬೇಡುವವನು : ಯಾಚಕ : "ಅರ್ಥೀ, ಮಾರ್ಗಣಕಃ, ಯಾಚಕಃ, ವನೀಪಕಃ — ಈ ೪ ಬೇಡುವವಂ" (ಕರ್ಣಾಟಕ. ೩೯–೨೦೪).

[ಸಂ.]

**ಮಾರ್ಗಣಾನುರಕ್ತ** (ನಾ). ೧. ಧನುರ್ವಿದ್ಯೆಯಲ್ಲಿ ಆಸಕ್ತಿಯುಳ್ಳವನು : ಆ ನೃಪಂ ಸಪ್ತಾಂಗಸಂಗಿಯಾಗಿಯುಂ ಸಪ್ತಾಂಗಸಂಗಿಯಲ್ತು . . . ಮಾರ್ಗಣಾನುರಕ್ತನಾಗಿಯುಂ ಮಾರ್ಗಣಾನುರಕ್ತನಲ್ತು (ಪುಷ್ಪಪು. ೯–೩೯ ವ). ೨. ಬೇಡುವವನು : ಯಾಚಕ : ಮೇಲಿನ 'ಪುಷ್ಪಪು.' ಪ್ರಯೋಗವನ್ನು ನೋಡಿ.

[ಸಂ.]

**ಮಾರ್ಗಣಾಸ್ಥಾನ** (ನಾ). [ಜೈನ] ಸಂಸಾರಿಜೀವಗಳು ಜ್ಞಾನದ ಮೂಲಕವಾಗಿ ಕಂಡುಕೊಳ್ಳುವ ನೆಲೆ : ದ್ವಾವಿಂಶತಿಪರೀಷಹಂಗಳುಮಂ ಗುಣಸ್ಥಾನಜೀವಸ್ಥಾನಮಾರ್ಗಣಾಸ್ಥಾನಂಗಳುಮಂ . . . ಮಧುರಕಟುಕವಿಪಾಕಮುಮಪ್ಪ ಕರ್ಮ(ಭೇದ)ಫಲಮುಮಂ ಕೇಳ್ದು ತ್ರಿಜ್ಞಾನಧರಂ ಕ್ಷಾಯಿಕಸಮ್ಯಕ್ತ್ವಾದಿ ಗುಣಂಗಳೊಳು ಸಮನ್ವಿತನಾಗಿ ಪೋದಂ (ಶಾಂತಿಪು. ೯೩) ; ಗತಿ ಇಂದ್ರಿಯ ಕಾಯಯೋಗ ವೇದ ಕಷಾಯ ಜ್ಞಾನ ಸಂಯಮ ದರ್ಶನ ಲೇಶ್ಯಾಭವ್ಯ ಸಮ್ಯಕ್ತ್ವ ಸಂಜ್ಞಾಹಾರಕಂಗಳೆಂಬ ಚತುರ್ದಶಮಾರ್ಗಣಾಸ್ಥಾನಂಗಳಂ ಅಱಿಯ ಪಡುವಲ್ಲಿ (ತತ್ತ್ವಸೂ. ೦೭).

[ಸಂ.]

**ಮಾರ್ಗಣೆ$_1$**, ಮಾರ್ಕಣೆ (ನಾ). ಪ್ರತಿಯಾಗಿ ಬಿಡುವ ಬಾಣ : ಎದುರು ಬಾಣ : ಪೇರೊಡಲ ಗೋರರೂಪಿನ ದಾನವಂ . . . ಬಲ್ಗಣೆಗಳಂ ಪೊಡಿಯುಂ ಮಾರ್ಗಣೆಗಳಂ ಕಡಿದುಂ . . . ಮುಟ್ಟಯಿಪ ಪ್ರತಿಭಟರಂ ತಡೆದು (ರಾಮಾಶ್ವ. ೦೦೨–೩). **ಮಾರ್ಕಣೆ**: ಮಾರ್ಗಣೆ, ಮಾರ್ಕೊರಲ್, ಮಾರ್ದನಿ, ಮಾರ್ಪಡೆ (ಶಬ್ದಸಾರ. ೦೨೦ ಪ್ರಯೋ) ; ಮಾರ್ಗಣೆಗಳಂ ಪಣೆಯೊಳಣೆವುತುಂ ಪೊಣೆವುತಂ ಕೂರ್ಗೊಂಬುದುದಿಗಳಿಂದೆ ಇರ್ಕಲದ ದಾನವರನಿಱಿವುತುಂ ಮುಱಿವುತುಂ . . . ವೃಷಭಂ ಪ್ರಹಾರಿಸಿದನು (ಚಂಪು. ೪೪–೦೩). [ಮಾರ್ (< ಮಾಱು$_2$) + ಕಣೆ$_1$]

**ಮಾರ್ಗಣೆ$_2$** (ನಾ). ೧. ಹುಡುಕುವಿಕೆ ; ಶೋಧನೆ : ಮಾರ್ಗಣೆಯ ಮುಖ್ಯ : ಲಭ್ಯದ ಮಾತದಂತಿರಲಿ ಸ್ವರ್ಗವನು ಭುವಿಗಿಳಿಸಬಲ್ಲವನದಾರು? (ಮಂಕುತಿ. ೮೭೯). ೨. ಬೇಡುವಿಕೆ ; ಯಾಚಿಸುವಿಕೆ. ೩. ಬಾಣ : ಅಂಬು : ಎತ್ತಲ್ ರಿಪುಪುರಮಿರ್ದಪುದೆತ್ತಲ್ ಖಳನಿರ್ಪನೆತ್ತ ಮಾರ್ಗಣೆ ಕವಿವತ್ತೆತ್ತ ನಿವಾರಿಪೆನೆಂಬೀ ಚಿತ್ತಂ ಪರಿಗಾದುದೇಂ ಪ್ರತಾಪಿಯೊ ಸಾಲ್ವಂ

(ಜಗ. ೧೬-೯೭) : ಕೀನ ಜೀವನು ಮಾರ್ಗಣೆಯೊಳಿರುವ ಹೊರಸಿದನು (ಶಬ್ದಾ. ೧೧-೫೪): ಇಂತವನುಸುರುತಿರಲು, ಕುವರನ ಮನಕಂತು ಮಾರ್ಗಣೆಯ ದಾಳಿಯಲಿ ಮುಂತುಗೆಡುತಿರಲಿರೆ (ಶರ್ಮ. ೩-೨೨) ೪. = ಮಾರ್ಗಣ ೬: ಉಪಶಮ ಸಮ್ಯಕ್ತ್ವಮುಮಂ ತೊಟ್ಟುಪಶಾಂತ ಕಷಾಯಂಬರಂ ವಿಶೇಷದಿಂ ಮಾರ್ಗಣೆಗಳೊಳಜೀವಂ ಕೊಳುಗೆ (ತಸೂವ್ಯ. ೯); ಯಾವ ಯಾವ ಧರ್ಮವಿಶೇಷದಿಂದ ಜೀವದ ಅನ್ವೇಷಣವನ್ನು ಮಾಡಲಾಗುವುದೋ, ಆ ಧರ್ಮವಿಶೇಷಗಳಿಗೆ ಮಾರ್ಗಣಾಗಳೆಂದು ಹೇಳುವರು. ಇಂಥ ಮಾರ್ಗಣಾಗಳೂ ಹದಿನಾಲ್ಕು ಇರುತ್ತವೆ (ಜೈನಶ. ೩೦೩). 'ಚತುರ್ದಶಮಾರ್ಗಣೆ' ನೋಡಿ. [ ಸಂ. ಮಾರ್ಗಣ ]

**ಮಾರ್ಗದರ್ಶಕ** (ನಾ). ೧. ದಾರಿಯನ್ನು ತೋರಿಸುವಂಥದು. ೨. ಸರಿಯಾದ ಮಾರ್ಗದಲ್ಲಿ ನಡೆಯುವಂತೆ ಪ್ರೇರಿಸುವಂಥದು; ಮೇಲ್ಪಂಕ್ತಿಯಾಗಿರುವಂಥದು : ಅವರ 'ಇಂಗ್ಲಿಷ್ ಗೀತಗಳು' ಭಾಷಾಂತರಗಳಾದರೂ ಹೊಸ ಕನ್ನಡಭಾವಗೀತಗಳಿಗೆ ಮಾರ್ಗದರ್ಶಕ ಆಗಿವೆ (ಶಿಕಾಮು. ೦೦೭): ಶ್ರೀ ಕೃಷ್ಣಶಾಸ್ತ್ರಿಗಳು ತಮ್ಮ ಈ ಕೃತಿಯ ಮೂಲಕ ಮಾರ್ಗದರ್ಶಕವಾದ ವಿಮರ್ಶಕೃತಿಯೊಂದನ್ನು ನೀಡಿದ್ದಾರೆ (ಸಂಕಮ. x, ಮುನ್ನುಡಿ). ೩. ದಾರಿಯನ್ನು ತೋರಿಸುವವನು : ಕಾಶರಾಜನೆ ಮಾರ್ಗದರ್ಶಕನಾದರೆ ಹೋಗುವೆ ಮಸಣದ ಮನೆಗೆ (ಶಿಂಕಾಪ. ೨೦೦-೮೯): ೪. ಕಾರ್ಯಸಾಧನೆಗೆ ಉಪಾಯವನ್ನು ಸೂಚಿಸುವವನು; ಸರಿಯಾದ ದಾರಿಯಲ್ಲಿ ನಡೆಯಲು ಸಲಹೆಯನ್ನು ನೀಡುವವನು : ಮಂಟೂರ ಮಹಾದೇವಯ್ಯನವರು . . . ಅವನ ವ್ಯಕ್ತಿವಿಕಾಸಕ್ಕೆ ಮಾರ್ಗದರ್ಶಕರಾಗಬೇಕೆಂದು ಆಗಾಗ ಹೇಳುತ್ತಿದ್ದರು (ರಂಗರೂ. ೬೪). [ಸಂ.]

**ಮಾರ್ಗದರ್ಶನ** (ನಾ). ದಾರಿಯನ್ನು ತೋರಿಸುವುದು: ಕಾರ್ಯಸಾಧನೆಗೆ ಉಪಾಯವನ್ನು ಸೂಚಿಸುವಿಕೆ : ವಸಂತನಿಂದ ಅವಳು ಪಾಠಕ್ಕೆ ಮಾರ್ಗದರ್ಶನವನ್ನು ಪಡೆದುಕೊಳ್ಳುತ್ತಿದ್ದಳು (ದೂರದ. ೨೬): ಯಾರಿಂದಲೂ ಅವಳಿಗೆ ಯೋಗ್ಯ ಮಾರ್ಗದರ್ಶನ ಸಿಗಲಿಲ್ಲ (ರಂಗರೂ. ೩೩). [ ಸಂ. ]

**ಮಾರ್ಗದರ್ಶಿ** (ನಾ). ೧. = ಮಾರ್ಗದರ್ಶಕ ೧. ೨. = ಮಾರ್ಗದರ್ಶಕ ೨ : 'ಕವಿರಾಜಮಾರ್ಗ'ವು . . . ಪ್ರೌಢವಾದ ಗದ್ಯಪದ್ಯಕಾವ್ಯಕ್ಕೆ ಮಾರ್ಗದರ್ಶಿಯಾಗಿರುವಂತೆ ದೇಸಿಮಾರ್ಗಗಳ ಪೂರ್ವಪರಂಪರೆಗೆ ಸಾಕ್ಷಿಯೂ ಆಗಿರುತ್ತದೆ (ಕಾಆಕ. ೨೩); ಹೊಸ ಉಪಾಧ್ಯಾಯರಿಗೆ ಟಿಪ್ಪಣಿ ಮಾರ್ಗದರ್ಶಿಯಾಗಿರುತ್ತದೆ (ಶಿಕ್ಷರ. ೨೩೦). ೩. = ಮಾರ್ಗದರ್ಶಕ ೩. ೪. = ಮಾರ್ಗದರ್ಶಕ ೪ : ಅವಳ ಅಭ್ಯಾಸಕ್ಕೆ ಯೋಗ್ಯ ಮಾರ್ಗದರ್ಶಿಯ ಅಗತ್ಯವಿದೆ (ಅದೇ). ೫. ಪ್ರೇಕ್ಷಣೀಯಸ್ಥಳಗಳಲ್ಲಿ ನೋಡಬೇಕಾದುವುಗಳನ್ನು ತೋರಿಸಿ ಅವುಗಳ ಬಗೆಗೆ ವಿವರಣೆಯನ್ನು ನೀಡುವವನು : ಮಾರ್ಗದರ್ಶಿಯು ಕೂಡಿ ನೋಡುತ್ತ ಹೋದೆ: ನೋಡಿದಂತೆಲ್ಲ ನಾ ಬೆಪ್ಪು ಬೆರಗಾದೆ (ಕೊರಗಿ. ೨-೨೨): ಎಲ್ಲಾ ಬಿಟ್ಟು ಮಾರ್ಗದರ್ಶಿಯಾಕಾದೆ ಅಂತ ನೀವು ಕೇಳಬಹುದು (ಶಾಗರ. ೭). [ಸಂ. ಮಾರ್ಗದರ್ಶಿನ್]

**ಮಾರ್ಗಪ್ರಭಾವನೆ** (ನಾ). [ಜೈನ] ತೀರ್ಥಂಕರತ್ವವನ್ನು ಸಾಧಿಸಿಕೊಡುವ ಷೋಡಶಭಾವನೆಗಳಲ್ಲಿ ಒಂದು : ದರ್ಶನವಿಶುದ್ಧಿ. ವಿನಯಸಂಪನ್ನತೆ. ಶೀಲವ್ರತೇಶ್ವನತಿಚಾರ. ಅಭೀಕ್ಷ್ಣಜ್ಞಾನೋಪಯೋಗ. ಸಂವೇಗ. ಶಕ್ತಿತಸ್ತ್ಯಾಗ. ಶಕ್ತಿತಸ್ತಪ. ಸಾಧುಸಮಾಧಿ. ವೈಯಾವೃತ್ಯಕರಣ. ಅರ್ಹದ್ಭಕ್ತಿ. ಆಚಾರ್ಯಭಕ್ತಿ. ಬಹುಶ್ರುತಭಕ್ತಿ. ಪ್ರವಚನಭಕ್ತಿ. ಆವಶ್ಯಕಾಪರಿಹಾಣಿ. ಮಾರ್ಗಪ್ರಭಾವನೆ ಮತ್ತು ಪ್ರವಚನವತ್ಸಲತ್ವ ಎಂಬ ತೀರ್ಥಂಕರತ್ವನಾಮಕರ್ಮದ ಹದಿನಾರು ಭಾವನೆಗಳಲ್ಲಿ ಒಂದು: "ಜ್ಞಾನ, ದಾನ, ಜಿನಪೂಜಾವಿಧಾನ. ತಪೋನುಷ್ಠಾನ ಮುಂತಾದುವುಗಳಿಂದ ಜಿನಧರ್ಮವನ್ನು ಪ್ರಕಾಶನಗೊಳಿಸುವುದು" (ಅದಿಪು. ೬೦ ಕೃಷ್ಣಶಾಸ್ತ್ರಿಕ ಕನ್ನಡ) : ಪರಪಕ್ಷದೂಷಣಪುರಸ್ಸರಮನೇಕೋಪಪತ್ತಿಗಳಿಂ ಸ್ವಪಕ್ಷಸ್ಥಾಪನೆಗೆಯ್ದು ಸನ್ಮಾರ್ಗಪ್ರಕಾಶನದಿಂ ಮಾರ್ಗಪ್ರಭಾವನೆಯಂ ಮಾಡಿ ಸಭಾಸದರಿಂ ಲಬ್ಧಪ್ರಶಂಸನಾಗಿ (ಅದಿಪು.೨-೨೨ ವ);ಸದ್ಧರ್ಮಪ್ರಸಿದ್ಧಪ್ರಭಾವಕಮಪ್ಪ ಮಾರ್ಗಪ್ರಭಾವನೆಯುಂ ಸದ್ಧರ್ಮಸ್ನೇಹಲಕ್ಷಣೋಪೇತಮುಮಪ್ಪ ದರ್ಶನವತ್ಸಲತ್ವಮುಮೆಂಬೀ ಷೋಡಶಭಾವನೆಗಳಂ . . . ಭಾವಿಸುತ್ತುಮಿರ್ದು (ಶಂಪ್ರಶ್ರೀ. ೧೦-೨೨ ವ). [ ಸಂ. ಮಾರ್ಗಪ್ರಭಾವನಾ ]

**ಮಾರ್ಗರಾಗ** (ನಾ). [ಸಂಗೀತ] ದೇಶೀರಾಗಗಳಿಗಿಂತ ಭಿನ್ನವಾಗಿದ್ದು, ಗಂಧರ್ವಲೋಕದಲ್ಲಿಯೇ ಪ್ರಯೋಗಗೊಳ್ಳುತ್ತಿದ್ದುವೆನ್ನಲಾದ ಆರು ಬಗೆಯ ರಾಗಗಳ ಸಮೂಹ ಮತ್ತು ಅವುಗಳಲ್ಲಿ ಪ್ರತಿಯೊಂದು ರಾಗ : ಗ್ರಾಮರಾಗದಿಂದ ಪ್ರಾರಂಭವಾಗಿ ಅಂತರಭಾಷೆಯಲ್ಲಿ ಮುಗಿಯುವ ಆರುಬಗೆಯ ರಾಗಗಳು ಮಾರ್ಗರಾಗಗಳೆನಿಸಿಕೊಳ್ಳುತ್ತವೆ (ಶಕಃಪ್ರ. ೩೩). [ಸಂ.]

**ಮಾರ್ಗರುಚಿ** (ನಾ). [ಜೈನ] ಸಮ್ಯಕ್‍ದರ್ಶನವುಳ್ಳ ಹತ್ತುಬಗೆಯ ದರ್ಶನಾರ್ಯರಲ್ಲಿ ಒಂದು ವರ್ಗಕ್ಕೆ ಸೇರಿದ ವ್ಯಕ್ತಿ ; ಕೇಳಿದ ಮಾತ್ರದಿಂದಲೇ ಮೋಕ್ಷಮಾರ್ಗದಲ್ಲಿ ಆಸಕ್ತಿಯುಂಟಾಗಿ ರತ್ನತ್ರಯ ಮಾರ್ಗದಲ್ಲಿ ನಡೆಯುವವನು : ಆಜ್ಞಾರುಚಿ. ಮಾರ್ಗರುಚಿ. ಉಪದೇಶರುಚಿ, ಸೂತ್ರರುಚಿ, ಬೀಜರುಚಿ, ಸಂಕ್ಷೇಪರುಚಿ. ವಿಸ್ತಾರರುಚಿ. ಅರ್ಥರುಚಿ. ಅವಗಾಢರುಚಿ ಮತ್ತು ಪರಮಾವಗಾಢರುಚಿ ಎಂದು ಹತ್ತು ಬಗೆಯಾದ ದರ್ಶನಾರ್ಯರುಂಟು : ನಿಸ್ಸಂಗಮೋಕ್ಷಮಾರ್ಗಶ್ರವಣಮಾತ್ರಜನಿತರುಚಿಗಳ್ ಮಾರ್ಗರುಚಿಗಳೆಂಬರ್ (ತತ್ತ್ವಪ್ರ. ೧೭೩). [ಸಂ.]

**ಮಾರ್ಗವಿದ್** (ನಾ). ಶಬ್ದಪ್ರಯೋಗದ ರೀತಿಯನ್ನು ತಿಳಿದವನು : ಶಾಬ್ದಿಕ : ಲಾಕ್ಷಣಿಕ : ವರ್ಗದ್ವಿತೀಯವರ್ಣಂ ವರ್ಗಚತುರ್ಥಾಕ್ಷರಂ ಮಹಾಪ್ರಾಣಮುಮಂ ಮಾರ್ಗವಿದರ್ ಸಂಸ್ಕೃತದೊಳಂ ಭೋಗರೆವನುಕೃತಿಯೊಳಂ ಪ್ರಯೋಗಿಸುತಿರ್ಪರ್ (ಶಬ್ದಮ. ೦೪). [ಸಂ. ಮಾರ್ಗವಿದ್]

**ಮಾರ್ಗಶಿರ** (ನಾ). ಹನ್ನೆರಡು ಚಾಂದ್ರಮಾನಮಾಸಗಳಲ್ಲಿ ಒಂಬತ್ತನೆಯದು : ಮಾರ್ಗಶೀರ್ಷ : ತನ್ಮಹಾದೇವಿಯು ಪರಿಪೂರ್ಣಪ್ರಸವಸಮಯಂ ಮಾರ್ಗಶಿರಬಹುಳದಶಮಿಯಾಗೆ (ಧನ್ಯಶ್ರೀ. ೧೧-೦ ವ) : ಆ ಮಾಸವೇ ಚೈತ್ರ . . . ಮಾರ್ಗಶಿರ ಪುಷ್ಯ ಮಾಘ ಫಾಲ್ಗುಣವೆಂದು ಹನ್ನೆರಡು ತೆಱನಾಗಿಹುದು (ಶಿವಶ. ೩೨೦). [ಸಂ. ಮಾರ್ಗಶಿರ, ಮಾರ್ಗಶಿರಸ್]

**ಮಾರ್ಗಶೀರ್ಷ** (ನಾ). = ಮಾರ್ಗಶಿರ : "ಮಾರ್ಗಶೀರ್ಷ. ಸಹಃ, ಮಾರ್ಗಃ, ಆಗ್ರಹಾಯಣಿಕಃ, —೪ ಮಾರ್ಗಶೀರ್ಷಮಾಸದ ಹೆಸರುಗಳು" (ಸಿದ್ಧಾಂ. ೩೯) : ಹೌದು ಇನ್ನೂ ನೆನಪಿದೆ. ಮಾರ್ಗಶೀರ್ಷಮಾಸದ ಚಳಿಗಾಲ ಅದು (ಪ್ರಕ. ೭). [ಸಂ.]

**ಮಾರ್ಗಶೈವ** (ನಾ). ಶೈವದ ಪ್ರಭೇದಗಳಲ್ಲಿ ಒಂದು : ಶುದ್ಧಶೈವವ ಹೊದ್ದದೆ ಪೂರ್ವಶೈವವನಾಚರಿಸದೆ ಮಾರ್ಗಶೈವವ ಮನ್ನಣೆಯ ಮಾಡದೆ ವೀರಶೈವವನಾಧರಿಸದೆ ಆದಿಶೈವವನನುಕರಿಸದೆ ಭೇದಿಸಬಾರದ ಲಿಂಗ ಕರದಲ್ಲಿದ್ದು . . . ಮನುಮೆನ್ನದ ಲಿಂಗೈಕ್ಯಂಗೆ ಸ್ವಾನುಭಾವದಿಂದ ನಮೋ ನಮೋ ಎಂಬೆ (ಷಟ್ಸ್ಥವ. ೦೨೬-೪೯೦) ; ಶುದ್ಧಮಿಶ್ರಸಂಕೀರ್ಣಪೂರ್ವಮಾರ್ಗಶೈವಂಗಳಲ್ಲಿ ಕರ್ಮಭಕ್ತಿಯಲ್ಲದೆ ನಿರ್ಮಳಸದ್ಭಕ್ತಿ ಎಲ್ಲಿಯದೋ (ಅಡಪ. ಮು. ೪೩-೭೭). 'ಪೂರ್ವಶೈವ' ನೋಡಿ. [ಸಂ.]

**ಮಾರ್ಗಶ್ರಮ** (ನಾ). ಪ್ರಯಾಣದಿಂದ ಉಂಟಾಗುವ ದಣಿವು. — ಆಯಾಸ : ತದುಕ್ತಿಸುಧಾಸಾರವಾರಿಧಾರೆಯಿಂದಂ ಕೊಸರ್ದ ರಾಜಪುತ್ರರ

ಮಾರ್ಗಶ್ರಮಾತಪಾಕ್ರಾಂತಮಪ್ಪ ಮನಮೆಂಬ ಲತೆಯನನೇಕಕುಶಲಾಲಾಪ ಪ್ರಶ್ನೆಯಿಂದಂ ಕುಸುಮಿತಮುಮಂ ಸ್ವಹಸ್ತತಾಂಬೂಲದಾನದಿಂದಂ ಫಲಿತಮುಮಂ ಮಾಡಿ (ಆದಿಪು. ೦೩-೩೬ ವ); ಗತಣತೇಣದೆಜಿಮುಗಳೊಳಗೆ ಕಾಲಿಡುತ ಸೋದಿಸಿ ಮುಂದೆ ಹೆಜ್ಜೆಯನಿಡುತ ಪೈಸರವೋಗಿ ಮಾರ್ಗಶ್ರಮಕೆ ಬೆಮರುವನ (ಶಬ್ದಾಗ. ೩-೧೩). [ಸಂ.]

**ಮಾರ್ಗಸುಂಕ** (ನಾ). ಹಾದಿಯ ಮೇಲೆ ಹಾಕುವ ಒಂದು ಬಗೆಯ ತೆರಿಗೆ : ಇದರಲ್ಲಿ ಗದ್ದೆ, ಬೆದ್ದಲು, ಕಾಡ್ತಾರಂಬ, ಮಾರ್ಗಸುಂಕ, ಸ್ಥಳ ಸುಂಕ . . . ಉಪ್ಪಿನ ಮೋಳೆ, ಆಚಾರಗಾಣಿಕೆ ಇವೇ ಮೊದಲಾದವುಗಳು ಸೇರಿದ್ದವು (ಕನ್ನಶಾ. ೩ ಉಪೋದ್ಘಾತ). [ಮಾರ್ಗ + ಸುಂಕ$_1$]

**ಮಾರ್ಗಹಿಂದೋಲ** (ನಾ). [ಸಂಗೀತ] ಒಂದು ರಾಗದ ಹೆಸರು : ಮಾರ್ಗಹಿಂದೋಲರಾಗವು (೫) ಆರೋಹದಲ್ಲಿ ರಿ_ಯನ್ನು ಬಿಟ್ಟಿದೆ (ಕಸುಶ್ರ. ೦೩೭). [ಸಂ.]

**ಮಾರ್ಗಿಡಿ, ಮಾರ್ಕಿಡಿ** (ನಾ). ಪ್ರತಿಯಾಗಿ ಸೂಸುವ ಕಿಡಿ : ನಾರಿಯಿಂದುಗಿದು ಬಿಡಲಾಕ್ಷಣಂ ಬಯದ ಮದನಾರಿಯುರಿಗಣ್ಣಿಂತೆ ಬರ್ಪುದಂ ಪೇಳ್ವ ಸರನಾರಿನ್ನುಮದಜಿ ಮಾರ್ಗಿಡಿಗಳಿಂ ಸಕಲಲೋಕಾಳಿ ಸಂವರ್ತಮಾಯ್ತು (ಕಂಘ. ೦೩-೩೦). **ಮಾರ್ಕಿಡಿ** : 'ಮಾರ್ಕಿಡಿವಿಡು' ಪರಾ. [ಮಾರ್ (< ಮಾಱು$_2$) + ಕಿಡಿ]

**ಮಾರ್ಜ** (ನಾ). ೧. ಸ್ವಚ್ಛಮಾಡುವುದು ; ಶುದ್ಧಮಾಡುವುದು. ೨. ಬಟ್ಟೆಗಳನ್ನು ಸ್ವಚ್ಛಮಾಡುವವನು ; ಅಗಸ. ೩. ವಿಷ್ಣು. [ಸಂ.]

**ಮಾರ್ಜಡಿ** (ಕ್ರಿ). ಪ್ರತಿಯಾಗಿ ಹೊಡೆ. — ಬಡಿ : ಬಾಂಪ ನಿಮ್ಮ ತರ್ಜನದಿನೀ ಜನದೊಂದುಲಿ ಮಾಣ್ಗೆ ಮಾಣಿಪಾಪಾರೆಮಗಿಲ್ಲ ಪಾರಕರೆ ನುತ್ತುಮೆ ಮಾರ್ಜಡಿಪಂದದಿಂ ಪ್ರತೀಹಾರಿಯರಂ ಪೊಡಬ್ಬು (ಪುಷ್ಪಪು. ೬-೩೩). [ಮಾರ್ (< ಮಾಱು$_2$) + ಜಡಿ$_2$]

**ಮಾರ್ಜನ** (ನಾ). ೧. ತೊಳೆಯುವಿಕೆ: 'ಮುಖಮಾರ್ಜನ' ಪರಾ. ೨. (ಮಂತ್ರಿಸಿದ ನೀರಿನಿಂದ ಮಾಡುವ) ಪ್ರೋಕ್ಷಣೆ : ಕೈಯಲ್ಲಿ ಅಭಿಮಂತ್ರಿತವಾದ ಉದಕವುಳ್ಳ ಕಲಶವನ್ನೂ ದರ್ಭಗೂರ್ಚಗಳನ್ನೂ ತೆಗೆದುಕೊಂಡು ಶಾಂತಿಮಂತ್ರವನ್ನು ಪಠಿಸುತ್ತಾ ದೇವರಾಜನಿಗೆ ಆ ಕಲಶೋದಕದಿಂದ ಮಾರ್ಜನವನ್ನು ಮಾಡಿದನು (ಮಹಾಭಾ. II. ೦೯೦೦). ೩. ಚೊಕ್ಕಟಗೊಳಿಸುವುದು ; ಶುದ್ಧಗೊಳಿಸುವುದು. ೪. ಅಳಿಸುವುದು ; ಒರೆಸುವುದು. ೫. ಉಜ್ಜುವುದು : ತೀಡುವುದು. ೬. ಒಂದು ಬಗೆಯ ಮರ : ರಕ್ತಲೋಧ್ರ : "ಗಾಲವಃ, ಶಾಬರಃ, ಲೋಧ್ರಃ, ತಿರೀಟಃ, ತಿಲ್ವಃ, ಮಾರ್ಜನಃ — ೬ ಲೋಧ್ರಗಿಡದ ಹೆಸರು" (ಸಿದ್ಧಾಂತಿ. ೦೦೯). [ಸಂ.]

**ಮಾರ್ಜನಿ** (ನಾ). ೧. ಸ್ವಚ್ಛಮಾಡುವುದು ; ಶುದ್ಧಮಾಡುವುದು. ೨. ಸ್ವಚ್ಛಮಾಡುವಂಥದು ; ಕಸಬರಿಗೆ ; ಪೊರಕೆ : 'ಸಂಮಾರ್ಜನಿ' ಪರಾ. ೩. ಬಟ್ಟೆಗಳನ್ನು ಸ್ವಚ್ಛಗೊಳಿಸುವವಳು ; ಅಗಸಗಿತ್ತಿ. [ಸಂ. ಮಾರ್ಜನೀ]

**ಮಾರ್ಜನೆ** (ನಾ). ೧. = ಮಾರ್ಜನ ೧ : "ಮಾರ್ಷ್ಟಿಃ, ಮಾರ್ಜನಾ, ಮೃಜಾ — ೩ ಶ್ರೀಗಂಧ ಕುಂಕುಮಕೇಸರಿ ಮುಂತಾದ ದ್ರವ್ಯಗಳನ್ನು ಮೈಗೆ ಹಾಕಿ ಉಜ್ಜಿ, ತೊಳಕೊಂಡು ಕೊಳೇ ಹೋಗಲಾಡಿಸುವುದಕ್ಕೆ ಹೆಸರುಗಳು" (ಸಿದ್ಧಾಂತಿ. ೨೦೩). 'ಮುಖಮಾರ್ಜನೆ' ಪರಾ. ೨. ಮೃದಂಗದಿಂದ ಹೊರಡುವ ಧ್ವನಿ : ನನ್ನ ಮೃದಂಗದ ಮಾರ್ಜನೆಯೆನೆ ಥೋಂ ತುಂಬುರು ವಿಧಿಯೊಡನೆನುವನು ಹರ ಓಂ (ಗಕೀಶ. ೦೩-೧೧೦). [ಸಂ. ಮಾರ್ಜನಾ]

**ಮಾರ್ಜರ** (ನಾ). ಬೆಕ್ಕು ; ಮಾರ್ಜಾಲ : ಸೂಕರ ಶುನಕ ಮಾರ್ಜರ ರಿಣಸಭ ಕಾಕ ಘೂಕಾದಿ ಗರ್ಗರರವದ ನೀಕರಿಸುವ ದೀನದನಿಯಿಂದ ಮೊಜಿಯಿಡಲೋಕರಿಸುಗು ದೆಸೆರವದ (ಪ್ರೇತ. ೯-೯೭). [ < ಸಂ. ಮಾರ್ಜಾರ ]

**ಮಾರ್ಜಾರ** (ನಾ). ೧. = ಮಾರ್ಜರ : "ಓತುಃ, ಬಿಡಾಳಃ, ಮಾರ್ಜಾರಃ, ವೃಷದಂಶಃ — ಈ ೪ ಬೆಕ್ಕು" (ಕಬಾಯು. ೧೦-೩೩) ; ಕದಳೀವನದೊಳಿರ್ದೊಟ್ಟೊಟ್ಟಿಗಂ ಮಾರ್ಜಾರನಾಗಿ ಪುಟ್ಟಿರ್ದು ಕಪೋತಂಗಳಂ ಕಾಣಲೊಡಂ ಒಡಿದು ಕೊಲ್ಲುದುಂ (ಕಾಪುಂಪು. ೬೯) ; ಶರಭಂಗಳ್ ಕೇಸರಿಕೇಸರಂಗಳಂ ಕ್ರೂರಘೋರಮಾರ್ಜಾರಂಗಳ್ ತರುಣಾಖುಶಾಬಶತ ಕಂಧರಮಂ ನಖಮುಖದಿ ನುಚ್ಚಿಸಿ ತುಚ್ಚಿಸಿದುವೊಲವಿಂ (ಪುಷ್ಪಪು. ೦೯-೦೯). ೨. ಪುನುಗುಬೆಕ್ಕು. 'ಮಾರ್ಜಾಲ' ಪರಾ. [ಸಂ.]

**ಮಾರ್ಜಾರಿ** (ನಾ). ೧. ಹೆಣ್ಣು ಬೆಕ್ಕು ; ಮಾರ್ಜಾಲಿ. ೨. ಪುನುಗಿನ ಬೆಕ್ಕು. ೩. ಒಂದು ಬಗೆಯ ಸುಗಂಧದ್ರವ್ಯ ; ಪುನುಗು : "ಚೇಳಿಕೆಯೆನಲ್ ಪುಣುಗು ಮಾರ್ಜಾರಿ[ಶಾಕಾಂ. ಲಿ]ಯೆನೆ ಜವಾದಿಯೆನಿಕ್ಕು" (ಕಬಂಗಾ. ೯೯-೨೨). [ಸಂ. ಮಾರ್ಜಾರೀ]

**ಮಾರ್ಜಾಲ** (ನಾ). ೧. = ಮಾರ್ಜರ : "ಮಾರ್ಜಾಲಂ ಬಿಡಾಲ ಮಾಖುದ್ವಿಷಂ ವೃಷದಂಶಮೋತುವೆನೆ ಬೆಕ್ಕೆನಿಕ್ಕುಂ" (ಕಬಂಗಾ. ೯೯-೦೦) ; ವನಮಹಿಷಕ ಮಾರ್ಜಾಲಂ ವನಾಶ್ವಮಹಿಷಂ ಸೂಕರಮನಿತುಂ ಮುನಿಸಂ ಪರಿಹರಿಸಿರ್ದುವು ಮುನಿನಾಥಾಂತಿಕದೊಳುದಿತಶಾಂತರಸಂಗಳ್ (ಅಜಿತ. ೬-೭) ; ಶುನಿ ಶೂಕರ ಮಾರ್ಜಾಲ ಹೆಗ್ಗಣ ಉರಗ ಮೊದಲಾದ ಮಲ ಮಾಂಸಭಕ್ಷಕಪ್ರಾಣಿಗಳು ಮೋಸದಿಂದ ಪಾದ ಪಾಣಿ ಗುದ ಗುಹ್ಯ ದೇಹವ ಕಚ್ಚಿದಡೆ ಸ್ಥೂಲವೆನಿಸುವುದಯ್ಯಾ (ತನ್ನಶ. ೪. ೩೨-೦೦೯) ; ಮಾರ್ಜಾಲ ಕಾಟವನ್ನು ತಡೆಯಲಾರೆವು ಕೃಷ್ಣ (ಪುರಂದ. ೩-೦೨೯ ಅನುಪಲ್ಲವಿ). ೨. ಪುನುಗುಬೆಕ್ಕು. 'ಮಾರ್ಜಾರ' ಪರಾ.

**ಮಾರ್ಜಾಲಸಂನ್ಯಾಸ** = (ಆಲಂ) ಕಪಟಸಂನ್ಯಾಸ : ಮಾರ್ಜಾಲ ಸಂನ್ಯಾಸ ಮಾಡಬೇಡ, ನಿನ್ನ ಸೋಗು ನನಗೆ ಅರ್ಥವಾಗುತ್ತದೆ (ರೂಢಿ). [ಸಂ.]

**ಮಾರ್ಜಾಲಕಿಶೋರನ್ಯಾಯ** (ನಾ). 'ಬೆಕ್ಕಿನ ಮರಿಯು ತನ್ನ ಸರ್ವಸ್ವವನ್ನೂ ತಾಯಿ ಬೆಕ್ಕಿಗೆ ಒಪ್ಪಿಸಿದರೆ, ಅದು ತನ್ನ ಮರಿಗೆ ನೋವಾಗದಂತೆ ಎಚ್ಚರಿಕೆಯಿಂದ ಬಾಯಲ್ಲಿ ಕಚ್ಚಿಕೊಂಡು ಹೋಗುತ್ತದೆ' ಎಂಬ ಭಾವನೆಯುಳ್ಳ ದೃಷ್ಟಾಂತ : ಜೀವಾತ್ಮನ ಸ್ವಪ್ರಯತ್ನವಿಲ್ಲದೆಯೇ ಪರಮಾತ್ಮನು ಅನುಗ್ರಹಿಸುತ್ತಾನೆ ಎಂಬುದಕ್ಕೆ ಇದು ದೃಷ್ಟಾಂತ : ದೃಷ್ಟಾಂತಗಳ ಮೂಲಕ ಜೀವಾತ್ಮ ಪರಮಾತ್ಮರ ಸಂಬಂಧವನ್ನು ವಿವರಿಸುವಾಗ ಮರ್ಕಟ – ಕಿಶೋರನ್ಯಾಯ, ಮಾರ್ಜಾಲ–ಕಿಶೋರನ್ಯಾಯ ಎಂದು ಹೇಳುವುದುಂಟು (ಶಾಕಿದ. ೨೬೪). 'ಮರ್ಕಟಕಿಶೋರನ್ಯಾಯ' ಪರಾ. [ಸಂ.]

**ಮಾರ್ಜಾಲಿ** (ನಾ). = ಮಾರ್ಜಾರಿ ೩ : "ಮಾರ್ಜಾಲಿ[ಶಾಕಾಂ. ರಿ]ಯೆನೆ ಜವಾದಿಯೆನಿಕ್ಕು" (ಕಬಂಗಾ. ೯೯-೨೨). [ಸಂ. ಮಾರ್ಜಾಲೀ]

**ಮಾರ್ಜಿಕೆ** (ನಾ). ಕಡೆದ ಮೊಸರು ; ಮಜ್ಜಿಗೆ : "ರಸಾಲಾ, ಮಾರ್ಜಿಕಾ — ೨ ಮೊಸರು ಕೈಗಡದು ಮಾಡಿದ ಮಜ್ಜಿಗೆ" (ಸಿದ್ಧಾಂತಿ. ೨೩೬). [ಸಂ. ಮಾರ್ಜಿಕಾ]

**ಮಾರ್ಜಿತ** (ಗು). ೧. ಶುದ್ಧಗೊಳಿಸಿದ ; ಸ್ವಚ್ಛಗೊಳಿಸಿದ. ೨. ಗುಡಿಸಿದ ; ಉಡುಗಿದ. [ಸಂ.]

**ಮಾರ್ಣಾಳ** (ಗು). ೧. ತಾವರೆಯ ದಂಟಿಗೆ ಸಂಬಂಧಿಸಿದ. (ನಾ). ೨. ತಾವರೆಯ ದಂಟು : ಇದು ಮತ್ಪ್ರಾಣೇಶನನ್ನೊಳ್ ನೆರೆದ ಪುಳಿನ ವಿಮಾಯಿರ್ದುದಾ ಕಾಂತೆ ಮೆಲ್ಲೊಲ್ಲದ ಮಾರ್ಣಾಳಾರ್ಧಮಿಾ ತೋರ್ಪುದು (ಕಂಪ್ರಪು. ೯-೦೦). ೩. ತಾವರೆ ; ಕಮಲ : ಪವಚಂಚನ್ನಮದ್ಯೋತ

ಸುಪ್ರಕೃತಪದಂ ಮಾರ್ಜಾರಶ್ರಾವಂ ಬೆಳ್ಪಿನ ಪಳದೇಸೀಸಮೂಹಂ ಬೆಳಲಂಭೋವಮಯೋಧಾರಾಳಿ ತಳ್ತೊಪ್ಪುವಿನಸೆಸೆದಿರುಳೊಳ್ ಜಾರನಾರೀ ಕದಂಬಂ (ಜಗ. ೯-೨೯). [ಸಂ. ಮಾರ್ಜಾಲ]

**ಮಾರ್ತಂಡ₁** (ನಾ). ಎದುರು ಪಕ್ಷ; ಪ್ರತಿಪಕ್ಷ: ಮಾರ್ತ್ರಣ್ಣ[ಂ] ರಣಮುಖದೊಳ್ ಮಾರ್ತ್ರಣ್ಣವನಾಜಿಯು ಗೆಲ್ವ ಭುಜವಿಕ್ರಮಮಾ ಮಾರ್ತ್ರಣ್ಣಂ ದನುಜಪ್ರಜಮಾರ್ತ್ರಣ್ಣಮನಾಜಿಯು ಗೆಲ್ವ ತೆಜಸಂ ಪೋಲ್ವಂ (ಸೌರಾ. XI-i. ೭೯-೬೫ ; ಶಾ. 1045). [ಮಾರ್ (<ಮಾಱು₂) + ತಂಡ]

**ಮಾರ್ತಂಡ₂** (ನಾ). ೧. ನೇಸರು : ಸೂರ್ಯ : "ಆದಿತ್ಯಃ . . . ಹರಿಃ, ಮಾರ್ತಂಡಃ, ತಪನಃ . . . ತ್ರಯೀತನುಃ —ಈ ೪೭ ಆದಿತ್ಯನ ಪೆಸರ್" (ಅಭಿಧಾ. ೭-೩೫) ; ಕಿವಿಯಂ ಮಾರ್ತಂಡನಪ್ಪಾತ್ಮಜಮಂಡಳಿ ಶಂಕಾಕಾಳಿತಂ ಪೆಡಂಮುಗುಳ್ . . . ಘೂರ್ಣಿಸಿತ್ತು ವಿಜಯಪ್ರಸ್ಥಾನ ಭೇರೀರವಂ (ಕಂಠೀರವ. ೦೨-೦೯); ಅಂದು ಮಾರ್ತಂಡನಪರಾಬ್ಧಿಗಿಳಿಯಲ್ಕಿಂತೆ ನಡೆತಂದು ದೇವಾಲಯದ ಮುಂದೆ ನಲಿನಲಿದು . . . ಮಯ್ಯಿಕ್ಕುತಂ (ನಂವರ. ೦೭-೧೪೭) ; ಮಾರ್ತಂಡಂ ಪಶ್ಚಿಮಾಭಿಮುಖನಾಗೆ ಸೀತಾಲಕ್ಷ್ಮಣ ರುತ್ತರಾಭಿಮುಖರಾಗಿ ಪೂಜಿಸುತ್ತಿರ್ (ರಾಮಾಶ್ವ. ೩೨-೪). ೨. ಎಕ್ಕದ ಗಿಡ; ಅರ್ಕವೃಕ್ಷ. ೩. ಹಂದಿ; ಸೂಕರ. [ಸಂ.]

**ಮಾರ್ತಂಡನಂದನ** (ನಾ). ೧. ಸೂರ್ಯನ ಮಗ. ೨. ಶನಿ : ಅನಘಾದಿ ತ್ರಯದಲ್ಲಿ ನಿಂದ ಕುಜನಿಂ ಚೋರಂ ಪ್ರಚಂಡಂ . . . ಮಾರ್ತಂಡ ನಂದನನಿಂದಂ ಬಹುಘೋಷಕಂ ಬಹುಗುಣಾರಂಭಾಢ್ಯನಕ್ಕುಂ ನರಂ (ಜಾತಕ. ೦೪-೭). ೩. ಯಮ. ೪. ಸುಗ್ರೀವ. ೫. ಕರ್ಣ. [ಸಂ.]

**ಮಾರ್ತಂಡಸುತ** (ನಾ). ೧. ಸೂರ್ಯನ ಮಗ. ೨. ಶನಿ : ದಿನನಾಥಾಲಯಲಗ್ನದೊಳ್ ಕುಜ ಬುಧ ತ್ರಿಂಶಾಂತಮಾದಂದು ಕೋಶನದ ಪ್ರದ್ವಿಪನಲ್ಲಿ ಕೂಡೆ ಪುರುಷಾಚಾರಾಢ್ಯ . . . ಮಾರ್ತಂಡಸುತಾಂಶದೊಳ್ ಪಸಿದೊಳಿರ್ದಾತಾಕೆ ಕೆಟ್ಟೋಡಂಗುಂ (ಜಾತಕ. ೨೨-೭). ೩. ಯಮ. ೪. ಸುಗ್ರೀವ. ೫. ಕರ್ಣ. [ಸಂ.]

**ಮಾರ್ತರ್** (ಕ್ರಿ). ಎದುರಾಗಿ ಬರು : ಮಾರ್ತರ್ಪ[ಪಾಠಾಂ. ತರ್ಪ] ತೆರೆಗಳಿಂ ತರಲಾತ್ತಿರ್ದು ತನ್ನದಿಗೆ ಸುರನದೀವಿಭ್ರಮಮಂ (ಕಬ್ಬಿಗ. ೭೭ ಕೃಷ್ಣ). [ಮಾರ್ (< ಮಾಱು₂) + ತರ್]

**ಮಾರ್ತಲೆ** (ನಾ). ೧. ಮತ್ತೊಂದು ತಲೆ : ಬೇರೊಂದು ಶಿರಸ್ಸು : ಮಾರ್ಕೊರಲ್, ಮಾರ್ತಲೆ ಮಾರ್ಪಡೆ (ಶಬ್ದಮ. ೨೯ ವೃತ್ತಿ) ; ನೆರೆದು ಬೆಟ್ಟೊಲು ಕಟ್ಟಿದಿರ ತಟ್ಟಿನ ರಾವುತರೊಳ್ . . . ಕೂರಸಿಯಿಂ ತಲೆ ಪಾಱಿ ಬೀಳ್ವಿನಂ ಸರಿಪೆಸನಾಗಿ ಪೊಯ್ಯೆ ತಲೆ ಮಾರ್ತಲೆಯೊಳ್ ನಿಮಿರ್ದಟ್ಟೆಯಿಟ್ಟೆ ಯೊಳ್ ಹರಿ ಹರಿಯೊಳ್ ಪಳಂಚೆ ಪೊಸತಾದುದು ಸಂಗರರಂಗಭೂಮಿ ಯೊಳ್ (೧೦೪-೭ ೭೦). ೨. ಪ್ರತಿಸ್ಪರ್ಧಿ : ಎದುರಾಳಿ : ಕರ್ತಾರಂ ಗೆಜಗುಪ್ಪುವತಿವರ್ತಿತ್ವಂ ಪೊಲ್ದದೆಂದು ಪುರುಷೂರಂಗೆ ಮುಂ ಮಾರ್ತಲೆ ಯಾದ ಚೀಳಾತಾಪರ್ತರನಂದೂಜೆ ಕಲ್ಪಿಪಂತಾಯ್ತು ನಗಂ (ಪಂಪಭಾ. ೦೦-೩೨) ; ಕೆಟ್ಟಲೆ ಬರಿದಾದೊಡಮೇಂ ಮಾರ್ತಲೆಯು ದಿನಾಧಿಪಂಗೆ (ಕಂಠೀರವ. ೧೦-೨೩೩). ೩. ಪ್ರತಿಪಕ್ಷ : ಎದುರುಬಲ : ಅಂತು ಕೈ ಕೊಂಡು ಪೊತ್ತಿತ್ತು ಪೊಯ್ದು ಕೂರ್ಪಾರ್ಗಳ ಬೆಳಗಿನ ಕೊಬ್ಬಿನ ಕೆಸಕದೊಳ್ಳು ಸಾಱಿ ಮುತ್ತಿದ ಮಾರ್ತಲೆಯೆಂಬ ಕೆಟ್ಟಲೆ ಕೂಡೆ ಕೆಟ್ಟಲೆ ಕಟುಂದಲೆಯಾಗೆ (ಆದಿಪು. ೧೦-೯೯ ವ). [ಮಾರ್ (< ಮಾಱು₂) + ತಲೆ₁]

**ಮಾರ್ತಳೆ** (ಕ್ರಿ). ಪ್ರತಿಫಲಿಸು : ಪ್ರತಿಬಿಂಬಿಸು : ಜಲಜಮಿತ್ರನ ಬಿಂಬವನು ಮಾರ್ತಳೆವ ಸರಸಿಯೊ . . . ವಿನಲುಮೇನಾ ಲಲನೆ ಮೆಱೆದಳು ದಿವ್ಯಗರ್ಭದ ಬಹಳತೇಜದಲಿ (ತಾಗ. ೯-೩-೭).
[ಮಾರ್ (< ಮಾಱು₂) + ತಳೆ₁]

**ಮಾರ್ತಟಿಪ್** (ಕ್ರಿ). ಎದುರಿಗೆ ಪಟ್ಟವಾಗಿ ಕಾಣಿಸಿಕೊಳ್ಳು : ಬಿರುದಂ ಪೇಳಯುದೊಳ್ ತೊಡರ್ಚಿ ಬಿರುದಂಕಂ ಮೆಚ್ಚುತ್ತಂ ಸಾರ್ಚಿ ಮುಚ್ಚಿರ ದಂಕಂ ಕಳದಲ್ಲಿ ನೋಡು ಬಯಲೊಳ್ ಬೇಡೆಂದು ಕೈವಾಣೆಯಿಟ್ಟರಸಂಕಂ ಪಡೆಗುಟ್ಟೆ ಮಾಸಮಳದಂಕಂ ಬಾಸೆಯಂ ಸಾರ್ಚಿ ಚಿತ್ರರದಿಂದಿರ್ದುದು ಮೊತ್ತದಿಂದೆ ಭೃಗುವಿದ್ಯಾಮೂರ್ತಿ ಮಾರ್ತಟಿಪ್ಪವೋಲ್ (ಆದಿಪು. ೨-೨೯).
[ಮಾರ್ (< ಮಾಱು₂) + ತಟಿ₁]

**ಮಾರ್ತಾಂಡ** (ನಾ). ನೇಸರು ; ಸೂರ್ಯ : ರಿಪುಕುಮುದಮಾರ್ತಾಂಡ . . . ಪರಿಶ್ಚಂದ್ರರಾಯನೇಱಿದನು ಮಣಿಮಯರಥವನು (ಹರಿಶ್ಚ. ೩-೦೨); ಕಂಡರೇ ಹಸ್ತಿನಪುರವ ಮಾರ್ತಾಂಡನಿಲ್ಲದ ದಿನದ ತೆಱದೊಳಗಂಡಲೆಯುತಿದೆ (ತಪ್ಪುಸ್ತೀ. ೨-೦೪) ; ನಿಬಿಡನೀರವಕಾನನಾಂತರಂ ನಡುಹಗಲ ಮಾರ್ತಾಂಡ ನುರವಣೆಯನಡಗಿಸುತೆ ತಂಪುಬನಗತ್ತಲೆಯ ಭೀಷ್ಮನಮ್ಮೋಹನದಿ ಮೆರೆ ದತ್ತು ಚಿತ್ರಗತಮಾದಂತೆವೋಲ್ ನಿಶ್ಚಲಂ (ಚಿತ್ರಾಂಗ. ೩-೩೭). [ಸಂ.]

**ಮಾರ್ತಾಂಡತನಯ** (ನಾ). ೧. ಸೂರ್ಯನ ಮಗ. ೨. ಶನಿ. ೩. ಯಮ. ೪. ಸುಗ್ರೀವ. ೫. ಕರ್ಣ : ಗಂಡುಗಲಿ ಕೋದಂಡರುದ್ರನ ಕಂಡು ವಿರಥನ ಮಾಡಿದನು ಮಾರ್ತಾಂಡತನಯನ ಗೆಲಿದು ರಣದಲಿ ನೊಂದನಾ ಭೀಮ (ಕುಮಾರವ್ಯಾ. ೦೩ ಸೂಚಕ). [ಸಂ.]

**ಮಾರ್ತಾಂಡಪಥ** (ನಾ). ಸೂರ್ಯನು ಸಂಚರಿಸುವ ಮಾರ್ಗ ; ಆಕಾಶ : ಕಂಡರಿವರಿಬ್ಬರ ರಣಾಗಮಮಂಡಿಸಿದ ಮಾರ್ಗಾಂತರದ ಮಾರ್ತಾಂಡಪಥದಲಿ ಮೋಹವಳಿಯೆ ಸುರಾಸುರವ್ರಾತ ಕಂಡು ಕಳುಹಿದರುಭಯಗುರುಗಳು ಗುಂಡಿಗೆಯ ಸುಧೆಯೌಷಧಿಗಳನು (ತೊರವೆ. ೭-೪೪-೨೦). [ಸಂ.]

**ಮಾರ್ತಾಂಡೋದಯ** (ನಾ). ಹೊತ್ತು ಹುಟ್ಟುವುದು : ಸೂರ್ಯೋದಯ : ಅಂತು ಮಾರ್ತಾಂಡೋದಯಮಪ್ಪುದುಂ ಭವ್ಯವರಪುಂಡರೀಕ ಮಾರ್ತಂಡಂ . . . ಚೈತ್ಯಾಲಯಕ್ಕೆ ಮಂದಿರ್ದರ್ (ಸುಕುಮಾ. ೦೨ ೦೭ ವ). [ಸಂ.]

**ಮಾರ್ತಾಂಡೋಪಲ** (ನಾ). ಸೂರ್ಯಕಾಂತಶಿಲೆ : ನೇಸರ್ಗಲ್ಲು : "ನೇಸರ್ಗಲ್ಮಾರ್ತಾಂಡೋಪಲಾಖ್ಯಂ" (ಕರ್ಣಾಟ. ೬೩). [ಸಂ.]

**ಮಾರ್ತಾಗು** (ಕ್ರಿ). ಎದುರಿಸು : ಪ್ರತಿಭಟಿಸು : ಬಾಳ್ಗಳುಡಿಗಳ್ ಜಱಿಬ್ಬು ಮಾರ್ತಾಗಿ ಶೋಣಿತಧಾರಾಳಿಗಳುರ್ಚೆ ಪೆರ್ಚಿ ಸಿಡಿಲ್ ತೇಂತಲ್ ವಿಮಾನಂಗಳಳ್ಕಿ ತಗುಳ್ವಾಗಳೆ ಮತ್ತ ಮತ್ತ ತಳರ್ದರ್ ದೇವರ್ ನಭೋಭಾಗದೊಳ್ (ಕಂಠೀರವ. ೦೨-೭) ; ಒಂದೊಂದಂ ಮಾರ್ತಾಗಿದು ಪೊಂದೊಂದಂ ಮೊನೆಯು ಕಚ್ಚಿನಿಂದುರುಳಿದುಪೊಂದೊಂದಂ ಕಡಿದಿಕ್ಕಿದು ಪೊಂದೊಂದಂ ಪಿಳ್ಕಿಂದೆ ಸೀಳ್ದು ಮಂಬಂಬರದೊಳ್ (ಜಗ. ೦೩-೯೪) ; ಉರವಣಿಸಲುರವಣಿಸಿದರು ಮಾರ್ತಾಗೆ ತಾಗಿದರು . . . ಸಮರಭೂಪಾಲ ಮಾಗ್ರದಲಿ (ಕುಮಾರವ್ಯಾ. ೪-೯೭).
[ಮಾರ್ (< ಮಾಱು₂) + ತಾಗು₁ (< ತಾಂಕು₁)]

**ಮಾರ್ತಿರುವು** (ನಾ). ಮತ್ತೊಂದು ಬಿಲ್ಲಿನ ಹಗ್ಗ.— ಮೌರ್ವಿ : ಪಾಸದ ನೇಣ್ಗಳಂ ಪೊಸೆವ ಜಾಲಮನೊಪ್ಪಿರೆ . . . ಬಿಲ್ಗೆಸುವ ಬಾಣಮಂ ತಿರುಪಿ ತಿರ್ದುವ ಮಾರ್ತಿರುಮಂ ತೊಡರ್ಚಿ ನೋಟಪ್ಪಾ ಸಹಜಕ್ರಿಯಾವನ ವನೇಚರರಿಂ ಬಗೆಗೊಂಡುದಾ ವನಂ (ಜಗ. ೦೭-೦೭) ; ಗುರುವೆಚ್ಚು ಕಡಿವನು ಗಾಂಡಿವದ ತಿರುವ ನವತಳಿಸಿ ಮಾರ್ತಿರುವಿನಲಿ ಸಂಕಲಿಸಿಕೊಂಡ ರ್ಜುನನು ದ್ರೋಣನ ನವನಿಶಿತಬಾಣೌಘದಲಿ ಹೂಳಿದನು ನಿಮಿಷದಲಿ (ಕುಮಾರವ್ಯಾ. ೯-೯೭). [ಮಾರ್ (< ಮಾಱು₂) + ತಿರುವು₂]

**ಮಾರ್ತೊಳಗು** (ಕ್ರಿ). ಪ್ರತಿಯಾಗಿ ಹೊಳೆ,— ಪ್ರಕಾಶಿಸು : ಪಳುಕಿನ ಭಿತ್ತಿಗಳೊಳ್ ಮಾರ್ತೊಳಗುವ ನಿಜತನುಗಳಿಂದೆ ತನ್ನಂದದ ಕೋಮಳೆಯು ರ್ವರಸೀಶನ ಪವನಳಿನಮನಾರಾಧಿಪಂತೆ ಸತಿ ಸೊಗಯಿಸಿದಳ್ (ಕಾದಂಬ. ೭೭೯) ; ಪಳುಕಿನ ಕಟ್ಟುಮದೊಳ್ ಮಾರ್ತೊಳಗುವ ಹರಿನೀಲಮಣಿಯ ಸೂಸಕದ ನೆಟಿಲ್ಗಳನಸಿತಾಹಿಗಳೆಂದೊಸೆದೆಳಸುವ ನೀಹದ ನವಿಲ್ಗಳೊಪ್ಪುಗು

ಮವಜಿಸೋಳ್ (ಶಬ. ೯-೦೨೬) ; ಎಳನೀರ ಮಡಿಗಳೊಳ್ ಮಾರ್ತೋಳಗುವ ಪಾವುರಿಯರಾನನಂಗಳುಮಲರ್ಗಣ್ಣಳುಮೆಸೆವುವಲರ್ದ ಕಮಳಂಗಳ ಮಿಸ್ಸಳ ಬಳಗಮೆಂಬ ಬಗೆ ಮಿಗುವಿನೆಗಂ (ಕೃಷ್ಣಕೃ. ೨-೦೭).

[ಮಾರ್ (< ಮಾಱು₂) + ತೋಳಗು₁]

**ಮಾರ್ದಂಗಿಕ** (ನಾ). ಮೃದಂಗವನ್ನು ನುಡಿಸುವವನು ; ಮದ್ದಳೆಯನ್ನು ಬಾರಿಸುವವನು : "ಆ ಮಾರ್ದಂಗಿಕಂ ಮದ್ದಳೆಕಂ" (ಕಲಿಕಂ. ೨೬೩) ; ವೈಣಿಕ ಪಾಣಿವಿಕ ವಾಂಶಿಕ ಮಾರ್ದಂಗಿಕ ಗಾಯಕ ನರ್ತಕಾದಿ ಕುತಪಪ್ರತತಿಯುಮಂ . . . ಬರಿಸಿ ಕುಳ್ಳಿರಿಸಿ (ಶಂಕ್ರಕೃ. ೬-೮೩೮) ; ಒಡಲೆಂಬೀ ಜಪಸಂ . . . ಮಹಾತ್ಮನಸಹಾ ತನ್ನೊಂದು ಸಾಮರ್ಥ್ಯದಿಂ . . . ನುಡಿಯಿಪಂ ಮಾರ್ದಂಗಿಕಂಬೊಲ್ (ಕಣ್ಣ. ೩-೯). [ಸಂ.]

**ಮಾರ್ದನಿ**, ಮಾರುದನಿ, ಮಾಱುದನಿ (ನಾ). ಮರುದನಿ ; ಪ್ರತಿಧ್ವನಿ: ಅಂಬರಚರಮಿಥುನರತಾಡಂಬರದೊಡನೊಗೆದ ಸಗುದ ಮಾರ್ದನಿ ಕಿವಿಗಂ ತುಂಬಿ ಮನೋಜಾಗಮಗುರುವೆಂಬುದನೊಡನೆಂಬ ಶಿಷ್ಯನಂ ಪೋಲ್ತಿರ್ದಂ (ಶಾಂತಿಪು. ೨-೧೦೨); ಕರೆಕರೆದು ಗಹ್ವರದ ಮಾರ್ದನಿಗಳಂ ಕೇಳ್ದು . . . ಕಣ್ತೆಱೆದು ನೋಡಿ ಕಾಣದೆ ಮಱುಗುತ (ಸಿದ್ಧರಾ. ೨-೬೩) ; ಕೊಪ್ಪಿನಲಿ ಸಿಂಜಿನಿಯು ಸಿಕ್ಕಿದನಳ್ಳಿಱಿದು ಮಾರ್ದನಿ ದಿಗಂತರವೊದಱಲೊದಱಿಸಿದನು ಮಹಾಧನುವ (ಕಣ್ಣ. ೦೩-೩). **ಮಾರುದನಿ** : ಕಡೆನುಡಿಯ ನುಡಿಯುತಿದೆ ಮಾರುದನಿ ಮೊಳಗುತಿದೆ, ಆಲಿಸಾಲಿಸದನು ! (ಶಿಖರ. ೩೪-೦). 'ಮಾರುದನಿಗೊಡು' ಪರಾ. **ಮಾಱುದನಿ** : ಚೀಱು ವಂಗನೆದುಬ್ಬರದೊಳೊದವೆ ಸಿಡಿಲಳುವ ಮಾಱುದನಿಯವಳ ಕಣ್ಣೊಳು ಕಱೆಯ ಮಳೆ ಶೋಕ ವರ್ಷಋತುವೆನಲೆಸೆದುದು (ಹಾಡಿಕಂ. ೬-೨೭).
☞ 'ಮಾರುದನಿ', 'ಮಾಱುವನಿ' ಎಂಬ ಶಬ್ದಗಳು ಛಂದಸ್ಸಿಗಾಗಿ ಮಾಡಿಕೊಂಡಿರುವ ರೂಪಗಳು. [ಮಾರ್ ( < ಮಾಱು₂ ) + ದನಿ₁]

**ಮಾರ್ದನಿಗುಡು** 'ಮಾರ್ದನಿಗೊಡು' ನೋ.

**ಮಾರ್ದನಿಗೊಡು**, ಮಾರುದನಿಗೊಡು, ಮಾರ್ದನಿಗುಡು (ಕ್ರಿ). ೧. ಪ್ರತಿಧ್ವನಿತವಾಗು ; ಪ್ರತಿಧ್ವನಿಸು : ಅವರ ಶಂಖಧ್ವನಿಯೂ ಸಿಂಹನಾದವೂ ಭೇರೀನಿನಾದವೂ ಭೂಮ್ಯಾಕಾಶಗಳನ್ನು ತುಂಬಿ ಮಾರ್ದನಿಗೊಡಲಾರಂಭಿಸಿದುವು (ಕಥಾ. ೨೬೩). ೨. ಪ್ರತಿಧ್ವನಿಯುಂಟಾಗುವಂತೆ ಮಾಡು : ಬೇಡವಡೆ ಕೂಡೆ ಪೊಕ್ಕೊಕ್ಕಲಿಕ್ಕಿ ಮಹಾವಿಂಧ್ಯಂ ಮಾರ್ದನಿಗೊಡಲಾರ್ದು ಬೊಬ್ಬಿಱಿದಬ್ಬರಿಸಿ . . . ಪುಳಿಂದರೆಲ್ಲವಂ ಮರ್ಬಿನೊಳಡಂಗಿಸಿ (ಶಂಕರ. ೦೮-೩೪). **ಮಾರುದನಿಗೊಡು** : ೩. (ಅಲಂ) ಪ್ರತಿಕ್ರಿಯೆಯನ್ನು ತೋರು ; ಸ್ಪಂದಿಸು : ದೇವಾಂಬೆಯ ಪವಿತ್ರಪ್ರೇಮಕ್ಕೆ ಅಪ್ಪಾಜಿಯ ಹೃದಯವು ಮಾರುದನಿಗೊಟ್ಟಿದ್ದಿತು (ಜಲೀಲ. ೨೦). **ಮಾರ್ದನಿಗುಡು** : ೨. ಮೃದಂಗಧ್ವನಿ [ಧೀರವಾಗಿ] ಬೆಟ್ಟುಗಳ್ ಮಾರ್ದನಿಗುಡೆ ಗಜಜ್ ಗರ್ಜಿಪ ಕಂಠೀರವರವಂಗಳೊಳಂ . . . ವಿಂಧ್ಯಾಟವಿಯೆಲ್ಲಂ ಪ್ರಚಲಿತಮಾದಂತಾಗೆ (ಅಜಿತಪು. ೦೩೦). [ಮಾರ್ದನಿ + ಕೊಡು₁]

**ಮಾರ್ದನಿಗೊಳ್** (ಕ್ರಿ). = ಮಾರ್ದನಿಗೊಡು ೨ : ಹಾಹಾರವಮೆತ್ತಂ ಮಾರ್ಬಲನೊಳ್ ಮಾರ್ದನಿಗೊಂಡುದು (ರಾಜಶೇ. ೦೨೯-೯).

[ಮಾರ್ದನಿ + ಕೊಳ್₁]

**ಮಾರ್ದನಿದೋಱು**, ಮಾರುದನಿತೋರು (ಕ್ರಿ). = ಮಾರ್ದನಿಗೊಡು ೧ : ಇಳೆಯು ತಳೆದಿರ್ದನೆ ಥೀಳಡೆ ಗಗನ ಮಾರ್ದನಿದೋಱೆ . . . ಸುದರ್ಶನಪ್ರತಿಮಾನವನು ಮತ್ತೆ ಱಿಗಿದನು (ಕೋರಣ. ೬-೩೨-೩೭). **ಮಾರುದನಿತೋರು** : ರಾಷ್ಟ್ರತರ ಕೇಕಗಳು ಕಾಡಿನಲಿ ತುಂಬುತ್ತ ಮಾರುದನಿತೋರುತ್ತ ಖಗಕುಲವ ಹಾರಿಸಲು (ಶಲಿಕೋ. ೭೭-೦೨).

[ಮಾರ್ದನಿ + ತೋಱು]

**ಮಾರ್ದನಿಯಿಡು**, ಮಾರ್ದನಿವಿಡು (ಕ್ರಿ). ೧. = ಮಾರ್ದನಿಗೊಡು ೧ : ಸಂತಸದೆ ಬಾಹಾಸ್ಫಾಲನಂಗೆಯ್ದು ದಿಗ್ವಲಯಂ ಮಾರ್ದನಿಯಿಟ್ಟು ಪೋರ್ಪ ಗಜಱಿದಂ ಚಾಳುಕ್ಯಕಂಠೀರವಂ (ಗದಾಯು. ೬-೯೭). ೨. = ಮಾರ್ದನಿಗೊಡು ೨ : ಅನುಪಮಪ್ರಾಸಾದಕೂಟಕುಹರಂಗಳೊಳ್ ಮಾರ್ದನಿಯಿಡುವ ಪಡುಮಜರ ಕಳಕಳಂಗಳೊಳ್ . . . ಮನುಜೇಂದ್ರಂ ಪೊಱಮಟ್ಟು (ಆದಿಪು. ೭೭): ಒಗೆದಬಳ್ಳಾಂಘ್ರಿನೂಪುರದ ಝಂಕೃತಿ ಮಾರ್ದನಿಯಿಟ್ಟು ನಾಡೆಯುಂ ಪೊಗೆ ಕುಜಕೋಟರಂಗಳಂ (ಶಬ್ದಮ. ೩-೯೬). **ಮಾರ್ದನಿವಿಡು** : ೧. ಮಾರ್ದವದೆ ಸಖಿಯರೊಡನೆ ಜನಾರ್ದನನಾಡುತ್ತುಮಿರ್ದ ಪದದೊಳ್ ದೆಸೆಗಳ್ ಮಾರ್ದನಿವಿಡಲದ್ಭುತ ವೃಷನರ್ದನವುಣ್ಮಿದುದದೊಂದು ವಜ್ರಾಶನಿಪೋಲ್ (ಜಗ. ೩-೩೪). ೨. ಪಲವುಂ ತೆಱದ ಪಱೆಗಳೆಸೆವುದ್ದಾಮರಭಸದಿಂದು ಮಾರ್ದನಿವಿಟ್ಟು ಮುಂದುಗಣ್ಮನಮನುಂಟುಮಾಡಿದಂತೆ ಶಾಂತೀಶ್ವರಂಗೆ (ಶಾಂತಿಪು. ೦೦-೩೦ ಪ).

[ಮಾರ್ದನಿ + ಇಡು₁]

**ಮಾರ್ದನಿವಿಡು** 'ಮಾರ್ದನಿಯಿಡು' ನೋ.

**ಮಾರ್ದನಿಸು** (ಕ್ರಿ). = ಮಾರ್ದನಿಗೊಡು ೧ : ಅವರ ಸಪ್ಪಳ ಮಾರ್ದನಿಸುತ್ತಿತ್ತು ಸುಂದರಿಯ ಕಿವಿಯಲ್ಲಿ (ಶಕ್ಷಾ. ೦೦೬) ; ಮಲೆಮಾನಮಾವುದು ತಾನೆ ಪೊಳಲಿಟ್ಟು ಮಾರ್ದನಿಸದಾ ನಿನ್ನ ಹಾಯಿಲುಗಳ (ಕುರುಜಾ. ೦೦೨).

[ಮಾರ್ದನಿ + – ಇಸು₃]

**ಮಾರ್ದವ** (ನಾ). ೧. ಮೃದುವಾದುದು ; ಕೋಮಲವಾದುದು : ವಿವಿಧಭಕ್ಷ್ಯಂಗಳನಮಳಮಾರ್ದವರಸರಸಾನ್ನಂಗಳಂ ತದ್ಯುವತಿಯುತ್ಸವದಿಂದ ಮಾಡುತ್ತಿರ್ಪ ಸಮಯದಲಿ (ಬಸವಪು. ೨೪-೩೩). ೨. ಕೋಮಲತೆ: ಸುಕುಮಾರತೆ : ಮಾರ್ದವ ಸುವಾಸನೆಗಳೊಂದೊಂದನೊಡಗೊಂಡು ಆರ್ದ್ರತಾಮಾಧುರ್ಯರಸಪುಷ್ಟಿಯನು ಪಡೆಯೆ ಆ ಹಣ್ಣು ಬೆಲೆಹಣ್ಣು (ಕೋಟಗಿರಿ. ೬೭-೦೭). ೩. ಮೃದುಸ್ವಭಾವ : ಮಾರ್ದವದೆ ಸಖಿಯರೊಡನೆ ಜನಾರ್ದನನಾಡುತ್ತುಮಿರ್ದ ಪದದೊಳ್ ದೆಸೆಗಳ್ ಮಾರ್ದನಿವಿಡಲದ್ಭುತವೃಷನರ್ದನವುಣ್ಮಿದುದದೊಂದು ವಜ್ರಾಶನಿವೊಲ್ (ಜಗ. ೩-೩೪): ಮಾರ್ದವಮುಂ ದ್ವಿಜರೊಳ್ . . . ಮನ್ನಣೆಯುಂ ಪೊರ್ದಗೆಯುವರೊಳ್ ಪುದುಗಿಸಿ ಬೇರ್ದಳೆಯಿಸಿಪನಿಂಪುಗೊಳಿಸಿ ರಾಜನಿಲಿಂಪಂ (ಜಗ ೩-೦೩೦). ೪. [ಜೈನ] ದಶಧರ್ಮಗಳಲ್ಲಿ ಒಂದು ; "ಜ್ಞಾನ. ಆದರಸತ್ಕಾರ. ಕುಲ, ಜಾತಿ, ಬಲ, ಐಶ್ವರ್ಯ. ತಪ ಮತ್ತು ಶರೀರಸೌಂದರ್ಯ ಇವುಗಳ ಅಭಿಮಾನವಿಲ್ಲದೆ ಇರುವುದು" (ಆದಿಪು. ಕೈಪಿಡಿ ಶಬ್ದಕೋಶ ೯೨೬): ಉತ್ತಮಕ್ಷಮಾಮಾರ್ದವಾರ್ಜವ . . . ಬ್ರಹ್ಮಚರ್ಯಪರ್ಯಾಯಪರ್ಯಾಪ್ತ ದಶಧರ್ಮಂಗಳಂ ಕೈಕೊಂಡು (ಆದಿಪು. ೬-೩೦ ವ); ಕ್ಷಮೆ ಮೆಯ್ ಮಾರ್ದವ ಮೋಜೆ ಸಾಜಮಳವಟ್ಟಿರ್ದಾರ್ಜವಂ . . . ನಯಂ ಬ್ರಹ್ಮಚರ್ಯ[ಮೆ] ಮಾನೋನ್ನತಿ ವರ್ಧಮಾನಮುನಿಗಕ್ಕುಂ ಪೆಱರ್ಗಕ್ಕುಮೇ (ಸುಕುಮಾ. ೦-೨೭) : ಕುಲ ರೂಪು ಜಾತಿ ಸುಬುದ್ಧಿ ತಪಸ್ಸು ಶಾಸ್ತ್ರ ಸಲೆ ಶೀಲ ಪ್ರಭೃತಿ ಗರ್ವದೊಳು ನೆಲಸದೆ ಗರ್ವಮಾತ್ರವ ಮಾಡದಿಪ್ಪುದು ಚೆಲುವೆ[ನೆ ಮಾ]ರ್ದವ ಧರ್ಮ (ಭ್ರಾಜಿ. ೦೦-೭೭೯). [ಸಂ.]

**ಮಾರ್ದವತೆ** (ನಾ). ಮೃದುತ್ವ; ಸುಕುಮಾರತೆ : ಸರಳ್ಯಾಹದ ಮಾರ್ದವತೆ ಪಯಸ್ಸಾದಂತೆ ಕಡಮೆಯಾಗುತ್ತದೆ (ಶಿಲ್ಪ. ೨೦೩): ಅಣಕಿಸುವ ಧ್ವನಿಯು ಹಾಡಿನ ತುಂಬೆಲ್ಲ ತುಂಬಿದ್ದರೂ ಅದು ವೀರಶೈವಸಂಸ್ಕಾರವನ್ನು ಹೊಂದಿ ಬಂದಿರುವುದರಿಂದ ಮಾರ್ದವತೆಯು ತುಂಬಿ ತುಳುಕಾಡುವುದು (ಶಿಷ್ಟಾ. ೩೬). [ಸಂ. ಮಾರ್ದವತಾ]

**ಮಾರ್ದಳಿಕ** (ನಾ). ಮೃದಂಗ ಬಾರಿಸುವವನು ; ಮದ್ದಳೆ ನುಡಿಸುವವನು : ಯೌವನಮಧುಮದಮುದಿತ ಮಾರ್ದಳಿಕ[ಪಾಠಾಂ. ರ್ದಂಗಿಕ] ವಾಂಶಿಕಪ್ರಹಸ್ಯಮಾನವಾದ್ಯ ಮೃದಂಗವಂಶನಿನದಲಯಮೃಚ್ಛಂದಸುಂದರ

ನಟಿತ್ಸುಂದರೀಸಂದೋಹಮುಮುಪಭೋಕ್ತೃಪೂರ್ವಾರಮಣೀಯಮುಮಪ್ಪಾಗೆ (ಆದಿಪು. ೬-೪೬ ವ). 'ಮಾರ್ದಂಗಿಕ' ಪರಾ. [ಸಂ. ಮಾರ್ದಂಗಿಕ]

**ಮಾರ್ದಿಟ್ಟಿ** (ನಾ). ಪ್ರತಿಯಾಗಿ ನೋಡುವ ನೋಟ, – ದೃಷ್ಟಿ : ಮಾರ್ದಿಟ್ಟಿಯನ್ನಾಚಿಸು ನಿಟ್ಟಿಸುತ್ತಿದ್ದು ಕಣ್ಣುಮುಳ್ದು . . . ಮೊಗ ಕತ್ತು ಗಳನ್ನೊರಸಿಕೊಂಡು ಧಿಗ್ಗನೆ ಮೆಯ್ಮೆದ್ದು (ಕುಂತ್ರಿ. ೬೯–೨೫).

[ಮಾರ್ (< ಮಾಱು₂) + ದಿಟ್ಟಿ]

**ಮಾರ್ದೊಡೆ** (ಕ್ರಿ). ಮತ್ತೆ ಉಜ್ಜು, – ತಿಕ್ಕು : ಪೂರ್ಣೇಂದುಬಿಂಬಗೆಜಿಗೆ ನೊಳಂ ಶೀರ್ಣಸ್ಯಂದಾಗ್ರದಿಂ ಮಾರ್ದೊಡೆಯುತ್ತುಂ . . . ಬಂದುದು ಮದವಿದ ಳಿತ್ತಿಂಗಳಾಕ್ಷಂ ಮಹೋಕ್ಷಂ (ನೇಮಿ. ೫–೯೭).

[ಮಾರ್ (< ಮಾಱು₂) + ತೊಡೆ₁]

**ಮಾರ್ನಡೆ** (ಕ್ರಿ). ಎದುರಾಗಿ ನಡೆ : ಸಯದ ಬಿಜ್ಜಲದ ವರ್ಣನೆಯ ಸತಿಯರೊಳು ಮಾರ್ನಡೆದಳರಸಿ ಸೌಖ್ಯಾರ್ಣವದ ತೆರೆಗಳಂತೆ (ಭಾಷಾಂ. ೯–೨೦) ; ಯುದ್ಧಸನ್ನದ್ಧರಾಗಿ ಗಜಾಶ್ವೋರುವರೂಥವೀರಭಟಸೈನ್ಯಂ ಗೂಡಿ ಕುಂತಾಸಿಚಕ್ರಗದಾದ್ಯಾಯುಧಮಾಂತು ಮಾರ್ನಡೆದು ಬೀಡಂ ಬಿಟ್ಟ ರಾಟೋಪದಿಂ (ಪೃಥು. ೩೬–೬). [ಮಾರ್ (< ಮಾಱು₂) + ನಡೆ₁]

**ಮಾರ್ನುಡಿ₁**, ಮಾರುನುಡಿ₁ (ಕ್ರಿ). ೧. ಪ್ರತಿಯಾಗಿ ಮಾತನಾಡು ; ಮಾರುತ್ತರ ಕೊಡು : ಮಿಡುಕದೆ ಭೀಷ್ಮ ನೋಡುತಿರು ಕುಂಭಜ ಸುಮ್ಮಿರು ಕರ್ಣ ಮಿಕ್ಕು ಮಾರ್ನುಡಿಯದೆ ಮೂಗುವಟ್ಟಿರು (ಗದಾ. ೬–೪೩) ; ಇವರ್ಗೆ ನೀನೇನುಮಂ ನುಡಿಯದಿರೆಂದು ಲಕ್ಷ್ಮಣನಂ ಮಾರ್ನುಡಿ ಯದಂತು ಮಾಡಿ (ರಾಮಾ. ೦೬-೭ ವ) : ಕರೆಯಲು ಮೂಕನೇ ಮಾರ್ನುಡಿಯೆ ನೀಂ (ರಾಜ. ೦೯–೦೦). ೨. ವಿರುದ್ಧವಾದುದನ್ನು ಹೇಳು ; ಎದುರುತ್ತರ ಕೊಡು : ಪತಿವಚನಕೆ ಮಾರ್ನುಡಿವುದುಂಟಾ ದೊಡಾ ಸತಿಗೆ ನಿಷ್ಕೃತಿಯಿಲ್ಲೆಂಬ ಶ್ರುತಿಯಿಂದೆ ನಿಮಗೆ ನಾನುಸಿರಲಂಜುವೆನು (ಕೋಟೀಶ. ೬-೯). **ಮಾರುನುಡಿ₁** : ೧. ನಿಂತಿವ್ಮ ಹಾಗೆಯೆ ಹೈಮವತಿ ಮಾರುನುಡಿದಳು (ಎರಕ. ೩೩). [ಮಾರ್ (< ಮಾಱು₂) + ನುಡಿ₁]

**ಮಾರ್ನುಡಿ₂**, ಮಾರುನುಡಿ₂, ಮಾಱುನುಡಿ (ನಾ). ೧. ಪ್ರತ್ಯುತ್ತರ : ಜವಾಬು : ಧಾರುಣಿಯಾಣ್ಮನಿದಕೆ ಮಾರ್ನುಡಿ ಯಾವುದೆಂದು ಚಿಂತಿಸುತ ಮಗುಳಂತೆಂದನು (ಶ್ರೀವತ್ಸ. ೯–೬೬) ; ನಿನಗಾವ ಕೇಳ್ಕೆಗಂ ಮಾರ್ನುಡಿಯ ನೀಯೆ ನಾನ್ (ಐರ್ಹಶ್ರೀ. ೩೦–೦೦೦೯). **ಮಾರುನುಡಿ₂** : ೧. ನಿನ್ನನೊಂದು ಕೇಳಲೆಂದು ಮನವು ತವಕಗೊಳ್ಳುದು ಇತ್ತ ನೋಡಿ ನಾಚದೆನಗೆ ಮಾರು ನುಡಿಯ ಕೊಡುವುದು (ಶಶಿಕೋ. ೨೭–೦೬). **ಮಾಱುನುಡಿ** : ೨. ಪ್ರತಿ ಯಾದ ಮಾತು; ಬೇರೆಯಾದ ಅಭಿಪ್ರಾಯ : ಮಾಱುನುಡಿಯುರದಿರ ಲಜೀವು ಮನ ಮಿಱುವುದಲಾಯೆಂದು ಮಣಿಗಣದೋಜಿಕೆಯು ಮುಂದ್ರಿಕೆ ಜನಿತ್ರನು ರಮೆಗೆ ರಾಘವನ (ಕೆ.ಜರಾ. ೫–೩–೯೨).

[ಮಾರ್ (< ಮಾಱು₂) + ನುಡಿ₂]

**ಮಾರ್ಪ** 'ಮಾಡು₁' ಪರಾ.

**ಮಾರ್ಪಜ್ಜೆ**, ಮಾರ್ಪೆಜ್ಜೆ (ನಾ). ವಿರುದ್ಧವಾಗ ನಡೆ. – ಚಲನೆ : ಮಾರ್ಪಜ್ಜೆಗಡು' ಪರಾ. **ಮಾರ್ಪೆಜ್ಜೆ** : 'ಮಾರ್ಪೆಜ್ಜೆಗಡು' ಪರಾ.

[ಮಾರ್ (< ಮಾಱು₂) + ಪಜ್ಜೆ]

**ಮಾರ್ಪಜ್ಜೆಗೆಡು**. ಮಾರ್ಪೆಜ್ಜೆಗೆಡು (ಕ್ರಿ). ವಿರುದ್ಧವಾದ ಚಲನೆಗೆ ಅಡ್ಡಿಯುಂಟಾಗು : ನಿನ್ನ ಶೇಮಾರ್ಪ[ಪಾಠಾಂ. ಪೆ]ಜ್ಜೆಗೆಟ್ಟುದು ಸರೋಜಾಕ್ಷಿ ನಿನ್ನಾಟ ಕಟ್ಟಿತರಸುಚಿನಡೆಪುಳಿ (ಕೃ.ಬಾಶಾ. ೬–೩೦). **ಮಾರ್ಪೆಜ್ಜೆಗೆಡು** : ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [ಮಾರ್ಪಜ್ಜೆ + ಕೆಡು₁]

**ಮಾರ್ಪಡಿ** (ನಾ). ಸಮಾನ ; ಎಣೆ ; ಸಾಟಿ : "ಸರಿ, ದೊರೆ, ಪಡಿ. ಗೆಡೆ. ಜೋಡಿ. ಸಾಟಿ, ಎಣೆ. ತೋಣೆ, ಮಾರ್ಪಡೆ[ಡಿ] . . . ಹೋಟಿ, ಸಂಗಡಂ–ಈ ೧೮ ಸಮಾನಕ್ಕೆ ಪೆಸರ್" (ಕಬಾ. ೩೯–೨೯೦) ; ಕುಡುವೆರ್ವಾ ನಡುವೆಂದು ಬಣ್ಣಿಸುವ ಬೆಳಂಬಗಳುತ್ತಿರ್ಕೆ ಮಾರ್ಪಡಿ ಮೂಲೋಕ ದೊಳಿಲ್ಲ (ಜಂಬೂಕ. ೯–೬). [ಮಾರ್ (< ಮಾಱು₂) + ಪಡಿ₂]

**ಮಾರ್ಪಡಿಸು** (ಕ್ರಿ). ವ್ಯತ್ಯಾಸಪಡಿಸು ; ಬದಲಾಯಿಸು : ಪೇಳ್ ಪರ್ವತಂಗೊಲಿಯದಂತವನ ಮೊಗಮಂ ಮಂಕಡಮೊಗದಂತೆ ಮಾರ್ಪಡಿಸ ಲಪ್ಪುದು (ಅದ್ಭುತ. ೯–೨೬); ಮಾನವನ ಅಂತರಂಗ ಎಲ್ಲಿಯೂ ಒಂದೇ. ದೇಶ ಕಾಲ ಭಾಷೆಗಳು ಇದನ್ನು ಮಾರ್ಪಡಿಸಲಾರವು (ಜಗಾ. ೯೦).

[ಮಾರ್ಪಡು + – ಇಸು₂]

**ಮಾರ್ಪಡು** (ಕ್ರಿ). ಬದಲಾವಣೆಹೊಂದು ; ವ್ಯತ್ಯಾಸಗೊಳ್ಳು : ಅವತ ರಿಸಿಹನು ಬೊಮ್ಮ ವಿಶ್ವದೇಹದೊಳೆನ್ನ ಅವನ ವೇಷಗಳೇಕೆ ಮಾರ್ಪಡುತಲಿ ಹವು ? (ಮಂಕುತಿ. ೩೬); ತ್ರಿಪುರಸಂಹಾರವಾದ ಬಳಿಕ ಆಯಾಸಗೊಂಡ ಶಿವನ ಹಣೆಯಿಂದ ಬೆವರುಹನಿಯೊಂದು ಬಿದ್ದು ಮರವಾಗಿ ಮಾರ್ಪಟ್ಟ ಕದಂಬ (ತಸುಹೊ. ೯೬).

[ಮಾರ್ (< ಮಾಱು₂) + ಪಡು₁./ತಮಿ. ಮಾಱುಪಡು]

**ಮಾರ್ಪಡೆ** (ನಾ). ಎದುರುಪಡೆ ; ಶತ್ರುಸೈನ್ಯ : ಅಂತಿದಿರಾಂತ ಮಾರ್ಪಡೆ ಯಲ್ಲಮಂ ಜವನ ಪಡೆಗೆ ಪಡಿಗಚ್ಚಿಕ್ಕುವಂತಿಕ್ಕಿ (ಶಬ್ದಸಾ. ೦೦–೯೯ ವ) : ಮೇಲೊಡ್ಡಿದುದ್ಯದೆ ಬಂದ ಮಾರ್ಪಡೆಯುನಿತುಂ (ಚಿತ್ರಾ. ೨೫೬); ಮಾರ್ಪಡೆ ಗಳ ಕೂರ್ಪಡುಗೆ, ಘೋರ ಬಯಸಿ ಕಡೆದರೇ ! (ಪಾಠಿ. ೩–೫೬).

**ಮಾರ್ಪಡೆಗಿಡಿಗ** = ಶತ್ರುಸೈನ್ಯಕ್ಕೆ ಗಿಡುಗನಂತಿರುವವನು : ಒಂದು ಬಿರುದು: ಶ್ರೀಮನುಮಹಾಮಂಡ[ಳೇ]ಶ್ವರ ಕೇಸವದೇವಒಡೆಯರ [ಪದದ] ಕಳುವ ಲೊಕ್ಕಿಯ ಬಳಿಯ ಬಿರುದು ಮಾರ್ಪಡೆಗಿಡಿಗ ಮಲೆವರ ಗಂಡ ಕಾ [ರೆ] ತ್ರಿ ಮಾಡುವ ನಾಯಕಂ (ಎಕ. I. ೯೯–೬ : 1422 ?). **ಮಾರ್ಪಡೆಗೊಱಂಟ** = ಶತ್ರುಸೈನ್ಯಕ್ಕೆ ಗಡುಸಾದವನು : ಒಂದು ಬಿರುದು : ಶ್ರೀಗಾಸ್ರಮವೆಸೆ ತೇಜಕ್ಕಾಗರವೆನೆ ನೆಗಳ್ದ ಗಂಗ ವಜ್ರನ ಲಂಕಬೊಪ್ಪೇಗಾದ್ಯನೆಂಬರವರೊಳಪ್ಪೇಗೆಸು ಮಾರ್ಪಡೆಗೊಱಂಟ ನಣ್ಣನ ಬಂಟ (ಎಕ. II (R). ೨೭೦–೩; 10ನೆಯ ಶ). **ಮಾರ್ಪಡೆಭೀಮ** = ಶತ್ರುಸೈನ್ಯದವರಿಗೆ ಭೀಮನಂತಿರುವವನು; ಒಂದು ಬಿರುದು : ತೇಜ ಮಹತ್ವರ್ಣ್ಣಂ ಮಾರ್ಪಡೆಭೀಮಂ ಮಲ್ಲಿಕಾಮೋದಂ ಕೀರ್ತ್ತಿವಿದ್ಯಾಧರಂ (ಶಾಸಾ. XX. ೨೦–೬ : 1019). [ಮಾರ್ (< ಮಾಱು₂) + ಪಡೆ₂]

**ಮಾರ್ಪಣ** (ನಾ). (ಧರ್ಮವಿರುದ್ಧವಾದ ಕೆಲಸಕ್ಕೆ) ಪ್ರತಿಯಾಗಿ ಪಡೆಯುವ ಹಣ : ಅಣುಮಾತ್ರಂ ಕೊಸರಿಲ್ಲದಾಳ್ದನೆಡೆಯೊಳ್ ಲಂಚಕ್ಕೊಡಂಬಟ್ಟು ಮಾರ್ಪಣಮಂ ಕೊಂಡತಿವಿತ್ತಮಂ ಕಡಿಸಿ . . . ಭಕ್ಷಿಪಾ ಗಣಕಂ ಹೆಗ್ಗಣಕಂ ಸಮಂ (ಕೋಟೀಶ. ೩೩).

[ಮಾರ್ (< ಮಾಱು₂) + ಪಣ₂]

**ಮಾರ್ಪಾಟ** 'ಮಾರ್ಪಾಡು' ನೋ.

**ಮಾರ್ಪಾಟು** 'ಮಾರ್ಪಾಡು' ನೋ.

**ಮಾರ್ಪಾಟುಗೊಳು** 'ಮಾರ್ಪಾಟುಗೊಳ್ಳು' ನೋ.

**ಮಾರ್ಪಾಟುಗೊಳ್ಳು**, ಮಾರ್ಪಾಟುಗೊಳು (ಕ್ರಿ). ವ್ಯತ್ಯಾಸವನ್ನು ಹೊಂದು ; ಬದಲಾವಣೆಯಾಗು : ಶಕ್ತಿಪೂಜೆಯ ರೀತಿಯಲ್ಲಿರುವ ಅವರ ನಂಬಿಕೆ, ಅವರ ಆಚಾರ ಮಾರ್ಪಾಟುಗೊಂಡುದು ನಿಮಗೆ ಕಾಣಿಸು ತ್ತದೆಯೇ ? (ಆಚಾ. ೦೯೨). **ಮಾರ್ಪಾಟುಗೊಳು** : ಮಾವಿನ ಬೇವಿನ ಬೇರುಗಳೊಂದಾಗಿ ನೆಲದೊಳು ಹೆಣೆದುಕೊಂಡಾಗ ಮಾವಿನ ಸಿಹಿ ಹೋಗಿ ಬೇವಿನ ಕಹಿಯಾಗಿ ಮಾರ್ಪಾಟುಗೊಳುವುದು ಬೇಗ (ಶಂಪಾಶ. ೦೦೩–೯).

[ಮಾರ್ಪಾಟು (< ಮಾರ್ಪಾಡು) + ಕೊಳ್ಳು₁ (< ಕೊಳ್₁)]

**ಮಾರ್ಪಾಡಿ** (ನಾ). ಶತ್ರುಸೈನ್ಯ ; ವೈರಿದಳ : ಈತನೆ ಗಂಡನೆಂದಾಡಿದಂ ಮಾರ್ಪಾಡಿಯಿಂ ಬಿಡದಿ ಪಾಜಿದ ಕೆಂಡಕ್ಕೆಣೆಯಾಗಿ ನಿಂದು ಪೃಥಿವೀ

ಪಾಲಾವನೀಪಾಲಕಂ (ತಂತ್ರವು. ೧೧-೯೬) : ನರನಿರ್ದಂ ಮಾರ್ಪಾಡಿಯೊಳರಿದೆನಗಾವುದಟಿ ಗರ್ವಮಾವುದಖಿಳವೇಶಿರಿಯೊನಿದನೊಲ್ಲೆನೆನ್ನದೆ ಮರುಳೇ ನೀನಿಂತು ವೀರಪಟ್ಟಮನಾಂಪೊ (ಬಂಹಂ. ೧೨-೬೬).

[ಮಾರ್ (< ಮಾಱು₂) + ಪಾಡಿ₂]

**ಮಾರ್ಪಾಡಿತನ** (ನಾ). ವಿರೋಧ : ಪ್ರತಿಕೂಲತೆ : "ಪ್ರಾತಿಕೂಲ್ಯಂ–ಮಾರ್ಪಾಡಿತನಮುಂ" (ಅೀತಿವಾ. ೨೮-೨೪).

[ಮಾರ್ಪಾಡಿ₀ (p← ತಮಿ. ಮಾಱುಪಾಟು) + –ತನ]

**ಮಾರ್ಪಾಡು**, ಮಾರ್ಪಾಟ್ಟು, ಮಾರ್ಪಾಟು (ನಾ). ಬದಲಾವಣೆ : ವ್ಯತ್ಯಾಸ : ಈ ಮಾರ್ಪಾಡನ್ನು ಅರ್ಥಮಾಡಿಕೊಳ್ಳುವುದು ಸ್ವಾಮಿಗೆ ಸಾಧ್ಯವಾಗದೆ ಹೋಯಿತು (ಶ್ರಾಬಿನ್ನೀ. ೪೦); ಒಬ್ಬರಿಂದ ಇನ್ನೊಬ್ಬರು ಪ್ರತಿಮಾಡುವಾಗ ನಡೆಸಿದ ಮಾರ್ಪಾಡಿನ ಫಲ (ಕಕ್ಷದ. ೫೬೬). **ಮಾರ್ಪಾಟ** : ಎವ್ವಿಗ್ಯಾ ಮಾನಸರ ಮನೋವಿಕಾರಮುಮನಿಂಗಿತಮುಮಂ ನುಡಿಯಿಂ ನಡೆಯಿಂ ಗೆಯ್ಮೆಯಿಂ ಮೊಗದ ಮಾರ್ಪಾಟದಿಂ ಅಱಿಯಲಕ್ಕುಮೆಂದು ಬಲ್ಲರ ಬಗೆ (ರಾಮಾಶ್ವ. ೧೧-೦೪). **ಮಾರ್ಪಾಟು** : ಜೀವಂತವಸ್ತು . . . ಪರಿಸ್ಥಿತಿಗೆ ತಕ್ಕಂತೆ ಮಾರ್ಪಾಟು ಹೊಂದುವುದು ಅವುಗಳ ವಿಶಿಷ್ಟ ಲಕ್ಷಣ (ಜನ್ಮಕ. ೬೦); ತಮಿಳು – ಕನ್ನಡ ಭಾಷೆಗಳೊಡನೆ ಹೋಲಿಸಿದಾಗ ತೆಲುಗುಭಾಷೆಯು ಕೆಲವು ಪದಗಳಲ್ಲಿನ ಮಾರ್ಪಾಟು. ಅದರಲ್ಲಿಯೂ ಆ ಧ್ವನಿವ್ಯತ್ಯಾಸ ಸ್ವಾರಸ್ಯವಾದುದು (ದ್ರಾಭಿ. ೦೬೨).

[ಮಾರ್ (< ಮಾಱು₂) + ಪಾಡು₃]

**ಮಾರ್ಪಿಡಿ** (ಕ್ರಿ). ೧. (ವೈರಿಗಳ ರಾಜ್ಯಾದಿಗಳನ್ನು) ಪ್ರತಿಯಾಗಿ ಹಿಡಿದುಕೊಳ್ಳು-ಸ್ವಾಧೀನಪಡಿಸಿಕೊಳ್ಳು : ನುಡಿದುದೆ ನನ್ನಿ ಮಾಡಿದುದೆ ಶಾಸನಮಿತ್ತುದೆ ರಾಮರೇಸು ಮಾರ್ಪಿಡಿದುದೆ ವಜ್ರಲೇಪಂ (ಎಕ. VII. ಶಿವಮೊ. ೧೧-೨೪: 1085 ?): ಅಲ್ಲಿ ನುಡಿದುದೆ ನಂಸಿ ನೋಡಿದುದೆ ಸಾಧ್ಯ ವೊಡಚ್ಚಿರ್ತ ಕಾರ್ಯಸಿದ್ಧಿ ಮಾರ್ಪಿಡಿದುದೆ ಸೊಂಮು (ಕಇ. I. ೨೫-೬೪ : 1085). ೨. ವಿರೋಧವನ್ನು ಹೊಂದು : ವಿರೋಧಿಸು : ಮಾರ್ಪಿಡಿಯೆ ಮಾಣಾನೀ ಘಟನೇಮಸವಿಗನೀತನಿದಿರ್ಗೆ ಬರಲಾರ್ಪವರಾರ್ ಮಾರ್ಪಡೆಯೊಳೆನ್ನ ಘನದೋರ್ದರ್ಪಮನಾಪರಿಸಿ ನೆಗಟ್ಟ ಕಲಿ ರಣವಜ್ರಂ (ಅಪ್ಪಕ. ೬೦೦). [ಮಾರ್ (< ಮಾಱು₂) + ಪಿಡಿ₁]

**ಮಾರ್ಘ** (ನಾ). ಬದಲಾವಣೆ ; ವ್ಯತ್ಯಾಸ : ಮಾರ್ಪಾಟು : ಅಲ್ಲಲ್ಲಿಯ ಸಂದರ್ಭ ಸನ್ನಿವೇಶಗಳಿಗನುವಾಗಿ ಆಕಾರಗಳೊಳಗೆ ಇಷ್ಟಷ್ಟು ಮಾರ್ಘಗಳವೆ (ಶಾಶಿಸು. ೨೦): ಬೆಟ್ಟಗುಡ್ಡಗಳನ್ನೆಲ್ಲ ಕಡಿದು ನೆಲವನ್ನು ಬಯಲುಮಾಡಿದುದರಿಂದ ಪ್ರಕೃತಿಯಲ್ಲಿ ಅನೇಕ ಮಾರ್ಘಗಳು ತಲೆದೋರಿದುವು (ಕಾಲಚಿ. ೪೦).

[ಮಾರ್ (< ಮಾಱು₂) – ಪ್ಪ₂./ತೆಲು. ಮಾರ್ಘ]

**ಮಾರ್ಘಗೊಳ್ಳು** (ಕ್ರಿ). ಬದಲಾಗು : ವ್ಯತ್ಯಾಸ ಹೊಂದು : ದುಃಖ ಸುಖಗಳಿಂದ ಮಾರ್ಘಗೊಳ್ಳದ ಶಾಶ್ವತಸೌಂದರ್ಯದ ಗುರಿಯತ್ತ ಸಾಗುವ ಈ ಲೌಕಿಕಾಲೌಕಿಕಮಿಶ್ರಸೌಂದರ್ಯವನ್ನೇ ನಾವೀಕ್ಷಿಸಬೇಕಾದುದು (ಕಾವ್ಯೋಇ. ೬೮೦); ಬಾಳುವೆ ಮಾರ್ಘಗೊಳ್ಳಲು ಹೊಸದೊಂದು ಕಣಿವೆಯನ್ನು ಹಿಡಿದು ಮುಂದೆ ಸಾಗಿತು (ರೂಪಾಬು. ೭೮).

[ಮಾರ್ಘ + ಕೊಳ್ಳು₁ (< ಕೊಳ್₁)]

**ಮಾರ್ಪೆಜ್ಜೆ** 'ಮಾರ್ಪಜ್ಜೆ' ನೋ.

**ಮಾರ್ಪೆಜ್ಜೆಗೆಡು** 'ಮಾರ್ಪಜ್ಜೆಗೆಡು' ನೋ.

**ಮಾರ್ಪೊಡೆ** (ಕ್ರಿ). ಪ್ರತಿಯಾಗಿ ಹೊಡೆ ; ಎದುರಿಸಿ ಹೊಡೆ : ಮುನ್ನಮೆ ಶಮಗ್ರಧ್ಯಾನದಿಂದಂಗರಕ್ಷಸಮೂಹಂ ದೆಸೆಗೆಟ್ಟು ಯಾನಗಜ ವಾಜಿಶ್ರೇಣಿ ಬೆಂಗೊಟ್ಟು ಪೋಯ್ತುಸುಹೃದ್ವೀರರೊಳೆಲ್ಲಿ ಮಾರ್ಪೊಡೆವರಾ ಪ್ರಸ್ತಾವದೊಳ್ ಕೃಷ್ಣನಂ (ಜಗನ. ೬-೬೬) ; ಕಾಯ್ಬಿನಿಂ ಸಿಡಿಲಂ ಮಾರ್ಪೊ ಡೆವಂ ಕೆಳದ್ರ್ಗರಗನಂ ಮಾರಿಕ್ಕುವಂ ಸಿಂಗಮಂ ಕವಿವಂ ಭಾವಿಸೆ ಪ್ರಿಥ್ವಿಸೆಟ್ಟಿ ಹರಿಪಂ ವೆಂಗ್ಯಾಂಬಿಕಾನಂದನಂ (ಕಇ. IV. ೦-೬೬ : 1204).

[ಮಾರ್ (< ಮಾಱು₂) + ಪೊಡೆ₁]

**ಮಾರ್ಪೊಣರ್** (ಕ್ರಿ). ಎದುರಾಗಿ ಹೋರಾಡು, — ಯುದ್ಧಮಾಡು : ಎನಿತು ಮದೇಭದೊಡ್ಡನಿತು ತೇರ್ . . . ಅನಿತೆ ಮದೇಭದೊಡ್ಡನಿತೆ ತೇರನಿತಾಳನಿತಶ್ವಮಸ್ತ್ರದಿಂ ಜನಿಯಿಸಿ ಪೋರ್ದು ಮಾರ್ಪೊಣರ್ದು ತಳ್ತಿಱಿದೆಯ್ದೆ ಪಳಂಚಿ ಕಾದುತಿರ್ಪನೆಗಂ (ಜಗಂ. ೦೮-೫೦).

[ಮಾರ್ (< ಮಾಱು₂) + ಪೊಣರ್₁]

**ಮಾರ್ಪೊಯ್** (ಕ್ರಿ). = ಮಾರ್ಪೊಡೆ : ತನ್ನೊಮ್ಮಿಗಳ್ ಬಂದು ಮಂದಿದಱಿಂ ಪೋದ ತಪೋವಳಂ (?) ಗಗನಮಂ ಮಾರ್ಪೊಯ್ದು ಕಣ್ಗೊಪ್ಪೆ ತೋರ್ಪುದಿದುತ್ತ್ರಂಬಿದಸಂಖ್ಯಶಂಖಧವಳಂ ಗಂಭೀರನೀರಾಕರಂ (ಶಂಖಶಾ. ೪-೨೪) ; ಆ ಬಿಗನೆಱಗಿ ಗದಾದಂಡದಿಂ ಪೊಯ್ದು ಭೀಮಂ ಸಜಯಂ ಮಾರ್ಪೊಯ್ದು ತದ್ದೈತ್ಯನ ಗದೆಯುಡಿಯಲ್ (ನೇಮಿಪು. ೯-೬೦) ; ವಿಲಸತ್ಕಂತುಕಮಂ ಪುಟಂನೆಗೆವವೋಲ್ ಮಾರ್ಪೊಯ್ದು . . . ಕೋಮಳೆ ಪುಷ್ಪಾಸ್ತ್ರವನೀಚ್ಚೆ ಮದುಡಿಗೆಗಳಿಂ ಪುಷ್ಪಾಸ್ತ್ರಮಂ ಪೊಯ್ದಳೇ (ದಶಕು. ೦೨-೬೪). [ಮಾರ್ (< ಮಾಱು₂) + ಪೊಯ್₁]

**ಮಾರ್ಪೊಸೆ** (ಕ್ರಿ). ಪ್ರತಿಯಾಗಿ ಉಜ್ಜು, – ತಿಕ್ಕು : ಪರ್ವರಿಕೆಗಿಡದೆ ಕಲಿ ವಿಷಖಿರ್ಪರಸದಿರಾಂತ್ರೊಡಾಂತು ವಲಲಂ ತಳಮುಂ ಮಾರ್ಪೊಸೆದು ತಳ್ತು ಕ[ಣ್ತುರಿ]ತರ್ಪಿನೆಗವುವುಂ[ತಿ] ಸಿಂಹನಾದದಿನಾರ್ದಂ (ಶಂಖಶಾ. ೮-೫೬). [ಮಾರ್ (< ಮಾಱು₂) + ಪೊಸೆ₁]

**ಮಾರ್ಪೊಳಪು**, ಮಾರ್ಪೊಳೆಪು (ನಾ). ಪ್ರತಿಬಿಂಬ ; ಪಡಿನೆಳಲು : "ಮಾರ್ಪೊಳಪು ಪಡಿನೆಬಲ್ ಪ್ರತಿಬಿಂಬಮಕ್ಕು" (ಕಬ್ಬಿಕ. ೬೦) ; ಮಣಿಮಯಭೂಮಿಯೊಳ್ ನಡೆವ ಪೌರವಧೂಪ್ರತಿಬಿಂಬದಂಘದಿಂ . . . ಜಡದ ಮಾರ್ಪೊಳಪಿಂ ರಮಣೀಯಮಾ ನೆಲಂ (ಶಾರಪು. ೦-೦೪೦) ; ಮದಗಜದ ಕರದ ಮಾರ್ಪೊಳಪಂ ನಿಜಸ್ವಚ್ಛತೆಯಿಂ ರಸಾತಳದಹಿ ಒಣ್ಗಿ ಕಾಣಪಂತೆ ಕಮನೀಯಮಾಗಿಯುಂ . . . ಆ ಪೆರ್ಪೊಳೆ . . . ರಂಜಿಸಿರ್ಪುದು (ರಾಜಶೇ. ೬-೨೪ ವ). **ಮಾರ್ಪೊಳೆಪು** : "ಮಾರ್ಪೊಳೆಪೆಂದು ಪಡಿನೆಬಲೆಂದುಂ ಪ್ರತಿಬಿಂಬಂ" (ಕಶಾ. ೭೦-೫೬೦) : ಉನ್ಮದಭೃಂಗನಾದದಿಂದ ವಿರಳಪುಷ್ಪಭೂಜಮೆಸೆವಂತಿರೆ ಚಂದ್ರಿಕೆ ಭೂಷಣಾಂಶುವಿಂ ಕವಿದಲರ್ಗಣ್ಣ ಮಾರ್ಪೊಳೆಪಿನಿಂ ಪ್ರಮದಾಗೇಯದಿನೊಪ್ಪುಲ್ (ಜಗನ. ೦೬-೦೦೨) ; ಬಳಸಿದ ತಾರಗೆಗಳ ಮಾರ್ಪೊಳೆಪೊಂದಿದ ಪೊನ್ನ ಬೆಟ್ಟು ಕೈಯಂ ಕಾಲಂ ತಳೆದಿರ್ದುದೆಂಬಿನಂ ಕಣ್ಗೊಳಿಸಿದನಂತವರ ಪಕ್ಕದೊಳ್ ಪಲಗಣ್ಣಂ (ಕಬ್ಬಿಗಾ. ೦೬೬) ; ಲಲಿತವೆನಿಪ್ಪ ನೀರಿಂ ಬೆಳೆದು ಸಮೃದ್ಧಂಗಳಾದೆಪೆಂದಾ ಸಸ್ಯಾವಳಿಗಳ್ ಮಾರ್ಪೊಳೆಪಿಂ ತಜ್ಜಳದೇವತೆಯರ್ಗೆ ಫಳಮನೀವವೊಲೆಸೆಗುಂ (ಶಾರಪು. ೦-೯೪). [ಮಾರ್ (< ಮಾಱು₂) + ಪೊಳಪು]

**ಮಾರ್ಪೊಳೆ** (ಕ್ರಿ). ಪ್ರತಿಬಿಂಬಿಸು: ಪ್ರತಿಫಲಿಸು : ಪೊಳೆವರುಣಾಂಶುವಿಂದೆಸೆವ ತನ್ನಯ ಮುಂಡಳಿಮುಬ್ಬಿಯಲ್ಲಿ ಮಾರ್ಪೊಳೆವಿನೆಗಂ ಸರೋಜಸಖನೊಯ್ಯನೆ ಪೊರ್ದಿದನಸ್ತಶೈಲಮಂ (ಅನಂತಪು. ೨೬೫); ಚಂದ್ರಕಾಂತಶಿಲಾತಳದೊಳ್ ಮಾರ್ಪೊಳೆವ ನಿಜಬಿಂಬಮಂ ಕಂಡು (ಗಿರಿಕ. ೦-೦೨೯ ವ): ಕೈಪಿಡಿಯಂ ಲೀಲೆಯಿಂ ದಿಟ್ಟಿಸಿ ಮಾರ್ಪೊಳೆವ ಮುದ್ದುಮೊಗಮಂ ಮಡಿಗೂಸುಗೆತ್ತು, ತನಗೆ ತಂದೀವುದೆಂದು ಚಲದಿಂ ಮಚಿಗುವ . . . ಕುಮಾರನೆನೆಗಪ್ಪನೆಂದಿಂಗೋ ಸಖೀ ! (ರಾಮಾಶ್ವ. ೮೯-೦).

[ಮಾರ್ (< ಮಾಱು₂) + ಪೊಳೆ₁]

**ಮಾರ್ಪೊಳೆಪು** 'ಮಾರ್ಪೊಳಪು' ನೋ.

**ಮಾರ್ಘತ** 'ಮಾರಿಘತ್ತು' ನೋ.

**ಮಾರ್ಘತು** 'ಮಾರಿಘತ್ತು' ನೋ.

ಕೆಯ್ವಾಸಿದಾಗಳ್ (ಶಂಶಕಾ. ೦೩-೩೩ ವ) ; ಒರ್ವನೆ ಧನ್ವಿಜಿನಲ್ ಸಕಲೋರ್ವರೆಯಂ ಕಾದು ತನ್ನ ಬಾಣದ ಪೊನೆಪೊಳ್ ಮಾರ್ಬಲಮಂ ತವಿಸಿದಂ (ಶಂಠಾಕಾ. ೨-೬೨). **ಮಾರ್ಬಲ$_1$** ೨ ಒಡನೆಯುವರೊಂದೆ ಮಾರ್ಬಲವೆಡೆ ಮಡಗದೆ ಪೊಗಟ್ಟಿತಾಗಿ ತಳ್ತಿಱಿದು ಯಶಂಬಡೆದಂ ಗೊಗ್ಗಿ (ಎಕ. XI. ಶಳ್ಳಕೆ. ೩-೪; ಸು. ೯೨೬); ನರರಿಂ ನರರಂ ಹರಿಯಿಂ ಹರಿಯಂ ವರೂಥಮಂ ತದ್ವರೂಥದಿಂದಿಟ್ಟು ಸುಪೃತ್ಕರಿಯಂ ಪಡಲಿಟ್ಟಂತಿರೆ ಪುರಂತ್ಸುತಂ ಮೋದಿ ತವಿಸಿದಂ ಮಾರ್ಬಲಮಂ (ಗದಾಯು. ೩-೬); ರಥಮಾಷಿಗಳ ರುಧಿರದ ಕಡಲೊಳದ್ದಿದನದ್ದಿದನು ಮಾರ್ಬಲದ ಗರ್ವಿತರ (ಕುವ್ಯಾಕ. ೨-೪೩). **ಮಾರ್ವಳ. ಮಾಱುಬಲ :** ಸರಳ ತೂಗುತ ಮಾಱುಬಲವನು ತಱುಬಿನಿಂದನು (ಕುವ್ಯಾಶಿ. ೬-೦೦). P ಇದು ಛಂದಸ್ಸಿಗಾಗಿ ಮಾಡಿಕೊಂಡ ರೂಪ.

**ಮಾರ್ಬಲಮಲ್ಲ** = ಶತ್ರುಸೈನ್ಯಕ್ಕೆ ಮಲ್ಲನಂತಿರುವವನು: ಒಂದು ಬಿರುದು : ಈದುವರಾದಿತ್ಯ ಮಾರ್ಬಲಮಲ್ಲ ಪಂಜಿಪುಂಕಪ್ಪೆರವ ಅಮ್ಮಣಪುತ್ರ ನಾಗರಪಿನ್ನಾಎಟ್ಟಿತ್ತು ಆಳುತ್ತಿಟ್ಟು (ಎಕ. VIII, ಸೊರಬ. ೪೦೩-೦೦: ೯೮೬). **ಮಾರ್ಬಲರಾಮ** = ರಾಮನಂತೆ ಶತ್ರುಪಡೆಯಿಂದ ಗೆಲ್ಲಲಶಕ್ಯನಾದವನು ; ಒಂದು ಬಿರುದು : ಚಾಮೊನ್ನಚೂಡಾಮಣಿ ಚಿಪಕೊಳ್ಗಣ್ಣ ಸಮರೈಕಪಾತ್ರ ಮಾರ್ಬಲರಾಮ ಶ್ರೀಮತ್ ಅರಕೆಲ್ಲ ಕೊಟ್ಟಕೆಲ್ಲಗಮ್ಮಣ್ಣಪ್ಪಿ (ಪ್ಯಾಜಿ. ೦೯೩೨, ೩೭-೯; ಸು. ೯೮೦). **ಮಾರ್ವಳಭೀಮ** = ಶತ್ರುಪಡೆಗೆ ಭೀಮನಂತೆ ಭಯಂಕರನಾಗಿರುವವನು ; ಒಂದು ಬಿರುದು : ಮಾರ್ವಳಭೀಮಂ (ಕೊಂಕಣಾ. ೦೯೩೪, ೨೦ಗಾಕ್ಷರ. ೩-೦೩ ; ೯೮೩). [ಮಾರ್ ($<$ ಮಾಱು$_2$) + ಬಲ$_3$]

**ಮಾರ್ಬಲ$_2$. ಮಾರ್ಬಲ$_3$** (ನಾ). ದೊಡ್ಡ ಪಡೆ ; ಮಹಾಸೈನ್ಯ : ನಿಲ್ ವೈಕುಂಠನುದಗ್ರಕೋಪನದಟಂ ಮಾರ್ಕೊಂಡು ಮಾಜಾಂತ ಮಾರ್ಬಲಮಂ ಬೆಂಕೊಳೆ (ಕಬಾಕ್ಷ. ೬-೦೫೦) ; ಬಲಕ್ಕೆ — ಅಳ್ಬಲ (ಅಳ್ಬಲ) . . . ಭೂಬಲಿ. ಮಾರ್ಬಲ (ಶಬ್ದ. ೨೯೬ ಕ್ರ ಯೋ). **ಮಾರ್ಬಲ$_2$:** ಖೋಳಕಾಷ್ಟಕನ ಮಾರ್ಬಲವು ಆಲಿ ಬೊಬ್ಬಿಱಿದರಮನೆಯ ದ್ವಾರವ ಸೇರಿ ಮೇಲೆ ಹತ್ತಿದರು ಪೌಳಿಯನು (ಕಃಶಂಕಾ. ೩-೪೪) ; ಕೋಳಾಲ ಬಳ್ಳಾಪುರ ಬೆಂಗಳೂರ ಭೂಪಾಲರು ಮಾರ್ಬಲಸಹಿತ ಮೇಳದೆ ತಿರುಮಲೇಶ್ವರನ ಕೂಟಕೆ ಬಂದಾಳಾಪವನೇನನೆಂಬೆ (ಕಂಪವಿ. ೩-೩೦) : ಅಕಳಂಕಮನ್ಮಥ ಮಹಾರಾಯ ತವಕದಿಂದಪೆಮಾರ್ಬಲವನೊಡಗೊಂಡು ನಡೆತಂದ (ಪಪಮೋ. ೬-೫). [$<$ ಮಹಾ+ ಬಲ$_3$]

**ಮಾರ್ಬಲೆ** ' ಮಾರ್ಬಲೆ ' ನೋ.

**ಮಾರ್ವಳ** ' ಮಾರ್ಬಲ$_1$ ' ನೋ.

**ಮಾರ್ವಾಡಿ** ' ಮಾರವಾಡಿ ' ನೋ.

**ಮಾರ್ಷ** (ನಾ). ಸಭ್ಯವಾದ ವ್ಯಕ್ತಿ ; ಗೌರವಸ್ಥ. [ಸಂ.]

**ಮಾರ್ಷ್ಟಿ** (ನಾ). ೧. ಸ್ವಚ್ಛಮಾಡುವುದು ; ಶುದ್ಧಮಾಡುವುದು. ೨. ಸುಗಂಧದ್ರವ್ಯಗಳ ಅನುಲೇಪನ : "ಸಮಾಲಂಭನಂ, ಚರ್ಚಾ, ಮಾರ್ಷ್ಟಿಃ — ಈ ೩ ಚರ್ಚೆ" (ಹಲಾಯು. ೪೯-೩೪೬). [ಸಂ.]

**ಮಾರ್ಸರಲ್** (ನಾ). (ಶತ್ರುವಿನ ಬಾಣಕ್ಕೆ) ಪ್ರತಿಯಾಗಿ ಬಿಡುವ ಬಾಣ : ಪಂಚಶರಂಗೆ ಮಾರ್ಸರಲದಾಗಿ ವಿಜೃಂಭಿಸುವಮ್ಮ ನೀಳ್ದ ಕಣ್ಣಂಚಿನ ಕಾಂತಿಗೊಂದಿಸಿತು ಸಾಮ್ಯವ ನೋಡಿಯೆನುತ್ತೆ ತೋರ್ಪ ಪೊಳ್ಪಿಂಚಿನ ಬಳ್ಳಿಯಂ ನೆಗಪಿ . . . ಸರೋರುಹಲೋಚನೆಯಾದ ಪೊಚ್ಚಪಳ್ (ಅಪ್ಪಿ. ೦-೬೩). 'ಮಾರ್ಕೊರ್ಲ್‌ಲ್' ಪರಾ. [ಮಾರ್ ($<$ ಮಾಱು$_2$) + ಸರಲ್]

**ಮಾಲ, ಮಾಳ$_4$** (ನಾ). ೧. ಬಯಲು ; ಕ್ಷೇತ್ರ. ೨. ಎತ್ತರವಾದ ಪ್ರದೇಶ ; ದಿಬ್ಬ. ೩. ಹಳ್ಳಿಯ ಬಳಿಯಿರುವ ಕಾಡು. ೪. ಕಪಟ ; ಮೋಸ : " ಮಾಳ — ಮಾಲ = ಕಪಟ, ವಂಚನೆ " (ಶಬ್ದಕೋ. ೩೫). **ಮಾಳ$_4$ :** ೪. ' ಮಾಳಿಗ ', ' ಮಾಳಿಡು ' ಪರಾ. [ಸಂ.]

**ಮಾಲಕ$_1$** (ನಾ). ಹಳ್ಳಿಯ ಬಳಿಯಿರುವ ಕಾಡು.— ಅರಣ್ಯ. ೨. ಒಂದು ಬಗೆಯ ಮರ : ಬೇವು. ೩. ಹಾರ ; ಮಾಲೆ : ತುಲಸಿಮಾಲಕ ಬಿಲ್ವ . . . ಸುರಹೊನ್ನೆ ಶ್ಯಾವಂತಿಗೆಗಳ ರಾಮ ಕಲಶಕರ್ಬಿಸಿದ (ಅಶ್ವಾಂಶ. ೬-೭೬). ೪. ನೆಲದಾವರೆ. [ಸಂ.]

**ಮಾಲಕ$_2$** ' ಮಾಲಿಕ$_2$ ' ನೋ.

**ಮಾಲಕಾಂಗೋಣಿ** (ನಾ). ಒಂದು ಬಗೆಯ ಔಷಧೀಸಸ್ಯ ಮತ್ತು ಎಣ್ಣೆಯ ಅಂಶವುಳ್ಳ ಅದರ ಬೀಜ : ಮಾಲಕಾಂಗೋಣಿ–ಸಣ್ಣಗಿಡ. ಔಷಧಕ್ಕೆ ಬರುತ್ತದೆ. ಕಟ್ಟಿಗೆ ತಕ್ಕಮಟ್ಟಿಗೆ ಗಟ್ಟಿ (ಕಶಾಗಿ. ೪೬).

[← ಹಿಂ. ಮಾಲಕಂಗನೀ. ಮಾಲಕಂಗುನೀ, ಮಾಲಕಗುನೀ ; ಮರಾ. ಮಾಲಕಾಂಗೋಣೀ, ಮಾಲಕಾಂಗುಣೀ]

**ಮಾಲಕಾರ** (ನಾ). ಹೂವುಗಳನ್ನು ಕಟ್ಟಿ ಮಾರುವವನು ; ಹೂವಾಡಿಗ : ಲಂಜೆಗೇಸರಂ ದೇವರ್ಕೆ ಪೂಸಿಱುವ ಮಾಲ(ಲಾ)ಕಾರಗ್ಗೆ ಅರ್ಥವಿಸದಿ ಇತ್ತೊದಾನಟೆಪೊನ್ ಪಣ್ಬಮಹಾಪಾತಕನಕ್ಕುಂ(ಕ್ಕುಂ) (ಶಿಂ. X. ೬೦-೩ ; 578). ' ಮಾಲಗಾಱ ' ಪರಾ. [P ಇದು ಸಂಸ್ಕೃತದ ' ಮಾಲಾಕಾರ ' ಎಂಬುದರ ಅಪಲಿಖಿತ]

**ಮಾಲಕಿ** 'ಮಾಲ್ಕಿ' ನೋ.

**ಮಾಲಕುಮಿ** 'ಮಹಾಲಕ್ಷ್ಮಿ' ನೋ.

**ಮಾಲಗಣ್ಣು** 'ಮಾಲುಗಣ್ಣು' ನೋ.

**ಮಾಲಗಾರ** 'ಮಾಲಗಾಱ' ನೋ.

**ಮಾಲಗಾರ್ತಿ** (ನಾ). ಹೂವುಗಳನ್ನು ಕಟ್ಟಿ ಮಾರುವವಳು ; ಮಾಲೆಗಾತಿ : ಪೂಗಳನೊಪ್ಪೆ ಕಟ್ಟಿ ಪೊಸಮಾಲೆಯನೆತ್ತುವ ಮಾಲಗಾರ್ತಿಯರ್ (ದಶಕು. ೦-೪೦). [ಮಾಲಗಾಱ+ –ತಿ$_1$ ($<$ –ಇತ್ತಿ)]

**ಮಾಲಗಾಱ. ಮಾಲಗಾರ. ಮಾಲಿಗಾಱ** (ನಾ). ಹೂವನ್ನು ಮಾರುವವನು ; ಹೂವಾಡಿಗ : ಉಱಿಲ್ಲಾಗೆ ಸಾಲೆ ಒಳುರೇ ವ[ರ್ಣ್ಣ]ಸಿಗೆಯಿಯೆದು ಮಾಲಗಾಱ ಶ್ರೀಮಾಂಚೇ ಮೂಟ ಇನಿಥೂ ಇರ್ಪ್ಪರ್ತಿಯ್ದು (ಕಇ. I, ೨-೦೪ ; ೯೦೦) ; ದೀವಿಗೆಗೆ [ಧಾರೆ?]ಯೆಣ್ಣೆಮಂ ಮಾಲಗಾಱರಲ್ಲಿ ಒಕ್ಕಲ (ದೊಂಕಣಾ. ೦೯೪೦, ಹರಸನಾಡು. ೩೬-೯ ; ೯೯೦). **ಮಾಲಗಾರ** ( ಮಾಲಗಾರರು . . . ಲಿಂಗವಂತಧರ್ಮವನ್ನೇ ಪಾಲಿಸುತ್ತಾರೆ . . . ತೋಟಗಳಲ್ಲಿ ಹೂ, ಎಲೆ, ಫಲಗಳು ಮುಂತಾದವುಗಳನ್ನು ಬೆಳೆದು ಮಾರಾಟ ಮಾಡುತ್ತಾರೆ (ಕಶಾಗಿ. ೦೦೨). **ಮಾಲಿಗಾಱ :** ಸಾಲಿಗರಯ್ವದಿಂಬರುಂ ತೆಲ್ಲಿಗನೂರ್ಱಿಪ್ಪದಿಂಬರುಂ ಮಾಲಿಗಾಱ[ಱ]ಯುವದಣ್ಬರು[ಂಪಂಚಮಠಸ್ಥಾ]ನಮುಮಿದ್ದು (ಕಇ. XI-i, ೪೬-೨೭ ; 1062). 'ಮಾಲಕಾರ' ಪರಾ. [$<$ಮಾಲೆಗಾಱ./ಸಂ. ಮಾಲಾಕಾರ]

**ಮಾಲಗುಜಾರ** (ನಾ). ೧. ಸರ್ಕಾರಕ್ಕೆ ಕಂದಾಯವನ್ನು ಸಲ್ಲಿಸುವವನು. ೨. ರೈತರಿಂದ ಕಂದಾಯವನ್ನು ವಸೂಲು ಮಾಡಿ ಸರ್ಕಾರಕ್ಕೆ ಸಲ್ಲಿಸುವ ಅಧಿಕಾರವನ್ನು ಹೊಂದಿದ್ದ ಮಧ್ಯಪ್ರದೇಶದ ಒಂದು ಜಮೀನ್ದಾರೀವರ್ಗ ಮತ್ತು ಆ ವರ್ಗಕ್ಕೆ ಸೇರಿದವನು : ನಮ್ಮ ವರ್ಹಾಡ—ನಾಗಪುರಗಳ ಕಡೆಗೆ 'ಮಾಲಗುಜಾರ'ರೆಂದು ಇರುತ್ತಾರೆ (ಜ್ಞಾಮುಶಾ. ೦೦).

[←ಪಾರ. ಮಾಲ್ಗುಜಾರ್ ; ಮಾಲ್ಗುರ್ಝಾರ್ ; ಹಿಂ. ಮಾಲಗುಜಾರ್ ; ಮರಾ. ಮಾಲಗುಜಾರ್, ಮಾಲಗುರ್ಝಾರ್]

**ಮಾಲಗುಜಾರಿ, ಮಾಲ್ಗುಜಾರಿ** (ನಾ). ೧. ಕಂದಾಯ. ೨. ಕಂದಾಯವನ್ನು ವಸೂಲು ಮಾಡುವ ಅಧಿಕಾರಿ : ಮೂರುಜಿಲ್ಲೆಗಳ ತಾಲೂಕದಾರರ ಅಭಿಪ್ರಾಯಗಳೊಡನೆ ಇಮಾದ್‌ಜಂಗ ಸುಭೇದಾರನು ತನ್ನ ಅಭಿ

ಪ್ರಾಯವನ್ನು ಸರಕಾರಕ್ಕೆ ತಿಳಿಸಲು, ಸುಭೇದಾರನ ಅಭಿಪ್ರಾಯಕ್ಕೆ ಮಾಲಗುಜಾರಿಯವರು ಒಪ್ಪಿಗೆಯಿತ್ತರು (ಕರ್ನಾಸಂ. ೨೦೩). **ಮಾಲ್ಗುಜಾರಿ :** ಇಮಾದ್‌ಜಂಗಬಹದೂರ ಸುಭೇದಾರನು ತನ್ನ ಅಭಿಪ್ರಾಯವನ್ನು ಮೇಲಧಿಕಾರಿಗಳಾದ ಮಾಲ್ಗುಜಾರಿಯವರಿಗೆ ತಿಳಿಸಿದನು (ಕರ್ನಾಸಂ. ೨೦೩). [←ಪಾರ. ಮಾಲ್ಗುಜಾರೀ, ಮಾಲ್ಗುಜ಼ಾರೀ ; ಹಿಂ. ಮಾಲಗುಜಾರೀ ; ಮರಾ. ಮಾಲಗುಜಾರೀ, ಮಾಲಗುಜ಼ಾರೀ]

**ಮಾಲತಿ**, ಮಾಳತಿ (ನಾ). ಒಂದು ಬಗೆಯ ಬಳ್ಳಿ ಮತ್ತು ಅದರ ಹೂವು ; ಜಾಜಿ : "ಮಾಲತಿಯೆಸಲ್ ಜಾಜಿಯಕ್ಕು" (ಶಬ್ದಮ. ೩೭-೨೦) ; ದಂಡೆಗಟ್ಟಿದ ಮಾಲತಿಯ ಮುಗುಳ ವನಮಾಲೆಗಳುಮಂ ಬೇಱೆವೇಱೆ ನೋಡಿ (ಜಗಂ. ೬-೦೬೫) ; ಕಲ್ಲೆಡಹೆ ಸೊಂದಳೆಂದು ಮಱುಗಿಯುಂ ನಿಲೆ ನಿಂದುಂ ಪೋಗೆ ಪೋಗಿಯುಂ, ನಗೆ ನಕ್ಕುಂ ಉಪಚರಿಸಿದ ನೀನೀಗಳ್ ಎಂತು ಕಲ್ಮನನಾಗಿ ಮಾಲತಿಯುಂ ಮೆಕ್ಕೆಯುಂ ಸಿಂಗರಿಸಿದಯ್ ! (ರಾಮಾಶ್ವ. ೩೬-೨೩). **ಮಾಳತಿ :** "ಮಾಳತೀ. ಜಾತಿಃ — ಈ ೨ ಜಾದಿ" (ಹಲಾಯು. ೩೪-೩೨) ; ಮಾಳತಿಯೊಳ್ ಬಂಡುಂಡ ಮದಾಳಿಯನಳಿಮಾಲೆ ಎಱಗಿ ಬಂಡುಣ್ಬವೊಲೀ ನೀಳಾಳಕಿಯೊಳ್ ಬೆರೆಸಿದ ಪೀಳನ ವಿಟರೆಯ್ದೆ ಸೋಂಕೆ ಸುಖಿಯಾಗಿರ್ಪರ್ (ಗಂಕ. ೪-೦೫೨). [ಸಂ. ಮಾಲತೀ]

**ಮಾಲದಿ** 'ಮಾಲದೀ' ನೋ.

**ಮಾಲದೀ**, ಮಾಲದಿ, ಮಾಲೀದಿ (ನಾ). (ಗ್ರಾಕ) ತುಪ್ಪದಲ್ಲಿ ಕರಿದ ಪೂರಿಯನ್ನು ಪುಡಿಮಾಡಿ, ಪಾಕದಲ್ಲಿ ಹಾಕಿ ಕಟ್ಟುವ ಒಂದು ಬಗೆಯ ಉಂಡೆ : ನನಗ ಮಾಲದೀ ಅಂದರ ಭಾಳ ಪ್ರೀತಿ (ಅಕಪಾ. ೬೩). **ಮಾಲದಿ :** ಮಾಲದಿಯ ಸವಿ ಮರೆತು, ಅವಳ ಅಧರದ ರಸದ ರುಚಿಯನ್ನು ಸವಿದರು (ಅಕಪಾ. ೬೬). **ಮಾಲೀದಿ :** ನೀ ಏನೋ ಇಂದ ಮಾಲೀದಿ ಮಾಡೀ ಅಂತ ನಿನ್ನ ಗಂಡ ಹೇಳಿದ (ಅಕಪಾ. ೬೩).

[←ಪಾರ. ಮಾಲೀದಹ್; ಹಿಂ. ಮಾಲೀದಾ, ಮಲೀದಾ ; ಮರಾ. ಮಾಲದೀ]

**ಮಾಲಪುವಾ** (ನಾ). (ಹೋಳಿಗೆಯಂತಿರುವ) ಒಂದು ಬಗೆಯ ಸಿಹಿ ತಿಂಡಿ : 'ಮಾಲಪುವಾ', ಬದಾಮು ಮುಂತಾದುವುಗಳನ್ನು ತಿನ್ನುವದರಿಂದ, ಹೋದ ವೀರ್ಯವು ತಿರುಗಿ ಬರುವದೆಂದು ಎಷ್ಟೋ ಮೂರ್ಖರ ತಿಳಿವಳಿಕೆಯಿದೆ (ಶ್ರಿಹ್ಮಕೀ. ೧೩೬). [←ಹಿಂ. ಮಾಲಪೂಆ, ಮಾಲಪೂವಾ; ಮರಾ. ಮಾಲಪುವಾ, ಮಾಲಪುಆ, ಮಾಲಪುಬಾ, ಮಾಲಪೋಹಾ]

**ಮಾಲಮತ್ತೆ**, ಮಾಲುಮತ್ತೆ (ನಾ). ಆಸ್ತಿ ; ಸ್ವತ್ತು : ವಿಶ್ವಾಸನ ಮುತ್ತಜ್ಜ ಲಚ್ಚಪ್ಪ . . . ನಮ್ಮೂರಿನ ಪೇಶ್ವೆ ಜಮೀನಿನ, ಮಾಲಮತ್ತೆಯ ಸರ್ವ ವ್ಯವಹಾರದ ಪರಿಪಾಟದ ಅಧಿಕಾರಸೂತ್ರ ವಹಿಸಿ ಇಲ್ಲಿಗೆ ಬಂದವರು (ದೀಶತ. 1, ೦೦). **ಮಾಲುಮತ್ತೆ :** ಎಲ್ಲರ ಹೃದಯದಿಂದಲೂ ಉದ್ಭವಿಸಲೆಳಸುವ ನಾಳಿನ ದೈವೀಜೀವನಕ್ಕೆ ಅನೇಕ ನಾಗರಿಕತೆಗಳ ಹಾಗು ಭಿನ್ನಸಂಸ್ಕೃತಿಗಳ ಉಜ್ವಲವಾದ ಪೇಟೆಯು ಮಾಲುಮತ್ತೆಯನ್ನು ಪೂರೈಸುವ ಸಿದ್ಧತೆಯಲ್ಲಿರುವುದು ಇದಕ್ಕಿಂತ ಹೆಚ್ಚಿಗೇನೂ ಇಲ್ಲವೆಂಬಂತೆ ತೋರುವುದು (ಶ್ರಬಂಧ. ೨೦). [←ಅರ. ಮಾಲ್‌ಮತಾಅ ; ಹಿಂ. ಮಾಲಮತಾ, ಮಾಲಮತಾ ; ಮರಾ. ಮಾಲ್‌ಮತ್ತಾ]

**ಮಾಲಲ್ಲೆ** (ನಾ). (?) : ಮಾರಿಬೆಱೆತಿಯಿಂ ಬಡಗಣ ಮಣ್ಣು ಪೊಳೆವೆಡೆ ಪಟ್ಟಿಣ್ಣಾಗಂ ಮಾಲಲ್ಲೆಯ ಮಣ್ಣು ಪೊಳೆವೆಡೆ ಮೂಗಣ್ಣಾಗಮೂಮಿಾದೇಗುಲದ ಬಟಿಪೆಯಮ ಸಲ್ವುದು (ಎಕ. IV (ಐ), ಎಳಂದೂ. ೦೭೪-೮ ; ಸು. 10 ಶೆಯ ಶತ). [ ? ]

**ಮಾಲವಕೈಶಿಕ** (ನಾ). [ಸಂಗೀತ] ಒಂದು ರಾಗದ ಹೆಸರು : ಯಾವುದರಲ್ಲಿ (ಮೊದಲ ಪಾದದ) ಎರಡು ಖಂಡಗಳು (ರಚಿತವಾಗಿವೆಯೋ) ಅದು ನಂದಾವತೀ ಎನ್ನಿಸಿಕೊಳ್ಳುತ್ತದೆ. ಇವರಲ್ಲಿ ತಾಳವು ಪ್ರತಿತಾಳವೆಂಬುದು ; ರಾಗವು ಮಾಲವಕೈಶಿಕ (ಶತುಶ್ರ. ೦೨೩). [ಸಂ.]

**ಮಾಲವಗೌಲ**, ಮಾಳವಗೌಳ (ನಾ). [ಸಂಗೀತ] ಒಂದು ರಾಗದ ಹೆಸರು : ಮಾಲವಗೌಲವೆಂಬುದು (೩೪) ಪೂರ್ಣ : ಸ_ಗ್ರಹ ; ಯಾವಾಗಲೂ ಹಾಡಲ್ಪಡುತ್ತದೆ (ಶತುಶ್ರ. ೦೩೪). **ಮಾಳವಗೌಳ :** ಕರ್ಣಾಟಗೌಳ . . . ಮಾಳವಗೌಳ . . . ದ್ರಾಮಿಡಗೌಳವೆಂಬೇಳುಂ ಉಪಾಂಗಗೌಳರಾಗಂಗಳು (ಚಿಶೀಕ. ೨೩೪). [ಸಂ.]

**ಮಾಲವಪಂಚಮ** (ನಾ). [ಸಂಗೀತ] ಒಂದು ರಾಗದ ಹೆಸರು : ಮಾಲವಪಂಚಮವು (೨೪) (ಸಂ)ಪೂರ್ಣ, ಆರೋಹದಲ್ಲಿ ಧ– ವನ್ನು ಬಿಟ್ಟಿದೆ; ಷಡ್ಜಗ್ರಹವನ್ನು ಕೂಡಿಕೊಂಡಿದೆ, ಎಲ್ಲ ಕಾಲಗಳಲ್ಲಿಯೂ ಹಾಡಲ್ಪಡುತ್ತದೆ (ಶತುಶ್ರ. ೦೩೫). [ಸಂ.]

**ಮಾಲವಶ್ರೀ**, ಮಾಳವಶ್ರೀ (ನಾ). [ಸಂಗೀತ] ಒಂದು ರಾಗದ ಹೆಸರು : ಮಾಲವಶ್ರೀ ರಾಗವು (೨೩) ಷಾಡವವಾಗಿದೆ ; ರಾಗಾಂಗ ; ರಿಷಭವನ್ನು ಬಿಟ್ಟಿದೆ (ಶತುಶ್ರ. ೬೦). **ಮಾಳವಶ್ರೀ :** ಮಧು ಮಾಧವೀ . . . ಮಾಳವಶ್ರೀ . . . ಕರ್ಣಾಟ ಬಂಗಾಳವೆಂದಿಪ್ಪತ್ತು ರಾಗಂಗಳೇ ರಾಗಾಂಗದಿಂದುದಿಸಿದವು (ಚಿಶೀಕ. ೨೩೩). [ಸಂ.]

**ಮಾಲವ್ಯ** (ನಾ). ಪ್ರಮಾಣಕ್ಕೆ ಅನುಸಾರವಾಗಿ ವಿಂಗಡಿಸಿರುವ ಐದು ಪ್ರಕಾರದ ಮನುಷ್ಯಜಾತಿಗಳಲ್ಲಿ ಒಂದು : ವರಾಹಮಿಹಿರನು ಮನುಷ್ಯರನ್ನು ಶರೀರದ ಅಳತೆ ಆಕಾರದ ಮೇಲೆ, ಐದು ಜಾತಿಗಳನ್ನಾಗಿ ವಿಂಗಡಿಸುತ್ತಾನೆ. ಹಂಸ, ಶಶ, ರುಚಕ, ಭದ್ರ, ಮಾಲವ್ಯ—ಎಂಬುವೇ ಈ ಐದು ಜಾತಿಗಳು (ಭಾರದ. ೩೦೭). [ಸಂ.]

**ಮಾಲಾಕಂದ** (ನಾ). ಒಂದು ಬಗೆಯ ಸಸ್ಯ ಮತ್ತು ಅದರ ಗಡ್ಡೆ : "ಆವಲಿಕಂದಃ – ಮಾಲಾಕಂದ" (೬೫೦. ೦೨). [ಸಂ.]

**ಮಾಲಾಕಾರ**, ಮಾಳಾಕಾರ (ನಾ). ಮಾಲೆಗಾರ ; ಹೂವಾಡಿಗ : "ಮಾಲಾಕಾರಃ, ಮಾಲಿಕಃ – ೨ ಹುವ್ವಾಡಿಗನ ಹೆಸರು" (ಸಿದ್ಧಾಂತಿ. ೩೦೯) ; ಇಂತೆಸೆವ ಮಾಲಾಕಾರವಧೂಜನಂಗಳಿಂ ಚೆಲ್ವುವೆತ್ತು ಪಲ್ಲವೋಲ್ಲಸಿತಮಪ್ಪ ಗಾಣಿಕ್ಯಸದನಪಂಕ್ತಿಗಳೊಳ್ . . . ಗುರುನಿತಂಬೆಯರ್ ಸೊಗಯಿಸುವರ್ (ಜಗಂ. ೨-೨೯ ವ) ; ಚತುರರವಿಯಾದವಂ ಸತ್ಕೃತಿವೇಟ್ಟುದು ತನಗಮಿತರ ಜನಕಂ ಸುಮನಃಸ್ಥಿತಿವಾಸನೆಬಿಡದಿರೆ ಸನ್ನುತಮಾಲೆಯನೆತ್ತುವಂತೆ ಮಾಲಾಕಾರಂ (ಧರ್ಮಾಪಾ. ೦-೯೫). **ಮಾಳಾಕಾರ :** "ಮಾಳಾಕಾರಃ, ಮಾಲಿಕಃ, ಪಾರಿಹಾರಿಕಃ — ಈ ೩ ಮಾಲೆಗಾಱಂ" (ಹಲಾಯು. ೯೬-೯೩೫) ; ಸೌರಭಚಯಂ ಸುಯ್ಗೆಬಿನಿಂದಾವಗಂ ದಳವೇಱುತ್ತಿರೆ ಪೂತ ಜಂಗಮಲತಾಸಂದೋಹಮೆಂಬಂತೆ ರಙ್ಗೊಳಿಸುತ್ತಿರ್ಪುದು ಮಾಲೆವೂದಳೆದ ಮಾಳಾಕಾರನಾರೀಜನಂ (ಶಂಪ್ರಪು. ೦-೦೩೨). [ಸಂ.]

**ಮಾಲಾದೀಪಕ** (ನಾ). [ಕಾವ್ಯಮಿಾ]ಒಂದು ಬಗೆಯ ಅರ್ಥಾಲಂಕಾರ ; ದೀಪಕ ಮತ್ತು ಏಕಾವಳಿ ಅಲಂಕಾರಗಳ ಲಕ್ಷಣಗಳು ಒಟ್ಟಿಗೆ ಸೇರಿ ಆದ ಅಲಂಕಾರ : ದೀಪಕಲಕ್ಷಣಂ ಏಕಾವಳೀಲಕ್ಷಣಮುಮೊಂದುವೆರದಿರೆ ಮಾಲಾದೀಪಕಮೆನಿಪುದು (ಅಕ್ರತಿ. ೯೬-೦೭) ; ದೀಪಕೈಕಾವಳಿಯು ಕೂಡಿಸಿ ಪೇಳೆ ಮಾಲಾದೀಪಕಾಲಂಕಾರವು (ಕುವಂ. ೯೬-೦). [ಸಂ.]

**ಮಾಲಾಪ್ರಸವ** (ನಾ). [ಜ್ಯೋತಿ] ಮಾಲಾಯೋಗದಲ್ಲಿ ಹುಟ್ಟಿದವನು : ಸುಖಸಮೇತನೆನಿಕುಂ ಮಾಲಾಪ್ರಸವನರಂ (ಜಾತತಿ. ೦೩-೦೯). [ಸಂ.]

**ಮಾಲಾಯೋಗ** (ನಾ). [ಜ್ಯೋತಿ] ಮೂರು ಕೇಂದ್ರಸ್ಥಾನಗಳಲ್ಲಿ ಮೂರು ಶುಭಗ್ರಹಗಳು ಇರುವ ಒಂದು ಯೋಗ : ಕ್ರೂರತ್ರಯಮಿರೆ ಕೇಂದ್ರಾಗಾರತ್ರಿತಯದೊಳೆ ಸರ್ಪಯೋಗಂ ಕೇಂದ್ರಾಗಾರ ತ್ರಿತಯಂಗಳೊಳಕ್ರೂರತ್ರಯಮೊಂದಿದೆಂದು ಮಾಲಾಯೋಗಂ (ಜಾತತಿ. ೦೩-೯). [ಸಂ.]

**ಮಾಲಾರೂಪಕ** (ನಾ). [ಕಾವ್ಯಮೀ] ಒಂದು ಬಗೆಯ ರೂಪಕ : ವರ್ಣಿಸುವ ಒಂದು ವಿಷಯವನ್ನು ಅನೇಕ ಪ್ರಕಾರವಾಗಿ ನಿರೂಪಣ ಮಾಡುವುದು : ಮಾಲಾರೂಪಕಕ್ಕೆ : ಸಂಸಾರಕ್ಕೇಕಸಾರಂ ಬಿಡಿಯ ಕುಲಧನಂ . . . ಜಾಣ ಮೆಯ್ ನಾಣ ಜೀವಂ ಮಾಂಸಾಶೀನಿರ್ನಿರೀಂತ ಪ್ಪೆಳೆಯುಳನಿಜಿಸಿಲ್ಕೆಂತು ನೀನೆತ್ತಿಕೊಂಡಪ್ (ಕಾವ್ಯಾವ. ೬೯೩) ; ವರ್ಣ್ಯ ವೊಂದನ್ನು ಅನೇಕಪ್ರಕಾರವಾಗಿ ನಿರೂಪಣಮಾಡಿದ್ದಲ್ಲಿ ಮಾಲಾರೂಪಕ ವೆನ್ನಿಸಿಕೊಳ್ಳುವುದು (ಕೈಪಿ. ೨೬೪). [ಸಂ.]

**ಮಾಲಾರ್ಪಣ** (ನಾ). (ಗೌರವಾರ್ಥವಾಗಿ) ಹಾರವನ್ನು ಅರ್ಪಿಸು ವಿಕೆ : ಸಮಾರಂಭದ ಕಡೆಯಲ್ಲಿ ಕಾರ್ಯದರ್ಶಿಗಳು ಅತಿಥಿಗಳಿಗೆ ಮಾಲಾ ರ್ಪಣ ಮಾಡಿದರು (ರೂಢಿ). [ಸಂ.]

**ಮಾಲಾರ್ಪಣೆ** (ನಾ). = **ಮಾಲಾರ್ಪಣ** : ಕೆಲವು ಸಮಾರಂಭಗಳಲ್ಲಿ ಅತಿಥಿಗಳಿಗೆ ಮಾಲಾರ್ಪಣೆ ಮಾಡುವುದರ ಬದಲು ನೆನಪಿಗಾಗಿ ಕೆಲವು ಪುಸ್ತಕಗಳನ್ನು ನೀಡುವ ವಾಡಿಕೆಯಿದೆ (ರೂಢಿ). [ಸಂ. ಮಾಲಾರ್ಪಣ]

**ಮಾಲಾವೃತ್ತ**, ಮಾಳಾವೃತ್ತ (ನಾ). [ಛಂದ] ಒಂದು ವೃತ್ತದ ಹೆಸರು; P ಇಪ್ಪತ್ತಾರು ಅಕ್ಷರಗಳ 'ಉತ್ಕೃತಿ' ಎಂಬ ಛಂದೋರೂಪದಿಂದ ಮುಂದಕ್ಕೆ ಹೆಚ್ಚು ಅಕ್ಷರಗಳುಳ್ಳ ಕೆಲವು ವೃತ್ತಗಳನ್ನು ಒಟ್ಟು ಗೂಡಿಸಿ ಅವುಗಳನ್ನು 'ಮಾಲಾವೃತ್ತ'ಗಳೆಂದು ಒಟ್ಟಾಗಿ ಹೆಸರಿಸಿ ರುವುದು ಪ್ರಾಚೀನ ಛಂದೋಗ್ರಂಥಗಳಲ್ಲಿ ಕಂಡುಬರುತ್ತದೆ. ಇವುಗಳಲ್ಲಿ ಒಂದನ್ನು ಮಾಲಾವೃತ್ತವೆಂದು ಬೇರೆಯಾಗಿ ಗುರುತಿಸಿ ರುವುದೂ ಕಂಡುಬರುತ್ತದೆ. ಇದು ದಂಡಕವೆಂಬ ರಚನೆಯನ್ನು ಸ್ವಲ್ಪಮಟ್ಟಿಗೆ ಹೋಲುತ್ತದೆ ಎನ್ನಬಹುದು : ಮದಪದಿಭಗಮನೆ . . . ಮಾಲಾವೃತ್ತದ ಪಾಂಗನೆಯ್ದು ಕೇಳ್ (ಛಂದೋಂಬು. ೩-೨೦೩). **ಮಾಳಾವೃತ್ತ** : ಅಪಜಂ ಪೊಜಗೆ ಮಾಳಾವೃತ್ತ ದಂಡಕಂಗಳ್ ಮಾತ್ರಾನಿಯಮಸ್ಕಂಧಕಾದಿಜಾತಿಗಳೆಂಬಿವಕ್ಕುಂ (ಛಂದೋಂಬು. ೧-೪೬ ೭). [ಸಂ.]

**ಮಾಲಿ**, **ಮಾಳಿ₁** (ನಾ). ೧. ಮಾಲೆಯನ್ನು ಧರಿಸಿದವನು : ಹಾರವನ್ನು ಧರಿಸಿದವನು. ೨. ಹೂವಾಡಿಗ : ಮಾಲೆಗಾರ : "ಮಾಳಾಕಾರಂ (ಮಾಲಿ)" (ಪಸ್ತುಕೋ. ೬೯-೬೪) : ಬಿರಿವ ಮುನ್ನವೆ ಉದುರಿಹೋದ ಮೊಗ್ಗುಗಳೆನಿತೊ ಬಿರಿದು ಮಾಲಿಯ ಕೈಗೆ ತುತ್ತಾದುವೆನಿತೋ! (ಕರುಣಾ ೦೩-೬) ; ಮಾಲಿ ಹೂವು ಸರಪರಾಜು ಮಾಡುತ್ತಾನೆ (ಶಿಬಂಧ. II. ೧೯೬). ೩. ತೋಟದ ವ್ಯವಸಾಯವನ್ನು ಮಾಡಿ, ಮೇಲ್ವಿಚಾರಣೆ ನೋಡಿ ಕೊಳ್ಳುವವನು ; ತೋಟಗಾರ : ತೊಳಗುತಿಪೆ ತೋಟದಲಿ ತರತರ ಗುಲಾಬಿಹೂ . . . ನೋಡಿಕೊಳ್ಳಲು ಮಾಲಿ ! (ಕುಣಿತ. ೬-೭) : ನೀನು ನಿನ್ನಯ ಮಾಲಿಯೊಂದಿಗೆ ಮರಳಿ ಬಾ ಈ ತೋಟಕೆ (ಚಂದ್ರಮಾ. ೪೦-೩). ೪. ದೇವರ ಪೂಜೆಗೆ ಹೂವನ್ನು ಒದಗಿಸುವ ದೇವಸ್ಥಾನದ ಒಂದು ಪರಿಚಾರಕವರ್ಗ ಮತ್ತು ಆ ವರ್ಗಕ್ಕೆ ಸೇರಿದ ವ್ಯಕ್ತಿ : ದೇವಸ್ಥಾನದ ಸೇವಕರು (Temple servants) ಅಂಬಲವಾಸಿ, ಬಲಿಯ, ದೇವಡಿಗ, ದೇವಾಳಿ, ಮಾಲಿ . . . ಸ್ಥಾನಿಕ, ವಾರಿಯರ್ (ತುಳುನಾ. ೨೬೨). **ಮಾಳಿ₁** : ೩. 'ನಾನು' ಒಕ್ಕಲುತನ ಮಾಡುತ್ತೇನೆ . . . ಗೋವಳ, ತಳವಾರ, ಮಾಳಿ, ಸಿಪಾಯಿಯಾಗಿ ಕೆಲಸಮಾಡುತ್ತೇನೆ (ವಚಸಂ. XXVI. ೩೪೧ ಪ್ರವೇಶ) ; ನನ್ನನ್ನು ಎಚ್ಚರಿಸಿದವನು ತೋಟದ ಮಾಳಿ (ಹೇಮಂತ. ೦೬೩). [ಸಂ. ಮಾಲಿನ್]

**ಮಾಲಿಕ₁** (ನಾ). ೧. ಹೂವಿನಲ್ಲಿ ವ್ಯವಹರಿಸುವವನು : ಹೂವಾಡಿಗ : ಮಾಲೆಗಾರ : "ಮಾಳಕಾರಃ, ಮಾಲಿಕಃ, ಪಾರಿಹಾರಿಕಃ —ಈ ೩ ಮಾಲೆಗಾರನ" (ಪಲಾಮು. ೯೬-೯೩೩) ; ಬರಪಿತ್ತು ಮಾಲಿಕಂಗಾ ನಳನೇಕ್ಷಣಂ ತಳರ್ದನುತ್ಸವದಿಂ (ಜಗದಿ. ೬-೦೭). 'ಕುಸುಮಮಾಲಿಕ' ನೋ. ೨. ತೋಟಗಾರ. [ಸಂ.]

**ಮಾಲಿಕ₂**, ಮಾಲಕ₂, ಮಾಲೀಕ (ನಾ). ಯಜಮಾನ : ಒಡೆಯ : ಈ ಗಿರಣಿಯ ಮಾಲೀಕರು ಹೇಡಿಗಳು, ಅತ್ಯಾಚಾರಿಗಳು (ಛಾರ. ೬೬) : ಚಂದ್ರಣ್ಣ ಆ ಊರಿನ ಜಮೀನುದಾರ. ಐವತ್ತು ಎಕರೆ ತೋಟದ ಮಾಲಿಕ (ಪಸ್ನು ಓ. ೨೨). **ಮಾಲಕ₂** : ಮಾಲಕ ಮನೆಯಲ್ಲಿಲ್ಲ ಅಂತಾ ಮೊದಲೇ ಏಕೆ ಹೇಳಲಿಲ್ಲ ? (ತಂಮುಟ. ೯೩) ; ಇದು ನವಾಬನ ಸಂಪತ್ತಿಯು, ಅವನೇ ಇದರ ಮಾಲಕನು (ಮಂದಾರ. ೬೬). **ಮಾಲೀಕ** : ರೈಲ್ವೆರಸ್ತೆ ಗಳಲ್ಲಿ ರೈತರು ದನಗಳನ್ನು ಬಿಟ್ಟರೆ ಹಾಗೆ ಬಿಟ್ಟಂಥಾ ದನಗಳ ಮಾಲೀಕ ರನ್ನು ಪತ್ತೆಮಾಡಿಕೊಡುವುದು ಗ್ರಾಮಾಧಿಪತಿಯ ಕರ್ತವ್ಯವಾಗಿರುವುದು (ಗ್ರಾಮಶಿಕ. ೦೩೮) : ನಾನ ನೆರೆಯ ಜಮೀನಿನ ಮಾಲೀಕ (ಕುಮಾ. ೨೮೨).
[ ←ಅರ. ಪಾರ. ಹಿಂ. ಮಾಲಿಕ್ : ಮರಾ. ಮಾಲಕ್ ]

**ಮಾಲಿಕೆ** (ನಾ). ೧. ಹೂವುಗಳನ್ನು ಸೇರಿಸಿ ಕಟ್ಟಿದ ಮಾಲೆ ; ಹಾರ : ಅಖಿಳಶಿವಭಕ್ತಪುಂಗವರ ನಿರ್ಮಾಲ್ಯಕುಸುಮಚಯಂಗಳಿಂ ಮಾಲಿಕೆಗಳಂ ರಚಿಸಂಗದಲ್ಲಿ ನೆಜಿಗ ಸುತ್ತಿ ಮತ್ತೆಯುಂ ಪೇಮಂಗುರುಮೂರ್ತಿ . . : ವಂದಿಸುತ (ಬಸವ. ೪೬-೬೨) ; ಶಿವಪೂಜೆಗಳವಟ್ಟ ಕುಸುಮಂ ಬೇಜಾಯ್ತು ತವೆ ಬಹುವಿಚಿತ್ರತರಮಾಲಿಕೆಗಳಂ ಸವೆದು (ರಾಜಶೇ. ೦೦-೩೬ ಠಗಳ). ೨. ಕೊರಳಿನಲ್ಲಿ ಧರಿಸುವ ಆಭರಣ : ಸರ. ೩. ಸಾಲು ; ಪಂಕ್ತಿ. ನಮ್ಮ ದೇಶವು ಉನ್ನತಸ್ಥಿತಿಗೆ ಬರುವುದು ; ಜಗತ್ತಿನ ಪ್ರಮುಖ ರಾಷ್ಟ್ರ ಗಳ ಮಾಲಿಕೆಯಲ್ಲಿ ಸೇರುವುದು (ಯುಕ್ತಸ್ರ. ೦೪). ೪. ಒಂದು ಬಗೆಯ ಜಾಟಿ. ೫. ಸಣ್ಣ ಒಳದಿರುವ ಅರಮನೆ ; ಸೌಧ. ೬. ಐವತ್ತು ನಾಲ್ಕು ಬಗೆಯ ಮಂತ್ರಸಾಧನಗಳಲ್ಲಿ ಒಂದು : ಷಡಾಮ್ನಾಯ ಮೂಲ ಗುರುಪರಂಪರೆ . . . ಪಂಜರ ಮಾಲಿಕೆ ಮೂಲಿಕೆ ತಂತ್ರಬಲಿ ಆತ್ಮೇಕ್ಯಗಳೆಂಬ ಪಂಚಚತ್ವಾರಿಂಶನ್ಮಂತ್ರಸಾಧನಂಗಳೊಳು ಪ್ರಜ್ಞೆಗೊಂಡು (೬ದೇಪ. ೯೦). [ ಸಂ. ಮಾಲಿಕಾ]

**ಮಾಲಿಖಾನೆ** (ನಾ). ಅಧಿಕಾರವನ್ನು ಕಳೆದುಕೊಂಡ ರಾಜ, ಜಮೀನು ದಾರ ಮುಂತಾದವರಿಗೆ ಕೊಡುವ ಮಾಸಾಶನ ಅಥವಾ ವರ್ಷಾಶನ: ಬಂಗರಾಜನಿಗೆ ಬ್ರಿಟಿಷರು ಮಾಲಿಖಾನೆಯನ್ನು ಕೊಟ್ಟು ಇರಿಸಿದ್ದರು (ವಶಿತ. ೨೪) ; ತಿಂಗಳು ತಿಂಗಳು 'ಮಾಲಿಖಾನೆ' ಯನ್ನು ಕಳುಹಿಸುವುದ ರಿಂದ ನಾನು ಚಿರಂಜೀವಿಯಾಗಿರಬೇಕು (ಘೂಮಳ. ೨).
[←ಪಾರ. ಮಾಲಿಕಾನಹ್ : ಹಿಂ. ಮಾಲಿಕಾನಾ./ತುಳು. ಮಾಲಿಕಾನ್]

**ಮಾಲಿಗ** (ನಾ). ಮಾಲೆಯನ್ನು ಕಟ್ಟುವವನು.— ತಯಾರಿಸುವವನು : ಮಾಲೆಯಂ ಮಾಡುವಂ. ಮಾಲೆಗಾಜಿಂ . . . ನ ವಿನೋದಾರ್ಥಂ ಮಾಲಾ ಕುರ್ವನ್ ತತ್ರ ತು ಮಾಲಿಗ ಇತಿ ಪೂರ್ವೇಣ ಇಗ ಪ್ರತ್ಯಯ ಏವೇತಿ (ಶಬ್ದಾನು. ೪೦೦ ವ್ಯಾಖ್ಯಾ). [ಮಾಲೆ + — ಇಗ]

**ಮಾಲಿಗಾಜಿ** 'ಮಾಲಗಾಜಿ' ನೋ.

**ಮಾಲಿಗೆವುಂಟಗೆ** ? (ನಾ). (?) : ಕಂತುಮಹೋತ್ಸವಂ ರತಿಯ ನೋಂಪಿ ವಸಂತ ನೃಪಾಲಪೂಜೆಯೊಡ್ಡಂತಿಯಪೂರ್ವದಾನತಿಥಿ ಮಾಲಿಗೆ ವುಂಟಗೆ ( ? ) ಜನ್ಮತಾರೆಯೆಂದಿಂತತಿಕೀರ್ತಿಯಿಂ ಪ್ರತಿದಿನಂ ತನಗಾಂ ಮಿಗೆ ಮಾಡಿದಳ್ಗೆ ದುಃಖಂ ತಲೆದೋರ್ಪಪೋಲ್ ಮುನಿದು ಬಂದಪಳಲ್ಲಿಗೆ ದೀಕ್ಷೆಗೊಳ್ಳಸಂಗಂ (ದಶಕು. ೯-೦೭). P ಇಲ್ಲಿ ಎರಡು ಪದಗಳಿರ ಬಹುದೆ ? [ ? ]

**ಮಾಲಿನಿ** (ನಾ). ೧. ಹೂವನ್ನು ಮಾಲೆಯಂತೆ ಕಟ್ಟಿ ಮಾರುವವಳು : ಹೂವಾಡಗಿತ್ತಿ. ೨. ಹಾರವನ್ನು ಧರಿಸಿರುವವಳು. ೩. ದುರ್ಗೆಯ ಒಂದು ರೂಪ. ೪. (ದುರ್ಗೆಯ ಪರಿಚಾರಕವರ್ಗಕ್ಕೆ ಸೇರಿದ) ಹೆಣ್ಣುಪಿಶಾಚಿ : ಈಗಳೆ ಕೊಂದು ಪೋಟಿಸಿ ಶಾಳಿಸಿ ಗಮ್ಮನೆ ನಿಮ್ಮ ನಿಮ್ಮ ಮಾಲಿನಿಯರ್ಗೆ ಬಲಿಗುಡುವೆಂ (ರಾಜಶೇ. ೦೦೨-೦೦): ಅಜಜುವ

ಶಿವಗಣಂಗಳ ಪರ್ವದ ಮಂಕಡರಾರ್ವ ಮಾಲಿನಿಯರ ಜೂಟ್ಟಿ ಬಳ್ಳಗಳ . . . ಕೋಲಾಹಲಂ ಬಿಜಯಸಾಗಲೊಡಂ (ರಾಮಾಶ್ವ. ೦೩೨-೨೨). ೫. [ಛಂದ] ಹದಿನೈದನೆಯ ಅತಿಶಕ್ವರಿಛಂದಸ್ಸಿನ ಒಂದು ವೃತ್ತದ ಹೆಸರು: ಅಮರಗಣಯುಗಂಗಳ್ಮಂತೆ ಭೂತೋಯಯುಗ್ಮಂ ಕ್ರಮದೆ ನಿಲೆ ಬೆಡಂಗಂ ತಾಳ್ದು ಬಂದಾ ವಿರಾಮಂ ವಿಮಲವೆಣಿಪುದೆಂಟೆಂಬಲ್ಲಿ ನಿಲ್ತಂದೊಡಕ್ಕುಂ ಸಮದಗಜಗತೀ ಕೇಳ್ ಮಾಲಿನೀನಾಮವೃತ್ತಂ (ಛಂದೋಂಬು. ೨-೦೫೩): ನನಮಯಯುಗಣಂಗಳ್ ಮಾಲಿನೀವೃತ್ತಮಕ್ಕುಂ (ಕ್ವಿಬೋ. ೬೩).

[ ಸಂ. ಮಾಲಿನೀ ]

**ಮಾಲಿನ್ಯ** (ನಾ). ೧. ಕಲ್ಮಶ : ಕೊಳೆ : ಮಾಲಿನ್ಯಂ ವಿಮಲದೊಳಾಗಲಾಗ ದೆಂಬಂತಾ ಲೀಲಾವಿಮಲಸರೋವರಂ ತರಂಗವ್ಯಾಲೋಲಂ ತಳೆದುದು ಕಜ್ಜಳಾಳಿಯಂ ತದ್ವ್ಯಾಲಾಲೋಚನಕುಮುದಂಗಳಿಂದಮಾಗಳ್ (ಲೀಲಾವ. ೦೯-೩); ಅರ್ಜುನನ ಬುದ್ಧಿ ತಿಳಿಯಾಗುತ್ತದೆ. ಮನದ ಮಾಲಿನ್ಯ ಮಾಯ ವಾಗುತ್ತದೆ (ಧರ್ಮಗೀತಾ. ೦೦೩). ೨. ಮಬ್ಬು : ಮಸುಕು : ಕ್ಷತ್ರ ಮತ್ತು ಧರ್ಮಗಳು ಪರಸ್ಪರ ಪೋಷಕಗಳಾಗಿರುವುದರಿಂದ ಕ್ಷಾತ್ರಶಕ್ತಿ ಕುಂಠಿತ ವಾದಾಗೆಲ್ಲ ಧರ್ಮದ ಪ್ರಕಾಶಕ್ಕೆ ಮಾಲಿನ್ಯ ಸಹಜ (ಪುಣ್ಯಾರ. ೦೦೯ ಟೀಕೆ).

[ಸಂ.]

**ಮಾಲಿಶ್**. ಮಾಲೀಷ್, ಮಾಲೀಸ್, ಮಾಲೀಸು (ನಾ). ೧. (ಮೆರುಗು ಬರುವಂತೆ) ಉಜ್ಜುವುದು ; ತಿಕ್ಕುವುದು. ೨. (ಅಲಂ) ಪುಸಲಾವಣೆ: ಬೆಣ್ಣೆಹಚ್ಚುವಿಕೆ : ದೇವರಿಗೆ ಮಂಗಳಾರತಿ ಅರ್ಪಿಸಿ, ನಾಳೆಯಿಂದ ಮತ್ತೆ ನಮ್ಮ ಮಾಲಿಶ್ ಸುರುವಾಯಿತೆಂದು ಆಗಾವು ಸೂಚನೆ ಕೊಟ್ಟಿಟ್ಟೆವು (ಲೇಶಹ. II. ೨೩೯). **ಮಾಲೀಷ್** : ೧. ಕರಾರಿಂದ ಕೆರೆಕೆರೆದು ಮಾಲೀಷ್ ರ್ಮಗೇಲಿ ಹಾಕುವುದಕ್ಕಾರಂಭಿಸಿದ್ದ (ದಿನಾಂ. ೩೭). **ಮಾಲೀಸ್**: ೧. ಕೆಂಪು ತೈಲದಿಂದ ಕಿಬ್ಬುಹೊಟ್ಟೆಯ ಮೇಲ್ಗಡೆಯಿಂದ ಕೆಳಕ್ಕೆ ಮಾಲೀಸ್ ಮಾಡ ಬೇಕು (ದಿಶಿ. ೩೨); ಅವರಿಬ್ಬರೂ ಒಬ್ಬರು ಸಾಬರ ಹತ್ತಿರ ಕೆಲಸಕ್ಕಿದ್ದರು; ಕುದುರೆಚಾಕರಿ . . . ಮಾಲೀಸ್ ಮಾಡಬೇಕು (ತಂಗೂಂ. ೭೩). **ಮಾಲೀಸು**: ೧. ಹೇಗಿದೆ ನೋಡಿ -- ಮಾಲೀಸಿನ ಪ್ರತಾಪ ? (ಗಂಗಾವ. ೯೩); ಆದಕ್ಕೆ ಮಾಲೀಸು ಅಪ್ಪಾಜಿಯೇ ಮಾಡುತ್ತಿದ್ದರು (ಕೆಂಗಾಳ್ಮ. ೨೩); ಹೊಟ್ಟೆ ತುಂಬಾ ಹುರುಳಿಯಿಲ್ಲ, ಕುದುರೆಗೆ ಮಾಲೀಸು ಮೂರುತಾಸು (ಗಾದೆ).

**ಮಾಲಿಶ್‌ಮಾಡು**, **ಮಾಲೀಸ್‌ಮಾಡು**, **ಮಾಲೀಸುಮಾಡು** = ೧. (ಎಣ್ಣೆ ಮೊದಲಾದುವುಗಳನ್ನು ಸವರಿ) ಉಜ್ಜು ; ತಿಕ್ಕು : ಮಾಲಿಶ್ ಮಾಡಿದ ಕುದುರೆಯ ಮೈ ಹೊಳೆಯುತ್ತಿದೆ (ರೂಢಿ); ಸೊಂಟದಲ್ಲಿ ಸೆಳೆತ ವಾದರೆ ಮೂತ್ರಕೋಶದ ಮೇಲೆ ಹಸುರುತೈಲವನ್ನೂ ಸೊಂಟದ ಮೇಲೆ ನೀಲಿತೈಲವನ್ನೂ ಮಾಲೀಸ್ ಮಾಡಬೇಕು (ದಿಶಿ. ೩೨) ; ಧನಿಯರ ಮತ್ತು ತಮ್ಮ ಮನೆಯ ಎತ್ತು, ಕೋಣಗಳನ್ನು ನೀರಲ್ಲಿ ನಿಲ್ಲಿಸಿಕೊಂಡು ಮಾಲೀಸು ಮಾಡುವುದೂ ಉಂಟು (ಸ್ವಸ್ವಹೊ. ೦೩). ೨. (ಅಲಂ) ಗಿಲೀಟಿನ ಮಾತ ನ್ನಾಡಿ ಮೆಚ್ಚಿಸು : ಪೂಸಿಮಾಡು : ಕೆಲಸ ಆಗೋವರೆಗೂ ಚೆನ್ನಾಗಿ ಮಾಲೀಶ್ ಮಾಡಿ. ಆಮೇಲೆ ತಿರುಗಿಯೂ ನೋಡದೇ ಇರೋದು ಕೆಲವರ ಸ್ವಭಾವ (ರೂಢಿ). **ಮಾಲೀಸಿನ ಮಾತು** = (ಅಲಂ) ಬೇರೆಯವರು ನಂಬು ವಂತೆ ಆಡುವ ಮಾತು ; ಬಣ್ಣಹಚ್ಚಿ ಆಡುವ ಮಾತು : ಗರುಡಾ ಚಾರ್ಯ ಬಹಳ ಮೃದುವಾಗಿ ನಗುತ್ತ ದಾಸಾಚಾರ್ಯನ ಮಾತಿಗೆ ತಾನು ಒಪ್ಪಿದೆ ಎನ್ನುವಂತೆ ನಟಿಸುತ್ತ ಹೇಳಿದ. ಇದರಿಂದ ಮಾಲೀಸಿನ ಮಾತು ಗೊತ್ತಿಲ್ಲದ ಲಕ್ಷ್ಮಣಾಚಾರ್ಯನಿಗೂ ಸಂತೋಷವಾಯಿತು (ಸಂಸ್ಕಾರ. ೩೮).

[←ಪಾರ. ಹಿಂ. ಮಾಲಿಶ್ : ಮರಾ. ಮಾಲಿಶ್, ಮಾಲಿಸ್, ಮಾಲೀಶ್. ಮಾಲೀಸ್]

**ಮಾಲಿಸು** (ಕ್ರಿ). ೧. ಕಡೆಗಣ್ಣಿನಿಂದ ನೋಡು; ಓರೆಗಣ್ಣಿನಿಂದ ನೋಡು: "ಮಾಲಿಸು ಕಟಾಕ್ಷೇ (ಕಡೆಗಣ್ಣಿನಿಂದ ನೋಡು). ದೀರ್ಘಾಲೋಕೇ ಚ (ಬಹಳ ಹೊತ್ತು ನೋಡು)" (ಶಮದ) : ಮೆಲ್ಲನಡಿಯಿಡುವೆರ್ಯವ ಜೀವಿತೇಶನ ನುಡಿಗೆ ಪಡಿನುಡಿಗುಡೆಯುಂ, ನುಡಿಯದಿರೆಯುಮಾಜದೆ ಕಾಂತೆ ಕೆಲನ ಕೆಳದಿಯುಂ ಮಾಲಿಪಂದು (ರಾಮಾಶ್ವ. ೨೦-೦೯). ೨. ನೆಟ್ಟ ದೃಷ್ಟಿಯಿಂದ ನೋಡು; ಒಂದೇ ಸಮನೆ ನೋಡು: ಆಲಿಸುತಿವೆ ಮಾಲಿಸುತಿವೆ ಹರಿಣದ ಜತೆ ಹರಿಣಿ (ಗಂಗಾತ. ೦೦೭-೭) ; ಕೊನೆಮುಳ್ಗಳಂತಾಗೆ ಹಿಂದುಮುಂದುಗಳೆಲ್ಲ ಕೊನೆದು ಬಾಡಿದ ನಿರತೆಯುಂ ಮಾಲಿಸುವಳು (ಕಾಂತಾರ. ೦೦೯-೨೩೩). ೩. (ಒಂದು ಪಕ್ಕಕ್ಕೆ) ಬಾಗಿಸು; ಓರೆಯಾಗಿಸು; ವಾಲಿಸು: ಅರಿದರಿಯದೆಯ ಕಾವ್ಯ ಮಾರ್ಗದಲ್ಲಿ ನರಂ ತರುಗಳಂ ಮಾಲಿಸುತ್ತೆ—ಪೋಷ ಜಾತ್ರೆಗರಂ ಪರಿಕಿಸುತ್ತೆ ತನ್ನನರಸುವ ಕವ್ವರೆ ತೆರಂ ಬರಿಯಿಸುತಿರವರೊಡನೆ ತನ್ನನೆಯ್ದಿದರಂ (ಸಂಶಕ. ೨೦-೩೯) ; ಬಯಕೆಗಳ್ . . . ನಾಲಗೆಯೊಳಿದ್ದಂತೆ ಬೋಳ ಬಾಯ್ತೆರೆದಂ ತೋಲ್ದಟ್ಟಿ ಕೇಡುಗಳ ಬಳಿವಿಡಿಯುಲೆಳಸುತಿಹ ಮಾಲಿಸುವ ಕಪಲ್ಗಳಮಾತುಗಳನುಗಿದಂ (ಕಾಂತಾರ. ೦೨೭-೨೭೯). ೪. (ಅಲಂ) ಏರು ಪೇರು ಮಾಡು ; ಬದಲು ಮಾಡು; ವ್ಯತ್ಯಾಸಗೊಳಿಸು : ಸತ್ಕಥೆಯ ಮಾಲಿಸದೆ[ಪಾಠಾಂ. ಅಲಸದೆ]ಮುಗರುಹು ಗರುಡೋರಗರ ವೈರಂಗಳು ಬಂದ ಕಾರಣಗಳ ತಿಳಿವಂತೆ ವಿಸ್ತರಿಸಬೇಕೆಮಗೆ (ತುರಂಗ. ೩-೧೦).

[ಮಾಲು₁ + — ಇಸು₃]

**ಮಾಲೀಕ** 'ಮಾಲಿಕ₂' ನೋ.

**ಮಾಲೀದಿ** 'ಮಾಲದೀ' ನೋ.

**ಮಾಲೀಷ್** 'ಮಾಲಿಶ್' ನೋ.

**ಮಾಲೀಸ್** 'ಮಾಲಿಶ್' ನೋ.

**ಮಾಲೀಸು** 'ಮಾಲಿಶ್' ನೋ.

**ಮಾಲು₁** (ಕ್ರಿ). ೧. ಓರೆಯಾಗು : ಬಾಗು ; ಓಲು : ಮೇಲಯ್ಯನೊಡನೈ ತಂದಾಂ ಪೊಕ್ಕು ನಿಜಾಲಯವನು ಮೇಲ್ವಸನಿಯ ಕಾಲಿಗೆಜಗಿ ಸುಖ ವಿರ್ಪನ್ನ ಮೆಲ್ಲನೆ ಮಾ[ಪಾಠಾಂ. ವಾ]ಲಿತು ಪಡುನೇಸಜುಬಟ್ಟು (ಸೊಬಗಿನೋ. ೦೩-೩೭); ರಾಲಿಪ ಪದ್ಮಕೈರವನಾಳ ಸತುಗುಂದಿ ಮಾಲಿದುವೆಸಳ್ಗಳು ಬಾಡಿ (ಮೋಹತ. ೯-೪೩) : ನನ್ನ ಮಾಲಿದಂಗುಲಿಯನ್ನು ನೇರವಾಯ್ತಿಲ್ಲೆಂದ ಮೋಲೆಲ್ಲರೆದ್ದರಾ ಕ್ಷಣವೆ (ಶರಕ. ೯೯-೦೨೦). ೨. ತೂಗಾಡು; ತೊನೆದಾಡು; ಒಲೆ : ಇಂತು ಮದಿರಾಪಾನವಂ ಮಾಡಿ . . . ಮಾಲುತುಂ ಜೋಲುತುಂ ತೇಲುತುಂ ಪಲೆಯುತುಂ ಮನಂಗೊಳಿಪ ತದ್ವನಿತಾಜನ ಮಧ್ಯದಲ್ಲಿ . . . ಇರ್ದಂ (ಉದ್ಭಟ. ೩-೯೦ ವ) ; ಚೆಂದವ ನೋಡಿರೆ . . . ಉಡಿಯ ಘಂಟೆ ಘಳಿರೆನುತ ನುಡಿದು ಮೆಲ್ಲನೆ ಪಿಡಿದುಕೊಂಡು ನಡೆಗೆ ಮಾಲುತ ಸಡಗರದಲಿ ಬೆಡಗುಮಾಡಿ ಆಡುವ ರಂಗನ (ಪುರಂದ. ೩-೦೦೩-೨); ಕಿಟ್ಟಣ್ಣ ಪಾತ್ರಿಯಾಗಿ ನಡುಗುತ್ತ ಹಿಂದೆ ಮುಂದೆ ಮಾಲಿ ನಡೆಯುತ್ತ, ಬುಸುಗುಟ್ಟಿ ಅಬ್ಬರಿಸಿದ (ಸ್ವಸ್ವಹೊ. ೭೦). 'ಓಲು₁'. 'ವಾಲು₁' ಪರಾ.

[ದೇ. ॥ ತುಳು. ಮಾಲುಪು, ಮಾಲು]

**ಮಾಲು₂** (ನಾ). ೧. ಓರೆ : ವಕ್ರತೆ : 'ಮಾಲುಗಣ್ಣು' ಪರಾ. ೨. ಬಾಗು ; ತಿರುವು : ಮುಕಾದೇವಿಕಾಸ್ಥಾನದ ಸಮೀಪದಲಿ ಮುಡಲು ಹರಿವ ಹೊಳೆಯಿಂದಂ ಪಡುವಲು ತೆಂಕಲು ಹಲಸಿನ ಮಾನಿ ಕೂಲಂಬಿ ಕೊಡಲು ಅಜ್ಜಿಯ ಮಾಲಿಂದಂ ಬಡಗಲು (ಸೌಇಇ. IX-ii. ೪೭೦-೩೦; 1478).

[< ಮಾಲು₁]

**ಮಾಲು₃** (ನಾ). ಸರಕು: ಸಾಮಗ್ರಿ: ಪದಾರ್ಥ : ನಾನೀಗ ಅವರ ಪಾಲಿಗೆ ದೂರದೊಂದು ಲೋಕದ ಮಾಲು (ಪತರಾ. I. ೩೮೬) ; ಸುಂಕದ ಕಟ್ಟೆಯ ಅಧಿಕಾರಿಗಳೇ ಈ ವ್ಯಾಪಾರದ ಮಾಲುಗಳನ್ನು ತಮ್ಮ ವಶಕ್ಕೆ ತೆಗೆದುಕೊಂಡು ಹಗಲು ರಾತ್ರಿ ಕಾವಲಿಡುತ್ತಾರೆ (ಕೃವಾಇ. II, ೦೯೯).

[←ಅರ. ಹಿಂ. ಮರಾ. ಮಾಲ್]

**ಮಾಲು₄** 'ಮುಹಾಲು' ನೋ.

**ಮಾಲುಂ**, ಮಾಲುಮ್ (ನಾ). ತಿಳಿದಿರುವುದು ; ಗೊತ್ತಿರುವುದು. **ಮಾಲುಮ್:** ನನಗೆ ಮಾಲುಮ್ ಇದ್ದರೆ ನಿಮ್ಮನ್ನೇಕೆ ಕೇಳಲು ಬರುತ್ತಿದ್ದೆ ತಾಯಿ (ರಂಗರೋ. ೧೩).

**ಮಾಲುಂಮಾಡು**=ನಿಶ್ಚಯಮಾಡು; ನಿರ್ಧಾರಪಡಿಸು : ಕಬಿಮಾ ಮುಲುಕಿನ ಕಿನಾರೆಗೆ ಬಂದರೆ, ದೋಸ್ತಿಮಾರ್ಗದಿಂದ ನಮ್ಮ ಕಡೆ ಒಬ್ಬ ಶ್ಯಾಣ ಗೃಹಸ್ಥನಿಗೆ ಕಳುಹಿಸಿ, ಎರಡು ಸರಹದ್ದನ್ನು ಮಾಲುಂ ಮಾಡಿಯೇವು (ರಾಜೇಂದ್ರ. ೯೩).

[←ಅರ. ಮಅಲೂಮ್, ಮಾಲೂಮ್; ಹಿಂ. ಮಾಲೂಮ್; ಮರಾ. ಮಾಲುಮ್, ಮಾಲೂಮ್]

**ಮಾಲುಕ** (ನಾ). ಒಂದು ಬಗೆಯ ಸುವಾಸನೆಯ ಗಿಡ; ಕಾಮಕಸ್ತೂರಿ: "ಮಾಲುಕಮೆನಲ್ಕೆ ಕತ್ತುರಿಕಾಮುಮೆನಿಸಿಕ್ಕು" (ಶಬ್ದರಾ. ೩೯-೨೯). [ಸಂ.]

**ಮಾಲುಗಣ್ಣು**, ಮಾಲಗಣ್ಣು (ನಾ). ವಕ್ರದೃಷ್ಟಿಯುಳ್ಳ ಕಣ್ಣು ; ಓರೆಗಣ್ಣು : ಪಂಚೇಂದ್ರಿಯಗಳಲ್ಲಿ ಬಹುಪ್ರಾಮುಖ್ಯವಾದ ಅವಳ ಕಣ್ಣು 'ಮಾಲುಗಣ್ಣಾಗಿತ್ತು' (ಪಾಗಿವ. ೬೦). **ಮಾಲಗಣ್ಣು :** ಕಾಲಕಾಮ ನಾರಿಯರು ಓಲೆಗಳಿವುದ ಕಂಡೆ ಮಾಲಗಣ್ಣೊಳು ತೊಳಲುವುದ ಕಂಡೆ (ಶಿವನೀ. ೭೩೩-೭೮೯) ; ಇವನು ಕಪ್ಪಗಿದ್ದಾನೆ, ಗಿಣಿಮೂಗು, ಮಾಲಗಣ್ಣು (ಅಲಿಮ. ೦೦೯). [ಮಾಲು$_{2}$ + ಕಣ್ಣು (< ಕಣ್)]

**ಮಾಲುಗಾಡಿ** (ನಾ). ಸಾಮಾನು, ಸರಂಜಾಮುಗಳನ್ನು ಹೊತ್ತು ಸಾಗಿಸುವ ಗಾಡಿ; ಗೂಡ್ಸ್‌ಗಾಡಿ : ತಿಂಮನು ಕೋರಿದಂತೆ ನೂರಾರಲ್ಲ- ಸಹಸ್ರಾರು ಪತ್ರಗಳು ಮಾಲುಗಾಡಿಗಳಲ್ಲಿ ಬಂದಿಳಿದವು ಧಾರವಾಡದಲ್ಲಿ (ಹುಚ್ಚುಮ. ೧೮). [ಮಾಲು$_{4}$ + ಗಾಡಿ$_{3}$. / ಹಿಂ. ಮಾಲ್‌ಗಾಡೀ]

**ಮಾಲುಧಾನ** (ನಾ). ೧. ಒಂದು ಬಗೆಯ ಹಾವು; ಕೇರೆ : "ಮಾಲುಧಾನ = ಕೇರೆ" (ನಾಚಿರಾ. ೬) ; "ಮಾಲುಧಾನಃ – ಹೆರೆಗಳೆದ ಹಾವು" (೬ಚಂ. ೦೨೪). ೨. ಹಾವಿನ ಜಾತಿಗೆ ಸೇರಿದ ಒಂದು ಬಗೆಯ ಪ್ರಾಣಿ ; ಊಸರವಳ್ಳಿ : "ಮಾಲುಧಾನಃ, ಮಾತುಲಾಹಿಃ — ೨ ವೂಸರವಳ್ಳಿ ಹಾವು, ವಿಷಗಿಡದ ಹುಳ, ಉಮ್ಮತ್ತದ ಹುಳ. ಇದು ಖಟ್ವಾಂಗದ ಆಕಾರವಾಗಿಯೂ ದೀರ್ಘದೇಹವಾಗಿಯೂ ಉದ್ದವಾದ ಬಾಲವುಳ್ಳದ್ದಾಗಿಯೂ ನಾಲ್ಕು ಕಾಲುಗಳುಳ್ಳದ್ದಾಗಿಯೂ ಇರುವುದು" (ನಿಘಂಟು. ೬೨). [ಸಂ.]

**ಮಾಲುಮ್** 'ಮಾಲುಂ' ನೋ.

**ಮಾಲುಮತ್ತೆ** 'ಮಾಲಮತ್ತೆ' ನೋ.

**ಮಾಲೂರ** (ನಾ). ೧. ಒಂದು ಬಗೆಯ ಮರ; ಬಿಲ್ವಪತ್ರೆ: "ಮಾಲೂರಃ, ಶ್ರೀಫಲಃ, ಬಿಲ್ವ — ಈ ೩ ಬೆಲ್ಲವತ್ರದ ಪೆಸರ್" (ಹಲಾಯು. ೩೨-೪೦) ; ಅದು ಜಂಬೂ ಜಂಭ ರಂಭಾಕುಳಕ . . . ಕಾಶ್ಮರ್ಯ ಮಾಲೂರ ಲೋಧ್ರೋ [ಪಾಠಾಂ. ಲ್ಲೂರ ಲೊದ್ರಂ]ಗುದಿ ಕಾಕ್ಷಪ್ಲಕ್ಷಪಥ್ಯಾಮಳಕತಿಳಕಭೂರ್ಜಾದಿ ಭೂಜಾವಕೀರ್ಣಂ (ಅರ್ಜುನ. ೩-೩೩). ೨. ಒಂದು ಬಗೆಯ ಮರ; ಬೇಲದ ಮರ : "ಮಾಲೂರಃ — ವಿಲಾವಾಲುಕ, ಬೇಳಕೆ, ಬೆಲ್ಲವತ್ತ" (೬ಚಂ. ೦೨೪). [ಸಂ.]

**ಮಾಲೂರಪತ್ರೆ** (ನಾ). ಬಿಲ್ವಪತ್ರೆ : ಪಾಲಾಶಕಲಧೌತಪುಷ್ಪಂಗಳುಂ ತುಳಸಿ ಮಾಲೂರಪತ್ರೆ ಯೀ ನಾಲ್ಕು ಲಿಂಗಕ್ಕೆ ಪ್ರಕ್ಷಾಲಿಸಿ ಪುನಃಪುನಃ ಧರಿಸಬೇಕಾದುದಂ ನಿರ್ಮಾಲ್ಯವಲ್ಲ (ಗುರುಚಾ. ೬-೦೭).

[ಸಂ. ಮಾಲೂರಪತ್ರ]

**ಮಾಲೆ**, ಮಾಳ್ಕೆ$_{2}$ (ನಾ). ೧. ಹೂವಿನ ಸರ,– ಹಾರ : "ಸ್ರಗ್, ಮಾಲಾ, ಮಾಲ್ಯಂ– ಈ ೩ ಹೂವಿನ ಮಾಲೆ" (ಹಲಾಯು. ೯೦-೩೯೬) ; ಅಲರ್ಗಣೆಯನಂಗಜಂಗೀಯಲ್ಕೆದು ರತಿ ಬರ್ಪ ಮಾಟಿಕ್ಕಿಯಿಂ ಮಾಲೆಯುನಾ ಲಲಿತಾಂಗಿ ಒಡವು ಕಣ್ಣಂ ಕಲಕ್ಕಮಾ ದಾಶರಥಿಯ ಬಗೆಗಂ ಬಂದಳ್ (ಶಂರಾಮಾ. ೩-೯೪) ; ಆ ಗಂಧರ್ವದತ್ತೆ ಚಿತ್ರಜಾತಶರಪರುಷಹತಿಗಳ್ಕಿ ಬಿಂಕದಿಂ ಝೋಂಕನೆಟ್ಟು ಮಾಲೆಯನಿಕ್ಕೆ (ಜೀಬಂಧ. ೩-೨೯) ; ಮಾಲೆಗೆ ಸುಯ್ಗೆ ಸೂಟ್ವಿರುತಿರಲ್ಕ ಳಿಮಾಳಿಕೆ ಮಾಲೆಗಾರ್ತಿಯುಮಾಲೆಯುನೆತ್ತಿ ನಿಂದಿರೆ ಮುಖೇಂದುವನೀಕ್ಷಿಸುತುಂ ಪೊದಟ್ಟಿ ತನ್ಮಾಲೆಗೆ ಕಯ್ಯುಸುಯ್ಕೆ (೭ಜಂತೀಶ್ವ. ೦೦-೩೦). ೨. ಕಂಠಹಾರ ; ಸರ : 'ಅಕ್ಷಮಾಲೆ', 'ಜಪಮಾಲೆ' ಪರಾ. ೩. ಸಾಲು; ಶ್ರೇಣಿ; ಪಂಕ್ತಿ : ಮಲಯಾನಿಳನೆಸಕದಿನುದಿರ್ವಲರ್ಗಳ ಮಕರಂದಮಾಲೆಗಳ್ ಪರೆದೆತ್ತಂ ನೆಲದೊಳ್ ಬಿಟ್ಟುಂ ಪಡೆದುವು ವಿಲೋಚನಾಂಬುಗಳನಗ್ಗಳಂ ವಿರಹಿಗಳಾ (ಕವಿರಾ. ೩-೦೩೬); ವಕುಳಮಾಲೆಯೊಳಾಲಿಸಿದಬ್ಜನೀದಳಾವಳಿಗಳ ಮಾಲೆಗುಂಡಿಗೆಗಳಿಂ ಸಮೆದಾಡುವ ಜೂಟಳಂಗಳಂ ಅಂತವಂ ನೋಡುತ್ತಂ ಪೋಗೆ (ಕಾದಂಬ. ೨೦೩); ದ್ವೈತಾದ್ವೈತವನೋದಿ ಏನು ಮಾಡಿದಿರಯ್ಯಾ . . . ಸ್ಥಾವರ ಜಂಗಮವೊಂದೆ ಎಂದು ನಂಬದನ್ನಕ್ಕ ಕೂಡಲ ಸಂಗಮದೇವಾ ಬಟಿಯ ಮಾತಿನ ಮಾಲೆಯಲೇನಹುದು (ಬಸವ. ೦೯೦). ೪. ಗುಂಪು; ಸಮೂಹ. ೫. ತುಳುಜನಾಂಗದವರ ಒಂದು ಒಳಪಂಗಡ : ತುಳುನಾಡಿನ ದೇವಾಲಯಗಳಲ್ಲಿ ಮಾಲೆಯರೆಂಬ ಒಂದು ಜಾತಿಪ್ರಭೇದಕ್ಕೆ ಕಾರಣವಾದ ವಿಚಿತ್ರವಾದೊಂದು ವಾಡಿಕೆಯಿದೆ (ಹುಕ್ಕಬ. ೦೯೦). **ಮಾಳ್ಕೆ$_{2}$** : ೩. ಮಲೆಯಲರ್ಗಳ್ಕೆ ಬಳ್ಕಿ ಮಚಿದುಂಬಿಯ ಮಾಳೆಗೆ ಕಾಯ್ದು ಬಯ್ದು. . . ಜೋಲ್ವರುತ್ಕಳಿಕೆಯಿನಾಮ್ರವಲ್ಲರಿಯೊಳೋಪವರಾ ಪುರನಂದನಂಗಳೊಳ್ (ಅಪಂಶು. ೦-೯೩); ದೀಪ್ತಿಗಿದಿರಾದ ಪತಂಗದ ಮಾಳೆಯಾದುದುಂ(ಪುಷ್ಪವೃ. ೩-೦೯).

**ಮಾಲೆಹಾಕು** = ೧. ಮದುವೆಯ ಸಂದರ್ಭದಲ್ಲಿ ವಧೂವರರು ಪರಸ್ಪರ ಹೂವಿನ ಹಾರವನ್ನು ತೊಡಿಸು; ವರಿಸು : ಹಿರಿಯಳಾದ ಅಂಬೆಯು. . . ಅವನಿಗೇ ಮಾಲೆಹಾಕಬೇಕೆಂದಿದ್ದಳು (ವಕಭಾ. ೩). ೨. ಗೌರವಸೂಚಕವಾಗಿ ಹೂವಮಾಲೆಯನ್ನು ಹಾಕು,– ತೊಡಿಸು : ಸಮಾರಂಭಗಳಲ್ಲಿ ವಂದನಾರ್ಪಣೆ ಮಾಡುವಾಗ ಆಹ್ವಾನಿತರಿಗೆ ಮಾಲೆ ಹಾಕುವುದು ವಾಡಿಕೆ (ರೂಢಿ).[1] [ಸಂ. ಮಾಲಾ]

**ಮಾಲೆಕಾರ** 'ಮಾಲೆಗಾಜ' ನೋ.

**ಮಾಲೆಗಟ್ಟು** (ಕ್ರಿ). ೧. (ಹೂವು, ಮಣಿ ಮುಂತಾದುವುಗಳಿಂದ) ಹಾರವನ್ನು ಕಟ್ಟು,—ರಚಿಸು : ಮಾಲೆಗಟ್ಟುತೆ ನೋಟಕರ ಕಣ್‌ಮಾಲೆಗಟ್ಟುವರೊರ್ಮೆ . . . ಅಲ್ಲಿಯ ಮಾಲೆಗಾರ್ತಿಯರು (ಶಾಶ್ವತಾ. ೨-೦೨) ; ಇತ್ತರದಲಿ ಮಾಲೆಗಟ್ಟಿ ಮಾಜುವ ಹೆಂಗಳರ್ತಿಯುನೇನ ಬಣ್ಣಿಸುವೆ (ಕಂಸವ. ೬-೮೨) ; ಕಟ್ಟುವೆನು ಕತೆಯೊಂದ ಬನದ ಗವಿಯಿಂದಯ್ದು, ಮರವೆಯಿಂದ ದನೆತ್ತಿ ಕೊಯ್ದು, ಎದೆಯನಪ್ಪಲು ಮಣಿಯ ಮಾಲೆಗಟ್ಟುವ ತೆರದಿ ಅಳಿವಿರದ ನೆನಹಿನಲಿ ಕೋದು (ನಳ್ಕ. ೩೯-೦೯). ೨. ಸಾಲುಗಟ್ಟಿ ನಿಲ್ಲು; ಸಾಲುಗಿರು : ಅಂತು ದೇವರ್ ದೇವನೊಳಾವಗಮಾದ ತಂತವ್ಯಾದರದಿಂ ಮಾಲೆಗಟ್ಟಿ ದುಗ್ಧವಾರಿಪೂರಿತ ಕನಕಕಳಶಂಗಳಂ ತಂದು ಗೊಂದಣಿಸಿ ಸಂದಣಿಸಿ ನೀಡಿದಾಗಳ್ (ಆದಿಪು. ೭-೮೩ ವ). [ ಮಾಲೆ + ಕಟ್ಟು$_{1}$ ]

**ಮಾಲೆಗಾತಿ** (ನಾ). ಹೂವನ್ನು ಕಟ್ಟಿ ಮಾರುವವಳು ; ಹೂವಾಡಿಗಿತ್ತಿ : ಮಾಣಸಿದನ್ನೆ ದಿಟ ಮಾಲೆಗಾತಿಯ[ಪಾಠಾಂ. ಘಟ್ಟಿವಾಳ್ತಿಯ] ಮೈಯ ಮೂಹೊಜಡ (ಕುಮ್ಮಾಸ. ೦೦-೦೭); ಪುಷ್ಪಮಾಲೆಯನೊರ್ವ ಚತುರವಿಟನಿಗೆ ಕೊಟ್ಟಳು ಮಾಲೆಗಾತಿ ತಾನತಿಶಯರೂಪಿನ ಬೆಡಗೆ (ವರ್ಧಕ. ೦-೦೦೬); ಪರಿಮಳವೆರೆದಿಂಬಿನ ದಿವ್ಯಪುಷ್ಪವ ಪರಿಕೊಂಡತಿ ಹರುಷದಲಿ ಸರಗಟ್ಟಿ ಬೆಲೆಗೆ ಮಾಜುವ ಮಾಲೆಗಾತಿಯರಿರವ ನಾನೇನ ಬಣ್ಣಿಪೆನು (ಕಂಸವ. ೨-೮೩). [ಮಾಲೆ + — ಕಾತಿ$_{5}$]

**ಮಾಲೆಗಾರ** 'ಮಾಲೆಗಾಜ' ನೋ.

**ಮಾಲೆಗಾರ್ತಿ** (ನಾ).= ಮಾಲೆಗಾತಿ : ಆಂ ಮುನ್ನಿನ ಭವದೊಳ್ ಪ್ರಿಯಸೇನೆಯೆಂಬ ಮಾಲೆಗಾರ್ತಿಯೆಂ (ವಡ್ಡಾರಾ. ೪೭-೦೦೬); ಚಲ್ಲವಾಡಿ ಪೂವೆತ್ತುವ

ಮಾಲೆಗಾರ್ತಿಯರನಂದರಿಕೇಸರಿ ನಿಂದು ನೋಡಿದಂ (ಶಂಕಖ. ೪-೯೦); ವರಮಲ್ಲಿಗೆ ಮೊಲ್ಲೆಗಳೊಳ್ ಬೆರಸಿದ ಮಧುಕರಕದಂಬದಿಂದಂ ನೀಲೋತ್ಕರ ಮುಂ ಮಾಕ್ತಿಕಮುಂ ಪೋಲ್ತಿರೆ ಮೆಱೆದಲ್ ಮಾಲೆಗಾರ್ತಿ ಮಣಿಗಾರ್ತಿಯ ವೋಲ್ (ಗಿಂಕ. ೨-೯೬). [ಮಾಲೆಗಾಱ + — ತಿ$_1$ ( < — ಇತ್ತಿ) ]

**ಮಾಲೆಗಾಱ, ಮಾಲೆಕಾರ, ಮಾಲೆಗಾರ** (ನಾ). ೧. ಹೂವಿನ ಹಾರ ವನ್ನು ಕಟ್ಟಿ ಮಾರುವವನು; ಹೂವಾಡಿಗ: "ಮಾಲಾಕಾರಃ, ಮಾಲಿಕಃ, ಪಾರಿಹಾರಿಕಃ– ಈ ೩ ಮಾಲೆಗಾಱಂ" (ಕಹಾಧು. ೯೬–೪೩೫); ಪೂಗೊಯ್ವ ವಸಂತಕನೆಂಬ ಮಾಲೆಗಾಱನರಸನ ಸಾವಂ ಕಂಡು (ವಡ್ಡಾರಾ. ೦೮೦–೨೫); ಮಗಮಗಿಪ ಜಾದಿಪೊಂಗೇದಗೆ ಮಲ್ಲಿಗೆಯೆಂಬ ಪಲವು ಪೂಮಾಲೆಗಳಂ ಬಗೆಯಱಿದು ನೀಡುಗುಂ ಮಾಲೆಗಾಱನಂ ಪೋಲ್ವುದಗ್ರಮಾಲ್ಯಮಹೀಜಂ (ಅಂಶು. ೩-೩೬); ಕಟ್ಟಿಯುಮೇನೊ ಮಾಲೆಗಾಱನ ಪೊಸಬಾಸಿಗಂ ಮುಡಿವ ಭೋಗಿಗಳಲ್ಲದೆ ಬಾಡಿ ಪೋಗದೇ (ಅಸಂಪು. ೦-೪೩). ೨. ತೋಟವನ್ನು ಬೆಳೆಸುವವನು ; ಮಾಲಿ : ಕಂಡವರ್ ಕಾಮಿಸೆ ಮಾಲೆಗಾಱರೊಸೆ ದೋವಿದ ಪೂವಿನ ತೋಂಟಮೊಪ್ಪುಗುಂ (ಗಿಂಕ. ೨-೬೦); ರಾಜಗೃಹಪುರ ಮನೆಯ್ದೆವಂದು ಪೊಱಗಣುದ್ಯಾನದೊಳ್ ವಿಶ್ರಮಿಸಿರ್ದನನ್ನೆಗಮಲ್ಲಿಯ ಮಹತ್ತರನಪ್ಪ ಮಾಲೆಗಾಱಂ ಬಂದು ನೋಟ್ಟಾಗಳ್ (ಕೀಶಸಂ. ೨೦೪-೩). **ಮಾಲೆಕಾರ** : ೧. ಪೂಗಳಿಂದ ತಮ್ಮವಯವಸೌಂದರ್ಯವಂ ವಿಟರಿಗೆ ತೋರಿಸುವಂತೆ ಮಾರುವ ಮಾಲೆಕಾರರ ಬಾಲೆಯರಿಂ (ಶಾಗಂಧಿ. ೫-೦). **ಮಾಲೆಗಾರ** : ೧. ಹೂಗಳಿಂದ ಹಾರ ಮಾಡಿ ದೇವಾಲಯಕ್ಕೆ ಒದಗಿಸು ವವನು ಮಾಲೆಗಾರನಾದ (ತಮಿಳು–ಮಾಲೈಕ್ಕಾರ) (ಶಾಸಗ. ೬೨).
[ಮಾಲೆ + —ಕಾಱ]

**ಮಾಲೆಗಾಱಗೇರಿ** (ನಾ). ಹೂವಾಡಿಗರು ವಾಸಿಸುವ ಓಣಿ,– ಕೇರಿ : ಆ ಪೂವಿನ ಪೊಟ್ಟಿನೊಳ್ ದೇವಕೀನಂದನಂ ಮಾಲೆಗಾಱಗೇರಿಯೊಳ್ ವಿಹಾರಿಸುತ್ತಂ ಬರ್ಪಲ್ಲಿ (ಜಗಪು. ೬-೦೦೫). [ಮಾಲೆಗಾಱ + ಕೇರಿ]

**ಮಾಲೆಗಿಡಿ** (ನಾ). ಒಂದರ ಹಿಂದೆ ಮತ್ತೊಂದರಂತೆ ಬರುವ ಕಿಡಿ ; ನಿರಂತರವಾಗಿರುವ ಕಿಡಿ : ಸಾಯ್ಲುಗಳ ಕಾರ್ಬೊಗೆಯ ಮುಸಕದ ಮಾಲೆಗಿಡಿಗಳ ದಾಡೆಗಳ . ರಣಧೂಳಿಯುಪ್ಪರದಸಮಭಟರೊದಗಿದರು ಸಮರದಲಿ (ಕೊರಂ. ೬-೦೪-೨೦). [ಮಾಲೆ + ಕಿಡಿ]

**ಮಾಲೆಗೇರಿ** (ನಾ). = ಮಾಲೆಗಾಱಗೇರಿ : ಮದನಮದಮತ್ತೇಭವನು . . . ಚದುರರಸನಿಗಿತ್ತನೆಂಬೊಲು ಪುದಿದ ಮಾಲೆಯು ಗಂಧಕುಂಕುಮ ಚದರಿಯೋಕುಳಿಯಾಡುತ್ತಿದಿತು ಮಾಲೆಗೇರಿಯಲಿ (ಶಾಗಹ. ೬-೦೬).
[ಮಾಲೆ + ಕೇರಿ]

**ಮಾಲೆಗೊಳ್** (ಕ್ರಿ). ಒಂದರ ಹಿಂದೆ ಮತ್ತೊಂದು ಬರು ; ಸಾಲಾಗು : ಮಾಲೆಗೊಳುತ್ತುಮೊತ್ತರಿಸಿ ಪಾಯ್ವ ಸರಲ್ಗಳನುಣ್ಮಿ ವಿಸ್ಫುಲಿಂಗಾಲಿ ಬರಲ್ ಸರಲ್ಮಿಟಿ ಸಿಡಿಲ್ಮಿಟಿಯುಂ ಗೆಲೆವಂದುದೆಂಬಿನಂ ಶೈಲಧರಂ ಕಱುತ್ತು ಕಱೆಯುತ್ತಿರೆ ಮಾರ್ಗಣವೃಷ್ಟಿಯಂ (ಜಗಪು. ೦೩-೭೭).
[ಮಾಲೆ + ಕೊಳ್$_1$]

**ಮಾಲೆಜೊಡರ್** (ನಾ). ಸಾಲಾಗಿರುವ ದೀಪ ; ಸಾಲುದೀಪ : ಮಾಲೆಜೊಡರ್ ನವಚಂಪಕಮಾಲೆಯುವೊಲ್ ಪೊಳೆಯ ಮೇಲೆ ಮಾರ್ಪೊಳೆಯೆ ಕರಂ ಲೀಲಾವತಿ ಪತಿಯಾಪ್ತಾಲೋಲತೆಯಿಂದೊಸೆದು ದೇವಿಯುಂ ಪೂಜಿಸಿದಳ್ (ಲೀಲಾವ. ೧೦-೬). [ಮಾಲೆ + ಸೊಡರ್]

**ಮಾಲೆದುಂಬಿ** (ನಾ). ದುಂಬಿಗಳ ಸಾಲು,–ಸರಣಿ : ಅವಳ ಕುರುಳ್ಗೆ ಮಾಲೆ ದುಂಬಿಗಳೆಣೆಯೆ (ಕಮವ. ೦೦೩ ಕ್ರಗೋ). [ಮಾಲೆ+ದುಂಬಿ (< ತುಂಬಿ$_1$)]

**ಮಾಲೆದೊಡಂಬೆ** (ನಾ). ಹೂವಿನ ಗುಚ್ಛ ; ಹೂದಂಡೆ: ಮಾಲೆ ಗಾರ್ತಿಯರ ಮೊಲ್ಲೆಗಳೊಳ್ ಸಾಲೊಳಿಡು ನೇಲ್ವ ಮಾಲೆದೊಡಂಬೆಯಂ ತೂಗಿ (ಅಪಾಶ. ೨-೨೪). [ಮಾಲೆ + ತೊಡಂಬೆ$_2$]

**ಮಾಲೆದೊಡರ್** (ನಾ). ಹೂವಿನ ಆಭರಣ ; ಪುಷ್ಪಾಲಂಕಾರ : ಪಗಲ ಕೆಯ್ದಾವಿಗೆಯ ಕಾಲ ಹಾಪೆಯ ಮೊತ್ತದ ಬಾಫುಲಿಯ ಮಾಲೆದೊಡರ ಮಾಸಾಳ್ಗಳ ಮಂತ್ರಣದೊಳಂ (ಗಿಂಕ. ೨-೦೦೩ವ). [ಮಾಲೆ + ತೊಡರ್$_2$]

**ಮಾಲೆಪೂವು** 'ಮಾಲೆವೂ' ನೋ.

**ಮಾಲೆವಡಿಗ** (ನಾ). ಹೂವಾಡಿಗ ; ಮಾಲೆಗಾರ : ಮಾಲೆಯಿಂ ಜೀವಿಸುವಂ, ಮಾಲೆವಡಿಗಂ (ಶಬ್ದಾಸು. ೪೦೬ ಕ್ರಗೋ).
[ಮಾಲೆ + — ವಡಿಗ]

**ಮಾಲೆವಡಿಗಿತಿ** (ನಾ). ೧. ಹೂವಾಡಿಗನ ಹೆಂಡತಿ. ೨. ಹೂವಾಡಿಗಿತ್ತಿ: ಪಾವಡಿಗಿತಿ, ಪೂವಡಿಗಿತಿ, ಮಾಲೆವಡಿಗಿತಿ (ಶಬ್ದಾಸು. ೦೪೨ ಕ್ರಗೋ).
[ಮಾಲೆವಡಿಗ + — ಇತಿ$_1$ (< — ಇತ್ತಿ)]

**ಮಾಲೆವೂ , ಮಾಲೆಪೂವು** (ನಾ). ೧ ಹೂವಿನ ಹಾರ; ಪುಷ್ಪಸರ: ಕತ್ತುರಿಬೊಟ್ಟನಿಟ್ಟು ಬಿಡುಮುತ್ತಿನ ಸೇಸೆಯನಿಕ್ಕಿ ಮಾಲೆವೂಮೆತ್ತಿ . . . ವಿದೇಹಿ ಸಾರಘನಸಾರದ ರನ್ನದ ಬಾಯಿನಂಗಳಿಂ ಚಿತ್ರವಿಕಾಸವಂ ಪಡೆದಳಂದಪರಾಜಿತೆಗಂ ಸುಮಿತ್ರೆಗಂ (ಶಂರಾಪಾ. ೩-೦೨೬); ಸೌರಭಭರಿಯುಂ ಸುಯ್ಗುಂಪಿನಿಂದಾವಗಂ ದಳವೇಱುತ್ತಿರೆ ಪೂತ ಜಂಗಮಲತಾಸಂದೋಹ ಮೆಂಬಂತೆ ಕಣ್ಗೊಳಿಸುತ್ತಿರ್ಪುದು ಮಾಲೆವೂದಳೆದ ಮಾಳಾಕಾರನಾರೀಜನಂ (ಶಂದ್ರಶು. ೦-೦೩೨) ; ಪುಲ್ಲವಡಿಗಿತಿಯರೆತ್ತಿ ಪಿಡಿದ ಮಾಲೆವೂವಿನ ನಱುಗಂಪಿಂಗೆ ಕವ್ವರೆಗೊಂಡು ಮುತ್ತಿ ಮುಸುಱಿ ಮೊರೆವ ಮಱಿದುಂಬಿ ಗಳಿಂಚರದೊಳಂ (ಕಬ್ಬಿಗ. ೪೪). **ಮಾಲೆಪೂವು** : ೨. ಹಾರವನ್ನು ಕಟ್ಟುವುದಕ್ಕಾಗಿ ಬೆಳೆಸುವ ಹೂವು : ನನ್ದಾದೀವಿಗೆಗೆ ಸೊಡರೆಣ್ಣೆಗೆ ಘಾಣ ೧ ಮಾಲೆಪೂವಿಗೆ ತೋಟ ೧ (ಶಾಇಇ. XX. ೨೬–೦೪; 1040).
[ಮಾಲೆ + ಪೂ$_2$]

**ಮಾಲೆವೂಗಾಱ** (ನಾ). = ಮಾಲೆಗಾಱ : ಮಡಿವಾಳ ಮಾಲೆವೂಗಾಱ ಕುಂಬಾಱ . . . ಚೂಳಾಯುತರ ಕೇರಿಗಳೆಡವಿಡದೊಪ್ಪಿದವಲ್ಲಲ್ಲಿ (ಶ್ರೀಪಾಂ. ೦–೭೭). [ಮಾಲೆವೂ + — ಕಾಱ]

**ಮಾಲೆವೂಡು** (ಕ್ರಿ). ಮದುವೆಯಲ್ಲಿ ಮಾಲೆಯನ್ನು ಹಾಕು : ವರಿಸು : ಅಂತೆಯ್ದೆ ಸೋಲ್ತುಮಧಿಕಲಜ್ಜಾಭಾವದಿಂ ಮಾಲೆವೂಡಲಱಿಯದೆ ಕುಮಾರಗ್ರೀವಾಲೋಕನೆಯಾಗಿರೆ (ಶಾಂತಿಪು. ೫-೦೫೬ ವ).
[ಮಾಲೆ + ಪೂಡು]

**ಮಾಲೆಸೂಡು** (ಕ್ರಿ). = ಮಾಲೆವೂಡು : ಸ್ವಯಂಬರದೊಳ್ ಸುಮತಿ ಯೆಲ್ಲರಂ ನೋಡಿಯಾರುಮಂ ಮೆಚ್ಚದೆ ಸಿರಿದಿಣ್ಣಂಗೆ ಮಾಲೆಸೂಡಿದೊಡೆ (ವಡ್ಡಾರಾ. ೦೦೬-೨೦); ಚೆಲ್ವಿಡಿದಿರ್ದ ರೂಪು ದೃಷ್ಟಿಗೆ ಪರೆ ಪಾಂಡುರಾಜನನೆ ಕುಂತಿ ಮನಂಬುಗೆ ಮಾಲೆಸೂಡಿದಳ್ (ಶಂಖಖ. ೦-೦೦೬); ನೀಳ್ದ ಬಾಹುಲತೆ ತೋಳ ಮೊದಲ್ ಮದನಾಸಾರಾಗಮುಂ ಸಾಲಿಡೆ ಸಾರ್ದು ಸೀತೆ ರಘುವಂಶ ನಮೇರುಗೆ ಮಾಲೆಸೂಡಿದಳ್ (ಶಂರಾಪಾ. ೩-೯೩). [ಮಾಲೆ + ಸೂಡು$_1$]

**ಮಾಲೋಪಮಾನ** (ನಾ). [ಕಾವ್ಯಮೀ] ಅನೇಕ ಉಪಮಾನಗಳು ಸಾಲುಸಾಲಾಗಿ ಹೆಣೆದು ಬರುವ ಒಂದು ಶಬ್ದಾಲಂಕಾರ : ಜನಿತ ಪ್ರಗಲ್ಭದೊಳ್ [ಮಾನ]ದೊಳ್ ಮಾಹಾತ್ಮ್ಯದೊಳ್ ನಿಜೋದಾರತೆಯೊಳ್ ಅನುಪಮಗುಣದೊಳ್ ಶ್ರೀಶಂ ಘನಮೆನೆ ಮಾಲೋಪಮಾನಭೇದಮಿದಕ್ಕುಂ (ಕವಿರಾ. ೩-೮೦). [ಸಂ.]

**ಮಾಲೋಪಮೆ** (ನಾ). = ಮಾಲೋಪಮಾನ : ಉಪಮಾಲಂಕಾರವೂ ಒಮ್ಮೊಮ್ಮೆ ದೀಪಕಾಲಂಕಾರದ ಛಾಯೆಯನ್ನೊಳಗೊಳ್ಳಬಹುದು. ಇದಕ್ಕೆ 'ಮಾಲೋಪಮೆ'ಯೇ ಉದಾಹರಣೆ (ಧ್ವನ್ಯಾಲೋ. ೨೦೪).
[ಸಂ. ಮಾಲೋಪಮಾ]

**ಮಾಲ್ಕಿ, ಮಾಲಕಿ, ಮಾಲ್ಕೀ** (ನಾ). ಒಡೆತನ ; ಸ್ವಾಮ್ಯ : ಮಾಮಲೇ ದಾರರಿಗೆ ಈ ತೋಟವು ತಮ್ಮಿಬ್ಬರ ಮಾಲ್ಕಿಗೆ ಸೇರಿದ್ದು, ಇಬ್ಬರೂ ಅದನ್ನು

ಸಾಗುವೇ ಮಾಡುತ್ತಿರುವುದಾಗಿ . . . ಸಾದರಪಡಿಸಿದ್ದ (ತುಕಪಿ. ೮). **ಮಾಲಕಿ :** ಹೊಲಗಳು ಯಥಾಪ್ರಕಾರ ಲಾವಣಿಯಾಗಿದ್ದವು. ಅವುಗಳ ಮಾಲಕಿ ನರಹರಿಯ ಹೆಸರಿನಲ್ಲಿ ನಡೆಯಬೇಕು (ಸಪುಜ. ೪೪೯). **ಮಾಲ್ಕೀ :** ಅನಂತಶಯನಗುಡಿಯ ಎದುರಿನ ಮನೆಯ ಹಿತ್ತಲದಲ್ಲಿ ನಮ್ಮ ಮಾಲ್ಕೀಯ . . . ಒಂದು ಮನೆಯಿದೆ (ಠಕ್ಕರ್ನ. ೧೬೦); ಇಷ್ಟ ದಿನಾ ಈ ಆಸ್ತಿನಾ ಉಣಕೋತ ಬಂದೀನು, ಇನ್ನ ಮ್ಯಾಗ ಅದರ ಮಾಲ್ಕೀ ನಿಂದ ಆತು (ಗ್ರಾಪೂಡು. ೦೦).

[←ಪಾರ. ಮಾಲಿಕ್; ಹಿಂ. ಮಾಲಿಕೀ; ಮರಾ. ಮಾಲಕೀ]

**ಮಾಲ್ಕೀ** 'ಮಾಲ್ಕಿ' ನೋ.

**ಮಾಲ್ಕೀಹಕ್ಕು** (ನಾ). ಒಡೆತನದ ಹಕ್ಕು ; ಸ್ವಾಮ್ಯದ ಅಧಿಕಾರ : ಗೌರೀಶ . . . ಕಾಮಿನಿಯತ್ತ ಮಾಲ್ಕೀಹಕ್ಕಿನಿಂದ ಕಣ್ಣು ಸಣ್ಣಗೆ ಮಾಡಿ ಮುಗುಳುನಗೆ ಬೀರಿದ (ಮುಕ್ತಿ. ೧೭೦). [ಮಾಲ್ಕೀ (< ಮಾಲ್ಕಿ) + ಹಕ್ಕು₂]

**ಮಾಲ್ಗುಜಾರಿ** 'ಮಾಲಗುಜಾರಿ' ನೋ.

**ಮಾಲ್ಮೆ** (ನಾ). ಸಲುಗೆಯಿಂದ ಉಂಟಾದುದು : ಅಧಿಕಪರಿಚಯದಿಂದಾದುದು: ನೀನು ಮಹಾರಾಣಿಯಾಗುವುದಕ್ಕೆ ನಾನು ಅಡ್ಡಬರಬಾರದು. ಅಕ್ಕನಿಗೆ ಕಲ್ಯಾಣವಾದರೆ ನನಗೂ ಸಂತೋಷವಲ್ಲವೆ ? ಹತ್ತಾರು ವರ್ಷ ಒಟ್ಟಾಗಿದ್ದುದರ ಮಾಲ್ಮೆ ಈ ಕಣ್ಣೀರು (ಶಾಂತಲಾ. ೬೪).

[ದೇ.॥ ತಮಿ. ಮಾಲಿಮಿ = ಚಿಕ್ಕಂದಿನ ಸ್ನೇಹ; ತೆಲು. ಮಾಲಿಮಿ = ಸಲುಗೆ, ವಾತ್ಸಲ್ಯ]

**ಮಾಲ್ಯ** (ನಾ). ೧. ಹೂವಿನ ಹಾರ,- ಸರ : "ಸ್ರುಗ್. ಮಾಲಾ, ಮಾಲ್ಯಂ – ಈ ೩ ಹೂವಿನ ಮಾಲೆ" (ಹಲಾಯು. ೯೦-೩೪೮); ವಸನಾಭರಣ ಮಾಲ್ಯವನು ಲೇಪನಾದಿಗಳನೆಸೆವ ವಾಹನವು ಮೊದಲಾದವೆಲ್ಲವ ಕೊಡಲು (ಶ್ರೀಕಣ. ೦೪-೩೩) ; ಅರಸನತಿಪ್ರಮೋದದಿನಪರಿಮಿತಧನಕನಕವಸನಮಾಲ್ಯ ಮಣಿಭೂಷಣಂಗಳಿಂ ಮಾಹೇಶ್ವರಾರಾಧನಂಗೆಯ್ದು (ರಾಜಶೇ. ೪-೩೪೭). ೨. [ಜೈನ] ಭೋಗಭೂಮಿಯ ಹತ್ತು ವಿಧವಾದ ಕಲ್ಪವೃಕ್ಷಗಳಲ್ಲಿ ಒಂದು ; ಹೂಮಾಲೆಗಳನ್ನು ಒದಗಿಸುವ ಕಲ್ಪವೃಕ್ಷ : ಮಾಲ್ಯ ತೋದ್ಯಜ್ಯೋತಿರ್ವಾಸ್ತ್ಯಾಭರಣಪ್ರದೀಪವಸನಾಶನ ಸತ್ಕಲ್ಯಗೃಹ ಪಾತ್ರ ರಾತ್ರಿಗುಣಾಳ್ಯರ್ಜಿತ ದಶವಿಕಲ್ಪಕಲ್ಪಕುಜಂಗಳ್ (ಶಾಕ್ಸೇಪು. ೦೬-೩೪).

[ಸಂ.]

**ಮಾಲ್ಯಪುಷ್ಪ** (ನಾ). ಒಂದು ಬಗೆಯ ಸೆಣಬು : "ಮಾಲ್ಯಪುಷ್ಪ – ಕಿಚಿಯ ಸಣಬು" (ಓಕಂ. ೦೩೪). [ಸಂ.]

**ಮಾಲ್ಯಮಹೀಜ** (ನಾ). = ಮಾಲ್ಯ ೨ : ಮಗಮಗಿಪ ಜಾದಿ ಪೊಂಗೇದಗೆ ಮಲ್ಲಿಗೆಯೆಂಬ ಪಲವು ಪೂಮಾಲೆಗಳಿಂ ಬಗೆಯಚಿದೋಲಗಿಪುದು ಮಾಲೆಗಾಜನಂ ಪೋಲ್ತುಮಗ್ರಮಾಲ್ಯಮಹೀಜಂ (ಅಂಪು. ೩-೬೬). 'ಮಾಲ್ಯಾಂಗ' ಪರಾ. [ಸಂ.]

**ಮಾಲ್ಯವಂತ** (ನಾ). ೧. ಮಾಲೆಯಿಂದ ಅಲಂಕರಿಸಲ್ಪಟ್ಟವನು ; ಹಾರವನ್ನು ಧರಿಸಿದವನು. ೨. ಒಂದು ಪರ್ವತದ ಹೆಸರು: ತಾನೆಡೆಗೆಡೆಗೆ ಗಂಗಾಜಲೋದ್ಧತಿಗೆ ತವೆ ಸವೆವುತಿಹ ಮಾಲ್ಯವಂತದ ಹವಣಿನಿತು (ರಸಪು. ೦೪-೨೬) ; ಸಿತಾಂತ . . . ಮಾಲ್ಯವಂತ . . . ವೈಕಂತಕವೆಂಬೈದು ನಗಂಗಳೇ ಮೂಡಣಮಂದರಗಿರಿಯ ಟಂಕಣ ಗಂಧಮಾದನಶೈಲದ ಮಧ್ಯಭಾಗದಲ್ಲಿರುವುವು (ತಿಪೇಳ. ೨೦೪). ೩. ಒಬ್ಬ ರಾಕ್ಷಸನ ಹೆಸರು.

[ಸಂ. ಮಾಲ್ಯವತ್]

**ಮಾಲ್ಯಾಂಗ** (ನಾ). = ಮಾಲ್ಯ ೨ : ಅದಿರ್ಮೂರ್ತಿಯ ವಕುಲದ ನಾಗದ ಪೊಂಗೇದಗೆಯ ಹೇಮತಾಮರಸದ ಕುಂದದ ಬಣ್ಣವಾಸಿಗಂಗಳನುದಾತ್ತ ಮಾಲ್ಯಾಂಗಮಹೀರುಹಂ ಕುಡುತಿರ್ಕುಂ (ಶಾಂತಿಪು. ೬-೦೦೨) ; ಮಾಲ್ಯಾಂಗ ಮೆಂಬುದು ಜಾತಿ ಕೇತಕಿ ಮರುವಕ ಪ್ರಭೃತಿ ಸರ್ವರ್ತುಕಥಾಮ ವಿಶೇಷಂಗಳನೀವುದು (ಶಾಪುಂಪು. ೪). 'ದೀಪಾಂಗ' ಪರಾ. [ಸಂ.]

**ಮಾವ** 'ಮಾಮ' ನೋ.

**ಮಾವಂತ**, ಮಾವತ, ಮಾವುತ, ಮಾವ್ತ, ಮಾಹುತ (ನಾ). ಆನೆಯನ್ನು ನಡೆಸುವವನು ; ಮಾವಟಿಗ : "ಹಸ್ತಿಪಕಃ, ಹಸ್ತ್ಯಾರೋಹಃ, ನಿಷಾದೀ – ಈ ೩ ಮಾವಂತಂ" (ಹಲಾಯು. ೩೬-೬೨) ; ಕರಿಕರಮುಂ ಮಾವಂತನ ಕರಮುಂ ತತ್ಪಾಂಡ್ಯಶಿರಮುಮೊಡನುರುಳೆ (ಶಂಶಭಾ. ೦೨-೬೬); ಮುರರಿಪು ರಾಮರ್ ಸುಬೇದರ್ ಕರಿಶಿಕ್ಷಕರಶ್ವಶಿಕ್ಷಕರ ಜೋದರ ಮಲ್ಲರ ಮಾವಂತರ ಮಂದುರಿಗರ ನೆಗಟ್ದಾವಾಸವಾರಿಗಳ ಕೇರಿಗಳೊಳ್ (ಜಗು. ೬-೨೬) ; ಕರಿಗಳನು ಕೌರವನ ಮಾವಂತರಿಗೆ ಕೈಗೊಳಿಸಿದರು (ಕುವ್ಯಾಸ. ೦೬-೬೨). **ಮಾವತ :** "ನಿಷಾದಿ ಹಸ್ತ್ಯಾರೋಹಸೆನಲು ಮಾವತನಕ್ಕು" (ಶಬ್ದಣ. ೪೬-೩) ; ಉಬ್ಬಿ ನಡೆದು ಬರುತಿಹ ಕರಿಘಟೆಗಳನಬ್ಬರಿಸಿಯೆ ಮಾವತರು ಕೊಬ್ಬಿದ ತನುವ ತಿವಿದು ಮೇಘವತ್ತ್ರಣಿಗೆಬ್ಬಿಸಿದರು ಸಬಳಿಗರು (ಅಂಜತ. ೬-೦೨೪). 'ಮಾವತಗೇರಿ' ಪರಾ. **ಮಾವುತ :** "ಜೋದಂ ಮಾವುತನು" (ಕಬಿಕಂ. ೦೩೨) : ತತ್ತುರಗಾಳಿಯುಂ ಖಂಡತುಂಡಮದಾಗೆ ಪೊಯ್ದುತಿರೌದ್ರದಿಂ ಬರೆ ಮಾವುತರ್ (ಉದ್ಭಟ. ೪-೭೮); ರಾವುತರು ಸೆಲ್ಲಿಸಿದರಗ್ಗದ ಮಾವುತರನಾನೆಗಳ ತುಡುಕಿ ಹಯಾವಳಿಯ ಬೀಸಿದರು ರಥಿಕರು ಹಾಯ್ದಿಸಿದರು ರಥವ (ಕುವ್ಯಾಸ. ೨-೦೩) ; ಗಿರಿಶಿಖರದ ಪೂ ತುಂಬಿದ ಕಕ್ಕೆಯ ಮರದಂತೆಯುತಿಚೆಲುವಿಂದ ಪರಿಪರಿಯಾಭರಣವ ಶೃಂಗಾರದೆ ಮೆಟಿದರು ಮಾವುತರಾಗ (ಕಂಪಶಿ. ೨೩-೦೦೪). **ಮಾವ್ತ :** ಮೊಜಿವ ಬೊಬ್ಬೆಗೆ . . . ಮಾವ್ತರಂ ಕೆಡೆಪಿಯಾನೆಗಳ್ ತಿರುಗುತಿರ್ದುವು (ಕಂಪು. ೨೪-೨೪) ; ಹೊಕ್ಕು ಮಾವ್ತರ ಮುರಿದು ಗಜಗಳ ಡೊಕ್ಕೆಯೊಳು ಚಾಚಿದರು (ಅಪಂಣ. ೬-೬-೩೭) ; ಮೊರೆಮೊರೆದು ಹೂಂಕರಿಸೆ ಮಾವ್ತರು ಕರದಿ ತಟ್ಟುತ ಮಸ್ತಕಾಗ್ರವ ಹೊರಜೆ ಘಂಟಾವಳಿಯ ಸೈತಿರಿಸುತ್ತ ತರುಬುವರು (ಕೋಣಗಡು. ೨೦-೦೩). **ಮಾಹುತ :** ಮದಕರಿಯುಂ ಮಾಹುತನ ಕುದುರೆ ತಾ ರಾಹುತನ ಹದುಳವನಣದು ನಡೆವಂತೆ ಸೂಳೆ ತನಗೊದಗುವರನಱಿಗು (ಸರ್ವಜ್ಞ. ೦೪-೦೩) ; ಅವನ ಚಿತ್ತವು ಮದ್ದಾನೆಯನ್ನು ಪಳಗಿಸುವ ಮಾಹುತನ ಕಜ್ಜವನ್ನು ಎಸಗುತ್ತಿರಲಿಲ್ಲ (ರೂಮುಮು. ೦೬). 'ಮಾವಂತಿಗ', 'ಮಾವಟಿಗ' ಪರಾ. [< ಪ್ರಾ. ಮಹಾಮತ್ತ./ಸಂ. ಮಹಾಮಾತ್ರ./ ತಮಿ. ಮಾವುತ್ತನ್ ; ತುಳು. ಮಾವತೆ, ಮಾವುತೆ; ತೆಲು. ಮಾವುತುಡು./ ಹಿಂ. ಮಹಾವತ್ ; ಮರಾ. ಮಾಹೂತ್, ಮಾಹೂವ್, ಮಹಾತ್, ಮಹಾದ್]

**ಮಾವಂತಿಗ**, ಮಾವತಿಗ, ಮಾವುತಿಗ (ನಾ). = ಮಾವಂತ : ನಿಷಾದಿ– ಮಾವಂತಿಗಂ (ಕಮುದ. ೨೩೩ ಅಡಿ): ಗಂಧಸಿಂಧುರಂ . . . ಯದೃಚ್ಛೆಯಿಂದತ್ತಲಿತ್ತಲ್ ಪರಿದೋಡಿ ಮಾವಂತಿಗನಂ ಕಾಡುತ್ತುಮಿರ್ದುದಂ ಮೆಲ್ಲಮೆಲ್ಲನೆ ಸಾಮೋಪಾಯಪ್ರಯೋಗದಿಂದಲಾನಸ್ತಂಭದಂತಿಕಕೆ ತಂದು ನಿಲಿಸುವುದುಂ (ವಾರಕು. ೬-೨೭ ಪ). **ಮಾವತಿಗ :** ಗಗನಪವನದ ಮೇಲೆ ಉದಯಮುಖವನುಛಾವ ಸಮಮದಗಜವ ನಿಲಿಸುವ ಮಾವತಿಗ ಬಂದ (ಅಪಕಂ. ೦೬೦-೪೦೦); ಮಾವತಿಗನ ಕಾಲಂ ಪಿಡಿದೋವದೆ ಸೆಳೆದವನನಿಕ್ಕಿಯಂಕುಸಮುಂ ಕೊಂಡಾ ವಾರಣಮಸ್ತಕದಿನಿಳಾವಲ್ಲಭನಿರ್ದನತುಳ ಸತ್ತ್ವಸಮಗ್ರಂ (ರಕಕು. ೬-೦೦೨); ರಾವುತರ ಮಾವತಿಗರ ತೇಲಾಳ್ಗಳ ಚಪ್ಪರಣೆಯೊಳ್ ಕಿಳರ್ವ ಹಯದ ಗೀಟಿಡುವಾನೆಯ ಕಿಱಿಗಿಱಿವ ಪೊಂದೇರೋರಣಮಿಂಬಿಡಿದಿರೆ. . . ಪಡೆ ನಡೆಯುತುಮಿರ್ದುದು (ರಾಮಾಶ್ವ. ೩೦-೩). **ಮಾವುತಿಗ :** ಪುನ್ನಾಗಂ ಪತ್ತಿ ರಂಜಿಸಿದರ್ಚದುರಮಾವುತಿ [ಶಾಕಾಂ. ವಟಿ]ಗರಂತೆ . . . ಬನದೊಳ್ಪೆಣ್ಗಳು (ಕೈಪಿಂಥಾ. ೬-೨೨). 'ಮಾವಂತ', 'ಮಾವಟಿಗ' ಪರಾ.

[ᑭ 'ಮಾವಂತ' ಮತ್ತು 'ಮಾವಟಿಗ' ಈ ಎರಡು ಸಮಾನಾರ್ಥವುಳ್ಳ

ಶಬ್ದಗಳ ಪ್ರಯೋಗದಲ್ಲಿ ಗೊಂದಲವುಂಟಾಗಿ ಈ ಶಬ್ದವು ರೂಪುಗೊಂಡಿರಬಹುದು]

**ಮಾವಟಿ** 'ಮಾವಟಿಗ' ನೋ.

**ಮಾವಟಿಗ,** ಮಾವಟಿ (ನಾ). = ಮಾವಂತ : "ಆಧೋರಣಃ, ಹಸ್ತಿಪಕಃ, ಹಸ್ತ್ಯಾರೋಹಃ, ಪಕ್ಷಾದಿನ್—ಈ ೪ ಮಾವಟಿಗ" (ನಾಕರಾ. ೦೩೪); ಅಟಿಗ ಪ್ರತ್ಯಯಕ್ಕೆ—ಕೊಲ್ಲಟಿಗಂ. ದೀವಟಿಗಂ, ಮಾವಟಿಗಂ (ಶಬ್ದ. ೨೦೪ ಪ್ರಯೋ); ಭರಿಕರ ಭರೀರದೊಳು . . . ಶಿರ ಶಿರದೊಳು ತಾಗೆ ವೈರಿಕರಿಗಳು ಪೊಣರ್ದವು ಮಾವಟಿಗರು ಮೇಲೆ ಕರವಾಳುಗಳೊಳು ಪೊಯ್ದಾಡೆ (ಪರ್ವಕ. ೬-೦೦೬); ಪೊಣರ್ಚಿಸಿದಪನಾನೆಯಂ ಮಾವಟಿಗನಿನರಸಂ (ಶಬ್ದಾ. ಸೂ. ೩೫೦ ಪ್ರಯೋ). **ಮಾವಟಿ :** ಹೊಳೆವ ಸೂನಗಿ ನೂಂಕುತಿಹ ಮಾವಟಿಯಿಂದ ತಳರ್ದವು ಸೊಕ್ಕಿದಾನೆಗಳು (ಪರ್ವಕ. ೬-೦೦೩) : ರಾಯಘಟ. ಸಿಂಹಘಟಗಳ ನಡುವಣ ಹಸುರುಹರಹಿನ ಮೇಲೆ ತಾವು ಮಾವಟಿಗಳು (ಏಳಚ. ೩೮).

[ಮಾ₁ + – ಅಟಿಗ./ತೆಲು. ಮಾವಟಿ. ಮಾವಟೀಡು]

**ಮಾವಡು** (ನಾ). (ಸಾಮಾನ್ಯವಾಗಿ ಉಪ್ಪಿನಕಾಯಿಗೆ ಬಳಸುವ) ಮಾವಿನ ಮಿಡಿ.–ಹೀಚು : ಕೂಲಿಯೋಗರದಕ್ಕಿ ಕೊಯಿಕೀರೆಯಂ ಕೊಂಡು ಮೇಲುಗಂಟಿಡುವ ಮಾವಡುವನೊಲವಿಂ ಕೊಂಡು. . . ಬರೆ (ಅಂಶ. ಬೇ. ೦೬೩-೨೦) ; ಸವಿದರೆ ಈ ಮಾವಡುವನ್ನು ಸವಿಯಬೇಕು (ಹಸುಹೂ. ೦೪).  [ದೇ.? ತಮಿ. ಮಾವಡು, ಮಾವಟಿ]

**ಮಾವಡೆ** (ನಾ). ದಾನವಾಗಿ ಕೊಟ್ಟ ಭೂಮಿಯಲ್ಲಿ ದೊರಕುವ ಬೇಟೆಯ ಪ್ರಾಣಿಗಳು ಮತ್ತು ಅವುಗಳಿಗೆ ಸಂಬಂಧಿಸಿದ ಒಂದು ಬಗೆಯ ತೆರಿಗೆ : ಚತುಃಸ್ಸೀಮಾಮಧ್ಯದೊಳಗೆ ಸಲುವ ಗದ್ದೆ ಬೆದಲು ತೋಟ ತುಡಿಕೆ ಮಾವಡೆ ಮರುವಡೆ ನಿಧಿ ನಿಕ್ಷೇಪ . . . ಸ್ವಾಂಮ್ಯಾಂಗಳುಂನ್ನು ಶ್ರಿಂಗ್ಗೇರಿ ಶ್ರೀಮಠಕ್ಕೆ . . . ಶ್ರೀವಿಜಯವೆಂಕಟಪತಿರಾಯರ್ಯ್ಯನವರು ಬರಸಿ ಕೊಟ ಭೂದಾನಶಾಸನ (ಶೃ.ಅಂ. ೦೯೩೩, ೩೨-೩೨; 1318) ; ಈ ಗ್ರಾಮದ ಚತುಸ್ಸೀಮೆಗೆ ಸಲುವ ನಂಜೆ ಪುಂಜೆ . . . ಮಾವಡೆ ಮರವಡೆ ಕಳುವಡೆ ನಾರಡೆ ಬಳುಕುನೀರು ಊರ ಸಂತೆ ಮೊದಲಾದ ಹಲ ಉಪಾಧಿಗಳು ಸಹ . . . ಸರ್ವಮಾನ್ಯವಾಗಿ ಆಚಂದ್ರಾರ್ಕ್ಕಸ್ಥಾಯಿಯಾಗಿ ಅನುಭವಿಸಿಕೊಂಡು (ಸೌಇಇ. IX–ii, ೪೬೬-೬; ಕ್ರಿ. 1472) ; ಯಿಾ ಚತುಸ್ಸೀಮೇವಳಗಿನ ತೋಟ ತುಡಿಗೆ ಗದೆ ಬೆದಲು ಮಾವಡೆ ಮರವಡೆ ನಿಧಿ ನಿಕ್ಷೇಪ . . . ಎಂಬ ಅಷ್ಟಭೋಗತೇಜಸ್ಸ್ವಾಂಮ್ಯಗಳನ್ನು ನೀವೇ ಅನುಭವಿಸಿಕೊಣ್ಣು ಬರಲುಳ್ಳವರೆಂದು . . . ಬರೆಸಿಕೊಟ್ಟ ಭೂದಾನ ಶಾಸನ (ಎಕ. X, ಮುಳಬಾ. ೦-೩೬ ; 1577 ?). 'ಮರವಡೆ' ಪರಾ.

[ ← ತಮಿ. ಮಾವಟ್ಟೈ, ಮಾವಿಟ್ಟೈ ]

**ಮಾವಣ್,** ಮಾವಣ್ಣು (ನಾ). ಮಾವಿನ ಹಣ್ಣು : ಮಾವಣ್ಗಳಂ ಪೀರ್ವ ಕೀರವಿಟ್ಟಿಯ ಪಣ್ಗೆ ಚಿತ್ತಂ ಹಾರಿದವುದೇ (ವಿಶಕು. ೦೦-೦೦) ; ಮಾವಣ್ಣರನೇಜಿಲ ಪಣ್ಗಳ ವೃಂದದಂಗಡಿಗಳೊಪ್ಪಿದುವು (ಶಶ. ೪೭-೨೦). **ಮಾವಣ್ಣು :** ತನಿಮಾವಣ್ಣಿನ ಮಧುರತೆ ಕಾಯೊಳು ಜನಿಪುದೆ (ಜೀವಂಧಾಂ. ೦೯-೬೬) ; ಪತಿಯಿತ್ತ ಮಾವಣ್ಣ ಯತಿಯೋರ್ವಗಿತ್ತಳುದ್ಧತಚಿತ್ತೆ ಕಾರಿಕಾಲಮ್ಮೆ (ಭೃರವೇ. ೪-೦೩೦) ; ಮಾವಣ್ಣನರಗಿಳಿ ಸವಿಪವೊಲಧರವಂ ಸವಿದು (ಕಂಕು. ೦೦-೩೯). [ಮಾ₁ (< ಮಾವು) + ಪಣ್₃]

**ಮಾವಣಿಗೆ** (ನಾ). (?) : 'ನುಸುಳ್ಮಾವಣಿಗೆ' ಪರಾ. [ ? ]

**ಮಾವಣ್ಣು** 'ಮಾವಣ್' ನೋ.

**ಮಾವತ** 'ಮಾವಂತ' ನೋ.

**ಮಾವತಗೇರಿ** (ನಾ). ಮಾವಟಿಗರು ವಾಸಿಸುವ ಬೀದಿ : ಮಾವತಗೇರಿ ರಾವುತಗೇರಿಯ ಸುತ್ತ . . . ಪಂಚಕಾರುಕರಾವಾಸಗಳಿರುತಿಹವು (ಅಂಶತ. ೬-೪೯). [ಮಾವತ (< ಮಾವಂತ) + ಕೇರಿ]

**ಮಾವತನ** (ನಾ). ಮಾವನಾಗಿರುವಿಕೆ : ಮಾವತನವಿದು ಬಿಡದೆ ಹೋಗದೆನುತ್ತ ಬಂದನು ಧರ್ಮಸುತ ನಗುತ (ಕುವ್ಯಾ.ಆ. ೦೨-೩) ; ಮೆಚಿಯಿ ಮದವನು ಮಾವತನವದು ಹೊಜಿಗಿರಲಿ ಸಹದೇವ ನಕುಲರ ನಜಿಯಬಹುದಿನ್ನೆನುತ ಹೊಕ್ಕನು ಶಲ್ಯ ಪರಬಲವ (ಕುವ್ಯಾ.ಶ. ೨-೪೬).

[ಮಾವ (< ಮಾಮ) + – ತನ]

**ಮಾವತಿಗ** ' ಮಾವಂತಿಗ ' ನೋ.

**ಮಾವಮ್ಮ ?** (ನಾ). ಒಂದು ನದಿಯ ಹೆಸರು : ಮಹಾರಣ್ಯ ಮಜ್ಜಲಿಯ ಬದರಿನರ್ಮ ಪೂಳಿವಳ್ಳಿವ್ಯಾವಮ್ಮನಿತಿ ಕ್ಷುದ್ರನದೀಶ್ರಯ ಪರಿಪೂರ್ಯ್ಯ ವಾಟಿಮಹಾಸಮುದ್ರಪರಿಹಾಸಿಮಹಾತಟಾಕಮ್ (ಎಕ. III (R), ತಂಕಿಕ. ೪೦೨-೬೬ ; 904). [ ? ]

**ಮಾವರ** (ನಾ). ಲಕ್ಷ್ಮಿಯ ಪತಿ ; ವಿಷ್ಣು : ಮಾವರಂ ಕೊಬ್ಬಿದ ಹಿರಣ್ಯಾಕ್ಷನಂ ಕೊಲಲು (ವೀಕೃಕು. ೩-೦೦-೦೩) ; ಆವ ಗುಣವನು ನೋಡಿ ಒಲಿದಿತ್ತೆಯೊ ಕಾಣೆ ಮಾವರಾ, ನಿನ್ನನೆಂತು ನಾ ಗೆಲಿದೆನರುಹಾ (ವಿಹಿಲಗ. ೦೬-೨). [ಸಂ.]

**ಮಾವಲಿ,** ಮಾಹುರ್ಿ₂, ಮಾಹುಲಿ (ನಾ). ೧. ಒಂದು ದೇವತೆಯ ಹೆಸರು : ಚೌಡರಿಗಳು . . . ಭವಾನಿ, ಮಾವಲಿ . . . ಪಾವನಾಯಿ ಇಷ್ಟು ದೇವತೆಗಳಿಗೆ ನಡಕೊಳ್ಳುತ್ತಾರೆ (ಕಥಾಗ. ೦೩೦). **ಮಾಹುರ್ಿ₂ :** ೧. ತಾವರೆಗಂಗಾಳೆ ಬೆನ್ನಿಲಿರೊ ಕೋವಿದಗುಣಗೆ ಅಭಯ ಕೊಡುವೆ ಮಾಹುರೀ ಯಲ್ಲಮ್ಮಾ ಬನ್ನಿಲೆನ್ನಾ ವಚನಕೆ (ಶ್ರೀಕೃಪಾ. ೬೦). **ಮಾಹುಲಿ :** ೨. ಧರ್ಮಿಷ್ಠಳಾದ ಹೆಂಗಸು : ಅವಳು ಗರತಿಯ ಮಗಳು. ಮಾಹುಲಿಯಾಗಿದ್ದಾಳೆ (ಉತ). [← ಮರಾ. ಮಾವಲೀ, ಮಾಹುಲೀ. ಮಾಲೂಲೀ]

**ಮಾವಶಿ,** ಮಾವಶೀ, ಮಾವಸಿ, ಮೌಸಿ (ನಾ). ತಾಯಿಯ ಒಡಹುಟ್ಟಿದವಳು ; ಚಿಕ್ಕಮ್ಮ ಅಥವಾ ದೊಡ್ಡಮ್ಮ : ಬೇರೆಯವರ ಮಾವಶಿಯರು ತಮ್ಮ ಅಕ್ಕನ ಮಗಳಿಗೆ ವಸ್ತ್ರ—ಒಡವೆ ಮಾಡಿಸಿಕೊಡುತ್ತಾರೆ (ಸ್ವಕಿಪ. ೬೬). **ಮಾವಶೀ :** ಮಾವಶೀ ಇದನ್ನೆಲ್ಲ ಮಾಡಿದ್ದಾಳೆ (ಸ್ವಕಿಪ. ೬೨). **ಮಾವಸಿ :** ನಿನ್ನ ಅಬಚಿಗೆ 'ಮಾವಸಿ' ಅನಬೇಕಪಾ (ಬೀಕಿ. ೩೮). **ಮೌಸಿ :** ನಮ್ಮ ಮೌಸಿ ನಾಳೆ ಅಮೇರಿಕದಿಂದ ಬರುತ್ತಿದ್ದಾಳೆ (ಉತ).

[← ಹಿಂ. ಮಾಉಸೀ, ಮಾಸೀ, ಮೌಸೀ ; ಮರಾ. ಮಾವಶೀ. ಮಾವಸೀ. ಪ್ರಾ. ಮಾಉಚ್ಛಾ. ಮಾಉಸಿಆ, ಮಾಉಸೀ. ಮಾಉಸ್ಸಿಆ, ಮಾಸಿಆ. ಸಂ. ಮಾತೃಷ್ವಸೃ, ಮಾತೃಸ್ವಸೃ]

**ಮಾವಶೀ** ' ಮಾವಶಿ ' ನೋ.

**ಮಾವಸಿ** ' ಮಾವಶಿ ' ನೋ.

**ಮಾವಳ** (ನಾ). ಮಹಾರಾಷ್ಟ್ರದ ಸಹ್ಯಾದ್ರಿಪರ್ವತಪ್ರದೇಶಕ್ಕೆ ಸೇರಿದ ಒಂದು ಕ್ಷತ್ರಿಯಜನಾಂಗ ಮತ್ತು ಆ ಜನಾಂಗಕ್ಕೆ ಸೇರಿದ ವ್ಯಕ್ತಿ : ಗಂಭೀರೋದ್ಧತಪರಿಘಾವರಣಭೀಷಣಶತಘ್ನೀಶತಸಂಕುಲಮತ್ತ ಮಾವಳಸೇನಾವಳೀವರ್ಮಿತ ಧರ್ಮಪುರೀಪ್ರಸಭಾಕ್ರಮಣ ಶ್ರವಣ ನಿರ್ಜನೀಕೃತ ಕೇಂಗೇರಿ . . . ಕುನ್ನತ್ತೂರ್ ಮುಖ್ಯದುರ್ಗವರ್ಗನಿರಾಯಾಸಾಕ್ರಮಣನಿರ್ವೃತನಿಜಸೈನಿಕಸಮೂಹನಂ (ಕಳಂ. ೩೮-೨೩).

[← ಮರಾ. ಮಾವಳೀ]

**ಮಾವಳಿಗ** (ನಾ). = ಮಾವಳ : ನರಪತಿ ಕೇಳ್ಮಿನ್ನೊಳ್ಪಡಿಬರಿಸದ ಮಾವಳಿಗಪಡೆಯನುಡುಗಿಪ ನೆವದಿಂ ಪರಿಹರಿಸಿ ಪಾಪಮನಿತಂ ಸುರುಪ್ಪ ದೋಳಿರಿಸಿ ಸೊಗಮನಮಗೊಳಿಸಿದಪ್ಪೆ (ಅಶ್ವತಿ. ೬೪-೬೦).

[ಮಾವಳ + – ಗ₂]

**ಮಾವಳ್ಳಿ** (ನಾ). ಮಾವಿನ ಚಿಗುರು.—ಕುಡಿ : ಇದಿರ್ಗಾಳಿಗೊಲೆವ ಮಾವಳ್ಳಿಯ ದಾಂಗುಡಿಯ ನುಣ್ಪೊಗರೆ ಬಳ್ಳಿಮಿಂಚಾಗೆ . . . ಬಸಂ

ಮನಂಗೊಂಡುದು (ಅಚಪು. ೫೪-೧೨). [ಮೂ₂ (< ಮಾವು) + ಬಳ್ಳಿ]

**ಮೂವಾಣಿಗ** (ನಾ). (?) : ಮೂವಾಣಿಗರುಂ ಇಗ್ಗರೆಯ ಪಾದಪ್ಪಡಿಗಳುಂ ಆನೆಸಾಸಲಾ ಬೀರಡಿಗಳುಂ ಮೂರಡಿಗಳುಂ . . . ಇ ಪೊಲನಂ ನಡೆಯಿಸಿ ದೋರ್ (ಎಕ. XVI, ಗುಬ್ಬಿ. ೬೫-೫೫ ; 733). [ ? ]

**ಮೂವಾನಿಕೆ ?** (ನಾ). (?) : ಕನಕಮಣಿದ್ರುಮ್ಮಗಳ ದಿವಿಜರ ವನಿತೆಯರ ನಮರಾವತಿಯ ತಾನಿನಿತುವನು ಏಂಗಡಿಸಿ ನಿಮ್ಮಡಿಗೀವೆನೀ ಕ್ಷಣದಿ ವನಿತೆ ಮೂವಾನಿಕೆಯುಳಲ್ಲವೆ ನೆನೆಯುಬೇಡಿಸಿತುಗ್ರಕರ್ಮವನೆನಲು ಸುರಪನ ಕೊಲ್ಲಲೆ ಸಾದರಿದ್ದು ತಮತಮಗೆ (ಕುಂದಗ. ೩೪-೯೦). [ ? ]

**ಮೂವಿ₁** (ನಾ). ಭ್ರೂಣದ ಮೇಲಿನ ಪೊರೆ ; ಮಾಸು ; ಜರಾಯು : 'ಮೂವಿಚೀಲ' ಪರಾ.

[ದೇ.॥ ತಮಿ. ಮಾ ; ಮಲ. ಮಾ, ಮಾವು ; ತೆಲು. ಮಾವಿ]

**ಮೂವಿ₂** (ನಾ). ೧. ಹಳದಿಮಿಶ್ರಿತವಾದ ಹಸುರುಬಣ್ಣ : (ಕ). ೨. ಪಾರಿವಾಳದ ಬಣ್ಣ ; ಬೂದುಬಣ್ಣ : ಮೂಲದಲ್ಲಿ ಪಾರವಾಳದ (ಮಾವಿ) ಬಣ್ಣನಂಥಾ ಕಾಳುಗಳು ಕೂಡಿರಬಾರದು (ಪುಂಖಶಾ. ೫೫): ಪಾರವಳದ (ಮಾವಿ) ಬಣ್ಣ, ದಾಲಚಿನಿಯ ಎಣ್ಣೆ, ಗುಲಾಬನೀರು (ಪುಂಖಶಾ. ೦೦೦). [ ?]

**ಮೂವಿಚೀಲ** (ನಾ). = ಮೂವಿ₁ : "ಗರ್ಭಾಶಯಃ , ಜರಾಯುಃ – ೨ ಬಸುರೊಳಗೆ ಸುತ್ತಿಕೊಂಡಿರುವ ಮಾವಿಚೀಲದ ಹೆಸರು" (ಸಿದ್ಧಂಚಿ. ೫೬). 'ಮಾಸುಚೀಲ' ಪರಾ. [ಮಾವಿ₁ + ಚೀಲ]

ಮಾವಿನಶುಂಠಿ (ನಾ). (ಉಪ್ಪಿನಕಾಯಿಗೆ ಹಾಕಲು ಬಳಸುವ) ಒಂದು ಬಗೆಯ ಸುವಾಸನೆಯ ಬೇರು : ಮಾವಿನಶುಂಠಿ. ಕರ್ಪೂರಅರಿಸಿನ (ಪ್ರುಶಿ. ೨೬-೯೯೬). [< ಮಾವು + ಶುಂಠಿ]

**ಮೂವಿನೂರ್** (ನಾ). ಒಂದು ಊರಿನ ಹೆಸರು : ಚನ್ದ್ರತೇಜಭಟ್ಟಾರರ್ಗೆ ಮಾವಿನೂರೊಳ್ ಬಗೆಗ[ನು] ಕೊಟ್ಟವರ್ ಸಾವಿರ(ವ್) ಬಳ್ಳಿಯ ತೋಣ್ಟದ ಸಾಮ್ಯವು (ಎಇ. XXVI, ೬೨-೦೯; 906).

[< ಮಾವು + ಊರ್]

ಮಾವು (ನಾ). ಒಂದು ಬಗೆಯ ಮರ ಮತ್ತು ಅದರ ಹಣ್ಣು : ಚೂತ : "ಸಹಕಾರಮಾಮ್ರಂ ಚೂತಮೆಸೆ ಮಾವೆನಿಕ್ಕುಂ" (ಪುಂಗಶಾ. ೫೯-೦೦); ತುಱುಗಿದ ಪೂಗೊಂಚಲ ಕಾದ್ರಿಱಿದ ಮಾವುಗಳ ಬೆಳೆದ ಕೌಂಗಿನ ಗೊನೆ ತಳ್ತಿಱಿಗಿರ ಮಾಡದೊಳಲ್ಲಿಯು ತಿಱಿದುಕೊಳಲ್ಕಿಂಬಿನೆಸಕ ಮೆಸೆದುದುಪವನಂ (ಕಂಪಶಾ. ೩-೯೦); ದಕ್ಷಿಣದೇಶದೊಳೊಂದುಮ್ಮಹಾಟವಿಯುರ್ಪುದು ಅದಱೊಳೊಂದು ಮಾವಿರ್ಪುದು (ಕಂಕಕೊ. ೨೨೬-೨೦); ಈ ಮರಾಗ್ರಹ ನಿನ್ನ ಚಿತ್ರದೊಳಾವುದೇ ತಪ್ಪೇನು ಕೋಗಿಲೆಯಾದರಿಸಿದಡೆ ಬೇವು ಮಾವಹುದಾದಡೆಮಗೇನು (ಶುಪ್ಪಕ. ೬-೯) ; ಮಾವು . . . . ಹಿಂದೂಸ್ಥಾನದಲ್ಲಿ ವಿಶೇಷವಾಗಿ ಬೆಳೆಯುತ್ತದೆ (ಸಸ್ಯಶಾ. ೦೩೨).

**ಮಾವಿನಕಾಯಿ ಸರ** = ಚಿನ್ನ ಅಥವಾ ಬೆಳ್ಳಿಯಲ್ಲಿ ಮಾಡಿಸಿದ ಮಾವಿನಕಾಯಿಗಳಿರುವ ಕಂಠಾಭರಣ : ಕಂಠಭೂಷಣಗಳು – ತಾಳಿ, ಚಂದ್ರಹಾರ . . . ಜೋಳದ ಸರ, ಮಾವಿನಕಾಯಿ ಸರ, ಮಲ್ಲಿಗೆ ಮೊಗ್ಗಿನ ಮಾಲೆ, ಪದಕ ಇತ್ಯಾದಿ (ಕವಿಕೋ. I, ೬೨೦). **ಮಾವಿನ ಬಟ್ಟೆ** = ಮಾವಿನ ಮರಗಳ ಮೇಲೆ ವಿಧಿಸುತ್ತಿದ್ದ ಸುಂಕ, – ತೆರಿಗೆ : ನಲ್ಲೆತ್ತು ನಲ್ಲೆಮ್ಮೆ ಮಾವಿನ ಬಟ್ಟೆ ಸುಂಕ ಕಾರುಕ . . . ಬಾವಲಿ ಬಿರಾಡ ಮುಂದೆ ಹುಟ್ಟುವ ಪೂರ್ವಾದಾಯ ಸಹವಾಗಿ ಸರ್ವಬಾಧೆ ಪರಿಹಾರಕ್ಕೆ ಗದ್ಯಾಣ ಗ ೧೧ ವರಹ (ಪ್ರಇ. ೦೯೩೯, ೨೬-೨೦; 1430).

[ದೇ.॥ ತಮಿ. ಮಾ ; ಮಲ. ಮಾ, ಮಾವು ; ಕೊಡ. ಮಾಂಗೆ ; ತೆಲು. ಮಾವಿ ; ಕಾಯ್ಕ. ಕೋಲಾ. ಮಾವ್ಸಿ]

ಮಾವುಕುದುರೆ (ನಾ). ಗಂಡುಕುದುರೆ : ಸಕುಲನು ಧರ್ಮರಾಜನಂ ನೋಡಿ ನಾನು ದಾಮಗ್ರಂಥಿಯೆಂಬ ಹೆಸರನ್ನು ವಹಿಸಿ . . . ಗೋಳಗೇ ಕುದುರೆಗಳ ಹದವನ್ನು ತಿಳಿದು ಮಾವುಕುದುರೆಗಳನ್ನು ಹತ್ತಿಸುವ ಚಾತುರ್ಯವನ್ನೂ (ಭಾಚಂ. ೫).

[ಮಾವು₂ (ಪ್ರ←ತೆಲು. ಮಾವು = ಗಂಡುಕುದುರೆ) + ಕುದುರೆ]

**ಮೂವುತ** 'ಮಾವಂತ' ನೋ.

**ಮೂವುತಿಗ** 'ಮಾವಂತಿಗ' ನೋ.

**ಮೂವುರಿ** 'ಮೌರಿ₁' ನೋ.

**ಮೂವುಲಿಗ** (ನಾ). ೧. ಬೇಡ : "ಮೃಗಯುಃ, ಲುಬ್ಧಕಃ, ವ್ಯಾಧಃ, ವಾಗುರಿಕಃ–ಈ ೪ ಮಾವುಲಿಗಂ" (ಹಲಾಯು. ೯೬-೯೯೨). ೨. ಕಟುಕ : ಚಂಡಾಲ : ಸಾಱಿ ಕೊಲ್ವ ಮಾವುಲಿ[ಪಾಠಂ. ರಿ]ಗಂಗೆ ದೋಷಮಿಲ್ಲಂ (ಲೀಲಾವ. ೯-೦೩೬ ಪ). 'ಪೆರ್ಮಾವುಲಿಗ' ಪರಾ. [? + – ಇಗ]

**ಮೂವ್ತ** 'ಮಾವಂತ' ನೋ.

**ಮೂಷ** (ನಾ). ೧. ಒಂದು ಬಗೆಯ ದ್ವಿದಳಧಾನ್ಯ ; ಉದ್ದು : "ಉರ್ದ ಮಾಷಂ" (ಪಸ್ತಕೋ. ೯೯-೫೬); ಅಂತು ಕೊಂಡ ಪದವಟ್ಗಳೊಳ್ ಕಳಮಷಷ್ಟಿಕಾವ್ರೀಹಿ . . . ಕುಲತ್ಥಮುದ್ಗಮಾಷರಾಜಮಾಷಾಢಕೀನಿಷ್ಪಾವಚಣಕ . . . ಜೀರಕಧಾನ್ಯಕಾದಿ ವಿವಿಧಧಾನ್ಯಭೇದಂಗಳುಂ (ಆದಿಪು. ೬-೬೨ ಪ) ; ಇಂದ್ರಿಯವರ್ಧನಹೇತುಭೂತಮಾಷವಿದಳಪಾಯಸಪ್ರಮುಖೇಕ್ಷುರಸಸೇವಾನಿವೃತ್ತಿಯುಂ (ಕಕ್ಕಶ್ರ. ೨೬೦). ೨. ಚಿನ್ನದ ಒಂದು ನಿರ್ದಿಷ್ಟಪ್ರಮಾಣದ ತೂಕ ; ಎಂಟುಗುಂಜಿ ತೂಕ : ೮ ಗುಂಜಿ ತೂಕ = ೧ ಮಾಷ ೧.೨ ಗ್ರಾಂ, ೪ ಮಾಷ = ೧ ಶಾಣ ೪.೮ ಗ್ರಾಂ (ಕಕಕ್ಕ. xiii, ಶ್ರಪಾಪ). [ಸಂ.]

**ಮೂಷಕ** (ನಾ). ೧. = ಮಾಷ ೧ : "ಮಾಷಕಃ–ಉದ್ದು" (ಓಕಂ. ೦೨೯). ೨. = ಮಾಷ ೨ : "ಕಾರ್ಷಾಪಣಃ, ಕಾರ್ಷಿಕಃ – ೨ ಎರಡು ಗುಲಗಂಜೀ ತೂಕದ ಬೆಳ್ಳಿ, ೧ ಮಾಷಕ – ೧೬ ಮಾಷಕಗಳಾದರೆ–೧ ಕರ್ಷವಾಗುತ್ತೆ" (ಸಿದ್ಧಂಚಿ. ೪೦೦). [ಸಂ.]

**ಮೂಷಪತ್ರಿ** (ನಾ). ಒಂದು ಬಗೆಯ ಸಸ್ಯ : "ಪಾಂಡುಃ – ಕಹಿಪಡಲ, ಮಾಷಪತ್ರಿ" (ಓಕಂ. ೯೪). [ < ಸಂ. ಮಾಷಪತ್ರಿಕಾ ]

**ಮೂಷಪರ್ಣಿ** (ನಾ). ಒಂದು ಬಗೆಯ ಉದ್ದು; ಕಾಡುದ್ದು : "ಹಯಪುಚ್ಛೀ, ಕಾಂಭೋಜೀ, ಮಾಷಪರ್ಣೀ, ಮಹಾಸಹಾ – ಈ ೪ ಕಾಡುದ್ದು" (ಪಾಶಶಾ. ೦೦೦). [ ಸಂ. ಮಾಷಪರ್ಣೀ ]

**ಮೂಷಮುಖ** (ನಾ). ಉದ್ದಿನ ಕಾಳಿನಂತೆ ಮೂತಿಯುಳ್ಳುದು: ನೊಣ : ಭಾಷಾವಿದರ್ ಕವಿತ್ವವಿಶೇಷಜ್ಞರ್ ನಿಕಷರಪ್ಪೊಡಪ್ಪುದು ಸಭೆಯೊಳ್ ಮಾಷಮುಖದಂತೆ ದೋಷಗವೇಷಣಪರರಪ್ಪರೆಂದೊಡದು ತೆಗಟಲ್ತೇ (ಆದಿಪು. ೦-೨೦); ಭೇಷಜದಂತಿರೆ ಸುಜನಂ ದೋಷಮನಪಹರಿಸಿ ಗುಣಮನದಱೊಳೆ ತೋರ್ಕುಂ ಮಾಷಮುಖದಂತೆ ಕೆಲಬರ್ ದೋಷಗ್ರಾಹಿಗಳಡುರ್ತು ಕಸವನೆ ಓದಿವರ್ (ಶಬ್ದಮ. ೦-೦೬); ಸತ್ತ್ವಂ ಓತುಸಂಪೆಱಗ್ರ್ಪತ್ತ್ರಂ ಪಾಡದಿರನೆಂದು ಮಱುಗಿದಪುದು ಮಚ್ಚಿತ್ತಂ ಮೃತಮಾಷಮುಖಂ ಮತ್ತೆನಿಸದೆ ಬವನಮೆಯ್ದಿ ಪಪೊಲುಂಬವಮ (ಲೀಲಾವ. ೦-೩೩). [ಸಂ.]

**ಮೂಷಾಪೂಪ** (ನಾ). ಒಂದು ಬಗೆಯ ಕರಿದ ತಿಂಡಿ; ಉದ್ದಿನ ವಡೆ. [ಸಂ.]

**ಮೂಷೀಣ** (ನಾ). ಉದ್ದನ್ನು ಬಿತ್ತಿರುವ ಪ್ರದೇಶ; ಉದ್ದು ಬೆಳೆಯುವ ಹೊಲ : "ಮಾಷ್ಯಂ, ಮಾಷೀಣಂ - ಈ ಎರಡು ಉದ್ದಿನ ಕೆಯ್" (ಹಲಾಯು. ೨೬-೬); ಆ ನಾಡೂರೂರ್ದಪ್ಪುದದೇನೆಸವೃದೊ! ಕೌದ್ರವೀಣ ಶ್ಯಾಮಿನದ ತ್ಯೆಲೀನದ ಮಾಷೀಣದ ಮೌದ್ಗೀನದ ಬಹುಸಾರಸಸ್ಯಸಕಳ ಫಳಂಗಳ್ (ಭುಕ್ತ. ೨-೬೨). [ಸಂ.]

**ಮಾಷ್ಯ** (ನಾ). = ಮಾಷೀಣ : "ಮಾಷ್ಯಂ, ಮಾಷೀಣಂ — ಈ ಎರಡು ಉದ್ದಿನ ಕೆಯ್" (ಶಬ್ದಮ. ೨೬-೬) ; ಲೀಲೆಯಿನವಜಿ ನೆಲಂ ಪರಿಪಾಲಿಸಿದುವು ಕಣ್ಗೆ ನಾಡೆ ಮೌದ್ಗಂ ಮಾಷ್ಯಂ ಶಾಲೇಯಂ ವ್ರೈಹೇಯಂ ತೈಲೀನಂ ಕೌದ್ರವೀಣಮೌಮ್ಯಂ ಯವ್ಯಂ (ಚಂದ್ರಪ್ರ. ೦-೯೦). [ಸಂ.]

**ಮಾಷ**$_1$ (ನಾ). ಉದ್ದು; ಮಾಷ : ಮಾಷಗೋಧೂಮಪ್ರಮುಖ ಶಾಲ್ಯಾಶನವ ಸದ್ಯೋಘೃತಾಮೃತ ಬಾಷಣಿಪ ದಧಿಶರ್ಕರಾನ್ವಿತ ಬಹು ಪದಾರ್ಥಗಳ . . . ಶಂಕರಗರ್ಪಿತವ ಮಾಡಿದ ಮಹಾಮಹಿಮ (ಶಂಕರಾ. ೩-೩೩). [< ಸಂ. ಮಾಷ ]

**ಮಾಸ**$_2$ (ನಾ). ೧. ಮೂವತ್ತುದಿವಸಗಳ ಅವಧಿ ; ತಿಂಗಳು : "ಮೂವತ್ತುದಿವಸಮಂ ಮಾಸಮೆಂಬುದು" (ಶಬ್ದಮ. ೯೯-೧೦೩) ; ಹೋರಾಧಿಪನಿರ್ದಸ್ತಾಗಾರದೊಳಭಿಭೂತಮಾಗೆ ಪೇಣಲ್ಲದೊಡಾ ಹೋರೇಶ ನಿರ್ದು ನಿಧನಾಗಾರದೊಳಭಿಭೂತಮಾಗೆ ಮಾಸದೆ ಮರಣಂ (ಜಾತಕ. ೬-೦೦); ಮಾಸಂ ಪಕ್ಷದ್ವಿತಯಂ ಮಾಸದ್ವಯಮೊಂದೆ ಋತು (ಶಂರಾಷು. ೦-೩೨) ; ದಿವಸಂ ಮೂವತ್ತೊದವಿರಲವು ಮಾಸಂ (ವ್ಯವಹಾ. ೬-೩೭). ೨. [ಗಣಿತ] ಹನ್ನೆರಡು ಎಂಬ ಸಂಖ್ಯೆಯ ಸಂಕೇತ.

**ಮಾಸಗಟ್ಲೆ** =೧. ಒಂದು ಪದ್ಧತಿಯನ್ನು ತಿಂಗಳಿಗೊಂದು ಬಾರಿ ಅನುಸರಿಸುವುದು : (+). ೨. ತಿಂಗಳುಗಟ್ಟಲೆ ; ಹಲವು ತಿಂಗಳುಗಳ ವರೆಗೆ : ಅವರು ವ್ಯವಹಾರದ ಕಾರಣದಿಂದ ಮಾಸಗಟ್ಲೆ ಪರದೇಶಗಳಲ್ಲಿ ಪ್ರವಾಸ ಮಾಡುತ್ತಿರುತ್ತಾರೆ (ಜನ). [ಸಂ.]

**ಮಾಸಂಕ** 'ಮಾಸಾಂಕ' ನೋ.

**ಮಾಸಂಕೆ** (ನಾ). ಅತಿಯಾದ ಹೆದರಿಕೆ,—ಭಯ : 'ಮಾಸಂಕೆಗೊಡು' ಪರಾ. [ ಮಾ$_4$ + ಸಂಕೆ$_1$ ]

**ಮಾಸಂಕೆಗೊಡು** (ಕ್ರಿ). ಅತಿಯಾದ ಹೆದರಿಕೆಯನ್ನು ಉಂಟು ಮಾಡು : ದಾರಿದ್ರ್ಯಂ ಕವಿದಂದು ಕಾಯ್ದು ಪಗೆಗಳ್ ಮಾಸಂಕೆಗೊಟ್ಟಂದು ದುರ್ವಾರವ್ಯಾಧಿಗಳೊತ್ತಿದಂದು ಮನದೊಳ್ ನಿರ್ವೇಗಮುಬ್ಬ್ಯಂ (ರಣ್ನಕ. ೨೩). [ಮಾಸಂಕೆ + ಕೊಡು$_1$]

**ಮಾಸಟೆ** (ನಾ). ಅತಿಯಾದ ಸುಳ್ಳು,—ಹುಸಿ : 'ಮಾಸಟೆವೆಣ್' ಪರಾ. [ಮಾ$_4$ + ಸಟೆ$_1$]

**ಮಾಸಟೆವೆಣ್** (ನಾ). ಹುಸಿ ನುಡಿಯುವವಳು : ಸುಳ್ಳುಗಾತಿ : ತಮ್ಮಬ್ಬೆ ಸತ್ತೊಡಮಿಾ ಮಾಸಟೆ[ಶಾಕಾಂ. ನಂಜನ]ವೆಣ್ಣ ಕಣ್ಗೆ ಪುಸಿ ಕಣ್ಣೀರಲ್ಲದೇಂ ಬರ್ಕುಮೇ (ಕಾವ್ಯಸಾ. ೦೦೦೦ ; ರೀಶಾಪ. ೨-೦೦೨ ನೋ). [ಮಾಸಟೆ + ಪೆಣ್]

**ಮಾಸತಿ, ಮಾಸ್ತಿ** (ನಾ). ೧. ಮಹಾಪತಿವ್ರತೆ,—ಸಾಧ್ವಿ : "ಮಾಸತಿ (ಮಾಸ್ತಿ) — ಮಹಾಸತೀ" (ಕನ್ನಕೋ. ೪೩) ; ಪೊಗಟಿಲ್ಕೆ[ಜೀಯೆನಾ] ಮಾಸತಿಯ ರೂಪಂ (ಗದಾಯು. ೬-೩೭) ; ಮುಂಡುಪಿಡೆ ಬಂದೆನು ಅರ್ತಿಯ್ನ ಕೂಡಿ ನಿನಗೀ ಕೃತಿಯಂ ಮಾಸತಿನುತಿಯಂ (ಅತರ್ಕ. iii) ; ಪತಿಯು ಜೀವಂತನಿರುವಾಗಲೇ ಸೌಭಾಗ್ಯದಿಂದ ಅಮರಧಾಮವನ್ನು ಸೇರಬೇಕೆಂದು ಆ ಮಾಸತಿಯು ಹಬ್ಬಯಕೆಯಿತ್ತು (ಋಶಸಂ. ೦೩೩). ೨. (ಹಿಂದಿನ ಕಾಲದಲ್ಲಿ ಯುದ್ಧ ಮುಂತಾದ ಸಂದರ್ಭಗಳಲ್ಲಿ) ಸತ್ತ ಗಂಡನೊಡನೆ ಚಿತೆಯನ್ನೇರುತ್ತಿದ್ದ ಪತಿವ್ರತೆಯಾದ ಹೆಂಗಸು,—ಮಹಾಸತಿ : ಮಲೆಯೂರ ವೀರಪದೇವರು ಊರ ತುಱುವಂ ಸೂರೆಕೊಳ್ವಾಗ ಪಲರನಿದಿರ್ಚ್ಚಿ ಕೊಂದು ಸುರಲೋಕಕೆ ಸಂದೊಡೆ ಆತನ ಸತಿ ಮಾಸತಿಯಾದಳು (ಎಪಿಕ. ೦೬೨೯, ೯೨-೩ ; 1179 ?) ; ಆಸೆಯಂನುಳಿದಸುವಿನ ಮೇಲೆ ತಮ್ಮ ಜೀವೇಶರೊಡನೆ ಹರಣವನು ಮಾಸದಗ್ನಿಗೆ ಮನವೊಲಿದೀಡಾಡುವ ಮಾಸತಿಯರು ಕಣ್ಗೆಸೆವರು (ಶಂಕರಸಾಂ. ೩೭-೦೨೯). **ಮಾಸ್ತಿ** : ೧. ಶರಣೆಂದೆಱಗೆ ಮಾಸ್ತಿ ಮುತ್ತೈಯ್ದೆಯಾಗೇಳೆನಲ್ಕವಳ ಗಂಡನ ಪ್ರಾಣಮೈದದೇ (ಕವಿಶ್ರೀ. ೩೭-೬೨). ೨. ಧೀರೆಯಾದ ಮಾಸ್ತಿಗೆ ವೀರತ್ವವಲ್ಲದೆ ಧಾರಿಣಿಯು ಜನರೆಲ್ಲರೂ ಓಡಿ ಮಾಸ್ತಿ ಎಂದೆ ಬಳಿಕ ವೀರತ್ವವೆಲ್ಲಿಯದೋ (ಸರ್ವಜ್ಞ. ೬೩-೯೭೯) ; ಮಾಸ್ತಿಯನ್ನು ಕುರಿತು ದಂತಕತೆ, ಸ್ಥಳಪುರಾಣ, ಮಹಾತ್ಮೆ—ಹೀಗೆ ಅರೇಬಿಯನ್ ನ್ಯಾಟ್ಸನ್ನು ಅರವತ್ತು ಪಾಲಿಗೆ ಮಿಗಿಸುವ ಸಾಹಿತ್ಯ ಉಂಟಾಗಿದೆ (ಸಹಸ. ೬). ೩. = ಮಾಸತಿಕಲ್ಲು : ಆತನ ಹೆಂಡತಿ ಚಳಕಿಯ ನಾಗೌಂಡಿಗೆ × × × ತಾಗಾಯಿಂಚ್ಚಿ ಹೋದಳು ಆ ಚಂನಪ್ಪನ ಬೀರಗಲು ಮಾಸ್ತಿಯ ಪ್ರತಿಷ್ಠೆ ಮಾಡಿಸಿದ ಮಂಗಳ × × × (ಸೌಇಇ. XX. ೪೩೬-೬ ; ಸು. 13ನೆಯ ಶ) ; ಗಂಡಸಾದರೆ—ತನ್ನ ಸತಿ ವಿಧೇಯಳಾಗಲೆಂದು, ಹೆಂಗಸಾದರೆ—ತಮ್ಮ ಪತಿ ಬಲಿಯಲೆಂದೂ ಬೇಡಿ, ಮಾಸ್ತಿಗೆ ಕುಂಕುಮವಿರಿಸಿ . . . ಹೋಗುತ್ತಾರೆ (ಸಹಸ. ೮). [ಮಾ$_4$ + ಸತಿ$_1$./ಸಂ. ಮಹಾಸತೀ]

**ಮಾಸತಿಕಲ್ಲು, ಮಾಸ್ತಿಕಲ್, ಮಾಸ್ತಿಕಲ್ಲು, ಮಾಸ್ತಿಗಲ್ಲು** (ನಾ). ಗಂಡನು ಸತ್ತಾಗ ಅವನ ಜೊತೆಯಲ್ಲಿಯೇ ಚಿತೆಯನ್ನೇರಿ ಮಹಾಸತಿ ಎಂಬ ಹೆಸರನ್ನು ಪಡೆದ ಪತಿವ್ರತೆಯ ಸ್ಮಾರಕವಾಗಿ ನಿಲ್ಲಿಸುವ ಕಲ್ಲು ; P ಸಾಮಾನ್ಯವಾಗಿ ಮಾಸ್ತಿಕಲ್ಲುಗಳ ಮೇಲೆ ಎತ್ತಿದ ತೋಳಿನ ಸ್ತ್ರೀಯ ಚಿತ್ರವಿರುತ್ತದೆ. ಸ್ತ್ರೀಯ ತಲೆಯ ಹಿಂದೆ ಬೆಂಕಿಯ ಜ್ವಾಲೆಗಳನ್ನು ಕೊರೆದಿರುವುದುಂಟು. ಕೆಲವು ಕಡೆ ಮಹಾಸತಿಯ ಕೈಯಲ್ಲಿ ಒಂದು ಹಣ್ಣಿನ ಚಿತ್ರವಿರುತ್ತದೆ : ಈ ಗುಂಪಾದರೂ ಸಣ್ಣ ಗುಂಪಲ್ಲವೆಂಬುದನ್ನು ನಾಡಿನ ಮೂಲೆಮೂಲೆಗಳಲ್ಲಿ ಮಾಸತಿಕಲ್ಲುಗಳು ಕೂಗಿ ಹೇಳುತ್ತಿವೆಯಾದರೂ ಸಹಗಮನ ಮಾಡಿದ ಸತಿಯರ ಸಾಲಿನಲ್ಲಿ ಮಹಾಭಾರತದ ಮಾದ್ರಿಯ ಹೆಸರು ಲೋಕೋತ್ತರವಾದುದು (ಶಾಪುರಾ. ೯) ; ಹರಿವ ಹಳ್ಳದ ದಂಡೆಗಿರುವ ಮಾಸತಿಕಲ್ಲು . . . ಎಣ್ಣೆಯುಣ್ಣುತ ಪೂಜೆಗೊಳ್ಳುವುದ ಕಂಡಿದ್ದೆ (ಚಾಪಜೀ. ೬-೦೩೭). **ಮಾಸ್ತಿಕಲ್** : ದೇವಾಲಯದ ಹೊರಗಡೆ ಪೂರ್ವದಲ್ಲಿ ವಸಂತಮಂಟಪ, ಮಾಸ್ತಿಕಲ್, ೧೮ ಅಡಿ ಎತ್ತರದ ಚೆನ್ನಾಗಿ ಅಲಂಕರಿಸಿರುವ ದ್ವಾರ ಇವೆ (ಹೊಯ್ಸಳಾ. ೯೨). **ಮಾಸ್ತಿಕಲ್ಲು** : ಭಟಂಣನ ಮಗ ಹರಿಗೆ ಸಿದ್ದಣನೂ ತಮ್ಮ ತಂಗಿ ತಿಂಮಮಗೆ ಮಾಸ್ತಿಕಲ್ಲ ಕಡಿಸಿ ನಿಲಿಸಿದೂ (ಎಪಿಕ. ೦೯೩೦, ೭೬-೨ ; ಸು. 1434) ; ಮಾಸ್ತಿಕಲ್ಲು ಎಂದರೆ ಮಹಾಸತಿಕಲ್ಲು. ಒಬ್ಬ ಪತಿವ್ರತೆಯಾದ ಹೆಂಗಸು ತನ್ನ ಗಂಡನು ಸತ್ತು ಹೋದರೆ . . . ಸಹಗಮನ ಮಾಡಿದ ಸಂಗತಿಯನ್ನು ಸೂಚಿಸುವಂತೆ ಆ ಸ್ಥಳದಲ್ಲಿ ನೆಟ್ಟ ಕಲ್ಲಿಗೆ ಮಾಸ್ತಿಕಲ್ಲು ಎಂದು ಹೆಸರು (ವ್ಯವಾಸ್ತು. ೩೭). **ಮಾಸ್ತಿಗಲ್ಲು** : ಇದನ್ನು 'ಪ್ರಶಸ್ತಿಶಾಸನ' ವೆಂದು ಕರೆಯಬಹುದಾದರೆ ಅನೇಕ ನಿಸಿದಿಕಲ್ಲುಗಳನ್ನೂ, ವೀರಗಲ್ಲು ಮಾಸ್ತಿಗಲ್ಲುಗಳನ್ನೂ ಅದೇ ಹೆಸರಿನಿಂದ ಕರೆಯಬೇಕಾಗುತ್ತದೆ (ಕಶಾಪ. ೨೯). [ಮಾಸತಿ + ಕಲ್ಲು (< ಕಲ್$_3$)]

**ಮಾಸಪತ್ರಿಕೆ** (ನಾ). ತಿಂಗಳಿಗೊಮ್ಮೆ ಪ್ರಕಟವಾಗುವ ಪತ್ರಿಕೆ : ನನ್ನ ಕೈಗೆ ಲಂಡನ್ನಿನ "ಸ್ಟ್ರಾಂಡ್" (strand) ಎಂಬ ಇಂಗ್ಲಿಷ್‌ಸಾಹಿತ್ಯ ಮಾಸಪತ್ರಿಕೆಯ . . . ಒಂದು ಸಂಚಿಕೆ ಸಿಕ್ಕಿತು (ಶೀರಹೊ. IX. ೫೫೩). [ಸಂ. ಮಾಸಪತ್ರಿಕಾ]

**ಮಾಸಪ್ರಸೂತೆ** (ನಾ). ಹೆರಿಗೆಯಾಗಿ ಒಂದು ತಿಂಗಳು ಕಳೆದಿರುವವಳು ; ತಿಂಗಳ ಬಾಣಂತಿ : ಮಾಸಪ್ರಸೂತೆ ಷಣ್ಮಾಸದ ಗರ್ಭಿಣಿ ತಾಂ ಕ್ಷುಧಾಸತಿ ಮೆಯಿಗಳಿಂಗೆಚ್ಚಿತ್ತಿವಳ್ ಮಾಸರ ನೃತ್ಯವಿಳಾಸಿನಿಗಂ ಕಾಮಸುಖಂ ಕೂಟಮುಂ ತತ್ಕಾಲಮೆ (ಮದನ. ೦೦-೦೦). [ಸಂ. ಮಾಸಪ್ರಸೂತಾ]

**ಮಾಸರ** (ನಾ). ೧. ಅಂದ ; ಚೆಲುವು ; ಸೌಂದರ್ಯ : ಕತ್ತುರಿಬೀಲಿಯ ನಾಂತ ಚೊಲ್ಲೆಯಂ ಮಿಸುಗುವ ದೋರೆವಲ್ ಕರಮೆ ಮಾಸರವಾದುದು ದೇಸೆಕಾರ್ತಿಯೊಳ್ (ಚಂದ್ರಪ್ರ. ೬-೩೦) ; ಮೆಯ್ವಾಸದ ಮಾಸರಮಂ ಬಿಡಿವ ಪಾಂಗಂ ಚಿತ್ರವಚನಚಮತ್ಕಾರಮಂ . . . ಭದ್ರಚಂಡಂ ಕಂದರ್ಪದೇವಂಗೆ ತೋಱುತ್ತುಮಿರೆ (ಶಾಂತಿಪು. ೭-೬೩ ವ); ನಿಜಾರುಣಾಂಶು ಪಾಸಿದ ದುಗುಲಕ್ಕೆ

ಬಾಸರದ ಮಾಸರಮಂ ಕಂಡೆ (ಅಜಿತ. ೯-೬೪). ೨. ಅಂದವಾದುದು ; ಸುಂದರವಾದುದು : ಮಾಸರಮೆನೆ ಪಾರದದಿಂ ಪೂಸಿದವೋಲ್ ಪೊನ್ನ ಮುಕುರಮಂ ಹಿಮುಲಿಪ್ತಂ ನೇಸಱ ಬಿಂಬಂ ತಿಂಗಳ ಕೂಸಿನವೋಲ್ ಕೋಡು ತಿರ್ದ್ದಂದಿನ ದಿಸದೊಳ್ (ಲೀಲಾವ. ೯-೬). [ ದೇ.॥ ತೆಲು. ಮಾಸರ ]

**ಮಾಸರಂ** (ಅ). ಚೆನ್ನಾಗಿ ; ಸುಂದರವಾಗಿ : ಇದರ್ಕೆ ಮಾಸರಮುಂಡಲೆಂದ ಧಿಕವಿಳಾಸದಿನಂಡಲಿಕ್ಕಿ ನೆಱೆಯೆ ಬಿಯಮಂ ಮೆಱೆದಂ (ಶಂಕರ. ೩-೪೪) ; ಹಸ್ತಿಮಸ್ತಕೋಲ್ಲಾಸಮಸಂಗರಾಗರಸಪೂರಸುನಿರ್ಝರಸೇತುಬಂಧನಂ ಮಾಸರ ಮೊಪ್ಪಿ ತೋಱುವುದು ಸಿಂಹಕಟೀತಟಮಾ ನೃಸಿಂಹನಾ (ಶರಶ. ೩-೦೩) ; ಮಾಸರಮೊಕ್ಕ ಕಸ್ತೂರಿಯ ಪಂಕಮನಲ್ಲದೆ ಪಂಕಮಂ . . . ನಿಜಾವಾಸದೊಳೆಂತುಟೆಂದಱಿಯಂ (ಸುಕುಮಾ. ೦೦-೦೦೭) ; ಮಾಸರಮಾಡುವ ಬೆಳೆ ಸಿರಿಯೋಸರಿಸದೆ ತಣಿಯೆ ಕಣಿಯಲೆಂದಳವಡಲಬ್ಜಾಸನನಡಸಿದ ಪಚ್ಚೆಯ ಪಾಸಱೆಯೆನೆ ಪಸಲೆಗವಿದ ಕಳಮಕ್ಷೇತ್ರಂ (ಧರ್ಮಾ. ೩-೩೪).

[ < ಮಾಸರ್ ]

**ಮಾಸರಕಟ್ಟಿ** (ನಾ). ಒಬ್ಬಾಕೆಯ ಹೆಸರು (?) : ಅವಱ್ಗೆ ಮಾಸರ ಕಟ್ಟಿಯರು ಅತ್ತಾಣೆಯುಂ ಒಸೆದು ಅಯ್ಗಳ ಕಯ್ಯೊಕ್ಕಲುಳೊಕ್ಕಳ ಮುಮಬೆಗೆ ಕೊಟ್ಟಾರ್ (ಎಕ. X, ಕುಣಿಗ. ೯೨-೬ ; ಸು. 780 ?).

[ ಮಾಸರ + ಕಟ್ಟಿ$_1$ ]

**ಮಾಸರಿಕೆ**, ಮಾಸರಿಕ್ಕೆ (ನಾ). ಚೆಲುವು ; ಮನೋಹರತೆ : ತೇಜಕ್ಕೋಪಾದ ಕಾಂತಿಗಂ ಬೆಡಂಗಿಗೆ ಪಾಂಗಾದ ದೇಸಿಗಂ ಮಾಸರಿಕೆಗೆಕ್ಕಲಾವಣವಾದ ಸೌಷ್ಠವಕ್ಕಂ . . . ಬೆಕ್ಕಸಂಬಟ್ಟು (ಶಾಂತಿಪು. ೩-೩೩ ವ). **ಮಾಸರಿಕ್ಕೆ** : ಬರಗಲೆಯುಂ ಕೊಪ್ಪುಂ ನೂಪುರಮುಂ ಲಂಬಳಮುಮಲ್ಲಿ ಮಲ್ಲಿಗೆಯ ಮುಗುಳ್ ಬಿರಿಮುಗುಳೆಂಬವು ತನಗಾಗಿರೆ ದೇಸೆಯ ಮಾಸರಿಕ್ಕೆಯುಂ ಪೊಸ ಬಿಸಿದಳ್ (ಶಾಂತಿಪು. ೬-೨೨). [ಮಾಸರ +— ಇಕೆ]

**ಮಾಸರಿಕ್ಕೆ** ' ಮಾಸರಿಕೆ ' ನೋ.

**ಮಾಸರೋಹಿಣಿ** (ನಾ). ಒಂದು ಬಗೆಯ ಔಷಧೀಸಸ್ಯ : "ಮುನಿ:– ಗೋರಕ್ಷದುಗ್ಧಿ. ಕಂಬಳ. . . ಅಗಸೆ. ಹಾಲವಕ್ಕಿ. ಕ್ಷುದ್ರದವನ. ಮಾಸ ರೋಹಿಣಿ" (ಓಕಂ. ೦೨೩). [ < ಸಂ. ಮಾಂಸರೋಹಿಣೀ ]

**ಮಾಸಲಾಣೆ** (ನಾ). (ಉಕ) ಮದುವೆ ಮುಂತಾದ ಶುಭಕಾರ್ಯಗಳಾದ ಒಂದು ತಿಂಗಳಿಗೆ ನಡೆಸುವ ಒಂದು ಸಮಾರಂಭ ; ತಿಂಗಳ ಕಂಬೋಲಿ : ಮದುವೆಯಾಗಿ ಒಂದು ತಿಂಗಳಾಯಿತು ; ಮಾಸಲಾಣೆಯ ಹಬ್ಬ ಜರುಗಿತು (ಕಶಕ. ೨೩) ; ಮಾಸಲಾಣೆಯ ದಿವಸ ಹಲವಾರು ಹೊರಗಿನ ಜನ ಊಟಕ್ಕೆ ಬಂದಿದ್ದರು (ಕಶಕ. ೨೭). ' ಕಂಭವಲಿ ' ಪರಾ.

[←ಮರಾ. ಮಾಸನಹಾಣ, ಮಾಸಹ್ನಾಣ./ಸಂ. ಮಾಸಸ್ನಾನ]

**ಮಾಸಲು** (ನಾ). ೧. ಕಾಂತಿಯಿಲ್ಲದಿರುವುದು ; ಮಂಕಾದುದು : ರಿಪುವಧೂವದನಂ ಮಿಗೆ ಮಾಸಲಾದುದು (ಕಳಿ. ೪-೦೩) ; ಮನಸ್ಸಿನ ಆ ಏಕಾಂತವಲ್ಲಾವರೂ, ವೈಯಕ್ತಿಕವಾದ ತಾಪತ್ರಯದ ಅಂಚೆ — ತಂತಿಗಳು, ಅವನ ಸ್ವೇಚ್ಛಾವಿಹಾರವನ್ನು ತಡೆದುಹಿಡುತ್ತಿವೆ ; ಪ್ರತಿಭೆಯ ಹೊಳಪನ್ನು ಮಾಸಲುಗೊಳಿಸುತ್ತಿವೆ (ಗಾಡೋಕ. ೩೫೦). ೨. ಮಲಿನವಾದುದು; ಕೊಳೆಯಾದುದು: ಮಾಸಲಂ ಕೊಳೆಯೆ ಮಡಿಯಾದ ದುಪ್ಪಟದಂತೆ . . . ಸಚ್ಚರಿತಮಂ ತಳೆದು ಮಯನೊಪ್ಪಿರ್ದನು (ಸಮ್ಯಕ್ತ್ವ. ೦೦-೨೦). ೩. (ಅಲಂ) ಅಸ್ಪಷ್ಟವಾದುದು ; ಸ್ಫುಟವಲ್ಲದುದು : ಚಿಕ್ಕಂದಿನಲ್ಲಿ ಅವನನ್ನು ನೋಡಿದ ನೆನಪು ನನ್ನ ಮನಸ್ಸಿನಲ್ಲಿ ಮಾಸಲಾಗಿ ಉಳಿದಿದೆ (ಉಂ).

**ಮಾಸಲು ಮಾಸಲು** (ದ್ವಿರುಕ್ತಿ) : ನನ್ನ ನೆನಪಿನಲ್ಲಿರೋದು ಅದೂ ಮಾಸಲು ಮಾಸಲಾಗಿರೋದು–ಹತ್ತು ವರ್ಷಗಳ ಹಿಂದಿನ ಅವನ ಮುಖ (ಶೀಲಕೋ. ೮೩). [ಮಾಸು$_1$ + — ಅಲು (< — ಅಲ್$_4$)]

**ಮಾಸಲುಕೆಂಪು** ' ಮಾಸಲುಗೆಂಪು ' ನೋ.

**ಮಾಸಲುಗೆಂಪು**, ಮಾಸಲುಕೆಂಪು (ನಾ). ತಿಳಿಗೆಂಪು ; ನಸುಗೆಂಪು : ಇದು ಮಾಸಲುಗೆಂಪು ಬಣ್ಣವನ್ನು ಹೊಂದಿದ್ದು, ಕಬ್ಬಿಣಮಿಶ್ರಿತಲವಣಗಳಿಂದಾಗಿದೆ (ಕಬಿಕೋ. I, ೬೯೬). **ಮಾಸಲುಕೆಂಪು** : ಜೈವಿಂನಿಮಹರ್ಷಿ: ತೇಜಸ್ವಿ . . . ಬಣ್ಣ ಮಾಸಲು_ಕೆಂಪು (ಪಠಾ. I, ೩೩೬).

[ಮಾಸಲು + ಕೆಂಪು$_1$]

**ಮಾಸಲೆ** (ನಾ). ರೀತಿ ; ಮಾದರಿ ; ನಮೂನೆ : ಮೂಲ ಅದೇ ಜಾತಿಯದು, ಅದೇ ಮಾಸಲೇದು, ಅಥವಾ ದರದ್ದು ಅಂತ ದಾಖಲೆಯನ್ನು ಕೊಟ್ಟು ಬರಿಯದೆ; ಪ್ರತಿ ಒಂದು ಪತ್ರದಲ್ಲಿ ವಿಸ್ತಾರವಾಗಿ ವರ್ಣಿಸಬೇಕೆಂಬ ಬಗ್ಗೆ ಸೂಚನೆ (ಹುಂಬಿಣ್ಣ. ೨೭ ಕೃತ್ತಿಕ); ಕಂಡವರ ಸಂಗಡ ಕಾದಾಡೋ ಈ ಪುಂಡಹುಡುಗಿ ಮಾಸಲೆ ಎಲ್ಲೂ ಇರಲಿಕ್ಕಿಲ್ಲ (ಬಂಡಾಯ. ೨೩).

[← ಅರ. ಮಸಲ್ ; ಮರಾ. ಮಾಸ್ಲಾ]

**ಮಾಸವಳ**, ಮಾಸವಾಳ, ಮಾಸಾಳ್, ಮಾಸಾಳಿ, ಮಾಸಾಳು (ನಾ). ೧. ದೊಡ್ಡ ಈಟಿ,–ಭರ್ಜಿ : ಮಚ್ಚರದಂಕಂ ಕಳದಲ್ಲಿ ನೋಡು ಬಯಲೊಳ್ಪೇಡೆಂದು ಕೈಯಾಣೆಯಿಟ್ಟರಸಂಕಂ ಪಱಿಗಟ್ಟಿ ಮಾಸವಳದಂಕಂ ದಾಸೆಯಂ ಸಾಱೆ ಬಿತ್ತರದಿಂದಿರ್ದುದು ಮೊತ್ತದಿಂದೆ ಭೃಗುವಿದ್ಯಾಮೂರ್ತಿ ಮೂರ್ತಗಬ್ಬವೋಲ್ (ಅಜಿತ. ೨-೨೯); ಬಿರಿದಾಳಿ[ಯಂ] ಮುನಂಗೊಳೆ ನಡೆತಂದು ಮಾಸವಳದಂಕಮುದಾಸುರವಾಗಿ ಭಾಷೆಯಂ ಗಟಹುತು ಮಿರ್ದುದು ನರಪನೋಲಗದಲ್ಲಿ ವಿಭೂಷಣಾಂಚಿತಂ (ಶಾಂತಿ. ೦೩-೦೯). ೨. ಸಾಹಸಿ ; ವೀರ ; ಶೂರ : ವಿಳಾಸದಿಂದಮಿರ್ದಾ ಶಿವಕ್ರಿಯನೆಗಟ್ಟ ಕಾವನ ಮಾಸವಳಂಬೊಲೊಪ್ಪಿದರ್ (ರಹಸ್ಯ. ೪-೦೪೪) ; ನವಯುವ್ವನ ಲಕ್ಷ್ಮಿಯನಿಂತಪಯುವದೊಳ್ತಾಳ್ದ ರತ್ನಶೇಖರನಾಗಳ್ ಸವಿರೇಱಿದ ತನುಮಂಕದ ಬವರಮನೊಳಕೊಳ್ವ ಮಾಸವಳನಂ ಪೋಲ್ತಂ (ಕುಣ್ಯಕ್ರ. ೦-೬೭). **ಮಾಸವಾಳ** : ೨. ಮಾಸವಾಳರುಂ ಲೆಂಕವಾಳರುಂ . . . ಪಂಚಮ ಜಾತಿಯುಂ ಕಥಂಚಿದ್ವಾನಂಗೊಡಲು ಯೋಗ್ಯರಕ್ಕುಂ (ಶಾಕ. ೩೨೦). **ಮಾಸಾಳ್**: ೨. ಮಾಸಾಳ್ಗಳಂತೆ ಬೀಡೆನುತ್ತುಂ ಹರಿಕಾರರಂತೆ ಕಾಪೆಪುತ್ತುಂ (ರಹಸ್ಯ. ೨-೬೦). ೩. ಸೈನಿಕ ; ಯೋಧ : ಮನೆಯರು . . . ನಿಂದರು ಮನಸಿಜನ ಮಾಸಾಳ್ಗಳಂದದಿ (ಶಾಗಣ. ೪-೩೩); ಬಿರುನುಡಿಗೇಳ ಸುರಪಾಯಕರು ಸಿಡಿಲಿನ ಪಾಳಯದ ಮಾಸಾಳ್ಗಳಂದದೊಳೆಱಿತೊಗ್ಗನಿರಿ (ಅಂಬಿಗ. ೨೬-೩). **ಮಾಸಾಳಿ** : ೨. ಉಱೆ ಪಡಿಸಮರರೋಳಿಯುಂ ಕಡಿಸು ಮಾಸಾಳಿಯುಂ ಕುಡಿಸು ನೆತ್ತರನೊಱಲ್ಗೆ (ತೆಂಕು. ೪೭-೨೨). **ಮಾಸಾಳು** : ೨. ಚತುರಬಲವಿಖ್ಯಾತ ಮಾಸಾಳುಗಳು . . . ಪೃಥುವಿಗಪ್ರತಿಯೆನಿಪ ಬಿರುದಿನುನ್ನತಭಟರು ಚತುರಬಲವಿರಲು (ಲಕ್ಷ್ಮೀ. ೩೦-೩೭). ೩. ಚಿತ್ರಜನ ಮಾಸಾಳೊ ಮನ್ಮಥನ ಕಿತ್ರಲಗೊ . . . ಮಾಸುತನ ದಳ ವೆನಲಿತ್ತಬದ ಗಣಿಕಾನಿಕರ ಮೆಱೆವುದು ವಿಳಾಸದಲಿ (ಶಿವಕೌ. ೦೭-೩೩); ಹೊಳೆವುತಿದ್ದರು ಮನಸಿಜನ ಮಾಸಾಳುಗಳಂತೆ ದಿಟ್ಟೆಯರು (ಚಕ.೦೨-೪೦).

**ಮಾಸವಳಮದನಮಹೇಶ** = ಮಹಾಪರಾಕ್ರಮಿಯಾದ ಮದನನನ್ನು ನಿಗ್ರಹಿಸಿದವನು ; ಒಂದು ಬಿರುದು: ಬಿರುದಿಂಗೆ–ಗಜದುಳಿ, ಗಜಪಾಱು, ನರಲೋಕದಲ್ಲಣಂ, ಮಾಸವಳಮದನಮಹೇಶಂ, ಅಂಕತ್ರಿನೇತ್ರಂ (ಚಟುತ. ೦೭೪ ಕ್ರಯೋ). [ಮಾ$_4$ + ಸವಳ (< ಸಬಳ$_2$)]

**ಮಾಸವಾರಿ** (ನಾ). ಶ್ರೇಷ್ಠನಾದ ಅಶ್ವಾರೋಹಿ : ಶಕ್ತಿಧರರ್ ಶಕ್ತಿಯಂ ಬಿಟ್ಟು ಶಕ್ತಿಯಂ ಮಱೆಗೊಳೆಯುಂ ಮಾಸವಾರಿಗಳಾಸವಾರಿಗಳಾಗೆಯುಮೀಂತು ತನ್ನ ತಂತ್ರಂ ಭಯಾಕ್ರಾಂತಸ್ವಾಂತಮಾದುದಂ ಕಂಡು (ಶಾಸ್ತ್ರಿ. ೩-೮೩ ವ). ಕವಿಯು 'ಆಸವಾರಿ' ಶಬ್ದದಂತೆ ಯಮಕದ ಚಮತ್ಕಾರಕ್ಕಾಗಿ ಈ ಶಬ್ದವನ್ನು ಸೃಷ್ಟಿಮಾಡಿರಬಹುದು.

[ಮಾ$_4$ + ಸವಾರಿ]

**ಮಾಸವಾಳ** ' ಮಾಸವಳ ' ನೋ.

**ಮಾಸವೆಗ್ಗಡೆ** (ನಾ). ತಿಂಗಳಿಗೊಮ್ಮೆ ಪರ್ಯಾಯವಾಗಿ ಬರುವ ಅಧಿಕಾರವನ್ನು ಹೊಂದಿದ ಹೆಗ್ಗಡೆ : ಶ್ರೀಯೋಗನಾಥ ದೇವರ ಅಮೃತಪಡಿ ಮೊದಲಾದ ಎಲ್ಲಾ ಶ್ರೀಕಾರ್ಯ್ಯಂಗಳು . . . ಅಶೇಷ ಮಹಾಜನಂಗಳು ಅಂದಂದು ನಡವ ಮಾಸವೆಗ್ಗಡೆ ಸೇನಬೋವರಿಂದವೂ ಆರೈದು ಉದಾಸೀನ ಮಾಡದೆ ಆಚಂದ್ರಾರ್ಕ್ಕಸ್ಥಾಯಿಯಾಗಿ ನಡೆಸುವರು (ಎಕ. XII, ತಕ್ಕಿಹಾ. ೨-೭೦ ; 1261). [ಮಾಸ್ಕ + ಪೆಗ್ಗಡೆ (<ಪೆರ್ಗಡೆ₁)]

**ಮಾಸವೆಗ್ಗಡೆತನ** (ನಾ). ತಿಂಗಳಿಗೊಮ್ಮೆ ಪರ್ಯಾಯವಾಗಿ ಬರುವ ಹೆಗ್ಗಡೆಯ ಅಧಿಕಾರ : ಅಟ್ಟದದೇಕಂಣನವರೂ ಇಶ್ವರಪೆದಿಗಳ ಮಾದಂಣಗಳ ಮಾಸವೆಗ್ಗಡೆತನದಲಿ ಸಪ್ಪೆಯಕೇತಯ್ಯಂಗಳ ಮಕ್ಕಳಾ ಪುಲಿಗೆಱೆದೇವರು ಸೋಮಯ್ಯಂಗಳಿಗೆ ಕೊಟ್ಟ ಸಿಲಾಸಾಸನದ ಕ್ರಮ ವೆಂತೆಂದಡೆ (ಎಕ. VI (R), ಕೃಕ್ಕರಾ. ೮-೬ ; ಸು. 1306).
[ಮಾಸವೆಗ್ಗಡೆ + —ತನ]

**ಮಾಸಾಂಕ.** ಮಾಸಂಕ (ನಾ). ೧. ಅತಿಯಾದ ಶೌರ್ಯ : ಮೂಱು ಲೋಕದ ಗಂಡನೆಂಬ ಮಿಱುದ ಮಾಸಾಂಕದ ಭಟನಿವನೀಗ (ಶಂಠಸಾಂ. ೬-೬೩). **ಮಾಸಂಕ** : ೨. ಅತಿಯಾದ ರೋಷ.– ಸಿಟ್ಟು : ಆ ಸರ್ಪನತ್ಯುಗ್ರತೆಯನೆ ನೆಗ್ಗೊತ್ತಿದಾ ಸಾಸಿಗನ ಕಾಣುತವೆ ಆಸುರದಿಂ ಕೆಲಬಲದೋರ್ವರ್ಹಿತತಿ ಮಾಸಂಕದಿಂ ಮುತ್ತಿದವು (ಶ್ರೀಣಾಂ. ೧೦-೬೫) ; ಮಾಸಂಕದೀದ ಬಂಧುಶ್ರೀ ಮಾನದೊಳಿನಿತು ಹೇಸದೇ ಮಾಡಿರ್ದ ವಂಶ ಘಾತಕದ ಫಲಮಿಾ ಸಮಯಮೊಂದಱೊಳೆ ಕಾಣಿಸಿದುದತ್ಯುಗ್ರಪುಣ್ಯ ಪಾಪದ ಫಲಗಳು (ನಮ್ಮಿಕಾ. ೩-೩೮). ೩. ಸರಿಸಮಾನ ; ಸರಿಸಾಟಿ : ವರಭೋಗದಿಂದ ಶಚಿಯಲ್ಲಿ ಮಾಸಂಕ . . . ರೋಹಿಣೀದೇವಿಯಲ್ಲಿ ಸುರುಚಿರ ಕಾಂತಿಯಿಂದಿಕ್ಕುತಕ್ಕೆಯಾಗಿರ್ಪಳಾ . . . ಸೋಮ ಸುವ್ರತದ ಸೀಮೆ (ನಮ್ಮಿಕಾ. ೬-೧೦). [<ಸಂ .ಮಹಾಸಾಹಸಾಂಕ. / ತೆಲು. ಮಾಸಟಿ]

**ಮಾಸಾದಿ** (ನಾ). ಶ್ರೇಷ್ಠನಾದ ಕುದುರೆಯ ಸವಾರ ; ಉತ್ತಮನಾದ ರಾವುತ : ಎಂತಪ್ಪ ದುಷ್ಟಾಶ್ವಂಗಳುಮನೇಱಲುಂ ತಿರ್ದಲುಂ ಬಲ್ಲೆನೆಂದು ಪೇಟ್ದೂಳಾಗಿ ತಂತ್ರಪಾಳವೆಸರೊಳ್ ಮಾಸಾದಿಯಾಗಿರ್ದಂ (ಶಂಶಶಾ. ೬-೩೪ ವ). [<ಸಂ. ಮಹಾಸಾದಿನ್]

**ಮಾಸಾಮಿಗ ?** (ನಾ). (?) : ದೇವಾಸುರರಾ ಶಿವಮಾರನಂ ಅಗ್ರಹಾರಮೆಳಮ್ಬುಣುಸೆ ಪ್ರಹ್ಮಾದೇಯ ಮಾಸಾಮಿಗ ಪ್ರೀ(?ವ್ರಿ)ತಿ ಅಱಿದು ಕೊಳೆ ಕೊಡಲಾರದೆ ಎನೆಬರು ಎಱಿದು ಸತ್ತೊರ್ (ಪ್ಕುಅಂ.೦೯೪೪. ೬-೨ ; 808). [..? ]

**ಮಾಸಾರ್ಧ** (ನಾ). ಒಂದು ತಿಂಗಳಿನ ಅರ್ಧಭಾಗ ; ಹದಿನೈದು ದಿನ ; ಪಕ್ಷ : "ಮಾಸಾರ್ಧದಲ್ಲಿ . . . ಪಕ್ಷಮೆನಿಕ್ಕು" (ಪಂಗಣಾ. ೦೯೬-೩೩) ; ಈ ದಿನಂ ಮೊದಲಾಗಿ ಮಾಸಾರ್ಧದೊಳೊಂದು ಮಹಾಲಗ್ನಪೊಳ್ದೆತ್ತೆಂದು ಪೇಳ್ದು (ಸಂಶರ. ೯-೬೨). [ಸಂ.]

**ಮಾಸಾವಂತ** ' ಮಹಾಸಾವಂತ ' ನೋ.

**ಮಾಸಾಶನ** (ನಾ). ೧. ಜೀವನನಿರ್ವಹಣೆಗಾಗಿ ತಿಂಗಳಿಗೊಮ್ಮೆ ಕೊಡುವ ಹಣ,– ಮಾಸದ ಸಮಯಕ್ಕೆ ಸರಿಯಾಗಿ ಕೊಡುವ ವೇತನ : ರಾಜನು ತನ್ನ ಸೇವೆಗೆ ನೂರುಮಂದಿ ವೀರಭಟರನ್ನಿಟ್ಟುಕೊಂಡು ಅವರ ಮಾಸಾಶನವನ್ನು ಒಂದೊಂದು ತಿಂಗಳಲ್ಲಿ ಒಪ್ಪೊಪ್ಪು ಮಗಳು ಕೊಡುವಂತೆ ನಿಷ್ಕರ್ಷಿಸಿದನು (ಕಠಕ. ೨೩) ; ಅನ್ನ ವಸ್ತ್ರಕ್ಕಾಗಿ ಸಾವಷಸ್ಯ ವಾಗಿ ಸ್ವಲ್ಪ ಮಾಸಾಶನದ ನಿಗದಿಯಾಗಿದೆ (ಏಬಂಶ. I, ೯೮೦). ೨. ನಿವೃತ್ತಿವೇತನ ; ಪಿಂಚಣಿ : ಉದ್ಯೋಗದಿಂದ ನಿವೃತ್ತರಾಗಿ ಸ್ವದೇಶಕ್ಕೆ ಹಿಂತಿರುಗುವ ಬಳಿಕವೂ ಅವರ ಮಾಸಾಶನ(Pension)ಕ್ಕಾಗಿ ಇಲ್ಲಿಂದ ಹಣ ಸಲ್ಲಬೇಕಾಗುತ್ತದೆ (ಏಾಂಶ್ರ. III. ೦೬೫೬). [ ಸಂ. ]

**ಮಾಸಾಳ್** ' ಮಾಸವಳ ' ನೋ.

**ಮಾಸಾಳಿ** ' ಮಾಸವಳ ' ನೋ.

**ಮಾಸಾಳು** ' ಮಾಸವಳ ' ನೋ.

**ಮಾಸಿ** (ನಾ). ಎಂಟು ಗುಂಜಿಗಳ ಒಂದು ತೂಕ : ೮ ಗುಂಜಿಗಳ ತೂಕಕ್ಕೆ ಮಾಸಿ (ಉದ್ದಿನಕಾಳ ತೂಕ) ಎಂಬ ಹೆಸರು (ಗ್ರಹಪ್ಪ. ೬).
[ < ಸಂ. ಮಾಷ ]

**ಮಾಸಿಕ** (ಗು). ೧. ತಿಂಗಳಿಗೆ ಸಂಬಂಧಿಸಿದ. (ನಾ). ೨. ವ್ಯಕ್ತಿಯು ಸತ್ತ ಮೊದಲನೆಯ ವರ್ಷದಲ್ಲಿ (ಸಾಮಾನ್ಯವಾಗಿ) ತಿಂಗಳಿಗೊಮ್ಮೆ ಮಾಡುವ ಶ್ರಾದ್ಧ ; ಶ ವೈದಿಕಪರಂಪರೆಯಲ್ಲಿ ಹಿರಿಯ ಮಗನು ಮೃತನ ಉತ್ತರಕ್ರಿಯೆಯನ್ನು ಮೊದಲ ಹನ್ನೆರಡು ದಿನಗಳ ಕಾಲ ಆಚರಿಸಿದ ಬಳಿಕ, ಮೃತತಿಥಿಯಿಂದ ಒಂದು ಸಂವತ್ಸರದ ಕಾಲಾ ವಧಿಯಲ್ಲಿ ಶ್ರಾದ್ಧಕಲ್ಪದ ಪ್ರಕಾರ ಹದಿನಾರು ಶ್ರಾದ್ಧಗಳನ್ನು ಮಾಡಬೇಕು. ಇವು ಸಾಮಾನ್ಯವಾಗಿ ತಿಂಗಳಿಗೊಂದಾಗುವುದರಿಂದ ' ಮಾಸಿಕ 'ಗಳೆನ್ನುತ್ತಾರೆ: "ಅನ್ವಾಹಾರ್ಯಂ, ಮಾಸಿಕಂ – ೨ ತಿಂಗಳು ತಿಂಗಳಿಗೂ ಮಾಡತಕ್ಕ ಪಿಂಡಪಿತೃಯಜ್ಞಕ್ಕೆ ಹೆಸರು" (ಸಿದ್ದಾಂತಿ. ೨೨೬) ; ಕ[ಟ್ಟಿ]ಪೋದ ವಲ್ಲಿಕನ ಮಾಸಿಕದೊಳೊಗೆದಾಜಿಗೆಯ್ದೆವಂದೊಟ್ಟಜೆ ದೋರ್ವ ಚೇರಮನ ಬಾಯೊಜಿಯೊಳ್ ಕಿರಿ × × × (ಎಕ. VI, ಕಡೂರು. ೩೫-೨೫ ; 1136); ಸಾವಿತ್ರಿ ಪ್ರತಿತಿಂಗಳೂ ತಪ್ಪದೆ ಮಾಸಿಕ ಮಾಡಿಸುತ್ತಿದ್ದಳು (ಕಾಯುಕ. ೨೦೦). ೩. ತಿಂಗಳಿಗೊಮ್ಮೆ ಪ್ರಕಟ ವಾಗುವ ಪತ್ರಿಕೆ ; ಮಾಸಪತ್ರಿಕೆ : ನಮ್ಮಲ್ಲಿ ದೈನಿಕಗಳ ಜೊತೆಗೆ ಸಾಪ್ತಾಹಿಕ, ಪಾಕ್ಷಿಕ ಹಾಗೂ ಮಾಸಿಕಗಳೂ ಸಾಕಷ್ಟು ಬರುತ್ತಿವೆ(ಕೂ೨).
[ ಸಂ. ]

**ಮಾಸಿಗ** (ನಾ). ಒಂದು ಮನೆತನದ ಹೆಸರು : ಪುರಿಗೆಱೆನಾಡ ಸರಟಪುರದಾಯ್ದುದಿಂ[ಬ]ರುಮಿಜ್ದು ನಾಡಯಿಸೆ ಮಾಸಿಗರ ಚಿದಾನ್ನಾ ಗೋಸಾಸ(ಂ)ಮಿಟಿಕ್ಕೋಂ (ಸೌಇಇ. XI-i, ೨೦-೩ ; 883). [ ? ]

**ಮಾಸಿಯವಾಡಿ** (ನಾ). ಒಂದು ಊರಿನ ಹೆಸರು : [ಕೋಗ]ಳಿಯಾ ಯ್ನೂಱುಮಂ ಮಾಸಿಯವಾಡಿ [ನೂಱ] ನಾಲ್ವತ್ತುಮನಾಳುತ್ತುಮಿರ್ದ್ದು (ಸೌಇಇ. XI-i, ೨೨-೬ ; 897). [ ? + ಪಾಡಿ₂]

**ಮಾಸಿರಿವಂತ** (ನಾ). ದೊಡ್ಡ ಶ್ರೀಮಂತ ; ಭಾರಿ ಐಶ್ವರ್ಯವಂತ : ಎಮ್ಮ ತಂದೆ ಮಾಸಿರಿವಂತನಾಗಿಯುಂ ಪೊನ್ನೆಂಬ ಪೆಸರ ಚಿನ್ನಮನಿರಿಸದೆ ದಾನಧರ್ಮಗೆಯ್ದು (ಶಂಚಕಂ. ೦೯೬-೨೦). [ಮ್ಹಾ + ಸಿರಿವಂತ]

**ಮಾಸಿಸು** (ಕ್ರಿ). ೧. ಕಾಂತಿಗುಂದಿಸು ; ಮಸುಕಾಗಿಸು : ದೋಸ ಮೇನಾನುಂ ಸ್ವಲ್ಪಮಾದೊಡಂ ಮಾಸಿಸಿರ್ಕುಮಣಂ ಕೃತಿವಧುವಂ (ಕಶಾ. ೧-೦೦೨) ; ಸೂಸಿದ ಪುಷ್ಪಾಂಜಲಿಯನೆ ಬಾಸಣಿಸಿದ ಮದವದಳಿ ಕುಳಂಗಳ ಚೆಲ್ವಂ ಮಾಸಿಸಿದುವು ವಾಸವನ . . . ಕಣ್ಗಳ್ (ಅಂತ್ಯ.೬-೦೦೬). ೨. ಹೀಯಾಳಿಸು : ಮಾಸಿದ ರೂಪು ನೋಱಿಪ್ಪಡರೆಮಾಸಿದ ಚಿತ್ರದ ಪೆಣ್ಣ ರೂಪುಮಂ ಮಾಸಿಸೆ ನಾಡೆ ಮಾಸದಿಕೆಯುಂ ಪಡೆದಪ್ಪುದು (ಶಂಶಶಾ. ೬-೬೨). ೩. ಅಪವಿತ್ರಗೊಳಿಸು ; ಕೆಡಿಸು : ಕುಲಮಂ ಮಾಸಿಸಿ ಮಾಹಮಂ ತೊಱೆದು ಕಂದರ್ಪೇಸೆ ಮೆಯ್ಯೊಳ್ ಮಹಾಮಲಮಂ ತಾಳ್ದಿದ ಕಷ್ಟರಂ . . . ಕಂಡು (ರರ್ವಾಕ್ಯ. ೦-೦೦೭).
[ಮಾಸು₁ + — ಇಸು₂]

**ಮಾಸು₁** (ಕ್ರಿ). ೧. ಮಲಿನವಾಗು ; ಕೊಳೆಯಾಗು : "ಮಾಸು– ಮಲೀಮಸೇ, ಜರಾಯುಶೌಚ (ಗರ್ಭಕೋಶದ ಸತ್ತೆ)" (ಶಬ್ದಾ) ; ಮಂಡೆ ಮಾಸಿದರೆ ಮಜ್ಜನವ ಮಾಡಿದಲ್ಲದೆ ಹಿಂಗದು ವ್ಯಾಪಾರ (ಸೋಳಪಶಾ. ೯೯–೨೦೩) ; ಹಡೆದ ತಾಯಿಲ್ಲ ತಾಯುಳ್ಳೊಡೆ ತಲೆ ಹೀಗೆ ಜಡೆಗಟ್ಟಿ ಕೊಂಡು ಮಾಸಿಹುದೇ (ಪೋಚಶ. ೨೦–೨೩) ; ಮಾಸಿದ ಸೀರೆ ಮಾಸಿಯ

ತಿಲಕದ . . . ಮುದಿವೇಶಿಯರೆದೆಯಾಡುತಿಹರು (ಕಂಪವಿ. ೬-೧೯೦). ೨. ಕೊಳೆಮಾಡು ; ಮಲಿನಗೊಳಿಸು : ಈ ಪುಸ್ತಕವು ಎಂಥಾ ಚಂದವದೆ ! ಇವನ್ನು ಮಾಸಬೇಡ (ಹುಂಬಿಜು. ೨-೬). ೩. ಕಾಂತಿ ಗುಂದು ; ಮಂಕಾಗು : ನಸುಮಾಸಿ ಪಾಡಳಿದ ರೂಪಿನೊಳುಣ್ಮುವ ಗಾಡಿ ನಾಡೆ ಕಣ್ಗೆಡಜಿ (ಕಂಕಥಾ. ೦೩-೯೯) ; ಮಾಸಿದ ಮುಕುರಂ ಬೊಲಂತೆ ಗಳಿತಪ್ರಭಮಾಯ್ತು ಮೃಗಾಂಕಮಂಡಲಂ (ಶಾಂತೀಶ್ವ. ೦೦-೮೮); ಆ ಸಮಯದೊಳಾದಿತ್ಯನು ತನಗೆಣೆ ಏಸು ನೋಡಿದೊಡಿಲ್ಲವೆಂಬ ವಿಮಾಸಲಳಿಮದೀ ಹನುಮನಿಂದೆಸೆ ಮೊಗ ಮಾಸಿ ಬಿದ್ದನು ಜಲಧಿಯೊಳು (ಅಂಕಕ. ೦೨-೨೮). ೪. ಕುಗ್ಗು ; ಕಡಮೆಯಾಗು : ಇಂದಲ್ಲ ನಾಳೆ ಬರಲೇಬೇಕು ತನಗಾಗಿ ಕಾಗದ ಎಂಬ ಆಸೆ ಮಾಸಿರಲಿಲ್ಲ (ವಾತ್ಸಲ್ಯ. ೦೬೬) ; ಭವಿಷ್ಯತ್ತಿನ ವಿಚಾರ ಮಾಡಿ ಆಸೆಗೋಪುರ ಕಟ್ಟಿದರೆ ಬಲವಾದ ಗಾಯದ ನೋವು ಮಾಸುವುದೇ? (ಕುರುಕಾ. ೦೩೯). ೫. (ಅಲಂ) ಅಪವಿತ್ರಗೊಳ್ಳು ; ಕಳಂಕ ಹೊಂದು: ಅಯ್ಯನಿತ್ತುದುಮುನಾಂ ನಿನಗಿತ್ತನಿದೇವುದಣ್ಣ ನೀನೊಲಿದ ಲತಾಂಗಿಗಂ ಧರೆಗಮಾಟಿಸಿದುದು ನೆಗಟ್ತೆ ಮಾಸದೇ (ಆದಿಪು. ೦೯-೦೩೦) ; ವಾಕ್ಸತಿ ಪೞಗುಂ ಮನ್ನೋಜರಿವು ಪೇಸುಗುಮುಗ್ಗದ ಕೀರ್ತಿ ಮಾಸುಗುಂ (ಕಂಕಕಂ. ೦೬೩-೬). ೬. ಅಪವಿತ್ರಗೊಳಿಸು ; ಕಳಂಕ ತರು : ಕೊಳ ದೊಳಗೆ ಪೊಕ್ಕು ಮೆಯ್ಗರೆದ್ಯೆ ಚೀ ಖಳ್ಯನೆನೆ ಬಾರ್ತೆಗಟ್ಟುದೆಮೂಲ್ಯ ಯಶೋರತ್ನಮೆಂಬುದಂ ಮಾಸುವೆನೇ (ಗದಾಯು. ೬-೨೪).

ಮಾಸದಿಕೆ=ಮಲಿನವಾಗದಿರುವಿಕೆ : ಮಾಸಿದ ರೂಪು ನೋಟಿಪ್ಪೊಡರೆ ಮಾಸಿದ ಚಿತ್ರದ ಪೆಣ್ಣ ರೂಪುಮಂ ಮಾಸಿಸೆ ನಾಡೆ ಮಾಸದಿಕೆಯಂ ಪಡೆದಪ್ಪುದು (ಕಂಕಥಾ. ೮-೬೨); P "ಇಲ್ಲಿ 'ಮಾಸದಿಕೆ' ಎಂಬ ಪಾಠ 'ಮಾಸ [ರಿ]ಕೆ' ಯಾಗಿರಬಹುದು." (ಕಂಕವೀ. ೨೮೬).

**ಮಾಸು₂** (ನಾ). ೧. ಕೊಳೆ; ಹೊಲಸು: "ಮಲಿನಂ ಮಾಸು" (ಅಕಕ್ಕ. ೪೩). ೨. ಕೊಳೆಯಾದ ಬಟ್ಟೆ ; ಮಲಿನವಾದ ವಸ್ತ್ರ : ಸಕ್ಕಳಾ ತಾಯಿ. ಮುದುಕಿ ಎಳೆಯುವಳಾಗಿ, ಮಾಸು ವಿಕಂಚೆಳೆಯಾಗಿ, ಸವೆದ ಮೈ ತುಂಬಿ (ಹೊಂಗಳು. ೨೦-೮). ೩. ಭ್ರೂಣವನ್ನು ಆವರಿಸಿರುವ ಪೊರೆ ; ಕಸ ; ಜರಾಯು : "ಗರ್ಭಾಶಯಃ, ಜರಾಯುಃ, ಕಲಲಃ, ಉಲ್ವಂ, ಈ ೪ ಗರ್ಭವು ಮುಸುಕಿಕೊಂಡಿದ್ದ ಮಾಸಿನ ಪೆಸರು" (ನಾಕರಾ. ೦೦೮) ; ಅಗಸೆ ಪೆಸಱವರೆ . . . ಬಳ್ಳಿಸೊರೆಯೆಂಬಿವನಿಕ್ಕುಗೆ ಪಾಲೊಳ್ ಮೇಣ್ ಮದ್ಯ ದೊಳೆ ಗೋಕುಲಂ ಮಾಸನಿಕ್ಕುಗುಂ ತತ್ಕ್ಷಣದಿಂ (ಲೋಕೋಪ. ೯-೦೯೦) ; ಕೂಸು ಬಲಿಯುವುದಕ್ಕೆ ಮೊದಲೆ ಮಾಸ ಹಱಿದು ಕೂಸ ಕೊಂದು (ಸಕವ. II,೪೦೬-೦೦೯೩) ; ಶಿಶುವು ಜನಿಸಿದ ನಂತರ ಮಾಸು ಸಂಪೂರ್ಣವಾಗಿ ಬಿದ್ದು ಹೋಗಬೇಕು (ಬಆಕ. ೩೯). ೪. (ಅಲಂ) ದೋಷ ; ಪಾಪ : ಮನದಲ್ಲಿ ಮಾಸಿರಲು ಮಹಿಮರೆನೆ ನೀಮರ್ುಳುಗಿ ಮರೆನಡೆವ ಮಾನಿಸರು ಹಲವರಿಹರು (ಕುಜೀ೪. ೦೩೩-೨೬೮).

[<ಮಾಸು₁./ತಮಿ. ಮಲ. ಮಾಚು, ಮಾಚ್ಚು; ತುಳು. ಮಾಸು ; ಕೊಡ. ಮಾಚಿ ; ತೆಲು. ಕುಇ. ಮಾಸಿ ; ಗೊಂಡಿ. ಕೋತ. ಮಾಚ್]

**ಮಾಸು₃** (ನಾ). ಬಾಡು ; ಅಡಗು ; ಮಾಂಸ : ನೆತ್ತರ್ ಮಾಸೆಲ್ಬು ತೊವಲ್ ಪತ್ತಿದೊಡಂಬಿದು (ಗಾಪಂಥ. ೯-೯) ; ಮೈಯಾಗ ಮಾಸಿಲ್ಲ ದಿದ್ದರೇನಾತ, ಕೈಯಾಗ ಕಾಸಿಲ್ಲೇನ? (ಜನಪ. I, ೨೮೩); ಇನ್ನೂ ತಲೀ ಮ್ಯಾಲಿನ ಮಾಸ ಆರಿಲ್ಲ ನಿನಗ (ಮುಕ್ತಸ. ೩).

[←ಮರಾ. ಮಾಸ್. / ಸಂ. ಮಾಂಸ]

**ಮಾಸುಚೀಲ** (ನಾ). ಗರ್ಭದಲ್ಲಿ ಮಗು ಬೆಳೆಯುವ ಚೀಲ ; ಭ್ರೂಣದ ಹೊರಪೊರೆ : "ಗರ್ಭಾಶಯಃ, ಜರಾಯುಃ—೨ ಬಸುರೊಳಗೆ ಸುತ್ತಿ ಕೊಂಡಿರುವ ಮಾವಿಚೀಲದ ಹೆಸರು . . . ಮಾಸುಚೀಲಕ್ಕೆ ಹೆಸರುಗಳೆಂತಲೂ ಕೆಲಕೆಲವರು ಪೇಳುವರು" (ಸಿದ್ಧಾಂತಿ. ೦೬೮). [ಮಾಸು₂ + ಚೀಲ]

**ಮಾಸುತ** (ನಾ). ಲಕ್ಷ್ಮಿಯ ಮಗ ; ಮನ್ಮಥ : ಚಿತ್ತಜನ ಮಾಸಾಳೊ . . . ಕಂದರ್ಪ ರಚಿಸಿದ ಸೂತ್ರವೋ ಮಾಸುತನ ದಳಮೆನಲಿತ್ತೆಜದಿ ಗಣಿಕಾನಿಕರ ಮೆಱೆದುದು ವಿಳಾಸದಲಿ (ಜೀವಂತ. ೦೭-೬೩). [ಸಂ.]

**ಮಾಸೆವಾನಿ** (ನಾ). ಒಂದು ಊರಿನ ಹೆಸರು : ಸೀಮಾನ್ತರವ್ ಪಡೆಯಮಿಪ್ಪ್ರಂತುಗಣ್ಡುಗಂ ಮಾಸೆವಾನಿ ಸೀಮೆ ಮೂಡಾಯ್ತೊಟ್ಟಿ (ಎಕ. V (R), ಕೃಕ್ಷವ. ೦೦೩-೬೩; 890) [ ? ]

**ಮಾಸೇನ** (ನಾ). ಒಬ್ಬಾತನ ಹೆಸರು : ಶ್ರೀ ಮಾಸೇನಪ್ಪ್ರರಮಪ್ರಭಾವ ರಿಷಿಯರ್ಕ್ಕಟ್ಟಪ್ಪಿನಾ ಮೆಟ್ಟದುಳ್ಳೀ ಸಂಗಂಗಳ ಪೇಟ್ದ ಸಿದ್ಧಸಮಯನ್ನ ಪ್ಪಾದೆ ನೋನ್ತು (ಎಕ. II, ೨೭-೦; 700). [ಮಾ₄ + ಸೇನ₂ ]

**ಮಾಸೇಸ** (ನಾ). ಮಹಾಶೇಷ; ಆದಿಶೇಷ : ಮೇಣೊರ್ಮೆ ಕೀಟಿಳೆಗೆ ಪಾಟಿಯಿಡುತೆ ಪಾಯ್ದು ಮಾಸೇಸನ ಬಂಡಾರಮನಪಹರಿಸಿ (ಅತ್ಯುಕ. ೨೯). [< ಸಂ. ಮಹಾಶೇಷ ]

**ಮಾಸೋಪವಾಸ**(ಗು).೧. ಒಂದು ತಿಂಗಳವರೆಗೆ ಉಪವಾಸವ್ರತವನ್ನು ಆಚರಿಸುವ : ಮಾಸೋಪವಾಸರವಿಚಂದ್ರಸಿದ್ಧಾನ್ತಿಗಳು . . . ಮಾಘನಂದಿ ಸಿದ್ಧಾಂನ್ತಿಚಕ್ರವರ್ತ್ತಿಗಳ ಶ್ರೀಪಾದಪದ್ಮಂಗಳಿಗೆ ಧಾರಾಪೂರ್ವಕಂ ಮಾಡಿ ಕೊಟ್ಟರು (ಎಕ. III (R), ನಾಗಮಂ. ೬೦-೨೪; ಸು. 12ನೆಯ ಶತ). (ನಾ). ೨. ಒಂದು ತಿಂಗಳವರೆಗೆ ಮಾಡುವ ಉಪವಾಸವ್ರತ : ಮಾಸೋಪವಾಸದೊಳಿರ್ದು ಪಾರಣೆಯೊಳ್ ಚರಿಗೆಗೆ ವಂದ ಧೃತಿಕರಣ ಮುನೀಂದ್ರರಂ ನಿಱಿಸಿ (ಶಾಂತಿಪು. ೯-೯೩೪). [ಸಂ.]

**ಮಾಸ್ಟರು**, ಮಾಸ್ತರ, ಮಾಸ್ತರು, ಮೇಷ್ಟರು, ಮೇಷ್ಟ್ರು (ನಾ). ಉಪಾಧ್ಯಾಯ: ಅಧ್ಯಾಪಕ : ಮಾಸ್ಟರುಗಳಿಗೆ ಮನೆ ಕಟ್ಟಿಕೊಡಲೂ ತರುದೂದು ಮಾಡಿದ್ದರು (ಹುಚ್ಚುಹ. ೬). **ಮಾಸ್ತರ** : ಅಂದು ಮಾಸ್ತರರು ರಾತ್ರಿ ಘಂಟೆ ಹತ್ತಾದರೂ ಮನೆಗೆ ಬಂದಿರಲಿಲ್ಲ (ಖಾವೇಂ. ೩); ಹೊನ್ನಪ್ಪಮಾಸ್ತರರು . . . ಸಿದ್ಧರಾಗುತ್ತಲಿದ್ದರು (ಕ್ರಾಂತಿ. ೩). **ಮಾಸ್ತರು** : ಅವರೊಬ್ಬ ಪ್ರಾಥಮಿಕಶಾಲೆಯ ಮಾಸ್ತರು (ಚೂರಿ). **ಮೇಷ್ಟರು** : ಶಾಲೆಯ ಮೇಷ್ಟರು ತುಂಟ ವಿದ್ಯಾರ್ಥಿಯನೆಂದರು. . . ಹೋಗು ಹೆಡ್ಮಾಸ್ಟರ ಬಳಿಗೆ (ಇಂಚಾಕ. ೦೨೦-೯೨); ಅದನ್ನು ಓದುವ ಕೆಲಸ ಆ ಊರಿನ ಮೇಷ್ಟರಿಗೆ ಸೇರಿದ್ದು (ಯೋಧಕ. ೭೬). **ಮೇಷ್ಟ್ರು** : ಆ ಮೇಷ್ಟ್ರೇ ಸುಣ್ಣವನ್ನು ತನ್ನ ವೆಚ್ಚದಿಂದ ಹೊಡೆಸಬೇಕು (ಮಹಾಗ. ೦೯೨); ಮೇಷ್ಟ್ರುಗಳು ಕಾಟ ಕೊಡಲು ಈಗಾಗಲೇ ಷುರು ಮಾಡಿರುತ್ತಾರೆ (ರೂಪಕಂ. ೩೩). [ ← ಇಂ. Master ]

**ಮಾಸ್ತರ** 'ಮಾಸ್ಟರು' ನೋ.

**ಮಾಸ್ತರಣಿ** 'ಮಾಸ್ತರಿಣಿ' ನೋ.

**ಮಾಸ್ತರತಿ** (ನಾ). = ಮಾಸ್ತರಿಣಿ : ಸಣ್ಣಸಣ್ಣ ಹುಡುಗೆಯರು ಮಾಸ್ತರತಿಯ ಆಶ್ರಯದಲ್ಲಿ ಬಿದ್ದುಕೊಂಡಿದ್ದರು (ಸ್ವಕಿತ. ೪೬೦); ಗಂಡನ್ನ ಬಿಟ್ಟು ಓಡಿ ಬಂದು ಇಲ್ಲಿ ಗರತಿಯಾಗಿ ಮಾಸ್ತರತಿ ಆಗ್ತಾಳೇನು ? (ಕೋಪತೀ. ೨). [ ಮಾಸ್ತರ (< ಮಾಸ್ಟರು) + — ತಿ₁ (< —ಇತ್ತಿ) ]

**ಮಾಸ್ತರಿಕೆ** (ನಾ). ಮೇಷ್ಟರ ಕೆಲಸ; ಉಪಾಧ್ಯಾಯ ವೃತ್ತಿ: ಹೆಂಡತಿಗೆ ಮಾಸ್ತರಿಕೆ ನೌಕರಿ ಬೇರೆ ಹಚ್ಚಿದ್ದಾಯಿತು (ಎಡಹ. ೦೯೪).

[ ಮಾಸ್ತರ (< ಮಾಸ್ಟರು) + — ಇಕೆ ]

**ಮಾಸ್ತರಿಣಿ**, ಮಾಸ್ತರಣಿ (ನಾ). ಉಪಾಧ್ಯಾಯಿನಿ; ಅಧ್ಯಾಪಕಿ : ನಿನ್ನ ಜೊತೆಗೆ ನಾನಿರುವೆ ಎಂದು ಮಾಸ್ತರಿಣಿ ಹಿಂದುಳಿದರು (ಅಪ್ಪ. ೮೩) ; ದತ್ತೂನ ಮಕ್ಕಳ ಮೊದಲ ಮಾಸ್ತರಿಣಿಯೂ ನಾನೇ ಆದೆ (ಸ್ವಕಿತ. ೨೦೯). **ಮಾಸ್ತರಣಿ** : ಅವರ ಮಾಸ್ತರಣಿ ಅವಳು (ಕುರುಡಾ. ೦೯೬).

[< ಮಾಸ್ಟರು]

**ಮಾಸ್ತರು** 'ಮಾಸ್ಟರು' ನೋ.

**ಮಾಸ್ತಿ** 'ಮಾಸತಿ' ನೋ.

**ಮಾಸ್ತಿಕಲ್** 'ಮಾಸತಿಕಲ್ಲು' ನೋ.

**ಮಾಸ್ತಿಕಲ್ಲು** 'ಮಾಸತಿಕಲ್ಲು' ನೋ.

**ಮಾಸ್ತಿಗಲ್ಲು** 'ಮಾಸತಿಕಲ್ಲು' ನೋ.

**ಮಾಸ್ತಿಗುಡಿ** (ನಾ). ಮಾಸ್ತಿಕಲ್ಲು ಇರುವ ದೇವಸ್ಥಾನ ; ಮಹಾಸತಿಯ ಹೆಸರಿನಲ್ಲಿ ಕಟ್ಟಿದ ಗುಡಿ : ಹುಬ್ಬಳ್ಳಿಯಿಂದ ಕಾರವಾರಕ್ಕೆ ಹೋಗುವ ಮಾರ್ಗಮಧ್ಯದಲ್ಲಿ ಸುಪ್ರಸಿದ್ಧವಾದ ಮಾಸ್ತಿಗುಡಿಯಿದೆ (ಕಶಾಅ. ೩೦೮). [ಮಾಸ್ತಿ (< ಮಾಸತಿ) + ಗುಡಿ₃]

**ಮಾಸ್ತಿಬೀಳು** (ನಾ). ಸ್ತ್ರೀಯು ಸತ್ತ ಗಂಡನೊಡನೆ ಚಿತೆಯೇರುತ್ತಿದ್ದ ಜಾಗ,– ಮಹಾಸತಿಯಾಗುತ್ತಿದ್ದ ಸ್ಥಳ : ಬಹುಕಾಲದ ಹಿಂದೆ ಆ ಸ್ಥಳದಲ್ಲಿ ಮಹಿಳೆಯರು ಸತಿಯನ್ನು ಆಚರಿಸುತ್ತಿದ್ದರಂತೆ. ಆದಕ್ಕಾಗಿ ಆ ಸ್ಥಳವನ್ನು ಮಹಾಸತಿಬೀಳು ಅಥವಾ ಮಾಸ್ತಿಬೀಳು ಎಂದು ಕರೆಯುತ್ತಿದ್ದರು (ಕಂಶಕಂ. ೦೫೩). [ಮಾಸ್ತಿ (< ಮಾಸತಿ) + ಬೀಳು₃ (< ಬೀಡು₂)]

**ಮಾಸ್ವಾರ** (ನಾ). ಒಳ್ಳೆಯ ಸವಾರ ; ಶ್ರೇಷ್ಠನಾದ ಅಶ್ವಾರೋಹಿ : ಗರವಟಿಗರ ಕೊಲ್ಲಾಯ್ತರ ನುಡಿಗಾಬರ ಮಾಸ್ವಾರರ ಸಂದಣಿ ಸಲೆ ಸೊಗಯಿಸಿತಾಗ (ಐಹುಕಾ. ೦೨-೦೧). [ಮಾ₄ + ಸ್ವಾರ (< ಸವಾರ)]

**ಮಾಹಜ್ಜನ** (ನಾ). ಊರಿನ ಪಂಚರು ; ಮಹಾಜನ : ಆಲನ ತೊಡು ಇಕ್ಕಿಸಿ ಬಿಟ್ಟಾನ್ ಮಾಹಜ್ಜನಮೊಸೆದು ಕೊಟ್ಟ ಕಬನಿ ಅಯ್ಗೊಳ (ಎಕ. X (S), ಮುಳಬಾ. ೦೫೬-೭; ೫೫ನೆಯ ೫೫). [< ಮಹಾಜನ]

**ಮಾಹತ್ತರ** (ನಾ). ಮುಖಂಡ ; ಮುಖ್ಯಾಧಿಕಾರಿ : ಬಂದ ಮಾಹತ್ತರಂ ಗುತ್ತರಂಗೊಟ್ಟು ದಾನಸನ್ಮಾನಂಗಳಂ ಸಂತೋಷಂಬಡಿಸಿ (ವರ್ಧಮಾ. ೩-೬೮ ವ). [< ಸಂ. ಮಹತ್ತರ]

**ಮಾಹತ್ತು** 'ಮಹಂತು' ನೋ.

**ಮಾಹಳ** 'ಮಹಳ' ನೋ.

**ಮಾಹಾತ್ಮ್ಯ** (ನಾ). ೧. ಹಿರಿಮೆ ; ಮಹಿಮೆ : ಜನಿತಪ್ರಗಲ್ಭದೊಳ್ ಮಾಂತನದೊಳ್ ಮಾಹಾತ್ಮ್ಯದೊಳ್ . . . ಶ್ರೀಶಂ ಘನಂ (ಕಪಾರ. ೩-೮೦); ಶ್ರೀಮತ್ಕಾರ್ಯರುಂ ಸಮ್ಯಕ್ತ್ವಮಾಹಾತ್ಮ್ಯದಿಂ ಸ್ತ್ರೀರೂಪಮಂ ಪತ್ತುವಿಟ್ಟು . . . ದಿವಿಜನಾದಂ (ಆದಿಪು. ೩-೭೦ ವ); ನಿನ್ನ ಮಾಹಾತ್ಮ್ಯವೆ ವಿಸ್ತಾರವಾದ ದ್ಯುಲೋಕಕ್ಕಿಂತಲೂ ಅಧಿಕವಾಗಿ ಬೆಳೆದಿದೆ (ಋಕ್ಸಾರ. ೩). ೨. ಹಿರಿಮೆಯುಳ್ಳವನು ; ಮಹಿಮಾಶಾಲಿ : ನೀನೆಂದ ಮಾತ ಬಾಹಿರ ಮಾಡಬಾರದು ಕರೆಸೆಂದನು ಮಾಹಾತ್ಮ್ಯನಲ್ಪಕೋಪಿಗನು (ಭರತ. ೩೫-೦೬). [ಸಂ.]

**ಮಾಹಿ** (ನಾ). ಕೋಣ ಅಥವಾ ಎಮ್ಮೆ : ದನುಜನಿಕಾಯ ತಂತಮಗಂದು ಖಳಪಂಗುಬ್ಬುವಾತಿಂ ನಿಂದು ಮಾಹಿಗೆ ಮುಗ್ಗನಿಟ್ಟಂತಾ ಮಹಾನಲಗೆ ಇಂಧನಮದಿತ್ತಂತೆ ರುದ್ರಗೆ ಕಂಪೆರಪುಗೊಟ್ಟಂತೆ ಕೋಪಪುರಂದ್ರಿಯನು ಕಾಣಿಕೆಯನಿತ್ತರು ಬೆದರ ಸುರಕಟಕ (ಅಂಬಿಕಾ. ೧೦-೩).

[ಇದು 'ಮಾಹಿಷ (ಷಿ)' ಎಂಬುದರ ಸಂಕ್ಷಿಪ್ತರೂಪವಿರಬಹುದೆ ?]

**ಮಾಹಿತಿ** (ನಾ). ೧. ಅರಿವು ; ತಿಳಿವಳಿಕೆ : ಕೆಲಸದ ಮಾಹಿತಿಯನ್ನು ಕೆಲವೇ ಮಾತುಗಳಲ್ಲಿ ಮಾಡಿಕೊಟ್ಟಿದ್ದರು (ಪಾತ್ಸಾರ. ೦೯೩) ; ಮಾಹಿತಿ ಸಾಲದೆ ಕೆಲಸವು ಮುಗಿಯದೆ ಬಹು ಪೇಚಿಗೀಡಾದ (ಇಂಡಾಕ. ೩೩-೩೦). ೨. ವಿವರಣೆ : ಕಾಗದದಲ್ಲಿ ಅಳಿಯನನ್ನು ಕುರಿತು ಇದ್ದ ಮಾಹಿತಿಯನ್ನು ಹೆಂಡತಿಗೆ ಕೃಷ್ಣಪ್ಪನವರು ತಿಳಿಸಲಿಲ್ಲ (ಏಕಾಂಗಿ. ೧೨); ಹೆಚ್ಚಿನ ಮಾಹಿತಿ ಅವನಿಂದ ದೊರೆಯಲಿಲ್ಲ (ಕಂಟಹು. ೦೨೧).

ಮಾಹಿತಿ ಕೊಡು = ವಿವರಣೆ ನೀಡು ; ಸಮಾಚಾರ ತಿಳಿಸು : ಆ ಹುಡುಗಿ . . . ನಮ್ಮ ಮೇಲೇ ತಿರುಗಿ ಬಿದ್ದಳು ಹೊರತು ಏನೂ ಮಾಹಿತಿ ಕೊಡಲಿಲ್ಲ (ಮೂರುಬಾ. ೨೬೦).

[←ಅರ. ಮಾಹೀಯತ್ ; ಹಿಂ. ಮಾಹಿಯತ್ ; ಮರಾ. ಮಾಹಿತೀ]

**ಮಾಹಿಷ** (ಗು). ಎಮ್ಮೆಯ : "ಮಾಹಿಷಶೃಂಗವದು ಗವಲಮಕ್ಕುಂ" (ಮಂಗರಾ. ೦೩೬-೪೦). [ಸಂ.]

**ಮಾಹಿಷವಿಷಯ** (ನಾ). ಒಂದು ನಾಡಿನ ಹೆಸರು : ಶ್ರೀಮತಿ ಮಾಹಿಷ ವಿಷಯೇ ಕಾಂಚನಮುಂದುವೋಲ್ ಇತಿ ಪ್ರಸಿದ್ಧೇ ಗ್ರಾಮೇ (ಎಇ. IV, ೬೦-೨೦; 945). [ಸಂ.]

**ಮಾಹಿಷಿ** (ನಾ). ಎಮ್ಮೆ : ಮಾಹಿಷೀಸಂತತಿ ವಿಪಿನಭಯಂ ಕಣ್ಗಗುರ್ವಾಯ್ತು ಕಾರೊಳ್ (ಶಂಪ್ರಕೃ. ೯-೯೬). [ಸಂ. ಮಾಹಿಷೀ]

**ಮಾಹಿಷಿಕ** (ನಾ). ೧. ಎಮ್ಮೆ ಕಾಯುವವನು. ೨. ಹೆಂಡತಿಯ ವ್ಯಭಿಚಾರದಿಂದ ಹಣ ಗಳಿಸುವವನು : ಕುಲಮಹಿಷಿ ದುರ್ಮಾರ್ಗ ಮುಖದೊಳು ಗಳಿಸಿದರ್ಥವನುಂಡು ಕಾಲವ ಕಳೆವ ನಿರ್ಭಾಗ್ಯರು ಕಣಾ ಮಾಹಿಷಿಕರೆಂಬವರು (ಉಪ್ವಾಣಿ. ೯-೯೯); ವ್ಯಭಿಚಾರಿಯಾದ ಸ್ತ್ರೀಯನು ಅಂಗೀಕರಿಸಿಕೊಂಡು ಇದ್ದವನು ಮಾಹಿಷಿಕನು (ಕಾಶೀಖಂ. ೨೦೩-೫). ೩. ದುಶ್ಶೀಲೆಯಾದ ಹೆಂಗಸಿನ ಉಪಪತಿ. [ಸಂ.]

**ಮಾಹಿಷ್ಯ** (ನಾ). ಕ್ಷತ್ರಿಯನಿಗೆ ವೈಶ್ಯಸ್ತ್ರೀಯಲ್ಲಿ ಹುಟ್ಟಿದವನು : "ಮಾಹಿಷ್ಯಃ . . . ವೈಶ್ಯಸ್ತ್ರೀಗೂ . . . ಕ್ಷತ್ರಿಯನಿಗೂ ಹುಟ್ಟಿದವನ ಪೆಸರು" (ಸಿದ್ಧಾಂತಿ. ೩೦೬). [ಸಂ.]

**ಮಾಹುತ** 'ಮಾವಂತ' ನೋ.

**ಮಾಹುರಿ₁** (ನಾ). [ಸಂಗೀತ] ಒಂದು ರಾಗದ ಹೆಸರು : ಬಲಹಂಸರಾಗ, ನಂತರ ಮಾಹುರೀ, ದೇವಕ್ರಿಯಾ . . . ನಂತರ ಭಾಷಾಂಗ (ರಾಗಸಮೂಹ) ವನ್ನು ಹೇಳಲಾಗುವುದು (ಕಕುಶ್ರ. ೦೩೦). [ಸಂ. ಮಾಹುರೀ]

**ಮಾಹುರಿ₂** 'ಮಾವಲಿ' ನೋ.

**ಮಾಹುಲಿ** 'ಮಾವಲಿ' ನೋ.

**ಮಾಹೆ** (ನಾ). ತಿಂಗಳು; ಮಾಸ : ತಾರೀಖು ೫ ಮಾಹೆ ಮೆ ಸಂನ ೧೮೧೩ ಯಿಸವಿ (ಪ್ಮಲಂ. ೦೬೨೯, ೯೯-೯೩ ; 1813); ಮಾಹೆಮಾಹೆಗೂ ಬಹಳ ಕ್ರಮವಾಗಿ ಸೇವಾಜನರುಗಳಿಗೆ ತಲಬಿನ ಬಟವಾಡೆಯಾಗುತ್ತಿತ್ತು (ಮುಹಾಕಂ. II, ೦೬). [←ಪಾರ. ಮರಾ. ಮಾಹಾ, ಮಾಹೆ; ಹಿಂ. ಮಾಹ್]

**ಮಾಹೆಯಾನಾ** (ಅ). ಪ್ರತಿ ತಿಂಗಳೂ ; ಮಾಸಮಾಸವೂ : ಈ ಪೈಕಿ ಮೂರರಲ್ಲಿ ಎರಡು ಭಾಗ ನಗದಿಯಾಗಿ ಮಾಹೆಯಾನಾ ಬಟವಾಡೆಯಾಗುತ್ತ ಉಳಿದ ಒಂದು ಭಾಗವು . . . ಸಂದಾಯವಾಗುತ್ತಿತ್ತು (ಮುಹಾಕಂ. II, ೬೩).

[←ಪಾರ. ಮಾಹಿಯಾನ್ ; ಹಿಂ. ಮಾಹಿಯಾನಾ ; ಮರಾ. ಮಾಹಾನ್]

**ಮಾಹೆವಾರಿ** (ಗು). ಪ್ರತಿ ತಿಂಗಳ ; ಮಾಸಿಕ : ಮಾಹೆವಾರಿ ಜಮಾಖರ್ಚು ಲೆಕ್ಕದ ತಯಾರಿ ಮತ್ತು ಕಿಸ್ತು ವಸೂಲಿ (ಮುಹಾಕಂ. II, ೫೬) ; ಕೊಟ್ಟಂತಾ ತಿಂಗಳಿನ ಸಂಬಳವು ಹಿಂದಿನ ತಿಂಗಳ . . . ಮಾಹೆವಾರಿ ಪಟ್ಟಿ ತಾಲ್ಲೂಕಿಗೆ ಕಳುಹಿಸಿಕೊಟ್ಟ ಹೊರತು ಮಂಜೂರ್ಮಾಡುವದಿಲ್ಲವು (ಗ್ರಾಮಾಳ. ೬).

[←ಪಾರ. ಮಾಹ್‌ವಾರ್ ; ಹಿಂ. ಮಾಹ್‌ವಾರೀ ; ಮರಾ. ಮಾಹೆವಾರೀ, ಮಾಹವಾರ್, ಮಾಹವಾರೀ]

**ಮಾಹೇಂದ್ರ** (ಗು). ೧. ಇಂದ್ರನಿಗೆ ಸಂಬಂಧಿಸಿದ. ೨. ಪೂರ್ವದಿಕ್ಕಿಗೆ ಸೇರಿದ. (ನಾ). ೩. ಇಂದ್ರಕೀಲಪರ್ವತ ; ಮಹೇಂದ್ರಗಿರಿ. [ಸಂ.]

**ಮಾಹೇಂದ್ರಕಲ್ಪ** (ನಾ). [ಜೈನ] ಹದಿನಾರುಕಲ್ಪಗಳಲ್ಲಿ ನಾಲ್ಕನೆಯದು : ಸನ್ಯಸನವಿಧಾನದಿಂ ಪರಿತ್ಯಕ್ತಜೀವಿತನಾಗಿ ಮಾಹೇಂದ್ರಕಲ್ಪದೊಳಣಿಮಾದ್ಯಷ್ಟಗುಣೈಶ್ವರ್ಯೋಪೇತನುಂ . . . ಆಗಿ (ಆದಿಪು. ೨-೦೯ ವ); ತವೆ ಸುಟ್ಟುಂ ಸಮೆಯಿಪುದಣಮಲ್ಲು ಸನತ್ಕುಮಾರಮಾಹೇಂದ್ರಕಲ್ಪಜನಿತಾಮರರಂ (ಪುಣ್ಯಾಶ್ರ. ೦೩-೦೦೦). [ಸಂ.]

**ಮಾಹೇಂದ್ರಿ** (ನಾ). ೧. ಪೂರ್ವದಿಕ್ಕು. ೨. ಹಸು ; ಆಕಳು. ೩. ಇಂದ್ರನ ಪತ್ನಿ ; ಶಚೀದೇವಿ. ೪. ಸಪ್ತಮಾತೃಕೆಯರಲ್ಲಿ ಒಬ್ಬಳು : "ಬ್ರಾಹ್ಮೀ

. . . ಮಾಹೇಂದ್ರೀ, ಚಾಮುಂಡಾ_ಈ ೭ ಸಪ್ತಮಾತೃಕೆಯರ ಪೆಸರ್'' (ಪಲಾಯು. ೪-೦೬). ೫. [ಸಂಗೀತ] ಸಪ್ತಸ್ವರಗಳ ಅಧಿದೇವತೆಗಳಲ್ಲಿ ಒಬ್ಬಳು : ಬ್ರಾಹ್ಮಿ . . . ಮಾಹೇಂದ್ರಿ ಚಾಮುಂಡಿಯವರೆಂಬವರೇ ಕ್ರಮದಿಂದಾ ಷಡ್ಜಾದಿ ಸ್ವರಾಧಿದೇವತೆಗಳು (ಏವೇಕ. ೦೬೬). [ಸಂ. ಮಾಹೇಂದ್ರೀ]

**ಮಾಹೇಯ** (ನಾ). ೧. ಭೂಮಿಯ ಪುತ್ರ. ೨. ನರಕಾಸುರ. ೩. [ಜ್ಯೋತಿ] ಕುಜಗ್ರಹ : ದಿವಿಜೇಜ್ಯನುಮುಡುಪತಿಯುಂ ರವಿಯುಂ ಸತ್ವಗ್ರಹಂ . . . ಭಾನವನುಂ ಮಾಹೇಯನುಂ [ಶಾಕಾಂ: ಧರಣಿಜನು] ಶನಿ ತಮೋಗ್ರಹಮೆನಿಪರ್ (ಜಾತತಿ. ೪-೧). [ಸಂ.]

**ಮಾಹೇಯಿ** (ನಾ). ಆಕಳು ; ಹಸು : ''ಹೋಮಧೇನು ಮಾಹೇಯಿ ಯೆಂಬುದು'' (ಪಲಾಯು. ೪೩-೦೦೩). [ಸಂ. ಮಾಹೇಯೀ]

**ಮಾಹೇಶ** (ಗು). ಪರಮೇಶ್ವರನಿಗೆ ಸಂಬಂಧಿಸಿದ : 'ಮಾಹೇಶಮಂತ್ರ' ಪರಾ. [ಸಂ.]

**ಮಾಹೇಶಮಂತ್ರ** (ನಾ). ಪರಮೇಶ್ವರನು ಅಭಿಮಾನಿ ದೇವತೆ ಯಾಗಿರುವ ಮಂತ್ರ : ತನ್ನ ಚಿತ್ತದೊಳ್ಮಾಹೇಶಮಂತ್ರಮಂ ಸ್ಮರಿಸುತ್ತ (ಕೈಬಿಕಾ. ೨೦-೦೪). [ಸಂ.]

**ಮಾಹೇಶ್ವರ** (ನಾ). ೧. [ವೀಶೈ] ಷಟ್ಸ್ಥಲಗಳಲ್ಲಿ ಎರಡನೆಯ ಹಂತ ದಲ್ಲಿರುವ ಭಕ್ತ : ಮಾಹೇಶ್ವರನೆಂತೆಂಬೆನಯ್ಯಾ 'ಪರಸ್ತ್ರೀ ಪರದರ್ಥದಾಸೆ ಬಿಡದನ್ನಕ್ಕ (ಬಸವ. ೩೦೦); ಶಿವಯೋಗದ ವಚನಾಮೃತವನು ಸದ್ಭಕ್ತಿ ಯುಳ್ಳ ಮಾಹೇಶ್ವರನು ತನ್ನ ಶ್ರೋತ್ರಮುಖದಲ್ಲಿ ಕೇಳಿ . . . ಸಂತೋಷ ವನೆಯ್ದುಬಲ್ಲಡೆ ಆ ಸುಖವು ಪರಿಣಾಮವನೊಡಗೂಡುವುದು (ಅಪಶಂ. ೨೦೩-೬೨೩). ೨. ಶಿವಭಕ್ತಿಪಂಥದ ಒಂದು ಪ್ರಭೇದ : ಪಾಶುಪತ, ಕಾಳಾಮುಖ, ಲಕುಲೀಶ, ಮಾಹೇಶ್ವರ, ಶೈವಸಿದ್ಧಾಂತ, ವೀರಶೈವ ಇವೇ ಮೊದಲಾದವು ಶಿವಭಕ್ತಿಪಂಥದ ಮುಖ್ಯಪ್ರಭೇದಗಳು (ಭಾರತ. ೩೦೬).[ಸಂ.]

**ಮಾಹೇಶ್ವರಜ್ವರ** (ನಾ). ೧. ಶಿವನ ಹಣೆಗಣ್ಣಿನಿಂದುಂಟಾಗಬಹುದಾದ ತೀಕ್ಷ್ಣವಾದ ತಾಪ : ಹರಂ ಮಾಹೇಶ್ವರಜ್ವರವನಟ್ಟಿದಂ ಹರಣದೊಳು ಹರವರಿಯ ತಾಪಮಂ ಕಟ್ಟಿದಂ (ಸಂಭರ. ೦೬-೦೦೩). ೨. ಒಂದು ಬಗೆಯ ಜ್ವರ : ವಿಷ್ಣುಕ್ರಾಂತಿಸಮೂಲ, ಕೊತ್ತುಂಬರಿ . . . ಸಕ್ಕರೆ ಪ್ರತಿಪಾಕವಿಕ್ಕಿ ಕೊಡಲು ಮಾಹೇಶ್ವರಜ್ವರವು ಬಿಡುವುದು (ಸಕಪ್ಪ. ೦೦೩). 'ಮಹೇಶ್ವರಜ್ವರ' ಪರಾ. [ಸಂ.]

**ಮಾಹೇಶ್ವರಸ್ಥಲ** (ನಾ). [ವೀಶೈ] ಷಟ್ಸ್ಥಲಗಳಲ್ಲಿ ಒಂದು : ಅಜಾದಿನ ಜಿದೆಂಬನ್ನಕ್ಕ ಮಾಹೇಶ್ವರಸ್ಥಲ (ಶದಗೋ. ೨-೦೦೬). [ಸಂ.]

**ಮಾಹೇಶ್ವರಿ** (ನಾ). ೧. ಪಾರ್ವತಿ. ೨. ಸಪ್ತಮಾತೃಕೆಯರಲ್ಲಿ ಒಬ್ಬಳು: "ಬ್ರಾಹ್ಮೀ, ಮಾಹೇಶ್ವರಿ . . . ಚಾಮುಂಡಾ – ಈ ೭ ಸಪ್ತಮಾತೃಕೆಯರ ಪೆಸರ್" (ಪಲಾಯು. ೪-೦೬). ೩. [ಸಂಗೀತ] ಸಪ್ತಸ್ವರಗಳ ಅಧಿ ದೇವತೆಗಳಲ್ಲಿ ಒಬ್ಬಳು: ಬ್ರಾಹ್ಮೀ ಮಾಹೇಶ್ವರಿ . . . ಚಾಮುಂಡಿಯುವ ರೆಂಬವರೇ ಕ್ರಮದಿಂದಾ ಷಡ್ಜಾದಿ ಸ್ವರಾಧಿದೇವತೆಗಳು (ಏವೇಕ. ೦೬೬). [ಸಂ. ಮಾಹೇಶ್ವರೀ]

**ಮಾಹಿಷ** (ನಾ). ಕೋಣ : ಮೇಷವನು ಮಾರುತನ ಸಖಿ ಮಾಹಿಷವನು ರವಿಪುತ್ರ ನೈಋತಿಯಾ ಸಮಂಜಸನರನ ಚಂಡಿಯು ಬಲಿಗೆ ಬೇಕೆಂದು ಪೋಷಿಸುವರೆನಲು (ತತ್ತು.೮. ೭-೪೪). ☞ ಇದು ಛಂದಸ್ಸಿಗಾಗಿ ಮಾಡಿ ಕೊಂಡಿರುವ ರೂಪ. [< ಸಂ. ಮಾಹಿಷ]

**ಮಾಳ₁**, ಮೋಳ₁ (ನಾ). ೧. ಗಂಡುಬೆಕ್ಕು ; ಬಾವುಗ : "ಮಾಳಂ ಮೋಳಂ ಪುಮ್ಮಾರ್ಜಾಳಮುಂ" (ಪಶಸಂ. ೪೩-೦೨೬). **ಮೋಳ₁** : ೧. "ಮೋಳಃ = ಗಂಡುಬೆಕ್ಕು" (ಕಾಶಕ್ಕ. ೨೬೨) ; ಒಂದು ಮಡಕೆ ನೊರೆ ವಾಲಿಂಗೆ ಪೊಂಬತ್ತು ಮೋಳಂ ಗಡ (ಶಂತಶ. ೯೦-೩೬). ೨. (ಆಲಂ) ಕೊಬ್ಬಿರುವವನು ; ಗಡವ : ಕೊಬ್ಬಿದ್ದಾನೆ ಹ್ಯಾಗೆ, ನೋಡು ಮೋಳ (ಶುಂಠರಿಂದಾ. ೨೬೪).

**ಮಾಳ₂**, ಮಾಳಿ₁, ಮೆಳ್ಳೆ, ಮೋಳೆ₂ (ನಾ). ೧. (ಎತ್ತರವಾದ) ಬಯಲುಪ್ರದೇಶ, — ಮೈದಾನ : "ಮಾಳವೆನೆ ಬಯಲ್" (ಶಂಶಬ. ೨೩); ಅದಮಾನುಮುಟಿಮಾನಸನಾಗದೆ ಮಾಳದೊಳ್ ಪೋದ ದಾನುಂಡುವ ಸೀರೆಗಮೆನ್ನನದಿರ್ಪ ಬಾರದೆ ಪೋದೆಡೆಯೊಳೆ ತಡೆದಾನವ ನೆಂದಪಂ (ಕಬಾ. ೦-೦೨೬) ; ಮರುಸ್ಥಳದ ಮಾಳದೊಳ್ ನಡುಪಗಲ್ಪರ್ರಂ ಗ್ರೀಷ್ಮದೊಳ್ ಸುರುಳ್ವಿನೆಗಮುಟ್ಟಿ ಬೇವವರ್ಗೆ ಜೋಂಪಮಿಮ್ಮಾವು ನಿರ್ಝರಾಂಬು ಕೊಳ್ವಿನ್ನೊಲ್ (ಅಂತ್ರ. ೦೩-೬೬) ; ಗೌಡನು ಕೆರೆಯ ಆಚೆ ತೋಟನಲ್ಲಿ, ಅದರಾಚೆಯ ಮಾಳದಲ್ಲಿ ಸ್ವಲ್ಪ ಹೊತ್ತು ತಿರುಗಿ ಸುತ್ತ ನೋಡಿ ಊರ ಕಡೆಗೆ ಮರಳಿ ತಿರುಗಿದನು (ಸಣ್ಣ. I. ೬-೦೨೨). 'ಗೋಮಾಳ₁' ಪರಾ. ೨. (ಸಮುದ್ರದ ತಡಿಯಲ್ಲಿ) ಉಪ್ಪು ತಯಾರಿಸುವ ಸ್ಥಳ,– ಕಣ : ಬೇಸಗೆಯಲ್ಲಿ ಸಮುದ್ರದ ದಂಡೆಗೆ ಒಡ್ಡುಗಳನ್ನು ಹಾಕಿ ಚೌಕ ಮಾಳಗಳನ್ನು ಮಾಡಿ, ಅವುಗಳಲ್ಲಿ ಸಮುದ್ರ ಉಕ್ಕೇರಿದಾಗ ನೀರು ಕಟ್ಟುತ್ತಾರೆ (ಮುಖಾಬಂಯ. ೪-೦೯೬). ೩. ಒಬ್ಬಾತನ ಹೆಸರು : ಅಯ್ಯುಗನುಂ ಮಾಳನುಂ ಮಾರಗನುಂ ನಾಗ × × × ಮುದ್ದನು ಒಡನೆ ಸಿದ್ಧಿಸಿದರ್ (ಎಕ. VII, ಶಿಪನಿ. ೨೪-೭; ಸು. 970 ?). 'ಮಾಳಕ್ಕ', 'ಮಾಳಬ್ಬೆ' ಪರಾ. **ಮಾಳಿ₁** : ೨. ಹುದುಲಿಲ್ಲದ ಉಪ್ಪಿನ ಮಾಳಿಗಳ ಹತ್ತಿರ ಮಹಾರಾಜರನ್ನು ಇಳಿಸುವ ವ್ಯವಸ್ಥೆಯನ್ನು ಮಾಡಲಾಗಿತ್ತು (ಗ್ರಾಮಚರು. ೩೮೭). **ಮೆಳ್ಳೆ** : ೨. ಈಗ ಯಾವತ್ತು ಉಪ್ಪಿನ ಮೆಳೆಗಳು ಹಾಳು ಬಿದ್ದವೆ (ಕಭಾಗ. ೨೯) ; ಇಲ್ಲಿ ೧೨೮ ಆಗರಗಳಲ್ಲಿ ಕೂಡಿ ೧೯೪೦೦ ಮೆಳೆಗಳಲ್ಲಿ ಉಪ್ಪು ಮಾಡುತ್ತಾರೆ (ಕಭಾಗ. ೩೮೨). **ಮೋಳೆ₂** : ೧. [ಬೇ]ವಿನ ಮೋಳೆಯು ಚೌಡಗೊಂಡನ ಗದೆ ಖ ॥ C (ಕೌಇಇ. IV, ೨೩೪-೭೩ ; 1513); ಊರ ಸಮೀಪದ ಹಾಳು ಮೋಳೆಗಳಲ್ಲಿ ಉಸುಕು ಭೂಮಿಗಳಲ್ಲಿ ಸಜ್ಜೆಯು ವಿಶೇಷವಾಗಿ ಬೆಳೆಯುವದು (ಕೃಶಿಕ್ರ. ೬೩). ೨. ಆ ಭೂಮಿಯ ಚತು ಸೀಮೆ ಮೂಡಲು ಹೆಬ್ಬುಣಸೆಯ ಹಳ್ಳ ವುಪ್ಪಿನ ಮೋಳೆ ತೆಂಕಲು (ಕೌಇಇ. IX-i, ೩೪೩-೩೩ ; 1226) ; ಅಲ್ಲಿಂದ ಬಡಗಲು ತಣ್ಣಸಹಳ್ಳಿಯ ಒಳಗೆರೆಯ ಉಪ್ಪಿನ ಮೋಳೆ (ಎಕ. XIV, ಮುಂಡ್ಯ. ೦೦೩-೪೪ ; 1516) ; ಸ್ವಂತ ಮೋಳೆಯಲ್ಲಿ ಬೇಕಾದಷ್ಟು ಉಪ್ಪು ಬರುವುದು (ಅದೂಟಿ. ೦೩). ೪. (ಉಪ್ಪುಮಣ್ಣಿನ) ರಾಶಿ, — ಒಟ್ಟಿಲು : (೬).

**ಮಾಳಂಮಾಡು, ಮಾಳ ಮಾಡು** = (ಆಲಂ) ಹಾಳುಮಾಡು : ಮಾಳವನ ಕೋಂಟೆಯ ಕೊಂಡು ಕೂಡೆ ಮಾಳಂ ಮಾಡುತ (ಕೇರಮು. ೪-೦೦) ; ಕ್ರೂರವಿಧಿಯು ಬಾಳುಗೆಡಿಸಿ . . . ಮನೆಯ ಮುರಿದು ಮಾಳ ಮಾಡಿತು (ಅರ್ಜುನ. ೦೦೦). **ಮಾಳ ಕಟ್ಟು** = (ಯಾವು ದಾದರೊಂದರ ಸ್ಮಾರಕವಾಗಿ) ಬಯಲುಜಾಗದಲ್ಲಿ ಕಟ್ಟೆಯನ್ನು ಕಟ್ಟು : ಗುಂಡು ಇಟ್ಟ ಜಾಗದಲ್ಲಿ ಮಾಳ ಕಟ್ಟಿದಂಥಾದ್ದು. ಬೀರಗೌಡ ಸತ್ತ ಜಾಗಾ ಸಹಾ ತೋರಿಸಿ (ರಾಕೇಂದ್ರ. ೦೪೬). **ಮಾಳವಾಗು** = (ಆಲಂ) ಹಾಳಾಗು ; ಕೆಡು : ಮನೆ ಮಾಳವಾಯಿತ್ತು ಹೊಲ ಬೆಳೆಗೆಟ್ಟಿತ್ತು ಭಕ್ತ ಭವಿಯಾದ (ಸಶವ. II, ೬೪೩-೦೬೪೯). [ದೇ.॥ ಕೊವ. ಮಾಳ./ ಮರಾ. ಮಾಳ]

**ಮಾಳ₃** 'ಮಹಳ' ನೋ.

**ಮಾಳ₄** 'ಮಾಲ' ನೋ.

**ಮಾಳಂಗೊಳ್** (ಕ್ರಿ). ಬಯಲಿಗೆ ಬೀಳು ; ದಿಕ್ಕಾಪಾಲಾಗು : ಆ ಪಾರ್ವಂ . . . ಭಯಂಗೊಂಡಾಡಂ ಶ್ವಾನನೆಂದೀಡಾಡಿ ಮಾಳಂ ಗೊಂಡೋಡಿದಂ (ಶಂತಶಂ. ೦೯೬-೨). [ಮಾಳ₂ + ಕೊಳ್₁]

**ಮಾಳಕ್ಕ** (ನಾ). ಒಬ್ಬಾಕೆಯ ಹೆಸರು : ತುರಾವ್ಮನ ಪೆಣ್ಣಾತಿ ಮಾಳಕ್ಕ ಅಕ್ಕಣಬ್ಬೆಬೋಯಿತಿ ಕೋಟೆಯಾಮ್ಮನಕ್ಕಂ (ಪ್ಮಿಆಂ. ೧೯೨೯, ೭೯-೩ ; 964). [ಮಾಳ್$_2$ + ಅಕ್ಕ$_1$]

**ಮಾಳಜಿಗೆ** (ನಾ). ಒಂದು ಬಗೆಯ ಆಯುಧ : ತೊಳಗುವ ಬಾಳೆ ತಟತ್ತ್ರಟಿಪ ಕಕ್ಕಡೆ. . . ಅಗುರ್ವಿಸುವಾವುತಿ ಪೂಸಿದಂತಿರಿಟ್ಟೆಳಮವರ್ದಿರ್ದ ಮಾಳಜಿಗೆ ಪಕ್ಕರೆಯಿಕ್ಕಿದ ಜಾಯಿಲಂ ಭಯಂಗೊಳಿಸೆ (ಪಂಪಭಾ. ೧೨-೭೭). [ ? ]

**ಮಾಳತಿ** 'ಮಾಲತಿ' ನೋ.

**ಮಾಳಪಕ್ಷ** 'ಮಹಳಪಕ್ಷ' ನೋ.

**ಮಾಳಬೆ** 'ಮಾಳಬ್ಬೆ' ನೋ.

**ಮಾಳಬೆಕ್ಕು, ಮೋಳಬೆಕ್ಕು** (ನಾ). ಗಂಡುಬೆಕ್ಕು ; ಬಾವುಗ : ಆ ಆವರಣದಲ್ಲಿ ಗೂಬೆ, ಕಾಡುಪಾರಿವಾಳ, ಬಾವಲಿ, ಮಾಳಬೆಕ್ಕು — ಇವು ನಮ್ಮ ಬಂಧುವರ್ಗವಾಗಿದ್ದುವು (ಹುಹುಬಾ. ೧೭). **ಮೋಳಬೆಕ್ಕು** : ಬಾವಲಿಗಳು ಹೊರಬಿದ್ದ ಒಂದೆರಡು ಕ್ಷಣಗಳಲ್ಲಿ ಅಲ್ಲಿನ ಮೋಳಬೆಕ್ಕುಗಳು ಹೊರಬೀಳುತ್ತವೆ (ಸರಸ. ೭೭) ; ಬೆಳಗೂ ಕಡೆವ ಬೆಣ್ಣೆ ಮೋಳಬೆಕ್ಕಿನ ಪಾಲಾಯಿತು (ಗಾದೆ). [ ಮಾಳ್$_1$ + ಬೆಕ್ಕು (<ಬೆಕ್ರ್) ]

**ಮಾಳಬ್ಬೆ, ಮಾಳಬೆ** (ನಾ). ೧. ಒಬ್ಬಾಕೆಯ ಹೆಸರು : ಶ್ರೀಮದ್ದೇವಣನ್ದಿಭಟ್ಟಾರಕರ ಗುಡ್ಡಿ ಮಾಳಬ್ಬೆ ಕಡಸತವಾದಿಯ ತೀರ್ತ್ಥದ . . . ಬಸದಿಗೆ ಕೊಟ್ಟಳ್ (ಎಕ. II (R), ೩೨೦-೨ ; ೯). **ಮಾಳಬೆ** : ೨. ಒಂದು ಕ್ಷುದ್ರದೇವತೆಯ ಹೆಸರು : ಕಾಳಿ ಕೊಳ್ಳಿಜಿಯುಪಂ ಮುಜಿದಿಕ್ಕುಗೆ . . . ಮಾಳಬೆ [ಶಾಕಾಂ. ಚಿ]ಗಿಂದು ಮೊಗವಾರವೆತ್ತುವೆಂ (೮೮ಶಾಪ. ೨-೦೦೭) ; ಟಕ್ಕಿಪಸಂ ತುಟಾ ಪೋಗುದೋರ್ಪನಂ ಮಾಳಬೆ [ಶಾಕಾಂ. ಚಿ]ಗಿಕ್ಕು (೮೮ಶಾಪ. ೨-೦೦೭). [ಮಾಳ್$_2$ + ಅಬ್ಬೆ$_1$]

**ಮಾಳಯ** ' ಮಹಳ ' ನೋ.

**ಮಾಳವ** (ನಾ). ೧. ಒಂದು ದೇಶ ಮತ್ತು ಆ ದೇಶದ ಜನರ ಭಾಷೆ : ಯತ್ಪಾದಾನತಿಮಾತ್ರಾಮೇಕಶರಣಾನಾಲೋಕ್ಯಲಕ್ಷ್ಮೀರ್ಧಿಯಾ ದೂರಾನ್ಮಾಳವನಾಯಕೋನಯುಪರೋ ಯತ್ರಾಣ ಬದ್ಧಾಞ್ಜಲಿಃ (ಎಕ. III (R), ತಂಜಪ. ೨೭೬-೩೩; 808); ಕರ್ಣಾಟಾಂಧ್ರ ದ್ರವಿಡ ಮರಾಟ ಲಾಟ ಮಾಳವ . . . ತೌಳವಾದಿ ದೇಶಭಾಷೆಗಳೊಳ್ ಪುಟ್ಟುವುವೆಲ್ಲಂ ಸರ್ವವಿಷಯಭಾಷಾಜಾತಿಗಳಕ್ಕುಂ (ಛಂದೋಂಬು. ೦-೯೭ ಪ); ಅಂಗ ವಂಗ ಕಳಿಂಗ ಕೊಂಗ ಮಾಳವ . . . ತುರುಷ್ಕ ಮರುಪ್ರಭೃತಿಭೂಪಾಲಕರಿಂ ಭಯಾನಕರಸಮುಂ . . . ನೆಗಟುತ್ತುಮಿರೆಯಿರೆ (ಜಗಪಿ. ೨-೩೯ಪ). ೨. [ಸಂಗೀತ] ಒಂದು ರಾಗದ ಹೆಸರು : ಮಾಳವ ಗೌಳ ಬಂಗಾಳ ಗೂರ್ಜರಿ ಕರ್ನಾಟ ಕಾಂಭೋಜಿ ಕೇತಾರಂಗಳ್ ದೇಶಿಯವಾಗಿವೆ (ಹಮ್ಮಿರ. ೨-೯೦ ಪ) ; ಮಾಳವಮಾ ಶ್ರೀರಾಗಂ ಸಾಳಗಮುರು ನಾಟಿ ಶಂಕರಾಭರಣಂ (ವ್ಯಕಾ. ೦೦-೦೦). ೩. [ಕಾಮಶಾ] ಮದನ, ಚಿತ್ರಕ, ದಮನ ಮತ್ತು ಮಾಳವ ಎಂಬ ಪುರುಷರ ನಾಲ್ಕು ಬಗೆಗಳಲ್ಲಿ ಒಂದು : ಅನುರಕ್ತಭಾವದಿಂ ಪದ್ಮಿನಿ ಮೊದಲಾಗಿರ್ಪ ನಾಲ್ಕುಜಾತಿ ಸ್ತ್ರೀಯರ್ಗಿನಿಯರ್ ವರ್ತಿಪರಿಂತು ಮದನ ಚಿತ್ರಕ ದಮ[ನ ಮಾಳ]ವಾಖ್ಯರೆಸಿಪ್ಪರ್ (ಮಶ್ಮಶಿ. ೨-೦೧). [ಸಂ. ಮಾಲವ]

**ಮಾಳವಕೌಶಿಕೆ** (ನಾ). [ಸಂಗೀತ] ಒಂದು ರಾಗದ ಹೆಸರು : ಷಡ್ಜ ಗ್ರಾಮ . . . ಮಾಳವಕೌಶಿಕೆಯೆಂಬಾಜು ಶುದ್ಧಜಾತಿಯಿಂದಾದ ರಾಗಂಗಳು (ಶಿವೇಕ. ೦೮೭). [ಸಂ. ಮಾಲವಕೌಶಿಕ]

**ಮಾಳವಗೌಳ** ' ಮಾಲವಗೌಲ ' ನೋ.

**ಮಾಳವಶ್ರೀ** ' ಮಾಲವಶ್ರೀ' ನೋ.

**ಮಾಳವಿ** (ಗು). ೧. ಮಾಳವದೇಶಕ್ಕೆ ಸಂಬಂಧಿಸಿದ. (ನಾ). ೨. ಮಾಳವದೇಶದ ರಾಜಪುತ್ರಿ. ೩. ರಾಮಾಯಣದ ಭರತನ ಪತ್ನಿಯ ಹೆಸರು : ಬಳಸಿದರು ಬಳಿಕವನಿಜೆಯನೂರ್ಮಿಳೆ ಮಹಾಮಾಂಗಲ್ಯಕನ್ಯಾಕುಲಶಿರೋಮಣಿ ಮಾಳವಿ [ಶಾಠಾಂ. ಮಾಂಡವಿ, ಮಾಳವ] ಶ್ರುತಕೀರ್ತಿಯೆಂಬವರು (ತೊರರಾ. ೦-೦೩-೨); ಆನತ್ತೆವಿರ್ಗೆಜಗಿ ಪರಕೆಗೊಂಡೆನಿಲ್ಲ ! ಮಾಳವಿಯರಂ ಬೆಸಗೊಂಡೆನಿಲ್ಲ ! (ರಾಮಾಶ್ವ. ೨೭-೨೭). ೪. [ಸಂಗೀತ] ಒಂದು ರಾಗದ ಹೆಸರು : ಷಡಾರ ಠಕ್ಕರಾಗ ಮಾಳವಿ . . . ಹಿಂದೋಳವೆಂಬೆಂಟು ಅಪ್ಪಸಾಧಾರಣದಿಂದಾದ ರಾಗಂಗಳು (ಶಿವೇಕ. ೨೭೩); ದೇಶಿ ಗುಜ್ಜರಿ ಮಾಳವಿಯಾಹೇರಿ . . . ಒಲ್ದು ಪಾಡಿದ (ತ್ರಿಷಷ್ಟಿ. ೬-೩೦). [ಸಂ. ಮಾಲವೀ]

**ಮಾಳವಿಕ** (ನಾ). ಒಂದು ಬಗೆಯ ಸಸ್ಯ ; ತಿಗಡೆ : " ಮಾಳವಿಕಮೆನೆ ತಿಗಡೆ " (ಪಂಗರಾ. ೯೨-೩೯). [ಸಂ. ಮಾಲವಿಕಾ]

**ಮಾಳವಿಗ** (ನಾ). ಮಾಳವದೇಶಕ್ಕೆ ಸೇರಿದವನು : ವಿಜಯಂ . . . ಮಾಳವಿಗರಂ ಕೆಟಗಿಪಿಗೆಯ್ಕುಲೀಯದಾಟಂದು ನಿಜನಾಮಾಂಕಿತಸಾಯಕಂಗಳಿಂದೆಚ್ಚು ನಚ್ಚಂ ಕಿಡಿಸಿ (ಪಂಪಭಾ. ೬-೨೯ ಪ). [ಮಾಳವ + -ಇಗ]

**ಮಾಳಾಕಾರ** ' ಮಾಲಾಕಾರ ' ನೋ.

**ಮಾಳಾವೃತ್ತ** ' ಮಾಲಾವೃತ್ತ ' ನೋ.

**ಮಾಳಿ$_1$** ' ಮಾಲಿ ' ನೋ.

**ಮಾಳಿ$_2$** (ನಾ). ಸಂಭೋಗಕ್ಕೆ ಅಸಮರ್ಥಳಾದವಳು : (ಕ). [ ? ]

**ಮಾಳಿಂಗಿ** (ನಾ). ಒಂದು ಸ್ಥಳದ ಹೆಸರು : ತೊಣವಳ್ಳಿಯ ಗುಡ್ಡರ ಪುಬ್ಬಾಮಿಗಂಗೆ ಮಾಳಿಂಗಿ ಗ್ರಾಮಿಗಿತ್ತಿಯಾಂಗೆ ಪುಟ್ಟಿದ ಶ್ರೀಮಾರಂ (ಎಕ. VII, ಶಿಕಾರಿ. ೨೯೭-೩ ; ಹು. 830). [ ? ]

**ಮಾಳಿಗ** (ನಾ). ಮೋಸಗಾರ ; ಕಪಟಿ : ಅನ್ಯತಕ್ಕೆ— ಅಟಮಟಿಗಂ. ಮಾಳಿಗಂ. ಪುಸಿಗಂ (ಶಮದ. ೦೯೭ ಕ್ರಿಯೋ). [ಮಾಳ್$_4$(=ಮಾಲ) + -ಇಗ]

**ಮಾಳಿಗೆ$_1$, ಮಾಣಿಗೆ** (ನಾ). ೧. ಮೇಲಿನ ಅಂತಸ್ತು ; ಮಹಡಿ ; ಉಪ್ಪರಿಗೆ : ಕಂಬ ಮಣಿದು ಮಾಳಿಗೆ ಉಳಿದು ಬೆಂಬಳಿಮಿಡಿದ್ಯವರು ಮಂದಿ ತುಂಬುತ ಕೈಮಜಿಪರು ನೋಡಿರೇ (ಅಪತಂ. ೨೯೭-೦೩೦೦); ಮೇಲಣ ನೆಲೆಯ ಮಾಳಿಗೆಗೆ ಚಿತ್ತೈಸು (ಭರತ. ೯-೦೩೭); ಮಾಳಿಗೆಯಿಂದ ಸೇವಕನೊಬ್ಬನು ಇಳಿದು . . . ಹೇಳಿದನು (ಯೋರು. ೦೯). ೨. ಉಪ್ಪರಿಗೆಯಿರುವ ಮನೆ; ಸೌಧ : ಮಾಳಿಗೆಯ ಮಾಳಿಗೆಯ ಮನಂಗೊಳಿಸುವ ನಾನಾಪ್ರಕಾರದಂಗಡಿಯುಂ . . . ವಿಳಾಸದಿಂದೆಂತು ನೋಟ್ಪಡಂ ರಮಣೀಯಂ (ಸುಕುಮಾ. ೯-೬೯); ಗುಡಿಸಿಲ್ ಚೆಲ್ವಾಗಿಯುಂ ಮಾಳಿಗೆಯಲ್ಲದು (ಧರ್ಮಾಮೃ. ೦೦-೦೮೩ ಪ). ೩. ಮನೆಯ ಮೇಲಿನ ಮಣ್ಣಿನ ಹೊದಿಕೆ,-ಮಣ್ಣಿನ ಮೇಲ್ಭಾವಣಿ : ಎಡೆಯ ಮಾಳಿಗೆಯ ಜಂತ್ರಯನುಚ್ಚಿ ಪಟುಮಾಡಿದರ್ಬೆಂಕಿಯಂ (ಇಳಿಕ. ದೀ. ೩೩-೭); ಲತೆಯ ಎಳಗುಡಿ ಮಾಳಿಗೆಗೆ ತೊಲೆಯೆ (ಕುವ್ಯಾಲಿ. ೩-೮೯); ಬೆಳ್ಳಿಯ ಬಟ್ಟಲಿನೊಳಾ ಮುತ್ತುಗಳಂ ಇರಿಸಿ ಮಾಳಿಗೆ ಮೇಲೆ ಮಡಗಲೂ ಆಗಲೆ ಮಳೆಬಂದರೆ ಆ ಮುತ್ತಂ ನಾಗರತ್ನವೆಂದು ತಿಳಿಯುವುದು (ಸೌಗಂಧಿ. ೩೭೭-೦೩). **ಮಾಣಿಗೆ** : ೧. ಅಲ್ಲಿಗೆ ಪೂರೈಸಿತ್ತು. ಅಂದು ಹೂವಳ್ಳಿಯ ಆ ಮಾಣಿಗೆ ಒಳಗೆ ನಡೆದಿದ್ದ ಆ ಮುಗ್ಧಘಟನೆ (ಮಲೆಮ. ೮೨); ಅವಳನ್ನು ಮಾಣಿಗೆಗೆ, ಆಗ ತಾನೆ ವಿವಾಹದಿಂದ ಹಿಂತಿರುಗಿದ್ದ ಚಿನ್ನಮ್ಮನ ಬಳಿಗೆ ಕರೆದೊಯ್ದರು (ಮಲೆಮ. ೬೯೨). [< ಸಂ. ಮಾಲಿಕಾ./ತಮಿ. ಮಾಳಿಕೈ]

**ಮಾಳಿಗೆ$_2$** (ನಾ). ಒಂದು ಕ್ಷುದ್ರದೇವತೆಯ ಹೆಸರು: ಎಲ್ಲಾಯಿ ಯಕನಾತಿ ಬನದ ಶಂಕರಿ ಮಲ್ಲಗ ಜಟ್ಟಿಂಗ ಮಾಳಿಗೆ ಮನಿದೇವಿ (ಬಸವ. ೩೬-೨). [?]

**ಮಾಳಿಗೆಮನೆ** (ನಾ). ೧. ಮಹಡಿಮನೆ ; ಉಪ್ಪರಿಗೆಮನೆ : ಹೂವಿನ ಹಡಂಗಿಲೆಯ ಚಲ್ಲಿಯ ಕೇರಿಯಲ್ಲಿವರ ಮಾಳಿಗೆಮನೆ (ಸೌಇಇ. IX-i, ೨೩೯-೬೭; 1178); ಮಾಳಿಗೆಮನೆಯು ಇರಲಿ ಜಾಳಿಗೆ ಹೊನ್ನಿರಲಿ ಆಳುಮಂದಿ

ಶಾನೆ ಇರಲಿ (ಘಠಂತ. ೨-೪೯-೪); ಧರೆಯಲ್ಲಿ ಸೊಗಸಾದ ಮಾಳಿಗೆಮನೆಗಳಲಿ ಕೆರೆ ತೊರೆಗಳಿಂದೆಸೆವ ಪಟ್ಟಣಗಳಲಿ (ಕುಪು. ೦೯-೦). ೨. ಹೆಂಚಿಗೆ ಬದಲಾಗಿ ನೆಲದಂತೆಯೇ ಸಮನಾಗಿರುವ ಮಣ್ಣಿನ ಮೇಲ್ಭಾವಣಿಯಿರುವ ಮನೆ: ಮಾಳಿಗೆಮನೆಗಳಲ್ಲಿ ವಾಸ ಮಾಡುವುದರಿಂದ. . . ಶರೀರಕ್ಕೆ ಚುಹಾಲಘುತರವಾಗಿರುವುದು (ಶಳಪ್ಪ. ೩೭) ; ಬೈಲುಸೀಮೆಯಲ್ಲಿ ಮಳೆ ಕಡಿಮೆ ಬೀಳುವುದರಿಂದ ಮಾಳಿಗೇಮನೆಗಳನ್ನು ಕಟ್ಟುವ ನಡಾವಳಿ ವಿಶೇಷವುಂಟು (ಮುಂಬಯಿ. ೯-೦೦೩). [ಮಾಳಿಗೆ$_1$ + ಮನೆ]

**ಮಾಳಿಡು** (ಕ್ರಿ). ಮೋಸ ಮಾಡು; ವಂಚಿಸು: ಊಳಿಡು, ದೂಳಿಡು. ಮಾಳಿಡು (ಶಬ್ದಾ. ಸು. ೧೯೯ ಪ್ರಯೋ). [ಮಾಳ್$_4$ (= ಮಾಲ) + ಇಡು$_1$]

**ಮಾಳಿಯಬ್ಬೆ** (ನಾ). ಒಬ್ಬಾಕೆಯ ಹೆಸರು: ಅಜವರ್ಮ್ಮರಸನುಂ ಮಾಳಿಯಬ್ಬರಸಿಯುಂ. . . ಕಾಲಂ ಕರ್ಚಿ ಧಾರಾಪೂರ್ವ್ವಕಂ ಮಾಡಿ ಬಿಟ್ಟ ವೃತ್ತಿ (ಎಕ. XI. ಮೊಳಕಾ. ೪೦-೩; 987). [ಮಾಳಿ$_?$ + ಅಬ್ಬೆ$_1$]

**ಮಾಳಿರಾಸಿಗ** (ನಾ). ಒಬ್ಬಾತನ ಹೆಸರು: ಮಾಳಿರಾಸಿಗನುಮೊ × ಜೀಯರ ಮೆಚ್ಚಿ ೧ ಗುಯ್ಯಲಂ ೩ ಮತ್ತ ಕೆಯ್ಯುಮಂ ಬಿಟ್ಟರ್ (ಎಕ. XI. ಮೊಳಕಾ. ೨೭-೭; 962). [ ? ]

**ಮಾಳಿ$_1$** 'ಮಾಳ್$_2$' ನೋ.

**ಮಾಳಿ$_2$** 'ಮಾಲೆ' ನೋ.

**ಮಾಳಿಸೋಗ** (ನಾ). "ಪರರ ವಸ್ತ್ರವನ್ನು ಹಾಕಿಕೊಂಡು ಬಡಿವಾರ ಮಾಡುವ ಅಗಸ" (ಏಕ್ಸ್ಕೇಸು. ಟಿಪ್ಪಣಿ) : ಲೌಕಿಕವೆಲ್ಲಾ ಬ್ರಹ್ಮಸ್ವರೂಪವೆಂದು ವೈಕಾರಿಕಮಾರ್ಗ ಕಾಣದವ ಅವನೆ ಮಾಳಿಸೋಗನೋ (ಏಕ್ಸ್ಕೇಸು. ೯೩-೦). [ಮಾಳಿ$_?$ + ಸೋಗು$_2$ + —ಅ$_7$]

**ಮಾಳ್ಕಿ** ' ಮಾಚಿಕ್ಕಿ ' ನೋ.

**ಮಾಳ್ದಿ** (ನಾ). ಒಂದು ಸ್ಥಳದ ಹೆಸರು: ಕಮ್ಮಾರ್ ಕೊಟ್ಟಲೆಯ ಮುದುವೂಣುಸೆ ಮಾಳ್ದಿಯುಳ್ ಊಡಿತ್ತು ಸೀಮೆ (ಎಕ. XVI. ಗುಬ್ಬಿ. ೭೩-೫೯; 733). [ ? ]

**ಮಾಳ್ಪ** 'ಮಾಡು$_1$' ಪರಾ.

**ಮಾಳ್ಮಕಿ** (ನಾ). ಗಂಡನನ್ನು ಅಗಲದವಳು ; ಗಂಡನ ಜೊತೆಯಲ್ಲೇ ಇರುವವಳು : "ಮಾಳ್ಮಕಿ — ಗಂಡನ ಪತ್ನಿ ಬಿಡದಾಕೆ" (ಕಪುದ. ಕಂ. ೨). 'ಮಗಳ್ಮಾ' ಪರಾ. [ ? ]

**ಮಾಳ್ವೊಪೊಟ್ಟಿ** (ನಾ). ಒಬ್ಬಾಕೆಯ ಹೆಸರು : ವೀರವೂರ ಮಾಳ್ವೊಪೊಟ್ಟಿಯುರಾ ಕುಡಿಮುದ್ದನ್ ಮೇರೆಯುಳ್ಳಿಱಿದು ವಿಟ್ಟರ್ (ಎಕ. V. ಚನ್ನರಾ. ೨೦೩-೪; ಸು. 770). [? + < ಪೊಡ್ಡಿ]

**ಮಾಱಂಕ**, ಮಾರಂಕ (ನಾ). ೧. ಮತ್ತೊಂದು ಯುದ್ಧ ; ಬೇರೊಂದು ಕಾಳಗ : ನಿಮ್ಮ ತೆಱದಿಂ . . . ಕಾದಲೆಂದು ಕಳದೊಳೀ ಮಾಱಂಕಮಂ ಬೇಡಿ ಬಂದುಲಿವರಾ (ವರ್ಧಕು. ೭-೩೪). ೨. ಎದುರುಕಾಳಗ : ಪ್ರತಿಭಟನೆ : ಗವುಡಗಾಱದೆ ಬಾರಿಕಂಗೆ ಕಳ್ಳಂಗಾಱದೆ ಬಟ್ಟೆವೋಪಂಗೆ ಮಾಱಂಕಕ್ಕಾಱದೆ ಸಂಕದ ಗೊರವಂಗೆ . . . ಮುನಿವರ್ (ರಪುರಾಪ್ತು. ೭-೦೧೯). ೩. ಎದುರಿಸುವ ಮಹಾಪರಾಕ್ರಮಿ ; ಪ್ರತಿಭಟ ; ಶೂರನಾದ ಎದುರಾಳು : ಅಂಕ ಕಳನೇಱಿ ಕೈಮುಱಿದಿರ್ದೊಡೆ ಮಾಱಂಕ ಬಂದಿಱಿವುದ ಮಾಣ್ಬನೆ (ಶಿಶಪ. ೦೭೬) ; ಮಧು ತೆತ್ತಿಗಂ ವಿರಹಿ ಮಾಱಂಕಂ ನೃಪಂ ಚಿತ್ತಸಂಭವನಾಗಲ್ಕಡುಕೆಯ್ದು ಕಾಯ್ದು ಕಳನಂ ಬಂದೇಱುವಂತೆ (ಸೂಕ್ತಿಸು. ೮-೨೦೯). ೪. ಪ್ರತಿಸ್ಪರ್ಧೆ ; ಹುರುಡು : ದೇವವಿಟರ್ಗೆ ಮಾಱಂಕದ ಕದಂ . . . ಅಳಿತುನದವರ್ಗೆ ತೆಗೆವ ಕದವಲ್ಲೆಂದು ಪಲಕಲವು ಕಟಕಿಗಳನಾಡೆ (ಶಂಶರ. ೦೩-೬೩) ; ಮದನನ ಮಾಱಂಕದ ಛಂದದ ಗಂಡನಂ . . . ಇವಳೊಲವದೆ ಕೊಂಬಳ್ (ಯಕೋಚ. ೩-೬೩) ; ಉದಯಿಸುವ ಸಹಸ್ರಕರಮಂಡಲಕ್ಕೆ ಮಾಱಂಕಮಾದ ತೇಜಃಪ್ರತಾಪಂ ಮಾಱಗಮಸೆದ್ದು ಕಣ್ಣಾಳ್ಕೆ ಬಿಳ್ಕುಱಿಸುವಿನೆಗಂ (ಅಸಂಚ. ೦೩-೯೦ ವ). ೫. ಪ್ರತಿಸ್ಪರ್ಧಿ ; ಹುರುಡಿಗ : ಜೋಜೋ ಯತಿಗಳ ಮನದ ಮಾಱಂಕವೆ ಜೋಜೋಯೆಂದು ತೂಗಿದರು (ಅಂಶಕ. ೯-೫೩). ೬. ಸವಾಲಾಗಿರುವವಳು : ಧೀರರಿಗೆ ಮಾಱಂಕವನು ವರಪಾರಿಕಾಂಕ್ಷಿಯ ಚಿತ್ರಚೌರ್ಯವಿಹಾರಿಯನು' ದ್ರೌಪದಿಯನಭಿವರ್ಣಿಸುವಡಾರು (ಕುವ್ಯಾಕ. ೦೩-೨೨). **ಮಾರಂಕ** : ೨. ಸೈನ್ಯದ ಆಯಕಟ್ಟಿನ ಸಮಯ ಸಂಪ್ರದಾಯಗಳನ್ನೆಲ್ಲ ತನಗೆ ಚಿತ್ತವೇರಿದಂತೆ ತಿರುಗಿಸಿ ಮಾರಂಕ ಮಾಡಿ (ಮಂಕ್ರಶ. ೭೭-೨೩). [ಮಾಱು$_2$ + ಅಂಕ$_1$]

**ಮಾಱಂಡಲ**, ಮಾಱಂಡಳ (ನಾ). ಸಮಾನ ; ಸಾಟಿ ; ಎಣೆ : ನೆಲಸಿದ್ದ ಮ್ಮೊಂಟೆ ಬಿಣ್ಪಂ ಬಡಗಣ ದೆಸೆಯಂ ಕೊಣ್ಣು ನೆಲ್ದ ಪ್ಪುದೋರಂಡಲ ಮುಳ್ಳಂ ವಿಶ್ವಮೆಂದುಮ್ಮಳಿಸಿ ಬೆಸಸೆ ವಿಶ್ವಾಮರಶ್ರೇಣಿ ಮಾಱಂಡಲವಾದಂ ತೆಂಕಮುಯಿಮುಟ್ಟೆರಡು ದೆಸೆಯೊಳಂ ತೂಕಕಂಬಂದದಿಂ. . . ಕುಂಭಜನ್ಮಂ (ಜಾಂಬೇಕ. ೨೯-೯೦; 12ನೆಯ ಶಶ); ಅಂಬುರಾಶಿಗೆ ಮಾಱಂಡಲವಾದ ಗುಣ್ಪು (ಎಕ. XI, ದಾವಣ. ೨೩-೩೭ ; 1224). **ಮಾಱಂಡಳ** : ಎನ್ನು ದಾನಿಯೆ ಸುರೋರ್ವ್ವಿಜಕ್ಕೆ ಮಾಱಂಡಳಂ ಸುರರಾಜಂಗೆಣೆಯೆಂದು ಕೀರ್ತ್ತಿಪ್ಪುದು (ಎಕ. II, ೦೯೨-೦೩ ; 1139) ; ಆರ್ಪನ್ನಮರಕುಜಕೆ ಮಾಱಂಡಳಂ ನೋಳ್ಪಡನ್ನಾ . . . ಭೂಪಾಲರೋಳ್ (ಎಕ. XII, ಕುಣುಗ. ೯-೩ ; 1151) ; ಶರದಾಕಾಶಮಂಡಳದ ಶಶಿಮಂಡಳಕ್ಕೆ ಮಾಱಂಡಳಮಾಗಿ (ವರ್ಧಕು. ೭-೪ ವ). ' ಓರಂಡಲ ' ಪರಾ. [ಮಾಱು$_2$ + ಅಂಡಲ$_?$]

**ಮಾಱಂಡಳ** 'ಮಾಱಂಡಲ' ನೋ.

**ಮಾಱಂಬು**, ಮಾರಂಬು (ನಾ). ೧. (ಗುರಿ ಇಟ್ಟು) ಹೊಡೆದ ಬಾಣ : ಭೋಂಕನೆ ಕಂಡು ಮಾಱಂಬಿಗೆ ಪಕ್ಕಾದ ಬೆಳ್ಮಿಗದಂತೆ (ಶಬುಪು. ೦೦-೯೦ ವ). **ಮಾರಂಬು** : ೨. ಪ್ರತಿಯಾಗಿ ಬಿಟ್ಟ ಬಾಣ : ಈತ ಮತ್ತದಕ್ಕೆ ಮಾರಂಬು ತೂರುವನು (ಜಾಪುಹ. ೩೦). [ ಮಾಱು$_1$ + ಅಂಬು$_2$ ]

**ಮಾಱಣಿ** (ನಾ). ಪ್ರತಿಸೈನ್ಯ ; ವೈರಿದಳ : ನನೆವಿಲ್ಲ ಬಲ್ಲಹಂ ಮಾಱಣಿಯುಂ ನೆಟ್ಟನೆ ತೋಳ್ವಲದಿಂದೆಟ್ಟಟ್ಟಿದಂ (ಕಬ್ಬಿಕಾ. ೨೬೬). [ಮಾಱು$_2$ + ಅಣಿ$_3$]

**ಮಾಱಪ್ಪು** (ಕ್ರಿ). (ಅಲಂ) (ಹಿಂದಕ್ಕೆ ಬಂದು) ಪ್ರತಿಯಾಗಿ ಅಪ್ಪಳಿಸು, — ಹೊಡೆ : ಗಳಿ ಮಾಱಪ್ಪುತರಸನನಲು ಹೊಯ್ದನು ಭಾಳದಲಿ ಭೀಮು (ಕುವ್ಯಾಗ. ೭-೨೦). [ಮಾಱು$_2$ + ಅಪ್ಪು$_1$]

**ಮಾಱಾಟ**, ಮಾರಾಟ$_1$ (ನಾ). ಹಣ ಪಡೆದು ವಸ್ತುವನ್ನು ಕೊಡುವುದು ; ವಿಕ್ರಯ : "ಪರಿವೃತ್ತಿ ವಿನಿಮಯಂ ಮಾಱಾಟಮೆಂದೆನಿಕ್ಕುಂ" (ಮಂಗರಾ. ೦೦೨-೨) ; ಮನೆ ಮಾಱಾಟಂ ರಸಾದ್ಯೌಷಧಂ ಭ್ರಾಂತಿಯ ತೋರ್ಕೆವ್ವೆ (ಸೋಬೀಶ. ೨೩) ; ಘೋಟಕರಥ ಹಸ್ತಿ ಪದಚರಾದಿಗಳ ಮಾಱಾಟದಂಗಡಿಗಳೊಪ್ಪಿದುವು (ಜೀಚಹ. ೩-೩೦). **ಮಾರಾಟ$_1$** : ಕಪ್ಪುರ . . . ಅದರ ಹಲಗೆಗಳನ್ನು ಮಾಡಿ ಮಾರಾಟಕ್ಕೆ ಕಳುಹುವರು (ಮುಂಬಯಿ. ೯-೭೦) ; ರಣ ಮರಣದ ಸಂತೆ ಮಾರಾಟಕೆ ಏರಾಟಕೆ ಹೊರಚೆಲ್ಲಿದೆ ಇಲ್ಲಿ (ಸೂರ್ಯಶಾ. ೪-೩).

[ಮಾಱು$_1$ + ಆಟ. / ತಮಿ. ಮಾಱಾಟ್ಟಮ್ ; ತುಳು. ಮಾರಾಟ]

**ಮಾಱಾಡು**, ಮಾರಾಡು (ಕ್ರಿ). ೧. ಹಣಕ್ಕೆ ಬದಲಾಗಿ ವಸ್ತುವನ್ನು ಕೊಡು ; ವಿಕ್ರಯಿಸು : ಮಾರು : ಪೆತ್ತ ಕೊಡುಗೂಸು ಪಣಕೆ ಮಾಱಾಡಿ (ರಾಜಶೇಕ್ಕ. ೭೯-೩). ೨. ಒಂದು ವಸ್ತುವನ್ನು ಕೊಟ್ಟು ಇನ್ನೊಂದು ವಸ್ತುವನ್ನು ಪಡೆ ; ಬದಲಾಯಿಸಿಕೊಳ್ಳು; ವಿನಿಮಯ ಮಾಡಿಕೊಳ್ಳು : ಪುಮಂಗೊಳಿಸಿದ ಕೆಂಪಂ ನೀರ್ವೊರ್ಕುಳಿಯೊಳ್ ಮಾಱಾಡಿಕೊಂಡ ತೆಱದಿಂ ತೋರ್ಕುಂ (ಕಾವ್ಯಾವ. ೬೦೩) ; ಲಲನಾಸಂತತಿ ಪಲ್ಲವಾಧರದ ಕೆಂಪಂ ಕಣ್ಮಲರ್ಗಿತ್ತು ಕಣ್ಮಲರ್ವೆಳ್ಪಂ ನಿಜಪಲ್ಲವಾಧರಕೆ

ಕೊಟ್ಟಂದಿಂಗ ಮಾಱಾಡಿ [ಪಾಠಾಂ. ಜೋತಿಡ್ಡಿ]ತೀ ಸಲಿಲಕ್ರೀಡೆಯೊಳ್ (೫ಗಪ. ೧೪-೧೧೨). **ಮಾರಾಡು :** ೧. ಈ ಕೋಟೆಯ ಹದದ ಬೇಹನ್ನು . . . ನಂಜರಾಜನ ಗೂಢಚಾರರಿಗೆ ಅರುವತ್ತೆಂಟು ವರಹಗಳಿಗೆ ಮಾರಾಡಿ (ಕಟ್ಟಿಆ. ೫೦-೧೯). ೨. ಎದುರಾಡು ; ಪ್ರತಿಯಾಗಿ ಮಾತನ್ನಾಡು : ಮಾಡದಿರ್ ವ್ಯಸನ ಮಡದೀಯೆನಲು ಮಾರ್ರಾಡಿದಳು ಬಲುದುಗುಡದಿ (ಕುವಲಾ. ೫೨). [ಮಾಱು$_1$ + ಆಡು$_1$]

**ಮಾಱಾಣೆ** (ನಾ). ಆಣೆಗೆ ಪ್ರತಿಯಾಗಿ ಮಾಡುವ ಆಣೆ : ನಿರ್ಣಯ ಮಾಡದೆ ಮಾಱಾಣೆಯಿಡೆ . . . ಆಣೆಗೆ ನಿಲ್ಲುವದಲ್ಲದೆ ಮಾಱಾಣೆಯನಿಡಲಾಗದು (ಹೇಶಾ. ೧೬-೨೬). [ಮಾಱು$_2$ + ಆಣೆ$_3$]

**ಮಾಱಾನ್, ಮಾರಾನ್** (ಕ್ರಿ). ಎದುರಿಸು ; ಪ್ರತಿಭಟಿಸು : ಕವನದೊಳಿದಿರಂ ಮಿಾಱಿ ಮಾಱಾಂತು ನಿಂದಾಂತರಿಭೂಪರ್ ಭಸ್ಮಮಾದರ್ (ಕಾವ್ಯಸಾ. ೨೦೫ ಕೂದ್ರಳ); ಎನಗಿಂ ಮಾಱಾಂಪರಾರ್ ತೋಱಿರೇ (ಪಂಪಭಾ. ೧೩-೮೪) ; ತಾಂ ಗಡೆನಗಂ ಮಾಱಾಂಪ ಗಂಡಂ ಗಡ (ಶುರಾಪು. ೪-೬೨); ಬಳ್ಕದಳ್ಕದೆ ಮಾಱಾಂತಿದಿರ್ಚಿ ಸಾವ ನಿನ್ನೀ ನೊಸಲಕ್ಕರದೋದಿಂಗೇನೆಂಬೆನೊ ! (ರಾಮಾಶ್ವ. ೯೦-೧೩). **ಮಾರಾನ್ :** ಮಾರಾಂತಹಿತರ ಭೀಮಂ ಪಲರಂ ತವೆ ಕೊಂದು (ವ್ಯಆಂ. ೧೯೨೯, ೬೩-೬ ; 1216) ; ಮರೆಹೊಕ್ಕರೆ ಕಾವ ಮಾರಾಂತರೆ ವೈರಿ (೩ಆ. V, ೪೦-೦ವಯ ೪೦೦; 1587); ಮಾರಾಂತ ಸುಭಟರ ಮುಂಡಮಂ ತೋರಿಸುತೆ . . . ನಡದನು ಮುಂದ ಕುರವಣಿಸಿ (ಅಂದಿಕಾ. ೨೨-೧೧).

[ಮಾಱು$_1$ + ಆನ್$_1$]

**ಮಾಱಾನೆ** (ನಾ). ಪ್ರತಿಯಾಗಿ ಬಂದ ಆನೆ : ಜಾಱಿದೆ ತನ್ನಾನೆಯಿನಾ ಮಾಱಾನೆಯು ಕುಂಬತಳಕೆ ಪಾಯ್ದು (ಕಬ್ಬಿಗ. ೨೯೩) ; ಮುಗಿಲಂ ಮಾಱಾನೆ ಗೆತ್ತಂ (ಕಮುದ. ೨೩೮ ಕ್ರಯೋ). [ಮಾಱು$_2$ + ಆನೆ$_1$]

**ಮಾಱಾಳ್, ಮಾರಾಳ್** (ನಾ). ಪ್ರತಿಭಟಿಸಿ ನಿಂತವನು ; ಎದುರಾಳಿ; ಶತ್ರು : ಮಾಱಾಳೊಳಂಕವಂ ಕಾದಿ ಗಳಿಸಿದ ಧನದಿ ಜಂಗಮಕ್ಕೆ . . . ಬೇಡಿದುದನಿತ್ತು (ಅಶಿವಂ. ೩೫-೯). **ಮಾರಾಳ್ :** ಮಾರಾಳ್ಗಳಂ ತೀಕ್ಷ್ಣತರ ಬಾಣಂಗಳಿಂದೆ ಸಂಹರಿಸುತಿರಲು (ಕೇಶಂಶ. ೧೧-೨೦).

[ಮಾಱು$_1$ + ಆಳ್$_3$]

**ಮಾಱಾಳಿ, ಮಾರಾಳಿ** (ನಾ). ೧. ಮಾರಾಟ ಮಾಡುವವನು ; ವ್ಯಾಪಾರಿ : ಮಾಱಾಳಿಯುಮೋದಾಳಿಯುಮೇಱಾಳಿಯುಮಪ್ಪನಾಗಿ (ಕಾವ್ಯಾವ. ೩೫೩) ; ಆಳಿ ಪ್ರತ್ಯಯಕ್ಕೆ—ಜೂದಾಳಿ, ಮಾಱಾಳಿ, ಏಱಾಳಿ (ಕಮುದ. ೨೦೩ ಕ್ರಯೋ); ಮಾಱಾಳಿಯ ಸಂತೆ ತಿಂತಿಣಿಸಿತು (ಪಕಪ. ೫-೪೬). **ಮಾರಾಳಿ :** ೨. ಎದುರಾಗುವವನು ; ಎದುರಾಳಿ : ಮಹೀಶೂರರತ್ನ ಸಿಂಹಾಸನದ ಸಮರಾಂಗಣಧರ್ಮಕ್ಕೆ ಇಂತಹ ವೀರವಿಶ್ವಾಸವನ್ನೊಪ್ಪಿಸಿ, ತವಕದ ಪ್ರತ್ಯಾಶೆಯಿಂದ ಕುದಿಯುತ್ತಿರುವ ಕಯ್ಗುಗೊಳ್ಳದ ಮಾರಾಳಿ (ಕಟ್ಟಿಆ. ೬೩-೧೬). [ಮಾಱು$_1$ + — ಆಳಿ$_3$]

**ಮಾಱಿಗೆ** (ನಾ). ೧. ಮಾರಾಟದ ವಸ್ತು ; ವ್ಯಾಪಾರದ ಸರಕು : ಮೋಱಿಗೆ, ಪೊಲಿಗೆ (ಶಬ್ದಾಮ. ೫೬೫ ಕ್ರಯೋ). ೨. ಬೆಲೆ ಬಾಳುವ ವಸ್ತು : ಅತಿಕೃಪಣ ಶಠಗ ಪರವಿಭವಕ್ಕಸೂಯನುಂ ವ್ರತ ಹಿರಿಯರಂ ಹಳಿವ ಮಾಱಿಗೆಯನಲ್ಲೆಂಬ ಸುತನಾದಿಮಿತ್ರಕಳತ್ರಮಂ ಬಿಟ್ಟು ತನ್ನುದರಮಂ ಪೋಷಿಸುವನು (ಅಶಿವಂ. ೩೯-೧೬). [<ಮಾಱು$_2$]

**ಮಾಱಿಟ್ಟ?** (?). (?) : ಗತಿಚೇಷ್ಟಾವಿರಹಂ ಶುಭಾಂಗದೆ ಘನಮ್ಮಾಱಿಟ್ಟ ಮಾನ್ವಿಟ್ಟುವಲ್ ಯತಿಯುಂ ಪೇಟ್ದಿ ವಿಧಾನದಿನ್ದು ತೋಱಿದೇ ಕಟ್ಟಿಪ್ಪನಾ ಶೈಲದುಳ್ (ಎಕ. II, ೬೬-೦; ಸು. 700). [ ? ]

**ಮಾಱಿತು** (ನಾ). ಮಾರಿದುದು ; ವಿಕ್ರಯಿಸಿ ಕೊಟ್ಟುದು : ಮಾಱಿತಕ್ಕೆ ಹೋಗೆ ವೀಸಮಂ ಕೊಟ್ಟರು (ಎಇ. V, ೧೯-೬೬ ; 1161) ; ಒಲೆಯ ಹೋಱಿ ಮಾಱಿತಕ್ಕೆ ಒಂದು ಕಟ್ಟೊಲೆ (ಮುಂಬರಾ. X, ೨೨೬-೦ ; 1205). [< ಮಾಱು$_2$]

**ಮಾಱಿಲಿ** (ನಾ). ಒಂದು ವಂಶದ ಹೆಸರು (?) : ಮುಣ್ಣನ್ ಮಗ ನೀಲಗಣ್ಣನ್ ಮಾಱಿಲಿತಟ್ಟಾರರ (ವ್ಯಎಂ. ೦೯೩೨, ೧೯೫; ೨ವಯ ೫೫). [ ? ]

**ಮಾಱು$_1$, ಮಾರು$_1$** (ಕ್ರಿ). ೧. ಯಾವುದಾದರೊಂದು ವಸ್ತುವನ್ನು ಕೊಟ್ಟು ಹಣವನ್ನು ಪಡೆದುಕೊಳ್ಳು; ವಿಕ್ರಯಿಸು : "ಮಾಱು— ವಿಕ್ರಯೇ"(ಕಮುಧಾ); ನೆಲ್ಲಂ ಪುರಿದು ಮಾಱಿದೆ ಕಾಣವಂತಿರಿಸಂಗಡಿಯೊಳ್ (ಕಬರಾ. ೨-೦೩೬) ; ಇದು ಮನೆಯಾಣ್ಮನಂ ಮಾಱುವಂದಮಲ್ಲದೆ ಪೂಮಾಱುವಂದಮಲ್ತು (ಪಂಪಭಾ. ೪-೯೦) ; ಪೂರ್ವದ ಭರಣಿಗರ ಸನ್ತತಿಯಲ್ಲದೆ ಪೆಱರ್ಗೆ ಕೆಯ್ಮನೆಯುಂ ಮಾಱಲಾಗದು (ಸೌಇಇ. XI-i, ೬೪-೩೪; 1028) ; ಉರಿಯ ಪೇಟೆಗಳಲಿ ಪತಂಗದ ಸರಕು ಮಾಱದೆ ಮರಳುವುದೆ (ಕುಮ್ಯಾಭಾ. ೧೧-೨೮); ಕಲ್ಲುಸಕ್ಕರೆ ಕೊಳ್ಳಿರೋ . . . ಸಂತೆಯೊಳಗೆ ಇಟ್ಟು ಮಾಱುವದಲ್ಲ (ಪುರಂದ. ೦-೧೨೬-೩). ೨. ಒಂದು ವಸ್ತುವನ್ನು ಕೊಟ್ಟು ಮತ್ತೊಂದು ವಸ್ತುವನ್ನು ಪಡೆ; ಅದಲುಬದಲು ಮಾಡಿಕೊಳ್ಳು; ವಿನಿಮಯ ಮಾಡಿಕೊಳ್ಳು : ಗತಜೀವಿತನಂತವಿವೇಕದಿಂ ತಪೋವಲ್ಲಿಯೊಳಪ್ಪನಲ್ಪಫಲಮೆಲ್ಲಮನಲ್ಪಫಲಕ್ಕೆ ಮಾಱಿ ಬಂದು (ಆದಿಪು. ೨-೪೨) ; ನೂಱುಪಶುಗೆಡಹಿಗೆ ಸುರೇಂದ್ರನು ಮಾಱುವನು ಗಢ್ಗಗೆಯ (ಕುಮ್ಯಾಆ. ೬-೮೪). ೩. ಮಾರ್ಪಡಿಸು; ಬದಲಾಯಿಸು: ಪಗಲನಿರುಳ್ಗೆ ಮಾಱಿ ನಯನಾಂಚಲಚಂದ್ರಿಕೆ . . . ಬಂದಳ್ (ಚಂದ್ರಪ್ರ. ೧೧-೦೨). ೪. ಒಪ್ಪಿಸು ; ಅರ್ಪಿಸು; ವಶಪಡಿಸು : ಹರಂಗೆ ಶಶಿಭೂಷಣಂಗೀಶ್ವರಂಗೆಯ್ದೆ ನಾಲಗೆಯಂ ಮಾಱಿದೆನೊಲ್ದು (ಪಂಪಾಶ.೩೦); ಮನವಂ ಶಿವನಂಘ್ರಿಗೆ ಮಾಱಿ (ಅದ್ಯಟ. ೦೨-೯೦) ; ಮನವನೀತಗೆ ಮಾಱಲಿತ್ತೆ ಇಂದ್ರಿಯವ್ವೈದನನುರಾಗ ಮಿಗೆ ಸೂಱೆಯಿತ್ತೆ (ಭರತ. ೯-೯೯). ೫. ಆದರಕ್ಕೆ ಒಳಗಾಗು; ಗೌರವ ಸಿಗು : ಇಲ್ಲಿ ನಮ್ಮ ಶಾಸ್ತ್ರ ಮಾಱುವುದಿಲ್ಲ ಸುಮ್ಮನಿದ್ದರೆ ದಾರು ಕೇಳುವರಿಲ್ಲ (ಪುರಂದ. ೨-೫೬ ಪಲ್ಲವಿ). ೬. ಬದಲಾಗು; ಮಾರ್ಪಾಟು ಹೊಂದು. ೭. ಎದುರಾಗು; ಪ್ರತಿಭಟಿಸು; ವಿರೋಧಿಸು : ಕಾಳಗದಲ್ಲಿ ಪೌಜನಿಕ್ಕಿದಡೆ ಮಾಱಿದಡೆ ಅರಸೆಂಬರಲ್ಲದೆ ಬಂಟರೆಂಬುದಿಲ್ಲ (ಪೋೞಪಾ. ೨-೫). ೮. ಹೊಡೆ; ಬಡಿ : "ಮೋದೆಂದುಂ, ಮಾಱೆಂದುಂ, ಎಱಗಿದನೆಂದುಂ, ಎಱಗೆಂದುಂ ಪೊಯ್ವುದು" (ಕಕಸಾ. ೬೨-೬೦೩). 'ಮಾಱಿಂಬು' ಪಠಾ. **ಮಾರು$_1$ :** ೧. ಅದ ಮಾರಿದರ ಶಿರಿಪುರುಷನ ಮಗ ದೇವಾತಿ (ಎಕ. VIII, ಸೊರಬ. ೮೫-೬ ; 876) ; ಆ ಮೊಸರನ್ನು . . . ಅರಕ್ಕೆ ಮೂರಾಗಿ ಮಾರುತ್ತಿದ್ದಳು (ಹೇಶಾಂ. IX, ೨೯). ೯. ವಿಕ್ರಯವಾಗು : ಅವು . . . ಬಹಳ ತುಟ್ಟಿ, ಏಳೆಂಟು ರೂಪಾಯಿಗೆ ಒಂದು ಸೇರು ಮಾರುತ್ತದೆ (ಮುಂಬಯಿ. ೪-೪೦).

**ಮಾಱಿಕೊಳ್, ಮಾರಿಕೊಳ್ಳು** = ವಿಕ್ರಯಿಸು; ಬೆಲೆಗೆ ಕೊಡು : ಸಾಲಬಟ್ಟರೆ ಮಾಱಿಕೊಂಬರಯ್ಯಾ (ಬಸವ. ೫೩೯); ಅವನು ತನ್ನ ವರ್ಗದೊಳಗೆ ಓದುವ ಪುಸ್ತಕಗಳನ್ನು ಗಡಿಯಾಲವನ್ನೂ ಮಾರಿಕೊಂಡನು (ಮುಂಬಯಿ. ೪-೧೯೨). [ದೇ.೫ ತವಿ. ಮಾಱು, ಮಾಱು$_2$; ಮಲ. ತೆಲು. ಮಾಱು ; ತುಳು. ಮಾರು ; ಕೊಡ. ಕೋತ. ಮಾರ್; ತೊದ. ಮೋಱ್ ]

**ಮಾಱು$_2$, ಮಾರು$_2$** (ನಾ). ೧. ಮಾರುವಿಕೆ; ಮಾರಾಟ; ವಿಕ್ರಯ: ತಾಂ ಪರಮೇಶ್ವರನಪ್ಪುದಱಿಂ ಮಾಱಿನ ಲೆಕ್ಕಮಂ ಬಗೆಯದೆ (ಬಂಹಂ. ೮೪-೨೯ವ); ಈ ಧರ್ಮಕೆ ಮಾಱುವ ಮಾಱು ಸಲ್ಲದು ಮುತ್ತುವ ಬತ್ತ ಸಲ್ಲದು (ಸೌಇಇ. IX-ii, ೪೬೪-೩೨; 1472). ೨. ವಿಕ್ರಯಕ್ಕೆ ಇಟ್ಟ ವಸ್ತು : ಮಾರಾಟದ ವಸ್ತು : ಮಲ್ಲಿಸೆಟ್ಟಿ ಮಾಱಂ ಕೊಂಡು ಅರಸರ

ಸಂನ್ನಿಧಿಯುಲು. . . ಧಾರಾಪೂರ್ವ್ವಕಂ ಮಾಡಿ ಬಿಟ್ಟರು (ಎಕ. VII. ಶಿಪಶಿ. ೬೪-೯೬; 1112?); ಸಲುವುದೆ ಕೇಳಿಕದ ಮಾಱಿಳಿಯೊಳು (ಶಬರ್ವ. ೨-೩೨). ೩. ಪ್ರತಿ ; ಎದುರು : 'ಮಾಱುತ್ತರ' ಪರಾ. ೪. ಇನ್ನೊಂದು ; ಮತ್ತೊಂದು : 'ಮಾಱಂಕ' ಪರಾ. ೫. ವಿರುದ್ಧ. ೬. ಗುರಿ; ಲಕ್ಷ್ಯ : 'ಮಾಱಿಸು' ಪರಾ. ೭. ಪರವಶ ; ಅಧೀನ : 'ಮಾಱುವೋಗು' ಪರಾ. ೮. ಮೋಹ ; ಮರುಳು : 'ಮಾಱುವೋಗು' ಪರಾ. ೯. ಜಗಳ : 'ಮಾಱುಗೊಳ್' ಪರಾ. **ಮಾರು$_{2}$** : ೪. 'ಮಾರುವೇಷ' ಪರಾ.

**ಮಾಱಾಗು**=ವಶಕ್ಕೆ ಸಿಕ್ಕು ; ಮಾರುಹೋಗು ; ಮರುಳಾಗು : ಈಶಂ ಭೀತಿಯಿಂದಂ ಬೆದಱಿದನೆನೆ ಮಾಱಾದರಾ ಭೂಮಿಪಾಳರು (ಎಕ. VII. ಶಿಕಾ. ೦೭೦-೦೦; 1065); ಸುಕುಮಾರಂ . . . ನುಡಿಯುಲಾ ಸವಿಗೇಳ್ದ ಕಿವಿಗೆ ಮಾಱಾಗುತ್ತೆ (ಶಹರ. ರೇ. ೩೩-೦೪).

[<ಮಾಱು$_{1}$. / ತಮಿ. ಮಾಱು, ಮಾಱ್ಱು ; ಮಲ. ಮಾಱು, ಮಾಱ್ಱು ; ತೆಲು. ಮಾಱ್ಱುಮಾ, ಮಾಱು]

**ಮಾಱುಂಗುಡು** 'ಮಾಱುಗೊಡು' ನೋ.

**ಮಾಱುಂಗೊಳ್** 'ಮಾರ್ಕೊಳ್' ನೋ.

**ಮಾಱುಕೊಳ್** 'ಮಾರ್ಕೊಳ್' ನೋ.

**ಮಾಱುಗವುಚು** (ಕ್ರಿ). ಬೋರಲು ಹಾಕು ; ದಬ್ಬು ಹಾಕು : ಹೂರಣವ ಮಾಡಿಯಾವುಂಡೆಯೆರಡಱ ನಡುವೆ ಪೂರಯಿಸಿ ಹಱಿಯದಂತೆ ಗೇಣಗಲಂ ಮಾಡಿ ಮಾಱುಗವುಚಿದ ಹಂಚನೊಲೆಗೆತ್ತಿ ತುಪ್ಪಮಂ ತೊಡೆದು ಹೂರಿಗೆ ಯುಡುವುದು (ಸೂಶಾ. ೦-೨೬).

[ಮಾಱು$_{2}$ + ಕವುಚು$_{2}$ (<ಕವಿಚು$_{2}$)]

**ಮಾಱುಗುಡು** 'ಮಾಱುಗೊಡು' ನೋ.

**ಮಾಱುಗೊಡು**, ಮಾರುಗೊಡು, ಮಾಱುಂಗುಡು, ಮಾಱುಗುಡು (ಕ್ರಿ). ೧. ಒಂದು ವಸ್ತುವಿಗೆ ಬದಲಾಗಿ ಮತ್ತೊಂದನ್ನು ಕೊಡು; ವಿನಿಮಯ ಮಾಡಿಕೊಳ್ಳು : ಸಕಳಜಗತೀಶ್ವರತ್ವಮನಕಾಮಿಕಂ ಮಾಱಿ ತಪಮನಲ್ಪಸುಖತ್ಯುತ್ಸುಕನಳಿಪಿಂ ಕುಡುವುದು ಮಾಣಿಕಮಂ ತೌಡಿಂಗೆ ಮಾಱುಗೊಡುವಂತಕ್ಕುಂ [ಪಾಠಾಂ. ಮಾಱುವಂತಾಗಿಕ್ಕುಂ] (ಸಪುಶ. ೪-೨೩). ೨. ಅರ್ಪಿಸು ; ವಶವಾಗಿಸು ; ಅಧೀನಪಡಿಸು : ಹಗೆಗೆ ಮಾಱುಗೊಟ್ಟು ನಿನ್ನವರನೊಪ್ಪಿಸುವರೆ (ಬಸವ. ೪೪); ಕನ್ನೆವೇಟಕ್ಕೆ ತನ್ನಂ ಮಾಱುಗೊಟ್ಟ ಪಾಱುಗೆಯ್ದದ ಜವ್ವನಿಗಿನಿಯನಿತ್ತ ನಖರದಕ್ಷತಂಗಳನೆ ತೊಡವು ಮಾಡಿ (ಚಂಪ್ರಶ. ೬-೩೫ ವ); ನಿಮಗೆನ್ನಂ ಮಾಱುಗೊಟ್ಟೆಂ ಪುರಹರ (ರಕ್ಷಶ. ೭೬) ; ಒಕ್ಕಲಂ ಮಾಱುಗೊಂಡಂಗೆ ನಂಬಿಯನಳಿಪಿ ತೊಳ್ತುಗೊಂಡವಂಗೆ ಅರಿದಾವುದು (ಕಪ್ಮರಾ. ೦೩-೯). **ಮಾರುಗೊಡು** : ೧. ಕೆಡುವ ಒಡಲನ್ನೂ ಒಡವೆಯನ್ನೂ ಕೆಡದ ಒಡವೆಗೆ ಎಂದೆಂದೂ ಮಾರುಗೊಡಬೇಕು (ಶಾಮುತ. ೪೦). ೨. ತನ್ನ ಮನಸನ್ನು . . . ತನ್ನ ಸ್ತ್ರೀಗೆ ಎಷ್ಟೇ ಮಾರುಗೊಟ್ಟಿದ್ದರೂ, ತಾಯ ಪ್ರೇಮದ ಪರಿಣಾಮವು . . . ತೋರಿಸದೆ ಹೋಗುವುದಿಲ್ಲ (ಶೀಗಟ್ಟ. ೦೬). ೩. ಮಾರುತ್ತರವನ್ನು ಕೊಡು ; ಬದಲು ಹೇಳು : ನಾನು ಮಾರುಗೊಡಲು ಅವಕಾಶ ಕೊಡಲಿಲ್ಲ (ಕಾಂಯಾ. ೦೫). **ಮಾಱುಂಗುಡು** : ೧. ಬಿರಿಮುಗುಳ್ವಾಸಿಗಮಂ ಮಾಱುಂಗುಡುವೆಳವೆಗ್ಗಳ ಮೂವಣ್ಣದ ಕಣ್ಗಳ ಕಾಂತಿಯೊಳು ಮಂಗಲಕೀರ್ತಿಯುತಂ ನಡೆದಂ (ಜಯುಶಾ. ೦೪-೨೦). P ಇದು ಪ್ರಾಸಕ್ಕಾಗಿ ಮಾಡಿಕೊಂಡಿರುವ ರೂಪ. **ಮಾಱುಗುಡು**: ೧. ಒಪ್ಪುವ ಮಾಣಿಕಮಂ ತೌಡಿಂಗವಯವದಿಂ ಮಾಱುಗುಡುವ ಮರುಳಂ ಪೋಲ್ಗುಂ (ಶಾಂತಿಪು. ೦೦-೪೦) ; ಕೆಡುವೊಡಲೊಡವೆಯನೆಂದುಂ ಕೆಡದೊಡವೆಗೆ ಮಾಱುಗುಡು ವುದಿಱಿಮಬೆಡಂಗಾ (ಗದಾಯು. ೨-೪). ೨. ಮದನಂಗೆ ಮಾಱುಗುಡುವರೇ (ಬಸವ. ೪೪) ; ಊರೊಳ್ ಮಾರಿಯೆಂದು ಮನೆವೋರಿಯಂ ಮಾಱುಗುಡುವರೇ (ಲಾಪೂಶ. ೩೫-೨೯). ೪. ಮಾರಾಟ ಮಾಡು ; ವಿಕ್ರಯಿಸು : ಹೊನ್ನುಳ್ಳ ಧನಿಕರಾರಾದೊಡಂ ಕೊಂಬವರ್ ಬನ್ನಿಯೆನ್ನಂ ಮಾಱುಗುಡುವೆಂ (ಹಶಾ. ೦೦-೨೦). [ಮಾಱು$_{2}$ + ಕೊಡು$_{1}$]

**ಮಾಱುಗೊಳ್** 'ಮಾರ್ಕೊಳ್' ನೋ.

**ಮಾಱುಗೋಲು** 'ಮಾರ್ಕೋಲ್' ನೋ.

**ಮಾಱುಡೆ** (ನಾ). ಬೇರೆಯ ಸೀರೆ.–ಉಡುಗೆ : ಮಾಱುಡೆಯಿಲ್ಲ ಮಜ್ಜನ ಮಿನಿಸಿಲ್ಲ ಕರ್ಪೂರವೀಳೆಯಗೊಳಲಿಲ್ಲ (ವೀಶುಸಂ. ೩೪-೩೯). 'ಮಾಱುಡೆಗಾಣ್' ಪರಾ. [ಮಾಱು$_{2}$ + ಉಡೆ$_{2}$]

**ಮಾಱುಡೆಗಾಣ್** (ಕ್ರಿ). ಬೇರೆಯ ವಸ್ತ್ರವು ಸಿಗು ; ಮತ್ತೊಂದು ಉಡುಗೆಯು ದೊರಕು : ಪಚ್ಚೆಯ ಪಸುವರ್ಣಿಯಂ ಕುಡಲಿಲ್ಲದಂತು ಬಾಯ್ತಂಬುಲಮೆಂಬುದಂ ಪಡೆಯದಂತುಟೆ ಮಾಱುಡೆಗಾಣದಂತಿರಟ್ಟುಂ ಬಱಿಗೊಂಡು ತೇದವುದು ಬೇಟಮಿದೆನ್ನಯ ಪಾಪಮಲ್ಲದೇ (ರೇಶಾವ. ೦-೧೦೬). [ಮಾಱುಡೆ + ಕಾಣ್]

**ಮಾಱುತ್ತರ**, ಮಾರುತ್ತರ (ನಾ). ೧. ಎದುರು ಮಾತು ; ಪ್ರತ್ಯುತ್ತರ ; ಮರುಮಾತು : ತೊತ್ತಿಂಗೆ ಲಕ್ಷಣವೇಕಯ್ಯಾ . . . ಮಾಱುತ್ತರವೇಕೆ (ಬಸವ. ೪೬೬) ; ತನ್ನಯ ನುಡಿಗೆ ಮಾಱುತ್ತರವ ಕೊಡು (ಕುವ್ಯಾಭಾ. ಒಂಭ. ೨೬-೨೦) ; ವಿಷಯಾತುರರು ನೆಱೆ ಬೂತುಗೆಡೆದರೆ ಗರುವರಾದವರಾತು ಮಾಱುತ್ತರವ ಕೊಡುವರೆ (ತೊರವೆ. ೩-೪-೨೨). **ಮಾರುತ್ತರ** : ೧. ಇತ್ತ ನೋಡಿದರೆ ಗಂಡನ ಮಾತಿಗೆ ಮಾರುತ್ತರವನ್ನು ಕೊಡಲಾಗದು (ಕನ್ನಶಾ. ೦೦೨) ; ವಿಮಲಾ ಎಂದು ಕರೆದರೆ ಮೌನವೇ ಮಾರುತ್ತರವಾಯಿತು (ಕಂಕುಬು. ೯೪). ೨. ಪ್ರತಿಯಾಗಿ ಬರೆಯುವ ಕಾಗದ ; ಜವಾಬು : ನೀವು ಅವರಿಗೊಂದು ಮಾರುತ್ತರವನ್ನು ಬರೆಯಲೇಬೇಕು (ಒಂಟಿದ. ೫೯). [ಮಾಱು$_{2}$ + ಉತ್ತರ]

**ಮಾಱುತ್ತರಂಗುಡು** 'ಮಾಱುತ್ತರಗೊಡು' ನೋ.

**ಮಾಱುತ್ತರಂಗೊಡು**, ಮಾರುತ್ತರಕೊಡು, ಮಾಱುತ್ತರಂಗುಡು, ಮಾಱುತ್ತರಗೊಡು (ಕ್ರಿ). ಎದುರುಮಾತಾಡು ; ಪ್ರತ್ಯುತ್ತರ ಕೊಡು : ಎನ್ನ ಸೌಭಾಗ್ಯಕ್ಕೆ ಹಾನಿಯೆಲ್ಲಿಹುದೆಂದು ಮಾಱುತ್ತರಂಗೊಟ್ಟು ಕೆಲಬಲವ ನೋಡುತಿರಲು (ಶಬಶ. ೪-೨೦) ; ರಘುಕುಲಲಲಾಮಂ ಕೇಳ್ದೊಡಾ ಕುಶಂ ನಸುನಗುತೆ ಮಾಱುತ್ತರಂಗೊಟ್ಟನು (ಕೈಬಶಾ. ೨೦-೨೪). **ಮಾರುತ್ತರಕೊಡು** : ರೇಣು . . . ಆಜ್ಞೆಗೈವ ಧ್ವನಿಯಲ್ಲಿ ಮಾರುತ್ತರ ಕೊಟ್ಟಳು (ಹೇಮಂತ. ೨೪೪). **ಮಾಱುತ್ತರಂಗುಡು** : ಆ ಮುನಿನಾಥನೆಂದು ಮಾಱುತ್ತರಂಗುಡಲೆಂದು ತಱಿಸಂದನು (ಹಶಾ. ೫-೭೦). **ಮಾಱುತ್ತರಗೊಡು** : ಅವಳಿಗೆ ಮಾಱುತ್ತರಗೊಟ್ಟು ನಗುತ ನೂಱಿಲಿಗಣ್ಣ ರುಕ್ಮಿಣಿಗೊಡರ್ಚಿದ ಹೊಗರೇಱುವ ಗರ್ಭೋತ್ಸವವ (ವೀಶ್ವತ. ೪-೬೬).

[ಮಾಱುತ್ತರ + ಕೊಡು$_{1}$]

**ಮಾಱುತ್ತರಗೊಡು** 'ಮಾಱುತ್ತರಂಗೊಡು' ನೋ.

**ಮಾಱುದನಿ** 'ಮಾರ್ದನಿ' ನೋ.

**ಮಾಱುದಾಂಟು** (ನಾ). ಮರು ನೆಗೆತ ; ಪ್ರತಿಯಾಗಿ ನೆಗೆಯುವ ನೆಗೆತ : ಮಾಱುದಾಂಟು ಬಿಡುಗಣ್ ಬಿಡುವಾಯ್ (ಕಪುರ. ೦೭೦).

[ಮಾಱು$_{2}$ + ದಾಂಟು$_{2}$]

**ಮಾಱುದ್ದು** (ಕ್ರಿ). ಒಂದಕ್ಕೊಂದು ತಿಕ್ಕು : ನೆಲನಂ ಮಾಱುದ್ದಿ ಕಯ್ಯಿಂ ಧರಾತಳದೊಳ್ ಸಾಸಿದ ತನ್ನ ತೀವ್ರಗದೆಯಂ ಕಂಡೆತ್ತಿಕೊಂಡು (ಗದಾಯು. ೬-೩೬) ; ಕೋಪಾಟೋಪದಿಂ ಕರತಳವ ಮಾಱುದ್ದಿ ಕೋದಂಡಮಂ ಸೆಳೆದು (ಹಶಾ. ೬-೨೯) ; ನೆಲಕ್ಕೆ ಮಾಱುದ್ದಿದನು ಕರವನು (ಕುವ್ಯಾಗ. ೬-೧೦).

[ಮಾಱು$_{2}$ + ಉದ್ದು$_{1}$ (< ಉದ್ರ್ು$_{1}$)]

**ಮಾಱುನುಡಿ** 'ಮಾರ್ನುಡಿ$_2$' ನೋ.

**ಮಾಱುಬರು** (ಕ್ರಿ). ಎದುರಾಗು : ಎದುರಿಸಿ ನಿಲ್ಲು : ಮೂಱುಲೋಕದ ಗಂಡ ಫಲುಗುಣ ಬಂದು ಕೊಲುತಿರಲು ಮಾಱುಬರುವರದಾರು (ಸಂಶಕ. ೩೦.೩೬). [ಮಾಱು$_2$ + ಬರು$_1$ (< ವರ್)]

**ಮಾಱುಬಲ** 'ಮಾರ್ವಲ' ನೋ.

**ಮಾಱುವಲೆ** 'ಮಾರ್ವಲೆ' ನೋ.

**ಮಾಱುಮಾತು**, ಮಾರುಮಾತು (ನಾ). ಪ್ರತ್ಯುತ್ತರ ; ಮಾರ್ನುಡಿ : ಮಾಱುಮಾತಿಗೆ ಹಱಿವನೆಣಿಸುತ ವಿಮಳೆ ಬಳಿಕಿಂತೆಂದಳಲ್ಲಮನ (ಪ್ರಭುಲಿ. ೯-೬೧) : ಮಾಱುಮಾತೇನ್ನೈ ಮಹೀಸುರರೇಱಿಸಿದರೇಱುವುದು (ಕುಮಾ.ಭ. ೦೩-೬೨) ; ಮಾಱುಮಾತಿಲ್ಲೇಕೆ ಹೇಳ್ವೆ ತಮ್ಮ ತನಗೆ (ಕೊರವಂ. ೩-೦೦-೦೦). **ಮಾರುಮಾತು** : ವಿಚಾರಶೂನ್ಯತೆಯಿಂ ಮಾರುಮಾತಿನ್ನೇಕೆ (ಗಗಚಾ. ೩-೨೯). [ಮಾಱು$_2$ + ಮಾತು$_1$]

**ಮಾಱುರಿ** (ಕ್ರಿ). ಎದುರಿಸಿ ಜ್ವಾಲೆಯಾಗು : ಎನ್ನೀ ತೇಜಸ್ಸುರಿತಕ್ಕೆ ಸೆಣಸಿಸೊಳ್ ಮಾಱುರಿಗುಂ ಸ್ಫುರಿಸದು ತೇಜಮಾ ಘುಜಬಲಿಯಾ (ಅಂಕ. ೦೯-೯೨). [ಮಾಱು$_1$ + ಉರಿ$_1$]

**ಮಾಱುಲಿ** (ಕ್ರಿ). ಪ್ರತಿಧ್ವನಿಸು : ಮಾರ್ದನಿ ಕೊಡು : ಹಂಸ ಚಕ್ರವಾಕ ಬಳಾಕವಿಪಕ್ಷಿಗಣಂಗಳ್ . . . ನಾನಾಪ್ರಕಾರದಿಂದಂ ಮಾಱುಲಿವ ದನಿಗಳಿಂದಮತಿರಮಣೀಯಮಪ್ಪ ಕೊಳನಂ ಕಂಡು (ಶಬ್ದಾ.ರಾ. ೩೯-೨೨). [ಮಾಱು$_2$ + ಉಲಿ$_1$]

**ಮಾಱುವಡೆ** (ಕ್ರಿ). ಅಂಗಡಿಯ ಸರಕಿನ ಮಾರಾಟವಾಗು : ಮಾಱುವಡೆಯದ ಪರದನಂತೆ ಕಂದಿ . . . ಇಂತೆಂದಂ (ಧರ್ಮಾಮೃ. ೦-೧೬೮). [ಮಾಱು$_2$ + ಪಡೆ$_1$]

**ಮಾಱುವೋಗು**, ಮಾರುವೋಗು, ಮಾರುಹೋಗು (ಕ್ರಿ). ೧. ವಸ್ತುವು ಮಾರಾಟವಾಗು, ವಿಕ್ರಯಂಗೊಳ್ಳು : ಕೆಡುವ ಭಂಡದಂತೆ ಮಾಱುವೋಗದು (ಧರ್ಮಾಮೃ. ೯-೦೬೩) ; ಮಾಱುವೋಗನೊತ್ತೆವೋಗ ನಮ್ಮ ಕೂಡಲಸಂಗಮದೇವ (ಬಸವ. ೩೩೯). ೨. ವಶವಾಗು ; ಅಧೀನವಾಗು : ಮತಿಸಮ್ಯಗ್ದರ್ಶನಜ್ಞಾನಚಾರಿತ್ರಂಗಳ್ಗೆ ದಯಾವಲೋಕನೆಗೆ ಕಣ್ಗಳ್ ಮಾಱುವೋದಂತೆ (ಅರ್ಹನೀ. ೦-೬) ; ಸೂಱೆವೋಯಿತು ಚಿತ್ತ ಕಂಗಳು ಮಾಱುವೋದವು (ಕುಮಾ.ರಾ. ೨-೦೦) : ನಂಬಿದಳಂ ಮಱೆದು ಸವತಿಯೊಂದು ಪಿಸುಣ್ಣ ಎಱೆಯಂ ಮಾಱುವೋದಂ (ರಾಜಶೇ. ೨೨-೯). ೩. ಮೋಹಗೊಳ್ಳು ; ಮರುಳಾಗು : ಮದೀಯ ಚಿತ್ತಮಾ ಸುದತಿಗೆ ಮಾಱುವೋಯ್ತು (ದಶಕು. ೦೦-೩೦). ೪. ಸೆಳೆಯಲ್ಪಡು ; ಆಕರ್ಷಣೆಗೊಳಗಾಗು : ಚಿತ್ತಕ್ಕೆ ಮಂದಂತುಟೀ ಮಾಟ್ಸುಗು ದಲ್ ಕಾದಂಬರೀದೇವಿಯ ಗುಣಪಣದಿಂ ಮಾಱುವೋದೆನ್ನನೀಗಳ್ (ಕಾದಂಬ. ೦೨೩); ನಿನ್ನ ಶೀಲಕಾಂ ಮಾಱುವೋದೆಂ ಕಾದಲೊಲ್ಲೆಂ (ಕೈವಲ್ಯ. ೯-೩೦). ೫. ಕೈತಪ್ಪಿ ಹೋಗು ; ನೆಣುಚಿಕೊಳ್ಳು : ನಿನ್ನಯ ಬೈತಲೆಯ ಮಣಿ ಮಾಱುವೋದುವ ಮತ್ತೆ ಬಿಡಿಸಿದಲೆ (ಕುಮಾ.ಸ. ೦೫-೩೯): **ಮಾರುವೋಗು** : ೨. ಅಪರದು ತರ್ಕ ಹಾಗೂ ಬುದ್ಧಿಶಕ್ತಿಗೆ ಮಾರುವೋದ ಬಾಳು (ರಾಜಪ. ೮೦). ೩. ಎದೆ ಮಾರುವೋಗದೊಡೆ ಕಣ್ ಸೊಬಗನುಂಪರೇಂ (ಮುಂಕುಶ. ೯೩೬); ಕವಿಯ ಸೂಕ್ತಿಯೊಳು ಮನ ಮಾರುವೋಗದ ಮನುಜನು ಯೋಗಿಯೊ ಪಶುವೊ ಆಗಿರ್ಪನು (ಇಂತಾಪ. ೧೩೨-೯೬): ಸುಬ್ಬನ ಮಗಳು ನೆರೆಮನೆಯ ಹೈದ ಚಿಕ್ಕನಿಗೆ ಮಾರುವೋಗುತ್ತಾಳವಳು (ರೂಪಸಂ. ೯). **ಮಾರುಹೋಗು** : ೨. ಸೋಮು ಥಳುಕಿನ ಜೀವನಕ್ಕೆ ಮಾರುಹೋಗಿದ್ದ (ಅಪಾಂ. ೩೪). ೩. ಮನಸ್ಸು ಅವಳ ಹೊಳಪಿನ ಕಣ್ಣುಗಳಿಗೆ ಮಾರುಹೋಗಿತ್ತು (ಮರಳ. ೬೦); ನಾನ್ನು ಅವಳ ರೂಪವನ್ನು ನೋಡಿ ಒಲಿದುದಲ್ಲ. ಅವಳ ಗುಣಸಂಪತ್ತಿಗೆ ಮಾರುಹೋದೆ (ಜಾಹುತ್ರ. ೯೬). [ಮಾಱು$_2$ + ಪೋಗು$_1$ (<ಪೋ$_1$)]

**ಮಾಱಿಸು** (ಕ್ರಿ). ಗುರಿಯಿಟ್ಟು ಬಾಣ ಬಿಡು : ಮನ್ಮಥನಾಗಳೇಱಸದೆ ಮಾಱಿಚ್ಚಂ ಪುರಸ್ತ್ರೀಯರಂ (ಶಂರಾಪು. ೩-೯೦). [ಮಾಱು$_2$ + ಎಸು$_1$]

**ಮಾಱೊಡ್ಡು$_1$**, ಮಾರೊಡ್ಡು (ಕ್ರಿ). ಪ್ರತಿಸ್ಪರ್ಧಿಯಾಗಿ ನಿಲ್ಲು : ಎದುರಿಸು : ಬೇಱೆಬೇಱೆ ಮಾಱೊಡ್ಡಿ ಮಿಱಿ ನಿಂದ ಗೀರ್ವಾಣ ಮುಖ್ಯರಂ ತೋಱುತಿರ್ಪ ಸಮಯದೊಳ್ (ಗಂಶ. ೬-೬೬ ವ); ಮಾಱೊಡ್ಡಿದಮರಾದ್ರಿಯಂತೆ ರಾಶಿಗಳಾಗಿ ಪೇಱಿ ತಂದೊಡವೆಯಂ ವಿವಿಧರತ್ನಂಗಳಂ ತೋಱಿಸಿ (ಕೈವಲ್ಯ. ೩೩-೩೦); ಗಾಳಿಗೆ ಮಾಱೊಡ್ಡಿ ಪೋಪ ಪತಾಕೆಯ ಕೌಸುಂಭಾಂಬರದಂತಿರೆ (ರಾಜಶೇ. ೩೯-೦೨). **ಮಾರೊಡ್ಡು** : ಮರಿಪೆ ನಗೆಗೆಡೆಮಾಡ ಮಾರೊಡ್ಡಿ ಮುನಿಪು (ಕಾಂಚ. ೩೦-೭೬); ಕೆಳಕ್ಕೆ ಬೀಳದೆ ಅದರ ಸೆಳೆತಕ್ಕೆ ತನ್ನ ಗರ್ಭಪ್ರಾಪ್ತವಾದ ವಿಕರ್ಷಣಶಕ್ತಿಯನ್ನು ಮಾರೊಡ್ಡಿ ಮೇಲೆ ತೇಲುತ್ತಾ (ಕಾವ್ಯಕು. ೩). [ಮಾಱು$_2$ + ಒಡ್ಡು$_1$]

**ಮಾಱೊಡ್ಡು$_2$** (ನಾ). ಪ್ರತಿಬಲ ; ಶತ್ರುಸೈನ್ಯ : ತಂತಮ್ಮ ಪಿಡಿದ ಬಾಳ್ವೆಳಗಿಂ ಮಾಱೊಡ್ಡಂ ಕಂಡು (ಆದಿಪು. ೨೬೬); ಒಡ್ಡಿತೀ ಬಲ ರಿಪು ಭಟರು ಮಾಱೊಡ್ಡ ಮೊಱೆದರು (ಕುಮಾ.ಭ. ೦೦-೬). [ಮಾಱು$_2$ + ಒಡ್ಡು$_2$]

**ಮಾಱೊತ್ತು** (ಕ್ರಿ). ಪ್ರತಿಯಾಗಿ ತಳ್ಳು, - ನೂಕು : ನೆರೆದೆಂಟುಂ ದಿಗ್ಗಜಂಗಳ್ . . . ದಂತಾಗ್ರದೊಳುರಮನವಷ್ಟಂಭದಿಂದೊತ್ತೆ . . . ಮಾಱೊತ್ತಿ ದೈತ್ಯೇಶನಾ ಭೂಧರಧುರ್ಯೇಭಂಗಳಂ ತೊಟ್ಟನೆ ಕೆಡಪುವ ನಾಶ್ಚರ್ಯಮೀ ದೈತ್ಯ ವೀರ್ಯಂ (ಜಗಂ. ೦೩-೯). [ಮಾಱು$_2$ + ಒತ್ತು$_1$]

**ಮಾಱೊರಸು** (ಕ್ರಿ). (ಒಂದಕ್ಕೆ ಒಂದು ತಾಗಿ) ಉಜ್ಜು, — ತಿಕ್ಕು : ಭೂಭುಜರೆಲ್ಲರೆಬ್ಬರಾನಂದದೆ ರತ್ನಹಾರಮಕುಟಾಂಗದ ಕಂಕಣ ಕುಂಡಲಂಗಳೊಂದೊಂದನವುಂಕಿ ಮಾಱೊರಸಿ ಬೇಱೆ ಝಣಜ್ಝಣಿತಪ್ರಣಾದಮಂ (ಜಗಂ. ೮-೦೦೯); ತುಱುತುಱುತಿಂಬ ಕಂದರಮನೊತ್ತರಗೊಂಡು ಮಹಾಮಹೀಜದೊಳ್ ತಱತಱನಾಗಿ ಮಾಱೊರಸುತುಂ ಮಲೆಯುತ್ತೊಲೆಯುತ್ತೆ . . . ಬರುತಿರ್ದುದು ಭೀಕರನೊಂದು ಸೂಕರಂ (ಕಾವ್ಯಸಾ. ೧೦೦೨). [ಮಾಱು$_2$ + ಒರಸು$_1$]

**ಮಾಱೊಲೆ** (ಕ್ರಿ). ಒಂದು ಕಡೆಯಿಂದ ಮತ್ತೊಂದು ಕಡೆಗೆ ಬಾಗು, — ಒಲೆದಾಡು : ನಳಿನಪತ್ರೋದಕದವೊಲು ಮಾಱೊಲೆದುದಬುಜಭವಾಂಡವು (ಕುಮಾ.ರಾ. ೬-೩೦). [ಮಾಱು$_2$+ಒಲೆ$_1$]

**ಮಾಱೋಲೆ**, ಮಾರೋಲೆ (ನಾ). ಪ್ರತಿಯಾಗಿ ಬರೆಯುವ ಕಾಗದ ; ಜವಾಬು : ಅಟ್ಟಿದ ವಿಭುಗೆ ಸಂತಸಂ ಮಾಡಿ ಬರೆದ ಮಾಱೋಲೆಯನೆಯ್ದಿಸಿದೊಡೆ (ಶಾಂತಿಪು. ೩-೩೩). **ಮಾರೋಲೆ** : ಅಣ್ಣನಿಂದ ಮಾರೋಲೆ . . . ನಿರೀಕ್ಷಿಸಿದ್ದ (ರಂಗವ. ೦೨೩) ; ಸಾಸಿರ ಕೆಲಸಗಳಿದ್ದರೂ ಒಂದಿನಿತು ಅವುಗಳನ್ನು ಬದಿಗಿರಿಸಿ ಮಾರೋಲೆ ಬರೆಯುವಿರೆಂದು (ತೆಂಮುಬಿ. ೩೨). [ಮಾಱು$_2$ + ಓಲೆ]

**ಮಾಟ** (ನಾ). ಮಾಳವ ದೇಶ : ಏಟುಂ ಮಾಟಮುಮಂ ಪಾಱೆಟಿ ತಗುಳ್ದಿಱಿದು ನರಗನುರಿಪಿದೊಡೆ ಕರಿಂಕೇಟಿಸಿದಾತನ ತೇಜದ ಬೀಟಲನನು ಕರಿಪುವಾದುವೊಗೆದುರಿವುರಿಗಳ್ (ಶಂಶಾ. ೦-೩೩). [P 'ಸಪ್ತಮಾಳವ' ಎಂಬುದು ಪ್ರಸಿದ್ಧವಾದ ಸಂಸ್ಕೃತ ಶಬ್ದಪುಂಜ. ಇದು ಅನೇಕ ಶಾಸನಗಳಲ್ಲಿ ಕಂಡುಬರುತ್ತದೆ. ಇದನ್ನು ಕನ್ನಡದಲ್ಲಿ 'ಮಾಳವದ ಏಳು ಭಾಗಗಳು' ಎಂದು ಅರ್ಥ ಬರುವಂತೆ ಹೊಸ ನುಡಿಗಟ್ಟನ್ನಾಗಿ ಬಳಸಲಾಗಿದೆ. ಇದರಲ್ಲಿ 'ಟ'ವು ಉಪಯೋಗಾರ್ಹವೇ ಎಂಬುದು ವಿಚಾರಣೀಯ. 'ಏಟುಂ ಮಾಳವಮುಂ' ಎಂಬುದು ಸರಿಯಾದ ಪಾಠವಿರಬಹುದು]

**ಮಾಟ್ಕೆ, ಮಾಳ್ಕೆ** (ನಾ). ೧. ಬಗೆ ; ರೀತಿ ಪ್ರಕಾರ : ಪರರ ದೋಷಂಗಳುಮಂ ಪೆಱವುಮನೀ ಮಾಟ್ಕೆಯೊಳಂ ತೋಱುವುದು (ಶಬರ. ೦-೬೭) ; ದಂಡರತ್ನಹತಿಯಿಂ ೧೧ ನೊಂದು ಸರಳ್ವ ಮಾಟ್ಕೆಯಂತಾಯ್ತಾಗಳ್ (ಆದಿಪು. ೦೩-೩೭) ; ದಾನವೇಶ್ವರಕುಲಮಂ ಮುರಾರಿ ಭುಜವಿಕ್ರಮದಿ ತವೆ ಕೊಂದ ಮಾಟ್ಕೆಯಿಂ (ಶಂತಶ. ೨೩೪-೦೭) ; ಈ ಮಾಟ್ಕೆಯಿಂ ಕಡುದೂರಂ ನಡೆದು ಘೋರಾರಣ್ಯಮನೊಂದಂ ಪೊಕ್ಕರ್ (ರಾಜಶೇ. ೩೩-೦೭). **ಮಾಳ್ಕೆ** : ೧. ತಾರಶ್ಯೈಳಮನುಮಾಪತಿ ರಾತ್ರಿಯು ನಿಂದಳಂಕರಿಸುವ ಮಾಳ್ಕೆಯಿಂದೆ (ಶಾಸನ. IX-i, ೨೬೭-೪೨ ; 1160) ; ತಂದು ಬೆಟ್ಟದ ಮಾಳ್ಕೆಯಿಂ ಮಾಣಮೊಟ್ಟುತಿರೆ (ವಂಬರ. ೩-೦೯); ಸಂಸೇವ್ಯಭುಕ್ತಿಯು ಕೈಕೊಂಡು ದಣಿದರು ಹಂಸ ಹಾಲುಂಡ ಮಾಳ್ಕೆಯೊಳು (ಭರತ. ೩-೯೯) ; ಕೊಳಂ ಜುಮ್ಮೆಂದು ಪುಳಕಿಸುವ ಮಾಳ್ಕೆ ಕಂಪಿಸಿದತ್ತು ತಂಬೆಲರ ಚುಂಬನಕ್ರೀಡೆಯಿಂದೆ (ತಶ್ಯಾಂಗ. ೩೪-೯೦೭). ೨. ನಡೆವಳಿ ; ಆಚರಣೆ : ಆ ನೃಪಾಲಕಂ ತುರಗಮೇಧಾಧ್ವರದ ಮಾಳ್ಕೆಗೆಳಸಿ (ಕೈಮಿನಿ. ೩-೨೪) ; ನಿನ್ನ ಜಾಣತನ ಬರಿಯ ಮಾತಿನದಾಗಲಿ ಮಾಳ್ಕೆಯುದಲ್ಲ (ಶಾರದ. ೦೦೩). ೩. ಕೆಲಸ ; ಕಾರ್ಯ : ತೊಳೆಯುವುದು, ಅರೆಯುವುದು, ತಿಂಡಿಗಳನ್ನು ಬೇಯಿಸುವುದು, ಇತ್ಯಾದಿ ಮಾಳ್ಕೆಗಳನ್ನು ಮಾಂಜಮ್ಮನ ಕೈಗಳೇ ಎಸಗುತಲಿವೆ (ಕೊಡಿನ. ೦೯) ; ಇತರ ಎಲ್ಲ ತರದ ನಿಂದ್ಯ ಮಾಳ್ಕೆಗಳನ್ನೂ ಅವರು ಎಸಗಿದ್ದರು (ಧೂಮಮ. ೦೯).

[<ಮಾಡು₁ + –ಕೆ]

**ಮಾಟ್ಗಟ್ಟೆ** (ನಾ). ರಚಿಸಿದ ಕಟ್ಟೆ ; ಕಟ್ಟಿದ ದಿಂಡು : ಮಾಟ್ಗಟ್ಟೆಗಳ ತಡಿಯೊಳ್ ಸೀಳ್ಗಾಯ್ಗಳ್ ಬೀಗಿ ಬೆಳೆದು ಕಂಬಿತ್ತುಗಳಿಂ ಪೊಱಗಿ ವರ್ದಿರೆ (ಕಬ್ಬಿಗ. ೦೯೩ ವ್ಯಾಖ್ಯಾ). [<ಮಾಡು₁ + ಕಟ್ಟೆ₁]

**ಮಾಟ್ಟಿ** 'ಮಾಡು₁' ಪರಾ.

**ಮಿಂಚಿಕ್ಕು** (ಕ್ರಿ). ೧. ಹೊಳಪನ್ನುಂಟುಮಾಡು : ಪ್ರಕಾಶಗೊಳಿಸು : ಗುಡಿಸಿ ಮಿಂಚಿಕ್ಕಲು ಬೀದಿಯಿದ್ದುವು ಪೋಪರಡಿಗಳ ಜುಮ್ಮುದಟ್ಟಿಸುತ (ಭರತ. ೨೦-೦೯). ೨. ಪ್ರಕಾಶಿಸು ; ಹೊಳೆ : ಬೆಳ್ಳುಗುರ್ಗಳಲತಗೆಯುಡಿ ಮಿಂಚಿಕ್ಕಿ ಜಲ್ಲಿಯುಂಗುರವು ಕಣ್ಗೆಸೆಯೆ ಸಲ್ಲಲಿತಾಂಗಿಯು ಕೆಂಬಜ್ಜೆ ಮೆಱದುವು ಚೆಲ್ಲುವಂತನುರಾಗರಸವ (ಭರತ. ೪೦-೬೨).

[ ಮಿಂಚು₂ + ಇಕ್ಕು ]

**ಮಿಂಚಿಡು** (ಕ್ರಿ). = ಮಿಂಚಿಕ್ಕು ೨ : ಪ್ರಸಿದ್ಧದಿ ಮೆರೆಯುದಿಹುದೆ ಮಿಂಚಿಟ್ಟ ಮಾಣಿಕ್ಯದಂತೆ (ಪಪವೋ. ೩೪ ೪೭). [ ಮಿಂಚು₂ + ಇಡು₁ ]

**ಮಿಂಚಿಸು** (ಕ್ರಿ). ೧. ಹೊಳಪು ಬರುವಂತೆ ಮಾಡು ; ಪ್ರಕಾಶಿಸುವಂತೆ ಮಾಡು : (ಕ). ೨. ಹೊರಗೆಡಹು ; ಹೊರಸೂಸು : ತದೇಕ ಚಿತ್ತನಾಗಿ ನನ್ನ ವಾಚನವನ್ನು ಕೇಳುತ್ತ ಕುಳಿತ ವಿಶ್ವಾಸ ತಟ್ಟನೇ ತನ್ನ ಮಾತು ಮಿಂಚಿಸಿದ (ದೀಕಪ. II, ೪). [ ಮಿಂಚು₂ + – ಇಸು₃ ]

**ಮಿಂಚು₁** (ಕ್ರಿ). ೧. ಹೊಳೆ ; ಪ್ರಕಾಶಿಸು ; ಥಳಥಳಿಸು : ಮಿಂಚುವೊಳ್ದೊಡೆ ಮಡಂ ಸುರಿವಾ ಬೆಮರರ್ಬಿ . . . ಮನ್ಮಥಾನಳಶಿಖಿ ಬೇಗೆಯಾಗೆ ಮದನಾಟವಿಯಂತೆವೊಲೊಪ್ಪಿ ತೋಱದಳ್ (ಕಾವ್ಯಸಾ ೬೦೨ ಕೊದ್ರಕ) ; ನಿರುಪಮದೇಹದೀಪ್ತಿಗಳೊಳೆಕ್ಕಯಿನೆಯ್ದೆ ಪಳಂಚಿ ಮಿಂಚುವಾಭರಣದ ಮಿಂಚು . . . ಚಿಲ್ವಸೆಯೆ ಕಣ್ಗೆಸೆದತ್ತು (ಆದಿಪು. ೨-೩) ; ಕಾಯ ಕರ್ರನೆ ಕಂದಿದರೇನಯ್ಯ ಕಾಯ ಮಿರ್ರನೆ ಮಿಂಚಿದರೇನಯ್ಯ (ಮಹಾದೇ. ೩. ೪೯-೦೦೭). ೨. ಆಕಾಶದಲ್ಲಿ ಮೋಡಗಳ ಘರ್ಷಣೆಯಿಂದ ಬೆಳಕು ಕಾಣಿಸಿಕೊಳ್ಳು. — ವಿದ್ಯುತ್ತು ಉಂಟಾಗು : ತಳಕ್ಕನೆ ಮಿಂಚಲೊಡನಾ ನಳಿನಲೋಚನೆ ಕಾಣುತುಂ (ಬಸವ. ೪೨-೩೦) ; ಎದ್ದುವು ಮುಗಿಲ್ಗಳೆಣ್ದೆಸೆಗಳೊಳ್ತರದೊಳಿದ್ದುವು ಗಿರಿಗಳಂತೆ ಮಿಂಚಿದುವು ದಿಗ್ವಧುಗಳುದ್ದಂಡದಿಂದೆ ಪರ್ಜನ್ಯನಂ ಸೆಣಸಿ ನೋಡುವಚಳಾಪಾಂಗದಂತೆ (ಕೈಮಿನಿ. ೧೭-೨).

೩. ಆಪ್ಯಾಯಮಾನವಾಗಿರು ; ಆಕರ್ಷಕವಾಗಿ ಕಾಣು : ಕರುಳ ಕತ್ತರಿ ಸಂಚರ ಮಾರಿ ತುತ್ತು ಮಿಂಚಿದೊಡನುಂಡು ಮತ್ತೆ ತೊಡೆ ಮಿಂಚಿದೊಡಾ ಖಳನಿಂತು ಮಾಡಿದಂ (ಅಪಂಶ. ೧೦-೪೪). ೪. ಸ್ಫುರಿಸು : ತೋಱು : ವಿಶ್ವಾಸ . . . ವಿರಾಗದ ಭಸ್ಮಭಸಿತದೇಹಿಯಾಗಿ ಪರವರ ಅಂಡಲೆಯುವ ಕಲ್ಪನೆ ಮಿಂಚಿತು (ದೀಕಪ. II, ೦೩೯). ೫. ಮೂಡು ; ತೋರು ; ಕಾಣಿಸಿಕೊಳ್ಳು : ಮಂಚಿಕೆ ಮಿಂಚಿದುದಾ ಶ್ಮಶಾನದೊಳ್ (ಕಾವ್ಯಾವ. ೩೭) ; ಚಿಂದಳಿವಿರ್ಮಿಂಚಿದ ಜನಂ ಜನಗಳಂ ಬಳಸದೂರೂರ್ಗಳಲ್ಲದೆಡೆಯುಲ್ಲಿಳೆಯೊಳು (ಕೈಮಿನಿ. ೩-೩) : ಮಿಂಚುವುವು ಚಿತ್ರರಸಭಿತ್ತಿಯುಲಿ ಹಸ್ತಿಪುರಿ ಮೇಣಿಂದ್ರಪ್ರಸ್ಥಾದಿ ನಗರಗಳ್ (ತಶ್ಯಾಂಗ. ೪೨-೦೦೩೦). ೬. ಅಭಿವ್ಯಕ್ತಗೊಳಿಸು ; ಸೂಸು : ಅಲ್ಲೇನು ಹಂದರದ ಮಣ್ಣೆ ತರುಪಲಿಯಾಗಿ ನಕ್ಮೆಗಳ ಮಿಂಚುತಿದೆ (ಕಾಲೂರ. ೩೮-೪೪). ೭. (ವಿದ್ಯುತ್ತಿನಷ್ಟು) ವೇಗವಾಗಿ ಚಲಿಸು ; ಧಾವಿಸು : ತೇಜಿಗಳನೇರ್ದು . . . ಮಿಂಚಿದರಯೋಧ್ಯಾಭಿಮುಖವಾಗಿ ಭರತನುಂ ಶತ್ರುಘ್ನನುಂ (ಶ್ರೀರಾಪಟ್ಟ. ೦೦೩-೦೩೩). ೮. ಮೇಲಾಗು ; ಉತ್ಕೃಷ್ಟವಾಗು ; ಅತಿಶಯಿಸು : ಅವರುಗಳೆಲ್ಲರಿಗಿಂತಲೂ ಭೀಮಸೇನನು ದೇಹಬಲದಲ್ಲಿ ಮಿಂಚಿದ್ದನು (ವ್ಯಾಸಬಿ. ೪೩). ೯. ದಾಟು ; ಮೀರು : ಸಸ್ಥವಿರು, ವೃದ್ಧತ್ವಂ –೨, ೫೦ ವರುಷಗಳಿಗೆ ಮಿಂಚಿದ ವಯಸ್ಸು (ಸಿದ್ಧಾಂತಿ. ೦೭೯). ೧೦. ಹೆಚ್ಚಾಗು ; ಅಧಿಕವಾಗು : ನಿಮ್ಮಂತಹ ದೊಡ್ಡವರ ನಡತೆಯೆಂಬುದು ಪ್ರೀತಿಯಾಗಿದ್ದರೂ ಬೇಡಿಕೊಂಡುದನು ಮೀರಲರಿಯದ ದಾಕ್ಷಿಣ್ಯ ಮಿಂಚಿ ಇರುವುದು (ವಕಶಾ. ೬೮-೩). ೧೧. (ಕಾಲದ ಅವಧಿ, ಕೆಲಸ ಇತ್ಯಾದಿ) ಕೊನೆಗಾಣು : ಮುಗಿ : ಮಿಂಚಿ ಹೋದ ಕಾರ್ಯಕ್ಕೆ ಚಿಂತಿಸಿ ಫಲವೇನು ? (ಗಾದೆ). [ದೇ.॥ ತಮಿ. ಮಲ. ಮಿನ್ನು : ತುಳು. ಮಿಂಚು, ಮಿಂಜು, ಮೆಂಚು; ತೆಲು. ಮಿಂಚು; ಕೋತ. ಮಿಂಚ್ : ತೊದ. ಮಿಚ್]

**ಮಿಂಚು₂** (ನಾ). ೧. ಹೊಳಪು ; ಕಾಂತಿ ; ಪ್ರಕಾಶ : "ತೊಳಗು, ಬೆಳಗು . . . ಮಿಂಚು, ಡಾಳಂ, ಪೊಗರ್, ತೊಳಪಂ, ಮಸೆ — ಈ ೧೪ ಕಾಂತಿ" (ಕಬಸಾ. ೩೩-೨೦೨): ನಿರುಪಮದೇಹದೀಪ್ತಿಗಳೊಳೆಕ್ಕಯಿನೆಯ್ದೆ ಪಳಂಚಿ ಮಿಂಚುವಾಭರಣದ ಮಿಂಚು . . . ಚಿಲ್ವಸೆಯೆ (ಆದಿಪು. ೨-೩); ತೊಳಗುವ ಮುತ್ತಿನೋಲೆಗಳ ಬೆಳ್ವೆಳಗಿಂ ಸುಲಿಪಲ್ಲ ಮಿಂಚಿನಿಂ . . . ಕಣ್ಗೊಳಿಸಿದಳಾಕೆ ಪಾಲ್ಗಡಲ ಪರ್ದೆರೆಯೊಳ್ ಸಿರಿ ನಿಂದಳೆಂಬಿನಂ (ಕಬ್ಬಿಗ. ೭೯) : ಕಂಗಳಿನ ಮಿಂಚಿನ ಹಳುಕಿನೆಡೆ ನಡೆಗೆಟ್ಟು ನಿಂದರು ಚಿತ್ರವಿಷ್ವಲರು (ಕುವ್ಯಾಪಿ. ೧-೨೩). ೨. ಆಕಾಶದಲ್ಲಿ ಮೋಡಗಳ ಘರ್ಷಣೆಯಿಂದ ಉಂಟಾಗುವ ಬೆಳಕು ; ವಿದ್ಯುತ್ತು : "ಶಂಪಾ, ಚಪಲಾ . . . ಐರಾವತೀ — ಈ ೧೧ ಮಿಂಚು" (ಹಲಾಯು. ೦೦-೬೦): ಪೊಳೆವ ಮಿಂಚುಗಳುಂ ಕರಮುಚ್ಚಮಪ್ಪ ಬೆಟ್ಟುಗಳ ತಟಂಗಳಂ ಸುರಿವ ನಿರ್ಝರಮುಂ ಪೊಸಕಾರೊಳಂತು ಬೆಳ್ಗೆ ಪಥಿಕಾಂಗನಾಜನಮನಂಜಿಸುವಂತಿರೆ ತೋಱ ಸುತ್ತಲುಂ (ಶಬರ. ೦-೮೨೪) : ಸಿಡಿಲಿಂ ಮಿಂಚಿಂ ಮೊಳಗಿಂ ಪಡೆಗುಳ್ಕಂ ಪಡೆವಹೀಂದ್ರರೆರ್ದೆಗಿಡುವಿನೆಗಂ ಸಿಡಿಲಂ ಮಿಂಚಂ ಮೊಳಗುಮನೊಡನೆ ತೆರಳ್ಚಿದುವು ಜಯನ ಶರನಿಕರಂಗಳ್ (ಆದಿಪು. ೦೩-೬೨); ಎಱಗಿದನು ಸಿಡಿಲಾಗಿ ಕಂಗಳೊಳಜುಕಿದನು ಮಿಂಚಾಗಿ (ಕುವ್ಯಾದ್ರೋ. ೦೬-೦೦). ೩. ವಿದ್ಯುತ್ತಿನಿಂದುಂಟಾಗುವ ಶಕ್ತಿ ; ವಿದ್ಯುಚ್ಛಕ್ತಿ : 'ಮಿಂಚುದೀವಿಗೆ' ಪರಾ. ೪. ಮೆರುಗು : ಬತ್ತಿರ್ದ ವಕ್ತ್ರಾಂಬುರುಹಂ ಮಿಂಚಾಗಲಿರ್ಪಂ ತೊಡೆದು . . . ಐದಿದಳ್ ವೃದ್ಧೆ (ರಶಕು. ೮-೦೯೭) : ಒಂದಿನಿಸು ತಪ್ಪಿಲ್ಲದೆಸೆವ ಸಂಭಾರಗಳನೊಂದಿಸಿಯೆ ಕಾಸಿದ ಕೊಣಬಿನಲ್ಲಿ ಮಿಂಚೊಂದುವಂದದಿಂ ಬೆಣ್ಣೆಯುಂ ಹಾಕಿ ಪೊಗ್ಗರಿಸಿ ಕೆಂಡ[ದಿಂ] ಧೂಪವನಿಡುವುದು (ಸೂಪಶಾ. ೬-೮) ; ಕಣ್ಣವೆ ಬಿಳುಪೇಱ ಕಪ್ಪ ಹತ್ತಿಸಿ ಮುಖಕೆಣ್ಣೆಯು ಮಿಂಚುಗಳಕ್ಕೆ . . . ಮುದಿಪಣ್ಯಾಂಗನೆಯುರೊಪ್ಪಿದರು

(ಕಂಪಿ. ೬-೧೯೨); ಪಶುಗಳ ಹೊಸ ಮೈ, ಮಿಂಚು ತುಂಬಿ ಪತ್ತುವುದು (ಕಶ್ರಮ. ೦೪೦). ೫. ವಿದ್ಯುತ್ತಿನಷ್ಟು ಅತ್ಯಲ್ಪ ಕಾಲ ; ಕ್ಷಣ : ಒಂದು ಮಿಂಚಿನಾಗ ಹತ್ತ ಇಚಾರ ಗಿರಕೀ ಹೊಡೀತಾವು (ಶಾಶಂ. ೩೨). ೬. ಕ್ಷಣಿಕವಾದುದು ; ಅತ್ಯಲ್ಪಕಾಲವಿರುವಂಥದು : ಒಂದು ಕಂಚಾಯಿತು ಒಂದು ಮಿಂಚಾಯಿತು ಮುಂದೆ ಕೂತಿಯಾ ಮುದಿಗೂಬೆ (ಗಾದೆ). ೭. ಆಧಿಕ್ಯ ; ಹೆಚ್ಚಳ : ಇದಕಿನ್ನು ಮಿಂಚಾಗಿ ಏನು ಕಷ್ಟವು ಬರಲು ಮದನಜನಕನ ಧ್ಯಾನ ಮರೆಯದಿರು ನೀನು (ಯುಪಕ. ೬). ೮. ಶ್ರೇಷ್ಠತೆ; ಹಿರಿಮೆ : 'ಮಿಂಚುಕವಿ' ಪರಾ. ೯. (ಮುತ್ತೈದೆಯರು) ಕಾಲಿನ ಎರಡನೆಯ ಬೆರಳಿನಲ್ಲಿ ಧರಿಸುವ ಉಂಗುರ : ಪಾದಾಂಗುಳಿಗಳಿಗೆ ಬಿಸಜಾಕ್ಷಿಯೊರ್ವಳು ನಗುತ ಸಂತೋಷದೆ ಮಿಸುನಿಯ ಮಿಂಚನಿಕ್ಕಿದಳು (ಕಂಪಿ. ೨೪-೭೧) ; ಸುಮಂಗಲಿಯರು . . . ಮಿಂಚು, ಪಿಲ್ಲಿ . . . ಮೊದಲಾದ ಆಭರಣಗಳನ್ನು ಧರಿಸಿಕೊಂಡು (ಮಲೆಮಂ. ೩೯) ; ಮಿಂಚು ಕಡಗ ತಾಲಿ ಇಲ್ಲದೆ ಮದುವೆಯೆ ? (ಗಾದೆ).

**ಮಿಂಚಿನ ಹುಳು** = ಬೆಳಕನ್ನು ಬೀರುವ ಒಂದು ಬಗೆಯ ಕೀಟ ; ಮಿಣುಕುಹುಳು : ಅಡವಿಯ ಮುಳ್ಳಲಿ ಮಿಂಚಿನ ಹುಳುಗಳು ಪಂಜನು ಹಿಡಿಯುವುವು (ಶಂಗೀತ. ೪೯-೧೩) ; ಒಂದೊಂದು ಸ್ಥಳದಲ್ಲಿ ಮಿಂಚಿನ ಹುಳುಗಳ ಮಾಲೆಗಳಿಂದ ತುಂಬಿದ ವೃಕ್ಷಗಳು ಸ್ಪಷ್ಟವಾಗಿ ದೃಷ್ಟಿ ಗೋಚರ ವಾಗುತ್ತಿದ್ದಿತು (ಕಶಾಕಂ.೨೮). [ < ಮಿಂಚು$_1$. /ತಮಿ. ಮಲ. ಮಿನ್ನಾಮಿ; ತುಳು. ಮಿಂಚಿ, ಮೆಂಚಿ ; ತೆಲು. ಮಿಂಚು ]

**ಮಿಂಚುಂಬುಳು** 'ಮಿಂಚುಂಬುಳು' ನೋ.

**ಮಿಂಚುಂಬುಳು**, ಮಿಂಚುಂಬುಳು, ಮಿಂಚುಬುಳು, ಮಿಂಚುಬುಳು, ಮಿಂಚುಹುಳ, ಮಿಂಚುಹುಳು (ನಾ). ಬೆಳಕನ್ನು ಬೀರುವ ಒಂದು ಬಗೆಯ ಹಾರುವ ಕೀಟ ; ಮಿಣುಕುಹುಳು ; ಖದ್ಯೋತ : ಶಶಭೃತ್ಕಾಂತಿಗೆ ಮಿಂಚುಂಬುಳು ಸಮನೆಂತಕ್ಕುಮೊ ದೊರೆಗಮೊರೆಗಮೆಣೆಗಂ ತೋಣಗಂ (ಶಾಂತಿಪು. ೦೨-೬೭) ; ಮಿಂಚುಂಬುಳುವಂ ಕಂಡುಮಿದು ಕೆಂಡಮೆಂದು ಬಗೆದದಱ ಮೇಲೆ ಪುಲ್ಲಂ ಪುಳ್ಳಿಯುಮನಿಕ್ಕಿ ಮೊಕ್ಕಳ ಮೂದುವುದುಂ (ಕಂತಕಂ. ೨೪೩-೩) ; ಘಟೋಲನೆ ಪಿಡಿದಂ ಮಿಂಚುಂಬುಳುವಂ ಪಿಡಿವಂತೆ ವಜ್ರಮಂ ದನುಜಹರಂ (ಜಗಪ. ೦೩-೦೦೭). **ಮಿಂಚುಂಬುಳು** : ಮಿಣುಕಿದೆ ಕಿಡಿಯಿಬ್ಬನಿ ನೋಡ ! ಕಾದಿರುಳಿನ ಮಿಂಚುಂಬುಳುವಂತೆ (ಅಶೀ. ೩೩-೭). **ಮಿಂಚುಬುಳು** : ಇನನಿರಲು ಮಿಂಚುಬುಳುವನು ಅಜಿಸುವನ ತೆಱದಿ (ಪಾಗೀಠ. ಪೀ. ೨೩೦-೦೭) ; ಮಿಂಚುಬುಳುವಿನ ಕಿರಣವೆತ್ತಲು ಹೊಳಹಿದೆತ್ತಲು ಕೋಟಿಸೂರಿಯರ (ಕುಪ್ಯಾಭೀ. ೭-೭೦). **ಮಿಂಚುಬುಳು** : "ಮಿಂಚುಬುಳುವಪಮಾ ಖದ್ಯೋತ ಪ್ರಕ್ಕು" (ತುಂಗರಾ. ೩೨-೦೦) ; ಸರಿಯೇ ಸೂರ್ಯಗೆ ಕೋಟಿ ಮಿಂಚುಬುಳುಗಳ್ (ಸೋಪೀಠ. ೧೦). **ಮಿಂಚುಹುಳ** : ಪಂಕಿಸಿತಿಂತುಡು ಸಂಕುಳ ಹೊಂಚುವ ಮಿಂಚುಹುಳಂಗಳ ಬೇಸಗೆ ಕೊನೆವರಿಯೆ (ಗೀಪಂ. ೯೩-೭). **ಮಿಂಚುಹುಳು** : ಮುಂಗಾರಿನಿರುಳಲ್ಲಿ ಮಿಂಚುಹುಳು ತಂದು ಸಿಂಗರಿಸಿದುದೆ ಕೊಡುವುದಮೃತಸೇಚನವಾ (ಕಪಪು. ೨೩-೪) ; ತಳುವು ಬೆಳಕನು ಕೆದರಿ ಮಿನುಕುವ ಮಿಂಚುಹುಳುವೆಂದೆಣಿಸಲೋ ! (ಶಂಗೀತ. ೦೩-೩). [ ಮಿಂಚು$_2$ + ಪುಟಿ ]

**ಮಿಂಚುಕವಿ** (ನಾ). ಶ್ರೇಷ್ಠನಾದ ಕವಿ ; ಉತ್ತಮ ಕವಿ : ಮಿಂಚು ಕವಿಗಳ ಪಲವು ರಸಗಬ್ಬವನು ಗಮಕದಲಿ ಉಂಚದಲಿ ಮೆಱೆದೋದಿ (ಶಾಕ್ಯಶಾ. ೩೨-೨೯). [ ಮಿಂಚು$_2$ + ಕವಿ$_1$ ]

**ಮಿಂಚುಗಣ್**, ಮಿಂಚುಗಣ್ಣು (ನಾ). ಹೊಳಪಿನಿಂದ ಕೂಡಿರುವ ಕಣ್ಣು : ಮಿಂಚುಗಣ್ಣಾಗಿದು ಮಾತಡುಗಿ ತೊಳಲಿದಾಗ ಮುಂಚಿದ ಮೇಲೊಜಗಿದರು (ಶರತ. ೦೦-೦೦೦). **ಮಿಂಚುಗಣ್ಣು** : ಅಚ್ಚ ಕಾಡಿಗೆಗಣ್ಣ ಮಿಗೆ ಮಿಂಚುಗಣ್ಣ . . . ನಿಪಿಡಕುಚಭಾರೆಯರ್ ಬರುತಿರ್ದರುತ್ಸವದೊಳು (ಜೆಶಪು. ೩೭-೪೪) ; ಕನ್ನೈದಿಲುಗಳೆಸಳುಗಣ್ಣ ಕಾಂತಿಯಿಂದುನ್ನತವಹ ಮಿಂಚುಗಣ್ಣ . . . ಹೆಣ್ಣುಗಳೈದಿತ್ತೊಗ್ಗಿನಲಿ (ಕಂಪಿ. ೯-೯೨) ; ಬಾತು ಕೊಂಡಿದ್ದ ಕಣ್ಣುರೆಪ್ಪೆಗಳ ಕೆಳಗೆ ಕಪ್ಪನೆಯ ಮಿಂಚುಗಣ್ಣುಗಳು ಮಿರುಗು ತ್ತಿದ್ದವು (ಕುಪರು. ೦೯೨). [ಮಿಂಚು$_2$ + ಕಣ್ ]

**ಮಿಂಚುಗಣ್ಣು** 'ಮಿಂಚುಗಣ್' ನೋ.

**ಮಿಂಚುಗಾಜಿಕೆ** (ನಾ). ಹೊರಗಿನ ಪ್ರದರ್ಶನ ; ಬಾಹ್ಯಾಡಂಬರ : ಕಂಚಿನೊಳಗೆ ಶಿಲೆಯೊಳಗೆ ದೇವನ ನೋಡೆ ಮಿಂಚುಗಾಜಿಕೆಯ ಭಕ್ತಿಯದು (ಶರತ. ೧೭-೦೦೭). [ಮಿಂಚು$_2$ + – ಕಾಜಿ + – ಇಕೆ]

**ಮಿಂಚುಗಿಡಿ** (ನಾ). ವಿದ್ಯುತ್ತಿನ ಕಿಡಿ.—ಕಣ : ತಡೆದಿದ್ದ ಸಮ್ಮೋಲವು ಹರಿದು ಥಟ್ಟನೆ ಕೂಡಿ ಮಿಂಚುಗಿಡಿಯನು ಸುರಿಸಿದಂತಾಯಿತು (ಒಲುಮ. ೨೯-೮). [ಮಿಂಚು$_2$ + ಕಿಡಿ]

**ಮಿಂಚುಗುರ್** (ನಾ). ಹೊಳಪುಳ್ಳ ಉಗುರು : ಒಸರ್ದಪುದಿವಲ್ತೆ ಚಂದನ ರಸಮೆನೆ ಮಿಂಚುಗುರ ಮಿಸುಪ ಸುಣ್ಬೆಳಗೆನಸುಂ ಪಸರಿಸೆ ಮರಲ್ದ ಕರಮೊಂದಸೆವುದು ಚಂದ್ರಾತಪಕ್ಕೆ ಮುಱಿಯೊಡ್ಡಿದವೋಲ್ (ಕಾದಂಪೂ. ೯೦೭). [ಮಿಂಚು$_2$ + ಉಗುರ್$_1$]

**ಮಿಂಚುಗೂಡು** (ಕ್ರಿ). ಹೊಳಪಿನಿಂದ ಕೂಡು ; ಕಾಂತಿಯುತವಾಗು : ಅವಳ . . . ಕಣ್ಣು ತೀಕ್ಷ್ಣ ಶಸ್ತ್ರದಂತೆ ಮಿಂಚುಗೂಡಿದ್ದವು (ಶಯಂತ. ೪೦೩). [ಮಿಂಚು$_2$ + ಕೂಡು$_1$]

**ಮಿಂಚುದಲೆ** (ನಾ). (ಲೋಚಿನಿಂದ ಕೂದಲಿಲ್ಲದೆ ಬೋಳಾಗಿದ್ದು) ಹೊಳೆಯುತ್ತಿರುವ ತಲೆ : ಮಿಂಚುದಲೆ ಬಿದ್ದ ಪುರ್ಬಿನ . . . ಡೊಂಬುಗಳು . . . ನೆರೆದುದು (ಸೋಮಕ. ೪-೪೦) ; ಮಿಂಚುದಲೆಗಳ ಖಂಡಿವಲ್ಗಳ . . . ಜೈನರ ಹಿಂಡು ನೆರೆದು (ಬಸಪು. ೩೦-೩೪). [ಮಿಂಚು$_1$ + ತಲೆ$_1$]

**ಮಿಂಚುದೀವಿಗೆ** (ನಾ). ವಿದ್ಯುದ್ದೀಪ : ಹೊತ್ತು ಆದೊಡೆ ನಲ್ಲಿ ನೀರೂ ಹೋಗಿಬಿಡುವುದು ಗಕ್ಕನೆ ಮುರ್ಮ ಕಣಕಲು ಮಿಂಚುದೀವಿಗೆ ಆರಿಬಿಡುವದು ಪಕ್ಕನೆ (ಹಾಡುಪಾ. ೩೦-೦೦). [ಮಿಂಚು$_2$ + ದೀವಿಗೆ]

**ಮಿಂಚುನೋಟ** (ನಾ). ಹೊಳಪುಗಣ್ಣಿನ ದೃಷ್ಟಿ : ಜೀವನದಲ್ಲಿ ಹಲವು ಸಾರಿ ವಾರೆನೋಟ, ಕುಡಿನೋಟ, ಮಿಂಚುನೋಟಗಳ ಅನುಭವವಿಲ್ಲದಿರುವ ವರು ಅತಿವಿರಳ (ಪಿಮ್ಮರ್. ೭). [ಮಿಂಚು$_2$ + ನೋಟ]

**ಮಿಂಚುಬಳ್ಳಿ** (ನಾ). ಒಂದು ಬಗೆಯ ಬಳ್ಳಿ ; ಜ್ಯೋತಿಷ್ಮತಿ : "ಪಾರಾವತಾಂಘ್ರಿ, ಕಟಭೀ, ಪಣ್ಯಾ, ಜ್ಯೋತಿಷ್ಮತೀ, ಲತಾ — ೫ ಕಂಗೊಂಗೇಗಿಡ . . . ಜ್ಯೋತಿಷ್ಮತೀ" (ಸಿದ್ಧಾಂತಿ. ೦೪೭) ; ಮುಪ್ಪುರ ಗಳನ್ನು ಉರಿಸಲು ಹೊರಟ ಶಿವನೂ ಮಿಂಚುಬಳ್ಳಿಯ ಹೂಗಳನ್ನು ಧರಿಸಿದ್ದನಂತೆ ! (ಶಾಸಗ. ೬೩). [ಮಿಂಚು$_2$ + ಬಳ್ಳಿ]

**ಮಿಂಚುಬುಳು** 'ಮಿಂಚುಂಬುಳು' ನೋ.

**ಮಿಂಚುಬುಳು** 'ಮಿಂಚುಂಬುಳು' ನೋ.

**ಮಿಂಚುರಿ** (ನಾ). ವಿದ್ಯುತ್ತಿನ ಉರಿ. — ಬೆಂಕಿ : ಪ್ರಮಿಮಾತ್ಮ್ಯಸನ್ನು ಬೆಸೆದು ಬಂಧಿಸಿದ್ದ ರೂಕ್ಷಶಿಖರಾಗ್ರವೇ ಮೊಳಗುದನಿಗೆ ಮಿಂಚುರಿಯ ಮೊಯ್ಲಿಗೆ ಹೋಳಾಯಿತು (ಬದ್ಧಶ್ರ. XXIII, ೬೬೨೪). [ಮಿಂಚು$_2$ + ಉರಿ$_2$]

**ಮಿಂಚುವಡಿಗ** (ನಾ). ಥಳಥಳಿಸುವ ಪೀಕದಾನಿ : ಪೊಣ್ಮಂಚಿಯ ಮೇಲ್ಗಟ್ಟು ಗಿಂಡಿ ಮಿಂಚುವಡಿಗ ವೀಣೆ ಸಂಗಳಿಸಿಮುವು ಲಾವಂಚದ ಬೀಸಣಿಗೆಗಳು (ಶರತ. ೦೩-೨೭). [ಮಿಂಚು$_2$ + ಪಡಿಗ]

**ಮಿಂಚುವಡೆ** (ಕ್ರಿ). ಹೊಳಪನ್ನು ಹೊಂದು : ತನಿವಣ್ಣ ಗೊಂಚಲಿಂ ಮಿಂಚುವಡೆದ ಪೇರ್ಮರನನಡರ್ವ ಕೋಜಗಂಗಳ ಬಳ್ಳಿವಾಲಮನೆಳನಾಗ

ರೆಂದು ಸೆಳೆದು ಕಡಿದೀಡಾಡಲವ್ವಳಿಸುವ ಮುದಿಪುಂಗುಲಿಗಳುಮಂ . . . ನೋಡುತ್ತುಂ ನಿಚ್ಚವಯಣದಿಂ ಬರೆವರೆ (ಕಬ್ಬಿಗ. ೨೩೪).

[ಮಿಂಚು$_2$ + ಪಡೆ$_1$]

**ಮಿಂಚುವೆಳಗು** (ನಾ). ೧. ವಿದ್ಯುತ್ತಿನ ಕಾಂತಿ, — ಪ್ರಕಾಶ : ಮಿಂಚುವೆಳಗಂಚಿರವಾಯ್ತು ಶಿಖಂಡಿ ತಾಂಡವಕ್ಕಲಸಿದುದು . . . ಶರತ್ಪ್ರಥಮಪ್ರವೇಶದೊಳ್ (ಜಗಂ. ೪-೩೭). ೨. ಕ್ಷಣಿಕವಾದ ಬೆಳಕು : ಚಂಚಲವಾದ ಪ್ರಕಾಶ : ಮಿಂಚುವೆಳಗಿನ ಬಳಕೆಯಲಿ ಮನ ಮುಂಚಿ ಮೈಗೊಂಡಳಲುವಾತುಮುವಂಚಕರು ನೀವ್ ಪಶುಗಳೆಂದರೆ ಮೇದವೇಕೆ (ಕುವ್ಯಾಕ. ೬-೨೭). [ಮಿಂಚು$_2$ + ಬೆಳಗು$_2$]

**ಮಿಂಚುವೋಗು** (ಕ್ರಿ). ವಿದ್ಯುತ್ತಿನಷ್ಟು ಕ್ಷಣಿಕವಾಗಿ ಹೊಳೆ, — ಪ್ರಕಾಶಿಸು : ಇದೇಂ ಭ್ರಮೆಯೊ ಮಾನವರ್ಗಮುಮ . . . ಪೊಪಟ್ಟ ಸಿರಿಯೆಂಬುದಿಂತೊಗೆದ ಮಿಂಚುವೋದಂಚಿಯೊಳ್ ಸದ್ವೃಕ್ಷಮೆನ ಲೊಲ್ಲರೀ ಭವದೊಳುಂಡೊಡಂ ಕಂಡೊಡಂ (ಅನಂಪು. ೯-೦೯).

[ಮಿಂಚು$_2$ + ಪೋಗು$_1$ (< ಪೋ$_1$)]

**ಮಿಂಚುಹುಳ** 'ಮಿಂಚುಂಬುಳು' ನೋ.

**ಮಿಂಚುಹುಳು** 'ಮಿಂಚುಂಬುಳು' ನೋ.

**ಮಿಂಚುಳ್ಳಿ** 'ಮೀನ್ಚುಳ್ಳಿ' ನೋ.

**ಮಿಂಚೆಳೆ** (ನಾ). ಹೊಳೆಯುವ ರೇಷ್ಮೆಎಳೆಗಳಿಂದ ಕೂಡಿದ ಸೀರೆ : ಮುಂದುಕಿ ಎಳೆಯುವಳಾಗಿ ಮಾಸು ಮಿಂಚೆಳೆಯಾಗಿ ಸವೆದ ಮೈ ತುಂಬಿ . . . ನಸುನಕ್ಕಳಾ ತಾಯಿ (ಹೊಂಗಳು. ೨೦-೮).

[ಮಿಂಚು$_1$ + ಎಳೆ$_2$ (< ಎಟೆ$^3$)]

**ಮಿಂಚೋಲೆ** (ನಾ). ಪ್ರಕಾಶಮಾನವಾದ ಕಿವಿಯ ಆಭರಣ : ಹೊಳೆಯುವ ಓಲೆ : ಮಿಣುಗುವ ಮಿಂಚೋಲೆ ಸುಲಿಪಲ್ಲು . . . ಎಸೆಯಲು ಮೆರೆವರು (ಕುಠಾಶಾಂ. ೨೫-೬೯). [ಮಿಂಚು$_2$ + ಓಲೆ]

**ಮಿಂಜೊಡರ್** (ನಾ). ಕಾಂತಿಯಿಂದ ಕೂಡಿರುವ ದೀಪ : ಮಿನುಗಿದುವು ಮಿಂಜೊಡರ್ ಮನೆಮನೆಗೆ, ಮಿಂಚಿನಲರಿನ ಗೊಂಚಲೋಲ್ (ಶ್ರೀರಾಮಾ. ೪೩೭-೭೫). [ಮಿನ್ (< ಮಿಂಚು$_2$) + ಸೊಡರ್]

**ಮಿಂಟಿಗೆ** 'ಮೆಂಟಿಕೆ' ನೋ.

**ಮಿಂಟೆ$_1$** 'ಮಿಟ್ಟೆ' ನೋ.

**ಮಿಂಟೆ$_2$** (ನಾ). ಒಂದು ಬಗೆಯ ಸಸ್ಯ : ಸಮಸ್ತಜ್ವರಗಳಿಗೆ : — ಹಿಪ್ಪಲಿ . . . ಮಿಂಟೆ, ಕಕ್ಕೆ, ಚಿಟ್ಟಲವುಡಲ, ಹಿಕ್ಕಾಡಲ್ಲಿಕೆ ಇವುಗಳ ಬೇರುಗಳು ಪ್ರತ್ಯೇಕ ೫ ತೂಕದ ಲೆಪ್ಪದಲ್ಲಿ ಕೊಂಬುದು (ವೈಶಾ. ೧೯೫). [ ? ]

**ಮಿಂಟೆಯುಂಬು** 'ಮಿಟ್ಟೆಯುಂಬು' ನೋ.

**ಮಿಂಡ** (ನಾ). ೧. ವೀರ ; ಶೂರ ; ಪರಾಕ್ರಮಿ : ಕೋಟೆಕನಾಮ ಧೇಯುಶಿಲೆ ಮುಂದಿರೆ ಭೋಂಕನೆ ಕಂಡು ಮಿಂಡರುತ್ಪಾಟಿಪೆಮೆಂದು ಪೂಣ್ದುಪಿಳಶಕ್ತಿಯಿನೆತ್ತುತುಮುಳ್ಳೆ ಪೊಯ್ಯೆ ನಿಪಾಟವರಾಗಿ ಪಿಂಗೆ (ವರ್ಧಪು. ೩-೯೫) ; ಅಟವಿಕದಳ ಹೊಯ್ದು ಮಿಂಡರ ಮಿಾಟನೆತ್ತಿದರವರು ಕಾಪಿನ ಕೋಟಲೆಗೆ ನಾವೊಲ್ಲೆವೆಂದರು ಚಿತ್ರಸೇನಂಗೆ (ಕುವ್ಯಾಭಾ. ೧೮-೩೮) ; ಮಿಂಡ ದುಂಡಿಗಳರ್ಥಿಕಾಱರು . . . ಖಂಡೆಯದ ಕಲಿಕೆಗಳ ತರಳರ ತಂಡ ಕೂಡಿತು (ತೊರರಾ. ೫-೫-೦೪). ೨. ಮಿಗಿಲಾದವನು ; ಶ್ರೇಷ್ಠನಾದವನು : ಕಲಿಗಳ ಗಂಡ ಕರ್ಮದ ಮಿಂಡ ದುರ್ಮೋಹಜಾಲಾಂಧಕಾರಮಾರ್ತಾಂಡ (ಶಿರತ. ೮-೦) ; ಹೊಸ ಬಿರುದರ ಗಣ್ಡ ರಾಯರಾಹುತ್ತ ಮಿಣ್ಡ (ಎಕ. XII, ತುಮಕೂ. ೦-೮೫ ; 1571). ೩. ಹೆದರಿಕೆಯನ್ನುಂಟುಮಾಡುವವನು ; ಭಯಂಕರನಾದವನು : ಮೂರು ರಾಯರ ಗಂಡ ಚಂಡಿ ಕೇಳ್ವರ ಮಿಂಡ (ಕುವತಾಶಾಂ. ೦೩೪). ೪. ಉಪಪತಿ ; ಜಾರ : "ಜಾರಃ, ಉಪಪತಿಃ—ಈ ೨ ಮಿಂಡನ ಪೆಸರ್" (ನಾತಿಂ. ೦೦೮) ; ನಿನ್ನ ಬೇಟದ ಮಿಂಡನಾವನನವನಂ ಪೇಟೆಂದು ಬೆಸಗೊಳೆ (ತಂತತಂ. ೭೫-೦೩) : ಒಳಗಣ ಗಂಡನವ್ವಾ ಹೊರಗಣ ಮಿಂಡನವ್ವಾ ಎರಡನೂ ನಡೆಸಲು [ಬಾರದವ್ವ] (ಮಹಾದೇ. ೬. ೪೮-೦೦೪) ; ಪರಾಂಗನೆಗೆ ಮನವೆಳಸಲೆಳಸುವರವರ ಹೆಂಡಿರಿಗೆಲಿಯ ಮಿಂಡರು (ತೊರರಾ. ೩-೮-೭). ೫. ಸ್ವಸಾಮರ್ಥ್ಯದಿಂದ ವಶಪಡಿಸಲು ಆಗದ ವಸ್ತು, ವ್ಯಕ್ತಿ, ಪ್ರಾಣಿ ಮುಂತಾದುವು : ಹೊಳೆ ದಾಟಿದ ಮೇಲೆ ಅಂಬಿಗರ ಮಿಂಡ (ಗಾದೆ) : ಕತ್ತೆ ಚಿತ್ರಗಾರನ ಮಿಂಡ (ಗಾದೆ). (ಗು). ೬. ಏರುವ ; ಉಕ್ಕುವ : 'ಮಿಂಡಪ್ರಾಯ' ಪರಾ. ೭. ಹರೆಯದ ; ಪ್ರಾಯದ : 'ಮಿಂಡಗೊರವ' ಪರಾ.

ಮಿಂಡಮಕ್ಕಳು = ಶೂರರೂ ಸಮರ್ಥರೂ ಆದ ಸ್ವಚ್ಛಂದ ತರುಣರು : ಅಂತಾ ತುಱುಪಟ್ಟಿಯ ಕಿಱುಮಕ್ಕಳಂ ಬಲ್ಮಕ್ಕಳಂ ಮಿಂಡ ಮಕ್ಕಳುಮನೊಂದೆ ಕೋಲೊಳ್ ತಂದು ಪುಲ್ಯುಲಿಡಿಸುವ ಕೃಷ್ಣನಂ . . . ಕರೆಯುತ್ತುಂ (ಅರ್ಜನೇ. ೭-೮೫ ವ).

[ದೇ.॥ ತಮಿ. ಮಿಣ್ಡ ; ತುಳು. ಮಿಂಡೆ : ತೆಲು. ಮಿಂಡಡು. ಮಿಂಡಡು : ಕೊಡ. ಮುಂಡೇ ; ಕೋತ. ಮಿಂಡ್, ಮುಂಡ್]

**ಮಿಂಡಕ್ಕರು** (ನಾ). ಪ್ರಾಯದ ಮೋಹ : ಸೊಕ್ಕುನೀರೆಯರೆಳೆವ ಮೇಲುದಂ ಸೆಳೆಯದಡಿಯಿಕ್ಕುವರ ಪಿಂದೆ ಪರ್ಯಂಕಮಂ ಪೊತ್ತು ಮಿಂಡಕ್ಕರಿಂ ಪಾರಿದರ್ಬಂದು (ಜಪಮು. ೫-೦೪).

[ಮಿಂಡು + ಅಕ್ಕರು (< ಅಟ್ಕಱ್$_2$)]

**ಮಿಂಡಗಾತಿ** (ನಾ). ಜಾರೆ; ಮಿಂಡಿ : ಈರ್ವರೂ ಮಿಂಡಗಾತಿಯ ಮೇಲೆ ಸಿಟ್ಟಾಗಿ, ಕೈ ಎತ್ತಿ — ಹಾಗೆಯೇ ಹಾಡುವರು (ರಾತ್ರಿಮ. ೭).

[ಮಿಂಡ + – ಕಾತಿ]

**ಮಿಂಡಗಾರ** 'ಮಿಂಡಗಾಱ' ನೋ.

**ಮಿಂಡಗಾಱ**, ಮಿಂಡಗಾರ (ನಾ). ೧. ಜಾರ : ವಿಟ : ಒಬ್ಬ ಸೂಳೆಯ ಬಾಗಿಲಲ್ಲಿ ಎಂಬತ್ತುನಾಲ್ಕುಲಕ್ಷ ಮಿಂಡಗಾಱರು (ಕಲ್ಯಾಶಾಂ. ೪೦). **ಮಿಂಡಗಾರ** : ೧. ಸೂಳೆ ಸುಲಿದುಕೊಂಡು ತಿಂದಳು, ಮಿಂಡಗಾರ ಕಿರಿದುಕೊಂಡು ತಿಂದ (ಗಾದೆ). ೨. ಸ್ವಾಧೀನಪಡಿಸಿಕೊಳ್ಳುವವನು ; ವಶಪಡಿಸಿಕೊಳ್ಳುವವನು : ನೀವು ಘಳಿಸಿದ ವ್ಯವಕ್ಕೆ ಈಗ ಮಿಂಡಗಾರರು ಬರುತ್ತಾರೆ (ಮುದ್ರಾಮಂ. ೦೫೦). [ಮಿಂಡ + – ಕಾಱ]

**ಮಿಂಡಗಾಱಿಕೆ** (ನಾ). ವ್ಯಭಿಚಾರ ; ಹಾದರ : ಮಿಂಡಗಾಱಿಕೆಯಲ್ಲಿ ಗಳಿಸಿದ ಸೌಖ್ಯವನುಂಡಲ್ಲದೆ ತೀರದು (ಮೋಹತ. ೩೫-೬೮).

[ಮಿಂಡಗಾಱ + – ಇಕೆ]

**ಮಿಂಡಗುದ್ದಲಿ** (ನಾ). ಒಂದು ವಂಶದ ಹೆಸರು : ತೊಗರ ಮಾಚಿ ಸೆಟ್ಟಿಯುಂ ಮಿಂಡಗುದ್ದಲಿ ನಾಮಿಸೆಟ್ಟಿಯುಂ ಸಮಸ್ತಮುಂಮುರಿದಂಡ ಗಳುಮಿಂತು ಪಟ್ಟಣಮಶೇಷದ ಸನ್ನಿದಾನದಲು . . . ದೇವರ್ಗೆ ಕೊಟ್ಟ ಕಯಿ ಕಂಮ್ಮಮಯ್ತುತ್ತು (ಎಕ. VII, ಶಿಕಾ. ೦೦೭-೩೮ : 1098) ; ಪುಲಿ ಗೆಱೆಯ ನಗರ ಮುಮ್ಮುರಿದಂಡ ಮಿಂಡಗುದ್ದಲಿ ಸಮಯ ಮಂತ್ರಿ ಸಾಮಂತ ಪಟ್ಟಸ್ವಾಮಿಗಳು . . . ಆದಿಯಾದ ಪಲರು ಪದಿನೆಂಟು ಸಮಯಮದೆಯ್ದೆ (ಸೌಮಶ. ೫-೪೫). [ ? ]

**ಮಿಂಡಗೊರವ** (ನಾ). ಹರೆಯದ ಜಂಗಮ : ಪ್ರಾಯದ ಜಂಗಮ : ಎಲೇ ಮಿಂಡಗೊರವ ಹೋಪರೆ ಕಂಡು (ಇಹರ. ದೇ. ೩೮-೮).

[ಮಿಂಡ + ಗೊರವ]

**ಮಿಂಡಜಂಗಮ** (ನಾ). = ಮಿಂಡಗೊರವ : ಮಿಂಡಜಂಗಮವಿಸರವಾ ಭರಣಾಂಬರಾಗರು . . . ತಾಂಬೂಲಾದಿಗಳನೊದವಿಸಿಕೊಳುತ್ತಾನಂದದಿಂ (ಬಸವು. ೦೦-೫೦); ಸಾಱೆ ಲಕ್ಕದ ಮೇಲೆ ತೊಂಬತ್ತಾಱುಸಾವಿರ ಮಿಂಡ ಜಂಗಮ ಮಿಾಱಿ ಬಾಲರು ವೃದ್ಧರೆಯ್ತುಹಾದೆಣಿಕೆಗರಿದೆನಿಸಿ (ಶ್ರಶುಂ. ೨೦-೩೦). [ಮಿಂಡ + ಜಂಗಮ$_1$]

**ಮಿಂಡತನ** (ನಾ). = ಮಿಂಡಗಾಱಿಕೆ : ಚಂಡಿಗೊಂಡೋರಂತೆ ಹೋಗದ ಭಂಡಿಸುವುದಿದು ಭಕ್ತಿನೀತಿಯೆ ಮಿಂಡತನಕಿದು ನೀತಿಯೇ (ಬಸವ. ೪೦-೩೪). [ಮಿಂಡ + — ತನ]

**ಮಿಂಡತಿ** (ನಾ). ಉಪಪತ್ನಿ ; ಜಾರೆ : ಹೆಂಡತಿಯು ಪುಟ್ಟು ತಿರುಗೋದು ಹರಕು ಹರಕುಚೆಂದಿ ಮಿಂಡತಿಯು ಪುಟ್ಟು ಮೆರೆವುದು ಮಿಸಲಯ ಮೇಲ್ಪಂದಿ (ಜಾನಪದ. ೧೬-೯)

[ಮಿಂಡ — ತಿ₁ (< ಇತ್ತಿ). ; ತುಲು. ಮಿಂಡತ]

**ಮಿಂಡಪೋದಿ** (ನಾ). ಒಂದು ವಂಶದ ಹೆಸರು : ಸ್ವಸ್ತಿಶ್ರೀಚೋಟಿ ಮಹಾರಾಜಾಙ್ಗಿ ಚಾತೆಯಪರಿಸಿನ ×× ಕಣ್ಣಾ ಕೊಟ್ಟ ಜಾಮಾಡಿಯ ತಳಾಱು ಮಿಣ್ಣಪೋದಿಯ ಪಿಳ್ಳಯು ತಲೆದ್ ×× ಗಾರವುಂ ×× (ಎಕ. X, ಗೌರಿ. ೩೩-೯ ; ೫೦. ೧೦೦). [?]

**ಮಿಂಡಪ್ರಾಯ** (ನಾ). ತುಂಬುಹರೆಯ : ನವತಾರುಣ್ಯ : ಬೀಯ ದೆಯ್ಯಿಸದಿಂತು ಮಿಂಡಪ್ರಾಯದಾತಂಗೆಂದು ಭಕ್ತಸಹಾಯಿ ಮುದ್ದುಮಾಡಿ ಪಡಿಯನಿತ್ತನು ಮೊನೆಯುಧರನೆನಗೆ (ಬಸವ. ೨೩-೦೦).

[ಮಿಂಡ + ಪ್ರಾಯ]

**ಮಿಂಡಭಕ್ತ** (ನಾ). = ಮಿಂಡಗೊರವ : ಈಯನೇ ಇವ್ಮಾಡಿಸಿ ಧನವನಜೇಯಮತಿಯೊಳು ಮಿಂಡಭಕ್ತಂಗೀಯವನಿಯಜೀಯರ್ ಮೊನೆಯ ಧರನೆಂಬ ಗಣನಾಥ (ಬಸವ. ೧೧-೩೭) [ಮಿಂಡ + ಭಕ್ತ₁]

**ಮಿಂಡವಂದಿ** (ನಾ). ಪ್ರಾಯದ ಹಂದಿ : ಕೊಬ್ಬಿದ ಹಂದಿ : ಮಿಂಡವಂದಿಯ ಲಾವಣೆಗೆಯ ಬಲಾಯಲಾಲನೆಯ . . . ಖಡ್ಗದ ಹಿಂಡುಗಳ ತೋಱಿಸುವೆನೇಳು (ಶಬ್ದಾ. ೩. ೧೩-೧೬). [ಮಿಂಡ + ಪಂದಿ]

**ಮಿಂಡಹರೆಯ** (ನಾ). = ಮಿಂಡಪ್ರಾಯ : ದಾಸಿಮಯ್ಯನ ತೆಜದಿ ತವನಿಧಿಗಾಸೆಮಾಡೆನು ಬೇಡೆನು ಗುಂಡಯನವೊಲು ಮಿಂಡಹರೆಯ ವನು (ಬಸವ. ೯-೩೩) [ಮಿಂಡ + ಹರೆಯ (< ಪರಯ)]

**ಮಿಂಡಾಟಿಕೆ** (ನಾ). ವ್ಯಭಿಚಾರ, ಹಾದರ : ತರುಣಿ ಮಿಂಡಾಟಿಕೆಯೊಳಾರ್ಜಿಸಿದುರುಮಹಾವಿತ್ತದಲಿ ಜೀವಿಪ ಪುರುಷನಾಲೋಕನವ ಮಾಡಿದ ವರ್ಗೆ ಘನನರಕ (ಅಂಬಿಗ. ೯೭-೬೦). [ಮಿಂಡು ಆಟಿಕೆ]

**ಮಿಂಡಾಡು** (ಕ್ರಿ). ಹಾದರ ಮಾಡು : ವ್ಯಭಿಚಾರ ಮಾಡು : ಮಿಂಡಾಡಿ ಮಾಡಿ [ಪಾಠಾಂ. ಮಿಂಡಾಟಮಾಗಿ] ಮೆಚ್ಚಿದ ರಂಡೆಯರೊಳ್ಪೆರೆದು ವಿಕೃತಿವೇಷದೆ ಜಗವುಂ ಕಂಡೆಜ್ಜಾನಿನ್ನನೆಂಬನ ಮುಂಡಿಂಗೊಳಗಾಗದಿಪ್ಪವಂ ಸತ್ಪುರುಷಂ (ಶಬ್ದ. ೦೪-೬೮). [ಮಿಂಡು + ಆಡು₁]

**ಮಿಂಡಿ₁** (ನಾ). ೧. ತುಂಬುಯೌವನವನ್ನು ಹೊಂದಿರುವವಳು : ನವಯುವತಿ : ಶೃಂಗಾರಸಂಯೋಗಿಯೆಂದುಟೆದ ಮಿಂಡಿಯರಾವಗ ಮೊಲ್ಲು ನೋಡಲಾ ಚಾರುವಚೋವಿಲಾಸನಿಧಿ ರಂಜಿಸುವಂ (ಉದ್ಭಟ. ೦೨-೩೬) ; ಮಂಡಿಯೊಳೇಗಳ್ಪುಂ ಪ್ರಾಣಕಾಂತನಪ್ಪಿಕೊಂಡಿರಿ ತೊಲಗ ಬೇಡನುತೆ ಮಿಂಡಿಯರಿಗೆ ಬುದ್ಧಿಗಲಿಸುವಂತೆಲೆವಳ್ಳಿ ಮುಂಡಿಗೆಗಳನಪರಿ ದಾವು (ಚೋಪಕ. ೨೯. ೩೩) ; ಮಿಂಡಿಯರ್ ಬಿಂಡುಗೊಂಡೆದೆಯನ ದಂಡ್ವಾಳ್ಗಳನೆ ಜಿಂಟೆಟ್ಟಿಲ್ಗಳಲ್ಲಿಗೆ ಸಂಚರಿಸಿ ಮೆಲ್ಲಡಿಯೊಡೆಯಿಂ ಚೆನ್ನಸುಗೆಯುಂ ತಳರ್ಚಿಯುಂ (ರಾಮಾಶ್ವ. ೦೨೨-೨೬). ೨. ಉಪಪತ್ನಿ : ಬೆಲೆ ಬಿರ ತುಂಬ್ಯಪುಂಟವಸರು ಮನೆವೊಕ್ಕೊಡೆ ಪೊಕ್ಕನಿಜ್ಜೆಯಗ್ಗಲಿಸಿವ ಮಾತೆ ಪಕ್ಕದಲೆಯೊಳ್ ವಿನುತಂ ರತಿಯಿಲ್ಲ ಮಿಂಡಿಯೊಳ್ (ಸುಕ್ತಿಸು. ೮-೩೪೯) ; ತಕ್ಕಯೊಡೆಯದ ಮಿಂಡಿಯುಪರತಿಯ ಸುಖಿವ ತನು ಜಕ್ಕುಲಿಸಿ ಪೊಗಳ್ವ ವಿಟನಂತೆ (ಕೃಶವ. ೦-೬-೮). (ಗು). ೩. ಪಿರುವ ; ಉಕ್ಕುವ : 'ಮಿಂಡಿವರೆಯ' ಪರಾ.

[ಮಿಂಡ + — ಇ₂. / ತುಳು. ಮಿಂಡಿ]

**ಮಿಂಡಿ₂** 'ಮಿರಡಿ' ನೋ.

**ಮಿಂಡಿ₃** (ನಾ.) (?) : ಕೆಂಡಗಳ ತನಿಗಿಡಿಯನಗಲದಿ ಚೆಂಡೆನಿಸುತೆ ಕಣ್ಗಳೆ ಪೊಗರಿನ ಮಿಂಡಿ ಮಿಟಿಟೆಯ ಸರಳ ಶರಧಿಯೊಳದ್ದಿದನು ಹರಿಯಾ (ಅಂಬಿಗ. ೦೭-೩೭). [?]

**ಮಿಂಡಿಗೆ** (ನಾ). ಗೊರಸಿನ ಹಿಂಭಾಗ : ಮಿಂಡಿಗೆಗಳಂ ಮಿಗೆ ಚುಂಬಿಪ ವಾಲವೊಪ್ಪೆ ನಿಂದೆಸೆವೆಳಸಣ್ಣರೋಮತತಿ ಕೊರ್ಬಿದ ಮೆಯ್ ಮಿಗೆ ಹೇಱುವೆತ್ತನಡ್ಡ ಸಹಿತಮಾ ಪನಸ್ಥಳಮನೆಯ್ದುವದನೋರ್ವ ಮಹಾವಣಿಗ್ವರಂ (ರಸಿಕ. ೪-೭೭) ; "ಗೊರಸು ?" (ಶಬ್ದ). [←ತೆಲು. ಮಿಡುಗು]

**ಮಿಂಡಿತನ** (ನಾ). ಹೆಣ್ಣಿನ ಯೌವನ,– ತಾರುಣ್ಯ : ಮಂಡೆದುಱುಬ ಮಿಂಡಿತನದಿ ನಿಬ್ಬಣಕ್ಕೆ ನಾ ಹೋದಡೆ ಮಂಡೆ ಬೋಳಾಗದನಕವಪ್ಪುದೆನಗೆ ನಿಬ್ಬಣ (ಶಿವಾನು. ೦೩೬-೩೯೪). [ಮಿಂಡಿ₁ + — ತನ]

**ಮಿಂಡಿದೊತ್ತು** (ನಾ). ಯೌವನಸ್ಥಳಾದ ದಾಸಿ : ಹಡವ ಹಣ ಹಾಗ ವೆಲ್ಲಂ ಜಡೆಯಿಡಕುರವಡಗಿ ಮಿಂಡಿದೊತ್ತಿರಿಗೀವೀ ತುಡುಗುಣಿ ಗೊರವರ ವೆಚ್ಚಂ ಪೊಡವಿಗೆ ಸಿವತತ್ವ ತಾನೆ ನೈಷ್ಠಿಕಮುನಿಪಂ (ಎಕ. XII, ತಿಪ್ತ. ೨೯-೨೬ ; 1149). [ಮಿಂಡಿ₁ + ತೊತ್ತು (< ತೊಟ್ಟು)]

**ಮಿಂಡಿವರೆಯ** (ನಾ). ತುಂಬುಪ್ರಾಯ : ನವಯೌವನ : ಕಿರುವರೆಯದಿಂ ಸಂತತಮಿಮ್ಮಿಂಡಿವರೆಯದ ಸೋಕುವರೆಯ ನಡುವರೆಯದವರು (ಶಬರ. ೨೯-೦೯). [ಮಿಂಡಿ₁ + ಪರೆಯ₂ (< ಪರಯ)]

**ಮಿಂಡಿವೆಂಡತಿ** (ನಾ). ನವಯುವತಿಯಾದ ಹೆಂಡತಿ : ಪತಿಯಿಲ್ಲದವಳೆನು ತೆನ್ನಯ ಮಿಂಡಿವೆಂಡತಿಯು ಕೋಳ್ಗೊಂಡಿಹ ಕುನ್ನಿ ಧೃತಿಗಿಡಾಹೇಡ ಧೈರ್ಯವನಾಂತು ಬಾರೆಂದು ರತಿರಾಜ ಮೂದಲಿಸಿದನು (ಚೋಪಕ. ೦೨-೮೨). [ಮಿಂಡಿ₁ + ಪೆಂಡತಿ (< ಪೆಂಡಿತಿ)]

**ಮಿಂಡಿವೆಣ್** (ನಾ). ತುಂಬುಪ್ರಾಯದ ಹೆಣ್ಣು ; ನವಯುವತಿ : ಗಂಡುಮಿಸೆಪೊಗರ್ಗಣ್ಣದಿರ್ಗಿಜವಸ್ತ್ರಮಾಗೆ ಸುರೋರ್ವಿಯೊಳ್ಮಿಂಡಿವೆಣ್ಗಳ ತೋಳ ತಕ್ಕೆಯೊಳಾವಗಂ ಬಿಡದೊಪ್ಪುಗುಂ ಚಂಡವಿಕ್ರಮಧಾಮನುದ್ಭಟ ಭೂಮಿಪಾಲಕನುಲ್ಲಸನ್ಮಂಡಲಾಗ್ರಕಿದಿರ್ಚೆ ದುನ್ನತಶತ್ರುಘಾತ್ರಿಪಸಂಚಯಂ (ಉದ್ಭಟ. ೦-೪೯) ; ಉಚಿತವಱಿದು ಮಿಂಡಿವೆಣ್ಗಳು ನವರತ್ನಖಚಿತ ಭೂಷಣಹಸ್ತದಲಿ ರುಚಿವೆತ್ತು ಬಡಿಸಲ್ಕೆ ಶ್ರೀಕೃಷ್ಣರಾಯನು ರುಚಿಗೆಯ್ದು ಮೊಗವನೀಕ್ಷಿಸಿದ (ಚೋಪಕ. ೦೯-೦೪). [ಮಿಂಡಿ₁ + ಪೆಣ್]

**ಮಿಂಡು** (ನಾ). ೧. ಶೌರ್ಯ : ಕಲಿತನ : 'ಮಿಂಡೇಱಿಟ್' ಪರಾ. ೨. ವ್ಯಭಿಚಾರ ; ಹಾದರ : 'ಮಿಂಡಾಟಿಕೆ' ಪರಾ. ೩. ನವಯೌವನ : ತುಂಬುಪ್ರಾಯ : 'ಮಿಂಡಕ್ಕರು' ಪರಾ. ೪. ಇಂದ್ರಿಯಲಾಲಸೆ : ವಿಷಯಲಂಪಟತೆ : (೬). ೫. ಪುಂಡ ; ತಂಟೆಕೋರ : ತಕ್ಕನ ಕರ್ಕಡೆ ಗೊಂಡು ಮಿಂಡು ಮಾರ್ಪುರ್ಲೆದಿದಿರಾಂತು ನಿಂದೆಡಸಿ ಸುತ್ತುವ ಬಾರಿಗೆ ಮೆಯ್ಯನೊಡ್ಡಿ ಕೋಟಲೆಗೊಳಗಾಗಿ ಪಂದಿ ನಮೆವಂದಮದಾರ್ಗಮಸೇವ್ಯ ವರ್ಣನಂ (ಸುಕುಮಾರ. ೫-೦೬) ; ಮಸಗಿದನಿತಂ ಮಿಂಡುಂ ತಾನುಂ ಭಯಂ ಕರಮಾಗೆ ಬಂದಸಗವೊಟೆಯುಂ ಪೊಕ್ಕು . . . ವಸ್ತ್ರವ್ರಾತಂಗಳಂ ನೆಱೆ ಕೊಂಡು ಸಂಕಿಸದೆ ತುಡುವಂ (ರಘರ್ಷಾಪ್ಯ. ೨-೩೭). ೬. ಅಹಂಕಾರ ; ದರ್ಪ : ಕಂಡಾ ವಿಮರ್ದಕಂ ಮಿಗೆ ಮಿಂಡಿನೊಳಿರ್ದರ್ಥಪತಿಯ ಪಕ್ಷದೊಳ ವನುದ್ದಂಡತೆಯಿಂ ಧನಮಿತ್ರನನಂಡಲೆಯುತ್ತಿರದೆ ಬೈದನೆಲ್ಲರ್ ಕೇಳಲ್ (ರಸಿಕ. ೬-೦೩೩).

ಮಿಂಡುಗುದ್ದು = ೧. ಪ್ರಾಣಯದ ಮೋಹದಿಂದ ಬಿದ್ದ ಪೆಟ್ಟು ; ಪ್ರಿಯವಾದ ಹೊಡೆತ. ೨. (ಆಲಂ) ದೂರಾಲೋಚನೆಯಿಲ್ಲದೆ ಪ್ರಿಯನಿಂದ ಪಡೆದ ನಷ್ಟ. [ದೇ.॥ ತಮಿ. ಮಿಣ್ಡು]

**ಮಿಂಡುವಡೆ** (ನಾ). ಪುಂಡರ ಸಮೂಹ ; ತಂಟೆಕೋರರ ಗುಂಪು : ದೇವ ಭವತ್ಪುತ್ರಂ ಕರಮೋವದೆ ಸಂಕಿಸದೆ ಮಿಂಡುವಡೆವೆರಸದಟಿಂದೋವೋ ವೆಂದೆಳಱೆ ಜನಂ ದಾವಾನಲನಂತೆ ಸುಡುವನಿರುಳುಂ ಪಗಲುಂ (ರಘರ್ಷಾಪ್ಯ. ೨-೬೪). [ಮಿಂಡು + ಪಡೆ₂]

**ಮಿಂಡೆ** (ನಾ). ತುಂಬುಪ್ರಾಯದ ಸ್ತ್ರೀ : ತರುಣಿ : ಅಂಡೆಗಳ ಮಿಂಡೆಯರ್ ಕೊಂಡು ಕೊಸಱಿ . . . ನೀರ್ಗಳಂ ಚೆಲ್ಲುತಾಡಿದರ್ ಸರಸಿಯೊಳ್ ಸರಸ ಮಿಗಲು (ಪಂಪಭಾ. ೬-೨೮) : ಕುಂಡಲಿಯಸಜೀದಾತ ಮಿಂಡೆಯರಿಗೊಲಿಯುಪನೆ (ಸರ್ವಜ್ಞ. ೩೦೬); ಮಿಂಡೇರ ಬಳಗವು ಬೆನ್ನತ್ತಿ ಬಂದು ನಿನ್ನ ರಂಡೇರೈವರು ಕೂಡಿ ನಗುತಲಿ ನಿಂತು (ಕಂಠೀ. ೨೦-೨). [ಮಿಂಡು ... ಎ₂]

**ಮಿಂಡೆವೆಣ್ಣು** (ನಾ). = ಮಿಂಡಿವೆಣ್ : ಮಿಂಡೆವೆಣ್ಣುಗಳೆಲ್ಲ ಮದವೆದ್ದು ತವೊಳು ಕಂಡ ಕಡೆಗೆ ಚೆಲ್ಲವರಿದು . . . ಉದ್ದಂಡತನವಲಾಡುತಿಹರು (ತಂತ್ರಹಾ. ೩-೦೬). [ಮಿಂಡೆ + ಪೆಣ್ಣು (<ಪೆಣ್) ]

**ಮಿಂಡೇಳ್** ' ಮಿಂಡೇೞ್ ' ನೋ.

**ಮಿಂಡೇೞ್**, ಮಿಂಡೇಳ್ (ಕ್ರಿ). ೧. ಪೌರುಷದಿಂದ ಉಬ್ಬು : ಉರ್ಕಿನ ಕೇಣಿಯ ಚೂಣಿ ಸೊರ್ಕುಂಜೆರ್ಕಾಗಲೊಡಂ ಕಂಡು ಮಿಂಡೆೞ್ದು ಪಡೆವಳರೆಲ್ಲರುರವಣಿಸಿ ಮುಂಬರಿದೊಡ್ಡಿ ನಿಂದರಾಗೆ ಕಾದಿ ಪೋದಿ ತಾಂ ತಮಗೆ ಜವಹುರದ ಪಡಿವಳರಾದರ್ (ರಾಮಾಶ್ವ. ೦೯೩-೨೭). **ಮಿಂಡೇಳ್** : ೧. ಎದ್ದುದೀ ಕಟಕದಲಿ ಬಲ ಮಿಂಡೆದ್ದು ಸುಭಟರು ಸಮರಭೂಮಿಯ ಹೊದ್ದಿದರು ಝಳಪಿಸುವಡಾಯ್ದದ ಹೊಗರ ಹೊಳಹುಗಳ (ಕುಮಾರವ್ಯಾ. ೯-೦೩) : ಕಿತ್ತರಾ ಮಂದರಮಹಾದ್ರಿಯವತ್ಯಧಿಕಬಲವೀರ್ಯಶೌರ್ಯೋದ್ವೃತ್ತದೇವಾಸುರರು ಬೊಬ್ಬಿಱಿದಾರ್ದು ಮಿಂಡೆದ್ದು (ಹರಿಭಾಗ. ೯-೬-೨೯). ೨. ಪುದಿಸು ; ಸೊಕ್ಕು : ಪೊಚ್ಚಪೊಂದಾವರೆಗಳ ಧೂಳಿಗಳ ತನಿಗಂಪನುಂಡು ಮಿಂಡೆದ್ದ ಭೃಂಗಾಳಿಗಳ ಬಳಗಂ ಪರಿಯಲ್ (ಕೃಷ್ಣರಾಜಾ. ೩-೮) ; ಗಂಡಾರಣ್ಯದಿ ದೊಡ್ಡ ಮಂಡುಕ ತನಗಿದಿರಂಡಲೆಯಿಲ್ಲೆನುತ್ತಾ ಕೊಂಡಾಡುವಂತಿರೆ ಮಿಂಡೆದ್ದು ಕೆಡುವಂತೆ ಕಂಡು ಕಾಣದೆ ಹೋಹರು (ಕುಮುದಾ. ೭). ೩. ತುಂಬುಪ್ರಾಯವನ್ನು ಹೊಂದು ; ನವಯೌವನಕ್ಕೆ ಬರು ; ಮಿಂಡೆದ್ದ ಹೆಣ್ಗಳುಪವನಕೆ ನಡೆತಂದು . . . ಕಂಡಕಂಡವನಿಜಾತಂಗಳಂ ಚಿಗುರಿಸಿವರೊಡನೆ ಪೂದೋಱಿಸಿದರು (ಕೃಷ್ಣರಾಜಾ. ೩೦-೩) : ಮಿಂಡೆದ್ದ ಪೊಲಗಾವ ಪಾಮರಿಯರುಂ ಮನದೊಲವಿನಿಂ ಪಾಡೆ (ಪ್ರ. ೧-೦೭-೩೮).

[ಮಿಂಡು – ಎೞ್₁]

**ಮಿಂತು** ' ಮಿಟ್ಟು ' ನೋ.

**ಮಿಂದು₁** ' ಮೀ₁ ' ಪರಾ.

**ಮಿಂದು₂**, ಮಿಾದಿ (ನಾ). (ದೇವತೆಗಳ ಹೆಸರಿನಲ್ಲಿಡುವ) ಮುಡಿಪು : ಮಿಾಸಲು : ಗವಱೆಗಳಯ್ಯೂರ್ವ್ವರುಮುಭಿನವಸೋಮೇಶಂಗೆ ಮಿಂದಿನಲು ಪಣವೊಂದಂ ಧ್ರುವವಾಗೆ ಪಸುಂಬೆಗೆ ಹಾಗವನೆಱಕದೆ ಕರ್ತ್ರುಯಲ್ಲಿ ಪೇಳೆಯಸಿತ್ತರ್ (ಕರ್ನಾ. IX-i, ೦೭೩-೬೦: 1099). P ಇದು ' ಮಿಾದು ' ಎಂಬುದರ ಅಪಲಿಖಿತವಿರಬಹುದೆ ?. **ಮಿಾದಿ** : ಹೋದ ಇರುಳು ಕಾರಣಂಗೆ ಇಟ್ಟ ಮಿಾದಿಯನ್ನು ನಾಯಿ ತಿನ್ನುತ್ತ ಇದೆ (ಪುರಂದ. ೦೩೧).

[ದೇ.॥ ಮಲ. ಮಿಾತ್ತು ; ಕೊಡ. ಮಿಾದಿ ; ತೆಲು. ಮಿಾದು]

**ಮಿಕ** ' ಮಿಗ ' ನೋ.

**ಮಿಕಿಮಿಕಿ** (ನಾ). ಆಶ್ಚರ್ಯದಿಂದ ಎವೆಮಿಟುಕಿಸದೆ ನೋಡುವುದನ್ನು ಸೂಚಿಸುವ ಒಂದು ಅನುಕರಣ ಶಬ್ದ : ವರ್ತಕನ ಮೋರೆಯನ್ನು ಮಿಕಿಮಿಕಿ ನೋಡುತ್ತ (ಮುಂಬಯಿ. ೩-೭೪) : ಅವೆಲ್ಲ ಹಸಿದು ತಿರುಗುವ ಅನಾಥಮಕ್ಕಳ ಹಾಗೆ ಭೂಪತಿಯ ಮುಖವನ್ನೇ ಮಿಕಿಮಿಕಿ ನೋಡುತ್ತವೆ (೩೭.೪. ೨೭೦).

**ಮಿಕ್ಕ** ' ಮಿಗು ' ಪರಾ.

**ಮಿಕ್ಕಡ** (ನಾ). ಹೆಚ್ಚಳ : ಆಧಿಕ್ಯ : ಎಳೆನೊರ್ಕು ಜಕ್ಕುಲಿಪಂತೆ ಮಿಕ್ಕಡದಿಂದ ರಾಗಾಂಕುರಂ ನೆಗೆವನ್ನವಾಗಿರೆ ಮೆಯ್ಪುವರ್ ನಲಿದುಣ್ಮಿ ತಳ್ಳಂಕಗುಟ್ಟಿ ಮುಟುಂಗಿ ಪೊಣ್ಮಿ ನಿತಂಬದಿಂ ಮದನದ್ರುವಂ (?) (ಸೂಕ್ತಿಸು. ೦೩-೦೦). [ದೇ.॥ ತೆಲು. ಮಿಕ್ಕಟ. ಮಿಕ್ಕುಟ]

**ಮಿಕ್ಕು₁** (ಕ್ರಿ). ೧. ಮಿಾರು : ಅತಿಕ್ರಮಿಸು : ಮಿಂಚುಬೆಳಗುಚ್ಚಳಿಸಿದಂತೆ ದಟ್ಟಯಿಸ್ಸ ಬರೆ ಸಂಚಳಿಪ ಮನಕೆ ಮಿಕ್ಕಲ್ಕೆಱಪನೀಯದಿರೆ (ಪ್ರಭು. ಪ. ೩೨-೪) : ಕನ್ನಡ ಲಯದ ಯಾವುದೇ ಗಣ ಎರಡು ಅಂಶಗಳ ವ್ಯಾಪ್ತಿಗಿಂತ ಕಡಿಮೆಯಾಗದು : ನಾಲ್ಕು ಅಂಶಗಳನ್ನು ಮಿಕ್ಕದು (ಛಂದೋ. ೭೯). ೨. ಉಳಿ : ಬಾಕಿಯಿರು : ಆಗಳಂಗಸೆ ತೂಪಿಱಿದ ತನುಭಾಗವುಳಿಯಲು ಶಿವನ ಮಿಕ್ಕಿದ ಭಾಗದೊಳು ಹುಗುಳೇಳೆ (ಬಸವ. ೦೩-೨೨) ; ಶಿವನೇ ವಿಪತ್ತು ಹೊಂದುವಂತವನಾದನು. ಮಿಕ್ಕಿದ ಜನರುಗಳಂ ಪೇಳುವುದೇಕೆ (ಪ್ರ. ೧೦೬). [ < ಮಿಗು]

**ಮಿಕ್ಕು₂** ' ಮಿಗು ' ಪರಾ.

**ಮಿಕ್ಕು₃** (ನಾ) ೧. ಉಳಿದುದು ; ಇತರ : ಜೀವರತ್ನಕಣಿಯೋ ಮಿಕ್ಕಾದ ಪಾಷಾಣಗಳ್ (ಸೋಮೇಶ. ೦೦): ಅವುವೊಂದುಸಿರ್ವ ಸಮುಚ್ಚಯದುಮುವಿಧಿ ನಿರುತಂ ದ್ವಿತೀಯೆಯೊಳವೊಕ್ಕರ್ಕುಂ ಸಮನಿಸವೆಂದುಂ ಷಷ್ಠಿಯೊಳುಮುಮವು ಮಿಕ್ಕಿನ ವಿಭಕ್ತಿಗಳ ಮೇಲಿರ್ಕುಂ (ಶಮದ. ೦೨೨). ೨. ಮಿಗಿಲು : ಅತಿಶಯ : ಸಾಯದುಳಿದವರಿಲ್ಲ ಮಿಕ್ಕಿನ ನಾಯಕರೊಳಕಟ (ಕುಮಾರವ್ಯಾ. ೩-೩೯). ೩. ಹೆಚ್ಚಳ : ಆಧಿಕ್ಯ: (?). [ < ಮಿಗು. / ತಮಿ. ಮಿಕ್ಕು, ಮಿಕ್ಕ = ಅಧಿಕವಾದ]

**ಮಿಗ**, ಮಿಕ (ನಾ). ೧. ಕಾಡಿನಲ್ಲಿ ವಾಸಿಸುವ ಮೃಗ : ವನ್ಯಪ್ರಾಣಿ : ಲಲಿತಘಟಿಗೊಂದು ಮಿಗಮಂಪೊಟ್ಟಡಂ ಬೇಂಟೆ ಸಮನಿಸದೆ ಪೊಱಲ್ಗೆಪೋದೊರ್ (ವಡ್ಡಾರಾ. ೯೩-೨೩): ಮುಂದಣ ಮಿಗಮಂ ಕಟ್ಟಿಪದೆ ಸಂದಿಸಿ ಬೞಿಗೊಳ್ವ ಮಿಗಮುಮಂ ಕಟ್ಟಿಪದೆ ತಾನೊಂದಳವಿದಪ್ಪದೆಚ್ಚು ಬಲಿಂದಮನಿಂ ಬಿಲ್ಲ ಬಲ್ಮೆಯಂ ಪೊಗೞಿಸಿದಂ (ಶಂಕರಾ. ೩-೯೬) : ಮಿಗವಲ್ಲ ಮಾನಸರೂಪಲ್ಲ ಕೇಸರಿಮೊಗ ತ್ರೆಱಿವಾಯ ಪಲ್ಗರಿದು ನಖದಿಂದಲಹಿತನ ಗುಂಡಿಕೊಂಡಱುಹಿದ ಪ್ರಕಟಿತ ಬಲುಹ ತೋಱಿನಗೆ (ಪೋಹತ. ೪೦-೨೨) ; ಕಾಡೊಳಿರ್ದುಂ ಮಿಗಂಗಳ್ ಬಾನೊಳಿರ್ದುಂ ಖಗಂಗಳ್ ಮಱಿಗಳನಾರಯ್ಯುತುಂ ಸೊಗಂಬಾಬ್ಬುವು (ರಾಜಶೇ. ೦೭-೨೩). ' ಮಿಗವೇಂಟೆ ' ಪರಾ. ೨. ಜಿಂಕೆ : ಚಿಗರೆ : " ಮಿಗವೆಂದೆರಲೆ " (೯೭೫. ೩೦-೯೯): " ಮಿಗವೆಂದಕ್ಕುಮದೆರಲೆಗೆ " (೪೨೬೦. ೬೦). ೩. ಕಸ್ತೂರಿಮೃಗ : ' ಮಿಗಸೊಕ್ಕು ' ಪರಾ. **ಮಿಕ** : ೪. ಹಂದಿ ; ಸೂಕರ : " ಮೃಗಃ = ಮಿಕಂ " (ಕಾಶ್ಯ. ೨೮೭); ಅನತಿ ದೂರದಲ್ಲಿಯೇ ಮಿಕ ತನ್ನ ಮರಿಗಳ ದಂಡಿನೊಡನೆ ಭೂತಾಡನ ಮಾಡುತ್ತ ಓಡಿಹೋಯಿತು (ಪ್ರ. ೭೯). ೫. ಬೇಟೆಯ ಪ್ರಾಣಿ : ಹುಲಿಯು ತನ್ನ ನಖಪಂಜರದ ಒಂದೇ ಹೊಡೆತದಿಂದ ದೊಡ್ಡ ದೊಡ್ಡ ಮಿಕಗಳ ಹೊಟ್ಟೆಯನ್ನು ಹರಿಯುತ್ತದೆ (ಮುಂಬಯಿ. ೪-೩೦). ೬. (ಆಲಂ) ಸುಲಭವಾಗಿ ಮೋಸಕ್ಕೆ ಗುರಿಯಾಗುವ ವ್ಯಕ್ತಿ : ಬಲಿಪಶು : ನಿಮ್ಮಿಬ್ಬರ ಹಣ ನೆಲಕ್ಕೆ ಬಿದ್ದಾಗ ಇಬ್ಬರಿಗೂ ಬುದ್ಧಿಬರುವುದು. ಮಿಕವಾಗಿದ್ದಾನೆ (೭೭೩೩. ೦೩೩).

**ಮಿಗದರಸ** = [ಜೈನ] ನೂರು ಇಂದ್ರರಲ್ಲಿ ಒಬ್ಬ; ಸಿಂಹ ಎಂಬ ಹೆಸರಿನ ಇಂದ್ರ : ಜೋಯಿಸರಾಣ್ಮಂ ಮಿಗದರಸಂ ಮೊದಲಾಗಿ ಸಲೆ ಸೊಗಯಿಸುವ ಶತೇಂದ್ರರ್ . . . ಗಂಧಕುಟಿಯೊಳೆಡಗಿಱಿದಿಹುದು (ಜಯನೃ. ೦೭-೩೯). **ಮಿಗದಾಣ್ಮ** = ಪ್ರಾಣಿಗಳ ಒಡೆಯ : ಮೃಗರಾಜ : ಸಿಂಹ : " ಮಿಗದಾಣ್ಮಂ ಮೃಗದೇವನಲ್ಲಿ " (ಕಬ್ಬಿಗರ. ೯೭).

[< ಪ್ರಾ. ಮಿಗ. / ಸಂ. ಮೃಗ]

**ಮಿಗಗಯ್ಯ** ' ಮಿಗಗೆಯ್ಯ ' ನೋ.

**ಮಿಗಗೆಯ್ಯ**, ಮಿಗಗಯ್ಯ, ಮಿಗಗೈಯ (ನಾ). ಜಿಂಕೆಯನ್ನು ಕೈಯಲ್ಲಿ ಧರಿಸಿದವನು : ಶಿವ : " ಗೊರವನೈಕಲ್ವೆಟ್ಟಳಿಯನೈಮೊಗಂ . . .

ಮಿಗಗೆ[ಪಾಠಾಂ. ಗ]ಯ್ಯನುಂ . . . ಕಡಿಗಣ್ಣನು " (ಶಬ್ದಕೈ. ೯): " ಎಳೆದೇರ . . . ಮಿಗಗೆ[ಪಾಠಾಂ. ಗ]ಯ್ಯನಿಂಗಳಗಣ್ಣ ಸಾಂತ ಪಂದಲೆವಚ್ಚ ಗಂದರ ಗಿಮಿಯನೀಸರಂ ದೇಸಿಗಂ " (ಶಬ್ದಮಂ. ೩). **ಮಿಗಗಯ್ಯ** : " ಎಣ್ಮಯ್ಯಂ . . . ಮಿಗಗಯ್ಯಂ . . . ಅಯ್ಮೊಗಂ—ಈ ೩೩ ಈಶ್ವರಂಗೆ ಪೆಸರ್ " (ಕಕಾ. ೪೭-೧). **ಮಿಗಗ್ಗೆಯ** : " ಮಿಗಗ್ಗೆಯಂ ಕಣ್ಣಡಿಗಂ . . . ಮಾದೇವ ಸಬ್ಬ ಗಂದರಗಿಮಿಯಂ " (ಕಶಕೊ. ೦೭).

[ಮಿಗ + ಕೆಯ್$_2$ + — ಅ$_7$]

**ಮಿಗಗ್ಗೆಯ** ' ಮಿಗಗೆಯ್ಯ ' ನೋ.

**ಮಿಗತೆ** ' ಮಿಗುತೆ ' ನೋ.

**ಮಿಗದಾಣ** (ನಾ). ಪ್ರಾಣಿಗಳು ಇರುವ ಪ್ರದೇಶ ; ವಕ್ಕೆ : " ನೊಸಲ್ನ ಮಿಗದಾಣ ಪಣೆ " (ಶಬ್ದಮಂ. ೯೭). [ಮಿಗ + ತಾಣ]

**ಮಿಗದೇರ** (ನಾ). ಜಿಂಕೆಯನ್ನು ವಾಹನವನ್ನಾಗಿ ಉಳ್ಳವನು : ವಾಯು : " ಕಂಪುವಳಂ ಎರಲ್, ಮಿಗದೇರಂ, ಎಲರ್, ಗಾಳಿ—ಈ ೫ ವಾಯುವ ಪೆಸರ್ " (ಕಕಾ. ೪೯-೩೮); ಮಿಗದೇರನ ಮಿಗಮಲ್ಲಿಯ ಮಿಗವಗೆಯ ರವಕ್ಕೆ ಪೆಳರ್ದು ನೋಳ್ಪಂದಮಂದೇಂ ಸೊಗಯಿಸಿದುದೊ ಸವಿನೋಟದ ಬಗೆಯಂ ವಿಚರಾಬಲಾಳಿಗುಪದೇಶಿಪವೋಲ್ (ಶಶಿಕೊ. ೦-೩೯).

[ಮಿಗ + ತೇರ್$_2$ + —ಅ$_7$]

**ಮಿಗದೊವಲ್** (ನಾ). ಜಿಂಕೆಯ ಚರ್ಮ ; ಕೃಷ್ಣಾಜಿನ : ಒಗೆದುದೊ ತಿಂಗಳಿಂಗೊಳದೊಳೇನಸಿತೋತ್ಪಲಮಿಂದು ನಾರದಂ ಮಿಗದೊವಲುಟ್ಟನೋ ಶಶಿ (ಶಕಬಿ. ೬-೨೮). [ ಮಿಗ + ತೊವಲ್$_3$ ( <ತೋಲ್$_1$ ) ]

**ಮಿಗಪತಿ** (ನಾ). ಪ್ರಾಣಿಗಳ ಒಡೆಯ ; ಮೃಗರಾಜ : ಸಿಂಹ : ತಿಳಿ ಮಿಗಪತಿ ಯಾವನೊರ್ವ ಸಮ್ಯಕ್ತ್ವವ ತಳೆದನವನೆ ಧನ್ಯನಲ್ತೆ (ವರ್ಧತ. ೮-೦೦೯). [ಮಿಗ + ಪತಿ$_2$]

**ಮಿಗಬೇರ** (ನಾ). (ಜಿಂಕೆಗೆ ಶತ್ರುವಾದ ಹುಲಿಯ ರೂಪ ಧರಿಸಿದ) ಒಬ್ಬ ರಾಕ್ಷಸನ ಹೆಸರು : ವ್ಯಾಘ್ರಾಸುರ : ತುಳಿಲಳವಾಂತು ನಿಂದ ಮಿಗಬೇರನನಿಕ್ಕಿ . . . ಬೆಳ್ಪಸಂದಳೆದಸೆದಿರ್ದ ಬಾಸ್ಪಮಿರನೊಳ್ವರಿಜಂ ತಳೆದೊಪ್ಪಿ ತೋಱಿದಂ (ಶಬಶು. ೫-೯). [ಮಿಗ + ಬೇರ$_1$]

**ಮಿಗಲಚ್ಚಣ** (ನಾ). ಜಿಂಕೆಯ ಚಿಹ್ನೆಯನ್ನು ಹೊಂದಿದವನು : ಚಂದ್ರ : "ಜೊನ್ನೊಡಲಂ . . . ಮಿಗಲಚ್ಚಣಂ . . . ತಿಂಗಳ್— ಈ ೨೦ ಚಂದ್ರನ ಪೆಸರ್" (ಕಕಾ. ೪೮-೨೩). [ಮಿಗ + ಲಚ್ಚಣ$_2$]

**ಮಿಗವಕ್ಕೆ** (ನಾ). = ಮಿಗದಾಣ: "ಹಣೆಯೆಂದು ಮಿಗವಕ್ಕೆ" (ಶಬ್ದಕೈ. ೫೦): ಅವರು ಪಚ್ಚೆಗಳ ಗುರುತನ್ನು ಹಿಡಿದು ಮಿಗವಕ್ಕೆಗಳನ್ನು ತಿಳಿದು ಕೊಳ್ಳುವರು (ಮತಶಿ. ೨೦). [ಮಿಗ + ವಕ್ಕೆ$_1$ (< ಪಟ್ಟಿ)]

**ಮಿಗವಕ್ಕೆಗ** (ನಾ). ಜಿಂಕೆಯು ತನ್ನಲ್ಲಿ ನೆಲಸಿರುವಂಥವನು ; ಜಿಂಕೆಗೆ ಆಶ್ರಯಸ್ಥಾನವಾಗಿರುವವನು : ಚಂದ್ರ : "ಸವಿಗಡಲಣುಗಂ . . . ಮಿಗವಕ್ಕೆಗಂ . . . ಶಶಿಯು ನಾಮಂ" (ಶಬ್ದಕೈ. ೪೩): ಕಡುಕೊರ್ಬಿ ಪರ್ಬಿದ ಮರ್ಬು ಮಿಗವಕ್ಕೆಗನೊಳಾದ ಪಗೆತನಮಂ ಬಗೆಗೊಂಡು ತಜ್ಜನಕ ವನನಿಧಿಯಂ ಕನಲ್ದು ಸುತ್ತಮೊತ್ತರಿಸಿ (ರಾಶಶೀ. ೦-೧೦೨ ವ).

[ಮಿಗ + ವಕ್ಕೆ$_1$ (<ಪಟ್ಟಿ$_3$) + — ಗ$_2$]

**ಮಿಗವಗೆ** (ನಾ). ಜಿಂಕೆಯ ಶತ್ರು : ಹುಲಿ : ಮಿಗದೇರನ ಮಿಗಮಲ್ಲಿಯ ಮಿಗವಗೆಯ ರವಕ್ಕೆ ಪೆಳರ್ದು ನೋಳ್ಪಂದಮಂದೇಂ ಸೊಗಯಿಸಿದುದೊ ಸವಿನೋಟದ ಬಗೆಯಂ ವಿಚರಾಬಲಾಳಿಗುಪದೇಶಿಪವೋಲ್ (ಶಶಿಕೊ. ೦-೩೯).

[ಮಿಗ + ಪಗೆ$_2$]

**ಮಿಗವಟ್ಟೆ** (ನಾ). ಮೃಗಗಳು ಓಡಾಡುವ ಜಾಡು.—ಮಾರ್ಗ : "ಸರುವೆಂದು ಮಿಗವಟ್ಟೆ [ಪಾಠಾಂ. ಕ್ಕೆ]" (ಕಕಾ. ೫೦—೬೯); "ಸರುವೆಂದೆನಲ್ಕೆ ಮಿಗವಟ್ಟೆಯುಂ ತಾಂ" (ಕಶಕೊ. ೫೮). [ಮಿಗ + ಬಟ್ಟೆ$_1$]

**ಮಿಗವಜಿ** (ನಾ). ಜಿಂಕೆಯ ಮರಿ : ಮರಿಹುಲ್ಲೆ : " ಕೋಸು ಮಿಗ ವಜಿಯುಕ್ಕ" (ಶಬ್ದಕೈ. ೫೨). [ಮಿಗ + ವಾಜಿ]

**ಮಿಗವೇಂಟೆ** (ನಾ). ಕಾಡುಪ್ರಾಣಿಗಳ ಶಿಕಾರಿ ; ವನ್ಯಮೃಗಗಳ ಬೇಟೆ : ಶಸ್ತ್ರವಿದ್ಯೆಯೊಳಂ ಮಿಗವೇಂಟೆಯೊಳಂ ನಿರತಿಶಯಪ್ರತಿಭಾಶಾಲಿಯನಾಗಿಸಿದಂ (ಮಶಾತ. ೫-೩೯ ವ). [ಮಿಗ + ಬೇಂಟೆ]

**ಮಿಗಸೊಕ್ಕು** (ನಾ). ಮೃಗಮದ; ಕಸ್ತೂರಿ : ಅಱಿದುವಸುಳೆಗಳು ಅನುವಂ ಪಡೆದುವು . . . ನನೆವಿಲ್ಲನ ಪಸುರ್ಗಾವಿನ ಮಿಗಸೊಕ್ಕಿನ ಪೊಸಮಿಂಟೆ ಯೆನೆ (ಜಮಕಾ. ೮-೩೯). [ಮಿಗ + ಸೊಕ್ಕು$_3$ (<ಸೊರ್ಕು$_2$)]

**ಮಿಗಿತೆ** ' ಮಿಗುತೆ ' ನೋ.

**ಮಿಗಿಲ್**, **ಮಿಗಿಲು** (ನಾ). ೧. ಹೆಚ್ಚಾದುದು ; ಅಧಿಕವಾದುದು : ಹೆಚ್ಚಳ : ಆ ಮುನಿಮುಖ್ಯನ ಸತಿ ಲೋಪಾಮುದ್ರೆ ತನೂಜರಿಂದೆ ಮಿಗಿಲೆನಿಸಿದತಿಪ್ರೇಮದೆ ನಡಪಿದ ವಿಟಪಿಸ್ತೋಮದಿನಾಶ್ರಮಪದಂ ಮನಂಗೊಳಿಸಿರ್ಕುಂ (ಕಾದಂಪೂ. ೮೦೯) ; ಮುಡದಿಯೆನ್ನಗಲೊಳಗೆ ಸಕಲದೇವಾನ್ನವ ಒಡೆಯರಿಂದಲೂ ಮಿಗಿಲಾಗಿಕ್ಕಲು ತೆಗೆದಿರಿಸಿದೆನು (ಬಸವ. ೪೩೯) ; ಮುಸುಕುವುದು ಮುಗಿಲೊಮ್ಮೆ ಸೂರ್ಯನ ಮಸಕ ಮಿಗಿಲಹುದೊಮ್ಮೆ (ಕುವ್ಯಾಕ. ೦೦-೩೭). ೨. ಶ್ರೇಷ್ಠವಾದುದು ; ಉತ್ತಮವಾದುದು ; ಮೇಲಾದುದು : ಚಲದೊಳ್ ದುರ್ಯೋಧನಂ . . . ಧರ್ಮದೊಳ್ ನಿರ್ಮಲಚಿತ್ತಂ ಧರ್ಮಪುತ್ರಂ ಮಿಗಿಲವರ್ಗಳನೀ ಭಾರತಂ ಲೋಕಪೂಜ್ಯಂ (ಪಂಪಭಾ. ೦೯-೬೪); ಈ ಲೋಕಕ್ಕಾ ಮಾನಿನಿಯ ಕುಲಂ ಮಿಗಿಲ್ (ಪಂಬರ. ೪-೮೨). ೩. ಶ್ರೇಷ್ಠತೆಯಿಂದ ಕೂಡಿದ ವ್ಯಕ್ತಿ ; ಉತ್ತಮ ವ್ಯಕ್ತಿ : ಆ ದೇವಿಗಂ ರೂಪವಿಳಾಸ ಶ್ರೀಯೊಳೀ ದೇವಿಯ ಮಿಗಿಲ್ (ಆದಿಪು-೫-೨೨); ಧುರದೊಳವಂ ಮಿಗಿಲೆನಗೆನೆ ನಿನಗೆ ಪಗಲೊಳೇಂ ಕಟ್ಟಲೆಯೋ (ಪಂಪಭಾ. ೦೨-೦೪೩); ಅತನುಶ್ರೀಕಾಂತೆಗೀ ಕಾಂತೆಯೆ ಮಿಗಿಲ್ (ಮಲ್ಲಿಪು. ೩-೮೭); ರತಿ ರಂಭೆ ತಿಲೋತ್ತಮೆ ಭಾರತಿಯೆಂಬಿವರ ದೊರೆಗೆ ಮಿಗಿಲೆನಿಸಿದ ಮತ್ಸತಿಯರ್ಪಲರಿರ್ದಪರ್ (ರಹರ್ಷಪು. ೩-೦೦೪); ತನಗೆಂತುಂ ಮಿಗಿಲೀ ಮಹೇಶಮದನಂ ತಾಂ ಮೋಹನಾಕಾರದಿಂ (ಕುಸುಮಾ. ೧೦-೭೦). ೪. ಅತಿಕ್ರಮ ; ಉಲ್ಲಂಘನೆ : "ಅತ್ಯಾಧಾನಮೆನಲತಿಕ್ರಮಮೆನಲು ಮಿಗಿಲೆನಿಕ್ಕುಂ " (ಮಂಗರಾ. ೦೩೩-೨೮). **ಮಿಗಿಲು** : ೧. ವೈದಿಕರಪ್ಪ ವೇದವಿತ್ತುಗಳೊಂದುಕೋಟಿಗೆ ಅನ್ನವನಿಕ್ಕಿದ ಫಲಕ್ಕೆ ಕೋಟಿಮಿಗಿಲು ಶಿವಶರಣಂಗೆ ಒಂದು ಭಿಕ್ಷವನಿಕ್ಕಿದ ಫಲ ಕೋಟಿಕನ್ಯಾ ದಾನದ ಫಲಕ್ಕೆ ಮಿಗಿಲು ಒಬ್ಬ ಭಸ್ಮಾಂಗಿಯ ಒಂದು ವೇಳೆಯ ತೃಪ್ತಿ (ಆದಿವ. ೦೨-೨೨); ಭುವನರಕ್ಷಕ ಮತ್ಸ್ಯದೇವರ ಹವಣನಾರೆಣಿಸುವರು . . . ವೇದವಾಕ್ಯಕೆ ಹತ್ತು ಮೊಳ ಮಿಗಿಲು (ಸಂಶತ. ೪-೨೭) ; ಬಳಿಕ ನಿಂದುದು ರಾಜ್ಯಲಕ್ಷ್ಮಿಯ ವಿಲಸದಭಿನವತೇಜ ದಿಗುಮಂಡಲಪರೀತ ಪುರಂದರನ ವೈಭವಕೆ ಮಿಗಿಲೆನಿಸಿ (ಕೊರರಾ. ೦-೩-೦೮) : ಜಗದೊಳಗೆ ಜ್ಞಾನವೇ ಮಿಗಿಲು (ಸರ್ವಜ್ಞ. ೩೦೭). ೩. ಜಾಣೆನೊಳು ವಾಣಿಗಿಮ್ಮಿಗಿಲು . . . ಎನಿಸಿ ಮೆಱೆವಳು ಹರಿಶ್ಚಂದ್ರನೃಪವರಸಿ (ಹತಕಾ. ೦-೪೯); ದೇವಾಸುರ ನರೋರಗನಿಕರವಲಿ ನಾರಾಯಣನೆ ಮಿಗಿಲು ಅರಸ ಸಂಶಯವೇಕೆ (ಕುವ್ಯಾಸ. ೮-೩): ನಳಭೂಪನೇ ನರಲೋಕದೊಳಗುತ್ತಮನಲಾ ತತ್ಪತ್ನಿ ಪಾರ್ವತಿಗೆ ನಾಕುಮಡಿ ಮಿಗಿಲು (ಕೊರರಾ. ೩-೨-೦೮). ೫. ಮುಂದಾದುದು : ಮುಂದಿರುವುದು : ಸರಳಿನಿಂ ವೃಷ್ಟಿಯಿಂ ಮನದಿಂ ರಥಾಶ್ವ ಮಿಗಿಲು (ಹತಕಾ. ೬-೩೩).

ಮಿಗಿಮಿಗಿಲು (ದ್ವಿರುಕ್ತಿ) : ಸುಖದ ಮಿಗಿಮಿಗಿಲಿನಿಂದಾಕೆ ಬೆಂದು ಮನನೊಂದು . . . ಪ್ರೇಮಧರ್ಮದಾಸ್ಯವನಾಂತು ತಂಗಿರುವಳು (ಗೊರೊ ಶಾ. ೩-೭೦). [< ಮಿಗು. / ತಮಿ. ಮಿಕಲ್; ತುಳು. ಮಿಗಿಲ್; ತೆಲು. ಮಿಗುಲು, ಮಿಕ್ಕಿಲಿ; ಐಯ್ಯ. ಮಿಗಿಲ್=ಉಳಿ]

**ಮಿಗಿಲು** 'ಮಿಗಿಲ್' ನೋ.

**ಮಿಗಿಲೆ** (ನಾ). ಸಮವಲ್ಲದ ಸಂಖ್ಯೆ; ಬೆಸ : ಪ್ರಸಾದದ ಬಿಡುಪುಷ್ಪಗಳನ್ನೆಣಿಸಿದರು; ಲೆಕ್ಕ "ಮಿಗಿಲೆ" ಯಾಗಿ ಬಂದಿತು (ಸಂಜಿವಾ. ೬೪) : ಐತಾಳರು . . . ಪ್ರಸಾದವನ್ನು ತೆಗೆದರು. 'ಮಿಗಿಲೆ' ಎಂದು ಹಿಗ್ಗಿನಿಂದ ಕಿರುಚಿ ನುಡಿದರು (ಮರಳು. ೩೦೯). [< ಮಿಗಿಲ್]

**ಮಿಗಿಲ್ಗಣ್** (ನಾ). ೧. (ಶಿವನ) ಹೆಚ್ಚಾದ ಕಣ್ಣು; ಮೂರನೆಯ ಕಣ್ಣು. ೨. (ಅಲಂ) ಗೆಲ್ಲಲು ಸಮರ್ಥವಾದ ದೃಷ್ಟಿಯುಳ್ಳವನು; ಕಣ್ಣಿನಲ್ಲಿ ಕಣ್ಣಿಟ್ಟು ನೋಡುವವನು : ಸಮರಕ್ಕಾಯುಧವೀವ ಕಯ್ವಿತ್ರರಣಕ್ಕಾಲೋಚನಕ್ಕಾಪ್ತಮಂತ್ರಿ ಮಿಗಿಲ್ಗಣ್ ಪರದುರ್ಗ್ಗವರ್ಗ್ಗವಿಜಯಕ್ಕಾಸ್ಥಾನರಂಗಕ್ಕೆ ರತ್ನಮಯಾಕಲ್ಪಮೆನಿಪ್ಪಿನಂ ನೆಗಳ್ದ ಬಲ್ಲಾಳಂಗಮಾ ನಾರಸಿಂಹಮಹೀಶಂಗವಮಾತ್ಯನಾದನಧಿಕಂ ಪೋಲಾಳ್ವದಂಡಾಧಿಪಂ (ಎಕ. XI. ದಾವಣ. ೨೫-೫೫: 1224). [ಮಿಗಿಲ್ + ಕಣ್]

**ಮಿಗಿಸು** (ಕ್ರಿ). ೧. ಹೆಚ್ಚಿಸು; ಅತಿಶಯಿಸು : ಮಿಗಿಸಿದನು ರವಿರಾಜವಂಶಾದಿಗಳ ರಾಯರ ರಾಜಧರ್ಮದ ಸೊಗಸನಮಲಚರಿತ್ರದಲಿ ಪಾಲನೆಯು ಲೂರ್ವರೆಯು (ಕೂರಶಾ. ೧-೪-೪); ಸಾಹಸಂ ಮಿಗಿಸಿದ ಪೂರ್ಯ್ಯಾಡಿ ತನಿವೀರರಸದಿಂದೆ ಸೊಗಸಿದರ್. . . ಚತುರಚತುರಂಗದವರು (ಕೃಮಿಶಾ. ೬-೪೦). ೨. ಉಳಿತಾಯ ಮಾಡು ; ಮಿಗುವಂತೆ ಮಾಡು : ಎತ್ತುಗಳನ್ನು ಮಾರಿ ಬಂದಿದ್ದರಲ್ಲಿ ಹಣ ಮಿಗಿಸಾದ ಮೇಲೆ ಚಿಕ್ಕ ಎತ್ತುಗಳನ್ನು ಕೊಳ್ಳುವಾ (ಬಂದಜೀ. ೯) ; ಸಂಬಳದ ಹಣ ಸ್ವಲ್ಪ ಮಿಗಿಸಿಟ್ಟುಕೊಳ್ಳಬೇಕು (ಕೂಸಿಬೇ. ೨೬೫). ೩. (ಬಳಿಯಲ್ಲಿಯೇ) ಇಟ್ಟುಕೊಳ್ಳು; ಉಳಿಸಿಕೊಳ್ಳು : ಕಷ್ಟದಿಂದಾವು ಮಣೆಯುಂ ಕುಡದೆ ಮಾಣ್ಕೊಂಡೇಂ ನಷ್ಟಮಾದಪುದೆ ಪಾರ್ಥನ ಜೀವಂ. . . ನೀನರಿಪ್ಪನಾಗದಿರಿನ್ನು ಮಿಗಿಸಿಕೊಳ್ವೆವು ಲೇಸನು (ಕೃಮಿಶಾ. ೨೯-೨೪). ೪. ಮೀರು ; ಮೀರಿಸು : ಮುಂದೆ ಶೋಭಾನವಂ ಪಾಡುತಡಿಯಿಟ್ಟುದಾನಂದದಿಂದೈದೆಯರ್ ತೂರ್ಯತ್ರಯಮುಮುದಿತಿನಂದನನ ನಾಟ್ಯಶಾಲೆಯು ಮಿಗಿಸಿತೇನೆಂಬೆನಿದಿರ್ಗೊಳ್ವ ಸಂಭ್ರಮವನು (ತಬಿಕೆ. ೬-೫೪). ೫. ಹೋಗದಂತೆ ತಡೆ : ಹಿಂದುಳಿಸು : ಅಡಂಗಲುಮಡಂಗಿಸಲುಮೊಡ್ಡಲುಮೊಡ್ಡಿಸಲುಂ ಪುಗಿಸಲುಂ ಮಿಗಿಸಲುಂ . . . ಏಱಿದುದನೇಱಿಸಲುಂ ಜಾಣನಾಗಿ (ಸಂಶಕಾ. ೫-೯೪ ವ); ಅಳ್ದಳೆಯೆ ಮಿಗಿಸುವಳಲ್ಲ ದೇಹವ ಪರಿಸ್ತರಣವ ಸಗಿಸ ಹೇಳೆಂದು ಪೇಳ್ದಳು (ಮೋಹತ. ೩೯-೯). [ಮಿಗು + –ಇಸು$_3$]

**ಮಿಗು** (ಕ್ರಿ). ಮಿಕ್ಕು$_2$ (ಭೂತಸೂ). ಮಿಕ್ಕ (ಭೂತಕೃ). ೧. ಹೆಚ್ಚಾಗು : ಅಧಿಕವಾಗು : ಮಿಸ್ಸು ಮಿಕ್ಕು ಪರವಸದಿಂದು ಕಣ್ಣೀರ್ಗಳ್ ಬಂದು ನೀಡುಂ ಬೇಗಮಿರ್ದು ನೋಡಿ (ವಡ್ಡಾರಾ. ೯-೨೬); ಮುಕ್ಕುಳಿಸಿಯುಂಗುಟ್ಟ ಮಧುಪಂ ಮಿಕ್ಕೆಸೆವಾಪೋದಮಿದಜಿ ತಣ್ಗಂಪಿನೊಳೊಳಪೊಕ್ಕವು (ಆದಿಪು. ೧೧-೧೨೦); ಮಿಕ್ಕ ಸತ್ಕ್ರಿಯೆಗಳನವರನ್ನೆಸಕ್ಕೆ ಸಂತೋಷಂಬಡಿಸಿ (ಬಸಪು. ೩೨-೧೧); ಸುದೇಷ್ಣೆ ಮನದಲಿ ಹರುಷ ಮಿಗೆ ಹೊಂಗಿದಳು (ಕುವ್ಯಾವಿ. ೧-೨೮). ೨. ಶ್ರೇಷ್ಠವಾಗು ; ಉತ್ತಮವಾಗು ; ಮೇಲಾಗು : ನಮಿಲೂರಾ ಸಿರಿಸಂಘದಾಜ್ಜಿಗಣದಾ ರಾಜ್ಞೀಮತೀಗನ್ತಿಯಾರ್ ಅಮಲಂ ಸಲ್ಲದ ಶೀಲದಿಂ ಗುಣದಿನಾ ಮಿಕ್ಕೋತ್ತಮುಮ್ಮಿರ್ಕಳೆದೊರ್. . . ಸ್ವರ್ಗ್ಗಾಲಯಂ ಪಜಿದಾರ್ (ಎಕ. II (R), ೧೧೨-೨; 7ನೆಯ ಶತ); ಉತ್ತಮಂ ಆಟ್ಟಂ ಮಿಕ್ಕ ದರ್ಶನಜ್ಞಾನಚಾರಿತ್ರಾರಾಧನೆಯುಂ (ವಡ್ಡಾರಾ. ೭೪-೮); ಮಹೇಶ್ವರನಂ ಮೆಚ್ಚಿಸಿ ಮಿಕ್ಕ ಪಾಶುಪತಮಂ ಪೆತ್ತಾತನೇ ಸಾಹಸಂ ಒರಿದಂ ಬೆಲ್ವನುಮಪ್ಪನೆಂದು ಮನದೊಳ್ ಸೋಲ್ಲಿಪ್ಪಿಟಿಂ ನೋಡಿದರ್ (ಸಂಶಕಾ. ೮-೨೭); ರತ್ನಚಯಂಗಳಿಂ ಮಿಗುವ ಮುತ್ತುಗಳಿಂ ನೆಱೆ ಕೀಲಿಸಿರ್ದ ದಲ್ ನೂತ್ನಮೆನಿಪ್ಪಲಂಕರಣಮಂ ಸಲೆ ತೊಟ್ಟು (ಶಾರಪು. ೪-೦೭). ೩. ಮೀರು ; ಅತಿಕ್ರಮಿಸು ; ಉಲ್ಲಂಘಿಸು: "ಮಿಗು – ಅತಿಕ್ರಮಣೇ, ಅವಶಿಷ್ಟೇ ಚ" (ಶಮಧಾ) ; ದೇಶಿಯನೆ ನಿಱಿಸಿ ಬಿಂಡವಾ ಸಮುನ್ನತಿಶಯುಮಿದೆಂದು ಯತಿಯುಂ ಮಿಕ್ಕರ್ (ಸಬಿಶ. ೧-೭೫): ಅರಸುಮಕ್ಕಳ್ ತಮ್ಮ ಮರ್ಯಾದೆಯುಂ ಮಿಕ್ಕು ದ್ರವ್ಯಂ ಮೊದಲಾಗೊಡೆಯಮಜಿಯೊಳ್ ಲೋಭಿಪ್ಪರಪ್ಪರ್ (ವಡ್ಡಾರಾ. ೮೭-೭): ಜಳನಿಧಿ ಮೇರೆಯಂ ಮಿಗದೆ ನಿಂದುದು (ಸಮುಶ.೭-೯೪): ಆತ್ಮಮಾನಸಗಭೀರತೆಯುಂ ಮಿಗುವಂಬುರಾಶಿ (ಶಕ್ಪು. ೯-೧೧೦). ೪. ಹಾಯು : ದಾಟು : ಕ್ರಮಿಸು : ಬಿಲ್ಲುಂದುಡುಕಿ ಕುಂತೀಭೋಜ ಹೊಕ್ಕನು ಮಿಕ್ಕನವರುಗಳ (ಕುವ್ಯಾದ್ರೋ. ೧೭-೯೦): ಶಶಿ ರವಿಗಳಂ ಮಿಕ್ಕು ತಾರಕೆಗಳನ್ನೋರಂತೆ ಪಿಂದುಳುಹಿ. . . ಮಾರುತಿಯುಂ ಪೋಗುತಿರೆ (ವೆಂಕಾರಾ. ೫-೧-೫೯). ೫. ತಿರಸ್ಕರಿಸು; ಕಡೆಗಣಿಸು : ನನೆಯಂಬಂ ಮಿಗೆ ಕಣ್ಮಲರ್ ಮಕರಮಂ ಕ್ರೋಡಧ್ವಜಂ ಪೋಲೆ ಕರ್ಬಿನ ಬಿಲ್ಲಂ ಗೆಲೆ ಪುರ್ಬು (ಗದಾಯು. ೧-೭); ಮಿಕ್ಕು ಮೀಱಿ ಹೋಹನ ಬೆಂಬತ್ತಿ ಕೈವಿಡಿವೆನು (ಮಹಾಪ. ೨. ೯೦-೮೭). ೬. ಸೋಲಿಸು; ಪರಾಭವಗೊಳಿಸು : ಎನ್ನಂ ಬಿಲ್ಬಲ್ಮೆಯೊಳ್ ಮಿಗ [ಪಾಠಾಂ. ಗಿ]ಲೆಯ್ದೆ ಬೀರ್ವರಿದ ಪಗೆಯುಂ ಬನ್ನಂಬಟ್ಟನ್ನ ಮುನ್ನಿನ ಬನ್ನಮುಂ ಒರಿದದೆ ನಿವಂಗೊಂಡಾನಿಂದಿಲ್ಲಿ ನೀಗದೆ ಮಾಣ್ಬನೇ (ಸಂಶಕಾ. ೧೨-೧೯); ಎಂತಪ್ಪ ವಿದ್ವಾಂಸರಂ ವಾದದಿಂ ಮಿಗುತೆ ಸಪಣರಂ ಕೂಡಿಕೊಂಡತಿಸಂಭ್ರಮದೊಳಿರಲು (ಪಾಗೀರ. ರೇ. ೨೫೯-೯): ಚಿಕ್ಕನ ಚಿಕ್ಕಮಗಂ ವಿಭವಕ್ಕೆ ಕುಬೇರಂಗೆ ಸೆಣಸುವಂ ರಾಯರುಮಂ ಮಿಕ್ಕಂ (ಎಕ. XXI, ೧೪-೨೫: 1260). ೭. ಉತ್ಸಾಹಗೊಳ್ಳು: ಮೋಹರವ ಮಿಕ್ಕುಱುಬಿದರು ಸಬಳಿಗರು ಮುಂಚಿತು ರಣಕೆ ಬಿಡಿಗಳು (ಕುವ್ಯಾದ್ರೋ. ೧-೯೬); ಮಿಕ್ಕು ಸೂಕುವ ಕುದುರೆಕಾಱರು ತಕ್ಕೆಗೆಡೆದರು (ಕುವ್ಯಾದ್ರೋ. ೫-೪). ೮. ಉಕ್ಕು; ಹೊರಹೊಮ್ಮು : ನಿಜಸ್ವಾಮಿವಿರಹವಿಧುರೆ ಪೊಣ್ಮುವ ಕಣ್ಣ ನೀರ್ಗಳಂ ನಿದಾಘಸಮಯಸರಸಿಯಂತಱಿಮಿಗಲೀಯದೊಳಗಡಂಗಿಸಿ ಸಭೆಯೊಳಿಂತೆಂದಳ್ (ಶಾಂತಿಪು. ೭-೪೭ ವ). ೯. ಮುಂದಾಗು; ಮುನ್ನಡೆ : ಕಡುಮಾನವ ರಥತುರಗ ಮಿಕ್ಕವು ಸರಳಸೂಠಿಯಲಿ (ಕುವ್ಯಾದ್ರೋ. ೧೧-೨೯). ೧೦. ಕಂಗೊಳಿಸು ; ಶೋಭಿಸು: ಗಿರಿಜೆಯುಂ ಚಂದ್ರಧರನುಂ ಕಂಡು ನಸುನಗುತೆ ಹರುಷರಾಗುತ್ತಱಿದು ಕಾರುಣ್ಯದಿಂ ಮಿಗುತೆ (ಸಂಬಶ. ೧-೫೦). ೧೧. ತೊರೆ : ತ್ಯಜಿಸು: ಬಿಡು : ಇನ್ತಿವಱೊಳ್ ಇರದೆ ಪತ್ತಣ್ಬು ವಳಯುಂ ಚಾರಿಸದನ್ನಂ ಭೋಗಮಿಕ್ಕವನಲ್ಲನಿನ್ನ್ರಾಜಂ (ಎಕ. II (R), ೦೭೪-೦೦೭ : 982) ; ಗಂಟಲಿನ ಗಾಣದ ಮಿಸಾದು ಮಿಗುವುದೇ ಮರಣಮುಯಭಯವ (ತೊರಶಾ. ೭-೦೯-೭೭). ೧೨. ಉಳಿ ; ಬಾಕಿಯಿರು : ಅವಶಿಷ್ಟವಾಗು : "ಮಿಗು–ಅತಿಕ್ರಮಣೇ. ಅವಶಿಷ್ಟೇ ಚ" (ಶಮಧಾ). ೧೩. (?) : ಪೊಟ್ಟುವಟ್ಟಳಿಗ ಸಮನಾಗೆ ಗಿರಿಗೆಯು ಕೋಲ್ಲುಟ್ಟಿ ಮಿಗಲುಂ ನೆಲಲುದುಣಮಿಾಯುವಿನ್ಸೊತ್ತದಳವಿಯೊಳ್ ಬರೆ (ಎಕ. II (R). ೧೭೪-೯೦; 982).

[ದೇ.॥ ತಮಿ. ಮಲ. ಮಿಕು; ತುಳು. ಮಿಗು, ಮಿಕ್ಕು; ಕೊಡ. ಮಿಂಜ್; ತೆಲು. ಮಿಗುಲು, ಮಿವುಲು; ಕೋತ. ತೊದ. ಮಿಕ್]

**ಮಿಗುತಾಯ** (ನಾ). ವ್ಯಯ ಮಾಡಿ ಉಳಿದುದು: ಶೇಷ : ಈ ತಿಂಗಳಿನ ಸಂಬಳದ ಮಿಗುತಾಯ ಹೆಚ್ಚಾಗಿಲ್ಲ (ರೂಢಿ).

[< ಮಿಗುತೆ + – ಆಯ$_4$]

**ಮಿಗುತೆ, ಮಿಗತೆ, ಮಿಗಿತೆ** (ನಾ). ೧. ಶ್ರೇಷ್ಠವಾದುದು : ಉತ್ತಮವಾದುದು : ಬಗೆಗೆಡಲಿಂತೆನಲಲ್ಲದೆಯೊಂದು ಮಿಗುತೆಯುನಱಿ ಚಿನ್ಮಾತ್ರಮಿದೆಂದು (ಶರಗೀ. ೭-೮): ಅಗಣಿತಬ್ರಹ್ಮಾಂಡಗಳ ತನ್ನೊಡಲೊಳಿಟ್ಟ ಮಿಗುತೆಯುಹ ಬೊಮ್ಮದೊಳಪೊಕ್ಕು ಮತಿ ಹಿಂದಕ್ಕೆ ಮಗುಳದಿರಲಂತದರ ಹೆಸರೇನು ಪೇಳಿ (ಕೃಕವ. ೫-೭೦-೨). ೨. ಉಳಿದುದು ; ಉಳಿಕೆ : ಶೇಷ : ಪುಗುತೆ, ಪುಗುತೆಗಳ್; ಮಿಗುತೆ, ಮಿಗುತೆಗಳ್ (ಶಬ್ದಾನು. ೫೭೦ ಪ್ರಯೋ). **ಮಿಗತೆ** : ೩. ಲಾಭ ; ನಫೆ: ದೊಡ್ಡವೀರರಾಜನ ದಿನದಲ್ಲಿ ಕೂಡ ವರ್ತಕಪೇಟೆಯ ಶೆಟ್ಟಿಯುಬಹಾರರು ಹೀಗೆ ಹಣ ಒಪಗಿಸಿದ್ದುಂಟು ;

ಅವನ್ನು ಮಿಗತೆಯೊಡನೆ ಹಿಂದಕ್ಕೆ ಪಡೆದವ್ನುಂಟು (ಶಿಶಾ. ೩೩).
**ಮಿಗಿತೆ :** ೨. ಕಾಲಾಂತರದಲೂ ಗೃಹದ ಜೀರ್ಣೋದ್ಧಾರಕ್ಕೆ ಪ್ರತಿ ವರ್ಷಉ ಮಿಗಿತೆಯಾಗಿ ಕೊಟ್ಟಿದ್ದದು ವೊಂದು ಹೊಂನು (ಎಕ. VIII. ತೀರ್ಥಹ. ೩೩-೬೦; ೩. 1430). [ಮಿಗು + —ತೆ$_2$./ ತಮಿ. ಮಿಕುತಿ, ಮಿಕುತವರ್; ಮಲ. ಮಿಕುತಿ; ತುಳು. ಮಿಗ್ತೆ. ಮಿಗಿತೆ; ತೆಲು. ಮಿಗತ]

**ಮಿಗುವರಿ** (ಕ್ರಿ). ೧. ಹತೋಟಿ ಮೀರಿ ಹರಿ,– ಪ್ರವಹಿಸು ; ಉಕ್ಕು: ಕೊರಗು ಮಿಗುವರಿವ ಕಂಬನಿಯು ಕುಡಿದ ಬಾಯ್ತೆರೆದಂ (ಕಾಂಹರ. ೧೬೫-೩೯೯). ೨. ಹೆಚ್ಚಾಗು ; ಅಧಿಕವಾಗು : ಮಿಗುವರಿಯುವಳ್ತಿಯುಂ ನಗುತ ಬರೆ ಬದ್ದಿನಂ (ಕಾಂಹರ. ೬೨-೦೦೩); ಎನಿತೆನಿತು ಮುಪ್ಪು ಮುಂಬರಿದು ಬಿಗಿವಪ್ಪುತಿಹುದನಿತನಿತು ಭೋಗಿಸುವ ಬಯಕೆ ಮಿಗುವರಿಯುತಿರಲು (ಶವಿಶಾ. ೨೬-೨೩). ೩. ಉಲ್ಲಂಘಿಸು ; ಅತಿಕ್ರಮಿಸು : ಈ ಮಾಗಣೆ ಎರಡು ಸಪ್ಪು ಕೊಡಗಿನ ಸಂಸ್ಥಾನಕ್ಕೆ ಸೇರಿದ್ದು ಇದೆ . . . ಇವರ ತಳ್ಳಿಗೆ ಬರಬೇಡ. ಮಿಗುವರಿದು ಬಂದರೆ, ತಾಳತಕ್ಕದ್ದಲ್ಲಾ (ರಾಜೇಂದ್ರ. ೮೮). [ಮಿಗು + ಪರಿ$_2$]

**ಮಿಗೆ$_1$** (ನಾ). ೧. ಹೆಚ್ಚಳ : ಆಧಿಕ್ಯ : (*). ೨. ಅತಿಶಯತೆ : ಮಿಗಿಲು : 'ಮಿಗೆವರ್', 'ಮಿಗೆವರಿ' ಪರಾ.
[ದೇ.॥ ತಮಿ. ಮಿಕ್ಕ; ತುಳು. ಮಿಗಿ]

**ಮಿಗೆ$_2$** (ಅ). ೧. ಹೆಚ್ಚಾಗಿ : ಅಧಿಕವಾಗಿ : ಮಿಗೆ ದುಷ್ಕರಕಾವ್ಯಂಗಳೊಳ ಗರ್ಹಿತಪ್ರಾಯಮಕ್ಕುಮಾ ಶ್ರುತಿಕಷ್ಟಂ (ಕಾರಾ. ೧-೬೮); ಅಲಂಪು ಮಿಗೆ ಭೋಗಿಸಿದಂ ಸುರಲೋಕಸೌಖ್ಯಮಂ (ಅಂಕ್ಷ. ೨-೬೦); ಕೃಷ್ಣೆಗೆ ಮಿಗೆ ದೊರೆಕೊಳಿಸದೆ ಕೋಪಮುಂ ಮನಸ್ತಾಪಮುಮಂ (ಗದಾಯು. ೦-೩೯). ೨. ಒಳ್ಳೆಯ ರೀತಿಯಲ್ಲಿ ; ಚೆನ್ನಾಗಿ : ಮಗಳೆ ನೀನಾತನ ಕೈವಿಡಿದಂದಿನ ಬಗೆಯ ಸುಖಂಗಳನಾಂತು ಮಿಗೆ ಜೀವಿಸುತಿರ್ಪುದುಮುಗೊಜಿಗಳುತ್ತು ನಗರಾಜಸುತೆ ಕಳುಹಿದಳು (ಪೋಹತ. ೬-೪೮). ೩. ಪೂರ್ತಿಯಾಗಿ : ಸಂಪೂರ್ಣವಾಗಿ : ತಮ್ಮ ತಮ್ಮ ನಿಖಿಳವ್ಯಾಪಾರವ[ನುಳಿದ]ರಸನ ನೋಡುವ ತವಕದೆ ಮಿಗೆ ನಗರಲೋಕವೆಯ್ದಿತ್ತಾಗಳ್ (ಕಾದಂಪೂ. ೪೬೩); ಮಿಗೆ ಇಂದುಮುಖಿಯಿಟ್ಟಾಣೆ ತೀವಿತ್ತು (ತಿರುರ. ೭೬. ೮-೦೦). 'ಬಿಗುಮಿಗೆ$_2$' ಪರಾ.

ಮಿಗೆಮಿಗೆ (ದ್ವಿರುಕ್ತಿ) : ಪಲವು ಸೂಳ್ ಕನಕಮದು ಕಾಸಿದಡೆ ಮಿಗೆಮಿಗೆ ಬಣ್ಣ ವೆಗ್ಗಳವಾಗಿ ತೋರ್ಪುದಲಾ (ಬಸವು. ೨೨-೬೩). **ಮಿಗೆಯರಳ ನೋಂಪಿ** = ಆಷಾಢಮಾಸದ ನಂದೀಶ್ವರಾಷ್ಟಮಿಯಿಂದ ಕಾರ್ತಿಕನಂದೀಶ್ವರಾಷ್ಟಮಿಯವರೆಗೆ . ಒಂದು ಹೂವಿನಿಂದ ಆರಂಭಿಸಿ ಪ್ರತಿದಿನವೂ ಒಂದೊಂದು ಹೂವನ್ನು ಹೆಚ್ಚಿಸಿಕೊಂಡು ಜಿನನಿಗೆ ಅರ್ಚನೆ ಮಾಡುವ ಒಂದು ವ್ರತ : ನೀನೀ ಮಿಗೆಯರಳ ನೋಂಪಿಯುಂ ಜಿನಭಕ್ತಿಪೂರ್ವಕಂ ಕೈಕೊಂಡು (ಮಧಿಕಾ. III. ೬೫೯).
[<ಮಿಗೆ$_1$]

**ಮಿಗೆವರ್** (ಕ್ರಿ) ಅತಿಶಯವಾಗು : ಶ್ರೇಷ್ಠವಾಗು : ಮಿಗೆವಂದೆಲ್ಲರ ಬಿಲ್ಲ ಬಿನ್ನಣದ ಬಿಣ್ಪಂ ರಾಮನೇಸಂಬಿನಂ ಮಿಗೆ ತನ್ನೇಸುಪಮಾನಮಾದುದೆನೆ ರಾಮಂ ಕಲ್ತ ಬಿಲ್ಬಲ್ಮೆಯುಂ ಪೊಗಟಲ್ವೇಟ್ಟಿದೆ (ತುರಾಮಾ. ೩-೦೫೦); ಮಿಗೆವಂದ ಪೆರ್ಮೆಗಂ ಸ್ಥಿರತೆಗಮಾಶ್ರಯಮಾದ ಗಗನಲಕ್ಷ್ಮಿಯ ಮಧ್ಯಾಧಿಗತವಳಿತ್ರಯಮೆನೆ ಸಲೆ ಸೊಗಯಿಪುದು ಜಗತ್ತ್ರಯಂ ಮರುತ್ತ್ರಯ ವಿಧೃತಂ (ಚಂದ್ರಪ್ರ. ೦-೬೯). [ಮಿಗೆ$_1$ + ಬರ್ (<ವರ್)]

**ಮಿಗೆವರಿ** (ಕ್ರಿ). ಅತಿಶಯಿಸು : ಮೇಲಾಗು : ಕೊಡನೊಳಗಣ ಜ್ಯೋತಿಯ ಅಡಗಿಸಲರಿಯದೆ ಮಿಗೆವರಿದಂತಾದೆಯೋ ಅಜಗಣ್ಣಾ (ಶೂನ್ಯಸಂ. ೨೩-೮); ನೀವು ಹೊಕ್ಕಲ್ಲಿ ಹೊಕ್ಕು ಮಿಕ್ಕು ಮೀಜಿ ಮಿಗೆವರಿವ ಲಿಂಗಾಂಗಿಗಳ ಪಾದದೊಳು ಹಿಂಗದಂತೆ ಇರಿಸೆನ್ನ (ಸಕವ. III. ೨೨೩-೩೬೩). [ಮಿಗೆ$_1$ + ಪರಿ$_2$]

**ಮಿಜಾಜು**. ಮಿಜಾಸಿ, ಮಿಜಾಸು (ನಾ). ೧. ಡಂಭ ; ತೋರಿಕೆ : ಪೌಲು : (*). **ಮಿಜಾಸಿ** : ೨. ದಿಮಾಕು : ಜಬರ್ಬ : ಯಾಕವಾ. ಬಲು ಹೆಚ್ಚಾಗೀತಿ ನಿನ್ನ ಮಿಜಾಸಿ ? (ಮೂಗಾಶಿ. ೨೦೦). **ಮಿಜಾಸು : ೨.** ಏನೋ ಯಾರಿಗ್ ತೋರಿಸ್ತೀ ನಿನ್ನ ಸಭ್ಯಗೃಹಸ್ಥನ ಮಿಜಾಸು(ಬಾಂಗಾಯ.೬೯).
[← ಪಾರ. ಮಜಾಜ್; ಅರ. ಹಿಂ. ಮಿಜಾಜ್; ಮರಾ. ಮಿಜಾಜ್. ಮಿಜಾಸ್]

**ಮಿಜಾಸಿ** 'ಮಿಜಾಜು' ನೋ.

**ಮಿಜಾಸು** 'ಮಿಜಾಜು' ನೋ.

**ಮಿಜಿಮಿಜಿ** (ನಾ). ಹಿಂದೆ ಮುಂದೆ ನೋಡುವುದು : ಸಂದೇಹ ಪಡುವುದು : ತೊಂಚಾವಂಚ : ಬಲೆ ಮಿಜ್ಜಿಮಿಜಿ ಜಾತಿ — ಈ ಚಳುವಳಿಪೋರಮುಂದೀ ಮನಸು ಬಲೇ ಚಂಚಲಾ (ಹುಚ್ಚಾಬಿ. ೯೩); ನಿನ್ನದು ಇದೇ ಸ್ವಭಾವ. ಹೀಗೇಕೆ ಸುಮ್ಮನೆ ಮಿಜಿಮಿಜಿ ಮಾಡುವಿ ? (ಶಿಸ್ಮಶ. ೯೦೩). [← ತುಳು. ಮಿಜಿಮಿಜಿ = ಜಿಗುಟಾದ]

**ಮಿಟ್** (ನಾ). ಒಂದು ಅನುಕರಣ ಶಬ್ದ.

ಮಿಟ್ಟಂ ಮಿಡುಕು = ಸ್ವಲ್ಪವಾದರೂ ಅಲುಗಾಡು,– ಚಲಿಸು : ಮಿಟ್ಟಂಮಿಡುಕದಿರೆ ಗರುದ್ಗುಚ್ಛಮುಚ್ಚಾಂಚುಕಲ್ಪಂ ನಡೆವಾರಿತ್ತಾತ್ತ ವೇಗಾವಹಸಿತ ಸುಮರುದ್ರಹಂಸಂ ರಾಜಹಂಸಂ (ಜವಾಶ್ಚ. ೨-೦). **ಮಿಟ್ಟೆ ಮಿಸುಗು, ಮಿಟ್ಟೆ ಮಿಸುಕು, ಮಿಟ್ಟು ಮಿಸುಕು, ಮಿಟ್ಟು ಮಿಸುಗು** = ಮಿಟ್ಟಂಮಿಡುಕು : ಜಮಾದಾರ ಮಿಟ್ಟೆ ಮಿಸುಗಲಿಲ್ಲ (ಗಂಗಾಶಾ. ೬೩); ದಾರಿಯಲ್ಲಿ ಧೋ ಧೋ ಮಳೆಯಾದರೂ ಅವನು ಮಿಟ್ಟೆ ಮಿಸುಕಲಿಲ್ಲ, ಬಿನ್ನನಾಗಲಿಲ್ಲ (ಸ್ವತಿಶ. ೨೨೬); ಆಕೆ ಏನು ಮಾಡಿದರೂ ಮಿಟ್ಟು ಮಿಸುಕುತ್ತಿದ್ದಿಲ್ಲ (ಇಶ್ವಶ. ೨೦೬); ಶ್ರೀಕಂಠಶಾಸ್ತ್ರಿಗಳು . . . ಅರ್ಧತಾಸಿನ ವರೆಗೆ ಮಿಟ್ಟು ಮಿಸುಗಲಿಲ್ಲ (ಗಂಗಾಶಾ. ೦೯೨). **ಮಿಟ್ಟೆಂದು ಮಿಡುಕು** = ಮಿಟ್ಟಂಮಿಡುಕು : ಅಂತು ಮುಳಿದ ಪವನಜನ ಕೋಪಾಟೋಪಮಂ ಕಂಡು ಕೌರವಬಲದ ನಾಯಕರೊಳೊರ್ವರಪ್ಪೊಡಂ ಮಿಟ್ಟೆಂದು ಮಿಡುಕಲಣ್ಮದಿರೆ (ಶಂಕಭಾ. ೦೨-೦೫೦ ವ).

**ಮಿಟಕಲಾಡಿ** (ನಾ). ಒಯ್ಯಾರಿ : ಸೋಗಲಾಡಿ : ಅಬ್ಬಬ್ಬ! ಮಿಟಕಲಾಡಿ. ಇವಳಿಗೆ ಇಪ್ಪತ್ನಾಲ್ಕು ಗಂಟೆ ಕಾಲವೂ ಕನ್ನಡಿಯ ಮುಂದೆಯೇ ಕೆಲಸ (ಹೂಹಣ್ಣು. ೩೮). [ದೇ.॥ ತೆಲು. ಮಿಟುಕುಲಾಂಡಿ]

**ಮಿಟಕಿಸು** 'ಮಿಡುಕಿಸು' ನೋ.

**ಮಿಟಕು** 'ಮಿಡುಕು$_1$' ನೋ.

**ಮಿಟಗರಿಸು** (ಕ್ರಿ). ರೆಪ್ಪೆಯನ್ನು ಬಡಿ; ರೆಪ್ಪೆ ಹೊಡೆ : ಅವನು ಕೆಲಸವಿಲ್ಲದೆ ಸುಮ್ಮನೆ ಮಿಟಗರಿಸುತ್ತಾ ಕೂತಿದ್ದಾನೆ (ರೂಢಿ).
[< ಮಿಟಗು$_?$ + — ಇಸು$_3$. / ತೆಲು. ಮಿಡುಕರಿಂಚು, ಮಿಣಕರಿಂಚು]

**ಮಿಟಮಿಟ** (ನಾ). (ಒಂದೇ ಸಮನೆ ನೋಡುವುದನ್ನು ಸೂಚಿಸುವ) ಒಂದು ಅನುಕರಣ ಶಬ್ದ.

ಮಿಟಮಿಟಸಗ್ಗ = ಏಪೆಯಿಕ್ಕದೆ ಪರಸ್ಪರ ಸುಮ್ಮನೆ ನೋಡುತ್ತಿರುವ ದೇವತೆಗಳಿಂದ ಕೂಡಿದ ಸ್ವರ್ಗ; ಯಾವ ಆಕರ್ಷಣೆ ಅಥವಾ ಸುಖವೂ ಇಲ್ಲದ ಸ್ವರ್ಗ : ದಿಟದಿಂದೊಲ್ದವರಂ ಲಂಪಟತೆಯಿನ ಪರ್ವಪ್ಪಿ ನೆರೆವ ನೆರೆವನಿತು ಸುಖಂ ಘಟಿಯಿಸದು ತಮ್ಮೊಳೆನಿಸುವ ಮಿಟಮಿಟಸಗ್ಗಂಗಳೋಳಿಯೇ ಸೌಧರ್ಮಂ (ಚಂದ್ರಪ್ರ. ೪-೬೩).

**ಮಿಟಲಿ, ಮಿಟಿಲ, ಮಿಟಿಲಿ, ಮಿಟಿಲೆ, ಮಿಟುಣಿ, ಮಿಟ್ಟಲಿ, ಮಿಟ್ಟುಲಿ,** ಮಿಟ್ಲಿ, ಮಿಟ್ಲೆ, ಮಿತಿಲಿ, ಪೆಟ್ಟಲಿ (ನಾ). ೧. ಒಂದು ಬಗೆಯ ಮರ: **P** ಇದರ ಎಲೆಯನ್ನು ಉಪ್ಪುಕಾಗದಂತೆ ಬಳಸಲಾಗುತ್ತದೆ: "ದರ್ಪಣರಿಯೆನಲು ಮಿಟಲಿಯ[ಪಾಠಾಂ. ಮಿಟಲಮ]ಕ್ಕು" (ಮಂಗರಾ. ೩೩-೦೯): ಮಿಟಲಿ :—ಈ ಬೇರಂ ನಿಂಬೇಹುಳಿಯಲ್ಲಿ ತೇದು ಪೂಸಲು

ತೊಡೆವಾಳ್ ಮಾಣ್ಬುಂ (ಪಿಪ್ರಿ. ೬). **ಮಿಟಲ** : ೧. "ಏರಪಣ — ಮಿಟಲ" (ಬಿಹಂ. ೪೩). **ಮಿಟಲಿ** : ೧. ಕಿರುಗೆರೆಯ ಯಡಲಗೆರೆಯ ಮಿಟಲಿಮೇಡಿನಲ್ಲಿ ನಟ್ಟ ಕಲ್ಲು (ಎಕ. XIV, ಮಂಡ್ಯ. ೧೦೩-೧೧೦; ಸು. 1516). **ಮಿಟಲೆ** : ೨. ಒಂದು ಬಗೆಯ ಔಷಧೀಸಸ್ಯ; ಮಾಚಿ : ಕಗ್ಗೊಜಲೆ ಬುಗುಡಿ ಮಿಟಲೆ [ಪಾಠಾಂ. ಟುಣಿ]ಯ ಸುಗ್ಗಿಯ ಪತ್ರಂಗಳೊಡನೆ ಮಾಡಿದ ಚೂರ್ಣಂ ಅಗ್ಗಳವೊಂದಿರೆ ಸಸ್ಯದೊಳಿಗ್ಗಲ್ಲದೆ ವಿಷಹರಂ ವಲಂ ಪ್ರತ್ಯೇಕಂ (ಖವೈದ. ೬-೮೨). **ಮಿಟುಣಿ** : ೨. ಪರ ಮಿಟುಣಿ ಸುಗಂಧಿಗಳೆಂಬೆರಡರ ಬೇರ್ಗಳನೆ ಚೂರ್ಣಿಸದಜೊಳ್ ತುಪ್ಪಂ ಬೆರಸಿರದೆ ಕುಡಿಸಲದು ಬಿಲ್ಲುರಿಗನ ವಿಷಮಂ ಕ್ಷಣಾರ್ಧದೊಳ್ ಪರಿಹರಿಕುಂ (ಖವೈದ. ೧೦-೬೩). **ಮಿಟ್ಟಲಿ** : ೨. "ಕರ್ಕರ — ತೊಟ್ಟಿ, ಮಿಟ್ಟಲಿ. . . ಕಪಿಪಡವಲ" (ಬಿಹಂ. ೨೨). **ಮಿಟ್ಟುಲಿ** : ೧. ಭೂತಾಳಿ ಬೂರುಪೆ ಮಿಟ್ಟುಲಿಯು ದಿಂಡ ಪಾತಂಗ ಮುಗುಳಿಯ ಮರನು (ಶಿಜಕಾಂ. ೦-೩೩). **ಮಿಟ್ಲಿ** : ೨. (ವೃತಿಗ. ೬೨-೦೪೭೮). ೩. ಒಂದು ಬಗೆಯ ಬಾಳೆ : ಕರ್ನಾಟಕದ 'ಮಿಟ್ಲಿ' ಹಾಗೂ ರಸಬಾಳೆಗಳು—ಸಾಕಷ್ಟು ಹೆಸರುವಾಸಿಯಾಗಿವೆ (ಸುತ್ತುಮು. ೬೦). **ಮಿಟ್ಲೆ** : ೨. "ಮಿಟಲ, ಮಿಟ್ಲೆ. . . ಪುಂಜ್ಯ" (ಸಕ್ರಿ. ೦೨೯). **ಮಿತಿಲಿ** : ೧. ಆ ಊರಿನವರು 'ಮಿತಿಲಿಸೌದೆ'ಯನ್ನು ಒಲೆಗೆ ಒಟ್ಟುವುದಿಲ್ಲವಂತೆ (ಜನಪ್ಪರು. ೦೯೭). **ಮೆಟ್ಟಲಿ** : ೧. ಮೆಟ್ಟಲೀಮರದ ಬಳಿಯ ಬಡಗ ಮುಖ ನೆ ೧ (ಎಕ. V (II). ತಿರುಮು. ೦೬-೩೭೮; 1749).

**ಮಿಟಾಯಿ** 'ಮಿಠಾಯಿ' ನೋ.

**ಮಿಟಿಕಿಸು** 'ಮಿಡುಕಿಸು' ನೋ.

**ಮಿಟಿಮಿಟಿ** (ನಾ). (ಒಂದೇ ಸಮನೆ ನೋಡುವುದನ್ನು ಸೂಚಿಸುವ) ಒಂದು ಅನುಕರಣಶಬ್ದ.

**ಮಿಟಿಮಿಟಿ ನೋಡು** = ಎವೆ ಮಿಟುಕಿಸದೆ ನೋಡು ; ಮಿಕಿಮಿಕಿ ನೋಡು: ನನ್ನ ಮಾತನ್ನು ಕೇಳಿ ಆಶ್ಚರ್ಯದಿಂದ ಆಕೆ ನನ್ನ ಕಡೆ ಮಿಟಿಮಿಟಿ ನೋಡತೊಡಗಿದಳು (ಶರಜಾ. ೦೯೭). **ಮಿಟಿಮಿಟಿಸಗ್ಗ** = ಎವೆಯಿಕ್ಕದೆ ಪರಸ್ಪರ ಸುಮ್ಮನೆ ನೋಡುತ್ತಿರುವ ದೇವತೆಗಳಿಂದ ಕೂಡಿದ ಸ್ವರ್ಗ; ಯಾವ ಆಕರ್ಷಣೆ ಅಥವಾ ಸುಖವೂ ಇಲ್ಲದ ಸ್ವರ್ಗ : ಮಾಟಿಡೆಯಿಲ್ಲ ಮಜ್ಜನಮಿನಿಸಿಲ್ಲ ಕರ್ಪೂರವೀಳೆಯಗೊಳಲಿಲ್ಲ ಆರೋಗಣೆಯಿಲ್ಲದಾ ಮಿಟಿಮಿಟಿ ಸಗ್ಗದಾ ತನ್ನಿಯರಿಗೆಳಸುವರೆ (ನೇಮಿನಾಂ. ೩೯-೩೮). **ಮಿಟಿಮಿಟಿಸ್ವರ್ಗ** = ಮಿಟಿಮಿಟಿಸಗ್ಗ : "ಮಿಟಿಮಿಟಿಸ್ವರ್ಗ—ಬೆರಗು. ಸುಖವಿಲ್ಲದ ಸ್ವರ್ಗ. ಕೆಲಸವಿಲ್ಲದ ಸ್ವರ್ಗ" (ಜಾನಕೋ. ೩೦); ಅವು ಪತ್ತೆಯಾಗಿ ಕೈಗೆ ಮರಳುವ ತನಕ ಲಂಡನ್ನಿನ ಹೋಟೆಲುಕೋಣೆಯ ಮಿಟಿಮಿಟಿಸ್ವರ್ಗದಲ್ಲಿ ಕುಳಿತಿರುವುದಾದರೂ ಸಾಧ್ಯವೆ ? (ಪಂಟಿರು. ೦೦೯).

**ಮಿಟಲ** 'ಮಿಟಲಿ' ನೋ.

**ಮಿಟಲಿ** 'ಮಿಟಲಿ' ನೋ.

**ಮಿಟಲೆ** 'ಮಿಟಲಿ' ನೋ.

**ಮಿಟುಕಿಸು** 'ಮಿಡುಕಿಸು' ನೋ.

**ಮಿಟುಕು**₁ 'ಮಿಡುಕು₁' ನೋ.

**ಮಿಟುಕು**₂ 'ಮಿಡುಕು₂' ನೋ.

**ಮಿಟುಣಿ** 'ಮಿಟಲಿ' ನೋ.

**ಮಿಟ್ಟನೆ** (ಅ). ಅತಿಯಾಗಿ, ಅಧಿಕವಾಗಿ ಎಂಬರ್ಥದ ಒಂದು ಅನುಕರಣಾವ್ಯಯ : ಪ್ರೋಷಿತಪ್ರಿಯೆಯಂತೆ ಮಹಿಯೊ ಮಿಟ್ಟನೆ ಮೌನ ! (ಹನ್ನರ. ೨೨-೦೩೧).

**ಮಿಟ್ಟನೆ ಮಿಡುಕು** = ೧. ಬಹಳವಾಗಿ ದುಃಖಿಪಡು,—ಸಂಕಟಪಡು : "ಮಿಟ್ಟನೆ ಮಿಡುಕಿತೆನಲಟಲು" (ಕರ್ಣಮಂ. ೬೦); ಸೌಂದರನ ಕಾಣದೆ ಬಳಲ್ದಳಲ್ದೆಳ್ದು ಮಿಟ್ಟನೆ ಮಿಡುಕಲೊಡನೆ ಬಂದು (ಸೌಂದರ. ೦೯-೦೩) : ತನ್ನರಿಯೊಪಲಂ ಕಡುಪಿಂ ಸುಡೆ ಪಿರಿ ಮಿಟ್ಟನೆ ಮಿಡುಕುತ್ತೆ ಬಾಯ್ಬಿಡುತೆ ನೃಪತಿ ಸಿಡಿಮಿಡಿಗೊಂಡಂ (ವೃಷಕಿ. ೩೯-೯೭). ೨. ಸ್ವಲ್ಪವಾದರೂ ಅಲುಗಾಡು ; ಮಿಸುಕಾಡು : ಚಿತ್ರದ ರೂಪಿನಂತೆ ಮಿಟ್ಟನೆ ಮಿಡುಕದೆ ನಿಂದು (ಧರ್ಮಾಮೃ. ೦೦-೩೦); ದಿಟ್ಟ ವಿಷಮುಷ್ಟ ಫಣಿಪತಿ ಮಿಟ್ಟನೆ ಮಿಡುಕದೆ ಬಟ್ಟಲ್ಬು ಪೆಟ್ಟುದು ಭಯದಿಂ (ಶಂಕಹಂ. ೬-೩೬) ; ಜಟ್ಟಿಗಳಂಕದಾಳುಗಳಿದ್ದರಲ್ಲಲ್ಲಿ ಮಿಟ್ಟನೆ ಮಿಡುಕದೆ ನಿಂದು (ಭರತ. ೦-೬೯). **ಮಿಟ್ಟನೆ ಮಿಸುಕು** = ಮಿಟ್ಟನೆ ಮಿಡುಕು ೨ : ಕಟುಪಟುಪ್ರಬಲಸಾಹಸಿಕರಪ್ಪ ವೀರಭಟರೆಲ್ಲಂ ನಟ್ಟಂತೆ ಮಿಟ್ಟನೆ ಮಿಸುಕದಿರೆ ನೆಟ್ಟನೆ ಕಂಡು (ಶಾಂತೀಶ್ವ. ೮-೦೦೩ ವ). [ಮಿಟ್ + — ಅನೆ₁]

**ಮಿಟ್ಟಲಿ** 'ಮಿಟಲಿ' ನೋ.

**ಮಿಟ್ಟಿ** 'ಮಿಂಟ್ಟೆ' ನೋ.

**ಮಿಟ್ಟಿಗೆ** (ನಾ). ಒಂದು ಬಗೆಯ ಭಕ್ಷ್ಯ : ಮಿಟ್ಟಿಗೆ ಮಾಡಿ ಬಡಿಸಿದ್ದರು. ಬಲು ರುಚಿಯಾಗಿತ್ತು (ಮನೋಕಂ. ೬೬). [ ? ]

**ಮಿಟ್ಟಿಯಂಬು** 'ಮಿಟ್ಟೆಯಂಬು' ನೋ.

**ಮಿಟ್ಟಿಸೆ** (ನಾ). ಒಂದು ಊರಿನ ಹೆಸರು : ಮಿಟ್ಟಿಸೆ ಆ ಮಹಾಜನಕ್ಕೆ ಸಾಲೆ ವಿಲಿಸೆ ಆ ಸಾಸಿರ್ವರ್ಗ್ಗಂ ಸಾಲೆ ಮುಂಟ್ಟಗುಪ್ಪೆ ಸಾಸಿರ್ವರ್ಗ್ಗಂ ಸಾಲೆ ಆಚಸ್ಪಂತಾರಕಂ (ಎಕ. VII, ಶಿಕಾರಿ. ೯೩ (೨)-೦೦: ಸು. ೫೯೦?). [?]

**ಮಿಟ್ಟು**₁ (ಕ್ರಿ). ಚಿಮ್ಮು : ಮಿಡಿ : ಆನೆಯೇರಿ ಕವಡೆಯ ಮಿಟ್ಟಿವ (ತುರಂಗ. ೩೨-೨೩). 'ಮಿಡಿ₁' ಪರಾ.

[ದೇ.॥ ತಮಿ. ಮಿಣ್ಣು = ತಳ್ಳು; ತೆಲು. ಮಿಟ್ಟು]

**ಮಿಟ್ಟು**₂ (ನಾ). [ಸಂಗೀತ] ಮೃದಂಗದ ಬಲಮುಖದಲ್ಲಿರುವ ಚರ್ಮದ ಮೇಲೆ ತೋರುಬೆರಳಿನಿಂದ ಹೊಡೆಯುವ ಪೆಟ್ಟು : ನಾರಾಯಣಸ್ವಾಮಿಅಪ್ಪಾ ಅವರು . . . ಹೊಸದಾಗಿ ಮೃದಂಗ ವನ್ನೊಂದನ್ನು ಮಾಡಿ ತಂದಾಗ, ಅದನ್ನು ಕೊಂಚಕಾಲ ನುಡಿಸಿ ಅದರ ಮಿಟ್ಟು, ಚಾಪು ಮತ್ತು ಟೊಪ್ಪು, ನಾದಗಳನ್ನು ಸರಿಯಾಗಿದೆಯೋ ಎಂದು ಪರೀಕ್ಷಿಸುತ್ತಿದ್ದರು (ಸಂಗೀತ. ೦೦೧). [<ಮಿಡಿ₁]

**ಮಿಟ್ಟುಲಿ** 'ಮಿಟಲಿ' ನೋ.

**ಮಿಟ್ಟೆ**, ಮಿಂಟ್ಟೆ₁, ಮಿಟ್ಟಿ, ಮಿಣ್ಣೆ, ಮಿಸಾಂಟೆ (ನಾ). ೧. ಎತ್ತರವಾದ ಭೂಮಿ ; ದಿಣ್ಣೆ ; ದಿಬ್ಬ; ತೆವರು : "ದಿಂಗೆ ಮಿಣ್ಣೆ ಮಿಟ್ಟೆಯದು" (ಶಬ್ದಮಂ. ೨೯೯); ಜಲವೆಲ್ಲ ಹರಿವುದು ಶಿಲೆಯೆಲ್ಲ ಶಿವವುದು ಮಳಲು ಮಿಟ್ಟೆಗಳೆಲ್ಲ ಮಣಿಯ ಮಯವು(ಕುರಂದ.೯-೧೦-೨);ಜೋಣಿಯ ಪ್ರದೇಶ ಹೊರತಾಗಿ ಯೆಲ್ಲ ಕಡೆಯಲ್ಲಿ ತೆರೆಯಂಥ ತಗ್ಗು ಮಿಟ್ಟೆಗಳನ್ನು ಕಾಣಬಹುದು (ಕಥಗ. ೯೩೯); ರಥ ಬರುವ ರಭಸಕ್ಕೆ ಗುಂಡುಕಲ್ಲು ತಗ್ಗು ಮಿಟ್ಟೆ ಗಿಡ ಸಹಿತಾಗಿ ಕುಂಬಾರನ ಚಕ್ರದಂತೆ ತಿರುಗಲು ಭೂಮಿ (ಕರ್ನಾಕ. ೨೯೮). ೨. ಮಣ್ಣಿನ ಮುದ್ದೆ : ಹೆಂಟೆ : ಕಾಮದೇವನಿಮ್ಮಾವಿನ ನನೆಯ[ನ]ಂಬುಗಳುಮನವಜಿ ಬಳ್ಳಿಡಿಯಿಂಸೆ ಮಿಟ್ಟೆ[ಯುಮಂ] ಮಾಡಿ ತನ್ನನೇಸಾಡಿ ಕಾಡೆ (ಶಂಶಭ. ೩-೦೨ ವ); ತೊಟ್ಟನೆ ಕಲ್ಲಾ ತಾಗಿದ ಮಿಟ್ಟೆಯವೋಲ್ಮಗುಟ್ಟಿಂ (ಸವುಕ. ೯-೮೨); ನಮ್ಮ ಕೂಡಲ ಸಂಗನ ಶರಣರ ಕಂಡುದಾಸೀನವ ಮಾಡಿದರೆ ಕಲ್ಲ ತಾಗಿದ ಮಿಟ್ಟೆ[ಪಾಠಾಂ. ಮಿಂಟೆ] ಯಂತಪ್ಪರಯ್ಯಾ (ಬಸವ. ೦೯೪): ಬಿಟ್ಟ ಕಣ್ಣಿಗಳ್ ಕಲ್ಲ ತಾಗಿ ಮರಳುತ್ತಿರ್ಪ ಮಿಟ್ಟೆಯಂತಾದವು (ಕೆಲವು. ೯೯-೦೩). ೩. ಉರುಳೆ ; ಗುಂಡು : ಅಲರ್ವಿಲ್ಲನ ಪಸಿರ್ವರಲ ಮಿಟ್ಟೆ [ಪಾಠಾಂ. ಮಿಂಟೆ]ಗಳ ಜಂಗುಳಿಯಂತೆ ಮೆಱೆವ ಬಣ್ಣೊನೆಯ ತಳಿರ್ದಿರ್ಪವಕೆಯು ಮರದ ಸಾಲ್ಗಳು ಕಣ್ಗೊಳಿಸಿಹವೇನ ಬಣ್ಣಿಪೆನು (ಶಬರಶಂ. ೩-೯೮). ೪. ಬಾಣದಂತೆ ಪ್ರಯೋಗಿಸುವ ಒಂದು ಸಾಧನ ಮತ್ತು ಅದರಲ್ಲಿಟ್ಟು ಹೊಡೆಯುವ ಗುಂಡುಕಲ್ಲು ; ಕವಣೆ : [ಕೂರಂಬಿನ ಕವಲಂಬಿನ] ಪಾಱುಂಬಳೆಯ ಕಕ್ಕಡೆಯ [ಮಿಟ್ಟೆಯ] ಮೊಪ್ಪೆ ಸರಲ ಬಲ್ಸರಿಯಂ

ಸುರಿಯೆ (ಧರ್ಮಾಮೃ. ೧೩-೧೭೪): ಬೇವಿನ ಕಟ್ಟೆ . . . ನಾನಾವಿಧ ಪಾಪದುಷ್ಟಮೃಗವಂ ಕೆಡೆಯೆಚ್ಚುವ ಮಿಟ್ಟೆ . . . ಎನೆ ರಂಜಿಪುವಲ್ಲಿ (ಪ್ರಭು. ೧೪-೯): ಪೊಡವಿಪತಿ ಚಿಕ್ಕಂದು ಮಿಟ್ಟೆಯ ಹೊಡೆಯೆ ನಡುಗಡಲಲ್ಲಿ ಬಿದ್ದನು (ಕೌಶಲಾ. ೬-೧೧); ಬಿಡುವಲೆ ಸೊರ್ಕು ಮರ್ದು ಪದವಿಲ್ಲಿದವಿಲ್ಲೆಲೆಯುಂಬು ಮಿಟ್ಟೆ [ಪಾಠಾಂ. ಟ್ಟೆ] . . . ಎನಿಪ್ಪಿವಂ ಪಿಡಿದು ಬೇಂಟೆಗೆ ಸಂದ ಪುಳಿಂದರೆಯ್ದಿದರ್ (ರಾಜಶೇ. ೫-೫೨). ೫. ಮೊಗ್ಗು; ಮುಗುಳು: ಹೂವಿನ ಮಿಟ್ಟೆಯನ್ನು ಹೂವಾಗಿಸಲು ಹೇಗೆ ಸಾಧ್ಯವಿಲ್ಲವೋ ಹಾಗೆಯೇ ಮಂದಾರಳನ್ನು ಬೇಗ ತಾಯಿಯಾಗುವಂತೆ ಮಾಡಿಸಲು ಸಾಧ್ಯವಿಲ್ಲ (ಬಾಳ್ವೆ. ೧೩). ೬. ನೆಲ; ಭೂಮಿ (?) : ಅರಸಿ ಕುಮಾರನಂ ಪಡೆದ ಭಂಗಿಯನೇವೆಸಗೊಳ್ವೆನೆಲ್ಲವೆಲ್ಲರ ತೆಱನಲ್ತು ಮಿಟ್ಟೆಯೊಳೆ ತಾಂ ಪಡೆದಂತೆ ಸುಖಪ್ರಸೂತಿಯೊಪ್ಪಿರೆ ಪಡೆದಳ್ (ಸುಕುಸು. ೭-೫೮).

**ಮಿಂಟೆ$_1$** : ೨. ವಿಮಾನಂ . . . ಕಲ್ಲಂ ತಾಗಿದ ಮಿಂಟೆ [ಪಾಠಾಂ. ಟ್ಟೆ]ಯಂತೆ ಬೆಟ್ಟವಂ ಪಳಂಚಿದ ಭೃತ್ರದಂತೆ ಪೆಜಸಾರ್ದು ನಿಂದು (ಧರ್ಮಾಶ. ೧-೮೫ ವ); ಈ ಕಪಟಮಂ ಮಾಡಿ ಬಳಿಕೆನ್ನ ಮಗಳ ನಾನೇ ಕೊಂದೆನೀ ತೆಱಂ ಕಲ್ಲನೆಚ್ಚಾ ಮಿಂ[ಪಾಠಾಂ. ಮಿಾಂ]ಟೆಯಾ ಕರ್ತುವಂ ತಾಗಿದಂತಾಯಿತು (ಸಮ್ಯಕ್ತ್ವ. ೬-೪೯); ಮಲ್ಲರ ಮಲ್ಲನ ಮೈಯೊಳವನ ಮುಷ್ಟಿ ಕಲ್ಲ ತಾಗಿದ ಮಿಂಟೆಯಾಯ್ತು (ನೇಮಿಸಂ. ೦೬-೦೦೮). ೩. ಸೊನ್ನೆಯ ಮಿಂಟೆ ಮಿಸುನಿಗರಡಗೆಯಂತೆ ಚನ್ನೆಯ ಕುಚಗಳೊಪ್ಪಿದವು (ಶ್ರೀಪಾಂ. ೩-೫೬); ಆ ಮುನಿಪತ್ರಿಯ ಪರಡುಗಳೆಸೆದವಾ ಸೋಮಧರಾರಿಯ ನೆಸುವ ಹೇಮದ ಮಿಂಟೆಗಳಂತಾ ನೃಪತಿಗೆ (ರಾಮವಿ. ೪-೧೫೫); ಚಿನ್ನದ ಚಿಕ್ಕ ಮಿಂಟೆಯ ಪೋಲ್ವ ಮೊಲೆಗಳ ಸನ್ನುತ ಪೊರವಾರುಗಳ ಚೆನ್ನೆಯರರಸಿ ಪದ್ಮಶ್ರೀನಂದೆಯ ಬೆಸ್ನೆನೊದೆದು ಪುಟ್ಟಿದಳು (ನಾಗಕು. ೦೪-೭೨). ೪. "ಶರಮುಂಡಿ ಮಿಂಟೆ [ಪಾಠಾಂ. ನೇಮಿ] ಯಾಕ್ಕುಂ" (ಮಂಗರಾ. ೮೬-೩೫); ಸುರಿದನು ಸರಳ ಸಾರವಸನಲಗರ್ಭದ ಬಾಯ ಧಾರೆಗಳನಿಲಗರ್ಭದ ಗಱಿಗಳಶನಿಯ ಗರ್ಭಮಿಂಟೆಗಳ (ಕುಮಾವ್ಯಾ. ೬-೩೫); ಬೋಳೆಗಳ ಮಿಂಟೆ [ಪಾಠಾಂ. ಮಿಟ್ಟೆ, ಮಿಾಟೆ]ಗಳ ದೇಹದ ಸಾಳುವನ ಗಳೆಯುಂಟುಗಳ ಶಬರಾಳಿ ಬಂದುದು ಪರ್ಣಶಾಲೆಗೆ ಸೂರ್ಯವಂಶಜನ (ತೊರರಾ. ೩-೩-೩); ತಾವರೆಗಾವೊಳಾಗಿಸಿದ ಬಿಲ್ಗೆ . . . ಭೃಂಗಾವಳಿಯೆಂಬ ಮಿಂಟೆವಿಡಿದಂಟಿಸಿ ಗೆಂಟಿನೊಳಿಟ್ಟು ಪಾಱಿಪರ್ ತೀವಿದ ಕೀರಮಂಡಳಿಯನಲ್ಲಿಯ ಪಾಮರಿಯರ್ನಿರಂತರಂ (ರಾಜಶೇ. ೨-೦೭). **ಮಿಟ್ಟೆ** : ೧. ತಗ್ಗು ಮಿಟ್ಟುಗಳನ್ನರಿಯದೆ ಬೀಳುತ್ತೇಳುತ್ತ. ತಲೆಗೆಪರಿ ಬಾಯಿ ಬಿಡುತ್ತ ವೈಮೇಲೆಚ್ಚರಿಲ್ಲದೆ ಅಂಬಿಕಾಭವನವನ್ನು ಸಮಿಾಪಿಸಿದ (ಬಡುಕಿ. ೦೮೦). ೨. "ಮಿಟ್ಟೆಯೆ ಮಿಣ್ಣೆಯುಮಕ್ಕುಂ" (ಕವಿಕಂ. ೨೩೦); ಬಾಣಗಳ ನಾರಸಿಂಹನ ಮೇಲೆ ಬಿಡಲು ಕಲ್ಲ ತಾಗಿದ ಮಿಟ್ಟೆಯಂತೆ ಹಾಱಿ ಹೋಗಲು (ಶೃಂಗಸೂ. I, ೦೨೦). ೩. ಉನ್ನತಫಲಗಳೊಂದಾಗುದಿಸಿದವೊಯೆನುತಿವನು ಜಟ್ಟಿಯ ವಿಧದಿ ಇನಮಂಡಲಕೆ ಮಿಟ್ಟೆಯ ಮಿಡಿದೊಲೈದಿದನು (ಉತ್ತ. ೩೦-೨೮). ೪. ಕಾಮನ ಕಯ್ಯ ಮಿಟ್ಟೆ [ಪಾಠಾಂ. ಟ್ಟೆ] ಗಳೊ ಕತ್ತುರಿಗಳೊ ಕಾಮಿತಪೂಗದೊಡ್ಡುಗಳೊ (ವರ್ಧ. ೧-೦೦೪); ಸಿಂಗಾಡಿವಿಲ್ಲಿನ ಗುಱಿಯ ಮಿಟ್ಟೆಯನೆಸುತ ಬಂದನು ತರಹರದಿ ಶ್ರೀಹರಿಯೆ ನಿನ್ನನು ನೋಳ್ಪ ತವಕದಲಿ (ಕೃಷ್ಣಾ. ೨೮-೭). ೫. ಹಳ್ಳಿಗರಿಗೆ ಪ್ರಣಯ ಬರುವುದು ಚಿಗಿತ ಮಾಮರಕ್ಕೆ ಮಿಟ್ಟೆ ಕೂತಂತೆ (ಕನ್ನಡ. ೦೦೫). **ಮಿಣ್ಣೆ** : ೧. "ಮಿಂಗೆ ಮಿಣ್ಣೆ ಮಿಟ್ಟೆಯದು" (ಕವಿಕಂ. ೨೪೯). ೨. "ಮಿಟ್ಟೆಯೆ ಮಿಣ್ಣೆಯುಮಕ್ಕುಂ" (ಕವಿಕಂ. ೨೩೦); ಪವನಸುತ ಕಂಡಾಗ್ರಹಿಸಿ ಮೇಲೆ ಗವಿಸಿದನು ಕುಧರವನು ಖಳನವಯವದ ಸೋಂಕಿನಲೊಡದುದಚಲಕೆ ಮಿಡಿದ ಮಿಣ್ಣೆಯೊಲು (ಅವಂಶಾ. ೭-೮-೬೫). ೩. ಹೊಳಪಿರುವ ದುಂಡಗಾದ ಸಣ್ಣ ಮಿಣ್ಣೆಯನ್ನು ನೀನು ನೋಡಿದರೆ ಅದು ನಿನಗೆ ಏನಾದರೊಂದು ಸಂಗತಿಯನ್ನು ಹೇಳುವುದಿಲ್ಲವೆ? (ಮಿಂತಿ. ೩). **ಮಿಾಂಟೆ** : ೨. ಕಲ್ಲಂ ತಾಗಿದ ಮಿಾಂಟೆಯಂತೆ ಮುಟ್ಟುಗೆಟ್ಟು (ಧರ್ಮಾಮೃ. ೧೦-೦೩೬); ಸೂಂಕಿ ಮಗುಚಲ್ ಕಲ್ಲನಿರದೆಚ್ಚ ಮಿಾಂಟೆ ಮಗುಚಿದ ತೆಱಂಬಡೆದುದಾಗಸಹುಲ್ಲಿ ತಿಱಿಚ್ಚಿನುತಪೆ (ಸಮ್ಯಕ್ತ್ವ. ೧೦-೩೪). ೩. ಕಳವೆಯ ಕದಿರ ಮಿಾಸಲ ಕಂಪನುಣಲೆಂದಳಿಶಿಶುಗಳು ಕೊನೆಯೇಱಿ ಪೋದವು ಪೂಗಱೆಯನ ಪಸುರ್ಗಾವಿನ ತೊಳಪ ನೀಲದ ಮಿಾಂಟೆ[ಪಾಠಾಂ. ಮಿಂಟೆ, ಮಿಾಂಟ]ಯಂತೆ (ಶ್ರೀಪಾಂ. ೦-೫೦); ಮಕರಾಂಕಮಂಡಿತ ಪೊಂಗಳಸಗಳ್ಗೆ ಮೌಕ್ತಿಕ ಮಿಾಂಟೆಯ ಸಾರ್ಚಿದಂತೆ ನಖಚಕ್ರದಸಕದಿಂ ಬೆರಲ್ಗಳೊಪ್ಪಿರ್ದ್ದು ಪಾಯಕನಂಘ್ರಿಯುಗಳಪಲ್ಲವದಿ (ಬೋಹತ. ೨೩-೦೪). ೪. ಎಮ್ಮಯ್ಯಂ ಪೇಟ್ಟಿಂತೆ ನೆಗಟ್ವೆನೆಂದು ಕಿಱಿಯ ಬಿಲ್ಲುಂ ಮಿಾಂಟೆಯುಮಂ ಕೊಂಡು ಪೋಗಿ ಪಚ್ಚವಡದಿ ಕುಟಿಯಂ ನೋಟ್ಪನ್ನೆಗಂ ಕರಿಯ ಪಿರಿಯ ತಲೆಯ ನಿಡಿಯ ಪುಱು ನೆಗೆದು ತೋಱಿದೊಡೆ ಮಿಾಂಟೆ[ಪಾಠಾಂ. ಮಿಟ್ಟೆ]ಯುಂ ತೊಟ್ಟು ತೆಗೆದಿಸುವಾಗಳ್ (ಜೀವಸಂ. ೦೩೪-೩೦ ವ) ; ಬಳಿಕೊಂಬತ್ತುಸಾವಿರ ಕೋಲು ಮಿಾಂಟೆಯ ಕವಲುಗಣೆ ಹನ್ನೆರಡುಸಾವಿರವು . . . ಅಱು ಬಂಡಿಯ ಲೆಕ್ಕವಿದೆ (ಕುಮಾವ್ಯಾ. ೦೮-೨೨) ; ಗೋಪುರಪ್ರಾಕಾರಮಂಟಪ ವಿಮಾನಂಗಳೊಳ್ ನೆಲಸಿರ್ಪ ಕಿಱುವಕ್ಕಿಗಳನೂದಿ ಮಿಾಂಟೆಗಳಿಂದಿಟ್ಟು ಕೆಡಪಿ . . . ತಂತಮ್ಮ ಸತಿಸುತಪಿತರೊಡವೆರಸುಣ್ಬರ್ (ಜಗವಾ. ೭-೦೦).

**ಮಿಟ್ಟೆಗೊಂಡ ಚಿಟ್ಟೆ, ಮಿಟ್ಟೆಕೊಂಡ ಚಿಟ್ಟೆ** = ಮಣ್ಣಿನ ಹೆಂಟೆಯ ಹೊಡೆತಕ್ಕೆ ಸಿಕ್ಕಿದ ಮಿಡಿತೆ : ಮುಸುಱಿ ದಿವ್ಯಾಸ್ತ್ರಚಯಂಗಳ್ ಕೂಳೆ ಗಾಂಧರ್ವಬಲಂಗಳ್ ಕೆಡೆದುವು ಮಿಟ್ಟೆಗೊಂಡ ಚಿಟ್ಟೆಯ ತೆಱದಿಂ (ತಂಜಾ. ೭-೩೮) ; ಬೆನ್ನನಟ್ಟಿ ನಟ್ಟ ಜಟ್ಟಿಗೆಯುಂ ಮಿಟ್ಟೆಗೊಂಡ ಚಿಟ್ಟೆ [ಪಾಠಾಂ. ಬಿಟ್ಟೆ]ಯಂತೆಯುಂ ಬಡಿಗೊಂಡ ಮೊಲದಂತೆಯುಂ ತಲೆಕೆಟಗಾಗಿ ಬಿಟ್ಟರ್ (ಶಾಂತಿಪು. ೪-೩೦ ವ) ; ತದ್ವಲಲಂ ನಿರ್ಭರಕೋಪಂ ಬದಿದೊರ್ದೆಯುಲ್ ಧರೆಯೊಳವಂ ಮಿಟ್ಟೆ ಕೊಂಡ ಚಿಟ್ಟೆವೊಲಿರ್ದಂ (ನೇಮಿಪು. ೦೦-೧೨೫). **ಮಿಟ್ಟೆಯ ಭಂಡ, ಮಿಟ್ಟಿಯ ಭಂಡ** = ಬೂಟಾಟಿಕೆಗಾಗಿ ಮೃತ್ತಿಕೆಯನ್ನಾಗಲಿ ವಿಭೂತಿಯನ್ನಾಗಲಿ ಧರಿಸಿರುವ ಲಜ್ಜೆಗೇಡಿ : ಸಕಲೇಂದ್ರಿಯದೊಳಗಿರ್ದು ವಸ್ತುವನಱಿದೆನೆಂಬ ಮಿಟ್ಟೆಯ ಭಂಡರನೊಪ್ಪ ವಿಣಾಂಕಧರ ಸೋಮೇಶ್ವರಲಿಂಗವು (ಸಕವ. I. ೭೦-೨೭೫) : ತನ್ನ ಇಷ್ಟಲಿಂಗದಲ್ಲಿ ದಾಸೋಹವ ಮಾಡಲಱಿಯದೆ ಹಲವು ಬಯಕೆಯ ಬಯಸುವ ಮಿಟ್ಟೆ [ಪಾಠಾಂ. ಟ್ಟೆ]ಯ ಭಂಡರನೆನ್ನತ್ತ ತೋಱದಿರಯ್ಯಾ ಕೂಡಲಚನ್ನಸಂಗಮದೇವಾ (ಚನ್ನವ. ೦೪೭-೪೩೪) : ಅಷ್ಟವಿಧಾರ್ಚನೆ ಷೋಡಶೋಪಚಾರವ ಮಾಡುವ ಮಿಟ್ಟೆಯ ಭಂಡರ ಕಂಡು ನಾಚಿತ್ತೆನ್ನ ಮನವು (ಸಮಾವ. ೭-೨೮).

[ದೇ.॥ ತಮಿ. ಮೆಟ್ಟು ; ಮಲ. ಮಿಟ್ಟಾಲ್ ; ತುಳು. ಮಿಟ್ಟೆ, ಮುಟ್ಟೆ; ತೆಲು. ಮಿಟ್ಟ, ಮೆಟ್ಟ]

**ಮಿಟ್ಟೆಗಲ್ಲು** (ನಾ). ಎತ್ತರವಾದ ಕಲ್ಲು ; ಉನ್ನತವಾದ ಶಿಲೆ : ಕುಂಭೀನಸಿಯು ಹಿಮಾಚಲದ ನೆರೆಯಲ್ಲಿಗುವ ದೊಡ್ಡದಾದ ಮಿಟ್ಟೆಗಲ್ಲ ಮೇಲೆ ಕುಳಿತಿದ್ದಳು (ಶ್ರೀರಾಮ. ೦೦೭). [ಮಿಟ್ಟೆ + ಕಲ್ಲು (<ಕಲ್$_3$)]

**ಮಿಟ್ಟೆದುಡು** (ಕ್ರಿ). ಕವಣೆಯನ್ನು ಪ್ರಯೋಗಿಸು : ಅವನೆಲ್ಲರನೆಸೆವ ಅವ ನಮ್ಮ ಕಂಡಡೆ ಬೆಟ್ಟನ್ನ ಮಿಟ್ಟೆದುಡ ಸಕಳೇಶ್ವರದೇವನಱಿಯದ ನಿರ್ಭಾಗ್ಯರನೆಸೆವಾ (ಸಕವ. II. ೫೪೭-೦೩೭೦).

[ಮಿಟ್ಟೆ + ತುಡು$_1$ ( < ತೊಡು$_1$)]

**ಮಿಟ್ಟೆನೆಲ** (ನಾ). ಎತ್ತರವಾದ ಭೂಮಿ ; ತೆವರು : (+).

[ ಮಿಟ್ಟೆ + ನೆಲ ]

**ಮಿಟ್ಟೆಯಂಬು, ಮಿಂಟೆಯಂಬು, ಮಿಟ್ಟೆಯಂಬು** (ನಾ). ಗುಂಡನೆಯ ಕಲ್ಲಿಟ್ಟು ಬಾಣದಂತೆ ಪ್ರಯೋಗಿಸುವ ಒಂದು ಬಗೆಯ ಸಾಧನ : ಬಾಲರೆಸುಗೆಯ ಮಿಟ್ಟೆ[ಪಾಠಾಂ. ಮಿಂಟೆ]ಯಂಬಿಗೆ ಸೋಲು

ವುವೆ ೧೧೨ (ಕುಮಾವ್ಯಾ. ೩-೨೭) ; ಬಿಟ್ಟೆಸಬಿಲಿಭೋಗವನೆಂಬ ಪ್ರತಿಕಸ ತೊಟ್ಟನೆಸುವೆನೆಂದು ಮದನ ಮಿಟ್ಟೆಯಂಬುಗಳ ಮಾಡಿಸಿದಂತೆ ಬಸವೊಳು ಬಟ್ಟಮಲ್ಲಿಗೆಗಳೊಪ್ಪಿಹವು (ಕಂಠೀಶ. ೨-೯೦). **ಮಿಂಟೆಯಂಬು:** ಥರಥರದ ಸಬಳಗಳ ಮಿಂಟಿಯೆಂಬನು ತಮ್ಮ ದೇಹದಲಿ ಧರಿಸಿ (ಕೂರವ. ೦೦-೩೮).
**ಮಿಟ್ಟೆಯಂಬು :** ಮುಳ್ಳಂಬುಗಳು ಸಾವಿರದೇಳ್ನೂಱು ಒಂಬತ್ತುಸಾವಿರ ಮಿಟ್ಟೆ [ಪಾಠಾಂ. ಮಿಂಟೆ]ಯುಂಬುಗಳು (ಭೈರಸೂ. ೧. ೬೩).
[ಮಿಟ್ಟೆ + ಅಂಬು₂]

**ಮಿಟ್ಟೆವರಹ** (ನಾ). ನಾಲ್ಕುರೂಪಾಯಿಗಳಷ್ಟು ಬೆಲೆಬಾಳುವ ಒಂದು ಬಗೆಯ ಚಿನ್ನದ ನಾಣ್ಯ : (೬). [ ← ತೆಲು. ಮಿಟ್ಟವರಹಾ]

**ಮಿಟ್ಟಾದಾರ** (ನಾ.) ಒಂದು ಜಿಲ್ಲೆಯ ಉಪವಿಭಾಗದ ಅಧಿಕಾರಿ : 'ಮಿಟ್ಟಾದಾರಿ ' ಪರಾ.
[ ←ಹಿಂ. ಮಿಟ್ಟಾದಾರ್. / ತಮಿ. ಮಿಟ್ಟಾತಾರ್]

**ಮಿಟ್ಟಾದಾರಿ** (ನಾ). ಮಿಟ್ಟಾದಾರನ ಆಡಳಿತಕ್ಕೆ ಒಳಪಟ್ಟ ಪ್ರದೇಶ : ಮದರಾಸಿಗೆ ದಕ್ಷಿಣಪ್ರಾಂತದಲ್ಲಿ ಶಿವಗಂಗೆ, ರಾಮನಾಡು. ಪುದಿಕೋಟೆ. ವೆಂಕಟಗಿರಿ ಇನ್ನೂ ಕೆಲವು ಮಿಟ್ಟಾದಾರಿಗಳು ಇವುಗಳೆಲ್ಲಾ ಉಳಿದೇ ಇವೆ (ಪಾಣಿನಾ. ೦೬). [←ಹಿಂ. ಮಿಟ್ಟಾದಾರೀ. /ತಮಿ. ಮಿಟ್ಟಾತಾರಿ]

**ಮಿಟ್ಟಾವು** (ನಾ). ಒಬ್ಬನ ಅಧಿಕಾರಕ್ಕೆ ಒಳಪಟ್ಟ ಆಡಳಿತದ ಪ್ರದೇಶ : ಮೈಸೂರ ರಾಜ್ಯವನ್ನು ೪೪ ಲಕ್ಷ ವರಹಾಕ್ಕೆ ಮಿಟ್ಟಾವಾಗಿ ಕೊಡಸ ಬೇಕೆಂದು ವಾಸಪ್ಪಾಜಿಯು ಇನ್ನೊಂದು ಸಲಹೆಯನ್ನು ಕಳುಹಿಸಿದ್ದನಂತೆ (ಕುಠಾಶ. ೯೦). [ ← ಹಿಂ. ಮಿಟ್ಟಾ. /ತಮಿ. ಮಿಟ್ಟಾ ]

**ಮಿಟ್ಲ** 'ಮಿಟಲಿ' ನೋ.

**ಮಿಟ್ಲಿ** 'ಮಿಟಲಿ ' ನೋ.

**ಮಿಠಾಯಿ, ಮಿಟಾಯಿ** (ನಾ). ಒಂದು ಬಗೆಯ ಸಿಹಿತಿಂಡಿ : ಎರಡು ರುಪಾಯಿ ವೆಚ್ಚ ಮಾಡಿ ಮಿಠಾಯಿ ತಿಂದರೆ (ಮುಂಬಯಿ. ೩-೦೭೯) ; ಅವಲಕ್ಕಿ, ಮಿಠಾಯಿ ಸಾಕಷ್ಟು ಉಳಿದಿವೆ (ಛಾಠಿ. ೩). **ಮಿಟಾಯಿ** :'ಸಕ್ಕರೆ ಮಿಟಾಯಿ' ಪರಾ. [← ಹಿಂ. ಮರಾ. ಮಿಠಾಈ]

**ಮಿಠಾಯಿಗಾರ** (ನಾ). ಸಿಹಿತಿಂಡಿಯನ್ನು ತಯಾರಿಸುವವನು ಹಾಗೂ ಮಾರುವವನು : ಮಿಠಾಯಿಗಾರ ಲಾಡು, ಜಿಲೇಬಿ, ಬತ್ತಾಸು ಮುಂತಾ ದುವನ್ನು ಸಿದ್ಧಪಡಿಸಿಕೊಂಡಿರುತ್ತಾನೆ (ಜೀವಾಕ್ಕ. ೨೨೯).
[ಮಿಠಾಯಿ + – ಗಾರ (<–ಕಾಱ)]

**ಮಿಠಾರಿ** (ನಾ). ಬೆಡಗು ; ಸೊಗಸುಗಾತಿ : ನೀಟುದೋರುತ ಮಿಠಾರಿಯ ರೊಲಿಸುತ . . . ನರ್ತನದಾಟ ನೋಡಿದರು ಕೋವಿದರು (ಶಾಂವಶಾ. ೩-೦೦೦) ; ಚಿತ್ರಿಣೀಜಾತಿ ಮಿಠಾರಿಯನ್ನು ಉತ್ತಮಳೆಂದು ಪೇಳುವರ್ರು (ಶಾಗಂಧಿ. ೪೬೯-೦೦). [← ತೆಲು. ಮಿಟಾರಿ]

**ಮಿಠಾಲಕಡಿ** (ನಾ). ಒಂದು ಬಗೆಯ ಮೂಲಿಕೆ ; ಯಷ್ಟಿಮಧುಕ ; ಅತಿಮಧುರ : "ಮಧುಕಂ. ಕ್ಲೀತಕ್ಯಂ ಯಷ್ಟಿಮಧುಕಂ, ಮಧುಯಷ್ಟಿಕಾ — ೪ ಅತಿಮಧುರದ ಹೆಸರುಗಳು. ಯಷ್ಟಿಮಧುಕಃ . ಮಿಠಾಲಕಡಿ" (ಸಿದ್ಧಾಂತಿ. ೦೪೩). [← ಹಿಂ. ಮಿಠೀಲಕಡೀ]

**ಮಿಡ, ಮುರುಡ₂** (ನಾ). ಶಿವ ; ಈಶ್ವರ : ''ಎಳದೇರ ಗೊರವನೈಪೊಗ . . . ಮಿಡ ಶಿಸುಳಿ . . . ಈಸರಂ ದೇಸಿಗಂ" (ಕಬ್ಬಿಗರ. ೩) ; ಒಡೆಯಂ ಕಣ್ಣಾಡಿಯಂ ಮಿಡಂ ತಿಸುಳಿ . . . ಮಱುಕಂಬೊತ್ತೀವುಗೆಮ್ಮಂ ಕರಂ (ಶಾಂತೀಶ್ವ. ೦-೦೭-೫೧). 'ಮಿಡಪ್ಪಿ ' ಪರಾ. **ಮುರುಡ₂ :** 'ಮುರುಡ ಸುತ', 'ಮುರುಡೇಶ್ವರ' ಪರಾ. [ < ಸಂ. ಮೃಡ]

**ಮಿಡಚಿ** 'ಮಿಡತೆ' ನೋ.

**ಮಿಡಚೆ** 'ಮಿಡತೆ' ನೋ.

**ಮಿಡಚ್ಚಿ** (ನಾ).ಒಂದು ಬಗೆಯ ಮರ ಮತ್ತು ಅದರ ಕಾಯಿ; ರುದ್ರಾಕ್ಷಿ: ತಣಸಾರುವ ಮಿರೋಕ್ಷಕ್ಕಂ ಸಲೆ ಗುಱುತದು ಗಜ ಬೂದಿಯ್ಂ ಮಿಡಚ್ಚಿಯ ಮಣಿಯುಂ (ಶಾಂತೀಶ್ವ. ೨-೦೨-೯). [ಮಿಡ + ಅಚ್ಚಿ₅]

**ಮಿಡತೆ.** ಮಿಡಚಿ. ಮಿಡಚೆ. ಮಿಡಿಚು, ಮಿಡಿಚೆ. ಮಿಡಿತೆ. ಮಿಡುಚೆ (ನಾ). ೧. ಒಂದು ಬಗೆಯ ಹಾರುವ ಹುಳು ; ಶಿವನ ಕುದುರೆ ; ಶಲಭ : " ಮಿಡತೆ – ಮಿಟಚಿ(ತಿ) " (ಶಬ್ದಕೋ. ೩೫) ; ಮಿಡತೆಹುಳುಗಳ ಗುಂಪಿನಂತೆ, ತನ್ನ ರಥವನ್ನು ಕುರಿತು ಬರುವ ಶಸ್ತ್ರಗಳನ್ನು ಅರ್ಜುನನು . . . ತಡೆದನು (ವ್ಯಾಸಶಿ. ೩೩೩). **ಮಿಡಚಿ :** ೧. ಪಟ್ಟ ಅಥವಾ ಮಿಡಚಿ (ಕೀಟಿವಿ. ೬೩). **ಮಿಡಚೆ :** ೧. " ಮಿಡಚಿ (ಮಿಡತೆ) = ಸೂರ್ಯನ ಕುದುರೆಹುಳ " (ಜಾನಪಕೋ. ೩೦). **ಮಿಡಿಚು :** ೨. ಒಂದು ಬಗೆಯ ಸಣ್ಣ ಮೀನು ; ಸೀಗಡಿ : ಸಲೆ ನೀರ್ವಿರ್ಪ್ಪಮಿಡಿಚಿಲ್ಲದುಸ್ತ್ರಮುಮಪಾ ತೀರ್ಥಂ ಶಿವಜ್ಞಾನಯೋಗಿಲಸದ್ವೃಕ್ತಿಪರಾಯಣಂ (೬೩೪. ೨೭). **ಮಿಡಿಚೆ :** ೧. "ಪತಂಗಃ, ಶಲಭಃ —೨ ಪತಂಗದ ಹುಳುವಿನ ಹೆಸರುಗಳು. ಮಿಡಿಚೆಗೂ ಹೆಸರಾಗುವದು" (ಸಿದ್ಧಾಂತಿ. ೦೬೨) ; ಮಿಡಿಚೆ(ತೆ) ಯಿಲಿ(ಯಲ್)ಯಿಂಚೆ ಮೃಗದಿಂ . . . ಕಿಡುವುದು ಫಲವುಂ ಪರಿವುಂ (ಅಭಿಮ. ೦೨-೦೫೪) ; ಒರಲೆ ಹುತ್ತಕ್ಕೆಯರಗಿಣಿ ಹರುವೆಯು ತೋಟಕ್ಕೆ ಮಿಡಿಚೆ ಕೋಗಿಲೆ ಹಳ್ಳಿಗೆ ತುರುವೆ ನವನಾಗಸಂಪಗೆ ಕುರುಬಂ ಸಲೆ ಜಾಣ ಖೂಳರಾಸ್ಥಾನಕ್ಕಂ (ಶೀತಿಸಾ. ೩೬೨). ೨. ಕಮಿವುಳಿಗಳನ್ನೊಂದು ತಿಳಿವಟ್ಟ ಲಿನಿಟ್ಟೆಱೆಯಲ್ಕೆ ಮಱುಱುಸೂಟುಗ್ ಮಿಡಿಮಿಡಿದರ್ಥಮುಂ ಕುಡಿದು ಚಿಪ್ಪಿಱಿದ್ದಿಕ್ಕಿದ ಸಣ್ಣಮೀನುಗಳಂ ಮಿಡಿಚೆಗಳಂ ಕುಱಿಯಂಕೆ (ದಶಕು. ೬-೨೦೯).

**ಮಿಡಿತೆ :** ೧. ಮಿಡಿತೆ ಹೆಗ್ಗಣ ಮೊದಲಾದ ದುಷ್ಟಜಂತುಗಳ ಬಾಧೆಗಳು ತಪ್ಪಿ ಪೈರುಗಳು ಬೆಳೆಯುವವು (ಕೃಪಾಕ. ೯೫) ; ಬಂತು ಉತ್ತರದಿಂದ ಹತ್ತಿರ ಹಳದಿ ಮಿಡಿತೆಯ ಹಾವಳಿ (ಕಂಡಮು. ೪೭-೦೦). ೩. ದೀಪಕ್ಕೆ ಮುತ್ತುವ ಒಂದು ಬಗೆಯ ಹುಳು ; ಪತಂಗ : ಕ್ರೋಧನಂಗೊಳಲಾಕೆ ಕೆಂಡದೆಡೆ ಮಿಡಿತೆಯುಂತಟಕಟಸುತ (ಶವಮು. ೦೦-೦೭).

**ಮಿಡುಚೆ :** ೩. ಬೇಗೆಯೊಳಗಣ ಮಿಡುಚೆ[ಪಾಠಾಂ. ಡಿಚೆ, ಡುಚು]ಗಳ ತೆಱದಿ ವ್ಯಕ್ತ ಉರಿದೇ ಹೋಹಿರಲ್ಲದೆ ಶಕ್ತಿಯುಂಟೇ ನಿಲಲು (ಬಸವು. ೩೬-೨೯).
[ದೇ.೩ ತಮಿ. ವಿಟ್ಟಿಲ್. ಮಲ. ವಿಟ್ಟಿಲ್, ವೆಟ್ಟಿಲ್ ; ತುಳು. ಮೊಂಟೆ ; ತೆಲು. ಮಿಡತ, ಮಿಡುತ ; ಕೋಲಾ. ಮಿಟ್ಟೆ : ಪರ್ಜಿ. ಮಿಟಕ]

**ಮಿಡಮಿಡ** (ನಾ). (ಆಧಿಕ್ಯ, ಅತಿಶಯತೆ ಮುಂತಾದುವನ್ನು ಸೂಚಿಸುವ) ಒಂದು ಅನುಕರಣಶಬ್ದ : 'ಮಿಡಮಿಡನೆ ' ಪರಾ.
**ಮಿಡಮಿಡ ಮಿಡುಂಕು, ಮಿಡಮಿಡ ಮಿಡುಕು** = ಬಹಳ ಸಂಕಟ ಪಡು, – ಪೇಚಾಡು : ಓರೊರ್ಮೆ ವಿರಹಾನಳನನ್ನ ಧಿವಿದಾಹದಿಂ ಕೆಂಪಡರೆ ಕಾಯ್ದು ವೆನಿಪ ಕೆಂದಾವರೆಯ ಪಾಸಿನೊಳ್ ಕೆಡೆದು ಮಿಡಮಿಡ ಮಿಡುಂಕುವದವಟಲ ಪೆರ್ಚಿನಿಂ ಕಿಚ್ಚಿನೊಳ್ ಬಿದ್ದ ಕಿಡಿಯಂ ನೆನೆಯಿಸುವಳ್ (ವರ್ಧಕ. ೯-೩೬ ವ) ; ಮಿಡಮಿಡ ಮಿಡುಕುವಿನಂ ಬಡಿಯೊಳೊಡೆಯ ಪೊಡೆ ಪೆಡತಲೆಯಂ (ವಡ್ಡಾರಾ. ೦೨೭-೭).

**ಮಿಡಮಿಡನೆ** (ಅ). ಒಂದು ಅನುಕರಣಾವ್ಯಯ.
**ಮಿಡಮಿಡನೆ ಮಿಡುಕು** = ಬಹಳ ವ್ಯಥೆಪಡು.–ಸಂಕಟಗೊಳ್ಳು : ಪೂಜಿಮಿಡುವ ಭೂಪಾಲನಂ ಕುಡು . . . ಮಿಡ[ಪಾಠಾಂ. ಮಿಡು] ಮಿಡನೆ ಮಿಡುಕಿತ್ತು ಪೌರಜನವು (ಹರಿಶ. ೯-೩) ; ಮಿಡಮಿಡನೆ ಮಿಡುಕುತವೆ . . . ಕಡುದುರುಳನಿವನೆಂದೆನುತ ತಲೆವೊಪೆಯ ಹೊಪ್ಪುಳು (ಬಸವು. ೨೯-೫೬). [ಮಿಡಮಿಡ + – ಅನೆ₁]

**ಮಿಡಿ₁** (ಕ್ರಿ). ೧. ಒಂದು ಬೆರಳಿನ ಹಿಡಿತದಿಂದ ಮತ್ತೊಂದು ಬೆರಳನ್ನು ವೇಗವಾಗಿ ಬಿಡುಗಡೆ ಮಾಡಿ ತಾಕಿಸು : " ಮಿಡಿ – ಅಂಗುಲಿಪ್ರಹರಣೇ (ಬೆರಳಿನಿಂದ ಚಿಮ್ಮು), ಶಲಾಟುಫಲೇ ಚ ಕಸುಕಾಯಿ "

(**ಶಮಿಧಾ**) ; ಮಿಡಿದೊಡೆ ತನಿಗ[ರ್ಪು]ರಸಂ ಬಿತುವುವು (**ಪಂಶಭಾ. ೧-೫೬**) ; ಮಿಡಿಯಲೊಡಂ ಸುರಿವುದು ರಸವೆಡೆಯುಡುಗದೆನಿಪ್ಪ ನುಡಿಗೆ(ಕಡುಗೆನಿಸಿದ) ಪೋಲ್ . . . ಇಕ್ಷುವಾಟಿಗಳೆಸೆಗುಂ (**ಕುಸುಮ. ೧-೧೧೧**) ; ಗಲ್ಲವನೊಡನೆ ಮಿಡಿಯೆ ಕಳಕಳನೆ ಅಳುತ್ತಿರಲು (**ಬಸವ. ೧೫-೧೩**). ೨. ಸಂತೋಷ, ಆಶ್ಚರ್ಯ, ಆಹ್ವಾನ ಮುಂತಾದುವನ್ನು ಸೂಚಿಸಲು ಎರಡು ಬೆರಳುಗಳನ್ನು ಸೇರಿಸಿ ಶಬ್ದ ಮಾಡು ; ಚಿಟಿಕೆ ಹಾಕು : ದಿವ್ಯಜ್ಞಾನದೊಳ್ ಮಹೇಶ್ವರನುದಾರಮಹೇಶ್ವರನಪ್ಪುದನಱಿದು ಬೆರಲಂ ಮಿಡಿದು ಮುಗುಳ್ನಗೆ ನಕ್ಕು . . . ಮುನೀಂದ್ರವೃಂದಮಂ ಪೋಗಲ್ವೇಳ್ದು (**ಪಂಶಭಾ. ೬-೧೩ ವ**) ; ಅರಸಂ ತಲೆಯಂ ತೂಗಿ ಬೆರಲಂ ಮಿಡಿದು ಲಲಿತಾಂಗನಂ ಬರಿಸಿ . . . ಇಂತೆಂದಂ (**ಧರ್ಮಾಮೃ. ೨-೯೩**) : ತಲೆಯಂ ತೂಗಿ ಬೆರಲ್ಗಳಂ ಮಿಡಿದು ಸದ್ವಿದ್ಯರ್ ಸಭಾಮಧ್ಯದೊಳ್ ಪಲಬರ್ ಸತ್ಕವಿಗಿತ್ತ ತಕ್ಕಿನ ಪೆಸರ್ ಸಲ್ವಂತೆ ನೀಚಂಗೆ . . . ಸಲ್ವುದೇ (**ಧರ್ಮನಾ. ೧-೪೯**). ೩. ತಂತಿವಾದ್ಯವನ್ನು ಬೆರಳಿನಿಂದ ಮೀಟಿ ಬಾಜಿಸು, — ನುಡಿಸು : ದನಿಯಿಂಪು ಬೀಣೆಯಂ ಮಿಡಿದವೊಲಾಗೆ ಗಾನದೊಳೊಡಂಬಡೆ ಮೇನಕೆ ಮುಂದೆ ಪಾಡಿದಳ್ (**ಪಂಶಭಾ. ೭-೮೯**) ; ವಿಪಂಚೀವೀಣೆಯಂ ಕೊಂಡು . . . ಮಿಡಿದು ನೋಡಿ ಮನಂಗೊಂಡು ಮೃದುಮಧುರಧ್ವನಿಗಳೊಳೆಸೆಯೆ ಬಾಜಿಸಿದೊಡೆ (**ಬಿಂಹರಿ. ೨-೩೦ ವ**) ; ನಿನ್ನ ಜೀವದ ತಂತಿ ಮಿಡದೇನ (**ಗಂ. ೧೧೧-೬**). ೪. ತರ್ಜನಿಯ ಹಿಡಿತದಿಂದ ಹೆಬ್ಬೆರಳನ್ನು ಬಿಟ್ಟು, ಯಾವುದಾದರೂ ವಸ್ತುವನ್ನು ಮೇಲಕ್ಕೆ ಚಿಮ್ಮಿಸು, — ಎಗರಿಸು : ಕರಿಯನೇಱಿ ಮೇಲಕ್ಕೆ ಮಿಡಿದಡೆ ಕವಡೆ ಬಿಡೆ ಹಬ್ಬಿ ಹಾಱಿದನಿತುವದ್ದಕ್ಕೆ ಸುರಿದ ಹೊಸಹೊನ್ನ ರಾಶಿಯನೀಯಬೇಹುದು (**ಹಕಳಾ. ೧೧-೨೫**) ; ಪಿಡಿವರ್ಬಾಡಬವಹ್ನಿಯಂ ಮಿಡಿವರಾದಿತ್ಯೇಂದು ಬಿಂಬಂಗಳಂ . . . ಮೃಡನ ಭಕ್ತರ್ ಬಲ್ಲಿದರ್ (**ರಾಜಶೇ. ೬-೧೧೮**). ೫. ಕಣ್ಣೀರನ್ನು (ಬೆರಳಿನಿಂದ) ಒರಸು ; ತೊಡೆ : ಗುಡುಗುಡನೆ ಸುರಿವ ಕಣ್ಬನಿಗಳಂ ಮಿಡಿವುತ್ತುಂ ಮತ್ತಮಿಂತೆಂದಳ್ (**ಕಾದಂಬ. ೯೩೨**) ; ಸುರಿದಶ್ರುಗಳಂ ಕಡುವೆರಲಿಂ ಕಾನೆನಸುಂ ಮಿಡಿಯುತ್ತುಂ ಭೂಪ ಕುಸುಮಶರನಿಂತೆಂದಂ (**ಕುಸುಮ. ೧೧-೫೨**) ; ಕಂಬನಿಯನುಗುರಲಿ ಮಿಡಿದು ನೊಂದನು ಪಾರ್ಥ ಹೃದಯದಲಿ (**ಕುಮಾ್ರವ್ಯ ೭-೨೭**) ; ನಯನದಿ ನುರುಳುವಂಬಕವಾರಿಬಿಂದುವ ಬೆರಳ ಕೊನೆಯಲಿ ಮಿಡಿದು ಮಿಡುಕಿದರಧಿಕ ಶೋಕದಲಿ (**ತೊರರಾ. ೨-೨-೧೦**). ೬. ಬಿಲ್ಲಿನ ಹೆದೆಯನ್ನು ಜಗ್ಗು, — ಮೀಟು, — ಎಳೆ : ಒಡೆಗುವುಜಾಂಡಮಿನ್ನಿನಿಸು ಜೇವೊಡೆದಾಗಳೆ ಬೊಮ್ಮನುಂ ಮನಂಗಿಡುಗುಮದೇವುದೆಂದು ಮಿಡಿದೊಯ್ಯನೆ ಜೇವೊಡೆದಾಗ[ಳಿ]ಬಸಂ[ಬೊ]ಚಸೊಡನೀಮಿತ್ತ (**[illegible] ೨-೭೬**) ; ಆ ಬಿಲು ದಿರುವ ಮಿಡಿದ್ಯೆದಿದರಾ ನಾಸಾವಿರಮಹಾರಥರು (**ಕುಮಾ್ರದ್ರೋ. ೧-೭೬**) ; ಭೋಂಕೆನೆ ಮಿಡಿವ ರಾಳಿಯ ಬಿಲ್ಲ ಪೆಟಲ್ಗಳ ಸಂಕುಲವಿರ್ದುದಲ್ಲಲ್ಲಿ (**ಮೋಹತ. ೨೦-೯**). ೭. ಕುಟುಕು ; ಊರು : ಆ ತೇಟ್ಗ(ರುಗ)ಳು ಬ್ಬರದಿಂದಂ ಮಿಡಿದಂದು ಲೋಳೆ ಮಱುಕಂ ಶೋಕಂ . . . ಸಾವು ತದುಗ್ರಜಾತಿವಿಷದಿಂ ಮರ್ತ್ಯರ್ಕಳೊಳ್ ತೋಱುಗುಂ (**ಲೋಕೋಪ. ೧೧-೨೫**); ಕೆಂದೇಟಿಗ್ ಮಿಡಿದೊಡೆ ತವುಡಂ ತಂದಿಕ್ಕಿದ ಧೂಪದಿಂದೆ ತದ್ವಿಷಮುಱುಗುಂ (**ಜವುದ. ೧೧-೪೦**). ೮. ಪುಟನೆಗೆ ; ಪುಟಿ ; ಹಾರು : ಎಡೆವಿಡೆಯ ನಾಡನೆಡೆಯೆಡೆಯೂರಂ ಮಿಡಿದನಿತು ಬೇಗದಿಂ ಕಟಿದೊಡರಿಸಿದುದು ನೃಪತಿಗಾ ಹಯಂ ವಿಸ್ಮಯಮಂ (**ಪಂರಾಮಾ. ೪-೧೨೨**) ; ಮುಂಗಾಲ್ಗಳಂ ನೆಗಬಿ ನಿಲ್ವ . . . ಮಿಡಿವ . . . ಬವರಿವರಿವ ಚಮ್ಮಟಿಗೆಗೆ ಚಳಿಯುದ ಕಡಿಯಾಣವಂ ಕೈಕೊಳದ ಬಗೆಯಂ ಬಗೆದಂತೆ ಕಂಡು (**ರಾಜಶೇ. ೬-೧೧ ವ**). ೯. ಮೇಲಕ್ಕೆತ್ತು ; ನಿಗುರಿಸು : ಪುಚ್ಛವ ಮಿಡಿದು ಕಾಲ್ಗೆರದು . . . ನೋಡುತಲಿರ್ದುದಾ ಮಾಯಾಮರಾಪಪತಿ (**ಅನಂರಾ. ೧-೪-೧೯**). ೧೦. ಚಲಿಸು : ಸುಳಿ : ಬೀಸು : ನುಡಿವ ಗಿಳಿಗಳ ಸೊಂಪು ನಡೆವಂಚೆಗಳ ಗುಂಪು ಮಿಡಿವ ಮಾರುತನ ತಂಪು (**ವೆಂಕಾರಾ. ೨-೧೮-೧೧**). ೧೧. ಅಲುಗಾಡಿಸು ; ಚಲಿಸುವಂತೆ ಮಾಡು: ಮೇರುಗಿರಿಯನು ಮಿಡಿದು ಮೀಂಟುವ . . . ವೀರವೃತ್ತಿಯ ಕಡುಹಿನುಗ್ರಸಮಗ್ರರಿರ್ದರು ಮೃಡನ ಮುಂದೆಸೆಯಲ್ಲಿ (**ಕೃಶುಂಲೀ. ೨-೨೪**); ಯಂತ್ರಿ ಮಿಡಿವರೆ ಕಾದಿ ಬೀಳ್ವವು ಯಂತ್ರಮಯ ಹಾವೆಗಳು (**ಕುಮಾ್ರಭೀ. ೭-೩೦**); ಬಡಗ ಬೊಂಬೆಯ ಮಾಡಿ ಬೆಡಗಿನ ಕೀಲಿಕ್ಕಿ ಮಿಡಿಯೆ ಸೂತ್ರವನು ನರ್ತಿಸುವ ಬೊಂಬೆಯೊಳು ಬಡಿಗ ತಾನಿಪನೆ (**ಸರ್ವಜ್ಞ. ೩೩೪**). ೧೨. (ಜೋರಾಗಿ) ಅಲುಗಾಡು ; ಒಲೆದಾಡು : ಮಿಸುಪ ಕುಂಡಲ ಓಲೆ ಅರಳೆಲೆಯೆಸೆಯೆ ಚಂಡಿಕೆ ಮಿಡಿಯೆ (**ಬಸವು. ೨೪-೪೪**). ೧೩. ಸ್ಪಂದಿಸು ; ತುಡಿ : ಸ್ವಲ್ಪ ಹೊತ್ತು ಪ್ರಾಣವಾಯು ಮಿಡಿಯುತ್ತಿದ್ದಿತು (**ಶ್ರೀರಾಮ. ೧೨೫**); ಶಾಂತಲೆಯ ಹೃದಯ ಮಿಡಿಯಿತು (**ಶಾಂತಲಾ. ೧೩೦**). ೧೪. ತವಕಿಸು : ಆತುರಪಡು : ಕಡಿವ ದನಿಗಳು ಮಿಡಿವ ದನಿಗಳು ಕೂಡಿ ಬಯ್ವ ದನಿ ಅಡಗಲಿಸಿ ಹೊಯ್ದಾಡಿ ಬಿದ್ದುದು ಪಡೆಯಲೆರಡಱಲಿ (**ಕಾಶಿರಾ. ೨೭-೨೩**); ಬಂತು ಪಂಚಮಿ ಬೋಲಬಗರಿಗೆ, ಹೆಣ್ಣು ತವರಿಗೆ ಮಿಡಿದವು (**ಪಿಂವು. ೦೨-೪**). ೧೫. ಸ್ಪಂದಿಸುವಂತೆ ಮಾಡು ; ತುಡಿಯುವಂತೆ ಮಾಡು : ಜಡವೆಂಬುದೇನು . . . ಮಿಡಿಯೆ ಪರಸತ್ವವಿದ್ಯುದ್ದೀಪ್ತಿಯದನಾಗ ನಡೆವುದದು ಜೀವಿವೊಲು (**ಮಂಕುತ. ೧೧೧**); ಇವರಲ್ಲಿಯ ಕೆಲವಾದ್ದರೂ ಒಳ್ಳೆಯ ಭಾವನೆಗಳು ಸಹೃದಯರ ಹೃದಯವನ್ನು ಮಿಡಿದರೆ ನನ್ನ ಶ್ರಮವು ಸಾರ್ಥಕವೆಂದು ಭಾವಿಸುತ್ತೇನೆ (**ಪಂದ್ರಪೂ. ೮೦೪**). ೧೬. ಹೊಮ್ಮಿಸು ; ಉಕ್ಕಿಸು : ವಲ್ಲಭನ ಅಡಿದಾವರೆಗಳ ಕಾಣದೆ ನಯನದಿಂ ಮಿಡಿವಳು ಬಾಷ್ಪಂಬುವನು (**ಮೋಹತ. ೨೮-೬**); ಮಗನ ಮಾತಿಗೆ ಮೆಚ್ಚಿ ಹಿಗ್ಗುತ ದೃಗುಜಲವ ಮಿಡಿದು (**ಅಕ್ರೂತ. ೬-೧೧**); ಕಣ್ಣೀರು ಮಿಡಿಯುತ್ತ ಭಯದಿಂದ ನಡುಗುತ್ತ ತುಳಸಾಬಾಯಿ ಹೇಳಿದಳು (**ಮಹಾಗ. ೨೩೯**). ೧೭. ಹೊಡೆ ; ಬಡಿ : ಮಿಡಿಬಿಲ್ಲ ಶಾಂತದೇವರೆ ತನ್ನ ಲಿಂಗವಂ ತೊಡಚಿ ಸಂಧಾನದಿಂ ನೋಳ್ಪವರನೆಲ್ಲರಂ ಮಿಡಿಯೆ ಪೋಗಲ್ಕೆ (**ತಂಪು. ೭೩-೨೭**); ಪೊರವಾರ್ಗಳಂ ಮಿಡಿವ ಪೂಮುಡಿಯ ಜಿಡಿಯಲೆನೆ ಸೆರಗು ದಜದಡಿಸುತಿರೆ (**ಕಾಬೂರ. ೧೨೪-೨೬೦**).

[**ದೇ.॥** ಮಲ. ಮಿಟಿ ; **ತೆಲು.** ಮಿಡಿಯು, ಮಿಟ್ಟು ; **ಕೋಲಾ.** ಮಿಟ್ ; **ಪರ್ಜಿ. ನಾಯ್ಕಿ.** ಮಿಟ್ಟ್]

**ಮಿಡಿ₂** (ನಾ). ೧. ಪೂರ್ಣವಾಗಿ ಬಲಿಯದ ಕಾಯಿ ; ಕಸುಗಾಯಿ ; ಹೀಚು : ಪುಷ್ಪಸಂಕುಳದೊಳ್ ನೀನೆ ವಿಳಾಸಿಯ್ತೆ ಮಿಡಿಗಳೊಳ್ ನೀಂ ಚೆಲ್ವನೈ (**ಅದಿಪು. ೧೧-೯೬**); ಕಯ್ಪುಸೊರೆಯ ಕುಡಿಯೋಂ ಮಿಡಿಯೋಂ (**ಗದಾಯು. ೩-೭೦**); ಎಳೆಗಱು ಎತ್ತಾಗದೇ ಲೋಕದೊಳ್ ಮಿಡಿ ಪಣ್ಣಾಗದೇ ದೈವದೊಲ್ಮೆಯಿರಲ್ (**ಸೋಮೇಶ. ೩೫**). ೨. (ಉಪ್ಪಿನಕಾಯಿಗೆ ಬಳಸುವ) ಚಿಕ್ಕಗಾತ್ರದ ಮಾವಿನಕಾಯಿ : ಮಿಡಿ ಹೆಡಗೆಗಳಲ್ಲೇ ಇದ್ದರೆ, ಮುಗ್ಗಲು ಆದೀತು (**ಮರಮು. ೭೨**); ಕುಟುಂ ಎಂದು ಮಿಡಿಯೊಂದನ್ನು ದವಡೆಯಲ್ಲಿಟ್ಟು ಕಡಿದು ಎರಡು ಲೋಟ ನೀರು ಕುಡಿದು ಕೈ ತೊಳೆಯುವುದಕ್ಕೆ ಕಟ್ಟೆಗೆ ಹೋದ (**ದೇವಹಂ. ೧೭೯**). ೩. ಚಿಕ್ಕದು ; ಕಿರಿದು : 'ಮಿಡಿದಬ್ಬೆ', 'ಮಿಡಿಹಣ್ಣು' ಪರಾ. ೪. (ಹಾವು ಮುಂತಾದ ಪ್ರಾಣಿಗಳ) ಮರಿ : ನಾಗರ ಮಿಡಿಯಾಗಿ ಆಡೋಣ (**ಕಪ್ಪಜಾ. ೧೪೫**); ನಾಗರ ಮಿಡಿ ಬಿಸಿಲಲ್ಲಿ ಹೊಳೆಯುತ್ತಿತ್ತು (**ರೂಢಿ**). 'ಮಿಡಿನಾಗ' ಪರಾ.

[**ದೇ.॥** ಮಲ. ಮಿಟಿ : **ತುಳು.** ಮಿಡಿ, ಮುಡಿ; **ಕೊಡ.** ಮುಡಿ; **ತೆಲು.** ಮಿಡಿ = ಬೇಟೆಯ ಸಾಧನ]

**ಮಿಡಿ₃** 'ಮಡ₁' ನೋ.

**ಮಿಡಿಗಾಯ್**. ಮಿಡಿಗಾಯಿ (ನಾ). ಪೂರ್ಣವಾಗಿ ಬಲಿಯದ ಕಾಯಿ : ಕಸುಗಾಯಿ ; ಹೀಚು : ಇಂದ್ರಜಾತಂಗಾಕೆ ತ್ರೋರಿದಳ್, **ಪೂ**ವಾಗಿ ಪೋಗಿ ಮಿಡಿಗಾಯ್ಗಳಂ ಪಡೆದೊಡಲ ವಾಸಂತದಂತ್ಯದ ರಸಾಲದೋಲ್ (**ಶಶಾಂಗ. ೫೦-೦೩೬೯**). **ಮಿಡಿಗಾಯಿ :** " ತಿರುಳುಂದೋರ್ವ ಮಿಡಿಗಾಯಿ ಕೋಮಳಂ ಶಲಾಟುಗಳ್ " (**ಶಂಗರಾ. ೩೩-೭**) ; ಮಿಡಿಗಾಯಿ ಹದಬಲಿದ ಕಾಯ್ ದೋರೆವಣ್ಣಿಂಬಿವಂ ಪಿಡಿದೊಜಗುವ ಹೊಸಮಾವು . . . ಕಿತ್ತೀಳೆಯಿಂದೆ ಕೇಳೀವನಂ ಕಂಗೆಸೆದುದು (**ಹಶಶಾ. ೩-೩೪**); ಹಣ್ಣಾದ ಮಿಡಿಗಾಯಿಯೋಲೆ ನೀ ಸಂನ್ಯಾಸಿಯಾಗಿರುವೆ ; ಮಿಡಿಗಾಯಿ ಬೆಳೆಬೆಳೆದು ಹಣ್ಣಾದ ತೆರನಲ್ಲ (**ಕೋಗಿಲೆ. ೭೭-೦೩**). [ಮಿಡಿ$_2$ + ಕಾಯ್$_4$]

**ಮಿಡಿಗಾಯಿ** 'ಮಿಡಿಗಾಯ್' ನೋ.

**ಮಿಡಿಚು** 'ಮಿಡತೆ' ನೋ.

**ಮಿಡಿಚೆ** 'ಮಿಡತೆ' ನೋ.

**ಮಿಡಿತ** (ನಾ). ೧. ಹೊಯ್ದಾಟ ; ಬಡಿತ : ನನ್ನ ನೋಡುವ ನೋಟ ನನ್ನದೇ ಕಣ್ಣಾಟ ಎಲ್ಲೆದೆಯ ಮಿಡಿತ ನನ್ನೆದೆಯ ತಾವು (**ಅರಳು. ೦೮೦-೭**). ೨. ಮಿಡಿದುಕೊಳ್ಳುವಿಕೆ ; ತುಡಿತ ; ಸ್ಪಂದನ : ದುರ್ವಾಸರ ಶಾಪ ಕ್ಕಿಂತಲೂ ದುಷ್ಯಂತನ ಪ್ರೇಮ ಪ್ರಬಲತರವಾಯಿತು ; ಮರವೆ ಮುಸು ಕಿದರೂ ಅವರ ಮಿಡಿತ ತಪ್ಪಲಿಲ್ಲ ! (**ಕಾವ್ಯಸ. ೫೩**); ಈ ಹಬ್ಬದ ಆಚರಣೆ ಯಲ್ಲಿ ನಮ್ಮ ಹಳ್ಳಿಗರ ಬಾಳಿನ ಮಿಡಿತವಿದೆ (**ಪೋಲಿದೀ. ೦೭**).

[ಮಿಡಿ$_1$ + — ತ$_2$]

**ಮಿಡಿತೆ** 'ಮಿಡತೆ' ನೋ.

**ಮಿಡಿದಬ್ಬೆ** (ನಾ). ಚಿಕ್ಕದಾಗಿರುವ ಬಿದಿರಿನ ಸೀಳು : ಹಡಪಿನಾಸೆ ಯೊಳೊರ್ವ ಬಡಸೂಳೆ ತನ್ನಯ ತಡಿಕೆಯಂತಸೆವ ಗಲ್ಲವನು ಮಿಡಿದಬ್ಬೆ ಯಿಂದ ಮಿಡಿಸಿ ಬಾತು ಸಮವಾಗಲೊಡನೊತ್ತಿವಿಡಿಯೆ ನಿಂದಿಹಳು (**ಅಂಶತ. ೩-೦೫೦**). [ಮಿಡಿ$_2$ + ದಬ್ಬೆ$_1$]

**ಮಿಡಿನಾಗ** (ನಾ). ನಾಗರಹಾವಿನ ಮರಿ : ಎಳೆಯ ನಾಗ : ಜೇಳಿನ ಗೊಳೆಯುಂ ಖಳರ ಮಂತ್ರಣಂ ಮಿಡಿನಾಗಕುಳವಿಡಿವ ಪೇಳಿಗೆಯು ಸಂತೋಷ ವೆನಿಸುವುದು (**ಹಶಶಾ. ೦೨-೨**).

[ಮಿಡಿ$_2$ + ನಾಗ./**ತೆಲು**. ಮಿಡಿನಾಗು, ಮಿಣ್ಣಾಗು = ಚಿಮ್ಮಿಕೊಂಡು ಹರಿಯುವ ಒಂದು ಬಗೆಯ ಹಾವು]

**ಮಿಡಿನಾಗರ** (ನಾ). = ಮಿಡಿನಾಗ : ಒಂದು ಚಿಕ್ಕ ಮಿಡಿನಾಗರ ವಸ್ತ್ರ ದಿಂದ ಹೊರಬಿದ್ದು ಹರಿದು ಬಾತು (**ಸುಭಸಂ. ೫೭**) : ಮಿಡಿನಾಗರ ಹೆಡೆ ಬಿಡಿಸೆ ಅದರಡಿ ಕೂಗಿತು ಕಪ್ಪೆ (**ಕ್ರಾಂತಕ್ಯ. ೫೩-೯**).

[ ಮಿಡಿ$_2$ + ನಾಗರ$_1$ ( < ನಾಗರು ) ]

**ಮಿಡಿಬಿಲ್** 'ಮಿಡಿವಿಲ್' ನೋ.

**ಮಿಡಿಬಿಲ್ಲು** 'ಮಿಡಿವಿಲ್' ನೋ.

**ಮಿಡಿಮಾವು** (ನಾ). (ಉಪ್ಪಿನಕಾಯಿಗೆ ಬಳಸುವ) ಚಿಕ್ಕಗಾತ್ರದ ಮಾವಿನ ಕಾಯಿ: ಮಿಡಿಮಾವಿನ ಉಪ್ಪಿನಕಾಯಿ ಬಹಳ ರುಚಿಯಾಗಿರುತ್ತದೆ (**ರೂಢಿ**). [ ಮಿಡಿ$_2$ + ಮಾವು ]

**ಮಿಡಿಮಿಂಚು** (ನಾ). ಚಿಕ್ಕದಾದ ಮಿಂಚು ; ಎಳೆಮಿಂಚು : ಮಿಡಿ ಮಿಂಚಂ ತೊಟ್ಟು ಭೂಷಾವಳಿಯ ತೆಜದೆ ಭೂಸ್ಥಾನಮಂ ಸಾರ್ದು ಮತ್ತಂ ಬಿಡುಗಣ್ಣಾರ್ ಮೇಲೆ ಪೋಗುತ್ತಿರಲ್ (**ಹಾರಾಕ್ಯ. ೨-೪-೨೩**).

[ ಮಿಡಿ$_2$ + ಮಿಂಚು$_2$ ]

**ಮಿಡಿಮೊಲೆ** (ನಾ). ಮಾವಿನ ಮಿಡಿಯಂತೆ ಕಿರಿದಾಗಿರುವ ಮೊಲೆ ; ಕಿರುಮೊಲೆ : ಮಿಡಿಮೊಲೆಯ ಒಡಿನಡೆಯ ಬಿಡುಜಡೆಯ ನೀಜೆ (**ರಾಮಾಶ್ವ. ೬೭-೨೩**). [ ಮಿಡಿ$_2$ + ಮೊಲೆ$_1$ ]

**ಮಿಡಿಯಿಸು**. ಮಿಡಿಸು (ಕ್ರಿ). ೧. ಸ್ಪಂದಿಸುವಂತೆ ಮಾಡು ; ತುಡಿ ಯುವಂತೆ ಮಾಡು : ಅವರ ಜೀವದ ಮಿಡಿತಕ್ಕೆ ತನ್ನ ಜೀವವನ್ನು ಮಿಡಿಯಿಸುವ ಹಿರಿಯ ಜೀವ — ಅವು 'ಮಹಾತ್ಮ' (**ರಾಮರಾ. ೨೯**). **ಮಿಡಿಸು :** ೧. ಕಣ್ಣ ಬಾಂಬಿಲ್ಗಳಲಿ ನೇಹವನು ಹೂಡುವಿರಿ ಕುದಿವ ಹೃದಯವ ಮಿಡಿಸಿ ಪ್ರಾಣ ನುಡಿಸಿ (**ತ್ರಿಕೈತಾ. ೦೭-೯**). ೨. ಹೊಡೆ ; ತಟ್ಟು : ಹಡಪಿನಾಸೆಯೊಳೊರ್ವ ಬಡಸೂಳೆ ತನ್ನಯ ತಡಿಕೆಯಂತೆಸೆವ ಗಲ್ಲವನು ಮಿಡಿದಬ್ಬೆಯಿಂದ ಮಿಡಿಸಿ ಬಾತು ಸಮವಾಗಲೊಡನೊತ್ತಿ ವಿಡಿಯೆ ನಿಂದಿಹಳು (**ಅಂಶತ. ೩-೦೫೦**). [ ಮಿಡಿ$_1$ + — ಇಸು$_3$ ]

**ಮಿಡಿವಟ್ಟು** (ನಾ). ಬಿಲ್ಲಿನಲ್ಲಿಟ್ಟು ಚಿಮ್ಮಿಸುವ ಕಲ್ಲು ; **ಕವಣೆಗಲ್ಲು** : ಮುಡಿ ಬಿಟ್ಟು ಕಾರ ಸೋಗೆಯ ಬೆಡಂಗನಭಿನಯಿಸೆ ಮುಡಿಯ ಸೂವಡಿಂ ಗಲರಂಬಿಡೆ ಮಧುಪಮಾಳೆ ಮಾವಿನ ಮಿಡಿಯಂ ಮಿಡಿವಟ್ಟನತನುಗಾಯ್ದು ಪೊಲಾಯ್ದುಳ್ (**ಪುಷ್ಪಕ್ಷೇ. ೭-೭೭**). [ ಮಿಡಿ$_1$ + ಬಟ್ಟು ]

**ಮಿಡಿವಲೆ** (ನಾ). ಬೇಟೆಯ ಪ್ರಾಣಿಗಳು ಬಲೆಯನ್ನು ಸಮೀಪಿಸಿ ದೊಡನೆ ಪ್ರಾಣಿಯ ಮೇಲೆ ಬಾಣವು ಚಿಮ್ಮುವಂತೆ ಅಳವಡಿಸಿರುವ ಒಂದು ಬಗೆಯ ಬಲೆ: ಸಿಡಿವಲೆಯ ಮಿಡಿವಲೆಯ . . . ಮೇಲು ಕೊಂಬಿನ ಬೇಟೆಗಾಜಿರು ಬಳಸಿದರು ಶಿವನ (**ಕುಮಾರ. ೫-೩೩**). [ ಮಿಡಿ$_1$ + ಬಲೆ$_1$ ]

**ಮಿಡಿವಿಲ್**, ಮಿಡಿಬಿಲ್, ಮಿಡಿಬಿಲ್ಲು, ಮಿಡಿವಿಲ್ಲು (ನಾ). ಬೊಂಬಿನ ಸೀಳಿನ ಒಂದು ತುದಿಯಲ್ಲಿ ಸಣ್ಣ ಹರಳನ್ನಿಟ್ಟು, ಆ ತುದಿಯನ್ನು ಹಿಂದಕ್ಕೆ ಬಗ್ಗಿಸುವುದರ ಮೂಲಕ ಹರಳನ್ನು ಚಿಮ್ಮಿಸುವ ಒಂದು ಬಗೆಯ ಸಣ್ಣ ಬಿಲ್ಲು : ಶಾಳಿವನದೊಳ್ ಕೀರಾಳಿಯಂ ಸೋವಲೊಳ್ಪಡಿ ಯಿಂದಂ ಮಿಡಿವಿಲ್ಲೊಳೆಚ್ಚೊಡೆ (**ಅಸಂಕ್ಷೇ. ೧-೪೦**) ; ಪಾಜುವ ತಜಗೆಲೆಯ ತುಜುಗಲಂ ಕಿಜುವಕ್ಕಿವಿಂಡೆಂದು ಕೊಜಂಡುಗಳಂ ಪಾಜೆವಿಡಿದು ಮಿಡಿವಿಲ್ಲೊಳಿಸಲೆಸಗಿ ಮಜುಗುವ ತುಜುಗಾವ ಕಿಜುಕುಳದ ಕಳೆಯರುಮಂ ನೋಡುತ್ತುಂ (**ಕಳ್ಳಕಾ. ೨೩೪**) ; ಬಿಡುವಲೆ ಸೊರ್ಕುಮರ್ದು ಪದವಿಲ್ಮಿ [**ಪಾಠಾಂ**. ಲ್ಮಿ]ಡಿವಿಲ್ . . . ಗಿಡಗಮೆನಿಪ್ಪವಂ ಪಿಡಿದು ಪೇಂಟೆಗೆ ಸಂದ ಪುಳಿಂದರೆಯ್ದಿದರ್ (**ರಾಜಶೇ. ೫-೫೨**). **ಮಿಡಿಬಿಲ್ :** ನೆಲ್ಲ ಮಡಿಗೆ ಬರ್ಪ ಗಿಳಿ ಗಿಜಿಗನ ತಳುಗಿಲ್ಲದೆ ಮಿಡಿಬಿಲ್ಗಳಿಂದ [**ಪಾಠಾಂ**. ಒಂಡಿವಿಲ್ಲಿಂದ] . . . ನೋವುತಲಲ್ಲಿ ಗೊಲ್ಲವೆಣ್ಗಳ ತಂಡವಿಹುದು (**ರಾಮಾಭಿ. ೨-೫೯**) ; ಕೈಗಲ್ಲು ರುಳ್ ಮಿಡಿ[**ಪಾಠಾಂ**. ಣೆ]ಬಿಲ್ ಪೆರ್ಬಲೆ . . . ಪಿಡ್ಗಂ ಗಾಳಮಿಂಬಾಗೆ ಕೊಂಡೊಡನಾ ಲಾಬ್ಧಕಸಂಚಯಂ ನಡೆದುದು (**ಧರ್ಮಾಮೃ. ೪-೫೦**). **ಮಿಡಿಬಿಲ್ಲು :** ಕಂಚಿನ ಕವಣೆ ಮಿಡಿಬಿಲ್ಲು ತಕ್ಕೊಂಡು ಲಂಕೆ ಹಾರಿಸಾನೆ ಗಿಳಿಹಿಂಡ (**ಜಾನಪ. ೯೦**). **ಮಿಡಿವಿಲ್ಲು :** ಮಿಡಿವಿಲ್ಲಿನೊಳಗೆ ಲಿಂಗವನೆಚ್ಚ ಆ ಲಿಂಗದೊಡನೆ ನಿರವಯಲಾದರು (**ಶಿಶವ. ೩೨-೨೫**) ; ಮಿಡಿವಿಲ್ಲಿನೊಳು ಗಿಳಿಯೆಸುವೊಂದು . . . ಬೆಡಗಿನಿಂ ಪಥಿಕರ ನಡೆಗೆಡಿಸುವರಲ್ಲಿ ಕಡುಚೆಲ್ವ ಕಳಮಗೋಪಿಯರು (**ನಾಗಕು. ೨-೨೪**).

[ ಮಿಡಿ$_1$ + ಬಿಲ್$_2$ ./ **ತೆಲು**. ಮಿಡಿವಿಲ್ಲು ]

**ಮಿಡಿವಿಲ್ಲು** 'ಮಿಡಿವಿಲ್' ನೋ.

**ಮಿಡಿವೆಣ್** (ನಾ). ಚಿಕ್ಕಪ್ರಾಯದ ಹೆಣ್ಣು : ಎಳೆಯ ಹುಡುಗಿ. ಮಿಡಿವೆಂಗಳು(ಬಹುವ): ಬೆಲೆವೆಣ್ಣು ಬೆಸವೆಣ್ಣು . . . ಮಿಡಿವೆಂಗಳು ಭೂಪಾಲನೇಶನ ನೋಡಿದರು (**ಗೊಮ್ಮಟ. ೦-೭೭**). [ ಮಿಡಿ$_2$ + ಪೆಣ್ ]

**ಮಿಡಿಸು** 'ಮಿಡಿಯಿಸು' ನೋ.

**ಮಿಡಿಹಕ್ಕಿ** (ನಾ). ಚಿಕ್ಕದಾಗಿರುವ ಪಕ್ಷಿ : ಪುಟ್ಟಹಕ್ಕಿ : ದುಡಿಯದಿರೆ ಮಿಡಿಹಕ್ಕಿಗಾದರೂ ಒಂದು ಕಾಳಿಲ್ಲ ! (**ಕೋಗಿಲೆ. ೨-೪೫**).

[ ಮಿಡಿ$_2$ + ಹಕ್ಕಿ ( < ಪಕ್ಕಿ ) ]

**ಮಿಡಿಹಣ್ಣು** (ನಾ). ಚಿಕ್ಕದಾದ ಹಣ್ಣು ; ಸಣ್ಣಗಾತ್ರದ ಹಣ್ಣು : ಒಡಿಹಣ್ಣು ಕುಂಬಳಕೆ ಮಿಡಿಹಣ್ಣು ಅಲಕ್ಕೆ (**ಸರ್ವಜ್ಞ. ೦೪೨**).

[ ಮಿಡಿ$_2$ + ಹಣ್ಣು$_3$ ( < ಪಣ್$_3$ ) ]

**ಮಿಡುಂಕು** 'ಮಿಡುಕು₁' ನೋ.

**ಮಿಡುಕ** (ನಾ). ೧. ಮಿಡಿತ ; ಸ್ಪಂದನ : ಮಿಡುಕಕೆ ಮೆಚ್ಚು ತಪ್ಪದನು ವಪ್ಪುದು ಮೇಲಿದು ಭಾಪು (ಕಕವಿ. ೬–೨೫೭) ; ಪ್ರೈಯು ನೀನು, ನೀ ಮಿಡುಕ, ನನ್ನ ಒಳುಬಗೆಯು ತಿಳಿಲು ನೀನು (ಹೃದಸ. ೬೩–೧). ೨. ಅಳಲು ; ದುಃಖ ; ವೇದನೆ : ತಮ್ಮದಿರ ಎದೆ ತಬ್ಬಿ ನೋಡಲೆ, ಮಿಡುಕ ನಡುಕಕ್ಕೆಳೆದಿದೆ (ಶಾತುಶಾ. ೪೯–೪). [ ಮಿಡುಕು₁ + —ಅ₇ ]

**ಮಿಡುಕಾಟ** (ನಾ). ೧. ಅಲುಗಾಟ ; ಚಲನೆ : ಕೈಕಾಲುಗಳ ಮಿಡುಕಾಟ ನಿಂತಿತು, ಮುಟ್ಟಿದರೆ ಮೈ ತಣ್ಣಗಾಗತೊಡಗಿತ್ತು (ಕಾಲೂರ. ೧೭ ಕಥಾಸಾರ). ೨. ತಳಮಳ : ಕಸಿವಿಸಿ : ನನ್ನ ಕಂಡುದನ್ನು ಉಳಿದವರಿಗೂ ಹೇಳಿ ಸಕಾಲದಲ್ಲಿ ಎಚ್ಚರಿಸದೆ ಹೋದೆನಲ್ಲ. ಎಂಬ ಮಿಡುಕಾಟಕ್ಕೆ ಕಾರಣ ವಾಗಬಾರದು (ದುಕ್ಷತ್ರ. ೧೫). [ ಮಿಡುಕು₁ + ಆಟ ]

**ಮಿಡುಕಾಡು** (ಕ್ರಿ). ೧. ನಡುಗು ; ಕಂಪಿಸು : ಅರೆಮುಚ್ಚಿದಕ್ಷಿ ಮಿಡುಕಾಡುವ ತಾಳುಗೆ . . . ಒಪ್ಪೆ ನವಾಂಬುದಬಿಂದುವೃಂದಮಂ ಗಳಗಳನೀಂಟುತಿರ್ಪುದು ಮನಂ ತಣಿವಂತಿರೆ ಚಾತಕೋತ್ಕರಂ (ಕುಸುಮಾ. ೬–೨೦). ೨. ತಳಮಳಿಸು ; ಕಸಿವಿಸಿಗೊಳ್ಳು : ಜಗತ್ತಿನಲ್ಲಿ ಆದರ್ಶ ಸಜ್ಜನರು ಯಾರಿದ್ದಾರೆ ! ಎಂದ ಮೇಲೆ ನಾನೇಕೆ ಇಷ್ಟು ಮಿಡುಕಾಡಬೇಕು (ಮುಂಗಾಳು. ೧೨). [ ಮಿಡುಕು₁ + ಆಡು₁ ]

**ಮಿಡುಕಿಸು**, ಮಿಟಕಿಸು, ಮಿಟಿಕಿಸು, ಮಿಟುಕಿಸು (ಕ್ರಿ). ೧. (ಕಣ್ಣುರೆಪ್ಪೆಯನ್ನು ಹೊಡೆದು) ಅಲುಗಾಡಿಸು ; ಅಲ್ಲಾಡಿಸು : ಬಟ್ಟ ಮಂಡೆವೆರಸಿ ಬಾಯ ಮಿಡುಕಿಸುತ ಕಣ್ಣ ಮುಚ್ಚಿ ಬೆರಳನೆಣಿಸು[ವಿ]ರುಯ್ಯಾ (ಬಸವ. ೫೬೯). ೨. ತಳಮಳಗೊಳ್ಳುವಂತೆ ಮಾಡು : ಕಸಿವಿಸಿಗೊಳಿಸು : ಎಡೆಯಾಗದ ಮೃಗಮನವುಂಕಿಸಲುಮೊಲ್ಲ[ವೊಲ್ಲ]ದ ನಲ್ಲರಂತೆ ಮಿಡುಕಿಸಲುಂ . . . ನಿಮ್ಮಡಿಯ ಕೆಲದೊಳಾನೆ ಬಲ್ಲೆಂ (ಶಂಶಭಾ. ೫–೪೩ ವ). **ಮಿಟಕಿಸು** : ೧. ಕಣ್ಣನ್ನು ಮಿಟಕಿಸದೆ ಮುಂದ್ದಾದ ಆ ಮಗುವನ್ನೇ ಎಲ್ಲರೂ ನೋಡುತ್ತಿದ್ದರು (ಕೂಶಿ). **ಮಿಟಿಕಿಸು** : ೧. ಎರೋಪ್ಪನು . . . ಕಣ್ಣನ್ನು ಮಿಟಿಕಿಸುತ್ತಾ ಪ್ರಶ್ನಿಸುವವನಂತೆ ಒಲಿನಿನ್‍ನ ಕಡೆ ನೋಡಿದನು (ಮಲೆಶಾ. ೬೭). **ಮಿಟುಕಿಸು** : ೧. ಅಕ್ಷಿಯ ಮಿಟುಕಿಸಿ ವಿಶ್ವದೊಳು ಅಕ್ಷರಕುಲವನು ಪಡೆದವಳು ! (ನಪಲ್ಲ. ೭೪–೦೫) ; ಅವನು ನನ್ನನ್ನು ನೋಡಿ ಕಣ್ಣು ಮಿಟುಕಿಸಿ "ಏನಪ್ಪಾ, ದೇವರಾಜ" ಎಂದ (ತಂಗಾಳಿ. ೩೦). [ ಮಿಡುಕು₁ + — ಇಸು₃. / ತೆಲು. ಮಿಡಿಕಿಂಚು ]

**ಮಿಡುಕು₁**, ಮಿಟಕು, ಮಿಟುಕು₁, ಮಿಡುಂಕು, ಮಿಡುಗು₁ (ಕ್ರಿ). ೧. ಅಲುಗು ; ಅಲ್ಲಾಡು : ಪದ್ಮಾಸನದಲ್ಲಿ ಕುಳಿತು ನೆಟ್ಟಿಲುವ ಮುಜಿದು ತುಟಿ ಮಿಡುಕದೆ ಉಚ್ಚರಿಸುತ್ತಾ (ಬಸವ. ೮೧೪) ; ಮಿಡುಕು ವುದು ಬಾಯ್ ಚಿತ್ರವವಳಲಿ ತೊಡಕಿಹುದು (ಕುವ್ಯಾಕ. ೧೯–೩೭) ; ಆಳುತ್ತೇಳುತ ಬೆರಳು ಚಾಳಿ ಮಿಡುಕುವ ಬಾಯಿ ಮೇಳದೊಳು ತೊಡಕ ಬಿಡದವನ ಜಪದುವೆ ಹಾಳುಮನೆಯಂತೆ (ಸರ್ವಜ್ಞ. ೧೭೩). ೨. (ಕಣ್ಣು ರೆಪ್ಪೆಯನ್ನು ಹೊಡೆದು) ಅಲುಗಾಡಿಸು ; ಅಲ್ಲಾಡಿಸು : ಕಣ್ಣು ಮಿಡುಕ್ಕೈ ಪಿಂಗಾಕ್ಷ ನೀನೇಕೆ ಮಿಳ್ಮಳ್ ನೋಡುತ್ತುಳನಿರ್ದ (ಶಂಶಭಾ. ೧೨–೦೫೦) ; ಉಪ್ಪರದಲ್ಲಿ ಕೈಯನು ಕೊಡದಿರಾ ಮಿಡುಕದಿರು ಮಂದಿಯನು (ಕುವ್ಯಾಶಿ. ೪–೨೯) ; ಮೊಗಮುಂ ತೂಗುತ್ತೆ ವಾಲಾಗ್ರಮುಂ ಮಿಡುಕು ತ್ತುಬ್ಬರಿಸುತ್ತೆ . . . ಬಂದತ್ತದೊಂದೆಕ್ಕಲಂ (ರಾಜಶೇ. ೫–೬೯). ೩. ಕದಲು ; ಮಿಸುಕು : ಬಾಹುಬಲಿಕುಮಾರನ ಭರತೇಶ್ವರನ ಪಕ್ಷದ ರಾಜಲೋಕ ಮನೆರಡುಂ ದೆಸೆಯೊಳಂ ಮಧ್ಯಸ್ಥರಾಗಿ ಮಿಡುಕದೆ ನೋಡುತ್ತಿರ್ಪಂತು ನಿಯಮಿಸಿದಾಗಳ್ (ಆದಿಪು. ೧೪–೧೦೪ ವ) ; ಒಡನೇಱು ಸವತಿ ನೂಂಕಲ್ಕೊ ಪರಿಸ ತೊಱೆಯೊಳಗೆ ಪಬುಗಲತ್ತಿತ್ತಲಣಂ ಮಿಡುಕದೆ ತಿರಿಯುತ್ತಿರೆ ಕಣ್ಣಡಿಗೆಱಗಿದಳತ್ತಿಯಬ್ಬೆಸತಿ (ಕರ್ಣಾಟಕ. XI-i. ೫೨–೨೫ ; 1007) ; ಗುಡ್ಡ ರೆತ್ತುಗಳ ಕೊರಳಂ ಪೂಡಿ ಭರದೊಳಿದಿರಾಗಿ ಕೊಂಡೊಯ್ಯಲೆಂದುಱಿದು ಚಪ್ಪರಿಸಿ ಪೊತ್ತೆತ್ತಿ ನೂಂಕಿದೊಡೆ ಮಿಡು[ಕಾಣಂ. ನೂಂ]ಕದೆ ರಥಂ ಗಿರಿಯಂತೆ ನೆಲಸಿರ್ದುದು (ಸಿದ್ಧರಾ. ೬–೨೭). ೪. ಕಂಪಿಸು ; ನಡುಗು : ಅದುರು : ಮೃಡನುದಾಸೀನದಿಂ ಹಸ್ತಮಂ ನೋಡುತಿರೆ ಮಿಡುಕು ತಿರ್ದುದು ವಿಷಂ ಪರನ ಕರತಳದೊಳಗೆ (ಸಂಬರ. ೧–೨೩) ; ತೋಳ್ ತೊಡೆ ಮಿಡುಕೆ ಸುಯ್ ಸೂಸೆ ನಿದ್ರೆ ಕವಿದು ಏತತ್ರಸುಖದಿಂದಿರುತಿರಲ್ಕೆ (ಹಶಕಾ. ೬–೫೨) ; ಮಿಡುಕುವ ಗಂಟಲಿರ್ದಳಿಗೆ ಜೋಲ್ದು ಮರಳ್ಚಿದೆಱಂಕೆ . . . ಬಿಸುಸುಯ್ದು ಸುಯ್ಲಿನಿಂ ಕಡುಬಡವಾದ ತಮ್ಮ ತನು ರಂಜಿಸೆ ಕೋಕಕುಳಂ . . . ನಿಂದುದದೊಂದು ತಾಣದೊಳ್ (ದಶಕು. ೬–೯೯). ೫. ನಡುಗು ವಂತೆ ಮಾಡು ; ನಡುಗಿಸು ; ಕಂಪನಗೊಳಿಸು : ಒಡಲುಂ ಮಿಡುಕು ವಿನಂ ಕಡಿವ ಕಟ್ಟೆಱುಂಪೆಗಳುಂ (ಆದಿಪು. ೫–೦೩). ೬. ತುಡಿ ; ಮಿಡಿ : ಹೊಡೆದುಕೊಳ್ಳು : ನಡೆವಂತೆ ನುಡಿವ ಪುತ್ರಿಕೆ ಮಿಡುಕುವ ರಸಚಿತ್ರದೆಸೆವ ಪೆಣ್ಣೆಂಬೊಳ್ಪಂ ಪಡೆದಳ್ ಕಣ್ಗಂ ಮನಕಂ ಪಡೆವಳ್ ಪೊಸವೇಟದೆಸಕವಂ ನೃಪಸುತನೊಳ್ (ಚಂದ್ರಪು. ೫–೧೦೭) ; ಜರೆಯೆಂಬ ರಕ್ಕಸಿ . . . ಕಂಡಳು ಮಿಡುಕುವೀ ಸೀಳೆರಡವನು ಹೊಱಹೊಳಲ ಬಾಹೆಯಲಿ (ಕುವ್ಯಾಸ. ೨–೪೪) ; ಮಿಳಿರ್ವ ಕಿವಿಗಳ ಮಿಡುಕುವಳ್ಳೆಯು . . . ಹೊಸಜವ್ವನದ ಹೊಮ್ಮರೆ ಹೊಳಕಿತಿದಿರಿನಲಿ (ತೊರರಾ. ೩–೮–೦೫) ; ಮಿಡುಕುವ ಮನಕ್ಕಂತ ನುಡಿಯುವ ತುಟಿಗೀತ ನೀಡುವ ಕೈವೇಲು ಸತತ (ಇಂತಾತ. ೦೫೫–೬೦). ೭. ಬೆಚ್ಚು ; ಮೆಟ್ಟಿಬೀಳು : ಕಮಲೆಗೆ ಆ ವಿಷಯ ತಟ್ಟನೆ ನೆನಪಾಯಿತು. ಮಿಡುಕಿ ಬಿದ್ದು. ನೆಟ್ಟಗೆ ಕೂತಳು (೭ಂದನ. ೦೫೩). ೮. ಸುಳಿ ; ಚಲಿಸು ; ಸಂಚರಿಸು : ಮುಂ ಮಹಿಯೆಲ್ಲಮುಂ ಶಿಶಿರರಾಜನೆ ಬಿಚ್ಚತಮಾಳ್ದನೀ ಗಳಾತಂ ಮಿಡುಕಲ್ಕೆ [ಸಲ್ಲಿರದೆ] ಪೋಪುದು (ಶಂಶಭಾ. ೫–೩೦) ; ಮೊಳೆಯೊಳ್ಮಿಡುಕುತ್ತಿದೆ ಮಿಂಚು ಕೆಚ್ಚಲೊತ್ತಿದುದು ಪಯೋಧರಾವಳಿ ತಳರ್ನಡೆ ಯಿಟ್ಟುದು ಪಶ್ಚಿಮಾನಿಳಂ (ಅನಂಪು. ೯–೫) ; ದುಶ್ಚರಿತವಿವನಲಿ ಮಿಡುಕ ಲಿಮ್ಮವು (ತೊರರಾ. ೬–೨೦–೭೦). ೯. ಚಂಚಲವಾಗು ; ಅಸ್ಥಿರಗೊಳ್ಳು : ಕೃತಕವೋ ದಿಟವೋ ದುರಂತರ ಶ್ರುತಿಗಳಱಿಯವು ನಮ್ಮ ಮಿಡುಕುವ ಮತಿಯ ಪಾಡೇ (ಕುವ್ಯಾಕ. ೭–೩೯) ; ದಾನವಸಧಿಕರೋಷದಲಿ ಮಿಡುಕಿ ಪರಿವಾರಕ್ಕೆ ನೇಮವ ಕುಡುತಹಮ್ಮಿಂದೊಗ್ಗಿ ತನ್ನಯ ಮಡದಿಯರ ನೆಮ್ಮಿರ್ದನಹಿತಧ್ವನಿಯನಾಲಿಸುತೆ (ಅಕ್ರೂರ. ೭–೭೬). ೧೦. (ಧಾಳಿ ಮಾಡಲು) ಮುನ್ನುಗ್ಗು ; ಧಾವಿಸು : ಕದನಕ್ಕಾವಿರ್ಮಿಡುಕುವರೆಂದಾಹವ ಕರ್ಮಠನಭಿಮನ್ಯುವಿರ್ದನಾ ಧುರಧರೆಯೊಳ್ (ಪೇಮಿಪು. ೦೨–೪೮) ; ಬಲವರ್ಗದಿಂ ಮಿಡುಕಲಣ್ಮದೆ ನೋಡಿದ ಸಾಸಿಗು ನುಡಿಯದಿರ್ಪುವೆ ಬೀರಮನಾರೊಳಂ (ಕಾವ್ಯಾವ. ೩೧೦) ; ಮಿಡುಕಿಪಡೆ ಮರುಳಹರಿ ಲೇಸಲ್ಲೆಮ್ಮೊಳತಿಮಥನ (ಕುವ್ಯಾದ್ರೋ. ೪–೬೦). ೧೧. ಆತುರಪಡು ; ತವಕಿಸು : ನೆರೆಪೊರೆಯ ಸಿರಿವಂತರ ಮನೆಗೆ ಪರಿಯಿಡಲ್ಕಡಹಡಿಸಿ ಮಿಡುಕುತಿರ್ಪ ಮಿಂಡರ ತಂಡಂಗಳುಮಂ . . . ಈಕ್ಷಿಸುತ್ತುಂ (ಪರ್ಣಪು. ೯–೩೬ ವ). ೧೨. ಹಾರು ; ನೆಗೆ : ಹೊಂಗಿ ಮಿಡುಕುವ ಮೀನ ಗುದಿಗಳಂ . . . ಪೂತಿಬೆಕ್ಕಂ ಪರಿಶ್ಚಂದ್ರರಾಯಂಗೆ ಕಾಣಿಕೆಯನಿತ್ತು (ಹಶಕಾ. ೫–೩) ; ಆರ ಕೈಕೊಂಬುದೀ ಬಿಸಿಲು ವೈಕುಂಠದಿ ನಾರಾಯಣ ನಿಲಲಿಂಜಿ ನೀರೊಳು ಮಿಡುಕಿ ಮೀನಾದ (ಪೋಹತ. ೦೯–೪೮). ೧೩. ಸರಿ ; ತೆರಳು ; ನಡೆ : ಹಿಂದಕೆ ಮಿಡುಕುವವನೇ ಕರ್ಣನೀತನ ಕಡುಹ ನೋಡು (ಕುವ್ಯಾದ್ರೋ. ೦೩–೩೨). ೧೪. ಎಚ್ಚೆತ್ತುಕೊಳ್ಳು ; ಚೇತರಿಸಿಕೊಳ್ಳು : "ಮಿಡುಕು, ಮಿಡುಂಕು — ಚೈತನ್ಯೇ (ಚೇತರಿಸು)" (ಶಮಧಾ) ; ಕೆಡೆದಿರ್ದರೆಲ್ಲರಂ ನೋಡಿ ರಣರಂಗದೊಳಡುಕಿ ಮಾತಾಡುವಿವರಂ ಕಂಡು ಲೀಲೆಯಿಂ ಪಿಡಿದು ಲವನೆಳತಂದು ಕೌತುಕದ ಕಪಿಗಳೆಂದಣ್ಣಂಗೆ ತೋಱಿಸಲ್ಕೆ (ಕೈಮಿಭಾ. ೨೦–೪೦). ೧೫. ಕೊರಗು ; ಪರಿತಪಿಸು : ಈ ಪರಿಯ ಬಿಡಿಬೀಸಿ

ಬಿಟ್ಟನೆಂತು ಸ್ವೈರಿಪೆನೆಂದು ಮಿಡುಕಿದಳಾತ್ಮವಲ್ಲಭಗೆ (ಪೋಚಚ. ೯-೧೦) : ನಾನು ಇನ್ನೂ ತಾಯಿಯಾಗಲಿಲ್ಲವಲ್ಲಾ ಎಂದು ಒಳದನಿ ಮಿಡುಕುತ್ತಿತ್ತು (ಕೆಪೋಡ. ೪೨). ೧೬. ಚಡಪಡಿಸು : ಒದ್ದಾಡು : ಮಿಡುಕುವಿನಂ ಪ್ರಾಣಿಗಳಂ ಮಡಿಪಿದೊಡಂ ದೋಷವಿಲ್ಲ ದೇವಾರ್ಚನೆಯುಳ್ಳೆಡೆ ಸಾಲ್ಗುಂ (ಸಮಶ. ೦೪-೬೬) ; ಅಧ್ವಗರ್ ಮಿಡುಕಿ ಕಿಚ್ಚಿನ ಕೀಡೆವೊಲಾದರ್ (ದಶಕು. ೪-೨೨) ; ಏನ ಮಾಡುವೆನೆನುತ ಮನದೊಳಗೆ ಮಿಡುಕುವನು (ತೊರರಾ. ೩-೨-೭೬). ೧೭. ಪಶ್ಚಾತ್ತಾಪಪಡು : ಕೆಲವು ತಿಂಗಳುಗಳಾದ ಮೇಲೆ ನಾವು ಮಾಡಿದ ತಪ್ಪಿಗೆ ಮಿಡುಕಬೇಕಾಯಿತು (ಸುವಸಂ. ೦). ಮಿಟಕು : ೧. ''ಮಿಟಕು – ಮಿಣಕು (ಮಿಣಮಿಣ ಮಿಟಕತೀತಿ)'' (ಜಾವಕೋ. ೩೦). ಮಿಟುಕು₁ : ೨. ಚುಕ್ಕಿ ಕಣ್ಣು ಮಿಟುಕುತಿತ್ತು (೩೦೧೬ಶ. ೮-೧). 'ಕಣ್ಮಿಟುಕು₁' ಪರಾ. ೧೪. ತರಣಿಕುಲ ಬಱದಾಯ್ತು ಮಿಟುಕಲು ನೆರೆಯದೆನುತವೆ ಬಾಯ ತೊಯಿಹೊಯಿದೊಱಲಿ ಹುಡಿಯಲಿ ಹೊರಳಿ ಸಾಯಲು ಬಗೆದನಾ ಭರತ (ಕೌಶರಾ. ೪-೨೦). ಮಿಡುಂಕು : ೧. ಮುರಿದ ಮೀಸೆ ಮಿಡುಂಕುವ ಬಾಯ್ ಕಡಂಗಿ ಕಣ್ಗೆಟ್ಟಳವಾಗಿ ಕೆಂಪುಗುವ ಕಣ್ಗಡಿಯುಂ ಕಱೆಯಲ್ಕೆ (ಪುಣ್ಯಾಸ್ರ. ೭-೦೩). ೨. ಎತ್ತಲುಂ ಮಿಡುಂಕಲ್ಪಡೆಯದೆ ಸಿಡಿಮಿಡಿಗೊಂಡು ಸಿಡಿದು ಸಿಡಿಲೇಱಿಗೆಯಿರ್ದು ಪಲ್ಗಡಿದು ಮಹಾಮುಸಕಂ ಮುಸಗಿ ಮುನ್ನಾರ್ಗವೊಳಸೋರದಗ್ಗಲಿಸಿದ ಮದದಿಂ ಮೇಗುಂ ಮೆಯ್ಯರಿಯದೆ ತಮ್ಮೊಳ್ ಪರಿಚ್ಛೇದಿಸಿ (ಪುಷ್ಪಪು. ೩-೧೨೭ ವ). ೬. ಬಱತಧರದ ಮಿಡುಂಕುವ ಕಂಬುಕಂಧರದ . . . ಉಡಿವ ನಡುವಿನ ಶಶಿಮುಖಿಯರೊಗ್ಗಿನಲಿ ಬಳಿವಿಡಿದೈದಿತಚ್ಯುತನ (ಅಕ್ರೂಚ. ೪-೦೮). ೧೪. ''ಮಿಡುಕು, ಮಿಡುಂಕು – ಚೈತನ್ಯೇ (ಚೇತರಿಸು)'' (ಶಮದ). ಮಿಡುಗು₁ : ೧೫. ''ಮಿಡುಗು – ಸಾಖಿನ್ನೇ (ದುಃಖದಿಂದ ಚಿಂತಿಸು)'' (ಶಮದ).

ಮಿಡುಮಿಡುಕು (ದ್ವಿರುಕ್ತಿ) : ಮಿಡುಮಿಡುಕೆ ಬಡಿತಂಗಾಸುವರುಂ ನೋಡೆನೋಡೆ ಕಣ್ಗಳಂ ಮಿಂಟುವರುಂ (ಆದಿಪು. ೩-೬೩ ವ) ; ಉಡುಗಡಣ ದೊಡೆಯನೊಡಲೊಡಕು ನಡನಡುಗಿ ಬಡಕರಿಸಿ ಮಿಡುಮಿಡುಕಲಡಿಗಡಿಗೆ (ಪಶಕಾ. ೦-೨) ; ಕೂಟಕೆ ಕಾತರಿಸಿ ಮಿಡುಮಿಡುಕಲೊಸರ್ವ ನಾಣೆಡೆ (ಶಬಪು. ೦೯-೩೨). ಮಿಡುಮಿಡುಮಿಡುಕು, ಮಿಡುಮಿಡುಮಿಡುಂಕು = ಬಹಳವಾಗಿ ಚಡಪಡಿಸು, .. ಒದ್ದಾಡು : ತನ್ನ ಬಾಲಂಬೆರಸುರಿಯೊಳ್ ಬಿಲ್ವು ಮಿಡುಮಿಡುಮಿಡುಕುತಿರ್ದ ಜನನಿಯುಂ ಕಂಡು ಪಾವುಗಳುಳ್ಳ ಪಗೆಯುಂ ಮಱೆಯವೆಂಬುದುಂ ನನ್ನಿಮಾಡಿ (ಶಂಶಪಾ. ೩-೯೯ ವ) ; ಬಿಸಿಲೊಳ್ ತಾನೆ ಹುಡುಹುಡನೆ ಮುಗ್ಗಿ ಮಿಡುಮಿಡುಮಿಡುಕಿ (ರವಾಕಮ್ಮ. ೦೦-೦೩೨) : ದೂಮಿಯೊಳ್ ಬಿಟ್ಟ ಪಾವಿನಂದದಿಂ ಮಿಡುಮಿಡುಮಿಡುಂಕಿ (ವರ್ಧಪು. ೯-೭೦ ವ). [<ಮಿಡಿ₁. / ಮಲ. ಮುಟುಕು ; ತೆಲು. ಮಿಡುಕು]

**ಮಿಡುಕು₂, ಮಿಟುಕು₂, ಮಿಡುಗು₂** (ನಾ). ೧. (ಕಣ್ಣರೆಪ್ಪೆಯ) ಅಲುಗಾಟ; ಚಲನೆ : ಎಮೆ ಮಿಡುಕಂ ಸಂಗಳಿಸಿದವರಿ ಗಗನಸ್ಥಳಿಯೊಳ್ ನಡೆ ಮಾಣ್ದು ಖಚರಿಯೆಂಬೀ ನುಡಿಗೆಡೆಗೊಟ್ಟಳ್ ಲತಾಂಗಿ ನವತರುಣಿಮದೊಳ್ (ತಂಪ್ರಶ. ೩-೦೦೦); ಲಲನೆ ಮೂಗಿನೊಳುಸುರನು . . . ಕೈಯ ಮೊದಲೊಳು ಮಿಡುಕನು ... ಕಾಣದೆ ನೊಂದಳು (ಹತಕಾ.೦೨-೨೭). ೨. ನಡುಕ ; ಕಂಪನ : ಬಿಸಿಲ್ವೆಕಿಲ್ . . . ಪಾಯ್ದು ಪುಲಿಯೆಂಬೀ ಬಾಧೆಯೊಳ್ ಮೆಯ್ಯನೊಡ್ಡಿಸೆ ಮೆಯ್ಯೊಳ್ ಮಿಡುಕುಳ್ಳ ತಾಣಮಣಮಿಲ್ಲೆಂಬಂತು ನಿಷ್ಪಂದನಾಗಿ ಸಮನ್ವಿತಗುಣಂ ಗುಣಂಗೊಳಿಸಿದಂ ಯೋಗೀಂದ್ರವೃಂದಾರಕಂ (ಆದಿಪು. ೭-೩೪) ; ದೊಮವಿಗವಳಿಂತೆಂದಳಾ ಗರಗರಿಕೆ ಕೊರಲೊಳೀಕ್ಷಣದೊಳ್ವಾರ್ದಿಂದು ಮಿಡುಕಿರ್ದೆಯೊಳೊದವೆ ಪುಳಂದನ ಕಣೆಗಟ್ಟಿನಿಂದ ವನಹರಿಣಿಯವೊಲ್ (ಜುಕೋತ. ೨-೪೦) : ಕೊರಳ ಮಿಡುಕಿನ ಮುಸೆಯ ಮುಖದಲಿ ಸುರಿವ ನೆತ್ತರ ಪತಿಯ ಸುತ್ತಲುಂ ತಿರುಗಿ ಚೀಱುವ ವಿಹಗಸತಿಯನು ಕಂಡನಾ ಮುನಿಪ (ತೊರರಾ. ೦-೨-೦೪). ೩. ಮಿಡಿತ : ತುಡಿತ : ಸ್ಪಂದನ : ಮಿಡುಕುಱೆ ಪೊಯ್ದು ತನ್ನೆರ್ದೆಯನೊತ್ತಿ ಕರಾಗ್ರದೊಳಾರೊಳಪ್ಪೊಡಂ ನುಡಿಯದೆ ಚಿಂತಿಸುತ್ತಮೆಮೆಯಿಕ್ಕುವುದಂ ಮಱೆದೊಂದು ಜಾವಮುಂ ಮಿಡುಕದೆ ಸಾಲಭಂಜಿಕೆವೊಲಿರ್ದ ಲತಾಂಗಿಯ ರೂಪು ಕಣ್ಗಳೊಳ್ ತೊಡರ್ದಿರೆ (ಸೂಕ್ತಿಸು. ೦೩-೨೩) ; ಶತಪ್ರಂದಮನು ಸುರವೈರಿಯೆಡೆಗೈತಂದು ನೋಡಿದನಸುರನೆದೆಯಲಿ ಮಿಡುಕನಾರೈದು (ತೊರರಾ. ೭-೨೪-೩೭). ೪. ಪ್ರಾಣ ; ಜೀವ : " ಅಸುವಟಿಲು ಮಿಡುಕು " (ಶಬ್ದಮಂ. ೬೦). ೫. ಚೈತನ್ಯ ; ಜೀವಂತಿಕೆ : (೬). ೬. ಅಂತಃಕರಣ ; ಕನಿಕರ ; ಅನುಕಂಪ : ಎಲ್ಲರೊಳು ಕಲಿಭೀಮನೇ ಮಿಡುಕುಳ್ಳ ಗಂಡನು (ಕುವ್ಯಾಪ. ೩-೩೪). ೭. ಪರಾಕ್ರಮ : ಶೌರ್ಯ : ಕಲಿತನ : " ಮಿಡುಕೆಂದೆನಲು ಪರಾಕ್ರಮ " (ಶತುವ. ೦೩೪): ಮಿಡುಕನುಳ್ಳರೆ ನಿನ್ನ ಮುಡಿಯನಾ ಹಿಡಿದು ನಾನೊಯ್ವಾಗ ರಾಘವ ತೊಡಚಿದನೆ (ಕೌಶರಾ. ೦೦-೭೯); ಮೇದಿನಿಯೊಳಾರಾದೊಡಂ ಮಿಡುಕುಳ್ಳೊಡುನ್ನತಪರಾಕ್ರಮಿ ತಡೆಯಲಿ ವಾಜಿಯನು (ಜೈಮಿಭಾ. ೨-೨೮); ನನ್ನ ಭಾವನ ಮಿಡುಕನ್ನು ನಾನು ಅರಿಯದವಳೆ ? (ಹುಲಿಹಾ. ೦೩೨). ೮. ಕಸುವು : ಶಕ್ತಿ : ಮೊಱಹಿನ ಮಿಡುಕುಗಳ ನಾಯ್ ನೂಕಿದವು ಹಾಸದ ವಿಳಾಸದಲಿ (ಕುವ್ಯಾಆ. ೦೩-೨೦). ೯. ಯಾವುದಾದರೊಂದು ಪ್ರಾಣಿಯು ಕಾಲನ್ನು ಊರಿದಾಗ ಮಣ್ಣಿನ ಮೇಲೆ ಕಂಡು ಬರುವ ಗುರುತು: ತಿವಳಿಯೊಳ್ ಮಿಡುಕಾಱದ ಮಣ್ಣಂ ದಿಕ್ಕಿದ ಲಂಡದ ಬೆಂಕೆಯಿಂ ಕವಿವ ಕಿಟ್ಟದೊಳ್ವಾನಲೊಳ್. ಸುಯ್ಯಾಱದ ಪೆರ್ಗೊರೆಯಿಂ . . . ಒಕ್ಕ ಪಲ್ಲವನಿಕಾಯದಿನಂದಱದಂ ಕಾಡಾನೆಗಳಾಗಡೆ ಪೋದುದಂ (ಕಾವ್ಯಾವ. ೭೨೭). ಮಿಟುಕು₂ : ೧. ' ಕಣ್ಮಿಟುಕು₂ ' ಪರಾ. ಮಿಡುಗು₂ : ೨. ಯುವರಾಜ:–(ಮಿಡುಗಿಂದಿದ್ದು.) ಆ ರುದ್ರವ್ವೆ ಹೇಳಬಿಡುತ್ತಾಳೆ (ಪಟ್ಟಅ. ೦೦೦-೭). ೬. ತನ್ನ ಕೂಡುವಳಗದ ನಿಚ್ಚವಂದುಗದೊಂದು ಮಿಡುಗಿಂ ನಂಜುಂಡ ಬಾಸ್ಕವಿರಂ. ಗಜಮುಖನ ಬಱಿವೊಡೆಯ ಪಾವಂ, ಅಱುಮೊಗನ ತೇರ ಸೋಗೆಯುಂ . . . ಇನ್ನಾನುಂ ಪಗೆಯುಂ ಮಱೆತು ಸಂತಂ ಪುದುವಾಳ್ವುದೆಂದು ಬುದ್ಧಿವೇೞಲ್ (ರಾಮಾಶ್ವ. ೪೨-೦೦).

[< ಮಿಡುಕು₁/ ತಮಿ. ಮಿಟ್ಟುಕ್ಕು: ಮಲ. ಮಿಟುಕ್ಕಮ್, ಮಿಟುಕ್ಕು]

**ಮಿಡುಕುಗಚ್ಚೆ** (ನಾ). (ಹಸು, ಎಮ್ಮೆ ಇತ್ಯಾದಿ ಪ್ರಾಣಿಗಳ) ಅದುರುತ್ತಿರುವ ಮರ್ಮಾಂಗ,–ಯೋನಿ : ಪೊಸನಸೆಯ ಸೊವಡನಾಘ್ರಾಣಿಸಿ ಮಣೆಲವ ಮಿಡುಕುಗಚ್ಚೆಯೊಳ್ ಮೊಗಪೆತ್ತುತ್ತೆಸೆದುದು ವೃಷಮುಮರರ ನೇಡಿಸುವವೊಲೇನುಂಟೆ ನಿಮಗಮಿಾ ಸುಖಮೆನುತುಂ (ಲೀಲಾವ. ೩-೯೩).

[ಮಿಡುಕು₁ + ಕಚ್ಚೆ]

**ಮಿಡುಕುಗುಂದು** (ಕ್ರಿ). ಚಲನೆ ಕಡಿಮೆಯಾಗು : ಅಲುಗಾಟವು ಕುಗ್ಗು : ಅರೆಮುಗುಳ್ದಕ್ಷಿಗಳ್ ಮಿಡುಕುಗುಂದದ ಚೆಂದುಟಿ . . . ಒಪ್ಪೆ ಪೊಸವೇಷದ ತಾಪಸನೊಪ್ಪಿ ತೋಱಿದಂ (ರಾಶಿಂ. ೨-೭೪).

[ಮಿಡುಕು₂ + ಕುಂದು₁]

**ಮಿಡುಕುಗೆಡು** (ಕ್ರಿ). ಪರಾಕ್ರಮವನ್ನು ಕಳೆದುಕೊಳ್ಳು : ಶೌರ್ಯವಿಲ್ಲದಾಗು : ಮಿಡುಕುಗೆಟ್ಟನು ಬಿದ್ದ ದಧಿಮುಖನೊಡನೆ ಹಳಚಿದನವನ ನಂಗದ (ಕೌಶರಾ. ೨೦-೪೧). [ಮಿಡುಕು₂ + ಕೆಡು₁]

**ಮಿಡುಕುದಾಣ** (ನಾ). (ದೇಹದಲ್ಲಿ ನಾಡಿಯು) ಸ್ಪಂದಿಸುವ ಸ್ಥಳ : ಕಡೆಗಂಗಳೊಳು ಜಲ ತೋಱಿದೊಡದನಾಗೊಡನೆ ಕಾಣುತಲಾಳಿಯರು ಮಿಡುಕುದಾಣವ ಮುಟ್ಟಿಯಱಿದುಸುರನು ನೋಡಿ ಕಡುಚಪಳೆಯರು ಮೂಗಿನೊಳು (ತಂಜಶ. ೭-೦೦೯). [ಮಿಡುಕು₁ + ತಾಣ]

|<–**ಮಿಡುಕುಜು** ' ಮಿಡುಗುಜು ' ನೋ.

**ಮಿಡುಗು$_1$** ' ಮಿಡುಕು$_1$ ' ನೋ.

**ಮಿಡುಗು$_2$** ' ಮಿಡುಕು$_2$ ' ನೋ.

**ಮಿಡುಗುಜು, ಮಿಡುಕುಜು** (ನಾ). ೧. ಬೆಂಕಿ : ಕಿಚ್ಚು : ಅಲ್ಲಿಯ ಮುನಿಗಳ ಮೀಸೆಗೆ ಮಿಡುಗುಜನಿಟ್ಟರು . . . ಆ ವೀರನ ಕಿಂಕರರು (ವೀರೇಶ. ೨-೪೭); ಕಡಿದೊಟ್ಟಿದ ಪುಳ್ಳಿಗಳಂ ಮಿಡುಗುಜು ಸುಡುವಂತೆ ಸುಡುಗು (ಶರಪೂ. ೨೫-೬೨). ೨. (ಆಲಂ) ತಾಪ : ಬೇಗೆ : ಧಗೆ : ತಾಪತ್ರಯದ ಮಿಡುಗುಜುಸಲೋರಂತೊದವಿಸುತ ಜಗದೆಜುಯನೆನಿಸುವ ನಿನ್ನನಜುಯದು ಮೂಢಜನ (ಜಿಣಾಗ. ೧೦-೫೨-೨೯). **ಮಿಡುಕುಜು** : ೧. ಓರಿದು ಬೆಳೆದಿಹ ವನದಿ ಮಿಡುಕುಜು ಹರಿಹರಿದು ಸುಡುವಂತೆ (ವ್ಯಾಸಾಶಾ. ೪-೨೭). ೩. ಬೆಂಕಿಯ ಕಿಡಿ : ಅಗ್ನಿಕಣ : ಹಲವುಕಾಲ ಧಾವತಿಗೊಂಡು ಒಟ್ಟಿದ ಹಿದಿರೆಯು ಒಂದು ಮಿಡುಕುಜಲ್ಲಿ ಬೇವಂತೆ ಸಲೆ ನೆಲೆ ಸನ್ನಿಹಿತನಾಗಿರ್ಪ ಶರಣನ ಭಕ್ತಿ ಒಂದನಾಯಾತದಿಂದೆ ಕೆಡುವುದು (ಬಸವ. ೨೦೩). [ದೇ.॥ ತೆಲು. ಮಿಡುಗುಜು, ಮಿಡುಂಗುಜು, ಮಿಣುಂಗುಜು, ಮಿಣುಗುಜು, ಮಿಣ್ಗುಜು]

**ಮಿಡುಚೆ** ' ಮಿಡತೆ ' ನೋ.

**ಮಿಡುಮಿಡನೆ** (ಅ). ಒಂದು ಅನುಕರಣಾವ್ಯಯ : ದೀರ್ಘಶೋಕವುಂ ಬಿಡೆ ಸುಡೆ ಕಿಚ್ಚಿನ ಕಿಡಿಯಂದದೆ ನೆಲದೊಳಗಿನಿಸುಂ ಮಿಡುಮಿಡನೆ ಮಿಡುಕುವೆನ್ನಂ ಕಂಡಂ (ಕಾದಂಪೂ. ೬೨೨); ಸರ್ವಾಂಗವುಂ ಕಡಿಯೆ ಮಿಡುಮಿಡನೆ ಮಿಡುಕುತ್ತ (ಬಿಂದೋರ. ಹ. ೫೦೦-೧೫) ; ಮಿಡುಮಿಡನೆ ಮಿಡುಕುತ್ತ ಕೋಪದಿ ಘುಡುಘುಡಿಸಿ ಪೊಜುಮಿಂಡನೆಂದನು (ಬಸವು. ೨೭-೧೫).

[ಮಿಡುಮಿಡು + —ಅನೆ$_1$]

**ಮಿಡುಮಿಡು** (ನಾ). ಕೋಪ. ದುಃಖ. ನೋವು ಮುಂತಾದುವುಗಳನ್ನು ಸೂಚಿಸುವಾಗ ಬಳಸುವ ಒಂದು ಅನುಕರಣಶಬ್ದ : 'ಮಿಡುಮಿಡನೆ ' ಪರಾ.

**ಮಿಡ್ಡೆ** ' ಮಡ್ಡಿ$_1$ ' ನೋ.

**ಮಿಣಕ್‌ಮಿಣಕ್** (ನಾ). (ದೀಪ. ಒಲೆ ಮುಂತಾದುವು ಮಂಕಾಗಿ ಉರಿಯುವುದನ್ನು ಸೂಚಿಸುವ) ಒಂದು ಅನುಕರಣಶಬ್ದ : ಮಂಕಾಗಿ ಉರಿಯುವ ಹಣತೆ ಮಿಣಕ್ ಮಿಣಕ್ ಎನ್ನುತ್ತದೆ (ಶ್ರೀಕೃ. ೧೦೫).

**ಮಿಣಕುಹುಳ** ' ಮಿಣುಕುಹುಳು ' ನೋ.

**ಮಿಣಕೆ** ' ಮಿನಿಕೆ ' ನೋ.

**ಮಿಣಮಿಣ** (ನಾ). (ದೀಪ, ಒಲೆ ಮುಂತಾದುವು ಮಂಕಾಗಿ ಉರಿಯುವುದನ್ನು ಸೂಚಿಸುವ) ಒಂದು ಅನುಕರಣಶಬ್ದ : ದೀಪ ಮಿಣಮಿಣ ಉರಿಯುತ್ತಿದೆ (ರೂಢಿ).

**ಮಿಣಿ** ' ಮಿಳಿ ' ನೋ.

**ಮಿಣಿಕೆ** ' ಮಿನಿಕೆ ' ನೋ.

**ಮಿಣಿಬಲೆ** ' ಮಿಣಿವಳ್ಳೆ ' ನೋ.

**ಮಿಣಿಮಿಟಿ** (ನಾ). ಒಂದು ಅನುಕರಣಶಬ್ದ : ಬಾವಡಿಯ ದೀಪ ಮಿಣಿಮಿಟಿ ಉರಿಯುತ್ತಲೇ ಇತ್ತು (ಮರಳು. ೪೭); ಬೇಲಿಯನ್ನು ಕಂಡು ಕಣ್ಣು ಮಿಣಿಮಿಟಿ ಮಾಡುತ್ತ ನಿಂತೆ (ಚಿಟ್ಟೆಕೇ. ೧೩೫).

**ಮಿಣಿಮಿಣಿ** (ನಾ). ಒಂದು ಅನುಕರಣಶಬ್ದ : ಬಂದನೇನೆ . . . ಧಣಧಣಧಣರೆಂಬ ಪಾದದ ತೊಡವಿನ ಮಿಣಿಮಿಣಿ ಕುಣಿದಾಡುತ ಶ್ರೀಕೃಷ್ಣ (ಪುರಂದ. ೨-೭೨-೨).

**ಮಿಣಿಮಿಣಿಸು** (ಕ್ರಿ). ಕ್ಷಣ ಬಿಟ್ಟು ಕ್ಷಣ ಹೊಳೆ, – ಪ್ರಕಾಶಿಸು : ಆ ವಧುಗಳು . . . ಮಿಂಚಿನ ಲತೆಯಂತೆ ಮಿಣಿಮಿಣಿಸುತ ಕಂಚುಮಿಂಚಾಗಿ ಹೊಳೆವರತ್ತಿತ್ತ (ಶರತ. ೧೩-೧೦೯). [ಮಿಣಿಮಿಣಿ + —ಇಸು$_3$]

**ಮಿಣಿಯಾಟ** (ನಾ). ಹಗ್ಗದ ಸಹಾಯದಿಂದ ನಡೆಸುವ ಆಟ, — ಚಮತ್ಕಾರ : ಗಳೆಯಾಟ ಮಿಣಿಯಾಟ ಅದೃಶ್ಯಕರಣ ಅಗ್ನಿಸ್ತಂಭ ಆಕರ್ಷಣ ಚೌಷಷ್ಟಿಕಲಾವಿದ್ಯೆಯ ಸಾಧಿಸಿದ ಡೊಂಬನೇನು ಕಿಜುಯನೇ (ಉಂಚ. ೪. ೨೦೭-೨೬೭). [ಮಿಣಿ (< ಮಿಳಿ) + ಆಟ]

**ಮಿಣಿವಲೆ, ಮಿಣಿಬಲೆ** (ನಾ). ಚರ್ಮದ ನೂಲಿನಿಂದ ತಯಾರಿಸಿದ ಬಲೆ : ಇತ್ತಲ್ ಮರೆಯ ಬಿಯದಪಡೆ ಮಿಣಿವಲೆಯನೊಡ್ಡಿ ಸೆರೆವಿಡಿಯುತಾ ಸಿಂಹಿಣಿಯನುಯ್ವುದರಸನ ಬೇಂಟೆವೀಡಿರ್ಪ ಕಂದರಕೆ (ಶ್ರೀರಾಮಪ. ೬೨೫-೨೦೦). **ಮಿಣಿಬಲೆ** : ಆ ಗುಡಿ ಬದೀಲೆ ಅಲ್ಲೇನು ಮಿಣಿಬಲೆಗೆ ಒಂದು ಒಂಟಿಗ ಬಿದ್ದು, ನೀನು ಭರ್ಜೀಲಿ ತಿವಿದು, ಒಂದುರುಳು ಉರುಳಿ, ಹಂದಿ ಹತ್ರಾನೆ ಬಿದ್ದದ್ದು ! (ಮಲೆಮ. ೧೦೯).

[ಮಿಣಿ (< ಮಿಳಿ) + ಬಲೆ$_1$]

**ಮಿಣುಕಿಸು** ' ಮಿನುಗಿಸು ' ನೋ.

**ಮಿಣುಕು$_1$** ' ಮಿನುಕು$_1$ ' ನೋ.

**ಮಿಣುಕು$_2$** ' ಮಿನುಕು$_3$ ' ನೋ.

**ಮಿಣುಕುದೀಪ** (ನಾ). ಮಂದವಾದ ಪ್ರಕಾಶವನ್ನು ಬೀರುವ ದೀಪ ; ಸಣ್ಣ ಬೆಳಕನ್ನು ಚೆಲ್ಲುವ ದೀಪ : ಮಿಣುಕುದೀಪದ ಮುಂದೆ ಹೆಂಗಸರಿಬ್ಬರೂ ಬಲು ಹೊತ್ತು ಕುಳಿತಿದ್ದರು (ಮರಳು. ೪೨೦); ಕತ್ತಲೆ ಇಲ್ಲವೆ ಕತ್ತಲೆಯಲ್ಲಿಯ ಮಿಣುಕುದೀಪ ಪ್ರಾಣಾನುಭವವಾದರೆ ಮೋಹಕವಾದ ಬೆಳುದಿಂಗಳು ಕಾವ್ಯಾನುಭವ (ಕಾಸಪೂ. ೪೩).

[ಮಿಣುಕು$_2$ (< ಮಿನುಕು$_3$ ) + ದೀಪ$_2$]

**ಮಿಣುಕುಬೆಳಕು** (ನಾ). ಮಂದವಾದ ಪ್ರಕಾಶ : ಕಚೇರಿಯ ದೀಪದ ಮಿಣುಕುಬೆಳಕಿನಲ್ಲಿ ಆ ಹೆಂಗಸರಿಗೆ ಊಟದ ಸಿದ್ಧತೆ ಮಾಡಿದನು (ಅನ್ನ. ೧೩೨). [ಮಿಣುಕು$_2$ (< ಮಿನುಕು$_3$ ) + ಬೆಳಕು$_2$ (<ಬೆಳಗು$_2$) ]

**ಮಿಣುಕುಹುಳು, ಮಿಣಕುಹುಳ** (ನಾ). ಮಿಂಚಿನಂತೆ ಕ್ಷಣ ಬಿಟ್ಟು ಕ್ಷಣ ಬೆಳಕು ಬೀರುವ ಒಂದು ಬಗೆಯ ಹುಳು ; ಮಿಂಚುಹುಳು : ಮಿಣುಕುಹುಳು ಒಂದೇ ಆದರೆ ಹೆಚ್ಚು ಬೆಳಕು ಕೊಡಲಾರದು (ಮುರುಕು. ೫೦). **ಮಿಣಕುಹುಳ** : "ಖದ್ಯೋತಃ, ಜ್ಯೋತಿರಿಂಗಣಃ—೨ ಕತ್ತಲೆಯಲ್ಲಿ ದೀಪದ ಹಾಗೆ ಹೊಳೆಯುವ ರೆಕ್ಕೆಗಳುಳ್ಳ ಮಿಣಕುಹುಳ" (ಸಿದ್ಧಾಂತ. ೧೭೨); ಮಿಣಕುಹುಳ ತಿಣುಕಿದರೆ ಜೇನು ಬಂದೀತೆ ? (ಗಾದೆ).

[ ಮಿಣುಕು$_2$ ( < ಮಿನುಕು$_3$ ) + ಹುಳು ( < ಪುೞು ) ]

**ಮಿಣುಗುಟ್ಟು** 'ಮಿನುಗುಟ್ಟು' ನೋ.

**ಮಿಣ್ಣಗೆ** (ಅ). ಅಲುಗಾಡದೆ ; ನಿಶ್ಚಲವಾಗಿ : ಎರಡು ಮೂರ್ತಿಗಳ ನಡುವೆ ಮಿಣ್ಣಗೆ ಉರಿಯುವ ಕಾಲುದೀಪ (ಸರಸ. ೭೭).

ಮಿಣ್ಣಗಿರು = ಸುಮ್ಮನೆ ಇರು : ಮಿಸುಕದಂತಿರು : ಕಣ್ಣೆತ್ತಿ ನೋಡರಾ ಕಡೆಯ ಕೌರವರಲ್ಲಿ ಮಿಣ್ಣಗಿರುವುದೊಂದು ವರುಷ (ಯಃಶಿಶ. ೨); ನಾಳೆ ಹೆಂಡತಿಯನ್ನು ಕಟ್ಟಿಕೊಂಡು ಬೇರೆ ಹೋದಾಗ ಎಲ್ಲವೂ ತಿಳಿಯುತ್ತದೆ–ಮಿಣ್ಣಗಿದ್ದವರ ಬಣ್ಣ ! (ಬಡ್ಡಉ. ೧೦೯).

[ ಮಿಣ್$_0$ + —ಅಗೆ$_3$./ತೆಲು. ಮಿನ್ನಕ ]

**ಮಿಣ್ಣನೆ$_1$** (ಗು). ಚಿಕ್ಕದಾದ ; ಸಣ್ಣದಾದ : ಗೆಳೆಯರ ಕಯ್ಯಲ್ಲಿಯ ಮಿಣ್ಣನೆ ನೆಲ್ಲಿಯನಸಿಯಲಿ ಕೆಯ್ಯುಗಲದೆ ಕೊಯ್ವು! (ಚಿಪ್ಪರ. ೦-೧೫).

[ ಮಿಣ್$_0$ + —ಅನೆ$_2$ (< —ಅನೆಯ$_2$ ) ]

**ಮಿಣ್ಣನೆ$_2$** (ಅ). ೧. ಸದ್ದಿಲ್ಲದೆ ; ಮೌನವಾಗಿ : ನೂಜುೖವರನು ಕೊಂದನು ಮರನ ಹಾಯಿಕಿ ಮರಳಿ ಮಿಣ್ಣನೆ ಬಂದು ಹೊಕ್ಕನು ಬಾಣಸದ ಮನೆಯ (ಕುಮಾವ್ಯಾ. ೩-೧೦೨) ; ಇಂದಿನಿತಿಂತೇಂ ಚೆಲ್ವಿನೊಂದು ಬಿತ್ತರದ ಭಂಗಿಯ ಪೊಸ ಬಣ್ಣನೆ ಮಿಣ್ಣನೆ ನಿನ್ನ ನಚ್ಚುಮೆಚ್ಚಿನ ಕಾಮನೊಂದು ಜಾನದೊಳೆ ಬೆರೆತುದು ? (ರಾಮಾಶ್ವ. ೧೩೯-೪). ೨. ಏನೂ ತಿಳಿಯದ

ಹಾಗೆ ; ನಿರ್ವಿಕಾರವಾಗಿ : ಎಲ್ಲವನ್ನೂ ಶಾಂತರಾಗಿ ಮಿಣ್ಣನೆ ಹೇಳು ತ್ತಿದ್ದೀರಲ್ಲ ! (ಶುಹಾಗ. ೨೬೪).

ಮಿಣ್ಣನಿರ್ = ಏನೂ ತಿಳಿಯದಂತಿರು ; ಮುಗ್ಧವಾಗಿರು : ಬೇಡವೇಡಂದೊಡಂ ಚಲದಿಂ ಓಡಿದು ಕಟ್ಟಿ ಮಿಣ್ಣನಿರ್ಪಂ (ರಾಪಟ್ಟಾಭಿ. ೦೫೩-೦೯); ನೀನೆಜಿಯದರಂತೆ ಮಿಣ್ಣನಿರ್ದುಮೆನ್ನನಿಂದೆನ್ನಂ ಕಟ್ಟಿಸಿದ ದಿಟ್ಟಂ (ರಾಪಟ್ಟಾಭಿ. ೦೬೫-೧). [ ಮಿಣ್$_0$ + —ಅನೆ$_1$ ]

**ಮಿಣ್ಣಸು** 'ಮಿಳ್ಳಿಸು' ನೋ.

**ಮಿಣ್ಣೆ** 'ಮಿಟ್ಟೆ' ನೋ.

**ಮಿತ$_1$** (ಗು). ಸತ್ತುಹೋದ ; ಗತಿಸಿದ : "ಮಿತ—ಮೃತ=ಸತ್ತು ಹೋದ, ವಿಫಲ" (ಶಬ್ದಕೋ. ೪೩) ; ಖುತ್ಸತ್ಕೃತ್ವಂ . . . ಮೃತ — ಮಿತ (ಶಮದ. ೨೬೮ ಕೃ.ಯೋ.). [ < ಸಂ. ಮೃತ ]

**ಮಿತ$_2$** (ಗು). ೧. ಅಳೆದ ; ಅಳತೆಮಾಡಿದ. ೨. ಮಿತಿಗೆ ಒಳಪಟ್ಟ ; ಸೀಮಿತವಾದ : ಮಿತನವಿಕೇಶಶೋಭಿತತನುತ್ವಂ . . . ಪರಿಪೀತದೇಹ ಬಿಂಬತವೆರಸಿಂತು ಪತ್ತತಿಶಯಂಗಳವೇಂ ಜಿನನೊಳ್ ಪೊದಬ್ದುವೋ (ಅಂಥಿ. ೧೧-೯೩). ೩. ಚಿಕ್ಕದಾದ; ಸಂಗ್ರಹವಾದ; ಸಂಕ್ಷಿಪ್ತವಾದ: 'ಮಿತನುಡಿ' ಪರಾ. ೪. ಕಡಮೆಯಾದ; ವಿರಳವಾದ. ೫. ಪರೀಕ್ಷಿಸಿದ ; ಪರಿಶೀಲಿಸಿದ. (ನಾ). ೬. ಅಳತೆ ಮಾಡುವುದು. ೭. ಮಿತಿಗೆ ಒಳಪಟ್ಟುದು ; ಸೀಮಿತವಾದುದು : ಮಿತವಾದ್ದು ಬಾಳುವುದು. ಹಿತವಾದ್ದು ಫಲಿಸುವುದು (ಗಾದೆ). [ಸಂ.]

**ಮಿತಂಪಚ** (ಗು). ೧. ಜಿಪುಣತನದಿಂದ ಕೂಡಿದ; ಕೃಪಣತನದ. (ನಾ). ೨. ಜಿಪುಣ ; ಲೋಭಿ : "ಕದರ್ಯಃ . . . ಕಿಂಪಚನಃ. ಮಿತಂಪಚಃ — ಈ ೫ ಲೋಭಿ" (ಕಲಾಯು. ೩೭-೦೯೨). ೩. ಪರಿಣತನಲ್ಲದವನು ; ಪಕ್ವತೆಯಿಲ್ಲದವನು : ಚತುರಕವಿಯೊಳ್ಪನತಿವಿಶ್ರುತ ವೈಯಾಕರಣರೊಲ್ದು ತೀವಿಂತಿರೆ ಮೂರ್ಖತೆಯಿಂದಮುರ್ವಿ ಕೊರ್ವಿದ ಮಿತಂಪಚರ್ ತೀವಳ[ಡ]ರಿದು ಪೊಸಬಗೆಯಿಂದಂ (ಶಬ್ದಮ. ೧-೦೬). ೪. ಪರಿಮಿತವಾದ ಪ್ರಮಾಣದಲ್ಲಿ ಆಹಾರವನ್ನು ತಯಾರಿಸುವುದು; ಕಡಮೆಪ್ರಮಾಣದ ಅಡುಗೆಯನ್ನು ಮಾಡುವುದು. [ಸಂ.]

**ಮಿತಕುಕ್ಷಿ** (ನಾ). ಹೊಟ್ಟೆಗೆ ಪರಿಮಿತವಾದ ಆಹಾರವನ್ನು ತೆಗೆದು ಕೊಳ್ಳುವವನು : ಮಿತಕುಕ್ಷಿ ಮಿತಭುಕ್ತ ; ಮಾತ್ರಾರ್ ಜಿತೇಂದ್ರಿಯನು ? ಅತಿಚರ್ಚೆ ಸಲದಲ್ಲಿ (ಮಂಕಂಕ. ೩೬೦). [ಸಂ.]

**ಮಿತನುಡಿ** (ನಾ). ಅಗತ್ಯಕ್ಕೆ ತಕ್ಕಷ್ಟು ಆಡುವ ಮಾತು; ಸಂಕ್ಷಿಪ್ತವಾದ ಮಾತು : ಮಿತನುಡಿಯ ಬಾಲೆಯರು ರತಿಗೆ ಮಿಗೆ ಚೆಲ್ವೆಯರು (ಪಪಮೋ. ೨-೩೩). [ ಮಿತ$_2$ + ನುಡಿ$_2$ ]

**ಮಿತಪರಿಗ್ರಹ** (ನಾ). [ಜೈನ] ಶ್ರಾವಕನ ವ್ರತಗಳಲ್ಲಿ ಒಂದು; ಆವಶ್ಯಕತೆಗೆ ಬೇಕಾದಷ್ಟು ಮಾತ್ರ ಧನ, ಧಾನ್ಯ ಇತ್ಯಾದಿಗಳನ್ನಿಟ್ಟುಕೊಂಡು ಉಳಿದುವನ್ನು ತ್ಯಾಗಮಾಡುವ ಒಂದು ಬಗೆಯ ವ್ರತ : ದಿನವ್ರತ ದಿಗ್ವ್ರತ ಮಿತಪರಿಗ್ರಹವ ಮತ್ತನಶನವ್ರತವ ಕೈಕೊಂಡು ವನಜಮುಖಿಯರು ಕೈಕೊಂಡರು ವ್ರತಗಳ ಜಿನಮುನಿಗಳ ಸಮಕ್ಷದೊಳು (ಶರಕ. ೦೬-೬೦). [ಸಂ.]

**ಮಿತಭಾಷಿ** (ನಾ). ಅಗತ್ಯಕ್ಕಿಂತ ಹೆಚ್ಚು ಮಾತನ್ನಾಡದವನು; ಕಡಮೆ ಮಾತನ್ನಾಡುವವನು : ಸ್ವಭಾವತಃ ಅವರು ಮಿತಭಾಷಿಗಳೆಂದು ಎಲ್ಲರ ನಂಬಿಕೆಯಾಗಿದ್ದಿತು (ಸಪಜೀ. ೯೬); ಸಭೆಯೊಳು ಮೇಲೆದ್ದು ಕುಣಿವನು ಬಹುಭಾಷಿ ಓಂಮುಳಿವನು ಮಿತಭಾಷಿ (ಇಂತಾಶ. ೨೦೫-೬೩). [ ಸಂ. ಮಿತಭಾಷಿನ್ ]

**ಮಿತಭಾಷೆ** (ನಾ). = ಮಿತನುಡಿ : ಹೋದಿರುಳು ತಾಂ ಬಾರದಿರೆ ಉಬ್ಬೆಗಂಬಡುತಿರ್ದಳಿಗೆ ನೆನವಸೊರೆಯುತ್ತೆ ಮಿತಭಾಷೆಯಲಿ . . . ಪೊಕ್ಕಳಾ ರಾಜ್ಞಿ . . . ಪಟಹರ್ಮ್ಯಮಂ (ಶಕ್ತ್ರಂಗ. ೧೮-೯೮೩). [ ಸಂ. ಮಿತಭಾಷಾ ]

**ಮಿತಭುಕ್ತ** (ನಾ). = ಮಿತಕುಕ್ಷಿ : ಮಿತಕುಕ್ಷಿ ಮಿತಭುಕ್ತ; ಮಾತ್ರಾರ್ ಜಿತೇಂದ್ರಿಯನು ? ಅತಿಚರ್ಚೆ ಸಲದಲ್ಲಿ (ಮಂಕಂಕ. ೩೬೦). [ಸಂ.]

**ಮಿತವಚನ** (ನಾ). ೧. = ಮಿತನುಡಿ : ...ವಚನಯುತಂ ಕೀರ್ತಿಕಾಂತಾಸಮೇತಂ . . . ಬುಧಜನಕುಮುದಾನಂದಚಂದ್ರಂ ಸಭೇಂದ್ರಂ (ರಾಶ್ವರಂ. ೦-೩೩). ೨. = ಮಿತಭಾಷಿ : ಕ್ಷಿತಿಪತಿಯಂ ಬರಿಸಿ ಜಗನ್ನುತನಂ ಸಂತೈಸಿ ಕುಶಲವಾರ್ತಾಂತರವಾಂ ಮಿತವಚನಂ ಬೆಸಗೊಂಡತಿವಿತೀರ್ಣ ಮುದನಾವನಾತನೆಂಬುದು ಮಾರ್ಗಂ (ಕವಿರಾ. ೨-೬). [ಸಂ.]

**ಮಿತವಾಕ್ಯ** (ನಾ). ೧. = ಮಿತನುಡಿ. ೨. = ಮಿತಭಾಷಿ : ಮಿತವಾಕ್ಯಂ ಸದ್ಗುಣೈಕ್ಯಂ . . . ನೆಗಟ್ದತಿಬಳಭೂಪಾಲಮಂತ್ರಿಪ್ರಧಾನಂ (ಸುಕುಮಾ. ೨-೫೦). [ಸಂ.]

**ಮಿತವ್ಯಯ** (ನಾ). ಹಣ. ಪದಾರ್ಥ ಮುಂತಾದುವುಗಳನ್ನು ಹಿಡಿತದಿಂದ ಖರ್ಚು ಮಾಡುವಿಕೆ.–ಮಿತಿಯಲ್ಲಿ ಬಳಸುವಿಕೆ : ಬಂಡವಾಳಕ್ಕೆ ಮುಖ್ಯಕಾರಣವೆನ್ನಿಸುವ ಮಿತವ್ಯಯವನ್ನು ನಮ್ಮ ಅರ್ಥಶಾಸ್ತ್ರವು ಒಂದು ಪ್ರಮುಖಧರ್ಮವಾಗಿ ಉಪದೇಶಿಸಿದೆ (ಶಾರಡ. ೩೫೭); ಅಕ್ಕಾಜಿಯು ತನ್ನ ಬಳಿಯಲ್ಲಿ ಸಂಗ್ರಹಿಸಿಟ್ಟುಕೊಂಡ ನೂರುರೂಪಾಯಿಗಳನ್ನು, ಮಿತವ್ಯಯದಿಂದ ನನ್ನ ಕೆಲಸಕ್ಕಾಗಿ ವೆಚ್ಚಮಾಡುವಂತೆ ತಿಳಿಸಿ ಕಳಿಸಿದ್ದಳು (ಹೇಮಂತ. ೦೬೯). [ಸಂ.]

**ಮಿತಸಂಖ್ಯೆ** (ನಾ). ಕಡಮೆ ಅಂಕೆ; ಅಲ್ಪಸಂಖ್ಯೆ : ಮನಸ್ಸಿನ ವಿಚಾರಗಳನ್ನು, ಭಾವನೆಗಳನ್ನು ತೋಡಿಕೊಳ್ಳುವ ಜನವರ್ಗಕ್ಕೆ, ಅವರು ಕೇವಲ ಮಿತಸಂಖ್ಯೆಯವರು, ಸಂಬಂಧಿಸಿದ ಈ ಬರಹವು ಸದ್ಯಕ್ಕೆ ಮಾತು, ಲೇಖನ, ಗೀತ, ನೃತ್ಯಗಳನ್ನು ಆಶ್ರಯಿಸಿದ ವ್ಯಕ್ತಿಗಳಿಗೆ ಅನ್ವಯಿಸುತ್ತದೆ (೭೦ಬಿದ. iii, ಪೊಠರ ಮಾತು). [ ಸಂ. ಮಿತಸಂಖ್ಯಾ ]

**ಮಿತಸಂತಾನ** (ನಾ). ಒಂದು ವ್ಯವಸ್ಥೆಗೆ ಒಳಪಟ್ಟ ಸಂತತಿ; ಕಡಮೆ ಮಕ್ಕಳನ್ನು ಪಡೆಯುವಿಕೆ : ಮಿತಸಂತಾನದ ಕಡೆಗೆ ಗಮನವು ತಿರುಗಿದೆ (ಶಿಲ್ಪಶಾ. ೦೭೩). [ ಸಂ. ]

**ಮಿತಾಹಾರ** (ನಾ). ಪರಿಮಿತವಾಗಿ ಮಾಡುವ ಊಟ; ಹಾಳತವಾದ ಆಹಾರಸೇವನೆ : ಅಲ್ಪವಲ್ಲದೆ ಯಥೇಷ್ಟವಲ್ಲದೆ ಯೋಗ್ಯಾನುಗುಣ್ಯವಾಗಿ ಭೋಜನಗೈವುದೇ ಮಿತಾಹಾರವೆನಿಸುವುದು (ವಿವೇಕ. ೦೪೮). [ಸಂ.]

**ಮಿತಿ** (ನಾ). ೧. ಅಳತೆ : ಪ್ರಮಾಣ : ಮಿಾಜಿತು ಭುಜಶಕ್ತಿ ಮಿತಿಯಿಲ್ಲ ತನುಕಾಂತಿದೋಜಿತು ಕಂತುನಂದನನಿಗೆ (ಮೋಹತ. ೩೯-೦೯). ೨. ತೂಕ ; ಭಾರ. ೩. ಮೇರೆ : ಎಲ್ಲೆ : ಮಿತಿ ಮೇರೆಯಿಲ್ಲದ ನೃಪರು ನೆರೆದುದು ಜನಕನಗರಿಯಲಿ (ತೊರರಾ. ೦-೦೨-೨೬); ಸುಳ್ಳಿಗಾದರೂ ಒಂದು ಮಿತಿಯಿರಬೇಕು (ದೇಶಸ್ನ. ೪೨). ೪. ಕಟ್ಟು ; ಕಟ್ಟಳೆ ; ನಿಯಮ : ಈ ರೋಗಂಗಳಿಗೆ ಈ ಔಷಧವೆಂಬ ಮಿತಿಯನ್ನುಂಟುಮಾಡಿ ಮಿಕ್ಕನವರು ಈ ಕಟ್ಟಳೆಯಂ ತಿಳಿದು ನಡೆಸುವುದು (ಶಸ್ವೈ. ೭) ; ಊಟದಲ್ಲಿ ಬಹಳ ಮಿತಿಯಿರಬೇಕು (ಮುಂಬಯಿ. ೪-೨೩). ೫. ಅವಧಿಯ ಮೊದಲು ಅಥವಾ ಕೊನೆ : ಮಾರಾಟದ ರಕ್ಕಮು ಜಮಾ ಆದ ಮಿತಿಇಂದ ಮೂರುದಿವಸಗಳು ಕಡಮೆ ಮಾಡಿ ಬಡ್ಡಿಯ ಲೆಖ್ಖಕ್ಕೆ ಹಿಡಿಯೋಣದರಲ್ಲಿ ಬಂದೀತು (ಮುಂಬಯ್ಯಾ. ೨೬) ; ಅಂಗಡಿಯ ಬಾಕಿಯು ಬರುವದಿದ್ದರೆ, ಬಾಕಿ ಇದ್ದ ಮಿತಿ ಹಿಡಿದು ಬಡ್ಡಿ ಆಕಾರಿಸಲ್ಪಡುವದು (ಮುಂಬಯ್ಯಾ. ೨೦೫). ೬. ಖಚಿತವಾದ ಹೇಳಿಕೆ. ೭. ಸಾಕ್ಷಿ. ೮. ದೃಢತೆ. [ಸಂ].

**ಮಿತಿಗೆಯ್** (ಕ್ರಿ). ಮಿತಿಗೆ ಒಳಪಡಿಸು ; ಮೇರೆ ಮಿಾರದಂತೆ ಮಾಡು : ರತಿದೇವಿ ಬಸಿಜಾಂತು ಪಡೆವ ದುಕ್ಕವ ಸುತವತಿಯಾಗಿ

ನೋಳ್ಪ ಸಂತಸದ ಮಿತಿಗೆಯ್ದೆ ಪೆಸಂದು ತೊಟ್ಟಿಲ ತೂಗಿದಳತಿಶಯದಿಂದೆ ಕುವರನ (ಸೋಹತ. ೧೭-೫೯). [ಮಿತಿ + ಕಯ್[1]]

**ಮಿತಿಮೀರು** (ಕ್ರಿ). ೧. ಎಲ್ಲೆಯನ್ನು ದಾಟು ; ಮೇರೆಮೀರು : ಸಣ್ಣ ಮೀನುಗಳನ್ನು ದೊಡ್ಡ ಮೀನುಗಳು ನುಂಗುತ್ತವೆ . . . ಇಲ್ಲದಿದ್ದರೆ ಅವು ಮಿತಿಮೀರಿ ಬೆಳೆಯುತ್ತಿದ್ದವು (ಮುಂಬಯಿ. ೪-೧೧೫); ಮ್ಲೇಚ್ಛ ಹುಡುಗಿಯ ಮೇಲೆ ಅವನಿಗಿದ್ದ ಸಿಟ್ಟು ಮಿತಿಮೀರಿತು (ಅಕಾರ. ೬೯). ೨. ವ್ಯವಹಾರದ ಸೀಮೆಯನ್ನು ಉಲ್ಲಂಘಿಸು ; ನಡವಳಿಕೆಯನ್ನು ಮೀರು : ಈ ಬಗೆಯಲ್ಲಿ ನಾಚಿಕೆಗೆಟ್ಟು ಮಿತಿಮೀರಿಯಿರುವುದು ನನ್ನಂತಹ ಕುಲವೆಣ್ಣಿಗೆ ತರವಲ್ಲ (ಚಕಾ. ೦೬). [ಮಿತಿ + ಮೀರು (<ಮೀಱು)]

**ಮಿತಿಲಿ** 'ಮಿಟಲಿ' ನೋ.

**ಮಿತು** 'ಮಿದು' ನೋ.

**ಮಿತುವಾಸಿಕೆ** (ನಾ). ಮೃದುವಾದ ಹಾಸುಗೆ.—ಶಯ್ಯೆ : ಮಿತುವಾಸಿಕೆಯ ಮೇಲೆ ತನುತಾಪದೊಡನೆ ಹೊರಳುತಂ (ಪಪಮಃ. ೯-೨೨). [ಮಿತು (<ಮಿದು) + ವಾಸಿಕೆ]

**ಮಿತ್ತು** 'ಮಿಟ್ಟು' ನೋ.

**ಮಿತ್ತುಗರೆ** 'ಮಿಟ್ಟುಗರೆ' ನೋ.

**ಮಿತ್ರ** (ನಾ). ೧. ನೇಸರು ; ಸೂರ್ಯ : "ಆದಿತ್ಯಃ . . . ಮಿತ್ರಃ, ಚಿತ್ರಭಾನುಃ . . . ತ್ರಯೀತನುಃ —ಈ ೪೭ ಆದಿತ್ಯನ ಪೆಸರ್" (ಹಲಾಯು. ೭-೩೭) ; ಮಿತ್ರಂ ಪ್ರತಾಪಸಹಿತಚರಿತ್ರಂ ಪರರ್ಣ ಬರುತುಮಿರೆ ಘನಪಥನಕ್ಷತ್ರಪ್ರಸೂನಮಂ ದ್ಯುತಪತ್ರಂಗಳನರುಣ ನುಡುಗಿದಂ (೦ಃರಾಚ. ೦೯-೦೩೩). ೨. (ಸಾಮಾನ್ಯವಾಗಿ ವರುಣನ ಜೊತೆ ವರ್ಣಿತವಾಗಿರುವ) ದ್ವಾದಶಾದಿತ್ಯರಲ್ಲಿ ಒಬ್ಬ : ಧಾತ ಆರ್ಯಮಾ ಮಿತ್ರ ವರುಣ ಇಂದ್ರ ವಿವಸ್ವಾನ್ ಪರ್ಜನ್ಯ ಪೂಷ ಅಂಶುಮಾನ್ ಗಭಸ್ತಿಮಾನ್ ತ್ವಷ್ಟೃ ವಿಷ್ಣುಗಳೆಂಬವರೇ ಕ್ರಮದಿಂ ದ್ವಾದಶಾದಿತ್ಯರು (ಶಿವೇಳ. ೨೦೬) ; ಗಣಪ ಮಿತ್ರರು ಸಪ್ತಋಷಿಗಳು ವಹ್ನಿ ನಾರದ ವರುಣನು ಇನಜಗೆ ಸಮ ಚಂದ್ರ ಸೂರ್ಯರು ಮನುಸುತೆಯು ಪೆಚ್ಚು ಪ್ರವಹನು (ತುರಂಠ. ಛಾ. ೦-೫-೩). ೩. ಗೆಳೆಯ ; ಸ್ನೇಹಿತ : "ಮಿತ್ರಂ, ಸಖಾ . . . ಸ್ನಿಗ್ಧಃ—ಈ ೫ ಕೆಳೆಯಂ" (ಹಲಾಯು. ೭೦-೨೭೯) ; ಮಿತ್ರ ವ್ಯಸನತ್ರಾಣಪವಿತ್ರೀಕೃತಗಾತ್ರನಪ್ಪ ನಿನ್ನಂ ಕಂಡಾ ಮಿತ್ರಮಿಹೀನೆನೀಗಳ್ ಮಿತ್ರತ್ವಕ್ಕಾಸೆಪಟ್ಟು ಬಂದೆಂ ನಿನ್ನೊಳ್ (ಶಂಶಕಂ. ೩.೨೦೭-೯೩೩) ; ಚಿತ್ರವಾಹನಪುತ್ರಿಯುಮಂ ರಕ್ತತನಯನುಮಂ . . . ಭೋಗಿಸಿದರನುದಿನಂ ಗೃಹಬಂಧುಮಿತ್ರರಂ ಮರೆದು, ಕರ್ತವ್ಯಮಂ ತೊರೆದು (ಶತ್ರುಂಗ. ೯೦-೧೦೩೯). ೪. [ರಾಜನೀ] ರಾಜನ ಸಪ್ತಾಂಗಗಳಲ್ಲಿ ಒಂದು ; ಇವರಲ್ಲಿ ಸಹಜಮಿತ್ರ—ತಾಯಿಯ ಅಥವಾ ತಂದೆಯ ಮೂಲಕ ನಂಟುತನವುಳ್ಳವನು, ಪ್ರಾಕೃತಮಿತ್ರ—ನೆರೆಯ ಶತ್ರುರಾಜ್ಯದ ಆಚೆಯಿರುವ ರಾಜ್ಯದ ಅರಸು ಮತ್ತು ಕೃತ್ರಿಮಮಿತ್ರ—ಕಾರ್ಯದ ಮೂಲಕ ಮೈತ್ರಿಯನ್ನು ಗಳಿಸಿದವನು ಎಂಬುದಾಗಿ ಮೂರು ಪ್ರಕಾರದ ಸ್ನೇಹಿತರಿರುತ್ತಾರೆ : "ಮಿತ್ರಂ . . . ಶತ್ರುದೇಶಕ್ಕಂತಲೂ ಆಚೆಯಂತ ಅರಸನ ಪೆಸರ್" (ರಾಜಶೇ. ೨೩೭).
[ಸಂ.]

**ಮಿತ್ರಕಾರ್ಯ** (ನಾ). ೧. ಸ್ನೇಹಿತನ ಕರ್ತವ್ಯ. ೨. [ರಾಜನೀ] ಸ್ನೇಹಿತನನ್ನಾಗಿ ಮಾಡಿಕೊಳ್ಳುವುದು : ಅನ್ಯರೆಲ್ಲರುಮನತಿಸ್ನೇಹದಿಂ ತನ್ನವರಂ ಮಾಡಿಕೊಳ್ವುದು ಮಿತ್ರಕಾರ್ಯಮೆಂಬುದು (ಶಂಶಕಂ. ೩. ೦೯-೧೧). ೩. ಕನ್ನಡದ ಪ್ರಸಿದ್ಧಗ್ರಂಥವಾದ 'ಪಂಚತಂತ್ರ'ದಲ್ಲಿ ಬರುವ ಐದನೆಯ ಪ್ರಕರಣ. [ಸಂ.]

**ಮಿತ್ರಕುಲ** (ನಾ). ೧. ಸೂರ್ಯವಂಶ ; ಇನಕುಲ : ಪತ್ತುಮಿಸು ಮುಗುಡಮುಂ, ಮಿತ್ರಕುಲ ಮಿತ್ರಪರ್ಯ (ಶ್ರೀರಾಮಪ. ೫೩೭-೨೩೭). ೨. ಗೆಳೆಯರ ಗುಂಪು ; ಸ್ನೇಹಿತರ ಸಮೂಹ : ಮಂತ್ರಿಯುಂ ಮೆಚ್ಚಿದ ತುಂಬುರನೆಂಬನಂ ಕೊಟ್ಟು ಮಖಂತೆ ತನ್ನೊಡನಿರ್ದ ಮಿತ್ರಕುಲಮುಂ ಕೊಟ್ಟು (ನಂಚರ. ೩-೫೯). [ಸಂ.]

**ಮಿತ್ರಗುಣ** (ನಾ). ಸ್ನೇಹಿತನಲ್ಲಿರಬೇಕಾದ ಗುಣ.—ಸ್ವಭಾವ : ಸ್ವಚ್ಛತನಂ ತ್ಯಾಗಂ ಶೌರ್ಯಂ ಸಮಾನವಹ ಸುಖದುಃಖಂ ಸ್ನೇಹಂ ದಾಕ್ಷಿಣ್ಯಂ ಸತ್ಯಂ ಶೌಚಮೆಂಬಿವು ಮಿತ್ರಗುಣಂಗಳ್ (ಶಂಶಕಂ. ೨೦೭-೦೯). [ಸಂ.]

**ಮಿತ್ರಘ್ನ** (ಗು). ಮಿತ್ರದ್ರೋಹಿಯಾದ. [ಸಂ.]

**ಮಿತ್ರಜ** (ನಾ). ೧. ಸೂರ್ಯನ ಮಗ. ೨. ಯಮ : ಮೃತ್ಯುಂಜಯನ ವಾಕ್ಯ ತಪ್ಪದೆಂದಾನುಳಿದೆ ಮಿತ್ರಜನ ದಹಿಸಿದಾಗಲೆ ಮೃಳುಹಲಿಲ್ಲವೆ (ಪಪಮಃ. ೯-೩೭). [ಸಂ.]

**ಮಿತ್ರತ್ವ** (ನಾ). ಗೆಳೆತನ ; ಮೈತ್ರಿ ; ಸ್ನೇಹ : ನಿನ್ನಂ ಕಂಡು . . . ಮಿತ್ರತ್ವಕ್ಕಾಸೆಪಟ್ಟು ಬಂದೆಂ ನಿನ್ನೊಳ್ (ಶಂಶಕಂ. ೩. ೨೦೭-೯೩೩) ; ಪೂಣ್ದವಾ ರವಿತನೂಜನುಂ ನಾನುಮಗ್ನಿಯೆ ಸಾಕ್ಷಿಯಾಗೆ ಮಿತ್ರತ್ವಮಂ (ಶ್ರೀರಾಮಪ. ೩೦೨-೩೭). [ಸಂ.]

**ಮಿತ್ರದ್ರೋಹ** (ನಾ). ಸ್ನೇಹಿತನಿಗೆ ಬಗೆಯುವ ಕೇಡು : ಗೆಳೆಯನಿಗೆ ಮಾಡುವ ವಂಚನೆ : ಅದನಾಂ ಕೇಳ್ದು ಸಿರದಿರ್ದನಪ್ಪೊಡೆ ವಿಶ್ವಾಸಘಾತುಕತ್ವಮುಂ ಮಿತ್ರದ್ರೋಹ [ಶಾಕಾಂ. ಮಿತ್ರದ್ರೋಹತ್ವ, ಮಿತ್ರೋದಾಸೀನ]ಮುಮಪ್ಪುದೆಂದಱಿಪಲ್ಬೇಡೆಂ (ಶಂಶಕಂ. ೧೧೧-೯) ; ಅರಸಿನವರಿಂದಾ ನಮಗೆ ಪ್ರಾಣೋಪಕಾರವಾದ್ದಕ್ಕೆ ಅವರಿಗೆ ನಾಲೂ ಸ್ವಾಮಿದ್ರೋಹ ಮಿತ್ರದ್ರೋಹ ಮಾಡಬಾರದು (ಕೃಪರ. ೨೯) ; ಅವ್ಯಾತ ಮತಿಯದು ಪತಿದ್ರೋಹವಾದರೆ, ಚಂಡಶಾಸನನವು ಮಿತ್ರದ್ರೋಹ (ಶಾಕ್ಯಸ. ೬೬). [ಸಂ.]

**ಮಿತ್ರದ್ರೋಹಿ** (ನಾ). ಸ್ನೇಹಿತನಿಗೆ ಕೇಡನ್ನು ಬಗೆಯುವವನು : ಗೆಳೆಯನಿಗೆ ವಂಚನೆಯನ್ನು ಮಾಡುವವನು : ಮಿತ್ರದ್ರೋಹಿಯಾದವನಿಗೆ ಕಾಣುವವರೆಲ್ಲ ಶತ್ರುಗಳೇ (ಗಾದೆ). [ಸಂ. ಮಿತ್ರದ್ರೋಹಿನ್]

**ಮಿತ್ರದ್ವಿಷ** (ನಾ). ೧. ಸೂರ್ಯನ ಹಗೆ : ರಾಹು. ೨. ಸ್ನೇಹಿತನನ್ನು ದ್ವೇಷಿಸುವವನು ; ಗೆಳೆಯನಲ್ಲಿ ಶತ್ರುತ್ವವನ್ನು ಹೊಂದಿದವನು. ೧, ೨ : ದ್ವಿರಸನಂ ಮಿತ್ರದ್ವಿಷಂ ವಕ್ರಗಾಮಿ . . . ಅತ್ಯಾಮಿಷದತ್ತಚಿತ್ತನೆನೆ ಪಾಪಂ ಪೋಲ್ತು ಲೋಕಕ್ಕೆ ಪರ್ತಿಪ ದುರ್ಮೋದನನುಗ್ರಸಂಕಪಸಿಯೆಂಬಮರ್ಘರ್ (ಕಮಹ. ೦೯-೦೪). [ಸಂ.]

**ಮಿತ್ರದ್ವೇಷ** (ನಾ). ಸೂರ್ಯನೊಡನೆ ಇರುವ ಹಗೆತನ,—ವೈರ : ದೋಷದೊಡೆತನವೊಂದು ಮಿತ್ರದ್ವೇಷವೊಂದು . . . ಅಬಲೆಯರಾಸ್ಯದಲಿ ಸಂಕ್ಲೇಶಿಯಾಗಿಹುದೊಂದೆನುತೆ ಶಶಿ ಹೇಸಿ ಮೆಲ್ಲನೆ ಜಾಱಿದನು ಪಡುವಣ ಸಮುದ್ರದಲಿ (ಅಕ್ರೂ. ೩-೫೦). [ಸಂ.]

**ಮಿತ್ರಪಂಚಕ** (ನಾ). [ವೈದ್ಯಶಾ] ಔಷಧಕ್ಕಾಗಿ ಬಳಸುವ ಬೆಲ್ಲ, ತುಪ್ಪ, ಗುಂಜಿ, ಜೇನುತುಪ್ಪ ಮತ್ತು ಬಿಳುಗಾರ ಎಂಬ. ಪರಸ್ಪರ ಸಹಾಯಕಗಳಾದ ಐದು ಬಗೆಯ ಪದಾರ್ಥಗಳು : ಆ ಭಸ್ಮವನ್ನು ಮಿತ್ರಪಂಚಕದಿಂದ ಕರಗಿಸುವುದು. ಮಿತ್ರಪಂಚಕವೆಂದರೆ ಬೆಲ್ಲ. ತುಪ್ಪ,/ಗುಂಜಿ, ಜೇನುತುಪ್ಪ, ಬಿಳುಗಾರ (ವೈ. ೫೬). [ಸಂ.]

**ಮಿತ್ರಪುತ್ರ** (ನಾ). ೧. ಸೂರ್ಯನ ಮಗ. ೨. ಶನಿ : ಕ್ಷಿತಿಜನೊಳೊಂದಿದ ಗುರುವಿಂ [ನೇತ್ರಾರಂ] ಮಿತ್ರಪುತ್ರನಿಂ ದುಃಖಿ . . . ಎನಿಕುಂ ಮನುಜಂ (ಜಾತಕ. ೦೫-೩). ೩. ಯಮ.

ಮಿತ್ರಪುತ್ರಸಂಹರ = ಸೂರ್ಯನ ಮಗನಾದ ಯಮನನ್ನು ನಾಶ ಮಾಡಿದವನು ; ಶಿವ : ತುಂಗಮಹಿಮಾಕರ ಭೀಕರ ಮಿತ್ರಪುತ್ರಸಂಹರ . . . ಜಂಪ್ರಶೇಖರ (ರಾಜಶೇ. ೦೩-೫೩). [ಸಂ.]

**ಮಿತ್ರಬಲ** (ನಾ). ಸ್ನೇಹಿತರಾಜರ ಬಲ : ಅಖಿಲ ಶಾರ್ದೂಲಂಗಳೇ ಮಿತ್ರಬಲಮಾಗಿಯುಂ ನಿಸರ್ಗದುರ್ಗಗಿರಿಗುಹಾಗಹ್ವರಂಗಳೇ ದುರ್ಗಂಗಳಾಗಿಯುಂ . . . ಮೃಗಾಧಿರಾಜಪದವಿಯೊಳಾಧಿಪತ್ಯಮನಾತ್ಮಸ್ವೀಕೃತಂ ಮಾಡಿ (ಪಂತಕಂ. ೮. ೨೨-೦೦). [ಸಂ.]

**ಮಿತ್ರಭಾವ** (ನಾ). ಗೆಳೆತನ ; ಮೈತ್ರಿ : ಅವರಲ್ಲಿ ಪರಿಚಯಾಭ್ಯಾಸವೆಂಬುದಿಲ್ಲ ಮಿತ್ರಭಾವವುಮಿಲ್ಲ (ಪಂತಕಂ. ೨೦೦-೬). [ಸಂ.]

**ಮಿತ್ರಭೇದ** (ನಾ). ೧. ಸ್ನೇಹಿತರಲ್ಲಿ ಉಂಟಾಗುವ ಒಡಕು, — ವ್ಯತ್ಯಾಸ. ೨. ಕನ್ನಡದ ಪ್ರಸಿದ್ಧಗ್ರಂಥವಾದ 'ಪಂಚತಂತ್ರ'ದ ಮೊದಲನೆಯ ಭಾಗ. [ಸಂ.]

**ಮಿತ್ರಮಂಡಲ**, ಮಿತ್ರಮಂಡಳ (ನಾ). ೧. ಸೂರ್ಯಬಿಂಬ. ೨. ಸ್ನೇಹಿತರ ಗುಂಪು. ೧, ೨ : ಹಿಮಕರಮಂಡಲಮಿದು ಶತ್ರುಮಂಡಲಾಭಂ ನೃಪೇಂದ್ರ ಮಸುಳ್ದುದು ಬೇಗಂ ನಿಮಿರಲ್ ಬಗೆದಪುದೀ ಮಿತ್ರಮಂಡಲಂ ಮಿತ್ರಮಂಡಲಾಭಂ ನಿನ್ನ (ಲೀಪು. ೦೨-೫೨). **ಮಿತ್ರಮಂಡಳ** : **೧, ೨** : ರಿಪುರಾಜಮಂಡಳಂ ಕುಂದಿ ಪದ್ಮತೇಜದಿನದೊರ್ಮೆಯುಂ ಪೆರ್ಚಿದು ಭಾವಿಪೊಡೆಯ್ದು ಮಿತ್ರಮಂಡಳಮುಪಚಯಮುಮಂ ತಾಳ್ದುದಂತದುಚಿತಂ ಚಿತ್ರಂ (ಧನ್ಯಕು. ೩-೬). [ಸಂ.]

**ಮಿತ್ರಮಂಡಳ** 'ಮಿತ್ರಮಂಡಲ' ನೋ.

**ಮಿತ್ರಲಕ್ಷಣ** (ನಾ). ಸ್ನೇಹಿತನಲ್ಲಿರಬೇಕಾದ ಗುಣ, — ಲಕ್ಷಣ : ಶೀಲಂ ಮಹಾಸ್ನೇಹಂ ಇವು ಮೊದಲಾದ ಮಿತ್ರಲಕ್ಷಣಂಗಳಾವನಲ್ಲಿಯುಂಟು ಆ ಮಿತ್ರನಲ್ಲಿ ತಾನಿಹುದು (ಪಂತಕಂ. ೨೯೩-೨೨). [ಸಂ.]

**ಮಿತ್ರಲಾಭ** (ನಾ). ೧. ಸ್ನೇಹಿತರನ್ನು ಗಳಿಸಿಕೊಳ್ಳುವಿಕೆ ; ಗೆಳೆಯರನ್ನು ದೊರಕಿಸಿಕೊಳ್ಳುವಿಕೆ. ೨. ಸಂಸ್ಕೃತದ ಪ್ರಸಿದ್ಧಗ್ರಂಥವಾದ 'ಹಿತೋಪದೇಶ'ದ ಮೊದಲನೆಯ ಭಾಗ. [ಸಂ.]

**ಮಿತ್ರವಿಯೋಗ** (ನಾ). ೧. ಸೂರ್ಯನ ಅಗಲಿಕೆ, — ವಿರಹ : ಮಂಥರನಂ ವ್ಯಾಧನುಯ್ದನೆಂದು ಮಿತ್ರವಿಯೋಗದಿಂ ಕಿಜಿಮಂ ಬೇಗಂ ದುಃಖಿತರಾಗಿರ್ದೇಗೆಯ್ವಮೆನೆ (ಪಂತಕಂ. ೨೨೬-೯) ; ಮಿತ್ರವಿಯೋಗದೊಳೀ ಶತಪತ್ರಂ ಕಡುಗಂದಿ ಕುಂದುಗೊಂಡಿರ್ಪುದು (ಪುಲ್ಲಪು. ೬-೮). ೨. ಸ್ನೇಹಿತನ ಅಗಲಿಕೆ, — ವಿರಹ : ಮಿತ್ರವಿಯೋಗದೊಳೀ ಶತಪತ್ರಂ ಕಡುಗಂದಿ ಕುಂದುಗೊಂಡಿರ್ಪುದದೇಂ ಚಿತ್ರಮೆ ದೇಹಿಗೆ ಮಾಣ್ಕುಂ ಮಿತ್ರವಿಯೋಗಂ ವಿಶೇಷಮಪ್ಪುದಪಟಲಂ (ಪುಲ್ಲಪು. ೬-೮). [ಸಂ.]

**ಮಿತ್ರವಿರಹ** (ನಾ). = ಮಿತ್ರವಿಯೋಗ ೧ : ದಿವಸದವಸಾನದೊಳ್ ಕಮಳವನಂ ಪೀರೊಡಿ ನಾಡೆ ಬಾಡಿದುದೇಂ ಚಿತ್ರಮೊ ಮಿತ್ರವಿರಹದೊಳ್ ಕೊರಗುವುದಿದವೆ ರಜೋಧಿಕಂ ಜಡಾಶಯನಿಳೆಯಂ (ಧನ್ಯಕು. ೦೩-೨೦). [ಸಂ.]

**ಮಿತ್ರಸಮ್ಮಿತ** (ನಾ). [ಕಾವ್ಯಮೀ] ಪ್ರಭುಸಮ್ಮಿತ, ಮಿತ್ರಸಮ್ಮಿತ ಮತ್ತು ಕಾಂತಾಸಮ್ಮಿತವೆಂಬ ಮೂರು ಬಗೆಯ ಅಲಂಕಾರಪ್ರಕಾರಗಳಲ್ಲಿ ಒಂದು ; P"ನಮ್ಮ ಕರ್ತವ್ಯಾಕರ್ತವ್ಯಗಳಿಗೆ ಸಾಧಕಬಾಧಕಗಳು ಕಂಡುಬರುವಂಥ ಕಥೆಗಳನ್ನು ರಸಪ್ರಾಧಾನ್ಯವಿಲ್ಲದೆ ಹೇಳಿ ನೀತಿಯನ್ನು ಸೂಚಿಸುವ ಪುರಾಣಾದಿಗಳು 'ಮಿತ್ರಸಮ್ಮಿತ'" (ಕೈಬಿ. ೦೬೩ ೮೨೮) : ಪ್ರಭುಸಮ್ಮಿತ ಮಿತ್ರಸಮ್ಮಿತ ಕಾಂತಾಸಮ್ಮಿತ ಎಂಬ ಮೂರು ಹೋಲಿಕೆಗಳು ಈ ಮೂರರ ದಾರಿಯನ್ನು ಸೂಚಿಸುತ್ತದೆ (ಕಾರಲಾ. ೨೩೪). [ಸಂ.]

**ಮಿತ್ರೆ** (ನಾ). ಗೆಳತಿ ; ಸ್ನೇಹಿತೆ : "ಸಾರಜ್ಞೆ ಮಿತ್ರೆ ಸಖಿಯಾಳಿ ಸಹಜೀವಿತೆ ವಯಸ್ಯೆಯೆನೆ ಕೆಳದಿಯಕ್ಕುಂ" (ಅಂಗರಾ. ೯೦-೩) ; ಮಿತ್ರೆ ನೋಡೆ ! ನೋಡೆ ! ನೀಡುಂ ನೋಡದ ಪಕ್ಕಿಯುಮೆನ್ನಂ ಬಂಜೆಯೆನುತ್ತೇಡಿಪಂತಿರೆನ್ನಿದಿರೊಳ್ ಓಳ್ಳೆಯುಂ ಮುದ್ದುಗೆಯ್ವುಂ (ನಾವಾಕ್ರ. ೦೬-೯) : ಮಿತ್ರೆಯರು ಪಡಗೂಡಿಯೂ ಸುಚರಿತ್ರೆ . . . ಒಪ್ಪಿರೆ ತೂಗುಮಂಚದೊಳು (ನಾಗಕ. ೨೫-೮೦). [ಮಿತ್ರ + — ಎ₂]

**ಮಿಥ** (ಅ). ೧. ಪರಸ್ಪರವಾಗಿ ; ಒಂದಕ್ಕೊಂದು ಪೂರಕವಾಗಿ. ೨. ರಹಸ್ಯವಾಗಿ ; ಗುಟ್ಟಾಗಿ. ೩. ಪರ್ಯಾಯವಾಗಿ ; ಬದಲಾಗಿ. [ಸಂ. ಮಿಥಸ್]

**ಮಿಥಸ್ಸ್ಪರ್ಧೆ** (ನಾ). ಪರಸ್ಪರ ಮಾಡುವ ಹುರುಡು, — ಪೈಪೋಟಿ : ಬಿಸಿಲುಂ ಬೆಳ್ದಿಂಗಳುಂ ಕಟ್ಟಲೆಯುಮಿವು ಮಿಥಸ್ಸ್ಪರ್ಧೆಯಂ ಮಾಣ್ದು ಪೊಣ್ದೊಂದು ಸಖಿತ್ವಂ ಪೆರ್ಚೆ ನಿಚ್ಚಂ ನೆಲೆಸಿದುವು (ಪಂಪ್ರತು. ೦೦-೯೦). [ಸಂ. ಮಿಥಸ್ಸ್ಪರ್ಧಾ]

**ಮಿಥುನ** (ನಾ). ೧. ಜೋಡಿ ; ಯುಗ್ಮ ; ಯುಗಳ : ಶ್ರೀಮನ್ಮಹಾನೇತ್ರವೆನಿಸುವ ಚಕೋರತತಿ ರಾಮಣೀಯಕಮಿಥುನಚಕೋರಕಗಳು ನಲಿಯೆ (ಶಾವಕಂ. ೮-೬). ೨. ಹೆಣ್ಣು ಮತ್ತು ಗಂಡಿನ ಜೋಡಿ ; ದಂಪತಿ : "ಸ್ತ್ರೀಪುರುಷರಿರ್ವರುಮಂ ಮಿಥುನಮೆಂಬುದು" (ಹಲಾಯು. ೦೦೬-೦೩) ; ರಾಜಹಂಸಪಾರಾವತಮಿಥುನಂಗಳುತ್ತುಂಗಪ್ರಾಸಾದಶಿಖರಮಣಿಗವಾಕ್ಷಾಂತರಾಳವಿವಿಧಗೃಹಾಂತರಗತಂಗಳಾದುವು (ಪಂಕಲಾ. ೯-೪೯ಪ) ; ಅಂತಲ್ಲಿ ಜಿನಚಂದ್ರ(ನೆನಿಪ) ಶ್ರೀಷೇಣನುಂ ಸಿಂಹನಂದೆಯುಂ ಮಿಥುನರಾದರ್ (ಶಾಂತಿಪು. ೬-೦೨೪ ಪ) ; ಮನೋಜಸುಖಕ್ಕಳವಳಿಸಿದುವಾಗಳ್ ರಥಾಂಗಮಿಥುನಶತಂಗಳ್ (ಪುಲ್ಲಪು. ೬-೦೦೩). ೩. ಅವಳಿ ಜವಳಿ ; ಯಮಳ. ೪. ಕೂಟ ; ಸಂಭೋಗ ; ಮೈಥುನ. ೫. [ಜ್ಯೋತಿ] ಜ್ಯೋತಿಶ್ಚಕ್ರದ ಹನ್ನೆರಡುರಾಶಿಗಳಲ್ಲಿ ಮೂರನೆಯದು : ಧನು ಝಷಂ ಸುಂದರಿ ಮಿಥುನಂ ದ್ವಿಸ್ವಭಾವರಾಶಿಗಳೆನಿಕುಂ (ಶಾತಿತ. ೦-೨೩) ; ಮೇಷ ವೃಷಭ ಮಿಥುನ . . . ಮೀನಮೆಂಬ ಹನ್ನೆರಡುರಾಶಿಗಳುಂ . . . ತಮ್ಮ ಅಧಿಕಾರಮಂ ಮಾಡುತ್ತಿರ್ಪವು (ಶಿವೇಳ. ೨೨೦). [ಸಂ.]

**ಮಿಥುನತ್ವ** (ನಾ). ದಂಪತಿಗಳಾಗಿರುವಿಕೆ : ಪುಟ್ಟಿದ ಜೀವರಾಶಿ ಮಿಥುನತ್ವದೊಳಲ್ಲದೆ ಪುಟ್ಟದು (ಶಾಂತಿಪು. ೬-೦೦೬). [ಸಂ.]

**ಮಿಥುನರ್ಕ್ಷ** (ನಾ). = ಮಿಥುನ ೫ : ದಿನನಾಥಂ ಮಿಥುನರ್ಕ್ಷದೊಳ್ ನೆಲಸೆ ವಿದ್ಯಾಪಾರಗಂ ಜ್ಞಾನಿ ಧನ್ಯನೆನಿಕ್ಕುಂ . . . ನರಂ (ಶಾತಿತ. ೦೬-೦೩). [ಸಂ.]

**ಮಿಥುನೀಕರಿಸು** (ಕ್ರಿ). (ಸಂಭೋಗದಲ್ಲಿ) ಸೇರಿರು : ಸುರನರೋರಗರೆಲ್ಲ ಮಿಥುನೀಕರಿಸಿಕೊಂಡಿಹರ್ನೈಸೆ ಗುಹ್ಯದ ಲಂಪಟದ ಬದುಕು (ಅಮೃತ. ೨-೬೩) ; ಕುಸುಮಲತಾವಾಪಿಗಳುಂ ಅಲ್ಲಿಯಲ್ಲಿಯ ಕ್ರೀಡಾಪರ್ವತದ ಗುಹಾಂತರದೊಳ್ ಮಿಥುನೀಕರಿಸಿ (ಸೌಗಂಧಿ. ೨೯೦-೦೦). [ಸಂ. ಮಿಥುನೀಕರಣ + — ಇಸು₁]

**ಮಿಥೋಯುಕ್ತ** (ನಾ). [ನಾಟ್ಯ] ಎಂಟು ಬಗೆಯ ಹಿಮ್ಮಡಿಗಳ ಚಲನೆಗಳಲ್ಲಿ ಒಂದು ; ಪರಸ್ಪರ ಕೂಡಿಕೊಂಡಂತಿರುವ ಹಿಮ್ಮಡಿಗಳ ಚಲನೆ : ಉತ್ಕ್ಷಿಪ್ತ, ಪತಿತ, ಉತ್ಕ್ಷಿಪ್ತಪತಿತ, ಅಂತರ್ಗತ, ಬಹಿರ್ಗತ, ಮಿಥೋಯುಕ್ತ, ವಿಯುಕ್ತ, ಅಂಗುಲಿಸಂಗತ — ಈ ಎಂಟು ಪಾರ್ಷ್ಣಿಯ ಭೇದಂಗಳ್ (ಲಾಸ್ಯರಂ. ೩-೦೦೦ ಪ). [ಸಂ.]

**ಮಿಥ್ಯ** (ನಾ). ೧. ಸುಳ್ಳು ; ಹುಸಿ ; ಸಟೆ : ಕ್ರೋಧಾರ್ಥರಾದ್ರಮಿಥ್ಯಂಗಳಂ ಪರಿಹರಿಸಿ ಬ್ರಾಹ್ಮಣೋತ್ತಮಮುನೀಶ್ವರರೆನಿಸಿ ನೀವೆ . . . ಮೂಜಗವ ನಿಟ್ಟೊರಸಿ ದೇವರ ಹಿಂಡಿ ಹಿಳಿಯಲು (ಹಕಲಾ. ೮-೦೬). 'ಮಿಥ್ಯವಂತ' ಪರಾ. ೨. ಮಾಯೆ ; ಭ್ರಮೆ : ಮಿಥ್ಯವನೇ ಹಿಡಿದು ಮಿಥ್ಯವನೇ ಪೂಜಿಸಿ ಮರ್ತ್ಯಲೋಕದ ಭಕ್ತರೆಲ್ಲ ವ್ಯರ್ಥವಾದವರಲ್ಲ (ಬಸಕಂ. ೨೬೬-೦೨೬೨). [ಸಂ. ಮಿಥ್ಯಾ]

**ಮಿಥ್ಯವಂತ** (ನಾ). ಸುಳ್ಳುಗಾರ ; ಅಸತ್ಯವಾದಿ : ಜಗವಲ್ಲಿ ಹೊತ್ತು ಹೋರುವ ಮಿಥ್ಯವಂತರಿಗೆ ತತ್ವದ ಸುದ್ದಿಯ ಹೇಳಿದರೆ ನಿತ್ಯರುದ್ರನಾದಡೂ ತಪ್ಪನನಾರನೆಂದೆ (ಮೋಳಿಗೆಮಾ. ೨೩-೯೯). [ಮಿಥ್ಯ ಮಂತ]

**ಮಿಥ್ಯಾವಾದಿ** (ನಾ). = ಮಿಥ್ಯಾವಂತ : ಒಡೆಯನತಿಕೋಪಿ ಹೆಂಡತಿ ಮಹಾಮೂರ್ಖೆ . . . ನೆರೆಮನೆಯವರು ಮಿಥ್ಯಾವಾದಿಗಳು (ಹತಕಾ. ೧೨-೩). [< ಸಂ. ಮಿಥ್ಯಾವಾದಿನ್]

**ಮಿಥ್ಯಾಚತುಷ್ಟಯ** (ನಾ). ಇದು ಸುಳ್ಳು, ಇದರ ಪರಿಚಯ ನನಗಿಲ್ಲ, ಆಗ ಅಲ್ಲಿ ನಾನಿರಲಿಲ್ಲ ಮತ್ತು ಆ ಕಾಲಕ್ಕೆ ನಾನು ಹುಟ್ಟಿರಲಿಲ್ಲ ಎಂಬ ನಾಲ್ಕು ಬಗೆಯ ಸುಳ್ಳುಗಳು : ತದ್ವಾರಾವಸಾನದೊಳ್ ನಿಂದು ಮಿಥ್ಯಾಚ[ತು]ಷ್ಟಯಾಲಂಕಾರವಾಗಿರ್ದ ಚತುಃಪಥಸಭಾಮಂಟಪದೊಳಿರ್ದ ವಿಟಕೋಟಿಯುಮಂ ಕಂಡು (ಶಾಂತಿಪು. ೯-೯೦ ವ). [ಸಂ.]

**ಮಿಥ್ಯಾಚರಣ** (ನಾ). ಬೂಟಾಟಿಕೆ ; ಕಪಟಾಚರಣೆ ; ಸೋಗು : ಮಿಥ್ಯಾಜ್ಞಾನತೆಯಿನಸನ್ಮಿಥ್ಯಾಚರಣಕ್ಕೆ ಸಂದು ಸಲೆ ಸತ್ಪಥಮುಂ ತಥ್ಯಮನೊಲ್ಲದೆ ರೋಗಿಗಪಥ್ಯಕ್ರಿಯೆಯಾದ ತೆಱದೆ ಕಿಡುವರ್ ಪಲರುಂ (ಶಂಪ್ರಪು. ೧೦-೧೨೩). [ಸಂ.]

**ಮಿಥ್ಯಾಚರ್ಯೆ** (ನಾ). ೧. =ಮಿಥ್ಯಾಚರಣ. ೨. ಸುಳ್ಳು; ಅಸತ್ಯ : "ಈರ್ಷ್ಯಾ, ಕುಹನಾ, ಡಂಭಃ, ಮಿಥ್ಯಾಚರ್ಯಾ . . . ಶಠಕಲ್ಪನಾ— ಈ ೧೧ ಮಾಯೆ" (ಹಲಾಯು. ೧೨೨-೩೬). [ಸಂ. ಮಿಥ್ಯಾಚರ್ಯಾ]

**ಮಿಥ್ಯಾಚಾರ** (ನಾ). = ಮಿಥ್ಯಾಚರಣ : ನಾರೀಸಹಜವಾದ ಅಸೂಯೆ ಮತ್ತು ಪತಿಯ ವಿಶ್ವಾಸಘಾತದ ಹಾಗು ಮಿಥ್ಯಾಚಾರದ ಆಶಂಕೆ . . . ಚೆನ್ನಾಗಿ ಮೂಡಿಬಂದಿದೆ (ಶಿಶ್ರೀ. XIX, ಹುಮ್ಮ೩). [ಸಂ.]

**ಮಿಥ್ಯಾಚಾರಿ** (ನಾ). ಬೂಟಾಟಿಕೆ ಮಾಡುವವನು ; ಕಪಟವಾದ ಆಚರಣೆಗಳಲ್ಲಿ ತೊಡಗುವವನು : ಸನಾತನಧರ್ಮವನ್ನು ಒಪ್ಪದವರೂ ವಿರೋಧಿಸುವವರೂ ಸನಾತನಿಗಳೇ ಆದರೂ ಅಂಥಾವರಿಗೂ ನಿರ್ಬಂಧವಿಲ್ಲ, ಅಂಥಾವರು ನಟನೆ ಮಾಡಿ ಮಿಥ್ಯಾಚಾರಿಗಳಾಗಬೇಕಾದುದಿಲ್ಲ (ಆರ್ಯಧ. ೩೦). [ಸಂ. ಮಿಥ್ಯಾಚಾರಿನ್]

**ಮಿಥ್ಯಾಜ್ಞಾನ** (ನಾ). [ತತ್ತ್ವಶಾ] ತಪ್ಪು ತಿಳಿವಳಿಕೆ; ಅಜ್ಞಾನ: ಶತಮತಿ ಮಿಥ್ಯಾಜ್ಞಾನಾವೃತಮತಿ ಸಂದಂ ದ್ವಿತೀಯನರಕಕ್ಕೇ ಸಂಸ್ಕೃತಿಯೊಳ್ ಧರ್ಮಾಧರ್ಮಸ್ಥಿತಿಯೆ ವಲಂ ಸ್ವರ್ಗನರಕಸುಖದುಃಖಕರಂ (ಆದಿಪು. ೩-೭೭); ಈತನಚ್ಯುತನಲ್ಲೆನಿಸಿ ವಿಪರೀತ ಮಿಥ್ಯಾಜ್ಞಾನ ತೋಱಿದಡೀತನಲಿ ತಪ್ಪೇನು (ಕುವ್ಯಾಸ. ೯-೧೦) ; ಒಂದು ವಸ್ತುವನ್ನು ಮತ್ತೊಂದೆಂದು ತಪ್ಪಾಗಿ ತಿಳಿಯುವುದೇ ಅಧ್ಯಾಸವು. ಅಧ್ಯಾಸ – ಭ್ರಾಂತಿ, ಮಿಥ್ಯಾಜ್ಞಾನ, ಮಿಥ್ಯಾಪ್ರತ್ಯಯ – ಇವೆಲ್ಲಾ ಪರ್ಯಾಯಶಬ್ದಗಳು (ಬ್ರಿಹ್ಮಸಾ. ೧೦). [ಸಂ.]

**ಮಿಥ್ಯಾಜ್ಞಾನಿ** (ನಾ). ೧. [ತತ್ತ್ವಶಾ] ಸರಿಯಾದ ತಿಳಿವಳಿಕೆಯಿಲ್ಲದವನು : ಅಜ್ಞಾನಿ : ಪಂತ್ತಿನ ಮಿಥ್ಯಾಜ್ಞಾನಿವೋಲ್ ನೀಂ ತರಳತೆವೆರಸಿಂತೇಕೆ ವಿಭ್ರಾಂತನಪ್ಪೈ (ಆದಿಪು. ೩-೭) ; ಗರ್ವಿತರು ಮಿಥ್ಯಾಜ್ಞಾನಿಗಳು ಕಲಿಯುಗದ ಮನುಜರು (ಕುವ್ಯಾಆ. ೧೦-೩೪). ೨. ತಾನು ಜ್ಞಾನಿಯೆಂಬ ತಪ್ಪುತಿಳಿವಳಿಕೆಯನ್ನು ಹೊಂದಿರುವವನು : ಮಾನಮನೆಂತುಂ ಮಿಥ್ಯಾಜ್ಞಾನಿಗಳೆರ್ದೆಯೊಳಗೆ ನೆಲಸಲೀಯದೆ ನಾಲ್ಕುಂ ಮಾನಸ್ತಂಭಂಗಳ್ ರತ್ನಾನದ್ಧಂಗಳ್ ನಿರಂತರಂ ಸೊಗಯಿಸುಗುಂ (ಆದಿಪು. ೧೦-೨೪) ; ಪ್ರಹಸಿತನೆಂಬೊಂ ಮಗನಾತನ ಕೆಳೆಯುಂ ವಿಕಸಿತನೆಂಬಿರ್ವರುಂ ಮಿಥ್ಯಾಜ್ಞಾನಿಗಳು ಶೂನ್ಯವಾದಿಗಳು (ಶಾಪುಂಪು. ೨೦). [ಸಂ. ಮಿಥ್ಯಾಜ್ಞಾನಿನ್]

**ಮಿಥ್ಯಾತಪಸ್ವಿ** (ನಾ). [ಜೈನ] ತೋರಿಕೆಗಾಗಿ ತಪಸ್ಸನ್ನಾಚರಿಸುವವನು: ಮಹಾವೀರನು . . . ಕೇವಲ ದೇಹದಮನ ಮಾಡುವುದು ಮಿಥ್ಯಾತಪಸ್ಸೆಂದು ಒತ್ತಿಹೇಳಿದನು. ಹಾಗೆ ತಪಸ್ಸುಮಾಡುವವರನ್ನು ಮಿಥ್ಯಾತಪಸ್ವಿಗಳೆಂದು ಹೇಳಿದನು (ಜೈನಶ. ೩೩೦). [ಸಂ. ಮಿಥ್ಯಾತಪಸ್ವಿನ್]

**ಮಿಥ್ಯಾತಪಸ್ಸು** (ನಾ). ತೋರಿಕೆಗಾಗಿ ಮಾಡುವ ತಪಸ್ಸು : ಮಹಾವೀರನು . . . ಕೇವಲ ದೇಹದಮನ ಮಾಡುವುದು ಮಿಥ್ಯಾತಪಸ್ಸೆಂದು ಒತ್ತಿ ಹೇಳಿದನು. (ಜೈನಶ. ೩೩೦). [ಸಂ. ಮಿಥ್ಯಾತಪಸ್]

**ಮಿಥ್ಯಾತ್ವ** (ನಾ). ೧. ಸುಳ್ಳು: ಹುಸಿ. ೨. ಅಜ್ಞಾನ; ಭ್ರಾಂತಿ; ಮಾಯೆ : ಸುಕವಿ ಸುಕರಕವಿ ಮಿಥ್ಯಾತ್ವಪ್ರಹರಕವಿ ಸುಭಗಕವಿ ನುತಮಹಾಕವೀಂದ್ರಂ ಸರಸ್ವತೀಮುಖಮುಕುರಂ (ಸುಕುಮಾ. ೧-೩೨). ೩. [ಜೈನ] ತತ್ತ್ವಾರ್ಥದಲ್ಲಿ ಶ್ರದ್ಧೆಯಿಲ್ಲದಿರುವಿಕೆ; "ದರ್ಶನಮೋಹನೀಯದಲ್ಲಿ ಮಿಥ್ಯಾತ್ವ, ಸಮ್ಯಗ್ಮಿಥ್ಯಾತ್ವ ಮತ್ತು ಸಮ್ಯಕ್‌ಪ್ರಕೃತಿ ಎಂದು ಮೂರು ವಿಧಗಳು. ನಿಜವಾದ ತತ್ತ್ವಜ್ಞಾನವನ್ನು ನಂಬದಿರುವುದು ಮಿಥ್ಯಾತ್ವವು" (ಜೈನಶ. ೩೬೭) : ಎಂತುಂತೆ ಕೇಳ್ದುವೆಂತಂತೆ ಮಿಥ್ಯಾತ್ವಮನಿಸಿನಿಸು ಪಿಂಗೆ (ವರ್ಧಾರಾ. ೬-೦೬) ; ತಮಮುಮಂ ದ್ಯುಮಣಿ ಮಯೂಖೋದ್ಗಮವುವಲಿಪೊಲಲೆಗೆ ಜಗದ ಮಿಥ್ಯಾತ್ವತಮಸ್ತಮುಮಂ ನಕಲಂಕದೇವ ಪ್ರಮಾಣರತ್ನಪ್ರದೀಪರಶ್ಮಿಕಲಾಪಂ (ಆದಿಪು. ೧-೧೬). [ಸಂ.]

**ಮಿಥ್ಯಾದರ್ಶನ** (ನಾ). = ಮಿಥ್ಯಾತ್ವ ೩ : ಮಿಥ್ಯಾದರ್ಶನಾವಿರತಿಪ್ರಮಾದಕಷಾಯಯೋಗೋಪಾರ್ಜಿತಜ್ಞಾನಾವರಣೀಯಾದಿ ಕರ್ಮಂಗಳ್ ಸಂಸಾರಕಾರಣಂಗಳ್ (ಆದಿಪು. ೧೦-೬೩ ವ). [ಸಂ.]

**ಮಿಥ್ಯಾದೃಷ್ಟಿ** (ನಾ). ೧. ಇರುವುದನ್ನು ಇಲ್ಲವೆನ್ನುವ ವಾದ : ಪಾಷಂಡವಾದ; ನಾಸ್ತಿಕತೆ : "ಮಿಥ್ಯಾದೃಷ್ಟಿಃ, ನಾಸ್ತಿಕತಾ — ೨ ಪರಲೋಕವಿಲ್ಲವೆಂಬ ಅಪ್ರಮಾಣಿಕಬುದ್ಧಿಯ ಹೆಸರುಗಳು. ಅಂದರೆ ವ್ಯಾವಹಾರಿಕವೇ ಇಲ್ಲವೆನಿಪ ಬೌದ್ಧಭ್ರಾಂತಿ" (ಸಿದ್ಧಾಂತ. ೪೩) ; ಸಂಯಮಿಯ ವರ್ತನೆ ಲೋಕವಿಲಕ್ಷಣವಾದುದು, ಅವನು ತತ್ತ್ವದೃಷ್ಟಿಯಲ್ಲಿ ಸದಾ ಜಾಗರೂಕನಾಗಿಯೂ, ಮಿಥ್ಯಾದೃಷ್ಟಿಯಲ್ಲಿ ವಿಮುಖನಾಗಿಯೂ ಇರುವನೆಂಬುದನ್ನು ವಾಕ್ಯ ಧ್ವನಿಸುತ್ತದೆ (ಧ್ವನ್ಯಾಲೋ. ೧೨೦). ೨. [ಬೌದ್ಧ] "ಇಹವನ್ನೂ ಪರವನ್ನೂ ಕುರಿತು ತಪ್ಪುಭಾವನೆಗಳುಳ್ಳವನು" (ಹಕ್ಕುಮ. ೧೩ ಟಿಪ್ಪಣಿ) : ಹೆಂಗುಸಾಗಿ ಇದ್ದು, ಮಿಥ್ಯಾದೃಷ್ಟಿಯವರ ಮನೆಯಲ್ಲಿ ವಾಸಮಾಡಿಯೂ, ಧರ್ಮಕ್ಕಾಗಿ ಹೀಗೆ ಪರಿತ್ಯಾಗ ಮಾಡಿದವರು ಬೇರೆ ಇನ್ನೊಬ್ಬರಿಲ್ಲ (ಹಕ್ಕುಮ. ೩೪). ೩. [ಜೈನ] ಮಿಥ್ಯಾದರ್ಶನಸಹಿತನಾದ ಜೀವಿ ; ಸಮ್ಯಕ್ತ್ವಜ್ಞಾನವಿಲ್ಲದವನು; ಅಭವ್ಯ : ಮಿಥ್ಯಾದೃಷ್ಟಿಗಳಪ್ಪವರ್ ಶ್ರಾವಕಬ್ರತಂಗಳಂ ಕೈಕೊಂಡರ್ (ವಡ್ಡಾರಾ. ೯೩-೬);ಮಿಥ್ಯಾದೃಷ್ಟಿಯಪ್ಪಂ ತನ್ನನೆಂತುಂ ಸಮಱಿ ನೆಗಟ್ಟೊಡ ಮಾತನಪಾತ್ರಮೆ (ಆದಿಪು. ೧೦-೯ ವ) ; ಜನಾಪವಾದಭಯದಿಂದೆನ್ನಂ ಬಿಸುಟ್ಟಂತೆ ಮಿಥ್ಯಾದೃಷ್ಟಿಗಳ ನುಡಿಯುಂ ಕೇಳ್ದರ್ಹತ್ಪರಮೇಶ್ವರ ಶ್ರೀಧರ್ಮಮಂ ಬಿಸುಡದಿರ್ಪುದು (ಶಂರಾಮಾ. ೧೩-೭೩ ವ). [ಸಂ.]

**ಮಿಥ್ಯಾಧರ್ಮ** (ನಾ). ನೈಜವಲ್ಲದ ಧರ್ಮ; ಕಪಟದಿಂದ ಕೂಡಿದ ಧರ್ಮ : ಮಕ್ಕಳಿಲ್ಲದವನೂ ಮುದುಕನೂ ಆದ ನೀನು ಮಿಥ್ಯಾಧರ್ಮವನ್ನು ಬೋಧಿಸಿ, ಮುದಿಹಂಸದಂತೆ ಜ್ಞಾತಿಗಳಿಂದ ಕೊಲೆಗೆ ಗುರಿಯಾಗುತ್ತೀಯೆ (ವಚಕಾ. ೯೩). [ಸಂ.]

**ಮಿಥ್ಯಾಧ್ಯವಸಿತಿ** (ನಾ). [ಕಾವ್ಯಮೀ] ಒಂದು ಬಗೆಯ ಅಲಂಕಾರ; ''ಒಂದು ಅರ್ಥವು ಸುಳ್ಳೆಂದು ಸಾಧಿಸಲು ಅಪ್ರಕೃತವಾದ ಮತ್ತೊಂದು ಸುಳ್ಳನ್ನು ಕಲ್ಪಿಸಿ ಹೇಳುವುದಾದರೆ ಮಿಥ್ಯಾಧ್ಯವಸಿತಿ" (ಕುವಲ. ೨೨೯ ಟಿಪ್ಪಣಿ): ಪುಸಿಯಾದರ್ಥ ಸಿದ್ಧ್ಯರ್ಥವಾಗಿ ಪುಸಿಯಿಂದರ್ಥಾಂತರ ಕಲ್ಪನೆ ಮಾಡಿ ಪೇಳಲ್ ಮಿಥ್ಯಾಧ್ಯವಸಿತಿಯೆನಿಸುವುದು (ಕುವಲ. ೧೨೨). [ಸಂ.]

**ಮಿಥ್ಯಾಪವಾದ** (ನಾ). ಇನ್ನೊಬ್ಬರ ಮೇಲೆ ಹೊರಿಸುವ ಅಸತ್ಯವಾದ ಆರೋಪ ; ಸುಳ್ಳುಆಪಾದನೆ : ಮಿಥ್ಯಾಪವಾದದಲ್ಲಿ ಮಾನನಷ್ಟ, ಮಾನನಷ್ಟದಲ್ಲಿ ಮಿಥ್ಯಾಪವಾದ ಇವು ಹೇಗೆ ಪರಸ್ಪರಾಂತರ್ಗತವಾಗುತ್ತವೆ? (ಕೃಷರು. ೩೬೧): ಮೂರ್ತಿವಂತದೈನ್ಯವೇ ಅವಳಾಗಿ ನಿಂತಿರುವುದನ್ನು ಕಂಡಾಗ ಎಂಥ ಮಿಥ್ಯಾಪವಾದ ಎಂದಿತು ಮನಸ್ಸು (ಜೋಕಿ. ೨೨). [ಸಂ.]

**ಮಿಥ್ಯಾಪವಾದಿ** (ನಾ). ಇನ್ನೊಬ್ಬರ ಮೇಲೆ ಅಸತ್ಯವಾದ ಆರೋಪವನ್ನು ಮಾಡುವವನು : ಸ್ವಾಮಿಕಾರ್ಯವಿಘಾತಕಂಗತಿಕಾಮುಕಗೆ ಮಿಥ್ಯಾಪವಾದಿಗೆ. . . ಪರಲೋಕವಿಲ್ಲ (**ಶಬ್ದಾ.ಶಿ. ೪-೨೬**). [ಸಂ. ಮಿಥ್ಯಾಪವಾದಿನ್]

**ಮಿಥ್ಯಾಪ್ರತ್ಯಯ** (ನಾ). = ಮಿಥ್ಯಾಜ್ಞಾನ : ಒಂದು ವಸ್ತುವನ್ನು ಮತ್ತೊಂದೆಂದು ತಪ್ಪಾಗಿ ತಿಳಿಯುವುದೇ ಅಧ್ಯಾಸವು. ಅಧ್ಯಾಸ, ಭ್ರಾಂತಿ, ಮಿಥ್ಯಾಜ್ಞಾನ, ಮಿಥ್ಯಾಪ್ರತ್ಯಯ – ಇವೆಲ್ಲಾ ಪರ್ಯಾಯಶಬ್ದಗಳು (**ಬ್ರ.ಸೂ.ಭಾ. ೦೦**). [ಸಂ.]

**ಮಿಥ್ಯಾಭಾವನೆ** (ನಾ). = ಮಿಥ್ಯಾದೃಷ್ಟಿ ೩ : ಸಾಗರದತ್ತನೆಂಬ ಪರದಂಗೆ . . . ಗುಣವತಿಯೆಂಬ ಮಗಳಾಗಿ ಮಿಥ್ಯಾಭಾವನೆಯಿಂ ಕಾಲಂಗೆಯ್ದುನಿತಾನುಂ ಕಾಲಂ ತಿರ್ಯಗ್ಗತಿಯೊಳ್ ತಿರಿತಂದು (**ವಡ್ಡಾರಾ. ೦೬-೪೯ ಪ**). [ಸಂ. ಮಿಥ್ಯಾಭಾವನಾ]

**ಮಿಥ್ಯಾಭಿಯೋಗ** (ನಾ). = ಮಿಥ್ಯಾಪವಾದ : "ಮಿಥ್ಯಾಭಿಯೋಗಃ-ಅಭ್ಯಾಖ್ಯಾನಂ–೨ ಇಲ್ಲದ್ದನ್ನು ಕಲ್ಪಿಸಿ ಆಕ್ಷೇಪಿಸುವುದಕ್ಕೆ ಪೆಸರುಗಳು" (**ಸಿದ್ಧಾಂತ. ೩೨**): ಮಳಯಕೇತುವೆಂಬ ರಾಜತನೂಜನತಿತೇಜಿಷ್ಣನಾಗಿ ತನ್ನ ಮಂತ್ರಿ ಮುದ್ರಾರಾಕ್ಷಸಂಗೆ ತಥ್ಯಾಭಿಯೋಗಮಾದೊಡಂ ಮಿಥ್ಯಾಭಿಯೋಗವೆಂದು ನಿಶ್ಚೈಸಿ (**ಶಂಕರಾ. ೨೯೪-೦೬**). [ಸಂ.]

**ಮಿಥ್ಯಾವಾದ** (ನಾ). ಸುಳ್ಳುಮಾತು; ಹುಸಿನುಡಿ. [ಸಂ.]

**ಮಿಥ್ಯಾವಾದಿ** (ನಾ). ೧. [ಅದ್ವೈತ] ಶಂಕರಾಚಾರ್ಯರ ಅನುಯಾಯಿ; ಅದ್ವೈತಿ; P ಅದ್ವೈತಮತದಲ್ಲಿ ಬ್ರಹ್ಮವೇ ಸತ್ಯ, ಜಗತ್ತು ಮಿಥ್ಯೆ ಎಂದು ಹೇಳುವುದರಿಂದ ಆ ಪಂಥಕ್ಕೆ ಸೇರಿದವನಿಗೆ ಮಿಥ್ಯಾವಾದಿಯೆಂದು ಹೆಸರು. ೨. [ಬೌದ್ಧ] ಬೌದ್ಧರಲ್ಲಿ ಒಂದು ಪಂಗಡದವನು ; ವಿಜ್ಞಾನವಾದವನ್ನು ಆಶ್ರಯಿಸಿದವನು : ಈ ಸ್ವಸಂವಿತ್ತರಂಪರೆ ಪೋಕುಂ ಪ್ರಳಯಕ್ಕೆ ತತ್ಕ್ಷಣಿಕ ಮಿಥ್ಯಾವಾದಿವಾದೀಂದ್ರರಿಂ (**ಶಾಂತಿಪು. ೬-೦೯೩**). [ಸಂ. ಮಿಥ್ಯಾವಾದಿನ್]

**ಮಿಥ್ಯಾವಿನಯ** (ನಾ). ಕಪಟದಿಂದ ಕೂಡಿರುವ ನಮ್ರತೆ; ಸೋಗಿನ ಸೌಜನ್ಯ : ಕೆಮ್ಮನೆ ನಿಮ್ಮನಚ್ಚಿಗಂಬಡಿಸಿದೆನೆಂದು ಚಾಟುವಚನಂಗಳಂ ಮೆಚ್ಚಿದು ಮಿಥ್ಯಾ ವಿನಯವಿನೋದೋಪಗೂಹಿತಸ್ವಾಂತಚಿಂತಿತಚಿತ್ತನಾಗಿರ್ದಂ (**ಜಗ. ೩-೨೨ ವ**). [ಸಂ.]

**ಮಿಥ್ಯಾಶಲ್ಯ** (ನಾ). [ಜೈನ] ವ್ರತಿಕನಿಗೆ ಬಾಧಿಸುವ ಮಾಯೆ, ಮಿಥ್ಯೆ ಮತ್ತು ನಿದಾನ ಎಂಬ ಮೂರು ಬಗೆಯ ಶಲ್ಯಗಳಲ್ಲಿ ಒಂದು ; ಮಿಥ್ಯಾದೃಷ್ಟಿಯನ್ನು ಹೊಂದಿರುವುದು : ಪೊಲ್ಲಮೆಯಂ ಮಾಡುವ ಮಿಥ್ಯಾಶಲ್ಯಂ ಮಾಯಾಶಲ್ಯಂ ನಿದಾನಶಲ್ಯಮೆಂಬ ಮೂಱುಂ ಶಲ್ಯಂಗಳಂ ಪಿಂಗಿದಂ (**ಧರ್ಮಾಮೃ. ೩-೦೩೦**) ; ಮಿಥ್ಯಾದೃಷ್ಟಿಗಳೊಳಂ ರಾಗಿಸಿದುದು ಮಿಥ್ಯಾಶಲ್ಯಮಕ್ಕುಂ (**ಶ್ರಾವಕಾ. ೦೨೩-೨**). [ಸಂ.]

**ಮಿಥ್ಯೆ** (ನಾ). ೧. ಅಸತ್ಯ ; ಸಟೆ ; ಸುಳ್ಳು : "ಅಳೀಕಂ, ವಿತಥಂ, ಮಿಥ್ಯಾ, ವೃಥಾ, ಅನೃತಂ – ಈ ೫ ಅಸತ್ಯದ ಪೆಸರ್" (**ಕರ್ಣಾಟ. ೨೩-೦೯೩**); ಪದಪದ್ಮಾನತನಾದ ಕಾದಲನ ಸೋಂಕಿಂದಾದ ರೋಮೋದ್ಗಮಂ ವಿದಿತಂ ಮಾಡೆ ಮನಃಪ್ರಸಾದಮಿದನೇನೆಂದೀರ್ಷೆಯಿಂ ಮಿಥ್ಯೆಯಿಂ ಪದುಳಂ ಮಾಡುವೆ ಮುಗ್ಧೆ (**ಪುಷ್ಪದ.೭-೯೬**). ೨. [ತತ್ತ್ವಶಾ] ಅಜ್ಞಾನ : ಮಾಯೆ : ಭ್ರಮೆ : ಮಿಥ್ಯೆಯನಳಿದುಳಿದ ಸತ್ಯಪ್ರಸಾದಿ . . . ಕೂಡಲಸಂಗಮದೇವರಲ್ಲಿ ತಾನೇ ಪ್ರಸಾದಿ (**ಬಸವ. ೯೪೨**) ; ಮಿಥ್ಯೆಯಿಂದೊಡೆ ಗಗನಕುಸುಮದೊಲಿತ್ತ ಭಾವಿಪುದು (**ಗಗಜಾ. ೨೦-೭೯**): ಈ ಜಗತ್ತು ಸತ್ಯವಾದುದು (ಮಿಥ್ಯೆಯಲ್ಲ, ಸುಳ್ಳಲ್ಲ) (**ಶಾರದ. ೨೭೩**). ೩. ಸತ್ತು ಮತ್ತು ಅಸತ್ತುಗಳೆಂಬ ಎರಡು ಮಾರ್ಗಕ್ಕೂ ಸೇರದುದು ; ಸದಸದ್ವಿಲಕ್ಷಣವಾದುದು : ಮಿಥ್ಯೆ, ಸುಳ್ಳು ಎಂಬ ಪದಕ್ಕೆ ಈಗ ಜನರು ಯಾವ ಅರ್ಥವನ್ನು ತಿಳಿಯುವರೋ ಶಾಸ್ತ್ರದಲ್ಲಿ ಆ ಅರ್ಥವಲ್ಲ. ಅದು ಎಂತಹುದೆಂದರೆ ಸದಸದ್ವಿಲಕ್ಷಣವು. ಸತ್ತೆಂದರೆ ಪರಬ್ರಹ್ಮನು. ಅಸತ್ತೆಂದರೆ ಶಶಶೃಂಗ ಮೊದಲಾದ ತುಚ್ಛಪದಾರ್ಥಗಳು. ಇಂತಹ ಎರಡು ವಿಧವಾದ ಮಾರ್ಗದಲ್ಲೂ ಸೇರಿದುದಲ್ಲವೆಂದು ನಿರ್ಣಯವೇ ಮಿಥ್ಯಾಪದದ ಅರ್ಥ (**ಹಿಂದಸಾ. ೨೨೪**). ೪. = ಮಿಥ್ಯಾಶಲ್ಯ : ಶಲ್ಯಗಳು ಮೂರು– ಮಾಯಾ, ಮಿಥ್ಯಾ ಮತ್ತು ನಿದಾನ . . . ಮಿಥ್ಯೆ ಎಂಬುದು ದೃಷ್ಟಿವಿಕಾರವು. ಇದು ತತ್ತ್ವಶ್ರದ್ಧೆಯ ಅಭಾವವೂ ಆಗಿದೆ (**ಶ್ರಾವಕಾ. ೩೭೩-೭೬**). [ಸಂ. ಮಿಥ್ಯಾ]

**ಮಿದಿ**$_1$ (ಕ್ರಿ). ೧. ಬತ್ತ ಮುಂತಾದ ಧಾನ್ಯವನ್ನು ಒನಕೆಯಿಂದ ಕುಟ್ಟು,– ತಳಿಸು,– ತೊಳಸು : "ಮಿದಿ – ಮುಸಲಕ್ರಿಯಾಯಾಂ (ಕುಟ್ಟು), ಘಾತ, ಮರ್ದನಯೋಃ (ಅರೆಯು, ಜಜ್ಜು)" (**ಶಮದ**): ಕೊಟ್ಟನಿತು ಬತ್ತವ ಮಿದಿದು . . . ಕಾಲವನು ಸವೆಯಿಸುತಿರ್ದನು (**ಹರಿಕ. ೦೨-೪**): ಲಕ್ಕಿಪರಾರು ಕಲ್ಲಜಗಿಗಳ ಮೇಲೆ ಘುಮ್ಮಿಕ್ಕಿ ನೃತ್ಯವನಾಡುವಂತೆ ಸೊಕ್ಕಿದ ಗಜದಂತಮುಸಲದಿ ಪರ್ಬಿದಿರಕ್ಕಿಯ ಮಿದಿವ ಹೆಣ್ಣುಗಳ (**ವೋಹಕ. ೦೯-೬೪**). ೨. (ಹಿಟ್ಟಿನಂತೆ) ನಾದು; ಮಿಸ್ಸು : ಕುಮರರು ಬಿಲ್ಲ ಬಲ್ಲಣಿಯ ಕೇಣಿಯನಲ್ಲಿ ಕೆಲರ್ ನಿಶಾಟರುಣ್ಮಿದ ಬಿಸುನೆತ್ತರೊಳ್ ಮಿದಿದು ನುಣ್ಣನೆ ನುಂಗಿದರ್ (**ಶಂಕಭಾ. ೦೨-೬**) ; ಶಾರದಾಭ್ರಸಂಕುಳಮನುಱೆ ಮಿದಿದು[**ಪಾಠಾಂ.** ಮಿದ್ದು] ಮುದ್ದೆಯನಾಗಿಸಿವನಜನೆನಲ್ ಬೆಳ್ಪೆಪೆಟ್ಟಿಸಿದುದು (**ಶಂಪಿಪಾ. ೨-೩೯**). ೩. ಹಿಸುಕು : ಅಮುಕು : ಮಲ್ಲನ ನಡಸಿ ತಿವಿದು ಕಡುಪಿಂ ಕೆಡೆ ಪಿ ಕೊಪ್ಪರದೊಳ್ ಕುಮ್ಮಿ ಮುಂಡಿಯೊಳ್ ಮಿದಿದು ಕುದಿದು ಸದೆದು ಸಣ್ಣಿಸುವ ಚೊಕ್ಕೆಯದಾಸೆಗೆ ಪೊಕ್ಕು ಮಲ್ಲನನಿಕ್ಕಿ ಮೆಟ್ಟಿ (**ಗಂಡಕ. ೨-೦೦೩ ವ**); ಸೆಲೆಗಳ ಸಂದನೆತ್ತಿ ಮಿದಿದಾರ್ದಿಱದುಣ್ಮುವನೆತ್ತರಿಂದೆ ಕೊಪ್ಪರಿಗೆಯೊಳರ್ದ ಬತ್ತಿಗಳ ರಾಶಿಗಳಂ ನೆನೆಯಿಕ್ಕಿ (**ತ್ರಿಪು. ೯೭-೦೨**). ೪. ಅರೆ ; ನುಣ್ಣಗಾಗಿಸು : ಮರ್ದಿಸು : "ಸಮ್ಮರ್ದಃ, ಪರಿಮಳಃ–ಈ ೨ ಮಿದಿವುದು" (**ಕರ್ಣಾಟ. ೦೨೭-೬೮**) ; ಮಿದಿದಿಂಬಾಗಿರೆ ಖರ್ಜೂರದ ಪಣ್ಣಂ ನಾರಿಕೇಳಮಂ ಶರ್ಕರೆಯಂ ಪುದಿದಡುಗೆ ಕಣಿಕದೊಳ್ (**ಲೋಕೋಪ. ೬-೬**). ೫. ಉಜ್ಜು ; ತಿಕ್ಕು : (?). ೬. ತುಳಿ ; ಮೆಟ್ಟು : 'ಮಿದಿತ' ಪರಾ. ೭. ಕೊಲ್ಲು ; ಸಂಹರಿಸು : ಬಿರಯಿಯ ಮಿಟ್ಟು[ಪ]ಂ ಮಿದಿದೊಡಲ್ಲದಣಂ ಮುಳಿಸಾಱದೆಂದು ಪಲ್ಮೊರೆದಪನಿಲ್ಲಿ ಮನ್ಮಥಂ (**ಶಂಕಭಾ. ೨-೦೩**). ೮. ಅಂಕೆಯಲ್ಲಿರಿಸು ; ದಮನ ಮಾಡು ; ನಿಗ್ರಹಿಸು : ಈ ಸಂಸಾರಿಗಳ ಸುಖಿಮಾತ್ರವಿಲ್ಲೆಂದು ಮಿದಿದು ಮನವನು . . . ಷಡುವರ್ಗವನು ಗೆಲಿದೆನು (**ಶಿಬಾಗ. ೭-೦೩-೨೩**). ೯. ಕೂಡಿಸು ; ಹೊಂದಿಸು : ಪಂಪನು ಅರಿಕೇಸರಿಯ ಸೈನ್ಯಾಧಿಪತಿಯಾಗಿ . . . ಉನ್ನತಿಯ ಮೆಟ್ಟಲುಗಳ ತುತ್ತತುದಿಯನ್ನೇರಿದ್ದನೆಂಬುದರಿಂದಲೇ ಆ ಅರಸರೆದೆಯ ಹದವನ್ನು ಮಿದಿದು ನೋಡಿಕೊಳ್ಳಬಹುದು (**ನಾಡೋಜ. ೯೪**) ; ಪಟ್ಟದಿಯನ್ನೂ ಕನ್ನಡನುಡಿಯನ್ನೂ ಅವನು ಮಿದಿದು ಹದಗೊಳಿಸಿದ್ದಾನೆ (**ಕಸಾಚ. ೦೬೨**). [ದೇ.॥ ತಮಿ. ಮಿತಿ; ಮಲ. ಮೆತಿ; ತುಳು. ಮೆದ್, ಮೆದಿ, ಮೆದು; ತೆಲು. ಮೆದುಗು, ಮೆದುಚು, ಮೆದುಪು]

**ಮಿದಿ**$_2$ (ನಾ). ೧. ಒನಕೆಯಿಂದ ಕುಟ್ಟುವುದು. ೨. ಸಂಹಾರ ; ನಾಶ : "ಮುಸಲಘಾತದೊಳು ಸಂಹಾರದೊಳು ಮಿದಿ" (**ಶಬ್ದಮಂ. ೯೪**). [<ಮಿದಿ$_1$./ತಮಿ. ಮಿತಿ]

**ಮಿದಿಕೂಲಿ** 'ಮಿದಿಗೂಲಿ' ನೋ.

**ಮಿದಿಗೂಲಿ, ಮಿದಿಕೂಲಿ** (ನಾ). ಬತ್ತವನ್ನು ಕುಟ್ಟಿದುದಕ್ಕಾಗಿ ಕೊಡುವ ಮಜೂರಿ : "ಮಿದಿಗೂಲಿ – ಭತ್ತ ಕುಟ್ಟಿದ ಕೂಲಿ" (**ಶಾಸಕೋ. ೩೦**). **ಮಿದಿಕೂಲಿ** : ಈ ದೇವರುಗಳ ಅಮೃತಪಡಿ ದಿನವೊಂದಕ್ಕೆ ನಿತ್ಯಪಡಿ ಅಕ್ಕಿ . . . ಮಿದಿಕೂಲಿ ಸಹಿತ ಸಲಗೆ ಹದಿನಾಲ್ಕು ಕೊಳಗ ಹನ್ನೊಂದು ಬಳ್ಳ

ಮೂಜಿಬಿ ಲೆಕ್ಕದೆ (ಎಶ. V (R), ತಿರುಮ. ೯೮-೯೦; 1269).
[ವಿದಿ₁ + ಕೂಲಿ₁]

**ವಿದಿತ** (ನಾ). ಮೆಟ್ಟುವಿಕೆ ; ತುಳಿತ : ಕಲಹ, ಕಪಟ, ಕುದಿತ, ವಿದಿತ . . . ಇವಕೆ ಇಗೋ ಹೇಸಿದೆ (ಶಾರಂಗ. ೩೯-೦೩). [ವಿದಿ₁ + — ತ₃]

**ವಿದಿಪ, ವಿದಿಹ** (ನಾ). ೧. ಕುಟ್ಟುವಿಕೆ : ವಿದಿಪಂ, ವಿದಿಪಂಗಳ್; ತಳಿಪಂ, ತಳಿಪಂಗಳ್ (ಶಬ್ದಾ.ಮ. ೩೬೩ ಪ್ರಯೋ). **ವಿದಿಹ** : ೨. ಚೆನ್ನಾಗಿ ಕಲಸುವಿಕೆ ; ನಾದುವಿಕೆ : ಕುಂಬಾರನ ಮಣ್ಣಿನಂತೆ ವಿದಿಹಕ್ಕೆ ಬಂದು ಧಾನ್ಯದಂತೆ ಹಗೇವಕ್ಕೆ ಬಂದು (ಬಸವೇಶ್ವ. ೩-೭೭). [ವಿದಿ₁ + — ಪ₂]

**ವಿದಿಲ್** (ಕ್ರಿ). (?) : ಆ ಮದಕಳಕ್ರೂರಶೂರಸೌರಭೇಯಂಗಳ್ . . . ಭೂತಳಮಂ ಕೊಳಗಿಂ ಪರಡುತ್ತುಮನುವಾಯುಗೆ ವಿದಿಲ್ದು ಕೆಯ್ಯಿಕ್ಕುವ ಸೊಕ್ಕಾನೆಗಳಂತೆ ತಲೆಯಿಕ್ಕಿ ತೊಲಗದ ಮನದ ಕನಲಿಕೆಯಿಂ ಕಾದಿ (ಅರ್ಜನೀ. ೪-೦೨೩ ಪ). [ ? ]

**ವಿದಿಸು** (ಕ್ರಿ). ಧಾನ್ಯವನ್ನು ಒನಕೆಯಿಂದ ಕುಟ್ಟಿಸು : ಎದ್ದು ಮುನ್ನಿನ ದಿವಸದಲಿ ಬತ್ತಿದ್ದ ಬೀಜವನಾಯ್ದುದಕದಿಂದದ್ದಿ ತೊಳೆತಂದಾಗ ಹುರಿಯಿಸಿ ವಿದಿಸಿ ಬೋನವನು ಇದ್ದ ಪೆರಿಯಲಿ ಮಾಡಿ ಗಡಣಿಸಿ (ಬಸವ. ೨೮-೪೪). [ವಿದಿ₁ + — ಇಸು₂]

**ವಿದಿಹ** 'ವಿದಿಪ' ನೋ.

**ವಿದು, ಮಿತು, ಮೆತು, ಮೆದು** (ಗು). ೧. ಮೃದುವಾದ; ಮೆತ್ತಗಿರುವ: "ವಿದು (ಮೆದು, ಮೆಲ್), ಮೃದು=ಮೆತ್ತನೆ" (ಕರ್ಣ.ಕೋ. ೩೫). ೨. ನಿಧಾನ ಸ್ವಭಾವವುಳ್ಳ. ೩. ಹಿತವಾದ; ಕೋಮಲವಾದ. (ನಾ). ೪. ಮೃದುವಾದುದು ; ಮೆತ್ತಗಿರುವುದು : ಹೊಳೆವ ವಿದುವಹ ಹಂಸತೂಲದ ಮಲಗುತಿಹ ಸತಿಗೀ ವಿಧಿಯೆ (ಪಳಿತ. ೩-೨); ವಿದು ನಸುಗೆಂಪು ದಟ್ಟಮದು ಶೋಭಿಪ ಪಾದತಳಂಗಳಾ ಸುದತಿಗೆ ತೋರ್ದೊಡಾಕೆ ಸೊಬಗಂ ಪತಿಗೊಂದಿಪಳ್ (ಹಾಕಾವ್ಯ. ೦-೦೩-೩೦); ಹತ್ತಿಯು ಉಣ್ಣೆಯು ಹಾಗೆ ವಿದುವಿರುತ್ತದೆ (ಮುಂಬಯಿ. ೪-೨೬). ೫. ಹಿತ ; ಕೋಮಲ : ವಿದುವಾಗಿ ಹದಗೊಂಡು ಹರಿವುದೀ ಹಾಡು (ಪಂಪಮು. ೩-೨). **ಮಿತು** : ೪. 'ಮಿತುವಾಸಿಕೆ' ಪರಾ. **ಮೆತು** : ೨. 'ಮೆತುಮನುಷ್ಯ' ಪರಾ. **ಮೆದು** : ೨. ಏನೋ ಮುಗಿದಿದೆ ಏನೋ ಬರಲಿದೆ, ರಾಗವಲ್ಲಿ ಮೆದು ಹುಸಿಗಾಲ (ಅರಳು. ೨೬೩-೨). ೫. ಆಕೆ "ಮಗುವಿನ ಮೇಲೆ ಇಷ್ಟೊಂದು ಸಿಟ್ಟೇಕೆ? " ಎಂದು ಮೆದುವಾಗಿ ಪತಿಯನ್ನು ಪ್ರಶ್ನಿಸಿದಳು (ಹಾಹುತ. ೨೭). [<ಸಂ. ಮೃದು./ತಮಿ. ಮೆತು; ತುಳು. ಮೆದು; ತೆಲು. ಮೆತಕ, ಮೆತುಕ, ಮೆತ್ತ; ನಾಯ್ಕಿ. ಮೆತ್ತ]

**ವಿದುಗ, ಮೆದುಗ** (ನಾ). ಮೃದುಸ್ವಭಾವವನ್ನು ಹೊಂದಿರುವವನು ; ನಿಧಾನಸ್ಥ :"ನರಃ . . . ನರ್ತಾ, ಈ ೪ ವಿದುಗಂ" (ಕಾಶಕ. ೦೪೨). **ಮೆದುಗ**: ನಿನ್ನಂತಹ ಹುಡುಗಿಯು ಸ್ವಾತಂತ್ರ್ಯವನ್ನು ಅಂತಹ ಮೆದುಗನು ಹೇಗೆ ಸುಲಭವಾಗಿ ವಶಪಡಿಸಿಕೊಂಡನೆಂಬುದೇ ಆಶ್ಚರ್ಯದ ಸಂಗತಿ (ಅರಾರ. ೨೨೦). [ವಿದು + —ಗ₂]

**ವಿದುಡಿಸು** (ಕ್ರಿ). ಚೆನ್ನಾಗಿ ಕಲಸು, —ಮಿಶ್ರಮಾಡು : ತುಪ್ಪದೊಳಗೆ ವಿದುಡಿಸಿದ ಹುರಿಯೆಳ್ಳು ಹುರಿದ ಹಾಲಿನ ಮದ್ದಿ ಸುದುರೆ ಹಪ್ಪಳದ ಹುಡಿ ಬಡಗಸುಂಡಗೆ ಮುಗುಳ್ವವದ ಸೊಜ್ಜಿಗೆ ಹುರಿದ ತೆಂಗಾಯ ಕುಸುರೆಯಂ ಪುದಿದಿಕ್ಕಿ (ಸೂಪಶಾ. ೩-೨೭). [ವಿದುಡು₁ + —ಇಸು₃]

**ವಿದುಡು₁** (ಕ್ರಿ). ಚೆನ್ನಾಗಿ ಕಲಸು ; ನಾದು ; ಮಿದ್ದು : ಹದನಾಗಿ ಕಾಯ್ದ ಹಾಲಿನ ಗಟ್ಟಿ ಕೆನೆದೆಗೆವುತದನೊಂದು . . . ತಳಿಗೆಯೊಳಗೆ ಹರಹಿ ಕೊಂಡರ್ಧಮಂ ವಿದುಡಿ ಕಜ್ಜಾಯ ಮಾಡುವುದು (ಸೂಪಶಾ. ೦-೩೯); ಅದು ಬೇಯದುದುಮರಿದೊಡೆ ಮತ್ತೊಮ್ಮೆ ಚೆನ್ನಾಗಿ ವಿದುಡಿ ಗೋಳಕಗಳಂ ಮಾಡಿ ತುಪ್ಪದೊಳು ಸುಡಲದು ತಾನೆ ನಕ್ಷತ್ರಫೇನ (ಸೂಪಶಾ. ೦-೬೪).

'ಮಿದ್ದು' ಪರಾ. [<ವಿದಿ₁]

**ವಿದುಡು₂** 'ವಿದುಳ್' ನೋ.

**ವಿದುದನಿ** (ನಾ). ಮೃದುವಾದ ಧ್ವನಿ : ಕೋಮಲಸ್ವರ : "ಸ್ವಲ್ಪ ಹೊರಗೆ ಬರತೀರಾ?" ಎಂದು ವಿದುದನಿಯಿಂದ ಅಂದಳು (ಗಂಗಾಕಾ. ೯). [ವಿದು + ದನಿ₁]

**ವಿದುನಗೆ** (ನಾ). ಮೃದುವಾದ ನಗೆ ; ಮಂದಹಾಸ : ಚೆಲುವೆಯ ಮೊಗದೊಳು ವಿದುನಗೆ ಮೊಳೆವಂದು ದೆಸೆದೆಸೆ ಬೆಳಗಿತೋರಂತೆ (ಇಂದಾಚ. ೦೬೯-೩೦). [ವಿದು + ನಗೆ]

**ವಿದುನುಡಿ** (ನಾ). ಇಂಪಾದ ಮಾತು ; ಮೃದುವಚನ : ಮಲ್ಲಿ ಮಿದು ನುಡಿಯಿಂದೆಂದಳು (ಪಪಾ. ೨೩); ಅವರು ಜೀವಂತರಾಗಿರುವರೆಂಬುದನ್ನು ಕೇಳಿಯೇ ನನಗೆ ಪರಮಾನಂದವಾಗಿ ಹೋಗಿರುವುದು ಎಂದು ವಿದುನುಡಿಗಳನ್ನಾಡಿದಳು (ಚಿನ್ನಪೇ. ೦೬೪). [ವಿದು + ನುಡಿ₂]

**ವಿದುವು** (ನಾ). ಮೃದುವಾಗಿರುವುದು : ವದನಸುಕಲಾಪೂರ್ಣಚಂದ್ರಯಸೂಪ ಕರಣನಿಂದುದಿತಾಮೃತಂ ತೆಕ್ಕನುಜಿ ತೀವುತುಭಯಪಾರ್ಶ್ವದೊಳಿಳಿಯೆ ತತ್ಪಸಾದವ ಸವಿಯಲೇವು ಶ್ರೀಭೂದೇವಿಯರ್ಕಳೊಲ್ದು ವಿದುವಾದ ಪಚ್ಚೆರೆ [ ಪೊಚ್ಚಿರೆ ] ಗಳಾಂತಂತೆ ಕಣ್ಗೆ ಚೆಲ್ವೊದವಿಸಿದುವು . . . ಕರ್ಣದ್ವಯಂ (ಹಂಪವಿ. ೯-೪೩). [ವಿದು + — ವು]

**ವಿದುಬೆಲ್ಲ** (ನಾ). ಮೃದುವಾಗಿರುವ ಬೆಲ್ಲ : ಜಗವೆಲ್ಲವು ವಿದುಬೆಲ್ಲವು ಅಗೊ ಮಲ್ಲಿಗೆಮೊಗ್ಗೆ (ಪಂಪಮು. ೭-೦೪). [ ವಿದು + ಬೆಲ್ಲ ]

**ವಿದುಲು** 'ವಿದುಳ್' ನೋ.

**ವಿದುಳ್, ವಿದುಡು₂, ಮಿದುಲು, ಮಿದುಳು, ಮೆದಡು, ಮೆದುಳು** (ನಾ). ೧. ಮನುಷ್ಯನ ಮತ್ತು ಇತರ ಕಶೇರುಕಪ್ರಾಣಿಗಳ ತಲೆಬುರುಡೆಯೊಳಗೆ ಸುತ್ತುಸುತ್ತಾಗಿ ಬಳಸಿಕೊಂಡು ಮುದ್ದೆಯಂತಿರುವ, ಬುದ್ಧಿಶಕ್ತಿಗೆ ಆಧಾರವಾಗಿರುವ ಒಂದು ಅವಯವ ; ಮಸ್ತಿಷ್ಕ:"ಮಸ್ತಿಷ್ಕವೆಂಬುದು ತಲೆಯ ವಿದುಳ್" (ಹಲಾಯು. ೦೦೪-೦೩); ವಿದುಳ್ಗಣ್ಣೆ ಪುಷ್ಪಕೃತಶೇಖರದಂತಿರೆ ಕೊಂಡುಪೋದರಚ್ಚರಸಿಯರಣ್ಣೆ ಸತ್ತ ಭಟರಂ ಕೊನೆವಿಸಾಸೆಯ ಚೆನ್ನ ಗಂಡರಂ (ಗದಾಯು. ೪-೨೨) ; ಬೀಸಿ ಕರಮೆತ್ತಿ ಪೊಯ್ದೊಡೆ ಸೂಸಿ ವಿದುಳ್ ಪೊಟ್ಟನೊಡೆಯೆ ತಲೆ (ಜಿಂಹಂ. ೭-೩೭) ; ವಿದುಳ್ಗಣವಸೆ ಕರುಳ್ಗಳಿಂ ಕಟ್ಟುಗ್ರಮಾದ ರಣರಂಗ ದೊಳ್ನಾಲಿಕೆಮುನಿ ರಾಮನಂ ಕಂಡನು (ಜೈಮಿನಿ. ೨೦-೪೬). ೨. ಮೇದಸ್ಸು ; ಕೊಬ್ಬು ; ನೆಣ : ಊದುಳ್(ಡು, ವಿದುಳ್ಳು) — ಮೇದಸಃ = ಮೆದುಳು, ಕೊಬ್ಬು " (ಕರ್ಣ.ಕೋ. ೩೫) 'ಕೊಬ್ಬಿದುಳ್' ಪರಾ. **ವಿದುಡು₂** : ೧. ಸಿಂಗನೆಣಿಗಿ ವಿದುಡುಂಡು ಕಲಕೊಕ್ಕ ಮುತ್ತಾನೆಯ ಅಣಿಮುತ್ತುಗಳಂ . . . ತಿಣಿದೊಟ್ಟ (ರಾಮಾಶ್ವ. ೭೩-೦೩) ; ತಲೆಯೊಳಗಿನ ವಿದುಡು ಶುದ್ಧವಾಗಿದ್ದರೆ, ಯಾವತ್ತು ಮನೋವ್ಯಾಪಾರಗಳು ಪ್ರತಿಬಂಧವಿಲ್ಲದೆ ಸಾಗುವುವು (ಮುಂಬಯಿ. ೪-೨೪). **ವಿದುಲು** : ೧. ವಿದುಲಡಗು ತೊರಳೆ ನೆಣ ವಸೆ ನೆತ್ತರ್ಗೊಂಡ ಕಾಳಿಜಗಳಂ ಜವನುಂಡೊಗಡಿಸಿದಿಳಿಯ ಪೋಲ್ತುದಾರಣದ ಕಳಂ (ಕಳಪ್ಪ. ೨-೪೬). **ವಿದುಳು** : ೧. ರಣದೊಳಹಿತರ ಶಿರದ ವಿದುಳೌತಣವು ಶಸ್ತ್ರಕೆ (ಕುಬ್ಜಾಶ. ೦೪-೪೦) ; ಖಾನಖಾನರ ಕಡಿದು ತಲೆಯ ವಿದುಳುಗಳ ಬಿತಗಾಗ ರಣಭೂತಗಳಿಗೆ ದಂಡೆಗಳನು ಮುಡಿಸಿದರು (ಕಂಪವಿ. ೦೬-೦೩) ; ಕೊಂಚ ಭೀತಿಯ ಎಳೆಯೂ ನನ್ನ ವಿದುಳಿನಾಳದಲ್ಲಿ ಸುಳಿದಂತಾಯಿತು (ಮಗವಾಂ. ೩೬). **ಮೆದಡು**: ೧. ಮೆದಡು ತಲೆಯಲ್ಲಿರುತ್ತದೆ (ಅವಂಶ. ೦೨). ೨. ''ಮೇದಸ್ — ಹೃದಯದಲ್ಲಿಯೂ ಎಲುಬುಗಳಲ್ಲಿಯೂ ಇರುವ ನೆಣ. ಇದನ್ನು ಮೆದಡುಯೆನ್ನುವರು'' (ಸಿದ್ಧಾಂತ. ೦೮೭). ೩. ಕಂಠ ; ಕುತ್ತಿಗೆ ; ಕತ್ತು : ತುತುಗ ನಾಯ್ ಕೊರಳಲ್ಲಿಪೊಡೆದ ಗಡಿಗೆಯ ಕಂಠ

ಬಿಡದಿರುವೊಲಾ ದ್ವಿಜನ ಮೆದುಳು ಕುಜುಹಿರಲು ಕಡೆಗೆ ತೆಗೆಯಲ್ ಬಾರದೊಡೆ (ಗುರುಚಾ. ೧೫-೩೩). **ಮೆದುಳು :** ೧. "ಮಸ್ತಿಷ್ಕಂ. ಗೋರ್ದಂ — ೨ ಎಲುವುಗಳ ಗೂಡಿನಲ್ಲಿರುವ ಮೆದುಳ ಹೆಸರುಗಳು" (ಸಿದ್ಧಾಂತಿ. ೧೬೬) ; ಅವರ ಮೆದುಳನ್ನು ಏಮೆ ಮಾಡಬಹುದೆಂದು ನನ್ನ ಅಭಿಪ್ರಾಯ (ಜಾಯ್ಕ. ೬೩) ; ನಿಮ್ಮ ಮೆದುಳಿಗೆ ಬಹಳ ಗಂಭೀರ ಸ್ವರೂಪವಾದ ತೊಂದರೆಯಾಗಿದೆ (ಅಶಪಾ. ೦).

[ ದೇ.॥ ತಮಿ. ಮಿತಟು, ಮಿತಟ್ : ತೆಲು. ಮೆದಡು : ಕೋಲಾ. ನಾಯ್ಕಿ. ಮಿತಿಕ್ ; ಕೋತ. ಮೆವ್ಲ್ : ಗೊಂಡಿ. ಮದ್ದುರ್, ಮೆದುರ್ ; ಕುರುಖ್. ಮೆದ್ಡೋ ; ಮಲ್ತೊ. ಮೆದೊ ]

**ಮಿದುಳು** ' ಮಿದುಳ್ ' ನೋ.

**ಮಿದುಳ್ಗೆಸಟಿ** (ನಾ). ಕೆಸರಿನಂತೆ ಅಜಿಗಿಜಿಯಾದ ಮೆದುಳು : ಕುಲಿಶವಿಘಾತದೊಂಬ ವೃಢಮುಷ್ಟಿವಿಘಾತದಿಸುಣ್ಮೆ ಪಾಯ್ದನಂ ತಲೆಯ ಮಿದುಳ್ಗೆಸಟಿ. . . ಮುಸಲಾಯುಧನಿಕ್ಕಿದನಾ ಪ್ರಳಂಬನಂ (ಜಗಿ. ೯-೫೬).

[ಮಿದುಳ್ + ಕೆಸಟಿ]

**ಮಿದ್ದಿಗೆ** ' ಮುದ್ದಿಗೆ$_1$ ' ನೋ.

**ಮಿದ್ದು** (ಕ್ರಿ). ೧. ಚೆನ್ನಾಗಿ ಕಲಸು ; ನಾದು ; ಮಿದಿ : ಅರಲು ತುಳಿಯುತ ಮಿದ್ದಿ ಘಟಗೊಳಿಪ ಕುಂಬಾರ (ಶಾವತೀ. ೭-೦೨೦). ೨. ತಿಕ್ಕು ; ಮರ್ದಿಸು : ಮಸ್ತಕದ ನರಮಂಡಲವನ್ನೆಲ್ಲ . . . ಮಿದ್ದಿ, ನಾದಿ, ಗಿರಾಕಿ ಗೋಣು ಚೆಲ್ಲಿಪ್ಪದೆಂದು ಖಾತ್ರಿಯಾದಾಗ ಕೈತೊಳೆದುಕೊಳ್ಳುತ್ತಾನೆ (ದೇಶವ್ಯ. ೭೨). ೩. ಹದಮಾಡು ; ಹದಗೊಳಿಸು : ಹಗೆಯ ತಿದ್ದಿ ಜನಮನವ ಮಿದ್ದಿ ನವಸೃಷ್ಟಿಗೈದ ಬಾಪು (ಅಮಶಂ. ೫೭-೬). 'ಮಿದುಡು$_1$' ಪರಾ. [ <ಮಿದಿ$_1$ ]

**ಮಿದ್ದೆ** (ನಾ). ಮಹಡಿ ; ಮಾಳಿಗೆ : ಪ್ರಘುಶಟ್ಟಿಯ ಮಿದ್ದೆಯೊಳು ದ್ರೋಣಕುಸುಮದ ಮಳೆಯಂ ಕಜಿಸಿದಂ (ಗುರುಚಾ. ೦೩-೮೮).

[ ದೇ.॥ ತಮಿ. ಮೆತ್ತೈ ; ಮಲ. ಮೆತ್ತ : ತುಳು. ಮೆತ್ತಿಗೆ; ತೆಲು. ಮಿದ್ದೆ, ಮಿದ್ದಿಯ; ಕೋತ. ಮೆದ್ : ತೊದ. ಮಿದ್ಯ್]

**ಮಿನ್** (ಸಪೂರೂ). 'ಮಿಂಚು' ಎಂಬ ನಾಮಪದಕ್ಕೆ ಸಮಾಸಗಳಲ್ಲಿ ಬರುವ ಆದೇಶರೂಪ : 'ಮಿಂಜೊಡರ್' ಪರಾ. [ < ಮಿಂಚು$_2$ ]

**ಮಿನಾರ್** 'ಮಿನಾರು' ನೋ.

**ಮಿನಾರ** 'ಮಿನಾರು' ನೋ.

**ಮಿನಾರು, ಮನಾರ್, ಮಿನಾರ್, ಮಿನಾರ, ಮೀನಾರ್** (ನಾ). ೧. ಪ್ರಾರ್ಥನೆಗೆ ಜನರನ್ನು ಎಚ್ಚರಿಸಲು ಮುಸ್ಲಿಂ ಘೋಷಕನು ನಿಲ್ಲುವುದಕ್ಕಾಗಿ ಮಸೀದಿಗೆ ಸೇರಿದಂತೆ ಕಟ್ಟಿರುವ ಎತ್ತರವಾದ ಸ್ತಂಭಗೋಪುರ ; ಬುರುಜು ; ಗುಮ್ಮಟ : ಅವುಗಳಲ್ಲಿ ಯಾವ ವಿಧವಾದ ಪ್ರತಿಮಾಚಿತ್ರಗಳಾಗಲಿ ವಿಗ್ರಹಗಳಾಗಲಿ ಇಲ್ಲದೆ . . . ಮಿನಾರುಗಳೂ (ಗುಮಟಗಳೂ) ಲಿಪಿರೇಖಾಚಿತ್ರಗಳೂ ಕಂಡುಬರುವುದು (ಇಸ್ಲಾಂಸಂ. ೨೮೭) ; ಸ್ತಂಭಗಳಂತೆ ಕಟ್ಟಿದ ಮಿನಾರುಗಳು ಮಹಮದೀಯ ಕಟ್ಟಡಗಳ ವಿಶಿಷ್ಟಮಾದರಿಗಳಾಗಿರುತ್ತವೆ (ಶಾರದ. ೪೦೦). ೨. ಸಮುದ್ರದಲ್ಲಿ ಹಡಗುಗಳಿಗೆ ದೀಪದ ಮೂಲಕ ದಾರಿ ತೋರಿಸುವುದಕ್ಕಾಗಿ ತೀರದಲ್ಲಿ ಕಟ್ಟಿರುವ ಗೋಪುರಾಕಾರದ ಕಟ್ಟಡ : "(ಕಡಲ) ದೀಪದ ಮನೆ ; (ಎತ್ತರವಾದ) ಸ್ತಂಭಗೋಪುರ : ಮಿನಾರು" (Minar. ೩೦೪೩). **ಮನಾರ್ :** ೧. ಮಿನಾರ್ ಅಥವಾ ಮನಾರ್ ಎಂದರೆ ಜ್ಯೋತಿರ್ಮಂದಿರ ಅಥವಾ ಅಗ್ನಿಮಂದಿರ ಎಂದರ್ಥ (ಇಸ್ಲಾಂಸಂ. ೦೩೭). **ಮಿನಾರ್ :** ೧. ಮಿನಾರ್ : ಕಟ್ಟಡದ ಎರಡುಕಡೆಗಳಲ್ಲಿಯೂ ದುಂಡಗೋ ಅಥವಾ ಅಷ್ಟಕೋಣಾಕಾರವಾಗಿಯೋ ಎತ್ತರವಾಗಿ ಹೋಗಿರುವ ಬುರುಜು (ವ್ಯಾಸ್ತು. ೦೫೭). **ಮಿನಾರ :** ೧. ರಣರಂಗದಲ್ಲಿ ಮಡಿದ ಸಿಪಾಯಿಯರ ರುಂಡಗಳನ್ನೆಲ್ಲ ಕೊಯ್ದು ತಂದು ಒಂದು ಮಿನಾರವನ್ನು ಕಟ್ಟಿದರಂತೆ ! (ಹಿಂದುಇ. ೦೭೦). **ಮೀನಾರ್ :** ೧. ದಿಲ್ಲಿಯಲ್ಲಿ ಕುತುಬ್‌ಮೀನಾರ್ ಹತ್ತಿರ ಇರುವ ಮಸೀದಿಯನ್ನು ಮುಸ್ಲಿಮರು ಜೈನದೇವಾಲಯಗಳನ್ನು ಕೆಡವಿ ಅವುಗಳ ಕಂಬಗಳನ್ನು ಉಪಯೋಗಿಸಿ ಕಟ್ಟಿದ್ದೆಂದು ಹೇಳುತ್ತಾರೆ (ವ್ಯಾಸ್ತು. ೦೫೯);

[ ← ಅರ. ಮನಾರ್, ಮನಾರಹ್ : ಪಾರ. ಮನಾರ್, ಮನಾರ, ಮನಾರತ್: ಹಿಂ. ಮನಾರ್, ಮನಾರಾ, ಮಿನಾರಾ, ಮೀನಾರ್, ಮೀನಾರಾ]

**ಮಿನಾಹಿ** (ನಾ). ೧. ಬರಬೇಕಾದ ಹಣವನ್ನು ಯಾವುದಾದರೂ ಲೆಕ್ಕಕ್ಕೆ ಹಿಡಿದುಕೊಳ್ಳುವಿಕೆ, —ಮುರಿದುಕೊಳ್ಳುವಿಕೆ ; ಉತ್ತಾರ : ವೆಂಕಪ್ಪಯ್ಯನ ಕೈಯಲ್ಲಿ ೬೦ಸಾವಿರವರಹವನ್ನು ದಂಡ ತೆಗೆದುಕೊಂಡು ಇವನಿಗೆ ಇದ್ದ ದರಮಾಹೆ ಸಾವಿರರೂಪಾಯಿಯನ್ನು ಮಿನಾಹಿ ಮಾಡಿಸಿ . . . ಆ ಅಧಿಕಾರವನ್ನು ಮೊಖೂಫ್ ಮಾಡಿಸಿದರು (ಮಹಾವಂ. I,೨೨೯). ೨. ಕೆಲಸದಲ್ಲಿ ಉಂಟಾದ ಕಡಿತ : ನಿರುದ್ಯೋಗ : ಅಂತ್ಯಕಾಲದಲ್ಲಿ ಸನ್ಯಾಸವನ್ನು ತಕ್ಕೊಂಡುಬಿಟ್ಟರೆ ಯಮಸದನಕ್ಕೆ ಯಾರೊಬ್ಬನೂ ಹೋಗಲಾರನು. ಹಾಗಾದರೆ ಯಮನ ಉದ್ಯೋಗ ಮಿನಾಹಿಯಲ್ಲಿ ಬರುವುದಲ್ಲದೆ ಲೋಕದಲ್ಲಿ ಪಾಪಿಗೊಬ್ಬಗಾದರೂ ಪಾಪಭಯ ಲೇಶವಾದರೂ ಇರದು (ವಾಗ್ಭೂಷಿ. ೨೮). [← ಅರ. ಮಿನ್‌ಹಾ : ಹಿಂ. ಮಿನ್‌ಹಾಈ./ ತುಳು. ಮಿನಾಯಿ, ಮಿನಾಹಿ]

**ಮಿನಿಕೆ, ಮಿಣಕೆ, ಮಿಣಿಕೆ, ಮೀನಿಕೆ** (ನಾ). (ಸೌತೆಯ ಜಾತಿಗೆ ಸೇರಿದ) ಒಂದು ಬಗೆಯ ಬಳ್ಳಿ ಮತ್ತು ಅದರ ಹಣ್ಣು : "ಕರ್ಕಟಿಕೆಯೆನೆ ಮಿನಿಕೆ" (ಮಂಗರಾ. ೯೦-೩೭); ಎಕ್ಕ ಮಿನಿಕೆ ಮೊದಲಾಗಿ ಅವು ಪಕ್ಷಕ್ಕೆ ಬಂದಡೆ ವಿಷ ಬಿಡುವುದೆ (ಸವಾಪ. ೫-೦೭). **ಮಿಣಕೆ :** "ಕಾಳಿಂಗದ . . . ಮಿನಕೆ, ಮಿಣಕೆಹಣ್ಣು . . . ಷಡ್‌ಭುಜಸೌತೆ" (ಸಸ್ಯಪಿ. ೯೨). **ಮಿಣಿಕೆ :** ಕೆಕ್ಕರಿಕೆ ಮಿಣಿಕೆ ಚಕ್ಕೋತ್ರ . . . ಮುಂತಾದ ಮಧುರಫಲಂಗಳ್ (ಸೌಗಂಧಿ. ೩೭-೯). **ಮೀನಿಕೆ :** "ವೃತ್ತಫಲಾ — ಬದನೆ. ಮೀನಿಕೆ, ನೆಲ್ಲಿಯ ಕಾಯ್" (ಓಷಧಿ. ೧೫೭). ' ಮೆಕ್ಕೆ$_3$' ಪರಾ. [ ? ]

**ಮಿನಿಕೆಬಳ್ಳಿ** (ನಾ). = ಮಿನಿಕೆ : 'ಕಾಡುಮಿನಿಕೆಬಳ್ಳಿ' ಪರಾ.

[ಮಿನಿಕೆ + ಬಳ್ಳಿ]

**ಮಿನಿಟು, ಮಿನೀಟು** (ನಾ). ೧. ಒಂದು ಗಂಟೆಯ ಅರುವತ್ತನೆಯ ಭಾಗ ; ಒಂದು ನಿಮಿಷ : ಇಬ್ಬರೂ ಇನ್ನೈದು ಮಿನಿಟಿನಲ್ಲಿ ಪತಿಪತ್ನಿಯರಾಗುವರು (ಅಸ್ನ. ೨೯೭) ; ರಾತ್ರಿ ಎಂಟು ಬಡಿದು ಮಿನಿಟಿನ ಮುಳ್ಳು ಇನ್ನೊಂದು ಸುತ್ತು ಬರುವಲ್ಲಾಯಿತು (ಸಠಸ. ೨೧). **ಮಿನೀಟು :** ೨. ಅತ್ಯಲ್ಪಕಾಲ : ನಾ ಒಂದು ಮಿನೀಟಿನ್ಯಾಗ ಸ್ವಚ್ಛ ಮಾಡ್ತೀನಿ (ಕ್ಷತ್ರ. ೩೭); ಒಂದು ಮಿನೀಟು! ಚಹ ತಗೊಂಡು ಹೋಗಬಹುದಲ್ಲ ? (ಏಲ್ಕ. ೩೦೩).

[← ಇಂ. Minute]

**ಮಿನಿಮಿನಿ** (ನಾ). ೧. ಕಾಂತಿ ; ಪ್ರಕಾಶ : 'ಮಿನಿಮಿನಿಸು' ಪರಾ. ೨. ಮಂದವಾದ ಪ್ರಕಾಶ ; ನಸುಹೊಳಪು : 'ಮಿನಿಮಿನಿಸು' ಪರಾ. ೩. (ಅಲಂ) ಅಸ್ಪಷ್ಟವಾದುದು; ಅವ್ಯಕ್ತವಾದುದು: ಎನಗೆಬಿಗರೆಂದು ಕೆಮ್ಮನೆ ಮಾನಮಂ ಮಸಿಮಾಡಿಕೊಳಲೊಡಂ ಮುನ್ನಿಣ್ಣ ಮಿನಿಮಿನಿಯೆನಿಪ್ಪ ಗುಣಮಾ ಮುನಿಯಿಂ ಪೆಜಪಿಂಗಿ ಪೋಪುದೊದಚ್ಚರಿಯೇ (ಉಶಾರ. ೩೮-೨೩೪). [ದೇ.॥ ತಮಿ. ಮಿನುಮಿನು = ಹೊಳೆ : ತುಳು. ಮಿಣಿಮಿನಿ, ಮಿಣಿಮಿಣಿ = ಹೊಳೆಯುವ]

**ಮಿನಿಮಿನಿಗಣ್** (ನಾ). ಹೆಚ್ಚು ಹೊಳಪಿಲ್ಲದ ಕಣ್ಣು; ಮಂಕಾಗಿರುವ ಕಣ್ಣು: ಮಿನಿಮಿನಿಗಣ್ ತಜಿಂಟದಲೆ ಜೋಲ್ದಿಹ ಮೈ . . . ಸೆರೆಗೊಂಡ ಕಾಲ್ಗಳಿಂ ಮನಕೆ ವಿರಕ್ತಿಯಂ ಪಡೆವ ಮುಪ್ಪಿನ ಪಾರ್ವನದೊರ್ಬನೊಪ್ಪಿದಂ (ಕುಮಾಸ್ರ. ೩-೮೦). [ಮಿನಿಮಿನಿ + ಕಣ್]

**ಮಿನಿಮಿನಿಸು** (ಕ್ರಿ). ೧. ಹೊಳೆ ; ಪ್ರಕಾಶಿಸು ; ಕಾಂತಿಯನ್ನು ಬೀರು : ತೊಳತೊಳಗಿ ಬೆಳಗಿ ಮಿನಿಮಿನಿ[**ಪಾಠಾಂ.** ಮಿನುಮಿಣಿ]ಸುತ್ತುಂ ಪಲವುಂ ದೀವಿಗೆಗಳ್ ಕಳ್ತಲೆ ಪೊತ್ತಂತೊಪ್ಪುತಿರ್ದುವಾ ಮನೆಮನೆಯೊಳ್ (ಗಿರಿ. ೪-೮೦). ೨. ಮಂದವಾಗಿ ಪ್ರಕಾಶಿಸು ; ನಸುಬೆಳಕು ಚೆಲ್ಲು : ಎನಿತು ವನಿತೆಯರಿರ್ದಡಂ ತಾರಗೆಗಳಂತೆ ಮಿನಿಮಿನಿಸುತಿರ್ಪರಾ ಚಂದ್ರವದನೆಯ ಮುಂತೆ (ಇಶಶ. ವೀ. ೨೯-೨). [ಮಿನಿಮಿನಿ + —ಇಸು$_3$]

**ಮಿನೀಟು** 'ಮಿನಿಟು' ನೋ.

Δ**ಮಿನುಂಗು** 'ಮಿನುಕು$_1$' ನೋ.

**ಮಿನುಕು$_1$, ಮಿಣುಕು$_1$, ಮಿನುಂಗು, ಮಿನುಗು$_1$** (ಕ್ರಿ). ಮಿನುಪ (ವರ್ತಕೃ). ೧. ಹೊಳೆ ; ಬೆಳಗು ; ಪ್ರಕಾಶಿಸು : "ಮಿನುಕು — ಅಂತರ್ಗತಸ್ವನೇ (ಒಸುಗುಟ್ಟು), ಕಾಂತೌ ಚ (ಪ್ರಕಾಶಿಸು)" (ಶಮಣ). ೨. ಕ್ಷಣ ಬಿಟ್ಟು ಕ್ಷಣ ಹೊಳೆ : ಎಸೆದುವು ಮಣಿಗಳ್ ಬೆಳ್ದಿಂಗಳ ಪೊರೆ ಪೊರೆಯೊಳ್ ಪಳ್ದೆಸದೆ ಮಿನುಕುತಿರ್ಪ ತಾರಾಳಿಯವೊಲ್ (ಅಸಂಪು. ೩-೭೩); ತಿಳುಪುಬೆಳಕನು ಕ್ವಚಿ ಮಿನುಕುವ ಮಿಂಚುಹುಳುವೆಂದೆಣಿಸಲೋ ! (ತಂಗೀತ. ೦೩-೩). ೩. ಗೋಚರಿಸು; ತೋರು ; ಸ್ಫುರಿಸು : ಭೂತಳಾಧೀಶ್ವರನ ಮನದೊಳಗೀತ ಕಾರಣಪುರುಷನಹ ಸಂಕೇತ ಮಿನುಕಲು ಕೊಟ್ಟನಂದು ಮಹಾಪ್ರಧಾನಿಕೆಯ (ಕೃಶಂಗಿ. ೯-೨೨). **ಮಿಣುಕು$_1$:** ೨. ಚಿಕ್ಕ ಮಿಣುಕಲಿ ಬೆಳ್ಳಿ ತಿಣುಕಲಿ ಒಂದೆ ಎಂಬೆಯಾ ಎರಡನೂ ? (ಅರಳು. ೦೨೯-೦೦). ೪. ಮಂಕಾಗಿ ಬೆಳಕು ಬೀರು ; ಮಂದವಾಗಿ ಪ್ರಕಾಶಿಸು: ನೂರಾರು ದೀಪಗಳು, ಮಿಣುಕುತಿಹ ಸೊಡರುಗಳು . . . ತೆಕ್ಕನೆಯೆ ಹುಟ್ಟಿ ಬರೆ (ಕಕ್ಷಿಣ. ೦೫-೭೭); ನಮ್ಮ ಸೊಡರನುರಿಸುವಿರೇಂ ಮಿಣುಕಲಿಂತು ಬರಿದೆ (ಗಿರಿವಿಂ. ೯೩-೨). Δ**ಮಿನುಂಗು :** ೫. ಶೋಭಿಸು ; ಒಪ್ಪು : ನಸುನಗೆ ಮಿನುಂಗೆ ಮೊಗದೊಳ್ ಪಸರಿಸೆ ನಿಜದಂತಕಾಂತಿ ನೃಪವರಸಭೆಯೊಳ್ (ಪಶಕು. ೨-೯೦). **P** ಇದು ಛಂದಸ್ಸಿಗಾಗಿ ಮಾಡಿಕೊಂಡಿರುವ ರೂಪ. **ಮಿನುಗು$_1$ :** ೧. ಮರಕತಕಾಂತಿಯಂ ತಳೆದು ನುಣ್ಣಗಿಗಳ್ಮಿನುಗಲ್ಕೆ ವಿದ್ರುಮಾಂಕುರದವೊಲೊಪ್ಪೆ ಚಂಚುಪುಟ ಮೊಯ್ಯನೆ ಬಂದುದು . . . ಶುಕಂ (ಕಾದಂಬ. ೬೦); ಘನವಿಕ್ರಮ ಶಿಖಿಯುತನೂತನವಿಚಲದ್ಘಾವಲೀಖಿಯೊಳ್ಪಂಬಿನೆಗಂ ಜನನುತನುದ್ಭಟ ದೇವನ ಮಿನುಪ ಕರಾಬ್ಜಸ್ಥಿತಾಸಿಲತೆ ಸೊಗಯಿಸುಗುಂ (ಉದ್ಯಟಿ. ೦-೬೭). ೨. ಕೌಲ್ಬರನು . . . ಅಲ್ಲಿಯ ವಿಜ್ಞಾನಜಗತ್ತಿನಲ್ಲಿ ನಕ್ಷತ್ರದಂತೆ ಮಿನುಗುತ್ತಿದ್ದನು (ಸಸ್ಯಕ. ೪೧) ; ಮಿನುಗಲೆ ಮಿನುಗಲೆ ಎಲೆ ನಕ್ಷತ್ರ (ರಾಮಾಶಿ. ೦೦೩). ೩. ಇವೆಲ್ಲವುಗಳು . . . ಹೊಸಅರ್ಥದಿಂದ ತುಂಬಿಕೊಂಡು ಮಿನುಗತೊಡಗಿದವು (ಗಂಪಶದು. ೦೨೩). ೫. ಮಿನುಪೀಕೃತಿಗಾವುದು ಪೊದಲ್ (ಉದ್ಯಟಿ. ೦-೩೬); ಸಲೆ ಮಿನುಪ ಕೊರಲ ಕರ್ಪತ್ತಿಗೆವಮ್ದುರ್ಗಜಿ³ವಪ್ಪೋಲ್ಮಾಡಿ ತುಟಿಯೊಳಾಂತು (ಶಬ್ದರಾ. ೩-೩೧): ಬಾಲಹಿಮಕರಕಿರಣನೊಡನೆ ಸಮೇಳವಹ ನಗೆ ಮಿನುಗೆ (ಕುವ್ಯಾಅ. ೩-೨೪).

**ಮಿನುಮಿನುಗು, ಮಿಣುಮಿಣುಕು** (ದ್ವಿರುಕ್ತಿ) : ಕತ್ತಲೆಯ ನಡುವೆ ಮಿನುಮಿನುಪ [**ಪಾಠಾಂ.** ಮಿನಿಮಿನಿಪ] ಜ್ಯೋತಿಯ ತೆಱದಿ (ಐಕಾಂಶ. ಪ. ೨೮೦-೭); ಮಿನುಮಿನುಪ ಪೊಂಬರಿಪಾಣಗಳೊಳೆಯ್ದೆ ನೀಡಿದರ್ ಪರಿಪರಿಯ ಪರಿಕರವನು (ಕವಿಕ್ಕ. ೩-೫೯); ಇರುಳು ಕತ್ತಲೆಯಲ್ಲಿ ಮಿಣುಮಿಣುಕಿ ಮೆರೆವಲೆದ ಮಿಂಚುಹುಳು . . . ಕಣ್ಮುಟಾಕುತಿದೆ (ಕಕ್ಷಿಣ. ೯೭-೦).

[ದೇ.॥ ತಮಿ. ಮಿನುಙ್ಕು, ಮಿನುಕ್ಕು; ಮಲ. ಮಿನುಕ್ಕು; ಮಿನ್ನುಕ, ಮಿನ್ನಿಕ್ಕ; ತುಳು. ಮಿನುಕು, ಮಿಣುಕು, ಮಿಣ್ಕು, ಮೆಣಕು, ಮೆಣ್ಕು ; ತೆಲು. ಮಿನುಕು, ಮಿನ್ಕು, ಮಿಣುಕು]

**ಮಿನುಕು$_2$, ಮಿನುಗು$_2$, ಮೊನಗು** (ಕ್ರಿ). ೧. ತನ್ನಷ್ಟಕ್ಕೆ ತಾನು ತಗ್ಗಿದ ಧ್ವನಿಯಲ್ಲಿ ಮಾತನಾಡು ; ಗೊಣಗುಟ್ಟು : "ಮಿನುಕು — ಅಂತರ್ಗತಸ್ವನೇ (ಒಸುಗುಟ್ಟು), ಕಾಂತೌ ಚ (ಪ್ರಕಾಶಿಸು)" (ಶಮಣ); ತದಾಮ್ರವನದೊಳೊರ್ವಂ ಮೈಯೊಳೆಲ್ಲಂ ಕೆಸಱನೊಟ್ಟಿಕೊಂಡು ಬತ್ತಲೆ ಮರುಳಂತೆ ತನ್ನೊಳ್ ಮಿನುಕುತ್ತುಂ ಮೋನದೊಳಿರ್ಪಂ (ಧರ್ಮಾಮೃ. ೬-೨೬); ಪೆಣ್ ಕೊಯ್ಕಲ್ಲಿರ್ಪಂದು ಮಂತ್ರಮನ್ ಮಿನುಕುವನ್ ಅವನ್ ಮರುಳ್ವೈದ್ಯನ್ (ಅಕ್ಕಪ್ಪಾ. ೨೯-೪೬೦). **ಮಿನುಗು$_2$ :** ೨. ತಗ್ಗಿದ ಸ್ವರದಲ್ಲಿ ಮಂತ್ರವನ್ನು ಹೇಳು,— ಜಪಿಸು : ಮಿನುಗುವ ಮಟಿಗಳ ವಿಕಲಮಂತ್ರದ ಬಿನುಗುಗಳ ಕೈಯಾಹುತಿಗೆ ಕರೆವನಿಮಿಷರ ಪಲ್ಲಟದ ವಿಚಲಿತ ಸೂಕ್ತಿಮಯನಿನದ ತನಿಭಯದ ತರಳಾಕ್ಷಿಗಳ . . . ಗದ್ಗದ ಮುನಿಗಳಿದ್ದರು ಬಲಿದ ಬೆಱಗಿನಲಿ (ಕುವ್ಯಾಸ. ೦೦-೩೯). **ಮೊನಗು :** ೧. ಲೋ, ಬಸವ, ಅಷ್ಟು ನೀರು ತಾರೋ . . . ಎಂದು ಮೊನಗಿ ಮುಗಿಸಿದನು (ಚಳರಾ. ೦೬೭). [ದೇ.॥ ತಮಿ. ಮುಣಙ್ಕು; ಮಲ. ಮಿಣುಮಿಣುಕ್ಕ, ಮಿಣ್ಣುಕ; ತುಳು. ಮುಣ್ಕು; ತೆಲು. ಮಿನುಕು, ಮಿನ್ಕು, ಮುನುಕು, ಮುನ್ಕು]

**ಮಿನುಕು$_3$, ಮಿಣುಕು$_2$, ಮಿನುಗು$_3$** (ನಾ). ೧. ಹೊಳಪು ; ಕಾಂತಿ ; ಪ್ರಕಾಶ : ನೆನೆಯಿಸುತಿರ್ದುದು ತುಂತುರ್ವನಿ ಮುಸುಕಿದ ದುಗ್ಧವಾರ್ಧಿಯುಂ ತಾನೆನಸುಂ ತನಿವೆಳ್ದಿಂಗಳ್ ಮುಸುಱುವ ಮಿನುಕಿಂದೊಪ್ಪುವ ನಭೋಂಗಣಂ ಧೃತಭಗಣಂ (ಕುಸುಮಾ. ೦೦-೧೩). ೨. ತಾಳಿ ; ಮಾಂಗಲ್ಯ : ಕಟಿಸೂತ್ರಂ ಬ್ರಹ್ಮಸೂತ್ರಂ ಸರಿಗೆ ಮಿನುಕು ಕೊಪ್ಪುಂಗುರಂ ಕರ್ಣಪೂರಂ . . . ಕೇಯೂರಮೆಂಬನ್ನವಂ ಪ್ರಸ್ಫುಟರತ್ನೋಪಾಶ್ರಯಂ ರಂಜಿಸುವಿನಮಲರಿಂ ಕಾಂತೆಯರ್ ಮಾಡಿ ಕೊಟ್ಟರ್ (ಸೂಕ್ತಿಸು. ೦೦-೪೯). **ಮಿಣುಕು$_2$ :** ೩. ಮಂಕು; ಮಸುಕು : 'ಮಿಣುಕುದೀಪ', 'ಮಿಣುಕು ಬೆಳಕು' ಪರಾ. **ಮಿನುಗು$_3$ :** ೧. "ತೊಳಗು, ಬೆಳಗು, ಮಿನುಗು . . . ಮಸೆ — ಈ ೧೪ ಕಾಂತಿ " (ಕೇಶಿರಾ. ೩೩-೨೦೨); ಕಣ್ಣ ಮಿನುಗಿಂ ತೊಳಗು ಪುಂಗುಟದ ಗಾಡಿಯಿಂ . . . ಬಿಡುಗಣ್ಣರೆಚಿ³ಯಿಂ ವಿಶ್ವನಾಥಂ ಪ್ರಸನ್ನನಾದಂ (ಶಬ್ದರಾ. ೭-೩೩). ೨. 'ಅಯ್ದೆಮಿನುಗು' ಪರಾ. ೪. ಕ್ಷಣ ಬಿಟ್ಟು ಕ್ಷಣ ಹೊಳೆಯುವ ಹೊಳಪು : ಹಿಳುಕು ಕವಿದವು ಭಟನ ಕೈ ವೆಮ್ಯಗಳಲಿ ಮಿನುಗಿದವಿರುಳು ಮರನಲಿ ಹೊಳೆದು ಮುತ್ತಿದ ಮಿಂಚುಬುಳುವಿನ ಮಿನುಗಿನಂದದಲಿ (ಕುವ್ಯಾದ್ರೋ. ೩-೩೬) ; ನಳಿನಬಾಂಧವನ ಮುಂದೆಸೆಯೊಳು ಮಿಗೆ ಮಿಂಚುಬುಳುವಿನ ಮಿನುಗು ರಂಜಿಪುದೇ (ಮೋಹತ. ೦೩-೦೦) : ಒಂದು ನಕ್ಷತ್ರವೂ ಮಿನುಗು ತೋರದು (ಸುಗುಣ. ೩೯-೬).

**ಮಿಣುಕುಮಿಣುಕು** (ದ್ವಿರುಕ್ತಿ) : ಗೋಡೆಯ ಮೇಲೆ ಕಪ್ಪುಗಟ್ಟಿಕೊಂಡು ಮಿಣುಕುಮಿಣುಕಾಗಿ ಉರಿಯುತ್ತಿದ್ದ ದೀಪದಿಂದ ಸಾಕಷ್ಟು ಬೆಳಕಿರುತ್ತಿತ್ತು (ಮಾರ್ಗದ. ೧೯).

[< ಮಿನುಕು$_1$. / ತಮಿ. ಮಲ. ಮಿನುಕ್ಕಮ್; ತುಳು. ಮಿಣುಕು, ಮೆಣ್ಕು, ಮೆಣುಕು ; ತೆಲು. ಮಿನುಕು, ಮಿನ್ಕು, ಮಿಣುಕು]

**ಮಿನುಕುಗಲೆ** (ನಾ). ಕಣ್ಣಿಗೆ ಗೋಚರಿಸುವ ಗಾಯದ ಗುರುತು,— ಕಲೆ : ಮಿನುಕುಗಲೆ ಭೂಷಣಂ ಸುಭಟನಿಕಾಯದ ಕಾಯತತಿಗೆ (ಶಾಂತೀಶ್ವ. ೬-೩೯). [ಮಿನುಕು$_1$ + ಕಲೆ$_2$]

**ಮಿನುಗಿಸು, ಮಿಣುಕಿಸು** (ಕ್ರಿ). ೧. ಕಾಂತಿಯನ್ನು ಸೂಸು ; ಬೆಳಕನ್ನು ಚಿಮ್ಮಿಸು : ಅಳನು ಮಿಡುಕನು ಮಿನುಗಿಸನು ಕಣ್ಗಳನು (ಕೃಶಂಗಿ. ೯-೦೨). ೨. ಹೊಳೆಯುವಂತೆ ಮಾಡು ; ಥಳಥಳಿಸುವಂತೆ ಮಾಡು : ಸೂರ್ಯನ ಕಿರಣ ನೀರಿನ ಮೇಲೆ ಬಿದ್ದು ತೆರೆಗಳನ್ನು ಮಿನುಗಿಸುತ್ತಿದೆ (ರೂಢಿ). **ಮಿಣುಕಿಸು :** ೩. ಉದ್ದೀಪಿಸು ; ದೀಪ್ತಗೊಳಿಸು : ಆ ತೇಜಗಳ ತುಣುಕು ಎದೆಯ ಮಿಣುಕಿಸಲಿಲ್ಲ ಮುಗಿಲ ಮಲ್ಲಿಗೆಯಂತೆ ಅಲ್ಲೆ ಬೆಳಗಿ (ಬಿಶಾಕೆ. ೦-೦೭). [ಮಿನುಗು$_1$ (< ಮಿನುಕು$_1$) + —ಇಸು$_3$]

**ಮಿನುಗು$_1$** 'ಮಿನುಕು$_1$' ನೋ.

**ಮಿನುಗು$_2$** 'ಮಿನುಕು$_2$' ನೋ.

**ಮಿನುಗು₃** 'ಮಿನುಕು₃' ನೋ.

**ಮಿನುಗುಂಗುಡಿ** (ನಾ). ಮಂದವಾದ ಪ್ರಕಾಶವನ್ನು ಬೀರುತ್ತಿರುವ ದೀಪದ ಕುಡಿ, — ತುದಿ : ದೀವಿಗೆಯೆಡೆಯಲ್ಲಿ ನಿಂತು, ಅಭ್ಯಾಸಬಲದ ಯತ್ನಕರ್ಮದಿಂದ ಮಿನುಗುಂಗುಡಿಯನ್ನು ಮೀಂಟಿ ಉಜ್ಜ್ವಳ ಮಾಡಿ (ಶಬ್ದಮ. ೦೦೩-೦೬). [ಮಿನುಗು₁ (< ಮಿನುಕು₁) + ಕುಡಿ₂]

**ಮಿನುಗುಟ್ಟು, ಮಿಣುಗುಟ್ಟು** (ಕ್ರಿ). ೧. ಕ್ಷಣ ಬಿಟ್ಟು ಕ್ಷಣ ಹೊಳೆ : ನಕ್ಷತ್ರಗಳು ಮಿನುಗುಟ್ಟುತ್ತವೆ. (ಅಶಾಕ. ೦೩). **ಮಿಣುಗುಟ್ಟು** : ೨. ಹೊಳೆ ; ಬೆಳಗು ; ಪ್ರಕಾಶಿಸು : ಚಕ್ರೇಶ್ವರಿಗೆ ಪುನಃ ಆಶಾದೀಪವು ಮಿಣುಗುಟ್ಟಲಾರಂಭಿಸಿತು (ಶ್ರೀಣಾಮು. ೨೮೬). [<ಮಿನುಗು₁ + ಕುಟ್ಟು₁]

**ಮಿನುಗುತಾರೆ** (ನಾ). ಥಳಥಳಿಸುವ ನಕ್ಷತ್ರ : ತವರುಬೆಳಗದ ಮಾರ್ಗದರ್ಶನ ಮಿನುಗುತಾರೆಯು ತೆರದೊಲು ಒಲಿದ ಗಂಡನ ಸಾಹಚರ್ಯವು ಪೂರ್ಣಚಂದ್ರನ ಬೆಳಕೊಲು (ತಂಪ್ರಮಾ. ೪೦-೬).
[ಮಿನುಗು₁ (< ಮಿನುಕು₁) + ತಾರೆ₂]

**ಮಿನುಗುವಡೆ** (ಕ್ರಿ). ಕಾಂತಿಯನ್ನು ಹೊಂದು ; ಪ್ರಕಾಶವನ್ನು ಪಡೆ : ನಾಗಂಗಳಂ ಕೊನೆಗೊಂಬುಗಳೊಳ್ ತಾಳ್ದು ಮಿನು[ಶಾಕಾಂ. ಮಿನು]ಗುವಡೆದ ಪಡೆವಣಿದುಬುಗಲಿಂ ತಳ್ತು ಮಾಣಿಕ್ಯದ ಮರಂಗಳಂತಿರಂದಂಬೆತ್ತ ಚಂದನಧರಾರುಹಂಗಳಂ (ಶಬಶಂ. ೩-೩೩ ವ).
[ಮಿನುಗು₃ (<ಮಿನುಕು₃) + ಪಡೆ₁]

**ಮಿನುಪ** 'ಮಿನುಕು₁' ಪರಾ.

**ಮಿನುಪು** (ನಾ). ಒಂದು ಬಗೆಯ ಧಾನ್ಯ ; ಉದ್ದು : ಪೆಸಱುಪ್ಪು ಕಡಲೆ ಗೋಧುವೆ ಮಿನುಪೆಳ್ಳುಂಬಿವಱ ಪೇಱು ಮೂವತ್ತಕೊರ್ಳ್ಗನ್ದೆಸೆವ ದವಸಕ್ಕಮಾಪ್ಪಿರ್ನೊನ್ದೆಸದಿಪ್ಪತ್ತಕ್ಕೆರ್ ಕೊಟ್ಟರೊನ್ದವ್ಮದದಿ (ಕೌಇಇ. IX-i, ೦೬೩-೬೪ ; 1099). [ದೇ.||. ತೆಲು. ಮಿನುಮು, ಮಿನ್ನು]

**ಮಿನುಮಿನನೆ** (ಅ). ಪ್ರಕಾಶಮಾನವಾಗಿ, ಥಳಥಳನೆ ಎಂಬ ಅರ್ಥವನ್ನು ಸೂಚಿಸುವ ಒಂದು ಅನುಕರಣಾವ್ಯಯ : ಮಿನು[ಶಾಕಾಂ. ನ] ಮಿನನೆ ತೋಱೆ ತಾವಗೆ ಘನತರತಿಮಿರಾವಕಾಶಮಾಕಾಶಮದೇಂ ನೆನೆಯಿಸಿದುದೊ ಕಡಲೊಳ್ ಸೀರ್ಪಣಿ ತನುವಂ ಪುದಿಯೆ ತೋರ್ಪ ಕೃಷ್ಣನ ತನುವಂ (ಶಂಣಾಮಾ. ೬-೭) ; ಮಿನುಮಿನನೆ ಮಿನುಗುತಿರ್ದುವು ನನೆದೀವಿದ ವಾಟಲೀದ್ರುಮಂಗಳ ಕೊನೆಗಳ್ (ಧಮುಶ್. ೦-೮೬). [ಮಿನುಮಿನು + — ಅನೆ₁]

**ಮಿನುಮಿನು** (ನಾ). ಹೊಳೆಯುವುದನ್ನು ಸೂಚಿಸುವ ಒಂದು ಅನುಕರಣಶಬ್ದ : 'ಮಿನುಮಿನನೆ' ಪರಾ.

**ಮಿನ್ನಲ್** (ನಾ). ಮಿಂಚು : ಅರ್ಣವಶಯನನ ಕರ್ಣಯುಗದಿ ನವರನ್ನಕುಂಡಲಗಳೊಪ್ಪಿರಲು ಕನ್ನಡಿಗದಪಿನೊಳಗೆ ಬಿಂಬಿಸುತಲಿ ಗನ್ನಮಿನ್ನಲೆನೆ ಶೋಭಿಸಿತು (ಕೃಸ್ತಗೀ. ೪-೩೩). [ಮಿನ್ನು₁ + — ಅಲ್₂ / ತಮಿ. ಮಲ. ಮಿನ್ನಲ್ ; ಪರ್ಜಿ. ಮಿನ್ನಲ್ = ಕಿಡಿ]

**ಮಿನ್ನು₁** (ಕ್ರಿ). ಹೊಳೆ ; ಪ್ರಕಾಶಿಸು : ಎನ್ನ ಮುಖವೇ ದ್ವಾರವೆನ್ನ ದಂತವೆ ಅದಕೆ ಮಿನ್ನುತಿಹ ಮೌಕ್ತಿಕದ ಸೂಸಕಗಳು (ಕುಶಾರ. ೯-೨).
[ದೇ||. ತಮಿ. ಮಲ. ಮಿನ್ನು ; ತುಳು. ಮೆಣ್ ; ಕೊಡ. ಮಿನ್]

**ಮಿನ್ನು₂** (ನಾ). ೧. ಹೊಳಪು ; ಪ್ರಕಾಶ : 'ಮಿನ್ನುವಡೆ' ಪರಾ. ೨. ಮಿಂಚು : ಮಿನ್ನುಗಳೆಸೆದವು ವಿದ್ಯುನ್ಮಾಲೆಯಂತೆ ರನ್ನವಳಲ ಸಿರಿಯು ನಾಂತು (ಪಶ್ಮಣಾ. ೦೦-೬೯); ರನ್ನತೊಡವಂ ತೊಟ್ಟು ಮಿನ್ನೆನಿಪಸೀಮಂತದಲಿ ಸಿಂದುರವನ್ನಿಟ್ಟು . . . ಕನ್ನಿಕೆಯರೆಸೆದರು (ವಂಕಾರಾ. ೦-೪-೩೭). ೩. ಹೊಳಪನ್ನುಂಟುಮಾಡುವ ಪದಾರ್ಥ : ಮಿನ್ನಿಂ ಸಾರಣೆಗೆಯ್ದಿಹ ಸನ್ನುತಭೂಮಿಯೊಳೆ ಕಳವೆಯಕ್ಕಿಯ ಪಿಟ್ಟಿಂ ಬಿನ್ನಣದೆಳೆ ಪದಿನೇಳಾಗುನ್ನತ ಷೋಡಶಸುಪಂಕ್ತಿಗಳ್ ಶೋಭಿಸುಗುಂ (ಹಾಲಾಸ್ತ. ೪-೦೭-೩೦).
[< ಮಿನ್ನು₁. / ತಮಿ. ಮಿನ್, ಮಿನ್ನು; ಮಲ. ಮಿನ್ನಿ, ಮಿನ್ನು]

**ಮಿನ್ನುವಡೆ** (ಕ್ರಿ). ಹೊಳಪನ್ನು ಪಡೆ : ಕಾಂತಿಯುಕ್ತವಾಗಿರು : ಪೊನ್ನ ಜನ್ನಿವಾರ ನೊಸಲ ಬಾಸರನಾಮ ಮಿನ್ನುವಡೆದ ಸುಲಿಪಲ್ಲು (ರಾಮಾಶ. ೦೨-೦೩) ; ಮಿನ್ನುವಡೆದಾ ನಿಡುಗೇಶವಪಾ ಘೂಳಿಂ ನಾಂದಿದವೆಂದೆತ್ತಿಕೊಡಹಿ (ಮಾದೇಶು. ೨೭-೨೮). [ಮಿನ್ನು₂ + ಪಡೆ₁]

**ಮಿಯಾವ್** (ನಾ). ಬೆಕ್ಕಿನ ಕೂಗನ್ನು ಸೂಚಿಸುವ ಒಂದು ಅನುಕರಣ ಶಬ್ದ : ಮಿಯಾವ್ ಎಂದು ಅಟ್ಟದಿಂದ ಬೆಕ್ಕು ಕೆಳಗೆ ಹಾರಿತು (ಪ್ರಕೃ. ೪೩).

**ಮಿರಡಿ, ಮಿಂಡಿ₂** (ನಾ). ಒಂದು ಬಗೆಯ ಸಸ್ಯ : "ನಾಯಿಬೇಲಿ . . . ಮಿರಡಿ. ಮಿಂಡಿ, ಮಿರ್ಡೆ" (ಸಸ್ಯಶಿ. ೬೦) ; ಮಿರಡಿ, ಮಿಂಡಿ (ವೃಶಿಗ. ೩೭-೭೪೦). **ಮಿಂಡಿ₂** : ಮೇಲಿನ ಪ್ರಯೋಗಗಳನ್ನು ನೋಡಿ.
[ ? ]

**ಮಿರಾಬು** (ನಾ). ದೇವಸ್ಥಾನದಲ್ಲಿ ದೇವರ ಉತ್ಸವಕಾಲದಲ್ಲಿ ಬಳಸುವ (ಕುದುರೆಯಾಕಾರದ) ಒಂದು ಬಗೆಯ ಅಲಂಕಾರಸಾಧನ : ಹಬ್ಬ ಹುದಿನಗಳಲ್ಲಿ ದೇವರನ್ನು ಹೊರುವ ಭಾರ ಇವನಿಗಿರಲಿಲ್ಲವಾದರೂ ನಂದೀಧ್ವಜ, ಚೌರಿ, ಚಾಮರ, ಮಿರಾಬು, ಅಬ್ದಾಗಿರಿಗಳನ್ನು ಉಗ್ರಾಣದಿಂದ ಹೊರಕ್ಕೆ ತಂದು ಧೂಳು ಕೊಡಹಬೇಕು (ಚಿಳುಮು. ೩).
[ ?./ ಮರಾ. ಮುರಾಬಾ ]

**ಮಿರಾಸದಾರ** 'ಮಿರಾಸಿದಾರ' ನೋ.

**ಮಿರಾಸಿ, ಮಿರಾಸು, ಮಿರಾಸೆ, ಮಿರಾಸೆ** (ನಾ). ೧. (ಹಳ್ಳಿಯಲ್ಲಿ) ರೈತರು ಸಾಗುವಳಿಮಾಡುವುದಕ್ಕಾಗಿ ಭೂಮಿಯ ಮಾಲೀಕನಿಗೆ ಕೊಡಬೇಕಾಗುವ ಧಾನ್ಯ, ಹಣ ಮೊದಲಾದುವು ಮತ್ತು ಆ ಮಾಲೀಕನು ಅದನ್ನು ಪಡೆಯಲು ವಂಶಪಾರಂಪರ್ಯವಾಗಿ ಹೊಂದಿರುವ ಹಕ್ಕು : ಸ್ಥಳದ ಹಂನೆರಡು ಮಂದಿ ಆಯಗಾರರ ನಿದಾನಿಸಿ ಯಥಾಪ್ರಕಾರ ನಿಂಮು ಸ್ಥಳ ಮಿರಾಸಿ ನಿಮ್ಮಗೆ ಕೊಟು ತಾವ್ರದ ಶಾಸನದ ಲಿಪಿ ಬರೆಸಿ ಕೊಟು ಯಿದ್ದೇವೆ (ಎಕ. XII, ತಿಪ. ೦೦೨-೩೨ ; 1720) : ಬ್ರಾಮಣವಾಗಿ ಬರಿಸಿ ಗೌಡಿಕೆ ಮಿರಾಸಿ ತಂನದೆಂದು (ಇಪ. ೦೯೪೭, ರಾಶಿಪವ್ರಂ. ೨೪೮-೦೯; ೪). ೨. ಗ್ರಾಮಸೇವಕರಿಗೆ ಊರಿನ ಮುಖ್ಯಸ್ಥರು ಮತ್ತು ರೈತರು ಹಣ ಅಥವಾ ಧಾನ್ಯದ ರೂಪದಲ್ಲಿ ಕೊಡುವ ವಾರ್ಷಿಕ ಅಥವಾ ಮಾಸಿಕವಾದ ವಿಶೇಷಸಂಭಾವನೆ, — ಭತ್ಯ : ನಿಬಂಧನೆಗಳ ಮೇರೆಗೆ ಸಲ್ಲಿಸಬೇಕಾದ ಮಿರಾಸಿಯನ್ನು ಸಲ್ಲಿಸಲಿಲ್ಲವೆಂತ ನೀರಗಂಟಿಯಿಂದ, ತೋಟಿಯಿಂದ ಅಥವಾ ತಳವಾರಿಯಿಂದ ಫಿರ್ಯಾದು ಬಂದರೆ (ಗ್ರಾಮಾಳ. ೯೩). ೩. (ಪ್ರಾಂತ್ಯದ ಪದ್ಧತಿಯ ಪ್ರಕಾರದ) ಗೇಣಿಯನ್ನು ಸಲ್ಲಿಸುತ್ತಿರುವ ತನಕ, ಗೇಣಿದಾರನಿಗೆ ಮತ್ತು ಅವನ ಉತ್ತರಾಧಿಕಾರಿಗೆ ಸಾಗುವಳಿಮಾಡಲು ಇರುವ ವಂಶಪಾರಂಪರ್ಯವಾದ ಹಕ್ಕು, — ಸ್ವಾಮ್ಯ : (ವ್ಯಗಳ. IV, ೭೭೯). **ಮಿರಾಸು** : ೨. ಅವನಿಗೆ ನಾಲ್ಕಾಣೆ ಮಿರಾಸು ಕೊಡುವರು (ಹುಟ್ಟಿಹ. ೯); ಆ ಊರಿನ ದೇವರ ಒಕ್ಕಲಿಗೆ ಸೇರಿದ ಪಕ್ಕದ ಊರುಗಳ ಒಕ್ಕಲುಗಳಿಂದಲೂ ಈಗ 'ಮಿರಾಸು' ( = ಮಾಮೂಲು) ಪಡೆಯುವ ಹಕ್ಕು ಅರ್ಚಕನಿಗಿದೆ (ಶೋರವೇ. ೧೨). **ಮಿರಾಸೆ** : ೨. ಸುಗ್ಗಿಯ ವೇಳೆಗೆ ಅವನು ಮತ್ತೆ ಹಿಂದಕ್ಕೆ ಬಂದು ತನ್ನ ಮಿರಾಸೆಯಾದ ರಾಗಿ ಭತ್ತವನ್ನು ವಸೂಲು ಮಾಡಿಕೊಂಡು ಹೋಗುತ್ತಾನೆ (ಹಳ್ಳಿಚಾ. ೩೯) ; ಅವರಿಗೆ ಪ್ರತಿ ಮನೆಯಲ್ಲೂ ವರ್ಷಕ್ಕೆ ಒಂದು ಗೊತ್ತಾದ ಪ್ರಮಾಣದಲ್ಲಿ ಮಿರಾಸೆ ಕೊಡುತ್ತಿದ್ದರು (ಕಳಹು. ೯೩). **ಮಿರಾಸೆ** : ೨. ಅವನ ಮಕ್ಕಳು . . . ತಳಾರಿಕೆ ಹಾಗೂ ನೀರಗಂಟಿತನವನ್ನು ನೋಡಿಕೊಂಡು, ಧಾನ್ಯದ ಮಿರಾಸೆಯನ್ನು ತೆಗೆದುಕೊಂಡು ನೆಮ್ಮದಿಯಿಂದ ಬದುಕುತ್ತಿದ್ದರು (ಊರುಕ. ೬೮).
[ ← ಅರೆ. ಮಿರಾಸ್ ; ಹಿಂ. ಮಿರಾಸ್, ಮಿರಾಸ್ = ಪಿತ್ರಾರ್ಜಿತ ಆಸ್ತಿ ; ಮರಾ. ಮಿರಾಸ್ = ವಂಶಪಾರಂಪರ್ಯವಾದ ಸಂಪತ್ತು]

**ಮಿರಾಸಿದಾರ**, ಮಿರಾಸದಾರ (ನಾ). ಸಾಗುವಳಿದಾರರಿಂದ ಮಿರಾಸಿಯನ್ನು ಪಡೆಯುವ ಹಕ್ಕನ್ನು ಹೊಂದಿದವನು : (೯). **ಮಿರಾಸದಾರ :** ಒಂದು ಪ್ರಾಂತ್ರದ ಆಡಳಿತಗಳೆಲ್ಲವೂ ದೇಶಾಧಿಕಾರಿಯಾದ ದೇಶಮುಖ . . . ಮಿರಾಸದಾರ, ಜಮೀನ್‌ದಾರ ಎಂಬೀ ಅಧಿಕಾರಿಗಳ ಅಧೀನವಾಗಿದ್ದುವು (ಛತ್ರ. ೦೩೮).

[ ← ಪಾರ. ಮೀರಾಸೀದಾರ್ : ಮರಾ. ಮಿರಾಸ್ದಾರ್ ]

**ಮಿರಾಸು** 'ಮಿರಾಸಿ' ನೋ.

**ಮಿರಾಸೆ** 'ಮಿರಾಸಿ' ನೋ.

**ಮಿರಿ** (ನಾ). ಕಾಳುಮೆಣಸು ; ಕರಿಮೆಣಸು : ಪಿಪ್ಪಲಿ ಮಿರಿ(ಳ)ನಾಗರಂ ಬಿಳಿದೆನಿಪ್ಪ ಪುನರ್ನವಿಯೆಂಬಿವೆಲ್ಲವುಂ ಜಲದೊಳೆ ಕೂಡಿಕೊಂಡರೆವುದಂ ಕುಡಿಸಲ್ . . . ಪೆರ್ಗಣಂಗಳ ವಿಷಂಗಳುಮಂ ಕಳೆಗುಂ (ಖವಾ. ೦೨-೯).

[ದೇ.॥ ತಮಿ. ಮಿರಿಯಮ್ ; ತೆಲು. ಮಿರಿಯಮು, ಮಿರೆಮು./ ಪ್ರಾ. ಮಿರಿಅ./ಮರಾ. ಮಿರೀ ; ಗುಜ. ಮರೀ./ಸಂ. ಮರಿಚ]

**ಮಿರಿದೆ** (ನಾ). ಒಂದು ಸ್ಥಳದ ಹೆಸರು ; P ಇದು ಈಗಿನ ಮೈಸೂರು ಜಿಲ್ಲೆಯ ಕೃಷ್ಣರಾಜನಗರದ ಮಿರ್ಲೆ ಗ್ರಾಮ : ಮಿರಿದೆಯ ಉಮ್ಮಾದಗಾಮುಣ್ಡರುಂ . . . ತೆನನ್ದಾಕರುಂ ಕೊಳನೆಲ್ಲೂರ ಸಾಲತ್ತರುಂ ವಾರದರುಂ ಎನೆವ್ವರುಂ ನರಸಾಕ್ಷಿ (ಎಕ. V (R), ಕೃ.ನ. ೧೦೩-೬೯ ; ಸಂ. 890). [P ಇದು 'ಮಿರಿಲೆ' ಎಂಬುದರ ಅಪಲಿಖಿತ]

**ಮಿರಿಮಿರಿ** 'ಮಿಱಿಮಿಱಿ' ನೋ.

**ಮಿರಿಳೆ**, ಮುರಳಿ$_2$ (ನಾ). ಹೊಲ, ಗದ್ದೆ ಹಾಗೂ ನದೀತೀರದಲ್ಲಿ ಬೆಳೆಯುವ ಒಂದು ಬಗೆಯ ಹುಲ್ಲು ಮತ್ತು ತಿನ್ನಬಹುದಾದ ಅದರ ಬೀಜ : ಕೀಳುಮರ ಕಾವಾಗಿ ಕೊಡಲಿಗೆ ಏಳಿಗೆಯ ತನ್ನಬಿಳಕುಲ ಬಾಲಕಂ ಕಡುಮೃತ್ಯುವಾದಂತಸುರಸಂತತಿಗೆ ಖೂಳನೈರುತಿ ಮೃತ್ಯುವಾದನು ಹೇಳಲಿನ್ನೇನರಸ ದಿಕ್ತಟಪಾಲಕರೊಡೆವೆರೆದು ಮಿರಿಳೆಯ ಬೀಜದಂದವಲಿ (ಅಂಬಿಕಾ. ೩೬-೨೭). **ಮುರಳಿ$_2$ :** ಎಳ್ಳಂತು ಬಿಸಿಲಿಗೆ ಒಣಗುತ್ತದೆ, ನೀನು ಯಾಕೆ ಒಣಗುತ್ತೀ ಮುರಳೀಬೀಜವೇ ? (ಗಾದೆ) ; ಎಳ್ಳೊಣಗಿದರೆ ಎಣ್ಣೆ ಬರುತ್ತದೆ. ನೀನು ಯಾಕೆ ಒಣಗುತ್ತೀ ಮುರಳೀಬೀಜವೇ ? (ಗಾದೆ). [ ← ಮರಾ. ಮುರಲೀ ]

**ಮಿರುಗಿಸು** 'ಮಿಱುಗಿಸು' ನೋ.

**ಮಿರುಗು$_1$** 'ಮಿಱುಗು$_1$' ನೋ.

**ಮಿರುಗು$_2$** 'ಮಿಱುಗು$_2$' ನೋ.

**ಮಿರುಗುಕೊಡು** (ಕ್ರಿ). ಹೊಳಪನ್ನು ಕೊಡು ; ಮೆರುಗು ನೀಡು : ಚಂದ್ರಿಕೆಯಲ್ಲಿ ಆ ಬಣ್ಣಕ್ಕೆ ಮಿರುಗುಕೊಟ್ಟಂತಾಗಿತ್ತು (ಬಾಣಲ. ೦೦೩).

[ಮಿರುಗು$_2$ (< ಮಿಱುಗು$_2$) + ಕೊಡು$_1$]

**ಮಿರುಗುಟ್ಟು** (ಕ್ರಿ). ಹೊಳೆ ; ಪ್ರಕಾಶಿಸು : ಅಲ್ಲಿ ಮಿರುಗುಟ್ಟುತ್ತ ಬಿದ್ದಿದ್ದ ಒಂದು ದುಂಡುಕಲ್ಲನ್ನು ಲಕ್ಷ್ಮಿಯ ಕೈಯಲ್ಲಿಟ್ಟ (ಎಂತ. ೦೩೨).

[ < ಮಿರುಗು$_2$ + ಕುಟ್ಟು$_1$ ]

**ಮಿರುಗುಹುಳ** (ನಾ). ಮಿಂಚಿನಂತೆ ಹೊಳೆಯುವ ಒಂದು ಬಗೆಯ ಹುಳು ; ಮಿಂಚುಹುಳು ; ಮಿಣುಕುಹುಳು : ತರಣಿಯಂಬರ ಬೆಳಗುವಂದದಿ ಮಿರುಗುಹುಳ ಬೆಳಗುವವೆ (ಜರಾಪೂ. ೦೬೯-೦೨).

[ ಮಿರುಗು$_1$ (< ಮಿಱುಗು$_1$) + ಹುಳ (< ಪುೞು) ]

**ಮಿರುತಾರಗೆ** (ನಾ). ಹೊಳೆಯುವ ನಕ್ಷತ್ರ : ಗೋಪುರದ ತುದಿಯಲ್ಲಿ ಬಾನನೆತ್ತುತ ನಿಂತು ಇರುಳಿನೊಳು ಮಿರುತಾರಗೆಯ ಮಾಲೆಗೊಳುತ (ಮರದೀ. ೦೨-೭). [< ಮಿರುಗು$_1$ + ತಾರಗೆ]

**ಮಿರುವರಿಕೆ** (ನಾ). "ಮಿರ್ರನೆ ಓಡುಪಿಕೆ" (ಗಿಳಿಂ. ೦೩೨ ಟಿಪ್ಪ.) : ನಲಿನಿಯ ನನೆಮುನಿಸಿನ. ಕೋಗಿಲೆಯ ಕೊರಳ ಕನಸಿನ, ಮುಗಿಲಿನ ಮಿರುವರಿಕೆಯು ಸಲ್ಲುತಿದೆ ನೋಡ ಹರಕೆಯು ! (ಗಿಳಿಂ. ೩೮-೦೯).

[ಮಿರು$_?$ + ಪರಿಕೆ$_1$]

**ಮಿರ್ಜಾಯಿ** (ನಾ). ಉದ್ದವಾದ ತೋಳುಗಳುಳ್ಳ ಒಂದು ಬಗೆಯ ಅಂಗಿ ; ಕುಡತಾ : ಶ್ರೀಅರವಿಂದರು . . . ಭಾರತದೇಶದ ಗಿರಣಿಯ ಉರುಟುಬಟ್ಟೆಯ ಸಾಧಾರಣ 'ಮಿರ್ಜಾಯಿ'ಯನ್ನು (ಕುಡತಾ) ಧರಿಸುತ್ತಿದ್ದರು (ಪುಜಾಯೋ. ೭೭).

[ ← ಪಾರ. ಮಿರಜಾ, ಮಿರಜಾಈ ; ಹಿಂ. ಮಿರಜಈ, ಮಿರಜಾತ್ತಃ ; ಮರಾ. ಮಿರಜಾಈ ]

**ಮಿರ್ತು** 'ಮಿಟ್ಟು' ನೋ.

**ಮಿರ್ಲೆ** (ನಾ). ಒಂದು ಬಗೆಯ ನೀರುಹಕ್ಕಿ : (೯). [ ? ]

**ಮಿಲನ**, ಮಿಳನ (ನಾ). ೧. ಸೇರುವುದು : ಸೇರಿಕೆ ; ಸಂಯೋಗ. ೨. ಒಬ್ಬರನ್ನೊಬ್ಬರು ಸಂಧಿಸುವಿಕೆ ; ಸಮಾಗಮ : ಮೊದಲ ಮೋಹದ ಬಲೆಯ ನೆಯ್ದುದೆಯ ತಿಳಿಗೊಳಂ. ಮೊದಲ ಮಿಲನದ ಮತ್ತೆ ವಿರಹದ ಶಿವಾಲಯಂ ! (ಕಣ್ಮಂಗ. ೭೨-೦೬೯೭) ; ಮಿಲನದ ತರುವಾಯ ದಂಪತಿಗಳಲ್ಲಿ ವಿಯೋಗವುಂಟಾದರೆ. ಅವರಲ್ಲುಂಟಾಗುವ ವಿರಹವಲ್ಲಿ ವೇದನೆಯ ಶ್ರುತಿಯಿರುವುದು (ಸಾಹಿಸ. ೯೩). **ಮಿಳನ :** ೧. ಇಬ್ಬರ ಹೃದಯಗಳ ಮಿಳನವಾಗುವುದು (ರ್ಮಕ್ಕಲೋ. XX. ೩೯೩೪) : ವೈದಿಕ ಯಾಗ ಮತ್ತು ಕಾಡಿನಲ್ಲಿನ ಭಗವದಾರಾಧನೆ — ಇವೆರಡೂ ಅಂಶಗಳ ಮಿಳನವು ಉಪನಿಷತ್ತುಗಳಲ್ಲಿ ನಮಗೆ ಗೋಚರವಾಗುತ್ತದೆ (ಕಕ್ಕಾ. ೨೦).

[ಸಂ.]

**ಮಿಲಾಖತು** 'ಮುಲಾಖತ್ತು' ನೋ.

**ಮಿಲಾಖತ್ತು** 'ಮುಲಾಖತ್ತು' ನೋ.

**ಮಿಲಾಯಿಸು**(ಕ್ರಿ). ೧. ಸೇರಿಸು ; ಕೂಡಿಸು : ಎಲ್ಲರನ್ನೂ ಒಟ್ಟಿಗೆ ಮಿಲಾಯಿಸಿ ಅವರೆಲ್ಲರ ತಲೆಗೆ ಒಂದೇ ಹೆಸರಿನ ಚೀಟಿಯನ್ನಂಟಿಸುವುದು ತರವಲ್ಲ (ಸಾಹಿತ್ರ. VI, ಕೃಗಾವಚ). ೨. ಬೆರಸು ; ಮಿಶ್ರಮಾಡು : ಕೊಳವಳಿಕೆ ಬೀಜ ಒಂದು ಸೇರು ಮೆಂತ್ಯ ಒಂದು ಸೇರು ಉದ್ದಿನ ಹಿಟ್ಟು ಒಂದು ಸೇರು ಇವನ್ನು ಮಿಲಾಯಿಸಿ ನೆರಳಲ್ಲಿ ಒಣಗಿಸಿ . . . ಅರವತ್ತು ದಿನ ತೆಗೆದುಕೊಂಡರೆ ವೀರ್ಯವೃದ್ಧಿಯಹುದು (ಕಾಮಶಾ. ೨೭೩). ೩. ಭೇಟಿ ಮಾಡಿಸು; ಪರಿಚಯ ಮಾಡಿಸು : (೯). ೪. ತಿರುಗಿ ಬೀಳು; ದಬಾಯಿಸು : ಪುರೋಹಿತಶಾಸ್ತ್ರಿಗಳಿಗೇ ಮಿಲಾಯಿಸುತ್ತಿರುವ ಮುತ್ತೈದೆಯರನ್ನು ಚಿತ್ರಿಸುವುದಕ್ಕಂತೂ ಆ ಆದಿಶೇಷನೇ ಬರಬೇಕು (ಸುವಸಂ. ೯೩); ಅಮೀರ ಸಾಬಿಯ ಕೈಯಲ್ಲಿದ್ದ ದೊಣ್ಣೆಗೆ ಭೀಷಣವಾಗಿ ಮಿಲಾಯಿಸಿ ಕೆಣಕಿದ ಸಿಂಹದಂತೆ ನಿಂತಿದ್ದಾನೆ. ಕುಳ್ಳ ವೆಂಕಟಣ್ಣ ! (ಮುಗಮಾ. ೦೪). ೫. ಹೊಡೆ: ಬಡಿ : ಇಬ್ಬರು ಪ್ರತಿಸ್ಪರ್ಧಿಗಳಿಗೆ ಕೈಕೈ ಮಿಲಾಯಿಸುವ ಹೊತ್ತು ಬಂತು (ಖಡ್ಗರ. ೯೩) : ಅವರು . . . ಕೈಕೈ ಮಿಲಾಯಿಸುವ ಕಾರಬಾರ ನಡೆಸಿರುತ್ತಾರೆ (ಶಿಬಿಂರ. II, ೨೭೦).

[ಮಿಲಾ$_0$ (P ← ಹಿಂ. ಮಿಲನಾ ; ಮರಾ. ಮಿಳಣೇ. ಮಿಳವಣೇ) + — ಇಸು$_3$./ತುಳು. ಮಿಲಾಯಿಸು, ಮಿಲಾವು, ಮಿಲಾಸು]

**ಮಿಲಾವ್**, ಮಿಲಾವೆ (ನಾ). ಸೇರಿಸುವುದು; ಕೂಡಿಸುವುದು : ಆ ಭೂಮಿಯನ್ನು ನಂಬರಿನೊಳಕ್ಕೆ ಮಿಲಾವ್ ಮಾಡಿಕೊಳ್ಳಲೂ ಬಹುದು (ಭೂಶಿಂಆ. ೩೭). **ಮಿಲಾವೆ :** ಕೋಟೆವಳಗಣ ಮಂದಿಯೆಲ್ಲಾ ಹೊರತೆಗೆದು ಪರಸ್ಥಳದ ಮಂದಿ ಕೋಟೆವಳಗೆ ಕಾಯಮಾದ ಸ್ಥಳದ ಮಂದಿ ಜ್ವತೆಗೆ ನಿಲಿಸಿ ಪರಸ್ಥಳದ ಮಂದಿ ಮಿಲಾವೆ ಮಾಡಿ ಪೇಟೆಕಾವಲಲ್ಲಿಯಿಟ್ಟು (ಕೈದರ. ೪೭). [← ಹಿಂ. ಮಿಲಾವ್; ಮರಾ. ಮಿಳಾಉ]

**ಮಿಲಾವಣೆ** (ನಾ). ೧. ಸೇರುವುದು; ಕೂಡುವುದಂ : (೯). ೨. ಹೊಡೆದಾಟ ; ಬಡಿದಾಟ : ಇನ್ನೇನು ರಣಕಹಳೆ ಊದುವುದೊಂದು ಉಳಿದಿತ್ತು

ಕೈಕೈ ಮಿಲಾವಣೆಯಾಗುವುದಕ್ಕೆ (ಸುವಸಂ. ೫೦). [ಮಿಲಾವ್ + —ಅಣೆ$_4$. / ಹಿಂ. ಮಿಲವಾನಾ, ಮಿಲಾನ; ಮರಾ. ಮಿಳವಣೀ]

**ಮಿಲಾವೆ** 'ಮಿಲಾವ್' ನೋ.

**ಮಿಲಿಟರಿ, ಮಿಲಿಟೆರಿ** (ಗು). ೧. ಸೈನ್ಯಕ್ಕೆ ಸಂಬಂಧಿಸಿದ; ಸೇನೆಯ : ದಂಡಿನ, ಮಿಲಿಟರಿ (Military· ಶಶ್ರಿ. ೫೫). (ನಾ). ೨. ಸೈನ್ಯ; ದಂಡು : ದೇವಾಲಯವು ಮಿಲಿಟರಿಯವರ ವಶದಲ್ಲಿದೆ (ಪ್ರವಾಸ. ೦೨೯). **ಮಿಲಿಟೆರಿ :** ೧. ಮೈಸೂರು ಮಿಲಿಟೆರಿ ಫೌಜಿಗೆ ಸೇರಿರುವಂಥವರ ಸಂಬಳ ಮತ್ತು ಅಲೋವೆನ್ಸ್‌ಗಳು (ಗ್ರಾಪೂಕ. ೩೫). ೨. ಆ ದಾರಿಯತ್ತ ಬ್ರಿಟಿಶರ ಮೂರುಮಿಲಿಯ ಮಿಲಿಟೆರಿಯೆಲ್ಲ ಕಣ್ಣಲ್ಲಿ ಕಣ್ಣಿಟ್ಟು ಸಹಾಯವನ್ನು ನಿರೀಕ್ಷಿಸುತ್ತಿದ್ದಿತು (ಶ್ರಬಸ. ೬೦). [← ಇಂ. Military]

**ಮಿಲಿಟೆರಿ** 'ಮಿಲಿಟರಿ' ನೋ.

**ಮಿಲಿತ, ಮಿಳಿತ** (ಗು). ೧. ಸೇರಿದ; ಕೂಡಿದ : ಹೃದಯ ಹೃದಯ ಮಿಲಿತೈಕ್ಯದಂಥದಿದೆ ಒಂದೆ ಹೃದಯಲೋಕ (ಅರಳು. ೦೬೫-೩). ೨. ಜೊತೆಗೂಡಿದ ; ಹೊಂದಿಕೆಯಾದ. ೩. ಬೆರಸಿದ ; ಮಿಶ್ರಣ ಮಾಡಿದ : ಅವನ ತಲೆಯ ಮೇಲೆ ಮೋಜಿಸಿಯೊಳೊಡಲೊಳಂತುದ್ಧೂಳಿಸುತ ಜಲಮಿಲಿ [ಪಾಠಾಂ. ೪] ತಭಸಿತವನು (ಬಸಪು. ೩೮-೦೪). ೪. ಭೆಟ್ಟಿಯಾದ; ಕಂಡ. **ಮಿಳಿತ :** ೧. ಮಿಳಿತ ಬುಧಾಳಿ ಭದ್ರಸುಮುಹೂರ್ತಮದಾಯ್ತೆನಲ್ (ತ್ರಿಶುವಿ. ೦೮-೫೮) ; ರತ್ನಾವಳಿಯ ಮಕುಟದ ಮಿಳಿತ ರಶ್ಮಿಗಳ ಅಷ್ಟದಿಗಧೀಶ್ವರರು ಭಾಪೆನಲು . . . ಅಷ್ಟಮೂರ್ತಿಪ್ರಿಯನು ಮೈದೋಱಿದನು ಮುನಿವರಗೆ (ಶಿಭಾಗ. ೬-೯-೨೮). (ನಾ). ೫. ಸೇರುವಿಕೆ; ಸಂಯೋಗ: ತಿಳಿಯುಲಿದು ಸಭಾಜನಸ್ಥಲಂ ಭಕ್ಷ್ಯಾದಿ ಮಿಳಿತಮೈಕ್ಯಾಂತ ಪಟುಸ್ಥಲಗಳಿವು (ಮಹಾವಿ. ೦೦-೯೮). [ಸಂ.]

**ಮಿಲುಕಾಟ** (ನಾ). ಒದ್ದಾಟ; ಚಡಪಡಿಕೆ : ಬಂಡೆಯ ಮೇಲಿನ ಜೀವಿಯ ಮಿಲುಕಾಟ ಮಿತಿ ಮೀರಿತು (ಎಮುಳ. ೬೦).

[ಮಿಲುಕು (< ಮಿಲುಗು) + ಆಟ]

**ಮಿಲುಕಾಡು** 'ಮಿಲುಗಾಡು' ನೋ.

**ಮಿಲುಕು** 'ಮಿಲುಗು' ನೋ.

**ಮಿಲುಗಾಡು, ಮಿಲುಕಾಡು** (ಕ್ರಿ). ೧. ಅಲುಗಾಡು ; ಅಲ್ಲಾಡು : ನಾಯಕ ಅವರ ಮುಖವನ್ನೇ ನೋಡಿ ಮೈಸವರುತ್ತಾನೆ. ಮಗು ಮಿಲುಗಾಡುತ್ತದೆ (ಪತರಾ. I, ೩೮೬); ಬಂಗಾರಿಗೆ ಮೈ ನಡುಕ ಬಂತು. ಮಗು ಮಿಲುಗಾಡಿತು (ಬಳಜೀ. ೬). **ಮಿಲುಕಾಡು :** ೨. ಒದ್ದಾಡು ; ಚಡಪಡಿಸು : ಮಳೆಯ ಪಂಜರಕ್ಕೆ ಸಿಲುಕಿ ಮಿಲುಕಾಡುವ ಜೀವಕ್ಕೆ ಕೇಳಿತೊ ಇಲ್ಲವೊ ! (ಎಮು. ೫೩). [ಮಿಲುಗು + ಆಡು$_1$]

**ಮಿಲುಗು, ಮಿಲುಕು** (ಕ್ರಿ). ೧. (ನೀರು ಹೆಚ್ಚಾಗಿ ಅನ್ನವು ಗಂಜಿಯೊಡನೆ) ಸೇರು; ಬೇರೆ : ಹೊತ್ತುವುದು . . . ಮಿಲುಗಿ [ಪಾಠಾಂ. ಗಿಲಿ, ಲಿಗಿ, ರಿಗಿ]ಹುದು ಪೊಡೆದಿಹುದು ನಸುಗಂಜಿ ಸುತ್ತಿಹುದು ಪೊಣಗಿಹುದು ದೋಷವಶಸಕ್ಕೆಂಟುತೆಱಸಪ್ಪುದು (ಸೂಶಶಾ. ೩-೦). ೨. ಕೂಡಿಸು; ಬೆರಸು : ತೊಳೆದ ಗೋಧುವೆಗೆ ಜೀರಿಗೆಯೆರಡ ಪೊರೆಯೊತ್ತಿ ಕಳಿಯರ್ಧ ನೀರರ್ಧವಾದೆಸಱನೆತ್ತಿಯದಱಿಸೊಳಗಿಕ್ಕಿ ಮಿಲುಗಿ ನೀರಿಂಗುವಂದದಿನಟ್ಟುಕೊಂಡಿಳುಹಿ (ಸೂಶಶಾ. ೩-೪೦). ೩. ಅಲುಗು; ಅಲ್ಲಾಡು : 'ಮಿಲುಗಾಡು' ಪರಾ. **ಮಿಲುಕು :** ೪. ಒದ್ದಾಡು; ಚಡಪಡಿಸು; ಮಿಡುಕು: 'ಮಿಲುಕಾಟ', 'ಮಿಲುಕಾಡು' ಪರಾ.

[ದೇಶ. ತೆಲು. ಮೆಲಗು, ಮೆಲಯು, ಮೆಲಿಯು]

**ಮಿಶಿನ್ನು** 'ಮಿಷನ್ನು' ನೋ.

**ಮಿಶ್ರ** (ಗು). ೧. ಸೇರಿಸಿದ; ಬೆರಸಿದ. ೨. ಕೂಡಿಕೊಂಡ; ಬೆರೆತ : ಆ ಗಂಧಸ್ನಪನೋದಕಂ ಮೇರುಮಹೀಧರಜಾಂಬೂನದನಿತಂಬಂಬಿದಿಱಿದು ಕಾಳಾಗರುಮಿಶ್ರಪಯಸ್ಸ್ರೋತಸ್ಸಮುದಿತಂ ಸೌವರ್ಣಸಪಾನಮೆಸೆದು (ಶಾಂತಿಪು. ೦೦-೫೨ ವ); ಯತ್ಸ್ವಮಿಶ್ರ ಧತ್ತ್ವಕ್ಕೆ ದತ್ತ್ವಂ (ಶಪುರ. ೨೬೬). ೩. ನಾನಾ ಬಗೆಯ: ವಿವಿಧ ರೀತಿಯ : ಅವನ ಹೃದಯ ಮಿಶ್ರ ಭಾವಗಳ ತುಮುಲರಂಗವಾಗಿತ್ತು (ಕುನರು. ೦೮೫). (ನಾ). ೪. ಸೇರಿಕೆ; ಮಿಶ್ರಣ : ಗುರುಲಘುಮಿಶ್ರಂ ಮೂಱಕ್ಕರದಿಂ ಗಣಮಿಡು ಲತಾಂಗಿ (ಛಂದೋಂಬು. ೦-೩೭). ೫. ಗೌರವಾನ್ವಿತವ್ಯಕ್ತಿಗಳನ್ನು ಕುರಿತು ಹೇಳುವಾಗ ಬಳಸುವ ಒಂದು ಪದ. ೬. ಒಂದು ಬಗೆಯ ಮೂಲಂಗಿ. ೭. [ಸಂಗೀತ] ಏಳುಲಘುಗಳ ಕಾಲದ ಮಿತಿಯುಳ್ಳ ಒಂದು ಬಗೆಯ ತಾಳ : ಜಾತಿ . . . ಇದು ಐದು ವಿಧವಾಗಿದೆ. ಅವು ಕ್ರಮವಾಗಿ (೧) ತ್ರಿಶ್ರ (೨) ಚತುರಶ್ರ (೩) ಖಂಡ (೪) ಮಿಶ್ರ (೫) ಸಂಕೀರ್ಣ. ಈ ಐದು ಜಾತಿಗಳೂ ಲಘುವಿಗೆ ಮಾತ್ರ ಸಲ್ಲುತ್ತವೆ . . . ತ್ರಿಶ್ರ ಚತುರಶ್ರಗಳ ಕೂಡಿಕೆಯಿಂದ ಮಿಶ್ರವೂ . . . ಹುಟ್ಟಿವೆ (ಸಂಗೀಪಂ. ೫೬) ; ವರ್ಣತಾಳವು ತ್ರ್ಯಸ್ರ, ಮಿಶ್ರ, ಚತುರಶ್ರವೆಂದು ಮೂರು ರೀತಿ (ಚತುಶ್ರ. ೯೬). ೮. ನಾಲ್ಕು ಬಗೆಯ ಧ್ವನಿಭೇದಗಳಲ್ಲಿ ಒಂದು : ದಿವಿಜನಾಯಕಗಾಯಕಂ . . . ಖಾವುಳ ಬೊಂಬುಳ ನಾರಾಟ ಮಿಶ್ರವೆಂಬ ನಾಲ್ಕುಂ ಧ್ವನಿಯ ಭೇದಮನಱಿದು . . . ಪಾತ್ರಿರೆಯುಂ (ಶಾಂತೀಶ್ವ. ೦೬-೬೭ ವ); ತಾಳಲಯ ಬೊಂಬಾಳ ಮಿಶ್ರದ ಮೇಳವದು ತಾರಾಗ (ಕುವ್ಯಾಸ. ೬೦೩. ೦-೯೭); ಆ ರಾಗಂಗಳಂ ಪಾಡುವಲ್ಲಿ . . . ಖಾವುಳ ಬಬ್ಬೋಳ ನಾರಾಟ ಮಿಶ್ರವೆಂಬ ಚತುರ್ವಿಧ ಸುಸ್ವರಗಳಿಂದುರುಳಿಸಿ ಕರ್ಣರಸಾಯನವಾಗಿ ಪಾಡಿ (ವಿವೇಕ. ೨೭೭). ೯. ಸ್ವರ. ಪಾಟ. ಬಂಧ. ಪದ, ತೇನ, ಬಿರುದ, ಚಿತ್ರ, ಮತ್ತು ಮಿಶ್ರಗಳೆಂಬ ಎಂಟು ಬಗೆಯ ಕರಣಗಳಲ್ಲಿ ಒಂದು : ರಾಸವು ತಾಳ, ದ್ರುತವೆಂಬ ಲಯ-ಇವುಗಳಿಂದ ಕೂಡಿರುವುದು ಕರಣದ ಸಾಮಾನ್ಯಲಕ್ಷಣವೆಂದು ತಿಳಿಯಬೇಕು. ಅದು ಎಂಟು ವಿಧವೆಂದು ಸಮ್ಮತಿಸಿದೆ. ಸ್ವರ, ಪಾಟ, ಬಂಧ, ಪದ, ತೇನ, ಬಿರುದ, ಚಿತ್ರ, ಮಿಶ್ರ (ಚತುಶ್ರ. ೮೫). ೧೦. [ಕಾವ್ಯಮೀ] ರೂಪಕಗಳಲ್ಲಿನ ಮೂರು ಬಗೆಯ ಕಥಾಂಶಗಳಲ್ಲಿ ಒಂದು: ಪ್ರಸಿದ್ಧವಾದ ಕಥಾವಸ್ತುವಿನಲ್ಲಿ ಬದಲಾವಣೆಯನ್ನು ಮಾಡಿರುವಂಥದು : 'ಮಿಶ್ರ' ಎಂದರೆ ಪ್ರಸಿದ್ಧವಾದ ಕಥೆಯಲ್ಲಿ ಬದಲಾವಣೆಗಳನ್ನು ಮಾಡಿದ್ದು (ಕೈಪಿಡಿ. ೨೦೬). ೧೧. [ಗಣಿತ] ಕೂಡುವುದು : ಯುತಂ, ಯುಕ್ತಂ, ಮಿಶ್ರಂ, ಸಮ್ಮಿಶ್ರಂ . . . ಬತಂ ಇಂತಿನಿತುಂ ಕೂಡೂದಕ್ಕೆ ಹೆಸರು (ವ್ಯವಹಾ. ೦೦-೦೨ ವ). ೧೨. [ಜೈನ] ಆತ್ಮನ ಐದು ಭಾವಗಳಲ್ಲಿ ಒಂದು; ಕರ್ಮದ ಕ್ಷಯೋಪಶಮದ ಭಾವ : ಆತ್ಮನಲ್ಲಿ ಪಾರಿಣಾಮಿಕ, ಔದಯಿಕ, ಮಿಶ್ರ, ಕ್ಷಾಯಿಕ, ಔಪಶಮಿಕಗಳೆಂದು ಐದು ಭಾವಗಳುಂಟು (ಕೈಪಿಡಿ. ೨೮೬); ಬಾಕಿ ನಾಲ್ಕು ಪರಿಣಾಮಗಳು ಔಪಶಮಿಕ, ಕ್ಷಾಯಿಕ, ಮಿಶ್ರ, ಔದಯಿಕಗಳು . . . ಬಾವಿಯ ನೀರಿನ ಕಶ್ಮಲದಂತೆ ಎರಡು ವಿಧವಾಗಿಯೂ ಇರುವುದು ಮಿಶ್ರ (ಹಿಂದಶಾ. ೮೫). [ಸಂ.]

**ಮಿಶ್ರಕಾಪಿ** (ನಾ). [ಸಂಗೀತ] ಒಂದು ರಾಗದ ಹೆಸರು : ಈ ಭಾಷಾಂಗ ಕಾಪಿರಾಗಕ್ಕೆ ಹಿಂದೂಸ್ಥಾನಿಕಾಪಿ, ದೇಶ್ಯಕಾಪಿ ಮತ್ತು ಮಿಶ್ರಕಾಪಿ ಎಂಬ ಹೆಸರುಗಳೂ ಪ್ರಚಾರವಲ್ಲಿವೆ (ಸಂಗೀತ. ೫೦).

[ಸಂ. ಮಿಶ್ರಕಾಪೀ]

**ಮಿಶ್ರಕಾವ್ಯ** (ನಾ). [ಕಾವ್ಯಮೀ] ಚಂಪೂಕಾವ್ಯ, ನಾಟಕ ಮುಂತಾದುವುಗಳಂತೆ ಗದ್ಯ ಮತ್ತು ಪದ್ಯಗಳೆರಡೂ ಸೇರಿಕೊಂಡಿರುವ ಸಾಹಿತ್ಯರಚನೆ : ಗದ್ಯ ಪದ್ಯಗಳೆರಡೂ ಇರತಕ್ಕ 'ಮಿಶ್ರ' ಕಾವ್ಯವು 'ಚಂಪು' ಎನ್ನಿಸುತ್ತದೆ. ನಾಟಕಾದಿ ದೃಶ್ಯಪ್ರಬಂಧಗಳಲ್ಲಿಯೂ ಗದ್ಯಪದ್ಯಗಳೆರಡೂ ಬರುವುದರಿಂದ ಇವುಗಳನ್ನೂ ಮಿಶ್ರಕಾವ್ಯಗಳಲ್ಲಿಯೇ ಸೇರಿಸಬಹುದು (ಕೈಪಿಡಿ. ೦೮೦). [ಸಂ.]

**ಮಿಶ್ರಣ** (ನಾ). ೧. ಸೇರಿಸುವುದು; ಕೂಡಿಸುವುದು : ಈ ಮಿಶ್ರಣದ ರೀತಿ ಎಂಥದೆಂದರೆ ಇತರ ಪಾಠಗಳ ಬೆರಕೆಯಿಂದ ಗ್ರಂಥದ ಅಂತಶ್ಶುದ್ಧಿಗೆ ಒದಗುವ ಲಾಭ ಅಥವಾ ನಷ್ಟವನ್ನು ನಿರ್ಧರಿಸುವುದು ಸಾಧ್ಯವಿಲ್ಲ (ಭಾರಪ. ೩೩). ೨. ಸೇರಿಸುವಿಕೆ: ಬೆರಕೆ. ೩. ಬೆರಸಿರುವುದು; ಬೆರಕೆ ಮಾಡಿದುದು : ಉಸುಕು ಸಾಕಷ್ಟು ಬಿಸಿಯಾದಾಗ ಕೇಕಿನ ಮಿಶ್ರಣವಿರುವ ಭಾಂಡೆಯನ್ನು ಉಸುಕಿನ ಮೇಲಿರಿಸುವುದು (ಅಡುಶಾ. ೩೭). ೪. ದ್ರವ ರೂಪದ ಔಷಧದ ಬೆರಕೆ : ನಾಲ್ಕು ಹೊತ್ತಿಗಾಗುವ ಮಿಶ್ರಣ ಒಂದನ್ನು ಡಾಕ್ಟರು ಮೇಜಿನ ಮೇಲಿಟ್ಟು (ಕಾವೇರಿ. ೨೦೩). [ಸಂ.]

**ಮಿಶ್ರತಳಿ** (ನಾ). ಭಿನ್ನವಂಶದ ಪ್ರಾಣಿಗಳ ಅಥವಾ ಸಸ್ಯಗಳ ಸಂಯೋಗದಿಂದ ಉತ್ಪನ್ನವಾಗುವ ಪ್ರಾಣಿ ಅಥವಾ ಸಸ್ಯ: "(ಪ್ರಾಣಿ, ಸಸ್ಯ) ಮಿಶ್ರತಳಿಯನ್ನು ಹುಟ್ಟಿಸು : ಮಿಶ್ರತಳಿಯಾಗು" (Hybridize. ಇಂಕನ್ನ). [ಮಿಶ್ರ + ತಳಿ$_5$]

**ಮಿಶ್ರಪ್ರಕೃತಿ** (ನಾ). ನಾಲ್ಕು ಬಗೆಯ ದೇಹಸ್ಥಿತಿಗಳಲ್ಲಿ ಒಂದು; ವಾತ ಮತ್ತು ಪಿತ್ತ ಲಕ್ಷಣಗಳು ಅಥವಾ ವಾತ, ಪಿತ್ತ ಮತ್ತು ಶ್ಲೇಷ್ಮ ಲಕ್ಷಣಗಳು ಕೂಡಿಕೊಂಡಿರುವ ದೇಹಸ್ಥಿತಿ : ವಾತಪ್ರಕೃತಿ. ಪಿತ್ತ ಪ್ರಕೃತಿ, ಶ್ಲೇಷ್ಮಪ್ರಕೃತಿ, ಮಿಶ್ರಪ್ರಕೃತಿ ಎಂದು ಪ್ರಕೃತಿಯು ನಾಲ್ಕು ತೆರನಾಗಿರುವುದು . . . ವಾತಪಿತ್ತಶ್ಲೇಷ್ಮಲಕ್ಷಣವಾದರೂ ಇವುಗಳಿಂದ ಕೂಡಿಕೊಂಡಿರುವಾತನೇ ಮಿಶ್ರಪ್ರಕೃತಿಯುಳ್ಳವನೆಂದರಿವುದು (ಸಕಪ್ರ. ೧೭). [ಸಂ.]

**ಮಿಶ್ರಪ್ರತಿ** (ನಾ). [ಗ್ರಂಥಸಂ] ಭಿನ್ನವಾದ ಹಸ್ತಪ್ರತಿಗಳ ಶಾಖೆಗಳ ಪಾಠಗಳು ಒಂದರೊಡನೊಂದು ಸೇರಿ ಉಂಟಾದ ಹಸ್ತಪ್ರತಿ : ಭಿನ್ನ ಶಾಖೆಗಳು ಹೀಗೆ ಒಂದರೊಡನೊಂದು ಸೇರುವುದಕ್ಕೆ ಪಾಠಮಿಶ್ರಣ (Crossing or intermixing) ಎಂದೂ ಮತ್ತು ಹಾಗೆ ಸೃಷ್ಟಿಯಾದ ಹಸ್ತಪ್ರತಿಗಳಿಗೆ ಮಿಶ್ರಪ್ರತಿಗಳೆಂದೂ (Misch-Codices) ಹೆಸರು (ಭಾರಪ. ೩೪). [ಸಂ.]

**ಮಿಶ್ರಲಯ** (ನಾ). [ಛಂದ] ಒಟ್ಟು ಲಯಕ್ಕೆ ಹೊಂದಿಕೆಯಾಗುವಂತೆ ಬೆರಕೆಮಾಡಿದ ವಿವಿಧ ಲಯ : ಮಿಶ್ರಲಯ: ಒಟ್ಟು ಲಯಕ್ಕೆ ಹೊಂದಿಕೆಯಾಗುವಂತೆ ಬೇರೆಬೇರೆ ಲಯಗಳ ಗಣಗಳನ್ನು ಮಿಶ್ರಗೊಳಿಸಿ ಬಳಸುವ ವೈಶಿಷ್ಟ್ಯವು ಹೊಸ ಕವಿತೆಗಳಲ್ಲಿ ವಿರಳವಾಗಿಯಾದರೂ ಕಾಣುತ್ತದೆ (ಛಂದೋವಿ. ೩೦೪). [ಸಂ.]

**ಮಿಶ್ರಲೋಹ** (ನಾ). ಬೇರೆ ಬೇರೆ ಲೋಹಗಳನ್ನು ಬೆರಸಿ ತಯಾರು ಮಾಡಿದ ಲೋಹ ; ಬೆರಕೆಲೋಹ : "ಬೆರಕೆಯ ಲೋಹ; ಮಿಶ್ರ ಲೋಹ; ಚಿನ್ನ ಅಥವಾ ಬೆಳ್ಳಿಯೊಡನೆ ಕೀಳ್ತರದ ಲೋಹವನ್ನು ಬೆರಸಿ ಮಾಡಿದ ಮಿಶ್ರಲೋಹ ; ಆ ಮಿಶ್ರಣದಲ್ಲಿಯ ಕೀಳುಲೋಹ" (Alloy. ಇಂಕನ್ನ); ಅಚ್ಚುಮೊಳೆಗಳ ತಯಾರಿಕೆಯಲ್ಲಿ ಕೆಲಸದ ಪರಿಮಿತಿಗೆ ತಕ್ಕಂತೆ ಮಿಶ್ರಲೋಹದೊಳಗಿನ ಲೋಹಗಳ ಶೇಕಡ ಪ್ರಮಾಣವನ್ನು ಬದಲಾಯಿಸ ಬೇಕು (ಮುದ್ರಣ. ೧೪). [ಸಂ.]

**ಮಿಶ್ರವರ್ಣ** (ನಾ). ಬೆರಕೆಯ ಬಣ್ಣ ; ಮಿಶ್ರಣ ಹೊಂದಿದ ವರ್ಣ. [ಸಂ.]

**ಮಿಶ್ರವಿವಾಹ** (ನಾ). ಬೇರೆ ಬೇರೆ ಜಾತಿಗೆ ಸೇರಿದ ಗಂಡುಹೆಣ್ಣುಗಳ ಮದುವೆ: ಅಂತರ್ಜಾತೀಯ ವಿವಾಹ : ಗಾಡಿಯಲ್ಲಿ ಮಿಶ್ರವಿವಾಹದ ಸಮಸ್ಯೆಯನ್ನು ಚರ್ಚಿಸುವ ಸುಸಂಸ್ಕೃತ ಮಹಿಳೆ (ಸಮಾಜ. ೧೭ ಏ.೮೩). [ಸಂ.]

**ಮಿಶ್ರವಿಷ್ಕಂಭ** (ನಾ). [ಕಾವ್ಯಮೀ] ನಾಟಕ ಅಥವಾ ದೃಶ್ಯಕಾವ್ಯಗಳಲ್ಲಿ ನಡೆದುಹೋದ ಅಥವಾ ಮುಂದೆ ನಡೆಯುವ ಕಥಾಂಶವನ್ನು ಮಧ್ಯಮ ಮತ್ತು ನೀಚಪಾತ್ರಗಳ ಸಂಭಾಷಣೆಯ ಮೂಲಕ ಸೂಚಿಸುವುದು : ವಿಷ್ಕಂಭ–ನಡೆದು ಹೋದ ಮತ್ತು ಮುಂದೆ ನಡೆಯುವ ಕಥಾಂಶಗಳನ್ನು ಮಧ್ಯಮಪಾತ್ರಗಳ ಮೂಲಕ ಸಂಕ್ಷೇಪವಾಗಿ ಸೂಚಿಸುವುದು. ಇದೇ 'ಶುದ್ಧವಿಷ್ಕಂಭ'. ಮಧ್ಯಮಪಾತ್ರಗಳೂ, ನೀಚಪಾತ್ರಗಳೂ ಸೇರಿ ಸೂಚಿಸಿದರೆ ಅದಕ್ಕೆ 'ಸಂಕೀರ್ಣವಿಷ್ಕಂಭ' ಅಥವಾ 'ಮಿಶ್ರವಿಷ್ಕಂಭ'ವೆಂದು ಹೆಸರು (ಕ್ರಬಿಡಿ. ೨೦೭); ಮಧ್ಯಮ ನೀಚಪಾತ್ರಗಳೆರಡೂ ಸೇರಿ ಆದರೆ 'ಮಿಶ್ರವಿಷ್ಕಂಭ'ವಾಗುತ್ತದೆ (ಸಂನಾಟ. ೧೩). [ಸಂ.]

**ಮಿಶ್ರಾಲಂಕಾರ** (ನಾ). [ಕಾವ್ಯಮೀ] ಅನೇಕ ಅಲಂಕಾರಗಳ ಮಿಶ್ರಣ; ಇದರಲ್ಲಿ ಸಂಸೃಷ್ಟಿ ಮತ್ತು ಸಂಕರ ಎಂದು ಎರಡು ವಿಧಗಳಿವೆ; "ಸಂಸೃಷ್ಟಿಯಲ್ಲಿರುವ ಅಲಂಕಾರಗಳು ಒಂದರಲ್ಲಿ ಮತ್ತೊಂದು ಕಲೆಯದೆ ತಿಲತಂಡುಲಗಳಂತೆ ಇರುತ್ತವೆ. ಆದರೆ 'ಸಂಕರ'ವೆನ್ನುವುದು ಹಾಲು ನೀರುಗಳಂತೆ ಸೇರಿಹೋಗಿ ಒಂದಕ್ಕೆ ಮತ್ತೊಂದು ಉಪಜೀವಕವಾಗಿರುತ್ತದೆ" (ಕ್ರಬಿಡಿ. ೨೮೯) : ಅನೇಕ ಅಲಂಕಾರಗಳು ಒಂದೆಡೆಯಲ್ಲಿರುವಾಗ 'ಸಂಸೃಷ್ಟಿ'ಯೆಂದೂ 'ಸಂಕರ'ವೆಂದೂ ಮಿಶ್ರಾಲಂಕಾರಗಳಾಗುವುವು (ಕ್ರಬಿಡಿ. ೨೮೯). [ಸಂ.]

**ಮಿಶ್ರಿ**, ಮಿಸಿರಿ, ಮಿಸ್ರಿ (ನಾ). ೧. (ಈಜಿಪ್ಟ್‌ದೇಶದಲ್ಲಿ ದೊರೆಯುವ) ಒಂದು ಬಗೆಯ ಸಕ್ಕರೆ; ಕಲ್ಲುಸಕ್ಕರೆ. ೨. ಒಂದು ಬಗೆಯ ಬೇರು : (÷). ಮಿಸಿರಿ : ೨. 'ಸಾಲಾಮಿಸಿರಿ' ನೋ. ಮಿಸ್ರಿ : ೨. 'ಸಾಲಾಮಿಸ್ರಿ' ನೋ.
[←ಅರ. ಮಿಸ್ರೀ; ಹಿಂ. ಮಿಶ್ರೀ, ಮಿಸರೀ, ಮಿಸ್ರೀ; ಮರಾ. ಮಿಶ್ರೀ]

**ಮಿಶ್ರಿತ** (ಗು). ೧. ಸೇರಿದ; ಕೂಡಿದ. ೨. ಸೇರಿಸಿದ; ಕೂಡಿಸಿದ. ೩. ಗೌರವಕ್ಕೆ ತಕ್ಕ; ಗೌರವಾರ್ಹವಾದ. (ನಾ). ೪. [ಸಂಗೀತ] ಹದಿನೈದು ವಿಧವಾದ ಗಮಕಗಳಲ್ಲಿ ಒಂದು ; ಎರಡು ಅಥವಾ ಅನೇಕ ವಿಧ ಗಮಕಗಳನ್ನು ಸೇರಿಸಿ ಹಾಡುವ ಕ್ರಮ : ಮಿಶ್ರಿತ–ಎರಡು ಮೂರು ವಿಧ ಗಮಕಗಳನ್ನು ಸೇರಿಸಿ ಹಾಡುವುದು (ಸಂಗೀಸಂ. ೨೭); ತಿರುಪ. ಹಾಗೆಯೇ ಸ್ಫುರಿತ. ಕಂಪಿತ, ಲೀನವೆಂಬುದು ಆಂದೋಲಿತ, ವಲಿ, ನಂತರ ತ್ರಿಭಿನ್ನ, ಕುರುಲ, ಆಹತ, ಉಲ್ಲಾಸಿತ. ಪ್ಲಾವಿತ, ಹುಂಫಿತ ಹಾಗೆಯೇ ಮುದ್ರಿತ, ನಾಮಿತ, ಮಿಶ್ರಿತ–ಹೀಗೆ ಹದಿನೈದು ಭೇದಗಳನ್ನು (ಗಮಕದಲ್ಲಿ) ವಿಧಿಸಿದೆ (ಚತುಶ್ರ. ೩೦). ೫. ನಾಲ್ಕು ಬಗೆಯ ಧ್ವನಿ ಭೇದಗಳಲ್ಲಿ ಒಂದು : ಕಾವುಳ ಬೊಂಬಾಳ ನಾರಾಟ ಮಿಶ್ರಿತಮೆಂಬ ಚತುರ್ವಿಧಸ್ವರಂಗಳಂ ಪರುಠವಿಸಿ (ವಿವೇಕ. ೧೮೯); ಮೂಜು ಮೂಜು ಸ್ತ್ರೀರಾಗಂಗಳಿಂದಭ್ಯಾಸಂಗೆಯ್ದು ಮತ್ತಮಾ ರಾಗಂಗಳಲ್ಲಿ . . . ಕಾವುಳ ಬೊಂಬಾಳ ನಾರಾಟ ಮಿಶ್ರಿತಮೆಂಬ ಚತುರ್ವಿಧ ಸುಸ್ವರಂಗಳಂ ಪರುಠವಿಸಿ (ಶೃಂಗ. ೩-೩ ವ). ೬. [ಜೈನ] ಒಂದು ನರಕದ ಹೆಸರು : ಧೂಮಪ್ರಭೆಯೊಳ್ ತಮಕಾ . . . ಮಿಶ್ರಿತಾಭಿಧಾನೇಂದ್ರಕಪಂಚಕ ತತ್ಸಂಬಂಧಿ ಶ್ರೇಢೀಬದ್ಧಪ್ರಕೀರ್ಣಕವಿಕಲ್ಪದಿಂ ತ್ರಿಲಕ್ಷಬಿಲಂಗಳಪ್ಪುವು (ತತ್ತ್ವಸೂ. ೧೨೦). [ಸಂ.]

**ಮಿಷ** (ನಾ). ೧. ದ್ವೇಷ ; ಹಗೆತನ ; ವೈರ. ೨. ಮೋಸ; ಕಪಟ : "ಕೈತವಂ, ಕಪಟಂ . . . ಮಿಷಂ, ನಿಭಂ, ನಿರ್ದಿಷ್ಟಂ, ವ್ಯಪದೇಶಃ – ಈ ೧೦ ನೆವಂ" (ಹಲಾಯು. ೧೧೭-೨೪). ೩. ನೆಪ ; ನೆವ ; ವ್ಯಾಜ : ಗೋಪಕದಂಬಕಮಿಂದು . . . ಕಾಮುರ್ಕಪೂಜೆಗೆ ಬರ್ಪುದೆಂದು ತನ್ಮಿಷದೊಳೆ ಚೆಚ್ಚರಂ ರಥಮಂ ನೇಚಿಸಿ ತರ್ಪುದು ರಾಮಕೃಷ್ಣರಂ (ಜಗಚ. ೩-೭೪); ಮೊರೆವಳಿನಿಯ ರವಮಿಷದಿಂದರವಿಂದಿನಿ ಪಾಡೆ ಮುಚ್ಚಿ ಮುತ್ತಿನ ಸರವಂ ಸರಸಿ ತೆರೆಗೈಯೊಳೀವಂತಿರೆ ಜಲಕಣಮಾಲೆ ಮೇಲದೇಂ ರಂಜಿಸಿತೋ (ರಾಜಶೇ. ೨-೭೭); ಸುಖದ ಮಿಷವು ದುಃಖ ವಿಷವು ಓಗ್ಗ ಪ್ರಾಣಪೂರಣಾ! (ಮೂರ್ತಿಕಾ. ೨೮-೭). [ಸಂ.]

**ಮಿಷನ್** 'ಮಿಷನ್ನು' ನೋ.

**ಮಿಷನ್ನು**, ಮಿಶಿನ್ನು, ಮಿಷನ್, ಮೆಷಿನ್ನು (ನಾ). (ವಾಹನಗಳನ್ನು ಓಡಿಸುವುದು, ಧಾನ್ಯವನ್ನು ಹಿಟ್ಟು ಮಾಡುವುದು, ಮುದ್ರಣ

ಕಾರ್ಯವನ್ನು ಮಾಡುವುದು. ಬಟ್ಟೆಯನ್ನು ಹೊಲಿಯು ವುದೇ ಮುಂತಾದ ಅನೇಕ ವಿಧವಾದ ಕೆಲಸಗಳಿಗೆ ಬಳಸುವ) ಯಾಂತ್ರಿಕಶಕ್ತಿಯನ್ನು ನಿಯೋಜಿಸಲಾಗಿರುವ ಸಲಕರಣೆ; ಯಂತ್ರ: ನನಗೊಂದು ಬಟ್ಟೆ ಹೊಲಿಯುವ ಮಿಷನ್ನು ಬೇಕು (ರೂ೩). **ಮಿಶಿನ್ನು:** ಗಿರಾಕಿಯ ಮೇಲೆ ಭಾರ ಹಾಕಿ ಮಿಶಿನ್ನು ಓಡಿಸುವುದು . . . ಈ ಮೊದಲಾದ ಪ್ರಯೋಗಗಳು ಸಾಮಾನ್ಯವಾಗಿರುತ್ತವೆ (ದೇಕಪ್ಪ. ೮೦). **ಮಿಷನ್:** ಮಿಷನ್ ಅಕ್ಕಿಯ ಅನ್ನಕ್ಕಿಂತ ಕೊಟ್ಟಣದ ಅಕ್ಕಿಯ ಅನ್ನದಲ್ಲಿ ಸಾರ ಹೆಚ್ಚು (ಮರ್ಕಮು. ೧೬೩). **ಮೆಷಿನ್ನು :** ಆ ಮೆಷಿನ್ನಿನ ಆಡಾಳುಡಿ, ಅದರ ಭರಾಟೆ . . . ಎಲ್ಲಾನ್ನೂ ನೋಡಿ. ಎಳೇ ಮಕ್ಕಳ ಹಾಗೆ ಕೈ ಚಪ್ಪಾಳೆ ಹೊಡೆದು ಕುಣಿದುಬಿಟ್ಟೆ (ಹೆಂಗೂರಿ. ೩೬). [←ಇಂ. Machine]

**ಮಿಷ್ಟ** (ಗು). ೧. ಸಿಹಿಯಾದ : ಪಂಡಿತಮಹಾಶಯರ ಮನೆಯಿಂದ ಮಾವಿನ ಹಣ್ಣು ಮತ್ತು ಮಿಷ್ಟ ಖಾದ್ಯ ಬಂದಿದೆ (ಇಕ್ಕ. ೪೬೬). ೨. ರುಚಿಯಾದ ; ಸವಿಯಾದ ; ರಸವತ್ತಾದ : 'ಮಿಷ್ಟಾನ್ನ' ಪದಾ. ೩. ತೋಯಿಸಿದ ; ಒದ್ದೆಮಾಡಿದ. (ನಾ). ೪. ಸಿಹಿಯಾದುದು; ಸವಿಯಾದುದು : ಗಂಡಸರು ಕುರ್ಚಿಯ ಉದ್ಧಾರಕಾರ್ಯದಲ್ಲಿ ಪ್ರವೃತ್ತ ರಾಗಿ ಶಿಷ್ಟವೂ ಮಿಷ್ಟವೂ ಆದ ಧನ್ಯವಾದಗಳನ್ನು ಸಂಪಾದಿಸುತ್ತಾರೆ (ಪಿಂಥ. II, ೧೬೬). ೫. ಸಿಹಿತಿಂಡಿ ; ಭಕ್ಷ್ಯ. [ಸಂ.]

**ಮಿಷ್ಟಭೋಜನ** (ನಾ). ಸವಿಯಾದ ಊಟ; ರುಚಿಕರವಾದ ಭೋಜನ : ತಾನು ಈ ದ್ವೀಪಕ್ಕೆ ಬಂದುದೂ . . . ಮಿಷ್ಟಭೋಜನವನ್ನು ಮಾಡಿದುದೂ ಕಲ್ಪವಲ್ಲೀಚೂರ್ಣವನ್ನು ಸೇವಿಸಿದುದೂ. ಒಂದೊಂದಾಗಿ ನೆನಪಿಗೆ ಬಂದಿತು (ರಾಜಾಮು. ೨೨೩). [ಸಂ.]

**ಮಿಷ್ಟಾನ್ನ** (ನಾ). ಸವಿಯಾದ ಊಟ ; ರಸಕವಳ : ಮೃಷ್ಟಾನ್ನ: ಶಿಷ್ಟೋತ್ಕರಮಂ ಮಿಷ್ಟಾನ್ನದಿಂ[ದ]ಂತಣಿಪಿ ನಿಜ[ಕು]ಳಕ್ಕಂ ವಿಶಿಷ್ಟೋತ್ತ ಮಮ್ ತಾಳ್ದಿರೆ (ಎಕ. XIII, ೬೩೦-೦೬; ೪೨೧); ಪ್ರಯಾಣಿಕರು ದುಡ್ಡಿಲ್ಲದೆ ಮಿಷ್ಟಾನ್ನವನ್ನು ತಿನ್ನುತ್ತಿದ್ದಾಗ, ಜ್ಯೋತಿ-ಅಣ್ಣನ ಕೆಲಸಗಾರರು ತಪಸ್ವಿಗಳ ಹಾಗೆ ಉಪವಾಸ ಮಾಡುವಂಥ ಲಕ್ಷಣವೇನೂ ಕಾಣಲಿಲ್ಲ (ಪಿಂಥ. II, ೯೬). [ಸಂ.]

**ಮಿಸರು** 'ಮಿಸ್ರ' ನೋ.

**ಮಿಸಲಯ** (ನಾ). ರೇಷ್ಮೆ ಬಟ್ಟೆ ; ಪಟ್ಟೆವಸ್ತ್ರ : ಹೆಂಡತಿಯ ಹುಟ್ಟು ತಿರುಗೋದು ಹರಕು ಹರಕು ಚಿಂದಿ ಮಿಂಡತಿಯ ಹುಟ್ಟು ಮೆರೆವುದು ಮಿಸಲಯ ಮೇಲ್ಸಂದಿ (ಜಪಾವ. ೪೮-೧೧). [←ಅರ. ಮಷ್ರೂಅ]

**ಮಿಸಲು** (ನಾ). ೧. (ಸಭೆ ಮುಂತಾದ ಸಮಾರಂಭಗಳಲ್ಲಿ ಯಾರಿ ಗಾದರೂ ನಿರ್ಣಯವಾದ ಉಚಿತವಾದ) ಸ್ಥಾನ : (೬). ೨. (ಸೈನ್ಯ, ಪೇದೆಗಳು, ಕುದುರೆಗಳು ಮುಂತಾದುವುಗಳ) ಅಧಿಕೃತವಾದ ತನಿಖೆ : (೬). [←ಅರ. ಮಿಸಾಲ್; ಹಿಂ. ಮಿಸಿಲ್; ಮರಾ. ಮಿಸಲ್]

**ಮಿಸಿ** (ನಾ). ೧. ತರಕಾರಿಯಾಗಿ ಬಳಸುವ ಒಂದು ಬಗೆಯ ಸೊಪ್ಪು; ಸಬ್ಬಸಿಗೆ : "ಮಿಸಿ ಶತಪುಷ್ಪಿಕೆ" (ವಸ್ತುಕೋ. ೩೬-೨೬); "ಶಾಲೇಯಃ, ಶೀತಶಿವಾ, ಛತ್ರಾ, ಮಧುರಿಕಾ, ಮಿಸಿಃ. ಮಿಶ್ರೇಯಾ–ಓ ಸಬ್ಬಸಿಕೆ ಹೆಸರುಗಳು" (ಸಿದ್ಧಾಂತಿ. ೧೩೬). ೨. ಒಂದು ಬಗೆಯ ಔಷಧೀಸಸ್ಯ; ಜಟಾಮಾಂಸಿ. [ಸಂ.]

**ಮಿಸಿಕಿ, ಮಿಸಿಕೆ** (ನಾ). ೧. ಕುದುರೆಯ ಮುಖಕ್ಕೆ ತೊಡಿಸುವ ಒಂದು ಬಗೆಯ ಅಲಂಕಾರ ಸಾಧನ (?) : ಮಿಸುನಿಯ ಟಂಕೆ ಸೇರಿದ ಮೊಗಮುಟ್ಟಿನ ಮಿಸಿ[ಪಾಠಾಂ. ಸು]ಕಿಯನಾ ವಾಹಕರು ಒಸೆದು ಸೇರಿಸಿದರಿಳಿಯದೇಖಿದಂತೆ ಕಣ್ಗೆಸೆಯಲಾ ಜಾತಿತುರಗಕೆ (ಕುಂರಾಮಾಂ. ೯-೮೭); ಅರೆಗಡಿದ ಪಕ್ಕರೆಯ ಖಂಡಿಸಿದ ತಡಿಯ ಮುಳಿದ ಮಿಸಿ [ಪಾಠಾಂ. ಸು] ಕಿಯ ಹೇರಾಳದಿಂ ಬಿಡದೆಸೆದುದು ರಣಭೂಮಿ (ಕುಂರಾಮಾಂ. ೨೦-೪೪). ಮಿಸಿಕೆ : ಕುದುರೆಯ ಒಂದು ಅವಯವ (?): ಕ(ೞ)ಳಿದುರ್ಕಿಂದೊಳ್ ತಾನಳವಡಿಸುಗು ಮಿಸಿ(ಹಿ)ಕೆ[ಪಾಠಾಂ. ಮಿಷಿರೆ]ಯೆಂಬ ಪೆಸರವಕಕ್ಕು (ಅಶ್ವಶಾ. ೯-೩೬). [ ? ]

**ಮಿಸಿಕೆ** 'ಮಿಸಿಕಿ' ನೋ.

**ಮಿಸಿರಿ** 'ಮಿಶ್ರಿ' ನೋ.

**ಮಿಸಿರಿಕೆ** (ನಾ). ಒಂದು ಬಗೆಯ ಕ್ರಿಮಿ : ಸ್ಪರ್ಶರಸಗಂಧರೂಪುಗಳೆಂಬೀ ನಾಲ್ಕುಮನಜೀವ ತುಂಬಿ ಪತಂಗ ಕೀಟ ನೊಣ . . . ತೊನಸಿ ತ್ರೋಳೆ ತೋಲೆ ಕೊಲಿಗ ಮಿಸಿರಿಕೆ ಪಚ್ಚೆ ಮಿಡತೆ ತೆರಳೆ ಕೊಟ್ಟಾರಿಗಂಯೆದೆವುಟು ಯೆಂದಿತ್ಯೇವಮಾದಿಗಳೊಳಂ (ಚಪಾರ. ೪೯). [ ? ]

**ಮಿಸಿಸು** 'ಮಿಶಾಯಿಸು' ನೋ.

**ಮಿಸುಂಕು** 'ಮಿಸುಕು$_1$' ನೋ.

**ಮಿಸುಕಾಟ** (ನಾ). ಅಲುಗಾಟ ; ಚಲನೆ : ಯಾವುದೋ ಹಿಂಬೆಳಕ ಮಿಸುಕಾಟವೇ ಹಿಗ್ಗಿ ಇಲ್ಲದುಂಟಾಗಿ ಕತ್ತಲೆಯು ಬೆಳಕಿಗೆ ಬಾಗಿ (ಮುಕ್ತಕಂ. ೩೨-೧೧). [ಮಿಸುಕು$_1$ + ಆಟ]

**ಮಿಸುಕಾಡು** (ಕ್ರಿ). ಅಲುಗಾಡು ; ಹೊರಳು : ಅವನು ಮಿಸುಕಾಡದೇ ನಿಧಾನವಾಗಿ ಉಸಿರಾಡುತ್ತಾ ಮಲಗಿರುವದನ್ನು ನೋಡಿ . . . ಗಾಳಿ ಹಾಕುವದನ್ನು ನಿಲ್ಲಿಸಿದಳು (ಹೂಹಣ್ಣು. ೩); ಭಾಸ್ಕರ ಕುರ್ಚಿಯಲ್ಲಿ ಅತ್ತಿತ್ತ ಅಸ್ವಸ್ಥನಂತೆ ಮಿಸುಕಾಡುತ್ತಿದ್ದ (ಕಮುತಿ. ೨೨೨). [ಮಿಸುಕು$_1$ + ಆಡು$_1$]

**ಮಿಸುಕು$_1$, ಮಿಸುಂಕು, ಮಿಸುಗು$_1$** (ಕ್ರಿ). ೧. ಕದಲು; ಅಲುಗು; ಅಲ್ಲಾಡು : ಆ ಬಲೆಯೊಳುತ್ತನ್ನಮತಿ ತೊಡರ್ದು ತನ್ನ ಪೆಸರ ನೆನೆದುಸಿರನೊಳಕೆಗೆದಸು ಪೋದಂತೆ ಮಿಸುಕದಿರ್ಪುದುಂ (ಪಂಪಭಾ. ೦೩೯-೬); ಸಲೆ ಪಶುಗಳೆಲ್ಲಂ . . . ನಿಮಿಷಮಾತ್ರದಲಿ ಮಿಸುಕದುಸುರಿಡದುಸಿಕ ನಿದ್ದಂತಸುಗಳೆದವು (ಲಕಥ. ೩೦-೩೯). ೨. ಕಂಪಿಸು ; ನಡುಗು ; ಅದುರು : "ಮಿಸುಕು_ಸ್ಪಂದನೇ (ಅದುರು)" (ಕಮುಧಾ). ೩. ಓಡಾಡು ; ಅಡ್ಡಾಡು; ಸಂಚರಿಸು: ತರುಣಿಯರ ತಂಡದೊಳ್ ಮಿಸುಕಬಾರದು ದೇವ (ಸಂಬರ. ೦೩-೦೦೪); ಎಲ್ಲಿಗೆ ಮಿಸುಕದಿರು ಮನೆಯಿಂದಗಲದಿರು (ಬಸವ. ೦೪-೨). ೪. ಚಲಿಸು ; ನಡೆ : ದೆಸೆಯಿಂದಾಗಸದಿಂದಜಾಂಡತಟದಿಂದತ್ತಲ್ಲಿ ಪೊಕ್ಕು ದುರ್ಗಮಿಂ ಮಿಸುಕಲ್ ತೀರ್ಗುಮೆ ವೈರಿಗೆ (ಪಂಪಭಾ. ೦೦-೦೦೮); ಅಂತು ಮಾರುತಿಯ ರಥಮಂ ಮಿಸುಕಲೀಯದಿಸುವುದುಂ (ಪಂಪಭಾಮಾ. ೦೩-೦೨೩ ವ); ಈ ವಸುಧಾಮಧ್ಯದೊಳೆತ್ತಲ್ ಮಿಸುಕುವನನ್ನೆತ್ತಲುಱಿವನಹಿತಕ್ಷಿತಿಪಂ (ಕಾವ್ಯಾವ. ೦೪೯); ಸಮೀರನ ಮಿಸುಕಲೀಯದೆ ಮುಂದೆ ಮಿಕ್ಕವು ವಿಗಡ ವಾಜಿಗಳು (ಕುವ್ಯಾಪಿ. ೩-೪೭). ೫. ಕದಲಿಸು ; ಅಲುಗಾಡಿಸು : ಎಸಕವುಳ್ಳರು ನೀವು ನಿಮಗನಿಮಿಷರು ಸರಿಯೇ ಘಣವ ಹಿಡಿವುದು ಮಿಸುಕ ಲಾಗದು ನೀವು ಬಾಲವನು (ಸಂಭಕ. ೩-೦೦೬); ಸುರರು ಸ್ತುತಿಸಿ ಕರೆಯೆ ತುಟಿಯ ಮಿಸುಕದವ ಒಱಿದೆ ಏತಕೆ ಬಾಯ ತೆಱೆದೆ ಹೇಳೊಮ್ಮೆ (ಪುರಂದ. ೦-೯೯-೦). ೬. ತಿರುಚು ; ತಿರುಗಿಸು : ಗೌಡರು ಎತ್ತುಗಳಿಗೆ ಛಟೀರ್ ಎಂದು ಬಾರುಕೋಲಿನಿಂದ ಬಿಗಿದು ಬಾಲ ಮಿಸುಕಿದಾಗ ಗಂಗಣ್ಣನಿಗೆ ಅರ್ಧಜೀವ ಬಂತು (ಕಪ್ಪುರು. ೧೩೪). ೭. ಹಿಂಸಿಸು ; ಒದ್ದಾಡಿಸು ; ಚಡಪಡಿಸುವಂತೆ ಮಾಡು : ಕಾಮಜ್ವರಂ ಸಂಕ್ರಮಿಸಿ ಮಿಸುಕಲೊಡನೆ ನೊಂದು ತನು ತನುವಾಯ್ತು (ಸೌಂದಕ. ೦೩-೩೩). ೮. (ಪ್ರತಿಭಟಿಸುವುದಕ್ಕಾಗಿ) ಉಸಿರೆತ್ತು ; ಬಾಯಿಬಿಡು : ಮಿಸುಕದೆ ನಿಮ್ಮ ನಿಮ್ಮ ನಿಜರಾಜಿತರಾಜ್ಯವಿಲಾಸದಲ್ಲಿ ಸಂತಸ ದೊಳೆಯಿರ್ಪುದು (ಕುಸುಮಾ. ೬-೦೨೨); ಬಸುಱಿ ಬಗಿವೆನು ಕೀಚಕನ ನಸುಮಿಸುಕಿದೊಡೆ ವೈರಾಟಮಂಡದ ಹೆಸರ ತೊಡೆವೆನು (ಕುವ್ಯಾಪಿ. ೩-೩೮); ಯುದ್ಧದ ಆಶೆಯನ್ನುಳ್ಳ ರಾಜರೆಲ್ಲ ನಕುಲನೊಂದಿಗೆ ಪ್ರತಿಭಟಿಸಿ ಸೋತರು. ಅವರನ್ನು ಕಂಡು ಉಳಿದ ರಾಜರು ಮಿಸುಕದೆ ಬಂದು ಕಾಣಿಕೆಯನ್ನು ತೆತ್ತರು

(ರಾಜಶೇ. ೯೦). ೯. ಚಲಾಪಣೆಯಲ್ಲಿರು : ಸಸಿಯಿರ್ದಪನಮವಾಸೆಯ ಬಸದಿಂ ಕಾಣಲ್ಕೆ ಬಾರದಂತಿರೆ ಜಿನರುಂ ವಸುಧೆಯೊಳಿರ್ದಮರ್ದಾಂ ಮಿಸುಕುವ ಕಲಿಕಾಲದೆಸಕದಿಂ ತಲೆದೋರದ್ (ಧರ್ಮಾಮೃ. ೩-೦೯೯). ೧೦. ಬರು ; ಪ್ರವೇಶಿಸು : ನೊಸಲಿನಲಿ ಕಣ್ಣುಳ್ಳ ದೇವನಾವೊಸೆದು ಲಂಕಾದ್ವೀಪಸೀಮೆಗೆ ಮಿಸುಕಲಮ್ಮನು (ಶಬ್ದಾ.ಸ. ೩-೩೬). ೧೧. ಕಾಣಿಸಿಕೊಳ್ಳು ; ತಲೆದೋರು : ಕಿಸುರುಗಾಸಿವಳಿ ಬಂದಿಗಳಹತನ ವಾವಿವೇಕವಾಸಿರಲೇನಾ ಚೆನ್ನಬಸವನಿಹ ರಾಜ್ಯದೊಳ್ ಮಿಸುಕವು (ಚೆಂಪು. ೬-೯೦); ಪುಸಿ ಸುಸುಳನ್ಯಾಯ ಕೌಳಿ ವಂಚನೆಗಳು ವಸುಧೇಶನಾಳ್ವ ರಾಜ್ಯದಲಿ ಮಿಸುಕಲಮ್ಮವು (ಕಂಪ್ತಶ. ೭-೬೩) ; ಮಿಸುನಿಯೊರೆಯಿಂ ಮಿಸುಕುವಸಿಧಾರೆಯಂತೆಸೆವ ನುಡಿಗಳಂ ಕೇಳುವ ಪಿಲಾತಗಾತನ ಮಡದಿ . . . ಸಂದೇಶಮಂ ದೂತಮುಖದಿಂ ಕಳುಹೆ (ಗೂರ್ಜ್ಕೊ.ಕ್ರಾ. ೭-೦೬೬). ೧೨. (ಆಲಂ) ಸುಲಭವಾಗಿ ಅರ್ಥವಾಗು,-ಅರ್ಥವು ಗೋಚರಿಸು: ಪೊಸಗನ್ನಡದಿಂ ವ್ಯಾವರ್ಣಿಸುವೆಂ ಸತ್ಕೃತಿಯನೆಂದು ಕನ್ನಡವಾಂ ಚಿಂತಿಸಿ ಕೂಡಲಾಜಿದಕ್ಕಟ ಮಿಸುಕದ ಸಕ್ಕದಮಾನಿಕ್ಯಮವನುಂ ಕವಿಯೇ (ಧರ್ಮಾಮೃ. ೦-೯೦). ◁ ಮಿಸುಂಕಿಸು : ೧. ಆ ಸರಳಾಂಗುಲಿಯಿಂ ಮುರಾಂತಕಂ ಭರದೊಳೆ ತನ್ನ ದಕ್ಷಿಣಕರಾಗ್ರದಿನೊತ್ತೆ ಮಿಸುಂಕದಿರ್ಪುದಂ (ಜಗನ್ನಾಥ. ೦೯-೯೯). ℙ ಇದು ಛಂದಸ್ಸಿಗಾಗಿ ಮಾಡಿಕೊಂಡಿರುವ ರೂಪ. ಮಿಸುಗು₁ : ೧. ಅಂಚಿರದುಮನೆ ಮಿಸುಗದ ಮಿಂಚಂಬರಚರ ಮಲ್ಲದ ಚಕೋರವಲರ್ಗಣ್ ಸತಿಯಾ (ಕಂಪ್ರ.ಕ. ೦೦-೯೬); ತಿರುಕುಚುಪ್ಪೆ ತೊಂಡನೆಂಬ . . . ಅಸಗನೊಂದನೆಸಗನೆತ್ತ ಮಿಸುಗದಭವವತದೋಪ್ಪನು (ತಿರುಕೊಂ.ದೇ. ೨೩೨-೭). ೩. ಕೊಂಬಿನೊಳ್ ವಸಿಯಿಸಿ ಮಿಸುಗುತಿರ್ದ ರಾಜಹಂಸನಂ ಆಂದೆಯೆಂದೇ ಬಗೆವು . . . ಎಚ್ಚಂ (ಶಂಕತಂ. ೦೨೬-೨). ೧೧. ಆನುಂ ತಪೋವನದೊಳ್ ಪಲಕಾಲಂ ತಪಂಗೆಯ್ಯ ಕೇವಲಜ್ಞಾನಂ ಪುಟ್ಟುವಲ್ಲಿ ಜನ್ಮಾಂತರದುಷ್ಕರ್ಮವಾಸನೆ ಮಿಸುಗೆ [ಪಾಠಾಂ. ಮಿಗೆ] (ಕಂಕಕಂ. ೬೦-೦೩); ಬಿಸಿಲುಗುದುರೆಯ್ಯೋಜ್ ಬೇಸಗೆ ರಾಜನಂದೆಸಗಿ ದುವ್ವಾಳಿಸಲಾಗ ಮಿಸುಗುವ ಖುರಧೂಳಿಯೆಂಬೊಲು ಸುಂಗಾಳಿ ಪಸರಿಸಿತಾ ಕಾಲದೊಳಗೆ (ಕಂಪ್ತಶ. ೯-೦೨).

[ದೇ.॥ ತುಳು. ಮಿಸ್ಕು ; ತೆಲು. ಮಿಸುಕು, ಮಿಸುಗು ; ತೊದ. ಮಿಸ್ಕ್]

**ಮಿಸುಕು₂** (ನಾ). ೧. ಅಲುಗಾಟ ; ಅಲ್ಲಾಟ : '' ಮಿಸುಕಿನೊಳಗಶ್ಮಂ ತಕದೊಳೊಲೆ '' (ಕಶ.ಕುಂ. ೦೦೯) ; ಮೊದಲ ನಿರ್ವಾಣ್ಯಮೆಂಬುದೆ ವಸ್ತು . . . ಅದಚ್ಚೊಳೆ ಸ್ಪಂದ ತೋರ್ಚುದುದದೇ ಮಿಸುಕು (ಪುಷೋಪ. ೨-೦೦). ೨. ಕಂಪನ ; ನಡುಕ ; ಆಕೆಯನ್ನು ಹಿಡಿದು ನಿಲಿಸಿಕೊಂಡು ಮಿಸುಕಿನಿಂದ ಬೋಧಿಸುತ್ತಿರುವಳು (ಕಬ್ಬಿ. ೦೨೨-೯). [<ಮಿಸುಕು₁]

**ಮಿಸುಗಿಸು** (ಕ್ರಿ). ಕದಲಿಸು ; ಅಲುಗಾಡಿಸು : ಮೇಲುಂದಿನ ವಸನಮಂ ಬಟ್ಟವೊಲೆ ಮಿಸುಗಲು . . . ನವಕುಸುಮಕೋಮಲೆಯರುಗಳೊಸೆದಾಕೆಯೊಡನೆ ಭರವಸದಿ ನಡೆತರುತಿರ್ದರು (ಶಾಂರಕ. ೦೩-೯೮).

[ಮಿಸುಗು₁ (< ಮಿಸುಕು₁) + - ಇಸು₃]

**ಮಿಸುಗು₁** 'ಮಿಸುಕು₁' ನೋ.

**ಮಿಸುಗು₂** (ಕ್ರಿ). ೧. ಹೊಳೆ; ಪ್ರಕಾಶಿಸು: "ಮಿಸುಗು__ಕಾಂತೌ" (ಕವಿರಾ); ಕುಸುಮದೆಸಟ ಮಿಸುಗುವಪೊಸದಳಂಬದ ಪೋಗೆ ಕಿಚ್ಚಿದು ಬೇಗಂ ಮಿಶ್ರಮಿಸಿ (ಅಜಿ. ೦೦-೭೦೫) ; ಮಿಸುಗುವ ರತ್ನತೋರಣಗಣಂಗಳನೂನವಿಮಾನದೊಳ್ ಗುಳ್ದೆಸೆದವು (ಸುಕುಮಾ. ೯-೨೦) ; ಮಿಸುಗುವ ಅರ್ರ ತೊಳಪ್ಪ ಕನ್ನವುರಂ ಚೆಲ್ವೆಸೆದಿರೆ (ಕಮುದ. ೬೨ ಕೃತಿಪ). ೨. ಕಂಗೊಳಿಸು ; ಮನೋಹರವಾಗಿರು ; ಶೋಭಿಸು : ಮಿಸುಪ ರಸಾತರಂಗಳನೊಡಂಬಡನಾಗದೆ ತನ್ನೊಳಿಂತು ಪೋಲಿಸುವೊಡೆ ಪೋಲಿಸಲ್ಕೆ ದೊರೆ ವೀಣೆಯುನಾ ಸುರತಪ್ರವೀಣೆಯುಂ (ಅಜಿಪು. ೨-೭೭); ಸಹಜವಿಭೂಷಣದಂತಿರೆ ಮಾಹನೀಯಲಕ್ಷಣಲಕ್ಷಣಂ ಮಿಸುಗೆ ಶುಭವಹನೆನಿಸಿದನಂ ಕಂಡಂ . . . ಆ ಮಹಿಪಂ (ಕಾದಂಪೂ. ೯೦೬); ದೇವ ದಯಾರಸಂ ಮಿಸುಪ ನಿನ್ನಯ ಮಾನಸದೊಳ್ ವಿಶಕ್ರಿರಾಜೀವದಿಂದು ಕುಂದದ ವಿಕಾಸವಿಳಾಸಮನಾಂತು ಭವ್ಯಭೃಂಗಾವಳಿಯಾಮಕ್ಕೆ ಮಿಗೆ ಕಾರಣಮಾದುದು (ಧರ್ಮಾ. ೦೯-೯೯). ೩. ಶ್ರೇಷ್ಠವಾಗಿರು ; ಮೇಲಾಗಿರು : ಬಸಮಲ್ಲದ ರಾಜಿಯಂ ಸ್ವೈರಿಸಲಾಜದೆ ಧರ್ಮಮಣ್ಣಾ ಕೊಲ್ಲೆನೆ ದಯೆಯಿಂ ಪಸುಮತಿಯೊಳಿಜವರದುವುಂ ಮಿಸುಗುವ ಸದ್ಧರ್ಮ ಮೇಂದು ನಂಬುವುದೆ ಬುಧಂ (ಧರ್ಮಾಮೃ. ೦-೦೬೬); ಇಂತೆಸೆದೀ ಪಾತಿವ್ರತ್ಯದ ಮಿಸುಗುವ ಜಸವಣ್ಣಾ ತಲೆಗೆ ತಪ್ಪೆನು ಪುಲ್ಲಂ (ಅಜಂಕ. ೦೦-೯೯).

**ಮಿಸುನಿ** (ನಾ). ೧. ಚಿನ್ನ ; ಬಂಗಾರ: '' ಸೊನ್ನೆ, ಕಸವರಂ, ಚೀಬೊನ್, ಮಿಸುನಿ—ಈ ೪ ಸುವರ್ಣಂ '' (ಕಕಶಾ. ೫೦-೬೦); ಮಿಸುನಿಯಿಂದುಂಟಾದ ಕಟಕ ಮಕುಟಾದಿ ತೊಡವುಗಳು ಮಿಸುನಿಯಲ್ಲದೆ ಮತ್ತೊಂದು ರೂಪಾಗ ಬಲ್ಲುದೆ ಹೇಳಾ (ಕಪ್ಪಪ. ೪. ೯೭-೨೦೩) ; ಆಸ್ಥಾನದಲಿ ಮಿಸುನಿಯ ಹೊಂಗಳೊಡನೊಡನುಕ್ಕಿ ಹೊಜವಡಲು (ಐಕಶ. ೨೩-೩೩); ರಸದ ಹೊಚಿಲೇಪದಲಿ ಹುದುಗಿದ ಮಿಸುನಿಯಂತಿರೆ (ಶಬ್ದಾ.ಕ. ೦೩-೬). ೨. ಮೆರುಗು ; ಗಿಲೀಟು ; ಹೊಳವು : ದೆಸೆಗಳನು ತೆರೆದು ಕವಿಯಾರೆ ಕೇಳುವನು ಮಿಸುನಿಯಾಗಸದಿ ಕೆಳೆನುಡಿಯ ನುಡಿಯುವನು (೧೯೬೦. ೨-೬); ಬಸವಂತಿ, ವಿಸ್ಮಯಕ್ಕೆ ನಗೆಯ ಮಿಸುನಿಯನ್ನು ಲೇಪಿಸಿ . . . ಕೇಳಿದಳು (ದೀಕಹ. II,೦೬೬). 'ಮಿಸುನಿಸು' ಪರಾ. ೩. ಪರಿಶುದ್ಧವಾದುದು ; ಅಪ್ಪಟ : ಮಿಸುನಿಯ ಚಿನ್ನಕ್ಕೆ ಒರೆಗಲ್ಲ ಹಂಗೇಕೆ (ಅಪಕಂ. ೩೩-೪೨೩); ಮಿಸುನಿಯ ಪೊನ್ನ ಪಲ್ಲಣದೊಳುಲ್ಲಸಿತಂಬಡೆಯಲ್ಕೆ ಕೂಡೆ ತೆತ್ತಿಸಿದ ಸಮಸ್ತರತ್ನರುಚಿಗಳ್ ಪುದಿದಂಜ್ಕೆ (ಕುಸಪಾ. ೪-೬೬).

**ಮಿಸುನಿಗಾಲ ಮಂಚ** = ಚಿನ್ನದ ಕಾಲುಗಳುಳ್ಳ ಮಂಚ : ಅಂಚೆನವಿರ ಪಾಸನುಳ್ಳ ಮಿಂಚುವಚ್ಚ ಮಿಸುನಿಗಾಲ ಮಂಚ . . . ಅಲ್ಲಿಗಲ್ಲಿಗೊಪ್ಪ ತೋರ್ಪವು (ಪಪ. ೬-೦೩). **ಮಿಸುನಿಯ ಕೆಲಸ**=ಬಂಗಾರದಲ್ಲಿ ಆಭರಣ ಇತ್ಯಾದಿಗಳನ್ನು ಮಾಡುವ ಕೆಲಸ; ಚಿನ್ನದ ಕುಸುರಿಗೆಲಸ: ಮಿಸುನಿಯ ಕೆಲಸದೊಳಗೆ ರನ್ನಂ . . . ಶಿವತತ್ತ್ವದೊಳು ಕೂರ್ತು ನೆಲಸಿದಾ ಪ್ರಣವದಂತರಸಂಗೆ ಪತಿಮೋಹಿಯೆನಿಪ ಮಂತ್ರೀಶನೆಸೆದಂ (ಪಾಕಕಂ. ೨-೦೯). **ಮಿಸುನಿಯ ದಟ್ಟಿ** = ಚಿನ್ನದ ಎಳೆಗಳುಳ್ಳ ಬಟ್ಟೆ ; ಪೀತಾಂಬರ : ಮಿಬುಗುವ ಮಿಸುನಿಯ ದಟ್ಟಿ ಕಟಿಯೊಳೊಪ್ಪ ಮೆಚಿವ ರತ್ನದ ದಾಕಿನಿಂದ ಒಚಿಯನುಗಿದ ಖಡ್ಗವಿಡಿದು ಕಂಬದೆ ಬಂದ ನರಸಿಂಹನಂತೆ ರಂಜಿಸಿದ (ಕೃಷಪ. ೦೩-೦೩). **ಮಿಸುನಿಯ ಬೆಟ್ಟು** = ಚಿನ್ನದಿಂದಾದುದೆಂದು ನಂಬಲಾದ ಪರ್ವತ ; ಮೇರು : ಉಚಿ ಮುಟ್ಟದುದಾ ನಿರ್ಜರಲೋಕಮನಾ ಮಿಸುನಿಯ ಬೆಟ್ಟು (ಐಹುಶಾ. ೦-೬೩). **ಮಿಸುನಿವಸುರಿವನು** = ಚಿನ್ನದ ಗರ್ಭದಿಂದ ಹೊರಬಂದವನು ; ಹಿರಣ್ಯಗರ್ಭ ; ಬ್ರಹ್ಮ : ಮಿಸುನಿವಸುರಿವನ ತಲೆಯ ತಳೆದು . . . ಕರುಣಿಸುವ ಮಚಿಸಿದಲೆಯ ಕುಡುಗೆ ಮತಿಯಿಸುವುಸಿರನಸವಸದೊಳು (ಬಾಶ್ವದೇ. ೬-೨).

[ದೇ.॥ ತೆಲು. ಮಸಿಮಿ, ಮಿಸಿ, ಮಿಸ, ಮಿಸಮಿಸ./ಹ್ರಾ. ಮಿಸಮಿಸ. ಮಿಸಿಮಿಸ]

**ಮಿಸುನಿಕೆಲಸ** 'ಮಿಸುನಿಗೆಲಸ' ನೋ.

**ಮಿಸುನಿಗಚ್ಚು** (ನಾ). ಚಿನ್ನದ ಬಣ್ಣದ ಲೇಪ ; ಹೊಂಬಣ್ಣದ ಮೆರುಗು: ಭೂರಮೆ . . . ನಳನಳಿಸುವ ಕೆಯ್ಯೊಲಮೆಂಬ ಮಿಸುನಿಗಚ್ಚಿನ ಪೊಂಗುಪ್ಪಸವಂ ತೊಟ್ಟು ಕಣ್ಗೆಡ್ಡಮಾದಳ್ (ರಾಕಶಾಶ್ಕ. ೯೩-೦೩).

[ಮಿಸುನಿ + ಗಚ್ಚು₂]

**ಮಿಸುನಿಗಪ್ಪಟ** (ನಾ). ಜರತಾರಿ ಬಟ್ಟೆ ; ಪೀತಾಂಬರ : ಮಿಸುನಿಗಪ್ಪಟ ಬಿಗಿದ ಉತ್ತರಿ ವಸುಮತಿಗೆ ಸಲೆ ರುದ್ರನೆಂಬೊಲು (ಮುಹಕ. ೦೨).

[ಮಿಸುನಿ + ಕಪ್ಪಟ₁ (< ಕಪ್ಪಡ)]

**ಮಿಸುನಿಗರು** (ನಾ). ಬಂಗಾರವನ್ನು ಕರಗಿಸಿ ಎರಕ ಹೊಯ್ದು ರಚಿಸಿದ ಗೊಂಬೆ ; ಚಿನ್ನದ ಎರಕದ ಪುತ್ಥಳಿ : ಅರಲ ಸರಲ ಸೊನ್ನಾರಂ ಪಲ ಪೂ ಪರಕಲಿಸಿದ ಪಾಸಂಬಗ್ಗಿ ಟದೊಳಗಿರಿಸಿ ಮಿಸುನಿಗರುಗಳನುಗುರಿಜೀತದ ಮಾಣಿಕವತ್ತಿಗೆಯು ಬೆರಸಿ (ಜಯುಕಾ. ೮-೪೭) ; ಮಿಸುನಿಗ ಪೆವ ಕಂಡರಿಸಿ ಯಂಗಜಶಿಲ್ಪಿ ಮಿಸುನಿಬಣ್ಣವನಿಡಲೆಂದು ಪೊಸೆದಗ್ನಿಯುಂ ಕಾಸಿ ಬಿಸಿಯೇಱುವವೊಲು ಬಲುಬಿಸಿಲಳಲುರಿದುದು ಭೂಪರನಾ (ಶ್ರೀಪಾಂ.೯-೩೩). [ಮಿಸುನಿ + ಕರ್ು₂]

**ಮಿಸುನಿಗಾಸು** (ನಾ). ಚಿನ್ನದ ನಾಣ್ಯ; ಬಂಗಾರದ ಕಾಸು : ಭದ್ರ ಗಾಯಕಂಗಂ ಮೆಚ್ಚಿ ಮಿಸುನಿಗಾಸೊಂದಿಯ್ಯೆ (ಕೇರಮ. ೬-೯೩). [ಮಿಸುನಿ + ಕಾಸು₂]

**ಮಿಸುನಿಗುಂಡಿಗೆ** (ನಾ). ಚಿನ್ನದ ಪಾತ್ರೆ : ಮುಗುಂದೆಯ ನೆಲೆವೊಲೆಬೆಂಬ ಮಿಸುನಿಗುಂಡಿಗೆಗಳನುರದೊಳಗಿಟ್ಟು . . . ಸುರತಾಂಭೋನಿಧಿಯೊಳ ಗೊಗುಮಿಗೆ ತೇಂಕಾಡಿದನರಸಂ (ಜಯುಕಾ. ೮-೩೪). [ಮಿಸುನಿ + ಗುಂಡಿಗೆ₂]

**ಮಿಸುನಿಗೆಲಸ**, ಮಿಸುನಿಕೆಲಸ (ನಾ). ಬಂಗಾರದಲ್ಲಿ ಆಭರಣ, ವಿಗ್ರಹ ಇತ್ಯಾದಿಗಳನ್ನು ಮಾಡುವ ಕೆಲಸ ; ಚಿನ್ನದ ಕೆಲಸ : ಮಿಸುನಿಗೆಲಸದ ಪುತ್ಥಳಿಗೆ ಮತ್ತುಸುವು ಘಟಿಸಿತೊ (ವಾಗಷ. ೨೭-೩೯). **ಮಿಸುನಿಕೆಲಸ** : ಮಿಸುನಿಕೆಲಸ, ಕೆತ್ತನೆ, ಬಟಿ ಎಂಬಿವು ಅವರ ಬಿಡುವನ್ನೂ ಹೊಲಬನ್ನೂ ಸಾರುತ್ತವೆ (ಬಾಪಾಕಾ. ೨೩೭). [ಮಿಸುನಿ + ಕೆಲಸ]

**ಮಿಸುನಿದಾವರೆ** (ನಾ). ಹೊಂಬಣ್ಣದ ಕಮಲ ; ಹೊಂದಾವರೆ : ಎನ್ನ ಮೊಗಕೆ ಸರಿಯೆನ್ನ ಬಹುದೇಯೆಂದು ಚೆನ್ನ ಮಿಸುನಿದಾವರೆಯಾ ತನ್ನ ಕೈಸೆಱೆವಿಡಿದಂತೆ ಪಿಡಿದಲೊಂದು ಪೊನ್ನೊಳೆಸೆವ ಡವಕೆಯನು (ಶ್ರೀಪಾಂ. ೨-೦೭). [ಮಿಸುನಿ + ತಾವರೆ]

**ಮಿಸುನಿಪಟ್ಟೆ** 'ಮಿಸುನಿವಟ್ಟೆ' ನೋ.

**ಮಿಸುನಿಬರಹ** (ನಾ). ಬಂಗಾರದ ಚಿತ್ರಣ : ಮಿಸುನಿಬರಹದ ಹಾವರಣ ಬಿಸಿವ ಗಲ್ಲದ ಮದಧಾರೆಯಿಂದಾನೆಗಳ್ಪಸಗಿ ಬಂದುವು ರಾಯನೆಡೆಗೆ (ಶರತ. ೨೦-೬೩). [ಮಿಸುನಿ + ಬರಹ (< ಬರೆಪ)]

**ಮಿಸುನಿಮೊಗ** (ನಾ). ಪ್ರಕಾಶಮಾನವಾದ ಮುಖವುಳ್ಳವನು ; ಅಗ್ನಿ : "ಮರಗೂಟಂ . . . ಮಿಸುನಿಮೊಗಂ, ಹಗ್ಗಿ, ಕಿಚ್ಚು, ಇಂಗಳಂ, ಎಲರ್ಗೆಳೆಯಂ . . . ಈ ೧೩ ಅಗ್ನಿ" (ಕಶಾ. ೯೯-೩೩) ; "ಮಿಸುನಿಮೊಗ ಸಗ್ಗಿಗರಡಬಳಸೆನ್ನಲಗ್ನಿಯಭಿಧಾನಂಗಳ್" (ಕಶಿಕಂ. ೩೫). [ಮಿಸುನಿ + ಮೊಗ]

**ಮಿಸುನಿವಟ್ಟಲ್** (ನಾ). ಬಂಗಾರದ ಬಟ್ಟಲು : ಎಸೆವ ಪೊಂಬರಿವಾಣ ಮಿಸುನಿವಟ್ಟಲ್ಗಳೊಳ್ . . . ಪಾಲ್ಮೊಸರ್ಗಳಿವು ಬಗೆಗೊಳಿಸಿ ಪೊಸತನಿಸಿ ರಲ್ಪವಿದಸಚ್ಯುತಂ (ಜೈಮಿಭಾ. ೬-೯೯). [ಮಿಸುನಿ + ಬಟ್ಟಲ್]

**ಮಿಸುನಿವಟ್ಟೆ**, ಮಿಸುನಿಪಟ್ಟೆ (ನಾ). ಪೀತಾಂಬರ ; ಜರತಾರಿ ವಸ್ತ್ರ : ಬಿಸಿನಿ ಬಿಸಿಲನುಟ್ಟಲೆಂಬಂತೆ ಬಿಗಿದುಟ್ಟ ಮಿಸುನಿವಟ್ಟೆ ಮಿಸುಗುತ್ತಿರೆ (ರಾಜಶೇ. ೫-೦೯ ಪ). **ಮಿಸುನಿಪಟ್ಟೆ** : ಆವ ದಿಕ್ಕಿನಲ್ಲಿ ನೋಡಲು ಥಳಿಥಳಿಸುವ ತೀವಿದ ಮಿಸುನಿಪಟ್ಟೆಗಳು (ಕಂಸವಿ. ೮-೯). [ಮಿಸುನಿ + ಪಟ್ಟೆ₃]

**ಮಿಸುನಿವತ್ತಿಗೆ** (ನಾ). ಚಿನ್ನದ ಕುಂದಣದ ಕೆಲಸ : ಓಲೆ ಮನ್ಮಥನ ಮನೋರಥಚಕ್ಕಿದ ಗಾಲಿಯಂತಾಗಲಂತದಱ ಮೇಲಿಟ್ಟ ಮಿಸುನಿವತ್ತಿಗೆ ಯೆಂದೆನೆ ಕಿವಿಯೋಲೆಯೊಪ್ಪಿದುವಾ ಸತಿಗೆ (ಶ್ರೀಪಾಂ. ೩-೩೨). [ಮಿಸುನಿ + ಪತ್ತಿಗೆ₁ (< ಪತ್ತುಗೆ)]

**ಮಿಸುನಿವಟೆ** (ನಾ). ಚಿನ್ನದ ಮಳೆ ; ಸುವರ್ಣವೃಷ್ಟಿ ; ಆ ಕುಶಲವತಿ ಕಟ್ಟಾಸೆಯಿಂ ತೊಟ್ಟನೆ ಮೆಟ್ಟನಿಟೆಯುತ್ತಾ ಮಿಸುನಿವಟೆ ಮಸಗಿದ ತೆಜಾವುದೆನೆ (ಶಕಿವಿ. ೬-೨೩೭ ಪ). [ಮಿಸುನಿ + ಮಟೆ]

**ಮಿಸುನಿವಾವುಗೆ** (ನಾ). ಚಿನ್ನದ ಪಾದುಕೆ : ಬೆಳ್ಳಡಿಯ ಬೆಳ್ಳಡಿಗೆ ಮಿಸುನಿವಾವುಗೆಯನೊಪ್ಪಿಸಿ (ರಾಜಶೇ. ೦೫೦-೦೪). [ಮಿಸುನಿ + ಪಾವುಗೆ]

**ಮಿಸುನಿವೆಟ್ಟು** (ನಾ). ಚಿನ್ನದಿಂದಾದುದೆಂದು ನಂಬಲಾದ ಪರ್ವತ : ಮೇರು : ಮಿಸುನಿವೆಟ್ಟುವೆ ನೀರ್ಮೊಗೆಯುಲೆಂದೊಸೆದು ನೀಡಿತೊ ಕಡಲಿಗೆರೆಡರ್ಪಿಸುವ ತೋಳ್ಗಳೆನಿಸೆ ಸಾಲಿಟ್ಟುದೊ ದಿವಿಜವ್ರಂದ (ಶಾಳ್ಳಶಾ. ೩೩-೩೮). [ಮಿಸುನಿ + ಬೆಟ್ಟು]

**ಮಿಸುನಿಸು** (ಕ್ರಿ). ೧. ಹೊಳೆ ; ಥಳಥಳಿಸು ; ಪ್ರಕಾಶಿಸು : ಮಿಸುಣಿ [ನಿ]ಪ ಪೊಂಗೆಜ್ಜೆ ಪರಿಪೂರ್ಣಚರಣ (ಕೀರ್ತನ. ೨೮-೪). ೨. ಕಂಗೊಳಿಸು; ಶೋಭಿಸು : ಮಿಸುಣಿ[ನಿ]ಪ ದೇವಹೂತಿ ಅಂಬುಧರ ಪೈಥೃತ ಕುಶಲ ಸುಕೃತ ಬೃಹತಿ ವೀತಾವ್ಯರು ವಸುಧೆಯೊಳಗೆ ಏಸು ಪುಣ್ಯ ಮಾಡಿದರೊ (ಕೀರ್ತನ. ೦೦-೦). [ಮಿಸುನಿ + —ಇಸು₃]

**ಮಿಸುಪು** (ನಾ). ೧. ಕಾಂತಿ ; ಪ್ರಕಾಶ ; ಹೊಳಪು : ಕೆಂಬಿಸಿಲ ಮಿಸುಪಿನಿಸು ಪಡುವಣ ದೆಸೆಗವಲಂಬಿಸಲೊಡರ್ಚಿದತ್ತಿನಬಿಂಬಂ (ಕಾದಂಸಂ. ೨೬೭) ; ಪಸರಿಸುವ ತನ್ನ ನಯನಪ್ರಸರಂ ಜನಪದನಬೇಂದುಮಂಡಲಮಂ ಭ್ರಾಜಿಸೆ ಬಳಸಿದ ನಕ್ಷತ್ರದ ಮಿಸುಪಂ ತಾಳ್ದಿದವು (ಪುಪಾಸೇ. ೯-೯). ೨. ಮನೋಹರತೆ ; ರಮ್ಯತೆ : ಅಮರ್ದಿನ ಪೊಸಸೋನೆಯ ಸುರಿದು ದೆಂಬಿನಂ ಪೇಟಿರ್ಮೊರ್ವಳ್ ಮಿಸುಪೆಸೆಯೆ ಪಾಡಿದಳ್ (ಸುಕುಮಾ. ೦೦-೨೩). [< ಮಿಸುಗು₂ + —ಪು₂]

**ಮಿಸುಪುದೋಱು** (ಕ್ರಿ). ಕಾಂತಿಯನ್ನು ಸೂಸು ; ಪ್ರಕಾಶವನ್ನು ಬೀರು : ಮಿಸುನಿಯ ಚಾವಡಿ ಎಸೆವ ರನ್ನದ ಲೋವೆ ಮಿಸುಪುದೋಱುವ ವಜ್ರಗಂಭ (ತಂಸಂಾ. ೦-೯೦). [ಮಿಸುಪು + ತೋಱು]

**ಮಿಸುಪೇಱು** (ಕ್ರಿ). ಹೊಳಪೇರು ; ಮಿಂಚು : ಅಸಮತರ ಕ್ಷುಧಾಗ್ನಿ ನೆಱೆ ನಂದೆ ಬಸಿಱ್ ಮಿಸುಪೇಱೆ ಪೊಂಗೆ . . . ದಂಪತಿಚಕೋರಚಯಂ ಸಲಿದಲ್ಲಿಗಲ್ಲಿಗಿಂತೆಸೆದುದು (ಕುಸುಮಾ. ೯-೩೩). [ಮಿಸುಪು + ಏಱು₁ (< ಏಱ್₁)]

**ಮಿಸುಮಿಲ್ಲಿ** (ನಾ). ಚೂರು; ತುಂಡು : ಉದಕದೊಳು ನನೆಹಿ ಮರ್ದಿಸಿದ ಸೊಜ್ಜಿಗೆಯ . . . ಹದನಱೆದು ಅಟ್ಟಳುಹಿ ಮಿಸುಮಿಲ್ಲಿಯಂ [ಶಾಕಾಂ. ಯಿಂ] ಕುಯಿದು ಚದುರಿಂದ ಘಟ್ಟವಾಲೊಳು ಹಾಕಿ ಪರಿಮಳಿಸೆ ತಾನೆ ಬೆಣ್ಣೆಯ ಪಾಯಸ (ಸೂಶಾ. ೩-೦೦); ಪುಸಿಯೇಕೆ ನಿಮ್ಮ ವರೆ ಯ್ಯೆಂದು ಬೇಗದಿ ಮುಸುಡುದೋಱವಡಿದ ನಾನು ಮಿಸುಮಿಲ್ಲಿ [ಶಾಕಾಂ. ಸಿಮಿಲಿ] ಮಾಡಿ ಕಂಡರಿಸಿಕ್ಕಿ ಪೋಗುವೆನು (ಕುರಾಸಾಂ. ೯-೦೦೬). [ ? ]

**ಮಿಸುಸೂತ್ರ** (ನಾ). (?) : ನಿಮಿಷಾರ್ಧದಿಂ ತನ್ನೀಪ್ಸಿತಕಾರ್ಯಮಂ ಮಿಸುಸೂತ್ರಮಂ ಮಾಡಿಕೊಟ್ಟುದಱಿಂ ತ್ರಿಲೋಕದೊಳಂ ತ್ರಿಕಾಲದೊಳಂ ಸಮ್ಯಕ್ತ್ವದಿಂ ಬಿಟ್ಟ ಹಿತಮಪ್ಪ ವಸ್ತು ಪೆಱತಿಲ್ಲಂ (ರತ್ನಕ. ೦-೨೩ ಪ). [ ? ]

**ಮಿಸ್ರ**, ಮಿಸರು (ನಾ). ಈಜಿಪ್ಟ್‌ದೇಶ ಮತ್ತು ಅಲ್ಲಿಯ ಜನಾಂಗ : ಮಿಸ್ರದೊಂಬತ್ತನೆಯ ಮಾರಿ ತಲೆದೋರಿತೇ ? (ಗೂರ್ಖ್ಶಾ. ೦೩-೩೨೨). **ಮಿಸರು** : ಈ ಸೀಮೆಯಿಂದ ಇಂಗ್ರೇಜ ಫೌಜು ಮಿಸರಿನ ಸೀಮೆಗೆ ಹೋಗಿ ಮುಸಲ್ಮಾನರ ಫೌಜಿಗೆ ಕುಮಕು ಮಾಡಿ, ಮಿಸರಿನ ಸೀಮೆಯನ್ನು ಫರಾಶೀಸರ ಕೈಯಿಂದ ಬಿಡಿಸಿದ ಕಾರಣ (ರಾಜೇಂದ್ರ. ೨೨೪). [ ← ಅರ. ಹಿಂ. ಮಿಸ್ರ; ಮರಾ. ಮಿಸರ ]

**ಮಿಸ್ರಾನಿ** (ನಾ). ಅಡುಗೆ ಮಾಡುವವಳು; ಅಡುಗೆಯವಳು : ಏನು ಚಂಪಾ! ರೊಟ್ಟಿಯನ್ನು ತಯಾರು ಮಾಡಿಕೊಡುವಿಯಾ ? ಮಿಸ್ ರಾನಿಯಾಗುವೆಯಾ ? (ಗಂಸಮು. ೦೫೬). [ ← ಹಿಂ. ಮಿಸರಾನೀ, ಮಿಸಿರಾಇನ್ ]

**ಮಿಸ್ರಿ** 'ಮಿಶ್ರಿ' ನೋ.

**ಮಿಹರಬ್** 'ಮಿಹಿರಾಬು' ನೋ.

**ಮಿಹಿಕಾಕರ** (ನಾ). ಹಿಮಕಿರಣಗಳನ್ನು ಹೊಂದಿದವನು ; ಚಂದ್ರ : ಇಹಪರಭೋಗವನೀವುದು ಮಿಹಿಕಾಕರವಾರವ್ರತಿಯುದವಸೆಯೊಳ್ ಬರೆ (ಶಾಂತ್ಯ. ೧-೦೭-೯). [ಸಂ.]

**ಮಿಹಿಕೆ** (ನಾ). ೧. ಮಂಜು ; ಹಿಮ ; ಇಬ್ಬನಿ : "ಪ್ರಾಲೇಯಂ . . . ಮಿಹಿಕಾ. ನೀಹಾರಃ — ಈ ೮ ಮಂಜು" (ಹಲಾಯು. ೦೦೭-೨೮). ೨. ಕರ್ಪೂರ. [ ಸಂ. ಮಿಹಿಕಾ ]

**ಮಿಹಿರ** (ನಾ). ೧. ನೇಸರು ; ಸೂರ್ಯ : "ಆದಿತ್ಯಃ . . . ಮಿಹಿರಃ, ವಿರೋಚನಃ . . . ತ್ರಯಿಾತನುಃ _ ಈ ೪೭ ಆದಿತ್ಯನ ಪೆಸರು" (ಹಲಾಯು. ೭-೩೭); ಮಿಹಿರ ಪ್ರದ್ಯೋತಿಸಂಧ್ಯಾಭವನ ಸಮಯದೊಳ್ ಪದ್ಮಿನೀಷಂಡದೊಳ್ ಪೊದಟ್ದು ಹಬಿರ್ವೆದರ್ೆಂಗುರಂ(?) ನೀರೊಳಗಣ ಮುಗುಳೊಳ್ ಸಿಲ್ಕಿ . . . ಇರ್ದತ್ತು (ಸುಕುಮಾ. ೩-೦೫). ೨. ಚಂದ್ರ. ೩. ಮೋಡ ; ಮುಗಿಲು. ೪. ಗಾಳಿ. ೫. ಮುದುಕ; ವೃದ್ಧ. ೬. ಎಕ್ಕದ ಗಿಡ. [ಸಂ.]

**ಮಿಹಿರನಂದನ** (ನಾ). ೧. ಸೂರ್ಯನ ಮಗ. ೨. ಕರ್ಣ : ಅಹಿತನಿಟ್ಟೆಳಕಳುಕಿ ಕೆಲದಲಿ ಮಿಹಿರನಂದನನೆಚ್ಚಡಂಬಿನ ಲಹರಿ ಮಸಗಿತು (ಕುಮಾರವ್ಯಾ. ೦೭-೪೭). [ಸಂ.]

**ಮಿಹಿರಬಿಂಬ** (ನಾ). ಸೂರ್ಯಬಿಂಬ ; ಸೂರ್ಯಮಂಡಲ : ಮಿಹಿರ ಬಿಂಬವ ಕಾಣದೀ ನೃಪಮಹಿಳೆಗಿದು ವಿಧಿಯೇ (ಕುಮಾ.ಶ. ೦೪-೭೨). [ಸಂ.]

**ಮಿಹಿರಾಧ್ವ** (ನಾ). ಸೂರ್ಯನು ಚಲಿಸುವ ಮಾರ್ಗ; ಆಕಾಶ : ಬಹುಧೂಮಲೇಖೆ ನಿಮಿರ್ದುವು ಮಿಹಿರಾಧ್ವದೊಳಾಂಜನೇಯನೊಡರಿಸೆ ಲಂಕಾದಹನಮಂ (ಕಂಠಾಪಿರಾ. ೦೧-೦೪೫). [ ಸಂ. ಮಿಹಿರಾಧ್ವನ್ ]

**ಮಿಹಿರಾಬು, ಮಿಹರಬ್** (ನಾ). (ಮಸೀದಿ ಮುಂತಾದ ಕಟ್ಟಡದ) ಬಾಗಿಲಿನ ಮೇಲುಭಾಗದ ಕಮಾನಿನಾಕಾರದ ರಚನೆ : ಇದರೊಳಗಿನ ಮಿಹಿರಾಬಿಗೆ ಚಿನ್ನದ ಮುಲಾಮು ಮಾಡಿದ್ದಾರೆ (ಮುಂಬಯಿ. ೭-೦೦೫). **ಮಿಹರಬ್ :** ಮಿಹರಬ್ ಹಜಾರದ ಪಶ್ಚಿಮಗೋಡೆಯಲ್ಲಿನ ಗೂಡು (ವ್ಯಾಪಕಸ್ತು. ೦೫೭). [←ಅರ. ಹಿಂ. ಮಿಹರಾಬ್, ಮೇಹರಾಬ್; ಮರಾ. ಮೇಹರಾಬ್, ಮೇಹರಬ್, ಮೇಹರಾಪ್ ]

**ಮಿಹಿಲಾಳು** (ನಾ). "ಕಿರಿಯು, ಕ್ಷುಲ್ಲಕ (?)" (ಬಸವ. ಕೋಶ); "ಪಟುಭಟ" (ಬಸವ. ಕ. ಕೋಶ) : ಆ[ಶಾಶಾಂ. ಅನು] ಮಿಹಿಲಾಳು ಭೋಜದೇವುಲಾಳು (ಬಸವ. ೩೨೭). 'ದೇವುಲಾಳು' ಪರಾ. [ ? ]

**ಮಿಳ್** (ಕ್ರಿ). ೧. ಅಲುಗಾಡು ; ಚಲಿಸು : 'ಮಿಳ್ಳಿಸು' ಪರಾ. ೨. ಹಬ್ಬು; ವ್ಯಾಪಿಸು : 'ಮಿಳ್ಳಿಚು' ಪರಾ. ☞ 'ಮಿಳ್ಳಿಸು', 'ಮಿಳ್ಳಿಚು' ಎಂಬ ಎರಡೂ ಶಬ್ದಗಳು ವ್ಯಾಪಕವಾಗಿ ಕವಿಗಳಿಂದ ಪ್ರಯೋಗಗೊಂಡಿವೆ. ಇವುಗಳಲ್ಲಿ 'ಇಸು' ಮತ್ತು 'ಇಚು' ಎಂಬುವು ಸೇರಿರುವುದರಿಂದ, ಮೂಲರೂಪವಾಗಿ 'ಮಿಳ್' ಶಬ್ದವು ಇದ್ದಿರಬೇಕೆಂದು ಊಹಿಸಲಾಗಿದೆ. ಇದಕ್ಕೆ ಕಾವ್ಯಪ್ರಯೋಗಗಳು ದೊರಕಿಲ್ಲ.

**ಮಿಳಕತ್** 'ಮಿಳಖತ್ತು' ನೋ.

**ಮಿಳಖತ್ತು, ಮಿಳಕತ್** (ನಾ). ಆದಾಯ ; ಉತ್ಪನ್ನ : ಕಾಕಾನ ಶ್ರೀಮಂತಿಕೆ ಅವರ ಖುದ್ದ ಮಿಳಖತ್ತಿನ ಆಸ್ತಿಯಲ್ಲಿದೆ (ದೀಕಹ. I, ೦೭). **ಮಿಳಕತ್ :** ನಮ್ಮ ಭಾಷೆಯಲ್ಲಿ ತೀರ ಹೊಂದಿಕೊಂಡು ಹೋದ ಮತ್ತು ಅನ್ಯದೇಶೀಯವೆಂದು ಗುರುತಿಸಲಾಗದ ಶಬ್ದಗಳೆಂದರೆ _ ಕಚೇರಿ . . . ಬಾಬತ ; ಮಿಳಕತ್ ; ಸರಕಾರ (ಶಾಕುಶಾ. ೦೭೩).

[ ←ಅರ. ಮಿಲ್ಕತ್ ; ಮರಾ. ಮಿಳಖತ್, ಮಿಳಕತ್, ಮಿಳಗತ್ ]

**ಮಿಳನ** 'ಮಿಲನ' ನೋ.

**ಮಿಳಮಿಳ** 'ಮಿಳ್ಮಿಳ' ನೋ.

**ಮಿಳಮಿಳನೆ** 'ಮಿಳ್ಮಿಳನೆ' ನೋ.

**ಮಿಳಿ, ಮಿಣಿ**[3] (ನಾ). ೧. ಚರ್ಮದ ಪಟ್ಟಿಗಳನ್ನು ಹೆಣೆದು ಮಾಡಿದ ಹಗ್ಗ; ತೊಗಲಿನ ಹಗ್ಗ : ನೂಚಿಪಾಡಿನ ಬಾಲಮಂ ಮುರಿದೊಡೇಂ ಮಿಳಿ[ಶಾಶಾಂ. ಣಿ]ಯುಕ್ಕುಮೆ ಕಣ್ಣಿಯುಕ್ಕುಮೆ (ಸಮಶ. ೯-೨೪೬); ಪೆಗಲೊಳ್ ತಗುಳ್ಚಿ ಮಿಳಿಗಳಂ . . . ಪುಗುತರೆ (ವೀಬಕ. ೯-೪೭); ಮಿಳಿ ಪೆಗಲೊಳ್ ಕೆಯ್ಯೊಳ್ ಸಂಬಳಿಗೋಲ್ (ಮುಹಾವೀ. ೯-೨೩). ೨. ಹಗ್ಗ; ಪಾಶ : ಲಲಿತಲತಾವ್ಯದುಶಾಖಾವಲಿ ಮಿಳಿಯಾಗೊರ್ವರೊರ್ವರಂ ತೂಗಿ . . . ಉಯ್ಯಲಾಡೆ (ಶಾಂತಿಪು. ೪-೯೭); ಸೌರಭೇಯಂಗಳ್ . . . ನಡುಕೋಡುವರಂ ನಟ್ಟ ಕೋಡುಗಳಂ ಮಿಳಿಯಂ ಕಟ್ಟಿ ಗೋಪಾಲಕರ್ ಕೀಟಿ ಸತ್ತು (ಅರ್ಜವೀ. ೪-೦೨೩ ವ); ಮರಿಚ ಮೌಕ್ತಿಕ ಲೋಹ ಹೇಮಾಭರಣ ಚರ್ಮ ದುಕೂಲ ಮಿಳಿ ಹಾದರಿಯ ಹೂವಿನ ದಂಡಗೇಕನಿವಾಸವೇಕೆ (ಕುಮಾರ. ೪-೪೪). ೩. ಆನೆ ಮುಂತಾದ ಪ್ರಾಣಿಗಳ ನಡುಕಟ್ಟಿಗೆ ಬಿಗಿಯುವ ತೊಗಲಿನ ಪಟ್ಟಿ; ಚೂಷೆ : ಮರುಚಾಪಮೆಂಬ ವಿಚಿತ್ರಾಂಬರದೊಂದು ಚಿನ್ನ ಮಿಳಿಯುಮಂ ಮಿಂಚೆಂಬ ಕೊಂಬುಮಂ ಕರಾಳವೆನಲ್ ಗರ್ಜಿಸಿದತ್ತಗಲ್ದಿನಿಯರಂ ಕಾರೆಂಬ ಮಾರದ್ವಿಪಂ (ಶಗಪ. ೪-೨೨); ಮಿಳಿ ಲತೆ ಗುಳಪೋ ಪತ್ರಂ ಫಳರಸಮೆ ಮದಾಂಬು (ಗಂಕ. ೭-೪೪); ಮದದಾನೆಯೊಂದು ಭೂಪನ ಗೃಹದೊಳ್ ಪಚಿದುದು ಹೊರಜೆಯು ಮಿಳಿಯುಂ (ಧರ್ಮಶ. ೩-೧೩). ೪. ಲೋಹದ ಸರಪಣಿ : ಮಿಳಿಯೊಳ್ ಮಾತಂಗಮಂ ಕಟ್ಟಿದೊಡೆ ನಿಲುಗುವಂತಲ್ಲದೆ . . . ಪಂಜಿಯೊಳ್ ಕಟ್ಟಿದಂದುಮ್ಮಳದಿಂ ಮತ್ತದ್ವಿಪಂ ನಿಂದಪುದೆ ಮರುಳೆ (ಧರ್ಮಾಮ್ಮ. ೦೧-೪೫); ಹೊನ್ನಮಿಳಿ ಸಹಿತ ತೆತ್ತಿಸಿದವಿಕ್ಕಿಲದಲಂದಜುಪತ್ತುಸಾವಿರ ಪಂಚ ಘಂಟೆಯ ಮತ್ತಗಜ ಶೃಂಗರಿಸಿತು (ಸಂಶಕ. ೨೦-೯೨). ೫. ಲಗಾಮು : ಮಿಳಿ[ಶಾಶಾಂ. ಣಿ]ಗಳಾದವು ಕುಹು ಸುತಾರಾವಳಿಗಳಮಳಪ್ರಣವವಾದುದು ಮೊಳೆಯು ಬಲುಚಿಮ್ಮಟಿಗೆ ಹಗ್ಗಕೆ ವರ ಷಡಂಗವುವು (ಕುಮಾ.ಕ. ೭-೭). ೬. ತೊಗಲಿನ ಹಗ್ಗದ ಮೇಲೆ ಹಾಕುವ ಒಂದು ಬಗೆಯ ತೆರಿಗೆ : ಮಗ್ಗದೆಚ[3] ತುಪ್ಪ ದಳ ಮಿಳಿ ಗುಳು ನೂಲು ಮುಖ್ಯವಾದಯೆಲ್ಲಾ ಅಪೂರ್ಬಾಯುಗೂಡಿ ಕಟ್ಟಿಕೊಟ್ಟು ಗುತ್ತಗೆಯು ಸಿಧಾಯ ಗದ್ಯಾಣ ನೂಱು ೧೦೦ (ಎಕ. XV, ಬೇಲೂರು. ೨೫೨-೭ ; 1298). ೭. (ಕರಾ) ಕೆಸುವಿನ ದಂಟು. **ಮಿಣಿ**[1]: ೧. "ಮಿಣಿ ಚರ್ಮಪಾಶಂ" (ಮುಂಗರಾ. ೯೪-೨೫); ಹೆಗಲ ಮಿಣಿ ಕೆಯ್ಯ ಸಂಬಳಿಗೋಲಿನೀಶ್ವರಂ. . . ಓರಿಯ ವೇಷಂಗೊಂಡು ಮನೆಯ ಮುಂದಂ ಸುಳಿಯೆ (ಕಂಶಾರ. ಹ. ೨೭೩-೦೪) ; ಬಿಡದೆ ಬೆಟ್ಟದರಲಿಗುಗಳ ನುಗ್ಗಡದ ಮುರಿಯಾಣಗಳ ಮಿಣಿಯಲಿ ಜಡಿದರಿಚಿದರು ಬಳಿಯ ಸುಬಳದಲಳ್ಳಿಗುಕ್ಕಿನಲಿ (ಕೊರಶಾ. ೭-೨೭-೨೮). ೨. ಮಿಣಿಯಿಲ್ಲದುಯ್ಯಲಾಡುತಿಹನು . . . ರಾಜೇಂದ್ರ (ಭರತ. ೦೯-೭೭) ; ಹತ್ತುಸಾವಿರ ಸನ್ನೆಗಳಿಂದ ಬಿಂಬವನೆತ್ತಿಸಿ ಬಂಡಿಗೈದಿಸಿದ ಕತ್ತದ ಮಿಣಿಗಳ ಜೋಡಿಸಿ ಜನರ ತಾನಿತ್ತೆಚಿವಲಿ ಸಿಲ್ಲಿಸಿದನು (ಗೋಮಕೇ. ೩-೪೦) ; ಜನರು ಹೆಗಲ ಮೇಲೆ ಕುಡ ಮಿಣಿಗಳನ್ನು ಹೊತ್ತುಕೊಂಡು . . . ಹೊಲಗೆಲಸಕ್ಕೆ ಹೋಗುತ್ತಿದ್ದಾರೆ (ಮುಂಜಾಕ. ೭). ೩. ಉಬಿದ ಮಿಣಿ ಮೊಗರಂಬ ಗದ್ದುಗೆ ಬಡಿಗೆಗಳ ಸೂತ್ರಿಕೆಯ ಕಬ್ಬಿಯ ಕಡಿಯಣದ ಕುಸುರಿಗಳೆಸೆದುದು ಕೂಡೆ ರಣಭೂಮಿ (ಕುಮಾ.ಕ. ೦೫-೭೦) ; ಕೊರಳ ಜೊತ್ತಿಗೆ ಸುರುಚಿರ ಚೆನ್ನ ಮಿಣಿ ಮತ್ತಾರದೊಳು ಪೊನ್ನಘಂಟೆಗಳು (ಅಂಜಕ. ೭-೯೮). ೪. ನೆಲವನ್ನು ಬಿಟ್ಟು ಅಂತರಿಕ್ಷದಲ್ಲೇ ತಿರುಗುವ ರೈಲುಹಾದಿಗಳೂ ಇವೆ. ಅಂತರಿಕ್ಷದಲ್ಲಿ ತೂಗುವ ಉಕ್ಕಿನ ಮಿಣಿಗಳೇ ಇವಕ್ಕೆ ಆಧಾರ (ಮಾಲಿಪ್ರ. I, ೨೭೯) ; ಬಂಡಿಗಳು ಉಕ್ಕಿನ ಮಿಣಿಗಳ ಸಹಾಯದಿಂದ ಕೆಳಗೂ ಮೇಲಕ್ಕೂ ಹೋಗಿಬರುತ್ತವೆ (ಅಪೂಕ. ೨೭೮) ; ಆ ನಾಯಿ . . . ಬಿಡಾರದಲ್ಲಿ ಕಟ್ಟಿ ಹಾಕಿ ಹೋದರೆ, ಕೂಗಾಡಿ ಒದ್ದಾಡಿ ಮಿಣಿ ಕಿತ್ತುಕೊಂಡು ಬರುತ್ತಿತ್ತು

(ಮಲಿವು. ೭). ೮. ತಂತಿಯು ಎಳೆಗಳಿಂದ ಮಾಡಿದ ಹುರಿ,-ಹಗ್ಗ. ವಿದ್ಯುತ್ತಿನ ಮಿಣಿ(cable)ಗಳಲ್ಲಿ ಒಳಕ್ಕೆ ನೀರು ಜಿನುಗದಂತೆಯೂ . . . ಇದರ ಹೊದಿಕೆಯನ್ನು ಹಾಕುತ್ತಾರೆ (ಜ್ಞಾಕೋ. III, ೦೨೫೦). ೯. ಒಂದರೊಡನೊಂದು ಸೇರಿಕೊಂಡಿರುವುದು ; ಹೆಣಿಗೆ : ಕಾವ್ಯ ಒಗಟಲ್ಲ, ಒಡಪಲ್ಲ, ರಸದ ಕಣಿ, ಭಾವದ ಮಿಣಿ (ಚಂದ್ರಶಾ. ಮುಮ್ಮುಖ).

[ ದೇ.॥ ತೆಲು. ಮಿಳಿ, ಮಿಳಿಗ ; ಕೋತ. ಮಿಳ್ಕ್ ]

**ಮಿಳಿಂದ** (ನಾ). ತುಂಬಿ ; ಭ್ರಮರ : ಪುಳಿಂದಂ ಮಿಳಿಂದನಂತೆ (ಪ)ವನಾನೀತಕುಸುಮಗಂಧಮನಾರಯ್ಯು ಎಡೆಮಾಡಿ ಬಂದು (ಪುಷ್ಪ.ಪು. ೫-೧೦೪೪) ; ವಾರಿಜಾಕ್ಷಿಯರು . . . ದೇವಾಯತನಕ್ಕೆದುತ್ತಿರೆ ತನುಗಂಪ ಚಾರುತರಮಂ ಕಂಡು ಭರದಿಂ ಮಿಳಿಂದಗಳು ತೊಳಪ ಮಂಜುಳರೂಪಮ ತೋರೆ (ಪಂಚಾ. ೦-೪-೪೯). [ ಸಂ. ಮಿಲಿಂದ ]

**ಮಿಳಿತ** 'ಮಿಲಿತ' ನೋ.

**ಮಿಳಿಮಿಳಿ** (ನಾ). ಒಂದು ಅನುಕರಣ ಶಬ್ದ : 'ಮಿಳಿಮಿಳಿಗಣ್' 'ಮಿಳಿಮಿಳಿನೇತ್ರ' ಪರಾ.

**ಮಿಳಿಮಿಳಿಗಣ್** (ನಾ). ರೆಪ್ಪೆಗಳನ್ನು ಒಂದೇ ಸಮನೆ ಬಡಿಯುವ ಕಣ್ಣು ; ಪಿಳಕಿಸುವ ಕಣ್ಣು : ಗಿಡಿಗಿಡಿಜಂತ್ರಂ ಮಿಳಿಮಿಳಿಗಣ್ಣಳೆನಲ್ ಸೋಂತಳಂತು ನೋನದೆ ಸುಖಕ್ಕೆ ಬಯಸಿದೊಡುಂಟೇ (ಸುಕುಮಾ. ೯-೬).

[ಮಿಳಿಮಿಳಿ + ಕಣ್ ]

**ಮಿಳಿಮಿಳಿತ** (ನಾ). ಷಂಡ ; ನಪುಂಸಕ : ಯಾರು — ಈ ರಾಮನಾಥನೆ? —ಬರೀ ಮಿಳಿಮಿಳಿತ (ಮುಯರುದಾ. ೨೪೫).

[ ←ಮರಾ. ಮಿಳಮಿಳೀತ=ನಿಸ್ಸಾರ ]

**ಮಿಳಿಮಿಳಿನೇತ್ರ** (ನಾ). = ಮಿಳಿಮಿಳಿಗಣ್ : ಜಯಮತಿಕಂತಿಯರ್ ಕಂತಿಯರಾಗೆ ತಪಂಬಟ್ಟು ಗಿಡಿಗಿಡಿಜಂತ್ರ[ಂ] ಮಿಳಿಮಿಳಿ[ಪಾಠಾಂ. ಳಮಿಳ] ನೇತ್ರವಾಗಿ ಘೋರವೀರತಪಶ್ಚರಣದೊಳ್ ನೆಗಟುತ್ತಿರ್ದರ್ (ವಡ್ಡಾರಾ. ೦೩೪-೩). [ಮಿಳಿಮಿಳಿ + ನೇತ್ರ]

**ಮಿಳಿಯಿಕ್ಕು** (ಕ್ರಿ). ಹಗ್ಗದಿಂದ ಕಟ್ಟು, — ಬಂಧಿಸು : ಒರ್ವ ಪೋರಿಗಳಾಗಿ ರಾಜಮಂದಿರದ ಸೀಯಬಾರದೊಳ್ ಪೊಣರ್ದು ಮಿಳಿಯಿಕ್ಕಿ ತೆಗೆಯೆಯುಂ ಕರಮೊಳಸೋರದೆ . . . ಪೋರ್ದು ಕೋದು (ಶಾಂತಿಪು. ೯-೪೬). [ ಮಿಳಿ + ಇಕ್ಕು ]

**ಮಿಳಿರ್.** ಮಿಳಿರು (ಕ್ರಿ). ೧. ಅತ್ತಿತ್ತ ಅಲುಗಾಡು : ಮುತ್ತಿನ ಬೆಳ್ಗೊಡೆಗಳ ಬಳಗದೊಳಗೆ ಚಾಮರತತಿ ಕೆಲದೊಳ್ ಮಿಳಿರ್ದು ತೊಳಗೆ (ಆದಿಂಪು. ೪೬೨ ರಗಳೆ). ೨. ತೂಗು ; ತೊನೆ ; ಹೊಯ್ದಾಡು : ಮಾಮರನಳ್ಳಿಗೊಂಬಿನೊಳ್ ಮಿಳಿರ್ವೆಳವಳ್ಳಿ ಬಾಲಮಲರ್ಗೊಂಚಲಿ ಕೇಸರಮೆಂಬಿನಂ ಮನಂಗೊಳೆ (ಅಜಿತ. ೭-೨೩) ; ಎಳಮಾವಿನಳ್ಳಿಗೊಂಬಂ ತಳ್ಪೊಯ್ದೆಳಸಿದ ವಸಂತದೂತಿಯು ಮಿಳಿರ್ವುಯ್ಯಲನಾಡುವಬಲೆ ಪಾಡಿದ ಳೊರ್ವಳ್ (ಕಾವ್ಯಾವ. ೨೪೨) ; ಮಿಳಿರ್ವ ಕುಹಳಾನೀಕಮುಮರ್ದ ಪೂಗಂಗಳಂ (ಉದ್ಭಟ. ೩-೬೮). ೩. ಬಾಗು ; ಬಗ್ಗು : ಚೆನ್ನ ಪಣ್ಗೊನೆಯ ಭರದಿಂ ಸನ್ನತಮಾಗಿರ್ದ ಬಾಳೆಸಸಿಯೊಳ್ ಮಿಳಿರ್ಗುಂ ತನ್ನ ಶಿಶುವಿಂಗೆ ಮೊಲೆಯಂ ಮನ್ನಿಸಿ ಬಾಗಿರ್ದ ಕೊಡುವ ಬಾಲೆಯ ತೆಱದಿಂ (ಜಾರಪು. ೦-೧೧೭). ೪. ಹೊರಳಾಡು ; ಉರುಳು : "ಮಿಳಿರ್ — ಸಮೃದ್ಧಾ (ವೃದ್ಧಿಯಾಗು). ಲುಠನೇ (ಹೊರಳಾಡು)" (ಶಮುಧಾ). ೫. ನೆಗೆ ; ಜಿಗಿ ; ಹಾರು : "ಮಿಳಿರ್ದುದೆನಲ್ಕೆ ನೆಗೆದುದು" (ಶಬ್ದಮಂ. ೦೪೪). ೬. ನಿಮಿರು ; ನಿಗುರು : ಮಿಳಿರ್ವನ್ನಂ ಕುಡಿವಾಲ ಮಮ್ಮಳಿಸುವನ್ನಂ ದಿಟ್ಟಿ . . . ತಿಳಿನೀರೂಡಿ ಮುರಾರಿ ವತ್ಸಕುಲಮಂ ಕಾದಂ (ಜಗನ್ನಾ. ೩-೭೦) ; ಮೋದದಿಂ ಮಿಳಿರ್ವನ್ನಂ ಕುಡಿವಾಲಮಮ್ಮಳಿಸುವನ್ನಂ ದಿಟ್ಟಿಗಳ್ ಸುರ್ಕಿ ಕೆಕ್ಕಳಿಪನ್ನಂ ಕಿವಿ ಪುಲ್ಗಳಂ ತಿಱಿದು ತಂದೂಡುತ್ತೆ . . . ಸಂಚರಿಸಿದರ್ ಗೋಪಾಲಲೀಲಾಸ್ಪದರ್ (ಪಿಶು.ಪು. ೫-೨-೦೫೭). ೭. ಚಾಚು ; ನೀಡು : ಮಿಳಿರ್ವ ನಾಲಗೆಯುರ್ಬಿದ ಪುರ್ವು . . . ಭೀತಿಯಂ ಪುಟ್ಟಿಸೆ ಬಂದು ಕಟ್ಟಿದಿರೊಳಿರ್ದನದೊರ್ವನಡುತ್ತು ಜಟ್ಟಿಗಂ (ಚಂದ್ರಪು. ೫-೭೦) ; ಬಳ್ಳಿಗಳ ಕುಡಿ ನಭಕ್ಕೆ ಮಿಳಿರ್ವೊಡಂ ಕುಟಿಗಳೊಳಗೊಱತು ನೀರ್ ಬರ್ಪೊಡಂ . . . ಇವ ನೋಡಿ ಪೇೞ್ ಮಟಿಯಧಿಕ ತಾನೆಂಬುದಂ (ಅಟ್ಟಮ. ೨-೦ ರಗಳೆ). ೮. ವ್ಯಾಪಿಸು ; ಹಬ್ಬು ; ಪಸರಿಸು : ಮಿಳಿರ್ವ ವಳ್ಳುರಿಯಲ್ಲದ ವಹ್ನಿ ಕಾಳಸಲ್ಲವ ಜವನಬ್ಧಿಮಧ್ಯಗತನಲ್ಲದ ಬಾಡವಂ (ಶಾ. V, ೫೨-೦೬ ; 1087) ; ಕಡೆಗಣ್ಣ ಕುಡಿಮಿಂಚು ಸಂಚಳಿಸಿ ಮಿಳಿರೆಯುಂ (ಪುಷ್ಪಪು. ೫-೩೪ ಪ). ೯. ಅಭಿವೃದ್ಧಿ ಹೊಂದು ; ಏಳಿಗೆಯಾಗು : "ಮಿಳಿರ್-ಸಮೃದ್ಧಾ (ವೃದ್ಧಿಯಾಗು), ಲುಠನೇ (ಹೊರಳಾಡು)" (ಶಮುಧಾ) ; "ಮಿಳಿತುದೆನೆ ವೃದ್ಧಿಯಾದುದಕೆ ನಾಮಂ" (ಶಬ್ದಮಂ. ೨೪). ೧೦. ಉತ್ಸಾಹಗೊಳ್ಳು : ನೀಱೆಯರ ನಿಡಿಯ ಕಡೆಗಣ್ಣೀಱಿಂದರ್ದ ಬರಿಯ ಬಱಕಮಲರಂಬುಗಳಿಂ ಮಾಱಿ ಮಿಳಿರ್ದಿಸದೆ ಮಸಕದೆ ತೋಱದೆ ಮಾಣ್ದಪನೆ ತನ್ನ ಸೊಬಗನನಂಗಂ (ಅಂಚಾವ. ೪-೪೭). ೧೧. ಹೆಚ್ಚಾಗು ; ಅಧಿಕವಾಗು : ಬೆಮರ್ ಮಿಗೆ ಮೂಡೆ ಸುಯ್ಯೆಲರ್ ಮಿಳಿರೆ . . . ಗಟ್ಟಿಗಳನ್ದು ಮುಗುಳ್ಚಿದ ರಿಂದುವಕ್ತ್ರೆಯರ್(ಗಿರಿಜಾ. ೨-೯೦) ; ಒಗೆದಳುರ್ದು ಮಿಳಿರ್ದ ಬಲದೊಳ್ ಪೊಗೆಯದೆ ಕಿಡಿಸೂಸದಸುಗೆಯೊಳದಳರ್ಗಳನಾಯ್ದುಗೆವೊಯ್ದಂತಿರೆ ನಾಲಗೆ ಸೊಗಯಿಸುವುರಿಮಾಲೆಯಂ ತಲೋದರಿ ಕಂಡಳ್ (ಅನಂತಪು. ೪-೦೨೫). ೧೨. ಹೊಳೆ ; ಮಿಂಚು ; ಪ್ರಕಾಶಿಸು : "ಮಿಳಿರೆ[ನೆ] ಪೊಳೆದುದು" (ರತ್ನಕೋ. ೦) ; ಮಿಳಿರ್ವ ಕುಡಿಮಿಂಚು ಸುರಧನು ತಳಿರ್ದೋರಣ . . . ಬಣ್ಣವಣಂ ಜಳದರವಮಾಗೆ ಜಯಮಂಗಳಸೂಚಕಮಾದುದತನುಗಾ ಘನಸಮಯಂ (ಚಂದ್ರಪು. ೪-೪೨) ; ಮಿಳಿರ್ವ ಕೆಂಬರಲೋಲೆಯಂ ಕಿವಿಗೆ ಸಾರ್ಚಿ (ಶಬ್ದರಾ. ೩-೪೭). ೧೩. ಹೊರಸೂಸು ; ಹೊರಚೆಲ್ಲು : ಪೊಳೆವಲರ್ಗಂಗಳಂ ಮಿಳಿರ್ದ ಬೆಳ್ಪು ರಸಾತ್ಮಕಮಾಗಿ ಗಂಡಮಂಡಳತಳ ದಿಂದಮಂದಿಱಿಯುತಿರ್ದುದು (ಕಾದಂಪು. ೭೯೯). ೧೪. ಶೋಭಿಸು ; ಕಂಗೊಳಿಸು ; ರಂಜಿಸು : ದೇವಸೌಂದರಿಯರ ದಿವ್ಯಮಪ್ಪ ಪೊಸಗಂಪಿ ನಲಂಪನವುಂಕಿಕೊಂಡುವಳ್ದಿರ ಮಿಳಿರ್ವೊಳ್ಗುರುಳ್ಗಳನೆ ಲೀಲೆಯಿನಾಡಿಸಿ . . . ಬೀಸಿದುದು ತಂಬೆಲರ್ (ಆದಿಪು. ೨-೬೫) ; ನಳನಳಿಸುವ ಕೆಂದಳಿರ ಕಾವಣಂಗಳುಮಂ ಮಿಳಿರ್ವ ಮಲ್ಲಿಕಾಮಂಟಪಂಗಳುಮಂ. . . ಲಲಿತಲತಾನಿಳಯಮ ನೊಳಗುಮಾಡಿ ಪಲವುಂ ನೆಲೆಯ ಚೌಪಳಿಕೆಗಳನಿಕ್ಕಿಸಿ (ಅರ್ಜುನವಿ. ೩-೧೦೪) ; ಮಿಳಿರ್ವ ಮಿಡಿಯು ಗಿಳಿಯ ನುಡಿಯ ಪರಿವ ಕಾಲ ಕರ್ಪುಗೋಲ ಚೆಲ್ವ ನಾಂತು (ಕಬ್ಬಿಗಕಾ. ೩೪೪ ರಗಳೆ). ಮಿಳಿರು : ೧೪. ನಗರವಲ್ಲೆಲ್ಲ ತಳಿರು ತೋರಣಗಳು ಮಿಳಿರಿದುವು (ನಾಗಕು. ೫೪).

**ಮಿಳಿಮಿಳಿರ್** (ದ್ವಿರುಕ್ತಿ) : ಮರುದಾಂದೋಳಿತ ಜಂಬೂತರುಶಾಖಾ ಹಸ್ತಕಿಸಲಯಂ ಮಿಳಿಮಿಳಿರುತ್ತಿರೆ ಸನ್ನೆಗೆಯ್ದು ತೋರ್ಪಂತಿ[ರಲೆಸೆದುವು ಪವನ]ಜಂಗೆ ದುರ್ಯೋಧನನಂ (ಗದಾಯುದ್ಧ. ೭-೪೩). **ಮಿಳಿರ್ದಾಡು**= ೧. ಅತ್ತಿತ್ತ ಅಲುಗಾಡು : ಕೇತನದ ಹರಿಗಳ್ ವಾತವ್ರಾತಂಗಳಿಂ ಮಿಳಿರ್ದಾಡೆ (ಶಾಂತಿಪು. ೩-೦೦೯) ; ಗುಡಿಯ ದಾಂಗುಡಿಗಳ್ ಮಿಳಿರ್ದಾಡುವಂತೆ ಕಣ್ಗೆಸೆದವು ತತ್ಪುರೋತ್ತಮನ ಪುಣ್ಯಮನೊಯ್ಯನೆ ಸೂಚಿಪಂತವೋಲ್ (ಸುಕುಮಾ. ೯-೨೦). ೨. ಹೊಯ್ದಾಡು ; ತೂಗು : ಮಿಳಿರ್ದಾಡುವ ನುಣ್ಪೆಳಿರೆಲ್ಲಿಯುಲ್ಲಿ . . . ಪಣ್ಗೊನೆಗಳವೆಲ್ಲಿಯುಲ್ಲಿಯೆನೆ ಸೋಲಿಸುಗುಂ ಬಿಡದಾವನಂ ಬನಂ (ಕಬ್ಬಿಗಕಾ. ೩೨). ೩. ಹಾರಾಡು ; ಜಿಗಿದಾಡು : ಎಳಗಿಳಿವಿಂಡಿನಂತೆ ಮಿಳಿರ್ದಾಡುವ ತುಂಬಿಯ ಬಂಬಲಂತೆ . . . ಸೋಲಿಸದೆ ಕಾಪನ ಕಬ್ಬಮುದಾರನಾದೊಡಂ (ಕಬ್ಬಿಗಕಾ. ೦೪).

[ದೇ.॥ ತಮಿ. ಮಿಳಿರ್ ; ಮಲ. ಮೆಟುಕ್ಕ ; ತುಳು. ಮೆಳಿ]

**ಮಿಳಿರು** 'ಮಿಳಿರ್' ನೋ.

**ಮಿಳಿರ್ಚು** (ಕ್ರಿ). ನಿಮಿರಿಸು ; ನಿಗುರಿಸು : ಕ್ಷೋಣೀಂದ್ರಕೇಳೀ ತುರಂಗಮಾ ಕುದುರೆಯುಂ ಕಾಣಾತುಂ ಧ್ವನಿಗೈದು ಪರಿತಂದು ಮೊಗಮುಮಾ ಘ್ರಾಣಿಸಿ ಮಿಳಿರ್ಚಿ ಕಿವಿಗಳನೊಡನೆ ಪೆಱದೆಗೆದು (ಕೃ.ಶಾ. ೨೫-೯).

[ಮಿಳಿರ್ + —ಚು₁]

**ಮಿಳಿಪೊಱ**[3] (ನಾ). ತೊಗಲಿನ ಹಗ್ಗದ ಕಂತೆ : ಮಿಳಿಪೊಱೆಯ ತೊಗಲ ಚೀರವುಂ ತೆಗೆದು ಲಡಿಗಿರಿಸಿ (ಶಾಕೋ.ಕೃ. ೬-೨೦). [ಮಿಳಿ + ಪೊಱ[3]]

**ಮಿಳಿಸುತ್ತು** (ನಾ). ತೊಗಲಿನ ಹಗ್ಗದ ಸುರುಳಿ : ಅಂತು ತಳರ್ದು ಸಡಗೊಂಡು ಮೊದಲೊಳ್ ಮಿಳಿಸುತ್ತಿಂಗಗ್ಗಳವಾಗಿ ಕಡು ಗೊರ್ಬಿಂ ಬಳೆದ ಪರ್ಮರಂಗಳ ತಿಂತಿಣಿಯೊಳಂ . . . ಬರ್ಪಾಗಳ್ (ಕಾದಂಬ. ೨೬೬). [ಮಿಳಿ + ಸುತ್ತು₂]

**ಮಿಳುಮಿಳ** (ನಾ). ಒಂದು ಅನುಕರಣ ಶಬ್ದ : 'ಮಿಳುಮಿಳನೆ' ಪರಾ.

**ಮಿಳುಮಿಳನೆ** (ಅ). ಎವೆ ಮಿಟುಕಿಸದೆ, ಕಣ್ಣು ಮಿಳುಕಿಸದೆ ಎಂಬರ್ಥದ ಒಂದು ಅನುಕರಣಾವ್ಯಯ : ಅಳಿಗಣ್ಣರಂತೆ ಮಿಳುಮಿಳನೆ ನೋಡುತ್ತುಂ (ಕೊ.ಶಂ. ೦೬೬-೧೯). [ಮಿಳುಮಿಳ + —ಅನೆ₁]

**ಮಿಳ್ತು** 'ಮಿಟ್ತು' ನೋ.

**ಮಿಳ್ಮಿಳ, ಮಿಳಮಿಳ** (ಅ). ಕಣ್ಣನ್ನು ಮಿಟುಕಿಸದೆ, ರೆಪ್ಪೆ ಬಡಿಯದೆ ಎಂಬರ್ಥದ ಒಂದು ಅನುಕರಣಾವ್ಯಯ : ತಕ್ಕರೂಕವರ್ದು ಕೊಂಡಾದರ್ಥಮುಂ ಪೊಟ್ಟು ಮಿಳ್ಮಿಳ ನೋಡುತ್ತುಂ (ಅಜಿ.ಪು. ೨-೦೫); ನೆಗಟ್ತೆಯ ಬೀರರೆಲ್ಲಂ ಬಡವರ ಒತರರಂತೆ ಮಿಳ್ಮಿಳ ನೋಡುತ್ತಿರೆ (ಶಂಕರಾ. ೬-೩೩೫). **ಮಿಳಮಿಳ**: ಬಳಮೆರಡುಂ ತನ್ನನೆ ಮಿಳಮಿಳ ನೋಡೆ (ಶಂಕರಾ. ೦೦-೬೦) ; ನಿನ್ನಯ ತಮ್ಮನ ನೆತ್ತರಂ ಭಯಂಗೊಳೆ ಪವಮಾನಸೂನು ತವೆ ಪೀರ್ದೆಡೆಯೊಳ್ ಕಲಿಕರ್ಣನೇಕೆ ಪೇೞ್ ಮಿಳಮಿಳ ನೋಡುತಿರ್ದಂ (ಶಂಕರಾ. ೧೩-೨೫).

**ಮಿಳ್ಮಿಳನೆ, ಮಿಳಮಿಳನೆ** (ಅ). = ಮಿಳ್ಮಿಳ : ಸಭೆಯೊಳ್ . . . ಮಿಳ್ಮಿಳನೆ ನೋಡುತ್ತಿರ್ದ ಬಲ್ಲಾಳ್ಗಳಿಲ್ಲಿ ಭರಂಗೆಯ್ದಪರ್ (ಗದಾಯು. ೩-೩೬) ; ಮನುವಂಶಮಹಾನಿಧಿ ಸೂೞ್ಪೋಗೆ ದುರ್ವಳಮನರಾಗಿ ಮಿಳ್ಮಿಳನೆ ನೋಡುತುಮಿರ್ಪುದೆ ಲೋಗರಂದದಿಂ (ಶರ್ಮಿಪು. ೯-೬೬) ; ತುಪ್ಪುಳ್ದಱಿದ ಕೋಳಿಗಳಂತೆ ಮಿಳ್ಮಿಳನೆ ನೋಡುತ್ತುಂ (ಭ್ರ.ಪು. ೩೫-೫೫ ವ). **ಮಿಳಮಿಳನೆ** : ಮಿಳಮಿಳನೆ ಕಣ್ಣು ಬಿಟ್ಟುಕೊಂಡೇ ಯೋಚಿಸುತ್ತಿದ್ದ (ಕು. ೦೦೯).

[ಮಿಳ್ಮಿಳ + —ಅನೆ₁]

**ಮಿಳ್ಮಿಳಸು** (ಕ್ರಿ). ಕಣ್ಣನ್ನು ಮಿಳುಕಿಸು ; ಎವೆ ಮಿಟುಕಿಸು : ಮೆಲ್ಲನೀಕ್ಷಿಸಲುಂ ಮಿಳ್ಮಿಳಿಸಿ ಕಣ್ದೆಱೆವ ತೆಱದೆ ಸಂಪಗೆಯ ಮಲ್ಲಿಗೆಯ ಮುಗುಳ್ಗಳುಳ್ಳಲರೆಪುಂ (ಶರ್ಮಿಪು. ೬-೨೬ವ). [ಮಿಳ್ಮಿಳ + —ಇಸು₂].

**ಮಿಳ್ಯಾಸ** (ಅ). ಬಹಳವಾಗಿ : ಹೆಚ್ಚಾಗಿ (?) : ಸುಡು ಸುಡು ಸಿರಿಯ ನಿನ್ನ ಹಸ್ತದೊಳೆ ದೀಕ್ಷೆಪಡೆವ ಸೈಬಲ್ಲಿಯ್ತು ನಮಗೆ ಸಿಡಿದು ಹೋದೆಯಲಾಹಾಹಾ ಯೆಂದು ಮಿಳ್ಯಾಸ ಮಿಡುಕುತಿರ್ದರು ಮೂವರತ್ತ (ಶರಿತ. ೬೯-೯೯). [ ? ]

**ಮಿಳ್ಳು** 'ಮಿಳ್ಳು' ನೋ.

**ಮಿಳ್ಳುಸು, ಮಿಣ್ಣಸು** (ಕ್ರಿ). ೧. ಅತ್ತಿತ್ತ ಅಲುಗಾಡು ; ಹೊಯ್ದಾಡು : ಪತಾಕೆಗಳ್ ಮಗುಟ್ದು ಮಿಳ್ಳುಸಿ ದಳ್ಳುಱಿದಾಡೆ (ಶಾಂತಿಪು. ೨-೮೨) ; ಕರೆಗಳ್ ಮಿಳ್ಳುಸೆ ಚಾಮರಂಗಳೆಲರಿಂದಂ ಪೆಲ್ಚಿನಿಂ ನರ್ತಿಸುತ್ತಿರೆ ನೀಳ್ದರ್ದ ಸೆಱಂಗು . . . ಬೆಳ್ದಂಗಳಂತಿರೆ ತೋಱತ್ತಿಸೆವೃತ್ತರೀಯಮವಸನಂ ರಾಜೇಂದ್ರ ಚಂದ್ರಾಂಕನಾ (ಕಾದಂಪು. ೨೮) ; ಪಸರಿಸೆ ಪೂವಲಿಗಳ್ . . . ಮಿಳ್ಳುಸೆ ಗುಡಿಗಳ್ (ಕಂಠಸೂ. ೩-೦೩೪) ; ಮಿಳಿರೆ ಸೆಱಂಗು ಮಿಳ್ಳುಸೆ ಕುರುಳ್ ತೊನೆಯುತ್ತಿರೆ ತಾರಹಾರಂ . . . ಪಾಡುತುಮುಯ್ಯಲಾಡಿದಳ್ (ಕುಸುಮಸೂ. ೧೦-೮೧೦). ೨. ಅಲುಗಾಡಿಸು ; ಅಳ್ಳಾಡಿಸು : ದಿಟ್ಟಿಸಿ ಕಿವಿಯ ಮಿಳ್ಳುಸುತಾರಿ ಪುಟನೆಗೆದ (ಕುಮಾರ. ೯-೯೬) ; ಪಲ್ಲುಗಳ ಕರಿಕಿರಿದು ಕಿವಿಗಳ ಮಿಳ್ಳುಸನು . . . ಮಟುಗಳ ಕಂಡು ಮುಳಲನು ಚೆಲ್ಲುವನು ಕಣ್ಗಳಗೆ (ಜಾತ್ರ. ೩೨-೨೫) ; ಕಿವಿಯ ಮಿಳ್ಳುಸುತ . . . ಬಾಲಂಗಳನ್ನೆತ್ತಿ ಹೊಸಬುರ ಸೊಗಡಿನಿಂದಲವ್ವಳಸುತ್ತ ಪಥದೊಳಗೆ ಗೋಕುಲದ ಹಿಂಡುಗಳ್ ಬರುತಿರ್ದವು (ಕುಲಂಗ. ೩೬-೩೨). ೩. ನೆಗೆ ; ಹಾರು ; ಚಿಮ್ಮು : "ಮಿಳ್ಳುಸಿ ತೆಂದು ನೆಗೆದುದು" (ಕಕಪ. ೬೬-೯೬೬). ೪. ನಿಮಿರು ; ನೆಟ್ಟಗೆ ನಿಲ್ಲು ; ನಿಗುರು : ನೆಗೆದ ಬೆನ್ ನಟ್ಟ ರೋಮಾಳಿ ಮಿ[ಪಾಠಾ. ಮೆ]ಳ್ಳುಸುವ ಬಾಲಂ ರೌದ್ರಕೋಪವುಂ ಬೀಱ (ಹಕಾ. ೬-೨೬) ; ಬಾಲ ಮಿಳ್ಳುಸಿರೆ ಚಳಸದಿರೆ ದಿಟ್ಟಿಯೊಳು ಚಿತ್ರವು . . . ನಭದಿಂದವನೀತಂದುದು ದಿವಿಜಗಜವು (ಜಾಳ್ಕಾ. ೩೬-೨೦). ೫. ಆವರಿಸು ; ಹಬ್ಬು : ಅಂತು ಕುರುಬಲದ ಕರಿಘಟೆಗಳಂ ನುಂಗುವಂತೆ ದೆಸೆದೆಸೆಗೆ ಮಿಳಿರ್ದು ಮಿಳ್ಳುಸಿದ ಸಿಂಗದ ಪಟಪಿಗೆಯುಂ . . . ಕಿಸುಪೊನ್ನ ರಥಮುಂ ಭಯಂಕರಾಕಾರಮಾಗೆ (ಶಂಕರಾ. ೦೦-೯೬ವ) ; ತೊಟ್ಟ ಗದ್ದಿಗೆಯ ಗರುಡವಕ್ಕದ ಕವಚದ ನವರತ್ನಕಿರಣಂಗಳ ಕಿತ್ತ ಕರವಾಳ ಬಾಯ್ದಾರೆಯೊಳ್ ಬಳ್ಳಿಗೊಂಡು ಮಿಳ್ಳುಸಿ ಪೊಳೆಯೆಯುಂ (ಅಸಂಪು. ೦೦-೮೫ ವ). ೬. ಹೊರಸೂಸು : ಹೊರಹೊಮ್ಮು : ದಳ್ಳುರಿಗಳ್ ಕಣ್ಕೊನೆಯೊಳ್ ಮಿಳ್ಳುಸೆ ಬಿಲ್ತೊಡಪೃತಸುರನಂದಿದಿರಾದಂ (ಉದ್ಭಟ. ೪-೬೩). ೭. ಸಾಗು ; ಮುಂದುವರಿ : ಅಂತು ಮುಳಿದು ಮಿಳ್ಳುಸಿ ದೆಸೆಯನವ್ವಳಸಲೊಡರಿಸುವರೆಸನಂ ಸೂತಂ ನೋಡಿ (ಶರ್ಮಿಪು. ೯-೬ ವ); ನುಡಿಸಿದರ್ ಬಳಿಕವಳ ಮಿಳ್ಳುಸುವ ಬಾಳ್ದಲೆಯ ಪೊಳ್ತು ಬಳಿಮಿಡಿದ (ಕಾಮೋಕ.೦೬೯-೩೬೯). ೮. ಹೊಳೆ; ಪ್ರಕಾಶಿಸು: ತಿರುವಂ ಮುಪ್ಪುರಿಗೊಂಡು ಮಿಳ್ಳುಸುವ ಮಿಂಚಂ ಮಾಡಿ ನೀಡುಂ ಭಯಂಕರಮಾಗೇಱಸಿಕೊಂಡು ಧನುವಂ . . . ನಿದಾಘಮುಂ ಬೆದಱ ಬೆಂಕೊಂಡತ್ತು ಮೇಘಾಗಮಂ (ಕಾದಂಬ. ೫೩೦); ಮಿಂಚು ಮಿಳ್ಳುಸೆ ಸುರಚಾಪಂ ಪೆಗೆಯೆ ಬೆಗಡುಗೊಂಡವರು ಸಂಪರಿಸಿ ಘನಾಘನಸಮಯಸ್ವರೂಪಮಂ ತಿಳಿಪಿ (ಕಂಠಸೂ. ೦-೮೦) ; ಮಿಯತ್ತಳದೊಳ್ ಮಿಳ್ಳುಸೆ ಚಿತ್ರಲೇಖೆ ನವವಿದ್ಯುಲ್ಲೇಖೆಪೊಲ್ಪಾಱದಳ್ (ಜಗಪು. ೦೬-೧೨೪). ೯. ಕಂಗೊಳಿಸು ; ಶೋಭಿಸು : ಮಿಳ್ಳುಸಿ ದಳ್ಳುಱಿದಾಡುವ ಜಿನೇಂದ್ರಶಿಶುವಂ ತಳದಿಂ . . . ರಾಗದಿನೆತ್ತಿಕೊಂಡಿಂದ್ರನ ದೇವಿ ಬಂದಳ್ (ಶಾಂತಿಪು. ೦೦-೬೪); ಮಿಳಿರ್ದು ಮಿಳ್ಳುಸೆ ವಾನರಕೇತನಂ . . . ಮಾರುತಿಯೇಱದೆ ತೇರದೇಂ ತಳರ್ದುದೊ ಧರೆ ಕಂಪಿಸುವನ್ನೆಗಂ (ಕುಂದಾಪು. ೦೩-೧೦೯); ಮಾಣಿಕಂಗಳ ಬೆಳಗಿನೊಡನೆ ಬಾಳಕನ ಮೆಯ್ಮೆಳಗು ದಳವೇಱ ಮಿಳ್ಳುಸಿದೊಡಳ್ಳುಱಿದಾಡುತ್ತುಂ ಕನಕ ಸರಸೀರುಹದೊಳೆ ಸಿರಿ ಮನಸಿಜನಂ ಪೆತ್ತು ಬಿಟ್ಟು ಪೋದಂತಿರೆ (ಅರ್ಕಶೀ. ೪-೯೫ ವ). **ಮಿಣ್ಣಸು** : ೧. ಮಿಣ್ಣಸಿ ಕುಚ ಗುರುಜಘನದಿಂ ನಡು ಬಳೆ[ಳ್ಕೆ] ಬಣ್ಣದುಟಿಗಳಲುಗುತಿರೆ ಹೆಣ್ಣುಗಳ್ಮುಂದಕೊಲೆದು ಗಂಧವರೆದರು (ಗೊಮ್ಮಟ. ೨-೬೯). [ಮಿಳ್ + —ಇಸು₂]

**ಮಿಳ್ಳುಱು** (ಕ್ರಿ). ೧. ಅತ್ತಿತ್ತ ಚಲಿಸು.—ಅಲುಗಾಡು : ಕುಡಿವಾಲಂ ನೆತ್ತಿಯೊಳ್ ಮಿಳ್ಳುಱಿಯೆ ಪೊಳೆಯೆ ಕೂರ್ದಾಡೆ . . . ಪಾಯ್ತಂದು ಮದ್ಯತ್ತದನಖಿಮಿದಳತ್ಕುಂಜರೇಂದ್ರಂ ಮೃಗೇಂದ್ರಂ (ಕಬಿಕ. ೩-೬೨); ನಂದಿಕೇತನಂ ಬಾಂದಳದಲ್ಲಿ ಮಿಳ್ಳುಱಿಯೆ . . . ನಡೆದಂ ಗಣಾಧಿಪಂ (ಭ್ರ.ಪು. ೨೦-೩೫). ೨. ಅಲುಗಾಡಿಸು : ಮಿಳ್ಳುಱಿಗು ಕಿವಿಗಳಲಿ ಕೇಳುತ ಹುಲ್ಲುಗಳ ನೆಱ ಕಚ್ಚಿ ಬಾಯಲಿ ಬಲ್ಲ ಪುರುಷರ ಪೋಲು ಮೇಲ್ನೋಗವಾಗಿ ಗೋವುಗಳು . . . ಲಕ್ಷ್ಮೀವಲ್ಲಭನ ನೋಡುತ್ತಲಿರ್ದವು ಚಿತ್ರದಂದದಲಿ (ಶಿಭಾಗ. ೧೦-೩೦-೫). ೩. ಹಬ್ಬು ; ವ್ಯಾಪಿಸು : ಮಿಳ್ಳುಱಿದು ಬಳ್ಳುವರಿವ ದಳ್ಳುರಿಯುಳುರ್ಕೆಯಿಂ ಗೋಪುರಂ ಸೀಳ್ದುಸೀ ಬಿಡೆ (ಭ್ರ.ಪು. ೦೩-೩೬ ವ). ೪. ಹೆಚ್ಚಾಗು ; ಅಧಿಕವಾಗು : ಅಪ್ರತಿಮಲ್ಲನೊಱಗಿದನರುಣಜಲದಲಿ ಮಿಳ್ಳುಱಿವ ಪೋಲುಸುರುಗಳ ಗದುಗದಿಪ ಕಂಠದಲಿ (ಶಿಭಾಗ. ೦೦-೫೬-೪೦). [ಮಿಳ್ + ಇಱು₂]

ವಿಂಶತಿಪ್ರಾಯಮಾಗಿ ಮೀಸಲ್ಗಳೆಯಲಿರ್ದ ಮನೋರಥದಂತೆ . . . ಪರಿವಿಂತದೊಳಿರಲ್ (ಶಂಪರ. ೧೧-೫). ೨. ಗಳಿಗೆಮುರಿ : ಮೆಲ್ದುಡಿಗೆಗಳಿಂ ಮೀಸಲ್ಗಳೆದುಡಿಗೆಗಳಿಂದಂ ನನಾಂದ್ರವಂ ಮನ್ನಿಸಿದಂ (ಅಜಿತ. ೪-೬೦). **ಮೀಸಲಳಿಗಳೆ** : ೩. ವಿಶಿಷ್ಟತೆಯಿಲ್ಲವಾಗು ; ವಿಶೇಷವಿಲ್ಲವಾಗು : ಹಳಸಿದಗ್ಗಳಿಕೆಗಳ ಮೀಸಲಳಿಗಳೆದ ಬಿರುದಿನ ಮಾನಭಂಗದ ಕಳವಳದ ಕನಸುಗಳಲಿದ್ದುದು ರಾಯನಾಸ್ಥಾನ (ಕುಮಾ.ಕ. ೧-೨೦).

[ಮೀಸಲ್ + ಕಳೆ$_1$]

**ಮೀಸಲ್ದೆಗೆ** (ಕ್ರಿ). ಮುಡಿಪಿಗಾಗಿ ಬೇರೆಯಾಗಿ ತೆಗೆದಿಡು, – ಪ್ರತ್ಯೇಕವಾಗಿ ತೆಗೆದಿರಿಸು : ಬಗೆಗಾಣರ್ಗೆಂದು ಮೀಸಲ್ದೆಗೆದನುವಿನೆರಟ್ಟಿಂಡಿ ಬೇಟಿರ್ಪುದು (ಶಶಿ. ೬-೬೦). [ಮೀಸಲ್ + ತೆಗೆ$_1$]

**ಮೀಸಲ್ಪಡೆ** (ನಾ). (ಆಪತ್ತಿನ ಸಮಯಲ್ಲಿ ಮಾತ್ರ ಬಳಸಲಾಗುವ, ಕ್ರಮವಾದ ಸೈನ್ಯದಿಂದ ಬೇರೆಯಾದ) ಕಾಯ್ದಿರಿಸಿದ ಸೈನ್ಯ : ತ್ರಿಶಿರಂಗೆ ಬೆಸಸು ಪೆರ್ಬಗಿಲ್ಗಳಂ ಬಲಿಸಿ ನಿಲ್ವಂತೆ ನಿರಿತ. ಮೀಸಲ್ಪಡೆಗಳಂ (ಶ್ರೀರಾಮ. ೬೫೬-೪೦೯). [ಮೀಸಲ್ + ಪಡೆ]

**ಮೀಸಲ್ವಾಯ್** (ನಾ). ಮೀಸಲಾದ ಬಾಯಿ ; ಚುಂಬಿಸದ ಬಾಯಿ : ಕವಿದು ಮಧುಪಾಳಿ ಕುಡಿವಾಸವಪಾತ್ರಂ ತಾನುಮೆಣೆ ಗಡೆನಗೆನುತಾ ರೂಪವತಿಯ ಮೀಸಲ್ವಾಯ್ ನಗುವವೊಲೆಸೆವುದು ರಾಗದೊದವಿನಿಂ ಬಂಧುಗೆಯಂ (ಪರ್ವತ. ೯-೨೫). [ಮೀಸಲ್ + ಬಾಯ್]

**ಮೀಸಲ್ವಾಯ್ದುಟಿ** (ನಾ). ಮೀಸಲಾದ ತುಟಿ ; ಅಚುಂಬಿತವಾದ ತುಟಿ : ಮೀಸಲ್ವಾಯ್ದುಟಿನಗೆ ಪೊಣಸೂಸದ ಕಣ್ ಬಳಸಲೆಳಸದೊಳ್ದೊಡೆ ಲಜ್ಜಾಭ್ರಾಸಮನೋಸರಿಸದ ಬಗೆ ಮಾಸರಮಾಯ್ತವರೊಳಡರ್ದ ಕೊಡಗೂಸುತನಂ (ಚಂದ್ರ. ೬-೪೯). [ಮೀಸಲ್ + ಬಾಯ್ದುಟಿ$_2$]

**ಮೀಸಲ್ವಾಸಿಗ** (ನಾ). ಮುಡಿಪಾಗಿ ಇರಿಸಿದ ಹೂವಿನ ದಂಡೆ : ಮಾಲೆಗಾರ್ತಿಯರ ಘಟ್ಟಿವಳ್ತಿಯರಂಗಪರಿಮಳದೊಳ್ ದಳಂಬಡೆದು ಮಡುಗಟ್ಟಿ ಪರಿವ ಮೀಸಲ್ವಾಸಿಗದೋಗರದಣ್ಪಿನ ಸೌರಭಸಂಗಮ ದೊಳೀಸುವಂತೆ ವಿಳಾಸದಿಂ ಮಸುಳ್ದು ಬಪ್ಪರ್ಗಳ್ (ಅನಂತ. ೬-೧ ಪ).

[ಮೀಸಲ್ + ಬಾಸಿಗ]

**ಮೀಸಲ್ವೋಗಿಸು** (ಕ್ರಿ). ಮುಡಿಪನ್ನು ನಾಶಗೊಳಿಸು ; ಮೀಸಲು ಮುರಿ : ಏಗುವೆನೇಗುವೆಂ ಕುಲವಂ ಕಲಂಕಿದಂ ಮುಗುಳಂ ಮೀಸಲ್ವೋಗಿಸಿದಂ ತೀವಿದಮೃತವಂ ತುಳುಂಕಿದಂ (ಶಂಪರ. ೦೨-೬೦).

[ಮೀಸಲ್ + ಪೋಗಿಸು]

**ಮೀಸು** 'ಮೀಯಿಸು' ನೋ.

**ಮೀಸೆ** (ನಾ). ೧. ಗಂಡಸಿನ ಮೇಲ್ದುಟಿಯ ಮೇಲೆ ಬೆಳೆಯುವ ಕೂದಲು ; ಶ್ಮಶ್ರು : "ಶ್ಮಶ್ರುವೆಂಬುದು ಮೀಸೆ" (ಹಲಾಯು. ೯೬-೩೬೦); ಕರ್ಪುರಂ ಕೈಕೊಂಡು ಕತ್ತುರಿಯಲ್ ಬರೆದಂತಪ್ಪ ವಿಕ್ರಾಂತತುಂಗನ ಮೀಸೆಗಳಾತನ ತೀವ್ರಪ್ರತಾಪಾನಳಧೂಮರೇಖೆಯಂತಾದುವು (ಶಂಕರಾ. ೨-೩೯ ವ) : ಕಸ್ತೂರಿಕಾಪಂಕದಿಂ ಬರೆದಂತಿರ್ದುವು ಮೀಸೆ (ಕೃಷ್ಣ. ೪-೬೬). ೨. ಹುಲಿ, ಬೆಕ್ಕು ಮೊದಲಾದ ಪ್ರಾಣಿಗಳ ಮುಖದ ಮೇಲಿರುವ ಬಿರುಸಾದ ಕೂದಲು: ಪುಲಿಯ ಮೀಸೆಯನಂಜದುಯ್ಯಲನಾಡಲಪ್ಪುದು (ರಹಸ್ಯ. ೧-೧೬೯) ; ಪುಲಿಗಳ ಮೀಸೆಯನುಯ್ಯಲಾಡಲೆ ನಂಜನೆಂಜಲಿಸಲುಮುಟ್ಟಿಯೆ ಕಾಳಕೂಟಮಂ (ಕಾವ್ಯಾ.ಪ. ೮೨); ಹುಲಿಯ ಮೀಸೆಯ ಹಿಡಿದುಕೊಂಡು ಒಲಿದುಯ್ಯಲೆಯಾಡುವಂತೆ (ಬಸವ. ೬೬೧ ಅ) ; ಹುಸಿದಾರ್ಭಟಿಸುವ ಹುಲಿಯ ಮೀಸೆಯ ಮಜ್ಜಾಶತಕ ಬಂದಲುಗಿಸುವಂತೆ (ಕೆಂಪರಾ. ೦೭-೨೪).

**ಮೀಸೆತಿಕ್ಕು** = ಮೀಸೆಯನ್ನು ತೀಡು, – ಮಾಲೀಸು ಮಾಡು : ಅಂಬಲಿ ಕುಡಿಯುವವನಿಗೆ ಮೀಸೆ ತಿಕ್ಕುವವರು ಇಬ್ಬರು (ಗಾದೆ). **ಮೀಸೆಬರು** = (ಆಲಂ) ಪ್ರಾಯಕ್ಕೆ ಬರು : ಮೀಸೆ ಬಂದ ಜವ್ವನದಂತೆ ಪೊತ್ತಿಸಿದ ಸೊಡರಂತೆ ದರ್ಶನದೆಂಟುಂಗದೊಳಂ ಮುನ್ನಂ ಸಂಪೂರ್ಣನಾಗಿ ನೆರೆದು (ಧರ್ಮಾಮೃ. ೧೧-೫). **ಮೀಸೆಬೋಳಿಸು** = ಮೀಸೆಯನ್ನು ತೆಗೆ : ದಿಬ್ಬಣಕ್ಕೆ ಬಂದ ಅವರ ಆನೆಗಳಿಗೆ ಹೊಟ್ಟೆಯುಬ್ಬುವಂತೆ ತಿನ್ನಿಸದಿದ್ದರೆ ನನ್ನ ಹೆಸರ ಬದಲು ಮಾಡಿರಿ, ನನ್ನ ಮೀಸೆ ಬೋಳಿಸಿರಿ (ಜನಪದ. ೦೬). **ಮೀಸೆಮಣ್ಣಾಗು** = (ಆಲಂ) ಅಪಮಾನವಾಗು ; ಅಪಮಾನ ಹೊಂದು : ಜಟ್ಟಿ ಜಾರಿ ಬಿದ್ದರೂ ಮೀಸೆ ಮಣ್ಣಾಗಲಿಲ್ಲ (ಗಾದೆ). **ಮೀಸೆಯ ಮುರಿ** = ಮೀಸೆಯ ತುದಿಯನ್ನು ತಿರುಚು : ಮುಳಿದು ಮೀಸೆಯ ಮುರಿದು ಹುಬ್ಬನು ಬಲಿದು . . . ಭಾರ್ಗವದತ್ತ ಬಾಣಕೆ ನೀಡಿದನು ಕರವ (ಕುಮಾ.ದ್ರೋ. ೦೩-೫೦). **ಮೀಸೆಯ ಮೇಲೆ ಕೈಯಿಳೆ** = (ಪೌರುಷದ ಸೂಚಕವಾಗಿ ಅಥವಾ ಸ್ಪರ್ಧೆಗಾಗಿ) ಮೀಸೆಯ ಮೇಲೆ ಕೈಯಿರಿಸು : ಗೌಡನ ಪಕ್ಷದ ಗರಡಿಯಾಳುಗಳು ಓಣಿಯಲ್ಲಿ ನಿಂತು ಮೀಸೆಯ ಮೇಲೆ ಕೈಯಿಳೆಯು ತೊಡಗಿದರು (ಶುಭ್ರ.ಹೆ. ೦೪೩). **ಮೀಸೆಯರ ಗಂಡ. ಮೀಸರಗಂಡ** = ಪರಾಕ್ರಮದ ಕುರುಹಾಗಿ ಮೀಸೆ ಬೆಳೆಸಿರುವವನಿಗೂ ಮೀರಿದ ಪರಾಕ್ರಮಿ ; ಶೂರರ ಶೂರ ; ಒಂದು ಬಿರುದು : ಮೀಸೆಯರ ಗಂಡ ಚಿಕ್ಕಬಮ್ಮರಯನಾಯಕನ ಮಗ ಹೊನ್ನಮಾರಯನಾಯಕನೂ . . . ಶಿಲಾಶಾಸನವ ಮಾಡಿಕೊಟ್ಟರು (ಎಕ. IX, ಬೆಂಗಳೂ. ೨೦-೧೧ ; 1342) ; ಮೀಸರ ಗಂಡನೆಂದೆಂಬ ಬಿರುದಿನ್ನಾಸೆಯಾಕಿವಳಿಗಾನಳ್ಕಿ ಪೈಸರಿಸಿದೊಡರಿನೃಪರೆಮ್ಮನು ಪರಿಹಾಸಕರನು ಮಾಡದಿಹರೆ (ಕುಶಾಲಾಂ. ೪೨-೦೬).

[ದೇ.ಶ ತಮಿ. ಮೀಚೈ, ಮೀಚೈ ; ಮಲ. ಮೀಶ ; ತುಳು. ಮೀಸೆ ; ತೆಲು. ಮೀಸ ; ಗೊಂಡಿ. ಮೀಸಾಂಗೆ ; ಕುರುಖ್. ಮಿಸೀ. ಮಿಚೀ]

**ಮೀಸೆಗಡಿ** (ಕ್ರಿ). (ಕೋಪದಿಂದ) ಮೀಸೆಯನ್ನು ಕಚ್ಚಿಕೊಳ್ಳು : ಕೇಳುತಿರ್ದನು ಕರ್ಣನಿಪನಾಭೀಳವಚನವನಧಿಕರೋಷಜ್ವಾಲೆ ರಘುಳಿಸೆ ಮೀಸೆಗಡಿದನು ತೂಗಿದನು ಶಿರವ (ಕುಮಾ.ಕ. ೯-೦೨) ; ವಾಸವಾರಿಯ ಕಣ್ಣುಗಳು ಕೆಂಡಸೂಸೆ ಬಾಯಲಿ ನೊರೆಗಳುಕ್ಕಲು ಮೀಸೆಗಡಿವುತ್ತಿರಲು ಹಲುಗಿರಿದೇಡಿಸಿದ ಹನುಮ (ತೊರವೆ. ೨೨-೧೧). [ಮೀಸೆ + ಕಡಿ$_1$]

**ಮೀಸೆಗೀಳ್** (ಕ್ರಿ). ಮೀಸೆಯನ್ನು ಕಿತ್ತು ತೆಗೆ : ಬಾಯನೊಡೆಬಡಿ ಮೀಸೆಗೀಳ್ ಕುರುಳ್ಗೊಯ್ದ . . . ಎನುತೆ ಜಟಿದಮರಕುಲವುಂ ಪೋಯೆನುತೆ ಬಪ್ಪಸುರರಂ ಕಂಡು (ಕಬ್ಬ. ೪೯-೪೯).

[ ಮೀಸೆ + ಕೀಳ್$_1$ (< ಕೀಟು$_1$) ]

**ಮೀಸೆದಿದ್ದು** (ಕ್ರಿ). ಮೀಸೆಯನ್ನು ತಿಕ್ಕು, – ತೀಡು : ಮೀಸೆದಿದ್ದುವ ಕೈಗಳಲ್ಲಿಂದೋಸರಿಸವರಸುಗಳ ಬೆಳ್ಳಿಲೆಯಿಮಾಸಿಕೊಂಬಾ ಕೈಗಳಲ್ಲಿಯೆ ನಿಂದವು (ಶಾಳ್ವ. ೩೬-೫೨). [ ಮೀಸೆ + ತಿದ್ದು$_1$ (< ತಿರ್ದು$_1$) ]

**ಮೀಸೆದೆಱೆ** (ನಾ). (ಪೌರುಷದ ಕುರುಹಾಗಿ) ಮೀಸೆಯನ್ನು ಹೊತ್ತಿರುವುದಕ್ಕಾಗಿ ವಿಧಿಸಿದ ತೆರಿಗೆ : ಪಾಡೊಳಗೆ ಮೀಸೆದೆಱೆಯಂ ಬೇಡಿಸುವಂ (ಅರ್ಜುನ. ೬-೫೯). [ಮೀಸೆ + ತೆಱೆ$_3$]

**ಮೀಸೆವೊಱು** (ಕ್ರಿ). (ಪರಾಕ್ರಮದ ಗುರುತಾಗಿ) ಮೀಸೆಯನ್ನು ಹೊಂದು : ಸಭಾವಳಯದೊಳೆನ್ನನೇಳಿಸಿದ ನಿನ್ನನನಾಕುಳಮೆನ್ನ ಚಟ್ಟರಿಂ ತಳವೆಳಗಾಗೆ ಕಟ್ಟಿಸದೆ ಮಾಣ್ದೊಡೆ ಕೆಮ್ಮ[ನೆ] ಮೀಸೆವೊತ್ತನೇ (ಶಬರ. ೨-೫೦) ; ಮೊಲೆವೆತ್ತ ತೈಲಜನನಿಯ ಕಲದೊಳ್ ರಂಜಿಪರೆ ಮೀಸೆವೊತ್ತಣ್ಣಂಗಳ್ (ಅಜಿತ. ೦-೬೫). [ಮೀಸೆ + ಪೊಱು]

**ಮೀಹ** (ನಾ). ೧. ಸ್ನಾನ ; ಜಳಕ: ಮೀಹಮಂ ತೊಱೆದು ಕಂಡರ್ಪನೆ ಮೆಯ್ಯೊಳ್ ಮಹಾಮಲವುಂ ತಾಳ್ದದ ಕಷ್ಟರಂ ಸವಣರಂ ಕಂಗೆಟ್ಟರಂ ಕಂಡು (ಧರ್ಮಾಮೃ. ೦-೧೧೬); ತೊಡೆಯನೇಱಿದಳಂಬಿಕಾಮಾತೆ ವ್ಯಾಜದಿಂ ಜಡಮನಿತೆ ಶಿರವನಡರಲ್ ಮೀಹ ತಡೆಯೆ ತಲೆ ಜಡೆಗಟ್ಟಲು

(ಛಾಪಸಂ. ೮-೨); ಎಣ್ಣೆಯಿಲ್ಲದ ಮೀಹ ಸುಣ್ಣವಿಲ್ಲದ ವೀಳೆ . . . ಮೞಲೊಳಗೆ ಎಣ್ಣೆ ಹೊಯಿದಂತೆ (ಶರ್ಣೋ. ೧೬೨೦). ೨. ರಜಸ್ವಲೆಯು ನಾಲ್ಕನೆಯ ದಿನದಲ್ಲಿ ಮಾಡುವ ಸ್ನಾನ ; ಋತುಸ್ನಾನ: 'ಮೀಹಂದಪ್ಪು' ಪರಾ.

**ಮೀಹದ ಮನೆ** = ಸ್ನಾನಗೃಹ; ಬಚ್ಚಲುಮನೆ: ಅವನಿಸುರನಿರು ಳೊಂದು ಪಶುವಿನ ಹಿಂದೆ ಹೋಗುತ ಮುಂದೆ ದೂಳಯ್ಕಗಳ ಮೀಹದ ಮನೆಯ ಕೆಲದಲ್ಲಿ ಮಿಂದಯಿಪ ಜಲಪಂಕ ಊರುಗಳೊಂದಿ ನೆನೆಯಲು (ಬಸವ. ೩೬-೩೨). [ಮೀ$_1$ + —ಹ$_2$ (<—ಪ$_2$)]

**ಮೀಹಂದಪ್ಪು** (ಕ್ರಿ). ಋತುಸ್ನಾನದ ಅವಸ್ಥೆಯನ್ನು ಮೀಱು: ಮುಟ್ಟು ನಿಲ್ಲು : ನಾಲ್ವತ್ತೆರಡಾ ಪ್ರೌಢಾಸ್ಪದಮಾಕೆಗೆ ಮೀಹಂದಪ್ಪ ದಂಗನೆಗಂ ಮೇಲೆ ಲೌಲ್ಯಗಬ್ದಂ ಪಸಿತೆ (ಸುಲಕಿ. ೭-೨). [ಮೀಹ + ತಪ್ಪು$_1$]

**ಮೀಹಣ** (ನಾ). = ಮೀಹ ೧ : ವರಮೀಹಣದ ಗೃಹವ ನೋಡುತ್ತ ಬಿಜ್ಜಳ ಧರಣಿಪನ ರಾಣಿವಾಸವ ನೂಱಯಿಪ್ಪತ್ತು ಬೇಱಬೇಱೀಕ್ಷಿಸುತ್ತ ಮುಂದೆ ಬರೆ (ಶ್ರೀಶಾ. ೨೦-೯); ವೈದ್ಯಶಾಸ್ತ್ರವನ್ನು ಚೆನ್ನಾಗಿ ತಿಳಿದಂಥಾ ವೈದ್ಯನು ಎಣ್ಣೆಯ ಪ್ರಮಾಣವಂತು ಮೀಹಣವ ಮಾಡಿಸುವುದು (ಸಕಲ. ೩೦). 'ಮೀಯಣ' ಪರಾ. [ಮೀಹ + —ಅಣ]

**ಮೀಳಿತ** 'ಮೀಲಿತ' ನೋ.

**ಮೀಳಿತಾಲಂಕಾರ** 'ಮೀಲಿತಾಲಂಕಾರ' ನೋ.

**ಮೀಱಿತ** (ನಾ). ಉಲ್ಲಂಘಿಸುವಿಕೆ ; ಅತಿಕ್ರಮಿಸುವಿಕೆ: ಬಗೆವಡೀ ಕನಸು ಗುರುವಾಜ್ಞೆಯಂ ಮೀಱಿತಕ್ಕೊಗೆವ ಕೇಡಿಂಗೆ ಸೂಚನೆ (ಪಕಳ. ೬-೫೬). [< ಮೀಱು + — ತ$_2$]

**ಮೀಱಿಸು**, ಮೀರಿಸು (ಕ್ರಿ). ೧. ಉಲ್ಲಂಘಿಸು ; ಅತಿಕ್ರಮಿಸು: ಲಲನಾಸಂಭೋಗರೋಗಂ . . . ಸಲೆ ಲಜ್ಜಾಭಾವಮಂ ಮೀಱಿಸುತುಮಿದೆ (ರಣ್ಣಕ. ೨೬). **ಮೀರಿಸು** : ೨. ಹಿಂದೆ ಹಾಕು; ಸೋಲಿಸು : ಎಲೈ ಅಗ್ನಿಯೆ . . . ನೀನು ಸಾಮರ್ಥ್ಯದಲ್ಲಿ ಉಳಿದ ದೇವತೆಗಳೆಲ್ಲರನ್ನೂ ಮೀರಿಸಿದ್ದೀಯೆ (ಋಗ್ವೇದ. ೨೬); ದೇಹದಾರ್ಢ್ಯದಲ್ಲಿಯೂ ನನ್ನನ್ನು ಮೀರಿಸಿದ್ದನು (ತಂಗಾಳಿ. ೯೦). [ಮೀಱು + — ಇಸು$_1$]

**ಮೀಱು**, ಮೀರು (ಕ್ರಿ). ೧. (ಮಾತು, ಅಪ್ಪಣೆ, ಆಣೆ, ವಿಧಿ ಇತ್ಯಾದಿಗಳನ್ನು) ಅತಿಕ್ರಮಿಸು; ಉಲ್ಲಂಘಿಸು: "ಮೀಱು—ಅತಿಕ್ರಮಣೇ" (ಶಮಂದ) : ಕಱುಂ ವೃತ್ತಿಗಳನಿಪಂ ಮೀಱಿದರಲ್ಲರ್ ದ್ವಿಜನ್ಮರ್ (ಆದಿಪು. ೦೩-೦೪); ದೆಯ್ವಮನಾರಯ್ಯ ಮೀಱಿ ಬ್ರಾಟಲ್ ನೆಱೆವರ್ (ಶಂಶಲಾ. ೪-೩); ನುಡಿಯದೆ ಪೋಗಲೀಯೆನೆಲೆ ಪೋದೊಡೆ ಧೂರ್ಜಟಿಯಾಣೆ ಮೀಱಿ [ಪಾಠಾಂ. ಮಿಕ್ಕು] ಪೋದೊಡೆ ಕಲಿಭೀಮನಾಣೆ (ಗದಾಯು. ೪-೪೫); ಓಂ ನಮ ಶಿವಾಯ ಎಂಬ ಮಂತ್ರವ ಮೀಱಲಮ್ಮದೆ ನಿಂದುದು ವೇದ (ಬಸವ. ೮೦). ೨. (ಸ್ಥಳ, ಸೀಮೆ ಇತ್ಯಾದಿಗಳನ್ನು) ದಾಟು; ಹಾದು ಹೋಗು : ನಿರವದ್ಯನೆಂಬ ಮಂತ್ರಿ ಮಾರ್ಕಂಡು ನೀನೀ ಸ್ವಯಂಬರ ಮಂಟಪಮಾರ್ಗಮಂ ಮೀಱಲಾಗದೆನೆಯುಂ (ಶಾಪುಂಜ. ೩೬). ೩. ಪ್ರತಿಭಟಿಸು ; ವಿರೋಧಿಸು: "ತಳ್ಪೊಯ್‌, ತಡಂಬರೆ . . . ಮೀಱು, ತೊಡರ್, ಉರ್ಕ್ಕೇರ್, ಮಿಗು, ತಡಂಬೊಯ್—ಈ ೨೫ ಪ್ರತಿಹತಕ್ಕೆ ಪೆಸರ್" (ಶಶಸಾ. ೩೯-೨೯೬); ಪರಮಂಡಳವ್ಯಸನಮನಾರಯ್ದು ಮಪ್ಪುಡಿತಪ್ಪಂತೆತ್ತಂ ಬಾಟ್ಟಿ ಮಂಡಲಮಲ್ಲದೆ ಕೀಱಯುಂ ಮೀಱಿಯುಂ ನೆಗಟ್ಟ್ವಿ ಮಂಡಲಮಿಲ್ಲ (ಶಂಶಲಾ. ೬-೬೬೫); ಆಱು ಪ್ರಜೆಯತ್ತಿಗೆಯರ ಮೀಱಿ ಲಾವೆನು ತಾಯೆ (ಸುಹಾದೇ. ೨. ೦೪೩-೩೨೮). ೪. ಮುನ್ನುಗ್ಗು; ಧಾವಿಸು; ಮುಂದೆ ಹಾಯು: ಕದನದೊಳಿದಿರಂ ಮೀಱಿ ಮಾಱಾಂತು ನಿಂದಾಂತರಿ ಭೂಪರ್ ಭಸ್ಮಮಾದರ್ (ಕಾವ್ಯಸಾ. ೨೦೫ ಕೂಡ್ರಳ); ಮೀಱುವ ಹಯವ ಮುಱಿಯೆನುತ . . . ರಾವುತರ ಶಿರವನೆಚ್ಚನು ಕೋದನೀಪರಿ ಹತ್ತು

ಸಾವಿರವ (ಕುಮಾಳ. ೩-೪). ೫. ಉದ್ಧಟತನವನ್ನು ತೋರು : ದರ್ಪದಿಂದ ಕೂಡಿರು; ಅಹಂಕಾರಪಡು : ಮೀಱುವಸುರಾಳಿ ದೈವವ ತೂಱುವವನೆಂದು ಮೀಱಿದವರಿಗೆ ತನ್ನ ಸೂಱೆಗೊಡುವವನೆಂದು ಅನುದಿನಾಗಮವು ಹೀಗೆನುತಿರಲು ಕೇಳಿದೆಂ (ರೀಸ್ಥಾಕೋ. ೩-೩೦); ಮೀಱಿದ ದೈತ್ಯನುಪಟಳವ ಈಗ ಮಾಣಿಸು (ಕುಮಾಕ್ರೋ. ೦೯-೬೬); ಮೀಱಿದ ಜಕ್ಕಮನ್ನೆಯನ ಮೇರೆಯಿಲ್ಲದ ಜಲವಾರಿಧಿಯನು ಮೋದಿದಾರುಭಟೆಯನೇವೇಳ್ವೆ (ಕಂಸವಿ. ೩-೩೪). ೬. ಜಯಿಸು ; ಗೆಲ್ಲು : ಪುತ್ರವಿಮೋಹ ಮನಾರೊ ಮೀಱುವರ್ (ಸುಕುಮಾ. ೧೦-೩೨); ಕಾಲನನು ಮೀಱುವರಾರು (ಕುಮಾಕ್ರೋ. ೭-೩೩). ೭. ನುಣುಚಿಕೊಳ್ಳು; ತಪ್ಪಿಸಿಕೊಳ್ಳು: ಹಿಡಿವೆನೆಂದೊಡೆ ಹಿಡಿಗೆ ಬಾರನವ್ವ . . . ತಡೆವೆನೆಂದೊಡೆ ಮೀಱಿ ಹೋದನವ್ವ (ಸುಹಾದೇ. ೨. ೯೩-೯೬); ಸರಳಂ ಮೀಱುತೆ ಹರಿಣಂ ಸರಳಿಸಿ ತೈದಾಱನೇಳನೆಂಟೊಂಬತ್ತಂ (ಗಿರಿಜಾ. ೦-೯೦); ಮೂಱು ಗೋದಾನಕ್ಕೆ ದಕ್ಷಿಣೆ ಮೂಱುಹುದು ಕೇಳಿಂದು ರುಷಿಮತ ಮೀಱದೇವುದು (ಸಂಶಕ. ಶಂ. ೦-೨೪). ೮. ಉಪೇಕ್ಷಿಸು ; ನಿರ್ಲಕ್ಷಿಸು : ಅದಱಿಂದೆ ಧರ್ಮಪದ್ಧತಿಯ ನೀಕ್ಷಿಸಲಿವಳನಿಂದು ಮೀಱುವುದು ಮತವಲ್ಲೆಂದ (ಕೈಮಿಶಾ. ೧೦-೨೦). ೯. ಉಲ್ಲಂಘನೆಯಾಗು : ಅಂತು ಕಾರಣವಾತ ಮಾಡಿದನಂತರಿಸದಾ ಸಂಜೆ ಕರ್ಮವನಂತದಕೆ ಫಲವಾಯ್ತು ಸಂಧ್ಯಾಕಾಲ ಮೀಱದಿರೆ (ಸಂಶಶ. ೬-೫೬). ೧೦. ಹೆಚ್ಚಾಗು; ಅಧಿಕವಾಗು : ದ್ವಯವಿಡಿದುದಕ್ಕೆ ಎರಡಿಲ್ಲದೆ ಮೀಱಲಿಲ್ಲವಾಗಿ ಜಗವನಱಿವುದಕ್ಕೆ ದಿವಾರಾತ್ರಿಯಲ್ಲದೆ ಮೀಱಿ ತೋಱಲಿಲ್ಲವಾಗಿ ಸಂಸಾರವ ಹಱಿವುದಕ್ಕೆ ನಿಃಕಳಂಕ ಮಲ್ಲಿಕಾರ್ಜುನನಲ್ಲದಿಲ್ಲವಾಗಿ (ಪೋಳಪು. ೦-೦); ಮೀಱಿದ ಖೇದಮುಂ ಮುದಮುಮೊರ್ಮೆಯೆ ಕೋಕಚಕೋರಕೋಟಿಗಿಂತೇಱಿದುದು (ಕವಿಸುಶಾ. ೧೦-೦೦). ೧೧. ಶ್ರೇಷ್ಠವಾಗು ; ಮಿಗಿಲಾಗು ; ಮೇಲಾಗು : ಮಾರ್ಗಕ್ರಿಯಾಲಿಂಗವಿಡಿದು ಮೀಱಿದ ಕ್ರಿಯಾಲಿಂಗಸಿದ್ಧಿ ಮೀಱಿದ ಕ್ರಿಯಾಲಿಂಗವಿಡಿವು ಕ್ರಿಯಾನಿಷ್ಪತ್ತಿಲಿಂಗಸಿದ್ಧಿ (ಬಸವ. ೮೬೬); ಸಲೆ ಸಮುನ್ನತ ಸನ್ನುತಿಗಳ್ಗೆ ಮೀಱಿದುದ್ವಾಕ್ಯಳಿಕಾಳಿ . . . ಒಪ್ಪೆ ಶಿವೆಯಂ ನಲಿದರ್ಚಿಸು ತೊಪ್ಪಿದಂ ನೃಪಂ (ಉದ್ಭಟ. ೪-೩): ಮೂರ್ತಿವ್ರಾತಮಂ ಮೀಱಿದ ಮಹಾಶಿವಮೂರ್ತಿಯಂ ಮತ್ತೆ ಖ್ಯಾತಲಿಂಗಸುಮೂರ್ತಿಯಾಗಿರಲೋತು ನಿಯಮಿಸಿ (ಬಸಪು. ೩೯-೦೪). ೧೨. (ಹರ್ಷೋದ್ರೇಕವನ್ನು) ತಡೆ; (ಸಂತೋಷಾತಿಶಯವನ್ನು) ನಿಗ್ರಹಿಸಿಕೊಳ್ಳು: ಅಂತು ಕಂಡು ಮೀಱಲಾಱದಿಂತೆಂದಂ (ಆದಿಪು. ೦೨-೩೦೮). ೧೩. ಹಿಡಿತಕ್ಕೆ ಸಿಕ್ಕದಿರು ; ಅಲಭ್ಯವಾಗು : ನಾಂ ತಳೆವೆನಾರ್ಪಿಂದೆ ವಿಜಯಮಂ ಮೀಱಿದೊಡೆ ಭವಾಂತರವನೈದಿಸದ ಮುಕ್ತಿಯಂ ಪಡೆದಪೆಂ (ಕೈಮಿಶಾ. ೧೦-೦೨) ; ಬೇಱೂರ ಸ್ನೇಹಕ್ಕೆ ಹಾಱಿ ಹೋಗುವನೆಗ್ಗ ಮೀಱಿದ ಶೂಲದ ಹೆಣಕೆ ನರಿ ನೆಗೆದು ಬಾಯಾಱಿ ಸತ್ತಂತೆ (ಸರ್ವಜ್ಞ. ೦೮೮೮). **ಮೀರು**: ೧. ಅವರ ಮಾತು ಮೀರಿದ ದೋಷಕ್ಕೆ ನಾವು ಪಾತ್ರರಾಗುವೆವು (ಮುದ್ರಾಮಂ. ೪-೪೮); ತಾರತಮ್ಯವರಿಯದವ ದೊರೆಯಲ್ಲ, ಮಾತು ಮೀರಿದವ ಸೇವಕನಲ್ಲ (ಗಾದೆ). ೨. ದಿಟ್ಟಿಯನೆ ಮಿಕ್ಕು ಮೀರುವ ಜವದಿ ಮುಟ್ಟಿ ಮುಟ್ಟದೆ ನೆಲಂ ಮೆಟ್ಟಿ ಮುಂಚುವ ಹರಿಣಶಿಶುವ ಸೌಂದರ್ಯಕ್ಕೆ ಬಗೆಸೋತು . . . ತೆಕ್ಕನೆಯೆ ಬೆಂಬತ್ತಿದಳ್ ಕನ್ಯೆ (ಶಕುಂಗ. ೩-೬೬); ಮೇರೆಯ ಮೀರದೆ ಚಲಿಸುವ ಧಾರಿಣಿಯಂ ಪೊತ್ತು ಪೊರೆವ ಕಾರಣದಿಂದಂ ಗೌರವ ಮಹಿಮಾಸ್ಥೈರ್ಯರ್ ಧಾರರ್ ಶೇಷಂ ಹಿಮಾಚಲಂ ನೀನುಂ ದಲ್ (ರ್ಯಮ್ಯರೋ. ೨೪೪). ೧೦. ಪಟ್ಟಿಳತ್ತು ಲಿಪಿಯ ಚರ್ಚೆಯಲ್ಲಿ ನಿಜಾಂಶಕ್ಕೂ ಮೀರಿದ ಗಾಳಿ ಸವಾರಿಯ ಚಕಮಕಿಯಿದೆ (ಲ್ಯಾಪಿ. ೫೬).

[ದೇ. ತಮಿ. ಮೀಱು, ವೀಱು ; ಮಲ. ವೀಱು ; ತುಳು. ಮೀರು ; ತೆಲು. ಮೀರು, ಮೀಱು ; ಗೊಂಡಿ. ವೀರಾನಾ; ಕುಇ. ಮೀಜ]

**ಮೀಜುಂಜೌವನ** (ನಾ). ತುಂಬುಪ್ರಾಯ ; ಪೂರ್ಣಯೌವನ : ವನಿತಾಮಣಿಯಿಂತೊಪ್ಪುವ ರೂಪಿಗೆ ಮಿಸುಗುವ ಮೀಜುಂಜೌವನವೇಜಿ ವಿರಾಜಿಸುತಿರೆ ಕಂಡು (ಜಯುಕಾ. ೩-೬೪). [ಮೀಜು + ಜೌವ್ವನ (< ಜವ್ವನ)]

**ಮೀಜುಹ** (ನಾ). ಮಿತಿಯನ್ನು ಮೀರುವಿಕೆ; ಉಲ್ಲಂಘನೆ : "ಅತ್ಯಾಧಾನಂ, ಅತಿಕ್ರಮಃ – ಈ ೨ ಮೀಜುಹ" (ಕಲಾಯು. ೦೨೪-೬೯). 'ಕೆಯ್ಮೀಜುಹ' ಪರಾ. [ಮೀಜು + – ಹ$_2$ (< – ಪ$_2$)]

**ಮುಂ$_1$** 'ಮುನ್$_1$' ನೋ.

**ಮುಂ$_2$** 'ಮುನ್$_2$' ನೋ.

**ಮುಂಕಟ್ಟು** 'ಮುಂಗಟ್ಟು$_1$' ನೋ.

**ಮುಂಕಣಿ** (ನಾ). ೧. ಮುಂಭಾಗ ; ಮುಂಗಡೆ ; ಎದುರುಭಾಗ : ಮುಂಕಣಿಯಲಿಟ್ಟಣಿಸಿದರು ಭಾರಂಕದಾಳುಗಳೆಂಟುಸಾವಿರ ಬಿಂಕದತಿರಥ ರೆಂಟುಕೋಟಿತುರಂಗ ಪಾಯದಳ (ಕುವ್ಯಾಕ. ೩-೦೪). ೨. ರಥ, ಬಂಡಿ ಮುಂತಾದುವುಗಳ ಮುಂಭಾಗ. – ಮೂಕಿ : ಕೆಲಂಬರು ಬಂಡಿಯ ಮುಂಕಣಿಯಂ [ಪಾಠಾಂ. ಮುಂದಂ] ಪಿಡಿದು ಪುರದ ತಿರುವೀಥಿಯೊಳು ನಡೆತಪ್ಪಾಗಳು (ಸಂಕಕೆ. ೨-೦೯); ಒಂದು ನಿಮಿಷಕೆ ಮತ್ತೆ ಪಡಿಬಲ ಬಂದುದಗಣಿತ ಯಕ್ಷ ರಾಕ್ಷಸವೃಂದ ಮುಕ್ಕುಳಿಕಿದುದು ಕರ್ಣನ ರಥದ ಮುಂಕಣಿಯ (ಕುವ್ಯಾಕ. ೦೯-೨೬).

[ಮುಂ$_1$ (< ಮುನ್$_1$) + ಕಣಿ$_3$ ./ತೆಲು. ಮುನ್ಕಲಿ, ಮುನುಕಲಿ]

**ಮುಂಕಣಿಸು** (ಕ್ರಿ). ಮುಂದುವರಿ ; ಮುಂದೆ ಸಾಗು ; ಮುನ್ನುಗ್ಗು : ಮೊಗ್ಗರಂಬೊಯ್ದುಗ್ಗಲಿಸಿ ನಡೆದು ಬಗ್ಗಿಸಿ ಬಯ್ದೊಗ್ಗುಗೆಡದೆ ಮುಂಕಣಿಸಿ ಭೋಂಕನೆ ನೂಂಕಿ (೧೦ಕ. ೬-೬೬ ವ); ಮುಂಕಣಿಸುತ್ತೆ ಚಪ್ಪರಿಸುತಂಗುಟದಿಂದೊದೆದಾದರ್ಜ ಸಾದರ್ಜ ಕೊರಂಕುಸವಿಟ್ಟು . . . ನೂಂಕೆ (೧೦ಕ. ೬-೭೨). [ಮುಂಕಣಿ + – ಇಸು$_3$]

**ಮುಂಕುಡಿ** 'ಮುಂಗುಡಿ$_1$' ನೋ.

**ಮುಂಕೊಂಕುಗತ್ತಿ** (ನಾ). ಮುಂದಕ್ಕೆ ಬಾಗಿರುವ ಒಂದು ಬಗೆಯ ಕತ್ತಿ : ದೈತ್ಯರು ಕಕ್ಕಡೆಯ ಮುಂಕೊಂಕುಗತ್ತಿಯ ಸಬಳ ಮುದ್ಗರವ ಕೊಂಡು ಬಂದಾ ದೈತ್ಯಗಣವನು ದಿಂಡುಗೆಡಹಿಯು ತುಳಿಯೆ (ಸಂಕಶ. ೬-೩೬) ; ಆರುತ್ಯತಂದ್ಯದೆ ದೇವಸನೋರಣಸಿಯುಸಿಬ್ರಾಪಮಾರ್ಗಣ ಕೊರಲಗು ಮುಂಕೊಂಕುಗತ್ತಿಯ ಭಟರು ಮೇಳವಿಸೆ (ಸಂಕಶ. ೯-೦೦೬).

[ಮುಂ$_2$ (< ಮುನ್$_2$) + ಕೊಂಕು$_2$ + ಕತ್ತಿ]

**ಮುಂಕೊಡು** (ಕ್ರಿ). ಮುಂದಾಗಿ ಕೊಡು ; ಮೊದಲೇ ಒಪ್ಪಿಸು : ನೆಲನುಂ ಸರ್ವಸ್ವಮುಂ ಕೊಟ್ಟುಡಿಗೆಜಿಗಿದನಾ ಪಾಣ್ಡ್ಯನುಳ್ಳಳ್ಕಿ ಬೇಗಂ ತಲೆಯುಂ ಮುಂಕೊಟ್ಟೆವಿನ್ನೇದುದು ಬೆಸನಮೀಗೇದಟ್ಟಿದ [ವಾರ್] ರಣಂಗಳ್ (ಶಾಇ. XX. ೯೯-೨೫; 1076 ?); ಲಂಕಾಧೀಶನ ಜಯವಧು ಪಂಕಜನಾಭಂಗೆ ಸೋಲ್ತು ರಣಮುಖದೆಡೆಯೊಳ್ ಮುಂಕೊಟ್ಟಿಟ್ಟದ ರನ್ನದ ಕಂಕಣ ಮೆಂಬಂತೆ ಕಯ್ಗೆ ಬಂದುದು ಚಕ್ರಂ (ಕಾಪಾಪ. ೩೯೫ ಪ್ರಯೋ).

[ಮುಂ$_2$ (< ಮುನ್$_2$) + ಕೊಡು$_1$]

**ಮುಂಕೊಳ್** 'ಮುಂಗೊಳ್' ನೋ.

**ಮುಂಕೊಳಿಸು** 'ಮುಂಗೊಳಿಸು' ನೋ.

**ಮುಂಕೊಳು** 'ಮುಂಗೊಳ್' ನೋ.

**ಮುಂಕೋರೆ** (ನಾ). ಖಡ್ಗಯುದ್ಧದಲ್ಲಿ ಒಂದು ವರಸೆ ; ಖಡ್ಗವನ್ನು ಮುಂದಕ್ಕೆ ಬಾಗಿಸುವುದು : ತಳಸಂಚು ಮೇಲ್ಸಂಚು ಹಿಂಕೋರೆ ಮುಂಕೋರೆ ಬಲಸನ್ನೆ ಯಡದ ಸನ್ನೆಯೊಳು ಅಲಗ ನೀಡಿದರಲಗಿನೊಳಾಂತು ನೆಗೆದು ಮೈಹೊಳೆದು ತಪ್ಪಿಸಿದನೆಲ್ಲವನು (ಕಕಶ. ೬೩-೨೬).

[ಮುಂ$_1$ (< ಮುನ್$_1$) + ಕೋರೆ$_1$]

**ಮುಂಗಂದಾಯ** (ನಾ). ಮೊದಲ ಕಂತಿನಲ್ಲಿ ಕೊಡುವ ಕಂದಾಯ, – ತೆರಿಗೆ : (ಕ). [ಮುಂ$_1$ (< ಮುನ್$_1$) + ಕಂದಾಯ]

**ಮುಂಗಜ್ಜ** (ನಾ). (ಯಾವುದಾದರೂ ಕಾರ್ಯಕ್ಕೆ ನಡೆಸುವ) ಪೂರ್ವಸಿದ್ಧತೆ : ಹೊಂಗೋಪುರಶಿಖರಕೆ ಪೋಪ ನಡೆ ನಿನ್ನ ಮುಂಗಜ್ಜವ ನೆಗಳ್ದಪೆನು (ಪೋಹಶ. ೨೯-೨೯). [ಮುಂ$_1$ (< ಮುನ್$_1$) + ಕಜ್ಜ$_1$]

**ಮುಂಗಟ್ಟು$_1$**, **ಮುಂಕಟ್ಟು** (ಕ್ರಿ). ೧. ಮುಂಭಾಗದಲ್ಲಿ ಸೇರು, – ಜೊತೆಗೂಡು : ತಂಗಡಲೆಯ ಮೆಯ್ಸಿ ನೀರನೂಡಿಸುತ ವಿಹಂಗ ಸಂತೋಷದಿ ತಮ್ಮ ಮುಂಗಟ್ಟಿದ ಮುದ್ದುಮರಿಗಳ್ಗೆ ಗುಟುಕೀಯೆ ಕಂಗೊಳಿಸಿತು ರುಕ್ಮಿಣಿಗೆ (ಪೋಹಶ. ೪-೦೯). ೨. ಮುಂಭಾಗಕ್ಕೆ ಬರು : ದಕ್ಷಿಣಕೆ ದೂಜಿತು ಬಲದ ಭಾಗದೆ ಪಲ್ಲಿ ಮುಂಗಟ್ಟಿ ಪಾಜಿತು ವಾಸುಗಿಪಕ್ಕಿ (ಪೋಹಶ. ೬-೨೫). ಮುಂಕಟ್ಟು : ೩. ಮುಂಭಾಗದಲ್ಲಿ ಅಡ್ಡಗಟ್ಟು ; ಮುಂದೆ ಹೋಗದಂತೆ ತಡೆದು ನಿಲ್ಲಿಸು : ಜಗವ ತನ್ನಯ ಮಾಯಾರೂಪಿನಿಂ ಪೊರೆವುತಿಹ ವಿಗಡತನದಿಂದವರ ಮುಂಕಟ್ಟಿ ನಿಲ್ಲಿಸುತೆ (ಕಕಮೋ. ೦೦-೬೪); ಪವಣದಿಂ ಪೊಕ್ಕು ಕವಿದರು ಶತ್ರುಬಲವ ಮತ್ತವರು ಮುಂಕಟ್ಟಿ ತರುಬುತ್ತಯಿರದಿರಿಯೆ ಮಗುಳವರು ಪುರವಣಿಸಿ ಕವಿದು (ಕಕಮೋ. ೩೨-೬). [ಮುಂ$_2$ (< ಮುನ್$_2$) + ಕಟ್ಟು$_1$]

**ಮುಂಗಟ್ಟು$_2$** (ನಾ). ೧. ಗೋಡೆಯ ಹೊರಭಾಗದ ಬುಡದಲ್ಲಿರುವ ಇಳಿಜಾರಾದ ಅಂಚು : (ಕ). ೨. ಕೆರೆಯ ದಂಡೆಯ ಒಳಭಾಗ : (ಕ). ೩. ಅಂಗಡಿ, ಮನೆ ಮುಂತಾದವುಗಳ ಮುಂಭಾಗದಲ್ಲಿ ಕಟ್ಟಿರುವ ಕಟ್ಟಡ : ಸಂತೆಯ ಎಡಬೀದಿಯಲ್ಲಿ ಉದ್ದಕ್ಕೂ ಅಂಗಡಿ ಮುಂಗಟ್ಟುಗಳು . . . ಮುಂಗಟ್ಟುಗಳೆಲ್ಲ ಹೂವು ಮತ್ತು ತಾಂಬೂಲವನ್ನು ಮಾರುವ ಅಂಗಡಿಗಳು (ಕೂಲೀಪಾ. ೩೨); ಅಂಗಡಿ ಮನೆ ಮುಂಗಟ್ಟುಗಳಲ್ಲಿ ಇಮ್ಮೆಯ್ಯ ಕಟಕಿ ಬಾಗಿಲುಗಳನ್ನು ತೆರೆದು, ಶುದ್ಧಿಗೊಳಿಸಲಾಗಿತ್ತು (ತುವರು. ೦೬೨) ; ಅಂಗಡಿ ಮುಂಗಟ್ಟುಗಳಂತೂ ತಳಿರುತೋರಣಗಳಿಂದ ಅಲಂಕೃತವಾಗಿದ್ದುವು (ಹೇಮುಕೂ. ೭).

[ಮುಂ$_1$ (< ಮುನ್$_1$) + ಕಟ್ಟು$_2$]

**ಮುಂಗಡ** (ನಾ). ಯಾವುದಾದರೂ ಕೆಲಸಕ್ಕೆಂದು ಮೊದಲೇ ಕಡವಾಗಿ ಕೊಡುವ ಅಥವಾ ಪಡೆಯುವ ಧಾನ್ಯ ಅಥವಾ ಹಣ; ಸಂಚಕಾರ ; ಅಗಾವು : ಕೊಳ್ಳಿ ಮುಂಗಡವಿದನು ಕೊಲೆಗೈದು ಕುರುವು ತಂದೆನಗೆ ತೋರ್ದರ್ ಮೇಲೆ ಬಹುಮಾನವಿದೆ ನಿಮಗೆ ಇದಕಿಂ ಮಿಗಿಲ್ (ಸಂಪ್ರಕ. ೦೩-೦೨) ; ಗಟ್ಟದಿಂದ ಮುಂಗಡಹಣ ಪಡೆದು ಜತೆಗೆ ಇಪ್ಪತ್ತೋ ಮೂವತ್ತೋ ರೂಪಾಯಿಗಳಂತೆ ಮುಂಗಡ ಹಾಕಬೇಕು (ಕಳ್ಳರೂ. ೨೮); ಅಂಗಡಿ ಇದ್ದರೆ ಸಾಲದು, ಮುಂಗಡ ಬೇಕು (ಗಾದೆ).

[ಮುಂ$_1$ (< ಮುನ್$_1$) + ಕಡ$_1$ ./ತುಳು. ಮುಂಗಡ, ಮುಂಗಣ]

**ಮುಂಗಡಪತ್ರ** (ನಾ). ವಾರ್ಷಿಕ ಆಯವ್ಯಯದ ಅಂದಾಜುಪಟ್ಟಿ : "ಆಯವ್ಯಯ ಪತ್ರ, ಮುಂಗಡಪತ್ರ, ಬಜೆಟ್" (Budget. ಶಕ್ರಿಶಿ. ೦೦); ಗ್ರಂಥಗಳನ್ನು ಕೊಳ್ಳುವ ಮುನ್ನ ಗ್ರಂಥಾಲಯದ ಮುಂಗಡಪತ್ರದಲ್ಲಿ (Budget) ಮಂಜೂರಾದ ಹಣವನ್ನು ನೋಡಬೇಕು (ಗ್ರಂಶಾ. ೦೦).

[ಮುಂಗಡ + ಪತ್ರ]

**ಮುಂಗಡಪ್ರತಿ** (ನಾ). ಪ್ರಕಟಣೆ ಇತ್ಯಾದಿಗಳಿಗೆ ಮುಂಚಿತವಾಗಿಯೇ ಕಳುಹಿಸುವ ಪ್ರತಿ : "ಮುಂಪ್ರತಿ, ಮುಂಗಡಪ್ರತಿ" (Advance Copy. ಶಕ್ರಿಶಿ. ೪). [ಮುಂಗಡ + ಪ್ರತಿ]

**ಮುಂಗಡಹಣ** (ನಾ). ಮುಂಚಿತ ಸಾಲವಾಗಿ ಕೊಡುವ ಹಣ : ಆ ಹಣ್ಣುಗಳೆಲ್ಲ ನಮ್ಮ ಪಾಲಿಗೆ ಬರುವಂತಿಲ್ಲ ಅಣ್ಣ, ಅವುಗಳನ್ನು ಬಾಗವಾನರಿಗೆ ಮುಂಗಡಹಣ ತೆಗೆದುಕೊಂಡು ಮಾರಿಬಿಟ್ಟಿದ್ದೇನೆ (ಹಮ್ಮಿಬಿ. ೦೨೯); ಗಟ್ಟದಿಂದ ಮುಂಗಡಹಣ ಪಡೆದು ಜತೆಗೆ ಇಪ್ಪತ್ತೋ ಮೂವತ್ತೋ ರೂಪಾಯಿಗಳಂತೆ ಮುಂಗಡ ಹಾಕಬೇಕು (ಕಳ್ಳರೂ. ೨೮). [ಮುಂಗಡ + ಹಣ]

**ಮುಂಗಡಿಸು** (ಕ್ರಿ). ಅಸಹನೆಯನ್ನು ತೋರಿಸು : ಎಲೆ ರಾಯ ನೀನುಬ್ಬಿ ನೊಳ್ ಕೌರವೇಶ್ವರನಿಗೆ ಮುಂಗಡಿ[ಪಾಠಾಂ. ಡ]ಸಿ ನುಡಿದು ಕೆಡಿಸಿದೆ (ತುರಂಗ. ೬೩-೨೩). [ಮುಂಗಡ$_{1}$ + — ಇಸು$_{3}$]

**ಮುಂಗಡೆ** (ನಾ). ಮುಂದುಗಡೆ; ಮುಂಭಾಗ; ಎದುರು : ಬಿರಯಿ ನೀಂ ಪೋಪೋಗು ಪೋಗೆಂದು ಮುಂಗಡೆ [ಪಾಠಾಂ. ಗುಡಿ]ಯೊಳ್ ಸಾಱುವ ಡೌಡೆಯೆಂಬ ತೆಱದೀದಂ ಬಗ್ಗಿ ಸುತ್ತಿರ್ದುವುಗ್ಗಡದಿಂ ಕೋಗಿಲೆ (ಕಬ್ಬಿಗ. ೩೩); ಆ ದೇಗುಲದೊಳಿಪ್ಪ ಭವನಂ ಕಂಡು ಪೊಡವಡುತ್ತಂ ಬಟ್ಟಲಂ ಮುಂಗಡೆ ಯೊಳಿಟ್ಟಾರೋಗಿಸೈ ಯೆನ್ನೊಡೆಯನೇ ಗುರು ಕಲ್ಲಿನಾಥಾ ಎಂದು ಬಿನ್ನೈಸಿ (ಬಸವ. ೦೯-೬); ಬೆಡಗಿನಭಿನವರಸದ ಭಾವದ ಕಡುಪುಕಾತಿಯರ್ನೈದಿದರು ಮುಂಗಡೆ [ಪಾಠಾಂ. ಗುಡಿ]ಯಲವನಿಜೆಯ (ತೊರವ. ೦-೦೯-೨೨).

**ಮುಂಗಡಿಕೂಸು** = ಕೊನೆಯ ಮಗುವಿನ ಹಿಂದಿನ ಮಗು : ನಮ ಮನ್ಯಾಗ ಹುಡುಗರಿಗೆ ಕೆಲಸ ಹಚ್ಚೂದುಲ್ಲ ಎತಿಗೊಳ್ಳಲಿಕ್ಕೆ ಅಂದ್ರ ಮುಂಗಡಿಕೂಸಿಲ್ಲ (ಸಮುಜ. ೩೯); ನನ್ನ ಮುಂಗಡೀಕೂಸು ಎಚ್ಚರಾತು ನೋಡು (ಬೀಚಹ. II. ೬೩೯). **ಮುಂಗಡೆಯಮಗು, ಮುಂಗಡಿಮಗು** = ಮುಂಗಡಿ ಕೂಸು : ಆಕೆಯ ಮುಂಗಡೆಯ ಮಗುವಿಗೆ ಇನ್ನೂ ಎರಡೇ ವರ್ಷ ವಾಗಿದೆ (ರೂಢಿ); ರಂಗೂಗೆ—ಅದೇ ನನ್ನ ಎರಡು ವರ್ಷದ ಮುಂಗಡಿ ಮಗು—ಎಪ್ಪತ್ತುದಿನದ ನಾಯಿಕೆಮ್ಮು ಬಂದಿತು (ಬಾಡಗೇ. ೯೬).

[ಮುಂ$_{1}$ (< ಮುನ್$_{1}$) + ಕಡೆ$_{3}$]

**ಮುಂಗಣ್ಣು** (ನಾ). ೧. (ವ್ಯಾಯಾಮ, ಈಜು ಇತ್ಯಾದಿಗಳಲ್ಲಿ) ತಲೆ ಕೆಳಗಾಗಿ, ಕಾಲುಮೇಲಾಗಿ ಗಾಳಿಯಲ್ಲಿ ನೆಗೆದು ಮುಮ್ಮುಖ ವಾಗಿ ಕಾಲಮೇಲೆ ನಿಲ್ಲುವ ಒಂದು ವರಸೆ : ದೊಂಬರ ಸೂಳೆ ಯೊಬ್ಬಳು. . . ಒಂದು ಗಣೇಮರದ ಸಮೀಪಕ್ಕೆ ಹೋಗಿ ಮೇಲಕ್ಕೆ ಹತ್ತಿ ಅಲ್ಲಿ ಲಾಗ, ಅಂತರಪರಟಿ, ಹಿಂಗಣ್ಣು, ಮುಂಗಣ್ಣು, ಎರಡು ಕೈಯನ್ನು ಬಿಟ್ಟ ದೊಣ್ಣೆವರಸೆ. . . ಇದೇ ಮೊದಲಾದ ಸಾಹಸಗಳನ್ನೆಲ್ಲಾ ಮಾಡುತಿರ ಲಾಗಿ (ಅದೂಟಿ. ೦೬೬); ಅಲ್ಲಿ ಹಿಂಗಣ್ಣು ಮುಂಗಣ್ಣು ಹಾಕುವುದರಲ್ಲಿ ನಿಸ್ಸೀಮನಾದವನಿಗೆ ಯಾವ ತುಂಬುಹೊಳೆಯಲ್ಲೂ ಭಯವಿಲ್ಲ. . . ಆದರೆ ಹಿಂದೆ ಅಲ್ಲಿ ಹಿಂಗಣ್ಣು ಮುಂಗಣ್ಣುಗಳನ್ನು ಹಾಕಿದ ನರಸಿಂಹಾಚಾರ್ಯರ ತಲೆ ಅಲ್ಲಿ ಒಡೆದುದನ್ನು ಕಂಡಿರುವ ಹಿರಿಯರು ಮಾತ್ರ ದೊಡ್ಡನ ಕಲ್ಲಿಗೆ ಹೋಗುವುದಕ್ಕೂ ಅಲ್ಲಿ ಹಿಂಗಣ್ಣು ಮುಂಗಣ್ಣು ಹಾಕುವುದಕ್ಕೂ ಹೆದರು ತ್ತಾರೆ (ಗರುಡಾ. ೦೬೨).

**ಮುಂಗಣ್ಣುಹೊಡೆ** = (ಆಲಂ) ಪ್ರಗತಿಪರವಾಗು : ಸಾಹಿತ್ಯ ವಿಚಾರದ ತೀರ್ಪು ಆಗಾಗ್ಗೆ ಮುಂಗಣ್ಣು ಹೊಡೆಯುತ್ತದೆ. ಪುನಃ ಹಿಂಗಣ್ಣು ಹೊಡೆಯುತ್ತದೆ (ಬಿಂರ. II. ೯).

[ಮುಂ$_{1}$ (< ಮುನ್$_{1}$) + ಕಣ್ಣು (< ಕಣ್)]

**ಮುಂಗತೆ** (ನಾ). ಮುಂದಿನ ಕತೆ; ಮುಂದಿನ ಕಥಾಭಾಗ : ಮುಂಗತೆ [ಪಾಠಾಂ. ಥೆ]ಯನುಸುರೆಂದು ಬೆಸಗೊಂಡನವನೀಶನು (ಜೈಮಿಭಾ. ೨೩-೦); ಪಾಂಡವಧರಣಿಪಾತ್ಮಜತನಯ ಕೇಳ್ ಮುಂಗತೆಯ ಕೌತುಕವ (ಕೋಗದು. ೨೦-೦). [ಮುಂ$_{1}$ (< ಮುನ್$_{1}$) + ಕತೆ]

**ಮುಂಗತ್ತರಿ** (ನಾ). ಖಡ್ಗಯುದ್ಧ, ದ್ವಂದ್ವಯುದ್ಧ ಮೊದಲಾದುವು ಗಳಲ್ಲಿ ಒಂದು ವರಸೆ : ನಿಲ್ಲುವ ಕಡೆಯಲ್ಲೇ ನಿಂತು ಪಾರ್ಶ್ವಗಳಿಂದ ಎರಡು ಪಾದಗಳ ಮುಂದಣಗತಿಯುಂಟಾಗುವ ಹಾಗೆ ಆವುದಾನೊಂದು ಕರ್ತರಿಗತಿಯು ಮಾಡಲು ತಕ್ಕಂಥಾದು ಅದು ಮುಂಗತ್ತರಿ ತೊಲಗುವದು (ಖಡ್ಗಟೀ. ೫-೯). 'ಮುಂಗರ್ತರಿ' ಹೋ.

[ಮುಂ$_{1}$ (< ಮುನ್$_{1}$) + ಕತ್ತರಿ$_{2}$]

**ಮುಂಗತ್ತಲೆ** 'ಮುಂಗಳ್ತಲೆ' ನೋ.

**ಮುಂಗಥೆ** (ನಾ). = ಮುಂಗತೆ : ಮನಮಿಕ್ಕು ಮೈಮರೆದು ಪರವಶಕ್ಷೀರ ಶರನಿಧಿಯ ಪೊಕ್ಕು ಮುಳುಮುಳುಗಿಯಾನಂದಿಪಂದದಿ ಪೇಳ್ವೆ ಮುಂಗಥೆಯ ಸಂಗತಿಯನು (ಶಶಿಶೋ. ೩-೯). [ಮುಂ$_{1}$ (< ಮುನ್$_{1}$) + ಕಥೆ]

**ಮುಂಗದನ** (ನಾ). ಪ್ರಾರಂಭದ ಯುದ್ಧ; ಮೊದಲ ಕದನ : ಪಾಂಡವರಜ್ಞಾತವಿದ್ದ, ವಲಲಂ ಕೀಚಕನ ಗೆದ್ದ, ಕುರುಕುಲ ಮುಂಗದನ ಮೆದ್ದ ನಾಡು ನೋಡಿದಲ್ಲವೇ ? (ಗಿರಿಜಾ. ೪೦-೦೯).

[ಮುಂ$_{1}$ (< ಮುನ್$_{1}$) + ಕದನ]

**ಮುಂಗನಸು** (ನಾ). (ಗರ್ಭಿಣಿಯ ಪ್ರಸವಪೂರ್ವದಲ್ಲಿ) ಕಾಣುವ ಸ್ವಪ್ನ : ತನುಭವಲಾಭದೌಹದನಿಮಿತ್ತದ ಸಂಗತಿ ತಕ್ಕ ನೋಂಪಿ ಮುಂಗನಸು ಬಯಕ್ಕೆ ಗೇಟುಗೆ. . . ಜನನೂತಜಾತಕರ್ಮವಿನಿತುಂ ಸುತ ಶೋಭನವಣನಸ್ಥಳಂ (ಸುಕುಸು. ೭-೦). [ಮುಂ$_{1}$ (< ಮುನ್$_{1}$)+ ಕನಸು]

**ಮುಂಗಪ್ಪು** (ನಾ). ಸೂರ್ಯ ಮುಳುಗಿದಾಕ್ಷಣ ಆವರಿಸುವ ಕತ್ತಲೆ; ಮುಸ್ಸಂಜೆಯ ಕಪ್ಪು : ಏನಾಗಲಿಯೆ ಮೋಡ ಕವಿದು ಮುಂಗಪ್ಪು ಹಬ್ಬಿಬಿಟ್ಟಿದೆ (ಶಂಕ್ರಗ. ೦೦೦-೪).

[ಮುಂ$_{1}$ (< ಮುನ್$_{1}$) + ಕಪ್ಪು$_{4}$ (< ಕರ್ಪು$_{1}$)]

**ಮುಂಗಯ್‌** 'ಮುಂಗೈಯ್‌' ನೋ.

**ಮುಂಗಯ್ಯುಮುರಿ** 'ಮುಂಗೈಪುರಾರಿ' ನೋ.

**ಮುಂಗರಿ** 'ಮುಂಗುರಿ' ನೋ.

**ಮುಂಗರುಳು** (ನಾ). "ಜಠರದ ಕೊನೆಯಿಂದ ಹೊರಡುವ ಸಣ್ಣ ಕರುಳಿನ ಆದಿಭಾಗ; ಮುಂಗರುಳು ಪೃಥಕ್‌ವಾಂತ್ರ" (Duodenum. ಇಂಕ) : ಮುಂಗರುಳು (Fore Intestine) ಮತ್ತು ಹಿಂಗರುಳು (Hind Intestine) ಹೊರಗಿನಿಂದ ಒಳಬಾಗಿ ಬೆಳೆಯುವುದರಿಂದ ಚರ್ಮದ ಪೊರೆಯಿದ್ದು (Cuticular Lining) ಕೀಟ ಪೊರೆ ಬಿಟ್ಟಾಗ ಆ ಪೊರೆಯೂ ಬಿಡುತ್ತದೆ (ಕೀಟಶ. ೨೬).

[ಮುಂ$_{1}$ (< ಮುನ್$_{1}$) + ಕರುಳು (< ಕರುಳ್)]

**ಮುಂಗರೆ** (ನಾ). "ಸಮುದ್ರದ ಏರುಮಟ್ಟಕ್ಕೂ ಇಳಿಮಟ್ಟಕ್ಕೂ, ಅಥವಾ . . . ಕಟ್ಟಡಗಳ ನೆಲಮಟ್ಟಕ್ಕೂ ಮಧ್ಯೆ ಇರುವ, ಕರೆಯ ಪ್ರದೇಶ; ಮುಂಗರೆ" (Foreshore. ಇಂಕ) : ಮುಂಗರೆಗೆ ಅಡ್ಡವಾಗಿ ಹೋಗುವ ಇಳುಕಲು ದಾರಿ (Hard. ಇಂಕ).

[ಮುಂ$_{1}$ (< ಮುನ್$_{1}$) + ಕರೆ$_{4}$]

**ಮುಂಗರ್ತರಿ** (ನಾ). ಒಂದು ಬಗೆಯ ಕತ್ತಿವರಸೆ : ನಿಂತುಕೊಂಡು ಪಾದದಲ್ಲಿ ಪಾದಪ್ರಕ್ಷೇಪವು ಮುಂಗರ್ತರಿಯೆಂಬುದು (ಖಡ್ಗಟೀ. ೯-೩೯). 'ಮುಂಗತ್ತರಿ' ಹೋ. [ಮುಂ$_{1}$ (< ಮುನ್$_{1}$) + ಕರ್ತರಿ]

**ಮುಂಗಲಿ** 'ಮುಂಗುರಿ' ನೋ.

**ಮುಂಗಲಿತನ** (ನಾ). ಯುದ್ಧದಲ್ಲಿ ಬೇರೆಯವರಿಗಿಂತ ಮೊದಲು ಮುನ್ನುಗ್ಗಿ ತೋರುವ ಪರಾಕ್ರಮ : ಅಱಿಯಬಹುದ್ಯೆ ಭಾವಮೈದುನ ಮೆಱೆ ಭುಜಾಟೋಪವನುಹಿಂದಣ ಕೊಱತೆಯನು ಕಳೆ ಮಗನೆ ಬೊಪ್ಪಕುಲ ಕ್ರಮಾಗತವ ಮಱೆಯದಿರು ಮುಂಗಲಿತನಕೆ ತಾನಿಱಿವೆ ನಾ ಮುನ್ನೆಂದು ತಮ್ಮೊಳು ಜಱೆದರೊಡವುಟ್ಟಿದರು ಬಾಂಧವಮಿತ್ರ ಭೂಮಿಪರು (ಕುಮಾಗ. ೦-೨೬). [ಮುಂ$_{1}$ (< ಮುನ್$_{1}$) + ಕಲಿತನ]

**ಮುಂಗವಚ** (ನಾ). "ಉಡುಪು ಕೊಳೆಯಾಗದಂತೆ ಮುಂದಕ್ಕೆ ಕಟ್ಟಿ ಕೊಳ್ಳುವ ಉಡಿಗೆ: ಮುಂಗವಚ; ದೂಳುಪಾವಡಿ" (Apron. ಇಂಕ) : ಅವಳು ಹಿಂದಿನಂತೆ ಇಂದೂ ಶ್ವೇತಶುಭ್ರವಾದ ಮುಂಗವಚನನ್ನು ತೊಟ್ಟಿದ್ದಳು (ಪುನರು. ೬೩); ಕೆಲಸದ ಹೊತ್ತಿನಲ್ಲಿ ಕೆಲಸಗಾರರಿಗೆಲ್ಲ ಉಸಿರಾಟಕ (ರೆಸ್ಪಿರೇಟರ್), ಕನ್ನಡಕ, ಕೈಗವುಸು, ಮುಂಗವಚ ಇತ್ಯಾದಿ ಗಳನ್ನು ಒದಗಿಸಬಹುದು (ಕಶಿಕೋ. I. ೩೬೯).

[ಮುಂ$_{1}$ ( < ಮುನ್$_{1}$ ) + ಕವಚ]

ಮುಂಗಸಿ ‘ ಮುಂಗುಸಿ ’ ನೋ.

**ಮುಂಗಳುಪು** (ಕ್ರಿ). (ತಾನು ಬರುವುದರ ಕುರುಹಾಗಿ ಉಡುಗೊರೆಯನ್ನು) ಮೊದಲೇ ಕಳುಹಿಸು ; ಮುಂಚೆಯೇ ಕಳುಹಿಸು : ತನ್ನ ಬಾಳುವೆಗೆ ನಚ್ಚಿನವಳೀ ರಾತ್ರಿವಧುವೆಂದು ಹಿಮಕರಂ ಮೆಚ್ಚಿ ಮುಂಗಳುಪಿದೆಳಮಾಣಿಕದ ಮಣಿಗಳೆನೆ ಸಂಜೆದಾರೆಗಳೆಸೆದುವು (ಕೈಬಿಖಾ. ೮-೪೭).

[ ಮುಂ$_2$ ( < ಮುನ್$_2$) + ಕಳುಪು (< ಕಟಿಪು$_1$ )]

**ಮುಂಗಳ್ತಲೆ,** ಮುಂಗತ್ತಲೆ (ನಾ). ಸೂರ್ಯನು ಮುಳುಗಿದಾಕ್ಷಣ ಬರುವ ಸಂಧ್ಯಾಸಮಯದ ಕತ್ತಲೆ ; ಮುಸ್ಸಂಜೆಯ ಕತ್ತಲೆ : ಮುಗಿಯೆ ಪಗಲ್ ಮುಸುಕಲ್ ಮುಂಗಳ್ತಲೆ. . . ನೆಟ್ ಮುಗಿದುವು ಮುನ್ನೀರಣುಗಿಯ ಸೆಜ್ಜೆವನೆಗಳಾ ರಾತ್ರಿಯೊಳು (ಜಯುಕಾ. ೦೩-೬೩). **ಮುಂಗತ್ತಲೆ :** ನದಿಯೆಡೆಗೆ ಬರಲೊಂದು ವೃಷಭನುದಕಾರ್ಥದಿಂ ತಾನು ಮುಂಗತ್ತಲೆಯೊಳದನರಿಯದೇ ತುಡುತಂಬನಾ ಕರ್ಣಪೂರದಿಂ ಮರೆಯೆಂದು ಬಿಡಲಾಗಿ (ಪೀಕೃತು. ೪-೭-೩೭); ದಟ್ಟವಾಗಲು ಪ್ರಾರಂಭಿಸಿದ ಮುಂಗತ್ತಲೆಯಲ್ಲಿ ಅಜ್ಜಿಯ ನಿಶ್ಚಲಮುಖ ನೋಡಿ ಹೆದರಿ (ಕಂದ್ರಸ. ೨೦-೦೨). [ ಮುಂ$_1$ ( < ಮುನ್$_1$) + ಕಳ್ತಲೆ ( < ಕಟ್ತಲೆ) ]

**ಮುಂಗಾ** (ಕ್ರಿ). ಮೊದಲು ಕಾಪಾಡು : ನಮ್ಮ ಜೋಕೆಯಂ ಬಗೆಯದೊಡೆ, ನಿನ್ನ ಜೋಕೆಯನೆ ಮುಂಗಾದು ಕೊಳು ಜೀಯಾ! (ಗೊಲ್ಲಾ. ೭-೦೭). [ಮುಂ$_2$ ( < ಮುನ್)$_2$ + ಕಾ$_1$ ]

**ಮುಂಗಾಣ್,** ಮುಂಗಾಣು (ಕ್ರಿ). ೧. ಮುಂಭಾಗವನ್ನು ಕಾಣು ; ಮುಂದನ್ನು ನೋಡು : ಕತ್ತ ಬಲ್ಗತ್ತಲೆಗೆ ತರಣಿ ಮುಂಗಾಣದಿರೆ ಪೊತ್ತುವೆಳಗಂ ಬೇಟ್ ತೋರ್ಪರಾರ್ . . . ಭೂಪ (ಕೈಬಿಖಾ. ೨-೦೬). ೨. ದಿಕ್ಕುತೋಚು ; ದಾರಿಕಾಣು ; ಮುಂದಾಗುವುದನ್ನು ತಿಳಿ : ಮದಮುಂ ಗರ್ವಮುಂ ಕೂಡಿಕೊಂಡಿರ್ದನಿತುಂ ಮುಂಗಾಣದತ್ಯುದ್ಧತತರಮುಖವಾಗಿರ್ಪುದೋರಂತೆ ವಿದ್ವಜ್ಜನಮಂ ಕೈಕೊಳ್ಳದೆನ್ನೀ ಮನದೊಳಗಣ ಹಂಕಾರವಿಂತಿಂತಿದಂ ದೇವನೆ ನೀಂ ತಗುರ್ತಿ . . . ರಕ್ಷಿಪ್ಪುದೆನ್ನಂ (ರಕ್ಷಾಶ. ೦೬); ಸಲಿಲಮಂ ನೀನೆಟ್ವುತಿರು ಪ್ರಜ್ವಳಿಸುವವು ದೀವಿಗೆಗಳಿಂತಗ್ಗಳಿಸಿ ಮುಂಗಾಣದಿಹ ಜೈನರ ಪಶುಗಳೀ ದಿನವೆ ಇಳೆಯೊಳಗೆ ಮಡಿದಹವು (ದಸಕೃ. ೩೦-೩೭). **ಮುಂಗಾಣು :** ೨. ಮದದಿಂದೆ ಮುಂಗಾಣದಜನಿದಿರೊಳುಂ ಪಂಚವದನದಶಭುಜ ಪಂಚದಶಲೋಚನಂಗಳಿಂ ಪೊದೆದ ಪುಲಿದೊವಲ ಕೆಂಜೆಡೆಯ ಮಂಜುಳಕಾಯನಾಕ್ಷಣಂ ಮೂಡಿರ್ದನು (ಶಬಕೃ. ೧೮-೪) ; ನೆಲದಾಸೆಯುಂ ಮೋಹಪಡೆದು ಮುಂಗಾಣದೆ ಕೊಲಬಾರದವರೆಲ್ಲರನು ಕೊಲಿಸಿದೆವು (ಕರ್ಣಪ. ೯-೦೦). ೩. (ಸನ್ನಿವೇಶ ವಿಶ್ಲೇಷಣೆಯಿಂದ) ಮೊದಲೇ ಗ್ರಹಿಸು,— ಅರಿತುಕೊಳ್ಳು : ಬಿಜ್ಜಳನು . . . ಅವನನ್ನು ಕೊಲ್ಲಿಸುವ ಹಂಚಿಕೆಯನ್ನು ಯೋಚಿಸುತ್ತಿರಬೇಕು ಅದನ್ನು ಮುಂಗಂಡೇ ಏನೋ ಬಸವೇಶ್ವರನು ಇನ್ನು ಕೆಲ ಕೆಲದಿನ ಕತಿಶಿವದ್ರೋಹವು ಉದಯಿಸಲಿಕ್ಕಿದೆ . . . ಎಂದಿರಬೇಕು (ಮೂರುಊ. ೯೨); ಗುರಿಗೆಂದೆ ಮುಂಗಂಡು ಹುಡುಗನೊದೆದಾ ಚೆಂಡು ಹರಿದಾಡಲಾಡುಂ ಬೊಲದೊಳದಕೆ ಗುರಿಯಿಲ್ಲವೆಂಬೆಯೇನು ? (ಶಾಂತಕ. ೪೮-೦೩).

[ಮುಂ$_1$ ( < ಮುನ್$_1$ ) + ಕಾಣ್ ]

**ಮುಂಗಾಣಿಕೆ** ‘ ಮುಂಗಾಣ್ಕೆ ’ ನೋ.

**ಮುಂಗಾಣಿಕೆಗೊಡು** (ಕ್ರಿ). ಮೊದಲ ಕಾಣಿಕೆಯನ್ನು ಕೊಡು : ಪುಷ್ಪೇಷುಗಂ ಪುಷ್ಪಬಾಣದ ಮುಂಗಾಣಿಕೆಗೊಟ್ಟೆನಾನೆ ಪೆಱತೆನ್ನಂತಾದುದೇ ಮೈಮೆಗಾಸ್ಪದಮೆಂಬಂತೆವೊಲಾಯ್ತು ಮಾಧವಿ ಮದಾಳಿಧ್ವಾನಸಂತಾನದಿಂ (ಜಗಪು. ೦೪-೭೩).

[ಮುಂಗಾಣಿಕೆ ( < ಮುಂಗಾಣ್ಕೆ) + ಕೊಡು$_1$ ]

**ಮುಂಗಾಣಿಸು** (ಕ್ರಿ). ಮುಂದೆ ಇರುವುದು ಕಣ್ಣಿಗೆ ಬೀಳು : ಬವರಕೆ ನಿಲಲು ತಿಮಿರವು ಸೂಕಿ ಮುಂಗಾಣಿಸದು ಮುನಿವರು ವಾಕಿನೀಪತಿ ವಿಷ್ಣು ವಿಶ್ವೇಶ್ವರರುಗಳು ಕೇಳೆಂದ (ಉತ್ತಕ. ೨೪-೭).

[ ಮುಂ$_1$ ( < ಮುನ್$_1$ ) + ಕಾಣಿಸು ]

**ಮುಂಗಾಣು** ‘ ಮುಂಗಾಣ್’ ನೋ.

**ಮುಂಗಾಣ್ಕೆ,** ಮುಂಗಾಣಿಕೆ (ನಾ). ೧. ಮುಂದಾಗುವುದನ್ನು ತಿಳಿಯುವಿಕೆ ; ಮುಂದಾಲೋಚನೆ : ಮುಕುಂದಯ್ಯನ ಮುಂಗಾಣ್ಕೆ ಒದಗಿಸಿದ್ದ ಬೆಚ್ಚನೆಯ ಕಂಬಳಿಯ ಮೇಲೆ ಬೆಚ್ಚಗೆ ಹೊದೆದುಕೊಂಡು ಮಲಗಿದ ಮೇಲೆಯೆ . . . ಚಿನ್ನಮ್ಮನ ಹೃದಯ ಅಳುಕತೊಡಗಿದ್ದು (ಮಲೆಮ. ೬೪೭). ೨. ಮೊದಲು ಅರ್ಪಿಸುವ ಕಾಣಿಕೆ ; ಮುಂಚಿತವಾದ ಕಾಣಿಕೆ : ಪುಷ್ಪೇಷುಗಂ ಪುಷ್ಪಬಾಣದ ಮುಂಗಾಣ್ಕೆ [ಪಾಠಾಂ. ಣಿಕೆ] ಗೊಟ್ಟೆ ನಾನೆ ಪೆಱತೆನ್ನಂತಾದುದೇ ಮೈಮೆಗಾಸ್ಪದಮೆಂಬಂತೆವೊಲಾಯ್ತು ಮಾಧವಿ (ಜಗಪು. ೧೪-೬೩); ತಂಗಿ ಊರ್ಮಿಳೆಯ ಕಣ್ಣೀರುಗಳ್ ಮುನ್ ಬರ್ಪ ಸೊಗಕಾರ್ಕೆ ಮುಂಗಾಣ್ಕೆಗಳನರ್ಪಿಸಿಹವೈ ಪ್ರಾಣೇಶ್ವರನ ಚರಣತಲಕೆ ! (ಶ್ರೀರಾಮಾ. ೨೦೩-೨೩೮). **ಮುಂಗಾಣಿಕೆ :** ೧. “ (ಮುಂದೆ ಬರುವುದನ್ನು) ಮೊದಲೇ (ತಿಳಿದು) ಹೇಳುವುದು ; ಮುನ್ ಸೂಚಿಸುವುದು . . . ಮುಂಗಾಣಿಕೆ ; ಮುನ್ನರಿವು ” (Prognosis. ೨೦೪೩); ತಲೆದೋರಿದನು ದಿನಪ ನಗೆಯುಡಗಿ ನಾಚಿದವು ಕುಮುದಾಳಿಗಳು ಮುಂಗಾಣಿಕೆಯ ಹರುಷದೊಳಗಿದು ವಿರಹದ ಬೀಳುಕೊಟ್ಟುವು ಜಕ್ಕವಕ್ಕಿಗಳು (ಕುಮಾರಿ. ೧-೨೮). ೨. ಮುಂಗಾಣಿಕೆಯ ಹೊನ್ನಂ ಕೊಟ್ಟರು (ಎಕ. XI. ದಾವಣ. ೪-೪೦: 1143); ಬವರವೆನ್ನದು ಬಳಿಕ ಮುಂಗಾಣಿಕೆಯು ನಿನ್ನದಲೈ ಜನವ ತೋಱು ತೋಱಿಸಲು (ಖಭಾಗ. ೦೦-೩೯-೨೮). ೩. ಮೊದಲ ನೋಟ ; ಪ್ರಥಮ ನೋಟ : ಕಾಣೆನಾಕೆಯ ಮುಂಗಾಣಿಕೆಯಲೇ ಸೂಱಿಹೋದುದು ಮನದ ಸರ್ವಸ್ವ (ಕುಮಾರಿ. ೨-೩೯).

[ಮುಂ$_1$ ( < ಮುನ್$_1$ ) + ಕಾಣ್ಕೆ]

**ಮುಂಗಾದಾಡು** (ಕ್ರಿ). ಮುಂಭಾಗದಲ್ಲಿ ನಿಂತು ಕಾದಾಡು : ಮುಂದೆ ಹೋರಾಡು : ಚೂಣಿಯ ಭಟಂ ಗಾಯದಳಲ ಲೆಕ್ಕಿಸದೆ ಮುಂಗಾದಾಡಿ ಮಡಿದು ಜಯವಡುವಂತೆ (ಗೊಲ್ಲಾ. ೦೨-೩೦೦).

[ಮುಂ$_2$ ( < ಮುನ್$_2$ ) + ಕಾದಾಡು ]

**ಮುಂಗಾರ್,** ಮುಂಗಾರಿ, ಮುಂಗಾರು (ನಾ). ೧. ಮೊದಲ ಮಳೆಗಾಲ ; ವರ್ಷಾರಂಭ : ವಿರಹಿ ಸಮಾಜದ ಬಾಷ್ಪಬಿಂದುಗಳ್ವೆರಸುದಿರ್ದುವು ಘನತೋಯಬಿಂದುಗಳ್ ಮುಂಗಾರೊಳ್ (ಕುಸುಮಾ. ೬-೦೭); ಏಸಮನುಗುಳುತೆ ಗುಡುಗುಬ್ಬಿಸಿವಲಿ ರಸನವೆನಲು ಮಿಂಚೆ ನೀಡಿ ಅಸಿತೋರಗ ತೆಕ್ಕೆಗೊಂಡಿರ್ದುದೆನೆ ಮೇಘದೆಸಕವೊಪ್ಪಿದುದು ಮುಂಗಾರ (ಪ್ರಗತ. ೯-೬೩) ; ಮೊಳಗಿನಬ್ಬರವಳಿದ ಗಗನಸ್ಥಳವೊ ಪೋಣ್ಮುಂಗಾರ ಮೇಘದ ಸುಳಿವು ನಿಂದಂಬುಧಿಯೊ . . . ದಶಕಂಠನ ಸಭಾಮಂಡಲವೊ ಹೇಳುವುದೇನು ಮೋನದೊಳಿರ್ದುದಾಸ್ಥಾನ (ತೊರರಾ. ೬-೪೦-೨). **ಮುಂಗಾರಿ :** ೧. ಮುಂಗಾರಿ ಮಿಂಚಿನಂದದಿ ದೇಶದೊಳಗೆ ನಿಸ್ಸಂಗನಾಗಿ ತಿರುಗಿ ಕಾಲ ಕಳೆಯಬೇಕು (ಏಕಾಗು. ೦೩-೩) ; ಬೈಲುಶೀಮೆಯಲ್ಲಿ ಹಿಂಗಾರಿಗಿಂತ ಮುಂಗಾರಿಯ ಮಳೆಯು ಹೆಚ್ಚು ಅನಿಯಮಿತವಾದದ್ದು (ಇಭಾಗ. ೨೦) ; ಮುಂಗಾರಿಯ ಮಳೆಯಾದ್ದರಿಂದ ಕೋಲುಮಿಂಚಿನ ಹೊಯ್ಲವೂ ಗುಡುಗು ಸಿಡಿಲುಗಳ ಅಬ್ಬರವೂ ಭಯವನ್ನುಂಟುಮಾಡುತ್ತಲಿವೆ (ಇಗದ್ಯ. II. ೪೯). ೨. ವರ್ಷದ ಮೊದಲು ಬೀಳುವ ಮಳೆ, — ಆರಂಭದ ಮಳೆ ; ಮೊದಲ ಮಳೆ : ವೇಳುಗ್ರಾಮದ ನಾಗರಿಕರು ಕಾದ ಹಂಚಿನಂತೆ ಮುಂಗಾರಿಯ ಬರವನ್ನು ನಿರೀಕ್ಷಿಸುತ್ತಿದ್ದರು (ರಕ್ತರ್. ೦೩೦). ೩. ವರ್ಷದ ಮೊದಲ ಮಳೆಗಾಲದಲ್ಲಿ ಬಿತ್ತುವ ಧಾನ್ಯ : ಮುಂಗಾರಿ. ಹಿಂಗಾರಿ, ಎರಡೂ ಬೆಳೆಯುವಂಥ ಭೂಮಿಯಲ್ಲಿ ಪೊಂದುವರ್ಷ

ಮುಂಗಾರಿಯ ಬಿತ್ತಿವರೆ ಮುಂದಿನ ವರ್ಷ ಹಿಂಗಾರಿಯ ಬಿತ್ತುವರು (ಕಣಾಗ. ೨೬೬) ; ಮುಂಗಾರಿಯಾಗಲಿ ಬಿಳಿಜೋಳವನ್ನಾಗಲಿ ಜೋಳವನ್ನು ಬಿತ್ತುವ ವರ್ಷ ಗೊಬ್ಬರವನ್ನು ಹಾಕಿ . . . ಬಿತ್ತಬೇಕು (ಕೃಷಿಶ್ರ. ೬೮) ; ಮೃಗನಕ್ಷತ್ರದ ವ್ಯಾಳೆಯಲ್ಲಿ ಬಿತ್ತುವ ಮುಂಗಾರಿ ಅಂದೆನಿಸಲ್ಪಡುವ ಜ್ವಾಳವು ಇಲ್ಲೆ ಸಾಧಾರಣವಾಗಿ ಖಪಸುತ್ತದೆ (ಮುಂಬವ್ಯಾ. ೩೩).

**ಮುಂಗಾರು :** ೧. ಮುಂಗಾರ ಮುಗಿಲೊಡ್ಡಿನಂತೆ ಮದಂಗಳಿಗಂಗೈಸುವ ತುಂಬಿವಿಂಡ ಹಿಂಗದೆ ಕರ್ಣತಾಳದಲಿ ಸೋವುತ ಮಾತಂಗ ನೀಗ್ಯೆದುವುವಲ್ಲಿ (ಕಂಪಪು. ೨-೫೬) ; ಒಡನೊಡನೆ ರೆಖೆಯಿಮ್ಮಿಡುತ ತನುಲತೆ ನಡುಗಿ ಹೊಂಪುಳಿಯಾಗಿ ನೋಟದ ಕುಡಿಗದಿರು ಮುಂಗಾರು ಮಿಂಚುಗಳಂತೆ ಚಂಚಲಿಸೆ (ಅಪಂಚಾ. ೦-೨೩-೩೩). ೨. ಕೇಳಿದೈ ನೃಪಸೂನು ನಿಮ್ಮ ನೃಪಾಲರಾಪ್ರಸ್ರವಣಶೈಲದ ಮೇಲಿರಲು ಮೈದೋಱಿದುದು ಮುಂಗಾರು ಧಾರುಣಿಗೆ (ತೊರಂರಾ. ೪-೬-೦) ; ವಸಂತಋತು ಆಗ ತಾನೆ ಆರಂಭವಾಗಿತ್ತು. ಆ ಪ್ರಾಂತದಲ್ಲೆಲ್ಲ ಮುಂಗಾರು ಚೆನ್ನಾಗಿ ಆಗಿದ್ದಿತು (ಶಾಂತಲಾ. ೨೯೪).

[ ಮುಂ$_1$ ( < ಮುನ್$_1$ ) + ಕಾರ್$_2$. / ತೆಲು. ಮುಂಗಾರಿ, ಮುಂಗರಿ ]

**ಮುಂಗಾರಿ** ' ಮುಂಗಾರ್ ' ನೋ.

**ಮುಂಗಾರಿಮಳೆ** ' ಮುಂಗಾರುಮಳೆ ' ನೋ.

**ಮುಂಗಾರಿಯ** (ನಾ). ಮುಂದಿನ ಕೆಲಸ, – ಕರ್ತವ್ಯ : ಪೂಗೋಲನ ಬಿಗಿಯುಪ್ಪಿ ಮುಂಗಾರಿಯದಾಗಮಾಂತರವ ಪೇಳದಳು (ನೋಹತ. ೦೦-೬೪).

[ ಮುಂ$_1$ ( < ಮುನ್$_1$ ) + ಕಾರಿಯ ]

**ಮುಂಗಾರಿರುಳು** (ನಾ). ಮುಂಗಾರುಮಳೆಯ ಕಾಲದ ರಾತ್ರಿ ; ದಟ್ಟವಾದ ಮೋಡಗಳಿಂದ ಕೂಡಿದ ಕಗ್ಗತ್ತಲೆಯ ರಾತ್ರಿ : ಮುಂಗಾರಿರುಳ ತನಿಯೆರಕ ನೀಲಾಚಲದ ಖಂಡರಣೆ ಘೋರರಾಹುವ್ಯೂಹವೆನೆ ಸುರವೈರಿಗಳ ಮೈಗಾಂತಿ ಲಹರಿಯ ಪೂರದಲಿ ಜಗ ಮುಳುಗೆ ಬಂದುದು ಲಕ್ಷಸಂಖ್ಯೆಯಲಿ (ಕುವ್ಯಾಕ. ೯-೩೪).

[ ಮುಂಗಾರ್ + ಇರುಳು ( < ಇರುಳ್ ) ]

**ಮುಂಗಾರು** ' ಮುಂಗಾರ್ ' ನೋ.

**ಮುಂಗಾರುಗಾಳಿ** (ನಾ). ವರ್ಷದ ಮೊದಲ ಮಳೆಯ ಕಾಲದಲ್ಲಿ ಬೀಸುವ ಗಾಳಿ; - ಮಾನ್‌ಸೂನ್ : ಮಳೆಗಾಳಿ, ಮುಂಗಾರು ಗಾಳಿ (ಭೂಪಿವ. ೬೨). [ ಮುಂಗಾರು ( < ಮುಂಗಾರ್ ) + ಗಾಳಿ$_1$]

**ಮುಂಗಾರುಮಳೆ, ಮುಂಗಾರಿಮಳೆ** (ನಾ). ವರ್ಷದ ಮೊದಲು ಬೀಳುವ ಮಳೆ,– ಆರಂಭದ ಮಳೆ,– ಮೊದಲ ಮಳೆ : ಮುಂಗಾರು ಮಳೆಗೆ ಸಿಕ್ಕ ಮಗು ಅಳುವಂತೆ ಅಳುತ್ತಿದ್ದಳು (ಎಳೆ. ೪೩). **ಮುಂಗಾರಿ ಮಳೆ:** ಅಶ್ವಿನ ಶುದ್ಧಹುಣ್ಣಿಮೆಯೇ ಶೀಗೆಹುಣ್ಣಿಮೆ, ಆಗ ಮುಂಗಾರಿ ಮಳೆಗಳು ಮುಗಿದು ಹಿಂಗಾರಿಮಳೆಗಳು ಪ್ರಾರಂಭವಾಗುವುವು (ಕನ್ನಜಾ. ೦೬೩). [ ಮುಂಗಾರು ( < ಮುಂಗಾರ್ ) + ಮಳೆ ( < ಮೞೆ ) ]

**ಮುಂಗಾರ್ಗಾಲ** (ನಾ). ಮುಂಗಾರು ಮಳೆಯ ಕಾಲ ; ವರ್ಷದ ಮೊದಲ ಮಳೆಗಾಲ : ಧುಮುಕುವ ಶೋಣಿತ ಗಿರಿಝರಿಯಲ್ಲಿ ನರರುಂಡಗಳು ನರಮುಂಡಗಳು ಮುಂಗಾರ್ಗಾಲದ ಬಲ್ಸರಿಯಲ್ಲಿ ಆಲಿಯ ಕಲ್ಲುಗಳುರುಳುರುಳ್ವಂತೆ ಧುಮುಕುತಲಿರುವುವು ! (ಶಾಂಕಜ. ೬೯-೦೬).

[ ಮುಂಗಾರ್ + ಕಾಲ ]

**ಮುಂಗಾಲ್, ಮುಂಗಾಲು** (ನಾ). ೧. ಚತುಷ್ಪಾದಪ್ರಾಣಿಯ ಮುಂಭಾಗದ ಅಥವಾ ಮುಂದಿನ ಕಾಲು : ಮುಂಗಾಲ್ಗಳಿಂದಂ ಮುಗಿಲಂ ಮುಟ್ಟಿಪ್ಪದೆಂಬಂತತಿಜವಮಿದಿರೊಳ್ ಬಂದುದಿಂದ್ರಾಯುಧಾಶ್ವಂ (ಶಾದಂಪು. ೪೫೬); ಬೀಗಿ ಬೆನ್ನಿಂ ಬಿಂವನ್ನಂ ಕೊರ್ವಿ ಮುಂಗಾಲ್ ಗಡಿಯೆನೆ ಕಡುಗೆಚ್ಚಲ್ ಮೊದಲ್ಗಿಂದು . . . ಮಾಹಿಷೀಸಂತತಿ ವಿಪಿನಭವಂ ಕಣ್ಣಗುಪ್ಪಾಯ್ತು ಕಾರೊಳ್ (ಕಂಪ್ರಕು. ೪-೮೬) ; ನಿಮಿರ್ದಂಗಂ ನೀಳ್ದ ಮುಂಗಾಲುಹುಗಿ ನಡೆವ ಪಿಂಗಾಲ್ ಚಲದ್ವಾಲದಂಡಂ (ಗಿಂಕ. ೦-೯೩). ೨. ಕಾಲಿನ ಮುಂಭಾಗ ; ಹೆಜ್ಜೆಯ ಮೇಲ್ಭಾಗ : ಅಂಗಯ್, ಅಂಗಾಲ್ . . . ಮುಂಗಯ್, ಮುಂಗಾಲ್ (ಶಮದ. ೦೬೬ ಪ್ರಯೋ) ; ಕಯ್ಯ ಮುಂದು, ಮುಂಗಯ್ ; ಕಾಲ ಮುಂದು ಮುಂಗಾಲ್ (ಶಬ್ದಾ. ಸು. ೩೦೬ ಪ್ರಯೋ). **ಮುಂಗಾಲು:** ೧. ಮುಗಿದ ಮುಂಗಾಲುಗಳ ಮುಂದಕೆ ಹೊಗುವ ಹಿಂಗಾಲುಗಳ . . , ನಿಗುರೊಡಲ ಮುಂಬರಿವ ಚಿಮ್ಮುವ ಚಿಗಿವ ಚಲನೆಯ ಚಂಗುವಾಜಿನ ಮೃಗವ್ಯಗೀನಿಕುರುಂಬದೊಳಗಡಹಾಯ್ದುದಗಲದಲಿ (ತೊರಂರಾ. ೩-೬-೯೩); ಎರಡು ಜನ್ನಗುದುರೆಗಳೂ ಒಂದಕ್ಕೊಂದು ಇದಿರಾದುವು . . . ಮುಂಗಾಲುಗಳಿಂದ ಒಂದನ್ನೊಂದು ಅಪ್ಪಳಿದುವು (ಐಮಕ. ೦೦೬). ೨. ಎತ್ತಿದ ಕೈಗಳ ಪೊಡೆವ ತಲೆಯ ನೆಗಪುತ್ತಿರೆ ಪೊಡೆವ ಮುಂಗಾಲ ಒತ್ತಿ ನೂಂಕಿದೊಡೆ ಪೊಡೆವ ವೀರವಿನ್ನಾಣರೆತ್ತ ನೋಡಿದರತ್ತಲಿಹರು (ಪರಕ. ೬-೬೨).

[ ಮುಂ$_1$ ( < ಮುನ್$_1$ ) + ಕಾಲ್$_1$. / ತೆಲು. ಮುಂಗಾಲು ]

**ಮುಂಗಾಲು** 'ಮುಂಗಾಲ್' ನೋ.

**ಮುಂಗಾಲುಪುಟಿಕೆ** 'ಮುಂಗಾಲ್ಪುಟಿಗೆ' ನೋ.

**ಮುಂಗಾಲುಪುಟಿಗೆ** 'ಮುಂಗಾಲ್ಪುಟಿಗೆ' ನೋ.

**ಮುಂಗಾಲ್ಪುಟಿಗೆ, ಮುಂಗಾಲುಪುಟಿಕೆ, ಮುಂಗಾಲುಪುಟಿಗೆ** (ನಾ). (ಆಲಂ) ಹಾರಿಕೆಯ ಮಾತು ; ಜಾರಿಕೆಯ ಮಾತು ; ಉಡಾಫೆಯ ಮಾತು : ಇಲ್ಲದ್ದನ್ನು ಹೇಳುವುದೇದರೆ ಆಶೀರ್ವದಿಸುವುದು ಎಂದರೆ ಮುಂಗಾಲ್‌ಪುಟಿಗೆಯನ್ನು ಇಡುವುದು (ಮುಂಗಾಪು. ೩ ಮುನ್ನುಡಿ) ; ವಿದ್ಯಾರ್ಥಿಯಾಗಿದ್ದಾಗಲೇ 'ಇಲೆಕ್ಶನ್'ನಾಟಕದ ಮುಂಗಾಲ್‌ಪುಟಿಗೆಯನ್ನಿಟ್ಟ ಶ್ರೀ ಎನ್ಕೆಯವರ ಸಾಹಿತ್ಯವಾಹಿನಿ ಈಚೆಗೆ ಬಗೆಬಗೆಯಾಗಿ ಹರಿದುಬಂದಿದೆ (ಸಾಸಪಾ. ೦೬೬). **ಮುಂಗಾಲುಪುಟಿಕೆ :** ದೊಡ್ಡದೊಡ್ಡ ಗೃಹಸ್ಥರು ಕಾಣಲಿಕ್ಕೆ ಬಂದಾಗ ಅವನು ಮುಂಗಾಲುಪುಟಿಕೆಯ ಮಾತಿನಿಂದ ಅವರ ಇಂಗಿತವನ್ನು ತಿಳಿದುಕೊಳ್ಳಲಿಕ್ಕೆ ಯತ್ನಿಸುತ್ತಿದ್ದನು (ಕಂಸಂ. ೩೨). **ಮುಂಗಾಲುಪುಟಿಗೆ :** ಖಿನ್ನತೆಯ ಕ್ಷುಬ್ಧತೆಯ ತೋರಗೊಡದಲೆ . . . ಮುಂಗಾಲುಪುಟಿಗೆಯಲಿ ಮುನ್ನುಗ್ಗುತ್ತಿರಬೇಕು (ಅರಳು. ೩೪೮-೦೨) ; ಮುಂಗಾಲುಪುಟಿಗೆಯ ಮರುಸವಾಲಿನಿಂದ ಅವನು ಉತ್ತರ ಕೊಟ್ಟನು (ಅನ್ನ.೦೦೩) ; ಪಂತರು ಮುಂಗಾಲುಪುಟಿಗೆ ಹೊಡೆದರು (ದೀಶಹ. I, ೮೪).

[ ಮುಂಗಾಲ್ + ಪುಟಿಗೆ ]

**ಮುಂಗಾವಲು** (ನಾ). ಮುಂಭಾಗದಲ್ಲಿರುವ ಕಾವಲು, – ರಕ್ಷಣೆ : ಮುಂಗೈಯ ಮೇಲೆ ಅಂಗಜನ ಅರಗಿಳಿಯಿರಿಸಿ ಮುಂಗಾವಲೆಂದು ಸುಗ್ಗಿಯ ಕೋಕಿಲವ ಸರಿಸಿ (ಗಂ. ೩೦-೨).

[ ಮುಂ$_1$ ( < ಮುನ್$_1$ ) + ಕಾವಲು ( < ಕಾವಲ್$_1$ ) ]

**ಮುಂಗಾವಳ** (ನಾ). = ಮುಂಗಳ್ತಲೆ : ಅಲ್ಲಿರುವ ಕನ್ನೆವೆಣ್ಣುಗಳ. . . ಮುಡಿಗಳ ಕತ್ತಲೆಗಳಂದ ಕೃಷ್ಣಪಕ್ಷದ ಮುಂಗಾವಳ ತೋಱಿದಂತೆ . . , ಇರುವುದು (ವಕಶ. ೪೯). 'ಮುಂಗಾಳು' ಪಠಾ.

[ ಮುಂ$_1$ ( < ಮುನ್$_1$ ) + ಕಾವಳ$_1$ ]

**ಮುಂಗಾಳು** (ನಾ). = ಮುಂಗಳ್ತಲೆ : ಅರವೀದಿಯಲ್ಲಿಯೇ ಮುಂಗಾಳು ಮುಸುಕಿತ್ತೆ ! (ನಾಪರೀ. ೦೨-೦೩); ಮುಂಜಾವದಿಂದ ಮುಂಗಾಳು ಕವಿಯುವವರೆಗೆ ಓರಿಗೆಯ ಹಸುಳರೊಡನಾಡಿ, ಬಿಸಿಲಿನ ಬೇಗೆ ಬೆಳುದಿಂಗಳಿನ ಕಳೆಯುತಿದ್ದೆ (ಉದ್ಯಾಕ. ೭೦೨).

[ಮುಂ$_1$ (< ಮುನ್$_1$) + ಕಾಳು$_3$ (< ಕಾೞ್$_3$)]

**ಮುಂಗಾಳಿಗ** (ನಾ). ಮುಂಚೂಣಿಯ ಯುದ್ಧ : ದಿನಕರನುದಯದಲಿ ಮುಂಗಾಳಿಗದ ಗಾಢಾಭಿಲಾಷರು ಬಂದು ಕಣನೊಳಗೆ . . . ಬಲಿದರು

ತಪ್ಪ ಮೋಹರವ (ಕುಮ್ಮಾಭಾ. ೬-೧); ಕೋಲ ಮಳೆಯನು ಕಚಿದನಾ ಮುಂಗಾಳೆ [ಪಾಠಾಂ. ೪]ಗದ ತವಕಿಗರಿಗೆ (ಶಿಭಾಗ. ೯-೬-೧೬).

[ಮುಂ$_1$ (< ಮುನ್$^*_1$) + ಕಾಳೆಗ]

**ಮುಂಗಿ** ' ಮುಂಗುರಿ ' ನೋ.

**ಮುಂಗಿಡು** ' ಮುಂಗೆಡು ' ನೋ.

**ಮುಂಗಿಮೋವುಗಿಡ** (ನಾ). ಒಂದು ಬಗೆಯ ಸಸ್ಯ : ಸರ್ಪಾಕ್ಷಿ : " ನಾಕುಲೀ, ಸುರಸಾ, . . . ಸುವಹಾ ರ ಸರ್ಪಾಕ್ಷಿಗಿಡದ ಹೆಸರುಗಳು . . . ಹಾವುಕಣ್ಣಿನ ಗಿಡ, ನಂಜಾರೇಗಿಡ, ಮುಂಗೀಮೋವುಗಿಡ " (ಸಿದ್ಧಾಂಚಿ. ೧೩೯).

[ಮುಂಗಿ (< ಮುಂಗುರಿ) + ಮೋವು + ಗಿಡ (< ಗಿಡು)]

**ಮುಂಗಿಲಿ** ' ಮುಂಗುರಿ ' ನೋ.

**ಮುಂಗಿಲು** ' ಮುಂಗುರಿ ' ನೋ.

**ಮುಂಗು$_1$** (ನಾ). ೧. " ಮುಂಭಾಗ " (ಶಶಸಾಂ ಕೋಶ) : ಬೆಡಗಿಯ ರಂಗ ರಂಗಾಯೆಂದು ಮುಂಗನಾವರಿಪಳ ಸಂಗವದೆಂತು ಸಾರುವುದೊ (ಶಶಸಾಂ. ೨೨-೬). ೨. ಮೊಳಕೆ ; ಅಂಕುರ ; ಚಿಗುರು : ಈ ಬೀಜ ಒಂದೂ ಈ ದರಿದ್ರಮಳೆ ಏಕಸಾನು ಹೊಡೆದು ಮುಂಗು ಬಂದ ಸಸಿಗಳೂ ಕೊಳೆತುಹೋದವು (ಮರಮ. ೩೦).

[< ಮುನ್$^*_1$./ತುಳು. ಮುಂಗು, ಮುಂಗೆ]

**ಮುಂಗು$_2$** (ನಾ). ಒಂದು ಬಗೆಯ ಸಸ್ಯ : ' ಆನೆಮುಂಗು ', ' ನೆಲ ಮುಂಗುಹುಲ್ಲು ' ಪರ್ಯಾ. [ ? ]

**ಮುಂಗುಚ** (ನಾ). ಎದ್ದು ಕಾಣುವ ಕುಚ : ತರಳಲೋಚನೆ ಮುಂಗುಚಂಗಳೊಳಾದ ಚೆಲ್ವುಗಳಂ ಮುಖಾಂಬುರುಹದೊಂದು ವಿಲಾಸಮಂ . . . ಸರೋರುಹಾನನೆ ತೋಱು ನೀಂ (ಧರ್ಮಾಮೃ. ೩-೦೨೯).

[ಮುಂ$_1$ (< ಮುನ್$^*_1$) + ಕುಚ]

**ಮುಂಗುಡಿ$_1$**, ಮುಂಕುಡಿ (ನಾ). ೧. ಮುಂದಿನ ತುದಿ, – ಕೊನೆ : (೬). ೨. ಮುಂದಿನ ಭಾಗ ; ಮುಂಭಾಗ ; ಅಗ್ರಭಾಗ : " ಮೂಗೆನೆ ಮುಂಗುಡಿಯಕ್ಕುಂ " (ಶಶು. ೨೦೫); ಅಂತು ದಕ್ಷಿಣದಿಕ್ಪಾಲ ಪುರಸ್ಸರರವನಿಪತಿಗಳೊಳಾಳ್ತನಮಂ ಪೂಣ್ದು ಸಾರಸರ್ವಸ್ವನಿವೇದನಂಗೆಯ್ದು ಮುಂಗುಡಿಯ ಬಂದ ಚಕ್ರವರ್ತಿ ವೈಜಯಂತೀ ದ್ವಾರಾಭಿಮುಖನಾಗಿ ಬೀಡಂಬಿಟ್ಟೋಲಗಂಗೊಟ್ಟಿರೆ (ಶಾಂತಿಪು. ೧೧-೬ ವ); ನಡೆತಂದಳ್ ಶಿವಪೂಜೆಗೆಂದಗಜೆ ಪುಷ್ಪವ್ರಾತಮಂ ಕೊಂಡು . . . ಸುಯ್ಗಂಪಿನೊಳ್ ಸಾರ್ದು ಮುಂಗುಡಿಯೊಳಂ ತೀಡುವ ದಕ್ಷಿಣಾನಿಲನಿನೊಪ್ಪಂಬೆತ್ತ ವಿಸ್ತಾರದೊಳ್ (ಗಿರಿಕ. ೮-೫೦) ; ಹಾಯ್ದು ರಥವನು ಭೀಮಸೇನನ ರಥದ ಮುಂಗುಡಿಗೆ (ಕುಮ್ಮಾಕ. ೨೦-೨೫). ೩. ಬಳ್ಳಿಯ ಮುಂಭಾಗದ ಕುಡಿ, – ತಳಿರು ; ಚಿಗುರು : ಒಸಗೆಯ ಮುಂಗುಡಿ ಚೆಲ್ವಿನ ಪಸರಂ . . . ಸಿರಿಯ ಮೆಯ್ಸಿರಿ ಪಸುರ್ವಂದರ್ ನೃಪನ ಕಣ್ಗದೇಂ ರಂಜಿಸಿತೋ (ಧರ್ಮಾಮೃ. ೬-೪); ಬರವರಲ್ಮುಂಗುಡಿಯ ಕಂಪು ಕರದಿಂ ತೀಡೆ ಹರಹರ ವಿರೂಪಾಕ್ಷ ನಿಮಗೆನುತ್ತಂ ಕೂಡೆ (ಪುಷ್ಪರ. ಹ. ೫೨೩-೧೧); ಮುದ್ದುತನದ ಮೋಹದ ಮುಂಗುಡಿಯ ಎದ್ದುಪ್ಪೆನ್ನನು ಎಳಲತೆಗುಡಿಯ (ಹಶಿಕಾ. ೫೦ ೨೧೭). ೪. ಮುಂಭಾಗದ ಸೈನ್ಯ ; ಅಗ್ರಭಾಗದ ಸೈನ್ಯ : ಮುಂಚೊಣಿ: "ಮುಂಗುಡಿಯೆನೆ ಮುಂದುಚೂಣಿಯೆನೆ ಮುಂಬಲಮುಂ" (ತಶು. ೧೭೬) ; ಶ್ರೀವೀರಬಲ್ಲಾಳದೇವರು ಮುಂಗುಡಿಯಂ ಬೆಸಸಲು (ಮೈಶಾ. ೦೪೪೦, ೦೪-೭ ; 1189) : ನಿಚ್ಚಟದ ಕಲಿಗಳ್ ಕಾದುತಿರ್ದರಿರ್ಬಲದ ಮುಂಗುಡಿಯವರ್ (ಕಬಿಪು. ೪೯-೨೬). ೫. (ಆಲಂ) ಮುನ್ಸೂಚನೆ : ಗೌರಿಗೆ . . . ಬಹು ಬೇಗ ಅದೊಂದು ಕೆಲಸವಷ್ಟೇ ಅಲ್ಲ, ಸೋಮಕ್ಕನ ದಬ್ಬಾಳಿಕೆಯ ಮುಂಗುಡಿಯೆಂಬುದರ ಅರಿವಾಗತೊಡಗಿತು (ಸಡದಾ. II, ೯೯೩). **ಮುಂಕುಡಿ** : ೪. ಮುಂಕುಡಿಯ ನಾಯಕರಿವರು ಪತಿಮುಂಕಕಾಱರು ಇವರ ಬಳಿಯಲಿ ಬಿಂಕದೆರಡಕ್ಷೋಣಿ ಬಲವದೆ (ಕುಮ್ಮಾಭೀ. ೨-೧೧).

ಮುಂಗುಡಿಕೂಸು = ಕೊನೆಯ ಮಗುವಿನ ಹಿಂದಿನ ಮಗು : ಆ ಕುರಿಮರಿ ಗೌರಿಗೆ ಮುಂಗುಡಿ ಕೂಸಾಯಿತು (ಸಡದಾ. II, ೮೮೫).

[ಮುಂ$_1$ (< ಮುನ್$^*_1$) + ಕುಡಿ$_2$]

**ಮುಂಗುಡಿ$_2$** (ನಾ). ಮುಂಭಾಗದಲ್ಲಿರುವ ಧ್ವಜ ; ಅಗ್ರಭಾಗದಲ್ಲಿರುವ ಪತಾಕೆ, – ಬಾವುಟ : ಅದು ಭುವನಕ್ಕೆ ಮಂಗಳದ ಮುಂಗುಡಿ . . . ಬಹುಲಕ್ಷ್ಮಿಯ ಲಾಸ್ಯಮಂದಿರಂ (ಪುಷ್ಪಪು. ೦೩-೦೦೪) ; ಅಲರ್ದ ಪೊಂದಾವರೆಯ ಪಂತಿಯೊ . . . ಕಾಂತಾಜನವೊ ಕಮಲಾಸನೆಯ ಮುಂಗುಡಿಯೊ ಬಂದಳೂರ್ವಶಿ (ಕುಮ್ಮಾಆ. ೯-೦೨). [ಮುಂ$_1$ (< ಮುನ್$^*_1$) + ಗುಡಿ$_2$]

**ಮುಂಗುಡಿ$_3$** (ನಾ). ೧. ಮುಂಭಾಗದಲ್ಲಿರುವ ಗುಡಿಸಲು : ಸಾಣೆವಿಡಿವ ಕಮ್ಮಾಱರ ಮುಂಗುಡಿಯಿಂ ಪುರಂ ಕಣ್ಗೆಂಬಾದುದು (ರಾಮಾಶ್ವ. ೦೦೩-೨೬). ೨. (ಅಂಗಡಿಯ) ಮುಂಭಾಗದಲ್ಲಿರುವ ಕಟ್ಟಡ; ಮುಂಗಟ್ಟು : ಎರಡು ತೆಱದೊಳಗೊಪ್ಪುವಂಗಡಿಯ ಮುಂಗು[ಪಾಠಾಂ. ಗ]ಡಿಯ ಸುರಿದ ಧಾನ್ಯದ ರಾಸಿಯೊತ್ತುಗಳ ಜೊತ್ತುಗಳ . . . ಪಾಳಿಯಂ ಕಣ್ಗೆಸೆದುದು (ಜೈಪು. ೪೨-೦೫); ನವರತ್ನಗಳ ದೀಪ್ತಿ ಮುಸುಗಿನ ಸಾಲು ಮಳಿಗೆಯಂಗಡಿ ಮುಂಗುಡೀ . . . ಹರದ ಸೆಟ್ಟಿಯರ ಸೌಭಾಗ್ಯಸಂಪತ್ತನಾರು ಪೇಳ್ವರು (ನವಮೋ. ೨-೩೦). [ಮುಂ$_1$ (< ಮುನ್$^*_1$) + ಗುಡಿ$_3$]

**ಮುಂಗುಡಿದಾಯ** (ನಾ). ಪ್ರಾರಂಭದಲ್ಲಿ ಯುದ್ಧಮಾಡುವ ಅವಕಾಶ : ಜೀಯ ಖಾತಿಯಿದೇಕೆ . . . ತಾ ತಾ ವೀಳಯವನೆನುತ ಹಾಯಿದರು ತಮತಮಗೆ ಮುಂಗುಡಿದಾಯದಲಿ ಘಟ್ಟಿಸುವ ನಿಸ್ಸಾಳಾಯತದ ಬಹುವಿಧದ ವಾದ್ಯದ ಬಳಿಯ ಲಗ್ಗೆಯಲಿ (ಕುಮ್ಮಾಆ. ೦೨-೩೦). ' ಮುಂಗುಳದಾಯ ' ಪರ್ಯಾ. [ಮುಂಗುಡಿ$_1$ + – ದಾಯ$_1$]

**ಮುಂಗುಡಿಬಿಡು** ' ಮುಂಗುಡಿವಿಡು ' ನೋ.

**ಮುಂಗುಡಿವರಿ** (ಕ್ರಿ). ೧. ಮುಂಭಾಗಕ್ಕೆ ಬರು ; ಮುಂದೆ ಬರು : ಮುಂಗುಡಿವರಿದು ಕಡುಕೈದ ಶಬರರೊಳಗೊಬ್ಬರುಳಿಯದ ತೆಱದಿ ಕೊಂದಿಕ್ಕಿ (ಹಶಕಾ. ೬-೨೦); ರಥರಾಜಿ ಮುಂಗುಡಿವರಿದುದವನೀಪತಿಯ ಚೂಣಿಯ ನೃಪರ ಜೋಕೆಯಲಿ (ಕುಮ್ಮಾದ್ರೋ. ೦-೪೬). ೨. ಕುಡಿಯಿಡು ; ಕೊನರು ; ವರ್ಧಿಸು : ಕಮಳಿನಿಯಿನಿಯನಸ್ತಮಿಸಿದಳಲುರಿಯಲೊದವಿ ಮುಂಗುಡಿವರಿದು ಗಗನಮಂ ತಳ್ಕಿಡಿದು ಬೆಂದ ಕಾರ್ಬೊಗೆಯೋಯೆನೆ . . . ರಾತ್ರಿ ಕಣ್ಗೆಸೆದುದು (ಸೋಮಚ. ೨-೮); ಬೇಕು ಬೇಡೆಂದೆಂಬುದೊಂದವಿವೇಕವುಳ್ಳನ್ನಬರ ನಾನಾ ಶೋಕಮೋಹಾದಿಗಳು ಮುಂಗುಡಿವರಿದು ಮುಸುಱುವುವು (ಶ್ರಶುಂ. ೨೪-೦೩).

[ಮುಂಗುಡಿ$_1$ + ಪರಿ$_2$]

**ಮುಂಗುಡಿವಿಡು**, ಮುಂಗುಡಿಬಿಡು (ಕ್ರಿ). ಮುಂದಕ್ಕೆ ಕುಡಿ ಬಿಡು : ಚಿಗುರು ; ಕೊನರು : ಕಡುನೀಱಿ ಪೂಗೊಯ್ಕಲೇಱುವ ಭರಕೆ ಮುಂಗುಡಿವಿಡುವೆಳಲತೆ ಮರನ ಬಿಡಲು ತನ್ನೋಪನ ಸತಿಯಪ್ಪಲು ಕಾಣುತೊಡನಗಲ್ವ ಬಲೆಯಂತಾಯ್ತು (ಶ್ರೀಚಾಂ. ೫-೩೩). **ಮುಂಗುಡಿಬಿಡು** : ಮುಂಗಾರಿಯ ಗುಡುಗಿಗೆ ಸಂಚಿಗೆ ಮುಂಗುಡಿಬಿಟ್ಟು ಪಾರಿಜಾತ ಮೊಗವೆತ್ತಿದೆ ಹಸುರಂಗಿಯ ತೊಟ್ಟು (ಮುಕ್ತಕಂ. ೪೪-೦೦).

[ಮುಂಗುಡಿ$_1$ + ಬಿಡು$_1$]

**ಮುಂಗುರಿ**, ಮುಂಗರಿ, ಮುಂಗಲಿ, ಮುಂಗಿ, ಮುಂಗಿಲಿ, ಮುಂಗಿಲು, ಮುಂಗುಲಿ, ಮೂಗುರಿ, ಮೊಂಗುರಿ (ನಾ). ೧. (ಹಾವನ್ನು ಕೊಲ್ಲುವ) ಒಂದು ಬಗೆಯ ಪ್ರಾಣಿ ; ನಕುಲ : " ಮುಂಗುರಿ ನುಲ್ಲಿಯುಂ ಬಭ್ರುವೆಂಬುದು " (ಶಶಾಮ. ೧೩೬-೩೦); ಪಾಪಂಗಳಂ

ಗೆಯ್ದುಪರಾನೆಯುಂ ಸಿಂಹಮುಂ ಪುಲಿಯುಂ . . . ಕಪ್ಪೆಯುಂ ಮುಂಗುರಿಯುಂ ಮೊದಲಾಗೊಡೆಯ ಸ್ಥಲಚರಂಗಳುಂ . . . ಆಗಿ (ಶಬ್ದಾ.ಶಾ. ೯೭-೬) ; ತದ್ವಂಘ್ರಿಪದ್ಮಂಗಳನ್ನೆಯ್ದೆ ಮಚ್ಚಿ ನೆಲಸಿರ್ದಪುವೀ ಪುಲಿ ಪಂದಿ ಕೋಡಗಂ ಮುಂಗುರಿಯೆಂಬ ನಾಲ್ಕುಂ ಭವಾವಳಿಯುಂ ಬೆಸಸಿಂ ಮುನೀಶ್ವರಾ (ಆದಿಪು. ೩-೦೯) ; ಅಂತು ಸಾರ್ತರ್ಪ ಭುಜಂಗನನಾ ಮುಂಗುರಿ ಕಂಡು ನಿಸರ್ಗವೈರಮಂ ನೆನೆಬರದೆ ಸರ್ಪನಂ ಶತಖಂಡಂ ಮಾಡಿ ಕೊಂದು ತಿನುತ್ತಿರ್ಪುದಂ (ಕಂತಕಂ. ೦೬೯-೩). ೨. ಒಂದು ಬಗೆಯ ಸಸ್ಯ : ಜಳದಂ ಮುಂಗುರಿಯುಂ ತರು ಜಳ ಚಮರಮುಂ ಸಕ ದೋಷಮುಂ ಪಿರಿವಕ್ಕುಂ (?) (ಕಲ್ಯಾಣ. ೧೧, ೩). **ಮುಂಗರಿ** : ೨. "ದ್ರುಪದೀ–ಬಂದಣಿಕೆ, ಮುಂಗರಿ" (ಓಿಕಂ. ೬೮). **ಮುಂಗಲಿ** : ೧. ಮರೆ ಮುಂಗ [ಶಾಕಾಂ. ಮುಾಗಿ] ಲಿ ಕಕ್ಕರವಕ್ಕಿ . . . ಓರಗೆಯೆಂಬಿವನ್ನೆದೆ ಕಾಸಿನೊಳ್ಗಡಣದೆ ಪೊತ್ತು ಬೇಡವಡೆ ಬಂದುದು ಕಾನನದೊಳ್ ನಿರಂತರಂ (ಸೂಕ್ತಿಸು. ೩-೦೬೬) ; ತೆಂಗು ಬಟ್ಟಲು ನುಂಗಿ ಮುಂಗಲಿಯನಿಲಿ ನುಂಗಿ ಗಂಗೆವಾಳಕರ ಹರ ನುಂಗಿ ಜಗವು ಬೆಳದಿಂಗಳಂತಿಕ್ಕು (ಸರ್ವಜ್ಞ. ೨೦೭೦); ಅಲ್ಲಿ ಒಬ್ಬ ಹಾವಾಡಿಗನು ಆಟ ಹೂಡಿದ್ದನು . . . ಒಂದು ಬದಿಗೆ ಮುಂಗಲಿಯನ್ನು ಗೂಟಕ್ಕೆ ಕಟ್ಟಿದ್ದನು (ಕಥೆಪು. ೩-೩೬). **ಮುಂಗಿ** : ೧. 'ಮುಂಗಿಮೋವು ಗಿಡ' ಪರಾ. **ಮುಂಗಿಲಿ** : ೧. ನು ನಾಯ್ಯುಂದಿ ಸಾರಂಗ ಕಡವೆ ಮುಂಗಿಲಿ [ಶಾಕಾಂ. ಗ:ರಿ] ಬೆಕ್ಕು . . . ತೋಳಗಳರಲೊಪ್ಪಿತಾ ಬಲ್ಗಾಡು (ಶ್ರೀಶಾಂ. ೬-೦೭) ; ಶರಭ ಶಾರ್ದೂಲ . . . ಮುಂಗಿಲಿಗಳ ಮೊತ್ತವಾವರಿಸಿ ಕೊಂಡಿಹುವು ಹೆಮ್ಮಲೆಯು (ಕಂಶಿಖ. ೦೬-೯೦). **ಮುಂಗಿಲು** : ೧. ವೈರವ ಬಿಟ್ಟು ಹುಲಿ ಹುಲ್ಲೆ ಒಂದಾಗಿ ಕರಿ ಸಿಂಹಗಳು ಚಂದದಿ ಮುಂಗಿಲ ಘಣ ನವಿಲುಗಳೀಗ (ಹಂಶಾಂ. ೦-೬೬). **ಮುಂಗುಲಿ** : ೧. ಮುಂಗುಲಿಯ ಮೇಲೆ ಹೆಡೆಯಿಟ್ಟು ಕೇಳ್ದಹಿಗಳುಂ ಸಂಗಣಿಸುವಹಿಯು ಹೆಡೆಗೆಡೆಗೊಡುವ ಶಿಖಿಗಳುಂ (ಅನಾಥ. ದೇ. ೦೬೩-೩); ಮೇಲ್ಮರನನಡರ್ವ ಕೋಡಗಂಗಳ ಬಳ್ಳಿವಾಲವನೆಳನಾಗರೆಂದು ಸೆಳೆದು ಕೆಡಪಿ ಕಡಿದೀಡಾಡಲವ್ವಳಿಸುವ ಮುಂದಿಮುಂಗುಲಿ [ಶಾಕಾಂ. ೦] ಗಳುಮಂ (ಕಲ್ಯಾಣ. ೨೩೯); ಪುಲ್ಲೆಗಳ್ಬರ್ಬುಲಿಗಳೊಳ್ಸರಸವಾಡುವುವು ಪಾವು ಮುಂಗುಲಿಗಳೊಡಗೂಡುವುವು (ಕೈಮಿಶಾ. ೦೩-೦೯). **ಮೂಗುರಿ** : ೧. ಪೊಲ ಮರೆ ಮೂಗುರಿ ಕೂರ್ಗುರಿಯಳಲು ಬೆಕ್ಕರತೆ . . . ಎರಡುತಲೆಯ ಪಕ್ಕಿಯಿನೊಪ್ಪಿದುದಾ ದಾರುಣ ಮುಪ್ಪಡಮು (ಹರಿವಂ. ೦೩-೨೯); ಪಲ್ಲಿ ಮೂಗುರಿ ಮೂಷಕ ಮೊದಲಾದ ತಿರಿಕ ನಾರಕಗತಿಯೊಳು ಪುಟ್ಟಿ (ಶೀಬಿಸಂ. ೭-೬೭). **ಮೊಂಗುರಿ** : ೧. ನಕರಿಯೆಂಬಾ ಪೆಸರ ತಾಳ್ದ ಗಿಡವನಂಟುತ್ತ ಮೊಂಗುರಿ ಮಹಾವ್ಯಾಳ ವಿಷಮುಂ ಕಳಿಪುದೇ (ಪೀಕೃಶಿ. ೪-೬-೬೮). 'ಮುಂಗುಸಿ' ಹೋ.
[ದೇ.॥ ತಮಿ. ಮೂಜ್ಜ್ಯ : ತುಳು. ಮುಂಗಿಲಿ, ಮುಂಗಿಲೆ, ಮುಂಗುಲಿ ; ತೆಲು. ಮುಂಗಿ]

**ಮುಂಗುರುಡು** (ನಾ). (ಆಲಂ) ಮುಂದುಗಾಣದಿರುವಿಕೆ; ದಿಕ್ಕು ತೋಚದಿರುವಿಕೆ : ದಿಗ್ಭ್ರಮೆ : ಚಿಂತಿಸುವ ಚಿತ್ತದಲು ಗುರಿಯಿರದ ಬಾಣದೊಲು ಎತ್ತಲೋ ಎತ್ತಲು ಮುಂಗುರುಡ ಮನದೊಲು (ಮುಕ್ತಿಕಾ. ೪೦-೦೩). [ಮುಂ$_1$ (< ಮುನ್$_1$) + ಕುರುಡು]

**ಮುಂಗುರುತು** (ನಾ). ಮುಂಗುರುಹು ; ಮುನ್ಸೂಚನೆ : ಹೀಗೆ ಬಹುವಿಧವಾದ ಸುಗುಣಗಳಿಂದ ಕೂಡಿದ ಈ ಕತೆಯ ಗೊಂಚಲು ಮುಂದೆ ಬರಲಿರುವ ಅನೇಕ ಫಲಸಂಚಯದ ಮುಂಗುರುತೆಂದು ನಾನು ಆಶಿಸುತ್ತೇನೆ (ಕೆಬೋಚ. ೭ ಮುನ್ನುಡಿ); 'ಹೂಬಿಸಿಲು' ಬರಲಿರುವ ವಸಂತೋತ್ಸವದ ಮುಂಗುರುತು (ಹಾಚಿಸಂ. ೦೯೯) ; ಧಾರವಾಡದ ಕರೆಯು ಅತ್ತ ಕರೆಯುತ್ತಿದೆ—ಎಂಬ ಮುಂಗುರುತು ಈಗಾಗಲೆ ಮೂಡಿದೆ (ಸೂರ್ಯಾಕಾ. ೨ ಮುನ್ನುಡಿ). [ಮುಂ$_1$ (< ಮುನ್$_1$) + ಗುರುತು (< ಗುಱುತು)]

**ಮುಂಗುರುಹು** 'ಮುಂಗುಜುಪು' ನೋ.

**ಮುಂಗುರುಳ್**, ಮುಂಗುರುಳು (ನಾ). ಮುಂದಲೆಯ ಕೂದಲು : ಮುಂಗೂದಲು ; ಅಳಕ : ಮೆಲ್ಲಡಿ ಕಂಜ ಮೊಡಿ ಸೋಗೆ ತುಂಬಿಗಡಣ ಮುಂಗುರುಳ್ಗಳಬನವ ಪುಳ್ಳಿಯ ಕಚ್ಚು ಸುಡಲು ಸೈರಿಪೆನೆ ನಿನ್ನಾಣೆ (ಶರ್ಶತ. ೬-೨೮). **ಮುಂಗುರುಳು** : ಮುಂಗುರುಳೊಳು ಬಿಗಿವಡೆದಿಹ ಮಣಿಯ ಕುಚ್ಚುಗಳ ನಿಡುದೋಳ ಬಳೆ ತಾಪಿತಿ ಕಡಗ ಕಂಣವಾಂತ ಕಡು ಚೆಲುವೆಯರೆಸೆದಿಹರು (ಕಂಶಿಖ. ೬-೦೦೯) ; ಸರಸಿಜೋಪಮವದನದಲಿ ಮುಂಗುರುಳ ತುಂಬಿಗಳೊಲೆಯೆ (ಅಸಂಶಾ. ೦-೦೭-೨೬).
[ಮುಂ$_1$ (< ಮುನ್$_1$) + ಕುರುಳ್$_1$]

**ಮುಂಗುರುಳು** 'ಮುಂಗುರುಳ್' ನೋ.

**ಮುಂಗುರುಳ್ಚು** (ಕ್ರಿ). ಆಯುಧವನ್ನು ಮುಂದಕ್ಕೆ ರಭಸಳಪಿಸು : ಕಯ್ಯ ಕರವಾಳವನ್ನು ಮುಂಗುರುಳ್ಚಿ ಜನ್ನಣದಿಂದ ಆತನ ಆಯುಧವನ್ನು ಹಾರಿಸಿಬಿಟ್ಟು . . . ಕೊರಳ್ವಿಡಿದಾಂಕಿ ನಿಲಿಸಿಕೊಳ್ಳನು (ಬಾಂಕ್ತ್ರಶ. ೦೦೩-೩).
[ಮುನ್$_2$ (< ಮುಂ$_2$) + ಕುರುಳ್ಚು]

**ಮುಂಗುಲಿ** 'ಮುಂಗುರಿ' ನೋ.

**ಮುಂಗುಸಿ**, ಮುಂಗಸಿ (ನಾ). ಹಾವನ್ನು ಕೊಲ್ಲುವ ಒಂದು ಬಗೆಯ ಪ್ರಾಣಿ ; ನಕುಲ ; ಇತ್ತ ನೋಡ್ಮುಂಗುಸಿಯ ಮೊಗದ ಚಂದಗಳ (ಬಾಲಶಾ. ೪); ಒಂದು ಮುಂಗುಸಿ . . . ಒಂದು ಹೆಗ್ಗಣ ; ಇವು ಅಲ್ಲಿದ್ದುವು (ಕಸಂ. ೭). **ಮುಂಗಸಿ** : ಮುಂಗುಸಿಯಂತೆಯು ವಂಟೆಗಳಂತೆಯು ನಡಗೆ ಉಳ್ಳ ಕುದುರೆಗಳು ವಡೆಯನಿಗೆ ಸಂಪದಭಿವೃದ್ಧಿಯಂ ಕೊಡುವವು (ಅಶ್ವಗಂಥಿ. ೩೦೩-೬); ಅಲ್ಲಿ ಒಂದು ಬಿಲದಿಂದ ಒಂದು ಮುಂಗಸಿ ಹೊರಟು ಬಂತು (ಕಥಶಾ. ೩೬೩). 'ಮುಂಗುರಿ' ಹೋ.
[ದೇ.॥ ತೆಲು. ಮುಂಗಿಸ, ಕೋಲಾ, ಗೊಂಡಿ. ಮುಂಗುಸ್./ ಪ್ರಾ. ಮಂಕುಸ, ಮಂಗುಸ ; ಮುಗ್ಗಸ./ ಕೊಂಕಣಿ. ಮುಂಗಸ/. ಮರಾ. ಮಂಗೂಸ್, ಮುಂಗೂಸ್, ಮುಂಗೂಸ್./ಇಂ. Mongoose]

**ಮುಂಗುಸಿಗಿಡ** (ನಾ). ಒಂದು ಬಗೆಯ ಸಸ್ಯ ; ಮುಂಗಿಮೋವು ಗಿಡ : "ಗರುಡಪಾತಾಳ, ಪಾತಾಳಗರುಡ, ಸರ್ಪಾರಿ, ಮುಂಗುಸೀಗಿಡ" (ಪ್ರಕ್ಷಿ. ೯೮); ಮುಂಗುಸಿಗಿಡ, ಪಾತಾಳ ಗರುಡ, ಸರ್ಪಾರಿ (ವೃಕ್ಷಿನಿ. ೩೬-೦೦೩೯).
[ಮುಂಗುಸಿ + ಗಿಡ (< ಗಿಡು)]

**ಮುಂಗುಳದಾಯ** (ನಾ). ( ? ) : ತಳಾರ ಕೇತಮಲ್ಲನಾಯಕಪ್ರಮುಖವಾಗಿ ಮಾಯಿಲೆಯ ಬವರಕ್ಕೆ ಹಲರಂ ಹೇಳಲು ಯೆಲರಿಂದ ಮುಂಗುಳದಾಯವಾಗಿ ನಡೆದು ಯಿದಿರಾಂತರಂ ಹಲರಂ ಕೊಂದು ಸ್ವಾಮಿಕಾರ್ಯಾರ್ಥವಂ ನೆಱಿ ಸುರಲೋಕಪ್ರಾಪ್ತನಾದಂ (ಎಕ. VII, ಶಿಕಾ. ೦೯೯_೦೦; 1181); ಚಕ್ರವರ್ತಿಗಳ ಹೇಳಿಕೆಯಿಂ ಮುಂಗುಳದಾಯದಿಂ ನಾಲ್ಕುದಿಶಾವರಕ್ಕಂ ನಡದು ಹೇಳ್ದ ಕೆಲಸಮಂ ಸಾಧ್ಯಂಮಾಡಿ (ಎಕ. XII, ೯೬-೨೯ ; 1187). 'ಮುಂಗುಡಿದಾಯ' ಪರಾ. [ ? ]

**ಮುಂಗುಜುಪು**, ಮುಂಗುರುಹು, ಮುಂಗುಜುಹು (ನಾ). = ಮುಂಗುರುತು : ರಂಗ ನಿನ್ನಯ [ರಕ್ತಿವೆತ್ತ ಕೌಮೋದಕಿಮಂ]ಗಳಜನನ ಸಂಸ್ಥಿತಿಗೆ ಮುಂಗುಜುಪಾಗಿ ಪೊರೆವುದು ಗಾ[ಡಿಯದೆನ್ನ] ಕಂಗಳ ಬಱಿಕಳೆಯಬೇಗೆ (ಕಶಾಂ. ೨-೯). **ಮುಂಗುರುಹು** : ಧೂಮಕೇತು ಕವಲ್ತು ಬಾನೊಳಗೆ ಬೆಳರುತಿದೆ ! ಕೇಡ ಮುಂಗುರುಹು ! (ಹೆಸ್ಕಿರ. ೨೦-೦೦೦); ಜೀವನದ ಆರಂಭದಲ್ಲಿಯೇ ಅವನು ತನ್ನ ಸ್ವಚ್ಛಂದವೃತ್ತಿಯ . . . ಮುಂಗುರುಹುಗಳನ್ನು ತೋರಿಸದೇ ಹೋಗಲಿಲ್ಲ (ಶಾಪಾದ. ೦೯). **ಮುಂಗುಜುಹು** : ರಂಗ ನಿನ್ನಾಜಾನುಬಾಹು ಬೆರಳು ನಖಮಂ ಗಂಡವರು ಮಜುಹುಟ್ಟ ಮುಂಗುಜುಹಱಿಯರು (ಕಕಶಾಂ. ೩-೦೩).
[ಮುಂ$_1$ (< ಮುನ್$_1$) + ಕುಜುಪು (< ಗುಜುಪು)]

**ಮುಂಗುಜುಹು** 'ಮುಂಗುಜುಪು' ನೋ.

**ಮುಂಗೊದಲ್**, ಮುಂಗೂದಲು (ನಾ). =ಮುಂಗುರುಳ್: ಕೋಪದಿಂ ಬಂದಜುಸಿ ಪಿಡಿದು ಮುಂಗೂದಲಂ ಪೊಯ್ದು (ಜಾರತ. ೩-೩೩).
**ಮುಂಗೂದಲು** : ಮಠದಲ್ಲಿ ಆದ ಮುಂಜಿಯ ದಿನ ತೆಗೆದುಹಾಕಿದ ಮುಂಗೂದಲು ಬೆಳೆಯಲು ಮೂರುತಿಂಗಳು ಬೇಕಾಗಿ (ಹೊಸಕ್ಷಿ. ೦೨೩).
[ಮುಂ$_1$ (<ಮುನ್$_1$) + ಕೂದಲ್ (< ಕೂಂದಲ್)]

**ಮುಂಗೂದಲು** 'ಮುಂಗೊದಲ್' ನೋ.

**ಮುಂಗೂಲಿ** (ನಾ). ಮುಂದೆ ಮಾಡುವ ಕೆಲಸ : ನಾನೇನೋ ಮುಂಗೂಲಿಯ ಕೆಲಸ ಮಾಡಿದ್ದೇನೆ. ಆದರೆ ಈ ದಾರಿಯಲ್ಲಿ ಯಾವ ಸೇನಾಪತಿಯೂ ಸೇನೆ ತೆಗೆದುಕೊಂಡು ಬರುವ ಸಮಾಚಾರವನ್ನು ಕೇಳಿಲ್ಲ (ಖಂಕಿಮು. ೯೩೩). [ಮುಂ$_1$ (< ಮುನ್$_1$) + ಕೂಲಿ$_1$]

**ಮುಂಗೂಳೆಯ** (ನಾ). ಮುಂಭಾಗದಲ್ಲಿರುವ ಗುಂಪು ; ಮುಂದಿರುವ ಸಮೂಹ : ಆರ್ತರೌದ್ರಧ್ಯಾನಮೆಂಬ ಮುಂಗೂಳೆಯದ ನಾಯಕರ್ವೆರಸು ದುರ್ಜನರ ಕೂಟಮೆಂಬ ಪಿಂಗೂಳೆಯದ ವೀರರ್ವೆರಸು (ರತ್ನಾಕತ್ನ. ೦೦-೯೭). [ಮುಂ$_1$ (< ಮುನ್$_1$) + ಗೂಳೆಯ]

**ಮುಂಗೆಡಿಸು** (ಕ್ರಿ). ಮುಂದುಗಾಣದಂತೆ ಮಾಡು: ದಿಕ್ಕು ತೋಚದಂತೆ ಮಾಡು : ಮುಂಗೆಡಿಸುವುದು ಲಜ್ಜೆ ನಾಚಿಕೆಯುಂಗುಸಂಗವದೇಕೆ ಹೊಲ್ಲ ತೊಲಂಗು ನೀನೆಂದಾವ ಪರಿಯಲಿ ಹೇಳಿದಡೆ ಮಾಣೆ (ಖಸತ್ನ. ೧೦-೯೯) ; ಮನುಜನಾಥರ ಮುಂಗೆಡಿಸಿದ ಕಾರ್ಮುಕವನು ಸಲ್ಲೀಲೆಯಿಂ ಜಯಿಸಿ ವನಿತೆಯ ಮುಂದಲೆವಿಡಿದೆಳೆತಹವು (ಜಿಪಂಕಾಂ. ೦೭-೫೦): ಪಶುಪತಿ ಮುಳಿದೆಚ್ಚ ಶರ ತ್ರಿಪುರವನಾಗ ಮುಸುಕಿ ಮುಂಗೆಡಿಸುವಂದದಲಿ ಮಸುಧೇಶನ ಪಡೆ ನಡೆದುದು (ಕೆಂಸಿ. ೦೪-೩೦). [ಮುಂಗೆಡು + _ ಇಸು$_3$]

**ಮುಂಗೆಡು**, ಮುಂಗಿಡು (ಕ್ರಿ). (ಮುಂದಿನ) ದಿಕ್ಕು ತೋಚದಿರು : ದಿಗ್ಭ್ರಮೆಗೊಳ್ಳು : ವೈರಿ ಮುಂಗೆಟ್ಟರೆ ಚಂಡವರ್ಮ ನರಪಂ ನಡೆಗೊಂಡನತೀವಕೋಪದಿಂ (ದಶಕು. ೭-೩೭) ; ಹುಟ್ಟಿದುದು ಮೊದಲಿದುವೆ ಕಡೆ ಮುಂಗೆಟ್ಟು ದುರ್ವೃತ್ತಿಯಲಿ ಪುಣ್ಯದ ಬಟ್ಟೆಯೆಂತ ಹದೆಂದರಿಯೆ ನೀ ಕನಸಿನೊಳಗಾಗಿ (ಖಸತ್ನ. ೧೦-೬) : ಬಿಡು ಬಿಡೆಲೆ ಸಹದೇವ ಯೆನ್ನಯ ನುಡಿಗೆ ಮಾಱುತ್ತರವ ಕೊಡು ಮುಂಗೆಡದೆ ಮುಂದಣ ನಿನ್ನವನ ಕಂಡಿಂತು ಮರುಳಪರೆ (ಕುವ್ಯಾಕ. ೨೩-೨೦). **ಮುಂಗಿಡು** : ಧಾರಿಣೀತಿಲಕನನೊಲ್ದು ಚಿತ್ರಪಟದೊಳ್ಪನನಿಲ್ಲಿಗೆ ತಂದು ತೋಱದಿಂತ ಟಲಿವೆಯೇಕೆಯೆನ್ನನೆನುತಂಗನೆ ಮುಂಗಿಡುತಿರ್ದಳುದ್ವೇಗ್ನಣಂ (ದಶಕು. ೦೦-೩೩).
[ಮುಂ$_1$ (< ಮುನ್$_1$) + ಕೆಡು$_1$]

**ಮುಂಗೆಡೆ** (ಕ್ರಿ). ಮುಖ ಮುಂದಾಗುವಂತೆ ಬೀಳು ; ಮುಖವಡಿಯಾಗಿ ಬೀಳು : ಪೊಡೆಗೆಡೆದವಾನೆಗಳು ಥಟ್ಟಿಗೆ ಕೆಡೆದವಗ್ಗದ ತುರಗದಳ ಮೈಗಡಸದಲಿ ಮುಂಗೆಡೆದು [ತಾಕಾಂ. ಮುಂಕೊಂಡು]ಹೊರಳಿತು ಕೂಡೆ ಪಾಯದಳ (ಕುವ್ಯಾಕ. ೬-೦೨). [ಮುಂ$_2$ (<ಮುನ್$_2$) + ಕೆಡೆ$_1$]

**ಮುಂಗೆದಱು** (ಕ್ರಿ). (ಮೈಯನ್ನು) ಮುಂದಕ್ಕೆ ಚಾಚು; ನಮಸ್ಕರಿಸು (?) : ಅಲ್ಲಿ ಬಾಗಿಲ್ಗೆ ಬರಲಿಲ್ಲ ಮೈಮುಂಗಿದೆದ್ದು ಮೆಲ್ಲನೈತಂದು ಮುಂಗೆದಱ ನೆಱೆ ಕಣ್ದೆಱೆದು (ಏಕರ. ೯-೦೭೪).
[ಮುಂ$_2$ (< ಮುನ್$_2$) + ಕೆದಱು$_1$ (< ಕೆದಱ್$_1$)]

**ಮುಂಗೆಯ್**, ಮುಂಗಯ್, ಮುಂಗೈ (ನಾ). ೧. ಕೈಯ ಮುಂಭಾಗ; ಮಣಿಕಟ್ಟು : "ಪ್ರಕೋಷ್ಠಮೆಂಬುದು ಮುಂಗೆಯ್ಯ" (ಶಬ್ದಮ. ೬೬-೩೭೯): ಮಹೇಂದ್ರದತ್ತನೆಂಬರಸನಾತನ ಮುಂಗೆ [ತಾಕಾಂ. ಗೈ]ಯ್ ಧಾತ್ರಿವಾಹನನ ಯೋಧನಿಂ ಚಕ್ರಪಾಣಿಯುಂ ಖಂಡಿಸೆ ಪಟ್ಟುದಾಗಿ (ವಡ್ಡಾರಾ. ೦೯೩-೯) ; ಅಂತು ಬೃಹಂದಳೆಯಾಗಿ ಗಾಂಡೀವಜ್ಯಾಘಾತದೋರ್ದಂಡನೀಲಂಗಳನಡಸಿದಂತಿರ್ದಿರದುಂ ಮುಂಗೆಯ್ಗಳ ಕರ್ಪಂ ಕೀವೆ ತೊಟ್ಟ ಬಳೆಗಳ್ ಮಱಸೆ (ಪಂಪಭಾ. ೯-೩೩ ವ) ; ಏನಕವಳಯಮುಂ ಮುಂಗೆಯ್ಯೊಳ್ [ತಾಕಾಂ. ಗೈಯೊಳ್] ಸಂಗಳಿಸಿಯುಂ (ಪಂಪ್ರತ್ನ. ೬-೩೩ ). ೨. ಕೈಯ ಮೇಲುಭಾಗ : ಹಸ್ತದ ಮೇಲುಭಾಗ : (+). ೩. (ಮನೆ ಅಥವಾ ಹಳ್ಳಿಯ ) ಮುಂಭಾಗ ; ಎದುರುಭಾಗ : (+).

**ಮುಂಗಯ್** : ೧. ಕಯ್ ಮುಂಗಯ್ ಮೊಗಂ. . . ಕಾಲಡಿಯಿಂದಿಂತಿ ವನಚರ್ಚ ಪೋದುವಿಸೆ ತತ್ಪ್ರಾಜನ್ಯಕಂದಾಂಕುರಂ (ಶಾಂತಿಪು. ೪-೦೭) ; ಮುಂಗಯ್ಯಿಂ ಪಿಡಿದೊತ್ತಿ ಕೈಯ ಕರವಾಳ್ ಬೀಟ್ಟರ್ಪಿನಂ ವೀರಂಗೆ ದೋರ್ಭಂಗಂ ಮಾಡಿದನೇನಲಂಘ್ಯಬಲನೋ ರಾಮಾನುಜಂ ಲಕ್ಷ್ಮಣಂ (ಪಂಪರಾ. ೬-೨೧) ; ಕನ್ನಡ ಸಮಾಸಕ್ಕೆ . . . ಮರ ಗಿಡು ಬಳ್ಳಿ ಪುಲ್ಪೊದರ್ ಪಕ್ಕಿ ಮಿಗಂಗಳ್ ಮುಂಗಯ್ (ಕವಿರ. ೭೨ ಕ್ರ ಯೋ). **ಮುಂಗೈ** : ೧. ''ಪ್ರಕೋಷ್ಠವೆನೆ ಮುಂಗೈಗೆ ನಾಮವುಮಕ್ಕುಂ'' (ಅಂಗನಿ. ೧೩-೬); ಕಂಕಣದಂತೆ ಮುಂಗೈಯಂ ಪತ್ತಿ ಕೊಱೆವರ್ (ರತ್ನಾಕತ್ನ. ೩-೭೩) ; ಬೊಂಕಮನುಱುಗಿಸಿ ನೀಡೇಡೆಸುತಂ ಮೊಳಕೈ ಮುಂಗೈಗಳನಾಡಿಸುತಂ (ಶೃಂಗಾರ. ಹ. ೧೭೨-೨೯). ೨. ಅಂಗಯ್ಯಲಾಡುವ ಗಿಳಿ ಮುಂಗೈಯ[ತಾಕಾಂ. ಗಯ್ಯ]ಮೇಲಣ ಗಿಳಿ (ಭೈಕಂದ. ೦-೦೦೨-೭) ; ಕಾವನ ಮುಂಗೈಯ ಗಿಳಿಯಂತೆ ನುಡಿದುಱೆ ಕಾವನ ಬಿಲ್ಲೋಲ ಒಡಿದು ಕಾವನ ರಥವಾಜಿ ಭುಂಜಿಸ ದಂತೆ ಕೈಗಾವ ಪಾಮರಿಯರೊಪ್ಪಿದರು (ಮೋಹತ. ೨-೯೭) ; ಕಡಿದು ಮುಂಗೈಯ ಕೋಪಾಟೋಪದಲಿ ಖಳ ಜಡಿದು ಖಂಡೆಯವ ಚಿಮ್ಮಿದನು (ಕಂಪಾ. ೦೪-೭೩). [ಮುಂ$_1$ (< ಮುನ್$_1$) + ಕೆಯ್$_3$]

**ಮುಂಗೈಯ್ಸರಲ್** (ನಾ). ಮುಂಗೈಯಲ್ಲಿ ಹಿಡಿಯುವ ಬಾಣ (?) ; "ಮುಂಗೈಯಲ್ಲಿ ತೊಟ್ಟುಕೊಳ್ಳುವ ಕಂಕಣ" (+): ಬೆರಲ್ . . . ನರಲುಂ ಮುಂಗೆಯ್ಸರಲುಂ[ತಾಕಾಂ. ಮುಂಗೈಸರಲುಂ] ಲಾಂತಂ (ಕವಿರ. ೨೬) . [ಮುಂಗೆಯ್ + ಸರಲ್]

**ಮುಂಗೆಲಸ** (ನಾ). ಮುಂದೆ ಮಾಡಬೇಕಾದ ಕೆಲಸ : ಮುಂದಿನ ಕಾರ್ಯ : ಹರನಿಂದೆ ಹತನಾದ ಕಂತು ರುಕ್ಮಿಣಿಯ ಸುತನಾಗಿ ಹುಟ್ಟಿ ಮುಂಗೆಲಸಕ್ಕೆ ಬಯಲಾದ ಕತೆಯ ಬಿತ್ತರಿಪೆ (ಮೋಹತ. ೩-೨).
[ಮುಂ$_1$ (< ಮುನ್$_1$) + ಕೆಲಸ]

**ಮುಂಗೇಣಿಕಾಱ** (ನಾ). ಪ್ರಧಾನನಾದ ಗುತ್ತಿಗೆದಾರ : ಗೋಣ ಕೊಯ್ಲಿನ ಕಾವಣಕೆ ಮುಂಗೇಣಿಕಾಱನು ಮೊಳಗಿದನು ಘಡ ಕೇಣ ವಿನ್ನೇಕೆನುತ ಕೈದೋಱಿತು ಭಟಸ್ತೋಮ (ಕುವ್ಯಾಕ. ೨೫-೪೨).
[ಮುಂ$_1$ (< ಮುನ್$_1$) + ಕೇಣಿಕಾಱ$_1$ (< ಕೇಣಿಗಾಱ)]

**ಮುಂಗೈ** 'ಮುಂಗೆಯ್' ನೋ.

**ಮುಂಗೈಕಂಕಣ** 'ಮುಂಗೈಗಂಕಣ' ನೋ.

**ಮುಂಗೈಕಸುವು** (ನಾ). ಮುಂಗೈಯ ಬಲ,—ಶಕ್ತಿ,— ಸಾಮರ್ಥ್ಯ: ರೂಪಚಂದನೆಷ್ಟೋ ಮುಂಗೈಕಸುವಿನ ಮನುಷ್ಯನಿದ್ದರೂ ನೀತಿಯ ಪ್ರಸಂಗ ಬಂದಾಗ ಆ ರಾಮಸಿಂಹನು ಆತನ ಗುರುವಾಗುತ್ತಿದ್ದ (ಚಂಡಪ್ರಾ. ೩೩) ; ತುಪ್ಪ ಹಾಲು ಮೊಸರು . . . ಇವನ್ನೆಲ್ಲ ಕನಸಿನಲ್ಲಿಯೂ ಕಾಣುತ್ತಿರಲಿಕ್ಕಿಲ್ಲ. ಆದರಿಲ್ಲಿ ಒಂದು ನಾಲಗೆ, ಒಂದು ಮುಂಗೈಕಸುವಿನಿಂದ ಆ ಪದಾರ್ಥಗಳ ಸುರಿಮಳೆಯೇ ಆಗುತ್ತದೆ (ಪ್ರೇಮಕಾಶ್ರು. ೩೯).
[ ಮುಂಗೈ (<ಮುಂಗೆಯ್) +ಕಸುವು (<ಕಸು$_3$) ]

**ಮುಂಗೈಗಂಕಣ**, ಮುಂಗೈಕಂಕಣ (ನಾ). ಕೈಯ ಮುಂಭಾಗದಲ್ಲಿ ಧರಿಸುವ ಕಂಕಣ : ಮುಂಗೈಗಂಕಣಕೆ ಕುಲದೀಪ ಕನ್ನಡಿಯೇಕೆ ತರಿಸು ಪ್ರತಾಪವಾಜಿಯನೆಂದು ಬಿನ್ನೈಸಿದನು ನಸುನಗುತ (ಏಕತ. ೭-೪). **ಮುಂಗೈಕಂಕಣ** : ಮುಂಗೈಕಂಕಣಕೇಂ ಕನ್ನಡಿಯ ಸಾಕ್ಷಿಯಾದುವೆ ಧರೆಯೊಳ್ (ಕೃಷಿ. ೩೩-೨೦).
[ ಮುಂಗೈ ( < ಮುಂಗೆಯ್ ) + ಕಂಕಣ ]

**ಮುಂಗೈಗೊಳ್** (ಕ್ರಿ). ತೋಳಿನ ಮುಂಭಾಗದಲ್ಲಿ ಹೊಂದಿಸಿಕೊಳ್ಳು,-ಹಿಡಿದುಕೊಳ್ಳು : ತಿರುಹಿ ಗಾಳಿಯು ತೆಗೆದು ಮುಂಗೈಗೊಂಡು ನಡೆನಡೆದು ಅರಿಬಲವನಿಡೆ ಮುಗ್ಗಿ ಕೆಡೆದುದು ತುರಗವಜ್ರಗಿಜಿಯೂದುದಿಭತತಿ (ಕುವ್ಯಾದ್ರೋ. ೬-೩೩). [ ಮುಂಗೈ (<ಮುಂಗೆಯ್) + ಕೊಳ್$_1$ ]

**ಮುಂಗೈಗೊಳಿಸು** (ಕ್ರಿ). =ಮುಂಗೈಗೊಳ್ : ಕಳಲಿ ರಣದಲಿ ಕೆಡೆದ ರಕ್ಕಸವಲಗೆಯಿರಲವ ಕೊಂಡು ಮುಂಗೈಗೊಳಿಸಿ ಯಜ್ಞದ ವೀರಭದ್ರನ ರಣಕೆ ಗುರುವಾದ (ಕೊರಿಂ. ೩-೬-೪೦). [ ಮುಂಗೈಗೊಳ್ + -ಇಸು$_3$ ]

**ಮುಂಗೈನಿಗಳ** (ನಾ). ಮುಂಗೈಗೆ ಧರಿಸುವ ಸರಪಳಿಯಂಥ ಒಂದು ಬಗೆಯ ಆಭರಣ : ಮುಂಗೈನಿಗಳವನು ತಿರುಹುತ್ತ ನಸುನಗುತೆದ್ದನಭಿಮನ್ಯು (ಕುವ್ಯಾದ್ರೋ. ೪-೩೪).
[ ಮುಂಗೈ (<ಮುಂಗೆಯ್) + ನಿಗಳ (=ನಿಗಲ) ]

**ಮುಂಗೈಮುರಾರಿ**, ಮುಂಗಯ್ಯಮುರಿ, ಮುಂಗೈಯಮುರಿ (ನಾ). ಮುಂಗೈಯಲ್ಲಿ ಧರಿಸುವ ಒಂದು ಬಗೆಯ ಕಂಕಣ : ಹಗಲುದೀವಟಿಯ ಪಂಜೆಯು ಬಗೆಗತಿಶಯಮಾದ ಸಿಂಹಲಕ್ಷ್ಮಪತಾಕಂ ಮೃಗಧರ ಮಕಿ [ಯು] ಪೆಂಡೆಯು ಬಗೆಯದೆ ಮುಂಗೈಮುರಾರಿಯೆಂಬುದನಿತ್ತಂ (ಬೀಳವಂ. ೦-೦೦೮) ; ಕಣ್ಗೆ ಕಾಮನ ರಕ್ಷಿ. ಬೆನ್ಗೆ ಭೀಮನ ರಕ್ಷಿ. ಮುಂಗೈ ಮುರಾರಿ ರಕ್ಷಿ (ಕನ್ನಜಾ. ೦೦೩); ಗಂಡುಕಚ್ಚೆ ಹಾಕಿ ಪೀತಾಂಬರವುಟ್ಟು . . . ಕರ್ಣಕುಂಡಲ, ರತ್ನಹಾರ, ಮುಂಗೈಮುರಾರಿಗಳಿಂದ ಲಲಿತ ಸಾಲಂಕೃತಳಾದಳು (ರಾಗಿಜ. ೦೩೩). **ಮುಂಗಯ್ಯಮುರಿ** : ಮುಂಗಯ್ಯ ಮುರಿ ಹಸ್ತಸರ ಸರಪಣಿ . . . ಮೇಗಯ್ಯ ಮುತ್ತಿನ ಸುಗಳಿಂ ಸಿಂಗರಿಸಿದಳಾ ಸೀಜ್ (ಕುರಾಕಾಂ. ೨೯-೯೬). **ಮುಂಗೈಯಮುರಿ** : ಮುಂಗೈಯ ಮುರಿ ಮುರಡಿಯ ಸರಪಳಿ ಹೊನ್ನುಂಗುರ ತೋಳ ಬಾಪುರಿಯ ಶೃಂಗಾರದ ಸಾಯಕಜಾಲ ಬಹಳಬೆಡಂಗಿನೊಳೈತಂದುದಾಗ (ಕಂಪಿ. ೨೩-೬೪).
[ ←ತೆಲು. ಮುಂಗಯಿಮುರಾರಿ. ಮುಂಗೈಮುರಾರಿ, ಮುಂಗಾ ಮುರಾರಿ. ಮುಂಗಾಮುರಮು ]

**ಮುಂಗೈಯಮುರಿ** 'ಮುಂಗೈಮುರಾರಿ' ನೋ.

**ಮುಂಗೈವಲ** (ನಾ). ಮುಂಗೈಯ ಬಲ,-ಶಕ್ತಿ : ದೋರ್ವಲಮುಂ ಪೊದಟ್ದು ಮುಂಗೈವಲಮುಂ ಕಿರಿದಾದುದೆನ್ನನಿನ್ನಾರ್ ಕೊಲ್ವರ್ (ಅಂಹಾ. ೬-೪೭). [ ಮುಂಗೈ (<ಮುಂಗೆಯ್) + ಬಲ$_3$ ]

**ಮುಂಗೈಹೊಡೆ** (ನಾ). ಬಿಲ್ಲುಗಾರರು ಬಿಲ್ಲಿನ ಹಗ್ಗವು ಕೈಗೆ ತಗಲದಂತೆ ಮುಂಗೈಗೆ ಕಟ್ಟಿಕೊಳ್ಳುವ ರಕ್ಷಾಕವಚ ; ಗೋಧೆ : ಬಲಿದ ಮುಂಗೈಹೊಡೆ[ಬಾಕಾಂ.ದೆ]ಯ ಬರುದಿನೊಳುಲಿವ ಘಂಟೆಯ ಬೆನ್ನಲೆವ ಬತ್ತಳಿಕೆಗಳಲೈದಿತ್ತು ಬಿಲ್ಲಾಳುಭಯಸೇನೆಯಲಿ (ಕುವ್ಯಾಶಿ. ೪-೦೦). 'ಕೆಯ್ಪೊಡೆ' ಪರಾ. [ಮುಂಗೈ (<ಮುಂಗೆಯ್) + ಹೊಡೆ$_3$ (<ಪೊಡೆ$_3$)]

**ಮುಂಗೊರಲ್** (ನಾ). ಕುತ್ತಿಗೆಯ ಮುಂಭಾಗ ; ಕೊರಳ ಮುಂದಿನ ಭಾಗ : ಉರದೊಳ್ ಫಣಿ . . . ಮುಂಗೊರಲೊಳ್ ಕಜ್ ಮಜ್ ಯಿಲ್ಲದೆ ದೊರೆಕೊಳೆ ಮೃಡನಡಿಗೆ ಪರಿಗನೆಜಗಿದನಾಗಳ್ (ಸಂಶಬ. ೬-೨೪).
[ ಮುಂ$_1$ (<ಮುನ್$_1$) + ಕೊರಲ್ ]

**ಮುಂಗೊಳ್**, ಮುಂಕೊಳ್, ಮುಂಕೊಳು (ಕ್ರಿ). ೧. ಎದುರಿಗೆ ಬರು ; ಮುಂದೆ ಬರು,-ನಿಲ್ಲು : (೬). ೨. ಮುಂದೆ ಹೋಗು ; ಮುಂದೆ ಸಾಗು ; ಮುಂದೆ ಚಲಿಸು : ಭಯಾಬ್ಧಿಯಲ್ಲಿ ಮುಂಗೊಂ [ಶಾಣಂ. ಕೊಂ] ಡು ಮುಳುಂಗಿ ತೇಲ್ದುವವನೀಕ್ಷಣಯುಗ್ಮಪಯಶ್ಚರದ್ವಯಂ (ಕಬಕಂ. ೪-೦೦೦). ೩. ಮುಂದೆ ನುಗ್ಗು ; ಧಾವಿಸು : ಆ ಮಹಾಚಲಪತಿಯ ರಮಣೀಯಜಂಗಮಾವತಾರಮೂರ್ತಿಗಳೆ ಮುಂಗೊಳ್ವಾಯದಿಂ ಪರಿದು ಕೆಡೆದುವೆಂಬಂತೆ ದೆಸೆದೆಸೆಗೆ ಪರಿದು ಕೋಡನೂಜ್ ಕೆಡೆವನೇಕದ್ವಿಪಸಂಕುಳಂಗಳುಮಂ (ಜಗಬ. ೬-೩೩ ವ).
**ಮುಂಕೊಳ್** : ೧. ಪಂಕಜಮುಖಿಯುರಿತ್ತಡಿಯ ಸೋಪಾನದೆ ಮುಂಕೊಂಡು ಮೆಜ್ದರರ್ತಿಯಲಿ (ಕಂಪಿ. ೫-೩೨). ೩. ಮಲಗು ತೇಳುತ ಕೆಚ್ಚಲುಗಳಗ್ಗಳಿಸಿ ತೊರೆಯುಲು ಮೋಹದಿಂದಾಕಳುಗಳಂಬೆಯೆನುತ್ತ ಮುಂಕೊಂಡಜುಚುತಿರಲಾಗಿ (ಬಸಪು. ೬೦-೩೩) ; ಧರ್ಮಸುತ ಮುಂಕೊಂಡು ರಣದಲಿ ಕಾದಿ ಗೆಲಿದನು ಮಾದ್ರಭೂಪತಿಯ (ಕುವ್ಯಾಶ. ೨ ಸೂಚಪ) ; ಮುರಿಮುರಿದುರ್ವಿಯಾ ತಳದಲ್ಲಿ ಮುಂಕೊಂಡು ಪರಿದಳು ತುಂಗಬೆಳ್ಳಂಗೆ (ಮೋಹತ. ೬-೩೩). ೪. ಮುಂಭಾಗದಲ್ಲಿ ಹೊಂದು ; ಮುಂದಿಟ್ಟುಕೊಳ್ಳು : ಧೇನುಗಳಂ ಮುಂಕೊಂಡು ಬರ್ಪ ಶಿಷ್ಯಸಮೂಹಂಗಳುಮಂ (ಸಂಕಕಂ. ೦೦೬-೨) : ತಲೆವಣೆಗಳ ತಾಳ್ದು ನಿಲೆ ಚವಿ ನಿಖಿಳಭೂಪಲೆಯು ಸಗ್ಗಿಗರ ಮುಂಕೊಂಡು ಕಲೆಗಧಿನಾಥ ಚಂದ್ರನ ನೋಡ ಪೋಪಂತೆ ನೆಲೆನೆಲೆಗಡರ್ದಳಾ ಕುವರಿ (ಮೋಹತ. ೨೭-೩೦). ೫. ಪ್ರಾರಂಭಿಸು ; ತೊಡಗು ; ಮೊದಲುಮಾಡು : ಗಿರಿದುರ್ಗ್ಗಸಿಂಘಂ ಮೊನೆಯ ಮುಂಕೊಳ್ವರ ಪೆಣ್ಡರ ಗಣ್ಡಂ ಪೆರ್ಗ್ಗಡೆ ಹೀರದಾಸನ ಸನ್ನಾಹ ಸುಭನಾಮದಿ ಷಮಸ್ತಪ್ರಶಸ್ತಿಸಹಿತಂ(ಶಾಇಇ. XI-i, ೩೦ ೦೪ ; 1024) ; ನಾಕನಿಳಯರು ತಂದ ಜಯವೇ ಸಾಕು ಸೋಲುವರಲ್ಲ ನೀವಿದಕೇಕೆ ನೆಜ್ ಮುಂಕೊಂಡಿರೆಂದನು ನಗುತ ಕಲಿಪಾರ್ಥ (ಸಂಭಾಶ. ೩೭-೪೩) ; ಮುಂಕೊಂಡ ಮಹಾವ್ರತಮಂ ಪಜ್ಪಡಿಸದ ತೀವ್ರಪರಿಗ್ರಹಕೊಂದಿನಿಸುಂ ಚಿತ್ತವನು ಎಡಗಿಸದ . . . ಸಾಧುಸಮಿತಿಗತಿಸಮತೆಯೊಳೆಜಗುವನು (ಜಯನಾ. ೦-೫). ೬. ಮಾರ್ಗವನ್ನು ಹಿಡಿ ; ದಾರಿಯನ್ನು ಹಿಡಿ : ವಿಭುವಂ ಕೈಮಿಗೆ ಚಾತುರಂಗಸಹಿತಂ ಪ್ರಸ್ಥಾನಮಂ ಮಾಡಿ . . . ವಿದರ್ಭದೇಶಪಥಮಂ ಕೊಂಡನುತ್ಸಾಹದಿ (ಪಳತಂ. ೨೩೪). ೭. ಸ್ವೀಕರಿಸು ; ಪಡೆ : ಸುಗ್ಗಿಯ ಪುಗಿಲೊಳ್ ಮುಂಕೊಂಡುಗ್ಗಿಯನುಜ್ಜುವಿಸಿದಂತೆ ಮೋನಮನುಟಿದೇಂ ಬಗ್ಗಿಸಿದುವೊ ಕೋಗಿಲೆಗಳ್ ಪೊಗ್ಗಪ್ಪ ವಿಯೋಗಿಯಂ ಪುಗಲ್ ಪುಗಲೆನುತಂ (ಕಾವ್ಯಾವ. ೬೯೨). ೮. ಎದುರಿಸು ; ಪ್ರತಿಭಟಿಸು : ವೈರಿವ್ರಾತವನು ಮುಂಕೊಂಡು ಹೊಯ್ದನು ಹೊಳೆವ ಖಡುಗದಲಿ (ಕುವ್ಯಾದ್ರೋ. ೬-೩೬) ; ಕೋದಂಡದ ಜೀವೆಯ ನೀಕಿ ಪುಂಡರೀಕಾಕ್ಷ ರಾಮನ ಪಿಂತುಮಾಡಿ ಮುಂಕೊಂಡನು ಖಚರ ಚಕ್ರಿಯನು (ಪರ್ರಶ. ೬-೬). ೯. ಅತಿಕ್ರಮಿಸು ; ಮೀರು : ಬಾಲರವಿಕೋಟಪ್ರಭೆಯನೊಳಕೊಂಡು ಮುಂಕೊಂಡು ಬಾಲನ ಘನತೇಜಮುರ್ವಿಯ ಮೇಲೆ ಪರ್ಬಲು (ಬಸಪು. ೩-೩೦). ೧೦. ಆತುರಪಡು; ತವಕಿಸು; ಉತ್ಸಾಹಿಸು: ಸೊಗಸಿವಡೆ ರತಿಗೆಯ್ದು ಸೊಕ್ಕಿದಡಗಲದೊಳಪೊಕ್ಕಂ ಪುಗಲು ಕಣು ಮುಗಿವಡಂ ಕೈಕೊಂಡು ಮುಂಕೊಂಡಡೆ ನಲಿವು ಮಿಕ್ಕು ಮಿಗೆ ನುಡಿಗಳಿಂದೊಲಿಸಿ (ಬಸಪು. ೪೨-೦೩) ; ತುರಗ ಖುರಗಳಲಿ ದಿಂಡುದಿರುಹುತ್ತಿರಲದಕ್ಕಾ ಗಂಡುಗಲಿ ಶಾಬರನೃಪನು ಮುಂಕೊಂಡು ಹೊಗಳುತ್ತಿರಲು ತುರಗದ ಪೂರ್ವಪಾಯವನು (ಸಂಭಶ. ೩-೦೪) ; ತೆಂಕ ನಾವೆಯ್ದುತಿದ್ದಪೆವೆಮಗಿದಿರಾಗಿ ತೆಂಕಣಿಂ ಬಪ್ಪರಾರೆಂದು ಮುಂಕೊಂಡು ಪಡೆಯೆಲ್ಲ ನೋಡುತಿದ್ದುದು ಗಗನಾಂಕಕೆ ದೃಷ್ಟಿಯನಿಟ್ಟು (ಶರತ. ೪೬-೦೬). **ಮುಂಕೊಳು** : ೧. ತೊಲಗಿರ್ಕೆ ಕಾಲಾಳು ಮೇಲಾಳ ಳವಿಗೊಡಲಿ ಮಹಾರಥರು ಮುಂಕೊಳಲಿ (ಕುವ್ಯಾದ್ರೋ. ೫-೯). ೧೦. ವಿಗಡೆಯರ್ನೆರೆದು ಕಾಳೆಗಕೆ ಮುಂಕೊಳುತಿರ್ದರು (ಕೃಬಿಜಾ. ೦೬-೫). ೧೧. ಆಕ್ರಮಿಸು ; ಮುತ್ತು ; ಕವಿ : ಅರಿಸ್ಕಂದನವ ಮುಂಕೊಳಲು ದಶಕಂಠ ಧನುವಿನೊಳಂಕಿಸುತ ಸೀತಾಸ್ತ್ರವನು ಭಾರಾಂಕನೆಸಗುವೆನಸುರ ಸೇನೆಯೆನುತ್ತಲೈತಂದ (ಉಕ್ಕ್ಷ. ೨೫-೬) : ಕಿರಿದಾದ ಚತುರಂಗದ ಪದಹತಿಯಲಿ ಮುರಿದೇಳ್ವ ಕೆಂದೂಳ್ಗಳಾಗ ತರಣಿಮಂಡಲವ ಮುಂಬಲಿದು ಮುಂಕೊಳುತಂದು ಕಿರಣದೀಳಿಗೆಯ ತಗ್ಗಿಸಿತು (ಕಂಪಿ. ೦೬-೨೬).
[ಮುಂ$_2$ (<ಮುನ್$_2$) + ಕೊಳ್$_1$]

**ಮುಂಗೊಳಿಸು**, ಮುಂಕೊಳಿಸು (ಕ್ರಿ). ೧. ಎದುರುಮಾಡು ; ಮುಂದು ಮಾಡು : ಎದ್ದು ನಿಟ್ಟಿಸುವಿನಿಮಿಷನ ನೋಟಕೆ ತನ್ನ ಮುದ್ದುಮೊಗವ ಮುಂಗೊಳಿಸಿ ನಿದ್ದೆಯೊಳೆಸಗಿದ ನಿಖಿಲಾಪಚಾರವ ತಿದ್ದುವುದಿನಿವಾತಿನೊಳು (ಹರಿಶ. ೬-೭). ೨. ಮುಂಭಾಗಕ್ಕೆ ಬರು ; ಎದುರಿಗೆ ಬರು ; ಮುಂದೆ ಬರು : ತಲೆವರಿಗೆಯುಲಿ ಖಡ್ಗಗರು ಮುಂಗೊ[ಪಾಠಾಂ. ಕೊ]ಳಿಸಿ ನಿಂದರು (ಕೊರಟಾ. ೭-೦೩-೧೦). ೩. ಮುಂದುವರಿ ; ಮುಂದೆ ಸಾಗು,- ನಡೆ : ಮುಂಗೊ[ಪಾಠಾಂ. ಕೊ]ಳಿಸುವುದು ಸದ್ಧರ್ಮದಲಿ ಕಳವಳಿಸದಿರು ಷಡುವರ್ಗದಲ್ಲಿ (ಕುಮಾ. ೯-೨೦). ೪. ಉಂಟಾಗು ; ಒದಗು : ಬಳಲಿದನು ಬಲುಹಾಗಿ ಸಾಹಿಸ್ನ ತಟವು ತನಗೆಂಬ ಬಗೆ ಮುಂಗೊ[ಪಾಠಾಂ. ಕೊ]ಳಿಸಿದುದು (ಕೊರಟಾ. ೩-೬-೭೯). **ಮುಂಕೊಳಿಸು** : ೧. ಜಲಜನಾಭನು ದೇವದುಂದುಭಿ ಮೊಳಗೆ ನಸುನಗುತಸ್ತ್ರಮಂ ಮುಂಕೊಳಿಸಿ ಸರಳ್ಗಳ ಸುರಿವನಸುರನ ಮೇಲೆ ಕಡುಬಂದ (ಜಾವೇಪು. ೪೦-೬೨). ೨. ಸೆಳೆದಡೊತ್ತಿದಡೆ ಮಿಸುಗದಿಹ ಕದಕೆ ಮುಳಿದು ಮುಂಕೊಳಿಸಿ [ಪಾಠಾಂ. ಮುಂಕಣಿಸಿ, ಮುಂಕಳಿಸಿ, ಪೂಂಕರಿಸಿ] ಸೂಂಡಿಲಂ ಸುತ್ತಿ . . . ಫಳಿಟ್ಟೊರಲಿ ಕೆಡೆದ ವಾನೆಗಳು ಕಂಡಪರಳುಕಲು (ಸೋಮಕು. ೪-೫೮) ; ಆಳವನಱಿಯದೆ ಕೆಣಕಿತಹ ಮುಂಕೊಳಿಸಿ ಕವನವ ಕೋಡ ಕೈಯವರಳವಿಗೊಟ್ಟರೆ ನೋಡಿ ಸಿಡಿಮಿಡಿಗೊಂಡು ಕೆಲಸಿಡವ . . . ನಿರುಪಮವೀರರೊದಗಿತು ಶಿಗುಳರಾವುತರು (ಕುಮಾರಾ. ೪-೭೩). ೫. ಮುಂಭಾಗದಲ್ಲಿರು ; ಎದುರಿನಲ್ಲಿರು : ದಳದ ಕೊನೆಯೊಳಗಿಹುದದಕೆ ಮುಂಕೊಳಿಸಿದೀಶಾನ್ಯದ ದೆಸೆಯು ದಳದೊಳಗಿರುವುದೈ ಛಂದಶ್ಶೈಲಪ ಮುನಿಪ ಕೇಳೆಂದ (ಜಾವೇಪು. ೫೦-೭). ೬. ಮುಂದುವರಿಯುವಂತೆ ಮಾಡು ; ಮುಂದುವರಿಸು ; ನಡೆಸು : ಸುರರ ವಾಯುಹಾರಿಸುತ ರಿಪುಭೂವರರ ಮುಂಕೊಳಿಸುತ್ತ . . . ಮೋಕ್ಷದ ಸಿರಿಯ ಕೈಗೂಡಿಸುತ ನಡೆದುದು ತುರಗ ದೆಸೆದೆಸೆಗೆ (ಜೈಮಿ. ೫-೨೭) ; ಘಾರಿ ಗದೆಯನು ಪಿಡಿದು ರ್ಘುಡಿದು ಮುರಾರಿಯನುಮತದಿಂದ ಮುಂಕೊಳಿಸಿದರು ಕಾಳಗವ (ಕೃಷ್ಣಾ. ೧೬-೩೭). ೭. ಮುನ್ನುಗ್ಗು ; ಮೇಲೆಬೀಳು : ಬಲುಕಣಗಳಿವದಿರನು ಕರಿ ಮುಂಕೊಳಿಸಿ ಕೆಡಹಿತು (ಕುಮಾದ್ರೋ. ೩-೨೪). ೮. ಆವರಿಸು ; ವ್ಯಾಪಿಸು : ಐರಾವತವನಿಂದ್ರನ ಮುಸುಕಿದನು ಶರತತಿಗಳಲಿ ಮಾಯಾದಿ ಮೃಗ ಪಂಗಳನು ಮುಂಕೊಳಿಸಿ (ಉತ್ತರ. ೨೬-೭೭). ೯. ಉತ್ಸಾಹಿಸು ; ತವಕಿಸು : ರಥ ಕಾಲಾಳು ಮುಂಕೊಳಿಸಿ ಅರಸನನುಜರು ಸಹಿತ ಕೃಷ್ಣನ ಬೆರಳ ಸನ್ನೆಯೊಳೈದೆ ಬಿಡೆ ಮೋಹರಿಸಿ ನಿಂದುದು ಮುರಿದ ಮಕರವ್ಯೂಹರಚನೆಯಲಿ (ಕುಮಾದ್ರೋ. ೪-೨೨). ೧೦. ಲೀನವಾಗು ; ನಿರತವಾಗು ; ತನ್ಮಯಗೊಳ್ಳು : ಭುವನಾವಳಿಯ ತೋರ್ಕೆಗೆ ತಾನೆ ನೆಲೆಯೆಂದೆನಿಪ ನಿಜಪದವ ಬಲಿದು ತನ್ನಲಿ ತಾನೆ ತಾನಾಗಲಿಘುಸುಖಿ ಸಂವಿತ್ಸ್ವರೂಪದಲಳಿದ ಮನದಲಿ ಮುಂಕೊಳಿಸುತಿರ್ದನು ಸಮಾಧಿಯಲಿ (ಏಕಾಗ. ೧೦-೭೭-೩೯). [ಮುಂಗೊಳ್ + — ಇಸು₃]

**ಮುಂಗೋಣೆ** (ನಾ). ಕಟ್ಟಡದ ಮುಂಭಾಗದಲ್ಲಿರುವ ಕೊಠಡಿ : ಚಿಕ್ಕಮ್ಮ ಸೋಫಿಯಾವಿವಾನೊವ್ನಾ ಮಾತ್ರ ಮುಂಗೋಣೆಯಲ್ಲಿ ಅವನನ್ನೆದುರುಗೊಂಡಳು (ಕೃಪರು. ೭೪) ; ಮುಖ್ಯಕೋಣೆಯನ್ನು ಪ್ರವೇಶಿಸುವುದಕ್ಕೆ ಮುನ್ನ ಇರುವ ಚಿಕ್ಕಕೋಣೆಯೇ ಅಂತರಾಳ, ಇದನ್ನು ಮುಂಗೋಣೆ (ಆಂಟಿರೂಮ್) ಎನ್ನಬಹುದು (ಶಬ್ದಕೋ. I. ೧೦೯).

[ಮುಂ₁ (<ಮುನ್₁) + ಕೋಣೆ₂ (<ಕೋಣ್)]

**ಮುಂಗೋಪ** (ನಾ). ಬಹಳ ಬೇಗನೆ ಬರುವ ಸಿಟ್ಟು ; ಶೀಘ್ರಕೋಪ : ದೇವ ಮುಂಗೋಪದೊಳಗೆಮ್ಮ ನುಡಿಯುಚಿತವಲ್ಲ (ಶಾಪಕಂ. ೦-೪೨) ; ಕೇಳುತಾಕ್ಷಣದಿ ಮುಂಗೋಪ[ಪಾಠಾಂ. ಮುಕ್ಕೋಪ]ಸಂಭವಮಾಯ್ತು (ವೆಂಕಟಾ. ೫-೩-೦೫) : ನಮ್ಮ ತಾಯಿಗೆ ತುಂಬಾ ಮುಂಗೋಪಾಂತ ಅದಕ್ಕೇ ಅಗ್ನೀ ಅರಿಕೆಮಾಡ್ಕೊಂಡೆ (ಕೃಪಾ. ೦೬). [ಮುಂ₂ (<ಮುನ್₂) + ಕೋಪ]

**ಮುಂಗೋಪಿ** (ನಾ). ಬಹಳ ಬೇಗನೆ ಕೋಪಗೊಳ್ಳುವ ಸ್ವಭಾವದವನು ; ಕೂಡಲೆ ಸಿಟ್ಟಿಗೇಳುವವನು : ಹಿಂದೆ ನೀನು ಮುಂಗೋಪಿಯಾಗಿ ಒರಟೊರಟಾಗಿ ವರ್ತಿಸಿದೆ (ಮಹಾಗ. ೨೪೫) ; ಬಹಳ ಮುಂಗೋಪಿಗಳು, ದುಡುಕುಸ್ವಭಾವದವರು (ದಾಂಪತ್. ೩೫೫). [ಮುಂಗೋಪ + — ಇ₃]

**ಮುಂಗೋಲ್**, ಮುಂಗೋಲು (ನಾ). ೧. ತಕ್ಕಡಿಯ ತೊಲೆಯು ಹೆಚ್ಚು ತೂಕದಿಂದ ಒಂದು ಕಡೆಗೆ ಬಾಗಿರುವುದು : (ಶ). **ಮುಂಗೋಲು** : ೨. ತಕ್ಕಡಿಯಲ್ಲಿ ಬಟ್ಟಿನ ತೂಕಕ್ಕಿಂತ ಹೆಚ್ಚಾಗಿ ತೂಗುವ ತೂಕ : ಅವನು ಬೆಣ್ಣೆಯನ್ನು ಮುಂಗೋಲಾಗಿ ತೂಗಿ ಕೊಟ್ಟನು (ರೂಢಿ). [ಮುಂ₁ (<ಮುನ್₁) + ಕೋಲ್₁]

**ಮುಂಗೋಲು** 'ಮುಂಗೋಲ್' ನೋ.

**ಮುಂಗೋಳ್** (ನಾ). ಸೈನ್ಯದ ಮುಂಭಾಗ, — ಮುಂದುಗಡೆ : ಮುಂಚೂಣಿ : ವಿರಾಟಂ ಶ್ವೇತನುತ್ತರಂ ಶಂಖನೆಂಬ ಮೂವರ್ ಮಕ್ಕಳುಂ . . . ಪನ್ನೊರ್ವರ್ ತಮ್ಮಂದಿರುಂಬೆರಸು ನೆಲನದಿರೆ ಮುಂಗೋಳೊಳ್ ನಡೆಯೆ (ಪಂಪಭಾ. ೯-೯೫ ವ) ; ಜನಕ ಕನಕರಿರ್ವರ್ ವಿಜಯಗಜಮನೇಱಿ ಮುಂಗೋಳೊ[ಪಾಠಾಂ. ಲೊ]ಳ್ ನಡೆಯೆ (ಪಂರಾಮಾ. ೪-೫೩ ವ) ; ಅರಾತಿಗಜಮಸ್ತಕಕ್ಕೆ ಲಂಘಿಸುವ ಮಸಕದಿಂ ಸಿಂಗದ ಜಂಗುಳಿಯಂತೆ ಮುಂಗೋಳೊಳ್ ಕಡಂಗುವಣಿಯ ನಾಯಕರ್ಗೆ . . . ಕೈವೀಸುವುದುಂ (ವರ್ಧಮಾ. ೬-೪೩ ವ).

[ಮುಂ₁ (<ಮುನ್₁) + ಕೋಳ್. / ತೆಲು. ಮುಂಗೋಲು = ಮೊದಲನೆಯ]

**ಮುಂಗೋಳಿ** (ನಾ). ಮುಂಜಾವದಲ್ಲಿ ಕೂಗುವ ಕೋಳಿ : ನಸುಕಿನಲ್ಲಿ ಕೂಗುವ ಕೋಳಿ : ಶಿವ ಶಿವೆಯರಿನಿತೆಸಗಿದೀ ವಿವರಮನ್ನೆಲಕೆ ಸಾರ್ವಂತೆ ಮುಂಗೋಳಿಗಳ್ ಕೂಗೆ (ಕಬ್ಬಿ. ೫-೩೦) ; ದಾವೀದಕುಲದಾದಿತ್ಯನ ನವ ಪ್ರಬೋಧನದ ಮುಂಗೋಳಿ (ಗೊರೂಕಾ. ೫೦-೩೭೦) ; ಮುಂಗೋಳಿ ಕೂಗ್ಯಾವು ಮೂಡು ಕೆಂಪೇರ್ಯಾವು (ಜಾನಪ. ೬).

[ಮುಂ₁ (<ಮುನ್₁) + ಕೋಳಿ₁ (<ಕೋೞಿ₁)]

**ಮುಂಚ** (ನಾ). ನಾಯಕ ; ಮುಖಂಡ : ಬಿಲ್ಗಾರರಲಿ ಮುಂಚನೆನಿಸಿ ಸೊಗದಿಂ ಬಾರ ! (ಹಮ್ಮಿರ. ೭-೬೪). [ಮುಂಚು₂ + — ಅ₇]

**ಮುಂಚಾಚು** (ಕ್ರಿ). ೧. ಮುಂಭಾಗಕ್ಕೆ ಚಾಚು ; ಮುಂದುಗಡೆಗೆ ನೀಡು : ಹೆಗಲ ಮೇಲಿಂದ ಹರಿದಾಸನನ್ನು ಮೆಲ್ಲಗೆ ಇಳಿಸಿ, ಕಿರಣಲೇಖೆಯ ತೊಡೆಯ ಕಡೆಗೆ ಅವನನ್ನು ಮುಂಚಾಚಿದನು (ಇತ್ಯಾ. ೪೨೭) ; ಮುಂಚಾಚಿದ ಅವನ ಕೈಯನ್ನು ಕಾಣದವಳಂತೆ ನಟಿಸಿ ಕೈ ಕುಲುಕದೆಯೆ . . . ಬಿರುಬಿರನೆ ನಡೆದಳು (ಕೃಪರು. ೩೨೨). ೨. ಮುಂಭಾಗಕ್ಕೆ ಚಾಚಿಕೊಳ್ಳು ; ಮುಂದುಗಡೆಗೆ ನೀಡಿಕೊಳ್ಳು : ಮುಂಚಾಚಿದ ಹೆಗಲೆಲುಬಿನ . . . ಚುರುಕುಮುಂದಿಯನೊಬ್ಬ ಮತ್ತೊಂದು ಕುದುರೆಯನ್ನು ನಡೆಸಿಕೊಂಡು ಬರುತ್ತಿದ್ದನು (ಕೃಪರು. ೨೭೭). [ಮುಂ₂ (<ಮುನ್₂) + ಚಾಚು₁]

**ಮುಂಚಿತ**, ಮುಂಚಿತ್ತು (ಅ). ಮೊದಲೇ ; ಮುಂಚೆಯೇ : ಪೂರ್ವಭಾವಿಯಾಗಿ: ಎಲವೊ ನೀನಾ ಸತಿಯ ಕಂಡಾ ಕಲಹ ಮುಂಚಿತ[ಪಾಠಾಂ. ತು] ಕಂಡನಲ್ಲದೆ ಗಲಭೆಕಾರಿರು ಘಾಸಿಮಾಡಿದರಣಕಸಣಕದಲಿ (ಕೊರಟಾ. ೫-೭-೨೯); ಕನ್ನಡಸಾಹಿತ್ಯಚರಿತ್ರೆಯಲ್ಲಿ ಹತ್ತನೆಯ ಶತಮಾನವು ಬಹಳ ಮಹತ್ವಪೂರ್ಣವಾದುದು. ಇದಕ್ಕೆ ಮುಂಚಿತವಾಗಿಯೂ ಕನ್ನಡಸಾಹಿತ್ಯ ಇದ್ದಿತು (ಸಾಹಿಸ. ೦); ಕೃತಿಯ ಮುಂಚಿತವಾಗಿ ಕೊಟ್ಟಿರುವ ಕಥಾಸಾರದಲ್ಲಿ ವಸ್ತು ಪಾತ್ರ ಸನ್ನಿವೇಶಗಳ ಪರಿಚಯವನ್ನೇ ಚೆಲುವಾಗಿ ಮಾಡಿಕೊಟ್ಟಿರುತ್ತಾರೆ (ಕಾಂಚನ. ಮುನ್ನುಡಿ). **ಮುಂಚಿತ್ತು** : ಗುಲ್ಮವ್ಯಾಧಿಸ್ಥನಿಗೆ ಮುಂಚಿತ್ತಾಗಿ ಸ್ನೇಹವಿಧಿಯನು ಮಾಡಿಸಿ, ನಾಡಿಗಳು ಸಡಿಲವಾದ ಬಳಿಕ ವಾಯುವು ಮುಂದುವರಿದು (ವೈದ್ಯಸಾ. I. ೨೯೪). P ಇದು ಸಂಸ್ಕೃತದ 'ವಂದಿತ,

ಕಥಿತ, ವಿದಿತ, ಪೂಜಿತ' ಇತ್ಯಾದಿ ಶಬ್ದಗಳ ಸಾದೃಶ್ಯದಿಂದ ರೂಪುಗೊಂಡಿರುವ ಶಬ್ದ. [< ಮುಂಚು$_1$]

**ಮುಂಚಿತ್ತು** 'ಮುಂಚಿತು' ನೋ.

**ಮುಂಚಿಸು** (ಕ್ರಿ). ಮುಂದುವರಿಯುವಂತೆ ಮಾಡು; ನಡೆಸು : ಪಂಚವಕ್ತ್ರಗಳನು ಹಂಚಿಸಿ ಮರ್ತ್ಯರ ಸಂಚಲತ್ವವ ನೆಱೆ ಸುಟ್ಟ ಕಂಚನಾದ್ರಿಗೆ ಬೇಗ ಮುಂಚಿಪ ಜಂಗಮಲಾಂಛನಕ್ಕೆ ನಮಸ್ಕಾರ (ಕೋಡಹ. ೧-೮); ನಮ್ಮ ಕಡೆಯಿಂದಲೇ ಶರಾರತ್ತು ನಡಸಿದರು ಎಂತ ಕಂಡೀತು ಎಂಬುದಾಗಿ, ನಾವು ಈ ಮೇರೆ ತಿಳಿವು, ಈಗ ಅವರು ಮುಂಚಿದಾಗ್ಯೂ, ಅವರ ಮೇಲೆ ಮುಂಚಿಸಬಾರದು (ರಾಜೇಂದ್ರ. ೯೩). [ಮುಂಚು$_1$ + — ಇಸು$_3$]

**ಮುಂಚು$_1$** (ಕ್ರಿ). ೧. ಮುಂದೆ ಹೋಗು; ಮುಂದುವರಿ; ಮುಂದಕ್ಕೆ ಚಲಿಸು : "ಮುಂಚು ಅಗ್ರಗಮನೇ (ಮುಂವರಿ)" (ಶಮದ); ಶುಚಿಸ್ವಾಭಾವಂಗಳವ್ಪದೞಿನಾರ್ದ್ರತೆಯುನಪ್ಪ ಕೆಯ್ದುತ್ಕಂಠಶಯನಪರಿಕಲ್ಪನಕ್ಕಾವಾವೆ ಮುಂಚುವೆವೆಂಬಂತೆ ಕುಮುದಿನಿಗಳೊಂದೊಂದು ಗಱಿಗಳುಳ್ಳಲರೆ (ಕಾದಂಬ. ೩೭೫); ಸಾಟಿ ಹಿಂಚಿತು ಮುಂಚಿದವನು ತಲೆಕಳನೊಳಗೆ ನೋಟಕ್ಕೆ ಕಣ್ಮಾಯದಂತೆ ಬಿದ್ದುದು ಕೆಳಗೆ (ಬಿಹಾರ. ದೇ. ೧೧೮-೭); ಮುಂಚಿದ ಪಿಂಚದಂಚೆಗಳೊಳಿಂಚರದಂಚರಮಾಗದಂಚಿಪೆರ್ಚಿಂಚರಮಿಾಯೆ (ಸೂಕ್ತಿಸು. ೧೪-೨೦). ೨. ಮುಂಚಿತವಾಗಿ ಹೋಗು; ಮೊದಲು ಹೋಗು; ಮುಂದಾಗು : ರಥದಿಂದಂ ಮುಂಚಿ ಮನೋರಥಂ ಮನೋರಥದಿನತ್ತಲದು ಮುಂಚಿ ಬೃಹದ್ರಥಮಿಂತು ಭರತರಾಜನ ರಥವ ಮನೋರಥದ ಬೇಗಮೊದವಿದುದಾಗಳ್ (ಆದಿಪು. ೧೨-೮೦); ಬಾಲತ್ವದಿಂದೆಲ್ಲಿಯುಂ ವಿನಯೋಲ್ಲಂಘನಮಾದುದಿಲ್ಲ ಮರಣಕ್ಕೆನ್ನಿಂದೆ ನೀಂ ಮುಂಚಿಮಯ್ (ಗದಾಯು. ೩-೭); ಮುರಹರ ರಥವ ಮರಳಿಚು ಮರಳಿಚೈ ರಥ ಮುಂಚುವುದೊ ಮನ ಮುಂಚುವುದೊ ಎಂದ (ಕುಮ್ಯಾಕ. ೧೪-೦೨). ೩. ಮೊದಲಿನದಾಗು; ಪೂರ್ವಭಾವಿಯಾಗು : ನನೆಮೊನೆಯಾಗಿ ಬಂದುವೆಳಮಾವೆಳಮಾವಿನ ಮುಂಚಿ ಬಂದ ಪೂವಿನ ಪೊಸಗೊಂಚಲೊಪ್ಪಿದುವು (ಶಾಂತಿಪು. ೭-೧೨೫): ಬಿರಯಿಗಳ ಸುಯ್ಗಳೊಡನೆಯೆ ಪಿರಿಯವು ದೆವಸಂಗಳಾದುವವರವರ ಪರಿಸ್ಫುರಿತಂಗಳೊಡನೆ ಕುಂದಿದು ವಿರುಳ್ಗಳುಂ ಮುಂಚಿ[ಪಾಠಾಂ.ಚಿ] ಬಂದ ಜಳದಾಗಮದೊಳ್ (ಕಾವ್ಯಾವ. ೬೦೫); ಹೋಗೆಂಬ ನುಡಿ ಪಿಂಚೆ ಮುಂಚಿ ಜೀವಂ ನೆಗೆದು ತಾಗಿ ನಡುನೆತ್ತಿಯಂ ಬಿಗಿದು ಬಾದಣದೆಗೆದು ವೇಗಡರ್ದು ಗಗನಕ್ಕೆ ದಂಡಾಯಮಾನದುರಿಯಾಗಿ ನೆಗೆಯಲ್ಕೆ (ಸಿದ್ಧರಾ. ೪-೩೮). ೪. ಮುನ್ನುಗ್ಗು; ಧಾವಿಸು : ಮಿಂಚಿನವೊಲ್ಪೊಳೆಯುತ್ತುಂ ಮುಂಚುವ ಸಿಡಿಲಂತೆಱಂಗಿ ವಹ್ನಿಜ್ವಾಲಾಸಂಚಯದವೋಲುಚ್ಚಳಿಸುಱೆ ತಾಂ ಚಕ್ರಧರೆ ಪೊಣರ್ವರಂದು ಪಟುತರಶೂರರ್ (ಉದ್ಭಟ. ೪-೧೧೫); ಕಣ್ಣ ಕೆಂಪಿನ ವಿಷಮರಗ್ಗದ ಕರ್ಣತನುಜರು ಮಸಗಿ ಮುಂಚುವ ಮೋಹರವನಡಹಾಯ್ದು ತಱುಬಿದರು (ಕುಮ್ಯಾಕ. ೧೧-೩೨): ಬಾಹುಗಳನ್ನು ಮುನ್ನೀಡಿ, ಪ್ರೇಮಾಲಿಂಗನಕ್ಕೆ ಮುಂಚುವನು (ಶಟ್ಶಿರ. ೧೮-೨೪). ೫. ಮುಂಚೆ ಒದಗು: ಮುಂದಾಗಿ ಉಂಟಾಗು, — ಸಂಭವಿಸು : ಅಂತು ಮುಂಚಿದ ಕಾರ ಕಾಮುರ್ಗಿಲಂತೆ ಶರವರ್ಷಮಯಮಾಗೆ ದೆಸೆಯೆಲ್ಲಮಂ ಪರ್ಬಿರ್ಪ ದಮಿತಾರಿಯೆಂಟ್ರಮಂ ಕಂಡು (ಶಾಂತಿಪು. ೪-೯೩ ವ); ಭೃಗುವೇಱುದಿನಕ್ಕಸ್ತಮಿಸುಗುಮೆನೆ ಮುಟ್ಟೆ ಕೊಂಡುದಿಲ್ಲ ಮೇಗಣ ಮುಟ್ಟೆಗಳ್ ಭೃಗುವೇಱು ದಿವಸದೊಳ್ ಮೂಡುಗುಮೆನೆ ಮುಟ್ಟೆ ಮುಂಚಿಕೊಂಡೊಡೊಳ್ಳಿತು (ಜಸ್ಟಿಸು. ೧೭-೧೪೪). ೬. ಮಿಗಿಲಾಗು; ಮೇಲುಗೈಯಾಗು : ಇಂಚೆಯು ಪಸವಿನ ಬಿಜದ ಕಳಂಚಿನ ಡಾವರದ ಬಾಧೆಯಿಲ್ಲದ ಪದದೊಳ್ ಮುಂಚದೆ ಪಿಂಚದೆ ಬಳೆದು ಮಿಂಚಿಯು ಕಱುಬ್ಬಿಡಿವೊಲಾದುವಾ ನಾಡೂರ್ಗಳ್ (ಶಂಶಕಾ. ೮-೩೦): ಪಂಚನಳರೆಲ್ಲರಿಂದಂ ಮುಂಚುವೆನೆಂದು ಸ್ವಯಂವರಾಲಯದ ಬಸತ್ಯಾಂಚನ ಸಿಂಹಾಸನದೊಳ್ ಸಂಚಲಿಸದೆ ನೆಲಸಿದರ್ ವಿಚಿತ್ರಾಕೃತಿಯಿಂ (ವಳಮು. ೩೦೦); ದನುಜ ಮುಂಚಿದ ಮನುಜ ಹಿಂಚಿದ ಮನುಜ ಮುಂಚಿದ ದನುಜ ಹಿಂಚಿದ ನೆನಲು ದೈವದಲಸುರ ಹಿಂಚಿದ ಮನುಜ ಮುಂಚಿದನು (ಕೌಶಿರಾ. ೩೭-೭೦). ೭. ವೇಗವಾಗು : ತೀವ್ರಗೊಳ್ಳು : ಸೀತೆಗೆ ವೈಜಾನಸರ ಮುತ್ತೈದೆಯರನೇವೊಟ್ಟಿಂಗೆ ಕಾಣ್ಬೆನೋ ಎಂಬೋದು ತವಕದಿಂ ನಡೆ ಮುಂಚಿದುದು (ರಾಮಾಶ್ವ. ೩೩-೧). ೮. ಮಿಾರು; ಅತಿಕ್ರಮಿಸು; ದಾಟು : ಮುಂಚಿದೆ ಅಯ್ಯಾ ಪರಬ್ರಹ್ಮವ ಮುಂಚಿದೆ ಅಯ್ಯಾ ಸಾಲೋಕ್ಯ ಸಾಮಿಾಪ್ಯ ಸಾರೂಪ್ಯ ಸಾಯುಜ್ಯಪದವಿಯ ಮುಂಚಿದೆ ಅಯ್ಯಾ (ಸರ್ವವ. ೮೮-೯೮೯): ಸಂಚಳಿಸು ತಿರೆ ಮಿಕ್ಕು ಮಿಾಱೆ ತಪ್ಪೆಲ್ಲರಂ ಮುಂಚಿ ಬಸವನ ಭಕ್ತಿ ಬಂದಿವಿಡಿಯಲ್ ಕರಂ (ಬಸರ. ೯-೩೦); ಮುಂಚುವುದು ಕೈ ಮನವ ಕೈಮೆಯ ಸಂಚವನು ಮನ ಮುಂಚುವುದು (ಕುಮ್ಯಾಕ. ೨೩-೧೦). ೯. ಆವರಿಸು; ವ್ಯಾಪಿಸು : ಮನಮಂ ತವಕಂ ಮುಂಚಿರೆ ತನು ರೋಮಾಂಚನಮನೊಂದೆ ಕಾಂಚಿವೆರಸು ಮೆಲ್ಲನೆ ನೀವಿ ಜಗುೞೆ ತತ್ಕಾಮಿನಿಯಾಲಿಂಗಿಸಿದಳುದ್ಭಟೋರ್ವೀಧವನಂ (ಉದ್ಭಟ. ೮-೧೧೭): ಸರಸಿಜಾಯತದಂದವನು ಮೋಹರಿಸಿ ಮುಂಚುವ ಪರಿಮಳವ ನಂದರಸಿ ಬೀಜುತ ಬಂದು ಹೊಕ್ಕಳು ರಾಜಮಂದಿರವ (ಕುಮ್ಯಾಬಿ. ೧-೨೯). ೧೦. ಹೊರಹೊಮ್ಮು; ಹೊರಸೂಸು; ಉಕ್ಕು : ಗುರುಪುಂಗವನೆ ನಿನ್ನೊಳುರವಣಿಸಿ ಮುಂಚುತಿಹ ಕರುಣಾಂಬುವೆನ್ನ ಮನದ ಮಲಿನಂ ದೊಳೆಯೆ ಪರಿಶುದ್ಧನಾದೆನಿದು ಸತ್ಯಂ (ಅಮರ. ೮-೪೪); ಇನ್ನಿದಕೆ ಮೆರುಗಿಡುವ ಕಲೆ ಒಂದು ಉಂಟೇ ? ಸೊಗಸು ಇನ್ನಿನಿಸಾದರೂ ಮುಂಚಬಹುದೇ ? (ಕಲಾವು. ೩-೪); ಮಿಂಚಿನಲ್ ಕುಡುಗೋಲ ಸೆಳೆದಳೊಡನೆಯೆ ಬೆಳ್ಳಿ ಮುಂಚಿದುದು ಕೆನ್ನೆತ್ತರೊತ್ತರದಿ ಸಿಡಿದು (ಕಾಬೂರ. ೧೩೦-೨೭೭). ೧೧. ಮಾಗಿ : ಮುಕ್ತಾಯವಾಗು : ಮಾತು ಮುಂಚದ ಮುನ್ನಲೆದ್ದು ವಿನೀತತೆಯೊಳಾ ಮುನಿಗೆ ವಂದಿಸಿ ಭೂತಪತಿಯ ಶರಾಸನದ ಕಡೆನೋಡಿ . . . ನಡೆವನು (ಅನಂರಾ. ೧-೨೩-೩೦).

[ಮುಂ$_2$ (< ಮುನ್$_2$) + — ಚು$_1$./ತೆಲು. ಮುಂಚು]

**ಮುಂಚು$_2$** (ನಾ). ೧. ಮೊದಲು; ಮುಂದು : ಎನ್ನ ಸುಖ ದುಃಖಕ್ಕೆ ಮುಯ್ಯಾಂತು ನೀ ಮುಂಚು ನಾ ಹಿಂಚಾಗಿ ಇದ್ದ ಮತ್ತೆ ಎನಗೆ ಬಂದ ಉಬ್ಬಸವಾವುದು (ಸಕವ. II, ೭೩೫-೧೮೧೩); ಅಂಗ ನೆನಹೇ ಹಿಂಚಾಗಿ ಲಿಂಗ ನೆನಹೇ ಮುಂಚಾಗಿಪ್ಪುದಯ್ಯ ಅಂಗವಿಷಯಂಗಳೇ ಹಿಂಚಾಗಿ ಲಿಂಗ ವಿಷಯಂಗಳೇ ಮುಂಚಾಗಿ ಇಪ್ಪವಯ್ಯ (ಸಿದ್ಧೇವ. ೮೩-೨೪೭). ೨. ಹಿಂದಿನದು; ಮುಂಚಿನದು; ಮೊದಲಿನದು : ತಕ್ಕ ಮಾನದೆ ಹಂಚಿ ಪೋದರು ರೊಕ್ಕಪಕ್ಕಗಳಂತೆ ಸೊರಗದೆ ಮಿಕ್ಕ ಮುಂಚಿನಗಿಂತ ವೆಗ್ಗಳವಾಗಿ ಬೆಳೆದಿಹುದು (ರಘುವಂ. ೨-೨೪): ಈ ದೇಶಕ್ಕೆ ಈಗ ಮುಂಚಿಗಿಂತ ಹೆಚ್ಚು ತಾಪು ಬರುತ್ತದೆ (ಮುಂಜಯ. ೪-೧೭೪).

[ಮುಂ$_2$ (< ಮುನ್$_2$) + — ಚು$_2$]

**ಮುಂಚುಂಗು** (ನಾ). ಮುಂಭಾಗದಲ್ಲಿರುವ ಕುಚ್ಚು : ಚೆಲುವಿನ ಓರೆದುಱುಬು ಮುಂಚುಂಗಿನಿಂ ನಲವೆತ್ತು ಸಿಂಗಾರವಾದ (ಜ್ಞಾವಚ. ೧೮-೧೧೪).

[ಮುಂ$_1$ (< ಮುನ್$_1$) + ಚುಂಗು$_1$]

**ಮುಂಚುಟು** (ಅ). ಮೊದಲೇ; ಮುಂಚೆಯೇ; ಪೂರ್ವಭಾವಿಯಾಗಿ: ನಿನಗೆ ಆರೋಗಣೆಯ ಮಾಡಿಸೂವಕ್ಕೆ ಮುಂಚುಟಾಗಿ ಶ್ರೀಗುರುವಿನ ಪ್ರಸಾದವ ಕೊಂಬೆ (ಶರಗೋ. ೨೦೭-೯); ನೀನು ಬಲ್ಲಡೆ ಮುಂಚುಟಾಗಿ [ಪಾಠಾಂ. ಚಿತಾಗಿ] ಮಹಾನರೇಂದ್ರನ ಮಾನ್ಯ ಮಾರ್ಗದ ಮಾನಿನಿಯ ಕೊಂಡೊಯ್ದು ಕೊಡು ರಕ್ಷಿಸುವನಿದು ಸಿದ್ಧ (ಕೃರರಾ. ೭-೬-೩೮). ☞ ಇದು 'ಅಂತುಟು', 'ಎಂತುಟು' ಎಂಬ ಶಬ್ದಗಳ ಸಾದೃಶ್ಯದಿಂದ ರೂಪುಗೊಂಡಿರುವ ಶಬ್ದ. [< ಮುಂಚು$_1$]

**ಮುಂಚೋಣಿ** 'ಮುಂಚೂಳಿ' ನೋ.

**ಮುಂಚೂಳಿ,** ಮುಂಚೂಣಿ (ನಾ). ೧. ಸೇನೆಯ ಮುಂಭಾಗ: ದಂಡಿನ ಅಗ್ರಭಾಗ : ಕರೆಕರೆದಾಗ ಮನ್ನೆಯ ಮಂಡಲಿಕರ ದೊರಗಲಿ ನಾಯಕರುಗಳ ನೆಱೆ ಮುಂಚೂಳಿಯ ಜಗಳಕೆ ನೇಮಿಸಿ ಪರಿವಾರದೊಡನೆ ಬೀಳ್ಕೊಟ್ಟ (ಶಂಪರಿ. ೦೫-೦೮); ಮುಂಚೂಳಿಯ ಕಾಳಗದಲ್ಲಿ, ಮಾರ್ಬಲವನ್ನು ಹೊಕ್ಕು ಅದನ್ನು ಕುಟ್ಟಿ ಕೋಲಾಹಲವನ್ನೆಬ್ಬಿಸಿದನು (ಶವೀರ. ೦೦೯). **ಮುಂಚೂಣಿ :** ೧. ಬೀರವ ನುಡಿದ ಮೂವರ ವಾಕ್ಯವ ಕೇಳಿ ಮಾರ ಮನ್ನಣೆಗೈದನವರ ಓರಂತೆ ಮುಂಚೂಣಿಯಲಿಂಬಿಟ್ಟು ವಿಸ್ತಾರದಿ ತೆರಳ್ದ ಮುಂದೆಸೆಗೆ (ಪೋಹಕ. ೬-೨೯); ಕರ್ಣನು ಆ ಏಟುಗಳನ್ನು ತಾಳಲಾರದೆ ಸೈನ್ಯದ ಮುಂಚೂಣಿಯಿಂದ ಹಿಂದಕ್ಕೆ ಹೋಗಿಬಿಟ್ಟನು (ವಕಥಾ. ೨೦೯). ೨. ಯುದ್ಧದಲ್ಲಿ ಎಲ್ಲಕ್ಕೂ ಮುಂದೆ ಇರುವ ಸೈನ್ಯದ ತುಕ್ಕಡಿ; ಅಗ್ರಗಾಮಿ ದಳ : ನಿಲದತಿವೇಗದಿಂ ನೃಪ ಬಂದು ತನ್ನ ಮುಂದಲೆವ ಬೇಡಂ ಪಡೆಗಂಡು ತಳುವದೆ ಮುಂಚೂಣಿಯಟ್ಟಲಾಭಯದೊಳು ಕಲಹ ಗಂಟಿಕ್ಕಿತು (ಜೀವಂಧಾಂ. ೮-೩೨) ; ಕಳುಹಿ ಅನುಚರರೊಡನೆ ತಾ ಬಹು ಬಲಸಮೇತದಿ ಪಾಚ್ಛರಿದ್ದೆಡೆಗಳಿಗೆ ಬರುವರ ಕಂಡು ಮುಂಚೂಣಿಯನು ಕಳುಹಿದರು (ಮುದ್ರಾಶಾ. ೫-೨೦). ೩. ಮುಂಭಾಗ ; ಮುಂದುಗಡೆ : ಬೊಬ್ಬಿರಿವ ವೀರಧ್ವನಿಯಿಂದ ತರುಗಿರಿ ಹಬ್ಬಿ ಮುಂಚೂಣಿ ಉರಿ ಹೊಗರೆದ್ದು ಸುತ್ತಿ (ಐದಾಕ. ೬೫-೫); ಪೈದಿಗಳ ಮೆರೆವಣಿಗೆ ಎಷ್ಟು ದೀರ್ಘವಾಗಿತ್ತೆಂದರೆ, ಮುಂಚೂಣಿಯ ಜನ ಕಣ್ಮರೆಯಾಗುವವರೆಗೆ . . . ಬಂಡಿಗಳು ಹೊರಟಿರಲಿಲ್ಲ (ಪ್ರವರು. ೯೩೭); ದೇಶವನ್ನು ಹಿಂದೊತ್ತಿ ಮಾರ್ಗವನ್ನು ಮುಂಚೂಣಿಯಲ್ಲಿ ತಂದಿವೆ (ಕವಿ. ೬೨).

[ ಮುಂ$_1$ ( < ಮುನ್$_1$ ) + ಚೂಳಿ$_1$ ]

**ಮುಂಚೆ** (ಅ). ೧. ಮುಂಭಾಗದಲ್ಲಿ ; ಮೊದಲಿನಲ್ಲಿ; ಮುಂದೆ : ಅಹಂಪೂರ್ವಿಕೆ ನಾ ಮುಂಚೆ ಇಹೆ. ತಾ ಮುಂಚೆ ಇಹೆನೆಂದು ಒಬ್ಬರಿಗೊಬ್ಬರು ಅತಿಕ್ರಮಿಸಿ ಮುಂಚುವುದು (ನಾಜರಾ. ೮). ೨. ಮುಂಚಿತವಾಗಿ : ಪೂರ್ವಭಾವಿಯಾಗಿ : ತಱಿಸಂದುದ್ವೃತವೈರಿಭೂಪಬಲದೊಡ್ಡಳ್ಳಡೆ ಲೆಕ್ಕಕ್ಕೆ ತಳ್ತಱಿದೆನ್ನಾಳ್ದನಾನೆ ಮುಂಚೆ ನಿಱಿಪಂ ಕೆಯ್ಕೊಂಡು ಕಟ್ಟಾಯಮಂ (ಶಂಶಥಾ. ೯-೭೦); ಮಾನಸಕೆ ಮುಂಚೆಱಿವ ಹಸ್ತಮುಂ ವ್ಯಸ್ತಮುಂ ನಾನಾಸ್ತ್ರಸಂತತಿಯ ಘಾತಿಯುಂ ಪಾತಿಯುಂ ದೇವಾಸುರರ್ಗೊಳಿಸೆದುದು (ಕಲಚ. ೯೩-೩೮). ೩. ಹಿಂದೆ ; ಪೂರ್ವದಲ್ಲಿ : ಮುಂಚೆ ಕಿನ್ನರಶರಣನನುಮಂ ಹಿಂಚೆ ಬಸವರಸನ ಹರಣಮಂ ಪಂಚಮುಖನಲಿ ಪಡೆದು ಮೆಱೆದನು ಮಾಚಿದೇವಯ್ಯ (ಬಸಪು. ೩೬ ಸೂಚನೆ); ಕೈ ತುಂಬಾ ಹಣ ಅವರಲ್ಲಿ ಮುಂಚೆ ಇತ್ತಂತೆ (ರಾಯುಕ. ೦). [ < ಮುಂಚು$_1$ ]

**ಮುಂಚೆಕಡೆ** (ನಾ). ಮುಂದುಗಡೆ, ಮುಂಭಾಗ: ಇಷ್ಟೆಲ್ಲವೂ ಆ ಮನೆಯ 'ಮುಂಚೆಕಡೆ'ಯ ಚಿತ್ರ (ಕಾಪೂರು. ೩೭). [ ಮುಂಚೆ + ಕಡೆ$_3$ ]

**ಮುಂಜ$_1$** (ನಾ). ಒಂದು ಬಗೆಯ ಚಿಕ್ಕ ನೇಗಿಲ ಕುಳ. ರೆಂಟೆಯ ಕುಳ : ಕಬ್ಬಿಣದ ಸಾಮಾನುಗಳಲ್ಲಿ ಮುಂಜ, ಬಳಿ . . . ಕುಡಗೋಲು ಮುಂತಾದ ಯಾವತ್ತು ಸಾಮಾನುಗಳು ಹವನಾಗಿಯೂ ಮೊನೆಯಾಗಿಯೂ . . . ಇರಬೇಕು (ಕೃಹಶ್ರ. ೨೦); ಕಾದ ಕಬ್ಬಿಣ ಬಡಿದು ಮುಂಜವ ಮಾಡಿ (ಲೋಕಗೀ. ೦೨೯); ಪುರುಷರ ಕೈಯಲ್ಲಿ ಮುಂಜ, ಹಾರಿ, ಗುದ್ದಲಿ, ಸಲಿಕೆ ಶೋಭಿಸುತ್ತಿದ್ದುವು (ಕೆರಹಾ. ೫೦).

**ಮುಂಜ$_2$** (ನಾ). ೧. ಒಂದು ಬಗೆಯ ಜೊಂಡು ; ನೊದೆಹುಲ್ಲು: ನೊಸೆಹುಲ್ಲು : "ಶರಃ. ಮುಂಜಃ — ಇವೆರಡುಂ ಪೊದೆ" (ಹಲಾಯು. ೩೨-೩೮) : ಮುಂಜ — ನೊದೆ (ಶಬ್ದಾಮ. ೦೬೦ ವೃತ್ತಿ). ೨. ನೊದೆ ಹುಲ್ಲಿನಿಂದ ತಯಾರಿಸಿದ (ಬ್ರಹ್ಮಚಾರಿಗಳ) ಉಡಿದಾರ : ಕಟಿಸೂತ್ರ. ೩. (ಹಸುರು ಬಣ್ಣದ) ಒಂದು ಬಗೆಯ ಕುದುರೆ : "ನೆಱೆ ಹಸುರಿರಲು ಮುಂಜನದು. . . ಸಿಲ್ಕಾದ ಕುದುರೆ ಸೂಕಳನೆನಿಕ್ಕುಂ" (ಮಂಗರಾ. ೬೨-೦೫). [ಸಂ.]

**ಮುಂಜಕೇಶಿ** (ನಾ). ವಿಷ್ಣುವಿನ ಒಂದು ಹೆಸರು : ಆ ಕೇಶಿಯುಂ ಮುಂಜಕೇಶಿ ಮಾರ್ಕೊಂಡು ಕರಮಂ ತೂಂತಿ ತದಾಸ್ಯದೊಳ್ ಬಳೆಯಿಸಲ್ (ಜಗರಿ. ೫-೯೫ ವ). [ ಸಂ. ಮುಂಜಕೇಶಿನ್ ]

**ಮುಂಜಕ್ಷಯ** (ನಾ). ಒಂದು ಬಗೆಯ ಪಕ್ಷಿ ; ಗೀಜಗ : "ಮುಂ[ಪಾಠಾಂ. ಮ, ಮಂ]ಜಕ್ಷಯಂ ಗೀಜಗವೆನಿಕ್ಕು" (ಮಂಗರಾ. ೫೨-೯). [ಸಂ.]

**ಮುಂಜಗಲಿ,** ಮುಂಜಗುಲಿ (ನಾ). ಮನೆಯ ಮುಂಭಾಗದಲ್ಲಿರುವ ಜಗಲಿ. — ಮುಂದುಗಡೆಯಲ್ಲಿರುವ ಕಟ್ಟೆ : ರಂಜಿಸುವ ಪೊಂಗೊಳಲ ನಡುಮನೆ ಮುಂಜಗಲಿಯೊಳಗಿರಿಸೆನುತ್ತವೆ ಮುಂಜೆಱಗ ಪಿಡಿದೆಳೆದು ಹೊರಳಿದ ಚಿತ್ರಲೀಲೆಯಲಿ (ಕೃಶಾಶಾ. ೩-೯೫). **ಮುಂಜಗುಲಿ :** ಶಾಸ್ತ್ರವನು ನಕ್ಷತ್ರ ನೆಲೆಗಟ್ಟುವನೆಯ ಮುಂಜಗುಲಿಯೊಳಗೋದುತ (ತ್ರಿಶುಪೋ. ೯-೩೯). [ ಮುಂ$_1$ ( < ಮುನ್$_1$ ) + ಜಗಲಿ ]

**ಮುಂಜಗುಲಿ** 'ಮುಂಜಗಲಿ' ನೋ.

**ಮುಂಜರಿ** (ಕ್ರಿ). ಮುಂದೆ ಸರಿ; ಮುಂದಕ್ಕೆ ಹೋಗು; ಮುಂದುವರಿ: ರಜನಿ ಮುಂಜರಿದಂತೆ ಹಿಂಜರಿದುದೊಯ್ಯನಾ ಪುರದ ರಾತ್ರಿಂಚರತ್ವಂ (ಶ್ರೀರಾಮಪ. ೯೩೮-೯೭). [ಮುಂ$_2$ (<ಮುನ್$_2$) + ಜರಿ$_1$ (<ಸರಿ$_1$)]

**ಮುಂಜವಿ** 'ಮುಂಜಿ' ನೋ.

**ಮುಂಜಾಗ್ರತೆ** (ನಾ). ಮೊದಲೇ ವಹಿಸುವ ಎಚ್ಚರ ; ಮುನ್ನೆಚ್ಚರಿಕೆ : ಅಯ್ಯೋ, ಹಾಗಿದ್ದರೆ ಮುಂಜಾಗ್ರತೆ ವಹಿಸಬೇಕು (ಕಾವೇರಿ. ೦೦೩); ಸುದ್ದಿ ಹರಡಿದ ಎರಡುದಿನ ಮುಂಚಿತವಾಗಿ ಶಾಲೆಗೆ ಬರುವಾಗ ಮನೆಯಲ್ಲೇ ನಿದ್ದೆ ಪೂರೈಸಿ ಮುಂಜಾಗ್ರತೆ ವಹಿಸಿದರು (ಕಾವೇರಿ. ೦೦೬).

[ಮುಂ$_1$ ( < ಮುನ್$_1$ ) + ಜಾಗ್ರತೆ ]

**ಮುಂಜಾನೆ** (ನಾ). ೧. ಬೆಳಗಿನ ಜಾವ; ದಿನದ ಮೊದಲಿನ ಯಾಮ : ಮುಂಜಾನೆಯ ಮಳೆ ಅಲ್ಲ, ಮಧ್ಯಾಹ್ನದ ನೆಂಟನಲ್ಲ (ಗಾದೆ); ಅಂಜನಕ್ಕೆ ಅಂಜಬೇಡ. ಮುಂಜಾನೆಗೆ ಆಡಬೇಡ (ಗಾದೆ). ೨. ಬೆಳಗ್ಗೆ; ಪ್ರಾತಃಕಾಲ : ಅವರೆಲ್ಲ ಮಡದಿ ಮಕ್ಕಳೊಡನೆ ಮುಂಜಾನೆಯೇ ಲಿಂಗಯ್ಯನ ಮನೆಗೆ ಆಗಮಿಸಿದ್ದರು (ಹಾಹುತ್ತ. ೮೮); ಆಗ ಮುಂಜಾನೆ ಎದ್ದು ನೀರನ್ನು ತರಲು ಪಕ್ಕದ ಬಾವಿಯ ಕಡೆಗೆ ಓರ್ವ ನಾರೀಮಣಿ ಹೋಗುತ್ತಿದ್ದಳು (ಮಚಿಕ. ೩೯); ಮುಂಜಾನೆ ೧೦ ಗಂಟೆಗೆ ಊಟಾ ಮಾಡಿ ಹೋಗೇನಿ (ಕುಂಕುಮ. ೫೩). [ <ಮುಂಜಾವ ]

**ಮುಂಜಾವ,** ಮುಂಜಾವು (ನಾ). ೧. ಬೆಳಗಿನ ಜಾವ; ದಿನದ ಮೊದಲಿನ ಯಾಮ : ಮುಂ[ ಪಾಠಾಂ. ಮುಂದು ]ಜಾವದಲೆದ್ದು ಲಿಂಗದಂಘ್ರಿಯ ಮುಟ್ಟಿ ಸುಪ್ರಭಾತದಲ್ಲಿ ಶಿವಶರಣರ ಮುಖವ ನೋಡುವುದು (ಬಸವ. ೪. ೯೩೨-೦೦೩೯); ತರುಣಿಗೆ ಪುತ್ರಸಂತಾನ ಸಿದ್ಧಿಸಲಾಗಿ ದೊರೆದುದು ಸ್ವಪ್ನ ಮುಂಜಾವ ಕೆಂಜೆಡೆಗಳು ಸುಳಿಪಲ್ಲಿನ ವದನವು ರಂಜಿಪ ಕರ್ಣಕುಂಡಲದಿ ಮುಂಜಾವದೊಳು ಬಂದು ನಿಂದು ಬ್ರಾಹ್ಮಣನಿಗೆ ಅಂಜಬೇಡೆಂದನೀಶ್ವರನು (ಅಬ್ಬಲೂ. ೨-೩೨). ೨. ಬೆಳಿಗ್ಗೆ : ಪ್ರಾತಃಕಾಲ : ಸೂಳು ಮಿಗಲಳ್ಳಿಱಿದವುರುನಿಸ್ಸಾಳತತಿ ಮುಂಜಾವದಲಿ ಹೆಗ್ಗಾಳೆ ಮೊಱೆದವು (ಕುವ್ಯಾಭೀ. ೬-೦) ; ಮುಂಜಾವ ಧಾರೆಯಾಯ್ತೆರಡು ಜಾವದೊಳರ್ತಿ ರಂಜಿಸಿ ನಿದ್ರೆ ಹಿಂಗಿದುದು ಹಿಂಜಾವದೊಳು ಮತ್ತೆ ಹೊಸಬರಾಗಿದ್ದರು ( ಶರತ. ೯೦-೦೬೯) ; ಮುಂಜಾವದಡಿಗೆ ಸಂಜೆಗಾಗಲೇ ತಂಗೂಳು (ಪರಿಮ. ೩೨-೦೯). **ಮುಂಜಾವು :** ೧. ರಾಯನು ಮುಂಜಾವಿನಲ್ಲಿಯೆ ಎದ್ದುಬಿಡುತ್ತಿದ್ದನು (ಕೃದೇವ. ೦೦). ೨. ಮುಂಜಾವಿನ ಪ್ರಾತರ್ವಿಧಿಗಳನ್ನು ತೀರಿಸಿಕೊಂಡು ಅವನು ಸ್ನಾನ ಮಾಡುತ್ತಿದ್ದನು (ರಂಗರೂ. ೦೯) ; ಸಂಜೆ — ಮುಂಜಾವಿನ ಅಡುಗೆಯ ನಿಮಿತ್ತದಿಂದ ಹೆಂಗಸು ಮನೆಯಲ್ಲಿರಬೇಕಾಗಿ, ಮೇಲ್ಕಾಣಿಸಿದ ಬಗೆಯ ಆನಂದೋತ್ಸವ

ಗಳಿಗೆ ಅವರು ಏರವಾಗಬೇಕಾಗುತ್ತದೆ (ಯಾಕ್ಷಶ್ರ. ೧೪೬) ; ಮುಂಜಾವಿನಲ್ಲಿ ಶ್ರೀಮಂತ ಅದೇ ಸಂಜೆಗೆ ದರಿದ್ರ ಅನ್ನೋ ಹಾಗೆ ಅವನ ಸ್ಥಿತಿ (ಗಾಳಿಗು. ೨೬).

[ಮುಂ$_1$ (<ಮುನ್$_1$) + ಜಾವ$_1$]

**ಮುಂಜಾವು** ' ಮುಂಜಾವ ' ನೋ.

**ಮುಂಜಿ**, ಮುಂಜವಿ, ಮುಂಜಿವಿ, ಮುಂಜಿವೆ, ಮುಂಜೆ (ನಾ). ೧. ಒಂದು ಬಗೆಯ ಹುಲ್ಲು ; ನೊಸೆಹುಲ್ಲು: 'ಮುಂಜಿಹುಲ್ಲು' ಪರಾ. 'ಮುಂಜ$_2$' ಹೋ. ೨. (ನೊದೆ ಹುಲ್ಲಿನಿಂದ ತಯಾರಿಸಿದ) ಉಡಿದಾರ ; ಕಟಿಸೂತ್ರ : ಸರಿಗೆಯೊಳ್ ಸಮೆದಕ್ಷಮಾಲಿಕೆ ಪೊನ್ನಮುಂಜಿ . . . ಪಿಂಗಜಟಾಳಿ ತಾವರೆಯ ಸೂತ್ರದೊಳಾದ ಜನ್ನವಿರಂ ದುಕೂಲದ ಕೋವಣಂ ಕರಮೊಡಂಬಡೆ ನೋಟಕರ್ಕಳನಾ ತಪಸ್ವಿ ಮರುಳ್ಚಿದಂ (ಶಂಶಕಾ. ೬-೮) ; ಮುಂಜಿ ಕಚ್ಚುಟಂ ಗುಂಡಿಗೆ ಭೋಳಮುಂಡೆ ಮಣಿದಂಡ ವಿವೀಕ್ಷಣಸೌಖ್ಯಹೇತುವೇ (ಶಂರಾವಿ. ೪-೮೦) ; ಕೌಪುಕೃಷ್ಣಾಜಿನವು ವರಯಜ್ಞೋಪವೀತವ ದಂಡ ಮುಂಜಿಯನಾ ಪವಿತ್ರೋತ್ತಮನು ಕೊಡೆ ವಿಡಿದಲ್ಲಿಗೈತಂದ (ಶಂಭಶ. ೦೦-೦೩). ೩. ಬ್ರಾಹ್ಮಣ ಬಾಲಕನು ಶಾಸ್ತ್ರೋಕ್ತವಾಗಿ ಯಜ್ಞೋಪವೀತವನ್ನು ಧರಿಸುವ ಕ್ರಿಯೆ ಮತ್ತು ಅದರ ಅಂಗವಾಗಿ ನಡೆಯುವ ಸಮಾರಂಭ : ಉಪನಯನ; ಬ್ರಹ್ಮೋಪದೇಶ : " ಮುಂಜಿಯುಪನಯನಮಕ್ಕುಂ " (ಮಂಗರಾ. ೭೩-೬) ; ವಿರಸಮೆನಗಿದು ಮುಂಜಿಯೆಂಬುದನೊರೆಯದಿರು (ಬಸಪು. ೩-೪೭); ವಿಪ್ರನ ಸುತನ ಮುಂಜಿಗೆ ತೀವಿದ್ಯೆಸನುಯಿತ್ತು ಮಾಡಿಸೆ (ಸಂಶಶ. ಶಂ. ೩೪೪-೨೯) ; ಎಲ್ಲಿ ನೋಡಿದಡೆ ಕುವರರ ಮುಂಜಿ ಸಂಭ್ರಮವುಲ್ಲಾಸದಿಂ ರಾಜಿಸುವ ಮುನಿಗಳಾಶ್ರಮವ ಕಂಡು ಪ್ರಭು ಚೋದ್ಯವಾಂತಂ (ಪ್ರಭುಪು. ೮-೦೬೩). **ಮುಂಜವಿ**: **ಮುಂಜಿವಿ** : ೩. ಈ ಮೂವರಿಗೂ ಮುಂಜಿವಿ ಮಾಡಬೇಕೆಂಬ ವಿಚಾರ ಮನೆಯಲ್ಲಿ ಸುರುವಾಯಿತು (ಸ್ವ. ತಿತ. ೨೨೩) ; ಅರಳಿಮರದ ಮುಂಜಿವಿಯನ್ನು ಮಾಡುತ್ತಾನೆ (ಖಾರಸಂ. ೨೦೩). **ಮುಂಜಿವೆ**: ೩. ಮದುವೆ—ಮುಂಜಿವೆ ಇತ್ಯಾದಿ ಎಲ್ಲ-ಖಾರವನ್ನು ಅವರೇ ಶಿರಸಾವಹಿಸಿದರು (ಸ್ವ. ತಿತ. ೨೦) ; ಒಂಭತ್ತು ವರ್ಷ ನಡೆಯುವಾಗ ಜಗನ್ನಾಥಮಿಶ್ರನು ಮಗನ ಮುಂಜಿವೆ ಮಾಡಿದನು (ಗೌರಾಂಗ. ೨೦). **ಮುಂಜೆ** : ೨. ಪೊನ್ನ ಮುಂಜೆ . . . ತನ್ನ ಪಾಂಡುರಾಕಾರದೊಳೊಪ್ಪೆ ನಾರದನದೇನಿಟೀತಂದನೊ ನೀರದಾಧ್ವದಿಂ (ಜಗಶಿ. ೦೦-೬). ೩. ತನಯರಿಗೆ ಮುಂಜೆಯಾಗಲ್ಕೆ ವೇದವುಲ್ಲಳಂ ಮುನಿಗಳಿಗೆ ಸೀಳ್ದೀವ ಭಲ್ಲೂಕಸಂಕುಳಂ(ಪ್ರಭುಪು. ೮-೦೮೩); ಇವನ ಮುಂಜೆಯಲ್ಲಿ ಯಜ್ಞೋಪವೀತವನ್ನು ಹಾಕತೊಡಗಲು, ಬಸವನು . . . ಶಿವನ ಹೊರ್ತು ಬೇರೆ ಗುರುವನ್ನು ನಾನು ನಂಬುವದಿಲ್ಲೆಂತಲೂ ಹೇಳಿದ್ದರಿಂದ ತಂದೆಯು ಅವನನ್ನು ಮನೆಯ ಹೊರಗೆಅಟ್ಟಿದನು (ಕಶಾಗ. ೪೦).

**ಮುಂಜೀಮಾಣಿ, ಮುಂಜವಿಮಾಣಿ** = ಉಪನಯನವಾದ ಮಾಣಿ ; ವಟು ; ಬ್ರಹ್ಮಚಾರಿ : ಮುಂಜೀಮಾಣಿಯಾದ ನಿಮಾಯಿಯನ್ನು ಕಂಡು ಜನರೆಲ್ಲರೂ 'ಬಾಲಗೋಪಾಲನೇ ಈತ' ಎಂದು ಕಣ್ತುಂಬ ನೋಡಿ ಆನಂದಪಡುವರು (ಗೌರಾಂಗ. ೨೦) : ಅವರೆಲ್ಲ ಮುಂಜವಿಮಾಣಿಗಳಾಗಿದ್ದರೂ ಯಾರ ತಲೆಯ ಮೇಲೂ ಚಂಡಿಕೆ ಇದ್ದಿಲ್ಲ (ಕವಲು. ೩೭).

[<ಸಂ. ಮೌಂಜೀ. / ತುಳು. ತೆಲು. ಮುಂಜಿ]

**ಮುಂಜಿಕೇಶ** (ನಾ). = ಮುಂಜಕೇಶಿ : " ವಿಷ್ಣುಃ. ಕೃಷ್ಣಃ. ಕೇಶವಃ, ಮುಂಜಿಕೇಶಃ . . . ವನಮಾಲೀ, ಗದಾಧರಃ —ಈ ೪೫ ನಾರಾಯಣನ ಪೆಸರ್ " (ಶಬ್ದಮ. ೩-೨೨) : " ಹರಿ ಶೌರಿ ವಿಷ್ಣು ನಾರಾಯಣಂ . . . ಮುಕುಂದಂ ಮುಂಜಿಕೇಶ[ಶಾಕಂ. ಶಿ] . . . ಗೋವಿಂದನಕ್ಕುಂ " (ಮಂಗರಾ. ೬-೦೭) ; ನವಸ್ಮಶ್ರುಕಳಾಪಸಂಪ[ದ ಮದಾಳಿ] ಶ್ರೇಣಿತಂ ಮುಂಜಕೇಶನ ವಕ್ತ್ರಾಂಬುಜಮೆಂಬಿನಂ ಸೊಗಯಿಕುಂ ವಾಗ್ದೇವತಾಧಿಷ್ಠಿತಂ (ಶರ್ಶಮ. ೩-೦೭). [ಪ್ರ ಇದು 'ಮುಂಜಕೇಶಿ' ಎಂಬುದರ ಅಪಲಿಖಿತ]

**ಮುಂಜಿಗಟ್ಟಿಸು** (ಕ್ರಿ). ಉಪನಯನವನ್ನು ಮಾಡು ; ಮುಂಜಿಯನ್ನು ಮಾಡು : ಮುಂಜಿಗಟ್ಟಿಸಿದನಾ ಕುವರಂಗೆ ಸೌಂದರೇಂದ್ರ (ಸೌಂದಪು. ೦೭-೭೩). [ಮುಂಜಿಗಟ್ಟು + — ಇಸು$_3$]

**ಮುಂಜಿಗಟ್ಟು** (ಕ್ರಿ). ನೊದೆಹುಲ್ಲಿನಿಂದ ಮಾಡಿದ ಉಡಿದಾರವನ್ನು ಕಟ್ಟು ; ಉಪನಯನವನ್ನು ಮಾಡು : ಮುಂಜಿಗಟ್ಟುವ ಪ್ರಾಯ ಮಾದೊಡೆ ಪ್ರಶಸ್ತದಿವಸವಾರನಕ್ಷತ್ರಮುಹೂರ್ತದೊಳ್ ಮುಂಜಿಬಂಧನ ಕ್ರಿಯೆಯುಂ ಮಾಡಿದ ಬಟಿಕ್ಕೆ (ವಡ್ಡಾರಾ. ೭೩-೨೦) : ಶಿವದೀಕ್ಷೆಯಿಲ್ಲದವನ ಪೊಲೆನ್ನಂ ಮುಂಜಿಗಟ್ಟುವ ಮನವಿದೆಂತಾಯ್ತಾಗ ನಿನಗವಿವೇಕಿಯಂದದಲಿ (ಬಸಪು. ೩-೪೪). [ಮುಂಜಿ + ಕಟ್ಟು$_1$]

**ಮುಂಜಿಬಂಧನಕ್ರಿಯೆ** (ನಾ). ನೊದೆಹುಲ್ಲಿನಿಂದ ಮಾಡಿದ ಕಟಿಸೂತ್ರವನ್ನು ಕಟ್ಟುವಿಕೆ ಮತ್ತು ಅದಕ್ಕೆ ಸಂಬಂಧಿಸಿದ ಸಮಾರಂಭ; ಉಪನಯನ : ಮುಂಜಿಗಟ್ಟುವ ಪ್ರಾಯಮಾದೊಡೆ ಪ್ರಶಸ್ತದಿವಸವಾರ ನಕ್ಷತ್ರಮುಹೂರ್ತದೊಳ್ ಮುಂಜಿಬಂಧನಕ್ರಿಯೆಯುಂ [೭೩ಕಾಂ. ಮುಂಜಿಗಬದ್ಧನಕ್ರಿಯೆಗಳಂ] ಮಾಡಿದ ಬಟಿಕ್ಕೆ (ವಡ್ಡಾರಾ. ೭೩-೨೦).

[< ಸಂ. ಮೌಂಜಿಬಂಧನಕ್ರಿಯಾ]

**ಮುಂಜಿವಿ** ' ಮುಂಜಿ ' ನೋ.

**ಮುಂಜಿವೆ** ' ಮುಂಜಿ ' ನೋ.

**ಮುಂಜಿಹುಲ್ಲು** (ನಾ). ಒಂದು ಬಗೆಯ ಹುಲ್ಲು : ನೊದೆಹುಲ್ಲು ; ನೊಸೆಹುಲ್ಲು : ಮುಂಜಿಹುಲ್ಲು, ಹೊದಕೆಹುಲ್ಲು (ವೈಶಿಗ. ೭೭-೦೩೭೭) ; ಬ್ರಹ್ಮವಿಚಾರವನ್ನು ಮಾಡುವವನು ಮುಂಜಿಹುಲ್ಲಿನ ನಡುವೆ ಇರುವ ಕಡ್ಡಿಯನ್ನು ವಿಂಗಡಿಸಿ ತೆಗೆಯುವ ಹಾಗೆ ದೇಹೇಂದ್ರಿಯಗಳ ದೆಸೆಯಿಂದ ಆತ್ಮಸ್ವರೂಪವನ್ನು ವಿಂಗಡಿಸುವನು (ಕೃವಾಬು. ೮೦).

[ಮುಂಜಿ + ಹುಲ್ಲು (<ಪುಲ್)]

**ಮುಂಜುಟ್ಟು** (ನಾ). ಮುಂದಲೆಯ ಕೂದಲು ; ಮುಂಭಾಗದ ಶಿಖೆ,- ಮುಡಿ : ವಾರಿಶಿಖಿ ತುಱುಬು ಮುಂಜುಟ್ಟು ನಡುವಣ ಶಿಖಿಯು ಚಾರುಮಕುಟಂ (ಗುರುಚಾ. ೩-೪೯); ವ್ಯತ್ಯು ಮುಂಜುಟ್ಟನು ಹಿಡಿದಿಹುದೆಂಬಂತೆ ಮಾಳ್ಪುದು ಸತ್ಕಾರ್ಯಗಳನು (ಇಂಶಾಶ. ೦೩೮-೭೯).

[ಮುಂ$_1$ (<ಮುನ್$_1$) + ಜುಟ್ಟು]

**ಮುಂಜೂರ್**, ಮುಂಜೂರು (ನಾ). ೧. ಮುಂಭಾಗದ ಛಾವಣಿ : ಮುನ್-ಸೂರ್, ಮುಂಜೂರ್ (ಶಾಶಾಶಿ. ೩೩ ಪ್ರಯೋ) ; ಮುಂಜೂರ್ ; ಮುಂಜೆಱಂಗು ; ತಣ್ಣೊಡರ್ (ಶಮದ. ೬೮ ಪ್ರಯೋ). ೨. ಛಾವಣಿಯ ಮುಂಭಾಗ : ಸಂಬಳಿಗೋಲ ಮುಂಜೂರೊಳಗೆ ಸಮಂತಿಟ್ಟು (ಅರಾಶ. ೦-೭-೦೩). **ಮುಂಜೂರು** : ೨. ಮುಂಜೂರ ಹಿಡಿದುಕೊಂಡು ಹಿಂದೆ ಮನೆಯ ಸುಟ್ಟು ನಿರಂಜನ ಪರಮಸಿದ್ಧ ಗುಹೇಶ್ವರಲ್ಲಯ್ಯನು (ಅವಶಂ. ೨೯೯-೦೩೦೪) ; ಗಸ್ಸದಿಂ ಬಜೆಗೋಪಮಂ ಶಾಳ್ದು ರ್ಝಂಕಿಸುತೆ ಮುಂಜೂರ ಹುಲ್ಲನುಚುರ್ತ್ತೆ ಶಿವಧಾಯಿನುತೆ (ತಿರುಶ. ದೇ. ೦೩-೦೩).

[ಮುಂ$_1$ (<ಮುನ್$_1$) + ಸೂರ್]

**ಮುಂಜೂರಿ** (ನಾ). (ರಾಜನ) ವಸ್ತ್ರಾಲಂಕಾರದ ಮುಂಭಾಗದಲ್ಲಿ ಕಟ್ಟಿರುವ ಚೂರಿ : ಅವುಗಳಲ್ಲಿ ರಾಜರು ಧರಿಸುವ ಕಿರೀಟ, ಭುಜಕೀರ್ತಿ . . . ಕರ್ಣಕುಂಡಲ. ಮುಂಜೂರಿ ಮುಂತಾದವುಗಳನ್ನೂ ಬಣ್ಣಿಸಿರುವರು (ಹುಬ್ಬಿಹ. ೮೩). [ಮುಂ$_1$ (<ಮುನ್$_1$) + ಚೂರಿ]

**ಮುಂಜೂರು** ' ಮುಂಜೂರ್ ' ನೋ.

**ಮುಂಜೆ** ' ಮುಂಜಿ ' ನೋ.

**ಮುಂಜೆರಗು** ' ಮುಂಜೆಱಂಗು ' ನೋ.

**ಮುಂಜೆಱಂಗು**, ಮುಂಜೆರಗು, ಮುಂಜೆಱಗು (ನಾ). (ಸೀರೆಯ ಅಥವಾ ವಸ್ತ್ರದ) ಸೆರಗಿನ ತುದಿ,- ಮುಂಭಾಗ,- ಅಂಚು : ಮುಂಜೂರ್;

ಮುಂಜಿಱಂಗು ; ತಣ್ಣೊಡರ್ (ಕಬುರ. ೬೮ ಶ್ರಯೋ) ; ಮುಂಜುಱುರ್, ಪೊಂಜುಱುರಿಗೆ, ಮುಂಜಿಱಂಗು (ಕರ್ನಾ.ಪು. ೯೩ ಶ್ರಯೋ). ಮುಂಜೆಱಗು : ಕಡುಮೂರ್ಛೆಯಾಂತಿರುವ ಕಾಂತನಂ ಮುಂಜೆಱಗಿನಿಂದ ಬೀಸುತಲೊರ್ವೆ ಸೈಪಿಡುವುದಂ ಕಂಡನು (ವಂಕಾರಾ. ೫-೬-೪೭) ; ನೋಡಲವ್ವದೆ ಕಂಗಳಿಗೆ ಮರೆಮಾಡಿದರು ಮುಂಜೆಱಗ ಸೆರಗನು (ಕೊರ್ಲ್ಲ.ಕ. ೫೮). ಮುಂಜೆಱಗು : ತಳರ್ವಡೆ ಮುದ್ದುಪೊಗಂ ಪೊರಳ್ದ ಮುಂಜೆಱಗು ಕಿವುಟ್ಟಿ ಪೀರ್ವ ಮೊಲೆ ದಟ್ಟಡಿಯೊಳ್ಪರಿದೋಡುವಂಗಣಂ ನೆಱೆ ತಸಗೊಪ್ಪುವರ್ಭಕನನೊ ರ್ವನನಾಂ ಪಡೆವಂದವಾವುದೋ (ಸುಕುಮಾ. ೯-೯೯) ; ಮದುಪಕ್ಕಳ ರಂಜಿಪ ಮುಂಜೆಱಗೆರಡಂ ಭೂದಿವಿಪಂ ಗಂಟಿಕ್ಕಿಸಿದ ಸಮನಂತರವಲ್ಲಿ (ಅರ್ಕ್ಯಾ. ೬-೬೪ ವ). [ಮುಂ₁ (< ಮುನ್₁) + ಸೆಱಂಗು]

**ಮುಂಜೆಱಗು** ' ಮುಂಜೆಱಂಗು ' ನೋ.

**ಮುಂಜೋಗಿಲ್** (ನಾ). ಉಟ್ಟ ವಸ್ತ್ರದ ಮುಂಭಾಗದಲ್ಲಿ ಚೀಲದಂತೆ ಮಾಡಿದ ಭಾಗ, — ಉಪಿ ; ಮಡಿಲು : ಮಾಂಸೋತ್ಕರಮಂ ಪೊತ್ತೆಯ್ದೆ ತಮ್ಮುಳ್ಳುಡೆಯ ತೊವಲ ಮುಂಜೋಗಿಸೊ[ಲೊ]ಳ್ ತೀವಿ ಕೊಂಡು. . . ನಡೆದರಾ ಕಾಡೊಳಂ ಬೇಡರಾ [ಗಳ್] (ಶಬಸಚಿ. ೦೪-೫೨). [ಮುಂ₁ (< ಮುನ್₁) + ಸೋಗಿಲ್ (< ಸೋಂಕಿಲ್)]

**ಮುಂಜೋಲಿ**, ಮುಂಜೋಲೆ (ನಾ). ೧. ಮುಂದಕ್ಕೆ ವಾಲುವಿಕೆ : ಮುಂಭಾಗಕ್ಕೆ ಓರೆಯಾಗುವಿಕೆ ; ಬಾಗುವಿಕೆ : ರಥವು ಓಡುವಾಗ ಮುಂಜೋಲಿ ಇರುತ್ತದೆ (ಮುಂಬಯು. ೪-೬೨) ; ಗೋವಿಂದರಾಯರಿಗೆ ಯಾರೋ ಹಿಂದಿನಿಂದ ತಮ್ಮ ಕತ್ತು ಹಿಡಿದು ದಬ್ಬಿದ ಭಾವನೆಯಾಗಿ ಮುಂಜೋಲಿಯನ್ನು ತಡೆದು ನಿಲ್ಲುವಂತೆ ಗಕ್ಕನೇ ನಿಂತರು (ಮುಗಿಮು. ೦೦೩). **ಮುಂಜೋಲೆ** : ೨. ಚಾಂಚಲ್ಯ ; ಅಸ್ಥಿರತೆ : ಈ ಮುಂಜೋಲೆ ಹಿಂಜೋಲೆಯ ದೆಸೆಯಿಂದ ನಾನು ಬರೆವುದಾದರೂ ಆಟಗೊಮ್ಮೆ ಸೋಣ ಕೊಮ್ಮೆ (ಸಂಫಾಸಾ. ೦೨).

**ಮುಂಜೋಲಿಯನ್ನು ಹೊಡೆ** = ವಾಲು : ಬಾಗು : ಈಗ ರಾಯರ ಮಾತಿನ ಒಲವು ವನಮಾಲಿಯ ಕಡೆಗೆ ಹೆಚ್ಚು ಮುಂಜೋಲಿಯನ್ನು ಹೊಡೆಯಿತು (ರಣರ್ಗಿ. ೨೮). **ಮುಂಜೋಲಿಯಾಗು** = ಮುಂದಾಗು ; ಮುಂದುವರಿ ; ಪ್ರಗತಿಯನ್ನು ಸಾಧಿಸು : ಆ ಮಗುವೇ ಬುದ್ಧಿ-ಭಾವನೆಗಳಲ್ಲಿ ಸ್ವಲ್ಪ ಮುಂಜೋಲಿಯಾಗಿತ್ತೊ ಅಥವಾ ಗೌರಿಯ ವಾತ್ಸಲ್ಯದ ಪಾಠಶಾಲೆ ಆ ಬುದ್ಧಿ ಭಾವನೆಗಳನ್ನು ಸ್ವಲ್ಪ ಮುಂದಾಗಿ ಕುದುರಿಸಿತ್ತೊ ಯಾರು ಬಲ್ಲರು (ಕಹಿರಾ. II. ೯೯೭). [ಮುಂ₁ (< ಮುನ್₁) + ಜೋಲಿ₃]

**ಮುಂಜೋಲೆ** ' ಮುಂಜೋಲಿ ' ನೋ.

**ಮುಂಡ₁** ' ಮುಂಡು₁ ' ನೋ.

**ಮುಂಡ₂** (ಗು). ೧. ತಲೆಯನ್ನು ಮುಂಡನ ಮಾಡಿದ. ೨. ಎಲೆಗಳನ್ನು ಕತ್ತರಿಸಿದ,— ಸವರಿದ. ೩. ಕೊಂಬಿಲ್ಲದ ; ಶೃಂಗವಿಲ್ಲದ. ೪. ಮೊಂಡಾದ ; ಹರಿತವಿಲ್ಲದ ; ಮೊನಚಿಲ್ಲದ. ೫. ಕ್ಷುದ್ರವಾದ ; ಅಲ್ಪವಾದ. (ನಾ). ೬. ತಲೆಯಲ್ಲಿ ಕೂದಲಿಲ್ಲದವನು ; ಬೋಳು ತಲೆಯವನು : "ಮುಂಡಃ, ಮುಂಡಿತಃ— ೨ ತಲೇ ಮೇಲೆ ಕೂದಲು ಬೆಳೆಯದ ಬೋಳುತಲೆಯವನು" (ಸಿದ್ಧಾಂತಿ. ೧೮೨) ; "ಬೋಟಂ=ಮಿಟ್ಟು ; ಮುಂಡಂ ; ಒಂದೌಷಧಂ" (ಕಬುರ. ೫೦. ೦). ೭. ಮುಂಡನ ಮಾಡಿದ ತಲೆಯವನು ; ಕ್ಷೌರ ಮಾಡಿದ ತಲೆಯವನು. ೮. ಕೊಂಬೆ, ರೆಂಬೆಗಳನ್ನು ಕತ್ತರಿಸಿದ ಮರದ ಕಾಂಡ : ಬೇರು ಮುಂಡ ಗಳು ಸಾಮಾನ್ಯವಾದ ಗಾಳಿಯ ಹೊಡೆತಕ್ಕೆ ಕದಲುವುದಿಲ್ಲ (ಜೀವಶಾ. ೦೭೭). ೯. ಮೊನಚಿಲ್ಲದ ಆಯುಧ ; ಮೊಂಡಾದ ಆಯುಧ : ಮೊನೆಯಿಲ್ಲದ ಮುಂಡವ ಹಿಡಿದು ಇಱಿದಲ್ಲಿ ಘಾಯಕ್ಕೆ ಕುಱುಹುಂಟೆ (ಸಕವ.೪. II. ೭-೦೩). ೧೦. ಹಣೆ ; ನೆತ್ತಿ. ೧೧. ಕ್ಷೌರಿಕ ; ನಾಯಿಂದ. ೧೨. ತಲೆ : ರುಂಡ : "ಮುಂಡಃ . . . ಮೂರ್ಧಾ, ಕಂ — ಈ ೮ ಮಂಡೆ" (ಹಲಾಯು. ೬೫-೩೭೪) : ಪಿಂಡವಿಲ್ಲದ ಶ್ರಾದ್ಧ ಮುಂಡವಿಲ್ಲದ ದೇಹ ಹೆಂಡ ರಿಲ್ಲದನ ಮನೆವಾರ್ತೆ ಅವಗಂ ಬಂಡು ಕಾಣಿಯ್ಯ (ಸರ್ವಜ್ಞ. ೦೭೯೩). ೧೩. ತಲೆಯಿಲ್ಲದ ದೇಹ : ಅಟ್ಟೆ : "ಕಬಂಧಃ, ರುಂಡಃ – ಈ ೨ ಮುಂಡಂ" (ಹಲಾಯು. ೦೦೪-೬) : ಪಂಚಾಶತ್ಕೋಟಿ ಭೂಮಂಡಲದ ಸೊಂದು ತಲೆಯಿಲ್ಲದ ಮುಂಡ ನಂಗಿತ್ತ ಕಂಡನು (ಅವಸಂ. ೬-೨೯) ; ಕೆಡೆದ ಮುಂಡದ ಬಿಟ್ಟ ತಲೆಯ ಚೆಲ್ಲಿದ ಕರುಳ . . . ವಿಶ್ವಾಮಿತ್ರನು ಅಡವಿ ಯೊಳಗೆಯ್ದೆ (ಹಕಾ. ೦೨-೩೪). ೧೪. ನ್ಯೂನಗೊಂಡ ಅವಯವವುಳ್ಳ ವನು ; ಅಂಗಹೀನನಾದವನು : ಭಂಡನೀತನು ಕಪಟವೇಷದ ತೊಂಡು ಕಾಱನು ಮೋಟಕೈಗಳ ಮುಂಡನು (ಐಸಭ. ೩೮-೨೩). ೧೫. ಔಷಧಿಗೆ ಬಳಸುವ ಒಂದು ಬಗೆಯ ಸುವಾಸನಾಸಸ್ಯ : "ಅಶುತಕಃ — ಮುಂಡ ರಾಜಾನ್ನ" (ಓಕಂ. ೫) ; "ಮುಂಡಃ — ಬೋಟ" (ಓಕಧ. ೦೨೬). ೧೬. ಒಂದು ಬಗೆಯ ಸಸ್ಯ : ಇಲಿಕಿವಿ ಗಿಡ : "ಮುಂಡಂ — ಇಲಿ ವಾಲ" (ಓಕಂ. ೦೨೬). ೧೭. ರಾಹು. ೧೮. ಒಂದು ಬಗೆಯ ಲೋಹ : ಕಬ್ಬಿಣ : "ಮುಂಡಂ—ಮುಂಡಲೋಹ" (ಓಕಧ. ೦೨೬). ೧೯. (ಭೂಮಿ ಯನ್ನು ಅಳೆಯುವ) ಒಂದಾಳು ಎತ್ತರದಷ್ಟು ಅಳತೆ ; ಪುರುಷ ಪ್ರಮಾಣ : ಪುಲಿಗಿಲ ಕೆಲದೊಳ್ ಪನ್ನಗನಿಲಯಂ ಸುಮಾಸಿಡಿದೊಡದಱ ತೆಂಕಣದೆಸೆಯೊಳ್ ಜಲಮಕ್ಕುಂ ಮುನ್ನಂ ಕಾಣಲಕ್ಕುಮೊಮ್ಮುಂಡದನಿತ ಱೊಳ್ ಕಚ್ಚುವನಂ (ಲೋಕೋಪ. ೫-೨೨). ೨೦. ಒಂದು ನಾಡಿನ ಹೆಸರು: ' ಮುಂಡರಾಷ್ಟ್ರ ' ಪರಾ. ೨೧. ಒಬ್ಬ ರಾಕ್ಷಸನ ಹೆಸರು. ೨೨. (ಅಕ್ಕಸಾಲೆ, ಕಮ್ಮಾರ ಮುಂತಾದವರು) ಲೋಹದ ವಸ್ತುಗಳನ್ನು ಇಟ್ಟು ಬಡಿಯಲು ಉಪಯೋಗಿಸುವ ಕಬ್ಬಿಣದ ಗಟ್ಟಿ ; ಅಡೆಗಲ್ಲು : "ಅಕ್ಕಡೆ ಮುಂಡಮುಕ್ಕು" (ಮುಂಗಿರಾ. ೦೮೩-೬). ೨೩. [ಗಣಿತ] "ಶಂಕು, ಗೋಪುರಾಕೃತಿ, ಮೊ. ಸಮರೂಪದ ಘನಾಕೃತಿಯ ಮೇಲ್ಭಾಗವನ್ನು ಆಧಾರಕ್ಷೇತ್ರಕ್ಕೆ ಸಮಾನಾಂತರವಾಗಿ ಕತ್ತರಿಸಿ ಹಾಕಿ ಉಳಿದ ಭಾಗ, ಇಂತಹ ಕತ್ತರಿಕೆಯ ಎರಡು ಸಮಕ್ಷೇತ್ರಗಳ ಮಧ್ಯಭಾಗ" (Frustum. ೨೦೪೬) : ಸೂಚೀಮುಖಾಕೃತಿ ಅಥವಾ ಬಿರ ಮಿಡ್ಡಿನ (Pyramid) ಮುಂಡ (Frustum)ದ . . . ಘನಕ್ಕೆ ಈ ಸೂತ್ರವನ್ನು ಭಾಸ್ಕರನು ಕೊಟ್ಟಿದ್ದಾನೆ (ಗಣಿತ. ೨೮೭).

**ಮುಂಡ ಮೋಚಿಕೊಳ್ಳು** = (ಆಲಂ) ಹಾಳಾಗು ; ನಾಶವಾಗು ; ಅಪ್ಪ ಮಾಡಿದ ೨೦,೦೦೦ ರೂ. ಸಾಲಕ್ಕೆ ಅವನೇ ಮುಂಡ ಮೋಚಿ ಕೊಳ್ಳಲಿ (ಶ್ರಕ್ಷೆ. ೨೭) ; ನಮ್ಮೆಲ್ಲರನ್ನೂ ಬಿಟ್ಟು ಸೀನಪ್ಪ ಮೈಸೂರಿಗೆ ಹೋಗಿ ಮುಂಡ ಮೋಚಿಕೊಳ್ಳುವುದು ನಾನು ನೋಡದೆ ಇರುತ್ತೇನೆಯೇ (ಅಶಶಾ. ೪). **ಮುಂಡಮೋಚು** = ೧. ಬ್ರಾಹ್ಮಣಸ್ತ್ರೀಯು ಗಂಡನನ್ನು ಕಳೆದುಕೊಂಡುದರ ಸಂಕೇತವಾಗಿ ತಲೆಯನ್ನು ಬೋಳಿಸಿಕೊಂಡು ಸೆರಗಿನಿಂದ ಮುಸುಕನ್ನು ಹಾಕಿಕೊಳ್ಳು : (+). ೨. = ಮುಂಡ ಮೋಚಿಕೊಳ್ಳು : ಈ ಪ್ರಕಾರದೊಳಾಸಱದೆ ತಾಂ ಮುಂಡ [ಜಾಹಂ. ಡ] ಮೋಚಿದ ಹಾಂಗೆ ಅಱಚುವರೆ (ಐಸಭ. ೩೭-೦೫) ; ಮುಂಡಮೋಚಿದೆ ನಾನು ಇನ್ನಾರು ಗತಿಯೆನಗೆ ಪುಂಡರೀಕಾಕ್ಷ ನೀ ಪಾಲಿಸೈ ತಂದೆ (ಕೃಸಂದ. ೦-೨೬-೨). [ಸಂ.]

**ಮುಂಡಂಗಿ** ' ಮುಂಡಿಗೆ₄ ' ನೋ.

**ಮುಂಡಕ** (ನಾ). ೧. ಕೊಂಬೆಗಳನ್ನು ಕತ್ತರಿಸಿಹಾಕಿದ ಮರದ ಕಾಂಡ ; ಬೊಡ್ಡೆ. ೨. ನಾಯಿಂದ ; ಕ್ಷೌರಿಕ ; ಹಜಾಮ. ೩. ತಲೆ: ಶಿರಸ್ಸು. ೪. ತಲೆಗೂದಲನ್ನು ಬೋಳಿಸಿಕೊಂಡವನು ; ಮುಂಡನಮಾಡಿ ಕೊಂಡವನು : ಮುಂಡಕರು, ಶ್ರಮಣಕರು, ಇಭ್ಯರು . . . ಇವರೊಡನೆ ಮಾತುಕತೆಯಾಡುವಾಗ ಪೂಜ್ಯಗೌತಮನೊಡನೆ ಹೇಗೋ ಹಾಗೆ

(ಶಿವಧ್ಯ. ೯೦). ೫. ಅಥರ್ವವೇದದ ಒಂದು ಉಪನಿಷತ್ತು: ಶ್ರೀರುದ್ರ ಬೃಹದಾರಣ್ಯಕ . . . ಮುದ್ಗಲ ಮುಂಡಕವೆಂಬಿವು ಮೊದಲಾದವೇ ಉಪನಿಷತ್ತುಗಳು (ವಿವೇಕ. ೩). 'ಮುಂಡಕೋಪನಿಷತ್ತು' ಪರಾ. [ ಸಂ. ]

**ಮುಂಡಕಲ್** (ನಾ). ಒಂದು ಊರಿನ ಹೆಸರು: ಕಾರ್ತ್ತಿಕಪೌರ್ಣಮಾಸ್ಯಾಂ ಪೈತಾಮಹೀ ಹಿರಣ್ಯಗರ್ಭಮಹೋತ್ಸವಮಪ್ಯಯೇ ಮುಣ್ಡಕಲ್ಲು ಗ್ರಾಮಸ್ಯ ಪಲ್ಲಿಜಿಗ್ರಾಮಸ್ಯಚ . . . ರಾಜವಾನೇನದತ್ತಾ (ಇಇ. XI, ೬೭-೦೬; ೭ನೆಯ ಶ). 'ಮಂಡಿಕಲ್' ಪರಾ. [ಮುಂಡ$_1$ + ಕಲ್$_3$]

**ಮುಂಡಕಾಟಿ** (ನಾ). ಮೋಟುಕೈಗಳುಳ್ಳವನು: ಮೋಟುಕೈಗಳ ದಂಡಗೊಡುತಂ . . . ಮುಂಡಕಾಟಿ[ಪಾಠಾಂ. ಮುಂಡುಗಾ]ಜಿಸು ಪಸರಿದೇವನ ಬಳಿವಿಡಿದು ಸಾರ್ದು (ಶಶಪು. ೩೯-೦೮). [ಮುಂಡ$_2$ + — ಕಾಟಿ]

**ಮುಂಡಕೋಪನಿಷತ್ತು** (ನಾ). ಅಥರ್ವವೇದದಲ್ಲಿ ಪ್ರಸಿದ್ಧವಾದ ಒಂದು ಉಪನಿಷತ್ತು; P ಈ ಉಪನಿಷತ್ತಿನ ಪವಿತ್ರತತ್ತ್ವಗಳನ್ನು ಯಾರು ಗ್ರಹಿಸುವರೋ ಅವರ ದೋಷಗಳೆಲ್ಲವೂ ಛೇದಿಸಲ್ಪಟ್ಟು ಬಿಡುಗಡೆ ಹೊಂದುವರೆಂಬ ನಂಬಿಕೆಯಿದೆ: ಮುಂಡಕೋಪನಿಷತ್ತು ಅಥರ್ವವೇದದ ಶೌನಕಶಾಖೆಗೆ ಸೇರಿದೆ (ಭಾರದ. ೩೯).

[ < ಸಂ. ಮುಂಡಕೋಪನಿಷದ್ ]

**ಮುಂಡಗಂಭ** (ನಾ). ಮರದ ಕಾಂಡದಿಂದ ತಯಾರಿಸಿದ ಕಂಬ: ಮಕರತೋರಣದ ಬಹಿರ್ಭಾಗದುಭಯಪಾರ್ಶ್ವದೊಳಮೋಳಿಪಡೆಯೆ ಸುರಕರೀಂದ್ರಮನೆ ಕಟ್ಟಲ್ ನಟ್ಟ ಪಾರಿಜಾತದ ಮುಂಡಗಂಭಂಗಳಂ ಪೋಲ್ತೊಪ್ಪಿ ಸಾಹಣಸೌಘಮೊಳ್ ನಿಚ್ಚಮೋಲಗಿಸುವ ಪಂಚಕಲ್ಯಾಣಂಗಳುಮಂ ಕಟ್ಟುವಾನೆಗಂಭಂಗಳುಮಂ . . . ನೋಡಿ (ಶಾಂತಿಪು. ೩-೧೪ ವ).

[ ಮುಂಡ$_2$ + ಕಂಭ ]

**ಮುಂಡಗಳ್ಳಿ**, ಮಂಡಗಳ್ಳಿ, ಮುಂಡುಗಳ್ಳಿ, ಮೊಂಡಗಳ್ಳಿ, ಮೊಂಡುಗಳ್ಳಿ (ನಾ). ಎಲೆಗಳಿಲ್ಲದ, ದಟ್ಟವಾದ ಮುಳ್ಳುಗಳುಳ್ಳ ಒಂದು ಬಗೆಯ ಕಳ್ಳಿಗಿಡ: "ಮಹಾವೃಕ್ಷಃ, ಸ್ನುಹೀ — ಈ ೨ ಮುಂಡಗಳ್ಳಿ" (ಪಶಾಯು. ೩೩-೯೯). **ಮಂಡಗಳ್ಳಿ**: ಯವಕ್ಷಾರ, ಚಿತ್ರಮೂಲಂಗಳಂ ಮಂಡಗಳ್ಳಿಹಾಲಿಂದರೆದು ಎಣ್ಣೆಯಲ್ಲಿ ಕಾಯಿಸಿ ಮೊಳೆಗೆ ಲೇಪವಂ ಮಾಡೆ ಕರಗಿ ಹೋಗುವುದು (ಸಕವೈ. ೨೯೩); ದೊಡ್ಡಬರದಲ್ಲಿ ಮೂರುವರ್ಷ ಮಳೆಯಿಲ್ಲ . . . ಉಳುವುದಕ್ಕೆ ಎತ್ತಿಲ್ಲದೆ ಮಂಡಗಳ್ಳಿ ಎಳೆದು ಬಿತ್ತನೆ ಮಾಡಿದರಂತೆ (ದಸ್ಸೂರು. ೧೯೨). **ಮುಂಡುಗಳ್ಳಿ**: "ಮುಂಡುಗಳ್ಳಿ ಸ್ನುಹಿಯೆನಿಕ್ಕು" (ಮಂಗರಾ. ೪೦-೩೯); ಎಕ್ಕೆಯ ಹಾಲು, ಮುಂಡುಗಳ್ಳಿಯ ಕೊನರು, ಕಹಿಸೋರೆಯ ಎಲೆ, ಹೊಂಗೆಯ ನಾರು ಇಷ್ಟನು ಆಡಿನ ಮೂತ್ರದಿಂದ ಅರೆದು ಲೇಪವಂ ಮಾಡಿಸಲು ಮೂಲವ್ಯಾಧಿಯ ಮೊಳೆ ಕರಗಿಹೋಗುವುದು (ವೈದ್ಯಸಾ. I. ೧೯೩). **ಮೊಂಡಗಳ್ಳಿ**: ಮೊಂಡಗಳ್ಳಿಮೊಗರು, ಕಹಿಸೋರೆಯೆಲೆ, ಹೊಂಗೆನಾರು, ಕಳ್ಳಿಹಾಲು ಸಹ ಆಡಿನ ಮೂತ್ರದಿಂದರೆದು ಲೇಪವಂ ಮಾಡೆ ಮೊಳೆ ಕರಗಿಹೋಗುವುದು (ಸಕವೈ. ೨೯೩). **ಮೊಂಡುಗಳ್ಳಿ**: ಬೇವಿನ ಕೊರಡು ಗರಿಕೆ ಮೊಂಡುಗಳ್ಳಿ (ತಾಗಂ೨. ೩೯-೩). [ < ಮುಂಡ$_0$ ( P ← ತಮಿ. ಮುಣ್ಣುಕವ್ = ಮುಳ್ಳು, ಮುಳ್ಳಿನ ಪೊದೆ ) + ಕಳ್ಳಿ$_2$ ]

**ಮುಂಡಜೀವಿತ** (ನಾ). (ಒಡೆಯನಿಗಾಗಿ) ತನ್ನ ತಲೆಯನ್ನು ಮುಡಿಪಾಗಿಟ್ಟಿರುವ ಬದುಕು (?): ಬಿಟ್ಟಿದೇವ ಹೊಯ್ಸಳಸಾಹಣಿ ಬಾಸಯನ ಕಲಿದೊರೆಯೆ . . . ಮೇಲಾಳಿಪ್ಪರ ಕೊಂದು ಕಾಲಾಳಿಪ್ಪರನಿಱಿದು ಜೋಳವಾಳಿಯ ನೆಱಿದ ಬಾಸಿ . . . ತಂನ ಜೀವಿತಮಂ ಮುಂಣ್ಡಜೀವಿತವಾಗಿ ನಿಲಿಸಿದ (ವ್ಯಕಂ. ೦೧೩೯-೦೨-೮; 1117). [ ಸಂ. ]

**ಮುಂಡನ** (ನಾ). ೧. ತಲೆಯನ್ನು ಬೋಳಿಸುವಿಕೆ; ಕ್ಷೌರ; ವಪನ: "ಕ್ಷೌರಂ ವಪನಂ ಮುಂಡನಮದಱಿಗೆ ಭದ್ರಾಕರಣಂ" (ವಸ್ತುಕೋ. ೦೦೯-೨೦); ಮುಂಡನ ಜಟ ಕೇಶದುರುಭಕ್ತಿಸುಜ್ಞಾನವಿರಕ್ತಿಕ್ತೆಂದು ಕಂಡರು ಭೈರವಾಂಕನುನ್ನತಿಯು (ಭೈರವೇ. ೯-೨೦). ೨. ತೀರ್ಥಯಾತ್ರೆ, ಸಂನ್ಯಾಸಸ್ವೀಕಾರ ಮುಂತಾದ ಪವಿತ್ರಸಂದರ್ಭಗಳಲ್ಲಿ ತಲೆಗೂದಲನ್ನು ತೆಗೆಸುವ ಒಂದು ವಿಧಿ: ಚಕ್ರಧರನ ಮುಂಡನವಾಯಿತು. ಸಂನ್ಯಾಸವನ್ನು ಸ್ವೀಕರಿಸಿದನು (ಸ್ವಾಗಸಂ. ೬೭). ೩. ಗಂಡನನ್ನು ಕಳೆದುಕೊಂಡ ಸಂಪ್ರದಾಯಸ್ಥ ಬ್ರಾಹ್ಮಣಸ್ತ್ರೀಯ ತಲೆಯನ್ನು ಬೋಳಿಸುವಿಕೆ, — ಮಡಿಮಾಡುವಿಕೆ: ಮಗಳ ಮುಂಡನಕಾರ್ಯವು ಅವರಿಗೆ ಅವಳ ವೈಧವ್ಯಕ್ಕಿಂತಲೂ ಕ್ರೂರವಾಗಿ ಕಂಡುಬಂದಿತ್ತು (ಪೇಮುಂತ. ೧೯೦).

**ಮುಂಡನ ಮಾಡಿಸು** = ೧. ಸಂನ್ಯಾಸ ಸ್ವೀಕಾರ, ಉಪನಯನ ಮುಂತಾದ ವಿಧಿಗಳಿಗಾಗಿ ತಲೆಗೂದಲನ್ನು ತೆಗೆಸು: ತಲೆಯನ್ನು ಮುಂಡನ ಮಾಡಿಸಿ . . . ಮೂರುಜನ ವಟುಗಳನ್ನೂ ಮೂರನೆಯ ಅಂತಸ್ತಿನ ಕೊಠಡಿಯಲ್ಲಿ ಮೂರು ದಿನಗಳವರೆಗೆ ಕೂಡಿಹಾಕಿದರು (ಚಿಂದ. II, ೩೬); ಆ ಮಹಾಯೋಗಿಯು ತಲೆಯನ್ನು ಮುಂಡನ ಮಾಡಿಸಿಕೊಂಡು . . . ವಿಭೂತಿಯನ್ನು ಧರಿಸಿ ಬರೀ ಮೈಯಲ್ಲಿದ್ದನು (ಸೀತಿಶಂ. VI, ೨೦). ೨. ವೈಧವ್ಯಸೂಚಕವಾಗಿ ಹೆಂಗಸು ತಲೆಯನ್ನು ಬೋಳಿಸಿಕೊಳ್ಳು; ಮಡಿಯಾಗು: ಇವರಲ್ಲಿ ವಿಧವೆಯರು ಇತರ ಬ್ರಾಹ್ಮಣವಿಧವೆಯರಂತೆ ಮುಂಡನ ಮಾಡಿಸುವುದಿಲ್ಲ (ಕಭಾಗ. ೬೨). [ಸಂ.]

**ಮುಂಡಪಾಷಾಣ** (ನಾ). ಕಬ್ಬಿಣ: ಉಕ್ಕು: "ಮುಂಡಾಯಸಂ — ಮುಂಡಪಾಷಾಣ" (೬ಕಂ. ೦೨೬). [ ಸಂ. ]

**ಮುಂಡಮೋಱಿ**[3] (ನಾ). (?): ಅನಂದಿನಾ ಭವದಲ್ಲಿ ಹಸಿದಾನವಂ ಮಾಡಲೊಲ್ಲದೇ ಇವಳೆನ್ನ ಬದುಕ ಜಿಡಳೆಂದೆಂಬ ಮುಂಡಮೋಱಿಯವಿವೇಕತನವಲ್ಲವೇ (ಸಮ್ಮುಳಿ. ೩-೨೦). [ ? + ಮೋಱಿ$_2$ ]

**ಮುಂಡಮೋಪಿ** (ನಾ). ಗಂಡನನ್ನು ಕಳೆದುಕೊಂಡು ತಲೆಗೂದಲನ್ನು ತೆಗೆಸಿರುವವಳು; ಮಡಿಹೆಂಗಸು: ವಿಧವೆಯರನ್ನು ಕುರಿತು ಹೇಳುವಾಗ ಕೆಲವರು ಅಗೌರವದಿಂದ ಮುಂಡಮೋಪಿ ಎಂದು ಹೇಳುವುದುಂಟು (ರೂಢಿ).

[ದೇ.॥ ತಮಿ. ಮುಣ್ಡೈಮೋಪ್ಪಿ; ತೆಲು. ಮುಂಡಮೋಪಿ]

**ಮುಂಡರಾಷ್ಟ್ರ** (ನಾ). ಒಂದು ನಾಡಿನ ಹೆಸರು: ಧರ್ಮ್ಮಯುವ ಮಹಾರಾಜ (ಜಸ್ಯ) ಶ್ರೀವಿಷ್ಣುಗೋಪವರ್ಮ್ಮಣೋ ವಚನೇನ ಮುಣ್ಡರಾಷ್ಟ್ರೇ ಉರುವುಪಲ್ಲಿಯೇ ಗ್ರಾಮೇ ಯಕಾ:(ಕಾ) ವಕ್ತವ್ಯಾಃ (ಇಇ. V, ೩೦-೦೬; ೫ನೆಯ ಶ). [ಸಂ.]

**ಮುಂಡಲೋಹ** (ನಾ). ಕಬ್ಬಿಣ; ಉಕ್ಕು: "ಕೃಷ್ಣಲೋಹಂ — ಕಬ್ಬುನ, ಅಯಸ್ಕಾಂತ, ಮುಂಡಲೋಹ" (೬ಕಂ. ೩೮). [ ಸಂ. ]

**ಮುಂಡಾ** (ನಾ). ದ್ರಾವಿಡವರ್ಗಕ್ಕೆ ಸೇರಿದ ಭಾರತದ ಮೂಲನಿವಾಸಿಗಳಲ್ಲಿಯ ಒಂದು ಜನಾಂಗ ಮತ್ತು ಅವರ ಭಾಷೆ: ಆರ್ಯರು ಇಲ್ಲಿಗೆ ಬರುವ ಮುನ್ನ ಇದ್ದ ಜನಾಂಗ ಮುಂಡಾಭಾಷೆಯನ್ನು ಆಡುತ್ತಿದ್ದಿರಬಹುದು (ಪ್ರಾಐ. ೨೬).

**ಮುಂಡಾಟ** (ನಾ). ಮುದ್ದಾಡುವಿಕೆ; ಪ್ರೀತಿಸುವಿಕೆ; ಲಲ್ಲೆಗರೆಯುವಿಕೆ: ಮುತ್ತಿನ ಬೊಟ್ಟಿನ ನೊಸಲೊಳು ನವರಸ ಮುಂಡಾಟದ ಕಲೆಯೋ ಅದಱಕೊತ್ತಿನ ನಾಮಾಂಕಿತವೋ (ಶಿವಗೀ. ೦೬೯-೮೦೯); ನೋಟವೆಲ್ಲಂ ಶಂಭುವನೆ ನೋಡುವಿರವು ಮುಂಡಾಟವೆಲ್ಲಾ ಶಂಕರನ ಭಜನೆ (ತಾಂದಪು. ೯-೦೬). 'ಮುದ್ದಾಟ' ಪರಾ. [ < ಮುಂಡಾಡು ]

**ಮುಂಡಾಡು** (ಕ್ರಿ). ೧. ಮುದ್ದಾಡು; ಪ್ರೀತಿಸು; ಲಾಲಿಸು; ಮುದ್ದುಗರೆ: ಕುಂತಿಯೊಡನೆ ಮದ್ರರಾಜನ ಮಗಳ್ ಶಲ್ಯನೊಡವುಟ್ಟಿದ ಮಾದ್ರಿಯುಮನೊಂದೆ ಪಸೆಯೊಳಿರಿಸಿ ಗಾಂಗೇಯಂ ವಿಧಾತ್ರಂ ಮುಂಡಾಡುವಂತೆ ತಾಂ ಮದುವೆಯಂ ಮಾಡಿ (ಪಂಪಭಾ. ೧-೧೦೬ ವ); ಕೊಂಡಾಡುಗೆ

ಕಲ್ಕೊಳದಿಗೆ ಮುಂಡಾಡುಗೆ ಮುದ್ದಿಸುಗೆ ಮರಲ್ದಪ್ಪುಗೆ ಕೈಕೊಂಡೀ ಕಾವ್ಯಮನಗಜೆಯು ಗಂಡನಲಂಪಿಂದೆ ಹಂಪೆಯ ವಿರೂಪಾಕ್ಷಂ (ಗಿರಿಕ. ೦-೦೦); ಕುಲವಂ ವರ್ಧಿಪ ಕಂದನಂ ಪಡೆದು . . . ಮುಂಡಾಡಿಯುಂ ಮುದ್ದಿಸಿಯುಂ . . . ಮನದ ಬೇಸರಂ ಕಳೆವೊಂದು ಸ್ಥೈಪೆನ್ನೊಳೆಂದಿಂಗಾದಪುದೋ (ರಾಶಶ್ಕ. ೦೮-೦೯). ೨. ಚುಂಬಿಸು ; ಮುತ್ತಿಡು : ಮದನಂ ತನ್ನಧಿದೈವದಾಕೃತಿಯನೊಲ್ದಾರಾಧಿಸಲ್ಕೆಂದು ಚಿತ್ರದ ರೂಪಂ ಬರೆದಂಜೆ ಮತ್ತೆ ರತಿ ತತ್ಸೌಂದರ್ಯಮಂ ಕಂಡು ಮೋಪಡಗುರ್ಬಿಂದಮುವೊಯ್ದು ಳಾದೊಡದ ಜೀವಾಂ ರೂಪುಗೆಟ್ಟಪ್ಪೆನೆಂದಿದನುರ್ವೀತಳದೊಳ್ ಪ್ರತಿಷ್ಠಿಸಿದನೆಂದಾ ಕಾಂತೆ ಮುಂಡಾಡಿದಳ್ (ಪಶಕು. ೦೦-೩೯); ಕಾಮಿನಿಯ ಕಡುನೊಂದೆಲಾ ಮುಖತಾಮರಸವನು ತೋಜು ತೋಜೆನುತಾ ಮುನೀಶ್ವರನಪ್ಪಿ ಮುಂಡಾಡಿದನು ನಿಜಸತಿಯ (ಕುಷ್ಮಾಕ. ೯-೦೩); ನೀಜಿನ ಮೊಗದೊಳು ಮೊಗವಿಟ್ಟು ಮುಂಡಾಡಿ ಮಿಾಜಿದ ಚೆಂದುಟಿರಸವ ಹೀರಿ ಓಪ್ಪೆಯ ಮಾಡಿದಲ್ಲದೆನ್ನಯ ಜಿಹ್ವೆ ಮೇರೆಗೆ ನಿಲದೆಲೆ ಕೆಳದಿ (೯ಂಸಶಿ. ೯-೦೦೯). ೩. (ಪ್ರೀತಿಯಿಂದ) ನೇವರಿಸು ; ಮುಟ್ಟು ; ಸೋಕು : ತುಂಗಸ್ತನಂ ಮಂಜರಿಯೋಳ್ ಮುಂಡಾಡೆ ಕಣ್ಗಳ್ಪೆರಸೆ ಕುಸುಮದೊಳ್ . . . ಪೂಗೊಯ್ದುಳೊರ್ವಳ್ (೦ಅಶಕ. ೦೩-೭೦); ಮುಗಿಲಂ ಮುಂಡಾಡುವಂತಿರುದ್ದಮಾದ ಪಲತೆಜದ ಕುಜಂಪಿನ ವಿಶ್ರ್ಹ ಪಟಂಗೆಗಳ ಗಾಳಿ ಗಾಳಿವಟ್ಟೆಯೊಳ್ ನಡೆವ ಪಗಲೊತೆಯುನ ಕುದುರೆಯ ಸೇದೆಯುಂ ಪಿಂಗಿಸೆಯುಂ (ಕಿಚ್ಚಾ. ೨೮೮); ಪ್ರಳಯದಲಿ ಸಾಗರದ ತೆರೆ ಮುಂಡಾಡಿದವು ಸಾಗರದ ತೆರೆಯಲಿ ಸಕಲ ಜಲಧಿಗಳೇಕ ರೂಪದಲಿ ಧರೆಯ ಮುಳುಗಿಸಿ ಮೇಲೆಮೇಲುಬ್ಬರಿಸಿ . . . ನೀರೇಜಾತಗ್ಗದ ಸತ್ಯಲೋಕದಲಿ (ಕುಷ್ಮಾಕ. ೦೯-೦೯). 'ಮುದ್ದಾಡು' ಪರಾ.

[< ಮುದ್ದು + ಆಡು₁]

**ಮುಂಡಾಸ** 'ಮುಂಡಾಸು' ನೋ.

**ಮುಂಡಾಸನ** (ನಾ). ೧. ತಲೆಕೆಳಗಾಗಿರುವಿಕೆ ; ತಲೆ ಕೆಳಗಾಗಿರುವ ಸ್ಥಿತಿ : ಇಳುಪಿದನು ಬಲುಗುಳವ ಖಂಡಿಸಿ ಕಳಚಿದನು ಮೊಗರಂಬವನು . . . ಛತ್ರ ಚಮರಾವಳಿಯ ಸೀಳಿದು ಬಿಸುಟನಾ ಗಜತಿಲಕ ಮುಂಡಾಸನದ ಲಿರ್ದುದು (ಕುಷ್ಮಾದ್ರೋ. ೩-೩೨). ೨. [ನಾಟ್ಯ] ಒಂದು ಬಗೆಯ ಭಂಗಿ : ಮತ್ತಂ ದಿಂಡು ಮುಂಡಾಸನಂ ದಪ್ಪಸರಣ . . . ಲಂಕಾದಹನ ಮೆಂಬ ಪಲವುಂ ತೆಜದ ಕರಣಂಗಳಂ ವಿಚಿತ್ರಮಪ್ಪ ಚಿತ್ರವಿದ್ಯೆಯುಂ ಲಾಸ್ಯ ತಾಂಡವಮೆಂಬೆರಡುಂತೆಜದ ನೃತ್ಯಭೇದದಿಂದಾಡಿ (ರರ್ವಕ. ೨-೨೮ ವ). ೩. [ಯೋಗ] ಕುಳಿತುಕೊಳ್ಳುವ ಒಂದು ನಿರ್ದಿಷ್ಟಭಂಗಿ. [ಸಂ.]

**ಮುಂಡಾಸು, ಮುಂಡಾಸ** (ನಾ). ತಲೆಯುಡುಗೆ ; ರುಮಾಲು ; ಪೇಟ: ಹರಿಕರುಣವೆ ಅಂಗಿ ಗುರುಕರುಣ ಮುಂಡಾಸು ಹರಿದಾಸರ ದಯವೇ ಬೊವಲ್ಲಿ (ಪುರಂದ. ೨-೦೩-೦); ಪಟ್ಟೆಯ ಹಚ್ಚಡ ಧೋತ್ರ ಮುಂಡಾಸನು ಕೊಟ್ಟು (ಗೋಪುರಿ. ೦೭-೦೮); ತಲೆಗೆ ಚೌಕುಳಿಬಟ್ಟೆಯ ಮುಂಡಾಸು ಸುತ್ತಿದ್ದವ ಗ್ರಾಮದ ಹಿರಿಯ ಗೌಡನಿರಬೇಕು (ಸಂಸ್ಕಾಕ. ೮೭). **ಮುಂಡಾಸ:** ಶಿವ . . . ಮಾಸಿದಂಗದಿ ಮಲಿನದಂಗಿ ಮುಂಡಾಸದಿಂದಾ ಸುಮಂದಿರದ ಪೊಜಬಾಗಿಲೊಳು ನಿಂದು (ಶ್ಮಶರಾ. ೬-೩೨); ಹರಿಗೆಗಳನು ಖಂಡಿಸಿ ಬೆನ್ನೊಳಗಿಹ ತರಕಸಗಳ ಹುಡಿಮಾಡಿ ಸಿರದ ಮುಂಡಾಸವ ಸೀಳ್ದಿಕ್ಕಿ ದಗಲೆಯ ಪರಿಪಾಟ ಮಾಡಿದರಾಗ (೯ಂಪಶಿ. ೦೩-೯೬); ಸೀರೆ, ಜರತಾರಿ, ಕಿವಿಯೀದ ಕಾಲ್ಬೆರಳಿನ ತನಕವೂ ಚಿನ್ನಾಭರಣ, ಮುಂಡಾಸ, ಬಾಸಿಗ, ಅಕ್ಷತೆ ಇವೆಲ್ಲವೂ ಮಂಟಪದಲ್ಲಿ ಹಬ್ಬುವ ಹೊಗೆಯಿಂದಾಗಿ ಒಂದು ಹುಣಿಸೆಯ ಕೊರಡಿಗೂ ಚಂದವನ್ನು ಪ್ರೇರಿಸುತ್ತಿರಬೇಕು (ಮೂಕಜ್ಜಿ. ೧೧೧). [←ಹಿಂ. ಮುಂಡಾಸಾ; ಮರಾ. ಮುಂಡಾಸೇ, ಮುಂಢಾಸೇ./ತುಳು. ಮುಂಡಾಸ್]

**ಮುಂಡಿ₁** (ನಾ). ೧. ಬೋಳಿಸಿದುದು : ಬೋಳಾದುದು. ೨. ರೆಂಬೆಗಳನ್ನು ಸವರಿದ ಮರ; ಬೋಳುಮರ. ೩. ಕೊಂಬಿಲ್ಲದುದು ; ಶೃಂಗವಿಲ್ಲದುದು : ಈ ಸುರಕಾಂತೆಯಂ ಮಹಾವೇಗದೆ ಕೊಂಡುಪೋಗಿ ಬಳಿಕಂ ಪರಮುಂಡಿ [ಪಾಠಾಂ. ಮುಂಡೆ]ಯ ಗೋವು ಕೊಂದು ಸಂಸ್ಕಾಗಿಸಿ ಬಿಟ್ಟು ಕೋಮಟಿಗನಂ ಸಲೆ ತರ್ಪುದು ತಳ್ವದಾದೊಡಂ (ಶಾಂತೀಶ್ವ. ೨-೯-೫೦). ೪. ಕ್ಷೌರಿಕ ; ನಾಯಿಂದ ; ಹಜಾಮ : "ಕ್ಷುರಿ ಮುಂಡಿ ನಾಪಿತಂ" (ಶಬ್ದಕೋ. ೬೬-೯೯). ೫. ಒಂದು ಬಗೆಯ ಸಸ್ಯ; ಬೋಳ: "ಬೋಟಚರ ಮುಂಡಿ" (ಜುರ. ಶ. ಶು. ೦); ತಾನಿದೊ ಮುಂಡಿಯು ಮೇಲಕದ್ದಿಹುದು ಮಾನಿತ ಮೂಲಂಗಿ ಮಾಸದಂತಿಹುದು (ಕಣಂತು. ೨೯). ೬. ತಲೆಯನ್ನು ಬೋಳಿಸಿಕೊಂಡವನು ; ಸಂನ್ಯಾಸಿ ; ಯತಿ : ಯಶೋಧರಕುಮಾರಂ ಋಷಿಪುತ್ರನಪ್ಪ ವಜೀಂದ್ರಾಕನ ಪ್ಯಾದುಸರ್ ಮೇಳದಿಂ ಮುಂಡಿಯ ವಂಶಜನೆಯೆಂದು ಕುಮಾರನೊಡನೆ ನಗುವುದು ಜೀಂದದುವೆ ಪ್ರಸಿದ್ಧವಾಗಿ ಮುಂಡಿಯ ವಂಶಮಾದುದು (ರಶರ್ಜ. ೦೦-೦೫೯). ೭. ತುದಿಗಳಲ್ಲಿ ಲೋಹದ ಅಣಸುಗಳಿಲ್ಲದ ಒನಕೆ : (೯). [ಸಂ. ಮುಂಡಿನ್]

**ಮುಂಡಿ₂** 'ಮುಂಡಿಗೆ₁' ನೋ.

**ಮುಂಡಿ₃** (ನಾ). ೧. ಜಮೀನಿನ ಒಂದು ಭಾಗ : ಮಡಿ (?): ಹೊಲದ ಇನ್ನೊಂದು ಮುಂಡಿಯಲ್ಲಿದ್ದ ಬೇಸಾಯ ಇವನ ಕಣ್ಣಿಗೆ ಬಿತ್ತು . . . ತಿರುಗಿ ಇವನಿರುವ ಮುಂಡಿಗೆ ಬರುವವರೆಗೂ ಇವನು ಏನು ಮಾಡಬೇಕು ? (ಸುಸಸಂ. ೯೭). ೨. (?): ತನ್ನ ಕೀರ್ತಿಯಂ ನಿಜುಸಿದಳ್ ಭಾರಂಗಿಯುರ್ಗ್ಗೆ ಮುಂಡ್ಡ ಜೀರ್ಣ್ನರ ಜೋಳಂ ತನ್ನೂರ ನಸ್ವಗೆಜೆಯ × × × ಗೆಗೊಟ್ಟಂ (ಎಕ. VII (೪), ಶಿಕಾ. ೩೬೮-೨೨; ೯೦೭). [ ? ]

**ಮುಂಡಿಗೆ₁** (ನಾ). ಕಟ್ಟು ; ಕಂತೆ ; ಪಿಂಡಿ : ಕಟ್ಟುವರ್ಣಜಿಕೆಯ ನೀವಿಯೊಳಗೆ ಕೈಗಟ್ಟುವರ್ಣಕಣಗಳನು ಕಟ್ಟುವರ್ಧಮ್ಮಿಲ್ಲವೆಲೆಯ ಮುಂಡಿಗೆಯನು ಕಟ್ಟು ಕುಪ್ಪೇಂಬುದಲ್ಲಿ (ಕೋಶತ. ೨-೨೩).

**ಮುಂಡಿಗೆ₂** (ನಾ). ೧. ರೆಂಬೆಗಳಿಲ್ಲದ ಮರದ ಬುಡ ; ಕಾಂಡ : ಬಲವ ಪವಘಟ್ಟಣೆಗೆ ಹೆಮ್ಮರನುಳಿದು ಬಿದ್ದವು . . . ಮುಂಡಿಗೆ ಮುಮುಡಿ ನೆಲಕೊಜಗಿದವು ಮಿಜುಗುವ ನಾಗವಲ್ಲಿಗಳು (ಕುಷ್ಮಾಕ. ೦೮-೪೭); ಎಲೆವಳ್ಳಿ ಮುಂಡಿಗೆಗಳಸಡರಿದುವು (ಕೋಶತ. ೨೯-೩೩). ೨. ಮರದ ದೊಡ್ಡ ತುಂಡು,– ದಿಮ್ಮಿ ; ತೊಲೆ : "ಮುಂಡಿಗೆ–ಮುಂಡಕ–ಕಂಬ, ತೊಲೆ" (ಕರ್ನಕೋ. ೩೭); ಹಾರೆ ಮುಂಡಿಗೆಗಳುಡಿದು ಮದಗಜಂ ಕಡಿದವಲ್ಲದೆ ಕದಂದೆಗೆಯದು (ಕೋಶುಕ. ೯-೬೨); ಆನೆ . . . ದೊಡ್ಡದೊಡ್ಡ ಮುಂಡಿಗೆಗಳನ್ನು ಒಮ್ಮೆಲೆ ಎತ್ತಿ ಇಡುತ್ತದೆ ! (ಕಕಕು. ೯-೬೨). ೩. ಮರದ ಕಂಬ,—ಸ್ತಂಭ : ನಂಜನ ಭೂಮಿಯ ಮೇಲೆ . . . ಮಂಜುಳದ ಮೂಜಿಂಗದ ಮುಂಡಿಗೆಯ ನಟ್ಟು . . . ಏಜಿಸಿದ ಗಳು ಚಿತ್ರಶುದ್ಧವೆಂಬ ಮೂಗುತಿ ಕೋಲಿನಲ್ಲಿ ನಿಂದಿತ್ತು (ಸಶವ. I. ೦೩೬-೩೩೦); ಹೆಬ್ಬಾಗಿಲ ಒಂದೊಂದು ಮುಂಡಿಗೆಯೋ ಐತಾಳರ ಜಬರದಸ್ತನ್ನು ಸಾರುವಂತಿತ್ತು (ದೇಶಹೂ. ೩೩); ಅವರ ಮನೆಯ ಜಗಲಿಯ ದೊಡ್ಡ ದೊಡ್ಡ ಮುಂಡಿಗೆಗಳೇ ಚಿತ್ರಕರ್ಮದಲ್ಲಿ ಆ ಕಲ್ಲುಕಂಭಗಳಿಗಿಂತಲೂ ಮೇಲುಮಟ್ಟದ್ದಾಗಿದ್ದುವು (ಶುರಿಶು. ೫೦೬). ೪. (ಕುದುರೆಗಳನ್ನು ಕಟ್ಟುವ) ಮರದ ಗೂಟ : "ಗೂಂಟಂ ಶಂಕುವಾರಯ್ಕೆ ಮುಂಡಿಗೆ ಸ್ಥಾಣುವೆಂದನಿಸಿಕ್ಕು" (ಶುಂಗರು. ೩೯-೦೩); ಖುರಮಣಿಕೆಯೊಳ್ ಕಾಲನಿಕ್ಕಿ ಮುಂದುಳದ ಮುಂಡಿಗೆಯಂ ಮುಲಂಗಿ ಕೌತುಕಂಬೆರಸು ಕೇಯೂರಕನನೀತಂದಂ (ಕಾದಂಬ. ೦೯೬); ಕೃಶಾನು ಸುತ್ತಿ ಸುಡೆ ಮುಂಮಿರಿವಂ . . . ಮುಂಡಿಗೆಯಂ ಮುಂಜೀದಾಗಳೇಂ ಬಿಸಿಲ್ಗುದುರೆಗಳಂದದಿಂ ಕುದುರೆಗಳ್ ಪಲವುಂ ದೆಸೆಬಿದ್ದ ಮಾದುವೋ (ಶಂಕಾಪು. ೦೦-೦೫೯); ಒಳ್ಗಿಚ್ಚಿನ ಮುಂಡಿಗೆಯಂ ಮ್ರುಚಿದು ವಿಸಟಂಬರಿವ ಸೂಕಳಾಶ್ವಂಗಳನಂಕಣಿಯಂ ಬಗೆಯದೆ ಮುಂಕೊಂಡು ಶಂಕಿಸದೇಜೆ (ರಾಜಶೇ. ೬-೭೦ ವ). [ < ಸಂ. ಮುಂಡಕ ]

**ಮುಂಡಿಗೆ$_3$**, ಮುಂಡ್ಗಿ, ಮುಂಡ್ಗು, ಮುಡಿಗೆ (ನಾ). ೧. ಸವಾಲು; ಸಮಸ್ಯೆ: ಉತ್ತರಗುಡುವವರಿಗೆ ಇಕ್ಕುವೆ ಮುಂಡಿಗೆಯು ಎತ್ತುವರುಳ್ಳರೆ ತೋಱುರ್ಕೈ (ಬೀರಾಶ. ೬-೫); ಜಗಕ್ಕೆ ಇಕ್ಕಿದೆ ಮುಂಡಿಗೆಯನೆತ್ತಿಕೊಳ್ಳಿ, ಕೂಡಲ ಸಂಗಯ್ಯನೊಬ್ಬನೇ ದೈವವೆಂದು (ಬಸವ. ೭೯೬); ಇಕ್ಕಿದೆನು ಮುಂಡಿಗೆಯ ದಿಕ್ಕು ದಿಕ್ಕಿನೊಳಗೆ ಅಖಂಡೇಶ್ವರನೆಂಬ ಮುಕ್ಕಣ್ಣ ಪರಶಿವನೇ ಘನಘನವೆಂದು (ಅಖಂಡೇ. ೦೨೯-೬೯). ೨. "ವಿಶೇಷಾತ್ಮಾನುಭವವನ್ನು ವಿಶಿಷ್ಟವಾದ ಒಗಟಿನ ರೀತಿಯಲ್ಲಿ ಹೇಳುವದು" (ಸಾಹಿಪ್ರ. iii. ೬೫೩): ಶಬ್ದ ಕಾವ್ಯಗಳಿಗೆಯಲ್ಲಿ ಇಂತಹ ಬಿಡಿಸಲಾರದ ಮುಂಡಿಗೆಗಳು ಸಿಗುವವು (ಶಂಶ. ೬೫); ಕನಕನ ಮುಂಡಿಗೆಯೆಂಬ ಹೆಸರಿನ ಹಾಡುಗಳು ಬೆಡಗಿನ ವಚನಗಳಂತೆ ಸಂಕೇತ ಬಲ್ಲವರಿಗೆ ಗಮ್ಯ, ಉಳಿದವರಿಗೆ ಗೂಢವಾಗಿ ಬಿಡುತ್ತವೆ (ಕಹಾಶ. ೨೯೩). ೩. ತಲೆಯ ಮೇಲೆ ಧರಿಸುವ ವಸ್ತ್ರ; ಶಿರೋವಸ್ತ್ರ: ಮುಂಡಿಗೆ ಮತ್ತು ಮುಡಿಗೆಗಳು ಮೊದಲು ಶಿರೋವಸ್ತ್ರವನ್ನು ಸೂಚಿಸುತ್ತಿದ್ದು ಕ್ರಮೇಣ 'ಸವಾಲು' ಎಂಬ ಅರ್ಥವನ್ನು ಪಡೆದುವು (ಸಂಕೋಶ. ೦೦೪). ಮುಂಡಿ$_2$: ೨. ಕೆಲವು ಸಿದ್ಧಾಂತಗಳನ್ನು 'ಮುಂಡಿ'ಗಳಂತೆ ಅರ್ಥವರಿಯದೆ ಜೀವನದಲ್ಲಿ ಸ್ವೀಕರಿಸಿ ಅದರಂತೆ ನಡೆಯುವವರೂ . . . ಮೂರ್ಖರೆಂದು ಆಗ ನಾವು ಸಪ್ರಮಾಣವಾಗಿ ಸಿದ್ಧಪಡಿಸಿದೆವು (ಜನಪಾ. vii, ಶ್ರನಾವತ). ೪. (?): ಮುಂಡಿಗೆ ಮುಂಡಿ ಕಟ್ಟಿಕೊಂಡ ರುಂಡರಿಗೇಕೆ ಗುರುಪರಭಕ್ತಿ (ಬೀರಾವ. ೩೬-೬೦). ಮುಂಡ್ಗು$_3$: ೪. ಮಿಂಡಾಟವಾಗಿ ಮೆಚ್ಚಿದ ರಂಡೆಯರೊಳ್ ರೆದು ವಿಕೃತಿವೇಷದೆ ಜಗವಂ ಕಂಡ ಜ್ಞಾನಿಯೆನೆಂಬನ ಮುಂಡಿಂಗೊಳಗಾಗದಿಪ್ಪವಂ ಸತ್ಪುರುಷಂ (ಶಬುಶ. ೦೪-೬೮). ಮುಡಿಗೆ: ೧. ಇಕ್ಕಿದಂ ಶ್ರುತಿನಿಚಯ ಮುಡಿಗೆಯ ನಿಕ್ಕಿದಂ ಶಾಸ್ತ್ರಾದಿ ಮುಡಿಗೆಯನಿಕ್ಕಿದಂ ಶೈವಾಗಮಾದಿಯ ವಾಕ್ಯಮುಡಿಗೆಯಿಂದಂ ಚಿಕ್ಕನೆತ್ತವೊ ನಿನ್ನ ದೈವಂ (ಶಾಪಂತ. ೯-೦೨೨); ಮುಡಿಗೆಯಂ ಹಾಯ್ಕಿದೇಂ ಬಂದಂಜದೆನ್ನೊಳಗೆ ನುಡಿಯಲರ್ಪವರುಂಟೆ (ಚೀಕೃಕ. ೪-೦೦-೮); ಮುಂಗುರಿರಾಯನೊಡ್ಡಿದ ಮುಡಿಗೆ ಬಾದುರಖಾನನ ಕೊರಳಿಗುರುಳಾಗುತ್ತದೆ (ಕಂಜಾಂಡ. ೫೭). ೨. ಮುಡಿಗೆಯಿದು ಮುಕ್ತಿ ಕಾರಣ ಭಕ್ತಿಯೆಂಬುದಕೆ ಮುಡಿಗೆಯಿದು ಶಿವಭಕ್ತರೇ ಶ್ರೇಷ್ಠರೆಂಬುದಕೆ (ಶಾಶಿಶ. ೦೪-೧೦೮). ೩. ಮುಂಡಿಗೆ ಮತ್ತು ಮುಡಿಗೆಗಳೆರಡೂ ಸಮಾನಾರ್ಥಕಗಳು. ಎರಡಕ್ಕೂ ಟೊಪ್ಪಿಗೆ ಅಥವಾ ತಲೆಯ ಮೇಲಿನ ಉಡುಪು ಎಂಬುದು ಮೂಲಾರ್ಥ (ಸಂಕೋಶ. ೦೦೩); ಈ ಮುಡಿಗೆಯ ಅಷ್ಟಕ ಮುಗಿಯುತ್ತಲೆ ಕೆಳಗೆ ಬಿದ್ದಿದ್ದ ಮುಡಿಗೆ ಹರಿಹರನ ಶಿರಸ್ಸನ್ನು ಅಲಂಕರಿಸಿತಂತೆ (ಶಠಶ. ೫೪೭).

**ಮುಂಡಿಗೆಯಿಕ್ಕು**, ಮುಡಿಗಿಕ್ಕು. ಮುಡಿಗೆಯಿಕ್ಕು = ಸವಾಲು ಹಾಕು; ಸಮಸ್ಯೆಯನ್ನು ಒಡ್ಡು: ಭೂಪಾಲಮಸ್ತಕದ ಮಕುಟವನು ಉತ್ತಮ ತೆಗೆದಿಟ್ಟ ಭಾವ ಇತ್ತುದು ಕಣ್ಗೆ ತನ್ನಪೊಲಾರಿಲ್ಲೆಂದೆತ್ತಿ ಮುಂಡಿಗೆಯಿಕ್ಕಿದಂತೆ (ಅಪಂಕ. ೪-೩೫); ಅಂತು ವಿಜಯನಶ್ವಗ್ರೀವನ ಮಗನಪ್ಪ ವಿಪುಳಕಂಠನು ತನ್ನವಾರ್ಯವೀರ್ಯಕ್ಕೆ ಮುಡಿಗಿಕ್ಕುವಂತಿಕ್ಕ (ಶಾಂತಿಪು. ೫-೫೫ ವ); ತಡವೇಂ ಪೂಣ್ಕೆಗೆ ದಿವ್ಯಂಬಿಡಿವೆಂ ರುಕ್ಮಿಣಿಯೊಳಲ್ಲದಿಂ ಹರಿ ಮಜ್ಜವಂ ಗಡ ಸತ್ಯಭಾಮೆಗೆಬಗಂ ಮುಡಿಗಿಕ್ಕಿದನಾರ್ಪರೆತ್ತಿಕೊಳ್ಳಂ ಸಭೆಯೊಳ್ (ಜಗಮಿ. ೦೨-೭೪); ಮುಂದೆ ತಿಸುಳಿಯಂ ಗೆಲ್ವುದರ್ಕೆ ಮುಡಿಗಿಕ್ಕುವಂತೆ ನಿಡುಗೈಗಳಂ ಮುಡಿಗಿಕ್ಕಿ ನಡೆದು (ಕಬ್ಬಿಗಾ. ೨೩೨); ಕಾಮನೊಡ್ಡೋಲಗದೊಳ್ ಮುಡಿಗೆಯುಕ್ಕಿಯುಂ ಕೈಯನೆತ್ತಿ ಪೊಗಳ್ದಂ ತಣಿಯನೆ ಮಧುಸ್ಮಪಂ ಮಲ್ಲಿಗೆಯಂ (ಅದಿಪು. ೦೦-೦೨೫); ಸುದತಿಗೆ ಪೆಱತೊರ್ವಳ್ ಹೇಮದಾಮಕಮನೀಯಚಂಚಚ್ಚಾಮರಮಂ ಮುದದಿಂದ ಮಿಕ್ಕಿದರ್ ಪರ್ಚಿಸಿಮೊಸಗೆಗವಯವದೆ ಮುಡಿಗೆಯಿಕ್ಕುವ ತೆಱದಿಂ (ಸುಕುಶಾ. ೦೦-೦೬). ಮುಂಡಿಗೆ ಹಾಕು = ಮುಂಡಿಗೆಯಿಕ್ಕು: ಪರದೈವವೇ ನೀನೆ ಭೂಪನ ಜೀವನ ಪರಮಗುರುವಾದರೆ ಎನ್ನ ನುಡಿಗಳು ನಿಲ್ಲಲೆಂದು ಶರಣನಿಗೋಸುಗ ಮುಂಡಿಗೆ ಹಾಕಿದರು (ಬೋಕ್ಷರಂ. ೩-೨). [?]

**ಮುಂಡಿಗೆ$_4$**, ಮುಂಡಂಗಿ, ಮುಂಡುಗ (ನಾ). ಕೇದಗೆ ಜಾತಿಗೆ ಸೇರಿದ ಒಂದು ಬಗೆಯ ಸಸ್ಯ: ಮುಂಡಿಗೆ ಒಲಿಯ ಚಾಪೆ, ತಲೆದಿಂಬು, ಜಮಖಾನೆ ಜಗುಲಿಗೆ ತಂದಿಟ್ಟರು (ಶಾಲಗ. ೦೭). ಮುಂಡಂಗಿ: ಹಯನಿಕರದ ಕಜ್ಜಗೆ . . . ಮುಂಡಂಗಿಯ ಮಸಿಯೊಡನಿರದೆಳ್ಳೆಣ್ಣೆಯನೆಱೆ ತುಱುಯಿನಿಸುಮಿಲ್ಲದಂತಿರೆ ಪೋಕಂ (ಲೋಕೋಪ. ೯-೨೯೦). ಮುಂಡುಗ: ಗಡಿ ಬೇಲಿಯ ಮುಂಡುಗದ ಓಡಲಿನಲ್ಲಿ ಕಣ್ಮರೆಯಾಗಿದ್ದ ಕಾಲುದಾರಿಯ ಸಮೆದ ನುಣ್ಪನ ಬೂದುಬಣ್ಣದ ರೇಖೆ . . . ಪ್ರಧಾನವಾಗಿತ್ತು (ಮರಳು. ೪೩); ಮುಂಡುಗ, ಬೆತ್ತ ಜಿಂಜರಗಿ, ಮುಕ್ಕಡಕ ಮುಂತಾದ ಗಿಡುಬಳ್ಳಿ ಪೊದೆಗಳಿದ್ದವು (ಕುಜಕಂ. ೨). [<ಸಂ. ಮುಂಡಿಕಾ./ತಮಿ. ಮಣ್ಟಕಮ್; ತುಳು. ಮುಂಡಗೆ, ಮುಂಡಿಗೆ, ಮುಂಡೆಯಿ; ಕೊಡ. ಮುಂಡೆ]

**ಮುಂಡಿತ** (ಗು). ೧. ಕ್ಷೌರಮಾಡಿದ; ಬೋಳಿಸಿದ: ನಿನ್ನೊಡನೆ ಹುತವಹನ ಹೊಗುವೆವು ಮನ್ನಣೆಯ ಮಾತಲ್ಲ ನಿನ್ನಂ ಮುನ್ನ ಮುಂಡಿತ ಶಿರವಲೆಸುವೆವು ತೀರ್ಥಯಾತ್ರೆಯಲಿ (ಕುವ್ಯಾಕ. ೨೦-೫೦). ೨. ಕತ್ತರಿಸಿ ಹಾಕಿದ. ೩. ಕೂದಲು ಬೆಳೆಯದ; ಬೋಳಾದ. ೪. ರೆಂಬೆಗಳನ್ನು ಕಡಿದ, -ಸವರಿದ. (ನಾ). ೫. ತಲೆಯನ್ನು ಬೋಳಿಸಿಕೊಂಡವನು: ಮುಂಡನ ಮಾಡಿಸಿಕೊಂಡವನು: ಮುನಿಯಾಗಿ ಮುಂಡಿತನಾಗಿ ದಾದೊಡಂ ಸಂಜೆಸಂಜೆಯೊಳೋರೊಂದು ಮನೆಗಳಲ್ಲಿ ಭಿಕ್ಷೆಯಂ ತಿರಿದುಂಡಾದೊಡಮೀ ದೇಹಮಂ ತೊಲಗಿಸಿ ಬಿಡುವೆನು (ಹಾರಣಾಂ. ೪೦). ೬. ತಲೆಯ ಮೇಲೆ ಕೂದಲು ಬೆಳೆಯದವನು; ಬೊಕ್ಕತಲೆಯವನು: "ಮುಂಡಃ, ಮುಂಡಿತಃ - ೨ ತಲೇ ಮೇಲೆ ಕೂದಲು ಬೆಳೆಯದ ಬೋಳು ತಲೆಯವನು" (ಸಿದ್ಧಾಂತಿ. ೦೬೨). [ಸಂ.]

**ಮುಂಡಿಸು**, ಮುಂಡಿಸು$_1$ (ಕ್ರಿ). ೧. ಕತ್ತರಿಸಿಹೋಗು; ತುಂಡಾಗು: ತೊಡೆಗಳು ಮುಱಿದು ಬಿಡದೆ ಕೈಕಾಲು ಮುಂಡಿಸಿ ರಿಪುಬಲ ನೆಱೆ ಮಡಿದುದು ರಣಭೂಮಿಯೊಳಗೆ (ಕಂಠಪ. ೩-೯೪). ಮುಂಡಿಸು$_1$: ೨. ಮೊಂಡತನಮಾಡು; ಹಟಹಿಡಿ: ಕೆಲಕೆ ಚಿಮ್ಮುವ ಮುಂಡಿಸಿ ನೆಗೆವ ಮುಂಡಿಸಿ ನಿಲ್ವ . . . ಸುಕಳಾಶ್ವಮಂ ಬೇಗದಿಂ ಬೆಂಗೆವಾಯ್ದು (ಗಂಗ. ೨-೧೦೫ ವ). ೩. (ಅಲಂ) ವಿರೋಧಿಸು; ಪ್ರತಿಭಟಿಸು: ಮಹಾಸಾಗರಕೆ ಮೀನ ಮುಂಡಿಸಿದವೋಲು . . . ಪರಬಲಾಂತಕ ಭೀಮ ನಿಂದನು ತಱುಬಿ ಪರಬಲವ (ಕುವ್ಯಾಕ. ೦೫-೮); ಬಲವೆರಡಾತ್ರಾದಸುರಾವಳಿ ಸುರಾವಳಿ ಪೂರ್ವಯುಗದಲಿ ಮಲೆತು ಮುಂಡಿಸಿದಂತೆ ತೋಟಿಯ ತೋಳ ತೀಟೆಯಲಿ (ಕೂರಣಾ. ೯-೦೯-೩೨). [ಮುಂಡು$_2$ + - ಇಸು$_3$]

**ಮುಂಡೀಚಲು** (ನಾ). ಒಂದು ಬಗೆಯ ಈಚಲುಮರ: "ಗರ್ಗರಃ- ಕೋಲುಮೀನು, ಕಬ್ಬೋರಿ, ಕಱುಯೇಲಕ್ಕಿ. ಮುಂಡೀಚಲು" (೬ಶಧ. ೪೫). [ಮುಂಡು$_?$ + ಈಚಲು$_1$ (< ಈಂಚಲ್)]

**ಮುಂಡು$_1$**, ಮುಂಡ$_1$ (ನಾ). ೧. ಸೊಂಟಕ್ಕೆ ಸುತ್ತಿಕೊಳ್ಳುವ ವಸ್ತ್ರವಿಶೇಷ; ದಟ್ಟಿ: ಪೊಳೆವ ಬಚ್ಚಣೆಯ ಹಂಗೆ ಬಿಚ್ಚುಗತ್ತಿಯ ಹೊಳೆವ ಕಟಿಯ ಮುಂಡುಗಳ ಬಲಗಳ ಮಧ್ಯದೆ ಸರ್ಪಸಂಭ್ರಮದೊಳು ಮಳೆಯಾಳ ದವನೀಶ ಬಂದ (ಕಂಠಪ. ೨೦-೬೫); ಒಂದೊಂದು ಪ್ರಾಂತದಲ್ಲಿ ಒಂದೊಂದು ಸಂಪ್ರದಾಯವಿದೆಯೆಂದೇ ಹೇಳಬೇಕು . . . ಮಂಗಳೂರಿನ ಮುಂಡು, ಕೊಲ್ಹಾಪುರದ ಪಾವುಡ ಇತ್ಯಾದಿ (ಮುಂಗಾರು. ೨೩). ೨. ತಲೆಯುಡುಗೆಯಂತೆ ಬಳಸುವ ಚಿಕ್ಕವಸ್ತ್ರ: (೬). ಮುಂಡ$_1$: ೧. ನಾಯರರ . . . ಗಂಡಸರೂ ಹೆಂಗಸರೂ ಒಂದೆ ಪ್ರಕಾರವಾಗಿ ಮುಂಡವೆಂಬ ವಸ್ತ್ರವನ್ನು ನಡುವಿಗೆ ಸುತ್ತಿಕೊಳ್ಳುತ್ತಾರೆ (ಕಥಾಗ. ೦೦೫).

ಮುಂಡುಪಂಚೆ = ದಟ್ಟಿವಸ್ತ್ರ : ಮುಂಡುಪಂಚೆ ಸುತ್ತಿದ ಅವನ ರೂಪು ಆಕರ್ಷಕವಾಗಿತ್ತು (ಬಾಳ್ವೆ. ೯೩).

[ದೇ.॥ ತಮಿ. ಮಲ. ಮುಣ್ಟು; ತುಳು. ಮುಂಡು ; ಕೊಡ. ಮುಂಡ್, ಮುಂಡಿ :. ಕೋತ. ಮುಂಡ್./ಮರಾ. ಮುಂಡೆ]

**ಮುಂಡು₂**, **ಮೊಂಟು₂**, **ಮೊಂಡ**, **ಮೊಂಡು**, **ಮೊಣ್ಣ**, **ಮೊಣ್ಣು** (ನಾ). ೧. ರೆಂಬೆಗಳನ್ನು ಕತ್ತರಿಸಿದ ಮರದ ಕಾಂಡ ; ಬೋಳುಮರ: ಹೆಗ್ಗಡೆಯವರು . . . ಕಡಿಸಿದ್ದ ಒಂದು ದೊಡ್ಡ ತೇಗದ ಮರದ ಮುಂಡು ನಿಂತಿದ್ದನ್ನು ನೋಡಿ ಅವರ ಸಂಬಂಧದ ಒಂದು ಕಥೆಯನ್ನೆ ಹೇಳಿದರು (ಮಲೆಮ. ೩೯೦). ೨. ರುಂಡವಿಲ್ಲದ ದೇಹ ; ಮುಂಡ : ತಲೆವೊಂದೆಸೆಯಾಗಿ ಮುಂಡೊಂದೆಸೆಯಾಗಿ ನೀ ಬಿಳ್ದಿರ್ದ ಕಂದನ ಪೋಲ್ವೆಯ ಪುತ್ಥಳಿಯನು ತೋಱಲು (ಕೃಕಂಜ. ೨-೦೦೩); ೩. ತಲೆ ; ರುಂಡ : ಸಿಡಿಲ ಬಳಗಂಗಳಂ ಬಱಸಿಡಿಲ ಚಯಂ ಪೊಯ್ವ ತೆಱದೆ ವಾಹಕ ರಂದಿರ್ಪಡೆಯವರ್ಗಳೊಡನೆ ಪೊಯ್ದರ್ ಕಡಿಖಂಡಂ ದಿಂಡು ಮುಂಡು ಮುರುಳೆ ಪೆಣಂಗಳ್ (ಜೀಬಂಕ. ೦೧-೦೬೧). 'ಮುಂಡುಮುಟುಕ' ಪರಾ. ೪. ತುಂಡು; ಚೂರು : ಅವರಿಗೆ ಜೋಬಿನಲ್ಲಿದ್ದ ಸಿಗರೇಟು ಮುಂಡು ಏಕೋ ಕೈಹಾಕಿದಾಗ ಸಿಕ್ಕಿಬಿಟ್ಟಿತು (೧೦ಶಾ. ೪೧) ; ಹಡಿಗೆಗೆ ದಾರ ಬಿಗಿಯುತ್ತಿದ್ದ ಸೀನನ ಬಾಯಲ್ಲಿ ಬೀಡಿಯ ಮುಂಡಿತ್ತು (ದೇವಕಂ. ೦೯೦); 'ಮುಂಡುವೋಗು' ಪರಾ. ೫. ಒಂದಾಳು ಎತ್ತರದಷ್ಟು ಅಳತೆ ; ಪುರುಷಪ್ರಮಾಣ : ನಾವು ಯಾನ ಮಾಡಿ ಬಂದ ಭೂಮಧ್ಯ ಸಮುದ್ರದ ಆಳ ಸಾಧಾರಣ ೧,೨೦೦ ರಿಂದ ೧,೪೦೦ ಮುಂಡುಗಳಷ್ಟಾಗ ಬಹುದು (ಕೃವಾಸಿ. ೦೩). ೬. ಮರದ ಕಂಬ. ಸ್ತಂಭ. (ಗು). ೭. ಹಠಮಾರಿಯಾದ ; ಹಿಡಿದ ಪಟ್ಟುಬಿಡದ : 'ಮುಂಡುಕಾಱ' ಪರಾ. **ಮೊಂಟು₂** : ೮. ಗಿಡ್ಡಾದುದು ; ಮೋಟಾದುದು : ಮೊಂಟಾಗಿ ಕೈಗಳೆರಡುಂ ಗೆಂಟಾಗಿರೆ ತನಗೆ ಸಿರಿಯು ಕೂಟುಂ ಕಾಲುಂ ಕುಂಟಾಗಿ ನವೆಯುತಿರ್ಪರ್ ಟೆಂಟಣಿಸಿ ಮಹಾತಪಂಗಳಂ ಕಿಡಿಸಿದವರ್ (ಧರ್ಮಾಮೃ. ೬-೦೯೦). ೯. ಹರಿತವಿಲ್ಲದ : ಮೊಂಡಾದ : ತರ ತರಹದ ಮೊಂಟು ಆಯುಧಪಾಣಿಗಳಾದ ಹಳ್ಳಿಯ ತರುಣರು . . . ತಮ್ಮ ತಮ್ಮ ಕೈಗಳನ್ನು ಬರಿದುಮಾಡಿಕೊಂಡರು (ಕಾಪ. ೩೨). **ಮೊಂಡ**: ೭. ಆ ಮೊಂಡ ಹುಡುಗಿ ಯಾರ ಮಾತನ್ನೂ ಕೇಳುವುದಿಲ್ಲ (ರೂಢಿ). ೯. ಮೊಂಡ ಕೊಡಲಿ ರೆಟ್ಟೆಗೆ ಮೂಲ (ಗಾದೆ). 'ಮೊಂಡಗತ್ತಿ' ಪರಾ. ೧೦. ಯಾವು ದಕ್ಕೂ ಜಗ್ಗದ₂ – ಸಗ್ಗದ : ಬಡ್ಡಿಯು ತಪ್ಪದೆ ಪ್ರತಿವರ್ಷ ಬರುತ್ತಿದ್ದಿತು. ಅದರಲ್ಲಿಯೂ ಒಬ್ಬೊಬ್ಬ ಮೊಂಡ ಸಾಲಗಾರರಿದ್ದರೆಂದು ಮರೆಯಲಾಗದು (ಜಯಂತ. ೪೨೬). ೧೧. ಹರಿತವಿಲ್ಲದುದು ; ಮೊನಚಿಲ್ಲದುದು : ಬಡ್ಡು : ಈ ಕತ್ತಿಯು ಬಾಯಿ ತುಂಬ ಮೊಂಡ (ರೂಢಿ). ೧೨. ಮೋಟಾದ ಅಂಗಗಳುಳ್ಳವನು ; ಅಂಗವಿಕಲ : ಮೂಕನು ಮೊಂಡ ಲಂಡ ಕಿವುಡಂ ಚಂಡಾಲ ತಾನಾದೊಡಂ . . . ಒಲಿವರ್ ಪೊನ್ನಿತ್ತೊಡಂ ಸೂಳೆಯರ್ (ಸೋಮೇಶ. ೭೦); ಬಾಲವನಕಾಲದಲಿ ಬಿಂಡಿಸಿದೆ . . . ಹಂದಿ ಕೋಳಿಗಳು ಬಳಿಸಂದು ಕಿಲಕಿಲನೆ ನಗರೇ ಮೊಂಡನೆಂದು (ಕುಕ್ಕು. ೪೨-೨). ೧೩. ಹಠಮಾರಿತನ ; ಶಠಸ್ವಭಾವ : 'ಮೊಂಡತನ', 'ಮೊಂಡಾಟ' ಪರಾ. ೧೪. (ಆಲಂ) ಪರಿಣಾಮ ವನ್ನು ಕಳೆದುಕೊಂಡುದು ; ಸತ್ವಹೀನ ; ಸಪ್ಪೆ : ಅವರ ತಲೆ ಬೋಳಿಸಿ, ಕೈಗೆ ಕೋಳಗಳನ್ನೂ ಮೈಗೆ ಜೈಲುಬಟ್ಟೆಗಳನ್ನೂ ತೊಡಿಸ ಲಾಯಿತು . . . ಒಟ್ಟಿನಲ್ಲಿ ಅವರ ಬಾಳು ಹರಿತವಾಗುವುದರ ಬದಲು ಮೊಂಡವಾಯಿತು (ಕೃಪರು. ೩೩೦). **ಮೊಂಡು** : ೧೩. 'ಮೊಂಡು ಗರೆ'. 'ಮೊಂಡುತನ' ಪರಾ. ೧೪. ಗಿಡ್ಡಾದ; ಮೋಟಾದ : ಒಂದು ಕಣ್ಣೊಂದು ಕಾಲ್ಕುಂಟು ಹಱಗಿವಿ ಮೊಂಡು [ಪಾಠಾಂ. ಮೊಣ್ಣ]ಬಾಲ (ಸಮ್ಯಕ್. ೨-೬೭); ಮೊಂಡು ಕಸಬರಿಗೆಯನ್ನು ತೆಗೆದಿಟ್ಟಿದ್ದೇನೆ (ದೇವೀಪ್ರ. ೦೬೦). **ಮೊಣ್ಣ** : ೧೨. ಮೂವಣ್ಣದಣ್ಣಗಳನು ಮೊ[ಪಾಠಾಂ. ಪೆ]ಣ್ಣ ಮಾಡಿಯೆ ಹಿಡಿತಹೆನು (ತ್ರಿಷಷ್ಟಿಸಂ. ೨೨-೦೩). **ಮೊಣ್ಣು** : ೮. ತಾಗಿದ ಕೈಯ್ಯ ಮೊಣ್ಣಾಗುವಂತೆ ಮಾಡುವುದುಚಿತಮೇ (ಸಮ್ಯಕ್. ೦೦-೩೩).

ಮೊಂಡುಬೀಳು= ಹಟಮಾಡು ; ಪಟ್ಟುಹಿಡಿ : ಹೀಗಾಗುತ್ತೆ ಅಂತ ನನಗೆ ಗೊತ್ತು. ಹೋಗೊಲ್ಲ ಅಂತ ಮೊಂಡು ಬಿದ್ದೆ (ಚಿವಾ. ೩೮).

[ದೇ.॥ ತಮಿ. ಮುಣ್ಟು. ಮೊಣ್ಟು. ಮೊಣ್ಣೈ : ತುಳು. ಮುಂಟು. ಮೋಂಟು; ಗೊಂಡಿ. ಮೊಟ್. ಸಂ. ಮುಂಡ]

**ಮುಂಡು₃** ' ಮುಂಡಿಗೆ₃' ನೋ.

**ಮುಂಡುಕಾಱ** (ನಾ). ಹಿಡಿದ ಪಟ್ಟು ಬಿಡದಿರುವವನು ; ಧಾರ್ಷ್ಟ್ಯವುಳ್ಳ ವನು : ಅಟಗಾಱಂ, ಮುಂಡುಕಾಱಂ, ಅರಮನೆಕಾಱಂ (ಶಬ್ದಾನು. ೦೬೭ ಸೂತ್ರ); ನುಡಿಕಾಱಂ, ಆಟಕಾಱಂ, ಮೋಸಕಾಱಂ, ಮುಂಡುಕಾಱಂ . . . ಮುಂಡು ಇತಿ ಧಾರ್ಷ್ಟ್ಯಂ (ಕನ್ನಸು. ೪೨೩ ಸೂತ್ರ).

[ಮುಂಡು₂ + – ಕಾಱ]

**ಮುಂಡುಗ** ' ಮುಂಡಿಗೆ₄ ' ನೋ.

**ಮುಂಡುಗಳ್ಳಿ** ' ಮುಂಡಗಳ್ಳಿ ' ನೋ.

**ಮುಂಡುಮಾಳಿಗೆ** (ನಾ). ಮನೆಯ ಮೇಲ್ಛಾವಣಿಗೆ ಹೊಂದಿಕೊಂಡಿರುವ ಕೋಣೆ ; ಅಟ್ಟದ ಕೋಣೆ : (ಕಿಸಂಗ್ರ. ೯೩). [ಮುಂಡು₂ + ಮಾಳಿಗೆ₁]

**ಮುಂಡುಮುಳಕ** ' ಮುಂಡುಮುಟುಕ ' ನೋ.

**ಮುಂಡುಮುಳ್ಕುಗ** ' ಮುಂಡುಮುಟುಕ ' ನೋ.

**ಮುಂಡುಮುಟುಕ**, ಮುಂಡುಮುಳಕ, ಮುಂಡುಮುಳ್ಕುಗ (ನಾ). ತಲೆಯನ್ನು ಆಗಾಗ ನೀರಿನಲ್ಲಿ ಮುಳುಗಿಸುವ ಒಂದು ಬಗೆಯ ಜಲಪಕ್ಷಿ ; ಗುಂಡುಮುಳುಕನ ಹಕ್ಕಿ : "ಪ್ಲವ ಎಂದು ಮುಂಡು ಮುಟುಕ ; ನೀರುಗೋಟೆಯೆಂದೂ ಎಂಬರು" (ನಾಚಿರಾ. ೬). **ಮುಂಡು ಮುಳಕ** : "ಆತಾಪಿಃ . . . ಚಿಲ್ಲಃ— ೨ ಮುಂಡುಮುಳಕನ ಹಕ್ಕಿ ಹೆಸರು" (ಸಿದ್ಧಾಂತ. ೧೩೯). **ಮುಂಡುಮುಳ್ಕುಗ** : ನೀರುಕೋಳಿ ಮುಂಡು ಮುಳ್ಕುಗ ಸಮುದ್ರದ ಕಾಗೆಗಳು ಇವು ಮೊದಲಾದ ಜಲಪಕ್ಷಿಗಳಿಂದಲೂ (ಕೃವಾಸ. ೩೦). [ಮುಂಡು₂ + ಮುಟುಕ]

**ಮುಂಡುವೋಗು** (ಕ್ರಿ). ತುಂಡಾಗು ; ಕತ್ತರಿಸಿಹೋಗು : ಆಗಳಿರ್ವಲವ ಕಡಿತಲೆಕಾಱರಲಗಲಗಿನೊಳ್ ಪಳಂಚೆ . . . ಕುಣಿಲ್ವಾಱುವ ಮುಂಡಮುಂ ಮುಂಡುವೋದ ಕಯ್ಯುಂ ಕಂಡುವೋದ ತೊಡೆಯುಂ ಪಿಸುಟ್ಟಿ ಕಿಟ್ಟೊಡೆಯುಂ ಕಣ್ವೋದ ಕಣಕಾಲುಂ ದೊಣ್ವೋದ ಮೇಗಾಲುಂ . . . ಅಗುರ್ವುವಡೆಯೆ (ಕಂಠೀರವ. ೦೩-೩೯ ವ).

[ಮುಂಡು₂ + ಪೋಗು₁ (< ಪೋ) ]

**ಮುಂಡೆ₁** (ನಾ). ೧. ಗಂಡನನ್ನು ಕಳೆದುಕೊಂಡು ತಲೆಯನ್ನು ಬೋಳಿಸಿಕೊಂಡ ಹೆಂಗಸು : "ವಿಶ್ವಸ್ತಾ, ವಿಧವಾ–ಈ ೨ ಮುಂಡೆ" (ನಾಚಿರಾ. ೦೬೭) ; ಬಱುಗೊಡನೆಣ್ಣೆ ಪಟ್ಟು . . . ಗಳಿತಾಶ್ರು ಮುಂಡೆ ಮೂಕೊಱತಿ ವಿಮುಕ್ತಕೇಶಿಯಿದಿರೊಳ್ ಬರೆ ಕಾಣಲುಮಾಗದು (ಲೋಕೋಪ. ೦೨-೦೦); ಕಂಡಿರೆಯಕ್ಕ ವಿಪರೀತವ ನಿಜಮುಂಡೆ ಮುತ್ತೈದೆ ಯಾದಳು ನೋಡಿರೇ (ಅವತಂ. ೨೯೬. ೦೩೦೦); ನಿನ್ನ ಪತಿಯ ಕೊಂದು ನೀ ಮೊದಲಾದಖಿಲವಲ್ಲಭೆಯರ ತಂದು ಮುಂಡೆಯರ ಮಾಡುವರು (ಅಂಜಿಕ. ೦೪-೭೩೦); ಕಳ್ಳನ ಹೆಂಡತಿ ಎಂದಿದ್ದರೂ ಮುಂಡೆ (ಗಾದೆ). ೨. ಜೈನಸಂನ್ಯಾಸಿನಿ; ಕಂತಿ : "ಶ್ರಮಣಾ, ಭಿಕ್ಷುಕೀ, ಮುಂಡಾ–ಈ ೩ ಕಂತಿ" (ಹಲಾಯು. ೪೦-೩೩೩); ಗೊರತಿಯು ಕಂತಿಯು ಕುಂಟಣಿಯರ ಮುಂಡೆಯು . . . ಸಾದಿತಿಯರ ಮುಂದಂ ನುಡಿಯಲೀಯಲಾಗದು ವಧುವಂ (ಮಲಹ. ೬-೨೭). ೩. ನಡತೆಗೆಟ್ಟವಳು; ಜಾರೆ: ಕೆಟ್ಟ

ದರ್ಪಣದೊಳಿಪ್ಪ ಮುಂಡೆಯುವರ್ಗಸೆಯೊಳಗುಳ್ಳುದಂ ತವಿಸಿ ಗಂಡರಸೇಂ ಕಾಣಿಮಾಡಿ ತಿಂದಪರ್ (ಸಮಶ. ೯-೦೦೩): ಗಂಡನ್ನ ತಾ ಬಿಡುತಿಹಳು ಪರಮಿಂಡನ್ನ ಕೂಡಿ ಲೋಲಾಡುತಿಹಳು. ಮುಂಡೇರು ಹೆಚ್ಚು ಜಗದೊಳು (ಶಿಕಂದ. ೦-೦೯೯-೩).

**ಮುಂಡೆಗಂಡ** = ವಿಧವೆಯ ಪತಿ : ಒಂದು ಬಯ್ಗುಳು : ಸತ್ತ ದನ ದನಕರುಗಳ ಮಾಂಸ ತಿನ್ನುವ ಈ ಮುಂಡೆಗಂಡರು . . . ನಮ್ಮ ಸತ್ವ ಹರಣರಾಗಬೇಕೆ ? (ಹೊಸಊಹ. ೧೯): ಅಯ್ಯೋ ಮುಂಡೇಗಂಡಾ ! ನೀನೂ ನಿಮ್ಮಪ್ಪನಿಗೇ ಅಂತೀಯೋನೋ ! (ರಂಗವ. ೨೨೩). **ಮುಂಡೆಮಗ** = ವಿಧವೆಯ ಪುತ್ರ; ಒಂದು ಬಯ್ಗುಳು : ಮುಂಡೆಮಗನೆ ನಾ ಹೇಳಿವನೆಂದು ಬೈದ್ಯಾಡಿ (ಶದಾಶ. ೦೩೦-೩) : ಎಲಾ, ಮುಂಡೇಮಗನೆ ನಾನು ಈ ವ್ಯಾಪಾರ ಬಿಟ್ಟುಬಿಟ್ಟರೆ ಊಟ ಕೊಡುವುದು ಯಾರು—ನಿನ್ನ ಅಪ್ಪನೋ ? (ಶುಂಗಾಮು. ೪). **ಮುಂಡೇದು** = (ಆಲಂ) ಹೀನವಾದುದು : ಕೀಳಾದುದು : ಅಲ್ಪವಾದುದು : ಮುಂಡೇದು ಈ ನಾಯಿ ದಾರಿಯಲ್ಲೇ ಮಲಗಿದೆ (ಕಶಿ). **ಮುಂಡೆದೈವ** = (ಆಲಂ) ಕೀಳಾದ ದೈವ; ಕ್ಷುದ್ರದೇವತೆ : ಕಂಡದ್ದು ಬಿಡದು ಮುಂಡೇದೈವ (ಗಾದೆ). [ಸಂ. ಮುಂಡಾ]

**ಮುಂಡೆ₂** (ನಾ). ಮಲ್ಲಯುದ್ಧದ ಒಂದು ವರಸೆ (?) : ತಿರುಣ ಕಾಳಾಡೆ ಬಾಹುಗೆಣೆ ಸಂದ ಸುಭಾಹುಡೆ ಮುಂಡೆ ಮುಷ್ಟಿ ಕಮ್ಮರಿ ಮುಹುಡಂ. ಪೋವುಡ ಚಲ್ಲಣಪಟ್ಟೆ ಪಟ್ಟಿಕತ್ತರಿಗಳೆನಿಪ್ಪ ಜಟ್ಟಿಗರ ಬಿನ್ನಣಮೊಪ್ಪೆ ಕಡಂಗಿ ಕಾದಿದರ್ (ತ್ರಿಕುಶಿ. ೨೬-೦೮). [ ? ]

**ಮುಂಡೆತನ** (ನಾ). ಗಂಡನಿಲ್ಲದಿರುವಿಕೆ ; ವೈಧವ್ಯ : ಅಂಗವೆಂಬ ಅಂಗನೆಯು ಆತ್ಮನೆಂಬ ಪುರುಷನಪ್ಪಿ ಮುಂಡೆತನ [ಶಾಶಾಂ. ನು]ವಿಲ್ಲದಿಪ್ಪ ಭೇದವ ತಿಳಿದು ನೋಡಿರಣ್ಣಾ (ಆದವ. ೩೨-೯೪). [ ಮುಂಡೆ₁ + —ತನ ]

**ಮುಂತಳರ್** ' ಮುಂದಳರ್ ' ನೋ.

**ಮುಂತಾಗು₁** ' ಮುಂತು₁ ' ಪರಾ.

**ಮುಂತಾಗು₂** ' ಮುಂತು₂ ' ಪರಾ.

**ಮುಂತಾಸನ** (ನಾ). ಮುಂಭಾಗದಲ್ಲಿರುವ ಆಸನ : ಅಗ್ರಪೀಠ : ದರ್ಶನಸ್ಥರ ಮುಂತಾಸನದಲ್ಲಿ ಕುಳ್ಳಿರಿಸಿಯುವರ್ಗಳ್ . . . ಶಂತಮ್ಮ ದೇವತಾಸ್ಥಿತಿವಾರಮ್ಮಮನುಕರೆ (ಧವ್ಯಶ. ೬-೨೩). [ಮುಂತು₂ + ಆಸನ]

**ಮುಂತಿಕ್ಕು** ' ಮುಂದಿಕ್ಕು ' ನೋ.

**ಮುಂತಿಡು** ' ಮುಂದಿಡು ' ನೋ.

**ಮುಂತಿರ್** ' ಮುಂದಿರ್ ' ನೋ.

**ಮುಂತಿರಿಸು** ' ಮುಂದಿರಿಸು ' ನೋ.

**ಮುಂತು₁**, ಮುಂದು₁ (ನಾ). ೧. ಮುಂಭಾಗ : ಮುಂದುಗಡೆ : ದುಷ್ಟಾಶ್ವದ ಮುಂತುಂ ಪಿಂತುಂ. . . ಬೆಸನಿಯ ನುಡಿಯುಂ ನಡೆಯುಂ ಪೊಲ್ಲ (ದರ್ಪಣಮು. ೯-೦೩೨); ತುಕಾರಕ್ಕೆ– ಮುಂದುಂ. ಮುಂತು; ಪಿಂದು, ಪಿಂತು (ಶಮದ. ೭೨೦ ಪ್ರಯೋ). ೨. ಮೊದಲ ಸ್ಥಾನದಲ್ಲಿರುವಿಕೆ; ಮೊದಲು : ಸಾಮಾನ್ಯಜಗದಾಳ ಮಲೆಯ ತೊತ್ತಳಿಮಳೆವ ಯತ್ನಿದ ಮೊಸಗೆ ಮುನ್ನು ಕಡಿಕಾಳಗಕ್ಕೆ ಪಿನ್ನು (ಎಕ XII. ತಿಪಟೂ. ೦೦೯-೨೩. 1130); ನಾನು ಮುಂತು ನೀನು ಮುಂತು ಕಡಲು ಮೂರು ಮೊರೆವಮಿಂತು (ಸೂರ್ಯಶಾ. ೨೨-೦೦). **ಮುಂದು₁** : ೧. ಆ ಧರಿತ್ರೀನಾಥನತ್ಯಂತ ಹರುಷಾಂತರಂಗನಾಗಿ ಸಿಂಹಾಸನದಿಂದಿಳಿದು ಮುಂದನೇಬಡಿಯಂ ನಡೆದು ಅವರರ್ದ ದೆಸೆಗೆ ಪೊಡೆವಟ್ಟು (ಸುಕುಮಾ. ೬-೯೬ ವ) : ಉರಿಯ ಬಣ್ಣದ ಸೀರೆಯನುಟ್ಟು ಹರಶರಣರೆಲ್ಲರು ಮದುವೆಗೆ ಹೋದರು ನಿಬ್ಬಣಿಗನ ಹಿಂದುಳಿಪಿ ಮದುವೆಯ ಹಬ್ಬ ಮುಂದೊಳಿತ್ತು (ಪೋಳಿಶಾ. ೯೦-೩೧೦); ಕುಮಾರನ ಮುಸುಡ ಮುಂದಕೆ ಬಿದ್ದು ಬದುಕುವುದುಂಟೆ ಭಟನಿಕರ (ಕುಮಾರ್ಯ. ೬-೯೦). ೨. ಅಹಂಪೂರ್ವಿಕಾ . . . ನಾನು ಮುಂದು ತಾನು ಮುಂದುಯೆಂಬುದಾಗಿ ಮೊಡಲ್ಪಡುವ ಕೆಲಸಕ್ಕೆ ಹೆಸರು (ಸಿದ್ಧಾಂತಿ. ೨೩೮): ಕಣ್ಣಿಗೆ ಮುಂದು ಕಡಿವಾಣಕ್ಕೆ ಹಿಂದು (ಗಾದೆ). ೩. ಮೊದಲಿನದು ; ಮುಂಚಿನದು : ನಿರ್ಮಲನಾದ ಶಿಷ್ಯನು ಕಾಯ ಜೀವದ ಭ್ರಾಂತುಸೂತಕ ಹಿಂಗಿ. ನಿಶ್ಶಂಕನಾದ ಗುರು ಈ ಉಭಯ ಭಾವದೊಳಗೆ ಆವುದು ಮುಂದು ಆವುದು ಹಿಂದೆಂದರಿಯಬಹುದು (ಅಶಸಂ. ೨೦೮-೯೨೬); ನೀರ ಕ್ಷೀರದಂತೆ ನೀನಿಪ್ಪೆಯಾಗಿ ಆವುದು ಮುಂದು ಆವುದು ಹಿಂದು ಎಂದರಿಯೆನು (ಬಸವರಾ. ಶ. ೦೩-೦೦). ೪. ಅನಂತರದ ಕಾಲ: ತರುವಾಯದ ಕಾಲ : ನಂಬಿ ಹೋಗೊದು ದೇವಂ ನುಡಿದ ಮಾತಿಂಗೆ ನಂಬಿಯೆಂಬಾ ನಾಮವಾದುವದು ಮುಂದಿಂಗೆ[ಶಾಶಾಂ. ಮುದ್ದಿಂಗೆ] (ಸಂಬಿರ. ೦-೮೬); ಶಿಶುವಿವನು . . . ಎಂದುಳುಹಿದೊಡೆ ರಕ್ಕಸನಹನು ಮುಂದಕೆ ತನಗವನು (ಕುಮಾರ. ೬-೨೮); ಈ ಚಂದ್ರಹಾಸಂ. . . ನಮಗೆ ಮುಂದಕೆ ಸರ್ವಥಾಮಿತ್ರನಪ್ಪಂ (ಜೈಮಿಭಾ. ೩೦-೨೩) : ಮುಂದಿನ ಮುಕ್ತಿಗಿಂತ ಈಗಿನ ಭುಕ್ತಿ ಲೇಸು (ಗಾದೆ). ೫. ಏಳಿಗೆ : ಉತ್ತರೋತ್ತರ : ಭವಿಷ್ಯ : ಹಿಂದಿಲ್ಲಾ ಸ್ವಾಮಿ ಮುಂದಿಲ್ಲಾ ಗೋವಿಂದ ನೀನಲ್ಲದೆ ಇಹಪರವಿಲ್ಲ (ಶಿಕಂದ. ೦-೨೯ ಶಲ್ಲ೬) : ಮುಂದನರಿಯದ ಗುರುವು ಹಿಂದನರಿಯದ ಶಿಷ್ಯ ಸಂದೆರಡುವರ್ಗವರಿಯದಿರ್ದುಪದೇಶ ಕೊಂದು ಕೊಂಡಂತೆ (ಸರ್ವಜ್ಞ. ೯೯): ಕೂಸಿನಾ ಮುಂದು ಎಣಿಸದೆ, ನಿಂದೆ ಗಣಿಸದೆ, ಹಿಂದೆ ಬಂದವಳು ಪಾಪಿಯೂ (ಕುಕ್ಕು. ೯೦ ೩೩).

**ಮುಂತಣ್**, **ಮುಂದಣ್** = ೧. ಎದುರು ; ಮುಂಭಾಗ; ಸಮ್ಮುಖ : ಮತ್ತೊರ್ವಂ ತನಗೆರಡರಿಯದೊಲ್ದು ನಲ್ಲಳನೇತರಿಕೊಳಪ್ಪುಡಮೋವಮಂ ಮಾಡದೆ ಬೇಟಮಂ ಸಲಿಸುವುದರ್ಕೆ ಸಂತಸಂಬಟ್ಟು ಮುಂತಣ್ಗೆ ಕಾವ ನಿಟ್ಟಿಂತೆಂದಂ (ಕಂಶಾ. ೪-೯೨ ವ); ಎನ್ನ ಮುಂತಣಿಂ ತೊಲಗಿ ಪೋಗು (ಕಂಠಾಪೂ. ೦೯-೦೩ ವ): ಮಾಣ್ಗುಟದರ ಮೆಯ್ಮೆಗೆನ ಕಣ್ಗಳ ಕೋರ್ಕೆಸ ತೊಳಗಿ ಬೆಳಗುತ್ತಂ ಮುಂದಣ್ಗಾಗಿ ನಡೆವ ನೃಪನಂ ಜಾಣ್ಕೊಂಡ ನಿಜ ಪ್ರಗಲ್ಭವಚನದೆ ನುಡಿದಳ್ (ಕಾದಂಕಾ. ೬೬೩); ರೈೊಂಪಿಸುತ ಮುಂದಣ ಗೊನೆದು ಬದ್ದನು ಭೀಮ ಪಾಂಡವಸೇನೆ ಕಳವಳಿಸೆ (ಕುಮಾರ. ೩-೨೬): ಮಂತ್ರಲಕ್ಷಂ ಮಿತವಚನಸಮೇತಂ ವಿವಿಧವಿಳಾಸಮಂ ತಳೆದು ಮುಂದಣ್ಗೆ ಬರೆವರೆ (ಆಜಿತ. ೦೩-೯೩ ವ). ೨. ಅನಂತರದ ಕಾಲ ; ಮುಂದೆ ಬರುವ ಕಾಲ : ಸರಸಿಜಾಸನ ಕೇಳು ಸದುದು ವರವವಗೆ ನಿನ್ನಿಂದ . . . ನೊಂದಿರಿ ಹಿರಿದು ನೀವದಱಿಂದ ಮುಂದಣಿಗರಿವಧಾಸಮುಯುಕ್ಕ್ಯಪಾಯುವ ಕೇಳಿ ನೀವು (ಕೃಶರಾ. ೦-೬-೬೩). **ಮುಂತಣ**, **ಮುಂದಣ**, **ಮುಂದಳ** = ೧. ಮುಂಭಾಗದಲ್ಲಿರುವ ; ಮುಂಬದಿಯ : ಬಲಿವು . . . ಮುಂತಣ ಪಿಂತಣೆರ್ಕಲಂಗಳ ಭಟರ್ಗಳ್ಲವೆಲ್ಲೆಡೆಯೊಳಂ ನೆರೆಮಾಂತುದುಮಲ್ಲದಾ ಮಹಾಬಲದನಿಬರ್ಗಮಂತನಿಬರಾಗಿಯೆ ತೋಱಿದನಾಜಿರಂಗದೊಳ್ (ಶಗದಾ. ೬-೩೮) ; ಮುಂತಣ ವಿಪಿನಾಂತರದಲ್ಲಿ ವೀರವಸಂತಪಾದಪನಿಚಯವನು ಸಂತಸಗೊಸರಿಸುತಿರುತಿರೆ ರತಿ ತನ್ನ ಕಾಂತನ ಬೆವರ ನೋಡಿದಳು (ಮೋಹತ. ೯-೩೨) ; ಮುಂದಣ ಮಾನಸರಂ ಪಡಿಯರ್ ತೊಲಗಿಸುತ್ತಂ ಬರೆ (ಪಶ್ಚಾಶಾ. ೬೦-೦೨) ; ಸಾಹಸಭೀಮಂ . . . ಪಾರ್ಥನ ಮನೆಯ ಮುಂದಣ ಬಂಡಿಯ ಕೂಟಂ ಕೆಯ್ಕೊಂಡು ನಿಲ್ವುದುಂ (ಪಂಪಭಾ. ೩-೨೬ ವ). ೨. ಮುಂದೆ ಬರುವ ; ಮುಂದಿನ : ಇಂತಿದನುಪ್ರಾಸಂ ಪಾದಾಂತದೊಳೊಂದಾವುದಾನುಮಿಟ್ಟಕ್ಕರಮಂ ಮುಂತಣ ಪಾದಾಂತಂಗಳೊಳಂ ತಡೆಯದೆ ಪೇಳ್ದೊಡಂತದಂತಪ್ರಾಸಂ (ಕವಿಮಾ. ೨-೯೩) ; ಪೆಱಗಣ ಮುಂತಣ ರಿತುಗಳ ತೆಱಿಯಂ ನಿಶ್ಚಯಿಸಿ ಮಧುಕರಂ ಮಧುಕರಮಂ ತಿಱಲಾಱದೆ ಪಲ್ಲಿಗೆಯೊಳ್ ಸೆಱಗೆಯ್ದುತಿರ್ದುದೊಂದು ಪರಿಮಳಫಲಮಂ (ಆದಿಪು. ೩-೦೮) ; ಮುಂತಣ ಕಥೆಯ ವಿಸ್ತರದ ನಿರೂಪಸು (ಕಾಂತೀಶ. ೩-೨) ;

ಮಾನಂ ಪೆರ್ಚಿದೆ ಸಿಂಹಪೋತಕಮನೋಪಲುಮಾಕೆಯು ಮೋಹಳಂ ಕರಂ ಪೆರ್ಚಿಮಮಾ ಗುಣಾರ್ಣವನ ಮುಂದಣ ಬೀರಮಸಂ[ದೆ] ತೋರ್ಪವೋಲ್ (ಹಂಪಭಾ. ೧-೦೪೨) ; ಮಗಧಾವನೀಶ್ವರಂ . . . ಅರ್ತಿಯಿಂ ಗೌತಮರಂ ಮುಂದಣ ನಿಶ್ಶಂಕೆಯು ಕಥೆಯುಂ ಬೆಸಗೊಳ್ವುದುಂ (ಧರ್ಮಾಮೃ. ೨-೪) ; ಮುಂದಣ ಸಂಕ್ರಾಂತಿಯ ದಿನ ಬಂದಿತು. ಪೂಜೆ ಮಾತ್ರ ಎಣಿಸಿದಂತೆ ನಡೆಯಲಿಲ್ಲ (ಕುಡಿಕೂ. ೭) ; ಹಿಂದಳ ಸುಖ ಮುಂದಳ ದುಃಖಿಗಳು ಮುಂದಳ ಸುಖ ಹಿಂದಳ ದುಃಖಿಗಳು ಇವ ತಾ ಸಂಧಿಸಿ ಅನುಭವಿಸಿದಲ್ಲಿ ಸಂಚಿತ ಪ್ರಾರಬ್ಧ ಆಗಾಮಿಗಳೆಂಬುದು ಅಲ್ಲಿ ಅಲ್ಲಿ ಸಂಕಲ್ಪಿಸಿ ಕೇಳಲೇತಕ್ಕೆ (ಬಾಪೂವ್ಯ. ೪. ೩೩೬-೦೩೬೧); ಮುಂದಿಂದ ಮುಂದಳ ಕಥೆಯು ಹೇಳುವೆನು (ಯುಪಶ. ೩). **ಮುಂತಣಂ** = ಮುಂಭಾಗದಲ್ಲಿರುವವನು ; ಮುಂದುಗಡೆಯಲ್ಲಿರುವವನು: ಅಣ್ಣತ್ತಿನ ದಿಗ್ವಾಚಕಂ ಪುಲ್ಲಿಂಗಮಪ್ಪೆಡೆಯೊಳ್ ಆಕಾರಮಂ ಕೈಕೊಳ್ಗುಂ . . . ಮುಂತಣಂ. ಪಿಂತಣಂ (ಶಮ.ದ. ೨೦೦ ಪ್ರಯೋ). **ಮುಂತಾಗಿ, ಮುಂದಾಗಿ** = ೧. ಮೊದಲುಗೊಂಡು ; ಮೊದಲಾಗಿ : ಹಾವಡಿಗ ಹಾದರಿಗೆ ಬಂಟನೋಲಯಕಾಱನೆಂದೆನಾದರೆ ನೀ ಮುಂತಾಗಿ ಬಂದ ಭಕ್ತರ ನೀಯೆನ್ನದಿದ್ದರೆ ಆದೇ ದ್ರೋಹ (ಬಸವ. ೭೦೬) ; ಅಱುವತ್ತುಗವುಡು ನೂಱೆಪ್ಪತ್ತುಸ್ಥಾನ ಸಾಸಿರದೇಳುನೂರು ಗವಱೆ ಗಂಡರು ಮುಂತಾಗಿ ಆ ಕುಸುಗೂರಲು ನೆರೆದು (ಎಕ. VII, ಶಿಕಾ. ೦೪-೦೦ ; 1309) ; ಶರಿರ ಮನ ಭಾವಗಳ ಗುರುಲಿಂಗಜಂಗಮಕೆ ಪರಣ ಮುಂತಾಗಿ ಅರ್ಪಿಸಿದ ಶರಣ ತಾ ಮರಳಿ ಜನಿಸುವನೆ (ಸರ್ವಜ್ಞ. ೦೪೩). ೨. ಮುಂಚಿತವಾಗಿ : ಮೊದಲೇ : ಪೂರ್ವಭಾವಿಯಾಗಿ : ಈ ಸ್ಪರ್ಶಾಂಗಗಳಿಂದ ಕೀಟ ಸನ್ನಿವೇಶವನ್ನು ಮುಂದಾಗಿ ಗ್ರಹಿಸುತ್ತದೆ (ಕೀಟಬಿ. ೦೩). **ಮುಂತಾಗು₁, ಮುಂದಾಗು₁** = ೧. ಅಭಿಮುಖವಾಗು ; ಎದುರಾಗು : ಆ ಊರ ಪೂರ್ವ್ವಸೀಮಾಪ್ರಮಾಣಂ ತೆಂಕ ಮುಂತಾಗಿ ಪರ್ವ್ವಿದ ದೇವಗಿರಿ ಆ ಊರ ದಕ್ಷಿಣಸೀಮಾಪ್ರಮಾಣ (ಸೌಇಇ. IX-i, ೩೨೭-೦೦೨ ; 1206) ; ಮೂಡಣ ಸೀಮೆ ಅರಕೆಱೆಯಿಂ ಪಡುವಲು ತೆಂಕ ಮುನ್ನಾಗಿ ನಡೆದ ಪೂರ್ವ್ವದ ಓಣಿಯಿಂ (ಎಕ. VII, ಶಿಕಾ. ೩೨೩-೨೦ ; 1046). ೨. ಪ್ರಮುಖವಾಗು : ಪ್ರಧಾನವಾಗು : ಲಿಂಗ ಮುಂತಾಗಿ ಮನ ಹಿಂತಾಗಿ ಅಂಗಭಾವವಳಿದು ಅರ್ಪಿಸಿಕೊಳಬಲ್ಲ ಪ್ರಸಾದಿಯ ಪರಮ ಪರಿಣಾಮವೆ ಪ್ರಸಾದ (ಅವಚ. ೨೩-೭೩) ; ಆಚಾರಂ ನಿಸದಾಗಿ ಸಮ್ಯಗ್ಗಣಗಣಂ ಮುಂತಾಗಿ ಮಂತ್ರಕ್ರಿಯಾಲೋಚಂ ನಿರ್ವ್ಯಭಿಚಾರಮಾಗೆ ಜಿನರಾಜಪ್ರಾಜ್ಯಸಾಮ್ರಾಜ್ಯದೊಳ್ . . . ನಮಗೀವರಕ್ಕೆ ನಯನಿಕ್ಷೇಪಪ್ರಮಾಣಂಗಳಂ (ಅರ್ಹದಾ. ೦-೪) ; ನೀತಿ ಮುಂದಾಯಿತು ಜಾತಿ ಬೆನ್ನಿರಿಯಿತು ನೀತಿಗೆ ಬಂದಿತು ಸಾವು (ಇಂಚಾಶ. ೨೦೩-೨). ೩. ಮುಂದುವರಿ ; ಮುಂದೆಬರು : ತೊಡಗು : ಜಯಸೇನ ನನ್ನು ನೋಡಿ, ಆ ಮಾಯಾಸೈನಿಕರು ಈಟಿ ಭರ್ಜಿ ಖಡ್ಗಗಳನ್ನು ಹಿಡಿದು ಅವನೊಡನೆ ಯುದ್ಧ ಮಾಡಲು ಮುಂದಾದರು (ಮಜಿಸ. ೬೩) ; ಆ ಊರಲ್ಲಿ ಎಲ್ಲಾ ಕೆಲಸಗಳಿಗೂ ಅವರೇ ಮುಂದಾಗುವವರು (ದೇವೀವ್ಞ. ೨೭). **ಮುಂತಾದ** = (ಅನೇಕ ವ್ಯಕ್ತಿಗಳ ಹೆಸರುಗಳು, ವಸ್ತುಗಳು ಅಥವಾ ವಿಷಯಗಳನ್ನು ಕುರಿತು ಹೇಳುವ ಸಂದರ್ಭದಲ್ಲಿ ಒಂದೆರಡನ್ನು ಸೂಚಿಸಿದ ನಂತರ ಹೇಳುವಲ್ಲಿ) ಇವೇ ಮೊದಲಾದ ; ಇತ್ಯಾದಿ : ಬಸದೊಳು ಹಿಮವೇಬ ಚೋರ ಪ್ರೈದ್ರೋಱೆ ಪಾದಪಲಕ್ಷ್ಮಿ ಬೆದಱೆ ಸೂಱೆಗೊಟ್ಟಂದದೆ ಪರಳ್ಗಾಯಿ ಮುಂತಾದ ತಾಱಿಕೆ ನೆಲಕುದುಱಿದುವು (ಪೋಹಶ. ೪-೪೩) ; ಅಂಕುಶಖಾನ ಮುಂತಾದ ಖಾನರುಗಳ ಶಂಕೆಯಿಲ್ಲದೆ ಕೂಡಿ ಕೊಟ್ಟು ಮುಂಕೊಂಡು ಪಾತ್ಶಾಹ್ಯವು ರಣಧೂಳಿಖಾನನ ಬೆಂಕದೆ ಬೀಳ್ಕೊಟ್ಟನಾಗ (ಕಂಪಾ. ೦೦-೯). **ಮುಂದಕೆತರು, ಮುಂದಕ್ಕೆತರು** = ಅಭಿವೃದ್ಧಿಗೆ ತರು : ಇದ್ದೊಬ್ಬ ಮಗನನ್ನು . . . ಮುಂದಕೆ ತರುವೆನೆಂದಕ್ಕ ಸಂಕಲ್ಪಿಸಿ ನಿಂತರು (ಇಂಚಾಶ. ೩೮-೪೩) : ಅವರು ತಂದೆ ಪ್ರಯಾಸಪಟ್ಟು ಈ ಸಂಸ್ಥೆಯನ್ನು ಮುಂದಕ್ಕೆ ತಂದರು (ಕೂವಿ). **ಮುಂದಕ್ಕೆಬರು** = ಅಭಿವೃದ್ಧಿಗೆ ಬರು ; ಏಳಿಗೆ ಹೊಂದು : ಮಕ್ಕಳು ಚೆನ್ನಾಗಿ ಓದಿ ಮುಂದಕ್ಕೆ ಬರಬೇಕು (ಕೂವಿ). **ಮುಂದಕ್ಕೆಹಾಕು** = ೧. ಮುಂಭಾಗಕ್ಕೆ ಹಾಕು : ಮುಂದುಗಡೆಯಲ್ಲಿಡು : ಅವನು ಆಟದ ಸಾಮಾನುಗಳನ್ನು ತಂದು ಮಗುವಿನ ಮುಂದಕ್ಕೆ ಹಾಕಿದನು (ಕೂವಿ). ೨. (ಯಾವುದೇ ವಿಚಾರ ಅಥವಾ ಕಾರ್ಯವನ್ನು) ಅನಂತರ ನಡೆಸುವುದಕ್ಕಾಗಿ ಸದ್ಯಕ್ಕೆ ನಿಲ್ಲಿಸು ; ಮುಂದೂಡು : ಅನಿವಾರ್ಯ ಕಾರಣದಿಂದ ಆತ ಊರಿಗೆ ಹೋಗುವುದನ್ನು ಮುಂದಕ್ಕೆ ಹಾಕಿದನು (ಕೂವಿ). **ಮುಂದಲು** = ೧. ಮುಂಭಾಗ ; ಮುಂದುಗಡೆ : ಅವನು ನಮ್ಮ ಮನೆಯ ಮುಂದಲಿಂದ ಹಾದುಹೋದನು (ಕೂವಿ). ೨. ಮುಂದಿನದು: ತರುವಾಯದ್ದು : ಮುಂದಲ ಮಾತನ್ನು ಈಗ ತೆಗೆಯಬೇಡ (ಕೂವಿ). **ಮುಂದಿನವರು** = ಮುಂದಿನ ಕಾಲಕ್ಕೆ ಸೇರಿದವರು : ಮುಂದೆ ಬರುವ ಜನಾಂಗ : ನಾವು ಮಾಡುವ ಕೆಲಸವು ಇಂದಿನವರು ಮಾತ್ರವಲ್ಲದೆ ಮುಂದಿನವರೂ ಮೆಚ್ಚುವಂತಿರಬೇಕು (ಕೂವಿ).

[<ಮುನ್₁./ತಮಿ. ಮುನ್ರು ; ಮಲ. ಮುನ್ತಿ ; ತೆಲು. ಮುಂದು ; ಕೋತ. ಮುಂದ್]

**ಮುಂತು₂, ಮುಂದು₂** (ಅ). ೧. ಮುಂದುಗಡೆಯಲ್ಲಿ : ಮುಂಭಾಗದಲ್ಲಿ : ಪೆಱಗಿಸಿದಾಗಿ ಮುಂತಗೆಲಿತಪ್ಪುದಱಿಂದೆ . . . ಭೋಗದೆ ಸಳ್ ತುಱುಗಿರವಿಂದೆ ಪೋಲ್ತುದು ಮಹಾನದಿ ರುಂದ್ರಫಣೀಂದ್ರರಾಜನು (ಕಾವ್ಯಸಾ. ೭೪೭ ಕೂವ್ರಶ). ೨. ಎದುರಿನಲ್ಲಿ; ಅಭಿಮುಖವಾಗಿ; ಮುಂದೆ: ನಮ್ಮಂ ಕಾಣಲೆಂದೀಗಳಿಲ್ಲಿಗೆ ಮುಂತೀ ಬರುತಿರ್ಪರೀಕ್ಷಿಸಿನಿಸಂ ಪಂಕೇಜಪತ್ರೇಕ್ಷಣೇ (ಕಾದಂಸಾ. ೩೭೨) ; ಕಾಶೀಪುರಾಭಿಮುಖಮಾಗಿ ಗಮಿಸಿ ಮುಂತೆಸೆವ ಶಿವಪುರ ಶಿವಕ್ಷೇತ್ರತತಿಗಳುಮನಂತಸಮಾಪುಣ್ಯಾವನ ಪುಣ್ಯನದಿಗಳುಮನೋರಂತೀಕ್ಷಿಸುತು (ಶಬ್ದರಾ. ೦೩-೨೮). ೩. ಪ್ರಾರಂಭದಲ್ಲಿ : ಪ್ರಥಮತಃ : ಧರ್ಮೋಪದೇಶಜ್ಞರು ಮುಂತಾ ಗೌತಮರು . . . ಶ್ರೇಣಿಕಂ ಸಂತೋಷಂ ಮಿಗೆ ಕೂರ್ತು ಕೇಳ್ದನಧಿಶ್ರೀಗಾರ್ವಮಂ ಧರ್ಮಮಂ (ಧರ್ಮಾಮೃ. ೦-೬೧). ೪. ಮೊದಲು ; ಮುಂಚೆ: ಮಿತ್ರರುಂ ಪಸ್ತಿನಿಕಾಯಾಕಲ್ಪಮುಂ ಮುಂತೆನಗೆನುತೆ ಕರಂ ಕಾಂಕ್ಷೆಯಿಂ ಶ್ರೀಧರ್ಮೆಯಿಂದೆ ಕೈನಿತುಂ ಪುಣ್ಯಕ್ಕೆ ಮಾಡಲ್ಕಡದೆ (ರಕ್ನಾಕ. ೮). ೫. ತರುವಾಯ : ಅನಂತರ ; ಆಮೇಲೆ : ಓಹೋ ! ಈಗಳಱಿತೆಂ, ಮುಂತೇಂ ಮುಂತೇಂ ? (ರಾಮಾಶ್ವ. ೦೦-೧೦). **ಮುಂದು₂** : ೨. ಇತರೇಂದ್ರರ್ ಪರಿಚಾರಕಪ್ರಕೃತಿಯಿಂ ಮುಂದಾಡೆ . . . ಸಂತತಶ್ರಮೋನಂದು ಜನಾರ್ಘಕಂಗೆಸೆಮದೋ ಜನ್ಮಾಭಿಷೇಕೋತ್ಸವಂ (ಆದಿಪು. ೭-೬೦) ; ಪುರದೊಳಗಣ ಸೂಳೆಯರೆಲ್ಲರುಮಂ ಹಿಡಿದೆಱೆದು ತರಿಸಿ ಯಕ್ಷಿಯ ಮುಂದಾದರದಿಂದಿರುಳೆಲ್ಲಂ ಜಾಗರಮಿರಿಸುವಂ (ಧರ್ಮಾಮೃ. ೨-೦೬). ೪. ಮೊದಲು ಬಂದಾನೆ ಪೇಟ್ಟಿಮೆಂ ನಯದಿಂದಿಲ್ಲಿಗೆ ತಕ್ಕುದೆಲ್ಲಮಂ ಮುನ್ನೀಂ ಪೋಗೆಂದು ಕಟುಪಲ್ಕೆ ಪೋದಂ ಮುಂದಾ ಕೇಯೂರಕಂ ಸುವಿಲುಳಿತಹಾರಂ (ಕಾದಂಪೂ. ೯೯೦). ೫. ಮುಂದೇಹ ದನುಜರೊಡನೆ ಕಾದಲು ರಕ್ತ ಬಂದು ವ್ಯೆಸೋಂಕಿ ಕೆಂಪಾಗೆ ಮುಂದಣ ತೊಳೆವೊಲು ಪಶ್ಚಿಮಾಂಬುಧಿಗಿನನಂದಿಳಿದನು ತೀವ್ರದಿಂದ (ಕಂಪಾ. ೯-೧೭೩).

**ಮುಂತಾಗು₂, ಮುಂದಾಗು₂** = ೧. ಸಮ್ಮುಖಕ್ಕೆ ಬರು : ಎದುರಾಗಿ ಬರು : ಅಂತು ತುರಗಬಲಮೆಲ್ಲಮುಂ ತಮಿಸಿ ಪಿಂತಪ್ಪರಸಲ್ಲದೆ ಮುಂತಪ್ಪರು ಕಾಣದೆ . . . ಪಾಪೇಭಕಂಠೀರವನಾ ವಿಜಯಶ್ರಮವ ನಾಱಿಸುತ್ತುಮಿರೆ (ಶಾಂತಿಪು. ೪-೦೭ ವ) ; ಕೊಯ್ಯರ ಅಜಯಪಾಲ್ಲಗೊರವ ಕೊಳಸೂಡಿಪ ಕದವು ಪರಿವಲ್ಲಿ ಮುನ್ನಾಗೆ ಬನ್ದು ತವರಬಣ್ಣ ಆನೆಲೆಯುರ ಮಗ ನೆಲ್ಲಲ್ಲ ಅಣ್ಣಮ್ಮರ್ನ್ ಅಳಿಯೆ ತೋಱುವನಿಕ್ಕಿಸಿ ಸಗ್ಗಯಾದಂ (ಎಕ. IX, ಹೊಸಕೋ. ೦೦೦ ೩ ; ಸು. ೯೦೦) : ಇದೊಂದೆ ಮೆಯ್ಮುಟಿದುದಿನ್ನೆ

ನಗಾವುದೊ ಮೆಳ್ವಡಪ್ಪು ಮುಂದಾದ ವಿರೋಧಿಸಾಧನವುಂನೆನ್ನ ಗದಾಶನ ಯೆಂದುರುಳ್ವುದೆಂ (ಕಂಕಶಾ. ೦೬-೯೯). ೨. ಮುಂದೆ ಒದಗಿಬರು : ಬಳಿಕ ಸಂಭವಿಸು : ಇತ್ತಲ್ ತಂತುವಾಯಿಕೆಯುಂ ತನಗೆ ಮುಂತಪ್ಪ ನಿರ್ಗಮೋಪಾಯಮಂ ಚಿಂತಿಸಿಕೊಂಡು ಸಂತಸಂಬಟ್ಟು (ಕಂಪಕಂ. ೬೬-೦೯) : ಮುಂತಪ್ಪ ಕಜ್ಜಗಳ್ ಕನಸಿನೊಳು ರಕ್ಕಸರ ಕಾಂತಸರಿದು (ವಂಕಾರಾ. ೩-೬ ೩೩೩೭) : ಮುಂದಪ್ಪ ದುಸ್ವಪ್ನಫಲಂಗಳಂ ಆದಿಭಟ್ಟಾರಕರ್ ಬೆಸಸೆ (ಶಾಪುಂಪು. ೩೪) ; ಇಂದಿದೇಂ ಪೆರ್ಮೆವಾಂಟುವನೆಂದು ಕಯ್ವಾಗಿ ಮುಂದಪ್ಪುದಂ ನೆರೆಯಲಣಿಯೆಸಲ್ ನಿಂದಂ (ಶಾಬಾರ. ೦೬೭-೨೯೩). ೩. ಹಿಂದೆ ಆಗಿಹೋಗಿರು ; ಮುಂದೆ ಸಂಭವಿಸು : ಸುರ ಮನುಜ ಭುಜಗ ಭುವನಾನ್ತರದೊಳ್ ಮುನ್ನಾದವಿನ್ನುದಿಪ್ಪುವವಿನ್ನೀದೊರೆಯ ಜಿನಭವನವಲ್ಲೆಂಬರ ಮಾತು ದಿಟಂ (ಎಕ. VII. ೩ಶಿವೊ. ೯೭-೯೨ ; 1113). ೪. ಮುಂಚಿತವಾಗಿ ಬರು : ಪೂರ್ವಭಾವಿಯಾಗಿ ಬರು : ಮುಂದಾಗಿ ದಿನಪನುದಯಾಸಂದದೊಳ್ಸನ್ಧ್ಯಮಯಸಮಯದೊಳ್ ಸಂಜೆ ಕರಂ ಪಿಂದುಟಿಬುದಂತೆ ಕೆಲರೊಡವಂದಾದುದಯದೊಳೆ ಸಾರ್ವರೆಡೆ ರೊಳಗಲ್ಪರೆ (ಕಾವ್ಯಶಾ. ೮೯೯ ಸೂತ್ರ ೪).

[< ಪ್ಮುಂತು₁. / ತೆಲು. ಮುಂದು ; ನಾಯ್ಕಿ. ಕುರುಖ್. ಮುಂದ್ ; ಪರ್ಜಿ. ಮಲ್ತೊ. ಮುಂದಿ]

**ಮುಂತುಗಾಣ್** 'ಮುಂದುಗಾಣ್' ನೋ.

**ಮುಂತುಗೆಡಿಸು** 'ಮುಂದುಗೆಡಿಸು' ನೋ.

**ಮುಂತುಗೆಡು** 'ಮುಂದುಗೆಡು' ನೋ.

**ಮುಂತುಗೊಳ್** 'ಮುಂದುಗೊಳ್' ನೋ.

**ಮುಂತುದಿ** (ನಾ). ಮುಂಭಾಗದ ತುದಿ : ಅಂಚು : (ಮುಂತುದಿಗಿಂತ) ಹಿಂಭಾಗ ನೀರಿನಲ್ಲಿ ಹೆಚ್ಚಾಗಿ ಮುಳುಗಿ (sterm. ೩೮೩).

[ಮುಂ₁ (< ಮುನ್₁) + ತುದಿ]

**ಮುಂತೆ₁.** ಮುಂದೆ₁ (ನಾ). ೧. ಮುಂಭಾಗ : ಮುಂದುಗಡೆ : ತುಳರಕ್ಕೆ – ಮುಂದು. ಮುಂತು : ಹಿಂದು. ಹಿಂತು : ಮುಂದೆ. ಮುಂತೆ (ಕಬುವ. ೦೨೦ ಪ್ರಯೋ). ೨. (ಆಲಂ) ಮುಂದಿನ ಯೋಚನೆ : ಗಂಡುಜಂಕೆ ಗೇನು ಚಿಂತೆ ಪ್ರಣಯಕಿಲ್ಲ ಹಿಂತೆ ಮುಂತೆ (ಸ್ವಕ್ಷೊ. ೩೨೬). **ಮುಂದೆ₁** ; ೧. ಮೇಲಿನ 'ಶಮದ' ಪ್ರಯೋಗವನ್ನು ನೋಡಿ. [< ಮುಂತು₁]

**ಮುಂತೆ₂.** ಮುಂದೆ₂ (ಅ). ೧. ಮುಂಭಾಗದಲ್ಲಿ ; ಮುಂದುಗಡೆ ಯಲ್ಲಿ : ಚಿತ್ರಪಟಮನಾ ಚೈತ್ಯಾಲಯದ ಕೆಲದ ಪಟ್ಟಸಾಲೆಯ ಮುಂತೆ ನೇಱಿ ನಿಜಾಭಿಲಷಿತಕಾರ್ಯಸಿದ್ಧಿಯನೆ ಪಾರುತ್ತಮಿರ್ದಳ್ (ಆದಿಪು. ೩-೯೩ ವ) : ಕಂತುಕವನಾ ಕೈಗೆ ಬರಲೀಯದೆ ಪೋಲಾಂತು ಕುಟಿಲದೇವತೆ ಗಳು ಕಾಂತಿಸೀಮಂತರತ್ನ ರತ್ನಾಜಿಮು ಮುಂತೆ ಬೇಗದೊಳಿರಿಸಿದವು (ಶಬರಶಂ. ೩೦-೦೦೬). ೨. ಎದುರಿಗೆ : ಸಮ್ಮುಖದಲ್ಲಿ ; ಸಮಕ್ಷ ದಲ್ಲಿ : ರೂಢಿಗೆಂದೆಲ್ಲರ ಮುಂದೆಯುಂ ಪೊಗಟಿಪೆಂ ಮರುಳಲ್ಲನೆ (ಸಮಶ. ೩-೬೦) : ಅರಸಂ . . . ಲಲಿತಾಂಗನಂ ಬರಿಸಿ ಮುಂತೆ ಕುಳ್ಳಿರಿಸಿ ಬಟಿಕ್ಕಮಿಂತೆಂದಂ (ಧರ್ಮಾಮೃ. ೨-೬೩) : ವೃಷಭರಾಜಂ ಹರುಷದಿಂದಿಪ್ಪ ಸಮಯದೊಳು ಮುಂತೆ ಕಿನ್ನರರು ಸವರಸದಿ ಪಾಡಲ್ಕೆ (ಬಸರ. ೦-೨೩). ೩. ಮುಂಚಿತವಾಗಿ ; ಪೂರ್ವಭಾವಿಯಾಗಿ : ಮುಂತೆ ನೀಂ ಪೋಗಾಸುಂ ಪೆಜಗನೆ ಬಂದಪೆಂ (ಅಜಿಪು. ೦೦-೨೦) ; ನಿನಗೆ ವಸಂತದೂತಿ ಪೆಸರೊಪ್ಪುವುದೆಂತೆನೆ ಮುಂತೆ ಬಂದು ನೀನೆನಗೆ ವಸಂತನಾಗಮನಮಂ ನೆಱೆ ಸೂಚಿಸಿ ಕೊಟ್ಟೆ (ಕಂಪ್ರಪು. ೭-೯೦). ೪. ಅನಂತರದಲ್ಲಿ : ತರುವಾಯ ; ಆಮೇಲೆ : ಮುಂತೆ ಪೇಳ್ವ ಕುಱಿಪಂ ಕುಱಿಗೊಂಡು ಕವೀಶರಾರ್ಪಂತು ಪಿಂಗಿಸುಗೆ ಕಾವ್ಯದಿನಾ ಲಘುದೋಷಮಂ (ಕಬಿರಾ. ೦-೦೨೯) ; ಮುಂತೆ ಶವಮೃಟಭೂಮಿವಾಕಾಂತಂಗರ್ಧಾಂಗಿಯಪ್ಪುದುಂ ತೋರ್ಪವೊಲಾ ಕಾಂತೆ ಯಂ ಪೆೃಗಂಂದಿದಳಂತಗಲದೆ ಪರ್ವಿದತನುತಾಪೋದಯದಿಂ (ಜಗ್ನಪು. ೭-೩೭) : ಇಂತು ಕರ್ಣನ ಸಖ್ಯದಲಿ ಘೋರಾಂತನಾ ಕೆಲಕಾಲವಿದ್ದಾ ಮುಂತೆ ಕಲಿತರು ದ್ರೋಣನಲಿ ಬಳಿಕಬಿಲವಿದ್ಯೆಗಳ (ಸಂಪಶ. ೦೯-೨೨). ೫. ಹಿಂದೆ ; ಪೂರ್ವದಲ್ಲಿ : ಅಂತ್ಯಜಾತಿಯೊಳಿರ್ಪ ಮುಂತೆ ತೀರ್ಥದೊಳಿರ್ಪ ವಂತಿಯೇಱಿರ್ಪ ತಿರಿದುಂಬ ಶಿವಯೋಗಿ ಎಂತಿರ್ದಡೇನು (ಶರಕ್ಷ. ೩೨೨); ಮುಂತೆ ರಾವಣನೆನಿಪನೊರ್ವನುದಿಸಲ್ ಬಾಧೆಯುಂ ತಡೆಯುದವುರರುಂ ಹರಿಯ ಪ್ರಾರ್ಥಿಸೆ (ವಂಕಾರಾ. ೨-೨೦-೨೮). **ಮುಂದೆ₂** : ೧. ಗಟಿಯಿಸಿ ದರ್ಥಂ ಸಲೆ ಪಾಂಗಟಿಯದೆಯುಂ ಶಬ್ದವೊಂದದಿರ್ದೊಡೆ ಮುತ್ತಾಂ ಪೆಟಸುಂ ಕೋದಂತಿರ್ಕುಂ ಕಟಲ್ಪಿ ಕಳೆಗೊಂದಿ ಮುಂದೆ ಬಾರದ ಪದಮಂ (ಕಬಿರಾ. ೨-೩) ; ಮನೆಮನೆಗಳ ಬಾಗಿಲು ಬಾಗಿಲ ಮುಂದೆ ಕನಕದೋರಣದ ಸಾಲಿಂದ ಘನತರವಹ ನವಿಲುಯ್ಯಾಲೆಗಳಿಂದಲನ್ನಿಮಿಷಪುರವ ಪೋಲ್ತಿಹುದು (ಕಂಸಶಿ. ೨-೬೦) ; ಕುದುರೆಯ ಹಿಂದೆ ಅರಮನೆಯ ಮುಂದೆ ಇರಬಾರದು (ಗಾದೆ). ೨. ನಂದಿಮಿತ್ರಂ ಬಂದು ಮುಂದೆ ನಿಂದು ಕೈಗಳಂ ಮುಗಿ ದಿಂತೆಂದಂ (ಶಬ್ದಾರಾ. ೬೯-೩) ; ದನುಜಾಂತಕನೆಂಬೀ ನಿನ್ನ ನಚ್ಚುವೋದಂಕ ಮೆಲವೊ ಮುನ್ನೆನ್ನನ್ನಂ ದನುಜಂ ಪುಟ್ಟಿದೆ ಸಂದುದು ನಿನಗೀ ಪೆಸರೆನ್ನ ಮುಂದೆಯುಂ ಸಂದಪುದೇ (ಕಂಶಿಠಾ. ೩-೩೪) ; ಗುರುವಂ ಮುಂದೆ ಪೊಗಟ್ವುದು ಮಿತ್ರರಂ ಬಂಧುಗಳಂ ಹಿಂದೆ ಪೊಗಟ್ವುದು (ಕಂಪಕಂ. ೩೭-೦೬) ; ನಿಮ್ಮ ಶರಣರ ಮುಂದೆ ನಾನೇತಱ ಭಕ್ತನಯ್ಯಾ ನಿಮ್ಮ ಶರಣರ ಮುಂದೆ ನಾನೇತಱ ಯುಕ್ತನಯ್ಯಾ (ಬಸವ. ೩೩೩). ೩. ಮುಂದೆ ದಶಾಂಕೆಯಿಂದಿಱಿದುದಂ ಪರಮಾಯುವಿನಿಂದಮೆತ್ತೆ ದಲ್ ನಿಂದುದು ವರ್ಷಂ (ಜಾತಕ. ೨೪-೨೬) ; ತಂದೆತಾಯಿಗಳಿಗೆ ಮುನ್ನಗ್ಗಿಯುಂ ಕೊಡದೆ ನೀ ಮುಂದೆ ಮಡಿಯಲುಬಹುದೆ (ಹಕಶಾ. ಶಂ. ೨೨೨-೨೦) ; ಹಿಂದೆ ಸೋಮೇಶನು ಬರುತ್ತಂ ಮುಂದೆಯೆನ್ನಂ ಕಳುಹಿದಡೆ ನಾ ತಂದೆ (ಬಸಪು. ೩೩-೦೭). ೪. ಹಿಂದೆ ನಾನಾಯೋನಿಯಲ್ಲಿ ಬಂದೆನೆಂಬ ಹೇಯವಿಲ್ಲ ಮುಂದೆ ಮುಕ್ತಿಯಾಗಬೇಕೆಂಬ ಯುಕ್ತಿಯಿಲ್ಲ (ಬಸವ. ೦೭) ; ಮುಂದಾ ಸ್ತ್ರೀರತ್ನಮನೊಲವಿಂದಂ ಪಡೆದಪ್ಪೆನೆಂಬುದಂ ಸೂಚಿಸುವಂತೊಂದೆರಡು ದಿನದೊಳತ್ಯಾನುದದೆ ಕಡುಜಾಣೆ ಮಾಣಿಕಂಗಂಡಿರ್ದಳ್ (ಗಿರಿಕ. ೩-೨೦) : ಇಂದು ನೀನಾ ಪಾಂಡುಪುತ್ರರನಂದಗೆಡಿಸದೆ ಬಿಟ್ಟೆಯಾದೊಡೆ ಮುಂದೆ ಬೆಟ್ಟಿತು ರಾಜಕಾರಿಯ (ಕುಮ್ಮಾಭಾ. ೬-೨೦). ೬. ಮೊತ್ತಮೊದಲು ; ಪ್ರಥಮತಃ : ಮುನ್ನಮೆ ತೆಱೆದಱಿದಿಂಗಳ್ವರಮಾಱದ ಕಾಂಡಕಪ್ರಪಾತ ಗುಹೆಯೊಳಗಣಿಂದ ಚಕ್ರರತ್ನಂ ಮುಂದೆ ನಡೆಯೆ (ಆದಿಪು. ೦೩-೮೦ ವ) ; ಕಳಸೋದರೆ ಕನ್ನಡೀಯ ಹಿಡಿವೆ ಬಂಡಿವಿಡಿದರೆ ನಿಮ್ಮಿಂದ ಮುಂದೆ ನಡವೆ (ಬಸವ. ೬೯೭).

**ಮುಂದೆಬರ್, ಮುಂದೆಬರು** = ೧. ಅನಂತರ ಸಂಭವಿಸು : ತರುವಾಯದಲ್ಲಿ ಉಂಟಾಗು.—ಒದಗು : ನಿಜಧೈರ್ಯದ ಗಣಿಸದೆ ಮುಂದೆಬರ್ಪುದಂ . . . ಬೆಳ್ಳಸವಾಳ್ವುದು ಕಜ್ಜಂ (ರಾಜಶೇ. ೦೪-೦೬) ೨. ಮುಂದುವರಿ : ಆಸಕ್ತಿವಹಿಸು : ಕಾಳೂರಿನ ಅಡಿಗಳು ಹೆಣ್ಣು ಕೊಡಲು ಮುಂದೆ ಬಂದರು (ಕವ್ಯಕ. ೦೬). ೩. ಅಭಿವೃದ್ಧಿಯನ್ನು ಹೊಂದು; ಏಳಿಗೆಯಾಗು: ಅವಿರತವಾದ ಅವರ ದುಡಿಮೆಯಿಂದ ಎರಡೇ ವರ್ಷಗಳಲ್ಲಿ ಅವರ ಸಂಸ್ಥೆ ಮುಂದೆಬಂದಿತು (ಕೂಡ). [< ಮುಂತೆ₂]

**ಮುಂದಂಡೆ₁** (ನಾ). ಮುಂಭಾಗ ; ಮುಂದುಗಡೆ : ಹೆಂಗಸರು ಬಾಗಿಲಿಗೆ ಬಂದು ಗುಡಿಸಲುಗಳ ಮುಂದಂಡೆಯಲ್ಲಿ ನಿಂತುಕೊಂಡು . . . ಅಕ್ಕಪಕ್ಕದಲ್ಲಿದ್ದವರಿಗೆ ಅವನನ್ನು ತೋರುತ್ತಿದ್ದರು (ಕೃಷು. ೨೭೬).

[ಮುಂ₁ (< ಮುನ್₁) + ದಂಡೆ₂]

**ಮುಂದಂಡೆ₂** (ನಾ). ಮಲ್ಲಯುದ್ಧದ ಒಂದು ಬಗೆಯ ಪಟ್ಟು.–ವರಸೆ : ಚಿಕದೇವಂ . . . ಅವನು ತುಡುಂಕೆ ಮುಳಿಸಿಂದವನಂ ಮೊಱೆದೆಟ್ಟು

ಮುಟ್ಟಿ ಮುಂದಂಡೆಯನೂಱಿ ಮೇಲ್ವರಿಪನೇಂ ಬಗೆ ಸೊರ್ಕಿರೆ ಮುಂದು ದೋರ್ಕರ್ಮೋ (ಶಶಿ. ೯-೦೯೦).

[ ಮುಂ$_1$ ( < ಮುನ್$_1$ ) + ದಂಡೆ$_3$ ( < ದಂಡಿ$_3$ ) ]

**ಮುಂದಟ್ಟು** (ಕ್ರಿ). ೧. ಮುಂದಕ್ಕೆ ಅಟ್ಟು,–ಓಡಿಸು : ಮುಳಿಸಿಂ ಮುಟ್ಟುವ ನಾಯ್ಗಳನೆ ತುಂಡಿಸಲ್ಕೆಂದುಱಿ ಕಿರ್ಗುಟ್ಟುತೆ ಮುಂದಟ್ಟೆ ಪೆಡಂಮುಟ್ಟುತೆ ಸೂಕರನಡರ್ದು ಸಾರ್ದುದು ಮೆಳೆಯಂ (ಗಿರಿ. ೦-೦೦೨). ೨. ಮುಂಚಿತವಾಗಿ ಅಟ್ಟು ; ಪೂರ್ವಭಾವಿಯಾಗಿ ಕಳುಹಿಸು : ತನ್ನೊಳ್ ನೆರೆಯಲಿದು ಜಯಶ್ರೀಯೆ ಮುಂದಟ್ಟಿದೆಕ್ಕಾವಳಿಯೆಂ ಬಂತಿರ್ದುದಂ ಕಂಠಿಕೆಯಂ . . . ಕಟ್ಟಿದಂ ಖೇಚರೇಂದ್ರಂ (ಆದಿಪು. ೦-೬೬); ಗಿರಿಜಾವಲ್ಲಭನೊತ್ತೆಗೊಟ್ಟ ಪೆಱೆಯಂ ಸೈತಿಕ್ಕಿವೇಱಾ ಬಂದಪಂ ಹರಿ ಮುಂದಟ್ಟಿದನಿಂದು ಕೌಸ್ತುಭಮಂ (ಸೂಕ್ತಿಸು. ೯-೦೩೩); ಆಳ್ಗಳಂ ಮುಂದಟ್ಟಿ ಸಡಗರದಿ ಬರುತಿರ್ಪನು (ಕಾಶಿರ. ೯೯-೦೯೫).

[ ಮುಂದು$_2$ ( < ಮುಂತು$_2$ ) + ಅಟ್ಟು$_2$ ]

**ಮುಂದಡಿ** (ನಾ). ಕಾಲಿನ ಮುಂಭಾಗ ; ಮುಂಗಾಲು : ಅಡಿಗಡಿಗೆ ಗಡಬಡಿಸುತಿಹ ಮುಂದಡಿ ಎಸೆಯೆ . . . ಹೆದಱಿ ಕಂಗೆಟ್ಟು ಡೆಂಡಣಿಸಿ ಸರಳಸುವ ಹರಿಣಂಗಳಂ ನೋಡಿ ಮುಂದೋಡಿ ಕೆಡಹಿದೆವು ದೀಹದ ಹುಲಿಗಳು (ಸೋಮಶ. ೩-೨೯). [ಮುಂದು$_1$ (< ಮುಂತು$_1$) + ಅಡಿ$_1$]

**ಮುಂದಡಿಯಿಡು** (ಕ್ರಿ). ಮುಂದಕ್ಕೆ ಹೋಗು ; ಮುಂದುವರಿ : ತುಡುಕುವರೆ ಧನುವಿಲ್ಲ ಮುಂದಡಿಯಿಡಲು ಸಾರಥಿಯಿಲ್ಲ ರಥ ಕಡಿವಡೆದುದು (ಕುಮಾ.ದ್ರೋ. ೬-೩೬); ದೃಢನಿಶ್ಚಯದಿಂದ ಪ್ರಯತ್ನಿಸು ವವನಿಗೆ ಎಂತಹ ದೊಡ್ಡಕಾರ್ಯವಾದರೂ ನಿಶ್ಚಯವಾಗಿ ಕೈಗೂಡು ವುದು. ಅವನು ಧೈರ್ಯದಿಂದ ಮುಂದಡಿಯಿಡಲಿಕ್ಕೆ ಬೇಕು ಮಾತ್ರ (ದೃಶಾ. ೩). [ಮುಂದು$_2$ ( < ಮುಂತು$_2$ ) + ಅಡಿಯಿಡು ]

**ಮುಂದರಿ** 'ಮುಂದುವರಿ' ನೋ.

**ಮುಂದರಿವು** (ನಾ). ಮುಂದಿನದನ್ನು ತಿಳಿಯುವ ಜ್ಞಾನ ; ಭವಿಷ್ಯ ಜ್ಞಾನ : ಇವನು ಮೊದಲು ಟ್ರೈಟನರೊಡನೆ ಯುದ್ಧಮಾಡುತ್ತಿದ್ದ ಸ್ಕೂಸಿಗೆ ಸಹಾಯ ಮಾಡಿದನು. ಹಾಗೆ ಮಾಡಲು ಕಾರಣವೇನೆಂದರೆ ಅವನಿಗೆ ಮುಂದರಿವಿತ್ತು (ಐಕ್ಕ್ಯಕ್ರ. LX, ೬೬೩೪).

[ಮುಂದು$_2$ ( < ಮುಂತು$_2$ ) + ಅರಿವು ( < ಅಱಿವು) ]

**ಮುಂದರುಗು** (ಕ್ರಿ). ಮುಂದಕ್ಕೆ ಚಲಿಸು ; ಮುಂದುವರಿ : ಈ ಭುವ ದೊಳಗೆ ಇರುಳಿದ್ದು ಭಾಸ್ಕರೋದಯವಾದ ಬಳಿಕ ಮುಂದರುಗುವೆವು (ವಂಕಾರಾ. ೨-೦೫-೪). [ ಮುಂದೆ$_3$ ( < ಮುಂತೆ$_2$) + ಅರುಗು$_1$ ]

**ಮುಂದಲೆ** (ನಾ). ೧. ತಲೆಯ ಮುಂಭಾಗ : ಬಲದೆ ಸುೞಿದಾವರ್ತಂ ಪುಂಸ್ತ್ರೀಜನಕ್ಕೆ ಶುಭಪ್ರದಂ . . . ಒಂದೆ ಮುಂದಲೆಯ ಸುೞಿಯಿಂದಕ್ಕುಂ ಕಳ್ಳಂ ಮಹೀವಳಯಾಗ್ರದೊಳ್ (ಲೋಕೋಪ. ೦೦-೨೫); ಶಾಂಕೆಗೆಸೆದುದು ಮುಂದಲೆಯೊಳಗರಳೆಲೆ ಬಹುರತ್ನನೂತ್ನಕಾಂತಿಪ್ರಕರಂ (ಗಿರಿ. ೩-೬೦) ; ಮಾರುತಿ ಹೊಯ್ದು ಕರ್ಣನ ಕೆಡಹಿದನು ಮುಱಿಯೊಡೆದನೆದೆಯನು ಹಾಯ್ದು ಮುಂದಲೆಗೆ (ಕುಮಾ.ಕ. ೦೨-೨೬). ೨. ತಲೆಯ ಮುಂಭಾಗದಲ್ಲಿ ರುವ ಕೂದಲು; ಮುಂಗೂದಲು : ಕೃಷ್ಣೆಯ ಮುಂದಲೆಯಂ ಪಿಡಿದೆೞೆ ವಲ್ಲಿಯೆ ತಲೆವಿಡಿದರ್ ನಮ್ಮ ಬೀರಮಂ ಕೌರವರುಂ (ಪಂಪಭಾ. ೭-೫೬) ; ಮುಂದಲೆಯಂ ಪಿಡಿದೆನ್ನಯ ಮುಂದೆೞೆದನಲಜೆಯನುಯ್ದು ಪರಿಭವಿಸಿ ವಳ್ಳೆಂಮುರಿದು ಸೊರ್ಕಿದವನಂ ಕೊಂದಂ ಕುರುಪತಿಯುಮಂ ಕೊಲಲ್ಪಡೆದ ಪೆನೇ (ಗದಾಯು. ೬-೨೬); ನಿಲಲಿ ಸುಭಟರು ಜೋಡಿಯಲಿ ಪರಬಲಕೆ ಜಾಱುವ ಜಯಸಿರಿಯ ಮುಂದಲೆಯ ಹಿಡಿಹಿಡಿಯೆನುತ ಹೆಕ್ಕಳಿಸಿದನು ಕುರುರಾಯ (ಕುಮಾ.ಶ. ೨-೫೦). ೩. ಮುಂಭಾಗ : ಮುಂದುಗಡೆ : ಮೞಗಾಲಿನ ಮುಂದಲೆಯುಪ್ಪರಿಗೆಯ ನೆಲೆ ಮೆಚ್ಚದೆ ಗುಡಿಸಲೊಳಿಹರೊಲಿದೆ (ಪಶ್ಚ. ೨-೦೦). ೪. ಮುಂದಿನದು ; ಭವಿಷ್ಯಕ್ಕೆ ಸೇರಿದುದು : ಅಂಚು ಅಂಚುಗಳಲ್ಲಿ ಚಳಿಯು ಇರಿತ ಹದನವಾಗುತ್ತಿದ್ದರೂ ಮುಂದಲೆಯ, ಸಿಹಿಕಹಿಗಳಿಗಾಗಿ ಪಳಲೇಬೇಕಾಗಿತ್ತು (ರಕ್ತರ. ೩೩೬).

ಮುಂದಲೆಯ ಹೂ = ಮುಂದಲೆಬೊಟ್ಟು : "ಮುಂದಲೆಯ ಹೂ ಲಲಾಮಕವೆಂಬುದು" (ಹರಾಯು. ೯೦-೩೯೯).

[ ಮುಂ$_1$ ( < ಮುನ್$_1$ ) + ತಲೆ$_1$ ]

**ಮುಂದಲೆಗೊಡು** (ಕ್ರಿ). ತಲೆದೋರು : ಬೆಳಗು ಬೆಳೆದುದು ಮನದ ಮಿಡುಕಿನ ಮಱುಕ ಮುಂದಲೆಗೊಟ್ಟುದೞಿವಿನ ಸೆಱಗು ಹಾಱಿತು (ಕುಮಾ.ಸ. ೦೯-೨೮). [ಮುಂದಲೆ + ಕೊಡು$_1$ ]

**ಮುಂದಲೆಗೊಳ್** (ಕ್ರಿ). ಮುಂಗೂದಲನ್ನು ಹಿಡಿದುಕೊಳ್ಳು : ಕಿಡಿನುಡಿದಿಂತು ನಡೆದು ಮುಂದಲೆಗೊಂಡು ಕೆಡಹಿ ಕೆಕ್ಕಳಗೆಳದರ್ದಗೆ ಅಡಿಯಿಟ್ಟು ಕರುಳ ಸೀಱುಂಬುಳಾಡುವನೆಂದು ಪೊಡೆಗೆ ಕೂರಸಿಯಿತ್ತು ದಾಗ (ಶ್ರೀರಾಂ. ೫೪೫). [ ಮುಂದಲೆ + ಕೊಳ್$_1$ ]

**ಮುಂದಲೆಬೊಟ್ಟು** (ನಾ). ಹೆಂಗಸರು ತಲೆಯ ಮುಂಭಾಗದಲ್ಲಿ ಧರಿಸುವ ಒಂದು ಬಗೆಯ ಆಭರಣ ; ಬೈತಲೆಬೊಟ್ಟು : ಮುಂದಲೆಬೊಟ್ಟು :– ಸ್ತ್ರೀವೇಷಕ್ಕೆ ಮಾತ್ರವೇ ಮೀಸಲಾಗಿರುವ ತೊಡಿಗೆ ಇದು (ಶಾರ್ಕಿಸು. ೪೬).

[ ಮುಂದಲೆ + ಬೊಟ್ಟು$_2$ ( < ಬಟ್ಟು) ]

**ಮುಂದಲೆವಣಿ** (ನಾ). = ಮುಂದಲೆಬೊಟ್ಟು : ವಣಿಜಸತಿಯರು . . . ಹಿಣಿಲ ಜುರಿಯ ಹೊಳೆವ ಮುಂದಲೆವಣಿಯ ಮುಕುರ ಮುಖಾಂಬುಜದ ಪವರ್ನುಣರ್ನುಣತ್ಕೃತಿ ಜಡಿಯೆ ನಡೆದುದು ಬೀದಿಬೀದಿಯಲಿ (ಕುಮಾ.ಗ. ೧೦-೦೬). [ ಮುಂದಲೆ + ಮಣಿ$_3$ ]

**ಮುಂದಲೆವಾಯ್** (ಕ್ರಿ). ತಲೆಯ ಮುಂಭಾಗಕ್ಕೆ ಹಾಯು,– ಎರಗು : ಹೊಯ್ದರೊಳಬಿದ್ದವರ ಮುಂದಲೆವಾಯ್ದು ತಿವಿದರು . . . ಉಭಯದ ಕಯ್ದುಗಾಱರು ನೀಗಿದರು ನಿಜಪತಿಯ ಹಣರುಣವ (ಕುಮಾ.ಭಿ. ೦೯-೦೦).

[ಮುಂದಲೆ + ಪಾಯ್$_1$]

**ಮುಂದಲೆವಿಡಿ** (ಕ್ರಿ). ತಲೆಯ ಮುಂಭಾಗದ ಕೂದಲನ್ನು ಹಿಡಿದು ಕೊಳ್ಳು : ಮುಂದಲೆಯ ಜುಟ್ಟನ್ನು ಹಿಡಿದುಕೊಳ್ಳು : ಪಾಂಚಾಲಸುತನು . . . ಐದಿ ಮುಂದಲೆವಿಡಿದು ಬಾಗಿಸಿ ಕೊಯ್ದನಾತನ ಕೊರಳನು (ಕುಮಾ.ದ್ರೋ. ೦೯-೨); ಅಪಸ್ಮಾರವತಿಕೋಪದಿಂ ರುದ್ರನಂ ಮುತ್ತೆ ಮುಂದಲೆವಿಡಿದು ಕೆಡಹಿ ಪಾದಂಗಳಿಂ ತೊತ್ತಳಂದುಳಿದು ತಾಂಡವ ರೂಪಮಂ ಧರಿಸಿ ಕುಣಿವುತಿರೆ (ಶಿಶಿಪು. ೨೦-೩೨).

[ಮುಂದಲೆ + ಪಿಡಿ$_1$]

**ಮುಂದಳ್$_1$** (ನಾ). ಮುಂಭಾಗದಲ್ಲಿರುವ ಸೈನ್ಯ ; ಮುಂಚೂಣಿಯ ಪಡೆ : ಮುಂದಳವನು ಪೊಯ್ಯುತ ಕದನದೊಳುರುಳದನವನು (ವರ್ಧಕ. ೬-೯೪); ಜಪಾನದವರು . . . ಮುಂದುವರಿಯುತ್ತ ಬಂದರೆ. ಅವರ ಮುಂದಳವನ್ನು ತಡೆಯುವದಕ್ಕಾಗಿ ಮೊಗಲ ಸರಾಯಿ ಎಂಬುವ ಎರಡನೆಯ ಸೇನಾಮುಖವೆಂದು ಬಗೆಯಲಾಯಿತು (ಪಕಪ. ೩೬).

[ ಮುಂ$_2$ ( < ಮುನ್$_2$ ) + ದಳ್$_2$ (=ದಳ) ]

**ಮುಂದಳ್$_2$** (ನಾ). ಮುಂಭಾಗದ ನೆಲ,—ಭೂಮಿ : ಗೋದಾವರಿಯ . . .ತುದ ನೀರನ್ನು ಬಾಗಿಲದ ಮುಂದಳಕೆ ಚಿಮುಕಿಸಿದಳು (ರಕ್ತರ. ೩೩೬). 'ಮನೆದಳ' ಪರಾ. [ಮುಂ$_2$ (< ಮುನ್$_2$) + ತಳ್ (= ತಲ) ]

**ಮುಂದಳರ್**, ಮುಂತಳರ್ (ಕ್ರಿ). = ಮುಂದರುಗು : ಮೋಣದೊಳ್ ಮುಂದಳರುತ್ತೀ ಪಾಡಿದಾಕೆಗಳ್ಗೆ ಪಾವುಡಮಂ ಕುಡುವೆಂ (ಶಶಿ. ೦೬-೦೩೩೪). **ಮುಂತಳರ್** : ಮುಂತಳರ್ದು[ಪಾಠಾಂ. ತಣದಿ] ಮಿಗೆ ತನ್ನ ಬಾಂಧವ ಸಂತತಿಯನೊಡಗೊಂಡು ನಿಷಧನ ಚಿಂತೆಯನು ಪರಿಹರಿಸಬೇಕೆಂದೈದಿತಾ ಹಂಸೆ (ನಳಚ. ೨-೯೨). [ಮುಂ$_2$ (<ಮುನ್$_2$) + ಅಳರ್]

**ಮುಂದಳೆ** (ಕ್ರಿ). ಮುಂದಕ್ಕೆ ಚಲಿಸು ; ಸಾಗು : ಆ ಬಲಂ ಕಂಡುದಧ್ರುಮಾರ್ಗದೊಳೆ ಮುಂದಳೆಯುತಿಹ ಮೇಘನಾದನಂ (ಕೈಬಿಡಾ. ೯-೦೩) ; ಸೌಮಿತ್ರಿ ಮತ್ತೆ ಭೂಜಾತೆಸಹಿತ. . . ಮುಂದಳೆದುಗ್ರಮೃಗಪಕ್ಷಿಗಣದಿಂದ ಘೋರ್ಮಿಸುವ ಹಳುವಮಂ ಪೊಕ್ಕನು (ಕೈಬಿಡಾ. ೦೯-೬).

[ಮುಂ₂ (< ಮುನ್₂) + ತಳೆ₁]

**ಮುಂದಱಿ** (ಕ್ರಿ). ೧. ಮುಂದಾಗುವುದನ್ನು ತಿಳಿ : ಭವಿಷ್ಯವನ್ನು ತಿಳಿದುಕೊಳ್ಳು : ಅಂತೊಗೆದನೇಕೋತ್ಪಾತಂಗಳಂ ಕಂಡು ಮುಂದಱಿವ ಚದುರರೆ ವಿದುರನಿಂತೆಂದಂ (ಕಂಶಾ. ೦-೦೩ ಪ) ; ಮುಂದಱಿಯದೆ ಪರೂಥವ ಕಳುಹಿ ಕೆಟ್ಟೆವು ಕಲಹಕವನಿಪನ . . . ಎಂದಳೈವಾಱಿತು ಸಕಲಸುರನಿಕರ (ಕೂರಾ. ೬-೫೦-೦೯). ೨. ಮುಂದಾಲೋಚನೆಯಿಂದ ಕೂಡು ; ದೂರದೃಷ್ಟಿಯನ್ನು ಹೊಂದು : ತಂದೆ ನಿಂದು ಮುಂದಱಿಯದೆ ಸೀತೆಯಂ (ಕಂರಾಶಾ. ೯-೦೬೦) : ಕಣ್ಣ ಕೋಪಕ್ಕೆ ಮುಂದಱಿಯದೆ ನುಡಿದೆ ಮನ ಮೆಚ್ಚಿ ಮರುಳಾದೆ ನೋಡವ್ವಾ (ಬಸವ. ೫೨೦) : ಮುಂದಱಿಯದ ಮುಗ್ಧೆಯೊಂದುದಕ್ಕೆ ನಗುತ್ತುಂ ನಡೆದು (ಶಕ್ತಿ. ೯-೩೪ ಪ). ೩. ದಾರಿ ಕಾಣು ; ದಿಕ್ಕು ತೋಚು : ಶಿವಶಿವಾ ಬಲುಮಬ್ಬಿನಲಿ ಮುಂದಱಿಯದೆನ್ನಯ ಕೊಬ್ಬನೇಮಣ್ಣಿಸುವೆನು (ಕುಪ್ರಾ. ಶೀ. ೬-೬೬) ; ಇತ್ತಲವನಿಪನಸುರಹರನ ಕಳುಹಿದ ಚಿಂತೆಗಿತ್ತು ನಿಜಬುದ್ಧಿಯಂ ಮುಂದಱಿಯದಿರೆ (ಕೈಬಿಡಾ. ೫-೨೦) ; ಭಾವಕಿಯೊರ್ವಳ ಬೆನ್ನಟ್ಟೆ ಕಡು ಮದನಾವಸ್ಥೆಯಿಂ ಮುಂದಱಿಯದೆ ನೀವಿಯನೆತ್ತಿ ಹಿಂಗೂಡಿ ನಗಿಪ ಹಾಸ್ಯ ಭಾವದ ವಿಟನೊರ್ವನೆಸೆದ (ಕಂಪಾ. ೬-೦೩೬).

[ಮುಂದು₁ (< ಮುಂತು₁) + ಅಱಿ]

**ಮುಂದಾಗು₁** 'ಮುಂತು₁' ಪರಾ.

**ಮುಂದಾಗು₂** 'ಮುಂತು₂' ಪರಾ.

**ಮುಂದಾಲೋಚನೆ** (ನಾ). ೧. ಮುಂದಾಗುವುದರ ಬಗೆಗಿನ ಆಲೋಚನೆ; ಮುಂದಿನ ಆಲೋಚನೆ : ಚಂದ್ರನಿಗೂ ಮಂಗಳಗ್ರಹಕ್ಕೂ ವಲಸೆ ಹೋಗುವ ಪ್ರಯತ್ನ ಈ ಮುಂದಾಲೋಚನೆಯಿಂದಲೆ ಆರಂಭವಾಗಿರ ದಿದ್ದರೂ, ಅದು ಬೇಗನೆ ಕೈಗೂಡಿದಷ್ಟು ಕ್ಷೇಮವೆಂದು ಕಾಣುತ್ತದೆ (ದೇಶಕ್ಕೆ. ೪೬). ೨. ವಿವೇಕ : ವಿವೇಚನೆ : ನಾನು ಆಗ ಮುಂದಾಲೋಚನೆಯಿಲ್ಲದೆ ಆ ಕೆಲಸವನ್ನು ಮಾಡಿದ್ದರಿಂದ ಈಗ ಪಶ್ಚಾತ್ತಾಪಪಡುತ್ತಿದ್ದೇನೆ (ರೂಢಿ). [ಮುಂದು₂ (< ಮುಂತು₂) + ಆಲೋಚನೆ]

**ಮುಂದಾಳ್**, ಮುಂದಾಳು(ನಾ). ೧. ಎಲ್ಲರಿಗಿಂತ ಮುಂದೆ ಇರುವವನು; ಮುಖಂಡ ; ನಾಯಕ : 'ಮುಂದಾಳ್ತನ' ಪರಾ. **ಮುಂದಾಳು** : ೧. ಆತ್ಮನಿರೀಕ್ಷಣೆಯಿಂದಲೇ ನಾವು ಮುಂದುವರೆಯಬಹುದು ಎಂಬ ಮುಂದಾಳುಗಳ ಭಾಷಣದಿಂದ ಏನೂ ಪ್ರಯೋಜನವಿಲ್ಲ (ಅಕಾ. ೩) ; ರಾಮರೂ ನಮ್ಮೂರಿನ ಒಬ್ಬ ಗಣ್ಯವ್ಯಕ್ತಿಗಳೆಂದೂ ಮುಂದಾಳುಗಳೆಂದೂ ಮಹಾಪುರುಷರೆಂದೂ ತಿಳಿದೇ ಇವರ ಸಹಾಯವನ್ನು ಅಪೇಕ್ಷಿಸಿರಬೇಕು (ರಾಯ. ೫೨) : ಶಾಸ್ತ್ರಜ್ಞರಲ್ಲಿ ಅವರು ಮುಂದಾಳು (ಪಶ್ಚಿಕೊ. ೯೦). 'ಮುಂದಾಳುತನ' ಪರಾ. ೨. ಮುಂದಕ್ಕೆ ಕರೆದೊಯ್ಯುವವನು : ಮುನ್ನಡೆಸುವವನು : ಅಂಧನ ಕೈಲಿ ಕೋಲಿತ್ತು ಕರದೊಯ್ವನು ಮುಂದಡಿ ತಪ್ಪಿ ಗುಂಡಿಗೆ ಕೆಡಪಲು ಅಂಧಕನ ತಪ್ಪೊ ಮುಂದಾಳಿನ ತಪ್ಪೊ (ಕಪಕ. ೦೨೦-೩). [ಮುಂದು₂ (< ಮುಂತು₂) + ಆಳ್₃]

**ಮುಂದಾಳಿಕೆ** (ನಾ). ನಾಯಕತ್ವ ; ಮುಂದಾಳುತನ : ಅವರ ಮುಂದಾಳಿಕೆಯಲ್ಲಿ ಇದರ ಕೆಲಭಾಗವನ್ನು ರಂಗದಲ್ಲಿ ತೋರಿ ನನ್ನ ಮನಸ್ಸಿಗೆ ಉಲ್ಲಾಸವನ್ನು ತಂದಿತು (ರೋಶುಂ. X, ಮುನ್ನುಡಿ).

[ಮುಂದಾಳು (< ಮುಂದಾಳ್) + – ಇಕೆ]

**ಮುಂದಾಳು** 'ಮುಂದಾಳ್' ನೋ.

**ಮುಂದಾಳುತನ** 'ಮುಂದಾಳ್ತನ' ನೋ.

**ಮುಂದಾಳ್ತನ**, ಮುಂದಾಳುತನ (ನಾ). = ಮುಂದಾಳಿಕೆ : ಹಿಂದುಸ್ಥಾನ ವಿಂದು ಪೂರ್ಣಸ್ವಾತಂತ್ರ್ಯ ಪಡೆದಿದೆ. ಪೌರ್ವಾತ್ಯಜಗತ್ತಿನ ಮುಂದಾಳ್ತನದ ದಾರಿಯಲ್ಲಿ ಹೆಜ್ಜೆ ಇಟ್ಟಿದೆ (ಅಬುಗಾಂ. ೯) ; ಯಾವ ಕಾರ್ಯಕ್ರಮವಾಗ ಬೇಕಾದರೂ ರಂಗನ ಮುಂದಾಳ್ತನ ಬೇಕೇಬೇಕು (ರಂಗರೂ. ೨೯). **ಮುಂದಾಳುತನ**: ಸಮಾಜದ ಮುಂದಾಳುತನವನ್ನು ವಹಿಸಿ (ಶ್ರೀಶ. ೦೯೯).

[ಮುಂದಾಳ್ + – ತನ]

**ಮುಂದಿಕ್ಕು**, ಮುಂತಿಕ್ಕು (ಕ್ರಿ). ೧. ಮುಂಭಾಗದಲ್ಲಿ ಇಡು ; ಎದುರಿಗೆ ಇರಿಸು : ಸೂಟ್ಬಟ್ಟನಾಗಳ್ ಜವಂ ಒಡಿದೀಡಾಡುವ ಮಾಟ್ಕೆಯಂತೆ ಪಲರಂ ಕೊಂದಿಕ್ಕಿ ಮೆಯ್ಮುಟ್ಟಿಪಂದೆಡೆಯೊಳ್ ಮಾಣದುರುಳ್ಚಿ ಕಟ್ಟಿ ರಿಪುವಂ ಮುಂದಿಕ್ಕಿದಂ ದ್ರೋಣನಾ(ಕಂಕಾ. ೨-೬೨). ೨. ಮುಂದೆ ಮಾಡು ; ಮುಂದೆ ಒಡ್ಡು : ಪರುಸದಿಂ ಶೇಷನಂ ಮುಂದಿಕ್ಕಿಕೊಂಡು ಮಣಿವೆರಸಿ ರಣಮಂಡಲಿಕೆ ಕಲಿಬುಭ್ರುವಾಹನಂ ಬರಲು (ಕೈಬಿಡಾ. ೨೫-೯೩). **ಮುಂತಿಕ್ಕು** : ೨. ಈ ಸಾಮಮಂ ಮುಂ ಪ್ರಯೋಗಿಸದೇ ಕಟ್ಟುವುದೆಂದು ದಂಡಮನೆ ಮುಂ ಮುಂತಿಕ್ಕುವಂ ಮಂತ್ರಿಯೇ (ಕಂಕಾ. ೯-೦೯).

[ಮುಂದು₂ (< ಮುಂತು₂) + ಇಕ್ಕು]

**ಮುಂದಿಡು**, ಮುಂತಿಡು (ಕ್ರಿ). ೧. = ಮುಂದಿಕ್ಕು ೧ : ಇವು ದಿವದೊಳಗಗ್ಗಳವೆನಿಸುವ ರತ್ನವ್ರಾತಮೆಮ್ಮ ಮನೆಯೊಳ್ ವಿಗಿಲಪ್ಪವು ನಿಧಿಗಧಿವಾಸಿಸಲಪ್ಪವೆಂದು ರತ್ನಂಗಳನಿಕರಮಂ ಮುಂದಿಟ್ಟಂ (ಅದಿಪು. ೦೨-೦೬) ; ಇತ್ತಲ್ ಸೌಮಿತ್ರಿಯುಂ ತನ್ನ ಮನೆಗೆ ಬಂದು ಪೊನ್ನ ಪುಡಿಯ ನತ್ತವಿರ ಮುಂದಿಟ್ಟು ಪೊಡಮಟ್ಟೊಡೆ (ಕಂಕಂ. ೦೫೬-೦) ; ದಿನಮಣಿಯರುಣನ ಮುಂದಿಡದೊಡವನೆಂತು ತಮಮಂ ತೂಳ್ದಂ (ಕಾಳಂಕ. ೦೦೦-೦೬೬). ೨. ಮುಂದುಗಡೆಯಲ್ಲಿ ನಿಲ್ಲಿಸು,– ಇರುವಂತೆ ಮಾಡು ; ಮುಂದುಮಾಡಿಕೊಳ್ಳು : ಅಲ್ಲಿಯ ಮುನಿಜನಮೆಲ್ಲಮಾ ಕೂಸುಗಳುಮಂ ಕುಂತಿಯುಮಂ ಮುಂದಿಟ್ಟೊಡಗೊಂಡು ನಾಗಪುರಕ್ಕೆ ವಂದು (ಕಂಕಾ. ೨-೨೯ ಪ) ; ಆನುಂ ಪ್ರಲಂಬಪ್ರಸೂದನನುಂ ಯಾದವಪರಿಸ್ಪಂದಮುಮಂ ಮುಂದಿಟ್ಟೊಡಗೊಂಡು ಪೋದೆವು (ಜಗಪು. ೯-೫೪ ಪ) ; ಕೇತಯ್ಯನಂ ಬಸವನಸಂಖ್ಯಾತರ ಸಮಕ್ಷದೊಳನುನಯದಿ ಲಾಲಿಸುತ ಹರುಷಂಬಟ್ಟು ಮುಂದಿಟ್ಟು . . . ಸಾಷ್ಟಾಂಗದಂಡಪ್ರಣಮಮಂ ಮಾಡಿ (ಬಸಪು. ೩೬-೫೦). ೩. ಮುಂದುವರಿ ; ಮುನ್ನುಗ್ಗು : ಕೊಂದು ಜಟಾಯುವನಾತು ಮುಂದಿಟ್ಟಾ ಜನಕಸುತೆಯನೊಯ್ದಂ (ಕರಾ. ೩-೦೯೪). ೪. ಮುಂದೆ ತರು ; ಗಮನಕ್ಕೆ ತರು: ಸೂಚಿಸು: ಬಯ್ಚಿಟ್ಟು ಕುಡುವುದೀ ಪಾತ್ರೆಯಂ ಎಂದದನವರ ವಶದೊಳಿರಿಸಿ ಹುತ್ತಡಿಯಿಟ್ಟು ಬಂಧು ಮತ್ತೊಂದು ಕುಹಕ ವನಲ್ಲಿ ಮುಂದಿಟ್ಟು . . . ಇದ ನೀವೆ ಬಲ್ಲಂತೆ ಪರಿರಕ್ಷಿಸುವುದೆನುತ (ತಿರುಶ. ಶೀ. ೦೦-೦೯) : ಅದೇ ಸಮಯದಲ್ಲಿ ಮನೆಯ ಯಜಮಾನಿತಿ ತನ್ನದೊಂದು ಬೇಡಿಕೆಯನ್ನು ಮುಂದಿಟ್ಟಳು (ಯೋಗಪು. ೨೯). ೫. ಒಪ್ಪಿಸು ; ಅರ್ಪಿಸು ; ಕೊಡು : ಬೆಸನಾವುದೆಮಗೆ ಬೆಸನಂ ಬೆಸಸೆನೆಯೇಬಾಟಿ ಯೆಂದು ಮುಂದಿಟ್ಟರ್ ಸ್ರಗ್ವಸನವಿಲೇಪನಭೂಷಾಪ್ರಸರಂಗಳನಲ್ಲಿ ಕೆಲಬರತಿಜಡಮತಿಗಳ್ (ಅದಿಪು. ೯-೧೨೫) ; ಸಂಗಂಗೆ ಸಾಷ್ಟಾಂಗದಿಂದಲ್ಲಿ ಪೊಡಮಟ್ಟು ಓಂಗದೀಶಂಗೆ ಭಯಭಕ್ತಿಯಂ ಮುಂದಿಟ್ಟು . . . ಬೀಳ್ಕೊಂಡ ನಕ್ಷೆಜಂ ಲಾಲಿಸುತ್ತಾಲಿಸುತ (ಬಸವ. ೩-೬). ೬. ತೋರ್ಪಡಿಸು; ಪ್ರಕಟಿಸು : ಪ್ರದರ್ಶಿಸು : ಸಪ್ತಕಕ್ಷಪರಿಕ್ಷಿಪ್ತಮಾಗಿ ಅಡಕಿಲ್ಗೊಂಡಿರ್ದುರ್ವೇಟಿಂ ಕುಳನಗಮೆನೆ ಶದ್ಭೂಮಿಕಾಸಪ್ತಕಂ ಮುಂದಿಡೆ ಚೆಲ್ವಂ (ಚಂದ್ರಪು. ೧-೦೪೨). ೭. ಪ್ರತಿಯಾಗಿ ನಿಲ್ಲಿಸು; ಎದುರಾಗಿ ಒಡ್ಡು : ಲಲನಾ ಸ್ವರ್ಣಘನಸ್ತನೋಲ್ಲಸಿತಲಾವಣ್ಯಾಮೃತಸ್ನಾನಮಂಗಲಮಂ ಮುಖ್ಯಮನಂ ದೊಡರ್ಚಿ ನೃಪಸೌಂದರ್ಯಕ್ಕೆ ಮುಂದಿಟ್ಟು ತನ್ನಲರ್ವಿಲ್ಲಂ . . . ಅರ್ಥ್ಯ

ಮನೆತ್ತಿ ಮನ್ಮಥನೃಪಂ ಕೊಟ್ಟಂ ಮಹೋತ್ಸಾಹದಿಂ (ಮಲ್ಲಿಕಾ. ೩-೩೦). ೮. ಉಂಟುಮಾಡು ; ಒದಗಿಸು : ಉದಯಂಗೆಯ್ವಮೃತಾಂಶುಬಿಂಬ ಮೆರ್ದೆಗಂ ಕಣ್ಗಂ ಮಹೋತ್ಸಾಹದೊಂದೊದವಂ ಮುಂದಿಡುವಂತೆ ತನ್ನ ಭುವನಪ್ರಖ್ಯಾತಸೌಂದರ್ಯದಿಂ . . . ಮನಂಗೊಳಿಸಿದಂ ಸಂಸಾರಸಾರೋದಯಂ (ಆದಿಪು. ೩-೯೨) ; ಜವದ ಜಾಣುಮೆಯ್ಯುಱಿದು ಸೂಳ್ಗಳು ಸವಿಯ ಮುಂದಿಡೆ ಮೆಱೆವ ಮೈಗುಡೆ ಸವಿಸುಸಿಲ ಸುಖರಸದೊಳೋಲಾಡಿಸಿದನಾ ಕುವರ (ಸಾಳ್ವಭಾ. ೯-೧೧); ತನ್ನ ಕುಲಕಂ ಚಲಕಂ ಮುಂದಿಟ್ಟು ಕುಂದ ನೊಂದಿದ ದಂದುಗದೊಳ್ ಕೂಂಟಿ ನಡೆವ ಕಲಿಯುಂ ಕಲಿಯೋ ! (ರಾಮಾಶ್ವ. ೧೨೬-೧೯). ೯. ನೆಪವಾಗಿ ಇಟ್ಟುಕೊಳ್ಳು; ಕಾರಣವಾಗಿ ಮಾಡಿಕೊಳ್ಳು : ಮುಂದಿಟ್ಟು ಪಗೆಕಾಯ್ದ ಪೊಲನೆಯರ್ಕೇಸ್ ಕಲಹ ಮನ್, ಅರ್ವಟಿಸಿ ಮುಳಿದಾರ್ದು ನಾಡ ಮೇಲ್ ನುರ್ಗಿದನ್ (ಅಂತಿಗೊ. ೬-೯೩). ಮುಂತಿಡು : ೧. ಜಾಂಬವತಿಯೆಂಬ ಆತನ ಕುಮರಿ ಕನ್ಯಾರತ್ನವು ಈ ಶಮಂತರತ್ನವನ್ನು ಸಹಾ ಕೊಟ್ಟು ನನ್ನ ಮನ್ನಿಸಿದನು ಎಂದು ಅವರುಗಳ ಮುಂತಿಟ್ಟು (ಶಾತ್ಸ. ೧೧೧-೨). ೨. ಅಂತು ಧರ್ಮಪುತ್ರನಂ ಮುಂತಿ[ಪಾಠಾಂ. ದಿ]ಟ್ಟು ಭೀಮಾರ್ಜುನನಕುಲಸಹದೇವರುಂ ದುರ್ಯೋಧನನಂ ಮುಂತಿಟ್ಟು ಯುಯುತ್ಸು ದುಶ್ಶಾಸನ. . . ಸದ್ಬಾಹುಗಳ್ ಮೊದಲಾಗಿ ನೂರ್ವರುಂ ಬಂದು (ಶಂಕಭಾ. ೨-೬೦ ವ). ೪. ಹಿಮುಕ್ಕೃದ್ವಂಶಜರಪ್ಪ ಪಾಂಡುಸುತರಂ ಕೆಯ್ಕೊಂಡು ನಿನ್ನಯ್ದು ಬಾಡಮನಿತ್ತುಂ ನಡಪೆಂದು ಸಾಮಮನೆ ಮುಂ ಮುಂತಿಟ್ಟೊಡೆ (ಶಂಕಭಾ. ೯-೫೮). ೬. ಶಿವಲಿಂಗ[ಂ] ಮೂರ್ತಿಗೊಂಡು ನಂದಿಯ ಹೃದಯಕಮಳಮನೊತ್ತರಿಸಿ ಪೊಱಮಟ್ಟು ಸದ್ಯೋಜಾತಮುಖಮಂ ಮುಂತಿಟ್ಟೊಳಗೊಳಗೆ ಗಳಗಳನೆ ನಡೆದು ಬರೆ (ಬಸರ. ೯-೩೦). ೧೦. ಮುಂದೆ ನಿಲ್ಲು; ಪ್ರಧಾನವಾಗಿ ನಿಲ್ಲು : ಅಂತವರ್ಗೆ ಜಾತಕರ್ಮನಾಮಕರಣಾನ್ನಪ್ರಾಶನಚೌಲೋಪನಯನಾದಿಷೋಡಶಕ್ರಿಯೆಗಳಂ ಗಾಂಗೇಯಂ ತಾಂ ಮುಂತಿಟ್ಟು ಮಾಡಿ (ಶಂಕಭಾ. ೧-೮೭ ವ). [ಮುಂದು$_2$ (< ಮುಂತು$_2$) + ಇಡು$_1$]

**ಮುಂದಿರ್**, ಮುಂತಿರ್ (ಕ್ರಿ). ೧. ಮುಂಭಾಗದಲ್ಲಿರು; ಎದುರಿನಲ್ಲಿರು; ಸಮ್ಮುಖದಲ್ಲಿರು : ಧುರದೊಳ್ ಮೂಱುಂಲೋಕಂ ನೆರೆದಿರೆಯುಂ ಕುಡುವ ಪೊ[ಟ್ಟ]ಱೊಳ್ ಮೇರುವೆ ಮುಂದಿರೆಯುಂ ಬೇರದ ಬಿಯದಂತರಕ್ಕೆ ಕಿಱಿದೆಂದು ಚಿಂತಿಪಂ ಪ್ರಿಯಗಳ್ಳಂ (ಶಂಕಭಾ. ೧-೯೮); ಕುರುಡರ್ನೂರ್ವರ್ನೆರೆದುಂ ಸುರಗಿರಿ ಮುಂದಿರ್ದುದಾದೊಡಂ ಕಾಣ್ಬರೆ (ದರ್ಪಣಮ್. ೭-೬೬); ಮುಂದಿರ್ದ ವೃಷಭಮುಖನಂ ಕರೆವುತಿರಲಲ್ಲಿ ಹರುಷದಿಂದೈತಂದು ಕೈಮುಗಿದು ನಿಂದಿರಲು (ಬಸರ. ೧-೨೧೩). ಮುಂತಿರ್ : ೧. ಮುಂತಿರೆ ಪಂಚಲಂ ಬೆಸಸಿ ಪಿಂತಿರೆ ನಾಮ್ಮಡಿತ್ತೈಲನಾಂತ ಸಾಮಂತಕದಂಬಕಂ ತೊಲಗೆ ಪಂಚಲನಂ ಪೆಣದಿಕ್ಕಿ ಕೊಂದ ಶೌರ್ಯ್ಯಂ ತನಗಾಗೆ (ಇಲ. XII. ೯೬-೯; 1187). ೨. ಮುಂದಾಗಿರು; ಪ್ರಮುಖವಾಗಿರು : ಮುಂತಿರೆ ಕೂರ್ಪ ನಯಜ್ಞತೆ ಪಿಂತಿರೆ ರಿಪುಮಂಡಳಂಗಳಂ ಕೊಂಡಿರೆ ನಿಶ್ಚಿಂತಮನಸಿ ಕೂರ್ಪಂ ತರ್ಪಂತುಪಶಮಮಿರ್ದುದಾ ನರೇಂದ್ರೋತ್ತಮನೊಳ್ (ಶಾಂತಿಪು. ೧೧-೧೧೧). [ಮುಂದು$_2$ (< ಮುಂತು$_2$) + ಇರ್$_1$]

**ಮುಂದಿರಿ** (ನಾ). ಒಂದು ಬಗೆಯ ಮರ ಮತ್ತು ಅದರ ಕಾಯಿ; ಗೇರು ; ಗೋಡಂಬಿ : 'ಮುಂದಿರಿಪಪ್ಪು' ಪರಾ.

[ದೇ.॥ ತಮಿ. ಮುನ್ತಿರಿ ; ಮಲ. ಮುನ್ದಿರಿ]

**ಮುಂದಿರಿಪಪ್ಪು** (ನಾ). ಗೇರುಪಪ್ಪು : ಗೋಡಂಬಿ, ಗೇರುಪಪ್ಪು, ಮುಂದಿರಿಪಪ್ಪು, ಜಿಡಿ (ಪ್ರಕಿಗ. ೬-೧೧೩).

[ಮುಂದಿರಿ + ಪಪ್ಪು (< ಪರುಪು)]

**ಮುಂದಿರಿಸು**, ಮುಂತಿರಿಸು (ಕ್ರಿ). ೧. = ಮುಂದಿಕ್ಕು ೧ : ಲವಲವಿಕೆಯುಂ ಪರಿಯಣಮಂ ಬಿತ್ತರಿಸಲುಂ ಪದ್ಮಿಕೆಯುನಗಲಂ ತಂದು ಮುಂದಿರಿಸಲುಂ . . . ಪೇಟಿಪ್ಪಾಗಳ್ (ಅಜಿತ. ೬-೨೦ ವ); ಸಂದು ಘಿಂಗಿಲಿಲ್ಲವಡೆ ತಪ್ಪಿಂತೆಂದು ಭಂಡಾರದ ಸಿವುಡಿಯುಂ ಮುಂದಿರಿಸಿ ಬಸವಣ್ಣನಾ ಕರಣಿಕರನೋಡಿಸಲು (ಬಸಪು. ೩೦-೨೯). ೨. ಮುಂಭಾಗದಲ್ಲಿ ಇರುವಂತೆ ಮಾಡು; ಮುಂದುಗಡೆಯಲ್ಲಿ ನಿಲ್ಲಿಸು : ತನ್ನಯ ರಾಣಿವಾಸಮಂ ಕರೆಸುತ್ತ ಬಂದವರನೋಯಾರದಿಂದ ಮುಂದಿರಿಸುತ್ತ ತೋಱಲೆಲ್ಲರನೊಲ್ಲೆನೊಲ್ಲೆನೆಂದೆನುತಮಿರೆ (ಇಹರ. ದೇ. ೩೩-೧೨). ಮುಂತಿರಿಸು : ೧. ಸಕಲ ವಸ್ತ್ರಾಭರಣದುಡುಗೊಱೆಗಳ ಮುಂತಿರಿಸಿ ಸತ್ಕುಪಾರಂಗೆಱಗಿ ತನ್ನ ಮನೆಗಂ ತಿರುಗಿದಂ ಬಿಜ್ಜಳಂ (ಚೆಬಸ. ೩-೧೮). ೨. ನೂರ್ವರ್ ತಮ್ಮಂದಿರುಮಂ ಪಿಂತಿರಿಸಿ ಲಕ್ಕಣಂ ಮೊದಲಾಗೆ ನೂರ್ವರ್ ಮಕ್ಕಳುಮಂ ಮುಂತಿರಿಸಿ (ಶಂಕಭಾ. ೯-೨೮ ವ). [ಮುಂದು$_2$ (< ಮುಂತು$_2$) + ಇರಿಸು]

**ಮುಂದಿರುಹಿಸು** (ಕ್ರಿ). ಮುಖವನ್ನು ತಿರುಗಿಸುವಂತೆ ಮಾಡು ; ಹಿಮ್ಮುಖವಾಗುವಂತೆ ಮಾಡು : ಅರ್ಜುನನು . . . ಕರ್ಣ ಮೊದಲಾದವರ ಮುಂದಿರುಹಿಸಿದು ಗರ್ಭವ್ಯೂಹವನು ಮುಱಿದ (ಕುಮಾರವ್ಯಾ. ಶಾ. ೨೯೦). [ಮುಂ$_2$ (< ಮುನ್$_2$) + ತಿರುಹಿಸು ( <ತಿರುವಿಸು)]

**ಮುಂದಿವಸ** (ನಾ). ಮಾರನೆಯ ದಿನ; ಮುಂಚಿನ ದಿವಸ : ಇಂದು ಚೊಡನು ಸುತ್ತಿದೋಲೆಯನೋದು ನಂದಿಯ ಹಳವಿಗೆಯನಾಗಳು ಹಿಡಿದುಕೊಂಡು ಮುಂದಿವಸದಲಿ ಹಗಲುಪಡಿಹಱಿಯುಂದವಲಿ ಕಣಜಂಗಳಿಗೆ ಹರಿತಂದು ಪಡಿಗಳನಳೆವ ಬಾಚರಸಂಗೆ ಇಂತೆಂದ (ಬಸಪು. ೫೩-೧೭).

[ಮುಂ$_2$ (< ಮುನ್$_2$) + ದಿವಸ]

**ಮುಂದಿೞಿಪು** (ಕ್ರಿ). ಮುಂಭಾಗದಲ್ಲಿ ಇಳಿಸು ; ಮುಂದುಗಡೆಯಲ್ಲಿ ಇಳುಹು : ಪಡಿಯಱತಿ. . . ಕನ್ನಡವಕ್ಕಿಯ ಪಂಜರಮಂ ತಡಮುದೆ ತಂದವನಿಪತಿಯ ಮುಂದಿೞಿ[ಪಾಠಾಂ.ೞು]ಪುವುದುಂ (ಕಾದಂಪೂ. ೮೨) ; ಮುಂದಿೞಿಪಿ ತನ್ನ ತಂದಾ ನಂದನೆಯಂ (ನೇಮಿಪು. ೬-೭೭).

[ಮುಂ$_2$ (< ಮುನ್$_2$) + ಇೞಿಪು]

**ಮುಂದು$_1$** ' ಮುಂತು$_1$ ' ನೋ.

**ಮುಂದು$_2$** ' ಮುಂತು$_2$ ' ನೋ.

**ಮುಂದುಗ** (ನಾ). ಮುಂದಾಳು ; ನಾಯಕ : ' ಮುಂದುಗತನ ' ಪರಾ.

[ಮುಂದು$_2$ (< ಮುಂತು$_2$) + – ಗ$_2$]

**ಮುಂದುಗಡೆ$_1$** (ನಾ). ೧. ಮುಂಭಾಗ; ಮುಂದಿನ ಭಾಗ : ಮುಂತೆ = ಮುಂದುಗಡೆಯಲ್ಲಿ (ಕಮಠ. ೯೨ ಟೀಕೆ); ಅವನು ಮುಂದುಗಡೆಯ ಕುರ್ಚಿಯಲ್ಲಿ ಕುಳಿತಿದ್ದಾನೆ (ರೂಢಿ). ೨. ಎದುರು; ಅಭಿಮುಖ : ನಾವು ಹೋಗುವಾಗ ಮುಂದುಗಡೆಯಿಂದ ಒಂದು ಕಾರು ಬಂದಿತು (ರೂಢಿ).

[ಮುಂದು$_2$ (< ಮುಂತು$_2$) + ಕಡೆ$_3$]

**ಮುಂದುಗಡೆ$_2$** (ಅ). ಮುಂಭಾಗಕ್ಕೆ; ಮುಂದೆ : ನಡೆ ಪಜ್ಜೆವಿಡಿ . . . ಅಡಗಿ ಪೊಯ್ಜಡಿ ಕೋಲನಿಡು ಮುಂದುಗಡೆ ನಾಯ ಬಿಡು (ಜೈಮಿಭಾ. ೨೮-೯೩); ಅವರ ಮನೆಯ ಮುಂದುಗಡೆ ಬೃಂದಾವನವಿದೆ (ರೂಢಿ).

[< ಮುಂದುಗಡೆ$_1$]

**ಮುಂದುಗತನ** (ನಾ). ಮುಂದಾಳುತನ ; ಮುಖಂಡತ್ವ; ನಾಯಕತ್ವ : ನಿಯೋಗಿ ಹೂವಯ್ಯನ ಮುಂದುಗತನದಲ್ಲಿ – ಇಕ್ಕೇರಿಯ ಸಂಸ್ಥಾನದ ರಾಯಭಾರದ ಪ್ರವೇಶ (ಮುಂತ್ರಕ. ೧೨೦-೧೯). [ಮುಂದುಗ + – ತನ]

**ಮುಂದುಗಾಣ್**, ಮುಂತುಗಾಣ್, ಮುಂದುಗಾಣು (ಕ್ರಿ). ೧. ಮುಂದಿರುವುದನ್ನು ಕಾಣು ; ಮುಂಭಾಗವನ್ನು ನೋಡು : ಅಯ್ಯಾ ನಿಮ್ಮ ಮಹಾವ್ರತಗಳಸಗಲಿ ಬರ್ದುಂಕಲಾಱೆನು ಶಿವಧೋ ಶಿವಧೋ ಕಂಗಳಶ್ರುಗಳಲ್ಲಿ ಮುಂದುಗಾಣೆನು (ಬಸವ. ೩೭೮). ೨. ಮುಂದಾಲೋಚನೆಯನ್ನು ಹೊಂದು ; ವಿವೇಚನೆಯನ್ನು ಪಡೆ : ಸಪ್ತಾವಸ್ಥೆಯ ಮದದಿಂ ಮುಂದುಗಾಣದೆ ತನ್ನ ನೆಳಲಂ ಪ್ರತಿಗಜವೆಂದುಱಿದೆ

ಕಜಾತ್ರೈಜಗಿ . . . ಸಾರುತಿರ್ಪ ಮದಾಂಧಗಂಧಸಿಂಧುರಂಗಳಿಂ (ಗಂಪ. ೧-೧೨೯ ವ) ; ಉಚಿತಮನುಸಿರ್ದೊಡಮದನೊಂದುಮನವಧರಿಸ ದವಳನೊಲಿಸುವ ಬಗೆಯುಂ ತುದಂ ಕಾತರನಂತೆ ದಲೆಂದುಮುದೇಂ ಮುಂದುಗಾಣ್ಬರೇ ಕಾಮಾಂಧರ್ (ಕಾರ್ಕಳ. ೩-೯೭). ೩. ದಾರಿ ಕಾಣು ; ದಿಕ್ಕು ತೋಚು : ವಿಹತಯೂಧಪತಿಪುಷ್ಪ ಕರಿಕಲಭ ದಂತತಿತ್ರಸ್ತನಾಗಿ ಮುಂದುಗಾಣದೆ ವಿಹ್ವಲನಾಗಿ . . . ಬರ್ಪನ್ನೆಗಂ (ಕಾದಂಬ. ೪೩೭). **ಮುಂತುಗಾಣ್** : ೨. ಮುಂತುಗಾಣದ ಮೂಜು ಲೋಕದ ಪ್ರಭುಮನೀನಿಂತೊಯ್ವರೆ ತರಳಾಕ್ಷಿ (ಅಜಿತ. ೯-೨೭೦). **ಮುಂದುಗಾಣು** : ೨. ಮುಂದುಗಾಣದ ಪರಮಯೋಗಾನಂದಮೂರ್ತಿ ಯನನ್ಯಭಾವನೆಯಿಂದೆ ಭಾವಿಸಲಹುದೆ (ಬಸವ. ೩೪-೧೧) ; ಭೀಷ್ಮನ ಶರಾತಿಗಂದಿದಿರಾದ ಮದದಲಿ ಮುಂದುಗಾಣನಿವ (ಕುಮಾರವ್ಯಾ. ೨-೪೦). ೩. ಬಂದಹೆನೆಂದಱಿಯಲಿಕ್ಕಿರ್ಪ್ಪಗಿ ಸಂದೇಹ ಬಿಡದು ಮುಂದುಗಾಣದು ಲೋಕ (ಬಸವ. ೪೨) ; ಸೈರಂಧ್ರಿ ತನ್ನಯ ಮಂದಿರಕೆ ಬರೆಯಾ ತಿಲೋತ್ತಮೆ ಮುಂದುಗಾಣದೆ ನಗ್ನೆಯಾಗಿರೆ ಶಾಪವಶೆಯಾಗಿ (ಸಂಕಷ. ೩-೦೯) ; ತಾಪದಲಿ ಮುಮ್ಮುಳಿತನಾದನು ಮುಂದುಗಾಣದೆ ಹಲವನೆಣಿಸುತ ಹರುಷ ಗೆಟ್ಟಂತೆಂದನಾ ಮುನಿಪ (ತೊರವ. ೧-೯-೨೯). ೪. ಮುಂದಾಗುವು ದನ್ನು ತಿಳಿ ; ಭವಿಷ್ಯವನ್ನು ಅರಿ : ಮಾಣದೆ ಅರಳೆಯು ತಿಟ್ಟನೆ ತಿರುಗುವ ಗಾಣದೆತ್ತಿನಂತೆ ಪೂರ್ವಲಿಖಿತ ಮುಂದುಗಾಣಲೀಯದು (ಬಸವ. ೩೯೦). [ಮುಂದು₂ (< ಮುಂತು₂) + ಕಾಣ್]

**ಮುಂದುಗಾಣಿಸು** (ಕ್ರಿ). ದಾರಿ ತೋರು ; ಉಪಾಯ ತೋಚು : ಇಂದಿವರನಾಂ ಕಳಿಪಲಸುರವೈರಿಗೆ ಬೇಸಱೊಂದಿನಿಸು ತೋಱದಿರ್ಪೊಡೆ ಜೀಯ ತನಗಿದಕೆ ಮುಂದುಗಾಣಿಸದು (ಕೃಬಿಶಾ. ೨-೪೩).

[ಮುಂದು₂ (< ಮುಂತು₂) + ಕಾಣಿಸು]

**ಮುಂದುಗಾಣು** 'ಮುಂದುಗಾಣ್' ನೋ.

**ಮುಂದುಗಾಣ್ಕೆ** (ನಾ). ಮುಂದಿನದನ್ನು ಕಾಣುವಿಕೆ ; ಮುಂದಾಲೋಚನೆ ; ದೂರದೃಷ್ಟಿ : ಪೊಗಟ್ಟಿನೆಜ್ಜೆ. ನಿನ್ನ ಮುಂದುಗಾಣ್ಕೆಯನ್ (ಅಶ್ವತ್ಥ. ೨೨-೪೪೪). [ಮುಂದು₂ (< ಮುಂತು₂) + ಕಾಣ್ಕೆ]

**ಮುಂದುಗಿಡಿಸು** 'ಮುಂದುಗೆಡಿಸು' ನೋ.

**ಮುಂದುಗಿಡು** 'ಮುಂದುಗೆಡು' ನೋ.

**ಮುಂದುಗೆಡಿಸು**, ಮುಂತುಗೆಡಿಸು, ಮುಂದುಗಿಡಿಸು (ಕ್ರಿ). ೧. (ಭಯ, ದುಃಖ, ಕೋಪ, ಮುಂತಾದವುಗಳಿಂದ) ದಿಕ್ಕುತೋಚ ದಂತೆ ಮಾಡು ; ಕಂಗೆಡಿಸು : ಪಟ್ಟದಾನೆ . . . ಸಪ್ತಾವಸ್ಥೆಯ ಮದದಿಂ ಮುಂದುಗಾಣದೆ ಮಾವಂತರಂ ಮುಱಿದಿಕ್ಕುತುಂ ಆರೆಕಾಱರ ನರೆದು ಸಣ್ಣಿಸುತ್ತುಂ ಮಂದಿಯುಂ ಮುಂದುಗೆಡಿಸುತುಂ . . . ಬಂದು (ಪಂಪಭಾ. ೨-೨೪) ; ರಾಧೇಯನರಸನ ಮುಂದುಗೆಡಿಸದೆ ಮಾಣನೋ (ಕುಮಾರವ್ಯಾ. ೧೧-೩೨) ; ವಿಜಯನ ವಾಜಿ ಬಂದು ಕೊಳಸಂ ಪೊಕ್ಕು ಸೀಗುರ್ಡಿಸದು ಪುಲಿಯಾಗಿ ಮುಂದುಗೆಡಿಸಿತು (ಕೃಬಿಶಾ. ೦೫-೩೩). ೨. ವಿವೇಕವಿಲ್ಲದಂತೆ ಮಾಡು ; ವಿವೇಚನೆಯನ್ನು ಕಳೆದುಕೊಳ್ಳುವಂತೆ ಮಾಡು : ಕನಕಲೋಭ ಮನಲೋಭ ಧನಲೋಭ ಮುಂದುಗೆಡಿಸಿ ಕಾಡುವೆನ್ನ (ಬಸವ. ೩೦೫). **ಮುಂತುಗೆಡಿಸು** : ೧. ಮಱಹು ಮನವ ಮುಂತುಗೆಡಿಸಲು ಹರಮಸಂ ಮಿಱಿಲಾದಿಮಯ್ಯಂ ತಾನಿದಿರಿದೆಂದಱಿಯ ದಿರುತಿರಲ್ಕಾ ದಿನಂ ತೀರ್ದುದು (ಸೋಮಕು. ೪-೯). ೩. ನಾಶಮಾಡು ; ಧ್ವಂಸಗೊಳಿಸು : ಶರಣ್ಬೊಕ್ಕ ಸದ್ಭಕ್ತಸಂತತಿಯಘತಿಮಿರವನು ಮುಂತುಗೆಡಿಪ ಮುನ್ನೇಸಱಂದದಿ ಮುನಿಕಾಂತನ ಮೂರ್ತಿಯೊಪ್ಪಿದುದು (ತ್ರಿಶಂಕ. ೧-೩೭). **ಮುಂದುಗಿಡಿಸು** : ೧. ಭೂತಳದೊಳ್ ಹಿಮ ಮೊತ್ತರಿಸಿತು ಭೂವನಜನಮನುಱೆ ನಡುಗಿಸುತಂ . . . ಮುಂದುಗಿ[ಡಿಸುತ್ತುಂ. ಗೆ]ಡಿಸುತ್ತುಂ ಮುಸುಕಿಡುತ್ತುಂ (ಗಂಪ. ೯-೩೯) ; ಕಳ್ಳಪಡಗಿನ ವರ್ಗಳ್ ರತ್ನಂ ತುಂಬಿರ್ದ ತದ್ವಹಿತ್ರಮನಂಬುಗಳಿಂದೆಚ್ಚು ಮುಂದುಗಿಡಿಸಿದರಾಗಳ್ (ಚಾಳು. ೦೨-೫೩). [ಮುಂದುಗೆಡು + -ಇಸು₃]

**ಮುಂದುಗೆಡು**, ಮುಂತುಗೆಡು, ಮುಂದುಗಿಡು (ಕ್ರಿ). ೧. (ಭಯ, ದುಃಖ, ಕೋಪ ಮುಂತಾದುವುಗಳಿಂದ) ದಿಕ್ಕು ತೋಚದಾಗು ; ಕಂಗೆಡು : ಸಂಸಾರವೆಂಬ ಸರ್ಪ ಮುಟ್ಟಲು ಪಂಚೇಂದ್ರಿಯವಿಷಯವೆಂಬ ವಿಷದಿಂದೆ ಆನು ಮುಂದುಗೆಟ್ಟೆನಯ್ಯ (ಬಸವ. ೨೦) ; ದಸಿ . . . ಇಂತಂಗಾಲ ನೆಟ್ಟು ಕಟ್ಟುಗಿಯಲಾ ನೋವಿನಿಂ ನಡೆಯುಡುಗುತಂದು ನೊಂದು ಕಂದಿ ಕುಂದಿ ಮುಂದುಗೆಟ್ಟು (ಉದ್ಭಟ. ೧೧-೧೧೩ ವ) ; ವಿವಿಧ ಭಾವದ ಭೇದದಲಿ ಮನ ಮುಂದುಗೆಡುತಿರ್ದುದು ಧನಂಜಯನ (ಕುಮಾರ. ೬-೫೨) ; ವಿರಹದೆ ಪಲುಬುವಳಳುವಳು ಮುಂದುಗೆಡುವಳು ಚಿಂತಿಪಳು (ಸೌಂದರ. ೯-೨೦೫). ೨. ವಿವೇಕವಿಲ್ಲದಾಗು; ವಿವೇಚನೆಯನ್ನು ಕಳೆದುಕೊಳ್ಳು : ನಾರಿಯೆಂಬ ರೂಪಿಂಗೆ ನೀವು ಒಲಿದು ಬಂದಿರಣ್ಣ ಮೂತ್ರವು ಬಿಂದು ಒಸರುವ ನಾಳವೆಂದು ಕಂಗಾಣದೆ ಮುಂದುಗೆಟ್ಟು ಬಂದಿರಣ್ಣ (ಮಹಾದೇ. ವ. ೬೬-೦೬೬) ; ಎಲ್ಲರುಂ ಮುಂದುಗೆಟ್ಟೇನುವಂ ಕಾಣದಿರೆ ಎಲ್ಲರ್ಗೆ ಭಯವೇಱೆ ನುಡಿ ಮುಂದುಗೋಱದಿರೆ (ಶುಕಸ. ವೇ. ೬೬-೬). ೩. ಏಳಿಗೆಯುಂ ಕೆಡು; ಭವಿಷ್ಯವು ಹಾಳಾಗು: (೬). ೪. ನಷ್ಟಕ್ಕೊಳಗಾಗು; ಹಾನಿಗೊಳ್ಳು : (೬). **ಮುಂತುಗೆಡು** : ೧. 'ಮುಂತುಗೆಡಿಸು' ಪರಾ. **ಮುಂದುಗಿಡು** : ೧. ಕಾಮನ ಬಾಣಕ್ಕೆ ಗುಱಿಯಾಗಿ ಮಱುಗಿ ಮಲ್ಲಳಿಗೊಂಡು ಮೆಲ್ಲನೆಳ್ದು ಮುಂದುಗಿ[ಡುತ್ತುಂ. ಗೆ]ಟ್ಟಂತಂತೆ ಸಿಂಗರಿಸಿ ಸಿಡಿಮಿಡಿಗೊಂಡು ನಡೆತರ್ಪಾಗಳ್ (ಗಂಪ. ೨-೧೧೫ ವ) ; ಮುಂದುಗಿಡೆ ಗೂಗೆ ಬೆಳಗದೆ ನಿಂದನೆ ರವಿ ಜಗಮನಂತೆ ಕವಿ ದುರ್ಜನನೇಂ ಮುಂದುಗಿಡೆ ಬುಧರ್ಗೆ ಪರಮಾನಂದಂಬಡೆವಂತು ಪೇೞದಿರ್ಪ್ಪುಮೆ ಕೃತಿಯುಂ (ಶಾರ್ಙ್ಗಚ. ೧-೮೫). [ಮುಂದು₂ (< ಮುಂತು₂) + ಕೆಡು₁]

**ಮುಂದುಗೆಯ್** (ಕ್ರಿ). ಮುಖ್ಯವಾದುದೆಂದು ಪರಿಗಣಿಸು : ನಿನಗಪ್ಪರಸ ದುರ್ಯೋಧನನೊಲಪಂ ಮುಂದುಗೆಯ್ದು ಬೆಸಕಯ್ವರೆ ನಿನ್ನನುಜರೆ ರಟ್ಟಿಸೆಗಂ ಕಿಸುಱೆನಿಸಾಗದು ಮಗನೆ ನೀನೊಡಂಬಡವೇಱ್ಕುಂ (ಪಂಪಭಾ. ೯-೬೩). [ಮುಂದು₁ (< ಮುಂತು₁) + ಕೆಯ್₁]

**ಮುಂದುಗೊಳ್**, ಮುಂತುಗೊಳ್, ಮುಂದುಗೊಳ್ಳು (ಕ್ರಿ). ೧. ಮುಂದೆ ಇಟ್ಟುಕೊಳ್ಳು : ತನತನಗೆ ಪೊನ್ನ ರಾಶಿಯನನವರತಂ ಮುಂದುಗೊಂಡನೇಕ ಕುಬೇರರ್ ಜನಿಯಿಸಿ ನಿಂದಂತಿರ್ಪುದು ಕನಕವ್ಯವಹಾರದಿಂದೆ ವೈಶ್ಯಕದಂಬಂ (ಗಂಪ. ೨-೯೫). ೨. ಮುಖ್ಯವಾದುದಾಗು; ಪ್ರಮುಖವೆಂದು ಪರಿಗಣಿಸು : ತನ್ನ ಸ್ವೇಚ್ಛಾಲೀಲಾವಿಲಾಸದ ನೆನಹಿಂದ ತನ್ನ ಚಿತ್ಪ್ರಭಾಸಾಮರ್ಥ್ಯಶಕ್ತಿಯು ಮುಂದುಗೊಂಡು . . . ಅನಂತಕೋಟಿ ಆತ್ಮರುಗಳನು ತನ್ನಲ್ಲಿಯೆ ಪುಟ್ಟಿಸಿ (ಚೆನ್ನಸಂ. ೨-೨) : ಮುಂದೆ ತಮಂಧವಿಟ್ಟಣಿಸಿ ರಾಹುವಿನಂತಿರೆ ಪೂರ್ವವೈರಮಂ ಮುಂದುಗೊಳುತ್ತೆ ಎನ್ನನಿದು ಮಾಡುವ ಪಾಳ್ಕೆಯನಿಂದು ಮಾಳ್ಪೆನಾನೆಂದು ತದೀಯರೂಪನುಱೆ ನುಂಗೆ (ಗಂಪ. ೪-೧೧೧). **ಮುಂತುಗೊಳ್** : ೩. ಮುಂದಾಗು; ಮುನ್ನುಗ್ಗು; ಮುಂದುವರಿ : ಮುಂತುಗೊಂಡಲ್ಲಿ ಜಗಳವ ಹತ್ತಿಸುವೆನೆಂದು ಚಿಂತಿಸುವ ಮನ ಕೊಂಡೆಯಕ್ಕೆಳಸಿ ಗದಗದನೆ ತಿಂತಿಮಸಗುವ ಬಾಯಿ . . . ಸಿಂಗರಂ ನಾರದಂಗೆ (ಸೋಮಕು. ೧-೨೯). **ಮುಂದುಗೊಳ್ಳು** : ೨. ಅಳಿಯಾಸೆಯನ್ನೇ ಮುಂದುಗೊಂಡು ಸುಳಿದಾಡಿ . . . ತನ್ನನ್ನೇ ಮಾರಿ ಬಂದ ಸುಖವನುಂಬ ಮೈಯರಿಯದ ಮರುಳು. ಮಾನವನ ಕಾಡುಬಾಳಿನಂತಲ್ಲ ಅವರ ಬಾಳು (ಚೋರಚ. ೩೩ ಕ್ರಿಸ್ತ ಶಕ).

[ಮುಂದು₂ (< ಮುಂತು₂) + ಕೊಳ್₁]

**ಮುಂದುಗೊಳ್ಳು** 'ಮುಂದುಗೊಳ್' ನೋ.

**ಮುಂದುದೆಗೆ** (ಕ್ರಿ). ಸ್ಪಷ್ಟಗೊಳಿಸು ; ವ್ಯಕ್ತಪಡಿಸು : ಸುಗ್ಗಿ ಬರ್ಪುದನೀ ನಂದನಕಾನೆ ಮುಂದುದೆಗೆದಂ (ಜಗಪ. ೦೪-೬೩).
[ಮುಂದು$_1$ (< ಮುಂತು$_1$) + ತೆಗೆ$_1$]

**ಮುಂದುದೋಱು್** 'ಮುಂದುದೋಱು' ನೋ.

**ಮುಂದುದೋಱು**, ಮುಂದುದೋಱು್ (ಕ್ರಿ). ೧. ತೋಱು ; ವ್ಯಕ್ತವಾಗು : ಎಲ್ಲರುಂ ಮುಂದುಗೆಟ್ಟೇನುವಂ ಕಾಣದಿರೆ ಎಲ್ಲರ್ಗೆ ಭಯವೇಱಿ ನುಡಿ ಮುಂದುದೋಱದಿರೆ (ಮುಕ್ತಾ. ದೀ. ೬೬-೬). **ಮುಂದುದೋಱು್**: ೨. ವಿವೇಚನೆಯುಂಟಾಗು ; ವಿವೇಕದಿಂದಿರು : ಮುಳಿಸಿಂದವನುಂ ಮೊಱೆದಿಬ್ಬು ಮುಟ್ಟಿ ಮುಂದುಡೆಯನೂಱಿ ಮೇಲ್ವರಿವನ್ನೇಂ ಬಗೆ ಸೋರ್ಕಿರೆ ಮುಂದುದೋರ್ಕುಮೇ (ಶಕಪ. ೪-೦೧೦).
[ಮುಂದು$_2$ (< ಮುಂತು$_2$) + ತೋಱು]

**ಮುಂದುರು** 'ಮುಂದುಱು$_1$' ನೋ.

**ಮುಂದುರುಗಯ್** (ಕ್ರಿ). ಮುಂದಕ್ಕೆ ಚಾಚಿದ ಹಸ್ತ: ನೀಡಿದ ಕೈ : ಗುಂಡಪ್ಪ:—(ಮುಂದುರುಗಯ್ಯಿಂದ ಅದನ್ನೆಳೆದುಕೊಂಡು ಓದಿಕೊಳ್ಳುತ್ತಿರುವನು) (ಮಂತ್ರಶ. ೦೩೦-೪).
[ಮುಂದುರು (< ಮುಂದುಱು$_1$) + ಕಯ್$_2$ (< ಕೆಯ್$_2$)]

**ಮುಂದುವಡು** (ಕ್ರಿ). ಮುಂದಕ್ಕೆ ಸಾಗು; ಮುಂದೆ ಬರು: ಬೇಹುಕಾರ: —(ಮುಂದುವಟ್ಟು. ಲಿಂಗರಾಜನಿಗೆ ಗುಟ್ಟಿನ ವರದಿಯನ್ನು ಕಿವಿಗೇಳಿಸ ತೊಡಗುವನು) (ಮಂತ್ರಶ. ೦೭೦-೦೪).
[ಮುಂದು$_2$ (<ಮುಂತು$_2$)+ಪಡು$_1$]

**ಮುಂದುವರಿ**, ಮುಂದರಿ-(ಕ್ರಿ). ೧. ಮುಂದಕ್ಕೆ ಹೋಗು, — ನಡೆ : ಒಂದೆರಡು ಕುಱುಹುಗಳ ಕಂಡೇ ಮುಂದುವರಿಯರು ನೀತಿವಂತರು (ಕೌಶಿರಾ. ೩೬-೩) ; ಸಮರಸಜೀವನದ ದೈವೀಪಥದಲ್ಲಿ ಅವನು ಮುಂದುವರಿಯುತ್ತಾನೆ (ಜಗದಾ. ೩೪). ೨. ರಭಸದಿಂದ ಮುನ್ನುಗ್ಗು ; ಧಾವಿಸು : ಸೊಂದು ಮರಳದೆ ಮುಸಗಿ ಸೂರ್ಯನ ನಂದನನು ತಾಗಿದನು ಗುರುಸುತ ಮುಂದುವರಿದನು ತಲೆ ಹಱಿದರೆನ್ನಟ್ಟೆ ಕಲಿಯೆನುತ (ಕುಮಾವ್ಯಾ. ೦೪-೩೩) ; ಶರವಿಬ್ಬುಗಿಯ ಮಾಡಿತು ಮುಂದುವರಿದಂಡಿಸಿದ ಸೂಕರನ (ತೊರಾ. ೩-೩-೨೦) ; ಇಂದುವದನೆ ರುಕ್ಮಿಣಿದೇವಿಗೆ ಗರ್ಭ ನಿಂತು ಗರ್ಭಿಣಿಯಾದುದಕೆ ಮುಂದುವರಿದು ಮೇಘ ಗರ್ಜಿಸಿದುವು ದೇವದುಂದುಭಿಗಳ ಹೊಡೆದಂತೆ (ವೋಹತ. ೪-೩೨). ೩. ಮುಂದಾಗು ; ಮುಂದೆ ಬರು : ಅವನದ್ದು ಯಾವ ಕೆಲಸಕ್ಕೂ ಮುಂದುವರಿಯುವ ಸ್ವಭಾವವಲ್ಲ (ರೂಢಿ). ೪. ಮೊದಲು ಕಾಣಿಸಿಕೊಳ್ಳು, — ಮೂಡು : ಅವಳಾಡಿದ ಮಾತಿಗೆ ಮೈಸವಿರ್ಮುಂದುವರಿದು ಗುಡಿಗಟ್ಟಿ ಕುಂದದ ಗದ್ಗದದುಲುಹಿಂದ ಸಖಿಯೊಡನೆಂದಳು ಮಾಱುತ್ತರವ (ಕಂಪಪು. ೪-೦೩೬). ೫. ಮುಂಚಿತವಾಗಿ ಹೋಗು : ತನ್ನ ಮಯ್ದುನನಪ್ಪವೋಘಾಸ್ತ್ರ ಧನಂಜಯನ ಬರವಿನ ಸಂತಸದೊಸಗೆ ಪಡೆವಾತಂ ಮುಂದುವರಿದಱಿಪುವಂತೆ . . . ಕೆತ್ತಿತ್ತು ವಲ್ ಬಲಗಣ್ಣುಂ ಬಲದೋಳುಮಾ ಬಲಿಬಲಪ್ರಧ್ವಂಸಿಗೆ (ಕಂಪಭಾ. ೪-೩೨ವ). ೬. ಆತುರಪಡು ; ತವಕಿಸು : ಮನಮೊನ್ನಂ ಮುಂಬರಲ್ ಮುಂದುವರಿವುದನೆ ತೋರ್ಪಂತೆ ನೀಳ್ದತ್ತು ಸುಯ್ (ಕಾದಂಪೂ. ೭೩೩) ; ಬೆಲೆಗೊಂಡು ನತರ್ಕಳ ಪಾಪರಾಶಿಯಂ ಭರವಹನಕ್ಕೆ ಮುಂದುವರಿವೀ ಯುಭಯಪ್ರದಹಸ್ತಮೊಂದು ಮೇಣ್ (ವಸ್ತ ಪಂ. ೦-೩). ೭. ಅಭಿವೃದ್ಧಿ ಹೊಂದು ; ಏಳಿಗೆಯನ್ನು ಪಡೆ : ಆತ್ಮಸಿರೀಕ್ಷಣೆಯಿಂದಲೇ ನಾವು ಮುಂದುವರಿಯಬಹುದು (ಅಕನಾ. ೩) ; ಮುಂದುವರಿದ ರಾಷ್ಟ್ರಗಳ ಸರಿಸಮಕ್ಕೆ ನಮ್ಮ ದೇಶವೂ ನಿಲ್ಲಬೇಕು (ರೂಢಿ). ೮. ಅಧಿಕವಾಗು ; ಅತಿಶಯಗೊಳ್ಳು : ಮುಂದುವರಿವುತ್ಸವದ ಮೊಳೆನಗೆಯು . . . ಇಂದುಮುಖಿ ಗಂಪಣಂ ಕಳೆದಿರುಳು ಕನಸ ನಾನಿಂತಿಂತು ಕಂಡೆನೆನಲು (ಸೋಪುಕ. ೦-೬೩) ; ಮುಂದುವರಿದ ವಿಲಾಪವಂತ್ರದ ಸಂದ ಪೂಜಾಸ್ತವವಲೊಯ್ಯನೆ ಸಂದರುಶನವ ಮಾಡಿದಳು ಮಾಯಾಪುಹೇಶ್ವರನ(ತೊರಾ. ೪-೩-೦೬). **ಮುಂದರಿ** : ೧. ಪತ್ನೀ ಸೋದರರು ಮಾರ್ಗಮಧ್ಯದಲ್ಲಿ ವ್ಯತರಾಗುತ್ತಾರೆ, ಯುಧಿಷ್ಠಿರನೊಬ್ಬನೇ ಮುಂದರಿಯುತ್ತಾನೆ (ಭಾರದ. ೦೦೩). ೨. ಎನ್ನಯಾ ಭಾರಿಗದೆಯು ನಿನ್ನ ಜಯಿಸಿ ಸಾರವರಿವುದು ಸಾರಿ ಮುಂದರಿವುತಿದೆಕೊ ಮಿಾರಿ ಬರುವುದು (ಕರ್ಣಕಾ. ೦೦). ೩. ಹೇಗಸರನ್ನು ಕೊಲ್ಲುವ ಗಂಡಸರ್ಯಾರೂ ಶಕ್ತಿಯನ್ನೆತ್ತಿ ಮುಂದರಿಯದ್ದರಿಂದ ವಿಷಕ್ಕೆ ಈ ಕಾರ್ಯವನ್ನು ಮಾಡಬೇಕಾಯಿತು (ಕೃಷ್ಣಾಕು. ೨-೦). ೪. "ಮುಂದರಿ . . . ಆತುರದಿ ಕೆಲಸ ಮಾಡು ; ಮುನ್ನಡೆ ಇಡು" (ಶಾಪಕೋ. ೩೨). ೫. ಎರಡನೇ ದೇಶದವರಿಗಿಂತ ತಾವು ಮುಂದರಿಯಬೇಕೆಂದು ಯಾವಾಗಲೂ ಬಯಸುತ್ತಿರುತ್ತಾರೆ (ಮುಂಬಯಿ. ೪-೦೩೬).
[ಮುಂಪ್ದು$_2$ (<ಮುಂತು$_2$) + ಪರಿ$_2$]

**ಮುಂದುವರಿಕೆ** (ನಾ). ೧. ಯಾವುದಾದರೂ ಕೆಲಸವನ್ನು ಮುಂದಕ್ಕೆ ಹಾಕುವಿಕೆ,—ಮುಂದೂಡುವಿಕೆ : "ನಿಲುವಳಿ, ಮುಂದುವರಿಕೆ" (Adjournment ಪತ್ರಿಸ. ೩). ೨. ಮುನ್ನಡೆಸುವಿಕೆ ; ಸಾಗಿಸುವಿಕೆ : ಈ ಕೆಲಸದ ಮುಂದುವರಿಕೆಗಾಗಿ ನಾವು ಎಲ್ಲ ಪ್ರಯತ್ನಗಳನ್ನೂ ಮಾಡಿದ್ದಾಯಿತು (ರೂಢಿ). [ಮುಂದುವರಿ + — ಕೆ]

**ಮುಂದುವರಿಸು** (ಕ್ರಿ). ಮುಂದುವರಿಯುವಂತೆ ಮಾಡು ; ಮುಂದಕ್ಕೆ ಸಾಗಿಸು : ಮನುಷ್ಯನು ಕಾರ್ಯ ಮಾಡುವದನ್ನು ನಿಲ್ಲಿಸಿದರೂ ಪ್ರಕೃತಿಯು ಗುಣಧರ್ಮಗಳು ತಮ್ಮ ಕಾರ್ಯವನ್ನು ಮುಂದುವರಿಸುತ್ತವೆ (ಕರ್ಮಸಾ. ೦೩೨) ; ಅಪ್ಪಾಜಿಯೂ ಆ ಬ್ರಾಹ್ಮಣನೂ ಸಂಭಾಷಣೆಯನ್ನು ಮುಂದುವರಿಸುತ್ತಾ ಕುಳಿತುಕೊಂಡರು (ಕಂಗಾಳ್ಕ. ೩).
[ಮುಂದುವರಿ + — ಇಸು$_3$]

**ಮುಂದುವಾಯ್** (ಕ್ರಿ). ಮುಂದುವರಿ : ಮುನ್ನುಗ್ಗು : ದಂಡೆಯ ಸೊಡ್ಡು ನಿಂದು ಪರಿದಿತ್ತಲುಮತ್ತಲುಮೋರ್ಮೆ ಚೆಲ್ಲದಿಂ ಚಂಡಿಸಿ ಮುಂದುವಾಯೆ ಚಿಱದೇವಸವಂ ಕವಿದೊತ್ತೆ (ಶಕಪ. ೪-೦೪೦).
[ಮುಂದು$_2$ (<ಮುಂತು$_2$)+ಪಾಯ್$_1$]

**ಮುಂದುಱು**$_1$. ಮುಂದುರು (ಕ್ರಿ). ೧. ಮುಂದೆ ಸಾಗು; ಮುಂದುವರಿ: 'ಮುಂದುಱುವರಿ', 'ಮುಂದುಱುವಾಯ್ಯುರ್' ಪರಾ. **ಮುಂದುರು** : ೨. ಮುಂದಕ್ಕೆ ಚಾಚು.— ನೀಡು : 'ಮುಂದುರುಗಯ್' ಪರಾ.
[ದೇ.॥ ತಮಿ. ಮುನ್ನುಱು]

**ಮುಂದುಱು**$_2$ (ನಾ). ಮುಂದೆ ಸಾಗುವುದು; ಮುಂದುವರಿಯುವುದು: "ಮುಂದುಱುವೆನಲ್ ಮುಂಬರಿವುದಕ್ಕೆ ನಾಮಂ" (ಶಬ್ದಕೈ. ೨೩) ; "ಮುಂಬರಿವುದು ಮುಂದುಱುವೆನಿಕು" (ಶಬ್ದಮಂ. ೫೦). [<ಮುಂದುಱು$_1$]

**ಮುಂದುಱುವರಿ** (ಕ್ರಿ). ಮುಂದೆ ಸಾಗು ; ಮುಂದುವರಿದು ಹೋಗು : ಗುಡಿಯುಂ ಸಿಂಧಂಗಳುಂ ಮುಂದುಱುವರಿಯೆ ದಿನಾಧೀಶಬಿಂಬಂಬರಂ (ಶಂರಾಪಾ. ೦೫-೨). [ಮುಂದುಱು$_1$ + ಪರಿ$_2$]

**ಮುಂದುಱುವಾಯ್ಯುರ್** (ಕ್ರಿ). ಮುಂದುವರಿದು ಬರು : ಧಾವಿಸಿ ಬರು : ಮುಂದುಱುವಾಯ್ಯುರ್ಪೆಳಗಂದಿಗಳ್ ಶೋರೆದು ತೋರಂಬೆತ್ತ ಬಲ್ಗೆಚ್ಚಲೊಳ್ಪೊಱೆಯಂ ಪೆರ್ದೊಡೆಯಿಂದಿಱುಂಕಿ ಮೊಲೆಯಿಂ ಪಾಯ್ಯುರ್ಪ ಪಾಲಿಂದೆ ಪಾಲ್ಗೊಱೆಯುಂತಾ ತೊಱೆಯಿಪ್ಪುದು (ಲೀಲಾವ. ೩-೬೨).
[ಮುಂದುಱು$_2$ + ಪಾಯ್ಯುರ್]

**ಮುಂದೂಕು** (ನಾ). (ಕರಾ) ರೋಗ ಮುಂತಾದುವುಗಳ, ತುಂಬ ಮುಂದುವರಿದ ಸ್ಥಿತಿ,— ಉಲ್ಬಣಸ್ಥಿತಿ. [←ತುಳು. ಮುಂದೂಕು]

**ಮುಂದೂಡು** (ಕ್ರಿ). ೧. ಮುಂಭಾಗಕ್ಕೆ ತಳ್ಳು, —ನೂಕು : ರಘುನಾಥ ಮಾಸ್ತರರು ಮನೆಯ ಬಾಗಿಲವನ್ನು ಮುಂದೂಡಿದರು (ಕಂಗಕೊ. ೦೦೪).

೨. ಮುಂಭಾಗಕ್ಕೆ ನೀಡು : ಮುಂಚಾಚು : ಹಂದಿಯು . . . ಮುಂದಿರುವ ಬಲೆಯನ್ನು ಸೀಳಿಬಿಡಬೇಕೆಂದು ಮೂತಿಯನ್ನು ಮುಂದೂಡಿ ಬಲೆಯ ಕಣ್ಣಿನಲ್ಲಿ ಸಿಕ್ಕಿಕೊಂಡಿತು (ಹುಬ್ಬಿಹ. ೨೦). ೩. (ಕಾಲದ ವಿಚಾರದಲ್ಲಿ) ಮುಂದಕ್ಕೆ ಹಾಕು : ಇಷ್ಟುಕಾಲ ಮುಂದೂಡಿ ಅಂತೂ ಈ ದಿನ ಹೊರಟಿದ್ದ ನಮ್ಮ ಕಾಶೀಯಾತ್ರೆ — ನಿಮ್ಮ ಸಹವಾಸದಿಂದ ನನಗೊಂದು ಪುಣ್ಯಯಾತ್ರೆ ಎಂದೇ ಅನಿಸುತ್ತದೆ (ಹೊಸಕ್ಷಿ. ೩೩) ; ಬೇಗನೆ ಮಾಳ್ಪುದು ಪುತ್ರಿಯ ಮದುವೆಯ ಮುಂದೂಡಲಾಗದು ನೋಡ (ಇಂಕಾಶ. ೨೦೪-೬). ೪. ಮುಂದೆ ಹೋಗುವಂತೆ ಮಾಡು ; ಮುಂದುವರಿಯುವಂತೆ ಪ್ರೇರಿಸು : ಆ ಹಾಳುಗುಡಿಯ ದಾರಿಯಲ್ಲಿ ಯಾರೂ ಕಾಣಲಿಲ್ಲ . . . ಆದರೂ ಆಶೆ ಅವರನ್ನು ಬಿಡಲಿಲ್ಲ, ಮುಂದೂಡಿತು (ಕುಂಕುಮ. ೨೩).

[ಮುಂ$_2$ (< ಮುನ್$_2$) + ದೂಡು (< ದೊಂಟು$_1$)]

**ಮುಂದೂಳ್** (ನಾ). (?) : ತತ್ತಮೋಬಳದ ಮುಂದೂಳ ದಾಟಿಯಾಗ್ಗಳಂತಿರೋಳಿಯೊಳ್ ಕೇಳೀಮಯೂರಂಗಳ್ ಉದ್ದಮೊಗೆದು ಪೊಂಗಡೆಯ ಪಕ್ಕವಣಿಗೆ ಪಾಜಿಯುಂ (ವರ್ಧಪು. ೬-೨೩ ಪ). [ ? ]

**ಮುಂದೆ$_1$** ' ಮುಂತೆ$_1$ ' ನೋ.

**ಮುಂದೆ$_2$** (ನಾ). ಜಾಡಿಯಾಕಾರದ ಒಂದು ಬಗೆಯ ಹಿತ್ತಾಳೆಯ ಪಾತ್ರೆ : (೬). [ದೇ. ತಮಿ. ಮುನ್ತೆ, ಪೊನ್ತೈ; ಮಲ. ಮೊಂತ ; ತೆಲು. ಮುಂತ; ಕೂ. ಮೂತ; ಕುವಿ. ಮೂಂತ]

**ಮುಂದೆ$_3$** ' ಮುಂತೆ$_2$ ' ನೋ.

**ಮುಂದೆಣಿಕೆ** (ನಾ). ಮುಂದಾಗುವುದನ್ನು ಕುರಿತು ಆಲೋಚಿಸುವಿಕೆ ; ಮುಂದಾಲೋಚನೆ : ಆ ವಿರಹಿಯುವಳ ಬೇಡಿಕೊಂಡು ಭರದಿಂದವನ ಕರೆಸಿ ಕೂಡಿದಳು ಕಾತರಗರ್ಬಿಣಿ ಮುಂದೆಣಿಕೆಯು (ಶ್ರೀಕೃಶ. ೨-೪೬).

[ ಮುಂದು$_2$ ( < ಮುಂತು$_2$ ) + ಎಣಿಕೆ ]

**ಮುಂದೆಣಿಸು** (ಕ್ರಿ). ಮುಂದಾಗುವುದನ್ನು ತಿಳಿ : ಭವಿಷ್ಯವನ್ನು ಅರಿ; ರಾಯವಜೀರನೆಂಬ ಬಿರುದಿಂ ಬಿರುದಾಂಕಿದಿರಾಂಪರಿಲ್ಲವೆಂಬೀಯದಟಿಂದೆ ಮುಂದೆಣಿಸಲಗ್ಗದ ವೀರುಪಮೊಗ್ಗರಂಗಳಿಂ . . . ಮುತ್ತಿದಂ (ಶಕಟ. ೨-೬೪). [ ಮುಂದು$_2$ ( < ಮುಂತು$_2$ ) + ಎಣಿಸು ]

**ಮುಂದೆಯ್ದು, ಮುಂದೈದು** (ಕ್ರಿ). ಮುಂದಕ್ಕೆ ಸಾಗು ; ಮುಂದುವರಿ : ನಡೆ ಸಾರ್ ಮುಂದೆ[ಪಾಠಾಂ. ದ]ಯ್ದು ಬೆಳ್ಮಾರಮನೆ ಬಿಗಿ ನಿಕುಂಜಂಗಳಂ ಸೋದಿಸು (ಕಬಕಂ. ೬-೪೪). ಮುಂದೈದು : ಮುಂದೈದುವ ತುರಂಗಮದ ಕೂಡೆ ನಡೆಯುತ್ತೆ (ಜೈಮಿಭಾ. ೧೬-೨೦) ; ಮುಂದೈದಲಾ ಗಿರಿಯ ಸಾರವತ್ತಾದ ವೃಕ್ಷಗಳೆಲ್ಲ ಬಂದೈದುತೋರಂತೆ ನಿಜಬಂಧುಗಳನು ಬೀಳ್ಕೊಡುವಂತೆ ಮಹಾಹೂರ್ತಮನುಸರಿಸಲು (ಕುಕಾರಾ. ೩-೦-೨೦).

[ ಮುಂದು$_2$ ( < ಮುಂತು$_2$ ) + ಎಯ್ದು ]

**ಮುಂದೆಸೆ** (ನಾ). ಮುಂದುಗಡೆ ; ಎದುರು : ಸ್ಥೂಲ ಸೂಕ್ಷ್ಮ ಕಾರಣ ಈ ಮೂಜು ಮುಂದೆಸೆಯಲ್ಲಿ ಕಂಡೆ (ಪೋಳಿಮಾ. ೦೪೯-೩೬೬) ; ಬಸವನಂ ಬರಹೇಳ್ದು ಕಳುಹಲು ಬಸವನಾಗಳೆ ಕೇಳ್ದು ಬಂದಾ ವಸುಮತೀಶನ ಮುಂದೆಸೆಯೊಳಿರಲು (ಬಸಪು. ೩೬-೨೯) ; ನಳಿನಬಾಂಧವನ ಮುಂದೆಸೆಯೊಳುಮಿಗೆ ಮಿಂಚುಬುಳುವಿನ ಮಿನುಗು ರಂಜಿಪುದೇ (ಮೋಹಶ. ೦೩-೦೦). [ ಮುಂ$_2$ ( < ಮುನ್$_2$ ) + ದೆಸೆ$_2$ ]

**ಮುಂದೆಱಪು** (ನಾ). ಮುಂಭಾಗದಲ್ಲಿರುವ ಖಾಲಿಯಾದ ಪ್ರದೇಶ ; ಮುಂದುಗಡೆಯ ಬಯಲು : ಸಜ್ಜನವ್ವನೆಯೊರ್ವಳ್ ಸೌಧದ ಮುಂದೆಱಪೊಳ್ಮೆಱೆದಳ್ (ಅದ್ಯದೀ. ೪೩-೨೩).

ಮುಂ$_1$ ( < ಮುನ್$_1$ ) + ತೆಱಪು ]

**ಮುಂದೈದು** ' ಮುಂದೆಯ್ದು ' ನೋ.

**ಮುಂದೊತ್ತು** (ಕ್ರಿ). ಮುಂದುವರಿ ; ಮುನ್ನುಗ್ಗು : ಭರದಿಂ ಬಂದೊತ್ತೆ ಮುಂದೆಮ್ಮ ಸಕದೆಸಕದಿಂ ತೀವಿ ಮುಂದೊತ್ತೆ ಗೋದಾವರಿ (ಸಮುಕ. ೦-೩೪); ಮುಂದೊತ್ತುವ ನಾಯ್ಗಳ ಬೊಗಳುವ ಬಾಯ್ಗಳ ಗೇಣಂಬುಗಳಿಂ ಕಟ್ಟಿದೆನು (ಹನ್ನೆರ. ೨೬-೭). [ ಮುಂದು$_2$ ( < ಮುಂತು$_2$ ) + ಒತ್ತು$_1$ ]

**ಮುಂದೊದಗು** (ಕ್ರಿ). ೧. ಮುಂದೆ ಹೋಗು : ಮುಂದಾಗು : ಶಚಿಯುಮೊಲಿದು ಕೈಗೊಟ್ಟು ಕರೆತರೆ ಜನನ ಕಾಣುತ್ತಲೆ ಮುಂದೊದಗಿ ಮೊಜಿವರ್ಧ್ಯಮೆತ್ತಿ ಜಯೆಂದು ಭಕ್ತಿಯೊಳೆಱಗಿ (ಶಾಶ್ವಪಾ. ೩೩-೯೦). ೨. ಅನಂತರದಲ್ಲಿ ಉಂಟಾಗು : ತರುವಾಯದಲ್ಲಿ ಸಂಭವಿಸು : ಮುಂದೊದಗಬಹುದಾದ ತೊಂದರೆಗಳಿಗೆ ಈಗಲೇ ಪರಿಹಾರವನ್ನು ಕಂಡುಕೊಳ್ಳಬೇಕು (ರೂಢಿ). [ ಮುಂದೆ$_2$ ( < ಮುಂತೆ$_2$ ) + ಒದಗು$_1$ ]

**ಮುಂದೋಳು** (ನಾ). ತೋಳಿನ ತುದಿ : ತನ್ನ ನಿತಂಬವು ನೀರಿನೊಳಲುಗಲು ಮುಂದೋಳು ದಡದೊಳಗಿರಲು ಮಂಡೂಕ ಪುರುಷಾಯತಾಸಕ್ತಳೆಂಬಂತೆ ಪ್ರತಿಬಿಂಬದೊಳು ತೋರ್ಪಳಲ್ತೆ (ಗಾಥಾಸ. ೪-೯೦).

[ ಮುಂ$_1$ ( < ಮುನ್$_1$ ) + ತೋಳು ( < ತೋಳ್ ) ]

**ಮುಂಧಾಳಿ** (ನಾ). ಮುಂದೆ ಧಾವಿಸಿ ಮಾಡುವ ಮುತ್ತಿಗೆ ; ನುಗ್ಗಿ ಮಾಡುವ ಧಾಳಿ : ಮೇಲು ಮುತ್ತಿಗೆಯಾಯ್ತು ಯವನರ ಧಾಳಿ ಗಂಧರ್ವಾವಳಿಯ ಮುಂಧಾಳಿಗುರಗಾಧಿಪತಿಯೊಬ್ಬನೆ ನಿಂದನಿದಿರಾಗಿ (ಜೈಭಾಗ. ೪-೦೬-೦೬). [ ಮುಂ$_1$ ( < ಮುನ್$_1$ ) + ಧಾಳಿ ( < ದಾಟಿ ) ]

**ಮುಂಧೋರಣ** (ನಾ). ಮುಂದಾಗುವುದರ ಬಗೆಗಿರುವ ಗಮನ : ಮುಂದಿನ ಯೋಚನೆ ; ಮುಂದಾಲೋಚನೆ : ನಾನು ಸುಮ್ಮನಿದ್ದು, ಪರಾವಲಂಬಿಯಾಗಿ, ಮುಂಧೋರಣವಿಲ್ಲದ ಲಗ್ನಮಂಟಪದಲ್ಲಿ ಅವಮಾನಿತನಾಗತಕ್ಕದ್ದಲ್ಲ (ಗಂಪಾಯು. ೦೩೪).

[ ಮುಂ$_2$ ( < ಮುನ್$_2$ ) + ಧೋರಣ ]

**ಮುಂಧೋರಣೆ** (ನಾ). = ಮುಂಧೋರಣ : ನಾನು ಮುಂಧೋರಣೆಯವಳು. ಮುಖ್ಯ ಮುಖ್ಯ ಸಾಮಾನುಗಳನ್ನು ಬದಿಗೆ ಸರಿಸಿಟ್ಟುಕೊಂಡು ಉಳಿದ ತಿನಿಸನ್ನು ದಾನಧರ್ಮಕ್ಕಾರಂಭಿಸಿದೆ (ಸ್ವಕೀತ. ೨೭೪) : ಪ್ರೇಮಭಂಗದಿಂದ ಸಾಯುವವರು ಜೀವಘಾತಕರೇ ಸರಿ. ಅದರಲ್ಲಿ ಧ್ಯೇಯವೂ ಇರುವುದಿಲ್ಲ . . . ಮುಂಧೋರಣೆಯೂ ಇರುವುದಿಲ್ಲ (ಜಯಂತ. ೩೨೭).

[ ಮುಂ$_2$ ( < ಮುನ್$_2$ ) + ಧೋರಣೆ ]

**ಮುಂಪಥ** (ನಾ). ಮುಂದಿನ ಮಾರ್ಗ : ಮರಾಳಧ್ವಜಂ . . . ಹರಿಯ ಮುಂಪಥದೊಳಡಗೆಡೆಯುತ . . . ಕೈಗಳ ಮುಗಿದನು (ಜೈಮಿಭಾ. ೦೪-೨೬).

[ ಮುಂ$_2$ ( < ಮುನ್$_2$ ) + ಪಥ ]

**ಮುಂಪಾಲು** (ನಾ). ಮೊದಲೇ ತೆಗೆದಿಟ್ಟ ಭಾಗ ; ಮೀಸಲು : ಮಿಂದು ಪೂಜ್ಯರ್ಗೆ ಮುಂಪಾಲು ನೀಡದೇನನುಮುಣ್ಣನುಂ ಅಧರ್ಮದಿಂ ಪಾಲ್ಗೆ ಗೋಮಂಬೊರ್ ಗೋಮಂ ಕರೆಯುಂ ದಿಟಂ (ಶಾಬ್ದಂದ. ೨-೦೪).

[ಮುಂ$_2$ ( < ಮುನ್$_2$ ) + ಪಾಲು$_2$ ( < ಪಾಲ್$_2$ ) ]

**ಮುಂಪುದಿ** (ನಾ). ಮುಂಬಾಗಿಲಿನ ಪಕ್ಕ, – ಪಾರ್ಶ್ವ : ಬರವ ಸೂಚಿಸಿ ಬಾರದಿರೆ ವಿಟಂ ಮುಂಪುದಿಗೆ ನೆಱೆ ನೆಮ್ಮಿ ನಿಂದು . . . ಮೈಮಱೆ ವುತರೆ ಳಿಗೆಚ್ಚುಱುತೆ ಸಖಿಯರುಪಚರಿಸಲೊಂದೆಡೆಯೊಳಿರ್ದಳದೊರ್ವಳು (ರಾಶಶ. ೭-೪೩). [ ಮುಂ$_2$ ( < ಮುನ್$_2$ ) + ಪುದಿ$_2$ ]

**ಮುಂಪೇಳ್** ' ಮುಂಪೇಟಿಸ್ ' ನೋ.

**ಮುಂಪೇಟಿಸ್, ಮುಂಪೇಳ್** (ಕ್ರಿ). ಮುಂಚಿತವಾಗಿ ಹೇಳು; ಮೊದಲೇ ಹೇಳು : ಜಾಂಬೂನದಂ . . . ಪೇಟಲಾತುರನಾದಂ ದನುಜಂಗೆ ದಿವ್ಯ ಮುನಿಗಳ್ ಮುಂಪೇಟ್ದ ವೃತ್ತಾಂತಮಂ (ಶಂರಾಪೂ. ೦೦-೭) ; ಎಂತುಂ ಮುಂ[ಪಾಠಾಂ. ಎಂತೆಯುಟು ಮುನ್ನಂ] ಪೇಟ್ದರ್ಥಾಂತರಮಂತುಟನೆ ಬಟಿಕ ತೋಱುವುದದು ದೃಷ್ಟಾಂತಂ (ಕಾವ್ಯಾವ. ೭೦೪). **ಮುಂಪೇಳ್ :** ಮುಂಪೇಳ್ದ ಬಂಧನಿಯಮಸೂತ್ರಮಂ ಲೇಸಾಗಿ ಭಾವಿಸಿ ತೀರ್ಥಬಂಧಮು

ಸಂಯುತಾದಿ ಚತುರ್ಗುಣಸ್ಥಾನದೊಳೆಯಕ್ಕುಂ (ಗೊಮ್ಮಸಾ. ೦೩-೦೦).
[ ಮುಂ₂ ( < ಮುನ್₂ ) + ಪೇಟು ]

**ಮುಂಪೋಗು** (ಕ್ರಿ). ೧. ಮುಂದಕ್ಕೆ ಹೋಗು ; ಮುಂದೆ ಸಾಗು : ತೇಜಾಧ್ಯರುಗಳು ಮುಂಪೋಗಿ ವಿಮಲಸರೋಜಪತ್ರಿಕೆಯ ಪೊಟ್ಟಣದಿ ರ್ಯಾಜಾವ್ಯುತವೆನೆ ತಣ್ಣೀರ ತಂದಿತ್ತರಾ ಜಿತಕಂತುನಂದನಗೆ (ಪೋಹಕ. ೦೯-೩೪). ೨. ಮುಂಚಿತವಾಗಿ ಹೋಗು ; ಮೊದಲು ಹೋಗು : ವ್ಯಪದೇಶಂ ಮುಂಪೋದುದನಪೂರ್ವಮಂ ಕಂಡು ನೆನೆವುದದು ತಾಂ ಸ್ಮರಣಂ (ಕಾವ್ಯಾವ. ೭೦೩).
[ ಮುಂ₂ ( < ಮುನ್₂ ) + ಪೋಗು₁ ( < ಪೋ₁ ) ]

**ಮುಂಪ್ರತಿ** (ನಾ). "ಪ್ರಕಟನೆಯಾಗುವ ಮೊದಲು ಕಳುಹಿಸಿದ ಪುಸ್ತಕದ ಪ್ರತಿ; ಮುಂಪ್ರತಿ "(Advance copy of a book. ೩೦೪೫).
[ ಮುಂ₂ ( < ಮುನ್₂ ) + ಪ್ರತಿ ]

**ಮುಂಬಕ್ಕಿ** (ನಾ). ಸೂರ್ಯೋದಯಕ್ಕೆ ಮೊದಲು ಧ್ವನಿಮಾಡುವ ಹಕ್ಕಿ : ದಿವಕಂದು ದೇವಕುವರಂ ಮರಳಿ ಬಹನೆಂಬ ಗೆಲುವಿಂದ ದೇವ ದೂತರೆ ಬಾರಿಸುವರೊ ಮಂಗಲವಾದ್ಯವೆನಲು ಮುಂಬಕ್ಕಿಗಳ ಮೇಳವಂ ಮೊಳಗಾಡೆ (ಗೂರ್ಕೊಸಾ. ೩೭-೯). [ಮುಂ₂ (< ಮುನ್₂ ) + ಪಕ್ಕಿ ]

**ಮುಂಬಗಲ್, ಮುಂಬಗಲು** (ನಾ). ಹಗಲಿನ ಮೊದಲ ಭಾಗ ; ಬೆಳಗ್ಗೆ ; ಪ್ರಾತಃಕಾಲ : "ಮುಂಬಗಲ್, ನಡುವಗಲ್, ನಡೆವಗಲ್ — ಇವು ೩ ತ್ರಿಕಾಲಂಗಳ್" (ಶಬ್ದಾ. ೩೭-೨೩೦) ; ಅಂತು ಮುಂಬಗಲ್ವರಂ ತುಮುಲುಕೆ ಕಾದುವ ಸಮ[ರಭರಂ] ಮನೋರಾಗಮಂ ಮಾಡೆಯುಂ (ಸಂಕಥಾ. ೦೩-೩೭ ವ) ; ರಾಘವನೆನ್ನಂ ತೃಣದಿಂ ಲಘುವಮೆನೆ ಬಗೆದನೆಂಬ ಮನಮುಮ್ಮಳದಿಂದಾಘುಮನೊಳಕೊಂಡಂತೆ ನಿದಾಘದ ಮುಂಬಗಲೆ ತಳೆದುದಿಳೆ ಕಡುಗಾಯ್ಪಂ (ಸಂರಾಮಾ. ೭-೦೦೦) ; ಪಲ್ಲಟಿಗುಟ್ಟುತ್ತುಮೆ ವಾನರಾಳಿ ನಡುಗುತ್ತಿರ್ದತ್ತು ಶಾಖಾಗ್ರದೊಳ್ ಸೆಜೆಗೆಯ್ಯಂದವೆ ಮುಂಬಗಲ್ವರಮುದೆತ್ತಂ ಪೋಗದಾ ಮಾಗೆಯೊಳ್ (ಸಂಸುಮ. ೭-೦೩). **ಮುಂಬಗಲು** : "ಇನನುದಯಕಾಲದೊಳ್ ಮುಂಬಗಲೆನಿಕ್ಕು" (ಶಶ. ೯೦) ; ಇಂದಿನ ಮುಂಬಗಲೊಳಗೇ ಕಾಂತೆ ನಾವೆಲ್ಲರು ಸಹಿತ ಕಂತುನಿವಾಸವೆಂದೆಂಬ ನಂದನಕತಿಸಂತೋಷದಿಂದೆಯ್ದಿದಳು (ಶ್ರೀಹಾಂ. ೩-೦೩) ; ಮುಂಬಗಲೀತು ಲೀಲೆಯೊಳು ಸಾಗಿತರ (ಧಶ. ೯೦-೨೭) ; ಮೊದಲ ದಿನದ ಮುಂಬಗಲಿನಲ್ಲಿ ಪಾಂಡವಸೇನೆ ಭೀಷ್ಮರ ದಾಳಿಯಿಂದ ನಡುಕಹೊಂದಿತು (ವ್ಯಾಕವಿ. ೩೨೩).
[ ಮುಂ₂ ( < ಮುನ್₂ ) + ಪಗಲ್ ]

**ಮುಂಬಗಲು** 'ಮುಂಬಗಲ್' ನೋ.

**ಮುಂಬಗೆ₁** (ಕ್ರಿ). ೧. ಮುಂದಾಲೋಚಿಸು ; ಪೂರ್ವಭಾವಿಯಾಗಿ ಗ್ರಹಿಸು : ಬೀರಮನಿದನಾಪೊ[ಂ] [ಮು]ಮ್ಬಗೆದು ಪೊಗಟಲಿಮ್ಪೊಂ (ಶಿ. XX, ೭೦-೦೦; ೪ನೆಯ ಶಿ). ೨. ಮೊದಲು ಲಕ್ಷಿಸು,-ಗಮನಿಸು : ಪಲರುಂ ವಿದ್ಯಾಧರಸ್ತ್ರೀಯರುಮುಮರಿಯರುಂ ಮಾನವಸ್ತ್ರೀಯರುಂ ತಮ್ಮೊಲವಿಂ ಮೇಲ್ವಾಯ್ದೊಡಂ ಮುಂಬಗೆಯದ ಬಗೆಯೇನಾ ಮುದು (ಸಂರಾಮಾ. ೯-೫೩). [ಮುಂ₂ (< ಮುನ್₂) + ಬಗೆ₁]

**ಮುಂಬಗೆ₂** (ನಾ). ಪೂರ್ವದ ಹಗೆ : ಹಿಂದಿನ ದ್ವೇಷ : (ಕ).
[ಮುಂ₁ (< ಮುನ್₁) + ಪಗೆ₂]

**ಮುಂಬಜ್ಜೆ** (ನಾ) ಮುಂದಿನ ಹೆಜ್ಜೆ ; ಮುಂದಿನ ಹಾದಿ,- ಜಾಡು : ಎಡಬಲನತ್ತಿತ್ತ ನೋಡದೆ ಮುಂಬಜ್ಜೆವಿಡಿದು ನಿಟ್ಟಿಸುತೊಯ್ಯನೈದಿ (ಶಶ. ೩-೦೬). [ಮುಂ₁ (< ಮುನ್₁) + ಪಜ್ಜೆ]

**ಮುಂಬಟ್ಟೆ** (ನಾ). ಮುಂದಿನ ದಾರಿ ; ಮುಂದಿರುವ ಮಾರ್ಗ : ತಂತಮ್ಮ ಮೇರೆಯಂ ತಪ್ಪಿದೊಡೆ ದಂಡಮಂ ಕೊಳ್ವ ಭೂಪಾಲರ ನಾಡ ವರ ಮಾಟದಿಂದೆ ಮುಂಬಟ್ಟೆಗಳೂರಂ ಪೆರ್ದಿ ಪೋಪಂತೆ (ರಕಚಾವ್ಯ. ೯-೬೮): ಕಂಬನಿದುಂಬಿದನೊಡನೆದ್ದು ದಕ್ಷಿಣ ಮುಂಬಟ್ಟೆಯೊಳಗಡ್ಡಬಿದ್ದು ಇಂಬುಗೊಳ್ಳಿಲೆ ಸ್ವಾಮಿ ನಿಮ್ಮ ಸೋಯಿಸಿದೆನೇನೆಂಬೆ ನಾನತಿಕ್ರೂರನು (ಶರಶ. ೯೯-೩೨). [ಮುಂ₁ (< ಮುನ್₁) + ಬಟ್ಟೆ₁]

**ಮುಂಬಡಿಸು** (ಕ್ರಿ). ಮುಂದೆ ನಡೆಯುವಂತೆ ಮಾಡು ; ಮುಂದುವರಿಸು : ಬಿನ್ನನಿರ್ದರಿವ ಮರೆಗೆಯ್ಗಳ್ದು ವಾಗೆಪೋಲಲುಗುಗೊಂಡೆನ್ನ ನಿಂಗಿಸದಿಂದೆ ಮುಂಬಡಿಸೆ ತೇಂಕುಮುಮ್ಮಗಿಲ್ಗೆ ಕಾಲ್ಮೊಳೆತಂತೆ ಕನಸಿನೊಳ್ (ಸಂಸಿಕ. ೩೨-೯). [ಮುಂಬಡು + — ಇಸು₃]

**ಮುಂಬಡು** (ಕ್ರಿ). ಮುಂದಕ್ಕೆ ಸಾಗು ; ಮುಂದೆ ನಡೆ : ಈ ಪರಿಯೊಳ್ ಸುಮಿತ್ರಾಪುತ್ರಂ . . . ದಮನನಂ ಸಂತವಿಟ್ಟುಂ ಮುಂಬಟ್ಟು ಪಡೆವೆರಸು ಪಯದ ಬೆಸ್ನೊಳೆ ನಡೆಯುತಿರೆಯಿರೆ (ರಾಮಾಕ್ಕ. ೦೦೦-೨೬).
[ಮುಂ₁ (< ಮುನ್₁) + ಪಡು₁]

**ಮುಂಬಡೆ** (ನಾ). ಮುಂಭಾಗದಲ್ಲಿರುವ ಸೈನ್ಯ : ಕಡಲು ಮೇರೆಯ ತಪ್ಪಿದೊಲು ಮುಂಬಡೆಗಳಸುರರ ಬಲವ ಮುಸುಗುತ ಸಿಡಿಲು ಬಡಿವಂದದಲಿ ಕಡಿದೊಟ್ಟಿದರು ಬೊಬ್ಬಿಡುತ (ಕಪಂರಾ. ೦-೦೦-೨).
[ಮುಂ₁ (<ಮುನ್₁) + ಪಡೆ₂]

**ಮುಂಬಣ್ಣ** (ನಾ). ಮೊದಲು ಕಾಣುವ ಬಣ್ಣ : ಪೊಸಜವ್ವನದ ಮುಂಬಣ್ಣದಂತೆ ಕರ್ಪಂ ಕೈಕೊಂಡು ಕತ್ತುರಿಯಲ್ ಬರೆದಂತಪ್ಪ ವಿಕ್ರಾಂತ ತುಂಗನ ಮೀಸೆಗಳಾತನ ತೀವ್ರಪ್ರತಾಪಾನಳಧೂಮಲೇಖೆಯಂತಾದುವು (ಸಂಕಥಾ. ೨-೩೯ ವ). [ಮುಂ₁ (<ಮುನ್₁) + ಬಣ್ಣ]

**ಮುಂಬದ, ಮುಂಬದನ್** (ನಾ). ರತಿಕ್ರೀಡೆಯ ಆರಂಭದಲ್ಲಿ ಸೂಸುವ ಸುರತದ್ರವ : ಬೆಂಡೇಟ್ಟ ಕಣ್ ಬೀಯದಟ್ಟುಜೊಳಂ ಪಾಸಿಗೆ ನಾಂಬ ಮುಂಬದಮಳುಂಬಂ ಕೂಟದೊಳ್ ನಲ್ಲರಾ (ಸಂಕೃಪು. ೯-೬೯) ; ಮುಂಬದಂ ಗೆಳಿಯುಸೆ ಕೂಡಿ ಗದ್ಗದದ ಕಂಠದಿ ಕೂಜಿತಮಂ ನೆಗಳ್ಚಿದಳ್ (ರಾಶಶೇ. ೦೦-೦೯೩). **ಮುಂಬದನ್** : ಉಬ್ಬರಿಸುವ ಮೆಯ್ಯುವಿರ್ಪಿನಾವ ಮುಂಬದನೊಸ್ಸರೆ ದೀವದೊಳ್ಪರಲ್ದರಲೆಯ ಭಾಪಮುಷ್ಟರಿಯಾನಚ್ಚಿಗೊಡರ್ಚಿದುದಾ ನೃಪೇಂದ್ರನಾ (ಅಸಂಪು. ೦೦-೯೦); ಒಂದೆರಡೊಳ್ಮಡಿ ತವಕದೊಳೊಂದೆರಡಾಲಿಂಗನಂ ಮುಗುಳ್ನಗೆ ನೋಟಂ ಸಂಪಣಿಸುವ ಮುಂಬದನೊಳಗಿಂದೀವರನಯನೆ ಪಾಣ್ಬನಂ ಬೀಟಿಕ್ಕೊಂಡಳ್ (ಸೂಕ್ತಿಸು. ೬-೦೬೬).
[ಮುಂ₁ (< ಮುನ್₁) + ಪದ₁]

**ಮುಂಬದಂಗೊಡು** (ಕ್ರಿ). ರತಿಕ್ರೀಡೆಯ ಆರಂಭದಲ್ಲಿ ಸುರತದ್ರವವನ್ನು ಸ್ರವಿಸು : ಮುಂಬದಂಗೊಡದಿರ್ಪಳ ಕೂಟಂ ಬಿಡದೇಳಜಾಟವು ದನಾವಂ ನಚ್ಚುಮಂ ಮೆಚ್ಚುವಂ (ರಾಶಶೇ. ೦೦-೦೩೪).
[ಮುಂಬದ + ಕೊಡು₁]

**ಮುಂಬದನ್** 'ಮುಂಬದ' ನೋ.

**ಮುಂಬದಿ** (ನಾ). ಮುಂಭಾಗ ; ಮುಂದುಗಡೆ : ಇದೇ ಗೋಡೆಯಲ್ಲಿ ರಂಗಸ್ಥಳದ ಮುಂಬದಿಗೆ ಇನ್ನೊಂದು ಬಾಗಿಲಿದೆ (ಪೀಠಯೋ. ೦); ಸುಮಾರು ಐವತ್ತುವರ್ಷದ . . . ರೈತನೊಬ್ಬ ಗುಂಪಿನ ಮುಂಬದಿಗೆ ಬಂದನು (ಕೃಷಕು. ೨೩೪) [ಮುಂ₁ (<ಮುನ್₁) + ಬದಿ₁]

**ಮುಂಬನ** (ನಾ). ವನದ ಮುಂಭಾಗ ; ತೋಟದ ಮುಂದುಗಡೆ : ಬಲಗೂಡಿ ತೆರಳ್ದು ರಸಿಕರಾಜೇಂದ್ರ ಮುಂಬನದಲ್ಲಿ ಕಂಡು ರಂಜಿಸುವ ಚೆಂಚಿತಿಯರಾಟಗಳ (ಪಂಶೀಕಕ. ೦೯-೬೦). [ಮುಂ₁ (< ಮುನ್₁) + ಬನ₁]

**ಮುಂಬನಿ** (ನಾ). (ನೆಲದ ಮೇಲೆ ಬೀಳುವ) ಮೊದಲ ಮಳೆಯ ಹನಿ : ಮುಂಬನಿಯಂ ಜಾದಗೆವಕ್ಕಿ ಹಂಸೆ ಕೊಳನಂ ಪದ್ಮಂಗಳಾದಿತ್ಯನಂ ನೆನೆವಂತಾಂ ನೆನೆವೆಂ ಸರೋಜಮುಖಿಯಂ (ಅಂಪು. ೦೨-೩೦); ಮುಂಬನಿಯಂ ಜಾದಗೆಯಿಂತಿ ತನ್ನಯ ಪವಣ್ಗೀಂ ತುಷ್ಟಿಯಂ ಮಾಡದೇ

(**ಶಾಂತೀಶ್ವ. ೧-೬೩**); ಕಾವಾರ್ಗಿಲ ಮುಂಬನಿಗಳೊಳು . . . ಜಿನುಗಿನಲಿ ಬಹುಮಳೆಗಳಲಿ ನೆನೆನೆನೆದು ಸಾಗರತೀರದಲಿ ಬಂದನು ಕಿರೀಟಿ (**ಕುವ್ಯಾಭಾ. ೦೯-೨೦**). [ಮುಂ$_2$ (< ಮುನ್$_2$) + ಪನಿ$_2$]

**ಮುಂಬಯಣ** (ನಾ). ಮುಂಚಿತವಾಗಿ ಮಾಡುವ ಪ್ರಯಾಣ : ' ಮುಂಬಯಣಂಬೋಗು ' ಪರಾ.
[ಮುಂ$_2$ (< ಮುನ್$_2$) + ಪಯಣ]

**ಮುಂಬಯಣಂಬೋಗು** (ಕ್ರಿ). ೧. ಮುಂಚಿತವಾಗಿ ಪ್ರಯಾಣ ಮಾಡು. ೨. (ಅಲಂ) ಮುಂಚಿತವಾಗಿ ಸಾಯು,–ಮಡಿ : ಇಂಬಟಿದನುವರದೊಳವಂ ಮುಂಬಯಣಂಬೋದಂ (**ಪಂಪಭಾ. ೦೨-೨**).
[ ಮುಂಬಯಣ + ಪೋಗು$_1$ (< ಪೋ$_1$) ]

**ಮುಂಬಯಸು** (ಕ್ರಿ). ಮುಂಚಿತವಾಗಿ ಬಯಸು,– ಅಪೇಕ್ಷಿಸು : ಮುಂಬಯಸಿ ಕೈಗೈದ ಸೊಬಗಿನ ಕೆಂಬಲರ ಮೈವಚ್ಚೆ ಕೆಂಬಲು ತುಂಬು ಗುಂಕುಮ ತಿವಿರು ಚೆಂದುಟಿಯುಟ್ಟರುಣವಸನ (**ಸಾಳ್ವಭಾ. ೩-೩೪**).
[ಮುಂ$_2$ (< ಮುನ್$_2$) + ಬಯಸು$_1$]

**ಮುಂಬರ್**, ಮುಂಬರು (ಕ್ರಿ). ೧. ಮುಂಭಾಗಕ್ಕೆ ಬರು ; ಮುಂದಕ್ಕೆ ಬರು : ಮನಮೆನ್ನಂ ಮುಂಬರಲ್ ಮುಂದುವರಿವುದನೆ ತೋರ್ಪಂತೆ ನೀಳ್ದತ್ತು ಸುಯ್ಲ್ (**ಕಾದಂಪೂ. ೬೫೬**); ಮುಂಬರ್ಪ ತನ್ನ ಮೊಮ್ಮನ ಕಾಲ ಸೊಪ್ಪುಳಂ ಕೇಳ್ದು (**ಗದಾಯುದ್ಧ. ೩-೪೦ ವ**); ಮುಂಬಂದೆಚ್ಚೊಡೆ ನಡು ವಾಯಂ ಬಗಿದೊಳಪೊಕ್ಕು ವಾಯುರಂಧ್ರದೊಳಂ ಬೀಳ್ವಂಬಂ ಕಡುವಿರು ಗುಟ್ ಕೂರ್ಕೊರ್ಂಬಿದು ಕಡಿದುದುದು ಪಟುಕಿಟಿಯುಮುಮಾ (**ಹರಿವಂಶ. ೪-೪೩**). **ಮುಂಬರು** : ೨. ಅನಂತರದಲ್ಲಿ ಬರು ; ಮುಂದೆ ಒದಗು : ತಮಗೆ ಮುಂಬಹ [**ಶಾಶಾಂ. ಬಾಹ**] ಸುಖದುಃಖಂಗಳನರಿಯದವರು ಮತ್ತೊಬ್ಬರ ಸುಖದುಃಖಗಳ ಮೊದಲೆ ಅರಿಯರು (**ಶಬ್ದವ. ೪. ೨೨೨-೪೯೩**); ರಾಜ್ಯದ ಮಹಾದಣ್ಣಾಯಕನು ನಾಡಿನ ಮೇಲೆ ಹೀಗೆ ಸಂಚರಿಸಿಮುದರಿಂದ ಮಂದಿಯ ಮನಸ್ಸು ಮುಂಬರುವ ಕಾಳೆಗದತ್ತ ತಿರುಗಿತು (**ಸಪಾ. ೬೨**). [ಮುಂ$_2$ (< ಮುನ್$_2$) + ಬರ್ (< ವರ್)]

**ಮುಂಬರಪ** (ನಾ). ಮುಂಚಿತವಾಗಿ ಬರೆದ ಬರವಣಿಗೆ; ಮೊದಲೇ ಬರೆದ ಬರಹ : ಸಿರಿಯಾಡಿಸೋಂಕಿನಿಂ ಪಣೆಯ ಮುಂಬರಪಂ ಪಸನಾಗೆ ಸೈಪೆ ಬೇರ್ವರಿಯೆ . . . ನಿಂದಳಮ್ಮೃತಾಬ್ಧಿತರಂಗದೆ ತೇಂಕುಪೊನ್ನದಿಂ (**ಅಪಾ. ೬-೨೪೪**). [ಮುಂ$_2$ (< ಮುನ್$_2$) + ಬರಪ (< ಬರೆಪ)]

**ಮುಂಬರಿ$_1$** (ಕ್ರಿ). ೧. ಮುಂದೆ ಚಲಿಸು ; ಮುಂದೆ ನಡೆ ; ಮುಂದಕ್ಕೆ ಸಾಗು : ಸುಪ್ರಭಮುನೀಶನಮಳತನುಪ್ರಭೆ ಮುಂಬರಿದು ಬೆಳಗಿದತ್ತು ಶಿವಜ್ಞಾನಪ್ರಭೆ ದಯಾಮೃತಾಸಾರಪ್ರಭೆಯೆನೆ ತನ್ಮುನೀಶನೊಡ್ಡೋಲಗಮಂ (**ಸುಕುಮಾ. ೩-೦೦೩**); ಗೋಮುಖವ್ಯಾಘ್ರಂಗಳಂದದ ಕಾಮ ಮೊದಲಾದಖಿಳವಿಷಯಸ್ತೋಮವನು ಮುಂಜುಂದಿಕ್ಕಿ ಮುಂಬರಿದಂತರಂಗದಲಿ ಆ ಮಹಾಶಿವಲಿಂಗಸಂಗಪ್ರೇಮಿಯಾಗಿ ಶಿವೈಕ್ಯಪದವನು ನೇಮಿಸಿದ ಮಹದೇವಿಯಕ್ಕಗೆ ಶರಣು ಶರಣಾರ್ಥಿ (**ಶ್ರಖಂ. ೦-೩**); ಅಂಬರಚರಿಯರಸೀ ಪಟ್ಟಣದೊಂದು ಸಂಭ್ರಮವನು ನೋಡಿಯೆನುತ ಕುಂಭಿನಿ ಕೈನೀಡಿ ಕರೆವೋಲು ಡೆಂಕಣಿ ಮುಂಬರಿದೆಸೆದುವರ್ತಿಯಲಿ (**ಕಂಪಾಪ. ೬-೯**). ೨. ಮುಂದಕ್ಕೆ ಹರಿ,– ಪ್ರವಹಿಸು : ಸಿಂದಿದನು ಸಿಮ್ಮಯ್ಯನಿದಿರಲಿ ಸಂಧಿಸುವ ರಣಗಲಿಗಳುಗ್ರಸ್ಯಂದನದ ಮುಂಭಾಗದಲಿ ಮುಂಬರಿವ ಹೆದ್ದೊರೆಯು ಮುಂದೆ ನಿಲುವ ಮಹಾದ್ರಿಯಂತೊಲು . . . ಸಲವೇಜವನು ಕಲಿಹನುಮ (**ಕೊರಾ. ೬-೩೦-೦೬**). ೩. ಮುಂದುವರಿ ; ಬೆಳೆ ; ಅಭಿವೃದ್ಧಿ ಹೊಂದು : ಈಗ ಸುಮಾರು ಮೂವತ್ತು ನಲವತ್ತು ವರ್ಷಗಳಿಂದಲೂ ನಮ್ಮ ಸಾಹಿತ್ಯ ನಾನಾಶಾಖೆಗಳಲ್ಲಿ ಮುಂಬರಿದು ಹಬ್ಬಿ ಹರಡುತ್ತಿದೆ (**ಬಂಕಿಮ. IX, ಮುನ್ನುಡಿ**). ೪. ಅಧಿಕವಾಗು ; ಹೆಚ್ಚಾಗು ; ವಿಶೇಷವಾಗು : ಅಂಬರಚರಿಯರ ತನುಗಂಧಿಗೆಳಗುವ ತುಂಬಿಯ ಬಳಗದಂದದಲಿ ಮುಂಬರಿದೆಸೆವ ಕಪ್ಪಿಡಿದ ಘಳಾಳಿಯಿಂ ಜಂಬುನೇಜಾಲಿಗಳೊಪ್ಪಿದುವು (**ಕಂಪಾ. ೨-೪೪**); ಬೆರಲಂ ಕೊಟ್ಟೊಡೆ ಬೇಟಮೋಘ ಕುರುಳುಮಂ ಕೊಯ್ದುತ್ತೊಡೇಂ ಕೂರ್ಮೆ ಕೇಳರವಿಂದಾನನೆ ಮನ್ಮನಃಪ್ರಿಯಮಿದಲ್ಲೀ ದೇಹಮಂ ನಲ್ಮೆ ಮುಂಬರಿವುತ್ತಿತ್ತೊಡಿಪೆಲ್ಲಮೇಂ ಪೆಚಿತ್ತೆ (**ರಾಜಶೇ. ೧೦-೦೩೯**). ೫. ಹರಡು : ವ್ಯಾಪಿಸು : ಪಸರಿಸು : ತನ್ನ ತೇಜದೊದವಿಂ ಹಾರಂಗಳೆಂಬಂತೆ ಭಾಸುರದಂತದ್ಯುತಿಮಾಲೆ ಮುಂಬರಿಪಿನಂ ವ್ಯಾಖ್ಯಾನಮಂ ಮಾಡುತಚ್ಚರಿವೆತ್ತಿರ್ದ ಸುಧರ್ಮಯೋಗಿವರನಂ ಕಂಡಂ ಧರಾಧೀಶ್ವರಂ (**ಸುಕುಮಾ. ೪-೯೯**); ಮಣಿಭೂಷಣದ್ಯುತಿ ಮುಂಬರಿವುತಿರೆ ಬಂದನಾಕೆಯ ಹರಣ ಬಂದಂತೆ (**ಸಾಳ್ವಭಾ. ೩-೦೬**); ಬಿಂಬಾಧರದ ಕೆಂಬೆಳಗು ಮುಂಬರಿದು ಕುಂಭಕುಚಕ್ಕೆ ಕೆಂಬರಲ ಸರಮಂ ಕೆಲಗೊಳಿಸೆ (**ರಾಜಶೇ. ೪-೦೪ ವ**). ೬. ಉಂಟಾಗು ; ಒದಗು : ಬಳಲಿದೆನು ಬಲುಹಾಗಿ ಸಾಕಿನ್ನೆಳಸಟವು ತನಗೆಂಬ ಬಗೆ ಮುಂಕೊಳಿಸಿದುದು ಮುಂಬರಿದುದುಗ್ರಾಟೋಪಕೋಪಶಿಖಿ (**ಕೊರಾ. ೩-೬-೬೯**). ೭. ಪರಿಣತವಾಗು ; ಪಕ್ವಗೊಳ್ಳು : ಪ್ರಾಚೀನ ಬೌದ್ಧಧರ್ಮವು . . . ಮುಂಬರಿದ ಚೇತನಗಳ ಏಕಾಂತತೆಯನ್ನೂ ಹೊರಗಿನ ನೆರವನ್ನೂ ಬಯಸದೆ . . . ಸ್ವಂತಪರಿಶ್ರಮದಿಂದ ಮೋಕ್ಷವನ್ನು ಗಳಿಸಬೇಕೆಂಬುದನ್ನೂ ಒತ್ತಿ ಹೇಳಿತು (**ಕಕ್ಕಾ. ೦೬೩**).

ಮುಂಬರಿ ಬೀಳು=ಮುಗ್ಗರಿಸಿ ಬೀಳು : ಥಗೆ ಹೊಡೆದಳ್ಳಿ ಹೊಂಬಿನ್ನಂತ ಬಿಸಿಲಿಂಗೆ ನಾಲಗೆನೀರು ತಟಗುಟ್ಟಿ ಸುರಿಯ ಮಿಗೆ ಓಡಿವಘನ ಮುಂಬರಿ ಬೀಳಲೆಳೆವ ನಾಯಿಗಳಡಸಿದುವೆಡಬಲದೆ (**ಮೋಹತ. ೦೯-೦೪**).
[ ಮುಂ$_2$ (< ಮುನ್$_2$) + ಪರಿ$_2$]

**ಮುಂಬರಿ$_2$** (ನಾ). ಮುಂದಕ್ಕೆ ಚಲಿಸುವಿಕೆ : ' ಮುಂಬರಿವರಿ ' ಪರಾ.
[ಮುಂ$_2$ ( < ಮುನ್$_2$) + ಪರಿ$_3$ ]

**ಮುಂಬರಿತ** (ನಾ). ಮುಂದುವರಿಕೆ ; ಅಭಿವೃದ್ಧಿ : ಇದುವರೆಗಿನ ಎಲ್ಲ ವಿವರಣೆಗಳಿಂದ್ಮ ಸುಮಾರು ಕ್ರಿ. ಶ. ೧೨ನೆಯ ಶತಮಾನದ ಆರಂಭದಿಂದ ಕ್ರಿ. ಶ. ೧೭ನೆಯ ಶತಮಾನದ ವರೆಗಾದ ಕೋಟೆಗಾಳೆಗದ ' ಸಂವರಣೆ ' ಯ ಮುಂಬರಿತವನ್ನು ಕಂಡುಕೊಳ್ಳಬಹುದಾಗಿದೆ (**ಕೋಟೆಗಾ. ೨೬**). [ಮುಂಬರಿ$_1$ + – ತ$_2$]

**ಮುಂಬರಿವರಿ** (ಕ್ರಿ). ಮುಂದಕ್ಕೆ ಹೋಗು. ಚಲಿಸು : ಮಿಕ್ಕು ಮುಂಬರಿವರಿದು ನೀಡವನಿಕ್ಕಿಲದ ಕೋಂಗಳ ಕಡಿ ಸಿಡಿದಿಕ್ಕಿ ಬಾಲದ ಓಜೆಯ ಸೀವರಿಸುವ ಶಿಖಾಳಿಗಳ (**ಕೊರಾ. ೩-೮-೪೬**). [ಮುಂಬರಿ$_2$ + ಪರಿ$_2$]

**ಮುಂಬರು** ' ಮುಂಬರ್ ' ನೋ.

**ಮುಂಬರೆಯ** (ನಾ). ಹರೆಯದ ಆರಂಭ : ನವಯೌವನ : ಸಿರಿ ಚೆಲ್ವಂ ಸಿರಿಯಲ್ಲಿ ರೂಪು ಮಿಗೆ ಚೆಲ್ವಂ ರೂಪಿನೊಳ್ ಮತ್ತೆ ಮುಂಬರೆಯಂ ಚೆಲ್ವನಿನಿತ್ತುಮೆಯ್ದೆ ಕಡುಚೆಲ್ವಂ ಬೇಟದಿಂ ಬೇಟಮುಂಬರೆಸಂ ಮನ್ನಿಸದಂದ ನಾಯಕಮುಂ (**ಅಪಂಪು. ೬-೩೯**); ಮುಜುಕದ ಗಾಡಿ ಮುಂಬರೆಯ [**ಶಾಶಾಂ. ರಿಯ**]ದೊಟ್ಟಜೆ ರಂಜಿಪ ದೇಸೆ ಸೌಷ್ಠವಂ ಮೆಚ್ಚಿದಿರೆ (**ಧರ್ಮಾಸ್ತ್ರ. ೭-೪**); ಧರಿಸಿದ ಕನಕಾಂಬರದವಾರಶೋಭಾವೈಭವಮಂ ಮುಂಬರೆಯದ ಮೆಯ್ಸಿರಿಯಿಂ ಜರಿಯುತ್ತುಂ (**ಮಣಾತ. ೩-೮೯ ವ**).
[ ಮುಂ$_1$ ( < ಮುನ್$_1$) + ಪರೆಯ$_2$ (< ಪರಯ) ]

**ಮುಂಬಲ್**, ಮುಂಬಲ್ಲು (ನಾ). ಮುಂಭಾಗದ ಹಲ್ಲು ; ಮುಂದಿನ ಹಲ್ಲು : ಸಂಧಿಸಿ ಮಾತ್ರದೆ ಮುಂಬಲ್ಲಿಂದರಳಿಯ ಮುಗುಳನಗಿವೃತಂ ಘೂಘೂಯೆಂದಂದಭಿಮಂತ್ರಿಸಿ ಭಸ್ಮಮನಂದಿಟ್ಟವರ್ ತೇಟ ವಿಷಮುದಾಕ್ಷಣ ಮಿಟಿಗುಂ (**ಜಸುದ. ೦೦-೦೧**); ಮುಂಬಲ್ಲಂ ನಾಲ್ಕಕ್ಕಮದೆಂಬುದು ಸಂದಂಶಮೆಂಬ ಪೆಸರಂ ಮೇಗಣ ಕೆಂಬಲ್ಲುಮುಗ್ರದಂತವದೆಂಬುದು (**ಅಶ್ವಶಾ. ೯-೯**). **ಮುಂಬಲ್ಲು** : ಕುರುಳು ಬೆರಳು ಮುಡುಹು ಮುಂಬಲ್ಲ

ಕೊಳ್ಳಾ ಸಿಜೀಯನಿಕ್ಕಿ ದಾಂಟಿದರೆ ಅಂತೆನ್ನ ನಂಬಾ (ಬಸವ. ೩೦೦); ಮುಂಬಲ್ಲು ಬಿದ್ದು ವೀಳೆಯವ ಕಲ್ಲೊಳು ಜೆಜ್ಜಿ ತಿಂಬರಲ್ಲದೆ ಬಿಟ್ಟರಾರು (ಶರಕ. ೭೦-೧೧೨); ನಗೆಮುಖಿ ಮುಂಬಲ್ಲೆಲ್ಲ ಚೆನ್ನ ಕಾಣೆ ಗೆರೆ ಬರದಾ ವಿಭೂತಿ ಕಪ್ಪುಗೊರಳ ಕಾಣೆ (ವಾಕರ. ೨೦೮).

[ಮುಂ$_1$ (<ಮುನ್$_1$) + ಪಲ್]

**ಮುಂಬಲ** (ನಾ). ಮುಂಭಾಗದ ಸೈನ್ಯ,– ದಂಡು ; ಮುಂಚೂಣಿ : " ಮುಂಗುಡಿಯೆನೆ ಮುಂದುಚೂಣಿಯೆನೆ ಮುಂಬಲಮುಂ " (ಶಕುಶಿ. ೦೭೭); ಮಲಯಮಾರುತನ ಬೆಂಬಲಮುಮುಂ ಚೈತ್ರಮಿತ್ರನ ಮುಂಬಲ ಮುಮಂ . . . ದರ್ಪಕನ ದರ್ಪಂಬೆರಸೆಟಕುಳಿಗೊಂಡು ಗಂಡೇಟಿದ ಗಂಡಗಾಡಿ ರೂಢಿವಡೆಯೆ (ಅಪಂಪು. ೬-೨೨ ವ); ಚಂಡ ಕೋದಂಡನ ದಂಡಾಧಿನಾಯಕಂ ವೀರಜಂಭರಾಜಂ ಮುಂಬಲದೊಳ್ ಕದೆನಕ್ಕಿ ಕಡಂಗಿ ಕದುಂಬಿ ಸನ್ನದ್ಧನಾಗಿ (ಹರಿಶ್ಚಂ. ೩-೩೩ ವ); ಅಟಾದುಟಿದ ಬೆಂಬಲಂ ಮುಂಬಲವಾಗೆ ಬೆಂಗೊಟ್ಟೋಡಿ ತಮ್ಮಾಣ್ಮಂಗೀತಿದಂ ಕೇಳಿ ಸಿದರ್ (ರಾಮಾಶ್ವ. ೦೯೭-೧). [ಮುಂ$_1$ (< ಮುನ್$_1$) + ಬಲ$_3$]

**ಮುಂಬಲಿ** (ಕ್ರಿ). ಮೊದಲು ವ್ಯಾಪಿಸು : ಏರಿದಾದ ಚತುರಂಗದ ಪದಹತಿಯುಲಿ ಮುರಿದೇಳ್ವ ಕೆಂದೂಳ್ಗಳಾಗ ತರಣಿಮಂಡಲವ ಮುಂಬಲಿದು ಮುಂಕೊಳುತಂದು ಕಿರಣದೇಳಿಗೆಯ ತಗ್ಗಿಸಿತು (ಕಂಪಹಿ. ೦೭-೨೮).

[ಮುಂ$_2$ (< ಮುನ್$_2$) + ಬಲಿ$_1$ (< ಬಲ್$_1$)]

**ಮುಂಬಲ್ಲು** ಮುಂಬಲ್ ' ನೋ.

**ಮುಂಬಸಿಱು** (ನಾ). ಗರ್ಭ ಧರಿಸಿದ ಪ್ರಾರಂಭದ ಕಾಲ : ಬಿಸುಗದಿರಿನ ಮುಂಬಸಿಱೊಳು ಮೂಡಣ ದೆಸೆವೆಣ್ಣ ಸೀಮಂತದ ಒಸಗೆಯ ವಾದ್ಯ ಗಳೆನೆ ದೇಗುಲಗಳೊಳೆಸೆದವು ಶಂಖನಿನಾದಂ (ಶ್ರೀಶಾಂ. ೨-೨೮)

[ಮುಂ$_1$ (< ಮುನ್$_1$) + ಬಸಿಱು (< ಬಸಿಱ್) ]

**ಮುಂಬಳೆ** (ನಾ). ಕೈಯ ಮುಂಭಾಗದಲ್ಲಿ ಧರಿಸುವ ಬಳೆ : ಬಾಜೀ ಬಂದು. ಹಿಂಬಳೆ, ಮುಂಬಳೆ, ದೋರ್ಯ, ಪೌಂಚಿ . . . ಡಾಬು ಮೊದಲಾದ ಆಭರಣಗಳನ್ನು ಧರಿಸಿಕೊಂಡು (ಮಲಿವಂ. ೩೮).

[ಮುಂ$_1$ (<ಮುನ್$_1$) + ಬಳೆ$_2$]

**ಮುಂಬಾಗಿಲ್**, ಮುಂಬಾಗಿಲು (ನಾ). **(ಕಟ್ಟಡದ)** ಮುಂಭಾಗದಲ್ಲಿರುವ ಬಾಗಿಲು; ಮುಂದಿನ ದ್ವಾರ; ತಲೆಬಾಗಿಲು: ಪೋಗಿ ನೀಂ ಗಿಳಿಯೆಮ್ಮ ದೇಗುಲದೊಪ್ಪುವುನ್ನತವಾದ ಮುಂಬಾಗಿಲಲ್ಲಿ ತೊಳಪ್ಪ ಪೂಗೊಳದೊಳ್ಮು ಟ್ಟಿಂಗೆನಲು (ಉದ್ಭಟ. ೭-೦೦೦); ಅಗಳನೂನಸಂಭ್ರಮಪರಿಭ್ರಮ ದಂಗನೆಯರ್ . . . ಮುಂಬಾಗಿಲೊಳುನ್ನತಧ್ವಜಚಯಂಗಳನೆತ್ತಿಸಿ ರಂಗ ವಾಲಿಯಂ ರಾಗದೊಳಿಕ್ಕಿ ಬೀದಿಯೊಳ್ ಸಂದಣಿ ಮಾಡಿದರಪ್ಪಶೋಭೆಯಂ (ಚಾರಶ. ೩-೧೩). **ಮುಂಬಾಗಿಲು:** ಇಂದ್ರಿಯದ ಬಾಗಿಲಲ್ಲಿ ಮನವಿಪ್ಪುದು ಮನದ ಮುಂಬಾಗಿಲಲ್ಲಿ ಭೋಗಲಿಂಗವಿದ್ದು ಸಕಲಭೋಗಂಗಳ ಭೋಗಿಸಿ . . . ಸೌರಾಷ್ಟ್ರಸೋಮೇಶ್ವರಲಿಂಗವ ಬಲ್ಲರೆ ಬಲ್ಲೆ (ಆದಯ. ೨೨-೭೦) ; ಕನಕಾಂಬುಜಮುಖಿಯಾ ಗೃಹದ ಮುಂಬಾಗಿಲ ಗೋಪುರದ ಚಿತ್ರದ ಭಿತ್ತಿ ಇಂಬಾಗಿರೆ ನೋಡಿದಳು (ಶ್ರೀಶಾಂ. ೭-೬೩) : ದಮಯಂತಿ ಗಂಡನನ್ನು ಎದುರುನೋಡುತ್ತಾ ಮುಂಬಾಗಿಲಿನಲ್ಲಿ ನಿಂತಿದ್ದಳು (ದೂಜಟ್ಟಿ. ೭೯).

[ಮುಂ$_1$ (< ಮುನ್$_1$) + ಬಾಗಿಲ್]

**ಮುಂಬಾಗಿಲು** ' ಮುಂಬಾಗಿಲ್ ' ನೋ.

**ಮುಂಬಾಗು** (ಕ್ರಿ). ಮುಂದುಗಡೆಗೆ ಬಾಗು ; ಮುಂದಕ್ಕೆ ಓಲು : ಒಂಬತ್ತುತಿಂಗಳು ಹೊತ್ತ ಮಾತೃಕೆಯ ಪಾದಾಂಭೋರುಹಕಲರ್ಗರೆದು ಮುಂಬಾಗಿ ಕೈನೀಡಿ ಶರಣೆಂಬ ರೀತಿಯೊಳ್ ಪೊಂಬಾಳೆ ಬನದೊಳೊಪ್ಪಿ ದುವು (ಪೋಹಶ. ೨೮-೯೦). [ಮುಂ$_2$ (< ಮುನ್$_2$) + ಬಾಗು$_1$]

**ಮುಂಬಾಯ್**$_1$ (ಕ್ರಿ). ೧. ಮುಂದಕ್ಕೆ ನುಗ್ಗು : ಅವ ಪೆರ್ಗಡಲ್ ಅಗಳು ಆವ ಮಲೆ ಬಲ್ಗೋಂಟೆ, ಆದರ ಮುಂಬಾಯ್ವರಿವು ಮೊಗಗೆಟ್ಟು ನಿಲಲು (ಶಾರಸಿ. ೭-೦೨೯). ೨. ಮುಂದಕ್ಕೆ ಹಬ್ಬು, – ಹರಡು : ಚಂದ್ರಧ್ವಜಾ ವನಿಪಂ...ಮೇಧಾವಿಳಾಂಕನ ವಕ್ತ್ರೇಂದುವನೊಯ್ಯನೀಕ್ಷಿಸುತುಮಾತ್ಮಾತ್ಸುಕ್ಯ ದಿಂದೊಂದನೆಂದೆನಲುದ್ಯೋಗಿಸಿದಂ ದ್ವಿಜದ್ಯುತಿನಿಕಾಯಂ ನೀಟ್ದು ಮುಂಬಾ ಯ್ವಿನಂ (ಕುಸುಮಾ. ೦೩-೭೩). ೩. ಮುಂದಕ್ಕೆ ಹರಿ, – ಪ್ರವಹಿಸು : ಸೋರ್ವಾ ವಾರಿಧಾರಾವಳಿಯಿನಿರದೆ ಮುಂಬಾಯ್ವ ವಾರಿಪ್ರವಾಹಾವಳಿಯಾ ವಾರಿಪ್ರವಾಹಾವಳಿಯಿನಿಳೆ ಪಯೋರೂಪವಾದತ್ತದೆತ್ತಂ (ಕುಸುಮಾ. ೬-೩೦). [ಮುಂ$_2$ (<ಮುನ್$_2$) + ಪಾಯ್$_1$]

**ಮುಂಬಾಯ್**$_2$ (ನಾ). ಬಾಯಿಯ ಮುಂಭಾಗ ; ತುಟಿ : ಮುಂಬಾಯ ಕರ್ಪೂರವೀಳೆಯದಿಂದ ಕಣ್ಗಂಬಾದನಾ ಗಾಡಿಕಾಜ (ಭರತ. ೦-೩೩).

[ ಮುಂ$_1$ (< ಮುನ್$_1$) + ಬಾಯ್ ]

**ಮುಂಬಾರೆಕಾಱ** (ನಾ). ಸೈನ್ಯದ ಮುಂಭಾಗದಲ್ಲಿ ಕಠಾರಿಯನ್ನು ಹಿಡಿದು ಯುದ್ಧಮಾಡುವ ಸೈನಿಕ ; ಮುಂಚೂಣಿಯ ಭಟ : ತಿರುಹಿ ಬಿಸುಟುವು ಕಾಲುಗಾಹಿನ ತುರಗವನು ಮುಂಬಾರೆಕಾಱರ ಶಿರವನೈದಾಱೇಳ ನಡಸಿದವಣಲ ಹೊಳಲಿನೊಳು (ಕುಮಾವ್ಯಾ ಭೀ. ೪-೭೭).

[ ಮುಂಬು$_2$ + ಆರೆ$_3$ + – ಕಾಱ]

**ಮುಂಬಾಲೆ** (ನಾ). ಕಿವಿಯ ಹಾಲೆಯ ಮುಂಭಾಗ : ಮೇಲುದಂ ಮಱಿದು ಮೆಯ್ಮಱಿದೊರ್ವಳೊಱಲ್ದು ಮುಂಬಾಲೆಯಂ ತಿರಿಪಿ ನೂಂಕಿ ಪವಿತ್ರಮನಿಟ್ಟು ಪಚ್ಚೋಲೆವಚ್ಚದೊಳೊಡಂಬಡೆ ಬಂದು ವಿದಗ್ಧ ಭೂಪಾಲ ನಂದನನನಂದರುಣಾಧರೆ ನೋಡಿದಳ್ (ಕಾವ್ಯಾವ. ೨೨೦).

[ಮುಂ$_1$ ( < ಮುನ್$_1$) + ಪಾಲೆ$_3$]

**ಮುಂಬಾಳು** (ನಾ) ಮುಂದಿನ ಬಾಳು ; ಭವಿಷ್ಯದ ಜೀವನ : ಹಿಂದೆ ಮಾಡಿದ ತಪ್ಪುಗಳನ್ನು ಇನ್ನು ಮುಂದೆ ಮಾಡದೆ, ಮುಂಬಾಳನ್ನು ಹಸನಾಗಿಸಿಕೊಳ್ಳುತ್ತೇನೆ ಎಂಬ ವಿಶ್ವಾಸವು ಉಂಟಾಗಿರುತ್ತದೆ (ಮಮೋಕಂ. ೨೩೪). [ಮುಂ$_1$ (< ಮುನ್$_1$) + ಬಾಳು$_2$ (< ಬಾಳ್$_3$)]

**ಮುಂಬಿಗ** (ನಾ). ೧. (ಸೈನ್ಯದ) ಮುಂಭಾಗದಲ್ಲಿರುವವನು : ಮುಂಚೂಣಿಯಲ್ಲಿರುವವನು : ಸೂತಸುತ ದಳಪತಿಯೆ ಘಡ ಮುಯ್ಯಾಂತರೇ ಮುಂಬಿಗರು (ಕುವ್ಯಾಕ. ೨-೬) ; ಅನಿತಱೊಳೆ ಗದೆಯಂ ಪದೆದು ಮೇಣೆರಡಱಿ ಮುಂಬಿಗನಂ ನಿರಾಯುಧನಂಗೆಯ್ದು . . . ಕಣದೊಳ್ ಕೆಡೆಪಿದಂ (ರಾಮಾಶ್ವ. ೦೯೩-೨೯). ೨. (ಸಾಹಿತ್ಯಕ್ಷೇತ್ರದಲ್ಲಿ) ಪ್ರತಿಷ್ಠಿತನಾಗಿರುವ ವ್ಯಕ್ತಿ : ಮುಂಬಿಗರಿದನಂತೆ ನೂಕೆ. ಬಳ್ಳಿ ಬರಿದೆ ಕೊರಗಲೇಕೆ ? ಹೆತ್ತಳ್ಳಿಸೆ ಫಲಮನಾಕೆ ಕಡುಸಾಜತೆಗೆ ? (ಗೀಪಂ. ೦೦೪-೩೭).

[ಮುಂಬು$_2$ + – ಇಗ]

**ಮುಂಬಿಡು** (ಕ್ರಿ). ೧. ಮುಂದಕ್ಕೆ ಬರುವಂತೆ ಮಾಡು : ಕಿಱಿಯಂ ಮುತ್ತಂ ಧನದಂ ಬಱಿಯಂ ತೊಱಿದಂ ಗೃಹಸ್ಥನೆನ್ನದೆ ಮುಂಬಿಟ್ಟಱಿಸಿ ಕೊಲುತಿರ್ಪ ಜವನೆಂಬಱಿಕೆಯ ಪಗೆವಂಗದೆಂತು ಪಂಗಿಗನಪ್ಪಂ (ಆದಿಪು. ೪-೭೭) ; ಏಂ ನಿಷ್ಕರುಣಿಯೊ ಪಸುಮಗನೆನ್ನದೆ . . . ಮರುಳಕ್ಕಟ ಮಾಣೆನ್ನದೆ ಮುಂಬಿಟ್ಟು ಕೊಂದಪಂ ಯಮರಾಜಂ (ಅಜಿತ. ೦೦-೨೩) ; ರಟ್ಟರ ಕೈಗೆ ವಿದ್ವೆಳೆಯುಂ ಪಟ್ಟಮುಮಂ ರಟ್ಟರಾಜ್ಯದರಸುಗಳಂ ಮುಂಬಿಟ್ಟು ತಱಿದೊಟ್ಟಿ ರಟ್ಟಘರಟ್ಟಂ ಚಾಳುಕ್ಯರಾಜ್ಯಪಟ್ಟಮನಾನ್ತಂ (ಎಕ. VII, ಶಿಕಾಂ. ೦೨೩-೦೨ ; 1029). ೨. ಎದುರಾಗು ; ಅಭಿಮುಖ ವಾಗು : ಮುಂಬಿಟ್ಟು ಪರೆದ ಕಟ್ಟಲೆಯಂ ಬೆದಱಿ ತೆರಳ್ದು ಬೆಳಪಂ ಬೆಳಗಿಂದೆಸೆದಿರ್ಪಂಬುಜಸಖನಂತಿರೆ ಮಿಾನಂಬುಟು ಬೆಳಗಿದಪುದಖಿಳ ಗಗನಾಂತರಮಂ (ಕಾವ್ಯಾವ. ೬೬೨). ೩. ಮುಂದಕ್ಕೆ ಹರಡು : ಶೋಣಾಬ್ಜದೊಳ್ ಕೆಱಿಗೊಂಡಿಂದುಕಲಾಂಕುರಚ್ಛವಿಯವೋಲ್ ಬಿಂಬೋಷ್ಠ ವಿಂಬಾದ ಬೆಂಬಟ್ಟಿಯೊಳ್ ಮುಂಬಿಡೆ ದಂತಕಾಂತಿ ಬಟ್ಟೀಕೆತೆಂದಳ್

ಮಹೀಕಾಂತನೊಳ್ (ಅನಂತಪು. ३-೫३). [ಮುಂ$_2$ (< ಮುನ್$_2$) + ಬಿಡು$_1$]

**ಮುಂಬಿಡುವಲೆ** (ನಾ). (ಮುಂಭಾಗದಲ್ಲಿ ಅಗಲವಾಗಿ ಹಾಸುವಂಥ) ಒಂದು ಬಗೆಯ ಬಲೆ : ಗೂಂಟವಲೆ ಪೊಣರ್ಚುವ ಬಲೆ ಮುಂಬಿಡುವಲೆ ನಡುವಲೆ. . . ನಿಡುವಲೆಗಳೊಪ್ಪಿದವು ಲುಬ್ಧಕರೊಳ್ (ಗೊಕ. ೦-೬೦).
[ಮುಂ$_2$ (< ಮುನ್$_2$) + ಬಿಡುವಲೆ]

**ಮುಂಬಿಸಿಲ್**, ಮುಂಬಿಸಿಲು (ನಾ). ಪ್ರಾರಂಭದ ಬಿಸಿಲು : ಬೆಳಗಿನ ಬಿಸಿಲು : ಎಳೆಬಿಸಿಲು : ಊರಿಂ ಪೊಱಮಟ್ಟು ಗಾವುದದೊಳ್ ಮುಂಬಿಸಿಲಂ ಮೂಡಿಸಿದಂ (ಕಶ್ಯಾ. ಸು. ೫೩೭ ವ್ಯಾಖ್ಯಾ) ; ಹೊಂಬಣ್ಣವೆರಚುವುದು ಮುಂಬಿಸಿಲ್ (ಚತ್ರಾಂಗ. ೫೩-೦೯೩೯). **ಮುಂಬಿಸಿಲು** : ಇಂಬಾಗಿ ನಗುನಗುವ ಮುಂಬಿಸಿಲ ಮೋರೆಯಲಿ, ಅಂಬುಜಸಖಂ ಬಂದನಂಬರದೆಲಿ (ಕಂಪು. ३೭-೦). [ಮುಂ$_1$ (< ಮುನ್$_1$) + ಬಿಸಿಲ್]

**ಮುಂಬಿಸಿಲು** ' ಮುಂಬಿಸಿಲ್ ' ನೋ.

**ಮುಂಬು$_1$** (ಕ್ರಿ). ೧. ಮುಂದಕ್ಕೆ ಬರು ; ಮುಂದೆ ಬರು : ಒದವಿದ ಮಾನಸಿಕ್ಕೆ ತಲೆದೋಱಿದ ಮುನ್ನವೆ ಮುಂಬಿ ಮೂರ್ತಿಗೊಂಡುದು ಸಿರಿ ಕೆಚ್ಚುಗೊಂಡುದು ಮನಂ . . . ರಾಸಿಗೊಂಡುದು ನೆಗರ್ತೆಯ ತೇಜವನಂತಪಾಳನ (ಕೌಇಇ. IX-i, ३೦೩-೫೭ ; 1126). ೨. ಮೊದಲು ಬರು : ಮುಂಚೆ ಬರು : ತೊಂಬತ್ತೇೞಜಿನೊಳ್ ಪರಿಮೇಷಮಾದೊಡಂ . . . ನೂಱ ನಾಲ್ವತ್ತೇೞುಂ ದಿನದೊಳೆತ್ತ ಮುಂಬಿ ನಿಲೆ ಮುಗಿಲ್ ಕರ್ಗಿಕೊಂಡಿರ್ಪೊಡಂ ಮೇಘಸಂತತಿಗಾದ ಗರ್ಭಮೆಲ್ಲಂ ತುಂಬಲ್ ಮಾತೇನೊ ಗಾಳಿಸಲೆಂದಱಿಗೆ ಬಿಟ್ಟಕಂದರ್ಪನ ಸೂತ್ರೋಕ್ತದಿಂ (ಅಭಿ.ಮ. ೬-೭೦).
[ಮುಂ$_1$ (< ಮುನ್$_1$) + < – ಪು$_1$ ]

**ಮುಂಬು$_2$** (ನಾ). ೧. ಮುಂಭಾಗ; ಮುಂದುಗಡೆ ; ಎದುರು : ಅರಿಭಟರು ಪವನಜನನಾನುತ ಮಾರಳುತುಬ್ಬರಬವತವನು ತಂದರನೆಲೆಗೆ ಹಾಯ್ಕಿದರು ಕರ್ಣಾದಿಗಳ ಮುಂಬಿನಲಿ (ಕುವ್ಯಾದ್ರೋ. ೦೩-೦೯) ; ದೇಶಿಯ ನಾಡಿದಳು ಪರವೆನಾಚಿ ವಲ್ಮೀಕನಾಥನ ಮುಂಬಿನೊಳು (ಸೌಂದಪು. ೬-೦೦); ಉಲುಹುಂದೆಗದೀಗುವ ಸಮುದ್ರದ ಸಲಿಲದವೊಲಾಯ್ತಖಿಳಸೇನಾಜಲಧಿ ಕೌಣಿಸು ಮಲೆವ ಮಹಿಪರ ಮುನಿಯ ಮುಂಬಿನಲಿ (ತೊರರಾ. ೦-೦೭-೫) ; ಮುಂಬಿನೊಳನಿರುದ್ಧ ಪೊಱಮಟ್ಟು ನಿಖಿಳನಿತಂಬಿನಿಯರ ಸಮುದಯದಿ (ಮೋಹತ. ೯೦-೩೯). ೨. ಸೈನ್ಯದ ಮುಂಭಾಗ ; ಮುಂಚೂಣಿ : ಬವರಕೆ ನಿಲುವ ಚೂಣಿಗರಿಲ್ಲ ಮುಂಬಿಗೆ ಹೊಳಕ ಬಲ್ಲವರಿಲ್ಲ ನಮ್ಮಯ ಬಲದ ನಾಯಕರು (ಕುವ್ಯಾದ್ರೋ. ಶಂ. ३೯೮-೬) ; ಕಳಕಳದ ಬೊಬ್ಬೆಗಳ ಕೈಮನಡುಭಯಬಲ ಮೋಹಿದುದು ಮುಂಬಿನಲಿ (ತೊರರಾ. ೭-೩೬-೦). ೩. ಮೊದಲು ; ಪ್ರಾರಂಭ : ಸುರತದ ಸುಗ್ಗಿ ಕಾಮನ ಸರಲ್ಗಳ ಪೂವಿನ ಪೊಟ್ಟು . . . ಸುರಾಗರಸಂಗಳ ಕಾರ ಮುಂಬು ತತ್ಪುರವರದಲ್ಲಿ ಸಾತ್ವಿಕದ ಮೈನಡುಕಂಗಳ ಮಾಗಿಯಾಗಳುಂ (ಅರ್ಧನೇ. ೦-೭೮) ; ಮತ್ತೆ ಭಾನು ಮೂಡುವ ಪದದೊಂದು ಮುಂಬಿನೊಳೆ ಬೆಳ್ಕರಿಪಂತಿರೆ ಕೂಡೆ ಪಾಂಡುರಚ್ಛವಿಯೊಳಕೊಂಡುದೊಂದೆ ದಿನಮಿಂತುಟು ಚಿಂತೆ ನರೇಂದ್ರದೇವಿಯಾ (ಛಕ್ಕಶೆ. ೩-೦೦೦) ; ವನಿತೆಯರಿರ್ವರುಂ ಚಲವಿಲೋಚನಮಿಂದುಕಳಾವಿಲಾಸಮುಂ ಜನಿಯಿಸೆ ತನ್ನಿವಾಸದೊಳಳಂಕೃತಿಯಂಶುಗಳಂತವಕ್ಕೆ ಮುಂಬಿನ ತೆಱದಿಂದೆ ಮುಂದುವರಿಯಲ್ ಬರೆ (ಮಹಾಪು. ೭-೭೮). ೪. ಮೊದಲು ಕಾಣಿಸಿಕೊಳ್ಳುವ ಗುರುತು: ಮುನ್ಸೂಚನೆ : ಉದಯಿಸಿತು ಕೇವಲಜ್ಞಾನದ ಮುಂಬಿದು ನೋಟಕ್ಕೊಡೆಂಬಿನಂ ತಪಮಂ ಕೊಳ್ವುದುಮೊಡನೆ ಮನಃಪರ್ಯಯ ಮುದಾತ್ತ ಮನನೆನಿಪ ತಮ್ಮನೀಂದ್ರೋತ್ತಮನೊಳ್ (ಚಂದ್ರಪ್ರ. ೦೩-೧೦३). ೫. ಮುಂದಿರುವವನು ; ಮುಂದಾಳು : ಪಂಚಾನನದಂತೆ ಗರ್ಜಿಸಿ ದಶಾನನನೆಪ್ಪುರೆ . . . ತಾಗಿದಂ ದಾನವರಶ್ವಪಸಂ ಜವನ ಮುಂಬಿವನೆಂಬಿನೆಗಂ ವಿಭೀಷಣಂ (ಶಂರಾಮ. ೦೯-೦೦). ೬. ಹಿಂದಿನದು : ಪೂರ್ವದು : (ಕ). ೭. ಮುಂದಿನದು ; ಅನಂತರ ಒದಗುವುದು : ಭವಿಷ್ಯ : ' ಮುಂಬುಗಳೆ ' ಪರಾ. ೮. ಗುರಿ ; ಉದ್ದೇಶ : ಲಕ್ಷ್ಯ : ಮಕ್ಕಳು ನಿರ್ದಿಷ್ಟ ಮುಂಬಿನಲ್ಲಿ ಬೆಳವಣಿಗೆ ಸಾಧಿಸುವಂತೆ ಕಲ್ಪಿಸಬೇಕು (ಶಿಕ್ಷದ. ೯೬) . ೯. (ಜಮೀನಿನಲ್ಲಿ) "ಕೊಯ್ಯುವ ಸಾಲು : ಅಕ್ಕಡಿ" (ಜಾವಕೋ. ೩೩) ; " ಹೊಲಗದ್ದೆ ಕೊಯ್ಯುವವರು ತಮತಮಗೆ ಕೊಯ್ಯಲಾಗುವಷ್ಟು ಜಾಗದಲ್ಲಿ ಅಥವಾ ಮೊದಲೇ ಇರುವ ಸಾಲಿನಲ್ಲಿ ಕೊಯ್ಯುತ್ತ ಮುಂದುವರಿಯುವುದು'' (ವವೃತ್ತಿಕೋಶ) : ಗದ್ದೆ ನಾಟಿಮಾಡುವಾಗ . . . ಹಾಡುತ್ತಾ ನಾಟಿಮಾಡುತ್ತಿದ್ದರೆ ಮುಂಬು ಹತ್ತುವುದೇ ಗೊತ್ತಾಗುವುದಿಲ್ಲವಂತೆ (ವವೃತ್ತಿ. ३೫).
[< ಮುಂಬು$_1$. / ತಮಿ. ಮುಣ್ಬು ; ಮಲ. ಮುಮ್ಬು ; ತೆಲು. ಮುನುಪು]

**ಮುಂಬುಗಳೆ** (ಕ್ರಿ). ಮುಂದಾಗುವುದನ್ನು ಅಲಕ್ಷಿಸು : ಮುಂದೆ ಒದಗುವ ಅಪಾಯವನ್ನು ನಿರ್ಲಕ್ಷಿಸು : ಮುಂಬುಗಳೆದು ಕಾದಿದವರು ಬಿರುದರ್ ಕಾದುವಂತೆ ಕುರುಪಾಂಡುಸುತರ್ (ಗದಾಯು. ೬-೦೯).
[ಮುಂಬು$_2$ + ಕಳೆ$_1$]

**ಮುಂಬುಗೊಳ್** (ಕ್ರಿ). ಮುಂದೆ ಹರಡು, – ಆವರಿಸು, – ವ್ಯಾಪಿಸು. ಅದೆ ಪೂತ್ಕಾರೋಚ್ಚಳಚ್ಚೀಕರತಿಮಿತಚಮೂರೇಣು ದಿಗ್ಭಿತ್ತಿಯಂ ಮುತ್ತಿದುದೆತ್ತಂ ಮುಂಬುಗೊಂಡಂಬರಮನಿತುಮನುದ್ಯತ್ಪತಾಕಾಡಂಬರಂ ನುಂಗಿದುದು . . . ಎಂಬನ್ನಂ ಜಗನ್ಮಂಡಳಮೆಡೆಗಿಡೆ ಬಂದತ್ತು ಮತ್ತೇಭಯ್ಯಂದಂ (ಪರ್ಶಪು. ೬-೯). [ಮುಂಬು$_2$ + ಕೊಳ್$_1$]

**ಮುಂಬುಟ್ಟು** (ನಾ). ಮುಂದಿನ ಹುಟ್ಟು ; ಮುಂದಿನ ಜನ್ಮ ; ಭವಿಷ್ಯಜ್ಜನ್ಮ : ಗಂಡುಗಳಿ ಮರುಕವೆತ್ತದಂ ನಿರುಕಿಸುತೆ ಮುಂಬುಟ್ಟಿನೊಳಗಿವಳನಿಂತು ನಾಂ ತೊರೆಯಿಸುವೆನಿನನೆಂದೊರೆದು ಗಂಗಾವರ್ತದೊಳ್ಕಡೆದು ಮಡಿದುದು (ಕೀಪರಾ. ೫-३೭).
[ ಮುಂ$_1$ (< ಮುನ್$_1$ ) + ಪುಟ್ಟು$_2$ ]

**ಮುಂಬೆಚ್ಚು** (ಕ್ರಿ). ಅತಿಶಯವಾಗಿ ಹೆಚ್ಚು : ವಿಶೇಷವಾಗಿ ವೃದ್ಧಿಯಾಗು : ಬೆಚ್ಚನಾದೆಡೆಯಿಂದೆ ಕಾತ್ತರಿಸಿ ಮುಂದುಡುಗೊಂಬೆಚ್ಚಱಿಂದೇಳ್ವ ರೋಮಾಂಚನದೊಳಾಸೆ ಮುಂಬೆಚ್ಚಿ ಬೆಮರುವ ಬಾಲೆ ಬೇಸಱದೆ ನಿಂದು ನಿಟ್ಟಿಸುತಿರ್ದಳು (ಕೈಟಭಾ. ३೦-३३).
[ಮುಂ$_2$ (< ಮುನ್$_2$) + ಪೆಚ್ಚು$_{21}$ (< ಪೆರ್ಚು$_1$)]

**ಮುಂಬೆದೆ** (ನಾ). ಮೊದಲ ಬಿತ್ತನೆಯ ಕಾಲ ; ಬಿತ್ತನೆಯ ಪ್ರಾರಂಭದ ಕಾಲ : ರೈತನಾದವನು ಭೂಮಿಯ ಹಿಂಬೆದೆ ಮುಂಬೆದೆಗಳ ಹದವನ್ನು ತಿಳಿದು ಬಿತ್ತನೆ ಮಾಡಿದರೆ ಒಳ್ಳೆಯ ಬೆಳೆಯನ್ನು ತೆಗೆಯಬಹುದು (ರೂಢಿ). [ಮುಂ$_1$ (< ಮುನ್$_1$) + ಬೆದೆ]

**ಮುಂಬೆಳಕು** ' ಮುಂಬೆಳಗು ' ನೋ.

**ಮುಂಬೆಳಗು**, ಮುಂಬೆಳಕು (ನಾ). ೧. ಮುಂಜಾನೆಯ ಮೊದಲ ಬೆಳಕು; ಉಷಃಕಾಲದ ಬೆಳಕು : ಪ್ರಸ್ತುತದೊಳೊಗೆದ ಮುಂಬೆಳಗಮಲದಂತದ ಗಭಸ್ತಿನವಪೂರ್ವಸಂಧ್ಯಾರುಣಂ ಭಾಳವಿನ್ಯಸ್ತಸಿಂಧೂರಂ (ಕೈಟಭಾ. ೦-೫) ; ಇಂಬಾದ ದೇಹಕ್ಕೆ ಮುಂಬೆಳಗು ಸಂಭ್ರಮಿಸಿ ತುಂಬಿನೇರಾದ ಮಧ್ಯದ ಪುರುಷನು ಶಂಖಿನಿಗೆ ಮೇಳ (ಸರ್ವಜ್ಞ. ೦೩೭೯); ಮೂಡಲೊಳು ಮುಂಬೆಳಗು ತೋರಿದುದು (ವೆಂಕಾರಾ. ೫-೫-३೯). ೨. ಮುಂಜಾನೆ ; ಉಷಃಕಾಲ ; ಅರುಣೋದಯ ಕಾಲ : ಅನಿತಱೊಳ್ ಮುಂಬೆಳಗಿನ ಕೋಳಿ ಕೂಗಿತು ಮೂಡದೆಸೆಗೆಂಪಡರ್ದುದು (ತಬಪು. ೯೮-೩೫) ; ಇಂದೆ ಮುಂಜಾನೆ ಕನಸಾಂತು ನಾನತಿ ಸಂಕಟಂಬಟ್ಟೆ : ಮುಂಬೆಳಗ ಕನಸು ಬರಿದಾಗದೀ ಸರಪರಾಧಿಯ ತಂಟೆ ಬೇಡೆಮಗೆ

(ಗೂರಿಸ್ನ್ಗೂ. ೯೩–೦೬೨). **ಮುಂಬೆಳಕು :** ೧. ಮತ್ತೆ ಕತ್ತಲಳಿದುದಯ ದೆಡೆ ಮುಂಬೆಳಕು ಮೈದೋರಿದುದು ಮಳೆಯು ಮರ್ಬಿನಲಿ (ಕತ್ಯಾಂಗ. ೯೩–೨೨೬೩); ಈಗಿನ ಕತ್ತಲೆ ಹರಿದು ಮುಂಬೆಳಕು ತೋರಿಯೇ ತೋರುತ್ತದೆ (ಳಳಹು. ೦೨೨). [ಮುಂ$_1$ (< ಮುನ್$_1$) + ಬೆಳಗು$_2$]

**ಮುಂಬೆಳಸು** (ನಾ). ಮುಂದಿನ ಬೆಳೆ.– ಫಸಲು : ಚೈತ್ರನ ರಥದ ಮುಂಬೆಳಸು ಮೆಚ್ಚಿದರ ಮನಮೆಚ್ಚು . . . ಎನಿಪ ಮಲ್ಲಿಗೆಗಳೇಂ ಬಿರಿದುವೋ (ಕಂಪ್ಕ. ೯೫–೨೬) ; ಎಂಬತ್ತು ನಾಲ್ಕುಲಕ್ಷದ ಜೀವರುಗಳೆಂದೆಂಬ ಬೀಜವ ಸೃಷ್ಟಿಕರ್ತ ಮುಂಬೆಳಸಿಗೆ ಪಣತವ ಕಟ್ಟಿದಂದದಿ ಪೊಂಬೆಟ್ಟ ಕಣ್ಗೆ ರಂಜಿಸಿತು (ಚೋಹಕ. ೨–೦೨). [ಮುಂ$_1$ (< ಮುನ್$_1$) + ಬೆಳಸು$_2$]

**ಮುಂಬೆಜಿಗು** (ನಾ). ದೇಹವು ಮುಂದಕ್ಕೆ ಬಾಗಿ ಸೆಟೆದುಕೊಳ್ಳುವ ಒಂದು ಬಗೆಯ ಅಪಸ್ಮಾರ : ಶರೀರವ ಬಿಲ್ಲಿನ ಹಾಗೆ ಮುಂದಕ್ಕಾಗಿ ಬಗ್ಗಿಸಿ ನೋಯಿಸುವುದು . . . ಇದನೇ ಮುಂಬೆಜಿಗು ಎಂಬರು (ವೈದ್ಯಸಾ. I. ೯೦೫). [ಮುಂ$_1$ (< ಮುನ್$_1$) + ಬೆಜಿಗು]

**ಮುಂಬೊಗು** (ಕ್ರಿ). ಮುಂದಕ್ಕೆ ಪ್ರವೇಶಿಸು : ಮುನ್ನುಗ್ಗು : ಹಡಗೊಡನೆ ಹಡಗು ಹಿತ್ತಲೆಯ ಮೂತಿ ಮೂತಿಗಳಮರಿ ತೊಡರಿದುವು ; ಹಲನರವು ಕೊಕ್ಕು ಮುಂಬೊಕ್ಕು ಫಿನಿಷಿಯರ ಕಪ್ಪಲಿಂದೆಗರಿಸಿತು ಮುಂಬುಬೊಂಬೆಯನು (ಶಾರಸಿ. ೦೬–೩೬೬).

[ಮುಂ$_2$ (< ಮುನ್$_2$) + ಪೊಗು]

**ಮುಂಬೊಳ್ತು** 'ಮುಂಬೊಟ್ತು' ನೋ.

**ಮುಂಬೊಟ್ತು, ಮುಂಬೊಳ್ತು** (ನಾ). ಬೆಳಗಿನ ಮೊದಲನೆಯ ಜಾವದ ಸಮಯ : ಮುಂಜಾನೆ ; ಪ್ರಾತಃಕಾಲ : "ಮುಂಬೊಟ್ತಿಂದು ಮುನ್ನೇಸಜ಼್" (ಳಕಸಾ. ೩೬ – ೨೫೨). **ಮುಂಬೊಳ್ತು :** ವಿಪಿನಾಂತರದಿ ಇನಿತು ಮುಂಬೊಳ್ತಿನೊಳಗೇಂಗೆಯ್ದು ತಿರುಗುತಿಪೆ ? (ಜತ್ಯಾಂಗ. ೦೨–೩೨೦).

[ ಮುಂ$_1$ ( < ಮುನ್$_1$) + ಪೊಟ್ತು ]

**ಮುಂಭಾಗ** (ನಾ). ಮುಂದಿನ ಭಾಗ ; ಮುಂದುಗಡೆ : ಶಂಬರಾಸುರ ನೋಲಗ ನೀರೊಟ್ಟಲೆಂದೆಂಬಂತೆ ರಾಜಿಸುತಿರಲು ಕುಂಭಸಂಭವನಂತೆ ನಾರದಮುನಿರಾಯ ಮುಂಭಾಗದಲಿ ಬಂದಿಳಿವ (ಪೋಹಕ. ೦೦–೬೯); ಮುಂಭಾಗಂಬಿಡಿದೆಯ್ದುತಿರ್ಪ ದಡಿಗರ್ ಮುಂಗಾಣದರ್ ದಂಡೆಯರ್ ಶಂಭುಸ್ಫಾರಮಹತ್ವಸಿದ್ಧಪರನಂ ಕಾಣುತ್ತೆ (ಹಾಲಾಸ್ಯ. ೨–೫–೦೧) ; (ಪ್ರೇಕ್ಷಕರು) ಬಲಬದಿಗೆ ಒಂದು ಗುಡಿಸಲಿನ ಮುಂಭಾಗವೂ ತೆರೆದಿಟ್ಟ ಬಾಗಿಲೂ ಕಾಣಸುವುದು (ಅಶ್ವಮೇ. ೩೨).

[ ಮುಂ$_1$ ( < ಮುನ್$_1$ ) + ಭಾಗ ]

**ಮುಂಭಾರ** (ನಾ). ಮುಂದುಗಡೆ ಹೆಚ್ಚು ಭಾರವಾಗಿರುವಿಕೆ; ಮುಂಭಾಗದಲ್ಲಿ ಹೆಚ್ಚು ತೂಕವಿರುವಿಕೆ : ಮೂಗುತಿ ಮುಂಭಾರ ತುರುಬೀನ ಹಿಂಭಾರ ಸೇರಿನ ಒಂಕಿ ಕೈಭಾರ (ಹಳ್ಳಿಯ. ೯೭) ; ಗಾಡಿಯಲ್ಲಿ ಮುಂಭಾರವಾಗಿದೆ, ಹಿಂದಕ್ಕೆ ಒಂದಿಬ್ಬರು ಕುಳಿತುಕೊಳ್ಳಬೇಕು (ರೂಢಿ).

[ ಮುಂ$_1$ ( < ಮುನ್$_1$ ) + ಭಾರ ]

**ಮುಕ** 'ಮೊಗ' ನೋ.

**ಮುಕದಮಿ** 'ಮೊಕದ್ದಮೆ' ನೋ.

**ಮುಕರು** 'ಮುಕ್ಕುಱು$_1$' ನೋ.

**ಮುಕಾದಮ** (ನಾ). ಗ್ರಾಮದ ಪಟೇಲ,—ಮುಖ್ಯಸ್ಥ : ಅವನು ನನ್ನ ಕೈಕಳಗೆ ಕಟ್ಟಿಗೆಯನ್ನೊಡೆಯಲು ಬಂದಿದ್ದನು ಎಂಬ ಸಂಗತಿಯನ್ನು ಬಿಟ್ಟು ಮುಕಾದಮನು ಅವಳಿಗೆ ವಿಶದಪಡಿಸಿದನು- (ದೋರಾಳ. ೧೦).

[ ← ಅರ. ಮುಕದ್ದಮ್; ಮರಾ. ಮುಕಾದಮ್ ]

**ಮುಕುಂದ** (ನಾ). ೧. ವಿಷ್ಣುವಿನ ಹೆಸರುಗಳಲ್ಲಿ ಒಂದು; ಕೃಷ್ಣ : "ವಿಷ್ಣುಃ ಕೃಷ್ಣಃ ಕೇಶವಃ ...ಮುಕುಂದಃ, ಗೋವಿಂದಃ... ಗದಾಧರಃ– ಈ ೪೫ ನಾರಾಯಣನ ಪೆಸರ್" (ಹರಾಯು. ೩–೨೨); ಮುಕುಂದನನೇಕ ಮುಕುಂದಬೃಂದಂಗಳ್ ಮೊಟಗೆ ಶುಭಮುಹೂರ್ತದೊಳರಿಕೇಸರಿಯುಂ ಮುಂದಿಟ್ಟು ಹಸ್ತಿನಪುರೋಪವನಮನೆಯ್ದೆ ವಂದಾಗಳ್ (ಪಂಪಭಾ.೦೯–೦೦ ವ); ಕಾವ್ಯಸಮಾಧಿಯುಂ ಪರಂಜ್ಯೋತಿ ಮುಕುಂದನೆನ್ನ ಬಗೆಯೊಳ್ ನಿಲೆ (ಜಗಪ. ೧–೦೭) ; ಮುರಹರ ನಗಧರ ಮುಕುಂದ ಮಾಧವ . . . ನಮೋ ನಮೋ (ಪುರಂದ. ದಾ. ೨–೯೯–೧). ೨. ಒಂದು ಬಗೆಯ ವಾದ್ಯ : ಮರ್ದಳೆ ಝಲ್ಲರಿ ಮುಕುಂದ ತಾಳ ಕಾಹಳ ಶಂಖ ವಂಶ ವೀಣಾಸ್ವರಂಗಳೆಸೆಯೆ (ವರ್ಧಮಾ. ೯೩–೨೮); ಸುರಮೃದಂಗರವಮೊಂದೆಡೆಯೊಳ್ ನೆಗಟ್ದುದು ರಾಜ್ಯಸಮರ್ಪಣಯಾಗಪತ್ತಿಹತ ಮುಕುಂದ [ಶಾಕಾಂ. ಮಮುಂದ]ರವಮೋದೆಡೆಯೊಳ್ (ಅದಿಪು. ೯–೬೬); ಸಕಳಗಣಸಂದೋಹ ನಂದಿತನಂದೀಶ್ವರ ಮುಕುಂದಹಸ್ತಾಹತವಿತತಮೃದುಮೃದಂಗಮಂಗಳರವ (ರಾಜಶೇ. ೦೩–೫೪ ವ). ೩. ಒಂದು ಬಗೆಯ ಸುಗಂಧದ್ರವ್ಯ; ಕುಂದುರುಷ್ಕ : "ಹೇಲಾಖ್ಯಂ, ಮುಕುಂದಃ, ಕುಂದಃ, ಕುಂದುರುಃ– ಈ ೪ ಕುಂದುರುಷ್ಕ" (ವಾಚರಾ. ೦೦೦) ; "ಪಾಲಂಕ್ಯಾ, ಮುಕುಂದಃ, ಕುಂದಃ, ಕುಂದುರು – ೪ ಕುಂದುರುಷ್ಕವೆಂಬುವ ಗ್ರಂಧ್ಯದ್ರವ್ಯವು" (ಸಿದ್ಧೌ. ೦೯೦); "ಮುಕುಂದಃ – ಕುಂದುರುಷ್ಕ" (೬ಕಧಿ. ೦೨೬). ೪. ಕುಬೇರನ ನವನಿಧಿಗಳಲ್ಲಿ ಒಂದು : ದಿಕ್ಪಾಲಕರೊಳಾ ಕುಬೇರನೇ ಪದ್ಮ ಮಹಾಪದ್ಮ ಶಂಖ ಮಕರ ಕಚ್ಛಪ ಮುಕುಂದ ಕುಂದ ನೀಲ ಚರ್ಚಂಗಳೆಂಬ ನವನಿಧಿಗೊಡೆಯನಾಗಿ ಈಶ್ವರನಿಗೆ ಸಖನಾಗಿರ್ಪಂ (ವಿವೇಕ. ೦೬೭). ೫. ಒಂದು ಬಗೆಯ ಪಕ್ಷಿ : ಕಾಗೆ ಪೊಣರ್ವಕ್ಕಿ ಪೊಂಗುರು ಗೂಗೆ ಮುಕುಂದಂ ಬಲಾಕ ಲಾವುಗೆ ಸೇನಂ (ಕಾವ್ಯಸಾ. ೦೦೯೯ ಕೂದ್ರ೪). [ ಸಂ. ]

**ಮುಕುಟ$_1$** 'ಮುಕುಡಕ' ನೋ.

**ಮುಕುಟ$_2$** (ನಾ). ಕಿರೀಟ; ಮಕುಟ : "ಮುಕುಟಂ ಕೋಟೀರಂ ಮೌಳಿ ಕಿರೀಟಂ ತಾನೆನಿಕ್ಕುಮುಷ್ಣೀಷಂ" (ವಸ್ತುಕೋ. ೬೫.೨); ಅದುರಿತು ಪಾದಾಘಾತದಿಂದ ಧರೆ ಬಿದಿರಿದುವು ಮುಕುಟ ತಾಗಿ ತಾರಕೆಗಳು ಉದುರಿದುವು ಕೈತಾಗಿ ಲೋಕಂಗಳೆಲ್ಲಾ . . . ನಮ್ಮ ಕೂಡಲಸಂಗಮ ದೇವನಿಂದು ನಾಟ್ಯವನಾಡೆ (ಬಸವ. ೫೯೦); ಉಜ್ವಳಿಪ ವಿದ್ರುಮಲತಾಂಕುರದಂತೆ ಕೆಂದಳಿರ ತೊಂಗಲಂತೆ ಪಸರಿಸುವ ಪದ್ಮರಾಗಮುಕುಟಮುಂ (ಕೃಷ್ಣಕ. ೫–೦೩ ವ). [ ಸಂ. ]

**ಮುಕುಟೆ** 'ಮುಕುಡಕ' ನೋ.

**ಮುಕುಡಕ, ಮುಕುಟ$_1$, ಮುಕುಟೆ, ಮುಕುತೆ, ಮುಕ್ಕಡಕ** (ನಾ). ಒಂದು ಬಗೆಯ ಸಸ್ಯ : ರಾಮಿ, ಮುಕುಡಕ, ಮುಕುತೆ, ಏನುಜಾರಿಗ (ವೃಕ್ಷಿಗ. ೯೯–೯೬೦). **ಮುಕುಟ$_1$ :** "ಕೋಟೀರಃ – ಮುಕುಟ, ಗೋರ, ಗದುಗು, ಓತಿ, ಕೋತಿ, ಗಂಧ, ನಖ" (೬ಕಧಿ. ೯೦); ಅದಟ ತದನಾಸ್ತರ ಮುಕುಟ ಆಲದ ಹಾಳ ಅಧಟ ತದನಸ್ತರ ಚೈಕೋಲ ತಾಟಮರ (ಸೌಇಇ. IX–i, ೯೦–೨೫; ಸು. 11ನೆಯ ೬೬). **ಮುಕುಟೆ :** "ಏಣುಜಾರಿಗ, ರಾಮಿ, ಮುಕುಟೆ, ಮುಕುತೆ, ಮುಕುಡಕ" (ಸಸ್ಯಶ. ೯೨). **ಮುಕುತೆ :** ಮೇಲಿನ 'ಸಸ್ಯನಿ' ಪ್ರಯೋಗವನ್ನು ನೋಡಿ. **ಮುಕ್ಕಡಕ :** ಕೆಲವು ಕಡೆಗಳಲ್ಲಿ ಗುರಗಿ, ಬಿದಿರು . . . ಜಿಂಜರಗಿ, ಮುಕ್ಕಡಕ. ಮುಂತಾದ ಗಿಡಬಳ್ಳಿಪೊದೆಗಳಿದ್ದವು (ಶಂಕಕಂ. ೨).

[< ಸಂ. ಮುಕುಷ್ಟಕ = ಒಂದು ಬಗೆಯ ಹುರುಳಿ ]

**ಮುಕುಡಿದೆಜ಼** (ನಾ). ಒಂದು ಬಗೆಯ ತೆರಿಗೆ : ಕಳುವ ಸಾಯಣ್ಣನವರಿಗೆ ಆ ಶ್ರೀವೀರಬಲಸ್ಲೇಳದೇವರಸರು ಆ ಸ್ಥಳದ . . . ಪಣ್ಣಕಾರುಕ ಅಲಿದೆಜ಼ ಮುಕುಡಿದೆಜ಼ ಜೆಟ್ಟಿದೆಜ಼ ಕೊನೆದೆಜ಼ ಖಾಣ ಸಂಬಳವೊಳಗಾದ

ಪೂರ್ಬ್ಬಾಯ ಅಪೂರ್ಬ್ಬಾಯು ಯೆಲ್ಲವನೂ ಕಾರುಣ್ಯಂ ಮಾಡಿ ಧಾರಾ ಪೂರ್ಬ್ಬಕಂ ಮಾಡಿ ಕೊಟ್ಟರು (ಎಕ. VI. ಕಡೂರು. ೯೯-೪೨; 1291).
[ಮುಕುಡಿ₂ + ತೆಱ₃]

**ಮುಕುತ** (ಗು). ೧. (ಬಾಣ ಮುಂತಾದುವನ್ನು) ಪ್ರಯೋಗಿಸಿದ; ಬಿಟ್ಟ: ನಕುಲ . . . ಯುಯುತ್ಸು ಸೃಂಜಯರು ಸಕಲಸನ್ನಾಹದಲಿ ಯುದ್ಧೋದ್ಯುಕ್ತರಾದರು ಚಡಿತಚಾಪರು ಮುಕುತ ಶಸ್ತ್ರಾವಳಿಯ ಮಳೆಗಾಲವನು ನಿರ್ಮಿಸುತ (ಕುಮ್ಯಾ.ಉ. ೬-೨೯). (ನಾ). ೨. ಬದುಕಿನ ಬಂಧನವನ್ನು ಕಳೆದುಕೊಂಡವನು; ಮರಣಹೊಂದಿದವನು: ಭಕುತವತ್ಸಲನಾಳ ಕೈಯಲಿ ಮುಕುತರಾದರು ಮೂಱುಸಾವಿರ ಮಕುಟವರ್ಧನರು (ಕೌಶಿಉ. ೩೪-೦೭). ೩. ಲೌಕಿಕಬಂಧನಗಳಿಂದ ಬಿಡುಗಡೆಯನ್ನು ಹೊಂದಿದವನು; ಪ್ರಾಪಂಚಿಕವಿಷಯಗಳಿಂದ ಮುಕ್ತನಾದವನು: ನೀನನ್ಯರುಗಳಲ್ಲಿ ಯುಕುತಿಯಿಂದವೆ ತಿಳಿದು ನಡೆಯಲು ಮುಕುತನಹೆ [ಪಾಠಾಂ. ಯುಕುತಿಯಿಂದವೆ ಮಾಡಿದರೆ ನಿರ್ಮುಕುತನಹೆ, ಯುಕುತಿಯಿಂದದ ಮಾಡದಿರು ನಿರ್ಮುಕುತನಹೆ] (ಕುಮ್ಯಾ.ಉ. ೯-೦೩); ಮುಕುತ ನಾನಾದೆಂ ಪ್ರಕಟಮಾರ್ಗಕ್ಕಂ ಮುಕುತಿಯಾ ಭಸ್ಮಂ ಸುಕರ ಕೇಳೆಂದುಂ (ಪಾಲಾಸ. ೪-೦೦-೩೯). [< ಸಂ. ಮುಕ್ತ]

**ಮುಕುತಿ** (ನಾ). ವಿಮೋಚನೆ; ಮೋಕ್ಷ; ಮುಕ್ತಿ: ಅಪರಿರವು ಮುಕುತಿ ಗಿಕುತಿಯು ಸುಖಿಗಳ ಪವಣೆ (ತಿರುಕ. ದೇ. ೯-೦೯); ಧೂರ್ತತನದಿಂ ಕಾದಿ ಕೂಡುವೆನಾರ್ತ ಪರಿಯಂತರದಲಾ ತ್ರೈಮೂರ್ತಿಯನು ಮೂದಲಿಸಿದಲ್ಲದೆ ಮುಕುತಿಯಿಲ್ಲೆಂದ (ಕೌಶಿಉ. ೨೩-೦೯); ಗುರುವಿನ ಗುಲಾಮನಾಗುವ ತನಕ ದೊರೆಯದಣ್ಣ ಮುಕುತಿ (ಪುರಂದ. ೩-೦೯೯ ಪಲ್ಲವಿ). [< ಸಂ. ಮುಕ್ತಿ]

**ಮುಕುತಿವಟ್ಟೆ** (ನಾ). ಮುಕ್ತಿಯನ್ನು ಸಾಧಿಸುವ ದಾರಿ; ಮೋಕ್ಷಮಾರ್ಗ: ಎಱಗುವೆನಲರ್ವಕ್ಕಿಯೊಲು ಧರ್ಮಕರ್ಮದ ತೆಱವನೆಲ್ಲವ ಭವ್ಯತತಿಗೆ ಅಱುಪಿ ಮುಕುತಿವಟ್ಟೆದೋಱುವುಪಾಧ್ಯರ ಮಿಱುಪುಂಘ್ರಿಯರುಹಾಂಬುಜಕೆ (ಶ್ರೀಪಾಲ. ೦-೬). [ಮುಕುತಿ + ಬಟ್ಟೆ₁]

**ಮುಕುತೆ** 'ಮುಕುಡಕ' ನೋ.

**ಮುಕುರ₁**, ಮುಕ್ಕರ, ಮುಖರ₁ (ನಾ). ಒಂದು ಬಗೆಯ ನಾಸಿಕಾಭರಣ; ಮೂಗುತಿ; ಮೂಗುಬೊಟ್ಟು; ನತ್ತು: ಪರಮಸೊಬಗಿಂ ದೆಸೆವ ಆ ದೇಶವೆಣ್ಣಿನ ಮುಕುರದಂತೆ ಒಪ್ಪ ವಿದ್ಯಾನಗರಮೆಸೆಯೆ (ಪ್ರೌಢರಾ. ೦-೬೬); ಮುತ್ತುಗೊಂಚಲು ಬುಗುಡಿ ಮುಕುರ ಚಳತುಂಬುಗಳು (ಬಾಪಾಳ. ೦೦). **ಮುಕ್ಕರ**: ಯುದ್ಧರಂಗಕ್ಕೆ ಬಂದ ರಾಮನು ರಾಮಬಾಣದಂತೆ ಆ ಪ್ರಬಲಸೈನ್ಯದೊಳಕ್ಕೆ ನುಗ್ಗಿ, ಮಾತಂಗಿಯೊಡನೆ ಕಾದಿ, ಅವಳ ಮುಕ್ಕರವನ್ನು ಹಿಡಿದೆಳೆಯುತ್ತ . . . ಧಿಕ್ಕರಿಸಿ ಅವರನ್ನು ಪ್ರಾಣಸಹಿತವಾಗಿ ಬಿಟ್ಟು ಬಿಟ್ಟನು (ಕರಾಂ. ೦೦೦). **ಮುಖರ₁**: ನಿನ್ನ ಮೂಗಿನಲ್ಲಿ ಧರಿಸಿರುವ ಮುಖರವು ನಿನ್ನ ತೌರುಮನೆಯ ಕೊಡುಗೆಯಷ್ಟೆ (ಕಥಾ. ೦೬೦); ಗೃಹಿಣಿಯು ಒಮ್ಮೊಂದೊಮ್ಮೆ ಮೂಗಿನ ಮುಖರವನ್ನು ಅಲುಗಾಡಿಸುತ್ತ . . . ಪ್ರಫುಲ್ಲೆಯೂ ಅವಳ ತಾಯಿಯೂ ಬಂದ ಸಮಾಚಾರವನ್ನೆಲ್ಲಾ ಆದ್ಯೋಪಾಂತವಾಗಿ ಹೇಳಿದಳು (ದೇವೀಚೌ. ೯).

[ದೇ.೫ ತೆಲು. ಮುಕ್ಕಱ, ಮುಂಗರ; ಕೋಲಾ. ಮುಕ್ಕರ, ಮೊಕರ]

**ಮುಕುರ₂** (ನಾ). ೧. ಕನ್ನಡಿ; ದರ್ಪಣ: "ಆದರ್ಶಃ, ದರ್ಪಣಃ, ಮುಕುರಃ — ಈ ೩ ಕನ್ನಡಿ" (ಹಲಾಯು. ೯೦-೯೦೦); ನೈರ್ಮಲ್ಯಶೋಭಾಕಲಿತಂ ತ್ರೈಲೋಕ್ಯಲಕ್ಷ್ಮೀಮಣಿಮುಕುರಮೆನಲ್ ಚೆಲ್ವವಾಯ್ತುಬ್ಜಪಂಡಂ (ಕಾದಂಪೂ. ೩೬೪); ಮುಕುರಂ ಕೈಯೊಳಿರಲ್ಕೆ ನೀರ ನೆಳಲೇಕೈ (ಸೋಮೇಶ.೩); ಮುಸುಬಿದ್ದ ಮಾಸಿದ ಮುಕುರಂಬೋಲಂತೆ ವಿಗತಪ್ರಭನಾಯ್ತು ಮೃತಾಂಶುಮಂಡಲಂ (ಕುಸುಮಾ. ೯-೬೬); ಆನೆ ಮುಕುರದೊಳಡಗಿ ಭಾನು ಸರಸಿಯೊಳಡಗಿ ಅನಿನ್ನ ಗುರುವಿನೊಳಡಗಿ ಸಂಸಾರ ತಾನೆತ್ತಣವು (ಸರ್ವಜ್ಞ. ೩೬೩). ೨. ಕುಂಬಾರನ ಚಕ್ರದ ಹಿಡಿ,—ತಿಗುರಿಯ ಹಿಡಿಕೆ. [ಸಂ.]

**ಮುಕುರಂದೋಱು** (ಕ್ರಿ). (ಪ್ರತಿಬಿಂಬವನ್ನು ನೋಡಿಕೊಳ್ಳಲು) ಕನ್ನಡಿಯನ್ನು ತೋರಿಸು: ಮಂಗಳಾರತಿಯೆತ್ತು ಚಮರ ಸೀಗುರಿಯಿಕ್ಕಿ ಅಂಗಜಹರಂಗೆ ಮುಕುರಂದೋಱು ಮೈಯಿಕ್ಕಿ ನಿಂದಿರ್ದ (ಬಸವ. ೩-೮೨).
[ಮುಕುರ₂ + ತೋಱು]

**ಮುಕುರತೋರಣ** (ನಾ). ಕನ್ನಡಿಗಳಿಂದ ತಯಾರಿಸಿದ ತೋರಣ; ಕನ್ನಡಿಗಳ ಸಾಲುತೋರಣ: ಮುಕುರತೋರಣಮೊಪ್ಪಿರೆ ಮಂಗಳಧ್ವಜಂ ಕುಣಿಯೆ . . . ಗುರುಪ್ರಣತಿಸಮುತ್ಸುಕಂ ಮುದದಿನಂದಿದಿರ್ಗೊಂಡನವಂ ನರಾಧಿಪಂ (ರಾಜಶೇ. ೩-೮೦). [ಮುಕುರ₂ + ತೋರಣ]

**ಮುಕುರಿಕ್ಕು** 'ಮುಕ್ಕುಱಿಕ್ಕು₁' ನೋ.

**ಮುಕುರಿಸು₁** 'ಮುಕ್ಕುಱಿಸು₁' ನೋ.

**ಮುಕುರು₁** 'ಮುಕ್ಕುಱು₁' ನೋ.

**ಮುಕುಲ₁**, ಮುಕುಳ (ನಾ). ೧. ಅರಳುತ್ತಿರುವ ಮೊಗ್ಗು; ಮುಗುಳು; ಕುಟ್ಮಲ: ಗಿರಿಶಿಖರ ಮುಕುಲದೊಲು ಮೊಗವನೆತ್ತಿವೆ ನಭವಲಲ್ಲಿ (ಉದ್ಯಾಭ. ೨೦-೩). ೨. ಮೊಗ್ಗಿನಂತೆ ಮುಗಿದ ಕೈ,—ಜೋಡಿಸಿದ ಹಸ್ತ. **ಮುಕುಳ**: ೧. "ಕೋರಕಃ, ಜಾಲಕಃ, ಕಳಿಕಾ, ಕುಟ್ಮಳಃ, ಮುಕುಳಃ — ಈ ೫ ಪೂವಿನ ಮುಗುಳ್" (ಹಲಾಯು. ೩೦-೩೨); ಆತನ ಕರತಲಸ್ಪರ್ಶಸುಖದಿಂ ಕಪೋಲತಲಕದಂಬಮುಕುಳಕರ್ಣಪೂರದಂತು ಣ್ಮಿರ್ದ ಪುಳಕಮುಂ ಬೆರಸು (ಕಾದಂಪೂ. ೭೯೦); ಮುಕುಳಂ ಮಾದಲರಾಯ್ತು ಮೆಯ್ಯರಿಸಿನಂ ಕ್ರಂಪೋಡಿತು (ಲೀಲಾವ. ೨-೫೪); ಸಲೆ ನಿಲೆ ಮಾವು ಪೂವು ವಕುಳಂ ಮುಕುಳಂ . . . ಕಂಪು ಸೊಂಪಗುಂದಲೆಯೆನೆ ರಮ್ಯಮಾ ವಿಷಯದುರ್ಗಳ ನಂದನವೃಂದವೆತ್ತಲುಂ (ಶಿಶ್ನಪು. ೨-೨೩). ೩. [ಛಂದ] ಕನ್ನಡಛಂಧಸ್ಸಿನಲ್ಲಿ ಪ್ರಸಿದ್ಧವಾದ ಇಪ್ಪತ್ತಾರು ಛಂದಗಳಲ್ಲಿ ಆರನೆಯದಾದ ಗಾಯತ್ರಿಛಂದಸ್ಸಿನ ಒಂದು ವೃತ್ತ: ಉರ್ವಗ್ಗುಂ ಮರುತಂ ಪರ್ದಿರ್ದಂದುಬಲೇ ಸರ್ವಾದ್ಯಂತದೊಳಂ ನಿರ್ವಾಜಂ ಮುಕುಳಂ [ಪಾಠಾಂ. ಕಮಲಂ, ಕುಮುದಂ] (ಛಂದೋಂಬು. ೨-೮೦). ೪. [ನಾಟ್ಯ] ನಾಟ್ಯಶಾಸ್ತ್ರದಲ್ಲಿ ಹೇಳಿರುವ ಅಸಂಯುತಹಸ್ತಗಳಲ್ಲಿ ಒಂದು: ನಾಟ್ಯಶಾಸ್ತ್ರದಲ್ಲಿ ಹೇಳಿರುವ ಅಸಂಯುತಹಸ್ತಗಳು ಯಾವುವೆಂದರೆ — ೧. ಪತಾಕ, ೨. ತ್ರಿಪತಾಕ . . . ೨೨. ಮುಕುಳ, ೨೩. ಊರ್ಣನಾಭ, ೨೪. ತಾಮ್ರಚೂಡ (ಅಭಾವ್ಯ. ೯೬). ೫. ಇಪ್ಪತ್ತು ಬಗೆಯ ಸಂಚಾರಿದೃಷ್ಟಿಗಳಲ್ಲಿ ಒಂದು; ಅಲಿಗಳನ್ನು ಚಲಿಸದೆ ರೆಪ್ಪೆಗಳನ್ನು ಮುಚ್ಚುವುದು: ಶೂನ್ಯ, ಮಲಿನ, ಶ್ರಾಂತ, ಲಜ್ಜಿತ, ಶಂಕಿತ, ಮುಕುಳ (ಅರ್ಧಮುಕುಳ), ಗ್ಲಾನ . . . ಮದಿರೆ — ಈ ಇಪ್ಪತ್ತು ಸಂಚಾರಿದೃಷ್ಟಿಗಳು (ಲಾಸ್ಯರಂ. ೩-೬ ವ); ಸೊಗಸಿಂದಂ ಕಣ್ಣೆವೆಗಳ್ ಮುಗುಳ್ದಿರ್ದುಂ ತಿರದ ತಾರೆ ಮುಕುಳಮೆನಿಕ್ಕುಂ (ಲಾಸ್ಯರಂ. ೩-೩೦). [ಸಂ.]

**ಮುಕುಲತೆ** (ನಾ). ಮೊಗ್ಗಿನಂತೆ ಸೇರಿಕೊಂಡಿರುವ ಸ್ಥಿತಿ, —ಕೂಡಿಕೊಂಡಿರುವ ಸ್ಥಿತಿ; ಕ್ಷಿತಿಪತಿಯು ಕರಸರೋಜದ್ವಿತಯಮನಡಿಗಡಿಗೆ ಮುಕುಲತೆಯನೈದಿಸಿ ತದ್ವತಿಪತಿ ನಿಜಕುವಲಯಬಂಧುತೆಯಂ ಪ್ರಕಟಿಸಿದನಾ ಸಭಾಭ್ಯಂತರದೊಳ್ (ಕಂಪ್ರಪು. ೩-೯). [ಸಂ. ಮುಕುಲತಾ]

**ಮುಕುಲನ** (ನಾ). ಕಣ್ಣನ್ನು ಮೊಗ್ಗಿನಂತೆ ಮುಚ್ಚಿಕೊಳ್ಳುವಿಕೆ: ಮುಕುಲನ ನಿಮೀಳನಂಗಳ್ ವಿಕಾಸಹಾಸಪ್ರಬೋಧನೋನ್ಮೇಷಂಗಳ್ ಪ್ರಕಟಿಸುಗುಂ ವ್ಯೈಕ್ಯಮಂ ನಿರ್ವಿಕಲ್ಪದಿಂ ಗೌಣಮುಖ್ಯವೃತ್ತಿಕೃತಂಗಳ್ (ಕಾವ್ಯಾವ. ೯೦೪). [ಸಂ.]

**ಮುಕುಲಿತ**, ಮುಕುಳಿತ (ಗು). ೧. ಮೊಗ್ಗಾದ; ಮೊಗ್ಗನ್ನು ತಳೆದ: ಚಾರುಮಿಟಪಾವಲೀವೃತಕೋರಕಿತಾಂಕುರಿತ ಪಲ್ಲವಿತ ಮುಕುಲಿತ [ಪಾಠಾಂ. ಮುಕುಳಿತ, ರುಚಿರ] ವಿಸ್ತಾರಿತ ರಮ್ಯಾಶೋಕಮಹೀರುಹಮುಮನಭವನಂಗ

ರುಚಿ ಪುದಿದಿರ್ಕುಂ (ಆದಿಪು. ೧೧-೪೦). ೨. ಮೊಗ್ಗಿನಂತೆ ಮುಚ್ಚಿಕೊಂಡಿರುವ, – ಸೇರಿಕೊಂಡಿರುವ ; ಮುಗಿದ : 'ಮುಕುಲಿತಕರ', 'ಮುಕುಲಿತಾಂಜಲಿ' ಪರಾ. **ಮುಕುಳಿತ** : ೧. ಪುರಬಹಿರ್ಭಾಗವಿಸ್ತರಿತನಂದನದೊಳಂಕುರಿತ ಪಲ್ಲವಿತ ಮುಕುಳಿತ ಕುಸುಮಿತಾಪರಿಮಿತ ಫಲಿತ ತರುಗಳೆ ಇಂತತಿಶಯವಿಲಾಸಕ್ಕೆ ನಿವಾಸಮುಂ (ಸುಕುಮಾ. ೨-೪೭) ; ಮುಕುಳಿತ ನೀಲೋತ್ಪಲಮುಮ್ಮೃತಕರೋದಯದೊಳಗಲರ್ದು ಪೊಱಸೂಸುವ ಪೊಲ್ಮಕರಂದಮನಿನನುಂ ಬಾಲಿಕೆ ನೋಡುತೆ ತಳೆದಳೊಗುವ ಹರ್ಷಾಶ್ರುಗಳಂ (ಉದ್ಭಟ. ೬-೯೯). ೨. ಮುಕುಳಿತಪಾಣಿಪಲ್ಲವಪುಟರ್ನಮಿತಾನನ ಪದ್ಮರೆಂದರಂತಕನಳವಂ ತ್ರಿಳೋಕದಟೆವಂ ಪರಿಭಾವಿಸಿ (ಮಲ್ಲಿಪು. ೧೪-೧೬೨). ೩. ಅರೆಮುಚ್ಚಿದ ; ಅರ್ಧಮುಚ್ಚಿದ : ಮುಕುಳಿತವಿಳೋಚನಂ ಕಂಟಕಿತಾಂಗಂ ಸ್ವೇದಬಿಂದುದಂತುರಿತಮುಖಂ ಪ್ರಕಟಶ್ವಸಿತೋತ್ಕಂಪಂ ನಿಕಾಮಕಮನೀಯಮಾದುದಿಂತು ರತಾಂತಂ (ಕಾವ್ಯಾವ. ೯೦೩), (ನಾ). ೪. ಮೊಗ್ಗುಗಳುಳ್ಳುದು ; ಮುಗುಳುಗಳುಳ್ಳುದು : ಸಮಪದಸ್ಖಲನಸುಖನಿಮೀಳಿತೋನ್ಮೀಲಿತನಯನಂಗಳಿಂ ಮುಕುಳಿತಮುಂ ಕುಸುಮಿತಮುಮಾದ ನಿಶ್ವಾಸಪವನನಿಂ ಪರಿಮಳಮುಂ ಬೀಱುವ ವಧೂವರರಾಗ ವಿಷಯವಲ್ಲರಿ ಫಲಿತಮಾದುದೆನಿಸಿ (ಜಗಂ. ೨-೩೨ ವ). [ಸಂ.]

**ಮುಕುಲಿತಕರ**, ಮುಕುಳಿತಕರ (ನಾ). ಮುಗಿದ ಕೈ ; ಜೋಡಿಸಿದ ಕೈ : ಮಾರುತಿ ಮೇಘರುತಿಯಿನುದಾತ್ತರಾಘವಂಗೆ ಮುಕುಲಿತಕರಸರೋಜನಾಗಿ (ಶಂರಾಮಾ. ೧೧-೪೨ ವ); **ಮುಕುಳಿತಕರ** : ಅನಂತರಂ ವಿಶ್ವಸೇನಾವನೀನಾಥನುಮೈರಾ ಮಹಾದೇವಿಯುಂ ಕುರುಕುಳಾಗ್ರಗಣ್ಯರಪ್ಪ ಬಂಧುಗಳುಂ ಮುಕುಳಿತಕರಕಮಳರ್ ಬಳಸಿಯುಮಿರೆ (ಶಾಂತಿಪು. ೧೧-೬೬ ವ) ; ವಂದಿಸುತ ಮುಕುಳಿತಕರಂಗಳ ಸಂದಿಸಲು ಭಾಳಸ್ಥಳಗಳಿಂ ನಂದಿಕೇಶನ ನಂಕಿಸುತ ಕೀರ್ತಿಸಿದರರ್ತಿಯಲಿ (ಬಸವ. ೨-೨೬). [ಸಂ.]

**ಮುಕುಲಿತಾಂಜಲಿ**, ಮುಕುಳಿತಾಂಜಲಿ (ನಾ). ೧. = ಮುಕುಲಿತಕರ : ಅಂತು ವಿನತನಾದನಂತರಂ ಸುರೇಂದ್ರಮುಮ್ಮ ವಜ್ರಬಾಹು ಪುರಂದರರೊಳಂ ವಿನಯಮೃತ್ತಿಯಿಂ ಮೆಱೆದು ಸಮುಚಿತಾಸನದೊಳ್ ಕುಳ್ಳಿರ್ದು ಮುಕುಲಿತಾಂಜಲಿಪುಟನಾಗಿ . . . ಬಿನ್ನವಿಸೆ (ಶಂರಾಮಾ. ೨-೩ ವ). ೨. ಕೈಗಳನ್ನು ಮುಗಿದವನು,—ಜೋಡಿಸಿದವನು : ಹರ್ಷಿತಚಿತ್ತಂ ಮರುತ್ತನಯಂ ರಾಮಚಂದ್ರಂಗೆ ಮುಕುಲಿತಾಂಜಲಿಯಾಗಿ. . . ಬಿನ್ನವಿಸೆ (ಶಂರಾಮಾ. ೧೧-೩೬ ವ) ; ಅಂತು ಪೊಕ್ಕು ಮುಕುಲಿತಾಂಜಲಿಯಾಗಿ ಮುಂದೆ ನಿಂದಿರ್ದ ಮೇದಿನೀದೇವಿಯ ದೈನ್ಯಭಾವಮಂ ವಿರಿಂಚಿ ಕಾರುಣ್ಯಚಿತ್ತದಿಂ ನೋಡಿ (ಜಗಂ. ೧-೨೭ ವ). **ಮುಕುಳಿತಾಂಜಲಿ** : ೧. ಅಂತು ಬೆಸಗೊಳ್ವುದುಂ ಮುಕುಳಿತಾಂಜಲಿಪುಟನಾಗಿ ವಿಪುಲಮತಿ . . . ಆಗಳುದ್ಯತನಾದಂ (ಶಂರಾಮಾ. ೧೧-೬೩ ವ) ; ತ್ರೇತೆಯೊಳಿಂದ್ರಂ . . . ಬಂದಾತುರನಾಗಿ ವಾರಿರುಹಸಂಭವನಂ ನುತಿಗೆಯ್ದು ಭಕ್ತಿಯುಕ್ತಾತಿಶಯೋಕ್ತಿಯಿಂ ಮುಕುಳಿತಾಂಜಲಿಯುಂ ಪಣೆಗಿಟ್ಟು ನಿಂದು (ಲಾಸ್ಯರಂ. ೧-೨). ೨. ಆ ವ್ಯತಿಕರಮಂ ಭಗೀರಥಂ ಕೇಳ್ದು, ತಾನುಮವರಲ್ಲಿಗೆ ಬಂದು ಪಂಚಮುಷ್ಟಿಯಿಂ ಬಂದಿಸಿ ಕುಳ್ಳಿರ್ದು . . . ಬೆಸಸುವುದೆಂದು ಮುಕುಳಿತಾಂಜಲಿಯಾಗಿ ಬಿನ್ನಪಂಗೆಯ್ದಾಗಳ್ (ಅಜಿಪು. ೧೧-೧ ವ). [ಸಂ.]

**ಮುಕುವಾಡು** (ನಾ). ಒಂದು ಬಗೆಯ ಹಾಡು,—ಗೀತೆ : ಕುಣಿವವರ ಕಂಡು ತಾನುಂ ಮುಗುಳ್ದು ನರ್ತಿಸುತಲಣಿಯರದಿ ಮುಕುವಾಡುಗಳ ತಾನು ಹಾಡುತಂ . . . ಪ್ರಭುದೇವ ಬರಲು (ಶ್ರಶುಕ್ಲ. ೯-೩೪). [? + ಪಾಡು₂]

**ಮುಕುಳ** 'ಮುಕುಲ' ನೋ.

**ಮುಕುಳಿ** (ನಾ). ೧. ಸ್ತ್ರೀಯ ಜನನಾಂಗ ; ಯೋನಿ : (*). ೨. ಆಸನದ್ವಾರ ; ಪೃಷ್ಠ : ಮಕ್ಕಳ ಮುಕುಳಿಯ ಮರಸಿದ ಕೋರಿಯ ಸಿಕ್ಕಿಲ್ಲದೆ ಪೆಗಲೊಳಗೆ ಹೊತ್ತು ತಿರುಗುವ ಪಂದಿಗಳ ಮುಕ್ಕಣ್ಣನ ಭಕ್ತರೆಂದು . . . ಕೊಂಡಾಡುತಿರುವೆ ನೀ ಬಸವ (ಬಸ್ತ್ರರಾ. ೯-೬೧) ; ಬಯನೆಟಿನಿಂದ ತಿವೀರಿ ಆತನ ಮುಕುಳಿಗೆ, ಅವನ ಗುಟಲುಸ್ವರ ಸ್ವಲ್ಪ ಕೇಳೋಣ (ಜರಸ. ೨೨೧). 'ಪುಕುಳಿ' ಪರಾ. [?]

**ಮುಕುಳಿತ** 'ಮುಕುಲಿತ' ನೋ.

**ಮುಕುಳಿತಕರ** 'ಮುಕುಲಿತಕರ' ನೋ.

**ಮುಕುಳಿತಹಸ್ತ** (ನಾ). ೧. = ಮುಕುಲಿತಕರ : ಎದ್ದು ಮುಕುಳಿತ ಹಸ್ತಗೂಡಿ ರಾಮಾಚಾರ್ಯರೊಲ್ದು ವಂದಿಸಿಯುನ್ನತಾಸನವನಿಕ್ಕಿ . . . ಶಂಖಿಕರ್ಣಾಚಾರ್ಯರ ಕ್ಷೇಮಮಂ ಬೆಸಗೊಂಡು (ಬಕೋಕ. ೭-೩೬). ೨. ಕೈಮುಗಿದಿರುವವನು : ಸಾಷ್ಟಾಂಗ ದಂಡಪ್ರಣಾಮಮಂ ಮಾಡಿ ಮುಕುಳಿತಹಸ್ತನಾಗಿ ನಿಂದಿರ್ದ ನಿಜಶಿಷ್ಯನಂ ನೋಡಿ (ನಾನಾಗು. ೬-೧೧).

[ಸಂ. ಮುಕುಲಿತಹಸ್ತ]

**ಮುಕುಳಿತಾಂಜಲಿ** 'ಮುಕುಲಿತಾಂಜಲಿ' ನೋ.

**ಮುಕುಳಿಸು** (ಕ್ರಿ). ೧. ಮೊಗ್ಗಾಗು ; ಮೊಗ್ಗು ಬಿಡು : ಮುಕುಳಿಸಿ ತೆಲರೆಳಸಿದ ಚಂಪಕ ಮುಕುಳದ ಚೆಲ್ವನೆಸೆವ ಲಸಿತಸ್ವಾಭಾವಿಕನತಮಂದೋಚ್ಛ್ವಸಪ್ರಕರ್ಷನಾಸಾವಿಳಾಸಮಾ ನರ್ತಕಿಯಾ (ಲೀಲಾವ. ೪-೧೧೬). ೨. (ಕಣ್ಣು) ಮುಚ್ಚು : ಮುಚ್ಚಿಕೊಳ್ಳು : ಆತನ ಕುಡುವಿಲ್ಲ ಜೇವಡೆಗೆ ಬಿಗುರ್ತಂತೆ ಕಣ್ ಮುಕುಳಿಸಿದುವು (ಕಾದಂಬ. ೬೬೬) ; ಮೊವಲ್‌ಮೆಗಳನು ಮುಕಳಿಸೆನ್ನ ಸಿರಿಯೇ ! ತೊದಲನ್ನು ನಿಲ್ಲಿಸೆನ್ನಯ ಹೊನ್ನ ಮರಿಯೇ ! (ಕುಪ್ಪ. ೨೪-೧).

[ಮುಕುಳ (= ಮುಕುಲ) + —ಇಸು₃]

**ಮುಕುಳೀಕೃತ** (ಗು). ೧. (ಮೊಗ್ಗಿನಂತೆ) ಮುಚ್ಚಿರುವ ; ಜೋಡಿಸಿದ ; ಮುಗಿದ : ಸುಬಳಧರಾಧೀಶ್ವರಂ . . . ಸಮುದಾಯಮಂ ಬಂದಿಸಿ ಸಮುಚಿತೋದ್ದೇಶವಾಸನದೊಳ್ ಕುಳ್ಳಿರ್ದು ಮುಕುಳೀಕೃತ ಕರಕಮಲಯುಗಲನಾಗಿ (ಸುಕುಮಾ. ೬-೪೬ ವ). (ನಾ). ೨. (ಮೊಗ್ಗಿನಂತೆ) ಮುಚ್ಚಿಕೊಂಡಿರುವುದು : ಮುಕುಳೀಕೃತಂ ಲಳಿತ ಮಧುರಂ ಲಜ್ಜಾಳೋಳಂ ಸ್ಮರಾಕುಳಿತಂ ಮನಂ ದಳಿತಮಪಸನ್ಮುಗ್ಧಂ ಸ್ನಿಗ್ಧಂ ವಿಳೋಕನಮೋಪಳಾ (ಶಂಶಾ. ೪-೭೭). [ಸಂ. ಮುಕುಲೀಕೃತ]

**ಮುಕುಱು** 'ಮುಕ್ಕುಱು₁' ನೋ.

**ಮುಕೂಡಲ್** 'ಮುಕ್ಕೂಡಲ್' ನೋ.

**ಮುಕೋಪು** 'ಮೋಕೂಫ್' ನೋ.

**ಮುಕ್ಕ₁** (ನಾ). (ಮಣ್ಣು ಮೊದಲಾದುವನ್ನು) ಮುಕ್ಕುವಂಥದು : 'ನೆಲಮುಕ್ಕ', 'ಮಣ್ಮುಕ್ಕ' ಪರಾ. [ಮುಕ್ಕು₁ + —ಅ₇]

**ಮುಕ್ಕ₂** (ನಾ). ಅಂಗಹೀನನಾದವನು ; ಊನ ಹೊಂದಿದವನು : ಮೋಟನಂ ಮುಕ್ಕನಂ ಕೀಳುಜಾತಿಯನು ಪುರುಳಿದ ಮೆಯ್ಯಾದೊಡಂ ಬೇಳಿ ಬೆಲೆಯಿತ್ತೊಡಮನು ಕಾಮನೆಂಬ ದುಶ್ಶೀಲೆಯರು ಕಣ್ಣಿಗೆ ಸೆಧರು (ಹತಕಾ. ೪-೪೪). [ಮುಕ್ಕು₄ (<ಮುಱಿಕು) + —ಅ₇]

**ಮುಕ್ಕ₃**, ಮೂರುಕ, ಮೂರ್ಕ (ನಾ). ತಿಳಿಗೇಡಿ ; ಅಜ್ಞ ; ಮೂಢ : "ಮುಕ್ಕ — ಮೂರ್ಖ = ಬುದ್ಧಿಹೀನ" (ಶಬ್ದಕೋ. ೩೭) ; ನಾನ್ ಮೆಚ್ಚಿನ್ ಇಲ್ಲದಾಸೆಗೆ ಕಿಚ್ಚುರ್ ಕಾಯಿಸುವ ಮುಕ್ಕನನ್ (ಅಕ್ಷಾ. ೧೯-೪೧೧); ಈ ಮುಕ್ಕ ಸನ್ಯಾಸಿಯಾದರೆ ಬಟ್ಟೆಗೆ ಬಣ್ಣ ಕೇಡು (ಮಲ್ಲಿ. ೧೧). **ಮೂರುಕ** : ಕಾಮಿನಿಯರುಗಳಾರು ಕೆಲಬರು ಕಾಮಿತವ ಕಾಮಿಸುವರಲ್ಲದೆ ತಾಮಸಧಿನಾ ಮೂರುಕರು ಪೂಜಿಸಿದ ಪೂಜೆಗಳ ಪ್ರೇಮದಿಂದೊಡಬಡುವರು (ಕುಮ್ಯಾಅ. ೩-೨೩) . **ಮೂರ್ಕ** : ಬಲ್ಲಂಗ ಮೂರ್ಕಂಗಾಪದವ ನೋರ್ಪಡಮಂ ಜವದೊಳ್ ಮಾರ್ಕೊಳ್ವಲ ಭೈರವಂ (ಎಕ. VI, ತರ್ಕಮ. ೯೪-೨೦ ; ಕ್ರಿ. 1060 ?). [<ಪ್ರಾ. ಮುಕ್ಖ /ಸಂ. ಮೂರ್ಖ]

**ಮುಕ್ಕಂಡುಗ** 'ಮೂಗಂಡುಗ' ನೋ.

**ಮುಕ್ಕಂಡೆ** (ನಾ). (ಕರಾ) ಹಾಳು ; ನಾಶ; ಮೂರಾಬಟ್ಟೆ : ಮೂವರು ಹೋದ ಕೆಲಸ ಮುಕ್ಕಂಡೆ (ಮೂರಾಬಟ್ಟೆ) (ಕೃವರಾಂಕ. ೫೫). [ ? ]

**ಮುಕ್ಕಂದಿ** (ನಾ). ಮೂರುವರುಷಗಳಿಗೊಮ್ಮೆ ಕರುಹಾಕುವ ಹಸು : "ಮುಕ್ಕಂದಿ – ಮೂರುವರುಷಕ್ಕೆ ಈಯುವ ಆಕಳು" (ಜಾನಕೋ. ೩೦). [ <ಮೂಱು + ಕಂದಿ$_2$ ]

**ಮುಕ್ಕಂಧಾಯ** 'ಮೂಗೆಂದಾಯ' ನೋ.

**ಮುಕ್ಕಟ,** ಮುಕ್ಕಟೆ, ಮುಕ್ಕಟ್ಟ, ಮುಕ್ಕಟ್ಟು$_3$ (ಅ). ೧. ಮುಂಚೆ ; ಮೊದಲು : ಪೂರ್ವಭಾವಿಯಾಗಿ ; ಮುಂಚಿತವಾಗಿ : ಈ ಪಿರಂಗೇರು ಬರೋ ಮುಕ್ಕಟ ಹೀಂಗೇ ಇರತಿತ್ತಂತ (ಕಂಪಜಾಕಾ. ೦೭೨). ೨. ಮುಂಭಾಗದಲ್ಲಿ ; ಮೊದಲಿನಲ್ಲಿ : ಎತ್ತು ಜತ್ತಗಿ ನುಂಗಿ ಭತ್ತ ಬಾನವ ನುಂಗಿ ಮುಕ್ಕಟ ತಿರುವೊ ಅಣ್ಣನ ಮೇಳಿ ನುಂಗಿತ (ಕಂಳ. ೨೯-೦೪). **ಮುಕ್ಕಟೆ** : ೧. ನೀ ಬರುವ ಮುಕ್ಕಟೆ ಈ ಮನೆಗೆ ಬಂದೀನಿ ಅವ್ವಾ ! (ಮುಡ್ಡಿಮು. ೫೬). **ಮುಕ್ಕಟ್ಟ**: ೧. ಆದರ ಯುವಸ್ವಾ ಮುಕ್ಕಟ್ಟ ಮಾಡಿದ್ದು ಶ್ಯಾಣೇತನ ಅತಿಲ್ಲೋ ಆಚಾರೆಪ್ಪ ? (ಗ್ರಾಮಜಾಮು. ೦೮೩) ; ಪಾವಳ್ಯಾ ಬಿಟ್ಟು ನಾ ಎಲ್ಲೂ ಹೋಗಾಣಿಲ್ಲಾ ಅಂತ ಅವರು ಮುಕ್ಕಟ್ಟ ಹೇಳಿದ್ದರಲೀ (ಗ್ರಾಮಜಾಮು. ೫೦೩). **ಮುಕ್ಕಟ್ಟು$_3$** : ೧. "ಮುಕ್ಕಟ್ಟು–ಮೊದಲು, ಮೂರುಗಂಟು, ಮುಂಭಾಗ" (ಜಾನಕೋ. ೩೦). ೩. ಮುಂಭಾಗಕ್ಕೆ ; ಮುಂದಕ್ಕೆ ; ಮುಂದುಗಡೆಗೆ : ಮೂರು ಹಾಡಿನ ಮೂಳ ಮುಕ್ಕಟ್ಟು ಬರಬೇಡ (ಹಳ್ಳಿ. ೬೬) ; ರಥವು ಓಡುವಾಗ ಮುಂಜೋಲಿ ಇರುತ್ತದೆ ; ಆದರಿಂದ ಮುಕ್ಕಟ್ಟು ಹಾರಿಕೊಂಡರೆ ಬೊಕ್ಕಬೋರ್ಲ ಬಿದ್ದು ಬಹಳ ಪೆಟ್ಟು ತಾಗುವುದು (ಮುಂಬಯು. ೪-೬೨). [ <ಮುನ್$_1$ ]

**ಮುಕ್ಕಟೆ** 'ಮುಕ್ಕಟ' ನೋ.

**ಮುಕ್ಕಟ್ಟ** 'ಮುಕ್ಕಟ' ನೋ.

**ಮುಕ್ಕಟ್ಟು$_1$** (ನಾ). ಮುಂಭಾಗ ; ಮುಂದುಗಡೆ : ಮುಕ್ಕಟ್ಟಿಗೆ ಎಣ್ಣೆಯನೊತ್ತಿಕೊಳ್ಳುವುದರ ಗುಣ (ಸಕಪ್ಟ. ೩೦) ; ಹಡಗಿನ ಮುಕ್ಕಟ್ಟಿನಲ್ಲಿ ಗಡುತರವಾದ್ದೊಂದು ಕಬ್ಬಿಣಸರಪಳಿಯು ಇರುವುದು (ಮುಂಬಯು. ೩-೦೦೩). 'ಮುಂಗಟ್ಟು' ಪರಾ. [ < ಮುನ್$_1$ + ಕಟ್ಟು$_2$ ]

**ಮುಕ್ಕಟ್ಟು$_2$** 'ಮುಗ್ಗಟ್ಟು' ನೋ.

**ಮುಕ್ಕಟ್ಟು$_3$** 'ಮುಕ್ಕಟ' ನೋ.

**ಮುಕ್ಕಡಕ** 'ಮುಕುಂಡಕ' ನೋ.

**ಮುಕ್ಕಡಪ್ಪು** (ನಾ). ಮೂರು ಹಾಯ್ಗುಡಗಳನ್ನುಳ್ಳದು : ಮೂಡ ಮುಕ್ಕಡಪ್ಪಿನ ಹೊಳೆ ತೆಂಕಯಿಂಕೆಯ ಹೊಳೆ ಪಡುವ ಪುಳಕಳಿಯುವ ಹೊಳೆ ಬಡಗ ಭಲಿಮೆಯ ಹೊಳೆ ಈ ನಾಲ್ಕು ಹೊಳೆಗಳನು . . . ದೇವರ್ಗೆ ಮಾಡಿಕೊಟ್ಟು ಧರ್ಮ ಕ್ಷೇಮದ ವಿವರ (ಎಶಿ. V. ೪೦-೬; 1587). [ < ಮೂಱು + ಕಡಪ್ಪು$_0$ (< ಕಡಪ್ಪು$_2$) ]

**ಮುಕ್ಕಡಲೆ** (ನಾ). ಕಡಲೆಯ ನುಚ್ಚು : ಸೇವಗೆಯ ಪಾಯಸ, ಮುಕ್ಕಡಲೆಯ ಹುಗ್ಗಿ, ಹಿಂಡಿಪು ಕಚ್ಚರಿ, ಅಲಸಂದೆಯ . . . ಕಾಣಿಕೆ ತಾಂಬೂಲ ಮಂತ್ರುಸಮನ್ವಿತವಾಗಿ ಶಿಶುವಿಗೆ ಮೂರು ಸೂಳು ನಿವಾಳಿಸಿ (ಶಾಲಿವ. ೦೨೯-೨). [ಮುಕ್ಕು$_4$ (<ಮುಱಿಕು) + ಕಡಲೆ]

**ಮುಕ್ಕಡಿ$_1$** (ನಾ). ೧. ಮೂಗು ಕಡಿದುಹೋಗಿರುವಿಕೆ ; ಮೂಗಿಲ್ಲದಿರುವಿಕೆ. ೨. ಮೂಗು ಕಡಿದು ಹೋದವನು ; ಮೂಗಿಲ್ಲದವನು: "ವಿಗ್ರಃ, ವಿಗತನಾಸಿಕಃ — ೨ ಮೂಗಿಲ್ಲದವನು, ಮುಕ್ಕಡಿಯುವನು" (ಸಿದ್ಧಾಂತಿ. ೦೮೦) ; ಮೂಗುಳ್ಳ ಮುಕ್ಕಡಿಗಳು ನಾವು . . . ಕಸ್ತೂರಿಯ ವಾಸನೆಯನ್ನು ನೋಡಿದೆವಾದರೆ ನಮಗೆ ಮೂಗಿನಲ್ಲಿ ನೆತ್ತರು ಬೀಳುವುದು! (ಸಾಹಿಜೀ. ೫೨). [ < ಮೂಗು + ಕಡಿ$_3$ ]

**ಮುಕ್ಕಡಿ$_2$** (ನಾ). ಮೂರು ತುಂಡು, — ಭಾಗ : ವರದರ್ಶನಕುಳಿಶದಿನುದ್ಧರಮಿಥ್ಯಾತ್ವಾದ್ರಿಪಕ್ಷಮುಂ ದ್ವಿರದೇಂದ್ರಂ ಭರದಿಂ ಖಂಡಿಸೆ ಮುಕ್ಕಡಿ ನಿರತಂ ತಾನಾಯ್ತು ದುಸ್ತರಂ ಮಿಥ್ಯಾತ್ವಂ (ಶಾರ್ಕ್ನೃ. ೫-೪೨) ; ಕೂರಲ ಗನಾ ಕರ್ಣ ಬರೆಸೆಳೆದಾರಿ ಹಿಂದಣಿನೆಚ್ಚು ಪಾರ್ಥಕುಮಾರಕನ ಚಾಪವನು ಮುಕ್ಕಡಿಯಾಗಿ ಖಂಡಿಸಿದ (ಕುಮಾರವ್ಯಾ. ೬-೩೨) ; ಮುಂದಣಯುಗಂಗಳಲಿ ಮನುಜಗೋಚರವಾಗದವೊಲೀ ವನನಿಧಿಯ ಸೇತುವ ವಿಭಾಗಿಪುದೆನಲು ಬಿಲುಗೊಪ್ಪಿಂದ ಮುಕ್ಕಡಿಯಾಗಿ ಖಂಡಿಸಿದ (ತೊರರಾ. ೬-೫೪-೦೭). [ < ಮೂಱು + ಕಡಿ$_3$ ]

**ಮುಕ್ಕಡಿಗೆಯ್** (ಕ್ರಿ). ಮೂರು ತುಂಡುಮಾಡು ; ಮೂರು ಭಾಗವಾಗುವಂತೆ ತುಂಡರಿಸು : ಮಂತ್ರಮಂ ತಂತ್ರದಿಂ ತಱಿದು ಪೊಸಮುಸೆಯ ವಿಶಿಖಂಗಳಿಂ ಪಗೆಯ ಬಿಲ್ಲಂ ಪುಲ್ಲಂ ಕಡಿವಂತು ಮುಕ್ಕಡಿಗೆಯ್ದು ಬೊಬ್ಬಿಱಿದಂ (ರಾಮಾಶ್ವ.೦೪೫-೨೬). [ ಮುಕ್ಕಡಿ$_2$ + ಕೆಯ್$_1$]

**ಮುಕ್ಕಣ್,** ಮುಕ್ಕಣ್ಣು (ನಾ). ಮೂರು ಕಣ್ಣುಗಳು : ಎರಡು ತೊಡೆಗಳ ಮೇಲೆ ಪರಮನನಿರಿಸಿ ಸತಿ ಅಭ್ಯಂಗನವನಾಚರಿಸುತ್ತೊಯ್ಯನೆ ಮೂಗನೊತ್ತುತ ಕಿವಿಯನೂದುತ್ತ ಒರೆಸುತಂ ಮುಕ್ಕಂಗಳಂ (ಬಸವ. ೦೫-೬). 'ಮುಕ್ಕಣ್ಣ' ಪರಾ. **ಮುಕ್ಕಣ್ಣು** : ಗಂಗೆಯ ಧರಿಸಿ ಭಸಿತವಿಟ್ಟು ಫಲದೊಳು ಹಿಂಗದೆ ಮುಕ್ಕಣ್ಣನಾಂತು ಅಂಗಜಹರನಂತೆಯಾರಾಮದೊಳಗಾ ತೆಂಗಿನ ಮರಗಳೊಪ್ಪಿದುವು (ಕಂಪವಿ. ೨-೪೨). [ < ಮೂಱು + ಕಣ್ ]

**ಮುಕ್ಕಣ್ಣ** (ನಾ). ೧. ಮೂರುಕಣ್ಣುಗಳುಳ್ಳವನು ; ತ್ರಿನೇತ್ರ ; ಶಿವ : "ಗೊರವನೆನಲ್ ಮುಕ್ಕಣ್ಣಂ" (ಚಕುವಿ. ೨೮) ; ಕಾಮಹರನೊಳ್ ಮುಕ್ಕಣ್ಣನೊಳಖಿಳವೇದಶಾಸ್ತ್ರಕ್ರಮಮಂ ಮಿಕ್ಕವನೊಳ್ ಪಿತೃವನದೊಳ್ ಪೊಕ್ಕವನೊಳದೆಂತು ಚಿತ್ತವಿಟ್ಟೆ ಲತಾಂಗೀ (ಗಿಂಕ. ೩-೦೦೦) ; ರಕ್ಕಸನೆರಡು ತೋಳ್ಗಳ ಕಡಿದಪೆನೆಂದು ಚಕ್ರವ ಪುನರಪಿ ತುಡುಕೆ ಮುಕ್ಕಣ್ಣನೈತರು ತುಭಯವೀರರಿಗಡ್ಡಹೊಕ್ಕನು ಮಧ್ಯಸ್ಥನಾಗಿ (ಪೋಹಕ. ೪೦-೬೨). ೨. [ಜೈನ] ಜ್ಞಾನದ ಮೂರನೆಯ ಕಣ್ಣುಳ್ಳವನು ; ಕೇವಲಜ್ಞಾನಿ ; ಜಿನ : ಲೆಕ್ಕವಿಲ್ಲದೆ ಬಂದ ರಕ್ಕಸನಾಯಕರಿಕ್ಕಿದ ಪೌಜುಗಳೆಲ್ಲವನು ಮುಕ್ಕಣ್ಣನ ಪರಿವಾರ ಕಾಣುತ ವಿತಿ ಮಿಕ್ಕು ನಡೆದುದಿದಿರಾಗಿ (ತ್ರಿಪುಶಾಂ. ೦೮-೨೦೩) ; ಎರಡುಗಣ್ಣಿಂದ ಲೋಕವ ನೋಡಬೇಕು ತನ್ನರವ ಸುಜ್ಞಾನ ದೃಷ್ಟಿಯೊಳು ತಿರುಗಿ ನಿಟ್ಟಿಸಬೇಕು ಮುಕ್ಕಣ್ಣಗಲ್ಲದೆಲ್ಲರಿಗೆ ಬಹುದೆ ಸುಖಸಿದ್ಧಿ (ಭರತ. ೫-೭೭).

ಮುಕ್ಕಣ್ಣನರಸಿ = ಶಿವನ ರಾಣಿ ; ಪಾರ್ವತಿ : ಮುಕ್ಕಣ್ಣನರಸಿಯ ಬೀಳ್ಕೊಂಡು ರತಿದೇವಿ . . . ಬಂದು ಹೊಕ್ಕಳು ಕುಸುಮಾವತಿಯ (ಮೋಪಕ. ೬-೪) ; ಮುಕ್ಕಣ್ಣನರಸಿಯೆಂಸಪೆ ಬಂದು ಧರೆಯೊಳಗೆ . . . ನಿರ್ವಾಣಪದವಿಯನಾಂತ ಮಾದೇವಿಯಕ್ಕನ ಪದಕ್ಕೆ ಶರಣು (ಕಬಪು. ೦-೦೫). [ಮುಕ್ಕಣ್ + — ಅ$_7$ ]

**ಮುಕ್ಕಣ್ಣವೈಜ್ಯ** (ನಾ). ಒಂದು ಬಗೆಯ ವಾದ್ಯ : ಮಕರತೋರಣ ಪಾಯಿಮುಪ್ಪುತ್ತಿಪು ಮುಕ್ಕಣ್ಣವೈಜ್ಯ ಬಸವನ ಡ್ಯೆಕ್ಕೆ ನಂದಿಧ್ವಜ ಭೇರಿ ಡ್ಯೆಂಕ ಪಂಚವಾದ್ಯ ಮುಂತಾಗಿ ನಮಸ್ಕರಿಸಿ ವನ್ದಿತಿ ಯಿದವೆ (ಎಕ. VI. ಕಳ್ಳಮು. ೦೦೯-೩೭; 1717). [ ಮುಕ್ಕಣ್ಣ$_1$ + ವೈಜ್ಯ$_0$ ]

**ಮುಕ್ಕಣ್ಣು** 'ಮುಕ್ಕಣ್' ನೋ.

**ಮುಕ್ಕನಗಿಡು** (ನಾ). ಒಂದು ಬಗೆಯ ಸಸ್ಯ : "ಕಿಣಃ—ಬೂದಿ, ಮುಕ್ಕನಗಿಡು" (೬ಚಕ. ೩೩). [ ? + ಗಿಡು ]

**ಮುಕ್ಕಬ್ಬೆ** (ನಾ). ಒಬ್ಬಾಕೆಯ ಹೆಸರು : ಆತನ ಪೆಣ್ಡತಿ ಮುಕ್ಕಬ್ಬೆ ಮಾಡಿಸಿದಳ್ (ಎಕ. VIII. ಸೊರಬ. ೪೦೬-೦೨ ; 951 ?). [< ಮೂಕಾಂಬೆ]

**ಮುಕ್ಕರ** 'ಮುಕುರ$_1$' ನೋ.

**ಮುಕ್ಕರಿ** ' ಮುಕ್ಕುಱು ' ನೋ.
**ಮುಕ್ಕರಿವೆ** ' ಮೂಕರಿವೆ ' ನೋ.
**ಮುಕ್ಕರೆ** ' ಮುಕ್ಕುಱು ' ನೋ.
**ಮುಕ್ಕಲ್** (ನಾ). ಒಂದೇ ಎಡೆಯಲ್ಲಿ ಮೂರುಕಲ್ಲುಗಳು ಸೇರಿರುವ ಪ್ರದೇಶ : ಅನ್ತೆ ಪೋಗಿ ಕಲ್ಕುಪ್ಪೆಯ ಅನ್ತೆ ಪೋಗಿ ಮುಕ್ಕಲ್ಲೆ ಪೋಗಿ ಅಡವಳಿಕೆಱೆಯ ಪಡುವಣ ಏಡೆಗೋಡೆ ಏರಿಯ ಮೇಗೆ (ಎಕ. XVI. ತಿಪಟೂ. ೦೧೦-೬೯; ಸು. ೯೦೦). [ < ಮೂಱು + ಕಲ್$_3$ ]
**ಮುಕ್ಕವಲು** ' ಮೂಗವಲ್ ' ನೋ.
**ಮುಕ್ಕಳಿಸು** ' ಮುಕ್ಕುಳಿಸು$_1$ ' ನೋ.
**ಮುಕ್ಕಳೆ** (ನಾ). ಮೂರುಬಣ್ಣಗಳಿಂದ ಕೂಡಿದ ಕಾಂತಿ–ಹೊಳಪು : ಥಳಥಳಿಪ ಪೊಂಬಟ್ಟೆ ಪಟ್ಟಾವಳಿಗಳನು ತಾನುಟ್ಟು . . . ಉಳಿದ ಗೋಪರಿಗೆಲ್ಲ ನಸುಮಾಂದಳಿರ ಸಾಲಿಯ ಚಂದ್ರಿಕೆಯ ಮುಕ್ಕಳೆ [ಶಾಕಾಂ.ಳೆ] ಯ ವಸ್ತ್ರವನಿತ್ತು ಹೊಕ್ಕನು ಮತ್ತೆ ಪಟ್ಟಣವ (ಅಕ್ರೂತ. ೬-೨೬).
[ < ಮೂಱು + ಕಳೆ$_6$ (= ಕಲೆ$_3$) ]
**ಮುಕ್ಕಳಿಸು** ' ಮುಕ್ಕುಳಿಸು$_1$ ' ನೋ.
**ಮುಕ್ಕಾಂ**, ಮುಕಾಂ, ಮುಕ್ಕಾಮು, ಮೊಕಾಂ, ಮೊಕ್ಕಾಂ, ಮೊಕ್ಕಾಮ, ಮೊಕ್ಕಾಮು, ಮೊಖಾಮು (ನಾ). ತಾತ್ಕಾಲಿಕವಾಗಿ ತಂಗುವಿಕೆ,– ಬೀಡುಬಿಡುವಿಕೆ ; ಬಿಡದಿ ; ಶಿಬಿರ ; ಠಾಣ್ಯ : ಗಿರಗಾಂವ ನಿವಾಸದಿಂದ ನಾವು ನಮ್ಮ ಮುಕ್ಕಾಂ ಕಿತ್ತಿದ್ದೇವೆ (ರಕ್ಮಗೋ. ೬೬); ನನ್ನ ಮುಕ್ಕಾಂ ಇದ್ದ ಊರಿನಿಂದ ಮಾವನ ಮನೆ ಸಮೀಪ ಇತ್ತು (ಕಂಬುಟಿ. ೦೦೪) ; ಡಾಕ್‌ಬಂಗಲೇದಾಗ ಈ ಸಾಬನ ಮುಕ್ಕಾಂ ಇತ್ತು (ದೀಕಹ. II, ೦೭). **ಮುಕಾಂ** : ಚೆಂಪಪಟ್ಟಣದ ಗಿಡದಲ್ಲಿ ತಂದು ಠಾಣಾಜೇಜಂಗಲ್ ತಿರುಗಿಸುತ್ತಾ ಧಣಿದು ಯಲ್ಲ ಮುಕಾಂ ಮಾಡಿ (ಹೃದಕ. ೪೩). **ಮುಕ್ಕಾಮು**: ಬೆಂಗಳೂರು ಮುಕ್ಕಾಮಿನಲ್ಲಿ ಕೆಲವು ದಿವಸ ಶಿವಪೂಜಾನಂದಲೋಲರಾಗಿರು ತ್ತಿರಲು (ಗುರುವ. ೦೩); ಒಂದು ಅನಪೇಕ್ಷಿತ ಕಾರಣಕ್ಕಾಗಿ ನನ್ನ ಇಲ್ಲಿಯ ಮುಕ್ಕಾಮನ್ನು ಅರ್ಧಕ್ಕೇ ಮುಗಿಸಬೇಕಾಗಿದೆ (ಹೊಸಕ್ಷಿ. ೦೬೨). **ಮೊಕಾಂ** : ಪ್ರಜೋತ್ಪತ್ತಿಸಂವತ್ಸರದ ಮಾರ್ಗಸಿರ ಬ ೧ ಲು ಮೊಕಾಂ ಬೆಂಗಳೂರು ಬಿದು ಸೂರಪ್ಪ ಮುನಸಿ (ಎಕ. VI, ಕೊಪ್ಪ. ೯೬-೩೪; 1811). **ಮೊಕ್ಕಾಂ** : ಇಂಗ್ಲಿಷ್‌ಕಂಪೆನಿಕ್ಯಾವಲ್ರಿಯ ಪದ್ಧತಿಯಂತೆ ಏರ್ಪಟ್ಟ ೫೦೦ ಮಂದಿ ಸವಾರರು ಕ್ಲೋಸ್‌ಪೇಟೆಯಲ್ಲಿ ಮೊಕ್ಕಾಂಮಾಡಿದ್ದರು (ಮುಜಾವಂ. II, ೪೬); ಮೇರಿಯ ಮನೆಯಲ್ಲಿ ಅಧಿಕಾರಿಗಳ ಮೊಕ್ಕಾಂ (ಕಾವೇಂ. ೦೩೨); ಅಲ್ಲಿನ ಚಿಕ್ಕ ಇನ್‌ಸ್ಪೆಕ್ಷನ್ ಲಾಡ್ಜಿನಲ್ಲೇ ಮೊಕ್ಕಾಂ ಮಾಡಿದೆ (ಕಂಪ. ೩೩೩). **ಮೊಕ್ಕಾಮ** : ಏತ ಸುಬ್ಬರಾವ ಮುನಷಿ ಹಜೂರದ ಮೊಕ್ಕಾಮು ನಂಜನಗೂಡ ಸಾಲ್ಲೇಯಾನಾ ಕಂಟಿರಾಯಿ ಐದುವರಹಾದ ಪ್ರಕಾರಾ ಜೋಡಿ ತಗೆದುಕೊಂಡು (ಮೈಆಂ. ೦೯೨೪, ೯೯–೯೫; 1813). **ಮೊಕ್ಕಾಮು** : ನಿಮ್ಮ ಹಿರಿಯರವರು ನಮ್ಮ ಅಜ್ಜಯ್ಯನವರ ಕೂಡೆ ಜಗಳ ಮಾಡಿ ಕೋಪುರದ ಮೊಕ್ಕಾಮಿನಲ್ಲಿ ತೀರಿಹೋದರು (ರಾಕೆಂದ್ರ. ೩೨); ಡೆಪ್ಯೂಟಿ ಕಮಿಷನರು . . . ಒಂದು ಜವಾಬಂದಿ ಮೊಕ್ಕಾಮನ್ನು ಕದಬಹಳ್ಳಿಗೇ ಹಾಕಿದರು (ನಮ್ಮೂರು. ೦೩೩). **ಮೊಖಾಮು** : ಅವಳು ಅಲ್ಲೇ ಇದಾಳೆ, ಊರುಕೇರಿ ಬಿಟ್ಟು ಅಲ್ಲೇ ಮೊಖಾಮು ಅಂದ (ತಂಗೂಂ. ೦೯೮).
[ ← ಅರ. ಪಾರ. ಮುಕಾಮ್; ಹಿಂ. ಮರಾ. ಮುಕಾಮ್, ಮುಕ್ಕಾಮ್. ಮೋಕಾಮ್ ]
**ಮುಕ್ಕಾಣೆ** (ನಾ). ಮೂರು ಕಾಣಿ ; ಹಣದ ಅರುವತ್ತುನಾಲ್ಕನೆಯ ಮೂರು ಭಾಗ : ಕಾಣಿಯ ಹಾಕಿ ಮುಕ್ಕಾಣೆಯನಱಸುವನಂತೆ ಒಂದ ಬಿಟ್ಟು ಒಂದ ಹಿಡಿದಿಹೆನೆಂಬ ಸಂದೇಹಿಗೇಕೆ ಲಿಂಗಾಂಗ (ಮೋಳಿಗೆವಚ. ೩೩–೨೯೭); ನಾಲ್ಕು ವೀಸ ಮುಕ್ಕಾಣೆ ಘಣಸಹಿತೇಕೊಪ್ಪುವುತಿರ್ದುದಕ್ಕಾಧಾರದಿಂದಂ ಪೇಳು ನೀಂ ಭಾವಿಸಿದರೇನತಿ ಮುತ್ತನಿರಲ್ ರಾಗದಿಂದಂ (ಗಾಸ್ಕರ. ೫೯ ೪).
[ < ಮೂಱು + ಕಾಣಿ$_1$ ]
**ಮುಕ್ಕಾಮು** ' ಮುಕ್ಕಾಂ ' ನೋ.
**ಮುಕ್ಕಾಲ್**, ಮುಕ್ಕಾಲು$_1$ (ನಾ). ೧. ಮೂರುಸಾಲು,– ಪಾದ : 'ಮುಕ್ಕಾಲ್ವಾಡು' ಪರಾ. **ಮುಕ್ಕಾಲು$_1$** : ೨. ಮೂರುಕಾಲು: 'ಮುಕ್ಕಾಲುಮಣೆ' ಪರಾ. ೩. ಮೂರುಕಾಲುಗಳುಳ್ಳ ಮಣೆ, –ಪೀಠ ; ಮುಕ್ಕಾಲಿ ; ತ್ರಿಪಾದಿ : ಎಂಜಿನಿಯರನ್ನು ಕರೆದುಕೊಂಡು ಹೋಗಿ ಮನೆ ತೋರಿಸಿದ್ದಾಯಿತು. ಅತ ಟೇಪು ಮುಕ್ಕಾಲು ಮುಂತಾದ್ದೇನನ್ನೂ ತುದಿರಲಿಲ್ಲ (ಹೊರಳು. ೨೬).
[ < ಮೂಱು + ಕಾಲ್$_1$ ]
**ಮುಕ್ಕಾಲಟ್ಟೆ** (ನಾ). ದೇವಸ್ಥಾನದ ಪರಿಚಾರಕರು ವಾಸಿಸುವ ಹಟ್ಟಿ : ಕುಂದಾಪುರದ ವೊಳಗಣ ಕುಂದೇಶ್ವರದೇವರ ಸನ್ನಿಧಿಯಲೂ ಪೂರ್ವದಲೂ ವೂರು ಜಗತ್ತು ಅದ್ದಿಕದಲೂ ಕುಡಾಕೂರ ದೇವಣಸೇನಬೋವ ಮಾಡಿಸಿದ ಧ(ಂ)ರ್ಮವ್ಯ ನಡೆಯದೇಯಿರಲಾಗಿ ಆ ನರಸಿಂಹದೇವವೊಡೆಯರು ಕುಂದಾಪುರದೊಳಗಣ ಗ್ರಾಮ ಜಗತ್ತು ಮುಕ್ಕಾಲಟ್ಟೆಗ[ಳ]ನು ಕರಸಿ ವಿಚಾರಿಸಿ (ಸೌಇಇ. IX – ii, ೪೪೦-೦೫; 1425). [ ? ]
**ಮುಕ್ಕಾಲು$_1$** ' ಮುಕ್ಕಾಲ್ ' ನೋ.
**ಮುಕ್ಕಾಲು$_2$** (ನಾ). ೧. ನಾಲ್ಕನೆಯ ಮೂರು ಭಾಗ (¾) : ಮುಕ್ಕಾಲು ಮೊಗ ಕಾಣುವಂತೆ ನೋಡುತ್ತ ತನ್ನ ಕರದೊಳ್ ಕಪೋಲ ವನ್ನಿಟ್ಟು (ಸೌಗಂ. ೨೦೪-೦೫); ಶ್ರೀಮಂತನಾತನು ಸಂನ್ಯಾಸಿಯಾತನು ಎಂದೆಲ್ಲರುಗ್ಗಡಿಸಿರಲು ಒಕ್ಕಾಲು ಮಾತ್ರವೆ ವಿಟವೆಂಮ ತಿಳಿ ನೀನು ಸುಳ್ಳಿನ ಕಂತೆ ಮುಕ್ಕಾಲು (ಇಂಕಾಕ. ೨೦೬-೬೭); ಸ್ವಲ್ಪ ಸರಿ ಎಂದರೆ ಅರ್ಧ ಮುಕ್ಕಾಲು ಕೊಡುವ ಅನಿವಾರ್ಯವೇ ಇಲ್ಲ (ಶಿಕ್ಷಣ. ೩೩೨). ೨. ಒಂಬತ್ತು ಕಾಸು ; ಮುಕ್ಕಾಲಾಣೆ : ಮಂಗಳೂರು ನಕ್ಕ ಒಂದು ಮುಕ್ಕಾಲಿನದ್ದು ಮರೆಯಬೇಡ (ಪಾಗೆ! ೬೩). ೩. ಹಿಂದಿನ ಕಾಲದಲ್ಲಿ ಬಳಕೆಯಲ್ಲಿದ್ದ ಮೂರುಕಾಸಿನ ಒಂದು ತಾಮ್ರದ ನಾಣ್ಯ : (೬).
**ಮುಕ್ಕಾಲಾಣೆ** = ಒಂಬತ್ತು ಕಾಸಿನ ನಾಣ್ಯ : ನನಗೆ ನನ್ನ ತಾಯಿ ಮುಕ್ಕಾಲಾಣೆ ಕೊಟ್ಟು ಕಳುಹಿಸಿದರು (ರೂಢಿ). **ಮುಕ್ಕಾಲುಪಾಲು**, **ಮುಕ್ಕಾಲುಮೂರುಪಾಲು** = ೧. ಮುಕ್ಕಾಲುಭಾಗ ; ನಾಲ್ಕರಲ್ಲಿ ಮೂರು ಭಾಗ ; ಬಹುಭಾಗ : ಮುಕ್ಕಾಲುಪಾಲು ಇವರೆಲ್ಲಾ ಊರೋಗೆ ರೈತರ ಮನೆಯಲ್ಲಿ ಜೀತಗಾರರಾಗಿದ್ದರು (ಹುಟ್ಟಿಕ. ೭೩); ಮಾನವನ ಮುಕ್ಕಾಲುಮೂರುಪಾಲು ಸಾಮಾನ್ಯವ್ಯವಹಾರವು ಪ್ರತ್ಯಕ್ಷ, ಅಪ್ರತ್ಯಕ್ಷವಾಗಿ 'ಆಹಾರನಿದ್ರಾಭಯಮೈಥುನಂ ಚ' ಎಂಬ ಸೂತ್ರದಲ್ಲಿ ಪವಣಿಸಿಹೋಗಿದೆ (ಸಾಹಿಚಿ. ೨೭). ೨. ಪ್ರಾಯಶಃ ; ಬಹುಶಃ : ಮುಕ್ಕಾಲುಪಾಲು ಈ ಹೊತ್ತಿನಲ್ಲಿ ಅವರು ಮನೆಯಲ್ಲಿರುವುದಿಲ್ಲ (ರೂಢಿ). **ಮುಕ್ಕಾಲುರೂಪಾಯಿ** = ಒಂದು ರೂಪಾಯಿಯಲ್ಲಿ ನಾಲ್ಕನೆಯ ಮೂರು ಭಾಗ; ಹನ್ನೆರಡಾಣೆ : (೬). **ಮುಕ್ಕಾಲುವಾಸಿ** = ೧. ಬಹುಪಾಲು : ಅವರ ಖಾಯಿಲೆ ಮುಕ್ಕಾಲುವಾಸಿ ಗುಣವಾಗಿದೆ (ರೂಢಿ). ೨. = ಮುಕ್ಕಾಲುಪಾಲು ೨ : ಅವರು ಮುಕ್ಕಾಲುವಾಸಿ ಇಂದು ನಮ್ಮ ಮನೆಗೆ ಬರಬಹುದು (ರೂಢಿ).
[ < ಮೂಱು + ಕಾಲು$_3$ (< ಕಾಲ್$_3$) ]
**ಮುಕ್ಕಾಲುಮಣೆ** (ನಾ). ಮೂರುಕಾಲುಗಳುಳ್ಳ ಮಣೆ,– ಪೀಠ : ಇದು ಸಾಹಿತ್ಯವೆಂಬ ಮುಕ್ಕಾಲುಮಣೆಯ ಮೂರು ಕಾಲು (ರಾಮಾಚ. ೯೬).
[ ಮುಕ್ಕಾಲು$_1$ (< ಮುಕ್ಕಾಲ್) + ಮಣೆ$_1$ ]
**ಮುಕ್ಕಾಲ್ವಾಡು** (ನಾ). ಮೂರುಪಾದಗಳುಳ್ಳ ಹಾಡು ; ಮೂರು ಸಾಲಿನ ಗೀತೆ; ತ್ರಿಪದಿ : ಮುಕ್ಕುಮುಕ್ಕಾದೀ ಮುಕ್ಕಾಲ್ವಾಡುಗಳ್

ಸಿಲ್ಕೆ ಜೋಕೆಯಿಂ ಚೌಕಂಗೊಂಡು ಬಣ್ಣಿಗೆಯೊಳ್ ತುಂಬುವಾಡಂ ಪಾಡಿವೆಂಬುದುಂ (**ಶಕಲಿ. ೬-೦೫೪ ಪ**); ಸಾಂಗತ್ಯವಾದರೂ ಈ ಮುಕ್ಕಾಲ್ಪಾಡುಗಳು(ತ್ರಿಪದಿ) ಚೌಕಂಗೊಂಡಾದುವೆಂಬುದನ್ನೂ ಅವನು ಸೂಚಿಸದೆ ಇಲ್ಲ (**ಕಾಹಿಲಿ. ೦೦೫**). [ ಮುಕ್ಕಾಲ್ + ಪಾಡು$_2$ ]

**ಮುಕ್ಕಿ** (ನಾ). ಮೂರ್ಖಳಾದ ಹೆಣ್ಣು; ತಿಳಿಗೇಡಿ ಹೆಣ್ಣು : ಇದ್ದರಲ್ಲಿ ಸಹಸ್ರಸಂಖ್ಯೆಯ ಮದ್ದುಕುಟಿಲದ ಮಾಯಕಾತಿಯರಿದ್ದೆಸೆಯ ಕವಿಗೊಬ್ಬಯರು ಮೂಳಿಯರು ಮುಕ್ಕಿಯರು (**ತೊರರಾ. ೫-೨-೩೪**). [ ಮುಕ್ಕ$_3$ + — ಇ$_2$ ]

**ಮುಕ್ಕಿಸು** (ಕ್ರಿ). ೧. ಮುಕ್ಕುವಂತೆ ಮಾಡು ; ಗಪಗಪನೆ ತಿನ್ನುವಂತೆ ಮಾಡು.– ತಿನ್ನಿಸು : ಹಕ್ಕಿಗಳು . . . ಕಾಳುಕಡ್ಡಿ ಹಕ್ಕಿ ಮರಿಗಳಿಗೆ ಮುಕ್ಕಿಸಿ ತಮ್ಮ ಆಹಾರಕ್ಕಾಗಿ ಹೊಲ ಗದ್ದೆಗಳಿಗೆ ಹಾರಿಹೋಗಿದ್ದವು (**ಪುಸ್ತರ. ೦೦**). ೨. (ಆಲಂ) ನುಂಗುವಂತೆ ಮಾಡು; ನಾಶಗೊಳಿಸು: ಅರಿಭೂಭೃದ್‌ಬಳಕಾಳದಂಡನೊಹೊಹೋ ಕೊಂದಿಕ್ಕಿಪಂ ಮುಕ್ಕಿಪಂ (**ಎಕ. VIII. ಸಾಗರ, ೦೦೯-೩೦; 1042**). [ ಮುಕ್ಕು$_1$ + — ಇಸು$_3$ ]

**ಮುಕ್ಕಿಱು** ' ಮುಕ್ಕುಱು$_1$ ' ನೋ.

**ಮುಕ್ಕು$_1$** (ಕ್ರಿ). ೧. (ಕಾಳು, ಹಿಟ್ಟು ಮುಂತಾದುವನ್ನು ಬಾಯಿತುಂಬ ತುಂಬಿಕೊಂಡು) ಅವಸರವಸರವಾಗಿ ತಿನ್ನು; ಗಪಗಪನೆ ತಿನ್ನು; ಕಬಳಿಸು : "ಮುಕ್ಕು – ಖಾದನವಿಶೇಷೇ" (**ಶಮಾ**); ಪುಟಿ ಘನವಾಗೆ ಕೊಕ್ಕರಿಸಿ ಗುಗ್ಗುರಿಯಂ ಕೊಳೆ ಮುಕ್ಕಿ ಮಿಕ್ಕುದಂ ಕೆಲದವರ್ಗಿತ್ತು (**ದಶಕು. ೯-೨೦೫**). ೨. (ಅಲಂ) ನುಂಗಿ ನೊಣೆ ; ನಾಶಮಾಡು : ಇನ್ನುಮೆಲ್ಲರಂ ಯಮಸುತನಂ ಸುರೇಂದ್ರಸುತನುಂ ಪೊಸದೀಗಳೆ ಮುಕ್ಕಿ ತೋಱಿರೆ (**ಪಂಪಭಾ. ೪-೭**); ಆನೆದಿಂಬಂಗಾಡಾವರಿದೆಂಬವೋಲ್ ಪೊಸೆದು ಮುಕ್ಕಲ್ ಸಾಲನೇ ಶಾರ್ಙ್ಗಿ ನಮ್ಮಂ ಗಂಡಾಳ್ತನಮೇವುದಾಶ್ರಯಿಸುವಂ ಶ್ರೀಪಾದಮಂ ಕೃಷ್ಣನಾ (**ಜಗಪಿ. ೯-೯೫**) ; ಉಕ್ಕಿಱುವ ಕೋಪಾಗ್ನಿ ದಳ್ಳಿಸಿ ದಿಕ್ಕುಗಳನಳ್ಳಿಱಿದು ಲಕ್ಷ್ಮಣನೆಕ್ಕತುಳದಲಿ ಬಂದನಾ ಲಯಕಾಲದಲಿ ಜಗವ ಮುಕ್ಕಿವೋದುವ ಮದನಹರನವೋಲು (**ತೊರರಾ. ೨-೩-೦೦**).

[ದೇ.‖ ತಮಿ. ಮುಕ್ಕು, ಮೊಕ್ಕು; ತುಳು. ಮುಕ್ಕು; ತೆಲು. ಬೊಕ್ಕು]

**ಮುಕ್ಕು$_2$** ' ಮುಲುಕು$_1$' ನೋ.

**ಮುಕ್ಕು$_3$** ' ಮುಱುಕು$_2$' ನೋ.

**ಮುಕ್ಕು$_4$** ' ಮುಱಿಕು ' ನೋ.

**ಮುಕ್ಕು$_5$** (ನಾ). (ಉಕ) ೧. ಒಂದು ಸಾರಿ ಮುಕ್ಕಳಿಸುವಷ್ಟು ದ್ರವ ; ಗುಟುಕು : ಮತ್ತೊಂದು ಮುಕ್ಕು ನೀರೇ ಹೆಚ್ಚಿಗೆ ಕುಡಿದು ಅಲ್ಲಿಯೇ ಕುಳಿತೆ (**ಪೀದಿಮ. ೦೦**); ಇಲ್ಲಿ ಮುಕ್ಕು ನೀರಿಗೂ ಗತಿಯಿಲ್ಲ (**ಸ್ವತಿತ. ೪೬೪**); ಮನೆಯಲ್ಲಿ ಒಂದು ಮುಕ್ಕು ಕೂಡ ನೀರು ಇರುವದಿಲ್ಲ (**ಹಂಸಾ. ೨೦**). ೨. ಮುಷ್ಟಿಯಲ್ಲಿ ಹಿಡಿಸುವಷ್ಟು ಪ್ರಮಾಣ ; ಬೀಸುವ ಕಲ್ಲಿನ ಕುಳಿಯಲ್ಲಿ ಹಿಡಿಸುವಷ್ಟು ಪ್ರಮಾಣ ; ಒಂದು ಹಿಡಿ : ಬೆಕ್ಕು ಮನೆಯೊಳು ಲೇಸು ಮುಕ್ಕು ಕಲ್ಲಿಗೆ ಲೇಸು (**ಸರ್ವಜ್ಞ. ೦೩೬೪**); ಮುಕ್ಕು (ಒಂದು ಹಿಡಿ ಧಾನ್ಯ, ಬೀಸುವ ಕಲ್ಲಿನಲ್ಲಿ ಒಮ್ಮೆ ಹಿಡಿಯುವಷ್ಟು ಧಾನ್ಯ) ಮನ್ಯಾಗ ಮುಕ್ಕು ಜ್ವಾಳಿಲ್ಲ (**ಸುವರ್ಣ. ೩೨೭**) ; ಆದ ಮುಕ್ಕಿಗೆ ಶರಣು ಗೋದಿಕಲ್ಲಿಗೆ ಶರಣು (**ಗರತಿ. ೦೩೭**). [< ಮುಕ್ಕುಳ್ ?]

**ಮುಕ್ಕುಗಳೆ** (ಕ್ರಿ). ಒಡೆ ; ಭಿನ್ನಗೊಳಿಸು ; ಭಂಗಮಾಡು : ತಾಗಿ ವಜ್ರವು ಮುಕ್ಕುಗಳೆವಡೆ ಸಾಗರವ ಹೊಗಲೇಕೆ ಗಿರಿಗಳು (**ಕುಮಾರದ್ರೋ. ಪಾ. ೦೭-೨೭**). [ಮುಕ್ಕು$_4$ (< ಮುಱಿಕು) + ಕಳೆ$_1$]

**ಮುಕ್ಕುಗೆಲಸ** (ನಾ). ಅಪೂರ್ಣವಾದ ಕಾರ್ಯ ; ಪೂರ್ತಿಯಾಗದ ಕೆಲಸ : ಈಗಿನ ಕಾಲದಲ್ಲಿ ಕಂಟ್ರಾಕ್ಟರ್‌ಗಳು ಬಹುಪಾಲು ಮಾಡುವುದೇ ಮುಕ್ಕುಗೆಲಸ (**ರೂಢಿ**). [ಮುಕ್ಕು$_4$ (< ಮುಱಿಕು) + ಕೆಲಸ]

**ಮುಕ್ಕುಚಿಕ್ಕೆ** (ನಾ). ಒಂದು ಬಗೆಯ ಧಾನ್ಯ,– ಕಾಳು (?) : ಬಿತ್ತಿದರೆ ಬಿತ್ತುವದು ಮುಕ್ಕುಚಿಕ್ಕೆಯ ಕಾಳು ಮುತ್ತು ರತ್ನನವ ಬಿತ್ತಿ ಮಾಡದಿರು ಹೊಲ ಹಾಳು (**ಗರ. ೩೦-೨**); ಮುಕ್ಕುಚಿಕ್ಕೆಯ ಕಾಳನ್ನೇನೊ 'ಶ್ರೀ'ಯವರು ಬಿತ್ತಿದ್ದಾರೆ (**ಗೊತ್ತು ಗು. ೦೩೦**). [ ? ]

**ಮುಕ್ಕುಟುಕ** (ನಾ). ಒಂದು ಬಗೆಯ ಪಕ್ಷಿ : ಮುಕ್ಕುಟುಕ ಮರಕುಟುಗ . . . ಪೆಱುವರ್ದವಱಿೊಳೊಪ್ಪುದುದು (**ಸಾಳ್ವಭಾ. ೫-೭೩**). [ ? ]

**ಮುಕ್ಕುಡಿ** (ನಾ). ೧. ತೊಂದರೆ ; ವಿಪತ್ತು : "ಮುಕ್ಕುಡಿಯೆನಲಮಗಡಕೆ ನಾಮಂ" (**ಶಾರಪಿ. ೪**). ೨. ಹಾಳು ; ನಾಶ ; ಧ್ವಂಸ : ಬಿಳ ಪದಾತಿಯ ಮುಕ್ಕುಡಿಯ ಮಾಡಿದನು ರಣಮದದುಬ್ಬಿನಲಿ ರಾಮ (**ತೊರರಾ. ೬-೪೫-೫೭**). [ ? ]

**ಮುಕ್ಕುಡಿತೆ** (ನಾ). ಮೂರು ಬೊಗಸೆ : ಶ್ರೇಯಾಂಸಂ . . . ನವವಿಧಪುಣ್ಯಸಪ್ತಗುಣಯುಕ್ತನಾಗಿ ಇಕ್ಷುರಸಮಂ ಮುಕ್ಕುಡಿತೆಯಂ ಕೊಂಡಕ್ಷಯ ದಾನಮೆಂಬುದುಂ (**ಪುಣ್ಯಾಸ್ರ. ೦೦-೨೦ ಪ**); ಈ ಮಂತ್ರಮನೋಮಂತ್ರಂಬುಜಸಖನುದಯದಲ್ಲಿ ಮುಕ್ಕುಡಿತೆಯುಮಂ ಕೊಂಬುದು ಜಲಮಂ ಮೂಮೆಯುದುಂ ಬಾಜಿ(ಚಿ)ಸೆ ಪರರ ವಿದ್ಯೆಯಂ ಭೇದಿಸುಗುಂ (**ಖವುದ. ೨೪-೦೭**). [<ಮೂಱು + ಕುಡಿತೆ]

**ಮುಕ್ಕುದಿ** (ನಾ). ಮೂರು ಕುದಿ ; ಮೂರು ಸಾರಿ ಕುದಿಯುವಿಕೆ : ಅಳಗಮೋಗಣ್ಣಿಯಂ ಬಿಟ್ಟುವೊಗ್ಗರಿಸಿಯುದ ಮುಕ್ಕುದಿಯ ಬರಿಸಿಕೊಂಡು ಇಳುಹಿ (**ಸೂಪಶಾ. ೩-೩೨**). [< ಮೂರು + ಕುದಿ$_3$]

**ಮುಕ್ಕುಪ್ಪೆ** (ನಾ). ೧. ಮೂರು ಗುಡ್ಡೆ ; ಮೂರುರಾಶಿ,–ಒಟ್ಟಿಲು : ಹ್ರಸ್ವದ್ವಿತ್ವಂಗಳ್ಗೆ–ಮುಕ್ಕುಪ್ಪೆ . . . ಮುಪ್ಪುರಿ, ಮುಮ್ಮಾಱು (**ಶಮದ. ೦೭೮ ಪ್ರಯೋ**); ಮುಕ್ಕೊಡೆ, ಮುಕ್ಕೋಡಿ, ಮುತ್ತಟಿ, ಮುಕ್ಕುಪ್ಪೆ (**ಶಬ್ದಾನು. ೦೦೦ ಪ್ರಯೋ**). ೨. ಜಮೀನಿನ ಉತ್ಪತ್ತಿಯನ್ನು ಮೂರುಭಾಗ ಮಾಡಿ ಒಂದು ಭಾಗವನ್ನು ಜಮೀನುದಾರನೂ ಎರಡುಭಾಗಗಳನ್ನು ರೈತನೂ ತೆಗೆದುಕೊಳ್ಳುವ ಒಂದು ವ್ಯವಸಾಯಕ್ರಮ : ಗಕ್ಕನೆ ಹಮ್ಮು ತಡೆದು ಗರ್ವವ ಮೈಯುಕ್ಕಿದ ಹಾಗಿರಲೇನಹುದು ಮಕ್ಕಲಿಗನ ದೆಸೆಯಿಂ ಕೊಂಡರ್ಥಕೆ ಮುಕ್ಕುಪ್ಪೆಯ ಫಲವೆನಲಹುದು (**ಛಕ್ತಿ. IV, ೦೨-೨೦**); ಮುಕ್ಕುಪ್ಪೆ ಸಾಗುವಳಿ. ಮುಕ್ಕುಪ್ಪೆಪಾಲು (**ಶಬ್ದದ್ರ. ೩೨೭**). [< ಮೂಱು + ಕುಪ್ಪೆ$_1$]

**ಮುಕ್ಕುರಿ** ' ಮುಕ್ಕುಱು$_2$' ನೋ.

**ಮುಕ್ಕುರಿಕ್ಕು$_1$** ' ಮುಕ್ಕುಱಿಕ್ಕು$_1$' ನೋ.

**ಮುಕ್ಕುರಿಕ್ಕು$_2$** ' ಮುಕ್ಕುಱಿಕ್ಕು$_2$' ನೋ.

**ಮುಕ್ಕುರಿಸು** ' ಮುಕ್ಕುಱಿಸು$_1$' ನೋ.

**ಮುಕ್ಕುರು** ' ಮುಕ್ಕುಱು$_1$' ನೋ.

**ಮುಕ್ಕುರುಕು** ' ಮುಕ್ಕುಱಿಕ್ಕು$_1$' ನೋ.

**ಮುಕ್ಕುವೋಗು** (ಕ್ರಿ). ೧. (ಆಯುಧ ಮೊದಲಾದುವು) ಸ್ವಲ್ಪ ಮುರಿದು ಹೋಗು ; ಮುಕ್ಕಾಗು : ಬಾಳಂ ಕಲ್ಲ ಮೇಲೀಡಾಡಿದೊಡದು ಮುಕ್ಕುವೋದುದಂ ಕಂಡು ಕಡುಮುಳಿದು (**ಪಂಪಶಂ. ೭೮-೦೯**); ವಿಶಾಖನಂದಿಯಂ ಕಂಡು ಮುನ್ನಂ ತನ್ನಱಿಯೆ ಮುಱಿದು ಕಿಱುಮುಕ್ಕುವೋದ ಬಾಳನೀಡಾಡಿ (**ವರ್ಧಮಾ. ೨-೩೩ ಪ**); ಪೆಸರಿಂಗೊಯ್ಯನೆ ಮುಕ್ಕುವೋದಡೆ ಬಟಿಕ್ಕಾ ಲಿಂಗಮಂ ಮುಟ್ಟಿ ಪೂಜಿಸಲಾಗ (**ಸಮಶ. ೯-೪**). ೨. ಊನವಾಗು ; ಕುಗ್ಗು ; ನಾಶವಾಗು : ಓರೆವೋಗದ ಚಲಮುಮಂ ಮುಕ್ಕುವೋಗದಳುರ್ಕುಮಂ ನೋಟಕರಬ್ಬಿನಮುಪ್ಪವರಿಂ ಪೊಗೞಿಸುವೆನೆಂದು ತಱಿಸಂದು (**ಶಾಂತಿಪು. ೪-೩೭ ಪ**); ಭಿಕ್ಷಾನ್ನಮನಿಕ್ಕುವಲ್ಲಿ ಸತಿಯಂ ಬೇಡೆಂದು ಕಣ್ಕೆತ್ತುವಂದಿನ ಸೊರ್ಕಕ್ಕಟ ಮುಕ್ಕುವೋಗಿ ಕಡೆಯೊಳ್ ಭೈಕ್ಷಕ್ಕೆಪಕ್ಕಾದಿರೇ (**ಸುಕುಮಾ. ೪-೨೭**). [ಮುಕ್ಕು$_4$ (< ಮುಱಿಕು) + ಪೋಗು$_1$ (<ಪೋ$_1$)]

**ಮುಕ್ಕುಳ್,** ಮುಕ್ಕುಳು (ನಾ): ೧. ಬಾಯಿಯ ಒಳಭಾಗ ಮತ್ತು ಬಾಯಿ ತುಂಬ ತುಂಬಿಕೊಂಡ ನೀರು ಇತ್ಯಾದಿ ದ್ರವಪದಾರ್ಥ : ಜಲಧಿಯೋಳ್ದರ್ಮರ್ದನ ಮುಕ್ಕುಳನುಗುಳುತ್ತಿಳಿಗೆ ವಂದುದೆನಿಸಿ ಖಲೀನಸ್ಖಲನಭವಬಹುಳಲಾಲಾಜಲಮುಗುತಿರೆ ತುರಗರತ್ನ ಮೆಸೆದತ್ತಾಗಳ್ (ಆದಿಪು. ೯೩೯); ತತ್ಸಿಂಧುಬಂಧದ ನೀರೆಲ್ಲಮನೊಂದೆ ಮುಕ್ಕುಳೊಳೆ ತಂದಾ ವಹ್ನಿಯಂ ತೂಳ್ದಿದಂ (ಜಗ. ೧೮-೫); ತೆಱವಿಂ ನೀಳ್ಕೆ ಗವಾಕ್ಷಮಂ ತೆಱೆವ ನೀರಂ ಮುಕ್ಕುಳೊಳ್ ತೀವಿಕೊಂಡೆಱೆವ . . . ಸೆಱಂಗಿಂ ಬೀಸುತಿರ್ಪೋಪರಬ್ಬಿಲಂಪಂಗನೆಯರ್ಗೆ ರಾಗಮನದೇಂ ಮಾಡಿತ್ತೊ ರತ್ಯಂತದೊಳ್ (ವರ್ಧ. ೬-೫೨). ೨. ಬಾಯಲ್ಲಿ ನೀರನ್ನು ತುಂಬಿಕೊಂಡು ಶುಚಿಮಾಡುವಿಕೆ; ಮುಕ್ಕುಳಿಸುವಿಕೆ : ಗಂಡೂಷ : "ಗಂಡೂಷಃ, ಮುಖಪೂರಣಾ..ಈ ೨ ಮುಕ್ಕುಳ್" (ಹಲಾಯು. ೧೩೦-೨೦೦); "ಮುಕ್ಕುಳೆನೆ ಗಂಡೂಷವು" (ಅಭಿಮಂ. ೬೦). ಮುಕ್ಕುಳು : ೧. ತುಳುಕುವೊಡೆಯ್ದೆ ಮೋರ್ಬಡಿತೆಗಂ ತೆಗೆದೀಂಟುವೊಡಾಗದೊಂದು ಮುಕ್ಕುಳಗೆನೆ ಸಾಲ್ವುದಿಲ್ಲ (ಜಗ. ೬-೦೬); ಮೊಗೆಯುಂಪ ಹೊಮ್ಮಿ ಬಂದ ಕಂಪಿಗೆ ಮೂಗೊಡ್ಡಿದ ಗುತ್ತಿಗೆ ಬ್ರಹ್ಮಾನಂದವಾಗಿ ಒಂದು ಮುಕ್ಕುಳು ಅದರಿಂದಲೇ ಕುಡಿವೇ ಬಿಟ್ಟನು (ಮುಳಿಮ. ೫೮೦). ೨. "ಮುಕ್ಕುಳೆನಲು ಗಂಡೂಷದಭಿಧಾನ" (ಶಬ್ದ. ೯೦). ೩. ತುಳುಕಿಸುವಿಕೆ : ಹೊರಹೊಮ್ಮಿಸುವಿಕೆ : ಮೇಲುಸುರ ಬಿಕ್ಕುಳಿನ ಬಿಗುಹಿನ ತಾಳಿಗೆಯ ನೀರುಗಳ ಮುಕ್ಕುಳಿನಾಲಿಗಳ [ಪಾಠಾಂ. ನಿದ್ರ್ಯವದ ನೀರೊಗುವಾಲಿಗಳ] ನರನಾಥ ತೆಗೆದಪ್ಪಿದನು ಫಲುಗುಣನ (ಕುಮಾವ್ಯ. ೧೮-೦).

[ದೇ.॥ ತುಳು. ಮುಕ್ಕುಲಿ, ಮುಕ್ಕುಳ]

**ಮುಕ್ಕುಳಿಸು₁,** ಮುಕ್ಕಳಿಸು (ಕ್ರಿ). ೧. ನೀರು ಮೊದಲಾದ ದ್ರವವನ್ನು ಬಾಯಲ್ಲಿ ತುಂಬಿಕೊಳ್ಳು.— ಇಟ್ಟುಕೊಳ್ಳು: ಮುಕ್ಕುಳಿಸಿದಮರ್ದನುಗುಳ್ವ ಪಳಕ್ಕುಮಿಪಳ್ ವಂಶಮುಖದಿನೆಸೆ ಕಳರುತಿ ಕೈಮುಕ್ಕು ಕಿಪಿವೊಕ್ಕು ಬಗೆಯಂ ಜಕ್ಕುಲಿಸೆ ಲತಾಂಗಿ ವಂಶಮಂ ಬಾಜಿಸಿದಳ್ (ಮಲ್ಲಿಪು. ೧೧-೧೧೧) ; ಎಳಗೆಲರ್ವೊಯ್ಸಿನಿಂದೊಸರ್ವ ಪಣ್ಗಳ ಸದ್ರಸಬಿಂದು ವೃಂದಮಂ ಘಳಿಲನೆ ಪೋಗಿ ಮುಕ್ಕುಳಿಸಿ-ತಂದು . . . ತನ್ನ ಪೆಣ್ಗಳಿಗೆಱೆಯುತ್ತುಮಿರ್ದುದೆನಸುಂ ನಲವಿಂ ಸುರತೋತ್ಸುಕಂ ಶುಕಂ (ಕುಸುಮಾ. ೫-೮೬) ; ಕೇದಗೆದೊಱೆಯ ನಿರ್ಮಳಸಲಿಲಮಂ ಮುಕ್ಕುಳಿಸಿ ಕಣ್ಣಂದಸೊಲವಿಂದ ಬಲುಸರಳುಗಳು ಎಡದ ಕೈಯಲಿ ಬಲದ ಕೈಯಲಿ ಮಾಂಸವಿಹ ಪೇರೆಲೆಯ ಜೊನ್ನೆಯನಾ ಶಿವೈಕ್ಯಂ ಪಿಡಿದು ನಡೆತಂದು (ಬಸವ. ೦೮-೩೦). ೨. ಬಾಯಲ್ಲಿ ನೀರನ್ನು ತುಂಬಿಕೊಂಡು ಗುಳುಗುಳಿಸು: "ಮುಕ್ಕುಳಿಸು-ಗಂಡೂಷೇ" (ಶಬ್ದಾ. ೫) ; ಬಳೆಯಲ್ಕಣ್ಮದುದಿಲ್ಲ ವಿಂಧ್ಯಗಿರಿಯುಂ ತನ್ನಾಜ್ಞೆಯಿಂದೊರ್ಮೆ ಮುಕ್ಕುಳಿಸಲ್ಕಂಬುಧಿ ಸಾಲ್ವುದಿಲ್ಲ (ಶಂಕರಾ. ೯-೨೦); ಕುರುಕುಳಸರೋಘಾಜಹಂಸಂ . . . ಕರಚರಣವದನಪ್ರಕ್ಷಾಳನಂಗೆಯ್ದು ಮುಕ್ಕುಳಿಸಿಯುಗುಳ್ದಾಚಮನಕ್ರಿಯೆಗಳಂ ನಿರ್ವತಿಗಿಸಿ (ಗದಾಯು. ೬-೦೩ ವ); ಮಂತ್ರಿಸಿದ ಸಲಿಲದ ಮುಕ್ಕುಳಿಸಿಯುಗುಳ್ದ ಸಮಸಾಹಸಿ ಕೊಂಡ ವರ ಕರ್ಪೂರದ ವೀಳೆಯವ (ಕುಮಾವ್ಯ. ೧೧-೩೦). ೩. ಪಕ್ಷಿಗಳು ಬಾಯಲ್ಲಿ ತುಂಬಿಕೊಂಡಿರುವುದನ್ನು ಮರಿಗಳಿಗೆ ತಿನ್ನಿಸು.—ಗುಟುಕುಕೊಡು : ದೀಪದ ಚಕೋರಿಗಳಬ್ಬೆಱಂ ಮುಕ್ಕುಳಿಪ ಮುಂಡಾಡುವ ಕರ್ಪೂರಕುವೊದೆವ ಚೆಲ್ಲಕೆಮ್ಮೆಸಾರ್ಚಿಪುದುಂ (ಚಂದ್ರಪ್ರ. ೬-೯೯ ವ); ತನ್ನ ನಚ್ಚಿನ ನಳ್ಳಿಳಂ ಗಱೆಸಿನ್ನೆಯಿಂ ಕೆಲಕ್ಕೆ ಕರೆವಳ್ಳಱೆಂ ಮುಕ್ಕುಳಿಸಿ ಚುಂಬಿಸುಗೂಡಿ ಗಾಡಿಯುಂದೆಱೆದವಳ್ನೋಡಿ (ರಾಜಶೇ. ೨-೫೬ ವ). ೪. ಹೊರಹೊಮ್ಮು ; ಹೂರಸೂಸು : ಸೊಕ್ಕು ಮುಕ್ಕುಳಿಸಿದಂತಿರ್ದಿರವುಂ ಬಟಲ್ದಂತೆ ಜೋಲ್ದಿಂದವಮುಂ ಮುನ್ನಮಭ್ಯಾಸಮಿಲ್ಲದುದರ್ಕೆಂತು ದೊರೆಕೊಳ್ಗುಂ (ಆದಿಪು. ೬೩೯); ಅಕ್ಕುಳಿಸಿವೆ ಪೊಟ್ಟೆ ಕೆಕ್ಕರಿಸಿದ ಕಣ್ಣು ಮುಕ್ಕುಳಿಸಿದ ರಕ್ತ ಪೆಣನು ಸಿಕ್ಕನೆ ಸೀಳುತ ಬೊಬ್ಬಿಡುತಲಿ ಅಡಿಯಿಕ್ಕಿದರಾರು ನೀವೆನುತ (ವನ್ನಿಶಾ. ೬-೩೩); ಸ್ನೇಹಕಾಂತಿ ಮುಕ್ಕುಳಿಸುತ್ತಿದ್ದ ಅವಳ ಮುಖವಲ್ಲಿ ಕಣ್ಣುಗಳು ಪ್ರಮುಖವಾಗಿ ಎದ್ದುಕಾಣುತ್ತಿದ್ದುವು (ಭೂಸರು. ೧೯೨). ೫. ಹೊರಹೊಮ್ಮಿಸು : ಹೊರಕ್ಕೆ ಚಿಮ್ಮಿಸು : ಮುಕ್ಕುಳಿಸಿಯುಗುಟ್ಟ ಮಧುವಿಂ ಮಿಕ್ಕಸೆವಾಮೋದಮಿದಱ ತಣ್ಣಂಪಿನೊಳೊಳ್ ಪೊಕ್ಕುವೆನೆ ಮಧುಪ ಕಂಪಂ ಮುಕ್ಕುಳಿಸಿದ ವಕುಳಪೂರುಮಂ ಸೋಲಿಸದೇ (ಅದಿಪು. ೦೨-೦೨೦): ಶಶಿಕಳೆಯ ಮುಱೆಗಳಂ ಮುಕ್ಕುಳಿಸಿದೆಳಗಾರ ಕಿಱುಮುಗಿಲ ಜವಳಗಳವೆನಿಸಿ ವಿಮಳಶೀತಳಮೃಣಾಳಶಕಳಮಂ ಸೆಱೆಗೆಯ್ದ ಶತಪತ್ರಪತ್ರಪುಟಿಕೆಗಳಂ (ವರ್ಧ. ೫-೬೩ ವ); ಅಗ್ನಿದೇವ. ನಿರ್ಮಲಪ್ರಭೆಯನ್ನು ಮುಕ್ಕುಳಿಸುವ ಸ್ಫಟಿಕದೀಪದಂತೆ ನಗುನಗುತ್ತ ಹೇಳಿದ (ಪಶಂಶಾ. ೪). ೬. ಸುರಿಸು; ಸ್ರವಿಸು : ಮದಮಂ ಮುಕ್ಕುಳಿಸಿರ್ದಿಭಂಗಳನುದಗ್ರಾಶ್ವಂಗಳಂ ತಕ್ಕನಗ್ಗದ ಬಾಡಂಗಳನಾಯ್ದು ಕೊಟ್ಟು ತಣಿದಂ (ಶಂಕರಾ. ೨-೫೩); ಮದಮಂ ಮುಕ್ಕುಳಿಸಿದು ವೆಣ್ಬತ್ತಾನಾಲ್ಕುಲಕ್ಕೆ ಗಜಂಗಳ್ (ಶಾಂತಿಪು. ೧೧-೦೨೬) ; ಪದಿನೆಣ್ಛಾಸಿರ ಲೋಹವಕ್ಕರೆಯ 'ಜಾತ್ಯಶ್ವಂಗಳಿರ್ಛಾಸಿರಂ ಮದಮಂ ಮುಕ್ಕುಳಿಸಿರ್ದ ದಂತಿಘಟೆಗಳ್ (ಕಾವ್ಯಾವ. ೬೬). ೭. ಹೊರದೂಡು : ನಿವಾರಿಸು ; ಬಿಡು ; ಕಳೆ : ನನೆಗಣೆಯಂ ಕೆಲಬಲದ ಪಸಾಯ್ತರ ಮೊಗಮಂ ನೋಡಿ ಮುಳಿಸಂ ಮುಕ್ಕುಳಿಸಿ ನಸುನಗೆವೆರಸು ಇಂತೆಂದಂ (ಕಬ್ಬಿಗಕಾ. ೧೮೮). ೮. ತಿರಸ್ಕರಿಸು; ಹೀಯಾಳಿಸು; ಹೀಗಳೆ: ರಸದಾಡಿಮದ ಬಿತ್ತುಮಂ ಪೊಸಮುತ್ತುಮಂ ಮುಕ್ಕುಳಿಸಿರ್ದತಪ್ಪ ವಿಬುಧವನಜವನಕಳಹಂಸನ ದಂತಪಂಕ್ತಿಗಳಮೃತಕಿರಣನ ಕಾಂತಿಗಳನಿಳಿಸುವಂತಾದುವು (ಶಂಕರಾ. ೨-೩೯ ವ); ಹೊಳೆಹೊಳೆದುದಾಭರಣ ರತ್ನಾವಳಿಯ ರುಚಿ ಮಣಿರುಚಿಗಳನು ಮುಕ್ಕುಳಿಸಿತಂಗಚ್ಛವಿ ತದಂಗಪ್ರಭೆಯನಡೆಹಾಯ್ದು ಥಳಥಳಿಸಿದುದು ವದನ (ಶಂಭಶ. ೨೯-೨೪); ಹೊಳೆವ ಮಣಿದೀಪಾಂಶುಗಳ ಮುಕ್ಕುಳಿಸಿದವು ಕಡೆಗಂಗಳಿಂದೊಪಳದ ಭಿತ್ತಿಯ ಬೆಳಗನಣಕದುದು ಬಹಳ ತನುಕಾಂತಿ (ಕುಮಾವ್ಯ. ೬-೦೫). ೯. (ಕಣ್ಣೊಳಗೆ) ಒಳಗೊಳ್ಳು ; ತುಂಬಿಕೊಳ್ಳು : ಲಲಿತಮಧುರಾಪಾಂಗದಲಿ ಮುಕ್ಕುಳಿಸಿ ತಣಿಯವು ಕಂಗಳು (ಕುಮಾವ್ಯ. ೦೫-೩೪); ಉಕ್ಕಿದುದು ಮನವಱೆದು ಕಂಗಳು ಮುಕ್ಕುಳಿಸಿದುವು ಮೂರ್ತಿಯನು (ಕೃಷ್ಣರಾ. ೨೨-೪೦). ೧೦. ತುಂಬು; ಆವರಿಸು ; ವ್ಯಾಪಿಸು : ಹೊಕ್ಕವಾನೆಗಳೆರಡುಸೇನೆಯೊಳೊಕ್ಕಲಿಕ್ಕಿದ ವೆಸುವ ಜೋದರ ತೆಕ್ಕೆಗೋಲಿನ ಮಾಲೆ ಮುಕ್ಕುಳಿಸಿದವು ದಿಗುತಟವ (ಕುಮಾವ್ಯ. ೪-೬೫). ೧೧. ಹಿರಿದಾಗು ; ಅತಿಶಯವಾಗು : ಸಲುಗೆ ಮುಕ್ಕುಳಿಸೆ ಮುಚ್ಚಿದ ಮುನಿಸುವೆರಸು ಕದಡಿದ ಗಂಗೆಯಂತೆ ಬಂಡುಗಪಾದಪತಿಯ ಸಭೆಯಂ ಹೊಕ್ಕನು (ಸಿದ್ಧರಾ. ೬-೪೬). ೧೨. (ಅಲಂ) ಊದಿಕೊಂಡಿರು : ಅಕ್ಕಜದ ರುಜೆಯೇನು ಮೊಸಸವೋ ಶರೀರಜವೋ ಮುಕ್ಕುಳಿಸಿಕೊಂಡಿರದಿರು (ಕುಮಾವ್ಯ. ೦೨-೧೧). ಮುಕ್ಕಳಿಸು : ೨. ಲಿಂಗಾಗ್ರದೊಳ್ಸಿಂದು ಕಾಲ್ತೊಳೆದು ಮುಕ್ಕಳಿಸುವರೆ ಮೂಢರೆರೆಯನೆ ಎನುತ್ತಂ ಬೈದು (ಮಹಾಪ್ರಭು. ೦೪-೦೮); ಉಪ್ಪಿನ ನೀರಿನಿಂದ ಬಾಯಿಯನ್ನು ಚೆನ್ನಾಗಿ ಮುಕ್ಕಳಿಸಬೇಕು (ಆರೋಗ್ಯ. ೨೫); ಉಣ್ಣೋದು ಗಂಜಿ. ಮುಕ್ಕಳಿಸೋದು ಪನ್ನೀರು (ಗಾದೆ). ೪. ಎಳೆದೇರ ಗಾರೀಶ ಸಿನ್ನೊಳಿಸೆವ ದಯೆಯ ಸೆರೆ ಮುಕ್ಕಳಿಪ ನೋಟವನ್ನ ಸುತ್ತು ಕಟ್ಟಿಕಾಯಲಿ (ಅಶ್ವಸ. II. ೪೪-೫). ೧೦. ವಿಶ್ವ ಜಗತ್ಪ್ರದೇಶಮಂ ಮುಕ್ಕಳಿಸಿತ್ತು ಮತ್ತೆ ಜಯಭೇರಿಯ ಘೂರಿಗಭೀರನಿಸ್ವನಂ (ಚಂದ್ರಪ್ರ. ೧೧-೨). [ಮುಕ್ಕುಳ್ + .... ಇಸು₃]

**ಮುಕ್ಕುಳಿಸು₂** (ಕ್ರಿ). ೧. ಗಪಗಪನೆ ತಿನ್ನು ; ಮುಕ್ಕು : ಒರ್ವಳು ಕೈವೆರಲ್ಗಳಿಂದಲ್ಲೆಯಂ ಜಕ್ಕುಲಿಸಿ ಬಗೆಬಗೆಯಲ್ಲಿ ನಗುವಿ ಪ್ರಸಾದಮಂ

ಮುಕ್ಕುಳಿಸಿ ಕುಕ್ಷಿಯುಂ ಅಕ್ಕುಳಿಸಿ ಕಣ್ಣೀರಾದುದೆಂದು ಮೋಹರಿದು . . . ಮಮತೆಯಿಂ ಮನಮುಟ್ಟಿ (ಶ್ರೀಶೋಭಾ. ೬-೨). ೨. (ಆಲಂ) ನುಂಗಿ ನೊಣೆ; ನಾಶಮಾಡು : ಕಣೆಕಣೆಯು ಹಳಚಿದವು ಮಾರ್ಗಣೆ ಕಣೆಯ ಕಡಿದವು ಕವಿವ ಕಣೆ ಕಿಱುಗಣೆಯ ಮುಕ್ಕುಳಿಸಿದವು ಪೆಕ್ಕಳಿಸಿದವು ಹರದೆಗರ (ಕುಮಾರ. ೪-೦೪). [< ಮುಕ್ಕು₁ + – ಇಸು₃]

**ಮುಕ್ಕುಳು** 'ಮುಕ್ಕುಳ್' ನೋ.

**ಮುಕ್ಕುಱಿಕು** 'ಮುಕ್ಕುಱಿಕ್ಕು₁' ನೋ.

**ಮುಕ್ಕುಱಿಕ್ಕು₁**, ಮುಕುರಿಕ್ಕು, ಮುಕ್ಕುರಿಕ್ಕು₁, ಮುಕ್ಕುರುಕು, ಮುಕ್ಕುಱಿಕು (ಕ್ರಿ). ಕವಿ; ಮುಸುಕು; ಆವರಿಸು ; ಮುತ್ತು : ಕಡುಮುಳಿದ ಪರಸಮಯಿಗಳ್ ಘುಡುಘುಡಿಸಿ ಬಂದು ಮುಕ್ಕುಱಿಕ್ಕೆ ತಕ್ಕುಗೆಡಿಸಿ ಘೋಂಕನೆ ಕೆಡಹಿ .., ಅಭಿಮಾನಂಗೆಡಿಸಿ ಬಿಡಲೊಡಂ(ನಾಶರ. ೦೬೮-೭೪); ನಾಯ್ಗಳು ವೆರಸಿ ಮುಕ್ಕುಱಿಕ್ಕಲು . . . ಎಲ್ಲರೊಡಲ ಕೆಳವಳಿಗೆಯುದ್ದ ಬೀದಿವರಿದೊಕ್ಕಲಿಕ್ಕಿತ್ತು ರಕ್ಕಸವಿಂಗಂ ಕಾಡೊಡಜಿಲು (ಹತಕಾ. ೬-೭). **ಮುಕುರಿಕ್ಕು:** ತುಡಿಕ್ಕಿ ತಳದೊಕ್ಕಲಿಕ್ಕಿಯೆ ಯೆಡಬಲದಲ್ಲಿ ಮುಱುರಿಕ್ಕಿ ಮಾಱಾಂತವರ × × × ತೊಲುವ ತೆಱದಿಂದಿಡವಳಿಯದೆ ತಿವಿದು ಕೊಂದನು ಸಮರಾಂಗಣದೊಳ್ (ಎಕ. VIII. ಸಾಗರ. ೦೦೨-೦೬ : 1203). **ಮುಕ್ಕುರಿಕ್ಕು₁** : ನನ್ನಿದಿರು ನೋಡಿದಲ್ಲೆಲ್ಲ ಪೂಜ್ಯಪೂರ್ವಜರಾದ ನಮ್ಮ ಎರೆಯಂಗ, ಬಿಟ್ಟಿದೇವ, ವೀರ ಬಲ್ಲಾಳರ ಕ್ರುದ್ಧಪ್ರತಿಮೆಗಳು ಮುಕ್ಕುರಿಕ್ಕಿ, 'ಹೊಯ್ ಸಳ ! ಮತ್ತೆ ಹೊಯ್ ! ಹೊಡೆ! ' ಎಂದು ತಿವಿತಿವಿದು ಆಡುತ್ತಿವೆ (ಶಾಂತಲಾ. ೪). **ಮುಕ್ಕುರುಕು** : ಸರಳೊಂದರಲಿ ಮುಕ್ಕುರುಕಿ ಬಿಡಲು ಶತಸಾವಿರ ಲಕ್ಷಶತಕೋಟಿಯರ್ಬುದವಾಗಲು (ತುರಂಗ. ೦೩-೨೦); ಗೋಡೆಗಳ ಬಿರುಕು, ಮನೆಗಳ ಹರುಕು, ಚರಂಡಿಯ ಕೊಳಕು ಇವೆಲ್ಲಾ ಮುಕ್ಕುರುಕಿ ನನ್ನ ದುಃಖವನ್ನು ಉಕ್ಕಿಸಿದುವು (ಚಿಸರು. ೦೩). **ಮುಕ್ಕುಱಿಕು** : "ಮುಕ್ಕುಱಿಕಿದುದೆನೆ ಮುತ್ತಿದುದು" (ಶಬ್ದ. ೮೪); ಮುಱಿಯೆಸುತ ಗಂಧರ್ವಬಲ ಮುಕ್ಕುಱಿಕಿ ಕೌರವಬಲವ ತತ್ತಱದಱದು ತರಹರವಿಲ್ಲೆನಿಸಿ ಹೊಗಿಸಿದರು ಪಾಳಯವ (ಕುಮಾರ. ೦೮-೩೪) ; ಘಡ ನೂಕುನೂಕೆನುತೆಱ ರಥಗಳನು ಮುಕ್ಕುಱಿಕಿ ಕವಿತರಲು (ಜೈಭಾಗ. ೦೦-೭೪-೪೯); ಸಿಡಿದ ಜಲಕಣಾವಳಿ ಯುವರ ಮುಖಪಂಕಜಂಗಳೊಳಗೆ ಮುಕ್ಕುಱಿಕಿ (ಕೆಲಕ್ರೀ. ೩೭-೭೭).

[ಮುಕ್ಕುಱು₁ + ಇಕ್ಕು]

**ಮುಕ್ಕುಱಿಕ್ಕು₂**, ಮುಕ್ಕುರಿಕ್ಕು₂ (ಕ್ರಿ). ೧. (ಭಾರವನ್ನು ಹೊರುವುದರಿಂದ ಅಥವಾ ನೋವು, ಹೆದರಿಕೆ ಇತ್ಯಾದಿಗಳಿಂದ) ತಿಣುಕು : ಮುಕ್ಕು : ರಕ್ಕಸರು ತಾವೆಲ್ಲ ಭಯದಲಿ ಮುಕ್ಕುಱಿಕ್ಕಿ ನರಾದಿವರಹನಡೆಕ್ಕಲಸು ತಾ ಬಂದನಲ್ಲಿಗೆ (ಸಂಶಪ. ೭-೩೭) ; ದಿಗ್ಗಜಂಗಳ್ ಮುಕ್ಕುಱಿಕ್ಕಿದುವು ಪೊಱೆಯ ಬಲ್ಲುಗ್ಗಿಸಿಂ ಕುಸಿದ ತಲೆಗಳನೆತ್ತಿ ಕಚ್ಛಪಂ ಪಿಗ್ಗಿ ಕಾಲಾಡಿದಂ (ಶ್ರೀರಾಮ. ೩-೩೩). ೨. (ಹಸು, ಎತ್ತು ಮೊದಲಾದುವು) ಅರಚು : ಪೆರ್ಚಿದೊಂದು ಸಂತಸದಿಂ ಬೈಗಿನೊಳ್ ಕೆಲೆದುಂ ಮುಕ್ಕುಱಿಕ್ಕಿಯುಂ ನೆಗೆದಾಡಿಯುಂ ಚಿದಱ ಪೋಪಾಕಳ ಮುಂದೆಯು ಮಾಟ್ಕಿಯಿಂ ನೆರೆದು ಬಂದ ಚಾತ್ರಿಯ ಪಯಣಿಗರ್ (ರಾಮಾಶ್ವ. ೮೨-೦೪); ಕಣ್ಗೊಳಿಸಿನ ಕರಡಿಯು ಮುಕ್ಕುಱಿಕ್ಕುವ ಕಾಟ್ಕೋಣನ . . . ಗಜಬಜದ ಸಂಚಾರಂ ಬಲ್ಪಿರಿದಾಯ್ತು (ರಾಮಾಶ್ವ. ೮೪-೯). **ಮುಕ್ಕುರಿಕ್ಕು₂**: ೩. ಗೂಳಿಗಳು ಕಾಲು ಕೆರೆದು ಕದನಕ್ಕೆಂದು ಆರ್ಭಟಿಸು : ಹುಲಿಯ ಹೆದರಿಕೆಯಿಂದ . . . ಬೀಜದ ಹೋರಿಯು ಕಟ್ಟಿಹಾಕಿದುದರಿಂದ ಸರಿಯಾಗಿ ಹೊಟ್ಟೆಗಿಲ್ಲದ ದೆಸೆಯಿಂದ ಮುಕ್ಕುರಿಕ್ಕುವುದನ್ನೂ ಮರೆತು ಮೇಲೆ ನೋಡುತ್ತಿದೆ (ಈಹುಲಿ. ೯೯).

[ಮುಕ್ಕುಱು₂ + ಇಕ್ಕು./ತುಳು. ಮುಕ್ಕುರುಪಕ್ಕು]

**ಮುಕ್ಕುಱಿಸು₁**, ಮುಕುರಿಸು, ಮುಕ್ಕುಱಿಸು, ಮುಕ್ಕುರಿಸು (ಕ್ರಿ). ೧. ಕವಿ; ಆವರಿಸು ; ಮುತ್ತು : ನಾಡೆಯುಂ ಬೇರ್ಗೆಡದೆತ್ತಂ ಪೆಟ್ಟುಗಳ್ ಮುಕ್ಕುಱಿಸೆ (ಶಾಂತೀಶ್ವ. ೦೨-೩೭); ಉಱುಗಲಿಳೆ ದಳಮುಕುರಿಸಿ ಮುಕ್ಕುಱಿಸಿ [ ಶಾಶಾಂ. ಱುಕಿ]ತಂಕಕೆ ಗಗನತಳ ಬಿಡದೊಱಲಿತಿವರವರದ್ರಿಗಳ ಕೈದುಗಳ ಕವನದಲಿ (ತೊರಗಾ. ೬-೦೩-೪೪). **ಮುಕುರಿಸು** : ೨. ಮುತ್ತುವಂತೆ ಮಾಡು ; ಆವರಿಸುವಂತೆ ಮಾಡು ; ಆಕ್ರಮಿಸುವಂತೆ ಮಾಡು: ಬಭ್ರುವಾಹನ ಮಧುಬಾಣವನ್ನೆಚ್ಚು ಅವುಗಳ ಮೇಲೆ ಜೇನ್ನೊಳಗರೆದ ; ಮೇಲೆ ಪಿಪೀಲಿಕಾಸ್ತ್ರವನ್ನು ಬಿಟ್ಟು ಕಟ್ಟಿರುವೆಗಳನ್ನು ಅವುಗಳಿಗೆ ಮುಕುರಿಸಿದ (ಬದುಕಿ. ೦೦೭). **ಮುಕ್ಕುಱಿಸು:** ೧. ಭಂಗು ಮುಕ್ಕುಱಿಸಿರ್ಪ ಮುತ್ತಳನದೊರ್ವಂ ಕುಡುತ ತಾಯ್ನನ್ನಯಾ ಭಂಗಂ ಪೋಪುದು . . . ಎನುತ್ತ ಸಲೆ ಸಬ್ಬಂಗೆಯ್ವನಾ ತಾಣದೊಳ್ (ಪೀರಪಿ. ೬-೦೩೩). **ಮುಕ್ಕುರಿಸು** : ೧. ಸೊಕ್ಕಿದೆಕ್ಕಲನೊಂದು . . . ಮುಕ್ಕುರಿಪ ನಾಯ್ಗಳಂ ಕೆಕ್ಕರಿಸಿ ಡುರು ಗುಟ್ಟಿ ಸಿಕ್ಕದೋಡಿತು ಕಾಡ ಕೆಳದೋಡಿದಂತೆ (ಶಾಂತಿರ. ೯೩-೦೮೩).

[ಮುಕ್ಕುಱು₁ + – ಇಸು₃]

**ಮುಕ್ಕುಱಿಸು₂** (ಕ್ರಿ). ಕಷ್ಟಪಡು ; ಒದ್ದಾಡು ; ಬಳಲು ; ಆಯಾಸ ಹೊಂದು : ಆ ವಸುದೇವ ಮನೆಯನು ಹೊಱವಡುತ ಬರೆ ಮುಂದೆ ಮಾರ್ಗಮಹಾಂಧಕಾರದಲಿ ಕಱಿವ ಮಳೆಯಲಿ ಕೆಸಱಿನಲಿ ಮುಕ್ಕುಱಿಸಿ ಮುಂಗುಡಿ ನೂಕದಿರಲದನಱಿದನಂತನು ಬಂದನಾಕ್ಷಣವಾಳ್ದನಿದ್ದೆಡೆಗೆ (ಜೈಭಾಗ. ೦೦-೪-೦೨). [ಮುಕ್ಕುಱು₂ + – ಇಸು₃]

**ಮುಕ್ಕುಱು₁**, ಮುಕರು, ಮುಕುರು, ಮುಕುಱು, ಮುಕ್ಕಿಱು, ಮುಕ್ಕುರು (ಕ್ರಿ). ೧. ಕವಿ; ಮುತ್ತು ; ಆವರಿಸು: "ಮುಕ್ಕುಱು=ಮುಸುಱುಹಂ" (ಶಮದ. ಕಂ. ೨); "ಮುಕ್ಕುಱು ಮುಸುಱುಹನೊಳ್" (ಶಶಾಸ. ೪೦). **ಮುಕರು** : ೧. ಜೇನ ನೊಣಗಳು ಅಲ್ಲಲ್ಲಿಗೆ ಮುಕರಿಕೊಂಡು ಕೂತಿದ್ದವು (ಮುಂಬಯಿ. ೯. ೪-೦೭೦); ಮನೆಯೆದುರು ಜನಜಂಗುಳಿ ಮುಕರಿತ್ತು (ಕವಸಿ. ೦೦೦); ಒಬ್ಬನು ಪತ್ರಿಕೆ ಕೊಂಡರೆ ಸಾಕು; ಹತ್ತುಜನ ಅವನ ಸುತ್ತಲೂ ಮುಕರಿರುತ್ತಾರೆ (ಶತ್ರಿಕಾ. ೪). **ಮುಕುರು** : ೧. ಗಾಳಿ ಬೆಳಕುಗಳು, ಸಂದುಗೊಂದುಗಳಲ್ಲಿ ಕೂಡ ನುಸುಳಿ ಅವರ ದೇಹವನ್ನು ತಟ್ಟಿದಂತೆ ಜನ ಮುಕುರಿತು (ಕಾಗಿಳ. ೦೭); ನರಹರಿಯು ಬಂದೊಡನೆ ಅವನನ್ನು ನೋಡಲು ನೂರಾರು ಜನ ಮುಕುರಿದ್ದರು (ಸಮುತೀ. ೦೨೩೦). **ಮುಕುಱು** : ೧. ಅಕಳಂಕಮುನಿಯೊತ್ತಿನೊಳಿರ್ಪ ಕುದುರೆಯಂ ಕಾಣುತಿವ ಕಳ್ಳನೆಂದು ಮುಕುಱಿಕೊಳುತ್ತಾತನಂ ಬಳಸಲ್(ಶಕುಪು. ೪-೦೦-೭೭). **ಮುಕ್ಕಿಱು** : ೧. ಲೆಕ್ಕವಿಲ್ಲದ ರಾಜಕಾರ್ಯ ನಿನಗೆ ಬಂದು ಮುಕ್ಕಿಱಿದಿದೆ ಮುಂದೆ ರಾವು (ಕುಂಡಸಾಂ. ೩೦-೩೭). ೨. ಎದುರುಬೀಳು; ವಿರೋಧಿಸು; ಪ್ರತಿಭಟಿಸು: ಇನಿಯನ ಸುದ್ದಿಗೇಳ್ವೆಡೆಗೆ ತಾನೆಯ್ತಂದು ಮನೆವಾಳ್ತಿ ಪೇಟ್ವ ಮಾತೆಯೊಳು ಮೊನೆದೋಱಿ ಮುನಿದು ಮುಕ್ಕಿಱಿದು ಕಳುಪಿ ಮುನ್ನಿನಸುವಾತುಗಳ ನಾಲಿಪುದು(ಶಕಪಿ. ೬-೦೩೭, ಶಾಂಗತ್ಯ ೯). **ಮುಕ್ಕುರು:** ೧. ಸಮಸ್ತ ಉತ್ಪಾತಗಳು ತನ್ನ ತಲೆಯ ಮೇಲೆ ಮುಕ್ಕುರಿದರೂ ತಾಳ್ಮೆಯಿಂದ ಅವುಗಳನ್ನೆಲ್ಲ ಹೇಗೋ ಹೊತ್ತುಕೊಂಡು ನಡೆಯುತ್ತಿದ್ದನು (ಜಯಂತ. ೦೨೭); ಬದುಕಿಗಾಗಿ ಜನ ಯಾವುದೊಂದು ಪಾತಕಕ್ಕೂ ಮುಕ್ಕುರುವರು (ಹುತ್ತಶ್ರ. ೦೭೭).

[< ಮುಸುಱು₁]

**ಮುಕ್ಕುಱು₂**, ಮುಕ್ಕರಿ, ಮುಕ್ಕರೆ, ಮುಕ್ಕುರಿ (ಕ್ರಿ). (ಭಾರವನ್ನು ಹೊರಲಾರದೆ ಅಥವಾ ನೋವು ತಡೆಯಲಾರದೆ) ಕಷ್ಟಪಡು : ಒದ್ದಾಡು; ಮೇಲುಬ್ಬಸ ಪಡು : 'ಮುಕ್ಕುಱಿಸು₂' ಪರ್ಯಾ. **ಮುಕ್ಕರಿ:** ರಾಮಯ್ಯಂಗಾರಿ . . . ತನ್ನ ಚೀಲವನ್ನು ಮುಕ್ಕರಿದು ತಲೆಯ ಮೇಲೆ ಹೊತ್ತುಕೊಂಡು ಊರ ಕಡೆ ಹೊರಟನು (ಹೇಮಾಶಿ. ೩); ತಂಗಾಳಿಯು ಅದನ್ನೆಲ್ಲ ಹೊತ್ತು ತರಲಾರದೆ ಮುಕ್ಕರಿಯುವಂತೆ ಉಸ್ ಎಂದುಕೊಂಡು ನಿಧಾನವಾಗಿ ಬೀಸುತ್ತಿದೆ (ನಡೆದಾ. II. ೦೪೭೪). **ಮುಕ್ಕರೆ** : ಹಾಗು ಶೀತ.

ನೆಗಡಿಯಿಂದ ಮುಕ್ಕರಿಯುತ್ತಿವೆ (ಕಜಿ). **ಮುಕ್ಕುರಿ :** ತಳ್ಳಿ ಕತ್ತಲೆಯಾದ ಮೇಲೆ ಮುಕ್ಕುರಿಯುತ್ತ ಚೀಲವನ್ನು ಸುಂದರಿಯು ಬಜಾರಕ್ಕೆ ಸಾಗಿಸಿದ (ನವೋರು. ೨೯೦). [< ಮುಲುಕು₁]

**ಮುಕ್ಕುಳುವಲ್** (ನಾ). ಒಂದರ ಮೇಲೊಂದು ಬೆಳೆದಿರುವ ಹಲ್ಲು : ಕೆಕ್ಕಳಗಣ್ ಕೆದಱಿದ ಕೆಂಗೂದಲ್ ಮೊಕ್ಕನೊಸಲ್ . . . ಮುಕ್ಕುಳುವಲ್ ಮುಂದಮೊಗ ನೀಡುಂದೋಳೆಕ್ಕಲವಂ ಪೊದಮೆಯ್ಯೊಳೆಸೆವ ಪಲರಕ್ಕಸಿಯರ ತಂಡಂ ನಡೆತಂದುದು ತದ್ದ್ರಧರಣಿಯೊಳು (ಜಯಕಾ. ೭-೨೭).

[ಮುಕ್ಕುಳು₁ + ಪಲ್]

**ಮುಕ್ಕೂಟ** (ನಾ). ೧. ಮೂರರ ಕೂಟ,— ಮೇಳ : "ಮೂರರ ತಂಡ, ಮುಕ್ಕೂಟ, ತ್ರಿತಯ" (Tern. ೬೦೪೫). ೨. (ಪರಸ್ಪರ ಸಂಬಂಧವಿರುವ ಅಥವಾ ಪರಸ್ಪರ ಪೂರಕಗಳಾದ) ಮೂರು ನಾಟಕಗಳ ಗುಂಪು: ಒರೆಸ್ಟಿಯಾ ಎಂದು ಪ್ರಖ್ಯಾತವಾಗಿರುವ ಮುಕ್ಕೂಟದ . . . ಮೂರು ರುದ್ರನಾಟಕಗಳು (ಅಂಕಾ. ೨೧೨); ಮುಕ್ಕೂಟವು ಇವನಿಗೆ ಅಷ್ಟಾಗಿ ಹಿತವಾಗಲಿಲ್ಲವೆಂದು ಕಾಣುತ್ತದೆ (ಅಂಕಾ. ೨೦೩) : ಈ ಮುಕ್ಕೂಟದಲ್ಲಿ ಮೊದಲನೆಯ ಭಾಗ ಇನ್ನೂ ಆಗ ತಾನೆ ನಾಟಕಕಲೆಯ ಅಭ್ಯಾಸಕ್ಕೆ ತೊಡಗಿರುವವನ ಕೆಲಸ (ಷೇಕ್ಸ್‌ಪಿ. ೯೦).

[< ಮೂಱು + ಕೂಟ₁]

**ಮುಕ್ಕೂಡಲ್.** ಮುಕೂಡಲ್, ಮುಕ್ಕೂಡಲು (ನಾ). ಮೂರು ಪ್ರದೇಶಗಳು ಕೂಡಿರುವ ಸ್ಥಳ.— ಜಾಗ : ಅನ್ತೆ ಬನ್ದು ನೈರಿತ್ಯನಾ ದೆಸೆಗೆ ಸೀಮೆ ಮೂಱು ಮೂರ ಪೊಲದ ಮುಕ್ಕೂಡಲೆ ವರುಣನಾ ದೆಸೆಗೆ ಸೀಮೆ (ಎಕ. IX (8), ಬೆಂಗಳೂ. ೦೩೦-೩೯; 828) ; ಕಡೆಕೊಳಂ ಪಾರವುರಂ ಪಯ್ದುಗೆಯ ಮುಕ್ಕೂಡಲ್ಲೆತ್ತಮೊಗದೆ ಪೋಗಿ (ಪ್ರಆಂ. ೦೯೩೪, ೩೮-೭; 11ನೆಯ ಶತ) . **ಮುಕೂಡಲ್ :** ಈಶಾನತಃ ಮುಕೂಡಲ್ . . . ಬಿದಿರೂರ್ಗ್ಗೆ ಜಿ ಮುಕೂಡಲ್ (ಎಕ. XII, ಗುಬ್ಬಿ. ೩೦-೮೮; 812). **ಮುಕ್ಕೂಡಲು :** ಅಸಗಪೊಟಿಯ ಕಿಱುಬೇಡಿಂ ಬಟಿಯ ಪುಣುಸೆ ಕಡೆಕೊಳಂ ಪಯ್ದುಗೆ ಪಾರವುರಂ ಮೂಱೂರ ಮುಕ್ಕೂಡಲ್ಲಿ ಪೊಲ ಸೀಮೆ ಕೂಡಿತ್ತು (ಪ್ರಆಂ. ೦೯೩೪, ೩೮-೨೦; 11ನೆಯ ಶತ).

[< ಮೂಱು + ಕೂಡಲ್]

**ಮುಕ್ಕೂಡಲು** ' ಮುಕ್ಕೂಡಲ್ ' ನೋ.

**ಮುಕ್ಕೂಡಿಸು** (ಕ್ರಿ). ಮೂರುಪಟ್ಟು ಮಾಡು : ಕೊಪ್ಪದಲ್ಲಿ ಅಂಣ ಉಪಾಧ್ಯಗೆ ಅಗ್ನೆಯ ಮಾಡಿ ಹೊರಡಿಸಿದ ಸಂಮಂಧ ಆತನ ಸ್ವಾಸ್ತಿ ಅಡಕೇ ಮರ ಸಾ ೧೦೦೦ಕಂ ಕೊಟ್ಟ ರೊಕ್ಕ ಗ ೩೦ ವರಹಗೆ ಬಡ್ಡಿ ಗ ೬ ವರಹಂನೂ ಮುಕ್ಕೂಡಿಸುತ ದೀವಿಗೆ ಸಹ ಬಿಟ್ಟುದು (ಎಕ. VI, ಕೊಪ್ಪ. ೩೦-೨೮; 1598). [< ಮೂಱು + ಕೂಡಿಸು]

**ಮುಕ್ಕೂಡು** (ನಾ). = ಮುಕ್ಕೂಡಲ್ : ಕಡೆಕೊಳಂ ಪಾರವುರಂ ತಣ್ಣೆಯುದ ಮುಕ್ಕೂಡು ಮೂಡ ಮೊಗದೆ ಪೋಗಿ ಬೆಳ್ಮೊಱಡಿ ಕಡೆಕೊಳಂ ಪೆರ್ವ್ವೆಡು ತಣ್ಣೆಯುದ ಮುಕ್ಕೂಡು ಬಡಗ ಮೊಗದೆ ಪೋಗಿ (ಪ್ರಆಂ. ೦೯೩೪, ೩೮-೭; 11ನೆಯ ಶತ); ಮುಕ್ಕೂಡು ದಾರಿಯಲಿ ಕೊಲೆಗೊಂಡನವನೆಂದು (ಮೂರುನಾ. ೦೨೨). 'ಮುಕ್ಕೂಡಲ್' ಪರಾ. [< ಮೂಱು + ಕೂಡು₃]

**ಮುಕ್ಕೆ** (ನಾ). ಮೂರ್ಖಳಾದ ಹೆಣ್ಣು ; ತಿಳಿಗೇಡಿಹೆಣ್ಣು : ಮುಡುಹಿನ ಮುಕ್ಕೆ [ಟಾಕಾ. ಕ್ಕಿ. ಕೈ] ಸೊಕ್ಕಿದಿರದೇನಭಿಮಾನದ ಜೋಡೆ ಬಾಲವುಂ ಬಡಿದಪೆ (ಅಪಂಪು. ೯-೩೦; ಸೂಕ್ತಿಸು. ೯-೪೨೪ ನೋ); ಮನಮಂ ನೋಯಲಾಡಿದೆನ್ ; ಮನ್ನಿಸೀ ಮುಕ್ಕೆಯನ್, ತಾಯಿ (ಶ್ರೀರಾಮಾ. ೭೦೨-೯೦).

[ಮುಕ್ಕ₃ + — ಎ₂]

**ಮುಕ್ಕೇಡು** (ನಾ). ಮೂರು ಬಗೆಯ ಕೇಡು,— ಹಾನಿ ; ತ್ರಿದೋಷ : 'ಬರೆಹಕಾರರ ಕೈಗಳ ಕೇಡು —ಸುಣ್ಣಸಪ್ಪಳಕದ ಕೇಡು—ಹೇಟಿಸಿದೊಡಘಟಿಪ ಕೇಡು ' ಎಂಬ 'ಬೆಳ್ಗ'ಳ ಕೃತಿಬಂಧ'ದ ಈ ಮುಕ್ಕೇಡುಗಳನ್ನು ಬತ್ತಟ್ಟಿಗಿರಿಸಿಕೊಳ್ಳಿರಿ (ನಾತೂಜ. ೦೪೩). [< ಮೂಱು + ಕೇಡು]

**ಮುಕ್ಕೊಂಗು** ' ಮೂಗೊಂಕು ' ನೋ.

**ಮುಕ್ಕೊಡೆ** ' ಮೂಗೊಡೆ ' ನೋ.

**ಮುಕ್ಕೊಡೆಯ** (ನಾ). [ಜೈನ] ಚರ್ಕವರ್ತಿಲಾಂಛನವಾದ ಮೂರು ಕೊಡೆಗಳನ್ನು ಉಳ್ಳವನು ; ಜಿನ ; ಅರ್ಹಂತ : ಮುಕ್ಕೊಡೆಯನ ದಿವ್ಯಮಂತ್ರಮೋಂ ಕೇವಳಮೋ (ಜಸಂಪ. ೦೦-೮).

[ಮುಕ್ಕೊಡೆ (< ಮೂಗೊಡೆ) + — ಅ₇]

**ಮುಕ್ಕೋಟಿ** (ನಾ). ಒಂದು ಸಂಖ್ಯೆ ; ಮೂರುಕೋಟಿ : ಭೀಷಣಂ ಮುಳಿದೆದ್ದು ನಡೆಯುತಿರಲು ಮುಕ್ಕೋಟಿರಕ್ಕಸರ್ಪೊಱಮಟ್ಟರವನ ಕೂಡೆ (ಕೃಪಂಕಾ. ೧೭-೩೦) : ವಾರುಣಾಸುರನೆನಿಪ ದೈತ್ಯನ ಮೈರುಚಿಯನನುಕರಿಸಿ ತೋರುವ ಘೋರಭೀಕರರಕ್ಕಸರು ಮುಕ್ಕೋಟಿ ಕಾಣಿಸಿತು (ಕೋಗದು. ೨೩-೪೨). [< ಮೂಱು + ಕೋಟಿ₁]

**ಮುಕ್ಕೋಣ** (ನಾ). ೧. ಮೂರುಮೂಲೆ. ೨. ಮೂರುತುದಿಗಳಿಂದ ಕೂಡಿದ ಒಂದು ಬಗೆಯ ಆಯುಧ : ಈ ಸುಸ್ಮೃತಿಯ ಆಯುಧಗಳಲ್ಲಿ ಹರೆಯುವ ಆಯುಧಗಳು, ಮೊನಚಾದ ಆಯುಧಗಳು, ಮುಕ್ಕೋಣಗಳು, ಸುಧಾರಿತವಿಧಾನಗಳಿಂದ ಮಾಡಲ್ಪಡುತ್ತಿದ್ದವು (ಕವಿಕೂ. I, ೬೦೩). ೩. [ರೇಖಾಗ] ಮೂರುಕೋನಗಳಿಂದ ಕೂಡಿದುದು ; ತ್ರಿಭುಜ : ತ್ರಿಕೋನ: ಮೂರು ಸರಳರೇಖೆಗಳಿಂದ ಕೂಡಿದ ಕ್ಷೇತ್ರಕ್ಕೆ ತ್ರಿಭುಜವೆಂದೂ ಮುಕ್ಕೋಣವೆಂದೂ ಹೆಸರು (ಕೂಬಂಅ. ೯). [< ಮೂಱು + ಕೋಣ₂]

**ಮುಕ್ಕೋಲ್** (ನಾ). ಒಟ್ಟಾಗಿ ಸೇರಿಸಿ ಕಟ್ಟಿದ ಮೂರು ದಂಡಗಳು ; ಯತಿಗಳು ಹಿಡಿಯುವ ದಂಡ ; ತ್ರಿದಂಡ : ಶ್ರೀ ನಾರಾಯಣನ ಸೇವಾಸಮಯದೊಳ್ ಕೊರಲ್ಗೆ ಧರಿಸಿದ ಸಂಪಗೆಯ ದಂಡಿಗೆಯುಂ ಪೋಲ್ವ ಸಿರಿದೋಳ್ಗಳುಂ . . . ಪಬಿನುಡಿವೆಂಡಿರ ಕುರುಳ್ ಸಿಕ್ಕುವಿಡಿಸಲ್ಕೊಂಡ ಸಿಕ್ಕಟಿಗೆಯುಂ ಪೋಲ್ವ ಮುಕ್ಕೋಲುಂ ಎಳವಿಸಿಲ ಸೋಂಕಿನೊಳೆಸೆವ ಕೆಂದಾವರೆಗಳಂತೆಳಗಾವಿಯುಡೆವಡೆದ ಸಿರಿಯುಡಿಯುಮಾಗಿ ಪದ್ಮಾಸನದೊಳಿರ್ಪಂದಮಂ ತನ್ನ ಮನದೊಳ್ ಬಂದಿವಿಡಿದೆಣಿಸಿದಂ (ಚಿಕವ. ೦೦೯-೦೯).

[< ಮೂಱು + ಕೋಲ್₁]

**ಮುಕ್ತ** (ಗು). ೧. ಬಿಡುಗಡೆಯನ್ನು ಹೊಂದಿದ ; ಬಂಧಮುಕ್ತವಾದ. ೨. ಬಿಚ್ಚಿದ ; ಬಂಧನವನ್ನು ಕಳಚಿದ : ಚಕ್ರಮುಕ್ಕಿಯ ಒಲ್ಲಿನಂತರಂಗದೊಳಗ್ನಿ ಗುಪ್ತವಾಗಿರ್ಪಂತೆ, ಬಾಹ್ಯವಿಸ್ಮೃತಿಯ ಮಧ್ಯೆ ಮಂಥರೆಯ ಹೃದಯದಲಿ ಸುಪ್ತವಾಗಿರ್ದ ರತಿ, ಚಿಲುಮೆಗಳ ಚಿಲುಮೆ ತಾಂ ಕಣ್ತೆರೆದುದೊಯ್ಯನೆಯೆ ಮುಕ್ತ ಮುಕ್ತಾಹಾರಧಾರೆಯಲಿ (ಶ್ರೀರಾಮಾ. ೨೩-೭೨೩). 'ಮುಕ್ತಕೇಶ', 'ಮುಕ್ತಕೇಶಿ' ಪರಾ. ೩. ಬಿಟ್ಟ ; ತ್ಯಜಿಸಿದ ; ತೊರೆದ : 'ಮುಕ್ತಕಂಚುಕ' ಪರಾ. ೪. ತೆರೆದ : 'ಮುಕ್ತದ್ವಾರ' ಪರಾ. ೫. (ಬಾಣ ಮೊದಲಾದುವನ್ನು) ಪ್ರಯೋಗಿಸಿದ : ಎಸೆದ ; ತೂರಿದ : ಕೊಂಡವುದುಂ ಬನಮನದಂ ಕಂಡೆಂತಿರಲಕ್ಕುಮೆಂದು ತಾಗಿದ ನೆಗಟಿರ್ದ್ದೆಳ್ಗಂಡರ ಗಂಡೋಡು ವಿನಂ ಕೊಂದುವು ಗಾಂಡೀವಮುಕ್ತಬಾಣಗಣಂಗಳ್ (ಪಂಪಭಾ ೩-೮೮). ೬. ನಿರ್ಬಂಧವಿಲ್ಲದ ; ತಡೆಯಿಲ್ಲದ : ಸಾಹೇಬರು ಹೋಗುವಾಗ . . . ನನಗೆ ಬೇಕಾದವನ್ನು ಆರಿಸಿಕೊಳ್ಳುವ ಮುಕ್ತ ಮುಕ್ತೀ ಕೊಟ್ಟಿದ್ದರು (ಬೀಶಹ. II, ೩೨೭). ೭. ನಿಷ್ಕಪಟವಾದ ; ಕುಟಿಲತೆಯಿಲ್ಲದ ; ಮುಚ್ಚುಮರೆಯಿಲ್ಲದ : 'ಮುಕ್ತಕಂಠ' ಪರಾ. ೮. [ತತ್ತ್ವಶಾ] (ಸಂಸಾರಬಂಧನದಿಂದ) ಬಿಡುಗಡೆಯನ್ನು ಹೊಂದಿದ ; ಮುಕ್ತಿಯನ್ನು ಪಡೆದ ; ಮೋಕ್ಷವನ್ನು ಹೊಂದಿದ : 'ಮುಕ್ತಾತ್ಮ' ಪರಾ. (ನಾ). ೯. ಬಿಡುಗಡೆಯನ್ನು ಹೊಂದಿದುದು ; ಬಂಧನದಿಂದ

ಕಳಚಿಕೊಂಡುದು : ಬದ್ಧವೆಂಬುದು ಮುಕ್ತವೆಂಬುದು ಬುದ್ಧಿಗೆ ಸರಿಯಾತ್ಮಕಿಲ್ಲೆಲೆ ಅದ್ವಯಾನಂದೈಕರಸವದಕೆಂತೊ ಆ ನುಡಿಯು (ಅಮೃತ. ೩-೦೪೦). ೧೦. ತೆರೆದುದು ; ತೆಗೆದುದು : ಹದಿಬದೆಯಾದವಳಿಗೆ ಸ್ವರ್ಗದ ದಾರಿ ಮುಕ್ತವಿದೆಯೆಂಬ ಮಾತೂ ಅಷ್ಟೇ ಪ್ರಚಲಿತವಿತ್ತು (ಕರ್ನಾಟ. ೦೯೩). ೧೧. ಬಿಡುಗಡೆಯನ್ನು ಹೊಂದಿದವನು ; ಪಾರಾದವನು : ಶೀಘ್ರವೇ ಸಿಂಗಪ್ಪನೂ ಅವನ ಮಕ್ಕಳೂ ವಿಪತ್ತಿನಿಂದ ಮುಕ್ತರಾದರು (ಮುಂಬಿದು. ೪-೭೮). ೧೨. [ತತ್ತ್ವಶಾ] (ಸಂಸಾರದ ಬಂಧನದಿಂದ) ಬಿಡುಗಡೆಯನ್ನು ಹೊಂದಿದವನು ; ಮೋಕ್ಷವನ್ನು ಪಡೆದವನು : ಮುಕ್ತಾವಳೀತಪಸ್ತಪನತಾಪದಿಂ ಸಮಾಧಿಮರಣದಿಂದೀಶಾನ ಕಲ್ಪದೊಳ್ ಕನಕಪ್ರಭನೆಂಬೊಂ ದೇವನಾಗಿ ಬಂದಿಲ್ಲಿ ಪುಟ್ಟಿ ಮುಕ್ತನಕ್ಕುಂ (ಶಾಂತಿಪು. ೯-೦೪ ವ) ; ಮುಕ್ತನಪ್ಪನು ಜೀವನುಂ ನಿರ್ಮುಕ್ತನಪ್ಪನು ಶಿವನು(ಬಸವ. ೩೦-೨೮) ; ಭಕ್ತನೆಂದೆನಿಸಯ್ಯ ಎನ್ನ ಮುಕ್ತನೆಂದೆನಿಸಯ್ಯ ಎನ್ನ (ಅಜಂದೇ. ೭೮-೭೦). [ಸಂ.]

**ಮುಕ್ತಕ₁** (ನಾ). ೧. ಅರ್ಥದೃಷ್ಟಿಯಿಂದ ಸ್ವಯಂಪೂರ್ಣವಾದ ಬಿಡಿಪದ್ಯ, – ಬಿಡಿಕವನ : ಇಡುಸಂಗಬ್ಬಂ ಮುಕ್ತಕಂ (ಕಾವ್ಯಾವ. ೪೩೦) ; ಮುಕ್ತಕ ಕುಳಕ ಮುಂತಾದ ಕವಿತ್ವದ ಯುಕ್ತಿಯೊಳರುಹನ ಪೊಗಳ್ದು ಮುಕ್ತಿಗಾಮಿಗಳಾತ್ಮಕಲೆಯ ಭೇದಾಭೇದಭಕ್ತಿಯೊಳೊರೆವರು ಮತ್ತೆ (ಶರತ. ೬೪-೭೪) ; ನಾಲ್ಕಾರು ಪಂಕ್ತಿಗಳಲ್ಲಿ ಸುಂದರವಾದ ಭಾವಪ್ರಪಂಚವೊಂದನ್ನು ಸೃಷ್ಟಿಸಬಲ್ಲ ಕವನರೂಪ 'ಮುಕ್ತಕ' (ಭಾವಗೀ. ೯೪) ; ಈ ಕಾಲದ ಸಾಹಿತ್ಯ ಎರಡು ರೂಪಗಳಲ್ಲಿ ನಮಗೆ ದೊರೆಯುತ್ತದೆ. ಮೊದಲನೆಯದು ಮುಕ್ತಕ-ಅಂದರೆ ಬಿಡಿಕಾವ್ಯಗಳು : ಎರಡನೆಯದು ಪ್ರಬಂಧಗಳು (ಭಾರತ. ೪೩೭). ೨. ಸಮಾಸಪದಗಳಿಲ್ಲದ ಸರಳವಾದ ಗದ್ಯ : ಕೆಲವರು ಮುಕ್ತಕ, ವೃತ್ತಗಂಧಿ, ಉತ್ಕಲಿಕಾಪ್ರಾಯ, ಚೂರ್ಣಕ ಎಂದು ನಾಲ್ಕುಭಾಗ ಮಾಡಿ ಅವುಗಳಲ್ಲಿ ಮುಕ್ತಕವು ಸಮಾಸರಹಿತವಾದದ್ದೆಂದೂ ಚೂರ್ಣಕವು ಅಲ್ಪಸಮಾಸವೆಂದೂ ಹೇಳುತ್ತಾರೆ (ಕೃಬಿದ. ೦೭೪ ಅಡಿ). [ಸಂ.]

**ಮುಕ್ತಕ₂** (ನಾ). ಮುತ್ತುಗದ ಮರ ಮತ್ತು ಅದರ ಹೂವು ; ಕಿಂಶುಕ ; ಪಲಾಶ : ರಕ್ತಾಶೋಕಲತಾಂತದ ಮುಕ್ತಕಮಂಜರಿಯ ಸೂಸಕಂ ತಿಲಕದ ಸಮ್ಯಕ್ತಿಲಕಮುಮ[ರೆ] ತನಗನುರಕ್ತಂ ಮಾಡಿದಳನೇಕ ಕಾಮುಕಜನಮಂ (ಶಾಂತಿಪು. ೯-೨೦); ಸ್ಥಿರದಿಂ ಕಾಮೇಶ್ವರಮಂತ್ರಮನುಚ್ಚರಿಸುವುದೊಂದೇ ಲಕ್ಷಮನು ತರದಿಂ ಪಂಚಾಶಿರ ಮುಕ್ತಕದೊಳ್ಪರಳಿಂ [ಪಾ.ಶಾಂ. ಭರದಿಂದೈಸಾಸಿರ ಮುತ್ತುಗದ ಪೊಸ ಅರಳಿಂ] ಮಾಳ್ಪುದು ಹೋಮಮನು (ಜನವ. ೦೩-೨೪) ; ಆ ವನಂ ಘನಾಗಮದಂತೆ ಘನಕದಂಬ ಮುಕ್ತಕವಿಲಸಿತಮುಂ . . . ತತತಾಪಸಸಮುಚ್ಚಯಮಾಗಿಯುಮಶೋಕಸಂಗತಮೆನಿಸಿರ್ದುದು (ರಾಜಶೇ. ೩-೭೪ ವ). [P ಇದು 'ಕನ್ನಡದ 'ಮುತ್ತುಗ' ಎಂಬುದರ ಸಂಸ್ಕೃತೀಕರಣರೂಪವಿರಬಹುದು]

**ಮುಕ್ತಕಂಚುಕ** (ನಾ). ಪರೆಯನ್ನು ಕಳಚಿದ ಹಾವು : ಪರೆಬಿಟ್ಟ ಹಾವು : "ನಿರ್ಮುಕ್ತಃ, ಮುಕ್ತಕಂಚುಕಃ – ೨ ಪೊರೆ ಬಿಟ್ಟ ಹಾವಿನ ಹೆಸರು" (ಸಿದ್ಧಾಂತ. ೭೨). [ಸಂ.]

**ಮುಕ್ತಕಂಠ** (ನಾ). ಸಂಕೋಚವಿಲ್ಲದೆ ನೇರವಾಗಿ ಹೇಳುವ ಮಾತು ; ಬಿಚ್ಚುಮಾತು : ಆನಂದವರ್ಧನನ ಕಾಲದಲ್ಲಿ ಪ್ರಾಕೃತಕಾವ್ಯಕ್ಕೆ ಇನ್ನೂ ಹೆಚ್ಚಾದ ಮನ್ನಣೆಯಿತ್ತು . . . ಅದನ್ನು ಅವನು ಮುಕ್ತಕಂಠದಿಂದ ಹೇಳಿದ್ದಾನೆ (ಕೃಪ್ರಾಲೋ. XI. ಮುನ್ನುಡಿ) ; ಪುಣ್ಯಶಾಲಿಗಳು ಮುಕ್ತಕಂಠದಿಂದ ಹಾಡಿ ಲೋಕಕ್ಕೆಲ್ಲ ತಮ್ಮ ಸಂತೋಷವನ್ನು ಹಂಚುತ್ತಾರೆ (ಗಾಂಧಿ. ೪೨). [ಸಂ.]

**ಮುಕ್ತಕಾಲ** (ನಾ). ಪ್ರಾಪಂಚಿಕಬಂಧನದಿಂದ ಬಿಡುಗಡೆ ಹೊಂದಿದ ಕಾಲ ; ಮರಣವನ್ನು ಹೊಂದಿದ ಸಮಯ : ಅರಿಷ್ಟನೇಮಿದೇವರ್ ಕಾಪ್ಪಿಪ್ಪತೀರ್ತ್ಥದೊಳು ಮುಕ್ತಕಾಲಮಂ ಪಡೆದ (ಎಕ II. ೦೪-೨ : ಶಾ. ೮೦೦). [ಸಂ.]

**ಮುಕ್ತಕೇಶ** (ನಾ). ಬಿಚ್ಚಿದ ತಲೆಗೂದಲು : ಸಮೆರತಸೌಖ್ಯದೊಳ್ ಸತಿ ದಿಗಂಬರವೇಷಮನಾಂತು ಮುಕ್ತಕೇಶಮುದೆಸೆಯಲ್ಕೆ ಕಣ್ ದರನಿಮೀಲಿತಮಾಗೆ . . . ತನ್ನ ಸೋರಮಣನ ಸ್ಸನ್ನಿಧಾನಮನುಪಾರ್ಜಿಪ ಯೋಗಿನಿಯಂತಿರೊಪ್ಪಿದಳ್ (ಕಾವ್ಯಸಾ. ೭೭೩). [ಸಂ.]

**ಮುಕ್ತಕೇಶಿ** (ನಾ). ೧. ತಲೆಗೂದಲನ್ನು ಬಿಚ್ಚಿಕೊಂಡಿರುವ ವ್ಯಕ್ತಿ : ಎನಿತುಂ ದ್ರೌಪದಿ ಮುಕ್ತಕೇಶಿ ನಮೆವಳ್ ತದ್ದುಃಖಮುಂ ಕಂಡು ಕಂಡೆ ನಿತುಂ ಸೈರಿಪೆನಾನುಮೆನ್ನನುಜರುಂ (ಗದಾಯು. ೭-೨೪) ; ಒರ್ವಂ ದ್ವಿಜಂ ಮುಕ್ತಕೇಶಿ ಜಟಿ ರಕ್ತಂ . . . ಕೊಂದಾಟಮಂ ಧೂಮಮಂ ನಿಪುಣರ್ ಕಂಡರೆ ಪೋಗರ್ಪ (ಸೋಮೇಶ. ೭೮). ೨. ಮರುಳು ; ಪಿಶಾಚಿ : ಕಪಾಲಪಾತ್ರಯನರೆನೆಗಪಿ ಕೊಂಕನಲಿ ಕುಡಿದರು ಮುಕ್ತಕೇಶಿಯರು (ಶುದ್ಧಾರೀ. ೩-೩೨). ೩. ಒಬ್ಬ ಶಕ್ತಿದೇವತೆಯ ಹೆಸರು : ರತಿ ಮುಕ್ತಕೇಶಿ ಶವವಾಹಿನಿ ಮೋಹಿನಿ ಚಂಡಿ . . . ಮಾಲಿನಿಯೆಂಬ ಶಕ್ತಿಯರ್ (ಕಬಸಂ. ೩-೦೨). [ಸಂ. ಮುಕ್ತಕೇಶಿನ್]

**ಮುಕ್ತಛಂದ** (ನಾ). [ಛಂದ] ಛಂದಸ್ಸಿನ ಕಟ್ಟುಪಾಡುಗಳಿಂದ ಮುಕ್ತವಾದ ಕಾವ್ಯರಚನಾಬಂಧ ; ಛಂದಸ್ಸಿನ ಕಟ್ಟಿಗೆ ಒಳಪಡದ ಪದ್ಯರಚನೆ : P 'ಸ್ವಚ್ಛಂದಛಂದ' ಎಂದು ಮೊದಲು ನಾಮಕರಣಗೊಂಡ ಪದ್ಯಸ್ವರೂಪವೇ ಈಗ 'ಮುಕ್ತಛಂದಸ್ಸು' ಎಂಬ ಹೆಸರಿನಲ್ಲಿ ಪ್ರಚಾರದಲ್ಲಿದೆ. ಇದು ಫ್ರೆಂಚ್‌ಭಾಷೆಯ 'Verse Libre' ಅಥವಾ ಇಂಗ್ಲಿಷಿನ 'Free Verse' ಎಂಬ ಶಬ್ದಪುಂಜಗಳ ಕನ್ನಡ ಅನುವಾದ : ಮುಕ್ತಛಂದ—ಎಂದರೆ, ಕನ್ನಡದ ಸರಳ ರಗಳೆಯನ್ನು ಹೋಲುವ ಛಂದ (ಭಾರತ. ೪೭೦) ; ವಚನಸಾಹಿತ್ಯದಲ್ಲಿ ಈ ಮುಕ್ತಛಂದದ ಅಂದಚಂದಗಳೆಲ್ಲ ಪ್ರಯೋಗವಾಗಿವೆ (ಛಂದೋವಿ. ೨೩೦) ; ಭಾವಗೀತಾತ್ಮಕವಾದ ಮುಕ್ತಛಂದದ ಮುಕ್ತಕಗಳು ಈ ವಚನಗಳು (ಶಂಶಿ. ೪೪). [ಸಂ. ಮುಕ್ತಛಂದಸ್]

**ಮುಕ್ತಛಂದಸ್ಸು** (ನಾ). = ಮುಕ್ತಛಂದ : ಹಿಂದಿಸಾಹಿತ್ಯದಲ್ಲಿ ಮುಕ್ತಛಂದಸ್ಸಿನಲ್ಲಿ ಕಾವ್ಯರಚನೆ ಮಾಡಿದ ಮೊದಲನೇ ಕವಿ ನಿರಾಲ (ಭಾರತ. ೪೭೦): ಮುಕ್ತ ಛಂದಸ್ಸು : ಕನ್ನಡ ನಾಡಿನಲ್ಲಿ ಭಕ್ತಿಗೆ ಬಂದ ಹೊಸ ಉಕ್ಕಿನೊಡನೆ ಈ ಬಂಧಗಳು ಹೀಗೆ ಏರಿ ಬಂದುವು (ಛಂದೋವಿ. ೨೩೦). [ಸಂ. ಮುಕ್ತಛಂದಸ್]

**ಮುಕ್ತಜಾನು** (ನಾ). [ನಾಟ್ಯ] ನೃತ್ಯದಲ್ಲಿ ಕುಳಿತುಕೊಳ್ಳುವ ಒಂದು ಭಂಗಿ ; P "ಉತ್ಕಟಸ್ಥಾನಕದಲ್ಲಿ ಒಂದು ಮೊಳಕಾಲನ್ನು ಮಾತ್ರ ನೆಲದ ಮೇಲಿಡುವುದು. ಹೆಂಗಸರನ್ನು ಒಲಿಸುವುದು, ಹವನ, ಸಜ್ಜನರನ್ನು ಸಂತೈಸುವುದು ಇವುಗಳಲ್ಲಿ ಇದನ್ನು ವಿನಿಯೋಗಿಸಬೇಕು" (ಶಾಸ್ತ್ರಂ. ೩೩೨ ಗದ್ಯಾನುವಾದ) : ಸ್ವಸ್ಥ, ಮಂದಾಲಸ, ಕ್ರಾಂತ, ವಿಷ್ಕಂಭಿತ, ಉತ್ಕಟ, ತ್ರಸ್ತಾಲಸ, ಜಾನುಗತ, ಮುಕ್ತಜಾನು, ವಿಮುಕ್ತ ಈ ಒಂಬತ್ತು ಕುಳ್ಳಿರ್ದ ಸ್ಥಾನಕಂಗಳ್ (ಶಾಸ್ತ್ರಂ. ೭-೦೨ ವ) ; ಉತ್ಕಟಮಳವಟ್ಟ ಜಾನುವೊಂದುಮುದಿಳೆಯೊಳಗೊಂದಲ್ಕೆ ಮುಕ್ತಜಾನುವೆನಿಕ್ಕುಂ (ಶಾಸ್ತ್ರಂ. ೭-೩೮). [ಸಂ.]

**ಮುಕ್ತದ್ವಾರ** (ನಾ). ೧. ಎಲ್ಲರಿಗೂ ಪ್ರವೇಶವಿರುವ ಬಾಗಿಲು ; ತೆರೆದ ಬಾಗಿಲು : ಮಾಮಾನ ಮನೆ ಎಲ್ಲರಿಗೂ ಮುಕ್ತದ್ವಾರ. ಅದರಿಂದ ಅವರಲ್ಲಿ ಸದಾ ಜನಸಂದಣಿ (ಸ್ವಪ್ನ. ೩೦). ೨. (ಅಲಂ) ಪೂರ್ಣ ಸ್ವಾತಂತ್ರ್ಯ : ನಿನಗೆ ಮುಕ್ತದ್ವಾರವಿದೆ (ಜಯಂತ. ೪೩೭). ೩. ಎಲ್ಲರಿಗೂ ಇರುವ ಅವಕಾಶ : ವಿಚಾರಗೋಷ್ಠಿಯಲ್ಲಿ ಭಾಗವಹಿಸಲು ಸರ್ವರಿಗೂ ಮುಕ್ತದ್ವಾರವಿದೆ (ರೂಢಿ). [ಸಂ.]

**ಮುಕ್ತಮನ** (ನಾ). ಪೂರ್ವಗ್ರಹವಿಲ್ಲದ ಮನಸ್ಸು ; ತೆರೆದ ಮನಸ್ಸು : ದೇಶಸ್ಥರ ಮುಕ್ತಮನವು ಉದಾರಪೂರ್ಣವಾದದ್ದು (ಸ್ವ.ಶಿಜ. ೨೩೦). [ಸಂ. ಮುಕ್ತಮನಸ್]

**ಮುಕ್ತಹಸ್ತ** (ನಾ). ೧. ಧಾರಾಳವಾಗಿ ನೀಡುವ ಕೈ ; ಕೊಡುಗೈ : ಕೃಷ್ಣಪ್ಪನವರದು ಮುಕ್ತಹಸ್ತ (ಅನಾಖಿ. ೨). ೨. ನೀಡಿದ ಕೈಯುಳ್ಳವನು : ಮೋಹಿನಿಯು ಪಾರ್ಶ್ವಗಳಲ್ಲಿ ಮುಕ್ತಹಸ್ತನಾದ ಗರುಡ ಮತ್ತು ಚಾಮರಧಾರಿಣಿಯರಿರುವರು (ಹೊಯ್ಸಾ. ೩೯). ೩. ಧಾರಾಳವಾಗಿ ನೀಡುವವನು ; ಕೊಡುಗೈಯವನು ; ಉದಾರಿ : ಶೌರ್ಯಮಿರೆ ಕೃಪಣವಿಧಿ ಮುಕ್ತಹಸ್ತಂ (ಶ್ರೀರಾಮಾ. ೮೨-೧೧೩). [ಸಂ.]

**ಮುಕ್ತಾಗುಣ** (ನಾ). ೧. ಮುತ್ತಿನ ಹಾರ : ಮೌಕ್ತಿಕದ ಸರ : "ತಾರಂ ಮುಕ್ತಾಗುಣಕಂ ಪರ್ಯಾಯಂ" (ಪಸ್ತುಕೋ. ೧೩೯-೦೨೩). ೨. ಮುತ್ತಿನ ಶ್ರೇಷ್ಠತೆ. ೩. ಮುತ್ತಿನ ಕಾಂತಿ. [ಸಂ.]

**ಮುಕ್ತಾಜಾಳ** (ನಾ). ಮುತ್ತುಗಳ ಸಮೂಹ : ಜೋಳವನುರು ಮುಕ್ತಾಜಾಳವಾಗಿಸಿ ಜಂಗಮಾಳಿಗಿತ್ತನು ಬಸವೇಶ (ಭೈರವೇ. ೨-೨೦೦). [ಸಂ. ಮುಕ್ತಾಜಾಲ]

**ಮುಕ್ತಾತ್ಮ** (ನಾ). ಸಂಸಾರಬಂಧನದಿಂದ ಬಿಡುಗಡೆಯನ್ನು ಹೊಂದಿದ ಆತ್ಮ ; ಮುಕ್ತಿಯನ್ನು ಪಡೆದ ಆತ್ಮ : ಕರ್ಮದಿಂದ ಸಂಪೂರ್ಣವಾಗಿ ಬಿಡುಗಡೆಹೊಂದಿದ ಆತ್ಮನು ಪುನಃ ಕರ್ಮದೊಂದಿಗೆ ಸೇರುವುದಿಲ್ಲ. ಇದಕ್ಕೇ ಮುಕ್ತಿಯೆಂದು ಹೆಸರು. ಈ ಮುಕ್ತಾತ್ಮನೇ ದೇವರು (ಭಾರದ. ೧೬೭). [ಸಂ. ಮುಕ್ತಾತ್ಮನ್]

**ಮುಕ್ತಾದಾಮ** (ನಾ). ಮುತ್ತಿನ ಹಾರ; ಮೌಕ್ತಿಕದ ಸರ : ಅನೂನ ಮರಕತರತ್ನಭಿತ್ತಿವಿಭ್ರಾಜದೊಳಾಲಂಬಮಾನಮುಕ್ತಾದಾಮಲಂಬೂಷಭೂಷಿತದೊಳ್ (ಸುಕುಮಾ. ೯-೧೭ ವ). [ಸಂ. ಮುಕ್ತಾದಾಮನ್]

**ಮುಕ್ತಾಧಾರ** (ನಾ). ೧. ಆಧಾರವಿಲ್ಲದಿರುವಿಕೆ: ಆಶ್ರಯವಿಲ್ಲದಿರುವಿಕೆ. ೨. ಮುತ್ತುಗಳಿಗೆ ಆಶ್ರಯವಾಗಿರುವುದು.– ಆಧಾರವಾಗಿರುವುದು. ೧, ೨ : ಆ ಮಹಾರ್ಣವಂ . . . ಮುಕ್ತಾಧಾರವಾಗಿಯುಮನಂತಾಧಾರಮುಂ . . . ಚತುರ್ಮುಖನಂತೆ ಸರಸ್ವತೀಪತಿಯುಮೆನಿಸಿದುದು (ಜಗಂ. ೦-೯೪ ವ). [ಸಂ. (ಮುಕ್ತ + ಆಧಾರ; ಮುಕ್ತಾ + ಆಧಾರ)]

**ಮುಕ್ತಾಫಲ, ಮುಕ್ತಾಫಳ** (ನಾ). ೧. ಮುತ್ತು; ಮೌಕ್ತಿಕ:ಕರಿಮಕರಂಗಳ ಕಯ್ಯೊಳ್ಸಿಕ್ಕಿನೊಳ್ ಬಿಬ್ಬಿಜಿಬಿಜಿದೊಡೆದ ಶುಕ್ತಿಪುಟೋದರಂಗಳೊಳಗಣಿಂದ ಮುಚ್ಚಳಿಸಿದ ತಾರಾತರಲಮುಕ್ತಾಫಲಂಗಳುಮನಟ್ಟಿಮಟ್ಟು ನೋಡುತ್ತುಂ ಪೋಗೆಪೋಗೆ (ಆದಿಪು. ೦೨-೭೯ ವ); ನಯನಂ ನೀಳಸರೋಜಭಾಸಿ ರದನಂ ಮುಕ್ತಾಫಲ[ಪಾಠಾಂ.ಳ]ಸ್ಪರ್ಧಿ . . . ಸುರೂಪಾಶ್ಚರ್ಯಮಾ ಕನ್ನೆಯಾ (ಸುಕುಮಾ. ೩-೩೩); ಬೇಜಿ ಬೇಡುವರವರ್ಗೆ ಪ್ರತ್ಯೇಕಮೊಂದೊಂದು ಬಳ್ಳ ಮುಕ್ತಾಫಲಮಂ . . . ಒಂದು ಭಾರ ಪೊನ್ನಂ ಕುಡುವುದು (ಪ್ರಬಶಾ. ೨-೨೭). ೨. (ಆಲಂ) ಒಳ್ಳೆಯ ಮಾತು; ಕೆಟ್ಟಮಾತು : ಅತ್ತೆಯೂ ಬಹಳ ಸಂತಾಪಗೊಂಡಿದ್ದಳು. ಅವಳ ಬಾಯಿಂದ ಒಂದೇ ಸಮನೆ ಮುಕ್ತಾಫಲಗಳು ಉದುರುತ್ತಲೇ ಇದ್ದವು (ಸ್ವ.ಶಿಜ. ೨೯). **ಮುಕ್ತಾಫಳ** : ೧. ಮೂಕಾಂಬಿಕಾಭಕ್ತಿಜನಿತಮುಕ್ತಾಫಳ ಲಕ್ಷ್ಮಾದೇವೀಮನಸ್ಸರೋವರರಾಜಹಂಸನಾಮಾದಿ ಸಮಸ್ತಪ್ರಶಸ್ತಿಸಹಿತಂ (ಸೌಇಇ. XX, ೦೦೩-೮; 1146); ಕುಂಭಿಕುಂಭಿನೀಧರ ಶುಂಭತ್ಕುಂಭತಟಗಳಿತ ವಿಪುಳವಿಮಳಮುಕ್ತಾಫಳಾವಳೀಪರಿಷ್ಕೃತಮಹಿತ ಮಹಾಮಹಿಮಾನೀಕನುಂ (ರಾಜಶೇ. ೩-೧ ವ). [ಸಂ.]

**ಮುಕ್ತಾಫಳ** 'ಮುಕ್ತಾಫಲ' ನೋ.

**ಮುಕ್ತಾಭರಣ** (ನಾ). ೧. ಆಭರಣಗಳನ್ನು ಕಳಚಿದವನು; ನಿರಾಭರಣನಾದವನು : ವಿರಹಿಯಂತೆ ಮುಕ್ತಾಭರಣನುಂ . . . ಶಿಶಿರಸಮಯದಂತಾರೂಢತಪನುಮಾಗಲೊಡಂ (ಶಂಪ್ರಪು. ೯-೯೦ ವ). ೨. ಮುತ್ತಿನ ಆಭರಣ, – ಒಡವೆ : ಧೃತಮುಕ್ತಾಭರಣಂ ಪರ್ಯಂಕಂಗಣಂ . . . ಮಲ್ಲಿಕಾಸ್ವಿತ್ರದಾಮಂ ತೆರೆಮಾಲೆಯಾಗೆ ವಿಮಳಕ್ಷೀರಾರ್ಣವಶ್ರೀಯನಾ ಶತಪತ್ರಾನನೆ ಪೋಲ್ತು ಬೆಳ್ಪಸದನಂಗೊಂಡೇರಿ ಮನಂಗೊಂಡಳೋ (ಶೃಪ್ರಪು. ೯-೯೪); ಧನಕನಕ ದೇವಾಂಬರಾದಿಮುಕ್ತಾಭರಣಪೂರವೀಟಿಕಾದಿಗಳನಿತ್ತು . . . ಬೀಳ್ಕೊಡಲು (ಶಾವಶಂ. ೩-೩೦). [ಸಂ. (ಮುಕ್ತ + ಆಭರಣ ; ಮುಕ್ತಾ + ಆಭರಣ)]

**ಮುಕ್ತಾಮಾಳಿಕೆ** (ನಾ). ಮುತ್ತಿನ ಮಾಲೆ, – ಹಾರ : ತೋರಣಗ್ರಥನ ಮುಕ್ತಾಮಾಳಿಕಾಳಂಬನ ವ್ಯಸನವ್ಯಗ್ರಕರಂ ಕರಂ ಸೊಗಯಿಸಿತ್ತಂತಲ್ಲಿ ಕಾಂತಾಜನಂ (ಶಂಪ್ರಪು. ೭-೩೩). [ಸಂ. ಮುಕ್ತಾಮಾಲಿಕಾ]

**ಮುಕ್ತಾಮುಕ್ತ** (ನಾ). ಕೈಯಲ್ಲಿ ಹಿಡಿದು ಎಸೆದು ಪ್ರಯೋಗಿಸುವ ಈಟಿ ಮುಂತಾದ ಆಯುಧ : "ಶಕ್ತಿ ಮೊದಲಾಗೆ ಪಾಣಿವಿಮುಕ್ತಂ ಛುರಿಕಾದಿ ತಾನಮುಕ್ತಂ ಯಂತ್ರೋನ್ಮುಕ್ತಂ ಶರಾದಿ ಮುಕ್ತಾಮುಕ್ತಂ ಯಷ್ಟ್ಯಾದಿಕಂ ತದಸ್ತ್ರಾಂತರದೊಳ್" (ಪಸ್ತುಕೋ. ೮೪-೦೪); ಕರಮುಕ್ತವಾ ಯಂತ್ರಮುಕ್ತ ಮುಕ್ತಾಮುಕ್ತ ಉರುತರದ ಮೂದೆಜದ ಕೈದುಕಾಜಿರು ಸಿಂಗವಜ್ರಗಳೆನೆ ಕಡುಕೆಯಿದು ಹೂಣಿಸಿ ಪಚಾರಿಸುತೆ (ಜಾಳ್ವಭಾ. ೨೩-೦೪); ಕರಮುಕ್ತ ಯಂತ್ರಮುಕ್ತ ಮುಕ್ತಾಮುಕ್ತ ವಿಮುಕ್ತವೆಂಬ ಹಲವು ತರದ ಕೈದುಗಳಿಂ (ಧರ್ಮವ್ಯಾ. ೦-೦೭). [ಸಂ.]

**ಮುಕ್ತಾಯ** 'ಮುಗಿತಾಯ' ನೋ.

**ಮುಕ್ತಾಯಗೊಳಿಸು** (ಕ್ರಿ). ಮುಗಿಸು ; ಪೂರೈಸು : ಗಾಯಕ ಅಥವಾ ಪ್ರಧಾನವಾದಕ ಕಚೇರಿಯ ಕಡೆಯಲ್ಲಿ ಮಂಗಳ ಹಾಡಿ, ಮಧ್ಯಮಾವತಿ ರಾಗಾಲಾಪನೆಯಿಂದ ಕಚೇರಿ ಮುಕ್ತಾಯಗೊಳಿಸುವುದು ಹಿಂದಿನಿಂದ ಬಂದ ಸಂಪ್ರದಾಯ (ಸಂಗೀಶಂ. ೦೦೨).

[ಮುಕ್ತಾಯ (< ಮುಗಿತಾಯ) + ಕೊಳ್$_1$ + – ಇಸು$_3$]

**ಮುಕ್ತಾಯಗೊಳ್ಳು** (ಕ್ರಿ). ಮುಗಿ ; ಕೊನೆಗೊಳ್ಳು : ಮೂಲನೊಳಂಬ ರಾಜವಂಶದ ಸಂತತಿ . . . ಕ್ರಿ. ಶ. ೧೦೫೪ರಲ್ಲಿ ಮುಕ್ತಾಯಗೊಂಡಿತೆಂದು ಹೇಳಬಹುದು (ಹೊಳಂಬ. ೩೯); ನೆಕ್ಲದೋವನ ಮನೋರಥ ನಿರೀಕ್ಷೆಗಳಿಗನುಗುಣವಾಗಿಯೆ ವ್ಯವಹಾರ ಮುಕ್ತಾಯಗೊಂಡಿತ್ತು (ಭೃವರು. ೨೭೦).

[ಮುಕ್ತಾಯ (< ಮುಗಿತಾಯ) + ಕೊಳ್ಳು$_1$ (< ಕೊಳ್$_1$)]

**ಮುಕ್ತಾಲಿ, ಮುಕ್ತಾಳಿ** (ನಾ). ೧. ದುಂಬಿಗಳಿಂದ ಬಿಡುಗಡೆಯನ್ನು ಹೊಂದಿದುದು. ೨. ಮುತ್ತುಗಳಿಂದ ಮಾಡಿದ ಮಾಲೆ,–ಹಾರ. ೧, ೨ : ಆ ಮಂಟಪಂ . . . ಸಮಧುರವಿತತಶಾಬ್ದೋಪಲಸಿತಮಾಗಿಯುಂ ಮುಕ್ತಾಲಿ [ಪಾಠಾಂ. ಳಿ] ವಿತಾನಮುಂ ಶಿವಪ್ರಭಾವಾಶ್ರಿತಮಾಗಿಯುಮತನು ವಿಳಾಸಾಸ್ಪದಮೆನಿಸಿರ್ದುದು (ರಾಜಶೇ. ೮-೮ ವ). **ಮುಕ್ತಾಳಿ** : ೨. ಜಗಮೆಲ್ಲಂ . . . ಮುಕ್ತಾಳಿಯುಂ ತೊಟ್ಟುದೋ . . . ಎಂಬಿಂತದೇಂ ಪರ್ವಿದುದೊ ನೃಪನತಿಸ್ಫೂರ್ತಿಕೀರ್ತಿಪ್ರತಾನಂ (ಪ್ರಶ್ನಪು. ೩-೦೪); ಆಗಿನ ಅವರ ಆಭರಣಗಳೆಂದರೆ ಅಂಗುಟಿಕೆ ಪೀರಮುದ್ರೆ, ಹೊನ್ನ ಕಾಲುಂಗರ . . . ಮುಕ್ತಾಳಿ, ರತ್ನಪದಕ . . . ಚೆಲುವನ್ನು ಹೆಚ್ಚಿಸಿ ತೋರಿಸುವಂತಹವು (ಕರ್ನಾಜ. ೦೬೨). [ಸಂ. (ಮುಕ್ತ + ಆಲಿ ; ಮುಕ್ತಾ + ಆಲಿ)]

**ಮುಕ್ತಾವಲಿ, ಮುಕ್ತಾವಳಿ** (ನಾ). ೧. ಮುತ್ತಿನ ಹಾರ, – ಸರ. **ಮುಕ್ತಾವಳಿ** : ೧. "ಹಾರಃ, ಮುಕ್ತಾವಳೀ . . . ೨ ಮುತ್ತಿನ ದಂಡೆಗಳ ಹೆಸರುಗಳು" (ಬಿದ್ಯಾಂಶಿ. ೨೦೦); ಕದಡುವ ನುಣ್ಬೆಳಗಿಂ ಮುಕ್ತಾವಳಿ ಕಣ್ಗೊಳಿಸಿದುದು ಗಜಪತಾಕೆಯಂದದಿನುರದೊಳ್ (ಕಾದಂಪೂ. ೮೩೩). ೨. [ಜೈನ] ಒಂದು ಬಗೆಯ ವ್ರತ : ತನ್ನ ಭವಸಂಬಂಧಮಂ ಕೇಳ್ದು ಮುಕ್ತಾವಳಿಯಂ ನೋಂತು . . . ಲಕ್ಷ್ಮಣೆಯೆಂಬೊಳಾಗೆ (ಜಾಪುಂಪು. ೩೩೪); ಮುಕ್ತಾವಳಿಯೆಂಬ ವ್ರತಮಂ ಮಾಡಿ ಆಯುರಂತ್ಯದೊಳ್ ಮೋಕ್ಷಮನೈದಿದನು (ಧರುಕ. ೩೦). [ಸಂ.]

**ಮುಕ್ತಾವಳಿ** 'ಮುಕ್ತಾವಲಿ' ನೋ.

**ಮುಕ್ತಾವಳೀತಪ** (ನಾ). = ಮುಕ್ತಾವಲಿ ೨: ವಾಸವನುಂ ಮಹೀಧರಂಗೆ ವಿದ್ಯಾಧರ ವಿಭೂತಿಯುಂ ಕೊಟ್ಟರಿಂಜಯಯಾಖ್ಯಮುನಿಮುಖ್ಯ ನಿಕಟದೊಳ್ ಮುಕ್ತಾವಳೀತಪಮಂ ಕೈಕೊಂಡು ಗೆಲ್ಲಂಗೊಂಡಂ (ಆದಿಪು. ೩-೩೮ ವ); ವಾಸವಂ ಮಹೀಧರಂಗೆ ವಿದ್ಯಾಧರಶ್ರೀಯುಂ ಕೊಟ್ಟರಿಂಜಯಮುನಿಪತಿಗಳ ಪಕ್ಕದೆ ಮುಕ್ತಾವಳೀತಪಮಂ ಕೈಕೊಂಡು ಗೆಲ್ಲಂಗೊಂಡಂ (ಶಾಪುಂಪು. ೨೧). [ಸಂ. ಮುಕ್ತಾವಲೀತಪ]

**ಮುಕ್ತಾಸಾರ** (ನಾ). ಶ್ರೇಷ್ಠವಾದ ಮುತ್ತು : ಸಾರತರ ತಾಮ್ರಪರ್ಣಿಯ ವಾರಿಯೊಳೆಳೆದಳಿಸಿ ಬಳೆದ ಶುಕ್ತಿಯ ಮುಕ್ತಾಸಾರಮನೀವ ಪಯೋನಿಧಿ ತೀರದ ನೃಪರಾತ್ಮಯಶಮನೀವಂತಾದರ್ (ಶಾಂತಿಪು. ೧೧-೧೩). [ಸಂ.]

**ಮುಕ್ತಾಸ್ಫೋಟ** (ನಾ). ಮುತ್ತಿನ ಚಿಪ್ಪು; ಶುಕ್ತಿ : ''ಮುಕ್ತಾಸ್ಫೋಟಂ ಶುಕ್ತಿ ಶಂಬೂಕಮಂಭಶ್ಶುಕ್ತಿಪುಟ್ಯಂ'' (ಚನ್ನಕೋ. ೨೩-೯). [ಸಂ.]

**ಮುಕ್ತಾಸ್ರುಜ** (ನಾ). ಮುತ್ತಿನ ಸರ, —ಹಾರ : ನಿಜಪತಿಯಭಿಧಾನಮನೀ ದ್ವಿಜನಾಂತಃದು ಮಾಣದೆಂದು ಹಂಸಂಗಾನೀ ರಜನಿ ಪಡೆದಿತ್ತ ಮುಕ್ತಾ ಸ್ರುಜಮನೆ ತತ್ರನುಫೊಳಡಿದ ಜಳಕಣಮೆಸೆಗುಂ (ರಾಜಶೇ. ೨-೬೩). [ಸಂ. ಮುಕ್ತಾಸ್ರುಜ್]

**ಮುಕ್ತಾಹಾರ** (ನಾ). ೧. = ಮುಕ್ತಾಸ್ರುಜ : ಬಾಹ್ಯವಿಕೃತಿಯ ವೃದ್ಧೆ ಮಂಥರೆಯ ಹೃದಯದಲಿ ಸುಪ್ತವಾಗಿರ್ದ ರತಿ, ಚಿಲುಮೊಲವುಗಳ ಚಿಲುಮೆ ತಾಂ ಕಣ್ದೆರೆದುದೊಮ್ಮನೆಯ ಮುಕ್ತ ಮುಕ್ತಾಹಾರಧಾರೆಯಲಿ (ಶ್ರೀರಾಮಾಯ. ೨೩-೬೨೩). ೨. ಆಹಾರವನ್ನು ತ್ಯಜಿಸುವುದು; ಅನಶನ; ನಿರಾಹಾರ. ೧, ೨: ಬಿಡದೆ ಮುಕ್ತಾಹಾರದಿಂದೆ ಸಮರೂಪದಿಂ ದೃಢತವೆತ್ತೂರ್ಧ್ವ ಮುಖಮಾಗಿ ಕರ್ಕಶವೃತ್ತದೊಡಗೂಡಿ ಕುಚಯುಗಂ ಮೆಚ್ಚಿದುದು ಕಠೋರತಪದಿಂದೆಸೆವ ಯೋಗಿಯಂತೆ (ಕೈಮಾ. ೩೧-೦೨). [ಸಂ. (ಮುಕ್ತಾ + ಹಾರ ; ಮುಕ್ತ + ಆಹಾರ)]

**ಮುಕ್ತಾಳಿ** 'ಮುಕ್ತಾಲಿ' ನೋ.

**ಮುಕ್ತಿ** (ನಾ). ೧. ಬಿಡುಗಡೆ; ವಿಮೋಚನೆ; ಸ್ವಾತಂತ್ರ್ಯ. ೨. ಬಿಡುಗಡೆಯನ್ನು ಹೊಂದುವಿಕೆ; ಸ್ವತಂತ್ರವಾಗುವಿಕೆ. ೩. ಬಿಟ್ಟು ಬಿಡುವಿಕೆ ; ತ್ಯಜಿಸುವಿಕೆ. ೪. ಎಸೆಯುವಿಕೆ. ೫. ಬಿಡುಗಡೆ ಮಾಡುವುದು; ಬಂಧಮುಕ್ತಗೊಳಿಸುವುದು. ೬. ಬಿಚ್ಚುವಿಕೆ ; ಕಳಚುವಿಕೆ. ೭. (ಸಾಲದಂತೆ) ತೀರಿಸುವುದು; ಸಲ್ಲಿಸುವುದು. ೮. ಆತ್ಮವು ಹುಟ್ಟು-ಸಾವುಗಳ ಬಂಧನದಿಂದ ಕಳಚಿಕೊಳ್ಳುವುದು; ಮೋಕ್ಷ; ಕೈವಲ್ಯ : "ಕೈವಲ್ಯಂ, ನಿರ್ವಾಣಂ, . . . ಮುಕ್ತಿ, ಮೋಕ್ಷ, ಮಹಾನಂದ:—ಈ ೧೧ ಮೋಕ್ಷದ ಪೆಸರ್" (ಕರ್ಣಾಶಬ್ದ.೨೦-೦೨೪); ಅನಾದಿಬಂಧನಬದ್ಧದ್ರವ್ಯಭಾವಕರ್ಮವಿಗಮದಿನನಂತಜ್ಞಾನಾದಿ ನಿಜರೂಪಮಂ ಪಡೆವುದು ಮುಕ್ತಿ (ಆದಿಪು. ೧೧-೬೩ ವ); ಒಲಿದೊಮ್ಮೆ ಶಿವ ಶರಣೆನ್ನಿರಯ್ಯಾ ಒಂದು ಸೊಲ್ಲಿಂಗೆ ಮುಕ್ತಿಸಿದ್ಧಿ (ಬಸವ. ೦೬೦). [ಸಂ.]

**ಮುಕ್ತಿಕಲ್ಲು** (ನಾ). ಬಾವಿಯಲ್ಲಿ ಪತ ಹಾಕುವುದಕ್ಕೆ ಆಧಾರವಾದ ಉದ್ದನೆಯ ಕಲ್ಲು; ಈ ಕಲ್ಲನ್ನು ಹಾಕಿಸುವುದರಿಂದ ಬಾವಿಯ ಕೆಲಸ ಮುಕ್ತಾಯವಾಗುವುದರಿಂದ ಈ ಹೆಸರು ಬಂದಿದೆ : ಬಾವಿಗೆ ಮುಕ್ತಿಕಲ್ಲು ಹಾಕಿಸಬೇಕಾಗಿದೆ (ಬಳಕೆ). [< ಮುಗಿತೆ + ಕಲ್ಲು (< ಕಲ್)]

**ಮುಕ್ತಿಗಾಮಿ** (ನಾ). ಮೋಕ್ಷಮಾರ್ಗದ ಅಭಿಮುಖನಾಗಿರುವವನು : ಮುಕ್ತಿಕ ಕುಳಕ ಮಹಾದ ಕವಿತ್ವದ ಯುಕ್ತಿಯೊಳೆರಜನ ಪೊಗಳ್ಳು ಮುಕ್ತಿಗಾಮಿಗಳಾತ್ಮಕಲೆಯ ಭೇದಾಭೇದಭಕ್ತಿಯೊಳೊರೆದರು ಮತ್ತ (ಕಟಕ. ೬೯-೬೭). [ಸಂ. ಮುಕ್ತಿಗಾಮಿನ್]

**ಮುಕ್ತಿಗೇಡಿ** (ನಾ). ಪರಮಪದವಿಯೆನ್ನು ಕೆಡಿಸಿಕೊಳ್ಳುವವನು ; ಭಕ್ತಿಯ ಸ್ಥಳಕುಳವನರಿಯದೆ ಬರಿದೆ ಭಕ್ತರೆನಿಸಿಕೊಂಬ ಮುಕ್ತಿಗೇಡಿಗಳನೇನೆಂಬೆನಯ್ಯ (ಅಲ್ಲಮ. ೬೯-೪೪). [ಮುಕ್ತಿ + ಕೇಡಿ$_1$]

**ಮುಕ್ತಿದಾಯಕ** (ನಾ). ಮೋಕ್ಷವನ್ನು ಕೊಡುವವನು; ಪರಮಾತ್ಮ : ಮುಕ್ತಿದಾಯಕ ನೀನು ಹೊಸನ್ಕೂರುಪುರವಾಸ (ಪುರಂದ. ೦-೯೩-೩). [ಸಂ.]

**ಮುಕ್ತಿಪಥ** (ನಾ). ಕೈವಲ್ಯವನ್ನು ಹೊಂದುವ ಮಾರ್ಗ; ಮೋಕ್ಷಮಾರ್ಗ : ಎನ್ನ ಮುಕ್ತಿಪಥಕ್ಕೆ ಈ ರುದ್ರಾಕ್ಷಿ ಸಾಧನವಯ್ಯಾ (ಬಸವ. ೯೩೯). [ಸಂ.]

**ಮುಕ್ತಿಪದ** (ನಾ). ಮೋಕ್ಷಪದವಿ ; ಕೈವಲ್ಯ : ''ಅಪವರ್ಗಂ ನಿಶ್ರೇಯಸಂ . . . ಮುಕ್ತಿಪದಂ ಬ್ರಹ್ಮಂ ಕೈವಲ್ಯಪದವಿ ಶಿವಗತಿ ನಿರಾಮಯಂ ನಿರ್ವಾಣಂ'' (ಚನ್ನಕೋ. ೨೧-೦೯); ಕಾರ್ಯಮಿವೆ ಸತತಮೊಮಗೆ ಸಪರ್ಯಾವಿದೇ ಮುಕ್ತಿಪದಮನೆಯ್ದುವಿನಂ (ಸುಕುಮಾ. ೦-೨೭). [ಸಂ.]

**ಮುಕ್ತಿಲೋಕ** (ನಾ). ಮೋಕ್ಷ; ಸ್ವರ್ಗಲೋಕ : ಅರ್ಚನೆಯುವನರ್ಚಿಸಿದಲ್ಲಿ ಪುಣ್ಯದ ಫಲ ಭಕ್ತಿಯಿಂ ದ್ರವ್ಯವ ಕೊಡುವುದು ಮುಕ್ತಿಲೋಕದೊಳಗು (ಸೋಮೇಶಶ. ೦೩-೬೦). [ಸಂ.]

**ಮುಕ್ತಿಸ್ಥಾನ** (ನಾ). = ಮುಕ್ತಿಪದ : ಕಷ್ಟಂ ದುಃಖಾನಲಪರಿಪ್ಲುಷ್ಟಂ ಚೀ ಗತಿಚತುಷ್ಟಯಂ ಪ್ರಾಣಿಗೆ ಸಂತುಷ್ಟತೆಯನೆಯ್ದೆ ಪಡೆದುಮಭೀಷ್ಟಸುಖಪ್ರದಮದೊಂದೆ ಮುಕ್ತಿಸ್ಥಾನಂ (ಆದಿಪು. ೯-೩೦); ಆಗಮೋಕ್ತ ಸಮಾಧಾನ ವಿಧಾನದಿಂ ಮುಡಿಪಿ ಮುಕ್ತಿಸ್ಥಾನಮಂ ಮುಂಚಿ ಸಾಧಿಸಿಕೊಂಡೊಳ್ಳು ಕುಮಾರಸೇನಮುನಿಪರ್ಗಕ್ಕುಂ ಪದಿರ್ಗಕ್ಕುಮೇ (ಶಾಪುಂಪು. ೩). [ಸಂ.]

**ಮುಕ್ತಿಹೇತು** (ನಾ). ಮೋಕ್ಷಕ್ಕೆ ಕಾರಣವಾದುದು : ಷೋಡಶಜಿನ ಪತಿನುತಚರಣಾಡಂಬರಮಂ ಭುವಿಖ್ಯಾತಿಯೆನೆ ತತ್ಪ್ರತಿಮಾನೀಡಾಗಮನಪುಂ ಮಾರ್ಹಾಕ್ರೀಡನಮುಂ ಮುಕ್ತಿಹೇತುವಪ್ಪುದು ಪಿರಿದೇ (ಶಾಂತಿಪು. ೦೨-೯೯). [ಸಂ.]

**ಮುಕ್ತೆ** (ನಾ). ೧. ಮುತ್ತು ; ಮೌಕ್ತಿಕ : ''ಮುಕ್ತಾಸಾರಮಂ ಮೌಕ್ತಿಕಂ'' (ಚನ್ನಕೋ. ೨೩-೯). ೨. ವೇಶ್ಯೆ; ಸೂಳೆ : ''ಬಂಧಕೀ, ಕುಲಟಾ, ಮುಕ್ತಾ, ಪುನರ್ಭೂ, ಪುಂಶ್ಚಲೀ, ಖಿಲಾ—ಜಾರಿಣಿಯರ ಹೆಸರು'' (ರತ್ನಕಂ. ೭-೩೮ ೪೪). ೩. ಒಂದು ಬಗೆಯ ಸಸ್ಯ. [ಸಂ. ಮುಕ್ತಾ]

**ಮುಕ್ತೇಸರ** 'ಮೊಖ್ತೇಸರ' ನೋ.

**ಮುಕ್ತೋಷ್ಠ** (ನಾ). ೧. ತೆರೆದ ತುಟಿ. ೨. ಅತಿಯಾಗಿ ಮಾತನಾಡುವವನು; ಹರುಕುಬಾಯಿಯವನು : ಅವರೊಳೋರ್ಬಂ ಮುಕ್ತೋಷ್ಠನುಂ ನಿಕೃಷ್ಟನುಮಪ್ಪ ಭಟ್ಟನಿಂತೆಂದಂ (ಕಂಠಕ. ೦೭-೬). [ಸಂ.]

**ಮುಕ್ತ್ಯಾತುರ್ಯ** (ನಾ). ಮೋಕ್ಷದ ಬಗೆಗಿರುವ ಆಸಕ್ತಿ (?) : ಹಸಿವು ತೃಷೆ ವೆಸನಂಗಳಲ್ಲಿ ಅಲಕ್ಷಿತನಾಗಿ ಪಾಶಬದ್ಧ ವಿರಹಿತನಾಗಿ ಗುಣಾವಗುಣವ ವಿಚಾರಿಸದೆ ಶಿಕ್ಷಾತುರ್ಯ ಮುಕ್ತ್ಯಾತುರ್ಯ ಸ್ವಯಿಚ್ಛಾತುರ್ಯ ವೆಂಬ ಘಂಟ ಠಾವಿನಲ್ಲಿ ಬದ್ಧನಾಗದೆ ಸ್ತುತಿಗೆ ನಿಲ್ಲದೆ ನಿಂದೆಗೊಂಡದೆ ಉಭಯವನೇನೆಂದು ಅರಿಯದೆ(ಶರಗೋ. ೦೦೩-೦೨೩). 'ಶಿಕ್ಷಾತುರ್ಯ' ಪರಾ. [ ? ]

**ಮುಕ್ರಿ$_1$** (ನಾ). ಮುಸಲ್ಮಾನರ ಧಾರ್ಮಿಕಗುರು : ಮಸೀದಿಯಿಂದ ಮುಕ್ರಿಗಳು ನಿನಗೆ ಆದೇಶ ಕಳುಹಿದರೂ ನೀನು ಕೇಳಲಿಲ್ಲ (ಹುಂಗಾಹು.೦೦). [ ← ಅರ. ಪಾರ. ಮುಕಿರ್ ]

**ಮುಕ್ರಿ$_2$** (ನಾ). ಕರ್ನಾಟಕದಲ್ಲಿ ಇರುವ ಒಂದು ಕೆಳವರ್ಗದ ಜನಾಂಗದ ಹೆಸರು : ಮುಕ್ರಿಗಳು– ಇವರು ಕಾನಡಾಜಿಲ್ಲೆಯಲ್ಲಿ ಹುಟ್ಟಿದ ಕೆಳಗೆ ಇರುತ್ತಾರೆ (ಕಜಾಗ. ೨೨೩) ; ಮಾದಿಗರ ಅಥವಾ ಮುಕ್ರಿಯರ ಒಂದು ಮಗು ಮನೆಯೊಳಗೆ ನುಗ್ಗಿಬಿಟ್ಟರೆ ನಮಗೆ ಬ್ರಹ್ಮಾಂಡ ಕೋಪ ! (ಏಕಾಂತ. ೯೬). [ ? ]

**ಮುಖ** (ನಾ). ೧. ಬಾಯಿ : "ವಕ್ತ್ರಂ, ಆಸ್ಯಂ . . . ಮುಖಂ—೭ ಬಾಯಿ" (ಬ್ಯಾಂಕ. ೦೯೩) : ತಂಬುಲದಿಂ ವಿಭವ ಪೇಳ್ಪುನೋಳಗಂಗುಡುಪಡೆದೊಳ್

...ಮುಖಪರ್ತಿತವಾದಂ ಕಟಶೋಧನದಿಂ ಪ್ರಭೇದವಕ್ಕಡಸಿದ ಬೇರನಾಮದ ಕೇವರಿಸಿರ್ದಮಾರೇಂದ್ರದಂತಿಯಾ (ಶಾಂತಿಪು. ೧೧-೯೫) ; ಲಿಂಗಪಥವ ತಪ್ಪಿ ನಡೆವರು ಜಂಗಮಮುಖದಿಂದೆ ನಿಂದೆ ಬಂದರೆ ಕೊಂಡ ಮಾಜಿಂಗೆ ಹೋಹುದು ತಪ್ಪದು (ಬಸವ. ೧೧೬) ; ಹಿಂದೆ ನಾರದಮುನಿಯ ಮುಖದಿಂದೆ ಕೇಳ್ದಂ ಮುಕುಂದನ ವಿಶಾಲಲೀಲಾಮಾಲೆಯಂ (ಕೃಬಾಳಾ. ೧೧-೨). ೨. ಮೊಗ ; ಮೋರೆ : "ವದನಮಾನನಮಾಸ್ಯಂ ಮುಖಂ ತುಂಡಂ ಲಪನಂ ವಕ್ತ್ರಂ ಮೊಗಕ್ಕೆ ನಾಮಂ" (ಪಸ್ತುಕೋ. ೬೯-೧೫) ; ಉದಧಿವೃತೋರ್ವಿಗೆ ಮುಖಮೆನಿಸಿದ ಬೆಳುವಲನಾಟ್ಗೆ ತಿಲಕದಂದದ ನಜುಗುಂದದ ವಿಪ್ರಕುಲೋತ್ತಮನಭ್ಯುದಿತಯಶಂ ಶ್ರೀಧರಂ (ಜಾತಕ. ೧-೪) ; ಕಣ್ಮಲರೊಳಾನಂದಾಶ್ರು ಮೈಯೊಳ್ ಸಮುದ್ಗತ ರೋಮಂ ಮುಖದೊಳ್ ವಿಲಾಸಮೆಸೆಯುತ್ತಿರ್ಪನ್ನಮಿಂತೆಂದರಾನತಮೂರ್ಧರ್ ಪಿತೃಮಾತೃಗಳ್ (ಜಗಂ. ೩-೫) ; ಮುಖಚತುಷ್ಟಯದಾತನಾರೀ ಮುಖಗಳೈದಜ ಮಹಿಮಸಾರು (ಕೊರರಾ. ೬-೧೧-೩೨); ಬಿರುನುಡಿಗಳಂ ತನ್ನ ಮೊಗಕಿರಿದು ಜರೆದೇಡಿಪರ್ಜುನನ ಮುಖಕೆ ದಿಟ್ಟಯಿನೊದ್ದು ಒಂತಿರುಗಿದಂ ಬಭ್ರುವಾಹನಂ (ಜೈಮಿನಿ. ೬೦-೨೨೦೦). ೩. ಪಕ್ಷಿಯ ಕೊಕ್ಕು.–ಚಂಚು. ೪. ಪ್ರಾಣಿಯ ಮೂತಿ ; ಮುಸುಂಡಿ. ೫. ಮುಂಭಾಗ ; ಮುಂದುಗಡೆ : ಆ ವೀರನು ಸೇನೆಯ ಮುಖದಲ್ಲಿ ನಿಂತಿದ್ದನು (ರೂಢಿ). 'ಮುಖಮಂಟಪ' ಪರಾ. ೬. ತಲೆಬಾಗಿಲಿನ ಮುಂಭಾಗ ; ಅಂಗಳ : "ಮುಖಂ, ನಿಃಸರಣಂ—ಈ ೨ ಹೆಬ್ಬಾಗಿಲ ಮುಂತು" (ಹಲಾಯು. ೪೯-೧೩೪). ೭. (ಬಾಣ, ಈಟಿ ಮುಂತಾದುವುಗಳ) ಚೂಪಾದ ತುದಿ ; ಮೊನೆ. ೮. ಮೊಲೆತೊಟ್ಟು ; ಚೂಚುಕ. ೯. ಪಾತ್ರೆ ಮೊದಲಾದುವುಗಳ ಬಾಯಿ. ೧೦. ಆಯುಧವ ಹರಿತವಾದ ಅಂಚು ; ಅಲಗು. ೧೧. ಮೇಲುಭಾಗ ; ಅಗ್ರಭಾಗ. ೧೨. ಹೊರಮೈ ; ಹೊರಭಾಗ : 'ಮುಖಲೇಪನ' ಪರಾ. ೧೩. ರಂಧ್ರ ; ತೂತು. ೧೪. ದಿಕ್ಕು ; ದಿಶೆ ; ಕಡೆ : ನೀವು ನೇರವಾಗಿ ಆ ಮುಖಕ್ಕೆ ಹೋದರೆ ಅವರ ಮನೆ ಸಿಕ್ಕುತ್ತದೆ (ರೂಢಿ). 'ಒಮ್ಮುಖ' ಪರಾ. ೧೫. ನದಿಯು ಸಮುದ್ರಕ್ಕೆ ಸೇರುವ ಸ್ಥಳ ; ಅಳುವೆ. ೧೬. ಪ್ರಾರಂಭ ; ಉಪಕ್ರಮ ; ಮೊದಲು : "ಆದಿ ಮುಖಂ" (ಪಸ್ತುಕೋ. ೧೧೯-೬೦) ; ಶ್ರೀವಾಗ್ದೇವಿಗೆ . . . ನಿರ್ಮಲಮೂರ್ತಿಗಿಳಾವಂದ್ಯಗೆ ಶಾಸ್ತ್ರಮುಖದೊಳವನತನಪ್ಪೆಂ (ಶಬ್ದ. ೧. ಪೀಠಿ) ; ಮುಖಮೆಂಬುದು ಪ್ರಾರಂಭಾರ್ಥವಾಚಾರ್ಥ (ಕುಶಂ. ೫೦). 'ದಿನಮುಖ' ಪರಾ. ೧೭. ಏನನ್ನಾದರೂ ಸಾಧಿಸಲು ಸಹಾಯಕವಾದುದು ; ಸಾಧನ : "ಉಪಾಯ ಲಪನಾದಿ ವಾಚಕಂ ಮುಖಮಕ್ಕುಂ" (ಪಸ್ತುಕೋ. ೧೩೩-೯೨). ೧೮. ಮಗ್ಗುಲು ; ಪಾರ್ಶ್ವ ; ಬದಿ : ಹೊರಗಿನ ಕಂಬಗಳು ಹದಿನಾರು ಮುಖಗಳನ್ನು ಹೊಂದಿವೆ (ಹೊಯ್ಸಳ. ೨೨೫) ; ಪ್ರತಿಭಾಗಕ್ಕೂ ನಾಲ್ಕು ಮುಖಗಳುಂಟು (ಕೀಟಿಶಿ. ೧೧). ೧೯. ಮೂಲ ; ಕಾರಣ ; ಹೇತು. ೨೦. ಮಾತಾಡುವಿಕೆ ; ಉಚ್ಚರಿಸುವಿಕೆ. ೨೧. ಸಂದರ್ಭ ; ಸನ್ನಿವೇಶ : ಎಲ್ಲರೂ ವೀರರು ಎಲ್ಲರೂ ಧೀರರು ಎಲ್ಲರೂ ಮಹಿಮರು ಎಲ್ಲರೂ ಪ್ರಮಥರು ಕಾಳಗದ ಮುಖದಲ್ಲಿ ಕಾಣಬಾರದು ಓಡುವ ಮುಖದಲ್ಲಿ ಕಾಣಬಹುದು (ಬಸವ. ೪೪೪) ; ಸವನಿಪುದಯತ್ನಕೃತ ಗೌರವಮುಖದೊಳ್ ಗುರು ಮುನೀಶ್ವರಾದಿ ವಿಶಿಷ್ಟೋದ್ಭವ ವಿನಯದೊಳೊಂದಿದಸಹ್ಯವೃತ್ತಿಯೊಳ್ ತಾಂ ಬಹುತ್ವಮೇತತ್ವದೊಳಂ (ಶಬ್ದ. ೧೧೨). ೨೨. ಮಾರ್ಗ ; ರೀತಿ : ಸ್ಥಾವರ ಜಂಗಮವೆಂಬುಭಯಪಕ್ಷ ಒಂದೇ ಆವ ಮುಖದಲಿ ಬಂದರೂ ತೃಪ್ತಿಯೊಂದೇ (ಬಸವ. ೬೨೫) ; ಎಲ್ಲಿಯುಮಾಮಂತ್ರಣದೊಳ್ ಬಲ್ಲರ್ ಪ್ರಥಮೈಕವಚನಮಂ ಲೋಪಿಸುವರ್ ನಿಲ್ಲದೆ ವಿಕಲ್ಪಮುಖದಿಂ ಸೊಲ್ಲಿಸುವರ್ ಹ್ರಸ್ವದೀರ್ಘಕಾಕುಗಳೆರಡಂ (ಶಬ್ದ. ೦೨೩). ೨೩. ಅಭಿಮುಖ ; ಎದುರು : ಮುಕ್ತಿಗೆ ಮುಖವಾಗಿ ಯುಕ್ತಿಗೆ ಹೊಜಗಾಗಿ ಅಜ್ಞಾನಿಗೆ ಅಜ್ಞಾನವಾಗಿಪ್ಪ ಭೇದ ಕಾಣಬಂದಿತ್ತು ನೋಡಾ (ಅಪಶಂ. ೨೦೨-೯೫೬). ೨೪. ಶ್ರೇಷ್ಠವಾದುದು ; ಉತ್ತಮವಾದುದು. ೨೫. ಮುಖ್ಯ ; ಪ್ರಧಾನ : ಸೊರ್ಕ್ಕಿಗಾಮುಣ್ಡರುಂ ಎದೆಯಗಾಮುಣ್ಡರುಂ . . . ನೀರಿಲ್ಲಿಯಾ ಸಿನ್ದೆಜಗಾಮಿಗರುಂ ಮುಖವಾಗೆ ಎರಡುಂನಾಟ್ಕೆ ರಾಜಶ್ರಾವಿತಮಾಗೆ ಪ್ರಸಾದಂಕೆಯ್ದಾರ್ (ಎಕ. XIX, ೦೪೫-೧೧ ; ಸು. ೬೮೦). 'ಮುಖಸ್ಥಾನ' ಪರಾ. ೨೬. ಮುಖ್ಯವಾದ ವ್ಯಕ್ತಿ ; ಪ್ರಧಾನವ್ಯಕ್ತಿ : ನಿಂದಿಸಿ ಧರ್ಮಜಪ್ರಮುಖರಂ ಮುಖರಂ ಮುಖರಂಧ್ರಘೋಷನಿಂತೆಂದಂ (ಜಗಂ. ೦೭-೩೩). ೨೭. ಪ್ರತ್ಯಕ್ಷ ; ಸಮಕ್ಷಮ : 'ಮುಖತಃ' ಹೋ. ೨೮. ದೃಷ್ಟಿ ; ಗಮನ : ಪರಮೇಶ್ವರನ ಅಜಿದವಂಗೆ ಜಗದಾಶೆಯ ಮುಖವಿಲ್ಲವೆಂದೆ (ಪೋಳ್ದಜ. ೪೦-೦೬೭). ೨೯. (ಆಲಂ) ನೈತಿಕಬಲ ; ಸ್ಥೈರ್ಯ : ಗುರುರಾಜರಾಯರು . . . ಯಾವ ಮುಖದಿಂದ ಕೇಳುತ್ತಾರೆ (ಪುರಂ. ೦೭೯). ೩೦. [ಕಾವ್ಯವಿ] ನಾಟಕದ ಐದುಬಗೆಯ ಸಂಧಿಗಳಲ್ಲಿ ಒಂದು ; ಐದು 'ಅರ್ಥಪ್ರಕೃತಿ'ಗಳೂ ಐದು 'ಅವಸ್ಥೆ'ಗಳೂ ಕ್ರಮವಾಗಿ ಸೇರಿದಾಗ ವಸ್ತುವಿನಲ್ಲಿ ವಿಭಾಗಗಳಾಗುವ ಐದು ಬಗೆಯ ಸಂಧಿಗಳಲ್ಲಿ ಮೊದಲನೆಯದು : ಸವಸಂದ ಮುಖಂ ಪ್ರತಿಮುಖಮವಮರ್ಶಂ ಗರ್ಭಮಂತೆ ನಿರ್ವಹಣಮೆನಿಪ್ಪವವೆಯ್ದು ಸಂಧಿಯುಕ್ತಂ ಸಹಿತ (ಕಾವ್ಯಾವ. ೯೩೬) ; ಮೇಲೆ ಹೇಳಿದ ಐದು 'ಅರ್ಥಪ್ರಕೃತಿ'ಗಳೂ ಐದು 'ಅವಸ್ಥೆ'ಗಳೂ ಕ್ರಮವಾಗಿ ಸೇರಿದರೆ, ವಸ್ತುವಿನಲ್ಲಿ ೧. ಮುಖ, ೨. ಪ್ರತಿಮುಖ, ೩. ಗರ್ಭ, ೪. ಅವಮರ್ಶ, ೫. ಉಪಸಂಹೃತಿ (ನಿರ್ವಹಣ) ಸಂಧಿಗಳೆಂಬ ಐದು ವಿಭಾಗಗಳಾಗುತ್ತವೆ (ಕೃಶಿಶಿ. ೨೦೮).

**ಮುಖಕಪ್ಪಗೆಮಾಡಿಕೊಳ್ಳು** = ಮುಖದ ಕಳೆಯನ್ನು ಕಳೆದುಕೊಳ್ಳು ; ಮಂಕಾಗು : ಅವನ ಮನಸ್ಸು ಸ್ವಲ್ಪ ದಿವಸದಿಂದ ವಿರಸವಾಗಿ ತನ್ನಲ್ಲಿ ಅಭಿಮಾನವನ್ನು ಬಿಟ್ಟಿದೆಯೆಂದು ಇವಳೂ ಹಾಗೆಯೇ ತನ್ನ ವಿಚಾರವಾಗಿ . . . ಪ್ರಬಲವಾದ ಅಸಮಾಧಾನವನ್ನು ತೋರಿಸುತಿದಾಳೆಂದು ಅವನೂ ತಿಳಿದುಕೊಂಡು ಮುಖ ಕಪ್ಪಗೆ ಮಾಡಿಕೊಂಡಿದ್ದರು (ಅರೂಬ. ೦೫೫). **ಮುಖಕಪ್ಪಿಡು** = ಮುಖವು ಕಳೆಗುಂದು ; ಕಂಗೆಡು : ಮರುಕ್ಷಣವೇ ಮುಖ ಕಪ್ಪಿಟ್ಟಿತು (ಪಟಿಶಾ. ೩೩೦). **ಮುಖಕಿರಿದಾಗು** = ಮುಖವು ಮುದುಡಿ ಹೋಗು ; ಖಿನ್ನವಾಗು : ಅಳಿಯರ ಶಾಯಡಿಗೆ ಆಗ ಕಳುಹಲು ನಾನೆ ಬಹೆನಾ ಬಾಗಿಲೊಳಗಿರಲೆಂಬ ಬೆಸನಾಯ್ತಾಗಲೆನಲೂಳಿಗರು ಮುಖ ಕಿರಿದಾಯ್ತು ಬಿಜ್ಜಣಗೆ (ಬಸ.ಪು. ೦೦೦-೪೦). **ಮುಖಕಿವಿಚು** = ಮುಖವನ್ನು ವಕ್ರಗೊಳಿಸು,– ಸೊಟ್ಟಗೆ ಮಾಡು : ನಾನು ನಿನಗೆ ಯಾವ ಅಪರಾಧವನ್ನು ಮಾಡಿದ್ದೇನೆ ಹೇಳು. ನನ್ನನ್ನು ಕಂಡ ಕೂಡಲೇ ಮುಖ ಕಿವಿಚುತ್ತೀ (ರಂಗಕೋ. ೦೪೭). **ಮುಖ ಕೆಂಪಗಾಗು** = ಮುಖದ ಬಣ್ಣ ಕೆಂಪಾಗು,– ರಂಗೇರು : ನಾಚಿಕೆಯಿಂದ ಅವಳ ಮುಖ ಕೆಂಪಗಾಯಿತು (ಕೀಶೋಶ. ೦೦೨). **ಮುಖಕೆಂಪೇರು** = ಮುಖ ಕೆಂಪಗಾಗು : ಖಾನ್ ಸಾಹೇಬರು ಮರಳಿ ಬಂದು ಕುಳಿತರು. ಅವರ ಮುಖ ಕೆಂಪೇರಿತ್ತು (ಪಟಿಶಾ. ೦೬೭). **ಮುಖಕೆಡು** = ಮುಖ ಕಪ್ಪಿಡು : ಲಜ್ಜಾಹೀನೆಯಾದ ಮೋತಿಬೀಬಿಯು ತಿರಸ್ಕಾರದಿಂದ ಮುಖ ಕೆಡದೆ . . . ಎಂದಳು (ಕವಾಕುಂ. ೬೬). **ಮುಖಕೆಳಗೆಹಾಕು** = ತಲೆ ತಗ್ಗಿಸು ; ಅವಮಾನವನ್ನು ಹೊಂದು : ನಾಳೆ ಪಂಚನಾಮೆಯ ಕಾಲಕ್ಕೆ ನಾನಾ ಸಾಹೇಬರು ನನಗಾಗಿ ಮುಖ ಕೆಳಗೆ ಹಾಕುವ ಪ್ರಸಂಗ ಬಂದೇ ಬರುವದು (ಸ್ವ.ಶಿಕ. ೦೯೦). **ಮುಖಕೊಟ್ಟು ಮಾತನಾಡು** = ನೇರವಾಗಿ ಮಾತನಾಡು : ಜಗಳವಾದಂದಿನಿಂದ ಅವರಿಬ್ಬರೂ ಸರಿಯಾಗಿ ಮುಖ ಕೊಟ್ಟು ಮಾತನಾಡುವುದಿಲ್ಲ (ರೂಢಿ). **ಮುಖಕ್ಕೆತಣ್ಣೀರೆರಚಿದಂತಾಗು** = ನಿರುತ್ಸಾಹವುಂಟಾಗು ; ಉತ್ಸಾಹ

ಭಂಗವಾಗು : ಮಗನು ನಷ್ಟವಾದ ಸುದ್ದಿಯನ್ನು ಕೇಳಿ ಅವರ ಮುಖಕ್ಕೆ ತಣ್ಣೀರೆರಚಿದಂತಾಯಿತು (ಅದೇ). **ಮುಖಕ್ಕೆಮಂಗಳಾರತಿ ಎತ್ತು** = ಮಾಡಿದ ತಪ್ಪನ್ನು ಎತ್ತಿ ಹೇಳಿ ಅವಮಾನಗೊಳಿಸು ; ಛೀಮಾರಿ ಹಾಕು : ಯಾರೂ ಮಾಡದ ಕೆಲಸ ತಾನು ಮಾಡಲು ಹೋಗಿ ಮುಖಕ್ಕೆ ಮಂಗಳಾರತಿ ಎತ್ತಿಸಿಕೊಂಡಳೆಂದಲ್ಲ! (ಚಿನ್ನಾರಿ ೨೦). **ಮುಖಕ್ಕೆ ಮಸಿ ಬಳಿ** = ಅವಮಾನಗೊಳಿಸು ; ನಾಚಿಕೆಗೀಡುಮಾಡು : ನಿಮ್ಮ ಮುಖಕ್ಕೆ ಮಸಿ ಬಳಿಯುವಂಥ ಕೆಲಸ ನಾನು ಮಾಡಿಲ್ಲ (ಅದೇ). **ಮುಖ ಗಂಟಿಕ್ಕು** = ಮುಖವು ಬಿಗಿದುಕೊಳ್ಳು, –ಗಡುಸಾಗು: "ಎಂತಹ ಕ್ರೂರಿಗಳಿರಬೇಕು ಇವರು '' ಎಂದುಕೊಂಡು ಮುಖ ಗಂಟಿಕ್ಕಿ ನನ್ನ ಕೋಣೆಗೆ ಹೋದೆನು (ಪ್ರಕಾಶ. ೧೨೦). **ಮುಖ ಗಂಟುಹಾಕಿಕೊಳ್ಳು** = ಮುಖಗಂಟಿಕ್ಕು : ಇವರಿಬ್ಬರೂ ಈ ವಿಚಾರವಾಗಿ ಒಬ್ಬರ ಸಂಗಡ ಒಬ್ಬರು ಯಾವ ಮಾತನ್ನೂ ಆಡದೆ ಸುಮ್ಮನೆ ಮುಖ ಗಂಟುಹಾಕಿಕೊಂಡೇ ಇರುತ್ತಿದ್ದರು (ಅಪೂಟಿ. ೧೬೦); ನಾನು ಅವರ ಕೈಗೆ ಕಾರ್ಡನ್ನು ಕೊಟ್ಟೆ. ತಕ್ಷಣ ಅವರ ಕಣ್ಣಿಗೆ ಮೊದಲು ಬಿದ್ದದ್ದು ಆ ಎರಡು ನಂಬರು. ಅವರು ಮುಖ ಗಂಟುಹಾಕಿಕೊಂಡರು (ಕಾರಮು. ೯೦). **ಮುಖ ಗಡಿಗೆಯಾಗು** = ದುಮ್ಮಾನವುಂಟಾಗು : ನಮ್ಮ ಮನೆ ಹುಡುಗನಿಗೆ ಓದೋ ವಿಚಾರ ಹೇಳಿದರೇ ಮುಖ ಗಡಿಗೆಯಾಗುತ್ತೆ (ಅದೇ). **ಮುಖ ಚಿಕ್ಕದಾಗು** = ಮುಖ ಕಿರಿದಾಗು : ಅದನ್ನು ಕೇಳಿ ಚಿಕ್ಕಜ್ಜಿಯ ಮುಖ ಚಿಕ್ಕದಾಯಿತು (ಕಾಂಕಮು. ೧೦೦). **ಮುಖ ತಗ್ಗಿಸು** = ಮುಖ ಕೆಳಗೆ ಹಾಕು : ಏನೂ ಮಾಡಲು ತೋಚದೆ ವಾಸಂತಿ ಮುಖ ತಗ್ಗಿಸಿ ನಿಂತುಬಿಟ್ಟಳು (ಕೀಪೋಡ. ೧೦೨). **ಮುಖತಪ್ಪಿಸಿಕೊಳ್ಳು** = ಜನರ ಕಣ್ಣಿಗೆ ಬೀಳದಂತಿರು ; ತಲೆ ತಪ್ಪಿಸಿಕೊಳ್ಳು ; ಮರೆಯಾಗಿರು : ವಸಂತರಾಯನಿಗೆ ರಾಘಪ್ಪ ಮುಖ ತಪ್ಪಿಸಿಕೊಳ್ಳುತ್ತಿದ್ದಾನೆಯೋ ಎಂಬ ಸಂದೇಹ ಬರತೊಡಗಿತ್ತು (ಗಂಪಾಡು. ೨೩). **ಮುಖ ತಿರುಗಿಸಿಕೊಳ್ಳು** = ತಿರಸ್ಕರಿಸು ; ನಿರ್ಲಕ್ಷ್ಯಮಾಡು : ನಾನು ಮಾತನಾಡುತ್ತಿರುವಂತೆಯೇ ಅವನು ಮುಖ ತಿರುಗಿಸಿಕೊಂಡು ಹೊರಟೇ ಹೋದ (ಅದೇ). **ಮುಖದ ನೀರಿಳಿಸು** = ತೇಜೋವಧೆ ಮಾಡಿ ಅಹಂಕಾರವನ್ನು ತಗ್ಗಿಸು : ಇನ್ನೊಂದು ಸಲ ಏನಾದರೂ ನನ್ನ ಕೆಣಕಲಿ, ಮುಖದ ನೀರಿಳಿಸಿ ಕಳಿಸಿಬಿಡುತ್ತೇನೆ (ಅಕಾಶೂ. ೧೦). **ಮುಖದ ನೀರಿಳಿಸು** = ಮುಖದ ನೀರಿಳಿಸು : ಎದುರೆದುರಿಗೇ ಇವನು ನಮ್ಮ ಮುಖದ ನೀರಿಳಿಸುತ್ತಿದ್ದಾನೆ (ಪಕಥಾ. ೨೬೩). **ಮುಖಪರಚಿಕೊಳ್ಳು** = ದಿಕ್ಕು ತೋಚದಾಗು : ಕೆಲಸ ಮಾಡಿ ಸಾಕಾಗಿ ಮುಖ ಪರಚಿಕೊಳ್ಳೋ ಹಾಗಾಗಿದೆ (ಅದೇ). **ಮುಖಮರೆಸಿಕೊಳ್ಳು** = ಮುಖ ತಪ್ಪಿಸಿಕೊಳ್ಳು : ಯಾವಾಗಲೂ ಹೀಗೆ ಮುಖ ಮರೆಸಿಕೊಂಡು ಕೂರಬೇಡ (ಮುಕೀ. ೧೬೪). **ಮುಖ ಮುರಿ** = ೧. ಅವಮಾನಗೊಳಿಸು ; ಮುಖಭಂಗಮಾಡು : ಈ ಮಾನುನಿಯ ಕರದು ಮುಖ ಮುರಿದು ಅಯಿರಾವತವ ನೋಂಪಳಾನೆಂದದಿ ಕುಂತಿ (ಶಾಂಕಪ. ೬-೨೦); ರಾಮಚಂದ್ರಯ್ಯನವರು . . . ಬಂದಿರುವಾಗ ಮದುವೆಗೆ ಒಪ್ಪಲಿಲ್ಲವೆಂದರೆ ಅವರ ಮುಖ ಮುರಿದಂತಾಗುತ್ತದೆ (ಕರಾಶಾ. ೬೦). ೨. ಹಿಮ್ಮೆಟ್ಟು ; ಹಿಂದಿರುಗು : ನಿನ್ನ ಸೈನ್ಯಗಳು ಆತನ ಪೆಟ್ಟುಗಳನ್ನು ತಡೆಯಲಾರದೆ ಮುಖ ಮುರಿದು ಓಡಿದವು (ಶ್ರವಾರ. ೧೨೩). **ಮುಖಮರಳು** = (ಸಂತೋಷದಿಂದ) ಮುಖವು ವಿಕಾಸಗೊಳ್ಳು, –ಹಿಗ್ಗು : ಇಂದಿರೆಯ ಮುಖವರಳಿತು. (ಚಿರಾಕ. ೦೨೯). **ಮುಖ ಸಿಂಡರಿಸಿಕೊಳ್ಳು** = ಮುಖಗಂಟಿಕ್ಕು : ಆ ಮಾತನ್ನು ಮೊದಲೇ ನಿರೀಕ್ಷಿಸಿದ್ದಳು ಗಿರಿಜೆ. ಸುಮ್ಮನೆ ಮುಖ ಸಿಂಡರಿಸಿಕೊಂಡು ನಿಂತಳು (ದೀಪಹ. ೦೩೦). **ಮುಖಸುಕ್ಕು** = ಮುಖವನ್ನು ಕಿರಿಚು, –ಕಿವುಚು : ಅವರು ಹೋಗುವುದನ್ನೇ ತುಟಿಗಚ್ಚಿ, ಮುಖಸುಕ್ಕಿ ನೋಡುತ್ತಾ ನಿಲ್ಲುತ್ತಾನೆ (ಚಂದ್ರಸ. ೦೩-೨೦). [ಸಂ.]

**ಮುಖಂಡ** (ನಾ). ಮುಂದಾಳು ; ನಾಯಕ : ಇಬ್ಬರು ಮುಖಂಡರು ಮುಂದಾಳಾಗಿ ನಾವು ಹೋಗುವೆವೆಂದರು (ದೇಶೀಚ. ೨೬); ಈ ನಾನಾ ಸಾಹೇಬನೇ ಕ್ರಿ. ಶ. ೧೮೫೭ರ ಸಂಗ್ರಾಮಕ್ಕೆ ಮುಖಂಡನಾಗಿ ಮುಂದುವರಿದನು (ಶ್ರಾಂಧ. ೩೬). [← ಮರಾ. ಮುಖಂಡ ]

**ಮುಖಕ್ಷೌರ** (ನಾ). ಮುಖದ ಮೇಲಿನ ಕೂದಲನ್ನು ಬೋಳಿಸುವುದು : ನಾನು ಬೇಗಬೇಗನೇ ಮುಖಕ್ಷೌರ ಮುಗಿಸಿಕೊಂಡೆನು (ಹಮುಂಕ. ೨೩೬). [ಸಂ.]

**ಮುಖಗೇಡಿ** (ನಾ). ಜನರೊಂದಿಗೆ ಸರಿಯಾಗಿ ಬೆರೆಯದವನು ; ಸಂಕೋಚಸ್ವಭಾವದವನು ; ಮುಸುಂಡಿ : ನಾವು ಸಾಮಾನ್ಯವಾಗಿ ಎಂಥವನನ್ನು ಸಿಡುಕು ಮುಖಗೇಡಿ . . . ಜೊತೆ ಬೇಡದ ಗೊಡ್ಡು–ಎಂದು ಕರೆಯುತ್ತೇವೆಯೋ ಅಂಥವನು ಸಹ ಸಮಾಜಸಂಬಂಧಗಳನ್ನು ಒಂದೆರಡನ್ನಾದರೂ ಉಳಿಸಿಕೊಂಡಿರುತ್ತಾನೆ .(ರಾಶ್ಯಶಾ. ೩೬). [ಮುಖ +ಕೇಡಿ$_1$]

**ಮುಖಗೊಡು** (ಕ್ರಿ). ಮುಖವನ್ನು ತೋರಿಸು ; ಕಾಣಿಸಿಕೊಳ್ಳು : ಬಾಧೆರ ಮತಿಸಂಪಾದನೆಗೆ ಮುಖಗೊಡದ . . . ಬ್ರಹ್ಮೇಂದ್ರಾದಿ ಸುರರುಬ್ಬಟೆಗೆ ಸೋಲದನಾದಿದೇವರ ದೇವ ಶಿವನನು ಕಂಡನುಬಾಣಭವ (ಕುಮ್ಮಾಕ. ೬-೦೭). [ ಮುಖ + ಕೊಡು$_1$ ]

**ಮುಖಚರ್ಯೆ** (ನಾ). ಮುಖದಲ್ಲಿ ತೋರಿಬರುವ ಅಭಿವ್ಯಕ್ತಿ : ಮುಖಭಾವ : ಮಾಸ್ಲಿಸಿಕೋವನ ಮುಖಚರ್ಯೆಯಲ್ಲಿ ನಿರುತ್ಸಾಹ ಮ್ಲಾನತೆಗಳು ತಲೆದೋರಿದುವು (ಕ್ರಪರು. ೨೩೦); ರಸಾನುಭವವನ್ನು ಉಪಾಧ್ಯಾಯರು ಅವರ ಮುಖಚರ್ಯೆಯಿಂದ ಅರಿತುಕೊಳ್ಳಬೇಕು (ಶಿಕ್ಷದ. ೨೯೦). [ಸಂ. ಮುಖಚರ್ಯಾ]

**ಮುಖಚಹರೆ** (ನಾ). ಮುಖದ ಮಾಟ,– ರೀತಿ : ಅವಳ ಮುಖ ಚಹರೆಯುಕ್ಕಿದ್ದ ಒಂದೊಂದು ಗೆರೆಯೂ, ಸುಕ್ಕೂ ಅವಳ ಕಠೋರತೆಯನ್ನು ವ್ಯಕ್ತಪಡಿಸುತ್ತಿದ್ದವು (ಝಾಂಶಿ. ೨); ಬಾಲ್ಯದ ಕನಸುಕಾಣುವ ಮುಗ್ಧಹುಡಿಗೆಯಂತಿವಳ ಮುಖಚಹರೆ (ಕಂಚು. ೬೬-೩).

[ಮುಖ + ಚಹರೆ]

**ಮುಖಚಾರಿ** (ನಾ). [ನಾಟ್ಯ] ನೃತ್ಯದ ಒಂದು ಭಂಗಿ : ತಿರುವುಗಸ್ತುರಿಲವಣ ಲಾಗು ಮುಖಚಾರಿವುಪ್ಪರುಪೆಡಗು ಗುಂಡಲಾದಿಯ ಬೀಕ ಬಿನ್ನಣದ ಗರುವಿಕೆಯ ಪಾತ್ರದೊಳು ನಿಲ್ಲಲು ಮಲುಹಣಿಯು ಮಲುಹಣ ಕಂಡು ಬೆಱಗಾದನು (ಗುಲಕ. ೨-೨೯). [ಸಂ. ಮುಖಚಾರೀ]

**ಮುಖಚಾಳಿಯ** (ನಾ). [ಸಂಗೀತ] ರಾಗೋಚಿತವಾದ ಸ್ವರಗಳನ್ನು ಗಮಕಸಹಿತವಾಗಿ ಪ್ರಯೋಗಿಸಿ ಹಾಡುವಿಕೆ.

**ಮುಖಚಾಳಿಯರು** = ರಾಗೋಚಿತವಾದ ಸ್ವರಗಳನ್ನು ಗಮಕ ಸಹಿತವಾಗಿ ಪ್ರಯೋಗಿಸಿ ಹಾಡುವವರು : ಮೇಳದಿ ಗಂಧರ್ವರಿಪ್ಪತ್ತೇಳು ತುಂಬುರಸಹಿತ ಶುದ್ಧದ ಸಾಳಗದ ಸಂಕೀರ್ಣದೇಶಿಯ ವಿವಿಧ ರಚನೆಗಳ ಬಾಳೆಯರ ಸುರಗಣಿಕೆಯರ ಮುಖಚಾಳಿಯರ ಸಂಗೀತತಾಳದ ತೂಳುವಟಿ ತುಂಬಿದುದು ಕುಸುಮಾಯುಧನ ಕಳಕಳವ (ಕುಮ್ಮಾಸ. ೦-೨೦).

[ಮುಖ+ಚಾಳಿಯ (<ಚಳಿಯು$_2$)]

**ಮುಖಚಿಟ್ಟು** (ನಾ). ಯಾವುದಾದರೊಂದು ಆಹಾರದ ಅತಿಸೇವನೆಯಿಂದ ಬಾಯಿಕೆಟ್ಟು ಜುಗುಪ್ಸೆಯುಂಟಾಗುವುದು, –ಕಟ್ಟರೆಯಾಗುವುದು : ಮೂರುದಿನಗಳಿಂದ ಮದುವೆಮನೆಯಲ್ಲಿ ಸಿಹಿ ಊಟಮಾಡಿ ಮುಖಚಿಟ್ಟು ಬಂದಿದೆ (ಅದೇ). [ಮುಖ+ಚಿಟ್ಟು$_3$]

**ಮುಖಚಿತ್ರ** (ನಾ). ಪುಸ್ತಕ, ಪತ್ರಿಕೆ ಮೊದಲಾದುವುಗಳ ರಕ್ಷಾಪುಟದ ಮೇಲಿನ ಚಿತ್ರ : ಈ ಪೀಠಿಕಾಭಾಗಕ್ಕೆ ಸಂಬಂಧಿಸಿದ ಭಾಗಗಳಾವುವೆಂದರೆ : (೧) ಪುಸ್ತಕದ ಸಂಕ್ಷೇಪವಾದ ಹೆಸರು, (೨) ಮುಖಚಿತ್ರ, (೩) ಮುಖಪತ್ರ . . . (೧೧) ಉಪನಾಮ (ಮುದ್ರಶ. ೯೨). [ಸಂ.]

**ಮುಖಚೂರ್ಣ** (ನಾ). ಅಲಂಕಾರಕ್ಕಾಗಿ ಮುಖಕ್ಕೆ ಹಚ್ಚಿಕೊಳ್ಳುವ ಒಂದು ಬಗೆಯ ಸುಗಂಧದ ಪುಡಿ : ಮುಖಚೂರ್ಣ ಎಂಬ ಪದವನ್ನು ರಘುವಂಶಕಾವ್ಯದಲ್ಲಿ ಕಾಳಿದಾಸಮಹಾಕವಿಯು ಉಪಯೋಗಿಸಿದ್ದಾನೆ (ಶಾರದ. ೩೭೯ ಅಡಿ) ; ಮುಖಚೂರ್ಣದ (Face Powder) ಬಳಕೆಗೆ ಯಾವಳೋ ಕಪ್ಪಗಿದ್ದ ಹೆಂಗಸೊಬ್ಬಳು ಕಾರಣವಿರಬಹುದು (ಶಾತಗೇ. ೨೮೭); ಬತ್ತಿದ ಕೆನ್ನೆಗೆ ಹತ್ತಿದ ಮುಖಚೂರ್ಣದ ಬಣ್ಣ (ಕಿರಿಅ. ೦೦-೦೯). [ಸಂ.]

**ಮುಖಚೇಷ್ಟೆ** (ನಾ). ೧. ಮುಖದ ಭಾವ ; ಮುಖಚರ್ಯೆ ; ಮುಖಭಂಗಿ : ಇವನ ಗತಿ ಮುಖಚೇಷ್ಟೆ ಭಾವೋತ್ಸವ ವಿಲಾಸವುಪೇಕ್ಷೆ . . . ಇವೇ ಸಾಕಿವನು ಘಾಟದ ವೀರನೆಂದರು ವೀರರರ್ಜುನನ (ಕುಮಾ.ಭಾ. ೧೫-೨೩). ೨. ಕೀಟಲೆ, ತಮಾಷೆಗಳಿಗಾಗಿ ಮಾಡುವ ಮುಖವಿಕಾರ : ರಂಗಮ್ಮ . . . ಮಗುವಿನೆದುರು ನಿಂತು, ತಮ್ಮ ಹಲ್ಲಿಲ್ಲದ ಬಾಯಿಯನ್ನು ತೋರಿಸುತ್ತಾ, ಮುಖಚೇಷ್ಟೆ ಮಾಡಿದರು (ರಂಗಪ. ೯೩).
[ಸಂ. ಮುಖಚೇಷ್ಟಾ]

**ಮುಖಜ** (ನಾ). ೧. ಬ್ರಹ್ಮನ ಬಾಯಿಯಿಂದ ಹುಟ್ಟಿದವನು ; ಬ್ರಾಹ್ಮಣ ೨. ಬಾಯಿಯಲ್ಲಿ ಹುಟ್ಟಿದುದು ; ಹಲ್ಲು. ೩. ಅಂಗಜ ; ಕಾಮ. ೪. [ನಾಟ್ಯ] ಆಂಗಿಕಾಭಿನಯದ ಮೂರು ಬಗೆಗಳಲ್ಲಿ ಒಂದು : ಆಂಗಿಕಾಭಿನಯವು ಶಾರೀರ, ಮುಖಜ, ಚೇಷ್ಟಾಕೃತ ಎಂದು ಮೂರು ವಿಧ ; ಕೈ ಕಣ್ಣು ಮುಂತಾದ ಅಂಗೋಪಾಂಗಗಳ ಚಲನೆಗಳು ಶಾರೀರ ಮತ್ತು ಮುಖಜ (ಸಂಪಾಟಿ. ೦೦) ; ಮುದ್ರೆಗಳು ಮೂರು ವಿಧವಾಗಿವೆ. ೧. ಶಾರೀರ, ೨. ಮುಖಜ, ೩. ಚೇಷ್ಟೀಕೃತ (ಅಭಾಷ್ಯ. ೯೪). ಮುಖಜನ್ಯೆಯ = ಮನ್ಮಥನ ತಂದೆ ; ವಿಷ್ಣು : ಮುಖಜನ್ಯೆಯನೆ ಮುಕುತಾರ್ಥವಾಹದೇನೊ ಅಖಿಳತಾಮಸಗಳು ಎನಗಿಲ್ಲವೊ (ಎಡಾಕೃ. ೦೦೭-೦). [ಸಂ.]

**ಮುಖತಃ** (ಅ). ಪ್ರತ್ಯಕ್ಷವಾಗಿ ; ಮೊಖ್ತಾ : ಶಚೀಂದ್ರನು ಅವನ ಹತ್ತಿರಕ್ಕೆ ಹೋಗಿ ವಿಷಯಗಳನ್ನೆಲ್ಲಾ ಮುಖತಃ ತಿಳಿದುಕೊಂಡನು (ಬಂಕಿಮ. ೯೩). [ಸಂ. ಮುಖತಸ್]

**ಮುಖದರುಶನ** (ನಾ). ಮುಖವನ್ನು ಕಾಣುವುದು : ವರುಣದೇವರಿಗೊಬ್ಬ ಪುತ್ರನ ವರಸಿ ಬೇಡಿದೆ ಪುತ್ರವರಮುಖದರುಶನವ ಮಾಡುವೆನೆನುತಲಾ ಮಗನು ವೋಜಿಯನು ತೋಜಿ ಮುಜುದಿನವಗಲಿ ಹೋದನು (ಸಂಭಶ. ಕಂ. ೦-೦೭) ; ಏನಯ್ಯ ಕಾಲಪುರುಷ ನಿನ್ನ ಮುಖದರುಶನವನೊಮ್ಮೆ ದಯಪಾಲಿಸಯ್ಯ (ಪಲಪು. ೨೬-೨). [<ಸಂ. ಮುಖದರ್ಶನ]

**ಮುಖದರ್ಶನ** (ನಾ). = ಮುಖದರುಶನ : ವಸಜಮುಖಿ ಕೇಳ್ ಪುತ್ರಮುಖದರ್ಶನವು ಸುಲಭವೆ ಪುಣ್ಯಹೀನರಿಗೆ (ಕುಮಾ.ಭಾ. ೯-೨೯) ; ಅವನ ಮುಖದರ್ಶನದಿಂದ ಅವಳಲ್ಲಿ ಕೋಪವೇ ಎದ್ದು ನಿಂತಿತು (ಕರಿಬಸ. ೦೩).
[ಸಂ.]

**ಮುಖದಾಕ್ಷಿಣ್ಯ** (ನಾ). (ಮನಸ್ಸಿನಲ್ಲಿ ಇಷ್ಟವಿಲ್ಲದಿದ್ದರೂ) ಬೇರೆಯವರ ಮನಸ್ಸಿಗೆ ನೋವಾಗದಂತಿರಲು ತೋರಿಸುವ ಸೌಜನ್ಯ, ಕರುಣೆ ಮುಂತಾದುವು : ಆ ಸಿಟ್ಟಿನಲ್ಲಿ ಆತನಿಗೆ ಯಾವ ಸಂಯಮವೂ ಉಳಿಯುವುದಿಲ್ಲ, ಯಾರ ಮುಖದಾಕ್ಷಿಣ್ಯವನ್ನೂ ಆತ ನೋಡುವುದಿಲ್ಲ (ಚಿಕಂಜಾ. ೦೭).
[ಸಂ.]

**ಮುಖದಿರುಹು** (ಕ್ರಿ). ೧. ಮುಖವನ್ನು ಹಿಮ್ಮುಖವಾಗಿ ಹೊರಳಿಸು ; ಹಿಂದಕ್ಕೆ ತಿರುಗು : ಬೆಜಗಡರಿ ಮುಖದಿರುಹಿ ಹಿಂದಣನಿಜದ ಕರ್ಣನ ನೋಡಿ ಮುಖದಲಿ ಕಿಱುನಗೆಯ ಕೇವಣಿಸಿ ನುಡಿದನು (ಕುಮಾ.ದ್ರೋ. ೭-೩೩). ೨. ಕೋಪ, ಅಸಮಾಧಾನಗಳಿಂದ ಮುಖವನ್ನು ಬೇರೆಡೆಗೆ ತಿರುಗಿಸು ; ದುಮ್ಮಾನವನ್ನು ಸೂಚಿಸು : ದಾಯಾದ್ಯರೊಳಗವತರಿಸಿದನು ಮಗನೆನುತ ಮುಖದಿರುಹಿದಳು ಗಾಂಧಾರಿ (ಕುಮಾ.ಭಾ. ೪-೯೪) ; ಎಲೆ ಹೊಲೆಯ ಪೋಗೆಂದಬಲೆ ಮುಖದಿರುಹಿದಳು ಜಾತಿಯಲಿ (ಕೌರಿಶಾ. ೫-೩-೩೩). ೩. ಹಿಂದಕ್ಕೆ ಹೋಗು ; ಹಿಮ್ಮೆಟ್ಟು ; ಸೋಲು : ಪವನಸುತ ಮುಖದಿರುಹಿದನು . . . ಕರ್ಣನ ಖಾತಿ ಮೊಪ್ಪರಿಸೆ ಐವರ ಮುಱಿದುದು ವಿಜಯಲಕ್ಷ್ಮಿಯು ಸವತಿ ಸೇರಿತು ಸಂಭಟರಿಗೆ (ಕುಮಾ.ಕ. ೧೦-೪೦). ೪. ಹಿಮ್ಮೆಟ್ಟುವಂತೆ ಮಾಡು ; ಸೋಲಿಸು : ವಿಗಡರೆಸುಗೆಯ ಭೂರಿಬಾಣದ ಹಿಂಡು ತಱಿದವು ಹೊಗುವ ಗಂಡಿಗರ ವಾರುವನ ಮುಖದಿರುಹಿದವು ಮದವಾರಣಂಗಳ ಕೊಡಹಿದವು (ಕುಮಾ.ಕ. ೦೬-೪೧). ೫. ನಿರ್ಲಕ್ಷಿಸು ; ಉಪೇಕ್ಷಿಸು : ಜೀಯ ಸಾಕಿನ್ನುಮರದೊಳಿನಗೇನ ಬೆಸಸಿದರನಿತ ತಾ ಮುಖದಿರುಹಿದರೆ ಡಿಂಗರಿಗನಲ್ಲ (ಕುಮಾ.ಆ. ೩-೪೦).
[ಮುಖ + ತಿರುಹು$_1$ (<ತಿರಿಪು$_1$)]

**ಮುಖದೋಱು** (ಕ್ರಿ). ಮುಖವನ್ನು ತೋರಿಸು ; ಕಾಣಿಸಿಕೊಳ್ಳು ; ಗೋಚರಿಸು : ಮುಂದೆ ಬರು : ಬಾಲಕರ ಪೂರ್ಣೇಂದು ಬಾರೋ ರಿಪುಕುಲಾಂತಕನಿಪುಣ ಮುಖದೋಱೊ (ಕುಮಾ.ದ್ರೋ. ೯-೨೦).
[ಮುಖ + ತೋಱು]

**ಮುಖದ್ರೋಣಿಕೆ** (ನಾ). [ಅಶ್ವಶಾ] ಕುದುರೆಯ ನಾಲಗೆಯು (ದೋಣಿಯಂತೆ) ಬಾಗುವ ಒಂದು ಬಗೆಯ ರೋಗ : ತಾವರೆಯಂ ಕನ್ನೆಯ್ದಿಲ ಪೂವಂ ಪ್ರೋಥಾಯುರೇಖೆ ಪೋಲೆ ವಿಶೇಷಂ ತೀವಿ ಮುಖದ್ರೋಣಿಕೆಯಿಂದಾ ವಾಜಿಗೆ ಮರಣಮಿರ್ಪತಯ್ದುಬ್ದದೊಳ್ (ಅಶ್ವಶಾ ೩-೬೧).
[ಸಂ. ಮುಖದ್ರೋಣಿಕಾ]

**ಮುಖದ್ವಾರ** (ನಾ). ಬಾಯಿ : ಮುಖದ್ವಾರದಿಂದ ಗರ್ಭಕುಹರವನ್ನು ಪ್ರವೇಶಿಸಿದ ಆ ಮದ್ಯಭೂತವು ಸ್ವಲ್ಪ ಹೊತ್ತಿನೊಳಗಾಗಿ ಬುದ್ಧಿಯನ್ನೆಲ್ಲ ಹಾಳುಮಾಡಿದುದರಿಂದ ಮತ್ತನಾಗಿ ಅವಿವೇಕಿಯಾದನು (ಕಲಿಕ. ೩೯).
[ಸಂ.]

**ಮುಖಪಟ್ಟಿ** (ನಾ). ಕುದುರೆ ಮುಂತಾದ ಪ್ರಾಣಿಗಳ ನೆತ್ತಿಗೆ ಹಾಕುವ ಒಂದು ಬಗೆಯ ಅಲಂಕಾರಸಾಧನ : ಆಗ ಭಗದತ್ತನು ಹದಿನಾಲ್ಕು ತೋಮರಗಳನ್ನು ಆ ದಶಾರ್ಣದೇಶಾಧಿಪತಿಯ ಆನೆಯ ಮೇಲೆ ಇರುವ ಸುವರ್ಣಮಯವಾದ ಮುಖಪಟ್ಟಿಯ ಮೇಲೆ ಪ್ರಯೋಗಿಸಲು (ಕೃಪಾಚಿ. ೦೪೬). 'ಮೊಗವಟ್ಟ' ಪರಾ.
[ಸಂ. ಮುಖಪಟ್ಟ. / ತಮಿ. ಮುಕಪಟ್ಟು. / ಮರಾ. ಮುಖಪಟ್ಟಾ]

**ಮುಖಪತ್ರ** (ನಾ). ಪುಸ್ತಕ ಅಥವಾ ಪತ್ರಿಕೆಯ ಮೊದಲಿನ ಪುಟ,— ಹಾಳೆ ; ಮುಖಪುಟ : ಈ ಪೀಠಿಕಾಭಾಗಕ್ಕೆ ಸಂಬಂಧಿಸಿದ ಭಾಗಗಳಾವುವೆಂದರೆ : (೧) ಪುಸ್ತಕದ ಸಂಕ್ಷೇಪವಾದ ಹೆಸರು, (೨) ಮುಖಚಿತ್ರ, (೩) ಮುಖಪತ್ರ (ಗ್ರಂಥದ, ಗ್ರಂಥಕರ್ತೃವಿನ ಮತ್ತು ಪ್ರಕಾಶಕನ ಹೆಸರುಳ್ಳದ್ದು) . . . (೧೧) ಉಪನಾಮ (ಮುದ್ರಣ. ೪೨); ಮುಖಪತ್ರ ಮುದ್ದಾಗಿ ಮುದ್ರಣವಾಗಿ . . . ವರ್ಣಚಿತ್ರಗಳಿಂದ ಪರಿಪೂರ್ಣವಾಗಿರಬೇಕು (ಚಿಕ್ಕದ. ೨೬೯); "ಬಲದೇವ ಮತ್ತು ತಾರೆಯರ ನರ್ತನವೆಂದು" ಮುಖಪತ್ರಗಳ ಮೇಲೆ ವರ್ಣಚಿತ್ರಗಳನ್ನೊಳಗೊಂಡು ಪ್ರಚಾರವಾಯಿತು (ಕಲಾಸಾ. ೦೦೩). [ಸಂ.]

**ಮುಖಪತ್ರಿಕೆ** (ನಾ). ಮುಖ್ಯವಾದ ಪತ್ರಿಕೆ ; ಪ್ರಸಿದ್ಧವಾದ ಪತ್ರಿಕೆ : ಇವರ ಹೆಸರು ಸಾಧ್ಯವಿದ್ದರೆ . . . ಮುಖಪತ್ರಿಕೆಯಲ್ಲಿ ಬಂದುಬಿಟ್ಟರೆ ಇವರಿಗೆ ಸದ್ಗತಿ ಸಿಕ್ಕಂತೆಯೇ (ಹುತ್ತುಹು. ೯೭). [ಸಂ. ಮುಖಪತ್ರಿಕಾ]

**ಮುಖಪರಿಚಯ** (ನಾ). (ಯಾವಾಗಲೋ ಒಬ್ಬ ವ್ಯಕ್ತಿಯನ್ನು) ಹಿಂದೆ ನೋಡಿದ ಗುರುತು : ಎಲ್ಲೋ ನೋಡಿದ ನೆನಪು . . . ಮುಖಪರಿಚಯವೂ ಇದೆ (ಕಳಪು. ೪೭). [ಸಂ.]

**ಮುಖಪರಿಮಳ** (ನಾ). ಮುಖದಿಂದ ಹೊರಡುವ ಸುಗಂಧ ; ಉಸಿರಿನ ಸುವಾಸನೆ : ಚಂದ್ರಕಾಂತಸುಧಾವೇದಿಕಾಮಧ್ಯಭೂಮ್ಯಂತ

ರಾಳೆದೊಳ್ ಒರ್ವಳ್ ಮುಖಪರಿಮಳನಿಪತದ್ಭ್ರಮರವಾತಾಯಾಸಿತೆಯಾದಳಂ (ಶಾಂತಿಪು. ೮-೮೬ ಪ). [ಸಂ. ಮುಖಪರಿಮಲ]

**ಮುಖಪಾಠ** (ನಾ). ಪುಸ್ತಕದ ಆಧಾರವಿಲ್ಲದೆ ಬಾಯಲ್ಲಿಯೇ ಹೇಳುವಂತೆ ಅಭ್ಯಾಸಬಲದಿಂದ ಜ್ಞಾಪಕದಲ್ಲಿಡುವುದು ; ಬಾಯಿಪಾಠ ; ಉರು : ಅವುಗಳನ್ನು ಮೇಲಿಂದ ಮೇಲೆ ಓದಿ ಧ್ಯಾನದಲ್ಲಿಡಬೇಕು. ಅದಷ್ಟು ಮುಖಪಾಠ ಮಾಡಬೇಕೆಂದು ಒತ್ತಾಯಪಡಿಸುತ್ತಿದ್ದರು (ಶೀಪಾಪ. ೩೭). [ಸಂ.]

**ಮುಖಪಾವಡ,** ಮುಖಪಾವುಡೆ (ನಾ). ೧. ಅವಕುಂಠನ; ಮುಸುಕು : ಹಡಪ ಕನ್ನಡಿಯುಂ ಮುಖಪಾವಡ ಕುಚಾಯುಮಂ ಪಿಡಿದು . . . ಮಾನಿನಿಯರು (ಪಪಮೋ. ೩-೯೩). **ಮುಖಪಾವುಡೆ :** ೨. ಮುಖವನ್ನು ಒರಸಿಕೊಳ್ಳಲು ಉಪಯೋಗಿಸುವ ಬಟ್ಟೆ : ಅಳಂಕರೂಪನ ಮುಖಚಂದ್ರಮನ ಕೂಡಿ ಸುಖದೊಳೋಲಾಡು ನೀನೆಂದು ಸಖಿ ದರಹಸಿತ ಬೆಳ್ದಿಂಗಳೀವೊಲು ಶುಭ್ರಮುಖಪಾವುಡೆಯ ನೀಡಿದಳು (ಕಂಪರ. ೨೪-೯೪). [ಮುಖ + ಪಾವಡ$_1$ (< ಪಾವುಡ$_1$)]

**ಮುಖಪಾವುಡೆ** ' ಮುಖಪಾವಡ ' ನೋ.

**ಮುಖಪುಟ** (ನಾ). = ಮುಖಪತ್ರ : ಶ್ರೀ ಕಾರಂತರು ಈ ಪುಸ್ತಕದ ಮುಖಪುಟಕ್ಕೆ ತಮ್ಮ ಚಿತ್ರದಿಂದ ಈ ಸಂಗ್ರಹವನ್ನು ಅಲಂಕರಿಸಿದ್ದಾರೆ (ಕೇಪೋಠ. ೯ ಹಮ್ಮ ಪುಟ); ಇವುಗಳನ್ನು ಸಾಮಾನ್ಯವಾಗಿ ಗ್ರಂಥದರ್ಶಕದ ಮೇಲೆ, ಮುಖಪುಟದ ಹಿಂಬದಿಗೆ . . . ಬರೆಯಲಾಗುತ್ತದೆ (ಗ್ರಂಶಾಂ. ೩೨). [ಸಂ.]

**ಮುಖಪೂರಣ** (ನಾ). ನೀರು ಮುಂತಾದ ದ್ರವಪದಾರ್ಥಗಳಿಂದ ಬಾಯಿ ಮುಕ್ಕಳಿಸುವುದು : "ಗಂಡೂಷಃ , ಮುಖಪೂರಣಂ – ಈ ೨ ಮುಕ್ಕುಳ್" (ಅಣಾಯು. ೧೩೦-೦೨೦). [ಸಂ.]

**ಮುಖಪ್ರಕ್ಷಾಳನ** (ನಾ). ಮುಖವನ್ನು ತೊಳೆಯುವಿಕೆ ; ಮುಖಮಜ್ಜನ : ಅಂತು ನೃಪತಿ ವ್ಯಗ್ರನಾಗಿ ಮುಖಪ್ರಕ್ಷಾಳನಾರ್ಥಂ ಪೇರಡವಿಯೊಳಂಜಲಿಯಿಂ ಜಲಮಂ ತಂದು (ಕಾದಂಪೂ. ೭೦೦); ತಣ್ಣನೆಯ ನೀರಿನಲ್ಲಿ ಮುಖಪ್ರಕ್ಷಾಳನ, ಪಾದಪ್ರಕ್ಷಾಳನಗಳನ್ನು ಮಾಡಿ . . . ಪ್ರಯಾಣವನ್ನು ಮುಂದುವರಿಸಿದರು (ಚಾಂತಲಾ. ೨೯೬). ' ಪಾದಪ್ರಕ್ಷಾಲನ ' ಪರಾ. [ಸಂ. ಮುಖಪ್ರಕ್ಷಾಲನ]

**ಮುಖಪ್ರಸಾಧನ** (ನಾ). ಮುಖದ ಅಲಂಕಾರ : ಪೊಸಮಾಣಿಕವಲ್ಲಣ ಮಚ್ಚಮುತ್ತು ತಳ್ತೆಸೆವ ಮುಖಪ್ರಸಾಧನಂ . . . ಒಪ್ಪೆ ಬಂದುಮಂದಸ ದೃಶವಾಜಿಗಳ್ (ರಾಚರೀ. ೧೪-೬೨). [ಸಂ.]

**ಮುಖಬಿಲೆ** ' ಮೋಕಾಬಿಲೆ ' ನೋ.

**ಮುಖಬೆಲೆ** (ನಾ). ೧. ಹಣ ಅಥವಾ ವಸ್ತುವಿನ ಮೇಲೆ ನಮೂದಿಸುವ ಬೆಲೆ ; ನಮೂದು ಬೆಲೆ : ಆ ಪುಸ್ತಕದ ಮುಖಬೆಲೆ ನಾಲ್ಕು ರೂಪಾಯಿ (ರೂಢಿ). ೨. (ಅಲಂ) ಯೋಗ್ಯತೆ ; ಅಂತಸ್ತು : ಅವನು ಯಾರನ್ನಾದರೂ ಅವರ ಮುಖಬೆಲೆಗೆ ಮಾತ್ರ ಸ್ವೀಕರಿಸುವವನು (ಗಂಪಾಯು. ೬೩). [ಮುಖ + ಬೆಲೆ$_1$]

**ಮುಖಭಂಗ** (ನಾ). (ಅಲಂ) ಎದುರೆದುರಿಗೇ ಮಾಡುವ ಅವಮಾನ ; ತೇಜೋವಧೆ : ಊರಲ್ಲೆಲ್ಲ ಜಂಬ ಕೊಚ್ಚುತ್ತ ಅಲೆಯುತ್ತಿದ್ದ ಕಾಮಣ್ಣನ ಗುಂಪಿನವರಿಗೆಲ್ಲ ಮುಖಭಂಗವಾದಂತಾಗಿತ್ತು (ಹುಚ್ಚು.ಕೆ. ೬೮) ; ಹಿಂದೆ ಎಷ್ಟೋ ಸಲ ನಿನ್ನಿಂದ ಅವರಿಗೆ ಮುಖಭಂಗವಾಗಿದೆ (ಹಳ್ಳಿಪಾ. ೨೮). [ಸಂ.]

**ಮುಖಭಂಗಿ** (ನಾ). ಮುಖದ ಭಾವ, – ರೀತಿ ; ಮುಖಮುದ್ರೆ : ರಾಮನಂ . . . ಶೋಕಮುಖಭಂಗಿಯಿಂದಶ್ರುಲೋಚನನಾಗಿ ನಿಡುಸುಯ್ದುನೆರ್ದೆ ನೊಂದನೋಲ್ (ಶ್ರೀರಾಮಪಾ. ೦೯೬-೪೦೮); ಶಿಂಗನ ಮುಖಭಂಗಿಯನ್ನು ನೋಡಿಯಾದ ಮೇಲೆ ಸ್ವಲ್ಪ ಹಿಂದೇಟು ಹಾಕಿದ (ಕಪುಹೊ. ೬೬). [ಸಂ. ಮುಖಭಂಗೀ]

**ಮುಖಭಂಗಿತ** (ನಾ). ಅಪಮಾನವನ್ನು ಹೊಂದಿದವನು ; ನಾಚಿಕೆಗೆ ಈಡಾದವನು : ಮರುಕ್ಷಣ ನಾನು . . . ಕೋಣೆಯಿಂದ ಹೊರಗೆ ಮುಖಭಂಗಿತನಂತೆ ಬಂದೆನು (ಪೇಪುಂತ. ೩೩೬). [ಸಂ.]

**ಮುಖಭದ್ರ** (ನಾ). ಮುಂಭಾಗದ ಅಂಗಳ ; ಮುಖಮಂಟಪ : ಶ್ರೀಮನ್ಮಹಾಮಣ್ಡಳೇಶ್ವರಂ ಎಚಿಹರಸದೇವಂ ಬಡಗಣಮುಖಭದ್ರವ ನಳಂಕಾರಸಹಿತ ಮಾಡಿಸಿದ ಮಂಗಳಮಹಾಶ್ರೀ (ಎಕ. VII (S), ಶಿಕಾಂ. ೩೩೦-೦ ; ಸು.1200). [ಸಂ.]

**ಮುಖಭಾವ** (ನಾ). = ಮುಖಭಂಗಿ : ಅವನು ಮಾತಾಡುತ್ತಿದ್ದಾಗ ವ್ಯಕ್ತವಾಗುತ್ತಿದ್ದ ಮುಖಭಾವ ಅವಳ ನೆನಪುಗಳನ್ನು ಕೆರಳಿಸುತ್ತಿತ್ತು (ಕೃಪರು. ೦೧೦). [ಸಂ.]

**ಮುಖಮಂಟಪ** (ನಾ). ದೇವಾಲಯ, ಅರಮನೆ ಮುಂತಾದುವುಗಳ ಮುಂಭಾಗದ ಹಜಾರ ; ಮೊಗಸಾಲೆ : ಮುಖಮಂಟಪದ ಕ್ಷುಲ್ಲಕ ದ್ವಾರದ ಹೇಮಕುಂಭ ಎಂಟುಸಾವಿರ (ಕಪಾಠ. ೦೬೭); ಅದರ ಮುಂದೆ ರಮಣೀಯವಾದ ಮುಖಮಂಟಪವನ್ನು . . . ಮಾಡಿದ್ದಾರೆ (ಶುಂಠಯು. ೬-೩೭); ಮುಖಮಂಟಪ ದೇವಾಲಯಗಳಲ್ಲಿ ನವರಂಗದ ಮುಂಭಾಗದಲ್ಲಿ ಸಾಧಾರಣವಾಗಿ ಇರುತ್ತದೆ. ಇದರ ಮೂಲಕವೇ ಜನಗಳು ಒಳಕ್ಕೆ ಹೋಗುವುದು (ಶ್ಮಪಾಶು. ೩೪). [<ಸಂ. ಮುಖಮಂಡಪ]

**ಮುಖಮಂಡನ** (ನಾ). ತುಟಿಯನ್ನು ಅಂದಗೊಳಿಸುವಂತಹುದು ; ತಾಂಬೂಲ : ' ಮುಖಮಂಡನಕ್ರೀಡೆ ' ಪರಾ. [ಸಂ.]

**ಮುಖಮಂಡನಕ್ರೀಡೆ** (ನಾ). ತಾಂಬೂಲಚರ್ವಣ : ಗಗನಮಂಡಲಮಂ ಚಕ್ರವರ್ತಿ ಮುಖಮಂಡನಕ್ರೀಡೆಯಿಂ ನೋಡುತ್ತಿರ್ಪನ್ನೆಗಂ (ಚಂದ್ರಪು. ೯-೪ ಪ). [ಸಂ. ಮುಖಮಂಡನಕ್ರೀಡಾ]

**ಮುಖಮಂಡಪ** (ನಾ). = ಮುಖಮಂಟಪ : ಹೊರಗಿನ ಮುಖಮಂಡಪ ಮಾತ್ರವೊ ದೇವಾಲಯದ ಕಲ್ಲುಗಳಿಂದ ನಿರ್ಮಿತವಾಗಿದೆ (ಹೊಯ್ಸಪಾ. ೪೩). [ಸಂ.]

**ಮುಖಮಜ್ಜನ** (ನಾ). ಮುಖವನ್ನು ತೊಳೆಯುವಿಕೆ ; ಮುಖಪ್ರಕ್ಷಾಳನ, ರಾಮಣನು ವಿದಿತ ಮುಖಮಜ್ಜನದ ಸಲಿಸಿರೆ . . . ಚಾರರು ಬಂದು ಹೇಳಿದರು (ಕೌಶಿಕಾ. ೦೬-೦) ; ಹಾಸಿಗೆಯನ್ನು ಸುರುಳಿ ಮಾಡಿ ಒಳಕೋಣೆಯಲ್ಲಿರಿಸಿ, ಮುಖಮಜ್ಜನಕ್ಕೆ ಹೊರಟೆ (ಮುಂಕಿಶ್ಮ. ೬೬). [ಸಂ.]

**ಮುಖಮಣಿ** (ನಾ). ಹಾರದ ಮಧ್ಯದಲ್ಲಿರುವ ರತ್ನ ; ನಾಯಕಮಣಿ : "ತರಳಃ, ಹಾರಮಧ್ಯಗಃ—ಹಾರದ ನಡುವೆಯಿರುವ ನಾಯಕಮಣಿ . . . ಸರದ ಮುಖಮಣಿ" (ಸಿದ್ಧಾಂತಿ. ೦೯೯). [ಸಂ.]

**ಮುಖಮಾಯ** (ನಾ). ಮುಖವು ಕಾಣದಂತೆ ಮಾಡುವಿಕೆ,— ಅದೃಶ್ಯಗೊಳಿಸುವಿಕೆ : ಕತ್ತರಿ ಮಳಲು ಚಂಡವೇದಿಯು ಕಿತ್ತ ಹಿಡಿಯುಂಬಿಡುವ ಕಲ್ಲುಂ ಮತ್ತೆ ಮುಖಮಾಯದ ತಿಲಕಮುಂ ಕರ್ಕಟಿಯ ರಜ್ಜು ನೀಲಗಪ್ಪಡ ದುಡಗೆ . . . ನಾಯಿಗಳ ಬಾಯ್ಮುಟ್ಟು ಓಳಿಯಿಂದಿವು ಮೆರೆಯೆ (ಬಸಪು. ೪೦-೩). [ ಸಂ. ಮುಖಮಾಯಾ ]

**ಮುಖಮಾರ್ಜನ** (ನಾ). = ಮುಖಮಜ್ಜನ : ಮರುದಿವಸ ಮುಂಜಾನೆ ಮುಖಮಾರ್ಜನಾದಿ ವಿಧಿಗಳನ್ನು ತೀರಿಸಿಕೊಂಡು, ಬಾಬೂರಾಯನು ತನ್ನ ಆಫೀಸುರೂಮಿಗೆ ಬಂದು ಕುಳಿತುಕೊಳ್ಳಲು, ಆ ದಿನದ ಟಪಾಲು ಬಂತು (ಕಳ್ಳಕಾ. ೨೪). [ಸಂ.]

**ಮುಖಮಾರ್ಜನೆ** (ನಾ). ಮುಖವನ್ನು ತೊಳೆಯುವಿಕೆ : ಎದ್ದವನೇ ಕೆಳಗೆ ಹೋಗಿ, ಮುಖಮಾರ್ಜನೆ ಮಾಡಿಕೊಂಡ (ಅಕಪಾ. ೦೨). [ ಸಂ. ಮುಖಮಾರ್ಜನ ]

**ಮುಖಮುದ್ರಿತ** (ನಾ). ೧. ಬಾಯಿ ತೆರೆಯದಿರುವಂಥದು : ಶ್ರುತ ಲಕ್ಷ್ಮೀಬುಧ[ಸಭಾ]ಮುದ್ರಿತಮಾದುದು ಸುಜನವೃತ್ತಿ ದುರ್ಜನಮುಖ ಮುದ್ರಿತಮಾದುದೀ ಜಗನ್ಮುದ್ರಿತಮಾದುದು ವೆಂಪನನ್ನದಣ್ಣಾಧಿಪನ (ಶಾಶಾ. XX, ೭೪-೨೩ ; 1112). ೨. ಬಾಯಿ ಕಟ್ಟಿಸುವವನು, – ಮುಚ್ಚಿಸುವವನು : ದಿಟನುಡಿವನ್ಯವಾದಿ ಮುಖಮುದ್ರಿತನುದ್ಧವಾದಿ ವಾಗ್ಬಲೋದ್ಭಟ ಜಯಕಾಳಮಂಡನಪಶುಬ್ದಮದಾಸ್ಕಂದಕವಾದಿ ದೈತ್ಯ ಧೂರ್ಜಟಿ ಕುಟಿಳಪ್ರಮೇಯ ಮದವಾದಿಭಯಂಕರನೆಸ್ಸು ಮಂಡಳಂ ಸ್ಫುಟಪಟುಘೋಷದಿಕ್ತಟಮನೆಯ್ದಿತು ವಾಕುಪಟು ಗೋಪನನ್ವಿಯ (ಎಕ. II, ೬೯-೯೮ ; 1100). [ಸಂ.]

**ಮುಖಮುದ್ರೆ** (ನಾ). ಮುಖದಲ್ಲಿ ಕಂಡುಬರುವ ಭಾವ ; ಮುಖಚರ್ಯೆ : ಸ್ವಭಾವಮುಗ್ಧೆ ಮುಗ್ಧವದನವನಜಮನೆಜಗಿ ತನ್ನ ಮುನ್ನಿನ ಜನ್ಮಂಗಳನಿಂತೆಂದು ಬರೆದು ತೋರ್ಪಂತೆ ನೆಲನಂ ಬರೆಯುತ್ತ ಮುಪಗತಮುಖಮುದ್ರೆಯಾಗಿ (ಆದಿಪು. ೩-೩೨ ವ) ; ಇದರಲ್ಲಿ . . . ರಸ ಭಾವಗಳನ್ನು ಸುವ್ಯಕ್ತವಾಗಿ ತೋರ್ಪಡಿಸುವ ಮುಖಮುದ್ರೆಗಳೂ ಇವೆ (ಭಾರತ. ೩೩೭). [ಸಂ. ಮುಖಮುದ್ರಾ]

**ಮುಖಮುನಿಸು** (ನಾ). ಮನಸ್ತಾಪ ; ವೈಮನಸ್ಯ : ಮಾತಿಗೆ ಮಾತು ಕಲಿತು ನುಡಿಗೆ ನುಡಿಯು ಕಲಿತು ತರ್ಕಮರ್ಕಟರಂತೆ ಹೋರುವ ಬಯಲ ಸಂಭ್ರಮದ ತರ್ಕಿಗಳ ಕಂಡರೆ ಮಾಗಿಯ ಕೋಗಿಲೆಯಂತೆ ಮುಖಮುನಿಸಾಗಿರಿಸಯ್ಯ (ಸಿದ್ಧೇವ. ೭೩-೨೦೮). [ಮುಖ + ಮುನಿಸು₂]

**ಮುಖಮೂಲ್ಯ** (ನಾ). ನಮೂದಿಸಿದ ಬೆಲೆ ; ಮುಖಬೆಲೆ : "(ನಾಣ್ಯ, ಕಾಗದದ ಹಣ, ಮೊ.ಗಳ ಮೇಲೆ ಹಾಕಿರುವ) ಮುಖಮೂಲ್ಯ ; ನಮೂದು ಬೆಲೆ" ( Face Value. ಇಂಕನ). [ಸಂ.]

**ಮುಖರ₁** 'ಮುಕುರ₁' ನೋ.

**ಮುಖರ₂** (ಗು). ೧. ಅತಿಯಾಗಿ ಮಾತನ್ನಾಡುವ ; ಗಳಹುವ : ಹರಟುವ. ೨. ಸದ್ದುಮಾಡುವ ; ಧ್ವನಿಸುವ : ಧವಳತಮರರುಹ ಪವನನಪವಮಾನಂಗೆಯ್ದು ಕಂದ ನಿಷ್ಠುರಚೀರೀರವಮುಖರ ಪರುಷಕಾನನ ಪವಮಾನನ ಸೋಂಕನಾಸೆಗೆಯ್ಯಲ್ ಬಗೆದೈ (ಶಂಖಾಪು. ೭-೧೧). ೩. ಝಣಝಣಿಸುವ; ಝಣತ್ಕಾರ ಮಾಡುವ : ವರಹಂಸಕದಂಬಕ ಮದು ಶರದಂಬುದಮಲ್ತು ಮುಖರನೂಪುರಸಂವಾದಿರವಂ ಸೆಗಬ್ದಿಪ್ಪುದು ಬಂಧುರಪದಜೀಂದಿದಜಿಸೊಳೆಂಬುದುಪಮಾಕ್ಷೇಪಂ (ಕವಿರಾ. ೩-೧೧೩). ೪. ಮಾರ್ದನಿಯನ್ನು ಕೊಡುವ ; ಅನುರಣನ ಮಾಡುವ. ೫. ಭಾವವನ್ನು ಸೂಚಿಸುವ, –ಹೊರಗೆಡಹುವ. ೬. ತೆಗಳುವ; ನಿಂದಿಸುವ : 'ಮುಖರಭಾಷೆ' ಪರಾ. ೭. ಲೇವಡಿ ಮಾಡುವ : ಅಣಕಿಸುವ. (ನಾ). ೮. ಶಬ್ದ ; ಧ್ವನಿ : ಉಪಹಾರ ಕುಸುಮಮತ್ತಮಧುಕರಝಂಕಾರಮುಖರಮುಮಪ್ಪ ಪುರಮನರಮನೆಯು ಮನತಿವಿಭೂತಿಯಿಂ ಪುಗಿಸಿ (ಶಂಖಾಪು. ೬-೯೫ ವ) ; ಅವಿವೇಕಂ ತದ್ಧರ್ಮ ಶ್ರವಣದಿನೋಸರಿಸಿದಂತಿರಾತ್ರಿಯುಮಣಮಾಗವೆ ಚಂಪಕಧಾತ್ರೀರುಹನಿವಹಂಗಳ್ ಮುಖರಮಲಿನಮಧುಪಪುಂಜದಾ (ಶಂವ್ರಪು. ೨-೯೪) ; ತನಗ ಹಮಿಕೆಯಿಂದಿರದೆಜಿಪ ನೃಪಾಳರ ಮೌಳಿಮಾಳೆ ಕುಟ್ಟಿಮಸಂಘಟ್ಟನದಿನತಿ ಮುಖರಮಾಗಿರ್ಪನೆಗಂ (ಕೃಷ್ಣಪು. ೪-೭೦). 'ಮುಖರಗೊಳ್' ಪರಾ. ೯. ಚೆನ್ನಾಗಿ ಮಾತನ್ನಾಡುವವನು : ವಾಚಾಳಿ : ಮುನಿಪತಿನಾರದ ನಭಿನುತಮತಿಮುಖ[ಶಾಕಾಂ. ಕು]ರನಾಗಿ ಹರಿಗಿಂತೆಂದಂ (ಜಗಪಿ. ೫-೯೮). ೧೦. ಮಾತು ಕೊಟ್ಟವನು : ಮುಖರನಾದೈ ಪಾರ್ಥ ಬರ್ಹಿಮರ್ಮುಖರ ಬಾಣಸದಾತನೀತನು ಸುಖವೆ ಹೇಳ್ಕೆ ತಂದೆ ಖಾಂಡವವನದ ನಿರ್ವಹನ (ಕುಮ್ಯಾಭಾ. ೨೦-೧೭). ೧೧. ನಿಂದಿಸುವವನು ; ಅಪ್ರಿಯವಾದ ಮಾತು ಗಳನ್ನಾಡುವವನು : "ದುರ್ಮುಖಂ ಮುಖರನವಂ" (ವಸ್ತುಕೋ. ೨೦೦-೧೭). ೧೨. ಅಣಕಿಸುವಿಕೆ ; ಪರಿಹಾಸ್ಯಮಾಡುವಿಕೆ. ೧೩. ಮಾತು : ನುಡಿ ; ವಚನ : ಅಂತುತ್ತಸ್ನಾಪಧಿಬೋಧಂ ಧರ್ಮಾಮೃತಾಸ್ವಾದನ ಪರನಾಗಿ ಕಿಱದುಪೊತ್ತನಿರ್ದು ನಿಜಮನೋಗತಕಾರ್ಯವಿಜ್ಞಾಪನಮುಖರ ಮುಖನಾಗಿ (ಆದಿಪು. ೧೫-೨೨ ವ) ; ಮುಹುರ್ಮುಹುರಾಶೀರ್ವಾದಮುಖರ ಮುಖನಾದ ರಾಮದೇವನಂ ಲಕ್ಷ್ಮಣಂ ಮದಂಬಿಕೆಯುಂ ಕಂಡೆನಲ್ಲಿತ್ತಲಿರ್ದ ಪಳೆಯಬುದುಂ (ಶಂಖಾಪು. ೯-೧೩೨ ವ). 'ಮುಖರಿಸು' ಪರಾ. ೧೪. ಕಾಗೆ. ೧೫. ಮುಂದಾಳು : ಮುಖಂಡ ; ನಾಯಕ. ೧೬. ಶಂಖ. [ಸಂ.]

**ಮುಖರಂಬ** 'ಮೊಗರಂಬ' ನೋ.

**ಮುಖರಗೊಳ್** (ಕ್ರಿ). ಧ್ವನಿಯಿಂದ ತುಂಬು : ನಾದಮಯವಾಗು : ಸಿದ್ಧರಾದ ಬ್ರಹ್ಮವೇತ್ತರಿಂದುಪಾಶ್ರಿತಮಾಗಿ ಹಾಱೂ ಹಾಱೂ ಹಾಯೆಂದು ಸಾಮಧ್ವನಿಯಿಂ ಮುಖರಗೊಂಡು (ವಿವೇಕ. ೨೬೮). [ಮುಖರ₂ + ಕೊಳ್₁]

**ಮುಖರತ** (ನಾ). [ಕಾಮಶಾ] ಚುಂಬನ : ರತದೊಳಗ್ಗಳಂ ಮುಖ ರತಂ ಸುರತೋತ್ಸವಕೆ (ಆದಿಪು. ೧೧-೯೭). [ಸಂ.]

**ಮುಖರತಿ** (ನಾ). [ಕಾಮಶಾ] ಬಾಯಿಯಲ್ಲಿ ಮಾಡುವ ಒಂದು ಬಗೆಯ ನೀಚತರವಾದ ರತಿಕೇಳಿ : ಸತಿ ತೊಡೆಯೊಳಿರ್ದು ಮುಖರತಿ ಗೆಯ್ಯುತಿರೆ (ಜನವ. ೧೦-೨೭). [ಸಂ.]

**ಮುಖರತೆ** (ನಾ). ೧. ಗಳಹುವಿಕೆ ; ಹರಟುವಿಕೆ : ಮೊದಮೊದಲು ಇಂಗ್ಲಿಷ್ ಕಲಿತವರು . . . ಮದ್ಯ ಮಾಂಸ ಮುಖರತೆ (ವಾಚಾಳತ್ವ) ಇವೇ ನಾಗರಿಕತೆಯ ಮುಖ್ಯಉಪಕರಣಗಳೆಂದು ತೀರ್ಮಾನ ಮಾಡಿಕೊಂಡರು (ಪಿಂಚಂ. II, ೨೯೦). ೨. ನಿಂದೆ ; ದೂಷಣೆ : ದಶಮುಖನ ಮುಖರತೆಯುಮನುದ್ವೃತ್ತತೆಯುಮಂ ನೆಱೆಯೆ ಬಿನ್ನವಿಸಿ ಮಾಣ್ಬುದುಂ (ಶಂಖಾಪು. ೧೨-೭೭ ವ). ೩. ಶಬ್ದ ; ಗದ್ದಲ. ೨, ೩ : ಮುಖರತೆ ಪುರುಳಿಯೊಳ್ . . . ಮಹಾಮಾತ್ರವರ್ತನಂ ಸೃಣಿಯೊಳಲ್ಲದಿಲ್ಲಮಲ್ಲಿಯುಂ (ಶಂವ್ರಪು. ೩-೯ ವ). [ಸಂ. ಮುಖರತಾ]

**ಮುಖರಭಾಷೆ** (ನಾ). ನಿಂದೆಯ ಮಾತು ; ತೆಗಳಿಕೆ : ಮೊಗಗಪ್ಪಾಗಿ ತಮಿಳಲ್ಲಿ ಮುಖರಭಾಷೆಯಿಂದ ಕೊರಲ್ಚಿಯೊಳರಿಕೊಳ್ಳುತ್ತಿದ್ದ, ಕಟ ಪಾಯಲ್ಲಿ ನೊರೆಗಟ್ಟಿ, ಮುಟ್ಟಿಮೋಗಿ — ಮಲಗಿಸಲ್ಪಡುವನು (ಮುಂತ್ರಕ. ೧೨೨-೫). [ಸಂ. ಮುಖರಭಾಷಾ]

**ಮುಖರಸ** (ನಾ). ೧. ಜೊಲ್ಲು ; ಲಾಲಾಜಲ : ನಿದ್ದೆಯೊಳ ಗಿಂದ ಎಚ್ಚರಿಸಿತ್ತು, ಬಂಜೆಗೆ ತೊರೆಗರೆಯಿಸಿತ್ತು. – ಈ ಮುಖರಸ (ಉದ್ಯೋಶಿ. ೧೦೭-೯). ೨. ಮುಖದ ಕಾಂತಿ, – ಕಳೆ : ವಿಭೂಷಣ ಪ್ರಭಾತ್ಯುನ್ನತಿ ಮಾಣ್ದಪುಂ ಮುಖರಸೋನ್ನತಿ ಮಾಣದೆ ಜೈನತತ್ವ ಸಂಪನ್ನರನಾಜಮಂಜಮಭಯ ಗೆಲಲಾರ್ಕುಮೊ ವಿಾಜಲಾರ್ಕುಮೋ (ಶಾಂತಿಪು. ೭-೭೯). [ಸಂ.]

**ಮುಖರಾಗ** (ನಾ). ಮುಖದ ಬಣ್ಣ, – ರಂಗು : ಪ್ರಕಟಿತಪ್ರವಾಳಮುಖ ರಾಗಮುಂ ಸ್ವಸ್ತಿಕಪ್ರಶಸ್ತಮಣಿದರ್ಪಣಸಮರ್ಪಿತಮುಮಪ್ಪ ಕಳಧೌತ ಮಂಗಳಕಳಶಮುಂ ಬಳಸಿ (ಮಲ್ಲಿಪು. ೯-೨೦೧). [ಸಂ.]

**ಮುಖರಿ₁** (ನಾ). ೧. ಒಂದು ಬಗೆಯ ದೇಶೀತಾಳ: 'ಮುಖರಿಗಾಣ' ಪರಾ. ೨. ಮದ್ದಳೆಗಳಲ್ಲಿ ಒಂದು ಪ್ರಕಾರ : ಶ್ರೀವಿರೂಪಾಕ್ಷ ನೋಲಗದಲ್ಲಿ ಮುಖರಿ ಮೊದಲಾದ ನಾಲ್ಕು ತೆಱದ ಮದ್ದಳೆಗಳೊಳಗೆ . . . ನುಡಿಸಿ (ವಿರೂಪಾ. ೬೦). [ಸಂ. ಮುಖರೀ]

**ಮುಖರಿ₂** (ನಾ). ಒಂಬತ್ತು ಬಗೆಯ ವಿಷದ ಹಲ್ಲುಗಳಲ್ಲಿ ಒಂದು : ಅವರಲ್ಲಿಯೊಂಬತ್ತು ವಿಷದ ಹಲ್ಲುಗಳು ಅವಾವುವೆನೆ ಕಾಳರಾತ್ರಿ ಕರಾಳಿ ಯಮದೂತಿ ವಿಭೀಷಣಿ ಭದ್ರಕಾಳಿ ಮುಖರಿ ಸರ್ಪದಂತಿ ಉಗ್ರಭೀಷಣಿ ಅತ್ಯುಗ್ರಭೀಷಣಿ (ವಿಷಚಿ. ೬-೨). [< ಸಂ. ಮುಖರಾ ?]

**ಮುಖರಿಗಾಣ** (ನಾ). [ಸಂಗೀತ] ದೇಶೀತಾಳವನ್ನು ಪ್ರಯೋಗಿಸಿ ಹಾಡುವವನು: ನಾನಾವಿಧದಿಂ ಪ್ರಯೋಗಿಸುವುಪಾಂಗಂಗಳ್ ರಸಂಬೆತ್ತು ಬಿತ್ತರಿಪಂತಾಣತಿ ಮಾಡಿದಂ ಮುಖರಿಗಾಣಂ (ಮಲ್ಲಿಪು. ೬-೨೩) ; ರಾಜಾಂಗಣದೊಳಗೆ ಮಂಗಳಾಚಾರಸಂಗೀತಕವುಂ ನೆಗಟ್ವ ಮುಖರಿಗಾಣರ ತಾಳವಾದ್ಯಕೋಳಾಹಳದೊಳಂ (ಅಸಂಪು. ೩-೩ ಪ). [ಮುಖರಿ$_1$ + ಗಾಣ$_3$]

**ಮುಖರಿತ** (ಗು). ೧. ಶಬ್ದದಿಂದ ಕೂಡಿದ ; ಧ್ವನಿಸುವ : ವಧೂವರರಿರ್ವರುಮಂ . . . ಅಲಕ್ತಕದ್ರುಪಾರುಣಚರಣಸಂಚರಣರಣಿತಮಣಿನೂಪುರಮುಖರಿತದಿಗಂತರಾಂತಃಪುರಜನಾಶೀರ್ವಾದಕೋಳಾಹಳಮುಮೆಸೆಯೆ ಮುಂದಿಟ್ಟು ತಂದು (ಆದಿಪು. ೪-೪೭ ಪ) ; ಪಾಂಡವಬಳಜಳನಿಧಿಯನಳಿಕುಳ ಝೇಂಕಾರಮುಖರಿತವಿಶಾಳಕರಟತಟವಾ ದಿಶಾಗಜೇಂದ್ರಂ ಕಲಂಕೆ (ಪಂಪಭಾ. ೧೧-೭೦ ಪ). (ನಾ). ೨. ಧ್ವನಿಯಿಂದ ಕೂಡಿದುದು : ಶಬ್ದದಿಂದ ತುಂಬಿದುದು : ಜೀರುಂಡೆಯ ಸ್ವರದಿಂದ ವನಭೂಮಿ ಎಲ್ಲವೂ ಮುಖರಿತವಾಯಿತು (ಇಪ್ಪ೪. ೩೪೦) ; ಶಾಂತಿನಿಕೇತನದ ಶಾಲವನದ ನಡುವೆ ನನ್ನ ಜ್ಞಾಪನಸಭೆಯು ಮರ್ಮರಿತವಾಗಲಿ, ಮುಖರಿತವಾಗಲಿ (ಶಿಖಂಡ. II. ೦೭೩). [ಸಂ.]

**ಮುಖರಿಸು** (ಕ್ರಿ). ಸ್ಪಷ್ಟವಾಗಿ ಮಾತನ್ನಾಡು ; ಹೇಳು : ಸುಖದೊಳಿರ್ವಾಗೆಲ್ಲ ಸುಮುಖರಾಗಿರಬಹುದಖಿಲವ್ಯಾಕುಲ ತಟ್ಟಿದಾಗ ಮುಖಕೆ ಕವಿದ ನೋವನೊದಚುವುದರಿದೆಂದು ಮುಖರಿಸಿ ಪೊಗಳ್ದನು ಫಣಿಪ (ಭರತ. ೭೪-೭೭). [ಮುಖರ$_2$ + — ಇಸು$_3$]

**ಮುಖರೆ** (ನಾ). ಹೆಚ್ಚು ಮಾತನ್ನಾಡುವವಳು ; ಗಳಹುವವಳು ; ವಾಚಾಳಿ : ಈ ಆಭರಣಗಳೆಲ್ಲಾ ಆ ದೇಹಕ್ಕೇ ಒಪ್ಪತಕ್ಕವು . . . ನೀನೂ ಅವುಗಳನ್ನೆಲ್ಲ ಒಮ್ಮೊಮ್ಮೆ ಅವಳಿಗೆ ತೊಡಿಸಿ, ಮುಖರೆಯಾದೀ ವಿದೇಶೀ ಹೆಂಗಸನ್ನು ಜಬ್ಬಿಸಿಕೊ (ಶಕುಂ. ೩೦). [ಸಂ. ಮುಖರಾ]

**ಮುಖರೋಗ** (ನಾ). ಮುಖ ಅಥವಾ ಬಾಯಿಗೆ ಬರುವ ಒಂದು ಬಗೆಯ ರೋಗ : ಎಕ್ಕೆಯ ಎಲೆ, ಔಡಲ . . . ಅಪ್ಪರಸ, ಈ ಸೊಪ್ಪುಗಳಂ ಸಮಾನಂಗೊಂಡು ಹಳೆಯ ಕಲಶವಂ ತುಂಬಿ ನೀರಂ ಹೊಯ್ದು ಲೇಸಾಗಿ ಕುದಿಸಿ ಮೈನೋವವರಿಗೆ, ಮುಖರೋಗದಾತಂಗೆ . . . ಸೇಕಂಗೊಳ್ಳಲು ಆ ವ್ಯಾಧಿ ತೀರ್ಗುಂ (ವೈದ್ಯಾ. ೬೪) ; ಶುಂಠಿರಸವನ್ನು ಲೊಕ್ಕೀ ಸೊಪ್ಪಿನ ರಸದಲ್ಲಿ ಏಳುದಿನ ತೆಗೆದುಕೊಳ್ಳಲು ಮುಖರೋಗಂ ಮಾಣ್ಗುಂ (ಸಳವೈ. ೧೦೩). [ಸಂ.]

**ಮುಖರೋಮ** (ನಾ). ಮುಖದಲ್ಲಿ ಬೆಳೆಯುವ ಕೂದಲು : ಮೀಸೆ : "ಮುಖರೋಮಂ ಶ್ಮಶ್ರು" (ವಸ್ತುಕೋ. ೭೦-೨೨) ; ಆಬಾಲಶಾರ್ದೂಲ ಮುಖರೋಮ ಕರಾಲಸ್ಯಕ್ವೋಪಾಂತಪ್ರರೂಢಶ್ಮಶ್ರುಜಾಲಂ (ಆದಿಪು. ೦೩-೪೩ ಪ). [ಸಂ. ಮುಖರೋಮನ್]

**ಮುಖಲಕ್ಷಣ** (ನಾ). ಮುಖದ ರೀತಿ ; ಮುಖಚರ್ಯೆ : ಅವಳು ಎಳೆಹರೆಯದಲ್ಲಿ ಅನುಪಮಸುಂದರಿಯಾಗಿದ್ದಿರಬಹುದೆಂದು ಅವಳ ಮುಖಲಕ್ಷಣದಿಂದ ವೇದ್ಯವಾಗುತ್ತಿತ್ತು (ಕುನರು. ೦೪೦) ; ಕಾನಂಬನಿಯ ಮುಖಲಕ್ಷಣ, ನೋಡಿದ ಮನುಷ್ಯ ಹೆದರುವ ಹಾಗಿತ್ತು (ಇಕ್ಕಳ. ೨೪). [ಸಂ.]

**ಮುಖಲೇಪನ** (ನಾ). ೧. ಯಾವುದಾದರೊಂದು ವಸ್ತುವಿನ ಮೇಲುಭಾಗಕ್ಕೆ ಬಳಿಯುವ ಮತ್ತೊಂದು ಲೇಪನವಸ್ತು : ಎಲೆಕ್ಟ್ರೋ ಫಲಕವು ಸ್ಟೀರಿಯೋಫಲಕಕ್ಕಿಂತ ಹೆಚ್ಚು ಉಪಯೋಗವುಳ್ಳದ್ದಾದರೂ ಅದರ ಬೆಲೆ ಹೆಚ್ಚು . . . ನಿಕ್ಕಲ್ ಮುಖಲೇಪನ ಮಾಡಿದರೆ ಅದರಿಂದ ಇನ್ನೂ ಹೆಚ್ಚು ಪ್ರತಿ ತೆಗೆಯಬಹುದು (ಮುದ್ರಣ. ೬೦). ೨. ಮುಖಕ್ಕೆ ಹಚ್ಚಿಕೊಳ್ಳುವ ಪೌಡರು, ಸ್ನೋ ಮುಂತಾದ ಕಾಂತಿವರ್ಧಕವಸ್ತು : ಟಿ.ವಿ. ಯಲ್ಲಿ ಮುಖಲೇಪನಗಳ ಆತ್ಮಾಕರ್ಷಕವಾದ ಜಾಹಿರಾತುಗಳನ್ನು ನೋಡುತ್ತೇವೆ (ರೂಢಿ). [ಸಂ.]

**ಮುಖಲೋಮಿ** (ನಾ). ಮುಖದ ಮೇಲೆ ಉದ್ದ ಕೂದಲುಗಳುಳ್ಳ ಒಂದು ಬಗೆಯ ಕೀಟ ; ಜಿರಲೆ : "ಮುಖಲೋಮಿ ತೋಡಂಗಿಯುಕ್ಕುಂ" (ಮಂಗರಾ. ೪೬-೦೩). [ಸಂ. ಮುಖಲೋಮಿನ್]

**ಮುಖವರ್ಣಿಕೆ** (ನಾ). (ನೃತ್ಯ, ನಾಟಕಗಳಲ್ಲಿ) ಮುಖಕ್ಕೆ ಹಚ್ಚುವ ಬಣ್ಣ, ಬಣ್ಣದ ಅಲಂಕಾರ, ವೇಷ ಮುಂತಾದುವು : ಕಥಾನಕದ ಪಾತ್ರಗಳಿಗೊಪ್ಪುವಂತೆ ವೇಷ, ಮುಖವರ್ಣಿಕೆಗಳನ್ನು ಸೃಷ್ಟಿಸಿದರು (ಯಕ್ಷಬ. ೦೦). [ಸಂ. ಮುಖವರ್ಣಿಕಾ]

**ಮುಖವಸ್ತ್ರ** (ನಾ). ೧. ಮುಖವನ್ನು ಒರೆಸಿಕೊಳ್ಳಲು ಬಳಸುವ ಬಟ್ಟೆ ; ಮುಖಪಾವಡ : ಮುತ್ತಿನುರೆ ಛತ್ರ ಚಾಮರ ಕುಂಚ . . . ವ್ಯಜನ ಮುಖವಸ್ತ್ರಯೆತ್ತಿ ಬೀಸುವ ಧವಳಚಾರಿಯ ಚಡಾಳಿಪರಿಕ್ಕಿಲದಿ ವತ್ತರಿಸುತ (ನವಮೋ. ೩-೨೪); ಹಡಪ ಕನ್ನಡಿ ಹೂಜೆ ಕಾಳಂಜಿ ಮುಖವಸ್ತ್ರ . . . ಮಚ್ಚಧ್ವಜವಾಂತು (ನವಮೋ. ೪-೩೮). 'ಕರವಸ್ತ್ರ' ಪರ್ಯಾ. ೨. (ಪ್ರತಿಮಾಪ್ರತಿಷ್ಠಾನದ ವಿಧಿಯಂತೆ) ಮುಖಭಾಗದಲ್ಲಿ ತೊಡಿಸುವ ಬಟ್ಟೆ (?) : ಆಚಾರ್ಯ್ಯಪ್ರತಿಮೆಯಂ ಪಂಚಗವ್ಯಶುದ್ಧಿಯಂ ಮಾಡಿ ಸುಗಂಧಾನುಲೇಪನಂಗೆಯ್ದು ದರ್ಭೆಯಿಂದಲಂಕರಿಸಿ ಮುಖವಸ್ತ್ರ ಮನಿಕ್ಕಿಯಿರಿಸುವುದು (ಪ್ರತಿಷ್ಠಾ. ೩-೨ ಪ). [ಸಂ.]

**ಮುಖವಾಡ** 'ಮೊಗವಡ' ನೋ.

**ಮುಖವಾದ್ಯ** (ನಾ). ಬಾಯಿಯಿಂದ ಊದುವ ಕೊಳಲು, ನಾದಸ್ವರ ಮುಂತಾದ ವಾದ್ಯ ; ಸುಷಿರವಾದ್ಯ. [ಸಂ.]

**ಮುಖವಾರ್ತೆ** (ನಾ). ಸಮಾಚಾರ ; ಸುದ್ದಿ ; ವಿಷಯ ; ವಿಚಾರ : ಧರ್ಮಪುತ್ರಂ . . . ವಿದುರನಟ್ಟಿದೋಲೆಯಾತಂ ಬಂದೇಕಾಂತದೋಲೆಯ ಸಿಕ್ಕಿದೊಡೆ ಮುಖವಾರ್ತೆಯೇನೆಂದೊಡೆ (ಪಂಪಭಾ. ೦೦-೩೬ ಪ).
[ಸಂ. ಮುಖವಾರ್ತಾ]

**ಮುಖವಾಸ** (ನಾ). ೧. ಬಾಯಿಯನ್ನು ಸುವಾಸನೆಗೊಳಿಸುವ ಒಂದು ಬಗೆಯ ಪರಿಮಳದ್ರವ್ಯ : ವಿಧವಿಧದೊಳೆಸೆವ ಕುಸುಮೋತ್ಕರದ ಪರಿಮಳದ ಮಧುರಾಸವಕೆ ತಮ್ಮ ಮುಖವಾಸದೊಳ್ಗಂಪಿನಧರದಿನಿದಂ ಬೆರಸುವಂತೆ ಮೊಗವಿಟ್ಟು ಪೊಂಬಟ್ಟಲೊಳ್ಸವಿದು (ಜೈಮಿನಿಭಾ. ೦೩-೪೩) ; ಗಂಧಹುಡಿಯರಂಗಡಿಗೈದಿ ಕಮ್ಮೆಣ್ಣೆ ಕಸ್ತೂರಿಯ . . . ತಾಂಬೂಲಮುಖ್ಯ ಮುಖವಾಸಗಳನೂ ತೆಗದು ಮುನ್ನಡೆದು (ನವಮೋ. ೦೭-೬೦). ೨. ಮುಖಕ್ಕೆ ಕಟ್ಟಿಕೊಳ್ಳುವ ಬಟ್ಟೆ, — ವಸ್ತ್ರ : ಪರಿಮಳಂ ತೀಡಿದಡೆ ಕಡೆಗೆ ಸಂಗಂಗೆನುತೆ ಚರಿತದಿಂ ಮುಖವಾಸವಂ ಸುತ್ತಿ ರಂಜಿಸುತೆ (ಬಸವ. ೩-೦೭). [ಸಂ.]

**ಮುಖವಾಸನ** (ನಾ). ೧. = ಮುಖವಾಸ ೧ : "ಆಮೋದೀ, ಮುಖವಾಸನಃ — ೨ ಪಚ್ಚಕರ್ಪೂರ ಮುಂತಾದ ಮುಖಪರಿಮಳಕ್ಕೆ ತಕ್ಕ ಸುದ್ರವ್ಯದ ಹೆಸರುಗಳು" (ಸಿದ್ಧಾಂತಿ. ೪೭). ೨. = ಮುಖವಸ್ತ್ರ ೨ : ಆವಾಹನ ಆಸನ್ನ . . . ನೈವೇದ್ಯ ಮುಖವಾಸನ . . . ಆತ್ಮಾರೋಪಣಮೆಂಬ ದ್ವಾತ್ರಿಂಶದುಪಚಾರಂಗಳಂ ಸಮಂತ್ರಕವಾಗಿ ಮಾಡಿ (ವಿವೇಕ. ೬೩). [ಸಂ.]

**ಮುಖವಿಕಾರ** (ನಾ). (ಮನಸ್ಸಿನ ಭಾವನೆಗೆ ತಕ್ಕಂತೆ) ಮುಖದಲ್ಲಿ ಉಂಟಾಗುವ ಬದಲಾವಣೆ, — ಮಾರ್ಪಾಟು : ಮುಖಭಾವ : ಪರುಷಾಳಾಪಮುಮತಿನಿಷ್ಠುರವೀಕ್ಷಣಮುಮುಖವಿಕಾರಮುಂ ಮಜಿಸಿರೆಯುಂ ತರಳಾಪಾಂಗಮುಮಾಕೆಯ ದರಹಸಿತಮುಮುಮಜಿಯೆ ಪೇಟ್ಗುಮೆಂಜಕಮನಿರ್ದೆಯೊಳ್ (ಶಬರಾ. ೩-೦೦೪); ನಾನು ಹೇಳಿದ್ದೆಲ್ಲವನ್ನೂ ಅವರು ಯಾವ ಮುಖವಿಕಾರವಿಲ್ಲದೆ ಕೇಳಿಸಿಕೊಂಡರು (ರೂಢಿ). [ಸಂ.]

**ಮುಖವಿಕಾಸ** (ನಾ). ಮುಖವು ಅರಳುವಿಕೆ, — ಹಿಗ್ಗುವಿಕೆ : ವಿಪಕ್ಷಭ್ರಮಣಚೇತೋಭಾವಭವನದ ಮುಖವಿಕಾಸದಲಿ ತಮದ ತನಿಮುಸುಕದಲಿ

ಭುಜವಿಕ್ರಮ ಛಡಾಳಿಸಲೆದ್ದು ಭೂಪೋತ್ತಮನು ಕೊಂಡನು ಗದೆಯನು (ಕುವ್ಯಾ.ಗ. ೭-೧೪). [ಸಂ.]

**ಮುಖವಿಕೃತಿ** (ನಾ). = ಮುಖವಿಕಾರ ೨ : ಭಂಗದಲಿ ಸಂದೇಹ ಮುಖವಿಕೃತಿಯಲಿ ದುರ್ನೀತಿ ಇಂಗಿತದಲಾಂಗಿಕದ ಭಾವಾಭಂಗಪರಿಯನು ಯೋಗಯುಕ್ತನಯಂಗಳಲಿ ತಿಳಿದುಸುರದಿರ್ದುದು ಸಭೆ ಸುಭೀತಿಯಲಿ (ಕುವ್ಯಾ.ಸ. ೧೪-೯೩). [ಸಂ.]

**ಮುಖವಿಕ್ಷೇಪಣ** (ನಾ). ಮುಖವನ್ನು ಅತ್ತ ಇತ್ತ ತಿರುಗಿಸುವಿಕೆ : ಬಲವ ಕೋಡ ಮೇಲೆ ಕೆಯ್ಯಂ ಪೇಜಿ ಮುಖವಿಕ್ಷೇಪಣಂಗೆಯ್ದು ಘನಾಘನನಿನಾದದಿಂ ಬೃಂಹಿತಂಗೆಯ್ವ ವಿಜಯಗಜಮುಂ (ಶಂಕಪಾ. ೯-೯೩ ವ). [ಸಂ.]

**ಮುಖವೀಣೆ** (ನಾ). ಬಾಯಿಂದ ಊದಿ ಬಾರಿಸುವ ಒಂದು ಬಗೆಯ ವಾದ್ಯ : ಮುಖವೀಣೆಯ ಮೋಹಂಗಳಿಂದಂ ರಾವಣವೀಣೆಯ ರಂಜಕರಿಂ . . . ಮೇಣ್ ಅಖಿಳನಿಯೋಗದಚ್ಚುಳಿಯ್ಯುರಿಂದೊಪ್ಪಿದತ್ತಾ ಮಹಾಲಿಂಗದಾಸ್ಥಾನಂ (ಹಬ್ಬ್ಕರ. ೬-೫೦ ವ) ; ತಾಳ ದಂಡಿಗೆ . . . ವಿವಿಧ ವಿದ್ಯಾಜಾಲ ಮುಖವೀಣೆಗಳ ತಂದಿಳುಪಿದರು (ಬಾಗಿಷ. ೨೨-೩೯) ; ನುಡಿಸುವವನ ಶ್ವಾಸಗಾಳಿಯಿಂದ ನುಡಿಯುವ ವಾದ್ಯಗಳು : ಕೊಳಲು, ನಾಗಸ್ವರ . . . ಮುಖವೀಣೆ, ಶಂಖವಾದ್ಯಗಳೂ ಈ ಪಂಗಡಕ್ಕೆ ಸೇರುತ್ತವೆ (ಸಂಗೀಸಂ. ೦೨೦). [ಸಂ. ಮುಖವೀಣಾ]

**ಮುಖವೇಣು** (ನಾ). = ಮುಖವೀಣೆ : ರಂಧ್ರಗಳಲ್ಲಿ ವಾಯುಸಂಚಾರದ ಮೂಲಕ ನಾದವನ್ನು ಸೃಷ್ಟಿಸುವುವು ಎರಡನೇ ಸುಷಿರಜಾತಿ : ಕೊಳಲು, ಸನ್ನಾಯಿ, ಮುಖವೇಣು ಮೊದಲಾದವು (ನಾಸಳ. ೯೩). [ಸಂ.]

**ಮುಖಶಾಲೆ** (ನಾ). ದೇವಸ್ಥಾನ ಅಥವಾ ಭವನಗಳ ಮುಂಭಾಗದ ಹಜಾರ ; ಮುಖಮಂಟಪ ; ಮೊಗಸಾಲೆ : ಈಶ್ವರಸೆಟ್ಟಿ ಎರಡು ದೇಗುಲದ ಕಳಸಮನಿಡಿಸಿ ಮುಖಶಾಲೆಯುಂ ಸಮೆಯಿಸಿ (ಶಾಸಪ. ೩೦-೦೨ : 1005) ; ಪಚ್ಚೆಯ ತೊಲೆ ಪವಳದ ಕಂಬ ಬೋದಿಗೆ ನಿಚ್ಚಳವಹ ನೀಲದಿಂದ ಮುಚ್ಚುಳ ಮುಖಶಾಲೆಯ ಮಣಿಮಂಟಪವಚ್ಚರಿಯಾಗಿರುತಿಹುದು (ಕೃಕೃಕಾಂ. ೭-೬೦). 'ಮೊಗಸಾಲೆ' ಪರಾ. [ಸಂ. ಮುಖಶಾಲಾ]

**ಮುಖಶುದ್ಧಿ** (ನಾ). ೧. ಬಾಯಿಯನ್ನು ಮುಕ್ಕುಳಿಸುವುದು. ೨. (ಉಕ) ತಾಂಬೂಲ. [ಸಂ.]

**ಮುಖಶ್ರೀ** (ನಾ). ಮುಖದ ಸೌಂದರ್ಯ, – ಚೆಲುವು : ಕ್ಷಾಯಿಕದೃಷ್ಟಿ ತುಷ್ಟಿಯೊಳೊಡಂಬಡೆ ಜೈನವಚೋಮೃತಂ ಮುಖಶ್ರೀಯ ಪೊವಟ್ಕೆಯು ಬೆಳಗೆ (ಶಾಂತಿಪು. ೦-೪). [ಸಂ.]

**ಮುಖಸಂಧಿ** (ನಾ). [ಕಾವ್ಯಮೀ] ಐದು ಅರ್ಥಪ್ರಕೃತಿಗಳೂ ಐದು ಅವಸ್ಥೆಗಳೂ ಕ್ರಮವಾಗಿ ಸೇರಿದರೆ ವಸ್ತುವಿನಲ್ಲಿ ಆಗುವ ಮುಖ, ಪ್ರತಿಮುಖ, ಗರ್ಭ, ಅವಮರ್ಶ ಮತ್ತು ಉಪಸಂಹೃತಿಯೆಂಬ ಐದು ಬಗೆಯ ಸಂಧಿಗಳಲ್ಲಿ ಮೊದಲನೆಯದು : ಅದರ 'ಮುಖಸಂಧಿ 'ಯೆಂಬ ಮೊದಲನೆಯ ಭಾಗದಲ್ಲಿ ಕಥೆ ಇನ್ನೂ ಬೀಜರೂಪವಾಗಿರುತ್ತದೆ (ಕೃಶಾ. ೨೦೬). [ಸಂ.]

**ಮುಖಸಾಲೆ** 'ಮೊಗಸಾಲೆ' ನೋ.

**ಮುಖಸಿರಿ** 'ಮೊಗಸಿರಿ' ನೋ.

**ಮುಖಸುತ್ತು** (ನಾ). ಕಕ್ಕಾಬಿಕ್ಕಿ ; ಗೊಂದಲ ; ಕಕಮಕ : ನಿನ್ನೆಯ ಯುದ್ಧದಲ್ಲಿ ನೀವು . . . ಯಾವ ಶೌರ್ಯವನ್ನು ತೋರಿಸಿದಿರೋ ಅದರಿಂದ ಯವನಸೇನೆಗೆ ಮುಖಸುತ್ತಾಗಿದೆ (ಜಕ್ಕೂ ಕೋ. ೯೦) ; ತುರುಕರನ್ನು ಇಟ್ಟುಕೊಳ್ಳತಕ್ಕದ್ದೇನೋ ನನಗೆ ಸರಿಯಾಗಿ ತೋರುವುದಿಲ್ಲ. ಈ ವಿಷಯದಲ್ಲಿ ಬಹು ಮುಖಸುತ್ತಾಗಿದೆ (ಮುಖಗ. ೯೩). [ಮುಖ + ಸುತ್ತು$_2$]

**ಮುಖಸುರತ** (ನಾ). = ಮುಖರತಿ : ಮುಖಸುರತಂ ಮುನಿಗಳಿಂ ದೂಷಣೆಯುಪ್ಪುದರಿಂ . . . ಪೇಳಲಿಲ್ಲ (ಕಾಮಶಾ. ೨೯೩). [ಸಂ.]

**ಮುಖಸ್ತುತಿ** (ನಾ). ಎದುರಿನಲ್ಲೇ (ಅಕಾರಣವಾಗಿ) ಹೊಗಳುವುದು, – ಪ್ರಶಂಸೆ ಮಾಡುವುದು : ಇದನ್ನು ಮಾತ್ರ ಮುಖಸ್ತುತಿಯೆಂದು ತಿಳಿಯಬೇಡಿರಿ (ಅಸ್ತ. ೧೬೩). [ಸಂ.]

**ಮುಖಸ್ಥಾನ** (ನಾ). ಪ್ರಮುಖವಾದ ಸ್ಥಳ : ಆ ಭೂಭಾಗದೊಳ್ ಉನ್ನತಂ ತಾನತ್ಯೂರ್ಜಿತಮಲ್ಲಿ ಭೋಗಿಜನರಮ್ಯಂ ಬೆಳ್ವೊಲಂ ತನ್ಮುಖಸ್ಥಾನಂ ಶೋಭಿಕುಮಾಗಳುಂ ಪುರಿಕರಶ್ರೀರಾಜಧಾನ್ಯಾಹ್ವಯಂ (ಶಾಸ. XX, ೯೭-೦೪ ; 1074). [ಸಂ.]

**ಮುಖಹೀನ** (ನಾ). ಸಂಕೋಚಸ್ವಭಾವದವನು ; ಮುಖಹೇಡಿ : ಅಪರಿಚಿತಸ್ಥಳಕ್ಕೆ ಹೋದರೆ ಅವನು ಉದ್ಧಟನಾಗುತ್ತಾನೆ. ಇಲ್ಲವೆ ಮುಖಹೀನನಾಗುತ್ತಾನೆ (ಇಪ್ಪ. ೧). [ಸಂ.]

**ಮುಖಹೇಡಿ, ಮುಖೇಡಿ, ಮುಖೇಡಿ** (ನಾ). ಸಂಕೋಚಪ್ರವೃತ್ತಿಯ ವ್ಯಕ್ತಿ ; ಸಿಗ್ಗಾಳಿ : "ಲಜ್ಜೆಯಿಂದ ಕೂಡಿದ ; ನಾಚುವ ; ಮುಖಹೇಡಿಯಾದ ; ಸಂಕೋಚಪ್ರಕೃತಿಯ ; ಸಿಗ್ಗಾಳಿ" (Bashful. ಇಂಕನಿ). 'ಮುಖಹೇಡಿತನ' ಪರಾ. **ಮುಖೇಡಿ** : ಸಮುದ್ರ ಶಾಂತವಾಗಿದೆ, ಗಾಳಿ ಮುಖೇಡಿಯಂತಿದೆ (ಸಿಂಧ. II. ೨೦೭) ; ದಾಮು ಎಲ್ಲಾ ಅವರಪ್ಪನ ಹಾಗೇ ಮುಖೇಡಿ (ಪ್ರಕೃತಿ. ೦೩). **ಮುಖೇಡಿ** : ಅವಳ ಸ್ವಭಾವವೇ ಹಾಗೇಂದ್ರೆ. ಮೊದಲಿನಿಂದಲೂ ಅದು ಮುಖೇಡಿ (ಕಟಸಂ. ೨೩೩). ಹೆಡ್ಮಾಸ್ಟರ್ ಲಕ್ಷ್ಮಣರಾಯರು ಸುಬ್ಬುವಿನ ಬೆನ್ನು ತಟ್ಟಿ "ನೋಡಿದೆಯಾ, ಮುಖೇಡಿಯಾಗಬಾರದು" ಎಂದು ಬಹಳ ಹೊಗಳಿದರು (ಶೀಮುಕಾ. ೩೦). 'ಮುಖೇಡಿತನ' ಪರಾ. [ಮುಖ + ಹೇಡಿ (< ಪೇಡಿ$_1$)]

**ಮುಖಹೇಡಿತನ, ಮುಖೇಡಿತನ, ಮುಖೇಡಿತನ** (ನಾ). ಸಂಕೋಚಸ್ವಭಾವ ; ನಾಚಿಕೆಯ ಪ್ರವೃತ್ತಿ : ಮಕ್ಕಳು ವಿಲಕ್ಷಣರೀತಿಯಲ್ಲಿ ವರ್ತಿಸುವರು . . . ಕೆಲವರಿಗೆ ಮುಖಹೇಡಿತನ (ಶಿಶುರ. ೬೪೯) ; ಒಂದು ವಿಧವಾದ ಮುಖಹೇಡಿತನ ಅವನನ್ನು ಎಲ್ಲರಿಂದ ಬೇರೆ ಮಾಡಿತ್ತು (ಬಿಡಾಕ. ೬೩). **ಮುಖೇಡಿತನ** : ಈ ಮುಖೇಡಿತನವನ್ನು ಬಿಟ್ಟು ನಾಲ್ಕುಜನರ ಜತೆ ಓಡಾಡುವುದನ್ನು ಕಲಿ (ಬೂಂ). **ಮುಖೇಡಿತನ** : ನೀನು ಅವಳಿಗೆ ಬುದ್ಧಿ ಹೇಳಿ ಮುಖೇಡಿತನ ತಪ್ಪಿಸಬೇಕು (ಕಟಸಂ. ೨೩೬).
[ಮುಖಹೇಡಿ + – ತನ]

**ಮುಖಾಂತರ** (ಅ). ಆ ಮಾರ್ಗವಾಗಿ ; ಮೂಲಕ : ಜೋಡು ರಿಪೇರಿಯವನ ಮುಖಾಂತರ ನನ್ನ ಒಬ್ಬ ಕರಗಿತ್ತು (ಪ್ರಕೃತಿ. ೦೦೭) ; ಬಂದಣ್ಣ . . . ವೈನಿಯ ಮುಖಾಂತರ ಅಣ್ಣನ ಪರವಾನಿಗೆ ಪಡೆದುಕೊಂಡ (ಪ್ರಕೃ. ೧೯೩).

**ಮುಖಾಂತರವಾಗಿ** = ಬೇರೆಯವರ (ಮಾತಿನ) ಮೂಲಕವಾಗಿ : ನಮ್ಮ ಅಪ್ಪಾಜಿಯವರ ಪ್ರಾರಭ್ಯ ಅಳಗಿಯ ಮನವಾಳ ರಾಮಾನುಜ ಜಿಯ್ಯರವರ ಮುಖಾಂತರವಾಗಿ ನಡೆಸಿಕೊಂಡು ಬರುವ ನಿತ್ಯಕಟ್ಟಳೆ ಕೈಂಕರ್ಯ (ಎಕ. III, ಶ್ರೀರಂಗ. ೦೦೦-೦೪೪; 1734) ; ಸೃಷ್ಟಿಯ ಮುಖಾಂತರವಾಗಿ ಕಾಣಿಸುವ ಆತನ ಮಹಿಮೆಯ ಕುರುಹುಗಳನ್ನು ತಿಳುಕೊಂಡು ಕೃತಜ್ಞರಾಗಿ ಭಕ್ತಿಯಿಂದ ನಾವು ಆತನನ್ನು ಯಾವಾಗಲೂ ಸೇವಿಸಬೇಕು (ಮುಂಹಿ. ೪-೩೦). [< ಮುಖ]

**ಮುಖಾಡ** 'ಮೊಗವಡ' ನೋ.

**ಮುಖಾಣಿ** (ನಾ). ಒಂದು ಬಗೆಯ ತೆರಿಗೆ : ಯಿಾ ಪಾರಪತ್ಯಗಾರರು ಸೇನಭೋಗರು ಸುಂಕದ ಸೇನಭೋಗರು ಸಹ ಜನ ೧ಕ್ಕೆ ೧ ಮುಖಾಣಿ . . . ವರುಷಂಪ್ರತಿಯೂ ಪ್ರತಿವರುಷಂಗಳಿಗೂ ಮಹದೇ [ವೇ]ಶ್ವರಸ್ವಾಮಿಯವರ ಭಂಡಾರಕ್ಕೆ ಕೊಡುವ ಹಾಗೆ ಕಟ್ಟಳೆಯನ್ನು ಮಾಡಿಸಿಯಿದ್ದೇವೆ (ಎಕ. IX. ಚಾನಪ. ೯೪-೨೭ ; 1662).
[? + < ಕಾಣ$_1$]

**ಮುಖಾಬಿಲೆ** 'ಮೊಕಾಬಿಲೆ' ನೋ.

**ಮುಖಾಮಿ** (ನಾ). ೧. ಒಡೆತನ ; ಸ್ವಾಮ್ಯ : ಅವನ ಮುಖಾಮಿಗೆ ೧೨ ವರಹದ ಭೂಮಿಯನ್ನೂ ಕೊಡುವದು (ಮುಖಾಪಂ. I, ೩೮). ೨. ಒಡೆತನವುಳ್ಳವನು; ಸ್ವಾಮ್ಯವುಳ್ಳವನು: ವಸ್ತ್ರಾಭರಣವವಿರತಂ ಕೊಡುತಿರುವರೆಂಬ ವರದಿಗೆ ಮುಖಾಮಿಗಳು ಕಾದಿರುತಿರ್ಪರು (ಕೃ.ಕ. ೬.೨-೧೨). [?]

**ಮುಖಾಮಿತನ** (ನಾ). = ಮುಖಾಮಿ ೧ : ದೊರೆಗಳವರು . . . ಲಕ್ಷ್ಮಯ್ಯಂಗಾರಿ ಎಂಬವನಿಗೆ ಈ ಪರಕಾಲಮಠದ ಮುಖಾಮಿತನವನ್ನು ನೇಮಕ ಮಾಡಿಸಿದರು (ಮುಖಾಪಂ. I, ೦೬೩). [ಮುಖಾಮಿ + -ತನ]

**ಮುಖಾಮುಖಿ** (ಗು). ೧. ಪ್ರತ್ಯಕ್ಷವಾದ ; ನೇರವಾದ : ಪ್ರತಿಯೊಬ್ಬ ಮಠದಾರನಿಗೂ ಮತ್ತು ಹುರಿಯಾಳುವಿಗೂ ಮುಖಾಮುಖಿ ಸಂಬಂಧವನ್ನು ಒದಗಿಸಿಕೊಂಡು ಅವರಿಗೆ ಹೇಳಿಕೊಳ್ಳುವ ವಿಚಾರ, ಹೊಸಮನಿಯದು (ಅಕಪಾ. ೯೦) : ಅವರಿಬ್ಬರೂ ಮುಖಾಮುಖಿ ಬೆಟ್ಟಿಯಾಗಲಿ, ಗೌಪ್ಯದ ಹಿಂದುಗಡೆಯಲ್ಲಿ ದಟ್ಟಯಿಸಿದ್ದ ಕತ್ತಲೆ ತೊಲಗಲಿ ಎಂದು ಅಪಳ ವಿಚಾರ (ಎಠಸ. ೦೩೦). (ನಾ). ೨. ಭೇಟಿ ; ಸಂದರ್ಶನ : ಹಿಂದೊಮ್ಮೆ ನೀನಲ್ಲಿ ಹೋಗೆ, ನಿನ್ನಯ ಬಯಕೆ ನೆರೆಯದೆಂದರಿತೊಡಂ ನಿನ್ನ ಜೀವಕೆ ಮೋಸವಿರದೆಂದೆ ಬೀಳ್ಕೊಟ್ಟೆ ನಿನ್ನನೀ ಹೊಸ ಮುಖಾಮುಖಿಯೊ ಜೀವಕ್ಕೆ ಮುಳ್ಳುವೇದೆ ಮನಸಿನ ಕವಲು ! (ಪಪ್ಪರ. ೦೯-೭೩). [ಸಂ.]

**ಮುಖಾರ** (ನಾ). ಮನೆಯ ಮುಂಭಾಗ : ಆ ಗೇಟಿನಿಂದ ಮನೆಯ ಮುಖಾರದ ವರೆಗೂ ಹೂವಿನ ಗಿಡಗಳ ಮತ್ತು ಚಿತ್ರವೃಕ್ಷಗಳ ವಲಯಾಕಾರವಾದೊಂದು ತೋಟವು ರಚಿಸಲ್ಪಟ್ಟಿತ್ತು (ಕಾದಂಬರಿ. ೨೦). [ ? ]

**ಮುಖಾರಿ** (ನಾ). [ಸಂಗೀತ] ಒಂದು ರಾಗದ ಹೆಸರು : ಮುಖಾರಿ ಹಿಂದೋಳವಸಂತವೆಂಬವೇ ವಸಂತಮಿಶ್ರರಾಗಂಗಳು (ವಿವೇಕ. ೦೪೯) ; ವರವಸಂತ ಮುಖಾರಿ ಗುಜ್ಜರಿ . . . ಮೋಹನದ ರಾಗಂಗಳಲಿ ಪಾಡಿದರು (ಹರಿಶ್ಚ. ೦೦-೪೪) ; ಮುಖಾರಿ—ಪ್ರಸಿದ್ಧ ಪ್ರಾಚೀನರಾಗ. ೨೦ನೇ ಮೇಳಕರ್ತ ನಠಭೈರವಿಯಲ್ಲಿ ಜನ್ಯ (ಸಂಗೀತಂ. ೦೩೪). [ಸಂ.]

**ಮುಖಾವಲೋಕನ** (ನಾ). ಮುಖವನ್ನು ನೋಡುವುದು ; ಮುಖದರ್ಶನ : ಅವರು ಪಿತೃಗಳ ಮರಣಾನಂತರ . . . ಬಹಳ ವರ್ಷಗಳಿಂದಲೂ ಅನ್ಯೋನ್ಯಮುಖಾವಲೋಕನವಿಲ್ಲದವರಾಗಿದ್ದರು (ಕವಿಕ. ೧). [ಸಂ.]

**ಮುಖಾಸಿ** 'ಮೊಖಾಸ' ನೋ.

**ಮುಖಾಸೆ** 'ಮೊಖಾಸ' ನೋ.

**ಮುಖಿ** (ನಾ). ಅಧಿಕಾರಿ ; ಮುಖ್ಯಸ್ಥ : ಮಠಗಳ ಮುಖಿಗಳೂ, ತಿರುನಂದಿಯ ಕೈಲಾಸದೇಗುಲದ ಸ್ಥಾನಾಧಿಪತಿಗಳೂ ಸರ್ವಮಾನ್ಯದತ್ತವಾಗಿ ಭೂಮಿಯನ್ನು ಅನುಭವಿಸುವಂತೆ ರಾಜಾಜ್ಞೆ ಇತ್ತು (ತುಳುಪಾ. ೦೩೦). [ ←ತುಳು, ಮುಖಿ ]

**ಮುಖೇಡಿ** 'ಮುಖಹೇಡಿ' ನೋ.

**ಮುಖೇಡಿತನ** 'ಮುಖಹೇಡಿತನ' ನೋ.

**ಮುಖ್ತ್ಯಾರ್** 'ಮೊಖ್ತಿಯಾರ್' ನೋ.

**ಮುಖ್ತ್ಯಾರನಾಮೆ** 'ಮೊಖ್ತಿಯಾರ್‌ನಾಮ' ನೋ.

**ಮುಖ್ಯ** (ಗು). ೧. ಬಾಯಿ ಅಥವಾ ಮುಖಕ್ಕೆ ಸಂಬಂಧಿಸಿದ. ೨. ಪ್ರಮುಖವಾದ ; ಪ್ರಧಾನವಾದ : ಸರ್ವಜ್ಞತ್ವ ಸರ್ವೇಶ್ವರತ್ವ . . . ಸರ್ವಶಕ್ತಿತ್ವಾದಿಗಳೇ ಈಶ್ವರನ ಮುಖ್ಯಗುಣಗಳು (೬ವೇಕ. ೨೮). ೩. ಉನ್ನತಮಟ್ಟದಲ್ಲಿರುವ ; ಶ್ರೇಷ್ಠವಾದ ; ಮೊದಲ ದರ್ಜೆಯ. ೪. ಅತ್ಯಂತ ಮುಂದಿರುವ ; ಅಗ್ರಸ್ಥಾನದ. ೫. ಮೊದಲಾದ ; ಮುಂತಾದ : ಲಕ್ಷ್ಮಿ ನಿಜವಲ್ಲಭೆ ಜಾಹ್ನವಿ ತನ್ನ ಪಾದಪದ್ಮೋದಕ ಮಿಂದ್ರಮುಖ್ಯದಿವಿಜರ್ ಸ್ವಪರಿಗ್ರಹಂ (ಜಗು. ೦-೨೦) ; ಸರಸಿಜಾಸನ ಮುಖ್ಯದೇವರನೊರಸುವಂ ಗಡ (ಬಸವ. ೨೩-೨೨). (ನಾ). ೬. ಪ್ರಮುಖವಾದುದು ; ಪ್ರಧಾನವಾದುದು ; ಮಹತ್ತ್ವವಾದುದು : "ಅಗ್ರ್ಯಂ, ಪ್ರಧಾನಂ, ಪ್ರಮುಖಂ, ಪುರೋಗಂ, ಮುಖ್ಯಂ . . . ಅಗ್ರಣೀಃ— ಈ ೧೩ ಮುಖ್ಯಂ" (ಹಲಾಯು. ೦೦೩-೩) ; ಬಡವನಾಗಲಿ ಬಲ್ಲಿದನಾಗಲಿ ಇನಿತು ಮುಖ್ಯವಾಗಿ ಮಾಡಿಸಿಕೊಂಬುದು ಜಂಗಮಸ್ಥಲ (ಬಸವ. ೬೭೪) ; ಕೂಡಿ ನುಡಿವೆಡೆಯೊಳೆಂದುಂ ಕೂಡದು ಲಿಂಗತ್ರಯಕ್ಕೆ ತರತಮಭಾವಂ ನೀಡುಂ ವಾಕ್ಯದ ಕಡೆಯೊಳ್ ಕೂಡಿದುದಾವುದದುವೆ ಮುಖ್ಯಮೆನಿಕ್ಕುಂ (ಶಬ್ದ. ೦೪) ; ರಸಾಭಿವ್ಯಕ್ತಿಗೆ ಮತ್ತೊಂದು ಮುಖ್ಯವಾದ ನಿಯಮವೆಂದರೆ—'ಮುಖ', 'ಪ್ರತಿಮುಖ', 'ಗರ್ಭ', 'ಅವಮರ್ಶ', 'ನಿರ್ವಹಣ' ಪಂಚಸಂಧಿಗಳನ್ನೂ . . . ಕೇವಲ ರಸಾಭಿವ್ಯಕ್ತಿಯ ದೃಷ್ಟಿಯಿಂದಲೇ ರಚಿಸುವುದು (ಧ್ವನ್ಯಾಲೋ. ೦೩೦). ೭. ಶ್ರೇಷ್ಠವಾದುದು ; ಉತ್ತಮವಾದುದು : "ಪ್ರಧಾನಂ, ಪ್ರಮುಖಃ, ಪ್ರವೇಕಃ, ಅನುತ್ತಮಃ, ಉತ್ತಮಃ, ಮುಖ್ಯಃ . . . ಅಗ್ರಿಯಂ— ೧೭ ಮುಖ್ಯವಾಗಿಯೂ, ಉತ್ತಮವಾಗಿಯೂ, ಇತರದಿಂದ ಅಪೇಕ್ಷಿಸಲ್ಪಡತಕ್ಕದ್ದಾಗಿಯೂ ಇರುವ ಶ್ರೇಷ್ಠವಾದಂಥಾದ್ದರ ಹೆಸರುಗಳು" (ಸಿದ್ಧಾಂತಿ. ೩೩೮). ೮. ಪ್ರಧಾನನಾದವನು ; ಪ್ರಮುಖವ್ಯಕ್ತಿ: "ಅಗ್ರೇಸರಂ ಪುರಸ್ಸರನಗ್ರಣಿ ಮುಖ್ಯಂ ಪುರೋಗಮಂ ಪ್ರಷ್ಠಂ" (ವಸ್ತುಕೋ. ೬೩-೯) ; ಅವರ್ಣವಾದಕ್ಕೆಡೆಯಾಗದೊಳ್ಪಿಂದವರ್ಣಕಾಮರ್ ಗುಣವೃದ್ಧಿಧಾಮರ್ ದಿವಾಕರರ್ ವ್ಯಾಕೃತಿನಾಮಿಗಳ್ಪೋಲ್ ದಿವಕ್ಕೆ ಪನ್ನಿರ್ವರ್ ಮುಖ್ಯರಾದರ್ (ಕಾವ್ಯಾವ. ೧೩) ; ಪಾಲೆಯನೆತ್ತಿ ಮಾಗಿಲೊಡೆಯನ ಸಕ್ಕವನೇ ದೊರೆ ನಿನಗೆಂದೇ ಈ ಮುಖ್ಯನ ಕಳಿಸಿಹನೇ (ಗೋಕುಲ. ೪೭-೦೩). ೯. ಅಗತ್ಯವಾದುದು ; ಅವಶ್ಯವಾದುದು : ಈ ಕಾಲದಲ್ಲಿ ಎಲ್ಲ ವಿಚಾರಗಳಲ್ಲೂ ತುಂಬ ಎಚ್ಚರಿಕೆಯಿಂದಿರುವುದು ಬಹಳ ಮುಖ್ಯ (ಕಊ). ೧೦. [ತತ್ತ್ವಶಾ] ಜೀವಸಂಬಂಧವಾದ ನಾಲ್ಕು ಬಗೆಯ ವಾಯುಗಳಲ್ಲಿ ಒಂದು : ವೈರಂಭ ಮುಖ್ಯ ಪ್ರಭಂಜನ ಅಂತರ್ಯಾಮಿ ಸೌಜ್ಞೆಯುಳ್ಳ ನಾಲ್ಕುಜೀವಸಂಬಂಧಮಾದ ವಾಯುಗಳೇ ಮಾನಸಾದ್ಯಂತಃಕರಣ ಚೇಷ್ಟಾಕಾರಣಂಗಳಾಗಿರ್ಕುಂ (ವಿವೇಕ. ೩೪). [ಸಂ.]

**ಮುಖ್ಯತೂರ್ಯ** (ನಾ). (?) : ಋಣಾತೂರ್ಯ ಮುಖ್ಯತೂರ್ಯ ಸ್ವೇಚ್ಛಾತೂರ್ಯವೆಂಬ ಮೂಜು ಮಾಟವ ಕಂಡು ಭಕ್ತಿ ಜ್ಞಾನ ವೈರಾಗ್ಯವೆಂಬ ತ್ರಿವಿಧವಿಶ್ವವನಜಿದು . . . ಕೂಡುವಲ್ಲಿ ಇಂತೀ ಭಾವ ಸವ್ಯಕ್ತನಸ್ಥಲ (ಮೋಕ್ಷಪಾ. ೦೦೬-೪೩೬). 'ಋಣಾತೂರ್ಯ' ಪರಾ. [ ? ]

**ಮುಖ್ಯತೆ** (ನಾ). ೧. ಪ್ರಾಧಾನ್ಯತೆ ; ಪ್ರಾಮುಖ್ಯತೆ : ಕೂಡ ನುಡಿವೆಡೆಯೊಳ್ ಲಿಂಗತ್ರಯಕ್ಕೆ ತಮ್ಮೊಳ್ ಮುಖ್ಯತೆಯುಮುಖ್ಯತೆಯುಮಿಲ್ಲ (ಶಬ್ದ. ೦೪೦ ವೃತ್ತಿ) ; ಪದನೆರಡುಂ ಮೇಣ್ ಪಲವುಂ ಪದಾರ್ಥಮಂ ಬಯಸುತಿರೆ ಬಹುವ್ರೀಹಿ ಪದಾರ್ಥದ ಗಡಣಂ,ದ್ವಂದ್ವಮೆನಿಪ್ಪುದವ್ಯಯೀಭಾವಮಾದಿಪದಮುಖ್ಯತೆಯಿಂ (ಶಬ್ದ. ೦೬೩). ೨. ಮೊದಲನೆಯ ಸ್ಥಾನ,—ದರ್ಜೆ. [ಸಂ. ಮುಖ್ಯತಾ]

**ಮುಖ್ಯತ್ವ** (ನಾ). = ಮುಖ್ಯತೆ ೧ : "ಬಲ್ಹಃ, ಬಲ್ಹನಂ, ಬಲ್ಹನೀಯಂ, ಈ ೩ ಮುಖ್ಯತ್ವಂ" (ಕಾಶಕ್ಕ. ೦೨೩); ಪುರುಷತ್ರಯಂ ಕ್ರಮದಿನಿದೋರ್ಡಂ ವ್ಯತ್ಯಯಮಾಗಿರ್ದೊಡಂ ಕೂಡಿ ನುಡಿವೆಡೆಯೊಳ್ ಉತ್ತಮಪುರುಷಕ್ಕೆ ಮುಖ್ಯತ್ವಂ (ಶಬ್ದ. ೨೩೩ ವೃತ್ತಿ). [ಸಂ.]

**ಮುಖ್ಯನ್ಯಾಯಾಧಿಪತಿ** (ನಾ). ಶ್ರೇಷ್ಠನ್ಯಾಯಾಧೀಶ ; ಉಚ್ಚನ್ಯಾಯಾಧಿಪತಿ : ಭಾರತದ ಮುಖ್ಯನ್ಯಾಯಾಧಿಪತಿಯವರಿಂದ ನಿಯುಕ್ತವಾಗತಕ್ಕ ಮಧ್ಯಸ್ಥಗಾರರು ನಿರ್ಧರಿಸತಕ್ಕಂಥ ಅಂಶದಾನವನ್ನು . . . ಪಾವತಿ ಮಾಡತಕ್ಕುದು (ಭಾರಾಸ. ೦೬೬). [ಸಂ.]

**ಮುಖ್ಯನ್ಯಾಯಾಧೀಶ** (ನಾ). = ಮುಖ್ಯನ್ಯಾಯಾಧಿಪತಿ : ಜಿಲ್ಲೆಯ ಸಿವಿಲ್‌ನ್ಯಾಯಾಲಯದ ಮುಖ್ಯನ್ಯಾಯಾಧೀಶನೇ ಕ್ರಿಮಿನಲ್ ಪ್ರಕರಣ

ಗಳಿಗೆ ಸಂಬಂಧಿಸಿದಂತೆ ಜಿಲ್ಲೆಯ ಸೆಷನ್ಸ್ ವಿಭಾಗದ ಮುಖ್ಯನ್ಯಾಯಾಧೀಶನಾಗಿರುತ್ತಾನೆ (ಕರ್ನಾ. XI, ೩೬೭); ಮುಖ್ಯನ್ಯಾಯಾಧೀಶ ಹೊತ್ತಿಗೆ ಮುಂಚೆ ಕೋರ್ಟಿಗೆ ಬಂದಿದ್ದನು (ಛನರು. ೨೫). [ಸಂ.]

**ಮುಖ್ಯಪ್ರಾಣ** (ನಾ). ಆಂಜನೇಯ ; ಹನುಮಂತ : ಕೂಸಿನ ಕಂಡೀರ್ಯಾ ಗುರು ಮುಖ್ಯಪ್ರಾಣನ ಕಂಡೀರ್ಯಾ (ಕುರಂ. ೧–೦೯೩ ಪಲ್ಲವಿ); ಜೋ ಜೋ ಜೋ ಮುಖ್ಯಪ್ರಾಣಾ ಮಲ್ಲರ ಗಂಟಲ ಗಾಣಾ (ವಾದಿರಾ. ೦೩೭ ಪಲ್ಲವಿ). [ಸಂ.]

**ಮುಖ್ಯಮಂತ್ರಿ** (ನಾ). ರಾಜ್ಯದ ಮಂತ್ರಿಮಂಡಲದ ಮುಖ್ಯಸ್ಥ ; ಪ್ರಧಾನಸಚಿವ : ಶಾಸನಸಭೆಯಲ್ಲಿ ಸಾವಿರಮಂದಿಯಿದ್ದರೂ ಕೆಲಸದ ಜವಾಬ್ದಾರಿ ಹೊರಲು ರಾಜ್ಯಕ್ಕೆ ಒಂದು ಮಂತ್ರಿಸಂಪುಟವೂ ಒಬ್ಬ ಮುಖ್ಯಮಂತ್ರಿಯೂ ಇರಬೇಕು (ರಾಜ್ಯಶಾ. ೬೩). [ಸಂ. ಮುಖ್ಯಮಂತ್ರಿನ್]

**ಮುಖ್ಯರಸ್ತೆ** (ನಾ). ವಿಶಾಲವಾದ ರಸ್ತೆ ; ಪ್ರಧಾನರಸ್ತೆ : ಗುಡಿಗಾರ ಪೇಟೆಯ ಒಂದು ಓಣಿಯಿಂದ ಹೊರಬಿದ್ದ ತುಂಗಕ್ಕ ಮುಖ್ಯರಸ್ತೆಯನ್ನು ಸೇರಿ ನಡೆಯಹತ್ತಿದ್ದಳು (ತುಂಗಭದ್ರಾ. ೦೩೭). [ಮುಖ್ಯ + ರಸ್ತೆ]

**ಮುಖ್ಯಸ್ಥ** (ನಾ). ಪ್ರಧಾನವಾದ ಅಧಿಕಾರವುಳ್ಳವನು : ಮುಖಂಡ; ನಾಯಕ : ಮಹಾಮಾತ್ಯನು ಮಂತ್ರಿಮಂಡಲದ ಮುಖ್ಯಸ್ಥನೆಂದು ಭಾವಿಸಬಹುದು (ಕಪಾಲ. ೩೩೦). [ಸಂ.]

**ಮುಖ್ಯಸ್ಥೆ** (ನಾ). ಪ್ರಧಾನವಾದ ಅಧಿಕಾರವುಳ್ಳವಳು; ಮುಖಂಡಳು: ಅವರು ಈ ದಿನ ಆ ಕಚೇರಿಯ ಮುಖ್ಯಸ್ಥೆಯಾಗಿ ಅಧಿಕಾರವನ್ನು ವಹಿಸಿಕೊಂಡರು (ರೂಢಿ). [ಮುಖ್ಯಸ್ಥ + –ಎ₂]

**ಮುಖ್ಯಾಧಿಕಾರಿ** (ನಾ). = ಮುಖ್ಯಸ್ಥ : ತೆರೆಯು ನಿಧಾನವಾಗಿ ಎದ್ದು ಜೈಲಿನ ಮುಖ್ಯಾಧಿಕಾರಿಯ ಕೊಠಡಿಯು ಪ್ರಕಟವಾಗುವುದು (ವೀರಯೋ.೧). [ಸಂ. ಮುಖ್ಯಾಧಿಕಾರಿನ್]

**ಮುಖ್ಯಾನಂದ** (ನಾ). [ತತ್ತ್ವಶಾ] ಆನಂದದ ಅಷ್ಟಭೇದಗಳಲ್ಲಿ ಒಂದು : ವಿಷಯಾನಂದ ಬ್ರಹ್ಮಾನಂದ ವಾಸನಾನಂದ ಮುಖ್ಯಾನಂದ ನಿಜಾನಂದ ಆತ್ಮಾನಂದ ಅದ್ವೈತಾನಂದ ವಿದ್ಯಾನಂದವೆಂಬವೇ ಆನಂದದಷ್ಟ ಭೇದಂಗಳವಱಲ್ಲಿ . . . ಹಾನೋಪಾದಾನವಿಲ್ಲದುಪೇಕ್ಷಾಬುದ್ಧಿಯಲ್ಲಿ ತೋರ್ಪುದೇ ಮುಖ್ಯಾನಂದವೆನಿಸುವುದು (ವಿವೇಕ. ೨೯). [ಸಂ.]

**ಮುಖ್ಯಾರ್ಥ** (ನಾ). [ಕಾವ್ಯಮೀ] ಶಬ್ದಪ್ರಧಾನವಾದ ಅರ್ಥ : ವಾಚ್ಯಾರ್ಥ : ಒಂದು ಶಬ್ದವನ್ನು ಕೇಳಿದ ಕೂಡಲೆ ತಟ್ಟನೆ ಮನಸ್ಸಿಗೆ ಹೊಳೆಯುವ ಅದರ ಸುಪ್ರಸಿದ್ಧವಾದ ಅರ್ಥವು ಮುಖ್ಯಾರ್ಥ ಅಥವಾ ವಾಚ್ಯಾರ್ಥವೆನ್ನಿಸುತ್ತದೆ (ಕೈಪಿಡಿ. ೦೬೬). [ಸಂ.]

**ಮುಖ್ಯೆ** (ನಾ). = ಮುಖ್ಯಸ್ಥೆ : "ವರಾರೋಹೆಯೆನೆ ಮುಖ್ಯೆಯಕ್ಕು [ಪಾಠಾಂ. ಮುಖ್ಯಳಕ್ಕು] " (ಮಂಗರಾ. ೯೦-೬). [ಸಂ. ಮುಖ್ಯಾ]

**ಮುಗದಾಣ** ' ಮೂಗುದಾಣ ' ನೋ.

**ಮುಗಲ್** ' ಮುಗುಳ್₁ ' ನೋ.

**ಮುಗಳಕ್ಕಿ** ' ಮುಗುಳಕ್ಕಿ ' ನೋ.

**ಮುಗಳ್** ' ಮುಗುಳ್₁ ' ನೋ.

**ಮುಗಿ** (ಕ್ರಿ). ೧. ಹೂವಿನ ದಳಗಳು ಮುಚ್ಚಿಕೊಳ್ಳು,–ಸಂಕೋಚನ ಹೊಂದು : "ಮುಗಿ–ಪುಷ್ಪಸಂಕೋಚನೇ (ಮೊಗ್ಗಾಗು)" (ಶಮದ); ಸರಸಿಜಬಾಂಧವನಸ್ತಾಂತರಗತನಾಗಿರೆ ಸರೋಜಿನೀವನಮಾದಂ ಕೊರಗುತ್ತೆ ಮುಗಿಗುವಿವಾಶ್ವರವಿರಹದೆ ಶೋಕಾಕುಲಂ ವಿಶೇಷಾಪ್ತಜನಂ (ಕವಿರಾ. ೩–೩೧); ಪಗಲಂತಿರ್ದಚ್ಚವೆಳ್ಪಂಗಳನಿನಕಿರಣದ್ಯೋತಿಗೆತ್ತಾಗಳಾಗಳೆ ಮುಗಿದಿರ್ದಂಭೋಜವೋರಂತಲರ್ದುವು ... ವಲಯಷಂಡಂಗಳಾಶಂಕೆಯಿಂದಂ ಮುಗಿಯಲ್ಕಿಂದಿರ್ದವೇನುಜ್ಜಳಿಸಿದುದೊ ಜಗಚ್ಚಕ್ರಮಂ ಚಂದ್ರಬಿಂಬಂ(ಆದಿಪು. ೦೨–೯); ದಿನಪನಪರಾಂಬುಧಿಯನೈದಲು ವನಜ ಮುಗಿದವು (ಕುಮ್ಯಾಭಾ. ೩-೬); ಮುಗಿದವೀ ಚಂದ್ರಾನನೆಯ ಬರವಿಗೆ ಸರೋರುಹಷಂಡ (ತೊರವೆ. ೩. ೬. ೨೦). ೨. ಕಣ್ಣು ತನಗೆ ತಾನೇ ಮುಚ್ಚಿಕೊಳ್ಳು,– ನಿಮೀಲಿತವಾಗು : ತವದ ಕಾಮೋದ್ರೇಕದಲಿ ಕೂಡುವ ಸಮಪ್ರಣಯಿಗಳ ನಿಡುಗಣ್ಣೆವೆಗಳರೆ ಮುಗಿವುತಿರೆ (ಸಾಳ್ವಭಾ. ೦೬-೩೭) ; ಚೆನ್ನಿಗ ನಿನ್ನಂಗವ ನೋಳ್ಪೆವೆಂದಕ್ಷಿಯಿನ್ನೊಂದ ನಿಟ್ಟಿಸವೆಂದು-ಮುನ್ನವೆ ಮುಗಿದಿವೆ ಚೆಲುವಿಕೆಯನು ತೋಱುತೆನ್ನ ನೇತ್ರಕೆ ಸುಖವೀಯೊ (ಕಂಸಾ. ೯–೦೮೦). ೩. ಕಣ್ಣನ್ನು ಮುಚ್ಚಿಕೊಳ್ಳು,– ನಿಮೀಲಿತಗೊಳಿಸು : ಅರೆಮುಗಿದಿರ್ದು ಜಾನಿಸುವ ಕಣ್ಮಲರಾಪ್ತಪದಾರ್ಥತತ್ತ್ವಮಂ ಸ್ಮರಿಯಿಪ ಚಿತ್ತಂ (ಸುಕುಮಾ. ೯–೦೬) ; ನಸು ಮುಗಿದ ಕಣ್ಣರೆಗಚ್ಚಿದೆಳಗಱುಕೆ . . . ಗೋರಿಗೆ ಸಿಕ್ಕಿದರಲೆಗಳನಕಟಕಟ ನಿಷ್ಕರುಣ ಲುಬ್ಧಕರು ಕಡೆಯೆಚ್ಚರು (ಹರಿಶ್ಚ. ೬–೨೭) ; ಕುಮಾರಿತಿ . . . ಪಾರ್ವತೀ ಶಾಂಕರಿ ಶಿವೇಯೆನುತ ನೆನೆವುತಿರಲೊಂದು ದಿವರಾತ್ರಿಯೊಳು ನಿಡುಗಣ್ಮಲರ ಮುಗಿದಿರ್ದಳು (ಸೌಂದರ್ಯ. ೬–೨೭) ; ಭಾರವಿದು ನಿನಗಿದುವೆ ವ್ರತಸಂಸ್ಕಾರ ಪರಿಯಂಶರಸ ಕೇಳೆಂದೂರುಜಪ್ರತಿ ಸರಳ ಕೀಲಿಸಿ ಮುಗಿಪನಕ್ಷಿಗಳ (ತೊರವೆ. ೨–೫–೦೬). ೪. (ಗುರು ಹಿರಿಯರನ್ನು ಕಂಡಾಗ ಗೌರವಸೂಚಕವಾಗಿ ಕೈಗಳೆರಡನ್ನೂ) ಜೋಡಿಸು ; ಸೇರಿಸು : ನಂದಿಮಿತ್ರಂ . . . ಬಂದು ಮುಂದೆ ನಿಂದು ಕೈಗಳಂ ಮುಗಿದಿಂತೆಂದಂ (ವಡ್ಡಾರಾ. ೭೯-೬) ; ಚಾರಣಯುಗಳಕ್ಕೆ ಕರಕಮಲಯುಗಲಮಂ ಮುಗಿದತಿತ್ವರಿತಗತಿಯಿಂ ಬರುತ್ತುಂ (ಆದಿಪು. ೨–೯೯ ವ) ; ಕೈಯ ಮುಗಿದುದು ನಿಖಿಳಪರಿವಾರ (ಕುಮ್ಯಾದ್ರೋ. ೧–೩೯) ; ಕಾಣಿಕೆಯನಿತ್ತೆಱಗಿ ಕಂಡುದು ಸಕಲಜನಶ್ರೇಣಿ ತಮತಮಗೆ ಮುಗಿದೆತ್ತಿವರ್ನೊಸಲೆಡೆಗೆ ಪಾಣಿಗಳನು (ಜೈಮಿಭಾ. ೭–೦೫). ೫. ಪೂರೈಸು ; ಮುಕ್ತಾಯವಾಗು ; ಕೊನೆಗೊಳ್ಳು : ತದ್ಯಾಗಮೊಂದುಬರಿಸಕೆ ಮುಗಿವುದು (ಜೈಮಿಭಾ. ೬–೦೦) ; ಅಂತಪ್ಪೊಡೆ ನೀಂ ಪೇಳ್ವ ನಲ್ಗತೆ ಮುಗಿಯೆ ಮಂದುದು (ರಾಮಾಶ್ವ. ೦೬೩-೨೭) ; ಮದುವೆ ಮುಗಿದರೂ ಮದುಮಗನ ನೋಡಲಿಲ್ಲ (ಗಾದೆ). ೬. ಬರಿದಾಗು ; ನಿಶ್ಶೇಷವಾಗು : "ಕುಸುಮಸಂಕೋಚನದೊಳಿಲ್ಲಮೆಯೊಳಂ ಮುಗಿಯೆನಿಸಂಗು" (ಶಬ್ದಮಂ. ೯೦) ; ಆ ಪೊಟ್ಟು ಕಾಮಂ ತನಗೆ ಬೆಂಬಲಮಾಗೆ . . . ನಿಷಂಗಂ ಮುಗಿವನ್ನಂ ಐವಡಿಗಣೆಯಿಂ ಮಱುವಕ್ಕದೊಳಿರ್ದಾ ರಾಮನನಿಸುತಿರ್ದಂ (ರಾಮಾಶ್ವ. ೩೯-೦೯); ಬತ್ತಿಯುಮೆಣ್ಣೆ ಮುಗಿದ ದೀವಿಗೆಯಂತೆ. ಕ್ಷಿತಿಜದಿಂ ಸಿಡಿದ ಮಿಂಚೆಂಬರದೊಳಳಿವಂತೆ ಭಗವಂತನೊಡನೆ ಪರಿನಿರ್ವಾಣವಡೆದಂ (ವೈಶಾಖ. ೯೬-೬೭೬). ೭. ಮುಳುಗು ; ಅಡಗು : ಗಗನನೀಲಿಮೆಯೆನ್ನ ಕಣ್ಗೆ ಸೊಗವೀವಂತೆ ಮುಗಿವ ತರಣಿಯ ರಕ್ತ ಹಿತವೆನಿಸದೇಕೋ (ಮಂಕುತಿ. ೫೨). ೮. ಕವಿ ; ಆವರಿಸು ; ವ್ಯಾಪಿಸು : ತನ್ನನರಿಯದ ವಿಶ್ವದಲಿ ನಿಂತು ತಾಳಿದರು ಒಳಗೊಳಗೆ ಬುದ್ಧಿಯದು ಕೆಣಕಲಿಸಗಿ ಜೀವಿಸದೆ ಹೋಗುವದು ಮಾನವನ ಜೀವಿತವು ಮುಕುರವದ ಮುಗಿದಂತೆ ಮಂಜು ಮಸುಗಿ (ಶಯನ. ೩೬–೧೯). 'ಮುಗಿಬೀಳು' ಪರಾ. ೯. ಹೆಚ್ಚಾಗು ; ಮೀರು ; ಮಿಗಿಲಾಗು : ಸಗುಣಗುಣಾಢ್ಯಭೂಪತಿಗಳೇಕಾಂತದಿ ಮಗುಟಗಳೊಂದೊಂದೊರಸಿ ಉಗುವ ಮಾಣಿಕಹೇಮರವ ನೂಱುಕೋಟಿಗೆ ಮುಗಿದು ಕೊಟ್ಟಿಹರು ವೈಶ್ಯರಿಗೆ (ಮೋಹತ. ೨೦-೩೫). ೧೦. ಕೊನೆಗೊಳಿಸು : ಮುಕ್ತಾಯಗೊಳಿಸು ; ಪೂರೈಸು : ಕಾರ್ಯವ ಮುಗಿದು ಬಂದವನೀಶಗುಸುರಲಾಶ್ಚರ್ಯವಾಯ್ತಂದಪ್ಪಿ ಮಗನ . . . ತಾತ್ಪರ್ಯದಿಂದಿತ್ತ ಮನ್ನಣೆಯೊ (ಭರತ. ೭೫–೨೦) ; ದುಗುಡವಿಲ್ಲದೆ ದಿನವ ತೋಷದೆ ಮುಗಿವನೇ ಸುಖಿಮನುಜನೈ ! (ಕಂಕ. ೯೧–೩). ೧೧. ತೀರಿಹೋಗು ; ಸಾಯು : 'ಮುಗಿವು', 'ಮುಗಿಸು' ಪರಾ. [ದೇ.॥ ತಮಿ. ಮುಕಿ ; ತುಳು. ಮುಗಿ; ತೆಲು. ಮುಗಿಯು; ಕೂಇ. ಮೂಗು]

**ಮುಗಿಡಿ** ? (ನಾ). ಒಂದು ಬಗೆಯ ಭೂಮಿ (?) : ಮೆಚ್ಚೆ ಮಣ್ಣುಮೂಗಣ್ಣುಘ ಪೊಲ×ನ್ನಿನ ಅ[ಷ್ಟ]ಕೆಯ ಕೆಯ್ಯು ಪಟುರ್ಗಣ್ಣುಗ ಕೊಳಗ

ಭತ್ತ ಮುಗಿಡಿಯ ಕೆಯ್ಯುಮಿನ್ನಿನಿತು ಸಲ್ಕೆ (ಸೌಇ. IX-i, ೩೩-೩೩ : ಸು. 10ನೆಯ ಶತ ?). [ ? ]

**ಮುಗಿತ** (ನಾ). ೧. ಸಂಕೋಚಗೊಳ್ಳುವಿಕೆ ; ಕುಗ್ಗುವಿಕೆ : "ಕುಚ– ಸಂಕೋಚನೇ. ಮುಗಿತದೊಳ್" (ಶಾಶಕ್ತ. ೨೬೦). ೨. ಮುಕ್ತಾಯ ಗೊಳ್ಳುವಿಕೆ ; ಪೂರೈಸುವಿಕೆ : "ಯಮು_ಉಪರಮೇ. ಮುಗಿತದೊಳ್" (ಶಾಶಕ್ತ. ೯೦). 'ಮುಗಿತಾಯ' ಪರಾ. [ಮುಗಿ+–ತ₂]

**ಮುಗಿತಾಯ**, ಮುಕ್ತಾಯ (ನಾ). ೧. ಕೊನೆ ; ಕಡೆ ; ಅಂತ್ಯ : ಮಂಗಳೂರಿನ ಘಟನೆಯೊಂದಿಗೆ ವಿದ್ಯೆಗೆ ಮುಗಿತಾಯ–ಮಾನವಸಹಾಯಕ್ಕೆ ಮುಗಿತಾಯ (ಪಾತ್ರಲ್ಕ. ೨೩೦). ೨. ಕೊನೆಯ ನಿರ್ಧಾರ ; ಅಂತಿಮ ನಿರ್ಣಯ : ಮಾವಿಯ ಸಂಗಡ . . . ಈ ಮಾತಿನ ಮುಗಿತಾಯ ಆಗಲೇಬೇಕೆಂದೂ ಅವಿುಲನು ನಿರ್ಧರಿಸಿದನು (ಇಶ್ಪಕ. ೨೬೩). 'ಉಳಿತಾಯ' ಹೋ. **ಮುಕ್ತಾಯ** : ೧. ವಿನೋದವೇ ಇಂಥ ಕಥೆಗಳ ಮುಕ್ತಾಯ (ಕಥಕ. ೨೯). ೩. ಕೊನೆಯ ಭಾಗ,–ಅಂಶ : ಮೂರು ನಾಲ್ಕು ನಿಮಿಷ ಮೊಂಡತನದಿಂದ ಮಾತಾಡಿದ್ದೆ ಕಡೆಗೆ ಸೋಲನ್ನೊಪ್ಪಿ ಮುಕ್ತಾಯಕ್ಕೆ ಸಂದುಬಿಟ್ಟೆ (ಪಂಟಿರು. ೩೯). ೪. [ಸಂಗೀತ] ಗಾಯನ ಅಥವಾ ವಾದನಗಳ ಏಳು ಹಂತಗಳಲ್ಲಿ ಕೊನೆಯದು : ಅಂಕುರ ಸ್ಥಾಯಿಕ ಶ್ರುತಿಸ್ಥಾಯಿ ಮೂರ್ಛನಸ್ಥಾಯಿ ಚೌಕ ಪೇಚರೀಸ್ಥಾಯಿ ರವಸಂಗತಿ ಮುಕ್ತಾಯಗಳೆಂಬ ಸಪ್ತಾವಸ್ಥೆಗಳಲ್ಲಿಯುಂ (ಪಪೀಕ. ೨೩೩) ; ಕೊರವರ ಭೀಮನು . . . ಸುದೀರ್ಘವಾದ ಪಲ್ಲವಿಯನ್ನು ಸನಾದದಲ್ಲಿ ನುಡಿಸಿ, ಕರಡಿ ಯವನನ್ನು 'ಮುಕ್ತಾಯ'ಕ್ಕೆ ಆಹ್ವಾನಿಸಿದ್ದಾನೆ (ಪಟ್ಟಹೊ. ೦೩).

**ಮುಕ್ತಾಯಕೊಡು** = (ಸಂಗೀತದಲ್ಲಿ) ಸಮಾಪ್ತಿಗೊಳಿಸು : ಉಪ ಸಂಹಾರ ಮಾಡು : ಮೇಳದವರು ಅದಕ್ಕೆ ಪೊಟ್ಟಮೊದಲು 'ಮುಕ್ತಾಯ' ಕೊಟ್ಟು, ಚಾಲತಿಯನ್ನು ಬಾರಿಸಿ ಮುಗಿಸುವರು (ಪಟ್ಟಹೊ. ೦೩). **ಮುಕ್ತಾಯಭಾಷಣ** = ಕಾರ್ಯಕ್ರಮದ ಕೊನೆಯಲ್ಲಿ ಮಾಡುವ ಭಾಷಣ : ಅಂದು ಅಧ್ಯಕ್ಷರೇ ಮುಕ್ತಾಯಭಾಷಣಮಾಡಿದರು (ರೂಢಿ). **ಮುಕ್ತಾಯಸಮಾರಂಭ** = ಕಾರ್ಯಕ್ರಮದ ಕೊನೆಯಲ್ಲಿ ನಡೆಸುವ ಸಮಾರಂಭ : ಮುಕ್ತಾಯಸಮಾರಂಭದ ದಿನ . . . ರಾಜ್ಯದ ನಾನಾ ಭಾಗಗಳಿಂದ ಆಗಮಿಸಿದ ಸಮಾಜದ ಜನರು ಹಾರಗಳನ್ನು ಸಮರ್ಪಿಸಿ ಗೌರವಿಸಿದರು (ಪಟ್ಟೂಶಾ. IV. ೩೦೯).

[ಮುಗಿತ + – ಆಯ್₄./ತುಳು. ಮುಗುತಾಯಿ; ತೆಲು. ಮುಕ್ತಾಯ]

**ಮುಗಿತೆ** (ನಾ). ೧.=ಮುಗಿತ ೧ : "ಚುಣ – ಸಂಕೋಚೇ. ಮುಗಿತೆ ಯೊಳ್ . . . ಚುಣನಂ, ಚುಣನೀಯುಂ. ಈ ೨ ಮುಗಿತೆ" (ಶಾಶಕ್ತ. ೨೬೩). ೨.=ಮುಗಿತ ೨ : "ಲಡ – ಉಪಸೇವಾಯಾಂ. ಕೆಲಸದ ಮುಗಿತೆಯೊಳ್" (ಶಾಶಕ್ತ. ೨೩೪). [ಮುಗಿ+ – ತೆ₂./ತುಳು. ಮುಗಿತೆ]

**ಮುಗಿಬೀಳು** (ಕ್ರಿ). (ಉಕ) ಕವಿ ; ಮುತ್ತು ; ಮುಸುರು : ಅಗಣಿತ ರಾದ ಶಿವಾಜಿಯ ಭಟರು ಇರುವೆಯಂತೆ ಬೆಳವಡಿಕೋಟೆಯನ್ನು ಮುಗಿ ಬಿದ್ದರು (ಕಬಂತ. ೬೨) ; ನನ್ನ ಪಾಡಿಗೆ ನಾನು ಹೂ ಹಡೆದರೇಕವರು ಮುಗಿಬೀಳುವರೊ ಮೇಲೆ ! (ಕರುಶ್ರಾ. ೦೩-೦೩).

[ಮುಗಿ+ಬೀಳು₁ (<ಬೀೞ್₁)]

**ಮುಗಿಯಿಸು**, ಮುಗಿಸು (ಕ್ರಿ). ೧. ಹೂವಿನ ದಳಗಳು ಮುಚ್ಚಿಕೊಳ್ಳು ವಂತೆ ಮಾಡು : ವನಜದಳಂಗಳೊಳೊಂದೊಂದನೆ ಮುಗಿಯಿಸಿ ಕುಮುದ ವನದಳಂಗಳೊಳೊಂದೊಂದನೆ ಒಡಿವಲರ್ಚುತಿರ್ದಪುವೆನೆ ಪೂಗೊಳದೊಳಗೆ ಪೊಳೆದುವಿಂದುಕರಂಗಳ್ (ಕಾದಂಕಾ. ೯೨೦) ; ಜಿನಲಕ್ಷಣನಿರೀಕ್ಷಣಮೆಂಬ ಚಂದ್ರನಿಂದಂತರಾಯಮೆಂಬ ತಾವರೆಯುಂ ಮುಗಿಯಿಸದೆ (ಧರ್ಮಾಮೃ. ೭-೯೬). ೨. ಕೈಗಳನ್ನು ಜೋಡಿಸುವಂತೆ ಮಾಡು, — ಸೇರಿಸುವಂತೆ ಮಾಡು : ಮರ್ತ್ಯವಿದ್ಯಾಧರರಾಜವ್ಯಂತರಾಧೀಶ್ವರಕರಸರಸಿಜಂಗಳಂ ಪಕ್ತ್ರಚಂದ್ರಸ್ಫುರಿತೋದ್ಯತ್ಕಾಂತಿ ನಿಚ್ಚಂ ಮುಗಿಯಿಸೆ (ಆದಿಪು. ೩-೯೬); ಇತರಪ್ರಚಂಡರ ಕರಾಬ್ಜಮನೀಕ್ಷಣಚಂದ್ರಿಕಾಂಶುವಿಂ ಮುಗಿಯಿಪ್ಪುದೆಂಬಿನಂ ಮುಗಿದುವಂದವನೀಶಕರಾಂಬುಜೋತ್ಕರಂ (ಜಗಧಿ. ೦೩-೭೨). ೩. ಆವರಿಸು ವಂತೆ ಮಾಡು; ಕವಿಯಿಸು : ಮುಗಿಯ್ಪುವಿವೆಂದುವೆಂದೆನಿಪ್ಪವಂ ಪರಿ ಸೈನ್ಯರಜೋಂಧಕಾರದಿಂ ಮುಗಿಯಿಸಿದಂ ದಿವಾಕರಕರಾಬ್ಜಮಂ (ಜಗಧಿ. ೦೩-೭೨). **ಮುಗಿಸು** : ೧. ವಿುಗಿಸಿದಂ ವಾದ್ಯರವದಿಂದಬ್ಧಿಘೋಷಮಂ ಮುಗಿಸಿದಂ ತಾವರೆಯನಾ ಬಭ್ರುವಾಹನಂ ಧೂಳ್ಗಳಿನನಂ ಮುಸುಕಲು (ಜೈಮಿಭಾ. ೦೭-೫೭); ಕೆಂದಾವರೆಗಳ ಮುಗಿಸುತ . . . ಪರಿಪೂರ್ಣೇಂದು ವದನೆಯುರ್ಬಿದಿದರು (ಕಂನವಿ. ೨೦-೭೬). ೨. ಈ ಬಾಲಕಂ ಭೂಪಾಲಕರ ಕಯ್ಯಂ ಮುಗಿಸಿಕೊಂಡು ಬದರ್ಕುಪಧಿಗತಪರಮಾರ್ಥನಪ್ಪತ್ಯಂತ ಕಾರಣಿಕಂ (ಪಂಬರ. ೨-೬೬). ೪. ತೆಗೆಯದಂತೆ ಮಾಡು; ಮುಚ್ಚಿಸು : ಬಹುಚಾಟುಚಪಳರ ಬಾಯ ಮುಗಿಸಿ . . . ವಧೂಟಿಯರು . . . ಸುವಿಲಾಸದಿಂ ಬರುತಿರ್ದರು (ಪಪಹೋ. ೨೪-೨೨). ೫. ಕೊನೆಗೊಳಿಸು; ಮುಕ್ತಾಯ ಮಾಡು ; ಪೂರೈಸು : ವಿುಗೆ ಮೂಜಗಂ ತಣಿಯೆ ಹಯಮೇಧಯಜ್ಞಮಂ ಮುಗಿಸಿ ಧರ್ಮಾತ್ಮಜಂ . . . ಸುಖದಿಂದೆ ರಾಜ್ಯಂಗೈದನು (ಜೈಮಿಭಾ. ೩೪ ಸೂಕ್ತ); ಹೊಸಗನ್ನಡದ ಕವಿತೆಯಲ್ಲಿ ಚರಣದೊಂದಿಗೆ ಪದವನ್ನೂ ಮುಗಿಸುವುದೇ ಪದ್ಧತಿ (ಸಮಾಲೋ. ೦೯೪). ೬. ಬರಿದು ಮಾಡು; ನಿಶ್ಶೇಷಗೊಳಿಸು : ಎಲ್ಲರ ತಿಂಡಿಯನ್ನೂ ಆ ಹುಡುಗ ಒಬ್ಬನೇ ಮುಗಿಸಿಬಿಟ್ಟದ್ದಾನೆ (ರೂಢಿ). ೭. ನಾಶಮಾಡು ; ಹಾಳುಮಾಡು ; ಧ್ವಂಸಗೊಳಿಸು : ಆ ಅವಿವೇಕಿ ತನ್ನ ತಂದೆಯ ಆಸ್ತಿಯನ್ನೆಲ್ಲಾ ಮುಗಿಸಿ ಬಿಟ್ಟನು (ರೂಢಿ). ೮. ಕೊಲ್ಲು ; ಸಾಯಿಸು; ತೀರಿಸು : ಅವಳಿಗೆ ದ್ರವ್ಯದಾಸೆ ತೋರಿಸಿ ಅವಳ ಮಗುವನ್ನು ನಮ್ಮ ವಶಪಡಿಸಿಕೊಂಡು . . . ರಾತ್ರೋರಾತ್ರಿ ಶ್ಮಶಾನಕ್ಕೆ ಒಯ್ದು ಮುಗಿಸಿಬಿಟ್ಟೆವು (ಶ್ರಶಾಶ. ೦೩). [ ಮುಗಿ + —ಇಸು₃ ]

**ಮುಗಿಲ್**, ಮುಗಿಲು (ನಾ). ೧. ಮೋಡ ; ಮೇಘ : "ಅಭ್ರಂ, ಅಬ್ದಃ, ಘನಃ, ಮೇಘಃ . . . ಬಲಾಹಕಃ – ಈ ೧೦ ಮುಗಿಲ ಪೆಸರ್" (ಕಚಾಯು. ೦೦-೫೬); ತಡೆತಡೆದು ಕಾಂತನಲ್ಲಿಗೆ ನಡೆಯಲ್ ಬಗೆದನಗೆ ಕಾರ ಕಾಱಿರುಳೊಳ್ ಸಯ್ತುಡವಡಿಕೆಗಳಂ ತೊಡೆದತ್ತೆಡೆಪಱಿಯದೆ ಪೊಳೆವ ಮಿಂಚು ಮುಗಿಲೆಡೆಯೆಡೆಯೊಳ್ (ಕಬಿರಾ. ೩-೦೨೫); ಇರ್ವರುಂ . . . ಸಹಸ್ರಕೂಟಾಕಾರಮಪ್ಪುದೊಂದು ಮುಗಿಲಂ ಕಂಡು (ವಡ್ಡಾರಾ. ೦೦೯-೩); ಪಾಱುವ ವಿಮಾನದೊಂದಳ್ಳೇಱಿಂ ಪರಿದುಗುವ ಮುಗಿಲ ನೀರ್ಗಳ ಪಲವುಂ ಜೀಱುಗಳೊಳೆಳಸಿ ಖಚರರನಾಱಿಸಿದುದು ಗಗನದೊಳ್ ವಿಯತ್ತಳಪವನಂ (ಆಂಪು. ೯-೯೬). ೨. ಬಾನು ; ಆಗಸ ; ಆಕಾಶ : "ಆಕಾಶದೊಳ್ ಕಾದಂಬಿನಿಯೊಳು ಮುಗಿಲ್" (ಕಬ್ಬಮಂ. ೦೦೬). ವಾಮನಕ್ರಮಂ ಮುಟ್ಟುಗೆ ಮುಟ್ಟದಿರ್ಕೆ ಮುಗಿಲಂ (ಅಲಾಪ. ೦-೦೦); ಅಲ್ಲಿಯ ಜನಂ ಮುಗಿಲೆಡೆಯೊಳೆಡೆವಿಡದೆಡೆಯಾಡಿ ಬಟಲ್ದ ಬಿಜ್ಜೋದರಿ ಯರ್ಕಳೆಱವಟ್ಟಿಗೆದಾಣಮೆಂಬಂತೆಸೆವೆಳನೀರ್ಗಳಂ ಪೊತ್ತಾಗಸದೆಡೆಗಡರ್ವ ಚೆಂದೆಂಗಿನ ಮರಂಗಳೊಳಂ . . . ಬಸಂತಗೆ ನೆಲೆವೀಡಾಗಿರ್ದುದು (ಕಬ್ಬಕಾ. ೩೦). **ಮುಗಿಲು** : ೧. "ಮುಗಿಲೆನಲ್ಮೇಘ" (ಕಶರ. ೯೦); ಮುಗಿಲು ಹಱಿದು ಬಿದ್ದರೆ ಎನಗೆ ಮಜ್ಜನಕ್ಕೆಱೆದರೆಂಬೆನು (ಬಸವಾದೇ. ೬. ೩೦-೬೩); ಭಯರಸದ ಹಬ್ಬುಗೆಯಲುಬ್ಬಿದ ಶೋಕದೊಡ್ಡನ ಮುಗಿಲು ಕಱಿದುದು ಕುರುಬಲದ ಕಂಬನಿಯ ಬಿಱುವಳೆಯ (ಕುಪ್ಪಾಕ. ೨೦-೩೬); ಮುಗಿಲು ಮುಸುಕಿದ ಚಂದ್ರಬಿಂಬವೊ ಪಗಲೊಳೆಸೆವ ಸದೀಪಕಾಂತಿಯೊ (ಪಕಶ. ೭-೨೯); ನೀಲಾಕಾಶದಲ್ಲಿ ನಿರ್ದಿಷ್ಟರೂಪದ ಬಿಳಿಯ ಮುಗಿಲೊಂದಿದ್ದರೆ ನಮ್ಮ ಗಮನ ಆ ಕಡೆ ಚೆನ್ನಾಗಿ ಬೀಳುತ್ತದೆ (ಕಿಪ್ಪರ. ೯೭೪). ೨. ಅಗಳಿಗಟ್ಟಣೆಯನಿಟ್ಟಿರುವರಲ್ಲದೆ ಮುಗಿಲಿಗಟ್ಟಣೆಯನಿಕ್ಕುವರೆ

(ಶಾಂಶೀತ. ೬-೩೦); ಮಳೆ ಯಾವಾಗ ಆದೀತೋ ಎಂದು ಮುಗಿಲ ಕಡೆ ನೋಡುವುದೇ ಅವನ ಕೆಲಸ (ವಪದ. ೩). ೩. ಮೇಲುಗಡೆ ; ಮೇಲು ಭಾಗ : ' ಮುಗಿಲುನೂಲು ' ಪರಾ.

**ಮುಗಿಲು ಮುಟ್ಟು, ಮುಗಿಲು ಮುಟ್ಟು** = ೧. (ಅಲಂ) ಮೇಲೇರು ; ಉಚ್ಚಾಗ್ರಯಸ್ಥಿತಿಯನ್ನು ತಲುಪು : ನೆಗಲ್ದಿಕ್ಷ್ವಾಕು ಕುಲಾಂಬರೇಂದುಭರತಂ ನಿನ್ನಗ್ರಜಂ ಸಾಹಸಂ ಮುಗಿಲಂ ಮುಟ್ಟೆ ... ದಿಗ್ಜಯಕ್ಕೆ **ಪೊಜಮಟ್ಟಾ** ಪೆಂಪು ಸಾಮಾನ್ಯಮೇ (ಆದಿಪು. ೧೪-೫೨). ೨. ಆಕಾಶವನ್ನು ತಲುಪು ; ಗಗನಕ್ಕೇರು : ವಿದ್ವಾಂಸರ ವೇದಾ ಶೀರ್ವಚನಗಳು ಪುರಜನರ ಜಯಘೋಷಗಳು ಮುಗಿಲು ಮುಟ್ಟುತ್ತಿದ್ದವು (ಶ್ರೀರಾಯ. ೩೪೪). **ಮುಗಿಲ ಕಿಚ್ಚು** = ಮೋಡಗಳ ಘರ್ಷಣೆಯಿಂದುಂಟಾಗುವ ಬೆಳಕು; ಮಿಂಚು : "ಮೇಘವಹ್ನಿಃ, ಇರಮ್ಮದಃ— ಈ ೨ ಮುಗಿಲ ಕಿಚ್ಚು" (ಕರ್ಣಾಡು. ೦೩-೭೦). **ಮುಗಿಲ ದನಿ**=ಮೋಡಗಳ ಘರ್ಷಣೆಯಿಂದುಂಟಾಗುವ ಧ್ವನಿ ; ಗುಡುಗು ; ಮೇಘಧ್ವನಿ : "ಮೊಟಗು = ಮುಗಿಲ ದನಿ" (ಕಪುದ. ಶಂ. ೧); ಮುಗಿಲ ದನಿಯಂ ಕೇಳ್ದ ಮುದಿಹಂಸೆಯಂತೆಯಾ ಮಗನ ದನಿಯಂ ಕೇಳಿ ಕೈಯ ನೆಟ್ಟಿಯ ಮುಜಿದು (ಸಮ್ಯಕ್ತ್ವ. ೨-೭೪). **ಮುಗಿಲ ಧ್ವನಿ**=ಮುಗಿಲ ದನಿ : "ಮೊಟಗೆಂದು ಮುಗಿಲ ಧ್ವನಿಯುದು" (ಶಶಬ. ೧೯೫). **ಮುಗಿಲ ಪೂ, ಮುಗಿಲ ಹೂ**= ಮಳೆನೀರು : "ಮುಗಿಲ ಪೂವೆಂದು ಜಲಂ"(ಕಶಸಾ. ೫೩-೧೪೯); "ಜಲವೆಂದುಂ ಮುಗಿಲ ಹೂ[ಶಾಶಾಂ. ಪೂ]ವೆನಿಕ್ಕುಂ" (ಕವಿಕಂ. ೪೭೦-೯೦). **ಮುಗಿಲಮಲ್ಲಿಗೆ, ಮುಗಿಲುಮಲ್ಲಿಗೆ** = ೧. ಒಂದು ಬಗೆಯ ಮಲ್ಲಿಗೆ : ಹೊರಗೆ ಎಡಬಲದಲ್ಲಿ ಎರಡು ಮುಗಿಲ ಮಲ್ಲಿಗೆಯ ಗಿಡಗಳಿರುವುವು (ಕೃಪಂಧ. ೯೫). ೨. (ಅಲಂ) ಕೈಗೆ ಎಟುಕದುದು; ದುರ್ಲಭವಾದುದು: ಅವರ ಗ್ರಂಥಗಳು ಕನ್ನಡಸಾಹಿತ್ಯಲೋಕಕ್ಕೆ ಮುಗಿಲ ಮಲ್ಲಿಗೆಯೇ ಆಗಿರುವುವು (ಸಾಹಿಸ. ೧); ಜ್ಞಾನಯೋಗವಂತೂ ನೂರಕ್ಕೆ ತೊಂಬತ್ತೊಂಬತ್ತು ಜನರ ಪಾಲಿಗೆ ಮುಗಿಲು ಮಲ್ಲಿಗೆ (ಧರ್ಮಸಾ. ೧೦೭). **ಮುಗಿಲವಟ್ಟೆ** = ಆಕಾಶಮಾರ್ಗ ; ಗಗನಪಥ : ಆತನುಂ ಕೂಡೆ ಕಾವಲ್ತೆತರೆ ಮುಗಿಲವಟ್ಟೆಯು ಬೇಹಿನಾಳಾಗಿ. ಬಟ್ಟೆವಿಡಿದರ್ ಪಂಚವಟಿಗೆ (ಶ್ರೀರಾಮಪಾ. ೦೪೪-೦೭). **ಮುಗಿಲಿಗೇರಿಸು** = (ಅಲಂ) ಹೊಗಳು ; ಅಟ್ಟಕ್ಕೇರಿಸು : ಸರ್ವಹಾನಿಗಳಿಗೂ ಕಾರಣವಾದ ಕ್ರೂರಕೃತ್ಯಗಳನ್ನು ಮೇರುಸಾಹಸಕೃತ್ಯಗಳೆಂದು ಮುಗಿಲಿಗೇರಿಸುವ ಸಮಾನಾಭಿರುಚಿಯ ಜನರ ನಡುವೆ ಈ ರಾಜಕೀಯದುರ್ಮಾರ್ಗಿಗಳು ಸ್ವಚ್ಛಂದದಿಂದ ವರ್ತಿಸುತ್ತಿದ್ದಾರೆ (ಪುಪಡು. ೫೦೦). **ಮುಗಿಲುದ್ದ, ಮುಗಿಲುದ್ದಂ** = ಆಕಾಶದಷ್ಟು ಎತ್ತರ ; ಗಗನದಷ್ಟು ಎತ್ತರ : ನಗು . . . ಮುಗಿಲುದ್ದವಾದ ನೋವಟವಮಟಿಗಂ ದಿಟಕ್ಕನೆ ಕರಂ ಬಳೆದಂ ಮನದಂತೆ ವಾಮನಂ (ಅರ್ಧಶೀ. ೬-೨೪); ಮುಗಿಲುದ್ದವಾಗಿ ಮೂವಳಿಸಿದ ಕೋಟೆಯಿಂ . . . ಉಗ್ಗಳಿಸೊಪ್ಪುಗು (ಶಾಇಇ. IX-i, ೨೪೭-೦೦; 1177); ಮುಗಿಲುದ್ದಂ ಪೊದತ್ತು ಹರ್ಷರಸಮಾ ಪುರದೊಳ್ (ಶಂರಾಪಾ. ೪-೨೮). **ಮುಗಿಲು ಮಾಳಿಗೆ** = (ಅಲಂ) ಕಲ್ಪನೆಯ ಸೌಧ,-ಮಹಲು : ವಿಜಯಸಿಂಹನಿಗೆ ತಾನು ಯೋಚಿಸುತ್ತಿದ್ದ ವಿಷಯವು ಬಹಳ ಮನೋಹರವಾಗಿದ್ದುದರಿಂದ . . . ತನ್ನ ಮುಗಿಲುಮಾಳಿಗೆಯನ್ನು ಪುನಃ ಕಟ್ಟಿಕೊಳ್ಳಲಾರಂಭಿಸಿದನು (ರಾಬಿಜ. ೨). **ಮುಗಿಲು ಮಾರೇಗೇಣು** = (ಅಲಂ) ಅತ್ಯಂತ ಉನ್ನತ ಮಟ್ಟದಲ್ಲಿರುವಿಕೆ : ಆಂಗ್ಲಭಾಷೆಯ ರಚನಾಶಕ್ತಿಯ ಸಂಬಂಧದಲ್ಲಿ ಅವನ ಗ್ರಹಿಕೆ, ಇನ್ನೇನು ಮುಗಿಲು ಮಾರೇ ಗೇಣು ಎಂಬಂತಾಗಿತ್ತು (ಇಕ್ಕಿಳ. ೨೨೫). [ದೇ.॥ ತಮಿ. ಮಲ. ಮುಕಿಲ್; ತುಳು. ಮುಗಿಲ್, ಮುಗಳ್; ತೆಲು. ಮೊಗುಲು, ಮೊಯಿಲು; ಕೋಲಾ. ಮೊರ್ಗರ್; ಪರ್ಜಿ. ಮಲ್ಗುರ್; ಗದಬ. ಮೊಗುಲ್, ಮೊಗ್ಗುಲ್; ಗೊಂಡಿ. ಮೊಯೊಲ್]

**ಮುಗಿಲಟ್ಟಣೆ** 'ಮುಗಿಲಟ್ಟಳೆ' ನೋ.

**ಮುಗಿಲಟ್ಟಳೆ, ಮುಗಿಲಟ್ಟಣೆ** (ನಾ). ಗಗನವನ್ನು ಮುಟ್ಟುವಷ್ಟು ಎತ್ತರವಾಗಿರುವ ಬುರುಜು; ಆಕಾಶವನ್ನು ಸೋಕುವಂಥ ಬತೇರಿ : ಮುಗಿಲಟ್ಟಳೆಗಳ ಕೆಲದಂಬುಗಂಡಿಯಿಂ ನುಸುಳ್ದು ನಡೆವ ದಿನಕರನ ಹಯಂ ಗಗನಾಧ್ವಖೇದಮಂ ಪಟಯಿಗೆಗಳ ತಣ್ಣೆಲರ ತೀಟದಿಂ ತೊಲಗಿಸುಗುಂ (ಶಂರಾಪಾ. ೦-೦೦೭); ಬಲಿದುದನಿತಕೆ ಕೋಟೆ ಪರಿಖಾವಳಯರಚನೆಯು ಲಾಳುವೇರಿಯ ಹುಲಿಮುಖದ ಮುಗಿಲಟ್ಟಳೆಯ ಸಾಲುಗಳ ಸೊಗಸಿನಲಿ (ಕೊರಂಶಾ. ೦-೦೩-೨) ; ಕಣ್ಗೆ ರಮಣೀಯವಾಗಿದೆ ಕರ್ಣತನಯ ನೋಡೀ ಪುರದ ಮುಗಿಲಟ್ಟಳೆಯ ಸಾಲ್ಗಳು (ಕೃಬಬ್ರಾ. ೩-೨೦). **ಮುಗಿಲಟ್ಟಣೆ** : ಅಗಟಿಗೊಳಗಬ್ಜಾಕೃತಿಯಿಂ ಮುಗಿಲಟ್ಟಣೆಯೊಳಗೆ ಚಂದ್ರಬಿಂಬಾಕೃತಿಯಿಂ ಮೊಗಮೊಪ್ಪೆ ವಿಮಾನಲೋಚನೆ ಮೃಗೇಕ್ಷಣದೆ ಸಗರನೃಪನನಭಿವೀಕ್ಷಿಸಿದಳ್ (ಅಜಿಪು. ೯-೩೭) ; ಬೆಟ್ಟದ ಕಿತ್ತು ತಂದಿರಿಸಿದಂದದಿ ಮುಗಿಲಟ್ಟಣೆತೆನೆಗಳಗ್ರದಲಿ ಬಟ್ಟರನ್ನಗಳ ತೆತ್ತಿಸಿದ ಹೊಂಗಲಸಂಗಳಿಟ್ಟಿರ್ದುವು (ಪೋಹಶ. ೨೦-೮).
[ಮುಗಿಲ್ + ಅಟ್ಟಳೆ]

**ಮುಗಿಲು** ' ಮುಗಿಲ್ ' ನೋ.

**ಮುಗಿಲುಗಡವು** ' ಮುಗಿಲ್ಗಡವು ' ನೋ.

**ಮುಗಿಲುನೂಲು** (ನಾ). ನೆಯ್ಗೆಯ ಮಗ್ಗದಲ್ಲಿ ಹಾಸುನೂಲಿನ ಮೇಲು ಭಾಗದಲ್ಲಿ ಬರುವ ನೂಲು, _ ಎಳೆ : ಹಾಸನ್ನು ಇರಿಸಿಯಾಗಲು ಅದರ ಎಳೆಗಳನ್ನು ಬೇರೆಬೇರೆ ಹೊಕ್ಕುಗಳಲ್ಲಿ ತಂದು, ಪ್ರತಿ 'ಸರಿ' ಯ ನೂಲು ಮೇಲೆ ಬರಲು 'ಮುಗಿಲು'ನೂಲು ಕೆಳಕ್ಕೆ ಹೋಗುವಂತೆ ಏರ್ಪಡಿಸಿ, ಇವೆರಡರ ಎಡೆಯಿಂದ ಹೊಕ್ಕನ್ನು ತರುವ ಲಾಳಿಯನ್ನು ಓಡಿಸುವರು (ಶಾಂಕ್ರ. I. ೪೨೦).
[ಮುಗಿಲು (< ಮುಗಿಲ್) + ನೂಲು$_2$ (< ನೂಲ್$_2$)]

**ಮುಗಿಲುವಟ್ಟೆ** 'ಮುಗಿಲ್ವಟ್ಟೆ' ನೋ.

**ಮುಗಿಲೂಱು** (ಕ್ರಿ). ಗಗನವನ್ನು ಆಶ್ರಯಿಸು; ಅಂತರಿಕ್ಷದಲ್ಲಿ ಸೇರು: ಅಂತು ಮುಗಿಲೂಱಿದ ಮೂಱುಲೋಕಮುಂ ಕರ್ಣಾರ್ಜುನರ ಯುದ್ಧಮಂ ನೋಡಲ್ ನೆರೆದು(ಶಂಶಭಾ. ೦೨-೦೪೪ ವ). [ಮುಗಿಲ್ + ಊಱು$_1$]

**ಮುಗಿಲ್ಗಡವು, ಮುಗಿಲುಗಡವು** (ನಾ). ಒಂದು ಬಗೆಯ ಈಚಲು ಮರ : ಮೃಣಾಳನಾಳಧಾರಾಗ್ರಹಂಗಳ ಮೇಲೆ ಮುಗಿಲ್ಗಡವಿನಲರ ಧೂಳಿಯೊಳ್ ಪೊರೆದು ನಿಲಿಸಿದ ಯಂತ್ರಮಯೂರಂಗಳುಮಂ . . . ನೋಡುತ್ತಂ ಪೋಗೆ (ಕಾದಂಬ. ೨೦೪). **ಮುಗಿಲುಗಡವು** : "ನೀಪಃ, . . . ಹಲೀಪ್ರಿಯಃ—ಈ ೪ ಮುಗಿಲುಗಡವಿನ ಮರ" (ನಾಶಂಕ. ೧೦೭). [ಮುಗಿಲ್ + ಕಡವು$_2$ (< ಕಡಂಬ)]

**ಮುಗಿಲ್ಗಲ್, ಮುಗಿಲ್ಗಲ್ಲು** (ನಾ). ಮೋಡದಿಂದ ಬೀಳುವ ಕಲ್ಲು ; ಆಲಿಕಲ್ಲು : "ಆಲಿವರಲೆಂದುಂ. ಮುಗಿಲ್ಗಲ್ಲೆಂದುಂ ಘನೋಪಲಂ" (ಳಕಸಾ. ೫೩-೧೫೪). **ಮುಗಿಲ್ಗಲ್ಲು** : "(ವಾಯುಮಂಡಲದಲ್ಲಿಯ ನೀರಿನ ಆವಿ ಗಡ್ಡೆಗಟ್ಟಿ ಮಳೆಯಂತೆ, ಮಳೆಯೊಂದಿಗೆ ಬೀಳುವ) ಆಲಿಕಲ್ಲು ; ಮುಗಿಲ್ಗಲ್ಲು" (Hail. ಇಂಕಇ). [ಮುಗಿಲ್ + ಕಲ್$_3$]

**ಮುಗಿಲ್ಗಲ್ಲು** 'ಮುಗಿಲ್ಗಲ್' ನೋ.

**ಮುಗಿಲ್ಗಿಚ್ಚು** (ನಾ). ಆಕಾಶದಿಂದ ಭೂಮಿಗೆ ಹರಿಯುವ ವಿದ್ಯುತ್ಪ್ರವಾಹ; ಸಿಡಿಲು; ಅಶನಿ : "ಮುಗಿಲ್ಗಿಚ್ಚೆಂದು ಸಿಡಿಲ್" (೪೭ಸಾ. ೫೩-೦೫೩). [ಮುಗಿಲ್ + ಕಿಚ್ಚು]

**ಮುಗಿಲ್ದನಿ** (ನಾ). ಮೋಡಗಳ ಘರ್ಷಣೆಯಿಂದ ಉಂಟಾಗುವ ಶಬ್ದ ; ಗುಡುಗು ; ಮೇಘಧ್ವನಿ : "ಮೊಟಗು = ಮುಗಿಲ್ದನಿ" (ಕಪುರ. ೬. ಶಂ. ೧) ; "ಮೊಟಗೆನೆ ಮುಗಿಲ್ದನಿ [ಶಾಶಾಂ. ಮುಗಿಲ ದನಿ]" (ಕಶ್ಮಮಂ. ೩೭).
[ಮುಗಿಲ್ + ದನಿ$_1$]

**ಮುಗಿಲ್ಮುಚ್ಚುಗು** (ಕ್ರಿ). ಮೋಡವು ಕವಿ,— ಆವರಿಸು : ಅಲ್ಲಿ ಮಹಾಂಬುಧಿಯೆ ಗೆತ್ತು ಮುಗಿಲ್ಮುಚ್ಚುಗಿ ನೀರ ಪೊಗೆವಪೊಲಿಂದೇಂ ಕತ್ತಲಿಸಿ ಬಂದು ನೀರಾಡುತ್ತಿರ್ದುವು ಸುತ್ತಮಲ್ಲಿ ವನಕರಿನಿವಹಂ (ಕಾದಂಪೂ. ೦೦೮). [ಮುಗಿಲ್+ತುಱುಗು$_1$ (< ತುಱುಕು$_1$)]

**ಮುಗಿಲ್ದೇರ** (ನಾ). ಮೋಡಗಳನ್ನು ರಥವಾಗಿ ಉಳ್ಳವನು : ದೇವೇಂದ್ರ : "ಇಂದಿರಂ ಪಲಗಣ್ಣಂ, ಮುಗಿಲ್ದೇರಂ, ಸಗ್ಗಗರಾಣ್ಮಂ– ಈ ೪ ಇಂದ್ರನ ಪೆಸರ್" (ಕಕಾ. ೯೬–೨೦) ; ಅಂತಪ್ಪ ಬನದವಂ ನೋಡೆ ಅಲರಿಚಂ, ಮುಗಿಲ್ದೇರಂ, ಮುಂತಪ್ಪ ಬಿಡುಗಣ್ಣರುಂ, ನಾರದಾದಿ ರಿಸಿಗಳುಂ ಸಾರ್ತಂದು ಒಳಗೆ ಪುಗೆ ಗಲಭೆಗೆಯ್ದರ್ (ಅದ್ಭುತ. ೦೯). [ಮುಗಿಲ್ + ತೇರ್$_2$ + –ಅ$_7$]

**ಮುಗಿಲ್ತೆರೆ** 'ಮುಗಿಲ್ತೆರೆ' ನೋ.

**ಮುಗಿಲ್ಬಟ್ಟೆ** 'ಮುಗಿಲ್ವಟ್ಟೆ' ನೋ.

**ಮುಗಿಲ್ಮುಚ್ಚು** (ನಾ). ಮೋಡದ ಚೂರು ; ಮೇಘದ ತುಣುಕು : ಇದುಪರಿದಿರ್ದ ಪಾವನೆ ಮುಗಿಲ್ಮುಚ್ಚಿಯೆಂಬಿನಮಿಂಬುಗೆಟ್ಟು ಕಂದಿದ ಪಟಗಂಬುಗನ್ನಡಿವೊಲೇನಟ್ಟಿದಾದುದೊ ಚಂದ್ರಮಂಡಲಂ (ಚಂದ್ರಕೃ. ೯–೫). [ಮುಗಿಲ್ + ಮುಚ್ಚು$_2$]

**ಮುಗಿಲ್ವಟ್ಟೆ, ಮುಗಿಲುವಟ್ಟೆ,** ಮುಗಿಲ್ಬಟ್ಟೆ (ನಾ). ಮೋಡಗಳು ಸಂಚರಿಸುವ ಪಥ ; ಆಕಾಶ : "ಆಗಸಂ, ಮಿಂಬಟ್ಟೆ, ಎರಲ್ವಟ್ಟೆ, ಸಗ್ಗಗವಟ್ಟೆ, ಮುಗಿಲ್ವಟ್ಟೆ, ಬಾನ್—ಈ ೬ ಆಕಾಶು" (ಕಕಾ. ೯೯–೯೧) ; ಅಟ್ಟಿದ ಜಟ್ಟಗರ್ತಡೆದುದರ್ಕೆ ಕನಲ್ದು ವಿಭೀಷಣಂ ಮುಗಿಲ್ವಟ್ಟೆಯಿನಟ್ಟಿ ತಿಂಬ ಜವನಂತಿರಯೋಧ್ಯೆಗೆ ಬಂದು ಪೊಕ್ಕು (ಕಂರಾಪು. ೩–೨೮) ; ಮುಳಿದು ಮುಗಿಲ್ವಟ್ಟೆಗೆ ಮಿಱಿ ಪಾಱುವ ಬಜ್ರೋದರಿ ಬಿಗಿದುಟ್ಟ ಸುವರ್ಣಾಂಬರದ ಸೆಱಂಗು ನಿಶಿತಮೆನೆ ಕೊಂಕಿದ ನಿಜಕಂಟಕದೊಳ್ ತೊಡರ್ದು (ಕಹಂ. ೩–೩೫ ವ). **ಮುಗಿಲುವಟ್ಟೆ** : ಗಗನಮಾರ್ಗದಿ ನಾರದನು ಬರಲೊಗೆದವರ ಯುದ್ಧವದು ನಿಜದೃಷ್ಟಿಗೆ ಸೊಗಸುಗೊಡೆ ನೋಡುತಿರ್ದನು ಮುಗಿಲುವಟ್ಟೆಯಲಿ (ಶಾಕ್ಷಟ. ೨೯–೫೦). **ಮುಗಿಲ್ಬಟ್ಟೆ:** "ಮುಗಿಲ್ಬಟ್ಟೆಯೆನೆ ಗಗನದೊಳ್" (ಕಾರ್ಣಾ. ೬೦–೨೩). [ಮುಗಿಲ್ + ಬಟ್ಟೆ$_1$]

**ಮುಗಿಲ್ವಟ್ಟೆಗ** (ನಾ). ಆಕಾಶದಲ್ಲಿ ಸಂಚರಿಸುವವನು ; ದೇವತೆ : ಮೊಗದಿಂದ ಪಾರ್ವರ ಪಡೆದು ನಿಗಮಶಾಸ್ತ್ರಾದಿಗಳಿತ್ತು ಜನ್ನಗೈಸುತ್ತೆ ಮುಗಿಲ್ವಟ್ಟೆಗರಿಗೆ ಮುದವನಿತ್ತ ರಂಗೇಶ ಬಗೆದಂದು ಬಿಡದೆನ್ನ ಸಲಹು (ಕಕಸಾಂ. ೬–೨೯). [ಮುಗಿಲ್ವಟ್ಟೆ + – ಗ$_2$]

**ಮುಗಿಲ್ವನಿ** (ನಾ). ಮೋಡದಿಂದ ಬೀಳುವ ನೀರಿನ ತೊಟ್ಟು ; ಮಳೆಯ ಹನಿ : ಜಲನಿಧಿಯುಂ ಮುಗಿಲ್ವನಿಗಳಿಂದಮುಗುರ್ವಿಸುವಂತೆ ನಿಮ್ಮನಾಂ ತಿಳಿಪಿದಪೆಂ ಗಡ (ಕಾದಂಪೂ. ೯೮೬). [ಮುಗಿಲ್ + ಪನಿ$_2$]

**ಮುಗಿಲ್ವೆಳಗು** (ನಾ). ಮೋಡಗಳ ಘರ್ಷಣೆಯಿಂದ ಉಂಟಾಗುವ ಬೆಳಕು; ಮಿಂಚು : "ಮುಗಿಲ್ವೆಳಗೆಂದು ಮಿಂಚು" (ಕಕಾ. ೫೩–೧೫೨). [ಮುಗಿಲ್ + ಬೆಳಗು$_2$]

**ಮುಗಿಲ್ವೊರೆ,** ಮುಗಿಲ್ಪೊರೆ (ನಾ). ಮೋಡದ ಪದರ ; ಮೇಘದ ತೆರೆ : ನೀಱಿ ಮುಗಿಲ್ವೊರೆಯೊಳ್ ಮೆಯ್ದೋಱುವ ಶಶಿಕಳೆಯು ಗಾಡಿಯಂ ಗೆಲೆವಂದಳ್ (ಕಂರಾಪು. ೩–೯೦). **ಮುಗಿಲ್ಪೊರೆ :** ಕರಿಯ ಮುಗಿಲ್ಪೊರೆಯೊಳ್ ಸಂಚರಿಸುವ ವಿದ್ಯುಲ್ಲತಾವಿಳಾಸಮನಾಂತಾದರದಿಂ ನಿಜ ವಲ್ಲಭ ನೆಟ್ಟರಮಂ ಪಾರುತ್ತುಮಿರ್ಪಳಂ ದ್ರೌಪದಿಯುಂ ಭೋಂಕೆನೆ ಕಂಡು (ನೇಮಿಪು. ೦೦–೬೦). [ಮುಗಿಲ್ + ಪೊರೆ$_5$]

**ಮುಗಿವು** (ನಾ). ೧. ಕೊನೆ ; ಮುಕ್ತಾಯ ; ಅಂತ್ಯ : ನದಿಯ ತೆರೆಯವೊಲುರುಳಿ ಹೊರಳುತಿರುವುದು ಜೀವ ಮೊದಲಿಲ್ಲ ಮುಗಿವಿಲ್ಲ ನಿಲುವಿಲ್ಲವದಕೆ (ಮುಂಕಾಕ. ೦೮) ; ಲಕ್ಷ್ಮಣನೊಡನೆ ಬಳಿಯ ಪರ್ವತಮಾಲ್ಯವಂತನ ಗುಹಾಗೃಹದಿ ಮಳೆಯ ಮುಗಿವಂ ಪಾರುತಿರ್ದನ್ ರಘೂದ್ವಹಂ (ಶ್ರೀರಾಪೂ. ೩೦೯–೯). ೨. ಸಾವು ; ಮರಣ : ಹದ್ದಿನಂತೆ ಹೊಂಚು ಹಾಕುತ್ತಿರುವ ಕೃಷ್ಣದೇವ ನನ್ನ ಮುಗಿವಿನ ನಂತರ ರಾಜ್ಯಾಧಿಕಾರವನ್ನು ಕಸಿದುಕೊಳ್ಳದೆ ಸುಮ್ಮನಿದ್ದಾನೆಯೆ! (ಅರಿಕ. ೦೦). [ಮುಗಿ + – ವು./ತಮಿ. ಮುಕಿವು]

**ಮುಗಿಸು** 'ಮುಗಿಯಿಸು' ನೋ.

**ಮುಗಿಹ** (ನಾ). (ಕೈಗಳನ್ನು) ಜೋಡಿಸುವಿಕೆ ; ಸೇರಿಸುವಿಕೆ : 'ಕೈಮುಗಿಹ' ಪರಾ. [ಮುಗಿ + – ಹ$_2$ ( < – ಪ$_2$) ]

**ಮುಗುಟು** 'ಮೊಗಳು' ನೋ.

**ಮುಗುಡ್ಡೆ** 'ಮೂಗುಡ್ಡೆ' ನೋ.

**ಮುಗುದ,** ಮುದ್ದ$_2$ (ಗು). ೧. ಮುಗ್ಧತೆಯಿಂದ ಕೂಡಿದ ; ಕಪಟ ವರಿಯದ : ಕೊಟ್ಟು ಬೇಸಱದ ಮುಗುದರಸು ದೊರಕಿದನಲೇ (ಹಕಾ. ೯–೭). (ನಾ). ೨. ಕಪಟವನ್ನು ತಿಳಿಯದವನು ; ಸರಳ ಸ್ವಭಾವದವನು : ಎನ್ನ ಅಜಗಣ್ಣ ತಂದೆ ಶಬ್ದಕ್ಕೆ ಹೇಸಿ ಮುಗುದ ನಾದನು (ಕೂಸ್ತಸಂ. ೩೦–೨೯) ; ಅಗಯಲಲುಗುವ ತಲೆಯ ಮುಪ್ಪಿನ ಮುಗುದನೀತವ ಕಾದ ಹೇಳದು ನಗೆಯ ಸುರಿದೈ ರಾಯ ಕಟಕದೊಳು (ಕುವ್ಯಾಭೀ. ೦–೩೫) ; ನಿಗಮನುತ ಗೀರ್ವಾಣ ರಕ್ಷಿಸು ಮುಗುದರನು ಕರುಣದಲ್ಲಿ ನೋಡುತಲಿ (ವಳಕ. ೩–೬೫). ೩. ದಡ್ಡ ; ತಿಳಿಗೇಡಿ ; ಮೂಢ : ಹಗೆಗಳಿಗೆ ತಂಪಾಗಿ ಬದುಕುವ ಮುಗುದರಿನ್ನಾರುಂಟು . . . ಲೋಕದಲಿ (ಕುವ್ಯಾಭಿ. ೩–೬೧) ; ಶ್ರೀಪಾದನಂಥ ಮುಗುದಯ್ಯನು ಹೇಗೆ ಎಲ್ಲಿಗೆ ಹೋಗಿದ್ದಾನು! (ಕನಕ. ೩೦). ೪. ಚೆಲುವ ; ಸ್ಫುರದ್ರೂಪಿ : "ಮುಗುದ (ಮುಕುಡು) —ಮುಗ್ಧ=ಸುಂದರ, ಮೂಢ" (ತದ್ಭಕೋ. ೩೬). **ಮುದ್ದ$_2$** : ೨. ಮುದ್ದರಾವುಂ ಲೌಕಿಕರು ಕರೆವರೆನ್ನ ಗೊಗ್ಗಯ್ಯನೆಂದು (ಶ್ರಕುಪು. ೬–೦೦೬). [ <ಸಂ. ಮುಗ್ಧ]

**ಮುಗುದತನ** (ನಾ). ೧. ಮುಗ್ಧಸ್ವಭಾವ ; ಸರಳತನ ; ಕಪಟವಿಲ್ಲದ ನಡವಳಿಕೆ : ನಗುತ ರಾಮನ ನರಚರಿತ್ರದ ಮುಗುದತನಕೆ ನಮೋ ಯೆನುತ ಪದಯುಗಳಕಾನತನಾಗಿ ಹಾಯ್ದನು ನಭಕೆ ವಿಹಗೇಂದ್ರ (ತೊರಾ. ೬–೦೬–೩೯). ೨. ಎಳೆತನ ; ಬಾಲ್ಯ : ಮುಗುದತನದೊಳೆದೆ ಮುಚ್ಚಿರೆ ಹರಯವೆ ತೆರೆಯದೆ ? ಅದ ನಚ್ಚಲು ಬಹುದೇ? (ಪಲ್ಲ. ೯–೨೨). [ಮುಗುದ + – ತನ ]

**ಮುಗುದಾಣ** 'ಮೂಗುದಾಣ' ನೋ.

**ಮುಗುದೆ** (ನಾ). ೧. ಸರಳಸ್ವಭಾವದ ಹೆಣ್ಣು ; ಕಪಟವರಿಯದವಳು : "ಮುಗುದೆ — ಮುಗ್ಧಾ" (ತದ್ಭಕೋ. ೩೬); ನೇಹದ ಮುಗುದೆ ವಿಟೆ ಯಾಗಿ ಮಹಾಲಿಂಗಗಜೇಶ್ವರನಲ್ಲಿ ಏಕಾಹಾರಗೊಂಡು ಇದ್ದಳವ್ವೆ (ಸವಚನ. ೭೩–೯೦೯) ; ಕಳವಳದ ಕರಣದ ಮುಗುದೆ ಬಂದಳು ಬಾಣಸಿನ ಮನೆಗೆ (ಕುವ್ಯಾವಿ. ೩–೩೫); ಸೊಗಯಿಪ ಚಂದ್ರಕಾಂತದ ಭಿತ್ತಿಯೊಳು ತನ್ನ ಯುಗಳಸ್ವರೂಪ ಬಿಂಬಿಸಲು ಅಗಲ್ದನಿಯನ ತೋಱಿಸು ಬಾಬಾ ಯೆಂದು ಮುಗುದೆ ಬಿದ್ದಳು ಚರಣದಲಿ (ಮೋಹತ. ೦೮–೫೫). ೨. ಎಳೆಯ ವಯಸ್ಸಿನ ಹುಡುಗಿ ; ಬಾಲೆ : 'ಮುಗುದೆತನ' ಪರಾ. ೩. ಚೆಲುವೆಯಾದ ತರುಣಿ ; ಸುಂದರ ಯುವತಿ : ರತಿಕೌಶಲವ ಮೆಱೆವ ಮುಗುದೆಯರು ಮುರಹರನ ಮನವನು ತೆಗೆಯಲರಿಯರು (ಕಿರಾಗೀ. ೦೦–೬೭–೩೦). [ < ಸಂ. ಮುಗ್ಧಾ]

**ಮುಗುದೆತನ** (ನಾ). ಎಳೆತನದ ಸರಳಸ್ವಭಾವ ; ಅರಿವಿಲ್ಲದಿರುವಿಕೆ : ಕುಂತಿಭೋಜಗೆ ಮಗಳಹೆನು ನಾಂ ತನ್ನ ಬಾಲ್ಯದೆ ಮುಗುದೆತನದೊಳು ಬಳೆಯುತಿರಲು (ಕುವ್ಯಾಉ. ೬೦೩. ೦೦ ೩೦ ಅರಿಶನ್ನ). [ಮುಗುದೆ+ –ತನ]

**ಮುಗುವಳಿ** (ನಾ). ೧. ಸಂಬಳ, ಬಾಡಿಗೆ ಕೆಲಸ ಮುಂತಾದುವುಗಳ ಬಗ್ಗೆ ಮಾತುಕತೆ ಮುಗಿದ ಮೇಲೆ ಮಾಡಿಕೊಳ್ಳುವ ಒಪ್ಪಂದ, — ಕರಾರು, — ಗೊತ್ತುವಳಿ : ಈಗಲೇ ನಾವು ಗುಪ್ತವಾಗಿ ಹೋಗಿ ಪರ್ವತ ರಾಜನಲ್ಲಿ ಸೂರೆ ಮಾಡದಂತೆ ಮುಗುವಳೀ ಹೊತ್ತುಕೊಂಡು ಅವರವರ ಶಕ್ತ್ಯನುಸಾರವಾಗಿ ಹಂಚಿಕೊಂಡು ತುಂಟರಿಗೆ ಆಸ್ಪದವಾಗದಂತೆ ಮಾಡಬೇಕು (ಮುದ್ರಾಮಂ. ೧೦೬); ಈ ಮುಗುವಳಿಯು ಸದ್ಯಕ್ಕೆ ಮೂರು ತಿಂಗಳವರೆಗೆ ನಡೆಯಲಿ ; ಆಮೇಲೆ ನೋಡೋಣ (ರಾಜಾವು. ೦೫೫). ೨. ಮುಂಚಿತವಾಗಿ ತೆಗೆದುಕೊಳ್ಳುವ ಹಣ ; ಮುಂಗಡಹಣ : ಕೆಲವು ಜನಗಳ ಕಡೆಯಿಂದ ಮುಗುವಳಿಯನ್ನೂ ತೆಗೆದುಕೊಂಡು . . . ಶ್ರೀರಂಗಪಟ್ಟಣಕ್ಕೆ ಬಂದು ಸೇರಿದರು (ಮುಹಾವಂ. I. ೨೦೪); ನಾಟಕದ ಖರ್ಚಿಗೆ ಆಳಿಗೆ ಒಂದೊಂದು ರೂಪಾಯಿ ಮುಗುವಳಿ ಕೊಡಬೇಕೆಂದು ತೀರ್ಮಾನವಾಯಿತು (ಪಪೂರು. ೩೦೨).

[ < ಮುಗಿ + — ವಳಿ$_3$ ]

**ಮುಗುಳ್**$_1$, ಮುಗುಳ್ಳು$_1$ (ಕ್ರಿ). ೧. ಮೊಗ್ಗಾಗು ; ಮೊಗ್ಗು ಕಾಣಿಸಿಕೊಳ್ಳು : "ಮುಗುಳ್ತುದೆಂದು ಮುಗುಳೇಱುದುದು" (ಶಶಾ. ೫೪–೦೯೦) ; ಮಾಧವಿ ಮುಗುಳ್ತುವೊಲಿರ್ದಳವೆಂಡಿರಿಂದಮೇಂ ಪಡೆದುವೊ ಲೀಲೆಯಂ ಮಣಿಮರೀಚಿವಿಚಿತ್ರಿತನಾಟ್ಯಶಾಲೆಗಳ್ (ಮಲ್ಲಿಪು. ೨–೭೦) ; ಕಟಿದುದು ಮೊಲ್ಲೆ ಮಲ್ಲಿಗೆ ಮುಗುಳ್ತುದು (ಅರ್ಜನೇ. ೩–೫೯) ; ಮುಗುಳ್ದೊಱಗಿರ್ದ ಮನೋಜ್ಞಮಲ್ಲಿಕಾಬ್ರ್ಯದಮಾನೂನಪುಷ್ಪಚಯಮೊಪ್ಪಿರೆ ನಂದನಮಲ್ಲಿ ರಂಜಿಕುಂ (ಶಬಶಂ. ೨–೪೦). ೨. (ಹೂವು ತನ್ನ ದಳಗಳನ್ನು ಮುಚ್ಚಿಕೊಳ್ಳುವಂತೆ) ಕಣ್ಣನ್ನು ಮುಚ್ಚಿಕೊಳ್ಳು, — ನಿಮೀಲನಗೊಳಿಸು : "ಮುಗುಳ್ – ನಿಮೀಲನೇ (ಕಣ್ಣು ಮುಚ್ಚು), ಕುಟ್ಮಲೇ ಚ(ಮೊಗ್ಗು)" (ಶಮುಧಾ) ; ಸೊಗಯಿಪ ಮುನ್ನಿನಿರ್ದ ಪರಿಜಂ ಕಡುಚೆಲ್ವು ಗಡಂ ಜಿನೇಂದ್ರನಂ ಬಗೆವ ಮನಂ ಗಡಂ ಮುಗುಳ್ದು ಜಾನಿಪ ಕಣ್ ಗಡಮಾತ್ಮತತ್ತ್ವದೊಳ್ ಬಗೆ ಗಡಂ (ಆದಿಪು. ೨–೩೦) ; ಪಱಿದ ತಲೆ ಬಿಟ್ಟ ಬಾಯ್ ನಸುಮುರಿದ ಕೊರಲ್ಮುಗುಳ್ದ ಕಣ್ಗಳರುಣಜಲದಿಂ ಪೊರೆದ ತನುವೆರಸು ಬೀಭತ್ಸರಸಮನಭಿಯಿಸುತಿರ್ದರಿಲ್ಲಿ ಭಟರ್ಕಳ್ (ಗದಾಯು. ೪–೨೫) ; ನೆಱೆ ಮುಗುಳ್ದಕ್ಷಿಯ ಮಿಡುಕದಂಗದ . . . ಪೊಡರ್ಪೆಸೆಯೆ ತಾಪಸಂ ತಪಮಿರ್ದಂ (ಶಬಶಂ. ೨–೯೪). ೩. ಮೂಡು ; ಮೊಳೆ ; ಅಂಕುರಿಸು : ನೀರಜದ ನಗೆ ಮುಗುಳ್ತುದು . . . ಚಕೋರದ ಮದಮುಡುಗಿ ಪೋಯ್ತು ಮುನ್ನೇಸಱನೊಳ್ (ಕುಸುವಾ. ೧೦–೭೯). ಮುಗುಳ್ಳು$_1$ : ೧. ಅಂಥ ಒಂದು ಅನುಭವಮುಹೂರ್ತವು ಸ್ಮೃತಿಬೀಜವಾಗಿ ರಸಸೇಚನವನ್ನು ಹೊಂದಿ ಮೊಳೆತು, ಚಿಗಿತು, ಕೊನರಿ, ಮುಗುಳಿ ಕಾವ್ಯಕೃತಿಯಲ್ಲಿ ಅರಳುವ (ಕಾಹಿಂ. ೦೪೦). ೩. ಎನಿತು ಚೆಲುವಿನ ನೋಟ ಏನು ಒಲವಿನ ಕೂಟ ಎಂಬ ಬಗೆಯಲಿ ನಗುವು ಮುಗುಳುತಿತ್ತು (ಬಿಶಾಸಿ. ೦–೧೪). ೪. (ಹೂವಿನ ದಳಗಳು) ಸಂಕೋಚನ ಹೊಂದು ; ಮುಚ್ಚಿಕೊಳ್ಳು : ಬೆಳಕು ಮೂಡೆ ಮಲರಿ, ಮುಳುಗೆ ಮುಗುಳಿ . . . ಆಃ ಇಂತೆನ್ನ ಬಾಳರಳಿದರೆ ಧನ್ಯನಲ್ತೆ (ಅಶಿಕೇ. ೨೩–೦೪).

[ದೇ. ॥ ತಮಿ. ಮುಕಿೞ್; ಮುಕಿೞಿ ; ತುಳು. ಮುಕುರು, ಮುಗುರು ; ತೆಲು. ಮೊಗುಡು]

**ಮುಗುಳ್**$_2$, ಮುಗುಳ್ಳು$_2$ (ನಾ). ೧. ಅರೆಬಿರಿದ ಹೂವು ; ಕುಟ್ಮಲ : "ಕೋರಕಃ, ಜಾಲಕಃ, ಕಳಿಕಾ, ಕುಟ್ಮಳಃ, ಮುಕುಳಃ — ಈ ೫ ಪೂವಿನ ಮುಗುಳ್" (ಶಬ್ದಾಯು. ೩೦–೩೨) ; ತಾಮರೆಯರಲೊಳ್ ಸರಸಸಿಜಾಮೋದದೊಳೊಂದಿ ನಲಿದು ಮಕರಂದರಜೋವ್ಯಾಮುಗ್ಧದೊಳೇ ಮುಗುಳೊಳಮಾ ಮಾಱ್ಕಿಯನಱಿಸಿ ಸುೞಿವುದಳಿ ಕಲಕಲದೊಳ್ (ಶಬಶಂ. ೩–೦೫೬) ; ನಿನ್ನೆ ನೀನಾದಿತ್ಯಂಗೆ ನೀರುಂ ಸೂಸಿ ಪೊಡೆಮಡುವಾಗಳಾ ನೀರ್ವರಿಸು ಸೂಸಿ ತಾಮರೆಗೆಱೆಯೊಳಗೆ ಮುೞುಗಿರ್ದ ಮುಗುಳ ಮೇಗೆ ತಗುಳ್ದಿರ್ದುದು (ವಡ್ಡಾರಾ. ೫–೦೫) ; ನನೆಯ ಕೊನೆಯ ತಳಿರ ಮುಗುಳ ವನಲತಾನಿಕುಂಜದಿಂ ಪ್ರಸೂನರಜದ ಪುಂಜದಿಂ (ಕಂಕಪ್ರಾ. ೦–೫೮ ರಗಳೆ) ; ಪೂವಳ್ಳಿಗಳ್ ನನೆಕೊನೆಮುಗುಳರೆಮುಗುಳ್ ಬಿರಿಮುಗುಳುಳ್ಳಲರ್ದ ಪೊಸ ಮಲರ್ಗಳಿಂದೆ ಸೊಗಯಿಸೆಯುಂ (ರಾಮಾಶ್ವ. ೦೭–೨). ೨. ಮೊಗ್ಗಿನಾಕಾರದಲ್ಲಿ ಮಾಡಿದ ಒಂದು ಬಗೆಯ ಆಭರಣ : ಬೆಳತಿಗೆಗಣ್ಣ ಬಳವಿಗಿದುವೆ ಗುಱಿಯೆಂದು ಕುಱುಪನಿಕ್ಕುವಂತೆ ಕೊನೆಗೊಡಂಕೆಯೊಳ್ ತೋರಮುತ್ತಿನ ಮುಗುಳಂ ತೆಗಳ್ಚಿಯುಂ (ಕಂತ್ರಪು. ೬–೬೩ ವ). **ಮುಗುಳ್ಳು**$_2$ : ೧. "ಕುಟ್ಮಲಃ, ಮುಕುಲಃ – ಈ ೨ ಮುಗುಳು" (ಪಾಶಾ. ೦೦೬); ಆಕಾಶ ಸರಸಿಯೊಳಿಡಿದ ತಾವರೆಮುಗುಳುಗಳೂ ಸುರಪಡೆಯೊಳೊತ್ತಿದ ಮುಗಿದ ಕೈಗಳೂ ಚಿತ್ರವಾಯ್ತು (ಕುಪ್ಯಾಕೃ. ೭–೩೬); ಸರಸಿಜಗಂಧಿಯ ವದನನಂದನದಲಿ ನೆಱೆ ಪೂತು ಸಾಲುಗೊಂಡೆಸೆವ ಪಿರಿದು ಮೊಲ್ಲೆಯ ಮುಗುಳ್ಗಳೆನೆ ಮೆಱೆದುವು ಮಿಱುಗುವ ದಂತಪಂಕ್ತಿಗಳು (ಕಂಪರಿ. ೯–೩೩).

ಮುಗುಳ ಕಂಕಣ = ಕೈಗೆ ತೊಡುವ ಒಂದು ಬಗೆಯ ಮೊಗ್ಗಿನಾಕಾರದ ಆಭರಣ : ಧುರದೊಳಸಿಲತೆಯನುಚ್ಚಿದಡರಿನೃಪಯುವತಿಯರ ಮುಗುಳ ಕಂಕಣದಾ ಕೀಲ್ತುರತರದಿನುಬ್ಬಿದವು ನಿಜಕರಬಿಟ್ಟವುವರ್ಕೆ ಕೀಲೆ ಶಾನ್ತರನೃಪತಿ (ಎಕ. VIII. ನಗರ. ೫೬–೨೪; 1062). ಮುಗುಳಾಗು = ೧. ಮೊಗ್ಗಾಗು; ಹೂವಾಗಿ ಅರಳದಿರು : ಅಲರಾಗಿ ನಿರೀಕ್ಷಿಸಿ ಕಾದಲನಂ ಮುಗುಳಾಗಿ ಸೋಂಕಿದೆಡೆಯೊಳ್ ಕಾಮಂಗಲಸದೆ ಸರಳಾಗಿ ಪಳಂಚಲೆವುದು ತೊಳಪವಳಬಾಂಗವಲರ್ಗಳ ಪಾಂಗಂ (ಅರ್ಜನೇ. ೦–೭೫); ಕಮಲವುದಯದೊಳರಳಿ ಸಂಜೆಯಲಿ ಮುಗುಳಾಗಿ ಸುಮುಖವ್ಪದಂತೆ ಮರುವಗಲು ಮುಗುಳ್ದು (ಮುಂಕುಕ. ೯೦). ೨. ಮೊಗ್ಗುಬಿಡು ; ಮೊಗ್ಗು ಕಾಣಿಸಿಕೊಳ್ಳು : "ಪದಪು ಮುಗುಳ್ತುದೆನೆ ಮುಗುಳಾದುದು" (ಶನ್ಯಕೃ. ೦೯೩–೦೯); ಗಗನಾಪಗೆಯ ಜಲಕಣಪದಂಬಮೊ ಮುಗುಳಾದುದೊ ಗಗನವೆಂಬ ಕಡಬದ ಮರನುಂ (ಹಮ್ಮಾರಿ. ೨–೬೨).

[ < ಮುಗುಳ್$_1$. / ತಮಿ. ಮುಕಿಟುವ್. ಮೊಕ್ಕುಳ್; ಮಲ. ಮುಕಿೞ್; ತುಳು. ಮುಗುರು. / ಸಂ. ಮುಕುಲ ]

**ಮುಗುಳಂಬ** (ನಾ). ಮೊಗ್ಗಿನ ಬಾಣಗಳುಳ್ಳವನು ; ಪುಷ್ಪಬಾಣ; ಕಾಮ; ಮನ್ಮಥ : ಮುಗುಳಂಬನೊಡಲ ಬೇಡಿದಳು ರುಕ್ಮಿಣಿ ಗಂಡು ಮಗನಾಗಬೇಕೆನಲು (ಮೋಹತ. ೦೦–೦೦); ಮುಗುಳಂಬನುಱುಬೆಗಾಱದೆ ಪೊರಳುತಿಪ ಮಂತ್ರಿಮಗಳೆಡೆಗೆ ಪರಿತಂದು ನುಡಿದಳೊಸಗೆಯನಾಪ್ತಸಖಿಯೊರ್ವಳವಳ ಕೂಡೆ (ಕೃಬಿಶಾ. ೩೦–೨) ; ಮುಗುಳಂಬನ ಮಡಿಗಮರಿದ ಪರಿಮಳವೊಗುವ ಪೂದೊಂಬೆಯಂತಿಹರು (ಕಂಪರಿ. ೬–೯೪).

ಮುಗುಳಂಬಕೇಳಿ = ಮದನಕೇಳಿ ; ಕಾಮಕೇಳಿ ; ರತಿಕ್ರೀಡೆ : ಎನ್ನ ಬಿಗಿದಪ್ಪಿ ಚುಂಬನವನೀಯೆ ಕೂಡಿ ಮುಗುಳಂಬಕೇಳಿಯೊಳು ಸುಖಿಯೆಂ ಬಗಡುರಕ್ಕಸನ ವಾಕ್ಯ ಕೇಳ್ದು ಕಂಗೆಟ್ಟು (ಶಾಂಕತ. ೩೩–೨೦). **ಮುಗುಳಂಬನಣುಗ** = ಮನ್ಮಥನ ಮಗ ; ಅನಿರುದ್ಧ : ಹೊಗಳಲಚ್ಚರಿಗೆಯ್ವ ಚಕಿತನಾರಿಯರನು ಮುಗುಳಂಬನಣುಗನೀಕ್ಷಿಸಿದ (ಮೋಹತ. ೦೮–೪೦).

[ ಮುಗುಳಂಬು + — ಅ$_7$ ]

**ಮುಗುಳಂಬು** (ನಾ). ೧. ಮೊಗ್ಗಿನ ಬಾಣ : ಬಿತ್ತರದ ಭಲ್ಲೆಯ ಮಾಟದಿ ಸುಸಂಪಗೆಯ ಮುಗುಳಂಬು ದೊರೆವಡೆದ ಕಣಗಿಲ ಪೊಳಂಬಮ . . . ಬತ್ತಳಿಕೆಗಳು ನೆರೆದಿರ್ದವರಲ್ಲಿ (ಕಾಳ್ಯಭಾ. ೫–೦೪). ೨. (ಮನ್ಮಥನ) ಹೂಬಾಣ; ಪುಷ್ಪಬಾಣ : ಮಗಳೆ ನಿನ್ನಯ ರೂಪ ಗುಣ ಶೀಲವ ನೋಡಿದಗಣಿತಸುರನರೋರಗರು ಮುಗುಳಂಬಿಗೊಳಗಾದರು (ಮೋಹತ. ೨೫–೩೩). ೩. ಒಂದು ಬಗೆಯ ಚಿಕ್ಕಬಾಣ : ಕಿಱು ಮೊನೆಯ ಮುಗುಳಂಬುಗಳ ಸೈಗಱೆದನಭಿಮನ್ಯುವಿನ ಮೆಯ್ಯಲಿ ತುಱು

ದವು ಮಱಿದುಂಬಿ ಕೆಂದಾವರೆಗೆ ಕವಿವಂತೆ (ಕುವ್ಯಾ.ದ್ರೋ. ೫-೩೪); ಅಲಿಸ್ಯೆ ಮುಗುಳೇಱು ಸಾವಿರವೇಳು ಬಳಿಕೊಂಬತ್ತುಸಾವಿರಕ್ಕೋಲು ಮೊಂಟೆಯು ಕವಲುಗಣೆ ಹನ್ನೆರಡುಸಾವಿರವು (ಕುವ್ಯಾ.ಶ. ೧೮-೨೨).

[ಮುಗುಳ್$_2$ + ಅಂಬು$_2$]

**ಮುಗುಳಕ್ಕಿ**, ಮುಗಳಕ್ಕಿ (ನಾ). ಸರಿಯಾಗಿ ಬೇಯದೆ, ಮೊಗ್ಗಿನಂತಿರುವ ಅನ್ನ ; ಪೂರ್ತಿಯಾಗಿ ಅರಳದೆ, ಅರೆಬೆಂದ ಅನ್ನ, —ಪಕ್ವವಾಗದ ಅನ್ನ : ಇವತ್ತು ಒಲೆ ಸರಿಯಾಗಿ ಉರಿಯದೆ ಅನ್ನ ಮುಗುಳಕ್ಕಿಯಾಯ್ತು (ಕೂಡಿ). **ಮುಗಳಕ್ಕಿ** : ಸಮಯ ತಪ್ಪಿ ಯಾವಾಗಲಾದರೂ ಇವಳು ಅಡಿಗೆ ಒಲೇ ಮುಂದಕ್ಕೆ ಹೋದರೆ, ಅನ್ನ ಮುಗಳಕ್ಕಿಯೋ ಇಲ್ಲ ಮಿಡ್ಡೆಯೋ ಆಗುತ್ತಿತ್ತು (ಹೂಮುರಾ. ೮೩).

ಮುಗಳಕ್ಕಿಗಂಜಿ = (ಔಷಧಕ್ಕಾಗಿ ಬಳಸುವ) ಅರೆಬೆಂದ ಅನ್ನದ ಗಂಜಿ ; ಪಕ್ವವಾಗದ ಅನ್ನದ ಗಂಜಿ : (೬).

[ಮುಗುಳು$_2$ (< ಮುಗುಳ್$_2$) + ಅಕ್ಕಿ$_2$]

**ಮುಗುಳಲರ್** (ನಾ). ಅರಳುತ್ತಿರುವ ಹೂವು; ಅರೆಬಿರಿದ ಹೂವು : ಪೊಟಲ ಬೀದಿವೀದಿಗಳನಿತುಮನೋರಂತೆ ತಳಿದು ಗುಡಿಗಟ್ಟಿಸಿ ನೀಂ ನಸೆಯ ಮುಗುಳಲರ ತುಱುಗಲನನಂತಮಂ ನೆಱೆಯೆ ಕೆದಱಿವೇೞ್ ನೃಪತಿಳಕಾ (ಅಂಕ್ಷು. ೫-೬) ; ಮುರಹರನೇತ್ರಃಪುರಪುರಂಧ್ರಿಕಾನಿಕಾಯಮಾ ವನೋದರದ ಪೂವುರದ ಲತೆಯ ಸಂತತಿಯ ಮುಗುಳಲರ ತುಱುಗಲ್ಗಳಂ ನೆಱೆವಿನ ಮಾಯ್ದುಕೊಂಡು ಮಂಡನಾವಳಿಯನೆಸೆಯೆ ಸಮೆದು ಪಸದನಂಗೊಂಡು (ನೇಮಿಷು. ೦೩-೨೦ ವ) ; ಮುಗುಳಲರ್ ಪೆಣ್ಣಾಯ್ತೊ ಪೆಣ್ಣೆ ಮುಗುಳಲರಾಯ್ತೊ (ಶ್ರೀರಾಮಪು. ೦೯೬-೦೬೬). [ಮುಗುಳ್$_1$ + ಅಲರ್$_2$]

**ಮುಗುಳಿ$_1$**, ಮುಗಲ್, ಮುಗಳಿ (ನಾ). ೧. ಒಂದು ಬಗೆಯ ಮುಳ್ಳಿನ ಮರ : ದಿಂಡ ಪಾತಂಗ ಮುಗುಳಿಯ ಮರನು. . . ಬಳಲಿ ಬಂದವರಿಗೆ ವಳಲೆಯಮೃತದಂತೆ ನೆಳಲಾಹ ವೃಕ್ಷವಲ್ಲಿಹವು (ಬಿಜಸಾಂ. ೧-೩೫); ಮುಗುಳಿಯ ಮರದ ನೆರಳಿಂದ ನುಂಗುವ ನೆಗಳು ಲೇಸೆಂದ (ಸರ್ವಜ್ಞ. ೦೩೬೬); ಮುಗುಳಿಯ ಒಳನಾರಂ ಆಡಿನ ಹಾಲಿನಲ್ಲಿ ಅರೆದು ಕುಡಿಯೆ ಎಂಥಾ ಕೆಮ್ಮುಲಾದರೂ ಮಾಣ್ಗುಂ (ಸಕವೈ. ೨೦೦). ೨. ಒಂದು ಊರಿನ ಹೆಸರು : ಪಸುಣ್ಡ ಮುಗುಳಿ ಪರನ್ತಿ ಮುಳ್ಗುನ್ದು ಏತೇಷಾಂ . . . ಮಧ್ಯಸ್ಥಿತೇ (ಇಆ. VII, ೨೨೦-೨೪; 658); ಮುಗುಳಿಯ ನಾಗಮಯ್ಯ ಬಸವನ ಹಳ್ಳಿಯ ಬಸವಯ್ಯ (ಎಕ. XV, ಬೇಲೂರು. ೩೦೬-೦೦; 971). **ಮುಗಲ್** : ೧. "ಮುಗಿನ ಹುಳಿಮರ . . . ಮರುವನ ಹುಳಿ, ಮುಗಲ್, ಮರ್ಗಲ್, ಕೋಕಂಮರ " (ಸಸ್ಯಕೋ. ೬೩). **ಮುಗಳಿ** : ೧. "ಮುಗಳಿ, ಮುಗ್ಲಿ, ಶಮಿ, ಚೆಲಯುದಿ, ಬನ್ನಿಮರ, ಮುಗಳಿ" (ಸಸ್ಯಕೋ. ೪); ಮುಗಳಿ, ಮುಗ್ಲಿ (ವೃಕ್ಷಔಷ. ೨-೦೯) ; ಮುಗಳಿ, ಸೀಗೆ, ಬಾಗೆ, ಸೀಮೆಹುಣಿಸೆ (ಪಶುಸಂ. ೨೩೯).

[ದೇ.? ತಮಿ. ಮುಕಿಲ್, ಮುಕಿಲುವ್ ; ಮಲ. ಮುಕಿಲ್]

**ಮುಗುಳಿ$_2$** (ನಾ). ೧. ಎತ್ತರವಾದ ಪ್ರದೇಶ; ದಿಣ್ಣೆ : 'ಮುಗುಳಿಗದ್ದೆ' ಪರಾ. ೨. (ದೇವಸ್ಥಾನ ಮೊದಲಾದುವುಗಳ) ಗೋಪುರ ; ಶಿಖರ: ಆ ದೇವಸ್ಥಾನದ ಮುಗುಳಿ ತುಂಬ ಎತ್ತರವಾಗಿದೆ (ಉಡಿ).

[← ತುಳು. ಮುಗುಳಿ]

**ಮುಗುಳಿಗದ್ದೆ** (ನಾ). ಬೆಟ್ಟದ ತುದಿಯಲ್ಲಿದ್ದು ಮಳೆಯ ನೀರನ್ನೇ ಆಶ್ರಯಿಸಿರುವ ಗದ್ದೆ,— ಜಮೀನು : (ಕಸಂಗ್ರ. ೦೬೫).

[ಮುಗುಳಿ$_2$ + ಗದ್ದೆ (< ಗಟ್ಟಿ)]

**ಮುಗುಳಿಸು** (ಕ್ರಿ). ೧. ಮೊಗ್ಗು ಬಿಡು ; ಮೊಗ್ಗು ಕಾಣಿಸಿಕೊಳ್ಳು : ಪಂಪಕಮಾದ ಚಂಪಕಲತೆಯ ಪೊಸಲೇಱದ ಕರವೀರಲತೆಯ ಮುಗುಳಿಸಿದ ವಕುಳಲತೆಯ ಬಾಳ್ದೊಂಪದ ಬಳಸು ವಿಳಸಮಾದ ರತ್ನರಚಿತಕೃತಕಾಚಲಂಗಳೊಳ್ (ಅಸಂಪು. ೦೦-೨೪ ವ). ೨. (ಮೊಗ್ಗಿನಂತೆ) ಮುಚ್ಚಿಕೊಳ್ಳು : ತನ್ನ ಕಡುಸೊಡರ ಬೆಳ್ಳನ್ನ ತಿಳಿಮುಂಜಾವದನ್ನ ಮುಗುಳಿಸುವ ಬೆಳ್ಳಿಯು ಬಟ್ಟಲಿಂ ಚೆನ್ನೆಸುವ ಕೊರ್ಗಣೆಗಳಿನ್ನದೆಲ್ಲಿಹುದೆಂಬುದನ್ನರಿವೆವೆಂತೊ ಕಂಗೊಳದನ್ನೆಗಂ (ಗೇಶಂ. ೫-೬). ೩. ಅರಳಿಸು; ವಿಕಾಸಗೊಳಿಸು: ಪೂಜೆಯಲ್ಲದಾ ಪೂಜ್ಯನು ಹೃದಯದಿ ಪೂನಗೆ ಮುಗುಳಿಸಿ ತಾಳುವನು (ಅರಳು. ೦೬೩-೦೪).

[ಮುಗುಳ್$_1$ + —ಇಸು$_3$]

**ಮುಗುಳು$_1$** 'ಮುಗುಳ್$_1$' ನೋ.

**ಮುಗುಳು$_2$** 'ಮುಗುಳ್$_2$' ನೋ.

**ಮುಗುಳುಗಣ್**, ಮುಗುಳುಗಣ್ಣು (ನಾ). ಮುಚ್ಚಿಕೊಂಡಿರುವ ಕಣ್ಣು; ನಿಮೀಲಿತ ನೇತ್ರ : ಮುಗುಳುಗಂಗಳ ಮೇಲುಗುಡಿದೋಳುಗಳ ಮಿಡುಕುವ ತುಟಿಯ . . . ಪೊಸ ತಪಸಿ ತೊಡಗಿದನು ಬಲಾತಪವ (ಕುವ್ಯಾ.ಶ. ೪-೪೩); ಅರ್ಘ್ಯಮೆತ್ತಿದ ಕೈಯ ಅಂಜಲಿಗದೇನೊ ಬಿಳ್ದಪೊಲಾಗ್ಯ ತವಳ ಮೆಯ್ ಜುಮ್ಮೆನೆ ನಿರ್ವಿಮಿರಲೊಯ್ಯನೆ ಮುಲರ್ದವಾ ಮುಗುಳುಗಣ್ (ಶ್ರೀರಾಮಪು. ೫೦೬-೨೦೫). **ಮುಗುಳುಗಣ್ಣು** : ಮುಗುಳುಗಣ್ಣುಗಳು, ಮೇಲೆತ್ತಿದ ತೋಳುಗಳು, ಮಿಡುಕುವ ತುಟಿಗಳು (ಶಾಮುಕಿ. ೯೨).

[ಮುಗುಳು$_1$ (< ಮುಗುಳ್$_1$) + ಕಣ್]

**ಮುಗುಳುಗಣೆ** 'ಮುಗುಳ್ಗಣೆ' ನೋ.

**ಮುಗುಳುಗಣೆಯ** 'ಮುಗುಳ್ಗಣೆಯ' ನೋ.

**ಮುಗುಳುಗಣ್ಣು** 'ಮುಗುಳುಗಣ್' ನೋ.

**ಮುಗುಳುಗಾಯಿ** 'ಮುಗುಳ್ಗಾಯ್' ನೋ.

**ಮುಗುಳುಗೊಂಬು** (ನಾ). (ಆನೆಯ) ಮೂಡುತ್ತಿರುವ ಕೊಂಬು; ಮೊಳೆಯುತ್ತಿರುವ ಕೋರೆ, — ದಂತ : ಚೋಟುಕೊಂಬಿನ ಆನೆ ೧ಕ್ಕೆ ೩೦. ವರಹ ಕ್ರಯ, ಮುಗುಳುಗೊಂಬಿನ ಆನೆ ೧ಕ್ಕೆ ೨೫ ವರಹ ಕ್ರಯ (ಶುಹಾವಂ. 1, ೩೯). [ಮುಗುಳು$_1$ (< ಮುಗುಳ್$_1$) + ಕೊಂಬು$_1$]

**ಮುಗುಳುದೆನೆ** (ನಾ). ಅಂಕುರಿಸುತ್ತಿರುವ ತೆನೆ ; ಮೊಳೆಯುತ್ತಿರುವ ಹೊಡೆ : ವ್ಯರ್ಥವಲ್ಲವೆ . . . ಮುಗುಳುದೆನೆಯ ಎಳೆತುಳಸಿದಳಗಳ ತಂದು ಪ್ರೇಮದಿಂದ ಜಗನ್ಮೋಹನಪೂಜೆಯ ಮಾಡಿ ಚರಣಕೆಱಗದವನ ಜನುಮ (ಪುರಂದ. ಧಾ. ೨-೩೬-೨). [ಮುಗುಳು$_1$ (< ಮುಗುಳ್$_1$) + ತೆನೆ$_1$]

**ಮುಗುಳುನಗು** 'ಮುಗುಳ್ನಗು$_1$' ನೋ.

**ಮುಗುಳುನಗೆ** 'ಮುಗುಳ್ನಗೆ' ನೋ.

**ಮುಗುಳುಬೊಕ್ಕೆ** (ನಾ). ಬಿರಿಯಲಿರುವ ಬೊಕ್ಕೆ ; ಒಡೆಯಲಿರುವ ಗುಳ್ಳೆ : " ಮುಗುಳು [ಪಾಠಾಂ. ಮುಳ್ಳು]ಬೊಕ್ಕೆ ಪಿಟಕಂ ಸ್ಫೋಟಕ ಪೊನಿಕ್ಕು" (ಮಂಗರಾ. ೦೦೩-೦).

[ಮುಗುಳು$_1$ (< ಮುಗುಳ್$_1$) + ಬೊಕ್ಕೆ$_1$]

**ಮುಗುಳುಬಾಳೆ** (ನಾ). ಬಾಳೆಯ ಹೂವು ; ಬಾಳೆಮೋತೆ : ಮುಗುಳು ಬಾಳೆಯ ಹೊಡೆಯ ನುಚ್ಚಾಗಿ ಕತ್ತರಿಸಿ ಒಗರು ಹೋಹಂತೆ ಸುಣ್ಣದ ನೀರಿನಿಂ ಕುದಿಸಿ ತೆಗೆದು (ಸೂಶಾ. ೪-೬೦).

[ಮುಗುಳು$_2$ (< ಮುಗುಳ್$_1$) + ಬಾಳೆ$_1$ (< ಬಾೞೆ)]

**ಮುಗುಳುವಿಡಿ** (ಕ್ರಿ). ಮೊಗ್ಗು ಬಿಡು, — ಕಾಣಿಸಿಕೊಳ್ಳು : " ಮುಗುಳ್ತು ದೆನೆ ಮುಗುಳುವಿಡಿದುದು" (ಶಬಿಶಂ. ೪೬೬-೬೬).

[ಮುಗುಳು$_2$ (< ಮುಗುಳ್$_2$) + ಪಿಡಿ$_1$]

**ಮುಗುಳುಹೊಡೆ** (ನಾ). = ಮುಗುಳುದೆನೆ : ಮುಗುಳುಹೊಡೆಗಳರೆಹೊಡೆ . . . ತಾಳುದೆಂಬುದೆನಿಪ ಶಾಲಿ ಸೊಗಸನಿತ್ತುವು ನೋಳ್ಪರಿಗೆ (ಕೆಂಶಪ. ೫-೬೨). [ಮುಗುಳು$_2$ (< ಮುಗುಳ್$_2$) + ಹೊಡೆ$_3$ (< ಪೊಡೆ$_3$)]

**ಮುಗುಳೇಱು** (ಕ್ರಿ). = ಮುಗುಳುವಿಡಿ : ಮುಗುಳೇಱದ ಚಂಪಕಲತೆವೊಲಿ ದರ್ಗಳಂತಾಕ್ಷಣದೊಳ್ (ಕಾದಂಸಾ. ೩೨೩); ಅವಳ ಕೋಮಲಿಕತಾಯುತುಂಬ

ಪೊಳೆವ ಸನ್ಮಾರ್ಗಲತೆ ಮುಗುಳೇಱಿದೊಲ್ ಮೆಲ್ಪುವಳೆಯೆ ನೀರಾಡಿದರ್ ಗಾಡಿಯಿಂ ಕೂಡಿಯಾ ನಳಿನಾಯತಾಂಬಕಿಯರಾಂ (ಸಂಧಿವಿ. ೬-೨೯).
[ಮುಗುಳ್$_2$ + ಏಱು$_1$ (< ಏಱ್$_1$) ]

**ಮುಗುಳೊತ್ತು** (ಕ್ರಿ). ೧. ಅಂಕುರಿಸು ; ಮೊಳೆ ; ಮೂಡು : ಮೊಲೆ ಮುಗುಳೊತ್ತುವಂದು ಮೊದಲಿಂದುವರಂ ಬಗೆದಂತಿರಿಚ್ಛೆಯುಂ ಸಲಿಸಿ . . . ಕೂರ್ತ ಮನಃಪ್ರಿಯನಂ ಬಿಡೆಂದು ನೀನೆಲೆ ಮುದುಪಾಱಿದೊಳ್ತೆ ನುಡಿಯಲ್ಬಗೆದಂದುವನೆಂತು ಸೈರಿಪೆಂ (ರಾಜಶೇ. ೧೦-೧೬೨); ಉತ್ತಮಜ್ಞಾನಸಲಿಲವನೆಱೆದು ಶರೀರ ಸುಚಿತ್ತಭೂಮಿಯೊಳಿಳ್ತಿಯುಂ ಬಿಳ್ತಲದುವೆ ಮುಗುಳೊತ್ತಿ ಪಲ್ಲವಿಸುತೇಕೋತ್ತರಶತಸ್ಥಲಂಗಳನಾಂತಿರುತ್ತಿರ್ಪನಂ (ಕೊಟ್ಟೂರ. ೦-೬೯). ೨. ಅರಳು ; ವಿಕಾಸವಾಗು: . . . ದಯೆಗೆ ಚಿತ್ತವಂಕುರಿಸಿ ಬುದ್ಧಿ ಪಲ್ಲವಿಸಿ ಮನಂ ಮುಗುಳೊತ್ತಿ ಕುಳ್ಳಿ . . ಬಸವರಾಜನಂ . . . ಕಂಡು (ಬಸವ. ೨-೬೩). ೩. ಮೊಗ್ಗುಗಳಿಂದ ತುಂಬು, – ಕೂಡಿರು : ಸಮ್ಮದವಂ ಕರಂ ತಳೆಯೆ ಜಾದಗೆಗಳ್ವಳಸತ್ಕದಂಬಜಾಲಂ ಮುಗುಳೊತ್ತೆ . . . ತಾಂ ಮುಂ ಮಟಿಗಾಲದೊಳ್ಮೆರೆದು ತೀಡಮುದೊಯ್ಯನೆ ಪಶ್ಚಿಮಾನಿಲಂ (ಉದ್ಭಟ. ೯-೧೩೦). [ಮುಗುಳ್$_2$ + ಒತ್ತು$_1$]

**ಮುಗುಳ್ಗಣ್** (ನಾ). ಮೊಗ್ಗಿನಂತಿರುವ ಕಣ್ಣು ; ಕುಟ್ಮಲದಂತಿರುವ ನೇತ್ರ : 'ಮುಗುಳ್ಗಣ್ಣ' ಪರಾ. [ಮುಗುಳ್$_2$ + ಕಣ್]

**ಮುಗುಳ್ಗಣೆ**, ಮುಗುಳುಗಣೆ (ನಾ). ಮೊಗ್ಗಿನ ಬಾಣ ; ಹೂವಿನ ಸರಳು ; ಪುಷ್ಪಬಾಣ : ಪಗೆಗಳುಮಂ ಪೆಂಡಿರುಮಂ ಮಿಗೆ ಸೋಲಿಪುವವನ ಬ. . . ಗಾಡಿಯುಮಾವಗಮಡಸಿ ತಾಗೆ ಕಣೆಯುಂ ಮುಗುಳ್ಗಣೆಯುಂ ಮೊನೆಯೊಳಂ ಪೊಟಳ್ದೀದಿಯೊಳಂ (ಕಬ್ಬಿಗ. ೯೬); ಸಲೆ ಪರವಶದೊಳಾದ ಕೂರುಗುರ ಕೊನೆವಲ್ಲ ಕಲೆ ಮೆಯ್ಯೊಳಿಲ್ಲದರ್ ಮುಗುಳ್ಗಣೆಯ ಮುದ್ರೆಯುಜ್ಜ್ವಲಿಸದರ್ . . . ಮೋಹಿಗಳ ಕುಲಕೆ ಹೊಱಗೆಂದು ನೂಪುರರವದೆ ನಾದಮುಂ ಪೊಯ್ಯುರಂಗನೆಯರಲ್ಲಿ (ಶಬ್ದರಾ. ೬-೯೧); ನಿಜಕಟಾಕ್ಷಶರಮಿರ್ದಂತೆ ಮುಗುಳ್ಗಣೆಗಳೇವಾಳ್ತೆಯೆಂದು ಕಾಮನ ಕರತಳದಿನವಂ ಕವರ್ತೆಗೊಂಡು ಚೆಲ್ಲುವಂತೆ ಪುಷ್ಪಪುಟಹಸ್ತದಿಂ ಪುಷ್ಪಾಂಜಲಿಯಂ ಕೆದರ್ದು (ರಾಜಶೇ. ೩-೦೯ ವ). **ಮುಗುಳುಗಣೆ** : ' ಮುಗುಳುಗಣೆಯ ' ಪರಾ.
[ಮುಗುಳ್$_2$ + ಕಣೆ$_1$]

**ಮುಗುಳ್ಗಣೆಯ**, ಮುಗುಳುಗಣೆಯ (ನಾ). ಹೂವಿನ ಬಾಣವನ್ನು ಹೊಂದಿದವನು ; ಕಾಮ ; ಮನ್ಮಥ : ಮುಕ್ತಿಪದವ ಹೊಲಬಂ ಮುಗುಳ್ಗಣೆಯನ ಶಕ್ತಿಗಿಡಿಪ ಪರಿವಿಡಿಯುಂ . . . ಯುಕ್ತಿಗೆ ಯುಕ್ತಮೆನಿಸುವಾಗಮುಮಂ ವ್ಯಕ್ತೀಕರಿಸುವುಪಾಧ್ಯಾಯರನಾಂ ಭಕ್ತಿಯಿನಭಿವಂದಿಸುವೆಂ (ಜಯನೃ. ೦-೯). **ಮುಗುಳುಗಣೆಯ** : ಮುಗುಳುಗಣೆಯನ ಶಂಭು ಕುವರನು ರುಗುಮಿಣಿಯ ಸಾರಿರಲು ಕೊಂಡಿಮುನಗರದಿಂ ಮಂತ್ರಿಗಳು ಬಂದೆಂದಂತೆ ಬಿನ್ನೈಸೆ (ಹರಿವಂ. ೩೦-೦೨). [ಮುಗುಳ್ಗಣೆ + – ಅ$_7$]

**ಮುಗುಳ್ಗಣ್ಣ** (ನಾ). ೧. ಮೊಗ್ಗಿನಂತೆ ಕಣ್ಣುಗಳನ್ನುಳ್ಳವನು. ೨. ಕೃಷ್ಣ : ಮೊಗವೆಲ್ಲ ಮುಚ್ಚಿಕೊಂಡಿಹ ಕಣ್ಣ ಮುಗುಳ್ಗಣ್ಣ ತಾವರೆಯ ಕಣ್ಣ (ಕೃಷ್ಣಚ. ೩-೬೦). [ಮುಗುಳ್ಗಣ್ + – ಅ$_7$]

**ಮುಗುಳ್ಗಾಯ್**, ಮುಗುಳುಗಾಯಿ (ನಾ). ೧. ಆಗ ತಾನೆ ಹೂವಿನಿಂದ ಹೊರಬಂದ ಕಾಯಿ ; ಅತಿ ಎಳೆಯ ಕಾಯಿ ; ಹೀಚು : ಮುಗುಳ್ಗಾಯ್ ಅಮಳ್ದೊಂಗಲ್, ಎಸಳ್ವಸೆ, ಅಮಳ್ಚಂತ್ರಂ (ಕವಿರಾ. ೯೩ ಪ್ರಯೋ) : ತಳಿರ್ಗೆಂಪು, ಬೆಳರ್ಗೆಂಪು, ಮುಗುಳ್ಗಾಯ್, ಎಸಳ್ಗೆಂಪಂ (ಶಬ್ದಾನು. ೬೩ ಪ್ರಯೋ). ೨. ಹೀರೆಕಾಯಿ ಮೊದಲಾದ ತರಕಾರಿಯಿಂದ ತಯಾರಿಸುವ ಒಂದು ಬಗೆಯ ಖಾದ್ಯ : ಕೆಲವ ಭಂಜಿತಶಾಕಮಂ ಕೆಲವ ಮುಗುಳ್ಗಾಯ . . . ಮಾಡಿ ಹಲವು ಚಂದದೊಳು ಹೀರೆಯ ಕಾಯ ಪಾಕಮಂ ಹಿರಿದಾಗಿ ಹಸಮಾಳ್ಪುದು (ಸೂಪಶಾ. ೩-೭). **ಮುಗುಳುಗಾಯಿ** : ೨. ಭಂಜಿತಶಾಖ, ಮುಗುಳುಗಾಯಿ, ನವಜಿಹ್ವಸಂಧೆ . . . ಶಾಕವಂಗಿ ಮೊದಲಾದ ಹೀರೆಯ ಕಾಯ ಪಾಕವನ್ನು ಹಸನಾಗಿ ತಯಾರಿಸುವುದು (ಸೂಪಶಾ. ೩-೬ ಅವ). [ಮುಗುಳ್$_2$ + ಕಾಯ್$_4$]

**ಮುಗುಳ್ಚು** (ಕ್ರಿ). ೧. (ಹೂವು ಮೊದಲಾದುವನ್ನು) ಮುಚ್ಚಿಕೊಳ್ಳುವಂತೆ ಮಾಡು : ಮೊಗ್ಗಾಗಿಸು : "ಮುಗುಳ್ಚು – ಸಂಕೋಚಕರಣೇ (ಕುಗ್ಗಿಸು)" (ಶಮದ) ; ಪಗಲರ್ಕನಿರುಳ್ವಿಧುಬಿಂಬವಿಂಬುಮಾಟ್ಪಂತೆ ಮುಗುಳ್ಚುಗುಂ ಕುಮುದಕಾನನಮಂ ಕಮಳಪ್ರತಾನಮಂ (ಲೀಲಾವ. ೬-೬೯). ೨. (ಕಣ್ಣು) ಮುಚ್ಚಿಕೊಳ್ಳು, – ಮುಗಿ : ಸುರತಾಂತದೊಳಕ್ಷಿಗಳಂ ಮುಗುಳ್ಚಿ ಪಟ್ಟಿರೆ ಪರಮಾಯು ತೀವಿತಿವಳೆಂದಿರದೋಡಿದನೊರ್ವನೂರಿಚಂ (ರಾಜಶೇ. ೧೦-೦೯೯). [ಮುಗುಳ್$_1$ + – ಚು$_1$]

**ಮುಗುಳ್ದೊಂಗಲ್** (ನಾ). ಮೊಗ್ಗುಗಳ ಗೊಂಚಲು; ಹೂಗೊಂಚಲು; ಪುಷ್ಪಗುಚ್ಛ: ಮುಗುಳ್ದೊಂಗಲ್, ಎಸಟಬ್ದಾಂ (ಶಬ್ದಾನು. ೬೩ ಪ್ರಯೋ).
[ಮುಗುಳ್$_2$ + ತೊಂಗಲ್]

**ಮುಗುಳ್ದೋಱ್** ' ಮುಗುಳ್ದೋಱು ' ನೋ.

**ಮುಗುಳ್ದೋಱು**, ಮುಗುಳ್ದೋಱ್ (ಕ್ರಿ). ಮೊಗ್ಗುಬಿಡು ; ಹೂಬಿಡು ; ಪುಷ್ಪಿತವಾಗು : "ಮುಗುಳ್ತುದು ತಾನದೆನೆ ಮುಗುಳ್ದೋಱಿದುದು" (ಶಬ್ದಮಂ. ೨೨೦-೨೨). **ಮುಗುಳ್ದೋಱ್** : ಬೆಳ್ಗೆ ಪುಟ್ಟಲ್ಕೆ ಸಂಪಗೆ ಮುಗುಳ್ದೋರ್ಪ ಸುದತಿಯರ ಬಟ್ಟಮೊಗಕಣೆಯಹವೆ ತಾವರೆಗಳೆಂದವಂ ಬಿಟ್ಟು ತುಂಬಿದ ಜವ್ವನೆಯರ ತನುಪರಿಮಳಕೆ ಕವಿದವಾಬನದಳಿಗಳು (ಕೃಷ್ಣರಾಜ. ೯-೦೭). [ಮುಗುಳ್$_2$ + ತೋಱು]

**ಮುಗುಳ್ನಗು**$_1$, ಮುಗುಳುನಗು (ಕ್ರಿ). ಮಂದಹಾಸವನ್ನು ಬೀರು ; ನಸುನಗು : ಪಂಪಕವಿ ಪೊನ್ನನ ಕಡೆ ತಿರುಗಿ ಮುಗುಳ್ನಕ್ಕನು (ರಾಷಚಂ. ೬). **ಮುಗುಳುನಗು** : ಬೋಳನು ಕೈಮುಚ್ಚಿ ಉಡುಗೊರೆ ಕೊಡಲು ಮುಗುಳುನಗುತ್ತ ಕೋಲ್ಕಾರರು ಹೀಗೆಂದರು (ಕಾಲೂರ. ೦೦ ಕಥಾಸಾರ).
[ಮುಗುಳ್$_2$ + ನಗು$_1$]

**ಮುಗುಳ್ನಗು**$_2$ (ನಾ). ಮಂದಹಾಸ ; ನಸುನಗು : ಅವರ ಮುಗುಳ್ನಗುವನ್ನು ಕಂಡು ಮನಸ್ಸಿಗೆ ಎಷ್ಟೋ ಸಮಾಧಾನವಾಯಿತು (ಕೂತ).
[ಮುಗುಳ್$_2$ + ನಗು$_3$]

**ಮುಗುಳ್ನಗೆ**, ಮುಗುಳುನಗೆ (ನಾ). = ಮುಗುಳ್ನಗು$_2$ : "ಸ್ಮಿತವೆಂಬುದು ಮುಗುಳ್ನಗೆ" (ಹಲಾಯು. ೯೩-೪೦೩) ; ಮಗಳ ಮೊಗಮಂ ಮುಗುಳ್ನಗೆವೆರಸು ನೋಡಿದಾಗಳ್ (ಅಂಥ. ೩-೪೬ ವ) ; ಮುಗುಳ್ನಗೆ ಪದೆಪಿಂ ಪೊವಟ್ಟುದು ಕುಮಾರನ ಕೋಮಳವಕ್ತ್ರಬಿಂಬದೊಳ್ (ಕುಸುಮಾ. ೬-೦೨೩) ; ದಾರಿಗನ ಮೋರೆಯಲ್ಲೊಂದು ಮುಗುಳ್ನಗೆ ಮಿಂಚಿತು (ಮುಕ್ಷಸ. ೩). **ಮುಗುಳುನಗೆ** : ಮೃಗನಯನೆ ನೀನೆನ್ನನೀಕ್ಷಿಸಿ ಮುಗುಳುನಗೆಯುಂ ಚಿಂತೆಯುಂ ನಿನಗೇಕೆ ಪೇಳೆನಲು (ಬಸವ. ೪೦-೩) ; ಮುಗುಳುನಗೆ ನಸುಮೊಳೆಯೆ ಭೀಮಾದಿಗಳಿಗೆಂದನು ಕೃಷ್ಣನು (ಕುಮಾರವ್ಯಾ. ೭-೦೨) ; ಮುಗುಳುನಗೆಯಲಿ ಸೂರ್ಯತನುಜನ ಮೊಗವ ನೋಡಿ (ಕಾವ್ಯಶಾ. ೪೩-೨೩) : ಅದೃಷ್ಟದ ಕುಲಿಮೆಯಿಂದ ನೆಗೆವ ಕಿಡಿಯಂತಿತ್ತು ಅವನ ಮುಗುಳುನಗೆ ! (ಅಶ್ವತ್ಥ. ೦೬೭). [ಮುಗುಳ್$_2$ + ನಗೆ]

**ಮುಗುಳ್ನನೆ** (ನಾ). ಅರಳುತ್ತಿರುವ ಮೊಗ್ಗು, – ಕುಟ್ಮಲ : ಮುಗುಬ್ದಿಂ ಮುಗುಬ್ದಿಂ ಪೊಸಮಲ್ಲಿಗೆಯ ಮುಗುಳ್ನನೆಯ ದೇಸೆಯುಂ ಕಂದರ್ಪಂ ಪೊಗಟ್ವಂ (ಮಲ್ಲಿಕಾ. ೩-೦೪) ; ಬಲ್ನನೆಯ ಪೊವಱ್ ಮುಗುಳ್ನನೆಯ ಪೆರ್ಮನೆ . . . ಪೊಸವಣ್ಣ ಗೊತ್ತಿದೆನೆ ಕಣ್ಗೆಸದಿರ್ದುದದೊಂದು ಮಾಮರಂ (ಕಬ್ಬಿಗ. ೦೦೦). [ಮುಗುಳ್$_1$ + ನನೆ$_3$]

**ಮುಗುಳ್ಮೊಲೆ** (ನಾ). ಮೊಗ್ಗಿನಂತಿರುವ ಕುಚ, – ಮೊಲೆ : ಹೊಗರೆಸೆವ ಮುಗುಳ್ಮೊಲೆಯೊಪ್ಪಿಗೆ . . . ನೃಪನಂದನೆಗೆ (ಜಯನೃ. ೦೩-೦೨) ;

ಸಣ್ಣ ಮುಗುಳ್ಮೊಲೆಯು ಪರಳ್ಮೊಲೆಯು . . . ಬೆದರ್ದ ಕಣ್ಣಸೋಟದ ಬಾಲೆಯರ್ . . . ಎಸೆವರು (ಕಬಿಪು. ೧೦-೧೯). [ಮುಗುಳ್$_2$ + ಮೊಲೆ$_1$]

**ಮುಗುಳ್ವಡೆ** (ಕ್ರಿ). ಮೊಗ್ಗು ಬಿಡು ; ಹೂಬಿಡು ; ಪುಷ್ಪಿತವಾಗು: ಬೊಗಸೆಗಂಗಳೆಯಂಗಲತಿಕೆಗೆ ತಿಗುರಿ ತೀಡಿದ ಮೃಗಮದದ ಮಗಮಗಿಪ ಸುರಭಿಯ ಕಾಮಿಯಭಿರತಿ ಮುಗುಳ್ವಡೆಯುಂತಾಸ್ವಾದಿಪಂತೆ (ಶೃಕವ. ೩-೩-೩). [ಮುಗುಳ್$_2$ + ಪಡೆ$_1$]

**ಮುಗುಳ್ವದ** (ನಾ). ಮೊಗ್ಗು ಬಿಡುವ ಹದ ; ಹೂ ಬಿಡುವ ಸ್ಥಿತಿ : ಮುಗುಳ್ವದನಾದ ಸಂಪಗೆ ಮುಡಲ್ವದಿರ್ಪುತ್ತೆ ಮರಲ್ದರಲ್ದ ಮಲ್ಲಿಗೆ ಮನಮಂ ಕವರುತ್ತಿರೆ (ಕಂಕಥಾ. ೩-೩೩) ; ಒರಿದು ಮೃದುವಾಗಿ ನಸದಕ್ಕಿ ಯೊಳಗರಿಸಿನವ ಪೊರೆಯೊತ್ತಿ ಮುಗುಳ್ವದದಿ ಬೆಂದ ವಿದಳಗಳಸೊಡವೆರಸಿ . . . ಪಾಕಂ ಮಾಡಿ ತೆಂಗಾಯ ತೆಗೆಯ ಕಾ ಹಸನಪ್ಪುದು (ಸೂಶಾ. ೩-೩) ; ಹುರಿಯಕ್ಕಿಯೆಳ್ಳು ಜೀರಿಗೆ ಮೆಣಸು . . . ಮುಗುಳ್ವದದಿ ಬೆಂದ ಬೇಳೆಯ ಹೆಸರು ಫುಲ್ಲಸೊಜ್ಜಿಗೆಯ ಕೂಳು (ಸೂಶಾ. ೯-೦). [ಮುಗುಳ್$_1$ + ಪದ$_1$]

**ಮುಗುಳ್ವಳೆ** (ನಾ). ಮೊಗ್ಗುಗಳ ಮಳೆ ; ಹೂಮಳೆ ; ಪುಷ್ಪವೃಷ್ಟಿ : ಮುಗುಳ್ವಳೆಯಂ ಸುರಿವ ಜಂತ್ರದ ಮುಗಿಲ್ಗಳ ತೆಗೆದು ತರಂಗೊಳಿಸಿದ ಪಂಚವಣ್ಣಿಗೆಯ ಪಟ್ಟೆಯ . . . ಗಾಡಿವಡೆದ ಮಂಟಪದ ಮಧ್ಯದಲ್ಲಿ ನೆರೆದ ವಿಬುಧರಿಂ (ರಾಶೇ. ೮-೩ ವ). [ಮುಗುಳ್$_2$ + ಮಳೆ (<ಮಟೆ$^3$)]

**ಮುಗುಳ್ವಿಲ್** (ನಾ). ಹೂವಿನ ಧನುಸ್ಸು ; ಪುಷ್ಪಚಾಪ : 'ಮುಗುಳ್ವಿಲ್ಲ' ಪರಾ. [ಮುಗುಳ್$_2$ + ಬಿಲ್$_2$]

**ಮುಗುಳ್ವಿಲ್ಲ** (ನಾ). ಹೂವಿನ ಧನುಸ್ಸನ್ನುಳ್ಳವನು ; ಕಾಮ ; ಮನ್ಮಥ : ಮುಗುಳ್ವಿಲ್ಲಂ ಮಗುಳ್ದೆಚ್ಚ ಶಿಳೀಮುಖ ಮುಗುಳೆ ಕುಲಟೆಯರ ಮೆಲ್ಲೆರ್ದೆಯಿಂ ನೆಟ್$^3$ ಮುಗಿದುವು ಮುನ್ನೀರಣುಗಿಯ ಸೆಜ್ಜೆವನೆಗಳಾ ರಾತ್ರಿಯೊಳು (ಶಯುಕಾ. ೧೩-೬೩) ; ಮುಗುಳ್ವಿಲ್ಲನಾ [ಪಾಠಾಂ. ಮುಗುಳ್ವಿಲ್ಲವಾ]ರತಿದೇವಿಯರಾಡುವ ನಗರಜನದ ಸಾರಿಯಿರ್ಪ ಪಗಡೆವಾಸೆಂದೆನೆ ರವಿ ಸೋಮವೀಥಿಗಳ್ಸೊಗಸಿಹವಾ ನಗರಿಯೊಳು (ಶ್ರೀಶಾಲ. ೦-೭೩). [ಮುಗುಳ್ವಿಲ್ + — ಅ$_7$]

**ಮುಗುಳ್ವುಣ್** (ನಾ). = ಮುಗುಳುಬೊಕ್ಕೆ : ಅಳುರೆ ಶರದದ ಬಿಸಿಲ್ ಕೋಮಳಿಕೆಯನುಟಿದಿನಿಸು ಬಾಡಿ ಕಂದಿರ್ದಳ್ ಕುಂದಳತಾಕುಮಾರಿ ಮುಗುಳ್ವುಣ್ಣೊ[ಪಾಠಾಂ. ಳ್ವೊಳ್ಳೆ]ಳೆತೊಡೆ ಮೆಯ್ಯಾಯ್ದು ಬಡಬಡಾದಂತಾದಳ್ (ಲೀಲಾವ. ೩-೩೬). [ಮುಗುಳ್$_2$ + ಪುಣ್]

**ಮುಗುಳ್ವೆಳಗು** (ನಾ). ಮೊಗ್ಗಿನಂತಹ ಕಾಂತಿ : ಬೆರಲೆಡೆಯೊಳಡಸಿದ ಕಪ್ಪುರವಳುಕಿನೊಳೆ ನಗಿಸುವ ರೋಡಗರನಿಡುವ ನೆವದಿಂ ಪರಿವ ಮುಗುಳ್ಗೆಯ ಮುಗುಳ್ವೆಳಗಿಂಗೆ ತಕ್ಕುಗುಡುವಂತೆಯುಂ (ಅಪಂಪು. ೯-೭ ವ). [ಮುಗುಳ್$_2$ + ಬೆಳಗು$_2$]

**ಮುಗುಳ್ಸರಿಗೆ** (ನಾ). ಮೊಗ್ಗುಗಳಿಂದ ಮಾಡಿದ ಸರ,— ಹಾರ : ವನಕುಸುಮಂಗಳಂ ಬಗೆಗೆವಂದುವನಟ್ಟಿಯೊಳಾಯ್ದು ಕೊಯ್ದು . . . ಮುಗುಳ್ಸರಿಗೆ ತೋಳ್ವಳೆ ಕಂಕಣವಾರಮೆಂದು ಬೇಟ್ಪನಿತನೆ ಮಾಡಿ ತೊಟ್ಟು ಕರಮೊಪ್ಪಿದಳಾಕೆ ಬಸಂತಕಾಂತೆವೋಲ್ (ಕಂಕಥಾ. ೨-೦೬). [ಮುಗುಳ್$_2$ + ಸರಿಗೆ]

**ಮುಗುಟಿ$_1$** (ಕ್ರಿ). (?) : ಶಿಥಿಲದ್ವಿತ್ವಕ್ಕೆ – ಮಗುಟ್ದಂ, ಅಗುಟ್ದಂ. . . ಮುಗುಟ್ದಂ, ತೆಗಟ್ದಂ (ಶಮದ. ೩೬ ಪ್ರಯೋ). [ ? ]

**ಮುಗುಟಿ$_2$** (ನಾ). (?) : ಪೊಕ್ಕುಟಿ, ಕೌಂಕುಟಿ, ನೆಗಟಿ, ಮುಗುಟಿ, ನೆಮಟಿ, ತೆಮಟಿ (ಶಬ್ದಾನು. ೧೯೦ ಪ್ರಯೋ). [ ? ]

**ಮುಗುಟ್ತೆ** (ನಾ). (?) : ಅಗುಟ್ತೆ, ಪೊಗಟ್ತೆ, ಮುಗುಟ್ತೆ , ನೆಗಟ್ತೆ (ಶಬ್ದಾನು. ೩೩೯ ಪ್ರಯೋ). [ಮುಗುಟಿ$_1$ + — ತೆ$_2$]

**ಮುಗ್ಗಟ್ಟು** (ನಾ). ೧. ವಿಷಮಸ್ಥಿತಿ ; ಕಷ್ಟ ; ತೊಂದರೆ ; ಪೇಚು : ಕಂಚಿನ ನಾಗರಿಕತೆಯು ಹರಡಿದ ಹಾಗೂ ತಾಮ್ರ ಮತ್ತು ತವರದ ಅಭಾವದಿಂದ ಎಲ್ಲರಿಗೂ ಹತಾರಗಳು ದೊರೆಯದೆ ಮುಗ್ಗಟ್ಟು ತಲೆದೋರಿತು (ಶಿಲ್ಪಸಾ. ೬೭) ; ಹೀಗೆ ಅವರನ್ನು ಬಲವಂತ ಮಾಡಿ ಮುಗ್ಗಟ್ಟಿಗೆ ಸಿಕ್ಕಿಸುವುದು ಬಹಳ ತಪ್ಪು (ಕುರಾಯ. ೭೦). ೨. ಕೊರತೆ; ಅಭಾವ : ಇಲ್ಲಿ ಸ್ಥಳಕ್ಕೆ ಬಹಳ ಮುಗ್ಗಟ್ಟಂತೆ ! (ಕೂಪಥೇ. ೨೯೯) ; ಅವನಿಗೆ ಹಣದ ಮುಗ್ಗಟ್ಟು ಬಲವಾಗುತ್ತಿತ್ತು (ರಕ್ತರೂ. ೮೩). 'ಇಕ್ಕಟ್ಟು', 'ಬಿಕ್ಕಟ್ಟು' ಪರಾ. [ದೇ.॥ ತಮಿ. ಮುಕ್ಕಟ್ಟು]

**ಮುಗ್ಗರಿಸು** ' ಮುಗ್ಗುರಿಸು ' ನೋ.

**ಮುಗ್ಗಲು** (ನಾ). ೧. ಬೂಷ್ಟು ಹಿಡಿದುದು; ಮುಗ್ಗಿದುದು : ಒಂದೇ ಸಮನೆ ಮಳೆ ಹಿಡಿದು, ಥಂಡಿಯಿಂದ ಎಷ್ಟೋಂದು ಹಪ್ಪಳ ಸಂಡಿಗೆಗಳು ಮುಗ್ಗಲಾದುವು (ಕೂಶಿ). (ಗು). ೨. ಬೂಷ್ಟು ಹಿಡಿದ; ಕೆಟ್ಟುಹೋದ : ದೊರೆಯು ಇವಳ ತೊಟ್ಟಿಗೆ ಕೊಡುತಾ ಇದ್ದ ಖಾಸಾಸೋಬಸ್ಕರವನ್ನು ದಿನಕ್ರಮೇಣ ಕಡಿಮೆ ಮಾಡುತ್ತಾ ಕಡೆಗೆ ಕಗ್ಗಲ ರಾಗಿ ಮುಗ್ಗಲ ಹುರಳಿಗೆ ಇಳಿಸಿದನು (ಶೀಟಿಪೂ. ೦೬). 'ಮುಮುಟಿಕಿಲ್$_1$' ಪರಾ.

**ಮುಗ್ಗಲಗೇಡಿ** = ಅಸಹ್ಯವ್ಯಕ್ತಿ : ಹೊಲಾ ಮನಿ ಎಲ್ಲಾ ಹಾಳು ಮಾಡೋ ಮುಗ್ಗಲಗೇಡಿಗೆ ಮಗಳ ಕೊಟ್ಟು ಯಾವ ನರಕಕ್ಕ ಹೋಗ ಬೇಕಂತೀರೀ ನೀವು ? (ಸಮಾಜ. ೨೯೬). [ಮುಗ್ಗು$_2$ + – ಅಲು (< – ಅಲ್$_2$). /ತಮಿ. ಮುಕ್ಕಲ್ = ಮುಗ್ಗುನಾತ]

**ಮುಗ್ಗಾಲಿ** ' ಮೂಗಾಲಿ ' ನೋ.

**ಮುಗ್ಗಿಸು** ' ಮೊಟಿಗ್ಗಿಸು ' ನೋ.

**ಮುಗ್ಗಿಱು** (ಕ್ರಿ). ಮುಗ್ಗರಿಸಿ ಬೀಳು ; ಎಡವು : ಮುಡಿಗೆ ಮುಡಿಯೆಂದವಳ ಕೆಯ್ಯೊಳಗೆ ತಂದು ಕೊಡಲೊಡನೆ ಹಾವಾಗಿ ಹೂಂಕರಿಸಿ ಕೋಪದಿ ಕೆಯ್ಯ ಕಡಿಯಲಾ ಕ್ಷಣದೊಳಗೆ ವಿಷವೇಱಿ ಮುಗ್ಗಿಱಿದು ಕಾಮಲತೆ ಭೂತಳಕ್ಕೆ ಕೆಡೆಯಲು (ಸಮ್ಯಕೌ. ೬-೯೯) ; ಡೊಳ್ಳುಹೊಟ್ಟೆಯನೆತ್ತಿ ಕೊಂಡೋಡಲಾಱದೆ ಹಳ್ಳಕೊಳ್ಳದಲಿ ಮುಗ್ಗ[ಗ್ಗಿ]ಱಿದು ಮುಳ್ಳಲ್ಲಿ ಬಿದ್ದು ಮೂಗರಿಸಿಕೊಂಡರ ಲೆಕ್ಕವಿಲ್ಲವನಾರು ಬಣ್ಣಿಪರು (ಕಂಪರಿ. ೦೭-೩೩). [ಮುಗ್ಗು$_1$ (< ಮೊಟ್ಟು$_1$) + ಇಱು$_1$]

**ಮುಗ್ಗು$_1$** ' ಮೊಟ್ಟು$_1$ ' ನೋ.

**ಮುಗ್ಗು$_2$** (ಕ್ರಿ). ೧. ಹಳಸು ; ಕೆಟ್ಟವಾಸನೆ ಬರು ; ಕೆಟ್ಟುಹೋಗು : ಅದಜಡಗು ಮುಗ್ಗಿ ಪುಟು ಪತ್ತಿದೊಡಾಱಲ್ ಪರಪೆ ಕಾಗೆಯುಂ ನಾಯುಂ ಮುಟ್ಟದುದು (ಯಕೋಶ. ೩-೩೮) ; ಇನಿವಣ್ಣಳಾವಾವವುಟವಱವಱ ರಸ ಮನನುವಾಗಿ ಹಿಳಿದು ಹಂಜಿಯ ಅರಲೆಯೊಳಗೂಡಿಯಿನಿಸು ಮುಗ್ಗದ ತೆಱದಿ ನೆಳಲೊಳೊಣಗಿಸಿ (ಸೂಶಾ. ೨-೩೩) ; ಮುಗ್ಗದ ಮುಗಿಯದ ಬಾಡದ . . . ಪೂವೆ ಪೂಬನದೊಳಳುಂಬಂ (ರಾಮಾಶ್ವ. ೩೩-೨೩). ೨. (ಆಲಂ) ಅಸಹ್ಯವಾಗು ; ಇಂದಿನ ಹದಗೆಟ್ಟ ವಾತಾವರಣದಲ್ಲಿ ಮೋಜು ಮಜಲುಗಳು ಮುಗ್ಗಹತ್ತಿವೆ (ಕನ್ನಜಾ. ೩೩).

[ದೇ.॥ ತಮಿ. ಮುಱು ; ತುಳು. ಮುಗ್ರ್ ; ತೆಲು. ಮುಗ್ಗು, ಮುಱುಗು, ಮುರ್ಕ್ಕು; ಗೊಂಡಿ. ಮುರ್ಕ್ಸಾನ]

**ಮುಗ್ಗು$_3$** (ನಾ). ಕೆಟ್ಟವಾಸನೆ ; ಹಳಸಲು ; ಬೂಷ್ಟು : ಖಂಡಸಕ್ಕರೆಯ ಮೆಲುವಾತ ಮುಗ್ಗಿನ ಹಿಂಡಿಗೆಱಗುವನೆ (ಸರ್ವಜ್ಞ. ೩೦೬) ; ಹೊಟ್ಟೆಗಿಲ್ಲದಕ್ಕ ಇದ್ದ ಮುಗ್ಗ ಕಾಳೆಲ್ಲ ಮುಕ್ಕಿಬಿಟ್ಟನರಿ (ಗ್ರಾಕೂಹು. ೬೩). [<ಮುಗ್ಗು$_2$./ತುಳು. ಮುಗ್ಗ, ಮುಗ್ಗು: ತೆಲು. ಮುಗ್ಗ; ಕೋಲಾ. ಮುರ್ಗ್ ; ಪರ್ಜಿ. ಮುರ್ಗ್, ಪುರುಗ್]

**ಮುಗ್ಗುಡಿ** (ನಾ). ಮೂರು ಕುಡಿ : ' ಮುಗ್ಗುಡಿವರಿ ' ಪರಾ. [< ಮೂಱು + ಕುಡಿ$_2$]

**ಮುಗ್ಗುಡಿವರಿ** (ಕ್ರಿ). ಮೂರುಕುಡಿಗಳಾಗಿ ಹಬ್ಬು : ಮುಗ್ಗುಡಿವರಿದು ರವಣಿಸಿಯೆ ತನತನಗುಗ್ಗಡದೊಯ್ಯಾರದ ಮೋಹರಿಸುವ ಭರದಿಂ ನೆರೆದುದು ಧರೆಯುಗಲದಲಿ (ವೀರೇಶ. ೨-೨೭). [ಮುಗ್ಗುಡಿ + ಪರಿ₁]

**ಮುಗ್ಗುಡ್ಡೆ** ' ಮೂಗುಡ್ಡೆ ' ನೋ.

**ಮುಗ್ಗುರಿಸು, ಮುಗ್ಗರಿಸು** (ಕ್ರಿ). ಎಡವಿ ಬೀಳು ; ಮುಗ್ಗು : ದೃಷ್ಟಮಲ್ಲದ ಸೂಕ್ಷ್ಮಮೋಹಸೂತ್ರದಿ ಪದಂ ಬಿಗಿದಂತೆಪೋಲಾಗೆ. ಮುಗ್ಗುರಿಸಿ ನಿಲ್ಲುತುಂ (ತತ್ವಾಂಗ. ೩೦-೧೩೯೪) : ೧೯೨೦ರಿಂದ ಬೆಳೆದು ಬಂದಿದ್ದ ರಾಷ್ಟ್ರದ ಶಕ್ತಿ ಕುಗ್ಗಿ ಮುಗ್ಗುರಿಸುವುದೋ ಎಂಬ ಹಾಗಿತ್ತು (ರಾಜವ. ೦೯). **ಮುಗ್ಗರಿಸು** : ಮುಗ್ಗರಿಸುವುದು ಮೊದಲಾದ ದುರ್ಗುಣಗಳಿಂದ ರಹಿತಗಳಾದ ಅಶ್ವಗಳು (ಶಾಗಂಧಿ. ೩೨೩-೪) ; ಯಾವುದೋ ಬಳ್ಳಿಯಲ್ಲಿ ಕಾಲು ಸಿಕ್ಕಿಹಾಕಿಕೊಂಡಿದ್ದರಿಂದ ಎಡವಿ ಮುಗ್ಗರಿಸಿ ಬಿದ್ದರು (ಹಸುಪೊ. ೭೭) ; ಬಿಡಿಸಿಕೊಳ್ಳಲು ಹೋದ ಅವಳು ಆಯ ತಪ್ಪಿ ಮುಗ್ಗರಿಸಿದಳು (ಅರಪೂ. ೩೦). ' ಕುಕ್ಕುಱಿಸು ', ' ತುಂಡರಿಸು ' ಹೋ.
[< ಮುಗ್ಗು₍₁ + — ಇಸು₃]

**ಮುಗ್ಗುರು ?** (ನಾ). ಎಡವಿ ಬೀಳುವಿಕೆ ; ಮುಗ್ಗುರಿಸುವಿಕೆ : ನಿಲಿಸಿ ಪರಾಶರಸ್ಮೃತಿಗೆ ನೀಂ ಕಲಿಕಾಲದಿ ಕೆತ್ತ ಕತ್ತಲಂ ತೊಲಗಿಪ ಕೆಯ್ದೀವಂಕ ಮಿರುಟೀಕೆಯು, ಮಾಣಿಸಿದೆಮ್ಮ ಮುಗ್ಗುರಂ (ಗೀಶಂ. ೩೦-೩).
[< ಮುಗ್ಗು₁]

**ಮುಗ್ಗೇರಿ** (ನಾ). ಒಂದು ಪ್ರದೇಶದ ಹೆಸರು : ಎರಿಸಲ್ಮುಗ್ಗೇರಿಯುಂ ಮುಂ ಮುನಿಯು ಮುಸಕಮಂ ಮಳ್ಗಿಸಲ್ಕನ್ನಕುಬ್ಜೇಶ್ವರನಂ ಹಿಮಾದ್ರಿಯುಂ ಪಾಯಿಸಲ(ರಾ?)ದಂಸುಮಂ . . . ಕುಂಧರಾಜಂ (ಕಕಶಂ. ೭-೭; ೨೨೨).
[? + ಕೇರಿ]

**ಮುಗ್ಗೊಲಿ, ಮುಗ್ಗೊಳಿ** (ನಾ). (ಹೈದರ್ ಮತ್ತು ಟಿಪ್ಪುಸುಲ್ತಾನರ ಕಾಲದಲ್ಲಿ ವಿಧಿಸುತ್ತಿದ್ದ) ಒಂದು ಬಗೆಯ ತೆರಿಗೆ : (ಕಸಂಗ್ರಾ. ೦೩೩). **ಮುಗ್ಗೊಳಿ** : (ಕಸಂಗ್ರಾ. ೦೩೩). [← ತುಳು. ಮುಗ್ಗೊಲಿ, ಮುಗ್ಗೊಳಿ]

**ಮುಗ್ಗೊಳಿ** ' ಮುಗ್ಗೊಲಿ ' ನೋ.

**ಮುಗ್ತೆ** (ನಾ). ಒಪ್ಪಂದ ; ಕರಾರು ; ಕಂಟ್ರಾಕ್ಟು : ' ಮುಗ್ತೆಕೆಲಸ ' ಪರಾ. [← ತುಳು. ಮುಗಿತೆ. ಮುಗ್ತೆ]

**ಮುಗ್ತೆಕೆಲಸ** (ನಾ). ಒಪ್ಪಂದ ಮಾಡಿಕೊಂಡ ಕೆಲಸ ; ಕರಾರಿನ ಕೆಲಸ ; ಕಾಂಟ್ರಾಕ್ಟ್ : (ಕಸಂಗ್ರಾ. ೦೨೨). [ಮುಗ್ತೆ + ಕೆಲಸ]

**ಮುಗ್ಧ** (ಗು). ೧. ಮೂಢತನದಿಂದ ಕೂಡಿದ ; ಮೌಢ್ಯದ : ' ಮುಗ್ಧತನ ' ಪರಾ. ೨. ಕಪಟತನವಿಲ್ಲದ ; ಸರಳಮನಸ್ಸಿನ : ಯುದ್ಧಾನುಭವವಿಲ್ಲದಿಹ ಮುಗ್ಧರಾಮನಿಂ . . . ರಣವಿದಗ್ಧರನೆಂತು ಗೆಲಲಹುದೊ ? (ಶ್ರೀರಾಮಪ. ೨೯-೩೯); ಅವರ ಮುಗ್ಧ ನಡೆನುಡಿಗಳಿಂದ ಪ್ರಭಾವಿತರಾದವರು . . . ಧನ್ಯರು (ಶಿಕ್ಷದ. ೭೭೮). ೩. ಆಕರ್ಷಕವಾದ ; ಮೋಹಕವಾದ : ಬಳಲ್ದ ಶಿಶು ನೋವಂ ಮರೆತು ನೆಮ್ಮದಿಯುಸಿರಿತು ಮುಗ್ಧನಿದ್ರಾಮುದ್ರೆಯಪ್ಪಂತೆ (ಶ್ರೀರಾಮಪ. ೧೭೪-೩೯೭). (ನಾ). ೪. ಮೌಢ್ಯ ; ಮೂಢತನ : ಮೂಗರ ಮೂಗರ ಪ್ರಸಂಗದಂತೆ ಇದೆ ಎನ್ನೊಳಗೆ ಅಱಿವಿನ ಪರಿಮಳ ಹೊಱಗೆ ನೋಡಿವರೆ ಮುಗ್ಧವಾಯಿತ್ತು (ಅವಶಂ. ೨೦೬-೯೩೪). ೫. ಆಕರ್ಷಕವಾದುದು ; ಮೋಹಕವಾದುದು : ಲಳಿತ ಮಧುರಂ ಲಜ್ಜಾಲೋಳಂ ಸ್ಮರಾಕುಳಿತಂ ಮನಂ ದಳಿತ ಮಪಸನ್ಮುಗ್ಧಂ ಸ್ನಿಗ್ಧಂ ವಿಲೋಕನಮೋಪಳಾ (ಶಂಶಥಾ. ೪-೭೭); ಅಱುಹು ಕರಗಿ ನಿರವಯಲಾಗಿತ್ತಾಗಿ ಅಖಂಡೇಶ್ವರನೆಂಬ ಶಬ್ದ ಮುಗ್ಧವಾಯಿತ್ತು (ಅಖಂಡೇ. ೩೦೩-೧೦೩). ೬. ಕಪಟವನ್ನು ತಿಳಿಯದವನು ; ಸರಳ ವ್ಯಕ್ತಿ : ತನಗರಿವಿಲ್ಲವೆಂಬರಿವಿರುವಾತನು ಮುಗ್ಧನು ನೀ ಬುದ್ಧಿ ಕಲಿಸು (೨ಂತಾಶ. ೦೩೦-೭೭). ೭. ಮೋಹಿತನಾದ ವ್ಯಕ್ತಿ ; ಆಕರ್ಷಿತನಾದ ವ್ಯಕ್ತಿ : ಅಂದು ನೀನು ಎಳೆಯ ಹುಡುಗನಾಗಿ ಅವಳ ಸೌಂದರ್ಯಕ್ಕೆ ಕೇವಲ ಮುಗ್ಧನಾದವನಾಗಿದ್ದೆ (ಹೇಮಂತ. ೪೦೯); ಅದನ್ನು ಪ್ರಭುಗಳೂ, ಮಹಾರಾಣಿ ಶಾಂತಲೆ, ಲಕ್ಷ್ಮಿಯರೂ ನೋಡಿ ಮುಗ್ಧರಾದರು (ಶಾಂತಲಾ. ೦೩೩). [ಸಂ.]

**ಮುಗ್ಧಜನ** (ನಾ). ಕಪಟವನ್ನು ತಿಳಿಯದ ಜನ ; ಸರಳಸ್ವಭಾವದ ಜನ : ಮುಗ್ಧಜನದಱಿತಮೆನಿಸಿ ವಿದಗ್ಧರುಮಿದು ಕನಕಗಿರಿಯೊ ರಜತಾದ್ರಿಯೊ ಸಂದಿಗ್ಧಮೆನಿಸಿಮದು ಸುರಗಿರಿ (ಕೃಕ್ಷು. ೮೦-೪೦); ಮುಗ್ಧ ಜನರನ್ನು ಬಂಧಿಸಿ . . . ಅವರನ್ನು ವಂಚಿಸಿದ್ದಕ್ಕಾಗಿ ಆ ಪುರೋಹಿತರು ಅಪರಾಧಿಸ್ಥಾನದಲ್ಲಿದ್ದರು (ತುವರು. ೦೬೦). [ಸಂ.]

**ಮುಗ್ಧತನ** (ನಾ). ಮೂಢತನ ; ಮೌಢ್ಯ : ಮುಗ್ಧತನವೇನೆಂದೆಣಿಸುವೆನು ಶಿವನನಲ್ಲದೆ ಪೆಱತನಱಿಯದದು (ಬಸಪು. ೦೩-೦೭).
[ಮುಗ್ಧ + —ತನ]

**ಮುಗ್ಧತೆ** (ನಾ). = ಮುಗ್ಧತನ : ಮುಂದದಿಂದಲೊಮ್ಮೆ ಮುಗ್ಧತೆಯಿಂದ ಲೊಪ್ಪೊಮ್ಮೆ . . . ಅಚ್ಚಿಸುತ್ತ (ತಿರುರ. ದೇ. ೫-೪); ದೈತ್ಯಬಾಹು ಮುಗ್ಧತೆಯನು ಹಿಸುಕಲು ಚಾಚಿತು ಹಲ ಬಾರಿ (ಪಂಪಮು.೩೯-೦೩) ; ದುಗ್ಧ ಧವಳಿಮ ಮುಗ್ಧತೆಯೆ ಮೈ ಹೊರೆಯುವಂತೆ (ಅಶಕೇ. ೨೩-೪).
[ಸಂ. ಮುಗ್ಧತಾ]

**ಮುಗ್ಧತ್ವ** (ನಾ). = ಮುಗ್ಧತನ : ಸಮಸಂದೊಂದಿದ ಲಜ್ಜೆಯುಜ್ಜುಗಮೆ ಲಜ್ಜಾಭಾವಮಂ . . . ಮುಗ್ಧಭಾವಮೆ ಮುಗ್ಧತ್ವ ಮಹತ್ವಮಂ ನೆಱೆಯೆ ಕಲ್ತೀತಾದುದಾ ಕನ್ನೆಯೊಳ್ (ಕಾದಂಬು. ೨೯೩); ಉತ್ತಮಮುಗ್ಧತ್ವಕ್ಕೆ ಮೆಚ್ಚಿದರ್ತಿಶಯಮಹಿಮಂ ಶಂಭು ರಕ್ಷಿಕ್ಕೆ ನಮ್ಮಂ (ಎಇ. XIV. ೨೭೦-೦೩ ;1181). [ಸಂ.]

**ಮುಗ್ಧಭಾವ** (ನಾ). ಕಪಟವಿಲ್ಲದ ಭಾವನೆ ; ಸರಳಭಾವ : ಸಮಸಂದೊಂದಿದ ಲಜ್ಜೆಯುಜ್ಜುಗಮೆ ಲಜ್ಜಾಭಾವಮಂ . . . ಮುಗ್ಧಭಾವಮೆ ಮುಗ್ಧತ್ವಮಹತ್ವಮಂ ನೆಱೆಯೆ ಕಲ್ತೀತಾದುದಾ ಕನ್ನೆಯೊಳ್ (ಕಾದಂಬು. ೯೩) : ಲೌಲ್ಯದೃಷ್ಟಿಯಿಂ ನೋಡುವ ನಂಬಿಯಣ್ಣನ ಮುಗ್ಧಭಾವಕ್ಕೆ ಮುಯ್ಯಾನುತಂ (ಸಂಬಶ. ೪-೮೯). [ಸಂ.]

**ಮುಗ್ಧಹೃದಯ** (ನಾ). ಕಪಟವಿಲ್ಲದ ಹೃದಯ ; ಸರಳಹೃದಯ . ನನ್ನ ಮುಗ್ಧಹೃದಯವನ್ನು ನಿಮ್ಮ ಅಧೀನವನ್ನಾಗಿ ಮಾಡಿ . . : ನಡೆಯಿಸುವೆನು (ಶಬಿ. ೬). [ಸಂ.]

**ಮುಗ್ಧಾಂಗನೆ** (ನಾ). ಕಪಟತನವರಿಯದವಳು ; ಸರಳಸ್ವಭಾವದವಳು : ಸೋಜಿಗದಿಂ ನೋಳ್ಪರೊಲ್ದು ಮುಗ್ಧಾಂಗನೆಯರ್ (ಹರಿವಂ. ೪-೨೦). [ಸಂ. ಮುಗ್ಧಾಂಗನಾ]

**ಮುಗ್ಧಾಲಾಪ, ಮುಗ್ಧಾಳಾಪ** (ನಾ). ಕಪಟತನವಿಲ್ಲದ ಮಾತುಕತೆ ; ಸರಳಸಂಭಾಷಣೆ : ನಚ್ಚಿನ ಮುಗ್ಧಾಲಾಪಮಿಂಪಂ ಕಱೆದು ಬಱೆತು ದೇಬನ್ನೆಗಂ ಬತ್ತಿರಲ್ ಬಾಯ್ (ಕಾದಂಬು. ೩೨೩). **ಮುಗ್ಧಾಳಾಪ** : ಬಹುಮುಗ್ಧಾಳಾಪವಾಕ್ಯಂಗಳಾವರಿಸುತ್ತುಂ ಪೊಸದೇಸೆವೆತ್ತಸೆಯೆ(ಸುಕುಮಾ. ೦೦-೪೦). [ಸಂ.]

**ಮುಗ್ಧಾಳಾಪ** ' ಮುಗ್ಧಾಲಾಪ ' ನೋ.

**ಮುಗ್ಧೆ** (ನಾ). ೧. ಕಪಟವನ್ನು ತಿಳಿಯದವಳು ; ಸರಳಸ್ವಭಾವದವಳು : ಮಾಮರನಲ್ಲಿದೊಂದು ಮಾಯದ ಮರನೆಂದು ಸಾರ್ದಳತಿ ಮುಗ್ಧೆ ಕುಜಾಂತರಮಂ ವಸಾಂತದೊಳ್ (ಶಂಪ್ರಕು. ೭-೦೦೬); ಓಘನ ತೆಱಂ ಪೆಱತಾದೊಡೆ ಮುಗ್ಧೆ ನಿಲ್ವಳೇ (ಕೃಕ್ಷು. ೬-೩೯); ಕಪಟವೆನ್ನುವುದನ್ನೇ ಅರಿಯದ ಈ ಮುಗ್ಧೆಯನ್ನು . . . ತಿರಸ್ಕರಿಸುವುದು ನಿನಗೆ ಯುಕ್ತವಲ್ಲವಲಾ ? (ಶ್ವಾಕುಂತ. ೬೮-೦೪). ೨. ಚೆಲುವೆ ; ಸುಂದರಿ : ಮುಗ್ಧೇ ಕೈರವನೇತ್ರೆ ಪಿಗ್ಗದಿಯವೋಲ್ ಮಾಳಿಸಾಂತೊಡಾನೇತಿರ್ಪೆಂ (ಗಂಶ.೯-೦೩೭);

ಮುಂದೆ ಕನ್ನಡಿವಿಡಿದು ನಡೆವ ಮುಗ್ಧೆಯರೊಳಗೆ . . . ಬರುತಿರ್ದ ನಪ್ರತಿಮಸುಕುಮಾರಶೇಖರಂ (ನೇಮಿ. ೫-೮೫) : ಪೊಸ ಮುತ್ತಿನ ತಲೆಮುಡುಗೆಯು ಪಸರಿಪ ಕಾಂತಿಯುವಗುಂತಿಮಾಲೆವೊಲಿರೆ ಕಂಡು ಸಮಂತು ಮುಗ್ಧೆಯರ್ ಮುಡಿಯಿಸರೆ ಕೆಲರ್ ಮುಂಚಿ ಮುಡಿದರೆಂಬೀ ಭ್ರಮೆಯಿಂ (ಶಿಶುಪ. ೬-೫೫). ೩. [ಕಾವ್ಯಮೀ] ಮುಗ್ಧೆ, ಮಧ್ಯೆ ಮತ್ತು ಪ್ರಗಲ್ಭೆ ಎಂಬ ಮೂರುವಿಧವಾದ ನಾಯಿಕೆಯರಲ್ಲಿ ಒಬ್ಬಳು ; ತಾರುಣ್ಯ, ಲಜ್ಜೆ ಮತ್ತು ಸರಳತನಗಳಿಂದ ಮನಸ್ಸನ್ನಾಕರ್ಷಿಸುವ ಹೆಂಗಸು : ಅತಿಲಜ್ಜಾನ್ವಿತೆ ಸಂಚಳಮತಿಯುವಿರಳಲೋಲಭಾವಸಂಭ್ರಮೆಯಾವಿಷ್ಕೃತಚಿತ್ತೆಯೆನಿಪ ಬಾಲಿಕೆ ಸತತಮವಳ್ಮುಗ್ಧೆಯೆಂಬ ಪೆಸರಂ ಪಡೆಗುಂ (ಶೃಂಗಾರ. ೩-೨೭); ಪುರುಷನಿದಿರೊಳ್ಗೆದೆ ಲಜ್ಜೆವೆರಸು ಚಲಿಸುವ . . . ಲೋಭದಿರವನಱಿಯದವಳೆ ಮುಗ್ಧೆಯೆನಿಪಳು (ಜಸವ. ೫-೬) ; ಸ್ತ್ರೀಯುಳಲ್ಲಿ ಯೌವನ ಮತ್ತು ಸಂಸಾರಾನುಭವದ ಮೇಲೆ 'ಮುಗ್ಧೆ', 'ಮಧ್ಯೆ', 'ಪ್ರಗಲ್ಭೆ' ಎಂದು ಮೂರುವಿಧ (ಕೃಬಿ. ೨೦೦). [ಸಂ. ಮುಗ್ಧಾ]

**ಮುಚುಕುಂದ** (ನಾ). ೧. ಒಂದು ಬಗೆಯ ಹೂವಿನ ಗಿಡ : "ಸದಾಪುಷ್ಪಮೆನಲು ಮುಚುಕುಂದಮಕ್ಕುಂ" (ಮಂಗರಾ. ೩೬-೨೫) ; ಕುಂದಮುಚುಕುಂದಮಂದಾರ . . . ಮಲ್ಲಿಕಾದ್ಯನೇಕಸುರಭಿಕುಸುಮಂಗಳಂ ಸಜ್ಜುಕಮಪ್ಪುವಂ ಪುಟ್ಟಿಯೊಳ್ ತೀವಿಕೊಂಡು (ಶಂಕರ.೦೦೭-೩); ಪಾಟಲ ಮುಚುಕುನ್ದ ಕುನ್ದ ಲತಿಕಾವೃತದಿಂದಮೆ ಒಳ್ಪಗಾವಿ . . . ಒಪ್ಪಿತೋಱುಗುಂ (ಪ್ರಾಕಂ. ೦೯೪೦, ೩೬-೨೦; 1103). ೨. ಒಬ್ಬ ರಾಜಋಷಿಯ ಹೆಸರು : ಮಱೆವ ಮುಚುಕುಂದನೆಂಬನ ಮಱೆವೊಕ್ಕುದನಂದು ನೀನ್ ಜರಾಸಂಧುಗಂ ಬೆಱುತೋಡಿದುದಂ ಭೂತಳಮಱಿಯದೆ ನೆನೆಯೆಲವೊ ಗೋವುಗಾದುದು ಪುಸಿಯೇ (ಶಂಕಾ. ೭-೫೭) ; ಒಱಗಿರ್ದಂ ನಿದ್ರೆಯಿನೆಬ್ಬಿಸಿದರಂ ಕೋಪಶಿಖಿಯಿನುರುಪುವ ವರದಿಂ ನೆಱೆದು ಕೃತಯುಗದೊಳ್ ಸುರರೊಳೆಱಿದ ಪರಿಶ್ರಮದೆ ರಾಜಮುನಿ ಮುಚುಕುಂದಂ (ಜಗ. ೯-೯೫) ; ಮುಚುಕುಂದನ ಮನೆಗೆ ಮುಕ್ಕುಂದ ಬಂದಂತೆ (ಪುರಂದ. ಭಾ. ೦-೦೯೬-೦).

[ಸಂ.]

**ಮುಚುಗ** (ನಾ). ಮುಟ್ಟಿದರೆ ತನ್ನ ಎಲೆಗಳನ್ನು ಮುಚ್ಚಿಕೊಳ್ಳುವ ಒಂದು ಬಗೆಯ ಗಿಡ ; ಮುಟ್ಟಿದರೆ ಮುನಿ : ಅವಳ ಆಶೆ ಮುಟ್ಟಿದರೆ ಮುದುಡಿಕೊಳ್ಳುವ 'ಮುಚುಗ'ದಂತೆ ಆಯಿತು (ದಂಕು. ೩೭). [< ಮುಚ್ಚು$_1$]

**ಮುಚ್ಚಂಜೆ** 'ಮುತ್ಸಂಜೆ' ನೋ.

**ಮುಚ್ಚಂಡಿ** 'ಮುಸುಂಡಿ$_1$' ನೋ.

**ಮುಚ್ಚಂದಿ** (ನಾ). ಮೂರುಪ್ರದೇಶಗಳ ಕೂಟ, — ಸೇರುವೆ : ಊರ ಪೊಲ ಮೇರೆ ಮೂಡ್ಯದೆಸೆ ಎಲವೆ ಕೆಱುವಜ್ಞಕ್ಕೆ ಱಿಎ ತೆಂಕಾ ಅದರುಳ್ನಡುಗಲ್ಲೆ ಮುಚ್ಚನ್ದಿನ್ನಡುಗಲ್ಲೆ ಪಡುವಯಾಲೆ ತಾಯನ್ದೆಕೆಱೆಯೆ (ಎಕ. X (s). ಕಳ್ಳಿ. ೦೦೭-೭೪ ; 850); ಅಲ್ಲಿಂದ ಮೂಡಲು ಮುಚ್ಚಂದಿಯ ಯಲ್ಲೆಗಲ್ಲು (ಎಕ. XIV. ಮುಂಡ್ಯ. ೦೦೫-೦೦೨; 1516).

[< ಮೂಱು + ಸಂದಿ (< ಸಂದು$_2$)]

**ಮುಚ್ಚಂಬೋಗು** (ಕ್ರಿ). ಮೂರ್ಛೆಹೋಗು ; ಎಚ್ಚರತಪ್ಪು : ಕೆಚ್ಚಗಿರೆ ಕಣ್ಣ ಪೊಟ್ಟೆಯುಮುಚ್ಚಿಗಳುಂ ತಾಲುದೇಶಮುಂ ಗುದಮುಖಮುಂ ಮುಚ್ಚಂಬೋಗಿ ಮನಂ ಕಣ್ಮುಚ್ಚಿರೆ ದಕ್ಕಾಲಿವೀಱೆ ಬಾಱದು ತುರಗಂ (ಅಶ್ವಶಾ. ೭-೭೨). [< ಮುಚ್ಚು$_2$ + ಪೋಗು$_1$ (< ಪೋ$_1$)]

**ಮುಚ್ಚಟೆ** (ನಾ). ೧. ಅಕ್ಕರೆ ; ಮಮತೆ ; ಪ್ರೀತಿ : ಹೆಣ್ಣು ಗಂಡಿನ ಮುಚ್ಚಟೆಯ ಮಾತುಗಳಿಗೆ ಬಾಯಿಬಿಟ್ಟು ತಾಯಿತನದ ಹೊರೆಗೆ ಹಿಂದು ಮುಂದು ತಿಳಿಯದೆ ತಲೆಕೊಡುವಷ್ಟು ತಿಳಿಗೇಡಿಯೇ ? (ಜಿವ್ಯಾರಿ. ೭೦); ಅವರು ತಮ್ಮನ್ನು ಮುಚ್ಚಟೆಯಿಂದ ಬೆಳೆಸಿದ್ದರು (ಕಂಚಿಶ್ರೀ. ೪೯೨). ೨. ಅಚ್ಚುಕಟ್ಟು; ಓರಣ : ಲಕ್ಕಿ ಸಾಯಲು ಬಿಡಬಾರದವ್ವ. ಮಾದನ ಮುಚ್ಚಟೆ ಸಂಸಾರ ಕೆಟ್ಟುಹೋಗುತ್ತದೆ (ಗೃಹಂ. ೧೫೨); ಉಳಿದವರಂತೆ ತಾನೂ ಮುಚ್ಚಟೆಯಾಗಿ ಬದುಕಿ ಬಾಳುವ ಆಕಾಂಕ್ಷೆಯಿರಲಿಲ್ಲವೇ ? (ಮುರುಕು. ೧೩೦). ೩. ತಾತ್ಸಾರ; ತಿರಸ್ಕಾರ : ಗಂಡ ಅಂದರೆ ಅಷ್ಟು ಮುಚ್ಚಟೆಯಾಗಿ ಹೋಯಿತೇನೇ (ತಾಯಿಕ. ೦೭). ೪. ನಟನೆ; ಸೋಗು : ನಿಚ್ಚ ಏಳುವ ಸಮಯ ಮೀರಿತೋ ಇಂದೀಗ ಎಚ್ಚರಿಕೆ ಪುಟ್ಟದೇ . . . ಮುಚ್ಚಟೆಯದೇಂ ನಿದ್ರೆ ತಿಳಿಯಲಾಗದೆ ಸ್ವಾಮಿ (ಪಿಬಾಕ. ೯೨-೬).

[ದೇ.॥ ತಮಿ. ಮುಚ್ಚಟ್ಟು; ತುಳು. ಮುಚ್ಚಟೆ = ಉತ್ಸವ; ತೆಲು. ಮುಚ್ಚಟ ]

**ಮುಚ್ಚಣ**, ಮುಚ್ಚಲ, ಮುಚ್ಚಳ್, ಮುಚ್ಚಳ, ಮುಚ್ಚಳು, ಮುಚ್ಚುಳ್, ಮುಚ್ಚುಳ, ಮುಚ್ಚುಳು (ನಾ). ೧. ಪೆಟ್ಟಿಗೆ, ಕರಡಿಗೆ, ಪಾತ್ರೆ ಮುಂತಾದುವುಗಳ ಮುಚ್ಚುವ ಸಾಧನ. ೨. (ಮನೆಯ) ಮೇಲ್ಭಾಗದ ಛಾವಣಿ, — ಸೂರು : ನೆಲಗಟ್ಟು ನಾಗಲೋಕಂ ತಳಮಾವಣಿ ದಶಾಭಿತ್ತಿ ಭಿತ್ತಿಬ್ರಜಂ ಸ್ವಸ್ತಲಭಾಗಂ ಮುಚ್ಚಣಂ ಮೇಗಣ ಸುರರ ವಿಮಾನೋತ್ಕರಂ (ಎಕ. II. ೨೩೪-೨೪; 1180). **ಮುಚ್ಚಲ** : ೧. ಆ ಹಾರ್ಮೋನಿಯಮ್ಮೋ — ಮುಚ್ಚಲ ತೆಗೆದ್ರೆ ಗೆಜ್ಜಲು ಬಂತೂಂತಾರಲ್ಲ ಹಾಗೆ . . . ಸಾಲು ಸಾಲಾಗಿ ಸೈನ್ಯವಾಗಿ ಹೊರಟುಬಿಟ್ಟವು (ದುರಂಗ. ೯೨). **ಮುಚ್ಚಳ್** : ೨. ಬೋದಿಗೆಯ ಕೂಟದಂತೆ ಮುಚ್ಚಳಂತೆ ಪ್ರತಿಷ್ಠೆಯಂತೆ . . . ಪದಿಮೂಱು ಗುಣಸ್ಥಾನಂಗಳಿರ್ದಪುವು (ಧರ್ಮಾಮೃ. ೦೨-೨೪) ; ಪಚ್ಚೆಗಳ ಕಂಬಂಗಳಿಂ ಪವಳಪಲಗೆಗಳ ಮುಚ್ಚಳ್ಗಳಿಂ . . . ಕೇರಿಕೇರಿಯೊಳ್ ಪಚ್ಚಿದುವು ಗೃಹಗೃಹದ್ವಾರಂಗಳೊಳ್ ಮಹಾಮೇರುವೆಗಳು (ಕಂಪು. ೫-೩). ೩. ಕದ; ಬಾಗಿಲು : ವಾಗೀಶ್ವರದೇವರಂ ದಂಡಿಸಲೆಂದು ಕೊಂಡು ಬಂದು ಪುರದ ಹೊಱಗಣ ಮಾಳಿಗೆಯೊಳು ಕಣ್ಣೊಳು ನೋಡಲರಿದೆನಿಸುವ ಸುಣ್ಣಮಂ ಸುರಿದವರಂ ಪುಗಿಸಿ ಮುಚ್ಚಳಂ ಮುಚ್ಚಿ (ವಾಗೀಶ.ದೇ. ೨೭೭-೦೦). **ಮುಚ್ಚಳ** : ೧. ಎತ್ತಿ ಹೇಳಿಗೆಯ ಕೂಡೆ ಮುಚ್ಚಳವನಿಕ್ಕಿದ ಮತ್ತೆ ಮುಕ್ತಿಕೆ ಮುತ್ತಿ ಇಲ್ಲವೆಂದೆ (ಪೋಳಪಾ. ೪೮-೦೬೨); ಬಿಗಿದ ನೇಣ ಖಂಡಿಸಿ ಬಳಿಕ್ಕ ಮುಚ್ಚಳ ತೆಗೆದು ನೋಡಲು (ಸಿದ್ಧರಾ. ೯-೦೪); ನಿರ್ಧನಂ ನಿಧಿಗಂಡಂತೆ ತನ್ನ ಮನೆಗೆ ಮಂದಸಮಂ ಕೊಂಡು ಬಂದು ನಿಜವಧುವಪ್ಪ ಕುಸುಮಾವಳಿಗೆ ಕುಡುವುದುಮಾಕೆಯಾ ಮಂದಸಿನ ಮುಚ್ಚಳವಂ ತೆಱೆದು ನೋಳ್ಪನ್ನೆಗಂ (ಶುಕಾಸ್ತ್ರ. ೨-೩೦ ಪ) ; ಮೇಲುಮುಚ್ಚಳ ತೆಱೆದ ತನುವಿನ ಹೇಳಿಗೆಯ ಶೋಕಾಹಿಯಂತಿರೆ (ಕುಮಾವ್ಯಾ. ೨-೦೭); ಎಲ್ಲದಕ್ಕೂ ಮುಚ್ಚಳವಿರುವುದು ಒಳ್ಳೆಯದು (ಅಡುಗೆ. ೩೩). ೨. ರತ್ನಲೋವೆ ಮಿಸುನಿಯ ಮುಚ್ಚಳದ ಪಲಗೆಯಿಂ . . . ಭದ್ರಮಂಟಪಮೆಸೆದುದು (ಶಶಿಪ. ೦-೨-೩೦). ೩. ಇಂದಿರೆ ಪದ್ಮಮಂದಿರದೊಳಿರ್ದು ಮಹಾಪ್ರಣಯಪ್ರಕೋಪದಿಂದೊಂದಿರುಳಿಕ್ಕೆ ಮುಚ್ಚಳವಂ (ಜಕಬು. ೫-೩೪). **ಮುಚ್ಚಳು** : ೧. ಕಾಶೀಪಟ್ಟಣಕ್ಕೆ ಪೋಗಿ ಸೂರ್ಯನನಾರಾಧಿಸಿ ಆ ಸೂರ್ಯನಿಂದ ಮುಚ್ಚಳು ಸಟ್ಟುಗಸಹಿತಮಾದ ಅಕ್ಷಯಪಾತ್ರೆಯಂ ಕೊಟ್ಟು (ಕಾಶೀಮ. ೨೪೬-೩). **ಮುಚ್ಚುಳ್** : ೧. ಉಪೇಂದ್ರನುರ್ಬಿದ ಮುಳಿಸಿಂದೆ ಮುಂದಸಿನ ಮುಚ್ಚುಳ ನುಂಗುಟದಿಂದ ಮೀಂಟಿ ಪೋಗೊದೆದು (ಜಗ. ೭-೩೦); ಬಿದಿ ಮಿಸುನಿಗೊಡಂಗಳಲ್ಲಿ ತೀವಿ ಮಿಸುಪ ನೀಲದ ಮುಚ್ಚುಳಿಟ್ಟವೋಲ್ ಮೊಲೆದಿಂದಿಗಳ್ ಕರ್ಬಿಡಿದು ಮೆಱೆನುವಾ ಶಶಿಮುಖಿಯಾ (ಉದ್ಭಟ. ೭-೪೯). ೨. ಕೇಳೀವನದ ಕೃತಕಾಚಳದ ನಡುವಣ ವಜ್ರದ ಮುಚ್ಚುಳ ಶಿಜ್ಜೆಯ ಮನೆಯು ಹಂಸತೂಳದ ತಣ್ಣೆಳಲ ತಳ್ಪದೊಳ್ ಬಿಜಯಂಗೆಯ್ಸಿ (ಶಂಬರ. ೦೪-೫). ೩. ತೆಱೆದುವು ಮುನ್ನಮಿಕ್ಕಿದ ವಿಮಾನದ ಮುಚ್ಚುಳ್ (ಅನಂಪು. ೦೨-೩೬). ೪. (ರೊಟ್ಟಿ ಸುಡುವ ಮೊದಲು) ಮೇಲೆ ಮುಚ್ಚಲು ಸಿದ್ಧಪಡಿಸುವ, ಕಲಸಿದ ಹಿಟ್ಟಿನ ಬಟ್ಟಲು, — ಕಣಕದ ಬಟ್ಟಲು : ನನೆದ ಸೊಜ್ಜಿಗೆಯ

ಸಲೆ ಕುಟ್ಟಿ ಸರಿಕನೆಯನಿಕ್ಕಿನಿಸು ಬೆಣ್ಣೆಯನಿಕ್ಕಿದಾ ರೊಟ್ಟಿಯನು ಮುಚ್ಚು ಳೊಳಗಿಕ್ಕಿ ಬೇಯಿಸಲು ತಾನುದುರುರೊಟ್ಟಿವೆಸರಂ ಪಡೆದುದು (ಸೂಶಾ. ೦-೦೮). **ಮುಚ್ಚುಳ :** ೨. ಪಚ್ಚೆಯ ತೊಲೆ ಪವಳದ ಕಂಬ ಬೋದಿಗೆ ನಿಚ್ಚಳವಹ ನೀಲದಿಂದ ಮುಚ್ಚುಳ ಮುಖಶಾಲೆಯು ಮಣಿಮಂಟಪವಚ್ಚರಿ ಯಾಗಿರುತಿಹುದು (ಕೃಶೃಸಾಂ. ೯೦). **ಮುಚ್ಚುಳು :** ೧. ಬಳಿಕ ಬೇವಾಗ ಗಂಜಿಯ ಬಸಿದುಕೊಂಡು ಮುಚ್ಚುಳನಿಕ್ಕಿ . . . ಮೃದುವಾಗಿ ಮಾಡಿದುದು ತಾ ಶುದ್ಧಮಪ್ಪೋದನಂ (ಸೂಶಾ. ೩-೨); ಅಗರು ಚಂದನ . . . ಕರ್ಪೂರ ತುಂಬಿ ಮುಚ್ಚಿವ ಎಂಗೆ ಭರಣಿಯ ಮುಚ್ಚುಳನುಗಿದಂದದೆ ಮಗಮಗಿಸಿದುದಾಸ್ಥಾನ (ಲಂಪಾ. ೬-೦೨).

[ಮುಚ್ಚು$_1$ +–ಅಣ./ತಮಿ. ಮುಚ್ಚನ್; ತುಳು. ಮುಚ್ಚಲ, ಮುಚ್ಚಿ, ಮುಚ್ಚಿಲ್]

**ಮುಚ್ಚಣಿಕೆ** 'ಮುಚ್ಚಳಿಕೆ$_1$' ನೋ.

**ಮುಚ್ಚಲ** 'ಮುಚ್ಚಣ' ನೋ.

**ಮುಚ್ಚಲಿಕೆ** 'ಮುಚ್ಚಳಿಕೆ' ನೋ.

**ಮುಚ್ಚಲು, ಮುತ್ತಲು** (ನಾ). (ಮಕ್ಕಳಾಡುವ) ಸಣ್ಣ ಮೊರ : "ಮುಚ್ಚಲು=ಮೊರ, ಸಿಬ್ಬಲು, ಮುಚ್ಚುವ ಸಾಧನ, ಟಪ್ಪರಿಕೆ; ಒಂದು ಮಕ್ಕಳಾಟಿಕೆ" (ರಮಾಶಾಂ. ೩೦೩). **ಮುತ್ತಲು :** "ಮುತ್ತಲು = ಮಕ್ಕಳಾಡುವ ಸಣ್ಣಮೊರ" (ಜಾನಕೋ. ೩೨); ದೇವರ ಮನಿಯಾಗ ಹೋದಳ ಚೆಂಗಳಕಿ ಮುತ್ತ ತಂದಾಳ ಮುತ್ತಲಿ[ಲ]ತುಂಬ (ಶೋಳಗೀ. ೦೬೩). [ದೇ.॥ ತಮಿ. ಮುಚ್ಚಿಲ್, ಮುಱ್ಱಿಲ್; ತೆಲು. ಮುಚ್ಚಿಲಿ]

**ಮುಚ್ಚವಡಿ, ಮುಚ್ಚೋಡಿ** (ನಾ). ೧. ಮೂರು ಜೊತೆ,—ಜೋಡಿ: ಮುಚ್ಚೋಟು, ಮುಚ್ಚವಡಿ (ಶಮುದ. ೦೮೮ ಪ್ರಯೋ) ; ಮು + ಕೊಡೆ, ಮುಕ್ಕೊಡೆ ಎವಂ ಮುಗ್ಗೊಡ್ಡೆ, ಮುಚ್ಚವಡಿ (ಶಬ್ದಮ. ೬೮ ಪ್ರಯೋ). **ಮುಚ್ಚೋಡಿ :** ೨. ಮೂರು ಮಡಿಕೆ,–ಪದರ : ನೀಡಗಲದ ಗಗನದ ನಟ್ಟನಡುವೆ ಮುಚ್ಚೋಡಿಯ ನಿಡುಚೀಲದಂತೆ ಕೂಡಿ ಗಾಳಿಗಳು ಮೂಱುಹುವದಱೊಳು ತುಂಬಿದೀಡಿನಂತಿಹುವಾಱು ವಸ್ತು (ಶಶತ. ೬೭-೬೯). [<ಮೂಱು + ಸವಡಿ$_1$]

**ಮುಚ್ಚಳ್** 'ಮುಚ್ಚಣ' ನೋ.

**ಮುಚ್ಚಳ** 'ಮುಚ್ಚಣ' ನೋ.

**ಮುಚ್ಚಳದೆಗೆ, ಮುಚ್ಚಳ್ದೆಗೆ, ಮುಚ್ಚುಳಂದೆಗೆ, ಮುಚ್ಚುಳ್ದೆಗೆ** (ಕ್ರಿ). ಪೆಟ್ಟಿಗೆ, ಕರಡಿಗೆ, ಪಾತ್ರೆ ಮುಂತಾದುವುಗಳ ಮುಚ್ಚಳವನ್ನು ತೆಗೆ, –ಬಾಯಿತೆರೆ : ತಡಬಡಂಬಡುತೆಯುಳುಕುತ್ತೆ ಮುಚ್ಚಳದೆಗೆಯಲು ಅಲ್ಲಿರ್ದ ಪಾತ್ರೆಯುಪ್ಪುದಿರೆಯುಚ್ಚಿಗೊಂಡು ತಲ್ಲಣಿಸಿ (ಸಿದ್ಧೇಪು. ೦೪-೩೩). **ಮುಚ್ಚಳ್ದೆಗೆ :** ಕಡಗಾಲದ ಕಿಚ್ಚಿನ ಮುಚ್ಚಳ್ದೆಗೆದಂದದೆ ಘುಡುಘುಡಿಸುವ ನಡುಗಣ್ಣಮೆಯೊಡೆಯಲು (ಶೀರೀಚ. ೨-೨). **ಮುಚ್ಚುಳಂದೆಗೆ:** ಬೆಳುದಿಂಗಳ ನಡುವಿರ್ದ ಚಂದ್ರಮನಂತೆ ಸರ್ವಾಂಗೋದ್ಧೂಳಿತಗಾತ್ರನಾಗಿರೆ ಮಱುದಿವಸಂ ಮುಚ್ಚುಳಂದೆಗೆದು ನೋಡಿ (ಶಾಗೀರ. ದೇ. ೨೬೬-೦೬); ಮುಚ್ಚುಳಂದೆಗೆದೇನುವಿಲ್ಲದಿರೆ ಬೆಱಗಾಗಿ (ಶಿರುರ. ದೇ. ೦೨-೦೩). **ಮುಚ್ಚುಳ್ದೆಗೆ :** ಶಾರಿಗಲಂಕರಿಸಲ್ಕೆ ಬಣ್ಣಗರಡಿಗೆಯ ಮುಚ್ಚುಳ್ದೆಗೆದು ರನ್ನಸರಮಂ ಸೆಗಟ್ಟುವ ಭಂಡಾರಿಗರಂತೆ ಬಗೆವಡೆದ ದಾಡಿಮಂಗಳುಂ (ಶಳಪು. ೦೦೨-೨೦); ಪ್ರಭಾಜಾಲಂ ನೀಲಂಬಡಿಸಿ ಮಸಗಿತ್ತೆಣ್ದೆಸೆಯೊಳಂ . . . ಚೆಂಬೊಂಗರಡಿಗೆಯ ಮುಚ್ಚುಳ್ದೆಗೆದವೋಲ್ (ಶಳಪು. ೩-೮೩).

[ಮುಚ್ಚಳ (< ಮುಚ್ಚಣ) + ತೆಗೆ$_1$]

**ಮುಚ್ಚಳರೊಟ್ಟಿ** (ನಾ). (ಕಣಿಕದ ಬಟ್ಟಲೊಳಗೆ ಹಿಟ್ಟನ್ನಿಟ್ಟು ಲಟ್ಟಿಸಿ ಸುಡುವ) ಒಂದು ಬಗೆಯ ರೊಟ್ಟಿ : ಉತ್ತಮದ ಸೊಜ್ಜಿಗೆಯ ಬಟ್ಟಲೊಳು ನನೆಹಿ ಮೆತ್ತನಾದಾಗ ತೆಗೆದದನು ಪಟ್ಟೆಯ ಹಿಟ್ಟನೊತ್ತಿ ಲತೆಯಱಿದೆರಡು ಬಟ್ಟಲ ನಡುವೆಯಿರಿಸಿ ಎರಡಂಚುಗಳ ಮಱಿದು ಹೊತ್ತದಂದದೊಳು ಕೆಂಡದೊಳಿರಿಸಿ ಮೋಜಿದಿಂದ ಮತ್ತದಂ ಬೀಸಿ ಬೇಯಿಸಿ ತೆಗದುಕೊಂಡಾಱಿಸುತ್ತ ತಿಳಿದುಪ್ಪ ಸಕ್ಕರೆಯ ಕಲಸೆ ಮುಚ್ಚ [ಶಾಶಾಂ.ಚ್ಚು]ಳರೊಟ್ಟಿವೆಸರಂ ಪಡೆದುದು (ಸೂಶಾ. ೦-೧೦).

[ಮುಚ್ಚಳ (< ಮುಚ್ಚಣ) + ರೊಟ್ಟಿ]

**ಮುಚ್ಚಳಿಕೆ$_1$.** ಮುಚ್ಚಣಿಕೆ, ಮುಚ್ಚಳಿಗೆ (ನಾ). ಮುಚ್ಚುವ ಸಾಧನ; ಮುಚ್ಚಳ : ಆ ದೋಣಿಯು ಅರೆಕಲ್ಲಿನಲ್ಲಿ ಒಂದು ಈ ಎರಡು ಗಜ ಪ್ರಮಾಣವಾಗಿ ಇರುವುದು ಅದಕ್ಕೆ ಮಂದ ಮುಚ್ಚಳಿಕೆಯು ಕಲ್ಲು ಸೇರಿಸಿ ವಜ್ರ ಬಿಗಿದಿರುವದು (ಥಶಾ. ೦೨೦-೩) ; ಭಯದ ಮುಚ್ಚಳಿಕೆಯು ಅದನ್ನು ಅದುಮಿತ್ತು. ಈ ಮುಚ್ಚಳಿಕೆಯನ್ನು ತೆಗೆದಾಗ ಜ್ವಾಲಾಮುಖಿಯು ಸ್ಫೋಟವಾಗದಿದ್ದೀತೆ? (ಹಬ್ಬಿ. ೦೬೩). **ಮುಚ್ಚಣಿಕೆ :** "ಮುಚ್ಚಳ" (ಜಾನಕೋ. ೩೨). **ಮುಚ್ಚಳಿಗೆ :** ಮನೆಯೊಳಗಣ ಒರಳು ಜಂಬೂದ್ವೀಪ ನವಖಂಡ ಪೃಥ್ವಿಯ ನುಂಗಿತ್ತು ನುಂಗಿದ ಮುಚ್ಚಳಿಗೆ ತೆಱಹಿಲ್ಲದೆ ಮತ್ತೆ ಆ ಮನೆಯ ನುಂಗಿತ್ತು (ವೋಳಪಾ. ೨೨೮-೬೯೦).

[ಮುಚ್ಚಳ (<ಮುಚ್ಚಣ) + — ಇಕೆ]

**ಮುಚ್ಚಳಿಕೆ$_2$, ಮುಚ್ಚಲಿಕೆ** (ನಾ). (ಅಪರಾಧಿಗಳಿಂದ ಸರಕಾರವು ಕರಾರು ಹಾಕಿ ಬರೆಸಿಕೊಳ್ಳುವ) ಒಳ್ಳೆಯ ನಡತೆಯ ಹೇಳಿಕೆಯುಳ್ಳ ಕರಾರುಪತ್ರ; ಒಡಂಬಡಿಕೆಯ ಪತ್ರ: ಸುಬೇದಾರನು ಪೈರುಪಚ್ಚಿ ಮುಂತಾದ ಬಾಬುಗಳಿಂದ ಹೆಚ್ಚು ಹುಟ್ಟುವಳಿಯನ್ನು ಮಾಡುವೆನೆಂದು ಮುಚ್ಚಳಿಕೆ ಬರೆದು ಕೊಟ್ಟನು (ಮುಹಾಮು. I. ೦೨೬);ಪಂಚಾಯತರು ಕೊಡುವ ತೀರ್ಮಾನಕ್ಕೆ ತಾವು ಬದ್ಧರಾಗಿರುವೆವೆಂದು ಕಕ್ಷಿಗಾರರು ಒಪ್ಪಿ ಮುಚ್ಚಳಿಕೆಯನ್ನು ಬರೆದುಕೊಡಬೇಕಾಗಿತ್ತು (ಮುಹಾಮು. II. ೨೩) ; ಈ ಪ್ರಾಂತದಲ್ಲಿರುವ ತನಕ ಯೋಗ್ಯ ನಡತೆಯಿಂದಿರುವರೆಂದು ಮುಚ್ಚಳಿಕೆ ಕೊಡಬೇಕು (ದೀವರೂ. ೦೦೪). **ಮುಚ್ಚಲಿಕೆ:** ಯಥಾವತ್ತಾಗಿ ದರ್ಯಾಫ್ತು ಮಾಡಿ ರುಜು ಮುಚ್ಚಲಿಕೆಯು ಬರೆಸಿಕೊಂಡು (ಮುಹಾಮು. II, ೩೯).

[← ಪಾರ. ಮುಚಲ್ಕಾ; ಹಿಂ. ಮುಚ್ಚಲಕಾ ; ಮರಾ. ಮುಚಲಕಾ, ಮುಚಲ್ಕಾ]

**ಮುಚ್ಚಳಿಗೆ** 'ಮುಚ್ಚಳಿಕೆ$_1$' ನೋ.

**ಮುಚ್ಚಳು** 'ಮುಚ್ಚಣ' ನೋ.

**ಮುಚ್ಚಳ್ದೆಗೆ** 'ಮುಚ್ಚಳದೆಗೆ' ನೋ.

**ಮುಚ್ಚಱು** (ನಾ). ಸೊನ್ನೆ; ಶೂನ್ಯ : "ಮುಚ್ಚಱಿಂದುಂ ಸೊನ್ನೆಯೆಂದುಂ ಶೂನ್ಯಂ" (ಶಶಾ. ೩೯-೨೮೬); "ಮುಚ್ಚಱೆ ಸೊನ್ನೆಯು ಶೂನ್ಯಂ" (ಶಬೆಂ. ೦೩೦). [ ? ]

**ಮುಚ್ಚಾಲ್** (ನಾ). ಮೂರು ಸಾಲು,–ಶ್ರೇಣಿ : ಮುಚ್ಚೆರೆ ; ಮುಚ್ಚಾಲ್ (ಶಮುದ. ೬೮ ಪ್ರಯೋ). [<ಮೂಱು + ಸಾಲ್$_3$]

**ಮುಚ್ಚಾಲೆ** (ನಾ). ಒಬ್ಬರು ಕಣ್ಣು ಮುಚ್ಚಿಕೊಂಡು ಇತರರು ಅಡಗಿಕೊಂಡ ಮೇಲೆ ಕಣ್ತೆರೆದು ಅವರನ್ನು ಹುಡುಕುವ ಆಟ; ಕಣ್ಣುಮುಚ್ಚಾಲೆ ಆಟ : ಮುಚ್ಚಾಲೆಯಾಡಿ ದೊಲ್ಲಯಿಸುವೇಕೆನ್ನ (ಗೀಬಿಂ. ೨೬-೨). [? ಇದು 'ಕಣ್ಣುಮುಚ್ಚಾಲೆ'ಯೆಂಬುದರ ಸಂಕ್ಷಿಪ್ತರೂಪ]

**ಮುಚ್ಚಿ** (ನಾ). ಸಾರ್ವಜನಿಕಕಚೇರಿಗಳಲ್ಲಿ ಮಸಿ ತಯಾರಿಸುವ, ಕಾಗದವನ್ನು ಒದಗಿಸುವ, ಪುಸ್ತಕಗಳ ರಟ್ಟುಕಟ್ಟುವುದೇ ಮೊದಲಾದ ಕೆಲಸಕ್ಕೆ ನೇಮಕಗೊಂಡ ವ್ಯಕ್ತಿ : (ಕೃಶಗ. II. ೩೩೬).

[< ಮುಚ್ಚು$_1$. / ತಮಿ. ಮುಚ್ಚಿ. / ಹಿಂ. ಮೋಚಿ]

**ಮುಚ್ಚಿಕೆ, ಮುಚ್ಚಿಗೆ** (ನಾ). ೧. ಹೊದಿಕೆ ; ಆವರಣ : ಚಿಪ್ಪಿನಾ ಮುಚ್ಚಿಕೆಯೊಳುಪ್ಪಹುದು ಮುತ್ತು (ಗೀಬಿಂ. ೩೦-೦೦೬). **ಮುಚ್ಚಿಗೆ :** ೨. ಮನೆಯ ಮೇಲುಭಾಗದ ಛಾವಣಿ,– ಸೂರು : ಚಂದ್ರಯ್ಯ . . .

ಕೊಟಡಿಯ ಮುಚ್ಚಿಗೆಯನ್ನು ನೋಡುತ್ತಾ ನಗತೊಡಗಿದ (ಕರಕ. ೮೩) ; ಅಡುಗೆಕೋಣೆಯ ಮುಚ್ಚಿಗೆ, ಗೋಡೆ . . . ನೆಲ-ಇವುಗಳ ಕಡೆಗೂ ಆಗಾಗ ಗಮನ ಕೊಡುತ್ತಿರಬೇಕು (ಅಡುಶಾ. ೩೭). 'ಮಚ್ಚಿಗೆ' ಪರಾ.

ಮುಚ್ಚಿಗೆಯ ಮನೆ, ಮುಚ್ಚಿಗೆ ಮನೆ=ಇಟ್ಟಿಗೆ, ಗಾರೆಗಳಿಂದ ಕಟ್ಟಿದ ಮನೆ : ಮುಚ್ಚಿಗೆಯ ಮನೆಯಾದರೂ, ಮನೆಯ ಮಾಡು ಹೆಂಚಿನದಲ್ಲ. ಪ್ರತಿವರ್ಷ ಸೋಗೆ ಹೊಚ್ಚಬೇಕು (ಬಾಳ್ವೆ. ೦೭೯); ಸುಬ್ರಾಯರ ಮುಚ್ಚಿಗೆ ಮನೆ ಒಂದು ದಿವಸ ಗ್ರಾಮದವರ ಹಗೆಗೆ ತುತ್ತಾಯಿತು (ಹಹಕ. ೭೦).

[ಮುಚ್ಚು₁ + — ಇಕೆ]

**ಮುಚ್ಚಿಗ₁** (ನಾ). ೧. ಇಟ್ಟಿಗೆ ಅಥವಾ ಗಾರೆ ಕೆಲಸ ಮಾಡುವವನು; ಉಪ್ಪಾರ : "ಪಲಗಂಡನೆನೆ ಮುಚ್ಚಿಗಂ" (ಮಂಗರಾ. ೦೦೦-೪). ೨. ಕಲ್ಲು ಕೆಲಸ ಮಾಡುವವನು; ಕಲ್ಲುಕುಟಿಗ : (ಕ). [ಮುಚ್ಚು₁ + —ಇಗ]

**ಮುಚ್ಚಿಗ₂** ' ಮೊಚ್ಚಿಗ ' ನೋ.

**ಮುಚ್ಚಿಗೆ** ' ಮುಚ್ಚಿಕೆ ' ನೋ.

**ಮುಚ್ಚಿಲು** (ನಾ). ಒಂದು ಬಗೆಯ ಸಸ್ಯ : ಮುಚ್ಚಿಲು. ಕಲ್ಲೇಗ (ವೃಶಿಗ. ೩೦-೩೬೮). 'ನೆಲಮುಚ್ಚಿಲು' ಪರಾ. [ ? ]

**ಮುಚ್ಚಿಸು** (ಕ್ರಿ). (ರಂಧ್ರ, ಬಾಗಿಲು ಮುಂತಾದುವನ್ನು) ಬಂದು ಮಾಡಿಸು : ಬಿಲದ ರಂಧ್ರವನ್ನು ಮಣ್ಣುಹಾಕಿಸಿ ಮುಚ್ಚಿಸಿದನು (ರೂಢಿ).

[ಮುಚ್ಚು₁ + — ಇಸು₃]

**ಮುಚ್ಚು₁** (ಕ್ರಿ). ೧. ಮರೆಮಾಡು ; ಹೊದಿಸು : "ಮುಚ್ಚು-ಆಚ್ಛಾದನೇ" (ಶಮದ) ; ಪೊಂಗೊಡನು ತಮಾಳಪಲ್ಲವದೊಳೆ ಮುಚ್ಚಿದಂದದೊಳೆ ಚೂಚುಕಮಾಂತುವು ಕರ್ಪನಾಕೆಯಾ (ಶಂಶಬಾ. ೦-೦೨೩); ನಾಲ್ಕು ದಿಕ್ಕಿನ ಶರಧಿಗಳು ಪರಿತಂದು ಲೋಕವನರಸ ಮುಚ್ಚಲು (ಸಂಭಕ. ೪-೭). ೨. (ಕಣ್ಣನ್ನು) ಮುಗಿ ; ನಿಮೀಲನಗೊಳಿಸು : ಪೆಣನಂ ಕಂಡ ಪಂದೆಯಂತೆ ಕಣ್ಣಂ ಮುಚ್ಚುತ್ತಂ (ಧರ್ಮಾಮೃ. ೦-೦೪೪). ೩. ಕಾಣದಿರುವ ಹಾಗೆ ಮಾಡು ; ಮರೆಸು ; ಅಡಗಿಸು : ಪಚ್ಚು ಪರಿಕಲಿಸಿ ಬೆನ್ನಂ ಮುಚ್ಚಿರೆ ಮುಡಿ (ಕಾವ್ಯಸಾ. ೯೭೭ ಕೂದ್ರಳ) ; ಕವಿಮಾರ್ಗದೊಳೊಳಪೊಕ್ಕುಂ ನವರಸಮಂ ತೆಱೆಯೆ ನುಡಿದನೆನಿಸಿದ ಕವಿ ಸತ್ಕವಿಯೆನಿಕುಂ ಗೂಡಾರದ ಕವಿಯಂತಿರೆ ಮುಚ್ಚಿ ಪೋದ ಕವಿಯುಂ ಕವಿಯೇ (ಅಶಪು. ೦-೯೭) ; ಪರಗುಣಂಗಳ ಮುಚ್ಚುವ ತನ್ನನೆ ಪೊಗಳ್ವ ಲೋಗರಂ ಪಱಿವ ನೀಚನೊಳ್ ನೀಚಗೋತ್ರದಾಸ್ರವಮಕ್ಕುಂ (ಸುಕುಮಾ. ೬-೨೪). ೪. (ಬಾಗಿಲು ಮೊದಲಾದುವುಗಳನ್ನು) ಹಾಕು ; ಬಂದು ಮಾಡು : ಗುಹೆಯ ಬಾಗಿಲಂ ಒರಿದೊಂದು ಸಿಲೆಯಂ ತಂದಿಟ್ಟು ಮುಚ್ಚಿ (ಪಡ್ಮರಾ. ೦೨೨-೨೦) ; ತೆಱೆಯದೆ ಮುಚ್ಚಿದ ಪಡಿಗಳ್ ತೆಱೆದುವು (ಸುಕುಮಾ. ೯-೦೯) ; ಖಗರಾಜ ವಿನತೆಯರಮನೆಗೈದಿ ಬಾಗಿಲು ತನತನಗೆ ಮುಚ್ಚಿರಲು . . . ಬಂದನು ಮನೆಗೆ ಕದ್ರುವಿನ (ಸಂಭಕ. ೩-೫೨). ೫. ಗುಟ್ಟುಮಾಡು ; ರಹಸ್ಯವಾಗಿಡು : ಎರಡೆರಡು ಛಿದ್ರವನಾರು ಮಾಡಿದರು ಮುಚ್ಚಿದರು ನೀನೆಚ್ಚೆಯಾದೊಡೆ ಸಚ್ಚಿದಾನಂದೈಕನಾಣೆಯು ನಿಶ್ಚಯವ ಹೇಳೆಂದು ಪಾರ್ಥನ ಕೇಳದನು ಭೀಷ್ಮ (ಸಂಭಕ. ೦೮ ೦೩).

[ದೇ.॥ ತಮಿ. ಮುಚ್ಚು ; **ಕೊಡ.** ಮುಚ್ ; **ತುಳು.** ಮುಚ್ಚು ; **ತೆಲು.** ಮುಚ್ಚು, ಮೂಂಚು, ಮೂಯು ; **ಕೋಲಾ.** ಮುನ್ಸ್ ; **ನಾಯ್ಕಿ.** ಮುಸ್ ; **ಪರ್ಜಿ.** ಮುಯ್ನ್ ; **ಗದಬ.** ಮೂಯ್ ; **ಗೊಂಡಿ.** ಮುಚ್, ಮುಚ್ಚಾನಾ ; **ಕುಇ.** ಮುಸ, ಮುಸಿ ; **ಕುವಿ.** ಮೂಚಾಲಿ, ಮುಜ್ಜನೈ ; **ಕುರುಖ್.** ಮುಚ್ನಾನ, ಮುಂಧಾನ ; **ಮಲ್ತೊ.** **ಬ್ರಾಹುಇ.** ಮುಸ್]

**ಮುಚ್ಚು₂**, ಮುಚ್ಚಿ₁ (ನಾ). ೧. (ಹೂವಿನ ದಳಗಳು) ಮುಚ್ಚಿರುವುದು : ಕೈರವಾಭ್ಯುದಯುದರಲ್ಲು ನೀರಜದ ಮುಚ್ಚು ರಥಾಂಗದಗಲ್ಕು . . . ಜಗತ್ತಿನ ಪುಣ್ಯದಚ್ಚು ಬಂದುದಯಗಿರೀಂದ್ರಮಸ್ತಕದೊಳಿರ್ದುದು ಪೂರ್ಣ ಶಶಾಂಕಮಂಡಲಂ (ಸೂಕ್ತಿಸು. ೬-೨೨೪). ೨. ಮುಚ್ಚುವ ಸಾಧನ ; ಮುಚ್ಚಳ : ರಾಜನು ಗುಡಾಣದ ಮುಚ್ಚನ್ನು ತೆಗೆದು ಹೊರಗೆ ಬಂದನು (ಮಡಿಕ. ೯೨). ೩. ಗುಟ್ಟು ; ರಹಸ್ಯ : ಕುತ್ತಂ ಪಗೆ ಮುಚ್ಚು . . . ವಿಷಾಗ್ನಿ ಬಾಧೆಯಿವು ಕೇಳೀ ನಾರಕಾವಸ್ಥೆಯಂ (ಅಪಂಪು. ೯-೪೨) ; ತನ್ನ ನೋಟದ ಕಳವು ನಗೆ ತೆರೆಯ ಮುಚ್ಚು (ಕಾಂಚರ. ೪೨-೩೪) ; ಮುಚ್ಚೇನು ಮತ್ತೆ ಬಿಚ್ಚೇನು ಇಲ್ಲಿ (ಮುಕ್ತಕಂ. ೦೩-೩). **ಮುಚ್ಚಿ₁**: ೨. ಮುಸುಂಕಿದಳ್ . . . ಮಱಿಪೆಂಬ ಮುಚ್ಚುಳಿಂದರೆಮುಗುಳ್ವಚ್ಚಿಯಂ ಸವಿಯ ಮುಚ್ಚಿದ ಮುಚ್ಚಿಯಿನಾಕೆ ಚಿತ್ತಮಂ (ಲೀಲಾವ. ೦೩-೧೭). 'ಎಸಮುರ್ಗಾಚ್ಚಿ' ಪರಾ.

[< ಮುಚ್ಚು₁./ತಮಿ. ಮುಚ್ಚು; **ಕೊಡ.** ಮುಚ್ಚಿ; **ತುಳು.** ಮುಚ್ಚ, ಮುಚ್ಚಿ, ಮುಚ್ಚು ; **ತೆಲು.** ಮೂತ : **ಗೊಂಡಿ.** ಮುಚ್ಚೀ, ಮುಚ್ಚಿ]

**ಮುಚ್ಚುಂಗಣ್**, ಮುಚ್ಚುಗಣ್ (ನಾ). ರೆಪ್ಪೆ ಮುಚ್ಚಿದ ಕಣ್ಣು; ಮುಗಿದ ಕಣ್ಣು : (ಎಮೆಯುಳಿದು ಅಂಗಾರಗಳಂತೆ ಹೊಳಪೊಳೆವ ಕ್ರೂರ ದೃಷ್ಟಿಗಳನ್ನು ಮಹಾರಾಜನ ಮುಚ್ಚುಂಗಣ್ಗಳಿಗೆ ನಟ್ಟು ನಿರೀಸಿಕೊಂಡು) (ಪಟ್ಟಿಅ. ೯೯-೨೩). **ಮುಚ್ಚುಗಣ್** : ಈತನಿದ್ದನು ಬಲೆಗೆ ಸಿಲುಕಿದ ಕೋತಿಯಂದದಲುಸುರದೊಡಕಿನ ಧಾತುಗುಂದಿದ ಮುಖದ ಮುರುಹಿನ ಮುಚ್ಚುಗಂಗಳಲಿ (ತೊರರಾ. ೩-೭-೧೯) : ಮಚ್ಚರದಿ ನಡೆವ ಮಗ ಪೊಲ್ಲ ಸೂಳೆಗೆ ಮುಚ್ಚುಗಣ್ಣೊಲ್ಲ (ಸರ್ವಜ್ಞ. ೦೯೦೨). [ಮುಚ್ಚು₁ + ಕಣ್]

**ಮುಚ್ಚುಗಣ್** ' ಮುಚ್ಚುಂಗಣ್ ' ನೋ.

**ಮುಚ್ಚುಗಣೆ** (ನಾ). ಮೂಡಿಗೆಯಲ್ಲಿ ಅಡಗಿರುವ (ವಿಧ ವಿಧದ) ಬಾಣ: ಅಚ್ಚಕೈಗುಂಕಣಕೆ ಮಣಿಮಯದಚ್ಚಗನ್ನಡಿಯೇಕೆ ನಮ್ಮಯ ಮು [ಪಾಠಾಂ. ನು, ಮು]ಚ್ಚುಗಣೆಗಳ ಕಲಹವನು ನೀ ನೋಡು (ತೊರರಾ. ೬-೩೦-೯). [ಮುಚ್ಚು₁ + ಕಣೆ₁]

**ಮುಚ್ಚುಗತ್ತಿ** (ನಾ). ಒರೆಯೊಳಗೆ ಸೇರಿಸಿಟ್ಟಿರುವ ಕತ್ತಿ : ನಡುವಿನಲ್ಲಿ ಮುಚ್ಚುಗತ್ತಿಯೂ ಕಠಾರಿಯೂ ಇದ್ದುವು (ಶ್ರೀಬದ್ರಾ. ೬೩).

[ಮುಚ್ಚು₁ + ಕತ್ತಿ]

**ಮುಚ್ಚುಗದಹು** (ನಾ). ಮುಚ್ಚಿದ ಬಾಗಿಲು ; ಬಂದು ಮಾಡಿದ ಕದ : ಮುಚ್ಚುಗದಹುಗಳಂ ತೆಗೆದುಕೊಳುತುಚ್ಚದಿಂ ಗಮನಿಸುವ ಲಿಂಗ ಸಮುಚ್ಚಯಂ (ಬಸವು. ೫೭-೪೩). [ಮುಚ್ಚು₁ + ಕದಹು₂ (<ಕದವು₁)]

**ಮುಚ್ಚುಗಲ್ಲು** (ನಾ). ಕಾಲುವೆ, ಚರಂಡಿ ಮೊದಲಾದುವುಗಳನ್ನು ಮುಚ್ಚುವ ಕಲ್ಲು ; ಹಾಸುಗಲ್ಲು : ಚರಂಡಿಯ ಮುಚ್ಚುಗಲ್ಲು ಸೀಳಿ ಹೋಗಿದೆ (ರೂಢಿ). [ಮುಚ್ಚು₁ + ಕಲ್ಲು (<ಕಲ್₃)]

**ಮುಚ್ಚುದೂಂಬು** (ನಾ). (ನೀರು ಹೊರಕ್ಕೆ ಹೋಗದಂತೆ) ಹಾಕುವ ತೂಬು ; ಮುಚ್ಚಿದ ತೂಬು : ಉಚ್ಚಿದರು ದೋರ್ವಳತಟಾಕದ ಮುಚ್ಚುದೂಂ[ಪಾಠಾಂ. ದೂ]ಬನು (ತೊರರಾ. ೩-೬-೧೮). [ಮುಚ್ಚು₁ + ತೂಂಬು]

**ಮುಚ್ಚುಮರೆ** ' ಮುಚ್ಚುಮಱೆ ' ನೋ.

**ಮುಚ್ಚುಮಱೆ**, ಮುಚ್ಚುಮರೆ (ನಾ). ಬಚ್ಚಿಡುವುದು ; ಗೋಪ್ಯ : ರಹಸ್ಯ : ಇದು ಮಟ್ಟಮೆಂದು ತಾಂ ಚಪ್ಪರಿಸಿದೊಡಾನಿರೆನೆ ಮುಚ್ಚು ಮಱೆಯೇಕೆಯೆ (ಅರ್ಜನೀ. ೩-೯); ಮುಚ್ಚುಮಱೆಯೇಕಿನ್ನು ನಮಗುಣಬಡಿಸು (ಕುಮಾವ್ಯಾ. ೨೦-೦೯); ಮುಚ್ಚುಮಱೆಯೇತಕೆ ಮನೆಮನೆಯಲಿ (ಪುರಂದ. ೦-೦೭೦-೨). **ಮುಚ್ಚುಮರೆ** : ತರಲ ಗೋವರ್ಧನರ ಭೆಟ್ಟಿಯಾಗಿ ಯಾವುದೂ ಮುಚ್ಚುಮರೆಯಾಗಿ ಉಳಿಯಲಿಲ್ಲವೆಂದು . . . ನಿಶ್ಚಿಂತಳಾದಳು (ಎರಕ. ೦೩೩); ತನ್ನ ಮನಸ್ಸಿನಲ್ಲಿದ್ದುದನ್ನು ಮುಚ್ಚುಮರೆಯಿಲ್ಲದೆ ಸ್ಪಷ್ಟವಾಗಿ ಉದ್ದೇಶಪೂರ್ವಕವಾಗಿ ಹೇಳಿದುದನ್ನೂ ಜ್ಞಾಪಿಸಿಕೊಂಡನು (ಮಲಸಾ. ೭); ಯಾವ ಮುಚ್ಚುಮರೆಯೂ ಇಲ್ಲದೆ ಸ್ವಾಮಿ ಹೇಳಿಬಿಟ್ಟ (ಸ್ವಾಮಿನೀ. ೪೩). [ಮುಚ್ಚು₁ + ಮಱೆ₂]

**ಮುಚ್ಚುಮಾತು** (ನಾ). ಗುಟ್ಟಾದ ನುಡಿ; ಮುಚ್ಚುಮರೆಯ ಮಾತು: ಕನಕದಾಸರೂ ತಮ್ಮ ದೊರೆಯ ಹೆಸರನ್ನು . . . ಬಿಚ್ಚುಮಾತಿನಲ್ಲಿ ಹೇಳಿಲ್ಲವಾದರೂ ಮುಚ್ಚುಮಾತಿನಲ್ಲಿ ತುಂಬ ಹೇಳಿದ್ದಾರೆ (ಕರ್ನಾಟ.೮೭). 'ಬಿಚ್ಚುಮಾತು' ಪರಾ. [ಮುಚ್ಚು$_1$ + ಮಾತು$_1$]

**ಮುಚ್ಚುವಲಗೆ** (ನಾ). ಛಾವಣಿಯ ಹಲಗೆ; ಸೂರುಕಟ್ಟು: ವಿವಾಹ ಮಂಟಪಮಂ ಪೊಂಗೋಡೆ . . . ಬೆಳ್ಳಿಯ ಮುಚ್ಚುವಲಗೆ . . . ಮಿಕ್ಕ ಮಣಿ ಮಿಸುನಿ ಕುಸುರಿಗೆಲಸಂಗಳಿಂದಲಂಕರಿಸಿ (ಹಾಲಾಸ್ಯ. ೦-೬-೨೭ ವ). [ಮುಚ್ಚು$_2$ + ಪಲಗೆ]

**ಮುಚ್ಚುವಲೆ** (ನಾ). ಗುಬ್ಬಿ ಮುಂತಾದ ಸಣ್ಣಹಕ್ಕಿಗಳನ್ನು ಮುಚ್ಚಿ ಹಿಡಿಯುವಂಥ ಬಲೆ: ಗುಬ್ಬಿಯ ಮುಚ್ಚುವಲೆಯಲಿ ಶಿವಶಿವಾ ಭೇರುಂಡ ಸಿಲುಕುವುದೆ (ಉತ್ತರಾ. ೦೬-೩೭). [ಮುಚ್ಚು$_1$ + ಬಲೆ$_1$]

**ಮುಚ್ಚುಳ್** 'ಮುಚ್ಚಳ' ನೋ.

**ಮುಚ್ಚುಳ** 'ಮುಚ್ಚಳ' ನೋ.

**ಮುಚ್ಚುಳದೆಗೆ** 'ಮುಚ್ಚಳದೆಗೆ' ನೋ.

**ಮುಚ್ಚುಳಿಕ್ಕು** (ಕ್ರಿ). ೧. ಮುಚ್ಚುವ ಸಾಧನವನ್ನು ಹಾಕು; ಮುಚ್ಚು: ತರುಣಿ ಭರಣಿಗೆ ಮುಚ್ಚುಳಿಕ್ಕುವ ಪೋಲು ಲಿಂಗಸಂಗರವ ಮಾಡಿದಳು (ಭಕ. ೪೦-೦೩೦). ೨. ಕದ ಮುಚ್ಚು; ಬಾಗಿಲು ಹಾಕು: ಮುಚ್ಚುಳಿಕ್ಕಿ [ಪಾಠಾಂ. ಮುಚ್ಚುಳಿಕ್ಕಿ] ಪೋದರವಮನೆಗಿಂದು ಪೇಟಿರೆ ಮಹತ್ತರರಂ ನೃಪಸಿಂಹ ನೀಂ ತಪಸ್ವರುಣಿಗೆ ಕೂರ್ತುದಂ ನುಡಿಪೊಡೀಯರೆ ಹೇಜಿ ಗರ್ಗಂಗಚಿತ್ತಮಂ (ಅಪಂಪು. ೩-೦೦೬). [ಮುಚ್ಚುಳ(<ಮುಚ್ಚಳ)+ಇಕ್ಕು$_1$]

**ಮುಚ್ಚುಳು** 'ಮುಚ್ಚಳ' ನೋ.

**ಮುಚ್ಚುಳ್ದೆಗೆ** 'ಮುಚ್ಚಳದೆಗೆ' ನೋ.

**ಮುಚ್ಚುಱು** (ಕ್ರಿ). ಮೂರ್ಛೆಹೋಗು; ಪ್ರಜ್ಞೆತಪ್ಪು: "ಮುಚ್ಚುತ್ತಂ= ಮೂರ್ಛೆವೋದಂ" (ಶಮದ. ಶಂ. ೨); ಎಚ್ಚಂಬೆರ್ದೆಯಿಂದುರ್ಚಲ್ ಮುಚ್ಚುತ್ತುಂ ತಕ್ಕೆ ನಾಡೆ [ಪಾಠಾಂ. ಮುಚುರ್ತ್ತುಂತಕ್ಕನಾಡ] ತೆರ್ಪತ್ತಾಗಳ್ ಬೆಚ್ಚದೆ ಕೋಪಾನಲಮುಱೆ ಬಿಚ್ಚಳಿಸಲ್ ಪರಿ ಬಳಿಕ್ಕೆ ನಿಡುಸ್ಸೈವಿನೆಗಂ (ಪೀಠಿ. ೦೨-೩೭). [< ಮುಚ್ಚು$_2$ + ಉಱು]

**ಮುಚ್ಚೂಳು** (ನಾ). ಮೂರು ಬಾರಿ,—ಸಲ: ಅಲ್ಲಿಂ ವಿಗತಜೀವಿಗಳಾಗಿಯೆಲೆ ಭೂವಲ್ಲಭ ನಿನಗೆ ಮುಚ್ಚೂಳು ಸಲ್ಲಲಿತಾಕಾರದವಮಳುಗಳಾಗಿ ತಾವುಲ್ಲಾಸದಿಂ ಜನಿಸುವರು (ವೀಖಂಸಂ. ೦೪-೦೩೦); ಬಲವಂದು ಮುಚ್ಚೂಳಿಂದವೆ ಧರಣಿಬಲನೇಶನಾ ದೇಗುಲದ . . . ಕುಲಿಶದ ಪಡಿಯ ನೋಡಿದನು (ಶ್ರೀಚಾಂ. ೬-೬೪). [< ಮೂಱು + ಸೂಳು$_2$ (< ಸೂೞ್)]

**ಮುಚ್ಚೆ$_1$** 'ಮುಚ್ಚು$_2$' ನೋ.

**ಮುಚ್ಚೆ$_2$**, **ಮುರ್ಚೆ** (ನಾ). ಮೈಮರೆಯುವುದು; ಎಚ್ಚರ ತಪ್ಪುವುದು; ಮೂರ್ಛೆ: "ಹಮ್ಮುದಾ, ಹರವಸಂ, ಮುಚ್ಚೆ—ಈ ೩ ಮೂರ್ಛೆ" (ಕರಣಾ. ೩೭-೨೩೨); ಎಚ್ಚ ಶರವಂ ಕಲಿ ಚಕ್ಕನೆ ಕಿಬ್ಬುರೇಪ್ರದೇಶವಮನಿಸೆ ನೇತ್ರರೊಕ್ಕು ಪತಿ ಮುಚ್ಚೆಯೊಳಿಚ್ಚೆಯೆಗೆಟ್ಟು ಜೋಲ್ದೊಡೆ (ಶಂಶಾ. ೦೨-೧೦೬); ಮುಚ್ಚೆಯ ಬಾಷ್ಪಕ್ಕಾಗಳೆ ಮುಚ್ಚೆ[ಮುಮರ್ಾ]ಕ್ಷಣದೆ ಹಾಸ್ಯಮುಂ ಶೋಕಮುಂ. . . ಪಲ್ಲಚ್ಚಿನಮಪ್ಪುದಮನೂನ(ಮು)ಮಾಣ್ಬುದುಮಕ್ಕುಂ (ಜಖಂದ. ೦೩-೨೦). **ಮುರ್ಚೆ**: ಸೀತೆ ದೊಪ್ಪನೆ ಕುಸಿತ್ತುಸ್ಸೆನುತ್ತೊರಗಿದಳ್ ಮರಕೆ ಮುಚ್ಚಿದುವಕ್ಷಿ ತಾಳಲಾರದ ಸೇದೆಯಿಂ ಪೇಳ್ದೆಳ್ಚರಳ್ದುದೊ ಮುರ್ಚೆಗೆಂಬಂತೆ (ಶ್ರೀರಾಮಪಾ. ೦೨೪-೬೩). [< ಸಂ. ಮೂರ್ಚ್ಛಾ]

**ಮುಚ್ಚೆಗೊಳ್** (ಕ್ರಿ). ಮೈಮರೆ; ಎಚ್ಚರ ತಪ್ಪು; ಮೂರ್ಛೆಹೋಗು: ಆ ವರ್ಚಸ್ವಿಯುಂ ಕಣೆದಿರಲಾರೆ ಹಾ ರಾಮರಾಮೆಂದು ಮುಚ್ಚೆಗೊಂಡಂ (ಶರಶ. ೪-೬೨); ಇಂದ್ರಜಿತು ಕಾಲಪೋಘವನದರಿ ಶಕ್ತ್ಯಾಯುಧವನಿಸಲ್ಕಾ ಲಕ್ಷ್ಮಣಂ ಮುಚ್ಚೆಗೊಳೆ (ಶರಶ. ೮-೨೩). [ಮುಚ್ಚೆ$_2$ + ಕೊಳ್$_1$]

**ಮುಚ್ಚೆದಿಳಿ** (ಕ್ರಿ). ಎಚ್ಚರವುಂಟಾಗು: ಜ್ಞಾನಬರು; ಪ್ರಜ್ಞೆಬರು: ಮುಚ್ಚೆದಿಳಿದರಸಿಯೊಳ್ ಬಗೆ ಬೆಚ್ಚಿರೆ ಶೀಲವತಿ ಸೀತೆ ಪೂಣ್ದುದನೆಂತುಂ ಪುಚ್ಚೆಱಿಯುಳಿನ್ನದಟಿಪಿಂ ಚೆಚ್ಚರಮಾ ಸಭೆಗೆ ರಾಘವಂ ಬಟಿಸಂದಂ (ಶಂರಾಮಾ. ೦೬-೩೩); ಆ ವೀರನೊಯ್ಯನೊಯ್ಯನೆ . . . ಮುಚ್ಚೆದಿಳಿದೆದ್ದನು (ಕೀಶರಾ. ೦೪-೨೩); ಕಿಱಿದಾನುಂ ಬೇಗದಿಂ ಮುಚ್ಚೆದಿಳಿದು ಮುಃಖಾರ್ತೆಯಾಗಿ . . . ಬಾಯಾಱೆ ಮುಱುಗಿದಳ್ (ರಾಜಶೇಕ್. ೩೩-೨೪). [ಮುಚ್ಚೆ$_2$ + ತಿಳಿ$_1$]

**ಮುಚ್ಚೆರೆ** (ನಾ). ಮೂರು ಬೊಗಸೆ.—ಸೇರೆ: ಕವರ್ಗ ಪವರ್ಗಮಲ್ಲದಲ್ಲಿಯುಂಮಿಮಾ ಲಕ್ಷಣಮಾಯ್ತು. . . ಮುಚ್ಚೆರೆ, ಮುಚ್ಚಾಲ್ (ಶಬಶ. ೦೭೬ ಶ್ರೀಯೋ); ಅರೆದ ಸಾಸುವೆಯ ಶುಂಠಿಯನಿಕ್ಕಿ ಪೊಚ್ಚೆರೆ ಮೊಸರಿನಲ್ಲಿ ಮುಚ್ಚೆರೆ[ಪಾಠಾಂ. ಚ್ಚರೆ, ಚ್ಚೆಳಿ]ಯ ನೀರ ಕದಡಿ ಮೋದವನಿರದೆ ಸರೆಗೊಟ್ಟು ನೀರೋಗರವನಿಕ್ಕಲು ಸುಗಂಧತಕ್ರೋದನ (ಸೂಶಶಾ. ೩-೨೭). [< ಮೂಱು + ಸೆರೆ$_2$ (< ಸೇರೆ$_1$)]

**ಮುಚ್ಚೆವೋಗು** (ಕ್ರಿ). = ಮುಚ್ಚೆಗೊಳ್: ಅಱಿವನೆಪೆವಱಿದು ಕೆಟ್ಟುದನೆಱಿಸಲ್ ಪೋಪಂತೆ ಮುಚ್ಚೆವೋಪುದುಂ (ಚಾಂತಪು. ೪-೯೯); ರತಿಯತಿಶೋಕಂಗೆಯ್ದು. . . ಬಸಿಱಿಂ ಪೊಸೆದು ಚೇತನಂಗೆಟ್ಟು ಭೂತಳದೊಳ್ ಬಿಳ್ದು ಕಿಚ್ಚುಗಟ್ಟಿದಳಲಿಂ ಮುಚ್ಚೆ [ಪಾಠಾಂ. ಮೂರ್ಛೆ]ವೋಗಿ (ಗಿಂಕ. ೬-೭೭ ವ); ಮೇರೆದಪ್ಪುವ ಸುಖಿಕೆ ಮುಚ್ಚೆವೋಪಳೊ ಏನೊ ಕಂದನಂ ಕಂಡು (ಶಂಪ್ರಕ. ೪೦-೦). [ಮುಚ್ಚೆ$_2$ + ಪೋಗು$_1$ (< ಪೋ$_1$)]

**ಮುಚ್ಚೋಟು** 'ಮುಂಚೋಟು' ನೋ.

**ಮುಚ್ಚೋಡಿ** 'ಮುಚ್ಚಪಡಿ' ನೋ.

**ಮುಚ್ಚೋರೆ**, **ಮುತ್ತುಸಾರೆ** (ನಾ). ಅಕ್ಕಿ ಮತ್ತು ಹೆಸರುಬೇಳೆಯ ಹಿಟ್ಟನ್ನು ಕಲಸಿ, ಮೂರುರಂಧ್ರವಿರುವ ಒರಳಿನಲ್ಲಿ ಚಕ್ಕುಲಿಯಂತೆ ಒತ್ತಿ ಕರಿಯುವ ಒಂದು ಬಗೆಯ ತಿಂಡಿ,—ತಿನಿಸು: ಪೂರಿ, ಚಟ್ನಿ, ಮುಚ್ಚೋರೆಗಳನ್ನು ತಂದು. . . ಕರೆದಳು (ಕವಕಂ. ೦೦೬); ಮುಚ್ಚೋರೆ, ಕೋಡುಬಳೆ, ಆಂಬೊಡೆ ಮುಂತಾಗಿ ತಿಂಡಿಗಳನ್ನು ಮಾಡಿಸುತ್ತ (ಬಾಂಶ್ರ. II, ೦೦೬). **ಮುತ್ತುಸಾರೆ**: ಕರುಗಾದ ಮುತ್ತುಸಾರೆಯ ಚಕ್ಕುಲಿಗಳ ನರಸಿಯನೆರಿಸಿರೆಕಿನುತ (ಜ್ಞಾಪತ. ೩೯-೦೩೦). [< ಮೂಱು + < ಸೋರ್$_3$]

**ಮುಜಗರ**, **ಮುಜುಗರ** (ನಾ). ೧. ಸಂಕೋಚ; ದಾಕ್ಷಿಣ್ಯ: ಆ ಮನುಷ್ಯ ಏನೋ ಮುಜಗರಪಡುತ್ತಿದ್ದಂತೆ ಅವನ ಚರ್ಯೆಯಲ್ಲಿ ಕಂಡು ಬಂದಿತು (ರಂಗಕ. ೩೬): ಮುಜಗರ ಮಾಡದೆ ತಗೋ ಎಂದು ಚಿರುಕಂಡ ಒತ್ತಾಯಿಸಿದ್ದ (ಚರಕ್. ೦೩೩). ೨. ಹಿಂಸೆ; ಕಷ್ಟ: ಹೇಮಲತೆಯ ಅನಾರೋಗ್ಯದ ನಿಮಿತ್ತವಾಗಿ ಮುಜಗರಪಡುತ್ತಿದ್ದಳು (ಬಿಶಾಶ. ೩೦). ೩. ಬಿಗಿ; ಹಿಡಿತ: ಈಗಲೀಗ ಮನೆಯಲ್ಲಿ ವಿಪರೀತ ಮುಜಗರ (ಹುಡಿಗೆ. ೯೬). **ಮುಜುಗರ**: ೧. ಏನೋ ಒಂದು ರೀತಿಯ ಮುಜುಗರ ಮನಸ್ಸಿನಲ್ಲಿತ್ತು (ದೂಬೆಟ್ಟ. ೦೩೨). ೨. ಮತ್ತೆಲ್ಲದರ ಜೊತೆಗೆ ಶಕುಂತಲೆಗೆ ಶಾರದೆಯನ್ನು ಶಾಮಣ್ಣ ತನ್ನ ಕಾರಿನಲ್ಲಿ ಕರೆದೊಯ್ದುದು ತುಂಬ ಮುಜುಗರವಾಗಿತ್ತು (ಒಂಟಿಪೀ. ೦೦೦); ಚಿಕ್ಕಮ್ಮ ತನ್ನ ಮಗಳೊಡನೆ ಯಾವುದೋ ವಿಷಯ ಮಾತನಾಡುತ್ತ ಮನಸ್ಸಿನಲ್ಲಿ ಬಹಳ ಮುಜುಗರ ಪಟ್ಟುಕೊಂಡು. . . ಹೇಳುತ್ತಿದ್ದುದು ಕೊಟಡಿಯಲ್ಲಿದ್ದ ಸರೋಜಳಿಗೆ ಕೇಳಿಸಿತು (ವಾಹಾಗ. ೩೩೩); ಗಿರಿಜ ತಮ್ಮನ್ನು ಕೊಂದು ರಕ್ತ ಕುಡಿದರೂ ಅವರಿಗೆ ಇನಿತೂ ಮುಜುಗರವಿರಲಿಲ್ಲ (ಶಧ್ರಕ. ೨೯೦). ೩. ಹೊರಗೆ ಪೋಡಗಳು ಭಾರವಾಗಿ ತೂಗಾಡುತ್ತಿದ್ದಾಗ ಮನೆಯಲ್ಲಿ ಎಂತಹ ಮುಜುಗರವೊದಗುವುದೋ ಅಂತಹ ವಾತಾವರಣ ಕಲ್ಪಿತವಾಗಿದೆ (ಆತ್ಮಶ. ೩). [?]

**ಮುಜರಾ** 'ಮುಜರೆ' ನೋ.

**ಮುಜರಾಯ್** ' ಮುಜರಾಯಿ ' ನೋ.

**ಮುಜರಾಯಿ, ಮುಜರಾಯ್** (ನಾ). ದೇವಸ್ಥಾನ, ಮಠ ಮೊದಲಾದುವುಗಳ ದಾನದತ್ತಿಗಳಿಗೆ ಸಂಬಂಧಿಸಿದುದು: ಮುಜರಾಯಿ ಬಾಬಿನ ವಿಚಾರಣೆಗೋಸ್ಕರ ಅವಶ್ಯಕವಾದ ಲವಾಜಮೆಯು ಮೊಕರರಾಯಿತು (ಮುಹಾಪಂ. II, ೦೦೦); ಮೈಸೂರು ಶೀಮೆಯ ಮುಜರಾಯಿ ಕಮಿಷನರವರ ಕಚೇರಿ (ಗುರುಚ. ೧೦); ಅವರು ತಮ್ಮ ಜೀವನದಲ್ಲಿ ಮುಜರಾಯಿ ಗುಮಾಸ್ತಗಿರಿ. . . ಎಲ್ಲಾ ಮುಗಿಸಿ ಇಪ್ಪತ್ತು ಮೂವತ್ತು ಸಾವಿರ ರೂಪಾಯಿ ಸಂಪಾದನೆ ಮಾಡಿ (ಅವತಂ. ೪೮). **ಮುಜರಾಯ್ :** ಮಠದ ಆಸ್ತಿಯನ್ನೆಲ್ಲಾ ಮುಜರಾಯ್ ಇಲಾಖೆಗೆ ಬರೆದುಕೊಡಲಾಯಿತು (ರೂಢಿ).

[← ಹಿಂ. ಮುಜರಾಈ]

**ಮುಜರಾಯ್ಬಕ್ಷಿ** (ನಾ). ಮುಜರಾಯಿ ಇಲಾಖೆಯ ಅಧಿಕಾರಿ : ಓರಿಯುರಸನೊಡನಾಡಿಯಿವನೆಂದುರೆ ಮಹತ್ವವ ನನಗೆ ಕಲ್ಪಿಸಿ ಪರಿಕಿಸದೆ ದಕ್ಷತೆಯ ಮುಜರಾಯ್ಬಕ್ಷಿ ಪದವಿತ್ತು (ರಾಮಸಂ. ೦-೦-೦೬).

[ಮುಜರಾಯ್ (< ಮುಜರಾಯಿ) + ಬಕ್ಷಿ]

**ಮುಜರೆ, ಮುಜರಾ, ಮುಜುರೆ** (ನಾ). ೧. (ಗೌರವಪೂರ್ವಕವಾಗಿ) ಬಿಟ್ಟುಕೊಡುವುದು ; ಮಾಫಿ ; ವಜಾ : ದಿವಾನ್ ಪೂರ್ಣಯ್ಯನವರು ಅದುವರೆಗೆ ಸರ್ಕಾರಕ್ಕೆ ಬರಬೇಕಾಗಿದ್ದ ಕಂದಾಯ ಮುಂತಾದ ತೆರಿಗೆಯ ಬಾಕಿಯನ್ನೆಲ್ಲಾ ಮುಜರೆಯಾಗಿ ಬಿಟ್ಟುಕೊಟ್ಟು ಜಮೀನು ಮತ್ತು ಸಾಯರು ಬಾಬುಗಳಲ್ಲಿ ಹಿಂದಿನ ಮಹಾಪ್ರಭುಗಳವರ ಕಾಲದಲ್ಲಿದ್ದಂತೆಯೇ ತೆರಿಗೆಯನ್ನು ದಾಖಲ್ಮಾಡಿದರು (ಮುಹಾಪಂ. II, ೩೦). ೨. (ಗೌರವದಿಂದ ಅರ್ಪಿಸುವ) ನಮಸ್ಕಾರ ; ಸಲಾಂ ; ವಂದನೆ : ಭಯಭರಿತಭಕ್ತಿಯೊಡನೆ ನೆಲತನಕ ತಲೆಗಳಂ ಬಗ್ಗಿಸುತ ಮುಜರೆಯಂ . . . ನಿಲವಿಲ್ಲದೇ ಗೈದರ್ (ಅರ್ಜುವಿ. ೨೪-೬೦) ; ಬಂದ ಜನರುಗಳು ಮುಜರೆಯಂ ಮಾಡಿದರು (ಮುಹಾಪಂ. I, ೩೭) ; ಎದ್ದು ನಿಂತು ಮುಜರೇ ಮಾಡಿ (ಮಂಜುಳ. ೦೩೯); ಸಭಾಸದರೆಲ್ಲರೂ ಆತನಿಗೆ ನಜರು ಮುಜರೆಗಳನ್ನು ಒಪ್ಪಿಸಿದರು (ರಾಚಿಇ. ೭೩): **ಮುಜರಾ :** ೧. ಲೆಖ್ಖಮಾಡುವದರಲ್ಲಿ ರತಲಿನ ಅಂಶ ಬಂದಿದ್ದರೆ, ಅದರ ಬಗ್ಗೆ ಒಂದು ರತಲ ಹಿಡಿದು ಲೆಖ್ಖವನ್ನು ಮಾಡಿ ಮುಜರಾ ಹಿಡಕೊಳ್ಳುವರು (ಮುಂಬಿಪ್ಯಾ. ೨೦೭). ೨. ಮುಜರಾ– "ನಮಸ್ಕಾರ, ಸಲಾಮು" (ಜಾನಕೋ. ೩೨). **ಮುಜುರೆ :** ೨. ಕವಾತು ಮುಜುರೆಗಳನ್ನು ತೆಗೆದುಕೊಂಡಿಲ್ಲ (ದೌಲತ್. ೦೨).

[←ಅರ. ಮರಾ. ಮುಜರಾ, ಮುಜ್ರಾ; ಹಿಂ; ಮುಜರಾ]

**ಮುಜಾರಿಯಾನ್** (ನಾ). ಸಾಗುವಳಿ ಮಾಡಿದ ಜಮೀನು,– ಭೂಮಿ : ಮೊಕದ್ದಮಾನೆ ಮುಜ್ಜಾರಿಯಾನೆ ತಾಲುಕೆ ಕೊಪದ ಹೋಬಳಿ ಸರಕಾರ . . . ಬರಸಿ ಕಳಿಹಿಸ್ತ ನಿರುಪ (ಎಕ. VI, ಕೊಕ್ಕ. ೪೮-೨೨; 1811).

[←ಅರ. ಮುರ್ಝರಿಅ ; ಪಾರ. ಮುರ್ಝಾರಿಆನ್ ; ಮರಾ. ಮುಜಾರಿಯಾನ್ = ವ್ಯವಸಾಯ ಮಾಡುವವನು]

**ಮುಜುಗರ** ' ಮುಜಗರ ' ನೋ.

**ಮುಜುರೆ** ' ಮುಜರೆ ' ನೋ.

**ಮುಜ್ಜಗ** ' ಮೂಜಗ ' ನೋ.

**ಮುಜ್ಜು** ' ಮುಸ್ಕು ' ನೋ.

**ಮುಜ್ಜ್ಯೋತಿ** (ನಾ). ಮೂರು ದೀಪಗಳು,– ಜ್ಯೋತಿಗಳು : ಎಸಳಾಟಿ ಕಮಲಗಳೆಸಳುಗಳೊಳಗೆ ಪೊಸಳೆ ಮುತ್ತಿ ಮುಜ್ಜ್ಯೋತಿ ಉರಿವುತಿದೆ (ಶಿವಗೀ. ೮೪೨). [< ಮೂರು + ಜ್ಯೋತಿ]

**ಮುಜ್ಝುಟ** (ನಾ). ಮಲ್ಲಯುದ್ಧದ ಒಂದು ವರಸೆ: ಭೂರವಮಂ ಭಟಂ ನಿಮಿರ್ದುರ್ ಕುತ್ತಿದೊಡುರ್ಚಿದ ಚಂಡಶಾಸನಂ ಚಾರಣದಾಸೆಯಿಂ ನುಸುಳ್ದು ಮುಜ್ಝುಟದೊಳ್ಮಗುಟ್ಟಿಕ್ಕಿವಟ್ಟೆ ಸೈಪಾರಿಸೆ (ಅಸಂಕಿ. ೦೦-೬೦). [ ? ]

**ಮುಟಗೆ** ' ಮುಟ್ಟಿಗೆ$_1$ ' ನೋ.

**ಮುಟ್ಟ** ' ಮುಟ್ಟೆ ' ನೋ.

**ಮುಟ್ಟಗುಪ್ಪೆ** (ನಾ). ಒಂದು ಊರಿನ ಹೆಸರು : ಕಾರ್ತ್ತಿಕಬಹುಳ ಪಞ್ಚಮಿ ಬೃಹಸ್ಪತಿವಾರದಂದು ಮುಟ್ಟಗುಪ್ಪೆಯಂ ಮಹಾಜನಕ್ಕೆ ಕೊಟ್ಟು (ಎಕ. VIII, ಸೊರಬ. ೪೭೪-೦೭ ; 954). [ಮುಟ್ಟ$_?$ + ಕುಪ್ಪೆ$_1$]

**ಮುಟ್ಟಯಿಸು, ಮುಟ್ಟಯ್ಸು, ಮುಟ್ಟವಿಸು, ಮುಟ್ಟಿಸು, ಮುಟ್ಟೈಸು** (ಕ್ರಿ). ೧. ಹತ್ತಿರ ಬರು ; ಸಮೀಪಿಸು : ಅಚ್ಚರಿವಟ್ಟಾರವಳೆಂದಱಿಪೊಡೆಂದು ಮುಟ್ಟಯಿಸಿ ಬಂದು (ರಾಮಾಶ್ವ. ೪೦-೪) ; ಜೀಯ ಇವಳೆನ್ನಣುಗಿ, ಶ್ರೀಮತಿಯೆಂಬ ಪೆಸರ್. ಪ್ರದಾನಸಮಯಮುಮಂ ಮುಟ್ಟಯಿಸಿ ಬಂದುದು (ಅದ್ಭುತ. ೯–೨೭). **ಮುಟ್ಟಯ್ಸು :** ೨. ಮೇಲೆಬೀಳು ; ಮುತ್ತು ; ಎರಗು : ಪೊಯ್ಸು ಘನಭೇರಿಯಂ ಭಾರಿಯಂಕಕ್ಕೆ ಮುಟ್ಟಯ್ಸಲಿ ಚತುರ್ಬಲಂ (ಶಬ್ದ. ೪೭-೩೨). ೩. ತಾಕು ; ತಟ್ಟು; ತಗುಲು : ಮನಮಂ ಮುಟ್ಟಯ್ಸಿ [ಪಾಠಾಂ. ಟ್ಟೈಸಿ] ಮಧ್ಯಂದಿನದ ಬಿಸಿಲೆ ಬೆಳ್ದಿಂಗಳಂತಾಗೆ . . . ಯೋಗೀಂದ್ರನತಂದ್ರಂ ನಿರ್ನಿಮೇಷಂ ನಗನಿಕಟಘಟದ್ರತ್ನಕೂಟಂಬೊಲಿರ್ದಂ (ಶಂರಾಪಡ. ೨-೦೪). **ಮುಟ್ಟವಿಸು :** ೧. ಉಟ್ಟ ಪೊಸ ಬೆಳುವಟ್ಟೆ ಪೊಮ್ಮಱಿ ಮುಟ್ಟವಿಸೆ ಪೊಂಬಣ್ಣವಾದುವು (ಕೊರರಾ. ೩-೮-೩೦) ; ಬಾಳೆಯಂ ಮುಟ್ಟವಿಸಿ ನಡೆತರ್ಪನಕ್ರಮಂ ನಕ್ರಮಂ ಮೆಟ್ಟಿ ಬಹ ಶಕುಲಮಂ . . . ಬಣ್ಣಿಸಲ್ಕೆರೆವರ್ಬರ್ (ಶ್ರೀರಾಪಟ. ೩-೨೭). ೨. ಗದೆಯಿಂ ಮುಟ್ಟವಿಪ ನೈರುತಿಯನಿರಿದನು ಬಿಳಚಿಲಾಯುಧಭದಿ (ಅಂಬರಾ. ೨೨-೦೨). **ಮುಟ್ಟಿಸು:** ೪. ಸ್ಪರ್ಶ ಮಾಡು : ಸ್ಪರ್ಶಿಸು : ಕಾಯ ಭಿನ್ನವಾಯಿತ್ತೆಂದು ಮುಟ್ಟಿಸುವರು ಲಿಂಗವನು (ಅವತಂ. ೯೦-೪೦೨). ೫. ಸೇರುವಂತೆ ಮಾಡು ; ತಲುಪಿಸು ; ಬಿಟ್ಟು ಬೆರಸಿದೆ ಸಾಕು ಹರಿಬಕೆ ಮುಟ್ಟಿಸಿದ ಗೆಲವಾಯ್ತು (ಕುಮ್ವ್ಯಾಕ. ೦೨-೨೯) ; ನನ್ನ ಮನೆಗೆ ಮುಟ್ಟಿಸಿಬಿಡಿ ಸ್ವಾಮಿ (ಕಳಕು. ೭೯) ; ಈ ಚೀಟಿ ಅವರಿಗೆ ಒಯ್ದು ಮುಟ್ಟಿಸು (ತೀಮಂಕ. ೨೩೭). ೬. ಕಚ್ಚು ; ಕಡಿ : ಲೋಹಿತಾಶ್ವ . . . ಹುಳ್ಳಿಯನು ತಾಹೆಡೆಯೊಳ್ ಫಣಿ ಮುಟ್ಟಿಸಿರ್ದುದಂ ನೆನೆಯಿರೆ (ಕಜೀಕಂ. ೬೯). ೭. ಎಡೆಮಾಡು ; ನೈವೇದ್ಯ ಮಾಡು: ಲಿಂಗವಿರಹಿತರ್ಮಾಡಿದ ಬೋನವ ಲಿಂಗವ ಮುಟ್ಟಿಸುವರೆ ಭಾಪಾಕವ ಇಂತೀಯೆರಡು ಪ್ರಕಾರದಿ ನರಕಂ (ರೀಕ್ಷಾಬೋ. ೮೪–೨೭). ೮. ಸಂದಾಯಮಾಡು; ಸಲ್ಲಿಸು : ಅವರ ಸಾಲ ಮುಟ್ಟಿಸು. (ರೂಢಿ). **ಮುಟ್ಟೈಸು :** ೨. ಮುಟ್ಟೈಸುವ [ಪಾಠಾಂ. ಮುಟ್ಟೈದುವ, ಬೊಬ್ಬಿಱಿವುತ] ಸುರನಸೆಚ್ಚನಾರಾಮ (ಕೊರರಾ. ೬-೨೫-೨೩). [ಮುಟ್ಟು$_1$ + — ಇಸು$_3$]

**ಮುಟ್ಟಯ್ಸು** ' ಮುಟ್ಟಯಿಸು ' ನೋ.

**ಮುಟ್ಟಲ್, ಮುಟ್ಟಲು, ಮುಟ್ಟಲೆ$_1$, ಮುಟ್ಟಳೆ** (ನಾ). ೧. ಸಾಮೀಪ್ಯ; ಹತ್ತಿರ. ೨. ಹೊಲೆ ; ಮುಟ್ಟು ; ಸೂತಕ : "ಮುಟ್ಟವೆ, ಮಾಣಿಕಂ, ಮುಟ್ಟಲ್_ಈ ೩ ಸೂತಕಂ" (ಕಶಾ. ೬೦-೬೦೪). **ಮುಟ್ಟಲು :** ೧. ಇದೆ ಲಗ್ನ ಮುಟ್ಟಲಾಯ್ತೆನೆ ತನ್ನ ತಂಗಿಯ ಪಡೆದು ಪಲ್ಲಕ್ಕಿಯೊಳಿಟ್ಟು ಮದುವೆಯ ಮಂಟಪಕಾ ಸಮೀರಜ ಗಾಢದೊಳಿಯ್ದುತಿರ್ದನು (ಭರತ. ೪೧-೨). ೨. "ರಜಸಂ, ಪುಷ್ಪಂ, ಆರ್ತಸಂ – ಈ ೩ ಮುಟ್ಟಲು" (ನಾಚಿರಾ. ೧೧೭) ; "ಮುಟ್ಟವೆ ಮಾಣಿಕವೆನುತುಂ ಮುಟ್ಟಲುಮೆನೆ ಸೂತಕಾಭಿಧಾನಂ" (ಕವಿಕಂ. ೨೩೦). **ಮುಟ್ಟಲೆ$_1$ :** ೨. ' ಮುಟ್ಟಲೆಗಾಣ್ ' ಪರಾ. **ಮುಟ್ಟಳೆ :** ೩. (?) : ತೊರವೆಯ ಪುರವರಾಧಿಪನಿನ ತನೂಜಾದಿಗಳ ಗಡಣದಲಿ ತಿರುಗಿದನು ಪಾಳೆಯಕೆ ಲಂಕಾಪುರಕೆ ಮುಂತ್ತಿಗೆ ಯಾದುದಾ ದಿನದಿರುಳಂಬುಬಿದಲಿ ಮುಟ್ಟಳೆಯ [ಪಾಠಾಂ. ಮಟ್ಟಳದ, ಮುಟ್ಟಳದ] ಕಟ್ಟಳೆಯ ಕಾಹಿನಲಿ (ಕೊರರಾ. ೬-೦೮-೨೯).

[ಮುಟ್ಟು$_2$ + — ಅಲ್$_2$]

**ಮುಟ್ಟಲತಿ** (ನಾ). ಮುಟ್ಟಾದವಳು ; ರಜಸ್ವಲೆ : ಬಾಣತಿ ಬಸುರಿ ಮುಟ್ಟಲತಿಯಾದಲ್ಲಿ ಶೋಣಿತ ಶುಕ್ಲ ದುರ್ವಾದವ ಕಾಣುತ ಹೊವಕುಳಿ ಗೊಳುತಿಹರದಜಲ್ಲಿ (ಶರಶ. ೬೩-೩೩).[<ಮುಟ್ಟಲ್ +_ತಿ (<-ಇತ್ತಿ)]

**ಮುಟ್ಟಲಮುರಕೆ** 'ಮುಟ್ಟಲುಮುರಿಕೆ' ನೋ.

**ಮುಟ್ಟಲವ್ವಿಯೂರ್** (ನಾ). ಒಂದು ಊರಿನ ಹೆಸರು : ಮುಟ್ಟಲವ್ವಿಯೂರ್ನ್ನಾಮಗ್ರಾಮಮಂ (ಪ್ಕಇಂ. ೦೯೩೬, ೩೩-೨೩ : 550).

[ ? + ಊರ್]

**ಮುಟ್ಟಲು** 'ಮುಟ್ಟಲ್' ನೋ.

**ಮುಟ್ಟಲುಗಾಣ್** 'ಮುಟ್ಟಲ್ಗಾಣ್' ನೋ.

**ಮುಟ್ಟಲುಮುರಿಕೆ**, ಮುಟ್ಟಲಮುರಕೆ, ಮುಟ್ಟಲುಮುರುಕ (ನಾ). ಮುಟ್ಟಿದರೆ ಮುರುಟಿಕೊಳ್ಳುವ ಒಂದು ಬಗೆಯ ಸಸ್ಯ ; ಮುಟ್ಟಿದರೆ ಮುನಿ : "ಮುಟ್ಟಲುಮುರಿಕೆ = ಖದಿರಿ, ಗಂಡಕಾರಿ, ಗಂಡಕಾಲಿ" (ಗಂಗಾಮ. ೬) . **ಮುಟ್ಟಲಮುರಕೆ :** ಮುಟ್ಟಲಮುರಕೆ ಮುಂತಾದ ಕೆಲವು ವನಸ್ಪತಿಗಳು ಕೈಹಚ್ಚಿದ ಕೂಡಲೇ ಮುಚ್ಚಿಕೊಳ್ಳುತ್ತವೆ (ಮುಂಜಯ. ೩-೩೩). **ಮುಟ್ಟಲುಮುರುಕ :** ಮುಟ್ಟಲುಮುರುಕದ ಸಸಿಯಂತಿದ್ದ ಇವನು ಒಂದುದೇಶದಿಂದ ಇನ್ನೊಂದುದೇಶಕ್ಕೊಯ್ಯುವದರಲ್ಲಿಯೇ ಕಮರಿಹೋಗಬಹುದೆಂಬ ಭೀತಿಯು ನೋಡುವವರಲ್ಲಿ ಹುಟ್ಟುತ್ತಿತ್ತು (ಕಮಜೀ. ೩೬೯) ; ಪ್ರೀತಿ-ಸಹಾನುಭೂತಿಗಳಿಲ್ಲದ ಜೀವ ಒಂದು ನಾಚಿಕೆಗಿಡ ; ಮುಟ್ಟಲುಮುರುಕ (ಪಪ್ಕಶಾ. ೦೩).

[<ಮುಟ್ಟು₁ +ಮುರಿಕೆ₁ (<ಮುರಿಗೆ₁)]

**ಮುಟ್ಟಲುಮುರುಕ** 'ಮುಟ್ಟಲುಮುರಿಕೆ' ನೋ.

**ಮುಟ್ಟಲೆ₁** 'ಮುಟ್ಟಲ್' ನೋ.

**ಮುಟ್ಟಲೆ₂** (ನಾ). ಮುಟ್ಟಾದವಳು ; ಹೊರಗಡೆಯಾದವಳು ; ರಜಸ್ವಲೆ : ಮುಟ್ಟಲೆಯಾಗಿ ಮೀಯದೆ ಸುಮ್ಮನಿರಬಹುದು ಸುಟ್ಟ ಭಸ್ಮವು ಪಣೆಯೊಳಿರಲು (ಬಿಜ್ಜಶಾ. ೨-೯೦) ; ಮುಟ್ಟಿ ಕರಗಸದೆ ಸೀಳ್ದರು ಮುಟ್ಟಲೆಯಂ ಬೆರಸಿ ನಡೆದ ಮಹಪಾತಕಿಯಂ (ಮುಂಕ್ಕಾ. III. ಪ್ರತಕ್ಕರೂಪ).

[ಮುಟ್ಟಲ್ + –ಎ₂]

**ಮುಟ್ಟಲೆಗಾಣ್** 'ಮುಟ್ಟಲ್ಗಾಣ್' ನೋ.

**ಮುಟ್ಟಲೆಗೊಳ್** (ಕ್ರಿ). ಮುಟ್ಟಾಗು ; ರಜಸ್ವಲೆಯಾಗು : ರಕ್ತಸ್ರುತಿಂ —ಮುಟ್ಟಲೆಗೊಂಬುದಂ ಕುರಿತು (ವಾಹಟೀ. ೨-೦-೯೭ ಪ).

[ಮುಟ್ಟಲೆ₁ (<ಮುಟ್ಟಲ್) + ಕೊಳ್₁]

**ಮುಟ್ಟಲ್ಗಾಣ್**, ಮುಟ್ಟಲುಗಾಣ್, ಮುಟ್ಟಲೆಗಾಣ್ (ಕ್ರಿ). ಮುಟ್ಟಾಗು: ರಜಸ್ವಲೆಯಾಗು : ರಜಸ್ವಲಾಭಿಗಾಮಿ=ಮುಟ್ಟಲ್ಗಂಡಳಂ ಪೋಪಲು ಗಂಡಳಂ (ಶೀತಿವಾ. ೨೩-೯೭). **ಮುಟ್ಟಲುಗಾಣ್ :** ಪುಟ್ಟದು ಜಗುಳ್ದೊಡೆ ಕೈಗಂ ನೆಟ್ಟನೆ ಬಪ್ಪಂತೆ ಬಂದೊಡಾತನೆ ಮಿಷ್ಟಂ ಇಟ್ಟೆಡೆ ವಸರಮಾಡೊಡೆ ಮುಟ್ಟಿಟ್ಟನ್ನಲುಗಂಡಂತೆ ತೊಲಗುವಾತನೆ ಕಷ್ಟಂ (ಶೀತಿಸಾ. ೨೭೧). **ಮುಟ್ಟಲೆಗಾಣ್ :** "ಪುಷ್ಪವತಿ ಮುಟ್ಟಲೆಗಂಡ ಸ್ತ್ರೀ" (ವಾತರಾ. ೬); ಮುಟ್ಟಲೆಗಂಡ ಸ್ತ್ರೀಯಂತಿಟ್ಟುಮಿರಲ್ಕಿಲ್ಲ ನಾಲ್ಕುದಿವಸಂ (ರವರ್ಣಾಪ್ಕು. ೦೯-೦೩೬) ; ಮುಟ್ಟಲೆಗಂಡು ಮಕ್ಕಳನು ಹಡೆಯದಿರ್ದ ಹುಟ್ಟುಬಂಜೆಯರೆಂದೆನುತ . . . ಸಗುತಿಹರು (ಗೋಶುಟೀ. ೦-೦೨೯).

[ಮುಟ್ಟಲ್ + ಕಾಣ್]

**ಮುಟ್ಟವಿಸು** 'ಮುಟ್ಟಯಿಸು' ನೋ.

**ಮುಟ್ಟವೆ** (ನಾ). ಮುಟ್ಟಾಗುವುದು ; ಹೊರಗಾಗುವುದು : "ಮುಟ್ಟವೆ, ಮಾಣಿಕಂ, ಮುಟ್ಟಲ್ – ಈ ೩ ಸೂತಕಂ" (ಕಶಶಾ. ೭೦-೭೦೯); ಮುಟ್ಟವೆಯನಳಿದ ಸತಿಯಂತೆ ರಂಜಿಸಬೇಕು (೦ಂಗಪ್ರ. ೨೨-೨).

[< ಮುಟ್ಟು₂ + –ವೆ]

**ಮುಟ್ಟವೆಗಾಣ್** (ಕ್ರಿ). = ಮುಟ್ಟಲ್ಗಾಣ್ : "ಅವೀ, ಉದಕ್ಯಾ, ರಜಸ್ವಲಾ, ಆತ್ರೇಯಿಕಾ, ಪುಷ್ಪವತೀ – ಈ ೫ ಮುಟ್ಟವೆಗಂಡವಳ್. ಕನ್ಯಕೆಯಾಗಿ ಮುಟ್ಟವೆಗಂಡವಳ್ ತಾಕಾಯೆಂಬುದು" (ಹಶಾಯು. ೬೦-೩೩೪).

[ಮುಟ್ಟವೆ + ಕಾಣ್]

**ಮುಟ್ಟಸ** 'ಮುಷ್ಟ₂' ನೋ.

**ಮುಟ್ಟಸು** 'ಮುಷ್ಟ₂' ನೋ.

**ಮುಟ್ಟಹಾಳ** 'ಮುಟ್ಠಾಳ' ನೋ.

**ಮುಟ್ಟಳೆ** 'ಮುಟ್ಟಲ್' ನೋ.

**ಮುಟ್ಟಾಟ** (ನಾ). ಪರಸ್ಪರ ಸ್ಪರ್ಶಿಸುವುದು, – ಮುಟ್ಟುವುದು : ಕಟ್ಟಾಸೆ ಅರಮನೆಗೆ ಮೆಟ್ಟಾಸೆ ಕಾಲಿಂಗೆ ಪಟ್ಟಣದಾಸೆ ಹರದಂಗೆ ಹಾದರಕೆ ಮುಟ್ಟಾಟದಾಸೆ (ಸರ್ವಜ್ಞ. ೦೭೬೯) ; ಅಡಕ – ನಗೆ ಕುಲುಕುಲಿಸಿ ಕಣ್ಣಮುಚ್ಚಣಿಕೆಯಲಿ ಮುಟ್ಟಾಟ ಹುಡುಕಾಟವಾಡುತಿಹುದು (ಗಂಗಾತ. ೬೦-೦).    [ಮುಟ್ಟು₃ + ಆಟ]

**ಮುಟ್ಠಾಳ**, ಮುಟ್ಟಹಾಳ, ಮುಟ್ಟುಹಾಳ, ಮುಟ್ಠಾಳ, ಮುಟ್ಠಾಳ, ಮುಠ್ಠಾಳ (ನಾ). ಮುಟ್ಟಿದುದನ್ನು ಹಾಳುಮಾಡುವವನು, ಬುದ್ಧಿಗೇಡಿ ಎಂಬರ್ಥದಲ್ಲಿ ಬಳಸುವ ಒಂದು ಬೈಗುಳು : ಗುರುಗಳು ಇವರು ಮುಟ್ಠಾಳರೆಂದು ನಿಶ್ಚಯಿಸಿ . . . ಹೊರಟುಹೋದರು (ಪಗಗ. ೦). **ಮುಟ್ಟಹಾಳ :** ನಮ್ಮ ಅಧಿಕಾರಿಗಳೆಲ್ಲಾ ಮುಟ್ಟಹಾಳರು, ಅವರಿಗೆ ಉಪಾಯವಾಗಿ ಕೆಲಸ ಮಾಡುವುದಕ್ಕೆ ಬಾರದು (ಕೀಲಿಶಾ. ೩೯). **ಮುಟ್ಟುಹಾಳ :** "ಪ್ರತಿಷ್ಠೆ ತೋರಿಸುವ ಕೀಳಧಿಕಾರಿ, ಮುಟ್ಟುಹಾಳ" (Bumble. ೩೦೯೩). **ಮುಟ್ಠಾಳ :** ಛತ್ರದ ಜನರು ಮುಟ್ಠಾಳರಾಗಿದ್ದಾರೆ (ಪುಣ್ಯಪು. ೦೩೭) ; ಮೂರ್ಖ – ಮಂಕ – ಮಡೆಯ – ಮುಟ್ಠಾಳ (ಕೀವಾಶ್ಯ. ೩); ಮುಟ್ಠಾಳ, ತಿಳಿಗೇಡಿ, ದುರ್ವಿದಗ್ಧ ! ಮುಚ್ಚು ಬಾಯಿ (ರಾಮವಾ. ೭೩). **ಮುಟ್ಠಾಳ :** ನೆಕ್ಲುದೋವ್ ವಿಧಿಯಿಲ್ಲದೆ 'ಮುಟ್ಠಾಳ' ಎಂದು ಗೊಣಗಿದನು (ಪುನರು. ೨೫೩). **ಮುಠ್ಠಾಳ :** ನಮ್ಮ ವರ್ಗದಲ್ಲಿ ಈ ಮುಠ್ಠಾಳರನ್ನು ಬಿಟ್ಟರೆ ಇಂಥ ಹೇಸಿ ಕೆಲಸವನ್ನು ಮಾಡುವವರು ಇರುತ್ತಾರಾದರೂ ಯಾರು ? (ರಂಗರೊ. ೯೦) ; ಏನು ಮುಠ್ಠಾಳನೊ ನೀನು ಹರಿ ! (ಪಪರಾ. II. ೬೭೭) ; ಲೋ ಮುಠ್ಠಾಳ, ಇದೇನೋ ಕಾಳಭೈರವನ ನೃತ್ಯ ! (ಶಲಾಶಾ. ೨).

[ದೇ.೫ ತಮಿ. ಮುಟ್ಟಾಳ್ ; ಮಲ. ಮುಟ್ಟಾಳ್, ಮುಟ್ಟಾಳನ್ ; ತುಳು. ಮುಟ್ಟಾಳ್]

**ಮುಟ್ಟಾಳು** (ನಾ). ಮುಟ್ಟಬಹುದಾದ (ಜಾತಿಗೆ ಸೇರಿದ) ಮನುಷ್ಯ. –ಆಳು ; ಅಸ್ಪೃಶ್ಯಜಾತಿಗೆ ಸೇರದವನು : ಪುಟ್ಟಣ್ಣ, ಸೇರೆಗಾರರು, ನಿಂಗ ಮೊದಲಾದ ಮುಟ್ಟಾಳುಗಳು (ಮುಟ್ಟಬಹುದಾದ ಜಾತಿಯವರು ಎಂದರ್ಥ . . . ) ಆ ಪದಾರ್ಥಗಳನ್ನೆಲ್ಲ ಹೇಳದಂತೆ ಎರಡು ಭಾಗವಾಗಿ ಬೇರೆ ಬೇರೆ ಮಾಡತೊಡಗಿದರು (ಕಾಹೂರು. ೩೯೦); ಅಯ್ಯೋ, ಮುಟ್ಟಿದ್ದಕ್ಕೆ ಬೇಸರವಾಯಿತೇ ? ನಾನು ಗೌಡ, "ಮುಟ್ಟಾಳು" (ಶಗುಳ. ೦೦೦).

[ಮುಟ್ಟು₁ + ಆಳು₃ (< ಆಳ್₃)]

**ಮುಟ್ಟಾಳೆ** (ನಾ). (ಕರಾ) ಅಡಕೆಪಟ್ಟೆಯಿಂದ ಮಾಡಿದ ಟೋಪಿ ; ಪಟ್ಟೆಟೋಪಿ : ವಾಸುದೇವಭಟ್ಟರು ತಲೆಗೆ ಮುಟ್ಟಾಳೆಯಿಟ್ಟು ಕೈಯಲ್ಲಿ ಕತ್ತಿ ಹಿಡಿದು ತೋಟಕ್ಕೆ ಹೊರಡಲನುವಾಗಿದ್ದರು (ಕ್ರಾಂತಿಸು. ೬೦) ; ಕಣ್ಣಿ ಮುಟ್ಟಾಳೆ ತಲೆಗಿಟ್ಟು ಬಳೆತೊಟ್ಟು ಹೊಂಗದಿರ ಕಳಕೆ ನಡೆತಂದ (ಶಾಪಗಿ. ೨೮).    [← ತುಳು. ಮುಟ್ಟಲೆ, ಮುಟ್ಟಳೆ]

**ಮುಟ್ಟಿ₁** (ನಾ). ಮುಚ್ಚಿದ ಅಂಗೈ ; ಮುಷ್ಟಿ : "ಮುಟ್ಟಿ – ಮುಷ್ಟಿ – ಬಲಿದ ಕೈಹಿಡಿ" (ಕದ್ಯಕೋ. ೩೭) ; ವೀರನಾದೊಡೆ ಕೈದು ಮುಟ್ಟಿಗಳ ಘೋರಪ್ರಹಾರಮಂ ತೋಜಿಸು (ಕ್ಕಐಶಾ. ೪-೩೩). [< ಸಂ. ಮುಷ್ಟಿ]

**ಮುಟ್ಟಿ₂** 'ಮುಟ್ಟಿಗೆ₁' ನೋ.

**ಮುಟ್ಟಿಗೆ₁**, ಮುಟಗೆ, ಮುಟ್ಟಿ₂ (ನಾ). ೧. = ಮುಟ್ಟು₁ : ಗಾಡಿಗ ಡಿಂಬು ಗಂಗೆ ಚಿಕ್ಕು ಮುಟ್ಟಿಗೆ ಪಸುರಂಬಲಿ ಮುಟ್ಟಿಗೆ ಹುರಿಬುತ್ತಿಯು ಬೇಡಿ . . . ಈಡಾಡಿದ ಕೂಳಂಬಲಿಯನಾಯ್ದು ಕುಡುಕುವ ಹೇಸಿದೈವಂಗಳ ಬೇಡಿ ಬೇಡಿ ನಿರರ್ಥ ಕೆಡಬೇಡ (ಬಸವ. ೩೩೬) ; ಪಕಾರಕ್ಕೆ ಟತ್ವಂ . . . ಮುಷ್ಟಿಕಾ – ಮುಟ್ಟಿಗೆ (ಶಮದ. ೨೬೨ ಕೃದೋ.) ; ಗಟ್ಟಿಕಾಳುಗಳನ್ನೆ ಮುಟ್ಟಿಗೆಯಲ್ಲಿ ಹಿಡಿಯಬೇಕೆಂದೇಕೆ ಚಪಲ (ನಂಪುಬು. ೨೭-೬). ೨. ಯಾವುದಾದರೂ ವಸ್ತುವೊಂದನ್ನು ಚಿವುಟಿ ಹಿಡಿಯುವ ಇಕ್ಕುಳದಂತಹ ಒಂದು ಬಗೆಯ ಸಾಧನ : "ಮುಟ್ಟಿಗೆ (ಮುಟ್ಟಿ) – ಮುಷ್ಟಿಕಾ = ಒಂದು ಉಪಕರಣ" (ತದ್ಭಕೋ. ೩೭) ; ಏಜನೆಯು ನರಕದೊಳ್ ಮುಱುವತ್ತುಮೂಱುಸಾಗರೋಪಮಾಯುಷ್ಯರುಮೊಡೆಯರ್ ನಾರಕರಾಗಿ ಪುಟ್ಟಿ ಛೇದನಭೇದನಪೂರಣಚೂರಣಪೀಡನಬಂಧನಂಗಳುಮಂ ಮುಟ್ಟಿಗೆಯೊಳಿಟ್ಟು ತೆಗಪುವುದು ಕೋಂತಂಗಳಿಂ ಮುಟ್ಟಿಗಳಿಂದಂ ಕರುಳ್ಗಳಂ ಸೋಲೆಕುತ್ತುವುದಂ . . . ಪೋಟ್ಟುದುಮೆಂದಿವು ಮೊದಲಾ ಗೊಡೆಯ ದುಃಖಂಗಳಂ . . . ಅನುಭವಿಸುವರ್ (ವಡ್ಡಾರಾ. ೪೬-೨೭) ; "ಮುಟ್ಟಿಗೆಯೊಳಿಟ್ಟು-ಕೊಡತಿಗಳಿಂದ ಹೊಡೆದು" (ವಡ್ಡಾರಾ. ಟಿಪ್ಪಣಿ). ೩. ದಿಕ್ಕುಗಳಿಗೆ ಎಸೆದು ಚೆಲ್ಲುವ ಬಲಿ : ಜಗಕ್ಕಿದು ಮಂಗಳವೆಂದು ರೌದ್ರದೇವತೆ ಪಿಡಿದಿಕ್ಕುವಾಮಿಷದ ಮುಟ್ಟಿಗೆಯೆಂಬಿನೆಗಂ ಸಿಡಿಲ್ದು ದಿಗ್ವಿತತಿಗೆ ಸೂಸೆ ಮುನ್ನಮೆರೆಯಾದ ರುರುಪ್ರಜವಾಗಳಾಸ್ಯದಿಂ ಪ್ರತಿಘ ದೊಳೆತ್ತಿ ಬೀಸಿಮುದದೊಂದು ಮುದದ್ವಿರದಂ ಮಹಾಹಿಯಂ (ಜಗಪ. ೧೭-೬); ಧರೆಯೊಳತಿಬಲನೆನಿಪ ಕೀಚಕನ ಸಾನುಜರ ಮುಱಿದು ಮುಟ್ಟಿಗೆಯ ಮಾಡಿದೆಲ ಭಾಪುರೆ (ತೊರಂದ. ೩-೬೩-೨). ೪. (?) : ಕಟ್ಟಿದರು ರಕ್ಕೆಗಳ ವಜ್ರದ ಮುಟ್ಟಿಗೆಯ ತಾಯ್ತಿಗಳ ಮಣಿಗಳ ನೆಟ್ಟ ಕಾಲಂದುಗೆಯ ಖಿಡೆಯ ದೊಳಸಿದ ಗಜಪಾಳಿ (ಅಂಬಿಗಾ. ೨೬-೦೬). **ಮುಟಗೆ** : ೫. ಒಂದು ಬಗೆಯ ಆಯುಧ (?) : ತೀಮುಯ್ಯಕಸಿಟ ಮಾಡಿ ಧರ್ಮಾ ಭೇರಿ ಜೀಗಟೆ ಕಂಚು ಮುಟಗೆ ಮಾಡಿದು ಮುಗುವಿನ ಪೋಗೆ ತ್ರಸೆಯಲಿ (ಕಾಇತಿ. IX-ii, ೪೭೦-೪೭ ; 1482). **ಮುಟ್ಟಿ₂** : ೨. "ಮುಟ್ಟಿಗೆ (ಮುಟ್ಟಿ) – ಮುಷ್ಟಿಕಾ = ಒಂದು ಉಪಕರಣ" (ತದ್ಭಕೋ. ೩೭). ೬. ನೆಲವನ್ನು ಕುಟ್ಟಿ ಸಮಮಾಡುವುದಕ್ಕಾಗಿ ಬಳಸುವ ಒಂದು ಬಗೆಯ ಮರದ ಸಾಧನ ; ದಮ್ಮಸು : 'ಕೈಮುಟ್ಟಿ' ಪರಾ.

[< ಸಂ. ಮುಷ್ಟಿಕ./ತಮಿ. ಮುಟ್ಟಿಕ್ಕೈ = ಸಣ್ಣ ಉಳಿ ; ಮಲ. ಮುಟ್ಟಿ = ಸಣ್ಣ ಉಳಿ]

**ಮುಟ್ಟಿಗೆ₂**, ಮುಟ್ಟುಗೆ (ನಾ). ೧. ಸೌದೆ ; ಕಟ್ಟಿಗೆ : ಅನಲಂಗೆ ಸಮಿಧೆ ದರ್ಭೆಯ ತುಪ್ಪಕೊಡಗಳಂ ಚನ್ನಾಗಿ ಮುಟ್ಟಿಗೆಯ ಹೊರೆಗಳಂ ವಿಪುಳತರ ಯಾಗಕಂ ಕೂಡಿಸಿದರು (ತುರಂಗ. ೬-೨೯). ೨. ಹೆಣವನ್ನು ಸುಡಲು ಒಟ್ಟಿದ ಸೌದೆಯ ರಾಶಿ ; ಚಿತೆ : ಮುಟ್ಟಿಗೆಯ ಮೇಲಿರ್ದ ಸುತನ ಹಿಂಗಾಲ್ವಿಡಿದು ಸೆಳೆದು ಬಿಸುಟಂ ಭೂಪನು (ಹರಿಶ. ೧೨-೩೭). **ಮುಟ್ಟುಗೆ** : ೨. ಮುಟ್ಟುಗೆಯ ಪೆಣನಸೊರ್ವಿಂ ಜೆಟ್ಟಿಂಗೆಂ ನೆಗಪೆ (ಮಹಾಶಿವ. ೯-೩೨).

[ ? ]

**ಮುಟ್ಟಿಗೆ₃**, ಮುಷ್ಟಿಗೆ (ನಾ). ಒಂದು ಬಗೆಯ ಸಸ್ಯ ; ದೊಡ್ಡಪತ್ರೆ : ತೆಗೆಬಿ ಕುಡಿಯಿಸುಗೆ ಶಿವೆ ಕಳವಿಗೆ ಬಾಳಂ ಕಕ್ಕೆ ಮುಸ್ತೆ ಪರ್ಪಟಕಂ ಮುಟ್ಟಿಗೆಯೆಂಬಿವಿನಿತುಮಂ ಪೈತ್ತಿಗಜ್ವರಂ . . . ಅಟಾಗಾ (ಲೋಕೋಪ. ೯-೦೬). **ಮುಷ್ಟಿಗೆ** : ಸಿರಿಕಂಡಂ ಮುಷ್ಟಿಗೆ . . . ಕೊತ್ತುಂಬರಿಯೆಂಬಿವನೆಂಟೊಂದಾಗಿರೆ ಮಱುಗಿಸಿ ಕುಡಿಯೆ ಪೈತಿಕಜ್ವರ ಹರಣಂ (ಲೋಕೋಪ. ೯-೦೭) ; ಮಧುಕಂ ಮುಷ್ಟಿ[ಶಾಕಾಂ. ದ್ವಿ]ಗೆ ಸಕ್ಕರೆ ಮಧುಜೀವನಿ ಪದ್ಮಕಂಗಳಂ ತಳ್ತು (ಅಶ್ವಶಾ. ೭-೬೩). [ ? ]

**ಮುಟ್ಟಲಿ** (ನಾ). ಮುಟ್ಟಿದುದನ್ನು ಇಲ್ಲವಾಗಿ ಮಾಡುವವನು : ನಿಮ್ಮಂಥಾ ಮುಟ್ಟಲಿಗಳಿಂದಲೇ ನಮ್ಮ ದೇಶವು ಹಾಳಾಯಿತು (ಮುಸಂಗ. ೦೪೭). [ ಮುಟ್ಟು₁ + – ಇಲಿ₃ ]

**ಮುಟ್ಟವಿಡಿ** (ಕ್ರಿ). ಮುಷ್ಟಿಯನ್ನು ಭದ್ರವಾಗಿ ಮುಚ್ಚು.— ಬಿಗಿ ಗೊಳಿಸು : ಮುಟ್ಟವಿಡಿದಿದಂದು ಗುರ್ದೂತೆ ಕಪ್ಪರ್ ಸಕಲಾಯುಧಂಗಳಂ ಬಂಧಿಸುತಂ ದುಷ್ಟಪೂಜೆಗಳನೆಸಗುತ್ತೆ ಶಿಷ್ಟತೆಯಂ ಬಿಟ್ಟು ಕೆಟ್ಟು ನುಡಿವರ್ ತಡೆವರ್ (ಹಾರಾಕ್ಷ. ೪-೦೫-೨೬). [ಮುಟ್ಟು₁ + ಪಿಡಿ₁ (< ಪಿಡಿ₁)]

**ಮುಟ್ಟಿಸು** 'ಮುಟ್ಟುಯಿಸು' ನೋ.

**ಮುಟ್ಟು₁** (ಕ್ರಿ). ೧. ಸೋಕು ; ಸ್ಪರ್ಶಿಸು ; ತಾಕು : "ಮುಟ್ಟು– ಸ್ಪರ್ಶನೇ, ಉಪಕರಣೇ ಚ" (ಶಮಧಾ) ; ಉರಿ ಮುಟ್ಟಿದರಳೆಯಂತಂ ಬಱಮುಱಿದತ್ತು (ಶಂಶಪಾ. ೧೦-೩೭) ; ಕಟ್ಟುಗೆ ಕಟ್ಟದಿರ್ಕೆ ಕಡಲಂ ಕಪಿಸಂತತಿ ವಾಮನ ಕ್ರಮಂ ಮುಟ್ಟುಗೆ ಮುಟ್ಟದಿರ್ಕೆ ಮುಗಿಲಂ . . . ಕವಿಗಳ್ ಕೃತಿಬಂಧದೊಳಲ್ತೆ ಕಟ್ಟಿದರ್ ಮುಟ್ಟಿದರ್ (ರೀಲಾವ. ೦-೧೦) ; ತೊಲಗು ತೊತ್ತಿನ ಮಗಳೆ ಮುಟ್ಟದಿರೆಲೆಯ ಬಿಬುಧರ (ಕೊರಂ. ೦-೦೦-೦೩) ; ಮುಟ್ಟಿ ಭಾಷೆಯ ಕೊಟ್ಟು ಮೋಸವನೆ ಮಾಡುವರು (ಪುರಂದ. ೦-೨೬-೨). ೨. ಸೇರು ; ತಲುಪು : ಜಾಣನಂತೆ ಮೆಚ್ಚಿದ ತೆಜದಾಸೆವಟ್ಟಲಸದೆತ್ತಿದಪೋಲ್ ದೊರೆವೆತ್ತು ದೂಟಿದಾಜಿದ ದನಿ ಮುಟ್ಟಿ ಮೇನಕೆ ಸರಸ್ವತಿ ಬಾಯ್ಬಿಟ್ಟುಜಿದಂತೆ ಪಾಡಿದಳ್ (ಶಂಶಪಾ. ೬-೮೮) ; ಇಳೆಯಂ ಸಾಸಿರಯೋಜನಂಬರೆಗಮಾನುರ್ಚಿರ್ದನಿರ್ದಂ ಮಹೀತಳಮಧ್ಯ ಸ್ಥನೆನಂತುಮಲ್ಲದೆಯುಮಿಂದ್ರಾವಾಸಮಂ ಮುಟ್ಟಿದಂ (ಸುಕುಮಾ. ೧-೬೩) ; ಮೂದಲೆಗಳಿವು ಮುಟ್ಟುವಡೆ ಮುನಿಸಾದಹೊಳ್ಳಿತು (ಕುಮಾರರಾ. ೦೪-೨೬) ; ನೇಮಿಕೆಯ ಪತ್ರವು ಬಂದು ಮುಟ್ಟಿತು (ಹೇಮಂತ. ೦೬೦). ೩. ಹತ್ತಿರಬರು ; ಸಮೀಪಿಸು : ಸಿಡಿಲ್ವೊ ಡೆದಪೊಲಟ್ಟಿ ಮುಟ್ಟಿ ಕಡಿದಿಕ್ಕಿದುದಾದೆಡರಂ (ಶಂಶಪಾ. ೦-೪೯) ; ನೆಗೆಟ್ಬಿದ್ದಚ್ಚಿಮಮೂರ್ತಿಗೀಯೆ ಸತಿಯಂ ತದ್ವಾಂಧವಶ್ರೇಣಿ ಬಂದು ಗಡಂ ತಾಂ ಬಿತದಟ್ಟಿ ಮುಟ್ಟಿ ಕವಿಯಲ್ (ಉದ್ಭಟ. ೦೨-೦೪). ೪. ಸೇವಿಸು ; ಸ್ವೀಕರಿಸು : ತನಗೆಂದಿಟ್ಟ ಪಾಲನೀ ಶಿಶು ಮುಂದೆ ಮುಟ್ಟನೆಂದುದುಮ್ಮಳಿಸಿ (ಸಿದ್ಧರಾ. ೦-೩೦) ; ಅವನು ಒಂದು ತುತ್ತು ಆಹಾರವನ್ನು ಮುಟ್ಟಲಿಲ್ಲ (ರಾಪಿಜ. ೩). ೫. ದೇಹ ಸಂಬಂಧವನ್ನು ಹೊಂದು ; ಕೂಡು : ಮುನ್ನ ಮುಟ್ಟತ್ತೆ ಮುಟ್ಟಿತ್ತು ಇನ್ನು ಮುಟ್ಟಿದೆನಾದರೆ ನಿಮ್ಮ ರಾಣಿ ವಾಸದಾಣೆ (ಬಸವ. ೬೬೭) ; ನೀಂ ಮುಟ್ಟದ ನಂದನೆಯಂ ಬಹುಮತಿಸುತೆ ನಿನ್ನನೆ ಪಾತ್ರೀಕರಿಸಿ ಬಿಟ್ಟ ಮುನಿಯ ವಿವಾಹಮಂ (ಶಾಕುಂತ. ೩೭-೦೨೦). ೬. ಸಲ್ಲು ; ಸಂದಾಯವಾಗು : ಇದು ನನ್ನ ಪಾಲು, ನನಗೆ ಮುಟ್ಟಿತು (ಮುಂಬಬು. ೬. ೪-೦೦). 'ಮುಟ್ಟುವಳಿ' ಪರಾ. ೭. ಅನುಭವಿಸು : ಪುಟ್ಟದ ಜಾತಿ ಮೆಟ್ಟದ ನೆಲಂ ನೆಱೆ ಕೊಳ್ಳದ ಕಾಲ ಪೊರ್ಮೆಯುಂ ಮುಟ್ಟದ ಭಾವಮಂದದ ಭವಂ ಪೆಱತಿಲ್ಲನೆ (ಶಬ್ದಶಾ. II. ೬೦೭). ೮. ಪಡೆ ; ಹೊಂದು : ಕೊಟ್ಟದ್ದು ಮುನ್ನಿಲ್ಲ ಮುಟ್ಟಿ ದಱವುಗಳಿಲ್ಲ ಕೆಟ್ಟ ವಿಷಯಗಳ ಬಿಡಲಿಲ್ಲ ಸ್ವರ್ಗದ ಬಟ್ಟೆ ಬೇಱೆ (ಸರ್ವಜ್ಞ. ೬೯೩). ೯. ಕಚ್ಚು ; ಕಡಿ : ಶಾಪದೆ ಪಾವು ಮುಟ್ಟಿದೊನ್ (ಏಕ. II, ೨೦-೦ ; 700) ; ಅಳುರದು ಕಿರ್ಚು ಮುಟ್ಟಿದ್ದು ವಿಷಾಹಿ ಮಹಾಸತಿಯಿರ್ದ ಮಂಡಲಂ ಬೆಳೆವುದು (ಅಶ್ವ. ೦-೩೩). ೧೦. ತಿನ್ನು ; ಮೇಯು : ಆಡು ಮುಟ್ಟದ ಗಿಡುವಿಲ್ಲ (ಗಾದೆ. ೩-೩೨).

**ಮುಟ್ಟಿದರೆಮುನಿ**=ಮುಟ್ಟಿದ ತಕ್ಷಣ ಎಲೆಗಳನ್ನು ಮುದುಡಿ ಕೊಳ್ಳುವ ಒಂದು ಬಗೆಯ ಸಸ್ಯ : "ಅಂಬಾಲಿಕ—ಮುಟ್ಟಿದರೆ ಮುನಿ" (ಅಕಾಪ. ೦-೯) ; ಮುಟ್ಟಿದರೆ ಮುನಿ . . . ಲಜ್ಜಾವತಿ (ವೃಶಿಗ. ೩೪-೦೦೭೯). **ಮುಟ್ಟಿದರೆ ಮುರುಟ**=ಮುಟ್ಟಿದರೆ ಮುನಿ : ಮುಟ್ಟಿದರೆ

ಮುರುಟಿಯುಸ್ಸು ಹಿಡಿಹಿಡಿಕೆಯುನ್ನೂ ಅಂಬಿಲದಲ್ಲಿ ಅರೆದು ಪೂಸಲು ಅಂಡವಾತ ಮಾಣ್ಗುಂ (ಅಶ್ವಶಾ. ೮೦).

[ದೇ.॥ ಮಲ. ತುಳು. ತೆಲು. ಮುಟ್ಟು : ಕೋತ. ತೊದ. ಮುಟ್]

**ಮುಟ್ಟು₂** (ನಾ). ೧. ಸೋಕುವುದು; ಸ್ಪರ್ಶ : ಹಸುವಿಂಗೆ ಸಂಜ್ಞೆ ಎತ್ತಿಂಗೆ ಮುಟ್ಟು ಕಜುವಿಂಗೆ ಲಲ್ಲೆ (ತುಅಗಾ. ೪. ೩೩೭-೭). ೨. ಹತ್ತಿರ : ಸಮೀಪ : 'ಮುಟ್ಟೂಳಿಗ' ಪರಾ. ೩. ಅಶುದ್ಧತೆ ; ಮೈಲಿಗೆ : 'ಮುಟ್ಟುಪಡು' ಪರಾ. ೪. ಹೆಂಗಸಿನ ರಜಸ್ಸು : "ಮುಟ್ಟುವೆ ಯೆನೆ ಮಾಣಿಕವೆನೆ ಮುಟ್ಟೆನೆ ಪೊಲೆ ಸೂತಕಾಭಿಧಾನಂ" (ಅಕುಶ. ೩೦) : ಮುಟ್ಟಿನ ಪೊಲೆಯೊಳಗೆ ಹುಟ್ಟಿಹನು ಶಿವಯೋಗಿ (ಸರ್ವಜ್ಞ. ೯೬೩) ; ಮುಟ್ಟಿನ ದೋಷದಿಂದ ಮಗುವಿಗೆ ಈರಲಾಗಿದೆ (ರೂಢಿ). ೫. ಸಾಮಾನು ; ಉಪಕರಣ ; ಸಾಧನ : "ಪರಿಸರದೊಳುಪಕರಣದೊಳ್ ಮುಟ್ಟು" (ಶಬ್ದಮಂ. ೮೯) ; ತೊಟ್ಟನೆ ಕೊಳೆ ಚತುರಂಗದ ಮುಟ್ಟಂ ಕಿದಱಿದವೊಲ್ (ಶಾಂತಿಪು. ೩-೩೯) ; ಕನ್ನದ ಮುಟ್ಟುಂಗಳಂ ತಂದಂ (ಶಂಕಶಂ. ೮. ೧೭೦-೧೭) ; ಸುತ್ತಿಗೆಯು ಕೈವಾರದ ಕಂಬಚ್ಚಿನ ಕೊಱಪೆ ಯುಡಗಲ್ಲ ಅರಸ ಮುಟ್ಟೊಟ್ಟಯುಸಿರೆ (ರಾಜಶೇಖ. ೦೦೩-೨೧). ೬. ಮದ್ದಳೆಯ ಮರದ ಚೌಕಟ್ಟು : (೬). ೭. ಚರ್ಮವಾದ್ಯವನ್ನು ಬಾರಿಸಲು ಬಳಸುವ ಕೋಲು : "ಆವುಜದ ಮುಟ್ಟಿನೊಳ್ ಲಾಳ ವಿಂಡಿಗೆಯೊಳಂ ಬಲ್ಲರಿಂದಗುಟಾಯುಕ್ಕುಂ" (ಸಂಜೀವ. ೧೩) ; ಅಗ್ಗ ಟೀಕೆ— ಲಾಳವಿಂಡಿಗೆ, ಆವುಜದ ಮುಟ್ಟು (ಶಮಂದ. ಶಂ. ೧). ೮. ಅಡ್ಡಿ ; ಎಡರು : ಪ್ರತಿಬಂಧ : 'ಮುಟ್ಟುಗೋಳು', 'ಮುಟ್ಟಿಡೆ' ಪರಾ. ೯. ಕಕ್ಕಾಬಿಕ್ಕಿ ; ದಿಗ್ಭ್ರಮೆ : (೬). ೧೦. ಉಪಯೋಗ ; ಪ್ರಯೋಜನ : ಆ ಗಿರೀಂದ್ರ ಕಂದರದೊಳ್ ತಪಂಗೆಯ್ವ ತಪೋಧನರ ತಪಂಗಳೆಲ್ಲಮಾತನ ತಪೋಮಯಶಿಖಿಗಳಿಂ ಬೆಂದು ಬೆಂದ ನುಲಿಯಂತೇ ತರ್ಕಂ ಮುಟ್ಟಿಲ್ಲದೆ ಮುಟ್ಟುಗಿಡೆ (ಶಂಕಶಾ. ೭-೬೦ ವ) : ಪರಮ ದಯೆ ಗೆಯ್ ನಿನ್ನೊಳ್ ತೊಟ್ಟೊಂದು ಭಕ್ತಿಯನಾದರಂಬೆರಸು ಪೆಱತೊಂದೇ ಮುಟ್ಟಾಮೊಲ್ಲೆಮಂತದನೆಂಬ ತತ್ಪರಸಮುದಯಂ ಚೇತೋವಾಕ್ಕಾಯ ಶುದ್ಧಿಗಳೊಳ್ ತಮೋಹರನನೆಱೆದರ್ (ಶಾಂತಿಪು. ೧೦-೨೦). 'ಮುಟ್ಟು ಗೆಡು' ಪರಾ. ೧೧. ಸಮಾನ ; ಸಾಟಿ : ಮಾನಿಯುಂ . . . ಮನಸ್ವಿಯುಮಂತಾ ಮಾನಸರನಾರುಮಂ ಮನಕೇನುಂ ಮುಟ್ಟಿಲ್ಲದಂತು ಬಗೆವುದು ದೋಷಂ (ಶಬರ. ೩-೦೭೧) ; ಜಯವರ್ಮಂ ಕೊಟ್ಟಪೆನೆಂದಿರ್ದೊ ಡಾತನಚಿರಾಯುಷ್ಯಂ ಮುಟ್ಟಿ ಟ್ಟಿ ಲ್ಲನೆಂದು ಮಾಣಿಸಿ (ಚಂದ್ರಪ್ರ. ೩-೦೦೨).

**ಮುಟ್ಟಾಗು** = ಹೊರಗಡೆಯಾಗು : ರಜಸ್ವಲೆಯಾಗು : ಮುಟ್ಟಾಗಿ ಇದ್ದೇನೆ ಮನೆಯೊಳಗ್ಯಾರಿಲ್ಲ ನಿಷ್ಠುರ ಮಾಡದೆ ಹೋಗೋ ದಾಸಯ್ಯ (ಪುರಂದ. ೦-೦೩೦-೩) ; ಶಾರದೆ . . . ಮುಟ್ಟಾದಾಗ ಹೀಗೆ ತವರು ಮನೆಗೆ ಬಂದುಬಿಟ್ಟದ್ದು ಇದುವೆ ಮೊದಲ ಸಾರೆಯಲ್ಲ (ಮಾಕೆಂಪ. ೩೭). **ಮುಟ್ಟುತಟ್ಟು**=ಮುಟ್ಟುಚಟ್ಟು ೧ : ಬ್ರಾಹ್ಮಣನ ಭಕ್ತಿ ಮುಟ್ಟುತಟ್ಟಿನಲ್ಲಿ ಹೋಯಿತ್ತು (ಮುಡಮಾ. ೦೩-೦೩) : ಒಡವೆಯ ಒಡಲೆಲ್ಲ ಸವಿರೂಪು ನುಡಿಕಂಪು ಮುಟ್ಟುತಟ್ಟಿನೊಳಿದೆ ಭೂಭುವನ (ಮುಕ್ತಕಂ. ೨-೦೪). **ಮುಟ್ಟುನಿಲ್ಲು** = ಹೊರಗಡೆ ಯಾಗುವುದು ನಿಂತುಹೋಗು : ಅರೆತಲೆಬೇನೆ . . . ಕೆಲವೇಳೆ ಮುಟ್ಟು ನಿಂತ ಮೇಲೆ (ಮೆನೋಪಾಸ್) ಹೆಚ್ಚಾಗುತ್ತದೆ (ಕವಿಕೋ. ೧· ೪೯೭). **ಮುಟ್ಟುನೀರು** = ಹೊರಗಡೆಯಾದ ಕೂಡಲೆ ಅಥವಾ ಹೊರಗಡೆಯಾದ ಮೂರುದಿನಗಳ ನಂತರ ಮಾಡುವ ಸ್ನಾನ : ಮುಟ್ಟುನೀರು ಹಾಕಿಕೊಂಡು ಆಕೆ ಊರಿಗೆ ಹೊರಟಳು (ರೂಢಿ). **ಮುಟ್ಟುಮನೆ** = ಹೊರಗಡೆಯಾದ ಅಥವಾ ಹೆತ್ತ ಹೆಂಗಸು ಇರತಕ್ಕ ಕೊಟಡಿ : (೬).

[<ಮುಟ್ಟು₁./ ತಮಿ. ತುಳು. ತೆಲು. ಮುಟ್ಟು: ತೊದ. ಮುಟ್ ]

**ಮುಟ್ಟುಂಗಾಱ** (ನಾ). ಮದ್ದಳೆಯನ್ನು ಬಾರಿಸುವವನು : ಲತೆಯ ಕೆಂದಳಿರ್ಗಳ್ ಬಿಜಗಾಳಿಯ ಸೋಂಕಿಂ ಪೊಸಪಱಿಸಿನ ನಿಡುವಣ್ಣಂ ಪೊಡೆಯಿ ತ್ತಿರೆ ಚೈತ್ರವೆಸರ ಮುಟ್ಟುಂಗಾಱಂ . . . ಕುಲಿಶಪ್ರಿಯದ್ಧ ಮುರಜಮಂ ನುಡಿಸುವ ತೆಱನಾಯ್ತು (ಜಯುಶಾ. ೦೧-೭).

[ ಮುಟ್ಟು₂ + — ಕಾಱ. / ತಮಿ. ಮುಟ್ಟುಕ್ಕಾರನ್ ]

**ಮುಟ್ಟುಕಟ್ಟು** (ನಾ). ೧. ಮುಟ್ಟು ತಡವಾಗುವ ಒಂದು ಬಗೆಯ ರೋಗ. ೨. ಒಂದು ಬಗೆಯ ಮೂತ್ರರೋಗ : ಕೃಮಿಗೆ ವಿಳಂಗಚೂರ್ಣ ಜೇನುತುಪ್ಪದಲ್ಲಿ ಕೊಳ್ಳುವುದು. ಮುಟ್ಟುಕಟ್ಟಿಗೆ ಎಕ್ಕೆಹಾಲು ಬೂದಿ ಕಲಸಿ ಬಾಳೇಹಣ್ಣಿನಲ್ಲಿ . . . ಕೊಳ್ಳುವುದು (ಅಶ್ವಶಾ. ೨೩); ಮುಟ್ಟುಕಟ್ಟಿಗೆ:– ಜೇವಿನ ಸೊಪ್ಪಿನ ಎಲೆಯ ರಸ. ಬೆಳ್ಳುಳ್ಳಿ ಗೆಡ್ಡೆ ರಸ, ಈ ಎರಡಕ್ಕೂ ಸರಿಯಾಗಿ ಎಣ್ಣೆಯನ್ನೂ ಕೂಡಿ . . . ಕೊಡಲು ಹುಳು ಮೂತ್ರದಲ್ಲಿ ಬೀಳುವುದು (ಅಶ್ವಶಾ. ೦೦೯).

[ ಮುಟ್ಟು₂ + ಕಟ್ಟು₂ ]

**ಮುಟ್ಟುಕುಟ್ಟು** (ನಾ). ಹೊರಗಡೆಯಾಗುವುದಕ್ಕೆ ಮುಂಚೆ ಅಥವಾ ಆಮೇಲೆ ಬರುವ ನೋವು : (೬).

[ ಮುಟ್ಟು₂ + ಕುಟ್ಟು₂./ ತಮಿ. ಮುಟ್ಟುಕ್ಕುಟ್ಟು ]

**ಮುಟ್ಟುಗ** (ನಾ). ಅಶುದ್ಧವಾಗಿರುವವನು (?) : ನಗಧರನಗ್ರ ವಲ್ಲಭೆಯೆ ನಾನೆಲೆ ಮುಟ್ಟುಗ ಮುಗ್ಧ ನಿನ್ನ ಮೈಲಗೆಯನದೇಕೆ ಪಿಂಡಿ [ದಪೆನಾಂ] (ಕುಮಾನೇ. ೦೯-೯೦). [ ಮುಟ್ಟು₂ + — ಗ₂ ]

**ಮುಟ್ಟುಗಿಡಿಸು** (ಕ್ರಿ). ಸಾಧನವಿಲ್ಲದಂತೆ ಮಾಡು ; ಅಸಹಾಯಕ ನನ್ನಾಗಿಸು : ಮೂವತ್ತಿರ್ವರುಮೊಳ್ಪಿಂಡಿರ್ಕಳುಮಂ ಮೂವತ್ತೆರಡುಕೋಟಿ ಕಸವರಮುಮಂ ಕೊಳದ ಪುಲ್ಲ ದರ್ಕಂ ತೊಱೆವಂತನಿತುಮಂ ತೊಱೆದು ಕರ್ಮಕ್ಷಯಾರ್ಥಂ ತಪಂಬಿಟ್ಟಾತನನಿಳಿಸಿ ಪರಿಭವಿಸಿ ಮುಟ್ಟುಗಿಡಿಸಿ ನುಡಿಯಲ್ವೇಡ (ವಡ್ಡಾರಾ. ೪೭-೦೩).

[ ಮುಟ್ಟುಗಿಡು ( < ಮುಟ್ಟುಗೆಡು ) + — ಇಸು₃ ]

**ಮುಟ್ಟುಗಿಡು** 'ಮುಟ್ಟುಗೆಡು' ನೋ.

**ಮುಟ್ಟುಗೆ** 'ಮುಟ್ಟಿಗೆ₂' ನೋ.

**ಮುಟ್ಟುಗೆಡು**, ಮುಟ್ಟುಗಿಡು (ಕ್ರಿ). ೧. ಸಾಧನವನ್ನು ಕಳೆದುಕೊಳ್ಳು; ಅಸಹಾಯಕವಾಗು : ಕೂರದರ್ ನೆಲನನೊಟ್ಟಜೆಯಿಂ ಕೊಳೆ ಕೊಟ್ಟು ಮುಟ್ಟುಗೆಟ್ಟಿನ್ನುಮರಣ್ಯದೊಳ್ ನಮೆದಪಂ ಯಮನಂದನಂ (ಶಂಕಶಾ. ೭-೩೩) : ಬೆಂಬಱಿಯುನುಱಿಯದೆ ಮುಟ್ಟೆವಂದೀ ಮುಟ್ಟುಗೆಟ್ಟ ದುರಾತ್ಮನಂ ವಿದಾರಿಸುವೆಂ (ಶಂಕಮಾ. ೦೦-೦೦೯ ವ). ೨. ಪ್ರಯೋಜನ ವಿಲ್ಲದಂತಾಗು ; ನಿಷ್ಪ್ರಯೋಜಕವಾಗು: ಕಲ್ಲಂ ತಾಗಿದ ಮಿಂಚಿಯಂತೆ ಮುಟ್ಟುಗೆಟ್ಟು . . . ಶ್ರೀದತ್ತಸೆಟ್ಟಿ ಪುಸಿಗೂರ್ಮೆಯಿಂದಿಂದ್ರದತ್ತಸೆಟ್ಟಿ ಯನಿಂತೆಂದಂ (ಧರ್ಮಾಮೃ. ೦೦-೦೩೭) ; ಜರಾಸಂಧಚಕ್ರವರ್ತಿ ಕೇಳ್ದು ಮುಳಿದಾತನ ಮೇಲೆ ದಂ[ಡಂ] ಪೇಱಿಪ್ಪೊ[ಡಾ] ದಂಡು ಕಾದಿ ಪಡಲ್ವಟ್ಟು ಸೋಲ್ತುಓಡಿ ಮುಟ್ಟುಗೆಟ್ಟು ಬಾಯ್ವಿಟ್ಟೋಡಿದೊಡೆ (ಶಂಹರಿ. ೩-೨೯ ವ). **ಮುಟ್ಟುಗಿಡು** : ೨. ಆ ಗಿರೀಂದ್ರಕಂದರದೊಳ್ ತಪಂಗೆಯ್ವ ತಪೋಧನರ ತಪಂಗಳೆಲ್ಲಮಾತನ ತಪೋಮಯ ಶಿಖಿಗಳಿಂ ಬೆಂದು ಬೆಂದ ನುಲಿಯಂತೇ ತರ್ಕಂ ಮುಟ್ಟಿಲ್ಲದೆ ಮುಟ್ಟುಗಿಡೆ (ಶಂಕಶಾ. ೭-೬೦ ವ). ೩. ಹೀಯಾಳಿಸು; ಜರಿ (?) : ನಿನ್ನ ಪರಿಜ್ಞಾನದ ತೆಱನನಱಿಯಲಾದುದು ನೀಂ ಮುಟ್ಟಮಿರೆಂದಾ ಘಟ್ಟನಂ ಮುಟ್ಟುಗಿಡೆ ನುಡಿದಂ (ಶಂತಶಂ. ೦೩-೯).

[ ಮುಟ್ಟು₂ + ಕೆಡು₁ ]

**ಮುಟ್ಟುಗೋಲು** 'ಮುಟ್ಟುಗೋಳು' ನೋ.

**ಮುಟ್ಟುಗೋಳು**, ಮುಟ್ಟುಗೋಲು (ನಾ). ಸಾಲ ವಸೂಲಿ ಮಾತ್ರಿತರ

ಕಾರಣಗಳಿಗಾಗಿ ಒಬ್ಬರಿಗೆ ಸೇರಿದ ಸ್ವತ್ತನ್ನು, ಸರ್ಕಾರ ಅಥವಾ ನ್ಯಾಯಾಲಯ ಮುಂತಾದುವುಗಳ ಆದೇಶದಂತೆ ಸ್ವಾಧೀನಕ್ಕೆ ತೆಗೆದುಕೊಳ್ಳುವುದು : ಈ ಮಹೀಪಾಲಕಂಗೀ ಮನೆಯನು ಮುಟ್ಟುಗೋಳಿಂಗೀಡುಮಾಡಿ ಮನೆಮಕ್ಕಳುಂ ಕೆಟ್ಟುಪೋಪಂತೆ ಮಾಡಿದೆನಲಾ (ಸಣ್ಣ್ಕೀ. ೦೦-೬೯) ; ತೋಳುಡಿದಸುರಾಧಿಪನ ಗೇಹವ ಮುಟ್ಟುಗೋಳ ತನ್ನಯ ದ್ರವ್ಯಸಹಿತ ಬಾಳುವೆಗಿರಬೇಕೆನದು ಮಂಚಿಸದೆ ಕೃಪಾಳುವಿಗಿತ್ತು ವಂದಿಸಿದ (ಬೋಜಚ. ೪೦-೩೩) ; ಇವನ ಸರ್ವೈಶ್ವರ್ಯವನ್ನು ಮುಟ್ಟುಗೋಳು ತೆಗೆದುಕೊಂಡು ಹೆಂಡಿರುಮಕ್ಕಳೊಡನೆ ಬಂಧಿಸಿ ಸೆರೆಗೆ ತಳ್ಳಿರಿ (ಅಕ್ಷಯು. ೨೬). **ಮುಟ್ಟುಗೋಲು** : ಸೇನಾವಿಧಿಯು ಮೇರೆಗೆ ಸಾದರಾದ ಯಾವುದಾದರೂ ದಂಡಾಜ್ಞೆಯನ್ನು, ವಿಧಿಸಿದ ಶಿಕ್ಷೆಯನ್ನು, ಆದೇಶಮಾಡಿದ ಮುಟ್ಟುಗೋಲನ್ನು ಅಥವಾ ಮಾಡಲಾದ ಇತರ ಕೆಲಸವನ್ನು ಮಾನ್ಯಗೊಳಿಸಬಹುದು (ಕಾರಾಶ. ೨೦); ಪರಂಗಿಗಳು . . . ಇವೆಲ್ಲವನ್ನು ಇಲ್ಲಿ ಮುಟ್ಟುಗೋಲು ಕೊಟ್ಟು ಹೋಗಬೇಕಾಗುತ್ತದೆ (ದಾಂಡೇ. ೨೪).

ಮುಟ್ಟುಗೋಲುಹಾಕು = ೧. ಸ್ವಾಧೀನಪಡಿಸಿಕೊಳ್ಳು ; ವಶಪಡಿಸಿಕೊಳ್ಳು : ಅಂಗಡಿಯಲ್ಲಿನ ಸಾಮಾನುಗಳನ್ನೆಲ್ಲ ಮುಟ್ಟುಗೋಲು ಹಾಕಿಕೊಂಡು ತನ್ನನ್ನು ಬಂಧಿಸಿ ಕೊಂಡೊಯ್ಯಲು ತಿಳಿಸಿರುವನೊ ಏನೊ (೧ಂಶ. ೦೦೨). ೨. ಸಂಪೂರ್ಣವಾಗಿ ನಿಲ್ಲಿಸು, ಇಲ್ಲವಾಗಿಸು : ಆತನ ವಾರ್ಷಿಕವೇತನಕ್ಕೆ ಮುಟ್ಟುಗೋಲು ಹಾಕಲ್ಪಟ್ಟಿದೆ (ಬುಡಾರಾ. ೯೯). ೩. ಅಡ್ಡಿಯುಂಟುಮಾಡು ; ಪ್ರತಿಬಂಧಿಸು : ನಿಬಂಧನೆಯು ಕಮ್ಯುನಿಸ್ಟ್‌ಪಕ್ಷವೊಂದನ್ನು ಬಿಟ್ಟು ಎಲ್ಲ ರಾಜಕೀಯಪಕ್ಷಗಳಿಗೂ ಮುಟ್ಟುಗೋಲು ಹಾಕಿದೆ (ಅಚಚ. ೬೦).

[ಮುಟ್ಟು$_2$ + ಕೋಳ್$_2$ (< ಕೋಳ್)./ತೆಲು.ಮುಟ್ಟುಕೋಲು]

**ಮುಟ್ಟುಚಟ್ಟು**, ಮುಟ್ಟುಚಿಟ್ಟು, ಮುಟ್ಟುಚೆಟ್ಟು (ನಾ). ೧. ಮುಟ್ಟು, ಸೂತಕ ಮುಂತಾದುವುಗಳ ಸಂಸರ್ಗದಿಂದ ಉಂಟಾಗುವ ಮೈಲಿಗೆ, —ಹೊಲೆ : ಮನೆಯಲ್ಲಿ ದೇವತಾಕಾರ್ಯಗಳು ನಡೆಯುವಾಗ ಮುಟ್ಟುಚಟ್ಟು ಆಗಬಾರದು (ಜನಪ). **ಮುಟ್ಟುಚಿಟ್ಟು** : ೧. ಮನೆಯಲ್ಲಿ ಏನೋ ಅನಾಚಾರ ನಡೆದು ಮುಟ್ಟುಚಟ್ಟು (ಮೈಲಿಗೆ) ಆಗಿಬಿಟ್ಟಿದೆ (ಕಾಷೂರು. ೬೦೪); ಜಾತಿಕೆಟ್ಟು ನೀತಿಕೆಟ್ಟು ಕೇರಿಗೆಲ್ಲ ಮುಟ್ಟುಚಟ್ಟು ! (ಮರಿಮ. ೦೯೯). **ಮುಟ್ಟುಚೆಟ್ಟು** : ೧. ಮಕ್ಕಳಿಗೆ ದಡಾರ ಎದ್ದಾಗ ಮನೆಯಲ್ಲಿ ಮುಟ್ಟುಚೆಟ್ಟಾಗಬಾರದೆಂದು ಹಿರಿಯರು ಹೇಳುವುದುಂಟು (ಜನಪ). ೨. ಅಶುಚಿತ್ವ; ಅಪಾವಿತ್ರ್ಯ : ವಿದ್ಯೆಗೆ ಮುಟ್ಟುಚೆಟ್ಟು ಎಲ್ಲಿಂದ ಬಂತು ? (ಮುಯ್ಯಿ. ೦೦೩).

[ಮುಟ್ಟು$_2$ + ಚಟ್ಟು$_2$./ ತುಳು. ಮುಟ್ಟುಚಟ್ಟು, ಮುಟ್ಟುಚಿಟ್ಟು]

**ಮುಟ್ಟುಚಿಟ್ಟು** 'ಮುಟ್ಟುಚಟ್ಟು' ನೋ.

**ಮುಟ್ಟುಚೆಟ್ಟು** 'ಮುಟ್ಟುಚಟ್ಟು' ನೋ.

**ಮುಟ್ಟುಡುಗು** (ಕ್ರಿ). ಹೊರಗಡೆಯಾಗುವುದು ನಿಲ್ಲು ; ಮುಟ್ಟುನಿಲ್ಲು: ಮುಟ್ಟುಡುಗಿ ಮುತ್ತ ಮುದುಪಾಗಿಯುಂ ಮೂವತ್ತುಂಬರಿಸಿದೆಳಜವ್ವನೆಯಂತೆ ಗಳಪುವದು (ಶಕಲಿ. ೬-೨೩೬ ಪ). [ಮುಟ್ಟು$_2$ + ಉಡುಗು$_1$]

**ಮುಟ್ಟುಪಡ** 'ಮುಟ್ಟುಪಡು' ನೋ.

**ಮುಟ್ಟುಪಡು**, ಮುಟ್ಟುಪಡ (ನಾ). ಮುಟ್ಟಲು ಅಯೋಗ್ಯವಾದುದು; ಸ್ವೀಕಾರಾರ್ಹವಲ್ಲದುದು : ಅನಜಿಂದದೆ ಕೊಕ್ಕರಿಕೆಗೆ ಶಾನಜಿ[ದು] ಸಾಲ್ದಿರ್ದುಮಜಿಯಮೇಟ್ಬುದೆ ಲೋಕಂ ಮಾನಿತೆಗೆ ಮುಟ್ಟುಪಡ[ಶಾಶಾಂ. ಡಾ]ದೆ[ದು]ದೇನೊ ಪೆಜರ್ ಕಂಡಡಲ್ಲದಾಗದೆ ಬಿಸುಡಲ್ (ಬಂಹಂ. ೪-೯) ; ಮುಟ್ಟುಪಡಾಯ್ತು ಜೊನ್ನಮಣಿಸೆಂಬ ಚಕೋರಚಪಕ್ಕೆ ಬಂಧನಂ ಬಿಟ್ಟುದು ಪದ್ಮಕೋಶವೊಳಕೊಂಬ ಮದಾಳಿಗೆ (ಸೂಕ್ತಿಸು. ೯-೨೬). **ಮುಟ್ಟುಪಡ** : ಪಂದೋಲ್ . . . ಅಸ್ಥಿಯೆಂಬಿಮೇಲುಂ ಕುಂದದೆ ಮುಟ್ಟುಪಡಮಕ್ಕುಮಾರ್ಹನ ಮತದಿಂ (ಧರ್ಮಾಮೃ. ೫-೦೩೩) ; ವಿಮಲಶುದ್ಧ ತಪಃಫಲಸೌಖ್ಯಯೋಗದೊಳ್ ತಲೆನವಿರಲ್ತೆ ಮುಟ್ಟುಪಡವೆಂಬವೊಲೂರ್ಜಿತಪುಣ್ಯಸಂಚಯಂ (ಅಪಂಕ್ತಿ. ೪-೯).

[ಮುಟ್ಟು$_1$ + < ಪಡು$_1$]

**ಮುಟ್ಟುವಳಿ** (ನಾ). ಸಲ್ಲಬೇಕಾದ ಖರ್ಚು ; ಸಂದಾಯದ ವೆಚ್ಚ.— ವ್ಯಯ : ಮುಟ್ಟುವಳಿ ಸಾಲ ಬಡ್ಡಿ . . . ಎಲ್ಲಾವನ್ನೂ ಸಲ್ಲಿಸಿಕೊಳ್ಳುತ್ತಾರೆ (ಶಿಲ್ಪ೮. ೦೩೩-೨೪೨) ; ದೊರೆಗಳವರು ಒಂದುವರ್ಷ ಆದ ಫಲವನ್ನು ರೇಖೆಮಾಡಿಸಿ, ರೈತರ ಮುಟ್ಟುವಳಿಯನ್ನು ವಿಚಾರಿಸಿ ನೋಡುವಲ್ಲಿ ಹುಟ್ಟುವಳಿ ಮುಟ್ಟುವಳಿ ಸಮವಾಗಿದ್ದುದರಿಂದ . . . ಮುಂದೆ ಸಮವಾರ ಕೊಡುವಂತೆಯೂ ನಿಬಂಧನೆ ಮಾಡಿದರು (ಮಹಾಕಾಂ. I, ೦೦೯). 'ಹುಟ್ಟುವಳಿ' ಪರಾ.

[ಮುಟ್ಟು$_1$ + – ವಳಿ./ತುಳು. ಮುಟ್ಟುವಳಿ, ಮುಟ್ಟೊಳಿ]

**ಮುಟ್ಟುಹ** (ನಾ). ಸೋಕುವಿಕೆ : ಮುಟ್ಟುವಿಕೆ : ವರ್ಮವಂ ಮುಟ್ಟುಹ ವಿದಚ್ಚರಿಯೆನುತ ಶಿಶುವಂ ನುತಿಸುತಿಂತೆಂದ (ಸದ್ದುಕು. ೬-೦೭).

[ಮುಟ್ಟು$_1$ + – ಹ$_2$ (< – ಪ$_2$)]

**ಮುಟ್ಟುಹಾಳ** 'ಮುಟ್ಟಾಳ' ನೋ.

**ಮುಟ್ಟೊಳಿಗ** (ನಾ). ಸಮೀಪದಲ್ಲಿ ಇದ್ದು ಮಾಡುವ ಸೇವೆ,— ಪರಿಚರ್ಯೆ : ನಿಟ್ಟುಸಿರಿಂದೆ ಕೀರ್ತಿಪ ಹೊನ್ನ ಸೆಳೆಗೆಯ್ಯುಗಟ್ಟುವರಂಗಳ ಸನ್ನೆಯಲಿ ಮುಟ್ಟೊಳಿಗದ ಬೋಳುಕರನೆಲ್ಲರ ಬೀಳುಕೊಟ್ಟೊಳಪೊಕ್ಕನುತ್ಸವದಿ (ಬೋಜಚ. ೨೦-೬೨). [ಮುಟ್ಟು$_2$ + ಓಳಿಗ (< ಊಳಿಗ)]

**ಮುಟ್ಟೆ**, ಮುಟ್ಟ (ಅ). ತನಕ : ವರೆಗೆ : ಹತ್ತುಕಯ್ಯಂ ಕಳದೂರೊಡೆಯರ ಮನೆ ಮುಟ್ಟೆ ಮನೆಯು ನಿವೇಶನದಗಲ ಕೆಯ್ ೫ಳ ತೆಙ್ಕಣ ಮೆಯ್ಯ ನೀಳಂ (ಎಇ. XIII. ೯೯-೭೯ ; 1112) ; ಬಡಗ ಮುನ್ನಾಗಿ ಹೋದ ಹುದುಗೆಜೆಯೊಳಗು ಮುಟ್ಟೆ ಗದ್ದೆಯುಡಕ್ಕೆ ತೆಜೆಯೊನ್ದು ಹಣವ ನಿಕ್ಕುವರ್ (ಎಕ. V, ಹಾಸವ. ೩೩-೬೦ ; 1170) ; ಮುಟ್ಟೆ ಎಂಬುದುಂ ಸೀಮಾರ್ಥಮುಂ ಪೇಟ್ಬುಗಂ (ಶಮದ. ೨೪೯ ವೃತ್ತಿ). **ಮುಟ್ಟ** : ಉದಯದೊಳು ಕಾದ ಹಾಲಂ ಸಂಜೆಮುಟ್ಟ ಕೆಂಡದೊಳಿರಿಸಿ . . . ಹೆಪ್ಪನಿಡೆ ಮೊಸರು ಕಡುಗೆಂಪಹುದು (ಸೂಶಕಾ. ೨-೭) ; ವೈಶಾಖಶುದ್ಧದ್ವಾದಶಿ ಮುಟ್ಟ ತಾಳಬೇಕೆನ್ನೆನ್ನ ಮಾತ ಮನ್ನಿಸೊಡೆ (ಬೋಜಚ. ೨೬-೩೪).

[< ಮುಟ್ಟು$_1$. / ತಮಿ. ಮುಟ್ಟ, ಮುಟ್ಟು = ಸಂಪೂರ್ಣವಾಗಿ ; ತುಳು. ಮುಟ್ಟ]

**ಮುಟ್ಟೆಡೆ** (ನಾ). ಕಷ್ಟದ ಸಂದರ್ಭ ; ಆತಂಕದ ಪರಿಸ್ಥಿತಿ : ಪಟ್ಟಣ ಖಳವಶವಾಗೆ ಕರ್ಣಾಟಕ ಕೆಟ್ಟು ನಮ್ಮಯ ರಾಜ್ಯಸಿರಿಗೆ ಮುಟ್ಟ[ಟ್ಟೆ]ಡೆಯಾಗುವಂದವ ನಿಲಿಸಿದನು (ಕೆಂಶಾ. ೦೬-೯೩) ; ಅಟ್ಟುಂಬ ಕಾಲದಲಿ ಕೊಟ್ಟುಂಬುದೊಬ್ಬರಿಗೆ ಕೊಟ್ಟುಂಬುದಱಿಯದಧಮಂಗೆ ಹಲತೆಜದ ಮುಟ್ಟೆಡೆಗಳಕ್ಕು (ಸರ್ವಜ್ಞ. ೬೬೦). [ಮುಟ್ಟು$_1$ + ಎಡೆ$_4$]

**ಮುಟ್ಟೈಸು** 'ಮುಟ್ಟೆಯಿಸು' ನೋ.

**ಮುಟ್ಟಾಳ** 'ಮುಟ್ಟಾಳ' ನೋ.

**ಮುಟ್ಠಾಳ** 'ಮುಟ್ಟಾಳ' ನೋ.

**ಮುಠಾರಿ** (ನಾ). ಕೈಗೆ ಧರಿಸುವ ಒಂದು ಬಗೆಯ ಆಭರಣ : ಮುಂಗೈಯ ಮುಠಾರಿ ಮೂರೇಣ ಕಡಗಾವ ಒಂಟಿ ನಾಗರಸುತ್ತ ಸರಪೇಟ (ಲೋಕಗೀ. ೨೦೦). [ ?./ಮರಾ. ಮಠಾರ=ಒಂದು ಬಗೆಯ ಆಯುಧ]

**ಮುಠ್ಠಾಳ** 'ಮುಟ್ಟಾಳ' ನೋ.

**ಮುಡಕಲು** 'ಮುಡುಕಲು' ನೋ.

**ಮುಡದಾರ** (ನಾ). (ಉಕ) ಬುದ್ಧಿವಾದವನ್ನು ಕೇಳದವನು; ಮೂಢ : ಇಷ್ಟು ದಿವಸ ನಿನಗೆ ಹೇಳುವವರು ಕೇಳುವವರು ಯಾರೂ ಇದ್ದಿಲ್ಲ . . .

ಅದಕ್ಕ ಈ ಮುಡದಾರ ಮುದುಕನ್ನ ತಂದೀರೇನು ? (ಬಾಂಧಾಯು. ೩೪) ; ಇಂಥಾ ನಮ್ಮ ಗೌಡರ ಉಪಕಾರ ತೀರಸದ ಮುಡದಾರ ಅನಿಸಿಗೋಳೋ ಜಾತಿ ನಮ್ಮದು ಅಲ್ಲ ತಗೀರಿ ! (ಗ್ರಾಮಾಯು. ೩೨೩).

[←ಪಾರ. ಮುರ್ದಾರ್ ; ಮರಾ. ಮುಡದಾರ್]

**ಮುಡದಾರಶಿಂಗಿ** ' ಮುರದಾರಸಿಂಗಿ ' ನೋ.

**ಮುಡದಾರಸಿಂಗ** ' ಮುರದಾರಸಿಂಗಿ ' ನೋ.

**ಮುಡದಾರಸಿಂಗಿ** ' ಮುರದಾರಸಿಂಗಿ ' ನೋ.

**ಮುಡಪು** ' ಮುಡಿಪು₃ ' ನೋ.

**ಮುಡಬ** ' ಮುಡುಬ ' ನೋ.

**ಮುಡಾವು** (ನಾ). ಒಂದು ಬಗೆಯ ಮೀನು : ನಿಮಗೆ ಬೇಕಾದ ಹೊಳೆಯ ಮೀನು, ಮುಡಾವು, ಅಬ್ರೋನಿ, ಕೂಸೆ, ಕಲ್ಲೂರು, ಕೊಂತಿ ಯಾವುದೂ ಇಲ್ಲ (ಹೂಸಕ್ಕ. ೩೪). [←ತುಳು. ಮುಡುವು]

**ಮುಡಿ₁** (ಕ್ರಿ). ೧. (ಹೂ ಮುಂತಾದುವನ್ನು ತಲೆಯಲ್ಲಿ) ಧರಿಸು ; ತಾಳು ; ಸೂಡು : ಪುಟ್ಟಿಗೆಯನುಟ್ಟು ಪೊಯ್ಯಂ ಪೂಸಿ ಪೂವಂ ಮುಡಿದು . . . ಪೊಱಮಡುತ್ತಂ (ಪಮ್ಪಾರಾ. ೦೨೩-೦) ; ಕಟ್ಟಿಮುಮ್ಮೋನೊ ಮಾಲೆಗಾಜನ ಪೊಸಬಾಸಿಗಂ ಮುಡಿವ ಭೋಗಿಗಳಿಲ್ಲದೆ ಬಾಡಿ ಪೋಗದೇ (ಅಪಃಪು. ೦-೪೩) ; ಕರುಳ ದಂಡೆಯನ್ನೈದೆ ಸಿರಿಮುಡಿಗೆ ಅಂದದಿಂದಲಿ ಮುಡಿದು (ಕುಮಾ್ರಸ. ೬೦೩. ೦೭-೪೩). ೨. (ತಲೆಗೂದಲನ್ನು) ಗಂಟು ಹಾಕು : ಮುಡಿಯಂ ಪಿಡಿದೆಱದವನಂ ಮುಡಿಯಿಸಿ ಮತ್ತವನ ಕರುಳ ಪಿಣಿಲಿಂದೆನ್ನಂ ಮುಡಿಯಿಸುವಿನೆಗಂ ಮುಡಿಯಂ ಮುಡಿಯೆಂ ಗಡ (ಶಂಕಥಾ. ೬-೦೦) ; ಮರುಳಂತೆ ಮರುಳೆ ತಲೆಯಂ ಪರಪಿರದೆ ಮನೋನುರಾಗದಿಂ ಮುಡಿ ಮುಡಿಯಂ (ಧರ್ಮಾಮೃ. ೩-೧೨೭). ೩. ಮುಗಿ ; ತೀರು ; ಕೊನೆಗೊಳ್ಳು : ಅದೊಡೆ ಬಲ್ಗತೆ ಕಣಾ ! ಒಂದೆರಟ್ಟಿವಸಕ್ಕೆ ಮುಡಿಯದು (ರಾಮಾಶ್ವ.೩-೦೦). ೪. ನಿವಾರಣೆಯಾಗಂ; ಪರಿಹಾರವಾಗು: ಈವುಪಚಾರ ದಿನಾತನ ಪಸಿವುಂ ಬಟಲ್ಕೆಯುಂ ಮುಡಿಯೆ (ರಾಮಾಶ್ವ. ೦-೦೨). ೫. ಇಲ್ಲವಾಗು ; ನಾಶವಾಗು : ಅಂತು ತನ್ನ ಪಗೆಯುಂ ಬಗೆಯುಂ ಮೊದನೊಡನೆ ಮುಡಿಯೆ (ಶಂಕಥಾ. ೦೨-೦೩೩ ಪ) ; ಕೆಡುವಂತಿದ್ದಿತೇ ಕೌರವನ ರಾಜ್ಯ ಮುಡಿವಂತಿದ್ದಿತೇ ರಾವಣನ ಬಲ್ಲಾಳಿಕೆ (ಸವಾಪ. ೦-೦೩). ೬. ಸಾಯು ; ಗತಿಸು : ' ಮುಡಿಪು₁ ' ಪರಾ. ೭. ಸಾಧ್ಯವಾಗು ; ಶಕ್ಯವಾಗು : 'ಕೈ ಜಾತಕ್ಕೂ ಮುಡಿಯ' ಎಂದು ಐತಾಳರು ಎಣ್ಣೆ ಸವರಿಕೊಂಡು ಉಜ್ಜುತ್ತಿದ್ದಾರೆ (ಮರಪ. ೩೩).

[ದೇ.॥ ತಮಿ. ಮಲೆ. ಮುಟಿ; ತುಳು. ಮುಡಿ; ತೆಲು. ಮೂಡು]

**ಮುಡಿ₂** (ನಾ). ೧. ತಲೆಯ ಕೂದಲು; ತಲೆಗೂದಲು : ಮುಡಿಯ ಸಂವರಿಸುಲೆ ಸೀರೆಯನುಡು ನವಾಂಬರವಿದೆ (ಕುಮಾ್ರಕ. ೩-೦೮). ' ಒಳ್ಮುಡಿ ' ಪರಾ. ೨. ಕಟ್ಟು; ಗಂಟು : ಅವರ ಕೈಕಾಲುಗಳನ್ನು ಮುಡಿ ಹಾಕಿ ಬಿಗಿದರು (ವಂಶವೃ. ೪೩೪). ೩. ಕಟ್ಟಿದ ತಲೆಗೂದಲು; ತುರುಬು : ಮುಡಿ ಮಕರಧ್ವಜಂಬೊಲೆಬಲುತ್ತಿರೆ (ಶಂಕಥಾ. ೪-೯೦) ; ಸುರರಮಣಿಯರ ಮುಡಿಗೆ ಮಲ್ಲಿಗೆಯರಲುಗಳವೊಲು . . . ರಂಜಿಸಿತು (ಜಾಳ್ಮಥಾ. ೩೩-೬೭) ; ಬರುತಿದೆ—ಸಡಲಿಸಿ ಮಡದಿಯರುಡಿಯನು ಮುಡಿಯನು . . . ತೆಂಕಣಗಾಳಿಯು (ಕುಪು. ೨೯-೩): ' ಮುಡಿಯಿಕ್ಕು ' ಪರಾ. ೪. ತಲೆ; ಶಿರಸ್ಸು : ಪರ ಜಂಗಮಕೆ ಮಾನಕಂಜನಣುಗೆಯ ಮುಡಿಯನರಿದಿತ್ತು (ಶಂಪು. ೩೩-೪೧) : ನಿನ್ನಡಿಯಾಣತಿಯನೆನ್ನ ಮುಡಿ ಯೊಳಾಂತೆನು (ಹರಿಶ. ೧-೪೪) ; ಅವಳು ಅಡಿಯಿಂದ ಮುಡಿಯವರೆಗೂ ನಡುಗಿಬಿಟ್ಟಳು (ಬಾಣಿಕ. ೩೯೪). ೫. ಕಿರೀಟ ; ಮಕುಟ : ಆ ಕುರು ಜಾಂಗಲವಿಷಯ ಮಹೀಕಾಂತೆಗೆ ಪೊಸತೆ ಸಮೆದ ಮುತ್ತಿನ ಮುಡಿ ಧಾತ್ರೀಕರ್ಣಪೂರಮುಪನಿಸ್ತ್ರೀಕರ ಲೀಲಾಂಬುಜಂ ಧರಿತ್ರೀತಿಳಕಂ (ಶಾಂತಿಪು. ೯-೦೩೯) ; ಮಕುಟಬದ್ಧರ ಮುಡಿಯ ರತ್ನಪ್ರಭೆಗಳಿ ಜಿರ್ಝರಿತ ತನುವಾಯ್ತು (ಕುಮಾ್ರರಾ. ೦೩-೨೭) ; ನೃಪ ಎಂಬ ಹೆಸರೊಡನೆ ಮುಡಿಯೊಂದನಾಂತೊಡನೆ ಕಳ್ಳರೊಡೆಯನು ಕೃಪೆಯ ಮೂರ್ತಿಯೇನು? (ಕೋಗಿಲೆ. ೦೩-೯). ೬. ತುದಿ ; ಶಿಖರ : ಮೂಡುವೆಟ್ಟಿನ ಮುಡಿಯ ತಪನೀಯಮಣಿಯಂತೆ ತಳತಳಿಸುತಿರ್ಪುದಯ ತಪನಬಿಂಬದಿ ಮೂಡಿ (ತಪ್ಪಾಂಗ. ೭-೦೬೦). ೭. ಸುಮಾರು ನಲವತ್ತೆರಡು ಸೇರು ಧಾನ್ಯದ ಅಳತೆಯ ಪ್ರಮಾಣ : ಹಾನೆ ೪೦ಕೆ ಮುಡಿ ೧ಲೂ ಮುಡಿ ೯ ಎಂಬತ್ತು ಮುಡಿ ಅಕ್ಕಿಯನು . . . ಕೊಟ್ಟು (ಪ್ರಕಾ. ೦೪೪೩, ೩೪-೩೦ ; 1673) ; ೧೪ ಕುಡವಕ್ಕೆ ೧ ಮುಡಿ, ೨೦ ಮುಡಿಗೆ ೧ ಖಂಡಗ (ಕಥಾಗ. ೨೯೦) ; ಒಂದು ಮುಡಿಯಲ್ಲಿ ಒಂದು 'ಮುರ' ಅಕ್ಕಿ ಇರುತ್ತದೆ. ಒಂದು ಮುರ ಎಂದರೆ ಎಂಬತ್ತು ತೊಲ ತೂಕದ ೪೨ ಸೇರು ಅಕ್ಕಿ (ಕೃಷಾಇ. 11, ೨೬೭). ೮. ಸುಮಾರು ನಲವತ್ತೆರಡು ಸೇರಿನ ಅಳತೆಯ ಧಾನ್ಯವನ್ನು ತುಂಬಿ ಕಟ್ಟುವ ಹುಲ್ಲಿನ ಚೀಲ : ಬೀಜಕ್ಕೆ ಇಡತಕ್ಕ ಬತ್ತವನ್ನು . . . ೭ ದಿನ ಒಣಗಿಸುವರು. ಇಷ್ಟಾದ ಮೇಲೆ ಮುಡಿಗಳನ್ನು ಕಟ್ಟಿ ಮನೆಗೆ ತರುವರು (ಮುಂಬಯು. ೩-೨೦೨). ೯. ಮೂಟೆ ; ಹೇರು ; ಹೊರೆ : ಅಣಿಮುತ್ತಿನ ಜಾಳಿಗೆಯೇಂ! ಕಸ್ತೂರಿಯ ಪೊಱೆಯೇಂ ! ಕಪ್ಪುರದ ಮುಡಿಯೇಂ ! (ರಾಮಾಶ್ವ. ೦೭೩-೦೭). ೧೦. ಕೊನೆ ; ಮುಕ್ತಾಯ : 'ಮುಡಿಗೊಳ್', 'ಮುಡಿವು' ಪರಾ. ೧೧. ಬೆಳ್ಳಿ ಅಥವಾ ಹಿತ್ತಾಳೆಯಿಂದ ಮಾಡಿದ ಬಳೆಯಾಕಾರದ ಟೊಳ್ಳು ಭಾಗದ ಒಳಗೆ ನಿರ್ದಿಷ್ಟವಾದ ಕೆಲವು ಸಸ್ಯಮೂಲಿಕೆಗಳನ್ನು ತುಂಬಿ, ತೋಳಿಗೆ ಕಟ್ಟಿಕೊಳ್ಳುವ ಒಂದು ಬಗೆಯ ರಕ್ಷಾ ಸಾಧನ : ತಡ ಕಟ್ಟುವವನ ಮುಂದೆ ಮುಡಿಭೇನು ? (ಗಾದ). ' ಮುಡಿಬಳೆ ' ಪರಾ. ೧೨. (ಅಲಂ) ಒಗಟು ; ಪದಿರು : ಪ್ರಮೀಳೆ ನಿಮಗೆ ಒಡಹುಟ್ಟಿದವಳಾದಳೆನ್ನೇನೆನಲ್ಕವಳ ಮುಡಿಯ ಮಾತಂ ಕೇಳ್ದು ಮೊಳೆವ ನಸುನಗೆಯ ಬೆಳ್ಪಡಿಯೆ (ಕ್ಕೈಮಿಭಾ. ೩೩-೦೪). ೧೩. [ಛಂದ] ಚರಣದ ಕೊನೆಗೆ ನಿಂತು ಮುಕ್ತಾಯವನ್ನು ತರುವ ಅಕ್ಷರ : ಚರಣದ ಕೊನೆಗೆ ನಿಂತು ಅದಕ್ಕೆ ಮುಡಿವು ಕೊಡುವ ಅಕ್ಷರಕ್ಕೆ "ಮುಡಿ" ಎಂಬ ಹೆಸರನ್ನು ಇಲ್ಲಿ ಕೊಡಲಾಗಿದೆ (ಕವಿರಾಮಾ. ೨೧೦) ; ಇದರಿಂದ ಆ ಗಣದ ಪೂರ್ವಾರ್ಧವು ಮೊದಲ ಒಳಪಾದಕ್ಕೆ "ಮುಡಿ"ಯಾಗಿಯೂ . . . ನಿಂತುಕೊಂಡಿತು (ಸಃಕೋಶ. ೦೯೭).

**ಮುಡಿಕೊಡಿಸು** = ದೇವರಿಗೆ ಕೊಡುವೆನೆಂಬ ಹರಕೆ ಹೊತ್ತು ತಲೆಯ ಕೂದಲನ್ನು ಅರ್ಪಿಸು : ಮಗೂಗೆ ಮನೆದೇವರ ಗುಡಿಯಲ್ಲೇ ಮುಡಿಕೊಡಿಸ್ತೀವಿ (ಮನೋಸಂ. ೧೩೨). **ಮುಡಿಕೊಡು** = ದೇವರಿಗೆ ಕೊಡುವೆನೆಂಬ ಹರಕೆ ಹೊತ್ತು ತಲೆಗೂದಲನ್ನು ಕೊಡು : ಈ ಕೆಲಸ ಸುಸೂತ್ರವಾಗಿ ಮುಗಿದರೆ ನಂಜನಗೂಡು ನಂಜುಂಡೇಶ್ವರನಿಗೆ ಮುಡಿಕೊಡುವ ಹರಕೆಯನ್ನು ಹೊತ್ತಿದ್ದೆ (ಚೂಡ). **ಮುಡಿಗಂಟು** = (ಕುಣಿಕೆ ಹಾಕಿ) ಕಟ್ಟುವ ಗಂಟು : ಅಕ್ಕ_ಪಕ್ಕದ ಮನೆಯ ಗಂಡುಸರು ಬಂದು ಈ ದುರ್ಯೋಧನನ ಮುಡಿಗಂಟನ್ನು ಬಿಚ್ಚಿದ ಮೇಲೆ, ಅವರನ್ನು ಕಟ್ಟಿದವನು ಗಂಧರ್ವನಲ್ಲದೆ ಅವರ ತಮ್ಮ ಕಿಟ್ಟಪ್ಪನೇ ಎಂದು ತಿಳಿದು ಮನಸ್ಸಿನೊಳಗೇ ನಕ್ಕರು (ವಂಶವೃ. ೪೩೩). **ಮುಡಿಬಿಡು** = ೧. ತುರುಬು ಕಟ್ಟದೆ ಕೂದಲನ್ನು ಇಳಿಬಿಡು : ಕರಮೆಸೆದರಬಲೆಯರ್ ನೋಟಕರ ಮನಮೊಸೆಯೆ ಮುಡಿಬಿಟ್ಟು ಸೋಗೆ ನವಿಲಂತೆ ಸೊಗಯಿಸಿ ತೋಱೆ (ಅಜಿತ. ೪-೭ ರಗಳೆ). ೨. ದೇವರಿಗೆ ಮುಡಿಕೊಡುವ ಹರಕೆ ಹೊತ್ತು ತಲೆಯ ಕೂದಲನ್ನು ಕತ್ತರಿಸದೆ ಬೆಳೆಯಲು ಬಿಡು : ಕೊಂಡ ಹಾಯುವ, ಮುಡಿ ಬಿಡುವ, ಬಾಯಿಬೀಗ ಚುಚ್ಚಿಸಿಕೊಳ್ಳುವ ಸಂಪ್ರದಾಯ . . . ಚಾಲ್ತಿಯಲ್ಲಿದೆ (ಸಂಜುಂತ. ೦೩೪).

[< ಮುಡಿ₁./ತಮಿ. ಮುಟಿ; ಮಲ. ಮುಟಿ, ಮುಟಿ; ತುಳು. ಕೋಲಾ. ಮುಡಿ ; ತೆಲು. ಮುಡಿ ; ಮುಡಿಯು]

**ಮುಡಿಕಟ್ಟು** 'ಮುಡಿಗಟ್ಟು₂' ನೋ.

**ಮುಡಿಕು** 'ಮುಡುಕ್ಕು' ನೋ.

**ಮುಡಿಗಂಪು** (ನಾ). ತಲೆಗೆ ಹಚ್ಚಿದ ಸುಗಂಧತೈಲ, ಮುಡಿದ ಹೂವು ಮುಂತಾದವುಗಳ ವಾಸನೆ : ಮುಡಿಗಂಪಿಂಗಾರ್ದು ಸಾರ್ತಂದೆಜಗೆ ವಜ್ಜಮೆಗಳ್ . . . ಮಣಿವಳವರ ದಿವ್ಯಾಂಘ್ರಿಯೊಳ್ ದೇವಿಯಾಗಳ್ (ರಾಜಶೇ. ೯-೨). [ಮುಡಿ₂ + ಕಂಪು]

**ಮುಡಿಗಚ್ಚು** (ಕ್ರಿ). (ಛಲ, ಕೋಪ ಮುಂತಾದುವುಗಳಿಂದ) ಎರಡು ಸಾಲುಗಳ ಹಲ್ಲುಗಳ ತುದಿಯು ಒಂದಕ್ಕೊಂದು ತಾಗುವಂತೆ ಕಡಿ : ಮಗರ ಅರಬಸ್ ಮತ್ತೆ ಬ್ಯಾಕ್ಟ್ರಿಯರ ಅರ್ತಮಿಾಸ್ ಆ ಕರೆಯ ಮಣ್ಣ ಮುಡಿಗಚ್ಚಿ ಸತ್ತೊಡಂ ಬಿಡೆವೆಂದು ಕಾದಿರ್ದ್ದರ್ (ಕಾರಸಿ. ೦೪-೩೦೪). 'ಹಲ್ಲುಮುಡಿ' ಪರಾ. [ಮುಡಿ₂ + ಕಚ್ಚು₁ (< ಕರ್ಚು₁)]

**ಮುಡಿಗಟ್ಟು₁** (ಕ್ರಿ). ೧. ತುರುಬನ್ನು ಕಟ್ಟು; ಕೇಶಾಲಂಕಾರಮಾಡು : ಒರ್ವ ಮಡದಿ ಬಳ್ಳಿಸೊಳಬಲೆಗೆ ಮುಡಿಗಟ್ಟಿದಲ್ ಮುಡಿಗಟ್ಟುವಂತೆ ನೋಡುವರೆರ್ದೆ (ತ್ರಿಕುಚು. ೩೨-೪೨) ; ಮತ್ತೆ ಮುಡಿಗಟ್ಟಿ ಹೂಮುಡಿದು ಅಲಂಕರಿಸಿಕೊಂಡ ದ್ರೌಪದಿ . . . ಕಳೆಗೊಂಡು ಶೋಭಿಸಿದಳು (ಭಾಮುಕ. ೬೧). ೨. ತುರುಬನ್ನು ಕಟ್ಟಿಕೊಳ್ಳು : ಕವಲಿಜಿಂದು ನೀಳ್ಕೆ ಬೆಂಬಿಸದಿಳಿವ ಕುಂತಳಂ ಕಾಮನ ಪತಾಕೆಯಂತಿರೆ ಮೆಜೆವ ಮುಡಿಗಟ್ಟಿ ಕೋಮಳೆಯು ಲಾವಣ್ಯರಸವಲ್ಲಿ ಮಡುಗಟ್ಟಿ (ಮಾಹರ. ೮೮. ೦೬೪-೦). ೩. ಹೊರೆಗಟ್ಟು; ಪೆಂಡಿಗಟ್ಟು : ನಿಮ್ಮುಮಂ ಸೀಳಿ ಪೊಳ್ಳೆಲ್ಲಿದು . . . ಮೂಗರಿದು ಮುಡಿಗಟ್ಟುತ್ತ (ಸವಪೋ. ೯-೩೦). [ಮುಡಿ₂ + ಕಟ್ಟು₁]

**ಮುಡಿಗಟ್ಟು₂**. ಮುಡಿಕಟ್ಟು (ನಾ). ೧. ತಲೆಗೆ ಕಟ್ಟಿಕೊಳ್ಳುವ ವಸ್ತ್ರ; ಪಾಗು; ರುಮಾಲು : ಎಲ್ಲರುಮಸೊಂದೆ ಸಮ್ಮೋಹನಾಸ್ತ್ರದಿಂ ಮೋಹಿಸಿ ಮೂರ್ಧಾಭಿಷಿಕ್ತರ ಮುಡಿಗಟ್ಟಿನ ಪಟ್ಟೆಗಳನುಗಿಪಟಂಗೊಂಡು (ಜಗ. ೦೪-೩ ವ) ; ಬೆನ್ನಬಿತ್ತಳಿಕೆಯ ಸುತ್ತಿದ ಕೀಲಿಯು ಮುಡಿಗಟ್ಟಿನ ಪಟ್ಟೆಯು . . . ಸಿಂಗರಂಬೆರಸಿ (೧೦೪. ೬-೩೩ ವ). **ಮುಡಿಕಟ್ಟು :** ೨. ಕೂದಲನ್ನು ಸೇರಿಸಿ ಹಾಕಿದ ಗಂಟು ; ಮುರಿದಣಿಕ್ಕಿದ ಗಡ್ಡಮಿಾಸೆ ಮುಡಿಕಟ್ಟಂ ತಲ್ತ ಕೆಂಬಟ್ಟೆ (ಗಸಂಪು. ೦-೦೬೩). ೩. ತಲೆಗೆ ಧರಿಸುವ ಒಂದು ಬಗೆಯ ಆಭರಣ : ಮುತ್ತಿನ ಮೂಗುತಿ ಮುಡಿಕಟ್ಟು ಭುಜಕೀರ್ತಿ ವೃತ್ತಕುಚದ ನಡುವೆಸೆವ ಕಸ್ತೂರಿಯಬೊಟ್ಟಿನ ಕಾಂತೆಗೊಲಿಯುದನ ವೃತ್ತಾಂತವನುಸುರುವೆನು (ಕುರಾಸಾಂ. ೦-೦೦೮). [ಮುಡಿ₂ + ಕಟ್ಟು₂]

**ಮುಡಿಗವಿ** (ಕ್ರಿ). ಕಿರೀಟವನ್ನು ಇಡು ; ಮಕುಟವನ್ನು ತೊಡಿಸು : ಮೃಗಮದಸಲಿಲದೊಳ್ ಪೊಲ್ಲಮೆಲ್ಲನುಳ್ಳಲರ್ದು ಚೆಲ್ವಿಂಗೆ ಮುಡಿಗವಿವಂತೆ ಶೋಜುವ ತೋರಮಲ್ಲಿಗೆಯ ಮುಡಿಯುಮೆಸೆಯೆ ಕೈಗೆಯ್ದಾಗಳ್ (ಆವಪು. ೯-೯೦ ವ) ; ನಮುನಕುವಲಯಮಾಲೆಯುಮನಾಂತು ಬಬಿಲ್ಲುಡಿ ಚೆಲ್ವಿಂಗೆ ಮುಡಿಗವಿವಂತೆ ಸೊಗಯಿಸೆಯುಂ (ಕಂರಾಮಾ. ೩-೬೭ ವ). [ಮುಡಿ₂ + ಕವಿ₁]

**ಮುಡಿಗಾಜಿ** (ನಾ). ಸಮಸ್ಯೆಯನ್ನು ಒಡ್ಡುವವನು : ಕಡುದುರುಳತನದಿ ಮುಚ್ಚರವನೊಲಿದಿಚ್ಛೈಪ ಮುಡಿಗಾಜಿರ್ವರ್ಗೆ ಕಿಚ್ಚಿಕ್ಕಿ ಶಿವಕವಿನಿಕರವಡಿ ವಿಡಿದು ನಡಸುವೆನು ವ್ಯಾಡಸೊಲ್ಮೆಯಂ ಪಡೆವ ರಾಘವಾಂಕನ ಚರಿತವ (ರಾಶಿತ. ೦-೦೬). [< ಮುಡಿಗೆ + — ಕಾಜಿ]

**ಮುಡಿಗಾಜಿಕೆ** (ನಾ). ೧. ದ್ವಂದ್ವಾರ್ಥವುಳ್ಳ ಮಾತು (?) : ಮುಡಿಗಾಜಿಕೆಯ ನುಡಿಗಳಲ್ಲ ಕೇಳ್ನಿನ್ನಾಣೆ (ಪ್ರಭುಪು. ೩-೩೩) ; ೨. (?) : ಊರೊಳಗೆ ಪರರಲ್ಲಿ ಸಾಲಮಂ ತೆಗೆದು ಮುಡಿಗಾಜಿಕೆಯೊಳೋಡಿ ಬಂದಾ ಸೊನ್ನಲಾಪುರದೊಳತಿಸಾಧುಸಜ್ಜನಸದಾಚಾರಿಯೊಲು ಬಿಲ್ಲೇಶಬೊಮ್ಮಯ್ಯನುಂ . . . ಸೇವೆಗೆಯ್ಯುತ್ತಿರ್ದ (ರಾಶಿಶ. ೦೩-೩೪). [ಮುಡಿಗಾಜಿ + — ಇಕೆ]

**ಮುಡಿಗೆ** 'ಮುಂಡಿಗೆ₃' ನೋ.

**ಮುಡಿಗೆದರು** (ಕ್ರಿ). ತಲೆಕೆದರು ; ಕೂದಲು ಹರಡಿಕೊಂಡಿರು : ಶ್ರೀ ತಪೋಧನರು ಜರ್ಜರಿಸಿ . . . ವ್ಯಾಘ್ರಾಸನವ್ರಾತಗಳನುಳಿದು ಮುಡಿಗೆದರಿ ನಿಡುಜಡೆಗಳೆಳೆವುತ್ತೆಯುತಿಭಯದಿ ಪರಿದು (ಶವಪೋ. ೬-೨೪) ; ನಿಂತಿರುವಳು ರಣರಂಗದಲಿ ದ್ರೌಪದಿ ಮುಡಿಗೆದರಿ (ಶಾಂತಶ. ೦೩-೨೦). [ಮುಡಿ₂ + ಕೆದರು (< ಕೆದಱು₁)]

**ಮುಡಿಗೆಯಿಡು** (ಕ್ರಿ). ಆಣೆಯಿಡು ; ಪ್ರಮಾಣಮಾಡು : 'ಕೈಮೇಲೆ ಕೈಯಿಟ್ಟು ಭಾಷೆಕೊಡು' ಎಂದು ಮುಡಿಗೆಯಿಟ್ಟು . . . ಶಪಥ ಮಾಡಿದ ರಂತೆ ! (ಮರೆವು. ೩೦೩). [ಮುಡಿಗೆ (< ಮುಂಡಿಗೆ₃) + ಇಡು₁]

**ಮುಡಿಗೊಳ್** (ಕ್ರಿ). ಕೊನೆಯಾಗು ; ಪೂರ್ಣಗೊಳ್ಳು : ನಿನಗೆ ನಾನ್ ನಚ್ಚಿತ್ತು ಸಂತೈಸೆನಿಂದು, ತಜಿಸಂದ ತೀರ್ಪಿಂತು ಮುಡಿಗೊಳ್ವದೆಂದು (ಅಂತಿಗೊ. ೪೨-೬೭೩). [ಮುಡಿ₂ + ಕೊಳ್₁]

**ಮುಡಿಗೊಳಿಸು** (ಕ್ರಿ). ತುರುಬು ಕಟ್ಟಿಕೊಳ್ಳು : ಕದರ್ದ ಕುಂತಳಮಂ ಮುಡಿಗೊಳಿಸಿ . . . ರತಿಯು . . . ಪ್ರಳಾಪಿಸುತೆ ಬರುತಿರ್ದಳು (ಶವಪೋ. ೬-೬೩). [ಮುಡಿ₂ + ಕೊಳ್₁ + — ಇಸು₃]

**ಮುಡಿದಂಡೆ** (ನಾ). ತುರುಬಿಗೆ ಮುಡಿಯುವ ಹೂವಿನ ಮಾಲೆ : ಕಡುಹರುಷದ ಜಡೆಯೆಡೆಯೊಳು ಗಂಗೆಯು ಮುಡಿದಂಡೆಯಾಗಿ ಧರಿಸಿದ . . . ಚೆನ್ನನಂಜುಂಡನಡಿದಾವರೆಗೆಜಗುವೆನು (ಕಂಪಶಿ. ೦-೭).
[ಮುಡಿ₁ + ದಂಡೆ₁]

**ಮುಡಿದಲೆ** (ನಾ). ಕಿರೀಟವನ್ನು ಧರಿಸುವ ತಲೆ : ಜೆಡೆದಲೆಗೆ ಕೊಟ್ಟನು ಮುಡಿದಲೆಯನೆನಲಲಘುಮತಿ ಕರವೂರ ಚೋಳನ ಭೃತ್ಯರಾಳಾನು (ಬಸಪು. ೨೭-೩೮) ; ಪಗಲ್ಪೋಳನೆಂದೆಂಬ ಧಾರುಣೀಶಂ ಜಡೆಯ ತಲೆಗೆ ಮುಡಿದಲೆ ಯಿತ್ತು ಕಾರುಣ್ಯಸಾಗರನ ಕೈಲಾಸಮಂ ಪೊಕ್ಕನು (ಚೆಂಪು. ೩೩-೩೦). 'ಜಡೆದಲೆ' ಪರಾ. [ಮುಡಿ₂ + ತಲೆ₁]

**ಮುಡಿನಾಳಿ** (ನಾ). ಧಾನ್ಯವನ್ನು ತುಂಬಿ ಬಾಯಿ ಕಟ್ಟಿರುವ ಮೂಟೆಯಿಂದ ಪರೀಕ್ಷಾರ್ಥವಾಗಿ ಧಾನ್ಯವನ್ನು ಹೊರತೆಗೆಯಲು ಬಳಸುವ ಚೂಪಾದ ಸಾಧನ; ಸಕ್ಕರೆಗುತ್ತಿ; ಚಕ್ರಗುತ್ತಿ : (ಕಸಂಗ್ರ. ೬೯).
[ಮುಡಿ₂ + ನಾಳಿ₁ (=ನಾಲಿ)]

**ಮುಡಿಪಿಕ್ಕು** (ಕ್ರಿ). (ದೇವರ ಹೆಸರಿನಲ್ಲಿ) ಯಾವುದಾದರೊಂದು ವಸ್ತುವನ್ನು ನಿರ್ದಿಷ್ಟ ಉದ್ದೇಶಕ್ಕಾಗಿ ತೆಗೆದಿಡು ; ಮೀಸಲಾಗಿರಿಸು : ಮುಡಿಪಿಕ್ಕಬೇಕೆಂದೂ ಮದ್ದೇ ಆಗಬೇಕೆಂದೂ ಕೆಲವರು ಹೇಳುತ್ತಿದ್ದಂತೆ ಒಬ್ಬನು ಮದ್ದೊಂದನ್ನು ಸಿದ್ಧಪಡಿಸಿದನು (ಕಾಲೂರ. ೧೪ ಕಥಾಸಾರ).
[ಮುಡಿಪು₂ + ಇಕ್ಕು]

**ಮುಡಿಪಿಡು.** ಮುಡುಪಿಡು (ಕ್ರಿ). = ಮುಡಿಪಿಕ್ಕು : ನನ್ನ ಧ್ಯೇಯ ಸಾಧನೆಗಾಗಿ ಮುಡಿಪಿಟ್ಟ ಜೀವನ ನನ್ನದು (೦೬ಶಶ. ೦೪೨) ; ಸತ್ಯವರನೆಂಬ ವೀರವರನೆಂಬ ಮಗನು ತನ್ನ ಶಿರವನ್ನು ಕೊಯ್ದು ದೇವಿಗೆ ಮುಡಿಪಿಟ್ಟನು (ಶಪಶಾ. ೯೬). **ಮುಡುಪಿಡು :** ಅದರ ಕೊನೆಮುಟ್ಟಲು ಒಂದೇ ಉಪಾಯ ನನ್ನ ಜೀವನವನ್ನು ನಿನಗೆ ಮುಡುಪಿಟ್ಟು ಧಾರೆಯೆರೆಯುವುದು (ಜಗದಾ. ೦೨) ; ಏಳೇಳು ರಾಜಕುವರ ಮನುಕುಲದ ಕಲ್ಯಾಣಕಾಗಿ . . . ಅದಕಾಗಿ ನಿನ್ನ ಜನನ ಮುಡುಪಿಡಲು ಬೇಕು ಪ್ರಾಣ (ಸ್ಮರಣೀ. ೭).
[ಮುಡಿಪು₂ + ಇಡು₁]

**ಮುಡಿಪು₁.** ಮುಡಿಪ್ಪು, ಮುಡಿಪು, ಮುಡುಪು₁, ಮುಡುಪು₁ (ನಾ). ೧. [ಜೈನ] ನೋಂಪಿಯ ಮೂಲಕ ಗತಿಸು,— ಸಾವನ್ನು ಹೊಂದು : ಗೋವರ್ಧನಭಟ್ಟಾರರ್ ಸಮಾಧಿಮರಣದಿಂದಂ ರತ್ನತ್ರಯುಮಂ ಸಾಧಿಸಿ ಮುಡಿಪಿ ದೇವಲೋಕಕ್ಕೆಯ್ದಿದರ್ (ವಡ್ಡಾರಾ. ೭೪-೨೮) ; ಘೋರವೀರತಪದೊಳ್ ತನುವಂ ಬಡಮಾಡಿ ನೋಂಪಿಯೊಳ್ ಮುಡಿಪಿ

(ಅವಿಪು. ೩-೯೦). **ಮುಡಿಪ್ಪು:** ೧. ಶ್ರೀ ಅಗಟಿಯ ಮೋನಿಗುರುವರ ಶಿಷ್ಯ ಕೊಟ್ಟುರದ ಗುಣಸೇನಗುರುವನ್ನೋರ್ನಸ್ತು ಮುಡಿಪ್ಪಿದಾರ್ (ಎಕ. II. ೯-೨ ; 700). **ಮುಡಿಹು :** ೧. ಮಾವಣ್ಣನ ಸಿಷ್ಯರುಂ ಸನ್ಯಸನಗೆಯ್ದು ಮುಡಿಹಿದ ನಿಸಿದಿ (ಎಕ. VI, ಶಕ್ಯಪು. ೩೦-೬ ; 1116) ; ಗೋಕವೆಯ ಮಗಳು ಸ[ಮಾ]ಧಿವಿಧಿಯಿಂದ ಮುಡಿಹಿ ಸ್ವರ್ಗಸ್ತೆಯಾದಳು (ಪ್ಕಅಂ. ೧೯೯೦, ೩೦-೬ ; ಸಂ. 12ನೆಯ ಶತ). **ಮುಡುಪ್ಪು$_1$:** ೧. ನಿಜಾಯುರವಸಾನದೊಳ್ ಸಮಾಧಿವಡೆದು ಮುಡುಪಿ ಸೌಧರ್ಮಕಲ್ಪದೊಳ್ ಸಾಮಾನಿಕ ದೇವರಾದೊರ್ (ಶಾಂತಿಪು. ೬-೮೬ ವ) ; ತಪದಿಂ ತಾಚಿದ ತನುವಂ ನಿಧಾನದಿಂ ಮುಂ ಬಿಟ್ಟಂ ಅಂತು ಮುಡುಪಿ (ಅಪಂಪು. ೦೨-೩೩ ವ) ; ಹರಿಪಯನು ಸಮಾಧಿಇಂ ಮುಡುಪಿ ಸರ್ಗಪ್ರಾಪ್ತನಾದ (ಕಇ. IV, ೯-೬ : 1292), **ಮುಡುಹು$_1$ :** ೨. ಸಾಯುವಂತೆ ಮಾಡು ; ಕೊಲ್ಲು ; ಸಾಯಿಸು : ಕಲಿಕರ್ಣನೀಗಳೆ ಮುಡುಹುವನು ಪವನಜನನೊಂದರೆ ಘಳಿಗೆಮಾತ್ರದಲಿ (ಕುವ್ಯಾಕ. ೧೯-೨೩). [ಮುಡಿ$_1$ + —ಪು$_1$]

**ಮುಡಿಪ್ಪು$_2$**, ಮುಡಪು, ಮುಡುಪ್ಪು$_2$ (ನಾ). ೧. ಹೊರೆ ; ಮೂಟೆ : ರತ್ನಾಭರಣರಾಶಿಗಳ ಚೀತಾಮಣಿಯ ಮುಡಿಪುಗಳ ಫರುಷದ ಕಣೆಯ ತನತನಗೆ ಒಡೆದು (ಗಿಕ. ೦೦-೭೭ ವ). ೨. ಚೀಲ ; ಸಂಚಿ : ಮುಡುಪಿನೊಳಗೆ ಇಟ್ಟ ಕೈಜೀತವು (ಪುರಂದ. ೨-೦೩-೯). ೩. (ವಿಶೇಷವಾಗಿ ದೇವರ ಹೆಸರಿನಲ್ಲಿ ಹರಕೆಹೊತ್ತು) ಒಂದು ನಿರ್ದಿಷ್ಟ ಉದ್ದೇಶಕ್ಕಾಗಿ (ಬಟ್ಟೆಯ ಗಂಟಿನಲ್ಲಿ) ಪ್ರತ್ಯೇಕವಾಗಿ ತೆಗೆದಿರಿಸಿದ ಹಣ, ಒಡವೆ ಮುಂತಾದ ವಸ್ತು ; ಮೀಸಲು : ಎನ್ನೊಡೆಯನನ್ ಮುಳಿದು ರುದ್ರನೇ ಪೊಯ್ದನೋ . . . ತನಗೆ ಮುಡಿಪನ್ ಕಟ್ಟಿ ತಂದುದಿಲ್ಲೆಂದು ? (ಅಕ್ಕಕಾ. ೬-೭) ; ದೇವರ ಹೆಸರಿನಲ್ಲಿ ಮುಡಿಪು ತೆಗೆದಿಟ್ಟು ಬರುವ ಪ್ರಯತ್ನ ಮಾಡುತ್ತಿದ್ದೆ (ಶದ್ಯಕ. ೨೦೩). ೪. ಒಬ್ಬ ವ್ಯಕ್ತಿಗೆ ಮೀಸಲಾಗಿರುವುದನ್ನು ಸೂಚಿಸುವ ಪ್ರೀತಿಯ ಗುರುತು : ಕುರುಳೊಳ್ ಕೊಂಕಿದ ಭಂಗಿಯಂ ಸಮಚಿ ವಕ್ಷೋಜಂಗಳೊಳ್ ಚಿತ್ರಮಂ ಬರೆದೊಪ್ಪುತ್ತಿರೆ ಪಚ್ಚೆಮಾಲೆ ಮುಡಿಪಿಂಗೊಲ್ದಿಕ್ಕೆ ಮುಂಗೈಗೆ ಬೊಪ್ಪರವಂ ಮುಟ್ಟಿ ಮುಸುಂಕಿ ದಂತವಲಯಂ ತಳ್ತೊತ್ತಿದಳ್ ಬೇಟಮಂ ಕರೆದಳ್ ಕೂರ್ತು ಬೊಜಂಗನೊಲ್ಲದುಟಿವಂ (ಅಪಂಪು. ೬-೦೯). **ಮುಡಪು :** ೩. ಆಚಂದ್ರಾರ್ಕಸ್ಥಾಯಿಯಾಗಿ ಸೋಮೇಶ್ವರದೇವರ ಮುಡಪಿಜ್ಗೆ ಭಂಡಾರಕೆ ಸಲುವುದು (ಎಕ. III, ತಂಜನ. ೦೬೩-೬ ; ?). **ಮುಡುಪ್ಪು$_2$ :** ೧. ಒಡವೆಯೊಳಗರೆ ಕಾಣೆಯುಂ ಸವೆದಡೆ ಬಳಿಕ ನಾಂ ಭಕ್ತನಲ್ಲೈ ಮುಡುಪಿನೆಣಿಕೆಗೆ ಕುಂದದಂತೆ ವಿಚಾರಿಸೈ (ಅಸಪು. ೦೦-೦೯). ೩. ಮುಡುಪು ಮಾಡಿ ಚಂದ್ರನಿಗೆ ಯದುರಾಗಿ ಮೂರು ಭಾರಿ ನಿವಾಳಿಸಿ (ತಾಗಂಂ. ೦೬೯-೬) ; ಬಲುವರ್ಷಗಳಿಂದ ಮನೆಯಲ್ಲಿದ್ದ ಮುಡುಪನ್ನೊಪ್ಪಿಸುವುದರ ವಿನಾ ಆತನಿಗೆ ಬೇರೆ ಉದ್ದೇಶವಿರಲಿಲ್ಲ (ಕಶು. ೦೦೨) ; ಬರಲಾರೆನಯ್ಯ ಬಹುದೂರ ನಿನ ಮುಡುಪ ಬರುವವರ ಕೂಡ ಕಳುಹೇನೊ (ಜಪಗೀ. ೨೦).

**ಮುಡಿಪುಕಟ್ಟು** = ೧. ಮೀಸಲಾಗಿ ತೆಗೆದಿರಿಸು : ಬಂದ ಕಷ್ಟ ಪರಿಹಾರವಾಗಲೆಂದು ದೇವರಿಗೆ ಮುಡಿಪುಕಟ್ಟಿಟ್ಟೆ (ರೂಢಿ). ೨. ಸಮರ್ಪಿಸಿಕೊಳ್ಳು ; ಅರ್ಪಿಸಿಕೊಳ್ಳು : ಸಸ್ಯಸಂಪತ್ಸಂಗ್ರಹಣ ಕಾರ್ಯಕ್ಕೆ ಮುಡಿಪುಕಟ್ಟಿದ್ದವರಲ್ಲಿ ಬಹುಮಂದಿ ವರ್ಗೀಕರಣವಿಭಾಗದ ಹವ್ಯಾಸಿಗಳೇ ಆಗಿದ್ದಾರೆ (ಹಸುಹೂ. ೦೨೦). [ದೇ.॥ ತಮಿ. ಮುಟಿಪ್ಪು ; ಮಲ. ಮುಡಿಪ್ಪು ; ತುಳು. ಮುಡಿಪು, ಮುಡುಪು ; ತೆಲು. ಮುಡುಪು]

**ಮುಡಿಪ್ಪು** ' ಮುಡಿಪ್ಪು$_1$ ' ನೋ.

**ಮುಡಿಬಳೆ** (ನಾ). = ಮುಡಿ$_2$ ೧೧ : ಸಿದ್ಧಿಕಾಲದೊಳ್ ಮಾಡಿದ ಮುಡಿಬಳೆ ವಿಭೂತಿಗಳು ಮಣಿಗಳು ಬೆತ್ತ ನವಿಲುಗರಿ ಅಂಕೋಲೆಕಡ್ಡಿ ಬೇವಿನ ಕೊರಡು ಗರಿಕೆ (ತಾಗಂಂ. ೩೯-೪). [ ಮುಡಿ$_2$ + ಬಳೆ$_2$ ]

**ಮುಡಿಯ** (ನಾ). ಒಬ್ಬಾತನ ಹೆಸರು : ಮುಡಿಯನುಂ ಎರೆಯನುಂ ಸನವಡಿಯನುಂ ಪರಿಯಟ್ಟರಾಳ ಕೊತ್ತಕ್ಕೆಯೂರ ಪೂರ್ವ್ವದ ಬೆಸಮಕ್ಕಳಾವರುಂ . . . ಪೊಲದೆ ಸೀಮೆಯೆಲ್ಲಮಂ ಓಲೆಯೊಳ್ಬರೆನ್ದು × × ಕಲ್ಲು ಸಾಸನಮಾಗೆ ಬರೆದುಕೊಣ್ಡೆಮು (ಎಕ. III, ನಂಜನ. ೦೩೯-೦೦ ; 915 ?). [ ? ]

**ಮುಡಿಯಾಳ** ' ಮುಡಿವಾಳ ' ನೋ.

**ಮುಡಿಯಿಕ್ಕು** (ಕ್ರಿ). ತಲೆ ಬಾಚು ; ಕೇಶಶೃಂಗಾರ ಮಾಡು : ಮುಡಿಯಿ [ಪಾಠಾಂ. ವಿ]ಕ್ಕುವಡಿಯೂಡುವಡಿಗಟ್ಟುವಾರತಿಯೆತ್ತುವ ತಿಳಕವಿಡುವ . . . ಆಕಾರವತಿಯರಂ (ಚಂದ್ರಪ್ರ. ೬-೬೫ ವ) ; ಮುಡಿಯಿಕ್ಕುವ ತಿಲಕವಿಡುವ ತೊಡಂದುಡಿಸುವ . . . ನಿಖಿಳಪರಿಚಾರಿಣೀಜನಂ ನಿಜನಿಯೋಗನಿಷ್ಠಾಪರತೆಯಿಂ ನಿರಂತರಮೋಲಗಿಸುತ್ತುಮಿರ್ಪುತಿರೆಯಿರೆ (ಕುಸುಮಾ. ೬-೬ ವ). [ ಮುಡಿ$_2$ + ಇಕ್ಕು ]

**ಮುಡಿಯಿಸು**, ಮುಡಿಸು (ಕ್ರಿ). ಹೂವು ಮೊದಲಾದುವುಗಳನ್ನು ತಲೆಗೆ ಸಿಕ್ಕಿಸು, – ಸೂಡು ; ಅಲಂಕರಿಸು : ಮುಡಿಯಂ ಪಿಡಿದೆಟ್ಟಿದವನಂ ಮುಡಿಯಿಸಿ ಮತ್ತವನ ಕರುಳ ಪಿಣಿಲಿಂದೆನ್ನಂ ಮುಡಿಯಿಸುವಿನೆಗಂ ಮುಡಿಯಂ ಮುಡಿಯೆಂ ಗಡ (ಸಂಶಧಾ. ೬-೦೦) ; ನೆಲೆಯುಂ ಗಾಡಿಯುಂ ಮಳವಡೆ ಲಲನೆ ಪೆಟಿಳ್ ದಿವ್ಯಮಾಲೆಯಾಂ ಮುಡಿಯಿಸಿದಳ್ (ಜಗಪು. ೦೦-೦೨೭). **ಮುಡಿಸು :** ನಾನು ಪುಷ್ಪವ ಮುಡಿವುದಕ್ಕೆ ಮುನ್ನವೇ ಜಂಗಮಕ್ಕೆ ಪರಿಮಳಪುಷ್ಪವ ಮುಡಿಸುವೆ (ಮಹಾದೇ. ಬ. ೬೯-೨೦೩) ; ಭೀಮನ ತೋರಗರುಳಿನ ದಂಡೆಯನು ಕೈಯಾರೆ ಮಾರಿಗೆ ಮುಡಿಸುವೆನು (ಕುವ್ಯಾಕ. ೩-೦೬). [ ಮುಡಿ$_1$ + — ಇಸು$_3$ ]

**ಮುಡಿಯೊಡೆ** (ಕ್ರಿ). ಕೂದಲು ಬಿಚ್ಚಿ ಹೋಗು ; ತಲೆ ಕೆದರಿಹೋಗು : ಇರದೆ ಮುಡಿಯೊಡೆದು ಮುಂಗುರುಳ್ಕೇಘಮೈದೆ ಬಂಧುರವದನಮಿಂದು ಮಂಡಲ ಮುಸುಕಲ್ . . . ಸತಿ ವಿರಹದಿಂ ಹುಡಿಯೊಳುರುಳ್ದು ರೋದಿಸುತ್ತೆ (ನವಮೋ. ೬-೩೯). [ ಮುಡಿ$_2$ + ಒಡೆ$_1$ ]

**ಮುಡಿಲು** (ನಾ). ಒಂದು ಬಗೆಯ ಮೀನು : ಕೊರವಂ . . . ಮುಡಿಲುಂ ಪಂದಿಗನೆಂಬ ಮೀನ್ದೆಗೆದನಾ ಭಕ್ತಂ (ತ್ರಿಪುಪು. ೩೭-೬). [ ? ]

**ಮುಡಿವಕ್ಕಿ** (ನಾ). ಸೋಗೆ ನವಿಲು : ನಡೆವಕ್ಕಿಯೊಡನೆ ನಡೆದಾಡಿ . . . ಮುಡಿವಕ್ಕಿಯೊಳ್ ಮುಡಿಯ ಮುಚುಕವಂ ಮಾಡಿ ಸವಗಡೆಯ ಸಚು ಮಿಂಡಿಯರ್ ಮಿಂಡೆಳ್ದು . . . ವಿಹರಿಸಿದರು (ಶಂವಪು. ೯-೨೨). [ ಮುಡಿ$_2$ + ಪಕ್ಕಿ ]

**ಮುಡಿವಣಿ** (ನಾ). ತಲೆಯಲ್ಲಿ ಧರಿಸುವ ರತ್ನ ; ಬೈತಲೆಮಣಿ : ಮುಡಿವಣಿಯಂ ಸೊಂಪಿಂದಿಟ್ಟು (ಕಬ್ಬಿಗ. ೩೨೩). [ಮುಡಿ$_2$ + ಮಣಿ$_2$]

**ಮುಡಿವಲೆ** (ನಾ). ಕೂದಲನ್ನು ಸೇರಿಸಿ ಕಟ್ಟಲು ಉಪಯೋಗಿಸುವ ಬಲೆಯಂತಹ ಒಂದು ಬಗೆಯ ಆಭರಣ : ಮೌಕ್ತಿಕಗಳ ಮುಡಿವಲೆ ಮೆಚಿವ ಬಾವುಲಿಯ ನಿಡುಗುರುಳಿನ ಮುತ್ತಿನ ಕುಚ್ಚಿನಿಂದ ಬಲ್ಪೆಡಗಾಗಿ ಮೆಚಿದರರ್ಶಿಯಲಿ (ಕಂವಪ. ೨೪-೪೨). [ ಮುಡಿ$_2$ + ಬಲೆ$_1$ ]

**ಮುಡಿವಳ** ' ಮುಡಿವಾಳ ' ನೋ.

**ಮುಡಿವಾಳ**, ಮುಡಿವಾಳ$_2$, ಮುಡಿಯಾಳ, ಮುಡಿವಳ (ನಾ). ಒಂದು ಬಗೆಯ ಸಸ್ಯ ಮತ್ತು ಸುವಾಸನೆಯಿಂದ ಕೂಡಿರುವ ಅದರ ಬೇರು: "ಕರಂ ಬಾಳಜೊನೆ ಮುಡಿವಾಳಮುಕ್ಕು" (ಅಂಗಗು. ೩೯-೨೯) ; ನೆಲೆಗೆಯ್ದುಂದಗತನ . . . ಪರಿಮಳದ ಬೇರ್ಗಳಂ ಬರೆತಗೆದಳ್ (ಗಿಂಕ. ೩-೬೩) ; ಮುಡಿವಾಳ ಬಾಳದ ಹರವರಿಯ ಹರಹಿದನು ಲಾಂಗೂಲದಲಿ ಕಲಿಹನುಮ (ಕೊರಾರಾ. ೩-೪-೦೩) ; ಗೊಜ್ಜಿಗೆಯ ಜಾದಿಯ ಮುಡಿವಾಳದ ಮಡಿಯ . . . ಋಷ್ಯಾಶ್ರಮೋಪವನಂ ಸೀತೆಗೆ ಕಣ್ಗೆವಂದತ್ತು (ರಾಪಶ$_4$. ೯೬-೬). **ಮುಡಿವಾಳ$_2$ :** "ಇಕ್ಷುರಕಂ — ಮುಡಿ

ವಾಳ, ನಾಂಗುಲಿಕ" (ಶಿಶಂ. ೦೩) : ಜನದೊಳು ಮುಡಿವಾಳ ಲಾಮಚವಿಹವು (ಅಂಶಸ. ೨-೯೭). **ಮುಡಿಯಾಳ** : ಮುಡಿಯಾಳ ಮುಪ್ಪಾದರೆ ಪರಿಮಳ ಬಿಡುವುದೆ (ಹ್ಯಹು. ೧೩೪). **ಮುಡಿವಳ** : ಕಿದಬೀವಡೆ ನಾಯಿದಜಿ ತಿಪ್ಪೆಯೊಳು ಮುಡಿವಳದ ಬೇರು ಕಾಣಿಪುದೆ ಯೆನಗೆ (ರಾಶತ. ೪-೩೭) ; ರತ್ನಗರ್ಭಾಂಗನೆಯು ಶಿರದಿ ಸದ್ಗಂಧಮೂಲವನು ನಿಕ್ಷೇಪಿಸಿದನೆನೆ ಮುಡಿವಳಗಳೆಸೆದವು (ಬಕೋಕು. ೩-೩೮). [ದೇ.॥ ತಮಿ. ಮುಟಿವಾಟ್ಟಿ$^3$ ; ತುಳು. ಮುಡಿವಾಳ, ಮುಡ್ನೆಲ, ಮುಡ್ಯಲ, ಮುಡ್ಯೆಲ ]

**ಮುಡಿವಿಡಿ** (ಕ್ರಿ). ತಲೆಯನ್ನು ಹಿಡಿದುಕೊಳ್ಳು : ಅಂಗದನು ಖಳನ ರಾಣಿಯ ಕಂಡು ಮುಡಿವಿಳಿದಳೆದು ಕೆಡಹಿದನು (ಕೌಶಿರಾ. ೩೮-೯೦) ; ವೀಣಾವಾದ್ಯಪೂರ್ಕೆಯ್ಯ ಮತ್ತೂರ್ಕೆಯ್ಯಿಂ ಬಾಣನ ಮುಡಿವಿಡಿದೆತ್ತಿ ಕ್ಷೀಣ ಸಂತೋಷದೆ ಪರಸಲ್ಕೆ (ಪೋಹತ. ೩೩-೦೧). [ ಮುಡಿ$_2$ + ಪಿಡಿ$_1$ ]

**ಮುಡಿವು** (ನಾ). ೧. ಕೊನೆ ; ಮುಕ್ತಾಯ : ಚರಣದ ಕೊನೆಗೆ ನಿಂತು ಅದಕ್ಕೆ ಮುಡಿವು ಕೊಡುವ ಅಕ್ಷರಕ್ಕೆ "ಮುಡಿ" ಎಂಬ ಹೆಸರನ್ನು ಇಲ್ಲಿ ಕೊಡಲಾಗಿದೆ (ಕಮೂಕೋ. ೨೦೦). ೨. ತೀರ್ಮಾನ ; ನಿರ್ಣಯ : ಈ ವಿಷಯದಲ್ಲಿ ಯೋಚನೆಯನ್ನು ಮಾಡಿದ್ದೆಲ್ಲ ಮುಗಿದಿದೆ. ನನ್ನ ಮುಡಿವನ್ನು ತಿಳಿಸಿದ್ದೇನೆ (ಹಸುಹೊ. ೨೨೯).

[ ಮುಡಿ$_2$ + – ವು. / ತಮಿ. ಮಲ. ಮುಟಿವು ]

**ಮುಡಿವೂ**, ಮುಡಿಹೂ (ನಾ). ತಲೆಯಲ್ಲಿ ಧರಿಸುವ ಹೂವು : ಮುಡಿವೂವಂ ಬಿಟ್ಟು ಝಂಕಾರಿಸುವಳಿಗಣಮಂ ನೀಟ್ದು ಮೇಲೇಟಿಯುಂ (ಕುಸುಪಾ. ೬-೦೫೦) ; ಸೀಗುರಿ ಬಿಜ್ಜಣ ಮುಡಿವೂ ಕರಗಂಬೊತ್ತು ಮುಡದಿ ದುರ್ಗಂ ದೀವದ ಖಗಮೃಗಕಂ ಬಿಡದಡಸಿತು . . . ಕದುಸೋವು (ಜಯುಶಾ. ೨-೯೦). **ಮುಡಿಹೂ** : ಕೊರಳ ಯಜ್ಞೋಪವೀತದ ಮುಡಿಹೂಗಳ ಪರಿಮಳಿಸುವ ಗಂಧದಿಂದ ಕರದೊಳು ಪಿಡಿಯನಾಂತರಸುಮಕ್ಕಳುಗಳು ಧುರಕನುವಾದರು (ಕಂಪಶಿ. ೦೭-೪೨); ಈ ಮುಡಿಹೂಗಳ್ ಬಾಡದ ಸದ್ವಿಧದಿಂದಾ ಬಡಕೂಸನು ಸಲಹೊ ಮುಕುಂದಾ ! (ಕುವ್ಯು. ೭-೨೦).

[ ಮುಡಿ$_2$ + ಪೂ$_2$ ]

**ಮುಡಿವೆಜಿ$^3$** (ನಾ). ಮುಂದಲೆಯಲ್ಲಿ ಧರಿಸುವ ಅರ್ಧಚಂದ್ರಾಕೃತಿಯ ಒಂದು ಬಗೆಯ ಆಭರಣ : ಮುಡಿವೆಜಿ$^3$ಯ ಮುತ್ತಿನ ಬೈತಲೆಯ ಮೂಗುತಿಯನೀಡಾಡಿ ಅಜಸಿದರು ಹರಿಹರಿದು ತಮ್ಮ ಮೈಜಿ$^3$ಯಾರನು (ತೊರರಾ. ೭-೫೦-೯೩). [ಮುಡಿ$_2$ + ಪೆಜಿ$^3$]

**ಮುಡಿವೊಜಿ$^3$** (ನಾ). ಹೊರೆಯಂತಿರುವ ತಲೆಗೂದಲು ; ಕೇಶಭಾರ : ಮುಡಿವೊಜಿ$^3$ಯ ವಿಷಯದೆ ಮಜಿ$^3$ಗೆ ಮದಾಂಧತಮಸಮಂ ಪೆಜಗಿಕ್ಕಿ ತನ್ನೊಳ್ ಮಾಳೆವ ಲಲನೆಯರ ವದನವಿಧುಬಿಂಬದೊಳ್ . . . ಪೊಕ್ಕು ಪೋರ್ಕುಳಿಯಿಕ್ಕಿಯುಂ . . . ವಿಜೃಂಭಿಸಿತ್ತಮಳಕಾಮುದೀವಿಸ್ತಾರಂ (ವರ್ಧಕು. ೭-೯೩ ವ). [ಮುಡಿ$_2$ + ಪೊಜಿ$^3$ ]

**ಮುಡಿಸರ** (ನಾ). ಕಿರೀಟದಲ್ಲಿ ನೇಲುವಂತೆ ಅಳವಡಿಸಿರುವ ಎಳೆ.– ಹಾರ : ಅರಳುಮಲ್ಲಿಗೆಮುಡಿಸರವನಾಂತಿಹನಾರೆ ದುರಗಲಿ ನರಸರಾಜೇಂದ್ರ (ಕಂಪಶಿ. ೨೫-೪೨). [ಮುಡಿ$_2$ + ಸರ$_2$]

**ಮುಡಿಸು** 'ಮುಡಿಯಿಸು' ನೋ.

**ಮುಡಿಹ** (ನಾ). ತಲೆಯಲ್ಲಿ ಧರಿಸುವುದು ; ಮುಡಿದುಕೊಳ್ಳುವುದು : ಪ್ರೇತವನದೊಳಗ ಬಳದ ಹೂಮಾಲ ಮುಡಿಹಕ್ಕೆ ಯೋಗ್ಯಂ (ಹಶಿಶಾ. ೭-೦೮). [ಮುಡಿ$_1$ + – ಹ$_2$ ( < – ಪ$_2$ )]

**ಮುಡಿಹು** 'ಮುಡಿಪು$_1$' ನೋ.

**ಮುಡಿಹೂ** 'ಮುಡಿವೂ' ನೋ.

**ಮುಡುಕಲು**, ಮುಡಕಲು (ನಾ). ಇಕ್ಕಟ್ಟಾದ ಜಾಗ : ಸಂದು : ತಪ್ಪಿಸಿಕೊಂಡಿದ್ದ ಪಸುವಿಗಾಗಿ ಅವನು ಊರಿನ ಮೂಲೆ ಮುಡುಕಲನ್ನೆಲ್ಲ ಹುಡುಕಿದನು (ಕೂಶಿ). **ಮುಡಕಲು** : ಮೂಲೆ ಮುಡಕಲಲ್ಲಿದ್ದವರೆಲ್ಲ ದೊಡ್ಡ ಪದವಿಗೆ ಬರುತ್ತಾರೆ (ತೆಂಗಾಸ್ಕ. ೨೩).

[ ಮುಡುಗು$_2$ + – ಅಲು ( < – ಅಲ್$_2$ )]

**ಮುಡುಕು$_1$**, ಮುಡುಗು$_1$. ಮುದುಕು, ಮುದುಗು$_1$ (ಕ್ರಿ). ೧. ಬಗ್ಗು ; ಬಾಗು; ಕೊಂಕಾಗು : (ಕ). ೨. ತಬ್ಬು ; ಆಲಿಂಗಿಸು : "ಮುಡುಕು (ಮುದುಕು) — ಶರೀರೋಪಗೂಹನೇ (ಆಲಿಂಗನ ಮಾಡು)" (ಶಮಧಾ). ೩. ಒದಗು ; ಉಂಟಾಗು : ಇನಿತು ದೂರಂ ನಡೆತರಲು ಪೇಳ್ ನಿನಗೆ ಮುಡುಕಿದ ಕಾರ್ಯವೇನು (ವಿಶಕ್ಯ. ೨೯-೦೧). ೪. ತಡೆತಡೆದು ಮಾತನಾಡು ; ತಡವರಿಸು: ಒಳನುಡಿಗಳಂ ನುಡಿವ ತಾ ತನ್ನೊಳು ನುಡಿಯುತಂ ಮುಡುಕಿ ನುಡಿವೆಡೆಯುಲಿ ಸಲಿಸಿ ದೀಪಿಸುವ ಶಿವಲಿಂಗದೊಳ ಡಂಗಿದಲು ನೆಜಿ$^3$ಯೊಲಿವ (ವಿಶಕ್ಯ. ೩೫-೨೦). **ಮುಡುಗು$_1$** : ೧. ಗುಡುಗಿನ ಮುಗು ಮುಡುಗಿ ಮೊರಪೆ ಕಿನ್ನರಿಗರಿಯನ್ನ (ಗಿಣಬ. ೯೩-೩೦). 'ಮುಡುಗುಗಿವಿ' ಪರಾ. ೫. ಬಾಗಿಸು ; ಕೊಂಕಿಸು : ಗಗನವನೊಡೆವೆನೊ ಮಿಡಿವೆನೊ ಶಶಿರವಿಗಳ ತಾರಗೆಗಳ ಮುಡುಗುವೆನೋ (ಬಿರೇತ. ೨-೦೨). **ಮುದುಕು** : ೨. "ಮುಡುಕು (ಮುದುಕು) — ಶರೀರೋಪಗೂಹನೇ (ಆಲಿಂಗನಮಾಡು)" (ಶಮಧಾ). **ಮುದುಗು$_1$** : ೬. ಮುದುಡು : ಸಂಕುಚಿತವಾಗು : ನಡುನಡುಗಿ ನಡೆವನೊಲಿದೊಡೆಗೆ ಮುದುಗಿಸ ಮೆಯ್ಯ ಲಕ್ಷಣಂ (ಶ್ರೀರಾಪೂ. ೨೦೦-೧೭೨) ; ಯಾವುದೋ ಮಹಾ ದೊಡ್ಡದರ ಮುಂದೆ ತನ್ನ ಅಲ್ಪತ್ವ ಮುದುಗಿ ನಾಚಿ ಹೆದರಿ ಕುಗ್ಗಿ ನೆಲಸಮವಾಗಿ ಹೋದಂತಾಗಿತ್ತು ಅವನಿಗೆ (ಮರಳು. ೫೭೪).

[ ದೇ.॥ ತಮಿ. ಮುಟಜ್ಜು. ಮುಟಕ್ಕು ; ಮಲ. ಮುಟಕ್ಕ; ತುಳು. ಮೊಡಂಕು; ತೆಲು. ಮುಡುಗು; ಪರ್ಜಿ. ಮುಡ್ ]

**ಮುಡುಕು$_2$**, ಮುಡಿಕು, ಮುಡುಗು$_2$, ಮುದುಗು$_2$, ಮೊಡಕು (ನಾ). ೧. ಬಾಗಿರುವುದು ; ಕೊಂಕಿರುವುದು : (ಕ). ೨. ಮೂಲೆ ; ತಿರುವು : ಬೆಳಲ ಗದ್ದೆಯ ಮುಡುಕಿನಲು (ಎಕ. VIII, ತೀರ್ಥಹ. ೨೦೭-೨೨; 1415); ವಾಯುವ್ಯಭಾಗದ ಕಿಬ್ಬೆಯ ಕೆಂಬರೆ ಮುಡುಕಿನಲ್ಲಿ. . .ಯಲ್ಲೆಗಳು (ಎಕ. III, ತಿರುಮ. ೭೨-೦೯೫; 1622). ೩. ಇಕ್ಕಟ್ಟಾದ ಸ್ಥಳ; ಗೊಂದಿ: 'ಮುಡುಕಲು' ಪರಾ. **ಮುಡಿಕು** : ೨. ತೆಂಲ ಮುಡಿಕನಲ್ಲಿ. . . ಸೆಟ್ಟಿ ಕ ೧ (ಎಕ. III, ತಿರುಮ. ೭೩-೭೭೩; 1748). ೩. ಮನೆಯ ಸಂದಿ ಮೂಲೆ ಮುಡಿಕಿನಲ್ಲಿ ಹುಡಿಕಿ ನೋಡಲ್ಕಿಲ್ಲದಿರಲು (ಭೈರಸೂ. I, ೩೯೯). **ಮುಡುಗು$_2$** : ೧. 'ಮುಡುಗಿಸು' ಪರಾ. **ಮುದುಗು$_2$** : ೪. ಮುದುರುವಿಕೆ; ಸಂಕೋಚ : 'ಮುದುಗಿಸು' ಪರಾ. **ಮೊಡಕು** : ೩. ವಿಸ್ತಾರದಲಿ ಬಾಳು, ವೈಶಾಲ್ಯದಿಂ ಬಾಳು ಕತ್ತಲೆಯ ಮೊಡಕು ಮೂಲೆಗಳ ಸೇರದಿರು (ಮಂಕುತ. ೯೦೩). [ < ಮುಡುಕು$_1$. / ತಮಿ. ಮುಟಜ್ಜು, ಮುಟುಕ್ಕ, ಮುಟುಕ್ಕು ; ಮಲ. ಮುಟಕ್ಕಮ್. ಮುಟುಕ್ಕು: ತುಳು. ಮುಡಂಕ್, ಮೊಡಂಕ್ ]

**ಮುಡುಗಾರ** (ನಾ). ಒಂದು ವಂಶದ ಹೆಸರು (?) : ಬಿಸವತಿಅಜ್ಜಿ ಊರಾಳೆ ಮುಡುಗಾರ ತೊಣ್ಣಪ್ಪರ ಮಗನುಂ (ಶಾಇ. XX. ೦೦-೨ : ?).

[ ? ]

**ಮುಡುಗಿಸು**, ಮುದುಗಿಸು (ಕ್ರಿ). ೧. ಬಾಗಿಸು ; ಬಗ್ಗಿಸು ; ಕೊಂಕಿಸು : ಕಾಳಿಯ ನಾದವ ಕೇಳುತ ಗಜಗಳು ನೀಳದೊಳಿರುತಿಹ ತೋಳ್ಗಳ ಮುಡುಗಿಸಿ ಚಾಳಿಸಿವೋಡುತಲಿ (ಹಮತ. ೦೮). **ಮುದುಗಿಸು**: ೨. ಸಂಕುಚಿತಗೊಳಿಸು; ಹುದುಗಿಸು : ತಲೆ ಕೆರೆದುಕೊಳ್ಳುತ್ತಾ ಮೈ ಮುದುಗಿಸಿ ನಿಂತಿದ್ದನು ಬಿಚ್ಚ (ಮರಳು. ೭೭೯).

[ ಮುಡುಗು$_2$ (< ಮುಡುಕು$_2$) + – ಇಸು$_3$ ]

**ಮುಡುಗು$_1$** 'ಮುಡುಕು$_1$' ನೋ.

**ಮುದುಗು₂** 'ಮುದುಕು₂' ನೋ.

**ಮುದುಗುಗಿವಿ** (ನಾ). ಬಗ್ಗಿದ ಕಿವಿ ; ಮುಡಿಚಿಕೊಂಡ ಕಿವಿ : ಹನುಮನ . . . ಚಿಗಿವ ಬಾಲವ ಮುದುಗುಗಿವಿಗಳ ಪೊಳೆವ ದಂಷ್ಟ್ರಗಳಾ ನಗುವ ಮುಸುಡ ನಿರೀಕ್ಷಿಸುತಲಿ (ಅನಂರಾ. ೪-೩-೩೯).
[ಮುದುಗು₁ (< ಮುದುಕು₁) + ಕಿವಿ₃]

**ಮುದುಗುದಾವರೆ** (ನಾ). ಒಂದು ಬಗೆಯ ಸಸ್ಯ : ಮುಟ್ಟಿದರೆ ಮುನಿ, ಮುದುಗುದಾವರೆ, ನಾಚಿಕೆಗಿಡ, ಲಜ್ಜಾವತಿ (ವೃಕ್ಷಿಗಿ. ೩೪-೦೦೬೯).
[ ← ತೆಲು. ಮುದುಗುತಾಮರ, ಮುದುಂಗುದಾಮರ ]

**ಮುದುಪಿಡು** 'ಮುಡಿಪಿಡು' ನೋ.

**ಮುದುಪು₁** 'ಮುಡಿಪು₁' ನೋ.

**ಮುದುಪು₂** 'ಮುಡಿಪು₂' ನೋ.

**ಮುದುಪು₃**, ಮುದುಬು₃, ಮುದುವು, ಮುದುಹು₂ (ನಾ). ಹೆಗಲು ; ಭುಜಾಗ್ರ : ಅಡಿಯಂ . . . ಮುಯ್ವಂ ಮುದುಪಂ ಬೆನ್ನಂ ಕೊರಲಂ ನಡುನೆತ್ತಿಯನೆತ್ತಿ ಪೊಯ್ದುರೊರ್ವರನೊರ್ವರ್ (ಗದಾಯು. ೮-೦೩) ; ಮೊಳಮೇಲಿಂ ಮೇಲುದಂ ತಂದೆಡದ ಮುದು[ಪಾಠಾಂ. ಡಿ]ಪಿನೊಳ್ಳೀಡುತುಂ (ಅರ್ಜುನ. ೩-೩೩). **ಮುದುಬು₃** : 'ಮುದುಬುಶೂಲೆ' ಪರಾ. **ಮುದುವು**: 'ಮುದುವಿಕ್ಕು' ಪರಾ. **ಮುದುಹು₂**: "ಭುಜಶಿರಸ್, ಅಂಸ :— ಈ ೨ ಮುದುಹು" (ಶಾಶರಾ. ೦೨೦) ; ಕುರುಳು ಬೆರಳು ಮುದುಹು ಮುಂಬಲ್ಲ ಕೊಳ್ಳು ನಿಟಿಯುನಿಕ್ಕಿ ದಾಟಿದರೆ ಅಂತೆನ್ನ ನಂಬಾ (ಬಸವ. ೩೦೦) ; ಮುದುಹಂ ಪೊಯ್ದುಕೊಳುತ್ತುಂ (ಕುಸುಮಾ. ೦೦-೦೬೩). 'ಮುಯ್ಪು' ನೋ. [ದೇ.II ತುಳು. ಮುದು]

**ಮುದುಪುಕುಡು** 'ಮುದುಪುಕೊಡು' ನೋ.

**ಮುದುಪುಕೊಡು**, ಮುದುಪುಕುಡು (ಕ್ರಿ). ಮಿಾಸಲು ತೆಗೆದಿರಿಸು : ಒಡೆಯನೆಂದೋ ಬಂದು ಕೇಳ್ವನು . . . ಎನುವವೊಲು ಸುಜಾತೆಯಿಂದ ಒಡಲ, ಜಾಣಿನ, ಜೀವಶಕ್ತಿಗಳನೆಲ್ಲವನು ಮುದುಪುಕೊಟ್ಟನು ಭರತ (ಮಂಕುತ. ೭೦೬). **ಮುದುಪುಕುಡು** : ಮಾತೆವೊಲೊ . . . ಭ್ರಾತೃಸುತ ಸಖರವೊಲೊ ಪಾತ್ರವೊಂದಕೆ ತಾಂ ಕಾತರಿಸುತಿಹುದು ತನ್ನೆಲ್ಲವನು ಮುದುಪುಕುಡೆ ಪ್ರೀತಿಯಾ ಮುಚ್ಚ್ಮುಹಟ (ಮಂಕುತ. ೪೨೬).
[ಮುದುಪು₂ (<ಮುಡಿಪು₂) + ಕೊಡು₁]

**ಮುದುಬ**, ಮುದಬ (ನಾ). ಊನವಾದ ಅವಯವಗಳುಳ್ಳವನು : ಅಂಗವಿಕಲ : ಅಲ್ಲಿ ಕೈ ಬಲಿಯದಿರೆ ಮುದುಬನಾ [ಪಾಠಾಂ. ದುಡೆಯಾ] ಗುತೆ ಬಂದು (ಹಿಂದೋರ. ಹ. ೩೨೦-೨೪) ; ಕೈಕಾಲ್ ಮುದುಬಗಳವಟ್ಟಂತೆ ಕುರುಡಗೆ ಕಣ್ಣು ಬಂದಂತೆ (ಕೃಶುರೀ. ೦೦-೨೪) ; ಎರಡುಕಾಲೊಡೆದು ಹುಣ್ಣಾಗಿ ಮುದು[ಡು]ಬನಾದನು (ಶೈರಸಂ. I, ೩೭೦). **ಮುದಬ** : ತನ್ನ ಕರದೋಳಿಹ ಚೆಂಬಿನಲಿ ಭರದಿಂದೆ ಪೊಡೆಯಲ್ಕೆ ಎರಡುಮೊಳಕಾಲೊಡೆದು ಸುರಿವುತಿರೆ ರಕ್ತ ತರತರಿಸುತ್ತಲಾ ಭಾಗ್ಯನಿಧಿ ಮುದಬನಾಗಿರ್ದನು (ಪ್ರಶಂಂ. ೩-೩೬) ; ಕಡಮೆಯವರ ಮಾತೇನು ದೊರೆ ರಾಯವಲ್ಲಭೆಯು ಮುದುಬಗೆ ಮನವಿಟ್ಟು ಬಳಿಕ (ಕುವಲಶಾಂ. ೦೭೦), 'ಉಡುಹು₁' ಪರಾ.
[ಮುದುಬು₂ + — ಅ₇. / ತಮಿ. ಮುಟವನ್]

**ಮುದುಬು₁** (ಕ್ರಿ). ಅಂಗವು ನ್ಯೂನತೆಯನ್ನು ಹೊಂದು ; ಊನವಾಗು: ಮಪದಿ ಮೊಣಕಾಲೂಚಿ ಬಾಗುತ ನಡೆಯೆ ಮೊಣಕಾಲ್ ಕೈಗಳಿಂ ಮುದುಬಿ [ಪಾಠಾಂ. ಮುದುಡಿ]ಪಡೆ (ಬಸಪು. ೩೭-೩೯).

**ಮುದುಬು₂**, ಮುದುಹು₃ (ನಾ). ಅಂಗದ ನ್ಯೂನತೆ; ಊನ : ಕಲಿಕಾಮ ಭೂವರನಂಗದಲಿ ಶೂಲೆಯುದಿಸಿ ಕರಚರಣವು ಮುದುಬಾಗೆ (ಪೋಳಪು. ೨-೦೬೪). **ಮುದುಹು₃** : 'ಮುದುಹುಗೊಳ್' ಪರಾ.
[<ಮುದುಬು₁./ತುಳು. ಮುದುಬು—ಊತ]

**ಮುದುಬು₃** 'ಮುದುಪು₃' ನೋ.

**ಮುದುಬುಶೂಲೆ** (ನಾ). ಹೆಗಲಿನಲ್ಲುಂಟಾಗುವ ನೋವು : ಹೊಸ ತರುತುಂಬಿಯ ನಿಲಾಭಿಯ ಹಣ್ಣಿನ ರಸದಲ್ಲಿ ಅರೆದು ಕಟ್ಟುವುದು . . . ಮುದುಬುಶೂಲೆ ಹರ (ವೈಶಂ. ೦೧೭).
[ಮುದುಬು₃ (< ಮುದುಪು₃) + ಶೂಲೆ₁]

**ಮುದುಮುಡಿಸು** (ಕ್ರಿ). ಥೀಳಿಡು ; ಅರ್ಭಟಿಸು (?) : ತಡಿಯೊಳೆಡೆಗೊಳದಲ್ಲಿಗಲ್ಲಿ ಗುಂಪುಗಳುಂ ಕೊಡುವ ಘನತುಂಬಿಗಳ ಕಂಡು ನೀರಾನೆಗಳ್ ಮುದುಮುಡಿಸಿ ವೈರದಿಂ ಬಂದಿರಿಯೆ (ಪಂಚಶಾ. ೯-೨೦-೦೯).
[ಮುದುಮುದು + _ ಇಸು₃]

**ಮುದುಮುದು** (ನಾ). ಒಂದು ಅನುಕರಣ ಶಬ್ದ : ದೈತ್ಯರು ಮುದು ಮುದು ಪಳಚಿ ಮತ್ಸರಿಸಿ ಕಡಿದಾಡುವ ಖಡ್ಗಧಾರೆಯಿಂದುರ್ಗಿರ್ವ ಕೆಂಗಿಡಿಗಳ ನೋಡುತಿದ್ದಿದ್ದಳು (ತೋಹಶ. ೨೯-೦೩).

**ಮುದುವಿಕ್ಕು** 'ಮುದುಹಿಕ್ಕು' ನೋ.

**ಮುದುವು** 'ಮುದುಪು₃' ನೋ.

**ಮುದುಹಿಕ್ಕು**, ಮುದುವಿಕ್ಕು (ಕ್ರಿ). ಭುಜವನ್ನು ಚಪ್ಪರಿಸು ; ಭುಜಾಸ್ಫಾಲನ ಮಾಡು : ಕಣ್ಣ ಕೆಂಚನೆ ಮಾಡಿ ಗಂಡುಗೆದರಿ ಮುದುಹಿಕ್ಕಿ ಕೆಲೆವವರ ಕಂಡಡಾಜುವೆ (ಬಸವ. ೯೯೭) ; ಕೈಯೆತ್ತಿ ಕೂಗಿಟ್ಟು ಕರೆಕರೆದು ಹಿಗ್ಗುತುಂ ಮೈಮುರಿಕ್ಕಿ ಮುದುಹಿಕ್ಕಿ ಕಡುಹಿಗ್ಗಿ ಹೆಚ್ಚುತುಂ (ಕಂಠೀರ. ಹ. ೦೪೦-೨೬). **ಮುದುವಿಕ್ಕು** : ನಲಿದು ಮುದುವಿಕ್ಕಿ ಗುವ್ವಾಡಿ ಗೆಲವಂ ಪೆರ್ಗರಡಿಯುತೆ ಕುಪ್ಪಿಕ್ಕಿ ಕರಂ ಕೆಲವಂ ಕಣ್ಣಾಪ್ಪಂ ಮುಂದಲೆ ದುಜುಬಿ ದುಮ್ಮಿಸಾಲಿಯೆನುತಂ ಕೆಲವಂ ಛರಿದಂ ಕೊಂಬು ಕೊಳಲ್ ಮಹೌವರಿಗಳ ಸುಣ್ಣರಮನಾಸ್ಕದೊಳ್ ತೋಜುತ್ತ (ಶ್ರೀಕೃಪಿ. ೨೭-೦೩೭)
[ಮುದುಹು₂ (< ಮುದುಪು₃) + ಇಕ್ಕು]

**ಮುದುಹು₁** 'ಮುಡಿಪು₁' ನೋ.

**ಮುದುಹು₂** 'ಮುದುಪು₃' ನೋ.

**ಮುದುಹು₃** 'ಮುದುಬು₂' ನೋ.

**ಮುದುಹುಗೊಳ್** (ಕ್ರಿ). ಊನವಾಗು ; ವಿಕಲತೆಯುಂಟಾಗು : ಕೆಡೆದವು ಮೇಘದೊಳಾಡುವ ಖಗತತಿ ಮುದುಹುಗೊಂಡ ರೆಕ್ಕೆ ಮುರುಟಿ (ಗೊಮ್ಮಟ. ೩-೪೦). [ಮುದುಹು₃ (< ಮುದುಬು₂) + ಕೊಳ್₁]

**ಮುದ್ದಿ** (ನಾ). ಹಿಂಭಾಗ; ಪೃಷ್ಠ : ಉಟ್ಟ ಪಟ್ಟೆಯ ಕಾಸೆ, ಹೊಂಬಟ್ಟೆಯ ನಡುಕಟ್ಟು ಮುದ್ದಿಯ ಮೇಲೆ ರಾರಾಜಿಸುವ ಐದಂಗುಲ ಅಗಲದ ಕಟಿಸೂತ್ರ (ಅವಕಂ. ೩೭ ಹೀರೆಕೆ, ಅವಬಿ.). [ದೇ.II ತುಳು. ಮುದ್ದಿ ; ತೆಲು. ಮುದ್ದಿ; ಮೂಡಿ]

**ಮುಣುಂಗು** 'ಮುಟುಂಗು' ನೋ.

**ಮುಣುಗಿಸು** 'ಮುಟುಂಗಿಸು' ನೋ.

**ಮುಣುಗು₁** 'ಮುಟುಂಗು' ನೋ.

**ಮುಣುಗು₂** 'ಮುಟುಕು₂' ನೋ.

**ಮುತ್‌ಫರ್ಖಿತ್** 'ಮುತಫರ್‌ಖಾತು' ನೋ.

**ಮುತಫರ್‌ಖಾತು**, ಮುತ್‌ಫರ್ಖಿತ್ (ನಾ). ೧. ಬೇರೆ ಬೇರೆ ಬಗೆಯ ಸಾಮಗ್ರಿ, — ವಸ್ತು ; ವಿವಿಧ ಬಗೆಯ ಸರಂಜಾಮು. ೨. ಬೇರೆ ಬೇರೆ ವಿಭಾಗ : ಮುತಫರ್‌ಖಾತಿನಿಂದ (Mutfar-Khat) ಆರುಮಂದಿ ಮಾತ್ಬರ್‌ಜನರನ್ನೂ ಸಹ ಚುನಾಯಿಸಿ . . . ಪಂಚಾಯತರು ಎಂದು ಮೊಕರರ್ಮಾಡಿದರು (ಮೈಹಾಮ. II, ೨೬). **ಮುತ್‌ಫರ್ಖಿತ್** : ೩. ವಿಶ್ರಾಂತಿವೇತನ ; ಪಿಂಚಣಿ : (ವೈಗಶೆ. IV, ೩೮೦).
[← ಅರ. ಮುತ್‌ಫರ್ರಿಕಾತ್ ; ಹಿಂ. ಮುತ್‌ಫರ್‌ಕಾತ್ ; ಮರಾ. ಮುತ್‌ಫರ್ಕಾತ್]

**ಮುತಯ್ಯ** (ನಾ). ಒಬ್ಬಾತನ ಹೆಸರು : ಮುತಯ್ಯನ ಮ[ಗ] (ಕ್ಕೆಇ. XI-i, ೨೯-೦೭; ಸು. 912). [ < ಮುತ್ತು₅ + ಅಯ್ಯ₁ (< ಅಯ್ಯ₁)]

**ಮುತವರ್ಜಿ** ' ಮುತುವರ್ಜಿ ' ನೋ.

**ಮುತವ್ವೆ** ' ಮುತ್ತವ್ವೆ' ನೋ.

**ಮುತಾಕಲು** (ನಾ). (?) : ೭೨ ಸುತ್ತಲೂ ಮುತಾಕಲಿಗೆ ದೊಡ್ಡ ೨೦ ಚಿಕ್ ೫೨ (ಎಕ. XIV, ಕಂಜನ. ೨೯೯ ಫುಟಿ ೦೯೦ ; 1847). [ ? ]

**ಮುತಾಕು** (ನಾ). (?) : ೭೨ ಮುತಾಕಿಗೆ ದೊ ೨೦ ಚಿಕ್ ೫೨ (ಎಕ. XIV, ಕಂಜನ ೨೯೯. ಫುಟಿ ೦೩೯ ; 1847). [ ? ]

**ಮುತಾಬಕ್** (ಅ). ಅನುಸಾರವಾಗಿ ; ಮೇರೆಗೆ : ಜಿಹಾರೀಯ ಛಂದ್ ೨೧ನೇ ಮಾಹೆ ಜಿಲ್ಹೇಜ್, ೧೧೯೭ನೇ ಹಿಜರೀ ಮುತಾಬಕ್ ಛಂದ್ ೨೭ನೇ ಮಾಹೆ ನವೆಂಬರ್ ೧೭೮೩ನೇ ಇಸವಿ (ಹಾವುಂ. ೨೨೭).

[← ಅರ. ಹಿಂ. ಮುತಾಬಿಕ್ ; ಮರಾ. ಮುತಾಬಿಕ್, ಮುತಾಬೀಕ್]

**ಮುತಾಲಿಕ**, ಮುತ್ತಲ್ಲಿಕ, ಮುತ್ತಾಲಿಕ (ನಾ). ಯಾವುದಾದರೂ ಒಂದು ವಿಶೇಷವಾದ ಕೆಲಸದ ನಿರ್ವಹಣೆಗಾಗಿ ನೇಮಕಗೊಂಡವನು ; ನಿಯೋಗಿ ; ಕಾರ್ಯಭಾರಿ : ಶ್ರೀಕೃಷ್ಣರಾಜವಡೆಯರೈಯ್ಯನವರು . . . ಮುತಾಲಿಕ ವೆಂಕಟರಾಮೈಗೆ ಬರೆಸಿ ಕೊಟ್ಟ ಕ್ರಯಭೂದಾನ ಶಾಸ್ತ್ರ ಸಾಧನದ ಕ್ರಮವೆಂತೆಂದರೆ (ಎಕ. IV (R), ಎಳಂದೂ. ೧೯೩-೬ ; 1763) ; ಕುಲಕರ್ಣಿ ಮುತಾಲಿಕ ತಿಂಮಪ (ಇಎ. ೧೯೯೭, ರಾಜನಿಕ್ಕಾರ್, ೨೯೮-೨; ?).

**ಮುತ್ತಲ್ಲಿಕ:** ಬರದಾತ ಶಾನುಬೋಗರ ಮುತ್ತಲ್ಲಿಕ ನರಸಪ್ಪನ ಸ್ವದಸ್ತೂರ ಬರಹ (ಪ್ರಮಅ. ೦೯೨೬, ೬೨-೯೮; 1768). **ಮುತ್ತಾಲಿಕ :** ಅವರ ಮುತ್ತಾಲಿಕರಾಗಿ . . . ನಾವು ಆ ಧನವನ್ನು ಬಡವರ ಉದ್ಧಾರಕ್ಕಾಗಿ ಉಪಯೋಗಿಸಬೇಕು (ಚಿತ್ರವು. ೦೬೬).

[← ಅರ. ಹಿಂ. ಮುತಲ್ಲಿಕ್; ಮರಾ. ಮುತಾಲೀಕ್]

**ಮುತುವರ್ಜಿ**, ಮುತವರ್ಜಿ (ನಾ). ೧. ಆಸಕ್ತಿ ; ಶ್ರದ್ಧೆ ; ಆಸ್ಥೆ : ಪ್ರತಿಯೊಬ್ಬರೂ ನಿಮ್ಮ ನಿಮ್ಮ ಕೆಲಸಗಳನ್ನು ಪ್ರಮಾಣಿಕರಾಗಿ ಮುತು ವರ್ಜಿಯಿಂದ ಮಾಡಬೇಕು (ಕಾಳಿಮು. ೦೬೦); ಆಕೆಗೆ ತಕ್ಕ ಹಾಗೆ ಮುತು ವರ್ಜಿಯಿಂದ ಕೆಲಸ ಮಾಡುವ ತೋಟಗಾರರಿರಬೇಕು (ಕರಿಜಿ. ೦). ೨. ಎಚ್ಚರಿಕೆ ; ಜಾಗರೂಕತೆ : ನೀನು ವಾರಕ್ಕೊಂದುಸಲ ಪರೀಕ್ಷೆ ಮಾಡಿಸಿಕೊಳ್ಳಬೇಕು. ತುಂಬ ಮುತುವರ್ಜಿಯಿಂದ ನಡೆದುಕೋಬೇಕು (ಪಂಚಿಕ್ಕ. ೨೯೭). **ಮುತವರ್ಜಿ :** ೨. ಆ ಆಟವನ್ನಾಡಲು ನಾನು ಬಹಳ ಮುತವರ್ಜಿ ಮಾಡಬೇಕಾಗಿದೆ (ಗರುಂ. ೨೯).

**ಮುತುವರ್ಜಿ ವಹಿಸು, ಮುತವರ್ಜಿ ವಹಿಸು** = ಆಸಕ್ತಿಯನ್ನು ಹೊಂದು ; ಶ್ರದ್ಧೆವಹಿಸು : ನನ್ನನ್ನವನು ಸ್ಮೃತಿಸುತ್ತಿದ್ದನೇ ಹೊರತು ಅಷ್ಟೇನೂ ಮುತುವರ್ಜಿ ವಹಿಸಲಿಲ್ಲ (ಫುಪರು. ೨೦೯) ; ಅಷ್ಟು ಮುತವರ್ಜಿ ವಹಿಸಿ ಮಾಡಿದ್ದ ಏರ್ಪಾಡುಗಳೆಲ್ಲ ಒಂದೇ ಒಂದು ಕ್ಷಣದಲ್ಲಿ ಪ್ಲೇಗಿನ ಅವಾಂತರದಿಂದ ಧ್ವಂಸವಾದುವಲ್ಲ (ರಂಗಕ. ೦೨೮).

[←ಅರ. ಹಿಂ. ಮುತಾವಜ್ಜಹ್; ಮರಾ. ಮುತವಜೀ, ಮುತವಜ್ಜೀ, ಮುತವಜಾ]

**ಮುತ್ತ₁** ' ಮುದು₁ ' ಪರಾ.

**ಮುತ್ತ₂** (ನಾ). ೧. ವಯಸ್ಸಾದ ವ್ಯಕ್ತಿ : ಮುದುಕ ; ವೃದ್ಧ : ಕಿಱಿಯಂ ಮುತ್ತಂ ಧನದಂ ಬಱಿಯಂ ತೊಱೆದಂ ಗೃಹಸ್ಥನೆನ್ನದೆ ಮುಂಬಿಟ್ಟಱಿಸಿ ಕೊಲುತಿರ್ಪ ಜವನೆಂಬಱಿಕೆಯ ಪಗೆವಂಗದಂತು ಪಂಗಿಗನಪ್ಪೆಂ (ಅಂಕ್ತ. ೪-೭೭) ; ಮುತ್ತನಿವಂ ಕೂಸಿವಂ . . . ಎಂದಿಂತು ಮಂದೋನ್ನತ್ತಂ ಬಗೆದಪನೆ ಬಗೆಯಸಂತಕರ್ಅಜಂ (ಜೀವಸಂ. ೯-೨೨). ೨. ಅಜ್ಜ ; ತಾತ : ಶ್ರೀಮತು ಶ್ರೀಬಿಟ್ಟಿಮಯನ ಮುತ್ತಂ ವಿನಯಾದಿತ್ಯ ಪೊಯ್ಸಳದೇವರ ರಾಜಂ (ಎಕ. VI. ೩೪ಕ್ಕಮ. ೬೮-೪: 1012). ೩. ಹಿರಿತನವುಳ್ಳವನು : ಗಣ್ಯ : ನೆಲೆವೆತ್ತ ಮುತ್ತರಿಂ ಮಿಗೆ ನೆಲೆವೆತ್ತಂ ಚಾಮರಾಜಂ (ಚಕಪ. ೨-೬೩). (ಗು). ೪. ವಯಸ್ಸಾದ ; ಮುಪ್ಪಿನಿಂದ ಕೂಡಿದ : ' ಮುತ್ತಾಣ್ಮ ' ಪರಾ. ೫. ಹಿಂದಿನ : ಪೂರ್ವಿಕ . ಇದು ನಮ್ಮ ಮುತ್ತ ಮೂವರ ಭವಪಂಚಕಪ್ರಪಂಚಿತಪ್ರೀತಿನಿಮಿತ್ತಂ (ಅರ್ಧನೇ. ೪-೯ ವ). ೬. ಇಳಿಯುವ ; ಅಡಗುವ : 'ಮುತ್ತಂಜೆ' ಪರಾ.

ಮುತ್ತರ್, ಮುತ್ತವರು (ಬಹುವ) : ಮುತ್ತರುಂ ಕುರುಡರುಮೆಸ್ನ ದೆವ್ವ ನುಡಿಗೇಳ್ ಮಗನೇ (ಕಂಕಅ. ೦೪-೦೨); ನಿನ್ನನು ಹೆತ್ತವರು ಮುತ್ತವರು ಮುನಿಗಳು ಮುಕ್ತಿಕಾಮರು ಭಜಿಸುವರದಾವನ ಪದಾಂಬುಜವ ವರ್ತಿಸುವಳಾಜ್ಞೆಯಲಿ ಮಾಯಾಮುಕ್ತಕಾಶಿನಿ (ಜಭಾಗ. ೪-೦-೪೮).

[<ಮುದು₁. / ತಮಿ. ಮೂತ್ತವನ್, ಮೂತ್ತೋನ್; ಮಲ. ಮುತ್ತನ್; ತೆಲು. ಮುತ್ತ]

**ಮುತ್ತ₃** ' ಮುಟ್ಟುಗ ' ನೋ.

**ಮುತ್ತಂಡ** (ನಾ). ಮೂರು ತಂಡ.– ಗುಂಪು : ಮುತ್ತಂಡದಲಿ ದಾಸವರು ಪೊಮ್ಮಲಾಗಿ ತಾನಿತ್ತನಯ್ಯನೊಳಾತಿ ಪ್ರಾಣವಂ (ಲಕ್ಷ್ಮಶಾ. ೦-೦೪-೩೭). [<ಮೂಱು + ತಂಡ]

**ಮುತ್ತಂದೆ** (ನಾ). ಅಜ್ಜನ ಅಥವಾ ಅಜ್ಜಿಯ ತಂದೆ ; ಮುತ್ತಾತ : ಅವರ ಮನೆಯಲ್ಲಿ ಅವರ ಮುತ್ತಂದೆಯ ಕಾಲದಿಂದಲೂ ಆ ಪದ್ಧತಿಯನ್ನು ಅನುಸರಿಸುತ್ತಾ ಬಂದಿದ್ದಾರೆ (ಕೂ೨). [ಮುತ್ತ₂ + ತಂದೆ]

**ಮುತ್ತಕ** ' ಮುಟ್ಟುಗ ' ನೋ.

**ಮುತ್ತಗ** ' ಮುಟ್ಟುಗ ' ನೋ.

**ಮುತ್ತಜ** ' ಮುತ್ತಜ್ಜ ' ನೋ.

**ಮುತ್ತಜ್ಜ**, ಮುತ್ತಜ (ನಾ). = ಮುತ್ತಂದೆ : ಅರಿಕೇಸರಿಗೆ ಮುತ್ತಜ್ಜನಾದ ಅವನು ಅರಿಕೇಸರಿಯೊಡನೆ ಹೋರಾಡಿದನೆಂಬುದನ್ನೂ ಒಪ್ಪಲಿಕ್ಕಾಗುವುದಿಲ್ಲ (ಪಾಕೋಶ. ೦೬೩); ಬಡತನವು ಹೆಚ್ಚಿದ್ದುದರಿಂದ ರೈತರು ಅಜ್ಜ; ಮುತ್ತಜ್ಜರು ಹೂತಿಟ್ಟಿದ್ದ ರೂಪಾಯಿಗಳನ್ನು ಕೊಟ್ಟಿದ್ದರು (ಹುಬ್ಬಿಹ. ೩). **ಮುತ್ತಜ :** ಶ್ರೀಮತು ಹಟಿಹೊಳಲೂರ ಗೌಡುಗಳ ಮೊಂಮಕ್ಕಳು ಮುತ್ತಜ ಬಡ್ರಪ್ಪಗೌಡನ ಮಗ . . . ಮಾಡಿದ್ದು ದೇವಸ್ಥಾನ ದೀಪಮಾಲೆ ಕಂಭ ಸಹಾ ಕೆರೆ ಸಹಾ ೨ (ಎಕ. VIII, ತೀರ್ಥ. ೯೨-೦; ?)

[ಮುತ್ತ₂ + ಅಜ್ಜ₂]

**ಮುತ್ತಜ್ಜಿ** (ನಾ). ಅಜ್ಜಿಯ ಅಥವಾ ಅಜ್ಜನ ತಾಯಿ : ಅವರು ತಮ್ಮ ಮುತ್ತಜ್ಜಿಯ ಕಾಲದ ಒಡವೆಗಳನ್ನು ಹಾಗೆಯೇ ಕಾಪಾಡಿಕೊಂಡು ಬಂದಿದ್ದಾರೆ (ಕೂ೨). [ಮುತ್ತ₂ + ಅಜ್ಜಿ]

**ಮುತ್ತಡಸು** (ಕ್ರಿ). ಮುತ್ತನ್ನು ಹದಿ.– ಮೆಟ್ಟು.– ಕೂರಿಸು : ಇತ್ತೀಜದೊಳು ನಿಂದಿಹ ಜೀವರನ್ನದ ಪುತ್ತಳಿಗಳು ಸೊಡರ್ವಿಡಿದು ಮುತ್ತಡ[ ಡ]ಸಿದ ಮಹಮುಪಕರಣಗಳಿಂದೆ ಚಿತ್ರಯಿಸಿದುವಲ್ಲಲ್ಲಿ (ವೀಪಕ. ೨೨-೪).

[ಮುತ್ತು₅ + ಅಡಸು]

**ಮುತ್ತತ್ತಿ** (ನಾ). ಒಂದು ಸ್ಥಳದ ಹೆಸರು : ನನ್ನಿಯ ಸೇಕರ ಶ್ರೀ [ಮು] ತ್ತತ್ತಿಯಂ ನಾಗಕುಮಾರಯ್ಯಂಗೆ ಕೊಟ್ಟೆಡನ್ನೊಡೆ (ಎಕ. V. (R), ತಿರುಮ. ೭೯-೩; ಸು. 9ನೆಯ ಶತ). [?]

**ಮುತ್ತಪ್ಪ** (ನಾ). ಅಜ್ಜನ ಅಥವಾ ಅಜ್ಜಿಯ ತಂದೆ; ಮುತ್ತಾತ : ಈತನು ನಹುಷನ ಮಗನಾದ ಯಯಾತಿರಾಯನು ; ನನಗೆ ತಂದೆಯು . . . ನಿಮಗೆ ಮುತ್ತಪ್ಪನು ಆಗಬೇಕು (ಕೃಪಾಅ. ೦೯೭); ನಮ್ಮ ಮುತ್ತಪ್ಪನಾದ ಹಿರಣ್ಯಕಶಿಪುವು ಧರಿಸಿದ ಕುಂಡಲವ್ಯ ಇವು (ಕೃಕೃರಾ. ೬-೪೪).

[ಮುತ್ತ₂ + ಅಪ್ಪ₁]

**ಮುತ್ತಬ್ಬೆ** (ನಾ). ೧.=ಮುತ್ತಜ್ಜಿ. ೨. ತಾಯಿಯ ಅಥವಾ ತಂದೆಯ ತಾಯಿ : ಅಜ್ಜಿ : ಪೆಱರ ಕಿಟಿಲೊಳಿಮ್ಮಬ್ಬೆಯುಂ ಮುತ್ತಬ್ಬೆಯುಂ

ಸಾದರ್ಿ ಬದಗುಗೆಯ್ದುಣೆ (ಅಧಿಪು. ೩-೩೪ ವ); ಪಡುವಳ್ ಕೀಟೋಲೊಳಮ್ಮ, ತೊಟ್ಟು ಪಡುವಳ್ ಮುತ್ತಬ್ಬೆಯೂ ಕೋಣೆಯೊಳ್ (ಕಾವ್ಯಾವ. ೩೦೬); ಮುತ್ತಬ್ಬೆಯುಂ ಪೆತ್ತ ತಾಯುಂ ಮೃತ್ಯುನಿವಾಸಮಂ ಪುಗಲು (ಶಬ್ದಾಸ್ತ್ರ. ೪-೪೩ ವ). [ಮುತ್ತ$_2$ + ಅಬ್ಬೆ$_1$]

**ಮುತ್ತಮ್ಮ$_1$** (ನಾ). = ಮುತ್ತಂದೆ : ಇಂದ್ರನೆಂಬ ವಿದ್ಯಾಧರಚಕ್ರವರ್ತಿ ನಿಮ್ಮ ಪಿರಿಯ ಮುತ್ತಮ್ಮನಪ್ಪ ಮಾಲಿಯಂ ಕೊಂದು ನಮ್ಮನ್ವಯದಿಂ ಬಂದ ಲಂಕೆಯಂ ಕೊಟ್ಟೊಡೀತನದೆನಾಳುತ್ತಿರ್ಪಂ (ಪಂಪರಾ. ೧೧-೧೪೩ವ). [ಮುತ್ತ$_2$ + ಅಮ್ಮ$_1$]

**ಮುತ್ತಮ್ಮ$_2$** (ನಾ). ಒಬ್ಬಾತನ ಹೆಸರು : ಕೇಸವಾದಿತ್ಯರ ದೇಗುಲ ಸಿದ್ಧೇಸ್ವರ ಮುತ್ತಮ್ಮನ ಕಲ್ಲನ್ತನ್ನ ಮಕ್ಕಳಿರ್ವ್ವರ ಕಲ್ಲ ಮಡಿಸಿದನ್ (ಸೌಇಇ. XI-i, ೩೫-೬; 933). [ಮುತ್ತ$_6$ + ಅಮ್ಮ$_1$]

**ಮುತ್ತಯ** 'ಮುತ್ತಯ್ಯ' ನೋ.

**ಮುತ್ತಯಿದೆ** 'ಮುತ್ತಯ್ದೆ' ನೋ.

**ಮುತ್ತಯ್ದೆ**, ಮುತ್ತಯಿದೆ, ಮುತ್ತೈದೆ (ನಾ). ೧. ವೃದ್ಧಳಾದ ಸುಮಂಗಲಿ : ಶೋಭನಾರ್ಥಕ್ಕಾದಡಂ ಕೆಲವಾಭರಣಮಂ ತೊಡಿಸವೇಳ್ಕು ಮದೇಭಗಮನೆಗೆನುತ್ತೊಸೆದು ಮುತ್ತಯ್ದೆ [ಪಾಠಾಂ. ತ್ತೈದೆ]ಯರು ಬಂದು (ಐಸಪು. ೪-೩೩). ೨. ಸುಮಂಗಲಿ ; ಸುವಾಸಿನಿ : ಮಿಣುಕಿದೆ ಕಿಡಿಯುಬ್ಬನಿ ನೋಡ . . . ಮುತ್ತಯ್ದೆಯ ಮೂಗುತಿ ಹರಳಂತೆ (ಅನಿಕೇ. ೩೩-೯); ಮುತ್ತಯ್ದೆ ಕೆಯ್ಯ ಭಿಕ್ಷೆ ಮೂರು ಹಿಡಿ ಸಾಕು (ಗಾದೆ). **ಮುತ್ತಯಿದೆ:** ೨. ಮುತ್ತಯಿದೆಯರೂ ಉಂಭ ಧರ್ಮ್ಮ ಆಚಂದ್ರಾರ್ಕವಾಗಿ ನಡವ ಹಾಗೆ ... ಮಾಡಿದ ಧರ್ಮ್ಮ (ಮೈಆಂ. ೧೯೩೪, ೧೮-೩; 1498). **ಮುತ್ತೈದೆ** : ೩. "ಚಿರಂಟೀ, ಸುವಾಸಿನೀ–ಈ ೨ ಮುತ್ತೈದೆಯ ಹೆಸರು" (ನಾಚರಾ. ೧೦೬); ಜಗವೆಲ್ಲಾ ಅಜ್ಜಿಯಲು ಎನಗೊಬ್ಬ ಗಂಡನುಂಟು ಆನು ಮುತ್ತೈದೆ ಆನು ನಿಟ್ಟೈದೆ (ಬಸವ. ೫೦೫); ವಿಲಾಸದಿಂ ವಾಡದರು ಮುತ್ತೈದೆಯರು ಶೋಭನವ (ವಳಕ. ೩-೬೮); ಮಹಾಪುರುಷರು . . . ಮುತ್ತೈದೆಯರಿಗೆ ಅರಿಶಿನ ಕುಂಕುಮ ಫಲಪುಷ್ಪತಾಂಬೂಲಗಳನ್ನೂ ದಕ್ಷಿಣೆಯನ್ನೂ ಇತ್ತು ಸತ್ಕರಿಸಿದನು (ಶ್ರೀರಾಮ. ೬).

**ಮುತ್ತಯ್ದೆಯಾಗು**, **ಮುತ್ತೈದಾಗು**, **ಮುತ್ತೈದೆಯಾಗು** = ಗಂಡನುಳ್ಳವಳಾಗಿರು ; ಸುಮಂಗಲಿಯಾಗಿರು : ಚಿತ್ತಜಾರಿಯನೊಲಿಸಿ ಗಂಡನಸುವಂ ಪಡೆದು ಮುತ್ತಯ್ದೆಯಾಗಿ ಕೆಲದಿನವಿರ್ದು ಚೆನ್ನೆ ಬಳಿಕು ತ್ತಮದ ಪದವಿಯಂ ಪಡೆವಳು (ಚೆರಪು. ೫೫-೪೫); ಮುತ್ತೈದಾಗಿರಬೇಕು ಮುದದಿಂದಲಿ ಹತ್ತುಸೂಜನಾದೊಡೆಯ ಪರಿಣಾಮ ಪತಿಯೊಂದು (ಪುರಂದ. ೧-೩೪ ಕೃತಿ); ಸರ್ವರೊಳಗೆ ಮುತ್ತೈದೆಯಾಗಿರ್ದು ವೈಧವ್ಯವನಾಂತು ಬಾಳುವೆನೆ (ಮೋಹತ. ೮-೩೬). **ಮುತ್ತೈದೆಪೂಜೆ** = ಕೋಮಟಿ ಜನಾಂಗದವರ ಮದುವೆಯಲ್ಲಿ ನಾಲ್ಕನೆಯ ದಿನ ಮಾಡುವ ಒಂದು ವಿಧಿ ; ಹಿಂದೆ ಸುಮಂಗಲಿಯಾಗಿ ಸತ್ತವರ ನೆನಪಿನಲ್ಲಿ ಮಾಡುವ ಪೂಜೆ: (ಎಕಪ್ಮ. IV. ೬೬). **ಮುತ್ತೈದೆ ಬಾಗಿನ** = ಶುಭಸಂದರ್ಭಗಳಲ್ಲಿ ಸುಮಂಗಲಿಯರಿಗೆ ಕೊಡುವ ಬಾಗಿನ : ಗೌರಿಪೂಜೆಯನಂತರ ಸುಮಂಗಲಿಯರಿಗೆ ಮುತ್ತೈದೆಬಾಗಿನ ಕೊಡುವುದುಂಟು (ರೂಢಿ). **ಮುತ್ತೈದೆಸಾವಿತ್ರಿ** = (ಪುರಾಣಗಳಲ್ಲಿ ಹೇಳಿರುವಂತೆ, ಸತ್ತ ಗಂಡನನ್ನು ಯಮನಿಂದ ಮರಳಿ ಪಡೆದು) ಶಾಶ್ವತವಾದ ಸುಮಂಗಲೀಪದವಿಯನ್ನು ಪಡೆದ ಮದ್ರದೇಶದ ಅಶ್ವಪತಿಯೆಂಬ ರಾಜನ ಮಗಳು: ಮುತ್ತೈದೆಸಾವಿತ್ರಿಪೂಜೆಗಳು ನಡೆದವು (ಶಾಂಕರಾ. ೧೦೦) **ಮುತ್ತೈದೆಸಾವು** = ಗಂಡನಿಗಿಂತ ಮೊದಲು ಹೆಂಡತಿ ಪಡೆಯುವ ಸಾವು ; ಸುಮಂಗಲಿಯಾಗಿ ಸಾಯುವಿಕೆ : ಮಲ್ಲಿದೇವರ ಬಳಿ ಕೇಳಿ ಕೊಡದ್ದು ಮುತ್ತೈದೆಸಾವನ್ನು! (ಸೌಂದಕ. ೩೫೨).

[< ಮುತ್ತ$_2$ + ಅಯ್ದೆ$_2$/ತುಳು. ಮುತ್ತಯಿದೆ, ಮುತ್ತೈದೆ : ತೆಲು. ಮುತ್ತಯಿದುವ, ಮುತ್ತೈವ, ಮುತ್ತೈದುವ]

**ಮುತ್ತಯ್ದೆತನ**, ಮುತ್ತೈದೆತನ (ನಾ). ಸುಮಂಗಲಿಯಾಗಿರುವಿಕೆ ; ಸುವಾಸಿನಿಯಾಗಿರುವಿಕೆ : ಉದಯಾಸತಿ ತನ್ನ ನಲ್ಲಂ ಉದಧಿಯೊಳಿಳಿಯಲ್ಕೆ ತನಗೆ ಮುತ್ತಯ್ದೆತನಕ್ಕಿದು ಸಲ್ಲದೆನುತ್ತುಂ ಹಾರದ ಮಣಿಯಂ ಕಳಲ್ಚುದಿರ್ದಪೊಲುಡುಗಣಮೆಸೆಗುಂ (ಗಿರಿಜಾ. ೪-೯೩ ಅಧಿಕಪ್ರ); ಓಸರಿಸುತಿದೆ ಮುತ್ತಯ್ದೆ [ಪಾಠಾಂ. ಮುತ್ತೈದೆ, ನಟ್ಟೈದೆ]ತನವೆಲೆ ಸರಮೆ ಕಳುಹಿ ಬೇಗ ಪತಿಯೆಡೆಗೆ (ತೊರರಾ. ೬-೦೨-೩೪); ಬಾಲೆಗೀ ಲಕ್ಷಣಂ ಮುತ್ತಯ್ದೆ [ಪಾಠಾಂ. ಮುತ್ತೈದೆ]ತನವಾಗಲರಿಯದು (ಜೈಮಿಭಾ. ೫-೫೫); ಅವಳ ಮುತ್ತಯ್ದೆತನ ತನ್ನ ಪಟ್ಟಿಗೇ ಗುಟ್ಟಾಗಿದ್ದ ವಿಷಯ (ಎರಸಿ. ೯೮). **ಮುತ್ತೈದೆತನ** : ಎಳಸಿ ಮುತ್ತೈದೆತನದಲಿ ಮುಂದೆ ಹೋದಪೆಂ ಕಳುಹಿಕೊಡಬೇಕೆಂದು ಮೈಯಿಕ್ಕಿ ಬೇಡಿಕೊಂಡಳು ಗಂಡನಂ ಚಂದ್ರಮತಿ (ಹರಿಶ್ಚಂ. ೦೦-೨೦); ಕೇಳಿದಳು ಹರುಷದಲಿ ಪುತ್ರಕರೇಳಿಗೆಯು ಮುತ್ತೈದೆತನದಲಿ ಬಾಳುವೆಯ ಕೈಕೊಂಡೆನೆಂದಳು ನಗುತ ಗಾಂಧಾರಿ (ಕುಂತಕ. ೨೦-೬); ಮನದೊಳು ನೆನೆದೊಡೆ ಬರ್ಪ ನಿನ್ನಾಳ್ದ ಮನಸಿಜನೆನಿಸಿ ಜೀವಿಪನೆಂದು ಮುತ್ತೈದೆತನವಿತ್ತನೀಶ್ವರ ರತಿಗೆ (ಮೋಹತ. ೮-೪೦). [ಮುತ್ತಯ್ದೆ + –ತನ$_1$]

**ಮುತ್ತಯ್ಯ**, ಮುತ್ತಯ, ಮುತ್ತಿಯ, ಮುತ್ತ$_6$, ಮುತ್ತ್ಯಾ, ಮುತ್ತ್ಯಾ$_6$ (ನಾ). ೧. ಅಜ್ಜಿಯ ಅಥವಾ ಅಜ್ಜನ ತಂದೆ; ಮುತ್ತಾತ: (೬). ೨. ತಾತ; ಅಜ್ಜ : ಮಾರ್ತ್ತಣ್ಡಯ್ಯಂ ತಮ್ಮ ಮುತ್ತಯ್ಯಂ ಮಾಡಿಸಿದ ಬಸದಿಯಂ ಪಡಿಸಲಿಸಿ . . . ತನ್ನ ಕೀರ್ತ್ತಿಶಿಳಾಸ್ತಂಭಮನಾಚನ್ದ್ರಾರ್ಕ್ಕತಾರಂಬರಂ ನಿಲಿಸಿದ (ಸೌಇಇ. XI–i, ೬೮-೯೬; 1045); ಅಪ್ಪನು ಡೋಹಾರ ಕಕ್ಕಯ್ಯನಾಗಿ ಮುತ್ತಯ್ಯ ಚೆನ್ನಯ್ಯನಾದರೆ ಆನು ಬದುಕೆನೆ (ಬಸವ. ೩೪೨); ಗುರುವಲಾ ಮುತ್ತಯ್ಯ ನಮ್ಮನು ಹೊರೆದ ತಂದೆಗೆ ತಪ್ಪಿದರು ಕಡುನರಕಗಳು ಪಾಂಡವರು (ಕುಮಾವ್ಯಾ. ೧೦-೦೨). ೩. ಮುದುಕ : ವೃದ್ಧ : ಮುತ್ತಯ್ಯ ಬೆದರಿದೇನು (ಕಾವ್ಯಾವ. ೩೦೨); ಮುತ್ತಯ್ಯ ಮುಳುವಳ್ಳು ಅತ್ತ (ಅರಳು. ೨೫೬-೩). **ಮುತ್ತಯ** : ೧. ಮುತ್ತಯ ಸರಸಿಜಾಸನ ನಮ್ಮ ಪಿರಿಯರ ಹೆಸರ ಕಡಿಸದಿರು (ಕೌಶಿರಾ. ೦೪-೨೩): ಭೂಪರ ಪಿತಪಿತಾಮಹರ ಅವರ ಮುತ್ತಯ ಬದರಿಕಾಶ್ರಮದಿ ಕ್ರತುಸಹಸ್ರದನಂತಕೋಟಿ ಕ್ಷಿತಿಯೊಳುಳ್ಳ ಸಮಸ್ತತೀರ್ಥದ ಗತಿಯನೀವ ಮಹಾನುಭಾವರ ಪಿತನು ನಡೆತಂದ (ಸಂಶಕ. ೩-೧). ೨. ಮುತ್ತಯನ ಕರತಳದ ಧನುವನು ಕತ್ತರಿಸಿದನು (ಕುಮಾವ್ಯಾ. ೯-೪೬); ಕುಶನೆ ಕೇಳ್ಕೆ ನಿಮ್ಮ ಮುತ್ತಯ ದಶರಥನು ಮಾಡಿದ ಮಹಾಧ್ವರದೆಸಕಕಿದು ಹೊಯ್ಕೈಯೆನಲು ಮಾಡಿದನು ಸತ್ಕ್ರತುವ (ತೊರರಾಂ. ೦-೦೨-೨೬). **ಮುತ್ತಿಯ** : ೧. "ಮುತ್ತಪ್ಪ–ಮುತ್ತಿಯ (ಮುತ್ತ್ಯಾ)" (ಶಾಪಕೋ–೩೨). **ಮುತ್ತ$_6$** : ೧. ನಮ್ಮ ಅಜ್ಜ ಮುತ್ತಂದಿರು ಈ ಪಟ್ಟಣವ ಬನಾದಿಯಿಂದಿರುತ್ತದೆಂದು ಹೇಳುವರು (ಮುಂಬಯಿ. ೬-೨೬೬). ೨. ಬಲ್ಲಿದ ಕಂಸನ ಮುರಿದಿಟ್ಟಾ ಕೋಲು ಉಲ್ಲಾಸದಿ ಪೆತ್ತಾ ತಾಯಿಯ ಕಡೆಯಿಲ್ಲದೆ ಬಿಡಿಸೀಸಲ್ಲಿಸಿ ಮುತ್ತಗೆ ಪಟ್ಟವ ಗಟ್ಟಿದ ಕೋಲು (ಶ್ರೀಕೃಪಾ. ೬೦). **ಮುತ್ತ್ಯಾ** : ೧. ಅಜ್ಜ ಆರುತಲೆ, ಮುತ್ತ್ಯಾ ಮೂರುತಲೆ ನಡೆದುಬಂದುದೇದು ಹೇಳಿದರು (ದಾಸಪು. ೬೬). ೨. ಶ್ರೀವಿಜಯದಾಸರ ತಂದೆಗಳು ಶ್ರೀನಿವಾಸಪ್ಪನವರಿಗೆ ಮುತ್ತು ದಾಸರ ಮುತ್ತ್ಯಾ ಈ ಉಭಯರಿಗೆ ನಾಯಿಯ ಜನ್ಮ ಬಂದಿತ್ತಂತೆ (ವಿಜಯ. ೧೫೪). **ಮುತ್ತ್ಯಾ$_6$**: ೨. ಹೆತ್ತ ತಾವೆಮನಜಿಯನೆ ಮುತ್ತ್ಯಾನ ಪ್ರಸ್ತಾಪವ ಹೇಳುವ (ಅಬುಡಿ. ೦೦೮-೫೦). [ಮುತ್ತ$_6$ + ಅಯ್ಯ$_1$]

**ಮುತ್ತರ$_1$** (ನಾ). ಮೂರುಬಗೆ, – ವಿಧ : ಇದು ಪೃಥ್ವಿಯೊಳಗಣ ಮುತ್ತರದ ಅಚ್ಚಿಗವು ಇದ ಬಿಡಿಸಾ ನಿಃಕಳಂಕಮಲ್ಲಿಕಾರ್ಜುನಾ (ವೀರಶಪ. ೦೬೨-೬೦೬) [<ಮೂಱು + ತರ$_6$ (<ತರಹ)]

**ಮುತ್ತರ₂** (ನಾ). ಒಬ್ಬಾತನ ಹೆಸರು : ಶ್ರೀಮದೆಚಿಯಪ್ಪರಸನ್ ಸಮಸ್ತ ರಾಜ್ಯಪ್ಪೆಯುತ್ತಮಿರೆ ಅವನ ಸಾಮನ್ತಂ ಶ್ರೀಮುತ್ತರ ಅತಿರಥಗಣ್ಡ . . . ಅಸನ್ದಿನಾಡನಾಳುತ್ತಿರೆ (ಎಕ. XV, ಅರಸೀ. ೨೧೩-೪; ಸು. ೮೯೦). [< ಮುತ್ತರಸ]

**ಮುತ್ತರಸ** (ನಾ). ಒಬ್ಬಾತನ ಹೆಸರು : ಕಿಚಿಗಾಳೆ ಮದವ ಮುತ್ತರಸರಾ ಮರಪ್ಪನ ಪರಮಿಳ್ಳ ಎಱಿತು ವೀರಸ್ವರ್ಗಂ ಪೊಕ್ಕಂ (ಎಕ. XII, ಹುಣ್ಸಗಿ. ೯೭-೪; ಸು. 750) ; ಮುತ್ತರಸರ್ವರ್ನೆಯಿಂ ಪಡುವಾಯ್ಯನೆಯಿಂ ಮುತ್ತರಸರ ಊರಿಂ ಇಟ್ಟು (ಎಕ. III, ತಿರುಮ. ೧೦೩-೪; ಸು. ೯೦೦).

[ಮುತ್ತು₅ + ಅರಸ₁]

**ಮುತ್ತಲ** 'ಮುಟ್ಟಿಗ' ನೋ.

**ಮುತ್ತಲು₁** 'ಮುಚ್ಚಲು' ನೋ.

**ಮುತ್ತಲು₂** 'ಮುಟ್ಟಿಗ' ನೋ.

**ಮುತ್ತಲು₃** (ನಾ). ಒಣಗಿದ ಬೇರು : ಆಡುಸೋಗೆಯ ಮುತ್ತಲು, ಅಮರದವಳ್ಳಿಯ ಮುತ್ತಲು, ಮುಳ್ಳುಸೊಂಡೆಯ ಮುತ್ತಲು, ಈ ಮೂರನ್ನು ಕತ್ತರಿಸಿ ಜಜ್ಜುಗುಟ್ಟಿ ಕಷಾಯುಮಿಟ್ಟು . . . ಸೇವಿಸುತ್ತಾ ಬರಲು . . . ಹಳೆಕೆಮ್ಮಲು, ಉಬ್ಬಸ ಸಹ ಪರಿಹಾರವಹುದು (ಸಕವೈ. ೨೨೪).

**ಮುತ್ತಲೆ** (ನಾ). ಮೂರು ತಲೆ : ಅವನ ತಲೆಗೆ ತಲೆಯ ಪಳಿಯಿಂದರಿದು ತಿರುಕೊಳವಿನಾಚಿ ಮಡಗಿದರೆ ಮುತ್ತಲೆಯೊಡನೆಯೊದಜಿತ್ತು ಶಿವಮಂತ್ರವ (ಛಾವತಂ ೯-೩೯); ಮುತ್ತಲೆ, ಮೂಜುತಲೆ (ಶಬ್ದಸು. ೩೬೦ ಪ್ರಯೋ).

[ < ಮೂಜು + ತಲೆ₁ ]

**ಮುತ್ತಲ್ಲಿಕ** 'ಮುತಾಲಿಕ' ನೋ.

**ಮುತ್ತವರ** (ನಾ). ಒಂದು ಮನೆತನದ ಹೆಸರು : ಇದಾ ಪಡೆದೊರ್ ಸುಸೇನವದಿಯರ ಸ್ವರ್ಣಗೋಸಾಸಿ ಮುತ್ತವರದ ಅಡಿಮುಪಸೆಟ್ಟಿಯು (ಎಇ. IX, ೨೨-೧೦; ?). [ ? ]

**ಮುತ್ತವ್ವೆ**, ಮುತವ್ವೆ (ನಾ). = ಮುತ್ತಜ್ಜಿ : ತಮ್ಮ ಮುತ್ತವ್ವೆ ಲಚ್ಚಿಯಬ್ಬರಸಿಯರು ಮಾಡಿಸಿದ ಬಸದಿಯಲಿಪ್ಪ ರಿ(ಷಿ)ಯರಾಹಾರ ದಾನನಿಮಿತ್ತಂ . . . ಮೂಜು ಪಣಮಂ ತೆತ್ತಂಬಂತಾಗಿ ಬಿಟ್ಟರು (ಎಇ. XVIII, ೧೭೩-೯೩; 1145); ಮುತ್ತಾಗವೆ ಮುತ್ತವ್ವೆ ಚಂಗಳೆ ಅತ್ತಿಯೇ ನಾನಿಹಗಿಹುದು ನಿನಗರ್ತಿಯೇ (ಬಸಶ. ೯೩-೩೯). ಮುತವ್ವೆ : ತಮ್ಮ ಮುತಪ್ವೆ ಲಚ್ಚಿಯಬ್ಬರಸಿಯರು (ಕೊಂಕಣ. ೦೯೯೦, ಶರಸಗಾಡು. ೩೨-೯೩; 1067). [ಮುತ್ತು₂ + ಅವ್ವೆ]

**ಮುತ್ತಟಿ** (ನಾ). ಮೂರುಸತ್ತಿಗೆಗಳು : ಮುಕ್ಕೋಡಿ, ಮುತ್ತಟಿ, ಮುಕ್ಕುಪ್ಪೆ (ಶಬ್ದಸು. ೦೦೦ ಪ್ರಯೋ). [< ಮೂಜು + ತಟಿ]

**ಮುತ್ತಾಣ್ಮ** (ನಾ). ಪಯಸ್ಸಾದ ಗಂಡ: ಏಂ ನಿಷ್ಕರುಣೆಯೊ ಪಸುಮಗನೆನ್ನದೆ ಮುತ್ತಾಣ್ಮನೆನ್ನದೆ . . . ಮುಂಬಿಟ್ಟು ಕೊಂದಪಂ ಯುಮರಾಜಂ (ಅತಪು. ೧೦-೨೩). [ಮುತ್ತು₂ + ಆಣ್ಮ (<ಆಳ್)]

**ಮುತ್ತಾತ** (ನಾ). = ಮುತ್ತಾಂದೆ: ''ಪ್ರಪಿತಾಮಹ:—೧ ತತ್ಪಿತಾ . . . ತಂದೆಗೆ ಪಿತಾಮಹ, ಮುತ್ತಾತ'' (ಸಿದ್ಧಾಂತ. ೦೭೬); ಇಲ್ಲಿ ನಮ್ಮ ಮುತ್ತಾತ ಅಂದರೆ, ಭೀಮರಾಯರ ತಂಗಿ ಬಳಗದವರು ಒಬ್ಬರಿದ್ದರಂತೆ (ಮುಕೀ. ೯೦); ತಾತನೋ ಮುತ್ತಾತನೋ ಹೆತ್ತಯ್ಯನೋ ಕಟ್ಟಿಸಿದ ಮನೆಯಲ್ಲಿ ಅವರ ಸಂತತಿ ವಾಸಿಸುತ್ತಾರೆ (ಪತದಾ. II, ೯೭೯). [ ಮುತ್ತು₂ + ತಾತ ]

**ಮುತ್ತಾರ** (ನಾ). ಮುತ್ತಿನ ಸರ ; ಮೌಕ್ತಿಕದ ಮಾಲೆ : ಇಡಿದೊತ್ತಿಂ ಮೊಲೆ ಮುಂದೆ ಪಾಯೆ ಕುಣಿಯುತ್ತೆತ್ತಾಡೆ ಮುತ್ತಾರಮುಂ . . . ಕಾದಲೆಯರ್ಕಳಲ್ಲಿ ಮೆರೆವರ್ ಚೆಂಡಾಟದೊಳ್ರಯ್ಯದಿಂ (ಪ್ರಸೋಮ. ೩-೨೯).

[< ಮುತ್ತು₅ + ಆರ₂. / ತಮಿ. ಮುತ್ತಾರಮ್. / ಸಂ. ಮುಕ್ತಾಹಾರ]

**ಮುತ್ತಾಲಿಕ** 'ಮುತಾಲಿಕ' ನೋ.

**ಮುತ್ತಿಂಥಿಬೋಯ** (ನಾ). ಒಬ್ಬಾತನ ಹೆಸರು : ಮುತ್ತಿನ್ಥಿಬೋಯಸ್ಯ ಕೌಣ್ಡಿಲ್ಯಗೋತ್ರ ವೆಣ್ಣಶರ್ಮ್ಮಣ (ಇಇ. VII, ೦೯೯-೯೭ ; 688).

[ ? + ಬೋಯ ]

**ಮುತ್ತಿಕ್ಕು** 'ಮುದ್ದಿಕ್ಕು' ನೋ.

**ಮುತ್ತಿಗೆ** (ನಾ). ೧. ಆವರಿಸುವಿಕೆ ; ವ್ಯಾಪಿಸುವಿಕೆ ; ಹಬ್ಬುಗೆ : ಸುಡುವ ಹೊಸವಿಷದುರಿಯ ಮುತ್ತಿಗೆಯ ನಡುವಿರ್ದ ಮೃಡನಂತೆ [ಪಾಠಾಂ. ನಡುವಿರ್ದ ಮೃಡನಂತೆ ಬಿಡದಡಸಿ] . . . ಇರ್ದನವನಿಪ ಸುರಿಯ ದಾಳಿಯೊಳಗೆ (ಹಕಣ. ೧೦-೦೨) ; ಮತ್ತೆ ಕವಿದುದು ಹೆಣನ ತುಳಿದೊತ್ತೊತ್ತೆಯಲಿ ರಿಪುಸೇನೆ ಮುಂಜಿನ ಮುತ್ತಿಗೆಯ ರವಿಯಂತೆ ಕಾಣಿಸು ಕಳಶಸಂಭವನ (ಕುಮಾವ್ಯಾ. ೦೯-೨೦) ; ಈ ತಮದ ಮುತ್ತಿಗೆ ತೆಗಸುವಡೆ ಮಾರ್ತಾಂಡನೇ ಕ್ಷಮನು (ಸಿಭಾಗ. ೦೦-೨೭-೦೩). ೨. ಬಳಸು ವಿಕೆ : ಪದ್ಮಾವತಿಯುಂ ಆದಯ್ಯನುಂ ಗಾಢಾಲಿಂಗನದ ಮುತ್ತಿಗೆ ಯತ್ತಲಗ್ಗಳವಾಗಿ ಸಕಲೇಂದ್ರಿಯಂಗಳೊಳಗುಗೊಟ್ಟು . . . ಸವಿವೃತ್ತಿಪ್ರ ಸುಖಿಸಮಯದೊಳಂ (ಅದಾ. ಹ. ೯೩೩-೨೦). ೩. ಮೇಲೆ ಬೀಳುವಿಕೆ ; ಆಕ್ರಮಣ ; ಧಾಳಿ : ಆ ಪೆರ್ವಲಮೆಯ್ದೆ ಸುತ್ತಟಿದು ಮುತ್ತಿಗೆಯಂ ನೆಜೆ ಬಿಟ್ಟು ಬಂದು ಸ್ಯೆತೊರ್ವಳಿಗೊಂಡು ಸಾವರ್ದಿರದಾಗಳೆ ಸಿಂಹ ಬಳಾಪನೀತನಾ (ಕುಸುಮಾ. ೧೦-೯೭) ; ಮುಸುಗಣದ ಮುತ್ತಿಗೆಗೆ ಏಳ ಬೆಕ್ಕಸನೆ ಬೆಱಗಾಗುತ್ತ ಸುಯ್ದನು (ಕೌಶಿಕ. ೨೦-೯) ; ನಮ್ಮಾ ಪೊಳಲ ನೊತ್ತರಿಸಿದಾ ಮುತ್ತಿಗೆಯೊಳೀ ಹೆಂಡಿರೀ ಮಕ್ಕಳೆಲ್ಲರುಂ ಸತ್ತುಹೋದಂ ತಾಯಿತು (ಸಮ್ಯಕ್. ೬-೩೩).

ಮುತ್ತಿಗೆಯನಿಕ್ಕು = ಎರಗು ; ಆಕ್ರಮಣಮಾಡು : ಬರುತಲೇ ಮುತ್ತಿಗೆಯನಿಕ್ಕಿದರೆರಡುಮೈಯಲಿ ಬೀದಿವರಿದೊಡಭುರಿದು ವೆಚ್ಚೈಸಿದರು (ಕೂರಣ. ೬-೭-೩೨) ; ಮುತ್ತಿಗೆಯನಿಕ್ಕಿಕೊಂಡಿರ್ಪೆಳವಿಸಿಲ್ಗಳೆನಲು ಗಗನ ವಡರ್ದ ಸೌಧಂಗಳ ಮರೀಚಿಯಿಂ ಪೊಗರುಗುವ ಪೊಚ್ಚಪೊಸಪೊನ್ನ ಕೋಂಟೆಗಳ ಕಾಂತಿಗಳ್ಸೆದೆ ಮುಸುಕಿಕೊಂಡೆಸೆದಿರ್ದುವು (ಕೃಬಿಶಾ. ೦೭-೭).

ಮುತ್ತಿಗೆ ಹಾಕು = ೧. ಸುತ್ತುವರಿ ; ಬಳಸು : ಅದರ ಸುತ್ತಲೂ ಹೊರಗೆ ಸೊಳ್ಳೆಗಳು ಮುತ್ತಿಗೆ ಹಾಕಿ ಝೇಂಕಾರ ಮಾಡುತ್ತಿರುತ್ತವೆ (ಹಂಚಿರು. ೯೨) ; ಜನ ಅವನಿಗೆ ಮುತ್ತಿಗೆ ಹಾಕಿದರು (ಕೃಪರು. ೨೯೭). ೨. = ಮುತ್ತಿಗೆಯನಿಕ್ಕು : ಮುಸಲ್ಮಾನರು ರಾಜಧಾನಿಗೆ ಮುತ್ತಿಗೆ ಹಾಕಿ ತಮ್ಮೆಲ್ಲರನ್ನೂ ತುಕ್ಕಡ ತುಕ್ಕಡ ಮಾಡಿಬಿಡುವರು (ಬಂಕಿಮ. ೩೦೯).

[ಮುತ್ತು₁ + — ಇಗೆ₆ / ತಮಿ. ಮುತ್ತಿಕ್ಕೈ. ಮುಟ್ಟಿಕ್ಕೈ. ಮುಟ್ಟುಕ್ಕೈ ; ತುಳು. ಮುತ್ತಿಗೆ, ಮುತ್ತಿ ; ತೆಲು. ಮುತ್ತಿಕ]

**ಮುತ್ತಿಗೆದೆಗೆ** (ಕ್ರಿ). ಆಕ್ರಮಣವನ್ನು ಕೈಬಿಡು ; ದಾಳಿಯನ್ನು ಹಿಂದಕ್ಕೆ ತೆಗೆದುಕೊಳ್ಳು : ಅಳುಕಿ ಮುತ್ತಿಗೆದೆಗೆದು ಸಾಲ್ವನ ದಳ ಮುರಿದು ನಿಜಪುರಕೆ ಹಾಯ್ದುದು (ಕುಮಾವ್ಯಾಕ. ೨-೨೩) ; ಮಿಗೆ ಬಲಾಹಕ ಕಡೆಗೈದಲು ಕಾಂತಿಯಿಂ ಸೊಗಸುವ ಮಾರ್ತಾಂಡನಂತೆ ರಘುಗೆಗ್ಗುಗಿಸಿದುದು ಪಟ್ಟಣ ಬಲು ಮುತ್ತಿಗೆದೆಗೆಯಲು (ಕಂಪರಾ. ೦೩-೦೨೭). [ಮುತ್ತಿಗೆ + ತೆಗೆ₁]

**ಮುತ್ತಿಗೆಯಿಕ್ಕು** (ಕ್ರಿ). ಎರಗು ; ಆಕ್ರಮಣ ನಡೆಸು : ಅರಿಪುರದೆಡ ಬಲ ಗಡಿದುರ್ಗಗಳನೀಗ ಭರದೆ ಮುತ್ತಿಗೆಯಿಕ್ಕಿ ಸೆಳೆಯೆ (ಕಂಪರಾ. ೩-೨೦).

[ಮುತ್ತಿಗೆ + ಇಕ್ಕು]

**ಮುತ್ತಿಡು** ' ಮುದ್ದಿಡು ' ನೋ.

**ಮುತ್ತಿಯ** ' ಮುತ್ತಯ್ಯ ' ನೋ.

**ಮುತ್ತಿಸು** (ಕ್ರಿ). ಸುತ್ತುಗಟ್ಟುವಂತೆ ಮಾಡು; ಸುತ್ತುವರಿಯಿಸು : ''ಮುತ್ತಿಸು-ದುರ್ಗಸಂವೇಷ್ಟನೇ'' (ಕಮಾಧಾ).

ಮುತ್ತಿಸಿಕೊಳು = ಆವರಿಸಲ್ಪಡು; ಸುತ್ತುವರಿಯಲ್ಪಡು : ಬೆಲ್ಲವೆ

ನೀ ಮುದ್ದುವೆಂಗಳ ಮೃದುವಾಯ ಬೆಲ್ಲಪಾದಿರದೆ ಬಂದಿಲ್ಲಿ ಪೊಲ್ಲಿಪ ನೊಣನ ಮುತ್ತಿಸಿಕೊಳಬೇಡ (ಮೋಹತ. ೨೦-೨೪). [ಮುತ್ತು₁ + -ಇಸು₃]

**ಮುತ್ತು₁** (ಕ್ರಿ). ೧. ಆವರಿಸು; ಕವಿ; ವ್ಯಾಪಿಸು : ಒಂದು ದೆಸೆಯೊಳ್ ತಗುಳ್ದ ಮುಕುಂದನ ಕರಚಕ್ರಂ. . . ಒಂದು ದೆಸೆಯೊಳ್ ಕುಂದದೆ ದಹನಾರ್ಚಿ ಸುತ್ತಿ ಮುತ್ತುವ ಪವದೊಳ್ (ಹಂಪಭಾ. ೩-೯೮); ಬಲವವಗಡಿಸಿ ನೊಕ್ಕುದು ಮಸಗಿದಂಬುಧಿ ಬಡಬನನು ಮೊಗೆವಂತೆ ಮುತ್ತಿತು ಕಳಶ ಸಂಭವನ (ಕುಮಾರವ್ಯಾ. ೧೬-೩೩); ಕಳಸಕುಂಚಗಳ ಕಾವಿಯಸಿಯುಕ್ತಿಗಳ ಕಾಂತಿ ಬಳಸಿ ಮುತ್ತಿತು ನೆರವಿಗರ (ಕಂಸವ. ೯-೬೮). ೨. ಸುತ್ತುಗಟ್ಟು; ಸುತ್ತುವರಿ; ಬಳಸು : ಸುತ್ತಿದ ನಂದನವನದಿಂ ಮುತ್ತಿದ ಕೆಯ್ವೊಲ ದಿನೆಸೆವ ಪದ್ಮಾಕರದಿಂದುತ್ತುಂಗಜಿನಾಲಯದಿಂದುತ್ತಮಪುರವೆನಿಸಿ ನೆಗಳ್ದ ಚಂಪಾಪುರದೊಳ್ (ಧರ್ಮಾಮೃ. ೩-೩); ಸಿಂಹವರ್ಮಧರಾದೇವರ ಸೇನಾಪತಿ ಚಂಪಾಪುರಮಂ ಪರಿಯಿಟ್ಟು ಮುತ್ತಿದಂ ಮೂವಳಸಿಂ (ಕುಸ್ತು. ೩-೦೨೬); ಹಾವಿನ ಹೆಡೆಯು ತುಳಿವರೇ! ಅಂಜಿಕಿಲ್ಲವೆ ಹಾವು ಮೈಗೆ ಮುತ್ತಿರಲು ಹೇಗೆ ಜೀವಿಪನೆ (ಪುರಂದ. ೨-೬೩-೪). ೩. ಧಾಳಿಮಾಡು; ಆಕ್ರಮಣ ನಡೆಸು; ಲಗ್ಗೆ ಹಾಕು : "ಮುತ್ತು—ಸಿರೋಧಾವರಣೇ, ಮೌಕ್ತಿಕೇ ಚ" (ಶಮಣಿ); ಬಲ್[ವ]ತೆ ಸು (ಸೂ)ದ್ರಿಕನ್ ಪ್ರಳಯಧನ ಮುತ್ತಿ ಅಣಿಯ [೦] ಕದಿವೊಂಗಂ ಚಲಮುಜಿಸೊಂಗಂ ಅಟ್ಟಿವೊಂಗಂ ಕುಡಲಪ್ಪೊಂಗಂ ಒಬ್ಬನೊ(ನೆ) ಆಚಾರ್ಯ(ಯ್ಯಾ)ನ್ (ಎಪಿ. XXIV. ೦೯೩-೬ ; ಸಂ. ೪೫೫) ; ಅನಿತುಂ ಬಲಮುಂ ಮುತ್ತಿ ಬಳಕಾವರ್ತರ್ ಸುತ್ತಲುಮೇಸಾಡಿ ಪಿರಿದ ತಿಣಿಕಂ ತಂದರ್ (ಆದಿಪು. ೦೪-೭೦) ; ವಜ್ರಾಯುಧನ ಮೊಮ್ಮನ ರಥವ ನಿರ್ದಾಯದಲಿ ಮುತ್ತಿದರು ಕುರುಸೇನಾಮುಹಾರಥರು (ಕುಮಾರವ್ಯಾ. ೩-೨೪). ೪. ಗುಂಪುಗೂಡು ; ಸಂದಣಿಸು : ಪೆಣ್ದುಂಬಿಗಳ್ ಮುತ್ತುತುಂ ಮುಸುಜುತ್ತುಂ ಬರೆ ಬಂದುದಿಂದ್ರವನದಿಂ ಪೂದಂವಲ್ (ಹಂಪಭಾ. ೯-೯೬); ಶ್ರೀವೀರನಾಥಂ ನೆಲಸಿರೆ ವಿಪುಳಾದ್ರೀಂದ್ರದೊಳ್ ಶೋಭೆಯಿಂ ಮುತ್ತಿದ ದೇವಾನೀಕದಿಂ . . . ಶ್ರೇಣಿಕಂ ಸಂತೋಷಂ ಮಿಗೆ ಕೂರ್ತು ಕೇಳ್ದನಧಿಕಶ್ರೀಗಾರ್ಮವುಂ ಧರ್ಮಮಂ (ಧರ್ಮಾಮೃ. ೦-೬೦) ; ಮುತ್ತಿ ಮುಸುಜುತ್ತು ಜನಂ ಕೆಡೆದಿರ್ದ ಯೋಗಿಯಂ (ವರ್ಧಮಾ. ೩-೦೦). ೫. (?) : ಈ ಧರ್ಮಕೆ ಮುಜುವ ಮಾಜು ಸಲ್ಲದು ಮುತ್ತುವ ಬತ್ತಿ ಸಲ್ಲದು (ಶಾಸ. IX-ii, ೪೬೪-೩೨ ; 1472).

**ಮುತ್ತಿಕೊಳ್, ಮುತ್ತಿಕೊಳ್ಳು**=೧. ಆವರಿಸು; ಕವಿ: ಮುಸುರು : ತನ್ನೆರಡುಕೆಯ್ಯೊಳಮೆಚ್ಚ ಶರಾಳಿಗಳ್ ಭಯಂಕರತರಮಾಗೆ ಭೂಭುವನ ಮೆಲ್ಲಮನೊರ್ಮೆಯೆ ಸುತ್ತಿ ಮುತ್ತಿಕೊಂಡಿರೆ ದೆಸೆಗಾಣಲಾಗದು (ಹಂಪಭಾ. ೧೦-೦೦೬); ಮಧ್ಯಾಹ್ನಸೂರ್ಯನ ಜೀಮೂತವೆ ಮುತ್ತಿಕೊಂಡಂತೆ ಆತನ ಶರಕಿರಣಗಳಿಂದೆ ಮದಗಜವ್ರಾತ ಸುಗ್ಗಾದುದು (ಮೋಹತ. ೩೪-೪೦); ಬೆಲ್ಲಕ್ಕೆ ನೊಣಗಳು ಮುತ್ತಿಕೊಳ್ಳುತ್ತಿವೆ (ರೂ). ೨. ಮುತ್ತಿಗೆ ಹಾಕು; ಧಾಳಿ ನಡೆಸು: ಪೆಣ್ರೈಮನಮನೆಯ ಮುತ್ತಿಕೊಳ್ವ ಜ್ಯಾರಟೆವಿನೊಳೆ (ಎಕ. VIII, ಸೊರಬ. ೨೨-೨; ಸಂ. ೪೦೦); ಕರ್ಣನಂ ಸುತ್ತಿ ಮುತ್ತಿಕೊಂಡು . . . ವಿವಿಧಾಯುಧಂಗಳೊಳಟ್ಟುವೆಚ್ಚು ಮಿಂಜಿದುಮಗುರ್ವುಮದ್ಭುತಮುಮಾಗೆ ಕಾದುವಾಗಳ್ (ಹಂಪಭಾ. ೦೨-೦೦೪ ವ); ಮತ್ತೆ ರಥಮಜುವತ್ತುಸಾವಿರ ಮುತ್ತಿಕೊಂಡುದು ಗಜವನು (ಕುಮಾರವ್ಯಾ. ೩-೩೯).

[ದೇಶೀ ತಮಿ. ಮಲ. ಮುಜ್ಜು; ತುಳು. ಮುತ್ತು; ತೆಲು. ಮುಟ್ಟು; ಕೋತ. ಮುತ್]

**ಮುತ್ತು₂** 'ಮುದ್ದು₁' ಪರಾ.

**ಮುತ್ತು₃** 'ಮುದ್ದು'. ನೋ.

**ಮುತ್ತು₄** 'ಮುಟ್ಟಿಗ' ನೋ.

**ಮುತ್ತು₅** (ನಾ). ೧. ನವರತ್ನಗಳಲ್ಲಿ ಒಂದು : ಮೌಕ್ತಿಕ : "ಮುಕ್ತಾ ಮೌಕ್ತಿಕಂ, ಶೌಕ್ತಿಕೇಯಂ — ಈ ೩ ಮುತ್ತು" (ಚಿಂಕು. ೧೯೪): ಗಜಾಯಿಸಿದರ್ಥಂ ಸಲೆ ಮಾಗಿಜಾಯದೆಯುಂ ಶಬ್ದದೋಲಿಪದೊಚೆ ಮುತ್ತುಂ ಮೆಚಿಸುಂ ಕೋದಂತಕ್ಕುಂ (ಕವಿರಾ. ೨-೩); ಅಂಬುಣೀ ಪಟಿಯೆ ಮುತ್ತಿನ ಕೇಡನೆ ನೊಂದಿ ನೋಡಿ ಬಿಳ್ಳುತ್ತಿರೆ (ಹಂಪರಾ. ೯-೬೪): ಮುತ್ತು ನೀರಲ್ಲಿ ಹುಟ್ಟಿ ಮುತ್ತೆ ನೀರಪ್ಪುದೆ (ಬಸವ.೬೬೬); ಮತ್ತಹಸ್ತಿಗಳ ಮಸ್ತಕದಿಂ ಬಿದಿರಿಂ ಫಣೀಂದ್ರೋತ್ತಮಾಂಗದಿನಗುರ್ವಿಪ ಮಂಟಿಯ ಕೋಚ್ಛಳಿಂ ಪತ್ತು ವಿಟ್ಟಗನಿಕುಂಜದೊಳೊಕ್ಕಳಮುತ್ತನಾಮುತ್ತುಮಿರ್ಪ ನಿಬಿರಪ್ರಿಯಕಾನನಿಸ ಯರ್ಕಳಿಂ (ಕಾವ್ಯಾವ. ೦೦೪; ಕಮದ. ೧೩೩ ಕ್ರಪೋ. ನೋ. ) : ಧವಳಶಂಬಿ ರ್ನುಮ ಮಸ್ತಕಾಂಬುಜ್ಯದ್ಯುವತಿಕಂಠ ಘನಸತ್ಯಣಂಗಳೊಳ್ ತಮೆಸುವೇಣು ವೊಳುದಾತ್ತದಂಷ್ಟ್ರ ಉತ್ಸವದ ಕೋಲೆಯೊಳಿಭೇಂದ್ರದಂತದೊಳ್ ... ಸಿತೇಕ್ಷು ವಿನ ಪರ್ವದೊಳ್ ಶಾಲಿಯುಜ್ವಳಾಯತದ ತಂಬದೊಳ್ ಲಲಿತಶುಕ್ತಿ ಯೊಳ್ ಲೋಕದೊಳ್ ಇಳಾಕರ[ಟ]ಮಾಯುವಬ್ಜದೊಳಂ ಸಮುದ್ಭೂತಮಾಕಳಾಯುತದ ಮುತ್ತು ತಾನೊಗೆದುದಲ್ತೆ ಭೂಷಾಪರಂ (ಬಾಲಾಕ. ೨-೦-೩೪). 'ಎಳೆಮುತ್ತು'., 'ಜಾತಿಮುತ್ತು' ಪರಾ. ೨. ಮೂಗುಬಟ್ಟಿನ ಕೆಳಗೆ ನೇತಾಡುವಂತೆ ಧರಿಸುವ, ಮೂರು ಅಥವಾ ನಾಲ್ಕು ಮುತ್ತು, ವಜ್ರ, ಚಿನ್ನ ಮುಂತಾದುವುಗಳಿಂದ ಸಣ್ಣಸಣ್ಣ ಗುಂಡುಗಳ ಆಕಾರದಲ್ಲಿ ಮಾಡಿದ ಒಂದು ಬಗೆಯ ಆಭರಣ : ಕರಮೆಸೆವತ್ತು . . . ಅಂಬರವ ಪುಳಿಂದಿ ತಾಳ್ದಿಸಿದ ಮೂಗಿನ ಮುತ್ತು (ಗಿರಿ. ೪-೯೩). ೩. ಆನೆಯ ಕುಂಭಸ್ಥಳದಲ್ಲಿರುವುದೆಂದು ಭಾವಿಸಲಾದ ಬಿಳುಪಾದ ಗುಂಡನೆಯ ವಸ್ತು : ಮತ್ತಗಜಂಗಳ ಮಸ್ತಕಕ್ಕೆ ಪಾಯ್ದು ಗಬಗಿಬಮಾಡುವಲ್ಲಿ ಪೊಳೆವಂಕುಶದಂತಿರೆ ಕೊಂಕುವೆತ್ತ ಕೂರುಗುರ್ಗಳೊಳೆಯ್ದೆ ತೆತ್ತಿಸಿದ ಮುತ್ತಿನ ಲೋಭದೆ ಕೊಲ್ವರೆತ್ತಲುಂ ಮೃಗಪತಿಯೂಥಮಂ (ರಾಜಶೇಖ. ೯೯); ಮುತ್ತಿನ ಬಯ್ಕೆಯಿಂ ತೆಗೆವೊ ಡಂಜಮೆಲ್ತೆ ಮದೀಯ ಖಡ್ಗಮೆಂದೆತ್ತಿದ ದಾಯಿಂ ಗಜದ ಮಸ್ತಕಮಂ ಕಡುಕೆಯ್ದು ಪೊಯ್ದೊಡಾ ನತ್ತಿಯ ಮುತ್ತು ರ್ನುಲ್ಲಿಸೆ ರಣಾಂಗಣದೊಳ್ ಕಿವಜಿಲ್ಕೆ . . . ಖಂಡೆಯಕಾಜಿರೊಪ್ಪಿದರ್ (ಚಂಪು. ೭-೭೨); ತಾರಕೆಗಳೆಸೆ ದಭ್ರವೆನೆ ರಿಪುವಾರಣದ ಮಸ್ತಕದ ಮುತ್ತುಗಳೊರಣಿಸಬೊಪ್ಪಿದುದು (ಕುಮಾರವ್ಯಾ. ೬-೪೩). ೪. (ಅಲಂ) ಪ್ರೀತಿಪಾತ್ರರನ್ನು ಕರೆಯುವಾಗ ಬಳಸುವ ಒಂದು ಪದ : ಏಕೆ ಅತ್ತೆ ಹೇಳು ಮುತ್ತೆ ಹೊತ್ತು ಮುರುಗುವಂದದಿ (ಪಾರಿಜ. ೦೩-೦). ೫. ಕಣ್ಣೀರಿನ ಹನಿ : ಅಶ್ರು ಬಿಂದು : ಎರಡೇ ಎರಡು ಮುತ್ತುಗಳು ಅವನ ಕಣ್ಣುಗಳಿಂದ ಉದುರುವುವು (ಹುಂಗನ. ೧೧೬). ೬. ಶ್ರೇಷ್ಠವಾದುದು ; ಉತ್ತಮವಾದುದು : 'ಆತ್ಮವತ್ ಸರ್ವಭೂತಾನಿ ಯಃ ಪಶ್ಯತಿ ಸಪಶ್ಯತಿ' ಎಂಬುದು ಗೀತೋಪನಿಷತ್ತಿನ ಮುತ್ತಿನ ಮಾತು (ನಾಡೋಜ. ೨).

**ಮುತ್ತಿನಕಂತೆ**="ಲಿಂಗವಂತರ ಒಂದು ಗೋತ್ರನಾಮ" (ಲಿಂಕ್ಪಾ. ೨೪). **ಮುತ್ತಿನಚಿಪ್ಪು, ಮುತ್ತಿನಸಿಪ್ಪು** = ಮುತ್ತು ಹುಟ್ಟುವ ಚಿಪ್ಪು : ಬಿಚ್ಚದೆ ಬಿಗಿದ ಮುತ್ತಿನ ಚಿಪ್ಪಿನಂದದಿ . . . ಇರ್ದಗಣಿತಾಮಲ ಪುಣ್ಯಚರಿತೆಯ ಕಂಡನಾ ಹನುಮ (ತೊರವೆ. ೩-೩-೨೪) ; ಈಗಿಡದ ಎಲೆಗಳು ಮುತ್ತಿನ ಚಿಪ್ಪು (oyster shell) ನಂತೆ ಎರಡು ಮುಚ್ಚಳಗಳುಳ್ಳವು (ಪಾಂಚಶ್ರ. I. ೩೦೩) ; "ಮುಕ್ತಾಸ್ಫೋಟಃ, ಶುಕ್ತಿಃ — ಈ ೨ ಮುತ್ತಿನ ಸಿಪ್ಪು" (ಕಲಾಡಿಯ. ೦೦೯-೪೨). **ಮುತ್ತಿನಬಲೆ** = ೧. ಮುತ್ತುಗಳನ್ನು ಸೇರಿಸಿ ಹೆಣೆದ ಬಲೆ : ರತ್ನದ ಸಂಕೋಲೆಯಾದರೆ ತೊಡರಲ್ಲವೆ ಮುತ್ತಿನ ಬಲೆಯಾದರೆ ಬಂಧನವಲ್ಲವೆ (ಮಹಾದೇ. ಬ. ೪೨-೯೨). ೨. ಮುತ್ತುಗಳನ್ನು ಹೆಣೆದು ಮಾಡಿದ ಒಂದು ಬಗೆಯ ಕೇಶಾಲಂಕಾರಸಾಧನ : ತುಜುಬಿನ ಮುತ್ತಿನ ಬಲೆ ಚಿನ್ನಗೇದಗೆಗಜಿಗಳಿಂ ಸಿಂಗರಿಸಿದಳು (ಕುಮಾರರಾ. ೨೯-೯೬). **ಮುತ್ತಿನಬೀದಿ** = ಮುತ್ತುಗಳನ್ನು ಸಾಲುಸಾಲಾಗಿ

ಪೋಣಿಸಿ ಮಾಡಿದ ಅಲಂಕಾರಸಾಧನ (?) : ಪೊಂಗೆಜ್ಜೆ ಘಂಟೆ ಮುತ್ತಿನ ಜೀವಿಯ ಜೀನ ಸಿಂಗರ ಲೋವೆಯನದಟ ಅಂಗದೊಳಗೆ ಸಂಗಡಿಸಲಾ ದಿವ್ಯತುರಂಗ ಕಣ್ಗೆಸೆದು ರಾಜಿಸಿದುದು (ಶಬರಶಂ. ೯-೬೯). ಮುತ್ತಿನ ಬೊಟ್ಟು = ಬೈತಲೆಯ ಮೇಲೆ ಧರಿಸುವ ಒಂದು ಬಗೆಯ ಮೌಕ್ತಿಕದ ಆಭರಣ : ಪೆಱೆನೊಸಲಿಱೆ ಪಣೆಗಟ್ಟು ಮುತ್ತಿನ ಬೊಟ್ಟು . . . ಚಿನ್ನಗೇವಣಿಗೆಱೆಗಳಿಂ ಸಿಂಗರಿಸಿದಳು (ಶಬರಶಂ. ೨೯-೯೭). ಮುತ್ತಿನ ಮುಗುಳು = ಮುತ್ತುಗಳಿಂದ ಮಾಡಿದ ಒಂದು ಬಗೆಯ ಕರ್ಣಾಭರಣ : ಕಿವಿಗೆ ಮುತ್ತಿನ ಮುಗುಳನ್ನು ಅಂದವಾಗಿ ಜೋಡಿಸಿ ದೇವರಿಗೆ ಕೈಮುಗಿದು ಚಾಮರಸೇವೆಗೆ ಆರಂಭಿಸಿದಳು (ದೇವಶಂ. ೦೦). ಮುತ್ತಿನ ಸತ್ತಿಗೆ = ಮುತ್ತುಗಳ ಕುಚ್ಚುಗಳನ್ನು ಕಟ್ಟಿದ ಛತ್ರಿ : ಹಗೆ ಸುತ್ತಿ ಸಾವಡಸುತಿದೆ ನಿನ್ನ ಮುತ್ತಿನ ಸತ್ತಿಗೆಯನೆತ್ತು ಸಲಹು ಭೂಭುಜ (ಹರಿಶ್ಚ. ೬-೯). ಮುತ್ತಿನ ಸರ = ಮುತ್ತುಗಳನ್ನು ಸೇರಿಸಿ ಮಾಡಿದ ಹಾರ : ನೀವು ಈ ದಿನ ಬೆಳಗ್ಗೆ ನನಗೆ ಉಡುಗೊರೆಯಾಗಿ ಕಳುಹಿಸಿದ ಮುತ್ತಿನ ಸರ — ಅದರ ಬೆಲೆ ಎಷ್ಟೊ (ವಿಶ್ವಾಮು. ೦೩). ಮುತ್ತಿನಸುಣ್ಣ = ಮುತ್ತನ್ನು ಸುಟ್ಟು ಅದರ ಭಸ್ಮವನ್ನು ಹಾಕಿ ಮಾಡಿದ ಸುಣ್ಣ : ಮುತ್ತಿನ ಸುಣ್ಣ—ಒಂದು ಮಡಕೆಯಲ್ಲಿ ಒಳ್ಳೆಮುತ್ತು ಒಂದು ತೊಲೆ ಹಾಕಿ . . . ಪುಟಪಾಕಲು ಬೆಳ್ಳಗೆ ಸುಣ್ಣವಾಗುವದು (ಶಾವುಶಾ. ೨೭೦). ಮುತ್ತಿನ ಸೇಸೆ = ಮುತ್ತುಗಳಿಂದ ಮಾಡಿದ ಅಕ್ಷತೆ : ಗೆಲಿಸನಸನುತನೆಂದು ಮುತ್ತಿನ ಸೇಸೆಯಂ ಪರಸಿ ತಳಿವರಿನಸಂಗನೆಯರು (ತೊರರಾ. ೪-೪-೨೩). ಮುತ್ತಿನಹಾರ = ಮುತ್ತಿನ ಸರ : ವಕುಳಮಾಲೆಯೆಂಬ ವಿಳಾಸಿನಿಗೆ ಮುತ್ತಿನ ಹಾರಮಂ ಲಂಚಂಗೊಟ್ಟು (ಪುಣ್ಯಾಶ್ರ. ೦೦-೬ ವ); ಮುತ್ತಿನ ಹಾರ ಹಱಿಯಲು ಕೆದಱಿದವು ದೆಸೆದೆಸೆಗೆ ಮುತ್ತುಗಳು (ಶಬ್ದಾಭಿ. ೪-೯೭). ಮುತ್ತಿನಾರ = ಮುತ್ತಿನ ಸರ : ಪೊಸಮೃಣಾಳದ ತೋಳ್ವಳೆ ಮುತ್ತಿನಾರಂ . . . ಕಣ್ಗೊಳಿ ನೆಲಸಿರ್ದರಲ್ಲಿ ಜಲದೇವಿಯರಂತೆ ವಿಳಾಸಿನೀಜನಂ (ಶಾರಂಜು. ४३९). ಮುತ್ತಿನಾರತಿ = ಮುತ್ತುಗಳನ್ನು ಅಲಂಕಾರವಾಗಿ ಹುದುಗಿಸಿದ ತಟ್ಟೆಯಲ್ಲಿ ಮಾಡುವ ಆರತಿ : ಮುತ್ತೈದೆವೆಂಗಳು . . . ಪಿಡಿಯಕ್ಕಿದಳೆದು ಬಂದರು ಮುತ್ತಿನಾರತಿವಿಡಿದಾ ರತಿದೇವಿಯೊಡನೆ (ಮೋಹತ. ೦೨-೯೮); ಮುತ್ತಿನಾರತಿ ರನ್ನದಾರತಿಗಳ ತಂದು ಮುತ್ತೈದೆಯರೆತ್ತಿ . . . ತರಳನನರ್ತಿಯಿಂದಲಿ ಪಾಡಿದರು (ಕುಸರಿ. ೪-೬೦). ಮುತ್ತಿನುಂಡೆ=೧. ಮೌಕ್ತಿಕದ ಗೋಲೆಗಳು.—ಗೊಂಡೆ: ತೆತ್ತಿಸಿದ ನವರತುನದಿಂದಲಿ ಮುತ್ತಿನುಂಡೆಯ ಜೂಳಿಯಂಗಳ . . . ರಥಕಳಶ ಮೇಲೆಸೆಯೆ (ಕುಮಾರವ್ಯಾ. ಏಂಜ. ಕಾಂ. ೨೬೮). ೨. ಹಾಲು ತುಂಬಿ ಪಕ್ವವಾದ ಕಾಳುಗಳ ತೆನೆ : ಮುತ್ತಿನುಂಡೆಯ ಮುಡಿದ ಸಿರಿನೆತ್ತಿಯನ್ನುತ್ತು ಬತ್ತಮಂ ಬಿತ್ತಿ ಬೆಳೆಯುವ ಉತ್ತಮದ ಹೊತ್ತು ಹತ್ತಿರಕೆ ಹತ್ತಿರಕೆ ಬರುತಿರುವುದೊತ್ತೊತ್ತಿ! (ಕೊಳಲು. ೦೬-೬೦). ಮುತ್ತಿನೋಲೆ = ಮುತ್ತುಗಳಿಂದ ಮಾಡಿದ ಓಲೆ ; ಮೌಕ್ತಿಕದ ಕರ್ಣಾಭರಣ : ತೊಳಗುವ ಮುತ್ತಿನೋಲೆಗಳ ಬೆಳ್ವೆಳಗಿಂ . . . ಸೆಳ್ಳುಗುರ ಮೆಯ್ವೊಳೆಪಿಂ ಮಿಗೆ ಪೆರ್ಚುವೆತ್ತು ಕಣ್ಗೊಳಿಸಿ ದಳಾಕೆ (ಕಬ್ಬಿಗಕಾ. ೬೯). [< ಸಂ. ಮುಕ್ತಾ / ಪ್ರಾ. ಮುತ್ತಾ. / ತಮಿ. ಮುತ್ತು, ಮುತ್ತಮ್, ಮುರುಂಕು ; ಮಲ. ತುಳು. ಮುತ್ತು ; ಕೊಡ. ಮುತ್ ; ತೆಲು. ಮುತ್ತಿಯಮು, ಮುತ್ತೆಮು, ಮುತ್ಯಮು ; ತೊದ. ಮುತ್]

**ಮುತ್ತುಂಗಾಲ್** (ನಾ). (ಅಲಂ) ಮುದಿವಯಸ್ಸು ; ಇಳಿವಯಸ್ಸು (?) : ಓಲಿವೊಡನೆ ಮುತ್ತುಂಗಾಲೊಳ್ ನರೆ ಬರ್ಪನ್ನೆಗವಿರು (ಕಬಿರ. ೨೪೬ ಪ್ರದೋ). [ ? ]

**ಮುತ್ತುಕ** 'ಮುಟ್ಟುಗ' ನೋ.

**ಮುತ್ತುಕಾರಾಚಿ** (ನಾ). ಒಂದು ಬಗೆಯ ಮರ : "ಮಾಚಿಪತ್ರೆ, ಗ್ರಂಥಪರ್ಣ, ಮುತ್ತುಕಾರಾಚಿ . . . ಕಾಡ ಉಪ್ಪು" (ಸಸ್ಯಕೋ. ೬೬); ಮುತ್ತು ಕಾರಾಚಿ, ಮಾಸಿಪತ್ರೆ (ವೈಶಿಂ. ೧೦-೬೯೩). [ಮುತ್ತು$_7$ + ಕಾರಾಚಿ]

**ಮುತ್ತುಕೊಡು** 'ಮುದ್ದುಗೊಡು' ನೋ.

**ಮುತ್ತುಗ** 'ಮುಟ್ಟುಗ' ನೋ.

**ಮುತ್ತುಗಣೆ** (ನಾ). ಮೌಕ್ತಿಕವು ದೊರೆಯುವ ನೆಲೆ ; ಮುತ್ತಿನ ಆಶ್ರಯಸ್ಥಾನ : ಪೇರಾನೆವೆಟ್ಟುಗಳ ನೆತ್ತಿಯ ಮುತ್ತುಗಣೆಯನಗುಬ್ಬಿ ಪಪ್ಪುವ ಗುದ್ದಲಿಗಳನಿಸಿ . . . ಅಳುಂಬಮಾದ ದಂಷ್ಟ್ರಾಂಕುರಂಗಳೊಳಂ (ವರ್ಧಮಾ. ೦೦-೩ ವ). [ಮುತ್ತು$_5$ + ಗಣ್ಣೆ$_2$ (< ಕಣ್ಣೆ$_6$)]

**ಮುತ್ತುಗದಬಳ್ಳಿ** (ನಾ). ಒಂದು ಬಗೆಯ ಸಸ್ಯ : ಮುತ್ತುಗದ ಬಳ್ಳಿ, ಮುಳ್ಳುಮುತ್ತುಗ (ವೈಶಿಂ. ೦೩-೨೬೬). [< ಮುತ್ತುಗ + ಬಳ್ಳಿ]

**ಮುತ್ತುಗಾರ** (ನಾ). ಮೌಕ್ತಿಕವನ್ನು ಮಾರುವವನು ; ಮುತ್ತಿನ ವ್ಯಾಪಾರಿ: ಮುತ್ತುಗಾರ ಭಾಗ್ಯವನ್ನು ಲೆಕ್ಕಿಸನವನು. ತಾಯ ಮುಖದಿಯ್ಯ ಹರ್ಷಬಾಷ್ಪವೇ ಅವನ ಬದುಕಿನ ಹುರುಳು (ಉದ್ಯಾಶಿ. ೬-೬).

[ಮುತ್ತು$_5$ + — ಗಾರ (< — ಕಾಱ)]

**ಮುತ್ತುಗಿಡಿ** (ನಾ). ಆವರಿಸುವ ಕಿಡಿ ; ಮುಸುರುವ ಕಿಡಿ : ಪೊತ್ತ ಹೊಗರಿನ ಮೊಱೆವ ಗಱೆಗಳ ಮುತ್ತುಗಿಡಿ [ಶಾಕಾಂ. ಪ] ಗಳ ಹೊಳೆವ ಧಾರೆಯ ಪೊತ್ತವಂಬೊಱೆವವು ಮೃತ್ಯುಂಜಯನ ಸಮ್ಮುಖಕೆ (ಕುವ್ಯಾಶ. ೬-೧೦). [ಮುತ್ತು$_1$ + ಕಿಡಿ]

**ಮುತ್ತುಗು** (ಕ್ರಿ). ಮುತ್ತು ಸುರಿ,-ಚೆಲ್ಲು : ಕರಿಶಿರದತ್ತಣಿಂ ಮುತ್ತೊತ್ತುಕ್ಕು ಮೊಬಲ್ಲಿ ಕರಿಶಿರದಿಂ ಮುತ್ತೊಕ್ಕುವೆಂದಾಯ್ತು (ಕಬಿರ. ೦೩೩ ಪ್ರಯೋ); ಕಣ್ಬನಿಗಳ್ಕೊಟ್ಟನೆ ಸತಿಯ ತೋರಮೊಲೆಗಾರಮನಾಗಳ್ಬಿಡಿಸಿ ನನ್ನಿ ಮಾಡಿದುವಟ್ಟಿರೆ ಮುತ್ತೊಕ್ಕುವೆಂಬಱಣಕದನಾಡಿಯುಂ (ರವಾಣಸಾ. ೩-೧೪೦).

[ಮುತ್ತು$_5$ + ಉಗ್ಗು$_1$]

**ಮುತ್ತುದೊಡವು** (ನಾ). ಮುತ್ತಿನ ಒಡವೆ ; ಮೌಕ್ತಿಕದ ಆಭರಣ : ನೇಱಿಲ ಪಣ್ಣನೆಣ್ಣೆಯುಳಿ ಎಳಸಿ ತೊಯ್ವಂತಪ್ಪ ವೈಯುಮ್ಮಳಿಸುವಾಸೆಯ ಮುತ್ತುದೊಡವಿನ ಬೆಡಂಗೆ (ಶಾಶ್ವರಾ. ೩-೧೦). [ಮುತ್ತು$_5$ + ತೊಡವು]

**ಮುತ್ತುಮಣಿ** (ನಾ). ಮುತ್ತಿನ ಮಣಿ; ಮೌಕ್ತಿಕ : ಪೊಸಜೋಳರಾಶಿಯಂ ಮುತ್ತುಮಣಿ ಮಾಡಿದಾ ಬಸವನೆಯ್ತಂದಪಂ (ಮಂಡಿಶ್ಯ IV. ೬೨೩ ಬಸವಸ್ತೋತ್ರ). [ಮುತ್ತು$_5$ + ಮಣಿ$_3$]

**ಮುತ್ತುಮಸರ** (ನಾ). ಮುತ್ತನ್ನು ಮಾರುವ ಅಂಗಡಿ : ನೀರೊಳಿರ್ದೊಡೆ ಬೆಲೆವಡೆಯೆವಾವೆಂದು ಮುನ್ನೀರನುಳಿದು ಬಂದಂತೆ ನೀರನುಗುಳುತಿಸೆವವು ಮುತ್ತುಮಸರಗಳ್ (ಶಬರಶಂ. ೩-೭೬). [ಮುತ್ತು$_5$ + ಪಸರ]

**ಮುತ್ತುಮಸೆ** (ನಾ). ಮುತ್ತುಗಳನ್ನು ಅಳವಡಿಸಿ ಮಾಡಿದ ಪೀಠ ; ಮುತ್ತಿನ ಹಸೆಮಣೆ : ಆ ಯುವತೀಜನಂ . . . ತೋಯಜನೇತ್ರ ಸೌಂದರಿಗೆ ಮಂಗಳಮಜ್ಜನಮಂ ನಿಮಿರ್ಚಿಸಲ್ಕಾಯತಮಾಗಿ ಮುತ್ತು ಮಸೆಯಂ ನಲಿದಿಕ್ಕಿದರ್ (ಉದ್ಭಟ. ೬-೧೨). [ಮುತ್ತು$_5$ + ಪಸೆ$_2$]

**ಮುತ್ತುಸಾರೆ** 'ಮುಚ್ಚೋರೆ' ನೋ.

**ಮುತ್ತುಹ** (ನಾ). ಮೇಲೆ ಬೀಳುವಿಕೆ ; ಮುತ್ತಿಗೆ ಹಾಕುವಿಕೆ ; ಆಕ್ರಮಣ : "ಅಭ್ಯವಸ್ಕಂದನಂ ಅಭ್ಯಾಸಾದನಂ – ಪರಿದು ಮುತ್ತುಹ" (ನಾಶಾರ. ೬). [ಮುತ್ತು$_1$ + —ಹ$_2$ (< —ಪ$_9$)]

**ಮುತ್ತೆ** (ನಾ). ಒಂದು ಬಗೆಯ ಸಸ್ಯ ಮತ್ತು ಅದರ ಹೂವು ; ಅದಿಮುರ್ಮುತ್ತೆ : ಮುತ್ತೆ ನನೆದೋಱೆ ತಳಿಗಳ ನಾಡೆ ಪೇಱೆ . . . ಶೋಭಿಸುತ್ತೆಡವಿಪಡೆತ್ತ [ಮುಗ್ಗಳಿಸಿ ನಾಡೆ ವಿ]ಗುರ್ವಿಸುವಷ್ಟು ಕಾಲದೊಳ್ (ಶಬರಶಂ. ೬-೦೩). 'ಪರಿಮುತ್ತೆ' ಪರಾ. [< ಅದಿಮುರ್ಮುತ್ತೆ]

**ಮುತ್ತೆರಿ** (ನಾ). ಒಂದು ಸ್ಥಳದ ಹೆಸರು ; ಗುರ್ದ್ದ(ಟ್ಟ)ದ ಪಳ್ಳಮ ಮುತ್ತೆರಿಪಿ(ಯ) (ಇಂ. VIII. ೨೦೩. ೨೩ : 10ನೆಯ ೬೩). [ ? ]

**ಮುತ್ತೈರೆಯು** (ನಾ). ಒಬ್ಬಾತನ ಹೆಸರು : ನಗರಲ ನನ್ನಯ್ಯನ ದೇಗುಲಕ್ಕೆ ಮುತ್ತೈರೆಯುಂ ಪಡೆದು ಕೊಟ್ಟಂ (ಎಕ. III, ನಂಜನ. ೧೫೫–೫ ; ಸು. 970 ?). [ಮುತ್ತು₅ + ಎರೆಯು (<ಎಱೆಯು)]

**ಮುತ್ತೈಱ** 'ಮೂದೆಱ' ನೋ.

**ಮುತ್ತೈದೆ** 'ಮುತ್ತಯ್ದೆ' ನೋ.

**ಮುತ್ತೈದೆತನ** 'ಮುತ್ತಯ್ದೆತನ' ನೋ.

**ಮುತ್ತೈದೆವೆಣ್**, ಮುತ್ತೈದೆಹೆಣ್ಣು (ನಾ). ಸುಮಂಗಲಿ: ಸುವಾಸಿನಿ. **ಮುತ್ತೈದೆಹೆಣ್ಣು :** ಇಷ್ಟು ದೊಡ್ಡ ಅರಮನೆಯಲ್ಲಿ ಒಂದೇ ಒಂದು ಮುತ್ತೈದೆಹೆಣ್ಣು ಇಲ್ಲದಿರುವುದು ಎಲ್ಲ ಸಂತೋಷಗಳನ್ನೂ ಮೆಟ್ಟಿ ನಿಂತಿದೆ (ಶಾಂತಲಾ. ೩೦).

ಮುತ್ತೈದೆವೆಂಗಳು (ಬಹುವ) : ಮುತ್ತೈದೆವೆಂಗಳು ಸಿರಿಮುಡಿಯ ಪೂದಂಡೆಗಳೊಡನೆ ಹಿಡಿಯಕ್ಕಿದಳೆದು ಬಂದರು ಮುತ್ತಿನಾರತಿವಿಡಿದು (ನೋಹಕ. ೧೭–೪೮). [ಮುತ್ತೈದೆ (<ಮುತ್ತಯ್ದೆ) +ಪೆಣ್]

**ಮುತ್ತೈದೆಹುಣ್ಣಿವೆ** (ನಾ). ಚೈತ್ರಶುದ್ಧಹುಣ್ಣಿಮೆ ಮತ್ತು ಅಂದು ಆಚರಿಸುವ ಎಲ್ಲಮ್ಮನ ಹಬ್ಬ : ಚೈತ್ರಶುದ್ಧಹುಣ್ಣಿವೆಯಂದು ಶ್ರೀರೇಣುಕಾ(ಎಲ್ಲಮ್ಮ) ದೇವಿಯ ಸೌಮಾಂಗಲ್ಯಸಮಾರಂಭ ನಡೆಯುತ್ತಿದೆ. ಇದು ಮುತ್ತೈದೆಹುಣ್ಣಿವೆ ಎಂದು ಜನಸಾಮಾನ್ಯರಿಗೆಲ್ಲ ಪರಿಚಿತವಾಗಿದೆ (ಶಾಪ್ತು. ೬೯). P ಹಿಂದೆ ಕಾರ್ತವೀರ್ಯನಿಂದ ಜಮದಗ್ನಿಯು ಪ್ರಾಣಾಂತಿಕವಾಗಿ ಗಾಯಗೊಂಡಾಗ ರೇಣುಕೆಗೆ ವೈಧವ್ಯವು ಪ್ರಾಪ್ತವಾಗಿ ಪರಶುರಾಮನಿಂದ ಪುನಃ ಮುತ್ತೈದೆತನವು ಲಭಿಸಿತು. ಇದರ ನೆನಪಿಗಾಗಿ ಎಲ್ಲಮ್ಮನ ಜಾತ್ರೆಯಂದು ಭಕ್ತರು ದೇವಿಯ ಕೈಬಳೆಗಳನ್ನು ಒಡೆದು ಪುನಃ ತೊಡಿಸುತ್ತಾರೆ.
[ಮುತ್ತೈದೆ (<ಮುತ್ತಯ್ದೆ) + ಹುಣ್ಣಿವೆ (<ಪುಣ್ಣಮೆ)]

**ಮುತ್ತೈದೆಹೆಣ್ಣು** 'ಮುತ್ತೈದೆವೆಣ್' ನೋ.

**ಮುತ್ತೋಣಿ** (ನಾ). ಒಂದು ಓಣಿಯ ಹೆಸರು : ಮದೊರ ಕಾಲುವೆಯ ದಾಟಿ ಹಂಗಿಯ ತೆವರು ಮುತ್ತೋಣಿಯುಂ ದಾಟಿ . . . ಮೂಡಣ ಪಳ್ಳವ ಕೂಡಿತು (ಎಕ. IV (R), ಎಳಂದೂ. ೪೯–೦೬; 963). [?+ಓಣಿ]

**ಮುತ್ತ್ಯಾ** 'ಮುತ್ತಯ್ಯ' ನೋ.

**ಮುತ್ತ್ಯ** 'ಮುತ್ತಯ್ಯ' ನೋ.

**ಮುತ್ಯಾ** 'ಮುತ್ತಯ್ಯ' ನೋ.

**ಮುತ್ಸಂಜೆ**, ಮುಚ್ಚಂಜೆ, ಮುಸ್ಸಂಜೆ (ನಾ). ಸೂರ್ಯನು ಮುಳುಗುವ ಹೊತ್ತು ; ಇಳಿಹೊತ್ತು ; ಸಾಯಂಕಾಲ : ತುದಿಹಗಲಿನ ಮುಬ್ಬಿನ ಮೇಲೆ ಸೂರ್ಯಾಸ್ತದ ಬೆಳಕು ಬಿದ್ದು ಅಂದಿನ ಮುತ್ಸಂಜೆ . . . ಮನೋಹರವಾಗಿ ಕಾಣುತ್ತಿತ್ತು (ಶಿಶಂಠ. II, ೬೮). **ಮುಚ್ಚಂಜೆ :** ಬಂಧನಂ ನಚ್ಚಣಿಯ ಮೊಲೆಗಟ್ಟೊಳಚ್ಚರಿಯ ರಾಗಮುಂ ಮುಚ್ಚಂಜೆಯೊಳಗಲ್ಲದಿಲ್ಲವಾ ದೇಶದೊಳಗೆ (ಉದ್ಭರೀ. ೨–೧೪) ; ಕೆಂಜವಿಯ ದೀಪ್ತಿ ದೇಗುಲ್ವರಗಳೆಸದವಾ ಸಂಜೆಯೊಳ್ನಿಶಿಯ ಮುಚ್ಚಂಜೆಯೊಳ್ಪೊಂಬಿಸಿಲ್ಸಂಜೆಯೊಳ್ (ಮದೀಶ್ವ. ೦೫–೪) ; ಎಲ್ಲವೂ ನಶ್ವರ, ಮುಚ್ಚಂಜೆಯ ಮುಗಿಲಿನಂತೆ (ತುಂಗಳ. ೫೪). **ಮುಸ್ಸಂಜೆ :** ಈ ಮುಸ್ಸಂಜೆ ಹೊತ್ತಿಗೆ ಏಕೆ ಬಂದೆ ? (ಈಕಫ. ೯೬) ; ಅತಿ ಬಿಳುಪಲ್ಲದೆ ಮುಸ್ಸಂಜೆಯ ನಸುಗೆಂಪಿನಲ್ಲಿ ಮಿಲನವಾಗಬಹುದಾದ ವೈವರ್ಣ (ಶೂರ್ಗದ. ೬೮).
[< ಮುತ್ತು₂ + ಸಂಜೆ]

**ಮುತ್ಸದ್ದಿ**, ಮುಸದ್ದಿ (ನಾ). ೧. ರಾಜ್ಯದ ವ್ಯವಹಾರಗಳನ್ನು ನೋಡಿಕೊಳ್ಳುವ ಒಬ್ಬ ಅಧಿಕಾರಿ : ಹನುಮನೀ ... ಮುತ್ಸದ್ದಿಯನು ಕಂಡು ಕೊಂಡ್ಹೋಗಿ (ಅರ್ಜಾವಿ. ೩೦–೪೦) ; ಅರಮನೆಯ ಮುತ್ಸದ್ದಿಗಳು ಪುರೋಹಿತರನ್ನೂ ರಾಮಣ್ಣನವರನ್ನೂ ಆ ಬೈಠಕ್ಖಾನೆಗೆ ಕರೆದುಕೊಂಡು ಹೋದರು (ಶ್ರೀರಾಮ. ೬೨) ; ಆಯಾಸ್ಥಳಗಳಲ್ಲಿ ಅವರವರನ್ನು ಅರಮನೆಯ ಮುತ್ಸದ್ದಿಗಳು ಕೂಡಿಸುತ್ತಿದ್ದರು (ಕದೀವ. ೧೩೦). ೨. ನಿಯೋಗಿ; ಕಾರ್ಯಭಾರಿ : ಮೃತಪಟ್ಟವನ ಮುತ್ಸದ್ದಿಯಿಂದ ಅಥವಾ ಅವನ ನವುಕರನಿಂದ ಹಾಗೆ ಮಾಡಲ್ಪಟ್ಟರೆ ೭ ಸಂವತ್ಸರಗಳ ಪರ್ಯಂತರ (ಗ್ರಾಮಾಕ. ೦೯೬). ೩. ಕಾರ್ಯನಿರ್ವಾಹಕ ; ವ್ಯವಸ್ಥಾಪಕ : ಸ್ಥಾನಿಕ ಪೆಬ್ಬಾರರು ಒಬ್ಬ ಮುತ್ಸದ್ದಿ ಯಾ ಮೆನೆಜರರನ್ನು ಇಟ್ಟುಕೊಂಡು ಸರ್ಕಾರಕ್ಕೆ ಲೆಕ್ಕ ಪತ್ರಗಳನ್ನು ಕಳುಹಿಸುತ್ತಿದ್ದರು (ಕುಗುನಾ. ೦೦೫). ೪. ರಾಜಕಾರಣಪಟು ; ರಾಜನೀತಿನಿಪುಣ : ಅನೇಕ ವರ್ತಮಾನ ಪತ್ರಿಕೆಯ ಯುದ್ಧನಿರೀಕ್ಷಕರು ದೊಡ್ಡ ಮುತ್ಸದ್ದಿಗಳಂತೆ ಹೀಗೆ ಹೀಗೆ ಆಗುವುದು ನಿಶ್ಚಿತವೆಂದು ಕಾಯಾಸ ಕಟ್ಟಿ ಹೇಳುತ್ತಿದ್ದರು (ಅನ್ನ. ೩೫). ೫. ತೀಕ್ಷ್ಣವಾದ ಬುದ್ಧಿಯುಳ್ಳವನು; ಚಾಣಾಕ್ಷ : ಶರೀಫನು ತುಂಬ ಮುತ್ಸದ್ದಿ. ಈ ಕುಟಿಲತಂತ್ರಗಳನ್ನೆಲ್ಲ ಬಲ್ಲ (ಹೂರಜ. ೨) ; ರಾವಜೀ ಕಾಕಾ, ಮುತ್ಸದ್ದಿ (ದೀಕಹ. II, ೩೬೫). **ಮುಸದ್ದಿ :** ೬. ಕರಣಿಕ; ಕಾರಕೂನ; ಗುಮಾಸ್ತ : ಸೀಮೆಯ ಜಮಾಖರ್ಚಿನಾ ಲೆಕ್ಕವ ಮುಸದ್ದಿಗಳೊಳಾಲಿಸುವುದೋದೆಸೆಯ ರೊಕ್ಕ ಬರಬೇಕೆಂದು ವಿವರಿಸುತಲೊಂದೆಸೆಯ . . . ವಿಚಾರಿಸುತ್ತ (ಕೃಷ್ಣವಿ. ೫–೪೯).
[← ಅರ. ಮುತ್ಸದ್ದೀ; ಹಿಂ. ಮುತ್‍ಸದ್ದೀ; ಮರಾ. ಮುತ್‍ಸದೀ, ಮುತ್‍ಸದ್ದೀ. ಮುತ್ಸುದೀ, ಮುತ್ಸುದ್ದೀ]

**ಮುತ್ಸದ್ದಿತನ** (ನಾ). ೧. ರಾಜನೀತಿನೈಪುಣ್ಯ; ರಾಜತಂತ್ರಜ್ಞತೆ : "ರಾಜನೀತಿನಿಪುಣತೆ, ಮುತ್ಸದ್ದಿತನ" (statesmanship. ಕಶ್ರಿ. ೬೮). ೨. ಅತಿಬುದ್ಧಿವಂತಿಕೆ ; ಚಾಣಾಕ್ಷತನ : ಶ್ಯಾಮರಾಯನಲ್ಲಿ ಪಂತ ಕುಟುಂಬದ ದೊಡ್ಡಸ್ತಿಕೆ ಇರದಿದ್ದರೂ ಅವರಲ್ಲಿಯ ಮುತ್ಸದ್ದಿತನ . . . ರೋಮರೋಮದಲ್ಲಿ ಸೆಲೆಯಾಡುತ್ತಿತ್ತು (ದೀಕಹ. II, ೩೦).
[ಮುತ್ಸದ್ದಿ + — ತನ]

**ಮುದ** (ನಾ). ಹಿಗ್ಗು ; ಸಂತೋಷ; ಆನಂದ : "ಪ್ರೀತಿ ಸುಖಂ ಮುದಂ . . . ಸುಸುಖವೆನಿಸಿಕ್ಕು" (ಮಂಗರಾ. ೬–೨೫) ; ವಿದಿತನವಾ ಸಂಸ್ಕೃತೋದಿತಪದಂಗಳೊಳ್ ಪುದಿದು ಬೆರಸಿ ಬರೆ ಕನ್ನಡದೊಳ್ ಮುದಮನವು ತರ್ಕಾಂ (ಕವಿರಾ. ೧–೫೫) ; ಭರತೇಶ್ವರಂ . . . ವನಾಭ್ಯಂತರಮಂ ತೊಟಿಲೆ ಮನಸ್ಕಂತಿಲ್ಲದ ಮುದಮನುಂಟು ಮಾಡಿದುದು ಬನಂ (ಆದಿಪು. ೧೧–೮೦) ; ಅರ್ಜುನನು . . . ಮುರಹರನೊಡನೆ ಮುದದಲಿ ರಥಕೆ ಬಂದನು (ಕುಮ್ಮಾದ್ರೋ. ೨–೧೭). [ಸಂ. ಮುದಾ]

**ಮುದಂಗೆಡು** (ಕ್ರಿ). ಸಂತೋಷವನ್ನು ಕಳೆದುಕೊಳ್ಳು ; ಆನಂದವಿಲ್ಲದಾಗು : ಬಹುದುಃಖದೊಗ್ಗಿನಿಂ ತಾಮಸದಿರ್ಕೆಯಿಂ ನೆರೆ ಮುದಂಗೆಡುತ್ತೈದೆನೆ (ಶಕಕ. ೦೭೦–೨೫). [ಮುದ + ಕೆಡು₁]

**ಮುದಂದಳೆ**, ಮುದದಳೆ (ಕ್ರಿ). ಹಿಗ್ಗು ; ಸಂತೋಷಿಸು : ತೊಳಗುವ ರನ್ನದೊಟ್ಟಿಲೊಳೆ ಪಟ್ಟಿರಿಸುತ್ತೆ ಕುಮಾರನಂ ಮುದಂದಳೆದೆಳವೆಣ್ಗಳೊಲ್ದು . . . ಏಘು ಜೋಯೆಸುತೊಪ್ಪಿ ತೂಗಿದರ್ (ರಾಜಶೇ. ೪–೬೦). **ಮುದದಳೆ :** ಚತುರಾಸ್ಯನಿವರನೆಲ್ಲಿಂದಲ್ಲಿ ಕೂಡಿಸಿದನೆಂದು ಯತಿ ಮುದವಳೆಯಲು (ನವಪೋ. ೩೩–೦೭). [ಮುದ + ತಳೆ₁]

**ಮುದಂಬಡು**, ಮುದಪಡು (ಕ್ರಿ). =ಮುದಂದಳೆ : ನಿಜಬಳಂ ಮುದಂಬಡುತ್ತಮಿರೆ ಪಡಿಬಳಂ ಕಂಗೆಡುತ್ತಮಿರೆ . . . ಪನ್ನತಿಕೆಯಿಂ ತನ್ನ ಬಲಂಬೆರಸು ಸುತ್ತಿ ಪತ್ತಿದಾಗಳ್ (ರಾಜಶೇ. ೬–೦೦೫ ವ). **ಮುದವಡು :** ಬಂದು ಹೊಕ್ಕನು ಪುರವ ಮೆಚಿವತಿಚಂದವನು ನೆಚಿ ನೋಡಿ ಮುದವಡುತಂದು [ ಪಾಠಾಂ. ಮನದೊಳಗಂದು ಕೊಂಡಾಡಿದನು] ಋತುಪರ್ಣನ ಮಹಾಸಿರಿಯ (ನಳಚ. ೬–೨೮) ; ನಿಟ್ಟಿಸುವಳು ಕೆಲಬಲನ ಇಟ್ಟದಿರೊಳು ಕಂಡಂತಾಗಲಲ್ಲೆ ಮುದಪಟ್ಟು (ಕರ್ಣಾಕ. ೨೨೭). [ಮುದ + ಪಡು₁]

**ಮುದಂಬೆರು** 'ಮುದಂಬೆಱು' ನೋ.

**ಮುದಂಬೆಱು,** ಮುದಂಬೆರು, ಮುದವೆಱು (ಕ್ರಿ)=ಮುದಂದಳೆ: ನಿಂಬಿಯಕ್ಕನ ಚೆನ್ನಭಕ್ತಿಗೆ ಮೆಚ್ಚಿಯಾರೋಗಿಸಿ ಮುದಂಬೆತ್ತು (ಬಸಪು. ೨೪-೭೫) ; ಜಂಭರಿಪು ನಿಜರೂಪುದೋಱುತೆ ಪರಸಿ ಮುದಂಬೆತ್ತು ಸಗ್ಗಕೆಯ್ದಿದಂ (ಶಬಶಂ. ೨-೯೨). **ಮುದಂಬೆರು :** ಎತ್ತಿದ ಪಲ್ಲವ ಪ್ರತಿಮ ಪಾಣಿಂಗಳಿಂ ವನದೇವಿಯರ್ ಮುದಂಬೆತ್ತೊಡನಿತ್ತರೀ ತೊಡವನೆಲ್ಲ ಮನನ್ನಿಕುಜಂಗಳತ್ತಣಿಂ (ಶಾಕುಂತ. ೫೦-೬೩). **ಮುದವೆಱು :** ಗಂಡ ಹೆಂಡಿರು ನಂದಿಯುಂ ಬಲಗೊಂಡು ವಂದಿಸಿ ಬಿರಿದು ಶುಭವಿದಿಗೊಂಡ ವೊಲು ನಿಜಮಂದಿರಕೆ ನಡೆತಂದು ಮುದವೆತ್ತು (ಬಸಪು. ೨-೫೫) ; ಒಡಿದಳು ಗಲ್ಲವ ಮುದ್ದಿಸಿ ಮುದವೆತ್ತು ನುಡಿದಳು ಏಳರಾಯನರಸಿ (ಮೋಹತ. ೧೧-೪೦). [ ಮುದ + ಪೆಱು$_1$ ]

**ಮುದಗೊಳ್ಳು** (ಕ್ರಿ).=ಮುದಂದಳೆ : ಶಾಂತಲಾದೇವಿ ಮನಸ್ಸಿನಲ್ಲಿ ಮುದಗೊಂಡಳು (ಶವಶಿ. ೪೨). [ಮುದ+ಕೊಳ್ಳು$_1$ (<ಕೊಳ್$_1$)]

**ಮುದತಿ** 'ಮುದ್ವತು' ನೋ.

**ಮುದತ್ತು** 'ಮುದ್ವತು' ನೋ.

**ಮುದದಳೆ** 'ಮುದಂದಳೆ' ನೋ.

**ಮುದಮಿಱು** (ಕ್ರಿ). = ಮುದಂದಳೆ : ಸುಧೆಯೊಳುದ್ಭವಮಾದ ಸುರ ಕರೀಂದ್ರನ ಮೇಲೆ ಮುದಮುತ್ತು ಹರಿಪೀಱಿರಲು (ಅನಂತ. ೭-೨೩).
[ ಮುದ + ಉಱು ]

**ಮುದಲ್** 'ಮೊದಲ್$_1$' ನೋ.

**ಮುದಲಿ** 'ಮೊದಲಿ' ನೋ.

**ಮುದಲಿಯಾರ್** 'ಮೊದಲಿಯಾರ್' ನೋ.

**ಮುದಲೆಕರು** 'ಮುದಲೆಗರು' ನೋ.

**ಮುದಲೆಗರು,** ಮುದಲೆಕರು (ನಾ). ಚಾವಣಿಯೇಣಿನ ತೊಲೆಗೆ ಆಧಾರವಾಗಿರುವಂತೆ ಜೋಡಿಸಿರುವ ಪಾರ್ಶ್ವದ ತೀರು, —ಜಂತೆ : (ಕಸಂಗ್ರಾ. ೩೦). **ಮುದಲೆಕರು :** (ಕಸಂಗ್ರಾ. ೩೦).
[ ← ತುಳು. ಮುದಲೆಗರು, ಮುದಲೆಕರು ]

**ಮುದವಡು** 'ಮುದಂಬಡು' ನೋ.

**ಮುದವಡೆ** (ಕ್ರಿ). = ಮುದಂದಳೆ : ಮುದವಡೆದೆಸೆವ ಚೌರಾಸೀತಿಬಂಧದ ವಿಧದ ರತಿಯು ತೋಱಿ ಮೆಱೆವ ಪುದುಗಿದ ನವರತ್ನದ ಪ್ರತಿಮೆಗಳಿಂದ ಮದನವಿಲಾಸ ರಂಜಿಸಿತು (ಕುಂಶಿ. ೭-೩೯). [ ಮುದ + ಪಡೆ$_1$ ]

**ಮುದವಲರ್** (ಕ್ರಿ). ಬಹಳವಾಗಿ ಹಿಗ್ಗು ; ಅತಿಯಾಗಿ ಆನಂದಿಸು : ಮುದವಲರ್ದಾಚರಿಸೆನೇ ಸಮುಗುರುಸಪರಿಯೆಗಳ (ಬಸಪು. ೧೫-೧೭).
[ ಮುದ + ಅಲರ್$_1$ ]

**ಮುದವೂಡು** (ಕ್ರಿ). ಸಂತೋಷಗೊಳಿಸು : ಆನಂದವನ್ನುಂಟು ಮಾಡು : ಆಡು ಬಾ ಮುದವೂಡು ಬಾ ಭಯದೂಡು ಬಾ ಒಲವೇ (ಗೋಕುಶಿ. ೨೭-೬); ಬೇರೊಂದು ಹಕ್ಕಿಯು ಜತೆಗೂಡಿ ಹಾಡನು ಹಾಡುತ ಮುದವೂಡು ಮನಕೆ (ಶಂಶಾಕ. ೨೦೨-೪೮). [ ಮುದ + ಊಡು$_1$ ]

**ಮುದವೆಱು** 'ಮುದಂಬೆಱು' ನೋ.

**ಮುದವೇಱಿಸು** (ಕ್ರಿ). ಸಂತೋಷವನ್ನು ಹೆಚ್ಚು ಮಾಡು, — ಅಧಿಕ ಗೊಳಿಸು : ಪೆಣ್ಮಕ್ಕಳನಾದರಿಪುದು ಮುದವೇಱಿಪುದು ಮುದ್ದಿಪುದು (ಹರಿಶಿ. ೫-೨೭). [ ಮುದವೇಱು + —ಇಸು$_3$ ]

**ಮುದವೇಱು** (ಕ್ರಿ). = ಮುದಂದಳೆ : ಪಸುಮಕ್ಕಳ ಮುದ್ದಿಸಿ ಮುದವೇಱುವುದು (ಹರಿಶಿ. ೪-೩೦). [ ಮುದ + ಏಱು$_1$ (<ಏಱ್$_1$) ]

**ಮುದಶ್ರು** (ನಾ). ಸಂತೋಷದಿಂದ ಉಕ್ಕಿಬರುವ ಕಣ್ಣೀರು ; ಆನಂದ ಬಾಷ್ಪ : ಕಣ್ಗಳಿಂ ಸುರಿಯೆ ಮುದಶ್ರು . . . ಕಾಂತನೊಳ್ ನೆರೆದು ರಥಾಂಗಕಾಂತೆಯಿರ್ದೆಯಾಱದು ಪಾದಪಂ ತತ್ಪ್ರಭಾತದೊಳ್ (ಚಂಪ್ರಕು. ೬-೧೧೦) ; ಸುರಿವ ಮುದಶ್ರುವೆ ಚಳೆಯಂ . . . ಗದ್ಗದರುತಿ ವರವಾದ್ಯ ಮದಾಗೆ ಶಿವನನವನಿದಿರ್ಗೊಂಡಂ (ರಾಜಶೇ. ೧೩-೫೦). [ಸಂ.]

**ಮುದಿ** (ನಾ). ೧. ಇಳಿವಯಸ್ಸು ; ವೃದ್ಧಾಪ್ಯ : ನಾಲಿಗೆಯು ಕೀಲವನು ಕೀಲದಲಿ ತಾನಱಿದು ಶೂಲವದು ರುಚಿಯು ಎಂದಿಹನು ಮುದಿಯಲಿ ಬಾಲನಂತಿಹನು (ಸರ್ವಜ್ಞ. ೨೦೦೭). ೨. ಮುದುಕ ; ವೃದ್ಧ : ಮುದಿಗಾ ಯುವ್ವನೆ ಶತ್ರುವೈ (ಕೋಮೇಕ. ೯೭) : ಚದುರೆಯಲ್ಲದಳ ಮನೆವಾರ್ತೆ ಮುದಿ ಗೂರಲೊದಱಿ ಸತ್ತಂತೆ (ಸರ್ವಜ್ಞ. ೦೭೨೮). (ಗು). ೩. ವಯ ಸ್ಸಾದ : ಮುಪ್ಪಿನ : ಆ ಮುದಿರೈತ . . . ಡಾಕ್ಟರನ ಕಡೆಗೆ ನೋಡಿದ (ಮಹಾತ್ಮಾ. ೫). ೪. ದೊಡ್ಡಗಾತ್ರದ : ಭಾರಿಯಾದ : 'ಮುದಿ ಕಾಗೆ' ಪರಾ. ೫. ಹಳೆಯ ; ಹಿಂದಿನ : 'ಮುದಿಗನಸು' ಪರಾ.
[ ದೇ.೫ ತುಳು. ಕೊಡ. ಮುದಿ ; ತೆಲು. ಮುದಿ, ಮುತ್ತಿ ]

**ಮುದಿಕಾಗೆ** (ನಾ). ೧. ವಯಸ್ಸಾದ ಕಾಗೆ : ಒಂದು ಮುದಿಕಾಗೆಯು ಹಾರಲಾರದೆ ಎರಡು ದಿನಗಳಿಂದ ಅಲ್ಲೇ ಕೂತಿದೆ (ರೂ). ೨. ಕಾಗೆ ಜಾತಿಗೆ ಸೇರಿದ ಒಂದು ಬಗೆಯ ದೊಡ್ಡ ಪಕ್ಷಿ : ಡೊಂಬಕಾಗೆ : " ದ್ರೋಣಕಾಕಃ, ಕಾಕೋಲಃ – ಈ ೨ ಮುದಿಕಾಗೆ " (ನಾಕುರಾ. ೧೧೪).
[ ಮುದಿ + ಕಾಗೆ ]

**ಮುದಿಕುಂಟಣಿ** 'ಮುದಿಗುಂಟಣಿ' ನೋ.

**ಮುದಿಗನಸು** (ನಾ). ಹಳೆಯ ಕನಸು ; ಹಿಂದಿನ ಕನಸು : ಮುದಿಗನಸು ಗಳನು ತೂರುತ್ತ, ಹೊಸಗನಸನು ಮೊಳೆದೋರುತ್ತ ಪಾವನಪವನನು ಬರುತಿಹನು (ಕಾಂಚಜ. ೨೩-೧೭). [ ಮುದಿ + ಕನಸು ]

**ಮುದಿಗಲ್ಲು** 'ಮುದುಗಲ್' ನೋ.

**ಮುದಿಗುಂಟಣಿ,** ಮುದಿಕುಂಟಣಿ (ನಾ). ಮುದುಕಿಯಾದ ಕುಂಟಿಲ ಗಿತ್ತಿ,— ತಲೆಹಿಡಿಕಿ : ಇದ್ದರಲ್ಲಿ ಸಹಸ್ರಸಂಖ್ಯೆಯ ಮುದ್ದುಕುಟಿಲದ ಮಾಯ ಕಾತಿಯರು . . . ಮುದಿಗುಂಟಣಿ[ಪಾಠಾಂ. ಮುದುಕುಂಟಣಿ, ಮುದು ಗುಂಟಣಿ, ಮುದುಗೂಟಣಿ]ಗಳು (ತೊರಶಾ. ೫-೨-೩೪) ; ಮುದಿಗುಂಟಣಿ ಪೇಳ್ದ ಸೂಳೆಸಿದ್ಧಾಂತವ ಸವಿಶೋಧವೆರಸು ಸಂತಸ ಮಿಗೆ ಕೇಳಿ ಸಲ್ಲಾಪ ದಿಂದ ಭೂಕಾಂತನೆಯ್ದುವನತ್ತತ್ತ (ನಾಗಕು. ೩೦-೧೫೫). **ಮುದಿಕುಂಟಣಿ :** ಮುದಂತೆ ಮೆಗ್ಗಳಿಸಿ ನಿಜತನುವ ನೋಡೆಸೊಗದಿರೆನುತಾಗ ಮುದಿಕುಂಟಣಿಯು ಬೋಧಿಸಿದಳಾತ್ಮಭವೆಗೆ (ವಂಶಾರಾ. ೫-೭-೫೦). [ಮುದಿ+ಕುಂಟಣಿ]

**ಮುದಿಗೂಡು** (ನಾ). ವಯಸ್ಸಾದ ದೇಹ ; ಜೀರ್ಣಶರೀರ : ಮುನ್ನ ಮುದಿಗೂಡು ತಪದಿಂದೊಣಗಿತಿದನೊಲ್ಲೆನು (ಕೃವಿಭಾ. ೨೭-೩೪).
[ಮುದಿ+ಗೂಡು]

**ಮುದಿಗೂಬೆ** (ನಾ). ೧. ವಯಸ್ಸಾದ ಗೂಬೆ ; ಮುದಿಯಾದ ಗೂಬೆ : ಮುದುಕ ಜವ್ವನೆಯನೊಡಗೂಡೆ ಮುದಿಗೂಬೆಯೊವಱಿಕೊಂಡಂತೆ (ಸರ್ವಜ್ಞ. ೦೬೦೩). ೨. (ವ್ಯಂಗ್ಯಾರ್ಥದಲ್ಲಿ) ಬಹಳವಯಸ್ಸಾದ ವ್ಯಕ್ತಿ : ನನ್ನಂಥ ಮುದಿಗೂಬೆಯ ಮಾತು ಯಾರಿಗೆ ಲಕ್ಷ್ಯ ? (ಅಪಾರೂ. ೬) ; ಒಂದು ಕಂಚಾಯಿತು, ಒಂದು ಮಿಂಚಾಯಿತು, ಮುಂದೆ ಕೂತಿಯಾ ಮುದಿಗೂಬೆ ? (ಗಾದೆ). [ಮುದಿ+ಗೂಬೆ (<ಗೂಗೆ)]

**ಮುದಿಗೊಡ್ಡು** (ನಾ). ಬಹಳ ವಯಸ್ಸಾದವನು ; ಮುದಿಯ : ನಿಮ್ಮಂಥವರು ಯಾವಾಗಲೂ ಅಂಥ ಮುದಿಗೊಡ್ಡಿನ ಹಿಂದೆ ಇರುವುದು ಸರಿಯಲ್ಲ (ಹಳ್ಳಿಹಾ. ೪೦) ; ಮುದಿಗೊಡ್ಡುಗಳಾಗಿ ಮದುವೆಯೇಕೆ ಮಾಡಿ ಕೊಳ್ಳುತ್ತಾರೋ ನನಗೆ ಗೊತ್ತಿಲ್ಲ (ಗೋಕುರ. ೦೪೮). [ಮುದಿ+ಗೊಡ್ಡು$_{u1}$]

**ಮುದಿಗೋಡ** (ನಾ). ಮುದಿಕೋತಿ ; ವೃದ್ಧಕಪಿ : ಮನೆಯೊಳಗೆ ಕಟ್ಟಿದರ್ದೊಂದು ಮುದಿಗೋಡನಂ ಬಸಕೆ ಹಿಡಿತರಿಸಿ (ಸಮ್ಯಕ್. ೨-೮೦).
[ಮುದಿ+ಕೋಡ$_1$ (<ಕೋಡಗ)]

**ಮುದಿತ** (ಗು). ೧. ಸಂತೋಷಗೊಂಡ ; ಸಂತುಷ್ಟವಾದ : ಹಿಗ್ಗಿನಿಂದ ಕೂಡಿದ : ಪ್ರಭಾಮಂಡಲಂ ಪ್ರಮೋದಮುದಿತಹೃದಯನಾತನಂ ರಾಮಸ್ವಾಮಿಯಲ್ಲಿಗುಯ್ವುದುಂ (ಶಂಗವಾ. ೦೪-೪೬ವ) ; ಗೋಪಾಲರಂ ಕಂಡತಿಮುದಿತಹೃದಯನಾಗಿ ಮುಕುಂದಂ . . . ಅನುರಾಗದಿಂ ನೋಡಿ (ಜಗಪ. ೪-೯೦ ವ) ; ಮುದಿತ ತಾಂಡವರೂಪಮೆಂತೆನೆ ನೋಡು ನೀನು (ಬಸವು. ೦೭-೦೪). ೨. ಸಂತೋಷವನ್ನುಂಟುಮಾಡುವ : ಶೀಡಿತ್ತಿರದೆ ಮುದಿತವಿಶ್ವಂ ನಾಭಸಂ ಮಾತರಿಶ್ವಂ (ಶಂದ್ರ ಪ್ರ. ೪-೩೦). (ನಾ). ೩. ನಲಿವು; ಹಿಗ್ಗು ; ಸಂತೋಷ : "ಮುತ್ . . . ಮುದಿತಂ . . . ಮೋದ್ಯಂ, ಈ ೧೨ ನಲಿವು" (ಶಾಶಕ. ೯೩) ; ಮುದಿತ ಎಂದರೆ ಒಳ್ಳೆಯ ವಿಷಯಗಳನ್ನು ಕಂಡರೆ ಸಂತೋಷ (ಅಮ್ಮಕ. ೭-೩ ಟೀಕು). ೪. ಸಂತೋಷ ಗೊಂಡವನು : ನಿಲ್ಲಿಸೆಂಬ ಮಾತನಿಂತು . . . ಕೇಳಿ ಮುದಿತನಾದ ಹರಿಯು ಶುಭವನೆಮಗೆ ಮಾಡಲಿ (ಧ್ವನ್ಯಾಲೋ. ೨೨೧). [ಸಂ.]

**ಮುದಿತನ** (ನಾ). ಮುಪ್ಪು ; ಇಳಿವಯಸ್ಸು ; ವೃದ್ಧಾಪ್ಯ : "ಸ್ಥಾವಿರಂ, ವೃದ್ಧತ್ವಂ . . . ಮುದಿತನ, ಮುಪ್ಪು" (ಸಿದ್ಧಾಂತಿ. ೦೭೯) ; ರಂಗಾಭಟ್ಟರ ಬಾಳುವೆಗೆ ಮುದಿತನದಲ್ಲಿಯೂ ಒಂದು ಮುಗುಳು ಬಿಟ್ಟಂತಾಯಿತು ! (ಜೀವರಂ. ೯೩). [ಮುದಿ + —ತನ]

**ಮುದಿಪಾಜಿ** (ನಾ). ವಯಸ್ಸಾದ ಸೂಳೆ ; ವೃದ್ಧವೇಶ್ಯೆ : ತನ್ನೊಳ್ ತಾನೆ ಜಿನುಂಗಿ ನುಡಿವ ಮುದಿ[ಶಾಶಾಂ. ದು]ಪಾಜಿಯುಂ ನೋಡುತುಂ ನಗುತುಂ ಬರೆ (೧೦೪. ೪-೦೫೬ ವ) ; ಹುಣ್ಣನೊಳಗುಳ್ಳ ವರಮಧುರ ಕಸು ಗಾಯೊಳುಂಟೆ ಕೂಡಿದೊಡೆನ್ನ ಪರಿಯು ತೋಱುವೆ ಪೊಸತ ನಿನ್ನಾಣೆಯೆಂಬ ಮುದಿಪಾಜಿಯಿರ್ದಳದೊಂದೆಡೆ (ಭಕ್ತಾಕ. ೨-೪೬) ; ಎನಗೆ ನೀನಲ್ಲದಾರಿ ಲ್ಲೆಂದು ನಿನ್ನ ಮನ ಸಿಲ್ಕಿಸದಿರೆಂದು ಮುದಿಪಾಜಿ ಮಗಳಿಗೆ ಬುದ್ಧಿಯಂ ಪೇಳ್ದಳು (ಶ್ರೀರಂಗ. ೬-೦೦). [ಮುದಿ + ಪಾಜಿ]

**ಮುದಿಪ್ರಾಯ** (ನಾ). = ಮುದಿತನ : ಇಷ್ಟು ಮುದಿಪ್ರಾಯದಲ್ಲಿ ಅವರಿಗೆ ಇಂಥಾ ಕಷ್ಟ ಬರಬಾರದಿತ್ತು (ಕೂಂ). [ಮುದಿ + ಪ್ರಾಯ]

**ಮುದಿಭ್ರಾಂತಿ** (ನಾ). ಅರೆಮರುಳು ; ಅರ್ಧ ಹುಚ್ಚು : ಒಂದು ವೇಳೆ ಜಹಾಂಗೀರನಿಗೆ ನನ್ನ ಸಮಾಚಾರ ತಿಳಿದರೆ ನನಗೆ ಮುದಿಭ್ರಾಂತಿ ಹಿಡಿದಿತ್ತು ಎಂದು ನಗುವನೇ ? (ಶಿಕ್ಷಾಮ. ೬೨). [ಮುದಿ + ಭ್ರಾಂತಿ]

**ಮುದಿಮುಂಡೆ** (ನಾ). ವಯಸ್ಸಾದವಳನ್ನು ಕುರಿತು ಅವಹೇಳನಾರ್ಥ ದಲ್ಲಿ ಹೇಳುವ ಒಂದು ಬಯ್ಗುಳು : ನಡೆ ಮುದಿಮುಂಡೆ ನೀನೇಬೊತ್ತು ವಲ್ಲಿನ ಸಜುವಮೆಸಿದುದು ಸೂಳೆಗೇರಿಯಲಿ (ಕೂರಣ. ೫-೯-೭೭). [ಮುದಿ + ಮುಂಡೆ$_1$]

**ಮುದಿಯ** (ನಾ). ೧. ವಯಸ್ಸಾದವನು ; ಮುದುಕ; ವೃದ್ಧ : ತಾಟುತ್ತ ಪ್ಯೆಯು ಬಡಿವಾಗ ಮುದಿಯನ ಕೋಟಲೆಯ ನೋಡ (ಸರ್ವಜ್ಞ. ೧೯೦೦) ; ಸತ್ತರೆಲ್ಲ ಮುದಿಯನೊಬ್ಬನೊಂಟಿಯಾಗಿ ಮನೆಗೆ ಉಳಿದ (ಅರ್ಜುನ. ೧೦೦). ೨. ವಯಸ್ಸಾದುದು ; ಮುದಿಯಾದುದು: ಹಣಿದು ಘಾಯದ ಪಿಷ್ಣು ನೊಂದು ಸಿಂಹವನದ್ದೆ ಕಣಕುಪೆತ್ತಿನ ಮುದಿಯನಂತೆ ದಿವ್ಯಾಸ್ತ್ರಮಂ ಗಣನಾಯಕನ ಮೇಲೆ ಬಿಡಲು (ವೀಕ್ಷ ಪ್ರ. ೩-೪-೩೮).
[ಮುದಿ + —ಅ$_7$./ತಮಿ. ಮುತಿಯನ್. ಮುತ್ತಿಯಾನ್. ಮುತಿ ಯವನ್ : ತುಳು. ಮುದಿಯೆ]

**ಮುದಿಯಳು** (ನಾ). ಮುದುಕಿ ; ವೃದ್ಧೆ : ಗಣಿಕನ ನೆರೆ ಹೊಲ್ಲ ಗಣಿಕೆ ಮುದಿಯಳು ಹೊಲ್ಲ (ಸರ್ವಜ್ಞ. ೭೪೬).
[ಮುದಿಯ + —ಅಳು$_4$ (< —ಅಳ್$_5$)]

**ಮುದಿರ್**, ಮುದುಡು$_1$, ಮುದುರು (ಕ್ರಿ). ೧. ಸೊರಗು; ಕೃಶವಾಗು: ಅಮೃತಮತಿಯುಷ್ಟವಂಕಂಗೆ ಮರುಳ್ಗೊಂಡತ್ತೆ ಗಂಡನಂ ವಿಷದಿಂಕೊಂದು ಮುದಿರ್ತು ಯಮಂ ಕೊಲೆ ಪಂಚಮನರಕದೊಳಪ್ಪಳ್ (ಯಶೋಕ. ೪-೫೬). ೨. ಕಡಮೆಯಾಗು ; ಇಳಿ : ಎಳವಿಸಿಲೀಗಳೀಗಳೆ ಮುದಿ[ಶಾಶಾಂ. ಸು]ರ್ದಪುದು ಜೊತಕುಜಾತಮಿಗಳೀಗಳೆ ನನೆದೋಱಿತು (ಆದಿಪು. ೧೩-೫). ೩. ಮುಚ್ಚು ; ಮುಗಿ : ಮಾಣಲೆ ಜೋಗಿ . . . ಮುದಿರ್ದ ಕಣ್ಣೆವೆಯುಂ ಬಿದಿರ್ಚಿ ನೋಡೆವೆಮ್ಮಂ (ರಾಮಾಶ್ವ. ೬೦-೫).

**ಮುದುಡು$_1$**: ೪. ಅಡಗು; ಹುದುಗಿಕೊಳ್ಳು: ಆಣವಮಾಯಾಕಾರ್ಮಿಕ ಮೂಱುನುರೆಯಲ್ಲಿ ಮುದುಡುತ್ತ ನಾ ತಂದ ಸುಧೆ ನಿಮಗಿಲ್ಲ ಎಂದೆ (ಸರ್ವವ. ೦೪೨-೭೪೭) ; ಯಕ್ಷಂ ಮರುಳಾದಂ ಮಿಕ್ಕವರ್ಗೊಂಟಿನೊಳೆ ಮುಮುಡಿವರ್ (ಅಪಂಕ್ಕ. ೦-೦೧೨) ; ಅಜಯ . . . ಜನಜಂಗುಳಿಯ ನಡುವೆ ಒಂದು ಮೂಲೆಯಲ್ಲಿ ಮುದುಡಿ ಕುಳಿತ (ಅಶ್ವಾರ್ಜ. ೦೫೬). ೫. (ಚರ್ಮ. ಬಟ್ಟೆ ಮೊದಲಾದುವುಗಳು) ಸುಕ್ಕಾಗು ; ಸುಕ್ಕುಗಟ್ಟು ; ನೆರಿಗೆ ಬೀಳು : ಚೆನ್ನಾಗಿ ಗರಿಮುರಿಯಾಗಿ ಇಸ್ತ್ರಿ ಮಾಡಿದ್ದ ಸೀರೆ ಬಸ್ಸಿನ ದೊಂಬಿ ಯಲ್ಲಿ ಮುದುಡಿ ಹಾಳಾಯಿತು (ಕೂಂ). ೬. (ಬಿಸಿಯ ರಭಸಕ್ಕೆ ತಾಗಿದ) ಹೂವು, ಎಲೆ ಮುಂತಾದುವುಗಳು ಸುರುಟು : ಮುರುಟಿ ಕೊಳ್ಳು : "ಮುದುಡು—ಸಂಕೋಚನೇ" (ಕವಾಶ) ; ಮಂಜಿನ ಭಾರ ದಿಂದ ಬಾಗಿ ಮುದುಡಿದ ಪುಷ್ಪಗಳು ಮತ್ತೊಮ್ಮೆ ಅರಳಿ ಎಸಳೆತ್ತಿ ಮುಂಬೆಳಕಿನಲ್ಲಿ ನಲಿವಂತೆ ನಮ್ಮ ಜೀವ . . . ಹಗುರವಾಯಿತು (ವಚನ. I. ೩೪೫). ೭. ಬಾಗು ; ತಿರುಗು : ತಿರುಚಿಕೊಳ್ಳು : 'ಮುದುಡುಗಿವಿ' ಪರಾ. ೮. ಕೈ. ಕಾಲು ಮುಂತಾದುವು ಸೇದಿಕೊಳ್ಳು,— ಎಳೆದುಕೊಳ್ಳು : ಒಂದು ವರುಷದ ಕೂಸಂ ನಂದಿನಿಯೆಂಬ ದೇವತೆ ಪಿಡಿದೊಡಾ ಕೂಸು . . . ಕೈಯುಂ ಮುದುಡಿ ಕಚ್ಚಿಕ್ಕುಂ (ಬಾಲಗ್ರ. ೦೩೦-೫). ೯. ಕುಗ್ಗು ; ಕುಸಿ : ನಿರ್ಮಲೆಯ ಅರಳಿಕೊಂಡಿದ್ದ ಮನಸ್ಸು ಮುದುಡಿಬಿಟ್ಟಿತು (ಶೀವತೀತ. ೧೦೪). ೧೦. ಆಯಾಸಗೊಳ್ಳು; ಬಸವಳಿ : ಮಲಮೂತ್ರ ಹೇಸಿಕೆಂದಲೆ ಯಳಿದು ಸೂಲಗಿತ್ತಿಯ ಕೆಯ್ಯ ಮೊಱಿದೊಳ್ಮುದುಡಿ ಬೀಳ್ದ (ಶಿಂಶೋರ. ಹ. ೫೦-೨೦). ೧೧. ಮುದ್ದೆಯಾಗು ; ಮುಮುಡೆಯಾಗು: ತವೆ ರೋಗಂ ಪತ್ತಿ ಗಾತ್ರಂ ಧರಣಿಗೆ ಕೆಡೆದಿರ್ಪಲ್ಲಿಯುಗ್ರಬ್ಬಪಂ ಬಂದವಿಚಾರಂ ಕಾಯ್ದು ಬಸ್ಸೆಂದೊಡೆಯೆ ಮುದುಡಿ ಬೀಳ್ವಲ್ಲಿ . . . ನೀವಲ್ಲದಾರ್ ಕಾವವರ್ (ರಕ್ಷಾಶ. ೩೭); ಮೆಲ್ಲಗೆ ಆಕೆಯ ಕಿಸೆಯಿಂದ ಒಂದು ಮುದುಡಿದ ಬೆಕ್ಕಿನ ಮರಿ ಈಚೆಗೆ ಬರುತ್ತಿತ್ತು (ಬಾಣಲ. ೨). ೧೨. ಅಡಗಿಸಿಕೊಳ್ಳು; ಹುದುಗಿಸಿಕೊಳ್ಳು : ಈ ವನಮಿದಂ ಸೋಂಕೆ ಸದ್ಗತಿಯಿಲ್ಲಮೆಂದು ರವಿ ತೊಲಗಿ ಕಿರಣಂಗಳಂ ಮುದುಡಿ[ಶಾಶಾಂ. ರುಬಿ] ಪೋಪನೊ ಪೇಳೆನೆ ಮಿತಿಯಿಲ್ಲದಾಗಸಕೆ ಬೆಳೆದ ತರುಪತ್ರಸಂತತಿಯ ಸಾಂದ್ರತ್ವದಿಂ ಕತ್ತಲಿಸುತಿದೆ (ಜೈಪ್ತು. ೦೦-೨೫). ೧೩. ಮುದ್ದೆಮಾಡು; ಮುದುಡೆ ಗೊಳಿಸು : ಕುಳಿಯೊಳಿಕ್ಕುವ ಮುದುಡಿ ಮುಚ್ಚಿ ಮುಗ್ಗುವ . . . ನೆಱೆ ಸುಲಿವ ಬಿಳಿರ ಕೋಳಾಹಳದೊಳಾ ರೌರವಂ ಭಯಂಕರವಾದುದು (ಸಿದ್ಧರಾ.೯-೨೯); ಹಾಸ್ಯಕ್ಕಾಗಿ ಬರೆದ ಲೇಖನವನ್ನು ಮುದುಡಿ ಬಿಸುಡುವೆನು (ರಾಜಾಪು. ೩೪). ೧೪. ತಿರುಚು; ಮಡಿಸು; ಬಗ್ಗಿಸು : ಒಂದು ದಸಿಯಂಗಾಲ ನಟ್ಟಡೆ ನೊಂದು . . . ಹಿಂದೆಸೆಗೆ ಕಾಲ್ ಮುದುಡ ಬಾರದು ಮುಂದೆಸೆಗೆ ನೀಡಲ್ಕೆ ಬಾರದು (ಬಸವು. ೪೩-೯೪) ; ಕಯ್ದುನ್ನೊಳ ಕೊಂಡ ಆ ವೀರನ ಮುಷ್ಟಿಯನ್ನು ವಿದ್ಯುದ್ವೇಗದಿಂದ ತುಡುಕಿ . . . ಅದನ್ನಾತನ ಬೆನ್ಗೆ ಮುದುಡಿ, ತೋಳ್ಮುರಿಚಿ . . . ಕೆಡಹಿ ಬಿಡುವನು (ಬರುಗಂ. ೦೫-೨೬). ೧೫. ಹಿಂದೆಗೆ; ಹಿಂಜರಿ; ಅಳುಕು : ದೇವದಾಸ ಮಾಂಸಾಹಾರಿಯಲ್ಲ. ಅದನ್ನು ನಾನು ಬಲ್ಲೆ. ಆದರೂ ಮನಸ್ಸು ಮೊದಲು ಮುದುಡಿತು (ನಟಿಶಾ. ೩೬೬). ೧೬. ಹತೋಟಿಗೆ ತರು; ನಿಯಂತ್ರಿಸು; ನಿಗ್ರಹಿಸು : ಮೂಱು ಮುದುಡಿ ಆಱನಡಗಿಸಿ ಎಂಟ ಗಂಟಿಕ್ಕಿ . . . ಮಂಡೆಯ ಮೇಲೆತ್ತಿದ ಮತ್ತೆ ಅವು ಹಿಂಗುವ ಠಾವಿಲ್ಲ (ಸರ್ವವ. ೩೬-೦೯೦).

**ಮುದುರು** : ೪. ಮಕ್ಕಳೆಲ್ಲ ಮುದುರಿ ಕುಳಿತರು (ಪಶುಶಾ. II, ೧೦೨೬); ಎಷ್ಟು ಹೊತ್ತು ತಾನೆ ಕಿಷ್ಕಿಂಧದಲ್ಲಿ ಮುದುರಿ ಕುಳಿತುಕೊಳ್ಳಬಲ್ಲ ? (ಹಸುಶೂ. ೨೩೬). ೫. ರೇಷ್ಮೆಬಟ್ಟೆಗಳು . . . ಇವಕ್ಕೆ ಸ್ಥಿತಿಸ್ಥಾಪಕಶಕ್ತಿ ಇರುವುದರಿಂದ ಬಟ್ಟೆಗಳು ಬೇಗ ಮುದುರುವುದಿಲ್ಲ (ಗೃಹಶಾ. ೬೬). ೧೭. ಗಾತ್ರವನ್ನು ಕಳೆದುಕೊಳ್ಳು; ಚಿಕ್ಕದಾಗು : ಭೂಮಿಯ ಒಳಭಾಗ ಇನ್ನೂ ಆರಿದ ಮೇಲೆ ಅದರ ಗಾತ್ರ ಕಡಿಮೆಯಾಯಿತು. ಸಂಕೋಚವಾಗುತ್ತಿದ್ದ ಒಳಪದರದ ಮೇಲೆ ಘನಪದರವು ಇಳಿದು, ಮುದುರಿ ಮುದುರಿ ಪರ್ವತಶ್ರೇಣಿಗಳನ್ನುಂಟುಮಾಡಿತು (ಭೂಪುಟ್ಟಿ. ೯೪); ಸೂರ್ಯನು ಮುದುರುತ್ತಿರುವನೆಂಬುದು ನಿಜವಾದರೂ ೮೬,೦೦೦ ಮೈಲು ವ್ಯಾಸವುಳ್ಳ ಅವನ ಮೈಯಲ್ಲಿ ೨೫೦ ಅಡಿ ಮುದುರುವಿಕೆಯು ಎಷ್ಟು ಸ್ವಲ್ಪ ! (ಜ್ಯೋತಿ. I, ೬೩).

**ಮುದುರಿಕೊಳ್ಳು, ಮುದುಡಿಕೊಳ್ಳು** = ೧. ಸುರುಟಿಕೊಳ್ಳು; ಮುರುಟು : ಸೂರ್ಯಕಿರಣ ಬಿದ್ದೊಡನೆಯೇ ನೆಬ್ಬಿದ್ದಲು ಮುದುರಿಕೊಳ್ಳಬೇಕೆಂಬ ನಿಯಮವೂ ಇಲ್ಲ (ಹಸುಶೂ. ೩೭೩); ಹೂಗಳು (ಕಮಲ, ತಾವರೆ ಇತ್ಯಾದಿ) . . . ಸಂಜೆಯಿಂದ ಮರುದಿನ ಮುಂಜಾನೆಯವರೆಗೆ ಮುದುಡಿಕೊಂಡಿರುತ್ತವೆ (ಸಸ್ಯಶ. ೦೦೪). ೨. ಅಡಗಿಕೊಳ್ಳು; ಹುದುಗಿಕೊಳ್ಳು : ಇದ್ದ ಜಾಗದಲ್ಲೇ ಎಲ್ಲರೂ ಮುದುರಿಕೊಂಡು ಮಲಗಿದರು (ಕೊ೩); ನಾನು ಕೊಂಚ ಮುದುಡಿಕೊಂಡು ಕುಳಿತುಕೊಂಡೆ (ಪಾಪೋಲೀ. ೩೮); ನಾಯಕ . . . ಅದರ ತುದಿಯಲ್ಲಿ ಮುದುಡಿಕೊಂಡು ಕುಳಿತುಕೊಳ್ಳುತ್ತಾನೆ (ಜೀಕಥೋ. ೩೪). ೩. ಒಳಕ್ಕೆ ಎಳೆದುಕೊಳ್ಳು,— ಸೆಳೆದುಕೊಳ್ಳು : ನಮ್ಮ ರೆಕ್ಕೆಗಳನ್ನು ಮುದುರಿಕೊಂಡು ಆಕಾಶದಿಂದಿಳಿದು . . . ಭೂದ್ವೀಪವನ್ನು ಮರಳಿ ಸೇರೋಣ (ಕ್ಷೀರಸಾ. ೬೮). ೪. ಕುಗ್ಗು; ಕುಸಿ : ಯೋಚನೆ ಮುಗಿದಾಗ ಮೋಹಿನಿ ಒಳಗಿನಿಂದಲೇ ಮುದುಡಿಕೊಳ್ಳುತ್ತಿದ್ದಳು (ಕಮಣ. ೦೦೬); ಗಿರಿಯನ ಮನಸ್ಸು ನಾಚಿಕೆಯಿಂದ ಮುದುಡಿಕೊಂಡಂತಾಯಿತು (ಮುಕ್ತ. ೬೪). ೫. ಬೇರೆಯವರೊಂದಿಗೆ ಬೆರೆಯದಿರು; ಒಂಟಿಯಾಗಿರು : ನರಹರಿಯು ಇನ್ನಷ್ಟು ಮುದುಡಿಕೊಂಡ, ಯಾರೊಡನೆಯೂ ಅವನು ಮನಸ್ಸು ಬಿಚ್ಚಿ ಮಾತಾಡುತ್ತಿರಲಿಲ್ಲ (ಸಮಾ. ೪೦೩).

[ದೇ. ತಮಿ. ಮುತಿರ್; ಮಲ. ಮುತಿರು; ಕೊಡ. ಮುದ್ರ್. ತೆಲು. ಮುದುರು]

**ಮುದಿರ** (ನಾ). ೧. ಮೋಡ ; ಮುಗಿಲು : ''ಅಭ್ರಂ, ಮೇಘಂ . . . ಮುದಿರಃ, ಜಲಮುಕ್, ಧೂಮಯೋನಿಃ—೧೫ ಮೇಘಗಳ ಹೆಸರುಗಳು'' (ಸಿದ್ಧಾಂತಿ. ೨೬); ತುದಿಯೊಳಗೆ ಸೆರೆಗೋಲಿಸಿ ಸಂಕನು ಮುದಿರನಿನದದಿ ಭೋರೆನುತ ಪೂರಿಸಿದನೊಡನೊಡನೆ (ಜಾತ. ೨–೬೩). ೨. ಪ್ರಣಯಿ. ೩. ವಿಷಯಲಂಪಟ. ೪. ಕಪ್ಪೆ; ಮಂಡೂಕ. [ಸಂ.]

**ಮುದಿರೆ** (ನಾ). ಒಂದು ಊರಿನ ಹೆಸರು : ಇದಕ್ಕೆ ಸಕ್ಷಿ ಮುದಿರೆ ಬೂಮಯ್ಯ ಬೆಳ್ಳನ ಕರಕುಡಿ ಬಾರದಕೆಜೆಯಮ್ಮ (ಎಕ. IV, ಹುಣಸೂ. ೬೨–೦೨; ಹು. ೪೦೦). [ ? ]

**ಮುದಿಪಾರ್ವ** (ನಾ). ವಯಸ್ಸಾದ ವಿಪ್ರ ; ವೃದ್ಧಬ್ರಾಹ್ಮಣ : ಈ ಮುದಿಪಾರ್ವರಂ ಗೆಲ್ಲದಿರಲಾರ್ ಮುಪ್ಪೊಬಲೊಡೆಯನಾಗಿಯುಮಲ್ತು (ಅದ್ಭುತ. ೩೦). [ಮುದಿ + ಪಾರ್ವ]

**ಮುದಿವು** (ನಾ). = ಮುದಿತನ : ತನಗೆ ಮುಪ್ಪೊಬಲೊಡೆತನಮುಂ ಬರ್ಪಂತೆ ವೇಳ್ ಮುದಿವಟುವುಂ ಬಾರದಂತೆ ವಿಧಿಯಂ ಬಲಿಸಿಕೊಳ್ವುದು (ಅದ್ಭುತ. ೨೮). [ಮುದಿ + — ವು]

**ಮುದಿವೆಣ್** (ನಾ). ವಯಸ್ಸಾದ ಹೆಂಗಸು; ಮುದುಕಿ.

**ಮುದಿವೆಣ್ಣಳು** (ಬಹುವ) : ಬಳೆದೊಡವ ಕುಂಟಣಿಯ ಸಡೆಯಿಸುವ ಮುದಿವೆಣ್ಣಳು . . . ಬರುತಿರ್ದರು (ಶಂಕೃ. ೯೭–೯೨). [ಮುದಿ + ಪೆಣ್]

**ಮುದಿವೇಶಿ, ಮುದಿವೇಸಿ** (ನಾ). = ಮುದಿಪಾಜಿ : ಪಾಸಿದ ಸೀರೆ ಮಸಿಯ ತಿಲಕದ . . . ಮುದಿವೇಶಿಯರೆಡೆಯಾಡುತಿಪ್ಪರು (ಕಂಪಾ ೬–೦೯೦). **ಮುದಿವೇಸಿ** : ನರೆದಲೆಯ ಮಸಿದೊಡೆದು . . . ಸುಳಿವರ ಕರೆವ ಮುದಿವೇಸಿಯರ ನಗುತವನೀಶನೀಕ್ಷಿಸಿದ (ತಃಪಂಕ. ೦೭–೩೯). [ಮುದಿ + ವೇಶಿ]

**ಮುದಿವೇಸಿ** 'ಮುದಿವೇಶಿ' ನೋ.

**ಮುದಿಷ್ಟ** (ನಾ). ಒಂದು ಬಗೆಯ ಸಸ್ಯ : ''ಮುದಿಷ್ಟಮೆಂಸ ಕಿಜುಕು ಸಾಲೆಯಕ್ಕುಂ'' (ಪಂಗಶಾ. ೩೨–೪೦). [ ? ]

**ಮುದಿಸೂಳೆ** (ನಾ). = ಮುದಿಪಾಜಿ : ತಕ್ಕೆಯೊಳ್ವರಿಸಿ ಸಸುಸೋಲಕಿ ವಿಟರಿಂ ಪಣಂದೆಗೆಯೆಂದು ಮುದಿಸೂಳೆ ಮಗಳ್ಗುಸುರ್ದಳು (ಶಂಕಿಶಾ. ೨೩–೯೩); ಬಾಗಿಲ ಕೈಸಾಲೆಯಲ್ಲಿ ಮುಂಬಸೂಳೆಯು ಯಳೆಹುಡುಗಿಯರಿಗೆ ಬುದ್ಧಿಯಂಗಲಿಸುತ್ತ (ಶಾಗಂ. ೧೯೦–೨). [ಮುದಿ + ಸೂಳೆ$_1$]

**ಮುದಿಹೋತು** (ನಾ). ಮುದಿಯಾದ ಗಂಡಾಡು.

**ಮುದಿಹೋತುತಲೆಯ** = ವಯಸ್ಸಾದ ಹೋತದ ತಲೆಯನ್ನು ಹೊಂದಿರುವವನು; ದಕ್ಷ : ಮುದಿಹೋತುತಲೆಯಂ ದಕ್ಷನಾಗ ನಡ ನಡುಗುತ್ತಂ ಸಾಷ್ಟಾಂಗವೆರಗಿ ವಂದಿಸುತಿದ್ದು ಮೃಡನ ಕೀರ್ತಿಸುತಿರ್ದನು (ಶೀಕೃ. ೩–೪–೩೬). [ಮುದಿ + ಹೋತು$_2$ (<ಪೋತು)]

**ಮುದು**$_1$ (ಕ್ರಿ). ಮುತ್ತ$_1$ (ಭೂತಕೃ), ಮುತ್ತು$_2$ (ಭೂತನ್ಯೂ). ೧. ಮುದಿಯಾಗು; ವಯಸ್ಸಾಗು; ವೃದ್ಧಾಪ್ಯವನ್ನು ಹೊಂದು : ''ಮುದು –ವೃದ್ಧೌ''(ಕಪುರಾ); ಮುಸು ಮುತ್ತಂತೆ ತೆರಳ್ದ ತನ್ನ ಪೊಗವಂ ಕಂಡಳ್ಕನೋ (ಅಂಕೃ. ೨ ೯೩); ಪೆತ್ತುಂ ತಳ್ಪಟ್ಟುಯದ ನಡು ಮುತ್ತುಂ ಬೀಟದ ಪಯೋಧರಂ . . . ಮೆಯ್ಯುತ್ತಿರೆ ಕರಮೊಪ್ಪಿದಪ್ಪರಲ್ಲಿಯ ಪೆಂಡಿರ್ (ಕಾವ್ಯಾತ. ೭೪೪); ತೊಂಬತ್ತುಮರುಷಂಗಳು ಸಲಲು ನೆಜಿ ಮುತ್ತುದಲ್ಲಾ ದೇಹವೆನ್ನದಹಂಗೆ ವರ್ತಿಸುತ (ಬಸಕೃ. ೪೪–೩). ೨. ಪಾಗು; ಬಲಿ; ಪಕ್ವವಾಗು : ಕಾರಿಕಾಲಮ್ಮೆ ಮುತ್ತ ಮಾವಿನ ಹಣ್ಣನೀಯಲು ಮತ್ತೆ ಮೆಲಿದು (ಬಸಕೃ. ೦೫–೨೩); ಮುತ್ತೊಡೆ ಮಿಡಿ ಪಣ್ಣಕ್ಕುಂ ವೃತ್ತಿನ ತಳಿರೇನುಣಲ್ಕೆ ಪಣ್ಣಾದಪುದೇ (ಜೀತಿಸಂ. I, ೩೯). ೩. ಕುಗ್ಗು; ಕ್ಷೀಣಿಸು; ಕುಂದು : ಚಂದ್ರಿಕೆ ಕಂಡು ನಾರ್ತುದೋ . . . ರತಿ ಮುತ್ತುದೊ ಪೊಟ್ಟನಾದುದೋ ಕಾವನ ಕೈದು (ಲೀಲಾಶ. ೨–೯೪); ಮುತ್ತುದು ನೇಸಜ ತೇಜಂ ಸುತ್ತುದು ದಾವಾಗ್ನಿ (ಕಮುದ. ೨೩೯ ಪ್ರಯೋ); ಕೈದು ಕಾಜಿರ ದಟಂ ತಂತಮಗೆ ದಟವುಟಿದಿಂ ಕುಶಲವರಿಸುಗೆಯಿಂ ಸತ್ತುಂ ಮುತ್ತುಂ ಕಟುದಮುಟುದುಂ ಪೋಪುದುಂ (ಜಾಜಾತ್ಕ. ೦೫೪–೦೭).

**ಮುತ್ತಂಚೆ** = ಮುದಿಯಾದ ಹಂಸಪಕ್ಷಿ : ಕಮಳಮಧುಪಾನದಿಂ ಸೊಕ್ಕಿದ ಮುತ್ತಂಚೆಯ ಧ್ವನಿಗಳಂತೆ ಜರ್ಝರಮಾದ ಪೊಂಗೆಜ್ಜೆಗಳ ಮೆಲ್ಲುಲಿಯೊಳಂ (ಕಾದಂಪೂ. ೬೬). **ಮುತ್ತಕಾಯ್** = ಬಲಿತ ಕಾಯಿ : ''ತಲರ್=ಮುತ್ತ ಕಾಯ್'' (ಕಮುದ. ಶಂ. ೦); ''ತಟಲೆಂದು ಮುತ್ತ ಕಾಯ್'' (ಕಶಶಾ. ೫೦–೭೯). **ಮುತ್ತಜಾಣ್ಮೆ** = ಪಕ್ವವಾದ ಜ್ಞಾನ,- ತಿಳಿವಳಿಕೆ : ಆಂ ಮುನ್ನಮಾಗಳ್ವಾಗಳ್ ಪಟಿದಸದ ಪಿರಿಯ ಮುತ್ತ ಜಾಣ್ಮೆಯ ಬಲ್ಲಿದರ ನೆರೆಯ ಮಟುಯ ನೆರಮುಂ ಜಾರುತುಮಿರ್ಪೋಡಾದಂ (ರಾಜಾತ್ಕ. ೦೦೪–೯). **ಮುತ್ತದಿನ** = ಮುದಿವಯಸ್ಸು; ಇಳಿಗಾಲ; ಮುಪ್ಪು : ತುರಂಗಮಂಗಳಿರ . . . ಇನ್ನೆಬರಂ ರಾಯನ ಹಯಶಾಲೆಯೊಳ್ ಬಳೆದುಂ ಜಾಟ್ಟುಮಿ ಮುತ್ತದಿನಂಗಳೊಳಿಂತೋದು ಯೋಗಂ ದೊರೆಕೊಂಡುದೆ ! (ರಾಜಾತ್ಕ. ೨೯–೩). **ಮುತ್ತನೇಸಱ್** = ಅಡಗುತ್ತಿರುವ ಸೂರ್ಯ; ಸಂಜೆಯ ಸೂರ್ಯ : ಬಗೆಯ ಕಾಪ್ಪು ಕಡೆವಗಲ ಮುತ್ತನೇಸಱ ಕಾಯ್ಪಿಂಗೆ ಪಾಸಟಿಯಾಗೆ . . . ರಕ್ತಸಂ ಸೋಲ್ತು ಸುಣ್ಣದೊಳಾದಂ (ರಾಜಾತ್ಕ. ೦೦೩–೨೬). **ಮುತ್ತನೋಳ್ತು** = ಮುತ್ತನೇಸಱ್ : ಏನನ್ನ

ನುಡಿಯಂ ಕಡೆಗಣ್ಣ ಮತ್ತಂ ಮತ್ತಂ ಮುತ್ತ ಘೋಟ್ಟ್ರನಂತೆ ಮೈವೆರ್ಚುವೈ? (ರಾಜಶ್ಯ. ೧-೧೨). **ಮುತ್ತಮುದಿ**=ಬಹಳ ವಯಸ್ಸಾದ ; ತುಂಬಾ ಮುದಿಯಾದ : ಮುತ್ತ ಮುದಿಯಾಗಿರ್ದ ಧೇನುವದೆಲ್ಲಿಯಿಲ್ಲಿ (ಕೃಷ್ಣಾ.ಕೋ. ೧೬೦). **ಮುತ್ತಮುದುಕಿ** = ಬಹಳ ವಯಸ್ಸಾದವಳು ; ಅತಿವೃದ್ಧೆ : ನಿಟ್ಟಿಸಿದರೆ ಮುತ್ತ ಮುದುಕಿಗಾದರು ಜುಮ್ಮುದಟ್ಟಿಸುತಿಹುದು ರೂಪವನ (ಭರತ. ೦-೩೦). **ಮುತ್ತಮುದುಗುಂಟಣಿ** = ಬಹಳ ವಯಸ್ಸಾದ ತಲೆಹಿಡಿಕಿ: ಮುತ್ತ ಮುದುಗುಂಟಣಿಯರ್ಕಳ ಕೃತ್ರಿಮಂಗಳಂ ಭಾವಕಚಕ್ರವರ್ತಿ ಕವಿಕೇಶವದೇವನ ಬಲ್ಲನುರ್ವಿಯೊಳ್ (ಸೂಕ್ತಿಸು. ೯-೪೮೦). **ಮುತ್ತಸಂಜೆ** = ಸಂಜೆಯ ಕೊನೆ : ಇಳಿಹೊತ್ತು : ಹೊತ್ತು ಎಷ್ಟಾದರೂ ಚಿತ್ರಜನಿಘನಿಂದು ಮುತ್ತ ಸಂಜೆಗೆ ಬಹನು (ಚಂದ್ರಸಾ. ೯-೦೯).

**ಮುದು₂** (ನಾ). ೧. ವಯಸ್ಸಾದ ವ್ಯಕ್ತಿ; ಮುದಿಯ : ಕುರೂಪು ಕುತ್ಸು ಮುದು ಗುಜುಗುಜುಕುಂ ಸೂರುಳಿಸತಂ ದುಷ್ಟುಂತಂ ದೂಱುವುದುಂ ಮುನ್ನುಪ್ಪುಂತಸುಡು ಭೂತುಂತಂ (ಮಲತಿ. ೦೦-೩). (ಗು). ೨. ವಯಸ್ಸಾದ; ಮುದಿಯಾದ: 'ಮುದುಗರಡಿ', 'ಮುದುಗಬ್ಬಿ' ಪರಾ. ೩. ಜೀರ್ಣವಾದ; ಹಳೆಯದಾದ : 'ಮುದುದೊವಲ್' ಪರಾ. ೪. ದೊಡ್ಡ; ಭಾರಿಯಾದ : ಮುದುಗರ₁ ' ದುಗಾಗೆ' ಪರಾ.

[ದೇ. ೫ ತಮಿ. ಮುತು, ಮೂತು; ಮಲ. ಮುತು; ತುಳು. ಮುದು; ಕೋತ. ಮುದ್]

**ಮುದುಕ** (ನಾ). ೧. ವಯಸ್ಸಾದವನು ; ವೃದ್ಧ : "ಪ್ರವಯಾ, ಸ್ಥವಿರಃ ... ಜರತ್–ಈ ೬ ಮುದುಕನ ಹೆಸರು" (ನಾಚಿರಾ. ೦೦೯); ಮುದುಕರಂತೆ ಲೋಳೆಸುರಿವ ಬಾಯುಂ ಕೀವುಗಿವಿಯವರಂತೆ ಕೀವುಸುರಿವ ಕಿವಿಯುಂ. . . ಅದ್ಭುತವಾಗೆ ಮೂಱುಂಲೋಕದ ಬೀಭತ್ಸಮನೆಲ್ಲಮನೊಂದು ಮಾಡಿ ವಿಧಾತ್ರಂ ರೂಪು ಮಾಡಿದಂ (ರಘುರಾಜ್ಯ. ೯-೭೩); ಗಡ್ಡದ ಮುದುಕರಲುಗುವ ತಲೆಯು ಕೈಕಾಲುಗಳ ಕಂಪನದ ಬೆಡಗುನಲಿ . . . ಕಂಗೆಟ್ಟು ಹಾಯ್ದರು (ಕೊರಟಾ. ೦-೦೦-೦೨); ಕಣವೆಯಲ್ಲಿ ಮುದುಕರೊಬ್ಬರು ಬರುತ್ತಿದ್ದರು (ಕಳಹು. ೦). (ಗು). ೨. ವಯಸ್ಸಾದ; ಮುದಿಯಾದ; ವೃದ್ಧಾಪ್ಯವನ್ನು ಹೊಂದಿದ : ಮುದುಕ ಜಂಗಮರು ಚಿಟ್ಟಿಗರೋಡಿದರು ಮುಂದೆ ಪಡೆದಾವು ಪಿಂದುಳಿದಪ್ಪೆ (ಸಿದ್ಧೇಶ. ೦೭-೦೯); ಕಡುಮುದುಕತಾಯ್ಗಂದೆಗಳ ಕಾವಡಿಯೊಳಿಟ್ಟಂ ಪೊತ್ತು ತಿರುಗುತಲಿ (ಅನಂತಾ. ೨-೩-೦೦); ಅಲ್ಲೊಬ್ಬ ಮುದುಕ ಬೇಸಾಯಗಾರನಿರುವನಂತೆ (ಜಾಹುತ್ತ. ೯೭).

[ ಮುದು₁ + – ಕ₃./ಮಲ. ಮುತುಕ್ಕ; ತುಳು. ಮುದುಕಿ; ಕೊಡ. ಮುದೀಕೇ; ತೆಲು. ಮುದುಕ ; ಕೋತ. ಮುದ್ಕ್; ಪರ್ಜಿ. ಗಡಬ. ಮುತ್ತುಕ್ ]

**ಮುದುಕತನ** (ನಾ). ಮುಪ್ಪು: ಮುದಿತನ; ವೃದ್ಧಾಪ್ಯ : "ವಾರ್ಧಕಂ ಅಂದರೆ ಮುದುಕತನಕ್ಕೂ ಪೆಸರಾಗುವುದು" (ಸಿದ್ಧಾಂತಿ. ೦೭೯); ಯಯಾತಿಗೆ ಮುದುಕತನ ಬಂತು (ಶೀತಿತಂ. I. ೦೮). [ ಮುದುಕ + – ತನ ]

**ಮುದುಕಿ** (ನಾ). ವಯಸ್ಸಾದವಳು ; ವೃದ್ಧೆ : "ವೃದ್ಧಾ, ಪಲಿಕ್ನೀ– ಈ ೨ ಮುದುಕಿ" (ನಾಚಿರಾ. ೦೦೭); ಮದನಜನಕ ನಿಚ್ಚ ಚೆಲುವನೆಂತೆಂಬೆನೆ ಮುದುಕಿ ಕುಬುಜೆಯನ್ನು [ಪಾಠಾಂ. ಮುದದಿಂದ ಕುಬ್ಜೆಯ] ಕೂಡುವನೆ (ಹರಿಂದ. ಭಾ. ೩-೯೩-೩): ನಾನು ಸುಮ್ಮನೆ ದಾರಿ ಹಿಡಿದು ಹೊರಟವರಂತೆ ಮುದುಕಿಗೆ ತೋರಿಸಿಕೊಂಡೆ (ಶ್ಯಾಮಲಾ. ೦೬೧).

[ ಮುದುಕ + – ಇ₂./ ಕೊಡ. ಮುದೀಕಿ ]

**ಮುದುಕು** 'ಮುದುಕು₁' ನೋ.

**ಮುದುಕೊತ್ತೂರ್** (ನಾ). ಒಂದು ಊರಿನ ಹೆಸರು : ಮುದುಕೊತ್ತೂರ ವಿಷಯೋ ಪೆಬ್ಬೊಟಲ್‌ಗ್ರಾಮೇ: (ಎಪಿ. X, ಮಾಲೂರು. ೬೩. ೦೮; ಸು. 370 ಕ್ರಿಶ).

[ ? + ಊರ್ ]

**ಮುದುಗಣ್**, ಮುದುಗಣ್ಣು (ನಾ). ೧. ವಯಸ್ಸಾದ ಕಣ್ಣು; ಎಳೆಯದಲ್ಲದ ಕಣ್ಣು; ಮುದಿಕಣ್ಣು. ೨. ಜೀರ್ಣವಾದ ಕಣ್ಣುಗಳುಳ್ಳವನು; ಮುದುಕ; ವೃದ್ಧ : ಎರಡು ಮನೆಗೆ ತಾನೆ ಮುದ[ದು]ಗಣ್ [ಪಾಠಾಂ. ಣು] ತನ್ನಿಂದಮುಗ್ಗಳಂ ಪೆಱರ್ವಿರ್ತರಿಲ್ಲದಬೆನೆಮ್ಮುನಟ್ಟಿದ ಮಾನಸರಂ ಮುಂದಿಟ್ಟು ರಾವಣನಂ ಕಾಣಿಸಿ ಕಾರ್ಯಸಿದ್ಧಿಯಂ ಮಾಡುಗೆ (ಚಾವುಂಪು. ೩೦೯). **ಮುದುಗಣ್ಣು** : ೧. ಅಗ್ರಫೇನಾಪೆತ್ರೋವ್ಮಳ ಮುದುಗಣ್ಣುಗಳಲ್ಲಿ ಹೊಳವು ಮಿಂಚಿ ಮಾಯವಾಯಿತು (ಕೃಸಮು. ೮೩೯).

**ಮುದುಗಣ್ಗಳ್, ಮುದುಗಂಗಳ್** (ಬಹುವ) : ಮುದುಗಣ್ಗಳಾಗಿ ನಿಮ್ಮಂತು ಪಱಿಯೆ ನುಡಿವರುಮೊಳರೇ (ಆದಿಪು. ೯-೦೦೩); ಮುದುಗಣ್ಗಳುಚಿತಮಂ ನುಡಿವುದು (ಶಾಂತಿಪು.೦೦-೧೨೦); ನೀಂ ವೀರಪರಿಗ್ರಹಪರೀತನಪ್ಪೆ ಯಾದಱಂ ಮುದುಗಂಗಳ ಮಾತಂ ಮಿಱಲಾಗದು (ಮುಹಾಪಿಸೇ. ೦೦-೦೦೦ ಪ).

[ಮುದು₂ + ಕಣ್ ]

**ಮುದುಗಣ್ಣು** 'ಮುದುಗಣ್' ನೋ.

**ಮುದುಗಣ್ತನ** (ನಾ). ಮುಪ್ಪು; ಮುದಿತನ; ವೃದ್ಧಾಪ್ಯ : ವಿನಯದಿನಾಮಿ ಭುವನೈಕನಾಥನಂ ಸಲ್ಗೆವೆರಸು ಬೇಡುತ್ತಿರೆ ಬಂದನುವಿಸುವ ನಿಮ್ಮ ಮುದುಗಣ್ತನದೊಳಿದೇನುಂತೆ, ಬಟ್ಟೆವೋಪೊಡೆ ಪೋಗಿಂ (ಆದಿಪು. ೯-೦೦೬); ಒರ್ಮೊದಲೆ ಮೊಱಗುವ ಪಲವುಂ ತೆಱದ ಪಱೆಗಳೆಸೆ ವೃದ್ಧಾಮರಭಸದಿಂದಂ ಮಾರ್ದನಿವಿಟ್ಟು ಮುದುಗಣ್ತನಮನುಂಟು ಮಾಡಿದಂತೆ ಶಾಂತೀಶ್ವರಂಗೆ (ಶಾಂತಿಪು. ೦೦-೩೦ ಪ); ಮುದುಗಣ್ತನಂ ಶಿಶುತೆಯೇರುಂಜವ್ವನಂ . . . ಇಂತಿವೆಲ್ಲಮರೊಳಂ ತುನಿರ್ಪಂ (ಸಂಸಿಕ. ೯೯-೩೦). [ ಮುದುಗಣ್ + — ತನ ]

**ಮುದುಗರ₁** (ನಾ). ೧. ದೊಡ್ಡ ಗ್ರಹ. ೨. ಶನಿಗ್ರಹ : ಮುಸಕಿಟ್ಟೊತ್ತಗೆ ಸ್ವಾರ್ದ ವೃದ್ಧನೊಳೊಡಂಬಟ್ಟೊತ್ತೆಯಂ ಕೊಂಬ ಶಾಯ್ಗೆ ಸರೋಜಾರುಣನೇತ್ರ. . . ಒರ್ವಳ್ ಮುದುನಾಯ ಮುತ್ತ ಮುದು ವೃದ್ಧಂಗೆನ್ನನಿಂತೋವದೊಪ್ಪಿಸಿ ಪೊಂಗಟ್ಟುವ ಚೇಲದೊಳ್ ಮುದುಗರಂ ತಂದಿಕ್ಕುವೈ ನಿಕ್ಕುವಂ (ಸೂಕ್ತಿಸು. ೮-೯೩೭); ಅವನಿಪನ ಮುಪ್ಪಿನಲಿ ಮುದುಗರವವಚಿತು (ಕೊರಟಾ. ೨-೩-೦೨).

[ ಮುದು₂ + ಗರ₂./ತಮಿ. ಮುತುಮಕನ್ ]

**ಮುದುಗರ₂** (ನಾ). ಗುದಿಗೆಯಂಥ ಒಂದು ಬಗೆಯ ಆಯುಧ : "ಮುದುಗರ – ಮುದ್ಗರ = ಮಾರುದ್ದದ ಗುದಿಗೆ" (ಕನ್ನಕೋ. ೩೬).

[ < ಸಂ. ಮುದ್ಗರ ]

**ಮುದುಗರಡಿ** (ನಾ). ಮುದಿಯಾದ ಕರಡಿ, –ಭಲ್ಲೂಕ : ಮುದುಗರಡಿಯು ಮುದುದೊವಲಂದದೆ ಕರಿಯಂ (ಜುಕೋಶ.೨-೯೦); ಅದು ಮುದುಗರಡಿಯಾಗಲಾಪುದಲಾ ಮಿಸುಕಲಾಱದೆ ಕುಳ್ಳಿರ್ದುದು (ಚಿತ್ರ. ೩೯-೬). [ ಮುದು₂ + ಕರಡಿ₁ ]

**ಮುದುಗಲ್**, ಮುದಿಗಲ್ಲು, ಮುದುಗಲ, ಮುದ್ಗಲ್ (ನಾ). ಒಂದು ಸ್ಥಳದ ಹೆಸರು : ಶ್ರೀಕಾಲಿಕ(ಕಾ)ದೇವೀಕಮಹೇಶ್ವರದೇವರ ದಿವ್ಯಶ್ರೀ ಪದ್ಮಪಾದಾರಾಧಕರಾದ ಮುದುಗಲ್ಲ (ಇಇ. X, ೬೨–೩ ; ಸು. ೬೫೮೫ ೫೫); ಅತಿಪ್ರಸಿದ್ಧನೆನೆ ಸಂದನನಿಂದ್ಯಗುಣಾನ್ವಿತಂ ಸದಾವರನೆನೆ ಸರ್ವಶಾಸ್ತ್ರ ಕುಶಲಂ ಮುದುಗಲ್ಲೊಳುದಾತ್ತಕೀರ್ತಿಯಿಂ (ಸೋಕೆಇಕ. ೦–೩ ೬೯೬೯). **ಮುದಿಗಲ್ಲು** : ಬಾದಾಮಿ ಮುದಿಗಲ್ಲು ಕೊಪಣದ ತೆಱಿನ ರಾಜ್ಯವೆಲ್ಲವನು ಇಱಿದು ಕೆಡಿಸುತ ಕುಮ್ಮಟದುರ್ಗದೊತ್ತಿನ ತೆಱಿಬನೊಳಗೆ ಬಿಟ್ಟು ನೊಸೆದು (ಕುಂಪಾಗಾಂ. ೦೯-೯೮). **ಮುದುಗಲ** : ಮಲ್ಲಿಸೆಟ್ಟಿನಾಮಾಮಾತ್ಯಃ (ತ್ರೊ) ಮುದುಗಲಗ್ರಾಮೋ ವಸ(ಸ)ನ್ (ಇಇ. VII, ೩೦೯–೨೩; 1249).

**ಮುದ್ಗಲ್** : ರಾಯಚೂರ ಜಿಲ್ಲೆಯ ವಿಖ್ಯಾತ ಪುರಾತನ ಕೋಟೆಯಾದ ಮುದ್ಗಲ್ ಸಮೀಪದ ಚಿಕಳಿಹಾಳ ಎಂಬಲ್ಲಿ ಬೇರೆಬೇರೆ ಕಾಲದ ಸ್ತರಗಳು ಹೊರಟಿವೆ (ಕರ್ನಾಟ. ೯೯). [ ಮುದು$_2$ + ಕಲ್$_3$ ]

**ಮುದುಗಲ** 'ಮುದುಗಲ್' ನೋ.

**ಮುದುಗಲ್ಲೆ** (ನಾ). ಮುದುಕಿ ; ವೃದ್ಧೆ : ಇಂತು ಮುದುಗಲ್ಲೆ ನಿಯೋಜಿಸಿದಳ್ ತನೂಜೆಯೊಳ್ (ಶಾಂತೀಶ್ವ. ೧೦-೭೮). [ ? ]

**ಮುದುಗಲ್ಲೆಗೂಂಟಣೆ** (ನಾ). = ಮುದಿಗುಂಟಣೆ : ಮುದುಗಲ್ಲೆ ಗೂಂಟಣೆ ಮಗಳ್ಗುಪದೇಶಮನಿಂತು ಮಾಡಿದಳ್ (ಶಾಂತೀಶ್ವ. ೧೦-೯೭) [ ಮುದುಗಲ್ಲೆ + ಕೊಂಟಣೆ (< ಕುಂಟಣಿ) ]

**ಮುದುಗಳ್ತಿ** ' ಮುದುಗಟ್ತಿ ' ನೋ.

**ಮುದುಗಟ್ತಿ**, ಮುದುಗಳ್ತಿ (ನಾ). ಮುದಿಯಾದ ಕತ್ತೆ; ಮುದಿಕತ್ತೆ: ಕುದುರೆಯನೋವದೆ ಸೀಳ್ದು ಮುದುಗಟ್ತಿಯನಿಟ್ಟು ಕೆಡಪಿದ್ದೆ ಬಲ್ಲಿದನೈ (ಜಗ. ೦೭-೯೪). **ಮುದುಗಳ್ತಿ** : ಮುದುಗಳ್ತಿಗಳೂ ಮೌನವಾಗಿರುವುದಿಲ್ಲ ! (ಮಂತ್ರಶ. ೦೦-೦೦). [ ಮುದು$_2$ + ಕಟ್ತಿ ]

**ಮುದುಗಾಗೆ** (ನಾ). ಒಂದು ಬಗೆಯ ದೊಡ್ಡ ಕಾಗೆ ; ಡೊಂಬಕಾಗೆ; "ದ್ರೋಣಕಾಕ" (ನಾಚಿರಾ. ೬). [ ಮುದು$_2$ + ಕಾಗೆ ]

**ಮುದುಗಿಸು** ' ಮುಡುಗಿಸು ' ನೋ.

**ಮುದುಗಿಳಿ** (ನಾ). ಮುದಿಯಾದ ಗಿಣಿ : ಬಳಿಗೆಯ್ವುತಿರ್ದ ಮಾಯ್ದುಬಿಗುಲಿ ಕರ್ವೇಡನಲ್ಲಿ ಮುದುಗಿಳಿಗಳುಮಂ (ಶಾಂತಿಪು. ೦೭೮). [ ಮುದು$_2$ + ಗಿಳಿ ]

**ಮುದುಗು$_1$** ' ಮುಡುಕು$_1$ ' ನೋ.

**ಮುದುಗು$_2$** ' ಮುಡುಕು$_2$ ' ನೋ.

**ಮುದುಗುಂಟಣೆ** (ನಾ) = ಮುದಿಗುಂಟಣೆ : ಒರ್ವಳ್ ಮುದುಗುಂಟಣೆ ಪೊಱಗೆ ನಿಂದು ದೆಸೆಯುಂ ನೋಡುವಾಕೆ ಲಲಿತಾಂಗನ ಬರದಂ ದೂರದೊಳೆ ಕಂಡು (ಧರ್ಮಾಮೃ. ೨-೫೪); ಗುಣಿ ರಾಗಮಂಜರಿಗೆ . . . ನೀತಿವಂತೆ ಮುದುಗುಂಟಣೆಯಪ್ಪಳ್ ಮಾತೆವೋಲ್ ಸೃಗಾಲಿಕೆಯೆಂಬಳ್ (ರಶಕು. ೬-೨೨೦). [ ಮುದು$_2$ + ಕುಂಟಣಿ ]

**ಮುದುಗುಂದೂರ್** (ನಾ). ಒಂದು ಸ್ಥಳದ ಹೆಸರು : ಮುದುಗುನ್ದೂರ್ವೋಪವಿಷ್ಟ ರಾಷ್ಟ್ರಕೂಟಚಾಳುಕ್ಯಹೈಹಯಪ್ರಮುಖಪ್ರವೀರಸನಾಥವಲ್ಲಭಸೈನ್ಯವಿಜಯ ವಿಖ್ಯಾಪಿತಪ್ರಭವಃ (ಎಕ V (R), ಕೃಷ್ಣರಾ. ೯೮-೬೮, ೬೦೯). ' ಕುಂದೂರು ' ಪಠಾ. [ ? + ಊರ್ ]

**ಮುದುಗುಂಪೆ** ' ಮುದುಗುಪ್ಪೆ ' ನೋ.

**ಮುದುಗುಡ್ಡೆ** (ನಾ). ದೊಡ್ಡ ದಿಬ್ಬ ; ಎತ್ತರವಾದ ತೆವರು : ಆ ಊರ ಹಡುವಲು ಮುದುಗುಡ್ಡೆ ಅಲ್ಲಿಂ ಬಡಗಲು ಹುಣಿಸೆ (ಎಕ. V, ಬೇಲೂರು. ೦೭-೯೯ ; 1136). [ಮುದು$_2$ + ಗುಡ್ಡೆ$_1$ ( < ಗುಡ್ಡ$_2$) ]

**ಮುದುಗುದುರೆ** (ನಾ). ವಯಸ್ಸಾದ ಕುದುರೆ: ಇವರಂ ನೀತಿವಿದರಪ್ಪಂತು ತಿಳಿಪುವಂದಂ ಮುದುಗುದುರೆಯಂ ತಿರ್ದುವಂತಕ್ಕುಂ (ಶುಕಸಂ. ೦೭-೦೦); ಮುದು [ಪಾಠಾಂ. ದಿ] ಗುದುರೆ ತಿರ್ದೆ ಬಡವಾದುದು (ಸವುಶ. ೦೩-೯೦). [ಮುದು$_2$ + ಕುದುರೆ]

**ಮುದುಗುಪ್ಪೆ**, ಮುದುಗುಂಪೆ (ನಾ). ಒಂದು ಸ್ಥಳದ ಹೆಸರು : ಮುದುಗುಪ್ಪೆಯ ಮಾರಸಿಜ್ಗಗಾವುಣ್ಡರುಂ ಎಱೆಗಜ್ಗಗಾವುಣ್ಡರುಂ... ಎನೆಬ್ಬರುಂ ನರಸಾಕ್ಷಿಯಾಗೆ ಪಡೆದಾವ್ (ಎಕ. VI(R), ಶ್ರೀರಂಗ. ೬೭-೦೮; ಸು. 800). **ಮುದುಗುಂಪೆ** : ಮುದುಗುಂಪೆಯ ಇನ್ದರಗಾವುಣ್ಡರು ಶ್ರೀದಾಮಗವುಣ್ಡರುಂ . . . ವಾರದರುಂ ಎನೆವ್ವರುಂ ನರಸಾಕ್ಷಿ (ಎಕ. V (R), ಕೃಷ್ಣರಾ. ೦೦೩-೭೦; ಸು. 890). [ಮುದು$_2$ + ಕುಪ್ಪೆ$_1$]

**ಮುದುಗುರುಡ** (ನಾ). ವಯಸ್ಸಾದ ಕುರುಡ : ಈ ಮುದುಗುರುಡನಿಕ್ಕಿದ ನಂಬುಗೆಯ ವಿಷವ್ಯಸಲೇ ತಲೆಗೇಱಿತಗ್ರಜನ (ಶುಭಾಕ. ೦೩-೭೫). [ಮುದು$_2$ + ಕುರುಡ]

**ಮುದುಗೂಗೆ** (ನಾ). ೧. = ಮುದಿಗೂಬೆ ೧: ಶಿವಶಿವಾ ಮುದು [ಪಾಠಾಂ. ದಿ] ಗೂಗೆ ಮೆಚ್ಚದು ರವಿಯನು (ಶುಭಾಕ. ೦೦-೫೫). ೨. = ಮುದಿಗೂಬೆ ೨ : ಮುದುಗೂಗೆಯ ಬಾರಿಗೆ ಕೈನೆ ತಾನೆ ಮೈಗರೆದೆನಗೊತ್ತಗೊಟ್ಟ ಸುಖ ಮಾಟ್ಕೆವೆಪಟ್ಟದನಕ್ಕ ಬಲ್ಲಪೆಂ ? (ಸೂಕ್ತಿಸು. ೬-೯೨೨). [ಮುದು$_2$ + ಗೂಗೆ]

**ಮುದುಗೆಱೆ** (ನಾ). ಒಂದು ಸ್ಥಳದ ಹೆಸರು : ಮುದುಗೆಱೆಯ ಪೂರ್ವ್ವಶೃಂಘ(ಗ)ದ ಪುಲ್ಲತ್ತಿಎ(ಯೆ) (ಇಅ. VIII. ೨೦೪-೩೭; 10ನೆಯ ಶತ). [ಮುದು$_2$ + ಕೆಱೆ]

**ಮುದುಗೊಂಥಬೋಯ** (ನಾ). ಒಬ್ಬಾತನ ಹೆಸರು : ಮುದುಗೊನ್ಥ ಬೋಯಸ್ಯ ಭಾರದ್ವಾಜಗೋತ್ರ ದುಗ್ಗಶರ್ಮ್ಮಣ (ಇಅ. VII, ೦೮೮-೩೯: 668). [ ? + ಬೋಯ]

**ಮುದುಡಿಸು** ' ಮುದುರಿಸು ' ನೋ.

**ಮುದುಡು$_1$** ' ಮುದಿರ್ ' ನೋ.

**ಮುದುಡು$_2$** (ನಾ). ೧. ಬಾಗು ; ಕೊಂಕು : " ಕುಂಚಾ= ಚೋಕು, ಮುದುಡು" (ನಾಕಕ. ೦೦). ೨. ಸಂಕೋಚ ; ಕುಗ್ಗುವಿಕೆ: ' ಮುದುಡುಗೊಳ್ ' ಪಠಾ. [ < ಮುದುಡು$_1$. / ತೆಲು. ಮುಡುತ = ಸುಕ್ಕು]

**ಮುದುಡುಗಿವಿ** (ನಾ). ಹೊರಭಾಗದಲ್ಲಿ ತಿರುಚಿಕೊಂಡಿರುವ ಕಿವಿ : ಮುದುಡು [ಪಾಠಾಂ. ರುಟು]ಗಿವಿಗಳ ಹಱಿಕುಗಡ್ಡದ ಕೆದಱು ಮೀಸೆಯ . . . ಕಿಱುಕುಳರು ಬಂದರು ನೆರೆದು ಕಾಗೆಯ ಹಳವಿಗೆಯೊಳು (ಐಸಪು. ೫೬-೯೯). [ಮುದುಡು$_1$ ( < ಮುದಿರ್) + ಕಿವಿ$_3$]

**ಮುದುಡುಗೊಳ್** (ಕ್ರಿ). ೧. ಮುರುಟಿಕೊಳ್ಳು ; ಸುರುಟಿಹೋಗು : ಪಲವು ನೆನಹನೆಲ್ಲ ಮಱೆತು ಬೆಂದ ನಾಲಗೆ ಮುದುಡುಗೊಂಡ ಬಗೆಯ ನಾನೆಂತು ಪೇಱುವೆನಮ್ಮ (ಗೀತಗೋ. ೩೦-೯). **೨. ಅಡಗಿಕೊಂಡಿರು** ; ಮುದುರಿಕೊಂಡಿರು : ಬೆಚ್ಚನಾದೆದೆಯಿಂದೆ ಕಾತರಿಸಿ ಮುದುಡುಗೊಂಬೆಚ್ಚಱಿಂದೇಳ್ವ ರೋಮಾಂಚನದೊಳಾಸೆ ಮುಂಬೆಚ್ಚೆ ಬೆಮರ್ವ ಎಲೆಬ ಬೇಸಱದೆ ನಿಂದು ನಿಟ್ಟಿಸುತಿರ್ದಳು (ಕೃಷ್ಣಚಂ. ೩೦-೨೨); ಆ ದುಗುಡದಿಂದೊಂದೆಡೆಯೊಳ್ ಮುದುಡುಗೊಂಡು ಮುಸುಂಕಿ ಪಟ್ಟಿರಲ್ (ಜಿಲ. ೬-೦೯೩೮). [ಮುದುಡು$_2$ + ಕೊಳ್$_1$]

**ಮುದುಡೆ** (ನಾ). ೧. ಸುಕ್ಕು ; ನೆರಿಗೆ : ಇಸ್ತ್ರಿ ಮಾಡಿ ಹಾಕಿಕೊಂಡಿದ್ದ ಬಟ್ಟೆಗಳು ದೊಂಬಿಯಲ್ಲಿ ಮುದುಡೆಯಾಗಿ ಹೋಯಿತು (ಜನ). ೨. ಮುದುರಿಕೊಂಡಿರುವುದು ; ಮುದ್ದೆ : ಅಲ್ಲಿ ತನು ಬಲಿಯದಿರೆ ಮುದುಡೆಯಾಗುತೆ ಬಂದು ಜೀವಂ ಬಲಿಯದಿರಲ್ಬುಸುಱಿಳಿವುತಂ ಬಂದು (ಬಿಂತೋಟ. ಹ. ೫೦೦-೦೦) ; ಪಡಸಾಲೆಯಲ್ಲಿ ಮುದುಡೆಯಾಗಿ ಕುಳಿತ ತಂದೆಯನ್ನು ನೋಡಿ ಜಾನಕಿ ಗಾಬರಿಯೇ ಆದಳು (ಮುಕ್ತಿ ರ. ೦೨); ಭಾಗೀರಥಿ ಕುಳಿತಲ್ಲಿಯೇ ಒರಗಿದಳು. ಮುದುಡೆಯಾದಳು (ನಾಲ. ೦೯). [ < ಮುದುಡು$_2$]

**ಮುದುತಪಸಿ** (ನಾ). ಮುದುಕನಾದ ತಪಸ್ವಿ ; ವೃದ್ಧನಾದ ಋಷಿ : ನೀನೀ ಜಿನಮುನೀಂದ್ರರಿಗೆಲ್ಲಕೆಗ್ಗಂ ಮುನಿದು ಮಾಡಿದೆ. ಮುದುತಪಸಿಗಳ ಮಂತ್ರಯಂತ್ರಾಳಿ (ಐಸಪು. ೫೨-೨೦). [ಮುದು$_2$ + ತಪಸಿ (.< ತವಸಿ)]

**ಮುದುದೊವಲ್** (ನಾ). ಹಳತಾದ ತೊಗಲು.; ಜೀರ್ಣವಾದ ಚರ್ಮ : ಮುದುಗರಡಿಯ ಮುದು [ಪಾಠಾಂ. ಱು]ದೊವಲಂದದೆ ಕರಿಯಂ (ಯಶೋಚ. ೨-೪೦). [ಮುದು$_2$ + ತೊವಲ್$_3$ ( < ತೋಲ್$_1$)]

**ಮುದುನಾಯ್** (ನಾ). ೧. ಮುದಿಯಾದ ನಾಯಿ. ೨. ಒಂದು ಬಯ್ಗುಳು : ಮುದುನಾಯ ಮುತ್ತ ಮುದುವೃದ್ಧಂಗೆನ್ನನಿಂತೋವ

ದೊಪ್ಪಸಿ ಪೊಂಗಟ್ಟುವ ಚೀಲದೊಳ್ ಮುದುಗರಂ ತಂದಿಕ್ಕುವೆಂ ನಿಕ್ಕುವಂ (ಸೂಕ್ತಿಸು. ೯-೪೩೭). [ಮುದು$_2$ + ನಾಯ್]

**ಮುದುನೆಲ್ಲಿ** (ನಾ). ಒಂದು ಸ್ಥಳದ ಹೆಸರು : ಅನ್ತೆ ಬನ್ದು ನೆಲ್ಲಿಪಳ್ಳದಾ ಪೇರೊಟ್ಟಿಯೊಳಗಿರ್ಪ ಮುದುನೆಲ್ಲಿಯ ಅನ್ತೆ ಮೂಡನೋಡಿ ಪರಿದ ಪೇರೊಟ್ಟಿ (ಎಕ. IX (s), ಬೆಂಗಳೂ. ೦೫೦-೪೭; 828). [ಮುದು$_1$+ನೆಲ್ಲಿ]

**ಮುದುಪ** (ನಾ). ೧. ಮುದುಕ ; ವೃದ್ಧ : '' ಕಿಟವನೆನೆ ಮುದುಪಂ '' (ಸಂಶೀಪ. ೪೩೦-೪); ಒಡಿದ ಬಿಲ್ಲೆ ದಂಟೆಂಗೆಳ್ ಮುದುಪಂಗೆ ಪಗೆವರ ನಿಟ್ಟೆಲ್ವಂ ಮುಱಿವೊಡನಗೆ ಪಟ್ಟಂಗಟ್ಟಾ (ಶಂಶಶಾ. ೦೦-೦೭); ಆ ಮುದುಪಂ ಗಡ ಕೊಟ್ಟನೊತ್ತೆಯಂ ಗರಗರನಾಯ್ತು ಬಲ್ಮೆ (ಸೂಕ್ತಿಸು. ೯-೪೨೨); ಮುದುಪಂ ಮುದವನಾಂತು ತಾನೆಡೆಮಾಡಿದ ಮನೆಗುಣಲ್ಪೋಗೆನಲ್ (ಕೃಷ್ಣಸ್ರ. ೩-೬೨ ಪ). (ಗು). ೨. ಮುದಿಯಾದ ; ವಯಸ್ಸಾದ : ಮುದುಪ ಬೊಜಂಗನಂ ಕಂಡ ಬೆಲೆವೆಣ್ಣಿನಂತೊಳಸಾರುತ್ತುಂ (ರಶೂಣಮ್ಮ. ೪-೭೭); ಪರಿಕಿಸೆ ಕಡುಮುದುಪ ತಂದೆಗೋರ್ವನೆ ಕಂದಂ (ಶಕಶ. ೬-೭೦). [ಮುದುಪು + —ಅ$_7$]

**ಮುದುಪತನ** (ನಾ). ಮುದಿತನ ; ವೃದ್ಧಾಪ್ಯ ; ವಾರ್ಧಕ್ಯ : ' ಮುದುಪತನಂಬೆಱು ' ಪರಾ. [ ಮುದುಪ + — ತನ]

**ಮುದುಪತನಂಬೆಱು** (ಕ್ರಿ). ವೃದ್ಧಾಪ್ಯವನ್ನು ಹೊಂದು; ವಯಸ್ಸಾಗು : ಮುದುಪತನಂಬೆತ್ತು ದೇವರಾಜನರಪತಿಗಾದರ್ ನಾಲ್ಗುವರರ್ (ಶಕಶ. ೩-೪). [ಮುದುಪತನ + ಪೆಱು$_1$]

**ಮುದುಪಾರ್ವ** (ನಾ). ಮುದುಕನಾದ ಬ್ರಾಹ್ಮಣ ; ವೃದ್ಧಬ್ರಾಹ್ಮಣ: ಕಂಡು ನಿಜತನಯನಳಪೆರ್ದೆಗೊಂಡಿರೆ ಮುದುಪಾರ್ವನಾಗಿ ಮೆಲ್ಲನೆ ಸಾರ್ವಾಖಂಡಳನಂ ಕಾಣಲೊಡಂ ಗಾಂಡಿವಿಗಿರದರ್ಚೆ ಪಾಯ್ದುವಶ್ರುಜಲಂಗಳ್ (ಹಂಶಶಾ. ೯-೨). [ಮುದು$_2$ + ಪಾರ್ವ]

**ಮುದುಪಾಱ್** (ನಾ). ವಯಸ್ಸಾದ ವೇಶ್ಯೆ ; ಮುದಿಸೂಳೆ : ನೆಱೆ ಜನಜಾಲದ ನಡುವೆ ನೃಪನನೀಕ್ಷಿಸುವುದು ಬಾಲಕಿಯಂದಮಿದಲ್ಲೆನುತುಂ ಮುದುಪಾಱೆವಲುಂಬಿವಳು (ಜಯುಕಾ. ೧೦-೫೯). [ಮುದು$_2$ + ಪಾಱ್]

**ಮುದುಪಾಱು** (ನಾ). = ಮುದುಪಾಱ್ : ಕೊಳೆತ ಹಾಡ ಬಗುಳುತ ಗಂಡುವೆಸರು ಸುಳಿಯಲ್ಕೆ ಬಾರೆನ್ನಾಣೆಯೆಂಬ ಮುದುಪಾಱಿರ್ದಳೊಂದೆಸೆಯೊಳು (ಹಶಕಾ. ೪-೨೭); ಕೂರ್ತ ಮನಃಪ್ರಿಯನಂ ಬಿಡೆಂದು ನೀನೆಲೆ ಮುದುಪಾಱು [ಶಾಕಾಂ. ದಿ ಪಾಱ್]ದೊಳ್ತೆ ನುಡಿಯಲ್ಬಗೆದಂದುದನೆಂತು ಸೈರಿಪೆಂ (ರಾಜಶೇ. ೧೦-೦೭೨). [ಮುದು$_2$ + ಪಾಱು$_3$]

**ಮುದುಪು** (ನಾ). ಮುಪ್ಪು ; ವೃದ್ಧಾಪ್ಯ : ಕಡುಮುದುಪಾದ ಕಾಲದೊಳು ತನ್ನನುಗರಿಗಡಕಮೆನಿಪ್ಪುದುಪಲೆಯುದ (ಹರಿ. ೯-೪೭); ಪುರುಷನೇ ಮುದುಪಿನೊಂದು ಪರಿಜಿಂ ಮೆಂಯ್ಗೊಂಡು ನಡೆತಂದನೋ (ರಾಮಾಶ್ವ. ೪೦-೦೪). [ ಮುದು$_2$ + —ಪು$_2$]

**ಮುದುಬಂಟಬೋಯ** (ನಾ). ಒಬ್ಬಾತನ ಹೆಸರು (?) : ಮುದುಬಂಟಬೋಯಸ್ಯ ಕೌಣ್ಡಿಲ್ಯಗೋತ್ರ (ಇಇ. VIII, ೦೬೭-೨೫; 688). [ ? + ಬೋಯ ]

**ಮುದುಮಂಕಡ** (ನಾ). ಮುದಿಕೋತಿ : ಕಾಡ ಮುದುಮಂಕಡನೊಂದು ಕೈಚಳಕವಂ ಪರಿಕಿಪುದೆಂದು ತನ್ನಡಿಯಿನೆರ್ದೆಯನೊದೆದು (ರಾಮಾಶ್ವ. ೯೯-೭). [ ಮುದು$_2$ + ಮಂಕಡ (< ಮಕ್ಕಡ) ]

**ಮುದುಮೊಗ** (ನಾ). ವೃದ್ಧಾಪ್ಯದಿಂದ ಸುಕ್ಕುಗಟ್ಟಿರುವ ಮುಖ ; ಮುದಿಮುಖ : ಮುಕ್ಕುಱುಕಲ್ ಮುದ[ದು]ಮೊಗ ನೀಡುಂ ದೋಳಿಕ್ಕಲವಂ ಪೊದಮುಯ್ಯೊಳಿಸಿವ ಪಲರಕ್ಕಸಿಯರ ತಂಡಂ ನಡೆತಂದುದು (ಜಯುಕಾ. ೭-೨೭). [ಮುದು$_2$ + ಮೊಗ]

**ಮುದುರಿಸು, ಮುದುಡಿಸು** (ಕ್ರಿ). ಸುರುಟಿಕೊಳ್ಳುವಂತೆ ಮಾಡು ; ಮುರುಟಿಸು : ಹೂವನ್ನು ಬಿಗಿಯಾಗಿ ಹಿಡಿದು ಮುದುರಿಸಬೇಡ (ರೂಢಿ). **ಮುದುಡಿಸು** : ಮುದುಡಿಸುತುಂ ಕೈರವಮಂ . . . ಉದಯಾಚಳ ಚೂಡದಲ್ಲಿ ಮೂಡಿದನರ್ಕಂ (೧೧೪. ೫-೯) ; ವಿದ್ಯಾರ್ಥಿಗಳಲ್ಲಿ ಸುಪ್ತವಾದ ಶಕ್ತಿಯನ್ನು ಅರಳಿಸುವದೇ ಶಿಕ್ಷಕನ ಕರ್ತವ್ಯವಾಗಿರುವಾಗ ನಾನು ಆ ಶಕ್ತಿಯನ್ನು ಹೇಗೆ ಮುದುಡಿಸಲಿ ? (ರಂಗರೂ. ೨೦೦). [ಮುದುರು (< ಮುದಿರ್) + — ಇಸು$_3$]

**ಮುದುರು** ' ಮುದಿರ್ ' ನೋ.

**ಮುದುವಕ್ಕ** (ನಾ). ಒಂದು ಸ್ಥಳದ ಹೆಸರು : ಮಣಲಿವಾಕ್ಕಿಯಸ್ಯ ಮುದುವಕ್ಕಗ್ರಾಮಸ್ಯ ಉಭಯತಟಯೋರ್ (ಪ್ರಅಂ. ೦೪೦೬, ೦೦ ; 700). [ ? ]

**ಮುದುವನ್ನಿಕೊಱಲು** (ನಾ). ಒಂದು ಸ್ಥಳದ ಹೆಸರು : ಮೂಡಣ ಕೊರ್ನೆಡ್ದು ಮುದುವನ್ನಿಕೊಱಲು ಪೂಡನ ಸೀಮೆ ಕಳ್ಳಿವೆಟ್ಟಿನ ಮೂಡಣ ಪೊರೆಯ ಮೂಱು ಬೆಟ್ಟು ಒಳಗು (ಪ್ರಅಂ. ೦೪೨೭, ೨೨೨-೬೨; 808). [ ? ]

**ಮುದುವರ್ದು, ಮುದುಹದ್ದು** (ನಾ). ೧. ಮುದಿಯಾದ ಹದ್ದು : ದುಶ್ಶಾಸನನಂ ಕಂಡಾತನಂ ಮುತ್ತಿ ಸುತ್ತಿಱಿದ ಮುದುವರ್ದುಗಳುಮನಗಲೆ ಮೆಟ್ಟಿ ಪೋಟ್ದು (ಶಂಶಶಾ. ೦೩-೫೭ ಪ). **ಮುದುಹದ್ದು** : ೨. (ವ್ಯಂಗ್ಯಾರ್ಥದಲ್ಲಿ) ಮುದುಕ ; ಮುದಿಯ : ಮಿಂಚುದಲೆ ಒಣಕರುಂ ನಿಡುಗಯ್ಯ ದಡಿಗರುಂ . . . ಅಂಡೆದಲೆಯುತ್ಸುಕರು ಸವೆದ ಮುದುಹದ್ದುಗಳು . . . ಸುತ್ತ ಮುತ್ತಿರಲು (ವಾಗೀಶ. ದೇ. ೨೫೪-೨೪). [ಮುದು$_2$ + ಪರ್ದು]

**ಮುದುವುಣುಸೆ** (ನಾ). ಒಂದು ಸ್ಥಳದ ಹೆಸರು : ಆನೆಗಲ್ಲೆ ಕಮ್ಮಾರ್ ಕೊಟ್ಟಲೆಯ ಮುದುವುಣುಸೆ ಮಾಳ್ದಿಯುಳ್ ಕೂಡಿತ್ತು ಸೀಮೆ (ಎಕ. XVI, ಗುಬ್ಬಿ. ೭೫-೫೩ ; 733). [ ಮುದು$_1$ + ಪುಣುಸೆ (< ಪುಳಿಸ) ]

**ಮುದುವೇಡ** (ನಾ). ಮುದುಕನಾದ ಬೇಟೆಗಾರ : ಕೆಱಗೆಲ್ಲಂ ಪರೆದು ಬಿರ್ದ ಶುಕಸಂತತಿಯಂ ಗಱಗಱಿಸಿ ಕಟ್ಟಿ ನಡುಬೆನ್ನಿಱಿವಿನೆಗಂ ಪೊತ್ತು ಪೋದನಾ ಮುದುಮೇ [ಶಾಕಾಂ. ಬೇ]ಡಂ (ಕಾದಂಪೂ. ೦೭). [ಮುದು$_2$ + ಬೇಡ$_1$]

**ಮುದುವೊಳಲ್** ' ಮುದುವೊಟಿಲ್ ' ನೋ.

**ಮುದುವೊಱಸು** (ನಾ). ೧. ಮುದಿಯಾದ ಹೊರಸುಪಕ್ಷಿ. ೨. (ವ್ಯಂಗ್ಯಾರ್ಥದಲ್ಲಿ) ಮುದಿಯ ; ಮುದುಕ : ಸೀಂತುಂ ಮೊರೆದುಂ ನಿದ್ರೆಯನೆ ಕೆಡಿಪ ಮುದುವೊಱಸಂ ಮತ್ತರಡಿಲ್ಲದೊಲ್ಲೆಂ (ರಶೂಣಮ್ಮ. ೨-೪೫). [ಮುದು$_2$ + ಪೊಱಸು]

**ಮುದುವೊಟಲ್, ಮುದುವೊಳಲ್** (ನಾ). ಒಂದು ಊರಿನ ಹೆಸರು ; ⓟ ಈಗಿನ ಬಿಜಾಪುರಜಿಲ್ಲೆಯ ಮುಧೋಳ : ನೆಗಟ್ದ ಮುದುವೊಟಲೊಳೆ ಪುಟ್ಟಿ ಸುಪುತ್ರನೆನಿಸಿದಂ ಕವಿರತ್ನಂ (ಅಜಿತ, ೦೨-೪೭). **ಮುದುವೊಳಲ್** : ಮುದುವೊಳಲ ದಾರಿಯಿಂ ಬಡಗ . . . ಬಿಟ್ಟ ಮತ್ತರು (ಸೌಇಇ. XI-ii, ೦೧೪-೪೪; 948). [ಮುದು$_1$ + ಪೊಟಲ್]

**ಮುದುಹದ್ದು** ' ಮುದುವರ್ದು ' ನೋ.

**ಮುದೋಡಿ** (ನಾ). ಮುಪ್ಪಿನಿಂದ ಕೂಡಿರುವ ವ್ಯಕ್ತಿ ; ಇಳಿವಯಸ್ಸಿನ ವ್ಯಕ್ತಿ : ಮುದೋಡಿಯಾದ ನಿಮ್ಮ ಅತ್ತೆಯು ಏನಾದರೂ ವಿಘ್ನವನ್ನು ತಂದಿಡಬಹುದು (ಶಶಶೀ. ೦೦೪). [ ? ]

**ಮುದ್ಗ** (ನಾ). ೧. ಒಂದು ಬಗೆಯ ದ್ವಿದಳಧಾನ್ಯವನ್ನು ಬಿಡುವ ಸಸ್ಯ ಮತ್ತು ಅದರ ಕಾಳು ; ಹೆಸರುಕಾಳು : "ಮುದ್ಗಮೆನಲ್ಕೆ ಹೆಸಱು" (ಮಂಗರಾ. ೮೦೦-೫) ; ಕುಲತ್ಥಮುದ್ಗಮಾಷರಾಜಮಾಷ . . . ಜೀರಕಧಾನ್ಯಕಾದಿ ವಿವಿಧಧಾನ್ಯಭೇದಂಗಳುಂ (ಆದಿಪು. ೬-೭೨ ಪ) ; ಇಂಗುಳಿಕ ದಣ್ಕೆಯಿಂ ನಯುಸಂಗಳ್ ಕಾಡಿಗೆಯ ತೊಡಪದಿಂ ರಂಜಿಸೆ ಸರ್ವಾಂಗಂ

ಮುದ್ಗಲ್ಯಾಮತರಂಗಿತತುಷ್ಟಂ ಸಪುಷ್ಪನೀ ಪರಪುಷ್ಪಂ (ಮಲ್ಲಿಪು. ೫-೩೭). ೨. ಮುಚ್ಚಳ ; ಹೊದಿಕೆ ; ಆಚ್ಛಾದನೆ. [ಸಂ.]

**ಮುದ್ಗಚೂರ್ಣ** (ನಾ). ಹೆಸರುಕಾಳಿನ ಹಿಟ್ಟು ; ಹೆಸರುಹಿಟ್ಟು : ಚರಣಯುಗ್ಮಂಗಳಿಗೆ ನಯಮುದ್ಗಚೂರ್ಣದಿಂದಿರದೆ ಪಾದೋದ್ವರ್ತನಂ ಮಾಡಿಯುಷ್ಣಾಂಬುವೆಱೆದು (ಲಶಿವಂ. ೪೪-೩). [ಸಂ.]

**ಮುದ್ಗಚ್ಛವಿ** (ನಾ). ಹೆಸರುಕಾಳಿನ ಬಣ್ಣ ; ಹಸುರು : ಅಂತು ಗೋಮೂತ್ರಚ್ಛವಿಯುಂ ಮುದ್ಗಚ್ಛವಿಯುಂ ಕಪೋತಚ್ಛಾಯೆಯುಮಪ್ಪ ಘನೋದಧಿಯುಂ (ಅದಪು. ೧೧-೪ ವ). [ಸಂ.]

**ಮುದ್ಗಪರ್ಣಿ** (ನಾ). ಒಂದು ಬಗೆಯ ಹೆಸರುಕಾಳಿನ ಗಿಡ : "ಮುದ್ಗಪರ್ಣೀ. ಕಾಡುಮುದ್ಗಾ. ಸಹ್ಯಾ— ೩ ಕಾಡುಹೆಸರುಕಾಳಿನ ಗಿಡ. ಅಡವೀ ಹೆಸರುಗಿಡದ ಹೆಸರು" (ಸಿದ್ಧಾಂತಿ. ೧೩೭). [ಸಂ. ಮುದ್ಗಪರ್ಣೀ]

**ಮುದ್ಗರ** (ನಾ). ೧. ಒಂದು ಬಗೆಯ ಆಯುಧ : "ಮುದ್ಗರಃ. ದ್ರುಘಣಃ—ಈ ೨ ಡಂಗೆ" (ಕಅಯು. ೭೬-೩೨೦) ; ಮುಸುಂಡಿ ಭಿಂಡಿವಾಳ ಮುದ್ಗರ ಗದಾದಿ ವಿವಿಧಾಯುಧಂಗಳೊಳಮತಿಪ್ರವೀಣ[ನು]ಂ . . . ಆಗಿ (ಶಂಪುಶ. ೨-೨೪ ವ) ; ಅಪ್ರಮೇಯಬಲನುದ್ಗತಮುದ್ಗರಹಸ್ತನೇಱೆ ರತ್ನ ಪ್ರಭಮಂ ವಿಮಾನಮನಗುರ್ವಿಸಿದಂ ನಭದೊಳ್ ಬಿಭೀಷಣಂ (ಕಂರಾವು. ೧೩-೩೦) ; ಸುರಗಿ ಚಕ್ರಂ ಮುದ್ಗರಂಗಳಾ ಸಬುದದಿಂದೊಗೆದ ಕಿಡಿ ಗಜಗಲಿಸೆ (ಹಕಶಾ. ೫-೧೩). ೨. ಸುತ್ತಿಗೆ : ಲೋಹಸಂಸರ್ಗದೊಳಗ್ನಿದೇವನು ಘನಮುದ್ಗರಹತಿವಡೆದಪನು (ಇಂಚಾಕ. ೨೦೯-೩೨). ೩. ಮೊಗ್ಗು ; ಮುಗುಳು. ೪. ಒಂದು ಬಗೆಯ ಮೀನು. ೫. ಒಂದು ಬಗೆಯ ಮಲ್ಲಿಗೆ. [ಸಂ.]

**ಮುದ್ಗಲ್** 'ಮುದುಗಲ್' ನೋ.

**ಮುದ್ಗಲ** (ನಾ). ೧. ಉಪನಿಷತ್ತುಗಳಲ್ಲಿ ಒಂದು : ಶ್ರೀರುದ್ರ ಬೃಹದಾರಣ್ಯಕ . . . ಮುದ್ಗಲ ಮುಂಡಕವೆಂಬಿವು ಮೊದಲಾದವೇ ಉಪನಿಷತ್ತುಗಳು (ವಿವೇಕ. ೫). ೨. ಒಬ್ಬ ಋಷಿಯ ಹೆಸರು : ಚ್ಯವನ ಮುದ್ಗಲ . . . ಮೃಕಂಡುಸುತಾದಿ ಭೂಮಿಪ್ರವರಮುನಿಗಳು ಬಂದು ಕಂಡರು ಧರ್ಮನಂದನನ (ಕುವ್ಯಾಗ. ೦೩-೨). [ಸಂ.]

**ಮುದ್ಗಾನ್ನ** (ನಾ). ಹೆಸರುಬೇಳೆ ಮತ್ತು ಅಕ್ಕಿಯನ್ನು ಒಟ್ಟಿಗೆ ಬೇಯಿಸಿ ಮಾಡುವ ಒಂದು ಬಗೆಯ ಖಾದ್ಯ ; ಹುಗ್ಗಿ ; ಕಿಚ್ಚಡಿ : ಹರಿದ್ರಾನ್ನ ಪರಮಾನ್ನ ಮುದ್ಗಾನ್ನ . . . ಗುಡಾನ್ನವೆಂಬ ಷಡ್ವಿಧಅನ್ನಾದಿ ನೈವೇದ್ಯಂಗಳಂ . . . ಸಂಪಾದಿಸಿ (ವಿವೇಕ. ೯೫) ; ಪರಮಾನ್ನವೆಂದು . . . ವಿಮಲಮುದ್ಗಾನ್ನಮಿವು ಷಡ್ವಿಧಾನ್ನನೈವೇದ್ಯ ಶಿವಗೆ (ಗುರುಶಾ. ೭-೫೫). [ಸಂ.]

**ಮುದ್ದ$_1$** (ನಾ). ೧. ಮುದ್ದಾಗಿರುವವನು ; ಚೆಲುವ ; ಸುಂದರ : ಕಂದ ಮುದ್ದನ ಅಚ್ಚ ನಿಡುಹಣೆಗೆ ತಾಯ್ತರಳೆ ಚಂದದಿಂ ಬೊಟ್ಟಿಟ್ಟ ಕತ್ತುರಿಗೆ ಜೋ (ಕಪು. ೪-೦). ೨. ಇಷ್ಟನಾದವನು ; ಆಪ್ತ : ಕವಿಗಳ ಮುದ್ದನಾಶ್ರಿತರ ಮುದ್ದನನಾಥರ ಮುದ್ದನ (ಎಕ. VIII (S). ಸೊರಬ. ೫೬೭-೯೫ ; 1201). ೩. ಒಬ್ಬಾತನ ಹೆಸರು : ಈ ಕಲ್ಲ ಸಂದಿಗರ ಕುಳಿ × × × ಮುದ್ದನ್ನಿಱಿಸಿದೊಂ (ಎಕ. VII. ಶಿಕಾ. ೨೦೯-೨೩;918) ; ಉಪ್ಪವಳ್ಳಿಯ ಪೋಚಿಗಾಮುಣ್ಡ ವಳಿಯೆಱೆ ಮುದ್ದಮಾಗುಣ್ಡಯೆಱೆಗ (ಎಕ. XV. ಬೇಲೂರು. ೩೦೬-೦೩ ; 971). [ಮುದ್ದು + — ಅ$_7$]

**ಮುದ್ದ$_2$** 'ಮುಗುಂದ' ನೋ.

**ಮುದ್ದಂಚೆ** (ನಾ). ಚೆಲುವಾಗಿರುವ ಹಂಸ : ಚೆಲ್ವಿಂದೆ ಸಾರ್ತಂದು ಬೇಡುವ ಮುದ್ದಂಚೆಗೆ ಕೈಯ ತಾವರೆಯ ಕಾವಂ ಚೆಲ್ಲದಿಂ ನೀಡುತುಂ (ಕಬ್ಬಿಗಾ. ೦೩೭). [ಮುದ್ದು + ಅಂಚೆ$_3$]

**ಮುದ್ದಂಚೆವಱೆ** (ನಾ). ಚೆಲುವಾದ ಹಂಸಪಕ್ಷಿಯ ಮರಿ : ಒಲಿದಾಡುವ ಮುದ್ದಂಚೆವಱೆಗಳಿಂ ನಱುಗಂಪಿಂ ತೀಡುವೆಳೆಗಾಳಿಯಿಂ ಸಿರಿಗೂಡಿದ ಗೃಹದಂತಿರಿರ್ದುದಲರ್ದಂಭೋಜಂ (ರಾಜಶೇ. ೧೨-೨೩). [ಮುದ್ದಂಚೆ + ಮಱೆ]

**ಮುದ್ದಕ** (ನಾ). ಒಬ್ಬಾತನ ಹೆಸರು : ಶಕವರ್ಷಮೆಂಟುನೂಱೆಣ್ಬತ್ತಯ್ದಾದನ್ದು ಮುದ್ದಕನ ನಾಶಕಾ ಭೋಗಿ ಅಗ್ನಿಪ್ರವೇಶಗೆಯ್ದಂ (ಎಕ. X, ಮುಳಬಾ. ೭೭-೨; 973). [ಮುದ್ದ$_1$ + — ಕ$_3$]

**ಮುದ್ದಣ** (ನಾ). (ಕರಾ) (ಪ್ರಾಯಕ್ಕೆ ಬಂದಾಗ) ಮುಖದ ಮೇಲೆ ಏಳುವ ಗುಳ್ಳೆ ; ಮೊಡವೆ. [← ತುಳು. ಮುದ್ದಣ್, ಮುದ್ದನ್, ಮುದ್ದಾನ್]

**ಮುದ್ದತಿ** 'ಮುದ್ದತು' ನೋ.

**ಮುದ್ದತಿಠೇವು** (ನಾ). (ಬ್ಯಾಂಕು ಮುಂತಾದ ಕಡೆಗಳಲ್ಲಿ) ನಿರ್ದಿಷ್ಟ ಕಾಲಾವಧಿಯವರೆಗೆ ಇಡುವ ಇಡುಗಂಟು. — ಠೇವಣಿ : ಅವಧಿಯ ಇಡುಗಂಟಿನ (ಮುದ್ದತಿಠೇವು) ಅವಧಿ ಮುಗಿಯುವ ಪೂರ್ವದಲ್ಲಿ ಅದರ ರಕಮು ಸಿಗಲಾರದು (ಬ್ಯಾಂಕಕ್ಕೆ. ೧೧) ; ಗೌಡರ ಪೇಢಿಯಲ್ಲಿದ್ದ ಮುದ್ದತೀ ಠೇವಿನ ಹಣದ ಬಡ್ಡಿಯನ್ನು ಪಣಿಗೆ ಕಳಿಸುತ್ತಿರಬೇಕು (ಠೀಕಹ. II. ೦೦೪). [ಮುದ್ದತಿ ( < ಮುದ್ದತು ) + ಠೇವು]

**ಮುದ್ದತಿದರ** (ನಾ). (ವ್ಯಾಪಾರದಲ್ಲಿ) ನಿರ್ದಿಷ್ಟಕಾಲಾವಧಿಗೆ ಮುಂಗಡವಾಗಿಯೇ ವಸ್ತುಗಳ ಮೇಲೆ ಹಾಕುವ ಧಾರಣೆ ; ಸಟ್ಟಾ; ಮುಂಗಡ ಒಪ್ಪಂದದ ದರ : ಬ್ಯಾಂಕುಹುಂಡಿಯನ್ನು ಕೊಳ್ಳುವಾಗ (೧) ಸ್ಪಾಟ್ ದರ, ತತ್ಕ್ಷಣದ ಸ್ಥಳದ ದರ (Spot Rate), (೨) ಮುಂಗಡ ಒಪ್ಪಂದದ ದರ, ಮುದ್ದತಿದರ (Forward Rate), ಎಂಬ ಎರಡು ಬಗೆಯ ದರಗಳಿರುವುವು (ಹಣಶ್ರ. ೦೦೪). [ಮುದ್ದತಿ ( < ಮುದ್ದತು ) + ದರ$_3$]

**ಮುದ್ದತಿಪತ್ರ** (ನಾ). ವಾಯಿದೆ ದಿನದ ಪಟ್ಟಿ : ರಟ್ಟಿನ ಒಳಮಗ್ಗಲು ಪಾಕೀಟನ್ನೂ (Book packet) ಅದರ ಎದುರಿಗಿನ ಕಾಗದದ ಮೇಲೆ ಮುದ್ದತಿಪತ್ರವನ್ನೂ (Due date label) ಹಚ್ಚುವರು (ಗ್ರಂಥಾಲ. ೦೫). [ಮುದ್ದತಿ ( < ಮುದ್ದತು) + ಪತ್ರ]

**ಮುದ್ದತಿಹುಂಡಿ** (ನಾ). ನಿರ್ದಿಷ್ಟಕಾಲಾವಧಿಗೆ ಮೊದಲೇ ನೀಡುವ ಚೆಕ್ಕು. — ಹುಂಡಿ : ಅವರು ನಡೆಸುವ ಹುಂಡಿಗಳ ವ್ಯಾಪಾರದಲ್ಲಿ — ಕೆಲವು ನಗದುಹುಂಡಿಗಳೂ ಇರಬಹುದು, ಇನ್ನು ಕೆಲವು ಮುದ್ದತಿ ಹುಂಡಿಗಳೂ ಇರಬಹುದು (ಬಾಅಶ್ರ. III. ೦೫೫೯). [ಮುದ್ದತಿ ( < ಮುದ್ದತು ) + ಹುಂಡಿ$_1$]

**ಮುದ್ದತು, ಮುದತಿ, ಮುದತ್ತು, ಮುದ್ದತಿ, ಮುದ್ದತ್ತು** (ನಾ). ೧. ಒಂದು ನಿರ್ದಿಷ್ಟ ಕಾಲಾವಧಿ ; ಗಡುವು ; ವಾಯಿದೆ: ಜೀತದ ಮುದ್ದತಿನೊಳಗೆ ಸಾಲ ಕೊಟ್ಟವನು ತೀರಿದರೆ ಅವನ ವಾರಸುದಾರರು ದುಡಿಸಿಕೊಳ್ಳುವರು (ಕಭಾಗ. ೨೯೭) ; ಮೂರು ತಿಂಗಳ ಮುದ್ದತಾದರೂ ಕೊಡಿರಿ (ಸವುಜೀ. ೩೫). **ಮುದತಿ** : ೧. ಮುದತಿ (ವಾಯಿದೆ)ಯಿಂದ ನೀಲಿಯ ಡಿಕ್ರಿಯ ಬಗ್ಗೆ ಜಮಾ ಮಾಡಲ್ಪಟ್ಟ ರಕಮಿಗೆ . . . ನೂರಕ್ಕೆ ಒಂದು ರೂಪಾಯಿ ಒಟ್ಟು ಬೀಳುವದು (ಮುಂಬಿವ್ಯಾ. ೦೦೦). **ಮುದತ್ತು** : ೨. ಯಾವುದಾದರೊಂದು ವಿಷಯವನ್ನು ಮುಂದಕ್ಕೆ ಹಾಕುವುದು ; ಮುಂದೂಡುವುದು : ನನ್ನ ಬಿಟ್ಟೀದ ಕೆಲಸ ಬರೀ ಮುದತ್ತು ಹಾಕುತಾ ಇದಾರ (ವೋಹಬ. ೦೨೨). **ಮುದ್ದತಿ** : ೧. ಮುದ್ದತಿಯಿಂದ ಕೊಟ್ಟ ನೀಲಿಯ ಮಾರಾಟದ ರಕಮು ಜಮೆ ಆಗುವದು (ಮುಂಬಿವ್ಯಾ. ೩೨ ಕ್ರಶ್ನಾವಳಿ); ಆ ಮಾಲಿನ ಪೂರ್ಣ ಕಿಮ್ಮತು ಮುದ್ದತಿಯ ಒಳಗೆ ಆಸಾಮಿಯವರು ನಮ್ಮ ಕಡೆಗೆ ಕಳುಹಿಸಬೇಕು (ಮುಂಬಿವ್ಯಾ. ೨೬೪). **ಮುದ್ದತ್ತು** : ೧. ಎಷ್ಟೋ

ಕತಿಬಿಗಳ ಮುದ್ದತ್ತು ಮಿಾರಿ ಗುಟು ಬಾರವಂತಾಯಿತು (ಗುರುತ್ರ. ೬). ೨. ಖಚ್ಲೆಯ 'ಮುದ್ದತ್ತು' ಮುಂದೆ ಬೀಳುತ್ತ ನಡೆದಿತ್ತು (ಶಾಕರ. ೨೦೮).
ಮುದ್ದತ್ತಿನ ಜ್ವರ = ನಿಯಮಿತ ದಿನಗಳವರೆಗೆ ಇರುವ ಜ್ವರ; ಕಟ್ಟಿನ ಜ್ವರ; ವಾಯಿದೆಜ್ವರ: ದುರ್ದೈವದಿಂದ ತಾಯಿಯು ಮುದ್ದತ್ತಿನ ಜ್ವರದಿಂದ ಹಾಸಿಗೆ ಹಿಡಿದಳು (ಪುಣ್ಯಕಿ. ೬೮).
[ ← ಅರ. ಹಿಂ. ಮುದ್ದತ್; ಮರಾ. ಮುದ್ದತ್, ಮುದತ್ ]

ಮುದ್ದತ್ತು 'ಮುದ್ದತು' ನೋ.

ಮುದ್ದಮೂರ್ಬೋಯ (ನಾ). ಒಬ್ಬಾತನ ಹೆಸರು: ಮುದ್ದಮೂರ್ ಬೋಯಸ್ಯ . . . ರೇವಶರ್ಮ್ಮಣ (ಇಶಿ. VII, ೦೬೮-೪೦ : 668).
[ ? + ಬೋಯ ]

ಮುದ್ದಯ 'ಮುದ್ದಯ್ಯ' ನೋ.

ಮುದ್ದಯ್ಯ, ಮುದ್ದಯ, ಮುದ್ದೆಯ್ಯ (ನಾ). ಒಬ್ಬಾತನ ಹೆಸರು: ರಾಚಾಲ ಪೊಂಪಲ ಚಲ್ಲನತ್ತವ್ಮಾ ಮುದ್ದಯ್ಯನುಮೆಱಿಯುಮ್ಮ ನೆಸುವ ರಾದಿತ್ಯಂ ತುಱುವನಿಕ್ಕಿಸಿ ಸತ್ತೊಂಗೆ ದಿಲೀಪಯ್ಯ × × × (ಎಕ. X. ತಂಕಾಮು. ೦೯೩-೦೦ ; 956 ?): ಮುದ್ದಯ್ಯ ಭಾವಿಯನ ಗಳಿಸಿದಂ (ಎಕ. VIII, ಸೊರಬ. ೪೬೦-೦೬ ; 1012). ಮುದ್ದಯ: ಕುನ್ದತೂರಬೀವಿನೊಳ್ × × × ಸಳಗ ತಿರಮಣ್ಣಗವುಣ್ಣರ ಮುದ್ದಯಂ ಕಾದಿ ಸ್ವರ್ಗಸ್ಥನಾದ (ಎಕ. X. ಮುಳಬಾ. ೨೬೬-೬ ; ಸು. 900?). ಮುದ್ದೆಯ್ಯ: ಮುದ್ದೆಯ್ಯ ತುಱುಗೊಳೊಳ್ ಮುಕ್ತಿಗೆ ಸನ್ದ (ಎಕ. XII. ಹೊಳಲ್ಕೆ. ೮೬-೫ ; ಸು. 965); ನಾಗಮಯ್ಯನ ಮಕ್ಕಳು ಬಿದಿವಾರಯ್ಯ ನುಂ ಮುದ್ದೆಯ್ಯನುಂ ಬಿಟ್ಟರ್ (ಎಕ. III (R), ಪಂಚಪ. ೨೩೩-೦೦ ; ಸು. 10ನೆಯ ಶತ). [ ಮುದ್ದು + ಅಯ್ಯ₁ ]

ಮುದ್ದಲು 'ಮೊದಲ್₁' ನೋ.

ಮುದ್ದಾ 'ಮುದ್ದೆ₂' ನೋ.

ಮುದ್ದಾಂ 'ಮುದ್ದಾಮು' ನೋ.

ಮುದ್ದಾಟ (ನಾ). ೧. ಮುದ್ದು ಮಾಡುವಿಕೆ; ಲಲ್ಲೆ; ಲಾಲನೆ: ಬೇಟಕ್ಕೆ ತವದ ಕೂಟಂ ಕೂಟಕ್ಕೆ ತನೂಜರಾ ತನೂಜರೊಳಂ ಮುದ್ದಾಟಂ ಫಲಮದೆ ತವ್ಮೊಳ್ ನಾಟಮ ಗಡ ಪೆಱವು ಸುಖಿಲವಂಗಳೋ(ಳೇನೋ) (ಸಂಧೃಶಿ. ೩-೪೨). ೨. ಚೆಲುವಾದ ಆಟ; ಮನಸೆಳೆಯುವ ಕ್ರೀಡೆ: ಕಿಸುರಿಲ್ಲದ ಮುದ್ದಾಟಂ ಮುಳಿಸಿಲ್ಲದ ಕಾಟಂ ಬಾಲಭಾಪಮಚ್ಚರಿ ಜನನ (ಅಪಂಶಿ. ೬-೬); ಸಾವು ಸುಳಿಯಲು ಬಾಳಿ ತಿಳಿಲು ಎನೆ ಸವಿಗೂಡಿ ಮುದ್ದಾಟವೆನೆ ಬಂತು ಕಾಳಿದಾಸನ ಸುಗ್ಗಿ (ಮುಕ್ತಕಂ. ೩೨-೦೪).
[ಮುದ್ದು + ಆಟ]

ಮುದ್ದಾಡಿಸು (ಕ್ರಿ). ೧. ಲಲ್ಲೆಗರೆ; ಲಾಲಿಸು; ಮುದ್ದಿಸು: ಕೂಸುಗಳಂ ಮುದ್ದಾಡಿಸಿ ದೇಸಿಯ ಮಾತುಗಳನಾಡಿ ಪೆರ್ಚಿಸಿ ಪೆಱರಂ ಲೇಸಾಗಿ ತನಗೆ ಚೆನ್ತಿಸುವಾಶಾಪರನೈದಲಾಱನುಱುನಿರ್ವೃತಿಯಂ (ಧರ್ಮಾಮೃ. ೩-೪೦); ಒಡಿದು ಚುಱುಕಾಗ್ರಮಂ ನಲವೊಡರಿಸೆ ಮುದ್ದಾಡಿಸುತ್ತು ಮಿರ್ದರ್ ಸುತನಂ (ಚಂದ್ರಪ್ರಶಿ. ೬-೯೬); ನವಿಲಂ ಮುದ್ದಾಡಿಸಿ . . . ಜೀವಿಸಾಜುದಾರ್ರ್ಕಂ ಎಂದು ಪರಸುವುದಂ (ಮಹಾಪೇ. ೫-೩೩ ವ). ೨. ಪರಸ್ಪರ ಮುದ್ದಾಡುವಂತೆ ಮಾಡು: ನೀರ ಬೊಂಬೆಗೆ ನಿರಾಳದ ಗೆಜ್ಜೆಯ ಕಟ್ಟಿ ಬಯಲ ಬೊಂಬೆಯ ಕೈಯಲ್ಲಿ ಕೊಟ್ಟು ಮುದ್ದಾಡಿಸುತ್ತಿರ್ದನಯ್ಯ (ಚೂಪ್ಪಸಂ. ೨೬-೦೫). [ಮುದ್ದಾಡು + -- ಇಸು₃]

ಮುದ್ದಾಡು (ಕ್ರಿ). ೧. ಪ್ರೀತಿಸು; ಲಾಲಿಸು; ಮುದ್ದಿಸು: ಪರಿದಾಡುವ ಮಗನಂ ಮುದ್ದಾಡುವಂತೆ . . . ಕೊಲ್ಲದ ವ್ರತಮಂ ಕೈಕೊಂಡು (ಧರ್ಮಾಮೃ. ೦೦-೬): ಕಕ್ಕಯ್ಯ ಓರಿಯಯ್ಯ ಚಿಕ್ಕಯ್ಯ ಚೆನ್ನಯ್ಯ ಎತ್ತಿ ಮುದ್ದಾಡಿ ಸಲಹಿದರೆನ್ನ (ಶಿಶವ. ೩೩೨): ಕಣ್ಣೊಳು ಮುದ್ದಾಡಿ ಮನದ ಮಗ್ಗುಲೊಳಿರಿಸಿ ಚಿತ್ರದೊಳಚ್ಚೊತ್ತಿ (ಪಂಚರ. ೨-೬೦). ೨. ಚುಂಬಿಸು; ಮುತ್ತುಕೊಡು: ಪೂವಲಿಯೊಳ್ ಮುದ್ದಾಡೆ ತುಂಬಿಗಳ್ಮಗಿಲುವ್ವಂ ಪರಿದತ್ತು ಹರ್ಷರಸಮಾ ಪುರದೊಳ್ (ಸಂಕಾಪು. ೪-೨೮); ಮುದ್ದಾಡುವಳು ಮುಸುಡೊಗ್ಗಿ ಮುದ್ದಂ ಬೇಡುವಳು (ಬಸವು. ೦೫-೦೪); ಎಂದಪ್ಪಿ ಕೊಂಬೆ ರಂಗಯ್ಯನ . . . ನಾನೆಂದು ಮುದ್ದಾಡುವೆ (ಪುರಂಪ. ೨-೬೬ ಅನುಕಲ್ಪಿ). [ಮುದ್ದು + ಆಡು₁]

ಮುದ್ದಾಮ್ 'ಮುದ್ದಾಮು' ನೋ.

ಮುದ್ದಾಮ 'ಮುದ್ದಾಮು' ನೋ.

ಮುದ್ದಾಮು, ಮುದ್ದಾಂ, ಮುದ್ದಾಮ್, ಮುದ್ದಾಮ (ಅ). ೧. ಉದ್ದೇಶಪೂರ್ವಕವಾಗಿ; ಉದ್ದೇಶದಿಂದ ಕೂಡಿ: "ನಿನ್ನ ಕತೆಯಲ್ಲಿ ಉಪ್ಪು-ಖಾರ ಇಲ್ಲವೇನು?" "ಇರಬಹುದು; ಆದರೆ ನಾನು ಮುದ್ದಾಮಾಗಿ ಏನೂ ಹಾಕಿಲ್ಲ" (ಮುಕ್ತ. ೯೩). ೨. ಖುದ್ದಾಗಿ; ಸ್ವತಃ: ಅದರ ಸಲುವಾಗಿ ಮುದ್ದಾಮು ತಿಳಿಸುತ್ತೇವಲ್ಲಾ (ಮುಂಬಯ್ಯಾ. ೨೦೫); ಅವರು ವೆಂಕಟರಾಮನನ್ನು ಮುದ್ದಾಮು ಹುಡುಕಿ, ಕಂಡು, ಹಸ್ತಲಾಘವ ಮಾಡಿ ಅವನ ಹಸ್ತದಲ್ಲೇ—ಒಂದು ಲಕೋಟೆಯನ್ನು ಬಿಟ್ಟು ಹೋದರು (ಅಳಾ. ೪). ಮುದ್ದಾಂ: ೧. ನಾನು ಮುದ್ದಾಂ ಬಡವರ ಸಲುವಾಗಿ ಅಂತ ಎರಡ ರೂಪಾಯಿ ಕಡಿಮೆ ಮಾಡೀನಿ (ನಡುಮ. ೨೬). ೨. ಮುದ್ದಾಂ ಸುಬ್ಬಕ್ಕನವರು ಆಡಿದ ಈ ಮಾತನ್ನು ಗೋವಿಂದರಾಯರ ಎದುರಿಗೆ ಹೇಳಿದನು (ಇತಿಶ್ರೀ. ೦೬೪): ನೋಟೀಸನ್ನು ಮುದ್ದಾಂ ಕಳುಹಿಸಿದ ಕಾಲದಲ್ಲಿ ತಲುಪಿದ್ದಕ್ಕೆ ಒಂದು ಅಕನಾಲೆಜ್ಡ್ ರಶೀದಿಯನ್ನು ಪಡೆಯಬೇಕು (ಗ್ರಾಮಕಾಕ. ೬೦). ೩. ಖಂಡಿತವಾಗಿ; ನಿಖರವಾಗಿ: ಆತನಿಗೆ ಸಾಸುವೆಯಷ್ಟೂ ಸಂಶಯ ಬಾರದೆ 'ಮುದ್ದಾಂ' ಮಾತನಾಡಿದೆ (ಕೋಹೊ. ೨೪). ಮುದ್ದಾಮ್: ೨. ನಾನೇ ಮುದ್ದಾಮ್ ನಿಮ್ಮಲ್ಲೇಗೆ ಬಂದು ವಿಷಯ ಹೇಳುತ್ತೇನೆ (ರೂಂ). ಮುದ್ದಾಮ: ೧. ನದೀತೀರದ ಊರಿನ ಮಿತ್ರರೊಬ್ಬರು ಮುದ್ದಾಮ ಅಲ್ಲಿಗೆ ಕರೆದೊಯ್ದು ಹೊಳೆಯ ದಂಡೆಯ ಮೇಲೆ ಸೊಗಸಾದ ಔತಣ ಕೊಟ್ಟರು (ಅಲ್ಪಪಿ. ೬೩). ೨. ಹೀಗೆ ಆಗಬಾರದೆಂಬುದರ ಸಲುವಾಗಿ ಮುದ್ದಾಮ ಸೂಚನೆ ಮಾಡೋಣವರಲ್ಲಿ ಬರುತ್ತದಲ್ಲಾ (ಮುಂಬಯ್ಯಾ. ೯೪). [← ಅರ. ಹಿಂ. ಮುದಾಮ್; ಮರಾ. ಮುದ್ದಾಮ್]

ಮುದ್ದಾಯಿ, ಮುದ್ದೈ (ನಾ). ದಾವಾ ಹಾಕುವ ವ್ಯಕ್ತಿ; ಫಿರ್ಯಾದಿ: ಸಾಹೇಬರಿಗೆ ಏಳೆ ಸಿಕ್ಕಿತು . . . ಮುದ್ದಾಯಿಯು ಕಡೆ ತಿರುಗಿದರು (ಬಾಸಳೂ. ೪). ಮುದ್ದೈ: ಅವಳು ಮುದ್ದೈಯಾಗಿ . . . ಮೆಜಿಸ್ಟ್ರೇಟರ ಮುಂದೆ ಬಂದವಳಲ್ಲ (ಹಹಸ. ೫೦). [← ಅರ. ಮುದ್ದಈ; ಹಿಂ. ಮುದ್ದಈ, ಮುದ್ದಇಯಾ; ಮರಾ. ಮುದಾಈ]

ಮುದ್ದಿಕೆ 'ಮುದ್ದಿಗೆ₁' ನೋ.

ಮುದ್ದಿಕ್ಕು, ಮುತ್ತಿಕ್ಕು (ಕ್ರಿ). ೧. ಚುಂಬಿಸು; ಮುತ್ತುಕೊಡು: ಅರವಿಂದಾನನೆ ಕೇಳು ಅರಮೊರೆಯಿಲ್ಲದೆ ಅಱಿಯದಂದದಿ ಒಂದು ಅಧರ ಮುದ್ದಿಕ್ಕಿದ (ಪುರಂಪ. ೦-೨೦೬-೦); ಆಕಸ್ಮಾತ್ ಮುದ್ದಿಕ್ಕುವ ಪ್ರಸಂಗ ಬಂದಿದ್ದರೆ ಕುದುರೆಗಳಾದರೂ ಸರಿಯುಬೇಕಿತ್ತು (ಬಂಗಾಪೆ. ೩). ೨. ಸೋಂಕು; ಮುಟ್ಟು; ಸ್ಪರ್ಶಿಸು: ಕಾಡಿನ ಹೆಮ್ಮರಗಳು ಆಕಾಶವನ್ನು ಮುದ್ದಿಕ್ಕುತ್ತಿದ್ದುವು (ರೂಂ). ಮುತ್ತಿಕ್ಕು: ೧. ಅವಳು ಪ್ರೀತಿಯಿಂದ ಮಗುವಿಗೆ ಮುತ್ತಿಕ್ಕಿದಳು (ರೂಂ). [ಮುದ್ದು + ಇಕ್ಕು]

ಮುದ್ದಿಗ (ನಾ). ಪ್ರೀತಿಗೆ ಪಾತ್ರನಾದವನು: ಹೊದ್ದಲೀಯದೆ ಮಾಯೆಯಂ ಸೆಱಿಗೆದ್ದ ಶರಣರು ನೋಡಿ ಲಾಲಿಪ ಮುದ್ದಿಗಂ ಬಂದಂ (ಬಸವು. ೨೪-೬). [ಮುದ್ದು + — ಇಗ]

ಮುದ್ದಿಗೆ₁, ಮಿದ್ದಿಗೆ, ಮುದ್ದಿಕೆ (ನಾ). ದ್ರಾಕ್ಷಿಯ ಬಳ್ಳಿ ಮತ್ತು ಅದರ ಹಣ್ಣಿನ ಗೊಂಚಲು; ಮೃದ್ವೀಕಾ – ಮುದ್ದಿಗೆ (ಕಮಂದ. ೨೬೮ ಕೃಯೋ.):

ಎಲೆಗೊಂದು ಪಣ್ಗೊನೆಯನಾಂತಿರ್ಪ ಮುದ್ದಿಗೆಯಿಂ . . . ಆ ವನಂ ಮೆರೆದುದು (ಶಾಂತಿ. ೭-೧೦) ; ಅಲ್ಲಿಗಲ್ಲಿಗೆ ಪಣ್ತ ತೊಂಗಲಿಂಬಿಡಿದ ಮುದ್ದಿಗೆಯ ಕಾವಣಮುಂ . . . ಕಾಡುಮಲ್ಲಿಗೆಯ ಬಳ್ಳಿಮಾಡಮುಂ ರಾಜಿಸೆ (ರಾಜಶೇ. ೬೦-೧೭). ಮಿದ್ದಿಗೆ : ಮೃದ್ವೀಕಾ,, ಮಿದ್ದಿಗೆ (ಶಬ್ದಮ. ೧೬೦ ಪ್ರಯೋ). ಮುದ್ದಿಕೆ : "ಮುದ್ದಿಗೆ (ಕೆ)–ಮೃದ್ವೀಕಾ" (ಶಬ್ದಕೋ. ೬೭).
[< ಸಂ. ಮೃದ್ವೀಕಾ]

**ಮುದ್ದಿಗೆ₂** (ನಾ). ಮೊಹರು; ಮುದ್ರಿಕೆ : ಮುದ್ರಿಕಾ – ಮುದ್ದಿಗೆ (ಶಬ್ದ. ೨೬೦ ಪ್ರಯೋ) ; ಮುದ್ರಿಕೆ, ಮುದ್ದಿಗೆ (ಶಬ್ದಮ. ೦೬೪ ಪ್ರಯೋ).
[< ಸಂ. ಮುದ್ರಿಕಾ]

**ಮುದ್ದಿಡು, ಮುತ್ತಿಡು** (ಕ್ರಿ). ಚುಂಬಿಸು ; ಮುತ್ತುಕೊಡು : ಗೋಪಿಯ ಭಾಗ್ಯವಿದು ಆ ಪರಮಾತ್ಮನ ಅಪ್ಪಿ ಮುದ್ದಿಡುವುದು (ಪುರಂದ. ದಾ. ೪-೨ ಕೀರ್ತ) ; 'ತಪ್ಪದಲೆ ಶಿವನ ಮುದ್ದಿಟ್ಟು', 'ಕಪ್ಪುಕಾಡಿಗೆ ಮಾಡಿ ಅಪ್ಪಿ ಮಗುವಿಗೆ ಹಚ್ಚಿ' ಮೊದಲಾದ ನುಡಿಗಳು ತಾಯ್ತನದ ಬೆಳ್ನುಡಿಗಳಲ್ಲವೇ ? (ಶಬ್ದಶಾ. ೦೬೭) ; ಮನೆಯ ದೀಪವೆಂದು ಮುದ್ದಿಟ್ಟರೆ ಗಡ್ಡ ಮೀಸೆ ಸುಟ್ಟಿತು (ಗಾದೆ). ಮುತ್ತಿಡು : ನುಣ್ಗಲ್ಲಮಂ ಬಿಡದಾಘ್ರಾಣಿಸಿ ಸೋಗೆ ಗಣ್ಗೊನೆಗಳಂ ಮುತ್ತಿಟ್ಟು . . . ಪೇರಟ್ಟಳಿಂ ತೊಡರ್ದೆಲ್ಲಾ ಬೆರೆವೆಣ್ಗಳಂ ನಲಿಯಿಸುಟಂ ತಣ್ಗಾಳಿಯೇಂ ನೋಂತುದೋ (ಶಕಾ. ೬-೩೭).
[ಮುದ್ದು + ಇಡು₁]

**ಮುದ್ದಿಮಯ್ಯ** (ನಾ). ಒಬ್ಬಾತನ ಹೆಸರು ; ಮುದ್ದಿಮಯ್ಯಂಗೆ ಪರಕಯ್ಯಂ ಪನ್ನಿರ್ವರ ಅರಸಿನ ಸಾಧಿಷ್ಠಿತದೊಳ್ ಕಾಲನ್ ಕರ್ಚಿ ಕೊಟ್ಟ ಭೂಮಿ (ಎಕ. XI. ಹಾಸನ. ೦೭-೧೦; ೪೪೪). [< ಮುದ್ದು + ಅಯ್ಯ₆₁]

**ಮುದ್ದಿಸು** (ಕ್ರಿ). ೧. ಪ್ರೀತಿಮಾಡು; ಲಲ್ಲೆಗರೆ : ಮೋಹಿಸಿ ಮುದ್ದಿಸಿ ಮರುಳಾದೆನವ್ವ (ಬಸವಾದಿ. ಬ. ೪೩-೯೪) ; ಮುನಿಯುತ್ತುಂ ಮುದ್ದಿಸುತ್ತುಂ ತೊನೆದು ತವಕಿಸುತ್ತುಮೂರ್ವತುಂ ಗರ್ವಿಸುತ್ತುಂ (ರಸ್ತಾಕ. ೬೩) ; ಪರಿಪರಿಯೊಳಿಂತಾ ಕುಮಾರನಂ ಮುದ್ದಿಸುತ್ತಿರೆ ಹರ ಹರಾ ಪುತ್ರಮೋಹ ವಿನ್ನೆಂತುಟೋ (ಬೊಪ್ಪ. ೩-೨೭). ೨. ಚುಂಬಿಸು : ಅಪ್ಪ ದೇವರೆ ಪೇಳೆನುತ ಬಿಗಿಯಪ್ಪುವಂ ಮುದ್ದಿಸುವಂ . . . ಕಣ್ಣಪ್ಪದೇವನು (ಬಸವ. ೦೪-೩೩) ; ನೇಹಮುರ್ವಿ ಮೊಗದಲ್ಲಿ ಮೊಗವಿಟ್ಟು ಮುಂಡಾಡಿ ಮುದ್ದಿಸುತೆ (ಶಬ್ದಶಾ. ೬-೩೦) ; ಭರದಿಂದೆ ಬಂದಪ್ಪಿದಂಗನೆಯು . . . ಮುದ್ದಿಸಿ ತನ್ನ ಬೆರಳುಂಗುರಂಗೊಟ್ಟು ಸಂತೈಸಿ ವೃಷಕೇತು ಕಾಂತೆಯಂ ಬೀಳ್ಕೊಂಡನು (ಕೈಮಿನಿ. ೬-೦೨). ೩. ಪ್ರೀತಿಯಿಂದ ತಡವು,— ನೇವರಿಸು : ಕೋಣನ ಬೇಂಟೆಯಾಡಿ ಕಡು ನೊಂದು ವಿಜೃಂಭಿಪ ತಮ್ಮ ನಲ್ಲರಂ ಕಾಣುತೆ ಬಂದು ಮುದ್ದಿಸಿ ವಿಷಾಣ ವಿಘಾತದಿನಾದ ಗಾಯಮಂ ಮಾಣದೆ ಹಸ್ತಪಲ್ಲವದೆ ಮುಟ್ಟಿ ನಿರೀಕ್ಷಿಸುತೊಪ್ಪಿದ ರ್ಷವಂತೇಣಕಿಶೋರನೇತ್ರೆಯರ್ (ಅದ್ಭುತ. ೨-೮೭) ; ಬಿರಿವೂಗಳು ಚುಂಬಿಸುತೆ, ಪರ್ಣಮಂ ಮುದ್ದಿಸುತೆ . . . ತೀಡುತ್ತೈತಂದ ತಂಗಾಳಿಯಂ ಸುಳಿಯೆಂದು ಕ್ರೀಡಿಸುತೆ (ಕಿತ್ತೂರು. ೬೨-೧೭೦೦) ; ಆರಾಧ್ಯರು ನನ್ನನ್ನು ಮುದ್ದಿಸಿ ಹರಸಿದರು (ತಂಗಾಳಿ. ೩೦). [ಮುದ್ದು + — ಇಸು₂]

**ಮುದ್ದು, ಮುತ್ತು₂** (ನಾ). ೧. ಅಕ್ಕರೆ ; ಒಲವು ; ಪ್ರೀತಿ : "ಅಱುಮೆಯು ತಾಂ ಲಲ್ಲೆಯೆನ್ನಲಿವು ಮುದ್ದಕ್ಕುಂ" (ಶಬ್ದ. ೦೮೦) ; ಆಕೆಯ ಮಾತಾಕೆಯ ಮುದ್ದಾಕೆಯಂದವಾಕೆಯ ತನುಸೋಂಕು . . . ಆಕೆಯ ಕೂಟಮೆ ದಲಿರ್ದುದರಸನ ಮನದೊಳ್ (ಕಾದಂಬ. ೬೬೨) ; ನಿನ್ನ ಮುದ್ದನೆ ನಚ್ಚಿ ಮೆಚ್ಚುಮೆನಾಗಳುಂ ನಿನ್ನಗಲ್ಕೆಯೊಳಿಂತು ಸೈರಿಸುವೆಂ (ಧರ್ಮಾಮೃ. ೩-೨೨೦); ಬಲದಾಯಿ ಮುದ್ದ ಬಲ್ಲಳೆ ನೊಂದ ನೋವ ನೋಯದವರೆತ್ತ ಬಲ್ಲರು (ಬಸವಾದಿ. ೩. ೦೪೦-೩೦೪) ; ನಾನೇದರೆ ಅವಳಿಗೆ ಎಷ್ಟೊಂದು ಮುದ್ದು ಎಂದು ಗೊತ್ತಿದೆಯೆ ? (ಅಪೋಲೊ. ೯೦). ೨. ಚುಂಬನ : "ಮುದ್ದು [ಚುಂ. ತ್ತು] ಚುಂಬನಮುದೋಷ್ಠಪಾನಂ" (ಶುಂಗಾರ. ೯೭-೦೭) ; ಲಂಬೋದರ ಗುಹರ್ಗಂ ಮುದ್ದುಗಳನೂಡಿ ಬೇಡಿದರ್ಗಭಿಮತವಿತತಿಯಂ ನೀಡಿ (ಬಸವ. ೦-೩೦); ಅಳ್ತಿಯಿಂ ಮುದ್ದುಗಳನು ಬೇಡುವರ್ ಕೆಯ್ಗಳೊಳ್ ಮೆಯ್ಗಳೊಳ್ ಬಾಯ್ಗಳೊಳಗೆ (ಶಬ್ದ. ೩-೨೬). ೩. ಅತಿಯಾದ ಪ್ರೀತಿಯಿಂದ ಉಂಟಾದ ಸಲುಗೆ ; ಸದರ : ಮುದ್ದು ವಿದ್ಯಾರ್ಥಿಗೆ ಸಲ್ಲ . . . ಜಿದ್ದು ಬೋಧಕನಿಗೆ ಸಲ್ಲ (ಇಂಚರ. ೦೭೦-೯೩) ; ಅಜ್ಜಿಯ ಮುದ್ದಿನಿಂದ ಮೊಮ್ಮಗ ಯಾರು ಹೇಳಿದ ಮಾತಿಗೂ ಕಿವಿಗೊಡುವುದಿಲ್ಲ (ರೂಢಿ). ೪. ಚೆಲುವು ; ಸೊಗಸು ; ಅಂದ : ಮಸೆದ ಮದನನಲಗಿನಲರ್ಗಳಂತೆ ಕಣ್ಗೊಳಿಸಿ ಬಳಸಿ ಬಂದಿರ್ದ ಪಾಟದಾಟದ ಮುದ್ದಿನ ಬರ್ದಿನ ಪರಿವಾರ ದೇವಿಯರುಮಂ . . . ಕಂಡು (ಅಭಿ. ೨-೬೩ ವ) ; ನುಡಿಯ ಮಾತಿನ ಮುದ್ದು ಶಿವನನೊಲಿಸುವ ಮುದ್ದುತಾನೆನಲ್ ಶಿವೆ ಮೆರೆದಳು (ಶಬ್ದ. ೩೭-೨೨) ; ಕಂದನಾಡುವ ಬಾಲಲೀಲೆಯಂ ನೋಡಿ ತೊದಲೋದಿದನಿ ಮಾತನುರೆ ಕೇಳ್ದು ಮುದ್ದಿನ ಮುದ್ದೆಯಂಪದಂಗವನೆತ್ತಿಕೊಂಡು ನಳಿತೋಳ್ಗಳಿಂದಪ್ಪಿ (ಕೈಮಿನಿ. ೦೪-೨೦). ೫. ಮಕ್ಕಳಾಟಿಕೆ ; ಬಾಲಲೀಲೆ : ನಡೆವ ತಳರ್ನಡೆಯೊಳ್ ಪುಡಿವುಡಿಯಾದುವು ಶಿಲೆಗಳೊಡೆದು ಕರಿಗಳ್ ಭೀಮಂ ಪಿಡಿದಡರ್ಮೊಡೆ ಬಾಯ್ಬಿಟ್ಟೆಲ್ವಡಗಾದುವು ಮುದ್ದಿದೆಂತು ಸೊಗಯಿಸವೇಡಾ (ಶಬ್ದ. ೨-೩) ; ಇನಿವಿರಿದಟಲನ್ನರೊಳಂ ಜನಿಯಿಸಿತನೆ ಬಯಸಿ ಪಡೆದು ತೊಡೆಯೇಱಿಸಿ ಮುದ್ದನೊಱಲ್ದು ನೋಡಿ ನಡೆಪಿದ ಜನನೀಜನಕರ್ಗದೆನಿತಬಲ್ ಜನಿಯಿಸುಮೋ (ಕಾದಂಬ. ೯೬೩) ; ಮುದ್ದಿಬಿನದಮನೊಡರ್ಚಿಯಾಡುವ ತನಯಂ ಸಂಸಾರಶರಧಿಸೇಮೆಯಪದಲ್ತೇ (ದಶಕು. ೩-೩೬). ೬. ಪ್ರೀತಿಗೆ ಪಾತ್ರವಾದ ವ್ಯಕ್ತಿ ಅಥವಾ ವಸ್ತು : ಎನ್ನ ಮುದ್ದೆ ಮುನಿಯದಿರಿದಾವ ಗಹನಂ (ಧರ್ಮಾಮೃ. ೨-೦೨೪) : ಯಶೋದೆ ಪರಮಸುಖಾರ್ದ್ರಲೋಚನದಿನೀಕ್ಷಿಸಿ ನಂದನನಂ . . . ಇದಾರ ನಿಧಾನವಿದಾರ ಮುದ್ದಿದಾರರಸಂ . . . ಇದಾರ ಸಿಂಹಮೆಂದಿರದಮರ್ದಪ್ಪಿದಳ್ (ಜಗ. ೩-೪೦) ; ನಿನ್ನ ಮಗನು ಮುದ್ದು ನಿನಗಾದರೆ ಗೋಪಿ ಯಾರಿಗೇನೆ (ಪುರಂದ. ೨-೮೩ ಕೀರ್ತ). ೭. ತುಟಿ ; ಅಧರ : ನಿದ್ರಾನ್ವಿತೆಯಾಗಿ ಕಣ್ದಟ್ಟಿಯೊಳಗನಿರುದ್ಧನ ಕಂಡಮರ್ದಪ್ಪಿ ಮುದ್ದಾಡಿ ಮುದ್ದ ಬಾಯೊಳಗಿಟ್ಟು ಚುಂಬಿಸುತಿದ್ದಳು ರತಿಶಾಸ್ತ್ರದಲಿ (ಬೋಪಹ. ೨೭-೪೦). ೮. ಅಪೇಕ್ಷಿಸಿದುದು ; ಬಯಸಿದುದು ; ಇಷ್ಟಾರ್ಥ : ಆರುಂಟು ಶಿವಶರಣರೊಳ್ ಕುಲಗುಣಾದಿಗಳನಾರಯ್ಯದವರ ಮುದ್ದಂ ಸಲಿಸಿ ಸಂತವಿಪರೀ ರಸೆಯೊಳ್ (ಶಬ್ದಶಾ. ೦೩-೨೦). (ಗು). ೯. ಪ್ರೀತಿಪಾತ್ರವಾದ ; ನಲ್ಮೆಯ ; ಅಕ್ಕರೆಯ : ಅಳದೆ ನೀ ಪಿಡಿದಾಡೆನ್ನಯ ಮುದ್ದುಬಾಲ (ಪುರಂದ. ೦-೨೨೬-೨) ; ಜಂಭಭೇದಿಯ ಮುದ್ದುಪೂರ್ವಶಿಯನೆ ಗೆದ್ದು ಬೊಂಬೆಯು ಕಾಲೊಳಿಟ್ಟಿಹರು (ಬೋಪಹ. ೧೬-೪೩) ; ನಿಮ್ಮ ಮುದ್ದು ಹುಡುಗಿಗೆ ತಕ್ಕಂತಹ ಅಚ್ಚುಮೆಚ್ಚಿನ ನವಯುವಕನೊಬ್ಬನನ್ನು ಹುಡುಕಿ (ಸುಂದರ. ೩). ೧೦. ಚೆಲುವಿನಿಂದ ಕೂಡಿದ ; ಮನೋಹರವಾದ : ನೀಲೋತ್ಪಲನಿಭಾಂಗದ ಮುದ್ದುಮುಸುಡಿನ ಚಲುವ ದೇವರ ದೇವನೆಸೆದನು (ಕೊರವ. ೦-೬-೮೦); ಪಾಲಿಸಮ್ಮ ಮುದ್ದುಶಾರದೆ (ಪುರಂದ. ೦-೦೪೦ ಕೀರ್ತ); ಓಲಗಶಾಲೆಯ . . . ಮಣಿಯ ಭಿತ್ತಿಗಳೆಡೆಯಲಿ ಮುದ್ದುಬಾಲಕಿಯರು ರಾಜಿಸಿದರು (ಶಂಕರ. ೨೦-೨೪). ೧೧. ಇಂಪಾದ ; ಮಧುರವಾದ ; ಸವಿಯಾದ : 'ಮುದ್ದುನುಡಿ' ಪರಾ. ಮುತ್ತು₂ : ೨. "ನಿರೋಧಾವರಣದೊಳು ಮೌಕ್ತಿಕದೊಳು ಚುಂಬನದೊಳುಂ ಮುತ್ತೆನಿಕ್ಕುಂ" (ಶಬ್ದಮ. ೪೬); ಮುತ್ತಯ್ಯ ಚದುರಿದೇನೆನೆ ಮುತ್ತಲ್ಲದುದುಂಟೆ ವಸ್ತು ಪೆಱತೆನೆ ಸತಿ ನೀಮಿತ್ತಿರಿಮೆನೆ ಕರಮೊಳ್ಪಿತ್ತಿತ್ತಾಗಡೆ ನಿಮ್ಮೊಳರ್ಪವೆನೆ ವೃದ್ಧವಿಟಂ "(ಶಬ್ದಮ. ೬೦೨) ; ಮಸ್ತಕವನು ಚುಂಬಿಸಿ ಮಗುಳಿರದಪ್ಪಿ ಎತ್ತಿಕೊಂಡನು ಮುತ್ತನಿತ್ತು (ಅಂಜನ. ೭-೬೦) ; ಆತ ಕೊಟ್ಟ ವಸ್ತು ಒಡವೆ ನನಗೆ ಅವಗೆ

ಗೊತ್ತು ತೋಳುಗಳಿಗೆ ತೋಳಬಂದಿ ಕಿನ್ನೆ ತುಂಬ ಮುತ್ತು (ಶಾಪಂ. ೫೯-೧೭). ಈ ಮೇಲಿನ 'ಕಾವ್ಯಾವ' ಮತ್ತು 'ಸಾದಲೀ' ಪ್ರಯೋಗಗಳಲ್ಲಿ 'ರತ್ನ' ಎಂಬರ್ಥವೂ ಶ್ಲೇಷಾರ್ಥವಾಗಿ ಹೊರಡುತ್ತದೆ.

ಮುದ್ದಿನ ಕಣಿ = ಚೆಲುವಿನ ಆಕರ, –ನೆಲೆ ; ಸೌಂದರ್ಯದ ಖನಿ : ಮುದ್ದುಗಾಳಿದರ ಮನೆ ಮುದ್ದಿನ ಕಣಿಯಾಗಿ ಉದ್ಧರಿಸ ಬಂದೆ ನೀ ಲೋಕಕ್ಕೆ ಸೊನ್ನಲಿಗಿ ಸಿದ್ಧ ಸುಕ್ಷೇತ್ರ (ಸಿದ್ಧಪು. ೩-೮೬). **ಮುದ್ದುಮುಚ್ಚಟೆ** = ಅತಿಶಯವಾದ ಪ್ರೀತಿ, – ಪ್ರೇಮ : ವಿವಾಹಾದಿಕಾರ್ಯಗಳನ್ನು ಮಾಡಿ ಮುದ್ದುಮುಚ್ಚಟೆಗಳನ್ನು ತೀರಿಸಿಕೊಳ್ಳಲಿಕ್ಕೆ ಮತ್ತೆ ಯಾರೂ ಇಲ್ಲ (ಲಕ್ಷ್ಮೀಶ್ರ. ೧೪೩). [ದೇ.II ತಮಿ. ಮುತ್ತು, ಮುತ್ತಮ್ ; ಮಲ. ಮುತ್ತು, ಮುತ್ತಮ್, ಮುತ್ತಿ ; ತುಳು. ಮುದ್ದು; ಮುತ್ತ, ಮುತ್ತು, ಮುದ್ದ : ತೆಲು. ಮುದ್ದು ; ಕೊಡ. ಮುತ್ತ ; ಕೋಲಾ : ಮುದ್ ; ಪರ್ಜಿ. ಮೊತ್]

**ಮುದ್ದುಕೊಡು** 'ಮುದ್ದುಗೊಡು' ನೋ.

**ಮುದ್ದುಗ** (ನಾ). ಚೆಲುವನಾದವನು : ಅಂದಗಾರ ; ಸುಂದರ : ಗೋಪಿಯರ್ಕೈದೆ . . . ನಗುತ್ತೆತಂದು ಮುದ್ದುಗರಿರವನೀಕ್ಷಿಸುತೆಂದರುನ್ನತ ಬಾಲಲೀಲೆಗಳ (ಕಿಭಾಗ. ೧೧-೬-೨೨) : ನನ್ನಿಯ ನಲ್ಲನಣ್ಣುನಾಣ್ಮಂ ಪುಸಿವರ ಬೊಜಗಂ ಮುದ್ದುಗರ ಮೊದಲಿಗಂ . . . ಬಲ್ಲಿದರ್ ಬಲ್ಲಪನೇಬವು ಮೊದಲಾದ ಪಲವುಂ ಬಿರುದರಂ ಕೇಳ್ದು (ತಕಶಂ. ೬೩-೧೦).

[ಮುದ್ದು + — ಗ2]

**ಮುದ್ದುಗಜ್ಜ** (ನಾ). ಪ್ರಿಯವಾದ ಕೆಲಸ : ಇಷ್ಟವಾದ ಕಾರ್ಯ : ಉದ್ದಂಡರಾಜ ವೇತಂಡರಾಜರು ಬಂದರಿದ್ದವರೆಲ್ಲರಿನ್ನೆಮ್ಮ ಮುದ್ದುಗಜ್ಜವನೆಸಗೆನಲೆಸಗಿದನೆಲ್ಲ ಬದ್ದಿನರನುಮತದಿಂದ (ಭರತ. ೩೯-೬೦).

[ಮುದ್ದು + ಕಜ್ಜ1]

**ಮುದ್ದುಗರೆ** 'ಮುದ್ದುಗಱೆ' ನೋ.

**ಮುದ್ದುಗಱೆ**, ಮುದ್ದುಗರೆ (ಕ್ರಿ). ೧. ಪ್ರೀತಿಯನ್ನು ಸೂಸು ; ಲಲ್ಲೈಸು ; ಅಕ್ಕರೆಯನ್ನು ತೋರಿಸು : ದೇಶಾವಳಲದಾತ್ಮಜನಂತೆ ನಿನ್ನಯ ಮಸ್ತಕಾಗ್ರದಲಿ ನಿಲಿಸುತಿದೆ ಪುಷ್ಕರವ ನಿನಗೀ ಪಲವು ತೆಜದಲಿ ಮುದ್ದುಗಱೆವುತ ನಲಿವುತಿದೆ ಇದ ನಿನ್ನನಗಲಿಸನಂಜಬೇಡ (ಅಮ್ಮಾ. ೬-೫೦). ೨. ಚೆಲುವನ್ನು ಬೀರು, –ಹೊರಹೊಮ್ಮಿಸು : ಸೋಗಿಲೊಳ್ ನಕ್ಕಾಡುತುಂ ಮುದ್ದುಗಱೆವುತುಂ ಲೀಲೆಯಿಂ ಮಕ್ಕಳಾಟಿಕೆಯೊಳೆಸೆದಂ ಜಗವನಾಡಿಸುವ ಸೂತ್ರಧಾರಂ (ಕಿಂಪು. ೫-೩೬). **ಮುದ್ದುಗರೆ** : ೧. ಶಾಂತಲಾದೇವಿಯ ನೊಂದ ಮನಸ್ಸು ಮಗುವಿನ ಈ ಮುದ್ದುಗರೆವ ಮಾತನ್ನು ಕೇಳಿತು (ಸವಿ. ೦೬೩); ಮಗುವಿನ. . . ಗಲ್ಲವನ್ನು ಸವರಿ ಮನಸ್ಸು ತಣಿಯುವಂತೆ ಮುದ್ದುಗರೆಯುತ್ತಿದ್ದಳು (ಹೊಸಕ್ಕ. ೩೬). ೩. ಚುಂಬಿಸು : ಪಾರಿಜಾತಗಳು ಮುದ್ದುಗರೆಯುವವು ಹವಳದುಟಿಗಳಿಂದ ಕಂಪ ಸೂಸಿ ಮಂದಾರ ಉಸಿರ ಬೆರೆಯುವವು (ಹಾಡುಹಾ. ೨೭).

[ಮುದ್ದು + ಕಱೆ1]

**ಮುದ್ದುಗಾತಿ** (ನಾ). ಚೆಲುವೆ ; ಸೊಗಸುಗಾತಿ; ಸುಂದರಿ : ರಾಯನಂ ಅರೆನೋಟದಿಂ ನೋಡಿ. . . ಮುದ್ದುಗೊಳುತಲಿರುವ ಮುದ್ದುಗಾತಿಯಂ ನೋಡಿ (ಶ್ರೀಗಂಧಿ. ೩೩೦-೧೧೧). [ಮುದ್ದು + — ಕಾತಿ5]

**ಮುದ್ದುಗಾರ** 'ಮುದ್ದುಗಾಱ' ನೋ.

**ಮುದ್ದುಗಾಱ**, ಮುದ್ದುಗಾರ (ನಾ). ೧. ಚೆಲುವನಾದವನು; ಸುಂದರ : ಒಂದು ಪೊಲೆಯನುಂಪವಳಸುವನೆ ಕೊಂದ ಮುದ್ದುಗಾಱ ಕಳ್ಳ ಕೊಕೊಕೊ ಎನ್ನಿರೊ (ಕಪಿ. ೨೦೦-೧). **ಮುದ್ದುಗಾರ** : ೧. ಮುದ್ದುಗಾರನಾದ ಮಂದಮಾರುತನ ಮುಂದುಮಾಡಿ. . . ಅಂದಗಾರನಾದ ಚಂದ್ರನು (ಶ್ರೀಗಂ. ೩೫೯-೯). ೨. ಅಂದವಾದುದು : ಚೆಲುವಾದುದು : ಕಣ್ಣಗಂದವಾದ ಮಗುವೊ- ಮುದ್ದುಗಾಱನಾದ ಮಾರಿಯೊ ಕಣ್ಣು ನೆಟ್ಟು ನೋಡುತಿದ್ದನು (ಶಂಗೀತ. ೬-೦೩); ಯಾಳಂದೂರು ಜಹಗೀರದಾರರ ಕಡೆಯ ಕನ್ಯೆ ಮುದ್ದುಗಾರನ ಹಾಗೆ ಇರಲಿಲ್ಲವೆ ? (ರಾಗಿಹ. ೧೯೩).

[ಮುದ್ದು + — ಕಾಱ]

**ಮುದ್ದುಗುಪ್ಪು** (ಕ್ರಿ). ಪುನಃ ಚುಂಬಿಸು, –ಮುತ್ತುಕೊಡು : ಅಪ್ಪಿ ವಣಿಮನು ಮುದ್ದುಗುಪ್ಪಿ ತಾ ದಣಿಯ (ಶ್ರೀಕೃಶಾ. ೭೯).

[ಮುದ್ದು + ಕುಪ್ಪು1]

**ಮುದ್ದುಗೆಯ್**, ಮುದ್ದುಗೈ (ಕ್ರಿ). ೧. ಪ್ರೀತಿಯನ್ನು ತೋರಿಸು; ಮುದ್ದಾಡು; ಲಲ್ಲೆಗರೆ : ನೂತನ ಮೊಳೆವಲ್ಲೊಗೆದುವು ತೊದಳ್ವಾತ ಮಾತನಾಡುವ ಮುದ್ದುಗೆಯ್ವ ಭೂತಳದೊಳಗಂಬೆಗಾಲಿಟ್ಟು ನಡೆವಂತೆ ಚೇತನವಾದುದಂಗಜಗೆ (ಪ್ರೀಹಕ. ೧೦-೩೯); ನೀಡುಂ ನೀಡವ ಪಕ್ಕಿಯ ಮೆಲ್ಲಂ ಬಂಜೆಯೆಸುತೇಡಿಪಂತಿರೆನ್ನಿದಿರೊಳ್ ಓಳ್ಪಿಯುಂ ಮುದ್ದುಗೆಯ್ಯುಂ (ರಾಮಾಶ್ವ. ೧೬-೬). ೨. ಚುಂಬಿಸು; ಮುತ್ತಿಡು : ಮಲ್ಲಿಗೆಗೋಲನರ್ಥಾಂಗಿಯು ಸುತವಾತ್ಸಲ್ಯದಿ ಬಿಗಿಯಪ್ಪಿಕೊಂಡು ಚೆಲ್ಲಿದಳವಯವದಲ್ಲಿ ದಿಟ್ಟಿಯ ಸೊಲ್ಲಿಸಿದಳು ಮುದ್ದುಗೆಯ್ದು (ಪ್ರೀಹಕ. ೧೭-೬೨). **ಮುದ್ದುಗೈ** : ೧. ಪಡೆದವರ್ಮುದ್ದುಗೈವಪರೂಟದೆಡೆಗಳೊಳ್ ಜೋದ್ಯಮಂದಳ್ ಸತ್ಯಭಾಮೆ ನಗುತೆ (ಕೃಪುರಾ. ೬-೯೭); ಬರೆತೆಗೆಪಪ್ಪಿ ಬಾಯ್ದೆರೆಜೆಯ ನೊಯ್ಯನೆ ಚುಂಬಿಸಿ ಮುದ್ದುಗೈದು . . . ಪೋಪುಳಿಯಿಂ ಪೊದಿಸುತ್ತೆ ನಲ್ಲಳಾ (ರಾಶೇಕೆ. ೧೧-೧೦೯). [ಮುದ್ದು + ಕೆಯ್1]

**ಮುದ್ದುಗೆಯಿತ** 'ಮುದ್ದುಗೆಯ್ತ' ನೋ.

**ಮುದ್ದುಗೆಯ್ತ**, ಮುದ್ದುಗೆಯಿತ (ನಾ). ೧. ಸರಸ; ವಿನೋದ : ಲಲ್ಲೆ : ಲೀಲೆಗಾಲಯಮಾದ ಮುದ್ದುಗೆಯ್ತಕ್ಕಂ ಗಾಡಿಗೆ ಪಾಡಾದ ಪಸದನಕ್ಕಂ. . . ಬೆಕ್ಕಸಂಬಟ್ಟು (ಶಾಂತಿಪು. ೩-೩೩ ವ); ನೋಟದೆ ಬೇಟ ಮಂಕುರಿಸಿಪಪ್ಪುದು. . . ಮುದ್ದುಗೆಯ್ತದಲರ್ದಪ್ಪುದು (ಚಂದ್ರಪ್ರ. ೬-೩೨); ಒರ್ವಳ್ ತನ್ನ ವಲ್ಲಭನ ಮೋಹದ ಮುದ್ದುಗೆಯ್ತಮುಂ ನೆನೆದು ಕಲದೊಳರ್ದ ಬರ್ದೆಗಿಂತೆಂದಳ್ (ಅಜಿಂಪು. ೬-೯೯ ವ). ೨. ಬಾಲಲೀಲೆ ; ಮಕ್ಕಳಾಟಿಕೆ : ಚುಂಬಿಸಿ ಲೋಳೆವಾಯ್ದೆಱೆಯನೀಕ್ಷಿಸಿ ಮಕ್ಕಳ ಮುದ್ದುಗೆಯ್ತದೊಳ್ಪಂ. . . ತಣಿವೆಯ್ದುವರೇಂ ಕೃತಾರ್ಥರೋ (ಚಂದ್ರಪ್ರ. ೩-೯೯): ಓಹೋ! ಮುದುಗಣ್ಣಸದ ಮುದ್ದುಗೆಯ್ತದ ರಮಣೀಯ ರಮಣ! (ಮಂತ್ರಶ. ೩೦-೨೯). ೩. ಪ್ರಾಣಿಗಳ ಮರಿಗಳ ಸಂತೋಷದಾಯಕವಾದ ಆಟ : ಈ ತವರೂರ ತಳದೊಳಾಡುವ ಮಱಿಯಂಚೆಯ ಮುದ್ದುಗೆಯ್ತಮುಮಂ. . . ಕಂಡು (ಮಲ್ಲಿಪು. ೪-೨೩). **ಮುದ್ದುಗೆಯಿತ** : ೨. ನೋಡಿ ದಣಿಯರು ಗೋಪಿಯರು . . . ಕೊಂಡಾಡಿ ದಣಿಯರು ಬಾಲಕೃಷ್ಣನ ಮುದ್ದುಗೆಯಿತವನು (ಕಾಳ್ನಿಶಾ. ೨೦-೩೭).

[ಮುದ್ದು + ಕೆಯ್ತ1]

**ಮುದ್ದುಗೈ** 'ಮುದ್ದುಗೆಯ್' ನೋ.

**ಮುದ್ದುಗೊಡು**, ಮುತ್ತುಕೊಡು, ಮುದ್ದುಕೊಡು (ಕ್ರಿ). ಚುಂಬಿಸು; ಮುತ್ತಿಡು : ಅಬ್ಬೊಳುವ ನಾಲ್ಗೆ ಮುದ್ದುಗೊಡಲೀಕ್ಷಿಸುವರ್ (ಸೂಕ್ತಿಸು. ೦೩-೩೦); ಒಲವಿಂದೆತ್ತಿ ತಕ್ಕೈಸಿ ಮುಂಡಾಡಿ ಮುದ್ದುಗೊಟ್ಟು (ಶ್ರೀಂಪು. ೩-೯೯). **ಮುತ್ತುಕೊಡು** : ತೆರೆಯೊಲ್ಮೆ ಸಿರವೆತ್ತಿ ಸಗ್ಗ ನೀಲಿಗೆ ಮುತ್ತುಕೊಡುವಂತೆವೋಲ್ (ಶಶ್ರೀಗ. ೯೦-೨೧೭೩); ಜೇನಿಗೆ ಮುತ್ತುಕೊಟ್ಟ ಹಾಗೆ (ಗಾದೆ). **ಮುದ್ದುಕೊಡು** : ಮೆಲ್ಲಮೆಲ್ಲನೆ ಬಂದು ಗಲ್ಲಕ್ಕೆ ಮುದ್ದುಕೊಟ್ಟು ನಿಲ್ಲದೆ ಓಡಿ ಹೋದ ಕಳ್ಳಗೆ ಬುದ್ಧಿ ಪೇಳೆ (ಪುರಂದ. ೦-೯೦ ಅಷಾಢ); ಭಟ್ಟರ ಎರಡನೆಯ ಮಗುವನ್ನು ಸರಸ್ವತಿ. . . ಲಟಲಟ ಮುದ್ದುಕೊಟ್ಟಳು (ಹಳ್ಳಿ. ೦೫). [ಮುದ್ದು + ಕೊಡು1]

**ಮುದ್ದುಗೊಸರು** (ಕ್ರಿ). ಸರಸದಲ್ಲಿ ಕೊಸರಾಡು: ಲಲ್ಲೆಯಿಂದ ತಪ್ಪಿಸಿ

ಕೊಳ್ಳಲು ಯತ್ನಿಸು : ಮುನಿಸ ಸಸುದೋರುತಿರು ಮುದ್ದುಗೊಸರುತ್ತ ವಿರು. . . ಮನವೊಲಿದು (ಪಂಕಾರಾ. ೩-೬-೩೦).
[ಮುದ್ದು + ಕೊಸರು₁ (< ಕೊಸರ್)]

**ಮುದ್ದುಗೊಳು** (ಕ್ರಿ). ಪ್ರೀತಿಯನ್ನು ಹೊಂದು, – ಪಡೆ : ರಾಯನಂ ಅರೆನೋಟದಿಂ ನೋಡಿ. . . ಮುದ್ದುಗೊಳುತಲಿರುವ ಮುದ್ದುಗಾತಿಯಂ ನೋಡಿ (ಸೌಗಂಧಿ. ೫೧೦-೧೧). [ಮುದ್ದು + ಕೊಳು (< ಕೊಳ್₁)]

**ಮುದ್ದುತನ** (ನಾ). ಚೆಲುವು; ಮೋಹಕತೆ : ಸೋಗೆಯ ಮಱಿಯ ಮುದ್ದುತನಮಂ ಮುದ್ದುಗಣ್ಗಳ ಬೆಳಗೆಂಬೆಳಮಿಂಚಿನ ಗೊಂಚಲಿಂ ಮುಂಡಾಡುತ್ತುಂ(ಅರ್ಜವೆ. ೧-೯೨ ವ); ನಿಱಿವಿಡಿದು ಮೊಗಮಂ ನೋಡುವ ತೂಗಾಡುವ ಮಗನ ಮುದ್ದುತನಮಂ ಬಸವರಾಜಂ ಕಂಡು (ಬಸರ. ೧೧-೧೨೨); ಬೀಱುತಿರ್ದಳು ಮುದ್ದುತನವನು ಕಳೆವೇಱುತಿರ್ದಳು ಮಾಯೆ (ಪ್ರಭುಲೀ. ೩-೩೧). [ಮುದ್ದು + –ತನ]

**ಮುದ್ದುದೋಱು** (ಕ್ರಿ). ಅಕ್ಕರೆಯನ್ನು ತೋರಿಸು ; ಪ್ರೀತಿಸು : ಮೂಱುಲೋಕದ ಕರ್ಮ ಸಮಗಿದಿರೆ ದೀಕ್ಷೆದೋಱೆಂದು ಮುದ್ದುದೋಱಿ ದರು (ಶಶಕ. ೭೧-೬೯). [ಮುದ್ದು + ತೋಱು]

**ಮುದ್ದುನಗೆ** (ನಾ). ಮೋಹಕವಾದ ನಗು; ಚೆಲುವಾದ ನಗೆ : ಗುರು ತರ ಶಿವಧ್ಯಾನಿ ಮುದ್ದುನಗೆಗಳ ದಾನಿ. . . ತೊದಳ್ನುಡಿಯ ತವಕಿಗಂ (ಬಸವ. ೧-೧೯೮); ಕಾಂತೆಯರ . . . ತಳಿರ್ದುಟಿಗಳಂ ಮುದ್ದುನಗೆಗಳಂ ಕಂಡು ನಡೆಯಲ್ ಮುಂದೆ ಕಾಲೇಳದೆ. . . ಪಥಿಕಸಂಕುಳಮಿರ್ದುದು (ಕಬ್ಬಿ. ೧೧-೧೯). [ಮುದ್ದು + ನಗೆ]

**ಮುದ್ದುನುಡಿ** (ನಾ). ಸವಿಯಾದ ನುಡಿ; ಇಂಪಾದ ಮಾತು : ಕಾಂತೆ ಯರ ಮೊಲೆಯ್ನುಡಿಯಿಂ ಸಂಜೆಸುರುಳಿಯೆಸ್ನದೆ ಮುದ್ದುನುಡಿಯಿಂದೊಡಂ ತನ್ನ ಕೇಡಂ ಬಗೆವನಲ್ಲದೆ ಸುಖಮಂ ಬಗೆಯಂ (ರಹಸ್ಯ. ೭-೧೨೩); ಅಕ್ಕರಂಗಳೊಳೆಸೆಯುದಿಹ ಮುದ್ದುನುಡಿಗಳಿಂ . . . . ಶಿಶುಲೀಲೆಯಿಂ ಕೆಲ ದಿಸಂ ತಾವ್ನೆ ಪರುಷಂದೋಱಿದಂ ಕುವರನು (ಕಂಪ. ೩-೪೩).
[ಮುದ್ದು + ನುಡಿ₂]

**ಮುದ್ದುಮರಿ** 'ಮುದ್ದುಮಱಿ' ನೋ.

**ಮುದ್ದುಮಱಿ, ಮುದ್ದುಮರಿ** (ನಾ). ಅಕ್ಕರೆಯ ಮರಿ; ಪ್ರೀತಿಯ ಶಾಬ : ವಿಹಂಗ ಸಂತೋಷದಿ ತನ್ನ ಮುಂಗಟ್ಟದ ಮುದ್ದುಮಱಿಗಳ್ಗೆ ಗುಟುಕೀಯೆ ಕಂಗೊಳಿಸಿತು ರುಕ್ಮಿಣಿಗೆ (ಮೋಹತ. ೪-೯). **ಮುದ್ದುಮರಿ:** ತನ್ನ ಮುದ್ದುಮರಿಗಳನ್ನು ಹಗಲೆಲ್ಲಾ ಅದು ನೋಡಿಕೊಳ್ಳುವ ರೀತಿ ಯಾರಿಗೂ ಒಂದು ಗಳಿಗೆ ನಿಂತು ನೋಡುವಂಥಾದ್ದು (ಪಕ್ಷಿಕು. ೧೬).
[ಮುದ್ದು + ಮಱಿ]

**ಮುದ್ದುಮಾತು** (ನಾ). ೧. ಪ್ರೀತಿಯ ಮಾತು ; ನಲ್ಮೆಯ ನುಡಿ : ಮೆಚ್ಚಿದಳೆನಿಮನಾಡಿದ ಮುದ್ದುಮಾತಿಗೆ (ಮೋಹತ. ೧೮-೯೨); ಮುದ್ದುಮಾತಿ ನಲಿ ಮೋಹದ ಬೀಱುಯುವನೊಳಗಿದ್ದ ಹಣವ ತೆಗೆ (ಕುಹು. ೬-೧೩೦).
೨. = ಮುದ್ದುನುಡಿ : ಇವನ ಮುದ್ದುಮಾತುಗಳನ್ನು ಕೇಳಿ ಪಾರ್ವತಮ್ಮ ಮರುಳುಗೊಂಡ ಚಿಗುರಿಯಂತೆ ನೋಡುತ್ತಿದ್ದಾಳೆ (ಕೆಳುಹು. ೧೯೦).
[ಮುದ್ದು + ಮಾತು₁]

**ಮುದ್ದುಮೊಗ** (ನಾ). ಚೆಲುವಾದ ಮುಖ; ಸುಂದರವದನ : ಬಿಡದ ಡಂ ಕೊಬ್ಬು ಕುಚಯುಗವೆಡಗಿಱಿದಿರೆ ಮುದ್ದುಮೊಗವನೆಂದುಂ ನೋಡಲ್ ಪಡೆಯದೆ ಬಡವಾದಂತಿರೆ ಬಡನಡು ಸೊಗಯಿಸುವುದಾ ಸರೋಜಾಸನೆಯಾ (ಕಾದಂಬ. ೯) ; ಕೆಂಜೆಡೆ ತಳರ್ನಡೆ ಮುದ್ದುಮೊಗಂ . . . ದಟ್ಟಡಿಯೊಳ್ಪ ರಿದೋಡುವಂಗಣಂ ನೆಱೆ ತನಗೊಪ್ಪುವರ್ಭಕನನೊರ್ವನನಾಂ ಪಡೆವಂದವಾ ವುದೋ (ಸುಕುಮಾ. ೯-೯೯); ಥಳಥಳಿಸುವ ಮುದ್ದುಮೊಗದ ನರ್ತಕಿಯರು ಘೀಲನೆ ನಡೆತಂದರಾಗ (ಕಂಪು. ೯-೩೬). [ಮುದ್ದು + ಮೊಗ]

**ಮುದ್ದುವಡೆ** (ಕ್ರಿ). ಚೆಲುವಾಗು ; ಸೊಗಸಾಗು ; ಮನೋಹರತೆ ಯನ್ನು ಹೊಂದು : ಮುದ್ದುವಡೆದು ಮನೆಯಂಗಣದೊಳ್ ಮಸವೊಸೆ ದಾಡುವ ಮಕ್ಕಳ ವಿನೋದಮಂ ಕಾಣ್ಬ ದಿವಸಮೆಂದಾದಪುದೋ (ಸುಕುಮಾ. ೯-೧೧೧). [ಮುದ್ದು + ಪಡೆ₁]

**ಮುದ್ದುವೀಱು** (ಕ್ರಿ). ಚೆಲುವನ್ನು ಹೊರಸೂಸು, — ಹೊಮ್ಮಿಸು : ಕೃಷ್ಣನ ಮೇಲೆ ಬಾಲೆ ಕಣ್ಣೋಲದಿನಂದು ಬಿತ್ತರಿಸಿದಳ್ ನಗೆವೀಱುವ ಮುದ್ದುವೀಱುವ . . . ಮುಗ್ಧ ಕಟಾಕ್ಷಮಾಲೆಯಂ (ಜಗವಿ. ೧೧-೭೯) ; ಕಡೆವಾಯೊಳ್ ಪಾಲಧಾರೆ ಪೊಳೆವಲ್ಗಳ್ವೊಲ್ ಬಿಡದೆಸೆಯೆ ಮುದ್ದು ವೀಱುತ್ತಡಿಯಿಡುವುವು ಪಲ್ಲವಮಱಿಯ ಮಱಿಗಳ್ ವನದೊಳ್ (ಶಬರ. ೩-೪೩). [ಮುದ್ದು + ಬೀಱು₁]

**ಮುದ್ದುವೆಣ್.** ಮುದ್ದುವೆಣ್ಣು (ನಾ). ಮುದ್ದಾಗಿರುವ ಹೆಂಗಸು : ಸುಂದರಿ ; ಚೆಲುವೆ : ಮುದ್ದುವೆಣ್ಗೆ ಅಸು ಮೋಹ ಹೊತ್ತುಸಱಿಯದೆ ಮೋಹಿಸುವರು ರಸಿಕರು (ಕುರಾಕಾಂ. ೨೪-೧೧೪) ; ಬೆಲ್ಲವೆ ನೀ ಮುದ್ದು ವೆಂಗಳ ಮ್ಯಾಡಂವಾಯ ಬೆಲ್ಲವಾಗಿರದೆ ಬಂದಿಲ್ಲಿ ಹೊಲ್ಲಿಹ ಸೊಣಿನ ಮುತ್ತಿಸಿ ಕೊಳಬೇಡ (ಮೋಹತ. ೨೦-೨೯). **ಮುದ್ದುವೆಣ್ಣು** : ಮುದ್ದುವೆಣ್ಣು ಮುದ್ದುವೆಣ್ಣಗೆ ಹೇಳದಳು ನಿನ್ನ ಬಿಟ್ಟು ಕಾಲಿದ್ದು ಹೋಪೆನೆ ಹೋಪುದಿಲ್ಲ (ಮೋಹತ. ೨೯-೩); ಬಣ್ಣದುಟಿಯ ಭಾವವ ಬೀಱುತ ಮುದ್ದುವೆಣ್ಣುಗಳ್ಕೆ ತಂದರಾಗ (ಕಂಪು. ೨೧-೭೪). [ಮುದ್ದು + ಪೆಣ್]

**ಮುದ್ದುವೆಣ್ಣು** 'ಮುದ್ದುವೆಣ್' ನೋ.

**ಮುದ್ದುಸೂಸು** (ಕ್ರಿ). ಪ್ರೀತಿಯನ್ನು ವ್ಯಕ್ತಪಡಿಸು ; ಒಲವನ್ನು ತೋರಿಸು : [ವಿನಯ ಪುಳಿಂದ . . . ಮುದ್ದುಸೂಸಿ ಚಂದ್ರಹಾಸನೆಡೆಗೆ ಓಡುತ್ತಾನೆ] (ಕಂಪ್ರಸ. ೩೮-೨೦). [ಮುದ್ದು + ಸೂಸು₁]

**ಮುದ್ದುಸೊಲ್ಲು** (ನಾ). = ಮುದ್ದುಮಾತು ೧ : ನೀನೆ ನಿನ್ನ ನಲ್ಲಗೆ ನೆಱೆ ಸೋತಳಹುದು ಅಲ್ಲಾದರರಸನನೀತು ಬಣ್ಣಿಪ ಮುದ್ದುಸೊಲ್ಲೇಕೆ ಬಿಡುವಕ್ಕ ನಿನಗೆ (ಶರತ. ೭-೩೮). [ಮುದ್ದು + ಸೊಲ್ಲು₂ (< ಸೊಲ್₂)]

**ಮುದ್ದೆ₁** (ನಾ). ೧. ಕಲಸಿದ ಆಹಾರ, ಹಿಟ್ಟು ಮುಂತಾದುವುಗಳ ಮೆದುವಾದ ದಪ್ಪ ಉಂಡೆ : ಅಶನದ ಮುದ್ದೆಯ ಕೇಳಿ (ಕಬ್ಬಾ. ೩೦); ಪಾರ್ಥನ ಕರುಳ ದೊಂಡೆಯ ಕೂಳ ಮುದ್ದೆಯ ಬಡಿಸಿ ದೈತ್ಯರಿಗೆ . . . ದಣಿಸಿದಡರಸು ಕೌರವನೆಸ್ನ ಸಾಕಿತಕಿಂದು ಫಲವು (ಕುವ್ಯಾಸ. ೮-೯೨); ತೆಂಗಾ ಯರೆದು ಕದಡಿ ಹಾಲೊಳಗೊಂದು ಮುದ್ದೆ ಬೆಣ್ಣೆಯನಿಕ್ಕಿ (ಸೂಶಶಾ. ೪-೪೩).
೨. ಕಲಸಿದ ಮಣ್ಣು, ಗಂಧ ಮುಂತಾದುವುಗಳ ಗಡ್ಡೆ, – ಕರಣೆ : ಉಳ್ಳರುಮೊಂದಪ್ಪಂತಿರೆಯು ಮಣ್ಣುಮುದ್ದೆಯೊ ಪೇಟೆ (ಸಮುಶ. ೨-೩೩); ಮೇಣದ ಮುದ್ದೆ . . . ಎಕ್ಕಲನ ಕರುಣೆಗಳಂತಿವನು ಕೊಂಡೊಲಿದು ಪೋಪ ಬೇಡರ ನೆರವಿಯೊಪ್ಪಿದುದು (ಕಾಳ್ಗಾ. ೧೩-೬); ಗಾತ್ರಾನುಲೇಪನಿ, ವರ್ತಿಃ— ಸುಗಂಧದ್ರವ್ಯಗಳೆಲ್ಲವನ್ನೂ ಕುಟ್ಟಿ ಅರೆದ ಮುದ್ದೆ (ಸಿದ್ಧಾಂತ. ೨೦೯). ೩. ರಾಗಿ ಮುಂತಾದವುಗಳ ಹಿಟ್ಟನ್ನು ಬೇಯಿಸಿ ಉಂಡೆ ಮಾಡಿದ ಒಂದು ಬಗೆಯ ಆಹಾರ ಪದಾರ್ಥ ; ಹಿಟ್ಟು : ಒಂದು ಮುದ್ದೆ ಹಲೀಸಾಗಿ ಹೊಡೀತಿದ್ದ ಬರಿ ಸಾರಿನಲ್ಲಿ. ಜೊತೆಗೆ ತುಂಡುಗಳು ಬಿದ್ದರಂತೂ ಎರಡು ಮುದ್ದೆಗೆ ಕಡಿಮೆಯಿಲ್ಲ (ಪಸೂರು. ೨೨೨) ; ಮುದ್ದೆಗೆ ಎದ್ದ, ಗುದ್ದಲಿಗೆ ಬಿದ್ದ (ಗಾದೆ). ೪. ಆಹಾರ : ಕೈಯ ಮುದ್ದೆಯ ಕೆಡಹಿದಲ್ಲಿ ಬಾಯಿಗೆ ಬಯಲು (ಪುರಾತ. ೨೭೬-೩೦); ಅವೆಱ ಮೇಲೆ ಸರುಗದ ಮುಟ್ಟಿಗೆಗಳನಿಟ್ಟು ಮುದ್ದೆಗಳನಿಟ್ಟು ಮೊದೆವಟ್ಟು (ಪ್ರಾವಕಾ. ೧೧೬-೩). ' ಮುದ್ದೆಗೊಳ್ಳು ' ಪರಾ. ೫. ಒಂದು ಬಗೆಯ ತಿನಿಸು : ಹೊರೆ ಚಕುಲೆ ಚಿಗುಳಿಯು ಕಕುಳ್ಕೆ ಮುದ್ದೆಯು (ದೇವಾಂಗ. ೩-೨೨೩). ೬. (ಆಲಂ) ಮೊತ್ತ ; ರಾಶಿ ; ಸಮೂಹ : ಅಡಗಿದ ತತ್ತ್ವಂಗಳ ತತ್ವದ ಮುದ್ದೆಯ ತುತ್ತನೊಲ್ಲದೆ ನಿಶ್ಚಯನಾದ ನಿಃಕಳಂಕಮಲ್ಲಿಕಾರ್ಜುನಾ

(ಕೋಣವಿಜಾ. ೬-೦೯); ಮುದ್ದಿನ ಮುದ್ದೆ ಲಲ್ಲೆಯು ಮೆಲ್ಲೆದೆಗಾರ್ತಿ (ಉತ್ತ.ಲೀ. ೩-೩೩ ಪ) ; ಕಂದನ . . . ಮುದ್ದಿನ ಮುದ್ದೆಯಂದವಂಗವನೆತ್ತಿಕೊಂಡು ನಲಿತೋಳ್ಗಳಿಂದಪ್ಪಿ (ಕೃಪಿಚ. ೦೬-೨೦). ೭. ಮುರುಟಿದುದು ; ಮುದುಡಿದೆ : ಮುದ್ದೆಯಾಗಿ ಬಿದ್ದ ಅವಳ ಅವಸ್ಥೆ ಅವಳ ಮನಸ್ಸಿನ, ಅವಳ ದೇಹದ ಅವಸ್ಥೆಯನ್ನು ನಿರ್ದೇಶಿಸುವಂತಿತ್ತು (ಕಮನ. ೨೬೦); ಮಕ್ಕಳ ಚಟು ವಟಿಕೆಗಳಿಗೆ ಅವಕಾಶವಿದ್ದರೂ . . . ಮುದ್ದೆಗಳಂತೆ ಕುಳಿತಿರಬೇಕಾದ ಸನ್ನಿವೇಶ ಒದಗುತ್ತಾ ಬಂತು (ಕಿಶ್ವರ. ೯೬೦). ೮. ನೇಕಾರನು ನೇಯ್ಗೆಯ ಎಳೆಗಳನ್ನು ಬಿಗಿಗೊಳಿಸಲು ಉಪಯೋಗಿಸುವ ಗೂಟ : (೬).

ಮುದ್ದೆಮಾಡು=೧. ರಾಗಿಹಿಟ್ಟನ್ನು ಬೇಯಿಸಿ ಉಂಡೆಮಾಡು : ಇಂದು ಊಟಕ್ಕೆ ಮುದ್ದೆಮಾಡಿ ಜೊತೆಗೆ ಅವರೆಕಾಳುಹುಳಿ ಮಾಡಿದ್ದೆ (ರೂಢಿ). ೨. ಒಟ್ಟುಸೇರಿಸು : ರಾಶಿಮಾಡು : ಮದನನ ಶೃಂಗಾರ ಮನೊರ್ಮೋದಲಂಗನೆ ಮುದ್ದೆಮಾಡಿ ತೋರ್ಪವೊಲೊಪ್ಪಿರ್ದುದು ಚೆಲ್ವ ನೆಂಡುವಿಟ್ಟರಳ್ಕೆರ್ದೆಯೊಯ್ಕನೆ ಕಂತುಕಾವತಿಯ ಬಲಗೆಯ್ಯೊಳ್ (ದಶಕು. ೦೨-೨೬). ೩. ಮುದುರಿಕೊಳ್ಳು ; ಸಂಕುಚಿತಗೊಳಿಸಿಕೊಳ್ಳು ; ಹುದುಗಿಸು : ಗೌಡ ಮೈಯನ್ನು ಮುದ್ದೆಮಾಡಿ ಮೂಲೆಯಲ್ಲಿ ಒರಗಿದ್ದ (ಮೂಕಜ. ೭). ಮುದ್ದೆಯಾಗು= ೧. ದ್ರವಪದಾರ್ಥಗಳನ್ನು ಕಾಯಿಸಿ ಅಥವಾ ಹಾಗೆಯೇ ಹಿಟ್ಟು ಮುಂತಾದುವುಗಳನ್ನು ಸೇರಿಸಿ ಕಲಸುವುದರಿಂದ ಗಟ್ಟಿಯಾಗು,—ಮೆದುವಾದ ಉಂಡೆಯಾಗು : ಹದನಾಗಿ ಕಾಯ್ದು ಹಾಲಿನ ಗಟ್ಟಿ ಕೆನೆದೆಗೆವುತ . . . ತುಬುವೆಯ ಬೇರಿನಿಂ ತೊಳಸೆ ಮುದ್ದೆಯಹುದು (ಸೂಶಾಸ್ತ್ರ. ೦-೫೯) ; ಎರಡು ತೊಲೆ ಮೇಣ ಬೆರಸುವುದರಿಂದ ತೈಲವು ಸ್ವಲ್ಪ ದಪ್ಪವಾದೀತಲ್ಲದೆ ಬೆಣ್ಣೆಯಂತೆ ಮುದ್ದೆಯಾಗಲಾರದು (ಶೀಕುಶೂ. ೬-೨೦ ಅಡಿಟಿ); ಹಾಲನ್ನು ಕಂದಿಸಿ. ಚೆನ್ನಾಗಿ ಗಾಳಿಸಿದ ಹಿಟ್ಟನ್ನೊಡನೆ ಬೆರಸಿ ಮುದ್ದೆಯಾಗುವವರೆಗೆ ಕಲಸುವುದು (ಅಡುಗೆ. ೯೯). ೨. ಅಕ್ಕಿ, ರವೆ ಮುಂತಾದುವು ಹೆಚ್ಚು ನೀರಿನೊಂದಿಗೆ ಅತಿಯಾಗಿ ಬೇಯುವುದರಿಂದ (ಉದುರಾಗದೆ) ಮಿದ್ದೆಯಾಗು : ಇಂದು ಅನ್ನ ಮುದ್ದೆಯಾಗಿದೆ (ರೂಢಿ). ೩. ಹುದುಗು; ಅಡಗು : ಕುಗ್ಗು; ಚಳಿಯಿಂದಲೂ ಭಕ್ತಿಯಿಂದಲೂ ವಿನಮ್ರನಾಗಿ, ಮುದ್ದೆಯಾಗಿ ಒಳ ಸೇರುವ ಇನ್ನೊಬ್ಬ ಭಕ್ತನು . . . ನನ್ನ ಮೋಂಬದ ಮಾಡರಿಯಲ್ಲಿ ಕಾಲಿಟ್ಟರೆ ಏನು ಗತಿ! (ಬೀಚಿಸ್ವ. ೯೯). [ದೇ.॥ ತಮಿ. ಮುತ್ತ್ಯೈ, ಮೊತ್ತೈ; ತುಳು. ಮುದ್ದೆ; ತೆಲು. ಮುದ್ದ]

**ಮುದ್ದೆ₂, ಮುದ್ದಾ** (ನಾ). ೧. ವಿಚಾರ; ಸಂಗತಿ; ವಿಷಯ: ನಾನು ಬೆಳಗಾಂವ್ಯಾಗ ನಿಂತದ್ದು ಯಾಕ ಅನೂದನ್ನ ಹೇಳತೀನಿ ಅಂದಿದ್ದೆ. ಅದು ಮುಖ್ಯ ಮುದ್ದೇ (ಬೀಶಹ. II. ೬೩). ೨. ಮೊಕದ್ದಮೆಯಲ್ಲಿ ವಾದಿ, ಪ್ರತಿವಾದಿಗಳು ಮಾಡುವ ವಾದ : (ಕಸಂಗ್ರ. ೩೫). ೩. ಕದ್ದ ಮಾಲು; ಕಳುವಾದ ಪದಾರ್ಥ. ಮುದ್ದಾ : ೪. ಅಭಿಪ್ರಾಯ; ತಾತ್ಪರ್ಯ: ಈ ಮಾತಿನ ಮುದ್ದಾ ಏನು? (ಶ್ರಶಾಕ. ೯೬-೦೩).

ಮುದ್ದೆಹಿಡಿ=ಅಭಿಪ್ರಾಯವನ್ನು ಹೊಂದು : ಪತ್ರಗಳಲ್ಲಿಯ ಮಜಕೂರವು ಎಷ್ಟು ಸ್ವಲ್ಪದಲ್ಲಿ ಎಷ್ಟು ಮುದ್ದೆಹಿಡಿದು ಮತ್ತು ಕಲಮವಾರ ಇದ್ದೀತು ಅಷ್ಟು ಒಳತಾದದ್ದು (ಮುಂಬಿಪ್ರಾ. ೩೩). ಮುದ್ದೇ ಮೊಲ್, ಮುದ್ದೇಮಾಲು = ಕಳುವಾದ ಪದಾರ್ಥ ; ಕದ್ದ ಮಾಲು: ಅವರವ ಸಾಕ್ಷಿ ಹಾಕಿಸಿ ಮುದ್ದೇಮಾಲ್ ಸಹಿತ ಹಿಡಿದು ಪೋಲೀಸರ ಕಾಬೇಕ್ತ ಕೊಟ್ಟುಬಿಡತೇವು (ಹೂಸಂಕಾ. ೦೦೦). ಅವನು . . . ಮುದ್ದೇಮಾಲು ಸಹ ಹೇಗೆ ಪಾರಾಗಿ ಹೋಗುವನೋ ನೋಡೋಣ ! (ಕಶ್ಮಕಾ. ೨೩).

[←ಅರ. ಮುದ್ದಆ, ಮುದಾಅ ; ಹಿಂ. ಮುದ್ದಾ, ಮುದ್ದಆ; ಮರಾ. ಮುದ್ದಾ, ಮುದಾ]

**ಮುದ್ದೆಗಣ** (ನಾ). (?) : ಪೊಟ್ಟು ವಿನಿತೀಶ್ವರಕ್ಕಂ ಸರ್ವ್ವಪರಿಹಾರಂ ಕೊಟ್ಟವರ್ಮ್ಮಣ್ಣುಂ ಮನೆಯುಂ ತೋಟಕ್ಕಂ ದೇವೇನ್ದ್ರತಮ್ಮಡಿಗಳಾ ಮುದ್ದೆಗಣರಾ ಗೋಷ್ಠಿಭರ್ಮ್ಮರವರ್(ಎಕ. IV (R), ಹಾಸುರಾ. ೧೯೭-೩; ಸು. 750). [ ? ]

**ಮುದ್ದೆಗೊಳ್ಳು** (ಕ್ರಿ). ಆಹಾರವನ್ನು ಸ್ವೀಕರಿಸು,—ತೆಗೆದುಕೊಳ್ಳು; ಊಟಮಾಡು : ಮುಸುಂಡ ಮುಜುಂಕಿಸಿ ಮುದ್ದೆಗೊಳ್ಳೆಂದಾ ಹಸಿದು ಕೋಪದೊಳು ನಿಂದಿರ್ದ ಅಸುರನಿದಿರು ನಡೆದಣಕವಾಡುವನಾ ಅಸಮ ವಿಕ್ರಮಿಜುನಿಜನು (ಸೀಚಿಹಂ. ೨೩-೦೩೯).

[ಮುದ್ದೆ₁ + ಕೊಳ್ಳು₁ (<ಕೊಳ್₁)]

**ಮುದ್ದೆಯ್ಯ** 'ಮುದ್ದಯ್ಯ' ನೋ.

**ಮುದ್ದೈ₁** 'ಮುದ್ದಾಯಿ' ನೋ.

**ಮುದ್ದೈಯಾಲೆ** (ನಾ). ಆರೋಪಕ್ಕೆ ಗುರಿಯಾದ ವ್ಯಕ್ತಿ; ಪ್ರತಿವಾದಿ: ಅವಳು ಮುದ್ದೈಯಾಗಿ, ಇಲ್ಲವೆ ಮುದ್ದೈಯಾಲೆಯಾಗಿ—ಎರಡೂ ವಿಧದಿಂದಲೂ ಮೆಜಿಸ್ಟ್ರೇಟರ ಮುಂದೆ ಬಂದವಳಲ್ಲ (ಪಹಸ. ೩೦).

[←ಅರ.ಹಿಂ.ಮುದ್ದಾಲೇಹ್; ಮುದ್ದಾಲೇಹ್; ಮರಾ. ಮುದಾಳೈ]

**ಮುದ್ರಕ** (ನಾ). ಪುಸ್ತಕ, ಪತ್ರಿಕೆ ಮೊದಲಾದುವನ್ನು ಅಚ್ಚುಮಾಡುವವನು,—ಮುದ್ರಿಸುವವನು : ಪ್ರತಿಯನ್ನು ಓದಿ . . . ನಿವಾರಿಸದ ದೋಷಗಳು ಮುದ್ರಿಸಿದ ಪ್ರತಿಯಲ್ಲಿ ಕಂಡುಬರುವುದರಿಂದ ಮುದ್ರಕನ ಮೇಲೆ ಅವರ ದುಷ್ಪರಿಣಾಮಗಳು ಉಂಟಾಗುವುವು (ಮುದ್ರಕ. ೨೬). [ಸಂ.]

**ಮುದ್ರಣ** (ನಾ). ೧. ಅಕ್ಷರದ ಮೊಳೆ ಮುಂತಾದುವುಗಳನ್ನು ಜೋಡಿಸಿ ಕಾಗದ, ಬಟ್ಟೆ ಮುಂತಾದುವುಗಳ ಮೇಲೆ ಮುದ್ರಿಸುವುದು; ಅಚ್ಚು : ಅಕ್ಷರಗಳು, ಅಂಗಗಳು . . . ಕುರುಹುಗಳು ಮೊದಲಾದುವನ್ನು ಕಾಗದ, ಬಟ್ಟೆ, ಹಾಗೂ ಮತ್ತಾವುದಾದರೂ ಸ್ಥಿತಿಸ್ಥಾಪಕ ಗುಣವುಳ್ಳ ಹಾಳೆಯ ಮೇಲೆ ಒತ್ತುಯಂತ್ರದ ಒತ್ತಡದಿಂದ ಮಸಿಯಲ್ಲಿ ಪ್ರತಿ ತೆಗೆಯುವುದಕ್ಕೆ ಮುದ್ರಣವೆಂದು ಹೆಸರು (ಮುದ್ರಕ. ೦); ಕನ್ನಡ ವರ್ಣಮಾಲೆ ಕಲಿಯುವುದು ಕಷ್ಟ . . . ಮುದ್ರಣಕ್ಕೂ ತೊಡಕಾಗಿದೆ (ದ್ರಾಪಿ. ೯೭). ೨. ಮುದ್ರೆಯೊತ್ತುವುದು; ಮೊಹರು ಮಾಡುವುದು. [ಸಂ.]

**ಮುದ್ರಣಕಾರ** (ನಾ). = ಮುದ್ರಕ : ನಾಲ್ಕೈದು ಮುದ್ರಣಕಾರರಲ್ಲಿ ಹೋಗಿ ಕೇಳಿದ್ದಾಯಿತು (ಕಂಗಾಳ್. iii. ಮುನ್ನುಡಿ). [ಸಂ.]

**ಮುದ್ರಣಯಂತ್ರ** (ನಾ) ಅಚ್ಚುಮಾಡುವ ಯಂತ್ರ; ಛಾಪುಯಂತ್ರ: ಮುದ್ರಿಸಬೇಕಾದ ವಸ್ತುವಿನ ಮೇಲೆ ಮಸಿ ಲೇಪಿಸಿ ಕಾಗದವನ್ನು ಅದರ ಮೇಲಿಟ್ಟು ಒತ್ತಿ ಪ್ರತಿತೆಗೆಯಲು ಉಪಯೋಗಿಸುವ ಸಾಧನವೇ ಮುದ್ರಣಯಂತ್ರ (ಮುದ್ರಕ. ೯೭). [ಸಂ.]

**ಮುದ್ರಣಾಲಯ** (ನಾ). ಮುದ್ರಿಸುವ ಸ್ಥಳ ; ಅಚ್ಚುಕೂಟ; ಛಾಪಖಾನೆ : ಗುಪ್ತ ಮುದ್ರಣಾಲಯವಿದ್ದ ಮನೆಯೊಂದರಲ್ಲಿ ಕೆಲವು ಸಂಚುಗಾರರೊಡನೆ ಅವಳು ವಾಸಿಸುತ್ತಿದ್ದಳು (ಭ್ರಪರು. ೨೦೦). [ಸಂ.]

**ಮುದ್ರಹಸ್ತ** (ನಾ). ಯಾವನಾದರೂ ಒಬ್ಬ ರಾಜ, ದಂಡನಾಯಕ ಮುಂತಾದವರ ಪರವಾಗಿ ರಾಯಸದ ಪತ್ರಗಳಿಗೆ ಮುದ್ರೆಯನ್ನು ಒತ್ತಲು ಅಧಿಕಾರವನ್ನು ಪಡೆದಿರುವ ವ್ಯಕ್ತಿ (?) : ಶ್ರೀಮನು ಮಹಾಪ್ರಚಣ್ಡದಣ್ಡನಾಯಕ ಸೇ[ನಾ]ಧಿಪತಿ ಮುದ್ರಹಸ್ತಂ ಸುಂಕದ ಮಾಯಿದೇವದಂಡನಾಯಕರು (ಶಾಇಅ. XX. ೦೭೬-೯೯; 1193); ಆ ಸ್ಥಳದ [ಮುದ್ರಹ]ಸ್ತ ವಂಕುಡೆಯರ × × ಗೌಡನಾಡಗಲುಡ (ಶಾಇಅ. XX. ೨೨೬-೦೩; 1306).

[ϸ ಇದು 'ಮುದ್ರಾಹಸ್ತ' ಎಂಬುದರ ಅಪಲಿಖಿತವಿರಬಹುದು]

**ಮುದ್ರಾಂಕಿತ** (ಗು). ೧. ಮುದ್ರೆಯೊತ್ತಿದ ; ಅಚ್ಚೊತ್ತಿರುವ. ೨. ಅಚ್ಚಾದ; ಮುದ್ರಿತವಾದ : (೬). (ನಾ). ೩. ಮೊಹರು

ಮಾಡಿದುದು : ಮುದ್ರೆಯುಳ್ಳುದು : ಅರಸಂಗೆ ಮನೆವೆರ್ಗಡೆ ಮುದ್ರಾಂಕಿತಮಪ್ಪಪಾಯಸದ ಮುದ್ರೆಯಂ ಕಳೆದು ಸುತ್ತನಬಿಗಿದು ತೋಱುವುದುಂ (ಶಾಂತಿಪು. ೨-೨೨ ವ). ೪. ಗುರುತು ; ಲಾಂಛನ : ಚರಣಾಲಕ್ತಕಲಾಂಛನಂ ನಿಟಿಲದೊಳ್ ಕೇಯೂರಮುದ್ರಾಂಕಿತಂ ಕೊರಲೊಳ್ . . . ತಳ್ತೊಪ್ಪುಯ್ಯೆ ನಿಚ್ಚಂ ವಿಚಿತ್ರರತಪ್ರೌಢತೆ ಭಾವಗಮ್ಯ ಮೆನಿಕುಂ ಶ್ರೀರೂಪಕಂದರ್ಪನಾ (ಜಗನ್ನಾ.೬೩೩). ೫. [ದ್ವೈತ] ವೈಷ್ಣವರು ಧರಿಸುವ ಶಂಖ, ಚಕ್ರ, ಗದಾ, ಪದ್ಮ ಮತ್ತು ನಾರಾಯಣ—ಎಂಬ ಐದು ಗುರುತುಗಳು : ಹೆಂಗಸರಲ್ಲಿಯೂ ಅನೇಕರು ಮುದ್ರಾಂಕಿತರಾಗಿ ಕೆಲಸಾರಿದರು (ವಾಗ್ಭೂ. ೪). ೬. ವಿಷ್ಣುಲಾಂಛನದಿಂದ ಕೂಡಿದ ಮುದ್ರೆಯನ್ನು ಹಾಕಿಕೊಳ್ಳುವವನು; ಮಾಧ್ವ: ವೈಷ್ಣವ : ದ್ವೈತದ ದಿವ್ಯಜ್ಞಾನವನ್ನು ಮುದ್ರಾಂಕಿತರಲ್ಲವವರಲ್ಲಿ ಮುದ್ರಿಸಿ ಹಂಚುವುದು ಪಾಪವೋ ಪುಣ್ಯವೋ ಎಂಬ ಸಮಸ್ಯೆಯೋ ಇನ್ನೂ ಕೆಲವರಿಗೆ ಬಗೆಹರಿದಿಲ್ಲ (ವಿಚಾಮಂ. ೫). [ಸಂ.]

**ಮುದ್ರಾಕರ** (ನಾ). ೧. ಮೊಹರನ್ನು ತಯಾರಿಸುವವನು. ೨. ಚಿತ್ರ, ಅಕ್ಷರ ಮುಂತಾದುವನ್ನು ಕೆತ್ತುವವನು. ೩. ನಾಣ್ಯವನ್ನು ಟಂಕಿಸುವವನು. [ಸಂ.]

**ಮುದ್ರಾಕ್ಷರಶಾಲೆ** (ನಾ). =ಮುದ್ರಣಾಲಯ : ಶ್ರೀ ಸಿದ್ಧೇಶ್ವರಪುರಾಣವು . . . ಸ್ವಕೀಯ ಶಂಕರವಿಲಾಸ ಮುದ್ರಾಕ್ಷರಶಾಲೆಯಲ್ಲಿ ಮುದ್ರಿಸಿ ಪ್ರಕಟಿಸಲ್ಪಟ್ಟಿತು (ಸಿದ್ಧೇಪು. ಮೊದಲ ಪುಟ). [ಸಂ. ಮುದ್ರಾಕ್ಷರಶಾಲಾ]

**ಮುದ್ರಾಧಾರಕ** (ನಾ). ೧. ಮೊಹರುಗಳನ್ನು ಹೊಂದಿರುವವನು. ೨. [ದ್ವೈತ] ತಪ್ತ ಮತೀಯಲಾಂಛನವಾದ ಮುದ್ರೆಯನ್ನು ಧರಿಸಿದವನು ; ವೈಷ್ಣವ ; ಮಾಧ್ವ. [ಸಂ.]

**ಮುದ್ರಾಧಾರಣ** (ನಾ). [ದ್ವೈತ] ವಿಶೇಷವಾಗಿ ಚಾತುರ್ಮಾಸದಲ್ಲಿ ಸುದರ್ಶನ ಹೋಮಮಾಡಿದ ಅಗ್ನಿಯಲ್ಲಿ ಶಂಖ, ಚಕ್ರಗಳ ಗುರುತುಗಳುಳ್ಳ ಲೋಹದ ಮುದ್ರೆಯನ್ನು ಕಾಯಿಸಿ, ಅದನ್ನು ಗುರುಗಳು ಗಂಡಸರ ಭುಜ, ಎದೆಗಳ ಮೇಲೂ ಹೆಂಗಸರ ಕೈ ಮೇಲೂ ಒತ್ತುವ ವಿಧಿ : ಮುದ್ರಾಧಾರಣದ ಮಾತು ಬಂದಾಗ ಮೇನಕೆ ಜಾನಕಿಬಾಯರ ನಡುವೆ ಮಹಾಯುದ್ಧವಾಗಿ ಕೊನೆಗೆ ಮೇನಕೆಯೇ ಗೆಲ್ಲುತ್ತಾಳೆ (ತವರು. ೬ ೩೬೪). [ಸಂ.]

**ಮುದ್ರಾಧಾರಣೆ** (ನಾ). ೧. = ಮುದ್ರಾಧಾರಣ : ಮುದ್ರಾಧಾರಣೆಯನ್ನು ಮಾಡಿಸಿಕೊಳ್ಳುವುದಕ್ಕಾಗಿ ಮಠದ ಶಿಷ್ಯರ ದೊಡ್ಡ ಸಮೂಹವು ನೆರೆದಿತ್ತು (ವಾಗ್ಭೂ. ೩). 'ತಪ್ತಮುದ್ರಾಧಾರಣೆ' ಪರಾ. ೨. ಶಂಖ, ಚಕ್ರ, ಗದಾ, ಪದ್ಮ, ನಾರಾಯಣ ಎಂಬ ಐದು ಗುರುತುಗಳುಳ್ಳ ಲೋಹದ ಸಾಧನವನ್ನು, ಕಲಸಿದ ಗೋಪೀಚಂದನದಲ್ಲಿ ಅದ್ದಿ ಹಣೆ ಮತ್ತಿತರ ದೇಹಭಾಗಗಳಿಗೆ ಒತ್ತಿಕೊಳ್ಳುವಿಕೆ : ಆಚಾರ್ಯರು ಢಾಳಾಗಿ ಕಾಣುವಂತೆ ನಾಮವನ್ನು ಹಾಕಿಕೊಂಡು, ಮುದ್ರಾಧಾರಣೆ ಮಾಡಿಕೊಂಡರು (೬೨೦). [ಸಂ. ಮುದ್ರಾಧಾರಣ]

**ಮುದ್ರಾಧಿಕಾರ** (ನಾ). ರಾಜನ ಅಂಕಿತದ ಉಂಡಿಗೆಯ ಮೇಲಿನ ಅಧಿಕಾರ : ಮಹಾಸ್ವಾಮಿಯವರ ಮಹಾಸನ್ನಿಧಾನದಲ್ಲಲ್ಲದೆ ಸಂಪುಟದ ಮುದ್ರೆಯನ್ನು ಸಡಿಲಿಸಲಾಗದು . . ಮುದ್ರಾಧಿಕಾರವಿರುವುದು ಮಹಾಸ್ವಾಮಿಯವರಿಗೆ ಮಾತ್ರ (ಮಂತ್ರಶ. ೧೧-೧೬). 'ಮುದ್ರಾಧಿಕಾರಿ' ಪರಾ. [ಸಂ.]

**ಮುದ್ರಾಧಿಕಾರಿ** (ನಾ). = ಮುದ್ರಹಸ್ತ : ಮುದ್ರಾಧಿಕಾರಿ ಸಚಿವಾತಿ ವಿಶುದ್ಧವು (ಬು)ದ್ಧಿ[ಃ] (ಎಇ. XXX, ೧೪೬-೦೫: 13ನೆಯ ಶತ). [ಸಂ. ಮುದ್ರಾಧಿಕಾರಿನ್]

**ಮುದ್ರಾಪಂಚಕ** (ನಾ). [ವೀಶೈ] ಭಿಕ್ಷಾಪಾತ್ರೆ, ಭಸ್ಮಘುಟಿಕೆ, ಕಂಥೆ, ದಂಡ ಮತ್ತು ಕಮಂಡಲುಗಳೆಂಬ ದೀಕ್ಷಾವಿಧಿಯ ಐದುಬಗೆಯ ಲಾಂಛನ : ನಿದ್ರೆಗೆಯ್ದಿರೆ ಭೂಪಾಲಂ ರುದ್ರಂ ಜಂಗಮವೇಷದಿಂ ಭದ್ರಾಕಾರದಿನೆಯ್ತಂದು ಮುದ್ರಾ[ಪಾಠಾಂ: ದ್ರ]ಪಂಚಕಯುಕ್ತದಿಂ (ಹಾಲಾಸ್ಯ. ೧-೪-೫೦). 'ಪಂಚಮುದ್ರೆ' ಪರಾ. [ಸಂ.]

**ಮುದ್ರಾಪಚಾರ** (ನಾ). ಅಧಿಕಾರದ ಮುದ್ರಿಕೆಯನ್ನು ದುರುಪಯೋಗ ಮಾಡಿಕೊಳ್ಳುವ ಅಥವಾ ಖೋಟಾನಾಣ್ಯಗಳನ್ನು ಬಳಸುವ ಅಪರಾಧ : ಮುದ್ರಾಪಚಾರೇ ವಿನಯೇ ರೂಪಕಾಃ ಷಟ್ಪಪಾದಾಃ ಸಹ ಧಾರ್ಮಿಕೇಣ (ಎಇ. XXX, ೧೬೯-೭೪ ; 605). [ಸಂ.]

**ಮುದ್ರಾಪಣ** (ನಾ). ಯಾವುದಾದರೊಂದು ನಿರ್ದಿಷ್ಟಲಾಂಛನವುಳ್ಳ ನಾಣ್ಯ,— ಹಣ : ದೇವಮಾನ್ಯವು ಧರ್ಮವಿಚಾರದಲ್ಲಿ ಮುದ್ರಾಪಣ ಮಾಡಿ (ಕರಂಶಾ. ೬-೨೫ ; 1091); ಆ ದೇವರಲ್ಲಿ ಶಪಥಂಗೆಯ್ದರು ಕೊಟ್ಟ ಮುದ್ರಾಪಣಂ ಒಳಗಾಗಿ ಶ್ರೀರಾಮೇಶ್ವರದೇವರ ಗೋಪುರದೊಳಗಣ ನಷ್ಟೋದ್ಧಾರಕ್ಕಂ ಕೊಟ್ಟರು (ಕ್ಷಆ. ೦-೧-೦೯; 1092); ಸೆಟ್ಟಿಗುತ್ತಂ ತನ್ನ ಬಿಟ್ಟಾಯಮಂತೆಂದೊಡೆ ಹಸುಬೆಯನಿಕ್ಕುವಲ್ಲಿ ಹಸೆಯ ಜವಳ ಗಂಧರ ಬಟ್ಟಲು ಒಂದು ಗೋಂಟು ವಿಚಾರಂಗೆಯ್ದುವರಲ್ಲಿ ಮುದ್ರಾಪಣಂ ಹೋಗೆ ಹಾಗಂ (ಎಇ. XIX, ೪೮-೩೦; 1144). [ಸಂ.]

**ಮುದ್ರಾಪಣೆ** (ನಾ). ಹೈದರನ ಕಾಲದಲ್ಲಿ ಕಂದಾಯದ ಅಧಿಕಾರಿಗಳ ಅಗತ್ಯಗಳನ್ನು ಪೂರೈಸದಿದ್ದವನ ಮನೆಯನ್ನು ಗುರುತುಮಾಡಿ ಅಥವಾ ಮೊಹರುಮಾಡಿ ಮುಚ್ಚುತ್ತಿದ್ದ ಒಂದು ಕ್ರಮ ; ಆ ಹೀಗೆ ಮಾಡಿದ ಮೇಲೆ ಸೈನಿಕರು ಆ ಮನೆಗೆ ಮುತ್ತಿಗೆ ಹಾಕುತ್ತಿದ್ದುದರಿಂದ ಆ ವ್ಯಕ್ತಿಯು ಶರಣಾಗುತ್ತಿದ್ದನು: (ಕಸಂಗ್ರಾ. ೦೫೪). [ಸಂ. ಮುದ್ರಾ]

**ಮುದ್ರಾಪತ್ರಿಕೆ** (ನಾ). ಮೊಹರುಮಾಡಿದ ಕಾಗದ : ಮುದ್ರೆಯೋಲೆ: ಸಂಶಯಕ್ಕೆ ಎಡೆಯೇ ಇಲ್ಲ; ಅದು ನಮ್ಮ ಮುದ್ರಾಪತ್ರಿಕೆ (ಮಂತ್ರಶ. ೧೩೦-೮). [ಸಂ. ಮುದ್ರಾಪತ್ರಿಕಾ]

**ಮುದ್ರಾಪ್ರಭು** (ನಾ). = ಮುದ್ರಹಸ್ತ : ಕಲ್ಲಿನಾಥದೇವರ ಮಾನ್ಯ ಸರ್ಬ್ಬಮಾನ್ಯ ಸರ್ಬ್ಬಬಾಧೆ ಎಲ್ಲ ಪರಿಹಾರವೆಂದು ಆ ಮುದ್ರಾಪ್ರಭು ಮಾನ್ಯಕಾಜಿ ಸಮಸ್ತಪ್ರಜೆ . . . ದೇವರಿಗೆ ಬಿಟ್ಟ ಧರ್ಮ್ಮ (ಕಇ. II. ೪೨-೨೯; 1306). [ಸಂ.]

**ಮುದ್ರಾಮಂಜೂಷ** (ನಾ). ೧. ಮೊಹರುಮಾಡಿದ ಪೆಟ್ಟಿಗೆ;— ಸಂದೂಕ. ೨. ಕೆಂಪುನಾರಾಯಣನೆಂಬ ಕವಿಯು ಹತ್ತೊಂಬತ್ತನೆಯ ಶತಮಾನದಲ್ಲಿ ರಚಿಸಿದ ಒಂದು ಕನ್ನಡಗದ್ಯಗ್ರಂಥ : ಮುದ್ರಾಮಂಜೂಷವೆಂಬ ಗ್ರಂಥದಲ್ಲಿ ಪರ್ವತರಾಜ ಸೇನಾಗಮನ ಕಥನವೆಂಬ ಚತುರ್ಥಾಶಯಸ್ಸಮಾಪ್ತಃ (ಮುದ್ರಾಮಂ. ೯೦); ಕೆಂಪುನಾರಾಯಣನ ಒಂದೇ ಒಂದು ಗ್ರಂಥವಾದ—'ಮುದ್ರಾಮಂಜೂಷ'ವನ್ನು ನೋಡಿದರೆ ಹೊಸಗನ್ನಡ ಗದ್ಯದ ನಸುಕುಮೂಡಿತೆಂದು ನಿಚ್ಚಳವಾಗಿ ತೋರುತ್ತದೆ (ಕಸಾತ. ೩೬೮). [ಸಂ.]

**ಮುದ್ರಾರಾಕ್ಷಸ** (ನಾ). ೧. ವಿಶಾಖದತ್ತನೆಂಬ ಕವಿಯು ಸಂಸ್ಕೃತದಲ್ಲಿ ಬರೆದಿರುವ ಒಂದು ಪ್ರಸಿದ್ಧನಾಟಕ : 'ಇದು ಮುದ್ರಾರಾಕ್ಷಸವೆಂಬ ಸಂಸ್ಕೃತನಾಟಕಕ್ಕೆ ಗದ್ಯರೂಪವಾದ ಭಾಷಾಂತರವು' ಎಂಬ ಹೇಳಿಕೆ ಯಥಾರ್ಥವಲ್ಲ (ಕಸಾತ. ೩೬೮); ಮೌರ್ಯವಂಶದ ಚಂದ್ರಗುಪ್ತನಿಗೆ (ಕ್ರಿ.ಪೂ. ೩೨೨–೨೯೮) ರಾಜ್ಯಕೊಡಿಸುವ ಪ್ರಯತ್ನದಲ್ಲಿ ಚಾಣಕ್ಯನು ಜೈನರನ್ನು ಸಹಾಯಕ್ಕೆ ತೆಗೆದುಕೊಂಡ ವಿಷಯ ಮುದ್ರಾರಾಕ್ಷಸನಾಟಕದಲ್ಲಿ (ಕ್ರಿ.ಶ. ೪೦೦) ಬಂದಿದೆ (ಕಶಾಅ. ೭೦). ೨. (ಆಲಂ) ಮುದ್ರಣದಲ್ಲಿಯ ತಪ್ಪು,— ದೋಷ : ಮುದ್ರಾರಾಕ್ಷಸನನ್ನು ಹಿಡಿತದಲ್ಲಿ ತರಲು ಅಚ್ಚುಕೂಟದಿಂದ ದೂರದಲ್ಲಿದ್ದ ನಮಗೆ ಸಾಧ್ಯವಾಗಲಿಲ್ಲ (ಪ್ರಬ್ರಾಶಿ. XXV, ಮುನ್ನುಡಿ). [ಸಂ.]

ಆವರಿಸುವಂತೆ ಮಾಡು : ತತ್ತ್ವಾರ್ಥಸೂತ್ರಮಂ ಬರೆದು ಗೃಧ್ರಪಿಂಛಾಚಾರ್ಯರ್ಜಸದಿಂ ದಿಗಂತಮಂ ಮುದ್ರಿಸಿ ಜಿನಶಾಸನದ ಮಹಿಮೆಯಂ ಪ್ರಕಟಿಸಿದರ್ (ಶಾಶಂಕು. ೨); ಚತುರಬ್ಧಿಮೇಖಲಾವಳಯಿತ ಭೂಮಿಗಾದನೆಱೆಯಂ ನೃಪತಿ ಪ್ರಭುಲೋಕಮಂ ನಿಯೋಜ್ಯ ಶತರಕೀರ್ತಿಯಿಂ ನೆಱೆಯೆ ಮುದ್ರಿಸಿ ಶೂದ್ರಕನೆಂಬ ಭೂಭುಜಂ (ಕಾದಂಪೂ. ೯); ಆವ ಮೊಲದೊಳರ್ಜುನನ ಬಾಣಾವಳಿಯು ತಱಿದೆಸೆಟ್ಟ ಮಗುಳೆ ಶರಾವಳಿಯು ಕೊನೆಗಳಲಿ ಮುದ್ರಿಸಿದನು ಧನಂಜಯನ (ಕುವ್ಯಾಕ. ೨೦-೩೨). ೧೧. ಅಡಗು : ಕಣ್ಣಿಗೆ ಕಾಣದಿರು ; ಮಾಯವಾಗು : ಜರಿದುದತಿರಥರಾಜಿ ಬಾಯಲಿ ಕರಿಷ ಹಾಯ್ತುದು ಭೂಮಿಪಾಲರ ಬಿರುದು ಮುದ್ರಿಸಿದವು ಸಮೀರಕುಮಾರನುರವಣೆಗೆ (ಕುವ್ಯಾದ್ರೋ. ೦೩-೦೯). ೧೨. ಅಡಗಿಸು ; ಕಾಣದಂತೆ ಮಾಡು ; ಮರೆಮಾಡು : ಮುದ್ರಿಸಲಾದಿರಾಜಚರಿತಂಗಳ ಸಾತ್ವಚರಿತ್ರಂ . . . ವಿಷ್ಣುಸಮುದ್ರನೊಪ್ಪುವಂ (ಎಕ. III (R). ಕಂಜಶ. ೨೩೮-೯; ११६७); ಶಾಲಿಯುತ ನಿಸ್ಸಂಕ್ಷೇಪವಣೆಯ ಭೂಪಾಳತ್ತನವನು ಮುದ್ರಿಸುವೆನೆನುತೆಚ್ಚನಭಿಮನ್ಯು (ಕುವ್ಯಾದ್ರೋ. ೩-೩೦). ೧೩. ಬಿಚ್ಚಿಡು; ಹುದುಗಿಸಂ : ಹುಗಿ : ತತ್‌ಬಿಶಿತಮಂ ಖಂಡಿಸುತ ಶೋಧಿಸುತ ನೋಡುತ ತಂಡತಂಡದ ನವ್ಯಶಾಕಂಗಳನೊಲಿದು ಮಾಡಿ ಕ್ಷಾರದಲ್ಲಿ ಮುದ್ರಿಸಿ ಮಡದಿ ಜನರಾರುಮಱಿಯದ ಹಾಂಗೆ ರುದ್ರಾಕಾರನಂ ಬಿಜಯಂಗೆಯಿಸಿ (ಶಾಕೃ. ೨೮-೨೨). [ಮುದ್ರೆ + -ಇಸು]

ಮುದ್ರೆ (ನಾ). ೧. ಹುಂಡಿ, ಭಾಂಗಿ ಮುಂತಾದುವುಗಳ ಮೇಲೆ ಭದ್ರತೆಗಾಗಿ ಹಚ್ಚುವ ಅರಗು, ಸೀಸ ಮೊದಲಾದವುಗಳ ಮೇಲಿನ ಮುದ್ರಿಕೆ. – ಉಂಡಿಗೆ, – ಮೊಹರು : ವಾಗ್ದೇವಿಯ ಭಂಡಾರದ ಮುದ್ರೆಯನೊಡೆದಂ ಸಾರಸ್ವತಮೆನಿಪ ಕವಿತೆಯೊಳ್ ಕವಿರತ್ನಂ (ಗದಾಯು. ೧-೩೯); ನಿಧಿ ನಿಕ್ಷೇಪ ಅಂಕ ಟಂಕ ಆಣೆ ಗೋಸನೆ ಮುದ್ರೆ . . . ಪಾರಣೆಯ ಜಂಗಮಾರಾ[ಧ]ನೆಗೆ ಕೊತ್ತಸಿಗೆ ಇ (ಈ) ಧರ್ಮಕ್ಕೆ [ಇ]ದು ವಿವರವೆಂದು ನಾಗರಸ[ರು] ಕೊಟ[ಟ್ಟ] ಸಾಸನ (ಎಕ. XXI. ೦೯-೬೩ ; 1200) ; ತನ್ನ ಮಗ ಮದನಂಗೆ ಮುದ್ರೆಸಹಿತ ಸರ್ವಜನಮಱಿಯದಂತೀವುದೀ ಪತ್ರಿಕೆಯನು (ಕೃಶಶಾ. ೨೯-೩೯) ; ಕರಣಿಕನು ಮುದ್ರೆಯನ್ನು ಒಡೆದು ಚೀಲದೊಳಗಿಂದ ಓಲೆಯನ್ನು ಹೊರತೆಗೆದ (ಹಾಕುಕ. ೯೯). ೨. ಮೊಹರುಮಾಡುವ ಅರಗು, ಸೀಸಗಳ ಮೇಲೆ ಒತ್ತುವ–ಸರಕಾರ, ಅಧಿಕಾರಿ, ರಾಜ ಮುಂತಾದವರ ನಿರ್ದಿಷ್ಟ ಚಿಹ್ನೆಯುಳ್ಳ (ಲೋಹದ) ವಸ್ತು ; ಮುದ್ರಿಕೆ : ಹಿರಿಯ ಬಿರುದಿನ ಮುದ್ರೆಯಿದು ನಗರವಿದು . . . ಮೇಲುಳ್ಳ ಸರ್ವಸ್ವವಿದು ನೋಡಿಕೋ ಮಹಾಪುರುಷ (ಹಕಶಾ. ೯-೪). ೩. ಪತ್ರ, ದಸ್ತೈವಜು ಮುಂತಾದುವುಗಳ ಮೇಲೆ ಸ್ಥಿರೀಕರಣಕ್ಕಾಗಿ ಸರ್ಕಾರ ಅಥವಾ ರಾಜನ ಪರವಾಗಿ ಮೊಹರನ್ನು ಒತ್ತುವುದರಿಂದುಂಟಾಗುವ ಗುರುತು. –ಚಿಹ್ನೆ : ರಾಜನ ಮುದ್ರೆ ಪ್ರತಿ ಆಣೆಯ ಮೇಲಾದರೆ ದೇವರ ಮುದ್ರೆ ಪ್ರತಿ ಕಾಳಿನ ಮೇಲೆ ಇರುತ್ತದೆ (ಪಾಕಶ. ೩) ; ಹಣವೆಂದರೆ ಮೂಲತಃ ಯಾವುದಾದರೊಂದು ರಾಜ್ಯದಲ್ಲಿ ಅಲ್ಲಿನ ಅಧಿಕಾರಿಗಳು ತಮ್ಮ ಮುದ್ರೆ ಒತ್ತಿ ಬಳಕೆಗೆ ತರುವ ಒಂದು ಬಗೆಯ ಪದಾರ್ಥವಿಶೇಷ (ಹಣಶ. ೨). ೪. ಗುರುತು: ಲಾಂಛನ; ಚಿಹ್ನೆ : ಪದಗಳು ಜನಮನದ ಟಂಕಸಾಲೆಯಲ್ಲಿ ಭಾವದ ಮುದ್ರೆಯನ್ನು ತಳೆದು ಚಲಾವಣೆಗೆ ಬರುವ ನಾಣ್ಯಗಳಿದ್ದಂತೆ (ಕೌಂದಸ. ೪೨). ೫. ಸಂಕೇತವನ್ನು ಕೆತ್ತಿರುವ ಉಂಗುರ ; ಮುದ್ರಿಕೆ : "ಮುದ್ರಾಯೆಂಬುಡು ಅಕ್ಕರಂ ಬೆರಸಿದುರ್ಂಗುರಂ" (ಹಲಾಯು. ೯೨-೪೦೩) ; ವರಕಥೆಗೆ ಕಿವಿಗೊಡುವ ಓಲೆಯ ಬೆರಳ ಧರ್ಮಕ್ಕೊಲಿವ ಮುದ್ರೆಯ ಧರಿಸಿಹರು ಪಾತಾಳಲಂಕೆಯ ಪುರದ ನಾರಿಯರು (ಕೌಶಾ. ೩೯-೯). ೬. ಲಾಂಛನವನ್ನು ಮುದ್ರಿಸಿರುವ ನಾಣ್ಯ, ಪದಕ ಮುಂತಾದುವು. ೭. ರಹದಾರಿ ; ಪರವಾನಗಿ. ೮. ಮುಚ್ಚಿರುವಿಕೆ ; ತೆರೆಯದಿರುವಿಕೆ. ೯. ಸಂಧ್ಯಾವಂದನೆ, ಸಂಕಲ್ಪ, ಪೂಜೆ ಮುಂತಾದ ಸಂದರ್ಭಗಳಲ್ಲಿ ಬೆರಳುಗಳನ್ನು ನಿರ್ದಿಷ್ಟಕ್ರಮದಲ್ಲಿ ಮಡಿಚಿ ತೋರುವ ವಿನ್ಯಾಸ. ೧೦. ಕಾವ್ಯ, ಹಾಡು ಮುಂತಾದುವುಗಳ ಕೊನೆಯಲ್ಲಿ ಸೂಚಿತವಾಗುವ ಕರ್ತೃವಿನ ಇಷ್ಟದೈವ, ಕುಲದೇವರು ಅಥವಾ ಕೃತಿಕರ್ತನ ಹೆಸರು. – ಅಂಕಿತ : ಯಾವ ಕೃತಿಕರ್ತನೂ ತನ್ನ ದೇಹವನ್ನೂ ಕೃತಿಯನ್ನೂ ತನ್ನ ಆರಾಧ್ಯದೇವರಿಗೆ ಸಮರ್ಪಿಸುವುದು ಸಂಪ್ರದಾಯ. ಈ ಸಮರ್ಪಣೆ ಅಥವಾ ಮುಡಿಪಿಗೆ 'ಅಂಕಿತ' ಅಥವಾ 'ಮುದ್ರೆ' ಎಂದು ಹೆಸರು (ಸಂಗೀತಂ. ೬೦) ; ಪಟ್ಣಂ ಸುಬ್ರಮಣ್ಯ ಅಯ್ಯರ್ . . . ಕೆಲವು ರಚನೆಗಳಲ್ಲಿ "ವರದ ವೆಂಕಟೇಶ್ವರ", "ಆದಿ ವೆಂಕಟೇಶ" . . . ಎಂಬ ಮುದ್ರೆಯನ್ನು ಉಪಯೋಗಿಸಿದ್ದಾರೆ (ಸಂಗೀತ. ೨೮). ೧೧. ಅಭಿವ್ಯಕ್ತಿ ; ಮುಖಭಾವ : ನಿದ್ರೆಯಿಂ ಸುಖವಿಲ್ಲ ಮದ್ರದಿಂ ಅರಿಯಿಲ್ಲ ಮುದ್ರೆಯಿಂದಧಿಕ ಮಾತಿಲ್ಲ (ಸರ್ವಜ್ಞ. ೨೩೦) ; ಹುಡುಗನ ಮುಖದಲ್ಲಿ ಕರುಣಾಜನಕಮುದ್ರೆ ಮೂಡಿ ನಿಂತಿತು (ಕುಗಿಹು. ೩) ; ದುಷ್ಟಬುದ್ಧಿಗೆ ಮಗಳನ್ನು ನೋಡಿದೊಡನೆ ಅಭ್ಯಾಸಬಲದಿಂದೆಂಬಂತೆ ಸಂತೋಷದ ಮಂದಸ್ಮಿತಮುದ್ರೆಯೊಂದು ಸುಳಿದು ಒಡನೆಯೆ ಮಾಯವಾಗಿ, ಬದ್ಧಭ್ರುಕುಟಿಯ ವದನವಿಕಾರತೆಯುಂಟಾಗುತ್ತದೆ (ಹಂದ್ರಸ. ೯೦-೩). ೧೨. (ಅಲಂ) ಬಿಗುಹು ; ಭದ್ರತೆ : ಯೌವನದ ಮುದ್ರೆಯನೊಡೆದುಲ್ ಬರ್ಪ ಮನೋಜನಂತೆ . . . ಸೌಂದರಂ ಪರವೆಯರ ಮನೆಗೆ ನಡೆತಂದು (ಸುಂದರ. ೦೦-೩೦). ೧೩. ಪರಿಣಾಮ ; ಪ್ರಭಾವ ; ವರ್ಚಸ್ಸು : ಕಲಿಯುವಾಗ ಆಗುವ ಅನುಭವ ಮಕ್ಕಳ ನರವ್ಯೂಹದಲ್ಲಿ ತನ್ನ ಮುದ್ರೆಯನ್ನೊತ್ತುತ್ತದೆ (ಶಿಕ್ಷಣ. ೦೯೮) ; ಗುರು ಚರಣರ ಹೃದಯದ ಮೇಲೆ ಗಿರೀಂದ್ರನ ಮಾತುಗಳು ಚೆನ್ನಾಗಿ ಮುದ್ರೆಯನ್ನು ಹಾಕುತ್ತಿದ್ದುವು (ಶಂಕ. ೩೩). ೧೪. [ದ್ವೈತ] ವೈಷ್ಣವರ ಲಾಂಛನವಾದ ಶಂಖ, ಚಕ್ರ ಮೊದಲಾದುವುಗಳ ಗುರುತುಳ್ಳ ಲೋಹದ ಸಾಧನ ಮತ್ತು ಆ ಸಾಧನದಿಂದ ದೇಹದ ಮೇಲೆ ಹಾಕಿಕೊಳ್ಳುವ ಗುರುತು : ಒಂದೊಂದು ಕೈಮೇಲೆ ಒಂದೊಂದು ಮುದ್ರೆಯನ್ನು ಬಹು ಸೂಕ್ಷ್ಮವಾಗಿ ಒತ್ತಿಬಿಟ್ಟು . . . ಅವಳ ಕೃತಜ್ಞತೆಗೆ ಪಾತ್ರರಾದರು (ವಾಗ್ಮೀ. ೩) ; ಈ ಗುಣಗಳನ್ನು ಅಳವಡಿಸಿಕೊಳ್ಳುವುದೇ ನಿಜವಾದ ಧರ್ಮ. ಇದಿಲ್ಲದೆ ನಾಮ, ಮುದ್ರೆ, ಲಿಂಗ, ಜನಿವಾರ, ಗಡ್ಡಗಳೆಲ್ಲವೂ ಡಂಭಾಚಾರ (ಹುಕ್ಷಶ. ೦೬೨). ೧೫. [ವೀಶೈ] ದೀಕ್ಷಾವಿಧಿಯಂ ಭಿಕ್ಷಾಪಾತ್ರೆ, ಭಸ್ಮಘುಟಿಕೆ, ಕಂಥೆ, ದಂಡ ಮತ್ತು ಕಮಂಡಲುಗಳೆಂಬ ಐದುಬಗೆಯ ಸಾಧನ : ಕರದಲ್ಲಿ ಕಪ್ಪರವಿಲ್ಲ ಕೈಯಲ್ಲಿ ಕಟ್ಟಿಗೆ ಇಲ್ಲ ಕರ್ಣದಲ್ಲಿ ಮುದ್ರೆ ಇಲ್ಲ ಶಿರದಲ್ಲಿ ಜಟಾಬಂಧವಿಲ್ಲ ಕಕ್ಷೆಯಲ್ಲಿ ಭಸ್ಮಗಂಟಿಕೆ ಇಲ್ಲ (ಶೂಲ್ಯಶೂ. ೦೩೩-೩೯೩) ; ಗುರೂಪದೇಶದಲಿ ಮುದ್ರೆಯನು ಮುಟ್ಟುವರು ಸೌಖ್ಯಸಮೃದ್ಧಿಯೊಳಗೋಲಾಡುವರು (ಶ್ರಕುಂ. ೦೦ ೧). ೧೬. [ನಾಟ್ಯ] ನೃತ್ಯ, ನಾಟಕಗಳಲ್ಲಿ ಅಂಗಗಳ ಚಲನವಲನದಿಂದ ತೋರಿಸುವ ವಿನ್ಯಾಸ : ಅಭಿನಯದಲ್ಲಿ ಮುದ್ರೆಗಳಿಗೆ ಇರುವ ಸ್ಥಾನವು ಅಗ್ರಗಣ್ಯವಾದುದು . . . ಅಭಿನಯದಲ್ಲಿ ನಟನ ಇಡೀ ದೇಹವು ಪ್ರವೃತ್ತವಾಗಿದ್ದರೆ, ಮುದ್ರೆಗಳಲ್ಲಿ ಅವನ ಒಂದೊಂದು ಅಂಗ ಮಾತ್ರ ಕೆಲಸ ಮಾಡುತ್ತದೆ. ಮುದ್ರೆಗಳನ್ನು ಮಾಡುವಾಗ್ಗೆ ಒಂದು ಅಂಗದ ಚಿಕ್ಕಚಲನೆ ಕೂಡ ಮಹತ್ತರವಾದ ಅರ್ಥವನ್ನು ಸೂಚಿಸಬಲ್ಲುದು (ಅಶಾಕೃ. ೪೩). ೧೭. [ಶಿಲ್ಪಶಾ] "ಪ್ರತಿಮೆಗಳ ಕೈ ಮತ್ತು ಬೆರಳುಗಳ ವಿಶೇಷ ಸ್ಥಿತಿಗೆ "ಮುದ್ರೆ" —ಎಂದು ಹೆಸರು" (ಕಾಶದ. ३०३). ೧೮. ಮಂತ್ರಶಾಸ್ತ್ರ ಪ್ರಸಿದ್ಧವಾದ ಒಂದು ಬಗೆಯ ವಿನ್ಯಾಸ (?) : ಅಸ್ತ್ರಮುದ್ರೆ ಚಕ್ರಮುದ್ರೆ . . . ಸಂಹಾರ

ಮುದ್ರೆಯೆಂಬ ಸಕಲಮುದ್ರಾಲಕ್ಷಣವನಜಾಡಾಯಾಕ್ರಿಯೆಗಳಲ್ಲಿ ಪ್ರಯೋಗಿಸಿ (ಚಿಕೇಳ. ೯೩). 'ದ್ರವ್ಯಮುದ್ರೆ' ಪರಾ.

**ಮುದ್ರೆಯಅಧಿಕ** = ಮೊಹರಿನ ಮೇಲ್ವಿಚಾರಣೆ,— ಉಸ್ತುವಾರಿ: ಮುದ್ರೆಯಅಧಿಕಕ್ಕೆ ಗ ೧೨ ಗಂಧಕುಡಿ ನೀರವರಿಗೆ ೧೩ (ಎಕ. V(R), ತಿರುಮ. ೯೬–೯೪; 1276). **ಮುದ್ರೆಯವ** = ೧. ಸಾರ್ವಜನಿಕ ವ್ಯವಹಾರ ಪತ್ರಗಳಿಗೆ ಮುದ್ರೆಯೊತ್ತುವವನು: (*). ೨. ವಿಷ್ಣುವಿನ ಲಾಂಛನವಾದ ಶಂಖ, ಚಕ್ರ ಮುಂತಾದುವನ್ನು ತನ್ನ ದೇಹದ ಮೇಲೆ ಧರಿಸುವವನು; ವೈಷ್ಣವ. **ಮುದ್ರೆಯವೋಲಗ**= ರಾಜನ ಮೊಹರನ್ನು ನೋಡಿಕೊಳ್ಳುವ ಕೆಲಸ, — ಸೇವೆ: ಸೇನಬೋಕೆವೊಂದಕ್ಕಂ ಗದ್ಯಾಣಂ ಹನ್ನೆರಡು ಮುದ್ರೆಯ ವೋಲಗಕ್ಕೆ ಗದ್ಯಾಣಂ ಹನ್ನೆರಡು (ಎಕ. V (R), ತಿರುಮ. ೬೬–೬೭; 1276).

[ಸಂ. ಮುದ್ರಾ]

**ಮುದ್ರೆಕೊಳಗ** (ನಾ). ಸರಿಯಾದ ಅಳತೆಯದೆಂದು ಅಧಿಕೃತವಾಗಿ ಒಪ್ಪಿಗೆ ಪಡೆದು ಸರ್ಕಾರದ ಮೊಹರನ್ನು ಹೊಂದಿರುವ ಕೊಳಗ: ಆರೋಗಣೆಗೆ ಸಲುವುದು ಅವಸರವಂದಕೆ ಅಮೃತಪಡಿ ದಿನವೊಂದಕೆ ಮುದ್ರೆಕೊಳಗದಲಿ ೧೫೦ ॥ ಳಕೆ ಕೊಳಗ ಒಂದಕೆ ಪಡಿ ೧೪೮ ಲೆಕದಲಿ ಸಲುವ ಪಡಿ ೧೯೬ಕೆ ಪ್ರಸಾದವೆಚ (ಎಕ. VI (R). ಕಾಂಪಕ. ೧೨೯–೭; 1545). [ಮುದ್ರೆ + ಕೊಳಗ$_1$]

**ಮುದ್ರೆಕೋಲು** (ನಾ). ಅರಮನೆಯ ಅಪ್ಪಣೆಯನ್ನು ಮೀರಿ ನಡೆದವರ ಧಾನ್ಯದ ರಾಶಿಗೆ ಮುದ್ರೆಹಾಕಲು ತೋಟಿ, ತಳವಾರ ಮುಂತಾದವರು ಬಳಸುತ್ತಿದ್ದ ಮೊಹರುಳ್ಳ ಮರದ ಕೋಲು, —ದಂಡ: ಆಚೆ ಈಚೆ ಸೂರ್ಯಚಂದ್ರರನ್ನೂ ಮಧ್ಯೆ 'ದೇ' ಎಂಬ ಅಕ್ಷರವನ್ನೂ ಕೆತ್ತಿಸಿದ ಈ ಮುದ್ರೆಕೋಲನ್ನು ಗ್ರಾಮಗಳ ಚಾವಡಿಯಲ್ಲಿ ಇರಿಸಿ . . . ಆ ಮುದ್ರೆಕೋಲನ್ನು ತೆಗೆದುಕೊಂಡು ಹೋಗಿ ಮುದ್ರೆಹಾಕುವಂತೆ ನಿಬಂಧನೆ ಮಾಡಿದರು (ಕಾಮಕಂ. I, ೦೦೯).

[ಮುದ್ರೆ + ಕೋಲು$_1$ (< ಕೋಲ್$_1$)]

**ಮುದ್ರೆಗಟ್ಟು** (ನಾ). ಪತ್ರ, ಮುಂತಾದುವುಗಳನ್ನು ದಾರದಿಂದ ಕಟ್ಟಿ ದಾರದ ಗಂಟಿನ ಮೇಲೆ ಹಾಕುವ ಮೊಹರು.—ಉಂಡಿಗೆ: (ಓಲೆಯನ್ನೀಯಿಸಿಕೊಂಡು, ಅದರ ಮುದ್ರೆಗಟ್ಟನ್ನು ತಿರುಗಿಸಿ ಪರೀಕ್ಷಿಸಿ) (ಚಿಬ್ಕೊ. ೭೭–೨೭). [ಮುದ್ರೆ + ಕಟ್ಟು$_2$]

**ಮುದ್ರೆಗಾಣಿಕೆ** (ನಾ). ಒಂದು ಬಗೆಯ ತೆರಿಗೆ (?): ಹತ್ತಿಪೊಂಮಾ ಮಾರ್ಗದ ಸುಂಕ ದೇವರಾಯವಟ್ಟ ಪಟ್ಟೆಗಾಣಿಕೆ ಮುದ್ರೆಗಾಣಿಕೆ ಸೊಪ್ಪಿನ ತೋಟ . . . ನಿರ್ವಿವಾದವಾಗಿ ಸಲುವದು (ಎಕ. V (R), ತಿರುಮ. ೦೬–೦೩೯; 1749). [ಮುದ್ರೆ + ಕಾಣಿಕೆ (< ಕಾಣ್ಕೆ)]

**ಮುದ್ರೆಗೂಳಿ** (ನಾ). ಒಂದು ನಿರ್ದಿಷ್ಟ ಕಾರಣಕ್ಕಾಗಿ ಮೀಸಲು ಮಾಡಿ, ಯಾವುದಾದರೊಂದು ನಿರ್ದಿಷ್ಟ ಲಾಂಛನವನ್ನು ಬೆನ್ನಿನ ಮೇಲೆ ಮುದ್ರಿಸಿ ಸ್ವೇಚ್ಛೆಯಾಗಿ ತಿರುಗಲು ಬಿಟ್ಟಿರುವ ಗೂಳಿ: ಅಣ್ಣನು ಒಬ್ಬ ಗೌಳಿಗನ ವೇಷ ಹಾಕಿಕೊಂಡು ಆ ಮುದ್ರೆಗೂಳಿಯನ್ನು ತಂದು ಅರಮನೆಗೆ ಕೊಟ್ಟನು (ದೇಶಕಾಕ. ೬೫). [ಮುದ್ರೆ + ಗೂಳಿ$_1$]

**ಮುದ್ರೆಪಡಿ** (ನಾ). = ಮುದ್ರೆಕೊಳಗ: ಆ ಪೊನ್ನ ಮುದ್ರೆಪಡಿಯ ತಂದು ಅಳಕೊಳ್ಳಿ (ಕೆಶಾಕ. ೩೨). [ಮುದ್ರೆ + ಪಡಿ$_1$]

**ಮುದ್ರೆಪ್ರಭು** (ನಾ). = ಮುದ್ರಹಸ್ತ: ಆ ಮುದ್ರೆಪ್ರಭು ಮಾನ್ಯಕಾಜ ಸಮಸ್ತಪ್ರಜೆ [ಗಳು] ಆಚಂದ್ರಾರ್ಕಸ್ಥಾಯಿಯಾಗಿ ಕಲ್ಲಿನಾಥದೇವರಿಗೆ ಬಿಟ್ಟ ಧರ್ಮ (ಕೌಇ. XX, ೨೨೬–೨೯; 1300). [ಮುದ್ರೆ + ಪ್ರಭು]

**ಮುದ್ರೆಬಸವಿ** (ನಾ). (?): ಯಡಗೈ ಬಲಗೈ ಮನೆ ೧೪ ಮುದ್ರೆ ಬಸವಿಗೆ ಮಗನಿಕಿವಾ ದೇವಾಂಗದವರು ಜಾತಿಗಟ್ಟಿಮುವರು ಸಹಾಮಗ ೧ಕ್ಕೆ ಮೀರೆಯಲ್ಲು ಕೊಡಲುಳವರು (ಎಕ. XIV· ಗುಶ್ಯ. ೬೪–೬೩; ಸಂ. 1776). [ ? ]

**ಮುದ್ರೆಮನುಷ್ಯ** (ನಾ). = ಮುದ್ರಹಸ್ತ: ಮಲ್ಲರಸ ಅಯ್ಯನವರ ಮುದ್ರೆಮನುಷ್ಯನು . . . ರಾಮಾಯ್ಯನೂ (ಎಕ. IV (R), ಎಳಂದೂ. ೬೭–೦೦; 1531). [ಮುದ್ರೆ + ಮನುಷ್ಯ]

**ಮುದ್ರೆಯುಂಗುರ** (ನಾ). (ರಾಜ ಮುಂತಾದವರ) ಲಾಂಛನವನ್ನು ಕೆತ್ತಿರುವ ಉಂಗುರ, —ಮುದ್ರಿಕೆ: ಕಡಗ ಕಂಕಣ ಮುದ್ರೆಯುಂಗುರ . . . ದಿವ್ಯನೂಪುರಗಳನಾಂತ ಮಾಡದ ರನ್ನೆಯರ್ಕೈದಿದರು (ಕಂಶಾ. ೨೦–೦೫); ಬೆರಳಿಗೆ ಮುದ್ರೆಯುಂಗುರವಿದ್ದುದರಿಂದ ಹಿಂದೂಮಹಿಳೆಯೆಂದು ಕೊಂಡೆ (ಕ್ಕಶಿ. ೬೦೦). [ಮುದ್ರೆ + ಉಂಗುರ]

**ಮುದ್ರೆಯೂಳಿಗ** (ನಾ). ರಾಯಸ, ಪತ್ರ ಮುಂತಾದುವುಗಳಿಗೆ ರಾಜನ ಮೊಹರನ್ನು ಒತ್ತುವ ಕೆಲಸ: ಅರಮನೆಯ ಊಳಿಗದಾಳ್ಗಳು ರಾಯಸಿಗರು; ಮುದ್ರೆಯೂಳಿಗದವರು (ಚಂಕ್ರಕ. ೭–೦೨).

[ಮುದ್ರೆ + ಊಳಿಗ (< ಊಳಿಗ)]

**ಮುದ್ರೆಯೊಡೆ** (ಕ್ರಿ). ಮೊಹರನ್ನು ತೆಗೆ; ಉಂಡಿಗೆಯನ್ನು ಒಡೆ: ಮುದ್ರೆಯೊಡೆದು, ಓದಿಕೊಂಡು, ಬೆಟ್ಟದ ಅರಸಿನ ದೊರ್ದಾಗೆಗಯ್ದು (ಚಿಬ್ಕೊ. ೭೭–೨೨). [ಮುದ್ರೆ + ಒಡೆ$_1$]

**ಮುದ್ರೆಯೊತ್ತು** (ಕ್ರಿ). ೧. ರಾಜನ ಮೊಹರನ್ನು ಒತ್ತುವುದರ ಮೂಲಕ ಆಜ್ಞೆ, ಒಪ್ಪಿಗೆ ಮುಂತಾದುವನ್ನು ಸ್ಥಿರೀಕರಿಸು: ಇತರ ಪ್ರಭುಗಳಿಗೆ ನಮ್ಮ ಅಕ್ರಿತರಿಂದ ಉಪಟಳವು ನಷ್ಟವು ಅಪಮಾನವು ಅಡಸದಂತೆ ಮುದ್ರೆಯೊತ್ತಿ ನಿಬನ್ದಿಸಿ (ಚಿಬ್ಕೊ. ೬೯–೦೬). ೨. ಪ್ರಭಾವವನ್ನು ಬೀರು; ವರ್ಚಸ್ಸನ್ನು ಬೀರು: ಮಕ್ಕಳ ಎಳೆಯ ಮನಸ್ಸಿನ ಮೇಲೆ ಮುದ್ರೆಯೊತ್ತಿ ಅವರ ಬೆಳವಣಿಗೆಯನ್ನು ಸಾಧಿಸಬೇಕು (ಶಿಕ್ಷಣ. ೩೦೮). ೩. ಮಾಧ್ವರ ಲಾಂಛನವಾದ ಶಂಖ, ಚಕ್ರಗಳ ಗುರುತನ್ನು ಹಾಕು: ಶಂಖಚಕ್ರಮುದ್ರೆಗಳನ್ನು ಮುದ್ರಾಧಾರಣೆಯ ಹೋಮಾಗ್ನಿಯಲ್ಲಿ ಚೆನ್ನಾಗಿ ಕಾಯಿಸಿ . . . ಶಿಷ್ಯರಿಗೆ ಜಾಗ್ರತೆಯಾಗಿ ಮುದ್ರೆಯೊತ್ತಿಬಿಡುವರು (ಜಾಗೃಂ. ೪). [ಮುದ್ರೆ + ಒತ್ತು$_1$]

**ಮುದ್ರೆಯೋಲೆ** (ನಾ). ಮೊಹರು ಸಹಿತವಾದ ಕಾಗದ, —ಪತ್ರ: ನಂಜರಾಜಯ್ಯನವರನ್ನು ಸರ್ವಾಧಿಕಾರಿಯ ಊಳಿಗಕ್ಕೆ ನಿಯಮಿಸಿಕೊಂಡಿರುವ ಹಳೆಯಪಯ್ಯದವರ ಮಹಾಸಭೆಯ ಮುದ್ರೆಯೋಲೆಯಿಂದು (ಚಂಕ್ರಕ. ೦೫೦–೩). [ಮುದ್ರೆ + ಓಲೆ]

**ಮುದ್ರೆವೊರು** (ಕ್ರಿ). ಆಜ್ಞೆಯನ್ನು ಪಡೆ; ಅಪ್ಪಣೆಯನ್ನು ಹೊಂದು: ಇರುಳ ಕಯ್ಯಾಳಿಗಳ ಕಿರಿಯ ಪ್ರಮಾಣಗಳಲ್ಲಿಯೇ ಮುದ್ರೆವೊತ್ತ ನಮ್ಮ ಕರ್ತವ್ಯಗಳನ್ನು ನೆರವೇರಿಸಿಕೊಳ್ಳೋಣ (ಚಿಬ್ಕೊ. ೬೬–೨೦).

[ಮುದ್ರೆ + ಪೊರು (< ಪೊಱು)]

**ಮುದ್ರೆಹಸ್ತ** (ನಾ). = ಮುದ್ರಹಸ್ತ: ಲಖ್ಮೀದೇವರ ಅಧಿಕಾರಿ ಮುದ್ರೆಹಸ್ತ ಮಲ್ಲಣ್ಣನುಂ ಪ್ರಭುಗಳುಂ . . . ಬಿಟ್ಟ ಮತ್ತರು (ಕೌಇ. XX, ೧೮೩–೫; 1197). [< ಸಂ. ಮುದ್ರಾಹಸ್ತ]

**ಮುದ್ಲಿಯಾರ್** 'ಮೊದಲಿಯಾರ್' ನೋ.

**ಮುಧಸೆ ?** (ನಾ). (?): ಕಿತ್ತೂರ ಪುದಿವತ್ತಮುಂ ಪೆರ್ಗ್ಗಡೆ ಗದ್ಯಾಣ ಮುಧಸೆಮಟ್ಟಿಗೆಯೂ ಪುದುವೊದಲುಂ . . . ಪುದಿವತ್ತಮುಂ ಕೊಟ್ಟು (ಎಕ. III (R), ಹೆಗ್ಗಡ. ೦೨೩–೪೦; 1079). [ ? ]

**ಮುಧಾ** (ಅ). ೧. ವ್ಯರ್ಥವಾಗಿ; ನಿಷ್ಪ್ರಯೋಜಕವಾಗಿ: ಅದನರಿಯದ ಬೋಧಬೋಧಿತ ತಪೋದಾನವಿಧಾನದಿಂ ಮುಧಾ ಕ್ಲೇಶಾಯಾಸನಿರತರಾಗಿ ನಮೆವರ್ (ಅಂಪು. ೨–೯ ವ). ೨. ತಪ್ಪಾಗಿ; ಸುಳ್ಳಾಗಿ; ಹುಸಿಯಾಗಿ.

[ಸಂ.]

**ಮುನ್₁**, ಮುಂ₁, ಮುನ್ನ₁ (ನಾ). ೧. ಮುಂದುಗಡೆ ; ಮುಂದು ; ಎದುರುಭಾಗ : (೬). ೨. ತರುವಾಯದ್ದು ; ಆಮೇಲಿನದು ; ಭವಿಷ್ಯಕ್ಕೆ ಸೇರಿದುದು ; 'ಮುನ್ನಜಿ' ಪರಾ. ೩. ಆದಿ ; ಮೊದಲು ; ಆರಂಭ. ೪. ಹಿಂದಿನದು ; ಪೂರ್ವಕಾಲಕ್ಕೆ ಸೇರಿದುದು ; ಮುಂಚಿನದು : ತತ್ಸೈನ್ಯಪಾದೋತ್ಥಿತಂ ಪುದಿದತ್ತಂ ರಜಮಂಬರಸ್ಥಳಮುಮಂ ಮುಟ್ಟಿತ್ತು ತಳ್ತುರ್ವಿ ಪರ್ವಿದೊಡಾ ಮುನ್ನಿನ ತೆಳ್ಪುಗೆಟ್ಟು ಕೆಸಱಾಯ್ತಾಕಾಶಗಂಗಾಜಲಂ (**ಶಂಕಶಾ. ೧೧-೨೯**); ನಾಂ ಪತಿವ್ರತೆಯಾದೊಡೆ ಮನೆದೈವಂಗಳೆನಗೆ ಸನ್ನಿದವಾದೊಡೆನ್ನ ಮೂಗು ಮುನ್ನಿನಂತಾಗಲಿ (**ಶಂಕಶಂ. ೭೭-೦೨**); ಮುನ್ನಿನ ಕುಲಮಂ ಸಿರಿಯಂ . . . ಅಳಿಪಿಂದಂ ನೆನೆಯುತ್ತಿರ್ಪ ದುರ್ಜನಂ ಮುನಿಯಲ್ಲಂ (**ಧರ್ಮಾಮೃ. ೩-೧೦೨**). (ಗು). ೫. ಮುಂದುಗಡೆಯ ; ಮುಂದಿನ ; ಮುಂಭಾಗದ. ೬. ಅನಂತರದ ; ಆಮೇಲಿನ; ತರುವಾಯದ : ಎನ್ನ ಜನ್ಮಕೆ ಸಾಫಲ್ಯ ಮಾದುದು ನಿನ್ನ ಚಿನ್ನಡಿಯೂಳಿಗದಿಂದ ಪಿನ್ನೇಳು ಮುನ್ನೇಳು ತರದವರನಿ ಬರುಮುನ್ನತಿವಡೆದರೆನ್ನಿಂದ (**ಹಂಬ. ೦-೩೯**). ೭. ಆರಂಭದ ; ಪ್ರಾರಂಭದ; ಶುರುವಿನ : 'ಮುನ್ನಿರುಳ್', 'ಮುನ್ನೇಸಱು' ಪರಾ. ೮. ಹಿಂದಿನ ; ಮುಂಚಿನ ; ಪೂರ್ವದ : 'ಮುನ್ನಿರವು' ಪರಾ. ೯. ಅಭಿವೃದ್ಧಿಯ ; ಉತ್ಕರ್ಷದಿಂದಕೂಡಿದ ; ಏಳಿಗೆಯುಳ್ಳ : 'ಮುನ್ನಡ್ಕೆ' ಪರಾ. **ಮುಂ₁** : ೧. 'ಮುಂಗಾಣ್' ಪರಾ. ೨. 'ಮುಂಗಾಣ್' ಪರಾ. ೩. ಮುಂ ಪಿಂತೆಂಬುದಿದಲ್ತೆ ನಿಳಿಂಪಮುಗಕ್ಕೆಲ್ಲಮಿಂತು ಬಾಯಬಿಡುವುದೆ ಚಃ ಗಾಂಪು ಬಗೆಗೊಂಡು ಜಿನಪತಿಯಂ ಪೂಜಿಸು ಪಡೆವೆಯಿನಿಯನಂ ಮಱುಭವದೊಳ್ (**ಅಶ್ವ. ೩-೦೭**). ೫. 'ಮುಂಗುರುಳ್', 'ಮುಂಜಗಲಿ' ಪರಾ. ೬. 'ಮುಂಗಡೆ' ಪರಾ. ೭. 'ಮುಂಗಾರ್', 'ಮುಂಜಾವ' ಪರಾ. **ಮುನ್ನ₁**: ೩. "ಆದಿಃ, ಅಗ್ರಂ, ಪು(ರಾ)ರಂ, ಪೂರ್ವಂ, ಪ್ರಥಮಂ, ಪ್ರಾಕ್, ಪುರಃ –ಈ ೭ ಮುನ್ನಂ" (**ಹಲಾಯು. ೧೦೭-೨೨**). ೪. ಕರಮೆಸೆಯೆ ಮುನ್ನಿನ ದಿನಂ ಶಂಕರನಿಗರ್ಚಿಸಿ ಮಱುದಿವಸ ಪರಿಹರಿಸಿದಾ ಪತ್ರೆಯನಿನಿತನಾವೋಹಿಲನು ತಂದು (**ಬಸವು. ೪೩-೭೭**) ; ಮುನ್ನಲುಳ್ಳಾಚಾರ್ಯರುಗಳ ಪದಗಳು ಮತ್ತೆನ್ನ ಚಿತ್ತದೊಳಿರ್ದ ಬಳಿಕ ಚೆನ್ನುನಡೆವುದು ಕವಿತೆ ಸೋಪ್ರದೋರ್ಪುದು (**ವರ್ಧಶ. ೦-೦೩**) ; ಒಲಿದು ತನ್ನೊಡವುಟ್ಟು ನೊಸೆ ಮಗಳೆಂದೆಂಬ ಪಲರು ಮುನ್ನಿನ ಬಾಂಧವರು ಕುಲದೇವತೆಯೆಂದು ಕೂರ್ತು ತಂತಮ್ಮಿಷ್ಟಫಲವ ಪಡೆವರೆನ್ನಿಂದ (**ಹಂಬ. ೦-೪೦**). ೫. ಮುನ್ನಜನ್ಮದ ಪಡೆದ ಫಲವಿದು ಎನ್ನ ಬಿಡುವುದೆ (**ಗೋಹಾಡು. ೦೮-೯೯**). ೧೦. ಹಿಂಭಾಗದ ; ಹಿಂಬದಿಯ : ಪೊಸೆದು ಕಟ್ಟಿದ ಮುನ್ನ ಕಚ್ಚೆಯ ಬೆಸುಗೆ ಶಿಖಿಗಳ ಗಂಟು . . . ಎಸೆವ ಪೊಂಬಣ್ಣದ ಶರೀರದಿ ಮಿಸುಪ ವಾಮನರೂಪನಾಂತಾ ವಿಷ್ಣುಮುನಿ ಬಂದ (**ಶಾಳ್ವಭಾ. ೧೮-೨೩**).

**ಮುನ್ನಾದಿನ** = ಹಿಂದಿನ ದಿನ : ಓಬಳವ್ವ ನಾಗತಿಯು . . . ತನಗೆ ಮುನ್ನಾದಿನ ಆದ ಸ್ವಪ್ನದ ಸಂಗತಿಯನ್ನು ಹೇಳಿದಳು (**ಚತ್ರಶಾ. ೬೦**) ; ನಾನು ನಾಡಹಬ್ಬದ ಮುನ್ನಾದಿನ ಹಲಸಂಗಿಗೆ ಹೋಗಿ ತಲುಪಿದೆನು (**ಕ್ರಬಂಧ. ೯೩**). **ಮುನ್ನಿನವ** = ಹಿಂದಿನವನು ; ಪೂರ್ವಜ : ನಿಮ್ಮಲಿ ಮುನ್ನಿನವನು ಯಯಾತಿಯುಯ್ಯನು ನಸ್ನ ನಾಮವೆ ನಹುಷನೆಂಬುದು (**ಕುಮಾರ ೦೩-೬೩**). [**ದೇ.॥ ತಮಿ.** ಮುನ್ ; **ಮಲ.** ಮುನ್, ಮುನ್ನಂ ; **ಕೊತ** ಮುನ್, ಮು ; **ತೆಲು.** ಮುಂ, ಮುನಿ, ಮುನು, ಮುನ್ನು]

**ಮುನ್₂**, ಮುಂ₂, ಮುನ್ನ₂, ಮುನ್ನಂ (ಅ). ೧. (ಸ್ಥಳಕ್ಕೆ ಸಂಬಂಧಿಸಿದಂತೆ) ಮುಂದೆ ; ಮುಂಭಾಗದಲ್ಲಿ ; ಮುಂದಕ್ಕೆ ; ಎದುರಿಗೆ: 'ಮುನ್ನುಗ್ಗು', 'ಮುನ್ನೂಕು' ಪರಾ. ೨. (ಕಾಲಕ್ಕೆ ಸಂಬಂಧಿಸಿದಂತೆ) ಅನಂತರದಲ್ಲಿ ; ಭವಿಷ್ಯದಲ್ಲಿ ; ಮುಂದೆ : ಪರಮಕವೀಶ್ವರಚೇತೋಹರಮೆಂಬಿನಮೆಸೆವ ಮಾಳವೀಮಾಧವಮಂ ವಿರಚಿಸಿದ ಕನ್ನಮಯ್ಯಂಬರವಾಗಂ ಸುಕವಿ ಬಗೆವೊಡಿನ್ನುಂ ಮುನ್ನುಂ (**ಶಂಕಶಂ. ೩-೮**). 'ಮುನ್ನುಟಿ' ಪರಾ. ೩. ಮೊದಲು ; ಮುಂಚೆ ; ಆರಂಭದಲ್ಲಿ : ನಡೆನೋಡಲ್ ರೂಪು ಕೇಳಲ್ ನುಡಿ ಪುರದ ಜನಕ್ಕಾಯ್ತು ಮುನ್ನಂತೆ ಮೇಗಣ್ಣಡರ್ದಾಗಳ್ ಮೆಯ್ಯ ಕಾಣಲ್ ಕಳಕಳಮಿನಿಸಂ ಕೇಳಲಾಯ್ತು (**ಆದಿಪು. ೭-೩೭**) ; ನೀವಿದನೆಮಗೞಿಪಿರ್ವುರ್ನೀ ವಾರ್ತೆಯನಱೆಯೆವು (**ಧರ್ಮಾಮೃ. ೨-೭೩**) : ಮನದೊಳ್ ಮುನ್ನೊಗೆದಿರ್ದ ಸಂಶಯಮದೆಲ್ಲಂ ಪಿಂಗೆ ಚಂದ್ರಧ್ವಜಾವನಿಪಂ ಸಂತಸದಂತಮೆಯ್ದು . . . ಉದ್ಯೋಗಿಸಿದಂ (**ಕುಸುಮಶಾ. ೦೩-೭೪**). ೪. ಹಿಂದೆ ; ಪೂರ್ವದಲ್ಲಿ : ಮುನ್ನೆಗಟ್ಟಿ ವೇಳೆ ಪಡಿಚರುಮಿನ್ನಪ್ಪೊರುಮಿಗದುಳ್ಳೊರುಂ ಬಗೆವೊಡವರ್ ನಿನ್ನನ್ನರೆ ನಿನ್ನನ್ನರೆ ನಿನ್ನನ್ನರೆ ನಿನಗೆ ನೀನೆ ದೊರೆಯುಯ್ ಸಮ್ಯಾ (**ಇಲ. XX, ೭೦-೦೦ ; ಸು. ೨ನೆಯ ಕತ**); ತನ್ನೊಳಗಣ ಪನ್ನಗನಂ ಮುನ್ನೀನ್ ಪಿಡಿದೊಗೆಯೆ ಕಾಯ ಲಾಜಿದೆ ಪಿರಿದುಂ ಬನ್ನದ ಕರ್ಪೆಸೆದುದು ತೋಱಿಗಿನ್ನುಂ ಪರ ಗಳ ತಮಾಳ ನೀಳಚ್ಛವಿಯಿಂ (**ಶಂಕಶಾ. ೩-೩೪**) ; ಉರಗ ನರ ದಿವಿಜಾದಿಗಳಿಗಿದು ಪರಿಹರಿಸಲಳವಲ್ಲ ದೈವದ ಪರುಠವಣೆ ಮುನ್ನಾದಿಯಲಿ ನಿರ್ಮಿಸಿತು ಮೃತ್ಯುವನು (**ಕುಮಾರವ್ಯಾ. ೭-೨೯**). **ಮುಂ₂** : ೧. ದಂಪತಿಗಳೆ ಮಾಡಿ ಬೀಳ್ಕೊಟ್ಟು ಕೆಳೆಯರು ಮುಂ ಪೋಗಲನಿರುವ್ವನೊಡನೆ ಚಂಪಕಧಾಮ ಕೋಮಲೆಯರು ಮರುಳ್ಗೊಂಡು ಮುಂಪೋದುದೇನ ಪೇಳುವೆನು (**ಮೋಹತ. ೦೮-೭೦**) ; ಪೊಸನೀರ ಹೂರದೊಳಗೆ ಮೞಿಮಿನ್ಗಳು ಮುನ್ಗಿ ಮುಂ ಪೊಳೆದಾಡುವಂತೆ ಮಿಸುಗುವ ವರಲಾವಣ್ಯಂಬುವಲಿ ಕಣ್ಣೆಸೆದುವು ಪೊಳಪೇಱಿ ನಗುತ (**ಕಂಶವ. ೦೦-೩೮**). ೨. ಮುಂ ಕೆಲವಾನುಂ ದಿವಸಕ್ಕೆ ದೇವ ಪಡೆವೈ ಶ್ರೀಮಂಡನ ಕ್ಷಾತ್ರಮಂಡಲವರ್ಗೋಚಿತಗಾತ್ರನಂ ಬಹುಕಳಾಸತ್ಪಾತ್ರನಂ ಪುತ್ರನಂ (**ಕಾದಂಬೂ. ೩೭೦**). ೩. ಪವಡಿಸಿದನಂತನೊಸೆದುಪ್ಪವಡಿಸಿ ತನ್ನೆರಡುಮಡಿಯನೊತ್ತುತ್ತಿರ್ದ ಹವವಿಜಯುಯಪ್ಪ ವಿಜಯನನೆ ವಲಂ ಮುಂ ಕಂಡು ಬೞಿಕ ನೃಪನಂ ಕಂಡಂ (**ಶಂಕಶಾ. ೯-೦೦**) ; ತನಗಾಕಸ್ಮಿಕ ಶಂಕೆ ತನ್ನ ಮನದೊಳ್ ಮುಂ ಪುಟ್ಟಿ ತತ್ಕಾಂತೆಯಂ[ದಿನಿ]ರುಳ್ ಚಿಂತಿಸಿ ನಿದ್ದೆಗೆಟ್ಟು (**ಸುಕುಮಾ. ೦೨-೦೯**) ; ಬಸವಪಟ್ಟಣಕೆ ಮುಂ ಜಸದಿಂದ ನಡೆತಂದು ಮಸೆವ ಮುತ್ತಿಗೆಯನೆ ಬಲಿದು ಬಸಮಾಡಿಕೊಂಡರಂ ಕೋಪದೆ ತಾನಾಗಳೆಸವ ಸಂತಸವ ತಾಳಿದನು (**ಕಂಶವ. ೦೭-೨೭**). ೪. ಮನುಷ್ಯಗತಿಯೊಳ್ ಪುಟ್ಟಿ ಮುಂ ಗೆಯ್ದ ಪಾಪಕರ್ಮದುದಯದಿಂದಂ . . . ದುಃಖಂಗಳನೆಯ್ದಿ (**ವಡ್ಡಾರಾ. ೯೭-೦೪**) ; ಕತೆ ಪಿರಿದಾದೊಡಂ ಕತೆಯ ಮೆಯ್ಗಿಡಲೀಯದೆ ಮುಂ ಸಮಸ್ತಭಾರತಮನಪೂರ್ವಮಾಗೆ ಸಲೆ ಪೇಟ್ದ ಕವೀಶ್ವರ[ರಿ]ಲ್ಲ (**ಶಂಕಶಾ. ೦-೧೦**) ; ಮುಂ ಪುಣ್ಯಕರ್ಮಮನಂತಾಗಿರೆ ಮಾಡದೀಗಳಟಲಿಂ ಪೇೞಿಂತಬಿತಿರ್ದಳಕ್ಕುಮೆ (**ಕಾದಂಬೂ. ೩೪೭**). **ಮುನ್ನ₂** : ೧. (೬). ೨. ಎನ್ನದಾನೆಂಬೆರಡಱಿಂದವೆ ಬನ್ನಬಡುವನು ಜೀವನಲ್ಲದೆ ಮುನ್ನವಿನ್ನಂ ದೆಂದಿಗಾತ್ಮಂಗಿಲ್ಲ ಭವಬಂಧ (**ಕುಮಾರವ್ಯಾ. ೭-೨೮**) ; ಎನ್ನ ವಂಶದ ಗೋವ್ಗಳೊಳಗೆ ನಿನ್ನ ವಂಶದ ಗೊಲ್ಲರೊಳಗೆ ಮುನ್ನ ಸಂಕ್ರಾಂತಿ ಹಬ್ಬದೊಳಗೆ ಚೆನ್ನಕೃಷ್ಣನ ಭಜಿಸಿಯೆ ಪಾಲುಪೊಂಗಲನಿಕ್ಕಿಸಯ್ಯ (**ಗೋಹಾಡು. ೨೨-೦೦೯**) ; ಚೆನ್ನೆ ನೀ ಪೋದೆಯಿನ್ನವನ ಹಿಂದೆಯೆ ಕಳುಹಿ ಮುನ್ನ ಬಾಳ್ವೆಯದೆಂತು ಪೇಳೆನ್ನ ಮಗಳೆ (**ಕಾಟೂರ. ೦೭೪-೩೯೦**). ೩. ದುರ್ಯೋಧನನಪ್ಪೊಡೆ ಶ್ವೇತಕೃಷ್ಣಕಾರಕಂ ಕೃಷ್ಣನಂ ತನಗೆ ಮಾಡದನ್ನೆಗಂ ಮುನ್ನಮೆ ಪನ್ನಗಶಯನನಂ ನಮಗೆ ಮಾಡುವುದುತ್ತಮಪಕ್ಷಂ (**ಶಂಕಶಾ. ೯-೦೦ ವ**) ; ಈ ಬಿಂಬೋಷ್ಠೆಯಂ ಸರ್ಪದಷ್ಟೆಯನೆನಗೆ ಪದುಮೆಮಾಟ್ಪಿರಪ್ಪೊಡೆ ನಾಳೆ ನೇಸಮೂರ್ಡದ ಮುನ್ನಮೆ ವಿಷಾಪಹಾರಂ ಮಾಡಿದಪ್ಪೆಂ (**ಸುಕುಮಾ. ೭-೮ ವ**) ; ನಾಳೆ ಪಡುವಣ ತರಣಿ ತೊಲಗದ ಮುನ್ನ ಕೊಲುವೆನು ವೈರಿ ಸೈಂಧವನ (**ಕುಮಾರವ್ಯಾ. ೮-೩೩**). ೪. ಆಂ ಮುನ್ನ ಜನನೀಚರ ಲಲಿತಾಂಗದೇವ

ನೊಳನುಬಂಧಿಸಿದ ಮೋಹದೊಳು ನಿನ್ನ ದೇವನಪ್ಪ ಲಲಿತಾಂಗಂ ಬೆರಸಿರ್ಪತ್ತಿ ರ್ಪಲಲಿತಾಂಗದೇವರಂ **ಪೂಜಿಸಿದೆಂ** (ಶಾಪುಂಕು. ೨೦) ; ಧರೆಯಂ ದ್ವಾಪರ **ದೊಳ್** ವದಾನ್ಯತಿಲಕಂ **ಲೋಕೋತ್ತರಂ** ಮುನ್ನ ಭಾಸ್ಕರಪುತ್ರಂ ನಿಜ ದಾನದಿಂ ತಣಿಪಿದಂತೀರೇಬ್ಬ ಪೀಭಾಗಮಂ **ದೊರೆವೆತ್ತುತ್ತಮಭೋಗದೊಳ್** ತಣಿಪಿದಂ ಭೂಪೋತ್ತಮಂ (ಪಂಕಶಂ. ೬-೦೦) ; ಈ ವಿಧಿಯಿಂ ಪಾಂಡವರಿಗ **ಕಟಾ** ಸ್ವಾಪ್ತ ಸೇರದು ತನಗೆ ತಾ ಮುನ್ನಾವ ನೋಹಿಯನಳಿದೆನೋ ಭವ ಭವಸುಸ್ರದಲಿ . . . ಎನುತ ಮಿಗೆ ಮರುಗಿದನು ಧೃತರಾಷ್ಟ್ರ (ಕುಮಾ್ಯಭಾ. ೦೬-೬). **ಮುನ್ನಂ** : ೧. (ಕ). ೨. ನಾಭಿರಾಜಂಗೆ ರಾಜ್ಯಾಭಿಷೇಕಂ ಗೆಯ್ದು ಮರುದೇವಿಗೆ ಮಹಾದೇವಿ ಪಟ್ಟಂಗಟ್ಟಿ **ಪೂಜಿಸಿ** ಮುನ್ನಮುಜು ದಿಂಗಳುಂಟೆನೆ ವಸುಧಾರೆಯುಮಾಯೋಧ್ಯಾಪುರದೊಳು ಸುರಿವಂತು ಧನದಂಗೆ **ಬೆಸಸಿದೊಡೆ** (ಶಾಪುಂಪು. ೩೦). ೩. ಸಕ್ಕದಮುಂ ಪಾಗದಮುಮಮಕ್ಕುಂ ಬಗೆದಂತೆ **ಸಮಜು ಪೇಟರ್** ಮುನ್ನಂ ನಿಕ್ಕುವಮೊಳವಪ್ಪುದೆಱಿಂತಕ್ಕಂತವ **ಱವಱ** ಲಕ್ಷ್ಯಮುಂ ಲಕ್ಷಣಮುಂ (ಶಬ್ದಮ. ೧-೪೧) : ಮುನ್ನಂ ಪೂಜಿಸಿ ಶರಮಂ ರಸ್ನದ ಪಡಲಗೆಯೊಳಿಟ್ಟು ನಿಜಪರಿವಾರಂ ತನ್ನುಳ್ಳನಿತುಂ ಬೆರಸು ಭಯನ್ನಡುಕಮನೀಯೆ ಬಂದು ಕಂಡಂ ದಿವಿಜಂ (ಆದಿಪು. ೧೨-೦೨೦) ; ಈ ಬಿಜುನುಡಿಯಂ ಲಾಲಿಸುತಾ ಬಾಲೆ . . . ಮುನ್ನಂ ಕಾಣಿಸಿಕೊಂಡ ದಿವ್ಯ ಪುರುಷನಂ ಮನದೊಳ್ ಜಾನಿಸಿ ತವಸಿಗಳೊಳೊರ್ವಂಗೆ ಸರವನಿಕ್ಕುವೆನೆಂದು ಮುಂದಡಿಯಿಟ್ಟಳ್ (ಅದ್ಭುತ. ೦೨-೨೦). ೪. ಭೂಪಮುರ್ನ್ನಮಿಂತಾರ್ವಿ ರೋಧಿಗಳಂ ಸಾಧಿಸಿ ವೀರಮಂ ತಳೆದರ್ (ಎಕ. XIII, ೩೨೯-೨ ; 929) ; ನುಡಿ ಮುನ್ನಂ ಸ್ಪಷ್ಟಮಾಗಿರ್ದುದು ಬಟಿಕಮಿದಸ್ಪಷ್ಟಮಾಯ್ತಗ್ನಿ ತಾಪಂ ಗುಡಲಲ್ಲಿಂದಿತ್ತಲಿಂತೀ ಪಾಕಸಮಿತಿಗೆ (ಶಾರಂಪೂ. ೬೬) ; ದುರ್ಧರದುಃಖ ಮೆನ್ನನಲೆವಂತುಂ ಮುನ್ನಮೇಗೆಯ್ದೆನೋ (ಸುಕುಮಾ. ೯-೦೦೯).

**ಮುಂಮುಂ**, **ಮುನ್ನಮುನ್ನ** (ದ್ವಿರುಕ್ತಿ) : ೧. ಮುಂದು ಮುಂದಕ್ಕೆ ; ತುಂಬ ಮುಂಭಾಗಕ್ಕೆ ; ಹೆಡೆ ನಿಮಿರಿ ಹರಿವಂತೆ ಹರಿದುದಾ ಸೇತುಸರ್ಪಂ. ಕ್ಷಣಕ್ಷಣಕೆ ಮುಂಮುಂ **ಬೆಳೆದು** (ತ್ರೀರಾಮಾ. ೫೯೨-೨೨೦). ೨. ಮೊದಮೊದಲು ; ತುಂಬಾ ಹಿಂದೆ : ಪುಣ್ಯವುಳ್ಳ ಶಾಲಿಕ್ಕೆ ಪಾಷಾಣ ಪುರುಷವಪ್ಪುದು ನೋಡುಯ್ಯ ಮಣ್ಣು ಹೊನ್ನಪ್ಪುದು ಮುನ್ನಮುನ್ನವೆ ಅಚ್ಚೊತ್ತಿದ ಭಾಗ್ಯವೆನ್ನ ಕಣ್ಣ ಮುಂದೆ ಕಾಣಬಂದಿತ್ತು ನೋಡಾ (ಬಪಶಂ. ೨೦೬-೯೩೨). [<ಮುನ್$_1$]

**ಮುನ್$_3$** 'ಮೊ$_1$' ನೋ.

**ಮುನಶಿ**, ಮುನಷಿ. ಮುನಿಷಿ, ಮುನುಷಿ, ಮುನ್ಷಿ (ನಾ). ೧. ಬರೆಹಗಾರ ; ಲೇಖಕ : **ಮೊಕಾಂ** ಬೆಂಗಳೂರು ಖುದು ಸುರಪ ಮುನಶಿ (ಎಕ. VI. ಕಡೂ, ೪೮-೫೪; 1811); ಅಶ್ವಥನಾರಣ್ಣಯ್ಯ ಮುನಶಿ (ಮೈಅಂ. ೦೯೩೦,೪೩-೪೬: 1812). ೨. (ಅರಬ್ಬಿ, ಪಾರಸಿ ಭಾಷೆಗಳನ್ನು ಬಲ್ಲ) ಗುಮಾಸ್ತ : ಕಾರಕೂನ : ಮುನಶಿಯು ಚಮಸಲಾಲನನ್ನು ಕರೆಯ ಬೇಕೆಂದು ದಫೆದಾರನಿಗೆ ತಿಳಿಸಿದನು (ಏಧಿವ್ಯ. ೦೬೫). **ಮುನಷಿ** : ೧. ಸುಬ್ಬರಾವ ಮುನಷಿ (ಮೈಅಂ. ೦೯೨೯, ೯೪-೪೫; 1813). ೨. ಕಿರಿಯ ದಿವಾನರು ಅದನ್ನು ಚಂದವಾಗಿ ಓದಿ ನೋಡಿ ಮುನಷಿಯನ್ನು ಕರೆಸಿ . . . ನುಡಿದನು (ವಾಗ್ಭೂಷಿ. ೦೯೫); ಮೂರುವಿಧದ ಮುನಷಿಗಳನ್ನು ಇರಿಸಿ ಕೊಂಡು ಅವರ ಯೋಗ್ಯತಾನುಸಾರವಾದ ಸಂಬಳವನ್ನು **ಕೊಡುವುದು** ತಿಣ್ಣವಾಗಿತ್ತು (ಮುಸುಗ. ೪೫). **ಮುನಿಷಿ** : ೨. ಓರ್ವ ಮುನಿಷಿಯಂ ಕರೆಮುಕೊಂಡುದಧ್ದುರಿಗೈದಿ (ಅಶ್ವಮವಿ. ೩೦-೩೬). ೩. (ಪಾರಸಿ, ಅರಬ್ಬಿ ಭಾಷೆಗಳ) ಶಿಕ್ಷಕ : (ಕ). ೪. ಕಾರ್ಯದರ್ಶಿ ; ಕಾರಭಾರಿ : (ಕ). **ಮುನುಷಿ** : ೨. ಕೋರ್ಟಿನ ಮುನುಷಿಯೊಬ್ಬನು ಪ್ರಮಾಣವಚನಗಳನ್ನು ಹೇಳಿಕೊಡಲಾರಂಭಿಸಿ (ಗವುಕ. ೧೬೬); ಶೀಲವತಿನೀರ್ಕಟ್ಟೆಯ ತಾಣದಲ್ಲಿ ಒಬ್ಬ ಸಾಮಾನ್ಯ ಮುನಶಿಯಾಗಿದ್ದ – ಹೆಸರು ಶೇಷಾಚಲಯ್ಯನೆಂದು (ಗೂಂಡಾರ. ೦೫೨). **ಮುನ್ಷಿ** : ೨. ದೊರೆಗಳ ಅಧೀನದಲ್ಲಿದ್ದ ಮುನ್ಷಿ ಗಳು ಫಾರಸಿ, ದಕ್ಖನಿ, ಕನ್ನಡ ಭಾಷೆಗಳನ್ನು ಚೆನ್ನಾಗಿ ಬಲ್ಲವರಾಗಿಯೂ ಇರುತ್ತಿದ್ದರು (ಕಡೂ). ೫. ಬೇರೆ ಬೇರೆ ಭಾಷೆಗಳನ್ನಾಡುವವರ ಮಾತುಗಳನ್ನು ಭಾಷಾಂತರಿಸಿ ಪರಸ್ಪರರಿಗೆ ತಿಳಿಸುವವನು : (ಮೈಗಜೆ. IV, ೬೮೦).

[ ← ಪಾರ. ಹಿಂ. ಮುನ್ಶೀ : ಮರಾ. ಮುನಶೀ, ಮುನ್ಶೀ ]

**ಮುನಷಿ** 'ಮುನಶಿ' ನೋ.

**ಮುನಸಿಪ** 'ಮುನಸೀಫ' ನೋ.

**ಮುನಸಿಫ** 'ಮುನಸೀಫ' ನೋ.

**ಮುನಸೀಫ್** 'ಮುನಸೀಫ' ನೋ.

**ಮುನಸೀಫ**, ಮುನಸಿಪ, ಮುನಸಿಫ. ಮುನಸೀಫ್. ಮುನಸುಫ್. ಮುನಸೂಫ್, ಮುನಸೂಫ, ಮುನ್ಸೀಫ್ (ನಾ). ಕೆಳದರ್ಜೆಯ ನ್ಯಾಯಾಲಯಗಳಿಗೆ ಬರುವ ವ್ಯವಹಾರಗಳನ್ನು ಇತ್ಯರ್ಥಗೊಳಿ ಸುವ **ನ್ಯಾಯಾಧೀಶ** : ಈಗಿರೋ ಮುನಸೀಫರು ಅವರಿಗೆ ಬೇಕಾದವರು (ತಂದಕೂ. ೦೫೯); ಹೆಂಗಸರು ಮಾಮಲೇದಾರ – ಮುನಸೀಫರಾಗುವರು (ಸ್ತ್ರೀಲಮಿ. ೨೦೪); ಹಳೆಮುನಸೀಫರಿಗೆ ವರ್ಗ ಆತು ಅಂತ ಚಹಾ **ಕೊಡ್ತಾರೆ** ವಕೀಲ್ರೆಲ್ಲ (ಹಸ್ಕೊಂದ. ೦೦೯). **ಮುನಸಿಪ** : ಅಂಕೋಲಾ ತಾಲೂಕ ಮುನಸಿಪರು ಹರತಿ ಲಕ್ಷುಮಯನವರು (ಜೊಂಕಾ. ೦೯೪೦, ಕುಮುಟ. ೦೦೩-೬; 1771). **ಮುನಸಿಫ** : ಗ್ರಾಮ ಮುನಸಿಫನು ಗ್ರಾಮಕೋರ್ಟಿನಲ್ಲಿ ದಾಖಲ್ಮಾಡಲ್ಪಟ್ಟ ವ್ಯಾಜ್ಯಗಳ ಒಂದು ರಿಜಿಸ್ಟರನ್ನು ಇಡತಕ್ಕದ್ದು (ಗ್ರಾಮಾಕ. ೧೯). **ಮುನಸೀಫ್** : "ಪ್ರಾಡ್ವಿವಾಕಃ, ಅಕ್ಷದರ್ಶಕಃ . . . ನ್ಯಾಯನಿರ್ಣಾಯಕನ ಹೆಸರುಗಳು. ಜಡ್ಜ್. ಮುನಸೀಫ್. ಧರ್ಮಾಧಿ ಕಾರಿ" (ಸಿದ್ಧಾಂತ. ೨೩೬). **ಮುನಸುಫ್** : ಮುನಸುಫ್ – ಗ್ರಾಮದ ಶಿವಿಲ್ ಅಧಿಕಾರಗಳನ್ನು ಚಲಾಯಿಸತಕ್ಕವನಿಗೆ ಮುನಸೂಫ್, ಗ್ರಾಮ ಮುನಸೂಫನೆಂದು ಹೆಸರು (ಗ್ರಾಮಾಕ. ೦). **ಮುನಸೂಫ್** : ಮೇಲಿನ '**ಮುನಸುಫ್**' ಉಲ್ಲೇಖದ ಪ್ರಯೋಗವನ್ನು **ನೋಡಿ**. **ಮುನಸೂಫ** : ಚಿದೂ . . . 'ಸಾಹೇಬ ಆಗಲಿ. ಮುನಸೂಫ ಆಗಲಿ (ಮುಕ್ತ್ಯರಿ. ೬). **ಮುನ್ಸೀಫ್** : 'ಮುನ್ಸೀಫ್‌ಕೋರ್ಟು' ಪರಾ.

[ ← ಅರ. ಹಿಂ. ಮುನ್ಸಿಫ್ ; ಮರಾ. ಮುನಸಫ್, ಮುನಸಿಫ್, ಮುನಸೀಫ್, ಮುನಸೂಫ್, ಮುನ್ಸಫ್ ]

**ಮುನಸುಫ್** 'ಮುನಸೀಫ' ನೋ.

**ಮುನಸುಫ್‌ಕೋರ್ಟು** 'ಮುನ್ಸೀಫ್‌ಕೋರ್ಟು' ನೋ.

**ಮುನಸೂಫ್** 'ಮುನಸೀಫ' ನೋ.

**ಮುನಸೂಫ** 'ಮುನಸೀಫ' ನೋ.

**ಮುನಾಫೆ** (ನಾ). ಲಾಭ ; ಫಾಯಿದೆ ; ಆದಾಯ : ಅವರು ಮುನಾಫೆ ಯಿಲಿಸಿ ಮಾರಿದ್ದೆಂಬುದೇ ಇಲ್ಲ (ಜಾರುದಾ. ೪೬); ಹತ್ತಿಪ್ಪತ್ತಕ್ಕೆ ಟಕ್ಕರ್ ವಿನಹ ನಿಮ್ಮಿಂದ ಒಂದು ಪೈ ಮುನಾಫೆಯಿಲ್ಲ (ಜೀವಮ. ೫೬).

[ ← ಅರ. ಮುನಾಫಅತ್, ಮುನ್ನಾಫಅ. ಮುನ್ಫಅ, ಮುನಾಫಾ ; ಹಿಂ. ಮರಾ. ಮುನಾಫಾ ]

**ಮುನಾಸಬು** (ಗು). ೧. ಉಚಿತವಾದ ; ಸೂಕ್ತ ; ತಕ್ಕುದಾದ : **ಈ** ಹದಿನೇಳು ಸ್ಥಳಗಳ ಪಾಳೆಯಗಾರರಿಗೆ ಅವರವರ ಸ್ಥಿತಿ ತರಗತಿಗಳಿಗನು ಸಾರ ಮುನಾಸಬು ಮಾಹೇಯಾನಾ ಮರ್ಯಾದೆಯ ತಲಬು (stipend) ಮೊಕರೂರಾಯಿತು (ಮಹಾವಂ. II, ೦೫). (ನಾ). ೨. ಅರ್ಹತೆ ; ಸೂಕ್ತತೆ : ಕುಳದ ಆದಾಯ ಮುನಾಸಬಿನಂತೆ ವಾರದ ದವಸದ ಗುತ್ತ ಯಲ್ಲಿ . . . ಸಲ್ಲುತ್ತಿತ್ತು (ಪಾಳಗಾ. ೫೪).

[ ← ಅರ. ಹಿಂ. ಮುನಾಸಿಬ್ ; ಮರಾ. ಮುನಾಸಬ್ ]

**ಮುನಿ₁** (ಕ್ರಿ). ೧. ಸಿಟ್ಟಾಗು ; ಕೋಪಗೊಳ್ಳು : "ಮುನಿ—ಕ್ರೋಧೇ. ತಪಸ್ವಿನಿ ಚ" (ಶಮು೨); ಅಳುವವೇಡಮುಜುಂಸಾಸಿರನುವಮಾನ್ ಚಿತ್ರವಾಹನನಾಳುತ್ತುಂ ಬಾಯ್ಕೋಳದಿರೆ ಮುನಿದು ಕೊಲ್ಲಿಪಲ್ಲವನೊಬವ್ವುಂ ನೊಲವ್ವುರಾದಿತ್ಯನ್ ವೆಸಸಲ್ (ಎಕ. VIII. ಸೊರಬ. ೧೧–೩; ಸು. ೯೦೦); ಒಸೆಗೆ ಮೇಣ್ ಮುನಿಗೆ ಮೇಣವರೆಲ್ಲರುಮಂತೆ ಬಗ್ಗ[ಸುಗೆ] ಮತ್ತುಮಾಯು ಲಾಗದು (ಕವಿರಾ. ೦–೧೪೩) ; ಮುನಿದಿರ್ಪತ್ತೊಂದುಸೂಬಿಜಾ ಕ್ಷತ್ರಿಯರ ನಚಿಸಿ ಕೊಂದಿಕ್ಕಿದಾ ರಾಮನಿಂದಿತ್ತ ನರೇಂದ್ರರ್ ಪೊಕ್ಕರಿಲ್ಲೋರ್ವರುಂ (ಗದಾಯು. ೦–೨೬); ಅವರಿವರ ಹವಣಲ್ಲ ಗುರು ಮುನಿದವಗಡಿಸಿದರೆ ನಿಲುವ ನಾವನು (ಕುಮಾ.ವ್ಯಾ. ೯–೨೫); ಒಲಿದರೆ ನಾರಿ, ಮುನಿದರೆ ಮಾರಿ (ಗಾದೆ). ೨. ಅಸಮಾಧಾನಗೊಳ್ಳು ; ಬೇಸರಹೊಂದು ; ಜುಗುಪ್ಸೆಪಡು : ತನ್ನ ಕರಿ ಮಾಡಿದಪರಾಧಂ ತನ್ನದೆನುತಂ ಪೆದೆಜಿ ಜೋಳನು ತನ್ನ ಜೀವಕೆ ಮುನಿದನಂತಾಗಿ (ಬಸವು. ೨೨–೨೦); ನೊಂದನೀಪರಿ ತನ್ನ ಕಂಗಳೆ ಮುಂದೆ ನರಪತಿ ಪಾರ್ಥನನ್ನೀನೆಂದು ಮುನಿದನೊ ಶಿವಶಿವಾ ಎಂದಳಲಿದನು ಭೀಮ (ಕುಮಾ.ಭ. ೦೨–೭). ೩. ಹೊಟ್ಟೆಕಿಚ್ಚುಪಡು ; ಮತ್ಸರಿಸು : ಒಡೆಯರ ಸಿರಿಯಂ ಕಂಡೊಡೆ ಬಡವರ್ ಮುನಿವಂತೆ ನರಕಗತಿಗಿಬಿಪ್ಪವರುಂ ತಡೆಯದೆ ನಿರ್ವೃತಿಸುವಿದುಂ ಪಡೆವವರಂ ಕಂಡೊಡಾಗಳುಂ ಕಡುಗಾಯ್ವರ್ (ಧರ್ಮಾಮೃ. ೧೦–೯೬); ನಿಮ್ಮವರೊಡನೆ ಸರಸಾಗಿಪ್ಪವರ ಕಂಡರೆ ನಾನವರಿಗೆ ಮುನಿವೆ ನೋಡಾ ಕಪಿಲಸಿದ್ಧಮಲ್ಲಿನಾಥ ನೀನವರಲ್ಲಿ ಇಪ್ಪೆಯಾಗಿ (ಸಿದ್ಧವ. ೩೨–೦೬೯); ಈರ್ಷ್ಯೆಗೆ – ಕವಿಗೆ ಕವಿ ಮುನಿವಂ (ಕವಿಮ. ೦೩೧ ಕ್ರಬೋ). ೪. ಪ್ರತಿಭಟಿಸು : ಮಲೆ : ಮುನಿದಿದಿರಾಗೆ ಶರಣ್ಬುಗೆ ಮನಮೊಲ್ದುದನೆರೆಯೆ ಫಲ್ಗುಣ(ನ)ಂ ಧಾತ್ರಂ ಕರ್ಣನೆನಲ್ ಗೊಜ್ಜಿಗಭೂಪಾಳನನೆಮ್ಬುವ ಭೂಮಿಪಾ[ಳಕ]ಕ್ಕೆಲರೊಳರೇ (ಎಕ. XIII. ೩೩೦–೧೧; ೨೭೫); ಸಾಕಿನ್ನಿವರವರಲೇನರ್ಜುನನು ಮಾಧವನು ಮುನಿದಡೆ ಗೆಲುವೆನಂಜದೆ. ರಥವ ಹರಿಸು (ಕುಮಾ.ವ್ಯಾ. ೯–೩೬) ; ಮುನಿಯದಿರು ರಾಮಂಗೆ ಮಲೆತರೆ ಮರಣವಹುದು (ತೊರೆರಾ. ೦೯–೨೯).

**ಮುನಿವರ ಸಿಂಗ** = ಪ್ರತಿಭಟಿಸುವವರನ್ನು ನಾಶಮಾಡುವವನು : ಒಂದು ಬಿರುದು : ಸುಗುಣಾದ ರಾಘವಂ ಮುನಿವರ ಸಿಙ್ಗ ಮಾಚಕದಾವಳು ಚಣ್ಣವಿಕ್ರಮಂ (ಎಕ. III (ಗ). ಪಗ ಡ. ೬೦–೩೦; 1057).

[ದೇ.॥ ತಮಿ. ಮಲ. ತುಳು. ಮುನಿ]

**ಮುನಿ₂** (ನಾ). ೧. ತಪಸ್ಸನ್ನು ಆಚರಿಸುವವನು ; ಋಷಿ : ತಪಸ್ವಿ : "ಋಷಿಃ, ತ್ರಿಕಾಲದರ್ಶೀ, ಮುನಿಃ, ವಾಚಂಯಮಃ – ಈ ೪ ಋಷಿಗಳ್" (ಶಬ್ದಮ. ೬೮–೨೩೬); ಮುನಿವನವನುನೆ ಬಿಸುಟುಬವು ಮುಂ ಮುನಿಯುರ ಸೋಂಕಿಲೊಳೆ ಒಳೆದ ಸಿಂಗಂಗಳ್ ಮುಬ್ಬಿಸೊಳದರ್ಪ ಪಿಡಿವ ಗುರ್ವ ಮುನೆಗೆಬಿವನಿತರ್ಕಮಲಸಿ ಮರುದಾತ್ಮಜನಾ (ಕಂಶಶಾ. ೨–೬) ; ಬೆಟ್ಟದ ಮುನಿಯಂ ನೆನೆದೊಡೆ ಮುಟ್ಟವು ರಾಕ್ಷಸ ಪಿಶಾಚಿ ವಿಷಮಾಗಿಗಳುಂ (ನೇಮಿಪು. ೦–೦೭); ಅಂಬುಧಿಯು ಮುನಿಯಾಪೋಷಣದ ಕೊಂಬಲ್ಲಿ ಚಂದ್ರ ಮನಮ್ಮಬಿಂದನೆ (ಬಸವ. ೨೫). P ವಿಶೇಷವಾಗಿ ವಿಷ್ಣು, ಶಿವ, ನಾರದ, ಭರತ, ಅಗಸ್ತ್ಯ, ವ್ಯಾಸ, ಪಾಣಿನಿ, ಅರ್ಹಂತ, ಬುದ್ಧ ಮುಂತಾದವರಿಗೆ ಈ ವಾಚಕವನ್ನು ಬಳಸುತ್ತಾರೆ. ೨. (ಏಕಾಂಗಿಯಾಗಿದ್ದುಕೊಂಡು) ಮೌನವ್ರತವನ್ನು ಆಚರಿಸುವ ತಪಸ್ವಿ. ೩. ದರ್ಭೆ. ೪. ಒಂದು ಬಗೆಯ ಮರ ; ಪಲಾಶ ; ಮುತ್ತುಗ. ೫. ಮಾವಿನ ಮರ. ೬. ಪ್ರಿಯಾಲವೃಕ್ಷ; P ಇನ್ನೂ ಅನೇಕ ಬಗೆಯ ಮರಗಳಿಗೆ ಈ ಹೆಸರುಂಟು : ಅಶೋಕ ಬದರಿ ಮಂದಾರ ಸುಪಟೀರ ಮುನಿ ಮಾತುಲುಂಗ . . . ಹೊನ್ನೆಯಿಂದಾ ಬನಂ ಕಣ್ಗೆಸೆದುದು (ನಂದಿಶಾ. ೩–೦೬). ೭. [ಜೈನ] ಶ್ರಮಣ; ಸವಣ : "ಮುನಿಃ, ತಪೋಧನಃ . . . ಶ್ವೇತವಾಸಾಃ ಸಂಯತಃ – ಈ ೯ ಸವಣರ ಪೆಸರ್" (ಶಬ್ದಮ. ೩೭–೧೯೦); ಆ ಮುನಿನಾಥಂ ತ್ರಿಗುಪ್ತಿಯೊಳ್ ನೆರೆದಂ ಈ ಮುನಿನಾಥಂ ಮಂತ್ರಗುಪ್ತಿಯೊಳ್ ನೆರೆದಂ (ಆದಿಪು. ೩–೨೯ ವ); ಮುನಿಮುಖ್ಯರ ಬರವಂ ಭೋಂಕನೆ ಕಂಡು (ಧರ್ಮಾಮೃ. ೯–೧೨). ೮. ಐದುವರ್ಗದ ಗುರುಗಳಲ್ಲಿ ಒಬ್ಬ : ಪಂಚಪರಮೇಷ್ಠಿಗಳಲ್ಲಿ ಒಬ್ಬ ; ಸಿದ್ಧ : ಮುನಿಜನದೋಬಿಸಿದೋಜಿಯೊಳನುವದಿಪ್ಪದಿದೊಂದೆ ಕೊಂಡಕುಂದಾನ್ವಯಸಂದನವನರುಕವೊಂದೆನಗಿನಿಸನುಗ್ರಹಂಗೆಯ್ಗೆ ಕರುಣದಿಂ ಮುನಿನಿವಹಂ (ಆದಿಪು. ೦–೦೨); ಅರ್ಹತ್, ಮುನಿ(ಸಿದ್ಧ), ಆಚಾರ್ಯ, ಉಪಾಧ್ಯಾಯ, ಸಾಧು ಇವರು ಪಂಚಪರಮೇಷ್ಠಿಗಳು (ಹಿಂದಶಾ. ೯೦). ೯. [ಗಣಿತ] ಏಳು ಎಂಬ ಸಂಖ್ಯೆಯ ಸಂಕೇತ : ಗಿರಿ ಮುನಿ . . . ಪರ್ವತಾದ್ರಿಯೇಬಿಜಿ ನಾಮಂ (ವ್ಯವಹಾ. ೯–೭). ೧೦. [ಕಾಮಶಾ] ಸ್ತ್ರೀಯರ ಪನ್ನೆರಡು ಬಗೆಯ ಮನೋಧರ್ಮಗಳಲ್ಲಿ ಒಂದು: ಶಾಂತಸ್ವಭಾವ : ಸುರ ಯಕ್ಷ . . . ಮುನಿ ಪಿಶಾಚ ರಾಕ್ಷಸ ಕಿನ್ನರ ಖರಮೆಂಬ ಪೆಸರ ಪನ್ನೆರಡುಸತ್ತ್ವದ ಬಗೆಯನೊರೆವೆನು (ಜನವ. ೫–೨೫). 'ಮುನಿಸತ್ತ್ವ' ಪರಾ.  [ಸಂ.]

**ಮುನಿಕೊಲ್ಬೋಯ** (ನಾ). ಒಬ್ಬಾತನ ಹೆಸರು : ಮುನಿಕೊಲ್ ಬೋಯಸ್ಯ ಭಾರದ್ವಾಜಗೋತ್ರ ಕನ್ನರಮ್ರ್ಣ ಏಕ್ಕಂಶಃ (ಎಕ. VII. ೦೬೬–೩೩; 668).  [ ? ]

**ಮುನಿನಿವೇದಕ** (ನಾ). ತಪಸ್ವಿಯ ಆಗಮನವನ್ನು ತಿಳಿಸುವವನು : ಋಷಿನಿವೇದಕ : ನಡೆದೇಬಿಡಿಮುಂ ಜಿನನಿರ್ದೆಡೆಗೆಬಿಗಿ ಬಿಟ್ಟಿಕ್ಕಂ ಮಚ್ಚು ಗೊಟ್ಟಂ . . . ಆ ಮುನಿನಿವೇದಕಂಗೆ ನೃಪೇಂದ್ರಂ (ಶಾಂತಿಪು. ೦–೬೩).

[ ಸಂ. ]

**ಮುನಿಪ** (ನಾ). ತಪಸ್ವಿಗಳಲ್ಲಿ ಮುಖ್ಯನಾದವನು : ರಾಗವಂ ಮುನಿಸುವಮನೊಲ್ಲದಂ ಮುನಿಪನೆಂಬುದು (ಕವಿರಾ. ೨–೦೦೬); ಮುನಿಪಂ ಮಾಸೋಪವಾಸಾಂತರದೊಳನುನಯಂ ಪಾರಿಸಲ್ಕೆಂದು ಪೊಕ್ಕೊಯ್ಯನೆ ಚರ್ಯಾಮಾರ್ಗದಿಂ ಬರೆ (ಶಂಶಶಾ. ೫–೩೪); ಅತಿಪ್ರಮುಖಮುನಿಪಶ್ರೇಣಿಗಳ ಪಾಪ್ಮನಸುಗಳಿಗೆ ಕ್ಷೀಣಪದದಲಿ ಮಾಜಿ ತ್ರೋಜುವ ನಿರುಪಮಿತಮೂರ್ತಿ (ಜನವ. ೫೦–೭೦).  [ಸಂ.]

**ಮುನಿಮು** 'ಮುನೀಬ' ನೋ.

**ಮುನಿಮತ** (ನಾ). ೧. ಋಷಿಯ ಅಭಿಪ್ರಾಯ.– ಮತ. ೨. [ಛಂದ] ಇಪ್ಪತ್ತಾರನೆಯ ಉತ್ಕೃತಿ ಎಂಬ ಛಂದಸ್ಸಿನಲ್ಲಿ ಹುಟ್ಟುವ, ಒಂದು ಪಾದದಲ್ಲಿ ಇಪ್ಪತ್ತಾರು ಅಕ್ಷರಗಳಿಂದ ಕೂಡಿರುವ ಒಂದು ವರ್ಣವೃತ್ತ : ವಿನಮಿತಬಲಿಶಪದೋಕ್ತಿಗಳಿಂ ಜನಹಿತಮಿಂತಿದು ಮುನಿಮತಮೆಂಬುದು (ಛಂದೋಂ. ೨–೦೯೯).  [ಸಂ.]

**ಮುನಿಯಿಸು, ಮುನಿಸು₁** (ಕ್ರಿ). ೧. ಕೋಪಗೊಳ್ಳುವಂತೆ ಮಾಡು; ಸಿಟ್ಟುಬರಿಸು : ಮುನಿಯಿಸಿದಂ ಕರಂ ಪಿರಿಯನಪ್ಪುದು ಬೆಟ್ಟನ ಬೆಟ್ಟ ವಸ್ತು ಕಾಂಚನಗಿರಿಯಿಂದಮುಗ್ಗಳಮೆನಿಪ್ಪದಾದೊಡಮೇನೊ . . . ದೊರೆಯಾರರಿಕೇಸರಿ ನಿನ್ನವೋಲ್ ಪೆಜಂ (ಕಂಶಶಾ. ೫–೬೬); ಮುನಿಯಿಸಿದ ರಾತಿಯಂ ಕೊಲ್ವೆನೆಂದು ಪೂಣ್ದಾತೆ ಪೂಣ್ಕೆ ತಪ್ಪದೆ ಕೊಲಲೇಂ ನಿನಗಲ್ಲದಿಂತು ತೀರ್ಗುಮೆ (ಗದಾಯು. ೧೦–೬); ಮುನಿಯಿಸುವೆಂ ಸಪತ್ನಿಯ ರನೆಂದಮರದ್ರುಮದೊಂದು ಪುಷ್ಪಮಂ ಮುನಿ ಹರಿಗಿತ್ತಂ (ಜಗನ. ೦೩–೪). **ಮುನಿಸು₁** : ೧. ಮುನಿಯದ ಕೂರದ ಮುನಿಸದ ಮುನಿಪತಿ ಭಾವಿಪೊಡೆ ತಾನೆ ಜಿನಪತಿಯಲ್ತೆ (ಸುಕುಮಾ. ೯–೩೭); ವಾರಿಜೋದ್ಭವನೀ ಸಲೋಜ ವಳಾಯತಾಕ್ಷಿಯ ಮೂಗಿನಾಕಾರಮಂ ನೆಜಿ ಪೋಲ್ಸಿರೆಂದುಬಿ ನೋಡಿ ಸಂಪಗೆಗಳ್ಗೆ ನಿಷ್ಕಾರಣಂ ಮುನಿಸಿರ್ದನಪ್ಪುದಜಿಂದದೇಂ ಮನದಬ್ಜಜಂ ಸಾರಲಣ್ಮದೆ ಭಾವಿಪಂದವನೊಂದು ಪೊರ್ದವು ತುಂಬಿಗಳ್ (ಧರ್ಮಾಮೃ. ೩–೦೬೨ ಅವತರ). ೨. ಕೋಪಗೊಳ್ಳು : ಸಿಟ್ಟಾಗು : ಇಂತು ಪೊಯ್ಬು ಪೆ

ನಿಂತು ಬಯ್ಯಪೇ ಮುನಿಸಿದೊಡೆ ತಿಳಿಪಿ ರತಿಯು ಕಾಲವಚಿದಿಂತು ನೆರೆವಪೆನವನೊಳ್ (ಪಂಪ. ೧೯-೪೦); ಚಿಂತೆಯಾದರ್ನ್ನು ಯಾರಿಗೆ ಹೇಳಾಲಿ ಅತ್ತೆ ಎಂದಾರೆ ಮುನಿಸ್ಯಾಳು ಸಿಡುಕ್ಯಾಳು (ಜಾನಪ. ೬೪).
[ ಮುನಿ$_1$ + – ಇಸು$_3$ ]

**ಮುನಿವಧು** (ನಾ). ಋಷಿಯ ಹೆಂಡತಿ; ಋಷಿಪತ್ನಿ : ಮುನಿವಧು ಗಾತ್ರವಲ್ಲಭನನಿತ್ತ ಪುಲೋಮಜೆ (ರರ್ಜುನಾ. ೨-೦೦೯); ಇನ್ನು ಪಾಂಡವ ರಾಜ್ಯಸಿರಿಯೆಮಗಿನ್ನು ಲೇಸಹುದಕಟ ದೈವದ ಗನ್ನಗತಕವೆಯೆನುತ ಓಗ್ಗಿತು ಮುನಿವಧೂನಿಕರ (ಕುಮಾರ. ೦೯-೩೩). [ ಸಂ. ಮುನಿವಧೂ ]

**ಮುನಿವಾಳು** (ನಾ). ಋಷಿಯ (ಶಾಂತವಾದ) ಬದುಕು.–ಜೀವನ : ಮನೆವಾಳು ಸಾಕಾಯ್ತು ಮುನಿವಾಳು ಬೇಕಾಯ್ತು (ಭರತ. ೩೨-೦೦೪).
[ ಮುನಿ$_2$ + ಬಾಳು ( < ಬಾಳ್$_3$) ]

**ಮುನಿವೃಕ್ಷ** (ನಾ). ಒಂದು ಬಗೆಯ ಮರ : ಅತ್ತಿಯಾಲವು ಅರಳಿ ಮತ್ತಿ ಮಹಿಷಾಕ್ಷಿ ಮುತ್ತುಗವು ಮುನಿವೃಕ್ಷ (ಶರಣ. ೦೨೯-೬). [ಸಂ.]

**ಮುನಿಷಿ** 'ಮುನಸಿ' ನೋ.

**ಮುನಿಸತ್ತ್ವ** (ನಾ). ೧. ಋಷಿಯ ಚೈತನ್ಯ. ೨. [ಕಾವ್ಯ] ಸ್ತ್ರೀಯರಲ್ಲಿರುವ ಹನ್ನೆರಡುಬಗೆಯ ಮನೋಧರ್ಮಗಳಲ್ಲಿ ಒಂದು: ಶಾಂತಸ್ವಭಾವ : ವಿನಯದ ವಿವೇಕದಿಂಪಿನ ಸೈರಣೆಯ ನುಡಿಯ ಜನನಿ ಜನಕರ್ಗಂಜಿ ನಡೆವ ಹಿತವ ನೆನೆವ ನಿರ್ಮತ್ಸರದ ಘನಭಕ್ತಿರತದ ಮಾನಿನಿಯೆ ಮುನಿಸತ್ತ್ವದವಳು (ಜನವ. ೫-೩೩). [ಸಂ.]

**ಮುನಿಸತ್ವ** (ನಾ). ೧. = ಮುನಿಸತ್ತ್ವ ೧. ೨. ಮುನಿಸತ್ತ್ವ ೨ : ದೇವಸತ್ವ . . . ವಾನರಸತ್ವ ಮುನಿಸತ್ವ ಪಿಶಾಚಸತ್ವ ರಾಕ್ಷಸಸತ್ವ ಕಿನ್ನರಸತ್ವ ಖಚರಸತ್ವವೆಂಬ ದ್ವಾದಶಸತ್ವ ಸತಿಯರಿಂ (ಚವೀಳ. ೦೮೩).
[ಸಂ.]

**ಮುನಿಸಪ್ತಕ** (ನಾ). ವಿಶ್ವಾಮಿತ್ರ, ಜಮದಗ್ನಿ, ಭರದ್ವಾಜ, ಗೌತಮ, ಅತ್ರಿ, ವಸಿಷ್ಠ ಮತ್ತು ಕಶ್ಯಪ ಎಂಬ ಏಳುಜನ ಋಷಿಗಳು; ಸಪ್ತರ್ಷಿಗಳು : ಚತುರಾನನನ ಸಭೆಯಲ್ಲಿ ಪೂಜ್ಯಂ ಮುನಿಸಪ್ತಕ ಮನಜಿತೋಳತ್ರಿಮುನಿವರನಧಿಕಂ (ಶಾಇ. XX, ೨೪೬-೦೨; 1228). [ಸಂ.]

**ಮುನಿಸಾನು** (ಕ್ರಿ). ಕೋಪವನ್ನು ತಾಳು; ಕೆರಳು; ಸಿಟ್ಟಾಗು : ನೀನಿನಿತು ಮುನಿಸಾನು [ಪಾಠಾಂ. ಮಾಡು] ವರೆ ಸಾಕಿನ್ನಾರು ಗತಿಯೆನಗೆ (ತಳಿತ. ೫-೯). [ ಮುನಿಸು$_2$ + ಆನು$_1$ ( < ಆನ್$_1$) ]

**ಮುನಿಸಿಪಾಲಿಟಿ**, ಮುನಿಸಿಪಾಲ್ಟಿ, ಮುನ್ಸಿಪಾಲಿಟಿ (ನಾ). ಸ್ಥಳೀಯ ಆಡಳಿತಾಧಿಕಾರವನ್ನು ಹೊಂದಿರುವ ನಗರದ ಸಂಸ್ಥೆ; ಪುರಸಭೆ; ನಗರಸಭೆ : ಕೆಲವು ಮುಖ್ಯವಾದ ಜಿನಸಿಗಳ ಮೇಲೆ ಮೊಕರರ್‌ವ ಆಕ್ಟ್ರಾಯಿ ಎಂಬ ತೆರಿಗೆಯೂ ಸರ್ಕಾರದ ಮೊಹತರ್ಫ ತೆರಿಗೆಯೂ ಈ ಮುನಿಸಿಪಾಲಿಟಿಗಳಿಗೆ ಸೇರಿದುವು (ಮಹಾವಂ. II, ೦೦೨): ಭಾರತೀಯರು . . . ಮುನಿಸಿಪಾಲಿಟಿಗಳು, ಜಿಲ್ಲಾಬೋರ್ಡುಗಳು, ಪ್ರತಿನಿಧಿಸಭೆಗಳು, ಇವು ಹೇಗೆ ಕೆಲಸ ಮಾಡಬೇಕೆಂಬುದನ್ನು ತಿಳಿದರು (ಶಾರದ. ೪೨೭). ಮುನಿಸಿಪಾಲ್ಟಿ : "ಮುನಿಸಿಪಾಲ್ಟಿ" ನೀರಿನ ಖಾತೆ ಕೆಲಸಗಾರರ ಸಂಪಂತಲ್ಲ (ಸುಕ್ಕುಸು. ೨೩). ಮುನ್ಸಿಪಾಲಿಟಿ : ಮುನ್ಸಿಪಾಲಿಟಿಯ ಮೇಲೆ ದಾವೆ ಹೂಡಿ, ಈ ಕಾಯಿದೆ ತೆಗೆದುಹಾಕುವ ಕಾಲ ಎಂದು ಬಂದೀತು ? (ಅಮ್ಮಿಐ. ೬). [ ← ಇಂ. Municipality ]

**ಮುನಿಸಿಪಾಲ್ಟಿ** 'ಮುನಿಸಿಪಾಲಿಟಿ' ನೋ.

**ಮುನಿಸು$_1$** 'ಮುನಿಯಿಸು' ನೋ.

**ಮುನಿಸು$_2$** (ನಾ). ೧. ಸಿಟ್ಟು ; ಕೋಪ : ಕ್ರೋಧ : "ಕೋಪಃ ಕ್ರೋಧಃ, ಅಮರ್ಷಃ, ರೋಷಃ, ಪ್ರತಿಘಃ—ಈ ೫ ಮುನಿಸು" (ಕಬಾಯು. ೩೯-೨೦೭) ; ವನರುಹದಳನಯನೇ ನಿನ್ನನೆ ನೆನೆನೆನೆದಿರುಳೊ ಳೊಜಗಿರೆ ಕಡೆಗಣ್ಣ ಕೆಂಪಿನನಗಿಸಿಯುಪವೊಲ್ಕೆಮ್ಮನೆ ರಕ್ತಾಂಭೋಜದಳದಿಯ ನಿಟ್ಟುಳಗೊಳ್ಗು (ಕಜಿಂ. ೧-೯೩); ನಿಮಗಂ ತಮಗಂ ಮುನಿಸುಂಟೆ ಕಾಯ್ದ ಬೆನ್ನೀರ್ ಮನೆ ಸುಡದೆಂಬೊಂದು ನುಡಿಯ ವೋಲ್ ಕುರುರಾಜಾ (ಶಂಕರಾ. ೯-೩೮) : ಕಂದ ಮನ ಮುನಿಸಿಲ್ಲಲೇ ನಾವೆಂದ ನುಡಿಗೆ (ಕುಮಾರ. ೮-೭೭) ; ಕೊಟ್ಟು ಬರುವ ನಿಷ್ಠುರಕ್ಕಿಂತ ಕೊಡದೇ ಬರುವ ಮುನಿಸು ಲೇಸು (ಗಾದೆ). ೨. ಸೇಡು : ವೈರ ; ದ್ವೇಷ : ನೀನಿಂತಿರಾನನ್ನೆಗಂ ಮುನಿಸಂ ತೀರ್ಚಿ ನರೇಂದ್ರವೈರಿತರುವಂ ನಿರ್ಮೂಲನಂ ಮಾಡುವೆಂ (ಗದಾಯು. ೬-೨೩).

ಮುನಿಸಂಮಾಡು = ಕೋಪ ಬರುವಂತೆ ಮಾಡು : ಕೆರಳಿಸು : ಸಿಟ್ಟುಬರಿಸು : ಆ ಮುನಿಗೆ ಮುನಿಸಂಮಾಡಲೆಂದಿಂದ್ರನುಪಾಯ ದೊಳಟ್ಟಿದ ಮದ್ರಿಕೀಟಂಗಳ್ ಕರ್ಣನೆರಡುಂ ತೊಡೆಯುಮಂ . . . ಉರ್ಚಿ ಪೋಗೆಯುಂ (ಶಂಕರಾ. ೦-೦೦೪ ವ). [ಮುನಿ$_1$ + –ಸು$_3$]

**ಮುನಿಸುಗುಟ್ಟು** (ಕ್ರಿ): ಸಿಟ್ಟಾಗು : ಕೋಪಗೊಳ್ಳು; ಕೆರಳು ; ರೇಗು: ಭೂದೇವಿ, ನೀನು ಈ ಚರಾಚರಜಗತ್ತಿನ ಶರೀರವಾಗಿದ್ದೂ ಅಜ್ಞಾನಿಯಂತೆ ಅಳಿಯನ ಮೇಲೆ ಮುನಿಸುಗುಟ್ಟುತ್ತೀ (ಉರಾತ. ೦೨೪).
[ಮುನಿಸು$_2$ + ಕುಟ್ಟು$_1$]

**ಮುನಿಸುಗೊಳ್ಳು** (ಕ್ರಿ). = ಮುನಿಸುಗುಟ್ಟು : ಮುನಿಸುಗೊಂಡಗ ರಿರುವ ಮಿಟಮಿಟಜನಿತ ವಿರಹಾನಲನ ಪೆರ್ಚಿಸಲ್ಕನಸಿಜನಟ್ಟಿದ ಚರರವೊಲು ತಂಪೆಲರು ಪರಿತಂದು (ಶಾಗಹ. ೩೦-೦೭).
[ಮುನಿಸು$_2$ + ಕೊಳ್ಳು$_1$ ( < ಕೊಳ್$_1$)]

**ಮುನಿಸುವ್ರತ** (ನಾ). [ಜೈನ] ವರ್ತಮಾನಕಾಲದ ಇಪ್ಪತ್ತುನಾಲ್ಕು ಜನ ತೀರ್ಥಂಕರರಲ್ಲಿ ಇಪ್ಪತ್ತನೆಯ ತೀರ್ಥಂಕರನ ಹೆಸರು : ವೃಷಭ ಅಜಿತ . . . ಮುನಿಸುವ್ರತ ನಮಿ ನೇಮಿ ಪಾರ್ಶ್ವ ವರ್ಧಮಾನರೆಂಬಿಪ್ಪತ್ತು ನಾಲ್ವರ್ ತೀರ್ಥಂಕರರ್ (ಜಾಪುಂಶ. ೪೦೨). [ಸಂ.]

**ಮುನೀಂದ್ರ** (ನಾ). ೧. ಋಷಿಗಳಲ್ಲಿ ಮುಖ್ಯನಾದವನು : ಶ್ರೀದೇವೇಂದ್ರ ಮುನೀಂದ್ರವಂದಿತಗುಣವ್ರಾತಂ . . . ದಯೆಗೆಯ್ವನಕ್ಕೆಮಗೆ ಮುಕ್ತಿ ಶ್ರೀಸುಖಾವಾಪ್ತಿಯಂ (ಅದಿಪು. ೧-೧) : ಪಸರಿಸಿದ ಮುನೀಂದ್ರನ ಪ್ರವೃದು ಕಿಸಲಯಸಮಪಾಣಿಪಾತ್ರದೊಳ್ ಶುದ್ಧಮನಂ ವಸುಧೇಶನಿಕ್ಕಿದಂ ಪಾಯಸಮಂ (ಕೃಷ್ಣ. ೦೯-೧೧). ೨. ಬುದ್ಧ. ೩. ಜಿನ. ೪. ಶಿವ. [ಸಂ.]

**ಮುನೀಬ**, ಮುನಿಮ (ನಾ). ೧. ಮೇಲ್ವಿಚಾರಣೆ ಮಾಡುವವನು : ನಿರ್ವಾಹಕ : ವ್ಯವಸ್ಥಾಪಕ : ಮುತ್ಸದ್ದೀರೂ ಮುನೀಬರೂ ಗಣತಿ ಮಾಡಿ ಚೀಗಾ ಹಾಕಿಸಿದರು (ಮುಸುಗ. ೦೬೦); ಅರಮನೆಯ ಮುತ್ಸದ್ದಿಯೂ ಮುನೀಬರೂ . . . ರಾಜಒಡೆಯನನ್ನು ಎದುರುಗೊಂಡರು (ಶ್ರೀರಾಮ. ೦೨೯). ಮುನಿಮ : ೨. ಲೆಕ್ಕಪತ್ರಗಳನ್ನು ನೋಡಿಕೊಳ್ಳುವವನು: ಗುಮಾಸ್ತ: ಕಾರಕೂನ : ದುಕಾನಿನ ಮುನಿಮನ ಪರಿಚಯದೊಳಗಿನವ ರಿದ್ದರೆ ಅಥವಾ ಅವರು ಮುನಿಮನಿಗೆ ತಮ್ಮ ಪಾತ್ರಿ ಕೊಟ್ಟರೆ . . . ರಕಮು ಕೊಡೋಣದರಲ್ಲಿ ಬಂತು (ಮುಂಬಯಿ. ೨೦).
[ ← ಅರ. ಹಿಂ. ಮುನೀಬ್, ಮುನೀಮ ; ಮರಾ. ಮುನೀಮ್]

**ಮುನುಷಿ** 'ಮುನಸಿ' ನೋ.

**ಮುನೂಜಿ** 'ಮೂನೂಜಿ' ನೋ.

**ಮುನ್ನ$_1$** 'ಮುನ್$_1$' ನೋ.

**ಮುನ್ನ$_2$** 'ಮುನ್$_3$' ನೋ.

**ಮುನ್ನಂ** 'ಮುನ್$_2$' ನೋ.

**ಮುನ್ನಡಸು** 'ಮುನ್ನಡೆಯಿಸು' ನೋ.

**ಮುನ್ನಡಿ** (ನಾ). ೧. ಪಾದದ ಮುಂಭಾಗ : ಕಾಲಿನ ಮುಂದುಗಡೆ.– ಎದುರು : ಗಜೆಯಂ ಭೋರೆನೆ ಪರ್ವಿ ಬೀಸಿ ಕಡುಪಿಂದೆಯ್ದುಂದು

ಮಾಜಿಯಾಂತ ಸಾಮಜಸಂಘಾತಮನೊಂದುಗೊಳ್ಳೆರಡುಗೊಳ್ಳೆಂದುರ್ವಿ ಪೊಯ್ಯೊಂದು ಪೊಯ್ಗೆ ಜವಂಗುಂದಿ ಸಿಡಿಲ್ದು ಮುನ್ನಡಿಗುರುಳ್ತರ್ಪನ್ನೆಗಂ ಬೀಟ್ . . . ಕೊಂದುಂ ಮರುನ್ನಂದನಂ (ಶಾಂತಿ. ೧೨-೧೧೨); ಯೋಗಿ ಪದತಳಮಿಳಿಯುಂ ನೆಟ್ ಮುಟ್ಟದ ಮುಂದುಗುಲದ ಸೆಟಗಂ ಪಡಿಪಾಸಿ ಮೊಟ್ಗಿದಂ ಮುನ್ನಡಿಯೊಳ್ (ಚಂದ್ರ ಪ್ರ. ೫-೨೨); ದಿವಿಜಾರಾಧ್ಯನ ನಿಂದ ಮುನ್ನಡಿಗೆ ವಾನವ್ಯಂತರರ್ ಮಾಟ್ಪರಷ್ಟವಿಧಾಭ್ಯರ್ಚನಂ (ಅನಂತ. ೯-೯೬).

೨. ಕಾಲಿನ ಮುಂತುದಿ ; ಮುಂಗಾಲು : (ಶ). [ಮುನ್$_1$ + ಅಡಿ$_1$]

**ಮುನ್ನಡಿಯಿಕ್ಕು** (ಕ್ರಿ). (ಅಲಂ) ಆಸಕ್ತಿತೋರಿಸು ; ಆಸೆಪಡು ; ಬಯಸು : ನೀರ ಕಡೆದು ಬೆಣ್ಣೆದೆಗೆವಂತೆ ಗೊಡ್ಡಿಗಪಾರ ಮುನ್ನಡಿಯಿಕ್ಕು ವಂತೆ (ಪುಣ್ಯ. ೧೨-೧೧೨). [ಮುನ್ನಡಿ + ಇಕ್ಕು]

**ಮುನ್ನಡೆ$_1$** (ಕ್ರಿ). ೧. ಮುಂದಕ್ಕೆ ಸಾಗು,_ಚಲಿಸು ; ಮುಂದುವರಿ: ಶಿಕ್ಷಣ ಫಲಮಾರ್ಗದಲ್ಲಿ ಮುನ್ನಡೆಯುವ ಸೂಚನೆ ವ್ಯಕ್ತಪಡುತ್ತದೆ (ಶಿಕ್ಷಣ. VIII, ಮುನ್ನುಡಿ); ಕಾಡುವೆಳೆಮಕ್ಕಳಂ ಪೊತ್ತು ಮುನ್ನಡೆದು (ಕಾಲೂರ. ೦೩೦-೪೩೦). ೨. ಮುನ್ನುಗ್ಗು ; ಮೀರಿನಡೆ : ಮಲೆಯ ಸೆರಗಂ ಸೆರಗೆ ಕೊಂಡೊಯ್ವು ನಾಡೊಡೆಯು ಗೆಲುವಡೆದು ಮುನ್ನಡೆಯೆ ಪಡೆಯ ಪಾಂಗಿನಲಿ (ಕಾಲೂರ. ೧೧೧-೨೧೨). [ಮುನ್$_2$ + ನಡೆ$_1$]

**ಮುನ್ನಡೆ$_2$** (ನಾ). (ಅಲಂ) ಏಳಿಗೆ ; ಪ್ರಗತಿ ; ಉತ್ಕರ್ಷ : "ಮುನ್ನಡೆ, ಅಭಿವೃದ್ಧಿ" (Advance. ಶಬ್ದ. ೯). [<ಮುನ್ನಡೆ$_1$]

**ಮುನ್ನಡೆಯಿಸು**, ಮುನ್ನಡಸು (ಕ್ರಿ). ಮುಂದಕ್ಕೆ ಒಯ್ಯು ; ಮುಂದು ವರಿಸಿಕೊಂಡು ಸಾಗು : ರಾಷ್ಟ್ರವನ್ನು ಯುಕ್ತಮಾರ್ಗದಲ್ಲಿ ಮುನ್ನಡೆ ಯಿಸುವುದು ಇವರಿಂದಾದೀತೆ ? (ಬಾಪು. ೦೯). **ಮುನ್ನಡಸು** : ಆ ಶಾಲೆ ಯನ್ನು ಯೋಗ್ಯರೀತಿಯಲ್ಲಿ ಮುನ್ನಡಸಿದ ಕೀರ್ತಿ ಅಲ್ಲಿನ ಮುಖ್ಯೋಪಾ ಧ್ಯಾಯರಿಗೇ ಸಲ್ಲಬೇಕು (ರೂಢಿ). [ಮುನ್$_2$ + ನಡೆಯಿಸು]

**ಮುನ್ನಡೆವಿಡಿ** (ಕ್ರಿ). (ಅಲಂ) ಮೀರು; ಅತಿಶಯಿಸು : ಉನ್ನತಲಲಾಟ ಪಟ್ಟಂ ಮನ್ನಿಸದಷ್ಟಮಿಯ ಚಂದ್ರನಂ ನಗೆಗಣ್ಗಳ್ ಮುನ್ನಡೆವಿಡಿದುವು ಕಮಳಮನಿನ್ನೇವಣ್ಣಿಪುದೊ ರಾಮನಭಿರಾಮತೆಯಂ (ಕುಂದಮಾ. ೩-೦೫೩). [ಮುನ್ನಡೆ + ಪಿಡಿ$_1$]

**ಮುನ್ನರಿ** 'ಮುನ್ನಱಿ' ನೋ.

**ಮುನ್ನಱಿ**, ಮುನ್ನರಿ (ಕ್ರಿ). (ಸೂಕ್ಷ್ಮಜ್ಞಾನದಿಂದ) ಮುಂದಾಗುವು ದನ್ನು ಮೊದಲೇ ತಿಳಿ, - ಮುಂಚಿತವಾಗಿ ಊಹಿಸು : ಬಿನ್ನವಿಸ ಲೆಂದಿರ್ದ ಹದನಂ ಮುನ್ನಱಿದು ಪರಮೇಶ್ವರು ಹಿಮಗುನ್ನಯನದಿಂ ನೋಡುವವಸರದೊಳ್ (ಬಸವ. ೦-೫೫). **ಮುನ್ನರಿ** : ಸ್ಫೂರ್ತಿಯಿಂದ, ಸೂಕ್ಷ್ಮಜ್ಞಾನದಿಂದ, ಮಂತ್ರತಂತ್ರದಿಂದ ಅಥವಾ ಊಹೆಯಿಂದ ತಿಳಿ. ಊಹಿಸು; ಮುನ್ನರಿ: ಭವಿಷ್ಯ ತಿಳಿ (Devine. ೨೦೫೩) ; ಹಕ್ಕಿ ಮುನ್ನರಿ ಯುವುದೆ ತನ್ನ ಪಯಣದ ತೆರನ ? (ಮಂಕುತ. ೭೩೦). [ಮುನ್$_1$ + ಅಱಿ]

**ಮುನ್ನಱಿಕೆ** (ನಾ). ಮುಂದೆ ಆಗುವುದರ ಸೂಚನೆ,-ತಿಳಿವಳಿಕೆ : ಮೊದಲೆ ಮುನ್ನಱಿಕೆಯನ್ ಪೇಟ್ದನಿತು ಪೇಟ್ದಿನೇ ಅಕ್ಕ ! (ಶಾಂತಿಗೂ. ೨೩-೩೩೩). [ಮುನ್$_1$ + ಅಱಿಕೆ]

**ಮುನ್ನಿ** (ನಾ). ನೃತ್ಯಗಾರನು ನಡುಪಟ್ಟಿಗೆ ಸೇರಿದಂತೆ ನಡುವಿಗೆ ಕಟ್ಟಿಕೊಳ್ಳುವ, ನೆರಿಗೆಗಳುಳ್ಳ ಒಂದು ಬಗೆಯ ವಸ್ತ್ರಾಲಂಕಾರದ ವಸ್ತು : ನಡುಪಟ್ಟಿಯನ್ನೂ ಮುನ್ನಿಯನ್ನೂ ಮಾಲಿಂಗ ವೀರಭದ್ರನ ನಡುವಿಗೆ ಹೊಂದಿಸಿ ಬಿಗಿದ . . . ನಡುವಿಗೆ ಸುಂದರವಾದ ನಾಲ್ಕೈದು ಬೆರಳುಗಳ ಅಗಲದ ಪಟ್ಟಿ . ಅಲ್ಲಿಂದ ಕೆಳಕ್ಕೆ ಇಳಿದು ನಿಂತ ಅಷ್ಟೆ ಅಗಲದ ವೆಲ್‌ವೆಟ್‌ನಿಂದ ಮಾಡಿದ ಜರಿ ಹೊಂದಿಸಲ್ಪಟ್ಟ ಮುನ್ನಿ (ಯಕ್ಷ. ೯೦). [ ← ತುಳು. ಮುನ್ನಿ = ನೆರಿಗೆ ]

**ಮುನ್ನಿರವು** (ನಾ). ಮೊದಲು ಇದ್ದ ಸ್ಥಿತಿ,—ಅವಸ್ಥೆ : ಅನಾವಳಿನ್ನ ಮುನ್ನಿರವಾವುದು ಪುತ್ರೀ ನಿನ್ನ ದಯವಾವುದು (ಹರಿ. ೦-೩೯). [ಮುನ್$_1$ + ಇರವು$_1$ (< ಇರ್) ]

**ಮುನ್ನಿರುಳ್** (ನಾ). ರಾತ್ರಿಯ ಮೊದಲ ಭಾಗ ; ಮುಸ್ಸಂಜೆ : "ಮುನ್ನಿರುಳಂ ಪ್ರದೋಷಮೆಂಬುದು" (ಹಲಾಯು. ೦೬-೦೦೯). [ಮುನ್$_1$ + ಇರುಳ್]

**ಮುನ್ನಿಱಿ** (ಕ್ರಿ). ಮುಂದೆ ನುಗ್ಗಿ ಇರಿ ; ಮುನ್ನುಗ್ಗಿ ನಾಶಮಾಡು : ರಿಪುಸೈನ್ಯಮೆತ್ತ ಧುರದೊಳ್ ನೃಪರಂ ಮುನ್ನಿಱಿದು ಪಲವು ಕಾಳಗದೊಳ್ ಭೂಮಿಪಚೂಡಾಮಣಿಸಿಂಗಂ . . . ಪೆಸರಂ ಪಡೆದು (ಎಕ. VIII. ಸೊರಬ. ೦೬೯-೦೬ ; 1033 ?) ; ಮತ್ತಗಜವಂ ಕೊಂದದದಟಸುವನೆತ್ತಿ ಮುನ್ನಿಱಿ ದವನ ಹರಣವನಿತ್ತು ಮೆಱೆದನು ಕಟ್ಟದೊಳು ಮಡಿವಾಳ ಮಾಚಯ್ಯ (ಬಸವ. ೨೦ ಸೊಪಸ). [ಮುನ್$_2$ + ಇಱಿ$_1$]

**ಮುನ್ನೀಡು** (ಕ್ರಿ). ಮುಂದಕ್ಕೆ ಚಾಚು,—ನೀಡು : (ಬಾಹುಗಳನ್ನು ಮುನ್ನೀಡಿ, ಪ್ರೇಮಾಲಿಂಗನಕ್ಕೆ ಮುಂಚುವನು) (ಚಿತ್ರ. ೦೬-೨೯). [ಮುನ್$_2$ + ನೀಡು$_1$]

**ಮುನ್ನೀರ್**, ಮುನ್ನೀರು (ನಾ). ಭೂಮಿಗಿಂತ ಮೊದಲು ಸೃಷ್ಟಿ ಯಾದ ಜಲ ; ಕಡಲು ; ಸಮುದ್ರ : ''ಮುನ್ನೀರ್, ನೀರೊಟ್ಟಿಲ್, ಕೊಱೆಗಳಾಣ್ಮಂ, (ಕಡಲ್)— ಈ ೪ ಸಮುದ್ರಂ" (ಕಬಿ. ೩೩-೦೪೦) : ಸಾರಗುಣಂ ತದ್ರಾಜಕುಮಾರನೊಳೆಳ್ಳನಿತು ಪೆಱರೊಳಿಲ್ಲೆಂತೆನೆ ಮುನ್ನೀ ರೊಳ್ ನೆಲಸುಗುಮಲ್ಲದೆ ನೀರೊಳ್ ನೆಲಸುಗುಮೆ ಸಾರರತ್ನಾವಳಿಗಳ್ (ಶಾಂತಿ. ೨-೬) ; ಮುನ್ನೀರ್ಬ್ಬಳಸಿರೆ ಧರಣಿಯೊಳ್[ನ್ನುಂ] ಮಾಧುರ್ಯ್ಯ ಸುಕರಚಾತುರ್ಯ್ಯಗುಣಪ್ರೋನ್ನತರಿಲ್ಲೆನೆ ಸಾಸನಮನ್ನಿದೆ ಚೆಲ್ವಾಗೆ ಸಾಮಿಯಣ್ಣಂ ಬರೆದೋಂ (ಶಾಸನ. XI-I, ೯೦-೫೬ ; ೯೬೪) ; ಎನ್ನಂತೆ ರತ್ನವಿತತಿಗೆ ತಾನ್ನೆಲೆಯಾಯ್ತೆಂಬ ಸಮಗುಣಪ್ರಣಯದಿನಾ ಮುನ್ನೀರ್ ಬಂದಪ್ಪಿದುದೆನೆ ತನ್ನಗರಮನವಮಲಪರಿಖೆ ಬಳಸಿದುದೆತ್ತಂ (ಚಂದ್ರ ಪ್ರ. ೦-೦೦೫). **ಮುನ್ನೀರು** : ''ಮುನ್ನೀರೆನಲ್ ಶರಧಿ" (ಕಶ. ೯೦) ; ಅವರ್ ಶೀಘ್ರದಿಂ ಮುನ್ನೀರ ತಡಿಗೆಯ್ದಲ್ (ಕದ್ಯ. ೦೦-೦೭೦) ; ತನ್ನನೇ ಓರಿ ಒಡಮಾಳ್ಪ ವಡಬಾಗ್ನಿಯಂ ತನ್ನನೇ ಹೆಚ್ಚುಗೆಯ ಮಾಳ್ಪಮೃತಕಿರಣನಂ ಮುನ್ನೀರು ತನ್ನ ಗಂಭೀರತನವನೇ ಮೆಱೆದು ಗರ್ಭೀಕರಿಸಿಶಿಲ್ಲವೇ (ಸಮ್ಯ. ೬-೫೦) ; ಅಲ್ಲದೋ ಮುನ್ನೀರು ಅದ ರೊಳಗೆ ಚಾಚಿಹುದು ಭೂಮಿ ತಾ ಕೂರ್ಮದಂತೆ ! (ದ್ಯಾವಾ. ೯೬-೦).

☞ ಕಿಟೆಲ್ ಅವರ ನಿಘಂಟು ಮತ್ತು ತಮಿಳುಕೋಶಗಳಲ್ಲಿ ಈ ಶಬ್ದವನ್ನು 'ಮುನ್' (<ಮೂಱು)+ನೀರ್=ಮಳೆಯ ನೀರು, ನದಿಯ ನೀರು ಮತ್ತು ಒರತೆಯ ನೀರು ಎಂದು ಅರ್ಥ ಮಾಡಿ ದ್ದಾರೆ. [ಮುನ್$_1$+ನೀರ್./ತಮಿ. ಮುನ್ನೀರ್; ತೆಲು. ಮುನ್ನೀರು]

**ಮುನ್ನೀರಣುಗ** (ನಾ). ಕಡಲಿನಲ್ಲಿ ಹುಟ್ಟಿದವನು ; "ಚಂದ್ರ" (ಶ್ರ ಚಿ). [ಮುನ್ನೀರ್ + ಅಣುಗ (<ಅಣ್ಗ)]

**ಮುನ್ನೀರಣುಗಿ** (ನಾ). ಕಡಲಿನಲ್ಲಿ ಹುಟ್ಟಿದವಳು ; ಲಕ್ಷ್ಮಿ : ಮುಗಿಯೆ ಪಗಲ್ ಮುಸುಕಲ್ ಮುಂಗಳ್ತಲೆ . . . ಮುಗಿದುವು ಮುನ್ನೀರಣುಗಿಯ ಸೆಜ್ಜೆವನೆಗಳಾ ರಾತ್ರಿಯೊಳು (ಜಗನ್. ೦೩-೬೩). [ಮುನ್ನೀರ್ + ಅಣುಗಿ (<ಅಣ್ಗಿ)]

**ಮುನ್ನೀರು** 'ಮುನ್ನೀರ್' ನೋ.

**ಮುನ್ನೀರೆರೆಯ** 'ಮುನ್ನೀರೆಱೆಯ' ನೋ.

**ಮುನ್ನೀರೆಱೆಯ**, ಮುನ್ನೀರೆರೆಯ (ನಾ). ಕಡಲಿನ ಒಡೆಯ : ಸಮುದ್ರಾಧಿಪತಿ ; ವರುಣ : ''ಮುನ್ನೀರೆಱೆಯಂ ಪ್ರಚೇತನೊಳ್ ಕಡಲೆ[ಱೆಯಂ]" (ಕಣ್ಣ. ೦). **ಮುನ್ನೀರೆರೆಯ** : "ಮುನ್ನೀರೆರೆಯನೆನೆ ವರುಣ" (ಕಶ. ೯೦). [ಮುನ್ನೀರ್ + ಎಱೆಯ]

**ಮುನ್ನೀರ್ಗಂದ** (ನಾ). = ಮುನ್ನೀರಣುಗ : ರನ್ನವಸಿರ್ಪಲವೊಗ ವೇಳ್ಪಾಲಗೆಯುನ್ನಲ್ಲದೆ ನಡೆವ ನೆರಲ್ಸರಿವುಮ್ಮುನ್ನೀರ್ಗಂದಂ ಬಿಸುಗದಿರ ನೊಡಲ್ಪಿಡಿದವನೆಂಬೆಂಟು ನಿನ್ನಯ ಪರಿಜು (ಅರ್ಕರ್ಶಿ. ೦-೩೨).
[ಮುನ್ನೀರ್ + ಕಂದ$_1$]

**ಮುನ್ನೀರ್ಗಟ್ಟೆ** (ನಾ). ಕಡಲಿನ ಎಲ್ಲೆ ; ಸಮುದ್ರದಿಂದ ಉಂಟಾದ ಸೀಮೆ.–ಗಡಿ : ಮುನ್ನೀರ್ಗಟ್ಟೆಯ ನಡುವಣ ಇಳೆಯೂಮ್ಮರು ಬೇಗದಿಂದ ತಳರ್ದರೋಲಗಕೆ (ಕುಣಹಾಂ. ೦೬-೫೦). [ಮುನ್ನೀರ್ + ಕಟ್ಟೆ$_1$]

**ಮುನ್ನೀರ್ಗಿಚ್ಚು** (ನಾ). ಸಮುದ್ರದ ಒಳಗಿರುವ ಬೆಂಕಿ ; ಕಡಲ್ಗಿಚ್ಚು ; ಬಡಬಾಗ್ನಿ : "ಕಡಲುರಿ ಮುನ್ನೀರ್ಗಿಚ್ಚೆನೆ ಪಡಬಾನಳಂ" (ತತುಃ. ೦೦೨). [ಮುನ್ನೀರ್ + ಕಿಚ್ಚು]

**ಮುನ್ನೀರ್ಮಗ** (ನಾ). = ಮುನ್ನೀರಣುಗ : "ಜೊನ್ನೊಡಲಂ ಪೆಗಲ್ವಗೆಯುಂ ಮುನ್ನೀರ್ಮಗಂ . . . ಎನ್ನಲ್ಕಿರುಳೆಚಿಯುನಪ್ಪನು" (ತತುಃ. ೨೦೦).
[ಮುನ್ನೀರ್ + ಮಗ]

**ಮುನ್ನೀರ್ವಕ್ಕೆಗ** 'ಮುನ್ನೀರ್ವಟಿಕ್ಕೆಗ' ನೋ.

**ಮುನ್ನೀರ್ವಟಿಕ್ಕೆಗ, ಮುನ್ನೀರ್ವಕ್ಕೆಗ** (ನಾ). ಕಡಲನ್ನೇ ಹಾಸುಗೆಯನ್ನಾಗಿ ಉಳ್ಳವನು ; ವಿಷ್ಣು : "ಅರಲ್ಬೊಜೆಯಂ . . . ಮುನ್ನೀರ್ವಟಿಕ್ಕೆಗಂ, ಕಾರೊಡಲಂ, ಕಾವನಯ್ಯಂ—ಈ ೧೨ ವಿಷ್ಣುಗೆ ಪೆಸರ್" (ಕಕಹಾ. ೪೭-೯). ಮುನ್ನೀರ್ವಕ್ಕೆಗ : "ರಕ್ಕಸವಗೆಯಂ ಮುನ್ನೀರ್ವಕ್ಕೆಗಂ . . . ಹರಿಯಕ್ಕುಂ" (ತತುಃ. ೭).
[ಮುನ್ನೀರ್ + ಪಟಿಕ್ಕೆ + — ಗ$_2$]

**ಮುನ್ನೀರ್ವೆಂಕೆ** (ನಾ). = ಮುನ್ನೀರ್ಗಿಚ್ಚು : "ಮುನ್ನೀರ್ವೆಂಕೆಯೆಂದು ಕಡಲ್ಗಿಚ್ಚೆಂದು ಬಡಬಾನಲಂ" (ಕಕಹಾ. ೫೩-೦೯೭). [ಮುನ್ನೀರ್ + ಬೆಂಕೆ]

**ಮುನ್ನು** (ನಾ). ಒಂದು ಬಗೆಯ ಸಸ್ಯ : ನರುವಲು, ನಾರಲೆ, ನರವೆ, ಮುನ್ನು, ಮಡಿಕೆ (ವ್ಯಜಿಗಿ. ೬೯-೦೩೦೦). [ ? ]

**ಮುನ್ನುಗ್ಗು** (ಕ್ರಿ). ರಭಸದಿಂದ ಮುಂದುವರಿ.—ಮುಂದಕ್ಕೆ ಸಾಗು : ಖಿನ್ನತೆಯ ಕ್ಷುಬ್ಧತೆಯ ತೋರಗೊಡದಲೆ . . . ಮುಂಗಾಲುಪುಟಿಗೆಯುಲಿ ಮುನ್ನುಗ್ಗುತಿರಬೇಕು (ಅರಳು. ೩೧೮-೦೨) ; ಎರಡನೆಯ ರಾಜೇಂದ್ರನು ಮತ್ತೆ ಮುನ್ನುಗ್ಗಿ ಚಾಳುಕ್ಯರ ಸೈನ್ಯವನ್ನು ಚೆಲ್ಲಾಪಿಲ್ಲಿಮಾಡಿದನು (ಕೊಳಂಬ. ೩೬). [ಮುನ್$_2$ + ನುಗ್ಗು$_1$ (<ನುರ್ಗು$_1$)]

**ಮುನ್ನುಡಿ** (ನಾ.) ೧. ಯಾವುದಾದರೊಂದು ಗ್ರಂಥದ ಆದಿಯಲ್ಲಿ ಪ್ರಕೃತಗ್ರಂಥದ ವಸ್ತು, ಉದ್ದೇಶ, ವ್ಯಾಪ್ತಿ, ನಿರೂಪಣಾಮಾರ್ಗ, ಗ್ರಂಥಕರ್ತ ಮುಂತಾದ ವಿಚಾರಗಳನ್ನು ಕುರಿತು ಬರೆಯುವ ಪರಿಚಯಾತ್ಮಕವಾದ ಬರವಣಿಗೆ : ಪೀಠಿಕೆ ; ಉಪೋದ್ಘಾತ : ಮುನ್ನುಡಿಯ ಪದ್ಧತಿ ನನಗೇನೋ ಪ್ರಿಯವಾದದ್ದಲ್ಲ (ಹುಹಾಗ. ii. ಸ್ಪೀಪರ ಮಾತು) ; ಒಬ್ಬ ದೊಡ್ಡವರು . . . ಒಲಿದು ಮುನ್ನುಡಿ ಬರೆದು ಕೊಟ್ಟಿರುವರು (ಕಾಲೂರ. ೫ ಬರೆದವನ ಎರಡು ಮಾತುಗಳು). ೨. (ಅಲಂ) (ಯಾವುದಾದರೊಂದು ಕಾರ್ಯದ) ಆರಂಭ ; ಮೊದಲು; ನಾಂದಿ: ಸಾಮಾನ್ಯದಿ ಸುಖಿಪುದೆ ಚಿರಶಾಂತಿಗೆ ಮುನ್ನುಡಿ (ಅಂಕೇ. ೩೯-೪) ; ಇನ್ನೆಗಂ ನೀನ್ ಕೇಳ್ದ ನುಡಿಗಳ್, ಮುಂದಾಗಲಿರ್ಪುದರ್ಕೊಂದುಮುನ್ನುಡಿಯುಮಲ್ಲಂ (ಬಿಶ್ವಶ್ರ. ೩೯-೬೩೦). [ಮುನ್$_1$ + ನುಡಿ$_2$]

**ಮುನ್ನುಲಿ** (ನಾ). ಮೊದಲ ಮಾತು ; ಆರಂಭದ ನುಡಿ ; ವೇದದ ಈ ಗೀತೆಗಳು . . . ಮಾನವಜನಾಂಗ ತನ್ನ ಮುತ್ತಿಗೆ ಕಣ್ಣು ತೆರೆಯುತ್ತಿದೆ ಎಂಬುದರ ಮುನ್ನುಲಿಯಾಗಿದೆ (ಛಾಪಗೀ. ೦೦೪). [ಮುನ್$_1$ + ಉಲಿ$_2$]

**ಮುನ್ನುಸಿರ್** (ಕ್ರಿ). ಮುಂದಾಗಿ ಹೇಳು ; ಮುಂಚೆಯೇ ನುಡಿ,–ತಿಳಿಸು : ಈ ಎಣಿಕೆಯನ್ ಮುನ್ನುಸಿರ್ದು, ಆಗ್ನಮಿನ್ ಅಜಿ‍ಕದಾದೊಡ ಮಿರು (ಅಂತಗೂ. ೪-೬೯). [ಮುನ್$_2$ + ಉಸಿರ್$_1$]

**ಮುನ್ನುಟಿ** (ಕ್ರಿ). ಅನಂತರದಲ್ಲಿ ಬಿಡು.—ತ್ಯಜಿಸು (?) : ಗಟಿಗೂಸಾತುವರಿಂದ್ರನಂ ಗಿರಿಶನಂ ಸರ್ವಸ್ವಮಂ ಕೊಂಡು ಮುನ್ನುಟಿವರ್ (ಶಮುಡ. ೬೫ ಶ್ರಯೋ). [ಮುನ್$_2$ + ಉಟಿ$_1$]

**ಮುನ್ನುಟಿವು** (ನಾ). ಮುಂದಿನ ಜೀವನ.—ಬದುಕು ; ಭವಿಷ್ಯ : ಚದುರ್ ತನಗುಳ್ಳೊಡೆ ಮೆಲ್ಪು ಮೇಳಮಂ ಪೊಸಯಿಸಿ ತನ್ನ ಮುನ್ನುಟಿವು ಬೇಟದ ಲಲ್ಲೆಯ ಬಲ್ಮೆ ಪತ್ತಿ ಸುತ್ತಿಸೆ ಪುರುಡಿಂಬುಕ್ಕೆಸೆ ಬಿಯಪಾಜಿಸಿ ಪೋದವಮಂ ಬೊಜಂಗನೇ (ಅಂಕೃ. ೦೨-೦೭). [ಮುನ್$_1$ + ಉಟಿವು]

**ಮುನ್ನೂಕು** (ಕ್ರಿ). ಒತ್ತಾಯದಿಂದ ಮುಂದಕ್ಕೆ ತಳ್ಳು ; ಮುಂದು ವರಿಯಿಸು : ನಮ್ಮ ಶತ್ರುಗಳಿಂದ ಮಾಡಲ್ಪಟ್ಟ ಈ ಯೋಚನೆ ನಮ್ಮನ್ನು ಕೂಡ ಪಾಪಮಾಡಲು ಮುನ್ನೂಕುತ್ತಿದೆ (ವ್ಯಾಕಡಿ. ೦೨೬).
[ಮುನ್$_2$ + ನೂಕು$_1$ (<ನೂಂಕು$_1$)]

**ಮುನ್ನೂರು** 'ಮೂನೂರು' ನೋ.

**ಮುನ್ನೂಱು** 'ಮೂನೂಱು' ನೋ.

**ಮುನ್ನೆಗಪು** (ಕ್ರಿ). ಮುಂದಕ್ಕೆ ಚಾಚು.—ಎತ್ತು : ಶೌರ್ಯೋನ್ನತಿಯಿಂ ಮುಂಗಾಲ್ಗಳಂ ಮುನ್ನೆಗಪುತುಗುರ್ಗಳಿಂ ಪೊಯ್ದು ಮೇಲ್ವಾಯ್ದು ಗರ್ವೋದ್ಧತಗರ್ಜತ್ಸಿಂಹಮಂ . . . ಖಡ್ಗದಿಂ ಪೊಯ್ದನತ್ಯದ್ಭುತಸತ್ತ್ವಂ (ಕಬಕಂ. ೩-೩೩). [ಮುನ್$_2$ + ನೆಗಪು$_1$]

**ಮುನ್ನೆಣಿಕೆ** (ನಾ). ಮುಂಚಿತವಾಗಿ ಮಾಡುವ ಆಲೋಚನೆ ; ಮುಂದಿನ ಆಲೋಚನೆ ; ದೂರದೃಷ್ಟಿ : ತಾಯಿ ಹೇಳಿದ ವಿವೇಕ ಅವನ ಮೈಗಾಪವಲಿಗಿದ್ದರೂ ವಿಧಿಯ ಹಠಕ್ಕೆ ಗೆಲುವಾಗಿ, ಅವಳ ಮುನ್ನೆಣಿಕೆ ನಿಜವಾಗುತ್ತದೆ (ಸಂಕುಂಡ. ೩೯) ; ಸಟೆಯ ಕರೆದಪರ್ ಬಾನವರ್, ಪ್ರಮಿಾತ್ಯೂಸ್ ಮುನ್ನೆಣಿಕೆಯುಳ್ಳವನ್ – ಎಂದು (ಬಿಶ್ವಶ್ರ. ೬-೦೨೬).
[ಮುನ್$_1$ + ಎಣಿಕೆ]

**ಮುನ್ನೆಲೆ** (ನಾ). ೧. ಮುಂಭಾಗ ; ಇದಿರು ; ಎದುರುಭಾಗ ; ಬೆಟ್ಟಿನ ನೀರಟ್ಟಿನ ಪೊಲಟ್ಟಿಲಗಳ್ ಬೆಟ್ಟಿತಾದೊಡಂ ಮುನ್ನೆಲೆಯೊಳ್ ನೆಟ್ಟನೆ ನಡುಗದೆ ಕದಡದೆ ಕಟ್ಟಿವಟಂ ದೊಡ್ಡದೇವನೆಸೆದಂ ದಿಟ್ಟಂ (ತಕಬ. ೩-೦೬). ೨. ಮುಂಚೆ ಇದ್ದ ಜಾಗ ; ಮೊದಲಿನ ಸ್ಥಳ : ಒಲೆಯಿಂ ಪಾಲ್ಗಂದಲಂ ಕೀಟ್ಗಿಳುಪಿ ಕಡೆಮೊಸರ್ಗಂದಲಂ ಪಲ್ಲಟಂಗೆಯ್ದೊಲವಿಂ ಮಕ್ಕಳ್ಗೆ ಪೊಯ್ವಾಲಿಡಿದೊಳಲಿಗಳಂ ಕೌಚಿ ಮೇಣ್ ಸುಣ್ಣನೀರ್ ಮುನ್ನೆಲೆಯೊಳ್ ತೋರ್ಪಂತೆ ತುಂಬಿಟ್ಟು . . . ನಲಿಗುಪಾ ನಂದಬಾಲಂ (ತಕಬ. ೩-೫೬). ೩. (ಅಲಂ) ಪ್ರಮುಖವಾದ ಸ್ಥಾನದಲ್ಲಿರುವ ವ್ಯಕ್ತಿ : ಒಲಿವ ಮುನ್ನ ಜಗಕೆಲ್ಲಕು ನಾ ಒಲಿದ ಮೇಲೆ ಜಗಕೆಲ್ಲಕು ನೀ ಹಿನ್ನೆಲೆ ನಾ ಮುನ್ನೆಲೆ ನೀ (ಗೂಳಿಬಿ. ೨೫-೦೦). [ಮುನ್$_1$ + ನೆಲೆ$_1$]

**ಮುನ್ನೇಸರ್, ಮುನ್ನೇಸರು** (ನಾ). ೧. ಬೆಳಗಿನ ಸೂರ್ಯ; ಉದಯ ಕಾಲದ ನೇಸರು ; ಬಾಲಸೂರ್ಯ : ರನ್ನದ ತೊಡವು ರಂಜಿಸುವ ಮಕುಟ, ಹೊಸ ಹೊನ್ನಬಣ್ಣದ ಮೈವೆಳಗು ಚೆನ್ನೆಸೆದನು ಬಿಸಿಯಲಿದಲೆ ಗೆಯ್ವುದ ಮುನ್ನೇಸರಿಂಜ ಮಾಳ್ಕೆಯೊಳು (ಶ್ರೀಪಾಂ. ೩-೨೨) ; ತನಿಜೊನ್ನಪಾಲನೀಂಟುವ ಪದೆದೊಳದು ಬತ್ತೆ ಮನದೊಳಂ ಕಂದಿತೋಱುವ ಹಂಸಪಾಜಿಯೊ ಪೋಳೆಸಲೆಸೆದುದಸ್ತಾದ್ರಿಯೊಳ್ ಚಂದ್ರಮಂಡಲಂ ಮುನ್ನೇಸಱಾಗಮದೊಳು (ತಅಪು. ೧೦-೯೦). ೨. ಪ್ರಾತಃಕಾಲ; ಅರುಣೋದಯದ ವೇಳೆ ; ಉಷಃಕಾಲ : "ಮುಂಬೊಟ್ಟೆಂದು ಮುನ್ನೇಸರ್" (ಕಕಹಾ. ೫೭-೨೩೨); ಕರಿಣಿ ಕರ್ಣಂಗಳೆನೆಚ್ಚರಿಸಿಮಾಗಳ್ ಬಾಯುಂ ತೆಱೆದುವು ಪಿಂಗಳಿಗಳ್ಗಲ್ಲಿ ಮುನ್ನೇಸಱಿನೊಳ್ (ಕಾದಂಪೂ. ೦೯೩); ಬಾಡಿದ ದೇವಿಯ ತನುಲತೆ ಬಾಡಿಸಿದುದು ನೋಡಿ ಬಾಡುವೆನ್ನಯ ಪೊಗಪಂ ಬಾಡಿ ಬಸವಟಾದು ಸಸಿಯುಂ ಬಾಡಿಸಿದುತ್ಪಲಿನಿಯಂತೆ ಮುನ್ನೇಸಱಿನೊಳ್ (ಅರ್ಜನೇ. ೦.೦೦೪) ; ಚಕೋರದ ಮಿದಮುದಗಿ

ಪೋಯ್ತು ಮುನ್ನೇಸಜಿನೊಳ್ (ಕುಸುಮಾ. ೧೧-೭೯). ಮುನ್ನೇಸಜು: ೨. ನಿನ್ನನೊಲಿಸಿದಜೀಕೆಯ ಜಯಭೂಪಂ ಮುನ್ನೆಯರೊಳ್ನಿಚ್ಚೆಯ ವರನಂ ವರಿಯಿಪ ಮಂಡಪಕೆ ಮುನ್ನೇಸಜ ಪೊತ್ತಿಂಗೆಯ್ತರ್ಪಂ (ಜಯಚಾ. ೪-೪೪).

**ಮುನ್ನೇಸಜು** 'ಮುನ್ನೇಸಜ್' ನೋ.

**ಮುನ್ನೊಡಲ್** (ನಾ). ಹಿಂದಿನ ಹುಟ್ಟು : ಪೂರ್ವಜನ್ಮ : ಎನ್ನೊಂದು ಮುನ್ನೊಡಲ ಅಬಿಗೆಯ್ಮೆಯ ಬೆಸುಗೆಯನೀಗಳೇ ಪಾತಕಕ್ಕೆ ಕೈನೀಡು ಪೊಡಾವವಮಾಡೆಂ (ರಾಮಾಶ್ವ. ೩೭-೨೯). [ಮುನ್$_1$ + ಒಡಲ್]

**ಮುನ್ನೋಟ$_1$** (ನಾ). ಮೊದಲಿನ ಓಟ : ಮುಂಚಿತವಾದ ಓಟ : 'ಮುನ್ನೋಟವಿಕ್ಕು' ಪರಾ. [ಮುನ್$_1$ + ಓಟ]

**ಮುನ್ನೋಟ$_2$** (ನಾ). ೧. "ಮುಂದಿನ ನಿರೀಕ್ಷೆ" (ಕಾಂಪರ. ೭೩-೦೩೩ ಅಬು) : ಒಸಗೆ ಸವಿಯುಂಲಿ ನನ್ನು ಮುನ್ನೋಟ ಕಂಪೊರೆಯ ಬಗೆಯ್ಯೊಡು ತಣಿಯುತಿರೆ ಬಳಗಕ್ಕೆಂ ಪಾರ್ತಂ (ಕಾಂಪರ. ೭೨-೦೩೩). ೨. ಮುಂದೆ ಪ್ರದರ್ಶಿತವಾಗುವ ಅಥವಾ ಪ್ರಕಟವಾಗುವ ದೃಶ್ಯ ಅಥವಾ ವಿಷಯಗಳ ಪೂರ್ವಚಿತ್ರ, –ಪೂರ್ವಪರಿಚಯ : ದೂರದರ್ಶನದಲ್ಲಿ ವಾರಕ್ಕೊಮ್ಮೆ ಆಯಾವಾರದ ಮುಖ್ಯಕಾರ್ಯಕ್ರಮಗಳ ಮುನ್ನೋಟ ವನ್ನು ತೋರಿಸುತ್ತಾರೆ (ರೂಢಿ). [ಮುನ್$_1$ + ನೋಟ]

**ಮುನ್ನೋಟವಿಕ್ಕು** (ಕ್ರಿ). (ಯುದ್ಧವು ಪ್ರಾರಂಭವಾಗುವುವಕ್ಕೆ) ಮುಂಚೆಯೇ ಓಡಿಹೋಗು, –ಮೊದಲೇ ಪಲಾಯನ ಮಾಡು : ಹದುಳವಿಡುವವರಿಲ್ಲ ಸೇನೆಯ ಮೊದಲಿಗರು ಮುನ್ನೋಟವಿಕ್ಕಿತು ಕದನದಲಿ (ಕುಮಾರ. ೪-೨೭). [ಮುನ್ನೋಟ$_1$ + ಇಕ್ಕು]

**ಮುನ್ಸಿ** 'ಮುನಸಿ' ನೋ.

**ಮುನ್ಸಿಪಾಲಿಟಿ** 'ಮುನಿಸಿಪಾಲಿಟಿ' ನೋ.

**ಮುನ್ಸೀಫ್** 'ಮುನಸೀಫ್' ನೋ.

**ಮುನ್ಸೀಫ್‌ಕೋರ್ಟು**, ಮುನಸುಫ್‌ಕೋರ್ಟು (ನಾ). ಕೆಳವರ್ಜೆಯ ನ್ಯಾಯಾಲಯ: ಊರೆಲ್ಲಾ ನಮ್ಮ ಕೈಲೇ ಇದೆ. ಮುನ್ಸೀಫ್‌ಕೋರ್ಟನ್ನೂ ಹಿಡಿದುಕೊಂಡಿದ್ದೇವೆ (ಅಸ್ತ. ೦೪). ಮುನಸುಫ್‌ಕೋರ್ಟು : ಜೊಬ್ಬೆ ವಗೈರೆ ಪ್ರಾಂತ್ಯಗಳಲ್ಲಿಯೂ ಗ್ರಾಮಪಂಚಾಯಿತಿಗಳಂತಲೂ ಗ್ರಾಮ ಮುನ ಸುಫಕೋರ್ಟುಗಳೆಂತಲೂ ಮೊಕರೂರ್ಮಾಡಲ್ಪಡುವವು (ಗ್ರಾಮಪಾ. ೨). [ಮುನ್ಸೀಫ್ (< ಮುನಸೀಫ್) + ಕೋರ್ಟು]

**ಮುನ್ಸೂಚನೆ** (ನಾ). ೧. ಮುಂದೆ ಆಗುವುದರ ಬಗೆಗೆ ಮೊದಲೇ ಕೊಡುವ ತಿಳಿವಳಿಕೆ: ಅವರು ಕೊಟ್ಟ ಮುನ್ಸೂಚನೆಯಿಂದ ನನಗೆ ಬಹಳ ಉಪಕಾರವಾಯಿತು (ರೂಢಿ). ೨. ಮುಂದೆ ಆಗುವುದರ ಬಗೆಗೆ ತೋರಿ ಬರುವ ಸುಳಿವು. — ಮಾಡು : ಮುಪ್ಪಿನ ಮುನ್ಸೂಚನೆಯನ್ನೇನೋ ಕಂಡಂತೆ ಆಗುತ್ತಿದೆ (ಸವಿ. ೩೦). ೩. ಭವಿಷ್ಯವನ್ನು ತಿಳಿಸುವಿಕೆ : ಭವಿಷ್ಯವೇಳುವುದು ; (ಮು. ಕೇಡಿನ) ಮುನ್‌ಸೂಚನೆ ; ಶಕುನ (Foreboding. ಇಂಕ೩). [ಮುನ್$_1$ + ಸೂಚನೆ]

**ಮುನ್ಸೂಚಿಸು** (ಕ್ರಿ). ಮೊದಲೇ ತಿಳಿಯಪಡಿಸು : ಕೇವಲ ಸಾಧಾರಣ ಒಂದು ತಿಗಣೆಯ ಜೀವಚಕ್ರವನ್ನು . . . ಯಾರೂ ಮುನ್ಸೂಚಿಸಲಾರರು (೬೬೬೬. ೬೪). [ಮುನ್$_2$ + ಸೂಚಿಸು$_1$]

**ಮುಪ್** 'ಮೂ' ನೋ.

**ಮುಪ್ಪಗ** 'ಮುಪ್ಪಾಗ' ನೋ.

**ಮುಪ್ಪಟ್ಟೆ** (ನಾ). ೧. ಮೂರು ಸಮಾನಾಂತರ ರೇಖೆಗಳುಳ್ಳ ಘನಾಕೃತಿಯ ಮೂರುಮುಖ : ಕೈಗಾರಿಕಾಕೇಂದ್ರಗಳಲ್ಲಿ ಯಂತ್ರಾಗಾರಗಳ ಕೆಳಗಿನ ಅಂತಸ್ತುಗಳಿಗೆ ಹೆಚ್ಚು ಬೆಳಕು ಬರುವ ಹಾಗೆ ಮುಪ್ಪಟ್ಟೆಯ ಗಾಜುಗಳನ್ನು (Prisms) ಬಳಸುತ್ತಾರೆ (ಕಿಲ್ಲಾ. ೩೨೪). ೨. ಮೂರು ಮೂರು ಪಟ್ಟೆಗಳುಳ್ಳ ಒಂದು ಬಗೆಯ ಸೀರೆ (?) : ಮುಪ್ಪಟ್ಟೆಯ ಬಣ್ಣವ ಬೀಳಮಡಲು ಕಡೆಯಲ್ಲಿ ಕಪೋತ ಕೆಂಪು ಮುಟ್ಟಿತ್ತು (ಸರ್ವಜ್ಞ ೭೮-೪೩೩); ಕಂದರ್ಪ ಕುಸುಮಾಂಗಳೆಗೆಭಾಗಿ ಮೆರೆವಾ ಚೆಂಮಾಡಂದನ ಮುಪ್ಪಟ್ಟೆಗಳು (ಅಮುಸಾಂ. ೪-೦೪). [ಮುಪ್ (< ಮೂಱು) + ಪಟ್ಟೆ$_3$]

**ಮುಪ್ಪತ್ತು** 'ಮುವತ್ತು' ನೋ.

**ಮುಪ್ಪದರ** (ನಾ). ಮೂರುಪದರ, —ಮಡಿಕೆ, —ಸ್ತರ : ಪ್ರಾಣಿಯು ಇಪ್ಪದರದ ಜೀವಿಯೆ . . . ಮುಪ್ಪದರದ ಜೀವಿಯೆ ? (ಪ್ರಾಣಿಶಾ. ೦೫). [ಮುಪ್ (< ಮೂಱು) + ಪದರ (< ಪದರ್ು)]

**ಮುಪ್ಪರಿಜು** (ನಾ). ಮೂರು ಬಗೆಯ ಆಕಾರ, —ರೂಪ, —ಆಕೃತಿ : ಪಿಡಿದೊನಾವನ್ ನಿಯತಿಯಧಿಕಾರಸೂತ್ರಮನ್ ? ಮುಪ್ಪರಿಜು ವಿಧಿದೇವಿಯರ್. ಮೋಕ್ಷ್ ಮಾಟೆಯಮಾ ರೌದ್ರಿಯರ್ (ಶ್ರೀರಾಮಾ. ೨೭-೩೬೪). [ಮುಪ್ (< ಮೂಱು) + ಪರಿಜು]

**ಮುಪ್ಪಳ$_1$** (ನಾ). ಬಾಳೆ, ಮಾವು ಮತ್ತು ಹಲಸು ಎಂಬ ಮೂರು ಬಗೆಯ ಹಣ್ಣುಗಳು : ಶಿವಸಾರಾಮೃತಮಂ ರಸಪೂಸರ್ವ ಮುಪ್ಪಳಮಂ ಜಿಲುಪಾಲ ತಿರುಳ ಕರಜಿಗಳುಮಂ . . . ಶಿವಾರ್ಪಿತದೊಡನೆ ಕೈಕೊಂಡು (ಸಂಪರ ೦೦-೩೫). [ಮುಪ್ (< ಮೂಱು) + ಪಳ್$_2$ (= ಪಲ್$_2$). / ತಮಿ. ಮುಪ್ಪೞಮ್]

**ಮುಪ್ಪಳ$_2$** ? (ನಾ). (?) : ಅ ಅಯಿವತ್ತು ಹಾಂಸ್ಯ ಹಣ ಮುಪ್ಪಳೂ ವೀಸಕ್ಕೆ (ಎಕ. VIII. ತೀರ್ಥಹ. ೦೬೦-೦೭: 1407). [ ?.]

**ಮುಪ್ಪಾಗ**, ಮುಪ್ಪಗ (ನಾ). ೧. ಮುಕ್ಕಾಲು ಭಾಗ : ನಾಲ್ಕನೆಯ ಮೂರು ಅಂಶ : ಆ ರಾಜ್ಯಶ್ರೀಗೆ . . . ಮೂಜಾಗಳೆಗೆಯ ಕಳೆದು ಮುಪ್ಪಾಗದಿಂ ಮೇಲೆ ಸಾತನಾದೊತ್ತೋಳ್ಗತು (ಕಾಂಪರ. ೩-೬೪) ; ಅವರ ಅರ್ಥವಿವೇಚನೆ ನಿನ್ನಿನ ರಾತ್ರಿಯ ಕಟ್ಟಿತು.ಬಿಟ್ಟು ಹತ್ತುವುದಕ್ಕೆ ಮೊದಲಿಟ್ಟಾಗ ಮುಪ್ಪಾಗ ಕಟ್ಟಿತು (ಕಾಂತಲಾ. ೩೩೭). ೨. ಒಂದು ಬಗೆಯ ನಾಣ್ಯ : ಮುಕ್ಕಾಲು ಹಣ : ಹಿಂದಿನ ಕಾಲದ ಮೂರು ಆಣೆ : ಆರುಕಾಸುಗಳಷ್ಟು ಬೆಲೆಯುಳ್ಳ ಒಂದು ನಾಣ್ಯ : ಯೆಂಭತ್ತು ನಾಲ್ಕು ಪೊನ್ನು ಹಣ ಮುಪ್ಪಾಗವನು ತೆರುವುದು (ಎಕ. VI. ಕೊಪ್ಪ. ೩೫-೦೨ ; 1400) ; ಗಿಳಿಯು ಪಂಜರದೊಳಿಲ್ಲ . . . ಮುಪ್ಪಾಗ ಬೆಕ್ಕ ಯನ್ನು ತಪ್ಪದೆ ನಾ ಹಾಕಿ ಸಾಕಿದೆ (ಪುರಂದ. ೦-೦೦೨-೪) ; ಹಾಗದ ಕೋಳಿ ಮುಪ್ಪಾಗದ ಮೇವು ತಿಂದಿತು (ಗಾದೆ). ೩. ಅಳತೆಯ ಒಂದು ಪ್ರಮಾಣ : ಯರಡು ಬಳ್ಳ ಅಕ್ಕಿಯ ತಳಿಗೆ ಪ್ರಸಾದ ಎಂಟು ಮುಪ್ಪಾಗ ೀಲ್ಮಾಯ ಇಷ್ಟನೂ . . . ಧಾರಾಪೂರ್ವಕವಾಗಿ × × × (ಎಕ. XIV. ಶ್ರೀರಂಗ. ೨-೨೦ ; 1529). ಮುಪ್ಪಗ : ೨. ಸಿಡಿಲಯ್ಯಂಗೆ ಪೊಂದಂ ಮುಪ್ಪಗ ವೃತ್ತಿ . . . ಅಜ್ಜಯ್ಯಂಗೆ ಮುಪ್ಪಗ ವೃತ್ತಿ (ಎಕ. XII. ತಿಪಟೂ. ೦೩-೨೦ ; 1251). [ಮುಪ್ (< ಮೂಱು) + ಪಾಗ$_1$]

**ಮುಪ್ಪಿಡಿ** (ನಾ). (ಮೂರು ಕಡೆ ಭಾಗಗಳುಳ್ಳ) ಒಂದು ಬಗೆಯ ಆಯುಧ ; ಚಾಕು : ಬಡಿಕೋಲ್ಮುಪ್ಪಿಡಿ . . . ವಿದಿತಚಕ್ರಂ . . . ಮಡಿ ಮುಖ್ಯವಾದ ಕೈದುಗಳಂ ಪಿಡಿದು (ಶಾಂಪು. ೦೬-೩೭) : ಸೋಟದ ಮುಪ್ಪಿಡಿಯನು ಕಿತ್ತುಕೊಂಡು ದರ್ಪಕನೆರ್ದೆಯಲ್ಲಿ ತಿವಿದು ರಕ್ಕಸ ಬಹು ದರ್ಪವಡೆದು ನಿಂದಿರ್ದ (ಬೋಚಕ. ೦೨-೬೩) : ಭಲ್ಲೆಯ ಕತ್ತಿ ಕಠಾರಿ ಮುಪ್ಪಿಡಿ ಪಂಕಿ ಸಲ್ಲಿಹ ಗದೆ . . . ಕಿರಿಸೆಗಳಾ ಗೃಹದಲ್ಲಿದ್ದುವಿರಿಮಾರಿ ಯಂತೆ (ಭರತ. ೨೦-೦೩೨).

[ ಮುಪ್ ( < ಮೂಱು ) + ಪಿಡಿ$_2$ / ತೆಲು. ಮುಪ್ಪಿಡಿ ]

**ಮುಪ್ಪಿಡು** ? (?). (?) : ಅಪ್ಪಿದರಪ್ಪುವಳುಗುರಿಚ್ಚಿರುಗುರಿಕ್ಕಿ ಉಪ್ಪರಿಸುವಳೊದಬುವಳು ನೆಪ್ಪುಗಾತಿಯು ನೇವಗಾಜನು ಪೊಕ್ಕರು ಮುಪ್ಪಿಡೆಸಾವನೆಗೊಂದು (ಭರತ. ೦೦-೬೯). [ ? ]

**ಮುಪ್ಪು** (ನಾ). ಮುದಿತನ ; ವೃದ್ಧಾಪ್ಯ ; ಇಳಿವಯಸ್ಸು : " ಜರಾ, ವಿಸ್ರಸಾ —ಈ ೨ ಮುಪ್ಪು " (ಹಲಾಯು. ೬೬-೩೪೯) ; ಸಿಂಗದ ಮುಪ್ಪಿಂ ನೆಗಟ್ದೀ ಗಾಂಗೇಯರ ಮುಪ್ಪುಮಿಟಾಕಿವಡೆಗುಮೆ (ಪಂಭಾ. ೧೧_೦೯) ; ಮುಪ್ಪಿಂದೊಪ್ಪವಳಿಯದ ಮುನ್ನ . . . ಪೂಜಿಸು ನಮ್ಮ ಕೂಡಲಸಂಗಮ ದೇವನ (ಬಸವ. ೦೩೦); ಮುಪ್ಪಿನ ಮುಗುದನೀತನ ಕಾದ ಪೇಳದು ನಗೆಯ ಸುರಿದ್ದೈ ರಾಯ ಕಟಕದೊಳು (ಕುಮ್ಯಾಭಾ. ೦-೩೫).

**ಮುಪ್ಪಿನ ಮುತ್ತೈದೆ** = ವಯಸ್ಸಾದ ಮುತ್ತೈದೆ ; ವೃದ್ಧ ಸುಮಂಗಲಿ : ಮುಪ್ಪಿನ ಮುತ್ತೈದೆಯ ರೂಪದಿಂದಯಿರುವಳಾದ ಕಾವೇರಿನದಿಗೆ ಪುನಃ ನಮಸ್ಕರಿಸಿ (ಅಳಗಮಾ. ೧೨೦). **ಮುಪ್ಪುಬೆಪ್ಪು**= ಅರೆಮರುಳಿನಿಂದ ಕೂಡಿರುವ ವ್ಯಕ್ತಿ : ನಾನಾಗಳೆಯು ನಿನ್ನ ಕರೆದ ಪಟಕದೊಳೊಂದು ಸೀರೆಯಂ ಕಂಡೆನಾದೊಡಮರಿವುದೇತಯ್ಯ ಪೇಳ್. ಈ ಮುಪ್ಪುಬೆಪ್ಪು ? (ಕ್ರೀಡಾಭಾ. ೨೬೪-೨೬೩).

[ದೇ.೩ ತಮಿ. ಮಲ. ಮೂಪ್ಪು ; ತುಳು. ಮುಪ್ಪು , ಮಜಬ್ಬು ; ತೆಲು. ಮುಪ್ಪು ]

**ಮುಪ್ಪುದಪ್ಪುಗ** (ನಾ). ವೃದ್ಧಾಪ್ಯವಿಲ್ಲದವನು; ಅಮರ: ದೇವತೆ: ನಯಮೆತ್ತಿನಿನುಡಿಯಿಂ ಜಾಣ್ಕೆಯಿನಾವಗಮಿನಿಜಸೆರ್ದೆಯನಿರ್ಕುಳಗೊಳ್ವೀ ಮುಜುಣನ ಗೆಳೆಯೆನಿಪಳ ಮನೆಮಯನೆನಿಕುಂ ಮುಪ್ಪುದಪ್ಪುಗರಪಸುವಾಗಳ್ (೭೮೮೨. ೬-೧೨೩). [ ಮುಪ್ಪು + ತಪ್ಪು$_{4}$ + — ಗ$_{2}$ ]

**ಮುಪ್ಪುರ** (ನಾ). ೧. ತಾರಕಾಸುರನ ಮಕ್ಕಳಾದ ಮೂರು ಜನ ದೈತ್ಯರು ನಿರ್ಮಿಸಿದ ಮೂರು ಪಟ್ಟಣಗಳು ; ತ್ರಿಪುರ ; ೯ ಆಕಾಶ ದಲ್ಲಿ ವಿದ್ಯುನ್ಮಾಲಿಯ ಕಬ್ಬಿಣದ ಪಟ್ಟಣ. ಅದರ ಮೇಲೆ ಅಂತರಿಕ್ಷ ದಲ್ಲಿ ಕಮಲಾಕ್ಷನ ಬೆಳ್ಳಿಪಟ್ಟಣ ಮತ್ತು ಅದಕ್ಕೂ ಮೇಲುಭಾಗದಲ್ಲಿ ತಾರಕಾಕ್ಷನು ನಿರ್ಮಿಸಿದ ಚಿನ್ನದ ಪಟ್ಟಣ : ಬಾಗಿಲ ಮುಂದೆ ನಿಂದಾ ಮುಪ್ಪುರದಂದಕೆ ನಿಜಮಕುಟವನು ಕಂದರ್ಪವಿಜಯನಲುಗಿ ನುಡಿದನು ಮೋಹೇಂದ್ರನಧುಟನಾವನೇದು (ತ್ರಿಪುರಾಂ. ೨೨-೨೪೯) ; ಎಸೆವ ಮುಪ್ಪುರದ ಸಿರಿಯು ಬಣ್ಣ ಪೊಡಾವಗಂ ತೀರದು (ಶಂಪು. ೪೦-೨೩) ; ಹರನ ಸಾಹಸ ಕಂಜದೆ ಪಲವಗಲು ಮುಪ್ಪುರ ಪಡಿಬರಿಸಿ ಪೋರಿದುದು (ಹರಿ. ೨-೪೮). ೨. ಮೂರುಲೋಕಗಳು ; ತ್ರಿಲೋಕ : ಮುನಿ ಮಾರ್ಕಂಡೇಯಾ . . . ಮುಪ್ಪುರದೊಳಗದಕೆ ಎದುರುಗಾಣನೆಂದು ಅಲ್ಪಮನಸುಮಾಡದೆ ವಾಸವಾದನು ಇಲ್ಲಿ (ಶೀರ್ಷಕು. ೩೭-೨). ' ಮುಪ್ಪುರಗೊಳ್ ' ಪರಾ.

**ಮುಪ್ಪುರ ಗೆಲಿದವನು** = ತ್ರಿಪುರವನ್ನು ಜಯಿಸಿದವನು ; ಶಿವ : ಕಂಡೆ . . . ಮುಪ್ಪುರ ಗೆಲಿದವನ ಮುನಿಸುತ ಸರ್ಪಭೂಷಣ ಶಿವನ ಭವನ (ಪುರಂದ. ೧-೦೬೫-೩). [ ಮುಪ್ ( < ಮೂಱು ) + ಪುರ$_{2}$ ]

**ಮುಪ್ಪುರಗೊಳ್** (ಕ್ರಿ). ಮೂರುಲೋಕಗಳನ್ನು ಗೆಲ್ಲು ; ತ್ರಿಲೋಕ ಗಳನ್ನು ಜಯಿಸು : ಮುಪ್ಪುರಗೊಂಡ ಮಾಧವನ ಅಪ್ಪಣೆವಡೆದು ಬಿತ್ತರಿಸುವ ಕೃತಿ ಜೀನ ತುಪ್ಪದ ತೊಟಿಯಾಗಲೆಜಿಯಾ (ಪೋಹಕ. ೦೬-೦).

[ ಮುಪ್ಪುರ + ಕೊಳ್$_{1}$ ]

**ಮುಪ್ಪುರವಗೆಯ** (ನಾ). ತ್ರಿಪುರವೈರಿ : ಶಿವ ; " ಜಡೆಗ ಮುಪ್ಪುರ ವಗೆಯಂ ಎಲುಗೈಯ ಬೂದಿಮೆಯ್ಯಂ . . . ಸ್ಮರಹರಂಗೆ ನಾಮಾವಿದು " (೪೭೫೦. ೦೭). [ ಮುಪ್ಪುರ + ಪಗೆಯ ]

**ಮುಪ್ಪುರಹರ** (ನಾ). ತ್ರಿಪುರಗಳನ್ನು ಧ್ವಂಸಮಾಡಿದವನು ; ಶಿವ : ತುಪ್ಪೀನ ಅಭಿಷೇಕ ಅಪ್ಪ ಸಿದ್ಧರಾಮಯ್ಯ ಮುಪ್ಪುರಹರನಿಗೆ ಮಾಡುವಾಗ ಚರಾಚರ ತುಪ್ಪುಂಡು ತೇಗಿತು ಆ ಚಣ (ಸಿದ್ಧಕೃ. ೦೪-೦೨).

[ ಮುಪ್ಪುರ + ಹರ ]

**ಮುಪ್ಪುರಿ** (ನಾ). ೧. ಮೂರುಹುರಿಗಳು, — ಎಳೆಗಳು. ೨. ಮೂರುಹುರಿಗಳನ್ನು ಸೇರಿಸಿ ಹೊಸೆದ ದಪ್ಪಹುರಿ ; ಹೊರಜೆ : ಕೆದಱಿದ ತಲೆಯುನಡಸಿ ಸುತ್ತಿದ ಮುಪ್ಪುರಿ [ಪಾಠಾಂ. ಮುಂಗುಡಿ. ಮುಂಗುರಿ]ಯು ಬಾರಿ ಕಡ್ಡಣಿಗೆಯ . . . ಬಿಱುನುಡಿಯ ಕಲಿ ವೀರ ಬಾಹುಕ ಬರುತ್ತಂ (ಹಕಾ. ೧೧-೦೭) ; ಕಾಳ್ಕಾನಿಸನೊರ್ವನುಂ ಕಾಪಟ್ಯದಿಂ ಕರೆದು ತಂದು . . . ಮುಪ್ಪುರಿಯಂ ಕಟ್ಟಿ ಕಟೀತಟಕ್ಕೆ ಸುಲಿದೊಳ್ಪಿಂ ಪಲ್ಗಳಂ ಕಾಲ್ಗಳಂ ಕರದಿಂದಂ ತೊಳೆದೊಂದು ಕೋವಣಮನಾಂತಂಗೊಲ್ದು ಕೆಯ್ಗೆಯ್ಯಿಸುತುಂ (ವೃಷಭ. ೨೭-೧೧). ೩. (ಮೂರು ವಸ್ತುಗಳ)ಕೂಡಲು; ಸಂಗಮ: ಸಮಾಗಮ: ಅನವರತದಾನದಿಂ ವಿಕ್ರಮೋನ್ನತದಿನಸಮ ಶೌರ್ಯೋನ್ನತಿಯಿಂ ವನನಿಧಿಪರೀತ ಸಕಲಾವನಿಯೊಳ್ ಮುಪ್ಪುರಿಪೂ ಲಾದುದಾ ನೃಪನ ಗುಣಂ (ಕಾವ್ಯಾವ. ೨೬೩) ; ಕುಮಾರನ ಯೌವರಾಜ್ಯ ಸಂಪದದೊಳಮಾಧಿರಾಜ್ಯನಿಜಲೀಲೆಯೊಳಂ ಪಿತೃ ವೃದ್ಧ ರಾಜ್ಯಸಂಪದದೊಳ ಮೊಪ್ಪಿದಂ ಸಿರಿಯ ಮುಪ್ಪುರಿಪೊಲ್ಪುವನೈಕಭೂಷಣಂ (ಅಜಿತ. ೯-೩) ; ವಿನಯಭಯಭಕ್ತಿಗಳು ಮುಪ್ಪುರಿಯೆನಿಸಿ ತನ್ನೊಳಗೆಸೆಯೆ ನಿಜಕಾಂತನಿಗೆಱಗಿ (ತಪ್ಪುಕ. ೨-೭೦). ೪. ಬಲವಾದುದು ; ಬಿಗಿಯಾದುದು : ಮೂಢ ಮಾನವರು ಮುಪ್ಪುರಿಯ ಮಾಯಾಪ್ರಬಂಧಕೆ ತಪ್ಪದೊಳಗಾಗಿಪ್ಪರು (ಅಪ್ಪುಕ. ೨-೦೦೩). ೫. ದಪ್ಪವಾಗಿರುವುದು ; ಒತ್ತಾಗಿ ಸೇರಿದುದು : ಮುಪ್ಪುರಿಯ ಹುಬ್ಬುಗಳ ಮುರಿದ ಮೀಸೆಯ ಮೇಚಕಾದ್ರಿಯ ಸರಿಸದ ವನವನೀಗ ಮಂಡೋದರಿಯ ಮಗನು (ತೊರವೆ. ೬-೯-೮) ; ಮು[ಪಾಠಾಂ. ದ]ಪ್ಪುರಿಯ ಹುಬ್ಬುಗಳ ಸುಯ್ಲುಗಳ . . . ಅಸಮಭಟರೊದಗಿದರು ಸಮರದಲಿ (ತೊರವೆ. ೬-೦೯-೨೦). ೬. ಆಧಿಕ್ಯ ; ಅತಿಶಯತೆ : 'ಮುಪ್ಪುರಿಗೊಳ್' ಪರಾ.

[ಮುಪ್ (<ಮೂಱು) + ಪುರಿ$_{3}$./ತಮಿ. ಮುಪ್ಪುರಿ ; ತೆಲು. ಮುಬ್ಬುರಿ]

**ಮುಪ್ಪುರಿಗೂಡಿಸು** (ಕ್ರಿ). ಮೂರುಎಳೆಗಳನ್ನು ಸೇರಿಸು,– ಕೂಡಿಸು: ನವಪವಿತ್ರಸೂಕ್ಷ್ಮವಾದ ಇಪ್ಪತ್ತೆಳೆಗಳಿಗೆ ಸಮಭಾಗದಿಂ ಮುಪ್ಪುರಿಗೂಡಿಸಿ ಪೋಣಿಸುವದಿದು ಉತ್ತಮ (ಜಪೇಶ. ೯೩).

[ಮುಪ್ಪುರಿಗೂಡು + — ಇಸು$_{3}$]

**ಮುಪ್ಪುರಿಗೂಡು**(ಕ್ರಿ). ೧. ಮೂರು ಎಳೆಗಳು ಸೇರು, – ಕೂಡು, –ಒಟ್ಟಾಗು : ತತ್ವದ ಕಾವು ನಿಜನಿಶ್ಚಯದ ಬಿದಿರು ಭಕ್ತಿ ಜ್ಞಾನ ವೈರಾಗ್ಯ ಇಂತೀ ತ್ರಿವಿಧ ಮುಪ್ಪುರಿಗೂಡಿದ ನೂಲಿನಲ್ಲಿ ಕಟ್ಟುಗಳ ಕಟ್ಟಿ (ಶರಣವ. ೩೦-೩೨೨). ೨. ಒಟ್ಟಾಗು ; ಸೇರು ; ಒಂದಾಗು : ಮೇಖಲೆಯ ಪಾರಿಹಾರ್ಯದ ಮಣಿನೂಪುರದ ಮಧುರಸ್ವನಂ ಮುಪ್ಪುರಿಗೂಡಿದ ಮದನಪಾಶಮೆನೆ ನಡೆತಂದಳ್ (ಶಂತಾಮ. ೩-೬೪) ; ಕಣ್ಣ ಕೇಸುರಿಯುಂ ಪುರ್ವಿನ ತಳ್ತ ಕಬೊರ್ಗೆಯುಂ ಮುಗ್ರೇಭಪ್ರತಾಪಕ್ಕೆ ಮುಪ್ಪುರಿಗೂಡುತ್ತಿರೆ (ಅಜಿತ. ೦೯-೭) ; ತಪ್ಪದಹುದು ಕೌಶಿಕನ ಕೋಟಲೆ ಈಗ ಮುಪ್ಪುರಿಗೂಡಿ ರಾಯನಿಗೆ ಹೆಪ್ಪಳಿಸಿತು (ಹಂಸಾಂ. ೦೬-೯೭). [ಮುಪ್ಪುರಿ + ಕೂಡು$_{1}$]

**ಮುಪ್ಪುರಿಗೊಳ್**, ಮುಪ್ಪುರಿಗೊಳು, ಮುಪ್ಪುರಿಗೊಳ್ಳು (ಕ್ರಿ). ೧. ಕೂಡು ; ಸೇರು ; ಒಂದಾಗು : ಹರಿವಿರಿಂಚಿಗಳ ಮನದ ಬಯಕೆಯುಂ ಕಂದರ್ಪನ ಪಂಚಬಾಣಾನುಸಂಧಾನಮುಂ ಪಾರ್ವತಿಯ ಮನೋರಥಮುಂ ಮುಪ್ಪುರಿಗೊಂಡು (ಗಿರಿಜಾ. ೯-೯೩ ಪ); ಮುಪ್ಪುರಿಗೊಂಡ ಹುಬ್ಬುಗಳ ನೆಗೆದ ರೋಮಾವಳಿಯ ಬಿಗುಹಿನ . . . ರಕ್ಕಸರನೀಕ್ಷಿಸಿ ನುಡಿದನಸುರೇಂದ್ರ (ತೊರವೆ. ೬-೨೩-೬). ೨. ಅತಿಶಯವಾಗು : ಅಧಿಕ ಗೊಳ್ಳು ; ಹೆಚ್ಚಾಗು : ತುಱುಂಬಿದ ಕುಸುಮಾವಳಿಯ ಪೊಸಕಂಪುಂ ಸೊಗಯಿಸುವ ಸೊಂಪುಂ ಮೋಹಿಸುವ ಬೆಳಗುಂ ಮುಪ್ಪುರಿಗೊಂಡು ಬಳಸಿ ಬೀದಿವರಿಯೆ (ಕುಬೇರ. ಹ. ೦೩೪-೦೭) ; ಕೋಪಾಗ್ನಿ ಮುಪ್ಪುರಿಗೊಂಡು ಮುಂದುಗೆಟ್ಟು ಮುಖದಿಂದೆ ವಲ್ಮೀಕನಾಥನ ಸದನಕೆಯ್ತಂದು ಬಿನ್ನಪಗೆಯ್ದು (ತ್ರಿಷಷ್ಟಿ. ೦೭-೯೨) ; ಮುಪ್ಪುರಿಗೊಂಡ ವೈರದಲೆಮ್ಮೊಳು ಮೋರೆದಪ್ಪಿದ ದುಷ್ಕೃತದಿಂದೆ (ಕರ್ಣಮ್ಮ. ೮-೩೪). ೩. ದೃಢಗೊಳಿಸು ; ಬಿಗಿಮಾಡು :

ತಿರುವಂ ಮುಪ್ಪುರಿಗೊಂಡು ಮಿಳ್ಳಿಸುವ ಮಿಂಚಂ ಮಾಡಿ . . . ನಿದಾಘಮಂ ಬೆದಱೆ ಬೆಂಕೊಂಡತ್ತು ಮೇಘಾಗಮಂ (ಕಾದಂಉ. ೩೩೦).
**ಮುಪ್ಪುರಿಗೊಳು**: ೧. ಪರಮಹರುಷಾದ್ಭುತಭಯಂಗಳು ಬೆರಸಿ ತನ್ನಯ ಮನದೊಳಗೆ ಮುಪ್ಪುರಿಗೊಳಲು ನಮಿಸುತ್ತ ಸಂಸ್ತುತಿಸಿದನು (ತಿಪ್ಪಅ. ೩-೪೦). **ಮುಪ್ಪುರಿಗೊಳ್ಳು** : ೧. ಮೂರುವಿಷಯಂಗಳು ಮುಪ್ಪುರಿಗೊಂಡು ಮಡಿಕೇರಿಯನ್ನು ಬಿಟ್ಟು ಹೊರಡುವ ವಿಷಯ ತೀರ್ಮಾನವಾಯಿತು (ಬಿಡ್ಕರಿ. ೯೪) ; ಶಾಂತಿ, ಚೆಲುವು, ಜೀವನದ ಪ್ರಗತಿ, ಇವು ಆ ಸನ್ನಿವೇಶದಲ್ಲಿ ಮುಪ್ಪುರಿಗೊಂಡಿದ್ದವು (ಕಮಾಶ. ೦೦೭೪). ೨. ಸುರಪತಿಯೆಂಬ ಪೆರ್ಮೆ ದೆಸೆಯಾಣ್ಮರನಾಳ್ದಪನೆಂಬ ಹಮ್ಮು ದುರ್ಧರದಿತಿಜೇಂದ್ರನಂ ಜಯಿಸಿದಾಳ್ತನ ಮುಪ್ಪುರಿಗೊಂಡು (ರಣಾವ. ೩-೩೦) ; ಘನರೋಷ ಮುಪ್ಪುರಿಗೊಂಡು ಪಾವಕನೆರಡುಗಣ್ಗೊಳು ಕಾಡಿದನೋ (ದೇವೀಶು. ೪-೨). ೪. ತೀಕ್ಷ್ಣವಾಗು ; ಚುರುಕಾಗು : ಪ್ರತಿಭೆ, ಅಭ್ಯಾಸ, ಜ್ಞಾನಗಳಿಂದ ಮುಪ್ಪುರಿಗೊಂಡ ಇವರ ಕವಿತಾಶಕ್ತಿ ಇವರ ಪ್ರತಿಯೊಂದು ಕೃತಿಯಲ್ಲಿ ಬಿಂಬಿತವಾಗಿದೆ (ಜಗದಾ. ೨೯೦). [ಮುಪ್ಪುರಿ + ಕೊಳ್$_1$]

**ಮುಪ್ಪುರಿಗೊಳಿಸು** (ಕ್ರಿ). (ಗಟ್ಟಿಯಾಗುವಂತೆ) ಸೇರಿಸು ; ಕೂಡಿಸು : ಒಂದುಮಾಡು : ನವ್ಯದಿವ್ಯಾಂಬರನಿಕರಮಂ ಹೊಸೆ ಹೊಸೆದು ಮುಪ್ಪುರಿಗೊಳಿಸಿ (ಬಸತ್ರಿ. ೩೭-೦೮). [ಮುಪ್ಪುರಿಗೊಳ್ + –ಇಸು$_3$]

**ಮುಪ್ಪುರಿಗೊಳು** 'ಮುಪ್ಪುರಿಗೊಳ್' ನೋ.

**ಮುಪ್ಪುರಿಗೊಳ್ಳು** 'ಮುಪ್ಪುರಿಗೊಳ್' ನೋ.

**ಮುಪ್ಪುರಿವಿಡಿ** (ಕ್ರಿ). ಹೊಸೆದು ಬಲಗೊಳಿಸು : ಸಿಡಿಲ ಬಳಗವ ಹಿಡಿದು ಮುಪ್ಪುರಿವಿಡಿದ ತೆಱನಂತಿರ್ದ ಕಣು (ಕುವ್ಯಾಭಾ. ವಿರಾ. ೦೦-೨೯ ಅವತರ್ಣ).
[ಮುಪ್ಪುರಿ + ಪಿಡಿ$_1$]

**ಮುಪ್ಪುರಿಸು** (ಕ್ರಿ). ಸೇರು ; ಕೂಡು ; ಒಂದಾಗು : ಕುಸಿದು ನಿಲ್ಲದ ಜಯಜಯಸ್ವನವಸದಳದ ವೃಘೆಯುಘೆರವಂ ಪಸರಿಸಿದ ಹರಹರರಾವಮುಂ ಮುಪ್ಪುರಿಸಿ (ಶಾಶಂತ. ೯-೭೩). [ಮುಪ್ಪುರಿ + – ಇಸು$_3$]

**ಮುಪ್ಪೊಡವಿ**(ನಾ). ಮೂರುಲೋಕ ; ತ್ರಿಲೋಕ : ಮುಪ್ಪೊಡವಿಯೊಳುಳ್ಳ ಕೃತ್ರಿಮಾಕೃತ್ರಿಮಮಪ್ಪ ಮಾಣಿಕಬಸದಿಗಳ ಒಪ್ಪುವ ಚೈತ್ಯಬಿಂಬಗಳನೇ ಪೊತ್ತು ತಪ್ಪದೆಯಭಿವಂದಿಸುವೆನು (ಶ್ರೀಶಾಂ. ೦-೯); ಅವಿರಳಮಾದ ಸಮರಸನ್ನಾಹದ ವಿವಿಧ ಮಹಾಭೇರಿಯ ಬಲ್ದನಿ ಬಳಸಿತು ಮುಪ್ಪೊಡವಿಯನು (ಶಡಕ್ಷಾ. ೭-೨೨).
[ಮುಪ್ (< ಮೂಱು) + ಪೊಡವಿ (< ಪೃಥುವಿ)]

**ಮುಪ್ಪೊಳಲ್** 'ಮುಪ್ಪೊಟಿಲ್' ನೋ.

**ಮುಪ್ಪೊಳಲು** 'ಮುಪ್ಪೊಟಿಲ್' ನೋ.

**ಮುಪ್ಪೊಳಲುರಿಕ** 'ಮುಪ್ಪೊಟಿಲುರಿಕ ನೋ'

**ಮುಪ್ಪೊಱಡು** 'ಮೂಹೊಱಡು' ನೋ.

**ಮುಪ್ಪೊಟಿಲ್**, ಮುಪ್ಪೊಳಲ್, ಮುಪ್ಪೊಳಲು, ಮುಪ್ಪೊಟಿಲು (ನಾ). ೧. ಮೂರುಊರುಗಳು, – ಪಟ್ಟಣಗಳು : ಈ ಚಿಕ್ಕದೇವನೊರ್ವನದಟಿಂದಂ ತೂಳ್ದಿದಂ ಚೆನ್ನರಾಯನ ದುರ್ಗಂ ಮಿಡಿಗೇಶಿ ಮದ್ದಗಿರಿಯೆಂಬೀ ಮುಪ್ಪೊಟಿಲ್ಪಿಂಕಮಂ (ಗೀತಗೋ. ೫೨-೮). **ಮುಪ್ಪೊಳಲ್** : ೨. = ಮುಪ್ಪುರ ೧ : ರಕ್ಕಸರ ಮುಪ್ಪೊಳಲ ಜೈಸಿ ಪ್ರಮದಮಂ ಸಕಲಲೋಕದೊಳು ಪೂರೈಸಿದನು (ಶಾಂವಶ್ರೀ. ೦೩-೧). **ಮುಪ್ಪೊಳಲು** : ೨. ಆ ಗಿರಿಯು ತಪ್ಪಲೊಳಗಾ ಪಾರು ಶತಖಂಡವಾಗಿ ಧೊಪ್ಪನೆ ಕೆಡೆಯಲೊಡನೆ ಮುಪ್ಪೊಳಲೊಂದುಭಾಗವೆಂಬಂತೆಂದು ಬಳೆದ ಮಾರುತಿಯಂಗವಂ ಕಂಡು (ಕೀಶರಾ. ೦೯_೪೦). **ಮುಪ್ಪೊಟಿಲು** : ೩. ಮೂರುಲೋಕಗಳು : ತ್ರಿಲೋಕ : ಮುಪ್ಪೊಟಿಲುಂ ನಡುಗಿದುದು (ಅದ್ಭುತ. ೦೦-೦೭).
[ಮುಪ್ (< ಮೂಱು) + ಪೊಟಿಲ್]

**ಮುಪ್ಪೊಟಿಲು** 'ಮುಪ್ಪೊಟಿಲ್' ನೋ.

**ಮುಪ್ಪೊಟಿಲುರಿಕ**, ಮುಪ್ಪೊಳಲುರಿಕ (ನಾ). ತ್ರಿಪುರಗಳನ್ನು ದಹಿಸಿದವನು ; ಶಿವ : "ಎಳೆದೇರ ಗೊರವನೈಮೊಗ ಕಂದುಗೊರಲ ಮುಪ್ಪೊಟಿಲುರಿಕಂ . . . ಈಶ್ವರನ ನಾಮಂ" (ಕಬ್ಬಿಗಂ. ೩) ; ಮುಪ್ಪೊಟಿಲುರಿಕನೊಲ್ಮೆಯುಂಟೆಂದುಂ, ಮುಪ್ಪೊಟಿಲೆ ಬಲ್ಲದು (ಅದ್ಭುತ. ೪೩-೩). **ಮುಪ್ಪೊಳಲುರಿಕ** : "ಮುಪ್ಪೊಳಲುರಿಕನೆನೆ ಮಹಾದೇವನಕ್ಕು" (ಕಶರ. ೬೦). [ಮುಪ್ಪೊಟಿಲ್ + ಉರಿಕ]

**ಮುಪ್ಪೋಳು** (ನಾ). ಮೂರುಹೋಳು, – ಭಾಗ. – ತುಂಡು : ಮುತ್ತ ಬಾಳೆಯ ಕಾಯನುಕ್ಕರಿಸಿ ಕದುಕಿಱಿದು ಮತ್ತದಂ ಮುಪ್ಪೋಳು ಮಾಡಿ (ಸೂಪಶಾ. ೪-೯೭).
[ಮುಪ್ (< ಮೂಱು) + ಪೋಳು$_2$ (< ಪೋೞ್$_2$)]

**ಮುಫತ್ತು** (ನಾ). ಪುಕ್ಕಟೆ ; ಉಚಿತವಾದುದು : ಅವನಿಗೊಂದು ಎರಡನೆಯ ದರ್ಜೆಯ ಟಿಕೇಟನ್ನು ಮುಫತ್ತಾಗಿ ಕೊಟ್ಟಿದ್ದಾರೆ (ಅಳಿಸಿ. ೪); ಒಂದು ಸದಸ್ಯರಾಷ್ಟ್ರದ ಅಂಚೆಯನ್ನು ಇನ್ನೊಂದು ಸದಸ್ಯರಾಷ್ಟ್ರ ಮುಫತ್ತಾಗಿ ಸಾಗಿಸಬೇಕೆಂದೂ ಒಪ್ಪಂದವಾಯಿತು (ಕವಿಕೋ. I. ೭೪).
[← ಅರ. ಮುಫತ್, ಮುಫ್ತ್; ಪಾರ. ಹಿಂ. ಮುಫ್ತ್; ಮರಾ. ಮುಫತ್, ಮೋಫತ್]

**ಮುಬದಲು** 'ಮುಬಾದಲೆ' ನೋ.

**ಮುಬಾದಲೆ**, ಮುಬದಲು, ಮುಬಾದಿಲೆ, ಮೂಬದಲು, ಮೂಬದಲೆ, ಮೋಬದಲಿ (ನಾ). ೧. ಪ್ರತಿಯಾದುದು; ಅದಲುಬದಲು: ವಿನಿಮಯ : ಮುಬಾದಲೆ ಮುಂತಾದ ಖರ್ಚಿಗೆ ಅವಕಾಶವಾಗದಂತೆ ನೋಡಿಕೊಳ್ಳಬೇಕೆಂತಲೂ ಸನ್ ೧೮೨೭ರಲ್ಲಿ ಹುಕುಂನಾಮ ಸಾದರ್ಮಾಡಿದರು (ಮಹಾಪಂ. II. ೩೭). **ಮುಬದಲು** : ೧. ಮಹಾರಾಜನು ತನ್ನ ಸಹಾಯದ ಮುಬದಲು . . . ಇಂಗ್ಲಿಷರಿಗೆ ನೆರವಾಗುವೆನೆಂದು ಹೇಳಿದನು (ತಂಸಂ. ೨೦೭). **ಮುಬಾದಿಲೆ** : ೨. ತಾತ್ಕಾಲಿಕವಾಗಿ ಕೊಟ್ಟ ಸಾಲ : (ಕಸಂಗ್ರಾ. ೭೩). **ಮೂಬದಲು** : ೧. ತೋಟದೊಳಗೆ ಹೂ ಬೆಳೆಯೋದು ಹೆಚ್ಚಲ್ಲ, ಬಂಜರಭೂಮಿಯೊಳಗ ಹೂ ಬೆಳೆದರ ಅದ ನಿನ್ನ ಬುದ್ಧಿಗೆ ಮೂಬದಲು (ಶಾಬಿಲ್ಲ. ೦೦೪). **ಮೂಬದಲೆ** : ೧. "ಪ್ರತಿ, ಸಮಾನವಾಗಿರುವ ಮತ್ತೊಂದು ವ್ಯಾಪಕತ್ವ, ಅಸಾಧಾರಣ ಧರ್ಮ, ಮೂಬದಲೆ" (ಸಿದ್ಧಾಂತಿ. ೪೩೦). **ಮೋಬದಲಿ** : ೧. ನನ್ನ ರೂಪಾಯಿಗಳಿಗೆ ಮೋಬದಲಿಯನ್ನು ಮುಟ್ಟಿಸುತ್ತೇನೆಂದು ಕಾಗದ ಬರದುಕೊಡು (ಮೋಹಿನೀ. ೪೭). [← ಅರ. ಮುಬಾದಲಾ; ಪಾರ. ಮುಬಾದಲ, ಮುಬದ್ದಲ್; ಹಿಂ. ಮುಬಾದಿಲಾ; ಮರಾ. ಮುಬಾದಲಾ, ಮುಬದಲಾ, ಮೋಬದಲಾ, ಮೋಬಾದಲಾ]

**ಮುಬಾದಿಲೆ** 'ಮುಬಾದಲೆ' ನೋ.

**ಮುಬಾರಕ್** (ಗು). ೧. ಮಂಗಳಕರವಾದ ; ಶುಭದಿಂದ ಕೂಡಿದ ; ಒಳ್ಳೆಯ : ಯಾವದೊಂದು ಕಾರ್ಯಕ್ಕೂ ಆ ಇಂಗ್ರೇಜ ಬಹಾದ್ದರ ಕುಂಪನಿ ಮುಬಾರಕ್ ಮರ್ಜಿ ಯಾವ ಮೇರೆ ಇದೆಯೋ ಅದರಲ್ಲಿ ಈ ದೋಸ್ತುದಾರರಿಗೆ ಅಬ್ರುಕೀರ್ತಿ ದೊಡ್ಡದಾದೀತು (ರಾಜೇಂದ್ರ. ೨೪೪). (ನಾ). ೨. ಶುಭ; ಮಂಗಳಪ್ರದ.
[← ಅರ. ಪಾರ. ಹಿಂ. ಮರಾ. ಮುಬಾರಕ್]

**ಮುಬ್ಬಣ್ಣ** 'ಮೂವಣ್ಣ' ನೋ.

**ಮುಮ್** 'ಮು$_1$' ನೋ.

**ಮುಮುರಿದಂಡ** 'ಮುಮ್ಮರಿದಂಡ' ನೋ.

**ಮುಮುಕ್ಷು** (ಗು). ೧. ಐಹಿಕ ವ್ಯವಹಾರಗಳಿಂದ ದೂರವಾಗಲು ಬಯಸುವ ; ಮೋಕ್ಷಾಪೇಕ್ಷೆಯಿಂದ ಕೂಡಿರುವ ; ಮುಕ್ತಿಯನ್ನು

ಬಯಸುವ : ಆವನೊಬ್ಬನ ವಿಮಳಕೀರ್ತಿಸುಧಾವಗಾಹನದಿಂದ ಪಾತಕ ಪಾವನತೆಯುಮಂ ಪಡೆವುದೀ ಜಗವಪ್ರಯತ್ನದಲಿ ಸೇವಿಸುವುದನುದಿನ ಮುಮುಕ್ಷುಜನಾವಳಿಗಳು (ಪಂಪಾಶ. ೪-೩-೨೬). (ನಾ). ೨. ಮುಕ್ತಿಯನ್ನು ಬಯಸುವವನು; ಮೋಕ್ಷಾಪೇಕ್ಷಿ : ಆ ಮುಮುಕ್ಷುಗಳ ಸಮಕ್ಷದೊಳವರ ಪೇೞ್ದ ಮಾೞ್ಕೆಯೊಳೆ ಪರಮಜಿನಪತಿ ಪರಿಭಾಷಿತಮಪ್ಪ ಪೋಷಿತವ್ರತಮಂ ಕೈಕೊಂಡು* (ಆದಿಪು. ೩-೪೦ ವ); ಅಕ್ಷಣದೊಳಗ್ನಿಭೂತಿ ಮುಮುಕ್ಷುಗೆ ಮೂಜಿನೆಯ ದಿವ್ಯಸರ್ವಾವಧಿ ಪುಣ್ಯಕ್ಷೇತ್ರ ಶುಭಸ್ಥಾನ ಸಮಕ್ಷದೊಳಾದುದು (ಸುಕುಮಾ. ೯-೪೭); ಶೌರಿ ಭವತ್ಸಾವ ಲವದಿಂದೆ ಮುಮುಕ್ಷುಗೆ ಮೋಕ್ಷಲಕ್ಷ್ಮಿ ಸಂಸಾರಿಗೆ ರಾಜ್ಯಲಕ್ಷ್ಮಿ ದೊರೆಕೊಳ್ವುದು (ಜಗಂ. ೧೭-೩೯). [ಸಂ.]

**ಮುಮುಕ್ಷುತ್ವ** (ನಾ). ಲೌಕಿಕವ್ಯವಹಾರಗಳಿಂದ ದೂರವಾಗಿ ಮುಕ್ತಿಯನ್ನು ಬಯಸುವಿಕೆ; ಮೋಕ್ಷಾಪೇಕ್ಷೆ : ಇಲ್ಲಿ ನಿತ್ಯವಸ್ತುವಿವೇಕದಿಂದ ಮೋಕ್ಷವಲ್ಲಿ ಇಚ್ಛೆಯೆಂಬ ಮುಮುಕ್ಷುತ್ವವೂ . . . ಭೋಗ ವೈರಾಗ್ಯವೂ ಬರುವುವು (ಹಿಂಪಾ. ೨೨೦). [ಸಂ.]

**ಮುಮುಕ್ಷುವೃತ್ತಿ** (ನಾ). ಮುನಿಧರ್ಮ; ಮೋಕ್ಷಾಪೇಕ್ಷೆಯ ನಡವಳಿಕೆ : ಕಾಮಸುಖೋಚಿತವಂತಿಗಳ್ ನಾಮೆತ್ತ ಮುಮುಕ್ಷುವೃತ್ತಿಯುಂ ತಾಳ್ದಿದವರ್ ತಾಮೆತ್ತ (ಆದಿಪು. ೫-೭೬). [ಸಂ.]

**ಮುಮೂರ್ಷು** (ಗು). ೧. ಪ್ರಾಣಬಿಡಲು ಇಚ್ಛಿಸುವ; ಜೀವವನ್ನು ತ್ಯಜಿಸಲು ಅಪೇಕ್ಷಿಸುವ. ೨. ಸಾವು ಸನ್ನಿಹಿತವಾಗಿರುವ; ಮರಣಾವಸ್ಥೆಯಲ್ಲಿರುವ : ತನ್ನ ತೊರೆವರ್ಭಕರ ಹಂಬಲಿಸುವ ಮುಮೂರ್ಷು ತಾಯಂತೆ. . . ತನ್ನಳಲನವರ ಹುಬಲದಿ ಮರೆತುಸುರಿದಂ (ಗೊರೊಕ್ಷಾ. ೧೨-೩೦೨). (ನಾ). ೩. ಸಾವು ಸಮೀಪಿಸಿದ ವ್ಯಕ್ತಿ; ಮರಣಾಸನ್ನನಾದ ವ್ಯಕ್ತಿ : ಆನೆಯುನಿರುಳುಂ ಪಗಲುಂ ಜಾನಿಸಿ ತನು ಮೂರ್ಖವೃತ್ತಿ ಪೊರ್ದಿದವೋಲಜ್ಞಾನಿ ನಯಾನಯಚಿಂತೆಯುನೇನುಮನಱಿಯನೆ ಮುಮೂರ್ಷುತೆಜಿನಱಿದಪನೇ (ಚಂದ್ರಪು. ೧೦-೫೭); ನವಕುಮಾರನು ಮುಮೂರ್ಷುವಿನಂತೆ ಕಾಪಾಲಿಕನ ಸಂಗಡ ಹೋದನು (ಕಪಾಕುಂ. ೨೫). [ಸಂ.]

**ಮುಮ್ಮಡ, ಮುಮ್ಮಡಿ$_2$** (ನಾ). ಕಾಲಿನ ಹರಡಿನ ಮುಂಭಾಗ : ಪೆರ್ದೊಡೆ ಕಟಿ ಮುಮ್ಮಡಂ ಪರಡು ಸಂದಿ ನೊಸಲ್ ಪಣೆ ಕಣು ಕದಂಪಿವೆಂಬೆಡೆಯನೆ ನಟ್ಟುವುರ್ಚಿದುವು . . . ಪಾರ್ಥನಂಬುಗಳ್ (ಪಂಪಭಾ. ೧೦-೦೫೭); ಒಂದೆಡೆಯೊಳ್ ಗೋಣ್ಣವಿರ್ ಮುಮ್ಮಡಂಬರಂ ಮುಸುಂಕಿರೆ ಪಟ್ಟೊಂದು ಮುತ್ತ ಸಿಂಗಕ್ಕೆ ತನ್ನ ಕೇಸರಮೆ ಜಾಲಮಾಗಿ . . . ಎಬಲಾಟಿಸಿಯುಮಾಜಿದಿರೆ (ರಾಮಾಶ್ವ. ೪೨-೨೪). ಮುಮ್ಮಡಿ$_2$ : ಕಾಲು, ಕಣಕಾಲು, ತೊಡೆ, ಹಿಮ್ಮಡಿ, ಮುಮ್ಮಡಿಗಳ ಸಹಾಯದಿಂದ ಮಾಡುವ ಒಂದು ಚಲನೆಗೆ 'ಚಾರಿ' ಎನ್ನುತ್ತಾರೆ (ಅಭಾಸ್ತ. ೫೦).

[ ಮುಂ$_1$ (< ಮುನ್$_1$) + ಮಡ$_1$ ]

**ಮುಮ್ಮಡಿ$_1$** 'ಮೂವಡಿ' ನೋ.

**ಮುಮ್ಮಡಿ$_2$** 'ಮುಮ್ಮಡ' ನೋ.

**ಮುಮ್ಮಡಿಸು** 'ಮೂವಡಿಸು' ನೋ.

**ಮುಮ್ಮಣ್ಣು** (ನಾ). ಮೂರುಸಲ ಬತ್ತದ ಬೆಳೆಯನ್ನು ಕೊಡುವ ಭೂಮಿ: (ಶಿಸಂಗ್ರಾ. ೧೭೫).

[ ಮೂವ್ (< ಮೂಱು) + ಮಣ್ಣು (< ಮಣ್) ]

**ಮುಮ್ಮನ** (ನಾ). ಹಿಂದಿನ ನೆನಪು,–ಆಲೋಚನೆ : ಮರೆತಿದೆ ಪೂರಾ ಮುಮ್ಮನವು, ಆದರು ಆತ್ಮಕೆ ಘನ ನೆನಪು (ಅರಳು. ೧೯೭-೦೩).

[ ಮುಂ$_1$ (< ಮುನ್$_1$) + ಮನ ]

**ಮುಮ್ಮನೆ$_1$** (ನಾ). ೧. ಮುಂದಿರುವ ಮನೆ ; ಎದುರುಮನೆ : ನೆರೆಮನೆಯ ಮುಮ್ಮನೆಯ ಹೆಮ್ಮಕ್ಕಳ್ ಬೇಗ ಬರೆ (ಸಿದ್ಧರಾ. ೨-೨): ನೆರೆಮನೆಯ ಮುಮ್ಮನೆಯ ಭಕ್ತರು ನೆರರುವಱಿಯುವ ಹಂಗೆ. . . ನಿಕ್ಷೇಪವಂ ಮಾಡಿರುತ್ತಿರಲು (ಬಸವು. ೪೯-೨೦). ೨. ಮನೆಯ ಮುಂಭಾಗ, –ಮುಂಬದಿ : ನಮ್ಮದು ತುಂಬ ಹಿಂದಿನ ಕಾಲದ ಮನೆ . . . ಮುಮ್ಮನೆ ಒಳಮನೆಗಳ ನಡುವೆ ತೋಟ (ಸಬಂಧ. II, ೧).

[ ಮುಂ$_1$ (< ಮುನ್$_1$) + ಮನೆ ]

**ಮುಮ್ಮನೆ$_2$** (ಅ). ಅತಿಯಾಗಿ; ಹೆಚ್ಚಾಗಿ ; ಅತಿಶಯವಾಗಿ : ಪಿಂಗಳಕಂ . . . ಹಮ್ಮಿದಂಬೋಗಿ ಮುಮ್ಮನೆ ಬೆಮರ್ತನ್ (ಪಂಚತಂ. ೪೭-೦೭), 'ಮುಮ್ಮಲನೆ' ಪಠಾ. [ ? ]

**ಮುಮ್ಮಯಿ್** 'ಮುಮ್ಮೆಯ್' ನೋ.

**ಮುಮ್ಮರಿ$_1$** 'ಮುಮ್ಮರಿ$_3$' ನೋ.

**ಮುಮ್ಮರಿ$_2$** (ನಾ). ನಾಶ; ಹಾಳು : ತೀರ್ಥರೊಳ್ ಸರಭಸದಿಂ ಪೂರ್ತಾಗೆ ಘಟಿರ್ಕೆಳಾದರ್ . . . ಕಾದಿ ನೆರಪಿ ಮುಮ್ಮರಿಯಾದರ್ (ಬಂಪಂ. ೭-೭೨).

[ ? ]

**ಮುಮ್ಮರಿದಂಡ** 'ಮುಮ್ಮರಿದಂಡ' ನೋ.

**ಮುಮ್ಮಲ** (ನಾ). [ವೀರಶೈ] ಜೀವನಿಗೆ ಅಂಟಿಕೊಳ್ಳುವ ಆಣವ, ಕಾರ್ಮಿಕ ಮತ್ತು ಮಾಯೆಗಳೆಂಬ ಮೂರುಬಗೆಯ ಮಲಗಳು,–ದೋಷಗಳು : ವ್ಯಸನಸಪ್ತಕದ ನೀರ್ಮುಕ್ಕುಳಿಸುತ ಮುಂದೆ ಮುಮ್ಮಲವೆಂಬ ಸುರೆಯನತಿಹೊಟ್ಟೆಯೊಡೆವಂದದಿಂದೀಂಟಿ . . . ಭವವನಾಳುವರ ಮೇಳವಂ ಬಿಡು (ಕಬಿತ. II, ೦೭೩=ವೈರಾಗ್ಯಶಬ್ದ೩).

[ಮೂವ್ (< ಮೂಱು) + ಮಲ$_3$]

**ಮುಮ್ಮಸಗು** (ಕ್ರಿ). ಮುಂಚೆಯೇ ಆವೇಶವನ್ನು ಹೊಂದು; ಮೊದಲೇ ಉದ್ವೇಗಗೊಳ್ಳು : ದಿವ್ಯಮರ್ ಗುಜುಗುಜಿಸದಿರಿಮತುಳರುದ್ರಗಣ ಮುಮ್ಮಸಗ ಬೇಡ (ತಬಪು. ೨-೨೭). [ಮುಂ$_1$ (< ಮುನ್$_1$) + ಮಸಗು]

**ಮುಮ್ಮುಳಿ** 'ಮಣ್ಮುೞಿ' ನೋ.

**ಮುಮ್ಮುಳಿಗಡಲು** (ನಾ). ಕ್ಷೋಭೆಗೊಂಡ ಸಮುದ್ರ ; ಹೊಯ್ದಾಡುವ ಕಡಲು : ಘುಳುಘುಳಿಸಿ ಕವಿವ ತೆರೆಗಳು ಹಳಚಿ ಕುದಿವ ಮುಮ್ಮುಳಿಗಡಲು (ಜಕಣಾ. ೦೦-೨೯). [ಮುಮ್ಮುಳಿ (<ಮಣ್ಮುೞಿ)+ಕಡಲು (< ಕಡಲ್$_2$)]

**ಮುಮ್ಮುಳಿಗೊಳ್** 'ಮಣ್ಮುಳಿಗೊಳ್' ನೋ.

**ಮುಮ್ಮುಳಿಗೊಳು** 'ಮಣ್ಮುಳಿಗೊಳ್' ನೋ.

**ಮುಮ್ಮುಳಿಯೋಗು** 'ಮಣ್ಮುೞಿವೋಗು' ನೋ.

**ಮುಮ್ಮುಳಿಸು** 'ಮಣ್ಮುೞಿಸು' ನೋ.

**ಮುಮ್ಮಳೆ** (ನಾ). ಬೇಸಗೆಯ ನಂತರ ಬರುವ ಮೊದಲ ಮಳೆ ; ಮುಂಗಾರು : ನಾನೆ ಮರ್ಬಿನ ಕರ್ಪು ನಾನೆ ಕದಿರ್ಜೊನ್ನಮುಂ ಮುಮ್ಮಳೆಯು ತನಿಗಂಪು ಬೇಸಗೆಯ ಬಿರುಜಳಂ (ಸಂಕಶ. ೩೦-೪). 'ಮುಮ್ಮಳೆಗಾಲ' ಪಠಾ.

[ಮುಂ$_1$ (< ಮುನ್$_1$) + ಮಳೆ (<ಮೞೆ)]

**ಮುಮ್ಮಳೆಗಾಲ** (ನಾ). ಮಳೆಗಾಲದ ಆರಂಭ; ಮುಂಗಾರಿನ ಸಮಯ: ಶರಧಿ ಮುಮ್ಮಳೆಗಾಲದಲ್ಲಿ ಭೋರ್ಗರೆವವೊಲು ಭೋರೆಂದು ಹಜೆಯಬ್ಬರಿಸಿದುವು (ಕೊರಶಾ. ೭-೩೫-೧೦).

[ಮುಂ$_1$ (< ಮುನ್$_1$) + ಮಳೆಗಾಲ (< ಮೞೆಗಾಲ)]

**ಮುಮ್ಮುಱಿದಂಡ** 'ಮುಮ್ಮರಿದಂಡ' ನೋ.

**ಮುಮ್ಮುಱಿಸು** (ಕ್ರಿ). ಎದುರಿಗೆ ಮರೆಮಾಚು (?) : ಘಡ ಹೋಗದಿರ್ ಮುಮ್ಮುಱಿಸಿ ಮಂಟಪಕೆ ಕಿಚ್ಚನಿಕ್ಕಿದ ಕಳ್ಳಬಂಟರಿವರಂ ಬೇಗದಿಂ ಪಿಡಿ (ತಬಪು. ೩೦-೨೭).

[ಮುಂ$_1$ (< ಮುನ್$_1$) + ಮಱಿಸು (< ಮಱೆಯಿಸು)]

**ಮುಮ್ಮುೞಿ** 'ಮಣ್ಮುೞಿ' ನೋ.

ಮುಯಿ ನಿಶ್ಚಯಮುಕ್ಕುಂ ... ಮಂಗಳರಾಹುಗಳ ವೃಷ್ಟಿಯಿರ್ದೊಡೆ ಬೆಳೆ ಪಾಟಿಬಾಗಿ ಕೆಡುವುದು (ಲೋಕೋಪ. ೨-೪೦ ಟೀಕೆ). [ ? ]

**ಮುಯ್ಯಾಕು** (ಕ್ರಿ). ಸೇಡನ್ನು ಹೊರಹಾಕು ; ದ್ವೇಷವನ್ನು ಕಕ್ಕು ; ಅರೇಸ್ ದೇವನಲ್ಲಿ ತಾನ್ ಕಂಡನ್ . . . ಮುಯ್‌ಕಾಟ್ವಿ ಕಣ್ಗಳನ್ ಕೊಲೆಗಯ್ಯಿನಿಱಿದುದನ್ (ಅಂತಿಗೊ. ೪೩-೯೦೦).

[ಮುಯ್$_1$ + ಕಾಱು$_1$ (< ಕಾಱಿನ್)]

**ಮುಯ್ದೆಗೆ** (ಕ್ರಿ). ಪ್ರತೀಕಾರವನ್ನು ಮಾಡು ; ಪ್ರತಿಭಟಿಸು ; ಎದುರಿಸು : ಸುಭಟನ ಸಿಂಹನಾದಕೆ ಮುಯ್ದೆಗೆದು ಕರಿ ಕಾದುತಿರ್ದುದು ಭೀಮಸೇನನಲಿ (ಕುವ್ಯಾದ್ರೋ. ೩-೩೬). [ ಮುಯ್$_1$ + ತೆಗೆ$_1$ ]

**ಮುಯ್ಯು, ಮುಯ್$_2$, ಮುಯ್ವು$_2$** (ನಾ). ೧. ಹೆಗಲು; ಭುಜಾಗ್ರ : "ಭುಜಾಗ್ರಃ, ಅಂಸಂ — ಈ ೨ ಮುಯ್ಯು" (ಹಲಾಯು. ೯೭-೩೭೦) ; ರಾವಣನಂ ಕೊಂದು ಜಯಶ್ರೀವಧುವಂ ತಾಳ್ದಿ ಮುಯ್ಪಿ [ಪಾಠಾಂ. ಯ್ವಿ] ನೊಳ್ ವರಸೀತಾದೇವತೆಯುಂ ತರ್ಪನ್ನೆಗಮೋವದೆ ಪುರುಷವ್ರತೋಚಿತಂ ವೀರರಸಂ (ಕಬಿರಾ. ೩-೦೯೦) ; ನೀಮುಮೆಂಡದ ಕೈಯನೆಬ್ಬಲಿಕ್ಕಿಯರ್ಧಗಪ್ಪಡ ಮನೆಡದ ಮುಯ್ಪಿನ ಮೇಗಿಕ್ಕಿ . . . ಬಲದ ಕೈಯೊಳ್ ಭೈಕ್ಷದ ಭಾಜನಮುಂ ಪಿಡಿದು (ವಡ್ಡಾರಾ. ೯೨-೦೭) ; ಬಲವಂದು ಬಾಹುಬಲಿಯ ನಣಂ ಭೇದಿಸಲಾಱದುದಱಿಸಿರ್ದುದು ಮಸುಳ್ದಿಸಸಂಗೆಟ್ಟು ಬಲದ ಮುಯ್ಪಿನ ಕೆಲದೊಳ್ (ಆದಿಪು. ೦೯-೦೦೭). ೨. ಪಕ್ಷಿಗಳ ರೆಕ್ಕೆಗಳು ಮೂಡುವ ಜಾಗ ;— ರೆಕ್ಕೆಗಳ ಮೂಲ : ಜೋಲ್ದಿಬೀಯಲ್ ಮುಯ್ಯುಗಳಾವಗೆವಱಿಯಲ್ ಬಲಪಾಱದಂತು ಮುಟ್ಟಿಂ ಪಾಱಲ್ (ಕಾದಂಪೂ. ೧೩೫) ; ಎಱಕೆಗಳಂ ಪೆಲ್ಲನುರ್ಬೆತ್ತಿ ಸಿಂದೊಯ್ಯನೆ ಮುಯ್ಯುಂ ತ್ರೋಟಿಯಿಂದಂ ತೊಡೆದು . . . ಕುಕ್ಕುಟಂ ಕೂಗಿತಾಗಳ್ (ಕುಸುಮಾ. ೪-೫೨). **ಮುಯ್$_2$** : ೧. "ತೋಳ್ಪಲೆ ಮುಯ್ಯೆನಲ್ ಭುಜದ ತುದಿಪೆಸರು" (ಶಬ್ದಮಂ. ೭೨) ; ಪಿರಿದುಂ ಸಂತೋಷದಿಂದಂ ತನಗೆ ಸಕಲಸಾಮ್ರಾಜ್ಯಮುಮಂ ಕೈಗೆವಂದಂತಿರೆ ಪೆರ್ಚಿದರ್ಮಂದು ಮುಯ್ಯಿಲ್ಲದೆ ನಲಿದನನಂಗಾಂತಕಂ (ಧರ್ಮಾಮೃ. ೧-೨೦೯). **ಮುಯ್ವು$_2$**: ೧. "ತೋಳ್ಪಲೆ ಮುಯ್ವೆ [ಪಾಠಾಂ. ಯ್ಯೆ] ನಲ್ ಭುಜಾಗ್ರಕ್ಕೆ" (ಕಬ್ಬಿಕೈ. ೬೬) ; ಬಳೆದುವು ತೋಳ್ಗಳಿಕ್ಕೆಯಿನಮಳ್ ಬಳೆವಂತಿರೆ ಮುಯ್ವುಗಳ್ ಕುಳಾಚಳಶಿಖರಂಗಳಂ ಮಸುಳಿಸಲ್ದುವು (ಶಂಕಶಾ. ೨-೩೭) ; ಉರಮುಂ ಮುಯ್ವುಂ ಮುಡುಪುಂ ಬೆನ್ನುಂ ಕೊರಲುಂ ನಡುನೆತ್ತಿಯುನೆತ್ತಿ ಪೊಯ್ದುರೊರ್ವರ ನೊರ್ವರ್ (ಗದಾಯು. ೮-೦೫). ೩. (ಪ್ರಾಣಿಗಳ) ಬೆನ್ನು; ಹಿಂಭಾಗ : ಆ ವೃಕ್ಷಮನಾಶ್ರಯಿಸಿದ ಕಾವೆರಡು ಕಕುದಸಂಬಂಧಿಯಂಶ(ಸ)ಮೆಸಿಕ್ಕುಂ ಆ ವಂಶದ ಮೊದಲಾಶ್ರಯ ಕಾವಿನ ಮುಯ್ವುಗಳೆ ದಾಪಮೆಂಬಭಿಧಾನಂ (ಅಶ್ವಶಾ. ೯-೩೦). ೪. (ಆಲಂ) ಭುಜಬಲ ; ಸಾಮರ್ಥ್ಯ : ಕಲಿಸಿದ ಭಾರ್ಗವಾತ್ಮಜರ ನೋಡದೆ ತಜ್ಞರ ಮುಯ್ವು ನೆತ್ತಿಯುಂ ಗೆಲೆ ಸಲೆ ರಾಮಲಕ್ಷ್ಮಣರದೇಂ ಸೆಱೆ ಕಲ್ತರೊ ಕೈದುವೆಲ್ಲಮಂ (ಕಂರಾಮಾ. ೩-೧೫೦); ಬಲ್ಲಾಳದೇವನ ಬೆನ್ನ ಮುಟ್ಟಿ ನೋಡಿ ಮೆಚ್ಚಿ ಮುಯ್ವುಂ ಕೊಂಡಾಡೆ (ಪ್ರಾಕಾ. ೦೯೩೭, ೩೦-೭ ; 1310). 'ಮುಡುಪು$_3$' ನೋ.

ಮುಯ್ವಂ ನೋಡು, ಮುಯ್ವಂ ನೋಡು = ೧. ಸಾಮರ್ಥ್ಯವನ್ನು ಕಂಡುಕೊಳ್ಳು; ಭುಜಬಲವನ್ನು ಅರಿತುಕೊಳ್ಳು : ಎನ್ನಂತು ಸಂದ ಕಳ್ಳರಿಲ್ಲೆಂದು ಮುಯ್ವುಂ ನೋಡಿ ಮತ್ತಂ ತನ್ನೊಳಿಂತೆಂದಾಲೋಚಿಸಿದಂ (ಧರ್ಮಾಮೃ. ೬-೫೪).- ೨. ಹೆಮ್ಮೆಪಡು ; ಗರ್ವಿಸು ; ವಜ್ರಕುಮಾರನಂ . . . ಮಣಿಮಾಲಿಮಹಾದೇವಿ ಕಂಡು ಮುಯ್ವುಂ ನೋಡಿ ರಾಗದಿಂ ವಿಳಾಸಿನಿಯರ್ಗಿಂತೆಂದಳ್ (ಧರ್ಮಾಮೃ. ೮-೦೪೨); ಸುಂದರಿಯೆರಡುಂ ಮುಯ್ವುಂ ಪಡೆದಗ್ಗಳಿಕೆಗೆ ಮೆಯ್ಮೆರ್ಚಿ ವಿಧಾತೃನಿಂದೆ ಮುಯ್ವುಂ ನೋಟ್ಟಿಂ (ಕಾವ್ಯಾವ. ೧೮೦). ೩. ಹೆಗಲನ್ನು ಮುಟ್ಟಿಕೊಳ್ಳು : ಭುಜವನ್ನು ತಟ್ಟಿಕೊಳ್ಳು : ಕದನೋತ್ಸಾಹದೆ ಸೂಸೂಬಿದರೆ ಮುಯ್ವುಂ ನೋಡುತುಂ ಬಾಹುಕಾಂಡದ ಕಂಡೂತಿಗಳಂ ತೆರಳ್ಚಲೆಡೆಯಾಯ್ತೆಂದು ಮೆಯ್ವೆರ್ಚಿದಂ (ಜಗವಿ. ೭-೪೪). ೪. ಸಂತೋಷಿಸು : ಉಬ್ಬು : ಕೆಟ್ಟ ಸಾಲಂ ಬಂದ ಪರದನಂತೆ ಮುಯ್ವುಂ ನೋಡಿ (ಧರ್ಮಾಮೃ. ೬-೦೨೫). **ಮುಯ್ವಂ ನೋಡಿಸು** = ಸಂತೋಷಪಡುವಂತೆ ಮಾಡು : ಬಾಳಕಾಲದೊಳ್ ತೊಡರ್ದ ಪೊಡರ್ದಯ್ವರ ಬಾಲಕ್ರಿಯೆಯುಂ ಮುಯ್ವಂ ನೋಡಿಸಿತು ತಾಯುಮಂ ತಂದೆಯುಮಂ (ಶಂಶಾ. ೨-೧೧); " ಮುಯ್ವಂ ನೋಡಿಸಿತು — ತಮ್ಮ ಹೆಗಲುಗಳನ್ನು ತಾವು ನೋಡಿಕೊಳ್ಳುವ ಹಾಗೆ ಮಾಡಿತು ಎಂದರೆ ಇಂಥ ಮಕ್ಕಳು ಇದ್ದಾರಲ್ಲಾ ಎಂದು ಸಂತೋಷಿಸುವ ಹಾಗೆ ಮಾಡಿತು " (ಶಂಶದೀ. ೫೯). **ಮುಯ್ವಾಗು** = (ಆಲಂ) ಆಧಾರವಾಗು ; ಆಶ್ರಯ ನೀಡು (?): ನಿಮಿರ್ಚಿ ಬಿಕ್ಕುಳಿಕೆ ಮೆಯ್ ಮುಯ್ವಾಗೆ ಕಂಪಕ್ಕೆ ಪಲ್ ಕುರುರಾಯಂ ಗದೆವೊಯ್ಲಿನಿಂದಿಳೆಗೆ ಬಿಟ್ಟಿಂ ಬೆಟ್ಟು ಬಿಟ್ಟಿಂದದಿಂ (ರಕರ. ೯-೦೯೦).

[ದೇ.॥ ತಮಿ. ಮೊಯ್ಯುಪ್ಪು; ಮಲ. ಮುಟಿಪ್ಪು; ತೆಲು. ಮೂಪು]

**ಮುಯ್ಮೆ** ' ಮೂಮೆ ' ನೋ.

**ಮುಯ್ಯ** ' ಮುಯ್$_1$ ' ನೋ.

**ಮುಯ್ಯಚ್ಚಿ** ' ಮೂವಚ್ಚಿ ' ನೋ.

**ಮುಯ್ಯಚ್ಚಿಗ** (ನಾ). ಮೂರುಕಣ್ಣುಗಳುಳ್ಳವನು ; ಶಿವ ; ಮುಯ್ಯಚ್ಚಿಗಂ ತನ್ನೊಳುಂ ತಾನೆ ಮಚ್ಚುತಂ ಶಯ್ಯೆಯಂ ಬಿಟ್ಟಪಳ ಮೆಱೆವೆನೆಂದುಜ್ಜುಗಿಸಿ ಪೂಜಿಮುಟ್ಟು ಬಂದನು (ರಾಶತ. ೭-೦೦೪).

[ಮುಯ್ಯಚ್ಚಿ ( < ಮೂವಚ್ಚಿ ) + — ಗ$_2$]

**ಮುಯ್ಯಡಿ** (ನಾ). ಮೂರುಅಡಿ,—ಪಾದ : ಮುಯ್ಯೆಂಬುದರ್ಕೆ— ಮುಯ್ಯಿಾರಡಿ, ಮುಯ್ಯೆಂದಂ, ಮುಯ್ಯಡಿ (ಶಮದ. ೧೮೮ ಪ್ರಯೋ). ' ಮುಯ್ಯಡಿಯ ' ಪರಾ. [ಮುಯ್$_3$ ( < ಮೂಱು ) + ಅಡಿ$_1$]

**ಮುಯ್ಯಡಿಯ** (ನಾ). " ಮೂಱುಪಾದಗಳುಳ್ಳವನು, ಭೃಂಗಿರಿಟಿ, ಭೃಂಗೀಶ ' (ಶ್ರಶಣ) : ಅಮಳಕೈಲಾಸಪರ್ವತವಿಳಿದು ದೃಢದಿಂ ವ್ಯಾಡಾಭಿಷವಮಂ ಬಿಡದೆ ನಿಜದಿಂದೆ ಪೊಡವಿಗಂ ನಡೆತಂದನತ್ಯಂತಮಹಿಮಾತಿಶಯ ಮಾಂತ ಮುಯ್ಯಡಿಯನು (ಶಾಸೋಪು. ೧-೬೨). [ಮುಯ್ಯಡಿ + — ಅ$_7$]

**ಮುಯ್ಯರ್ಧ** (ನಾ). ಮೂರು ಮತ್ತು ಅರ್ಧ ; ಮೂರುವರೆ : ಬಾದಿಪಮ್ಮಣ ಮುಯ್ಯರ್ದ್ಧಾಂಶಃ (ಇಆ. VII, ೦೬೭-೯೨; 688).

[ಮುಯ್$_3$ ( < ಮೂಱು ) + ಅರ್ಧ]

**ಮುಯ್ಯಾನ್$_1$, ಮುಯ್ಯಾನು$_1$, ಮುಯ್ವಾನ್$_1$** (ಕ್ರಿ). ೧. (ಒಳ್ಳೆಯದು ಅಥವಾ ಕೆಟ್ಟುದನ್ನು ಮಾಡಿದುದಕ್ಕೆ) ಪ್ರತಿಯಾಗಿ ಕೊಡು ; ಪ್ರತೀಕಾರ ಮಾಡು : ಅನುಜನ ನೆತ್ತರನೀಂಟಿದವನ ನೆತ್ತರ ಜೀವಸಹಿತಮಿಾಂಟದೆ ದುರ್ಯೋಧನನೆಂಬ ಪೆಸರ್ಗೆ ಮುಯ್ಯಾಂಪೆನೆ (ಗದಾಯು. ೫-೮): ಪೂತುದು ಕುರವಕ ಫಲಪಣ್ಣು ಬರಲು ಮುಯ್ಯಾತುದು ಮ್ಯಾಗಿ ಮರ್ತ್ಯರಿಗೆ (ಮೋಹತ. ೪-೪೨): ೨. ಉಡುಗೊರೆಯನ್ನು ಕೊಡು ; ಬಹುಮಾನವನ್ನು ನೀಡು : ಸೋತುದರಿಬಲ ಹೋಗೆನುತ ಮುಯ್ಯಾಂತು ಮನ್ನಿಸಿ ಹೊಸ್ಸಬಟ್ಟಲೊಳಾತಗಳಗೊಲಿದಿತ್ತನೈ ಕರ್ಪೂರದ ವೀಳೆಯವ (ಕುವ್ಯಾದ್ರೋ. ೪-೧೧). ೩. ಬಹುಮಾನವನ್ನು ಪಡೆ ; ಮೆಚ್ಚನ್ನು ಗಳಿಸು : ವಾಜಿಮುಖ್ಯನ ಮನಂ ಮೆಚ್ಚಲ್ಕೆ ಮುಯ್ಯಾಂಪ ತನ್ನಿರವಿಂಗಳ್ಕುವ ಚಿಂತೆಯಿಂ ಒಲಿಸಿದಂ ಸೌಹಾರ್ದದಿಂ ಬಾಹುಕಂ (ನಳಚಂ. ೬೪೮). ೪. ಪ್ರತಿಭಟಿಸು ; ಸೆಣಸು ; ಎದುರಿಸು : ಇನ್ನುಂ ದನುಜರಿಪುವಿನೊಳ್ ಕಾದದೇಕರ್ಪೆ ಸಂಕ್ರಂದನ ನೀಂ ಪೌಲೋಮಿಯುಪ್ಪೆ ಸ್ನಧಿಪನೆನಿಸಿ ಬನ್ನಕ್ಕೆ ಮುಯ್ಯಾಂತು ನಿಲ್ವೈ (ಜಗವಿ. ೦೩-೬೦) ; ಸೂತಸುತ ದಳಪತಿಯೆ ಘಡ ಮುಯ್ಯಾಂತರೇ ಮುಂಬಿಗರು (ಕುವ್ಯಾಕ. ೨-೮).

೫. ಎದುರಾಗು ; ಅಭಿಮುಖವಾಗು ; ಇದಿರಾಗಿ ಬರು : ಐಯ್ಯನೆ ಕರೆದಡೆ ಮುಂದೆ ಬಂದು ನಿಂದಿತ್ತು ಮುಯ್ಯಾಂತಡೆ ಬಯಲಾಯಿತ್ತು, ಗುಹೇಶ್ವರ (ಅಶಶ. ೮-೩೦) ; ಲಾಂಛನವ ಹೊತ್ತು, ಮುಯ್ಯಾಂತು ಅಡಿಗೆಱಗಿ ಪ್ರುಡನೆಂದೆ ಪ್ರಮಾಣಿಸಿ . . . ನಮೋ ನಮೋ ಎಂಬೆ (ಬೋಕಶಾ. ೪೬-೦೭೭). ೬. ಪ್ರತಿಫಲವನ್ನು ಅಪೇಕ್ಷಿಸು ; ಪ್ರಯೋಜನವನ್ನು ಬಯಸು : ತನ್ನ ಮಾಟಕೆ ತಾನೆ ಮುಯ್ಯಾನ ದಾಸೋಹಿ (ಶಿಶಗ. ೦೬-೬೨). ೭. ಸಲುಗೆಯನ್ನು ತೋರು : ಸದರ ದಿಂದಿರು : ದೇವನೊಲ್ಲಿದನೆಂದು ಮುಯ್ಯಾನಲು ಬೇಡಾ ಕಱಕಟಿ ಕಾಡಿದ ನೊಲ್ಲಿದನೆ (ಬಸವ. ೦೯೯). ೮. ಹಿಗ್ಗು : ಸಂತೋಷಿಸು : ಧವಳಿತನುತ ಕೀರ್ತಿವರಂ ವಂದಿವೃಂದಾಧಾರಂ ಮುಯ್ಯಾಂತನೆತ್ತಂ ಸುಲಲಿತಕವಿತಾ ಕಲ್ಪವಲ್ಲೀವಸಂತಂ (ಕುಕಾ.ಸ್ತ. ೬-೬೪). **ಮುಯ್ಯಾನು**$_1$ : ೭. ಇಂತಪ್ಪ ಬೇಡಂಗೆ ಮುಯ್ಯಾನುವರೆ (ಕಶಾ.ಕ. ಶೇ. ೦೭೨-೯). ೮. ಮಹಾನಿಧಿ ನಿಮಗೆ ನಾಂ ಕೈಯಾನುವೆ ಕರುಣಾಪ್ರಸಾದವಂ ಕೊಟ್ಟರೆ ಮುಯ್ಯಾನುವೆ (ಶಂಕಶಂ. ೦೦-೩೭). **ಮುಯ್ವಾನ್**$_1$ : ೮. ತರಲಾಪಾಂಗದಿನಾ ನೃಪಾಲತಿಲಕಂ ಮುಯ್ವಾಂ [ಪಾಠಾಂ. ಯ್ಯಾಂ] ತರಲ್ದು . . . ನಿರಂತರ ಮುದ್ಯಾನವಿನೋದಮಂ ಸಲಿಸುವಂ ಭೂಕಾಂತನಾಕಾಂತೆಯಿಂ (ಅಶಂಪು. ೨-೦೮). ೯. ಪೈಪೋಟಿಯಾಗು ; ಪ್ರತಿಸ್ಪರ್ಧಿಯಾಗು : ವಿಷಯವರ ವನಿತೆಯ ಸೀಮಂತದ ಮಣಿಕಾಂತಿಗೆ ಮುಯ್ವಾಂತುದು ಚೆಲ್ವಿಂ ಪ್ರಭಾಕರೀ ಪಾಮಪುರಂ (ಶಾಂತಿಪು. ೦-೬೩).

**ಮುಯ್ಯಾತುಕೊಳ್ಳು** = ಎದುರಿಸು ; ಸೆಣಸು : ಪ್ರತಿಭಟಿಸಂ : ನನ್ನ ಸರಲ ಮುಯ್ಯಾತುಕೊಂಡೊಡೆ ರುದ್ರಗರಿದು (ಪಿ.ಚಂಪಶ. ೦೨-೩೯).

[ಮುಯ್$^1_1$ + ಆನ್$_1$]

**ಮುಯ್ಯಾನ್**$_2$, ಮುಯ್ಯಾನು$_2$, ಮುಯ್ವಾನ್$_2$ (ಕ್ರಿ). ಗರ್ವಿಸು : ಬೀಗು ; ಹೆಮ್ಮೆಪಡು : ನಾನಾವಿಲಸನ್ಮನೋಹರಸುಖಂ ಬೇಱಿಲ್ಲೆಂದು ಲಾವಣ್ಯಮೆನ್ನದೆ ಬೇಱಿಲ್ಲೆಂದು ಪಲಾಲಮಂ ಗಟಿಪಿ ಚಾತುರ್ಯಕ್ಕೆ ಮುಯ್ಯಾಂಪುದೇ (ಸುಕುಂಪಶಾ. ೦೦-೦೦೯); ಅಬಲೆಯರೊಳ್ ಮುಯ್ಯಾಂಪಳ್ ಸೊಬಗಿಂಗಾ ಸತ್ಯಭಾಮೆ ಬೇಡಿಂ ತನಗಾ ಸೊಬಗೆಯುರಲರಂ ಪುಂಡಿದಿರೆ ಸೊಬಗೇಕಚ್ಚೆತ್ರುಮಾಯ್ತು ಭೀಷ್ಮಕಸುತೆಯಾ (ಜಗಂ. ೦೨-೬೦). **ಮುಯ್ಯಾನು**$_2$ : ಆ ಶರಣನು ತಾನು ತಾನಾಗಿ ಆಱುವರುಶನಕ್ಕೆ ಯಾಚಕನಲ್ಲ ಪಱುವರುಶನಕ್ಕೆ ಮುಯ್ಯಾನುವನಲ್ಲ (ಅಶಶ. ೨೫೦-೦೦೯೬). **ಮುಯ್ವಾನ್**$_2$ : ಇಂತು ಸುಯೋಧನಂ ನಿನಗೆ ಮಾಡಿದ ರಾಜ್ಯವಿಭೂತಿ ಗುಂತೆ ಮುಯ್ವಾಂ [ಪಾಠಾಂ. ಯ್ಯಾಂ]ತಿರದಿರ್ (ಶಂಕಶಾ. ೨-೬೬); ಈ ಧಡಮೆನಿಪ್ಪೊಡಲಂ ಕೈಕೊಂಡುಂ ಗಡ ಜೀವನಾವಗಂ ಮುಯ್ಯಾಂಪಂ (ಶರಗಿ. ೦೨-೬೪). [ಮುಯ್$^2_2$ (<ಮುಯ್ಪು) + ಆನ್$_1$]

**ಮುಯ್ಯಾನು**$_1$ 'ಮುಯ್ಯಾನ್$_1$' ನೋ.

**ಮುಯ್ಯಾನು**$_2$ 'ಮುಯ್ಯಾನ್$_2$' ನೋ.

**ಮುಯ್ಯಾನೆ** (ನಾ). ಮೂರು ಆನೆ : ಮುಯ್ಯಾನೆ, ಮೂಱಾನೆ (ಶಬ್ದಾ.ಸು. ೩೭೦ ಕ್ರ.ಯೋ). [ಮುಯ್$^3_3$ ( < ಮೂಱು) + ಆನೆ$_1$]

**ಮುಯ್ಯಾಳ್**, ಮುಯ್ಯಾಳು (ನಾ). ಒಬ್ಬನ ಕೆಲಸಕ್ಕೆ ಪ್ರತಿಯಾಗಿ ಬರುವ ಮತ್ತೊಬ್ಬ ಆಳು; ಬದಲಿ ಆಳು : ರಂಗ ನೀ ಕಾರ್ಗದ್ದೆ ಕಳೆಯುನು ಹೆಂಗಳನು ಮುಯ್ಯಾಳ್ಗೆ ಕರಕೊಂಡೀಗದೇ ಕೀಳೆಂದು ನೇಮಿಸಿ (ಅಹಾರಿ. ೩೦-೩೨). **ಮುಯ್ಯಾಳು** : ಮುಯ್ಯಾಳು ಬರದಿದ್ದರೆ ಲಗ್ನ ಕಟ್ಟಿದ ದಿನ ವಿವಾಹಭಂಗ ಮಾಡಿದವನ ಪಾಪವನ್ನು ಅವನ ತಲೆಯ ಮೇಲೆ ಹೊರಿಸುತ್ತಿದ್ದರು (ಹುಟ್ಟಿ.ಹ. ೭೦) : ಗಿರಿಯಪ್ಪಗೌಡರೂ ಈರಮ್ಮನೂ ಮುಯ್ಯಾಳಿನ ಕೆಲಸಕ್ಕಾಗಿ ಬೇರೆ ಒಕ್ಕಲುಗಳ ಜಮೀನಿಗೆ ಹೋಗಿ ಕೆಲಸ ಮಾಡುತ್ತಿದ್ದರು (ಕಂಹಕ. ೧೯). [ಮುಯ್$^1_1$ + ಆಳ್$_3$]

**ಮುಯ್ಯಾಳು** 'ಮುಯ್ಯಾಳ್' ನೋ.

**ಮುಯ್ಯಾಱಡಿ** (ನಾ). ಹದಿನೆಂಟು ಅಡಿ : ಮುಯ್ಯೇಟ್ ಸೂಟ್, ಮುಯ್ಯಾಱಡಿ (ಶಾಶಾಸೂ. ೦೩೫ ಉದಾ); ಮುಯ್ಯಾಳ್, ಮುಯ್ಯೇಟು, ಮುಯ್ಯಾಱಡಿ (ಶಬ್ದಾ.ಸು. ೩೬ ಕ್ರ.ಯೋ).

[ಮುಯ್$_3$ (< ಮೂಱು) + ಆಱು$_3$ + ಅಡಿ$_1$]

**ಮುಯ್ಯಿ**$_1$ 'ಮುಯ್$^1_1$' ನೋ.

**ಮುಯ್ಯಿರ್**, ಮುಯ್ಯಿರ್ (ನಾ). ಒಂದು ಸಂಖ್ಯೆ; ಆರು: 'ಮುಯ್ಯಿ ರ್ಮೊಗ' ಪರಾ. **ಮುಯ್ಯಿರ್** : 'ಮುಯ್ಯಿರಡಿ' ಪರಾ.

[ಮುಯ್$^1_3$ (< ಮೂಱು) + ಇರ್$_1$]

**ಮುಯ್ಯಿರ್ಮೊಗ**, ಮುಯ್ಯಿರ್ಮೊಗ (ನಾ). ೧. ಆರುಮುಖ. ೨. ಆರು ಮುಖಗಳುಳ್ಳವನು ; ಷಣ್ಮುಖ: "ನವಿಲ್ದೇರಂ, ಮುಯ್ಯಿ ರ್ಮೊಗಂ (ಅಱುಮೊಗಂ), ಮುರಗೂಟ ಪಾಗಂ__ಈ ೪ ಕಾರ್ತಿಕೇಯಂಗೆ ಪೆಸರ್" (ಕಶಾ. ೯೭-೩). **ಮುಯ್ಯಿರ್ಮೊಗ** : ೨. "ತಾರಕಮಥನಂ ಮುಯ್ಯಿರ್ಮೊಗನೆನಿಸಿಕೊಂಬಂ" (ಕತು. ೩೦). [ಮುಯ್ಯಿರ್ + ಪೊಗ]

**ಮುಯ್ಯಿ** (ಕ್ರಿ). ಉಡುಗೊರೆ ನೀಡು ; ಬಳುವಳಿಕೊಡು : ಮದುವೆಗೆ ಬಂದ ಬಿಜ್ಜಾಧರರಾಯರ್ಗೆ ಸದಮಲಮಣಿಭೂಷಣಗಳ ಮುದದಿಂ ಮುಯ್ಯಿತ್ತು . . . ಬೀಳ್ಕೊಟ್ಟನು (ಶ್ರೀಪಾಂ. ೦೦-೦೦). [ಮುಯ್$_1$+ಈ$_2$]

**ಮುಯ್ಯಿರ್** 'ಮುಯ್ಯಿರ್' ನೋ.

**ಮುಯ್ಯಿರಡಿ** (ನಾ). ೧. ಆರು ಪಾದ,–ಕಾಲು : ಮುಯ್ಯಂಬುದರ್ಕೆ– ಮುಯ್ಯಿರಡಿ, ಮುಯ್ಯಂದಂ, ಮುಯ್ಯಡಿ (ಕಮುದ. ೦೬೬ ಕ್ರ.ಯೋ). ೨. ಆರುಕಾಲುಗಳುಳ್ಳುದು; ಅರಡಿ; ದುಂಬಿ : "ಮುಯ್ಯಿರಡಿ= ತುಂಬಿ" (ಕಮುದ. ಶಂ. ೨) ; ಮುಯ್ಯಿರಡಿ ಮೊತ್ತದ ಭೋಜನಶಾಲೆಯೊ ತಾನಿದೆನಲ್ಕೆ ರಂಜಿಸಿತು ಪೂವಿನ ಪಸರಂ (ಜಿಕಶ. ೬-೧೦೨); ಬಂಡುಣ ಲೆಂದು ತಂಡತಂಡದಿಂ ಮಂಡಳಿಸಿ ಮುಯ್ಯಿರಡಿಗಳ್ ಬಂದೆಱಗುಗುಂ (ರಾಮುಕ್ಕ. ೯-೧). [ಮುಯ್$^1_3$ (< ಮೂಱು) + ಈರಡಿ]

**ಮುಯ್ಯಿರ್ಮೊಗ** 'ಮುಯ್ಯಿರ್ಮೊಗ' ನೋ.

**ಮುಯ್ಯೆರಡಡಿ** (ನಾ). = ಮುಯ್ಯಿರಡಿ ೨ : "ಅಲರ್ವಕ್ಕೆ . . . ಮುಯ್ಯೆ ರಡಡಿ__ಈ ೭ ಭ್ರಮರಂ" (ಕಶಾ. ೩೩-೦೯೯). [ಮುಯ್ಯೆರಡು + ಅಡಿ$_1$]

**ಮುಯ್ಯೆರಡು** (ನಾ). = ಮುಯ್ಯಿರ್ : 'ಮುಯ್ಯೆರಡಡಿ' ಪರಾ.

[ಮುಯ್$^1_3$ (< ಮೂಱು) + ಎರಡು]

**ಮುಯ್ಯೇಟ್**, ಮುಯ್ಯೇಟು (ನಾ). ಒಂದು ಸಂಖ್ಯೆ; ಇಪ್ಪತ್ತೊಂದು: ಮುಯ್ಯೇಟ್ ಸೂಟ್, ಮುಯ್ಯಾಱಡಿ (ಶಾಶಾಸೂ. ೦೩೫ ಉದಾ). **ಮುಯ್ಯೇಟು** : ರಾಯೆಂಬೀ ಪೆಸರಿಲ್ಲದಂತು ಮುಳಿಸಿಂ ಮುಯ್ಯೇಟು ಸೂಟಿಂತು ಕಟ್ಟಾಯಿಂ ಪೊಯ್ಪುಱುವೋಗೆ ತಂದೆಯುಟುವಿಂಗಾ ಭಾರ್ಗವಂ ಕೊಂದಂ (ಶಂಕಶಾ. ೦೨-೩೬) ; ಚಲದಿಂ ಮುಯ್ಯೇಟುಸೂಟ್ ಕ್ಷತ್ರಿಯು ರನಱಿಸಿ ಕೊಂದಿಕ್ಕಿದಂ ಜಾಮದಗ್ನ್ಯಂ (ಕಮುದ. ೦೬೬ ಕ್ರ.ಯೋ).

[ಮುಯ್$_3$ (< ಮೂಱು) + ಏಟ್$_2$]

**ಮುಯ್ಯೇಟು** 'ಮುಯ್ಯೇಟ್' ನೋ.

**ಮುಯ್ವಾನ್**$_1$ 'ಮುಯ್ಯಾನ್$_1$' ನೋ.

**ಮುಯ್ವಾನ್**$_2$ 'ಮುಯ್ಯಾನ್$_2$' ನೋ.

**ಮುಯ್ಪು**$_1$ 'ಮುಯ್$^1_1$' ನೋ.

**ಮುಯ್ಪು**$_2$ 'ಮುಯ್ಪು' ನೋ.

**ಮುಯ್ಯೊನೆ** (ನಾ). ಹೆಗಲಿನ ತುದಿ; ಭುಜಾಗ್ರ : ಮನುಜರ ಗೆಯ್ತಮಂ ಬಸುಟು ದೇವರೆಮೆಂಬಭಿಮಾನಮೇಱಿ ಮುಯ್ಯೊನೆಗಳ ನೋಟ್ಪರಿನ್ನೆರಡು ತೋಳೊಳವೆಂಬವೋಲುರ್ವರೇಶ್ವರರ್ (ಶಾಂಪು. ೫೬೬).

[ಮುಯ್$_2$ (< ಮುಯ್ಪು) + ಮೊನೆ]

**ಮುರ₁** 'ಮುರಿವು' ನೋ.

**ಮುರ₂** 'ಮುರುವು₂' ನೋ.

**ಮುರ₃** (ನಾ). ಒಂದು ಬಗೆಯ ಸುಗಂಧವುಳ್ಳ ಸಸ್ಯ ಮತ್ತು ಅದರಿಂದ ತಯಾರಿಸುವ ಗಂಧದ್ರವ್ಯ : "ಮುರ—ಮುರ ಎಂಬ ಗಂಧದ್ರವ್ಯ" (ಓಕಾ. ೦೫೬). [ಸಂ. ಮುರಾ]

**ಮುರಕಲಿ** 'ಮುಟುಕಿಲ್₂' ನೋ.

**ಮುರಕಲು** 'ಮುರುಕಲು' ನೋ.

**ಮುರಕಳಿ** 'ಮುರುಕಳಿ' ನೋ.

**ಮುರಕಿ** 'ಮುರಿಗೆ₁' ನೋ.

**ಮುರಕಿಲ** 'ಮುಟುಕಿಲ್₂' ನೋ.

**ಮುರಗಡೆ**, ಮುರುಗಡೆ (ನಾ). (ಉಕ) ೧. ಮುರಿಯುವಿಕೆ; ಭಗ್ನವಾಗುವಿಕೆ; ಭಂಗವಾಗುವಿಕೆ: ವಿವಾಹ ಮುರಗಡೆಯಾಗುವದೇನು ಎಂಬ ವಿಲಕ್ಷಣ ಹೆದರಿಕೆಯಾಗುವದು (ಸುತ್ತು ಮು. ೬೩). **ಮುರುಗಡೆ :** ೧. ತನ್ನ—ಶಕೂನ ಮದುವೆಯ ಮುರುಗಡೆಯನ್ನು ಮಾಡಲು, ಶ್ಯಾಮರಾಯ ಅಸಮರ್ಥನಿದ್ದ ಬಗ್ಗೆ ಅವನಿಗೆ ಖಾತ್ರೀ ಇತ್ತು (ನೀಕಹ. II, ೨೬೯). ೨. ಸಂಬಂಧವು ಕಡಿದುಹೋಗುವಿಕೆ : ಗಂಗಕ್ಕ ನನಗ ಖಾಸ ಅಕ್ಕ ಆಗಬೇಕು . . . ಆಕೀದು ನನ್ನದು ಮುರುಗಡೆ ಆಗಿ ಇಂದಿನ ಮಿತಿಗೆ ಹದಿನೈದುವರ್ಷ ಆದವು (ಗಂಘಾಡು. ೦೦೨).

**ಮುರಗಡೆಮಾಡು** = ಮುಕ್ತಾಯವನ್ನು ತರು ; ನಿಲುಗಡೆ ಮಾಡು ; ನಿಲ್ಲಿಸು : ವೆಚ್ಚಗೆಯ ಮಾತುಗಳಿಗೆ ಇಲ್ಲಿ ಮುರಗಡೆ ಮಾಡುತ್ತೇನೆ (ಗಾಳಿ. XI. ಮುತ್ತಗದ ಶಾಕು). [< ಮುಟು₁ + ಕಡೆ]

**ಮುರಗಿ₁** 'ಮುರಿಗೆ₁' ನೋ.

**ಮುರಗಿ₂** (ನಾ). ಹೆಣ್ಣುಜಿಂಕೆ : "ಮುರಗಿ – ಮೃಗೀ – ಹರಿಣಿ" (ಕದ್ಯಕೋ. ೩೦). [<ಸಂ. ಮೃಗೀ]

**ಮುರಗಿಕಾಯಿ** 'ಮುರ್ಗಿಕಾಯಿ' ನೋ.

**ಮುರಜ** (ನಾ). ೧. ಒಂದು ಬಗೆಯ ಚರ್ಮವಾದ್ಯ ; ಮದ್ದಳೆ : "ಮೃದಂಗಃ, ಮುರಜಃ— ಈ ೨ ಮದ್ದಳೆ" (ಹಲಾಯು. ೦೭–೯೭) ; ಅದು ವಾಯುತ್ರಯವೇಷ್ಟಿತಂ . . . ವೇತ್ರಾಸನರಥಲ್ಲರೀಮುರಜದಂತೊಪ್ಪಿರ್ಪುದು (ನೇಮಿ. ೦–೪೪) ; ಅಲ್ಲಿ ಮುರಜದ ಮದದ ಕಹಳೆಗಳ ದನಿಯೊಳಗೆ ಅಲ್ಲಿಯಾವುಜದ ಶಂಖದ ಘನಧ್ವನಿಯೊಳಗೆ . . . ಸಾಂದ್ರ ರುಚಿಗೊಡುವ ಪರಿಯಾಣಂಗಳುಮನಿಂತೆ ನೀಡುತಿರೆ (ಐಕಿ. ೬–೦೦೩). ೨. [ಕಾವ್ಯಮಿ] ಚಿತ್ರಕವಿತ್ವದ ಒಂದು ಪ್ರಕಾರ ; ಒಂದು ಪದ್ಯವನ್ನು ಮದ್ದಲೆಯ ಆಕಾರದಲ್ಲಿ ರಚಿಸುವ ಒಂದು ಚಿತ್ರಬಂಧ: ಶರಶೂಲಚಾಪಚಕ್ರಾಸಿರೂಪವಿಭಿತರಥತುರಂಗಪದಗತಪಾಠಂ ಮುರಜಂ ಗೋಮೂತ್ರಿಕೆ ಪುಷ್ಕರಮರ್ಧಭ್ರಮಣಸರ್ವತೋಭದ್ರಂಗಳ್ (ಕಾವ್ಯಾ.ಪ. ೩೬೯). [ಸಂ.]

**ಮುರಜಕೇತನ** (ನಾ). ಮದ್ದಳೆಯ ಚಿಹ್ನೆಯುಳ್ಳ ಬಾವುಟ,–ಧ್ವಜ : ಆಗಳ್ ಧರ್ಮಪುತ್ರಂ ತ್ರಿಭುವನಂಗಳಾಕಂಪಂಗೊಳೆ ಮುರಜಕೇತನವಿರಾಜಿತ ಮಪ್ಪ ತನ್ನ ರಥಮನದಿರದಿದಿರಂ ಪರಿಯಿಸಿ (ಪಂಪಭಾ. ೦೩–೪೯ ವ). [ಸಂ.]

**ಮುರಜಬಂಧ** (ನಾ). = ಮುರಜ ೨ : ವರದಾನ ಪರಾದನ್ಯಂ ಪರದಾನ ಪರಾದವಂ ನೆರದಾವದಿರಾಜನ್ಯಂ ಪರಿಜನಪರಾದವಂ (ಮುರಜಬಂಧಂ) (೪೬ಡಾ. ೨–೦೯೦) ; ಅಕ್ಷರಗಳನ್ನೂ ಪದಗಳನ್ನೂ ಕುಶಲತೆಯಿಂದ ಆರಿಸಿ ಜೋಡಿಸಿ ಕವಿಗಳು ಉಂಟುಮಾಡುವ ಇತರ ಶಬ್ದವೈಚಿತ್ರಕ್ಕೆ ಚಿತ್ರಕವಿತ್ವವೆಂದೂ 'ಬಂಧ' ವೆಂದೂ ಹೆಸರು . . . ಇವುಗಳಲ್ಲಿ . . . ಹಾರಬಂಧ, ಮುರಜಬಂಧ ಮೊದಲಾದ ನಾನಾವಿಧಗಳುಂಟು (ಕೃಶಾ. ೨೩೪). [ಸಂ.]

**ಮುರಜಬಂಧಕ** (ನಾ). = ಮುರಜ ೨ : [ಗೋಮೂತ್ರಿಕಂ] . . . ಶ್ರೀಮದರ್ಧಭ್ರಮಂ ಚಕ್ರಸಾಮಂ ಮುರಜಬಂಧಕಂ ಇವು ದುಷ್ಕರ ಕಾವ್ಯಂಗಳ್ (ಸ) ವಿಶೇಷವರ್ತಿಗಳ್ (೪೬ಡಾ. ೨–೦೦೨). [ಸಂ.]

**ಮುರಜೆ** (ನಾ). = ಮುರಜ ೧ : "ಮೃದಂಗಾಃ, ಮುರಜಾಃ–೨ ಮದ್ದಳೆ ಹೆಸರುಗಳು" (ಸಿದ್ಧಾಂತಿ. ೩೬) ; ಮುರಜೆಯ ಗತಿಯುಟಿದು . . . ಗುರು ಲಘು ಪ್ಲುತ ದ್ರುತವನು ತಾಳದೊಳವ ಪರಿವಿಡಿಯಿಂದೊತ್ತಿದನು (ಜೈಮಿನಿ. ೯–೫೬) ; ಸುಜ್ಞಾನವೆಂಬ ಕೊಡತೆಯಿಂದ ಆ ಮಾಡಕೆಯಂ ತಟ್ಟುವ ಧ್ವನಿ . . . ಮುರಜೆ ಮೃದಂಗ ವುಡುಕು ಕಹಳೆಯಂತಾಗೆ (ಶೃಂಗರಸ. I, ೨೩೪). [ಸಂ. ಮುರಜಾ]

**ಮುರಡಿ₁** 'ಮುರುಡಿ₁' ನೋ.

**ಮುರಡಿ₂** 'ಮೊರಡಿ₂' ನೋ.

**ಮುರಡು** 'ಮುರುಟು₃' ನೋ.

**ಮುರದಾರಸಿಂಗಿ**, ಮುಡದಾರಶಿಂಗಿ, ಮುಡದಾರಸಿಂಗ, ಮುಡದಾರಸಿಂಗಿ, ಮುರುದಾರಶೃಂಗಿ, ಮುರುದಾರಸಿಂಗಿ (ನಾ). ಒಂದು ಬಗೆಯ ಖನಿಜಲವಣ ; ಮೈಲುತುತ್ತ : (೬ಸಂಗ್ರಾ. ೦೦೬). **ಮುಡದಾರಶಿಂಗಿ :** ಹವೆಯೊಳಗೆ ಇದನ್ನ ಕಾಸಿದರೆ ಅವ್ಲವಿಕಾರದ (ಜಂಗಿನ) ಕೆನೆ ಬರುವದು . ಅದಕ್ಕೆ ಮುಡದಾರಶಿಂಗಿಯೆನ್ನುವರು (ಪಂಚಿಕಾ. ೬–೨೩). **ಮುಡದಾರಸಿಂಗ :** ೨೦ ಮುಡದಾರಸಿಂಗ; ೨೧ ರೇವಚಿನ್ನಿ (ಪುಂಚಿವ್ಯಾ. ೦೨೨) . **ಮುಡದಾರಸಿಂಗಿ :** (೬ಸಂಗ್ರಾ. ೦೦೬). **ಮುರುದಾರಶೃಂಗಿ :** ಮುರುದಾರಶೃಂಗಿಯಂ ತಂದು ನಿಂಬೇಹುಳಿಯಲ್ಲಿ ತೇದು ತೊಡೆಯಲು ಎನಿತಪ್ಪ ಸೊಸೆಹುಣ್ಣು ಮಾಣ್ಗಂ (ಅಶ್ವಶಾ. ೬೬). **ಮುರುದಾರಸಿಂಗಿ :** (೬). [<ಪಾರ. ಮುರದಾರ್‌ಸಂಗ್ ; ಹಿಂ. ಮುರದಾಸಂಖ್; ಮರಾ. ಮುಡದಾರಶಿಂಗ್, ಮುಡದಾರಸಿಂಗ್, ಮುಡದಾರ್‌ಸೇಂಗ್. / ತೆಲು. ಮುರುದಾರಸಿಂಗಿ]

**ಮುರಬ್ಬ**, ಮುರಬ್ಬಾ, ಮೊರಬ್ಬ (ನಾ). ಮಾವು, ನೆಲ್ಲಿ ಮುಂತಾದ ಕಾಯಿಗಳನ್ನು ಸಕ್ಕರೆ ಅಥವಾ ಬೆಲ್ಲದ ಪಾಕದಲ್ಲಿ ಹಾಕಿ ತಯಾರಿಸುವ ಒಂದು ಬಗೆಯ ಖಾದ್ಯ ; ಗುಳಂಬ : ಹಣ್ಣಿನ ಮುರಬ್ಬ. ಮಣ್ಣಿನ ಬೊಂಬೆ... ಮೊದಲಾದ ಆಶ್ಚರ್ಯ ಆಶ್ಚರ್ಯಕರವಾದ ಸಾಮಾನುಗಳು ಮಾರಿದುವು (ಶಾಂಂ. II, ೦೦೯); ಹಕೀಮರ ಲೇಹ್ಯ, ಮುರಬ್ಬ ಎಲ್ಲವನ್ನೂ ತರಿಸಿದಂತೆ ತಿಪ್ಪೆಗೆ ಎಸೆದಾಯಿತು (ಸಿಂ. ೦೦೬). **ಮುರಬ್ಬಾ:** ಅತಿಯಾಗಿ ಮಾಗಿದ ಹಣ್ಣುಗಳಿದ್ದರೆ . . . ಮುರಬ್ಬಾ ತಯಾರಿಸಬಹುದು (ಅಹಾ. ೬೬). **ಮೊರಬ್ಬ :** ಸಕ್ಕರೆಪಾಕದಲ್ಲಿ ಕೆಲವು ಹಣ್ಣುಗಳನ್ನು ಅಥವಾ ಹಣ್ಣಿನ ರಸಗಳನ್ನು ಬೇಯಿಸಿ ಜಾಂ . . . ಮೊರಬ್ಬಗಳನ್ನು ಮಾಡಿ ಕೆಲವು ದಿನ ಈ ಆಹಾರಗಳು ಕೆಡದಂತೆ ರಕ್ಷಿಸಲಾಗುತ್ತದೆ (ಗೃಹಚ. ೩೬).

[← ಅರ. ಮುರಬ್ಬ, ಮುರಬ್ಬಾ ; ಪಾರ. ಮುರಬ್ಬ ; ಹಿಂ. ಮುರಬ್ಬಾ ; ಮರಾ. ಮುರಂಬಾ, ಮುರಬ್ಬಾ, ಮೋರಂಬಾ]

**ಮುರಬ್ಬಾ** 'ಮುರಬ್ಬ' ನೋ.

**ಮುರಮು** (ನಾ). ಗಟ್ಟಿಮಣ್ಣಿನ ಪೆಂಟೆ : P ಕರಿಕಲ್ಲು ರೂಪಾಂತರಗೊಂಡು ಉಂಟಾದ ಗಟ್ಟಿಮಣ್ಣು ಅಥವಾ ಹರಳು. ಇದು ಕಪ್ಪು ಮೊದಲಾಗಿ ಅನೇಕ ಪ್ರಕಾರವಾಗಿರುತ್ತದೆ : ಮಾರ್ಗಗಳನ್ನು ಮಾಡಲಿಕ್ಕೆ ಮುರಮು ಮತ್ತು ಕಲ್ಲುಗಳ ಅನುಕೂಲವಿರಬೇಕು (ಶಿಕ್ಷಕೋ. ೩೦).

[← ಮರಾ. ಮುರೂಮ್]

**ಮುರಮುರ** (ನಾ). (ಗರಿಗರಿಯಾಗಿರುವುದನ್ನು ಸೂಚಿಸುವ) ಒಂದು ಅನುಕರಣ ಶಬ್ದ : ಮುರಮುರ ಮಾಡುತ್ತಿರುವ ಮುಂಡಾಸನ್ನು ಬಿಚ್ಚಿ ಮಾಡುವುದೆಂದರೇನು ? (ಪತುಕೋ. ೨೬೦).

**ಮುರಮುರಿ** (ನಾ). ಪುರಿ ; ಚುರುಮುರಿ ; ಕನ್ನಡದಲ್ಲಿಯ ಸಿಳ್ಳು . . . ಚುರಮುರಿ, ಮುರಮುರಿ, ಡಮರ್, ಝಾಂಗಟೆ, ಜೇಘೊಡೆ, ಟಂಕಾರ —

ಮೊದಲಾದ ಶಬ್ದಗಳು ಅನುಕರಣದಿಂದಲೇ ಬಂದುವು (ಶಾಶಾಶಾ. ೩).
[← ಹಿಂ. ಮರಾ. ಮುರಮುರಾ]

**ಮುರರ್ಜಿಲ** (ನಾ). ಒಂದು ಬಗೆಯ ಅಕ್ಕಿ: ಅರಸಿನ ಕೆಂಬಟ್ಟೆ, ಸುಕದಾಸ, ಮುರರ್ಜಿಲ, ಯಾಲಕ್ಕಿರಾಜಾ (ಕಸಂಗ್ರಾ. ೬). [ ? ]

**ಮುರಲಿ, ಮುರಳಿ$_1$** (ನಾ). ಒಂದು ಬಗೆಯ ಸುಷಿರವಾದ್ಯ; **ಕೊಳಲು** ; **ವೇಣು** : ಮುರಲಿನಾದವ ಕೇಳಿ ತರಳೆಯರೆಲ್ಲ ಮರುಳಾಗಿ ಬರುತಿದ್ದೇವೆ (ಶ್ರೀಕಂಠ. ೩. ೪-೦೦೦-೬). 'ಮುರಲಿಗಾನ' ಪರಾ. **ಮುರಳಿ$_1$** : ಬಂದು ನಿಂದ ಕಣ್ಣು ಮುಂದೆ . . . ಮುರಳಿಚುನೂದುತ್ತ ಮರುಳುಗೊಳಿಸಿ ಜನರ ಕೊರಳ ಪವಕ ಹಾರ ಧರಿಸಿ ತಾ ನಲಿಯುತ್ತ (ವಿಜಾಕೃ. ೨೦-೨); ಮುರಳಿಯ ಕೈಕೊಳ್ಳುವೆಂದು ಮರಳಿ ಬರುವೆನು (ಗೋಕುಲ. ೫೪-೨೩).
[ಸಂ. ಮುರಲೀ]

**ಮುರಲಿಗಾನ, ಮುರಳಿಗಾನ** (ನಾ). **ಕೊಳಲನ್ನು ಬಾರಿಸುವಿಕೆ** ; **ವೇಣುಗಾನ** : ಪುರರಿಪು ವಿಧಿ ಪೊಗಳುತಿರಲು ವಿರಚಿಸಿದ ಪುರಂದರ ವಿಠಲ ಮುರಲಿಗಾನ.ಮಾಡಿದ (ಶ್ರೀಕಂಠ. ೩. ೪-೪೪-೩). **ಮುರಳಿಗಾನ** : ವತ್ಸವ ಪರಿ ಕಾದನಾ . . . ಕೊಳಲು ತನ್ನ ಕೈಲಿ ಪಿಡಿದು ಮುರಳಿಗಾನ ಮಾಡುತ್ತ (ವಿಜಾಕೃ. ೦೩-೦). [< ಸಂ. ಮುರಲೀಗಾನ]

**ಮುರಲೀಧರ, ಮುರಳೀಧರ** (ನಾ). **ಕೊಳಲನ್ನು ಹಿಡಿದಿರುವವನು** ; **ವೇಣುಗೋಪಾಲ** ; **ಕೃಷ್ಣ**. **ಮುರಳೀಧರ** : ಕೊಳಲುಲಿವಾಲಿಪವೆಲ್ಲ ಆದೊಡೆ ಮುರಳೀಧರ ಕಾಣಬೊಲ್ಲ (ಗೋಕುಲ. ೦೦-೦೬). [ಸಂ.]

**ಮುರವ$_1$** 'ಮುರುವ' ನೋ.

**ಮುರವ$_2$** (ನಾ). ಒಂದು ಬಗೆಯ ವಾದ್ಯ ; **ಮುರಜ** : ತಜ್ಜಲ ನಿಧಿಯಲ್ಲಿ ಲಕ್ಷಯೋಜನಗಾಢಮಧ್ಯಮಧ್ಯವಿಸ್ತಾರವಶಸಪುಸ್ತಯೋಜನತಳವದನ ವಿಸ್ತಾರದ ಮುರವಾಕಾರದ ಪಾತಾಳಂಗಳ್ ದಿಕ್ಚತುಷ್ಟಯದೊಳ್ ನಾಲ್ಕುಂ . . . ಇರ್ಕುಂ (ಕತ್ರ್ರ. ೦೯೨) ; ಸಮಸ್ತಪಾತಾಳಂಗಳು ಸಾಸಿರದೆಂಟು ಮುರವದಾಕಾರವದರ ತ್ರಿಭಾಗದ ಕೆಳಗೊಂದು ಭಾಗದೊಳಂ ವಾಯು ಪೊಂದಿ ತೀವಿಕ್ಕುಂ (ಶಾಕ್ಷಟಿ. ೨೬). 'ಮುರುಜ' ಪರಾ.
[< ಪ್ರಾ. ಮುರವ, ಮುರಯ./ಸಂ. ಮುರಜ]

**ಮುರವತ್ತು, ಮುರುವತ್ತು** (ನಾ). ೧.(ಉ.ಕ.) **ದಾಕ್ಷಿಣ್ಯ** : ಹಂಗು : ಪಕ್ಷಪಾತ . . . ಯಾರ ಮುರವತ್ತು, ಒಲುಮೆ, ಬಲುಮೆಗಳಿಗೆ ಒಳಗಾಗಿ ಹೋಗಿದ್ದನೋ ತಿಳಿಯದು (ಶೂಬುಶಾ. ೩೩). ೨. **ಒತ್ತಾಯ; ಜುಲುಮೆ; ಬಲಾತ್ಕಾರ** : ಅರ್ಧ ಮುರವತ್ತಿಗಾಗಿ ಅರ್ಧ ಮಗನಲ್ಲಿಯ ವಿಶ್ವಾಸಕ್ಕಾಗಿ ಸರಹುರಿಯನ್ನು ಮುಂದೆ ಕಳಿಸಲು ಆಚಾರ್ಯರು ಒಪ್ಪಿಕೊಂಡರು (ಸವುಜೀ. ೯೨) ; ಪೋಲೀಸರ ಮುರವತ್ತಿನಿಂದ ಸಾವ್ಕಾರ ಪಂತನು ಆ ಪ್ರಕರಣದ ಶೋಧಕ್ಕಾಗಿ ಆ ಹಳ್ಳಿಗೆ ಹೋದನು (ಅಂಬಿಕೆ. ೪೨) ; ನಾಚಿಕೆ ಮುರವತ್ತುಗಳಿಂದಾಗಲಿ . . . ಅಪ್ರಿಯವನ್ನವನ್ನು ಸ್ವಲ್ಪವಾದರೂ ಭಕ್ಷಿಸಬೇಡಿರಿ (ಬ್ರಹ್ಮಕ್ಷೀ. ೦೩೯). ೩. **ಮರ್ಜಿ** ; **ಲಹರಿ** : ಮಾನವು ಮಾರಾಟವಾಗಬಾರದೆಂದು ಎಷ್ಟು ಜನರ ಮುರವತ್ತು ಕಾಯಬೇಕಾಗುವದೋ ಕಾಣೆ (ಹೂ೦ಬು. ೦೬೪). ೪. **ಅಂಜಿಕೆ** ; **ಭಯ** : ಅರುವತ್ತು ಮುಗಿದೀತು ಅರುವು ಮರುವಾದೀತು ಎಂಬ ಮುರವತ್ತಿನಲಿ ಹಾಡಲಾರೆ (ಜೀವಲ. ೬೦-೦೦) ; ಯಾರ ಭಿಡೆ—ಮುರವತ್ತುಗಳಿಲ್ಲದೆ ಮುಚ್ಚುಮರೆಯಿಲ್ಲದೆ ಅವನು ಕಂಡದ್ದನ್ನಾಡಿದ್ದಾನೆ (ಕಶಾಕ. ೩೪೩). **ಮುರುವತ್ತು** : ೨. ಬಳಗದಲ್ಲಿ ಮುರುವತ್ತಿಗಾಗಿ ಅನುರೂಪವಾಗದ ಗಂಡು ಹೆಣ್ಣನ್ನು ಮದುವೆ ಮಾಡುವುದೂ ಕಂಡುಬರುವುದು (ಕನ್ನಜಾ. ೦೨೩). ೩. ಮುಂದೆ ಮದುವೆ ಯಾವ ವೇಳೆ . . . ಇನ್ನೊಬ್ಬರ ಮೂಢು ಮುರುವತ್ತುಗಳನ್ನರಿತು ಅವರಂತೆ ನಡೆಯಬೇಕು (ಸವುಜೀ. ೧೪೬). [←.ಅರ. ಮುರವ್ವತ್ ; ಹಿಂ. ಮುರವ್ವತ್, ಮುರೌವತ್ : ಮರಾ. ಮುರವತ್]

**ಮುರವು$_1$** 'ಮುರಿವು' ನೋ.

**ಮುರವು$_2$** 'ಮುರುವು$_2$' ನೋ.

**ಮುರಸು, ಮುರುಸು** (ನಾ). (ಮನಸ್ಸಿನ) **ವಿರೋಧ** ; **ವೈಷಮ್ಯ** : 'ಇರಸುಮುರಸು' ಪರಾ. **ಮುರುಸು** : ಅವನು ತನ್ನ ದೊಡ್ಡಿಯನ್ನು ತಲುಪಿ ಕಾರ್ಯನಿರತನಾದ ನಂತರ ಮನಸ್ಸಿನ ಮುರುಸು ಬೇಸರಗಳೆಲ್ಲ ಮಾಯವಾದುವು (ಕೃಷರು. ೨೪೪). 'ಇರಸುಮುರುಸು' ಪರಾ.
[<ಮುರಿ$_1$ + — ಸು$_3$]

**ಮುರಳಿ$_1$** 'ಮುರಲಿ' ನೋ.

**ಮುರಳಿ$_2$** 'ಮಿರಿಳಿ' ನೋ.

**ಮುರಳಿ$_3$** (ನಾ). [ಅಶ್ವಶಾ] ಕುದುರೆಯ ಆರು ಬಗೆಯ ಲಕ್ಷಣಗಳಲ್ಲಿ ಒಂದು : ಭಂಜಳಿ ಮುರಳಿ ಝುಳಂಪಿ ವಾಹಿಣಿ ರೂಪು ರಂಜಿಪ ರೇಖೆಯೆಂದೆಂಬ ಮಂಜುಳಮಾದ ಷಡಂಗದೊಳಾ ಹಯ ರಂಜನೆವಡೆದುದತ್ತಾಗ (ಶ್ರೀಪಾಲ. ೯-೦೨). **P** ಇದು ಕುದುರೆಯ ಗತಿಭೇದವೇ ಎಂಬುದು **ವಿಚಾರಣೀಯವಾಗಿದೆ.**
[ ?./ತೆಲು. ಮುರಳಿ = ಅಶ್ವಗತಿಗಳಲ್ಲಿ ಒಂದು ಬಗೆ]

**ಮುರಳಿಗಾನ** 'ಮುರಲಿಗಾನ' ನೋ.

**ಮುರಳೀಧರ** 'ಮುರಲೀಧರ' ನೋ.

**ಮುರಾಡ** (ನಾ). **ಹಟ** ; **ಮೊಂಡುತನ** : ನಡೆಸಿಕೊಡದೆ ಏನು ? ಅದಕ್ಕೆ ಈ ಮುರಾಡವೇ ಅಣ್ಣ ? (ಕುಂಗಲ. ೩).
**ಮುರಾಡ ಹಾಕಿಕೊಳ್ಳು = ಪಟ್ಟುಹಿಡಿ** ; **ಹಟಮಾಡು** : ಶ್ಯಾಮಲೆ ಬರುವುದಿಲ್ಲವೆಂದು ತಿಳಿದುಕೊಂಡೇ ಈ ಕುಮುದೆಯು ಮುರಾಡ ಹಾಕಿಕೊಂಡು ಕುಳಿತಿರುವಂತೆ ಕಂಡುಬರುತ್ತದೆ (ಮರುಸಂ. ೦೦೬).
[?./ ಅರ. ಹಿಂ. ಮರಾ. ಮುರಾದ್=ಆಸೆ, ಇಚ್ಛೆ]

**ಮುರಾಲಿ** (ನಾ). ಆನೆಗೆ ತೊಡಿಸುವ ಒಂದು ಬಗೆಯ **ಆಭರಣ** : ಆನೆಕೊಂಬಿಗೆ ಪಿತ್ತಾಳೆ ಅಣಸು ಮುರಾಲೀ ಆನೆಕಾಲಿಗೆ ಹಿತ್ತಾಳೆ ತೊಡೆಸರಪಣಿ (ಎಕ. XIV, ಪಂಜಪ. ೨೯೨-ಕ್ರುಟಿ. ೦೯೨; 1847). [ ? ]

**ಮುರಿ$_1$** (ಕ್ರಿ). ೧. **ಬಾಗು** ; **ಬಗ್ಗು** : "ಮುರಿ—ವಕ್ರಭಾವೇ(ಬಗ್ಗು)" (ಕಮರಾ); ಎಡಗೆಯ್ಯನೂಜ್ ಪೀಠದ ಕಡೆಯೊಳ್ ಮುಯ್ಯುದ್ದಮಾಗೆ ಮುರಿದ ಬೆಡಂಗಚ್ಚುಡಿದಿರೆ ಹಾರಂ ಕೆಲಕೋರ್ಗುಡಿಸೆ ನಿಜಾನುಜರೊಳಾಗಳೊರ್ವಂ ನುಡಿದಂ (ಶಾಂತಿಪು. ೩-೦೦೩); ಮುರಿದೆಡಗೈ ನಿಜಾಂಗಗಳನೋಸರಿಸಿ (ಅಜಪು. ೬-೪೪) ; ಕಂಬಿಯೊಳೊಂದುದಿನದಲಿ ಹೊತ್ತುದಕವಂ ಶೀಘ್ರದಿಂದ ತರುತ್ತ ಹಳ್ಳದನಾಚೆ ದಾಟಲು ಬೆನ್ನು ಮುರಿದಿರಲು ಬಿಡದೆ ಕಂಬಿಯನವಚಿಕೊಂಡು (ಬಸಪು. ೪೪-೩). ೨. **ಬಾಗಿಸು; ಬಗ್ಗಿಸು** : ವೃಕೋದರನೊಯ್ಯನೆ ನಕ್ಕು ಬಾಲವಂ ಸಲೆ ಮುರಿದೆತ್ತಲಾಟಿಸೆ ಧರಿತ್ರಿಗೆ ಕೀಲಿ[ಸಿ]ದಂತುಟಾಗಿ ಪೋರ್ವಲದ ಪೊಡರ್ಪುಗೆಟ್ಟು ನಡೆನೋಡಿ ಮರುತ್ಸುತನಂ ಮರುತ್ಸುತಂ (ಸಂಕಭಾ. ೮-೩೨); ಕೆಂದಾವರೆಗೆತ್ತಡಿಯೊಳ್ ಸಂಧಿಸಿ ಕಳಭಂಗಳೆಳಸೆ ಕೆಯ್ಯಂ ಮುರಿದಾಸ್ಯೇಂದುವನೀಕ್ಷಿಸಿ ಸಿಂಗದ ಚೆಂದದಿನೆಂದಂಬೆಗಾಲೊಳೆಸೆವನೊ ಕಂದಂ (ಪುಷ್ಪಪು. ೩-೯೩). ೩. **ವಕ್ರವಾಗು** ; **ಜೋಂಕಾಗು** ; **ಸೊಟ್ಟಾಗು** : ಕರಂಗಳ್ ಚೆಲ್ವನಾಂತಿರ್ದೊಡಂ ಮುರಿದಂತಿರ್ದವರ ಮೇಲೆ ಪೇರಿ ನಡೆವರ್ (ಸೋಮೇಶ. ೩೩) ; ಮುರಿದ ಕಾಲ್ಗಳನೆಳೆಕೊಳುತ ಇಜಿಮಾಡುವಾಕಾಶವೀರರ ಕಂಡಳು ಪರಿಣಾಂಬಿಕ ನಸುನಗುತ (ಪೋಹಶ. ೨೪-೦೨). ೪. **ಹೊರಳು** ; **ತಿರುಗು** : ಪೋಪ ಬರ್ಪ ಜನವಂ ಮುಂದಿದೀಕ್ಷಿಸೆ ಕಾಂತೆ ಬೀದಿಯಂತೆಯ್ದುವಿನಂ ಪೊದಟ್ಟಿದೆಸನಂಗರಸಾಬ್ಧಿಯೊಳುಯ್ಯು ತೊಯ್ಯು (ಶಾಂತಿಪು. ೬-೯೬); ಮುರಿದ ಕೊರಲ್ ಬಟಲ್ದೆಳವಲಾಟಿಪ ಮೆಯ್ . . . ಕತ್ತುರಿಮೊನೆಗೊಂಡೆಚಲ್ವ ಕಿವಿ ಸೂಚಿಸಿದಪ್ಪುದು ಸೋಲ್ಮ ಭಾವವಂ (ಕಾದಂಪೂ. ೬೩೦): ಮುಗುಳೊರ್ವಳಾಟದೊಳ್ ಮತ್ತೊರ್ವಳಂ ತನ್ನ ಬಗಸೆ

ಗಣ್ಣಿಂ ಮುರಿದು ನೋಡೆ (ಶಬ್ದಮ. ೬-೯೬). ೫. ಹೊರಳಿಸು ; ತಿರುಗಿಸು: ಗುರುಪಿತಾಮಹರಿಂದ ಮೋಱೆಯ ಮುರಿದ ವಿಜಯವಧೂಕಟಾಕ್ಷವ ತಿರುಹಿ ಹಾಯ್ಕುವ ಗಂಡನಾವನು ನೀವು ತಪ್ಪಿದಡೆ (ಕುಮಾ.ಭಾ. ೩-೩೩); ಅಗಲಲಾಱದ ಮುರಿದ ಮೋಱೆಯು ದುಗುಡದಲಿ ಹಯವಶ್ಯವಾರಿಯ ನುಗುಳೆ ಗತಿಗುಂದಿದವು ಗುಣಭರಿತನ ವಿಯೋಗದಲಿ (ತೊರವೆ. ೨-೩-೨). ೬. ವಿಮುಖವಾಗು ; ಪರಾಙ್ಮುಖವಾಗು : ಮುರಿದು ಕಣ್ಣಟ್ಟರೆ ಕ್ಷಣಕೆ ಮುಕ್ತಿಯು ಕಾಂಬ ಭರತಚಕ್ರಿಯು ಹೇಳಲಳವೆ (ಭರತ. ೦-೨೦). ೭. ಓಲು; ಜೋಲು ; ಓರೆಯಾಗು : ಮುರಿಯೆ ಕೊರಲ್ ಕೆಲಕ್ಕೆ ಮುಡಿ ಜೋಲ್ವಿನೆಗಂ ಕರವಂ ಕದಂಪು ಸಾರ್ತರೆ . . . ಕರುವಿಟ್ಟ ಚಿಂತೆಯನೆ ಚಿತ್ರಿಸಿದಂತೆ ಪೊಲಿರ್ದ ನಲ್ಲಳಂ . . . ನರಪತಿ ಭಾವಿಸಿ (ವರ್ಧಮಾ. ೯-೬೬) ; ಮುರಿದ ಗೋಣಿನ ಕರದ ತಲೆಗಿಂಬುಗಳ ಕಾಲಾಕೊಱಗಿತವನಿಯಲಿ (ಕುಮಾ.ದ್ರೋ. ೦೩-೬). ೮. (ನಿದ್ರೆ, ಜಡತೆ ಮುಂತಾದುವನ್ನು ಹೋಗಲಾಡಿಸಲು ಕೈಕಾಲು ಮುಂತಾದುವುಗಳನ್ನು) ನೀಡು,– ಚಾಚು,– ನೆಟ್ಟಗೆ ಮಾಡು : ಒಂದು ದಿನದ ಕೂಸಂ ವನಧಿಯೆಂಬ ದೇವತೆ ಓಡಿದೊಡಾ ಕೂಸು ಬೆನ್ನು ಕೊರಳುಮಂ ಮುರಿವುತಿರ್ಕ್ಕುಂ (ಜಾಂಆ. ೦೨೯-೦೬); ಒತ್ತರಿಸಿ ನಡೆವುತ್ತ ಕಾಲ್ಪಿಚ್ಚುತ್ತ ಒದೆವುತ ಬೆನ್ನ ಮುರಿದುಕೊಳುತ್ತ . . . ಮುಂಡುಗಾಱನು ದಸರಿದೇವನ ಬಳಿವಿಡಿದು ಸಾರ್ದು (ಬಸವ. ೩೯-೦೬). ೯. ನುಲಿ ; ತಿರುಚು : ಕಾಲ್ಗಿಡಿಸಲುಂ ಮುರಿದು ಕಿಟ್ಟಡಂ ತಡಮಂಜಿವ ಱಿಂದಂ ಬಾಹು ಕೈಕೊಳ್ಳೆಬವು ಮೊದಲಾಗಿ ಗೋಮೂತ್ರಮಂಡಲಮು ಪತಾಕಾಶಂ ವೇಜವಿತಿಯೆಂಬ ವಿಧಿಗಳೊಳ್ ಬಂದು ನೆಲೆಗಿಡಿಸಲುಂ ಪೊಲಗಿಡಿಸಲುಂ ಬಲ್ಲಂ (ಶಾಂತಿಪು. ೩-೨೩ ಪ); ಮಗಧೇಶನನಿಕ್ಕಿ ಮೆಟ್ಟಿಪೆಂ ಲಾಳನ ಗಂಟಲಂ ಮುರಿದಪೆಂ (ಶಾಸ. XI–i, ೩೨-೦೫; 1007 ?). ೧೦. ಹುರಿ ಮಾಡು ; ಹೊಸೆ; ತೀಡು : ಮುರಿದಣ್ಪಕ್ಕಿದ ಗಡ್ಡ ಮೀಸೆ ಮುಡಿಕಟ್ಟಿಂ ಶಳ್ತ ಕೆಂಬಟ್ಟೆ (ಅನಂತಪು. ೦೦-೬೩); ನೆಲಕ್ಕೆ ತೂಂತಿಟ್ಟಪೊಲಿರ್ದ ಮೈಮುರಿದ ಮೀಸೆ ಮಿಡುಂಕುವ ಬಾಯ್ (ಕೃಷ್ಣಾಸ್ತ. ೬-೦೫) ; ಮೀಸೆಯ ಮುರಿದು ಹುಬ್ಬನು ಬಲಿದು . . . ಭಾರ್ಗವದತ್ತ ಬಾಣಕೆ ನೀಡಿದನು ಕರವ (ಕುಮಾ.ದ್ರೋ. ೦೩-೫೦). ೧೧. ಹೆಣೆದುಕೊಂಡಿರು ; ಸೇರಿಕೊಂಡಿರು : ಜಡೆಯುಡೆಯ ಬಾಂದೊಱೆಯ ಮಕರಂದಸಂದೋಹದ ಮುರಿದ ಜಡೆಗಳ . . . ಪಂಪಾವಿರೂಪಾಕ್ಷಕಲ್ಪದ್ರುಮಂ ಪೊರೆಯಲಾನತಜನರನು (ಹಂಪೆ. ೫-೧). ೧೨. ಮತ್ತೆ ಬರು ; ಹಿಂದಿರುಗಿ ಬರು ; ಪುನಃ ಬರು : ಪೆಱಪಿಂಗುವನಂ ಮುರಿದಡಸಿ ಓಡಿದು ಘಟ್ಟಿಸಿ ಓರಿಯಱೆಯೊಳ್ ಪೊಯ್ದು ನಸಗವೊಯ್ಲುಂ ಭೀಮಂ (ಹಂಪಮಾ. ೩-೩೦) ; ಕಮಲದಳಾಯತಾಂಬಕಿ ನಳನ ರೂಪಿನ ನಾಲ್ವರಿರೆ ಕಂಡು ಮಾಯವಿದು ತಾನಱಿಯೆನಿವರ ನಿಜಾಯತವ ನೆಂದೆನುತ ಮುರಿದಾ ವಾಯುಗತಿಯಲಿ ಬಂದು ಹೊಕ್ಕಳು ತನ್ನ ಮಂದಿರವ (ನಳಚ. ೩-೩೦). ೧೩. ಹಿಂಜರಿ ; ಹಿಮ್ಮೆಟ್ಟು ; ಹಿಂದೆಗೆ : ಉರವಣಿಸು ನ್ನದು ಕೊಂಡ ಹಜ್ಜೆಗೆ ಮುರಿಯಲಾಗದು (ಕುಮಾ.ದ್ರೋ. ೦೩-೨೦); ಆ ತರುಣಿಯರ . . . ಸುತರಳಾಪಾಂಗರೋಚಿಯಲಿ ಮುರಿದುದಾ ಮರಗತ್ತಲೆಯ ವ್ಯೂಹಿ (ತೊರವೆ. ೦-೩-೯೩); ಒಡೆದ ನೆತ್ತಿಗಳಿಂದ ರಕುತದ ಮಡು ಹರಿಯೆ ತರಹರಿಸಲಾಱದೆ ಪಡೆ ಮುರಿದು ಬರುತಿರಲು (ನಳಚ. ೯-೨೭). ೧೪. ಹಿಮ್ಮೆಟ್ಟಿಸು : ಹಿಂದೆ ಸರಿಯುವಂತೆ ಮಾಡು : ತನಗೆ ಮುಲಿತ ನರಸಿಂಹಪುರ ಬೇಲೂರ ಜನಪತಿಗಳ ಮುರಿದು (ಕಂಠೀರ. ೩-೫೦). ೧೫. ಕುಗ್ಗು ; ಅಡಗು ; ಕುಸಿ ; ತಗ್ಗು : ಪರಿಯಿಂದಂ ಪೂರ್ಬು ಜೋಲ್ದುದ್ ತೆರೆ ತರತರದಿಂದದಲ್ಲ ಪೊಣ್ಮಲ್ಕೆ ಗಂಟಲ್ ಮುರಿದತ್ತೊಂದೊಂದಱೊಳ್ ತಳ್ತೊಗೆದು ಸಿರೆಗಳ್ (ಜಾರಂಭ. ೦೬೩): ಮೋಹದಿಂದಿನ್ನೆಗಂ ಭವವಾರ್ಧಿಯೊಳ್ ತಿರಿದೆಂ ಮನಂ ಮುರಿವನ್ನೆಗಂ (ರಹಟ್ಟ. ೬-೦೨೦). ೧೬. ಅಣಿಗೊಳ್ಳು : ಸಿದ್ಧವಾಗು : ಅರಸನನುಜರುಸಹಿತ ಕೃಷ್ಣನ ಬೆರಳ ಸನ್ನೆಯೊಳೈದೆ ಬಿಡೆ ಮೋಹರಿಸಿ ನಿಂದುದು ಮುರಿದ ಮಕರವ್ಯೂಹರಚನೆಯಲಿ (ಕುಮಾ.ದ್ರೋ. ೯-೨೨); ಉರವಣಿಸಿದರು ಮುರಿದು ಮಕರವ್ಯೂಹದತಿರಥರು (ಕುಮಾ.ದ್ರೋ. ೦೦-೧). ೧೭. ಕಡೆಗಣಿಸು ; ತಿರಸ್ಕರಿಸು : ಅವರವರ ಕೃತಕರ್ಮಸಂಸ್ಕಾರ ಹೋಲಿಸುವುದಳಿಸುವುದು . . . ಇದಕಹಿತ ಹಿತರೆಂದಾರ ಮುರಿವುದು ಮನ್ನಿಸುವುದೈ ಭೀಮ (ಕುಮಾ.ಅ. ೨೦-೦೬). ೧೮. ಬಿಚ್ಚು ; ಹರಡು : ಮುರಿದಿಳಿವ ವೇಣಿಕಾಬಂಧುರ ಯಮುನಾನದಿಯು ಪೂರ್ಣಪ್ಲವನ ಸ್ಥಳದಂತಿರೆ ಕರಮೆಸೆದುದು ಘನಜೀವರಜಘನಂ ಚಕಿತತರುಣಹರಿಣೀಕ್ಷಣೆಯಾ (ಪ್ರಭು. ೯-೦೦೩). ೧೯. ಹೊರಹೊಮ್ಮು ; ಉಂಟಾಗು : ಪಾದರಿಗಲರ್ಗಂಗಳಿಂದೆ ಮಕರಂದಮುದಿತ್ತು ತುಬಿಂಕೆ ಪಲ್ಲವಂ ಮುರಿದುವು ತೋಳೋಳಿಂದು ಮಲಯಾನಿಳನಿರ್ದಪನೆಂದು ತೋರ್ಪವೋಲ್ (ಅಜಿತ. ೭-೦೦); ಅಲ್ಲಲ್ಲಿಯಕ್ಕಿ ಮುರಿವಲ್ಲಲ್ಲಿ ಕೆಂಪಾಗುವಲ್ಲಲ್ಲಿ ಕುಯ್ಯಲಾಗುವ ಪಲವು ಪೆಸರ್ವಡೆವ ನೆಲ್ಲ ಗದ್ದೆಗಳತಿ ಮುದಂಬಡಿಸಿದುವು ತಮ್ಮನೋವಿದ ಕುಟುಂಬಗಳಿಗೆ (ಸಮ್ಯಕ್ತ್ವ. ೦-೨೨). ೨೦. (?) : ಉದ್ದವಟವೆಂಟ಼ವರೆಂಬುದೆ ಬಿದ್ದಂ ಮುನ್ನಲ್ಲಿ ಕಡುಪಿನೊಳ್ ಬಹುವಿಧದಿಂದುದ್ದವಟವೆಂಱದು ಮುರಿಗುಂ ಬಿದ್ದಮೆನಲ್ ಬಳಳ ಪೂಜಗನೆಱೆವ ಬೆಡಂಗಂ (ಎಳ. II. ೦೩೩-೦೦೯; ೪೪೫).

ಮುರುತುಕೊಳ್ಳು, ಮುರಿತುಕೊಳ್ಳು= ೧. ಬಿಗುವಾನವಾಗಿರು ; ಬಿಗಿಯಲ್ಲಿರು : ತನಗೆ ಬರೆಯಲಿಲ್ಲವಲ್ಲ ಎಂದು ಮುರುತುಕೊಂಡು ತಾನೂ ಬರೆಯಲಿಲ್ಲ (ಶಿಂಶು. ೬೯); ಅವನು ಮುರುತುಕೊಂಡೇ ಬಿಗಿಯಾಗಿ ನಡೆದನು (ಸರುವಾ. ೦೬೦). ೨. ಸಿಟ್ಟಾಗು ; ಕೆರಳು; ಕೋಪಮಾಡಿಕೊಳ್ಳು : ತಾಯಿಯ ಮಾತೂ ಅವನಿಗೆ ಹಿತವಾಗಲಿಲ್ಲ; ಆದ್ದರಿಂದ ಮುರುತುಕೊಂಡು ಮತ್ತೆ ಸಭೆ ಬಿಟ್ಟು ಹೊರಟು ಹೋದನು (ವಚನಾ. ೨೫೬); ಹೀಗೆ ಅಳುತಾ ಕೊಡುವ ದಾನವನ್ನು ನಾನು ಒಲ್ಲೆನೆಂದು ಮುರಿತುಕೊಂಡು ಹೋದನು (ಅಚಿತಾಂ. XIII, ೨೭). [ದೇ.॥ ತಮಿ. ಮುರಿ ; ಮಲ. ಮುರಿ ; ತುಳು. ಮುರ್ಲು ; ತೆಲು. ಮುರಿಂಚು, ಮುರಿಯು ; ಪರ್ಜಿ. ಗದಬ. ಮುರ್ಗ್]

**ಮುರಿ₂** 'ಮುಱಿ₁' ನೋ.

**ಮುರಿ₃** 'ಮುರಿವು' ನೋ.

**ಮುರಿ₄** 'ಮೂರಿ' ನೋ.

**ಮುರಿಕ** (ನಾ). ೧. "ವಕ್ರಸ್ವಭಾವದವನು" (ಶ್ರಕೋ). ೨. ಸಿಟ್ಟಿನ ಮನುಷ್ಯ: "ಮುರಿಕನೆನಲ್ ಕೋಪಿ" (ಶಾಕಾ. ೯೩).

[ಮುರಿ₁ + — ಕ₃]

**ಮುರಿಕಟ್ಟು** (ನಾ). ವಜಾ ; ಕಳೆಯುವಿಕೆ ; ಮುರಿದುಕೊಳ್ಳುವಿಕೆ: ನಿನ್ನ ಮಗಗೆ, ಅನ್ನ ಬಟ್ಟೆ ಎಲ್ಲಾನೂ ಕೊಟ್ಟು ಅದರ ಜೊತೆಗೆ ನಿನ್ನ ಸಾಲದೊಳಗೆ ವರ್ಷಾ ಹದಿನೈದುರೂಪಾಯಿ ಮುರಿಕಟ್ಟನೂ ಮಾಡಿಕೊಡಬೇಕು (ಸುಪರಂ. ೬೦). [ಮುರಿ₂ (< ಮುಱಿ₁) + ಕಟ್ಟು₂]

**ಮುರಿಕಿನಾಡು, ಮುರಿಗನಾಡು, ಮುಲಕನಾಡು** (ನಾ). ಒಂದು ನಾಡಿನ ಹೆಸರು ಮತ್ತು ಅಲ್ಲಿಗೆ ಸೇರಿದ, ತೆಲುಗು ಮಾತನಾಡುವ ಸ್ಮಾರ್ತಬ್ರಾಹ್ಮಣರ ಒಂದು ಒಳಪಂಗಡ : ಇವರೊಳಗೆ ಕಾಸಲನಾಡು, ಮುರಿಕಿನಾಡು, ತೆಲಗನ್ಯ, ವಾಗನಾಡು, ವೇಲನಾಡು ಎಂದು ಐದು ಪೊಳಭೇದಗಳುಂಟು (ಕಹಾಗ. ೯೬). **ಮುರಿಗನಾಡು** : ಪಲ್ಲವಿಶೇಷಯ್ಯರ್ ಅವರು ಮುರಿಗನಾಡು ತೆಲುಗು ಬ್ರಾಹ್ಮಣರು (ಶಂಗೀತ. ೯೬). **ಮುಲಕನಾಡು** : ಅವರು ಮುಲಕನಾಡು ಬ್ರಾಹ್ಮಣರು (ಕೂಂ).

[← ತೆಲು. ಮುರಿಕಿನಾಡು, ಮುಲಿಕಿನಾಡು, ಮುಲ್ಕಿನಾಡು, ಮುಱಿಕಿನಾಡು]

**ಮುರಿಕಿಲು** 'ಮುಱುಕಿಲ್₂' ನೋ.

**ಮುರಿಕಿಸು** 'ಮುಱುಕಿಸು' ನೋ.

**ಮುರಿಕೆ₁** 'ಮುರಿಗೆ₁' ನೋ.

**ಮುರಿಕೆ$_1$**, ಮುರಿಗೆ$_2$, ಮುರುಕೆ (ನಾ). ೧. ಔಷಧೀಸಸ್ಯ; ವನಸ್ಪತಿ; ಗಿಡಮೂಲಿಕೆ: (?) ೨. ಒಂದು ಬಗೆಯ ಸಸ್ಯ: ಮುರಿಕೆಯ ಕಾಯ್ ಮುಡುವಾಗಲ್ ಬೆರಸಿದ ಮಧುವಂ ವಿಲೋಚನಂಗಳೊಳೆಚ್ಚಲ್ ಪರೆಗುಂ ಕಡವಿನ ವಿಷಮುಂ (ಜಸುಧ. ೦೬-೭೦). **ಮುರಿಗೆ$_2$** : ೨. ಜಾವನಿಗಾಲೆ . . . ಕಾಡುಪತಂಗ, ಮುರಿಗೆ (ಪ್ರಕಿಗಿ: ೪೦-೭೪೪). **ಮುರುಕೆ:** ೨. "ಮಹಾಜ್ವಾಲಿನೀ—ಮುರುಕೆಯ ಮರ" (ಓಕಂ. ೦೨೨): 'ಮುರ್ಗ್ಗಿ', 'ಮುಱುಕಿಲ್$_2$' ಪರಾ. [ ? ]

**ಮುರಿಕೊಂಬು** (ನಾ). ಮೇಲುಮುಖವಾಗಿ ಬಾಗಿಕೊಂಡಿರುವ ಒಂದು ಬಗೆಯ ಊದುವ ವಾದ್ಯ: ಒದಗಿರ್ಪ ಪರೆಕೊಂಬು ಮುರಿಕೊಂಬುಗಳ ಮೊಳಗುವ ಪದಪಿನಿಂ ಬೀಗರಂ ಕರೆದುಲಿಯುತಿತ್ತು (ಕಾಊರ. ೦೪೬-೨೦೬).
[ಮುರಿ$_1$ + ಕೊಂಬು$_1$]

**ಮುರಿಗಟ್ಟಿಗೆ** (ನಾ). ನೆಯ್ಗೆಯ ಒಂದು ಉಪಕರಣ : ಹರುಗುಣಿ ಗೂಟ ಕವಣೆಗೋಲು ಲಾಳಿಯು ಮುರಿಗಟ್ಟಿಗೆಯು . . . ನಾಲಿಗೆಗೂಟವ ನಿರದೊಂದುಳಿಯದೆ ಕಟ್ಟಿದನು (ಅಮುಶಾಂ. ೩-೩). [ಮುರಿ$_1$ + ಕಟ್ಟಿಗೆ$_1$]

**ಮುರಿಗಡಲು** (ನಾ). (ಕ್ಷೋಭೆಯಿಂದ) ಹೊಯ್ದಾಡುತ್ತಿರುವ ಸಮುದ್ರ: ಮುಂದೆ ತವಕಿಗ ಭಟರ ತೆರಳಿಕೆಯಿಂದ ಮೊಳಗಿದ ಗಭೀರಭೇರಿಯ ಮಂದರದ ಮುರಿಗಡಲ ಗಜಱಿಸೊಲೊದಱಿತುರಿಸೇನೆ (ಕುಮಾ.ದ್ರೋ. ೨-೦೪). [ಮುರಿ$_1$ + ಕಡಲು (< ಕಡಲ್$_2$)]

**ಮುರಿಗನಾಡು** ' ಮುರಿಕಿನಾಡು ' ನೋ.

**ಮುರಿಗಿನಮರ** ' ಮುರುಗಿನಮರ ' ನೋ.

**ಮುರಿಗೆ$_1$**, ಮುರಕೆ, ಮುರಗಿ$_1$, ಮುರಿಕೆ$_1$, ಮುಱಿಕ್ಕು (ನಾ). ೧. ಸುರುಳಿ ; ಸುತ್ತು : ಮಸ್ತಕಾಂಬುಜಕೆ ಮುರಿಗೆಯಾಕಾರ ಕೃತ ಕೌಶೇಯದಂಬರು ದೇಹದೊಳ್ಮುರಿಗೆಯಾಗಿರೆ ಪೊದೆದ ಶಾಲುಮದು ರಂಜಿಸು ತಿರೆ (ಮುಶಾಂ. ೦೭-೬); ಚಿನ್ನಕಾರವೆಂಬ ಜಾತಿಯು ಕಾನಡಾಜಿಲ್ಲೆಯಲ್ಲಿ ಇಲ್ಲ . . . ಕೋಡು ೧೨ ಇಂಚು; ಬುಡದಲ್ಲಿ ಮುರಿಗೆಗಳಿರುತ್ತವೆ (ಕಶಾಗ. ೬೩). ೨. ಇರಿಕೆ ; ಸಿಂಬಿ : ಇವರಲ್ಲಿಯ ಬಂಧವು ದೇವಾಲಯಗಳ ಗೋಡೆಗಳಲ್ಲಿ ಕಲ್ಲುಗಳ ಮೇಲೆ ಅಲ್ಲಲ್ಲಿ ಕಂಡುಬರುವ ನಾಗರಹಾವಿನ ಮುರಿಗೆಯಂತಿದೆ (ಗೊತ್ತುಗು. ೦೬೪). ೩. ತೋಳಿನಲ್ಲಿ ಧರಿಸುವ ಒಂದು ಬಗೆಯ ಆಭರಣ ; "ವಂಕಿ; ನಾಗಮುರಿಗೆ" (ಶಾಶಕೋ. ೩೩) : ಮುತ್ತಿನ ಚೌಕಳಿ ಮುರಿಗೆ ತಿದ್ದಿದ ಮಿಸೆ ಹತ್ತುಗಟ್ಟೇವು ಎಡಪದಕವ (ರೋಕಗೀ. ೩೬). 'ನಾಗಮುರಿಗೆ' ಪರಾ. ೪. (ಅಲಂ) ತೊಡಕು; ಸಮಸ್ಯೆ; ಗೋಜು: ಮನಸ್ಸಿನ ಮುರಿಗೆಗಳನ್ನು ಕಳೆದು ಅದನ್ನು ಸರಲ ಮಾಡಲು ಭಗವಂತನನ್ನು ಅನನ್ಯಭಾವದಿಂದ ಪ್ರಾರ್ಥಿಸಲಾಗಿರುವದು (ಶರಶ. ೪೬); ಈ ಮನಸ್ಸಿನ ಈ ಮುರಿಗೆಯೊಮ್ಮೆ ಬಿಚ್ಚಿದರೆ . . . ನಿರ್ಣಯಿಸುವದು ಸುಲಭವಾದ ಮಾತು (ಜಾಸಹು. ೩೪). **ಮುರಕೆ :** ೫. ತಿರುವು ; ಬಾಗು : ಘಟ್ಟದ ಮುರಕೆಯಲ್ಲಿ ಮುಂದಿನ ವಿರಂ ಹಿಂದಿನ ಬವ ನಿಟ್ಟಿನಲ್ಲಿಯೇ ಹೋಗುವಂತೆ ಕಾಣುತ್ತದೆ (ಸೂರ್ಯಕಾ. ೬೪); ಇವರು ರಸ್ತೆಯ ಈ ಮುರಕೆಯ ತನಕ ಮುಟ್ಟಿಸಿ ಹೋದರು (ಸುಶಿರುಕಾ. ೩೩). **ಮುರಗಿ$_1$** : ೧. ರತ್ನದ ಶಿಖರಗಳಿವೆ ಸಾವಿರ ಬಂಧನ ಮುರಗಿಗಳಿಂದ (ಳಲು. ೬೬೦). **ಮುರಿಕೆ$_1$** : ೬. ಮುದುರಿಕೊಳ್ಳುವುದು; ಸಂಕೋಚ : 'ಮುಟ್ಟಲುಮುರಿಕೆ' ಪರಾ. **ಮುಱಿಕ್ಕು :** ೫. 'ಪೆರ್ಮುಱಿಕ್ಕು' ಪರಾ.
[ಮುರಿ$_1$ + — ಗೆ./ತುಳು. ಮುರಿಗೆ]

**ಮುರಿಗೆ$_2$** ' ಮುರಿಕೆ$_1$ ' ನೋ.

**ಮುರಿಗೆಗೊಳ್ಳು** (ಕ್ರಿ). ಗೋಜಿನಲ್ಲಿ ಸಿಲುಕಿಕೊಳ್ಳು; ಸಿಕ್ಕಿನಲ್ಲಿ ಬೀಳು : ಕರುಳುಗಳು ಮರಮುಂಟ ಮುರಿಗೆಗೊಳ್ಳುವವು . . . ನೋವು ಪರಿಹರಿಸು ವವರಾರು? (ಜನ್ನ್ಸ. ೦೨೪). [ಮುರಿಗೆ$_1$ + ಕೊಳ್ಳು$_1$ (<ಕೊಳ್$_1$)]

**ಮುರಿಗೆಡಹು** (ಕ್ರಿ). ಚೂರುಚೂರಾಗುವಂತೆ ಕತ್ತರಿಸಿ ಬೀಳಿಸು : ನಾಶಮಾಡು : ಕವಿವ ಪದಾತಿ ಪೊಗುವಾನೆಗಳ ಕುದುರೆ ಪೊಂದೇರ್ಗಳ ಮುರಿಗೆಡಹಿದಂ (ಕುರಂಗ. ೩೨-೦೩).
[ಮುರಿ$_2$ (< ಮುಱ್$_1$) + ಕೆಡಹು (<ಕೆಡಪು)]

**ಮುರಿಗೆಡು** (ಕ್ರಿ). ಭಂಗವಾಗು ; ಭಗ್ನವಾಗು: ಪರಮವಾದ್ಯದ ನೆರವಿ ಮಧ್ಯದೊಳರರೆ ಖಳಪತಿ ಸುರರ ದಳಗತಿ ನೆರೆಗೆಡಲು ಮುರಿಗೆಡಲು ಬೆರವಂತುರುಬಿ ತರುಬಿದನು (ಅಂಬಿಗಾ. ೪೦-೦೨).
[ಮುರಿ$_2$ (< ಮುಱ್$_1$) + ಕೆಡು$_1$]

**ಮುರಿಗೆಡೆ** (ಕ್ರಿ). ೧. ತಿರುಗು; ಹೊರಳು: ಊರ ಹೊಗುವದರಱಿದಱಿದು ಹೆಮ್ಮಾರಿಯನು ಕೇಡಾಯ್ತೆನುತ ಧವಳಾರಗೋಪುರದೇಱಿಕೆಯ ನೋಟಕರು ಮುರಿಗೆಡದು ದೂರದಲಿ ನಿಂದಿಹರು (ಕೂರಗಾ. ೩-೭-೧೬). ೨. ಹಿಮ್ಮೆಟ್ಟು; ಹಿಂಜರಿ : ಗರುಡನ ಗಱಿಯ ಗಾಳಿಗೆ ಫಣಿಗಳ ಮೊತ್ತ ಮುರಿಗೆಡೆದೋಡು ವಂದದಲಿ ನರಸರಾಜೇಂದ್ರನ ಸಾಹಸದುಬ್ಬುಬೆಗೆ ತುರುಕರೋಡಿದರ್ದೆಸೆದೆಸೆಗೆ (ಕೆಂಶಂ. ೦೩-೦೦೪). [ಮುರಿ$_1$ + ಕೆಡೆ$_1$]

**ಮುರಿಗೇಶ** (ನಾ). ಡೊಂಕುಡೊಂಕಾಗಿ ಬೆಳೆದಿರುವ ಕೂದಲು ; ವಕ್ರವಾಗಿರುವ ಕೂದಲು : ಲೋಹದ ಕೋರಗಂಭಂಗಳೊಳಗೆ ಮುರಿಗೇಶದಿಸೆಸೆವ ಶಬರರ ತಲೆಗಳೋಳಿಯಂತೆ ರಕ್ತಚಾಮರಂಗಳ ಸೊಳಕೆಯ್ದು . . . ಚಂಡಿಕಾಗೋಪುರದ್ವಾರಪುರೋಭಾಗದೊಳ್ . . . ಅವತರಿಸಿ (ಗಾದಂಗಾ. ೨೬೪). [ಮುರಿ$_3$ (< ಮುರಿವು) + ಕೇಶ]

**ಮುರಿಚು**, ಮುರುಚು (ಕ್ರಿ). ೧. ತಿರುಗಿಸು; ತಿರುವು; ತಿರುಚು: ಸೆಳೆದು ಮುರಿಚುವ ತಿರುಚುತಾಕ್ಷಣ ಹೊಳಕಿ ತೊಡಚುವ ಬಾಹು ಬಗೆಯ (ಅಂಬಿಗಾ. ೦೬-೨೬). ೨. ನೂಕು; ತಳ್ಳು: ಕಡೆಯ ಝಣಝಣರವ ಮುಸಲವನೊಡನೆ ಹೊಱವಂಟರು ನೃಪಾಲಕನೊಡನೆ ಮುರಿಚಿದರು ಹಿಡಿವ ಸಚಿವ ಪ್ರಾಯ್ತ ಮಂತ್ರಿಗಳ (ಕುಮಾ.ಸ. ಒಂ೩. ೪-೪೬). **ಮುರುಚು :** ೧. ಮದಮುಖನ ಭುಜಬಲವ ನೋಡುವವಿದು ವಿಕಾರವಲಾ ಎನುತ ಮುರುಚಿದನು ಬಲ ಬಲಗಯ್ಯಸುರವಣಿಸಿದನು ವಾತಿಮಲಿ (ಕುಮಾ.ಗ. ೬-೩೦) : ಅರರೆ ಸುರಪನ ಪಟ್ಟದಾನೆಯ ತರುಬಿ ಹಿಡಿಹಿಡಿ ಕಾಲನಡಗನು ಮುರುಚಿ ಕೊಯ್ತ್ ಕೊಯ್ತ್ (ಅಂಬಿಗಾ. ೨೬-೬). ೨. ಉರೆ ತಡೆದರವರುದೊಬ್ಬರೊಬ್ಬರು ಮುರುಚಿ ಕರತಳವ (ಅಂಬಿಗಾ. ೩೪-೪೪). ೩. ನುಣುಚಿಕೊಳ್ಳು ; ತಪ್ಪಿಸಿಕೊಳ್ಳು : ಕೈಯ್ಯ ಹಿಡಿವರೆ ಅಂತು ಮುರುಚುವೆ ಎನ್ನ ಉರದಲಪ್ಪಿ ಹಿಡಿವಡೆಂತು ಮುರುಚುವೆ (ಕೂಕ್ಕಸಂ. ೪೬-೩೦).

**ಮುರುಚಿಕೊಳ್** = ನುಣುಚಿಕೊಳ್ಳು ; ತಪ್ಪಿಸಿಕೊಳ್ಳು : ಬಲು ನಾಯ ಬಾಯಿಂದ ಮುರುಚಿಕೊಂಡೋಡುವ ಮೊಲಂ (ಹಕಗಾ. ೩-೨೬) ; ದ್ರುಪದಸುತೆಯನ್ನು ಹಿಡಿದೆಳೆಯಲ್ಕೆ ಬಲ್ಮೆಯಿಂ ಹೊಗಾಗಿ ಖಳನನ್ನುಕ್ಕಿ ಮುರುಚಿಕೊಂಡಳಲಿದಳು (ಕುರಂಗ. ೨೩-೩). [ಮುರಿ$_1$ + —ಚು$_1$]

**ಮುರಿತ$_1$** (ನಾ). ೧. ಬಗ್ಗಿದುದು ; ಬಾಗು : ನಳಿ —. ಮುರಿತಂ (ಕಾಕಳ. ೩೦). ೨. ಕೊಂಕುನಡೆ ; ವಕ್ರಗತಿ : 'ಇಂಗ್ಲಂಡ ನಾವಿಕರು' ಎಂಬ ಕವನದ ಛಂದದೋಜಸ್ಸು, ಮುರಿತ, ತಿರುಪುಗಳ ಅಂದ, ಗಮಕದಿಂದಲೇ ಪ್ರಕಟವಾಗಬೇಕು (ಬಾಶಮ. ೦೨೬). [ಮುರಿ$_1$ + —ತ$_2$]

**ಮುರಿತ$_2$** ' ಮುಱಿತ ' ನೋ.

**ಮುರಿತಾಪ** ' ಮುರುತಾಪು ' ನೋ.

**ಮುರಿದಲೆ** (ನಾ). ವಾಲಿಸಿರುವ ತಲೆ ; ಓರೆ ಮಾಡಿದ ಶಿರಸ್ಸು : ಜಡಿವ ಓರಿಯುಬ್ಬಣದ ಹೆಚ್ಚಿದ ಮುಡುಹುಗಳ ಮುರಿದಲೆಯ ಚರಣದ ತೊಡರ ಮೊಳಗಿನ ಬಾವುಲಿಗಳಲಿ ಘಣಘಣಧ್ವನಿಯ . . . ದಡಿಗ ದಾನವಸಮನಿ ಹಚ್ಚಿಗೆ ಸೆಗ್ಗಲೈತಂದ (ಕುಮಾ.ದ್ರೋ. ೦೩-೪೪).
[ಮುರಿ$_1$ + ತಲೆ$_1$]

**ಮುರಿದಿಟ್ಟಿ** (ನಾ). ಓರೆನೋಟ ; ಕೊಂಕುನೋಟ : ತರುಣ ಹರಿಣಗಣಕ್ಕೆ ಸರಸೇಕ್ಷಣದ ಸವಿನೋಟಮನುಪದೇಶಿಪ್ಪಂತೆ ದೆಸೆವಡೆದು ಮುರಿದಿಟ್ಟಿ ಪರಿದಿಟ್ಟಿ ನೆಟ್ ಮೆಟ್ಟೆಯೆ (ರಾಜಶೇ. ೧-೦೩೫ ವ). [ಮುರಿ$_1$ + ದಿಟ್ಟಿ]

**ಮುರಿನೋಟ** (ನಾ). ೧. = ಮುರಿದಿಟ್ಟಿ : (ತಮತಮಗೆ ಮುರಿನೋಟವನ್ನಾಡಿಸಿ, ನಕ್ಕುಬಿಡುವರು) (ಮಂತ್ರಶ. ೩೯-೧೭). ೨. (ಅಂತರಂಗದ ಕಡೆಗೆ) ತಿರುಗಿಸಿದ ದೃಷ್ಟಿ : ತನ್ನಚ್ಚಿಯ ಮುರಿನೋಟದ ವಿಶ್ರಾಂತಿಯೆಡೆಯಿದೆನೆ ನೀಳ್ದ ನಾಸಾಪುಟಂ ರಂಜಿಸೆ (ರಾಮಾಶ್ವ. ೪೦-೨೨). [ಮುರಿ$_1$ + ನೋಟ]

**ಮುರಿಪಾತ್ರೆ** (ನಾ). ಬಾಗಿರುವ ಹಿಡಿಕೆಯುಳ್ಳ ಪಾತ್ರೆ : ಕಮಂಡಲ : ಲೋಹದಿಂದೆ ವಿರಚಿಸಿದ ಮುರಿಪಾತ್ರೆಯುಂ ಕುಂಡಲಂ ತನ್ನ ಕರದಿನಗಲದ ಶಾಂತಮಲ್ಲಿಕಾರ್ಜುನಲಿಂಗಮುರುಪ್ರಣವಮಂತ್ರಮಾ ಋಗ್ವೇದಮಾತುಳ ಕೇಸರಿವಾಹನಂ ಕೇಳ್ವುದು (ಚೆಬಶ್ರು. ೩೯-೨೨). [ಮುರಿ$_1$ + ಪಾತ್ರೆ]

**ಮುರಿಪು$_1$**, ಮುರಿಹು, ಮುರುಹು$_1$ (ಕ್ರಿ). ೧. (ಮುಷ್ಟಿಯಲ್ಲಿ ಹಿಡಿದು) ನುಲಿ; ತಿರುಚು;ಹಿಂಡು : "ಮುರಿಪು– ಮುಷ್ಟಿ ಘ್ರಮಣೇ" (ಶಮದ). ೨. ಬಾಗಿಸು ; ಬಗ್ಗಿಸು : ಮುರಿಪಿದ ಕರಂಬಾಸಿಗದೆರಡುಂ ಕಡೆಯುಂ ವಿಳಾಸವತಿ ಪಿಡಿದೆರಡುಂ ಕ ರ ದಿ ನ ಮು ಕ ರಿ ಸಿ ದಳ್ ಸುರಶರಾಸನಶ್ರೀಯುಮನಾಳ್ದ ಗಗನಶ್ರೀಯುಂ (ಚಂದ್ರಪ್ರ. ೧೭-೭೯). **ಮುರಿಹು:** ೧. ವಸ್ತ್ರಕುಳಮನಲ್ಲಿ . . . ಏಕನಿಷ್ಠೆಯಿಂದ ತಿರಿಹಿ ಮುರಿಹಿ ಹಿಳಿದು ಹಿಂಡಿ (ತಿರುಕೊಂ. ದೇ. ೨೩೩-೦೦). **ಮುರುಹು$_1$** : ೧. ಬಯ್ದು ಸುಯ್ದು ತೆಗೆಯಲಲ್ಲಿ ತಿರುಹಲ್ಲಿ ಮುರುಹಲಲ್ಲಿ ಮಾಳಿಗಳೊಳಗೆ (ತಿರುಕೊಂ. ದೇ. ೨೩೭-೦೩) ; ಸಾರಥಿ ತುಡುಕಿ ವಾಘೆಯ ಮುರುಹಿ ಮರಳಿಚಿ ರಥದ ಕುದುರೆಗಳ ತಡಿಯುದಶ್ವತ್ಥಾಮನಲ್ಲಿಗೆ ನಡೆದು ಬರುತಿರೆ (ಕುಮಾ.ದ್ರೋ. ೦೯-೫): ಮುರುಹಿ ಹಿಡಿಯಲು ಮಡದ ನನ್ನಿಗೆ ತಿರುಗಿತತಿವೇಗದಲಿ ಹಯವು (ಸಳತ. ೭-೭). ೨. ಬೆರಳ ದರ್ಭೆಯ ಹಜೆಯ ಬಿಸುಟನು ಜೋಡುಸೀಸಕ ಬಾಹುರಕ್ಷೆಗಳ ಮುರುಹಿ ಬಿಗಿದನು (ಕುಮಾ.ದ್ರೋ. ೯-೦೫). ೩. ಪಕ್ಕಕ್ಕೆ ತಿರುಗಿಸು, ಹೊರಳಿಸು : ಸರಸು ಕಳುಹಿಸಿ ಕೊಳಲು ಗುರುವೋಪರವನಪಸವ್ಯದಲಿ ವಂಚಿಸಿ ಮುರುಹಿದನು ಮುರವೈರಿ ರಥವನು ಮುಂದಣೊಡ್ಡಿಂಗೆ (ಕುಮಾ.ದ್ರೋ. ೧೦-೦) ; ಮುರುಹುವೆ ಮುಸುಡ ನೇತಕೆ ಹೇಳುವೆವು ಪಾತಕವಿಘಾತಕವ (ಸಿದ್ಧಾಗ. ೬-೧೨-೪). ೪. ಕೊಂಕಿಸು ; ಸೊಟ್ಟಮಾಡು : ಪಾಂಚಾಲ ಮತ್ಸ್ಯರು ಹಲರು ನಡೆಮುದೆ ಮಾರ್ಗವೆಂದೇ ಮುರುಹಿದರು ಮುಖವ (ಕುಮಾ.ಭೀ. ೯-೨೬). ೫. ಹುರಿಗೊಳಿಸು ; ಹೊಸೆ : ಮುರುಹಿದನು ಮೀಸೆಯನು ಕಣ್ಣುಗಳರಳಿದವು (ಕುಮಾ.ದ್ರೋ. ೦೯-೦೩) : ತಿದ್ದಿ ಮೀಸೆಯ ಮುರುಹಿ ರಕ್ಕಸನೆದ್ದು ನಿಂದಿದ್ದನುಚರರ ಬಿಡಪದ್ದಲಿಸೆ (ತೊರವೆ. ೫-೬-೩). ೬. ಬಾಗು ; ಬಗ್ಗು : ಮುರುಹಿ ನಿಂದವು ಕೊಡಹಿದವು ಕೇಸರವನಧ್ವರ್ತ್ರುಮದಘಗೆ ಪರಿಪರಿಸೆ ನೀರೊಳು ಮೊಗಸಿದನು ಹರಿಹಯಚತುಷ್ಟಯವ (ಕುಮಾ.ದ್ರೋ. ೧೦-೩೯). [ಮುರಿ$_1$ + — ಪು$_1$]

**ಮುರಿಪು$_2$**. ಮುರುಪು, ಮುರುಹು$_2$ (ನಾ). ೧. ಹಿಮ್ಮೆಟ್ಟುವಿಕೆ : ಹಿಂಜರಿತ : ಹಿನ್ನಡೆ : "ಮುರಿಪೆನೆ ಮರಳಿದ ಭಾವಂ" (ರನ್ನಕಂ. ೨). ೨. ಯುದ್ಧ ಮಾಡುವಾಗ ಬಳಸುವ ಗತಿಗಳಲ್ಲಿ ಒಂದು ; ಸುತ್ತು ತಿರುಗುವುದು : ಆವರ್ತನೆ : ಬೆರಸಿ ಪೊಯ್ದಾಡಿದುದು . . . ಕೈದುಗಳೊಳು ಕರಚಮತ್ಕಾರ ಲಾಘವ ಲವಣಿ ಪಯಪಾಡು ಮುರಿಪು ವ್ಯಾಲುಂಠ ಲಾಗು ಲವಣಿ ಲಕ್ಷ್ಯಂಗಳಿಂ ಘುರದೊಳೇಜಂ ತೋಜ್ ಮಿಾಜು ತತಿಬಲದಲ್ಲಿ ನಾನಾಪ್ರಹಾರದಿಂದೆ (ಚೆಬಶ್ರು. ೩೬-೩೬). **ಮುರುಪು** : ೨. ಬಹುಲಾಗುವೇಗದಿಂ ತಿರುಪು ಮುರುಪುಗಳಿಂದ ಪೊಯ್ದಾಡಿ . . . ಕಾದಿದರು ಬಾತ್ರಿಯಿಂದುಭಯಭಟರು (ತುರಂಗ. ೩೩-೨೪). **ಮುರುಹು$_2$** : ೩. ಸುತ್ತು : ಬಾಗು : ತಿರುವು : ಹಿರಿಯ ಭವನದ ಸುತ್ತುವಳಿಯುದ ಮುರುಹಿನಲಿ ಮನೆಮನೆಗಳಾ ಮಂದಿರನಿಕಾಯಕೆ ಬಾಗಿಲೊಂದಾದ್ವಾರದೇಶದಲಿ (ಕುಮಾ.ಆ. ೬-೭೦) ; ಕೋಟೆಯಿದ್ದುದು ಮುಂದೆ ಶಿವನ ಕರೋಟಿಮಾಲಾವಳಿಯುದಪ್ಪೊಲುಜ್ ಪಾಟಿಸಿದ ಕೊತ್ತಳದ ಮುಗಿಲಟ್ಟಳೆಯ ಮುರುಹಿ[ಶಾತಾಂ.ವಿ]ನಲಿ . . . ವಿವಿಧರಚನೆಯಲಿ (ತೊರವೆ. ೫-೨-೪). ೪. ನದಿಯ ಹರಿಯುವಿಕೆಯಲ್ಲಿರುವ ಬಾಗು, — ಮುರಿವು : ಚಕ್ರಾದಿಯೆನೆ ನೀರ ಮುರುಹಕ್ಕು (ಮಂಗರಾ. ೦೨೩-೦೩). ೫. ಕಿವಿಗೆ ಹಾಕಿಕೊಳ್ಳುವ ಒಂದು ಬಗೆಯ ಆಭರಣ ; ಮುರು : ಬೆಂಡೋಲೆ ಮುರುಹು ಮಾಗಾಯ್ . . . ಉಡಿದಾರಂ ಭೂಮಂಡಲಪತಿಯಾತ್ಮಜಂಗೆ ರಂಜಿಸುತಿರ್ಕುಂ (ದಶಕು. ೨-೭೩) ; ಬೆಳ್ಳಿ ಮುಂತಿ ಮುರುಹು ತಾಂಬ್ರಂ ನಲ್ಲ ಲೋಹಂ ಕಂಚು ಮೊದಲಾದೆಲ್ಲವಂ ಒಟ್ಟೈಸಿ ತರಿಸಿ (ದಶಕು. ೦೭-೬). ೬. [ನಾಟ್ಯ] ವೃತ್ತಾಕಾರವಾಗಿ ಸುತ್ತುವ ಒಂದು ಭಂಗಿ : ಮುರುಹು ತಿರುಪು . . . ಕರಣ ಭ್ರಮರಿಗಳನಜಿದು ತರುಣಿ ರಂಗಸ್ಥಳದಲಿ ನರ್ತಿಸಿದಳು (ಜೀವಂಧರಾ. ೯-೯೪) ; ಮುರುಹು ಗುಂಡಾಲಿಮೆಣಿಪ್ಪಡಹುಗಳನು (ಲೀಪಂ. ೩೨-೪೬). [ಮುರಿ$_1$ + — ಪು$_2$]

**ಮುರಿಬಡಿ** (ಕ್ರಿ). ಹಿಂಜರಿಯುವಂತೆ ಮಾಡು ; ಹಿಮ್ಮೆಟ್ಟಿಸು : ದಂಗೆ ಎಬ್ಬಿಸಿದ್ದ ಸಾಮಂತರನ್ನೂ ವಿಜಯಾಕಾಂಕ್ಷಿಗಳಾದ ಶತ್ರುಗಳನ್ನೂ ಮುರಿಬಡಿದು . . . ಅಧಿಪತಿಯಾದನು (ಕನಾಗಳ. ೫೭). [ಮುರಿ$_1$ + ಬಡಿ$_1$]

**ಮುರಿಮಲಕು** (ನಾ). (ಬಟ್ಟೆಯನ್ನು) ತಿರಿಚಿ ಹಾಕಿದ ಗಂಟು : ಕಳಶಜಲದಲಿ ಮಿಯ್ಯ ನೆತ್ತರ ತೊಳೆದು ಪೊಸಮಡಿವರ್ಗದಲಿ ಮುರಿಮಲಕ ಬಿಗಿದನು (ಕುಮಾ.ಶ. ೨೪-೩೪). [ಮುರಿ$_1$ + ಮಲಕು$_2$]

**ಮುರಿಮಿಾಸೆ** (ನಾ). ಹುರಿಮಾಡಿದ ಮೀಸೆ : ಹೊಸೆದ ಮೀಸೆ : ನಿಡಿಯೊಡಲ ಮುರಿಮೀಸೆಗಳ ಕೆಂಪಡರ್ದ ಕಂಗಳ. ಹೊಳೆವ ದಾಡೆಯ ದಢಿಗದಾನವನವನಿ ಹಜ್ಜೆಗೆ ನೆಗ್ಗಲೈತಂದ (ಕುಮಾ.ದ್ರೋ. ೧೫-೪೪) ; ಸರಸ ಸಂಗೀತವೆ ತಡವಾಡಬೇಡಮ್ಮ ಭರತರಾಜೇಂದ್ರನ ಮೊಗದಾ ಮುರಿಮೀಸೆಯಂತೆ ಮೋಹಿಸುತ ಬಾ ಬಾರೆಂದು ಕರೆವುತ ನಗುತ ಹಾಡಿದಳು (ಭರತ. ೧೧.೭೦). [ಮುರಿ$_1$ + ಮೀಸೆ]

**ಮುರಿವಡೆ** (ಕ್ರಿ). ಹೊಸೆದುಕೊಂಡಿರು ; ಹುರಿಯಾಗಿರು : ಮುರಿವಡೆದ ಮೀಸೆಗಳ ಮಹೋಳಿಯ ಮಣಿಕಿರೀಟಗಳಾ ಥರಥರದ ರತ್ನಪ್ರಭಾಬಂಧುರದ ಹೊರಳಿಯುಳಿಯುಲಿತಿಸಿಂಗರಮೆಸಗೆ (ಅಮರಾ. ೫-೨-೧೦). [ಮುರಿ$_2$ + ಪಡೆ$_1$]

**ಮುರಿವು**, ಮುರ$_1$. ಮುರಪು$_1$. ಮುರಿ$_3$, ಮುರು$_1$. ಮುರುವು$_1$ (ನಾ). ೧. ಬಳುಕು ; ಕೊಂಕು : ಹರಿದು ಹುಬ್ಬಿನ ಬಳ್ಳಿವೆಳಗಿನ ಮುರಿವು ಮಂಡಳಿಸಿದುದು (ಕುಮಾ.ಭೀ. ೬-೩೩). ೨. ಬಾಗಿರುವುದು ; ತಿರುವು ; ಬಾಗು : ಹರಿಯ ಪೀಥಿಯ ಸೋಮವೀಥಿಯ ಮುರಿವುಗಳ ಕೇರಿಗಳ ನೆಲೆಯುಪ್ಪರಿಗೆಗಳ ಹೊಂಗೆಲಸದಲಿ ಹೊಳೆಹೊಳೆದುದಾ ನಗರ (ಕುಮಾ.ಆ. ೦೮-೧೦) ; ಸೋಮ ಸೂರ್ಯರ ವೀಥಿ ಕೇರಿಗಳ ಮುರಿವುಗಳ ಮಣಿಮಯದ ರಚನೆಯಿಂ ಹೊಳೆಹೊಳೆದು ಸುರಪುರಿಗೆ ಹರಸುವಿನ ಪುರಿಗೆ ಮಿಗಿಲೆನಿಸಿತದು (ತುರಂಗ. ೦೪-೦೯). ೩. ಡೊಂಕು ; ವಕ್ರತೆ : ಮಾತಿನ ಮುರಿವುಗಳು ಗೆಲ್ಲವಲೆ ನೀ ನೆಟ್ ನೋಡು ಕೈಗುಣವ (ಕುಮಾ.ದ್ರೋ. ೧೦-೫೩). ೪. ನದಿ ಮೊದಲಾದ ಜಲಾಶಯಗಳಲ್ಲಿರುವ ಸುಳಿ,— ಚಕ್ರ : "ಚಕ್ರಾದಿ, ಪುಟಭೇದಃ—ಈ ೨ ತೋಯದ ಮುರಿವು" (ಹಲಾಯು. ೧೧೦-೪೯) ; ಮೊಜ್‌ಮೊಜ್ ಘೂರ್ಮಿಸುವ ಪರಿವುಗಳ ಮುರಿವುಗಳ . . . ಮುನಿಜನಂ ಸೇವಿಸುವ ಭಾವಿಸುವ ಗಂಗೆಗವನಿಜೆ ಬಂದಳು (ಕೃಮಿಶಾ. ೦೯-೫). ೫. ಲೋಹದ ತಂತಿಯನ್ನು ಬಾಗಿಸಿ ಮಾಡಿರುವ, ಕಿವಿ ಅಥವಾ ಮೂಗಿಗೆ ಹಾಕಿಕೊಳ್ಳುವ ಒಂದು ಬಗೆಯ ಒಡವೆ : ಉಡಿಗಂಟೆ ಮುರಿವು ಮಾಗಾಯ್ . . . ಅಂದುಗೆ ಕಡುಚೆಲ್ವಾಗಿಪ್ಪ

ಸುತನಡಂಗಿದಂ (ದಕಳು. ೫-೬೫). ೬. ಓಂಜರಿತ : ಹಿಮ್ಮೆಟ್ಟುವಿಕೆ ; ಹಿಂದೆ ಸರಿಯುವಿಕೆ : ಸಿಂಗದ ಮುರಿವುಂ ಮೇಷದ ಪಿಂಗುಂ ನಯವಿದರ ವಿನಯಮುಮಿಂತಿವು ಮೂಱುಂ ಭಂಗಮೆನಿಸಲ್ಕೆ ಪಡೆಯವು (ಶಂಕಕಂ. ೨೬೮-೯); ಇಂದಿನೀ ಮೋಹರದ ಮುರಿವಸದಳ ನಿಧಾನಿಸಲರಿದು (ಕುವ್ಯಾದ್ರೋ. ೯-೨೬). ೭. ಆವರಿಸುವಿಕೆ ; ಸುತ್ತುವರಿಯುವಿಕೆ ; ಆವರಣ : (ಕ). ೮. ಸುತ್ತಿರುವುದು ; ಸುತ್ತು ; ಸುರುಳಿ : ಮಿಸುಪ ಮೊಳೆಗಳ ಮುರಿವುಗಳ ನೇಣವಸೆಯು ತೊರಳೆಯ ತೊಂಗಲಿನೊಳಂದೆಸೆವ ಚಕ್ರವ ನೋಡಿದನು ದೈತ್ಯಾರಿ ಕೋಪದಲಿ (ಕುವ್ಯಾಶೀ. ೬-೫೨). ೯. ಕುಗ್ಗುವಿಕೆ ; ಕುಸಿತ : ಇದಿರುವಂದು ಸುಮಂತ್ರನಿಳಿಗೆಳುಹಿದನು ಮನಕರಿಯಿಂದ ಮುರಿವಿನ ಮುಂದದ ಮೊಳೆಪಶ್ರುಗಳ ಸಂತಾಪದಲಿ ರಘುಪತಿಯು (ತೊರಣ. ೨-೨-೨೯). ೧೦. (ಕಣ್ಣು) ಮುಚ್ಚಿಕೊಳ್ಳುವಿಕೆ : ತಾರಕೆಯು ಮುರಿವುಗಳು ಕಾಣಿವ ಸಮಿರಣನ ಶಶಿಯೆಡೆಗೆ ರಜನೀನಾರಿ ತೋಳೆಡೆಗೊಟ್ಟ ಳಂಬುಜಬಂಧು ಹೊಱವಂಟ (ಕುವ್ಯಾದ್ರೋ. ೧೬-೯೫). ೧೧. (ಮನಸ್ಸಿನ) ಓಲುವಿಕೆ ; ತೊರಳುವಿಕೆ ; ಓಲಾಟ : ಚಿತ್ತದ ನೆಲೆಯುಱಿದು ನೆಮ್ಮುವುದು ಮುರಿವಿನ ಪೊಳವಱದು ಹಿಂಗುವುದು (ಕುವ್ಯಾಶ. ೧೫-೨೯). ಮುರ₁ : ೫. ಕಿವಿಯಲಿ ಹೊನ್ನಿನ ಅಗಸೆಯ ಹೂ, ಮುರ; ತಲೆ ಮೇಗಡೆ ಪಾಗು (ರಾಮಶ. ೬-೦). ಮುರವು₁ : ೫. "ಮುರವು (ಮುರುವು) —ಕಿವಿಯ ಆಭರಣ" (ಬಾವಕೋ. ೬೬). ಮುರಿ₃ : ೨. ಮುರಿಗಳಂ ರಘುರಿಗಳಂ ಕಳೆದಿವರು ಏರಿ ಕಂಡರು ಮೇಲಿಕಂ ಪರಿವ ಸುರನದಿಯನು (ತುರಂಗ. ೯೯-೨೬). 'ಬಲಮುರಿ' ನೋಡಿ. ೩. "ಕರಾಭರಣ ವಕ್ರತೆ ಬಲೀವರ್ದ ಸಮುಕಟ್ಟುಗಳೊಳಂ ಮುರಿಯುಲಾ" (ಕದ್ರಿವಂ. ೦೦೬). ೫. ಬಾಲನ ಕಿವಿಗೇ ಕಡಕುಂಟು ಮುರಿಯುಂಟು (ಪುಟ್ಟಿಹ. ೦೦೦). ೧೨. ಗೆರೆ ; ರೇಖೆ : 'ಮುಮ್ಮುರಿ₂' ನೋಡಿ. ೧೩. ಧಾರೆ ; ಹೊನಲು : ಬಿಂಜವೆಟ್ಟನಿಱತರ್ಪ ಶೋಣಾನವದೆರಡುಂ ಪೊನಲೆಂಬಂತಿರೊಂದು ಪುತ್ರಿನತ್ರಣಂ ಕವಲ್ವಿವ ನೆತ್ತರ ಮುರಿಯುಂ . . . ನೋಟ್ಪುದುಂ (ರಾಮಾಶ್ವ. ೬೬-೦೯). ೧೪. ಕೈಗೆ ತೊಡುವ ಒಂದು ಬಗೆಯ ಆಭರಣ : ಪಸ್ಯದ ಮುರಿ ಮಣಿಮುಯದುಡಿದಾರ ಬೆರಳುಂಗುರ ಗೆಜ್ಜೆಯುಂಮುಗೆ ಮೊಱದುವಾ ಭರತ ರಾಜೇಂದ್ರನಾತ್ಮಜಗೆ (ಭರತ. ೨೫-೨೫). 'ಮುಂಗೈಮುರಾರಿ' ನೋಡಿ. ೧೫. ಕಬ್ಬಿನ ಗಾಣದಲ್ಲಿ ಯಂತ್ರಕ್ಕೆ ಅಳವಡಿಸುವ ಕಬ್ಬಿಣದ ಬಳೆಯಾಕಾರದ ಒಂದು ಬಗೆಯ ಸಾಧನ : (ಕ). ೧೬. ಎತ್ತು, ಕುದುರೆ ಮೊದಲಾದುವುಗಳ ತಡಿಯ ಬುಡದಲ್ಲಿ ಹಾಕುವ ಉಣ್ಣೆ ಅಥವಾ ತುಪ್ಪಳಿನ ಮೆತ್ತೆ : (ಕ). ೧೭. ಮಲ್ಲಯುದ್ಧದ ಒಂದು ಪಟ್ಟು.—ವರಸೆ : ಘುಲ್ಲಾಬ್ಜನಯನಂ ಜಲಂಧರಂ ಸಾಮಾನ್ಯರಲ್ಲ ರವದಿರು ಲವಣ ಲಾಗು ಮುರಿ ಮೊದಲ ಬಗೆಯಿಂದ ಹೋಗುತ್ತಿರ್ದರು (ಬೀಕ್ಕಪ. ೨-೦೨-೯೦). ಮುರು₁ : ೫. "ಮುರು . . . ಕಿವಿಯೋಲೆ. ಕರ್ಣಾಭರಣ" (ಕಸೂಕೋ. ೬೫೬). ಮುರುವು₁ : ೨. ಮೂಡಲ ವಿಲ್ಲ ಹಳ್ಳದ ಮುರುವಿನಲ್ಲಿ ನೈರಾತ್ಯದ ಕೋಣೊಳ್ ನಟ್ಟ ಕಲ್ (ಮುಂಬರಾ. X. ೨೨೬-೫೬ ; 1205) ; ಕಿಬ್ಬಯಲ ಮುರುವಿನ ಇಂನೆಸಱ ನಟ್ಟ ಕಲ್ಲಿಂದ ಬಡಗ (ಎಕ. XII. ತಿಪಟೂ. ೯೨-೯೦ ; 1229). ೪. ಒಂದರ ತರುವಾಯ ಒಂದರಂತೆ ಮೂರು ವರ್ಷ ನದಿಯು ಮಣಿದು ಮುರುವಾಗಿದ್ದ ಮೆಟ್ಟಿನಲ್ಲಿ ಮಿನಗಳು ತೀರ ಕಷಮೆ ಬಂದವು (ಇಕ್ಕೆ. ೯೦೫). ೫. ಮಾಲೆ ಮುರುವು ಬಾವುಲಿಗಳಲ್ಲಾಡುವಂತೆ (ಸೌಗಂಧಿ. ೨೦೬-೦೮). ೧೭. ಹುದು ಬೇಹಿನ ಚರರು . . . ಕಟಕದ ಗಜಬಜವನಲ್ಲಲ್ಲಿ ಮಾಣಿಸುತ ನೆರವಿ ನಗೆಗೆಡೆಯಾಗೆ ಮುಸುಕಿನ ಮುರುವಿನಲಿ ಪಾಳಯವ ಹೊಕ್ಕರು (ಕುವ್ಯಾದ್ರೋ. ೮-೯೮); ಪಟುಭಟರು ತಿರುವಿನೊಳ್ ಮುರುವಿನೊಳ್ ಹುರಿಕಟಿಸಿ ಬೊಬ್ಬಿರಿದು ಮಾರ್ವಲೆತರು (ತುರಂಗ. ೫೬-೫೫). [ಮುರಿ₁ + — ವು]

ಮುರಿವೋಗು (ಕ್ರಿ). ವಕ್ರತೆಯನ್ನು ಹೊಂದು : ಬಾಗುವಿಕೆಯನ್ನು ಪಡೆ : ಹೊಗೆ ಮರುತನಿಂದ ಮುರಿವೋಗಿ ಬಸದೆಡೆಗೆ ತೆರಳೆ ಬರ್ಪ ವಿಧಿಗಳ ಪರಿಪೂತವೆಂದೆನಿಸಿ ಸಂದುದಂದು (ಬಂಬಾ. ೦-೯೩).
[ಮುರಿ₂ + ಪೋಗು₁ (<ಪೋ₁)]

ಮುರಿಸು₁ 'ಮುಱಿಯಿಸು' ನೋ.

ಮುರಿಸು₂ (ನಾ). ವಕ್ರ ; ಡೊಂಕು : ಅಷ್ಟಾದಿಡ್ಡಿ : ಆ ಬೊಕ್ಕಸಿಂಗನ ಕ್ರೂರಾಸಿವಿಘಾತಿಯಿಂ ಸದಾಶಿವನಾಯಕಂ . . . ವೆಗಲ್ವಿಡಿದು ನಡುವೆನ್ನಂ ಬರಂ ಮುರಿಸಾದ ಮಸೆದೋರಲಾಗಳಾ ಗಾಯಮಂ ಸ್ಮರಿಸಿ (ಕೆಳದಿ. ೨-೮).
[ಮುರಿ₁ + — ಸು₃]

ಮುರಿಹ (ನಾ). ತಿರುಚುವಿಕೆ ; ನುಲಿತ : ಮೊಲನಂತೆ ಬಡಿಹಕ್ಕೆ ಮಂದು ಮುಡಿಯಂತೆ ಮುರಿಹಕ್ಕೆ ಮಂದು (ಧರ್ಮಾಮ್ಯ. ೩-೬೬).
[ಮುರಿ₁ + — ಹ₂ (<—ಪ₂)]

ಮುರಿಹು 'ಮುರಿಪು₁' ನೋ.

ಮುರು₁ 'ಮುರಿವು' ನೋ.

ಮುರು₂ 'ಮುರುವು' ನೋ.

ಮುರುಂಗಿ (ನಾ). ಒಂದು ಬಗೆಯ ಸಸ್ಯ : ನುಗ್ಗೆ : "ಮುರುಂಡ–ಮುರುಂಗಿ, ಸಿಗ್ರುಡಿತೆ. ಕಾಡನುಗ್ಗಿ" (೬ಕಂ. ೦೫೩). [ಸಂ. ಮುರುಂಗೀ]

ಮುರುಂಟಿಸು, ಮುರುಟಿಸು₁ (ಕ್ರಿ.) ೧. (ಚಳಿ, ಭಯ ಮುಂತಾದುವುಗಳಿಂದ) ಕುಗ್ಗಿಸು ; ಮುದುಡುವಂತೆ ಮಾಡು ; ಮುದುರಿಸು : ಉಱೆ ಹಿಮಂ ನೆನೆವ ಮನಮ ಮುರುಂಟಿಪುದಯ್ಯೊ (ಸಾಸಂತ. ೯-೦೨೬ ರಗಳೆ) ; ಚಿತ್ತದೊಳಾಕುಳೆ ಸುಯ್ಯು ಸುಯ್ಲಿನಿಂ ತನ್ನ ಕರಾಗ್ರಮಂಕಜ ಮನೆಯ್ದೆ ಮುರುಂಟಿಸುತಿರ್ಪಳಾವಗಂ (ಚಾರಪು. ೩-೮). ಮುರುಟಿಸು₁ : ೧. ಮುತ್ತಿ ನೆರೆತಿಹ ಜೀವಜಾಳರಿಗೆತ್ತಿ ಕಾಮುಗ್ರಹವಿಕಾರತೆ ಮುತ್ತಿ ಮುರುಟಿಸುತಿರ್ದುದೇನೆಂದೆಂಬೆನಚ್ಚರಿಯು (ಕೃಶುಲೀ. ೩-೦೩) ; ಕೈಮೀರಿದವರನ್ನು ಹೊತ್ತು ಹೊಗಳಿ, ಮೀರದವರನ್ನು ಮುರುಟಿಸಿ ಮುಕ್ಕುವುದು ಚಳಗಾಲಪುರುಷನ ವಿಶಿಷ್ಟವಾದ ರಾಜನೀತಿ (ಬೀಚಿಬಂ. ೨೦). ೨. ತಿರುಚು : ಸೊಟ್ಟಮಾಡು : "ಏಷ್ಟು ದಿನ ಹೀಗೆ ಬ್ರಹ್ಮಚಾರಿ ಕೊರಡಾಗಿರುತ್ತಾನಂತೆ ಅವನು" ಎಂದು ಮುಖ ಮುರುಟಿಸಿ ಹೇಳುವುದನ್ನು ಕೇಳಿ (ಸ್ವಕ್ರಸೊ. ೨೩೦). [ಮುರುಂಟು₁ + — ಇಸು₃]

ಮುರುಂಟು₁, ಮುರುಟು₁, ಮುರುಡು₁ (ಕ್ರಿ). ೧. (ಎಲೆ, ಬಳ್ಳಿ ಮುಂತಾದುವು) ಸುರುಟಿಕೊಳ್ಳು : ಮೇಗಣ ನಾಲ್ಕುಱೊಳ್ಳೆದಱ ಮೇಗಣಭಾಗದೊಳಗುರ್ವ ಘರ್ಮಂ ಪಿಮದಿಂದಾಗಳ ಮುರುಂಟುವರ್ ಮಱಭಾಗದೊಳುಱಪವಱೋಳನ್ನಮೇಱುಂ ನರಕಂ (ಅಂಶು. ೫-೮೨) ; ಗೆಂಟಾಗಿ ವಿಕಾಸಕ್ಕೆ ಮುರುಂಟಿದ ಮಲ್ಲಿಗೆಯುಸಲರಿಪಂತೆ ವಸಂತಂ . . . ಪೊಕ್ಕಂ (ಅರ್ಜನೀ. ೪-೦೯೮). ೨. ಸೊಟ್ಟಾಗು ; ಡೊಂಕಾಗು ; ವಕ್ರಗೊಳ್ಳು : ತಾಂ ತೊನ್ನನಾಗಿ ಮುರುಂಟಿದ ಕೈಯುಂ ಕಾಲುಂ ಬೆರಸು . . . ಲೋಗರ ಮನೆಗಳೊಳ್ ಭೈಕ್ಷಮಂ ಬೇಡಿ (ವಡ್ಡಾರಾ. ೦೨೨-೨೨); ಉಂಬರಕುಷ್ಟಂ ಮೂಡಿದೊಡಿಂಬಱಯಿ ಮುರುಂಟಿ ಬಾತು ಕೀತೊಡೆ (ಬಂಪುರಿ. ೧೩-೩೯). ೩. ಕುಗ್ಗು ; ಮುದುಡು : ನೆನೆದೊಡೆ ಮನಂ ಮುರುಂಟುವ ಸೀತಳದ ನಡುವೆ ತನು ಕರಗಿ ಕೋಡಿಸುವ ಬಹಳ ಶೀತದ ನಡುವೆ ಕೊಲುವ ಹಿಮವಾತಂಗೆ ಶಿಶಿರೋಪಚಾರವದು (ಮುಂಬ. ಕ. ೦೬೯-೨೫) ; ಮಿಥ್ಯಾವೇದಿಪೇಟಕರ್ ದಂತಿಸಂತಾನದಂತೆ ಮುರುಂಟಿಯುಂ (ಅನಂಪು. ೦೯-೯೬ ವ). ಮುರುಟು₁ : ೧. ಹರಿದ ಗಾಳಂಗೆಸಳು ಮುರುಟಿದ ಕೊನೆ ಮುಱದ ನೆಱ ಮುತ್ತದಿಂ ತೊಱದು . . . ಸೋಂಪಿನ ಬಲ್ಲಪತ್ರಯನಾಗ ಕೊಯಿತಂದು (ಬಸವು. ೦೮-೩೦); ವೃಕ್ಷಗಳು ಯಲೆ ಮುರುಟಿದವು (ಕಾಳ. ೧೦೫-೨೦). ೨. ಕುಱಸೊಸಱಬಂಗಣೊಱವಾಯದ್ ಪಪ್ಪಳ

ಮೂಗಿಂ ಮುರುಟಿದ ಕಿವಿ (ಮುಕೋತ-೨-೩೯) ; ಪಿರಿದಪ್ಪ ನೀರಡಿಕೆಯಿಂ ರಸವನು . . . ಪಾನವ ಮಾಡುವೆನೆಂದೆನ್ನ ಕರವ ನೀಡುವ ಸಮಯದೊಳು ಇದಜಿಳು ಮುರುಟಿದವೆನ್ನೀ ಹಸ್ತಗಳು (ಶೇಮಸಂ. ೧೦-೨೨೫) : ಮುರುಟಿದವು ರಸ ಸೋಂಕೆ ತನ್ನಯ ಕರಚರಣ (ಶಾಸ್ತ್ರ. ೦೭-೬೫). ೩. ಅರಗು ತಿಂದು ಕರಗುವ ದೈವವ ಉರಿಯ ಕಂಡರೆ ಮುರುಟುವ ದೈವವನೆಂತು ಸರಿಯೆಂಬೆನಯ್ಯಾ (ಬಸವ. ೫೫೬) ; ಒಮ್ಮೆ ಊಟ ಮುಗಿದು ಬಿಟ್ಟತೆಂದರೆ ತಾಯಿ ಹಾಸಿಕೊಟ್ಟ ಚಾಪೆಯಲ್ಲಿ ಮುರುಟಿ ಬಿದ್ದುಕೊಳ್ಳುತ್ತಿದ್ದೆ (ಮುಂಗಾಮು. ೬೮). ೪. ಸುಕ್ಕಾಗಿರು ; ನೆರಿಗೆಗಳಿಂದ ಕೂಡಿರು : ಕೊಂಕಿದ ಕೋಡಿನ ಮುರುಟಿದ ಮುಸುಡಿನ ಹಳ್ಳದ ಮೂಗಿನ . . . ಮೃಗವಿದಿಗೋ (ಧರ್ಮ. ೪೪೭). ೫. ಕೀಳು ; ಚಿವುಟು ; ಕೊಯ್ಯು : ಮೊಳೆಯಲ್ಲಿ ಮುರುಟುವುದನದು ಬಲಿದ ಬಳಿಕ ಮುರುಟಲ್ಪಹುದೆ (ಸತ್ಯ. ೨-೪೦);ಮುರುಟಿದೆಯಲಾ ನೀನೆ ಮಳ್ಳಿ, ನೀನೆ ಬೆಳೆದ ಬಯಕೆ ಬಳ್ಳಿ ! (ಅಹಲ್ಯ. ೩೩-೧೯). **ಮುರುಡು₁** : ೩. ತವರುಮನೆಯ ವಿಚಾರದಿಂದ ಅವಳ ಮನಸ್ಸು ಭಾರವಾಗಿತ್ತು. ಮನಸ್ಸು ಮುರುಡಿ ಕೊಂಡಿತ್ತು (ರಪಂ. ೧೬೦).

**ಮುರುಟಿಕೊಳ್ಳು** = ಮುದುಡಿಕೊಳ್ಳು ; ಸುರುಟಿಕೊಳ್ಳು : ಯಶೋದೆ . . . ಮಲಗಿದಲ್ಲೆ ಮುರುಟಿಕೊಂಡಳು (ವಾತ್ಸ. ೦) : ನೀನು ಚೇರಟೆಹುಳು ಕಂಡಿದ್ದೀಯಲ್ಲ, ಅದನ್ನು ಮುಟ್ಟಿದರೆ . . . ಥಟ್ಟನೆ ಮುರುಟಿಕೊಂಡು ಮಲಗಿ ಬಿಡುತ್ತದೆ (ಮೂಕಜ್ಜ. ೭೦).

[ದೇ.॥ ಮಲ. ಮುರಟು ; ತುಳು. ಮುರುಂಟು]

**ಮುರುಂಟು₂, ಮುರುಟು₂** (ಕ್ರಿ). ೧. ಬೆಂಕಿಯನ್ನು ಹೊತ್ತಿಸು ; ಉರಿಯುವಂತೆ ಮಾಡು : "ಮುರುಂಟು — ದಹನಕರಣೇ" (ಶಮದಾ). ೨. ಸುಡು ; ಸೀಯು ; ಕರಿಕಾಗು : ದೇಹದ ದಾಪ ದೇಟ್ಗೆಗಾಚಾಪಳನೇತ್ರ ಸುಯ್ಕೆ ಮುಖಸೌರಭಸೇವೆಗಡುರ್ತು ಸಾರ್ದ ಭೃಂಗೀಪಟಳಂಗಳಕ್ಷಣಮರಲ್ದುವೆಱಕೆ ಮುರುಂಟೆ ಧಾತ್ರಿಯೊಳ್ (ಕುಸುಮಾ. ೦೩-೯೯) ; ಬೆಳಗಾಗಲೊಡಂ ಮುರುಂಟೆ ಬಿರ್ದಿರ್ದಾಱಂ ಪೆಣಂಗಳಂ ಕಂಡು (ಮಹಾಪೇ. ೯-೫೭ ವ) ; ಸಪ್ತಜಡಧಿಗಳ್ ತಕಪಕನೆ ಕುದಿದುಕ್ಕೆ ಬತ್ತುತಿರ್ದುವು ಕೆಳಗೆ ಫಣಿ ೦ರಿಗಳ ಹೆಡೆಗಳುಂ ಕೈಕಾಲ್ಗಳುಂ ಮುರುಂಟುತ್ತಿರ್ದುವು (ತಿರುಪು. ೯೧-೨೫). ೩. ಬಾಡು ; ಒಣಗು ; ಬತ್ತು : ಕುಡಿ ಮುಱಿದಿರ್ದೊಡಂ ಕೊನೆ ಮುರುಂಟಿದೊಡಂ ನಱುಕೆ ರ್ದೊಡಂ ಬೆಳತೊರ್ಡಪೋಣಿರ್ದೊಡಂ ಸರುಜಮಿ ದ್ರುಮಮೆಂದಱಿ . . . ಕರಿಯ ಮಣ್ಣುಮನೊಟ್ಟಿಗೆ ಬಾಟ್ಟಿ ಮಾ ಮರಂ(ಲೋಕೋಪ. ೬-೦೩); ಪುಷ್ಪಬಾಣನಿಸೆ ನಾಂಟಿ ಮುರುಂಟಿದ ಪೂವೆ ಪುಳ್ಳಿಯಾಗಿರೆ ಮನಮೆಯ್ದೆ ಬೆಂದವುಗಳಿಲ್ಲದೊಡೆಲ್ಲಿಯುದಂಗಜಾಸಳಂ (ಅರ್ಜು. ೯-೦೦೨) ; ನಾರಿಯನೆಚ್ಚ ನಾದೊಡಲರೇಖ ಮುರುಂಟುಗುಮೆಂದು ಮನ್ಮಥಂ ದೂರದೊಳಿರ್ಪನೋ (ನೇಶಂ. ೦೯೭). **ಮುರುಟು₂** : ೨. ಕಿಚ್ಚಿಂ ಪೊಕ್ಕಲ್ಲಿ ಮುರುಟಿ ಸಾವವರ್ಮೂರ್ಢರ್ (ಸಪಹ. ಅನುಬಂಧ. I. ೧೨-೨೭) : ತರಹರಿಕೆಗೊಂಬುದೆ ತರಣಿಕಿರಣಸ್ಫುರಣೆಯಲಿ ಮಾಜಿಮಾಡಿದೆನು ತಪ್ಪಿಂಗೆ ಪಕ್ಷಗಳ ಮುರುಟಿ [ಶಾಕಾಂ. ೮]ದವು ತನ್ನುಭಯಪಾರ್ಶ್ವದ ನಿರೀಶಿಯಮಪಕ್ಷಗಳು (ಕೂರಂ. ೯-೦೦-೦೯). ೩. ಉಷ್ಣಕರನ ಕಿರಂಗಳ್ ಪರೆಯುವ ಮುಟ್ಟಿದ ಮುನ್ನವೆ ಮುರುಟಿದುವೆನೆ ಮುಗಿದುವುತ್ಪಲಪ್ರಕರಂಗಳ್ (ಲಾಪ. ೩-೬) ; ಈ ಹೊತ್ತಿನ್ನ ಕಾಲದ ಕುಡಿ ಮುರುಟಿತು (ಹಕಸಾ. ೦೨-೦೦). ೪. ಇಲ್ಲವಾಗು: ನಾಶಹೊಂದು ; ಹಾಳಾಗು : ಬಂದು ನುಡಿಯುಂ ತಲೆದೋಱದು ಚಿತ್ತದುತ್ಸವಂ ಮುರುಟಿತು (ರಕಸು. ೫-೫೭) ; ಯುಕುತಿ ಮಸುಳಿಸದ ಗುಣಕೆಡದ ಸತ್ಯಾವರಣ ಮುರುಟದಿಹ ಘನವಿತರಣ (ಹಕಿಂ. ೯-೫೦) ; ಅಚ್ಚಳಿಯದ ಆ ಪ್ರೇಮಕ್ಕೇನಾಯಿತು ? ಅದು ಹಾಗೆಯೇ ಮುರುಟಿತೆ ? (ಮೂಕಜ. ೪೦).

**ಮುರುಟಿಹೋಗು** = ೧. ಬಾಡು ; ಬತ್ತು ; ಒಣಗು . ಅವಳ ಆಸೆಯ ಕುಡಿ ಮುರುಟಿಹೋಗಿತ್ತು (ಪಾಗಲಾ. ೬೯) ; ಅವರ ಪಿದೆಯ ಆಶೆ-ಆಕಾಂಕ್ಷೆಗಳು ಮರದಿಂದ ಕಿತ್ತು ಬಿಸಿಲಿಗೆ ಎಸೆದ ಮೂಂದಳಿರುಗಳಂತೆ ಅರೆಕ್ಷಣದಲ್ಲಿ ಮುರುಟಿಹೋಗುತ್ತಿದ್ದುವು (ಕೂಮಮು. ೦೯). ೨. ನಾಶವಾಗು; ಹಾಳಾಗು: ಈ ಹಾಳುಊರಿನಲ್ಲಿ ಮುರುಟಿ ಹೋಗ ಬಾರದು ಇವನ ಪ್ರತಿಭೆ (ಮುರುದಾ. ೦೫೬). [ದೇ.॥ ತಮಿ. ಮಲ. ಮುರುಟ್ಟು]

**ಮುರುಕ₁** 'ಮುಱುಕ₂' ನೋ.

**ಮುರುಕ₂** 'ಮುಱುಕು₂' ನೋ.

**ಮುರುಕಲು, ಮುರಕಲು** (ನಾ). ೧. ಮುರಿದುದು : ಚೂರು : ತುಂಡು : ಹೊಟ್ಟಣಿಗಳಿದ್ದ ಚಕ್ಕುಲಿಯೆಲ್ಲ ಮುರುಕಲಾಗಿಬಿಟ್ಟವೆ (ಕಠಂ). (ಗು). ೨. ಮುರಿದ : ಭಗ್ನವಾದ : ಅದರಲ್ಲಿ ಇದ್ದು ದೆಂದರೆ ಫಲಕೊಡುವಂತಹ ಹತ್ತೆಂಟು ತೆಂಗಿನ ಮರಗಳು ; ಮತ್ತೊಂದು ಮುರುಕಲು ಗುಡಿಸಲು (ಶಾರದಾ. ೨೦೩); ಮೊದಲು ಮೊದಲು ಮುರುಕಲು ಮಂಟಪವಿತ್ತು (ಹುಟ್ಟಿಹ. ೬೨). **ಮುರಕಲು** : ಆ ಮುರಕಲು ಮನೆಗೆ ವ್ಯಥಾ ತೇಪೆಹಾಕಿದರೆ ಏನು ಪ್ರಯೋಜನ ? (ಹೋರಪು. ೨೮).

[ ಮುರುಕು₃ ( < ಮುಱುಕು ) + – ಅಲು ( < –ಅಲ್₂ ) ]

**ಮುರುಕಳಿ, ಮುರಕಳಿ** (ನಾ). ಮುರಿಯುವ ಸ್ಥಿತಿ ; ಭಗ್ನಾವಸ್ಥೆ : ಚಪ್ಪರದ ಹಲಭಾಗವು ಮುರುಕಳಿಗೆ ಬಂದಿತ್ತು (ಅಂಚೆ. ೨೮). **ಮುರಕಳಿ**: ಹಾಳಾಗಿದ್ದ ಉದ್ಯಾನಗಳೂ, ಮುರಕಳಿಗೆ ಬಂದಿದ್ದ ಕೃತಕಾದ್ರಿಗಳೂ . . . ದುಃಖದಾಯಕವಾಗಿ ನಾಯಕನ ಮೈಯಲ್ಲಿ ನಡುಗನ್ನು ಹುಟ್ಟಿಸಲು (ಕಾದಂಬ. ೫). 'ಸವಕಳಿ' ನೋ. [ < ಮುರುಕಲು ]

**ಮುರುಕಾಟ** (ನಾ). ಬಿಂಕ ; ಬಿನ್ನಾಣ : ಆಟ ಮುಗಿಯಿತು, ಗಂಗೆಯ ಮುರುಕಾಟ ಮುಗಿಯಲಿಲ್ಲ (ಸುಷಂ. ೩೨).

[ ಮುರುಕು₂ ( < ಮುಱುಕು₂ ) + ಆಟ ]

**ಮುರುಕಿಲು** 'ಮುಱುಕಿಲ್₂' ನೋ.

**ಮುರುಕು₁** 'ಮುಱುಕು₁' ನೋ.

**ಮುರುಕು₂** 'ಮುಱುಕು₂' ನೋ.

**ಮುರುಕು₃** 'ಮುಱುಕು' ನೋ.

**ಮುರುಕುನುಡಿ** (ನಾ). ಒಯ್ಯಾರದ ಮಾತು ; ಬಿಂಕದ ನುಡಿ : ಮುರುಕುನುಡಿ . . . ಟವುಳಿನುಡಿಗಳಿಂ ಪುರುಷರನು ಬೆಗಡುಗೊಳಿಸುವ ಬನ್ನಣೆಯ ನುಡಿಯ ಭಾವೆಯರು ಬರುತಿರ್ದರು (ಪಪಪೋ. ೨೪-೦೫)

[ ಮುರುಕು₂ ( < ಮುಱುಕು₂ ) + ನುಡಿ₂ ]

**ಮುರುಕೆ** 'ಮುಱಿಕೆ₂' ನೋ.

**ಮುರುಗ, ಮುರುಘ** (ನಾ). ೧. ಒಬ್ಬ ದೇವತೆಯ ಹೆಸರು : ಸುಬ್ರಹ್ಮಣ್ಯ ; "ಷಣ್ಮುಖದೇವ" (ತ್ರಿಶಬ್ದ). **ಮುರುಘ** : ೨. ಅರುವತ್ತುಮೂವರು ಪುರಾತನರಲ್ಲಿ ಒಬ್ಬನ ಹೆಸರು : "ಮುರುಘ– ಷಣ್ಮುಖಸ್ವಾಮಿ, ಅರುವತ್ತುಮೂವರಲ್ಲಿ ಒಬ್ಬ ಶರಣ" (ಶೀಕ್ಷಿಶಾ. ೨೪-೬).

[ ದೇ.॥ ತಮಿ. ಮುರುಕನ್ ; ಮಲ. ಮುರುಗನ್ ]

**ಮುರುಗಕಾಯಿ** 'ಮುರ್ಗಿಕಾಯಿ' ನೋ.

**ಮುರುಗಡೆ** 'ಮುರಗಡೆ' ನೋ.

**ಮುರುಗಿಕಾಯಿ** 'ಮುರ್ಗಿಕಾಯಿ' ನೋ.

**ಮುರುಗಿನ ಮರ, ಮುರಿಗಿನಮರ** (ನಾ). ಒಂದು ಬಗೆಯ ಮರ : "ಮುಷ್ಕರಃ – ಮುರುಗಿನ ಮರ" (ಟಿಕಂ. ೦೨೬). **ಮುರಿಗಿನಮರ** : "ವಿಘಾಂಡೀ — ಆವರ್ತಿಕೆ, ಮುರಿಗಿನಮರ" (ಟಿಕಂ. ೦೫೪).

[ ಮುರುಗು₂ + ಮರ₁. / ತಮಿ. ಮುರುಜ್ಜೈ = ನುಗ್ಗೆಮರ. / ಸಂ. ಮುರುಂಗೀ = ನುಗ್ಗೆ ]

**ಮುರುಗುಟ್ಟು** (ಕ್ರಿ). ಮುರಮುರ ಎಂದು ಶಬ್ದಮಾಡು : ಕೈಯಲ್ಲಿ ಕಾಗದ ಮುರುಗುಟ್ಟಿತು (ನಿರಾತ. ೯೮). [ <ಮುರಮುರ + ಕುಟ್ಟು$_{1}$ ]

**ಮುರುಗೆ** (ನಾ). (?) : ಮತ್ತೆ ನೋಡಿದ ಜೈನವಳಕದಿರೆತ್ತಿ ಮುರುಗೆಯ ನೆತ್ತಿ ನೇವರಿಸುತ್ತ ಸುರಗಿಯ ಕಿತ್ತು ಪೊಕ್ಕನು ವೀರಬೊಬ್ಬೆಯಲಿ (ಶಶಿಂ. ೫೭೭–೦೮). [ ? ]

**ಮುರುಘ** ' ಮುರುಗ ' ನೋ.

**ಮುರುಚು** ' ಮುರಿಚು ' ನೋ.

**ಮುರುಜ, ಮುರುಜೆ** (ನಾ). ಒಂದು ಬಗೆಯ ವಾದ್ಯ ; ಮುರಜ : ಧುರಕೆ ನಿಲೆ ಮುರುಜ ಡಿಂಡಿಮ ಪಟಹ . . . ಮೃದಂಗಚಯ ಮೊರೆದವು (ಕುರಂಗ. ೫೭–೯೭) ; ಧರೆಯ ನೃಪರಾರಾದಡೆಯುಮಿಾ ಮುರುಜವನು ಭಾಜಿಸಿಯುಂ ಮೆಚ್ಚಿಸಿ ತರುಣಿಮಣಿಯನು ಗೆಲ್ವುದು (ನಾಗಕು. ೨೨–೪೦). **ಮುರುಜೆ** : ಬಿಡದೆ ನಿಂದಿಪ ದುರ್ಜನನ ಬಾಯಿಗೆ ತುತ್ತನೊಡನಿತ್ತು ನುತಿಸಿಕೊಂಬಂತೆ ಕಡುಹೀನರವಗೆಯ್ದು ಮುರುಜೆಗನ್ನವನಿಟ್ಟು ನುಡಿಸಿದ ಕುಶಲದಿಂದವನು (ಜೀವಂಶಾ. ೯–೮೪). ' ಮುರವ$_{2}$' ಪರಾ. [ <ಸಂ. ಮುರಜ ]

**ಮುರುಜೆ** ' ಮುರುಜ ' ನೋ.

**ಮುರುಟಿಸು$_{1}$** ' ಮುರುಂಟಿಸು ' ನೋ.

**ಮುರುಟಿಸು$_{2}$** (ಕ್ರಿ). ೧. ಚಿವುಟು ; ಕೀಳು ; ಕತ್ತರಿಸು : ಮೊಳೆಯಲೇ ಮುರುಟ[ಪಾಠಾಂ. ಡಿ]ಸಲು ಬೇಹುದು ಬಲಿದ ಬಳಿಕದು ನಿನ್ನ ಹವಣೇ (ಕುಮಾ.ಅ. ೬–೦೬). ೨. ಇಲ್ಲವಾಗಿಸು ; ನಿರ್ನಾಮಮಾಡು ; ನಾಶಗೊಳಿಸು : ಬಳಿಯುಗುಡದೆ ತನಗಹಿತರಾದವರನು ಮೊಳೆಯೊಳೆ ಮುರುಟಿಸಬೇಕು (ಮೋಹತ. ೦೦–೦೨) ; ನಾನು ಕೊನರಿದ ಆಸೆಯನ್ನು ಅಲ್ಲಿಗೇ ಮುರುಟಿಸಿಕೊಂಡು ಡ್ರಾಯಿಂಗರೂಮಿನಿಂದ ಹೊರಗಾದೆ (ಮುಸಳು. ೬೩). [ ಮುರುಟು$_{1}$ ( < ಮುರುಂಟು$_{1}$ ) + — ಇಸು$_{3}$ ]

**ಮುರುಟು$_{1}$** ' ಮುರುಂಟು$_{1}$ ' ನೋ.

**ಮುರುಟು$_{2}$** ' ಮುರುಂಟು$_{2}$' ನೋ.

**ಮುರುಟು$_{3}$**, ಮುರಡು, ಮುರುಡು$_{2}$ (ನಾ). ೧. ತಿರುಚಿಕೊಂಡಿರುವುದು ; ಡೊಂಕಾದುದು ; ಸೊಟ್ಟಗಿರುವುದು : ' ಮುರುಟುಗಟ್ಟು ' ಪರಾ. ೨. ಮುದುಡೆಯಾದುದು ; ಮುದ್ದೆ : (*). ೩. ಮೂಲೆ : ವಾಮನಮುದ್ರೆ ತಿದ್ದಿಯಿರುವ ಮುರುಟ ಹುಟ್ಟುಗಲ್ಲು ೧ (ಎಕ. XIV, ಮೈಸೂರು. ೦೦೫–೩೬೨ ; 1674) ; ಇದಕ್ಕೆ ವಾಯುವ್ಯದ ಮುರುಟೀ ಮೂಡಪತ್ತಿನಲ್ಲಿ ಈಶಾನ್ಯ ಮುಂಬಾನೆ ೧ (ಎಕ. III, ತಿರುಮ. ೬೩–೯೩೭ ; 1748.) (ಗು). ೪. ಡೊಂಕಾಗಿರುವ ; ಸೊಟ್ಟಗಿರುವ ; ವಕ್ರವಾದ : ಛಂದೋಲಂಕಾರಲಕ್ಷಣಗಳ ಬಂದ ನೋಡದೆ ಪುಣ್ಯಕಥೆಯ ಒಂದನೆ ನೋಡಿ ಮುರುಟುಚಂದನದೊಳು ಗಂಧಮೆ ಮುಖ್ಯವೆಂತಂತೆ ಆ ಕಥೆಯನು ಪೇಳ್ದರಾರೆನೆ (ಶಾಂತೀಶ. ೦–೦೨). **ಮುರಡು** : ೫. ಕೀಳಾದ : ಕ್ಷುದ್ರವಾದ : ಬಾರಿಬಾರಿಗೆ ನಿಮ್ಮ ಹಾರೈಸಿ ಆನಂದವಾರಿಧಿಯಲಿ ಮಗ್ನರಾಗಿ ತಾರರು ಮನಸಿಗೆ ಮುರಡುದೇವತೆಗಳ ಸಾರಹೃದಯರು ನಿಂದಿಪರು (ಶಿವಾಕೃ. ೭೬–೫). **ಮುರುಡು$_{2}$** : ೧. ಮುರುಡಾದೊಡೆ ಮಲಯಜಂಗಳಂ ಕೊಂಕಿದೊಡೇಂ ಸ್ಮರಚಾಪಮನಿಟ್ಟಿಕೆಯ್ವರೆ (ಧುಕೋಶ. ೨–೪೨) ; ಒಳನೋಟ ಕುರುಡು ಕೈಕಾಲು ಮುರುಡು ಕುಟ್ಟುತ್ತಿರುವೆ, ತಮ್ಮ (ತಂತ್ರಸಾ. ೩–೦). ೬. ಬಾಗಿರುವ ಭಾಗ : ಪಚ್ಚೆಯ ಬಟ್ಟಲೊಳ್ ಶಂಖದ ಮುರುಡನಿಟ್ಟಿಪ್ಪಂತೆ ತಾವರೆಯೆಲೆಯೊಳಿಪ್ಪ ಮಿಡುಕದೆ ಕುಳ್ಳಿರ್ಪ ತರುಣಮರಾಳಂಗಳ್ (ಲೀಲಾವ. ೬–೭೯ ವ) ; ಶರಧಿಯ ನೊರೆಯುಂ ಶಂಖದ ಮುರುಡುಂ ಪೊಸ ಚಲ್ಲಗೊಟ್ಟೆಯುಂ ಮಣಿಶಿಲೆಯುಂ ಪರಿಯಾಗಿರೆ ಮಧುವಿಂದಿಡೆ ಪರಿಹರಿಕುಂ ಕಣ್ಣ ಪೂಗಳಂತರ್ಕ್ಷಣದಿಂ (ಗೋವೈದ್ಯ. ೨೦೦–೩೨). ೭. ಗೂನು ; ಡೂಗು : ತಿರುಜ್ಞಾನಸಂಬಂಧಿ ಸೋಂಕಿದ ಮಾತ್ರದಿ ಮುರುಡೆಲ್ಲ ಪೋಗಿ ರುಜುವಾಗಿ ನಿಂದಿರಲು (ಗೌಂಡಪು. ೦೨–೮೮). [ < ಮುರುಂಟು$_{1}$ ]

**ಮುರುಟುಕೂದಲು** (ನಾ). ವಕ್ರವಾಗಿರುವ ಕೂದಲು ; ಡೊಂಕು ಡೊಂಕಾಗಿ ಬೆಳೆದಿರುವ ಕೂದಲು : ಅಳಿಕುಂತಳಂದ ಮುರುಟು ಕೂದಲಾ ಬಲುಸಿಂಹನಡುವೆಂದ ಮೊಸಳಂತ ನಡುವನು (ಶಬಾಶ. ೩೮–೯). [ ಮುರುಟು$_{1}$ ( < ಮುರುಂಟು$_{1}$) + ಕೂದಲು ( < ಕೂಂದಲ್)]

**ಮುರುಟುಗಟ್ಟು** (ಕ್ರಿ). ಡೊಂಕಾಗು ; ಸೊಟ್ಟಾಗು : ಮುಡುಬರಾದರ್ಕೆಲರು ಕೈಕಾಲ್ಮುರುಟುಗಟ್ಟಿ ಗುಡುಗುರಿಸೆ ಕೆಲರು (ಶತುಪು. ೯–೫–೩೯). [ ಮುರುಟು$_{3}$ + ಕಟ್ಟು$_{1}$ ]

**ಮುರುಟುಗೈ** (ನಾ). ವಕ್ರವಾಗಿರುವ ಕೈ ; ಸೊಟ್ಟಗಿರುವ ಕೈ : ಮುರುಟುಗೈ[ಪಾಠಾಂ. ಕೆಯ್]ಮೋಟಿಗಳ ಕಾಟನ ಖರದೊಂದೆಸೆಯ . . . ವಿಗತಾಂಬರದ ಭಟರೊಂದೆಸೆಯ ಕಾಣಿಸಿತನಿಲನಂದನಗೆ (ಕೂರಣಾ. ೫–೬–೬೬). [ಮುರುಟು$_{3}$ + ಕೈ$_{2}$ (<ಕೆಯ್$_{2}$) ]

**ಮುರುಟುರೋಗ** (ನಾ). ದೇಹದ ಅಂಗಾಂಗಗಳು ತಿರುಚಿಕೊಳ್ಳುವ ಒಂದು ಬಗೆಯ ರೋಗ : ಅವರ ದೇಹಗಳಲ್ಲಿ ಉಳಿದವುಗಳೆಂದರೆ ಎಲುವಿನ ಹಂದರಗಳು ಮಾತ್ರ. ಮುರುಟುರೋಗದಿಂದ ಸತ್ತಿರಬೇಕೆಂದೆನಿಸಿತು (ಅನ್ನದಾ. ೫). [ಮುರುಟು$_{1}$ (<ಮುರುಂಟು$_{1}$) + ರೋಗ]

**ಮುರುಟುಹ** (ನಾ). ಮುದುಡುವುದು ; ಸಂಕುಚಿತವಾಗುವುದು : ಹತ್ತಿದರೆ ಮುರುಟುಹಂ ರಕ್ಷಪದಿ ಶೀಘ್ರಯದು (ಪಶುಗಣಾ. ೯೩–೯೩). [ಮುರುಟು$_{1}$ (< ಮುರುಂಟು$_{1}$) + — ಹ$_{2}$ (< — ಪ$_{2}$)]

**ಮುರುಡ$_{1}$, ಮೊರಟ, ಮೊರಡ**(ನಾ). ೧. ಮೈಯೆಲ್ಲಾ ಗಂಟುಗಂಟಾಗಿರುವವನು : ಕುಂಟನಾಗುವ ಮುರುಡನಾಗುವ ಕನ್ನವಿಕ್ಕುವ . . . ಮುನ್ನ ಸೊಡ್ಡಳನ ಆರಾಧನೆ ಇಲ್ಲದ ಕುನ್ನಿಗಳಿಗೆಲ್ಲಾ ಈ ವಿಧಿ ತಪ್ಪದು (ಸರ್ವವ. ೦೬೯–೭೯೭); ಗೊತವನ ರೂಪಮನಾ ನೀರುಮನುಪಸಂಹರಿಸಿ ಗುಜ್ಜನುಂ ಪೊಟಂಡನು[ಂ] ಮುರುಡನುಮಾಗಿ ಬರೆ ಕಂಡ[ಪರ್ ನಗೆ] (ಬಂಹಂ. ೯–೨೫ ವ); ತಾಳಕಾಯ ಮೋಳಿಗೆಯೊಂದಂದದ ಮುರುಡನಷ್ಟ ವಕ್ರಂ ಮೊದಲೊಣಗಿದ ಕೂಸಗೊಟಡಿನಂದದೆ ಕೊಂಕಂ (ಧುಕೋಶ. ೨–೪೦). ೨. ಒರಟುಸ್ವಭಾವದವನು ; ಉದ್ಧತ ; ಅನಾಗರಿಕ : ಸುರೆಯಿಂದ ಸೊಕ್ಕುವನ ಪರದೇಶಕ್ಕೆದುವನ ಮುರುಡನ ನಪುಂಸಕನ . . . ಬಧಿರನ ಪೆಂಡಿರು ಪರರ ಪೆಂಡಿರಲ್ತೆ (ಜನವ. ೦೨–೯೯). **ಮೊರಟ** : ೨. ಈ ವಿತ್ರಮರಾಯನು ಒಳ್ಳೆಯ ಬುದ್ಧಿಕೌಶಲಶಕ್ತಿಯುಕ್ತಿಶೌರ್ಯಸಾಹಸಗಳಲ್ಲಿ ಅಪ್ರತಿಮನಾಗಿರಬಹುದಾದರೂ . . . ಮೊರಟನೂ ಆಗಿರಬೇಕು (ಪಟ್ಟಅ. ೦೯೦–೦೦). **ಮೊರಡ** : (*). [ಮುರುಡು$_{3}$ (<ಮುರುಟು$_{3}$) + — ಅ$_{7}$. / ತಮಿ. ಮುರಣ್ಟನ್, ಮುರುಟನ್; ಮುರಟನ್ ; ಮಲ. ಮುರಟನ್]

**ಮುರುಡ$_{2}$** ' ಮಿಡ ' ನೋ.

**ಮುರುಡ$_{3}$** (ನಾ). ಒಂದು ಮನೆತನದ ಹೆಸರು : ಮುರುಡರ ಕಾವಿಸೆಟ್ಟಿ ಮಾದಿಸೆಟ್ಟಿ ಮುಖ್ಯವಾಗಿ ಸಮಸ್ತ[ ತ ]ಳದವರುಂ ಗವಚಿರಾಜಸೆಟ್ಟಿ ಓಲೆಯ ಚಟ್ಟಿಸೆಟ್ಟಿ . . . ಹಸುಂಬೆ[ ಗೆ ]ಹಾಗವಂ ಸ್ಥಾಯಿಯಾಗಿ ಬಿಟ್ಟರು (ಕ್ಶಾಇ. XX, ೭೮–೨೯; 1118). [ ? ]

**ಮುರುಡಸುತ** (ನಾ). ೧. ಈಶ್ವರನ ಮಗ. ೨. ಗಣಪತಿ ; ವಿಘ್ನೇಶ್ವರ: ಮುರುಡಸುತನ ಅಂಘ್ರಿಗೆ ಎರಗಿ (ಕಪಾಗೀ. ೯೨). ೩. ಷಣ್ಮುಖಿ. [ಮುರುಡ$_{2}$ (<ಮಿಡ) + ಸುತ]

**ಮುರುಡಸೆ** (ನಾ). ಒಂದು ಬಗೆಯ ಗಿಡ : " ಆವರ್ತಕಿಯೆನಲ್ಕೆ ಮುರುಡಸೆ " (ಪಶುಗಣಾ. ೯೨–೩೯). [ ? ]

**ಮುರುಡಿ**, ಮುರಡಿ₁ (ನಾ). ಕೈಬೆರಳುಗಳ ಉಂಗುರಗಳೂ ಬಳೆಗಳೂ, ಸಣ್ಣ ಸಣ್ಣ ಸರಪಣಿಗಳ ಮೂಲಕ ಒಂದಕ್ಕೊಂದು ಹೊಂದಿಕೊಂಡಿರುವಂತೆ ಇರುವ ಒಂದು ಬಗೆಯ ಹಸ್ತಾಭರಣ : ಬಿಗಿದುಳಿ ಸರಪಳಿಯ ಮುಂಗೈತಳದ ಮುರುಡಿಗಳ . . . ಹಾರದ ಸುಗುಣ ಕಾಂಚಿಯ ದಾಮದಬಲೆಯುರ್ಕೈದಿದರು ಹರಿಯ . (ಅಕ್ರೂ.ಚ. ೪-೫೦). **ಮುರಡಿ₁** : ನಾಯಕರು 'ಮುಂಗೈಯ ಮುರಿ, ಮುರಡಿಯ ಸರಪಳಿ, ಹೊನ್ನುಂಗುರ, ತೋಳಬಾಪುರಿ 'ಗಳಿಂದ ಸಿಂಗರಿಸಿಕೊಂಡಿರುತ್ತಿದ್ದರು (ಕಣಾಚ. ೦೭೦). [?./ ತೆಲು. ಮುರಿಡಿಗೊಲುಸು = ಮುಂಗೈಗೆ ತೊಡುವ ಒಂದು ಬಗೆಯ ಆಭರಣ]

**ಮುರುಡಿಸು** (ಕ್ರಿ). ಎದುರುಬೀಳು ; ವಿರೋಧಿಸು : ಗಂಡುಗಲಿಯಿವನೆಂದು ಭಯದಲಿ ಕಂಡವರ ಮನ್ನಿಸುತ ಮುರುಡಿಸಿಕೊಂಡ ಮೂರ್ಖಿಂಸದೆದು ಸಪ್ತಾಂಗಗಳ ಕೈಕೊಳುತ (ಉತ್ತ.ಕ. ೦೭-೩).

[ಮುರುಡು₃ + — ಇಸು₁]

**ಮುರುಡು₁** 'ಮುರುಂಟು₁' ನೋ.

**ಮುರುಡು₂** 'ಮುರುಟು₁' ನೋ.

**ಮುರುಡು₃**, ಮೊರಡು₁ (ನಾ). ೧. ಒರಟಾದುದು : ಬಿರುಸಾದುದು : 'ಮುರುಡುಗಲ್ಲು' ಪರಾ. ೨. (ಮರ, ಸೌದೆ ಮುಂತಾದುವುಗಳ) ಗಂಟುಗಂಟಾಗಿರುವ ಭಾಗ.–ಕೊರಡು : ಮುನಿಸ ಮುನಿದಡೆ ಶ್ರೀಗಂಧದ ಮುರುಡಿನ ಹಾಗಿರಬೇಕಪ್ಪಾ (ಸವಚ. ೭೮-೩೬೩); ಮಾಯೆ ಬಿದಿರ ಮುರುಡಿನಂತೆ (ಶಚಾರ. ೦೨). ೩. ಎದುರು ಬೀಳುವುದು ; ವಿರೋಧಿಸುವುದು : 'ಮುರುಡಿಸು' ಪರಾ. **ಮೊರಡು₁** : ೧. ನೆಲದ ಒಳಉರಿಯೊದ್ದು ತೂರಿರುವ ಮೊರಡಾದ ಸಿಲೆಯ ಸಾವಿರದ ಗುಡಿ–ಬಸದಿ–ರಥ ಗೊಮ್ಮಟರ . . . ಸುಡ–ಹೂವುಗಳ ತುಳಿಯುಂತಿಹರೊ ! (ಜಾಸಿಗ. ೩೪–೦೩). ೨. ಕಾಡುಹಂದಿಯೊಂದು ಮೂತಿಯನ್ನು ಮುಂದೆ ಚಾಚಿ, ತನ್ನ ಕೋರೆದಾಡೆಗಳಿಂದ ಕಾಡುಗೆಣಸಿನ ಮೊರಡೊಂದನ್ನು ಅಗೆಯುತಿತ್ತು (ಹುಲಿಜಾ. ೨೩೪). [ದೇ.॥ ತಮಿ. ಮುರಣ್ಣು; ಮುರಟು, ಮುರುಟು; ಮಲ. ಮುರಟು; ತುಳು. ಮುರುಡು; ತೆಲು. ಮೊರಡು, ಪ್ರೋಡು]

**ಮುರುಡು₄** (ನಾ). (ಕರಾ) ಮೀಸೆಗಳುಳ್ಳ ಒಂದು ಬಗೆಯ ಬಾವಿ ಮೀನು. [ದೇ.॥ ತುಳು. ಮೊರಂಟೆ; ತೆಲು. ಮುರುಂಡ = ಒಂದು ಬಗೆಯ ಕ್ಷುದ್ರಜಲಜಂತು]

**ಮುರುಡುಗಲ್ಲು**, ಮೊರಡುಕಲ್ಲು (ನಾ). ಒರಟಾದ ಕಲ್ಲು; ಬಿರುಸಾದ ಶಿಲೆ : ಮುರುಡುಗಲ್ಲನು ಶರಣೆಯ ಮಾಡಿತೇ ಪಾಪ (ಕೃಕೃಗೊ. ೩೪–೪೩). **ಮೊರಡುಕಲ್ಲು** : ಮೊರಡುಕಲ್ಲಿಗ ನೀರಿನಾ ಮೃದುತರವಿಶೇಷಂ ದೊರಕುವುದೇ (ಕವೀಚ. ೬-೨೦). [ಮುರುಡು₃ + ಕಲ್ಲು (< ಕಲ್₃)]

**ಮುರುಡುಗೊಳ್ಳು** (ಕ್ರಿ). ಬಾಗು ; ಗೂನಾಗು : ಮುರುಡುಗೊಂಡಿದ ದೇಹವೇಕೀ ಪರಿಯೊಳಾಯ್ತೆನುತ ಪರಿ ಚಿಬುಕವ ಕರದೆ ಪಿಡಿದೆತ್ತಿದನು ಚರಣದೊಳುಂಗುಟವ ಮೆಟ್ಟಿ (ಅಕ್ರೂ.ಚ. ೭-೩೩).

[ಮುರುಡು₂ (< ಮುರುಟು₁) + ಕೊಳ್ಳು₁ (< ಕೊಳ್₁)]

**ಮುರುಡುಗೋಲ್** (ನಾ). ಅಂಕುಡೊಂಕಾದ ದೊಣ್ಣೆ; ಸೊಟ್ಟಗಿರುವ ಕೋಲು : 'ಮುರುಡುಗೋಲ್ವಿಡಿ' ಪರಾ.

[ಮುರುಡು₂ (< ಮುರುಟು₁) + ಕೋಲ್₁]

**ಮುರುಡುಗೋಲ್ವಿಡಿ** (ಕ್ರಿ). ಅಂಕುಡೊಂಕಾಗಿರುವ ಕೋಲನ್ನು ಹಿಡಿದುಕೊಳ್ಳು : ಮುರುಡುಗೋಲ್ವಿಡಿದು ತಡವರಿಸಿ ನಡೆದ ಮುದುಪಂ ಕಟಜಮುಖಿಯೊರ್ವಳ್ ಕಂಡು ಪ್ರಮೆಗೊಂಡು (ಕಜ್ಜ. ೧೦–೭೭).

[ಮುರುಡುಗೋಲ್ + ಪಿಡಿ₁]

**ಮುರುಡೇಶ್ವರ** (ನಾ). ಶಿವನ ಹೆಸರುಗಳಲ್ಲಿ ಒಂದು : ➡ ಉತ್ತರ ಕನ್ನಡಜಿಲ್ಲೆಗೆ ಸೇರಿದ ಭಟ್ಕಳದ ಸಮೀಪದಲ್ಲಿರುವ ಮುರುಡೇಶ್ವರ ಎಂಬ ದೇವಾಲಯ ಮತ್ತು ಆ ದೇವಾಲಯವಿರುವ ಊರು : ಮುರುಡೇಶ್ವರದೇ × × × ಭೂಮಿರಾಪೋಹ್ಯುದಯಂ ಯವುಶ್ಚ ಅಹ × × × (ಕಶಾ. I. ೩೬–೦೬; ಸು. 1424).

[ಮುರುಡ₂ (< ಮಿಡ) + ಈಶ್ವರ./ಸಂ. ಮೃಡೇಶ್ವರ]

**ಮುರುತಾಪು**, ಮುರಿತಾಪ (ನಾ). ಒಂದು ಬಗೆಯ ವಾದ್ಯ : ಕರಡೆ ಡವುಡೆ ಚಿನ್ನತಿತ್ತಿರಿ ಹೆಗ್ಗಾಳೆ ಮುರುತಾಪು ಡೋಳು . . . ಕೊಳಲ ರವಗಳಿಂದರಸನೈದಿದನಾಹವವ (ರಾಶುಂ. ೦೭–೦೦೦). **ಮುರಿತಾಪ** : ಪಟಹ ಡಿಂಡಿಮವಾದ್ಯ ಮುರಿತಾಪ ಭೇರಿ ತಂಬಟ ದಮಾಮಿಗಳಾದಿಯಲಿ ಲಟಕಟಿಸುವ ನಾನಾವಾದ್ಯ ಸಕಲದಿಕ್ತಟ ಬಿರಿವಂತೆ ಗರ್ಜಿಸಿತಾ (ಕೋಹಚ. ೩೭–೪).

[ ← ತುಳು. ಮುರ್ತಾಪ, ಮುರ್ತಾಮ = ಗರ್ವ; ಮುರ್ತಾಪದ ದೋಲು = ಒಂದು ಬಗೆಯ ಡೋಲು]

**ಮುರುದಲೆ** (ನಾ). ಅಡ್ಡರಸ್ತೆಗೆ ತಿರುಗುವ ಜಾಗ,— ಸ್ಥಳ : (೪).

[< ಮುರಿವು + — ದಲೆ]

**ಮುರುದಾರಶೃಂಗಿ** 'ಮುರದಾರಸಿಂಗಿ' ನೋ.

**ಮುರುದಾರಸಿಂಗಿ** 'ಮುರದಾರಸಿಂಗಿ' ನೋ.

**ಮುರುಪು** 'ಮುರಿಪ್ಪು₂' ನೋ.

**ಮುರುಮುಚ್ಚಿ** 'ಮುರುಮುರಿ' ನೋ.

**ಮುರುಮುರಚಿ** 'ಮುರುಮುರಿ' ನೋ.

**ಮುರುಮುರಿ**, ಮುರುಮುಚ್ಚಿ, ಮುರುಮುರಚಿ, ಮುರುಮುರುಚಿ (ನಾ). ಒಂದು ಬಗೆಯ ಸಸ್ಯ : ಶುಂಠಿ, ನೆಗ್ಗಿಲ ಬೇರು . . . ಕೊಮ್ಮೆ ಬೇರು ಮುರುಮುರಿಯ ಸೊಪ್ಪು, ಇವಱ ಕಷಾಯವ ಕೊಡಿಸುವದು (ಕೃಶ್ಯಾ. I. ೩೩೦). **ಮುರುಮುಚ್ಚಿ** : "ದಾರ್ವೀ – ಮರದರಿಸಿನ, ಮುರುಮುಚ್ಚಿ" (೬ಕಂ. ೬೩) ; "ಮುರುಸತ್ರಾ – ಮುರುಮುಚ್ಚಿ (ಮುಂಜೆ)" (೬ಕಂ. ೦೨೬). **ಮುರುಮುರಚಿ** : "ಅದಾತಿ – ಮುರು ಮುರಚಿ, ದೇವದಾಳಿ" (೬ಕಂ. ೦೦). **ಮುರುಮುರುಚಿ** ; "ದಾರಿಕಾ– ಮುರುಮುರುಚಿ" (೬ಕಂ. ೬೫). [ದೇ.॥ ತಮಿ. ಮುರಿಮುರಿ ]

**ಮುರುಮುರುಚಿ** 'ಮುರುಮುರಿ' ನೋ.

**ಮುರುವ**, ಮುರುವ₁, ಮುರವ₁ (ನಾ). ೧. ದಡ್ಡ ; ಮೂರ್ಖ : ಆಪೂರ ಗೌಡನ ಮನೆಯ ನಳಿನಮುಖಿಯರು ಶುಚುವಳನ ಕರೆದು ಮುರುವ ನೀಂ ಕಱೆದು ಕುಡಿದೆಯೊ ಹಾಲನು ತಳುವದುಸಿರು . . . ಎನೆ (ಸಿದ್ಧೇಶ್ವ. ೯–೩೬) ; ಸೂಳೇಗೆ ಹೋದವನು ಏನಾದ ಎಂತಾದ . . . ಆ ಮುರುವ ಸೂಳೆಕಾಲೀಗೆ ಕೆರವಾದ (ಹಳ್ಳಿಯ. ೦೦೪). ೨. ಬಡವ ; ದರಿದ್ರ ; ನಿರ್ಗತಿಕ : ಕತ್ತಿ ಹಿಡಿಯುವ ಕ್ಷತ್ರಿಯ, ಮೇಣಿ ಹಿಡಿಯುವ ಮುರುವನಾಗಬೇಕೇ ? (ಕಳುವು. ೦೦೦) ; ಕಾಣದ ಮುರುವ ಕನಸ ಕಂಡರೆ ಏಳುಬಾರಿ ಎದ್ದು ಕೂತ (ಗಾದೆ). **ಮುರುವ₁** : ೧. ಗಂಡಾನ ಕಾಣೇರೋ ಗೆಂಡ್ಕೊಟ್ಟೆ ಮುರುವಾನ . . . ಕೊಂಡ್ಹೋದ್ರು (ಹಳ್ಳಿಯ. ೦೬೩). ೨. ಹೊಟ್ಟೆಗಿಲ್ಲದೆ ಮುರುವ ಒಣಗಿ ತೆಳುವಾಗಿದ್ದ, ಕವಳ ದೊರಕಿತು ಊದಿದಾನೆ (ಪಶಾ. II. ೨೫). **ಮುರವ₁** : ೧. ಅಭ್ಯಾಸವಿಲ್ಲದ ಮುರವ ಔಪಾಸನ ಮಾಡಿ ಗಡ್ಡಮೀಸೆ ಸುಟ್ಟುಕೊಂಡ (ಗಾದೆ) : ತಲೇಕೂದಲು ಸೆರೆಯಾದ ಮೇಲೆ ತಪ್ಪಿಕೊಂಡ ತಪ್ಪಲಿ ಮುರವ (ಗಾದೆ).

**ಮುರುವತ್ತು** 'ಮುರವತ್ತು' ನೋ.

**ಮುರುವನ ಹುಳಿ** (ನಾ). ಒಂದು ಬಗೆಯ ಸಸ್ಯ : ಮುರುವನ ಹುಳಿ. ಮುಗಲ್, ಮುರ್ಗಲ್. 'ಕೋಕಂ' ಮರ (ವೃಕಿಶಿ. ೩೪–೭೩೩). [ ? ]

**ಮುರುವಿಕ್ಕು** (ಕ್ರಿ). (ದನ. ಕರು ಮುಂತಾದುವುಗಳಿಗೆ) ಕಲಗಚ್ಚನ್ನು ಇಡು.– ನೀಡು : ಮುರುವಿಕ್ಕಿ ಪೊರೆದು ಗೊಡ್ಡಂ ಕಱೆದೊಡೆ ಪಾಲುಂಟೆ (ರವರ್ಗಸು. ೧೦–೯೦). [ಮುರುವು$_2$ + ಇಕ್ಕು$_4$ ]

**ಮುರುವಿಡು** (ಕ್ರಿ). = ಮುರುವಿಕ್ಕು : ಮುಂಜಾನೆ ಎದ್ದು . . . ಕೊಟ್ಟಿಗೆಗೆ ಹೋಗಿ ಹಸುಗಳಿಗೆ ಮುರುವಿಟ್ಟು, ಹಾಲು ಕರೆದುಕೊಂಡು ಬರುವುದು (ದುಂಡಿ. ೯೮); ಆಕಳಿಗೆ ಮುರುವಿಟ್ಟು ಎಮ್ಮೆಗೆ ಸುರುಗಿಟ್ಟು ರಂಜಣಿಗಿ ಹಾಲು ಹಿಂಡ್ಯಾರೊ (ಕಪ್ಪಜಾ. ೪೪೫).

[ ಮುರುವು$_2$ + ಇಡು$_1$ ]

**ಮುರುವು$_1$** 'ಮುರಿವು' ನೋ.

**ಮುರುವು$_2$**, **ಮುರ$_2$**, **ಮುರವು$_2$**, **ಮುರು$_2$**, **ಮುರುಹು$_3$** (ನಾ). ಹಾಲುಕೊಡುವ ದನಗಳಿಗೆ ಮತ್ತು ಎತ್ತುಗಳಿಗೆ ಹುರುಳಿ, ಹತ್ತಿಕಾಳು, ಹಿಂಡಿ, ಹೊಟ್ಟು ಮೊದಲಾದುವುಗಳನ್ನು ನೀರಿನೊಂದಿಗೆ ಬೆರಸಿತುವ ಆಹಾರ; ಕಲಗಚ್ಚು, ಬೇಯಿಸಿದ ಅಂಬಲಿ, ಮುಸುರೆ ಇತ್ಯಾದಿ : ಆವಂ ತುಱುಸು ತಳಿಯಿಕ್ಕು ತಡೆಯದೆ ಮುರುವಂ ಸುರಿ (ಲೀಲಾವ. ೫–೦೦೯); P ಇಲ್ಲಿ ಪ್ರಾಸಸ್ಥಾನವೆಂದು ಗ್ರಂಥದಲ್ಲಿ 'ಱ' ವನ್ನು ಬಳಸಿದೆ ; ಎಳಗಱುವಂ ಬಿಡು ಮುರುವಂ ಕಳಿದು . . . ಗೋಕುಳವಂ ಕಱೆ (ತ್ರಿಪು. ೦೫–೨೬); ಆಕಳ ಕರೆಸಿ ವೃಷಕೆ ಮುರುವ ಹಾಕಿ ಶಿಶುಗಳಾಕ್ರೋಶವ ಕೇಳದೆ . . . ರಾಕಾಚಂದ್ರಾಸ್ಯೆಯರು ನಡೆದರು (ಕೃಸಾ. ೪೮–೯); ಓಂಡುವಾಗ ದನಗಳನ್ನು ಪ್ರಸನ್ನಗೊಳಿಸಬೇಕಾದರೆ, ಮುರುವು ಮೊದಲಾದ ತಿನಿಸು ಕೊಡಬೇಕಾಗುವದು (ಸ್ತ್ರೀಲಾ. ೦೦೦). **ಮುರ$_2$** : ಸೀತಕ್ಕ ದನಗಳಿಗೆ ಕಲಗಚ್ಚು ಮುರ ಕೊಟ್ಟು ಹಾಲು ಕರೆಸಿ (ಪ್ರಕ್ಷಿ. ೦೨೨). **ಮುರವು$_2$**: ಹಾಲ್ಗೆ ಮುರವೇಂ ಬೆಳೆಯೆ (ವರ್ಧಮಾ. ೦–೦೦೯): ಮಸವೆಂಬ ಕರುವನ್ನು ಬಿಡು. ಘನಭಕುತಿಯ ಮುರವನ್ನಿಡು (ಹಚ. ೦೭೬); ಅದಕ್ಕೆ ನಾನೇ ಮುಸುರೆ ಮುರವು ತಿನ್ನಿಸುತ್ತಿದ್ದೆ (ಸುಹಸಂ. ೬೭). **ಮುರು$_2$**: ಸಗಣೀ ಬಾಚುವುದು, ಮುರು ಬೇಯಿಸಿ ಕರೆಯುವ ಎಮ್ಮೆದನಗಳಿಗೆ ಇಡುವುದು (ಹುಲಿಮ. ೭೮೦); ಹೋದವರಗೇಡಿಗೆ ಹಿಂದೆಯು ಬಂದೆಯು ಮುರು ಕಂಡ ಎಮ್ಮೆಯ ಹಾಗೆ (ತಂಪ್ರಶೀ. ೨೩–೯೦). **ಮುರುಹು$_3$**: ಪೊಲೆಯರ ಮನೆಯ ಮುರುಹ ಹೊಜಗಿರಿಸಿದಡೆ ಹಂದಿ ಬಂದು ಮೂಸಿ ಪೋಪಂತೆ (ಶೀದಾವ. ೫೯–೬೦).

**ಮುರುವಿನ ಒಲೆ** = ದನಗಳಿಗೆ ಅಂಬಲಿ ಮುಂತಾದುವನ್ನು ಬೇಯಿಸುವ ಒಲೆ : ಗುತ್ತಿ ಕಿರುಜಗಲಿಯ ಮೂಲೆಯಲ್ಲಿ ಮುರುವಿನ ಒಲೆಯ ಬೆಂಕಿಗೆ ಸ್ವಲ್ಪ ಹತ್ತಿರವಾಗಿ. . . ಕುಳಿತುಕೊಂಡನು (ಮಲೆಮ. ೦೬).

**ಮುರುಸು** 'ಮುರಸು' ನೋ.

**ಮುರುಹು$_1$** 'ಮುರಿಪ್ಪು$_1$' ನೋ.

**ಮುರುಹು$_2$** 'ಮುರಿಪ್ಪು$_2$' ನೋ.

**ಮುರುಹು$_3$** 'ಮುರುವು$_2$' ನೋ.

**ಮುರುಹು$_4$** 'ಮುಱುಕು$_2$' ನೋ.

**ಮುರೆ** (ನಾ). ಸುಗಂಧದಿಂದ ಕೂಡಿದ ಒಂದು ಬಗೆಯ ಸಸ್ಯ ಮತ್ತು ಅದರಿಂದ ತಯಾರಿಸುವ ಸುಗಂಧದ್ರವ್ಯ : "ತಾಳಪರ್ಣೀ– ಮುರೆಯೆಂಬ ಗಂಧದ್ರವ್ಯ" (ಓಷಧಿ. ೬೭); ಮುರೆ ಬೋಟಂ ರುಜೆ ಮಾಂಸಿ ಪೂತಿಪಹಳಂ ತಾಮಿಂತಿವೊಂದೆಂಶಮಾಗಿರೆ (ಲೋಕೋಪ. ೭–೨೭); ಒಂದೆಲಗನ ಸೊಪ್ಪು . . . ಮುರಾ, ತ್ರಿಫಲೆ . . . ತನ್ನೆಲೆಹುಳಿಗನ ಗೆಡ್ಡೆ ಇವುಗಳನ್ನು ಸಮಾಂಶವಾಗಿ ಆನೆಯ ಮೂತ್ರದಲ್ಲಿ ಅರೆದು (ಕೃಶೃಜ. II. ೫೦). [ ಸಂ. ಮುರಾ ]

**ಮುರ್ಕಿಲಿ** 'ಮುಱುಕಿಲ್$_2$' ನೋ.

**ಮುರ್ಗಿಲ್** 'ಮುಱುಕಿಲ್$_2$' ನೋ.

**ಮುರ್ಗಳ** 'ಮುಱುಕಿಲ್$_2$' ನೋ.

**ಮುರ್ಗಿ** (ನಾ). ಒಂದು ಬಗೆಯ ಸಸ್ಯ ಮತ್ತು ಅದರ ಕಾಯಿ : 'ಮುರ್ಗಿಕಾಯಿ' ಪರಾ. [ ? ]

**ಮುರ್ಗಿಕಾಯಿ**, **ಮುರಗಿಕಾಯಿ**, **ಮುರುಗಕಾಯಿ**, **ಮುರುಗಿಕಾಯಿ** (ನಾ). ಒಂದು ಬಗೆಯ ಕಾಯಿ : (೯). **ಮುರಗಿಕಾಯಿ** : "ಎಡಮುರಿ, ಮುರುಡಿ . . . ಮುರಗಿಕಾಯಿ" (ಸಸ್ಯಶಿ. ೬೯). **ಮುರುಗಕಾಯಿ** : ಓಮ ಎಂಟು ತೂಕ, ಮುರುಗಕಾಯಿ ನಾಲ್ಕು ತೂಕ . . . ಸಕ್ಕರೆ ೧೨ ತೂಕ, ಇವನ್ನು ಚೂರ್ಣವಂ ಮಾಡಿ (ಶಿಷ್ಯಶಿ. ೮೦). **ಮುರುಗಿಕಾಯಿ** : ಎಡಮುರಿ, ಮುರುಗಿಕಾಯಿ . . . ಕವರ್ಗಿ (ವ್ಯಶಿಗ. ೯೨–೬೩೨). [ಮುರ್ಗಿ + ಕಾಯಿ$_4$ (< ಕಾಯ್$_4$) ]

**ಮುರ್ಗಿನಕೋಡುಸೊಪ್ಪು** (ನಾ). ಒಂದು ಬಗೆಯ ಸಸ್ಯ ಮತ್ತು ಅದರ ಸೊಪ್ಪು : ಕಿರೀಹುಳಿಪ, ಹುಳಿ, ಮುರ್ಗಿನಕೋಡುಸೊಪ್ಪು, ಸಣ್ಣಗೂಗೆ, ಬಿಳಿಕೊಮ್ಮೆ (ವ್ಯಶಿಗ. ೬–೦೨೭).

[ < ಮುರ್ಗಿ + ಕೋಡು$_5$ + ಸೊಪ್ಪು$_2$ ]

**ಮುರ್ಗು** 'ಮೊಟ್ಟು$_1$' ನೋ.

**ಮುರ್ಚೆ** 'ಮುಚ್ಚು$_2$' ನೋ.

**ಮುರ್ತೆ**, **ಮೂರ್ತೆ** (ನಾ). ಈಚಲು, ತಾಳೆ ಮುಂತಾದ ಮರಗಳಿಗೆ ಕಚ್ಚುಮಾಡಿ ಹೆಂಡವನ್ನು ಇಳಿಸುವಿಕೆ : ಕೂಕ್ರ ತನ್ನ ಕುಲಕಸುಬು ಮುರ್ತೆಯನ್ನೇ ಮಾಡಿಕೊಂಡು ಬಂದ (ಒತ್ತಿಗ. ೯೭). **ಮೂರ್ತೆ**.

**ಮೂರ್ತೆ ಮಾಡು** = ಹೆಂಡವನ್ನು ಇಳಿಸುವುದಕ್ಕಾಗಿ ತಾಳೆ, ಈಚಲು ಮುಂತಾದ ಮರಗಳ ಕಾಂಡವನ್ನು ಕಚ್ಚುಮಾಡು: ಗದ್ದೆಯ ಸಮುದ್ರದ ಬದಿಯಲ್ಲಿರುವ ಮರಗಳನ್ನು ಮೂರ್ತೆಮಾಡಿದರು ಬಿಲ್ಲವರು (ತುಳುಜಾ. ೫೯) ; ಎಲ್ಲರ ಕೈಯಲ್ಲು ಮೂರ್ತೆಮಾಡುವ ಕತ್ತಿಗಳು (ಜಪಸ. ೨೫). [ ← ತುಳು. ಮುರ್ತೆ. ಮೂರ್ತೆ ]

**ಮುದಾ೯ರಿ** (ಗು). ಮೂಢಸ್ವಭಾವದ ; ದಡ್ಡತನದ : ತಿಳಿವಳಿಕೆಯಿಲ್ಲದ : ಅವನ ವಿಷಯಕ್ಕೆ ಮಾತ್ರ ನಾನು ಏನನ್ನೂ ಹೇಳಲಾರೆ. ಅವನು ಮೊದಲೇ ಮುರ್ದಾರಿ ಮನುಷ್ಯ (ರೂಢಿ).

[←ಪಾರ. ಮುರ್ದಾರ್ : ಮರಾ. ಮುರ್ದಾರ್. ಮುಡದಾರ್]

**ಮುರ್ದಾರಿಕೆ** (ನಾ). ಮೂಢತನ ; ದಡ್ಡತನ : 'ಮುರ್ದಾರಿಕೆ' ಮಾಡಿ, ಛೀ ಎನ್ನಿಸಿ ನೂರುವರ್ಷ ಬಾಳುವುದಕ್ಕಿಂತಲೂ ಒಳ್ಳೆತನದಿಂದ ಮನುಷ್ಯ ಹತ್ತೇ ವರ್ಷ ಬದುಕಿದ್ದರೆ ಚಂದ (ಒತ್ತಿಗ. ೬೦).

[ಮುರ್ದಾರ್ರ್ರ (P←ಮರಾ. ಮುರ್ದಾರ್) + – ಇಕೆ]

**ಮುರ್ಮುರ** (ನಾ). ಹೊಟ್ಟು ಹಾಕಿ ಮಾಡಿದ ಬೆಂಕಿ ; ಉಮಿಬೆಂಕಿ ; ತುಷಾಗ್ನಿ. [ಸಂ.]

**ಮುಲಕನಾಡು** 'ಮುರಿಕಿನಾಡು' ನೋ.

**ಮುಲಕಿ** 'ಮುಲ್ಕಿ' ನೋ.

**ಮುಲಕೀಪರೀಕ್ಷೆ** 'ಮುಲ್ಕಿ' ಪರಾ.

**ಮುಲಖಿ** 'ಮುಲ್ಕಿ' ನೋ.

**ಮುಲಾಖಿತು** 'ಮುಲಾಖತ್ತು' ನೋ.

**ಮುಲಾಖತ್ತು**, **ಮಿಲಾಖಿತು**, **ಮಿಲಾಖತ್ತು**, **ಮುಲಾಖತು** (ನಾ). ೧. ಹೊಂದಿಕೆ ; ಹೊಂದಾಣಿಕೆ : ಅವರಿಬ್ಬರ ಅಭಿಪ್ರಾಯಗಳು ಮುಲಾಖತ್ತಾಗಲಿಲ್ಲ (ರೂಢಿ). ೨. ಭೇಟಿ ; ಸಂದರ್ಶನ : ಅವರ ಮುಲಾಖತ್ತಿನ ಮ್ಯಾಲಿಂದ ನಿನ್ನ ಅನುಭವಕ್ಕ ಬಂದೇ ಬಂದವ (ಶಾಂತಾಯು. ೬೪) ; ಕುಸುಮಾ ಪ್ರಮೀಳೆಯರ 'ಮುಲಾಖತ್ತು' ಸ್ಮರಣೀಯವಾಗಿದೆ (ಕರುಣಾ. ೨೬ ಖಂಡ). **ಮಿಲಾಖಿತು** : ೨. ತಾವು ಇಲ್ಲಿಗೆ ಬಂದು, ತಮ್ಮ ಮಿಲಾಖತಿನ ಫಾಯಿದೆಯಿಂದ ಸಂತೋಷಪಡಿಸಬೇಕು (ಶಾಕುಂತ್ರು. ೫೬).

**ಮಿಲಾಖಿತ್ತು** : ೨. ಮಿಲಾಖಿತ್ತಿಗೆ ಬರಬೇಕು ಬಂದರೆ ರಾಜ್ಯಕೊಡುತ್ತೇನೆ (ಮುದಶ. ೪-೦೭). **ಮುಲಾಖಿತು** : ೨. ದೇರಣ್ಣ ಮಹಾ ಹುಮ್ಮಸದಿಂದ. ನನ್ನ ಅವನ ಮುಲಾಖಿತಿನಿಂದ ತೊಡಗಿ . . . ಯಾವತ್ತು ವಿಷಯಗಳನ್ನು ವಿವರಿಸಿದನು (ಚಬ್ಬಿಜೀ. ೬).

[← ಅರ. ಹಿಂ. ಮುಲಾಕಾತ್ : ಮರಾ. ಮುಲಾಕತ್, ಮುಲಾಖತ್, ಮುಲಾಕಾತ್]

**ಮುಲಾಜ್** 'ಮುಲಾಜು' ನೋ.

**ಮುಲಾಜು, ಮುಲಾಜ್** (ನಾ). ೧. ದಾಕ್ಷಿಣ್ಯ ; ಭಿಡೆ ; ಸಂಕೋಚ : ನಿಮ್ಮ ಕಚೇರಿಯ ಮರ ದೋಸ್ತಿ ಮುಲಾಜು ಮಡಗುವದು . . . ನ್ಯಾಯ ಮಾಡುವದು, ಇಂಥಾ ಅನ್ಯಾಯದ ಮಾರ್ಗವಿಡಿದು ಹೋಗುವಂಥಾ ಜನರ ಮೇಲೆ ನಮ್ಮ ದಯ ಪ್ರಾಪ್ತವಾಗಿ ಬರಲಿಕ್ಕಿಲ್ಲ (ರಾಜೇಂದ್ರ. ೨೩೪); ಧನಿಗಳ ಮಕ್ಕಳನ್ನು ಸಹ ಮುಲಾಜಿಲ್ಲದೆ ಛಗಳು ಕೋಲಿಂದ ಕಾಯಿಸುವು ದನ್ನು ಕಂಡಿದ್ದಾನೆ (ಸ್ವಕೃಪೊ. ೨); ಮಂಜನು . . . ತಿಮ್ಮಪ್ಪಹೆಗ್ಗಡೆಯ ನೀಚತನವನ್ನು ಮುಲಾಜಿಲ್ಲದೆ ಬಯಲಿಗೆಳೆಯತೊಡಗಿದನು (ಮುಕಿವು. ೩೩೦). ೨. ಹಂಗು ; ಋಣ : ಮದುವೆ ಆಗಿಹೋಗಿದೆ. ಬ್ಬರ ಮುಲಾಜು ಇನ್ನೊಬ್ಬರಿಗಿಲ್ಲ ಸರಿ. ಬೀಗರನ್ನು ಜರೆಯಲು ಆರಂಭಿಸುತ್ತಾರೆ (ಪವ್ವಾರು. ೦೦೩) ; ಮತ್ತೆ ಪದರಿಕೆ ಇಲ್ಲ. ಹಾಗಂತ ಹೆದರಲಿಕ್ಕೆ ತನಗೆ ಯಾರದು ಮುಲಾಜು (ಹೂಶಕ್ಕ. ೯೯). **ಮುಲಾಜ್** : ೧. ನಮಗೆ ಗರ್ಜು ಬಂದಾಗ ನಿಮ್ಮ ಹಣ ಬಾರದೆ ಹೋದರೆ ನಾವು ಮುಲಾಜ್ ಇರಿಸಿ ಕೊಳ್ಳುತ್ತೇವೆಯೋ ? (ಹಾರುಣಾ. ೦೨೦).

[← ಅರ. ಮುಲಾಹಜಾ, ಮುಲಾಹಜ಼ಾ ; ಹಿಂ. ಮುಲಾಹಜಾ ; ಮರಾ. ಮುಲಾಜಾ, ಮುಲಾಇಜಾ, ಮುಲಾಹಿಜಾ]

**ಮುಲಾಮು, ಮುಲಾವು** (ನಾ). ೧. ಚಿನ್ನ, ಬೆಳ್ಳಿ, ಹಿತ್ತಾಳೆ ಮೊದಲಾದ ಲೋಹಗಳಿಗೆ ಮೆರುಗು ಹೆಚ್ಚಿಸಲು ಬಳಿಯುವ ಚಿನ್ನ, ಬೆಳ್ಳಿ ಮೊದಲಾದ ಲೋಹಗಳಿಂದ ಮಾಡಿದ ಲೇಪನ ವಸ್ತು ; ಗಿಲೀಟು : ಚಿನ್ನದ ಮುಲಾಮಿನ ಕೆಲಸವನ್ನು ನೋಡಿ (ಮುಂಶಾಹು. ೪-೧೭೨) ; ಸುಲ್ತಾನನು ಬೇಟೆಗೆ ಹೋಗುವಾಗ . . . ಅವನನ್ನು ಹಿಂಬಾಲಿಸಿ . . . ಚಿನ್ನದ ಮುಲಾಮಿನ ಕವಚದಿಂದ ಅಲಂಕೃತವಾದ ಇನ್ನೂರು ಹಸ್ತಿದಳವೂ ಹಿಂಬಾಲಿಸುತ್ತವೆ (ಕೃಸಾಇ. II. ೦೭೬) ; ಬೆಳ್ಳಿ ಮುಲಾಮಿನ ಹಿತ್ತಾಳೆಲೋಟಕ್ಕೆ ಕೊಟ್ಟಾವರೂ ತೋರು ಜಗಕೆ (ಚಂದ್ರಶೀ. ೩೦-೨೦). ೨. ಗಾಯ, ಹುಣ್ಣು ಮುಂತಾದುವುಗಳನ್ನು ಗುಣಪಡಿಸುವು ದಕ್ಕಾಗಿಯೂ ಸೌಂದರ್ಯವರ್ಧಕಗಳನ್ನು ಮಾಡುವುದಕ್ಕಾಗಿಯೂ ಬಳಸುವ, ಔಷಧದ್ರವ್ಯಗಳಿಂದ ಮಾಡಿದ ಒಂದು ಬಗೆಯ ಜಿಡ್ಡು ಪದಾರ್ಥ : ಗಾಯಕ್ಕೆ ಹಚ್ಚಲು ಮುಲಾಮು ಕೊಟ್ಟರು (ಕಕವು. ೩-೩೭): ಡಾರ್ವಿನಾನನು . . . ಸ್ವತಃ ಒಂದು ಮುಲಾಮನ್ನು ತಯಾರಿಸಿ ತನ್ನ ಹಲವಾರು ಗಾಯಗಳಿಗೆ ಹಾಗಿಸಿದನು (ಪೀಠರು. ೦೨) : ಈ ಮರದ ಹಣ್ಣಿನಿಂದ ಸುವಾಸನೆಯ ಎಣ್ಣೆಯನ್ನು ತೆಗೆದು ಹೆಚ್ಚಾಗಿ ಮುಲಾಮಿಗೆ ಉಪಯೋಗಿಸುತ್ತಾರೆ (ಕೃಸಾಇ. II. ೦೭೭). **ಮುಲಾವು** : ೧. ಚೀನಾದ ಮುಲಾವಿನ ಸಾಮಾನು ೧ ವಿಲಾಸದ ಅರಳೆಲೆ ೭ ಮೊಕಪಟೀ ತುಂಡು (ಎಕ. XIV. ಸಂಶಪ. ೩೯೯-೦ಸೆಯು ಕರಿಂ ; ಕಾ. 1848) ; ಈ ದೇವಸ್ಥಾನದಲ್ಲಿರುವ ಎಲ್ಲಾ ದೇವರಿಗೂ ಸಮರ್ಪಣೆ ಮಾಡಿರುವ ವಸ್ತುಗಳು ಯಾವುವೆಂದರೆ . . . ಬಾಗಿಲಿಗೆ ಚಿನ್ನದ ಮುಲಾವಿನ ಬಾಗಿಲವಾಳೆ (ಪಚಾಪಂ. II. ೦೭೭).

[← ಅರ. ಮುಲಮ್ಮಅ. ಮುಲಮ್ಮಾ ; ಹಿಂ. ಮುಲಮಾ, ಮುಲಮ್ಮಾ ; ಮರಾ. ಮುಲಾಮಾ, ಮುಲಾಮ್ಮಾ ]

**ಮುಲಾವು** 'ಮುಲಾಮು' ನೋ.

**ಮುಲು** (ನಾ). (ಹುಳುಗಳು ಹರಿದಾಡುವುದನ್ನು ಸೂಚಿಸುವ) ಒಂದು ಅನುಕರಣಶಬ್ದ : 'ಮುಲುಗುಟ್ಟು' ಪರಾ.

ಮುಲುಮುಲು (ದ್ವಿರುಕ್ತಿ) : ಇರುವೆಗೂಡಿನ ಹತ್ತಿರ ನಿಂತದ್ದರಿಂದ ಕಾಲುಮೇಲೆಲ್ಲಾ ಇರುವೆಗಳು ಮುಲುಮುಲು ಅಂತ ಹತ್ತಿಬಿಟ್ಟುವು (ರೂಢಿ).

**ಮುಲುಕು**$_1$, **ಮುಕ್ಕು**$_2$, **ಮುಲುಗು**, **ಮುಲ್ಗು**, **ಮೂಲಗು**, **ಮೂಲುಗು** (ಕ್ರಿ). ೧. ಹೆರಿಗೆಯ ಸಮಯದಲ್ಲಿ ಬೇನೆಯನ್ನು ತಾಳಲಾರದೆ ತಿಣುಕು, – ಮುಕ್ಕಿರಿ : "ಮುಲುಕು – ಪ್ರಸವನ ಕ್ರಿಯಾಯಾಂ" (ಕವಂ) : ಮುಲುಕಿ ಬೆಳಗನ್ನೆಗ ಬಸುಜೆಯಿಸುಗಳೆದ ಕೂಸಂ ಹೆಜುವ ಜೆದಿಂ . . . ಎನ್ನಿರವಳೆದು ನಿಃಫಲವೆನಿಸಿತಲ್ಲಾ (ಶಕೃ. ೩೭-೦೩) ; ತಲೆ ಪೆಟ್ಟಿ ಮಾಜೆಯಿರೆ ಗರ್ಭಭಾರದಿ ಪುಲ್ಲೆ ಮುಲುಕುತಿರ್ದುದು ಬೇನೆ ಮಸಗಿ (ನಾಗಕು. ೦೩-೪): ಮುಲುಕಿ ಬೇನೆ ಯೊಳಿರುವ ಪುಲ್ಲೆಯ ಕಂಡು (ನಾಗಕ. ೦೩-೨೯). ೨. ಹೆಚ್ಚಾದ ವ್ಯಥೆ, ತಳಮಳ ಮುಂತಾದುವುಗಳಿಂದ ಸಣ್ಣ ದನಿಯಲ್ಲಿ ನರಳು: ಮಾಚಿಕಬ್ಬೆ ಸ್ವಲ್ಪ ಮುಲುಕಿದರು (ಚಾಂಶಕಾ. ೩೭೭); ವೆಂಕಪ್ಪಯ್ಯನವರು ಮುಲುಕುತ್ತಾ ಪಜಾರದಲ್ಲಿ ಮಲಗಿದ್ದರು (ಬಿಚ್ಚಾರಿ. ೪) ; ಹನುಮಪ್ಪ ಮೂಕನಂತೆ ಮುಲುಕುತ್ತಾ ಕೂತನು (ಚಂದ್ರಶೀ. ೬೨). ೩. ಭಾರವಾದ ವಸ್ತುವನ್ನು ಎತ್ತುವ ಮೊದಲಾದ ಹೆಚ್ಚು ಶ್ರಮಸಾಧ್ಯವಾದ ಕೆಲಸಗಳನ್ನು ಮಾಡುವಾಗ ಆಯಾಸದಿಂದ ಕೂಗು, – ಧ್ವನಿಮಾಡು : (ಕಾಶಕೋ. ೩೩). ೪. ಸರಿ ; ಚಲಿಸು ; ಕದಲು : "ಅಲುಗು . . . ಮಿಸುಕು, ಮುಲುಕು, ಸರಿ" (ಕಂಪಾಹು. ೭೬); ಎರಡು ಕಡೆ ಜೋರ್ಜಿಗಳಿಗೂ ಪೂರ್ತಾ ಜನ ನಿಂತು . . . ಪೆದ್ದ ಕೊಡದೆ ಹೋದರೆ ಈ ತೇರು ಮುಲುಕುವುದಿಲ್ಲ (ಗರುಡಾ. ೬೨). **ಮುಕ್ಕು**$_2$ : ೩. ಆ ವೃದ್ಧರು ತಮ್ಮ ಕೈಯಲ್ಲಿದ್ದ ಚೀಲದ ಭಾರದಿಂದಾಗಿ ನಡೆಯಲಾರದೆ ಮುಕ್ಕುತ್ತಿದ್ದರು (ರೂಢಿ). **ಮುಲುಗು**: ೨. ಅಲರ್ದ ಚಂಪಕವೃಕ್ಷಕೆರಗಿಯಳೆವೆಳದಯುಬಳಗದಂದದಲಿ ಮುಲುಗುತ ಬರ್ಪಯರೆಜೀವಿಗಳ ನೋಡಿ (ಹಹಕೋ. ೦೨-೯೭); ಲಲನೆ ಯರಿಗೆಳೆಯರ್ಕಳಿಗೆ ವೃದ್ಧರಿಗೆ ಬೇನೆಗಳು ಮುಸುಂಕಿದವು . . . ಮುಲು ಗುವ ಪಲುಂಬುವ ನರಳ್ವ ಹೊಯಿಕೊಳ್ವ ಬೊಬ್ಬಾಟವಿಡಿದುದಾಗ (ಹಲ್ಲಕ. ೦೦-೨೩); ಒಳಗೆ ಹಾಸಿಗೆಯ ಮೇಲೆ ನವಾಬರು ಸಣ್ಣಗೆ ಮುಲುಗುತ್ತಾ ಮಗ್ಗುಲಿಗೆ ತಿರುಗಿದರು (ದೌಂಕ್. ೦೦). **ಮುಲ್ಗು**: ೧. ಹೆರುವ ವೇದನೆ ಯಿಂದ ಮುಲ್ಗು ವಳರಸಿ(ಆರ್ಗಾ. ೩-೬). **ಮೂಲಗು**: ೨. 'ಮೂಲಗಿಸು' ಪರಾ. **ಮೂಲುಗು** : (೪).

[ ದೇ. ॥ ತಮಿ. ಮುಕ್ಕು ; ಮಲ. ಮುಕ್ಕು, ಮೂಲುಕ ; ತುಳು. ಮುಕ್ಕುರು ; ತೆಲು. ಮುಕ್ಕು, ಮುಲುಗು, ಮೂಲ್ಗು ; ಕೋಲಾ. ಮೂಲ್ಗ್ ; ಕೋತ. ತೊದ. ಮುಕ್]

**ಮುಲುಕು**$_2$ (ನಾ). ೧. ಹೆರಿಗೆಯ ಸಮಯದಲ್ಲಿ ನೋವಿನಿಂದ ಮುಕ್ಕಿರಿ ಯುವಿಕೆ,—ತಿಣುಕುವಿಕೆ : "ಪ್ರಸವವೇದನಮಾಸಹೃತ್ವ ಮುಲುಕೆಂದಕ್ಕು" (ಕಾ್ಯಪಂ. ೬೦): ಆರು ಪೆತ್ತವಳಿಗೆ ಮೂರು ಹೆತ್ತವಳು ಮುಲುಕು ಕಲಿಸಿದಳಂತೆ (ಗಾದೆ). ೨. ನರಳುವಿಕೆ ; ನರಳಾಟ; ಒದ್ದಾಟ; ಮರುಕ್ಷಣವೇ . . . ಜೀವ ಸಂಕಟದಿಂದ ನರಳುವ ಕೊನೆಯಿರದ ಮುಲುಕು (ಅಪಾಶ. ೦೯).

[< ಮುಲುಕು$_1$. / ಮಲ. ಮೂಳಲ್; ತೆಲು. ಮೂಲುಗು, ಮೂಲ್ಗು]

**ಮುಲುಕು**$_3$ 'ಮುಲ್ಕಿ' ನೋ.

**ಮುಲುಖಿ** 'ಮುಲ್ಕಿ' ನೋ.

**ಮುಲುಖು** 'ಮುಲ್ಕಿ' ನೋ.

**ಮುಲುಗು** 'ಮುಲುಕು$_1$' ನೋ.

**ಮುಲುಗುಂದ** 'ಮುಳ್ಗುಂದ' ನೋ.

**ಮುಲುಗುಟ್ಟು** (ಕ್ರಿ). ೧. ಹುಳುಗಳು ಒತ್ತೊತ್ತಾಗಿ ಹರಿ,-ಸರಿದಾಡು ; ತೇವವಿರುವ ಸ್ಥಳದಲ್ಲಿ ಗೆದ್ದಲುಹುಳುಗಳು ಮುಲುಗುಟ್ಟುತ್ತಿರುತ್ತವೆ

(ಕಿೂ). ೨. ಹುಳುಗಳು ಮೈಮೇಲೆ ಹರಿದಾಡಿದಂತೆ ಭಾಸವಾಗು : ಬೆಳಗ್ಗೆ ಕೈ ಮೇಲೆ ಹಲ್ಲಿ ಬಿದ್ದಿದ್ದು ಆ ಜಾಗ ಇನ್ನೂ ಮುಲುಗುಟ್ಟುತ್ತಾ ಇದೆ (ಕಿೂ). ೩. (ಅಲಂ) ಪರದಾಡು ; ಚಡಪಡಿಸು : ಎಲ್ಲ ಜಹಗೀರಿಗಳಿಗೂ ಆಯಾಸವಾಗಿತ್ತು; ಯಾವುದಾದರೊಂದು ನಿರ್ಣಯಕ್ಕೆ ಬಂದು ತಮಗೆ ಬಿಡುಗಡೆಯಾದರೆ ಸಾಕೆಂದು ಮುಲುಗುಟ್ಟುತ್ತಿದ್ದರು (ಶ್ರೀಮು. ೦೦೬) ; ಸೈಕೆ, ನಿಶ್ಚೇತನಳಾಗಿ ನೆಲದ ಮೇಲೆ ಬಿದ್ದು, ಮುಲು ಗುಟ್ಟುತ್ತಾ . . . ನಿಟ್ಟುಸಿರಳು (ಕಲ್ಲಕಾ. ೯೭). [ಮುಲು + ಕುಟ್ಟು₁]

**ಮುಲುವುನ್ನೆ** (ನಾ). ಒಂದು ಬಗೆಯ ಔಷಧೀಸಸ್ಯ : ಹಿಪ್ಪಲಿ . . . ಮುಲುವುನ್ನೆಬೇರು, ನೆಲಗುಳ್ಳ, ಕೊನ್ನಾರಿಗೆಡ್ಡೆ ಇವನ್ನು ಕಷಾಯಮಾಡಿಟ್ಟು ಕೊಡಲು ಕಫ . . . ಛರ್ದಿ ಸಹ ಗುಣವಾಗುವುವು (ಸಳಪ್ಪ. ಶಂ. ೯೩೩).

[ ? ]

**ಮುಲ್ಕಿ**, ಮುಲಕಿ, ಮುಲಖಿ, ಮುಲುಕ್ಕು, ಮುಲುಖಿ, ಮುಲುಖು (ಗು). ೧. ಕಂದಾಯಕ್ಕೆ ಸಂಬಂಧಿಸಿದ ; ಕಂದಾಯದ : ಅಲ್ಲಿಂದ ಮುಂದೆ ಮುಲ್ಕೀಕಚೇರಿಗಳ ಸಮೂಹದಲ್ಲಿ ಪ್ರವೇಶಿಸಿದರು (ಗ್ರಹಕ. ೬೪). ೨. ದೇಶೀಯ ; ಸ್ಥಳೀಯ : (ಕ). (ನಾ). ೩. ರೆವಿನ್ಯೂ ಇಲಾಖೆಗೆ ಸಂಬಂಧಿಸಿದುದು ; ಕಂದಾಯದ ವಿಷಯಕ್ಕೆ ಸೇರಿದುದು : ಈ ಕೋರ್ಟಿನಲ್ಲಿಯೇ . . . ಮುಲ್ಕಿ ಎಂದರೆ ರೆವಿನ್ಯೂ ಬಾಬಿನಲ್ಲಿ, ರೈತರು ಮುಂತಾದವರ ಫಿರ್ಯಾದುಗಳನ್ನು ಸಹ ವ್ಯಾಸ ರಾಯರು ಕೇಳಿ ವ್ಯವಸ್ಥೆ ಮಾಡುತ್ತಿದ್ದರು (ಮಹಾಶಂ. II, ೨೫); ಮುಲ್ಕಿ ಮತ್ತು ನ್ಯಾಯಖಾತೆಯಲ್ಲಿ ಕಂಡುಬಂದ ಈ ಮನುಷ್ಯಸ್ವಭಾವವೇ ದಂಡಿನಲ್ಲಿ ಇನ್ನೂ ಹೆಚ್ಚಿನ ಸ್ವರೂಪದಲ್ಲಿ ಅನುಭವಕ್ಕೆ ಬಂದರೆ ಸೋಜಿಗವೇನು ? (ಹುಚ್ಚಕ್ರ. ೩೩). ೪. ಮಾಧ್ಯಮಿಕಶಾಲೆಯ ಕೊನೆಯ ವರ್ಗದ ಪರೀಕ್ಷೆ: ನೀನು ಹೇಗಾದರೂ ಮುಲ್ಕಿ ಆಗಿರುವಿ. ಅದರ ಬಲದಿಂದ ಎಲ್ಲಿಯಾದರೂ ಶಿಕ್ಷಕನಾಗಿ ಬಾಳು (ಹಣ್ಣಿ. ೦೩೯) ; ಹುಡುಗಿಯರಿಗೆ ಇಂಗ್ಲೀಷ್ ಬೇಡವೇ ಬೇಡ. ಮುಲ್ಕೀ ಪಾಸಾದರೆ ಸಾಕು (ಮೂರುದಾ. ೯೭). **ಮುಲಕಿ** : ೧. ಮುಲಕೀ ಕೆಲಸವು ಯೋಗ್ಯರೀತಿಯಿಂದ ನಡೆದಿರುವದೆಂಬುದನ್ನು ಪ್ರತ್ಯಕ್ಷ ವಾಗಿ ನೋಡಬೇಕು (ಶಿಖಾಕೊ. ೩೩). ೨. ಸರಕಾರದವರು ಕಾದಿಟ್ಟ ಅಡವಿಯ ನೆರೆಹೊರೆಯ ಊರವರಿಗೆ ಮುಲಕೀ ಅಧಿಕಾರಿಗಳು ಅಡವಿಗೆ ಬೆಂಕಿ ಹತ್ತ ಗೊಡಬಾರದೆಂತ ಆಗಾಗ್ಗೆ ತಿಳಿಸುತ್ತಿರಬೇಕು (ಶುಂಠಿಯ. ೫-೪). ೪. ನೆರೆಮನೆ ಪಾಂಡ್ಯಾ . . . ಈ ಸಲ ಮುಲಕಿ ಕುಂತಾನು (ಬಾಶಂ. ೯). **ಮುಲಖು** : ೫. ಸ್ಥಳ; ಪ್ರದೇಶ : ನಮ್ಮ ಪ್ರೇಮಬಂದ ಈಗೀಗ ಮಾರ ವಾಡಿ ಮುಲಖ ಬಿಟ್ಟು ಬಂದಾವ್ (ನೋಡಿಶಿ. ೯೨); ಇಮು ಜಾಲಿ ನಿಮ್ಮ ಮುಲಖದಾಗ್ ಬಹುತ್ ಅದಾವ್ (ನೋಹಿ. ೩೯). **ಮುಲುಕ್ಕು**: ೫. ಟೀಪುಸುಲ್ತಾನರ ಕಡೆಯ ಮನುಷ್ಯರು ತಮ್ಮ ಮುಲುಕಿನಲ್ಲಿ ಬರಲಿಕ್ಕೆ ಬಿಡದ ಹಾಗೆ, ಬಂದೋಬಸ್ತು ಮಾಡುವದು (ಶಾಕೇಂದ್ರ. ೯೫). **ಮುಲುಖಿ** : ೫. ನೃಸಿಂಹವಾಡಿಯು ಕೊಲ್ಲಾಪುರದ ಛತ್ರಪತಿಗಳ ಜಹಗೀರಿನ ಮುಲುಖಿ ವಾಗಿದ್ದು, ವಾಡಿಯ ಸುತ್ತಮುತ್ತಲು . . . ಬ್ರಿಟಿಶ್ ಮುಲುಖ ಇರುತ್ತದೆ (ದೀಪಶ. ೨೦). **ಮುಲುಖು** : ೫. ನಾನೀಗ ಏನಾದರೂ ದುಡುಕಿದರೆ, ಬಂತು ಪ್ರಾಣಕ್ಕೆ ಸಂಚಕಾರ! ಅಯ್ಯೋ, ಇದು ಮಹಮ್ಮ ದೀಯರ ಮುಲುಖಾಗಿದ್ದರೆ ! (ಅಶಾಂಪ. ೦೬೦).

**ಮುಲ್ಕೀಪರೀಕ್ಷೆ**, **ಮುಲಕೀಪರೀಕ್ಷೆ** = ಮಾಧ್ಯಮಿಕ ಶಾಲೆಯ ಕೊನೆಯ ವರ್ಗದ ಪರೀಕ್ಷೆ : ಶಿಶುನಾಳಶರೀಫಸಾಹೇಬರು . . . ಕನ್ನಡ ಮುಲ್ಕೀಪರೀಕ್ಷೆಯವರೆಗೆ ಅಧ್ಯಯನಮಾಡಿದರು (ಕಪೀಠ. ೩೩) ; ಜಮುಳ ವಿದ್ಯಾಭ್ಯಾಸಂಗವು ಮುಲ್ಕೀಪರೀಕ್ಷೆಯವರೆಗೆ . . . ಸಾಗಿತ್ತು (ಜಾಗಿಶ. ೦೦); ಸುಮತಿಗೆ ಈಗ ೨೦ ವರುಷ ವಯಸ್ಸು. ಕನ್ನಡ ಮುಲಕೀಪರೀಕ್ಷೆ ಪಾಸಾಗಿ . . . ಶಿಕ್ಷಕಿಯಾಗಿದ್ದಾಳೆ (ಅನೋಲ. ೩೩).

[← ಅರ. ಮುಲ್ಕ್; ಹಿಂ. ಮುಲಕೀ, ಮುಲ್ಕೀ; ಮರಾ. ಮುಲಕೀ, ಮುಲಖೀ, ಮುಲೂಕ್, ಮುಲೂಖ್, ಮುಲ್ಕೀ ]

**ಮುಲ್ಕಿಖಾತೆ** (ನಾ). ಕಂದಾಯದ ವಿಭಾಗ : ರೆವಿನ್ಯೂ ಇಲಾಖೆ : ನಾನು . . . ಮುಲ್ಕಿಖಾತೆಯಲ್ಲಿ ಗುಮಾಸ್ತೆಯ ಕೆಲಸವನ್ನು ಹೇಗೆ ಸರಿಯಾಗಿ ಮಾಡಬೇಕೆಂಬುದನ್ನು ಕಲಿತುಕೊಂಡೆನು (ಹೇಮಂತ. ೦೯೩).

[ಮುಲ್ಕಿ + ಖಾತೆ₂]

**ಮುಲ್ಕೀಪರೀಕ್ಷೆ** ' ಮುಲ್ಕಿ ' ಪರಾ.

**ಮುಲ್ಕು** ' ಮುಲುಕು₁ ' ನೋ.

**ಮುಲ್ತಾನಿ** (ಗು). ೧.(ಅಲಂ) ದೊಡ್ಡಸ್ತಿಕೆಯ ; ಆಡಂಬರದ : ತವರನ್ನು ಬಾಯಿತುಂಬಾ ಹಳಿಯೋದಿಕ್ಕೆ ಬರುತ್ತಲ್ವೆ ನಿಮಗೆ ಬಾಯಿದ್ದ ? ನೋಡ ಬೇಕಾಗಿತ್ತು, ನೀವು ಮಾಡಿದ ಮುಲ್ತಾನೀ ಅಳಿಯತನವನ್ನು (ಕೂಸಿಸಂ. ೩). (ನಾ). ೨. ಮುಲ್ತಾನವೆಂಬ ದೇಶ ಮತ್ತು ಅಲ್ಲಿಗೆ ಸಂಬಂಧಿಸಿದ ವ್ಯಕ್ತಿ : ಮುಲ್ತಾನೀ ಎಂಬ ಪೂರ್ವಪರ್ಷಿಯಾದೇಶದ ಯವನರ ಪುರದ ನಿವಾಸಿ (ಪುಂತಠೀ. ೩೯೦). ೩. [ಸಂಗೀತ] ಒಂದು ರಾಗದ ಹೆಸರು: ಬಿಲಾವಲ್, ಮುಲ್ತಾನಿ, ರಾಮಕಲಿ ರಾಗಗಳು ಕ್ಷಯರೋಗವನ್ನೂ . . . ಗುಣಪಡಿಸುವುವೆಂಬ ಭಾವನೆ ಉತ್ತರಭಾರತದಲ್ಲಿದೆ (ಭಾರತ. ೫೯೪) ; ಗೌಡಿಯು ರಾಮಕ್ರೀಮೇಲದಲ್ಲಿ ಹುಟ್ಟಿದೆ . . . ಮುಲ್ತಾನೀರಾಗವು ಇದರ ಪೂರ್ವೀಕ (ಪುಂತಠೀ. ೩೯೯). [← ಹಿಂ. ಮರಾ. ಮುಲತಾನೀ]

**ಮುಲ್ಲ** ' ಮುಲ್ಲಾ ' ನೋ.

**ಮುಲ್ಲಂಗಿ** ' ಮೂಲಂಗಿ ' ನೋ.

**ಮುಲ್ಲಗಿವಿ** (ನಾ). ತಿರುಚಿಕೊಂಡಿರುವ ಕಿವಿ : ಮುರುಟುಗಿವಿ : ನಿನ್ನ ಒಂದು ಕಿವಿ ಆಗಲೇ ಯಾರೋ ಕಿತ್ತು ಹಾಕ್ಯವರೆ (ಆದಕ್ಕೋಸ್ಕರವೇ ನನ್ನೂರ ಶಾನುಭೋಗರಿಗೆ 'ಮುಲ್ಲಗಿವಿ ಶಾನುಭೋಗ' ಅಂತ ಅಡ್ಡ ಹೆಸರೂ ಇತ್ತು) (ಹಡ್ಡಿರು. ೦೯೯) ; ಒಂದು ಕಿವಿ ಇರಲೇ ಇಲ್ಲ ಶಾನುಭೋಗರಿಗೆ. ಇನ್ನೊಂದು ಮುಲ್ಲಗಿವಿಯಾಗಿತ್ತು (ಹಡ್ಡಿರು. ೦೩೦). [ಮುಲ್ಲ? + ಕಿವಿ₃]

**ಮುಲ್ಲಶಾಸ್ತ್ರ** ' ಮುಲ್ಲಾಶಾಸ್ತ್ರ ' ನೋ.

**ಮುಲ್ಲಾ**, ಮುಲ್ಲಿ₁ (ನಾ). ೧. ಮುಸಲ್ಮಾನರ ಧರ್ಮಗುರು : ಮುಲ್ಲಾನು ಹೇಳುವುದನ್ನೋ ಅಥವಾ ಜೆಟರ್ ಪುರೋಹಿತ ಹೇಳುವುದನ್ನೋ ಕೇಳಿ (ಕುಲದಾ. ೬೦). ೨. ಅರಬ್ಬಿ, ಪಾರಸಿ ಮುಂತಾದ ಭಾಷೆಗಳನ್ನು ಹೇಳಿಕೊಡುವವನು : ಮೌಲ್ವಿ : (ಕ). **ಮುಲ್ಲ₁** : ೧. ' ಮುಲ್ಲಶಾಸ್ತ್ರ ' ಪರಾ. [←ಅರ. ಮೌಲಾನಾ ; ಹಿಂ. ಮುಲ್ಲಾ ; ಮರಾ. ಮುಲನಾ, ಮುಲಾನಾ, ಮುಲ್ಲಾ]

**ಮುಲ್ಲಾಶಾಸ್ತ್ರ**, ಮುಲ್ಲಶಾಸ್ತ್ರ (ನಾ). ಮುಸಲ್ಮಾನರ ಧರ್ಮಗ್ರಂಥ : ಕೊರಾನು : ಕಾಲವನು ವಿರಾರಿಂ ಬಾಳುವರೆ ಶ್ರೀವರ್ಧಮಾನವ್ಯಾಳೆ ಮುಲ್ಲಾಶಾಸ್ತ್ರವಾದುವು ಸಕಲ ಸಮ್ಯಕ್ತ್ವ (ಅಜ್ಞಪು. ೩೪-೩೦) ; ಆ ದಿವಸ ಮಸೀತಿಯಲ್ಲಿ ನೀನು ಮುಲ್ಲಾಶಾಸ್ತ್ರ ಓದುವುದನ್ನು ನೀನು ನನಗೆ ಮೊದಲು ತಿಳಿಸಲೇ ಇಲ್ಲ (ಕುಸುಗ. ೦೩). **ಮುಲ್ಲಶಾಸ್ತ್ರ** : ಮುಲ್ಲಶಾಸ್ತ್ರದ ನೆಲೆಯ ಗುಜುತಬೀಯದೆ ಬಳ್ಳಿಕೂಗನು ಕೂಗಿ ಬಗುಳಿ ಬಾಯಾಡುವಂಥ ಕಳ್ಳ ತುರುಕರಿಗೆಲ್ಲ ವೀರಸ್ವರ್ಗವುಂಟೆ (ಕಷಕ.೦೨೬-೪). [ಮುಲ್ಲಾ + ಶಾಸ್ತ್ರ]

**ಮುಲ್ಲಿ** (ನಾ). (ಉಕ) ನಾಜೂಕು ; ಸೂಕ್ಷ್ಮ : ನನ್ನ ಮಾತ ನೀ ನಡಸ ದಿದ್ದರೆ ನಿನ್ನ ಲಗ್ನ ಹ್ಯಾಂಗ ಆಗತದ ನೋಡತೀನಿ ವಿಶ್ವಾಸ್ನ ಮುಲ್ಲೀ ಮಾಡಿ ಕೊಡಸ್ತೀನಿ (ದೀಕಹ. II, ೨೬೭). [← ಅರ. ಮುಲಾಯಮ್, ಮುಲಾಯಿಮ್ : ಹಿಂ. ಮುಲಾಯಮ್ ; ಮರಾ. ಮುಲಾಕೀಮ್, ಮುಲಾಯಮ್ ]

**ಮುಲ್ಲಾಕ**, ಮುಲ್ಲೂಕ (ನಾ). ಮುಸಲ್ಮಾನ ಸೈನಿಕ ; ಮಹಮ್ಮದೀಯ ಯೋಧ : ಮೋಡಿಯ ಹರಿಗೆಯ ಭಟರು ನೇಜೆಯಗಳ ನೀಡುತಿರುವ

ಮುಲ್ಲುಕರ ಪಾಡುಗೆಡಿಸಿ ಹೊಯ್ದು ಜಯಿಟ್ಟ ದೆಸೆದೆಸೆಗೋಡಿಸಿದುದ ನೇವೇಳ್ವೆ (ಕಂಪ. ೦೩-೯೦). **ಮುಲ್ಲೂಕ** : ಕರೆಸಿದ ತಳವಾರ ರಾಮನ ಬೇಗದಿ ಕರಸಿದ ಮಲ್ಲ ಮುಲ್ಲೂಕರ (ಬಿಕ್ಕ. ರಾ. ೬-೪೩).

[←ಅರ. ಮುಲ್ಕ್; ಹಿಂ. ಮುಲುಕ್, ಮುಲ್ಕ್; ಮರಾ. ಮುಲೂಕ್, ಮುಲೂಖ್ = ಪ್ರಾಂತ, ರಾಜ್ಯ, ದೇಶ]

**ಮುಲ್ಲೂಕ** 'ಮುಲ್ಲುಕ' ನೋ.

**ಮುಲ್ಲೋಕ** 'ಮೂಲೋಕ' ನೋ.

**ಮುವಜ್ಜಲ್** (ನಾ). (ಮಹಮ್ಮದೀಯ ಕಾಯಿದೆ ಪ್ರಕಾರ) ಇಂತಿಷ್ಟು ವಾಯಿದೆಯೊಳಗೆ ಸಲ್ಲಿಸಬೇಕೆಂದು ನಿಗದಿಯಾಗುವ ಸ್ತ್ರೀಧನ: ೧೧೩. ಕೇಳಿದ ಕೂಡಲೆ ಕೊಡಬೇಕಾದ ಮುವಜ್ಜಲ್ ಎಂಬ ಸ್ತ್ರೀಧನದ ಬಗ್ಗೆ ಒಬ್ಬ ಮಹಮ್ಮದೀಯನಿಂದ. ಮೂರು ವರ್ಷಗಳು ೧೧೪. ಮುಂದೆ ಯಾವ ಸಮಯದಲ್ಲಿಯಾದರೂ ಕೊಡಬೇಕಾದ ಮುವಜ್ಜಲ್ ಎಂಬ ಸ್ತ್ರೀಧನಕ್ಕಾಗಿ ಒಬ್ಬ ಮಹಮ್ಮದೀಯನಿಂದ. ಮೂರು ವರ್ಷಗಳು (ಗ್ರಾ ವಶ. ೬೪೯). [←ಫಾರ. ಮುಅಜ್ಜಲ್, ಮುಅಜ್ಜಿಲ್]

**ಮುವಾನೆ** (ನಾ). ಮೂರು ಹಾನೆಗಳಷ್ಟು ಅಳತೆ: ಕೊಡಗಿಯ ಶಂಕರ ನಾರಾಯಣದೇವರಿಗೆ ಮುವಾನೆ ಅಕಿಯ ನಯಿವೇದ್ಯ (ಕೌಶಾ. IX–ii, ೪೦೯-೯; 1380). [<ಮೂಱು + ಹಾನೆ]

**ಮುವೊಲ್ಪೋಗೆ** (ನಾ). ಒಂದು ಊರಿನ ಹೆಸರು: ತೊಱಕಿಕ್ಕಾರಾಟ್ಟಿಯ ಪೆಕ್ಕವಿಯ ಮುವೊಲ್ಪೋಗೆಯಕೂಡಲೂರು (ಎಕ. III (R), ಗುಂಡ್ಲುಪೇ. ೬೬-೩; ಕಿ. 750). [ ? ]

**ಮುವ್ವತ್ತು** 'ಮೂವತ್ತು' ನೋ.

**ಮುಶಲ** (ನಾ). ೧. ಒಂದು ಬಗೆಯ ಆಯುಧ; ಗದೆ. ೨. ಒನಕೆ. ೩. ದಂಡ; ಕೋಲು. [ಸಂ.]

**ಮುಶಲಿ₁** (ನಾ). ಗದೆಯನ್ನು ಧರಿಸಿರುವವನು; ಗದಾಧರ; ಬಲರಾಮ. [ಸಂ. ಮುಶಲಿನ್]

**ಮುಶಲಿ₂** (ನಾ). ೧. ಹಲ್ಲಿ: "ಮುಶ[ಕಾಕಂ. ಸ]ಲಿ ಗೃಹಗೋಧಿಕಂ ಗೃಹಕಿಕಂ. ಹಲ್ಲಿಯುದು" (ಮಂಗರಾ. ೪೮-೦೪). ೨. ಒಂದು ಬಗೆಯ ಸಸ್ಯ; "ನೆಲತಾಳೆ" (ಸಸ್ಯಾ. ೯೨). [ಸಂ. ಮುಶಲೀ]

**ಮುಶಲಿಕೆ** (ನಾ). ೧. ಹಲ್ಲಿ; ಗೌಳಿ. ೨. ಹಲ್ಲಿಯ ಜಾತಿಗೆ ಸೇರಿದ ಒಂದು ಬಗೆಯ ಪ್ರಾಣಿ; ಉಡು: "ಗೋಧಂ ಮುಶಲಿಕಾಖ್ಯಮೆನಲುಡುವೆನಿಕ್ಕುಂ" (ಮಂಗರಾ. ೪೮-೦೦). [ಸಂ. ಮುಶಲಿಕಾ]

**ಮುಶಾಯಿರಾ** 'ಮುಶೈರಾ' ನೋ.

**ಮುಶಿ** 'ಮೂಸೆ' ನೋ.

**ಮುಶೀರಿ** (ನಾ). ಸಿಂಹಾಸನ (?): ಮುತ್ತು ಮಾಣಿಕ ರತ್ನ ವಜ್ರ ವೈಡೂರ್ಯದಿಂದರ್ಚಿಯ ಪ್ರೈದೊಡವುಗಳನಿತ್ತೂ ಹಸ್ಕರಿಕೆ ಹಲ್ಲಣ ಸಮ ಕಟ್ಟನು ಎತ್ತ ಬಾರದ ಮುಶೀರಿಯನು ತರಿಸಿಕೊಟ್ಟು (ಅಮುತಾಂ. ೩-೦೯).

[ಪ ಇದು 'ಔಶೀರ' ಎಂಬುದರ ಅಪಲಿಖಿತವಿರಬಹುದು]

**ಮುಶೈರಾ**, ಮುಶಾಯಿರಾ (ನಾ). ಅನೇಕ ಕವಿಗಳು ಒಂದೆಡೆ ಸೇರಿ ತಮ್ಮ ತಮ್ಮ ಕವಿತೆಗಳನ್ನು ವಾಚನ ಮಾಡುವ ಸಭೆ; ಕವಿಗೋಷ್ಠಿ: ಈವತ್ತು ಸಂಜೆ ರವೀಂದ್ರಕಲಾಕ್ಷೇತ್ರದಲ್ಲಿ ಪ್ರಖ್ಯಾತಕವಿಗಳ ಮುಶೈರಾ ನಡೆಯಲಿದೆ (ರೂಢಿ). **ಮುಶಾಯಿರಾ**: ನಮ್ಮ ಭಾಷೆಯಲ್ಲಿ ತೀರ ಹೊಂದಿಕೊಂಡು ಹೋದ . . . ಶಬ್ದಗಳೆಂದರೆ ಕಚೇರಿ, ಮುಶಾಯಿರಾ, ಗೈರಮರ್ಜಿ (ಚಾಶ್ರೀ. ೦೬೬).

[←ಅರ. ಮುಶಾಅರಹ್; ಹಿಂ. ಮುಶಾಯರಾ]

**ಮುಷಕರ** 'ಮುಷ್ಕರ₁' ನೋ.

**ಮುಷಿತ** (ಗು). ೧. ಕದಿಯಲ್ಪಟ್ಟ; ಕಳುವಾದ. ೨. ಕಳೆದು ಹೋದ; ನೀಗಿದ; ಸೂರೆಹೋದ: ಹಮಕಾಂತನಾರ್ಕವಾಳಾಲಯದಿಂ ಸಿರಿ ಸಂಜೆಪೊಱು ಬರೆ ಮುಷಿತಸುಪೋದಯೆಯಾಗಿ ಪುಗಿಸುತದ್ವೀತಿಯಿಂದೆ ಮುಚ್ಚುವವೊಲಾಯ್ತು ನಳಿನನಿಕೋಚಂ (ಪರ್ಶ್ವಪು. ೬-೨೪). ೩. ನಾಶಮಾಡಿದ; ಧ್ವಂಸಗೊಳಿಸಿದ. ೪. ಸುತ್ತುವರಿದ; ಮುತ್ತಲ್ಪಟ್ಟ. (ನಾ). ೫. ಕಳುವಾದುದು; ಕದ್ದೊಯ್ದುದು: "ಮುಷಿತಂ, ಮುಷಿತಂ – ೨ ಕದಿಯಲ್ಪಟ್ಟದ್ದು" (ಸಿದ್ಧಾಂತಿ. ೩೯೬). ೬. ಕದಿಯುವುದು; ಕಳ್ಳತನ. [ಸಂ.]

**ಮುಷ್ಕ** (ನಾ). ೧. ಅಂಡ; ವೃಷಣ: "ಮುಷ್ಕಂ ಅಂಡಃ . . . ಮುಷ್ಕಿಃ – ಈ ೬ ಅಂಡಂ" (ಕಲಾಯು. ೯೬-೩೬೯); ತಲೆ ವೋಪಂ . . . ವೃಶ್ಚಿಕವಸತಿ ಗುದಂ ಮೇಹನಂ ಚಾಪ ಸಂಭೂನಿಳಯಂ ಮುಷ್ಕಂ ಮೃಗಾಖ್ಯಂ ಕಟಿಘಟವುರು ಮಿನೋದಯಂ ಬಾಲಮುಷ್ಕಂ (ಜಾತಕ. ೩-೩); ಆ ಮಹಾಮುನಿಯ ಶಾಪದೊಳಿಂದ್ರ ಮುಷ್ಕಾಂಡರಹಿತಘೋರಾಕೃತಿಯನು ತಾಮುಸದೊಳಾಳ್ದ (ವಂಕಾರಾ. ೦-೦೬-೦). ೨. ಒಂದು ಬಗೆಯ ಮರ; ಮೊಕ್ಕೆ. [ಸಂ.]

**ಮುಷ್ಕಕ** (ನಾ). ೧. = ಮುಷ್ಕ ೧. ೨. = ಮುಷ್ಕ ೨: "ಗೋಲೀಢಃ . . . ಮೋಕ್ಷಃ, ಮುಷ್ಕಕಃ – ೬ ಮೊಕ್ಕೆಮರದ ಹೆಸರು" (ಸಿದ್ಧಾಂತಿ. ೦೨೦). [ಸಂ.]

**ಮುಷ್ಕರ₁**, ಮುಷಕರ (ನಾ). ೧. ಹಟ; ಮೊಂಡುತನ; ಆಗ್ರಹ: ಉಣುವಾಗ ಪೀನಘಂಟೆಗಳುಲಿದು ಬತ್ತಿಗಳಾನಿಸುತ ಕರ್ಣದಲಿ ಕಾಲವ ಸಾನಗಾಯ್ದಿ ಹರೆಲ್ಲ ಭವ್ಯರು ಮುಷ್ಕರಗಳಿಂದ (ಜಿಶ್ವಪು. ೯-೨೪). ೨. ಸೊಕ್ಕು; ದುರಹಂಕಾರ: (೪). ೩. ಯಾವುದೇ ಸಂಘ ಅಥವಾ ಸಂಸ್ಥೆಯ ಕೆಲಸಗಾರರು, ವಿದ್ಯಾರ್ಥಿಗಳು ಮುಂತಾದವರು ತಮ್ಮ ಬೇಡಿಕೆಗಳು ಮನವಿಗಳಿಂದ ಈಡೇರದಿದ್ದಾಗ ಅವನ್ನು ಕಾರ್ಯಗತ ಮಾಡಿಸುವ ಉದ್ದೇಶದಿಂದ ಮೂಲಸಂಸ್ಥೆಯ ವಿರುದ್ಧವಾಗಿ ಹೂಡುವ ಸಂಪು.— ಚಳುವಳಿ: ಎಷ್ಟೇ ಕಷ್ಟ ಬಂದರೂ ಮುಷ್ಕರಗಳನ್ನು ಹಿಡಿಯದೆ ತಮ್ಮ ನ್ಯಾಯವಾದ ಬೇಡಿಕೆಗಳನ್ನು ಶಾಂತರೀತಿಯಲ್ಲಿ ಪಡೆಯಬೇಕು (ಶಾಗ್ಗಿ. ೪ ಪೂರಂಜುಟು); ಈ ವರ್ಷ ಮುಷ್ಕರದ. ಪರಿಣಾಮವಾಗಿ ಮಾಲೀಕ ಅವನನ್ನು ವಜಾಮಾಡಿದ್ದನು (ಪ್ರಸಜು. ೦೩೪). **ಮುಷಕರ**: ೧. ವೆಂಕಟ್ರಾಮಶಾಸ್ತ್ರಿಗಳಿಗೆ . . . ನಾಲ್ಕು ತಡವೆ ಪ್ರವರ್ತಿ ಆಗಿ ತೀರಿ ಹೋದದ್ದರಿಂದ ಅವರ ಕುಟುಂಬ ಸಹಗಮನ ಮಾಡಬೇಕೆಂಬದಾಗಿ ಯಾರು ಹೇಳಿದಾಗ್ಯು ಕೇಳದೆ ಮುಷಕರ ಮಾಡಿಕೊಂಡು ಅಪ್ಪಣೆ ಕೊಡ್ಡಿ ಬೇಕೆಂಬದಾಗಿ ಯಿದಾರೆ (ಪ್ಯಾಅಂ. ೦೯೩೯, ೩೩-೬; 1805).

**ಮುಷ್ಕರ ಹಿಡಿ** = ೧. ಹಟಹಿಡಿ; ಆಗ್ರಹಪಡಿಸು: ನನ್ನ ಮನೆಯವಳು . . . ನನ್ನೊಡನೆ ಬಂದೇ ತೀರುತ್ತೇನೆಂದು ಮುಷ್ಕರ ಹಿಡಿದಿದ್ದಾಳೆ (ಹುತ್ತುಹು. ೯೩). ೨. ಸಂಪು ಹೂಡು; ಸತ್ಯಾಗ್ರಹವನ್ನು ಆರಂಭಿಸು: ಪರೀಕ್ಷೆಗಳನ್ನು ಮುಂದೂಡಬೇಕೆಂದು ವಿದ್ಯಾರ್ಥಿಗಳು ಮುಷ್ಕರ ಹಿಡಿದಿದ್ದಾರೆ (ರೂಢಿ). ೩. (ವಿರೋಧದಿಂದ) ಕಾರ್ಯವನ್ನು ನಿಲ್ಲಿಸು; ಅಸಹಕಾರವನ್ನು ಸೂಚಿಸು: ಮೇಲಕ್ಕೆ ಏರುವ ಧೂಮಸ್ತೋಮವನ್ನು ಮೂಗು ಬಾಯಿಗಳು ಮುಷ್ಕರ ಹಿಡಿಯುವ ತನಕ ಹೀರಿ ಹೀರಿ . . . ಮಂತ್ರ ಜಪಿಸಿದೆ (ಹರಿಟು. ೩೪). **ಮುಷ್ಕರ ಹೂಡು** = ಮುಷ್ಕರ ಹಿಡಿ ೨: ಕೆಲಸಗಾರರಿಗಂತೂ ಏನೂ ಉಪಯೋಗವಾಗಲಿಲ್ಲ. ಅಸಮಾಧಾನವಾದಾಗ ಮುಷ್ಕರ ಹೂಡುವುದೊಂದೇ ಅವರಿಗಿದ್ದ ದಾರಿ (ಶಿಲ್ಪಪಾ. ೭೪). [ದೇ.॥ ತಮಿ. ಮುಷ್ಕರಮ್, ಮುಕ್ಕರಮ್; ಮಲ. ಮುಷ್ಕರಮ್, ಮುಷ್ಕು=ಬಲ; ತೆಲು. ಮುಷ್ಕರ]

**ಮುಷ್ಕರ₂** (ನಾ). ಗಂಗರ ಒಬ್ಬ ರಾಜನ ಹೆಸರು: ಶ್ರೀಮತ್ಕೊಂಗಣಿವೃದ್ಧರಾಜಸ್ಯ ಪ್ರಣೀತಮುಷ್ಕರದ್ವಿತೀಯ ನಾಮಧೇಯಸ್ಯ ಸರ್ವವಿದ್ಯಾ

ಪಾರಗಸ್ಯ ಸೂನೋಃ (ಎಕ. IV (R). ಚಾಮರಾ. ೩೯೭-೯; ೧೭ನೆಯ ಶ): ಮುಷ್ಕರನಾಮಧೇಯಃ ತಸ್ಯ ಪುತ್ರಃ ಚತುರ್ದಶವಿದ್ಯಾಸ್ಥಾನಾಧಿಗತ ವಿಮಲಮತಿಃ (ಎಕ. III (R), ನಂಜ. ೯೦೨-೯; ೧೦೪). [ ? ]

**ಮುಷ್ಕರಕಾರ** (ನಾ). ಸಂಪು ಹೂಡುವವನು ; ಚಳುವಳಿ ನಡೆಸುವವನು: ರಾಜಕೀಯಪ್ರೈದಿಗಳು, ಸಮಾಜವಾದಿಗಳು ಮತ್ತು ಮುಷ್ಕರಕಾರರು ಅಂಥವರು (ಕೃಷು. ೯೦೩). [ಮುಷ್ಕರ₁ + —ಕಾರ₁ (< —ಕಾರ)]

**ಮುಷ್ಕಿ**. ಮುಸಿಗೆ (ನಾ). ಕೈಗಳನ್ನು ಬೆನ್ನಿನ ಹಿಂಬದಿಗೆ ತಂದು ಕಟ್ಟುವಿಕೆ ; ಹೆಡಮುರಿಗೆ : ನಿರ್ದಯವುಳ್ಳ ಆಳು ಆ ಕ್ಷಣ ಹೇಳಲಾಗ ಕಟ್ಟ ಮುಷ್ಕಿಗಳನ್ನು ಬೇಡಿಯೊಲು ಬೇಗ ನವಾಬರ ಕಡೆ ದಾರಿನವರು . . . ಒಳಕ್ಕೆ ಬಂದು ಆ ೬೦ ಮಂದಿಯನ್ನೂ ಹಿಡಿದು (ಕಂಠೀ. ೦೯) ; ಮುಷ್ಕೀ ಕಟ್ಟಿ ಪಹರೆಯಲ್ಲಿ ಇರಿಸಿದರು (ಕಾಮಕಂ. ೨೩೦) ; ಬಾಚಿಗನನ್ನು ಹಿಡಿದು . . . ಹಗ್ಗಗಳಿಂದ ಮುಷ್ಕೀಕಟ್ಟಿ . . . ತಳ್ಳಿದರು (ಕರ್ನಾಮಂ. IV. ೦೦೦). ಮುಸಿಗೆ : 'ಮುಸಿಗೆಬಿಗಿ' ಪಠಾ. [ ? ]

**ಮುಷ್ಕಿಲ್**, ಮುಷ್ಕೀಲು (ನಾ). ಕಷ್ಟ ; ಕ್ಲೇಶ ; ತೊಂದರೆ : ಬರುವ ಲಾಭದಲ್ಲಿ ಈ ದೊಡ್ಡ ಕುಟುಂಬದ ಪಾನಬಚಾವದ ಕೆಲಸವೇ ಮುಷ್ಕಿಲ್ ಆಗಿತ್ತು (ರೇಹ. I, ೦೩೨) ; ನವಕರಿಯನ್ನು ಸಹಜಾಸಹಜೀ ಬಿಡುವದು ಮುಷ್ಕಿಲ್ (ರೇಹ. II, ೩೨೪). **ಮುಷ್ಕೀಲು** : ನಮ್ಮ ಸೀಮೆಗೆ ಒಂದು ತೃಣ ಬಾರದಂತೆ ಪಥಮಾರ್ಗವೆಲ್ಲಾ ಈ ಏಳು ಎಂಟು ತಿಂಗಳಿಂದ ಬಂದು ಮಾಡಿ, ಬಹಳ ಮುಷ್ಕೀಲು ಮಾಡಿದ್ದಾರೆ (ರಾಕೇಂದ್ರ. ೦೩೬).

[← ಅರ. ಮುಶ್ಕಿಲ್; ಹಿಂ. ಮುಶ್ಕಿಲ್, ಮುಸ್ಕಿಲ್; ಮರಾ. ಮುಶಕೀಲ್, ಮುಶ್ಕೀಲ್, ಮುಸಕೀಲ್]

**ಮುಷ್ಕೀಲು** 'ಮುಷ್ಕಿಲ್' ನೋ.

**ಮುಷ್ಟ₁** (ಗು). ೧. ಕದ್ದ ; ಕಳವು ಮಾಡಿದ : ದೋಚಿದ. (ನಾ). ೨. ಕಳ್ಳತನ ; ಚೌರ್ಯ. [ಸಂ.]

**ಮುಷ್ಟ₂**. ಮುಟ್ಟಸ. ಮುಟ್ಟಸು (ನಾ). ಮಂತ್ರ : ಮಾಟ : ಅಭಿಚಾರ. ನೆಲ ಸುಟ್ಟು ಬೆಲ್ಲ ಹಾಕಿದರೆ ಎಲ್ಲ ಮರೆತು ಹೋಗಿ ಸೇರಿದ ಮನೆಯನ್ನು ಬಿಡುವುದಿಲ್ಲವಂತೆ . . . ಅಂತೂ ನೆಲ ಸುಟ್ಟು ಬೆಲ್ಲದನ್ನ ಹಾಕಿ ಮಾಡಿದ 'ಮುಷ್ಟ' ಸುಳ್ಳಾಗಲಿಲ್ಲ (ಜೀವಕು. ೦೩೨); ಅವಳು ಹೆರಿಗೆ ಮಾಡಿಸುವುದು . . . ದನಕರುಗಳಿಗೆ ಕಾಯಿಲೆಯಾದರೆ ಮುಷ್ಟ ಮಾಡುವುದು . . . ಇತ್ಯಾದಿಗಳಲ್ಲಿ ತೊಡಗಿ ಜೀವನಯಾಪನೆ ಮಾಡುತ್ತಿದ್ದಳು (ಕುಲಕು. ೩೬೦). **ಮುಟ್ಟಸ** : ಬೇರು ಬಳ್ಳಿಗಳನ್ನು ತಂದು ಖಾಹಿಲೆಯಾದವರಿಗೆ ಮುಟ್ಟಸ ಮಾಡೋದು—ಏನಾದರೂ ಸಮಯ ಉಳಿದರೆ. ಜನಿವಾರ ಮಾಡ್ತ ಕೂರೋದು (ಹೊಸಕ್ಕ. ೨೯೯); ಹೀಗಾದರೂ ಇದು ಬದುಕಿಕೊಳ್ಳಲಿ ಎಂದು ಮುಟ್ಟಸಮಾಡಿ ಕತ್ತಿಗೆ ಹತ್ತು ಬಗೆಯ ತಾಯಿತ ಕಟ್ಟಿ (ಗ್ರಾಕ್ಕ. ೦೩೪). **ಮುಟ್ಟಸು** : ನಾಲ್ಕುದಿಕ್ಕಿಗೂ 'ಮುಟ್ಟಸು' ಮಾಡಿ ಕಟ್ಟಿದರಾಯಿತು. ಆಗ ಕದ್ದರೆ, ಕದ್ದವರು ರಕ್ತಕಾರಿ ಸಾಯುತ್ತಾರೆ (ಚುಕೊ. ೦೩೮).

[< ಸಂ. ಮುಷ್ಟ ?]

**ಮುಷ್ಟಾಮುಷ್ಟಿ** (ನಾ). ಪರಸ್ಪರ ಮುಷ್ಟಿಗಳಿಂದ ಹೊಡೆದಾಡುವುದು ; ಗುದ್ದಾಟ : ಚೋಣಿಯಲಿ ನಾಯಕರು ಒಟ್ಟೈಸಿ ಕೀಚಕನ ಮುರಿದರೆಯುಟ್ಟ ಹೊಪ್ಪುರು ಪುರಕೆ ಮುಷ್ಟಾಮುಷ್ಟಿಯಲಿ ಗುರು ಭೀಷ್ಮ ರವಿಸುತರಡ್ಡ ಗಟ್ಟಿದರು (ಕುಮ್ಮಾ. ೬೦೩. ೨೩-೩); ಕೇಶಾಕೇಶಿ ಬಳಿಕ ದಂತಾದಂತಿ ಯೆಂದೆನಿಪ್ಪಾ ಬೆಡಗಿನಿಂದೆಸೆವ ಮುಷ್ಟಾಮುಷ್ಟಿಯಿಂ ಪೋರೆ ಪೊಡವಿ ಕಂಪಿಸೆ . . . ಆ ವೀರಭದ್ರಂ ಕೃತಕಫಣಿಗಳೀರ್ವರು ಭಾವು ಕಾದಿದರಲಾ (ಜಕ್ಕೃಚ. ೩-೬-೦೩). [ಸಂ.]

**ಮುಷ್ಟಿ₁**. ಮುಷ್ಟೆ. ಮುಸುಟೆ (ನಾ). ೧. ಒಂದು ಬಗೆಯ ಮರ : "ಗಿರಿವೃಕ್ಷಃ—ಮುಷ್ಟಿ" (ಟಸಾ. ೯೬). ೨. ಒಂದು ಬಗೆಯ (ಸೊಪ್ಪಿನ) ಗಿಡ : ಬಹುಮೂತ್ರವಾಗಿ ಇರುವಂಥವರುಗಳಿಗೆ ಕೊಡುವ ಪಥ್ಯವರ್ಗಂಗಳ ಕ್ರಮವು . . . ಮುಷ್ಟಿಯಸೊಪ್ಪು, ಮಜ್ಜಿಗೆ ೧ ಹೊನಗೊನ್ನೆ (ಅಶ್ವಶಿ. ೦೩೬). **ಮುಷ್ಟೆ** : ೨. "ದ್ಯುತಿಯೆನಲು ಮುಷ್ಟೆಯಕ್ಕು" (ಚುಂಗಸಾ. ೯೩-೯೬); "ಕಟುಕಾ _ ಮುಷ್ಟೆ, ಕಡಸಿಗ" (೬ಕಧಿ. ೨೩). **ಮುಸುಟೆ** : ೨. "ಮುಸುಟೆ — ಖುಕ್ಷಗಂಧೆ, ಭಗಲಾಂತಿ, ಅಮೇಗಿ, ವೃದ್ಧದಾರಕ, ಜಂಗ" (ನಾತರಾ. ೯). [ದೇ.॥ ತವಿ. ಮುಚಿಟ್ಟಿ; ತೆಲು. ಮುಷ್ಟಿ, ಮುಸಿಂಡಿ. ಮುಸಿಡಿ. ಮುಸ್ಟಿ; ಹಿರ್ಜಿ. ಮೂಟಿ. / ಸಂ. ಮುಸಟೀ]

**ಮುಷ್ಟಿ₂** (ನಾ). ೧. ಬೆರಳುಗಳನ್ನು ಮಡಿಚಿದ ಮುಂಗೈ : ಮುಚ್ಚಿದ ಮುಂಗೈ; ಮುಟ್ಟಿಗೆ: "ಪಿ(ಹಿ)ಡಿಕೆಯ್ಸಿದ ಕೆಯ್ಯ ಕುಡಿತೆಯುಂ ಮುಷ್ಟಿ ಯೆಂಬುದು" (ಹಲಾಯು. ೬೮-೩೬೩) ; ಅಬ್ಬರಿಸಿ ಬಲುಮುಷ್ಟಿಗಳ ಸಭೆಕಬ್ಬಿ ಸುತ್ತ ಕಯ್ಯುಡ್ಡಾಕಿದರು ಸುರರುಬ್ಬರಿಯ ಸುಳಿಸಿದರು ಮುಷ್ಟಿಯ ಸೂಳು ಪಾಳಿಸಲಿ (ಕೂರಾ. ೯-೩-೯) ; ರ್ಘುಗರ್ಘುಗಿಸೆ ಕೌಕ್ಷೇಯಕಂ ರಾಜಗೌರವಕೆ ಮುಷ್ಟಿಯಲಿ, ಛಂದೋಗಮಾನದಿಂದೆ ಮನದಿಂದೆ ನಡೆದರ್ (ಚಿತ್ರಾಂಗ. ೬೯-೨೯೩೦). ೨. ಮಲ್ಲಯುದ್ಧದ ಒಂದು ವರಸೆ; ಮುಷ್ಟಿಯಿಂದ ಹೊಡೆಯುವಿಕೆ : ಗುದ್ದುವಿಕೆ : ಪಲತೆಱದ ಹೊಯ್ಲು ರಂಜಿಸೆ ಪಲತೆಱ ದೋಜೆಗಳ ಕತಿಯೊಳಾಸನಗತಿಯೊಳು ಪಲತೆಱದ ಮುಷ್ಟಿಯೊಳು ನಿರ್ಮ್ಮಳ ಮನೆ ತಿಳಿವಲ್ಲೆ ಬಿಟ್ಟದೇವಂ ಬಲ್ಲಂ (ಎಕ. XII, ತಿಪ್ಪಟ. ೦೭-೨೯; 1216 ?): ಹೊದಜುಗಿಡಿಗಳ ಕೇಸುರಿಯ ಹಾರದಲಿ ಪರಿತಂದಹಿತ ವಳಪತಿಯೆದೆಯ ನೊದೆದುದು ನೆಲಕೆ ನಟ್ಟುದು ನಾಲ್ಕು ಮುಷ್ಟಿಯಲಿ (ಕುಮ್ಮಾಶ. ೩-೬೬). ೩. ಮುಚ್ಚಿದ ಕೈಯಲ್ಲಿ ಹಿಡಿಯುವಷ್ಟು ಪ್ರಮಾಣ : ಹಿಡಿಯಲ್ಲಿ ಅಡಗುವಷ್ಟು ಪ್ರಮಾಣ : ಆ ಮುದ್ದೆಯನ್ನು ನೀನು ಹೇಗೆ ತಿನ್ನುತ್ತೀ ? ನಿನಗೆ ಬಲವಾದ ಅನ್ನ ಇದ್ದರೆ ಒಂದು ಮುಷ್ಟಿಯಾದರೂ ಹಿಡಿಯುತ್ತದೆ (ಕುರಕು. ೨೨). ೪. ಕತ್ತಿ ಮೊದಲಾದ ಆಯುಧಗಳ ಹಿಡಿ.- ಹಿಡಿಕೆ : "ತ್ಸರುಃ, ಮುಷ್ಟಿಃ — ಈ ೨ ಪಿ(ಹಿ)ಡಿ" (ಹಲಾಯು. ೩೮-೩೨೯). ೫. ಕೈಯಿಂದ ಹಿಡಿಯಲು ಅನುಕೂಲವಾದ ಮಧ್ಯಭಾಗ.— ನಡುವಣ ಭಾಗ : "ಬಿಲ್ಲ ಹೆದೆ ಜೀವೆ ಸಿಂಜಿನಿ ಮೌರ್ವಿ ಜ್ಯಾಗುಣಮೆನಿಕ್ಕು ನಡು ಮುಷ್ಟಿಯಕ್ಕುಂ" (ಮಂಗರಾ. ೬೬-೩೩). ೬. ಉದ್ದವನ್ನು ಅಳೆಯುವ ಒಂದು ಅಳತೆ : ಅಂಗುಲವ ನಾಲ್ಕ ಕೂಡಲು ಮುಷ್ಟ [ಷ್ಟಿ] ಯಾರದುದೆ ಹಸ್ತ ಚತುರಕೆ ದಂಡು (ಖಾಸ್ಕರ. ೩೨-೦೦). ೭. ಭಿಕ್ಷೆ : ಮುಷ್ಟಿಯಂ ಬೇಡಿ ತಂದಾ ದ್ರವ್ಯದೊಳಗೆ ತನ್ನಿಷ್ಟಗುರುವಿಂಗೆ ನಿರ್ಭರಭಕ್ತಿಯಿಂದ ಸಂತುಷ್ಟಿ ಯಪ್ಪಂದದಿಂ ನಿತ್ಯದಾನಂ ಮಾಡಿ (ಸಮ್ಯಕ್ತ್ವ. ೬-೩); ಧೃತಭಕ್ತ ದ್ವಿಜವೇಷ ಮನುಡುಗದೆ ಕೈಕೊಂಡು ಬಂದು ಮುಂದೆ ನಿಲುತ್ತಂ ಮಡದಿತಲೆರನ್ನೆ ಮುಷ್ಟಿಯನೊಡನಿತ್ತೊಡೆ ಸುಂದರೇಶನೋವಂಜಿನಿನ್ನಂ (ಹಾಲಾಸ್ಯ. ೨-೬-೯೦). ೮. ಕದಿಯುವುದು. ೯. ವೃಷಣ ; ಅಂಡ : "ಮುಷ್ಕಂ . . . ಸಂಗ್ರಾಹಃ, ಮುಷ್ಟಿಃ — ಈ ೬ ಅಂಡಂ" (ಹಲಾಯು. ೩೩-೩೬೯); ಸಂಗ್ರಾಹಂ ಮುಷ್ಟಿ ಮುಷ್ಕಂ ವೃಷಣಮೆಂದೆನಲು ಲಿಂಗದೆಡೆಯಂಡಮಕ್ಕು" (ಮಂಗರಾ. ೯೬-೦೯). ೧೦. ಅಸ್ತ್ರಪ್ರಯೋಗವನ್ನು ಮಾಡುವ ಮಂತ್ರ : ತನಗೆ ದೇವೇಂದ್ರನಿತ್ತ ಐಂದ್ರಮೆಂಬ ದಿವ್ಯಾಸ್ತ್ರಮುಮಂ ನೈಷ್ಟಿಕಮೆಂಬ ಮುಷ್ಟಿಯುಮಂ ಕೆಯ್ಕೊಂಡು (ಕಂಶಕಾ. ೬-೩೬ ಪ) ; ಅವಸುಗ್ರಪಾಶುಪತ ಬಾಣದಿನಲ್ಲದೆ ಸಾಯನಿಂತವಂ ಹರನೊಸೆದಿತ್ತುಮೇನದಱ ಮುಷ್ಟಿಯ ನೀಯನೆ . . . ಎಂದು ಚಕ್ರಿ ಶಿವನಲ್ಲಿಗೆ ಕೊಂಡೊಗೆದಂ ಕಿರೀಟಿಯುಂ (ಕಂಶಕಾ. ೮೦-೦೩೦) ; "ಅದಱ ಮುಷ್ಟಿಯಂ = ಅದರ ಮಂತ್ರವನ್ನೂ (ಟಿ)" (ಕಂಶಟೀ. ೯೨೯); "ಮುಷ್ಟಿ—ಮಂತ್ರ, ಪ್ರಯೋಗ ಕ್ರಮ" (ಕಂಶಕಾ. ೯೦೬೫). ೧೧. [ನಾಟ್ಯ] ಇಪ್ಪತ್ತು ನಾಲ್ಕು ಅಸಂಯುತಹಸ್ತಗಳಲ್ಲಿ ಒಂದು : ನಾಲ್ಕುಬೆರಳುಗಳನ್ನು ಮಡಿಚಿ ಹೆಬ್ಬೆರಳನ್ನು ಅವುಗಳ ಮೇಲೆ ಇಟ್ಟು ತೋರುವ ಒಂದು ಬಗೆಯ ಹಸ್ತವಿನ್ಯಾಸ :

ನಾಟ್ಯಶಾಸ್ತ್ರದಲ್ಲಿ ಹೇಳಿರುವ ಅಸಂಯುತ ಹಸ್ತಗಳು ಯಾವುವೆಂದರೆ—೧. ಪತಾಕ, ೨. ತ್ರಿಪತಾಕ . . . ೭. ಮುಷ್ಟಿ (ಅಭಾಪ್ರ. ೯೭). 'ಮುಷ್ಟಿಕಸ್ವಸ್ತಿಕ ಪರಾ. [ಸಂ.]

**ಮುಷ್ಟಿಕ** (ನಾ). ೧. ಅಕ್ಕಸಾಲಿಗ ; ಚಿನಿವಾರ : "ನಾಡಿಂಧಮಃ, ಕಳಾದಃ, ಸುವರ್ಣಕಾರಃ, ಮುಷ್ಟಿಕಃ — ಈ ಳಿ ಅಕ್ಕಸಾಲೆ" (ಕಅಭಿಧಾ. ೧೬–೯೩೯) ; "ನಾಳಿಂಧಮಂ ಕಳಾದಂ ಮುಷ್ಟಿಕನದಕ್ಕಸಾಲೆಯೆನಿಸಿಕ್ಕು" (ಮಂಗರಾ. ೦೦೦–೦). ೨. ಮುಷ್ಟಿಯಿಂದ ಮಾಡುವ ಯುದ್ಧ ; ಗುದ್ದಾಟ ; ಮುಷ್ಟಾಮುಷ್ಟಿ. ೩. = ಮುಷ್ಟಿ ೧೧ : 'ಮುಷ್ಟಿಕಸ್ವಸ್ತಿಕ' ಪರಾ. ೪. ಕಂಸನ ಆಸ್ಥಾನದಲ್ಲಿ ಇದ್ದು, ಕೃಷ್ಣಬಲರಾಮರೊಡನೆ ಸೆಣಸಿ ಹತನಾದ ಒಬ್ಬ ಜಟ್ಟಿ. [ಸಂ.]

**ಮುಷ್ಟಿಕಸ್ವಸ್ತಿಕ** (ನಾ). [ನಾಟ್ಯ] ಮೂವತ್ತು ಬಗೆಯ ನೃತ್ತಹಸ್ತಗಳಲ್ಲಿ ಒಂದು ; P "ಒಂದು ಕೈಯನ್ನು ಅರಾಲಹಸ್ತದಲ್ಲಿ ಆವೇಷ್ಟಿತಹಸ್ತಕರಣದಿಂದಲೂ ಮತ್ತೊಂದು ಕೈಯನ್ನು ಅಲಪಲ್ಲವ ಹಸ್ತದಿಂದಲೂ ಅನೇಕಾವರ್ತಿ ಸುತ್ತಿಸಿ ಎರಡು ಕೈಗಳಿಂದಲೂ ಕಟಕಾಮುಖಹಸ್ತವನ್ನು ಮಾಡಿ ಒಂದನ್ನೊಂದು ಮುಟ್ಟದಂತೆ ಕೈಗಳನ್ನು ಸ್ವಸ್ತಿಕಾಕಾರದಲ್ಲಿ ಹಿಡಿಯುವುದು" (ಲಾಕ್ಷರಂ. ಗದ್ಯಾನುವಾದ. ೨೩೯) : ಚತುರಸ್ರ . . . ಮುಷ್ಟಿಕಸ್ವಸ್ತಿಕ . . . ವಲಿತ, ಲಲಿತ — ಈ ಮೂವತ್ತು ನೃತ್ತಹಸ್ತಂಗಳ್ (ಲಾಕ್ಷರಂ. ೨–೯೯ ಪ). [ಸಂ.]

**ಮುಷ್ಟಿಕೀಲು** (ನಾ). ಮುಂಗೈಯ ಕೀಲು ಹಿಡಿದುಕೊಳ್ಳುವ ಒಂದು ಬಗೆಯ ರೋಗ : ೨೭ ತೆರಣದ ಬೀಜವಂ ಮೊಸರ ನೀರಿಂದ ತೇದು ತಣಿಗೆಗೆ ಮೆತ್ತಿ ಬಿಸಿಲಲ್ಲಿ ಇರಿಸಲು ತೈಲಂ ಬರುವುದು. ಆ ತೈಲವಂ ಪೂಸಿಕೊಂಡರೆ ಮುಷ್ಟಿಕೀಲು ಕಳೆವುದು (ವೈದ್ಯ. ೩೩).

[ಮುಷ್ಟಿ₂ + ಕೀಲು ( < ಕೀಲ್ )]

**ಮುಷ್ಟಿಕೆ** (ನಾ). ಮುಷ್ಟಿ ; ಹಿಡಿ : "ಮುಷ್ಟಿಕಾ — ಮುಟ್ಟಿಗೆ" (ಕಪುರ. ೨೩೩ ತ್ರಪೋ). [ ಸಂ. ಮುಷ್ಟಿಕಾ ]

**ಮುಷ್ಟಿಗೆ** 'ಮುಟ್ಟಿಗೆ₃' ನೋ.

**ಮುಷ್ಟಿಗೆಯ್** (ಕ್ರಿ). ೧. ಕೈಯ ಬೆರಳುಗಳನ್ನು ಮಡಿಸಿ ಹಿಡಿಯಾಗಿ ಮಾಡು ; ಮುಷ್ಟಿಹಿಡಿ : ಕಯ್ಯ ಮುಷ್ಟಿಗೆಯ್ದು ಅಳೆಯೆ [ಪಾಠಾಂತರ ಕೈಯಂ ಮುಷ್ಟಿಗೈದಳೆಯೆ] ರತ್ನಿಯಕ್ಕುಂ (ಮಂಗರಾ. ೯೩–೯). ೨. ಹಿಡಿಗೆ ಒಳಪಡುವಂತೆ ಮಾಡು : ಮುಷ್ಟಿಗೆಯ್ದು ಮಯೂರಪಿಂಛಸಮೂಹವಂ ನೆಗೆವುತ್ತ ತಾವಷ್ಟು ಮಂತ್ರಿಸಿ ಬೀಸಲಾತನ ತಾಪಮಾಜದೆ ಪೆರ್ಚಿರಲ್ (ಜಾತಕ. ೪–೦೯–೨೭). [ ಮುಷ್ಟಿ₂ + ಕೆಯ್₁ ]

**ಮುಷ್ಟಿಗ್ರಾಹ್ಯ** (ಗು). ೧. ಹಿಡಿಯಲ್ಲಿ ಹಿಡಿಯಬಹುದಾದ ; ಮುಷ್ಟಿಯಲ್ಲಿ ಅಡಗುವ : ಮಧುಮಾಸಕುಸುಮಸಮೃದ್ಧಿಯಂತೆ ವಿಜಾತಿಯುಂ ಮದನಚಾಪಲತೆಯಂತೆ ಮುಷ್ಟಿಗ್ರಾಹ್ಯಮಧ್ಯೆಯುಂ . . . ಎನಿಸಿದೇಜುಂ ಜವ್ವನೆಯ ರೂಪಾತಿಶಯಮಂ ನಿಮೆಯಿಕ್ಕದೆ ನೋಡುತ್ತುಂ (ಕಾದಂಬ. ೯೯). (ನಾ). ೨. ಹಿಡಿಯಲ್ಲಿ ಅಡಗುವಂಥದು ; ಮುಷ್ಟಿಯಲ್ಲಿ ಗ್ರಹಿಸಬಹುದಾದುದು : ಪಿಡಿಯೆನಿಪ್ಪ ನುಡಿ ಮುಷ್ಟಿಗ್ರಾಹ್ಯದ ಪೆಸರುಂ ಕಬ್ಬಿಣಯ ಮೆಸರಿವನಜಾ (ತಕುಂ. ೦೯) ; ಈ ಎಲ್ಲ ವೈವಿಧ್ಯಮಯವಾದ ರೂಪಗಳೆಲ್ಲವೂ ದೃಷ್ಟಿಗ್ರಾಹ್ಯವೇ ಹೊರತು ಮುಷ್ಟಿಗ್ರಾಹ್ಯವಲ್ಲ (ಶೌಂದಸ. ೯೯). [ಸಂ.]

**ಮುಷ್ಟಿಘಾತ** (ನಾ). ಮುಷ್ಟಿಯಿಂದ ಹೊಡೆಯುವಿಕೆ ; ಗುದ್ದುವಿಕೆ. [ಸಂ.]

**ಮುಷ್ಟಿಘಾತ** (ನಾ). ಮುಷ್ಟಿಯಿಂದ ಹೊಡೆಯುವುದು ; ಗುದ್ದುವುದು : ಮಲ್ಲಯುದ್ಧದ ದೋಷಗಳಲ್ಲಿ ಒಂದು : ಕಳಂಬೊಕ್ಕು ನಿರಿಸುಗೆಯ್ದು ನಖಹತಿ ದಶನಹತಿ ಪದಪಾತಂ ಮುಷ್ಟಿಪಾತಮೆಂಬ ದೋಷಂಗಳಿಂ ಪೊರ್ದದ ನಾಲ್ಕುಂ ಸ್ಥಾನದೊಳಂ . . . ಪಲತೆಜದ ಪಾತಂಗಳೊಳಂ ನೆಜೆದು (ಚಂದ್ರಪ್ರ. ೩–೭೭ ವ). [ಸಂ.]

**ಮುಷ್ಟಿಪ್ರಶ್ನೆ** (ನಾ). ಹಿಡಿಯಲ್ಲಿ ಅಡಗಿಸಿರುವುದನ್ನು ಬೇರೊಬ್ಬರು ಕಂಡುಹಿಡಿಯುವ ಸಮಸ್ಯೆ : ಕನಕದಾಸರ . . . ಬಾಳೆಯ ಹಣ್ಣಿನ ಕಥೆಯನ್ನು ಪವಾಡವೆಂದು ಹೇಳಲಿಕ್ಕೆ ಬಾರದಿದ್ದರೂ ಎರಡನೆಯ 'ಮುಷ್ಟಿಪ್ರಶ್ನೆ'ಯಂತೂ ಹೇಳಿ ಕೇಳಿ ಪವಾಡ (ಕರ್ನಾಟ. ೬೯).

[ ಸಂ. ಮುಷ್ಟಿಪ್ರಶ್ನಾ ]

**ಮುಷ್ಟಿಪ್ರಹಾರ** (ನಾ). ಮುಷ್ಟಿಯಿಂದ ಕೊಡುವ ಪೆಟ್ಟು, —ಹೊಡೆತ : ಗುದ್ದು : ಇನ್ನು ಕೈದುಗಳೇಕೆ ವೃಥಾ ಮುಷ್ಟಿಪ್ರಹಾರ ಪ್ರಕಟಸತ್ವರಿಗೆ (ಕುಮಾ. ೦೯–೩೯). [ಸಂ.]

**ಮುಷ್ಟಿಬಂಧ** (ನಾ). ೧. ಮುಷ್ಟಿಯನ್ನು ಬಿಗಿಮಾಡಿ ಹಿಡಿದುಕೊಳ್ಳುವಿಕೆ : "ಮುಷ್ಟಿಬಂಧಃ, ಸಂಗ್ರಾಹಃ — ೨ ಗಟ್ಟಿಯಾಗಿ ಹಿಡಿಯನ್ನು ಹಿಡಕೊಳ್ಳುವದಕ್ಕೆ ಹೆಸರು" (ನಿಘಂ. ೩೩೯). ೨. ಒಂದು ಹಿಡಿಯಲ್ಲಿ ಅಡಗುವಷ್ಟು ಪ್ರಮಾಣ. [ಸಂ.]

**ಮುಷ್ಟಿಬಲ** (ನಾ). ಮುಂಗೈಯ ಬಲ, —ಸಾಮರ್ಥ್ಯ : ದಾನವರು ದಕ್ಕಡರು ಧೈರ್ಯೋದ್ದಾಮಶೀಲರು ಘಾಯವನು ಗಿರಿಯಾನಬಾರದು ಮುಷ್ಟಿಬಲವೆಗ್ಗಳರು ಸತ್ವದಲಿ (ಕುಮಾರವ್ಯಾ. ೦೩–೩೩). [ಸಂ.]

**ಮುಷ್ಟಿಮೈಥುನ** (ನಾ). [ಕಾಮಶಾ] "ಹಸ್ತದಿಂದ ಕೃತಕವಾಗಿ ಮಾಡುವ ರತಿಕೇಳಿ" (ಸಂಕೋ. ೯೩೩). [ಸಂ.]

**ಮುಷ್ಟಿಯುದ್ಧ** (ನಾ). ಪರಸ್ಪರ ಮುಷ್ಟಿಗಳಿಂದ ಹೊಡೆದಾಡುವುದು ; ಮುಷ್ಟಾಮುಷ್ಟಿ : ಮಾಣ್ಗೆ ಶಸ್ತ್ರನಿಶಾತಾಸ್ತ್ರನಿಕಾಯದಿಂ ನೆಗಳ್ದ ಯುದ್ಧಂ ಮುಷ್ಟಿಯುದ್ಧಕ್ಕೆ ನಿಂದನುವಾಗು (ಕಬಿಸಂ. ೯–೩೩) ; ಸುಖಾರಾಮ ಮುಷ್ಟಿಯುದ್ಧದಲ್ಲಿ ಗಟ್ಟಿಗನಾಗಿದ್ದನು (ಸುಪತ. ೩೬). [ಸಂ.]

**ಮುಷ್ಟಿಶೂಲೆ** (ನಾ). ವೃಷಣಕ್ಕೆ ಸಂಬಂಧಿಸಿದ ನೋವು : ಮುಷ್ಟಿಶೂಲೆಗೆ :—ಬೆಲ್ಲ ಗಣಿಕೆಸೊಪ್ಪು ಅರೆದು ಆ ರೋಗಿಯ ಮೂತ್ರದಲ್ಲಿ ಕಲಸಿ ಬಿಸಿ ಮಾಡಿ ಇಕ್ಕಿ ಕಚ್ಚೆಯಲ್ಲಿ ಕಟ್ಟಲು . . . ತನ್ನ ಸ್ಥಾನಕ್ಕೆ ಬರುವುದು (ವೈದ್ಯ. ೦೯೭). [ ಸಂ. ಮುಷ್ಟಿಶೂಲಾ ]

**ಮುಷ್ಟೆ** 'ಮುಷ್ಟಿ₁' ನೋ.

**ಮುಸಂಡಿ** 'ಮುಸುಂಡಿ₁' ನೋ.

**ಮುಸಂಬಿ** 'ಮೂಸಂಬಿ' ನೋ.

**ಮುಸಡಿ** 'ಮುಸುಡು' ನೋ.

**ಮುಸದ್ದಿ** 'ಮುತ್ಸದ್ದಿ' ನೋ.

**ಮುಸರೆ** 'ಮುಸುಱೆ' ನೋ.

**ಮುಸಲ₁**, ಮುಸಳ (ನಾ). ೧. ಬತ್ತ ಮೊದಲಾದುವುಗಳನ್ನು ಕುಟ್ಟಲು ಉಪಯೋಗಿಸುವ ಮರದ ಒಂದು ಸಲಕರಣೆ ; ಒನಕೆ : "ಒನಕೆ ಮುಸಲಮೆನಿಕ್ಕು" (ಮಂಗರಾ. ೩೨–೨೨) ; ಮದದಂತಿದಂತಮುಸಲಪ್ರವಿಭಗ್ನಮಹಾಮಹೀರುಹಾಸ್ಪದಂ (ಪಂಪಭಾ. ೩–೦೦) : ತೆಗೆದು ಸೀಳ್ದೆಡೆಯೊಳದಱ ಪೊಡೆಯೊಳಾ ಮುಸಲಾಂಶಮುಂ ಮುಂತೆ ಕಂಡು (ಶಬ್ದಮಣಾ. ೦೦–೦೯೮) ; ಉಲೂಖಲದ ಸೋಮವಲ್ಲಿಯ ಮುಸಲದ . . . ಬಹುಸಾಧನಂಗಳಿಂ . . . ಮಖಶಾಲೆ ಕಣ್ಗೆ ಸೆದುದು (ಜೈಮಿನಿ. ೩೩–೩೯) ; ೨. ಒನಕೆಯಾಕಾರದ ಒಂದು ಬಗೆಯ ಆಯುಧ : ಅಸಿ ಮುಸಲ ಕಣಾಯ ಕಂಪನ ಮುಸುಂಡಿ ಬಿಂಡಿವಾಳ . . . ಅಂಕುಶಾದಿ ಶಸ್ತ್ರಾಸ್ತ್ರಂಗೊಳೊಳೆಚ್ಚು (ಕಂಠೀರವ. ೦೩–೭೩ ವ) ; ಮುಸಲ ಗದಾ ತೋಮರ ಶಂಕು ಶಕ್ತಿ ಚಕ್ರಚ್ಛುರಿಕಾದ್ಯಾಯುಧದೋಳ್ಧಿಗತಶ್ರಮನಾದಂ (ಧರ್ಮಾಮೃ. ೯–೩೦) ; ಮುದ್ಗರ ಮುಸಲ ತೋಮರ ಪೇಟಕಾದಿ ಸಮಸ್ತಶಸ್ತ್ರದ ಘಾತದತಿಬಲಖಳರು ಕೂಡಿತು ಕೋಟಿಸಂಖ್ಯೆಯಲಿ (ತೊರವೆರಾ. ೩–೩–೦೫). ೩. ಗದೆ :

ಕಂಧರದ ಮುಸಲದ ವಿಮಳನೀಲಾಂಬರದ ರಾಮನ ಸುಳಿವ ಕಂಡರು ಕೃಷ್ಣಪಾಂಡವರು(ಕುಮಾ.ಗ. ೩-೫೬). ೪. ಗಂಟೆಯ ನಾಲಗೆ. ೫. ಒಂದು ಬಗೆಯ ಶಸ್ತ್ರಚಿಕಿತ್ಸೆಯ ಸಲಕರಣೆ. ೬. [ಜ್ಯೋತಿ] ನಕ್ಷತ್ರಪುಂಜ. ೭. "ಆಶ್ರಯಯೋಗಗಳಲ್ಲಿ ಒಂದು ; ಸ್ಥಿರರಾಶಿಗಳಲ್ಲಿ ಏಳುಗ್ರಹಗಳೂ ಇರುವುದು" (ಜಾತಕ. ಶಂ. ೩, ೩೮೩) : ಚರರಾಶಿಯೊಳೇಳುಗ್ರಹಮಿರೆ ಯೋಗಂ ರಜ್ಜುವೆನಿಸುಗುಂ ಸ್ಥಿರಧೊಳ್ ಕೂಡಿರೆ ತಾನದು ಮುಸಲಂ (ಜಾತಕ. ೧೩-೦). **ಮುಸಳ** : ೧. "ಮುಸಳಮಯೋಗ್ರಂ" (ವಸ್ತುಕೋ. ೩೦-೩೨): ಮದಗಜದಂತಕಾಂತ ಮುಸಳಂಬಿಡಿದೆತ್ತುವ ತೋಳ ನುಣ್ಪುಗರ್ ಮದನನ ಬಾಳ ನುಣ್ಪುಗರನೇಳಿಸೆ (ಪುಷ್ಪ.ವೃ. ೩-೯೨). [ಸಂ.]

**ಮುಸಲ₂** (ನಾ). ಇಸ್ಲಾಂ ಮತದವನು ; ಮಹಮ್ಮದೀಯ : ಆ ಮುಸಲರವ ಇಂದುಮತಿಸ್ನ ಲಗ್ನಾದನಂತ ನೋಡ್ರಿ (ಅಹನಾ. ೨೦೩): ಮಂತ್ರೋಚ್ಚಾರದಿ ಮಂತ್ರಾಕ್ಷತೆಯನು ಬೀರಿದ ಕೂಡಲೆ ಮುಸಲರು ಚಿತೆಯನು ಸೇರುವರಯ್ಯಾ ಸೇರುವರು (ಕೋಗಿಲೆ. ೨೧-೬೫) : ಮಾತು ಅರಿಯದ ಮುಸಲ ಹಾಸುವ ಕವುದಿ ಒಯ್ದು (ಗಾದೆ). [< ಮುಸಲ್ಮಾನ]

**ಮುಸಲಘಾತ** (ನಾ). ಒನಕೆಯಿಂದ ಬೀಳುವ ಪೆಟ್ಟು.—ಹೊಡೆತ. [ಸಂ.]

**ಮುಸಲಧರ** (ನಾ). ಗದೆಯನ್ನು ಧರಿಸಿದವನು ; ಬಲರಾಮ : ಆ ನಿಖಿಳಪರಿವಾರದನುಸಂಧಾನ ವೃಷ್ಣಿಗಳತ್ತ ತಿರುಗಿದವೇನನೆಂಬೆನು ಮುಸಲಧರನಾಗಮನಸಂಗತಿಯ (ಕುಮಾ.ಗ. ೩-೫೭). [ಸಂ.]

**ಮುಸಲಧಾರೆ** (ನಾ). ಒನಕೆಯಷ್ಟು ದಪ್ಪವಾಗಿ ಸುರಿಯುವ ಮಳೆ : ಭಾವಗಳು ಮುಸಲಧಾರೆಯಾಗಿ ಸುರಿದು . . . ಓಡುವುದಕ್ಕೆ ಮೊದಲುಮಾಡಿದುವು (ಬಂಕಿಮ. ೧೯೫) ; ಮುಸಲಧಾರೆಯಾದ ಮಳೆ, ಪರಿಚಯವಿಲ್ಲದ ಸ್ಥಳ, ಅವಳು ಎಲ್ಲಿಗೆ ತಾನೇ ಹೋದಾಳು ? (ಅಜಾತ. ೮೯೧): ಇಷ್ಟರಲ್ಲಿಯೋ ಮುಸಲಧಾರೆಯಿಂದ ಮಳೆಯು ಸುರಿಯಬಹುದೆಂದು ನನ್ನ ನಂಬುಗೆಯು (ಒಲವ. ೧೦೦). [ಸಂ. ಮುಸಲಧಾರಾ]

**ಮುಸಲಪಾಣಿ** (ನಾ). ೧. ಗದೆಯನ್ನು ಹಿಡಿದಿರುವವನು. ೨. ಬಲರಾಮ : ಕೌಂತೇಯನ್ರಸಂ ಮುಸಲಪಾಣಿ ಮನದೊಳ್ ಪೊಗಟ್ಟಂ (ಗದಾಯು. ೬-೬೦). [ಸಂ.]

**ಮುಸಲಮಾನ್** 'ಮುಸಲ್ಮಾನ' ನೋ.

**ಮುಸಲಮಾನ** 'ಮುಸಲ್ಮಾನ' ನೋ.

**ಮುಸಲಸ್ನಾನ** (ನಾ). ಒನಕೆಯನ್ನು ನೀರಿನಲ್ಲಿ ಅದ್ದಿ ತೆಗೆಯುವಷ್ಟು ಕ್ಷಿಪ್ರಕಾಲದಲ್ಲಿ, ದೇಹವನ್ನು ನೀರಿನಲ್ಲಿ ಮುಳುಗಿಸಿ ಮೇಲೇಳುವಿಕೆ; ತೀರ್ಥಕ್ಷೇತ್ರಗಳಲ್ಲಿ ಮಾಡುವ ಕ್ಷಿಪ್ರಕಾಲದ ಸ್ನಾನ : ಈ ತೀರ್ಥದಲ್ಲಿ ಒನಕೆ ಮುಳುಗಿದಂತೆ ಸುಮ್ಮನೆ ಮುಳುಗುವ ಮುಸಲಸ್ನಾನವೂ ಸಮಸ್ತ ಪಾಪಗಳನ್ನು ಪರಿಹರಿಸುವದೋ ಅದರಿಂದ ಹೇಳಲ್ಪಟ್ಟಿತು (ಅರ್ಕಪು. ೨೦). [ಸಂ.]

**ಮುಸಲಹತಿ** (ನಾ). ಒನಕೆಯ ಪೆಟ್ಟು.—ಹೊಡೆತ : ಪ್ರರವನಂಗಳ ಮುಸಲಹತಿ [ಶಾಕಾಂ. ಪುರಜನದ ಮುಸಲಾಪಹತಿ]ಯಲಿ ಮುಜಿದು ಬಂದುದು ಕೌರವೇಂದ್ರನ ದಳ ಪಿಘಾತಿಯಲಿ (ಕುಮಾ.ಆ. ೬-೬೩). [ಸಂ.]

**ಮುಸಲಾಯುಧ** (ನಾ). ೧. ಮುಸಲವೆಂಬ ಆಯುಧ. ೨. ಗದೆ. ೩. ಗದೆಯನ್ನು ಹಿಡಿದವನು ; ಬಲರಾಮ : ಹಲ ಮುಸಲಾಯುಧಂ ನಡೆವ ಶಾರದಗೇಂದ್ರಮನೊಂದು ಕಮಲ್ಗಿಲ್ ಬಳಸಿದವೊಲ್ ವಿರಾಜಿಸೆ ವಿನಿಲಪಟಂ (ಶಂಕರಾಮಾ. ೬-೭೬). ೪. ಒಬ್ಬ ರಾಕ್ಷಸನ ಹೆಸರು : ಬಕಾಸುರ ಜಟಾಸುರರ ಮಕ್ಕಳ್ ಚತುಸ್ತ್ರಿಂಶತ್ಸಹಸ್ರನಕ್ತಂಚರಪರಿವೃತ ಕಳಂಭೂಷ ಮುಸಲಾಯುಧ ಕಾಳನೀಳ ವಿದ್ಯುನ್ಮಾಲ್ಯಾದಿಗಳುಂ ಬಂದು ಕೂಡೆ (ಶಂಶಾ. ೧೦-೨೭ ವ). [ಸಂ.]

**ಮುಸಲಿ₁** (ನಾ). ೧. ಗದೆಯನ್ನು ಧರಿಸಿರುವವನು. ೨. ಬಲರಾಮ: "ನೀಲಾಂಬರಂ. . . ಮುಸಲಿ ಹಲಿ ರೌಹಿಣೇಯಂ ತಾಳಧ್ವಜಂ ರಾಮ ನೆನಲು ಬಲನಕ್ಕು" (ಮಂಗರಾ. ೭-೨೦): ದಾನವಮದವಿದಳಿತ ಮುಸಲಿಯ ಮಾತಿಗಾನಂದವಡೆದು (ಪೋಹತ. ೦೩-೧೪). [ಸಂ. ಮುಸಲಿನ್]

**ಮುಸಲಿ₂** (ನಾ). ೧. ಹಲ್ಲಿ ; ಗೌಳಿ : "ಮುಸಲಿ ಗೃಹಗೋಧಿಕಂ ಗೃಹಪಿಕಂ ಹಲ್ಲಿಯದು" (ಮಂಗರಾ. ೯೯-೦೪). ೨. ಹಲ್ಲಿಯ ಜಾತಿಗೆ ಸೇರಿದ ಒಂದು ಬಗೆಯ ಪ್ರಾಣಿ: ಮೊಸಳೆ. ೩. ಹಲ್ಲಿಯ ಜಾತಿಗೆ ಸೇರಿದ ಒಂದು ಪ್ರಾಣಿ; ಓತಿಕೇತ: "ಸರಟಃ, ಕೃಕಲಾಸಃ—೨ ತೊಂಡೇ ಹೆಸರು, ಹೆಂಟೇಗೊದ್ದ. . . ಹಾವುರಾಣಿಗೂ ಇದೇ ಹೆಸರು" (ಸಿದ್ಧಾಂತಿ. ೦೫೭). ೪. ಒಂದು ಬಗೆಯ ಸಸ್ಯ ; ನೆಲತಾಳೆ : "ಮುಸಲೀ, ತಾಲಮೂಲಿಕಾ—೨ ನೆಲತಾಟಿ ಹೆಸರು. ನೆಲತಾಳೇಗೆಡ್ಡೆಯನ್ನು ಪರು" (ಸಿದ್ಧಾಂತಿ. ೦೬೯). ೫. ನಪುಂಸಕಸತ್ತ್ವದ ಕುದುರೆ : ಒಂದು ಪಾದ ಮಾತ್ರವೆ ಶುಭ್ರವಾಗಿ ಪುಷ್ಪಹೀನವಾದ ಅಶ್ವವು ಮುಸಲೀಯೆನಿಸಿಕೊಳ್ಳುವದು (ಅಶ್ವಶಾ. ೩೦೨-೭). [ಸಂ. ಮುಸಲೀ]

**ಮುಸಲಿಕೆ**, ಮುಸಳಿಕೆ (ನಾ) ೧. ಹಲ್ಲಿ: ಗೌಳಿ. ೨. ಹಲ್ಲಿಯ ಜಾತಿಗೆ ಸೇರಿದ ಒಂದು ಪ್ರಾಣಿ : ಉಡ : "ಗೋಧಾ ಮುಸಲಿಕಾ—ಈ ೨ ಉಡು" (ಕರಾದು. ೩೯-೮೧). **ಮುಸಳಿಕೆ** : ಮುಸು[ಸ]ಳಿಕಾದ್ಯಾಕರ ಪರಿಸರ್ಪಂಗಳ ಉತ್ಕೃಷ್ಟಾಯುಸ್ಥಿತಿ ನವಪೂರ್ವಾಂಗಂ (ತತ್ತ್ವಶ್ರ. ೦೭೭). [ಸಂ. ಮುಸಲಿಕಾ]

**ಮುಸಲುಮಾನ** 'ಮುಸಲ್ಮಾನ' ನೋ.

**ಮುಸಲ್ಮಾನ್** 'ಮುಸಲ್ಮಾನ' ನೋ.

**ಮುಸಲ್ಮಾನ**, ಮುಸಲಮಾನ್, ಮುಸಲಮಾನ, ಮುಸಲುಮಾನ, ಮುಸಲ್ಮಾನ್, ಮುಸಿಲ್ಲಮಾನ, ಮುಸುಲಮಾನ, ಮುಸುಲುಮಾನ, ಮುಸುಲ್ಮಾನ (ನಾ). ಇಸ್ಲಾಂಧರ್ಮವನ್ನು ಅನುಸರಿಸುವವನು; ಮಹಮ್ಮದೀಯ : ತಾನೇ ಬಂದ ಮುಸಲ್ಮಾನರೆಂಬಭಿಮಾನದಿಂ (ಕದಂತ. ೬೪); ಅರೇಬಿಯಾದಿಂದ ಶಕ್ತಿಯನ್ನು ರಕ್ಷಿಸಿ ಶಾಸ್ತ್ರ ಹೊರಟ ಅಚ್ಚ ಮುಸಲ್ಮಾನರು ರೋಮಿನಲ್ಲಿರುವಾಗ ರೋಮನರಂತಿರು ಎಂದುಕೊಂಡು ಮುಂದುವರೆದಿರಬೇಕು (ಶಾರದ. ೪೦೭). **ಮುಸಲಮಾನ್** : ಮುಸಲಮಾನ್ ನೃಪ ನಿಮ್ಮನ್ನು ಕೊಲ್ಲ ಹೇಳಿಯೆ (ಚಿತ್ರ.ರಾ. ೬-೦೨). **ಮುಸಲಮಾನ** : ಬಸವರಾಜನ ಭಾಗ್ಯವೆಲ್ಲವ ವಸುಧೆಯೊಳು ನಿಕ್ಷೇಪಿಸುತ ನೃಪ ಅಸುವ ಕಳೆಯಲು ಅಧಿಕಪಟ್ಟವು ಮುಸಲಮಾನರಿಗೆ (ಶರಂ. ೪೫೦-೦೪); ಮುಸಲಮಾನರು ಹಂದಿ ಬಕ್ಷಣೆ × × × (ಎಕ. IX, ತನ್ನಕ. ೦೭೩-೦೩ ; 1761) : ಆ ವಾರ್ತೆಯಂ ಮುಸಲಮಾನ ದೊರೆ ಕೇಳ್ದು (ಗುರುಶಾ. ೦೫-೫೪). **ಮುಸಲುಮಾನ** : ಮುಂದೆ ಮುಸಲುಮಾನರಾಗಲಿ (ಬೊಂಕಶಾ. ೦೯೩೭, ಲಕ್ಷ್ಮೀಶ್ವರ. ೪೭-೪ ; ?). **ಮುಸಲ್ಮಾನ್** : ಹಿಂದೂ ಮುಸಲ್ಮಾನ್ ಸಮಸ್ಯೆಗಳು. . . ಪ್ರಗತಿಗೆ ಕಂಟಕವಾಗಿ ಕುಳಿತಿವೆ (ಶಿಕ್ಷದ. ೨೫). **ಮುಸಿಲ್ಲಮಾನ** : ಯಿಾ ಧರ್ಮಕ್ಕೆ ಅಳುಪಿದರೆ ಗೋಮಾಂಸಭಕ್ಷಣೆ ಮುಸಿಲ್ಲಮಾನರಿಗೆ ಹಂದಿಮಾಂಸಭಕ್ಷಣೆ (ಕೌಇಇ. XX, ೩೫೭-೨೨; 1576). **ಮುಸುಲಮಾನ** : ಮುಸುಲಮಾನ ತಪ್ಪಿದರೆ ಮಕ್ಕೆದಲ್ಲಿ ಮುಸಾಪ ಬಿಸಾಟ ಪಾತಕೆ ಹೋಹರೂ (ಇಆ. IX, ೯೪-೬; ?). **ಮುಸುಲುಮಾನ** : ಯಿಾ ಧ(ಂ)ರ್ಮವನು ಅ × × ಮುಸುಲುಮಾನರಾದರೆ ಅತಾ ಹೊಲೆಯ ಮಾದಿಗ ತುರುಕನಲ್ಲಾ (ಕೌಇಇ. XX, ೩೮೪-೬; 15ನೆಯ ಶತ): ಮುಸುಲುಮಾನರಲ್ಲಿ ಯಾರು ಅಡ್ಡಿ ಮಾಡಿದರು ಮಕ್ಕಾದಲ್ಲಿ ಹಂದಿಬಕ್ಷಣೆ ಮಾಡಿದ ದೋಷಕ್ಕೆಹೋಗಲುಳ್ಳವರು (ಎಕ. IX, ನೆಲಮಂ. ೬-೦೮;1763). **ಮುಸುಲ್ಮಾನ**: ಇತರ ದೇಶಗಳಲ್ಲಿ ಮುಸುಲ್ಮಾನ ಮೊದಲಾದವರ ಆಳ್ವಿಕೆಯಲ್ಲಿ ಈ ಧರ್ಮಕ್ಕೆ ಹೆಚ್ಚಿನ ಬಾಧೆಗಳು ಸಂಭವಿಸಿದರೂ ನಮ್ಮ ತುಳುನಾಡಿನಲ್ಲಿ ಅಂಥ ಅಪಾಯಗಳು ಸಂಭವಿಸಲಿಲ್ಲ (ತುಳುನಾ. ೨೬೯).

[← ಪಾರ. ಮುಸಲಮಾನ್, ಮುಸುಲ್ಮಾನ್ ; ಹಿಂ. ಮುಸಲಮಾನ್ : ಮರಾ. ಮುಸಲಮಾನ್, ಮುಸಲ್ಮಾನ್]

**ಮುಸಲ್ಮಾನಿ** (ಗು). ೧. ಮಹಮ್ಮದೀಯರಿಗೆ ಸಂಬಂಧಿಸಿದ. (ನಾ). ೨. ಮಹಮ್ಮದೀಯರ ಭಾಷೆ ; ಉರ್ದು : ಮುಸಲ್ಮಾನಿಯಲ್ಲಿ ಮಾಲ್ಘು ಎಂದರೆ, ಅಂಬಿಗನಿಗೆ ಹೆಸರು (ಕಪಾಕಿಂ. ೪).

[ ← ಅರ. ಮರಾ. ಮುಸಲಮಾನೀ, ಮುಸಲ್ಮಾನೀ : ಪಾರ. ಮುಸುಲ್ಮಾನೀ ; ಹಿಂ. ಮುಸಲಮಾನೀ]

**ಮುಸಳ** 'ಮುಸಲ₁' ನೋ.

**ಮುಸಳಿಕೆ** 'ಮುಸಲಿಕೆ' ನೋ.

**ಮುಸಾಂಬ್ರ** (ನಾ). ಒಂದು ಬಗೆಯ ಸಸ್ಯ ಮತ್ತು ಅದರಿಂದ ತಯಾರಿಸುವ ಔಷಧ ವಸ್ತು: "ಸೀಮೆಕತ್ತಾಳೆ, ಲೋಳೆಸರ, ಮುಸಾಂಬ್ರ . . . ನೋಣಸರ" (ಶಸ್ಯಶಿ. ೯) ; ಲೋಳೆಸರ, ಮುಸಾಂಬ್ರ (ಕೃಷಿಗಿ. ೩-೯೦). [ದೇ.॥ ತೆಲು. ಮುಸಾಂಬ್ರು, ಮುಸಾಂಬರ]

**ಮುಸಾಫರ್‌ಖಾನೆ** 'ಮುಸಾಫಿರ್‌ಖಾನೆ' ನೋ.

**ಮುಸಾಫರ** 'ಮುಸಾಫಿರ' ನೋ.

**ಮುಸಾಫರಖಾನೆ** 'ಮುಸಾಫಿರ್‌ಖಾನೆ' ನೋ.

**ಮುಸಾಫಿರ್‌ಖಾನೆ,** ಮುಸಾಫರ್‌ಖಾನೆ, ಮುಸಾಫರಖಾನೆ (ನಾ). ಪ್ರಯಾಣಿಕರು ಇಳಿದುಕೊಳ್ಳುವ ಸ್ಥಳ ; ಪ್ರವಾಸಿಬಂಗಲೆ : ಮಾತುಮಾತಾಡ್ತ ಬಂದೇ ಬಿಟ್ಟೆವಲ್ಲ ಮುಸಾಫಿರ್‌ಖಾನೆಗೆ (ಬಮಕ್ಕ. ೪೩) ; ಅಲಿಕಾದರನು . . . ಮುಸಾಫಿರ್‌ಖಾನೆಗೆ ಹೋಗಿ ಒಂದು ಕೋಣೆಯಲ್ಲಿ ಇದುಕೊಂಡು ಆಲೋಚಿಸಹತ್ತಿದನು (ಮಚಿಸ. ೩೯). **ಮುಸಾಫರ್‌ಖಾನೆ:** ಅಧಿಕಾರಿಗಳು ಇಳಿದುಕೊಂಡಿದ್ದ ಮುಸಾಫರ್‌ಖಾನೆ ಹಾವಿನ ಹುತ್ತವಾಗಿ ತೋರಿತು (ಚಿಸ್ತ್ರ. ೦೦೪) ; ಈ ಕಟ್ಟಡಗಳೇ ಅಲ್ಲದೆ ಸಫದಿದೊರೆಗಳು ಹಲವು ಸರಾಯಿ ಅಥವಾ ಮುಸಾಫರ್‌ಖಾನೆಗಳನ್ನೂ . . . ನೆಲದಡಿ ಕಾಲುವೆಗಳನ್ನೂ ಕಟ್ಟಿಸಿದರು (ಇಶ್ಮಾಂಸಂ. ೦೩೨). **ಮುಸಾಫರಖಾನೆ :** ತಮ್ಮ ಗ್ರಾಮದ ಸರಹದ್ದಿನಲ್ಲಿರತಕ್ಕ ಛತ್ರ, ದೇವಸ್ಥಾನ, ಮುಸಾಫರಖಾನೆ, ರಾಜಮಾರ್ಗಗಳು ಮುಂತಾದವುಗಳಲ್ಲಿ ಗಸ್ತು ಮಾಡುತ್ತಿರಬೇಕು (ಗ್ರಾಮಾಕ. ೩೦) ; ರಾಘಚಂದ್ರನು ಪಾತಜ್ಜಿಯನ್ನು ಮನೆಗೆ ಬಿಟ್ಟು ಮುಸಾಫರಖಾನೆಗೆ ಬಂದನು (ಕಕಪು. ೦೦೯).

[← ಹಿಂ. ಮುಸಾಫಿರ್‌ಖಾನಾ ; ಮರಾ. ಮುಶಾಫರ್‌ಖಾನಾ]

**ಮುಸಾಫಿರ,** ಮುಸಾಫರ, ಮುಸಾಫಿರಿ (ನಾ). ಯಾತ್ರೆ ಮಾಡುವವನು ; ಯಾತ್ರಿಕ ; ಪಯಣಿಗ : ಹೊರಪ್ರಾಂಗಣದ ಚಾವಡಿಯಲ್ಲಿ ಯಾತ್ರಿಗಳೂ, ಭಾವಜೀಗಳೂ, ಮುಸಾಫಿರರೂ . . . ಬೀಡು ಬಿಟ್ಟಿರುತ್ತಾರೆ (ಶಾಕುಂಪಾ. ೪೭) ; ತಾವು ಉತ್ತರಹಿಂದುಸ್ಥಾನಕ್ಕೆ ಬಂದ ಮುಸಾಫಿರರು ; ನೆಲೆಯಿಲ್ಲದ ಜನರು ಎಂದು ಅನಿಸುತ್ತದೆ (ತಗುಕ. ೦೦). **ಮುಸಾಫರ :** ಆ ಮಾತಿಗೆ ನಾಚಿಕೆಪಟ್ಟ ಈ ಮುಸಾಫರರು ಹೊರಟು ಹೋದರು (ಕಥಾಮಂ. IV. ೬೨). **ಮುಸಾಫಿರಿ :** ಹೇಣ್ತಿ ಪ್ಪಾದ ಮ್ಯಾಗ ನಾವೂ ಮುಸಾಫಿರೀನ (ವೃಶಿ. ೪೭).

[← ಅರ. ಹಿಂ. ಮುಸಾಫಿರ್ ; ಮರಾ. ಮುಸಾಫರ್, ಮುಶಾಫರ್]

**ಮುಸಾಫಿರಿ** 'ಮುಸಾಫಿರ' ನೋ.

**ಮುಸಾಫಿರಿಬಂಗ್ಲೆ** (ನಾ). = ಮುಸಾಫಿರ್‌ಖಾನೆ : ಈಗ ಮುಸಾಫಿರಿ ಬಂಗ್ಲೇದಾಗ ಚೌಕೀದಾರ ಅದೀನ್ರಿ (ವೃಶಿ. ೯೭).

[ ಮುಸಾಫಿರಿ (< ಮುಸಾಫಿರ) + ಬಂಗ್ಲೆ (< ಬಂಗಲೆ) ]

**ಮುಸಿ₁** (ನಾ). ಹುಸಿಯಾದುದು ; ಕೃತ್ರಿಮವಾದುದು : 'ಮುಸಿನಗು' ಪರಾ.

**ಮುಸಿಮುಸಿ ನಗು**=ಕೃತ್ರಿಮವಾಗಿ ನಗು ; ಹುಸಿನಗು : ಮಾಲಿಸುಮಾಲಿಗಳು . . . ಹರಿಯ ಪಕ್ಷದಲಿ ಪೊಗಿಸೆ ಕೂರಂಬುಗಳ ಮುಸಿಮುಸಿ ನಗುತ ಶಾರ್ಙ್ಗವ ಪಿಡಿದು ವಿವಿಧಾಶುಗವನೆಚ್ಚೊಡೆಗಡಿದನು (ಅಪಂರಾ. ೦-೬-೪೭) ; ವಿದ್ಯಾರ್ಥಿಗಳು ಸಿದ್ದಣ್ಣನತ್ತ ಮುಖ ತಿರುಗಿಸಿ ಮುಸಿಮುಸಿ ನಕ್ಕರು (ಒಡ್ಡಉ. ೩೩) ; ಅಂಬಿಗನು ಮುಸಿಮುಸಿ ನಗುತ್ತ . . . ಹಲಗೆಯ ಕಡೆ ಕೈ ತೋರಿಸಿದ (ಹಸುಹೂ. ೩೩೨). [← ತೆಲು. ಮುಸಿ]

**ಮುಸಿ₂** 'ಮೂಸೆ' ನೋ.

**ಮುಸಿಕಟ್ಟು** (ಕ್ರಿ). ಚಿನ್ನ, ಬೆಳ್ಳಿ ಮುಂತಾದ ಲೋಹಗಳನ್ನು ಕರಗಿಸುವ ಸಾಧನವನ್ನು ಅಳವಡಿಸು ; ಮೂಸೆಯನ್ನು ಇಡು : ಸಾಗಾರ್ಜನನು ಪರ್ವತಕೆ ಮುಸಿಕಟ್ಟಿ ಬೆಳ್ಳಿಯ ರಸದ ಪ್ರಚಂಡವಾದ ಪ್ರವಾಹಗಳನ್ನು ಹರಿಬಿಟ್ಟಿರುವನೇನೋ (ಹುದುರಾ. ೨೬).

[ಮುಸಿ₂ (< ಮೂಸೆ) + ಕಟ್ಟು₁]

**ಮುಸಿಕೆ** (ನಾ). ಓಕಳಿಯಾಟದಲ್ಲಿ ನೀರನ್ನು ತೂರಲು ಬಳಸುವ ಬಟ್ಟೆಯಿಂದ ಮಾಡಿದ ಜಾಳಿಗೆಯಂತಹ ಸಾಧನ (?) : ಕುಸ್ತಿಯ ಗರಡಿಗಳು ಹೊಂಡದ ನೀರನ್ನು ತಮ್ಮ ಧೋತ್ರದ ಚಾಳಿಯಲ್ಲಿ ತುಂಬಿಕೊಂಡು ಸೂಳೆಯರ ಮೇಲೆ ತೂರುವದು ಪ್ರಾರಂಭವಾಯಿತು. ಆ ನೀರಿನ ಮುಸಿಕೆಗಳ ಹೊಡೆತದಿಂದ ತಪ್ಪಿಸಿಕೊಳ್ಳಲು ಸೂಳೆಯರು ಮನೆಗಳ ಕಂಟಿಗಳನ್ನು ಉಪಯೋಗಿಸುತ್ತಿದ್ದರು (ಗ್ರಾಮಕಥು. ೨೩೯). [ ? ]

**ಮುಸಿಗಾರ** (ನಾ). ಲೋಹಾದಿಗಳನ್ನು ಮೂಸೆಯಲ್ಲಿಟ್ಟು ಕಾಯಿಸುವವನು : ಸಾಹಸಿಗಳಾದ ಮುಸಿಗಾರರು ಭೂಗರ್ಭವನ್ನು ಬಗೆದು ಬೆಳ್ಳಿ, ಭಂಗಾರ, ತಾಮ್ರ ಮುಂತಾದ ಧಾತುಗಳ ರಾಶಿಯನ್ನು ಒಟ್ಟುತ್ತಿದ್ದರು (ಶಿರಂಗ. ೦). [ ಮುಸಿ₂ (< ಮೂಸೆ) + – ಗಾರ (< – ಕಾಱ) ]

**ಮುಸಿಗೆ** 'ಮುಷ್ಕಿ' ನೋ.

**ಮುಸಿಗೆಬಿಗಿ** (ಕ್ರಿ). ೧. ಹಿಂಗಟ್ಟುಮುರಿ ಕಟ್ಟು ; ಹೆಡಮುರಿ ಹಾಕು : ಕೋಣೆಯ ಬಾಗಿಲು ತೆಗೆದು ಒಳಗಿನಿಂದ ಅದನ್ನು ಹಾಕಿ ನನ್ನನ್ನೂ ಮುಸಿಗೆಬಿಗಿದನು (ಪಂಚಿಮ. ೩೯). ೨. ಬಿಗಿಯಾಗಿ ಕಟ್ಟಲ್ಪಡು,–ಬಂಧಿಸಲ್ಪಡು: ಮರಕ್ಕೆ ಮುಸಿಗೆ ಬಿಗಿದಿದ್ದ ರಣದುಲ್ಲಾಖಾನನು ಆತನ ಕಣ್ಣಿಗೆ ಬಿದ್ದನು (ವಾರ್ಸಿಕೀ. ೩೦). [ಮುಸಿಗೆ (< ಮುಷ್ಕಿ) + ಬಿಗಿ₁]

**ಮುಸಿನಗು** (ನಾ). ಹುಸಿನಗು ; ಕೃತ್ರಿಮವಾದ ನಗೆ : ಮುಸಿನಗುವಿ ನೊಳಗಿರಲಶಕ್ಯವೆ ಪಿಶಾಚಿಕೆಗೆ ? (ಮಂಕಸ. ೪೦೬). [ಮುಸಿ₁ + ನಗು₂]

**ಮುಸಿನಗೆ** (ನಾ). = ಮುಸಿನಗು : ಯಾಕೋ, ಈ ಮುಸಿನಗೆ ? ಗಟ್ಟಿಯಾಗಿ ನಗುವುದಕ್ಕೆ ಧೈರ್ಯವಿಲ್ಲವೆ ? (ಹಸುಹೂ. ೦೭೯).

**ಮುಸಿಮುಸಿನಗೆ** (ದ್ವಿರುಕ್ತಿ) : ದೆಸೆದೆಸೆಯ ಸಸಿಪದನೆಯರ ಮುಸಿ ಮುಸಿನಗೆಯು ಗುಸುಗುಸುಗಳೆಸಗಿರಲು (ಅಪಂರಾ. ೦-೨೩-೪೭).

[ಮುಸಿ₁ + ನಗೆ]

**ಮುಸಿಮನೆ** (ನಾ). ೧. ಚಿನ್ನ, ಬೆಳ್ಳಿ ಮುಂತಾದ ಲೋಹಗಳನ್ನು ಕರಗಿಸಲು ಬಳಸುವ ಸಾಧನವಿರುವ ಸ್ಥಳ. ೨. (ಅಲಂ) ಕಠಿಣವಾದ ಹಂತ,— ಮಜಲು : ಕವಿವಾಣಿ ಈ ನಾಲ್ಕು ಮುಸಿಮನೆಗಳಲ್ಲಿ ಹಾದು ಹದಗೊಂಡು ಪರಿಪಾಕಪೂರ್ತಿಯನ್ನು ಹೊಂದುವುದೆಂದು ಪಂಪನು ಹೇಳಿದ್ದಾನೆ (ಕಪಾ. ೬೦). [ಮುಸಿ₂ (< ಮೂಸೆ) + ಮನೆ]

**ಮುಸಿಯ** 'ಮುಸು₂' ನೋ.

**ಮುಸಿಲ್ಲಮಾನ** 'ಮುಸಲ್ಮಾನ' ನೋ.

**ಮುಸು₁** (ನಾ). ಒಂದು ಅನುಕರಣ ಶಬ್ದ : 'ಮುಸುಗುಟ್ಟು' ಪರಾ.

**ಮುಸುಮುಸು** (ದ್ವಿರುಕ್ತಿ) : ಮುದ್ದುಕೂಸಿನ ಹಾಗೆ ಮುಸು ಮುಸುಮಾಡುತ್ತ ಕುಣಿದಾಸ (ಸೂರ್ಯಪಾ. ೩೩-೩).

**ಮುಸು₂,** ಮುಜ್ಜು, ಮುಸಿಯ, ಮುಸುವ, ಮುಸುವು, ಮೂಸು₂ (ನಾ). ಕರಿಯ ಮುಖವೂ ಉದ್ದ ಬಾಲವೂ ಉಳ್ಳ, ಒಂದು ಬಗೆಯ

ದೊಡ್ಡ ಗಾತ್ರದ ಕಪಿ ; ಗೋಲಾಂಗೂಲ : "ಗೋಲಾಂಗೂಲಃ, ಕೃಷ್ಣವಕ್ತ್ರಃ - ಈ ೨ ಮುಸು" (ಹಲಾಯು. ೩೯-೭೯) ; ಮುಸು ಮುತ್ತುಂತೆ ತೆರಳ್ತ ತನ್ನ ಮೊಗಮಂ ಕಂಡಳ್ಕನೋ (ಅಂಕ್ಲ. ೨-೪೩) ; ಮೊಸಳೆ ಮುಸುವಿಂದಂ ವಂಚಿಸಲ್ಪಟ್ಟು ಮನಂಗೆಟ್ಟು ಪೋಪುದುಂ (ಪಂತಪಂ. ೨೮೫-೦೮); ವಾನರ ಸಿಂಗಳೀಕ ಮುಸು ಕರಡಿಯ ಬಲಂ ಮುತ್ತಿದುದು (ಕೃಷ್ಣಾ. ೨೦-೦೮). **ಮುಜ್ಜು**: 'ಅದು ಕರಡಿಯಲ್ಲ ಮುಜ್ಜು, ದೊಡ್ಡ ಕಪ್ಪು ಮಂಗ' ಎಂದ (ಬಾಳಿ. ೯೩); ಮಾವಿನ ಗಿಡದ ಕಾಯಿಗಳು ಎಲ್ಲಾ 'ಮುಜ್ಜು' ತಿಂದು ಹಾಳಾಗಿ ಹೋಗುತ್ತಿವೆ (ಕಹಾವ. ೦೭೦). **ಮುಸಿಯ**: ಮೊಲ, ಮುಸಿಯ, ತುಲಿ, ಕರಡಿ, ಕುರ್ಕ ಮುಂತಾದ ಇತರ ಪ್ರಾಣಿವರ್ಗಕ್ಕೆ ಕಾಡಿನಲ್ಲಿ ಭೀತಿಯೇ ಇರಲಿಲ್ಲ (ಪಂಚಪಂ. ೨). **ಮುಸುವ** : ನರಿ ಹದ್ದು ಜಂಬುಕ ಮುಸುವ ಶರಭ ಶಾರ್ದೂಲ ಸಿಂಹವು (ಪಪ್ನಗಾ. ೦-೦೨೪); ಮರೆ ಹುಲ್ಲೆ ಸಿಂಗ ಮುಸುವನು . . . ಚಕೋರನ ಬಳಗವೊಪ್ಪಿತು ವನದೊಳು (ಗೋಪಾಪು. ೩-೦೦); ಬಸ್ಸು ನಿಂತಾಗ, ಬಸ್ಸಿನ ಬಳಿಗೆ ನೂರಾರು ಮುಸುವಗಳು ಬಂದು ತಿಂಡಿ ಬೇಡಿಕೊಂಡು ಹೋದುವು (ಅಬಾಪ. ೩). **ಮುಸುವು** : ಮರದ ಮರಿಯಿಂ ಮಲೀಮಸಮಾದ ಮುಸುಂಬು ಮುಸುವಿನ ಮುಸುಂಬಿನಂತೆ (ಅರ್ಥಶಾ. ೩-೦೦೩ ಪ); ಮುಸುವೆನೆ ತನ್ನ ಮುತ್ತುಮುಸುಡಿಂದಿರ ದೇಡಿವಳ್ (ಅಭಿಶಿ. ೦೦-೦೭೩). **ಮೂಸು**: ಕೋತಿಗಳಲ್ಲಿ ಜಾತಿ : ಶಿಂಗಳೀಕ . . . ಕೋಡಗ, ಮೂಸು ಮುಸುವ (ಪಶುಪು. ೨೩೯).

[ದೇ.॥ ತಮಿ. ಮುಚು; ಮಲ. ಮೊಚ್ಚ; ತುಳು. ಮುಜ್ಜು, ಮುಜ್ಜಿ; ಕೊಡ. ಮುಚ್ಚೀ; ಕೋಲಾ.ಮುಯ್ ಮುಯಿಾ; ನಾಯ್ಕ. ಪರ್ಜಿ. ಮುಯ್; ಗೊಂಡಿ. ಮುಂಜ್, ಮೂಂಜ್ ; ಕೂ. ಮೂಸು ; ಕುವಿ. ಮೂಹ]

**ಮುಸುಂಕಿಡು**, ಮುಸುಕಿಡು, ಮುಸುಗಿಡು (ಕ್ರಿ). ೧. ಮುಚ್ಚು; ಮರೆಮಾಡು ; ಮುಸುಕುಹಾಕು : ನಯನೌಘಚ್ಛಲದಿಂದೆ ನೈದಿಲೆಸಲಂ ಶಕ್ರಂ ಮುಸುಂಕಿಟ್ಟಂ (ಪಂಪ್ರಭು. ೯-೩೭). ೨. (ಮುಖವನ್ನು) ಮರೆ ಮಾಡಿಕೊಳ್ಳು; ಮುಸುಕನ್ನು ಹಾಕಿಕೊಳ್ಳು : ಮೋಹದ ಮುನಿಸು ಮನದೊಳ್ ತೀವಿ ಪ್ರಣಯಕಲಹಂ ಬಲಿದು ಪ್ರಸಾದಮನೊಲ್ಲದೆ ಬಸವಂ ಮುಸುಂಕಿಟ್ಟು . . . ಪಟ್ಟಿರ್ದಿರೆ (ಬಸವ. ೪-೪೩); ವಸ್ತುಗಳ್ ಮುಸುಂಕಿಟ್ಟೋಡೆ ಸರಸಿಜಭವಂ ಕಂಡು ಕಂಡು ಕಾಳಿಗಕೆ ಮುಂಕೊಂಡಸು (ಕಬ್ಬಿ. ೩೦-೪೪). **ಮುಸುಕಿಡು** : ೧. ದೆಸೆಯೆಲ್ಲಂ ತೀವ್ರಬಾಣಾಳಿಯೊಳೆ ಮೆಡಬಿದಂತಂಬರಂ ಬಾಣದಿಂದಂ ಮುಸುಕಿಟ್ಟಂತಾಗೆ (ಪಂಪಭಾ. ೧೨-೨೦); ಕುಂಭದ್ವಯಕ್ಕೆ ಮುಸುಕಿಟ್ಟ ಬೆಳ್ವಟ್ಟೆಯಂತಿರೆ ಗುರುಕುಚಂಗಳಂ ನೋಳ್ಪ ಕಾಮುಕನಿಕರದ ದಿಟ್ಟಿ ನಾಂಟದ ತೆಱದಿ ಮಱೆಮಾಡಿದಂದದಿಂ ಕಟ್ಟಾಣಿ ಮುತ್ತುಗಳ ಕೆತ್ತಿಸಿದ ಪೊಲೆಕಟ್ಟ ಕಟ್ಟಿದಳ್ (ಶಾಂಪ್ರಳ. ೭-೨೮). ೨. ಮುಸುಕಿಟ್ಟ ಪಟ್ಟಣಿಗೆಯುಂ ಪೊಱಪೊಣ್ಮುವ ಕಣ್ಣ ಬಿಳ್ಪುವೋಪರ ಮನದೊಳ್ ತೆಱಂಬೊಳೆವ ಬಾಳೆಗಳಂತಿರೆ . . . ಬಂದುದುಂದೊಡನೆ ಸಪ್ಪನವೆಂಡಿರ ತಂಡಂ (ಅಪ್ರ.೦೦-೪೬ ಆಪಠ) ; ನಿಜೋತ್ತರೀಯ ವಸನಾಂಚಲದಿಂ ಮುಸು ಕಿಟ್ಟು ಚಿಂತೆಯೊಳ್ . . . ಜಾನಿಸುತ್ತಿರಲು (ಕಾದಂಬ. ೩೬೬); ನಿಶೆಯೆಂಬ ವಧು ನೀಲಿಯ ವಸನವನುಟ್ಟು ಮುಸುಕಿಟ್ಟಳೆಂಬಂದದಲಿ ದಿಸೆ ಪದಿನಾಱ ಱೊಳೆಯ್ದು ಕತ್ತಲೆ ಮುತ್ತಿ ಮುಸುಕಿದುದು (ಅಂಪಚ. ೩-೦೦೨). ೩. ಆವರಿಸು; ತುಂಬಿಕೊಳ್ಳು: ಭೂತಳದೊಳ್ ಹಿಮಮೊತ್ತರಿಸಿ ಭುವನಜನಮನುಱೆ ನಡುಗಿಸುತುಂ . . . ಮುಂದುಗೆಡಿಸುತ್ತು ಮುಸುಕಿ ದುತುಂ (ಗಂಳ. ೯-೩೮); ಬಸಿಱೊಳ್ ಮಾಸೊತ್ತಿ ನೆತ್ತರ್ ಪಸರಿಸಿ ಕರುಳಿಂ ಸುತ್ತಿ ಮೂತ್ರಂ ಪುರೀಷಂ ಮುಸುಕಿಟ್ಟಿಲ್ಲಂಗದೊಳ್ ಕೆತ್ತಿರಲ್ (ಕಜ್ಜಾಕ. ೩). **ಮುಸುಗಿಡು**: ೨. ತಾಯಿ ದೊಡ್ಡಮ್ಮಾ ಏಸುಟ್ಟು ಮೆರೆದಾಳು ಕಾಗೂಟ್ಟು ಕರಿದಾ ಮುಸುಗಿಟ್ಟು . . . ಮೆರೆದಾಳೂ (ಜಾಬ್ಬಿಪ. ೬೩).

[ಮುಸುಂಕು$_2$ + ಇಡು$_1$]

**ಮುಸುಂಕು$_1$**, ಮುಸುಕು$_1$, ಮುಸುಗು$_1$ (ಕ್ರಿ). ೧. (ಗವಸಣಿಗೆ ಮೊದಲಾದುವುಗಳಿಂದ) ಮುಚ್ಚು; ಮರೆಮಾಡು; ಆಚ್ಛಾದಿಸು;ಹೊದೆಸು : ದೆಸೆ ಪಸುರೇಱ ಪಚ್ಚೆಯೊಳೆ ಮುಚ್ಚಿ ಮುಸುಂಕಿದ ಮಾಟ್ಕೆಯಾದುದು . . . ಮೇಘಕಾಲದೊಳ್ (ಪಂಪಭಾ. ೭-೨೨); ಎಲ್ಲಿ ಹೊಕ್ಕಲ್ಲಿ ನಿನ್ನ ವಿಚಾರವ ಮಾಣೆ . . . ಕೋಡಗವ ಹುಲ್ಲಲ್ಲಿ ಮುಸುಂಕಿದಂತೆ [ಪಾಠಾಂ. ಮುಸು ಕಿಟ್ಟಂತೆ] ಕೂಡಲಸಂಗಮದೇವ ನಿನ್ನ ಪರಿ (ಬಸವ. ವ. ೬೩೯); ಗಗನಲಕ್ಷ್ಮಿಯ ಪಯೋಧರಮಂ ಮುಸುಂಕಿದ ಚೀನಾಂಬರದ ಸೆಱಂಗಿನಂತೆ ತೊಳತೊಳಪ ವಳಯಿಗೆಯ ಪಟಲಗಳ್ಕಿರುತ್ತಿರೆ (ಅಭಿಶಿ. ೦೩-೭೧ ಪ). ೨. ಮರೆಮಾಡಿಕೊಳ್ಳು; ಹೊದೆದುಕೊಳ್ಳು : ಅನಿಮೀಕ್ಷಿಸಲಾ ಲತಾಂಗಿ ಲಜ್ಜಿಸಿ ತನುವಂ ನಿಜಸ್ಮಿತಸಿತಾಂಶುಕಪಲ್ಲವದಿಂ ಮುಸುಂಕುವಳ್ (ಕಾದಂಬ. ೯೯); ಆ ವಧುವಿನ ಗೃಹಜೆಯ್ದಿ ಮುಸುಂಕಿದ ಧಾವಳ್ಯಾಂಬರಮಂ ತೆಗೆದಂ ಸ್ಮರನಸಿಯೊಱೆದೆಗೆದಂತೆ (ಜಯುಕಾ. ೨-೪೨). ೩. ಮುತ್ತು; ಕವಿ; ಮುಸುರು : ಶ್ರವಣನತಪಾರಿಜಾತಸ್ತವಕೋದ್ಗತಮರಿಮಳಕ್ಕೆ ನಂದನಭೃಂಗೀನಿವಹಂ ಕವಿದೆನ್ನ ಮುಸುಂಕುವಿನಂ ಪೊಱಮಟ್ಟೆನಾಗಳತಿಸಂಭ್ರಮದಿಂ (ಕಾದಂಕ. ೯೯೦); ನೊಣಗಳ್ಮುಸುಂಕಿ . . . ಮುನಿಪತಿಯನಗಲದೆ ಸುಱಿವುವು ಜುಮ್ಮೆಂದು ಕಂಡವರ್ಬೆಸುವಿನಂ (ರಘುಶು. ೪-೬೭); ಅಬಲೆಯೊರ್ವಳರ ಮರುಳ್ದುಂಬಿಪೋದಲರ್ದ ಪೊಂದಾವರೆಯ ಸಿರಿಗೆತ್ತು ಮೊಗಕಱಗೆ, ಕಯ್ಮಿತ್ತಿ ಪೊಯ್ಯೆ ಕೆಂದಾವರೆಯರಲೆಸುತ್ತದಂ ಭರದಿಂ ಮುಸುಂಕೆ (ಶಬ್ದಶಾ. ೬-೪೭). ೪. ಹರಡು ; ಹಬ್ಬು : ಆವರಿಸು; ವ್ಯಾಪಿಸು : ಭೋಗಾಂಗಮಾಗಿಯುಂ ಕೃಷ್ಣಾಗರುಧೂಪಂ ಮುಸುಂಕಿ ಕೊಂದಿಕ್ಕಿದುದಾ ಭೋಗಿಗಳನಿಂತು ಸಂಸ್ಕೃತಿಭೋಗಂಗಳ್ ಭೋಗಿಭೋಗದಿಂ ವಿಷಮಂಗಳ್ (ಅಪ್ರ. ೩-೨೩); ಕುಸುಮಶರನ ಪೊಸಜಸದ ಬೆಳರ್ಪು ಮುಸುಂಕಿದುದೋ ಎನಲು ಅಸಿತೋತ್ಪಲಲೋಚನೆಯಾನನದೊಳ್ ಪಸರಂಗೊಂಡು ವಿವರ್ಣಂಮಿಗೆ ರಂಜಿಸಿವುದು (ಜಯುಕಾ. ೪-೦೮). ೫. ದಟ್ಟವಾಗಿರು ; ನಿಬಿಡವಾಗಿರು; ಸಾಂದ್ರತೆಯಿಂದ ಕೂಡಿರು : ಪೊಸವೇಟಮೆಂಬ ಚೆಲ್ವಿಡಿದೆಳ ಮಾಮರಂ . . . ಅನುರಾಗಮೆಂಬ ತಳಿರಿಂದೆಸೆದಟ್ಕಱನಾಳ್ದ ನೋಟಮಂ ಬಿಡಿದಲರಿಂ ಮುಸುಂಕಿ ಸುಸಿಲೆಂಬ ಬಸಂತದೊಳೇಂ ಪೊದೞ್ದುವೋ (ಆದಿಪ್ರ. ೦೨-೨೮); ಎಯ್ದೆ ಮುಸುಂಕಿ ನೀದ ತಣ್ದೆಳರ್ಗಳನೊಪ್ಪೆ ತೋರ್ಪ ಜಲಮಂಟಪದಲ್ಲಿಗೆ ಬಂದನಾ ನೃಪಂ (ಕಾದಂಬ. ೪೩೮). ೬. ಒಟ್ಟಾಗು; ಸೇರು; ಕೂಡು : ಪೊಸಮುತ್ತಿನ ಲಂಬಣದೊಳ್ ಮುಸುಂಕಿದಂತಿಡಿಯೆ ಪೂತ ಸುರಯಿಯ ಮುಗುಳಂ . . . ಆಯ್ದಳ್ (ಅಪ್ರ. ೧೦-೪೯). ೭. ತುಂಬಿರು; ಆವರಿಸಿರು : ವಿದ್ಯುಲ್ಲತಾಗರ್ಭೀಕೃತಶಾರದಾಭ್ರವಿಭ್ರಮದಂತೆ ಭಸಿತಂ ಮುಸುಂಕಿದ ಬಿಸುಗಣ್ಣಿಂ ಮೆಱೆವ ಲಲಾಟಪಟ್ಟದಿಂ (ಬಸವ. ೪-೦೪); ಮೊಸಳೆ ಮುಸುಂಕದಚ್ಚ ಪೊಸ ಬಾಂಬೊಟೆಯಿಂಬೊನ ಲೆಱರ್ಮೆ ಕೂರ್ನೋಣಾ ಮುಸುಱದ ಜೇನ ಪುಟ್ಟಿ (ಸಳಿ. ೬-೦೩೩). **ಮುಸುಕು$_1$** : ೧. "ಮುಸುಕು—ಆವರಣೇ, ಭಾವೇ ಚ" (ಶಬ್ದಾ); ದುಕೂಲಾಂಬರಂ ನಿಜಾಂಗದೊಳಂ ಸಂದೆಸೆದಿರೆ ಬೆಳ್ಮುಗಿಲಿಂದಂ ಮುಸುಕಿದ ನೀಲಾದ್ರಿ ಬರ್ಪ ತೆಱದೊಳ್ ಬಂದಂ (ಪಂಪಭಾ. ೨-೩೮); ಮಹಾಸ್ತ್ರ ನೀರದೊಳೀತವನು ಮುಸುಕಿದನು ಶರಮಯವಾಯ್ತು ರಣಭೂಮಿ (ಕುಮಾ.ವ. ೨೦-೩೦); ಮುಸುಕಿದಳು ಮಾಯಾವಿಲಾಸದ ವಸನದಲಿ ಮಾಯಾ ನಿತಂಬಿನಿ ಮಿಸುಕದಂತಿರೆ (ಕೌರಣಾ. ೨-೦-೪೦). ೩. ಧರ್ಮವೆಂಬಿಂದು ಮಂಡಲಕ್ಕೆ ಮುಸುಕುವ ಕಾಳರಾಹುವಿನ ನಾಲಗೆಯೆನಿಪ ಸಿರಿಯಂ ಬಣ್ಣಿಪಂ ಗಾಂಪನಲ್ತೆ (ಕಾದಂಪೂ. ೩೩೨) : ಅಳಿನಿಕುರುಂಬಮಶೋಕೆಯ ತಳಿರಂ ಮುಸುಕುವವೊಲಂಘ್ರಿಪಲ್ಲವಮಂ ಕುಂತಳತತಿಗಳ್ಮುಸುಱೆ . . . ಪೊಡಮಟ್ಟಂ (ರಶರ್ಮಶು. ೨-೦೪೬) ; ಮುಸುಕಿ ರ್ಝುಮ್ಮನೆ ತಗೆವುತೆಱಗುತ ಮಸಗಿ ನೆಗೆದೋಡುವ ನೊಣಂಗಳ ದೆಸೆದೆಸೆಗೆ ಹೇಸಿಕೆಯು ನಾತವಧಿಕ

ಭಯಂಕರವು ಪಸರಿಸಲು (ಬಸವ. ೪೬-೩೯) ; ಪರಶುವಿನಿಂದೆ ಮುಸುಕಿ ಮುದ್ಗರದಿಂದಲಸಿಯುರೆದು . . . ದೆಸೆಗೆಡಿಸಿದರ್ ಸುರಪ್ರಸರಮಂ ದಾನವರ್ (ಶಬ್ದ. ೪೪-೩೨). ೪. ಕುಸುಮಾಪಚಯವ್ಯಸನಾವಸಕ್ತ ಸುರಯುವತಿ ಪಾಣಿಪಲ್ಲವರಾಗಂ ಮುಸುಕಿದುದೆನಿಸಿದುದಸುಗೆಯ ಪೊಸದಳಿಗಳೊಳೆಸೆವ ಕೆಂಪು ನಂದನವನದೊಳ್ (ಆದಿಪು. ೭-೪೭) ; ಕೂಡೆ ಮೂಜಗವಂ ಮುಸುಕಿ ತೀಂಕಾಡಿಸುವ ಗಂಗೆಯನುಮೇಶನು ಸೂಡಿದನಲಾ (ಬಸವ. ೩೪-೭೩); ರವಿ ಪಶ್ಚಿಮಾದ್ರಿಯಂ ಮುಟ್ಟಿಗೊಳೆ ತಮಸ್ತೋಮಮವನಿಯಂ ಮುಸುಕಿತು (ಕೃಚಿಂಥ. ೬-೪೯). ೫. ಸನೆಯಿಂ ಮುಸುಕಿದ ತಳಿರಂ ಪೇಱಿದ ಪೊಸ ಮಾವುಗಳಿಂ ಬಸಂತಮೆಸೆದಪುದು (ಆದಿಪು. ೧೧-೬೩) : ಮಿಸುಪ ನದೀ ನಾರಿಯ ನಳಿತೋಳಿನಲೆಸೆವಿರ್ತಡಿಗಾಲುವೆಯಿಂದಮೆ ನೆಱೆ ಮುಸುಕಿ ಬೆಳೆದ ಚೆಂದೆಂಗೊಳ್ವಾಳೆಯಡಕೆ ಪಸುರೆಲೆವಳ್ಳಿ . . . ಒಪ್ಪಿದುವು (ಜಯನೃ. ೧-೩೯). ೬. ಕೇಯೂರಕಟಕಸಮಿತಿಯೊಂಗಾಯತಬಾಹುಗಳನುಸ್ಮಿತಪ್ರತ್ನ ಪಟಚ್ಛಾಯೆಯೊಳೆ ಮುಸುಕಿ ದೇಹಚ್ಛಾಯೆಯುಮಂ ಪುದಿಯೆ ರತ್ನತರುವೆಸೆ ಪೋಲ್ತಂ (ಆದಿಪು. ೯-೪೦); ಅಲಘುವರ್ಣಕರೀತಿಯಿಂ ರಸಂ ಮುಸುಕಿಯುಜ್ವಳಿಪಂತೆ . . . ಬರೆಯಿಸುತೆ (ಶಬ್ದಾ. ೧೨-೩೦). ೮. ಒದಗು ; ದೊರಕು ; ಉಂಟಾಗು : ರಸನೇಂದ್ರಿಯಂ ತೃಪ್ತಿಪಡೆಯಲಿಹಪರಸೌಖ್ಯ ಮುಸುಕುವುದು (ಸೂಕ್ತಿ. ೧-೩). ೯. ಅಡಗಿರು; ಮರೆಯಾಗು : ಆ ವಿರಾಟನ ರಾಜಧಾನಿಯೊಳೀ ವಿಳಾಸದಿ ಮುಸುಕಿ ತಾವ್ ಪರಸೇವೆಯಲಿ ಪಾಂಡವರು ಕಳೆದರು ಹತ್ತುಮಾಸವನು (ಕುವ್ಯಾ.ವಿ. ೨-೨) ; ಖರಕಿರಣ ಮೇಘದೊಳು ಮುಸುಕಿರ್ದುರವಣಿಸಿ ಪೊಡಮಡುವ ತೆರದಿಂ (ಕೊಲ್ಹಾ.ಕ. ೩೭). ೧೦. ಮುಚ್ಚಿಡು; ರಹಸ್ಯವಾಗಿಡು ; ಅಡಗಿಸು : ಕುಂತೀನಂದನರು ಸುಕ್ಷಾತ್ರತೇಜೋವೃಂದವನು ಮುಸುಕಿದರು ವಿಮಲಬ್ರಹ್ಮರಶ್ಮಿಯಲಿ (ಕುವ್ಯಾ.ಆ. ೧೦-೨). ೧೧. ಸುತ್ತುಗಟ್ಟು; ಬಳಸು; ಸುತ್ತುವರಿ : ಶಿಖಿಯ ಸೆಕೆ ತಾಗೆ ಮಿಗೆ ಕುಂದುತುಂ ಪುದಿದ ಮಾಸು ಮುಸು[ಪಾಠಾಂ. ಮಸುಂ]ಕಲುಬ್ಬಸದೊಳೊಂದುತುಂ (ಬಿಂದೋರ. ಹ. ೩೦೦-೨೧) ; ಪೊಂಗೊಡಮೊಲೆವೆಂಗಳು ಮುಸುಕಿತು ವ್ಯಡತಪದ್ಧ್ವಂಸಿಯ ಪಿತನ (ರೋಹಿತ. ೧೪-೩೦) ; ಅಸಿವರುಣಿಗಳಾ ಕಾಸಿಯ ಪುರವನು ಮುಸುಕಿ ಕಾದಿರುವಂದದಲಿ ಒಸೆದು ಪಟ್ಟಣವನು ಪಾಪಿನಿಯೆರಡಾಗಿ ಪಸರಿಸಿ ರಕ್ಷಿಸುತಿಹಳು (ಕಂಪಿ. ೩-೪೩).

**ಮುಸುಗು₁** : ೩. ಇಸೆ ಮುತ್ತಿ ಮುಸುಗಿ[ಪಾಠಾಂ. ಸುಱಿ] ಪರಿಬಂಧಿಸಿದವು ನರರಥತುರಂಗಮಂಗಳಂ . . . ಅವನ ಸರಲ್ಗಳ್ (ಶಂಕರಾ. ೧೨-೧೭೩); ನಟ್ಟೊಗ್ಗರಲ್ದನಿಗೆ ಪಾರಾವತಾದಿ ವರಖಗತತಿ ಮುಸುಗಲು (ಶ್ರೀಂದಶ. ೧೬-೨೩) ; ಸಗರನ ತನೂಜರಾಗುರುಬಿ ಶರವರ್ಷಮಂ ಸೈಗರೆಯಲವು ಸಕಲ ನಾಗಬಲಮಂ ಮುಸುಗುತೆ (ತತ್ವಪು. ೯-೧೧-೩೯). ೭. ಮುಖವೆಲ್ಲ ಧೂಳು ಮುಸುಗಿದೆ (ವೀರಬಸ. ೧೯೦). ೧೦. ಸತ್ಯವನ್ನು ಮುಸುಗುವ ಶಕ್ತಿ ಕ್ಷುಲ್ಲಕವಾದ ಅಸತ್ಯಕ್ಕಿದೆಯೇ ? (ಶಿಶಂಬಾ. ೧೨೦). ೧೧. ಆ ಕುವರನನು . . . ರಾಕೇಂದುವಿನಂದದ ಮೊಗವರ್ಗಳ್ ನಾಕಸತಿಯರೊ . . . ಎಸೆ ಮಿಗೆ ಮುಸುಗಿದರು (ಚಿಪುಳ್ನ. ೧೭-೩೦). 'ಮುಚ್ಚು₁', 'ಮುಸುಱು₁' ಪರಾ.

**ಮುಸುಂಕು₂**, ಮುಸುಕ, ಮುಸುಕು₂, ಮುಸುಗು₂ (ನಾ). ೧. ಹೊದಿಕೆ; ಆಚ್ಛಾದನೆ : ಎಯ್ದೆ ಪಂದೆಳಸಿ ಮತ್ತ್ಯಪರ್ಯಂಕಮಂ ಪೊರ್ದುವಂ ಪದೆದಾನೀಕ್ಷಿಸೆ ಪೋಪನೊಯ್ಯನೆ ಮುಸುಂಕಂ ಪೊಕ್ಕು ಮೆಯ್ಮುತ್ತಿಪಂ (ಕುಸುಮಾ. ೧೨-೧೩೦). **ಮುಸುಕ** : ೧. ತೆಗೆ ನಿನ್ನ ಮುಸುಕವ ನಗುತುಂಬಿ ಮೊಲೆಯನು ಜಗವನೆಲ್ಲವ ತಿರುಗಿ ಬಾಯಾಜಿ ಬಂದೆನು (ಪುರಂದ. ೧-೬ ಅನುಪಲ್ಲವಿ). ೨. ತೆರೆ ; ಜವನಿಕೆ : ಪರದೆ : "ಜವನಿಕೆ ಮುಸುಕಂ" (ಶಬ್ದಮ. ೧೩). **ಮುಸುಕು₂** : ೧. ಮುಸುಕಿರ್ದ ಭವಬಂಧನವ ತೆಗೆದು ಕಳೆವಂತೆ ಮುಸುಕಂ ತೆಗೆದಂ (ಸೌಂದರ. ವೀ. ೬೬-೦೪) ; ತಲೆಯ ಮುಸುಕಿನ ಕಂಗಳೊಱತೆಮ ಜಲದ ಮುಗುಡದ ಮುಖದ ಜನಪತಿ ಫಲುಗುಣನನೆತ್ತಿದನು (ಕುವ್ಯಾ.ದ್ರೋ. ೬-೧೭) ; ಆಗಳಸುತ . . . ಶಿಖಿಯ ಮೇಗೆ ಕವಿದ ಬಿಳಿ ಮುಗಿಲನೊತ್ತರಿಸುವಂತಾಗ ನೂಂಕಿದ ತನ್ನ ಮುಸುಕ (ಭರತ. ೧೦-೬೬). ೨. ಮುಸುಕು ಸರಿಯಲು ಮೋಡವೋಡಿದಿನಬಿಂಬದಂತೆಸೆವ ಮೊಯ್ಯೆಳಗೆದ್ದು ಬೀದಿವರಿದು (ಸಿದ್ಧರಾ. ೨-೩) ; ಪಸರಿಸಿದ ಪರಿವಾರಮಧ್ಯದೊಳಸಮಬಲ ಹೊಳಕಿದನು ಮೇಘದ ಮುಸುಕನುಗಿದಿನನಂತೆ ಮೈದೋಱಿದನು ಕಲಿಭೀಮ (ಕುವ್ಯಾ.ಅ. ೭-೩೨) ; ಸೌಗಂಧಿಕಾದೇವಿಯುಂ ಸಮೀಪದಲ್ಲಿರುವ ಸಖೀಮುಖಮಂ ನೋಡಿ ಕನ್ನಡಿಯ ಮುಸುಕಂ ಮರೆಮಾಡುವಂತೆ ಸನ್ನೆಯಂ ಮಾಡಿ (ಸೌಗಂಧಿ. ೪೯೦-೧೧). ೩. ಮುಖವನ್ನು ಮರೆಮಾಡಿಕೊಳ್ಳುವ ಬಟ್ಟೆ: ಅವಕುಂಠನ; ಬುರುಕಿ : ಮೆಳ್ಪತೆ ನುಡಿದೆಯ್ದೆವಂದು ಮುಸುಕಂ ತೆಗೆದಾಗಡೆ ಮೇಲೆವಾಯ್ದು ಬಲ್ದಡಿಗನಪ್ಪಂಕಿ ಬಲ್ಲಡಿಗನಂ ಪಿಡಿದೊಮ್ಮೆಯೆ ಮಲ್ಲಯುದ್ಧದೊಳ್ ಪೋರ್ದು (ಶಂಕರಾ. ೯-೭೭) ; ಮುಸುಕುಗಳ ಮೇಲ್ಸೆಱಗುಗಳ ಮಸೌಳಿಗಳ ಮಹಿಳಾಜನ ವಿರಾಜಿಸಿತ್ತು (ಕೊರಡಾ. ೧-೩-೨೯). ೪. ಆವರಿಸುವಿಕೆ; ಕವಿಯುವಿಕೆ: ಮುಚ್ಚಿಕೊಳ್ಳುವಿಕೆ : ವಿಸುಗೆ ನಿಮಗೆಂದಾಯ್ತು ನಿದ್ರೆಯ ಮುಸುಕಿನಲಿ ಗೋಗ್ರಹಣದಲಿ ಜೀವಿಸಿದ ಜಾಣರು ನೀವು (ಕುವ್ಯಾ.ದ್ರೋ. ೭-೬). ೫. ಆವರಣ : ವ್ಯಾಪ್ತಿ : ಜಲಧಿಯ ಮುಸುಕಿನಾಗಿದತಿಕರುಣಿಯೋ ಹೇಗುಸಿನ ಹರಿಬಕೆ ಕೃಪೆಯ ಮಾಡು (ಕುವ್ಯಾ.ಗ. ೧೪-೧೧೭) ; ರೂಪ ಬಂಧದ ಬಿಗುಹು ಮಿಕ್ಕಿಯ ಮುಸುಕನುಗಿದುಳಿವುದೆ ಕುಮಾರನ ಮುಸುಡ ಮುಂದಕೆ ಬಿದ್ದು ಬದುಕು ಪರೇ ಮಹಾದೇವ (ಕುವ್ಯಾ.ದ್ರೋ. ೭-೨೭). ೬. ಅಡ್ಡಪಟ್ಟಿ; ಮರೆ : ಕಂಗಳಲಿ ಕಟ್ಟಿದ್ದ ಮುಸುಕನಭಂಗನಾಗ ತೆಗೆದು ಬಿಸುಟು ನಯನಂಗಳಂ ಬಲುಹಿಂದ ತೆಱೆದುಱೆ ನೋಡಲು (ಮಹಾ. ೩೦-೬೦). ೭. ಮುಚ್ಚುವ ಸಾಧನ ; ಮುಚ್ಚಳ : ಪೊನ್ನ ಕೊಪ್ಪರಿಗೆಗಳೊಳಗೆ ತೀವಿ . . . ಬಸವರಾಜನು ಮುನ್ನ ತಾಂ ಮುದ್ರಿಸಿದ ಮುಸುಕಂ ತೆಗೆಯಲೊಡನತಿನಿಸಿತ ಗರಳೋದ್ರೇಕವಹ್ನಿಪ್ರಸರಪೆಡೆಗೆಡೆಗೆ . . . ನೆಗೆಯುತಿರಲು (ಬಸವ. ೩೬-೩೯). ೮. ಒರೆ; ಕೋಶ : ಮುಸುಕಿನ ಸುರಗಿ ಕಿತ್ತುವ ಮಂದಿ ದಳದುಳವಾಯ್ತು ನಿಮಿಷದಲಿ (ಕುವ್ಯಾ.ದ್ರೋ. ೭-೩). ೯. ಗುಟ್ಟು: ರಹಸ್ಯ: ಮುಚ್ಚುಮರೆ : ಗೌಪ್ಯ : ಮುಗುಳ್ತದ ಭರದ ಗುಜುಂಗುಜುಗೋಷ್ಠಿಗಳ ಜನಜನದ ಮುಸುಕುಗಳ . . . ಪಾಳೆಯದಿರವು ಲೇಸಲ್ಲೆನುತ ಬಂದನು ರಾಜಮಂದಿರಕೆ (ಕುವ್ಯಾ.ಕ. ೧೭-೩); ಮಾರಿಹಿಂಡು ಮತ್ತೆ ಮುಸುಕಿನ ಮಂಡು ಮೈಗೆ ಮುತ್ತಿದರೇನು ವಾರಿಜನಾಭನ ವಸುದೇವಸುತನ ಸಾರುವಂಥ ಪರಿದಾಸರಿಗೆ (ಪುರಂದ. ೧-೨೩೬-೧); ಪೋಲ್ವೆಯುಂ ತಿಳುಪೆಂದು ಮುಗುಳೆ ಮುಗುಳುಪಚರಿಸಿ ಮುಸುಕಿನಿಂ ಬೆಸಗೊಂಡರು (ಶರಶಾ. ೭-೨೪). ೧೦. ತೋರಿಕೆ ; ವೇಷ : ಸೋಗು : ಪುಸಿಯಾದ ಜಪ ಮಾಡುವವಗೆ ಮುಸುಕಿನ ಡಂಭವದೇಕೆ (ಪುರಂದ. ೦-೩೦-೩). ೧೧. ಮಂಕು : ಮಬ್ಬು : ಹಿಡಿದ ದುಗುಡದ ಕವಿದ ಮುಸುಕಿನ ಗಡಣದಲಿ ಗುರುಕೃಪಜಯದ್ರಥರೊಡನೊಡನೆ ಬರುತಿರ್ದುದಖಿಲಮಹೀಶಪರಿವಾರ (ಕುವ್ಯಾ.ಶ. ೧೧-೧೭) ; ಗಂಡುಅಧ್ಯಾಪಕರಿಗೆಲ್ಲ ಒಂದು ಬಗೆಯ ನಿರುತ್ಸಾಹದ ಮುಸುಕು ಕವಿಯುತ್ತದೆ (ಹಸುಹೊ. ೩೨೭). ೧೨. ಪ್ರಕಟವಾಗದಿರುವಿಕೆ ; ವ್ಯಕ್ತವಾಗದಿರುವಿಕೆ : ಮುಸುಕು ಪೆರ್ಚೆಸುತ್ತು ಹೊದಕೆಗಳಸದೃಶದೊಳಪಿಕ ವಿಚಿತ್ರಪುಳಕವಿಲಾಸಪ್ರಸರಂ ಸನ್ನಾಹನವೆಂತೆಸೆವಾವೇಗಕ್ಕೆ ತರದಿನನು ಭಾವಂಗಳ್ (ರಸರ. ೪-೧೧೨ ಸೂತ್ರ). **ಮುಸುಗು₂** : ೧. ಥಂಡಿಯ ಮುಸುಗಿನಲ್ಲು ಬೆಚ್ಚಗೆ ಕನಸು ಕಂಡಿಲ್ಲ ? (ನೆಪಾ. ೩೩-೧). ೩. ಅರಸೀ ದೊಡ್ಡಮ್ಮಾ ಮುಸುಗೀನಾ ಬಣ್ಣಾಕೆ ಎರಸವ್ರೆ ನೀಲೀಕುದುರೇಯಾ (ಹುಬ್ಬಿಪ. ೭೩) ; ಮುಸುಗುಹಾಕಿಕೊಂಡರೆ ಏನು ನೋಡುವುದಕ್ಕಾಗುತ್ತೆ ಮಣ್ಣು! (ಶಾಪೇಚ್. ೩೪). ೮. ಇಂದು ಮುಸುಗಿನ ಮರೆಯ ಸುರಗಿಯುಂದದಿ ಬರ್ಪಂ (ನವಪೋ. ೨೭-೩೪).

**ಮುಸುಕಿನ ಗುದ್ದು** = ೧. (ಆಲಂ) ಒಳಗೊಳಗೇ ಅನುಭವಿಸುವ ಹಿಂಸೆ ; ಹೊರಗೆ ಕಾಣದ ನೋವು : ಬಿಸಿ ಆಲೂಗೆಡ್ಡೆಯು ಬಾಯೊಳ ಗಿಟ್ಟಂತೆ ಕಸಿಮಿಸಿಗೊಳುತಿದೆ ಜೀವ ಹುಸಿಯಲ್ಲವೊ ಹಾಳುಸಂಸಾರದೀ ಚಿಂತೆ ಮುಸುಕಿನ ಗುದ್ದಲ್ಲೊ ದೇವ (ಬಂಶಾಕ. ೯೯-೯೪). ೨. ಕಣ್ಣಿಗೆ ಕಾಣ ದಂತೆ ಕೊಡುವ ಪೆಟ್ಟು ; ನೇರವಲ್ಲದ ಆಕ್ಷೇಪಣೆ : ಮುಸುಕಿನ ಗುದ್ದಿಗವಕಾಶವಿಲ್ಲದ ನಿಷ್ಕಾಪಟ್ಯ; ಕೃತ್ರಿಮಸ್ಥಾನಮಾನಗಳಿಗಳುಕದ ನಿರ್ಭಯ. . . ಇವು ಅವರ ವ್ಯಕ್ತಿತ್ವದ ಪ್ರಧಾನಗುಣಗಳು (ಶ್ರೀಕೃಕೃ. vi, ಮುಖಪ್ಟು). **ಮುಸುಕಿನ ಜೋಳ** = ಒಂದರ ಮೇಲೊಂದು ಎಲೆಯ ಮುಸುಕುಗಳನ್ನು ಉಳ್ಳ ಒಂದು ಬಗೆಯ ಜೋಳ : ಮುಸುಕಿನ ಜೋಳದ ಹಿಟ್ಟಿನ ರೊಟ್ಟಿಯನ್ನು ತಿಂದು, ಹಾಲು ಕುಡಿಯುವರು (ಬಾಂಕೃ. II. ೯೦೭); ಮುಸುಕಿನ ಜೋಳವನ್ನು ಹೆಚ್ಚಾಗಿ ಬೆಳೆಯುವಂತೆ ಸರಕಾರ ನಮ್ಮ ದೇಶದಲ್ಲಿ ಪ್ರಚಾರ ಮಾಡಬೇಕು (ಕರಪ. ೩೪). **ಮುಸುಕಿನ ವಡೆ** = ಒಂದು ಬಗೆಯ ವಡೆ : ಉದ್ದಿನ ಬೇಳೆಯಂ ನಸೆಯಿಕ್ಕಿ ತೊಳೆದು ಒರಳೊಳಾಡಿಸಿ . . . ತುಪ್ಪದಲ್ಲಿ ಬೇಯಿಸುವುದು. ಅದರ ಹೆಸರು ಮುಸುಕಿನ ವಡೆ (ಸೂಶಾ. ೦-೭೭ ಅ೨೭). 'ಮುಸುಕೊಡೆ' ಪರಾ. **ಮುಸುಕಿನೊಳಗಿನ ಗುದ್ದು** = ೧. ಮುಸುಕಿನ ಗುದ್ದು ೧ : ಈ ಮುಸುಕಿ ನೊಳಗಿನ ಗುದ್ದು ನನಗೆ ಸಹಿಸಲಸಾಧ್ಯವಾಗಿದೆ (ರೂ೨). ೨. = ಮುಸು ಕಿನ ಗುದ್ದು ೨ : ಏನಿದ್ದರೂ ನೇರವಾಗಿ ಮಾತನಾಡು. ಈ ಮುಸುಕಿ ನೊಳಗಿನ ಗುದ್ದು ಸಾಕು (ರೂ೨). [< ಮುಸುಂಕು$_1$./ತೆಲು. ಮುಸುಕು, ಮುಸುಗು, ಮುಸುಗುಡು, ಮುಸುವು]

**ಮುಸುಂಕುಗಳೆ** (ಕ್ರಿ). ಆವರಣವನ್ನು ನೀಗು,-ಸರಿಸು : ದಂತಂ ಮುಸುಂಕುಗಳೆಯಲ್ಕಾಂತಿವೆ ನಡು ತನುವನೆಳಸದಿದೆ. . . ಕಾಂತಿ ಶರೀರ ಮುಸುಕಿರ್ಪಲಿದೆ ಪಾರ್ವತಿಯಾ (ಗಿಂಕ. ೪-೭). [ಮುಸುಂಕು$_2$ + ಕಳೆ$_1$]

**ಮುಸುಂಕುಗಳ್ತಲೆ**, ಮುಸುಕುಗತ್ತಲೆ (ನಾ). ಆವರಿಸಿರುವ ಕತ್ತಲೆ: ಕವಿದಿರುವ ಅಂಧಕಾರ : ನಸುಗಳ್ತಲೆಯುರೆಗಳ್ತಲೆ ಮುಸುಂಕುಗಳ್ತಲೆ . . . ರಸೆಗಳ್ತಲೆಯೆನಿಸಿ ಕೂಡೆ ತೀವಿತು ತಿಮಿರಂ (ಗಿಂಕ. ೪-೭೩). **ಮುಸುಕುಗತ್ತಲೆ** : ಮುಸುಕುಗತ್ತಲೆಯಲ್ಲಿ ಇನ್ನೂ ಕಣ್ಣುಚ್ಚಿಕೊಂಡವರಿಗೆ ಈ ಚಿಲಿಪಿಲಿಹಾಡಿನ ಅರ್ಥವಾಗುತ್ತಿರಲಿಕ್ಕಿಲ್ಲ (ಸೂಹಿ. ೯೩).

[ಮುಸುಂಕು$_1$ + ಕಳ್ತಲೆ (< ಕತ್ತಲೆ)]

**ಮುಸುಂಡಿ$_1$**, ಮುಚ್ಚುಂಡಿ, ಮುಸಂಡಿ, ಮೂಸಂಡಿ, ಮೂಸುಂಡಿ (ನಾ). ೧. ವಕ್ರಬುದ್ಧಿಯುಳ್ಳ ವ್ಯಕ್ತಿ : ಕೊಂಕುಸ್ವಭಾವದ ವ್ಯಕ್ತಿ : ಮೊನೆಗಾತಿ ಮುಗುದೆ ಮುಸುಂಡಿಯಾಗಲಿ ನೆರೆವನೆ ಗರತಿಯು ನೀಕರಿಸಿದೆ . . . ಆವರಿಸುವುದು (ಹಂಬ. ೪-೩೭). ೨. ಸಂಕೋಚಸ್ವಭಾವದ ವ್ಯಕ್ತಿ ; ಮುಖಹೇಡಿ ; ಅಂಜುಕುಳಿ : ಆ ಹುಡುಗ ಬಲು ಮುಸುಂಡಿ. ನಾಲ್ಕು ಜನರೊಂದಿಗೆ ಸೇರುವುದಕ್ಕೆ ಹಿಂಜರಿಯುತ್ತಾನೆ (ರೂ೨). (ಗು). ೩. ಹೇಡಿಯಾದ ; ಅಂಜುಕುಳಿಸ್ವಭಾವದ : ಎಲೋ ಲಕ್ಷ್ಮಣಾ, ನಿನ್ನನ್ನು ಈ ಮುಸುಂಡಿ ರಾಕ್ಷಸ ಕೊಂದು ಬಂದನೆ ? (ಮುಂಬಮು. ೭-೨೯೩). **ಮುಚ್ಚುಂಡಿ** : ೧. ಆ ತಿರುಜ್ಞಾನಸಂಬಂಧರ ಸಮರ್ಥಿಕೆಯಂ ಕಂಡುರ್ಬಿ ಕೊರ್ಬಿ . . . ಶಿವಭಕ್ತಜನವುಬ್ಬಿಉಸುತಿರ್ಪುದಂ ನೋಡಿ ಕಡುಗಾಯ್ದು ಮುಚ್ಚುಂಡಿಗಳಪ್ಪ ಭಂಡಸಮಣರಗ್ನಿಸ್ತಂಭಮೆಂದು ಮುಳಿದು ಮತ್ತ ಮಿಂತೆಂದರ್ (ತ್ರಿಪು. ೩೩-೫೯) ; "ಘಟಿಪಾರಿ" (ತ್ರಿಪು. ೯೩೯). **ಮುಸಂಡಿ** : ೧. ಆಗ ಪುರಂದರಕೋಟೆಯೊಳಗೆ ಆ ಮುಸುಂಡಿಗಳು ಶ್ರೀಧರಸ್ವಾಮಿಗಳನ್ನು ಹಿಡಿದಿಟ್ಟಿದ್ದರು (ಕವಂ. ೯೯). ೨. ಅವನನ್ನು ಕೆಲವರು 'ಮುಸಂಡಿ' ಎಂದೂ ಕೆಲವರು 'ಸೀಟ್ಯೆಟು' (ಅರ್ಥಹುಚ್ಚು) ಎಂದೂ ಕರೆಯುವರು (ತ್ರೀಕ. ೧). **ಮೂಸಂಡಿ** : ೨. ಅವರ ರಕ್ತದಲ್ಲಿ ಬರಿಯ ಬಿಳಿಯ ಕಣಗಳೇ ಇರಬೇಕು. ಏನು ಸಪ್ಪೆ ಮುಖ . . . ಮೂಸಂಡಿ ಗಳು ! (ಅಂಹೂ. ೧೨೪). ೩. 'ಮೂಸಂಡಿದೊತ್ತು' ಪರಾ. **ಮೂಸುಂಡಿ** : ೩. ಕೊಂದು ಬಂದನೆ ನಿನ್ನನೀ ಮೂಸುಂಡಿ ರಕ್ಕಸನು (ತೊರಾ. ೭-೪೨-೩೩). [ದೇ.॥ ತಮಿ. ಮುಚುಣ್ಣರ್ = ಕೀಳು ದರ್ಜೆಯ ಜನ; ತುಳು. ಮುಸುಂಡಿ, ಮುಸುಡಿ = ನಾಚಿಕೆಗೆಟ್ಟ ಹೆಂಗಸು]

**ಮುಸುಂಡಿ$_2$**, ಮುಸುಂಡೆ, ಮುಸುಡ, ಮುಸುಂಡಿ$_2$ (ನಾ). ೧. ಒಂದು ಬಗೆಯ ಯುಧ : "ತೋಮರ . . . ಮುಸುಂಡಿ ಸ್ಫೋಟಗದೆ ಶಂಕು ಯಷ್ಟಿಗಳ್ ಕೈದುಗಳ ಭೇದಮುಕ್ಕುಂ" (ಮಂಗರಾ. ೮೬-೩೮); ಮುಸಲ ಮುಸುಂಡಿ ಭಿಂಡಿವಾಳ ತೋಮರ ಮುದ್ಗರ ಮಹಾವಿವಿಧಾಯುಧಂ ಗಳೊಳಿಟ್ಟುಂ. . . ಕಾದುವಾಗಳ್ (ಶಂಕಶಾ. ೦೨-೦೦೯ ವ); ಅಸಿಮುಸಲ ಕಣಾಯ ಕಂಪನ ಮುಸುಂಡಿ ಬಿಂಡಿವಾಳ. . . ಪಾಶಾಂಕುಶಾದಿ ಶಸ್ತ್ರಾಸ್ತ್ರಂಗ ಳೊಳೆಚ್ಚುಮಿಟ್ಟುಮಿಱಿದುಂ (ಶಂರಾಮಾ. ೦೩-೭೩ ವ): ಮುದ್ಗರ ಮುಸುಂಡಿ . . . ಸುರಗಿ ಮೊದಲಾಗಿರ್ದ ಕೈದುಗಳ ಪರಿಮಿಡಿಯೊಳುರವಣಿಸಿ ಪೊಯ್ದು (ಕೃಶಾ. ೦೨-೨೪). **ಮುಸುಂಡೆ** : ೨. ಒಂದು ಬಗೆಯ ಸಸ್ಯ : 'ಪೆರ್ಮುಸುಂಡೆ' ಪರಾ. **ಮುಸುಡ** : ೧. ಮುದ್ಗರ ಕುಂತ ಮುಸುಡ ಭಲ್ಲೆಯ ಬಿಂಡಿವಾಳಂಗಳಂ ಕಳೆದು ಮುಸಕದಿಂದೈದಿದರ್ ಪಟುಭಟರ್ (ನೆಪು. ೨೩-೩೫). **ಮುಸುಡಿ$_2$** : ೧. ದುಡವಲಗೆಯ ಮುಸುಡಿ ಮುದ್ಗ ಕಠಾರಿಯುಬ್ಬಣದ ಗಂಡುಗಲಿಗಳು ಕವಿದರು (ಕುವ್ಯಾಭೀ. ೫-೭೦). 'ಭುಸುಂಡಿ' ಪರಾ. [< ಪ್ರಾ. ಮುಸುಂಢಿ. ಮುಸಂಢಿ./ ಸಂ. ಮುಸುಂಠೀ./ತಮಿ. ಮುಚುಣ್ಟಿ; ತುಳು. ಮುಸುಂಡಿ, ಮುಸುಡಿ; ತೆಲು. ಮುಸುಂಡಿ]

**ಮುಸುಂಡಿತನ** (ನಾ). ಮುಖಹೇಡಿತನ ; ಸಂಕೋಚಸ್ವಭಾವ : ಅಲ್ಲಿ ಕೆಲಸ ಮಾಡಬೇಕಾದರೆ ನಿನ್ನ ಮುಸುಂಡಿತನವನ್ನು ಮೊದಲು ಬಿಡಬೇಕು (ರೂ೨). [ಮುಸುಂಡಿ$_1$ + — ತನ]

**ಮುಸುಂಡು**, ಮುಸಡಿ, ಮುಸುಡಿ$_1$, ಮುಸುಡು, ಮುಸುಡೆ, ಮುಸುಣಿ, ಮುಸುಳಿ (ನಾ). ೧. (ಪ್ರಾಣಿಗಳ) ಉದ್ದವಾಗಿರುವ ಮುಖ— ಮೂತಿ : ಜಲದೊಳಗೆ ಮುಸುಂಡನಿಟ್ಟು ನೀರಂ ಕುಡಿಗುಂ. . . ಚಿರಾಯುಷಪ್ಪುದು ತುರಗಂ (ಅಶ್ವಶಾ. ೩-೨೭); ಹರಿಣಗಣಂ ಬಂದು ಮುಸುಂಡಂ ನೀಡಿ ಕಣ್ಮುಚ್ಚಿ ನೀರಂ ಕುಡಿದು ತಣಿದು ಮರಳ್ವುವು (ರಾಮಾಶ್ವ. ೩೦-೧೯). **ಮುಸಡಿ** : ೨. (ವಿಶೇಷವಾಗಿ ತಿರಸ್ಕಾರಾರ್ಥ ದಲ್ಲಿ ಮನುಷ್ಯರ) ಮುಖ ; ಮೋರೆ : ಅವನ ಮುಸಡಿ ಕಂಡರೆ ಹೇಸಿಗೆ ಯಾಗುತ್ತಿತ್ತು ನನಗ (ಮುಖ್ಯಹ. ೦೬೩). **ಮುಸುಡಿ$_1$** : ೧. ಯಾವ ಅಶ್ವಕ್ಕೆ ಊರ್ಧ್ವಮುಖವಾಗಿ ಬಗ್ಗಿರುವ ಕೊನೆಯುಳ್ಳದ್ದಾಗಿ ವಾಮಭಾಗದಲ್ಲಿ ರೇಖೆಯು ಮುಸುಡಿಯಲ್ಲಿರುವದೊ ಆ ಅಶ್ವವನ್ನು ಮೃಗಜಂಭವೆಂಬ ರೋಗವು ಐದನೇ ವರ್ಷದಲ್ಲಿ ಕೊಲ್ಲುವುದು (ಸೌಗಂಧಿ. ೩೨೦-೦೩). ೨. ಪಾತಕರ ಮುಸುಡಿ ನೋಡಲಾಗದು (ಗಣಶಾ. ೦೩೯-೩); ಮುಸುಡಿ [ಶಾಕಾಂ. ಡು]ಗಳು ಕಂದಿದವು ಕುಂದಿದವೆಸೆವ ತನುಕಾಂತಿಗಳು (ತೊರಾ. ೨-೪-೦೭) ; ಇಲ್ಲಿ ಕಳಸೇ ಅವನನ್ನು, ಅವನ ಮುಸುಡಿಯನ್ನಾದರೂ ನೋಡ್ತೇನೆ (ಮುರುಡಾ. ೦೬೩). **ಮುಸುಡು** : ೧. ಸೂಕರನಾ ಅಶುದ್ಧವ ತಿಂದು ಬಂದಜಿ ಮುಸುಡ ಒಂದು ಮೂಸಿ ನೋಡುವಂತೆ (ಮುಶಶೂ. ೮-೯) ; ವೃಷಭನು . . . ಕಿವಿಯನಲುಗಿಸುತ ಮುಸುಡೆತ್ತುತ್ತುಸಿರಿಡುತ . . . ಹತ್ತಿರಕೆ ಬಂದು (ಐಸಪು. ೩೨-೨೭); ನಾಯಿಗಳು ತಮ್ಮ ಮುಸುಡುಗಳನ್ನು ನಾಲಿಗೆಯಿಂದ ಒರೆಸಿಕೊಳ್ಳುತ್ತ . . . ಬಾಲವನ್ನು ಅಲ್ಲಾಡಿಸಿದುವು (ಜಾಕತ. ೯೯). ೨. "ಮುಸುಡೆನೆ ಮೊಗಂ" (ಕಬ್ಬಿಮು. ೭೨) ; ಮುಸು ಡೊಳಗೆ ಮೂಡಿತ್ತು ಕಾಂತಿಯಾತನ ಸತಿಗೆ (ಶಂಕೇರ. ದೇ. ೨೪೦-೦೨) ; ಭೀಮ ಕಷ್ಟವನೆಸಗಿದನು ಹಾಯೆಂದರಾದೊಡೆ ಮುಸುಡನವರಾದ್ರಿ ಯಲಿ ತೇವೆಸು ದೇವಸಂತತಿಯ (ಕುವ್ಯಾವಿ. ೩-೬೮) ; ಉಸುರದಿಪ್ಪರಸಂಗೆ

ವಿನಯದಿಂ ಮುಸುಗಿಸುತೆ (ನವಮೋ. ೨೩-೧೦).

[ಮುಸುಗು$_2$ (< ಮುಸುಂಕು$_2$) + — ಇಸು$_3$]

**ಮುಸುಗು$_1$** ' ಮುಸುಂಕು$_1$ ' ನೋ.

**ಮುಸುಗು$_2$** ' ಮುಸುಂಕು$_2$ ' ನೋ.

**ಮುಸುಗುಕ್ಕೆ** (ನಾ). =ಮುಸುಕಿ: ಎಣೆ ಬಿಟ್ಟಾದ ಮೇಲೆ ವನದ ಮುಸುಗುಕ್ಕೆ ಬಿಚ್ಚು (ರೂಢಿ). [< ಮುಸುಕು$_2$ + ಕುಕ್ಕೆ$_1$]

**ಮುಸುಗುಗಟ್ಟು** (ಕ್ರಿ). ೧. =ಮುಸುಗರೆ: ಘನರೋಷಾಗ್ನಿಯ ಕೂರ್ಪು ಪರ್ವೆ ಮುಸುಗುಗಟ್ಟುತ್ತುಂ . . . ಪಳಂಚಿದುವು ಕೋಣಂಗಳ್ (ಕಬಿತ. II, ೩೬೦ ವೆಂಕಟೇಶ್ವರ ಶ್ರಿಂಗ) ; ಕಾಡ ಹಂದಿಗಳು ಮುಸುಗುಗಟ್ಟುತ್ತ ಮುಂದುವರಿದವು (ಕಪಕ್ಕು. ೭-೧೦೩). ೨. ಗೋಣಗುಟ್ಟು : ನಾದಿನಿ ಅತ್ತಿಗೆಯು ಕೂಡ ಹೊರಡಲಿಲ್ಲ. ಏನೋ ಮುಸುಗುಗಟ್ಟಿದಳು (ಶಿರಾಶ. ೪೪).

[ಮುಸು$_1$ + ಕಟ್ಟು$_1$]

**ಮುಸುಗುಡು** (ಕ್ರಿ). = ಮುಸುಗರೆ : ಗಾಳಿ ಜತಿಗೆ ನೀ ಗೂಳಿ ಹಾಂಗ . . . ಮುಸುಗುಡುತ ಹೊರಟೆ ಬಯಲಾಗ (ಹೃದಸ. ೦೭-೦೬) ; ಕೆರಳಿದ ಸಿಂಹಿಣಿಯ ಹಾಗೆ ಆಕೆ 'ಮುಸುಗುಡುತ್ತ'ಲಿದ್ದಳು (ಬಿರಹಾ. ೯).

[ಮುಸು$_1$ + ಕುಡು$_1$ (< ಕೊಡು$_1$)]

**ಮುಸುಗುಬ್ಬಸ** (ನಾ). (ಆಲಂ) (ದುಃಖ, ರೋಷಗಳಿಂದ ಒಳಗೊಳಗೇ ಉಂಟಾಗುವ) ಸಂಕಟ ; ತಳಮಳ ; ಮೂಗುಬ್ಬಸ : ಸೂಳುನಗೆ ಬೀಳನಗೆಯಲಡಿಗಡಿಗಾಳಿ ಮುಸು[ಪಾಠಾಂ. ಳು]ಗುಬ್ಬಸದಲಿದ್ದು ಕರಾಳ ಮತಿ ಸಂತೈಸಿ ನೆಟಿ ತನ್ನವರಿಗಿಂತೆಂದ (ಕುಪ್ರಾಸ. ೨-೭೭). 'ಮೂಗುಬ್ಬಸ' ಪರಾ. [ಮುಸುಗು$_2$ (<ಮುಸುಂಕು$_2$) + ಉಬ್ಬಸ]

**ಮುಸುಟೆ** ' ಮುಷ್ಟಿ$_1$ ' ನೋ.

**ಮುಸುಡ** ' ಮುಸುಂಡಿ$_2$ ' ನೋ.

**ಮುಸುಡಿ$_1$** ' ಮುಸುಂಡು ' ನೋ.

**ಮುಸುಡಿ$_2$** ' ಮುಸುಂಡಿ$_2$ ' ನೋ.

**ಮುಸುಡಿಕ್ಕು** (ಕ್ರಿ). (ಪ್ರಾಣಿಗಳು ತಮ್ಮ ಉದ್ದವಾದ) ಮೂತಿಯನ್ನು ಚಾಚು, — ನೀಡು : ತುಂಬಿ ಮುಸುಡಿಕ್ಕದ ಮಲರ್ (ಶ್ರೀಪುಜಾ. ೨-೯೩) ; ಮಸಿದ ಪೆರ್ಬುಲಿವಾಯ್ಗೆ ಮೃಗಗಳ ಶಿಶುವು ಮುಸುಡಿಕ್ಕುವೊಲು ಭೂಚರರೆಸುವಂದ ಚೆನ್ನಾದುದು (ಶಾಗತ. ೨೦-೬).

[ಮುಸುಡು (< ಮುಸುಂಡು) + ಇಕ್ಕು]

**ಮುಸುಡಿಡು** (ಕ್ರಿ). ೧. =ಮುಸುಡಿಕ್ಕು: ಪಡಿಮೊಗಳುಮುಸುಡಿಟ್ಟು ಪೀರ್ದ ಪುಷ್ಪಗಳನುಳಿದು . . . ಸೊಬಗಿಸುಳ್ಳಲರ ತಿಟಿದರಬಲೆಯತು (ಶಾಪಕಂ. ೪-೨೭). ೨. ಮುಖವಿಡು ; ಮೋರೆಯಿಡು: ಮುಸುಡೊಳು ಮುಸುಡಿಟ್ಟು ನಾವೆ ಮುದ್ದಿಸುತಿರಲುಸುರದಿರ್ಪರೆ ಮಾನನಿಧಿಯೆ (ಶರಸ. ೬-೨೩).

[ಮುಸುಡು (< ಮುಸುಂಡು) + ಇಡು$_1$]

**ಮುಸುಡು** 'ಮುಸುಂಡು' ನೋ.

**ಮುಸುಡುದೆಗೆ** (ಕ್ರಿ). ೧. ಮುಖವನ್ನು ತಿರುಗಿಸು. ೨. (ಆಲಂ) ತಿರಸ್ಕರಿಸು ; ಕಡೆಗಣಿಸು : ರಸಿಕನಲ್ಲದೆ ನರಪೂರ್ವಶಿಯುಸು ಕಂಡು ಮುಸುಡುದೆಗೆವನೆಯವಳೊಳು ಹಸನಾಗದು ರತಿಬೆಂದೊಂದು ನೆವದಿಂದ ಬಿಸುಟನು (ಕುಠಾಕಾಂ. ೪೪-೯೬), [ಮುಸುಡು (< ಮುಸುಂಡು) + ತೆಗೆ$_1$]

**ಮುಸುಡುದೋಱು** (ಕ್ರಿ). ಮುಖವನ್ನು ತೋರಿಸು ; ಮೋರೆಯನ್ನು ಕಾಣಿಸು : ನಿಮ್ಮವರಯ್ಯೋ ದು ಬೇಗದಿ ಮುಸುಡುದೋಱದಡಿದ ನಾನು [ಪಾಠಾಂ. ಗಾಣಿಸದೊಡಿವನು] ಮಿಸಿಮಿಲಿಮಾಡಿ ಕಂಡರಿಸಿಕ್ಕಿ ಪೋಗುವೆನು (ಕುಠಾಕಾಂ. ೯-೦೦೬). [ಮುಸುಡು (< ಮುಸುಂಡು) + ತೋಱು]

**ಮುಸುಡೆ** 'ಮುಸುಂಡು' ನೋ.

**ಮುಸುಡೊಣಗು** (ಕ್ರಿ). ಮೋರೆಯು ಬಾಡಿಹೋಗು ; ಮುಖವು ಕಳೆಗುಂದು : ತಗ್ಗಿತುಬ್ಬಾಳುಗಳು ಮುಸುಡೊಣಗಿ ತುಟಿಯೊಣಗಿ ವೀರರಸ ಹಾರಿದುದು (ತುರಂಗ. ೩೬-೪೦).

[ಮುಸುಡು (< ಮುಸುಂಡು) + ಒಣಗು$_1$]

**ಮುಸುಣೆ** ' ಮುಸುಂಡು' ನೋ.

**ಮುಸುದೆ** (ನಾ). ಒಂದು ಬಗೆಯ ಸಸ್ಯ : " ಭಜೀ – ಮುಸುದೆ " (ಓಕಂ. ೧೦೦). [ ? ]

**ಮುಸುಮೊಗ** (ನಾ). (ಮುಸುವಿನಂತಿರುವ) ಅಂದಗೆಟ್ಟ ಮೋರೆ : ವಿಕಾರವಾದ ಮುಖ : ಮುಸುಮೊಗಮಾಯ್ತು ಮೊಗಂ ಕಾಲ ಸತ್ತುಗಂ ಪೋಯ್ತು ಪಲ್ಗಳಳ್ಳಾಡಿದುವೇಡಿಸುವಂತಿರ್ದಪರಿನ್ನುಂ ಬಿಸುಡಿರೆ ನೀವಜ್ಞ ನಿಮ್ಮ ನಿರ್ಲಜ್ಜಕೆಯಂ (ಅಜಪು. ೨-೧೦೦) ; ಮೆಯ್ನವಿರಿಂದ ತುಱುಗಿದ ಮುಸುಮೊಗ ಪೆಣ್ಣ ತೆಱನಱಯದ ಕೊಟದೆಮ್ಮ ಮಾವನಿರೆ ಮಱಿವರೆ ಪೆಣ್ಗಳಿದಿರೊಳು (ಕುಠಾಕಾಂ. ೪೪-೭). [ಮುಸು$_2$ + ಮೊಗ]

**ಮುಸುರ್** ' ಮುಸುಱು$_1$ ' ನೋ.

**ಮುಸುರಿಡು** (ಕ್ರಿ). ಬಳಸು ; ಸುತ್ತುಗಟ್ಟು : ನೀಡುಂ ಮೈ ಸುಬ್ಬರಾಯಾ ನಿನಗೆ . . . ಓಜಮುರ್ಸುರಿಡೆಯೆಡೆಯೊಳ್ಬಗಿ ನಿಲ್ವರ್ಗಡ (ಮೈಸೂಮ. ೭-೨೨೦). [ಮುಸುರು$_1$ (< ಮುಸುಱು$_1$) + ಇಡು$_1$]

**ಮುಸುರು$_1$** ' ಮುಸುಱು$_1$ ' ನೋ.

**ಮುಸುರು$_2$** ' ಮುಸುಱು$_2$' ನೋ.

**ಮುಸುರು$_3$** (ನಾ). ಎಡೆಬಿಡದೆ ಸುರಿಯುವ ಮಳೆ : ಜಡಿಮಳೆ : ಸೋನೆ : ಇಂದ್ರಗೋಪದ ರುಚಿಯಿಂದೆಸೆವ ಮುಗಿಲಿಂದೆ ಜಗದೊಳ್ ಮುಸುರಲ್ಲದೆ ಪಿರಿಯ ಮಱೆಗಳಾಗವು (ಅಭ್ಯಮ. ೬-೦೪). 'ಮುಸುರ್ಪು$_1$' ಪರಾ. [ ದೇ. ॥ ತೆಲು. ಮುಸುರು]

**ಮುಸುರುಗಟ್ಟು** (ಕ್ರಿ). (ಕಣ್ಣು) ಗೀಜಿನಿಂದ ಆವರಿಸು : ಗೀಜು ಕಟ್ಟಿಕೊಳ್ಳು : ಮಗುವಿನ ಕಣ್ಣು ಮುಸುರುಗಟ್ಟಿದೆ (ರೂಢಿ).

[ಮುಸುರು$_2$ (< ಮುಸುಱು$_2$) + ಕಟ್ಟು$_1$]

**ಮುಸುರೆ** ' ಮುಸುಱೆ ' ನೋ.

**ಮುಸುರ್ಪು$_1$** (ನಾ). ಮಳೆ ಬರುವ ಸೂಚನೆಯುಳ್ಳ ಮುಗಿಲು : ಮೋಡ : ' ಮುಸುರ್ಪುಗಟ್ಟು' ಪರಾ. [< ಮುಸುರು$_3$]

**ಮುಸುರ್ಪು$_2$** (ನಾ). (?) : "ಮುಸುರ್ಪನೆ ಮಾರ್ಪನೆ ಕೈವಿಡಿದುದಕ್ಕಂ" (ಕನ್ನಕಂ. ೧೨). [ ? ]

**ಮುಸುರ್ಪುಗಟ್ಟು** (ಕ್ರಿ). ಮಳೆಯು ಬರುವಂತೆ ಮೋಡವುಂಟಾಗು, — ಮೋಡವು ಮುಚ್ಚಿಕೊಳ್ಳು : ಸಂದಾಶ್ರಯಜದ ಕಾಳದೊಳೊಂದಿದ ತೇರಸದ ಹಸ್ತದಿಂ ತೊಟ್ಟತ್ತಲ್ ಮುಂದಣಸುರಾಧಿಪರೆಗಂ ಮುಂದೈಸಿ ಮುಸುರ್ಪುಗಟ್ಟಿ ಪೆರ್ಮಱೆಯಿಕ್ಕುಂ (ಅಭ್ಯಮ. ೬-೦೭೨).

[ಮುಸುರ್ಪು$_1$ + ಕಟ್ಟು$_1$]

**ಮುಸುರ್ವ** ' ಮುಸುಱು$_1$ ' ಪರಾ.

**ಮುಸುಲಮಾನ** ' ಮುಸಲ್ಮಾನ ' ನೋ.

**ಮುಸುಲುಮ** ' ಮುಸ್ಲಿಂ ' ನೋ.

**ಮುಸುಲುಮಾನ** ' ಮುಸಲ್ಮಾನ ' ನೋ.

**ಮುಸುಲ್ಮಾನ** ' ಮುಸಲ್ಮಾನ ' ನೋ.

**ಮುಸುವ** ' ಮುಸು$_2$ ' ನೋ.

**ಮುಸುವನಭತ್ತ** (ನಾ). ಒಂದು ಬಗೆಯ ನೆಲ್ಲು : ಹೆಸರಕಟ್ಟು. ಗೋಧಿ. ಮುಸುವನ ಭತ್ತದ ಅಕ್ಕಿಯ ಅನ್ನ . . . ಜೇನುತುಪ್ಪ ಇಪ್ಪನು . . . ಪಥ್ಯವೆಂದು ದೊಡ್ಡ ಋಷೀಶ್ವರರು ಹೇಳುವರು (ವೈದ್ಯಶಾ. I, ೦೪೩); ಮುಸುವನಭತ್ತದ ಅಕ್ಕಿ. ಸಣ್ಣಕ್ಕಿ . . . ಜೇನುತುಪ್ಪ ಇವೆಲ್ಲ ಉಣುವುದು ಪಥ್ಯಂಗಳು (ಸಕವ್ಯ. ೨೦೩). [ ? + ಭತ್ತ$_1$ ( <ಬತ್ತ)]

**ಮುಸುವು** ' ಮುಸು$_3$ ' ನೋ.

**ಮುಸುಳಿ** ' ಮುಸುಂಡು ' ನೋ.

**ಮುಸುಱು** ' ಮುಸುಱು$_1$ ' ನೋ.

**ಮುಸುಱು$_1$**, ಮುಸುರ್, ಮುಸುರು$_1$, ಮುಸುಱ್ (ಕ್ರಿ). ಮುಸುರ್ವ (ವರ್ತಕೃ). ೧. ಮರೆಮಾಡು ; ಮುಚ್ಚು : ಮುಸುಂಕು : " ಮುಸುಱು_ಸಂಛನ್ನೇ " (ಶಮದ); ಮುಗಿಲಿಂ ಮುಸುಱಿದ ನೇಸಱಿಂ ಕಂಡುದಱಿಂ ಕೇವಳಜ್ಞಾನಿಗಳಾಗರು (ಚಾಪುಂಪು. ೩೩). ೨. (ದುಂಬಿ, ನೊಣ ಮುಂತಾದುವುಗಳಂತೆ) ಹಿಂಡುಹಿಂಡಾಗಿ ಮುತ್ತು.–ಕವಿ : " ಮುಸುಱುವವಕ್ಕೆ ಮುಕ್ಕುಱುವವಕ್ಕು " (ಕಬ್ಬಕೈ. ೭೮); ನಡೆವ ಪರಿಶ್ರಮದಿಂದೊಗೆವ ಲತಾಂಗಿಯರ ಸುಯ್ಯ ಕಂಪಿಂಗಳಿಗಳ್ ಮೊಗಸಿ ಮುಸುಱಿದುವು (ಆದಿಪು ೧೧–೭೦); ಅಲರ್ದಲರ್ವಾಸುಗಳೊಳ್ ಪರಿಮಳಕ್ಕೆ ಪರಿತಂದು ಮುಸುಱುವಳಿಕುಲದಿಂದಾಕುಲತೆ ಪಿರಿದಾಗೆ . . . ಕಾಂತೆ ಪೊತ್ತಿ ಪೊಗೆವುತಿರ್ದಳ್ (ಕಾದಂಬ. ೩೩೭): ಪುರಜನನಾರಕರ್ . . . ಗೂಗೆಯುಂ ಕರಂ ಮುಸುಱುವ ಕಾಗೆಗಳಂತಿರೆ (ಅನಂಪು. ೯–೩೦); ಜೇಂಗೊಡಮಂ ಮುಸುಱಿ ಮೊರೆವ ಮಱಿದುಂಬಿಗಳ ಗಾನದಂತೆ . . . ಪಾಡಿ ಪೊಗಟ್ಟಿ ಗಾಯಕಸಂದೋಹದಿಂ (ರಾಮಾಶ್ವ. ೨೩–೧೧). ೩. ಗುಂಪುಗೂಡು ; ಸಂದಣಿಸು; ಒಟ್ಟಾಗು: ಬಡಿ ಕೋಲ್ ಕಟ್ಟಿಱಿ . . . ಎಂದು ಮುಸುಱಿ ನಾರಕರಾಗಳ್ ಪತ್ತಂ ಕೊಂತಂಗಳಿಂದಂ . . . ಕುತ್ತುವುದುಂ (ಪಡ್ಮಾರಾ. ೦೨೭–೦೨) ; ಮುಸುಱುವ ಮುಗಿಲ್ಗಳಿಂದಣಮುಸೆಯದೆ ನಿದರ್ಕ ಬಿಂಬಮಂ ಕಂಡುದಱಿಂ ಬೆಸೆಯುತಿಂ ದುಷ್ಷಮಾಕಾಲದೊಳಸದ್ರುಶಕ್ತೆವಲ್ಯ ಬೋಧ ದಿನಕರಬಿಂಬಂ (ಆದಿಪು. ೧೫–೩೩) ; ಮುಸುಱಿ ನೋಡುವ ನೋಟಕರು ಕಾಣಿಸದ ಕಾರ್ಯಕ್ಕೆ ಬೆಗಡುಗೊಂಡರು (ಕೃಶುರೀ. ೭–೩೮). ೪. ಆವರಿಸು ; ಹರಡು : ಪಸರಿಸು : ನೆನೆಯುತಿರ್ದುದು ತುಂತುರ್ವನಿ ಮುಸುಕಿದ ದುಗ್ಧವಾರ್ಧಿಯಂ ತಾನೆನಸುಂ ತನಿವೆಳ್ಪಿಂಗಳ್ ಮುಸುಱಿದ ಮಿಸುಕಂದೊಪ್ಪುವ ನಭೋಂಗಣಂ ಧೃತಭಗಣಂ (ಕುಸುಮಾ. ೧೧–೦೩); ಬಟಸಾರ್ವ ದೊರೆಯುನಮುರ್ದ್ವೆತ್ತಲುವಗ್ ಮುಸುಱಿತ್ತು ಕೂರಬಿಲ ಮುರ್ಬುದನಿ (ಅಂತಿಗೊ. ೩೩–೧೦೨೯). ಮುಸುರ್ : ೨. ಕಾಂತೆಯರ ಕಂಠಮಾಲೆಗಳ ಕಟ್ಟಾಣಿಮುತ್ತುಗಳ್ ಕೆಲಕ್ಕೆ ಸಿಡಿದುದುರಿ ಪುಷ್ಪ ಪರಿಮಳಂ ಪರಿಯೆ ಮುಕ್ತಿಗೆಯುರಲ್ಗಳಿಂದು ಮುಸುರ್ವ ತುಂಬಿಗಳ ಬಂಬಲ್ಗಳಿಪ್ಪಂ (ರಣಾವ. ೨–೯ ವ) ಮುಸುರು$_1$ : ೨. ನಾನಾಶೋಕ ಮೋಹಾದಿಗಳು ಮುಂಗುಡಿಪರಿದು ಮುಸುರಿಹ (ಅತ್ತಚ. ೦–೩೩); ನೊಣಗಳು ಮುಸುರಿ ಕೊಂಡು ಮನೆಯ ಮುಂದಿನ ಕೊಳಕುಗುಂಡಿ ಕೊಳೆಯುತ್ತಿದ್ದರೂ . . . ಬೊಗಸೆ ಮಣ್ಣನ್ನು ಅದರ ಮೇಲೆ ಹಾಕಿ ಮೂಗನ್ನು ಕಾಪಾಡಿಕೊಳ್ಳುವ ಯೋಗ್ಯತೆ ನಮಗಿಲ್ಲದೆ ಹೋಗಿದೆ (ಸಾಹಿಜೀ. ೮೭). ಮುಸುಱ್ : ೨. ಪೊಸ ಪೂಗಳಂ ನೋಡಿ ನಳಿತೋಳ್ಗಳಂ ನೀಡಿ ಮುಸುರ್ವಳಿಗೆ ಕಾಯ್ವುತಂ ಕುಸುಮಮಂ ಕೊಯ್ವುತಂದೆಸೆದರ್ (ನೇಮಿಪು. ೪೩–೩೮); ಮೊಗದೊಳ್ ಮುಸುರ್ವ ಬಿಡುಗುರುಳ ಬೆನ್ನೊಳ್ ನಟ್ಟ ಸರಳ . . . ಪೊಯ್ಮಳಿಗಳ ಪೊತ್ತ ನಾಣ್ಚಿಕೆಯು ಸರ್ವದಿಕ್ಪಾಲರೋಟಂಗಾಣುತ ಜನಾಗ್ರಹಂಗಳ್ಗನು (ಶಂಪು. ೪೯–೨೪). ' ಮುಸುಂಕು$_1$ ' ಪರಾ.

[ದೇ.॥ ತೆಲು. ಮುಸುರು, ಮುಸರು]

**ಮುಸುಱು$_2$**, ಮುಸುರು$_2$ (ನಾ). ಆವರಣ : ಮರೆ; " ಕೊವ್ವರಿ " (ಕಕುಶ. ೯. I . ೩೩). **ಮುಸುರು$_2$** : ' ಮುಸುರುಗಟ್ಟು ' ಪರಾ.

[ < ಮುಸುಱು$_1$]

**ಮುಸುಱುಹ** (ನಾ). ಮುತ್ತುವಿಕೆ : ಆವರಿಸುವಿಕೆ : " ಮುಕ್ಕುಱು ಮುಸುಱುಹನೊಳ್ " (ಕಕಾಶಶ. ೪೦); " ಮುಕ್ಕುಱು ಮುಸುಱುಹಂ " (ಶಮದ. ಶಾ. ೩).

[ಮುಸುಱು$_1$ + — ಹ$_2$ ( < — ಪ$_2$)]

**ಮುಸುಱಿ**, ಮುಸರೆ, ಮುಸುರೆ (ನಾ). ೧. ಪಾತ್ರೆಯಲ್ಲಿ ಅನ್ನ ಮುಂತಾದ ಆಹಾರಪದಾರ್ಥಗಳನ್ನು ಬೇಯಿಸಿದ್ದು, ಇನ್ನೂ ತೊಳೆಯದೆ ಇರುವುದರಿಂದ ಉಂಟಾಗಿರುವ ಅಶುಚಿ.– ಕೊಳೆ : ಮೃಗರಾಜಂ . . . ವನಮೃಗಮನುಗಿಬಗಿಮಾಡಿ ಬಿಡುಪೆಡೆಯೊಳೊಡನೊಡನೆ ಪೊರೆದು ಮುಸುಕಿದ ಪೊಸನೆತ್ತರ ಮುಸುಱಿಯಿಂ ಪೊಳೆವ ಪೊಟಱಿಯದೊಱಿಯೊಳ್ ಕಿಱಿಪಿದ ಕೃತಾಂತನಂಕುಶಮಿದೆನಿಸಿಯುಂ (ವರ್ಧಪು. ೧೦–೩ ವ); ನೀವೆಲ್ಲ ಮುಸುಱಿದ ನೊಣಂ ಬಸವನೇ ಮುಸುಱಿಯಾ ಮಡಕೆ (ಶೀಕೃಪು. ೮–೨–೬೩); ಸೊಣಗನು ಮತಿಗೆಟ್ಟು ಮುಸುಱಿಯ ಮಡಕೆಯೊಳಗೆ ಮೊಗವಿಟ್ಟು ದೆಸೆಗಾಣದೆ ಬಾಧೆಗೆ ತನುಗೊಟ್ಟು ಪೆಸಗೊರ್ಳಲಿದು ಸಂಸಾರದ ಗುಟ್ಟು (ಅವರೂ. ೨೦). **ಮುಸರೆ** : ೧. ನಾಯಿ ಮುಟ್ಟಿದ ಗಡಿಗೆ ಮುಸರೆಯಾದರೇನು ? ಮಡಿಯಾದರೇನು ? (ಗಾದೆ). ೨. ದನಕರುಗಳಿಗೆ ಕುಡಿಯಲು ಇಡುವ ಕಲಗಚ್ಚು : ಮುರು : ರಂಜಣಿಗಿಯಲ್ಲಿ ಮಹಿಷಿ ಮೊಗವೆದ್ದಿ ಗಂಜಿ ಮುಸರೆ . . . ಕುಡಿದಂತೆ (ಮೋಕ್ಷದೀ. ೪೯–೧); ಹಸುವಿಗೆ ಮುಸರೆ ಇಡು (ರೂಢಿ). ೩. ಅನ್ನ ಮೊದಲಾದ ಬೇಯಿಸಿದ ಪದಾರ್ಥಗಳು ಹಾಗೂ ಅವುಗಳನ್ನು ಬೇಯಿಸಲು ಬಳಸಿದ ಪಾತ್ರೆಗಳನ್ನು ಮುಟ್ಟುವುದರಿಂದುಂಟಾಗುವ ಅಶುಚಿ.– ಮೈಲಿಗೆ : ಮಾಸಿದ್ದಕ್ಕೆ ಹೆದರದವಳು ಮುಸರೆಗೆ ಹೆದರಿಯಾಳೇ ? (ಗಾದೆ). ೪. ಅನ್ನ ಮುಂತಾದ ಪದಾರ್ಥಗಳನ್ನು ಬೇಯಿಸಿದ್ದು, ತೊಳೆಯಬೇಕಾಗಿರುವ ಪಾತ್ರೆ: ಬೆಳಗ್ಗೆಯಿಂದ ಮುಸರೆ ತೊಳೆಯಲು ನನಗೆ ಬಿಡುವೇ ಆಗಲಿಲ್ಲ (ರೂಢಿ). ೫. ಅನ್ನ ಮುಂತಾದ ಬೇಯಿಸಿದ ಪದಾರ್ಥ : ಅದೇನ ಮುಸರೆ ಅಲ್ಲಾ ಮುರಲಿ ಅಲ್ಲಾ ತೊಕೋರಿ (ಜಾಬಲಿ. ೦೯). **ಮುಸುರೆ** : ೧. ಆಹಾರದ ಡಬ್ಬಿ ಅಲ್ಲಿಯೇ ಕುಳಿತು ಮುಸುರೆಯ ತೆರೆದ ಬಾಯನ್ನು ತೋರಿಸಿತು (ಮುಕ್ತಿ.ದ. ೩೪); ಗಂಡುಹೆಣ್ಣಿಗೂ–ಎಂಜಲು ಮುಸುರೆಗೂ ಜೋಡಿಯಲ್ಲ (ಮೂಕಜ್ಜ. ೨೩೮). ೨. ಉತ್ತಮಾನ್ನವ ನೀಡೆ ಮುಸುರೆ ಬಯಸುವಂತೆ (ಶಿದಾಕೃ. ೩೮–೩); ಅದಕ್ಕೆ ನಾನೇ ಮುಸುರೆ ಮುರವ ತಿನ್ನಿಸುತ್ತಿದ್ದೆ (ಸುವಸಂ. ೬೭). ೩. ಅನ್ನ ಮುಟ್ಟಿ ಕೈ ಮುಸುರೆಯಾಗಿದೆ, ತೊಳೆದುಕೊಂಡು ಬಾ (ರೂಢಿ).

ಮುಸುರೆ ತಿಕ್ಕು = ಅಡುಗೆ ಮಾಡಿದ ಪಾತ್ರೆಗಳನ್ನು ತೊಳೆ : ತಾಯಿ ವೆಂಕಮ್ಮ ಮುಸುರೆತಿಕ್ಕುವುದಕ್ಕೆಂದು ಕೆರೆಯ ಹಾದಿ ಹಿಡಿದಳು (ಮುಂಗಾರು. ೨೩). [ದೇ.॥ ತಮಿ. ಮೂಚಟ್ಟೆ ; ತುಳು. ಮುಸರೆ, ಮುಸ್ರೆ]

**ಮುಸ್ತ** (ನಾ). ಹುಲ್ಲಿನ ಜಾತಿಗೆ ಸೇರಿದ ಒಂದು ಬಗೆಯ ಸಸ್ಯ ಮತ್ತು ಅದರ ಗೆಡ್ಡೆ ; ಭದ್ರಮುಸ್ತೆ. [ಸಂ.]

**ಮುಸ್ತಕ** (ನಾ). = ಮುಸ್ತ : "ಮುಸ್ತಕಃ, ಕುರುವಿಂದಃ, ಭದ್ರಾ, ಜಳದಃ_ ಈ ೪ ಭದ್ರಮುಸ್ತೆ" (ಹಲಾಯು. ೧೦೨–೪೬೮). 'ಭದ್ರಮುಸ್ತಕ' ಪರಾ.

[ಸಂ.]

**ಮುಸ್ತಕಿ** (ನಾ). = ಮುಸ್ತ : ಮುಸ್ತಕಿಯ ಚೂರ್ಣ: _ ಭದ್ರಮುಸ್ತೆ, ಕೋಷ್ಠ . . . ಕುಂಬಳದ ಬೀಜ, ಇಷ್ಟು ಔಷಧಗಳನ್ನು ಸರಿಯಾಗಿ ಕೂಡ ಚೂರ್ಣವ ಮಾಡಿ . . . ಕೊಡುವುದು (ಚಿಕ್ಕಿ. ೪೪). [< ಸಂ. ಮುಸ್ತಕ]

**ಮುಸ್ತಯಿದೆ** ' ಮುಸ್ತೈದೆ ' ನೋ.

**ಮುಸ್ತಾಕಂದ** (ನಾ). ಭದ್ರಮುಸ್ತೆಯ ಗೆಡ್ಡೆ ; ಕೊನ್ನಾರಿಗೆಡ್ಡೆ : ಮೆಲ್ಲ ಮುಸ್ತಾಕಂದಂಗಳ ತಿರುಳ್ ಪಱಿದೊಕ್ಕು ಕಂಪಿಡುತ್ತಿರೆ ಪೋದ ಕಾಡುಪಂದಿಗಳ ಗೊಂದಣವಜ್ಜೆಗಳುಮಂ . . . ಕಂಡು (ಕುಸುಮಾ. ೦೪–೨೯ ವ) ; ಮುಸ್ತಾಕಂದಮನೆತ್ತಿ ಬೇರ್ಗಳನಿತಂ ತಿಂದು (ದಶಕು. ೨–೦೦೬).

[ಸಂ.]

**ಮುಸ್ತಾದ** (ನಾ). ಗೇಕಿನ ಹುಲ್ಲು ತಿಂದು ಜೀವಿಸುವ ಒಂದು ಬಗೆಯ ಕಾಡುಹಂದಿ. [ಸಂ.]

**ಮುಸ್ತಾಭ** (ನಾ). ಒಂದು ಬಗೆಯ ಹುಲ್ಲು : 'ಮುಸ್ತಾಭಚೂರಣ' ಪರಾ. [ಸಂ.]

**ಮುಸ್ತಾಭಚೂರಣ** (ನಾ). ಮುಸ್ತಾಭದ ಬೇರಿನ ಚೂರುಗಳನ್ನು ತುಪ್ಪದಲ್ಲಿ ಹುರಿದು ಅಕ್ಕಿಹಿಟ್ಟು, ಸಕ್ಕರೆ ಮುಂತಾದುವುಗಳೊಂದಿಗೆ ಬೆರಸಿ, ವರಾಹಸ್ವಾಮಿಗೆ ನೈವೇದ್ಯಕ್ಕಿಡುವ ಒಂದು ಬಗೆಯ ಉಂಡೆ : (೬). [ಮುಸ್ತಾಭ + ಚೂರಣ]

**ಮುಸ್ತೆ** (ನಾ). = ಮುಸ್ತ : "ಆ ಮುಸ್ತಕಂ ಮುಸ್ತೆ ಭದ್ರಾತಕಂ ಗೇಕು" (ಜಗನ್ನಾ. ೪೧-೩೩) ; ಇದು ಶೈತ್ಯಕಷಾಯಂ ಬಳ್ಳಿ ಮರುಚಿ ನೆಲಬೇವು ಮುಸ್ತೆ ಪರ್ಪಾಟಕದಿಂ ಕುದಿದಿಳುಪಿ ಕಟುಕರೋಹಿಣಿಯುಮಜಿಯೊಳಗಿರೆ (ಕರ್ಣಾ. ೬-೬೨) ; ಇಂಗಿನೆಲೆ ಮುಸ್ತೆಯುಳಿಲೆ ಲವಂಗಂ . . . ಮರಿಚ ಸೈಂಧವಲವಣಂ (ಅಶ್ವಶಾ. ೭-೪೪). 'ಭದ್ರಮುಸ್ತೆ' ಪರಾ.
[ < ಸಂ. ಮುಸ್ತಾ ]

**ಮುಸ್ತೈದು** 'ಮುಸ್ತೈದೆ' ನೋ.

**ಮುಸ್ತೈದೆ**, ಮುಸ್ತಯಿದೆ, ಮುಸ್ತೈದು (ನಾ). ೧. ಸಜ್ಜು ; ಅಣಿ ; ತಯಾರು : ಥಳಥಳಿಪ ಕೊಪ್ಪರಿಗೆ ಚರುವಿಗೆಯ ಬಿಂದಿಗೆಯು ದಳವೇಜುತಂ ಹೇಜು ಮುಸ್ತೈದೆಯಾಗಲ್ಕೆ ಕಳೆಯೇಜುತಂ ಬಂದು (ಶ್ರೀಕೃಷ್ಣ. ೯-೨೨೪) ; ಮೂರನೆಯ ದಿನ ಸೂರ್ಯಾಸ್ತಮಯವಾಗುತ್ತಲೇ ಯಥಾಪೂರ್ವ ಸಕಲ ಮುಸ್ತೈದೆಯ ಮಾಡಿಕೊಂಡು ಅರಸು ಭೃತ್ಯಾಲಯಮಂ ಪೊಕ್ಕು (ಹುಳಿಗ. ೨೦) ; ಸಕಲ ಆಯುಧವನ್ನು ಮುಸ್ತೈದೆಮಾಡಿ ಬಂದು ದೊರೆಗೆ ತಾನು ಚಂದದಿಂ ಪೇಳ್ದ (ಹುಪಳ. ೧೩೩). ೨. ಸಾಮಗ್ರಿ ; ಸಲಕರಣೆ ; ಉಪಕರಣ : ಬಲದೇವಮಂತ್ರಿ ತನ್ನ ಬಾಲೆಯಳಿಗಿತ್ತ ಬಹು ತಳಿತ ಹೇವಂದ ಮಂಚ ಲೇಪು ಮುಸ್ತೈದೆ (ಕರಂ. ೧೯೬) ; ಮುಸ್ತೈದೆಗಳೊಳಪೊಗದಂತು ಕಂಡಿ ಕಣಿವೆ ಪಥಂಗಳಂ ಕಟ್ಟಿ (ಕಳಶ. ೩-೪೪). **ಮುಸ್ತಯಿದೆ :** ೧. ಭೂಮಿಯ ರಥ . . . ದಾನ ದಂಡ ಸಾಮ ಭೇದಂಗಳೆ ಚಬುಕು ಇಂತು ರಥ ಮುಸ್ತಯಿದೆಯಾಗಲು (ಕೃರಸೂ. I, ೩೦). ೨. ತಮ್ಮ ಕನ್ನಗಳವಿನ ಮುಸ್ತಯಿದೆ ಸಹವಾಗಿ ಪೋಗುವಲ್ಲಿ (ಕೃರಸೂ. I, ೩೪೯). **ಮುಸ್ತೈದು :** ೨. ಸಾಸುವೆ, ಮೆಂಥ್ಯ, ಜೀರಿಗೆ, ಇಂಗು ಮುಂತಾದ ಒಗ್ಗರಣೇ ಮುಸ್ತೈದುಗಳಿಂದ ಪೂರಿತವಾಗಿ (ಕೃವಾಪಿ. ೦೩).

ಮುಸ್ತೈದೆಯುರು = ಸಾಮಗ್ರಿಗಳನ್ನು ಹೊಂದಿದವರು ; ಉಪಕರಣಗಳನ್ನು ಹಿಡಿದಿರುವವರು : ಕಸ್ತೂರಿಗಂಧಿಯುರ್ ಬನದೊಳು ಬಹುಫಲವಸ್ತುಗಳನು ಸೇಂದಿಕೊಂಡು ಮುಸ್ತೈದೆಯುರಾಗಿ ಬಂದರು ಪರಮ ಪದಸ್ಥ ಶ್ರೀಕೃಷ್ಣನಿರ್ದೆಡೆಗೆ (ಪೋಃಹತ. ೪-೬೦). [← ಅರ. ಮುಸ್ತಅದ್, ಮುಸ್ತಇದ್ ; ಹಿಂ. ಮುಸ್ತೈದ್ ; ಮರಾ. ಮುಸ್ತೇದ್]

**ಮುಸ್ಲಮು** 'ಮುಸ್ಲಿಂ' ನೋ.

**ಮುಸ್ಲಿಂ**, ಮುಸುಲುಮು, ಮುಸ್ಲಮು, ಮುಸ್ಲಿಮು, ಮುಸ್ಲೀಮು (ಗು). ೧. ಇಸ್ಲಾಂಮತಕ್ಕೆ ಸೇರಿದ ; ಇಸ್ಲಾಂಧರ್ಮದ. (ನಾ). ೨. ಇಸ್ಲಾಂ ಮತಕ್ಕೆ ಸೇರಿದ ವ್ಯಕ್ತಿ ; ಮಹಮ್ಮದೀಯ : ಇಲ್ಲಿಯ ಮುಸ್ಲಿಂರು ಪಾಕೀಸ್ತಾನೀ ಮುಸಲ್ಮಾನರೊಡನೆ ಬೀಗತನ ಬೆಳೆಸುವುದು ಪರರಾಷ್ಟ್ರದೊಡನೆ ಸಂಬಂಧ ಮಾಡಿದಂತೆ ಎಂದು ಎಣಿಸಲೇಬೇಕಲ್ಲವೆ ? (ಯುಕ್ತಶ್ರ. ೦೬೨). **ಮುಸುಲುಮು :** ೨. ಸೇತು ಕೇತಾರದ ನಡುವೆ ಮುಸುಲುಮರ ಜಾತಿಯಲ್ಲದೆ ಹಿಂದುವರ ಜಾತಿಧರ್ಮ ಸ್ಥಿತಿಯುಂಟೆ (ಶಾರಾಶಾಂ. ೩೩-೦೩೮). **ಮುಸ್ಲಮು :** ೧. ಧೀರ ಮುಸ್ಲಮಕುಳವನು — ಚಿಮ್ಮಿ, ಕೆರಳಿಸಿ, ಕಲೆತರು (ಹೊಂಗಳು. ೩-೨). **ಮುಸ್ಲಿಮು :** ೨. ಮುಸ್ಲಿಮರೂಪದ ರಾಕ್ಷಸರ ಶಕ್ತಿ ಹಿಂದೂಸಂಸ್ಕೃತಿಯ ನಾಶಕ್ಕೆ ಪಟ್ಟ ಪ್ರಯತ್ನ . . . ಇತಿಹಾಸಪ್ರಸಿದ್ಧ (ಜುಣ್ಣರ. ೦೦೪ ಶ್ಲೋ). **ಮುಸ್ಲೀಮು :** ೨. ಹಿಂದು ಜೈನ ಮುಸ್ಲೀಮ ಕ್ರೈಸ್ತರೆಲ್ಲರೊಂದೇ ಬಾಂಧವರು (ಗೀಪಿಂ. ೪೬-೪) ; ಮುಸ್ಲೀಮರು . . . ಬಾಬಯ್ಯನ ಬೆಳ್ಳಿಯ ವಿಗ್ರಹಗಳನ್ನು ಸ್ಥಾಪಿಸಿ ಹೂವು, ಗಂಧ, ಚಂದನದಿಂದ ಪೂಜಿಸುತ್ತಿದ್ದರು (ಮಗವಜಂ. ೦).
[← ಅರ. ಮುಸಲಿಮ್, ಮುಸ್ಲಿಮ್; ಹಿಂ. ಮುಸಲಿಮ್, ಮುಸಲ್ಲಮ್; ಮರಾ. ಮುಸ್ಲಿಮ್, ಮುಸ್ಲೀಮ್]

**ಮುಸ್ಲಿಮು** 'ಮುಸ್ಲಿಂ' ನೋ.

**ಮುಸ್ಲೀಮು** 'ಮುಸ್ಲಿಂ' ನೋ.

**ಮುಸ್ಸಂಜೆ** 'ಮುತ್ಸಂಜೆ' ನೋ.

**ಮುಹಗ್ಗಳ ?** (ನಾ). ಮಲ್ಲಯುದ್ಧದ ಒಂದು ಪಟ್ಟು(?) : ಎಸೆವ ಮುಹಗ್ಗ [ಪಾಠಾಂ. ಹುದ್ಗ]ಳಂ ತಡಕಿ ಕಕ್ಷವಡಂ ಮುಹಡಂ ತುಳಾಡಿ . . . ಸಸಿಕುವೆನಿಪ್ಪ ಜಟ್ಟಿಗನ ನಚ್ಚಿನ ಬಿನ್ನಣಮೊಪ್ಪೆ ಕಾದಿದರ್ (?) (ಶಂಪ್ರಕೃ. ೩-೬೮ ; ಶಾಪ್ತಶಾ. ೩೦೪ ನೋ). [?]

**ಮುಹಚಾಳೆಯ** (ನಾ). = ಮುಖಚಾಳೆಯ : ಕಳೆಯ ಮಯಣಮಂ ಸುಣ್ಣಾಗೆ ತಿರ್ದಿ ಪುಂಖಿಸಿ ಹೊ[ಹೆ]ಲ್ಲಣೆಯ ಶುದ್ಧಮಾಗಿ ಮುಹಚಾಳೆಯಮುಮಾಡಿ . . . ತೋರ್ಕೆಗೊಳಿಸುವುದುಂ (ಶಾಂತೀಶ. ೬-೯೩ ಪ). [? ಇದು 'ಮುಖಚಾಳೆಯ' ಎಂಬುವರ ಅಪಲೇಖನವಿರಬಹುದು]

**ಮುಹಡ**, ಮುಹುಡ (ನಾ). ಮಲ್ಲಯುದ್ಧದ ಒಂದು ಪಟ್ಟು .— ವರಸೆ : ಕಕ್ಷವಡಂ ಮುಹಡಂ [ಪಾಠಾಂ. ಹುಳಂ] ತುಳಾಡಿ . . . ಸಸಿಕುವೆನಿಪ್ಪ ಜಟ್ಟಿಗನ ನಚ್ಚಿನ ಬಿನ್ನಣಮೊಪ್ಪೆ ಕಾದಿದರ್ (?) (ಶಂಪ್ರಕೃ. ೩-೬೮); ಅಂ ಪಿಡಿದುದೆ . . . ಹತ್ತೆ ಡೊಕ್ಕರಂ ಚಡಿಕೆ ತುಳಾಡಿ ಪೊಟ್ಟಮುಡುಹಂ ಮುಹಡಂ ದಣುಪಟ್ಟ ಪಟ್ಟಿಸಂ (ಅಪಂಕೃ. ೨-೨೭). **ಮುಹುಡ :** ಕಮ್ಮರಿ ಮುಹುಡಂ ಜವತ್ಸವಡಿ ಪಾಸಗೆ . . . ಪಟ್ಟಕತ್ತರೆಗಳೆನಿಪ್ಪ ಜಟ್ಟಿಗರ ಬಿನ್ನಣಮೊಪ್ಪೆ ಕಡಂಗಿ ಕಾದಿದರ್ (ತ್ರಿಪುಪಿ. ೨೬-೦೮). [?]

**ಮುಹಪೋವುಡ** (ನಾ). = ಮುಹಡ (?) : ಸಸಿಕ್ಕು ಮುಹಪೋವುಡ ಚಲ್ಲಣ ವಟ್ಟ ಪಟ್ಟಕತ್ತರೆಗಳೆನಿಪ್ಪ ಜಟ್ಟಿಗರ ಬಿನ್ನಣಮೊಪ್ಪೆ ಕಡಂಗಿ ಕಾದಿದರ್ (ತ್ರಿಪುಪಿ. ೨೬-೦೮). [< ಮುಹಡ ?]

**ಮುಹಮ್ಮದೀಯ**, ಮಹಮ್ಮದೀಯ (ಗು). ೧. ಇಸ್ಲಾಂಧರ್ಮಕ್ಕೆ ಸೇರಿದ.— ಸಂಬಂಧಿಸಿದ. (ನಾ). ೨. ಮಹಮ್ಮದ್‍ಪೈಗಂಬರನ ಅನುಯಾಯಿ ; ಮುಸಲ್ಮಾನ : ಈ ಭಾಗದಲ್ಲಿ ಮುಹಮ್ಮದೀಯರ ೧೨ ತಿಂಗಳುಗಳ ಹಬ್ಬಗಳ ಸಾಮಾನ್ಯಕಲ್ಪನೆಯನ್ನು ಕೊಡಲಾಗಿದೆ (ಘಾಹಬ್ಬ. ೦೯೪). **ಮಹಮ್ಮದೀಯ :** ೧. ಕ್ರೈಸ್ತ ಮಹಮ್ಮದೀಯ ಮತಗಳಲ್ಲಿ ಮತಾಂತರಹೊಂದಿ ಮದುವೆಯಾಗಲು ಅವಕಾಶವಿದೆ (ಬಂಕಿಮು. ೨೦೩). ೨. ಮಹಮ್ಮದೀಯರಂತೆ ನಾನೂ ಉಪವಾಸ ಮಾಡಿದೆ. (ಕೃವಾತ. II, ೦೬೨).
[← ಅರ. ಹಿಂ. ಮುಹಮ್ಮದೀ]

**ಮುಹರಿ** 'ಮೌರಿ$_1$' ನೋ.

**ಮುಹರ್ರಮ್** 'ಮೊಹರಂ' ನೋ.

**ಮುಹುಃ** (ಅ). ಪುನಃ ; ಮತ್ತೆ : ಮತ್ತಕೋಕಿಲೋಚ್ಚೈರ್ಧ್ವಾನಂ ಮುಹುರಾಕರ್ಣಿಸಿ ಪಡೆದತ್ಯಹರ್ನಿಶಂ ಪೆರ್ಚನಂತರಂಗಕ್ಕೆನ್ನಾ (ಶಬರಾ. ೦-೩೬); ಮುಹುರ್ವಾರ್ಕಿ ಕ್ರೀಡೆಯನುಬಿಸಿದು ಕುಮಾರಕಚೂಡಾಮಣಿ ತಂದೆಯೆಂದುದರ್ಕೆರ್ದೆಗೊಂಡಂ (ಶಂಪ್ರಕೃ. ೨-೩೩).

**ಮುಹುರ್ಮುಹುಃ**, ಮುಹುರ್ಮುಹು (ದ್ವಿರುಕ್ತಿ) : ಮುಹುರ್ಮುಹುರಾಂದೋಳಿತಮಸ್ತಕನುಂ ಉದಂಚದ್ರೋಮಾಂಚಕಂಚುಕಿತನುಮಾಗಿ ಸ್ತೋಡುತ್ತುಂ (ಆದಿಪು. ೦೦-೩೨ ಪ); ಮುಹುರ್ಮುಹುರಾಶೀರ್ವಾದಮುಖರಮುಖನಾದ ಶಾಮದೇವನಂ ಲಕ್ಷ್ಮಣಾ . . . ನುಡಿವುದುಂ (ಶಂಖಾಕು. ೯-೦೬೨ ಪ); ಚಿಕುಹೂಚ್ಚಿಕುಹೂ ಸನ್ನೆಯುಮೊಲು ಮುಹುರ್ಮುಹು

ಆರೆಚ್ಚರಕೀ ತುತ್ತುರಿ ಬಾನೊಳು ಮೊಳಗುತಿದೆ? (ಗಡೀಶ. ೨೯-೨).
P ಕನ್ನಡವಲ್ಲಿ 'ಮುಹುರ್' ಎಂಬ ರೂಪವನ್ನು ಪ್ರತ್ಯೇಕವಾಗಿ ಎಲ್ಲೂ ಪ್ರಯೋಗಿಸಿರುವುದು ಕಂಡುಬಂದಿಲ್ಲ. ಆದ್ದರಿಂದ ಇಲ್ಲಿ 'ಪುನಃ' ಎಂಬ ಶಬ್ದಸಾಮ್ಯದಿಂದ 'ಮುಹುಃ' ಎಂಬ ರೂಪವನ್ನು ಮಾಡಲಾಗಿದೆ. [ಸಂ. ಮುಹುರ್]

**ಮುಹುಡ** 'ಮುಹಡ' ನೋ.

**ಮುಹುರಿ** 'ಮೌರಿ₁' ನೋ.

**ಮುಹುರ್ದೃಷ್ಟ** (ನಾ). ಮತ್ತೆ ಮತ್ತೆ ಕಂಡುದು ; ಪುನಃಪುನಃ ನೋಡಿದುದು : "ಅವಗೀತಂ, ಮುಹುರ್ದೃಷ್ಟಂ, ಉಪಲಬ್ಧಂ – ಈ ೩ ಮಗುಚಿ ಮಗುಚಿ ಕಂಡುದು" (ಹಲಾಯು. ೦೨೯-೬೦). [ಸಂ.]

**ಮುಹುರ್ಭಾವಿಸು** (ಕ್ರಿ). ಪುನಃ ಹುಟ್ಟು ; ಮತ್ತೆ ಮೂಡು : ಮತ್ತೊಮ್ಮೆ ಮೆಲ್ಲನೆಗೆ ಗರಿ. ಮುಹುರ್ಭವಿಸುವೊಡೆ, ನಿನ್ನ ರಕ್ಷಮೊಯ್ಯ ನೆತ್ತರಿಂ ತನಿಯೆರೆವೆನೆನ್ನ ಸುಜನಾತ್ಮಕ್ಕೆ (ಶ್ರೀರಾಮಾ. ೩೯೦-೬೬೩).
[ಸಂ. ಮುಹುರ್ಭವ + — ಇಸು₃]

**ಮುಹುರ್ಭಾಷೆ** (ನಾ). ಹೇಳಿದುದನ್ನೇ ಮತ್ತೆಮತ್ತೆ ಹೇಳುವುದು : "ಅನುಲಾಪಃ ಮುಹುರ್ಭಾಷಾ–ಈ ೨ ಅಡಿಗಡಿಗೆ ನುಡಿವ ನುಡಿ" (ಹಲಾಯು. ೨೯-೦೯೯). [ಸಂ. ಮುಹುರ್ಭಾಷಾ]

**ಮುಹೂರ್ತ₁** (ನಾ). ನೆಲಸುವುದು ; ಆಸೀನಗೊಳ್ಳುವುದು : ಚಿಕ್ಕರಸರ ಸನ್ನಿಧಾನವು ಸಜ್ಜೆಯಲ್ಲಿ ಮುಹೂರ್ತಮಾಡುವವರೆಗೆ ನೀವು ಕುಳ್ಳಿರದಿರಿ ! (ವಿಶ್ವಾಶಿ. ೪೩–೨೩) ; ಪೂರ್ಣಯ್ಯನವರು . . . ದೊರೆಗಳಿಗೆ ಮುಜರೆ ಮಾಡಿ. ಅವರಿಗೆ ಹಸ್ತಲಾಘವ ಕೊಟ್ಟು ಕರೆದೊಯ್ದು ಪಲ್ಲಕ್ಕಿ ಯಲ್ಲಿ ಮುಹೂರ್ತಮಾಡಿಸಿದರು (ಕೃಷ್ಣಕೂ. ೦೯೮). [<ಸಂ. ಮುಹೂರ್ತ]

**ಮುಹೂರ್ತ₂** (ನಾ). ೧. ಸ್ವಲ್ಪಹೊತ್ತು ; ಅಲ್ಪಸಮಯ : ಎಲೆ ಶಕುಂತಳೆ ಇಲ್ಲಿಯೇ ಒಂದು ಮುಹೂರ್ತ ನಿಲ್ಲು (ಶಾಕುಂತ. ೯-೨೬) ; ಎಲೆ ಮಗಳೆ, ಒಂದು ಮುಹೂರ್ತ ಲಜ್ಜೆಪಡದಿರು (ಶಾಕುಂತ. ೬೬-೭). ೨. ದೈವಪ್ರತಿಷ್ಠಾಪನೆ, ದೀಕ್ಷಾಸ್ವೀಕಾರ, ಮದುವೆ, ಮುಂಜಿ ಮುಂತಾದ ಮಂಗಳಕಾರ್ಯಗಳಿಗಾಗಿ ಜ್ಯೋತಿಷ್ಕರು ನಿಶ್ಚಯಿಸುವ ಶುಭಗಳಿಗೆ ಮತ್ತು ಆ ಗಳಿಗೆಯಲ್ಲಿ ನಡೆಸುವ ಶುಭಕಾರ್ಯ : ಒಳ್ಳೆ ತಪ್ಪ ಮುಹೂರ್ತದೊಳ್ ದೀಕ್ಷೆಯಂ ಕೊಟ್ಟು (ವಡ್ಡಾರಾ. ೬-೨); ಮುಹೋತ್ಕೃಷ್ಟಮಪ್ಪ ಮುಹೂರ್ತದಿಂ ಸನಾಥಮಾದ ನಿಶಾಮಧ್ಯಸಮಯದೊಳ್ . . . ಶಾಶ್ವತನವತರಿಸಿರ್ದಂ (ಜಗವ. ೨-೯೯ ವ); ಮಜುದಿವಸ ಮಂಗಳ ಮಯಮುಹೂರ್ತದ ಜೋಯಿಸರ ಜೋಳಿಯಲಿ ನಿರ್ಗಮನಿರತನಾದನು ಕೃಷ್ಣನು (ಕುಮಾ.ಉ. ೬-೯); ವಿಜಯದಶಮಿಯ ಸುಮುಹೂರ್ತದಲ್ಲಿ ವಿಜಯ ಯಾತ್ರೆ ಹೊರಡುವುದೆಂದು ನಿಶ್ಚಯವಾಯಿತು. ಆ ಮುಹೂರ್ತವೇ ಪ್ರಭುಗಳ ಜನ್ಮತಾರೆಗೆ ಚೆನ್ನಾಗಿ ಕೂಡಿ ಬಂದಿತ್ತು (ಶಾಂತಲಾ. ೦೯೭). ೩. ದಿನದ ಮೂವತ್ತನೆಯ ಒಂದು ಭಾಗ : ನಲವತ್ತೆಂಟುನಿಮಿಷಗಳ ಅವಧಿ : "ಕ್ಷಣಮಾದಾಜು ಘಟಿಗೆಯೆನಿಕ್ಕುಂ ಅವಜೆರಡೆರಡಂ ಕೊಂಡೊಡೆ ಬವರಿಸುವ ಮುಹೂರ್ತಮಂತದೊಂದಕ್ಕುಂ" (ವಸ್ತುಕೋ. ೦೩-೯೩); ಅಮ ಸಮಯಾವಲಿ ಕೋಟ್ಯುಚ್ಛ್ವಾಸಸ್ತೋಕನಿಮೇಷನಾಡಿಕಾಮುಹೂರ್ತದಿವಸಪಕ್ಷಮಾಸರ್ತ್ವಯನ ಸಂವತ್ಸರಾದಿ ಗಣನಾನುಕ್ರಮದಿಂದಂ ಪೆರ್ಚಿದೆಣಿಕೆಯೊಳ್ ಕೂಡಿದುದು (ಆದಿಪು. ೬-೯೮ ವ): ತನ್ನಾಳೀಕಾಲಬಯಗಂ ಮುಹೂರ್ತಮೆನೆ ವರ್ತಿಸುಗುಂ (ಶಂರಾಮಾ. ೦-೩೦) : ದಿನಕೆಂಟು ಜಾವ ಬಂದುದು ಅಜುವತ್ತುಗಳಿಗೆ ಮುಹೂರ್ತಗಳು ಸಂದಿಸೆ (ಭಾಸ್ಕ.ಶಿ. ೩೨-೩); ಎರಡು ನಾಳಿಗಳಿಂದ ಮುಹೂರ್ತ, ಮೂವತ್ತು ಮುಹೂರ್ತಗಳಿಂದ ಒಂದು ಅಹೋರಾತ್ರ (ದಿವಸ)ವಾಗುತ್ತದೆ (ಕ್ರಿಶಶ. ೬೭೬). ೪. ಜ್ಯೋತಿಷ್ಕ ; ಜೋಯಿಸ.
**ಮುಹೂರ್ತಹಿಡಿ**=ಯಾವುದಾದರೊಂದು ಮಂಗಳಕಾರ್ಯಕ್ಕಾಗಿ ಶುಭಸಮಯವನ್ನು ಗೊತ್ತುಮಾಡು ; ಲಗ್ನವನ್ನು ನಿಶ್ಚಯಿಸು : ಲಗ್ನದ ಮುಹೂರ್ತಹಿಡಿಯಲು ಇನ್ನೆರಡು ತಿಂಗಳಿದ್ದಾವೆ ಎನ್ನುವಾಗ ಟೈಫಾಯ್ಡ್ ಆಗಿ ಹುಡುಗ ತೀರಿಕೊಂಡ (ಮೂರುದಾ. ೬೬). [ಸಂ.]

**ಮುಹೂರ್ತವೇದಿ** (ನಾ). ಮಂಗಳಕಾರ್ಯಕ್ಕಾಗಿ ಒಳ್ಳೆಯಘಳಿಗೆಯನ್ನು ನಿಶ್ಚಯಿಸುವವನು ; ಜೋಯಿಸ : ಜನಪತಿ . . . ಸಿಂಹಪೀಠದೊಳ್ ಮನದೊಲವಿಂದೆ ಮೂಡ ಮೊಗದಿಂ ಮಿಗೆ ಕುಳ್ಳಿರೆ . . . ನುತ ಮುಹೂರ್ತವೇದಿನಿಚಯಂ ಬಲದಲ್ಲಿರವೇಳ್ಕುಂ (ಲಾಸ್ಕರಂ. ೦-೩೯).
[ಸಂ. ಮುಹೂರ್ತವೇದಿನ್]

**ಮುಳ್**, ಮುಳು, ಮುಳ್ಳು (ನಾ). ೧. ಕಂಟಕ: ಪಾಟಿಸುವೆನೊಯ್ಯನೆ ಮುಳ್ಳೊಳೆ ಮುಳ್ಳಂ (ಶಂಶಬಾ. ೯-೬೬); ಮುಳ್ಳಿಲ್ಲದ ಬನ್ನಿಯ ಮಾರನುಳ್ಳೆಡೆಯೊಳಂ . . . ಒಂದು ಪುರುಷದೊಳ್ ನೀರಕ್ಕುಂ (ಲೋಕೋಪ. ೩-೦೦); ಅಡಿಯಲ್ಲಿ ಸಿಲ್ಕಿದ ಮುಳ್ಗಳಂ ನಿಲ್ಲದೊತ್ತಿ ಪುಳುಂಬಿನಿಂ ಕಳೆಯುತ್ತ ದೇಹಮನೊಪ್ಪುತುಂ ಮೆಲ್ಲಲ್ಲರ್ಗಿರದಾಯೆನುತ್ತು ಪುರಣ್ಯಸಂಚರನೊಪ್ಪಿದಂ (ಅರ್ಜುಟ. ೯-೦೨೦). ೨. ಕಂಟಕಗಳಿಂದ ಕೂಡಿದ ಗಿಡ, ಪೊದೆ ಮುಂತಾದುವು : ಬಳ್ಳಿಯೆಲ್ಲಂ ಲತೆ ಮುಳ್ಳೆಲ್ಲಂ ಕೇದಗೆ ಬೆಳೆಗಯ್ಯೆಲ್ಲಂ ಫಲಶಾಲಿಯೆಂದೊಡೇವೊಗಟ್ಟುವೆದಂ (ಕಾವ್ಯಾವ. ೬೦). ೩. ಚೂಪಾದ ತುದಿ,–ಮೊನೆ : 'ಮುಳ್ಗಣೆ' ಪರಾ. ೪. ಚೇಳು ಮುಂತಾದುವುಗಳ ಕೊಂಡಿ : ಮಾಡಿದನೇಕೆಯೊ ವ್ಯೇಲಂ ನೋಡದೆ ಬಿದಿ . . . ರೂಢಿಸಿ ತೇಟಿಗ್ಗೆ ಮುಳ್ಳಂ (ರತ್ನಾಕಾ. ೦-೬೨). ೫. ತಕ್ಕಡಿಯ ಏರು ಪೇರನ್ನು ಸೂಚಿಸಲು ತಕ್ಕಡಿಯ ಕೋಲಿನ ನಡುವಿನಲ್ಲಿರುವ ಚೂಪಾದ ಸಲಕರಣೆ : (೬). ೬. ಕುದುರೆಯನ್ನು ದೌಡಾಯಿಸುವುದಕ್ಕಾಗಿ ಸವಾರನು ಹಿಮ್ಮಡಿಗೆ ತೊಡುವ ಲೋಹದ ಚೂಪಾದ ಸಾಧನ: (೬). ಮುಳು: ೧. ಎಡಪಿಯುಮಂಗಾಲಮ್ಮುಳ್ಳು ನಡೆಯುಂ ತಾನೆಂತು ನೊಂದು ಮಜುಗುಮನತೆಳ್ಳೆಡೆಗಳೊಳಂ ಪ್ರಾಣಿಗಳು ಮಡಿವದೆ ನೋಯಿಸದೆ ಕಾವುದೆಂಬಂ ಜೈನಂ (ಸಮಶ. ೬-೬); ಅಡವಿಯ ಮಾರ್ಗದಲಿ ಕಲುಮುಳುಗಳೊಳು ಕಾಪಥಕ ಕೋಮಲಚರಣಗಳ ಕೊಡುತ ತೊಳಲಿದರು (ಕುಮಾ.ಶಿ. ೬-೯೩). 'ಮುಳುಗಳ್ಳಿ' ಪರಾ. ಮುಳ್ಳು: ೧. "ಮುಳ್ಳು ಕಂಟಕಮುಕ್ಕು" (ಮಂಗರಾ. ೯೯-೯೩); ಮುಳ್ಳಿಗೆ ಮೊನೆಯ ಎಳ್ಳಿಗೆ ಎಣ್ಣೆಯ ತಂದಿರಿಸಿದವರುಂಟೆ ಅಯ್ಯಾ ( ಅಜಾಷಾ. ೦೨೯-೯೨); ಮುಳ್ಳಂ ಕಳೆದು ದಸಿಯಂ ಸಿಕ್ಕಿದಂತಾಯಿತ್ತಲಾ (ಬಸವ. ೩೩-೯೯); ಒಳ್ಳೆಯನು ಇರಮೂರು ಕಳ್ಳನೊಡನಾಟವು ಸುಳ್ಳನ ಮಾತು ಇವು ಮೂಜು ಕೆಸಜೊಳಗೆ ಮುಳ್ಳು ತುಳಿದಂತೆ (ಸರ್ವಜ್ಞ. ೦೦೬೬): ಮುಳ್ಳನ್ನು ಮುಳ್ಳಿನಿಂದಲೇ ತೆಗೆಯಬೇಕು (ಗಾದೆ). ೨. ಕಾಡುಹಂದಿಯ ಮೈಮೇಲೆ ಚೂಪಾದ ಕಡ್ಡಿಯಂತಿರುವ ಬಿರುಗೂದಲು : "ಶಲಲಂ, ಶಲಂ–ಈ ೨ ಎಯ್ಯ ಮುಳ್ಳು" (ಹಲಾಯು. ೪೯-೮೦). ೮. ಧಾನ್ಯಗಳ ತೆನೆಯ ಮೇಲಿರುವ ಮೊನಚಾದ ವಸ್ತು: ಕೂಬು: "ಕಿಂಶಾರು, ಧಾನ್ಯಶೂಕ–ಧಾನ್ಯದ ತುದಿಯ ಮುಳ್ಳು" (ಶಾತಂ. ೬). ೯. ಗಡಿಯಾರದಲ್ಲಿ ವೇಳೆಯನ್ನು ಸೂಚಿಸಲು ಅಳವಡಿಸಿರುವ, ಸೂಜಿಯಂತೆ ಮೊನಚಾಗಿರುವ ಉಪಕರಣ: ಗಡಿಯಾಳದ ತಗಡಿನ ನಡುವೆ ಸಣ್ಣದೊಂದೂ ದೊಡ್ಡದೊಂದೂ ಎರಡು ಮುಳ್ಳುಗಳು ಹಚ್ಚಿರುತ್ತವೆ (ಮುಂಗಾರು. ೩. ೩-೬೬); ಕೀಲಿ ಕೊಟ್ಟಾಗ ಎಲ್ಲಾ ಗಡಿಯಾರಗಳ ಮುಳ್ಳುಗಳೂ ಬಲಕ್ಕೆ ತಿರುಗುತ್ತವೆ (ಜೀವಾಕ್ಕ. ೨೦೦). ೧೦. ಕಂಟಕಗಳಿಂದ ತುಂಬಿರುವ ಒಂದು ಬಗೆಯ ಸಸ್ಯ: "ಖಮುಂಖಾ-ಮುಳ್ಳು, ಹಿಡಹಿಡಕೆ" (ಓಷಂ. ೯೩). ೧೧. ಲೇಖನಿಯ ತುದಿಗೆ ಸಿಕ್ಕಿಸಿ ಶಾಯಿಯಿಂದ ಬರೆಯಲು ಉಪಯೋಗಿಸುವ ಲೋಹದ ಮೊನಚಾದ ಸಾಧನ: ನನ್ನ ಲೇಖನಿಯ ಮುಳ್ಳು ಸವೆದು ಹೋಗಿದೆ (ರೂಢಿ). ೧೨. (ಅಲಂ) ಹಿಂಸೆ ; ತೊಂದರೆ : ಅಗಲು

ವಿಕೆಯೆಂದರೆ ಜೀವಕ್ಕೆ ಮುಳ್ಳು (ಕನ್ನಪಾ. ೧೨೦). ೧೨. ದುಃಖ; ಚಿಂತೆ; ನೋವು: ನನ್ನ ಹೃದಯದಲ್ಲಿ ನೆಟ್ಟ ಮುಳ್ಳು ನೆಟ್ಟಂತೆಯೇ ಇದೆ (ಬಾಣಶ. ೬೬).

**ಮುಳ್ಳ ಪಂದಿ, ಮುಳ್ಳ ಹಂದಿ**= ಮೈಮೇಲೆ ಹರಿತವಾದ ಕಡ್ಡಿಗಳಂತಿರುವ ಗರಿಗಳುಳ್ಳ ಒಂದು ಬಗೆಯ ಕಾಡುಹಂದಿ: ಎಚ್ಚಂಬುಗಳವು ರೋಮವುಮನುಚ್ಚಳಿಸಲ್ಕಾಜಿದಲ್ಲಿ ತೊಡರ್ದಿರೆ ಕೊಡಪುತ್ರಚ್ಚರಿಯ ಮುಳ್ಳ ಪಂದಿವೊಲಚ್ಚಿಗಮಂ ಮಾಡಿ ಮಡಿಪಿದತ್ತದು ಸುರರು (ಕಾಶಂ. ೯-೧೬); ಮುಳ್ಳುಹಂದಿಯ ಮುಳ್ಳನ್ನು ಕೆಲವರು ಬೈತಲೆ ತೆಗೆದುಕೊಳ್ಳಲು ಬಳಸುತ್ತಾರೆ (ರೂಢಿ). **ಮುಳ್ಳ ಹಾಸಿಗೆ**= (ಅಲಂ) ಯಾತನೆಯನ್ನುಂಟುಮಾಡುವ ಸ್ಥಳ: ಅವನ ಪತ್ರ ಬಾರದಾಗಲು ಸಮಸ್ತಜಗತ್ತೇ ಬಾರುಗೆ ಮುಳ್ಳಹಾಸಿಗೆಯಾಗಿ ಭಾಸವಾಯ್ತು (ಇಶ್ವಶ. ೨೬೯). **ಮುಳ್ಳಾಗು**=(ಅಲಂ) ಕಂಟಕಪ್ರಾಯವಾಗು; ಅಡ್ಡಿಯಾಗು: ಸಾವಿರದ ಮೇಲೇಳ್ನೂಱು ಬಸದಿಗಳಿರಲವಕೆ ಮುಳ್ಳಾಗಿ ಪೊಂದಿರ್ದುದು ಶಿವಾಲಯವು ತಡೆಯದೀ ದೇಗುಲವನೀಗಳೆ ಕೆಡಿಸಬೇಕು (ಬಸಪು. ೫೦-೬೬); ಅತೋಭ್ರಷ್ಟ, ತತೋಭ್ರಷ್ಟನಾಗಿ, ಮನೆಗೆ ಮುಳ್ಳಾಗಬೇಡ (ಹಂಗಿತ. ೬೩). **ಮುಳ್ಳಾಡಿಸು** = (ಅಲಂ) ಚುಚ್ಚಿ ಮರುಕಳಿಸುವಂತೆ ಮಾಡು; ಕೆರಳಿಸು: ನೆನೆವು ಮುಳ್ಳಾಡಿಸಲು ಎದೆಯ ದನಿ ..ತುಟಿಕದೊಳು ಮೈಮರೆವಿನಲಿ ಭಾವ ತೋಡಲಾರೆ (ಜೀವಲಿ. ೭೦-೧೧). **ಮುಳ್ಳಿನ ಮೇಲಿರು** = (ಅಲಂ) ಮುಳ್ಳಿನ ಮೇಲಿದ್ದಂತೆ ಚಡಪಡಿಸು; ಬಲು ಆತಂಕಗೊಂಡಿರು: ದೂರದ ಶಾಲೆಯಿಂದ ಮಕ್ಕಳು ಮನೆಗೆ ಬರುವವರೆಗೂ ಆಕೆ ಮುಳ್ಳಿನ ಮೇಲಿದ್ದರು (ರೂಢಿ). **ಮುಳ್ಳುಹಾಕಿಸು** = ಬಟ್ಟೆ ಒಗೆಯುವ ಕಲ್ಲು, ಒರಳುಕಲ್ಲು, ಬೀಸುವ ಕಲ್ಲು ಮುಂತಾದುವುಗಳನ್ನು ಉಳಿಯಿಂದ ಹೊಡೆಯಿಸಿ ಒರಟಾಗಿಸು: ಬೀಸುವ ಕಲ್ಲು ತುಂಬಾ ನುಣುಪಾಗಿಬಿಟ್ಟಿದೆ, ಮುಳ್ಳು ಹಾಕಿಸಬೇಕು (ರೂಢಿ). **ಮುಳ್ಳೇಳು** = (ಅಲಂ) ರೋಮಾಂಚನಗೊಳ್ಳು; ಪುಲಕಿತಗೊಳ್ಳು; ನವಿರೇಳು: ಅವನ್ನು ನೆನೆದರೆ ಈಗಲೂ ನನ್ನ ಮೈ ಮುಳ್ಳೇಳುತ್ತದೆ (ಹಳ್ಳಿಪಾ. ೦೦೩); ಕೈಮುಟ್ಟಿದಾಗ ಮಾಧವನ ಭುಜಕ್ಕೆ ಸೋಕಲು ಅವನಿಗೆ ಮೈಮೇಲೆ ಮುಳ್ಳೆದ್ದಿತು (ಏರಾಕ. ೫೬).

[ದೇ.॥ ತಮಿ. ಮುಲ. ಕೋತ. ತೊದ. ಮುಳ್; ತುಳು. ಮುಳ್ಳು; ಕೊಡ. ಮುಳ್ಳಿ; ತೆಲು. ಮುಲು, ಮುಲ್ಲು ; ಕುವಿ. ಮುಲ್ಲು]

**ಮುಳಕ** (ನಾ). (ಕರಾ) ಹಲಸಿನ ತೊಳೆ, ನೆನೆಸಿದ ಅಕ್ಕಿ ಮುಂತಾದುವನ್ನು ತಿರುವಿ, ಬೋಂಡದಂತೆ ತುಪ್ಪದಲ್ಲಿ ಕರಿದು ಮಾಡುವ ಒಂದು ಬಗೆಯ ತಿಂಡಿ : ಮೇಳದಲ್ಲೊಂದು ಪಾರ್ಟಿ ಸಿಕ್ಕಿದ ಮೇಲೆ ಬೊಜ್ಜದ ಊಟ, ಬೊಜ್ಜದ ಪಾಯಸ, ಹಲಸಿನ ಹಣ್ಣಿನ ಮುಳಕಕ್ಕೆಂದು ಬದುಕುವ ಬ್ರಾಹ್ಮಣರ ಕೊಂಪೆಯಿಂದ ಪಾರಾಗಬಹುದು (ಸಂಸ್ಕಾರ. ೩೯).

[ ? ]

**ಮುಳಗಳ್ಳಿ** 'ಮುಳುಗಳ್ಳಿ' ನೋ.

**ಮುಳಲು** (ನಾ). ಒಂದು ಬಗೆಯ ಸಸ್ಯ: "ಕ್ರಮುಕಪಾದಿ__ಮುಳಲು, ದಸಿ" (ಶಿತಧಿ. ೨೮). [?./ತಮಿ. ಮುಟಲ್= ಗಜ್ಜುಗದ ಜಾತಿಯ ಗಿಡ]

**ಮುಳವು** 'ಮುಳುವು' ನೋ.

**ಮುಳಿ₁** (ಕ್ರಿ). ೧. ಕೆರಳು; ವ್ಯಗ್ರವಾಗು; ಕೋಪಗೊಳ್ಳು: "ಮುಳಿ- ಕೋಪೇ" (ಶಮದ); ಸಿಮುಗೆಲ್ಲರಾಳು ಕುಜಿಕ್ಕಾಲರಮುನಾಳಿಯುರ್ ರಣಾಲಿ ಅರಸರಲ್ಲಿನ್ಮುಳಿವು ಬನ್ದು (ಎಕ. XVI. ಕುಮುಕೊ. ೯೮-೩; ಸು. 780); ತಣಿಯೆಯುಣಲಿಕ್ಕಿದನೆಂದೊಡೆ ಮುಳಿದು ಸಾಯೆ ಬಡಿದು ಮನೆಯಿಂ ಪೆಂಡತಿಯನಟ್ಟಿ ಕಳೆದೊಡೆ (ವಡ್ಡಾರಾ. ೬೭-೦೫); ಮುಳಿದಿರೆ ಪಾದಪಂಕಜ ನುನಾಂತಲೆಯೊಳ್ ನಿಲೆ ತಾಳ್ದಿ ನಲ್ಲಳೇ ತಿಳಿಯನೆ (ಆದಿಪು. ೯-೧೧); ವಿಧಿ ಮುಳಿಯುವಕಟಾ ಪಾಪಿಗಳಿಗೆ (ಕೊರಟಾ. ೨-೫-೨೩). ೨. ವಿರೋಧವಾಗು; ವಿಪರೀತವಾಗು: ಇನಿಯವು ಮೊದಲೊಳ್ ನಂಜಿನ ಪನಿವೊಲ್ ಬಟೀಕೆಯ್ದೆ ಮುಳಿವ ಕೊಂದಿಕ್ಕುವುವಿಂತೆನೆಯೆನೆ ವಿಷಯವಿಷಾಸ್ವಾದನದೊಳ್ ಲಂಪಟರಿದೇಕೆಯೋ ನರಪಶುಗಳ್ (ಆದಿಪು. ೦೯-೦೨೫).

**ಮುಳಿದರ್**=ಹಗೆಗಳು ; ಶತ್ರುಗಳು: ಮುಳಿದರನಿಕ್ಕುವೆಂದು ಮ್ಮಳಿಸಿದರಿಜಿಯಲ್ಕೆ ನಕುಲಸಹದೇವರ್ಕಳ್ (ಗದಾಯು. ೬-೨೬); ಮುಳಿದರಂ ಜಂಕಿಸಿದವು ಬಿಡದಾರ್ದು ಕಾವನೆಚ್ಚಲರ್ಗಣೆಗಳ್ (ಕಬ್ಬಿಗಕಾ. ೩೦೦). **ಮುಳಿವರ ಭೀಮ** = ಕೆರಳಿದವರಿಗೆ ಭೀಮನಂತಿರುವವನು; ಒಂದು ಬಿರುದು : ಕಾಪ್ಪುರ ಭೀಮಂ ದುರದಡೆ ರಾಮಂ ಮುಳಿವರ ಭೀಮಃ (ಪ್ಕಲಿಂ. ೦೯೨೮, ೩೦-೦೫; 1056). **ಮುಳಿವರಾದಿತ್ಯ** = ಕೆರಳಿದವರಿಗೆ ತಾಪವನ್ನುಂಟುಮಾಡುವವನು ; ಒಂದು ಬಿರುದು : ನುಡಿದನ್ತೆ ಗಣ್ಡಂ ಮುಳಿವರಾದಿತ್ಯಂ ಮನ್ನೆಯಪಲ್ಲಭಂ (ಸೌಇಇ. XX, ೨೦-೬೬; 1019). 'ಮುನಿ₁' ಪರಾ.

[ದೇ.॥ ತಮಿ. ಮುಳಿ = ಕುದಿ, ಸುಡು, ಒಣಗು, ಹಾಳಾಗು]

**ಮುಳಿ₂** (ನಾ). ಸಿಟ್ಟು; ಕೋಪ : 'ಮುಳಿಕೆಯ್', 'ಮುಳಿಯಿಸು' ಪರಾ. [<ಮುಳಿ₁./ಮುಲ. ಮುಟಿ]

**ಮುಳಿ₃** (ನಾ). ಮನೆಯ ಛಾವಣಿಗೆ ಹೊದೆಸಲು ಬಳಸುವ ಒಂದು ಬಗೆಯ ಹುಲ್ಲು : ಈ ಸಾರಿ ಮುಳಿಹುಲ್ಲಿಗೂ ದರ ಏರಲಿಕ್ಕಿದೆ (ಮುಗಿಯು. ೩೬೩); ಗುಡ್ಡೆಯಲ್ಲಿ ಮುಳಿಹುಲ್ಲು ಹಸನಾಗಿ ಸೊಂಟದಷ್ಟು ಎತ್ತರ ಬೆಳೆಯುವ ಸಮಯ ಅದು (ರಕ್ತರೂ. ೩೯). [←ತುಳು. ಮುಳಿ, ಮುಲಿ]

**ಮುಳಿಕೆಯ್** (ಕ್ರಿ). ಕೋಪಗೊಳ್ಳು; ಸಿಟ್ಟಾಗು; ಕೆರಳು : ಎನ್ನ ಮನಕ್ಕೊಡಂಬಡನೊಡಂಬಡುವೈ ಪಟಿಗೆಯ್ದುದೇಪಮಂ ನೀನ್ನೆಗಟ್ಟಿದಲೆಂದು ಮುಳಿಕೆಯ್ದುಗಿದೊಪ್ಪದು ಸಪ್ಮ್ಯತಾಪಸಾನನ್ನಳಿನಾನನೇ ಮುಳಿದದಂ ಬಿಸುಡೈ (ಶಾಂತಿಪು. ೬-೬೯). [ಮುಳಿ₂ + ಕೆಯ್₁]

**ಮುಳಿಯಿಸು** (ಕ್ರಿ). ಕೋಪ ಬರುವಂತೆ ಮಾಡು ; ಸಿಟ್ಟಿಗೆಬ್ಬಿಸು ; ಕೆರಳಿಸು : "ಮುಳಿಯಿಸು – ಕೋಪೇ" (ಶಮದ); ನಿಮ್ಮಂ ಮುಳಿಯಿಸಿದ ಸುಧಾಸುರರುಮನೊಳರೆನಿಸೆಂ ಕರ್ಣನೆಂಬನೆನಗೇವಿರಿಯಂ (ಕಂಕಪಾ. ೦೨-೧೩೦); ಸಿಂಹಮಂ ಮುಳಿಯಿಸಿ ಪಲ್ಗಳಂ ಪಿಡಿದು ಕಿಟ್ಟವರಾರ್ (ಗದಾಯು. ೯-೨೦); ಮುಳಿಯಿಸದೆನ್ನಂ ಮಗುಟ್ದುಂ ಬಿಳ್ದೊಡೊಟ್ಟೊಡೆ ಗೆಲ್ವೆಯಂಬುದೊಟ್ಟೊಡೆ ಗೆಲ್ಲದರ್ (ಕಾವ್ಯಾವ. ೭೭೯). [ಮುಳಿ₂ + – ಇಸು₃]

**ಮುಳಿವು** 'ಮುಳುವು' ನೋ.

**ಮುಳಿಸಾಱು** (ಕ್ರಿ). ಕೋಪವು ಶಾಂತವಾಗು ; ಸಿಟ್ಟು ಇಳಿ : ಬಿರಯಿಯ ಮಿಟ್ಟು[ವೆ]ಂ ಮಿದಿದೊಡಲ್ಲದಣಂ ಮುಳಿಸಾಱಿದು (ಕಂಕಪಾ. ೨-೦೩).

[ಮುಳಿಸು + ಆಱು₁]

**ಮುಳಿಸು** (ನಾ). ಕೋಪ ; ಸಿಟ್ಟು ; ಮುನಿಸು : "ಕಿಸುಗಣ್ಣು . . . ಮುಳಿಸು, ಮುನಿಸು, ಒರಸೊರಸು, ಸೆಣಸು – ಈ ೮ ಕೋಪಂ" (ಕಕಪಾ. ೬೩-೯೮೬); ಮೆಲ್ಲನೆಸಪ ಮಲಯಾನಿಲನುಂ ಮುಳಿಸಂ ಕಟಲ್ಚಿ ಕಳೆದುವು . . . ಕಾಮಿಗಳಾ (ಕೆಂಂ. ೨-೭೦); ಸಿಗ್ಗನಾಟ್ ಮುಳಿಸಂ ನೀನ್ನೆದಿಂಗಂ ಬಿಸುಡು (ಆದಿಪು. ೦೯-೦೨೮); ಮುನಿ . . . ಮುನ್ನಿನ ಪಗೆಯಂ ಕುಂಡಲಸಂ ನೆನೆದವಧಿಯಿನಳವಿಗಟಿದ ಮುಳಿಸಂ ತಳೆದಂ (ಶಂರಾಮ. ೯-೦೯); ಪೊಲ್ಲದರೊಲುಮೆಯೊಳ್ಳಿದರ ಮುಳಿಸು ನಿಲಬಲ್ಲುದೆ (ಕುರಾಶಾಂ. ೦-೫೫). 'ಮುನಿಸು' ಪರಾ. [ಮುಳಿ₁ + – ಸು₃]

**ಮುಳಿಸುಗ** (ನಾ). ಕೋಪಿಸಿಕೊಳ್ಳುವವನು ; "ಭಾಮುಕಃ, ಭಾಮಾನಃ– ಈ ೨ ಮುಳಿಸುಗಂ" (ಕಾಕಕ. ೦೦೬). [ಮುಳಿಸು + – ಗ₂]

**ಮುಳು** 'ಮುಳ್' ನೋ.

**ಮುಳುಂಕಿಸು** 'ಮುಟುಂಗಿಸು' ನೋ.

**ಮುಳುಂಕು** 'ಮುಟುಂಗು' ನೋ.

**ಮುಳುಂಗಿಸು** 'ಮುೞುಂಗಿಸು' ನೋ.

**ಮುಳುಂಗು** 'ಮುೞುಂಗು' ನೋ.

**ಮುಳುಕ$_1$** 'ಮುೞುಕ' ನೋ.

**ಮುಳುಕ$_2$** (ನಾ). ಒಂದು ಬಗೆಯ ಸಸ್ಯ : ಮುಳುಕದ ಹಗಿನು. ಇಂಗುಳಮಂ ನೀರಲ್ಲಿ ಅರೆದು ನುಂಗೆ ಮಾಱಿದಿನಕ್ಕೆ ಬಂಜೆಗೆ ಗರ್ಭಮಕ್ಕುಂ (ಅಶ್ವಶಾ. ೯೦). [←ತೆಲು. ಮುಲಕ, ಮುನಗ]

**ಮುಳುಕಿಸು** 'ಮುೞುಂಗಿಸು' ನೋ.

**ಮುಳುಕು$_1$** 'ಮುೞುಂಗು' ನೋ.

**ಮುಳುಕು$_2$** 'ಮುೞುಕು$_2$' ನೋ.

**ಮುಳುಕುನೀರ್** (ನಾ). ಮುಳುಗಿಸುವಷ್ಟು ನೀರು : ತನ್ನ ಮಾಯಾ ಲೇಶದಿಂ ಮೂಱುಂ ಜಗಮಂ ಮೋಸಂಗೊಳಿಪ ಮುಕುಂದಂಗೆ ಮೋಹ ರಸಮಂ ಮುಳುಕುನೀರೆನಿಪ ಮುಗುಳ್ನಗೆಯುಂ . . . ತಣಿಯದ ನೋಟಂಗಳುಂ ಪೆಣ್ಣಾಸಮ ಸಾಜದಿಂದಮೆ ಆದೊಡಂ (ಜಗಮೋ. ೦೦೩-೦೭).

[ಮುಳುಕು$_1$ (<ಮುೞುಂಗು) + ನೀರ್]

**ಮುಳುಕೂಗರಿ**, ಮುಳ್ಳುಕೂಗರಿ (ನಾ). ಒಂದು ಬಗೆಯ ಗಿಡ ಮತ್ತು ಅದರ ಕಾಯಿ : ಮುಳುಕೂಗರಿಕಾಯಿ (ಹಾಜಕಾಯಿರಿ. ಗಜ ಪಿಂಪಳಿ) (ಮೂಲಿಕಾ. ೦೨೯). **ಮುಳ್ಳುಕೂಗರಿ** : ಹಾಜುಕಾಯಿರಿ (ನಸುಗುನ್ನಿಕಾಯಿ, ಮುಳ್ಳುಕೂಗರಿಕಾಯಿ) (ಮೂಲಿಕಾ. ೦೫೦).

[ಮುಳು (<ಮುಳ್) + ಕೂಗರಿ]

**ಮುಳುಗ** 'ಮುೞುಕ' ನೋ.

**ಮುಳುಗಡೆ** (ನಾ). ನೀರಿನಲ್ಲಿ ಅಡಗಿಹೋಗುವುದು,— ಮುಳುಗಿಹೋಗುವುದು : ಅನೇಕ ಎಕರೆಗಳ ಅರಣ್ಯಪ್ರದೇಶವನ್ನೂ ಬಂಜರು ಜಮೀನನ್ನೂ ತಾತಾ ಅವರಿಗೆ ವಶಪಡಿಸಬೇಕಾಗಿದ್ದಿತು. ಅದರ ಪ್ರಯುಕ್ತವಾಗಿ ಕೆಲವು ವಾಸಸ್ಥಳಗಳು ನೀರಿನಲ್ಲಿ ಮುಳುಗಡೆಯಾಗುವ ಸಂಭವವಿದ್ದಿತು (ಜಾಗ್ರಹ. ೬೮). [<ಮುಳುಗು$_1$ + ಕಡೆ$_2$]

**ಮುಳುಗತ್ತಿ** (ನಾ). ಮುಳ್ಳನ್ನು ಸವರಲು ಬಳಸುವ ಕತ್ತಿ : ಕುಱುಬನುಱ್ ಮುಳುಗತ್ತಿಯಿಂ ತಿಱಿಯಱುಮೆಗಳು ಬರೆಗುಡುಹುಮಡಗಿದ ಕುಱುಬೊವಲ ತಿದಿಯುಸೆಯೆ . . . ನೋಡುತ್ತ (ಬಸವ. ೨೦-೦೨); ಆ ಕುರುಬ ಮುಳುಗತ್ತಿಯಿಂದ ಮಾದರಸ ಕಾಣಿಸಿದ್ದ ಬೊಬ್ಬುಲಿಮರದ ಕಾಯಿಸೊಪ್ಪುಗಳನ್ನೇ ಕಡಿಕಡಿದು ಕುರಿಗಳಿಗೆ ಮೆಯ್ಯಿಸತೊಡಗುತ್ತಾನೆ (ಜಪ. ೨೬೯).

[ಮುಳು (<ಮುಳ್) + ಕತ್ತಿ./ತೆಲು. ಮುಲುಕತ್ತಿ]

**ಮುಳುಗಳ್ಳಿ**, ಮುಳಗಳ್ಳಿ, ಮುಳ್ಳುಗಳ್ಳಿ (ನಾ). ಮುಳ್ಳುಗಳಿರುವ ಒಂದು ಬಗೆಯ ಕಳ್ಳಿಗಿಡ : ಕಳ್ಳಿಯೊಳು ಹಾಲು ಮುಳುಗಳ್ಳಿಯೊಳು ಹೆಜ್ಜೇನು ಎಳ್ಳಿನೊಳಗೆಣ್ಣೆ ಹನಿದಿರಲು ಶಿವಲೀಲೆ ಸುಳ್ಳೆನ್ನಬಹುದೆ (ಸರ್ವಜ್ಞ. ೧೯೯). **ಮುಳಗಳ್ಳಿ** : ಬಿದರಕ್ಕಿ, ಲೋಳಸರ, ಮುಳಗಳ್ಳಿ ಮುಂತಾದವುಗಳು ಸುಖದ ಕಾಲದಲ್ಲಿ ನಿರುಪಯುಕ್ತಪದಾರ್ಥಗಳೆಂದು ಎಣಿಸಲ್ಪಡುತ್ತವೆ (ಮುಂಬಯಿ. ೩-೨೫೯); ಬರಗಾಲದ ಆಹಾರ . . . ೧. ಬಾಳೇಕಾಯಿ. ಹೂವು, ೨. ತೊಂಡೇಕಾಯಿ, ೩. ಮುಳಗಳ್ಳೀಕಾಯಿ (ಕಥಾಗೆ. ಹಂ. ೦೦). **ಮುಳ್ಳುಗಳ್ಳಿ** : ಈ ಬೈಲುಸೀಮೆಯ ಅಡವಿಯಲ್ಲಿ ಸಾಧಾರಣವಾಗಿ ಎಲ್ಲ ಕಡೆಯಲ್ಲಿಯೂ ಜಾಲಿ, ಈಚಲು, ಕಳ್ಳಿ, ಮುಳ್ಳುಗಳ್ಳಿ . . . ಬಣಾದವರಿ ಮುಂತಾದವುಗಳು ದೃಷ್ಟಿಗೆ ಬೀಳುತ್ತವೆ (ಕೆಳಕ. ೩೦).

[ಮುಳು (<ಮುಳ್) + ಕಳ್ಳಿ$_2$]

**ಮುಳುಗಿಡು** 'ಮುಳ್ಗಿಡು' ನೋ.

**ಮುಳುಗಿಸು** 'ಮುೞುಂಗಿಸು' ನೋ.

**ಮುಳುಗು$_1$** 'ಮುೞುಂಗು' ನೋ.

**ಮುಳುಗು$_2$** 'ಮುೞುಕು$_2$' ನೋ.

**ಮುಳುಗುಂದ** 'ಮುಳ್ಗುಂದ' ನೋ.

**ಮುಳುಗುಮಿಹ** (ನಾ). ನೀರಿನಲ್ಲಿ ತಲೆಯನ್ನು ಮುಳುಗಿಸಿ ಮಾಡುವ ಸ್ನಾನ : ಖಗಗಳಿಗೆ ಸುಖದಮಾದುದು ನದಿಯ ಮುಳುಗುಮಿಹಂ (ಶ್ರೀರಾಮ. ೨೨೬-೨೨). [ಮುಳುಗು$_1$ (<ಮುೞುಂಗು) + ಮಿಹ]

**ಮುಳುಗುಹಕ್ಕಿ** (ನಾ). ನೀರಿನ ಅಡಿಯಲ್ಲಿ ತಲೆಯನ್ನು ಮುಳುಗಿಸಿ ಮೀನು ಮುಂತಾದುವನ್ನು ಹಿಡಿಯುವ ಒಂದು ಬಗೆಯ ಪಕ್ಷಿ : ಮುಳುಗುಹಕ್ಕಿ, ಮುಳುಕ (Diver. ೩೦೯೩).

[ಮುಳುಗು$_1$ (<ಮುೞುಂಗು) + ಹಕ್ಕಿ (< ಪಕ್ಕಿ)]

**ಮುಳುಗೆದಱು** (ಕ್ರಿ). ಮುಳ್ಳುಗಳನ್ನು ಚೆದರಿಸು,— ಹರಡು : ತಱುಗಿದಂಬಿನಲೆಯ್ಕ್ಕವ್ಯಗ ವ್ಯೆಯುಱುಚೆಯುಲಿ ಮುಳುಗೆದಱುವಂದದಲುಱುಬಿ [ಪಾಠಾಂ. ಮುಳುಗೈದಾಡುವಂತಿರೆವ್ಯುಱುಬಿ] ರಘುಡಿಸಿ ರಘುಡಿತೆಯುಲಿ ಮೇಲ್ವಾಯ್ದು (ಕುಮಾರ. ೩-೦೦-೦೬).

[ಮುಳು (< ಮುಳ್) + ಕೆದಱು$_1$ (< ಕೆದಱ್$_1$)]

**ಮುಳುಗೊಗ್ಗಿ**, ಮುಳ್ಳುಕೊಗ್ಗಿ, ಮುಳ್ಳುಕೊಗ್ಗೆ, ಮುಳ್ಳುಗೊಗ್ಗಿ (ನಾ). ಒಂದು ಬಗೆಯ ಔಷಧೀಸಸ್ಯ : ನೆಲ್ಲಿ . . . ಮುಳುಗೊಗ್ಗಿಯೆಂಬಿನಿತ್ತುಱಿ ಪುಡಿಯಂ ಚೆಲ್ಲನೆ ಮಾಱಿನೊಳೂಡಿದೊಡಲ್ಲಾಪಾವಿನ ವಿಷಕ್ಕೆ ತವಿಲದೆ ಸಾಲ್ಗುಂ (ಅಶ್ವಶ. ೬-೩೩). **ಮುಳ್ಳುಕೊಗ್ಗಿ** : " "ಕಂಟಪುಂಖಃ — ಮುಳ್ಳುಕೊಗ್ಗಿ" (೬ಕಥ. ೨೩); ಮುಳ್ಳುಕೊಗ್ಗಿಯ ಬೇರಿನ ಕಷಾಯವ ಕೊಡಿಸಲು ಅಂಗುರವಿಷ ಹರವಹುದು (ವೈದ್ಯಸಾ. II, ೨೨೯). **ಮುಳ್ಳುಕೊಗ್ಗೆ** : "ಕಂಟಾಲುಕ್ಷುಪಮಾನಗ್ಗಾರೆ, ಮುಳ್ಳುಕೊಗ್ಗೆ" (೬ಕಥ. ೨೩); ಬೆಲ್ಲವತ್ತದ ಬೇರು, ಮುಳ್ಳುಕೊಗ್ಗೆ ಬೇರು, ಈ ಎರಡು ಬಗೆ ಬೇರು ಪ್ರತ್ಯೇಕ ಮೂವತ್ತೆರಡು ಹಲಗಳನಾಗುಳ ನೀರಲ್ಲಿ ಕಷಾಯವೆತ್ತಿ (ವೈದ್ಯಸಾ. I, ೪೯೬). **ಮುಳ್ಳುಗೊಗ್ಗಿ** : "ಕಾರುನೀಲಿ, ಮುಳ್ಳುಗೊಗ್ಗಿ, ಗೊಗ್ಗಿ" (ಶಬ್ದಶ. ೬೪).

[ಮುಳು (< ಮುಳ್) + ಕೊಗ್ಗಿ$_1$]

**ಮುಳುಗೋಲು**, ಮುಳ್ಳುಕೋಲು, ಮುಳ್ಳುಗೋಲು (ನಾ). ೧. ದನ, ಕರು, ಕುದುರೆ ಮುಂತಾದುವುಗಳನ್ನು ಚೋದಿಸಲು ಬಳಸುವ ಚೂಪಾದ ಕೋಲು ; ತಿವಿಗೋಲು : ಬಲವುಳ್ಳೆರಡೆತ್ತುಗಳಂ . . . ಮುಳುಗೋಲಂ ಸಂಪಾದಿಸಿ (ಕಕ್ರಸ. ೩-೨-೩) ; ದೊರೆ ಮಾತಿನ ಮುಳುಗೋಲಿಂದ ತಿವಿದಾಗ ಮಂತ್ರಿ ಸ್ಮರಣೆ ಕಳೆದುಕೊಳ್ಳದೆ . . . ಮಾತು ಕೊಡುತ್ತಾನೆ (ಸಂಕ್ರಾಂತ. ೯೩). **ಮುಳ್ಳುಕೋಲು** : ೧. ದೇವಕೀನಂದನನು . . . ರಥಾಶ್ವಗಳ ಪಗ್ಗಗಳನ್ನು ಬಿಟ್ಟು ಹಸ್ತಕಮಲಗಳಿಂದ ಮುಳ್ಳುಕೋಲನ್ನು ಹಿಡಿದು . . . ಭೀಷ್ಮನ ಮೇಲೆ ನಡೆದನು (ಗ್ರಹಾರ್. ೧೬೬). **ಮುಳ್ಳುಗೋಲು** : ೧. "ಪ್ರಾಜನಂ, ತೋದನಂ, ತೋತ್ರಂ—೩ ತಿವಿಗೋಲು, ಮುಳ್ಳುಗೋಲು" (ಸಿದ್ಧಾಂತ. ೨೬೬). ೨. ಒಂದು ಬಗೆಯ ಈಟಿ : "ಶಲ್ಯಂ, ಶಂಕುಃ — ೨ ಸೆಲ್ಲೆಹದ ಕೋಲು, ತಿವಿಗೋಲು, ಮುಳ್ಳುಗೋಲು" (ಸಿದ್ಧಾಂತ. ೨೬೬).

[ಮುಳು (<ಮುಳ್) + ಕೋಲು$_1$ (< ಕೋಲ್$_1$)]

**ಮುಳುದೊಡಕು** (ನಾ). ಗೋಜುಗೋಜಾಗಿರುವ ಮುಳ್ಳು : ಮುಳುದೊಡಕಿನೊಳು ಕೂದಲೊಂದೇ ಸಿಲುಕಿ ನಿಂದವು ಚಮರಿಮೃಗ (ಕುಮಾರ. ೦೩-೨೯). [ಮುಳು (<ಮುಳ್) + ತೊಡಕು$_3$ (<ತೊಡಂಕು$_3$)]

**ಮುಳುಮುತ್ತು** 'ಮುಳ್ಮುಟ್ಟುಗ' ನೋ.

**ಮುಳುಮುತ್ತುಗ** 'ಮುಳ್ಮುಟ್ಟುಗ' ನೋ.

**ಮುಳುಮುಳು** (ನಾ). (ಸದ್ದಿಲ್ಲದೆ ಅಳುವುದನ್ನು ಸೂಚಿಸುವ) ಒಂದು ಅನುಕರಣಶಬ್ದ.

ಮುಳುಮುಳು ಅಳು = ಸದ್ದು ಮಾಡದೆ ಒಂದೇ ಸಮನೆ

ಅಳು : ಮುಳುಮುಳು ಅಳುತ್ತಾ ಶೀಲಿ ಅಲ್ಲೇ ಬಿದ್ದುಕೊಂಡಳು (ಕಣ್ಣಿತಿ. ೩೦) ; ಸೀತಕ್ಕ ಮುಳುಮುಳು ಅತ್ತಳಂತೆ (ಮುಂದುರಾ. ೦೬೬).

**ಮುಳುಮುಱಿ** 'ಮುಳ್ಮುಱಿ' ನೋ.

**ಮುಳುಮೆಟ್ಟು** (ನಾ). ಕಾಲಿಗೆ ಮುಳ್ಳು ಚುಚ್ಚದಿರಲು ಹಾಕಿಕೊಳ್ಳುವ ಮೆಟ್ಟು,-ಪಾದರಕ್ಷೆ : ಕಳಕಳವ ಕಣ್ಣಜಿವೆಗಳ ಮನಗಲಿತನದ ಮುಳು ಮೆಟ್ಟುಗಳ ವೆಗ್ಗಳಿಯುರಿದ್ದುದ್ದು ಭೀಮಸಾತ್ಯಕಿಸೃಂಜಯಾದಿಗಳು (ಕುಣ್ಣಾ.ಕ. ೨೦-೦೯). [ಮುಳು (<ಮುಳ್) + ಮೆಟ್ಟು₂]

**ಮುಳುಮೊನೆ** 'ಮುಳ್ಮೊನೆ' ನೋ.

**ಮುಳುವಸೆ** 'ಮುಳ್ವಸೆ' ನೋ.

**ಮುಳುವು**, ಮುಳವು, ಮುಳಿವು (ನಾ). ೧. ಅಡ್ಡಿ ; ಕಂಟಕ : ವಿಘ್ನ : ನಮ್ಮ ಧರ್ಮ ನಮ್ಮ ಪ್ರಗತಿಗೆ ನೆರವಾಗಬೇಕೇ ಹೊರತು ಮುಳುವಾಗ ಬಾರದು (ಹೇಮುಕೂ. ೦೦೦). ೨. ಕೇಡು ; ನಾಶ : (ಕ). ೩. ಕೇಡಿಗೆ ಕಾರಣವಾದುದು ; ನಾಶಕರವಾದುದು : ನಿನ್ನ ಹಟವಾರಿತನವೇ ನಿನಗೆ ಮುಳುವು ಆಯಿತು (ಕುಂಂಬಯು. ೬. ೨-೩೦) ; ಆ ಚಂಚಲತೆ ವಿಷ್ಣೂನ ಜೀವನಕ್ಕೆ ಮುಳುವಾಗಬಹುದೆಂದು ಅವನೆಂದೂ ತಿಳಿದಿರಲಿಲ್ಲ (ಹರುಶೀ. ೦೦೪೩) ; ನನ್ನ ಚೆಲುವೇ ನನಗೆ ಮುಳುವಾಗಿದೆ (ಕಮನ. ೦೨). ೪. (ಕೆಡುಕಿಗೆ) ಕಾರಣ ; ಮೂಲ : ತಾನು ತನ್ನ ಅಣ್ಣನ ಸಾವಿಗೆ ಮುಳುವಾದೆನೇನೊ ಎಂಬ ಎದೆಗುದಿಯು ಬೆನ್ನುಹತ್ತಿ ಅವಳು ಒಳಗೊಳಗೆ ನವೆಯುತ್ತಿದ್ದಳು (ಕಶಕ. ೩೮). ೫. ಹಿಂಸೆಯನ್ನುಂಟು ಮಾಡುವಂತ ಹುದು; ವೇದನೆಪಡಿಸುವಂತಹದು : ಗಂಡಸರ ಕಾಟದಿಂದಾದ ಅವಳ ಮನಸ್ಸಿನ ನಿರುತ್ಸಾಹ(?)ನೆಕ್ಕಲದೋವನ ಮನಸ್ಸಿಗೆ ಮುಳುವಾಗಿತ್ತು (ಕುಪರು. ೪೯೩). ೬. ವಿರೋಧಿಸುವ ವ್ಯಕ್ತಿ ; ಎದುರಿಸುವ ವ್ಯಕ್ತಿ : ಈ ಇಲಾಖೆಯೊಳಗೆ ರೂಪಚಂದನಿಗೆ ಅವಳೊಬ್ಬಳು ಮಾತ್ರ ಮುಳುವಾಗಿದ್ದಾಳೆ (ಜಿಅನ್ನಾ. ೯೫). **ಮುಳವು** : ೨. ಸುಲಭಮಾರ್ಗವ ಬಿಟ್ಟು ವಿಜಯವಿಠಲ ರೇಯ ಕೆಲಕಾಲವು ತಿರುಗಿ ಮುಳವು ಮಾಡಿಕೊಂಡೆ (ವೋಜ್ಞ೦ೀ. ೩೦-೨). **ಮುಳಿವು** : ೩. ದ್ವಿಜನಿಗಸಂತುಷ್ಟಿಯಿಂದ ವಿನಾಶವು ನೃಪನಿಗೆ ತುಷ್ಟಿಯೆ ಮುಳಿವು (೩೦ಜಾಕ. ೦೬೩-೨) ; ನನ್ನ ನಾಲಗೆಯೆ ನನಗೆ ಮುಳಿವಾಗಿದೆ (ಶ್ರೀಜಾತ್ರ. ೪) ; ಗಂಡಸಿಗೆ ಸಾಲ ಮುಳಿವು, ಹೆಂಗಸಿಗೆ ಹಾದರ ಮುಳಿವು (ಗಾದೆ). 'ಮುಳ್' ಪರಾ.

**ಮುಳುವೇಲಿ**, ಮುಳ್ಳುಬೇಲಿ, ಮುಳ್ಳುವೇಲಿ (ನಾ). ೧. ಮುಳ್ಳು ಪೊದೆಗಳಿಂದ ರಚಿಸಿದ ಬೇಲಿ,—ಆವರಣ : ತವಗ ತಳ ಮುಳುವೇಲಿ ಬಾಗಿಲ ಜವಳಗದ ಬೀಯುಗದಲಿದ್ದುದು ದಿವಿಜವನವೃದ್ದಂಡಕರ ಪರಿಮಳದ ಪೂರದಲಿ (ಕುಣ್ಣಾ.ಕ. ೦೬-೨೬) ; ಮುಳುವೇಲಿ ಮೇರುವೆ ತಳ ಸುರಂಗ ಗಳಿಂದ ಬಳಸಿ ಬಂಧಿಸಲಾ ಪುರವ ಪೊಳಲೊಳಗೆಸೆವ ಜನರು ಭೀತಿಗೊಂಡಾಗ ಕಳವಳಿಸಿದರು (ಕಂಪಜ. ೦೩-೩೩). **ಮುಳ್ಳುಬೇಲಿ**: ೧. ಅದಕ್ಕೆ ಮುಳ್ಳು ಬೇಲಿ 'ಕುತ್ತ'ದಿದ್ದರೆ, ಒಳಗೆ ಹಸುರು ಉಳಿಯಲಿಕ್ಕಿಲ್ಲ (ಜುರಮು. ೦೦). ೨. (ಅಲಂ) ಅಭಿಪ್ರಾಯಭೇದ ; ಅಂತರ : ಮನಮನಗಳ ಮುಳ್ಳುಬೇಲಿ ಮಮತೆ ದೂರ ತಳ್ಳಿವೆ (ಕಂಮು. ೨೪-೦೯). **ಮುಳ್ಳುವೇಲಿ** : ೨. ಈ ಮಾತು ಪುರುಷಭಾಗ್ಯದ ಮುಳ್ಳುವೇಲಿ. ನೀನು ಒಂದಿಲ್ಲೊಂದು ದಿನ ಕಿತ್ತಿ ಮುಂದೆ ಸಾಗಬೇಕಾಗುವುದು (ಜಡುಂತ. ೬೪).

[ಮುಳು (<ಮುಳ್) + ಬೇಲಿ]

**ಮುಳುಪೊರಜೆ** (ನಾ). ಮುಳ್ಳುಮುಳ್ಳಾಗಿರುವ ಹಗ್ಗ : ಒರಟಾದ ಹಗ್ಗ : ಬಗಿದು ಪೊಮ್ಮುಳಗಳನು ಹೊಸಜಾಂಬೆಗಳ ಜೋಡಿಸಿ ಕಟ್ಟಿ ಮುಳುವರಜ [ಪೊರಜೆ] ಗಳ . . . ನಿಡುಸಿಖಲ್ಲಿಗಳ ಶಾಲುಗಳೆಸೆಯೆ ಸಿಂಗರಿಸಿದರು ಮುಮಗಜವ (ತಿಪ್ಪುರು ೩-೩೩).

[ಮುಳು (<ಮುಳ್) + ಪೊರಜೆ]

**ಮುಳುಸಾಂತೆ** 'ಮುಳುಸೌತೆ' ನೋ.

**ಮುಳುಸೌತೆ**, ಮುಳುಸೌಂತೆ, ಮುಳ್ಳುಸವುತೆ, ಮುಳ್ಳುಸೌತೆ (ನಾ). ಮುಳ್ಳುಗಳುಳ್ಳ ಒಂದು ಬಗೆಯ ಸೌತೆ : ಅಗಸೆ ಮುಳು ಸೌತೆ ತೊಂಡೆಯು ಪಲವು ಫಲಕದಗಳ ಶಾಖಾವಳಿಯ ಸವಿಯೊಪ್ಪುರಣೆ ಘಮ ಘಮಿಸಲಿಕೆ ಬಡಿಸಿದರು (ಅಶಂಶಾ. ೬-೨೩-೩೯). **ಮುಳುಸಾಂತೆ**: ಕಣ್ಗೊಳಿಸುವ ಮುಳುಸೌಂತೆ ಕುಂಬಳ (ಬೊಂಕಶಾ. ೦೪೪೩, ೩೦೪ಕ್ಷರ. ೨೬-೩; 1076). **ಮುಳ್ಳುಸವುತೆ** : (ಕ). **ಮುಳ್ಳುಸೌತೆ** : "ರೋಮಶೀ—ಮುಳ್ಳು ಸೌತೆ" (ಓಕಧಿ. ೦೪೦). [ಮುಳು (<ಮುಳ್) + ಸೌತೆ (<ಸವತೆ)]

**ಮುಳುಹು**(ನಾ). ೧. ಮೊನೆಗೋಲಿನಿಂದ ಚುಚ್ಚುವಿಕೆ,-ಚೋದಿಸುವಿಕೆ: (ಕ). ೨. ಪ್ರಾಣಿಗಳನ್ನು ಚೋದಿಸಲು ಬಳಸುವ ಚುಚ್ಚು ಗೋಲು,— ಮೊನೆಗೋಲು : "ಪ್ರಾಜನಂ ಮುಳುಹು" (ಮಂಗರಾ. ೦೦೯-೨). [< ಮುಳ್]

**ಮುಳುಹುಗೋಲ್** (ನಾ).= ಮುಳುಹು ೨ : "ಪ್ರತೋದಃ ಪ್ರಾಜನಂ ತೋತ್ರಂ—ಈ ೩ ಮುಳುಹುಗೋಲ್" (ಹಿಶಾಭು. ೪೪-೪೨೩).

[ಮುಳುಹು + ಕೋಲ್₁]

**ಮುಳ್ಗಣೆ** (ನಾ). ಮೊನಚಾದ ತುದಿಯುಳ್ಳ ಬಾಣ; ಹರಿತವಾದ ಸರಳು : ಜಗವ ಸುಂಗಿದ ನಿಃಜು ಪೋಪರ ವಿಗಡಸೂರ್ಯನ ಕಿರಣಗಳ ಬಲುಮುಳ್ಗಣೆಗಳು ತಾಗೆ (ದೀಜೀಮು. ೪-೩೯). [ಮುಳ್ + ಕಣೆ₁]

**ಮುಳ್ಗತ್ತಿಗೆ** (ನಾ). ಮುಳ್ಳುಮುಳ್ಳಾಗಿರುವ ಕತ್ತಿ: ಕರಾಗ್ರದಲ್ಲಿ ಮುಳ್ಗತ್ತಿಗೆಯುಂ ತಿರಿಯುಂ ಚಟಿಯುಂ ಘಟವುಂ ಪರಶುವನಿರದಾಂತು (ಕೃಕಲ. ೦೦-೩೦). [ಮುಳ್ + ಕತ್ತಿಗೆ]

**ಮುಳ್ಗಿಡು**, ಮುಳುಗಿಡು. ಮುಳ್ಳುಗಿಡ (ನಾ). (ಬೊಬ್ಬುಲಿ, ಜಾಲಿ, ಗುಲಾಬಿ ಮೊದಲಾದ) ಮುಳ್ಳುಗಳಿಂದ ತುಂಬಿರುವ ಗಿಡ : ಪಡೆಯದ ಬೇಟವುಂ ಪಡೆದುದಂ ಕಿಡಿಸಲ್ ತೊಡಿಯೊಳ್ ಪೊಡಟ್ಟ ಮುಳ್ಗಿಡುಗಡಿಸಟ್ಟುಗೆಕ್ಕೊನಲಿಗಂ ದೊರೆಯಪ್ಪರೆ ಕೇಳರಪ್ಪವರ್ (ಶಾಂತಿಪು. ೬-೮೦); ಮುಳ್ಗಿಡುಗಳೊಳ್ ತೊಡರ್ದ ಮೆಯ್ಯುವಿರ್ ಪಱಿಗು ಮೆಂದು ಮಿಡುಕಲೊಲ್ಲದಲ್ಲಿಯೆ ನಿಂದು (ಕಂದ್ರಪ್ರ. ೩-೬೩ ಶ). **ಮುಳುಗಿಡು**: ಮುಳುಗಿಡು ತಿವರ್ಗಳ್ ಱಿರಿವಾಗಿಯುಂ (ಕಲ್ಯಾಣ. ೨-೪). **ಮುಳ್ಳುಗಿಡ**: ದುರ್ಲಭಚಂದ್ರನು . . . ಕಾಡುಮುಳ್ಳುಗಿಡಗಳಲ್ಲಿ ನುಸಿದು . . . ಓಡುತ್ತಾನೆ (ದೇಜೀಚ. ೪೦); ಗಂಡಕವು . . . ಮುಳ್ಳುಗಿಡ, ಕಬ್ಬು, ಧಾನ್ಯ, ತೃಣ ಮುಂತಾದ್ದನ್ನು ತಿನ್ನುತ್ತದೆ (ಕುಂಂಬಯು. ೪-೪೭).

[ಮುಳ್ + ಗಿಡು]

**ಮುಳ್ಗು** 'ಮೊಟ್ಗು₁' ನೋ.

**ಮುಳ್ಗುಂದ**, ಮುಲುಗುಂದ, ಮುಳುಗುಂದ, ಮುಳ್ಗುಂದು (ನಾ). ಒಂದು ಸ್ಥಳದ ಹೆಸರು ; ಇದು ಈಗಿನ ಗದಗ್ ತಾಲ್ಲೂಕಿನಲ್ಲಿದೆ : ಮುಳ್ಗುನ್ದಾಖ್ಯೇನಗರೇ (ಎಇ. XIII, ೦೪೨-೪; 902) ; ಮುಳ್ಗುಂದ ದೊಳ್ನೆನ್ನೆ ಸನ್ನಸನಕ್ಕೆಯ್ದಿ ನಿವೃತ್ತಿಗೆಯ್ದು . . . ಮುಡಿಪಿ (ಶಾಸಂಪು. ೩). **ಮುಲುಗುಂದ** : ಮುಲುಗುಂದೇಂದ್ರ ಶಿವಮಪ್ಪ ಪುತ್ರ ಆತ್ರೇಯ ಗೋತ್ರಜಃ (ಎಇ. XII, ಕುಮಕೂ. ೦-೨೦೩ ; 1571). **ಮುಳುಗುಂದ** : ಮುಳುಗುನ್ದವಿದ್ಯಾಧರಂ ನಾಮಾದಿಸಮಸ್ತಪ್ರಸಸ್ತಿಸಹಿತಂ ಶ್ರೀಮನ್ಮುಳು ಗುನ್ದಪ(ಂ)ನ್ನೆರಡಱ ಮನ್ನೆಯಂ ( ಕೌಇಇ. XI-i, ೯೭-೦೦ ; ೭೭೪ ) ; ಮುಳುಗುಂಡದೋಳಿರ್ದು ಮಹೋಜ್ಜ್ವಳಧರ್ಮಾಮೃತಮನರ್ತಿಯಿಂದಂ ಭವ್ಯಾವಳಿಗಱುಪಿದಂ (ಧರ್ಮಾಮೃ. ೦೪-೦೬೬). **ಮುಳ್ಗುಂದು** : ಪರನ್ನಿ ಮುಳ್ಗುನ್ದು ವಿಶೇಷಾಂ ಮಧ್ಯಸ್ಥಿತೇ (ಇಇ. VII, ೨೨೦-೨೯ ; 658); ಮುಳ್ಗುನ್ದುಪನ್ನೆರಡುಮಂ ಮಾಯಿರ್ಮ್ಮನಾಳೆ (ಎಇ. XXVI, ೪-೦೦; ೯೦೬).

**ಮುಳುಗುಂದಗೊಂಡ ಗಂಡ** = ಮುಳುಗುಂದವೆಂಬ ಸ್ಥಳವನ್ನು

ವಶಪಡಿಸಿಕೊಂಡ ವೀರ; ಒಂದು ಬಿರುದು : ಮುಳುಗುಂದಗೊಂಡ ಗಂಡ ವೀರಬಲ್ಲಾಳ ಪೃಥ್ವೀರಾಜ್ಯಂಗೆಯ್ಯುತಮಿರೆ (ಎಕ. XVI, ಚಳ್ಳಕೆರೆ. ೩೯-೨೩ ; 1177). [ಮುಳ್ + ಕುಂದ$_3$ ]

**ಮುಳ್ಗುಂದಸಿಂದ** (ನಾ). ಒಂದು ವಂಶದ ಹೆಸರು : ಸ್ವಸ್ತಿಶಮಧಿಗತ ಪಂಚಮಹಾಶಬ್ದ ಮಹಾಸಾಮಂತಮುಳ್ಗುಂದಸಿಂದ ಶ್ರೀಮತ್‍ಚಾತರಸರ್ ಕಡಂಬಳಿಯಾಯಿರಮುಮಂ ಉತ್ತರೋತ್ತರಮಾಗೆ ಆಳುತ್ತಿರೆ (ಎಕ. XI. ದಾವಣ. ೦೦೯-೦೦; 992). [ಮುಳ್ಗುಂದ + ಸಿಂದ$_1$ ]

**ಮುಳ್ಗುಂದು** 'ಮುಳ್ಗುಂದ' ನೋ.

**ಮುಳ್ತುಗ** 'ಮುಟ್ಟುಗ' ನೋ.

**ಮುಳ್ಪಂದಿ,** ಮುಳ್ಳುಮಂದಿ, ಮುಳ್ಳುಹಂದಿ (ನಾ). ಮೈಮೇಲೆ ಮುಳ್ಳಿನಂತೆ ಚೂಪಾದ ಗರಿಗಳುಳ್ಳ ಒಂದು ಬಗೆಯ ಕಾಡುಹಂದಿ : ಪುಳಿಂದರ್ . . . ಮುಳ್ಪಂದಿ ಪುಲ್ಲೆ ಕರಡಿಗಳಂ . . . ಖಡ್ಗಗಳನುಚ್ ಪಿಡಿದರ್ (ಪಂಪಭಾ. ೯-೩೯). **ಮುಳ್ಳುಮಂದಿ :** "ಈಹಾಮೃಗ – ಮುಳ್ಳುಮಂದಿ" (ಟಕಂ. ೦೩). **ಮುಳ್ಳುಹಂದಿ :** ಶಲಲೀ . . . ಮುಳ್ಳುಹಂದಿಯ ಕೂದಲಿಗೆ ಹೆಸರು (ಸಿದ್ಧಾಂತಿ. ೦೩೯) ; ಆ ಭೋಜಪತಿಯು ಮುಳ್ಳುಹಂದಿಯು ಹಾಗೆ ಶರಪೂರಿತಶರೀರನಾಗಿ ರಥದಿಂದ ಧುಮಿಕಿ ಶಕುನಿಯ ರಥಕ್ಕೆ ಹೋದನು (ಶ್ರೀಭಾರ. ೦೨೬).

[ ಮುಳ್ + ಪಂದಿ. / ತಮಿ. ಮುಳ್ಳುಮ್ಪನ್ನಿ ]

**ಮುಳ್ಪು** (ನಾ). ೧. ಕೆಂಪುಬಣ್ಣ; ಅರುಣವರ್ಣ : ಕೊಸಗಿನ ತುಱುಂಬು ಮುಳ್ಪಿನ ವಸಂ ಕುಂಕುಮಾನವಾಂಗರಾಗಂ ಪರಿರಂಜಿಸೆ ರಾಗದಿಂದಮುತ್ಪಾದಿಸಿದನಜಂ ಭುವನಜನಮನೆನಿಸಿದುದು ಜನಂ (ಜಾಂಚಿ. ೭-೦೯೩). ೨. ಕೆಂಪುಬಣ್ಣದ ಬಟ್ಟೆ; ರಕ್ತವರ್ಣದ ವಸ್ತ್ರ : ತಳ್ತೊಬ್ಬಿಯುದ್ದ ಸಂಜೆಗೆಂಪಿನ ತಳ್ಪಮರ್ದಿರೆ ಪೊರೆಯನೆತ್ತಿ ಪೊಲಿಸಿದ ತೆಜದಿಂ ಮುಳ್ಪಿನ ಪೊಸಟೊಪ್ಪರಮಿನಕಳ್ಪಂಗಾ ಜೋಗಿಗೆಸೆದುದಸದಳಮಾಗಲ್ (ಲೀಲಾವ. ೯-೭೩); ಪೂತೆಲವಕ್ಕೆ ಪೌರವನಭೂರುಹಮೊಪ್ಪುವ ಮುಳ್ಪಿಗುಚ್ಚಳತ್ಕೇತನ ಚೀನಚೀಳವರುಣೋಪಲಭಿತ್ತಿಗೆ ಪೊನ್ನ ಕೋಂಟೆ . . . ದೊರೆಯಾಗಿ ತೋಱದತ್ಪಾತನೋಳಾಂತು ಪೂಣ್ಬಡೆದ ಖೇಚರಸೇನೆಯ ರಕ್ತಸೇಕದಿಂ (ಕಾದ್ರಶ. ೬-೩೬).

**ಮುಳ್ಪೊಗು** (ಕ್ರಿ). ಮುಳ್ಳು ನಾಟು, – ಚುಚ್ಚು : ಮುಳ್ಪೊಕ್ಕವನಂತೆ ಕುಸಿಯುತ್ತುಂ (ರಘುನಾಥ. ೦-೦೯೯). [ಮುಳ್ + ಪೊಗು]

**ಮುಳ್ಮರ,** ಮುಳ್ಳುಮರ (ನಾ). ಮುಳ್ಳುಗಳಿರುವ ಮರ : ಮುಳ್ಮರದ ಕೆಟಗಿರ್ದ ಲತೆಯಂತೊಸೆರಿಸುತ್ತುಂ (ರಘುನಾಥ. ೩-೯೬); ಮುಳ್ಮರದ ಕೆಲದ ಮಾಲತಿಯೊಳಶ್ವರ್ಗನ ಕೆಯ್ಕ ರತ್ನದೊಳ್ಸವ ಸೆನಿಸಿರ್ದಳ್ . . . ಶಬರಿ ಶಬರನ ಕೆಲದೊಳ್ (ಶಾಶಕೌ. ೦೨-೬೭). **ಮುಳ್ಳುಮರ :** ಮುಳ್ಳುಮರದ ಬೇರೆಡಹುಗಲ್ಲುಗಳಂವ ನಿಲ್ಲದೊಪ್ಪಿದುದು ಕಾಂತಾರ (ಕಂಚು. ೦೬-೯೩). [ ಮುಳ್ + ಮರ$_1$ ]

**ಮುಳ್ಮುಡಿ** (ನಾ). ಮುಳ್ಳುಗಳಿಂದ ಮಾಡಿದ ಕಿರೀಟ : ಮುಳ್ಮುಡಿಯ ಕ್ರಿಸ್ತಮೂರ್ತಿಯು ಗಾಜಿನ ಸಂಪುಟವೊಂದನ್ನು ಬಲಗಡೆಯು ಮೂಲೆಯಲ್ಲಿ ತಗುಲಿಹಾಕಿತ್ತು (ಪುಶಕು. ೩೦). [ ಮುಳ್ + ಮುಡಿ$_2$ ]

**ಮುಳ್ಮುತ್ತ** 'ಮುಳ್ಮುಟ್ಟುಗ' ನೋ.

**ಮುಳ್ಮುತ್ತಕ** 'ಮುಳ್ಮುಟ್ಟುಗ' ನೋ.

**ಮುಳ್ಮುತ್ತಗ** 'ಮುಳ್ಮುಟ್ಟುಗ' ನೋ.

**ಮುಳ್ಮುತ್ತುಗ** 'ಮುಳ್ಮುಟ್ಟುಗ' ನೋ.

**ಮುಳ್ಮುಚಿ,** ಮುಳುಮುಚಿ, ಮುಳ್ಳುಮುರಿ, ಮುಳ್ಳುಮುಚಿ (ಕ್ರಿ). ೧. ಮುಳ್ಳು ಚುಚ್ಚು, – ನಾಟು : ಸರ್ಪನಾಶ್ರಯಿಪುದೆನುತಳ್ಕಿ ಮನೆಯಂ ಮಾಣದಿರ್ಪರೇ ಮುಳ್ಮುಚಿಗುಮೆಂದು ಪಯಣಾಬೋಗದಿರ್ಪರೇ (ಶಬ್ದಶಾ. ೦-೩೪). **ಮುಳುಮುಚಿ :** ೨. (ಆಲಂ) ಅಡ್ಡಿಯುಂಟಾಗು ; ತಡೆಯಾಗು : ಕೇಳಿದ್ಯೆಯಲಿ ಕಂದ ತನ್ನಯ ನಾಲಗೆಗೆ ಮುಳುಮುಚಿದುದುತ್ತರವಾವುದೆನಗೆ (ಕೊರವಾ. ೬-೪೩-೦೩). **ಮುಳ್ಳುಮುರಿ :** ೧. ನೀನು ಹೇಳಿದೆ, ಬ್ರೂದೂ ಮತ್ತೆ ಓಡಿಹೋಗಿದ್ದಾಳೆಂದು . . . ಕೇಳಿ ನನ್ನ ಎದೆಯೊಳಗೆ ಮುಳ್ಳುಮುರಿದಂತಾಯಿತು (ಇಶ್ಕಿ. ೯೪೨). **ಮುಳ್ಳುಮುಚಿ :** ೧. ಮೃದುಪಾದಂಗಳಲಿ ಮುಳ್ಳುಮುಚಿಯಲೇ ನಂದಜೀಯಳು (ಜೀಪಂಕ. ೩-೦೯).

[ ಮುಳ್ + ಮುಚಿ$_1$ ]

**ಮುಳ್ಮುಟ್ಟುಗ,** ಮುಳುಮುತ್ತ, ಮುಳುಮುತ್ತುಗ, ಮುಳ್ಮುತ್ತ, ಮುಳ್ಮುತ್ತಕ, ಮುಳ್ಮುತ್ತಗ, ಮುಳ್ಮುತ್ತುಗ, ಮುಳ್ಳುಮುತ್ತಗ, ಮುಳ್ಳುಮುತ್ತಲ, ಮುಳ್ಳುಮುತ್ತುಕ, ಮುಳ್ಳುಮುತ್ತುಗ (ನಾ). ಮುಳ್ಳುಗಳಿರುವ ಪಲಾಶವೃಕ್ಷ : ನಿನ್ನ ಮುಳಿಸಿನ ಬೆಂಕೆಯಿಂ ಪೊತ್ತಿ ಪೊಗೆದುರಿವ ಪಗೆವರ ಬೀಡಿನಂತೆ ಸುತ್ತಲುಂ ಪೂತ ಮುಳ್ಮುಟ್ಟುಗದ ಮರಂಗಳೊಳಂ . . . ಬಕುಳಂಗಳೊಳಂ ಬಿನದಕ್ಕೆ ಪಕ್ಕಾದ ಬನಮಂ ನೋಡಲ್ವೇಟ್ಟುದು (ಧರ್ಮಾ. ೯೯). **ಮುಳುಮುತ್ತ :** "ಮುಳುಮುತ್ತಂ ಕಟು ತಿಕ್ತಮೆಂಬಿವು ಪಲಾಶಾಖ್ಯಂ" (ಕಾಸಾರ. ೦೯೮); ಮುಳುಮುತ್ತ ಹೂಶಂದದಲಿ ಹುದುಗಿದ ನೆತ್ತರಿನ ನೆಣವಸೆಯಾಲೆಸೆದನು ರಣದೊಳಾ ಖಚರ (ಕುಮಾ. ೦೯-೩೯). **ಮುಳುಮುತ್ತುಗ :** ಬೆತ್ತ ಬೇವಗಾರಣಿಲೆ ಮುಳುಮುತ್ತುಗದ ತರು ಕರ್ಣಿಕಾರದ ಮೊತ್ತವಿದೆ ನೋಡಬಲೆ (ಕೊರವಾ. ೩-೦-೨೭). **ಮುಳ್ಮುತ್ತ :** ಮುಳ್ಮುತ್ತವಂಕೋಲೆ ಕಾಟಿಣಸಿಂಗಳಂ ಕೊಸಗು ಗೇರ್ ಕಕ್ಕೆ ಖದಿರಸಮ್ಮರಂ (ಸೂತ್ರಸು. ೩-೨೩) ; ಕರಿಕಕ್ಕೆ ಬಿಕ್ಕೆ ಮುಳ್ಮುತ್ತವಶೋಕೆ ಮಾವು . . . ಗುಗ್ಗುಳಂ ಮತ್ತಮನೇಕವೃಕ್ಷತತಿಯಿಂದೆಸೆದಿರ್ದುದು ತದ್ವನಾಂತರಂ (ಪಳಕಂ. ೭೦). **ಮುಳ್ಮುತ್ತಕ :** ಬೆತ್ತ ಖದಿರು ಮುಳ್ಮುತ್ತಕ ಕಗ್ಗಲಿ. . . ಕುತ್ತುಬುಮೆಳೆಗಳಿಂದಿರದಾ ಕಾನನವಿತ್ತುದಗುರ್ವನು (ಕುರಾಶಾಂ. ೨೭-೩೭). **ಮುಳ್ಮುತ್ತಗ :** ತತ್ತಿಸಿದ ಕಣೆಗಳಂ ಮೈಗಳ್ಳಿಮಿಗದೊಲಿರೆ ನೆತ್ತರೊಱತ ಗಳಿಂದ ತಸುಗಳುಚ್ ಪೂತ ಮುಳ್ಮುತ್ತಗ [ಶಾಶಾಂ. ತ್ತುಕ]ದೊಲಿರೆ ತಂದೆ ಮಕ್ಕಳೆಚ್ಚಾಡಿದರ್ (ಕೈಬಿಶಾ. ೨೩-೯೦). **ಮುಳ್ಮುತ್ತುಗ :** ಅಲ ಮುಳ್ಮುತ್ತುಗ ಕೊಡಸಿಗೆ ಬನ್ನಿಗಳ್ಗೆಲಕಡರಿ ಮುಸುಕಿಪುವು (ಕಂಶಾ. ೦೮-೩೭) ; ಇದಿರುಗಾಯದೆ ಪೂತ ಮುಳ್ಮುತ್ತುಗದಂತೆ ಕದನದೆ ನಂಜೇಂದ್ರ ಮೆಚಿದ (ಕಂಶಾ. ೦೯-೮೦). **ಮುಳ್ಳುಮುತ್ತಗ :** "ಮುಳ್ಳುಮುತ್ತಗ –ರೋಹಿ, ರೋಹಿತಕ, ಪ್ಲೀಹಶತ್ರು, ದಾಡಿಮಪುಷ್ಪಕ" (ಶಾಶಾ. ೯) ; "ಚಿಕ್ರ ಶಾಲ್ಮಲೀ – ಮುಳ್ಳುಮುತ್ತಗ" (ಟಕಂ. ೩೩). **ಮುಳ್ಳುಮುತ್ತಲ :** ಮುಳ್ಳುಮುತ್ತಲ, ತಕ್ತರೋಹಿತಕ, ರೋಹಿತಕ (ಮೈಶಿ. ೬-೦೩೦) ; ಮುಳ್ಳುಮುತ್ತಲ (ಪಾಂಗಾರಾ). . . ಇದರ ಮಿದುವಾದ ಕಟ್ಟಿಗೆಯಿಂದ ಪೆಟ್ಟಿಗೆ ಮುಂತಾದವುಗಳನ್ನು ಮಾಡುವರು (ಶಶಾಗ. ೯೭). **ಮುಳ್ಳುಮುತ್ತುಕ :** "ರೋಹೀ, ರೋಹಿತಕಃ, ಪ್ಲೀಹಶತ್ರುಃ, ದಾಡಿಮಪುಷ್ಪಕಃ– ನಾಲ್ಕು ಮುಳ್ಳುಮುತ್ತುಕದ ಹೆಸರುಗಳು" (ಸಿದ್ಧಾಂತಿ. ೦೨೩) ; ಮುಳ್ಳುಮುತ್ತುಕ ಮತ್ತಿ ಹೊನ್ನೆ . . . ಬಿಟ್ಟದಾವರೆಗಳಿಂದಾ ವನಂ ಕಂಗೆಸೆದುದು (ಸಿತ್ರಶಾ. ೬-೦೭). **ಮುಳ್ಳುಮುತ್ತುಗ :** "ರೋಹಿಃ, ರೋಹಿತಕಃ, ಪ್ಲೀಹಶತ್ರುಃ, ದಾಡಿಮಪುಷ್ಪಕಃ— ಈ ೪ ರೋಹಿಣದ ಮರಂ, ಮುಳ್ಳುಮುತ್ತುಗವೆಂಬರು" (ಶಾಶಶಾ. ೦೦೭) ; ಮುಳ್ಳುಮುತ್ತುಗದ ಭಸ್ಮ, ಎಳ್ಳಿನ ಭಸ್ಮ, ಈ ಎರಡನು ಪಾವಡೆಯಲ್ಲಿ ಪೊಟ್ಟಣವ ಕಟ್ಟಿ ಕಷಾಯವ ಕಾಸಿ ಕೊಡಿಸಲು ರಕ್ತಗುಲ್ಮ ಹರ (ವೈದ್ಯಶಾ. I, ೩೦೯) : ಅಲರ್ಮದಡವಿಯ ಮುಳ್ಳುಮುತ್ತುಗಂ (ಕುಹಾಶ. ೮-೦೭).

[ಮುಳ್+ಮುಟ್ಟುಗ./ತೆಲು. ಮುಲುಮೋದುಗ]

**ಮುಳ್ಮೊನೆ**, ಮುಳುಮೊನೆ, ಮುಳ್ಳುಮೊನೆ (ನಾ). ಮುಳ್ಳಿನ ಚೂಪಾದ ತುದಿ : ಮುಳ್ಮೊನೆಯಂತೆ ಕ್ರೂರನಾಗಿ . . . ತೇಱಿನಂತೆಲ್ಲಾ ಪಱಿಗಮೋಗಾದ್ಯ (ರವರ್ಣಮ್. ೨-೦೦೩). **ಮುಳುಮೊನೆ :** ಮುಳು ಮೊನೆಗಳಲಿ ಗಿಱಿ ನೆತ್ತರಗಳೆದು ಹುಡಿಯಲಿ ಹೊರಳಿ ತಾ ಬಂದಳಂತ ಧೃತರಾಷ್ಟ್ರಂಗೆ ಭೀಷ್ಮಗೆ ದೂಱುವನು ಭೀಮ (ಕುಮ್ಯಾಭಾ. ೬-೬). **ಮುಳ್ಳು ಮೊನೆ :** ನೀನು ತೊಸಸೆಯ ಕೊಲೆಯ ಮಾಡಿದೆ ಮುಳ್ಳುಮೊನೆಯಲಿ (ಸಂಶಕ. ೦೯-೦೬) ; ಮುತ್ತಿ ಮುಸುಕಿತ್ತು ಕಗ್ಗತ್ತಲೆ ಧರಿತ್ರಿಯುಂ ಮುಳ್ಳು [ಪಾಠಾಂ. ಳ್]ಮೊನೆ ಕೊಳ್ಳದಂತೆ (ಜೈಮಿಭಾ. ೨೬-೬) : ಮುಳ್ಳುಮೊನೆ ಯಷ್ಟು ಆಸ್ಪದ ಕೊಡದವನ ತಳ್ಳಿಗೆ ಹೋಗಬೇಡ (ಗಾದೆ).

[ಮುಳ್ + ಮೊನೆ]

**ಮುಳ್ವಟ್ಟೆ** (ನಾ). ಮುಳ್ಳುಗಳಿಂದ ತುಂಬಿರುವ ಹಾದಿ—ಮಾರ್ಗ : ಅಲ್ಲಲ್ಲಿಗೆ ಮುಳ್ವಟ್ಟೆಗಳಲ್ಲಲ್ಲಿಗೆ ಸುತ್ತಿ ಮುತ್ತಿ ತಿಂಬ ಕಡಂದುಱು (ರವರ್ಣಮ್. ೩-೬೩).

[ಮುಳ್ + ಬಟ್ಟೆ$_1$]

**ಮುಳ್ವತ್ತರಿಗೆ**, ಮುಳ್ಳುಹತ್ತರಿಕೆ (ನಾ). ಒಂದು ಬಗೆಯ ಸಸ್ಯ : ಸೊರೆ ದಾಸಣಮುಂ ಮುಳ್ವತ್ತರಿ[ಪಾಠಾಂ. ರ]ಗೆಯೆಂಬಿವಱ ಬೇರ್ಗ ಳೊಳ್ ಮೆಚ್ಚಿದುದಂ ಕೊರಲೊಳ್ ಕಟ್ಟುಗೆ ಬಕರ್ಗಂ ನಿರುಪದ್ರವದಿಂದ ಮೆಯ್ದೆ ಶಿಶುವಿನ ಪಲ್ಗಳ್ (ಲೋಕೋಪ. ೯-೦೬೩). **ಮುಳ್ಳುಹತ್ತರಿಕೆ :** ಪಾಲ್ಗುಂಬಳದ ಬೇರ್, ದಾಸವಣದ ಬೇರ್, ಮುಳ್ಳು ಹತ್ತರಿಕೆಯ ಬೇರ್, ಇವಱೊಳಗೆ ದೊರಕಿದುದೊಂದಱ ಬೇರಂ ಕೊಂಡುಬಂದು ಶಿಶುವಿನ ಕೊರ ಲೊಳ್ ಕಟ್ಟಲ್ ಉಪದ್ರವವಿಲ್ಲದೆ ಪಲ್ಗಳ್ ಬರ್ಪುವು (ಲೋಕೋಪ. ೯-೦೬೩ ಟೀಕು).

[ಮುಳ್ + <ಹತ್ತರಿಕೆ]

**ಮುಳ್ವಸೆ**, ಮುಳುವಸೆ (ನಾ). ೧. ಮುಳ್ಳಿನ ಹಾಸುಗೆ : ನುಡಿಗಟ್ಟು ಗಳು . . . ನುಡಿವುರುಳ್. ಮುಳ್ವಸೆ. ಬಗೆಗುದುರೆ (ಕಾಲೂರ. ೨ ಮುನ್ನುಡಿ). **ಮುಳುವಸೆ :** ೨. ಚುಚ್ಚುವ ಹಾಸುಗೆ ; ಒರಟು ಹಾಸುಗೆ : ಅರಸನು . . . ಮೊಳೆಗಲ್ಲ ಮುಳುವಸೆಯ ಮೇಲೆ ಹಸಿದಳವಳಿದು ಹೊದೆ ಯಲಿಲ್ಲದೆ ಹೊಯ್ಲ ಓಮುವನು ರಾತ್ರಿದರ್ಸೇವಣ್ಣಸುವೆನು (ಹತಕಾ. ೯-೯೭).

[ಮುಳ್ + ಪಸೆ$_2$]

**ಮುಳ್ವಾಗಿಲ್** (ನಾ). ಮುಳ್ಳಿನಂತೆ ಚೂಪಾಗಿರುವ ಮೊಳೆಗಳುಳ್ಳ ಬಾಗಿಲು ; ಕಂಟಕದ್ವಾರ : ಎಸೆಳ್ವಳೆ. . .ಮುಳ್ವಾಗಿಲ್ (ಶಬ್ದಾಮ. ೬೩ ಪ್ರಯೋ). 'ನುಸುಳ್ವಾಗಿಲ್' ಪಾಠಾ. [ಮುಳ್ + ಬಾಗಿಲ್]

**ಮುಳ್ವೆರಸು** (ಕ್ರಿ). ಮುಳ್ಳುಗಳಿಂದ ತುಂಬಿರು,—ಕೂಡಿರು : ಕುಱಿ ಯೆಂದು ಮುಳ್ವೆರಸಿದ ಗುಜುಱುಗೊಂಬು (ಶಮದ. ಪ. ೩೩ ವೃತ್ತಿ).

[ಮುಳ್ + ಬೆರಸು$_1$ (<ಬೆರೆಯಿಸು)]

**ಮುಳ್ವೆಳೆ** (ನಾ). ಮುಳ್ಳಿನ ಪೊದೆ,—ಹೊದರು : ಇಳೆಯಾಣ್ಮನಾಜ್ಞೆ ಯಿಂದನುಚರರು ತಂದು ಮುಳ್ವೆಳೆಯಲ್ಲಿ ತೊಟ್ಟಲಿಂ ಸಿಕ್ಕಿ ಬರಲು (ಟೀಕೃಕ. ೬-೪-೩೨).

[ಮುಳ್ + ಮೆಳೆ$_1$]

**ಮುಳ್ಸೀರೆ** (ನಾ). (?) : ಬೆಳ್ಚರಿ, ಬೆಳ್ಸರಿ ; ಮುಳ್ಚೀರೆ. ಮುಳ್ಸೀರೆ (ಶಬ್ದಾಮ. ೯೩ ಪ್ರಯೋ). [ ? ]

**ಮುಳ್ಸೆಱಂಗು** (ನಾ). (?) : ಕಣ್ಸೋಲಂ, ಮುಳ್ಸೆಱಂಗು (ಶಬ್ದಾಮ. ೯೩ ಪ್ರಯೋ).

[ ? ]

**ಮುಳ್ಸೆಱ** (ನಾ). (?) : ಮುಳ್ಚೆಱ. ಮುಳ್ಸೆಱ (ಶಬ್ದಾಮ. ೯೩ ಪ್ರಯೋ).

[ ? ]

**ಮುಳ್ಳಂಕೋಲೆ**, ಮುಳ್ಳು ಅಂಕೋಲೆ (ನಾ). ಒಂದು ಬಗೆಯ ಮುಳ್ಳಿನ ಗಿಡ : ಅವರು ತಮ್ಮ ಕಾಂಪೌಂಡಿನ ಸುತ್ತಲೂ ಮುಳ್ಳಂಕೋಲೆಯನ್ನು ಬೆಳೆಸಿದ್ದಾರೆ (ರೂಢಿ). **ಮುಳ್ಳುಅಂಕೋಲೆ :** ನೀರುಪ್ಪಿಗಿಡ, ಮುಳ್ಳು ಅಂಕೋಲೆ. ಗೋರಿಮಿಡಿ. ಕೊಳಪಳಿಕೆ (ವೃಶಿಗ. ೦೦-೦೯೬).

[ಮುಳ್ಳು (<ಮುಳ್) + ಅಂಕೋಲೆ./ತುಳು. ಮುಳ್ಳಂಕಲೆ, ಮುಳ್ಳಂಕೋಲೆ]

**ಮುಳ್ಳಂಬು** (ನಾ). ಮೈ ಮೇಲೆ ಮುಳ್ಳುಗಳಿರುವ ಒಂದು ಬಗೆಯ ಬಾಣ,—ಸರಳು : ಆತನ ಆಯುಧಗಳ ಗಣನೆ ಎಷ್ಟೆಂತೆಂದಡೆ ಮುಳ್ಳಂಬುಗಳು ಸಾವಿರದೇಳ್ನೂಱು ಒಂಬತ್ತುಸಾವಿರ ಮುಟ್ಟೆಯಂಬುಗಳು ಸರಳಂಬು ಹನ್ನೆರಡುಸಾವಿರ (ಶೃರಸೂ. I, ೮೩).

[ಮುಳ್ಳು (<ಮುಳ್) + ಅಂಬು$_2$]

**ಮುಳ್ಳಕೀರೆ** 'ಮುಳ್ಳುಕೀರೆ' ನೋ.

**ಮುಳ್ಳಭಟ್ಟಾರಕ** (ನಾ) ಒಬ್ಬಾತನ ಹೆಸರು : ಬಭೂವೋಗ್ರತಪೋ ಯುಕ್ತಃ ಮುಳ್ಳಭಟ್ಟಾರಕೋ ಗಣೀ ತಚ್ಛಿಷ್ಯೋ ಗುಣವಾನ್ಸೂರಿಃ ಗುಣ ಕೀರ್ತಿರ್ಮುನೀಶ್ವರಃ (ಶಾಸಂ. XX, ೦೩-೬ ; 875).

[ಮುಳ್$_{ಲ0}$ + ಭಟ್ಟಾರಕ]

**ಮುಳ್ಳಮುಂಜ** (ನಾ). ಒಂದು ಬಗೆಯ ಹುಲ್ಲು : 'ಅಧೋಮುಖಿ— ಎತ್ತುನಾಲಿಗೆ. ಮುಳ್ಳಮುಂಜ" (೬೭೦. ೩). [<ಮುಳ್ + ಮುಂಜ$_3$]

**ಮುಳ್ಳಹೊಂಗೆ** 'ಮುಳ್ಳುಹೊಂಗೆ' ನೋ.

**ಮುಳ್ಳಾವಿಗೆ** (ನಾ). ಶಿವನ ಹಾಗೂ ವಿಷ್ಣುವಿನ ಭಕ್ತರು ಹರಕೆಗಾಗಿ ತೊಡುವ. ಕಬ್ಬಿಣದ ಚೂಪಾದ ಮೊಳೆಗಳನ್ನು ಒಳಭಾಗದಲ್ಲಿ ಮೆಟ್ಟಿರುವ ಮರದ ಹಾವುಗೆ : ಕಾಲು ಮುಳ್ಳಾವಿಗೆ ಕೈಯ ಡಮರಿಯ ನುಡಿಸಿ ಉರಿಗಣ್ಣ ತಿಲಿ ವೂತ ಕಂಡರಂಜಿಕಿ ಬರುವ ರುದ್ರ ಬಂದಿದ್ದನ ಸಪನದಲಿ (ಲೋಕಗೀ. ೦೯೩). [ಮುಳ್ಳು(<ಮುಳ್) + ಹಾವಿಗೆ(<ಪಾವುಗೆ)]

**ಮುಳ್ಳಿ ?** (ನಾ). ನೀರಿನ ಪಾತ್ರೆ (?) : ಸ್ವರದ ಮುಳ್ಳಿಯ ಕೊಂಡು ತಟಾಕಕ್ಕೆ ಹೋಗಿ ಪಿರಿಯರು ಬೋನವ ಮಾಡುತ್ತಿಪ್ಪರು (ಶವಗೋ. ೨೬-೬೮).

[ ? ]

**ಮುಳ್ಳಿಕಾದಂಟು** 'ಮುಳ್ಳುಕಾದಂಟು' ನೋ.

**ಮುಳ್ಳಿಚುಳ್ಳಿ** (ನಾ). ಒಂದು ಬಗೆಯ ಸಸ್ಯ : ಹೋಳೆಚುಳ್ಳಿ. ಮುಳ್ಳಿ ಚುಳ್ಳಿ. ಪರಿಕಂಚ, ತಾಡೆಚುಳ್ಳಿ (ವೃಶಿಗ. ೨-೨೯). [ಮುಳ್$_{ಲ0}$ + ಚುಳ್$_{ಲ1}$]

**ಮುಳ್ಳಿಡಿ** (ಕ್ರಿ). ಮುಳ್ಳುಗಳಿಂದ ತುಂಬಿರು ; ಕಂಟಕಮಯವಾಗಿರು : ನೀನೆಂದುಮಂ ಮಾಡೆನೆಂದಾ ಚಂಡಿ ಚಂಡಿಪೋರೆ ಮುಳ್ಳಿಡಿದ ಮರನೇಱು ದಂತಾದುದು (ಜೈಮಿಭಾ. ೦೦-೨೯). [ಮುಳ್ಳು (<ಮುಳ್)) + ಇಡಿ$_2$]

**ಮುಳ್ಳಿಡು** (ಕ್ರಿ). ಮೈಯ ಕೂದಲು ನೆಟ್ಟಗಾಗು ; ರೋಮಾಂಚನ ಗೊಳ್ಳು : ಅವನ ಮೆಯ್ ಮುಳ್ಳಿಟ್ಟು (ಮುಂಬದು. ೬. ೩-೬೦) : ಮೈಯು ಮುಳ್ಳಿಡಬಹುದು ಆದರು ಮನದೊಳಗೆ ಇದೆ ಧೈರ್ಯವು (ಅರಳು. ೩೯. ೦೩).

[ಮುಳ್ಳು (<ಮುಳ್) + ಇಡು$_1$]

**ಮುಳ್ಳಿಬಳ್ಳಿ** (ನಾ). ಒಂದು ಬಗೆಯ ಸಸ್ಯ : (ವೃಶಿಗ. ೯೬-೯೦೦).

[ಮುಳ್$_{ಲ0}$ + ಬಳ್ಳಿ]

**ಮುಳ್ಳಿಱ** (ಕ್ರಿ). ೧. ಮುಳ್ಳು ಚುಚ್ಚು,—ನಾಟು : ಮುಳ್ಳಿಱ ಯಲಿನಿತಾದಡಂ ತೆಱಪಿಲ್ಲದೇ ಸಂಕೀರ್ಣ ಪದದಿಂದೆಲ್ಲೆಡೆಯೊಳಂ ತಾನೆಯಾಗಿದ್ದಹನಲಾ ವಿಶ್ವವಲ್ಲಭಂ (ಬಿಸಕ. ೩೦-೩೯). ೨. ಮುಳ್ಳಿ ನಿಂದ ಚುಚ್ಚಿ ರಂಧ್ರಮಾಡು,—ಕೊರೆ : ಹೋಳಾಗಿ ಬಾಳೆಯ ಕಾಯ ಸಂಬಳಿಸಿ . . . ಮುಳ್ಳಿಱಿದು ಸಂಭಾರಮಂ ತುಂಬಿ (ಸೂಪಶಾ. ೪-೬೨).

[ಮುಳ್ + ಇಱಿ$_1$]

**ಮುಳ್ಳು** 'ಮುಳ್' ನೋ.

**ಮುಳ್ಳುಅಂಕೋಲೆ** 'ಮುಳ್ಳಂಕೋಲೆ' ನೋ.

**ಮುಳ್ಳುಅಬ್ಬೆ** (ನಾ). ಒಂದು ಬಗೆಯ ಸಸ್ಯ : "ಕಠೀರಃ, ಕ್ರಕರಃ, ಗ್ರಂಥಿಲಃ—೩ ಮುಳ್ಳುಅಬ್ಬೆಯ ಹೆಸರು" (ಸಿದ್ಧಾಂಶಿ. ೦೩೦).

[ಮುಳ್ಳು (<ಮುಳ್) + ಅಬ್ಬೆ$_4$]

**ಮುಳ್ಳುಂಗೊಳ್ಳಿ** (ನಾ). ಮುಳ್ಳುಗಳುಳ್ಳ ಕಣೆಕೆ : ಇಂತು ಬಂದು ಬಂದಿವಿಡಿದುಂ ನೇಣಂ ಬಿಗಿದುಂ ಮುಳ್ಳುಂಗೊಳ್ಳಿಯಿನಿಱಿದ್ದುವಱೆದು ಮಾರ್ದಂ ಸಾರ್ದುಮೆಱೆ³ ಯಿಂಯ್ಯಾಗಳ್ (ರಾಪಟ್ಟಾಭಿ. ೭೯-೨೪).

[ ಮುಳ್ಳು (<ಮುಳ್) + ಕೊಳ್ಳಿ₀ (<ಕೊಲಿಕೆ) ]

**ಮುಳ್ಳುಕಂಟಿ** (ನಾ). ಮುಳ್ಳುಗಳಿರುವ ಪೊದೆ, –ಹೊದರು : ಇವುಗಳಲ್ಲಿ ಕವಳಿ, ಪರಗಿ, ಜಾಲಿ ಮುಂತಾದ ಮುಳ್ಳುಕಂಟಿಗಳು ಬೆಳೆಯುತ್ತವೆ (ಕಕಪು. ೭-೦೩). [ಮುಳ್ಳು (<ಮುಳ್) + ಕಂಟಿ₂]

**ಮುಳ್ಳುಕಾದಂಟು, ಮುಳ್ಳಿಕಾದಂಟು** (ನಾ). ಒಂದು ಬಗೆಯ ಸಸ್ಯ : "ಮುಳ್ಳುಕಾದಂಟು, ಶಾರಿಕೆ" (ಸಸ್ಯಪ. ೯೭). **ಮುಳ್ಳಿ ಕಾದಂಟು** : ಮುಳ್ಳಿಕಾದಂಟು, ಶಾರಿಕೆ (ವ್ಯಶಿಗ. ೫೨–೦೦೩೭). [?]

**ಮುಳ್ಳುಕಾರೆ** (ನಾ). ಮುಳ್ಳುಗಳುಳ್ಳ ಒಂದು ಬಗೆಯ ಕಾರೆಗಿಡ : ಮುಳ್ಳುಕಾರೆ (ಕಾಟಿಗೊತ್ತಿ). ಸಾಧಾರಣವಾದ ಸಣ್ಣಗಿಡ . . . ಕಾಯಿಗಳಿಂದ ಚರ್ಮಕ್ಕೆ ಕರಿಬಣ್ಣ ಕೊಡುವರು (ಕಶಾಗ. ೪.).

[ಮುಳ್ಳು (<ಮುಳ್) + ಕಾರೆ₁. / ತಮಿ. ಮುಳ್ಳುಕ್ಕಾರೈ]

**ಮುಳ್ಳುಕೀರೆ, ಮುಳ್ಳಕೀರೆ** (ನಾ). ಮುಳ್ಳುಗಳಿರುವ ಒಂದು ಬಗೆಯ ಕೀರೆಸೊಪ್ಪು : "ಮುಳ್ಳುಕೀರೆಸೊಪ್ಪು, ಮುಳ್ಳುಹರಿವೆಸೊಪ್ಪು . . . ಮುಳ್ಳುಗೊಡಕೊಚ್ಚು" (ಸಸ್ಯಪ. ೦೦). **ಮುಳ್ಳಕೀರೆ** : ಮುಳ್ಳಕೀರೆಸೊಪ್ಪು, ಮುಳ್ಳುಹರಿವೇಸೊಪ್ಪು (ವ್ಯಶಿಗ. ೭-೯೩).

[ಮುಳ್ಳು (<ಮುಳ್) + ಕೀರೆ. / ತಮಿ. ಮುಳ್ಳಜ್ಕೀರೈ, ಮುಳ್ಳುಕ್ಕೀರೈ]

**ಮುಳ್ಳುಕುರ** (ನಾ). ಕುದುರೆಯನ್ನು ಹತೋಟಿಯಲ್ಲಿಡಲು ಬಳಸುವ, ಮುಳ್ಳುಗಳಿರುವ ಒಂದು ಬಗೆಯ ಸಾಧನ : . ಕುದುರೆಗಳಿಗೆ ಜೀನು ಹಾಕುವುದಿಲ್ಲ. ಕಡಿವಾಣಕ್ಕೆ ಬದಲು ಹದಮಾಡಿದ ಎತ್ತಿನ ಚರ್ಮದ ಮುಳ್ಳುಕುರ ಹಾಕುತ್ತಾರೆ. ಇದರ ಒಳಭಾಗದಲ್ಲಿ ಕಬ್ಬಿಣದ ಅಥವಾ ಹಿತ್ತಾಳೆಯ ಮುಳ್ಳುಗಳಿರುತ್ತವೆ . . . ಇದಕ್ಕೆ ಲಗಾಮನ್ನು ತಗುಲಿಸಿರುತ್ತಾರೆ. ಸವಾರನು ಲಗಾಮನ್ನು ಹಿಡಿದು ಎಳೆದಾಗ ಕವಲುಗೋಲು ಕುದುರೆಯನ್ನು ಹತೋಟಿಗೆ ತರುತ್ತದೆ (ಕ್ರವಾತ I, ೪೦ ೬೩೮).

[ಮುಳ್ಳು (<ಮುಳ್) + ಕುರ?]

**ಮುಳ್ಳುಕೂಗರಿ** 'ಮುಳುಕೂಗರಿ' ನೋ.

**ಮುಳ್ಳುಕೊಗ್ಗಿ** 'ಮುಳುಗೊಗ್ಗಿ' ನೋ.

**ಮುಳ್ಳುಕೊಗ್ಗೆ** 'ಮುಳುಗೊಗ್ಗಿ' ನೋ.

**ಮುಳ್ಳುಕೊಳಂಜಿ** (ನಾ). ಮುಳ್ಳುಗಳಿರುವ ಒಂದು ಬಗೆಯ ಸಸ್ಯ : (ವ್ಯಶಿಗ. ೭೪-೦೩೦೬). [ಮುಳ್ಳು (<ಮುಳ್) + ಕೊಳಂಜಿ]

**ಮುಳ್ಳುಕೋಲು** 'ಮುಳುಗೋಲು' ನೋ.

**ಮುಳ್ಳುಗಳ್ಳಿ** 'ಮುಳುಗಳ್ಳಿ' ನೋ.

**ಮುಳ್ಳುಗಿಡ** 'ಮುಳ್ಗಿಡು' ನೋ.

**ಮುಳ್ಳುಗುಜುಚಿ** (ನಾ). ಮುಳ್ಳಿನ ಪೊದರು, –ಮೆಳೆ : ಬದಿರ್ವಿಂಡಲು ಮುಳ್ಳುಗುಜುಚಿ ಬಲ್ಮೆಳೆ . . . ಕಣೆಗಾಡಾ ಹಳುವಿನೊಳೊದವಿಹುದೆಲ್ಲಿ ನೋಡಿದರು (ಶ್ರೀಚಾಂ. ೭-೦೩).

[ ಮುಳ್ಳು (<ಮುಳ್) + ಕುಜುಚಿ₀ (<ಕುರುಚು) ]

**ಮುಳ್ಳುಗೆಣಸು** (ನಾ). ಒಂದು ಬಗೆಯ ಗೆಣಸು : (ವ್ಯಶಿಗ. ೩೦-೫೯೦).

[ಮುಳ್ಳು (<ಮುಳ್) + ಗೆಣಸು (<ಗೆಣಸು) ]

**ಮುಳ್ಳುಗೆಱೆ³** (ನಾ). ಒಂದು ಸ್ಥಳದ ಹೆಸರು; P ಈಗಿನ ಶಿವಮೊಗ್ಗ ಜಿಲ್ಲೆಯ ಹೊಳೆಹೊನ್ನೂರುಹೋಬಳಿಯಲ್ಲಿರುವ ಒಂದು ಹಳ್ಳಿ : ಬೂತಯ್ಯನ ಮಾದಯ್ಯ ಸಿಂಗೆಯರ ಮಾದಯ್ಯ ಗಾವುಣ್ಡಗೆಯ್ಯೆ ಮಣ್ಣಲೆಸಾಯಿರನಾಡ ತುಱುಗೊಳ್ ತೆರಳ್ದು ಸತ್ತಂ ಮುಳ್ಳುಗೆಱೆ³ × × × (ಮ್ಯಆಂ. ೦೯೩೫, ೩೩-೪ ; 939).

[ಮುಳ್ಳು (<ಮುಳ್) + ಕೆಱೆ³]

**ಮುಳ್ಳುಗೊಂಚಿ** (ನಾ). ಮುಳ್ಳನ್ನು ಒಟ್ಟಾಗಿ ಕಟ್ಟಿ ಮಾಡಿದ ಗೊಂಚಲು, —ಗುಚ್ಛ : ಎಂಟನೆಯ ಮಸು ಕಾಮಧೇನುವ ಮುಳ್ಳು ಗೊಂಚಿಯಿಂ ಪೊಡೆದಾತನು ಪೊಡೆಯುಲಿ ಬಹುಕಾಲವಿರಲಿ ಅವಸಾನದೊಳ್ ಬಿಡದೆ ಸರಳಿನ ಮಂಚದಲಿ ಮರಣಿಸಲಿ (ತುರಂಗ. ೯-೨೭).

[ಮುಳ್ಳು (<ಮುಳ್) + ಗೊಂಚಿ (<ಗೊಂಚಿ) ]

**ಮುಳ್ಳುಗೊಗ್ಗಿ** 'ಮುಳುಗೊಗ್ಗಿ' ನೋ.

**ಮುಳ್ಳುಗೊರಟಿ** 'ಮುಳ್ಳುಗೋರಂಟಿ' ನೋ.

**ಮುಳ್ಳುಗೊರಟೆ** 'ಮುಳ್ಳುಗೋರಂಟಿ' ನೋ.

**ಮುಳ್ಳುಗೋರಂಟ** 'ಮುಳ್ಳುಗೋರಂಟಿ' ನೋ.

**ಮುಳ್ಳುಗೋರಂಟೆ** 'ಮುಳ್ಳುಗೋರಂಟಿ' ನೋ.

**ಮುಳ್ಳುಗೋರಂಟಿ**, ಮುಳ್ಳುಗೊರಟಿ, ಮುಳ್ಳುಗೊರಟೆ, ಮುಳ್ಳುಗೋರಂಟ, ಮುಳ್ಳುಗೋರಂಟಿ, ಮುಳ್ಳುಗೋರಟೆ (ನಾ). ೧. ಮುಳ್ಳುಗಳುಳ್ಳ ಹಳದಿಸ್ಫಟಿಕದ ಗಿಡ ಮತ್ತು ಅದರ ಹೂವು : "ಕುರಂಟಕ, ಸಹಚರಿ, ಪೀತಝಿಂಟಿ -- ಕೆಂಪಿನ ಮುಳ್ಳುಗೋರಂಟಿ (ಕುರವಕ) ; ಅರಿಸಿನಬಣ್ಣದ ಮುಳ್ಳುಗೋರಂಟಿ" (ನಾಪರಾ. ೪) ; "ಕುರಂಟಿಕ . . . ಮುಳ್ಳುಗೋರಂಟಿ, ಮುಳಜಾಲಿ" (ಸಸ್ಯಪ. ೦೯). **ಮುಳ್ಳುಗೊರಟಿ** : ೨. ಒಂದು ಬಗೆಯ ಔಷಧೀಸಸ್ಯ : ಅಮೃತಬಳ್ಳಿ, ಕೊಡಸಿಗೆ . . . ಸಹಚರಿ (ಮುಳ್ಳುಗೊರಟಿ), ಸಬ್ಬಸಿಗೆ, ಕಳ್ಳನ ಗಿಡ ಇವನ್ನು ಹಸಿಯದಿರುವಾಗಲೇ ಉಪಯೋಗಿಸಬೇಕು (ಸಕಪ್ರ. xii, ಪ್ರಸ್ತಾವನೆ). **ಮುಳ್ಳುಗೊರಟೆ** : ೨. ನೆಲಗುಳ್ಳದ ಬೇರು . . . ಮುಳ್ಳುಗೊರಟೆ, ಶುಂಠಿ ಇವುಗಳನ್ನು ಸಮನಾಗಿ ಕಷಾಯವಿಟ್ಟು . . . ಕುಡಿಯೆ ಶ್ಲೇಷ್ಮಜ್ವರ ಗುಣವಾಗುವುದು (ಸಕಪ್ರ. ೯೮). **ಮುಳ್ಳುಗೋರಂಟ** : ೧. "ಕುರುವಕಃ, ಅರುಣೇತಸ್ಮಿನ್ – ಕೆಂಪು ಹುವ್ವುಳ್ಳ ಮುಳ್ಳುಗೋರಂಟದ ಹೆಸರುಗಳು" (ಸಿದ್ಧಾಂತ. ೦೨೯). **ಮುಳ್ಳುಗೋರಂಟಿ** : ೧. "ಸೈರೇಯಕಃ, ಝಿಂಟೀ – ಈ ೨ ಮುಳ್ಳುಗೋರಂಟಿ" (ನಾಪರಾ. ೦೦೬). ೨. ನೆಲಗುಳ್ಳದ ಬೇರು . . . ಮುಳ್ಳುಗೋರಂಟಿ ಬೇರು, ಶುಂಠಿ ಸಹ ಕಷಾಯ ಕಾಯಿಸಿ ಸೇವಿಸಲು ಶ್ಲೇಷ್ಮಜ್ವರವು ನಾಶವಾಗುವುದು (ಸಕಪ್ರ. ೯೮). **ಮುಳ್ಳುಗೋರಟೆ** : ೧. ಮುಳ್ಳುಗೋರಟೆಗಿಡದ ತುಂಬ ಹೂವು ಅರಳಿದ್ದುವು (ಕೂಂ).

[ ಮುಳ್ಳು ( < ಮುಳ್ ) + ಗೋರಂಟಿ. / ತೆಲು. ಮುಲು ಗೋರಂಟ ]

**ಮುಳ್ಳುಗೋರಟೆ** 'ಮುಳ್ಳುಗೋರಂಟಿ' ನೋ.

**ಮುಳ್ಳುಗೋಲು** 'ಮುಳುಗೋಲು' ನೋ.

**ಮುಳ್ಳುಚಮಚ, ಮುಳ್ಳುಚಮಚೆ** (ನಾ). ಗಟ್ಟಿಯಾದ ಆಹಾರ ಪದಾರ್ಥವನ್ನು ಚುಚ್ಚಿ ಹಿಡಿದು ತಿನ್ನಲು ಬಳಸುವ, ಚೂಪಾದ ಹಲ್ಲುಗಳುಳ್ಳ ಒಂದು ಬಗೆಯ ಚಮಚ : (ಭೋಜನ ಊಟ ಮಾಡುವಾಗ ಅಥವಾ ಅಡಿಗೆ ಮಾಡುವಾಗ ಉಪಯೋಗಿಸುವ) ಮುಳ್ಳುಚಮಚ (Fork. ೩೦೬೩). **ಮುಳ್ಳುಚಮಚೆ** : ಯಾರು . . . ಫಯಜೂಖಾನ ಸಾಹೇಬನು ಮಾಡಿದ ಪಾಕವನ್ನು, ಮುಳ್ಳುಚಮಚೆ ಹಿಡಿದು, ಸೇವಿಸುವುದನ್ನು ಕಲಿತಿರುವರೊ ಅವರು ಈ ಪೀಡೆಯಿಂದ ಮುಕ್ತರಾಗಿರುವರು (ಕಮುಳ. ೦೬). [ ಮುಳ್ಳು ( < ಮುಳ್ ) + ಚಮಚ ]

**ಮುಳ್ಳುಚಮಚೆ** 'ಮುಳ್ಳುಚಮಚ' ನೋ.

**ಮುಳ್ಳುಜವೆ** (ನಾ). ಒಂದು ಬಗೆಯ ಯವಧಾನ್ಯ : ಮುಳ್ಳುಜವೆಯು . . . ತ್ವಕ್‌ರೋಗಗಳನ್ನು ಕಳೆಯುವುದು (ಶಿವ್ಯಾಂಗ. ೧೦೪ ೮೪೯);

ಗೋಪ್ಪುರದ ಭೂಮಿಯಾಗಿ ತಂಪು ಇರುವುದರಿಂದ . . . ಅವರಿಯಾದರೂ ಮುಳ್ಳುಜವೆಯಾದರೂ ಬಿತ್ತಿದರೆಯೂ ಬರುತ್ತದೆ (ಕೃಶಿಶ್ರ.೩೬).

[ ಮುಳ್ಳು ( < ಮುಳ್ ) + ಜವೆ ]

**ಮುಳ್ಳುಜೇನಂಗಿ** (ನಾ). ಮುಳ್ಳುಗಳಿಂದ ಕೂಡಿದ ಒಂದು ಬಗೆಯ ಸಸ್ಯ : "ಪರಂಗಿಜಾಲಿಗಿಡ, ಮುಳ್ಳುಜೇನಂಗಿ" (ಸಸ್ಯಾ. ೦೦೨).

[ ಮುಳ್ಳು ( < ಮುಳ್ ) + ಜೇನಂಗಿ ]

**ಮುಳ್ಳುತಂತಿ** (ನಾ). ಮುಳ್ಳಿನಂತೆ ಚೂಪುತುದಿಗಳಿಂದ ಕೂಡಿದ ಲೋಹದ ಎಳೆ : ಬಿಟ್ಟರೋ ಕಾಡಲ್ಲಿ ಕಣ್ಣುಕಟ್ಟಿ ಸುತ್ತಲೂ ಬಿಗಿದಿಟ್ಟು ಮುಳ್ಳುತಂತಿ (ಸವ್ಯಕೃ. ೮೭). [ ಮುಳ್ಳು ( < ಮುಳ್ ) + ತಂತಿ ]

**ಮುಳ್ಳುತಾರೆ** (ನಾ). ಮುಳ್ಳುಗಳಿಂದ ಕೂಡಿದ ಒಂದು ಬಗೆಯ ತಾರೆಯ ಗಿಡ : ಕುಡವಲೆ, ಹೆತ್ತರಿಮುಳ್ಳು, ಮುಳ್ಳುತಾರೆ, ಗಜಬೀರ (ವ್ಯಶಿಗಿ. ೩೭-೭೩೯). [ಮುಳ್ಳು (<ಮುಳ್)+ತಾರೆ$_1$ (<ತಾಱಿ)]

**ಮುಳ್ಳುನಿವಂದಿಗೆ** (ನಾ). ಒಂದು ಬಗೆಯ ಔಷಧೀಸಸ್ಯ : ಬೇಲದ ಬೀಜ . . . ಮುಳ್ಳುನಿವಂದಿಗೆಸೊಪ್ಪು ಇವು ಸಹ ಕೊಂಡು ರಸವ ಹಿಂಡಿಕೊಂಡು ಈ ರಸದಲ್ಲಿ ಏಳುದಿನ ತೆಗೆದುಕೊಳ್ಳೆ ಪಥ್ಯದೊಳರೆ ಸಕಲ ಮೇಹ ಗುಣ (ಚಿಕ್ಕಿ. ೦೨೦). [ಮುಳ್ಳು ( < ಮುಳ್ ) + ನಿವಂದಿಗೆ]

**ಮುಳ್ಳುನೆಗ್ಗಿಲು** (ನಾ). ಮುಳ್ಳುಗಳುಳ್ಳ ಒಂದು ಬಗೆಯ ನೆಗ್ಗಿಲು ಗಿಡ : ಬಳ್ಳಿದುಱುಚಿ ನೆಱಿ ಮುಳ್ಳುನೆಗ್ಗಿಲು . . . ಹುಲ್ಲುಗಳ್ ಬೆಳೆದಾಗ ದಾರಿ ಬಿಡದೆ ಜಾಱುಗಲ್ಲ ಮುಱಿಸಿಕೊಂಡಿಹುವು (ಕಂಪವಿ. ೦೮-೩೯).

[ ಮುಳು ( < ಮುಳ್ ) + ನೆಗ್ಗಿಲು (< ನೆರ್ಗಿಲ್ ) ]

**ಮುಳ್ಳುನೆಲ್ಲಿ** (ನಾ). ಒಂದು ಬಗೆಯ ಮುಳ್ಳಿನ ಗಿಡ : "ಕಕ್ಕುಚಂಡೆರೆ. ಮಣಿಕಣ್ಣು, ಮುಳ್ಳುನೆಲ್ಲಿ" (ಸಸ್ಯಾ. ೦೦೩).

[ ಮುಳ್ಳು (< ಮುಳ್ ) + ನೆಲ್ಲಿ ]

**ಮುಳ್ಳುಪಾರಿವಾಳ, ಮುಳ್ಳುಹಾಲಿವಾಣ** (ನಾ). ಮುಳ್ಳುಗಳುಳ್ಳ ಪಾಲಿವಾಣದ ಮರ : "ಕನಕಸ್ಥಾ–ಮುಳ್ಳುಪಾರಿವಾಳ" (ಓಷ. ೨೪). **ಮುಳ್ಳುಹಾಲಿವಾಣ** : ಮುಳ್ಳುಹಾಲಿವಾಣ, ಮುಳ್ಳುಮುತ್ತುಗ (ವ್ಯಶಿಗಿ. ೩೩-೬೮೦). [ ಮುಳ್ಳು ( < ಮುಳ್ ) + ಪಾರಿವಾಳ$_2$ ]

**ಮುಳ್ಳುಬದನೆ** (ನಾ). ಮುಳ್ಳುಗಳಿರುವ ಒಂದು ಬಗೆಯ ಬದನೆ : "ಕಂಟಕಪ್ರಂತಾಕಿ – ಮುಳ್ಳುಬದನೆ" (ಓಷ. ೨೭).

[ ಮುಳ್ಳು ( < ಮುಳ್ ) + ಬದನೆ ]

**ಮುಳ್ಳುಬೆಟ್ಟಮಾವು** (ನಾ). ಒಂದು ಬಗೆಯ ಮಾವು : ಮುಳ್ಳುಬೆಟ್ಟಮಾವು, ಗಚ್ಚನ್ನೆಕಾಯಿ (ವ್ಯಶಿಗಿ. ೨೪-೪೪೦).

[ ಮುಳ್ಳು ( < ಮುಳ್ ) + ಬೆಟ್ಟ + ಮಾವು ]

**ಮುಳ್ಳುಬೇಲಿ** 'ಮುಳುವೇಲಿ' ನೋ.

**ಮುಳ್ಳುಮದರಂಗಿ** (ನಾ). ಒಂದು ಬಗೆಯ ಮುಳ್ಳಿನ ಗಿಡ : ಮುಳ್ಳುಗೋರಂಟಿಗಿಡ : ಕುರಂಟಿಕೆ, ಮುಳ್ಳುಗೋರಂಟಿ, ಮುಳ್ಳುಮದರಂಗಿ (ವ್ಯಶಿಗಿ. ೦೦-೦೯೯). [ ಮುಳ್ಳು ( < ಮುಳ್ ) + ಮದರಂಗಿ ]

**ಮುಳ್ಳುಮರ** 'ಮುಳ್ಮರ' ನೋ.

**ಮುಳ್ಳುಮುಖ** (ನಾ). ೧. (ಸಿಡುಬು ಮುಂತಾದುವು ಎದ್ದು) ಗುಳ್ಳೆ. ಕಲೆಗಳಿಂದ ಕೂಡಿ ಒರಟಾದ ಮುಖ. – ಗಂಟುಗಂಟಾಗಿರುವ ಮುಖ : ಅವನದು ಮುಳ್ಳುಮುಖ (ರೂಢಿ). ೨. ಪರುಷಗ್ರಾಹ್ಯದ ಮೇಲ್ಮೈ : ಒರಟಾದ ಹೊರಮೈ : ಆ ಉಲ್ಕೆಗಳು ಕ್ರಮೇಣ ಒಟ್ಟುಗೂಡಿ ಉಂಡೆಯಾಗಿ ಚಂದ್ರನಾಯಿತೆಂತಲೂ ಒಳಗೆ ಸೇರಿದ ಉಲ್ಕೆಗಳಿಂದ ಬಿದ್ದ ಪೆಟ್ಟುಗಳೇ ಚಂದ್ರನ ಮುಳ್ಳುಮುಖಕ್ಕೆ ಕಾರಣವೆಂತಲೂ . . . ಹೇಳುವರು (ಜ್ಯೋತಿರ್ವಿ. ೨೦೦). [ ಮುಳ್ಳು ( < ಮುಳ್ ) + ಮುಖ ]

**ಮುಳ್ಳುಮುತ್ತಗ** 'ಮುಳ್ಮುತ್ತುಗ' ನೋ.

**ಮುಳ್ಳುಮುತ್ತಲ** 'ಮುಳ್ಮುತ್ತುಗ' ನೋ.

**ಮುಳ್ಳುಮುತ್ತುಕ** 'ಮುಳ್ಮುತ್ತುಗ' ನೋ.

**ಮುಳ್ಳುಮುತ್ತುಗ** 'ಮುಳ್ಮುತ್ತುಗ' ನೋ.

**ಮುಳ್ಳುಮುರಿ** 'ಮುಳ್ಮುಱಿ' ನೋ.

**ಮುಳ್ಳುಮುಱಿ** 'ಮುಳ್ಮುಱಿ' ನೋ.

**ಮುಳ್ಳುಮೊನೆ** 'ಮುಳ್ಮೊನೆ' ನೋ.

**ಮುಳ್ಳುಯಲಗ** (ನಾ). ಮುಳ್ಳುಗಳಿಂದ ಕೂಡಿದ ಎಲೆಗಳುಳ್ಳ ಒಂದು ಬಗೆಯ ಸಸ್ಯ : ಮುಳ್ಳುಯಲಗದ ಹೂವಿನಂತೆ ಹೆಮ್ಮರದ ಹೂವಿನಂತೆ ಕಾದ ಕಬ್ಬಿಣದಂತೆಯೂ ಇರುವ ಈ ಆರು ಬಗೆಯ ಹೊಳಪುವುಳ್ಳ ರತ್ನವು ವೈಶ್ಯಜಾತಿಯಾದ ಸೌಗಂಧಿಕವೆಂದು ತಿಳಿಯುವದು (ಸೌಗಂ೨. ೩೭೭-೦೭).

[ ಮುಳ್ಳು ( < ಮುಳ್ ) + ಎಲೆ$_1$ + – ಗ$_2$ ]

**ಮುಳ್ಳುರಾಮಫಲ** (ನಾ). ಮುಳ್ಳುಗಳಿಂದ ಕೂಡಿದ ಒಂದು ಬಗೆಯ ಗಿಡ ಮತ್ತು ಅದರ ಹಣ್ಣು : (ವ್ಯಶಿಗಿ. ೭-೦೨೦).

[ ಮುಳ್ಳು ( < ಮುಳ್ ) + ರಾಮಫಲ ]

**ಮುಳ್ಳುರ್ಚು** (ಕ್ರಿ). ಮುಳ್ಳು ಚುಚ್ಚು – ನಾಟು : ಪಳ್ಳದ ಕೇದಗೆಗೆ ಪಾಯ್ದು ಪತ್ತಿದ ಕೆಯ್ಯಂ ಮುಳ್ಳುರ್ಚೆ ತೆಱೆದು ಪಲ್ಲಂ ಘೋಳೈನೆ ನಗಿಸಿದುದು ಕಟಕಮಂ ಮರ್ಕಟಕಂ (ರಸರ. ೨-೯೯).

[ ಮುಳ್ + ಉರ್ಚು ]

**ಮುಳ್ಳುವಂದಿ** 'ಮುಳ್ಪಂದಿ' ನೋ.

**ಮುಳ್ಳುವೇಲಿ** 'ಮುಳುವೇಲಿ' ನೋ.

**ಮುಳ್ಳುವೊಂಗೆ, ಮುಳ್ಳುಹೊಂಗೆ** (ನಾ). ಮುಳ್ಳುಗಳಿಂದ ಕೂಡಿದ ಒಂದು ಬಗೆಯ ಹೊಂಗೆಮರ : "ಅಂಗಾರವಲ್ಲರಿ – ಮುಳ್ಳುವೊಂಗೆ" (ಅಕಾ. ೨-೦೦). **ಮುಳ್ಳುಹೊಂಗೆ** : "ಮರ್ಕಟೀ – ಅಜಮೋದ . . . ಮುಳ್ಳುಹೊಂಗೆ" (ಓಷ. ೦೧೩). [ಮುಳ್ಳು (<ಮುಳ್) + ಹೊಂಗೆ]

**ಮುಳ್ಳುವೊರೆ** (ಕ್ರಿ). ಮುಳ್ಳುಗಳಿಂದ ತುಂಬಿರು; ಕಂಟಕಮಯವಾಗಿರು: ಅರ್ಚಿಸುವರು ಮುಳ್ಳುವೊರೆದ ಲೋಹದೆಲವಮರದೊಳಕಟ (ಶಾಪಂತ. ೬-೪೦). [ಮುಳ್ಳು (<ಮುಳ್) + ಪೊರೆ$_2$]

**ಮುಳ್ಳುಸವುತೆ** 'ಮುಳುಸೌತೆ' ನೋ.

**ಮುಳ್ಳುಸೀಗೆ** (ನಾ). ಮುಳ್ಳುಗಳಿಂದ ಕೂಡಿದ ಒಂದು ಬಗೆಯ ಸಸ್ಯ : "ಜನೀ, ಜತೂಕಾ . . . ಸಂಸ್ಪರ್ಶಾ – ಈ ೬ ಮುಳ್ಳುಸೀಗೆ" (ಶಾಶರಾ. ೦೦೨). [ಮುಳ್ಳು (<ಮುಳ್) + ಸೀಗೆ$_1$]

**ಮುಳ್ಳುಸುಂಡೆ** (ನಾ). ಮುಳ್ಳುಗಳಿಂದ ಕೂಡಿದ ಒಂದು ಬಗೆಯ ಸುಂಡೆಬಳ್ಳಿ : ಮುಳ್ಳುಸುಂಡೆಹೂವು ಎರಡು ಮಾನ ಒಂದು ಮಾನ ಹಸುವಿನ ಹಾಲಿನಲ್ಲಿ ಬೇಯಿಸಿ . . . ತೆಗೆದುಕೊಳ್ಳೆ ವೀರ್ಯವೃದ್ಧಿ (ಕಾಮಶಾ. ೨೭೪). [ಮುಳ್ಳು (<ಮುಳ್) + ಸುಂಡೆ$_1$]

**ಮುಳ್ಳುಸೇವಂತಿಗೆ** (ನಾ). ಬಿಳಿಯ ಬಣ್ಣದ ಹೂವುಗಳನ್ನು ಬಿಡುವ, ಮುಳ್ಳುಗಳುಳ್ಳ ಒಂದು ಬಗೆಯ ಸಸ್ಯ : ಇಂಗಳದ ಹಣ್ಣು, ಮುಳ್ಳುಸೇವಂತಿಗೆ ಬೇರು . . . ಬಿಲ್ವಪತ್ರೆಕಾಯಿಯ ತಿರುಳು ಇವುಗಳ ನ್ನೆಲ್ಲಾ ಕಷಾಯಮಿಟ್ಟು ಸೇವಿಸಲು ಎಂಥ ದೋಷಜ್ವರವಾದರುಂ ಕೆಡುಗುಂ (ಸಳವ್ಯ. ೩೦೬).

[ಮುಳ್ಳು( <ಮುಳ್) + ಸೇವಂತಿಗೆ. / ತುಳು. ಮುಳ್ಳುಸೇವಂತಿಗೆ]

**ಮುಳ್ಳುಸೌತೆ.** 'ಮುಳುಸೌತೆ' ನೋ.

**ಮುಳ್ಳುಹಂದಿ** 'ಮುಳ್ಪಂದಿ' ನೋ.

**ಮುಳ್ಳುಹಣ್ಣು** (ನಾ). ಮುಳ್ಳುಗಳಿಂದ ಕೂಡಿದ ಹಣ್ಣುಬಿಡುವ ಒಂದು ಬಗೆಯ ಗಿಡ : ಪುರ್ವಾಲಿ, ಮುಳ್ಳುಹಣ್ಣು (ವ್ಯಶಿಗಿ. ೭೯-೦೬೩) ; ಹುಡುಗಿಯರೆಲ್ಲ ಮುಳ್ಳುಹಣ್ಣುಗಳನ್ನು ತೆಗೆಯಲು

ಯೋಗಿದ್ದೆವು (ಮೂರುದಾ. ೨೪೩).

[ಮುಳ್ಳು (<ಮುಳ್) + ಹಣ್ಣು$_3$ (<ಪಣ್$_3$)]

**ಮುಳ್ಳುಹತ್ತರಿಕೆ** 'ಮುಳ್ಪತ್ತರಿಗೆ' ನೋ.

**ಮುಳ್ಳುಹರಿವೆ** (ನಾ). ಮುಳ್ಳುಗಳಿರುವ ಒಂದು ಬಗೆಯ ಹರಿವೆ ಸೊಪ್ಪು : ಮುಳ್ಳುಕೀರೇಸೊಪ್ಪು, ಮುಳ್ಳುಹರಿವೇಸೊಪ್ಪು (ವೃಶಿಗ. ೬-೯೩). [ಮುಳ್ಳು (<ಮುಳ್) + ಹರಿವೆ$_2$ (<ಪಱುಪೆ)]

**ಮುಳ್ಳುಹಲಸು** (ನಾ). ಮೈಮೇಲೆ ದೊಡ್ಡ ದೊಡ್ಡ ಮುಳ್ಳುಗಳಿರುವ ಒಂದು ಬಗೆಯ ಹಣ್ಣು ಮತ್ತು ಅದರ ಗಿಡ ; ಅನಾನಸು : 'ಅನಾನಸ್' ಎಂಬ ಹಣ್ಣು ಮತ್ತು ಗಿಡ ; ಮುಳ್ಳುಹಲಸು ; ಪರಂಗಿ ಹಲಸು ; ನೆಲಹಲಸು (Ananus. ಕಂಕೊ).

[ಮುಳ್ಳು (<ಮುಳ್) + ಹಲಸು (<ಪಲಸು)]

**ಮುಳ್ಳುಹಾಲಿವಾಣ** 'ಮುಳ್ಳುಪಾರಿವಾಳ' ನೋ.

**ಮುಳ್ಳುಹಾಸಿಗೆ** (ನಾ). (ಅಲಂ) ಯಾತನೆಯನ್ನುಂಟುಮಾಡುವಂತಹುದು ; ಕಷ್ಟಕರವಾದುದು : ಯಾರಿಗೂ ಬೇಡವಾಗಿದ್ದೇನೆ ಎಂಬ ಅರಿವು ಕೆಂಪುದೇವಯ್ಯನಿಗೆ ಕ್ಷಣಕ್ಷಣಕ್ಕೂ ಉಂಟಾಗಿ ಅರಸುತನವು ತನಗೆ ಮುಳ್ಳುಹಾಸಿಗೆಯಂತಾಗಬೇಕು (ಜದೇವ. ೧೯೬).

[ಮುಳ್ಳು (<ಮುಳ್) + ಹಾಸಿಗೆ (<ಪಾಸುಗೆ$_1$)]

**ಮುಳ್ಳುಹುಳ** (ನಾ). ಮುಳ್ಳಿನಂತಹ ಕೊಂಡಿಗಳಿರುವ ಒಂದು ಬಗೆಯ ಹುಳು ; ಚೇಳು : "ವೃಶ್ಚಿಕಃ – ೧ ಮುಳ್ಳುಹುಳ್ ಚೇಳು." (ಸಿದ್ಧಾಂತ. ೪೬೦). [ಮುಳ್ಳು (<ಮುಳ್) + ಹುಳ (<ಪುೞು)]

**ಮುಳ್ಳುಹೊನಗೊನ್ನೆ** (ನಾ). ಮುಳ್ಳುಗಳಿರುವ ಒಂದು ಬಗೆಯ ಸಸ್ಯ, – ಹೊನಗೊನ್ನೆ : (ವೃಶಿಗ. ೩-೯೩).

[ಮುಳ್ಳು (<ಮುಳ್) + ಹೊನಗೊನ್ನೆ (<ಪೊನ್ನಗನ್ನೆ)]

**ಮುಳ್ಳುಹೊನ್ನೆ** (ನಾ). ಮುಳ್ಳುಗಳಿಂದ ಕೂಡಿದ ಒಂದು ಬಗೆಯ ಹೊನ್ನೆಮರ : ಮುಳ್ಳುಹೊನ್ನೆ . . . ಗಡುತರವಾಗಿ ಬೆಳೆಯುತ್ತದೆ. ಕಟ್ಟಿಗೆ ಗಟ್ಟಿ (ಕಶಾಗ. ೯೬).

[ಮುಳ್ಳು (<ಮುಳ್) + ಹೊನ್ನೆ (<ಪೊನ್ನೆ)]

**ಮುಳ್ಳೂರು** 'ಮುಳ್ಳೂಱು' ನೋ.

**ಮುಳ್ಳೂಱು, ಮುಳ್ಳೂರು** (ಕ್ರಿ). ಮುಳ್ಳನ್ನು ಚುಚ್ಚು, – ನೆಡು : ವಿಸರ್ಜಿಸಿ ಬಿಡುವಾಗ ಎಲ್ಲಿರ್ದನೊ ಮುಳ್ಳೂಱಿ ತೆಱಿಹಿಲ್ಲದಿಪ್ಪ ಅಖಂಡವಸ್ತು (ಬಸವ. ೪. ೦೨೦೩). **ಮುಳ್ಳೂರು** : ಅಂದಿನ ಸಭೆಯಲ್ಲಿ ಮುಳ್ಳೂರು ವಷ್ಟೂ ಸ್ಥಳವಿರಲಿಲ್ಲ (ರೂಢಿ). [ಮುಳ್ಳು (<ಮುಳ್) + ಊಱು$_1$]

**ಮುಳ್ಳೆಳ್ಳು** (ನಾ). ಮೊನೆ ಮುರಿಯದ ಎಳ್ಳು ; ಚೂಪಾಗಿರುವ ಎಳ್ಳು : ಭೂಮಿಗೆ ವಿಚಿತ್ರವಾದುಧು ಮಂಟಪಂ ನೋಡೆ ಹೋಮಕುಂಡಂ ಸುಡುವ ಮುಳ್ಳೆಳ್ಳುಗಳ್ಕೂಡೆ (ವೀರಶ. ಹ. ೯೬೩-೪).

[ಮುಳ್ಳು (<ಮುಳ್) + ಎಳ್ಳು (<ಎಳ್)]

**ಮುಳ್ಳೊತ್ತು** (ನಾ). ೧. ಕಾಲಿಗೆ ಮುಳ್ಳು ನಾಟದಿರಲು ಹಾಕಿಕೊಳ್ಳುವ ಚಪ್ಪಲಿ,– ಮೆಟ್ಟು : ಗುರುವೆ ಮುಳ್ಳೊತ್ತುಗಳ ಮಾಡಿ ಕಾಲ ಹಾಕುವೆನು (ಕನಕ. ೬೯); ಹಾಯೆ ಹರಿಗೋಲಾದೆ ; ರಾಯಭೇರಿಗೆ ಆದೆ ; ರಾಯರಾ ಕಾಲಿಗೆ ಮುಳ್ಳೊತ್ತಾದೆ (ಜೀಗಬ್ಬು. ೦೬೯). ೨. (ಅಲಂ) ಕಿರುಕುಳವನ್ನು ಕೊಡುವಂತಹುದು ; ಉಪದ್ರವಕಾರಿಯಾದುದು : ಕೃಷ್ಣದೇವರಾಯ ವಿಜಯಸಾಮ್ರಾಜ್ಯಕ್ಕೆ ಶತಮಾನಗಳಿಂದ ಮುಳ್ಳೊತ್ತಾಗಿದ್ದ ವಿಜಾಪುರರಾಜ್ಯವನ್ನೇ ಉಧ್ವಸ್ತಗೊಳಿಸುವ ಪ್ರಬಲಾಕಾಂಕ್ಷೆಯಿಂದ ಜೈತ್ರಯಾತ್ರೆಯನ್ನು ಮುಂದುವರಿಸಬಯಸಿದನು (ಆಳಿಕೆ. ೧೧೧). [ಮುಳ್ + ಒತ್ತು$_2$]

**ಮುಱಿ$_1$, ಮುರಿ$_2$** (ಕ್ರಿ). ೧. ತುಂಡುಮಾಡು ; ಪುಡಿರಿಸು : "ಮುಱಿ–ಮೋಟನೇ, ಖಂಡೇ ಚ (ತುಂಡು)" (ಶಮಾ): ಕೈದಂದಜಿ ಮುಱಿ ನಿಟ್ಟೆಲ್ವನರಿದು (ವಡ್ಡಾರಾ. ೧೨೬-೨) ; ಪಗೆವರ ನಿಟ್ಟೆಲ್ವಂ ಮುಱಿ ವೊಡೆನಗೆ ಪಟ್ಟಂಗಟ್ಟಾ (ಶಂಶಖ. ೧೧-೧೬) ; ಕುಳಿಕನ ದಾಡೆಯುಂ ಮುಱಿವ ದಿಗ್ಗಜಮುಂ ಪಡೆಪಾಯ್ವು . . . ಅಳವಂ ಸಮಂತು ತಳೆದಂ ರಣದೋಹಳನಾ ಕುಮಾರಕಂ (ಚಂದ್ರಪ್ರ. ೬-೨೮) ; ರಥವನು ನಾಕುಶರದಲಿ ಮುಱಿದು ಸೂತನ ತಲೆಯನೆರಡಱಲಿ ನೂಕಿ . . . ಬಿದಿದನು ದ್ರೋಣ (ಕುಮ್ಯಾದ್ರೋ. ೨-೯೨). ೨. ತುಂಡಾಗು ; ತುಂಡರಿಸಿ ಹೋಗು : ಮೂಗುಂ ಮುಱಿವನ್ನಂ ಮುಂದೆ ಮುಗ್ಗುತ್ತೆಡಬಲದೊಳಗಾಂ ಬೀಱುತುಂ ಪಕ್ಕ ಗೂಡಾಗೊಱಗುತ್ತಂ ಪೋಗಿ (ಕಾದಂಪೂ. ೦೯೦) ; ಕುಳಿಕನ ಪಲ್ಗಳಂ ಮುಱಿಯೆ ಪೋದಿದರಾರ್ (ಗದಾಯು. ೯-೨೦) ; ಚನ್ನಮಲ್ಲಿಕಾರ್ಜುನಯ್ಯ ನಿಱಿದಲಗು ಒಡಲಲ್ಲಿ ಮುಱಿದು ಹೊರಳುವೆನ್ನಳಲನು ನೀವೆತ್ತ ಬಲ್ಲಿರೆ (ಮಹಾದೇ. ೪. ೦೨೦-೨೯೦) ; ಗಿರಿಯ ಶಿರದಲಿ ಹೂತ ಕಕ್ಕಯ ಮರ ಮುಱಿದು ಬೀಳ್ವಂತೆ ವಿಮಳಾಭರಣಕಾಂತಿಯ ಕಡಲ ಕೋಮಲಕಾಯ ಭಗದತ್ತ ಉರುಳಿದನು (ಕುಮ್ಯಾದ್ರೋ. ೪-೬೬). ೩. ಕಡಿ ; ಕತ್ತರಿಸು ; ಛೇದಿಸು : ಅರಸಂ ಕಂಡು ಕಡುಮುಳಿದದಱ ಗೋಣಂ ಮುಱಿದೊಡಾಗಿಳಿಯುಂ ಸತ್ತು (ವಡ್ಡಾರಾ. ೦೦೯-೧) ; ಬ್ರಹ್ಮಾಂಡಮಂ ಪೊಕ್ಕನ ಪೊಡಮಾ ಬ್ರಹ್ಮನ ಗಂಟಲಂ ಮುಱಿದಪೆಂ (ಶಂಶಖ. ೦೩-೬೬) ; ತಾಳತರುವನು ಮುಱಿದು ಸಮರಾಭೀಳದುಂದುಭಿಯಟ್ಟೆಯನು ತುದಿಗಾಲಲೊದದರಸಾದನಿನೆತೆಸೊಡಂಗೆ ರಘುನಾಥ (ತೊರಾ. ೯-೨ ಸೂಚನೆ). ೪. ಕಡಿದುಹೋಗು ; ಕತ್ತರಿಸಲ್ಪಡು : ಮುತ್ತಿನ ಮುಱಿದ ಲಂಬಣಂಗಳ್ಪೆರಸೆಟಲ್ವ ಪಚ್ಚೆಯ ಸರವ ಹಾರದ ತೋರಣಂಗಳಂ ನುಗುಳುತ್ತುಂ ಬಂದು (ಆದಿಪು. ೪-೨೩ ವ). ೫. ಕೀಳು ; ಕೊಯ್ಯು : ಪಾದಪಂಗಳ ಪುಷ್ಪಸ್ತಬಕಂಗಳಂ ಮುಱಿವುತುಂ ಪೋಗಲ್ ಮದೇಭಂಗಳ್ (ಕಾದಂಪೂ. ೬೩೦) ; ಸುರಹೊನ್ನೆದೊಂಗಲ ಮುಱಿದು ಪರಮಪ್ರಶಸ್ಥೆ ಮತ್ತೊರ್ವಳು ಪಾದರಿಘುರಲ್ಗಳ ತಿಱಿದಿಕ್ಕಿದಳು (ಸೋಹಕ. ೨೯-೬೩). ೬. (ಬೆಲ್ಲಾಪಿಲ್ಲಿಯಾಗಿ) ಸೋತುಹೋಗು, – ಪರಾಜಯಹೊಂದು : ಅಂತು ಧನುರ್ವಲದ ಮೊನೆ ಮುಱಿವಂತೆ ಮಲಪುಮುಱಿಕೆಯ ಬಿಲ್ಲ ನಾಯಕರ್ಕಳುಗ್ರ ಸಾಯಕದಿಂ ಸಾಯೆ (ಶಾಂತಿಪು. ೯-೧೧ ವ) ; ಘೋರರುದ್ರನ ದಳ ಮುಱಿಯಿತ್ತು (ಅವತಂ. ೩೩-೨೩೩). ೭. ಪಾಲಾಗು ; ವಿಭಾಗವಾಗು : [ನಾ]ಗಘೋರನೆಂಬೋ ಬಟ್ಟೆಕೆಱಿಯ [ಧಾಟಿಗೆ] ಮುಱಿಯುವಡದ ಪೊಲನ ಕೊಳ್ವೆನೆನ್ದು ಜನ್ಪೊಡ್ಡಿ ನಿನ್ನಾನೆಂಬ ಮಾತಂ ಕೇಳ್ದು (ಸಾಇಇ. XI-i, ೨೦-೬; ೩೯೩). ೮. ತೊಲಗು ; ಬಿಟ್ಟುಹೋಗು ; ಮರೆಯಾಗು : ಕೋಪವಡಗದೆ ತಾಪ ಮುಱಿಯದೆ ಬಱಿದೆ ಭಕ್ತರಾದೆವೆಂದು ಬೆಬ್ಬಬೆಱವವರ ಕಂಡು ಆನು ಮುಱುಗುವೆನಯ್ಯ (ಶ್ರಶುವ. ೩೬) ; ತ್ರಿಜಗಚೌವಟಮಲ್ಲ ನೀನೆನಿಪ ಮಾನಗರ್ವವು ಮುಱಿಯದೇ ರಿಪುಸೇನೆ ನಗದೇ (ಕುಮ್ಯಾಶ. ೪-೩೩). ೯. ಸೋಲಿಸು ; ಪರಾಭವಗೊಳಿಸು : ಕಳಿಂಗನಂ ಮುಱಿದು ಭಂಗಿಸಿದಾತ್ಮಭುಜಪ್ರತಾಪಮಂ ಕೇಳೆ (ಎಕ. VII, ಶಿವಮೊ. ೬೯-೧೩ ; 1112); ಅಮಂದಿರಂ ಮಲ್ಲಯುದ್ಧದಿಂ ಮುಱಿದು ಕೊಲಿಸುವೆಂ (ಜಗಪ. ೬-೩೬ ವ) ; ಕೊರಲೊತ್ತುತೆ ಮುಱಿವನವನ್ ಬಟಲದ ಮಲೆಗೂಳಿಯುಮನ್ (ಅಂತಿಗೊ. ೦೬-೪೩೨). ೧೦. ನಾಶಮಾಡು; ಧ್ವಂಸಗೊಳಿಸು: ಎನ್ನ ಮಾಯದ ಮದವ ಮುಱಿಯಯ್ಯಾ (ಮಹಾದೇ. ೪. ೬-೯) ; ಮತ್ತೆ ಮುಱಿದನು ಹತ್ತುಸಾವಿರಮತ್ತಗಜವನು . . . ರಣಾಗ್ರದಲಿ (ಕುಮ್ಯಾಶ. ೮-೩೨). ೧೧. ಕೆಡಿಸು ; ಹಾಳುಮಾಡು : ಅಱುಹಿದರೆ ವಿದುರಂಗೆ ಕಾರ್ಯವ ಮುಱಿವನಾತನು (ಕುಮ್ಯಾಸ. ೦೨-೩೩). ೧೨. ಕೊಲ್ಲು ; ಸಾಯಿಸು : ಮುಱಿದಬೇಡಿದುಮ್ಮೆ ನಿನ್ನನಿರದಂತಕನಾಂ ನಡೆ ನೋಡೆ ನೋಡೆ ನೀಂ ಕರಗಿದೆಯೆಂತುಂ (ಆದಿಪು. ೩-೧೪) ; ಹಾವಿನ ಬಳಗ ಗರುಡನ

ಮೇಜಾಯು ಮುಱಿವವೊಲಾಯಿತಕಟ (ಶಬ್ದಾನ್ರೋ. ೬-೬೩); ತರಣಿವಂಶಜರು . . . ರಜನೀಚರ ವಿರೋಧನ ಮುಱಿದು ಸಾರ್ದರು ಪಂಚವಟಿವನವ (ತೊರವಾ. ೩-೧ ಸೂಚನ) ; ಏಗಳುಂ, ನೀನ್, ನೋಟಪ್ಪಿನ್, ಅಜಗುಲಿಗಳನ್ ಮುಱಿವ ನೋಂಪಿಯನ್ ನೋಂತಿರ್ಪ (ಅಕೃಶಾ. ೦-೨). ೧೩. ನಿಲ್ಲಿಸು ; ಭಂಗಗೊಳಿಸು : ಮುಱಿದು ನಿದ್ರೆಯ ಕಾಪಿನಸುರರ ತರುಣಿಯರು ಬಳಸಿದರು (ತೊರವಾ. ೫-೩-೨೯). ೧೪. ಕೆಡು ; ಹಾಳಾಗು : ಮುಱಿದ ಮನಮಂ ಮೆಚ್ಚಿಸಿದವನೊ (ಬಸವ. ೪೦-೪೦) ; ಮುಱಿದ ಭರತಾನ್ವಯದ ಬೆಸುಗೆಯು ತೆಱಸು ತೋಱಿತೆ ಪುಣ್ಯವೆನುತೆಚ್ಚಱಿತು ನುಡಿದಳು (ಕುಮಾವ್ಯಾ. ೩-೩). ೧೫. ಮೀರು ; ದಾಟು ; ಉಲ್ಲಂಘಿಸು : ನುತ ಸಮ್ಯಕ್ತ್ವಮಣುವ್ರತಸ್ಥಿತಿ ಸಮತ್ವೀಭಾವನಂ ಪ್ರೋಷಧವ್ರತಮೆಂದುಂ ಪಸಿಯೊಂದುಮಂ ಮು[ಶಾಠಾಂ. ಪ]ಱಿಯೆನೆಂಬೀ ಪೂಣ್ಕೆ ಮಾಡಂ (ಅಂಕು. ೬-೦೦) ; ಏಳುಕಡಲಿನ ಮೇಲೆ ಮುಱಿವರು ಕೀಲ ಕಳೆವರು ರವಿಯ ಬಂಡಿಯ (ಸಂಕಶ. ೭-೦೬) ; ದಂಡೆಯ ಮುಱಿವಂತೆ ಬಳೆದಿರ್ದ ಕರ್ಮಿಸ ಖಂಡೇಂದುಭಾಳಕಸ್ತುರಿಯ . . . ಸುಪ್ರಚಂಡನ ಮೊಗವ ನೋಡಿದನು (ಮೋಹಕ. ೩೫-೪೯). ೧೬. (ತುದಿಯು) ಮೊಂಡಾಗು ; ಮುಕ್ಕಾಗು : ಪಱಿದುವು ಗಱಿ ಚಂಚುಗಳುಂ ಮುಱಿದುವು ತಲೆನಡುಗುತಿರ್ದುವೆನ್ನದೆ ತರದಿಂ ಬಱಿಗೆಯ್ವುತಿರ್ದಮಾಯ್ದುಱಿಗುಲಿ ಕರ್ವೇಡನಲ್ಲಿ ಮುಂದುಗಿಳಿಗಳುಮಂ (ಕಾದಂಪೂ. ೦೭೬). ೧೭. ಚುಚ್ಚು ; ನಾಟು : 'ಮುಳ್ಮುಱಿ' ಪರಾ. ೧೮. ಇಲ್ಲವಾಗು ; ನಾಶವಾಗು : ಪುಲ್ ಮುಱಿದುದು ಬೆಳಸುಡುಗಿ ಬಯಲ್ ಮಸಗಿದುದು (ಶಾಂತಿ. ೦೦-೩೯). ಮುಱಿ₂ : ೧. ಅವಳು ರೊಟ್ಟಿಯನ್ನು ಮುರಿದು ಮುರಿದು ನಾಯಿಗೆ ಹಾಕುತ್ತಿದ್ದಳು (ರೂಢಿ). ೨. ಭರದಿಂದ ಯಕ್ಕಲನ ಹೊಕ್ಕಿರಿದು ಕರಡಿ ಬಾಯ್ದೆರೆಯ ಮುಸುಡಂ ಮುರಿಯಲಿಕ್ಕಿ ಬಗ್ಗನ ಬಾಯೊಳಿರದೆ ಸೇರಿಸಿ ಕಠಾರಿ (ಶಶಿವೋ. ೦೬-೨೩); ಜಾರಿಬಿದ್ದುದರಿಂದ ಅವನ ಕೈಮೂಳೆ ಮುರಿದಿದೆ (ರೂಢಿ). ೩. ಕೆಲವರು ಮಡಿದು ಹೋದರು, ಕೆಲವರು ಮುರಿದು ಓಡಿಹೋದರು (ಮುಂಬಯಿ. ೬. ೫-೪೬). ೪. ಬತ್ತಿಸಿ ನೃಪಾಲರಾಟೋಪಮಂ ಕೋಪದಿಂ, ನೀಲಧ್ವಜನ ಮುರಿದು (ಕತ್ತಾಂಗ. ೭೨-೦೯೬). ೧೦. ಅವರ ಸೊಕ್ಕು ಮುರೀಲಿಕ್ಕೆ ಒಂದೇ ಹಾದಿ (ದಾಸಕು. ೩೬); ವೈಭವಗಳ ನೂರ ನೀವನು ದೇವನು ಮುರಿಯುವೊಡಧಮಜೀವವನು (ಇಂಶಾಕ. ೩೦-೯೩). ೧೧. ಚಿನ್ನರಿಹರೆಂಬೆನಿಕೆ ಮುರಿಯೆ ಬಸುಸುಯ್ವಂ (ಕಾರಿಶರ. ೩೬-೩೭); ಮನೆ ಮುರಿದರೆ ಕಟ್ಟಬಹುದು, ಮನ ಮುರಿದರೆ ಕಟ್ಟಲಾಗ (ಗಾದೆ). ೧೨. ಸಮಾಜದ ನೀತಿನಿಯಮಗಳನ್ನು ಮುರಿದುಬಿಡುವವರು (ಶಿಕ್ಷದ. ೦೦೦). ೧೩. ಕಳೆ ; ವ್ಯಯವಾಗು : ಕೊಬ್ಬರಿಎಣ್ಣೆ ಡಬ್ಬಿಯೊಳಗಿಂದ ಬೇಡಿದ್ದಾದರೆ ಬಹಳ ಮೋಹನತ್ತು ಮತ್ತು ವೇಳೆ ಮುರಿಯುತ್ತದೆ (ಮುಂಬವ್ಯಾ. ೦೩೯). ೨೦. ತಡೆ ; ನಿರೋಧಿಸು ; ಅಡ್ಡಿಪಡಿಸು : "ಇಂದು ನಾಗಪಂಚಮಿ, ಉಬ್ಬುರದ ಹೊತ್ತಿಗೆ ಹೋಗಬೇಡಿರಿ" ಎಂದು ನಾವು ಹೊರಟಾಗ ಬಹಳಷ್ಟು ಜನ ಮುರಿದು ಮಾತಾಡಿದ್ದರು (ಸ್ವ.ಚಿತ. ೯೬೪). ೨೧. ಸಾಯು ; ಮರಣಹೊಂದು : ಯುದ್ಧದಲ್ಲಿ ಮರಣವುಂಟಾದರೆ ವೀರಸ್ವರ್ಗವನ್ನು ಪಡೆಯುತ್ತೇವೆ . . . ಕ್ಷತ್ರಿಯನು ಮುರಿದಾನೇ ಹೊರತು ಮಣಿಯುವುದಿಲ್ಲ (ವಕಥಾ. ೨೩೩). ೨೨. (ಇನ್ನೊಬ್ಬರು ಕೊಡಬೇಕಾದ ಹಣ ಮುಂತಾದುವನ್ನು) ವಜಾ ಮಾಡಿಕೊಳ್ಳು ; ಹಿಡಿದುಕೊಳ್ಳು ; ಮರದಲ್ಲಿಟ್ಟುಕೊಳ್ಳು : ಕಳುಹಿಸದೆ ಹೋದರೆ ನಮದಾ ಯಾವ ವರ್ತಕನಿಗೆ ಕೊಟ್ಟಿರುತ್ತದೆಯೋ ಅವನು ಮುರುಕೊಂಡರೆ ಮುರಿಯುವೆವು, ಇಲ್ಲದಿದ್ದರೆ ಮಾಲ ಖರೀದಿ ಮಾಡಿ ಕೊಟ್ಟೇವು (ಮುಂಬವ್ಯಾ. ೨೬೩). ೨೩. ಮಾರ್ಪಡು ; ಬದಲಾಗು ; ವಿನಿಮಯವಾಗು : ಮಾಯಿಂದೆಗಳನ್ನು ಹಾಕಿ ಮಾರುವ ಈ ಹುಂಡಿಗಳನ್ನು ಕೊಳ್ಳಲು ಉಪಯೋಗಿಸುತ್ತಾರೆ. ಪೇಟೆಯಲ್ಲಿ ಇವು ಧಾರಾಳವಾಗಿ ಸಂಚರಿಸುತ್ತವೆ, ನಗದಿಗೆ ಮುರಿಯುತ್ತವೆ (ಹಾಶ್ರ. ೨೦೬).

ಮುರಿದುಕೊಳ್ಳು = ೧. ತುಂಡಾಗು ; ಕತ್ತರಿಸಿ ಹೋಗು : ಸರಪಳಿಗೆ ತುಕ್ಕು ಹಿಡಿದಿದ್ದರಿಂದ ತನಗೆ ತಾನೇ ಮುರಿದುಕೊಂಡು ಹೋಯಿತು (ರೂಢಿ). ೨. (ಇನ್ನೊಬ್ಬರು ಕೊಡಬೇಕಾದ ಹಣ ಮುಂತಾದುವನ್ನು) ವಜಾಮಾಡಿಕೊಳ್ಳು ; ಹಿಡಿದಿಟ್ಟುಕೊಳ್ಳು ; ವಶಕ್ಕೆ ತೆಗೆದುಕೊಳ್ಳು : ನಾನು ನಿಮಗೆ ಕೊಡಬೇಕಾಗಿರುವ ದುಡ್ಡನ್ನು ಸಂಬಳದಲ್ಲೇ ಮುರಿದುಕೊಳ್ಳಿ (ರೂಢಿ). ೩. ಕೊಲ್ಲು ; ಸಾಯಿಸು ; ನುಂಗಿಹಾಕು : ಆಚಾರ್ರು ಗಾಳಿಯಾಗಿ ತನ್ನನ್ನು ಮುರಿದುಕೊಳ್ಳಬೇಕು ಎಂದು ಹೂಡಿದ್ದ ಹೂಟವನ್ನು ತೊದಲುತ್ತಾ ಹೇಳಿದ (ಕಪ್ಪುರು. ೨೦೨).

ಮುರಿದುಮುರಿದು ಮಾತಾಡು = (ಸಂಕೋಚ, ಅನುಮಾನಗಳಿಂದ) ತಡೆದುತಡೆದು ಮಾತನ್ನಾಡು : "ಹಾ! ನೀವು ಇಬ್ಬರೇ ಇಲ್ಲಿ ಯಾವಾಗ–" ಎಂದು ಮುರಿದು ಮುರಿದು ಮಾತಾಡಿದೆ (ಕಳ್ಳಕು. ೩೩).

[ದೇ.॥ ತಮಿ. ಮುಱಿ, ಮುಱಿ; ಮಲ. ಮುಱಿ; ತೆಲು. ಮುಱಿಯು, ಮುರಿಯು]

**ಮುಱಿ²** (ನಾ). ೧. ಚೂರು ; ತುಂಡು ; ತುಣುಕು : ಪಾಱಿದುದ ಭ್ರಂಶಪಱಿರ ಖುರಧಾರಾಟಂಕಾಹತಿ ಮುಗಿಲ ಮುಱಿಗಳಂ ಕೆದಱಿದಿನಂ (ಶಾಂತಿಪು. ೦೦-೪೨); ವಿರಹಶಿಖಿಯಳುರೆ ಜಳಶೀಕರನಿಕರಮೆ ಬಲಿತ ತೆಱದಿನ ಬಲೆಯ ಮೈಯೊಳ್ ಕರಮೆಸೆದಿರ್ದುವು ಸಖಿಯರ್ ಕರತಳದಿಂ ತಳೆಯೆ ತೊಳಪ ಮುತ್ತಿನ ಮುಱಿಗಳ್ (ಲೀಲಾವ. ೦೦-೩೦); ಅರೆಗಣ್ಣಳಿಸೆವ ಕೋಣನ ತಲೆಯ ಮುಱಿಗಳಿಂ . . . ಎಸೆವ ದುರ್ಗಾನಿಲಯಮಂ ಮಹೋದ್ಯೋಗದಿಂ ವಸುಧಾಧಿಪಂ ಪೊಕ್ಕಂ (ರಶಕು. ೫-೩); ಒರ್ವ ಪುಳಿಂದನಿತಂಬಿನಿ . . . ಸುರಧನುವಿನ ಮುಱಿಯಂ ಕೈವಿಡಿದು ಬಂದಂದದೊಳೊಂದರಗಿಳಿ ಸಹಿತಂ ನಿಂದಿರ್ದಪಳ್ (ಜಗುಕಾ. ೨-೨೦). ೨. ಸೋಲು ; ಅಪಜಯ : 'ಮುಱಿವಡೆ' ಪರಾ.

ಮುಱಿಮುಱಿಯಾಗು = ತುಂಡು ತುಂಡಾಗು ; ಅನೇಕ ಚೂರುಗಳಾಗು : ಸುಯ್ವ ಸುಯ್ಲ ಸುೞಿಗೆ ನೆಲೆಗೆಟ್ಟು ಮುಱಿಮುಱಿಯಾಗಿ ನಿಡುಗಂಬಂಗಳ್ ತೇಂಕೆ (ರಾಜಶೇಕ್ಕ. ೦೬೦-೩೬). [< ಮುಱಿ₁/. ತಮಿ. ಮುಱಿ, ಮುರಿ; ಮಲ. ಮುಱಿ; ತೆಲು. ಮುರಿ, ಮುರಿಯು]

**ಮುಱಿಕಾಯಿ** (ನಾ). ಔಷಧಿಗೆ ಉಪಯೋಗಿಸುವ ಒಂದು ಬಗೆಯ ಕಾಯಿ : ಮುಱಿಕಾಯಿ ಸುಗ್ಗಿನಖಮಂ . . . ವರದೇವದಾರು ಕಣಮೊಂದಿರೆ ಮಾಸಿಯೊಳರೆದು ಬೇದುಗಟ್ಟು ವಿಷಘ್ನಂ (ಖಕುವ. ೦೬-೭೬).

[< ಘುಱಿಕಿಲ್₂ + ಕಾಯಿ₄ (< ಕಾಯ್₄)]

**ಮುಱಿಕಿಸು** 'ಮುಱುಕಿಸು' ನೋ.

**ಮುಱಿಕು**, ಮುಕ್ಕು₄, ಮುರುಕು₃, ಮುಱುಕು₃ (ನಾ). ೧. ತುಂಡು ; ಚೂರು ; ತುಣುಕು : ದುಱುದುಱಿವ ತಲೆಮಿದುಳ ದಂಡೆಯ ಹಱಿಗರುಳ ನೇಣವಸೆಯ ಮೂಳೆಯ ಮುಱಿ[ಪಾಠಾಂ. ಱು]ಕುಗಳ ಕಡಿಖಂಡ ಮಯವಾಯ್ತು ವಿಳ ಚತುರಂಗ (ಕುಮಾವ್ಯಾ. ೧೯-೩೩). ಮುಕ್ಕು₄ : ೨. ಯಾವುದಾದರೊಂದು ವಸ್ತುವಿನ ಸ್ವಲ್ಪಭಾಗವು ಮುರಿದು ಹೋಗಿರುವುದು ಮತ್ತು ಹಾಗೆ ಭಾಗಶಃ ಮುರಿದುಹೋದ ವಸ್ತು : "ಖಾದನವಿಶೇಷ ಗರ್ವಂಗಳೊಳ್ ಬಗೆಯ ಭಾಂಡದೊಳಗೀ ಪತ್ತುಂಡನವುದಾಗೆ ಮುಕ್ಕು" (ಕಬ್ಬಿಮು. ೬೦); ಹಾಲ ಕಂದಲು ತುಪ್ಪದ ಮಡಕೆಯ ಬೋಕು ಮುಕ್ಕೆನಬೇಡ (ಬಸವ. ೪೦೬); ಚಂದ್ರನು ಬಡವಾಗುತ್ತ ಬಂದು ಪ್ರಕಾಶಬಿಂಬದ ಒಂದು ಕಡೆಯಲ್ಲಿ ಮುಕ್ಕು ಕಾಣಿಸಿಕೊಂಡು, ಅದು ದೊಡ್ಡದಾಗುತ್ತ . . . ಕೃಷ್ಣಪಕ್ಷದ ಅಷ್ಟಮಿಚಂದ್ರನಾಗಿ ಬೆಳಗುವನು (ಜ್ಯೋತಿರ್ವಿ. ೨೦೩). ೩. ರಂಧ್ರ ; ಪೊಟರೆ : ಮುರುಡಿನಿಂ

**ಮೂಗ ಕೊಯ್** = (ಅಲಂ) ಅವಮಾನಗೊಳಿಸು ; ಮರ್ಯಾದೆಯನ್ನು ಕಳೆ : ಬಾಗಿಸಿದ ಬಿಲ್ಲಿನಲಿ ರಾಯರ ಮೂಗ ಕೊಯ್ದನು ಮದುವೆಯಲಿ (ಕುಮಾ.ಭಿ. ೬-೧೦). **ಮೂಗನುಳುಹು** = (ಅಲಂ) ಮರ್ಯಾದೆಯನ್ನು ಕಾಪಾಡು : ಮಾನವನ್ನು ರಕ್ಷಿಸು : ಅಸುರರ ಕೊಂದಮರರ ಮೂಗನುಳುಹಿದ ಬಿಸುಗಣ್ಣನುರುನಾಸಿಕಕೆ ವಸುಧೆಯೊಳಿಲ್ಲುಪಮಾನ (ಕುರಾಶಾಂ. ೬-೧೩) ; **ಮೂಗಿಗೆ ಕವಡೆ ಕಟ್ಟಿಕೊಳ್ಳು** = (ಅಲಂ) ಎದುರು ಮಾತನಾಡದೆ ಜೀತದಾಳಾಗಿರು, – ಅಧೀನವಾಗಿರು : ಮೂಗಿಗೆ ಕವಡೆ ಕಟ್ಟಿಕೊಂಡು ಆ ಮಡುಗಿ ಒಬ್ಬಳೇ ದುಡಿದು ಸಾಯಬೇಕು (ಸಂಜೆವ. ೬೨) ; ಇಷ್ಟನ್ನೆಲ್ಲ ಹೇಗೊ ಸಹಿಸಿಕೊಂಡು ಮೂಗಿಗೆ ಕವಡೆ ಕಟ್ಟಿಕೊಂಡು ಹೋಗುತ್ತಿದ್ದರೂ (ಮುಖಶಾ. ೩). **ಮೂಗಿಗೆ ತುಪ್ಪ ಹಚ್ಚು** = (ಅಲಂ) ಆಸೆಯನ್ನು ತೋರಿಸು : ಬಯಕೆಯನ್ನು ಹುಟ್ಟಿಸು : ಶಿವಪೂಜೆ, ಗುರುಸೇವೆಗಳ ನೆವಮಾಡಿ ದೊರೆಗಳ ಮೂಗಿಗೆ ತುಪ್ಪ ಹಚ್ಚಿಕೊಡ್ರಿಸಬೇಕೆಂದು ಮಾಡಿದ್ದಾಳೆ! (ಗಂಪ. ೧೮೯) ; ನರಗುಂದ ಜಕಾತಿ ಕಟ್ಟಿ ಕೆಲ್ಸಾ ಕೊಡಸ್ತೇನಿ ಅಂತ ಮೂಗಿಗೆ ತುಪ್ಪಾ ಹಚ್ಚಿಕೊಡಿಸಿದಾ (ತಿನಗು. ೬೬). **ಮೂಗಿನ ನೇರಕ್ಕೆ ಮಾತನಾಡು** = (ಅಲಂ) ತನ್ನ ಅನುಕೂಲಕ್ಕೆ ತಕ್ಕಂತೆ ಮಾತನ್ನಾಡು; ತನಗೆ ಸರಿಯಾಗುವಂತೆ ಮಾತನ್ನಾಡು : ನಿನ್ನ ಮೂಗಿನ ನೇರಕ್ಕೆ ಮಾತನಾಡಬೇಕಾದರೆ ಹೆಂಗಸರನ್ನು ಹೆಳವರನ್ನು ಮಂಕರನ್ನು ಮೂಢರನ್ನು ಕೇಳು ಹೋಗು (ಶಶಾ. ೯೯). **ಮೂಗಿನ ಮೇಲೆ ಬೆರಳಿಡಿಸು** = (ಅಲಂ) ಅತಿಯಾಗಿ ಆಶ್ಚರ್ಯಪಡಿಸು,– ವಿಸ್ಮಯಗೊಳಿಸು : ಆಕೆಯು . . . ತನ್ನ ಪ್ರಬಲವಾದ ಪರಾಕ್ರಮದಿಂದ ಮಹಾ ಚತುರರಾದ ಇಂಗ್ಲಿಷರಿಗೆ ಕೂಡ ಮೂಗಿನ ಮೇಲೆ ಬೆರಳಿಡಿಸಿರುವಳು (ಕೀಗಟ್ಟು. ೧೦೩). **ಮೂಗಿನಲಿ ಬೆರಳಿಡು** =(ಅಲಂ) ಅತಿಯಾಗಿ ಆಶ್ಚರ್ಯಪಡು,– ವಿಸ್ಮಯಗೊಳ್ಳು : ಕೊಂಡು ಬರುತಿದೆ ಭಟರು ಮನ್ನೆಯ ಗಂಡನಾಗ್ಯೆ ಜೀಯ ಎನೆ ಖತಿಗೊಂಡು ಕುರುಪತಿ ನೋಡಿದನು ಮೂಗಿನಲಿ ಬೆರಳಿಟ್ಟು (ಕುಮಾ.ದ್ರೋ. ೬-೨೩). **ಮೂಗಿನವರೆಗೆ ಕೆಲಸ** = (ಅಲಂ) ಬಹಳವಾದ ಕೆಲಸ ; ಅತಿಯಾದ ದುಡಿಮೆ : ಬೇಸಾಯದ ಸಮಯ ಅವನಿಗೆ ಮೂಗಿನವರೆಗೆ ಕೆಲಸ (ಸ್ವಪ್ನಹೂ. ೭). **ಮೂಗು ಚಾಚು** = (ಅಲಂ) ಮತ್ತೊಬ್ಬರ ವಿಷಯದಲ್ಲಿ ತಲೆಹಾಕು ; ಅಧಿಕಪ್ರಸಂಗ ವಹಿಸು : ನಿಮ್ಮ ಮನೆತನದ ವಿಷಯದಲ್ಲಿ ಮೂರನೆಯವನಾದ ನಾನು ಮೂಗುಚಾಚಲು ಬರುವುದು ಸರಿಯಲ್ಲವೆಂದು ನನಗೂ ಅನಿಸುತ್ತದೆ (ಗಂಗಾಶ. ೬೩). **ಮೂಗು ತಿಕ್ಕಿಸು** = (ಅಲಂ) ನಿರುತ್ತರಗೊಳಿಸು ; ಸೋಲಿಸು : ತಂಟ ಕೇಶವನು ಸುಮ್ಮನಿರಲಿಲ್ಲ. ಅವನು ಇಂಥ ಎಷ್ಟೋ ಮಾಸ್ತರರನ್ನು ಮೂಗು ತಿಕ್ಕಿಸಿದ್ದನು (ಕಪಾಕೀ. ೨೩). **ಮೂಗು ತಿಕ್ಕು** = (ಅಲಂ) ನಿರುತ್ತರಗೊಳ್ಳು ; ಶರಣಾಗು ; ಸೋಲು : ಅವನ ಮುಂದೆ ದೊಡ್ಡ ದೊಡ್ಡ ಸನಾತನಿಗಳು ಮೂಗುತಿಕ್ಕಬೇಕು ! (ಕುಂಹಿಂ. ೨೨) ; ಶ್ರೀಮಂತರೆದುರಿಗೆ ಈವರೆಗೂ ಮೂಗುತಿಕ್ಕಲಿಲ್ಲ (ಜವಜಾ. ೫೬). **ಮೂಗುಮುರಿ** = (ಅಲಂ) ಅವಮಾನಗೊಳಿಸು ; ಅವಹೇಳನ ಮಾಡು : ಮೂದಲಿಸಿ ಮೂಗು ಮುರಿದಟ್ಟಿದರೋ ನಿನ್ನೆಡೆಗೆ ನನ್ನ (ಕಾವ್ಯ. ೬೯); ವಯಸ್ಸಿಗೆ ಬಂದ ಹೆಣ್ಣಿಗೆ ಬೇಗ ಮದುವೆ ಮಾಡದಿದ್ದರೆ ನೋಡಿದವರೆಲ್ಲಾ ಮೂಗುಮುರಿಯುತ್ತಾರೆ (ಮುಳೀ. ೮೬); ಮಹಾದೇವಿ ಮೂತಿ ತಿರುವಿದಳು, ಮೂಗುಮುರಿದಳು (ಸಂಸಾಂ. ೨೯). **ಮೂಗು ಮೇಲಾಗು** = (ಅಲಂ) ಗೌರವವು ಹೆಚ್ಚಾಗು ; ಪ್ರತಿಷ್ಠೆಯು ಹೆಚ್ಚು : ಊರ ಹೆಂಗಸರು ಆಕೆಯ ಸಹಜ ಸಿಂಗಾರ ಬಣ್ಣಿಸಿದರು, ದೇಸಾಯರ ಮೂಗುಮೇಲಾಯಿತು (ಪಿರಾಶ. ೧೦೦). **ಮೂಗು ಹಾಕು** = ಮೂಗುಚಾಚು : "ನೀವು ನಮ್ಮ ಮಾತಿನಲ್ಲಿ ಮೂಗು ಹಾಕುವುದು ಬೇಡ" ಎಂದು ಸುಂದರಿ ಅವರಿಗೆ ಎಚ್ಚರಿಸಿದಳು (ಹಳ್ಳಹಾ. ೦೮೯). **ಮೂಗುಹಾಯಿಸು** = ಮೂಗುಚಾಚು : ತಮ್ಮ ವ್ಯವಹಾರದಲ್ಲಿ ಮೂಗು ಹಾಯಿಸುವ ಪ್ರೇತಾತ್ಮಗಳಿಗೆ ಕಾಣಿಕೆಗಳನ್ನು ಪ್ರಾಣಿಗಳನ್ನು . . . ಅರ್ಪಿಸುತ್ತಾರೆ (ಕಂಕೋ. I. ೬೬೦). **ಮೂಗು ಹೋಗು** = (ಅಲಂ) ಅವಮಾನವಾಗು ; ಮರ್ಯಾದೆಯು ಹೋಗು : ಈಗಲೀ ಧರ್ಮಶ್ರವಣ ನೀನಾಗಳೇಚಿಸಿ ನುಡಿದ ಭಾಷೆಗೆ ಮೂಗುಹೋದುದೆ ಮಚ್ಚದಲಾ ಮಾತುಗಳು ಹಳಸುವವೆ (ಕುಮಾ.ಶ. ೨೬-೩೪). **ಮೂಗುಳ್ಳವ** = (ಅಲಂ) ಮಾನವಂತನಾದವನು ; ಸ್ವಾಭಿಮಾನಿ : ಈ ನಪುಂಸಕರೊಡನೆ ಹುಟ್ಟಿದ ನಾನು ಮೂಗುಳ್ಳವನೆ ಮಾನಿನಿ (ಕುಮಾ.ಭಿ. ೩-೯೮).

[ದೇ.॥ ತಮಿ. ಮಲ. ಮೂಕ್ಕು ; ಕೊಡ. ಮೂಕಿ ; ತುಳು. ಮೂಗು, ಮೂಕು ; ತೆಲು. ಮುಕ್ಕು ; ಕೋಲಾ. ಮುಕ್. ಮೂಕ್ಕೊ ; ನಾಯ್ಕ್. ಮುಂಗರ್ ; ಪರ್ಜಿ. ಕುಇ. ಮುಂಗೆಲಿ ; ಕುವಿ. ಮುಂಗೆಲಿ, ಮೂಂಗೆಲ್ಲಿ]

**ಮೂಗುಂದ** (ನಾ). ಒಂದು ಪ್ರದೇಶದ ಹೆಸರು : ಮೂಗುಂದ ಪನ್ನೆರಡು ಪುಲಿವಟ್ಟಿ ಪನ್ನೆರಡುಂ ಕಲ್ವತ್ತಿಯೆಂಬುದ (ಎಕ. VIII, ಸೊರಬ. ೯೬೭-೦೩; 991): ಬಿಜ್ಜರಸರ್ ಎಡವಟ್ಟಮೆಪ್ಪತ್ತುಮಂ ರಟ್ಟಪಳ್ಳಿಯೆಪ್ಪತ್ತುಮಂ ಮೂಗುಂದಮುಂ ಪನ್ನೆ × × ತ್ರಿಭೋಗಾಭ್ಯಂತರಸಿದ್ಧಿ (ಕಇ. IV, ೯೦-೦೦ ; 11ನೆಯ ಶತ). [ಮೂ<sub>1</sub> (< ಮೂಱು) + ಕುಂದ<sub>3</sub>]

**ಮೂಗುಗಾಯ** (ನಾ). ಹೊರಗೆ ಗಾಯ ಕಾಣಿಸದಿದ್ದರೂ ಒಳಗೇ ನೋಯುವ ಗಾಯ : ಅವನು ಜಾರಿಬಿದ್ದುದರಿಂದ ಮಂಡಿಯಲ್ಲಿ ಮೂಗುಗಾಯವಾಗಿದೆ (೬೦೨). [ಮೂಗು + ಗಾಯ]

**ಮೂಗುಜಾತಿ** (ನಾ). ಮಾತನ್ನಾಡಲು ಬಾರದ ಪ್ರಾಣಿ, ಪಕ್ಷಿ ಇತ್ಯಾದಿ : ಮೂಗುಜಾತಿಗಳ್ ಮೇವುದು ಪುಲ್ ಜಲಂ ಕುಡಿವುದಿರ್ಪೆಡೆಯುಂ ಪಟುವಂತುಮಿಷ್ಟಸಂಸೇವನೆಯುಳ್ಳಿ ಮೆಯ್ಯಱಿಯದಿರ್ದವನೇಂ ಗಳ ಕೊಲ್ವುದೊಳ್ಳಿತೇ (ಶಂಪು. ೧೧-೯). [ಮೂಗು + ಜಾತಿ]

**ಮೂಗುಡ್ಡೆ, ಮುಗುಡ್ಡೆ ; ಮುಗ್ಗುಡ್ಡೆ** (ನಾ). ೧. ಮೂರು ಗುಡ್ಡೆ, –ರಾಶಿ : ಮುಗ್ಗುಡ್ಡೆ, ಮೂಗುಡ್ಡೆ : ಮುಕ್ಕೂಡೆ, ಮೂಗೊಡೆ (ಶಬ್ದಮ. ೩೫೩ ಪ್ರಯೋ). **ಮುಗುಡ್ಡೆ** : ೨. ಮೂರು ಗಡಿಗಳು ಸೇರುವ ಕಡೆ ಗುರುತು ಮಾಡಿರುವ ಗುಡ್ಡೆಗಳು : ತೆಂಕಲು ಬೆಳ್ಳನೂರ ಪೊಲದ ಸೀಮೆ ನೈರಿತ್ಯದಲು ಶಂಖದ ಬಸದಿಯ ಬೆಳ್ಳನೂರ ಪೊಲದ ಮೇರೆಯ ಮುಗುಡ್ಡೆ (ಸೌಇಇ. XX, ೬೪-೩೫; 1112): ಮಾದೀಹಳಿಯ ಬೇಗೂರ ಮುಗುಡ್ಡೆಲಿ ನೆಟ ಕಲು (ಎಕ. XIV. ಗುಂಡ್ಲುಪೇ. ೦೨೬-೭; ?). **ಮುಗ್ಗುಡ್ಡೆ** : ೧. ಮುಗ್ಗುಡ್ಡೆ, ಮುಪ್ಪೊಟರ್ (ಶಮದ. ೦೯೮ ಪ್ರಯೋ) ; ಮುಗ್ಗುಡ್ಡೆ, ಮುಚ್ಚವಡಿ (ಶಬ್ದಮ. ೬೮ ಪ್ರಯೋ). ೨. ತಮ್ಮ ಸೀಮಾನ್ತರವಗ್ ಆಗ್ನೇಯದ ಕೋಣೆಕೊಳ್ ಮುಗ್ಗುಡ್ಡೆಯ ನೊಸಕಲ್ಲೆಂಬ ಬಳಿಯ ಕಲ್ಲು (ಪ್ರಕಂ. ೦೯೨೦, ೦೦-೮೬೯; 967): ಕರ್ದುಗಿನ ಪೊಲದ ಕಟ್ಟಲೆವಾಡದ ಪೊಲದ ಮುಗ್ಗುಡ್ಡೆಯ ಬೇಳದ ಮರಂ (ಸೌಇಇ. XI-i, ೪೮-೦೪; 1002) ; ಅದಕೆ ಪಶ್ಚಿಮ ಕಾರಡಿಕೆ ಬೇವಿನ ಹಳ್ಳಿ ಪೊನ್ನಾಪುರ ಹೊಲ ಕೂಡಿದ ಮುಗ್ಗುಡ್ಡೆ ಬಳಿಯ ವಾಮನಮುದ್ರೆ (ಎಕ. XIV, ೨೨೩-೨೩೮; 1551). ೩. (?) : ಹಿಡಿದ ಶಂಕುಪ್ರಮಾಣದ ಗೇಣಿಂದೆ ಉತ್ತರಮಾಗಿರೆ ಬೀಸಿ ಸೈತಿರಿಸಿ ನಡುವೆ ಶಂಕುವುಮಂ ಪೊಸ್ಕು ಪೊಱಮಟ್ಟ ನೆಟಲನಾ ರೇಖೆಯೊಳರ್ಚಿಸಿಟ್ಟು ಹಿಡಿಯ ಸೂತ್ರಮಂ ಪಡುವಲುಂ ಮೂಡಲುಮಾಗಿರ್ದಂ ಮತ್ತಲ್ಲಿ ಮಚ್ಚಂ ಬೀಸೆ ಬಡಗಲುಂ ತೆಂಕಲೆಂದಱಿ ಮೇಣಾದ್ರವ[ತು]ರೆಯುಂ ನೋಡಿ ಮುಗ್ಗುಡ್ಡೆಯುಂ ನೀದು ಕೊಳ್ಗೆ (ಲೋಕೋಪ. ೩-೦೬). [ಮೂ<sub>1</sub> (< ಮೂಱು) + ಗುಡ್ಡೆ<sub>1</sub>]

**ಮೂಗುತಿ, ಮೂಕುತಿ** (ನಾ). ಮೂಗಿನಲ್ಲಿ ಧರಿಸುವ ಒಂದು ಬಗೆಯ ಒಡವೆ : ನಾಸಾಭರಣ ; ಮೂಗುಬೊಟ್ಟು : ಹೊನ್ನೋಲೆಯು

ಚನ್ನೆಗೆ ಮೂಗುತಿಯ ಮುಂಗುಳ್ಗೆ . . . ರುದ್ರಾಣಿಗೆ ರಕ್ಷಣಾರ್ಥಂ ತಂದೆ ನಿಯಾಮಿಸಿಕೊಟ್ಟ . . . ಶೋಡಷಸಹಸ್ರವಿಳಾಸಿನಿಯರ್ವೆರಸು ನಡೆತಂದು (ಗಿರಿಜಾ. ೩-೯೦ ವ); ಮಾಣಿಕ್ಯದ ಕರ್ಣಪೂರದ ಮೂಗಿನ ಮೂಗು [ಶಾಕಾಂ. ಕು]ತಿಯ ಪಚ್ಚೆಯ ಪದಕದ . . . ಶೃಂಗಾರಂ ಪಳಂಚನಾಗೆ (ರಟ್ಟಮತ. ೨-೨೩ ವ); ಮುತ್ತಿನ ಮೂಗುತಿಯಂ ವಿರಚನೆಗೆಯ್ವುಳ ದೊರ್ವಳ್ ತರುಣಿಯ ನಾಸಾಮುಕುಳದೊಳು (ಚಯ್ಯಸಾ. ೩-೯); ಮೂಗುತಿ ಮುಂಭಾರ ಎಣಗಂಟು ಹಿಂಭಾರ ನನ ಗೆಣೆಯ ನೀ ತಂದ ಬಣ್ಣಾ ನೆರಿ ಭಾರ (ಹಳ್ಳಿಹಾ. ೭೩); ಮೂಗಿಗಿಂತ ಮೂಗುತಿ ಭಾರ (ಗಾದೆ). **ಮೂಕುತಿ :** "ಘೋಣಾಂಕುಶಂ ಪೇಟಿ ಮೂಕುತಿಯಕ್ಕು" (ಮಂಗರಾ. ೯೯-೨೩); ಮುಖಬಿಂಬದೊಳ್ ಮುತ್ತಿನ ಮೂಕುತಿಯಂ ಮೇಳೈಸಿ (ವಜುರ. ಹ. ೦೬೬-೦೯); ಭೂಗಧಿನಾಥವಲ್ಲಭೆಯ ರೂಪು ಸಮಸ್ತನಿಳಿಂಪಕಾಮಿನೀ ಪೂಗದ ಚೆಲ್ವ ಮೂಕುತಿಗಳಲ್ಲಿಯ ಮುತ್ತುಗಳಲ್ಲಿ ಬೀಬಿಸಲ್ಕೆ (ಶಾರಶ. ೬-೩೮); ತುಱುಗಿದ ದಿವ್ಯಕಾಂತಿಯ ಮೂಕುತಿಯಿಂದ ಸರಸಿಜಗಂಧಿ ಯೊಪ್ಪಿದಳು (ಕಂಪಿಎ. ೯-೭೩). [ದೇ.॥ ತಮಿ. ಮಲ. ಮೂಕ್ಕುತ್ತಿ ; ತುಳು. ಮೂಕುತಿ, ಮೂಂಕುತಿ, ಮೂಂಕುತ್ತಿ, ಮೂಕುದಿ, ಮೂಗುತಿ]

**ಮೂಗುತಿಸೊಪ್ಪು** (ನಾ). ಒಂದು ಬಗೆಯ ಸೊಪ್ಪು : ಮೂಗುತಿಸೊಪ್ಪು, ಹೊನ್ನಾವರಿಕೇಸೊಪ್ಪು (ಪ್ರೈ ಶಿಗಿ. ೭೭-೦೫೬೯).

[ಮೂಗುತ್ತಿ + ಸೊಪ್ಪು₂]

**ಮೂಗುದಾಣ**, ಮುಗದಾಣ, ಮುಗುದಾಣ (ನಾ). ೧. ಹಸು, ಎಮ್ಮೆ ಮುಂತಾದ ಪ್ರಾಣಿಗಳನ್ನು ಹಿಡಿತದಲ್ಲಿಟ್ಟುಕೊಳ್ಳಲು ಮೂಗಿಗೆ ಹಾಕುವ ದಾರ ; ಮೂಗುದಾರ : ಕೋಣನಿಗೆ ಮೂಗುದಾಣವಿರಲಿಲ್ಲ (ಕಂಠಹು. ೪೩). ೨. (ಅಲಂ) ಅಂಕೆ ; ಹಿಡಿತ ; ನಿಯಂತ್ರಣ : ವೇಗವತಿನಾಮ ವಿಜ್ಜಯವಿಠ್ಠಲ ವೇಗ ಮೂಗುದಾಣ ಇಕ್ಕಿ ಮೊಗ ಮಾಣಿ ಪದು (ಪೋಕ್ಷದೀ. ೪೩-೬); ಕೋಣಪನ ಮೂತಿಗೆ ಕಳ್ಳಂ ಕುಡಿಸಿ, ಗತಿಗೆ ಮೂಗುದಾಣವನಿಕ್ಕಿ ಪಡೆಪಡೆಯ ಬೇಸರವನಾರಿಸಲ್, ಕುಣಿಕುಣಿಸಿ ಸೆಳೆ ದೊಯ್ಯುತಿಹನೆಮ್ಮ ಹಾಸ್ಯವಿದ್ಯಾಕುಶಲಸೇನಾನಿ ! (ಶ್ರೀರಾಮಾ. ೬೬೯-೩೦೦); ಸಂಪತ್ತಿನ ಮೂಗುದಾಣವು ನಿಮ್ಮ ಕೈಯಲ್ಲಿದೆ ಎನ್ನುತ್ತಾರೆ (ಏಪ್ಪಾಪು. ೦೫). **ಮುಗದಾಣ :** ೧. ಮುಗದಾಣ ಹಾಕಿ ಹಗ್ಗ ಹಚ್ಚಿದ ಎತ್ತು ಸುಮ್ಮನೆ ಯಜಮಾನನ ಭಾರವನ್ನು ಹೊರುವಂತೆ, ವರ್ಣಾಶ್ರಮಬದ್ಧರಾದ ಜನರು ಈಶ್ವರನು ನಿಯಮಿಸಿದ ಕರ್ಮಗಳನ್ನು ಸುಮ್ಮನೆ ಮಾಡುತ್ತ ಹೋಗುವರು (ಶಾಮ್ಯಶ. ೩೨); ಸಾಕ್ರೆಟೀಸನ ಹನನ ಬ್ರೂನೋನ ದಹನ . . . ಎಲ್ಲೆಡೆಯೊಳೂ ಜ್ಞಾನ – ನಂದಿಗೇ ಮುಗದಾಣ ! (ಕರುಶ್ರಾ. ೬೯-೯). ೨ ಗೀತೆಯಂ . . . ಗ್ರಾಮಗಳನ್ನು ಕೊಲ್ಲಲಿಕ್ಕೆ ಹೇಳುವುದಿಲ್ಲ. ಕಾಮಗಳಿಗೆ ಮುಗದಾಣವನ್ನು ಹಾಕಲಿಕ್ಕೆ ಹೇಳುತ್ತದೆ (ಗೀತಾಸಂ. ೯೯); ಈ ಮೆರವಣಿಗೆಯ ಮುಗದಾಣ ಅವರ ಕೈಯಲ್ಲಿತ್ತು (ಸಮಜೀ. ೯೯೬). **ಮುಗುದಾಣ :** ೧. ಎತ್ತ ಕಾಯುವಣ್ಣ ನಮ್ಮೆತ್ತ ಕಂಡೇನೊ ಮುತ್ತೀನ ಹಗ್ಗ ಮುಗುದಾಣ ಹಾಕ್ಕೊಂಡು ಹುತ್ತೀನ ಕೆಳಗ ಮಲಗ್ಯಾನೊ (ಜನಗೀ. ೦೭). ಹಿಡಿ, ಹಗ್ಗ, ಮಿಣಿ, ಜತ್ತಿಗೆ, ಬಾರಕೋಲು, ಮುಕ್ಕಡ, ಮುಗುದಾಣ ಇವೆಲ್ಲ ಸಾಮಾನ್ಯವಾಗಿ ಎತ್ತುಕಟ್ಟಿದವರ ಮನೆಯಲ್ಲಿ ಇರತಕ್ಕ ವಸ್ತುಗಳೇ (ಶಿಕವ. ೦೭೬). ೨. ಮೂಢಸಂಪ್ರದಾಯದ ಮುಗುದಾಣದಿಂದ ನೆರೆದ ಜನಗಳು ಕವಲೆತ್ತಿನಂತೆ ತಲೆಹಾಕಿ 'ಹೂಂ' ಎಂದರು (ಶೀದಾಶ. ೮೩); ತಿಗುರಿ ಓಡುತ್ತಿರುವ ಕಾಲಿಗೆ ಪಥಿಕನ ಬಯಕೆಯೇ ಮುಗುದಾಣ (ರಕ್ತನ್ಯ. ೨೩೭). 'ಮೂಗುದಾರ' ಪರಾ. [ಮೂಗು + ದಾಣ₀ (< ದಾವಣ₁). /ಮುರಾ. ಮುಗದಾಣ]

**ಮೂಗುದಾರ** (ನಾ). = ಮೂಗುದಾಣ ೧ : ಮೂಗುದಾರ ಹಾಕಿ ಎತ್ತುಗಳನ್ನು ಎಳೆಕೊಂಡು ಹೋಗೋ ಹಾಗೆ ಇನ್ನೊಬ್ಬರ ಭಾವನೆಗಳು ನಿಮ್ಮನ್ನು ಎಳೆಕೊಂಡು ಹೋಗಬಾರದು (ಪೂರ್ಗವ. ೩೩). 'ಮೂಗುದಾಣ' ಪರಾ. [ಮೂಗು + ದಾರ₁]

**ಮೂಗುದುಱಿಸು** (ಕ್ರಿ). ಮೂಗನ್ನು ಕೆರೆದುಕೊಳ್ಳು : ಅದರಿರ್ವರ್ಗ ಮೊರ್ವರೊರ್ವರೊಳ್ ಮೂಗುದುಱಿಸಲಾಗದ ಕಷ್ಟಮುವರ್ಗಂತು ಪೊಡಂಬಡಾಗದು (ಕಂಠಹಾ. ೦೨-೦೦೩ ವ); ಈತಂ ಮನೆಯ ಕಿಱುಕುಳ ವ್ಯಸನಂ ಮಾಡದಿರೆ ತನ್ನ ಕಿಱಿಯಬ್ಬೆ ಜಡಿದೊಡೆ ಮುಳಿದು ಬಂದೊಂ ಮೂಗುದುಱಿಸಲಾಱದ ಕಷ್ಟಸಂದಾ ತೆಱಸಂ ಪೇಟ್ದು (ಕಾಪುಂಪು. ೬೩).

[ಮೂಗು + ತುಱಿಸು]

**ಮೂಗುನಾಚಿ** (ನಾ). (ಅಲಂ) ನಾಚಿಕೆಗೆಟ್ಟವನು ; ಲಜ್ಜೆಗೇಡಿ : ಈ ಸಕಲದೊಳಗೆ ಒಂದು ಸಯವಿಲ್ಲದೆ ನಾವು ಹಿರಿಯರು ನಾವು ಲಿಂಗವಂತ ರೆಂಬರು ಇದಿರ ಕೈಯಲ್ಲಿ ಎನಿಸಿಕೊಳುತ್ತಿಹರು ಮನನಾಚದೇ ಇಂತಾ ಮೂಗುನಾಚಿಗಳ ಮೆಚ್ಚುವನೇ . . . ಪೂರ್ವಾಚಾರ್ಯ ಸಂಗನ ಬಸವಣ್ಣ (ಶರಶಿ. ೭೦-೩೯೦). [ಮೂಗು + <ನಾಣ್ಚು₂ + — ಇ₃]

**ಮೂಗುನೇಣು** (ನಾ). = ಮೂಗುದಾಣ ೧ : ಪೇರ್ಗಳಂ ಬಿಸುಟ ಹೋರಿಗಳ ಚಪ್ಪರಣೆಯಿಂ ನಿಲಿಸಿ ಮೂಗುನೇಣೆಡುತೆ . . . ನಾನಾ ತೆಱದ ಸದಳಿಗಳ್ ನಡೆದು ಬರುತಿರ್ದರಂದು (ಜಬಪು. ೪೭-೯೭).

[ಮೂಗು + ನೇಣು (<ನೇಣ್₁)]

**ಮೂಗುನೋವು** (ನಾ). ೧. ಮೂಗಿನಲ್ಲಿ ಉಂಟಾಗುವ ನೋವು.– ಬಾಧೆ : ಮೂಗಿನ ಮೇಲೆ ಕುರು ಎದ್ದು ಅವನು ಮೂಗುನೋವಿನಿಂದ ಪರದಾಡುತ್ತಿದ್ದಾನೆ (ರೂಂ). ೨. = ಮೂಗುಗಾಯ : ಅವಳು ಮೇಲಿನಿಂದ ಬಿದ್ದುದರಿಂದ ಮೈಯಲ್ಲೆಲ್ಲ ಮೂಗುನೋವಾಗಿದೆ (ರೂಂ). ೩. (ಅಲಂ) ಹೇಳಿಕೊಳ್ಳಲಾಗದ ಸಂಕಟ.– ಹಿಂಸೆ ; ಮೂಕ ವೇದನೆ : ಅವನು ತನ್ನ ದುಃಖವನ್ನು ಯಾರೊಂದಿಗೂ ಹೇಳಲಾರದೆ ಮೂಗುನೋವನ್ನು ಅನುಭವಿಸುತ್ತಿದ್ದಾನೆ (ರೂಂ). [ಮೂಗು + ನೋವು]

**ಮೂಗುಬಟ್ಟು**, ಮೂಗುಬೊಟ್ಟು (ನಾ). = ಮೂಗುತಿ : ಅವಳು ಧರಿಸಿರುವ ಮುತ್ತಿನ ಮೂಗುಬಟ್ಟು ತುಂಬ ಚೆನ್ನಾಗಿದೆ (ರೂಂ). **ಮೂಗು ಬೊಟ್ಟು :** ಮನೋರಮೆ . . ಸುಂದರಯುವತಿ . . . ಮೂಗಿನಲ್ಲಿ ಮೂಗುಬೊಟ್ಟು, ಕೈಯಲ್ಲಿ ಗಾಜಿನ ಎರಡೆರಡು, ಮುತ್ತಿನ ಒಂದೊಂದು ಬಳೆಗಳಿವೆ (ಶ್ರೀಕಾಕ. ೨). [ಮೂಗು + ಬಟ್ಟು]

**ಮೂಗುಬೊಟ್ಟು** 'ಮೂಗುಬಟ್ಟು' ನೋ.

**ಮೂಗುಬ್ಬಸ** (ನಾ). = ಮೂಗುನೋವು ೩ : ಮುಸುಕಿದರಿ ಶರ ಜಾಲವನು ಖಂಡಿಸಿ ರಘುಕ್ಷಿತಿನಾಥ ಮೂಗುಬ್ಬಸವ ಮಾಡಿದನೆಸುಗೆಯಲಿ ಬಳಿಕಾ ನಿಶಾಟಂಗೆ (ತೊರರಾ. ೩-೬-೩೭); ಚಿಂತಾಸಾಗರದೊಳ್ ಮುಳುಂ ಗಿದ ಮೂಗುಬ್ಬಸವಿಱಿದು . . . ಪೋಪೆವೆಂಬುದುಂ (ತಕವಂ. ೪೮-೦೩); ಬಡತನದ ಮೂಗುಬ್ಬಸವನ್ನು ಇದಕ್ಕಿಂತ ಮೇಲಾಗಿ ವ್ಯಕ್ತಪಡಿಸುವುದು ಹೇಗೆ! (ಸವಾರೊ. ೩೭). [ಮೂಗು + ಉಬ್ಬಸ]

**ಮೂಗುಮಾಱಿ** (ನಾ). (ಅಲಂ) ಮರ್ಯಾದೆಯನ್ನು ಕಳೆದುಕೊಂಡ ವ್ಯಕ್ತಿ ; ಮಾನಗೇಡಿ : ಅಱಿದಱಿದು ಮತಿಗೆಟ್ಟ ಮಾನಸಕುಱಿಯಲಾ ನೆರೆಕಂಡು ಕಂಡೆಚ್ಚರದ ಖೂಳನಲಾ ವಿವೇಕದ ಮೂಗುಮಾಱಿಯಲಾ (ಕುಮಾ. ೬-೬೦); ತಮ್ಮ ನಗರದ ಸೂಳೆಗೇರಿಯೊಳ್ ಪಂಥವಂ ನುಡಿದು ನಿಲ್ಲದೆ ಬಂದ ಮೂಗುಮಾಱಿಗಳಿವರಲಾ (ಜಬಪು. ೨೩-೬).

[ ಮೂಗು + ಮಾಱು₁ + — ಇ₃ ]

**ಮೂಗುರಿ** 'ಮುಂಗುರಿ' ನೋ.

**ಮೂಗುರ್ಚಿ** (ನಾ). ೧. ಮೂಗು ಚುಚ್ಚಿಸಿಕೊಂಡವನು ; ಮೂಗು ದಾರ ಹಾಕಿಸಿಕೊಂಡವನು. ೨. (ಅಲಂ) ಬೇರೆಯವರಿಗೆ ಅಧೀನ ನಾಗಿರುವ ವ್ಯಕ್ತಿ.– ಆಳಾಗಿರುವ ವ್ಯಕ್ತಿ : ಲೋಕದಲಿ ವಿಗಡ

ಬಿರುದನು ಬಿಸುಟು ಬಡಿಹೋರಿಗಳು ಪಾಂಡವರಂತೆ ಮೂಗುರ್ಚಿಗಳ ದಿನ್ನಾರುಂಟೆನುತ ಮುಳುಗಿದಳು ನಳಿನಾಕ್ಷಿ (ಕುಮ್ಮಾವ್ಯ. ೩-೬೦).

[ ಮೂಗು + ಉರ್ಚು + — ಇ$_3$ ]

**ಮೂಗುರ್ಚು** (ಕ್ರಿ). (ಎತ್ತು, ಎಮ್ಮೆ ಮೊದಲಾದುವುಗಳ) ಮೂಗು ದಾರವನ್ನು ಕಳಚು ; ಸ್ವೇಚ್ಛೆಯಾಗಿ ಬಿಡು : ಮೂಗುರ್ಚಿದಮ್ಮೆ ಪೋರಿಯುಂ ಪೆಜಮೆಟ್ಟಿದ ತಗರುಂ ತಾಗುವಂತೆ ತಂತಮ್ಮೊಳಿರ್ದಾನೆಗಳಂ ನೋಂಕಿ . . . ಇರ್ದ ಪದದೊಳ್ (ಶಾಂತಿಪು. ೬-೮೨ ವ).

[ ಮೂಗು + ಉರ್ಚು ]

**ಮೂಗುವಡಿಸು** (ಕ್ರಿ). ಮಾತಿಲ್ಲದಂತೆ ಮಾಡು: ಮೌನವಾಗಿಸು; ಮೂಕನನ್ನಾಗಿ ಮಾಡು : ಮತ್ತಪರ ನುಡಿಯುಲಿಯದೆ ಮೂಗುವಡಿಸಿ . . . ಕಾಡುತಲ್ಲಿಹುದೊಂದು ನಡ ಮೋಹರಾಜನ (ತ್ರಿಶಿಸಾಂ. ೯-೯೮).

[ ಮೂಗುವಡು + — ಇಸು$_3$ ]

**ಮೂಗುವಡು** (ಕ್ರಿ). ಮಾತಿಲ್ಲದಂತಾಗು; ಮೌನವಾಗು: ಮೂಕವಾಗು: "ಮೂಗುವಡು (ಮೂಗು + ಪಡು) — ಮೌನೇ" (ಶಮುಧಾ); ಮಿಡುಕದೆ ಭೀಷ್ಮ ನೋಡುತಿರು ಕುಂಭಜ ಸುರ್ಕಿರು ಕರ್ಣ ಮಿಕ್ಕು ಮಾರ್ನುಡಿಯದೆ ಮೂಗುವಟ್ಟಿರು (ಕುಂಶಾ. ೭-೩೩); ಗುರುಬಸವ ನಿನ್ನ ಕೋಡಿಂ ಸುರಭಿ ಕರಂ ಮೂಗುವಟ್ಟುದದು ಕಲ್ಲಾಯ್ತು ಪರುಷಂ (ಬಸರ. ೯-೨); ಬಗ್ಗಿಸಲಿ ಕೋಗಿಲೆ ! ಏನೀ ಮಾಮರದ ಸೆಳೆಗೊಂಬಿನೊಳ್ ಮೂಗುವಟ್ಟಿರ್ಪಯ್ ? (ರಾಮಾಶ್ವ. ೨-೦). [ ಮೂಗು + ಪಡು$_1$ ]

**ಮೂಗುಸನ್ನೆ** (ನಾ). ಮೌನವಾಗಿ ಸಂಜ್ಞೆ ಮಾಡುವುದು; ಮಾತನಾಡದೆ ಅಂಗಾಂಗಗಳ ಚಲನೆಯಿಂದ ತಿಳಿಯಪಡಿಸುವುದು : ಮೂಗುಸನ್ನೆ ಮಾತ್ರ ಕಾಣಿಸಿದಾಗಿನ ಅನುಭವ ನನ್ನ ಶ್ರೋತೃಗಳಿಗೆ ಲಭಿಸಿರಬೇಕು (ಪಂಟಿರು. ೩೯). [ ಮೂಗು + ಸನ್ನೆ$_2$ ]

**ಮೂಗುಸಿರ್** (ನಾ). = ಮೂಗುಜಾತಿ : ಎನ್ನೊಡೆಯ, ತಜಿಸಂದು ತುಟುಗಳನ್ ಕೊಲ್ವೆಯಾ? ಮೂಗುಸಿರ್ಗಳನ್ ತುಜುಬಿ, ಮಂದೆಗಳ ನಿಡಿದು . . . ಕಲಿಗಳೊಳೆ ಕಲಿ ಎಂದು ನೀನಿಂತು ನಿಲ್ವೆಯಾ (ಅಶ್ವತ್ಥಾ. ೯-೦೩೮). [ ಮೂಗು + ಉಸಿರ್$_2$ ]

**ಮೂಗುಸೆಕೆ** (ನಾ). (ಅಲಂ) ಅತಿಯಾದ ಸೆಕೆ; ಹೆಚ್ಚಾದ ತಾಪ; ಉಬ್ಬುಸೆಕೆ : ಛಾವಣಿಯ ಕೆಳಗೆ ತೇವದ ಹವ ಕವಿಯುತ್ತದೆ; ಕಂಬಗಳ ನಡುವಿನ ಕೈಸಾಲೆಗಳಲ್ಲಿ ಮೂಗುಸೆಕೆ ಹಬ್ಬುತ್ತದೆ (ಹಸುಹೂ. ೩೮೪).

[ ಮೂಗು + ಸೆಕೆ ]

**ಮೂಗುಹರುಕ** (ನಾ). ೧. ಮೂಗು ಹರಿದಿರುವುದು; ಮೂಗಿಲ್ಲದುದು: ಮೂಗುಹರುಕಾವೊಂದು ಹಳೆಯ ತಲೆಬುರುಡೆ ನಡು ಸಿಲುಬೆಯುಡಿಯುಂ ಜಗವ ಬಾಯ್ಕಿಸಿದು ನಗುತಲಿದೆ (ಗೊಲ್ಗೊಥಾ. ೦೩-೩೬೦). ೨. ಮೂಗನ್ನು ಕೊಯ್ಯಿಸಿಕೊಂಡವನು; ಮೂಗು ಹರಿದಿರುವವನು : ಮೂಗು ಹರ[ರು]ಕ ಜೋಗಿ . . . ತಲೆಕೆದರಿದವರು . . . ಲವಣ ಇವುಗಳು ಎದುರಾಗಿ ಬಂದರೆ ಕಾರ್ಯಹಾನಿಯಾಗುವುದು (ಸೌಗಂಧಿ. ೩೮೩-೨೦).

[ ಮೂಗು + ಹರುಕ ( < ಪಱುಕ ) ]

**ಮೂಗುಳ** 'ಮೂಗೊಳ' ನೋ.

**ಮೂಗುಳಬುದ್ಧಿ** (ನಾ). (ಅಲಂ) ಅತಿಯಾದ ಬುದ್ಧಿ,—ತಿಳಿವಳಿಕೆ : ಮುದಿಯನೂರೊಳ್ಪಿಂಪಗ್ಗಳದ ಬಣಂಜಿಗನೆನೆ, ಮೂಗುಳಬುದ್ಧಿಯ ಕೇತಿಸೆಟ್ಟಿಯ ಪೊಗಳದರಾರ್ (ಕರ್ಣಾ. IX-i. ೨೯೬-೨೭; 1176).

[ ಮೂಗುಳ ( < ಮೂಗೊಳ ) + ಬುದ್ಧಿ ]

**ಮೂಗೆಯ್**, ಮೂಗಯ್ (ನಾ). ಮೂರುಮೊಳದ ಅಳತೆ : ಮೂಗಾವುದಂ, ಮೂಗೋಜು, ಮೂಗೆ[ಪಾಠಾಂ. ಗ]ಯ್ (ಶಮುದ. ೦೬೮, ಪ್ರಯೋ). **ಮೂಗಯ್** : ಶೀವಿರ್ದತ್ತು ಮೊದಲ್ಮೊದಲ್ಗೆ ಪಣೆಯುಂ ಮೂಗಯ್ಯ ಮೂಗಯ್ಯನಿತ್ತಾವಕ್ಕೆಯ್ದಿ ಕವಲ್ಕವಲ್ತು ಪಲವುಂ ಕೊಂಬಾದು ಪೊಳ್ಗೊಂಬುಗಳ್ (ಆದಿಪು. ೨೧-೯೩); ಎಸೆವ ಮುತ್ತಿಯ ಬಡಗ ಪುತ್ತಿರ್ದೊಡಂ ಪುತ್ತಿನಿಂ ಪಡುವ ಮೂಗಯ್ಯ ನೆಲನಂ ಬಿಸುಟು (ಜಿಸ್ತ್ರಾಪು. ೦೦-೦೦). [ ಮೂ$_1$ ( < ಮೂಱು ) + ಕೆಯ್$_2$ ]

**ಮೂಗೆಱೆ** (ನಾ). ಮೂರು ಗೆರೆ : ವರ ಮಂದ ಮಧ್ಯ ತಾರಸ್ವರ ಸೀಮಾರೇಖೆಯೆನಿಸೆ ಮೂಗೆಱೆ ಲಾವಣ್ಯರಸಾಬ್ಧಿಯೊಳಮರ್ದೆಸೆದುದು ಪರಿಕಲಿತ ಸುವರ್ಣಶಂಖಮೆನೆ ಗಳಮವಳಾ (ವೃಷಪ. ೪-೦೦೦).

[ ಮೂ$_1$ ( < ಮೂಱು ) + ಗೆಱೆ ]

**ಮೂಗೇಟು** (ನಾ). = ಮೂಗುಗಾಯ : ಇತರರೂ ಸಣ್ಣಪುಟ್ಟ ಗಾಯಗಳಿಂದಲೂ ಮೂಗೇಟುಗಳಿಂದಲೂ ನೊಂದು ರೇಗಿ ಒಬ್ಬರ ಮೇಲೊಬ್ಬರು ದೂರು ಹೇಳುತ್ತಾ ಕೂಗಾಡುತ್ತಿದ್ದರು (ಮಲೆಮ. ೪೩೪).

[ ಮೂಗು + ಏಟು$_1$ ]

**ಮೂಗೇಣ್**, ಮೂಗೇಣು (ನಾ). ಮೂರುಗೇಣು ಉದ್ದದ ಅಳತೆ : ಮೂಗೇಣ್, ಮೂಗಾವುದಂ, ಮೂವಣ್ಣಂ (ಶಾಶಾಶೂ. ೦೩೩ ಉದಾ): ಮೂಗೇಣ್, ಮೂಗಾವುದಂ (ಶಮುದ. ೦೬೮ ಪ್ರಯೋ). **ಮೂಗೇಣು** : ಮೂಗೇಣಗಲದ ಬಾವಿಗೆ ಆರುಗೇಣಗಲದ ಗಾತ್ರದ ಕುಂಭವ ಬಿಟ್ಟು ಹುರಿಗೂಡಿದ ಕಣ್ಣಿಯಲ್ಲಿ ಸೇದುತ್ತಿರಲಾಗಿ ನೀರು ನೆಲನ ಮುಟ್ಟದೆ ಕುಂಭವ ಬಿಟ್ಟು ಕಣ್ಣಿಯಲ್ಲಿ ತುಂಬಿ ಬಂದಿತ್ತು (ಮೋಳಿಮೂ. ೦೯೮-೭೩೯).

[ ಮೂ$_1$ ( < ಮೂಱು ) + ಗೇಣ್ ]

**ಮೂಗೇಣಿಡು** (ಕ್ರಿ). (ಅಲಂ) ಆಶ್ಚರ್ಯಪಡು : ಕಡುಗಲಿಯು ಪಡೆಬಿಟ್ಟುದಮುಮಾ ಕಡೆಯು ಕಾಣದೆ ಹಲವು ಕಣ್ಣಲಿ ದಡಿಗ ರಾವಣ ನೋಡಿ ಮೂಗೇಣಿಟ್ಟು ಬೆಱಗಾದ (ಕೌಶಿರಾ. ೦೭-೦೩).

[ ಮೂ$_2$ ( < ಮೂಗು ) + ಗೇಣಿಡು ]

**ಮೂಗೇಣು** 'ಮೂಗೇಣ್' ನೋ.

**ಮೂಗೇರಿಸು** (ಕ್ರಿ). ೧. (ಅಲಂ) ಮೂಗನ್ನು ಅರಳಿಸು ; ಆಶ್ಚರ್ಯಪಡು : ಇದೇನು ಅಚ್ಚರಿಯ ವಿಷಯವೆಂದು ಯಾರಾದರೂ ಮೂಗೇರಿಸಬಹುದು (ಶ್ರೀರಂಗ. ೭೮). ೨. ಅಹಂಕಾರವನ್ನು ತೋರಿಸು; ಬಿಂಕ ಮಾಡು : ನಾನು ಹುಚ್ಚಿಯೇ ಸರಿ ಅವರೇ ಯೋಗ್ಯರು ಒಳ್ಳೆಯವರು ಅವರ ಮನೆಗೆಯೇ ಹೋಗಿರಿ ಎಂದು ಮೂಗೇರಿಸಹತ್ತಿದಳು (ಜಿಬಿಪಾ. ೨೬); ನೋಡು ನೋಡು ಮಾತಿಗೆ ಮಾತುಕೊಡುವುದಕ್ಕೆ ಎಷ್ಟು ಚೆನ್ನಾಗಿ ಕಲಿತಿದ್ದಾಳೆ . . . ಮುದುಕ ಮೂಗೇರಿಸಿದ (ಮುಕಶೂ. ೩೦).

[ ಮೂಗು + ಏರಿಸು ( < ಏಱಿಸು ) ]

**ಮೂಗೊಂಕು**, ಮುಕ್ಕೊಂಗು (ನಾ). ಮೂರುಕಡೆಯ ಬಾಗು,—ವಕ್ರತೆ; ತ್ರಿಭಂಗಿ : ಅಂತ್ಯಲೋಪಕ್ಕೆ — ಮೂಗೊಂಕು, ಮೂವಿಟ್ಟೆ . . . ಮೂದಲೆ (ಶಮುದ. ೦೬೮ ಪ್ರಯೋ); ಓ ಓ ! ಒರ್ಪನೆಯ ಬಿಂಕಣೆಗಿವಿಯ ಮೂಗೊಂಕುದಾಗಿನ ಪೇರೊಡಲ ಇಲಿದೇರ ಬೆನಕ ! (ರಾಮಾಶ್ವ. ೬೬-೨೦). **ಮುಕ್ಕೊಂಗು** : ಆ ಗೋಪಾಲಕೃಷ್ಣಂ ನಲಿದು ಕೊಳಲನೂದುತ್ತಮಿರ್ದಂದದಿಂದಾನಂದಂ ಕೈಗಣ್ಮಲಾ ಕಕ್ಕಿಯ ಮರನನದಂ ನೆಮೆ ಮುಕ್ಕೊಂಗಿನಿಂದಂ ನಿಂದಿರ್ದೊಪ್ಪುತ್ತೆ (ತ್ರಿಪುರಿ. ೦೩-೩೪).

[ಮೂ$_1$ (<ಮೂಱು) + ಕೊಂಕು$_2$]

**ಮೂಗೊಡೆ**, ಮುಕ್ಕೊಡೆ (ನಾ). ೧. ಮೂರುಕೊಡೆ : ಮುಗ್ಗುಡ್ಡೆ, ಮೂಗುಡ್ಡೆ; ಮುಕ್ಕೊಡೆ, ಮೂಗೊ[ಪಾಠಾಂ. ಕೊ]ಡೆ (ಶಬ್ದಾಮ. ೩೩೩ ಪ್ರಯೋ). **ಮುಕ್ಕೊಡೆ** : ೨. [ಜೈನ] ಜೈನದೇವಾಲಯಗಳಲ್ಲಿ ಜಿನಪ್ರತಿಮೆಯ ಹಿಂದೆ ಸಾಲಾಗಿ ಇರುವ ಚಕ್ರವರ್ತಿಲಾಂಛನದ ಮೂರು ಛತ್ರಿ : ಶ್ರೀಮದಶೋಕಂ ಮುಕ್ಕೊಡೆ ಚಾಮರತತಿ ದಿವ್ಯಭಾಷೆ ಸುರತೂರ್ಯರವಂ ಪೂಮಳೆ ಕೇಸರಿಪೀಠಂ ಭಾಮಂಡಳಮೆಸೆಯೆ

ನೆಗಟ್ಟಿನೊಸೆವಾದಿಜಿನಂ (ಜಾಪುಂಪು. ೧) ; ದೇಹಾರದ ಮನೆಯಂ ಪೊಕ್ಕು . . . ದೇವರ ಮುಕ್ಕೊಡೆಯೊಳಿರ್ದ ವೈಡೂರ್ಯ ಮಾಣಿಕಮಂ ಕಾಣದೆ ಪೊಱಮಟ್ಟು (ರಪಾರಾಪು. ೬-೮೮) ; ಒಡೆಯನಿಪ್ಪುದು ಕರಿಣಿಯೊಳು ಮುಕ್ಕೊಡೆಯೆನಿಪ್ಪುದು ಜಿನಪತಿಯ ಮುಕ್ಕೊಡೆಯೊಳಲ್ಲದೆ ನೋಳ್ಪೊಡಿಲ್ಲಾ ಮೆಱೆವ ನಾಡೊಳಗೆ (ಶಾಲ್ಮಶಾ. ೧-೬೦). ೩. ಜೈನದತ್ತಿಗಳ ಗಡಿಗಳನ್ನು ಸೂಚಿಸುವ ಮೂರು ಕೊಡೆಗಳ ಚಿತ್ರವಿರುವ ಮೇರೆಯ ಕಲ್ಲು : ನಾಲ್ಕು ದಿಕ್ಕಿಗು ನಾಲ್ಕು ಮುಕ್ಕೊಡೆ ಸಹ ನಾಲ್ಕು ನೆಟ್ಟ ಕಲ್ಲು (ಎಕ. XI, ಹೊಳಲ್ಕೆ. ೧-೨೩ ; 1154) ; ಆ ಕಿರುಕಟ್ಟದ ಪಡುವಣ ಕೋಡಿಯಲು ಹುಟ್ಟುಗುಂಡಿನಲಿ ಬರದ ಮುಕ್ಕೊಡೆ ಹಸುಬೆ ನೆಟ್ಟೆ . . . ದೇವಳಂಗೆಱೆಯ ತೆಂಕಣ ಕೋಡಿಯ ಗುಂಡಿನಲಿ ಬರದ ಮುಕ್ಕೊಡೆ ಹಸುಬೆ ನೆಟ್ಟೆ (ಎಕ. II, ೩೩೪-೨೯ ; 1282).

ಮುಕ್ಕೊಡೆಯ ಕಲ್ಲು = ಮುಕ್ಕೊಡೆ ೩ : ಶೈವದತ್ತಿಗಳ ಮತ್ತು ಜೈನದತ್ತಿಗಳ ಗಡಿಗಳನ್ನು ಹೇಳುವ ಕಲ್ಲುಗಳಿಗೆ 'ಲಿಂಗಮುದ್ರೆಯ ಕಲ್ಲು' 'ಮುಕ್ಕೊಡೆಯ ಕಲ್ಲು' ಎಂಬ ಹೆಸರುಗಳಿರುವ ಹಾಗೆ ಬೌದ್ಧದತ್ತಿಗಳ ಮೇರೆಯ ಕಲ್ಲುಗಳಿಗೆ 'ಶಾಕ್ಯಶಿಲಾ' ಎಂಬ ಹೆಸರಿತ್ತು (ಕಶಾಅ. ೧೧೩). **ಮುಕ್ಕೊಡೆಯೊಡೆಯ** = ಚಕ್ರವರ್ತಿಲಾಂಛನದ ಮೂರು ಛತ್ರಿಗಳನ್ನು ಉಳ್ಳ ಒಡೆಯ ; ಜಿನ ; ಅರ್ಹಂತ : ಅನೂನಭಕ್ತನೇರ್ಪಡೆ ಒಡಿಯಲ್ಕೆ ಪೂರ್ಣಸಸಿಯಂ ನಗುವಂದದಿನೊಪ್ಪಿ ತೋರ್ಪ ಮುಕ್ಕೊಡೆಯೊಡೆಯಂಗೆ ಮಾಡುವುದು ಪೊಮ್ಮೆಯೆನೀ[ಯಿಾ]ಗುಮನಂತಸೌಖ್ಯಮಂ (ಸಮಸ. ೧-೧೩೦) ; ಮುಕ್ಕೊಡೆಯೊಡೆಯ ಜಿನೇಂದ್ರನನೊಲ್ದು ಪಾಡಿದರು (ಧರಕ. ೧-೯೩). [ಮು$_1$ (<ಮೂಱು) + ಕೊಡೆ$_2$]

**ಮೂಗೊಲೆ** (ನಾ). ಉರಿಯು ಹೊರಗೆ ಕಾಣಿಸದಂತಿರುವ ಒಲೆ ; ಆವುಗೆ : ಮೆಯ್ಮೆದಿ ನೀಳ್ದ ಸಂಯ್ಮದಿಯುಸಿರ್ವಿರಹಜ್ವರದೇಟಿಗೆ ಕಿಚ್ಚು ಕೆಯಿಬಾಯ್ದೆಱೆ ಕೆಂಡದೊಬ್ಬುಳಿಕೆ ಮೂಗೊಲೆ ಮೂಗೆನೆ ಪೂರ್ವಿನಿರ್ಗಳಂ ಕಾಯ್ಮಡವಾಗದಂತು ಒಡಿದುಗಜಕಾರುಕನಕ್ಷಿಬಾಣಮಂ ಸಯ್ಮಱೆ ಕಾಸಿ ಕಾಮಿನಿಯ ಬಾಷ್ಪದೊಳೊಯ್ಕನೆ ನೀರನೂಡಿದಂ (ಶೃಂಗಾರ. ೪-೩೪).

[ಮೂಗು + ಒಲೆ$_4$]

**ಮೂಗೊಳ.** ಮೂಗಳ, ಮೂಗುಳ (ನಾ). ಮೂರು ಕೊಳಗಗಳ ಒಂದು ಅಳತೆ : ಪುತ್ತೂರೊಳು ಕಣ್ಣಂಗೂಳರಸ ಕನಕಾರಿಗೆ ಮೂಗೊಳಂ ಅಟನಿ ಭಗವತಿಗೆ ಕೊಟ್ಟುದು (ಎಕ. X, ಕೋಲಾರ. ೨೩೦-೯ ; ಸು. 750) ; ನೂಱಾಱು ಖಂಡುಗ ಮೂಗೊಳವಾಗಿರೆ ಕಡಗೊಂಡು ತಿದ್ದಕೊಡುವಲಿ ಯುಂಮಂ ಬೇರರುಗಳಮಂ ತೂರಲು ಪಾರಿದರಜಮೆರಡುಬಳ್ಳ ಪೊಗಲಕ್ಕೇನೊ (ಕಾಸ್ವತ. ೨೯-೨). **ಮೂಗಳ** : ಒಕ್ಕಳ ಕಾಣದವೈಸೂಱ ಇಕ್ಕಳ ಕಾಣದವು ಸೂಱು ಮೂಗಳ ಕಾಣಂ (ವ್ಯವಹಾ. ಕರಬಿನ ಸೂತ್ರ) ; ಸಿನ್ನಿಷ್ಟವ ಕರುಣಿಸುವೆ ಬೇಡೆನಲು ನವಣೆ ಮೂಗಳದೆಣಿಕೆ ವರಚಕ್ಷುಗಳನೀವುದೆಂದು ಕೊಂಡಾಡಲ್ (ಶ್ರೀರಾ. ೨-೪೬) ; ಕಾಳಮ್ಮನೆಂಬವಳ್ ಕಗ್ಗಲ್ಲಿನಿಂ ಕರೆದ ಹಾಲನೀಶಂಗುಣಿಸಿದಳ್ ಕಣ್ಗಳಂ ಕೊಟ್ಟು ಕಾಳಿದಾಸಂ ಮಗುಳೆ ಮೂಗಳದ ಕಣ್ಣನುರೆ ಪಡೆದನೊಲವಿಂ (ಶಬಕ್ಕೆ. ೩೩-೯೩ ಅ) ; ಉಪ್ಪಿಲ್ಲದೆ ಮೂಗಳ ಗಂಜಿ ಕುಡಿಯುವವಗೆ ಉಪ್ಪಿದ್ದರೆ ನಾಗಳವೂ ಸಾಲದು (ಗಾದೆ). **ಮೂಗುಳ** : ಪತ್ತುಕೊಳಗ ಭತ್ತಮುಂ ಒನ್ದು ಎಂತೆಯುಂ ಒಣ್ಣಗೆ ಮೂಗುಳಮಂ ಕಪ್ಪಡಕ್ಕೆ ಪಟ್ಟೆಯುಂ ಬ್ರಹ್ಮಲಿಂಗಿಭಟಾರ್ಗೆ ಕೊಟ್ಟುದು (ವ್ಯಾಅಶಿ. ೧೯೪೬, ೨೮-೧೯ ; 1032) ; ಅಂಡೆಯಲ್ಲಿ ಐಗಳ ಕರೆದು ಕಂಡದಲ್ಲಿ ಸುರಿಯಲಾಗಿ ಮೂಗುಳವಾಯಿತ್ತು ಆ ಮೂಗುಳವ ಒಲೆಯ ದೆಸೆಯಲ್ಲಿ ಇರಿಸಲಿಕೆ ಕಾಸೂದಕ್ಕೆ ಮುನ್ನವೇ ನಾಶವಾಯಿತ್ತು (ಸರ್ವವ. ೧೦೮-೩೭೮) ; ವೆಂಕಟನಿಗೆ ೫ ಕೊಳಗದಲ್ಲಿ ಮೂಗುಳ ಕೊಟ್ಟ (ಎಕ. IX, ಹೊಸಕೋ. ೨೪-೧೦ ; 1745). [ಮೂ$_1$ (<ಮೂಱು) + ಕೊಳ$_1$]

**ಮೂಗೋರು** (ನಾ). (ಕ್ಷೌರಮಾಡಿದ) ಮೂರುಪಟ್ಟೆ : ಕಿಡೆ ಮೂಗೋಱೆಂ[ರಂ]ಭೋಂಟಿಸಿ ನಡುದಲೆಯೊಳ್ ಮೆಟಿಸನೊಡೆದು ಪಣೆಯಂ (ಕಮಧ. ೧೮೮ ಪ್ರಯೋ). [ಮೂ$_1$ (<ಮೂಱು) + ಗೋರು$_1$]

**ಮೂಚೋಟು.** ಮುಚ್ಚೋಟು (ನಾ). ಮೂರು ಚೋಟು : ಒಂದು ಅಳತೆ : ಮುಚ್ಚೋಟು. ಮೂಚೋಟು (ಶಬ್ದಾಮ. ೩೨೦ ಪ್ರಯೋ). **ಮುಚ್ಚೋಟು** : ಮುಚ್ಚೋಟು, ಮುಚ್ಚವಡಿ (ಕಮಧ. ೧೮೮ ಪ್ರಯೋ); ಮುಚ್ಚವಡಿ, ಮುಚ್ಚೋಟು (ಶಬ್ದಾನು. ೬೮ ಪ್ರಯೋ).

[ಮೂ$_1$ (<ಮೂಱು) + ಚೋಟು]

**ಮೂಜಗ.** ಮುಜ್ಜಗ (ನಾ). ೧. ಸ್ವರ್ಗ, ಮರ್ತ್ಯ ಮತ್ತು ಪಾತಾಳ ಎಂಬ ಮೂರು ಲೋಕಗಳು ; ತ್ರಿಲೋಕ : ಮೂಜಗದಲ್ಲಿ ನಿರುತರು ಕೂಡಲಸಂಗನ ಶರಣರು ತ್ರಿವಿಧವನಱಿಯರು (ಬಸವ. ೯೦೦) ; ಉಗ್ರತಪದೊಳ್ ನೆಲಸಿ ನಿಲೆ ತಪಸ್ತೇಜಂ ಮೂಜಗಮಂ ಪರ್ಬಿದಾಗಳ್ (ಗಿರಿಕ. ೯-೧೩ ವ) ; ಮೂಜಗವನೆ ಗೆಲ್ಲುವಾಸೆಯ ತೋರ್ಪರು ಎಲ್ಲ ಕಾಮಿನಿಯರು ಹೊರಗೆ (ಇಂತಾಶ. ೪೦-೪೦). **ಮುಜ್ಜಗ** : ೧. ವೀಣೆಯಂ ತಾಳವಂ ಮೇಳವಿಸಿ ಮುಜ್ಜಗಂಗಳು ಮೋಹಗೊಳಿಸುವಂತೆ (ಶಾಗಂಧಿ. ೧೯೦-೭). ೨. ಮೂರು ಲೋಕಗಳಿಗೆ ಒಡೆಯನಾದವನು; ಪರಮಾತ್ಮ. ೩. ವಿಷ್ಣು : ಮುಜ್ಜಗನ ಕೊಂಡಾಡೊ ಸಜ್ಜನರ ಕೂಡೊ (ಕಪಕ. ೨೦೦-೨). ೪. ಶಿವ.

ಮೂಜಗದೆಱೆಯ = ಮೂರು ಲೋಕಗಳಿಗೂ ಒಡೆಯನಾದವನು; ವಿಷ್ಣು : ಮೂಜಗದೆಱೆಯನ ಕಾಲ್ತೊಳೆದಳು ಹೊನ್ನಭಾಜನ ಗಂಧವಾರಿಯಲಿ (ಮೋಹತ. ೪-೨೯). **ಮೂಜಗದೊಡೆಯ, ಮುಜ್ಜಗದೊಡೆಯ** = ೧. ಮೂರುಲೋಕಗಳಿಗೆ ಒಡೆಯನಾದವನು ; ಶಿವ : ಅಜಹರಿವಂದಿತ ಮೂಜಗದೊಡೆಯನು ಗಜಾಂಬರ ಹೊದಿಸೂ ಸಿದ್ಧಗೆ ಕರೆದು ಗಿರಿಜೆಗೆ ನಿನ ಕಂದನ ಕೊಳ್ಳೆಂದ (ಸಿದ್ಧಕ್ಕೆ. ೩-೯೯). ೨. = ಮೂಜಗದೆಱೆಯ : ಒಳಗಣ್ಣಿನೊಳಗಿಂದ ನೋಡೋ ಮುಜ್ಜಗದೊಡೆಯನ (ಪುರಂದ. ೩-೩ ಅನುಬಂಧ).

[ಮೂ$_1$ (<ಮೂಱು) + ಜಗ]

**ಮೂಟೆ** 'ಮೂಡೆ' ನೋ.

**ಮೂಟೆಕಟ್ಟು** 'ಮೂಡೆಗಟ್ಟು$_1$' ನೋ.

**ಮೂಟೆಸುಂಕ** (ನಾ). ಹೊರೆಗಳ ಮೇಲೆ ಹಾಕುವ ತೆರಿಗೆ, – ಸುಂಕ : ಈ ಗ್ರಾಮಕೆ ಸಲುವ ಗೃಹಾರಾಮ ಕ್ಷೇತ್ರ ಗದ್ದೆ ಬೆದ್ದಲು ಕಾಡಾರವ್ಟು ನೀರಾರವ್ಟು ಹೊಗೆಹಣ ಮನೆವಣ ಮೂಟೆಸುಂಕ . . . ಚರಾದಾಯತೆರಿಗೆ ಮುಂತಾದಯೇನು ಉಂಟಾದರೂ ನಿಮಗೆ ಸಲುವುದು (ಮ್ಯಾಅಶಿ. ೧೯೪೦, ೪೭-೧೮ ; 1669). [ಮೂಟೆ (< ಮೂಡೆ) + ಸುಂಕ$_1$]

**ಮೂಡ** 'ಮೂಡು$_3$' ನೋ.

**ಮೂಡಗಡಲ್** (ನಾ). ಪೂರ್ವದಿಕ್ಕಿನ ಸಮುದ್ರ : ಅಣಿಯರವಾಡ ಮೂಡಗಡಲೊಳ್ ತೆರೆವಾಲೆಯನೆತ್ತಿ . . . ಬಂದೆಸಗಿತ್ತತಿಶೈತ್ಯಕಾರಣಂ . . . ಇಂದ್ರದಿಶಾಸಮೀರಣಂ (ಜಗಾ. ೧೪-೪).

[ಮೂಡ (< ಮೂಡು$_3$) + ಕಡಲ್$_2$]

**ಮೂಡಗಡೆ** (ನಾ). ಪೂರ್ವದಿಕ್ಕು ; ಮೂಡಣ ದೆಸೆ : ನಡೆತಂದ ಚಂಗಳೆ ಸರಸರನೆ ಆ ಮೂಡಗಡೆ ಮೊದಲಾಗಿ ನಿಂದಿರ್ದ . . . ಸುತನಂ ಹಿರಿಯ ದನಿ ದೆಸೆಗೆಯ್ದೆ ಕಡೆಯಲು ತೊಡಗಿದಳು ಜನನಿ (ಬಸಪು. ೨೪-೩೬) ; ಅತಿಹರುಷದೆ ಪೂರ್ವಚಂದ್ರನು ಮೂಡಗಡೆಯೊಳೊಪ್ಪಿದನರ್ತಿಯಿಂದ (ಕಂವಾ. ೮-೪) ; ಪಾಳೆಯದೊಳಾ ಮೂಡಗಡೆಯೊಳು ಬಾಲದೊತ್ತಿನಲಿ ನಿಂದವನು ಪಾತಾಳಕೊಯ್ಕಲು ಪಥವ ಕಾಣದೆ ಕಂಡನೂಹೆಯಲಿ (ಉತ್ತಕ. ೩೩-೩೮). [ಮೂಡ (< ಮೂಡು$_3$) + ಕಡೆ$_3$]

**ಮೂಡಗರೆ** (ನಾ). ಪೂರ್ವದ ದಡ ; ಮೂಡಣ ತೀರ : ಬಸದಿಯ ಪಡುವಣ ಎಳೆದೋಣ್ಣವುಂ ಪಡುವಣ ತೋಟಿಯ ಮೂಡಗರೆಯು ಪೊಸದೋಣ್ಣವುಂ (ಎಕ. X, ಕೋಲಾರ. ೯೦-೬೭ ; 903).
[ಮೂಡ (<ಮೂಡು₃) + ಕರೆ₄]

**ಮೂಡಗೆ** ' ಮೂಡಿಗೆ ' ನೋ.

**ಮೂಡಗೆಂಪು** (ನಾ). ಪೂರ್ವದಿಕ್ಕಿನ ಕೆಂಪುಕಾಂತಿ : ತೆರೆ ಸರಳ್ವ ನಡುಗಡಲ ಹಡಗಿನೆಡೆ ಮೂಡಗೆಂಪೇರಿ ಮತ್ತೊಮ್ಮೆ ಮೇಲೆ ನೆಗೆವ ದೇವರುರಿಗಣ್ಣಂತೆ ತೋರಿ ನೆಗೆಯುತಿದೆ ಮತ್ತೊಮ್ಮೆ . . . ಹಿರಿಯ ಬೆಳಕೊಂದು ಸಿರಿಸಾರಿ (ಹೊಂಗಳು. ೩೩-೯). [ಮೂಡ (< ಮೂಡು₃) + ಕೆಂಪು₁]

**ಮೂಡಗೆಱೆ** (ನಾ). ಒಂದು ಊರಿನ ಹೆಸರು : ಸೀಮಾನ್ತರಂ ಪಡುವಾಯ್ವ್ಯಾವೇರಿಯೆ . . . ಮೂಡಗೆಱೆವಿ ಬೊಜ್ಜಗೆಱೆಯ ಒಳಗೆಱೆವಿ ಕೂಡಿತ್ತು ಸೀಮೆ (ಎಕ. VI (R), ಶ್ರೀರಂಗ. ೬೬-೨೪ ; 800).
[ಮೂಡ (< ಮೂಡು₃) + ಕೆಱೆ]

**ಮೂಡಣ್** ' ಮೂಡು₃ ' ಪರಾ.

**ಮೂಡಣ** ' ಮೂಡು₃ ' ಪರಾ.

**ಮೂಡಣಂ** ' ಮೂಡು₃ ' ಪರಾ.

**ಮೂಡದೇಶ** (ನಾ). ಪೂರ್ವದಿಕ್ಕಿನಲ್ಲಿರುವ ರಾಷ್ಟ್ರ, ದೇಶ : ಪಾಪಕಲ್ಲ ಕುಲತಿಲಕಂ ×[ಳ್ಳ]ಪಿನಾಥ ಮೂಡದೇಶರಕ್ಷಕಂ (ಕಇಇ. XI-i, ೯೦-೨೨ ; 969). [ಮೂಡ (< ಮೂಡು₃) + ದೇಶ]

**ಮೂಡಮುಖ** (ನಾ). ಪೂರ್ವದಿಕ್ಕು ; ಮೂಡಲು : ಮೂಡಮುಖಂ ಕೇರಿವುಮಂ ಬಸದಿಯಿಂ ಮೂಡಲು (ಇಆ. XVIII, ೩೦೦-೦೬ ; 11ನೆಯ ಶತ).
[ಮೂಡ (< ಮೂಡು₃) + ಮುಖ]

**ಮೂಡಮೊಗ** (ನಾ). = ಮೂಡಮುಖ : ಜಗುನೆಯಂ ಪಾಯ್ದು ಮೂಡಮೊಗದೆ ಪಯಣಂಬೋಗಿ ಮತ್ಸ್ಯದೇಶಮಂ ಪುಗುತಂದರ್ (ಕಂಶಭಾ. ೯-೩೦ ವ) ; ಕಡೆಕೊಳಂ ಖಾರವುರು ತಣ್ಣೆಯದ ಮುಕ್ಕೊಡು ಮೂಡ ಮೊಗದೆ ಪೋಗಿ (ಎಕ್ಯ.ಅಂ. ೦೯೩೯. ೩೮-೭ ; 11ನೆಯ ಶತ) ಮೂಡಮೊಗದಿಂ ತ್ರಿದಶಾರ್ಚಿತಪಾದಪಂಕಜಂ ನಿಂದಿರ್ದಂ (ವರ್ಧಪು. ೦೫-೬೦).
[ಮೂಡ (< ಮೂಡು₃) + ಮೊಗ]

**ಮೂಡಲ್** ' ಮೂಡು₃ ' ಪರಾ.

**ಮೂಡಲಿ** (ನಾ). ಒಂದು ಬಗೆಯ ಸಸ್ಯ : ನಾಕೋಲಿ, ಮೂಢಮುರ, ಮೂಢ, ಮೂಡಲಿ, ಕನಕಚಂಪಕ (ವೈ ಕಿಂ. ೫೬-೦೦೪೦). [ ? ]

**ಮೂಡಲು** ' ಮೂಡು₃ ' ಪರಾ.

**ಮೂಡವೆಟ್ಟ** ' ಮೂಡುವೆಟ್ಟ ' ನೋ.

**ಮೂಡವೆಟ್ಟು** ' ಮೂಡುವೆಟ್ಟ ' ನೋ.

**ಮೂಡಾಯ್**, ಮೂಡ್ಯೆ (ನಾ). ಪೂರ್ವದಿಕ್ಕು ; ಮೂಡಲು : ಅನ್ತೆ ಬನ್ದು ಮೂಡಾಯಿನ್ನಿಬ್ಬಿನ್ದ ನೀರಿಟೀವ ಅನ್ತೆ ಬನ್ದು ತೊಲ್ಲೊಱಿಡಿ ವಿ (ಎಕ್ಯ.ಅಂ. ೦೯೩೬. ೬೩-೨೭ ; 550) ; ತಸ್ಯ ಸೀಮೆ ಮೂಡಾಯ್ಪರ್ವ್ವಳ್ಳಮೆ . . . ಮೂಡಾಯ್ ನೋಡಿ ನಡದು ಇಬ್ಬುಲ್ಗೊಳ್ಲಿಯೆ (ಎಕ. III (R), ಹೆಗ್ಗ.ಡ. ೯೦-೬ ; 750) ; ವಿಜಯಾದಿತ್ಯನ್ ವೀರಚೂಳಾಮಣಿ ಪ್ರಭುಮೇರು ವಡುಗವಟಿ ಪನ್ನಿಚಾಸಿರಮುವರ್ ಮಣ್ಣೆಯಿನ್ಮೂಡಾಯುವರ್ ಪೃಥುವೀ ರಾಜ್ಯಂಗೆ[ಯೆ] (ಕಇಇ. IX-i, ೫-೬ ; ಸು. ೮ನೆಯ ಶತ). **ಮೂಡ್ಯೆ** : ಪೃಥುವಂ ಮಾಗ್ಗಸ್ಸಿಕೆಱೆ ಮೂಡ್ಯೆ ಕಜೆ ಗೋಡೆ ವಿ (ಎಕ. X (S), ತಕ್ಕ.ರ. ೬೬-೦೬ ; 850). 'ತೆಂಕಾಯ್', ' ಪಡುವಾಯ್ ' ಪರಾ.
[ಮೂಡು₃ + — ಆಯ್₂./ತುಳು. ಮೂಡಾಯಿ, ಮೂಡಯಿ. ಮೂಡಾಯಿ]

**ಮೂಡಾಯಿ** ' ಮೂಡಾವಿ ' ನೋ.

**ಮೂಡಾವಿ**, ಮೂಡಾಯಿ, ಮೂಡಾವೆ (ನಾ). (ಮಲಗುವಾಗ ಅಥವಾ ಕುಳಿತುಕೊಳ್ಳುವಾಗ ಒರಗಿಕೊಳ್ಳುವ) ದಿಂಬು; ಒರಗು ; ಲೋಡು; ಮೆತ್ತೆ : "ಮೂಡಾವಿಯೆಂಬುದುಂ ಕೊಳುಡೆಯೆಂದುಂ ಮಲಗು" (ಶಶಾ. ೬೦-೩೨೪) ; ಕಣ್ಗೊಳಿಸುವ ಮುಡುಹಿನ ಮೂಡಾವಿಗೆ ಕೈಯಿಟ್ಟ ಸುಗ್ರೀವರನ ಲಲಿತಾಂಗದ ಮೇಲಾ ಸತಿಯರ್ಗಳ್ಗ್ನೆಳಗು ಪರಿದು ಮುಸುಕಲು (ಜಯಕಾ. ೦೯-೬೩) ; ಸೆಳೆಗೊಂಬಿನ ಕೇರ್, ಪಣ್ಣಲೆಯ ಪೊವಕೆ, ಚಿಂದಳರ ಪಟ್ಕೆ, ಪೊಸಸುಟಿಯ ಮೂಡಾವಿ, ಅಲರ್ಜೊಂಪದ ಮೇಲ್ಕಟ್ಟು ಚೆಲ್ವಾಗೆ (ರಾಮಾಕ್ಶ. ೦೯೯-೦೦) ; ಶಾಂತಲಾದೇವಿ . . . ಸೆಜ್ಜೆಯ ರೇಶಿಮೆಯ ಹೊನ್ನ ಜರಿಯ ಮೂಡಾವಿಗಳನ್ನು ಅನುಗೊಳಿಸಿದಳು (ಶವ. ೪೯). **ಮೂಡಾಯಿ** : ರಾಮಣೀಯಕ ತಾರಕಪ್ರಪ್ರಪ್ಪವುಂ ಮಲಗು ಸಾವುವೇದಾದಿ ನಿಗಮಾರ್ಥಗಳ್ಮೂಡಾಯಿ ನಾಮರೂಪಕ್ರಿಯಾಪೂರಮುಪಚಾರಾಂಗ (ಏಕೋಕ್ತಿ. ೨-೩೦). **ಮೂಡಾವೆ** : ಸುಖಾಸೀನದ ಮೂಡಾವೆಗಳಲ್ಲಿ ಸಿಂಗಾರಮ್ಮನು ನೀಳ್ಗೊರಗಿರುವಳು (ಚಟ್ಟಿಅ. ೧೦-೧). [< ಮೂಡೆ]

**ಮೂಡಾವೆ** ' ಮೂಡಾವಿ ' ನೋ.

**ಮೂಡಿ** (ನಾ). ಹುಟ್ಟುವುದು : ಉದಯ : "ಮೂಡಿ = ಉದಯಂ" (ಕಪತ. ಕಂ. ೨) [< ಮೂಡು₁]

**ಮೂಡಿಕೆ** (ನಾ). ೧. ಭಾವನೆ ; ಅನಿಸಿಕೆ : ಸೌಂದರ್ಯಕ್ಕೆ ಸಂಬಂಧಿಸಿದಂತೆ ಕವಿಯ ಪ್ರತಿಭಾನವ್ಯಾಪಾರ ನಾಲ್ಕು ಘಟ್ಟಗಳಲ್ಲಿ ನಡೆಯುತ್ತದೆ: (೧) ಸುಂದರವಾದ ವಸ್ತುವನ್ನು ಕುರಿತು ಕಲಾವಿದನ ಅಂತರಂಗದಲ್ಲಿ ಆಗುವ ಮೂಡಿಕೆಗಳು (ಸೌಂದಶ. ೯೦). ೨. ಸ್ವರೂಪ : ಕರ್ಣಾಟಕಸಂಗೀತದ ಮುಕುಟಮಣಿಗಳಾದ ಈ ತ್ರಿಮೂರ್ತಿಗಳು ಒಂದೇ ಕಡೆಯಲ್ಲಿ ನಡೆಸಿದ ಕಚೇರಿಯ ಅದ್ಭುತ ಮೂಡಿಕೆಯನ್ನು ಮಾತುಗಳಲ್ಲಿ ಅಳವಡಿಸಲು ಸಾಧ್ಯವೇ ಇಲ್ಲ (ಸಂಗೀತ. ೩೦). [ಮೂಡು₁ + — ಇಕೆ]

**ಮೂಡಿಗೆ**, ಮೂಡಗೆ (ನಾ). ೧. ಬಾಣಗಳ ಚೀಲ; ಬತ್ತಳಿಕೆ; ತೂಣೀರ: "ತೂಣೀರಂ, ಉಪಾಸಂಗಂ, ತೂಣಂ, ತೂಣೀ, ನಿಷಂಗಃ, ಇಷುಧಿಃ, ಬಾಣಾಶ್ರಯಃ, ಕಳಾಪಃ — ಈ ೮ ಮೂಡಿಗೆ " (ಹಲಾಯು. ೬೬-೬೦೦) ; ತನು ಮೂಡಿಗೆಯಾಗಿರೆ ತಳೆದನಹಿತರೆಜ್ಜೆಂಬುಗಳಂ (ವರ್ಧಕ. ೫-೩೩); ನೀಡದೆ ಮೂಡಿಗೆಯಿಂ ಕೈಗೊದಗುವಹೂಡದಮುನ್ನವೆ ತಿರುವಾಯ್ದೋಯಿವ . . . ಮಹಾದಿವ್ಯಶರಂ (ಜಯುಕಾ. ೭-೦೦). ೨. "ಮೂಡಿಗೆಗಳು ಎಂದರೆ, ಜೊಂಪ (ಚಪ್ಪರ) ಢೇರೆ ಮೊದಲಾದುವುಗಳಿಗೆ ಆಧಾರಗಳಾಗಿ ಮಧ್ಯದಲ್ಲಿ ಸಾಲಾಗಿ ನೆಲೆಗೊಳಿಸಿದ ನೀಳ್ಗಂಬಗಳು" (ಪಾರೋಟ. ೩೦೫): ತೊವಲ್ವೆರಸು ನಟ್ಟಾಲಂಗಳುಮನಮರೆ ಮಾಡಿದ ಬಿಟ್ಟುಳಿಯ ಕಕ್ಕಂಬ ತೊಡಂಬೆಯ ಮೂಡಿಗೆಯ ಕದಳಿಕೆಯ ಕಾಂಡಪಟಂಗಳುಮಂ (ಕಂಶಭಾ. ೫-೯೭ ವ) ; P ' ಪಂಪಭಾರತ ದೀಪಿಕೆ 'ಯಲ್ಲಿ ಈ ಪ್ರಯೋಗಕ್ಕೆ ' ಬತ್ತಳಿಕೆ ' ಎಂದೇ ಅರ್ಥ ಹೇಳಿದೆ. **ಮೂಡಗೆ** : ೩. (?) : ಅಱು ಪರಿಯಾಪ್ತಿಗಳೊಳಂ ನೆಱೆದು ತೋಱಲಾಗಿ ಪೊಟ್ಟನೊಡೆದ ಮೂಡಗೆಯು ಗೊಟ್ಟಯಂತಿರೆ ಸಿಡಿಲ್ದುಚ್ಛಳಿಸಿ ಪೋಗಿ ಕೆಲಗೆ ನಟ್ಟಿರ್ದನೇಕವಿಧ ನಿಶಾ ತಾಯುಧಂಗಳ ಮೇಲೆ ನುಚ್ಚುನೂಱಾಗಿ ಪಟ್ಟುಬಿರ್ದು ಮೂರ್ಛೆವೋಗಿ ಪಮ್ಮೈಸಿ ಮೆಯ್ಯಱಿಯದಿಪ್ಪುದುಂ (ವರ್ಧಮಾ. ೫-೨೬ ವ). [ ? ]

**ಮೂಡಿಸು** (ಕ್ರಿ). ೧. ಹುಟ್ಟಿಸು; ಉಂಟುಮಾಡು : ಆದಾರ್ಗೆ ಜನ ಮುಂದೆ ಮೂಡಿಸದೊ ಮುದದೊದವಂ (ಕಂಶಪು. ೬-೯); ತದ್ದನುಜನ ತ್ರಸ್ಪ ೦ ಸೀಳ್ದು ಲೋಕಂಗಳಂ ನಿರ್ಭಿನ್ನಾನಂದಾಬ್ಧಿಯೊಳ್ ಮೂಡಿಸಿದಳ್ ಜಯ ಮನ್ಮಾತೆ ಪಂಪಾಭವಾನೀ (ಉದ್ಭಟ. ೩-೪೪) ; ಮನ್ಮಥ ಹೊನ್ನ ಹೊದೆಯಿಂದಲೊಂದಂಬ ತೆಗೆದು ಎದೆಯ ಸಂಕುಲದಿ ಮೂಡಿಸಿ ತೋಱಿಸಿ ಬಿಲ್ಲ ಹೆದೆಯ ಕತ್ತರಿಸಲಿಕ್ಕಿದನು (ಸೋಹಕ. ೩೯-೦೬). ೨. (ದೀಪವನ್ನು) ಹಚ್ಚು; ಹೊತ್ತಿಸು : ಒಳಗೆ ಹೋಗಿ ಕಂದೀಲನ್ನು ಮೂಡಿಸಿ, ಅಡುಗೆಯ

ಮನೆಯ ಹೊಸತಿಲ ಮೇಲೆ ತಂದಿಟ್ಟಳು (ಗಂಗಾಸ. ೬೦). ೩. ಅಚ್ಚು ಮಾಡು ; ಮುದ್ರಿಸು : ಉಗಿಯ ಯಂತ್ರದಿಂದ ಮೋಹರಗಳ ಮೇಲೆ ಅಕ್ಷರಗಳನ್ನು ಮೂಡಿಸುತ್ತಾರೆ (ಮುಂಬಯಿ. ೩-೨೪೪); ತನ್ನ ಹೆಸರನ್ನು ನಾನ: ಮರೆಯಬಾರದೆಂದು ತನ್ನ ಕೊಡೆಯ ಮೇಲೆ ಮೂಡಿಸಿ ಇಟ್ಟಿದ್ದಾನೆ (ದೇಶಕ್ಕ. ೬೩). [ಮೂಡು₁ + — ಇಸು₃]

**ಮೂಡು₁** (ಕ್ರಿ). ೧. ಹುಟ್ಟು ; ಉತ್ಪತ್ತಿಯಾಗು ; ಉದಯಿಸು : "ಮೂಡು—ಉತ್ಪತ್ತೌ" (ಶಮುಧಾ); ನೇಸಱ್ ಮೂಡಿದೊಡೆ ಭಟಾರರಲ್ಲಿಗೆ ನಂದಿಮಿತ್ರಂ ವಂದು ಬಂದಿಸಿ ಇಂತೆಂದಂ (ವಡ್ಡಾರಾ. ೬೨-೧೪) ; ನೇಸಱ್ ಮೂಡಿದುದು ಬಕಂಗೆ ಮಿಟ್ಟು ಮೂಡುವ ತೆಱದಿಂ (ಶಂಶಶಾ. ೩-೨೭) ; ಗಱಿ ಮೂಡಿದ ಬಟಿಕ ನೀನೆ ದಲ್ ಪೋದಪ್ಪೈ (ಕಾದಂಬ. ೬೯೩). ೨. ಉಂಟಾಗು ; ತಲೆದೋರು ; ಕಾಣಿಸಿಕೊಳ್ಳು : ಜತುಗೃಹಕವಾಟಪುಟ ಸಂಧಿಗಳೊಳ್ ಸುರಂಗಮಂ ಗಂಗೆಯೊಳ್ ಮೂಡುವಂತಾಗೆ ಸಮೆದು (ಪಂಶಶಾ. ೩-೪ ವ); ಮೂಡಿದುವುರದೊಳ್ ಮೊಲೆ (ಜಯಶಾ. ೩-೨೩); ವಿದ್ಯಾರಣ್ಯರ ಮನಸ್ಸಿನಲ್ಲಿ ಸ್ವರಾಜ್ಯಸ್ಥಾಪನೆಯ ಸಂಕಲ್ಪ ಮೂಡಿತು (ಶ್ರೀವಿದ್ಯಾ. ೦೩೯).

**ಮೂಡಿ ಮುಳುಂಗಾಡು, ಮೂಡಿ ಮುಳುಗಾಡು, ಮೂಡಿ ಮುಳುಗಾಡು, ಮೂಡಿ ಮುಳ್ಮಾಡು** = ೧. ಕಾಣಿಸಿಕೊಂಡು ಪುನಃ ಕಾಣದಂತೆ ಮುಳುಗು,—ಮರೆಯಾಗು. ೨. (ಆಲಂ) ಮಗ್ನವಾಗು ; ತಲ್ಲೀನವಾಗು : ಸಮುನ್ನತಭಕ್ತಿರಸಸುಧಾವಾರ್ಧಿಯೊಳ್ಮೂಡಿ ಮುಳುಂಗಾಡುತ್ತುದ್ಭಟಕ್ಷಿತೀಂದ್ರಚಂದ್ರಮಂ . . . ಬೆಸಗೊಂಡಂ (ಉದ್ಭಟ.೨-೨೨ ವ); ರುಚಿರಾಭವಾನಂದಲೀಲೆಯೊಳ್ಮೂಡಿ ಮುಳುಗಾಡುತ . . . ಪದ್ಮ ರಸಗುರುವಂ ನಿರೀಕ್ಷಿಸುತ್ತೆ (ಪದ್ಮರಾ. ೭-೬೩); ಪರಮಾನಂದರಸದೊಳಗೆ ಮೂಡಿ ಮುಳುಗಾಡಿ . . . ಕೈ ನೀಡಿ ಕೊಟ್ಟಂ ನಂದಿಯುಂಡಿಗೆಯ ಪೊಸ ಹೊನ್ನ ಮೊಗೆಮೊಗೆದು ಶಿವ ನಂಬಿಗೆ (ಸೌಂದರ. ೩-೨೭); ರಾಗರಸದೊಳು ಮೂಡಿ ಮುಳುಗಾಡಿದಳು ಜಿನದತ್ತೆ (ಸಾಳ್ವಭಾ. ೩-೨೩); ಮನಮುನುಱ ಸೆಱೆವಿಡಿಥ ಸೀಯನಪ್ಪ ಗೇಯರಸಾಬ್ಧಿಪೂರದೊಳ್ ಮೂಡಿ ಮುಳು ಗಾಡುತ್ತುಂ (ಶಾಂತಿಪು. ೨-೨೨ ವ); ಅಂತಾ—ರಜನಿಯೊಳ್ ರಾಜೇಂದ್ರ ಚಂದ್ರಂ ಸುರತಸುಖಾಂಭೋಧಿಯೊಳ್ಮೂಡಿ ಮುಳುಗಾಡಿ (ಕಾದಂಬ. ೬೦೬); ಅಂತು ಪುರಮುಮಂತಃಪುರಮುಮಾದಿಪುರುಷಜನ್ಮೋತ್ಸವಸುಧಾಂಬು ರಾಶಿಯೊಳ್ ಕೂಡಿ ಮೂಡಿ ಮುಳ್ಮಾಡುವುದಂ ನೋಡಿ (ಆದಿಪು. ೭-೦೨೩ ವ); ಪೊನಲೊಳಗೆ ಮೂಡಿ ಮುಳ್ಮಾಡುವವೋಲ್ (ಪುಷ್ಪದ. ೦೩-೬೭). **ಮೂಡಿ ಮುಳುಂಗು, ಮೂಡಿ ಮುಳುಕು, ಮೂಡಿ ಮುಳುಗು, ಮೂಡಿ ಮುಳ್ಕು** = ಮೂಡಿ ಮುಳುಂಗಾಡು : ನಿಜೋತ್ತರೀಯವಸನಾಂಚಲ ದಿಂ ಮುಸುಕಿಟ್ಟು ಚಿಂತೆಯೊಳ್ ಮೂಡಿ ಮುಳುಂಗಿ ತನ್ನ ಮನದನ್ನ ರೊಳಂ ಮೊದಲಾಗಿ ಕನ್ನೆ ಮಾತಾಡದೆ ಜಾನಿಸುತ್ತಿರಲು (ಕಾದಂಬ. ೩೬೬); ನೋಡುವಳುಱ ಕಾತರಿಪಳು ಮೈಸೋಂಕಿ ಮೂಡಿ ಮುಳುಕಿ ಮೋಹರಸದೆ ಕೂಡಾಗ ಬಿಗಿಯಪ್ಪಿ ಮೊಗಮೊಗವೆರಸಿ ಮುಂಡಾಡಿದಳು (ಕಂಪಾಪಿ. ೦೦-೩೦); ನೋಡಿ ಪುಳಕದೊಳ್ ಮೂಡಿ ಮುಳುಗುತ್ತೊಮ್ಮೆ ನೋಡಿಯುಮ್ಮಳಿಸುತಾ ನಂಬ್ಯಣ್ಣನಾ ವೃದ್ಧನಾ ಕೂಡೆ . . . ನುಡಿದು (ಸೌಂದರ. ೪-೭೯); ಲೀಳಾರಸದೊಳಗೆ ಮೂಡಿಮುಳ್ಕುವ . . . ಲೀಲಾಕೇಳಿಗಳೆ ವಿಲಾಸಕೇಳಿಗಳ್ ನೃಪಪತಿಯಾ (ಅತಪು. ೩-೯).

**ಮೂಡು₂** (ಕ್ರಿ). ತುಂಬಿಸು ; ಭರ್ತಿಮಾಡು : ಗಱಕೆಯ ತೊಳಚಿಯ ದಾಂಗುಡಿಯಂ ಚಿವುಂಟಿ ಬಾಱವಟ್ಟೆಯೊಳ್ ಮೂಡಿ ತರ್ಪ ಟಾಲವಟು ಗಳಂದೆಯುಂ . . . ಪುಣ್ಯಾಶ್ರಮಂ ಮನೋಹರಮಾಯ್ತು (ರಾಮಾಶ್ವ. ೪೩-೦೬). [ ? ]

**ಮೂಡು₃, ಮೂಡ** (ನಾ). ೧. ಸೂರ್ಯನು ಹುಟ್ಟುವ ದಿಕ್ಕು ; ಪೂರ್ವದಿಕ್ಕು : ಮೂಡ ದೆಸೆಯೊಳ್ಕಂಪು ದೊರೆಯೆ ತಾರಗೆ ಪರೆಯೆ ಕೂಡೆ ತಂಗಾಳಿ ಮುಂಬರಿಯೆ ಕಮಲಂ ಬಿರಿಯೆ . . . ಮಱೆದಂ ಪ್ರಭೆಯೊಳಾ ಸುತ್ಯನಾದಿತ್ಯನು (ಕೈವಿಶಾ. ೨-೭೩); ಮುಂಗೋಳಿ ಕೂಗ್ಯಾವು ಮೂಡು ಕೆಂಪೇರ್ಯಾವು (ಹಳ್ಳಿಬಾ. ೦೯). **ಮೂಡ** : ಮೂಡ ಕಱಯ ಕಲ್ಪಡಿಗೆ ತೀರ್ಥದ ಕಲ್ಪಡುವ ಕಮ್ಮಱಕಲ್ ನೈರಿತಿಯೊಳೆ ಆ ವಡಕಲ್ ತೆಂಕ ಪೇರೂರ ಪಳ್ಳಂ (ಎಕ. XI, ಮೊಳಕಾ. ೨೭-೩ ; 962) ; ರತಿನಾಟಕಾಭಿನಯಮಂ ಕೃತಕೃತ್ಯಂ ಮಾಡಿ ರಮ್ಯವಾಗಿರೆ ದೀಪದ್ಯುತಿ ಯುವತಿಯರೊಳ್ ನಿದ್ರಾವಶಾರವಾದತ್ತು ಮೂಡವೆಳಗಪ್ಪಾಗಳ್ (ಶಗಪಿ. ೦೩-೦೩೭); ಮೂಡ ಕೆಂಪೊತ್ತಿದುದು ಕಮುತಣ್ಣನಾಗೆಲರ್ ತೀಡಿತು (ಶಬ್ದರಾ. ೭-೩).

**ಮೂಡಣ್** = ಪೂರ್ವದಿಕ್ಕು : ನೀಲಗಿರಿ ಬಡಗಣ್ಗಾ ತಾರಂ ದ್ರಾವಣ ರಣವಕ್ಷಾರಂ ಮೂಡಣ್ಗೆ ತನಗೆ ಸೀಮೆಯೆನಿಕ್ಕುಂ (ಮಲ್ಲಿಪು. ೨-೦೨); ಮೂಡಣಿಂ, ಮೂಡಣ್ಗೆ (ಶಾಶಾಭೂ. ೩೭ ಉದಾ). **ಮೂಡಣ** = ೧. ಪೂರ್ವದಿಕ್ಕಿನ : ನೆಯ್ದಿಲ್ಗೆಱಯಾ ಏಱ ಮೂಡಣ್ಣಾಸೀಮೆ ಇಡೆ ವೆಟ್ಟದಾ ಪಡಗಣ್ಣಾ ನೀರಿಱಗೆ (ಎಇ. XXI, ೦೭೬-೦೩; ಸು. 8 ನೆಯ ಶತ); ಮೂಡಣ ದೆಸೆಯ ವ[ರಾಹ]ಕಱಯಂ ಮೂಡಣ ಪಳ್ಳ ಅದಱ ತೆಜ್ಕಣದೆಸೆ [ಮಣ್ಣಗೆಱ]ಗೂಟ್ಟಂ (ಸೌಇಇ. XI-i, ೯-೨೭; 862) ; ದೇವತೆ . . . ಕೋಗಿಳಿಯ ಮೂಡಣ ದೆಸೆಯ ಪರ್ವತದ ಕೊಳದ ತಡಿಯೊಳ್ ಲತಾ ಮಂಟಪದೊಳಿರಿಸಿ ಪೋದೊಡೆ (ವಡ್ಡಾರಾ. ೦೦೬-೪); ನಡೆದು ಬಂದುದು ಕೌರವೇಂದ್ರನ ಪಡೆ ಕುರುಕ್ಷೇತ್ರಕ್ಕೆ ಮೂಡಣ ಕಡೆಯಲಳವಡಿಸಿದರು ಬೀಡಾಯಿತ್ತು ವಹಿಲದಲಿ (ಕುಮಾವ್ಯಾಭೀ. ೦-೩೦). ೨. ಪೂರ್ವದಿಕ್ಕು : ಪಡುವಣಕೆ ಸಂದ ರವಿ ಮೂಡಣದಿ ಎದ್ದ (ನೆಂಪು. ೩-೦೬); ಮೂಡಣದಲ್ಲಿ ತಂಗದಿರ ಮೂಡಿದಾಗ ಆ ನಾಲ್ವರು ಮನೆಯನ್ನು ತೊರೆದರು (ಹಾಹುತ್ತ. ೯೬). **ಮೂಡಣಂ** = ಪೂರ್ವದಿಕ್ಕಿನವನು : ಮೂಡಣಂ, ತೆಂಕಣಂ (ಶಮುದ. ೦೦೦ ಪ್ರಯೋ). **ಮೂಡಲ್, ಮೂಡಲು, ಮೂಳ್ಲು** = ಪೂರ್ವದಿಕ್ಕು : "ಪ್ರಾಚಿಯೆನೆ ಪೂರ್ವಮೈಂದ್ರಿಯೆನೆ ಮೂಡಲೆನಿಕ್ಕು" (ಮಂಗರಾ. ೦೭-೦೯); ಮನೆಯುಂ ಪೆರ್ಚಿಸುವೊಡೆ ಮುನ್ನಿನ ಮಾಱ್ಕೆಯೊಳಿರ್ದು ಮೂಡ ೨ ಬಡಗಲ್ ಪೊತ್ತಿ ನಿಮಿರ್ಚುಗೆ (ಶೋಕೋಶ. ೩-೦೩); ಇದು ಪೂರ್ವಾಚಲಮಲ್ಲದಿನ್ನಿದು ಸುರೇಂದ್ರಾಶಾದ್ರಿ . . . ಒಪ್ಪುವ ಮೂಡ ಲಲ್ಲದಿದು ತಾಂ ಮೂಡಲ್ಮನೋರಾಗದಿಂ (ಧರ್ಮಾಮೃ. ೪-೦೩೪); ಬಸದಿಯಿಂ ಮೂಡಲು ದಾನಸಾಲೆಗೆ ಪನ್ನಿ[ರ್]ಕ್ಕಯಿನಿವೇಸಣಮುಮಂ . . . ಬಿಟ್ಟ (ಇಇ. XVIII, ೩೦೦-೦೭; ಸು. 11ನೆಯ ಶತ); ಮೂಡಲು ಮಗುಳೆ ಕೆಂಪೇಱ ಕದನಕೆ ಕಳನ ತುಂಬಿತು ಮತ್ತೆ ಕೌರವ ಪಾಂಡವರ ಸೇನೆ (ಕುಮಾವ್ಯಾಭೀ. ೭-೩); ಸೂರ್ಯನು ಪಡುವಣದಲ್ಲಿರುವವರಿಗಿಂತ ಮೂಡಲಿನಲ್ಲಿರುವವರಿಗೆ ಮೊದಲು ಗೋಚರಿಸುತ್ತಾನೆ (ಮುಂಬಯಿ. ೪-೬೭); ಶೆಟ್ಟಿಹಳ್ಳಿಗ್ರಾಮಕ್ಕೆ ಮೂಳ್ಲು ಬಾಗ್ಗನಹಳ್ಳಿ ದಕ್ಷಿಣ (ಎಕ. XIV, ತಿರುಮ. ೦೭೩-೦೯; 1662); ಹಾಲೆ ಬೇಲೂರುಗ್ರಾಮಕ್ಕೆಯಲ್ಲ ಚತುಸ್ಸಿಮ ವಿವರ ಹೇಮಾವತಿಗೆ ಮೂಳ್ಲು ಮೊರಸಾಗರಹಳ್ಳಿಗೆ ಪಶ್ಚಿಮ (ಮೈಆರಿ. ೦೯೪೩, ೪೬-೦೭; 1666).

[ < ಮೂಡು₁./ ತುಳು. ಮೂಡು ]

**ಮೂಡುಗಟ್ಟನಗಿಡ** (ನಾ). ಒಂದು ಬಗೆಯ ಸಸ್ಯ : ಮೂಡುಗಟ್ಟನ ಗಿಡ, ಬೋಡುಕಡಲೆಸೊಪ್ಪು, ಕರಂಡೆ, ಮೂಡಿಗಿಡ (ಮೈಶಿಗ. ೭೦-೦೪೭೦).

[ ? + ಗಿಡ (< ಗಿಡು) ]

**ಮೂಡುನೇಸಱ್** (ನಾ). ಹುಟ್ಟುತ್ತಿರುವ ಸೂರ್ಯ; ಉದಯರವಿ: ಮೊದಲ್ ಮೂಡುನೇಸಱ ಕಡೆಗೆ ತಿರುಗು (ಬಿದ್ಯಕ್ಷ. ೩೭-೬೦೯).

[ ಮೂಡು₁ + ನೇಸಱ್ ]

**ಮೂಡುವೆಟ್ಟ, ಮೂಡವೆಟ್ಟ, ಮೂಡವೆಟ್ಟು, ಮೂಡುವೆಟ್ಟು** (ನಾ). ಪೂರ್ವದಿಕ್ಕಿನಲ್ಲಿರುವ ಪರ್ವತ ; ಉದಯಾಚಲ : ಓರ್ವ ಅಗ್ನಿ

ಪೋತ್ರಿಯು . . . ಎಳನೇಸರು ಮೂಡುವೆಟ್ಟುವನ್ನೇರುವ ಸಂಭ್ರಮವನ್ನು ನೋಡುತ್ತಾ ಮೈ ಮರೆತಿದ್ದನು (ಮುಡಿಸ. ೧). **ಮೂಡವೆಟ್ಟ**: ಮೂಡ ವೆಟ್ಟದ ನಡುನೆತ್ತಿಯೊಳಿರ್ದ ಭಾಸ್ಕರನ ಕಂಡೆ ನಾನು (ನಾಗಕು. ೩-೩೨); ಕ್ಷೋಣೀಯ್ಮತಾಮಸಂ ಪರಿಜು ದುಃಖಂ ಪೋಗೆ ಮೂಡೇವಘಯ ಮೂಡ ವೆಟ್ಟದುದಿಯನ್ನಡರಿ ನೋಡಿದಂ ಪ್ರೀತಿಯಿಂದೆ (ವೆಂಕರಾ. ೨-೨೭-೧೨). **ಮೂಡವೆಟ್ಟು**: "ಮೂಡವೆಟ್ಟೆಂದು ಪೂರ್ವಾಚಲಂ" (ಶಶಾ. ೯೯-೩೦); ದನಿಮಾಡೆ ಕುಕ್ಕುಟ ಪರಿದೋಡೆ ತಿಮಿರ ಪದ್ಮಿನಿಗತಿಸಂತಸಗೂಡೆ ಮನುಜರು ಭೂಪಾಳಿ ಧನ್ಯಾಸಿಗಳ ಪಾಡೆ ಇನ ಮೂಡವೆಟ್ಟಿನೊಳ್ಮೂಡೆ (ಶೀವಂಸಾಂ. ೦೭-೩೪); ಘನಸತ್ತ್ವಂ ವಿಷ್ಣುಪದಾರ್ಚನೆಗೆಯ್ಯಲ್ ಮೂಡವೆಟ್ಟು ಶಶಿಶಂಖದೆ ಪಾಲ್ಗೊನಲಿನಭಿಷೇಕವಂ ಮಾಟ್ಟಿನವೋಲ್ ಪಸರಿಸಿತೊ ಮಸಗಿ ಪೊಸವೆಳ್ದಿಂಗಳ್ (ಶಕಬಿ. ೬-೨೪). **ಮೂಡುವೆಟ್ಟು**: ತಾನೆ ಭಾಸ್ಕರಂ ಬೇಗನುಪ್ಪವಡಿಸಿ ಮೂಡುವೆಟ್ಟಿನ ಕೋಡುಗಲ್ಲಿನೇಜು ನಿಟ್ಟಿಸುತಿರ್ದಂ (ರಾಮಾಶ್ವ. ೨೭-೧); ಹರಿಗೋಲು ಇರುಳೆಲ್ಲ ತೇಲಿ, ನೇಸರು ತನ್ನ ಪೊಂಬೇರನ್ ಅಡರಿ ಮೂಡುವೆಟ್ಟಿನ ನೆತ್ತಿಗೈತಹ ಮುನ್ನ . . . ಬಂದು ಈ ದ್ವೀಪವನ್ನು ಸೇರಿದುದು (ಬಗಾಳ. ೨೩-೩). [ಮೂಡು₃ + ಬೆಟ್ಟ]

**ಮೂಡುವೆಟ್ಟು** 'ಮೂಡುವೆಟ್ಟ' ನೋ.

**ಮೂಡೆ**, ಮಟ್ಟೆ₂, ಮೂಟೆ, ಮೊಟ್ಟೆ₃ (ನಾ). ೧. ಹುಲ್ಲು, ನಾರು, ಬಟ್ಟೆ, ಮೊದಲಾದುವುಗಳಿಂದ ಕಟ್ಟಿದ ದೊಡ್ಡ ಗಂಟು,–ಕಟ್ಟು,–ಹೊರೆ: ನೂಱಿರ್ಪತ್ತು(ಸ್ಯಾ)ಕೊಂಬೆ ಗಾರೊಡಂ ಪಡೆಯುಂ ಮೆಣ್ಣ(ನ್ನು) ಮೂಡೆ ಜಮಳಿ ಒನ್ದು (ಎಇ. XXI, ಗಲಿ೦೭; 8ನೆಯ ಶತ); ನೀರ ಮೂಡೆಯು ಕಟ್ಟಿ ಬಯಲಿಗೆ ಬಲೆಯ ಬೀಸಬಹುದೇ ಅಯ್ಯ (ಸಿದ್ಧೇವ. ೬೪೪). ೨. ಧಾನ್ಯ ಮೊದಲಾದುವನ್ನು ತುಂಬಿಸಿ ಕಟ್ಟಿದ ದೊಡ್ಡ ಚೀಲ: ಪುರದ ವೀಧಿಯೊಳಿಡದು ನೆಲ್ಲ ಮೂಡೆಗಳಿರಲು (ಶಂಬರ. ೧೧-೦೦೨); ಬಳ್ಳ ಐವತ್ತರ ಲೆಕ್ಕದ ಅಕ್ಕಿ ಮೂಡೆ ೨ಳ (ಎಇ. XX, ೬-೪೩; 1556); ಕಣ್ಣಾಮುಚ್ಚೆ ಕಾಡೇಗೂಡೆ ಉದ್ದಿನ ಮೂಡೆ ಉರುಳೇ ಹೋಯ್ತು (ಹುಬ್ಬುತ. ೦೩೪); ಮೂಢನಿಗೆ ಭಯವಿಲ್ಲ, ಮೂಡೆ ಭತ್ತಕ್ಕೆ ಕೇಡಿಲ್ಲ (ಗಾದೆ). ೩. ಚಿಕ್ಕಪೊಟ್ಟಣ,– ಗಂಟು: ತಳಿರ ಮೂಡೆಯೊಳೆ ಮಲ್ಲಿಗೆಯ ಮುಗುಳ್ಗಳನೊಟ್ಟೆ ಮಿಕ್ಕ ಮುಗುಳಂ ಮೇಲುದಿಂ ಮೊಟ್ಟೆಯಂ ಕಟ್ಟಿ (ಲೀಲಾವ. ೦೦-೦೦). ೪. ಒರಗಿಕೊಳ್ಳಲು ಉಪಯೋಗಿಸುವ ಉದ್ದವಾದ ದಿಂಬು; ಲೋಡು: ಪಾಡುವ ಗಾನವ ನಿಲಿಸಿ ಮತ್ತೊಱಗುವ ಮೂಡೆಯನೊಱಗಿ ಚಕ್ರೇಶ ನೋಡುತಿರ್ದನು (ಭರತ. ೩೯-೯೬). 'ಒಱಗುವಮೂಡೆ'. 'ಮಲಂಗುಮೂಡೆ' ಪರಾ. ೫. ಒಂದು ಅಳತೆ: ಶಾಸನಗಳಲ್ಲಿ ಬರುವ ನಾಣ್ಯಗಳೂ ಅಳತೆಗಳೂ . . . ಹಾನೆ, ಮೂಡೆ, ಮುಡಿ (ತುಳುಪಾ. ೨೭೦). **ಮಟ್ಟೆ₂**: ೧. ಮಾತೆಯಾ ತಲೆಗೊಂದು ಮಟ್ಟೆಯನ್ನಿರಿಸಿ ತಾಯಂ ಬಯ್ವುತಂ ನಡೆದನಾ ಕಲ್ಕಿಯು (ತುರಂಗ. ೯೦-೬). **ಮೂಟೆ**: ೧. ಮಂದಿರದಿ ಮೊಟ್ಟೆಯನಿಟ್ಟು ಇಂದುಧರ ಜಂಗಮರ ಅಂದು ಪೂಜಿಸುವ (ಶರಲೀ. ೦೭೦-೭); ಲಲಿತಾ ಇನ್ನೊಂದು ಮೂಟೆಯನ್ನು ತೆಗೆದುಕೊಂಡು ಹಿಂದೆ ಹೊರಟಳ್ (ಸುಬ್ಬಣ್ಣ. ೩೩). ೨. ಹಾಗೂ ಹೀಗೂ ಉದ್ದಿನ ಮೂಟೆ ಕುಲುಕಿದ ಹಾಗೆ ಜನಗಳು ಸವರಿಸಿಕೊಂಡು ಎಲ್ಲರೂ ಕುಳಿತರು (ರಾಮಾಪ. ೦೦೦). **ಮೊಟ್ಟೆ₃**: ೧. ಕುಡುಪವನೇನನಿತ್ತಪನೊ ಕಟ್ಟಿ ಬುಧಾಳಿಗೆ ಪೊನ್ನ ಮೊಟ್ಟೆಯಂ ಕುಡುವೊಡೆ ಚಿಟ್ಟರಂ ಕುಡುವುದುಳ್ಳುದಂ (ಲೀಲಾವ. ೦-೩೩); ಮನ ಸೋಂಕಿದ ಸುಖವ ಮೊಟ್ಟೆಯ ಕಟ್ಟಬಹುದೆ (ಅಪಶಂ. ೦೩೦-೩೯೯); ಕಂಬಳಿಯೊಳಾತನಂ ಮೊಟ್ಟೆಯಂ ಕಟ್ಟಿ ಪೊತ್ತು ತಾದು ಬೀದಿಯೊಳಗೀಡಾಡಿಪೋಗೆ (ಕುಮಾವ್ಯಾ. ೪-೨೦ ಪ); ಅಟ್ಟಿಕ್ಕುವವನಿಗೆ ಹೆಂಡತಿಯಾಗಬೇಡ, ಮೊಟ್ಟೆ ಹೊರುವವನಿಗೆ ಆಳಾಗಬೇಡ (ಗಾದೆ). ೨. ಭತ್ತವನ್ನು ರಾತ್ರಿಕಾಲದಲ್ಲಿ ಹೊತ್ತುಕೊಂಡು ಹೋಗುವಾಗ್ಯೆ ಭತ್ತದ ಮೊಟ್ಟೆ ತೂತಾದ್ದರಿಂದ ದಾರೀಕಡೆಗೂ ಚೆಲ್ಲಿದ್ದರಿಂದ (ಮೈಆರ್. ೦೯೩೯, ೦೬-೩೩; 1402). ೬. ಪೊಟ್ಟಣದಲ್ಲಿ ಕಟ್ಟಿದ ಆಹಾರ; ಬುತ್ತಿ: ಹೊಟ್ಟೆಯು ಮೇಲೆ ಕಟ್ಟೋಗರದ ಮೊಟ್ಟೆಯು ಕಟ್ಟಿದರೇನು ಹಸಿವು ಹೋಹುದೇ (ಅಪಶಂ. ೪೨-೦೭೯). [ದೇ. ॥ ತಮಿ. ಮೂಟ್ಟೈ, ಮೂಟ್ಟೈ; ಮಲ. ಮೂಡ; ತುಳು. ಮೊಟ್ಟೆ; ತೆಲು. ಪರ್ಜಿ. ಮೂಟ; ಕುವಿ. ಮೂಂಟ; ಕುರುಖ್. ಮೋಠಾ. / ಸಂ. ಮೂಟ, ಮೂಟಕ, ಮೂಡಕ. / ಪ್ರಾ. ಮೂಡ. / ಮರಾ. ಮೂಡ್]

**ಮೂಡೆಗಟ್ಟು₁**, ಮಟ್ಟೆಗಟ್ಟು, ಮೂಟೆಕಟ್ಟು, ಮೊಟ್ಟೆಕಟ್ಟು, ಮೊಟ್ಟೆಗಟ್ಟು (ಕ್ರಿ). ೧. ಗಂಟುಕಟ್ಟು; ಹೊರೆಮಾಡು: ಪಾತಾಳದೊಳಗಿರ್ದ ಶೇಷನ ಕತ್ತು ಕೈಕಾಲ ಮುದುಡಿ ಮೂಡೆಗಟ್ಟಿ ಕಟ್ಟುತ್ತೆ (ಶೀಕೃ. ೨-೦೨-೪೩); ಮೂಡೆಗಟ್ಟಿದ ಧಾನ್ಯ ನಿರುತಾಗಿ ಮೊಳೆವಂತೆ ಕೂಡೆ ರೋಮಗಳು ಗುಡಿಗಟ್ಟೆ (ಕೃಕುಶು. ೪-೦೪). ೨. ಗಂಟಾಗು; ಬಾವು ಬರು: ಅಂಜನಚೋರಂಗೆ ಮುಳಿದು . . . ಕಾಲೊಳಂ ಕೈಯೊಳಂ ಮೂಡೆಗಟ್ಟುವಂತೆ ಮೋದಿ (ಧರ್ಮಾಮೃ. ೨-೦೨೦). **ಮಟ್ಟೆಗಟ್ಟು**: ೧. ತಂಬುಲಿಗರ ನಂಬಲಿಯಂ ಮಟ್ಟೆಗಟ್ಟುವರಂತೆ ಕೋಡಗಟ್ಟಂಗಟ್ಟಿ ಕಾಡುವಂ (ಧರ್ಮಾಮೃ. ೨-೭೭). **ಮೂಟೆಕಟ್ಟು**: ೧. ಅರ್ಜುನನನ್ನು ರಣಾಂಗಣದಲ್ಲಿ ಜಯಿಸುವುದಕ್ಕೆ ನಿಶ್ಚಯಿಸುವುದು ಘಾಳಿಯನ್ನು ಹಿಡಿದು ಮೂಟೆಕಟ್ಟುವುದಕ್ಕೂ . . . ಎಣಿಸಿದ ಹಾಗೆ (ಕೃವಾಳ. ೬೨); ಆ ವೀರಭೂಮಿಯ ಸ್ವತಂತ್ರರಾಣಿಯನ್ನು ಬಲಾತ್ಕಾರದಿಂದ ತಂದರೆ, ಹಿಂದೂ ಪಾಳೆಯಗಾರರ ವಿರೋಧಾನಲವನ್ನು ಮೂಟೆಕಟ್ಟಿ ಪಟ್ಟಣಕ್ಕೆ ತಂದಂತೆಯೇ ಸರಿ (ಬೆಳಕ. ೪೭). ೩. ಧಾನ್ಯ ಮುಂತಾದುವನ್ನು ಚೀಲದಲ್ಲಿ ತುಂಬಿಸಿ ಕಟ್ಟು: ಅವನು ಭತ್ತವನ್ನು ಮೂಟೆಕಟ್ಟಿ ಸಂತೆಗೆ ಮಾರಲು ತೆಗೆದುಕೊಂಡು ಹೋದನು (ರೂಢಿ). ೪. ಒಟ್ಟುಗೂಡಿಸು; ಒಟ್ಟಾಗಿ ಬಂಧಿಸು: ಹೆಣ್ಣಿನ ತಂಟೆ ಇನ್ನು ಬೇಡವೆಂದು ರೋಷವನ್ನೆಲ್ಲಾ ಮೂಟೆಕಟ್ಟಿ ಇಟ್ಟಿದ್ದ ಭೀಮನೂ ಮತ್ತೆ ಕೆರಳಿದನು (ಕಾವ್ಯಸ. ೦೯); ಆ ಸೇಡನ್ನು ಅವನು ಮೂಟೆಕಟ್ಟಿ ಮನದ ಮೂಲೆಯಲ್ಲಿ ಬಚ್ಚಿಟ್ಟುಕೊಂಡನು (ಒಡ್ಡು. ೪೦). **ಮೊಟ್ಟೆಕಟ್ಟು**: ೧. ನನ್ನ ಜುಬ್ಬವನ್ನು ತೆಗೆದು ಪಂಚೆಯನ್ನು ಎತ್ತಿ ಮೊಟ್ಟೆಕಟ್ಟಿ ಕೆರೆಯೊಳಗಿಳಿದೆ (ಜಂಗಾಳ್ಯ. ೩೩೩). ೪. ಮಂದಾ ಅವಸರದಿಂದ . . . ಒದ್ದಾಡುವ ಮನಸ್ಸನ್ನು ಒಟ್ಟುಗೂಡಿಸಿ ಮೊಟ್ಟೆಕಟ್ಟಿ ಅಂತೂ ಕುಳಿತುಕೊಂಡಳು (ಇಶ್ವ. ೨೩೩). **ಮೊಟ್ಟೆಗಟ್ಟು**: ೧. ಪುಡಿಗತ್ತುರಿಯೆಂದು ಒಡಿಕೆಯ್ಸಿ ಪೊಸಲುಂ ಪಾಸಿ ಮೊಟ್ಟೆಗಟ್ಟಲುಂ . . . ಅಪ್ಪ ಕಾಳದ ಕಟ್ಟಲೆಯೊಳ್ (ಅರ್ಥವೇ. ೩-೦೬ವ); ತನ್ನ ಮನದಣಿವನಿತು ಪೊನ್ನಂ ತನ್ನ ವಸನದಿಂ ಮೊಟ್ಟೆಗಟ್ಟಿ ಸಡಗರಂ ಮಿಗೆ ಪೊತ್ತು (ವೃಕಬಿ. ೦೬-೦೬ ವ); ಹುಟ್ಟುವಾಗಲೆ ಧನವ ಮೊಟ್ಟೆಗಟ್ಟಿಳಿದಿಹನೆ (ಸರ್ವಜ್ಞ. ೬೦೯). [ಮೂಡೆ + ಕಟ್ಟು₁]

**ಮೂಡೆಗಟ್ಟು₂** (ನಾ). ಮೂಡೆಗಳನ್ನು ಕಟ್ಟುವಂತೆ ಕಟ್ಟುವ ಒಂದು ಬಗೆಯ ಬಿಗಿಯಾದ ಬಂಧ, – ಕಟ್ಟು: ಈಗಳೊರ್ವಂ ಗಂಧರ್ವಂ . . . ಕುರುರಾಜನುಮಂ ಯುವರಾಜನುಮನೊಡನೆ ಮೂಡೆಗಟ್ಟುಗಟ್ಟಿಕೊಂಡು ಗಗನಮಂಡಳಕ್ಕೊಗೆದು ಪೋದಂ (ಪೇಱಿತು. ೦೦-೭೦ವ); ಮೂಡೆಗಟ್ಟಂ ಕಟ್ಟಿ ಹುಡುಕುನೀರೊಳ್ ಮೆಟ್ಟಿ ಕಾಡುತಿಹ ಪಾಮರರ ಕೈವಿಡಿತಗೊಳಗಾಗಿ (ರಾಮಕಂ. ೨.೬); ಮೂಡೆಗಟ್ಟಂ ಕಟ್ಟಿ ಹುಡುಕುನೀರೊಳಗದ್ದಿ ಕೂಡೆ ಮೂಗಂ ಕೊಯ್ದೊಡೆ (ಗುರುಚಾ. ೦-೩೩). [ಮೂಡೆ + ಕಟ್ಟು₂]

**ಮೂಡೈ** 'ಮೂಡಾಯ್' ನೋ.

**ಮೂಡೊಂಕು** (ನಾ). ಮೂರು ಕಡೆಗಳಲ್ಲಿ ಬಾಗಿರುವುದು, – ಡೊಂಕಾಗಿರುವುದು: ಮಲಹರನ ನಡುವೊಂದೆಸೆಗೆ ಒಲಿದೊಲಿದುಕೊಂಡಿದೆ . . . ಮೂಡೊಂಕಾಗಿ ಕಾಲೊಂದು ನೆಲನನೂಱಿತ್ತೊಡಲನ್ನಾಂತುದು ಉಳಿದ ಮೆಲ್ಲಡಿ (ಬಸವು. ೦೭-೨); ಜಡಿದ ಖಂಡೆಯದ ಮೂಡೊಂಕ ತಿದ್ದದ

ಮುನ್ನವಡಿಗೆಱಗಿದುದು ಕೇಶವನ ಪೊಡವಿ ತ್ರಿಖಂಡವೆ ಷೋಡಶರಾಯರು ಪಡೆದರು ಭೃತ್ಯಭಾವವನು (ವರ್ಧಕ. ೬-೫೦).

[ಮೂ₁ (< ಮೂಱು) + ಡೊಂಕು₂]

**ಮೂಢ** (ಗು). ೧. ತಿಳಿವಳಿಕೆಯಿಲ್ಲದ ; ಅವಿವೇಕದಿಂದ ಕೂಡಿದ : 'ಮೂಢನಂಬಿಕೆ', 'ಮೂಢಭಕ್ತಿ' ಪರಾ. (ನಾ). ೨. ತಿಳಿವಳಿಕೆಯಿಲ್ಲದವನು; ತಿಳಿಗೇಡಿ; ಅಜ್ಞ: "ವೈಧೇಯಃ . . . ಮೂಢಃ . . . ಮಾತೃಶಾಸಿತಃ — ಈ ೧೧ ಅಱಿಯದವಂ" (ಶಬ್ದಮ. ೫೬-೦೬೦); ಮೂಢ ಬಲ್ಲನೆ ಜ್ಞಾನದೃಢ ಭಕುತಿಯು (ಕುರಂದ. ರಾ. ೫-೦೪೦ ಕಲ್ಲಿ); ಮೂಢ ಒಂದಿರುಗಿ ಪೋಗಿ ಸಲಹಿಕೊ ಶರೀರಮಂ (ಪಂಚಾಂಶ. ೫-೩-೦೦). ೩. ಪೆದ್ದ; ಮಂಕ : ಮೂಢಗೆ ಹೇಳಿದ ಬುದ್ಧಿ ಆಡಿಗೆ ಹಾಕಿದ ಮೇವು (ಗಾದೆ). ೪. ಆಲಸ್ಯ; ಸೋಮಾರಿತನ : ಮೂಢವೆಂದರೆ ತಮೋಗುಣದಿಂದ ನಿದ್ರೆಯಲ್ಲಿರುವ ಹಾಗೆ ಆಲಸ್ಯದಲ್ಲಿರುವುದು (ಹಿಂದಶಾ. ೦೦೨). ೫. = ಮೂಢತ್ರಯ : ಮೂಱುಮೂಢದಿನಾಱನಾಯತನಸೇವೆಯಿಂ . . . ಒಂಗಿದ ನಿರ್ಮಳಮಪ್ಪ ಸಮ್ಯಕ್ತ್ವರತ್ನಮಂ ಕೈಕೊಂಡು (ಸುಕುಮಾ. ೩-೩೪ ಪ); ಬೆಸನಾವುದುಯೆನುತವೆ ಮೂಱುಮೂಢಗಳೊಳೆಸೆದು ಬಿನ್ನಹವ ಮಾಡುವರು (ತ್ರಿಷಷ್ಟಿ. ೬-೬೦); ಮೂರು ಮೂಢಗಳೆಂಟುಮಲವಿನ್ನಾರನಾಯತವಷ್ಟಮದಗಳ ಬೇರುಪಡಿಸಲು ದರುಶನೀಕನುಯೆನಿಪನು (ಜಗಮಾ. ೫೯೯-೨೪). 'ಮೂಢತ್ರಯ' ಪರಾ. [ಸಂ.]

**ಮೂಢತನ** (ನಾ). ತಿಳಿವಳಿಕೆಯಿಲ್ಲದಿರುವುದು ; ಮೂರ್ಖತನ : ರೂಢಿ ಮಾಡಿದ ಧರ್ಮಗತಿಯಲಿ ಗಾಢಮಾಡಿದ ಸರ್ವಜನಗಳ ಮೂಢತನ ಬಯಲಾಗಿ ಹೋಯಿತು (ಸಂಶಕ. ೪-೩೪). [ಮೂಢ + — ತನ]

**ಮೂಢತೆ** (ನಾ). ೧. = ಮೂಢತನ : ಮೂಢತೆಯಂ ಬಿಟ್ಟು ಪೆಱರ್ ಮಾಡುವ ಡೊಂಬಿಂಗೆ ಬೇಗಮೆಱಗದೆ ಮೂರ್ಖರ್ ಮಾಡುವುದಂ ಲೇಸೆನ್ನದೆ ಕೂಡುವುದಾರಯ್ದು ಮೂಢದೃಷ್ಟಿಯೊಳಜೀವಂ (ಧರ್ಮಾಮೃ. ೫-೩); ಬೀತುದು ಬಿಂಕಮೋಡಿದುದು ಮೂಢತೆ ಮೂಡಿದುದಶ್ರು ಕಣ್ಗಳೊಳ್ . . . ಬೆಳ್ಪಳಿಸಿ ಬೇವಸಮಂ ತಳೆದಂ ಧನಂಜಯಂ (ಕಬಕಂ. ೪-೦೦೩). ೨. ದಿಗ್ಭ್ರಮೆ; ಕಕ್ಕಾಬಿಕ್ಕಿ. [ಸಂ. ಮೂಢತಾ]

**ಮೂಢತ್ರಯ** (ನಾ). [ಜೈನ] ಲೋಕಮೂಢ, ದೇವತಾಮೂಢ ಮತ್ತು ಪಾಖಂಡಿಮೂಢ ಎಂಬ ಮೂರು ಬಗೆಯ ಮೂಢತನ.— ಮೌಢ್ಯ : "ದೇವಮೂಢ, ಲೋಕಮೂಢ, ಗುರುಮೂಢ ಇವು ಮೂಢತ್ರಯಗಳು. ದೇವಮೂಢ : — ಮಿಥ್ಯಾದೇವರ ಉಪಾಸನೆ. ಲೋಕಮೂಢ : —ನದಿಸ್ನಾನ, ಪರ್ವತದ ಮೇಲಿಂದ ಬೀಳುವುದು ಮುಂತಾದವುಗಳು ಪುಣ್ಯಕರವೆಂದು ಭಾವಿಸುವುದು. ಗುರುಮೂಢ : — ಆರಂಭಪರಿಗ್ರಹಗಳುಳ್ಳ ವಿಷಯವಾಸನೆಯಿಂದ ಕೂಡಿದ ಪಾಖಂಡಿಗಳನ್ನು ಮುನಿಗಳೆಂದು ಭಾವಿಸಿ ಪೂಜಿಸುವುದು. ಇದಕ್ಕೆ ಪಾಖಂಡಿಮೂಢವೆಂದು ಅನ್ನುತ್ತಾರೆ" (ಆದಿಪು. ಜೈನಪಾಂಭಾಷಿಕ ಶಬ್ದಕೋಶ) : ಜೀವಾದಿ ನವಪದಾರ್ಥದೊಳಾವಗಮುಟ್ಟಿಯನೆ ಮಾಡು ಮೂಢತ್ರಯದೊಳ್ ಭಾವಮನೆ ಬಿಸುಡು (ಆದಿಪು. ೫-೫೬). [ಸಂ.]

**ಮೂಢತ್ವ** (ನಾ). = ಮೂಢತನ : ಪೀಡೆಪಟ್ಟರೂ ಮೂಢತ್ವ ಹೋದೀತೇ (ಗಾದೆ). [ಸಂ.]

**ಮೂಢನಂಬಿಕೆ** (ನಾ). ಹಿಂದಿನಿಂದ ಬಂದ ಸಂಪ್ರದಾಯಗಳನ್ನು ವಿವೇಚನೆಯಿಲ್ಲದೆ ನಂಬುವುದು ; ಕುರುಡುನಂಬಿಕೆ : ಇದರ ಮೂಲಕ ದೇಶದಲ್ಲಿ ಒಂದು ಹೊಸ ದೃಷ್ಟಿ ಸಂಚಾರವಾಯಿತು. ಹಲವು ಮೂಢನಂಬಿಕೆಗಳು ಜಾರಿಹೋದುವು (ಶಾರದ. ೬೨೦) ; ವಿಚಾರಶೂನ್ಯವಾದ ಅಂಧಶ್ರದ್ಧೆ ಬೆಳೆದು, ಅಜ್ಞಾನ ಮೂಢನಂಬಿಕೆಗಳಿಂದ ಉದ್ಭವಿಸುವ ಸಂಕುಚಿತಮನೋವೃತ್ತಿ (ಜುಕ್ಕಾರ. ೨೭ ಪೀಠಿಕೆ). [ಮೂಢ + ನಂಬಿಕೆ]

**ಮೂಢಭಕ್ತಿ** (ನಾ). ತಿಳಿವಳಿಕೆಯಿಲ್ಲದ ಭಕ್ತಿ ; ಅಂಧಶ್ರದ್ಧೆಯಿಂದ ಕೂಡಿದ ಭಕ್ತಿ : ದೇವಸ್ಥಾನಗಳಲ್ಲಿ ನಡೆಯುವ ಉತ್ಸವವಿಶೇಷಗಳು ಪಾಮರರಂಜನೆಯಿಂದ ಅಜ್ಞಜನರೂ ಮೂಢಭಕ್ತಿಯಿಂದ ಮುಕ್ತರಾಗಲು ಸಹಾಯಕಗಳಾದುವು (ಶಾರದ. ೬೦). [ಸಂ.]

**ಮೂಢಮತಿ** (ನಾ). ತಿಳಿವಳಿಕೆಯಿಲ್ಲದ ವ್ಯಕ್ತಿ ; ಮೂರ್ಖವ್ಯಕ್ತಿ : ಮೂಢಮತಿಗಳಿಗಮಲಬ್ರಹ್ಮದ ಗೂಢವೆಂತಳವಡುವುದು (ಗಗಶಾ. ೦೨-೪೬). [ಸಂ.]

**ಮೂಢಮರ** (ನಾ). ಒಂದು ಬಗೆಯ ಮರ : ನಾರೋಲಿ. ಮೂಢ ಮರ, ಮೂಢ. ಮೂಢಲಿ. ಕನಕಚಂಪಕ (ವೃಕ್ಷಶಿ. ೫೬-೦೦೪೦).

[ಮೂಢ₃ + ಮರ₁]

**ಮೂಢಾತ್ಮ** (ನಾ). = ಮೂಢಮತಿ : ವಿತತಭಾಷಿತನಪ್ಪ ತನ್ನಿಂಗಿತ ವನವರಾಯತಮನಱಿಯದೆ ಕ್ಷಿತಿಪನವ ಮೂಢಾತ್ಮನೈ (ಕುಮಾರ. ೩-೪೯); ಎಲವೊ ಮೂಢಾತ್ಮ ನೀನೆನ್ನ ಕಟ್ಟಳೆಯನಱಿದು . . . ಪಟ್ಟಣದೊಳೇಕೆ ತಳುವಿದೆ (ಜೈಮಿ. ೧೦-೨೯). [ಸಂ. ಮೂಢಾತ್ಮನ್]

**ಮೂಢೋಕ್ತಿ** (ನಾ). ತಿಳಿವಳಿಕೆಯಿಲ್ಲದ ಮಾತು ; ಮೂರ್ಖತನದ ನುಡಿ : ಪಾಳಾದ ದುಷ್ಕರ ಲಂಕಾಪುರಮಂ ನಭೋಗಪುರಮಂ . . . ಸುಸ್ಥಿರಹಮ್ಮೀರಪುರಕ್ಕೆ ತೋಡಿಸಲೊಡಂ ಮೂಢೋಕ್ತಿ ಮೂಲಲೋಕದೊಳ್ (ಹಮ್ಮೀರ. ೦-೬೪). [ಸಂ.]

**ಮೂತಿ, ಮೋತಿ** (ನಾ). ೧. (ಸಾಮಾನ್ಯವಾಗಿ ಹೀನಾರ್ಥದಲ್ಲಿ ಹೇಳುವಾಗ ಮನುಷ್ಯರ) ಮುಖ ; ಮೋರೆ : ಜಾತಿಮರ್ಕಟ ಪಳಿದೊಡೇನಳಿವುದೆ ನಿಶಾಪತಿಯ ಮೂತಿಯೊಳಗಣ ಚೆಲುವು (ಕೃಷ್ಣಾಕ. ೬-೨೨) ; ಎಂಟುರೂಪಾಯಿ ಬಿಸಾಡುತಿದ್ದೆನಲ್ಲೇ ನಿನ್ನ ಮೂತಿಯ ಮೇಲೆ (ನಕದಾ. I, ೫೦೫). ೨. ಹಂದಿ, ಹೆಗ್ಗಣ ಮುಂತಾದ ಪ್ರಾಣಿಗಳ ಉದ್ದವಾದ ಮುಖ ; ಮುಸುಡಿ : ಹಂದಿಯು . . . ಮುಂದಿರುವ ಬಲೆಯನ್ನು ಸೀಳಿಬಿಡಬೇಕೆಂದು ಮೂತಿಯನ್ನು ಮುಂದೂಡಿ ಬಲೆಯ ಕಣ್ಣಿನಲ್ಲಿ ಸಿಕ್ಕಿಕೊಂಡಿತು (ಹುಲಿಹ. ೨೦). ೩. ಬಾಯಿಯ ಕೊನೆ ; ಕಟಬಾಯಿ ; ಸೋಟೆ : ಆಕೆ ಆ ಹುಡುಗಿಯ ಮೂತಿಯನ್ನು ತಿವಿದು ದೂಡಿದಳು (ರೂಢಿ). ೪. ಮುಂಭಾಗ ; ತುದಿ : ದೋಣಿಯ ಅಥವಾ ಹಡಗಿನ ಮೂತಿ (Bow. ೨೦೪೩) ; ಕುಡುಗೋಲಿನ ಮೂತಿ ಮುರಿದು ಹೋಯಿತು (ರೂಢಿ). ಮೋತಿ : ೧. ಹಿಂಗ್ಯಾಕ ಮೋತಿ ಮಾಡಕೊಂಡ ಕುಂತದಿ ? (ಶಿವ್ನಹಿಂ. ೬೦). ೨. "ಜಾತಿ ವರ್ಣದ ಹಯಕ್ಕಂಘ್ರಿವಳಯಂ ಪಾಲ ಮೋತಿ [ಪಾಠಾಂ.ತು.ಟಿ³]ಕಪ್ಪಾಗೆ ಸತ್ವಾಧಿಕಂ" (ಮಂಗರಾ. ೬೨-೦೭) ; ಕಚ್ಚಿದ ನಾಗರಹಾವನ್ನು ಮಂತ್ರಬಲದಿಂದ ಕರೆಯಿಸಿ ಆ ಹಾವೇ ತಾನು ಕಚ್ಚಿದ ಗಾಯಕ್ಕೆ ಮೋತಿಯಿಟ್ಟು ವಿಷ ಹೀರಿ . . . ಹೋಗುವಂತೆ ಮಾಡುತ್ತಿದ್ದನು ! (ಕಂಬಹು. ೪೨).

**ಮೂತಿತಿರುವು**=ಅಲಕ್ಷ್ಯದಿಂದ ಮುಖವನ್ನು ಬೇರೆಕಡೆಗೆ ತಿರುಗಿಸು; ವಿಮುಖವಾಗು : ನನ್ನನ್ನು ನೋಡಿ ಅವಳು ಮೂತಿತಿರುವಿಕೊಂಡು ಹೋದಳು (ರೂಢಿ). **ಮೂತಿ ತಿವಿ** = ೧. ಸೋಟೆಯನ್ನು ಚುಚ್ಚು.— ತಿವಿ : ಕೋಪದಿಂದ ಆತ ಆ ಹುಡುಗನ ಮೂತಿತಿವಿದ (ರೂಢಿ). ೨. (ಅಲಂ) ಅಪಹಾಸ್ಯಮಾಡು ; ಅವಮಾನಪಡಿಸು : ಅಂದಿನ ಸಭೆಯಲ್ಲಿ ಜನರು ಅವನಿಗೆ ಮೂತಿತಿವಿದು ಕಳಿಸಿದರು (ರೂಢಿ).

[ದೇ.॥ ತಮಿ. ಮೂಞ್ಚಿ, ಮೂಞ್ಚಿ³ ; ಮಲ. ಮೂಚ್ಚಿ, ಮುಚ್ಚಿ, ಮುಞ್ಚಿ, ಮೂಞ್ಚಿ, ಮೊತ್ತಿ, ಮೋನ್ತ ; ತೆಲು. ಕೋಲಾ. ನಾಯ್ಕಿ. ಮೂತಿ ; ಕುವಿ. ಮೂಂಬು. ಮೂಂಬೂ ; ಕುರುಖ್. ಮೋಚ್ಚಾ ; ಕೋತ. ಮುಚಿ. ಮೋಂಗ್]

**ಮೂತೆರ** 'ಮೂದೆಱ' ನೋ.

**ಮೂತ್ರ** (ನಾ). ಮನುಷ್ಯ, ಪ್ರಾಣಿ ಮುಂತಾದ ಜೀವಜಂತುಗಳ ಶರೀರದಿಂದ ಹೊರಬರುವ ಕಲ್ಮಷಜಲ : ಉಚ್ಚೆ ; ಗಂಜಲ : "ಪಸುಜಲಮೆನಲ್ಕೆ ಮೂತ್ರಮಕ್ಕುಂ" (ಶಂಗರಾ. ೯೭-೧೪) ; ಪರಿಮೂತ್ರಂ ಭಿನ್ನಲಿಂಡಂ ಸುರಿಯೆ ಮದಜಳಂ ಮೆಯ್ಯೊಳ್ಗಳ್ಗಡೆ (ಮಲ್ಲಿಪು. ೧೦-೯೨) ; ಕೈಯಲ್ಲಿ ಕುಜುಹು ಬಾಯಲ್ಲಿ ಅಜುಹು ನುಡಿವುತ್ತಿಪ್ಪ ಅಯ್ಯಗಳೆಲ್ಲರು ಇಜುಹಿನ ಮೂತ್ರದಲ್ಲಿ ಪ್ರಳಯವಾದರು ನೋಡಾ (ಸಿದ್ಧೇವ. ೦೦೯-೩೩೭) ; ಮೂತ್ರ ಬಹಳವಾಗಿ ಹೋಗುವುದಕ್ಕೆ ಚಿಕಿತ್ಸೆ : — ಅಳಲೇಕಾಯಿ ಚೂರ್ಣ ಗ ೩ ತೂಕವನ್ನು ಜೇನುತುಪ್ಪದಲ್ಲಿ ಕೊಡುವುದು (ಶಿವ್ಯ.ಶಿ. ೦೩೪). [ಸಂ.]

**ಮೂತ್ರಕಟ್ಟು** (ನಾ). ಮೂತ್ರವಿಸರ್ಜನೆಯಲ್ಲಿ ತಡೆಯುಂಟಾಗುವ ಒಂದು ಬಗೆಯ ರೋಗ : ಉಚ್ಚೆ ನಿಂತುಹೋಗುವುದು : ಮೂತ್ರಕಟ್ಟಿಗೆ : — ಗರಿಕೆಬೇರು, ಯಷ್ಟಿಮಧುಕ, ನೆಗ್ಗಿಲುಬೇರು, ತ್ರಿಫಲೆಯ ರಸದಲ್ಲಿ ಅಟ್ಟು ಕರ್ಪೂರ, ಶಿಲಾಧಾತುವಂ ಪ್ರತಿಪಾಕವಿಕ್ಕಿ ಕುಡಿಯೆ ಎಲ್ಲಾ ಮೂತ್ರಕೃಚ್ಛ್ರ ಮಾಣ್ಗುಂ (ಶಿವ್ಯ.ಶಿ. ೧೭೦) ; ಜೋಳ ದರಗದ ರಸವನ್ನು ಹಸುವಿನ ಹಾಲಿನಲ್ಲಿ ಕೂಡಿಸಿ ಜೀರಿಗೆ ಗ ೨ ತೂಕ, ಸಕ್ಕರೆ ಗದ್ಯಾಣ ೩ ತೂಕ ಸಹ ಹಾಕಿ ಕೊಡಲು ಮೂತ್ರಕಟ್ಟು ಹೋಗುವುದು (ಸಕವ್ಯ. ಶಂ. ೪೯೪). [ಮೂತ್ರ + ಕಟ್ಟು₂]

**ಮೂತ್ರಕಲ್ಲು** (ನಾ). ಮೂತ್ರಕೋಶ ಅಥವಾ ಮೂತ್ರನಾಳದಲ್ಲಿ ಕಲ್ಲಿನಂತೆ ಗಟ್ಟಿಯಾದ ಗಂಟು ಉಂಟಾಗಿ ಮೂತ್ರ ವಿಸರ್ಜನೆಗೆ ತಡೆಯೊಡ್ಡುವ ಒಂದು ಬಗೆಯ ರೋಗ ; ಅಶ್ಮರಿ : ಮೂತ್ರಕಲ್ಲಿಗೆ ಗುಳಿಗೆಯ ಮಾಡುವ ಕ್ರಮ : — ಕೆಂಪಿನ ಅಂಕೋಲ ಬೇರು, ಪುಳಿಸೊಪ್ಪು . . . ಇವಕ್ಕೆ ಸಮ ಇಂಗು, ಅಂಬಿಲದಲ್ಲಿ ಅರೆದು ಮೂತ್ರಕಲ್ಲಿಗೆ ಗುರುಗುಂಜಿಯ ಪ್ರಮಾಣಕ್ಕೆ ಕೊಡುವುದು (ಬವ್ಯ.ಶಿ. ೧೨೪).
[ ಮೂತ್ರ + ಕಲ್ಲು (< ಕಲ್$_3$) ]

**ಮೂತ್ರಕುಂಡಲಕ** (ನಾ). ಹನ್ನೆರಡು ಬಗೆಯ ಮೂತ್ರಸಂಬಂಧವಾದ ರೋಗಗಳಲ್ಲಿ ಒಂದು : ಹನ್ನೆರಡು ಪ್ರಕಾರ ಮೂತ್ರಘಾತಗಳ ಪೆಸರಾವಾವೆಂದೊಡೆ — ಮೂತ್ರೋತ್ಸಂಗ, ಮೂತ್ರಗ್ರಂಥಿ, ಮೂತ್ರಕ್ಷಯ, ಮೂತ್ರಾತೀತ, ಮೂತ್ರಶುಕ್ಲ, ಮೂತ್ರಕುಂಡಲಕ, ಮೂತ್ರವಿಡ್ಘಾತ, ಮೂತ್ರವಾತ, ಮೂತ್ರಪ್ಲೀಹ, ಉಷ್ಣವಾತ, ಮೂತ್ರವಸ್ತಿ, ಮೂತ್ರಸಾದವೆಂದಿಂತು (ಸಕವ್ಯ. ೩೭೦). [ಸಂ.]

**ಮೂತ್ರಕುಂಡಲಿಕೆ** (ನಾ). = ಮೂತ್ರಕುಂಡಲಕ : ಮೂತ್ರೋತ್ಸಂಗ, ಮೂತ್ರಗ್ರಂಥಿ, ಮೂತ್ರಕ್ಷಯ, ಮೂತ್ರಾತಿಸಾರ, ಮೂತ್ರಶುಕ್ಲ, ಮೂತ್ರಕುಂಡಲಿಕೆ, ಮೂತ್ರವಿಡ್ಘಾತ, ಮೂತ್ರವಾತ, ಮೂತ್ರಾಷ್ಟೀಲ, ಉಷ್ಣವಾತ, ಮೂತ್ರವಸ್ತಿ, ಮೂತ್ರಸಾದಗಳೆಂದು ಇವು ಹನ್ನೆರಡು ತೆಱ (ವೈದ್ಯಸಾ. I. ೨೩೪). [ಸಂ. ಮೂತ್ರಕುಂಡಲಿಕಾ]

**ಮೂತ್ರಕೂಪ** (ನಾ). ೧. ಉಚ್ಚೆಯು ಸಂಗ್ರಹವಾಗುವ ಗುಂಡಿ. ೨. ಒಂದು ನರಕದ ಹೆಸರು : ಪರ್ವತ ಯುಗಳಪರ್ವತ ಕ್ಷುರಧಾರೆ ಮೂತ್ರಕೂಪ ವಿಷ್ಟಾಕೂಪವೆಂಬೈಸು ಮಂತ್ರಿನರಕಂಗಳು (ಶಿವೇಶ.೦೩೩). [ಸಂ.]

**ಮೂತ್ರಕೃಚ್ಛ್ರ** (ನಾ). ಉರಿ ಮತ್ತು ನೋವಿನಿಂದ ಕೂಡಿದ್ದು ಸರಾಗವಾಗಿ ವಿಸರ್ಜನೆಯಾಗದಿರುವ ಒಂದು ಬಗೆಯ ಮೂತ್ರ ರೋಗ : ಅಮರದವಳ್ಳಿ, ಬಿಲ್ವಪತ್ರೆಕಾಯಿ . . . ಕಷಾಯ ಕಾಯಿಸಿ, ಹಿಪ್ಪಲಿ ಪ್ರತಿಪಾಕಗೊಂಡು ಸೇವಿಸೆ . . . ಅಸ್ಥಿಗತಜ್ವರ, ಮೂತ್ರಕೃಚ್ಛ್ರ ಮೊದಲಾದ ರೋಗಗಳು ಗುಣವಾಗುವವು (ಸಕವ್ಯ. ೯೦). [ಸಂ.]

**ಮೂತ್ರಕೃಚ್ಛ್ರೆ** (ನಾ). = ಮೂತ್ರಕೃಚ್ಛ್ರ : ಅಂತಪ್ಪ ರೇಖೆಗಳ್ ಕರ್ಪಂ ತಳೆದಾ ಪೋಥಮಧ್ಯದೊಳ್ ತೋರ್ಪೊಡೆ ಬಾಟ್ಗುಂ ತುರಗಂ ಪೋಡಷವರ್ಷಾಂತರವುಂ ಮೂತ್ರಕೃಚ್ಛ್ರೆಯಿಂದಂ ಮಡಿಗುಂ (ಅಶ್ವಶಾ. ೩-೨೦). [ಸಂ. ಮೂತ್ರಕೃಚ್ಛ್ರ]

**ಮೂತ್ರಕೋಶ** (ನಾ). ದೇಹದಲ್ಲಿ ಉಚ್ಚೆಯು ಶೇಖರವಾಗುವ ಚೀಲ : ಕಾಯಿಲೆ ತೀವ್ರಗತಿಯಲ್ಲಿರುವಾಗ ಕೆಲವು ವೇಳೆ ಮೂತ್ರಕೋಶ (urinary bladder) ಕ್ಕೆ ಲಕ್ವ ಹೊಡೆಯುತ್ತದೆ (ಕೆಂರೋ. ೪೩). [ಸಂ.]

**ಮೂತ್ರಕ್ಷಯ** (ನಾ). ಹನ್ನೆರಡು ಬಗೆಯ ಮೂತ್ರರೋಗಗಳಲ್ಲಿ ಒಂದು; ಸರಿಯಾದ ಪ್ರಮಾಣದಲ್ಲಿ ಮೂತ್ರೋತ್ಪತ್ತಿಯಾಗದಿರುವುದು : ಮೂತ್ರೋತ್ಸಂಗ, ಮೂತ್ರಗ್ರಂಥಿ, ಮೂತ್ರಕ್ಷಯ . . . ಮೂತ್ರಸಾದಗಳೆಂದು ಇವು ಹನ್ನೆರಡು ತೆಱ (ವೈದ್ಯಸಾ. I. ೨೩೪) ; ಹನ್ನೆರಡು ಪ್ರಕಾರ ಮೂತ್ರಘಾತಗಳ ಪೆಸರಾವಾವೆಂದೊಡೆ ಮೂತ್ರೋತ್ಸಂಗ, ಮೂತ್ರಗ್ರಂಥಿ, ಮೂತ್ರಕ್ಷಯ . . . ಮೂತ್ರಸಾದವೆಂದಿಂತು (ಸಕವ್ಯ. ೩೭೦). [ಸಂ.]

**ಮೂತ್ರಗ್ರಂಥಿ** (ನಾ). = ಮೂತ್ರಕಲ್ಲು : ಮೂತ್ರೋತ್ಸಂಗ, ಮೂತ್ರಗ್ರಂಥಿ . . . ಮೂತ್ರಸಾದಗಳೆಂದು ಇವು ಹನ್ನೆರಡು ತೆಱ (ವೈದ್ಯಸಾ. I. ೨೩೪) ; ಹನ್ನೆರಡು ಪ್ರಕಾರ ಮೂತ್ರಘಾತಗಳ ಪೆಸರಾವಾವೆಂದೊಡೆ, ಮೂತ್ರೋತ್ಸಂಗ, ಮೂತ್ರಗ್ರಂಥಿ . . . ಮೂತ್ರಸಾದವೆಂದಿಂತು (ಸಕವ್ಯ. ೩೭೦). [ಸಂ.]

**ಮೂತ್ರಚೀಲ** (ನಾ). = ಮೂತ್ರಕೋಶ : ಬಹುಮೂತ್ರಕ್ಕೆ ಮೊದಲು ಹುಟ್ಟುವ ಉಪದ್ರವ ಮೂತ್ರಚೀಲವು ಗುದದ ಮೇಢ್ರದ ಮಧ್ಯದಲ್ಲಿ ಇಹುದು (ಶಿವ್ಯ.ಶಿ. ೦೩೭). [ಮೂತ್ರ + ಚೀಲ]

**ಮೂತ್ರಜನಕಾಂಗ** (ನಾ). ಶರೀರದ ಶುದ್ಧೀಕರಣಾಂಗಗಳಲ್ಲಿ ಒಂದು; ಮೂತ್ರೋತ್ಪತ್ತಿಯನ್ನು ಮಾಡುವ ಅಂಗ : "ಸಸ್ತನಿಗಳ, ಪಕ್ಷಿಗಳ, ಉರಗಮನಿಗಳ, ಉದರಕುಹರದಲ್ಲಿರುವ, ರಕ್ತದಲ್ಲಿಯ ಉಪಯೋಗ ಕಳೆದ ಸಸಾರಜನಕಪದಾರ್ಥವನ್ನು ಹೊರದೂಡುವುದಕ್ಕಾಗಿ ತನ್ನಲ್ಲಿ ಹರಿಯುವ ರಕ್ತದಿಂದ ಬೇರ್ಪಡಿಸಿ ಮೂತ್ರದ ಮೂಲಕ ಸಾಗಿಸುವ, ನಾಳಗುಚ್ಛಾಂಗಗಳೆರಡರಲ್ಲಿ ಒಂದು : ಮೂತ್ರಜನಕಾಂಗ ; ಮೂತ್ರಪಿಂಡ" (Kidney. ಇಂಕಶ). [ಸಂ.]

**ಮೂತ್ರತಡೆ** (ನಾ). = ಮೂತ್ರಕಟ್ಟು : ಪೆಟ್ಲುಪ್ಪು ಗ ೧ ತೂಕವನ್ನು ಪುಡಿ ಮಾಡಿ ನಿಂಬೆಹಣ್ಣಿನ ರಸದಲ್ಲಿ ಕಲಸಿ ಸಕ್ಕರೆ ಗ ೩ ತೂಕ ಹಾಕಿ ಕುಡಿಯಲು ಆ ಕ್ಷಣವೇ ಮೂತ್ರತಡೆ ಹೋಗುವುದು (ಸಕವ್ಯ. ಶಂ. ೪೯೪).
[ಮೂತ್ರ + ತಡೆ₂]

**ಮೂತ್ರದೋಷ** (ನಾ). ಮೂತ್ರಸಂಬಂಧವಾದ ರೋಗ : ಈ ಲೇಹ್ಯಕ್ಕೆ ಚ್ಯವನಪ್ರಾಶವೆಂದು ಹೆಸರು . . . ಇದನ್ನು ಸೇವಿಸಲು . . . ಮೂತ್ರದೋಷ, ಶುಕ್ರದೋಷ, ಸ್ವರಭಂಗ ಇವೆಲ್ಲವೂ ಪರಿಹರವಹವು (ವೈದ್ಯಸಾ. II. ೨೩೬). [ಸಂ.]

**ಮೂತ್ರದ್ವಾರ** (ನಾ). ಮೂತ್ರಕೋಶದಲ್ಲಿ ಶೇಖರವಾದ ಮೂತ್ರವು ಹೊರಬರುವ ರಂಧ್ರ ; ಮೂತ್ರವಿಸರ್ಜನೆಯಾಗುವ ನಾಳ ; ಮೂತ್ರನಾಳ. [ಸಂ.]

**ಮೂತ್ರನಾಳ** (ನಾ). = ಮೂತ್ರದ್ವಾರ : ಲೊಕ್ಕಿಯ ಸೊಪ್ಪಿನ ರಸದಲ್ಲಿ ಪಚ್ಚೆಕರ್ಪೂರದ ಚೂರ್ಣವ ಹಾಕಿ ಸ್ವಲ್ಪ ಎಣ್ಣೆಯ ಬಿಟ್ಟು ಬಾರಿಸಿ ಸಮರಸಂಗೈದು ಹಿಂಡಿ ಸಣ್ಣ ಪಾವಡೆಬತ್ತಿಗೆ ಆ ರಸವ ಮಾಡಿ ಮೂತ್ರನಾಳದಲ್ಲಿ ಮೇಲಕ್ಕೆ ಏರಿಸಲು ಆ ಉತ್ತರಕ್ಷಣದಲ್ಲಿಯೇ ಮೂತ್ರ ಝಲ್ಲನೆ ಬಿಡುವುದು (ವೈದ್ಯಸಾ. I. ೨೩೬) ; ಅಳಲೆಕಾಯಿ, ನೆಗ್ಗಿಲುಬೇರು, ತಿಲಕಹಣ್ಣು . . . ಜೇನುತುಪ್ಪ ಪ್ರತಿಪಾಕವಿಕ್ಕಿ ತೆಗೆದುಕೊಳ್ಳಲು ಮೂತ್ರನಾಳದಲ್ಲಿ ಸಿಕ್ಕಿಕೊಂಡಿರುವ ಕಲ್ಲು ಕರಗಿ ಬೀಳುವುದು (ಸಕವ್ಯ. ಶಂ. ೪೯೭).
[ಸಂ. ಮೂತ್ರನಾಲ]

**ಮೂತ್ರನಿರೋಧ** (ನಾ). = ಮೂತ್ರಕಟ್ಟು : ಸೌತೆಯ ಬೀಜವಂ ನೀರಲ್ಲಿ ಅರೆದು ಕುಡಿಯೆ ಮೂತ್ರನಿರೋಧ ಮಾಣ್ಗುಂ (ಶಿವ್ಯ.ಶಿ. ೭). [ಸಂ.]

**ಮೂತ್ರಪರೀಕ್ಷೆ** (ನಾ). (ರೋಗದ ಮೂಲವನ್ನು ಪತ್ತೆಹಚ್ಚಲು ರೋಗಿಯ) ಮೂತ್ರವನ್ನು ರಾಸಾಯನಿಕವಾಗಿ ವಿಭಜಿಸಿ ಪರಿಶೀಲಿಸುವಿಕೆ : ಅನೇಕ ರೋಗಗಳನ್ನು ಪತ್ತೆಹಚ್ಚಲು ಮೂತ್ರಪರೀಕ್ಷೆ ಸಹಾಯಕವಾಗುತ್ತದೆ (ಋಣ). [ಸಂ. ಮೂತ್ರಪರೀಕ್ಷಾ]

**ಮೂತ್ರಪಿಂಡ** (ನಾ). = ಮೂತ್ರಜನಕಾಂಗ : ಈ ವಿಷಾಣುಗಳು ಹೃದಯ, ಮೂತ್ರಪಿಂಡಗಳು, ಮಿದುಳು ಮತ್ತು ಮಿದುಳುಬಳ್ಳಿಯ ಅಣುಕೋಶಗಳ ಮೇಲೆ ಕೆಲಸ ಮಾಡಿ ಅಪಾಯವನ್ನು ತಂದೊಡ್ಡುತ್ತವೆ (ಕಂಠರೋ. ೨೦). [ಸಂ.]

**ಮೂತ್ರಪ್ಲೀಹ** (ನಾ). ಮೂತ್ರಸಂಬಂಧವಾದ ಒಂದು ಬಗೆಯ ರೋಗ : ಹನ್ನೆರಡುಪ್ರಕಾರ ಮೂತ್ರಘಾತಗಳ ಪೆಸರಾವಾವೆಂದೊಡೆ ಮೂತ್ರೋತ್ಸಂಗ . . . ಮೂತ್ರಪ್ಲೀಹ, ಉಷ್ಣವಾತ, ಮೂತ್ರವಸ್ತಿ, ಮೂತ್ರಸಾದವೆಂದಿಂತು (ಸಕವೈ. ೩೭೦).
[ಸಂ. ಮೂತ್ರಪ್ಲೀಹನ್]

**ಮೂತ್ರಬಂಧ** (ನಾ). = ಮೂತ್ರಕಟ್ಟು. [ಸಂ.]

**ಮೂತ್ರರಕ್ತ** (ನಾ). ಉಚ್ಚೆಯಲ್ಲಿ ನೆತ್ತರು ಹೋಗುವ ಒಂದು ಬಗೆಯ ರೋಗ : ಮೂತ್ರರಕ್ತಕ್ಕೆ :— ಚತುರ್ಭಾಗ ಚವುಡಂಗಿರಸ, ಆವಿನ ನೊರೆಪಾಲು ಕುದಿಸುವುದು. ಕಿಚುಕುಸಾಲೆರಸದಲ್ಲಿ ತ್ರಿವಾರು ಕೂಡಿ . . . ಗುಳಿಗೆ ಮಾಡಿ ಕೊಳ್ಳೆ ಮಾಣ್ಗುಂ (ವೈವಿ. ೦೨೪). [ಸಂ.]

**ಮೂತ್ರರೋಗ** (ನಾ). = ಮೂತ್ರದೋಷ : ಮೂತ್ರರೋಗಕ್ಕೆ :— ಏಲಕ್ಕಿ ೧ ತೂಕ, ತವಕ್ಷೀರ ೪ ತೂಕ . . . ಆಡಿನ ಹಾಲಲ್ಲಿ ಕದಡಿ ಕುಡಿಯಲು ಮೂತ್ರರೋಗ ಗುಣ (ವೈವಿ. ೦೦೪) ; ಮೂತ್ರರೋಗ, ಛರ್ದಿರೋಗ . . . ವಾತರೋಗ ಇವೇ ಮುಂತಾದ ರೋಗಗಳಿಂದ ಕೂಡಿದವರು ದಂತಧಾವನಕ್ಕೆ ಅನರ್ಹರೆಂದರಿವುದು (ಸಕವೈ. ೨೯). [ಸಂ.]

**ಮೂತ್ರವಸ್ತಿ** (ನಾ). ಮೂತ್ರಸಂಬಂಧವಾದ ಒಂದು ಬಗೆಯ ರೋಗ : ಹನ್ನೆರಡುಪ್ರಕಾರ ಮೂತ್ರಘಾತಗಳ ಪೆಸರಾವಾವೆಂದೊಡೆ, ಮೂತ್ರೋತ್ಸಂಗ . . . ಮೂತ್ರವಸ್ತಿ . ಮೂತ್ರಸಾದವೆಂದಿಂತು (ಸಕವೈ. ೩೭೦). [ಸಂ.]

**ಮೂತ್ರವಾತ** (ನಾ). ಮೂತ್ರಸಂಬಂಧವಾದ ಒಂದು ಬಗೆಯ ರೋಗ : ಹನ್ನೆರಡುಪ್ರಕಾರ ಮೂತ್ರಘಾತಗಳ ಪೆಸರಾವಾವೆಂದೊಡೆ, ಮೂತ್ರೋತ್ಸಂಗ . . . ಮೂತ್ರವಾತ . . . ಮೂತ್ರಸಾದವೆಂದಿಂತು (ಸಕವೈ. ೩೭೦). [ಸಂ.]

**ಮೂತ್ರವಿಡ್ಘಾತ** (ನಾ). ಒಂದು ಬಗೆಯ ಮೂತ್ರರೋಗ : ಮೂತ್ರೋತ್ಸಂಗ . . . ಮೂತ್ರವಿಡ್ಘಾತ . . . ಮೂತ್ರಸಾದಗಳೆಂದು ಇವು ಹನ್ನೆರಡು ತೆಱ (ವೈದ್ಯಸಾ. I, ೨೩೪). [ಸಂ.]

**ಮೂತ್ರವಿಸರ್ಜನೆ** (ನಾ.) ಮೂತ್ರವನ್ನು ಸುರಿಸುವಿಕೆ ; ಉಚ್ಚೆ ಹೊಯ್ಯುವಿಕೆ : ಕಾಯಿಲೆ ತೀವ್ರಗತಿಯಲ್ಲಿರುವಾಗ . . . ಮೂತ್ರ ವಿಸರ್ಜನೆ ರೋಗಿಯ ಸ್ವಾಧೀನ (control) ತಪ್ಪಿ ತನಗೆ ತಾನಾಗಿಯೇ ಮೂತ್ರ ಹನಿಹನಿಯಾಗಿ ಹೊರಬೀಳುತ್ತದೆ (ಕಂಠರೋ. ೪೩).
[ಸಂ. ಮೂತ್ರವಿಸರ್ಜನ]

**ಮೂತ್ರವ್ಯಾಧಿ** (ನಾ). = ಮೂತ್ರದೋಷ : ಮುಳ್ಳುಮುತ್ತುಗದ ಒಳನಾರಂ ಚೂರ್ಣವಂ ಮಾಡಿ ಕರ್ಪೂರ, ಶಿಲಾಧಾತು ಬೆರಸಿ ಮಜ್ಜಿಗೆ, ಜೇನುತುಪ್ಪದಲ್ಲಿ ಕೊಳ್ಳೆ ಮೂತ್ರವ್ಯಾಧಿ ಮಾಣ್ಗುಂ (ವೈವಿ. ೩೭). [ಸಂ.]

**ಮೂತ್ರಶಂಕೆ** (ನಾ). ಮೂತ್ರಸಂಬಂಧವಾದ ಒಂದು ಬಗೆಯ ರೋಗ; ಉರಿಯಿಂದ ಕೂಡಿ ಆಗಾಗ ಮೂತ್ರವಿಸರ್ಜನೆ ಮಾಡಬೇಕೆನ್ನುವ ತೀವ್ರವಾದ ಅನಿಸಿಕೆ : ಮೇಲುಬ್ಬಸಮುಂಟಾಗಿ ಕಣ್ಣುಗಳಲ್ಲಿ ಡಾಳ ತಪ್ಪಿ . . . ಬಹಳವಾಗಿ ಮೂತ್ರಶಂಕೆಯು ಕಾಣಿಸುತ್ತುಂ . . . ಇಂದ್ರಿಯಗಳು ಹೀನವಸ್ಥೆಯಿಂ ವ್ರಣದಿಂ ಕೂಡಿಕೊಂಡಿದ್ದ ಕ್ಷಯರೋಗವು ಅಸಾಧ್ಯ (ಸಕವೈ. ೨೯೭). [ಸಂ. ಮೂತ್ರಶಂಕಾ]

**ಮೂತ್ರಶರ್ಕರೆ** (ನಾ). ಮೂತ್ರದೊಂದಿಗೆ ಸಕ್ಕರೆಯ ಅಂಶವು ಹೆಚ್ಚಾಗಿ ಹೋಗುವುದು : ದಾಳಿಂಬದ ಬೀಜ, ಏಲಕ್ಕಿ, ಪಾಷಾಣ ಭೇದಿ, ಶಿಲಾಧಾತು, ಹಿಪ್ಪಲಿ ಇವಂ ಚೂರ್ಣಂ ಮಾಡಿ ರಾಜಾನ್ನದ ಅಕ್ಕಿಗಚ್ಚಿನಲ್ಲಿ ಕುಡಿಯೆ ಮೂತ್ರಕೃಚ್ಛ್ರಂ, ಮೂತ್ರಶರ್ಕರೆಯುಂ ಕೆಡುಗುಂ (ವೈವಿ. ೨೦೭). [ಸಂ. ಮೂತ್ರಶರ್ಕರಾ]

**ಮೂತ್ರಶುಕ್ಲ** (ನಾ). ಮೂತ್ರದೊಂದಿಗೆ ರೇತಸ್ಸು ವಿಸರ್ಜನೆಯಾಗುವ ಒಂದು ಬಗೆಯ ರೋಗ : ಮೂತ್ರೋತ್ಸಂಗ, ಮೂತ್ರಗ್ರಂಥಿ . . . ಮೂತ್ರಶುಕ್ಲ, ಮೂತ್ರಕುಂಡಲಿಕೆ . . . ಮೂತ್ರಸಾದಗಳೆಂದು ಇವು ಹನ್ನೆರಡು ತೆಱ (ವೈದ್ಯಸಾ. I, ೨೩೪) ; ಹನ್ನೆರಡುಪ್ರಕಾರ ಮೂತ್ರ ಘಾತಗಳ ಪೆಸರಾವಾವೆಂದೊಡೆ, ಮೂತ್ರೋತ್ಸಂಗ . . . ಮೂತ್ರಶುಕ್ಲ . . . ಮೂತ್ರಸಾದವೆಂದಿಂತು (ಸಕವೈ. ೩೭೦). [ಸಂ.]

**ಮೂತ್ರಶೂಲೆ** (ನಾ). ಮೂತ್ರವಿಸರ್ಜನೆಯ ಸಮಯದಲ್ಲಿ ನೋವುಂಟಾಗುವ ಒಂದು ಬಗೆಯ ರೋಗ : ಬಿಳಿದುರ್ಬಚಿ, ಅಣಲೇಕಾಯಿ, ಪಾಷಾಣಭೇದಿ, ನೆಲದಾಳ, ಕೊತ್ತುಂಬರಿ, ಕಕ್ಕೇಹಣ್ಣಿನ ತಿರುಳು ಇವ ಕಷಾಯವ ಕಾಸಿ ಸಕ್ಕರೆ ಹಾಕಿ ಪಾಕವಿಕ್ಕಿಕೊಳ್ಳಲು ಮೂತ್ರ ಕೃಛ್ರ, ಕಟಿಯ ಉರಿ, ಮೂತ್ರಶೂಲೆ ಮಾಣ್ಗುಂ (ವೈವಿ. ೦೭೨).
[ಸಂ. ಮೂತ್ರಶೂಲ]

**ಮೂತ್ರಸಾದ** (ನಾ). ಬಣ್ಣವು ವ್ಯತ್ಯಾಸಗೊಂಡು ನೋವಿನಿಂದ ವಿಸರ್ಜನೆಯಾಗುವ ಒಂದು ಬಗೆಯ ಮೂತ್ರರೋಗ : ಮೂತ್ರೋತ್ಸಂಗ . . . ಮೂತ್ರವಸ್ತಿ, ಮೂತ್ರಸಾದಗಳೆಂದು ಇವು ಹನ್ನೆರಡು ತೆಱ (ವೈದ್ಯಸಾ. I, ೨೩೪). [< ಸಂ. ಮೂತ್ರಾಸಾದ]

**ಮೂತ್ರಸಿಕ್ಕು** (ನಾ). = ಮೂತ್ರಕಟ್ಟು : ಸೂಲೆ ಸುಭಿಕ್ಷಾ(ಕ್ಷಂ) ರೂಕ್ಷಾಸೂಲೆಯೆ ಸಲೆ ಮೂತ್ರಸಿಕ್ಕು ರಕ್ತವಿಮೋಹಂ ಶೂ(ಲಾ)ವಿಷ್ಕಂಭ ಕೀಟಕ ಸೂಲಾಕ್ಷ್ಯವಿ ಸಿಂಘ(ಹ)ಣದ್ವಯಂ ವಾತಾಂತ್ಯಂ (ಅಕ್ಕಾ. ೦೦-೭೦); ಏಲಕ್ಕಿ, ಪಾಷಾಣಭೇದಿಯುಂ, ಕಲ್ಲ ಅಗಿಲು, ಹಿಪ್ಪಲಿ ಎಂಬಿವುಗಳ ಪುಡಿಗಳಂ . . . ಮೂತ್ರಸಿಕ್ಕು ಬಹುಮೂತ್ರ ಸಂಕಟದೊಳು ಲೇಹ್ಯವಂ ಮಾಡುಗೆ (ವೈವಿ. ೨೦) ; ಗಣಜಿಲಬೇರಂ ಸುಟ್ಟು ಬೂದಿಯಂ ಆಡಿನ ಹಾಲಿನಲ್ಲಿ ಕೂಡಿ ಕುಡಿಯೆ ಮೂತ್ರಸಿಕ್ಕು ಬಿಡುವುದು (ಸಕವೈ. ೩೭೩).
[ಮೂತ್ರ + ಸಿಕ್ಕು₃.]

**ಮೂತ್ರಾಘಾತ** (ನಾ). ಮೂತ್ರವಿಸರ್ಜನೆಯಲ್ಲಿ ತೊಡಕುಂಟಾಗುವ ಹನ್ನೆರಡು ಬಗೆಯ ವ್ಯಾಧಿ ; ᴘ ಇವುಗಳ ಸಂಖ್ಯೆಯಲ್ಲಿ ಭಿನ್ನಾಭಿಪ್ರಾಯಗಳಿವೆ : ಹನ್ನೆರಡುಪ್ರಕಾರವಾದ ಮೂತ್ರಾಘಾತಂ ಗಳುಂಟು (ವೈದ್ಯಸಾ. I, ೨೩೪) ; ವಾತಪಿತ್ತಶ್ಲೇಷ್ಮಂಗಳು ವಸ್ತಿಸ್ಥಾನವನೈದಿ ತಮ್ಮ ತಮ್ಮ ಕಾರಣಗಳಿಂ ಪ್ರಕೋಪಿಸಿ ಮೂತ್ರಾಘಾತವೆಂಬ ಮಹಾರೋಗಗಳನು ಪುಟ್ಟಿಸುತಮಿರ್ಪುದು (ಸಕವೈ. ೩೭೦). [ಸಂ.]

**ಮೂತ್ರಾತೀತ** (ನಾ). ತಡೆತಡೆದು ಹೋಗುವ ಒಂದು ಬಗೆಯ ಮೂತ್ರರೋಗ : ಹನ್ನೆರಡು ಪ್ರಕಾರ ಮೂತ್ರಘಾತಗಳ ಪೆಸರಾವಾವೆಂದೊಡೆ, ಮೂತ್ರೋತ್ಸಂಗ . . . ಮೂತ್ರಾತೀತ . . . ಮೂತ್ರಸಾದವೆಂದಿಂತು (ಸಕವೈ. ೩೭೦). [ಸಂ.]

**ಮೂತ್ರಾಶಯ** (ನಾ). = ಮೂತ್ರಕೋಶ. [ಸಂ.]

**ಮೂತ್ರಾಷ್ಠೀಲ** (ನಾ). = ಮೂತ್ರಕಲ್ಲು: ಮೂತ್ರೋತ್ಸಂಗ . . . ಮೂತ್ರವಾತ, ಮೂತ್ರಾಷ್ಠೀಲ, ಉಷ್ಣವಾತ, ಮೂತ್ರವಸ್ತಿ, ಮೂತ್ರಸಾದಗಳೆಂದು ಇವು ಹನ್ನೆರಡು ತೆಱ (ವೈದ್ಯಸಾ. I, ೨೩೪).
[ಸಂ. ಮೂತ್ರಾಷ್ಠೀಲಾ]

**ಮೂತ್ರಿ** (ನಾ). ರಸ್ತೆ, ಬಸ್‌ನಿಲ್ದಾಣ ಮುಂತಾದ ಸಾರ್ವಜನಿಕ ಸ್ಥಳಗಳಲ್ಲಿ ಮೂತ್ರವಿಸರ್ಜನೆಗೆ ಅನುಕೂಲವಾಗುವಂತೆ ಕಟ್ಟಿರುವ ಸ್ಥಳ : (ಖಾಸಗಿ ಅಥವಾ ಸಾರ್ವಜನಿಕ) ಮೂತ್ರಸ್ಥಳ, ಮೂತ್ರಿ (Urinal. ೨೦೪೩). [ < ಮೂತ್ರ ]

**ಮೂತ್ರಿಸು** (ಕ್ರಿ). ಉಚ್ಚೆಹೊಯ್ಯು : ಮೂತ್ರವಿಸರ್ಜನೆ ಮಾಡು: ನಡುವಟ್ಟೆಯೊಳ್ ಕೆಲಸಿ ಮೂತ್ರಿಸೆ ಪೇರಡಿ ತನ್ನನಟ್ಟಿಯಿಂ ನಲಿನಲಿದಾಡೆ ಪೋದ ಮನುಜಂ ಪಡೆಗುಂ ತನಗಿಷ್ಟಸಿದ್ಧಿಯಂ (ಶೋಕೋಶ. ೦೨-೨೩) ; ಸಗಣವನಿಕ್ಕುತಂ ಮೂತ್ರಿಸುತವಲರುತ ಕೆಲನ ನೋಡುತ ಚೆಲ್ಲವಾಡುತ್ತ . . . ವೃಷಭೇಶ್ವರನಿರಲು (ಬಸವ. ೩೩-೨೬) ; ಮಠದ ಪಿತ್ತಲಲ್ಲಿ ಅಯ್ಯ ಮೂತ್ರಿಸ್ತಾ ಕೂತಿದ್ದ (ರುಕ್ರಿ ಮ. ೨೩).

[ ಮೂತ್ರ + - ಇಸು₃ ]

**ಮೂತ್ರೋತ್ಸಂಗ** (ನಾ). ನೋವಿನಿಂದ ಕೂಡಿದ್ದು ರಕ್ತಸಹಿತವಾಗಿ ಮೂತ್ರವಿಸರ್ಜನೆಯಾಗುವ ಒಂದು ಬಗೆಯ ರೋಗ : ಹನ್ನೆರಡು ಪ್ರಕಾರ ಮೂತ್ರಘಾತಗಳ ಪೆಸರಾವಾವೆಂದೊಡೆ, ಮೂತ್ರೋತ್ಸಂಗ, ಮೂತ್ರಗ್ರಂಥಿ . . . ಮೂತ್ರಸಾದವೆಂದಿಂತು (ಸಕವೈ. ೩೬೦). [ಸಂ.]

**ಮೂದಚ್ಚಾರಿ** (ನಾ). ಒಬ್ಬಾತನ ಹೆಸರು : ಶ್ರೀ ಆನನ್ದೂರ ಮೂದಚ್ಚಾರಿ ಮಾಡಿದನ್ (ಎಕ. X, ಶಿಡ್ಲ. ೩೨-೦೩ ; ಸು. 870 ?).

[ಮೂದ್ಕ + ಆಚಾರಿ]

**ಮೂದಲಿಕೆ** (ನಾ). ಹಂಗಿಸುವಿಕೆ ; ಹೀಯಾಳಿಕೆ ; ಚುಚ್ಚುಮಾತು : ಕೆಳದಿಯರ ಸಂತೈಕೆ ಮೂದಲಿಕೆಯಂತಾಗೆ . . . ಮರುಗಿದಳಬಲೆ (ಶತ್ರಾಂಗ. ೩೩-೦೩೨) ; ಒಂದು ವೇಳೆ ಹೋದರೆ ತನ್ನ ತಾಯಿಯಿಂದ ಏನಾದರೂ ಮೂದಲಿಕೆ ಬರಬಹುದು ಎಂಬ ಭಯ (ಮಹಾಗ. ೧೦).

[ಮೂದಲ್₂ + — ಇಕೆ./ತೆಲು. ಮೂದಲಿಕ = ನಿದರ್ಶನ]

**ಮೂದಲಿಸು** (ಕ್ರಿ). ಹಂಗಿಸು; ಹೀಯಾಳಿಸು; ಅವಹೇಳನ ಮಾಡು: ಈ ನುಡಿಯಂ ಮಟೆಯಲ್ವೇಡೆಂದಿರ್ವರುಮೋರೊರ್ವರಂ ಮೂದಲಿಸಿ ಪ್ರತಿಜ್ಞೆಗೆಯ್ದು (ವತ್ಥಾ ಣ. ೦೨೯-೦೧) ; ಆ ಮಾತು ತನ್ನಂ ಮೂದಲಿಸಿ ದಂತಾಗೆ ವಿದ್ವಿಷ್ಟವಿದ್ರಾವಣನಿಂತೆಂದು (ಕಂಕಥಾ. ೩-೬೨ ವ) ; ಶಸ್ತ್ರವ್ರಣವಂ ನಿನ್ನಂತೆ ಮೆಚೆವುದಿದೀವ ಬೆಡಂಗಾ ಎಂದು ಮೂದಲಿಸಿ ನುಡಿಯೆ (ಗದಾಯು. ೨-೩ ವ): ಪೂತು ಮಝುರೇ ಬಾಲ ಎಂದವನೀಶ ಮೂದಲಿಸಿದನು ತನ್ನವರ (ಕುಮಾ ರರಾ. ೬-೨೪).

[ಮೂದಲ್₂ + — ಇಸು₃./ತೆಲು. ಮೂದಲಿಂಚು = ನಿರೂಪಿಸು]

**ಮೂದಲ್₁** (ನಾ). ಮೂರು ತಲೆ : ತಲೆ ಪಗೆವರ ಕೆಯ್ಕೊಳ್ ಸುರಲಲನೆಯು ತೋಳೊಳಗೆ ಪತಿಯ ಭಂಡಾರದೊಳಂ ನೆಲಸೆ ಸುಭಟರ್ಕಳೊಳ್ ಮೂದಲೆ ನೆಗಬ್ದುದು ಪೊನ್ನನನ್ನನಾವನೊ ಮೊನೆಯೊಳ್ (ಅಜಿತ. ೦-೩೬); ಇಲ್ಲಿ 'ಮೂರುತಲೆ' ಮತ್ತು 'ಮೂದಲಿಕೆ' ಎಂಬ ಶ್ಲೇಷಾರ್ಥವಿದೆ : ಆತ್ಮಲೋಪಕ್ಕೆ . . . ಮೂಲೋಕ, ಮೂದಲೆ (ಕಪಟ. ೦೮೬ ಕ್ರ.ಟೋ).

ಮೂದಲೆಯ = ಮೂರು ತಲೆಗಳುಳ್ಳವನು : ಮೂದಲೆಯಂ, ಮೂಜು ತಲೆಯಂ (ಕಶ್ಯಾ ಸು. ೩೩೨. ಕ್ರ.ಟೋ).

[ಮೂ₁ (< ಮೂಜು) + ತಲೆ₁]

**ಮೂದಲ್₂** (ನಾ). = ಮೂದಲಿಕೆ: ತಲೆ ಪಗೆವರ ಕೆಯ್ಕೊಳ್ ಸುರಲಲನೆಯು ತೋಳೊಳಗೆ ಪತಿಯ ಭಂಡಾರದೊಳಂ ನೆಲಸೆ ಸುಭಟರ್ಕಳೊಳ್ ಮೂದಲೆ ನೆಗಬ್ದುದು ಪೊನ್ನನನ್ನನಾವನೊ ಮೊನೆಯೊಳ್ (ಅಜಿತ. ೦-೩೬) ; ಕೋಕಿಲ ಧ್ವನಿ ಮೂದಲೆಯುಲಿಯಾಗೆ ಬಂದುದುದು ಬಸಂತಂ (ಧರ್ಮಾ. ೦-೩೬) ; ಇರ್ವರುಂ . . . ಸೆಣಸಿಂಗೆ ಸೊಸು ಮೂದಲೆಗೆ ಮೂದಲೆಗಳಂ ಪೆಣಗಿದರ್ (ಶಬ್ದ. ೪೯-೪೩).

[ದೇ.॥ ತವಿ. ಮೂತಲಿ. ಮೂತರಿ = ನಿರೂಪಿಸು; ತೆಲು. ಮೂದಲ = ಸಾಕ್ಷಿ]

**ಮೂದಲೆವಾತು** (ನಾ). ತಿರಸ್ಕಾರದ ಮಾತು ; ಅವಹೇಳನದ ನುಡಿ : ಮೂದಲೆವಾತುಗಳ್ ಗಡ ಮಹಾನಿಗಮೋಕ್ತಿಗತೀತನೊಳ್ ಜಯಾಹ್ವಾದದ ರ್ಪುಂಕೆಗಳ್ ಗಡ (ಶಬಶಂ. ೪-೦೩೧). [ಮೂದಲ್₂ + ಮಾತು₁]

**ಮೂದಲೆಸೊಲ್ಲು** (ನಾ). = ಮೂದಲೆವಾತು : ಬಲ್ಲಿದ ಭಟರು ಭಾಷೆಯ ಮಾಡಿ ಮೂದಲೆ ಸೊಲ್ಲುಗಳಂ ತಳುಬಿದರು (ಕಂಸಪ. ೦೬-೩೨).

[ಮೂದಲ್₂ + ಸೊಲ್ಲು₂ (< ಸೊಲ್₂)]

**ಮೂದಲ್ಮೆ** (ನಾ). = ಮೂದಲಿಕೆ : ತಂತವ್ಮು ಮನದ ಮಚ್ಚರದ ಮರ್ಚಿನ ಕಾದಲ್ಮೆ ಮೂದಲ್ಮೆಯಾಗಿ ಕೈಗೆಯ್ದು ಪ್ಮೈಗೆಯ್ಕದೆ ಪರಿಚ್ಛೇದಿಸಿ (ಅನಂತ. ೦೨-೦೨ ವ). [< ಮೂದಲ್₂ + - ಮೆ₃]

**ಮೂದಿಟ್ಟಿ** (ನಾ). ಮೂರುಕಣ್ಣು : ಮುನ್ನೀರ ಕಟ್ಟಲಾಜಿದನ ಸದನಾಗ್ರದೊಳ್ ನಿಂದ ಮೂದಿಟ್ಟಿಯುಳ್ಳತುಳರುದ್ರಂ (ಬಸೋಪು. ೦೩-೩೦).

[ಮೂ₁ (< ಮೂಜು) + ದಿಟ್ಟಿ]

**ಮೂದಿರಿಕ** (ನಾ). ಮೂರು ಕಡೆಗೆ ತಿರುಗುವಂತಹುದು : ಉಗುಬಿಪ ಮೂಗಂ ಮುಚ್ಚಿಪ ಮೊಗಮಂ ಮೂದಿರಿಕನಾಗಿಪುದ್ದಾರವಾನವಗ ಮೊಗೆಯಿಪ ಬೇಡರ ಪಳ್ಳಿಗಳಂ ಪತಿ ಪಾಯ್ದು ಪೋಗೆ (ಶಾಂತಿಪ. ೬-೩೬).

[ಮೂ₁ (< ಮೂಜು) + ತಿರಿಕ₁]

**ಮೂದಿವಸ** (ನಾ). ಮೂರು ದಿನ : ಅವರಿವರ ಸಖ್ಯಕೆ ನೆರೆದುದೇಕಾದಶ ಶತಕ್ಷೋಣಿ ತವಿಸುವರೆ ನನಗೊಂದುದಿನ ಮೂದಿವಸದಲಿ ಗುರುವೈದು ದಿವಸಕೆ ರವಿಜ (ಕುಮಾ ಭಾ. ೨-೨೦). [ಮೂ₁ (< ಮೂಜು) + ದಿವಸ]

**ಮೂದೆಕಲ್** (ನಾ). ಒಂದು ಊರಿನ ಹೆಸರು (?) : ಮಾಪಾಮುತ್ತರಸರಾ ಪೊಟಲಘಟ್ಟನಾ ಮೇಗೆಟ್ಟು ಮೂದೆಕಲ್ಲಾ ಕಾಳಿಗದುಳ್ . . . ಅನಿವರುವರ್ ಅನ್ನಿಟುದು ಸತ್ತರ್ (ಎಕ. X. ಶ್ರೀನಿವಾ. ೪೦-೨ ; ಸು. ೯೦೦).

[ಮೂದೆ? + ಕಲ್₃]

**ಮೂದೆರ** 'ಮೂದೆಜ' ನೋ.

**ಮೂದೆಜ**, ಮುತ್ತೆಜ, ಮೂತೆರ, ಮೂದೆರ (ನಾ). ೧. ಮೂರು ಬಗೆ,—ರೀತಿ ; ತ್ರಿವಿಧ : ಮೂಲೋಕಂ, ಮೂದೆಜಂ (ಶಾಶಾಶೂ. ೦೩೩ ಉದಾ) ; ನಾಡೆಯುಂ ನಲವನಿಳಾಧಿಪಗೆ ನೆಲೆವೆರ್ಚಿಸಿದತ್ತು ಗೃಹಾಧಿದೇವತಾ ವಿಲಸದವಾಂಗದೊಳ್ ನೆರೆದು ಮೂದೆಜದೊಪ್ಪುವ ಬಣ್ಣದಂದದಿಂ (ಕಂತ್ರ ಪು. ೩-೦೦೨) ; ದಿನದೊಳ್ ಮೂದೆಜನಾಯ್ತು ಭಾನುವಿನ ತೇಜಂ (ಕುಸುಮಾ. ೩-೬). **ಮುತ್ತೆಜ:** ೨. ಮೂರು ಭಾಗ : ಅವಂ . . . ಮುತ್ತೆಜನ ಮಾಡಿಯೊಂದಕ್ಕೆ ಹುಳಿಯೊಂದಕ್ಕೆಯುತ್ತಮದ ಸಿಹಿ ಹುರಿದ ಕಡಲೆಪುಡಿಯೊಂದಕ್ಕೆಯೊತ್ತರಿಸಿಯಿರಿಸಿ (ಸೂಪಶಾ. ೩-೨೦). **ಮೂತೆರ :** ೧. ಅಜ್ಞನಾಗಿರ್ಪವನಧಿಕಾರಿಯಾದುದು ಮೂತೆರನಾದ ಕೇಡಹುದು ಅರ್ಥನಾಶನವಪುದಪಕೀರ್ತಿಯುಪ್ಪುದು ನರಕಲೋಕದ ದುಃಖವಹುದು (ಜಂತಾಶ. ೦೩೩-೩೨). **ಮೂದೆರ :** ೧. ಪ್ರಾಜ್ಞನಾಗಿರ್ಪವನಧಿಕಾರಿಯಾದಂದು ಮೂದೆರನಾದೊಳ್ಳಿತಹುದು ಯಶವಹುದುವಿತ್ತಧನಾಗಮವಪ್ಪುದು ನಾಕಲೋಕದ ಸುಖವಹುದು (ಜಂತಾಶ. ೦೩೩-೩೦).

[ಮೂ₁ (< ಮೂಜು) + ತೆಜ₁]

**ಮೂದೇವರ್**, ಮೂದೇವರು (ನಾ). ಬ್ರಹ್ಮ, ವಿಷ್ಣು ಮತ್ತು ಮಹೇಶ್ವರ ; ತ್ರಿಮೂರ್ತಿ: "ಮೂದೇವರ್ಕಳ್ ತ್ರಿಮೂರ್ತ್ಯರ್ಥದೊಳ್" (ಶಬ್ದಾ. ೩೦) ; ಮೂದೇವರುಂ ಪರಸಿ ನಿಜನಿವಾಸಂಗಳ್ಗೆ ಪೋದರ್ (ಕಂಕಥಾ. ೩-೦೦೩ ವ). **ಮೂದೇವರು :** ಮೂದೇವರ ದೇವನ ಗೃಹದೊಳು ಬಲುಭೇದದ ಧ್ವಜನಿಕರಗಳು ವಾದಿಸಿ ವಾಯುಪಥಿಕರೊಡನವರಿಗೆ ಹಾದಿಯ ಕೊಡದಿರುತಿಹವು (ತ್ರಿ ಪುರಾಂ. ೭-೭೮) ; ಅಗಣಿತಪರಮಮುಮುಕ್ಷುಗಳ ನಿವಹ . . . ನೆರೆದು ತಮ್ಮೊಳಗಾರು ಮೂದೇವರೊಳು ಮುಖ್ಯರೆನುತ್ತ

ಸಂಶಯಾಕರವ ತೆತ್ರರು ಮನವನು (ಶಿಶಾಗ. ೧೦-೯೨-೧).

[ಮೂ₁ (< ಮೂಱು) + ದೇವರ್]

**ಮೂದೇವರು** ' ಮೂದೇವರ್' ನೋ.

**ಮೂದೇವಿ** (ನಾ). ೧. ಒಬ್ಬ ದೇವತೆಯ ಹೆಸರು ; ಜ್ಯೇಷ್ಠಾದೇವಿ ; ಅಲಕ್ಷ್ಮಿ: ' ಜ್ಯೇಷ್ಠೆ ' ಹೋ. ೨. ಮಂಕುತನ ; ಜಡತ್ವ ; ಸೋಮಾರಿತನ : ಮದ್ದು ತಿಂದು ತಿಂದು ಮನೆಯೆಲ್ಲ ಬಜಿದಾಗಿ ಹೊದ್ದಿತು ಮೂದೇವಿ ಮೈದುನಗೆ (ಭೀಂರ. ೨-೯೯-೨) ; ಹೋದೆಹೆವೆಂದರೆ ಹಾದಿಯು ಕಾಣೆವು ಮೂದೇವಿ ಬಂದಿತುಯೆಮಗೆ (ಪುರದಾಸ. ೨-೦೨೦). ೩. ಚಟುವಟಿಕೆಯಿಲ್ಲದ ವ್ಯಕ್ತಿ ; ಸೋಮಾರಿ : ಒಬ್ಬನೇ ಮಗನಿಗೆ ಈ ಮೂದೇವಿ ಎಲ್ಲಿಂದ ಗಂಟುಬಿದ್ದಳೋ ಏನೋ (ಪಂಸಾ. ೪೦).

[ಮೂ+ದೇವಿ./ತಮಿ. ಮೂತೇವಿ ; ಮಲ. ಕೊಡ ತೆಲು. ಮೂದೇವಿ]

**ಮೂಧ** (ನಾ). ಒಂದು ಬಗೆಯ ಸಸ್ಯ : ನಾರೋಲಿ, ಮೂಧಮರ, ಮೂಧ, ಮೂಡಲಿ, ಕನಕಚಂಪಕ (ಬ್ಯುಶಿ. ೩೬-೦೧೯೦). [ ? ]

**ಮೂನೂಱು**, ಮುನೂಱು, ಮುನ್ನೂರು, ಮುನ್ನೂಱು (ನಾ). ಒಂದು ಸಂಖ್ಯೆ ; ಮೂರುನೂರು : ಸ್ವಸ್ತಿಶ್ರೀ ಶ್ರೀಪುರುಷ ಮಾಹಾರಾಜರ್ ಪೃಥುವೀರಾಜ್ಯಂಗೆಯೆ ಸಿಯಗೆಲ್ಲರ್ ಮೞುಗರೆನಾಡುಮೂನೂಱುಮಾಳೆ (ಎಕ. XVI. ತುಕು. ೯೬-೩;750); ಬೆಳ್ವೊಲಮೂನೂಱುಮನಾಳುತ್ತುಂ (ಎಇ. VIII. ೨೦೬-೦೬ ; 866); ನೂಱುರಥದಲಿ ಸರಳ ಹೊಡೆ ಮೂನೂಱು ಪರಿಚಾರರು ಸಹಿತ ಮೈದೋಱಿ ನಿಂದನು ಭೀಮನೊಬ್ಬನೆ ತಱುಬಿ ಕುರು ಬಲವ (ಕುಪ್ಪಾ.ಕ. ೦೫-೩). **ಮುನೂಱು** : ರಾಜ್ಯಾಭಿವೃದ್ಧಿಗೆ ಉತ್ತರೇಶ್ವರದ ಆದಿತ್ಯ ಗ್ರುಹಮಮುಂಗುಳ ×ಮುನೂಱು ಪೊಕಲೊಳ × (ಕ೩೪. ೦೦೬-೯೭-೭; 792). **ಮುನ್ನೂರು** : ತಮ್ಮ ರಾಜ್ಯದಲ್ಲಿ ನಿಡುಂಬರೆ ಕಟ್ಟುವ ಕೆಲಸದಲ್ಲಿ ಮುನ್ನೂರು ಚಲುವಾನು ಆಳು ಉಂಟಪ್ಪೆ (ರಾಜೇಂದ್ರ. ೦೯೩) : ಮುನ್ನೂರುಮಂದಿ ಕೂಲಿಗಳು, ಕುಂಬಾರಗುಂಡಿಯಲ್ಲಿ ದುಡಿಯುತ್ತಿರುವ ಕಾಲದಲ್ಲಿಯೇ, ಅಲ್ಲಿನ ಜ್ವರದ ಸುಗ್ಗಿಯೂ ಬಲಿಯಿತು (ಶಾರುರಾ. ೦೫೩). **ಮುನ್ನೂಱು** : ನಿನ್ನ ಪ್ರಾಯದಲಿ ಹಣವ ಗಳಿಪೆನೆಂದು ಮುನ್ನೂಱು ಮಂಚವ ಮುಱಿದೆ (ಕಂಸರ. ೬-೦೫೫).

**ಮೂನೂರ್ಬರ್**, **ಮೂನೂರ್ವರ್** = ಮೂರು ನೂರು ಜನ ; ಮುನ್ನೂರು ಮಂದಿ : ಎಟ್ಟಬಿಂಬರುಂ ಮೂನೂರ್ಬ್ಬರುಂ ಜಕ್ಕಿಯ ಬ್ಬೆಯೊಳ್ ನುಡಿದವು ತವುರ್ಱ ಬಿಡಿಸಿದೋರ್ (ಎಕ. VII, ಶಿಕಾ. ೨೦೯-೦೯ ; 918) ; ಚಕ್ರವರ್ತ್ತಿ ಶ್ರೀವೀರವಾರಸಿಂಹ ದೇವರಸರಾಣಿ ಸೋವಲದೇವಿಯರಾಣಿ ಮೂನೂರ್ಬ್ಬರಿಗಂ ಮೂವತ್ತಿತ್ತ್ಸಾಸಿರಕಂ (ಎಕ. VI, ಕಂಕ. ೩೩-೯; 1290); ಕೋಡಾಮರ್ ಪೊಯ್ಗುಕೆಯೆ ಬಿಟ್ಟ ಮೂನೂರ್ವ್ವರ್ಗಂ (ಎಕ. VI, ಕೊಪ್ಪ. ೯೦-೭ ; ಸು. 1090).

[ಮೂ₁ ( < ಮೂಱು ) + ನೂಱು₂]

**ಮೂನೆಲ** (ನಾ). ಸ್ವರ್ಗ, ಮರ್ತ್ಯ ಮತ್ತು ಪಾತಾಳವೆಂಬ ಮೂರು ಲೋಕ ; ತ್ರಿಲೋಕ : ಆವೂರ ಮುಳ್ಪಸಿಯ ಮೂನೆಲಂ ತನಗೆಂಬ ಅವನಿರ್ಪನೊ ಕೊರಗು ಪುರ್ಱೀವ ಪೆಸರು (ಶಾಂತಿ. ೨೮-೨೦).

[ ಮೂ₁ ( < ಮೂಱು ) + ನೆಲ]

**ಮೂನೆಲೆ** (ನಾ). ಮೂರು ಅಂತಸ್ತು: ಮೂಱುಲೋಕಮನೆ ಪೋಲ್ಬುದು ಮೂನೆಲೆಯಿಂ ಸಯಂಬರಂ (ಶಂಶಕಾ. ೩-೩೩); ಮೂನೆಲೆವೆತ್ತಾ ಸಭೆ ಮೂಱುಲೋಕವೊಡನೊಂದಿರ್ದತ್ತೆನಲ್ ರಂಜಿಸುಂ (ನೇಮಿಶ. ೯-೯೦).

[ಮೂ₁ ( < ಮೂಱು ) + ನೆಲೆ₁]

**ಮೂಬದಲು** ' ಮುಬಾದಲೆ ' ನೋ.

**ಮೂಬದಲೆ** ' ಮುಬಾದಲೆ ' ನೋ.

**ಮೂಮಡಿ** ' ಮೂಪಡಿ ' ನೋ.

**ಮೂಮಡಿವೀರ** (ನಾ). ಮೂರು ಪಟ್ಟು ಶೂರ ; ಮಹಾವೀರ : ಜ್ವಾಲಾಂಬಿಕನ ತಪೋಭೃಪ್ಪನ ಮಾಡಿದೋಲೆಯುಕಾಜಿನದಾರು ಮೂಲೋಕ ವಿಜಯ ಮೂಮಡಿವೀರ ಕಮ್ಮಲಗೋಲನಲ್ಲವೆ ಪೇಳು ಜೀಯ (ನೋಹಚ. ೯-೦೩).

[ಮೂಮಡಿ ( < ಮೂವಡಿ ) + ವೀರ]

**ಮೂಮರಿ** (ನಾ). (?) : ತೋಟ ತುಡಿಕೆ ಮಕ್ಕಿ ಹಕಲು ಮೂಮರಿ ಕೋಹು ಕಾಡಾರಂಭ ನಿಧಿನಿಕ್ಷೇಪ ಜಲಪಾಷಾಣ ಅಕ್ಷೀಣಿ ಆಗಾಮಿ ಸಿಧಸಾಧ್ಯ ಯಿಂತಿ ಅಷ್ಟ ಭೋಗ ತೇಜಸ್ವಾಂಮ್ಯ ಮುಂತಾಗಿ ಏನುಳಿದನು ನಿಮಗೆ . . . ಧಾರೆಯನೆಱೆದು ಕೊಟೆವಾಗಿ (ಎಕ. VIII, ತೀರ್ಥಹ. ೨೨-೨೦; 1405). [ ? ]

**ಮೂಮೆ**, ಮುಮ್ಮೆ, ಮುಯ್ಮೆ, ಮೂರ್ಮೆ, ಮೂವೆ (ನಾ). ಮೂರುಸಲ ; ಮೂರುಬಾರಿ : "ಮೂವೆಯೆನೆ ಮೂಱುಂ ಸೂಟಿ" (ಶಶಾ. ೯೯) ; ಅನಿವಾರಿತಾಚಾರಿಗೆ ಮೂಮೆ ಪಟ್ಟಂಬೆಪಪಟ್ಟಮು ತ್ರಿಭುವನಾಚಾರಿಯೆನ್ನು ಪೆಸರಿತ್ತು (ಇಇ. X.೧೯-೩; 7ನೆಯ ಶಕ); ಇರ್ವರುಮಂ ಮೂಮೆ ಸುರೇಂದ್ರಕಾಂತೆ ಬಲಗೊಂಡುದ್ಯನ್ಮನಃಪ್ರೀತಿಯಿಂ ಎಱಗಿ (ಆದಿಪು. ೭-೯೯); ಮೂಮೆ ಕೈವಿಗೆ ಬಲವಂದು ಗಂಧ ಕುಟಿಯಂ (ಅನಂಪು. ೦೦-೩೬); ಸಮವಸರಣಮಂಡಪಮಂ ಹೊಕ್ಕಾ ರವಣಿ ಸುಲೋಚನೆ ಸಹಿತ ಜನಪನಂ ಮೂಮೆ ತಿರಿದು ಬಂದು (ಜಯನೃ. ೦೬-೨೭). **ಮುಮ್ಮೆ** : ಮುಮ್ಮೆ, ಮೂಮೆ (ಶಬ್ದಾನು. ೩೫೯ ಶ್ರ ಯೋ). **ಮುಯ್ಮೆ** : ಮುಯ್ಮೆ, ಮುಯ್ವರ್ (ಶಬ್ದಾನು. ೩೬೦ ಶ್ರಯೋ). **ಮೂರ್ಮೆ** : " ಮೂರ್ಮೆಯೆನಲ್ ತ್ರಿಕವಾರದಲ್ಲಿ" (ಕರ್ನಾಶ. ೬೩) ; ಪೇಟ್ವಾಗಳೊರ್ಮೆಯೊ ಮೇಣಿರ್ಮೆಯೊ ಮೂರ್ಮೆಯೋ ಕುರುಕುಳಪ್ರಾರಬ್ಧದುರ್ವೃತ್ತಕಂ (ಕಾವ್ಯಾ.ವ. ೩೯೯) ; ಮೆ ಪ್ರತ್ಯಯಕ್ಕೆ . . . ಮೂರ್ಮೆ, ಸಾಸಿರ್ಮೆ, ಪಲರ್ಮೆ (ಶಮದ. ೨೦೬ ಶ್ರ ಯೋ); ಬೀರಮಂಡಿಗವರೋಹಿಸಿ, ಮಣಿದು ಮೂರ್ಮೆ ನಮಸ್ಕರಿಸಿ (ಬಸ್ವಿಕ. ೦೦೯-೨೨). **ಮೂವೆ**: ದೇವದೇವನ ಬೆಸನ ಮಾಯಾದೇವಿ ತಲೆಯಲಿ ಧರಿಸಿ ಪದದಲಿ ಮೂವೆ ಬಲವಂದೆಱಗಿ ಹೋಗುವವೆನುತ ಬೀಳ್ಕೊಂಡು (ನಿಶಾಗ. ೦೦-೨-೩೪).

**ಮೂಮೂರ್ಮೆ** (ದ್ವಿರುಕ್ತಿ) : ಬಿಜ್ಜಳದ ಕೂರ್ಮೊನೆಯನ್ನು ಮಹಾರಾಜನ ಮುಖದ ಸುತ್ತವೂ ಭುಜಕೀರ್ತಿಗಳನ್ನು ಬಳಸಿಯೂ ಮೂಮೂರ್ಮೆ ನಿವಳಿಸಿ (ಐರುಗಂ. ೩೨-೩).

[ಮೂ₁ (<ಮೂಱು) + – ಮೆ₂./ತಮಿ. ಮುಮ್ಮೆ; ಕೊಡ. ಮೂವು]

**ಮೂಮ್ಮೈ** (ನಾ). ಒಂದು ಬಗೆಯ ಸಸ್ಯ : '' ಮಾರ್ಕಂಡೇಯಂ– ಮೂಮ್ಮೈ '' (೬ತರ. ೦೨೩). [ ? ]

**ಮೂಮೊನೆ**, ಮುಮ್ಮೊನೆ₁ (ನಾ). ಯಾವುದಾದರೊಂದು ಆಯುಧದ ಚೂಪಾಗಿರುವ ಮೂರು ತುದಿ.– ಮೊನೆ : ' ಮೂಮೊನೆಗೈದು ' ಪರಾ. **ಮುಮ್ಮೊನೆ₁** : ಮುಮ್ಮೊನೆಯ ಬೋಳೆಯ ಸರಳಿನಲಿ ಸಾಧನ ಸಮಗ್ರರು ಶಿಶುಪನೆಚ್ಚರು ದೆಸೆದೆಸೆಗೆ ಕವಿದು (ಕುಪ್ಪಾ.ದ್ರೋ. ೬-೦೦); ಹೊಳೆವ ತ್ರಿಶೂಲ ಮುಮ್ಮೊನೆಯಿಂದೆ ಕಂಗಿಡಿಗಳನುಗುಳ್ದು . . . ಪರಿಯುರಸ್ಥಲದಲ್ಲಿ ಬಂದು ಪೋಹಿಸಿತು (ಪೋಹಚ. ೯೦-೬೬).

[ಮೂ₁ ( < ಮೂಱು) + ಮೊನೆ]

**ಮೂಮೊನೆಗೈದು**, ಮುಮ್ಮೊನೆಗಯ್ದು, ಮುಮ್ಮೊನೆಗೈದು (ನಾ). ಮೂರು ಹರಿತವಾದ ಮೊನೆಗಳುಳ್ಳ ಆಯುಧ ; ತ್ರಿಶೂಲ : '' ಮೂಮೊನೆಗೈದು[ಪಾಠಾಂ. ಮುಮ್ಮೊನೆಗಯ್ದು]ವೆಂದುಂ, ಶಿಸುಳ ವೆಂದುಂ, ಶಿವಂ ಪಿಡಿವ ತ್ರಿಶೂಲಂ '' (ಕಶಸಾ. ೯೭-೨). **ಮುಮ್ಮೊನೆಗಯ್ದು**: ಮೇಲಿನ ' ಕಶಸಾ.' ಪ್ರಯೋಗದ ಪಾಠಾಂತರವನ್ನು ನೋಡಿ. **ಮುಮ್ಮೊನೆಗೈದು** : " ಮುಮ್ಮೊನೆಗೈದುವೆನಲ್ ತಿಸುಳಂ '' (ಕಶಾಸ. ೬೦). [ಮೂಮೊನೆ + ಕೈದು₁ ( <ಕಯ್ದು)]

**ಮೂರ** (ನಾ). ತೊಗಟೆ ; ಸಿಪ್ಪೆ : " ಮೂರ " ಅಂದರೆ ತೊಗಟೆಯು ಸ್ವಲ್ಪಭಾಗವಿದ್ದು ಮೇಲಿನ ರೇಷೆಗಳು ಕೂಡಲದಂತೆ ಶೀರಾಗಿರಬೇಕು (ಹುಣಿಸ್ಯಾ. ೩೦). [ ? ]

**ಮೂರಡಿ** ' ಮೂಱಡಿ ' ನೋ.

**ಮೂರನ್ನ** (ನಾ). [ಜೈನ] ಮೋಕ್ಷವನ್ನು ಪಡೆಯಲು ಸಾಧಕವಾದ, ಸಮ್ಯಗ್ದರ್ಶನ, ಸಮ್ಯಗ್‌ಜ್ಞಾನ ಮತ್ತು ಸಮ್ಯಕ್‌ಚಾರಿತ್ರ ಎಂಬ ಮೂರು ಬಗೆಯ ರತ್ನ ; ರತ್ನತ್ರಯ : ಹೊದೆದು ಸುಜ್ಞಾನಾಂಬರವ ಮೂರನ್ನವ ಮುದದಿ ತೊಟ್ಟಪವರ್ಗವೆಂಬ ಸುದತಿಯಯೆದೆವನೆಯೊಳಗಿಪ್ಪ ಶಂಕಪದಪದ್ಮಗಳಿಗೆ ನಮಿಸುವೆ (ಜೀವಂಧ. ೦೩-೧); ವರತತ್ತ್ವಜಲವನು ಮಿಂದು ಸುಜ್ಞಾನಾಂಬರವ ಪೊದೆದು ಮೂರನ್ನವನು ಹರುಷದಿಂ ತೊಟ್ಟು ನಿರ್ಮಲಪುರುಷನಿಗಲ್ಲದರಸಿಯಹಳೇ ಮುಕ್ತಿರಮಣಿ (ಜೀವಂಧ. ೦೪-೦೦).
[ಮೂ$_1$ (< ಮೂಱು ) + ರನ್ನ (< ರತುನ)]

**ಮೂರಾಬಟ್ಟೆ** (ನಾ). ಹಾಳು ; ನಾಶ ; ಕೇಡು : ನೋಡಲಿ ನೋಡಲಿ ನೋಡಲಿ ಅವರು ಮೂವರು ಕೂಡಿ, ರಚಿಸಿದ ಮೂರಾಬಟ್ಟೆಯ ನಾಟಕವ ! (ಗಂ. ೬೬-೦೩) ; ಈ ಮನೆಯ ಮೂರಾಬಟ್ಟೆ ಯಾರಿಂದ ಆಯಿತೆನ್ನುವುದು ನನಗೆ ತಿಳಿದ ವಿಷಯವಾಗಿದೆ (ಶುಕ್ತಿ. ೩೬). [← ಮರಾ: ಮುರಾಬಟ್ಟೀ]

**ಮೂರಿ**. ಮುರಿ$_4$ (ನಾ). ೧. ಯಮನ ಭಯಂಕರವಾದ ಕೋಣ : ನಾಡರಸಂ ತಗುಳ್ದು ಕಡೆಗಾಲದ ಮಾರಿಯ ಮೂರಿಯಂತೆ ಕಣ್ಣಾಡದೆ ಬಾಲವೃದ್ಧವನಿತಾವಧೆಗೆಯ್ದು (ಶಂಕಾಪೂ. ೪-೩೯), ಮಾರಿಯ ಮೂರಿಯಂತೆ ಬರ್ಪ ಸೂರ್ಕಿದಾನೆಯಂ ಕಂಡು (ಕಕಶ್ರೀಮ್ಣ. ೦೩-೩೩); ಮಾರಿಯ ಮೂರಿ ಮೇಲೆಱಗುವಂದದೆ ಭೋಂಕನೆ ಮೇಲೆವಾಯ್ದು ಕಂಠೀರವಮಂ . . . ಕಡಿಕೆಯ್ದು (ಶರ್ಶಿ. ೩-೪೪); ಭೈರವನ ಜವನ ಮಾರಿಯ ಮೂರಿಯ ಪೋಲ್ ನಿಂದ ಮಾರಿದತ್ತಂ (ಯುಕೋಶ. ೦-೩೮). ೨. (ಭಯಂಕರವಾಗಿ ತೆರೆದ) ಬಾಯಿ : ಮಾರಿಯ ಮೂರಿ ರಕ್ಕಸನ ರೌದ್ರತೆ . . . ಸಾಹಣಿ ಮಲ್ಲನ ಬಾಹುವಿಕ್ರಮಂ (ಕೊಶ್ಯಾ. ೦೬-೦೭; 1189). ' ಮೂರಿಗೊಳ್ ', ' ಮೂರಿವಿಡು ' ಪರಾ. ೩. (ಹೆದರಿಕೆಯನ್ನುಂಟುಮಾಡುವಂಥ) ಗುಂಪು : ಸಮೂಹ : ತಾರಗೆಯೆನೆ ತೊನೆದೊಟ್ಟಿದ ಮೂರಿಯ ರೋಮಂಥ ಫೇನಮಂಜರಿನಿಕರಂ ಕಾರಿರುಳ ತಿರುಳಿದೆನೆ ಮದಸೈರಿಭಮಿ ರ್ಪುವು ಚಳತ್ತಮಾಳದ ನೆಳಲೊಳ್ (ಅರ್ಜಶೀ. ೩-೪೩) ; ಕಾಲಾಗ್ನಿಯ ಮಾಲೆಯಂತೆ ಮಾರಿಯ ಮೂರಿಯಂತೆ ಮೃತ್ಯುವಿನ ಕೊತ್ತಳಿಯಂತೆ . . . ಮುಂತಿರ್ದ ರಕ್ಕಸವಡೆಯ ನಡುವೆ ನಿಂದ ವೀರತಾರಕಾಸುರಂ (೧೦೪.೬-೩೩೪); ಸಿಂಗದ ಸಂಗಮಂತಕನ ಶಿಂತಿಣಿ ಮಾರಿಯ ಮೂರಿ ಕಾಲರುದ್ರಂಗನುಸಾರಿ ಭೈರವನ ಭಾರಣೆ . . . ಎನಲೊಪ್ಪುವಪೋಲ್ ನೆರೆದಿರ್ದ ದಾಕ್ಷಿಣಂ ಸಂಗರದುಜ್ಜುಗಕ್ಕೆ ಚತುರಂಗಬಲಂ (ದಕಶು. ೭-೪೯). ೪. ಆಯಾಸ ಅಥವಾ ಜಡತೆಯನ್ನು ಹೋಗಲಾಡಿಸಲು ಮೈ ಮುರಿಯುವಿಕೆ : ' ಮೂರಿಯಿಡು ' ಪರಾ. ಮುರಿ$_4$ : ೫. ಎತ್ತು, ವೃಷಭ : "ಕರಾಭರಣ ವಕ್ರತೆ ಬಲೀವರ್ದ ಸಮುಕಟ್ಟುಗಳೊಳಂ ಮುರಿಯುಲಾ" (ಕಾ.ಶುಂ. ೦೦೬). ☞ ಈ ಶಬ್ದದ ಮತ್ತು ಇದರ ಸಮಾಸಪದಗಳ ಅನೇಕ ಪ್ರಯೋಗಗಳ ಅರ್ಥ, ಅದರ ಬೆಳವಣಿಗೆ ಮತ್ತು ನಿಷ್ಪತ್ತಿಯ ಬಗೆಗೆ ಭಿನ್ನಾಭಿಪ್ರಾಯಗಳಿದ್ದು ವಿಚಾರಣೀಯವಾಗಿದೆ.
[ ದೇ.॥ ತಮಿ. ಮಲ. ತುಳು. ಮೂರಿ ]

**ಮೂರಿಗೊಳ್** (ಕ್ರಿ). ಒಟ್ಟಾಗಿ ಹಿಡಿ : ಅಡಮಂ ಗೋಟ್ಮುಱಿಗೊಂಡು ದೋಟದಲೆಯಂ ಮುಂಗೆಯ್ಗಳಿಂ ಮೂರಿಗೊಂಡಿಡುವವ ಕೂಂಕಿ ಕೊಡಂಕೆಯಂ ಮುಱಿವಂ . . . ಮಿಂಡರ ಮಿಾಸೆಯಂ ಸೆಳೆದು ಮೂಗಿಟ್ಟೇಱುವಂ ಮಕ್ಕಳಟ್ಟೊಡೆ ಬಾಯ್ದಾಯನೆ ಪೊಯ್ವನೇಂ ಸಿತಗನೋ ಕಾಳಾಹಿಕೋಳಾಹಳಂ (ಅರ್ಜಶೀ. ೬-೮೪). [ಮೂರಿ + ಕೊಳ್$_1$]

**ಮೂರಿಡು** ' ಮೂರಿಯಿಡು ' ನೋ.

**ಮೂರಿಯಿಡು**. ಮೂರಿಡು, ಮೂಲಿಯಿಡು (ಕ್ರಿ). ೧. ಆಯಾಸ ಅಥವಾ ಜಡತೆಯನ್ನು ಹೋಗಲಾಡಿಸಲು ಕೈಕಾಲುಗಳನ್ನು ನೀಡು; ಮೈಮುರಿ : ಮೂರಿಯಿಡುವೊಡಂ ಸುಱಿವೊಡಂ ಸಿಂಗರಂಗೆಯ್ವೊಡಂ ತಂಬುಲಂ ಮೆಲುವೊಡಂ ನೀರಂ ಕುಡಿವೊಡಂ ನುಡಿವೊಡಂ ಶೃಂಗಾರಂಗೆಯ್ವೊಡಂ . . . ಕಾಣಲೀಯಲಾಗದು ವಧುವಂ (ಶುದಶಿ. ೦೦-೩೦). **ಮೂರಿಡು** : ೨. ಭಯಂಕರವಾಗಿ ಬಾಯಿತೆರೆ: ನೊಣೆಯಲ್ ನುಂಗಲಿ ಕಾತಳಂ ಮುರಿದು ಮೂರಿಟ್ಟಂತೆ. . .ಲಗ್ಗಿಗಾರ್ದು ವಸುಷೇಣಂ ಸಾರ್ದು ಸೂಟಿಸಿದಂ (ಅವಂತಿ. ೦೦-೮೩). ☞ ಈ ಶಬ್ದದ ಸ್ವರೂಪವು ಸಂದಿಗ್ಧವಾಗಿದೆ. **ಮೂಲಿಯಿಡು** : ೧. ಅಸನಪ್ರಾಶಯ್ಯಾತಳದಿಂದಂ ಕಾಂತೆ ಯಿೞಿದೊಡಂ ಮೆಯ್ಯಂ ಕಮ್ಮಗೆ ಮೂಲಿಯಿಡುವೊಡಂ ಪಚ್ಚುವೊಡಂ ಇರವಂ ಭಯಸುವೊಡಂ ಪರಪುರುಷಸಮಕ್ಷದೊಳಿಪ್ಪಲ್ಲವಸತೀಭಾವಂ (ಮದಶಿ. ೬-೪೪). [ಮೂರಿ + ಇಡು$_1$]

**ಮೂರಿವಿಡು** (ಕ್ರಿ). ೧. (ಭಯಂಕರವಾಗಿ) ಬಾಯಿಬಿಡು; ಬಾಯಿತೆರೆ: ಆಗಳ್ ದುರ್ಯೋಧನನಂ ಮುಂದಿಟ್ಟೊಡಗೊಂಡು ಧೃತರಾಷ್ಟ್ರಕರ್ಣ ಶಲ್ಯಶಕುನಿ ಸೈಂಧವಪ್ರಭೃತಿಗಳ್ ನೆಲಂ ಮೂರಿವಿಟ್ಟಂತೆ ಸಭಾಕ್ಷೋಭಮಾಗೆ ತಳರ್ದು . . . ಪೋದರ್ (ಪಂಪಭಾ. ೨-೮೬ ವ) ; ಭವದೀಯವನಾಯುಜ ಹಯನಿವಹಂ ಕೇಳ್ ಮೂರಿವಿಟ್ಟು ನಿಶ್ವಾಸಂ ಸೈಂಧವಮಂ ಮಾಸಿಸೆ ಸೊಗಯಿಸಿತು ವಿನಿದ್ರಂ ದೇವ ದೀರ್ಘಪಟಮಂಡಪದೊಳ್ (ಶಾಂತಿಪು. ೩-೯೨). ೨. ಗುಂಪುಗೂಡು ; ಒಟ್ಟಾಗು : ದ್ರುಪದಂ . . . ತನ್ನ ಮಗಂದಿರುಂ ತಮ್ಮಂದಿರುಂ ಬೆರಸು ನೆಲಂ ಮೂರಿವಿಟ್ಟಂತೆ ಬರೆ (ಪಂಪಭಾ. ೪-೬೪ ವ); ಸಿಡಿಲ ಬಳಗಕ್ಕೆ ಕುಳಿಕನ ಕುಡುಹುಡಗೆ ಮೂರಿವಿಟ್ಟ ಮಾರಿಗೆ ಮಾಱಿಂ ಪಡುವಣ್ಣ (ಎಪಿಕ. XV, ೦೪೨-೦೯; 1184). ೩. = ಮೂರಿಯಿಡು ೧ : ಮೂರಿವಿಡುತ್ತುಂ ನಿಂದು ಮೆಯ್ಯಂ ಬಿದಿರ್ದೆಳಸಿದುದಶ್ವಾಳಿ ಮೇಹಿಂಗೆ (ಪರ್ಶಪು. ೬-೩೪). [ಮೂರಿ + ಬಿಡು$_1$]

**ಮೂರು** 'ಮೂಱು' ನೋ.

**ಮೂರುಕ** ' ಮುಕ್ಕ$_3$ ' ನೋ.

**ಮೂರುಕಾಸು** (ನಾ). ೧. ಹಿಂದೆ ಇದ್ದ ಆಣೆಯ ಹನ್ನೆರಡನೆಯ ಹಿಂದು($\frac{1}{12}$)ಭಾಗದ ಬೆಲೆಯ ಮೂರುನಾಣ್ಯಗಳು ಮತ್ತು ಆ ಮೂರು ನಾಣ್ಯಗಳ ಬೆಲೆಯ ಒಂದು ತಾಮ್ರದ ನಾಣ್ಯ: ಇಂದಿನ ರೂಪಾಯಿಗೆ ಹಿಂದಿನ ಮೂರುಕಾಸಿನ ಬೆಲೆಯೂ ಇಲ್ಲವಾಗಿದೆ (ಕಆ). ೨. (ಅಲಂ) ಗಣನೆಗೆ ತಕ್ಕುದಲ್ಲದ ಕಾಸು ; ಅಲ್ಪಹಣ : ಹತ್ತು ಬಂಗ್ಲಿ ಊಟಲ್ಲ, ಅದನ್ನು ಮೂರುಕಾಸಿಗೆ ಇಲ್ಲಿ ಕೊಡುವುದು ಯಾಕೆ, ನೀನೇ ಒಯ್ದು ಬಿಡು (ಹೊಸಕ್ಷ. ೪೯). ೩. ತುಚ್ಛ ; ಅಲ್ಪ : ನನ್ನ ಚಾರಿತ್ರ್ಯದ ಬಗ್ಗೆ ಮಾತನಾಡದಳೇ ಈ ಮೂರುಕಾಸಿನ ಬಜಾರಿ (ಮೂರುದಾ. ೦೪೩).

**ಮೂರುಕಾಸಿನವ** = ಲೆಕ್ಕಕ್ಕೆ ಇಲ್ಲದವನು; ಗಣನೆಗೆ ಬಾರದವನು; ಅಲ್ಪವ್ಯಕ್ತಿ : ಹೀಂತ ಮೂರುಕಾಸಿನವ! (ಕಳ್ತರೂ.೯೯). **ಮೂರುಕಾಸಿನವಳು** = ಲೆಕ್ಕಕ್ಕೆ ಇಲ್ಲದವಳು ; ಗಣನೆಗೆ ಬಾರದವಳು; ಅಲ್ಪಳು : ನೀನು ತಡೆದದ್ದರಿಂದ — ಇಲ್ಲವಾದರೆ ಆ ಮೂರುಕಾಸಿನವಳಿಗೆ ತೋರಿಸುತ್ತಿದ್ದೆ ಯಾರ ಚಾರಿತ್ರ್ಯ ಏನು ಎಂದು (ಮೂರುದಾ. ೦೪೯).
[ಮೂರು (< ಮೂಱು) + ಕಾಸು$_2$]

**ಮೂರುತಗೊಳಿಸು** (ಕ್ರಿ). ಕುಳಿತುಕೊಳ್ಳುವಂತೆ ಮಾಡು ; ಕುಳ್ಳಿರಿಸು; ಸಕಲ ಶಿವಭಕ್ತರಂ ಬರಿಸಿ ಮೂರುತಿ[ತ]ಗೊಳಿಸಿಯುಕುಟಿಲಂ ಕಾಲೊಚಿ ತೋದ್ಯಸತ್ಕಾರವಂ ಪ್ರಕಟಿಸಿ (ಪದ್ಮರಾ. ೨-೬೦).
[< ಮೂರ್ತ$_2$ + ಕೊಳ್$_1$ + — ಇಸು$_3$]

**ಮೂರುತಿ** (ನಾ) ೧. ದೇವರು, ಮನುಷ್ಯ ಮುಂತಾದವರ ಪ್ರತಿಕೃತಿ; ವಿಗ್ರಹ; ಪ್ರತಿಮೆ : "ಮೂರುತಿ—ಮೂರ್ತಿ = ವಿಗ್ರಹ, ಆಕಾರ" (ಶಬ್ದಕೋ. ೩೬): ವ್ಯರ್ಥವಲ್ಲ ತವ ತಪಸ್ಸು, ಮರೆದಮಳಿಯು ಮೂರುತಿ (ಅಶೀ. ೦೬-೯). ೨. ರೂಪು; ಆಕಾರ ; ಆಕೃತಿ: ತುಂಬಿದವು ನವಮಾಸ ಬಳಿಕ ನಿತಂಬಿನಿಯರಿಗೆ ನಿರ್ಮಳಪ್ರತಿಬಿಂಬ ಕಾಣಿಸಿತಾದಿನಾರಾಯಣನ ಮೂರುತಿಯು (ಕೊರಠಾ. ೧-೬-೯) ; ಮೂರುತಿಯನೆ ನಿಲ್ಲಿಸೋ ಮಾಧವ ನಿನ್ನ ಎನ್ನ ಹೃದಯಕಮಲದೊಳು ಒದಗಿ ನೆನೆಯುವಂತೆ ನಿನ್ನ (ಪುರಂದ. ೦-೦೬ ಕಲ್ಲ೩). 'ಮೂರುತಿಗೊಳ್ಳು' ಪರಾ. [< ಸಂ. ಮೂರ್ತಿ]

**ಮೂರುತಿಗೊಳ್ಳು** (ಕ್ರಿ). ಆಕಾರವನ್ನು ತಳೆ ; ರೂಪುಗೊಳ್ಳು: ನಿಮ್ಮ ವೇದಶಾಸ್ತ್ರಂಗಳು ಮೂರುತಿಗೊಂಡಲ್ಲಿ ಚತುರ್ವೇದಿಗಳಿಗೊಮ್ಮೆ ಅಕ್ಕಿತ್ತೆ ಅಯ್ಯಾ (ಬಸವ. ೩೮೫). [ಮೂರುತಿ + ಕೊಳ್ಳು$_1$ (< ಕೊಳ್$_1$)]

**ಮೂರುನಾಮ** 'ಮೂಱು' ಪರಾ.

**ಮೂರುಸಂಜೆ** 'ಮೂಱುಸಂಜೆ' ನೋ.

**ಮೂರೆಲೆ** 'ಮೂಱೆಲೆ' ನೋ.

**ಮೂರೆಲೆಯಾಟ** (ನಾ). ಪ್ರತಿಯೊಬ್ಬ ಆಟಗಾರನೂ ಮೂರು ಮೂರು ಎಲೆಗಳನ್ನು ಹಾಕಿಕೊಂಡು, ಪಣವನ್ನಿಟ್ಟು ಆಡುವ ಒಂದು ಬಗೆಯ ಇಸ್ಪೀಟು ಆಟ ; ಪರೇಲ್ : ಈ ವೈದಿಗಳು ಮೂರೆಲೆಯಾಟದ ಶಕುನಿಯೊಡನೆ ಆಟವಾಡಿ ಸೋತು ಅವನಿಂದಲೆ ಹಣ ಸಾಲವಾಗಿ ಪಡೆದಿದ್ದರು (ಪ್ರಹಸ. ೫೧೬). [ಮೂರೆಲೆ (< ಮೂಱೆಲೆ) + ಆಟ]

**ಮೂರೆಲೆವೊನ್ನೆ** 'ಮೂಱೆಲೆಹೊನ್ನೆ' ನೋ.

**ಮೂರೆಲೆಹೊನ್ನೆ** 'ಮೂಱೆಲೆಹೊನ್ನೆ' ನೋ.

**ಮೂರ್ಕ** 'ಮುಕ್ಕ$_3$' ನೋ.

**ಮೂರ್ಖ** (ನಾ). ತಿಳಿಗೇಡಿ ; ಅವಿವೇಕಿ : 'ವೈಧೇಯಃ. . .ಮೂರ್ಖಃ, ಮಾತೃಶಾಸಿತಃ— ಈ ೧೧ ಅಱಿಯದವರ್' (ಹಲಾಯು. ೫೬-೦೬೧) ; ರವಿ ... ಮಕರದೊಳಿರೆ ಮೂರ್ಖಂ ಖಳಂ ಲೋಭ ನೀಚವ್ಯವಹಾರಂ (ಜಾತಕ. ೦೬-೦೬);ಮೂರ್ಖನ ಕೈಯ್ಯ ರತ್ನದೊಳ್ಸಮವೆನಿಸಿರ್ದಳ್ವನವಿಜಯಲಕ್ಷ್ಮಿಯು ಬಾಳ್ಗೊದಲೆ ನೇವಿಸಿ ಶಬರಿ ಶಬರನ ಕೆಲದೊಳ್ (ಶಾಕ್ಕಚ. ೦೨-೬೭) ; ಮೂರ್ಖಂಗೆ ಬುದ್ಧಿಯನು ನೂರ್ಕಾಲ ಪೇಳಿದರೆ ಗೋರ್ಕಲ್ಲ ಮೇಲೆ ಮಳೆ ಹುಯಿದರಾ ಕಲ್ಲು ಹೀರ್ಕೊಯಿದುಂಟೆ (ಸರ್ವಜ್ಞ. ೦೦೩೧). [ಸಂ.]

**ಮೂರ್ಖತನ** (ನಾ). ತಿಳಿಗೇಡಿತನ ; ಅವಿವೇಕ : ಮನದಸ್ನ ಮದ್ವಾಕ್ಯವ ಕೇಳು ನೀ ಮೂರ್ಖತನದಿಂದೆ ಓಡಿದರೆ ನೀಬ ಘನಶಾಪವ ಕೊಟ್ಟುಯಿಕ್ಷಣ ಭೂವಿಭಾಜನವ ಮಾಳ್ಪಳು ಜೀಯ ನಿಮ್ಮ (ವೀರಹತ. ೦೦-೩೭); ಚೌಡಪ್ಪನವರ ಮೂರ್ಖತನಕ್ಕೋ ಅಥವಾ ಮರುಳುತನಕ್ಕೋ ಬಹಳ ಕೆಡುಕೆನಿಸುತ್ತದೆ (ಹಳ್ಳಿಶಾ. ೦೦೫) ; ಪರನಾರಿಯರೊಂದಿಗೆ ಬೆರೆಯುವುದು ಶುದ್ಧ ಮೂರ್ಖತನವಲ್ಲವೇ ? (ಕಾವೀಂ. ೬). [ಮೂರ್ಖ + — ತನ]

**ಮೂರ್ಖತೆ** (ನಾ). = ಮೂರ್ಖತನ : ಧರೆಗೆಸೆದತ್ತು ತಾರಕನ ದುರ್ಗತಿ ತಾರಕನೇಳ್ಗೆ . . . ತಾರಕನ ಮೂರ್ಖತೆ ತಾರಕನುತ್ಪಥಕ್ರಮಂ (ಗಿರಿಜಾ. ೬-೦೦) ; ಮೂರ್ಖತೆ ಸಾಕು ರಾಜಕುಮಾರಗಿದು ತಾ ಯೋಗ್ಯವಲ್ಲ (ಕೊರಠಾ. ೯-೦೧-೦೨). [ಸಂ. ಮೂರ್ಖತಾ]

**ಮೂರ್ಖತ್ವ** (ನಾ). = ಮೂರ್ಖತನ. [ಸಂ.]

**ಮೂರ್ಖವೃತ್ತಿ** (ನಾ). = ಮೂರ್ಖತನ : ಅತಿವಯನಾಗಿ ಬಾಳವೃತ್ತಿಯಿಂದಬೞಿದಂದಿನ ಮೂರ್ಖವೃತ್ತಿ ಪಂಡಿತವೃತ್ತಿಯಿಂದಮಲ್ಲದವು ನೀಗದು (ಶಾಂತಿಪು. ೭-೪೦) ; ಅನೆಯುನಿರುಳುಂ ಪಗಲುಂ ಜಾನಿಸಿ ತನು ಮೂರ್ಖವೃತ್ತಿ ಪೂರ್ವದಪೋಲ್ಲಜ್ಞಾನಿ ನಯಾನಯಚಿಂತೆಯನೇನುಮನಱಿಯನೆ ಮುಮುಕ್ಷು ತೆಱನಱಿದಪನೇ (ಚಂದ್ರಪ್ರ. ೦೦-೩೬). [ಸಂ.]

**ಮೂರ್ಖಿಸು** (ಕ್ರಿ). ಅರಿವನ್ನು ಕಳೆದುಕೊಳ್ಳು ; ದಡ್ಡತನದಿಂದಿರು : ಮುನಿದು ಮೂದಲಿಸಿ ಮೋಡಿಯೊಳಿದ್ದು ಮೂರ್ಖಿಪ ಮೊಸೆಗಾತಿಬಿಸಾಕೃತಿಗೇಳ್ ಇನಿಯನ ಮೊಗವ ನೋಡದ ಮುನ್ನ ಮೋಹಿಸಿ ಮನಗರಗುವಳು (ಹರಿಶ. ೦-೫೫). [ಮೂರ್ಖ + — ಇಸು$_3$]

**ಮೂರ್ಚ್ಛಿಸು** (ಕ್ರಿ). ಮೈಮರೆ ; ಮೂರ್ಛೆಹೋಗು : ಈಶಾನುಭವ ಪರವಶದೊಳಾ ಸುತಂ ಮೂರ್ಚ್ಛಿಸುವನಿಂತೆಂದು ಧರೆಗೇಷ್ಮದರ್ಥವಂ ನಟಿಸಿ ತೋರ್ಪಂತೆ ಚಂದ್ರಾನನೆಗೆ ನಿದ್ರೆಯಾಯ್ತು (ಜೈಮಿನಿ. ೨-೪೦) ; ದೇವದತ್ತಂ ನಿದ್ರಿಸಿದಂ, ಮೂರ್ಚ್ಛಿಸಿದಂ, ಸತ್ತಂ (ಶಬ್ದಾನು. ೨೦೯ ವ್ಯಾಖ್ಯಾ). [ಮೂರ್ಚ್ಛೆ + — ಇಸು$_3$]

**ಮೂರ್ಚ್ಛೆ** (ನಾ). ಅರಿವು ತಪ್ಪುವುದು ; ಎಚ್ಚರ ತಪ್ಪುವುದು : ಅಱಿವು ಇದಿರೆಡೆಗೆಟ್ಟಲ್ಲಿ ಎಣ್ಣೆ ಬತ್ತಿ ತೀರಿದ ಮತ್ತೆ ಬೆಳಗೆಂಬುದು ನಷ್ಟ . . . ಅದು ಮೂರ್ಚ್ಛೆ ಅಮೂರ್ಚ್ಛೆ ಅದು ಅಱಿವಿನ ಮಱವೆ (ಶೂನ್ಯಸಂ. ೦೦೬-೯೬೫). [ಸಂ. ಮೂರ್ಚ್ಛಾ]

**ಮೂರ್ಚ್ಛೆತಿಳಿ** (ಕ್ರಿ). ಎಚ್ಚರಹೊಂದು ; ಪ್ರಜ್ಞೆಯನ್ನು ಪಡೆ : ಪರಿಜನಂ . . . ಕಪ್ಪುರವ ರಜಂಬೊರೆದ ಕರಕಾಂಬುವಂ ತಳಿದರವುರನೆಬ್ಬಱಿಸೆ ಮೂರ್ಚ್ಛೆತಿಳಿದು ಕುಮಾರಂ ಈ ಪಟಮನಿಲ್ಲಿಗಾರ್ ತಂದರೆಂಬನ್ನೆಗಂ (ಅಂಜ. ೯-೦೬) : ವಿಷಯವೆಂಬ ರಸವ ಕುಡಿದು ಅಜ್ಞಾನವೆಂಬುದೊಂದೆ ಹಾಸಿಕೆಯಲ್ಲಿ ಮಲಗಿ ಮೂರ್ಚ್ಛೆತಿಳಿಯದೆ ಇಪ್ಪುದ ಕಂಡು ನಾಚಿತ್ತೆಯ್ಯ ಎನ್ನ ಮನ (ಅಜಗ. ೦೩-೨೬). [ಮೂರ್ಚ್ಛೆ + ತಿಳಿ$_1$]

**ಮೂರ್ಚ್ಛೆವೋಗು** (ಕ್ರಿ). = ಮೂರ್ಚ್ಛಿಸು : ಹಾ ಸ್ವಯಂಪ್ರಭೇ ಎಂದು ಮೂರ್ಚ್ಛೆವೋವುದುಂ (ಅಂಜ. ೪-೦೬).

[ಮೂರ್ಚ್ಛೆ + ಪೋಗು$_1$ (< ಪೋ$_1$)]

**ಮೂರ್ಛನ** (ನಾ). ೧. ಅರಿವು ತಪ್ಪುವುದು : ಎಚ್ಚರ ತಪ್ಪುವುದು. ೨. [ಸಂಗೀತ] ಸಪ್ತಸ್ವರಗಳ ಆರೋಹಣ ಮತ್ತು (ಅದೇ ಕ್ರಮದ) ಅವರೋಹಣ : ಮೂರ್ಛನ— ಪ್ರತಿಸ್ವರದಿಂದಲೂ ಸ್ವರಸಪ್ತಕದ ಪೂರ್ಣಕೆ (ಸಂಗೀತಂ. ೨೮). [ಸಂ. ಮೂರ್ಛನಾ]

**ಮೂರ್ಛನೆ** (ನಾ). = ಮೂರ್ಛನ : ಮೃದುಪವನಾಘಾತದಿಂದೆ ಗಾಂಧಾರ ಗ್ರಾಮದ ಮೂರ್ಛನೆಗಳನುಚ್ಚರಿಸಿದುವಮರರ ಹೆಗಲ ಬೀಣೆಗಳ್ ಮಿಡಿಯದೆಯುಂ (ಚಂದ್ರಪ್ರ. ೦೨-೬೯) ; ಆಹತ ಕಂಪಿತ ಮೂರ್ಛನಾಗಮಕಸ್ಥಾಯಿ ಸಂಚಾರಿ (ಯಶೋದಶಂ. ೩-೦ ವ) ; ಸಪ್ತಸ್ವರಗಳ ಆರೋಹಣ ಮತ್ತು ಅವರೋಹಣಕ್ರಮಗಳಿಗೆ ಪ್ರಾಚೀನಶಾಸ್ತ್ರಕಾರರು ಮೂರ್ಛನೆ ಎಂದು ಕರೆದಿದ್ದಾರೆ (ಸಂಗೀತಂ. ೦೯). [ಸಂ. ಮೂರ್ಛನಾ]

**ಮೂರ್ಛಿತ** (ಗು). ೧. ಅರಿವು ತಪ್ಪಿದ ; ಪ್ರಜ್ಞೆಯನ್ನು ಕಳೆದುಕೊಂಡ. (ನಾ). ೨. ಮೂರ್ಛೆ ಹೊಂದಿದವನು : ಪತಿಯೆದ್ದೊಡನೆ ರಕ್ತಂ ಸುರಿವ ಕರಂ ಸರ್ಪನಂ ಕಂಡು ಆಗ ಹೌಹನೆ ಹಾಱಿ ಮೂರ್ಛಿತನಾಗಿ ಸತ್ತನು (ಬಸವಪು. ೯೬-೨೩) . ೩. ಗಟ್ಟಿಗೊಳಿಸಿದುದು ; ಗಡ್ಡೆ: ಸುರಸ ತೈಲಂಗಳಿಂ ಪಾಷಾಣಧೃತಿಗಳಿಂದಿರದೆ ಮರ್ದಿಸಿ ಮೂರ್ಛಿತಂ ಮಾಡಿ ಬಳಿಕ ರಸಮಂ ಕೊಂಡು ತದನಂತರಂ ಸಲೆ ಕಲ್ಕಮಂ ಮಾಡಿ (ಅರಾಜ. ೨-೦೩-೬). [ಸಂ.]

**ಮೂರ್ಛಿಸು** (ಕ್ರಿ). ಅರಿವಿಲ್ಲದಾಗು ; ಜ್ಞಾನತಪ್ಪು; ಎಚ್ಚರವನ್ನು ಕಳೆದುಕೊಳ್ಳು: ಕಣ್ಗಳಂ ಮುಚ್ಚಿ ಸೆರಬಿಗಿದು ದಡದಡಿಸಿ ದೊಪ್ಪನೆ ಬಿದ್ದು ಸಂಗ ಶರಣೆನುತ ಮೂರ್ಛಿಸೆ (ಬಸವ. ೨-೫೯); ಮೇದಾನಳನುರಿದೆರ್ದೆ ... ಹಾ ದೇವೀ ಎನುತುಮವನಿಪತಿ ಮೂರ್ಛಿಸಿದಂ (ಶಾಂತೀಶ. ೫-೦೬೨); ಗಾಯದಿಂ ಮೂರ್ಛಿಪರ್ ಚೇತರಿಪರು . . . ನಿಚ್ಚಟದ ಕಲಿಗಳಿಪ್ಪಾಡಿದರ್ ಹರಿ ಜಲಂಧರರ್ (ಕಂಠೀ. ೨೫-೦೯). [ಮೂರ್ಛೆ + — ಇಸು$_3$]

**ಮೂರ್ಛೆ** (ನಾ). ೧. ಎಚ್ಚರವನ್ನು ಕಳೆದುಕೊಂಡಿರುವ ಸ್ಥಿತಿ : ಮೈಮರೆವು : ಆ ಪಂಡಿತಂ . . . ಮೂರ್ಛೆಯಿಂದೆಚ್ಚತ್ತಂತೆ

ಬೆಚ್ಚನೆ ಸುಯ್ದು (ಸುಕುಚ. ೩-೬ ಪ) : ಪುದಿದಿರೆ ಮನಮಂ ಮೋಹತಮಂ ದೀಪಂ ವಾತಾಹತಿಯಿಂಸಂದುವಂತೆ ಮೂರ್ಛೆಗೆ ಸಂದಂ (ಶಂಕಾಚ. ೯-೦೦೬) ; ಅರಸು ಮೂರ್ಛೆಗೆ ಸಲಲು ವಿಭೀಷಣ ಹಿರಿದು ತನ್ನೊಳಗಳಲುತಿರಲು (ಕರಾರಾ. ೨೨-೬೪). ೨. ಪ್ರಜ್ಞೆತಪ್ಪಿ ಬೀಳುವ ಒಂದು ಬಗೆಯ ರೋಗ ; ಅಪಸ್ಮಾರ ; ಮಲರೋಗ : ಕಕ್ಕೆಹಣ್ಣು, ಅಮರವಳ್ಳಿ, ಪರ್ಪಾಷ್ಟಕ, ಭದ್ರಮುಸ್ತೆ. ಕಟುಕರೋಹಿಣಿ ಎಂಬಿವಂ ಕಷಾಯಮಂ ಕಾಸಿ ಕಕ್ಕೆಯ ಹಣ್ಣಂ ಕಲಸಿ ಕುಡಿಸಲು ಚಳುಕು ಹರ, ಮೂರ್ಛೆ, ಮಱವೆ, ಭ್ರಾಂತಿ, ದಾಹ, ಶ್ಲೇಷ್ಮಜ್ವರ ಹರ (ಶಿವ್ಯ೩. ೦೮). ೩. [ಕಾಮಶಾ] ವಿರಹದ ಹತ್ತು ಬಗೆಯ ಅವಸ್ಥೆಗಳಲ್ಲಿ ಒಂಬತ್ತನೆಯ ಅವಸ್ಥೆ ; ಮೋಹ ಪರವಶತೆ ಯಿಂದ ಪ್ರಜ್ಞೆಯನ್ನು ಕಳೆದುಕೊಂಡರುವ ಸ್ಥಿತಿ: ಅಭಿಲಾಷೆ ಚಿಂತೆ... ಮೌನ ಮೂರ್ಛೆ ಮರಣಮೆಂಬ ದಶಾವಸ್ಥಾದಿ ವಿಚಾರಪರರಿಂ (ಶಿವ:೪. ೦೪೪). ೪. [ಯೋಗ] ಎಂಟು ಬಗೆಯ ಕುಂಭಕಗಳಲ್ಲಿ ಒಂದು : ಸೂರ್ಯಭೇದನ . . . ಮೂರ್ಛೆ ಕೇವಲಮೆಂಬಷ್ಟಕುಂಭಕಪ್ರಕಾರಂಗಳುಂ (೬ಪಲ. ೦೬೦). [ಸಂ. ಮೂರ್ಛಾ]

**ಮೂರ್ಛೆಗೊಳಿಸು** (ಕ್ರಿ). ಪ್ರಜ್ಞೆತಪ್ಪಿಸು ; ಮೈಮರೆಯುವಂತೆ ಮಾಡು : ಶುರಿಯದಿಂ ಘಣಬಾಣಗಳ ಕಠೋರದಿಂದರಿಸೈನ್ಯವ ಮೂರ್ಛೆ ಗೊಳಿಸಿ ಪರಿತಂದು ಶೇಷಾಪರಾವತಾರನ ದಿವ್ಯಚರಣಂಗಳೊಳೈಕ್ಯವಾಯ್ತು (ಮೋಹಚ. ೪೦-೩೬). [ಮೂರ್ಛೆ + ಕೊಳ್$_1$ + — ಇಸು$_3$]

**ಮೂರ್ಛೆತಿಳಿ** 'ಮೂರ್ಛೆದಿಳಿ' ನೋ.

**ಮೂರ್ಛೆದಿಳಿ, ಮೂರ್ಛೆತಿಳಿ** (ಕ್ರಿ). ಅರಿವನ್ನು ಪಡೆ; ಪ್ರಜ್ಞೆಯನ್ನು ಹೊಂದು; ಎಚ್ಚರಗೊಳ್ಳು : ಮುಗಿಯೆ ಕಣ್ಮಲರ್ಗಳ್ ನಸುಮುಚ್ಚಿ ಹೋಗಿ ತಣ್ಣಿಲರಲೆಬಿಂದೆ ಮೂರ್ಛೆದಿಳಿದಳ್ (ಶಂಕಾಚ. ೯-೦೦೦); ಚಿತ್ರ ಘನಾತ್ಮಸಂಭವ ಮೂರ್ಛೆದಿಳಿದೆಚ್ಚತ್ತನೊಂದರೆಗಳಿಗೆಯಲಿ (ಮೋಹಚ. ೩೪-೩೩). **ಮೂರ್ಛೆತಿಳಿ** : ತೆರ್ವತ್ತಂ= ಮೂರ್ಛೆತಿಳಿದಂ (ಕಜಾದ. ೫೦. ೨). [ಮೂರ್ಛೆ + ತಿಳಿ$_1$]

**ಮೂರ್ಛೆವೋಗು, ಮೂರ್ಛೆಹೋಗು** (ಕ್ರಿ). =ಮೂರ್ಛಿಸು: ಗಾಂಗೇಯ ನೊಳ್ ಪರಶುರಾಮಂ ಕಾದಿ ಬಸವಳಿದುಸಿರಲಪ್ಪೊಡಮೂಱದೆ ಮೂರ್ಛೆ ವೋಗಿರ್ದನಂ ಕಂಡು (ಪಂಪಭಾ. ೦-೯೦ ವ); ಅತ್ಯಾಸಕ್ತಿಯಿಂ ಮರವಟ್ಟರಂತೆ ಯುಂ ಚಿತ್ರಿಸಿದರಂತೆಯುಂ ಮೂರ್ಛೆವೋದರಂತೆಯುಂ . . . ಮಿಡುಕದೆ ನೋಡುತಿರ್ದರ್ (ಕಾದಂಪೂ. ೬೪೬) ; ಕೆನ್ನೀರ್ ಭರದಿ ಬೆಚ್ಚನೆ ಪಾಯ್ತಿರೆ ಕಣ್ಣರಮುಚ್ಚುತ್ತುಂ ಮೂರ್ಛೆವೋದುದಲ್ಲಿ ವರಾಹಂ (ಕಾಕಂ. ೪-೨೨). **ಮೂರ್ಛೆಹೋಗು** : ನಿಮ್ಮ ಈ ನಡತೆಯನ್ನು ಕಂಡು ನಮ್ಮ ಸ್ವಾಮಿನಿ ಯು ಭಯೋದ್ರೇಕದಿಂದ ಮೂರ್ಛೆಹೋಗಿರುವಳು (ಶಾಕಿ. ೬೩); ದಶ ರಥನು ... ಮೂರ್ಛೆಹೋಗಿ ಕೂಡಲೆ ಎಚ್ಚತ್ತುಕೊಂಡನು (ಶೀಕಿಶಂ. I, ೦೪).
[ಮೂರ್ಛೆ + ಪೋಗು$_1$ (<ಪೋ$_1$)]

**ಮೂರ್ಛೆಹೋಗು** 'ಮೂರ್ಛೆವೋಗು' ನೋ.

**ಮೂರ್ತ$_1$** (ನಾ). ದೇವಕಾರ್ಯ, ಮದುವೆ, ಮುಂಜಿ ಮುಂತಾದ ಮಂಗಳಕಾರ್ಯಗಳನ್ನು ನೆರವೇರಿಸಲು ಗೊತ್ತುಪಡಿಸುವ ಶುಭ ಗಳಿಗೆ ; ಮುಹೂರ್ತ : "ಮೂರ್ತ–ಮುಹೂರ್ತ=ಶುಭಗಳಿಗೆ" (ಕಶ್ಯಕೋ. ೩೬); ಈ ರಗಳೆ ಹಚ್ಚಿಕೊಂಡರೆ ಮೂರ್ತ ಏರ್ರಿ ತೀರು ಹರೀಡೆ ಇದ್ದರೆ ಇಡೀ ನಾಳಗೇ ಕೇಡಲ್ಲ (ಕಂಗಳ. ೦೩೪). [<ಸಂ. ಮುಹೂರ್ತ]

**ಮೂರ್ತ$_2$** (ಗು). ೧. ನಿರ್ದಿಷ್ಟಆಕಾರವನ್ನು ಪಡೆದ,– ರೂಪವನ್ನು ಹೊಂದಿದ. (ನಾ). ೨. ಆಕಾರ ; ರೂಪ : ಮೂರ್ತ ಎಂದರೆ ಸಕಲ, ಸಾವಯವ; ಅಮೂರ್ತ ಎಂದರೆ ನಿಷ್ಕಲ, ನಿರವಯವ ಎಂದರ್ಥ (ಶಶ್ರಿಶಿ. ೨೬). ೩. ಆಕಾರವನ್ನು ಹೊಂದಿದವನು ; ಸ್ವರೂಪವನ್ನು ತಾಳಿ ದವನು : ಅಯ್ಯಾ ನಿಮ್ಮ ಶರಣನು ಮೂರ್ತನಲ್ಲ ಅಮೂರ್ತನಲ್ಲ ಲಿಂಗ ದಲ್ಲಿ ಪ್ರಾಣಸಂಚಿತ (ಶಸ್ವಶ. ೪. ೦೨೮-೦೩೬೯). ೪. ಆಸೀನವಾಗಿರುವಿಕೆ; ಉಪಸ್ಥಿತಿ : ಅಲ್ಲಿಂದ ಕೈಲಾಸಕ್ಕೆ ನಡೆದಾರು ಅಲ್ಲಿ ತಳಿರುಚಪ್ಪರವಿಕ್ಕಿ ಮೂರ್ತವಂ ಮಾಡಾರು (ಕಾಂಶಂ. ೦೦). 'ಮೂರ್ತಂಗೆಯ್' ಪರಾ.
**ಮೂರ್ತಮಾಡು**=ಕುಳಿತುಕೊಳ್ಳು : ಬಸವರಾಜನ ಗೃಹವ ಪೊಕ್ಕು ದಕಮಂ ಕೊಂಡು ಸಸಿನೆಯಾರೋಗಣೆಗೆ ಮೂರ್ತಮಾಡಿರಲ್ (ಶ್ರೀಶಚ. ೨-೦೭). [ಸಂ.]

**ಮೂರ್ತಂಗೆಯ್** (ಕ್ರಿ). ಕುಳಿತುಕೊಳ್ಳು : ಆಸೀನವಾಗು : ಚೆನ್ನಬಸವೇ ಶ್ವರದೇವರು, ಅನುಭವದ ಮಂಟಪದಲ್ಲಿ ಮೂರ್ತಂಗೆಯ್ದಿರ್ಪ ಸಮಯದಲ್ಲಿ . . . ಬಿನ್ನೈಸಿದ ಪ್ರಸ್ತಾವದ ವಚನ (ಮಶಿಶಾ$_6$. IV, ೦೦೫೦).
[ಮೂರ್ತ$_2$ + ಕೆಯ್$_1$]

**ಮೂರ್ತಗೊಳ್** (ಕ್ರಿ). ೧. ರೂಪುದೋರು ; ಸಾಕಾರಗೊಳ್ಳು : ಹಡ ಪದಪ್ಪಣ್ಣನೆ ಎನ್ನ ಕರಸ್ಥಲಕ್ಕೆ ಲಿಂಗವಾಗಿ ಬಂದು ನೆಲೆಗೊಂಡನು ಚನ್ನ ಮಲ್ಲೀಶ್ವರನೆ ಎನ್ನ ಮನಸ್ಥಲಕ್ಕೆ ಪ್ರಾಣವಾಗಿ ಬಂದು ಮೂರ್ತಗೊಂಡನು (೦೦ಗಶ. ೭೦-೬೮). ೨. ಕುಳಿತುಕೊಳ್ಳು ; ಆಸೀನನಾಗು : ಅಹೀಂದ್ರ ಭೂಷಣಂ . . . ಸಭಾಮಂಟಪ ಮಧ್ಯಸ್ಥಿತ ಮಣಿಪೀಠಮನಲಂಕರಿಸಿ ಗಾಡಿಯಿಂ ಮೂರ್ತಿ[ರ್ತ]ಗೊಂಡು (ಕಶಶಂ. ೫-೫೬ ವ); ಪಾರ್ವತಿಯಾಣ್ಮಂ . . . ಕಾಂಚೀನಗರಮಂ ಪೊಕ್ಕು ಭಕ್ತಗೃಹಬಹಿರ್ದೇಶದಾಚಮರ ಮೊದ ಲೊಳ್ ಬಗ್ಗದೊಪಲ ಪಾಸುಗೆಯಲ್ಲಿ ಸಲ್ಲೀಲೆಯಿಂ ಮೂರ್ತಿ[ರ್ತ] ಗೊಂಡಿರೆಯಿರೆ (ವೃಶಂ. ೦೪-೩೦ ವ). [ಮೂರ್ತ$_2$ + ಕೊಳ್$_1$]

**ಮೂರ್ತಗೊಳಿಸು** (ಕ್ರಿ). ಕುಳ್ಳಿರಿಸು ; ಕುಳಿತುಕೊಳ್ಳುವಂತೆ ಮಾಡು: ತಂಡತಂಡದಿ ಬಪ್ಪವರ್ಗದಿರ್ಗೊಂಡು ಪುರಜನವೆಯ್ದೆ ಮಸೆಗೊಡ ಗೊಂಡು ಬರುತಿರೆ ಮೂರ್ತಗೊಳಿಸಿ ಸುಖಾಸನಂಗಳಲಿ (ಚಶಪು. ೪-೫); ವರ ಚಿತ್ರಲೇಖೆ ಪ್ರದ್ಯುಮ್ನಸುತನಾ ವಳಕಡೆಗೆ ಬಳಿಗೊಂಡು ಬಂದು ತತ್ಪಯ್ಯಂಕ ದಲಿ ಮೂರ್ತಗೊಳಿಸಿ (ಚಚಚೊ. ೨೬-೩೫) ; ಮಾರಯ್ಯ . . . ಮನೆಗೆ ಬಂದ ಜಂಗಮಮೂರ್ತಿಗಳಿಗೆ ಶರಣೆಂದು ಭಕ್ತಿಯಿಂದ ಬಾಗಿ ಆನಂದದಿಂದ ಬೇಗ ಅವರನ್ನು ಮೂರ್ತಗೊಳಿಸಿದ (ಮೋಳಿಚ. ೭೨ ಶ್ರೀ ಶಾಶ).
[ಮೂರ್ತಗೊಳ್ + — ಇಸು$_3$]

**ಮೂರ್ತತೆ** (ನಾ). ಆಕಾರಸಹಿತವಾದುದು ; ಸಾಕಾರತೆ : ವಿಚಾರ ವೆಂದರೆ ಮೂರ್ತತೆ, ಸಾಕಾರತೆ. ಅದಕ್ಕೆ ರೂಪವಿಲ್ಲದೇ ಇಲ್ಲ (ಶಿಶಾಶಂ. ೬೩).
[ಮೂರ್ತ$_2$ + — ತೆ$_3$]

**ಮೂರ್ತಿ** (ನಾ). ೧. ಆಕಾರ ; ಸ್ವರೂಪ : ಶ್ರುತಮೂರ್ತಿಯಾಗಿಯುಂ ರುಚಿರತನು ಲಿರಂ ಬಳಿಯಳಾಗಿಯುಂ ಚತುರವಚೋನ್ವಿತೆ ಬಾಯ್ವಾ ಯೊಳ್ ನೆಲಸಿಯುಮತಿಶುಚಿ ವಾಗ್ದೇವಿ ಕೂರ್ತು ಮೂಟಿಮಗುಱಿವಂ (ಶಾಶಶಿ. ೦-೨); ವಿಷ್ಣು ಮನುಗಳು ಸಂದ ಪಾರ್ಥಿವಲೋಕಪಾಲಕರೊಂದು ಮೂರ್ತಿಯದು (ಕಾಶ್ಯದ್ರೋ. ೩-೬೮); ಮೂರ್ತಿ ಚಿಕ್ಕದಾದರೂ ಕೀರ್ತಿ ದೊಡ್ಡದು (ಗಾದೆ). ೨. ದೇಹ ; ಒಡಲು ; ಶರೀರ: "ತನುಃ . . . ಅಪ ರಘನಃ, ಮೂರ್ತಿಃ—ಈ ೧೭ ಶರೀರಂ" (ಹಲಾಯು. ೯೪-೩೫೬); ಅರರಾದ್ರಂ ಕರದೈಷ್ಟ್ಯಮುಲ್ಲಸದಹೀನಾಲಂಕೃತಂ ಮೂರ್ತಿ . . . ದೇವಗಣಾಪಂ ರಕ್ಷಿಕ್ಕೆ ಭೂಚಕ್ರಮಂ (ಶಗಪ. ೦-೫). ೩. ಪ್ರತಿಮೆ ; ವಿಗ್ರಹ : ಕುಲಕ್ರಮ ದಿಂದ ಬಂದ ಇವೇ ಮೂರ್ತಿಗಳನ್ನು ಶ್ರೀರಾಮನೂ ಪೂಜಿಸಿದನಂತೆ! (ಕಪು. ೩೩೪); ಏಕಲವ್ಯನು ದ್ರೋಣಾಚಾರ್ಯರ ಮೂರ್ತಿಯನ್ನು ಮಾಡಿ, ಅದರ ಸಾನ್ನಿಧ್ಯದಲ್ಲಿ ಧನುರ್ವಿದ್ಯೆ ಕಲಿಯುತ್ತಿದ್ದುದು ಸರ್ವವಿದಿತ (ಶಾಕದ. ೫೦೦). ೪. ಕಾಣಿಸಿಕೊಳ್ಳುವಿಕೆ ; ಸಾಕ್ಷಾತ್ಕಾರ. ೫. ಕಾಠಿಣ್ಯ; ದೃಢತೆ. ೬. ಸೌಂದರ್ಯ. ೭. ಕಾಗೆ ; ವಾಯಸ. ೮. [ಗಣಿತ] ಮೂರು ಎಂಬ ಸಂಖ್ಯೆಯ ಸಂಕೇತ : ಹರನಯನ ಮುನ್ನ ಪುರ ಶಿಖಿ ವರರತ್ನಂ

ಮೂರ್ತಿ ಲೋಕ ವಿಮಲತ್ರಿತಯಂ . . . ವರ್ಣತ್ರಯುವುದು ಮೂಜಿಬಿ ನಾಮಂ (ಶ್ಕಶಾ. ೯-೩). [ಸಂ.]

**ಮೂರ್ತಿಗೊಳ್,** ಮೂರ್ತಿಗೊಳ್ಳು (ಕ್ರಿ). ೧. ಆಕಾರವನ್ನು ಪಡೆ : ಸ್ವರೂಪವನ್ನು ತಾಳು : ಹರಹಾಸದ್ಯುತಿ ಮೂರ್ತಿಗೊಂಡುದೊ ವಿರಿಂಚ ಖ್ಯಾತಿ ಲೋಕಂಗಳೊಳ್ ಪರಿದಾಯಾಸದೆ ನಿಂದುದೋ . . . ಎಂಬಂತಿರೆ ದಿವ್ಯಸುಂದರಿ ಮನಕ್ಕಾನಂದವಂ ಮಾಡಿದಳ್ (ಶಾದಂಕು. ೬೬೩) ; ತಾಯ ತಂದೆಯ ಚಿತ್ರಕ್ಕವರ್ದನ ಮುಟಿಯಂ ಕಟಿದರೆ ಕುಮಾರಕರ್ ಮೂರ್ತಿ ಗೊಂಡ ಪುರುಷಾರ್ಥದವೋಲ್ (ಶಂಶಾಪು. ೩-೦೯೯) ; ಪಶುಪತಿ ಬಸವನ ಮನವ ಮೊನೆಯೊಳೊಪ್ಪೆ ಮೂರ್ತಿಗೊಂಡು (ಬಸರ. ೯-೨೦). **ಮೂರ್ತಿಗೊಳ್ಳು :** ೨. ಸಾಕ್ಷಾತ್ಕಾರಗೊಳ್ಳು; ಗೋಚರಿಸು : ಪಂಚ ಸ್ಥಾನದಲ್ಲಿಪ್ಪ ಲಿಂಗವ ಕರಸ್ಥಲದಲ್ಲಿ ಮೂರ್ತಿಗೊಳ್ಳಲಿಕ್ಕಾಗಿ ಕಂಗಳು ತುಂಬಿ ಬಾಹ್ಯದೃಷ್ಟಿ ಅಳಿತು ಲಿಂಗದೃಷ್ಟಿ ಪರಿಪೂರ್ಣವಾದಲ್ಲಿ (ಶುದೇವ. ೨೮೭-೬೭).

[ಮೂರ್ತಿ + ಕೊಳ್$_1$]

**ಮೂರ್ತಿಗೊಳ್ಳು** 'ಮೂರ್ತಿಗೊಳ್' ನೋ.

**ಮೂರ್ತಿತ್ರಯ** (ನಾ). ಬ್ರಹ್ಮ, ವಿಷ್ಣು ಮತ್ತು ಮಹೇಶ್ವರ; ತ್ರಿಮೂರ್ತಿ : ಮಸದಿ ಮೂರ್ತಿತ್ರಯವು ಕೇಳ್ಕೆ (ಶ್ವಶಿಂ. ೧೯-೩೩).

[ಸಂ.]

**ಮೂರ್ತಿಪೂಜೆ** (ನಾ). ವಿಗ್ರಹಾರಾಧನೆ : ಕೆಲವರು, ಕಾಡುಜನರ ಪದ್ಧತಿ ಯಾದ ಮೂರ್ತಿಪೂಜೆಯನ್ನು ಹಿಂದೂಗಳು ಇನ್ನೂ ಬಿಟ್ಟಿಲ್ಲವೆನ್ನುತ್ತಾರೆ (೯೮೦. ೩೩೬). [ಸಂ. ಮೂರ್ತಿಪೂಜಾ]

**ಮೂರ್ತಿಬಲ** (ನಾ). ಮೈಯ ಕಸುವು : ದೇಹದ ಬಲ : ದಮಿ ತಾರಿಯ ಬಲಂ ಚಂದ್ರಬಲಮಿಲ್ಲದಂಕಕಾಜನಂತೆ ಸೋಲ್ತು ಮೂರ್ತಿಬಲ ಮಿಲ್ಲದ ಮಲ್ಲನಂತಿಕ್ಕುಪಟ್ಟು (ಶಾಂತಿ. ೯-೩೦ ವ). [ಸಂ.]

**ಮೂರ್ತಿಭಂಜಕತೆ** (ನಾ). ವಿಗ್ರಹವನ್ನು ಒಡೆಯುವಿಕೆ; ಪ್ರತಿಮೆ ಯನ್ನು ಭಂಗಮಾಡುವಿಕೆ : ಮಹಮ್ಮದೀಯರು ಮಾಡಿದ ಮೂರ್ತಿ ಭಂಜಕತೆಯಲ್ಲಿ ಹಿಂದುಗಳಿಗೆ ನೋವಾಯಿತು, ಅವಮಾನವಾಯಿತು (೪ವಾ೯೪. ೩೯). [ಸಂ. ಮೂರ್ತಿಭಂಜಕತಾ]

**ಮೂರ್ತಿಮಂತ** (ಗು). ಸ್ಪಷ್ಟವಾದ ಅಭಿವ್ಯಕ್ತಿಯನ್ನು ಹೊಂದಿದ ,— ಆಕಾರವನ್ನು ತಳೆದ : ಸುಂದರಿಗೆ ಮಗಳ ಸ್ವಭಾವದ ಮೂರ್ತಿಮಂತ ಕಲ್ಪನೆಯಾಗಿತ್ತು (ಹಳ್ಳಹಾ. ೦೦೦): ಮೂರ್ತಿಮಂತ ದೈನ್ಯವೇ ಅವಳಾಗಿ ನಿಂತಿರುವುದನ್ನು ಕಂಡಾಗ ಎಂಥಾ ಮಿಥ್ಯಾಪವಾದ ಎಂದಿತು ಮನಸ್ಸು (ಹೊಸಕ್ಷ. ೨೨). [ಸಂ. ಮೂರ್ತಿಮಾತ್]

**ಮೂರ್ತಿಮತಿ** (ಗು). ೧. ಆಕಾರವನ್ನು ಹೊಂದಿದ; ದೇಹವನ್ನು ತಾಳಿದ. ೨. ಗಟ್ಟಿಯಾದ ; ಕಠಿಣವಾದ. (ನಾ). ೩. ಆಕಾರವನ್ನು ಪಡೆದವಳು ; ರೂಪವನ್ನು ತಾಳಿದವಳು : ಆ ಮರುದೇವಿಮಹಾದೇವಿ . . . ನಾಭಿನರೇಂದ್ರನೆಮ್ದೊ ಸಂಗಳಸಿದ ಕೀರ್ತಿ ಮೂರ್ತಿಮತಿ ತದ್ವದನಾ ಬ್ಜವಿಲಾಸವಾಸದೊಳ್ ತ ಳ ರ ದೆ ನಿಂದ ವಾಗ್ವನಿತೆಯೆಂಬಭಿಶಂಕೆಯ ನುಂಟುಮಾಡಿದಳ್ (ಆದಿಪು. ೭-೨೭); ಆತನ ಕೀರ್ತಿಲಕ್ಷ್ಮಿಯೆ ಮೂರ್ತಿ ಮತಿಯಾದಂತಾತ್ಮೀಯಪ್ರಾಣೇಶ್ವರನ ಮನಕ್ಕೆ ವರೆ ಸೂಟಿಗ ವಂದು ಸುಪ್ರೆಯಾಗಿ (ಸುಕುಚರಿ. ೯-೦೦೪ ವ). [ಸಂ. ಮೂರ್ತಿಮತೀ]

**ಮೂರ್ತಿವೆರು** 'ಮೂರ್ತಿವೆಱು' ನೋ.

**ಮೂರ್ತಿವೆಱು,** [1] ಮೂರ್ತಿವೆರು (ಕ್ರಿ). = ಮೂರ್ತಿಗೊಳ್ ೧ : ಸದ್ಧರ್ಮಮೇ ಮೂರ್ತಿವೆತ್ತು ಸಮದೃಷ್ಟಿಯೊಳ್ ನಿಂದ ವೃಷೇಂದ್ರನಿಂ . . . ಪಂಪನಾಳ್ದು ಪರಮನ ಸಭೆ ಕಣ್ಗೊಳಿಸಿದುದು (ಶಬಶಂ. ೦-೬೯ ವ). **ಮೂರ್ತಿವೆರು :** ಬೆದರಿದ ಹರಿಣಿಯಂತಿದ್ದ ಮುಖಭಾವ; ದೈನ್ಯವೇ ಮೂರ್ತಿವೆತ್ತು ಬಂದಂತೆ (ಜಾನ್ಪದ. ೬೩). [ಮೂರ್ತಿ + ವೆಱು$_1$]

**ಮೂರ್ತಿಶಿಲ್ಪ** (ನಾ). ಪ್ರತಿಮೆಯನ್ನು ಕಂಡರಿಸುವ ವಿದ್ಯೆ : ವಿಗ್ರ ಹದ ಕೆತ್ತನೆಯ ಕೆಲಸ : ಪ್ರಾಚೀನಭಾರತದಲ್ಲಾದರೋ ವೇದಗಳ ಕಾಲ ದಲ್ಲಿಯೇ (ಕ್ರಿ. ಪೂ. ೩೦೦೦ ?) ಮೂರ್ತಿಶಿಲ್ಪವು ತಲೆಯೆತ್ತಿದ್ದಿತು (ಕಾರಠ. ೩೦೯); ಮೂರ್ತಿಶಿಲ್ಪದ ಸಾಲಿಗೇ ಸೇರಿಸಬಹುದಾದ ನೊಳಂಬರ ದೇವಾಲಯದ ಒಂದು ಭಾಗವೆಂದರೆ, ಅಲ್ಲಿಯ ಜಾಲಂಧ್ರಗಳು (ಕೊಳಂಬ. ೦೦೦). [ಸಂ.]

**ಮೂರ್ತಿಸು** (ಕ್ರಿ). ೧. ಆಕಾರವನ್ನು ಕೊಡು : ಸ್ವರೂಪವನ್ನು ನೀಡು ; ರೂಪಿಸು : ಪೊಗಳೆ ಮೂರ್ತ್ತಿಸಿದರಕ್ಕ ಸದರ್ತ್ಥಿವಲ್ಲಭ (ಎಕ. VII, ಶಿಮೊ. ೩-೨೨: 1218); ಸ್ವಾರಾಜ್ಯದೊಂದು ಘನಕನಸು ಕಂಡು ಕಟೆದಿಟ್ಟೆ ಆಗಿ ತ್ಯಾಗಿ, ಕಾರುಣ್ಯದಲ್ಲಿ ಮಾನವರ ಮರ್ಮ ಮೂರ್ತಿಸುವ ಶಿಲ್ಪಿಯಾಗಿ (ಕೊಹರ್ಕಶಾ. ೦೬-೦೨); ಕುಂಬಾರನಾಗಿದ್ದು ಅವನು ಮಣ್ಣಿಂದ ಮನುಷ್ಯನನ್ನು ಮೂರ್ತಿಸಿದ್ದ (ಐದ್ಕಶ್ರ. ii, ೩೬೪೪). ೨. ರೂಪವನ್ನು ತಾಳು ; ಆಕಾರವನ್ನು ಪಡೆ : ವಿಹಿತಾಪರಾಧಸ್ಮರಣೆ ಮನದಲಿ ಮೂರ್ತಿಸಲು ಸುರನಾಥನಂತೆಂದ (ಶಿಶಾಗ. ೦೦-೨೩-೨೨).

[ಮೂರ್ತಿ + — ಇಸು$_3$]

**ಮೂರ್ತೀಭವಿಸು** (ಕ್ರಿ). = ಮೂರ್ತಿಗೊಳ್ ೧ : ಸರ್ವಜನಮುಹಿಮೆ ಗಳುಂ ಮೂರ್ತೀಭವಿಸಿ ಗೋರೂಪಂಗಳಾಗಿರ್ಕುಂ (ಶಿವೇಕ. ೨೮೯) ; ಅರಸ ನುರುಕೀರ್ತಿಪ್ರತಾಪ ವಿಶ್ವಾಕಾರವೆರಸಿ ಮೂರ್ತೀಭವಿಸಿದಂತೆ . . . ತೋರ್ದ ರಚ್ಚರಿಯ ಪರಿಯ (ಶಂಕಾರಾ. ೨-೩-೩೩); ಕಲಾವಿದನ ಅಂತಸ್ಸತ್ತ್ವವೇ ಅಲ್ಲಿ ಮೂರ್ತೀಭವಿಸಿದಂತಿತ್ತು (ಕಂಗರೂ. ೯೪). [< ಮೂರ್ತಿ + ಭವಿಸು]

**ಮೂರ್ತೆ** 'ಮುರ್ತೆ' ನೋ.

**ಮೂರ್ಧ** (ನಾ). ೧. ತಲೆಯ ಮುಂಭಾಗ ; ಮುಂದಲೆ ; ನೆತ್ತಿ. ೨. ತಲೆ ; ಶಿರಸ್ಸು : "ಮುಂಡಃ . . . ಶೀರ್ಷಃ, ಮೂರ್ಧಾಃ, ಕಂ _ ಈ ರ ಮಂಡೆ" (ಹಳಾಯು. ೬೩-೩೬೯); ಧರೆಗಮರಾಧ್ವದಿಂ ಕೆಡೆವ ಜೈದ್ಯನ ಮೂರ್ಧವ ರತ್ನಭಾಃಪರಂಪರೆ ಕುಡಿಮಿಂಚಿನಂತೆಸೆಯೆ (ಜಗಂ. ೦೬-೩೮); ಮೂರ್ಧದ ಭಾಳನಯನವ ಭರಿತಪರಿಮಳದಂಗವಟ್ಟದ ಜಡಿದ ಕೆಂಜೆಡೆಯ . . . ಶಿವನನು ಕಂಡನಬುಜಭವ (ಶುಪ್ರಾಕ. ೬-೦೬). ೩. ಮುಂದೆ ಇರುವ ಪ್ರದೇಶ ; ಮುಂಭಾಗ. ೪. ಶಿಖರ ; ತುದಿ. ೫. ಮುಂದಾಳು ; ಮುಖಂಡ. ೬. [ವ್ಯಾಕ] ಎಂಟು ಉಚ್ಚಾರಣಾ ಸ್ಥಾನಗಳಲ್ಲಿ ಒಂದು ; ಅಂಗುಳು.

**ಮೂರ್ಧ್ನಿಘ್ರಾಣ** = ಪ್ರೀತಿ, ವಾತ್ಸಲ್ಯಗಳಿಂದ ನೆತ್ತಿಯನ್ನು ಮೂಸುವುದು ; ಮತ್ಪ್ರಾಣವೆ ಪೊನ್ನೆಜೆಯ ಪರುಷಮೇ ಮುಕ್ತಿಯ ನಿರ್ವಾಣವೆ ಎನುತುಂ ಮೂರ್ಧ್ನಿಘ್ರಾಣಂಬೆರಸಗಲದಪ್ಪಿದಂ ಗಿರಿರಾಜಂ (ಗಿರಿಕ. ೩-೦೦೦); ನಂಬಿಯನೆತ್ತಿ ತಕ್ಕೈಸಿ ಶಂಕರಂ ಸಾರ್ದು ಮೂರ್ಧ್ನಿ ಘ್ರಾಣವಂ ಮಾಡುತೆ (ಹಂಪರ. ೭-೦೩೯). P ಸಂಸ್ಕೃತದಲ್ಲಿ ಇದು ಒಂದು ಪದವಲ್ಲ. [ಸಂ. ಮೂರ್ಧನ್]

**ಮೂರ್ಧನ್ಯ** (ಗು). ೧. ತಲೆಗೆ ಸಂಬಂಧಿಸಿದ. ೨. ಶ್ರೇಷ್ಠತೆಯಿಂದ ಕೂಡಿದ ; ಉತ್ತಮ : 'ಮೂರ್ಧನ್ಯ ಬ್ರಾಹ್ಮಣ' ಪರಾ. (ನಾ). ೩. ತಲೆಗೆ ಸಂಬಂಧಿಸಿದುದು. ೪. ಪ್ರಮುಖವಾದುದು. ೫. ಪ್ರಮುಖ ವ್ಯಕ್ತಿ ; ಮುಖಂಡ : ಕ್ರಿಸ್ತ ಶಕ ೧೨ ರಲ್ಲಿ ಉಂಟಾದ ವೀರಶೈವಕ್ರಾಂತಿಯ ಮೂರ್ಧನ್ಯರಾದ ಶ್ರೀ ಬಸವಣ್ಣನವರ ಪ್ರಭಾವವನ್ನು ಅನೇಕ ತೆಲುಗುಕವಿಗಳ ಮೇಲೆ ಕಾಣಬಹುದಾಗಿದೆ (ಶಾಶಾಶ. ೨೯೩). ೬. [ವ್ಯಾಕ] ಬಾಯಿಯ ಮೇಲುಭಾಗದಲ್ಲಿ (ಅಂಗುಳಿನಲ್ಲಿ) ಹುಟ್ಟುವ ಅಕ್ಷರ; ಮೂರ್ಧಸ್ಥಾನದಲ್ಲಿ ಉಚ್ಚಾರಗೊಳ್ಳುವ ಅಕ್ಷರ : ರೇಫೆ ಮೂರ್ಧನ್ಯಂ (ಶಬ್ದಮ. ೦೯ ಸೂತ್ರ); ಮೂರ್ಧನ್ಯ ಋ. ೠ. ಟವರ್ಗ, ರ, ಷ, (ಬಿ. ಬಿ. ೪) (ಶ್ವಶಿಂ. ೩). [ಸಂ.]

**ಮೂರ್ಧನ್ಯಬ್ರಾಹ್ಮಣ** (ನಾ). ಶ್ರೇಷ್ಠನಾದ ಬ್ರಾಹ್ಮಣ : ಕಲಿಯುಗ ದಂದುಚ್ಚಂಗಿಯುಚ್ಚೆಯುಂಬಳ್ಳಿಯೊದಲಾಗಿ ಮೂರ್ಧನ್ಯಬ್ರಾಹ್ಮಣಕನ್ಯಕೆ (ಶಾಇಪ. VI. ೩೭೮-೦೬ ; 1070). [ಸಂ.]

**ಮೂರ್ಧಪಿಂಡ** (ನಾ). ಆನೆಯ ಕುಂಭಸ್ಥಳ : "ಮೂರ್ಧಪಿಂಡಃ, ಕುಂಭಃ — ಈ ೨ ಆನೆಯ ಕುಂಭಸ್ಥಳಂ" (ಹಲಾಯು. ೩೭-೬೩); ಬೆದಱಿ ಮನಂ ವನಸ್ಥಲದೊಳೊಂದಿಭಮಿರ್ದುದು ಮೂರ್ಧಪಿಂಡಮಪ್ಪಿದು ಶಿಖರಸ್ಥಲಂ (ಶಂರಾಪು. ೧೦-೦೫೯). [ಸಂ.]

**ಮೂರ್ಧವ್ಯಾಧಿ** (ನಾ). ತಲೆಶೂಲೆ : ಶಿರೋವ್ಯಾಧಿ : ಕೆಂಪಿನ ಅಗಸೆ:- ಈ ಹೂವಿನ ರಸವನ್ನು ದಿನ ಬಿಟ್ಟು ದಿನ ಒತ್ತಿ ನೀರಸೆಱಿದರೆ ಮೂರ್ಧ ವ್ಯಾಧಿ, ನೇತ್ರರೋಗ ಗುಣ (ಶಿಶ್ಯ.ಬೋ. ೪). [ಸಂ.]

**ಮೂರ್ಧಾಭಿಷಿಕ್ತ** (ನಾ). ರಾಜ್ಯಭಾರದ ಅಧಿಕಾರವನ್ನು ಪಡೆಯು ವಾಗ ಶಾಸ್ತ್ರೋಕ್ತವಾಗಿ (ತಲೆಯ ಮೇಲೆ) ಅಭಿಷೇಕ ಮಾಡಿಸಿ ಕೊಂಡವನು; ಪಟ್ಟದ ಅರಸು; ರಾಜ : "ರಾಜಾ . . . ಮೂರ್ಧಾ ಭಿಷಿಕ್ತಃ . . . ಲೋಕಪಾಲಃ – ಈ ೧೨ ಅರಸು" (ಹಲಾಯು. ೬೯-೨೭೭); ವಿದಿತಂ ಮೂರ್ಧಾಭಿಷಿಕ್ತರ್ ಪಲಬರರಸುಗಳ್ ಪ್ರಾಜ್ಯಸಾಮ್ರಾಜ್ಯಲಕ್ಷ್ಮೀ ಪದಮಂ ಕೈಕೊಂಡು ತಮ್ಮಂ ಮಱೆದು (ಅಜಿಪು. ೯-೩೯); ಮೂರ್ಧಾಭಿ ಷಿಕ್ತರಿರೆ ಗೋವರ್ಧನನಂ ಪೂಜಿಸೆಂದನಱಿಯದೆ ಭೀಷ್ಮಂ (ಜಗದಿ. ೦೭-೦೯): ನೀನು ದುರ್ಯೋಧನನ ಮಕುಟಭಂಗ ಮಾಡಿದ್ದು ಅಕ್ಷಮ್ಯ. ಭೀಮ; ಆತನು ಮೂರ್ಧಾಭಿಷಿಕ್ತನಾಗಿದ್ದ (ಅಗ್ರಹ. ೨). [ಸಂ.]

**ಮೂರ್ಧಾಭಿಷೇಕ** (ನಾ). ರಾಜನಾಗುವ ವ್ಯಕ್ತಿಗೆ ರಾಜ್ಯಭಾರದ ಅಧಿಕಾರವನ್ನು ವಹಿಸಿಕೊಡುವಾಗ ಶಾಸ್ತ್ರೋಕ್ತವಾಗಿ (ತಲೆಯ ಮೇಲೆ) ಅಭಿಷೇಕ ಮಾಡುವುದು; ಪಟ್ಟ ಕಟ್ಟುವುದು : ನಿಜಕೂಟಾಗ್ರ ದೊಳ್ ಪಾಯ್ವ ಗಂಗಾಜಲದಿಂ ಮೂರ್ಧಾಭಿಷೇಕೋನ್ನತಿ ನಿಲೆ . . . ಚಕ್ರೇಶತ್ವಮಂ ತಾಳ್ದಿದುದಖಿಳಧರಾರಮ್ಯಹೈಮಾಚಳೇಂದ್ರಂ (ಶಂಶಧಾ. ೪-೦೪). [ಸಂ.]

**ಮೂರ್ಧಾಭಿಷೇಚನ** (ನಾ). = ಮೂರ್ಧಾಭಿಷೇಕ : ಪರಪಾಂಚಾಲ ತನಯಂಗೆಸಗಿದರು ಮೂರ್ಧಾಭಿಷೇಚನವ (ಕುವ್ಯಾಉ. ೦೦-೩೪). [ಸಂ.]

**ಮೂರ್ವಡಿ** 'ಮೂವಡಿ' ನೋ.

**ಮೂರ್ವಡಿಸು** 'ಮೂವಡಿಸು' ನೋ.

**ಮೂರ್ಮೆ** 'ಮೂಮೆ' ನೋ.

**ಮೂಲ, ಮೂಳ**[2] (ನಾ). ೧. ಮರ, ಗಿಡ ಮುಂತಾದುವುಗಳ ಭೂಮಿಯೊಳಗಿರುವ ಭಾಗ; ಬೇರು; ಪಾದ : "ಪಾದಂ, ಮೂಲಂ– ಈ ೨ ಮರದ ಬೇರ್" (ಹಲಾಯು. ೩೦-೨೯); ಮೂಲ ಸಟಾಳಿಯಿಂದ ಮುರಗಾಲಯುಮಂ ಬಹುಶಾಖೆಯಿಂದಮಿಂದ್ರಾಲಯುಮಂ ಪಳಂಚಿ (ಶಂರಾಪು. ೭-೦೨೭); ಇದೆ ಬಿಲ್ವಮೂಲದೊಳ್ ಪುಲಿಯ ನಖಚಿಹ್ನಮಿಂತಿದೆ ಸರ್ವಮೃಗಪಕ್ಷಿಗಳ ಪಕ್ಕಿಯೆಂದು ಪರಿದೋಡಱಿವಾ ಪಡೆವೆರಸಿ ಬೇಂಟೆ ಯಾಡುತಿರ್ದಂ (ಲಾಪಶಂ. ೩-೦೦) ; ಮೂಲ ತಿಳಿದವನಿಗೆ ಎಲೆ ತೋರಿಸ ಬೇಡ (ಗಾದೆ). ೨. ಗೆಡ್ಡೆ; ಗೆಣಸು; ಕಂದ : ಆಕೆಯು ಸಾವಿರ ವರ್ಷಗಳವರೆಗೆ ಫಲ -– ಮೂಲಗಳನ್ನು ಭಕ್ಷಿಸಿದಳು (ತುಳಸೀ. ೨೩). 'ಕಂದಮೂಲ' ಪರಾ. ೩. (ಮರ ಮುಂತಾದುವುಗಳ) ಬುಡ; ಕೆಳಭಾಗ : ಆತ್ಮೋದ್ಭವಮೂಲಚ್ಛೇದನೋಪಾಯಮನೆಣಿಸದು ಮದ್ ಬುದ್ಧಿ (ಕಣ್ಣಕ. ೬೦೩) : ಮಲೆತು ನಿಮಿರ್ದ ಗರುವ ತರುವರಕುಲಂ ಮೂಲಮಂ ತಿರಿಪಿ ವಿಘಟಿದವೋಲ್ ನೆಲಕ್ಕುರುಳಿದುವು (ಶತ್ರಾಂಗ. ೪೯-೦೩೦೩); ಮೂಲ ಘಿಡಿದು ಅಲ್ಲಾಡಿಸಿದ ಬಳ್ಳಿಯಂತೆ ಬಳುಕಿತು ಜೀವ (ಹಾಡುಶಾ. ೦೭-೬). ೪. ಹುಟ್ಟುವ ಸ್ಥಳ; ಉಗಮ : ದಯವೇ ಧರ್ಮದ ಮೂಲವಯ್ಯ (ಬಸವ. ೨೪೭); ಹಲವರು ಬ್ರಾಹ್ಮಿಲಿಪಿಯ ಮೂಲ ಹೊರದೇಶಗಳಲ್ಲಿ ಹುಡುಕಬೇಕೆಂದು ತಿಳಿಸಿದ್ದಾರೆ (ಬ್ರಾಲಿಪಿ. ೪೭). ೫. ಕಾರಣ : ಹೇತು : ಅವನ ಕಂಠದೊಳೊಂದುಸಾಲಗ್ರಾಮದುಪಲು ಪೊನ್ನ ಮನೆ ಮಾಡಿಕೊಂಡಿಸೆಯುತಿಹುದಂತೆ ! ಆತನ ವಿಚಿತ್ರಕಥೆಗದೆ ಮೂಲವಂತೆ ! (ಶಂಕ್ರಸ. ೩೦-೦೪). ೬. ಪ್ರಾರಂಭ; ಆದಿ; ಮೊದಲು. ೭. ಒಂದು ಗ್ರಂಥದ ಮೊಟ್ಟ ಮೊದಲನೆಯ ಪ್ರತಿ ; ಅನಂತರದ ಪಾಠಗಳಿಗೆ ಆಧಾರವಾದ ಪ್ರಾರಂಭದ ಗ್ರಂಥ ; ಆಕರಗ್ರಂಥ : ಮೂಲದಲ್ಲಿದೆಯೆಂದು ತರ್ಜುಮೆಯಲ್ಲೂ ಉಳಿದು ಬಂದ ಒಂದೆರಡು ಪದಗಳನ್ನು ತೆಗೆದಿದ್ದರೆ ಇನ್ನೂ ಸುಂದರವಾಗುತ್ತಿತ್ತು (ಪ್ರಾರಪ. XIV. ಮುನ್ನುಡಿ). ೮. (ವ್ಯಾಪಾರ ಅಥವಾ ಉದ್ಯೋಗದಲ್ಲಿ ತೊಡಗಿಸುವ) ಪ್ರಾರಂಭದ ಧನ; ಅಸಲು; ಬಂಡವಾಳ : ವನಿಯರು ಮೂಲವಾಗಿ ಕೊಂಡ ಬಾಳಿನ ವಿವರ (ಶಕ್ಚಇ. IX–ii. ೪೦೯–೧೩; 1365) ; ಏಳುವರ್ಷದ ಬಡ್ಡಿ ಮೂಲಸಹಿತವಾಗಿ ತಾಳುವನಲ್ಲೇಲೊ ತಿರುಕ ಮುಂಡಾಳಿ (ಪುರಂದ. ೦-೦೦೯-೦); ಸಾಲ ಮೂಲವ ತಿಂತು . . . ಬರ ಬಂದು ದೇಶವ ತಿಂತ್ರು (೩೦ಜಾಪ. ೦೭೦-೪೮) ೯. ಹತ್ತಿರ ; ಸಮೀಪ. ೧೦. ಕೋಶ; ಭಂಡಾರ: ಊರನ್ನ ಅವಗೊಳಿರಾ. ಊರನ್ನ ಅಪಗೊಳಿರಾ ಲಾಡಾಯಿ ಮಾಡಾಕ ಹೋಗತೆಲ ಬರುತನಕ ಅರಮನಿ ಮೂಲ ಜತನಾವ (ಲಾವಣಿ. ೨೨೨). ೧೧. ಹಕ್ಕು; ಅಧಿಕಾರ : ಯೆಕಪ್ಪನಾಯಕನು ಯಿಜಿದು ಯಿ[ದ್ದುಯಿಸಿ ಕೊಂಡು] ಬೀಳಲಾಗಿ ನಿಂಮ ಸಂತತಿ ಪರಂಪರೆಯಾಗಿ ಹೆಂಣಿಗೆ ದಾನ ಗಂಡಿಗೆ ಮೂಲ ಆಚಂದ್ರಾರ್ಕಸ್ಥಾಯಿಯಾಗಿ ಬ[ಂ]ದು (ಕಇ. III–i. ೦೩-೬; 1542). ೧೨. ಬೀಳಲು. ೧೩. ಪೊದರು. ೧೪. ಆದಿ, ಅಂತ್ಯವಿಲ್ಲದವನು ; ಪರಬ್ರಹ್ಮ. ೧೫. [ವ್ಯಾಕ] ಯಾವ ಪ್ರತ್ಯಯ ವನ್ನೂ ಹಚ್ಚದ ಶಬ್ದದ ಅವಿಭಾಜ್ಯರೂಪ ; ಪ್ರಕೃತಿ ; ಧಾತು. ೧೬. [ಗಣಿತ] ಯಾವ ಒಂದು ಸಂಖ್ಯೆಯನ್ನು ಅದರಿಂದಲೇ ಒಂದು ಗೊತ್ತಾದಷ್ಟು ಸಲ ಗುಣಿಸಿದರೆ, ಒಂದು ನಿರ್ದಿಷ್ಟ ಸಂಖ್ಯೆ ಅಥವಾ ಮೊತ್ತ ಬರುತ್ತದೆಯೋ ಆ ಮೊದಲಿನ ಸಂಖ್ಯೆ : ಪ್ರಾಚೀನ ಚೀಣರು ವರ್ಗಸಮೀಕರಣಕ್ಕೆ ಒಂದೇ ಮೂಲವನ್ನು ಮಾತ್ರ ಕೊಟ್ಟಿದ್ದಾರೆ (ಗಇತ. ೦೭). 'ಘನಮೂಲ', 'ವರ್ಗಮೂಲ' ಪರಾ. ೧೭. [ಜ್ಯೋತಿ] ಒಂದು ನಕ್ಷತ್ರದ ಹೆಸರು: ಇಪ್ಪತ್ತೇಳು ನಕ್ಷತ್ರ ಗಳಲ್ಲಿ ಹತ್ತೊಂಬತ್ತನೆಯದು : "ಮೂಲವಾಶ್ಲೇಷೆ ಕೃತ್ತಿಗೆಯೊಳಾ ತಾರೆಯೆಂಟಹವು" (ಮಂಗರಾ. ೦೯-೩); ಮೂಲಮಾಗಿರೆ ನಕ್ಷತ್ರಂ . . . ಪರಮಂ . . . ಬಂದು . . . ಆಶ್ರಯಿಸಿದಂ (ಶಕ್ರಪು. ೯-೦೦೩); ಆರ್ದ್ರೆ . . . ಮೂಲ . . . ಮಖೆಯೆಂಬವೆ ಕ್ರಮದಿಂದ ಷಡ್ಜಾದಿ ಸ್ವರಂಗಳ ಜನ್ಮನಕ್ಷತ್ರಂಗಳು (ಶಿಪೀಳ. ೨೩೦). ೧೮. (ಆಲಂ) ಉಪದ್ರವಕಾರಿ : ಕಂಟಕ : ಅತ್ತೀಗೆ ಸೊಸಿ ಮೂಲ ಹಿತ್ತಲಾಗೆ ಕದ ಮೂಲ ಬಿತ್ತೀದ ಹೊಲಕೆ ಸದಿ ಮೂಲ ಊರಾಗೆ ಹಚ್ಚೀಗೆ ಮೂಲ ಬಡವಾಗೆ (ಗಾರಪ. ೨೨) ; "ಬಡವನ ಸಿಟ್ಟು ದವಡಿಗೆ ಮೂಲ" ಎನ್ನುವ ಹಾಗೆ ಬಡವನಾದ ಸಿದ್ದಣ್ಣನ ಸಿಟ್ಟು ಶ್ರೀಮಂತರಾದ ಬೆಳ್ಳೀಗೌಡ ರನ್ನು ಏನು ಮಾಡುವ ಹಾಗೆಯೂ ಇರಲಿಲ್ಲ (ಶಂಜಶಂ. ೫೨). **ಮೂಳ**[2] : ೧. ಪಾರಂ ಕಾಳಮಲ್ಲದ ಕಾಳದೊಳ್ ಫಲಪುಷ್ಪದೊಳ್ ನೆಱೆದಂದು ಮೇಣ್ ಮೂಳದಿಂದಮಕಾರಣಂ ಕಿಡೆದಂದು ದೇಶದ ಹಾನಿ (ಲೋಕೋಪ. ೪-೩೪).

**ಮೂಲಿಂಬರಂ** = ಬುಡದ ವರೆಗೆ : ತಳದ ವರೆಗೆ : ಅಂತು ಪಾತಾಳಮೂಲಂಬರಂ ಮುಟ್ಟಿಗಿ ದಿವಿಜದೀರ್ಘಿಕೆಯೊಳ್ ಮುಟ್ಟಿಗಿ ನೆಗೆವ ಅಭ್ರಮೂಪತಿಯಂತೆ ನೆಗೆಯುಶೊಡಂ (ಶಂದ್ರುಪು. ೫-೪೩ ಪ). **ಮೂಲಚೂಲ** = ಆದಿ ಮತ್ತು ಅಂತ್ಯ : ಕೇವಲ ಆವರಣಗಳಿಗೆ ಪಡಿಮಿಡಿಯುವ ದೈಹಿಕವರ್ತನೆಗಳನ್ನೇ ಮಾನಸಿಕವ್ಯಾಪಾರದ ಮೂಲಚೂಲಗಳೆಂದು ಒಪ್ಪಲಾಗುವುದಿಲ್ಲ (ಶಾಂದಶ. ೯). [ಸಂ.]

**ಮೂಲಂಗಿ**, ಮುಲ್ಲಂಗಿ. ಮೂಲಗೆ (ನಾ). ತರಕಾರಿಯಾಗಿ ಬಳಸುವ ಒಂದು ಬಗೆಯ ಗೆಡ್ಡೆ : "ಮೂಲಕಂ ಮೂಲಂಗಿ" (ನಾಕರಾ: ೧೦೨) ; ಹದದ ನೆಲದ ಮೂಲಂಗಿಯ ಕೀಳ್ವಂತೆಯುದಜಿ ಕೊಂಬನು ಕಿಳ್ತುಕೊಂಡು (ನೇಮಿಚಂ. ೦೬-೦೦೬) ; ಚಕ್ರವರ್ತದ ಸೊಪ್ಪು, ಮೂಲಂಗಿ, ಮಜ್ಜಿಗೆ . . . ಇವು ಪಥ್ಯವರ್ಗ (ವೈದ್ಯಶಾ. I. ೪೦೨) ; ಮೂಲಂಗಿಯಲ್ಲಿ ಎರಡು ವಿಧಗಳಿವೆ. ಬಿಳಿಯದು ಉದ್ದವಾಗಿರುತ್ತದೆ. ಕೆಂಪುಬಣ್ಣದ್ದು ದುಂಡಾಗಿರುವುದು (ತರಶ. ೩೦). **ಮುಲ್ಲಂಗಿ** : "ಮೂಲಕವೆಂಬ ಶಾಕ ಮುಲ್ಲಂಗಿಯೆನಿಸಿರ್ಕುಂ" (ಮಂಗರಾ. ೨೯-೩) ; ಮುಲ್ಲಂಗಿ, ಗಜ್ಜರಿಗಳಂಥ ಗಡ್ಡೆಗಳಲ್ಲದೆ ಇತರ ವನಸ್ಪತಿಗಳ ಬೇರುಗಳೂ ಕೂಡ ಇಲ್ಲಿ ಸಮಾವೇಶವಾಗುತ್ತವೆ (ಶ್ರಾವಣ. ೨೦೩-೨೨). **ಮೂಲಗೆ** : "ಮೂಲಕಾಯೆಂಬುದು ಮೂಲಗೆ (ಮೂಲಂಗಿಗೆಡ್ಡೆ)" (ಹಲಾಯು. ೨೬-೧೧) ; ಸವನಾಗಿ ನುಗ್ಗಿ ಬಜೆ ಸಾಸಿವೆ ಮೂಲಗೆ ಕರಿಯ ಬಸ್ಸಿ ಎಂಬಿವಿನಿತಜಿ ಬೀಜವನಾವ ತಕ್ರದಿಂದರೆದು ವಿಲೇಪಂಗೆಯ್ಯೆ ಕಳೆಗುಮವು ಗಂಟುಗಳಂ (ಲೋಕೋಪ. ೯-೦೨೬).

[ದೇ.॥ ತಮಿ. ಮಲ. ಮುಳ್ಳಂಗಿ ; ತುಳು. ಮುಲ್ಲಂಗಿ, ಮೂಲಂಗಿ, ಮೂಲೆಂಗಿ ; ತೆಲು. ಮುಲ್ಲಂಗಿ. / ಸಂ. ಮೂಲಕ]

**ಮೂಲಕ₁** (ನಾ). = ಮೂಲಂಗಿ : "ಮೂಲಕವೆಂಬ ಶಾಕ ಮುಲ್ಲಂಗಿಯೆನಿಸಿರ್ಕುಂ" (ಮಂಗರಾ. ೨೯-೩) ; "ಮೂಲಗೆ (ಮೂಲಂಗಿ. ಮುಲ್ಲಂಗಿ) =ಮೂಲಕ" (ಶಬ್ದಕೋ. ೩೬). [P ಸಂಸ್ಕೃತಕೋಶಗಳಲ್ಲಿರುವ 'ಮೂಲಕ' ಶಬ್ದವು ದೇಶೀಯಮೂಲದ್ದಾಗಿರಬಹುದು]

**ಮೂಲಕ₂** (ಅ). ಮುಖಾಂತರ : ದ್ವಾರಾ : ಆ ಸಂಶೋಧನೆಗಳನ್ನು . . . ಹಲವಾರು ಲೇಖನಗಳ ಮೂಲಕ ಪ್ರಕಟಿಸಿದನು (ಸಸ್ಯಕ. ೭೦) ; ಆ ಕಾರ್ಯ ಮಾನವರ ಮೂಲಕವೇ ಆಗಬೇಕು ಎಂಬುದಕ್ಕೆ ಕಾರಣವೇನು ? (ಜೆತಂಬಾ. ೮). [< ಸಂ. ಮೂಲ]

**ಮೂಲಕಂದ** (ನಾ). ಒಂದು ಬಗೆಯ ಸಸ್ಯ : "ಕಂದಲತಾ — ಮೂಲಕಂದ, ನೆಲಗುಂಬಳ" (ಓಷಧಿ. ೨೩). [ಸಂ.]

**ಮೂಲಕೃತಿ** (ನಾ). = ಮೂಲ ೭ : ಒಂದು ಪಾಠಪರಂಪರೆಯ ಭಿನ್ನಶಾಖೆಗಳ ನಡುವೆಯಾಗಲೀ ಅಥವಾ ಮೂಲಕೃತಿಗೂ ಲಭ್ಯಕೃತಿಗಳಿಗೂ ಮಧ್ಯೆಯಾಗಲೀ ಎಷ್ಟು ಬಾರಿ ಪಾಠಲೇಖನಗಳು ಜರುಗಿರಬಹುದು ಎಂಬುದನ್ನು ಎಲ್ಲ ಸಲವೂ ಹೇಳುವುದು ಸಾಧ್ಯವಿಲ್ಲ (ಭಾರತ. ೬೩). [ಸಂ.]

**ಮೂಲಗಂಟು** (ನಾ). ವ್ಯಾಪಾರ ಅಥವಾ ಉದ್ಯೋಗಕ್ಕಾಗಿ ಹೂಡಿದ ಹಣ : ಬಂಡವಾಳ : ಅಸಲು : (೪). [ಮೂಲ + ಗಂಟು]

**ಮೂಲಗಾರ** (ನಾ). ಜಮೀನಿನ ಪ್ರಾರಂಭದ ಒಡೆಯ,-ಮಾಲೀಕ : ಹೈಗನಾಡಿನೊಳಗಿನ ಭೂಮಿಯು ಪ್ರಜೆಗಳ ಆಸ್ತಿಯೆಂದೆಣಿಸಲ್ಪಡುತ್ತದೆ. ಭೂಮಿಯ ಬಾಧ್ಯಸ್ಥರೆಲ್ಲರು ಬಹುಶಃ ಬ್ರಾಹ್ಮಣರೇ. ಅವರಿಗೆ ವಾಡಿಕೆಯಾಗಿ ಮೂಲಗಾರರೆಂದೆನ್ನುವರು (ಮುಂಬಯಿಗ. ೩-೨೦೪) ; ಏಕಾಕಿಯಾದ ಒಬ್ಬ ಮೂಲಗಾರನು ಅನುಭವಿಸಿದಂತಾ ಒಂದು ವತನಿನ ಪರಾಧೀನವು ಆತನ ಮರಣದ ತರುವಾಯ ಅವನ ವಾರಿಸ್ದಾರನ ಅಭ್ಯಂತರಿಸಬಹುದು (ಶಾಶ್ವ.ಪಿ. ೪೪೬). [ ಮೂಲ + — ಗಾರ (< —ಕಾಜ) ]

**ಮೂಲಗಿಸು** (ಕ್ರಿ). ಕುಂಯ್ ಎಂದು ಸಣ್ಣದನಿಯಲ್ಲಿ ಶಬ್ದಮಾಡು ; ಕುಂಯಿಗುಡು : ತನ್ನ ಹೆಣ್ಣು ಗಂಡು ಶುನಕಪರಿವಾರ ಸಮೇತನಾಗಿ ಹುಲಿಯ ಅವನನ್ನು ಎದುರುಗೊಂಡಿತು. ಆದರೆ ಎಷ್ಟು ಬಾಲ ಅಳ್ಳಾಡಿಸಿದರೂ ಮೂಲಗಿಸಿದರೂ ಯಜಮಾನನಿಂದ ಯಾವ ವಿಶ್ವಾಸದ ಅಥವಾ ಮುದ್ದಿನ ಸೂಚನೆಯೂ ಹೊರಹೊಮ್ಮಲಿಲ್ಲ (ಮಳೆಮ. ೦೬೮).

[ಮೂಲಗು (< ಮುಲುಕು₁) + — ಇಸು₃]

**ಮೂಲಗು** 'ಮುಲುಕು₁' ನೋ.

**ಮೂಲಗುಂಡರ** (ನಾ). ಒಬ್ಬಾತನ ಹೆಸರು : ಮೂಲಗುಣ್ಡರರ ಮಗಪುನ್ (ಪ್ರಾಏ. ೦೯೩೬. ೦೯೬-೮ ; ೪ನೆಯ ೫೩). [ ? ]

**ಮೂಲಗುಣ** (ನಾ). ೧. ಪ್ರಾರಂಭದಿಂದ ಇರುವ ಗುಣ : ಮೊದಲಿನಿಂದ ಇರುವ ಸ್ವಭಾವ. ೨. [ಜೈನ] ಮುನಿಗಳು ಆಚರಿಸಬೇಕಾದ ಇಪ್ಪತ್ತೆಂಟು ಬಗೆಯ ಆಚರಣೆಗಳು : ಇಪ್ಪತ್ತೆಂಟು ಮೂಲಗುಣಂಗಳೊಳಮುತ್ತರಗುಣಂಗಳೊಳಮುತ್ತರೋತ್ತರಂ ನೆಗಟ್ದು (ಅಂಶು. ೬-೨೮ ವ) ; ಮೂಲಗುಣಮಾದಿ ಸಕಲಗುಣಾಳಿಯೊಳಂ ಕಿಡದೆ (ಧರ್ಮಪ. ೩-೮೬). [ಸಂ.]

**ಮೂಲಗುತ್ತಿಗೆ** (ನಾ). ಮೊದಲಿನಿಂದ ಪಡೆದಿರುವ ಗುತ್ತಗೆ : ನಾವು ಹಾರಿಕೆಯ ಬೊಮ್ಮಣ್ಣಹೆಗ್ಗಡೆಯಿಂದ ಮೂಲಗುತ್ತಿಗೆಯ . . . ಮಾಡಿದ ಅಗ್ರಹಾರದ ಮಹಾಜನಂಗಳ ವಿವರ (ಎಕ. VI, ಶೃಂಗೇರಿ. ೩೩-೨೪ ; 1417).

[ಮೂಲ + ಗುತ್ತಿಗೆ (< ಗುತ್ತಗೆ)]

**ಮೂಲಗೆ** 'ಮೂಲಂಗಿ' ನೋ.

**ಮೂಲಗೇಣಿ** (ನಾ). = ಮೂಲಗುತ್ತಿಗೆ : ಸೆಟ್ರು ಅವನಿಗೆ ಮೂಲಗೇಣಿಗೆ ಮಾರಿ ತಿನ್ನುವ ಅಧಿಕಾರವಿರುವ ಶರ್ತದ ಮೂಲಗೇಣಿಗೆ ಒಂದು ಏಕ್ರೆಯಷ್ಟು ಸ್ಥಳವನ್ನು ಕೊಟ್ಟರು (೭ಧ್ಯ.ಉ. ೩೧).

[ಮೂಲ + ಗೇಣಿ (< ಕೇಣ್₃)./ತುಳು. ಮೂಲಗೇಣಿ]

**ಮೂಲಗ್ರಂಥ** (ನಾ). ಆಧಾರಗ್ರಂಥ ; ಆಕರಗ್ರಂಥ : ಅನ್ನೆಗಮುವ್ಯಕ್ತಕಾಲದೊಳೋದಿ ಮಜಿದ ವಿಷಮುಶಾಸ್ತ್ರದ ಮೂಲಗ್ರಂಥಕ್ಕೆ ವಿವರಣೆ ಬರ್ಪವೊಲಿರದವಧಿವಿಬೋಧದೆ ಬರೆ ಮನಕ್ಕೆ ಬಗೆಯೊಳ್ ಕಂಡಂ (ಶಾಂತಿಪು. ೭-೦೮ ವ) ; ಪರಂಪರಾಗತವಾಗಿ ಬಂದಿರುವ ಲಭ್ಯ ಹಸ್ತಪ್ರತಿಗಳ ಆಧಾರದಿಂದ ಮೂಲಗ್ರಂಥದ ಎಂದರೆ ಕವಿಯ ಸ್ವಹಸ್ತಾಕ್ಷರಪ್ರತಿಯ ಸ್ವರೂಪ ವೇನಿರಬಹುದೆಂಬುದನ್ನು ನಿರ್ಣಯಿಸಿ ಪರಿಷ್ಕಾರ ಮಾಡುವ ಕೆಲಸ ಗ್ರಂಥ ಸಂಪಾದನೆ (ಭಾರತ. vii, ಮುನ್ನುಡಿ). [ಸಂ.]

**ಮೂಲಚ್ಛೇದ** (ನಾ). ೧. (ಮರದ) ಬುಡವನ್ನು ಕತ್ತರಿಸುವುದು. ೨. (ಅಲಂ) ಪೂರ್ಣವಾಗಿ ನಾಶಮಾಡುವುದು : ಇವರ ಬಲುಹಂತಿರಲಿ ಸಾಕಿನ್ನವರ ಕರೆಸು ವಿರೋಧಬಂಧವ್ಯಪಹೃತಿಗೆ ಫಲವಿಲ್ಲ ಮೂಲಚ್ಛೇದ ಕರ್ಮವಿದು (ಕುಮಾ.ಅ. ೦೬-೦೮). [ಸಂ.]

**ಮೂಲಣ್ಣ** (ನಾ). ಒಬ್ಬಾತನ ಹೆಸರು : ಜೋಕಣ್ಣಂ ಮೂಲಣ್ಣಂ× ×ನ್ ಅಭ್ಯಸ್ತರ ಸಿದ್ದಿ ಪಜೆದರ್ (ಎಕ. VIII, ಸೊರಬ. ೩೦೦-೮ ; 958).

[ಮೂಲ? + ಅಣ್ಣ₂]

**ಮೂಲತಃ** (ಅ). ಮೊದಲಿನಲ್ಲಿ ; ಪ್ರಾರಂಭದಲ್ಲಿ : ಸಹಜವಾಗಿ ಅವರು (ದ್ರಾವಿಡರು) ಮೂಲತಃ ಆಡುತ್ತಿದ್ದ ಭಾಷೆಯು ಭಾರತಕ್ಕೆ ಬರುವ ಮುನ್ನ ಇದ್ದ ಪ್ರದೇಶದ ಇತರ ಪ್ರದೇಶಗಳೊಡನೆ ಕೆಲವು ರೂಪಸಾಮ್ಯಗಳನ್ನು ಪಡೆದಿದ್ದಿರಲೇಬೇಕು (ದ್ರಾವಿಭಾ. ೩೦). [ಸಂ. ಮೂಲತಸ್]

**ಮೂಲತತ್ತ್ವ** (ನಾ). ಆಧಾರಭೂತವಾದ ತತ್ತ್ವ ; ಮುಖ್ಯ ತತ್ತ್ವ : ಪತಿ – ಪಶು – ಪಾಶಗಳೆಂಬ ತತ್ತ್ವತ್ರಯಗಳೇ (ತ್ರಿಪದಾರ್ಥಗಳೇ) ಶೈವಾಗಮದ ಮೂಲತತ್ತ್ವಗಳು (ಭಾರತ. ೬೩) ; ಸತ್ಯ, ಪ್ರೇಮ, ತ್ಯಾಗ, ಅಹಿಂಸೆ . . . ದಯೆ, ಮಮತೆ ಇವೇ ಮಾನವಧರ್ಮದ ಮೂಲತತ್ತ್ವಗಳು (ಧರ್ಮಸಾ. ೩). [ಸಂ.]

**ಮೂಲತ್ರಿಕೋಣ** (ನಾ). [ಜ್ಯೋತಿ] ಸೂರ್ಯ ಮೊದಲಾದ ಗ್ರಹಗಳ ರಾಶಿರೂಪವಾದ ಗೃಹ ; ರವಿಗೆ ಸಿಂಹ, ಚಂದ್ರನಿಗೆ ವೃಷಭ, ಕುಜನಿಗೆ ಮೇಷ, ಬುಧನಿಗೆ ಕನ್ಯಾ, ಗುರುವಿಗೆ ಧನುಸ್ಸು, ಶುಕ್ರನಿಗೆ ತುಲಾ ಮತ್ತು ಶನಿಗೆ ಕುಂಭ – ಇವು ಮೂಲ ತ್ರಿಕೋಣಗಳು : ದಿನಪಾದಿಗಳುಚ್ಚಕೇಟಿನೆಯ ಗೃಹಂ ನೀಚಮುವರ್ಗೆ ಹರಿ ವೃಷಮಜಮಂಗನೆ ಧನು ತೊಲೆ ಕುಂಭಮಿವಿಂತಿನಿತುಂ ಮೂಲತ್ರಿಕೋಣಮಕ್ಕುಂ ಕ್ರಮದಿಂ (ಜಾತಕ. ೧-೪೨) ; ಸೂರ್ಯಾದಿಗ್ರಹಗಳ ಉಚ್ಚರಾಶಿಗೆ ಏಳನೆಯದು ಆಯಾ

ಗ್ರಹಗಳಿಗೆ ನೀಚರಾಶಿ. ಸಿಂಹ ವೃಷಭ ಮೇಷ ಕನ್ಯಾ ಧನುಸ್ಸು ತುಲಾ ಕುಂಭ ಇವು ಕ್ರಮವಾಗಿ ಸೂರ್ಯಾದಿಗ್ರಹಗಳಿಗೆ ಮೂಲತ್ರಿಕೋಣರಾಶಿಗಳು (ಜಾತಕ. ೧-೪೨. ೮೩೬). [ಸಂ.]

**ಮೂಲದಂಡಿಗೆ** (ನಾ). ಹಿಂದೆ ಶಾಲೆಗಳಲ್ಲಿ ವಿದ್ಯಾರ್ಥಿಗಳನ್ನು ಶಿಕ್ಷಿಸಲು ಉಪಯೋಗಿಸುತ್ತಿದ್ದ ಒಂದು ಬಗೆಯ ಸಾಧನ ; ಕೋದಂಡ : ತೂಗುದಂಡಿಗೆ (ಉಕ) : ತಪ್ಪುಮಾಡಿದ ವಿದ್ಯಾರ್ಥಿಯನ್ನು ಶಿಕ್ಷಕರು ಚೆನ್ನಾಗಿ ದಂಡಿಸುತ್ತಿದ್ದರು. ಮೂಲದಂಡಿಗೆ ಹಾಕಿ ಜೋತುಬಿಡುತ್ತಿದ್ದರು (ರಂಗರೂಾ. ೦೨೯). [ಮೂಲ, + ದಂಡಿಗೆ]

**ಮೂಲದಳ** (ನಾ). ಮುಖ್ಯಸೈನ್ಯ ; ಮೊಸಲುಪಡೆ : ಕೋವಿದೆಯರೆಯ್ದಿಂದರುತ್ಸವದಿಂದಲಾ ಪರವೆಯೊಡನೆ ಪಂಚಾಯುಧನ ಮೂಲದಳ ವಾಡಿದಂತೆ (ಸೌಂದಕ. ೬-೩೩). 'ಮೂಲಬಲ' ಪರಾ. [ಸಂ. ಮೂಲದಲ]

**ಮೂಲದೇವರು** (ನಾ). ೧. ಯಾವುದಾದರೊಂದು ಮನೆತನಕ್ಕೆ ಆರಂಭದಿಂದಲೂ ಇರುವ ಅಭಿಮಾನಿದೇವತೆ : ಗೌಡಸಾರಸ್ವತರ . . . ಮೂಲದೇವರುಗಳು ಸ್ಮಾರ್ತಸಂಪ್ರದಾಯದ ದೇವತೆಗಳು (ತುಳುನಾ. ೧೬೦). ೨. ದೇವಸ್ಥಾನದಲ್ಲಿ ಅನೂಚಾನವಾಗಿ ಪೂಜಿಸುವ ದೇವರ ವಿಗ್ರಹ : ಈ ದೇವಾಲಯದ ಮೂಲದೇವರ ವಿಗ್ರಹ ತುಂಬ ಸುಂದರವಾಗಿದೆ (ರೂಢಿ). [ಮೂಲ+ದೇವರು (<ದೇವರ್)]

**ಮೂಲದ್ರವ್ಯ** (ನಾ). ೧. ವ್ಯಾಪಾರ ಮುಂತಾದುವಕ್ಕೆ ಮೊದಲಬಾರಿ ಹೂಡುವ ಹಣ ; ಬಂಡವಾಳ : ಸಂಪತ್ತಿಯನ್ನು ಹುಟ್ಟಿಸಲಿಕ್ಕೆ ಏನಾದರೂ ಮೂಲದ್ರವ್ಯ ಬೇಕು (ಮುಂಬಯಿ. ೩-೩೦). ೨. ಆಧಾರವಾದ ಮೊದಲನೆಯ ವಸ್ತು ; ಮೂಲವಸ್ತು : 'ಪಿಚ್‌ಬ್ಲೆಂಡ್' ಎಂಬ ಖನಿಜದಲ್ಲಿ ದೊರೆಯುವ ಒಂದು ಸ್ವಪ್ರಕಾಶ ಮೂಲದ್ರವ್ಯ (Actinium. ಇಂಕೊ). [ಸಂ.]

**ಮೂಲದ್ರಾವಿಡ** (ನಾ). ದ್ರಾವಿಡಭಾಷೆಗಳಿಗೆ ಮೂಲವಾಗಿ ಇದ್ದಿರಬಹುದಾದ ಪ್ರಾಚೀನ ಭಾಷಾರೂಪ ; ಪೂರ್ವದ್ರಾವಿಡ : ಮೂಲದ್ರಾವಿಡಭಾಷೆಯು ಕವಲೊಡೆದು ಅವುಗಳಲ್ಲಿ ಒಂದು ಕವಲು ಕನ್ನಡವೆಂಬ ಸ್ವತಂತ್ರಭಾಷೆಯಾಯಿತು (ಕೈಪಿಡಿ. ೪೦೯) ; ಮೂಲದ್ರಾವಿಡಭಾಷೆಯಲ್ಲಿ 'ಬ' ಈ ಧ್ವನಿಯಿತ್ತೆಂಬುದರಲ್ಲಿ ಸಂದೇಹವಿಲ್ಲ (ಸೋಸಂಶಿ. ೯). [ಸಂ.]

**ಮೂಲಧನ** (ನಾ). = ಮೂಲದ್ರವ್ಯ ೧ : ಲೀಲೆಯಿಂ ಲಿಂಗಕ್ಕೆ . . . ಚಂದನಮನರ್ಪಿಸುತಿರಲು ತನ್ನ ಮೂಲಧನವೇಸುಂಟದಲ್ಲವನೋಳಿಯಲಿ ಚಂದನಕೆ ಸವೆಯಲು (ಬಸವು. ೬-೧) ; ಮೊದಲಿನದು ಕಾರ್ಖಾನೆಯ ಕಟ್ಟಡ, ಯಂತ್ರ, ಉಪಕರಣಗಳಿಗೆ ಬೇಕಾಗುವ ಮೂಲಧನ (ಪಾಂಶ್ರ. I, ೯೬೪). [ಸಂ.]

**ಮೂಲಧಾತು** (ನಾ). ೧. ಕೀವು ; ಲಸಿಕೆ. ೨. [ವಿಜ್ಞಾ] ರಾಸಾಯನಿಕವಾಗಿ ವಿಭಜಿಸಲು ಅಸಾಧ್ಯವಾದ ಘಟಕ,—ದ್ರವ್ಯ : ಅಣುಬಾಂಬಿನಲ್ಲಿ ಯುರೇನಿಯಮ್ ಎಂಬ ಮೂಲಧಾತುವಿನ ಪರಮಾಣುವಿನ ಒಡೆಯುವಿಕೆಯಿಂದ ದೊರೆಯುವ ಸ್ಫೋಟನಶಕ್ತಿಯು ಅಡಕವಾಗಿದೆ (ವಿಜ್ಞಾಪಿ. ೮೩೬). [ಸಂ.]

**ಮೂಲನಕ್ಷತ್ರ** (ನಾ). [ಜ್ಯೋತಿ] ಒಂದು ನಕ್ಷತ್ರದ ಹೆಸರು : ಸಿತಪಕ್ಷದ ಪಂಚಮಿದಿನಪತಿವಾರಂ ಶುಭದ ಮೂಲನಕ್ಷತ್ರಮೊಳನ್ವಿತಮಾಗೆ ನೆಗಟ್ದುದೀ ಮತ್ಕೃತಿ ಜಗದೊಳ್ (ಅದಿಪು. ೦೬-೬೬) ; ದಿನದೊಳುತ್ಪನ್ನನಾದಂ ಮೂಲನಕ್ಷತ್ರದಿಂದರಿಪ್ಪಾಂಶದೊಳ್ ಸುಕುಮಾರನು (ಕೈಪಿಡಿ. ೨೬-೦೯). [ಸಂ.]

**ಮೂಲನಿವಾಸಿ** (ನಾ). ಒಂದು ಪ್ರದೇಶದಲ್ಲಿ ಬೇರೆ ಪ್ರದೇಶದ ಜನರು ಬಂದು ನೆಲಸುವುದಕ್ಕಿಂತ ಮೊದಲೇ ಅಲ್ಲಿದ್ದಿರಬಹುದಾದ ಜನಾಂಗ ಮತ್ತು ಆ ಜನಾಂಗಕ್ಕೆ ಸೇರಿದವನು ; ಆದಿವಾಸಿ : ಮೂಲನಿವಾಸಿಗಳಲ್ಲಿ ಒಬ್ಬನನ್ನು ಕುರಿತು ಬರೆದಿಟ್ಟ ಸಂಗತಿ (ಮುಂಬಯಿ. ೯-೦೦೬) ; ದ್ರಾವಿಡರೂ ಕೂಡ ಭಾರತದ ಮೂಲನಿವಾಸಿಗಳಲ್ಲ (ದ್ರಾಶಿಪಿ. ೨೬). [ಸಂ. ಮೂಲನಿವಾಸಿನ್]

**ಮೂಲಪತ್ರ** (ನಾ). (ನಕಲು ಪ್ರತಿಗಳಿಗೆ ಆಧಾರವಾದ) ಮೊದಲನೆಯ ಪ್ರತಿ ; ಪಡಿಪತ್ರವಲ್ಲದ ಅಸಲುಪತ್ರ : ನಡೆ ನಿನ್ನ ಮೂಲಪತ್ರವನೆನಗೆ ತೋರು (ಜಂಬಿರ. ೬-೯೬) ; ವಚನದೊಡೇನಾಯ್ತು ಪತ್ರವನೆಮ್ಮ ಸತಿ ಮುನ್ನಲಚಿದಿರ್ದು ಮೂಲಪತ್ರಗಳನು ಪೂಜಿಗಣ ಶಿವಭವನದೆ ವೈತಿಟ್ಟಳೆಂದಚಪೆ (ಶ್ರೀಖಂ. ೦೦-೦೯). [ಸಂ.]

**ಮೂಲಪಾಠ** (ನಾ). ಕವಿಯೇ ರಚನೆಮಾಡಿದ ಕೃತಿಯ ಲಿಖಿತಭಾಗ ; ಗ್ರಂಥದ ಪ್ರತಿಗಳಲ್ಲಿ ದೊರಕುವ ಅತಿ ಪ್ರಾಚೀನವಾದ ಪಾಠ : ಕೆಲವು ಸಂದರ್ಭಗಳಲ್ಲಿ ಕವಿಯ ಮೂಲಪಾಠವೇನಿರಬಹುದೆಂಬುದನ್ನು ಊಹಿಸುವುದಕ್ಕೆ ಆಗದಂತೆ ಇರುತ್ತದೆ (ಕನ್ನಸಂ. ೨೨೬). [ಸಂ.]

**ಮೂಲಪುರುಷ** (ನಾ). (ವಂಶ ಅಥವಾ ಕುಲದ) ಮೊದಲನೆಯ ವ್ಯಕ್ತಿ ; ಮೊದಲಿಗ : ಸಂತತಿಯಿಲ್ಲದ ಕುಲಗಳ ಸಂಪತ್ತುಗಳು ಮೂಲಪುರುಷರ ಅವಸಾನದಲ್ಲಿ ಅನ್ಯರನ್ನು ಸೇರುವುವು (ಪಾಕಿಂಚ. ೯೬-೩೭) ; ಕಳಲೆಯ ವಂಶಕ್ಕೆ ಇವನೇ ಮೂಲಪುರುಷನಾದನು (ಸಕನ್ನ. V. ಕೃಷ್ಣಾಪಟ). [ಸಂ.]

**ಮೂಲಪ್ರಕೃತಿ** (ನಾ). [ವೇದಾಂತ] ಜಗತ್ತಿನ ಸೃಷ್ಟಿಕಾರ್ಯಕ್ಕೆ ಮೂಲಕಾರಣವಾದ (ತ್ರಿಗುಣಾತ್ಮಕವಾದ) ಪ್ರಕೃತಿ : ಒಂದಕ್ಕೊಂದು ಹೆಚ್ಚು ಕಡಮೆಯಾಗದಂತೆ ಸಮಾನವಾದ ಸತ್ತ್ವರಜಸ್ತಮಸ್ಸೆಂಬ ಮೂರುಗುಣಗಳುಳ್ಳ ದ್ರವ್ಯವು ಮೂಲಪ್ರಕೃತಿಯೆನಿಸಿಕೊಳ್ಳುವುದು (ತತ್ತ್ವಕಂ. ೬) ; ಪ್ರಕೃತಿಯಲ್ಲಿ ವಿಶ್ರಾಂತಿಯಾದರೆ ಅದೇ ಮೂಲಪ್ರಕೃತಿ (ಹಿಂದಶಾ. ೫೭). [ಸಂ.]

**ಮೂಲಪ್ರತಿ** (ನಾ). ೧. ಕವಿಯು ಬರೆದ ಸ್ವಹಸ್ತಾಕ್ಷರ ಪ್ರತಿ. ೨. ನಕಲಿಗೆ ಆಧಾರವಾದ ಪ್ರತಿ ; ಅಸಲುಪ್ರತಿ - ಮಾತೃಕೆ : ಕಳಲೆ ರಂಗಸ್ವಾಮಿಅಯ್ಯಂಗಾರ್ಯರ ಮೂಲಪ್ರತಿಯಿಂದ ಈ ಗ್ರಂಥವು ಬರೆಯಲ್ಪಟ್ಟಿದೆ (ಸಕನ್ನ. V. ಕೃಷ್ಣಾಪಟ) ; ಈ ತಪ್ಪುಗಳಿಂದಾಗಿ ಮೂಲಪ್ರತಿಯ ಪಾಠ ನಕಲಿನಲ್ಲಿ ಹಲವು ಕಡೆ ಕೆಟ್ಟುಹೋಗುತ್ತದೆ (ಕನ್ನಸಂ. ೬೬). [ಸಂ.]

**ಮೂಲಬಂಧ** (ನಾ). [ಯೋಗ] ಹಠಯೋಗದ ಮೂಲಬಂಧ, ಉಡ್ಯಾಣಬಂಧ ಮತ್ತು ಜಾಲಂಧರಬಂಧ ಎಂಬ ಮೂರು ಬಂಧಗಳಲ್ಲಿ ಒಂದು : ಅನಿಲ ನಿರೋಧನದಿಂದಾಧಾರವಾದಪಾನ ದಿನಪತಿಯನು ಹೃದಯದ ಶಶಿಯೆನಿಪ ಪ್ರಾಣದೊಡನೆ ಕೂಡಿ ನಡುನಾಡಿಗನುಗೂಡಲದೆ ಮೂಲಬಂಧವು (ಕೈವಲ್ಯ. ೫-೦೫-೧) ; ಮೂಲಬಂಧ ಉಡ್ಯಾಣಬಂಧ ಜಾಲಂಧರಬಂಧವೆಂಬ ಬಂಧತ್ರಯಂಗಳುಂ (ಪಿವೇಕ. ೦೪೬). [ಸಂ.]

**ಮೂಲಬಲ** (ನಾ). ಯಾವುದಾದರೂ ತುರ್ತು ಸಂದರ್ಭಗಳಿಗಾಗಿ ಸದಾ ಸಜ್ಜುಗೊಳಿಸಿರುವ ಸೈನ್ಯ ; ಮೊಸಲುಪಡೆ ; ಮುಖ್ಯಸೈನ್ಯ : ಮೂಲಬಲವಿಲ್ಲದ ತುಟಿಲಸದನಂತೆ ಬಿಲ್ಲೊಳ್ಗೊಟ್ಟನಾಗಿ (ಶಾಂತಿಪು. ೯-೩೦ ಪ) ; ಕಾಳರಕ್ಕಸನ ಕವಿದು ಹಳಚಲು ಮೂಲಬಲ ಮುನ್ನೂಱು ಪದ್ಮವ ಭಾಳಲೋಚನನಂತೆ ಲಯಿಸಿದನಂದು ರಘುರಾಯ (ತೊಕಾ. ೬೬ ಕಲ್ಪ೬) ; ರಾವಣನ ಮೂಲಬಲ ಕಂಡು ಕಪಿಸೇನೆ ಆವಾಗಲೆ ಬೆದರಿ ಓಡಿದವು (ಪುರಂದ. ೯-೦೯೯-೦). [ಸಂ.]

**ಮೂಲಬೇರ** (ನಾ). ದೇವಸ್ಥಾನದ ಗರ್ಭಗುಡಿಯಲ್ಲಿ ಶಾಸ್ತ್ರೋಕ್ತವಾಗಿ ಪ್ರತಿಷ್ಠೆ ಮಾಡಿರುವ ಮೊದಲ ದೇವವಿಗ್ರಹ ; ಮೂಲಪ್ರತಿಮೆ : ಇದರ ಮಧ್ಯದಲ್ಲಿ ಪಿಂಡಿಕೆಯನ್ನಿಟ್ಟು ಅದರ ಮೇಲೆ ಪ್ರಭಾವಳಿ,

ಲತಾತೋರಣ, ಕೀರ್ತಿಮುಖಿಗಳ ಮಧ್ಯೆ ಮೂಲಬೇರವನ್ನು ಸ್ಥಾಪಿಸಿರುವರು (ಹೊಯ್ಸಳ ವಾ. ೦೯). [ಮೂಲ+ಬೇರ್ತ್. / ತಮಿ. ಮೂಲಪೇರವ್]

**ಮೂಲಭದ್ರಿಕೆ** (ನಾ). ಮೂಲಮಂತ್ರಾಕ್ಷರ ಮತ್ತು ಅವುಗಳನ್ನು ಒಳಗೊಂಡ ತಾಯಿತಿ : "ಷಮಹಕ್ಷರಳಮಿಮ ಕ್ರಮದಿಂದ ಪಲ್ಲಟಿಸೆ ಮೂಲಭದ್ರಿಕೆಯಕ್ಕು" (ಮಂಗರಾ. ೦೦೩-೫). [ಸಂ.]

**ಮೂಲಭಾಷೆ** (ನಾ). ಯಾವುದೇ ಭಾಷೆಯ ಮೂಲಸ್ವರೂಪವನ್ನು ಹೊಂದಿರುವ ಭಾಷೆ ; ಅತಿ ಪ್ರಾಚೀನ ರೂಪದ ಭಾಷೆ : ಕನ್ನಡ ತೆಲುಗು ತಮಿಳು . . . ಬಡಗ ಮೊದಲಾದ ಭಾಷೆಗಳಿಗೆ ಪರಸ್ಪರ ಇರುವ ಹೋಲಿಕೆಯನ್ನು ನೋಡಿದರೆ ಈ ಭಾಷೆಗಳೆಲ್ಲವೂ ಒಂದೇ ಮೂಲಭಾಷೆಯಿಂದ ಹುಟ್ಟಿರಬೇಕೆಂದು ಗೊತ್ತಾಗುತ್ತದೆ (ಕೃಬಿತ. ೪೦೩) ; ಇದೇ ಕುಲಕ್ಕೆ ಆಧುನಿಕಕಾಲದಲ್ಲಿ ಇಂಗ್ಲೀಷ್ . . . ಗುಜರಾತಿ ಭಾಷೆಗಳು ಸೇರುತ್ತವೆ. ಇವುಗಳನ್ನು ಮೂಲಭಾಷೆಗಳೆಂದು ಕರೆಯಬಹುದು (ಭಾರಠ. ೯೫೬). [ಸಂ. ಮೂಲಭಾಷಾ]

**ಮೂಲಭೂತ** (ಗು). ಪ್ರಧಾನವಾದ ; ಮೊತ್ತಮೊದಲಿನ : ಜನತೆಯ ಮೂಲಭೂತ ಹಕ್ಕುಗಳಿಗಾಗಿ . . . ಹೊಡೆದಾಡಿದ ಆ ನಾಯಕರಿಗೆ ತಾವು ಎಷ್ಟು ಋಣಿಗಳೋ ಮುಂದಿನ ಪೀಳಿಗೆಯವರು ತಿಳಿದುಕೊಳ್ಳುವುದು ಒಳ್ಳೆಯದು (ಸಂಗೀತ. ಅಹುಬ). [ಸಂ.]

**ಮೂಲಮಂತ್ರ** (ನಾ). ೧. 'ಓಂ' ಎಂಬ ಮಂತ್ರಾಕ್ಷರ ; ಪ್ರಣವ. ೨. ಬೇರೆ ಬೇರೆ ದರ್ಶನಗಳ ಬೆಳವಣಿಗೆಗೆ ಆಧಾರವಾದ ವೇದಮಂತ್ರ. ೩. ಮುಖ್ಯವಾದ ಮಂತ್ರ ; ಪ್ರಧಾನವಾದ ಮಂತ್ರ : ಹರನ ದಾನಾಭಯಕರಂಗಳ ಪರಿಯೊಳತಿದಾನಾಭಯಪ್ರದಭರಿತಮಾಗಿಯು ಮೂಲಮಂತ್ರಂಗಳ ವಿಭಾತಿಯಲಿ (ಬಸಪು. ೩೯-೯೫); ವರಮೂಲಮಂತ್ರವನು ಗುರುವು ಬೋಧಿಸಲಾಗ ಹರುಷದಿಂ ಶಿಷ್ಯಂಗೆ ಜ್ಞಾನ ಪಲ್ಲವಿಸಲ್ಕೆ (ತ್ರಿಶಂಶ. ೬-). [ಸಂ.]

**ಮೂಲಮಾನ** (ನಾ). ಮುಖ್ಯವಾದ ಅಳತೆಗೋಲು : ಆದರ್ಶಗಳನ್ನು, ಅವುಗಳ ಮಟ್ಟವನ್ನು ಸೂಚಿಸಬಲ್ಲ ಒಂದು ಮೂಲಮಾನ ಬೇಕು (ತಿಕ್ಷರ. ೩೨೫): ಇದನ್ನು ಮೂಲಮಾನವನ್ನಾಗಿ ಮಾಡಿಕೊಂಡು ಕವಿಗಳನ್ನು, ಕಾವ್ಯಗಳನ್ನು ಪರಿಶೀಲಿಸಲು ಹೊರಟಿರುವುದರಿಂದ ಇದು ಎಷ್ಟರ ಮಟ್ಟಿಗೆ ಆಧುನಿಕ ವಿಮರ್ಶೆಯ ವಿಧಾನವಾಗಲು ಸಾಧ್ಯ (ಸೌಂದರ. i, ಮೊದಲ ಮಾತು). [ಸಂ.]

**ಮೂಲರಸ** (ನಾ). [ಕಾವ್ಯವಿಶಾ] ನವರಸಗಳಲ್ಲಿ ಮುಖ್ಯವಾದ ರಸ : ಭರತನ ನಾಟ್ಯಶಾಸ್ತ್ರದಲ್ಲಿ (VI, ೩೯-೯೦) ಶೃಂಗಾರ, ರೌದ್ರವೀರ, ಬೀಭತ್ಸ ಇವು ನಾಲ್ಕೂ ಮೂಲರಸಗಳೆಂದೂ . . . ಹೇಳಿದೆ (ಕೃಬಿತ. ೨೦೦). [ಸಂ.]

**ಮೂಲರೋಗ** (ನಾ). ಗುದದ್ವಾರದ ರೋಗ ; ಮೊಳೆರೋಗ : ಆ ಕಷಾಯ . . . ಕೊಂಬುದು . . . ಅತಿಸಾರ, ಮೂಲರೋಗ, ಕಾಮಾಲೆ ತಿಮಿರ ಹರ (ಶಿವೈತಿ. ೦೯೬) ; . ಕೊಡಸಿನೆಲೆಯ ಗುಣ: — ಇದರಲ್ಲಿ ಊಟ ಮಾಡುವುದರಿಂದ . . . ಮೂಲರೋಗ, ಭಗಂದರರೋಗ ಇವೇ ಮುಖ್ಯವಾದವುಗಳನ್ನು ಹೋಗಲಾಡಿಸಿ . . . ಸಮಸ್ತ ತಿಮಿರಗಳನ್ನೂ ನಾಶಮಾಡುವುದು (ಸಕವೈ. ೪೯). [ಸಂ.]

**ಮೂಲವರ್ಣ** (ನಾ). ಇತರ ಬಣ್ಣಗಳಿಗೆ ಮೂಲಾಧಾರವಾದ ಬಣ್ಣ ; ಮುಖ್ಯ ಬಣ್ಣ : ಮುದ್ರಣ ಬಣ್ಣಗಳಲ್ಲಿ ಹಳದಿ, ಕೆಂಪು ಮತ್ತು ನೀಲಿ ಬಣ್ಣಗಳು ಮೂಲವರ್ಣ (primary)ಗಳು. ಈ ಮೂರನ್ನು ಸೇರಿಸಿದರೆ ಕಪ್ಪು (ಅಥವಾ ಕಂದು) ಬಣ್ಣವಾಗುತ್ತದೆ (ಮುದ್ರಕ. ೬೬). [ಸಂ.]

**ಮೂಲವಸ್ತು** (ನಾ). ೧. ಆದಿದ್ರವ್ಯರೂಪವಾದ ಪರಮಾತ್ಮತತ್ತ್ವ ; ಮೂಲತತ್ತ್ವ: ಸ್ವಯಂಭುವಳಿದು ಶೂನ್ಯವಾಯಿತ್ತು ಮೂಲವಸ್ತುವೆಂದು ಬೇಜಿಂಬೇ ತಾನಲ್ಲದೆ (ಸಿದ್ಧೇವ. ೦೮೯-೫೬೬). ೨. =ಮೂಲಧಾತು ೨: ಪ್ರತಿಯೊಂದು ಮೂಲವಸ್ತು (Element)ವೂ ಅತಿಶಾಖವೇರಿರುವಾಗ ತನ್ನ ವಿಶೇಷವಾದ ಕಿರಣಗಳನ್ನು ಬೀರುತ್ತದೆ (ಕ್ಯೋರಿರ್ಬಿ. ೦೯, ೫೨೬); ಬೇರೆ ಬೇರೆ ಮೂಲವಸ್ತು(Elements)ಗಳ ರೋಹಿತಗಳ ಪಟ್ಟಿಗಳನ್ನು ಹೋಲಿಸಿ ನೋಡಿದರೆ ಒಂದೊಂದೂ ಬೇರೆಯಾಗಿರುವುದು ಕಂಡುಬರುವುದು (ಭೌತಶಾ. ೨೦೬). [ಸಂ.]

**ಮೂಲವಿಗ್ರಹ** (ನಾ). =ಮೂಲಬೇರ : "ಅಚಲ" ಪ್ರತಿಮೆಗಳಿಗೆ "ಮೂಲವಿಗ್ರಹ"ವೆಂದೂ ಹೆಸರು (ಭಾರದ. ೦೫೨). [ಸಂ.]

**ಮೂಲವೀಸ** 'ಮೂಲೆವೀಸ' ನೋ.

**ಮೂಲವ್ಯಾಧಿ** (ನಾ). = ಮೂಲರೋಗ : "ಅರ್ಶಃ, ಗುದಕೀಲಕಃ— ಈ ೨ ಮೂಲವ್ಯಾಧಿ" (ಹಲಾಯು. ೯೯-೯೫೦) : ಪೆಡೆತಲೆ ಮಿಗೆ ನೋಗುಂ . . . ಮೂಲವ್ಯಾಧಿಯುಮಡಸುಗುಮಿಂತಿನಿತೆ ಜೂದಿನಿಂದಪ್ಪ ಫಲಂ (ಸಮುಶ. ೬-೫೦), ಎತ್ತುನಾಲಿಗೆ :— ಈ ಸೊಪ್ಪಂ ಅಕ್ಕಿಯಲ್ಲಿ ಹಿಟ್ಟುಕುಟ್ಟಿ ಸಪ್ಪೆರೊಟ್ಟಿ ತಟ್ಟಿ ತುಪ್ಪದಿಂದ ಮೆಲ್ಲಲು ಮೂಲವ್ಯಾಧಿ ಮಾಣ್ಗುಂ (ಶಿವೈತಿ. ೩). [ಸಂ.]

**ಮೂಲಶಬ್ದ** (ನಾ). [ವ್ಯಾಕ] ಪ್ರತ್ಯಯ ಮೊದಲಾದುವು ಇನ್ನೂ ಸೇರದಿರುವ ಶಬ್ದ : ದೇಶ್ಯಶಬ್ದಗಳನ್ನು ಮೂಲಶಬ್ದಗಳು, ನಿಷ್ಪನ್ನ (Derivative) ಶಬ್ದಗಳು, ಸಮಾಸಶಬ್ದಗಳು ಎಂದು ಮೂರು ವಂಗಡಗಳಾಗಿ ವಿಭಾಗಿಸಬಹುದು (ಕೃಬಿತ. ೧೪). [ಸಂ.]

**ಮೂಲಶಿಕ್ಷಣ** (ನಾ). ಮುಂದಿನ ವಿದ್ಯಾಭ್ಯಾಸಕ್ಕೆ ಅತ್ಯಗತ್ಯವಾಗಿ ಬೇಕಾಗುವ ಆರಂಭದ ಶಿಕ್ಷಣ ; ಮೂಲಾಧಾರವಾದ ವಿದ್ಯಾಭ್ಯಾಸ: ಮಕ್ಕಳು ಜನ್ಮತಃ ಪಡೆದುಕೊಂಡು ಬಂದಿರುವ ವಿಧಾಯಕಶಕ್ತಿಗಳು ಅವರೇ ಕಥೆಯನ್ನು ಹೇಳುವಾಗ ಪ್ರಕಟವಾಗುವುವು. ಮೂಲಶಿಕ್ಷಣದಲ್ಲಿ ಇದಕ್ಕೆ ಆತ್ಮಪ್ರಕಾಶನವೆಂದು ಹೇಳುವುದುಂಟು (ಕಥೆ. ೬೩) ; ಪಾಕಶಾಸ್ತ್ರವನ್ನು ಮೂಲಶಿಕ್ಷಣದಲ್ಲಿ ಸೇರಿಸಬಹುದು (ಹೇಮಾಶೀ. ೬೫). P ಇದು ಇಂಗ್ಲಿಷಿನ 'Basic Education' ಎಂಬುದರ ಅನುವಾದ. [ಸಂ.]

**ಮೂಲಸಂಘ** (ನಾ). [ಜೈನ] ದಿಗಂಬರಪಂಥದ ಪ್ರಾಚೀನವಾದ ಒಂದು ಸಂಘದ ಹೆಸರು : ಸ್ವಸ್ತಿಶ್ರೀ ಮೂಲಸಂಘದೇಶಿಯಗಣ ಪೊಸ್ತಕಗಚ್ಛದ ಕೊಣ್ಡಕುನ್ದಾನ್ವಯ ಕೊಲ್ಲಾಪುರದ . . . ಪ್ರತಿಬದ್ಧದ ಶ್ರೀಮಾಘನಂದಿ ಸಿದ್ಧಾನ್ತದೇವರ ಶಿಷ್ಯರು (ಎಕ. II (R), ೫೨೬-೦ ; 13ನೆಯ ಶತ). [ಸಂ.]

**ಮೂಲಸ್ತಂಭ** (ನಾ). ಪ್ರಮುಖವಾದ ಅವಲಂಬನೆ ; ಆಧಾರಸ್ತಂಭ : ಬಲದೇವ ವಾಸುದೇವರ್ . . . ಶೌರ್ಯಮೂಲಸ್ತಂಭದಂತೆಯುಂ ಸಾಹಸ ದ್ರವಿಣಸಾಧನದಂತೆಯುಂ . . . ಸುಖಿಮಿರ್ಪನ್ನೆಗಂ (ಶಾಂತಿಪು. ೦-೮೦ ವ). [ಸಂ.]

**ಮೂಲಸ್ಥ** (ನಾ). ಪರಂಪರೆಯಿಂದ ಬಂದ ಯಾವುದಾದರೂ ಅಧಿಕಾರ ಸ್ಥಾನದಲ್ಲಿರುವ ವ್ಯಕ್ತಿ : ಶ್ರೀಮತು ಮಾಣಿಕ್ಯಪೊಳಲ ಮೂಲಸ್ಥ ಚನ್ದಕಕೋಜನ ಸುಪುತ್ರಂ ಪರವಾದಿಮಲ್ಲೋಜಂ (ಎಕ. VI (R), ಕೃಕ್ಷರಾ. ೦೦೬-೦೨ ; 1165 ? ). [ಸಂ.]

**ಮೂಲಸ್ಥಾನ** (ನಾ). ೧. ಹುಟ್ಟುವ ನೆಲೆ ; ಉತ್ಪತ್ತಿಸ್ಥಾನ ; ಉಗಮ ಸ್ಥಳ : ವಿಭವದ ಮೂಲಸ್ಥಾನಮೆನಿಸಲಿದು ಕಾಮದೇವನಾಸ್ಥಾನಮೆನಿಸಲ್ . . . ಸಮೆದತ್ತು ವಿವಾಹ ಗೇಹಂ (ಆದಿಪು. ೯-೩೦ ರಗಳೆ). ೨. ದೇವಾಲಯದಲ್ಲಿ ಮೂಲವಿಗ್ರಹವನ್ನು ಇಟ್ಟಿರುವ ಒಳಭಾಗ ; ಗರ್ಭಗುಡಿ ; ಗರ್ಭಗೃಹ : ತಾವು ಮಾಡಿಸಿದ ಶಿವಾಲಯದ ಮೂಲಸ್ಥಾನದ ಶ್ರೀಸೋಮೇಶ್ವರದೇವರ್ಗ್ಗೆ ತಮ್ಮ ಪ್ರಭುತ್ವದ ದೋಣೆಯಿಂ . . . ತಮ್ಮಂ [ಶ]ಕ್ಕೆ ಬಂದ ಮತ್ತರಯ್ವತ್ತೇಳಟಿಯೊಳಗೊ (ಸೌಇಇ. XX, ೬೯-೯೩; 1107); ದೇವತಾಮೂರ್ತಿಗಳು ಮೂಲಸ್ಥಾನದಲ್ಲಿ (ಗರ್ಭಗೃಹದಲ್ಲಿ) ಶಿಲಾಮೂರ್ತಿ

ಗಳಾಗಿ ಉಪಾಸನೆಯ ಪ್ರಯೋಗ ವಿಧಾನಗಳಿಂದ ದೇವತಾ ಶಕ್ತಿಸಂಪಾದನೆ ಹಾಗೂ ಸಂರಕ್ಷಣೆಯ ಕೇಂದ್ರವಾಗಿದೆ (ಛಾರಳ. ೬೦). ೩. ಮುಖ್ಯವಾದ ಸ್ಥಳ ; ಕೇಂದ್ರ ; ಪ್ರಮುಖಕ್ಷೇತ್ರ : ಕೃತಯುಗದ ಕೇ[ದಾ]ರವೆಂಬ ಮೂಲಸ್ಥಾನ ತ್ರೇತಾಯುಗದಲ್ಲಿ ವಾರಣಾಸಿಯೆಂಬ ಮೂಲಸ್ಥಾನ ದ್ವಾಪರದಲ್ಲಿ ವಿರೂಪಾಕ್ಷನೆಂಬ ಮೂಲಸ್ಥಾನ ಕಲಿಯುಗದಲ್ಲಿ ಪರ್ವತವೆಂಬ ಮೂಲಸ್ಥಾನ (ಚಚಹ. ೩೪೪). ೪. ಹುಟ್ಟೂರು : ಜನ್ಮಸ್ಥಳ ; ಸ್ಥಾನಿಕರು ಶೃಂಗೇರಿಯ ಮಠದ ಶಿಷ್ಯರೆಂದೂ ಸುಬ್ರಹ್ಮಣ್ಯವು ಇವರ ಮೂಲಸ್ಥಾನವೆಂದೂ ಖಚಿತವಾಗುತ್ತದೆ (ತುಳುವಾ. ೦೦೬). ೫. ತಳಹದಿ ; ಬುನಾದಿ ; ಆಧಾರ. ೬. ಪರತತ್ತ್ವ ; ಪರಬ್ರಹ್ಮ. ೭. ಗಾಳಿ ; ವಾಯು. [ಸಂ.]

**ಮೂಲಸ್ಥಾಪಕ** (ನಾ). ಸಂಘ, ಸಂಸ್ಥೆ, ಮತ, ಸಿದ್ಧಾಂತ ಮೊದಲಾದುವುಗಳನ್ನು ಸ್ಥಾಪನೆಮಾಡಿದವನು : ಆದ್ಯಪ್ರವರ್ತಕ : ಈ ಅನಾಥಾಶ್ರಮದ ಮೂಲಸ್ಥಾಪಕರು ಬಹಳ ಉದಾರಿಗಳು (ಕಖ). [ಸಂ.]

**ಮೂಲಾಜ್ಞಾನ** (ನಾ). [ವೇದಾಂತ] ಪ್ರಪಂಚದ ಪೂರ್ವಸ್ಥಿತಿ ; ಪ್ರಕೃತಿ : ಪ್ರಕೃತಿಯೆಂದರೆ ಮೂಲಾಜ್ಞಾನ, ಮಾಯೆ, ಅವಿದ್ಯೆ ಮೊದಲಾದ ಶಬ್ದಗಳಿಂದ ಹೇಳಲ್ಪಡುವ ಪ್ರಪಂಚದ ಪೂರ್ವಸ್ಥಿತಿ (ಹಿಂದಕಾ. ೦೪೪). [ಸಂ.]

**ಮೂಲಾಣು** (ನಾ). ಗುಪ್ತಪುಷ್ಪೀಯ ಸಸ್ಯಗಳಲ್ಲಿ ಪ್ರತ್ಯೇಕ ಹೊಂದಿ, ಸ್ವತಂತ್ರವಾಗಿ ಬೆಳೆಯಬಲ್ಲ ಒಂದು ಕಣ ; ಬೀಜಕಣ : ನಿರ್ಲಿಂಗ ರೀತಿಯ ವಂಶಾಭಿವೃದ್ಧಿಯಲ್ಲಿ ನೈಪುಣ್ಯ ಪಡೆದ ಜೀವಕಣಗಳು ಉತ್ಪತ್ತಿಯಾಗುತ್ತವೆ. ಇವುಗಳನ್ನು ಮೂಲಾಣು ಅಥವಾ ಬೀಜಕಣ (spores) ಎಂದು ಕರೆಯುತ್ತಾರೆ (ಸಸ್ಯಶಾ. ೬೩) ; ಮೂಲಾಣು (spores)ಗಳು ಚದುರಿ ಮೊಳೆತು ಕಾಲಂಗುಲಕ್ಕೆ ಮೀರದ ಹಸುರುಬಣ್ಣದ ಹೃದಯಾಕಾರದ ಪೊರೆಗಳಾಗುತ್ತವೆ (ಹಸುಹೂ. ೦೪೦). [ಸಂ.]

**ಮೂಲಾಧಾರ** (ನಾ). ೧. ಮುಖ್ಯವಾದ ಅವಲಂಬನೆ, — ಆಸರೆ. ೨. ಪ್ರಮುಖವಾದ ಅಸ್ತಿವಾರ. ೩. ಹೊಕ್ಕುಳು ; ನಾಭಿ. ೪. [ಯೋಗ] ದೇಹದ ಸಕಲನಾಡಿಗಳಿಗೂ ಮೂಲಸ್ಥಾನವೆಂದು ಭಾವಿಸಲಾದ ಗುಹ್ಯಸ್ಥಾನ ಮತ್ತು ಜನನೇಂದ್ರಿಯಗಳ ಮಧ್ಯದ ಎರಡು ಅಂಗುಲಗಳ ಪ್ರದೇಶ, — ನಾಡೀಚಕ್ರ ; ಷಟ್ಚಕ್ರಗಳಲ್ಲಿ ಒಂದು : ಮೂಲಾಧಾರ [ಪಾಠಾಂ. ಮತ್ತಮಾಧಾರ] ಸ್ವಾಧಿಷ್ಠಾನ ಮಣಿಪೂರಕ ಅನಾಹತ ವಿಶುದ್ಧಿ ಆಗ್ನೇಯವೆಂಬ ಷಟ್ಚಕ್ರಂಗಳುಂ (ಏವೀಳ. ೦೪೪); ಮೂಲಾಧಾರದ ಚಕ್ರದಲ್ಲಿ ಲಿಂಗರೂಪದಿಂದಿರುವ ಪರಬ್ರಹ್ಮನನ್ನು ಶಕ್ತಿಯು ಸರ್ಪರೂಪದಿಂದ ಕುಂಡಲಿನಿಯೆಂಬ ಹೆಸರಿನಲ್ಲಿ ಸುತ್ತಿ ಮಲಗಿರುವಳೆಂದೂ . . . ಶಕ್ತಿಪಂಥ ಪ್ರತಿಪಾದಿಸುತ್ತದೆ (ಛಾರಠ. ೩೦೬). [ಸಂ.]

**ಮೂಲಾನಕ್ಷತ್ರ** (ನಾ). = ಮೂಲನಕ್ಷತ್ರ : ಮೂಲ . . . ಮೂಲಾ ನಕ್ಷತ್ರಕೆ ಪೆಸರು (ಭಾಸ್ಕರ. ೬೩-೦) ; ಸಾವಿತ್ರಮ್ಮನವರು ಮೂಲಾನಕ್ಷತ್ರದ ಹುಡುಗಿ ಆಗುವುದಿಲ್ಲವೆಂದೇ ಸಾಧಿಸಿಬಿಟ್ಟರು (ಮುಕಾಪ. ೦೬).
[ ☞ ಇದು ' ಮೂಲನಕ್ಷತ್ರ ' ಎಂಬ ಶಬ್ದದ ತಪ್ಪುಬಳಕೆ ]

**ಮೂಲಾರ್ಥ** (ನಾ). ಶಬ್ದದ ಮೊದಲನೆಯ ಅರ್ಥ : ಅನೇಕ ವೇಳೆ ಶಬ್ದಗಳಿಗೆ ಇರುವ ಮೂಲಾರ್ಥವೇ ಇಲ್ಲದೆ ಹೋಗಿ ಹೀನಾರ್ಥ ಪ್ರಾಪ್ತವಾಗಬಹುದು (ಕಖ). [ಸಂ.]

**ಮೂಲಿ$_1$** (ಗು). ೧. ಬೇರಿನಿಂದ ಬೆಳೆಯುವ. ೨. ಕಾಯಿಂ ಹಕ್ಕಿರುವ: ಭೂಮಿ ಮನೆಗಳನು ಸಸಿ ಬಳಿ ಬಾಳೆ ನೆಡಿಸಿ ಗೈಸಿ ರೂಪ ಮಾಡಿಸಿ ಮೂಲಿ ವಕಲಗಳ ಕ್ರಿಯ ಕಾಲಕಾಲಂಪ್ರತಿಯಲು ತೆರಸಿಕೊಂಡು ಬಹಿರಿ (ಪ್ಯಾಶಾ. ೦೪೩೯, ೯೩-೩೦ ; 1667). (ನಾ). ೩. ಕಾಯಿಂ ಹಕ್ಕಿರುವ ಸಾಗುವಳಿ ಭೂಮಿ, — ಜಮೀನು : (೬೩೦ಗ್ನಾ. ೦೩೬). ೪. (?) : ಆರು[ವ್ವೊ]ಬ್ಬರು ಮೂಲಿ ಮಾಡಿದಡೆ (ಶಾಸಂ. ೦೪೩೯, ಶಾಸನಗಳು. ೪೬೦-೦೯ ; 1297).
[ ಸಂ. ಮೌಲಿನ್. / ತುಳು. ಮೂಲಿ ]

**ಮೂಲಿ$_2$** (ನಾ). ಒಂದು ಬಗೆಯ ಸಸ್ಯ : '' ಮೂಲಿಯೆನೆ ಹಣ್ಣ '' (ಶುಂಗರಾ. ೮೩-೪೬). ' ಅಣ್ಣೆ$_2$ ' ಹೋ. [ ? ]

**ಮೂಲಿಕ** (ಗು). ೧. ಮೂಲದ ; ಮೊತ್ತಮೊದಲಿನ. ೨. ಮುಖ್ಯವಾದ ; ಪ್ರಮುಖವಾದ. ೩. ಬೇರು, ಗೆಡ್ಡೆ ಇತ್ಯಾದಿಗಳನ್ನು ಆಹಾರವನ್ನಾಗಿ ಸೇವಿಸುವ. (ನಾ). ೪. ಋಷಿ ; ಮುನಿ. [ಸಂ.]

**ಮೂಲಿಕಾಸಿದ್ಧಿ** (ನಾ). ಅರುವತ್ತನಾಲ್ಕು ಕುಶಲವಿದ್ಯೆಗಳಲ್ಲಿ ಒಂದು; ವನಸ್ಪತಿಯ ಉಪಯೋಗದ ಬಗೆಗೆ ಇರುವ ನಿಪುಣತೆ : ಅಕ್ಷರ ಲೆಕ್ಕ . . . ಮೂಲಿಕಾಸಿದ್ಧಿ . . . ಮಂತ್ರತಂತ್ರಸಿದ್ಧಿ ಇವೆಲ್ಲವ ಕಲಿತಡೇನೋ ಚೌಷಷ್ಟಿವಿದ್ಯಾಕಳಾವಿದನೆನಿಸಿಕೊಂಬನಲ್ಲದೆ ಲಿಂಗವಂತನೆನಿಸಿಕೊಂಬುದಿಲ್ಲ (ವಚಿವಚಾ. ೯೩-೬೦). [ಸಂ.]

**ಮೂಲಿಕೆ** (ನಾ). ೧. ಬೇರು ; ಮೂಲ. ೨. ಔಷಧವಾಗಿ ಉಪಯೋಗಿಸುವ ಬೇರು ; ವನಸ್ಪತಿ : ನಿಮಿತ್ತ ಲಗ್ನ . . . ಮೂಲಿಕೆಯಿಂದ ಕಡೆಯ ನಿನ್ನ ಇರವು (ಮೋಳಿಪಪ. ೨೬೪-೩೩) ; ಕೆಲವು ಮೂಲಿಕೆಗಳ ರಸವನ್ನು ಹಿಂಡಿ, ಗಾಯಕ್ಕೆರೆದು ಬಟ್ಟೆಯನ್ನು ಸುತ್ತಿ (ಪುಪ್ಪಕ. ೦೬). ೩. ಸತ್ತವರನ್ನು ಬದುಕಿಸುವುದೆಂದು ಭಾವಿಸಲಾದ ಒಂದು ಬಗೆಯ ವನಸ್ಪತಿ : ವಾತಜನ ಮೂಲಿಕೆಗೆ ಕಪಿಬಲ ಬೀತರಸಿದುದು (… ೩೩-೨೦). ೪. ಲೋಹದಿಂದ ಚಿನ್ನವನ್ನು ತಯಾರಿಸಲು ಉಪಯೋಗಿಸುವರೆಂದು ಭಾವಿಸಲಾದ ಒಂದು ಬಗೆಯ ವನಸ್ಪತಿ : ಕಿಸುವಂ ಮೂಲಿಕೆಯಿಂ ಪೊರ್ದಿಸೆ ನಗೆಯೊಳ್ ಹೇಮಮಪ್ಪ ತೆಱದಿಂದಂ ಸಂಕಿಸದೆ ವರಧರ್ಮದೊಳ್ , ಕೂರ್ತಸಗುವ ನರನುಂ ವಿಶೇಷಸುಖಿಯಾಗಿರ್ಕುಂ (ಧರ್ಮಾಮೃ. ೪-೩೪). [ ಸಂ. ಮೂಲಿಕಾ ]

**ಮೂಲಿಗ** (ನಾ). ೧. ಔಷಧೀಸಸ್ಯಗಳ ಬೇರುಗಳಲ್ಲಿ ವ್ಯವಹರಿಸುವವನು ; ಮೂಲಿಕೆಗಳನ್ನು ಮಾರುವವನು ; ಗಂದಿಗ : (೬). ೨. ಮೂಲಕಾರಣನಾದ ವ್ಯಕ್ತಿ ; ಪ್ರವರ್ತಕ ; ಮೊದಲಿಗ : ಜೂದೆ ನೆವಮಾಗಿರೆ ಮೂಲಿಗನಾದನಾನೆ ಪೂಣ್ದಡುಮಗೆಗನ್ನೊಳವ ಕಿಸುರೆನ್ನೊಡವೋಪುದಿದೊಳ್ಳಿತು (ಪಂಪಭಾ. ೦೩-೦೬) ; ಮೂವತ್ತೊಂದುಸ್ಥಳದ ಮೂಲಿಗ ತಾನಯ್ಯಾ (ತಸ್ವಪ. ೪. ೬೯೩-೦೪೪೪) ; ಮೂಲದಲ್ಲಿ — ಮೂಲಿಗಂ (ಮೊದಲಿಗಂ) (ಶಬ್ದಮ. ಸೂ. ೦೬೦ ವೃತ್ತಿ). ೩. ಪರಂಪರೆಯಾಗಿ (ಯಾವುದಾದರೂ) ಅಧಿಕಾರವನ್ನು ಹೊಂದಿರುವ ವ್ಯಕ್ತಿ : ದೊರವಡಿಯಪ್ಪತ್ತಱ ಪ್ರಭುಗಾವುಂಡಗಳುಂ ಮೂಲಿಗರುಂವೆಂಟುಹಿಟ್ಟುಗಳು ಸಹಿತ . . . ಭೀವರಾಶಿಪಂಡಿತರ ಪಾದಪ್ರಕ್ಷಾಳನಂಗೆಯ್ದು ಧಾರಾಪೂರ್ವ್ವಕಂ ಮಾಡಿ ಕೊಟ್ಟರು (ಶಾಇಇ. IX–i, ೨೩೩–೩೯ ; 1149); ಅಲ್ಲಿಯ ಮೂಲಿಗಮುಖ್ಯವಱಗ್ಗಾವುಂಡುಗಳಿಗೆ ಪಾದಪೂಜ[ಜೆ]ಯುಂ ಕೊಟ್ಟು . . . ಪೂಜುಗೌಂಡು ಬಿಟ್ಟ ಎರೆಯ ಮತ್ತರು ನಾಲ್ಕು (ಕೊಡ್ಡಾ. ೦೩-೩೪; 1186). ೪. ಬಂಡವಾಳಗಾರ ; ವರ್ತಕ. [ಮೂಲ + — ಇಗ]

**ಮೂಲಿಗಗೆಯಿ** (ನಾ). ಪರಂಪರೆಯಾಗಿ (ಯಾವುದಾದರೂ) ಅಧಿಕಾರವನ್ನು ಹೊಂದಿರುವ ವ್ಯಕ್ತಿಗೆ ಕೊಟ್ಟ ಜಮೀನು, — ಉಂಬಳಿ : ಮಾನಸಬ್ರಾಹ್ಮಣರ್ಗೆ ಮೂಲಿಗಗೆಯಿಯಾಗಿ ಕೊಟ್ಟ ನೂಱುಮತ್ತರ್ಕೆಯ್ಯುಮನಿನ್ನೂಱುಗದ್ಯಾಣಪ್ಪೊನ್ನುಂ ಕೊಟ್ಟು ಕೊಂಡ ಮತ್ತನ್ನೂಱುಂ (ಶಾಇಇ. XX. ೯೩-೩೪; ?). [ಮೂಲಿಗ + ಕೆಯಿ ( < ಕೆಯ್$_4$ ) ]

**ಮೂಲಿಗಮಾನ್ಯ** (ನಾ). = ಮೂಲಿಗಗೆಯಿ : ×× ಬಮ್ಮಿಮಯ್ಯ ತಮ್ಮ ಮೂಲಿಗಮಾನ್ಯದ ಮೂಡಣ ಕೆಯಲು ಬಿಟ್ಟ ಕೆಯಿ ಮತ್ತರು ೬ (ಶಾಇಇ. IX–i, ೦೦೪-೬೫; 1107). [ಮೂಲಿಗ + ಮಾನ್ಯ]

**ಮೂಲಿಗವನೆ** (ನಾ). ಪರಂಪರೆಯಾಗಿ (ಯಾವುದಾದರೂ) ಅಧಿಕಾರವನ್ನು ಹೊಂದಿರುವ ವ್ಯಕ್ತಿಯ ನಿವಾಸ : ಕರಡಿಯ ಮಲಯನ ಮಂಠದಿಂ ಬಡಗ ಕೈ ೩೪ ಪಡುವ ಮೂಲಿಗವನೆಯ ಹೆ[ದ್ದಾ]ರಿ ಮೂಡಬಡಗ ಮುಖ ಬಂದ ಕೈ ೪೮ (ಶಾಇ. XI-i, ೬೯-೩೫; 1033).
[ಮೂಲಿಗ + ಮನೆ]

**ಮೂಲಿಗೆ** (ನಾ). ಔಷಧದಂತೆ ಉಪಯೋಗಿಸುವ ಬೇರು ; ವನಸ್ಪತಿ: ಮೂಲಿಕೆ: 'ಮೂಲಿಗೆಮರ್ದು' ಪರಾ.
[< ಸಂ. ಮೂಲಿಕಾ./ತುಳು. ಮೂಲಿಗೆ]

**ಮೂಲಿಗೆಮದ್ದು** 'ಮೂಲಿಗೆಮರ್ದು' ನೋ.

**ಮೂಲಿಗೆಮರ್ದು**. ಮೂಲಿಗೆಮದ್ದು (ನಾ). = ಮೂಲಿಗೆ : ಮಡದಿ ಬಾಣ್ನೀಜೀಯೊರ್ವಳ್ ಚಂಚಲದೃಷ್ಟಿಯಿನತ್ತಮಿತ್ತಂ ನೋಟ್ಟಿಳ ಮೂಲಿಗೆಮರ್ದಂ ಕೊಂಡುಯ್ವೊಡಕ್ಕುಂ (ಧರ್ಮಾ. ೦-೩). **ಮೂಲಿಗೆ ಮದ್ದು** : ಅಗಸ್ತ್ಯೋಪದಿಷ್ಟವಾದ ಮೂಲಿಗೆಮದ್ದಿನಂತಿರುವ ಅಶ್ವಮೇಧಯಾಗವನ್ನು ಜರುಗಿಸಲಿಕ್ಕಾಗಿ (ಕಪ್ಪಇ. ೯೮).
[ಮೂಲಿಗೆ + ಮರ್ದು]

**ಮೂಲಿತಿ ?** (ನಾ). ಒಂದು ಸಂಖ್ಯೆ ; ಐದು (?) : ಪೇಳುವೊಡೆ ಕೇಮಿ ಆರಯ ಮುದ್ದಣಂ ಪದುಣ ಮೂಲಿತಿ ಪರಯ ಮಾರಯ ಕಾಳ ತಿಮ್ಮ ಸಗಾಳ ಮೇಲೊಂದಜಿಂ ಹತ್ತು ದಶ ಕಂಸ ಕಾರತಯ ನಗರೆಯಾಗಿ ತೇಯಾಂ (ಶುಂಗರಾ. ೦೦೨-೯). [?]

**ಮೂಲಿಯಿಡು** 'ಮೂರಿಯಿಡು' ನೋ.

**ಮೂಲಿವರ್ಗ** (ನಾ). ೧. ಜಮೀನಿನ ಒಡೆತನದ ಹಕ್ಕು ; ಹಿಡುವಳಿ : ಕನ್ನಡ ಜಿಲ್ಲೆಯ ಹೆಚ್ಚಿನ ದೇವಾಲಯಗಳು ಸ್ಥಾನಿಕರ ಮೂಲಿವರ್ಗದಲ್ಲೇ ಇದ್ದುದು ಕಂಡುಬರುತ್ತದೆ (ತುಳುನಾ. ೦೦೭). ೨. (ವರ್ಗದಾರರು ಕಂದಾಯ ಸಲ್ಲಿಸುವ) ಭೂಮಾಲೀಕ : ಜಮೀನುದಾರ : (ಕಸಂಗ್ರಾ. ೧೩೬). [ಮೂಲಿ₁ + ವರ್ಗ./ತುಳು. ಮೂಲಿವರ್ಗ]

**ಮೂಲುಗು** 'ಮುಲುಕು₁' ನೋ.

**ಮೂಲೆ₁** (ನಾ). ೧. ಎರಡು ದಿಕ್ಕುಗಳ ನಡುವಿನ ದಿಕ್ಕು ; ವಿದಿಕ್ಕು : ಬೊಬ್ಬೆಯುಲಿ ದಿಕ್ಕಿನ ಮೂಲೆ ಬಿರಿದುದು ಜರ್ಜರಿತದದ್ರಿಗಳು (ಕುಮಾ.ಕ. ೩-೩೩). ೨. ಕೊನೆ : ಅಂಚು : ನಡುಹೊಳೆಯ ಹರಿಗೋಲ ಮೂಲೆಯು ಕಡಿದಿರಾದರೆ ನಮ್ಮ ಪುಣ್ಯದ ಬಿಡುಗಡೆಯ ಕಾಲವು ಶಿವಾ (ಕುಮಾ.ರಾ. ೯-೩); ಭೂಮಿಗೆ ನಾಲ್ಕು ಮೂಲೆಗೆ ಕಲ್ಲ ನೆಟ್ಟದ್ದು (ಎಕ. VII, ಶಿಕಾ. ೯೨-೨೮; ?). ೩. ಬಾಗು ; ತಿರುವು : ಹೆಳವನ ಕಾಲುವೆ ಮುಂದೆ ಬಡಗಲು ಹರಿದ ಮೂಲೆ (ಎಕ. VII, ಶಿಕಾ. ೬೩-೧೦೨; 1527). ೪. ಕಟ್ಟಡಗಳ ರಚನೆಯಲ್ಲಿ ಎರಡು ಗೋಡೆಗಳು ಸೇರುವ ಜಾಗ : ಮೂಲೆಯಲ್ಲಿದ್ದ ಎರಡು ಮಣ ತೂಕದ ಬಂದೂಕವನ್ನು ಹೊತ್ತುಕೊಂಡು ಹೊರಗೆ ಬಂದೆ (ರಾಹುಳ. ೦೯). ೫. ಅಪ್ರಸಿದ್ಧವಾದ ಜಾಗ : ಯಾರೂ ಹೋಗದ ದೂರದ ಸ್ಥಳ : ತನ್ನ ಗುರುವಿನ ತತ್ತ್ವ ಸಂದೇಶವನ್ನು ದೇಶದ, ವಿಶ್ವದ ಮೂಲೆಮೂಲೆಯಲ್ಲಿ ಪಸರಿಸುವ ಪಣವನ್ನು ತೊಟ್ಟ ಧೀರ ನರೇಂದ್ರ (ರಮಾಗಾ. ೪೭). ೬. [ರೇಖಾಗ] ಒಂದೇ ಸಮರೇಖೆಯಲ್ಲಿರದ ಎರಡು ರೇಖೆಗಳು ಅಥವಾ ಎರಡು ಸಮಕ್ಷೇತ್ರಗಳು ಸಂಧಿಸುವ ಸ್ಥಳ : ಕೋನ : ಪ್ರತಿಯೊಂದು ಮೂಲೆ ಅಥವಾ ಶೃಂಗ (vertex)ದಲ್ಲಿಯೂ ಇವುಗಳಿಗೆ ಕ್ರಮವಾಗಿ ೩, ೩, ೪, ೩, ೫, ಮುಖಗಳು ಸೇರುತ್ತವೆ (ಗತಶ. ೨೮).

**ಮೂಲೆಗಳವರು** = ಆಗ್ನೇಯ, ನೈಋತ್ಯ, ವಾಯುವ್ಯ ಮತ್ತು ಈಶಾನ್ಯವೆಂಬ ಉಪದಿಕ್ಕುಗಳ ಅಧಿಪತಿಗಳು : ದೆಸೆಯವರು ಮೂಲೆಗಳ[ಪಾಠಾಂ. ಗೆಳೆ]ವರು ಮನ್ನಿಸುವರೇ ಸುರಲೋಕಸುಖವನು ವ್ಯಸನಭರಭಂಗಿಸದಲೇ ಹೇಳು (ಕುಮಾ.ಕ. ೦೦-೨೬). **ಮೂಲೆಗೆ ಕೂರು** = (ಆಲಂ) ಅಧಿಕಾರವನ್ನು ಕಳೆದುಕೊಂಡು ಯಾರಿಗೂ ಕಾಣದಂತೆ ಒಂದು ಬದಿಗೆ ಹೊರಟು ಹೋಗು ; ನಿಷ್ಪ್ರಯೋಜಕವಾಗು : ಮಂತ್ರಿಗಳೆಲ್ಲ ಮೂಲೆಗೆ ಕೂತರು (ಬಸ್ತ್ರೀ. ೬ ಪ್ರದಿಶಿಕ). **ಮೂಲೆಗೆ ನೂಂಕು, ಮೂಲೆಗೆ ನೂಕು** = (ಆಲಂ) ಅಧಿಕಾರವನ್ನು ಕಿತ್ತುಕೊಂಡು ಒಂದು ಬದಿಗೆ ತಳ್ಳು : ದುಷ್ಟಬುದ್ಧಿ ಎಂಬೊನ್ ಮಂತ್ರಿ. ವೃದ್ಧನಾಗಿಹ ದೊರೆಯನವನು ಮೂಲೆಗೆ ನೂಂಕಿ . . . ಧೂರ್ತನಾಗಿಹನು (ಕಂದ್ರಕ. ೩೯-೦೦); ಹಣವನ್ನೆಲ್ಲಾ ಕಳೆದುಕೊಂಡ ಅವನನ್ನು ಅವನ ಮಕ್ಕಳೇ ಮೂಲೆಗೆ ನೂಕಿದರು (ರೂಢಿ). **ಮೂಲೆಗೊತ್ತು** = ಪಕ್ಕಕ್ಕೆಹಾಕು; ಬದಿಗೆ ತಳ್ಳು : ಆಮದು ಮಾಡಿಕೊಂಡ ಬದನೆ ಬಗೆಗಳು . . . ನಮ್ಮ ನಾಡಿನದಾದ ಬಗೆಯನ್ನು ಮೂಲೆಗೊತ್ತಿವೆ (ಶಾಸಗ. ೩೮). **ಮೂಲೆಪಾಲಾಗು** = (ಆಲಂ) ಅಧಿಕಾರ, ಹಣ ಮುಂತಾದುವನ್ನು ಕಳೆದುಕೊಳ್ಳು : ನಿರುಪಯುಕ್ತವಾಗು : ಮೂಲೆಗುಂಪಾಗು : ವೈದಿಕದೇವತೆಗಳಲ್ಲಿ ಅನೇಕರು ಅಷ್ಟರೊಳಗಾಗಿ ಮೂಲೆಪಾಲಾಗಿದ್ದರು (ಅಕಹ. ೦೦೦). **ಮೂಲೆಮುಡುಕು** = ಸಂದು ; ಗೊಂದಿ: ಕಳ್ಳರು ಈ ಕೋಟೆಯ ಮೂಲೆಮುಡುಕುಗಳನ್ನೆಲ್ಲಾ ಹುಡುಕಾಡಿ ನೋಡಿದರು (ಶಾರಪೀ. ೭೩); ಯಾವುದೋ ಒಂದು ಸಣ್ಣ ಹಳ್ಳಿಯ ಮೂಲೆಮುಡುಕುಗಳಲ್ಲಿ ವಾಸವಾಗಿದ್ದವರು ಎಂದೂ ಕಾಣದ ದೊಡ್ಡಪಟ್ಟಣಕ್ಕೆ ಬಂದರೆ . . . ದಿಗ್ಭ್ರಮೆ ಹಿಡಿಯುತ್ತದೆ (ಶಾಗ್ನಿ. ೩). **ಮೂಲೆಯುವದಿರು** = ಮೂಲೆಗಳವರು : ಮೂಲೆಯುವದಿರು ಮಿಡಿದರಲಾಯೆನುತ ಸುರಪತಿ ತರಿಸಿದನು ಗಜವ (ಕಂಠಕ. ೨೦-೩೭).

[ದೇ.೫ ತಮಿ. ತೊದ. ಮೂಲೈ ; ಮಲ. ತೆಲು. ಪರ್ಜಿ. ಕುವಿ. ಮೂಲ ; ತುಳು. ಕೊಡ. ಮೂಲೆ ; ಕೋಲಾ. ಮೂಲಾ; ಕುಇ. ಮೂಜು; ಕೋತ. ಮೂಲ್]

**ಮೂಲೆ₂** (ನಾ). ಉಂಬಳಿ : ಮಾನ್ಯ (?) : 'ಮೂಲೆವತ್ತ', 'ಮೂಲೆಸುಂಕ', 'ಮೂಲೆಹೇರು' ಪರಾ. [< ಮೂಲ್ಯ]

**ಮೂಲೆಗ** (ನಾ). (ಆಲಂ) ಶ್ಮಶಾನದಲ್ಲಿರುವವನು ; ಶ್ಮಶಾನವಾಸಿ ; ಶಿವ : ಕಂದುಗೊರಳನ ಮೂಲೆಗನ ಸೌಂದರ್ಯಶಾಲಿಯ ರಂಗಗೆ ಸಾಟಿಯೆಂಬ ಮಂದಭಾಗ್ಯರ ಮಾತು ನಿಜವೆ (ಕಕಾಂ. ೬-೪೨).
[ಮೂಲೆ₁ + -ಗ₂]

**ಮೂಲೆಗಂಬ** (ನಾ). ಕಟ್ಟಡದ ಯಾವುದಾದರೂ ಗೋಡೆಗಳು ಸೇರುವ ಜಾಗದಲ್ಲಿರುವ ಸ್ತಂಭ: ಇತ್ತಲಿದೆ ಮೂಲೆಗಂಬ [ಪಾಠಾಂ. ಭ]ವನೆತ್ತಲ್ ತಳದಲ್ಲಿ ಬಾಗಿಲಿರ್ದಪುದು (ರಕಳು. ೯-೦೨೬).
[ಮೂಲೆ₁ + ಕಂಬ₁ (< ಕಂಭ)]

**ಮೂಲೆಗದ್ದೆ** (ನಾ). ಗದ್ದೆಯ ಅಂಚು.-ಮೂಲೆ : ಮಯೂರಮಿಥುನಂ . . . ಬೆಳೆದ ಗದ್ದೆಯ ಹಳದಿಗಿಳಿತಂದು ಮೆಲ್ಲನೆಯೆ ಮೂಲೆಗದ್ದೆಯಲಿ ಮೆಲ್ಲುತೆ ನೆಲ್ಲನು (ಶಕ್ತಾಂಗ. ೩೪-೦೯೬೨). [ಮೂಲೆ₁ + ಗದ್ದೆ (<ಗಟ್ಟಿ)]

**ಮೂಲೆಗಲ್ಲು** (ನಾ). ಕಟ್ಟಡವನ್ನು ಪ್ರಾರಂಭಿಸುವಾಗ ಇಡುವ ಕಲ್ಲು ; ಆಧಾರಶಿಲೆ : ಒಂದಾನೊಂದು ಕಾಲಕ್ಕೆ ನಮ್ಮ ಊರಿನಲ್ಲಿ ಗೌಂಡಿಗಳೆಂದು ದುಡಿದ ಶ್ರೀಎಲ್ಲಪ್ಪನವರಿಂದ ಮೂಲೆಗಲ್ಲು ಕೊಡಿಸಲ್ಪಡಲಿದೆ (ಅಕಶಾ. ೧೬೭).
[ಮೂಲೆ₁ + ಕಲ್ಲು (<ಕಲ್₃)]

**ಮೂಲೆಗಾಸು** (ನಾ). ಒಂದು ಬಗೆಯ ತೆರಿಗೆ (?) : ಉಭಯನಾನಾದೇಶ ಅಯ್ಯಾಮಳೆ ಮುಖ್ಯವಾದಿತ್ತಾ ಸಮಸ್ತರು ಸೊರ್ಕುಂಟೆಯ ಸಾತ್ತ ದೇವರಿಗೆ ಕೊಟ ಮೂಲೆಗಾಸಿನ ಧರ್ಮಶಾಸನದ ಕ್ರಮವೆಂತೆಂದರೆ (ಎಕ. IX (8), ಕಲಮಂ. ೯೦-೩; 1630). [ಮೂಲೆ₂ + ಕಾಸು₂]

**ಮೂಲೆಗುಂಪು** (ನಾ). (ಆಲಂ) ವ್ಯರ್ಥ ; ಹಾಳು.

**ಮೂಲೆಗುಂಪಾಗು** = ನಿರುಪಯುಕ್ತವಾಗು ; ಪ್ರಯೋಜನಕ್ಕೆ

**ಬಾರದಾಗು** : ಆದಷ್ಟೇ ಕಾರಣಕ್ಕೆ ನಿರಾಪರಾಧಿಯಾದ ಹೆಣ್ಣಿನ ಜೀವನ ಮೂಲೆಗುಂಪಾಗಿತ್ತು (ಮರಳಿ. ೯೩); ಗದ್ಯವು ಅನಾಮಧೇಯ ಪರಿಸ್ಥಿತಿಯಲ್ಲಿ ಮೂಲೆಗುಂಪಾಗಿದ್ದಿತೆಂದು ಹೇಳಿದರೂ ಸಲ್ಲುತ್ತದೆ (ಅರ್ಧಶಾ. ೪೦).
[ಮೂಲೆ$_1$ + ಗುಂಪು$_1$ (< ಗುಣ್ಪು$_1$)]

**ಮೂಲೆಗೊಂಗಡಿ** (ನಾ). ಮೂಲೆಯಾಕಾರದ ಗೊಪ್ಪೆ : ನಿಲುವಂಗಿ ಮುಂಡಾಸು ಮೂಲೆಗೊಂಗಡಿ . . . ಪಾದದೊಳ್ರನ್ನದಾವುಗೆ ಮೆಟ್ಟಿ ಕಂಗೆಸೆದನಾ ಸಿದ್ಧನು (ಸಿದ್ಧಕಾ. ೦೦-೦೩). [ಮೂಲೆ$_1$ + ಗೊಂಗಡಿ]

**ಮೂಲೆಮಟ್ಟ** (ನಾ). (ಕಟ್ಟಡಗಳ ನಿರ್ಮಾಣಕಾಲದಲ್ಲಿ) ಸಮಕೋನಗಳನ್ನು ನಿರ್ಮಿಸಲು ಅಥವಾ ಪರೀಕ್ಷಿಸಲು ಬಳಸುವ ಸಲಕರಣೆ : ಎರಡು ಕರಣೆಗಳು, ಒಂದು ತೂಕದ ಗುಂಡು, ಒಂದು ರಸಮಟ್ಟ, ಒಂದು ಸಣ್ಣ ಮೂಲೆಮಟ್ಟ (ಜ್ಞಾಕಕ. ೦೯೯).
[ಮೂಲೆ$_1$ + ಮಟ್ಟ$_1$. / ತಮಿ. ಮೂಲೈಮಟ್ಟಮ್ : ತೆಲು. ಮೂಲಮಟ್ಟಮು]

**ಮೂಲೆವತ್ತ**, ಮೂಲೆವರ್ತ (ನಾ). ಒಂದು ಬಗೆಯ ತೆರಿಗೆ (?) : ಪೊನ್ನಲು ಧಾನ್ಯ ಬಳ್ಳ ೧ ಮೂಲೆವತ್ತಂ ಮಾನ ೧ (ಕಶಾ. ೪೦-೩೮-೨೨ ; 1087) ; ಮೂಲೆವತ್ತಂ ಹೇಜುಂಗೆ ಹಿರಿಯ ಸೊಳಸ ೨ ಸೊಂಟಿಗೆಯಕ್ಕಿ (ಶಾಸಾ. IX-i, ೦೭೨-೪೦ ; 1106) ; ಹೇಜುನಲು ಮೂಲೆವತ್ತ ಮಾನ ೧ (ಶಾವೇಡ. ೩೯-೨೬ ; 12ಶರು ಶಶ). **ಮೂಲೆವರ್ತ** : ತನ್ನಂತರ್ರಾಳಿಕೆಯ ಮೂಲೆವರ್ತ ಮುಖ್ಯವಾಗಿ ಪೆಜುಂಕದಧಿಕಾರಿ ಚಾವುಣ್ಣರಾಯನುಂ (ಪ್ರಳಾ. ೦೯೨೯, ೬೨-೦೦ ; 1319). ' ಮೂಲ್ಯವತ್ತ ' ಪರಾ.
[ಮೂಲೆ$_2$ + < ವಟ್ಟ]

**ಮೂಲೆವರ್ತ** ' ಮೂಲೆವತ್ತ ' ನೋ.

**ಮೂಲೆವೀಸ**, ಮೂಲವೀಸ (ನಾ). ಒಂದು ಬಗೆಯ ತೆರಿಗೆ (?) : ದುಮ್ಮಿಯ ಪುರವರಾಧೀಶ್ವರ ಶ್ರೀವೀರಭದ್ರದೇವರ ಅಮೃತಪಡಿಗಾಗಿ ದುಮ್ಮಿಯ ನಿರಾಶ್ರಯಮಠದ ಕೆಞ್ಚವೀರಣ್ಣೊಡೆಯರು ಕೊಟ್ಟಂಥ ಮೂಲೆವೀಸದ ವಿವರ (ಎಕ. XI, ಹೊಳಲ್ಕೆ. ೦೩-೦೩ ; ಸು. 1525). **ಮೂಲವೀಸ** : ಚೆಂನಮಾಜಿಯವರೂ ಬರಸಿ ಕೊಟ್ಟ ಮೂಲವೀಸದ ಧರ್ಮಶಾಸನದ ಕ್ರಮವೆಂತೆಂದರೆ (ಎಕ. VIII, ತೀರ್ಥಹ. ೯೩-೦೯ ; 1694). ' ಮೂಲ್ಯ ' ಪರಾ. [ಮೂಲೆ$_2$ + ವೀಸ]

**ಮೂಲೆಸುಂಕ** (ನಾ). ಒಂದು ಬಗೆಯ ತೆರಿಗೆ : ಒಕ್ಕಲುದೆಜು ಮೂಲೆ ಸುಂಕಂ . . . ಸರ್ವಬಾಧಾಪರಿಹಾರವಾಗಿ ಬಿಟ್ಟರು (ಎಕ. VIII, ಸೊರಬ. ೩೨೬-೩೩ ; 1159). [ಮೂಲೆ$_2$ + ಸುಂಕ$_1$]

**ಮೂಲೆಹೇರು** (ನಾ). (ಕೊಡುಗೆಯಾಗಿ ನೀಡಿದ ಜಮೀನಿನಲ್ಲಿ ಬೆಳೆದ ಯಾವುದಾದರೂ) ಸರಕಿನ ಹೆಸರು : ಯಡದೊರೆಕೋಟೆಮಾರ್ಗದಲ್ಲಿ ಮೂಲೆಹೇರ್ರಿಗೆ ಕಾಸು ೧ (ಎಕ. III (R), ನಂಜನ. ೩೩೭-೦೦ ; 1771). [ಮೂಲೆ$_2$ + ಹೇರು$_2$ (< ಪೇಱು$_2$)]

**ಮೂಲೋಕ**, ಮುಲ್ಲೋಕ (ನಾ). ಸ್ವರ್ಗ, ಮರ್ತ್ಯ ಮತ್ತು ಪಾತಾಳವೆಂಬ ಮೂರುಲೋಕ : ತ್ರಿಲೋಕ : ಮೂಲೋಕಕ್ಕೆ ಪೆಂಡಿರ್ಧಗುಂದಲೆಯಾಗಿರ್ಪುದು ದೇವದುಪತಿರತಶ್ರೀಸುಂದರಾ ಮಂದರಂ (ಅಜಿಪು. ೧-೩೦) ; ಮೂಲೋಕದೊಳವಯಿಸುವೀ ಬಾಲಿಕೆಗೆಣೆಯಿಲ್ಲವೆಂದೆ ಕಂಗೊಳಿಪ ವಧೂಜಾಲದೊಳೆಂದಿರದಱಿಪುವ ಪೋಲಡಗಿದುವವಳ ತ್ರಿವಳಿಗಳ್ (ಅನ್ನಪು. ೬-೯೮); ಅಱಿವಿನೊಳ್ ಮೂಲೋಕಮಂ ಕಾಣ್ಬ . . . ಅರುಹಂತಂ ಸಲ್ಲೇಖಂ ಮಾಡಿಕ್ಕಿ ಬೇಡಿಮುದಂ ತನ್ನಱಿವಟ್ಟಿಗರ್ಗೆ (ಕನ್ನಾಶಾ. ೩೦೩). **ಮುಲ್ಲೋಕ** : ಮುಲ್ಲೋಕದಲ್ಲಗಜೆ ಶ್ರೀರಾಮನಾಮ ಸರ್ವೋತ್ಕೃಷ್ಟವು (ಪಂಕಾರಾ. ೨-೨೨-೬).

**ಮುಲ್ಲೋಕದಲ್ಲಣ** = ಮೂರುಲೋಕಗಳಿಗೂ ತಲ್ಲಣವನ್ನುಂಟುಮಾಡುವವನು : ಮುಲ್ಲೋಕ[ಶಾಶಾ. ಮೂಲೋ]ದಲ್ಲಣ ರಾವಣಾಸುರ ಮುಖ್ಯರಾಕ್ಷಸರ ನುಡಿದನು ಯುವಾಪುರಿಗೆ ರಣದೊಳಗೇಕಪತ್ನೀವ್ರತನು (ಕೊರರಾ. ೬-೩೨-೪). [ಮೂ$_1$ (< ಮೂಱು) + ಲೋಕ]

**ಮೂಲೋತ್ಪಾಟ** (ನಾ). ೧. ಗಿಡ ಮರಗಳನ್ನು ಬೇರುಸಮೇತ ಕೀಳುವುದು. ೨. (ಆಲಂ) ಸಂಪೂರ್ಣವಾದ ನಾಶ ; ನಿರ್ಮೂಲ : ಮಲೆಪರ ಮೇಲೆ ಯುದ್ಧಕ್ಕೆ ಹೋಗಿದ್ದ ಬೊಪ್ಪಣ ಅವರ ಮೂಲೋತ್ಪಾಟ ಮಾಡಿ, ದಂಡಿನೊಡನೆ ಹಿಂದಿನ ರಾತ್ರಿಯೆ . . . ಬಂದು ಸೇರಿದ್ದ (ಕಾಂತರಾ. ೦೭೯). [ಸಂ.]

**ಮೂಲೋತ್ಪಾಟನ** (ನಾ). ೧. = ಮೂಲೋತ್ಪಾಟ ೧. ೨. = ಮೂಲೋತ್ಪಾಟ ೨ : ವರ್ಣಭೇದವನ್ನು ಮೂಲೋತ್ಪಾಟನ ಮಾಡಿದ ಅಪೂರ್ವಪುಣ್ಯವು ಸರ್ ಜೆ. ಸಿ. ಬೋಸರಿಗೆ ಲಭಿಸಿತು (ಜಗಶಂ. ೨). [ಸಂ.]

**ಮೂಲೋತ್ಪಾಟನೆ** (ನಾ). = ಮೂಲೋತ್ಪಾಟ ೨ : ಸಂಪ್ರದಾಯ ಪರಿಸ್ಥಿತಿಯ ಮೂಲೋತ್ಪಾಟನೆಗೆ ಅಜನ್ಮವಿಸರಾಗಿರಲೆಂದೂ ಅವನು ಆಶಿಸಿದನು (ಪ್ರವರು. ೩೦೩) ; ಈಶ್ವರ ಜಗತ್ತನ್ನು ಲಯಗೊಳಿಸುತ್ತಾನೆ, ಅಧರ್ಮವನ್ನು ಮೂಲೋತ್ಪಾಟನೆ ಮಾಡುತ್ತಾನೆ (ತತ್ವಶಾ. ೩೩೦).
[ಸಂ. ಮೂಲೋತ್ಪಾಟನ]

**ಮೂಲ್ಯ** (ಗು). ೧. ಆರಂಭದ ; ಮೂಲದ. ೨. ಬೆಲೆ ಕೊಟ್ಟು ತರಬಹುದಾದ ; ಕೊಂಡುಕೊಳ್ಳಬಹುದಾದ. ೩. ಬುಡಸಹಿತ ಕೀಳಲು ಯೋಗ್ಯವಾದ ; ಮೂಲೋತ್ಪಾಟನ ಮಾಡಬಹುದಾದ. (ನಾ). ೪. ಬೆಲೆ ; ದರ; ಧಾರಣೆ. ೫. ವೇತನ ; ಪಗಾರ ; ಸಂಬಳ: "ಭೃತಿಃ . . . ಮೂಲ್ಯಂ, ವೇತನಂ ಈ ೬ ಬೆಲೆ" (ಶಬ್ದಮ. ೦೨೦-೯೩). ೬. ಉಪಯುಕ್ತವಾದುದು ; ಬೆಲೆಯುಳ್ಳದು : ನಿರ್ಮಳಭೇದಮಾದ ಕೊಂಡಾಟದನಂತಸೌಖ್ಯಮನೆ ಮಚ್ಚದ ಮಚ್ಚುಗೆಯೊಳ್ ತೊಡರ್ಚ ಮಾಜುಪಾಟದಿನೆನ್ನ ದರ್ಶನವಿಶುದ್ಧಿಯೆ ಮೂಲ್ಯಮೆನಲ್ ಜಿನೇಶ್ವರಾ (ಶಂಬಾಮಾ. ೩-೦೦). ೭. ಆದರ್ಶ ; ತತ್ತ್ವ ; ಮೌಲ್ಯ : ತನ್ನವೇ ವೈಯಕ್ತಿಕ ಹಾಗೂ ಸಾಮಾಜಿಕ ಮೂಲ್ಯಗಳನ್ನು ಹುಡುಕುವ ಹವ್ಯಾಸಕ್ಕೆ ಬಿದ್ದ (ಮುಕ್ತಿ. ೨೦) ; ಸಾಹಿತ್ಯದ ಕೆಲವು ಮೂಲ್ಯಗಳ ಬಗೆಗೂ ಅವರು ಚರ್ಚಿಸಿದರು (ದೂರಕ. ೦೩). ೮. ಅಸಲು ; ಬಂಡವಾಳ : ಅವರ ಶ್ರಮ್ಮ ಶಕ್ತಿಯನ್ನು ಅದರ ಶುದ್ಧಮೂಲ್ಯಕ್ಕೆ ಕೊಳ್ಳದೇ ಅದನ್ನು ಜೀವಂತವಿಡುವ ವೆಚ್ಚಕ್ಕೆ ನಾನು ಕೊಳ್ಳುತ್ತೇನೆ. ಆ ಮೂಲ್ಯಕ್ಕಿಂತ ಈ ವೆಚ್ಚ ಎಷ್ಟೋ ಕಡಿಮೆ ಇರುತ್ತದೆ (ಕೂಡಾಡ. ೦೨೨). ೯. ಗಳಿಕೆ ; ಲಾಭ. ೧೦. ಬೆಲೆಕೊಟ್ಟು ಕೊಂಡ ವಸ್ತು ; ಕೊಂಡುಕೊಂಡ ಪದಾರ್ಥ. ೧೧. ಉಂಬಳಿ; ಮಾನ್ಯ ; ಕೊಡುಗೆ : ' ಮೂಲ್ಯವತ್ತ ' ಪರಾ.
[ಸಂ.]

**ಮೂಲ್ಯಮಾಪನ** (ನಾ). ವಸ್ತು, ಕಲಾಕೃತಿ ಮುಂತಾಹುವುಗಳ ಯೋಗ್ಯತೆಯನ್ನು ಕುರಿತಂತೆ ಮಾಡುವ ನಿರ್ಣಯ : ಈ ಅಲಿಪ್ತ ಭಾವ ಲೇಖಕರಿಗೆ ಸಾಧಿಸಿದರೆ ಸಂಸಾರದಲ್ಲಿ ಘಟಿಸಿದ ಘಟನೆಗಳ ಮೂಲ್ಯಮಾಪನವನ್ನು ಲೇಖಕ ಸರಿಯಾಗಿ ಗುರುತಿಸಲು ಸಮರ್ಥನಾಗುತ್ತಾನೆ (ಕೃತಿತಿ. ೩). ' ಮೌಲ್ಯಮಾಪನ ' ಪರಾ. [ಸಂ.]

**ಮೂಲ್ಯವತ್ತ** (ನಾ). ಒಂದು ಬಗೆಯ ತೆರಿಗೆ : ಅಮ್ಮಣಯ್ಯದಂಡನಾಯಕರು ಪ್ರಮುಖಕರಣಂಗಳು ತಮ್ಮಾಯದ ಹೇಜುಂಗೊಟ್ಟಳ ಮೂಲ್ಯವತ್ತಮಂ ಬಿಟ್ಟರು (ಎಕ. V, ೨೩-೨೬ ; 1165). ' ಮೂಲೆವತ್ತ ' ಪರಾ. [ಮೂಲ್ಯ + < ವಟ್ಟ]

**ಮೂವಂಕ** (ನಾ). ಮೂರುಕಡೆಗಳಲ್ಲಿ ಬಾಗಿರುವುದು, – ಕೊಂಕಿರುವುದು : ಅವರ ಮೂವಂಕದ ಕೊಂಬುಗಾಳೆಯ ದನಿಗೇಳ್ವುದುಂ . . . ಬೆಚ್ಚಿ (ಶಕಂ. ೪೦೬). [ ಮೂ$_1$ (< ಮೂಱು) + ವಂಕ$_1$ ]

**ಮೂವಚ್ಚಿ**, ಮುಯ್ಯಚ್ಚಿ (ನಾ). ಮೂರು ಕಣ್ಣು : ಮೂವಚ್ಚಿಯ್ಯ ಮೊಗದ ಶಿವ ಸುಮ್ಮಾನದಿಂ ಸಲಹುಗೆ (ಶಂಠಸೂ. ೨೦-೩೪). **ಮುಯ್ಯಚ್ಚಿ**: 'ಮುಯ್ಯಚ್ಚಿಗ' ಪರಾ. [ಮೂ$_1$ (< ಮೂಱು) + ಅಚ್ಚಿ$_5$]

**ಮೂವಚ್ಚೆ** (ನಾ). ಮೂರು ಗುರುತು,—ಚಿಹ್ನೆ : ಗುರುಕುಚಜಘನಂಗಳ ತೂಗವೇಳ್ಕೆಂದು ಸರಸಿಜಭವ ನಡು ಒಡಿದೆತ್ತಿ ಬೆರಲ ಮೂವಚ್ಚೆಗಳ ಮೃದು ರಂಜಿಸುವಂತೆ ತರಳೆಯ ತಿವಳಿಗಳೆಸೆದವು (ತ್ರಿಕುತಿ. ೨೦-೪೬).
[ಮೂ$_1$ (< ಮೂಱು) + ಪಚ್ಚೆ]

**ಮೂವಟ್ಟಲ್**, ಮೂವಟ್ಟಲು (ನಾ). ಪುಣ್ಯಾಹ ಮೊದಲಾದ ಶುಭ ಕಾರ್ಯಗಳಲ್ಲಿ ಮೂರುಪಾತ್ರೆಗಳನ್ನಿಟ್ಟು ಮಾಡುವ ಒಂದು ಧಾರ್ಮಿಕವಿಧಿ : ಮೂವಟ್ಟಲ್ ಬಲಿಮುಖ ನಾನಾವಿಧಲೌಕಿಕಶುಭಂಗಳಂ ವಿರಚಿಸಿ ಮೇಣಾವರಿಸಿದ ಮುದದಿಂ ತದ್ವಿವರನೆಸೆದಿರ್ದಂ (ಉದ್ಭಟ. ೬-೩೪). **ಮೂವಟ್ಟಲು** : ಈಱಲು ಮೂವಟ್ಟಲು ಹಸೆಹಂದರ ತೊಂಡಿಲು ದಾಸಿಂಗ ಹಣೆಯಕ್ಕಿ ಹೆಣನ ಸಿಂಗಾರ ಶ್ರಾದ್ಧ ಕೂಳು ಈ ಪರಿಯ ಮಾಡುವನೆ ಶಿವಭಕ್ತ (ಶಶ್ವಶ. ೪. ೦೦೬-೨೩೮) ; ಪಟ್ಟಣದೊಳು ಸಂಭ್ರಮವೆಡೆವಿಡದೆ ಮೂವಟ್ಟಲ ಮಾಡಿದರೊಲಿದು (ಶೋಹಕ. ೦೬-೪೦).
[ಮೂ$_1$ (< ಮೂಱು) + ಬಟ್ಟಲ್]

**ಮೂವಟ್ಟಲು** 'ಮೂವಟ್ಟಲ್' ನೋ.

**ಮೂವಟ್ಟೆ** (ನಾ). ಸ್ವರ್ಗ, ಮರ್ತ್ಯ ಮತ್ತು ಪಾತಾಳ ; ಮೂರು ಲೋಕಗಳು; ತ್ರಿಪಥ : ಜಾನಕಿಯ ಕಣ್ಗೆ ತೋಱಿತು ಮುಂದೆ ಸನ್ನುತ ರಘೂದ್ವಹನ ಕೀರ್ತಿಯೆನೆ ಮೂವಟ್ಟೆಯನ್ನಡೆದು ಮುಕ್ಕಣ್ಣನಂ ಸಾರ್ದು . . . ಪೆಂಪೊದವಿ ಪಱಿವ ಬೆಳ್ದೊವನಲ್ಲಿ ವಿಜನದಿಯ (ಕೃಷ್ಣಾ. ೦೯-೪).
[ಮೂ$_1$ (< ಮೂಱು) + ಬಟ್ಟೆ$_1$]

**ಮೂವಡಿ**, ಮುಮ್ಮಡಿ$_1$, ಮೂಮಡಿ, ಮೂರ್ಮಡಿ (ನಾ). ೧. ಮೂರು ಪಟ್ಟು ; ಮೂರರಷ್ಟು : ಜನನಪ್ರಸ್ತುತಕಾಲದೊಳ್ . . . ತ್ರಿಗುಣಮಂ ತಾನೀಗುಮಾ ಮೇಗೆ ಪೆತ್ತನಿತಂ ಮೂವಡಿ ಮಾಟ್ಪುದೊಮ್ಮೆಯೆ ವಲಂ ದ್ವಿತ್ರ್ಯಾಹತಂ ಬಂದೊಡಂ (ಜಾತಿ. ೬-೩) ; ಧರೆಯೊಳ್ ದೀರದ ಪೆಂಪಿಂ ನರನಿಂದಿರ್ಮಡಿ ಬಕಾರಿಯಿಂ ಮೂವಡಿ ಭಾಸ್ಕರಸುತನಿಂ ನಾಲ್ವಡಿ (ಗದಾ್ಯ. ೬೦) ; ಮೂವಡಿ ನಾಲ್ಮಡಿಯ್ಯಮಡಿ ಸಂತಸದಿಂದೆ ತಂದೆ ಮಗಳಂ ಕರೆದಂ (ಗಿರಿ. ೩-೦೦೪). (ಗು). ೨. ಮೂರನೆಯ : ಶ್ರೀಮನ್ಮೂವಡಿ ಚಲ್ಲುಕದೇವರ್ . . . ಬಿತ್ತುವಟ್ಟವ ಕಳದೊಳ್ ಕುಡುವರ್ (ಎಕ. IX. ಚನ್ನಪ. ೪೬-೬ ; 901 ?). **ಮುಮ್ಮಡಿ$_1$** : ೧. ಜೈನಭಕ್ತಿಯೊಳ್ ವರವಧುವಪ್ಪ ರೋಹಿಣಿಗೆ ಮುಮ್ಮಡಿ (ಧರ್ಮಾಮೃ. ೪-೦೪) ; ಅಂತಾಗದಡೆ ಕೊಳ್ಳಿದಱ ಬೆಲೆಯಂ ಹೇಳಿಯುದಱಿಂದ ಆಗದಡೆ ಇಮ್ಮಡಿಯು ಮುಮ್ಮಡಿಯಾಗಿ ಕೊಟ್ಟೆಹೆನು (ಬಸವ. ೨೬-೪೦). ೨. ಮಾರಿಯ ಮೂರಿ ಯಾನ್ತರಿಗೆ ಮುಮ್ಮಡಿ ಚೋಳನ ಗನ್ಧವಾರಣಂ (ಎಕ. III, ಶ್ರೀರಂಗ. ೧೪೦-೦೬ ; 1012) ; ಮಣ್ಣೆನಾಡ ಬಳೆವಾಡಿಯ ಮುಮ್ಮಡಿ ಚೋಳ ಗಾವುಣ್ಡನುಂ ಸಾಕ್ಷಿ (ಎಕ. IX. ಚಂಪು. ೦-೨೦ ; 1029). ೩. ಮೂರರಷ್ಟು ಇರುವ ; ಮೂರುಪಟ್ಟು ಅತಿಶಯವಾಗಿರುವ : ಬಣಗರ ತೊಲಗ ಪೇಳೆನುತ ಮುಮ್ಮಡಿ ರಾವಣನಂತೆ ನಿಂದು ಗರ್ಜಿಸಿದ (ಕೋಹಕ. ೦೨-೪೪). **ಮೂವಡಿ** : ೧. 'ಮೂವಡಿವೀರ' ಪರಾ. **ಮೂರ್ಮಡಿ** : ೧, ಮಡದಲಿ ನೂಂಕೆ ವಾಜಿ ಗರುಡಂಗಮದಿರ್ಮಡಿ ವಾಯುವಿಂಗೆ ಮೂರ್ಮಡಿಯೆನಿಪೊಂದು ತನ್ನ ಜವದಿಂ ಪರಿಯಲ್ಕೆ (ಆರಂಭ. ೬೨೦) ; ವಸುಧೆಯೊಳತ್ಯಧಿಕಪಾಪಂ ಪುಸಿವುದದಱಿಂ ಕೇಳಿರಡು ಮಡಿ ಪುಸುವ ಕೊಲ್ಲುವುದದಱ ಮೂರ್ಮಡಿಯಾದ ಪಾತಕವು ಸಿಹುವ ಕೊಲ್ಲುವುದು (ಚಂದ್ರಾ. ೦೦-೨೨).

**ಮೂವಡಿಗಂಡ** = (ಶತ್ರುಗಳಿಗಿಂತ) ಮೂರುಪಟ್ಟು ಪರಾಕ್ರಮಿಯಾದವನು ; ಮಹಾವೀರ; ಒಂದು ಬಿರುದು : ಸಮಧಿಗತ ಪಂಚಮಹಾಶಬ್ದಮಹಾಮಣ್ಡಲೇಶ್ವರಂ . . . ಮೂವಡಿಗಣ್ಡಂ (ಎಕ. XII, ೨೬೯-೭ ; 1040). **ಮೂವಡಿಜೂಜು** = ಶತ್ರುಗಳ ಪಾಲಿಗೆ ಬಹಳ ಭೀಕರನಾದವನು ; ಒಂದು ಬಿರುದು : ಮೂವಡಿಜೂಜು ನಾಮಾದಿ ಸಮಸ್ತಪ್ರಶಸ್ತಿಸಹಿತಂ (ದೊಂಕಣ. ೬೪೩೬. ಜಾಸುಗ. ೭೩-೦೩; 975); ಮೂವಡಿಜೂಜು ನಾಮಾದಿ ಸಮಸ್ತಪ್ರಸಸ್ತಿ ಸಹಿತಂ ಶ್ರೀಮನ್ಮಹಾಮಣ್ಡಳೇಶ್ವರಂ ಕೀರ್ತಿವರ್ಮ್ಮದೇವರ ಬೆಸದೆ . . . ಬಿಟ್ಟ ಉಪ್ಪಿನ ಹೇಱು ಅಯ್ವತ್ತು (ಸೌಇಇ. XX. ೩೪-೦೩ ; 1053).
[ಮೂ$_1$ (< ಮೂಱು) + ಮಡಿ$_2$]

**ಮೂವಡಿಗೂಡು** (ಕ್ರಿ). ಮೂರರಷ್ಟು ಬೆರಸು ; ಮೂರುಪಾಲು ಸೇರಿಸು : ಜಳದಂ . . . ಕಟುಕಂ ಭಿನ್ನೇಜಮೆಂಬಿಂತಿವಂ ಜಳದೊಳ್ ಮೂವಡಿಗೂಡಿ ಕಾಸಿ ಮಧುಮಿಶ್ರಂ ಪೊಯ್ಗೆ (ಲೋಕೋಪ. ೯-೨೩೩).
[ಮೂವಡಿ + ಕೂಡು$_1$]

**ಮೂವಡಿನಾಡು** (ನಾ). ಮೂರುಲೋಕ ; ತ್ರಿಲೋಕ : ಭಾವಿಸಿ ಭಜಿಸುವ ಭಕ್ತರ ಠಾವಿನೊಳಿರ್ಪೊಂದು ಹರ್ಷಮಿಲ್ಲಿಯುಮಿಲ್ಲಾ ಮೂವಡಿ ನಾಡೊಳಮಿಲ್ಲೆನೆಯೇವಣ್ಣಿಪೆನೆನ್ನ ಮನದ ನನ್ನಿಯ ನೆಲೆಯಂ (ಶಿವಶ. ೩-೯೭). [ಮೂವಡಿ + ನಾಡು]

**ಮೂವಡಿಸು**, ಮುಮ್ಮಡಿಸು, ಮೂಮಡಿಸು, ಮೂವಳಿಸು (ಕ್ರಿ). ೧. ಮೂರರಷ್ಟಾಗು ; ಮೂರುಪಟ್ಟಾಗು : ವಿರಹವಿಮ್ಮಡಿಸೆ ಸುಯ್ ಮೂವಡಿಸೆ ಮೈಬಿಸುರ್ಪಿರದೆ ನಾಲ್ವಡಿಸೆ (ಶಂಭು. ೪೬-೦೦). ೨. (ಅಲಾ) ಅಧಿಕಗೊಳಿಸು ; ಹೆಚ್ಚುಮಾಡು : ನೃಪನ ದಕ್ಷಿಣಪಾರ್ಶ್ವದೊಳೊಪ್ಪಿ ತೋರ್ವ ತತ್ತರುಣಿಯ ಕೈಯ ಖಡ್ಗಲತೆ ಮೂವಡಿ[ಜಾಣಂ. ೪]ಸಿತ್ತು ಮನಕ್ಕೆ ಮೂರ್ಛೆಯಂ (ಪುಷ್ಪ. ೬-೦೦೭) ; ಕಣ್ಣ ಬೆಳಗುಂ ಮುಖದ ಕಾಂತಿಯುಂ ಮಿಗೆ ಸೊಗಸಂ ಮೂವಡಿಸೆ (ಗಿರಿ. ೭-೦೦ ಪ); ಇಮ್ಮಡಿಸಿ ಮೂವ[ಜಾಣಂ. ಮುಮ್ಮ]ಡಿಸಿ ಸಾಧುಗಳತ್ತ ಹರಕೆಗಳಿಂದಲೇನಹುದು (ಬಸವ. ೨೩-೩೬). **ಮುಮ್ಮಡಿಸು** : ೧. ನನ್ನ ದುಃಖ ಇಮ್ಮಡಿಸಿ ಮುಮ್ಮಡಿಸಿ, ಉಕ್ಕಿ ಹೊರಚೆಲ್ಲಿ ಹೋಯಿತು (ಶ್ರೀಶ. ೦೬೩) ; ತಿಂಗಳಿನ ವೆಚ್ಚಗಳು ಕುಳಿತಲ್ಲಿಯೇ ಮುಮ್ಮಡಿಸಿದವು (ಸುಗಿಯು. ೩೬೬). **ಮೂರ್ಮಡಿಸು** : ೧. ಇರ್ಮಡಿಸಿ ಮೂರ್ಮಡಿಸಿ ನೂರ್ಮಡಿಸಿದುದು ವೈರುಪಚ್ಚಿ (ಚಂದ್ರಸ. ೩೯-೨೩). **ಮೂವಳಿಸು** : ೧. ಗಿಳಿಗಳ ಒಡ್ಡನಿನ್ದಸೆವ ಕೆಯ್ದೊಳದಿಂ ಮುಗಿಲುದ್ದವಾಗಿ ಮೂವಳಿಸಿದ ಕೋಟೆಯುಂ . . . ಊರ್ಗ್ಗಳೊಪ್ಪುಗು (ಸೌಇಇ. IX-i. ೨೯೭-೦೦ ; 1177).
[ಮೂವಡಿ + — ಇಸು$_3$]

**ಮೂವಣ್ಣ**, ಮುಬ್ಬಣ್ಣ (ನಾ). ಮೂರುಬಣ್ಣ ; ತ್ರಿವರ್ಣ : ಮೂಗಾವುದಂ, ಮೂವಣ್ಣಂ, ಮೂವಳಸು (ಶಾಶಾಕೊ. ೦೩೩ ಉಪಾ) ; ಅಂದಂಬಡೆದ ಮೊದಲ ಮೂವಣ್ಣಮದೊಂದೊಂದಱೊಳೊಂದಿದ ಬಗೆ . . . ಕರಂ ಮನಸಂದುದು (ಶಬ್ದಾಳ. ೩-೩) ; ಮೂವಣ್ಣಕ್ಕೀಡಪ್ಪಂ ತಾವರೆವಾಗೆಯೊಂದದಿನದೊಳೆನುತದನಿಳಿಕ್ಕೆದಾ ವನಿತೆಯ ನುಣ್ಗದಪದು ಭಾವಿಸೆ ಶಾಶ್ವತನಿಜಪ್ರಕಾಶದಿನೆಸೆಗುಂ (ಶೃಶಶಿ. ೪-೦೦೩). **ಮುಬ್ಬಣ್ಣ** : ಕಪ್ಪು-ಬಿಳಿ ಫೋಟೋಗಳನ್ನೂ ತೆಗೆದೆವು. ಮುಬ್ಬಣ್ಣದ ಫೋಟೋಗಳನ್ನೂ ತೆಗೆದೆವು (ಹಸುಹೂ. ೨೦೭).

**ಮೂವಣ್ಣದಣ್ಣ** = (?) : ಮೂವಣ್ಣದಣ್ಣಗಳನು ಹೆ[ಜಾಣಂ. ಮೊ]ಣ್ಣ ಮಾಡಿಯೆ ಹಿಡಿತಹೆನು (ತ್ರಿಕುಜಾ. ೦೨-೦೩೦). **ಮೂವಣ್ಣದಾಬೆ** = ಪರಾಶಕ್ತಿ ; ಆದಿಪ್ರಕೃತಿ ; ಮೂಲಶಕ್ತಿ : ಹರಹಿನಲಿ ಬೇಟದಲಿ ಮೂವಣ್ಣದಾಬೆಯ ಕೂಟದಲಿ ಕುಱುಹಾಗಿ ಮಿಗೆ ನಿಲೋರ್ಟಿಸುವ ನಿಜ ದಿಟ್ಟ ಬೊಮ್ಮವಿದು (ಕುಮಾ್ಯಸ. ೯-೦೭). [ಮೂ$_1$ (< ಮೂಱು) + ಬಣ್ಣ]

**ಮೂವಣ್ಣಂಗೊಳ್,** ಮೂವಣ್ಣಗೊಳು (ಕ್ರಿ). ೧. ಮೂರುಬಣ್ಣಗಳಿಂದ ಕೂಡಿರು ; ತ್ರಿವರ್ಣವಾಗು. ೨. (ಅಲಂ) ಮೂರು ಬೇರೆ ಬೇರೆ ರೂಪಗಳಾಗು : ಮೂವರುಮವರ ತನೂಜರ್ ಮೂವಣ್ಣಂಗೊಂಡು ತೆಲುಗ ಕನ್ನಡ ತಿಗುಳರ್ ತೀವಿದ ನಾಡುಗಳಂ ಕಾವೋಽವಲ್ಕೆಂದಡರ್ದರಂದು ಮೂಱು ಪೊಟಲಂ (ಶಶಿಪ. ೨-೩೦). **ಮೂವಣ್ಣಗೊಳು :** ೩. ವಿವರ್ಣವಾಗು ; ಪೇಲವವಾಗು: ಬಿಳಿವಣ್ಣಗಳ್ ಕಾದಲರ್ ತೊಲಗೆ ಹೊಲಬಳಿದು ಮೂವಣ್ಣಗೊಳುತಿರ್ದರಂದು (ಉದ್ಭರ. ೪-೪೦). [ ಮೂವಣ್ಣ + ಕೊಳ್$_1$ ]

**ಮೂವಣ್ಣಂಬರ್** (ಕ್ರಿ). ೧. ಮೂರುಬಣ್ಣಗಳಲ್ಲಿ ಹಾದುಬರು ; ಮೂರುರಂಗುಗಳನ್ನು ಹೊಂದು : ಕಂದಿದಳುಟೀದೊಡೆ ಬೆಳ್ಪನೊಳೊಂದಿದಳೊಂದದೊಡೆ ಬಂದೊಡತಿರಾಗಕ್ಕಂ ಸಂದಳಿವಳ್ ಮೂವಣ್ಣಂಬಂದಳ್ ನಿಷ್ಕರುಣ ತರುಣಿ ನಿಷ್ಕಾರಣದಿಂ (ಕಂದ್ರಕೌ. ೬-೭೪). ೨. (ಬಾಲ್ಯ, ಯೌವನ ಮತ್ತು ಮುಪ್ಪು ಎಂಬ) ಮೂರು ಅವಸ್ಥೆಗಳನ್ನು ಹಾದು ಬರು; ಅವರಿಸೆ ಕೂಸುತನಮುಂ ಜೌವನಮುಂ ಮುಪ್ಪುಮಂತೀಯೆಂಬಿನ್ನೆವರಂ ಮೂವಣ್ಣಂಬರೆ ರೂಪಪರಾವರ್ತನವಿಧಿಯಿನವರ್ಗೆ ವಿಧಿ ವಿಧಿಯಿಸುಗುಂ (ಅಜಿತ. ೨-೯೩). ೩. (ಬ್ರಹ್ಮ, ವಿಷ್ಣು ಮತ್ತು ಮಹೇಶ್ವರ ಎಂಬ) ಮೂರು ಬೇರೆಬೇರೆ ಸ್ವರೂಪವನ್ನು ಪಡೆ : ಅವಾವ ತೆಱದೊಳೆಂತುಂ ಭಾವಿಪ್ಪೊಡನೇಕರೂಪನಾಗಿರ್ಪವರಂ ದೇವರವರೆಂದು ನಂಬದೆ ಮೂವಣ್ಣಂಬಂದ ದೇವರಂ ನಂಬುವುದೇ (ಸಮಶ. ೦-೦೨೩).
[ ಮೂವಣ್ಣ + ಬರ್ ( < ವರ್) ]

**ಮೂವಣ್ಣಂಬರಿಸು** (ಕ್ರಿ). ೧. ಮೂರುಬಣ್ಣಗಳು ಬರುವಂತೆ ಮಾಡು ; ತ್ರಿವರ್ಣವಾಗಿಸು. ೨. (ಬಾಲ್ಯ, ಯೌವನ ಮತ್ತು ಮುಪ್ಪು ಎಂಬ) ಮೂರು ಅವಸ್ಥೆಗಳನ್ನು ಉಂಟುಮಾಡು : ಸಾವನ್ನೆವರಂ ಸೈತಿರದಾವನೊಳಂ ಶೈಶವಂ ಯುವತ್ವಂ ಮುಪ್ಪೆಂಬೀ ವಿಧಿವಡೆದಿರ್ದಲ್ಲಿಯು ಮೂವಣ್ಣಂಬರಿಪ ದೇಹದೊಳ್ ಮೋಹಿಪುದೇ (ಧರ್ಮಾ. ೩-೯೩). ೨. (ಅಲಂ) ವಿವರ್ಣಗೊಳಿಸು ; ಪೇಲವವಾಗಿಸು : ಅಣ್ಣ ಮೊಱೆಗೊಳಿಸಿ ಜೋಳಕರಣ್ಣಲೆಯುಂ ತಳಿರನುಡಿಸಿ ನನ್ನಗೆಯುಂ ಮೂವಣ್ಣಂಬರಿಸಿದನುರ್ವರೆ ಬಣ್ಣಸಲೆಱೆಯಂಗನೃಪತಿಚಕ್ರಿಯ ಬೆಸದಿಂ (ಎಕ. V. ಅರಸೀ. ೦೦೨-೦೪ ; 1110 ? ).
[ ಮೂವಣ್ಣ + ಬರಿಸು ( < ವರಿಸು$_1$ )]

**ಮೂವಣ್ಣಗೊಳು** 'ಮೂವಣ್ಣಂಗೊಳ್' ನೋ.

**ಮೂವಣ್ಣವಡೆ** (ಕ್ರಿ). = ಮೂವಣ್ಣಂಬರ್ ೨ : ಹಸುಳೆತನದೊಳೊಂದು ಹೊಸಹರೆಯದೊಳೊಂದು ಹಸಗೆಟ್ಟ ಮುಪ್ಪಿನೊಳೊಂದು ಮುಸುಕಿದ ಮೂವಣ್ಣವಡೆದು ಕಡೆದು ಮತ್ತೆ ಮಸಿವಣ್ಣಹುದೀ ಒಡಲು (ತ್ರಿಪಾಂ. ೦೪-೪೦). [ ಮೂವಣ್ಣ + ಪಡೆ$_1$ ]

**ಮೂವತ್ತು,** ಮುಪ್ಪತ್ತು, ಮುವ್ವತ್ತು (ನಾ). ಒಂದು ಸಂಖ್ಯೆ ; ಮೂರು ಹತ್ತು ; ತ್ರಿದಶ : ನಾಲ್ವತ್ತು ಸಾಂಬಿನೊಳೊನ್ದು ಮೂವತ್ತಱ ಕಟಗಂ ಇನ್ನೂಱ ಮೇಲುಂ ಅರೆಸಾಂಪು (ಎಕ. VI. ೦೩೩-೭; 793) ; ಕೂಟಾ ತೊಱದು ಮೂವತ್ತುಗಾವುದ × × × ದೆವಸದೊಳೆಯ್ದಿ (ಸೌಇಇ. XI-i, ೦೦-೦೭ ; 865) ; ವೃಷಸೇನ ಸೌಬಲರ ಸರಳು ಮೂವತ್ತಱಿ . . . ಮುಱಿಯೆಚ್ಚು ವಿಮುಖರ ಮಾಡಿದನು ಭೀಮು (ಕುಮ್ಯಾವ್ಯ. ೦೩-೩೪). **ಮುಪ್ಪತ್ತು. ಮುವ್ವತ್ತು :** ಈಗ ಮುವ್ವತ್ತು ವರುಷಗಳ ಹಿಂದಲು ನಮ್ಮ ಊರ ನರಸಿಂಹಸ್ವಾಮಿಯ ವೈಭವವನ್ನು ಜ್ಞಾಪಿಸಿಕೊಂಡರೆ ದೇವರಿಗಿಂತ ಕಾಲವೇ ಪ್ರಬಲವಾದುದೆಂದು ತೋರುತ್ತದೆ (ಹೇಮಾಕೀ. ೪೩).

**ಮುವ್ವತ್ತೆರಡು ಕಲೆ** = [ವೀಶೈ] ಸದಾಚಾರ, ಸದ್ಭಕ್ತಿ ಇತ್ಯಾದಿ ಮೂವತ್ತೆರಡು ಬಗೆಯ ಕಲೆಗಳು; ಬತ್ತೀಸ ಕಲೆ : ಇಂತೀ ಮುವ್ವತ್ತೆರಡು ಕಲೆಗಳ ಸದ್ಗುರುಮುಖದಿಂದಱಿದ ಬಸವ ಮೊದಲಾದ ಸಮಸ್ತ ಪ್ರಮಥಗಣಂಗಳೆಲ್ಲ ಏರಾಭಾರಿ ವೀರಶೈವಸನ್ಮಾರ್ಗವಿಡಿದಾಚರಿಸಿದರು ನೋಡಾ (ವಚಾರೇ. ೩. ೯೦-೨೦೩). **ಮೂವತ್ತಾಱುಂ ಗುಣ** = [ಜೈನ] ಆಚಾರ್ಯನಿಗೆ ಅಗತ್ಯವಾದ ಮೂವತ್ತಾರು ಬಗೆಯ ಗುಣಗಳು : ಅನಶನಾದಿ ಹನ್ನೆರಡು ತಪಗಳು, ಸಾಮಾಯಿಕ ಪ್ರತಿಕ್ರಮಣಾದಿ ಆರು ಆವಶ್ಯಕಗಳು, ಉತ್ತಮಕ್ಷಮಾದಿ ಹತ್ತು ಧರ್ಮಗಳು, ಜ್ಞಾನಾಚಾರಾದಿ ಐದು ಆಚಾರಗಳು ಮತ್ತು ಮನೋಗುಪ್ತ್ಯಾದಿ ಮೂರು ಗುಪ್ತಿಗಳು : ಮೂವತ್ತಾಱುಂ ಗುಣಂಗಳ್ ತಮಗವರ್ದಿರೆ ಸಂದೈದುಮಾಚಾರದೊಳ್ಸದ್ಭಾವಂ ಕೈಗಣ್ಮೆ . . . ಆಚಾರ್ಯರಿನ್ನೆವ್ವ ನೇನೋದಾವಂ ತಳ್ತಟ್ಟದಂತೋಸರಿಸಿ ಕಳೆಗೆ ಸಂಸಾರಕಾಂತಾರದಿಂದಂ (ಅದಿಪು. ೦-೩); ಮೂವತ್ತಾಱುಂ ಗುಣದಿಂ ಭಾವಜನಂ ಕಟ್ಟಿ ಪೆಟ್ಟುವೆಟಿದರ್ ವೃಷದಿಂ ಭಾವಿಪೊಡೆ ಮೇಘಚಂದ್ರತ್ರೈವಿದ್ಯರದೆಂತೊ ಶಾಂತರಸವಂ ತಳೆದರ್ (ಶಂಣಾಪು. ೦-೦೯). **ಮೂವತ್ತಿರ್ವರ್, ಮುವ್ವತ್ತಿರ್ವರ್, ಮೂವತಿಬ್ಬರ್, ಮೂವದಿಂಬರ್**=ಮೂವತ್ತೆರಡು ಮಂದಿ; ಮೂವತ್ತೆರಡು ಜನ : ಅಯಿರ್ವರ್ಗಂ ಮಕ್ಕಳ್ ಶ್ರೀವರ್ಧನಂ ವಿಜಯಂಧರಂ ವೀರಬಾಹು ಮೊದಲಾಗಿ ಮೂವತ್ತಿರ್ವರ್ ಕುಮಾರರುಂ (ಪಾರ್ಶ್ವಪು. ೯೩-೦೯) ; ಮುವ್ವತ್ತಿರ್ವರ್ಪಂಡಿರುಮಂ ಬಂಧುಜನಮುಮಂ ಜ್ಯೇಷ್ಠಪುತ್ರನುಮಂ ಕರೆದು (ಧರ್ಮಾಮೃ. ೦-೦೦೦) ; ಮೂವತಿಬ್ಬರುಂ ನಲ್ಗಳ ಕಟಿನ ಕೊಟ್ಟರ್ (ಎಕ. X. ಶ್ರೀನಿಂಗ. ೪೨-೩; ಸು. 920) ; ಪೊನ್ನೆಱನುಂ ಚೋಳಮಹಾರಾಜನುಂ ಮೂವದಿಂಬಪ್ಪಾರ್ವರಾನ್ ಕೊಂದಾ × (ಎಕ. XVI. ಮಧುಗಿ. ೦೦೬-೪ ; ೮ನೆಯ ಶತ). **ಮೂವತ್ತುಮುಕ್ಕೋಟಿ, ಮೂವತ್ತುಮೂರುಕೋಟಿ, ಮೂವತ್ತುಮೂಕೋಟಿ** = (ಸಾಮಾನ್ಯವಾಗಿ ದೇವತೆಗಳ ಎಣಿಕೆಯನ್ನು ಸೂಚಿಸುವ) ಒಂದು ಸಂಖ್ಯೆ : ಮೂವತ್ತುಮುಕ್ಕೋಟಿ ದೇವೇಶ್ವರಯೋಗಿಹೃದ್ಧ್ಯಾನಗಮ್ಯ ಪರಮಪುರುಷ ಪುರುಷೋತ್ತಮ (ಮೋಹತ. ೩೭-೦೦) ; ಮಕ್ಕಳಿವರೇನಮ್ಮ ? ಮೂವತ್ತುಮೂರುಕೋಟಿ ! ನಾ ಹಡೆದ ಮೂವತ್ತುಮೂರುಕೋಟಿ (ಗಂ. ೩೦-೩) ; ಜಾನಕಿಯ ಕಣ್ಗೆ ತೋಱಿತು ಮುಂದೆ . . . ಮೂವತ್ತುಮೂಕೋಟಿ ವಿಬುಧರಂ ತನ್ನೊಳ್ಗೊಳಗಿದರಣಕಿಪ ಪೆಂಪೊದವಿ ಪರಿವ ಬೆಳ್ವೊನಲ್ದಿವಿಜನದಿಯ (ಕೈಬಿಲಾ. ೦೯-೮). **ಮೂವತ್ತುಮೂದೇವರ್** = ಹನ್ನೆರಡು ಆದಿತ್ಯರು, ಎಂಟು ವಸುಗಳು, ಹನ್ನೊಂದು ರುದ್ರರು, ಇಬ್ಬರು ಅಶ್ವಿನಿಗಳು ಎಂಬುದಾಗಿ ಮೂವತ್ತುಮೂರು ದೇವತೆಗಳು; ತ್ರಿದಶರು : ಏಕಾದಶರುದ್ರರುಂ ದ್ವಾದಶಾದಿತ್ಯರುಮಷ್ಟವಸುಗಳುಮಶ್ವಿನೀದೇವರುಂ ಮೊದಲಾಗೆ ಮೂವತ್ತ [ ತ್ತು ] ಮೂದೇವರುಂ . . . ನೆರೆದು (ಶಂಶರಾ. ೦-೦೯೭ ವ). **ಮೂವತ್ತುಮೂವರ್** = ಮೂವತ್ತುಮೂದೇವರ್ : ಮೂನೂಱಯ್ವತ್ತು ಸಮಾಚೀನವಿಮಾನಂಗಳುಂ ಮೂವತ್ತುಮೂವರ್ ದಿವಿಜರುಂ . . . ಅಱುವತ್ತುಮೂವರ್ ವಲ್ಲಭೆಯರುಂ ತನಗೆ ಪ್ರಸಿದ್ಧಮಾಗೆ (ಶಾಂತಿಪು. ೪-೦೦೦ ವ) ; ಮೂವತ್ತುಮೂವರಾದರ್ ದೇವರ್ (ಕಮಲ. ೯೯ ತ್ರಿ ಯೋ). **ಮೂವತ್ತುಮೂಱು, ಮುಪ್ಪತ್ತುಮೂರು, ಮೂವತ್ಮೂಱು** = ಒಂದು ಸಂಖ್ಯೆ ; ಮೂವತ್ತು ಮತ್ತು ಮೂರು : ಮೂವತ್ತುಮೂಱು ಸಾಗರೋಪಮಂಬರೆಗಮಾಯುಷ್ಯಮನೊಡೆಯರಾಗಿ (ಧರ್ಮಾ. ೯೮-೦೩) ; ಸ್ವಸ್ತಿಶ್ರೀ ಸೀಯುಮಲ್ಲವರಸರ್ . . . ಮುಪ್ಪತ್ತುಮೂರು ಪರಿಹಾರ ಕೊಟ್ಟರ್ (ಎಕ. IX. ಹೊಸಕೋ. ೨೨-೯; ಸು. 750) ; ಸುರಮನಲು ಮೂವತ್ಮೂಱುನಕ್ಷತ್ರವಿಪ್ಪತ್ತೇೞ್ನಿಕರುಂ (ಪುಂಗಣಾ. ೦೦೪-೯). **ಮೂವತ್ತೆರಡಾಯುಧ** = ಮೂವತ್ತೆರಡು ಬಗೆಯ ಅಸ್ತ್ರಗಳು; ಬತ್ತೀಸಾಯುಧ : ಕಟ್ಟಿದ ಪಟಯಿಗೆಗಳುಮೊಟ್ಟಿದ ಮೂವತ್ತೆರ

ಡಾಯುಧಂಗಳಿಂ ಬೆರಸಿ . . . ಪಡೆವಳರ್ಕಳ್ ಕುರುಕ್ಷೇತ್ರದೊಳ್ ಚಿತ್ರಿಸಿ ದಂತೊಡ್ಡಿ ನಿಂದಾಗಳ್ (ಶಂಶಭಾ. ೧೨-೩೧ ವ) ; ಪರಶು ಬಿಲು . . . ಶೂಲಂ ಸುರಗಿ ಪೊದಲಾಗೆ ಮೂವತ್ತೆರಡಾಯುಧಮಂ ಮಹೋತ್ಸವಂ ಬೆರಸಿನಿತಂ ನಿಲಿಪಿ ಪೂಜಿಸಿ (ಧರ್ಮಾಪು. ೨-೧೨೮). ಮೂವತ್ತೆರಟ್ನಾಡು, ಮೂವತ್ತೆರಡುನಾಡು = [ಜೈನ] "ವಿದೇಹಕ್ಷೇತ್ರದಲ್ಲಿ ಸೀತಾ, ಸಿತೋದಾ, ವಕ್ಷಾರಗಿರಿ ಮತ್ತು ವಿಭಂಗನದಿಗಳ ಮೂಲಕವಾಗಿ ಮೂವತ್ತೆರಡು ದೇಶಗಳಾಗಿವೆ" (ಆದಿಪು. ಕನ್ನಡ ಪಾರಿಭಾಷಿಕ ಕೋಶ) : ಒಂದಱೊಳ್ ಪದಿನಾಱಾಗಿ ನಿರಂತರಂ ಪೊಗಯಿಕುಂ ಮೂವತ್ತೆರಟ್ನಾಡುಗಳ್ (ಆದಿಪು. ೨-೩೦) : ಉದಯಿಸಿರ್ಪುದು ನೋಡೆ ಮೂವತ್ತೆರಡುನಾಡುಗಳು (ಶಾಂತೀಪು. ೨-೩೩). [ಮೂ$_1$ (< ಮೂಱು) + ಪತ್ತು$_3$./ತಮಿ. ಮುಪ್ಪತು; ಮಲ. ಮುಪ್ಪತು, ನುಪ್ಪತ್ತು; ತುಳು. ಮುಪ್ಪ; ಕೊಡ. ನುಪ್ಪದೀ; ತೆಲು. ಮುಪ್ಪದಿ, ಮುಪ್ಪೈ; ಕೋತ. ಮುಅತ್]

**ಮೂವಳಸು$_1$** (ಕ್ರಿ). ಮೂರು ಸುತ್ತು ತಿರುಗಿಸು; ತ್ರಿಪ್ರದಕ್ಷಿಣೆ ಹಾಕು: ಜಳರುಹನಾಭಂ ಕಣ್ಣೊಳ್ ಪೊಳೆದುಳ್ಕುವ ಸೂರ್ಯಹಾಸಮಂ ಕುಡೆ ಕೈಯೊಳ್ ಹಳಧರನ ದೇಹರುಚಿ ಮೂವಳಸುವುದುಂ ಚಂದ್ರಹಾಸಮೆಸಿಸಿತ್ತಾಗಳ್ (ಶಂಶಭಾ. ೯-೨೬) ; ಮೂಱುಲೋಕಮಂ ಮೂವಳಸಿ ನಿಜಯಶಂ (ಶುಶ್ರು. ೪-೧೩೨) ; ನೃಪಾಲಕರು . . . ಭರದಿಂದೆಯ್ತಂದೆಡೆಯಿಲ್ಲದಂತಾ ಪುರವ ಮುತ್ತಿದರು ಮೂವಳಸಿ (ನೇಮಿಸಂ. ೧೨-೭೧).

[ಮೂ$_1$ (< ಮೂಱು) + ಬಳಸು$_1$]

**ಮೂವಳಸು$_2$** (ನಾ). ಮೂರು ಸುತ್ತು ; ಮೂರು ಆವರ್ತ : ಸಜ್ಜಾತಗಿರಿಯನೆಯ್ದುಯಲ್ಲಿಯೆ ರಾತ್ರಿ ಪ್ರತಿಮೆ ನಿಂದೊರನ್ನೆಗಂ ಕಾಟ್ಟಿಚ್ಚು ಮೂವಳಸಂ ಬಳಸಿಯುಂ ತಗುಳ್ದು ತಮ್ಮಂ ಸುಡೆ (ವಡ್ಡಾರಾ. ೦೭೪-೬) ; ಮೂವಳಸಾಗಿ ಸುತ್ತಿ ಮುತ್ತಿ ಕಾದುತ್ತಿರ್ದ ವಿದ್ಯುದ್ದಂಷ್ಟ್ರನುಮಂ ಸುದಂಷ್ಟ್ರನುಮಂ ಕಂಡು (ಶಾಂತಿಪು. ೪-೬೦ ವ) ; ಅಮರಾವತೀಪುರಮಂ ಮೂವಳಸಾಗೆ ಮುತ್ತಿಕೊಳ್ವುದುಂ (ಧರ್ಮಾಪು. ೯-೩೨೪).

[ಮೂ$_1$ (< ಮೂಱು) + ಬಳಸು$_3$]

**ಮೂವಳಿಸು** 'ಮೂವಡಿಸು' ನೋ.

**ಮೂವಾಯಿಲರು** (ನಾ). ತಮಿಳುನಾಡಿನ ಚಿದಂಬರಕ್ಷೇತ್ರದಲ್ಲಿ ನೆಲಸಿ, ಶಿವನ ಮಹಾಭಕ್ತರೆಂದು ಪರಿಗಣಿತರಾಗಿದ್ದ ಮೂರುಸಾವಿರ ಬ್ರಾಹ್ಮಣರ ಒಂದು ವರ್ಗ : ಇಂತೊಪ್ಪುವಲ್ಲಿ ಮೂವಾಯಿಲರು ಕುಳ್ಳಿರಲು ಸಂತತಂ ಮೆಱೆವ ಪೊನ್ನಾಂಬಲದೊಳೆಸದಿರಲು (ತಿರುಶ. ದೀ. ೦೩-೬). [ ← ತಮಿ. ಮೂವಾಯಿರವರ್]

**ಮೂವಾಳ್** (ನಾ). ಮೂರುಸಾವಿರ ಉಳಿಗಳು : ಇವರ್ಗಳ್ ಮೂವಾಳ್ ಲಕ್ಕದುರ್ವರರೆಯೊಳ್ ಬೆಳೆಗೆ ಸಾರೆ ಕೊಳೆ ಪದಪಱೆಗಳ್ ಕರ್ಮನ ಮಡಲಂತೆ ಕವಲ್ತುವಿರ್ದ ಕಿಯ್ವೊಲಗಳೆಸೆಗುಮೋರೊಂದೆಡೆಯೊಳ್ (ಶಾಸ್ತ್ರಾವ. ೨೦೭). [ಮೂ$_1$ (< ಮೂಱು) + ಬಾಳ್$_3$]

**ಮೂವಿಟ್ಟಿ** (ನಾ). ಸಂಬಳವಿಲ್ಲದೆ ಮಾಡುವ ಮೂರು ಬಗೆಯ ಕೆಲಸ : ಮೂರುಬಗೆಯ ಬಿಟ್ಟಿಕೆಲಸ : P "ಬಿಟ್ಟಿಯು ಮೂರು ತೆರನಾದುದು (ಇದೇ ಶಾಸನಗಳಲ್ಲಿ ಬರುವ ಮೂವಿಟ್ಟಿ ) : (೧) ಶೋಧನ ಕರ್ಮ—ಮಾರ್ಗ ಮಧ್ಯದ ರಸ್ತೆಯನ್ನು ಸರಿಪಡಿಸುವುದು: ಸೇತುವೆ, ನದಿ, ಬಾವಿ ಇತ್ಯಾದಿಗಳನ್ನು ಪರೀಕ್ಷಿಸುವುದು. (೨) ವಹನಕರ್ಮ+ಆಯುಧ, ಕವಚ, ಧಾನ್ಯ ಮುಂತಾದುವನ್ನು ಹೊರುವುದು. (೩) ಅಪನಯನ ಕರ್ಮ —ಪೆಟ್ಟು ತಿಂದು ಕೆಳಕ್ಕೆ ಬಿದ್ದ ಸೈನಿಕರನ್ನು ಅವರ ಆಯುಧಗಳ ಸಮೇತ ಹೊರುವುದು" (ಕಶಾಲಿ. ೨೩೬)* ಕೆಯ್ವಿಱಿಯುಂ ಕೊಟ್ಟಳವಟ್ಟ ಸಾಧನಮುಂ ಮೂವಿಟ್ಟಿಗಂ ಪೊಣ್ದು ಕಾಲ್ಗೆಱಗಿತ್ತಂತರಿಗಂಗೆ ಬೆರ್ಚಿ ಭಯದಿಂ ಗ್ರಾಮಂ ಕುಳಂ ರಾಜಕಂ (ಶಂಶಭಾ. ೬-೩೦) : ಕೊಟ್ಟೆಯದ್ದಿ ಕಪ್ಪಮಂ ಮುಗುಟ್ದಟ್ಟಿದ ಬಟ್ಟಗೊಲ್ದು ಪೇಟ್ದು ತಾಣಕ್ಕೆ ನೃಪರ್ ಬಿಟ್ಟು ಭುಜಗರ್ವಮಂ ಮೂವಿಟ್ಟಿಗೆ ಬರೆ ನೆಗಟ್ದ ನಿಳೆಯೊಳರವಿಂದನೃಪಂ (ಶಾಕ್ತೇಶ್ವ. ೨-೩) ; ವೀರಾರಿನೃಪಾಳರಂ ಬರಿಸಿದಂ ಮೂವಿಟ್ಟಿಗಂ ಬಿಟ್ಟಿಗಂ (ಎಕ. XI, ದಾವಣ. ೨೩-೩೪; 1224) ; ಶೋಧನ ಕರ್ಮ, ವಹನಕರ್ಮ, ಅಪನಯನಕರ್ಮ ಎಂಬ ಮೂರು ಬಗೆಯಾದ ವಿಟ್ಟಿಗಳನ್ನು ಕನ್ನಡಕವಿಗಳು 'ಮೂವಿಟ್ಟಿ' ಎಂಬ ಪದದಿಂದ ನಿರ್ದೇಶಿಸಿರುವ ಹಾಗೆ ಕಾಣುತ್ತದೆ. ಸೋತ ರಾಜನು ಗೆದ್ದ ರಾಜನಿಗೆ ಈ ವಿಟ್ಟಿ ಕರ್ಮಗಳನ್ನು ಮಾಡುವ ದೈನ್ಯಾವಸ್ಥೆಗೆ ಗುರಿಯಾಗುತ್ತಿದ್ದರು . . . ಪಂಪ ಪೊನ್ನ ಪಾರ್ಶ್ವರ ಪದ್ಯಗಳಲ್ಲಿ 'ಮೂವಿಟ್ಟಿ'ಗೆ ಇರುವ ಆನುಪೂರ್ವಿ ಹೆಚ್ಚು ಕಡಮೆ ಒಂದೇ ರೀತಿಯಾಗಿರುವುದು ಸೋಜಿಗದ ವಿಷಯ (ಸಂಶಾವಿ. ೨೨೪).

[ಮೂ$_2$ (< ಮೂಱು) + ಬಿಟ್ಟಿ$_1$]

**ಮೂವಿಟ್ಟಿಗೆಯ್** (ಕ್ರಿ). ಮೂರು ಬಗೆಯ ಬಿಟ್ಟಿಕೆಲಸಗಳನ್ನು ಮಾಡು : ಭಕ್ತಿಯಿಂದಮೆ ಮಸಂಗೊಂಡಿರ್ಪ ಕಂದಿಪ್ಪ ಕಾಲ್ಗೆಱಗಿಪ್ಪ × × ಗೆಯ್ವುತ್ತಿರೆ × × × ಮೂವಿಟ್ಟಿಗೆಯ್ವುತ್ತಿರ್ಪ ಪೊಡರಂ × × × (ಶಾಇ. IX–i, ೦೬೦-೦೨; 1091). [ಮೂವಿಟ್ಟಿ + ಕೆಯ್$_1$]

**ಮೂವಿಧಿ** (ನಾ). ೧. ಮೂರು ಬಗೆಯ ತೊಂದರೆ : ತಾಪತ್ರಯ : 'ಮೂವಿಧಿಗಾಣ್' ಪರಾ. ೨. (?) : ಅಡಸು ಹರಿ ವಿಧಿಗಳಂ ಬಡಿಸು ಮೂವಿಧಿಗಳಂ ಸುಡಿಸು ಕೈಲಾಸಮಂ (ತಿಬಕೃ. ೪೬-೨೨).

[ಮೂ$_1$ (< ಮೂಱು) + ವಿಧಿ]

**ಮೂವಿಧಿಗಾಣ್** (ಕ್ರಿ). ತೊಂದರೆಗೊಳಗಾಗು: ತಾಪತ್ರಯ ಪಡು : ಹೊತ್ತ ನಿಜವನಱಿಯದತ್ತಲಿತ್ತ ಸುತ್ತಿ ಬಳಸುವನಂತೆ ಹಿಡಿದಿರ್ದ ಲಿಂಗವ ಕಾಣದೆ ಮೂವಿಧಿಗಾಣ್ಬರನೇನೆಂಬೆನಯ್ಯ (ಆದಪ. ವು. ೬೩-೦೦೪).

[ಮೂವಿಧಿ + ಕಾಣ್]

**ಮೂವಿಧಿಬಡು** (ಕ್ರಿ). = ಮೂವಿಧಿಗಾಣ್ : ಮುಟ್ಟರೊಂದುವನು ಮೂವಿಧಿಬಟ್ಟರೂ (ಬಸವ. ೩೮೩). [ಮೂವಿಧಿ + ಪಡು$_1$]

**ಮೂವೀದಿವಡಿಸು** (ಕ್ರಿ). ೧. ಮೂರುಬೀದಿಗಳನ್ನು ತಿರುಗಿಸು. ೨. (ಅಲಂ) ಅಲೆಯುವಂತೆ ಮಾಡು; ಸುತ್ತಾಡಿಸು : ಪೀತಾಂಶುಕನೆಂದು ಪಾವಕನು ಮೂವೀದಿವಡಿಸಿಯುಂ (ಜಗಿನಿ. ೯-೩೩ ವ).

[ಮೂ$_1$ (< ಮೂಱು) + ಬೀದಿ + ಪಡಿಸು]

**ಮೂವೀಧಿಗೊಳ್** (ಕ್ರಿ). ಮೂರು ದಾರಿ ಹಿಡಿ; ಮೂರುಸೀಳಾಗು : ಮೂವೀಧಿಗೊಂಡು ಮುನ್ನೀರ ಬೀಳುತ ಚಂದ್ರಗಾವಿಯ ವಸನವ ತಳೆದು ಸಾವಿರಕ್ಕೆಯಿಂದೆ ಪೊಡೆವಟ್ಟನೆಂಬಂತೆ ಶೀವಿತು ಕಡುಸಂಜೆಗೆಂಪು (ಮೋಹತ. ೦೧-೦೬). [ಮೂ$_1$ (<ಮೂಱು) + ವೀಧಿ + ಕೊಳ್$_1$]

**ಮೂವೆ** 'ಮೂಪೆ' ನೋ.

**ಮೂವೆರಟ** (ನಾ). [ಸಂಗೀತ] ಒಂದು ಬಗೆಯ ಲಯ : ದೇಸಿಯ ತಾಳದೊಳಗೆ ಒತ್ತೆರಟ ಮೂವೆರಟ ಮೊದಲಾದ ಲಯದಿಂ . . . ಪಾಡುವ ಬಂಧವ್ಯಾಪ್ತಿಗಳಂ ಮೆಯ್ದೋಱಿಸಿ (ಬಸವಶಾ. ೭೬). [ ? ]

**ಮೂವೆರಲ್**, ಮೂವೆರಲು, ಮೂವರಳು (ನಾ). ೧. ಮೂರುಬೆರಳು. ೨. ಮೂರುಬೆರಳುಗಳ ಒಂದು ಅಳತೆ : ಎರಡೂರ್ಧ್ವರೇಖೆಗಳ್ ಮೂವೆರಲಶ್ವ(ಳಸ್ಟ)ಪ್ರೋಥ ಮಧ್ಯದೊಳ್ ತೋಱೆ ಮಹಾಜ್ವರಪರಿತಾಪದೊಳಷ್ಟಮಾಪರಿಸಕ್ಕಾ ವಾಜಿಗೆಯ್ದುಗಂ ಮರಣಭಯಂ (ಅಶ್ವಶಾ. ೩-೦೦). **ಮೂವೆರಲು** : ೧. ಸುರನರ ನಾಗಲೋಕದಿ ನರ್ತಿಸುವ ಸೌಂದರವೆಣ್ಣು ಬಾಣಸಂದನೆಯು ಸರಿಯಿಲ್ಲವೆಂದು ಮೂವೆರಲಿಂದೆ ರತಿರಾಜ ಬರೆದಂತೆ ತಿವಳಿ ರಾಜಿಸಿತು (ಮೋಹತ. ೨೩-೨೦). **ಮೂವೆರಳು** : ೨. ನಾಲ್ವೆರಳು ಹಸ್ತಿನಿಗೆ ಮೂವೆರಳು ಚಿತ್ತಿನಿಗೆ ಇರ್ವೆರಳು ಕುಚಮಧ್ಯ ಶಂಖಿನಿಗೆ (ಸರ್ವಜ್ಞ. ೦೬೩೩); ಲೊಕ್ಕಿಬೇರಿನ ತೊಕ್ಕನ್ನು ತೆಗೆದು ಒಣಗಿಸಿ ಚೂರ್ಣವ ಮೂವೆರಳನಷ್ಟನ್ನು

ಹಸುವಿನ ತುಪ್ಪದಲ್ಲಿ ಒಂದು ಮಂಡಲ ಸೇವಿಸೆ ಕ್ಷಯ ಖಾಸಂ ಗುಣಮಕ್ಕುಂ (ಸಕಸ್ಕ. ೨೦೬). [ಮೂ$_1$ (<ಮೂಱು) + ಬೆರಲ್]

**ಮೂವೆರಲು** ಮೂವೆರಲ್ ' ನೋ.

**ಮೂವೆರಳ್** (ನಾ). ಮೂರು ಎರಡು; ಆರು: ' ಮೂವೆರಳ್ಮೊಗ ' ಪರಾ. [ಮೂ$_1$ (< ಮೂಱು) + ಎರಳ್ (< ಎರಡು)]

**ಮೂವೆರಳು** ' ಮೂವೆರಲ್ ' ನೋ.

**ಮೂವೆರಳ್ಮೊಗ** (ನಾ). ಆರುಮುಖ : ಸಾವಿರಭುಜದ ಶರಭ ಶತಮುಖದ ಶಾರ್ದೂಲ ಮೂವೆರಳ್ಮೊಗದೆರಲೆ . . . ಅನಿತುಮಂ ಕುವರಂಗೆ ತೋಱಿ ಸಿದನು (ಶೀಶರ. ೦೨-೦೬). [ಮೂವೆರಳ್ + ಮೊಗ]

**ಮೂವೇಳೆ** (ನಾ). ಮೂರುಹೊತ್ತು; ತ್ರಿಕಾಲ : ಒಲಿದು ಮಜ್ಜನ ಮಾಡಿ ಧೌತವಸ್ತ್ರವನುಟ್ಟು ಸುಲಭಸದ್ಭಕ್ತಿಯೊಳ್ಕೂಡಿ ಬಲಗೊಂಡು ಮೂವೇಳೆ ಜಿನಭವನವ ಪೊಕ್ಕು ನಲಿದು ನಮಿಸಿದ ದೇವನಿಗೆ (ಜಿನಂಶಾಂ. ೩೯-೬); ಸುರಮುನಿಪಜಾಲಕ್ಕೆ ಮೂವೇಳೆ ಭಸ್ಮವಂ ತಳೆದು ಪ್ರಾಣವನಿತ್ತ ವಿಶ್ವೇಶ್ವರಂ (ಗುರುಚಾ. ೫-೩೭).

[ಮೂ$_1$ (< ಮೂಱು) + ವೇಳೆ (= ವೇಲೆ)]

**ಮೂಶೆ** ' ಮೂಸೆ ' ನೋ.

**ಮೂಷಕ** (ನಾ). ೧. ಒಂದು ಬಗೆಯ ಪ್ರಾಣಿ; ಇಲಿ : "ಆಖುಃ, ವೃಷಃ, ಮೂಷಕಃ — ಈ ೩ ಇಲಿ" (ಶಬ್ದಾಭು. ೩೯-೬೨); ಮುಂಗುರಿ ಮೂಷಕಂ . . . ನಿಜವೈರವಂ ಮಱೆದಿಪ್ಪುವೆನೆ ಮುನಿಯ ಮಹಿಮೆಯಂ ಪೊಗಳ್ವ ರಾರು (ಹಕಾ. ೩-೩೭). ೨. ಕಳ್ಳ; ಚೋರ. [ ಸಂ. ]

**ಮೂಷಕಪರ್ಣಿ** (ನಾ). ಒಂದು ಬಗೆಯ ಸಸ್ಯ; ಇಲಿಕಿವಿ ಗಿಡ : "ಚಿತ್ರಾ, ಉಪಚಿತ್ರಾ, . . ಮೂಷಕಪರ್ಣೀ—೧೦ ಎಲಿಯಾಲದ ಮರಕ್ಕೆ ಹೆಸರು, ಇಲಿಕಿವಿಗಿಡ" (ಸಿದ್ಧಾಂತಿ. ೦೩೨). [ಸಂ. ಮೂಷಕಪರ್ಣೀ]

**ಮೂಷಕವಿಷ** (ನಾ). ಇಲಿಯು ಕಡಿತದಿಂದ ಉಂಟಾಗುವ ನಂಜು : ತುಂಬುವುದುದಕಮುಮಂ ತಾನಿಂಬಿನೊಳಂ ಕೈಪೆಸೊರೆಯ ಗುಂಡಿಗೆಯೊಳ್ ಮೂಱುಂಬ ದಿನಂಬರಮಿರಿಸಿದುದಂ ಬಿಡದಭಿಮಂತ್ರಿಸುವುದು ಸೂಟ್ಟೂಱು ವರಂ ಕುಡಿಸಲ್ಕಂತಾ ಜಳಮಂ ಕಿಡುಗುಂ ಮೂಷಕವಿಷಂಗಳಾಕ್ಷಣದಿಂದಂ (ಖಖರ. ೦೨-೬); ಕಿಱುನೆಲ್ಲಿ, ಕಿಱುಗಡಸಿಗೆ, ಸುರುಸುರುಕೆ, ಇವು ೩ ಸಮಾನಂಗೊಂಡು ಅರೆದು ಆಡಿನ ಹಾಲಲ್ಲಿ ಅರೆದು ಕುಡಿದು ಪೂಸುವುದು. ಮೂಷಕವಿಷ ಮಾಣ್ಗುಂ (ಖಸ್ಥಿ. ೦೯೬). [ಸಂ.]

**ಮೂಷಿಕ** (ನಾ). ಇಲಿ ; ಮೂಷಕ : ಈ ಮೂಷಿಕಂ ಸಾಮಾನ್ಯನಲ್ಲಂ (ಘಂಶಕ್. ೨೫೦-೯). 'ಮೂಷಿಕವಾಹನ' ಪರಾ. [ಸಂ.]

**ಮೂಷಿಕಪರ್ಣಿ** (ನಾ). = ಮೂಷಕಪರ್ಣಿ : "ಮೂಷಿಕಾಹ್ವಯಂ— ಮೂಷಿಕಪರ್ಣಿ" (೬ಕಥಿ. ೦೩೭). [ಸಂ. ಮೂಷಿಕಪರ್ಣೀ]

**ಮೂಷಿಕವಾಹನ** (ನಾ). ಇಲಿಯನ್ನು ವಾಹನವಾಗಿ ಉಳ್ಳವನು; ಗಣೇಶ : ಪಾಶಾಂಕುಶಧರ ಪರಮಪವಿತ್ರ ಮೂಷಿಕವಾಹನ ಮುನಿಜನ ಪ್ರೇಮ (ಪುರಂದ. ೦-೬-೧); ಪ್ರಕಟಮುಮೆಂತೆಯುಲಿ ಮೂಷಿಕವಾಹನನೆ ತಾನು (ಶಂಕು. ೩೯-೯). [ಸಂ.]

**ಮೂಷಿಕೆ** (ನಾ). ೧. ಹೆಣ್ಣು ಇಲಿ : ದಿವ್ಯಜ್ಞಾನದಿಂದಾಕೆ ಮೂಷಿಕೆಯಪ್ಪುದನಱಿದಿಂತೆಂದಂ (ಪಂಚತಂ. ೩೫೯-೯). ೨. ಹೆಗ್ಗಣ : "ದೀರ್ಘದೇಹಿ ಮೂಷಿಕಾ—೨ ಹೆಗ್ಗಣ" (ಸಿದ್ಧಾಂತಿ. ೦೫೭). ೩. ಜೇಡರ ಹುಳು. ೪. ಚಿನ್ನ, ಬೆಳ್ಳಿ ಮುಂತಾದ ಲೋಹಗಳನ್ನು ಕರಗಿಸುವ ಪಾತ್ರೆ; ಮೂಸೆ : ಭಸಿತವೇ ಘುಟಿಕೆ ರುದ್ರಾಕ್ಷಿ ಮೂಲಿಕೆ ಸಿದ್ಧರಸ ಮೂಲಮಂತ್ರ ನಿಜಹಸ್ತ ಮೂಷಿಕೆ ನಿಯಾಮಿಸುವಾಜ್ಞೆಯಿಂಧನಂ ಜ್ಞಾನಾಗ್ನಿಯಗ್ನಿ (ಸಿದ್ಧರಾ. ೧-೧೨). [ಸಂ. ಮೂಷಿಕಾ]

**ಮೂಷಿತ** (ಗು). ೧. ಕದ್ದ; ಅಪಹರಿಸಿದ. (ನಾ). ೨. ಕಳುವಾದುದು ; ಕದಿಯಲ್ಪಟ್ಟುದು : "ಮೂಷಿತಂ, ಮುಷಿತಂ—೨ ಕದಿಯಲ್ಪಟ್ಟದ್ದು" (ಸಿದ್ಧಾಂತಿ. ೩೯೭). [ ಸಂ. ]

**ಮೂಷೆ** (ನಾ). ೧. ಹೆಣ್ಣು ಇಲಿ. ೨. = ಮೂಷಿಕೆ ೪ : ವಾಸವ ದಿಕ್ತಟಂ ಸಮೆದ ಮೂಷೆ. . . ಪಟಂಗಾಸಿನ ಪೊನ್ನ ಗಂಟೆಯವೊಲೊಪ್ಪಿದು ದುದ್ಗತಭಾನುಮಂಡಲಂ (ಅಕಥ. ೬-೭೦); ಕುಕ್ಕುಟಗುದಿವ ವಜ್ರದ ಮೂಷೆಯೊಳಿಕ್ಕಿ ಕರಗಿಸುವುದುಂ (ಸುಕುಮಾ. ೧೧-೯೭ ವ); ಲೋಕದ ಸೂಕಳತ್ವಮಂ ಮೂಷೆಯೊಳಿಟ್ಟೆಱದಂತೆ ದುಷ್ಪತನದ ಪಟ್ಟವನಾಂತಿಪ್ಪುದು (ಪುಣ್ಯಾಸ್ರ. ೩-೫೦ ವ). [ಸಂ. ಮೂಷಾ]

**ಮೂಷೆಯಿಡು** (ಕ್ರಿ). ಚಿನ್ನ, ಬೆಳ್ಳಿ ಮೊದಲಾದ ಲೋಹಗಳನ್ನು ಕರಗಿಸಲು ಮೂಸೆಯನ್ನು ಸಜ್ಜುಮಾಡು.–ಕೋಪೆಯನ್ನು ಅಣಿಗೊಳಿಸು : ಕೋಟಿಹೋಮಮುಮಂ ಬ್ರಾಹ್ಮಣಭೋಜನಮುಮಂ ಸೌಮ್ಯಗಿರಿಗುಹಾಗೇಹಂಗಳೊಳ್ ಮಂತ್ರಿ ಮಾಡಿದಪಂ . . . ಎಂದು ಡಂಗುರಮಂ ಪೊಯ್ಸೆ ಬಾಯ ಸವಿಗೆ ಪಾರ್ವರೆಲ್ಲಂ ಪರ್ವತಕ್ಕೆ ಮೂಷೆ [ಶಾಶಾಂ. ಶೆ. ಸೆ]ಯಿಡುವಂತೆ ಸುತ್ತಿ ಮುತ್ತಿ ಬೇಳ್ವೆಯುಮನಡುಗೆಯುಮಂ ಎಡೆಯುಡುಗದೊಡರಿಸೆ (ಅರ್ಜಶೇ. ೬-೨೦ ವ). [ಮೂಷೆ + ಇಡು$_1$]

**ಮೂಸಂಜೆ** (ನಾ). ದಿನದ ಮೂರು ಸಂಧಿಕಾಲಗಳು ; ಬೆಳಗು, ಮಧ್ಯಾಹ್ನ ಮತ್ತು ಸಂಜೆ ; ತ್ರಿಸಂಧ್ಯೆ: "ಮೂಸಂಜೆಯೆಸೆವುದು ತ್ರಿಸಂಧ್ಯೆಯೊಳ್" (ಅಕರ. ೯೨). ಮೂಱುಸಂಜೆ ' ಪರಾ.

[ಮೂ$_1$ (< ಮೂಱು) + ಸಂಜೆ]

**ಮೂಸಂಡಿ** 'ಮುಸುಂಡಿ$_1$' ನೋ.

**ಮೂಸಂಡಿದೊತ್ತು** (ನಾ). ಹೇಡಿಯಾದ ಸೇವಕಿ; ಮುಸುಂಡಿಯಾದ ದಾಸಿ : ಕೊಬ್ಬಿದಳು ಮೂಸಂಡಿದೊ[ಶಾಶಾಂ. ತೊ]ತ್ತಿವಳು (ಐಶಕು. ೩೩-೨೯); ಕರೆಯುವಳ ಮೂಸಂಡಿದೊತ್ತಿನ ಮಱುಕ ಕರಲೇಸನಲವಳ ಹತ್ತಿರಕೆ ತಂದರು ಕೆಳದಿಯರು (ಕೂರಂ. ೨-೦-೩೦).

[ಮೂಸಂಡಿ (< ಮುಸುಂಡಿ$_1$) + ತೊತ್ತು (< ತೊೞ್ತು)]

**ಮೂಸಂಬಿ, ಮುಸಂಬಿ, ಮುಸುಂಬಿ, ಮೋಸಂಬಿ** (ನಾ). ಈಳೆ ಜಾತಿಗೆ ಸೇರಿದ ಒಂದು ಬಗೆಯ ಮರ ಮತ್ತು ಅದರ ಹಣ್ಣು : ನಿಂಬೆ. . . ಮೂಸಂಬಿ, ಟೊಮ್ಯಾಟೊ, ನೆಲ್ಲಿಕಾಯಿ, ಕಿರುನೆಲ್ಲಿಕಾಯಿ ಈ ಗುಂಪಿಗೆ ಸೇರಿವೆ (ಗೃಹಕು. ೯೩). **ಮುಸಂಬಿ** : ನಿಂಬೆಹಣ್ಣು. . . ಮುಸಂಬಿ . . . ಲೆಟ್ಯೂಸ್ ಇವುಗಳಲ್ಲಿ ವಿಟಮಿನ್ 'ಸಿ' ಇದೆ (ಗೃಹಕು. ೯೦). **ಮುಸುಂಬಿ**: "ಮುಸುಂಬಿ–ಸಿಹಿನಿಂಬೆ, ಒಂದು ಬಗೆ ಕಿತ್ತಳೆ" (ಸಿಂಕೋ. ೬೬). **ಮೋಸಂಬಿ** : ರಮಾ ನಿಧಾನವಾಗಿ ಮೋಸಂಬಿಯನ್ನು ಸುಲಿಯ ತೊಡಗಿದಳು (ಹೂಹಣ್ಣು. ೬೬). [←ಹಿಂ. ಮುಸಂಬೀ; ಮರಾ. ಮುಸಂಬೇ, ಮೊಸಂಬೇ]

**ಮೂಸಕ** (ನಾ). ೧. ಕಳ್ಳ : "ಮೂಸಕ—ಮೂಷಕ=ಇಲಿ, ಕಳ್ಳ" (ಕನ್ನಕೋ. ೩೭). ೨. ಇಲಿ : ಮೂಷಕ : ಅಳಿಗಂಧಭುಂಜನೆ ಮಧುಮಕ್ಷಿಕದ ಘೃತಗೊಡ ಮೂಸಕದ ದ್ವಾರಭೇದ (ಸರ್ವಶ. ೦೩೯-೩೬೩); ಮೂಸಕನ ಮೀಸೆಯು ಬಿಂದು ಮೂಱುಲೋಕವನು ಮುಳುಗಿತ್ತು (ಕರ್ಣಾಶಾಂ. ೯-೦೦೪). [< ಸಂ. ಮೂಷಕ]

**ಮೂಸಕದೇರ** (ನಾ). = ಮೂಷಿಕವಾಹನ: "ಬಿಜ್ಜೆವಳಂ . . . ಮೂಸಕ ದೇರನೆನೆ ವಿನಾಯಕನ ನಾಮಮಂ" (ಅಭಿಸ್ಕ. ೫).

[ಮೂಸಕ + ತೇರ್$_2$ + — ಅ$_7$]

**ಮೂಸಱ** (ನಾ). ಒಂದು ಊರಿನ ಹೆಸರು : ಕಲ್ಲಮನೂರ್ಗ್ಗಾಮುಂ [ನ್ನುಗ]ಯ್ಕು [ಮೂ]ಸಱಱ ಕಳ್ವಳ್ಳ ಪೆರ್ದ್ದಮನಾಳುತ್ತುಮಿಬ್ದು (ಕಶಾ. I, ೦೯-೬; ಸು. ೩೬೬). [ ? ]

**ಮೂಸು$_1$** (ಕ್ರಿ). ವಾಸನೆ ನೋಡು: ಆಘ್ರಾಣಿಸು: "ಮೂಸು–ಆಘ್ರಾಣೇ" (ಶಮದ); ಆ ದೇವರ ಮುಂದೆಳ ನಂದಿಯ ನೋಡಾ . . . ಅದು ಬಂದು

ಬಂದು ಪರಿವಾರದೇವತೆಗಳ ಮೂಸಿ ನೋಡಿತ್ತು ನೋಡಾ (ಶರ್ಣ. ೨೩-೦೦೦); ಅರುಟ್ಟು ಕಳೆದ ಹೂ ನಿನ್ನ ಬಾಯದು ಕೇತಿಮಾರಿಯೇ ಮೂಸಿ ಕೊಳು . . . ಎಂದು ಕುಡಿದ ಮೂಳೆಯರು ನಗಿಸಿದರು ಬೀದಿಯ ಜನವನು (ಹಕಣ. ೪-೯೭). [ದೇ.॥ ತಮಿ. ಮೂಚು ; ಮಲ. ಮುಕ ; ತುಳು. ಮೂಸು ; ಕೊಡ. ಪರ್ಜಿ. ಮೂಸ್ ; ತೆಲು. ಮೂಚುಚು: ಗೊಂಡಿ. ಮುಸ್ಕನಾ : ಕುಇ. ಮೂಂಜ; ಕೋತ. ತೊದ. ಮೂತ್ ]

**ಮೂಸು$_2$** ' ಮುಸು$_2$ ' ನೋ.

**ಮೂಸುಂಡಿ** ' ಮುಸುಂಡಿ$_1$' ನೋ.

**ಮೂಸುಕೊಳವೆ** (ನಾ). ಮೂಗಿನ ಸೊಳ್ಳೆಗಳ ಮೂಲಕ ಗಾಳಿಯನ್ನು ಎಳೆದುಕೊಳ್ಳಲು ಅನುಕೂಲವಾಗುವಂತೆ ನಾಳವಿರುವ ಒಂದು ಬಗೆಯ ಸಲಕರಣೆ : ಆ ಮೂಸುಕೊಳವೆಯನ್ನು ಇಲ್ಲಿ ಕೊಡಿ (ಹಸುಹೊ. ೩೪). [ ಮೂಸು$_1$ + ಕೊಳವೆ (< ಕೊಟವಿ) ]

**ಮೂಸೆ, ಮುಶಿ, ಮುಸಿ$_2$, ಮೂಶೆ** (ನಾ). ೧. ಚಿನ್ನ, ಬೆಳ್ಳಿ ಮುಂತಾದ ಲೋಹಗಳನ್ನು ಕರಗಿಸಲು ಬಳಸುವ ಸಾಧನ; ಕೋವೆ : "ಮೂಸೆ (ಮೂಸಿ, ಮುಸಿ) ಮೂಷಾ–ಬಂಗಾರ ಮೊದಲಾದುವನ್ನು ಕರಗಿಸುವ ಕೋವೆ" (ಶಬ್ದಕೋ. ೩೬); ಬಳವ್ಯೆರಿಯೆಂಬ ಸಾಧಕನಿಳಿಯಂ ಪೊಸಮೂಸೆ ಮಾಡೆ ಶಶಿಮಂಡಲಮಂ ಗುಳಿಗೆಯಿಡೆ ತಿಮಿರಕಾಳಿಕೆ ತಿಳಿದಂತೆ ಜಲಕ್ಕನಾಯ್ತು ಪೊಸವೆಳ್ದಿಂಗಳ್ (ಅನಂಪು. ೬-೯೩); ಗ್ರಾಫೈಟ್ ಮೂಸೆಗಳಲ್ಲಿ ಪುಡಿ ಮಾಡಿದ ಈ ಅದಿರನ್ನು . . . ಪಡೆಯಬಹುದು (ಕಖಕೋ. I, ೬೩೯). **ಮುಶಿ :** ೧. ಟಂಕಸಾಲೆಯಲ್ಲಿ ೧೨೫೦ ರೂಪಾಯಿ ತೂಕ ಬೆಳ್ಳಿಯನ್ನು ತಸ್ತದಂಥಾದ್ದೊಂದು ಮುಶಿಯೊಳಗೆಯಿರಡು ಕಿದಿಗಳನ್ನು ಊದಿ ಕರಗಿಸುವರು (ಕಣಗ. ೨೮೨): ಈ ಕಬ್ಬಿಣದ ರಸವನ್ನು ಉಸುಬಿನ ಮುಶಿಗಳಲ್ಲಿ ಹೊಯ್ದು ನಳದ ಕೋಳವೆ . . . ಗುದ್ದಿಗೆ ಮುಂತಾದ ಪದಾರ್ಥಗಳನ್ನು ಮಾಡುವರು (ಮುಂಬಯಿ. ೬-೧೯). **ಮುಸಿ$_2$:** ೧. ಪಾರಜ ಚಿನ್ನಗಳ ಮಿಶ್ರಣವನ್ನು ಮುಸಿಯೊಳಗಿಟ್ಟು ಕಾಸಿದರೆ ಪಾರಜವು ಉಗಿಯಾಗಿ ಹೋಗುವುದು (ಮುಂಬಯಿ. ೪-೧೦೨). ೨. ತಂಬಾಕನ್ನು ತುಂಬಿ ಸೇದಲು ಸಿದ್ಧಪಡಿಸಿದ ಮೂಸೆಯಾಕಾರದ ಹೊಗೆಕೊಳವೆ, – ಹೊಗೆಬತ್ತಿ: ಅಲ್ಲಿ 'ಮುಸಿ' ಸೇದುತ್ತ ಆಕೆಯ ಪತಿ ಬಸಪ್ಪ ಕುಳಿತಿದ್ದ (ಬರಹಾ. ೧೭); 'ಏಕ್ಕವಲೆ'ಯ 'ಮುಸಿ'ಯಲ್ಲಿ ತಂಬಾಕನ್ನು ತುಂಬಿ ಅದನ್ನು ಸೇದುವುದಕ್ಕೆ ಸಿದ್ಧಪಡಿಸಿಕೊಂಡು ಅವನು ಇನ್ನೂ ಆಕೆಯನ್ನು ನೆಟ್ಟ ಕಣ್ಣುಗಳಿಂದ ನೋಡುತ್ತಲಿದ್ದ (ಬನಸಿ. ೩). **ಮೂಶೆ :** ೧. ಗಂಧಕ ಅಲದ ಹಾಲಿನಲ್ಲಿ ಅರದು ಮೂಶೆಯಲ್ಲಿ ಅರ್ಧ ಮಡಗಿ ಮೇಲುಗಂಧಕ ಮಡಗಿ(ಗಂಧಕ್ರ. ೨-೨): ಭರತಖಂಡ ಕುಲುಮೆಯ ಮೇಲಿನ ಮೂಶೆಯಂತೆ ಇತ್ತು (ಕಾರಡ. ೩೨೨).

[ ಸಂ. ಮೂಷಾ./ತುಳು. ಮೂಸೆ, ಮೂಚಿ ]

**ಮೂಹರಿ** (ನಾ). ೧. ಮೂರು ಬಗೆ ; ಮೂರು ರೀತಿ : ಮೂಹರಿಯ ಮೂರ್ತಿಗಳು ಸಹಿತಾನೆಂದಡಂಜುವರು (ನಿಭಾಗ. ೬-೬-೮). ೨. (?) : ಭಾಗ್ಯದ ಮೂಹರಿಯ ಕಾಲದಲಿ ಖಗವರವಾಹನಾಂಘ್ರಿಯ ಭಕ್ತಿ ಶ್ರೀನೆಂತಂದಳಾ ದೇವಿ (ಸಿಭಾಗ. ೮-೦೩-೪೩). [ ಮೂ$_1$ (< ಮೂಜು) + ಪರಿ$_3$ ]

**ಮೂಹೊಱಡು, ಮುಪ್ಪೊಱಡು** (ನಾ). ಬೆನ್ನು, ಸೊಂಟ ಮತ್ತು ಮಂಡಿ– ಈ ಮೂರುಕಡೆಗಳಲ್ಲಿ ಉಂಟಾಗಿರುವ ಮೂರುಡೊಂಕು : ಮಾಣಿಸಿದಪ್ಪೆ ದಿಟ ಘಟ್ಟಿವಾಳ್ತಿಯ ಮೈಯ ಮೂಹೊಱಡ (ಕುಮಾ.ಸ. ೦೦-೦೬). **ಮುಪ್ಪೊಱಡು :** ಈ ತೇಜವೀ ರೂಪು ತಕ್ಕುದೈ ಮುಪ್ಪೊಱಡು [ಪಾಠಾಂ. ವ್ಯಜುಗು] ವಿಧಿಕೃತವಕ್ಕು (ಸಿಭಾಗ. ೦೦-೩೬-೩೦).

[ಮೂ$_1$ ( < ಮೂಜು) + ಪೊಱಡು$_2$ (< ಪೊಱಂಡು$_2$)]

**ಮೂಹೊಱಡೆ** (ನಾ). ದೇಹದ ಮೂರುಕಡೆಗಳಲ್ಲಿ ಡೊಂಕನ್ನು ಹೊಂದಿರುವವಳು ; ಕುಬ್ಜೆ: ಚಂದನವಿತ್ತ ಮೂಹೊಱಡೆಯ ತನುವ ನೇರಂದವ ಮಾಡಿ ತೋಱಿಸಿದ ವೃಂದಾವನತಾತ್ಪರ್ಯನ ಕಾರುಣ್ಯದಿಂದೆ ಮೇಲ್ಗತೆಯ ವಿಸ್ತರಿಸು (ಮೋಹತ. ೪೦-೦). [ಮೂಹೊಱಡು + – ಎ$_2$]

**ಮೂಳ$_1$** ' ಮೂಟ ' ನೋ.

**ಮೂಳ$_2$** ' ಮೂಲ ' ನೋ.

**ಮೂಳಕಿವಿ** ' ಮೂಟಗಿವಿ ' ನೋ.

**ಮೂಳನಾಯಿ** (ನಾ). ಅಂಗವಿಕಲವಾದ ನಾಯಿ : ಸೂಳೆಯರ ಅವ್ವ ಮುದಿನಾಯಿ ಅವರಪ್ಪ ಮೂಳನಾಯಿ (ಸರ್ವಜ್ಞ. ೦೯೬೦); ಹೆಂಡತಿ ಹೆಗ್ಗಡಿತಿಯಾದರೆ ಗಂಡ ಮೂಳನಾಯಿಗಿಂತ ಕಡೆ (ಗಾದೆ).

[ ಮೂಳ$_1$ ( < ಮೂಟ) + ನಾಯಿ (< ನಾಯ್)]

**ಮೂಳಪ್ರತಿಷ್ಠೆ** (ನಾ). ಒಣಜಂಬ ; ಬಡಿವಾರ : ಆ ಜೋಯಿಸನು . . . ಎರಡನೇ ವರವಾದಾಗ್ಲೂ . . . ಮೂಳಪ್ರತಿಷ್ಠೆಯನ್ನು ಬಿಟ್ಟು ಮಗಳನ್ನು ಕೊಟ್ಟು ಮದುವೆ ಮಾಡುತೇನೆಂದು ನಿಶ್ಚೈಸಿಕೊಂಡಿದ್ದನು (ಮೂಮಾ. ೯).

[ಮೂಳ$_1$ ( < ಮೂಟ) + ಪ್ರತಿಷ್ಠೆ]

**ಮೂಳವಾಸನೆ** (ನಾ). ಅಲ್ಪವಾದ ಆಸೆ ; ಕೀಳುಬಯಕೆ : ಮನದೊಳಿದ್ದ ಕೀಳುಬುದ್ಧಿಯಪರಾಧವ ಮೂಳವಾಸನೆಯ ಮೂಲವ ವೇದಾಂತಸಮ್ಮೇಳನದಿಂದ ಬಾಹ ಸುಖವ ಪೇಳುತ್ತ (ಶಕ್ತಿ. ೦೨೩-೨).

[ ಮೂಳ$_1$ ( < ಮೂಟ) + ವಾಸನೆ]

**ಮೂಳಿ** ' ಮೂಟಿ$_1$ ' ನೋ.

**ಮೂಳು** (ನಾ). ೧ ಕಿವಿಯಿಲ್ಲದಿರುವುದರಿಂದ ದೇಹದಲ್ಲುಂಟಾದ ಊನ,– ಅಂಗವಿಕಲತೆ : " ಮೂಳುः = ಕರ್ಣಹೀನತ್ವಂ " (ಕಾಶಕ್ಕ. ೨೬೨); ಈ ವಿಪಿನಾಂತ್ರರದ ಪರ್ಣಾಲಯದೊಳಿರುತಿಹರು ದಶರಥರಾಜನಂದನರು ಲೀಲೆಯಲಿ ತಾಂ ಚರಿಸುತಿರೆ ಕಟ್ಟಾಳುತನದಿಂ ಹಿಡಿದು ಮೋಸದಿ ಮೂಳು ಮಾಡಿದರು (ಅಪಂರಾ. ೩-೪-೨). (ಗು). ೨. ಹರಿದುಹೋದ : 'ಮೂಳುಕಿವಿ' ಪರಾ. ೩. ಸಾಧಾರಣವಾದ : ಹಡಾಡಿ : 'ಮೂಳು ನಾಯಿ' ಪರಾ. [ಮೂಳ$_1$ ( < ಮೂಟ) + — ಉ$_4$]

**ಮೂಳುಕಿವಿ** (ನಾ). ಹರಿದುಹೋದ ಹಾಲೆಗಳುಳ್ಳ ಕಿವಿ; ಹರುಕುಕಿವಿ : ಮೂಳುಕಿವಿಯ ಮುದ್ದಿ ಮುನಿದ ಗಂಡನ ಬಿಟ್ಟು ಕೇಳೂರೊಳೊಬ್ಬನ ಮೇಳಾದೊಳಿಹಳು (ಕರಕ. ೯೬-೩) [ಮೂಳು + ಕಿವಿ$_3$]

**ಮೂಳುನಾಯಿ** (ನಾ). ನಾಡಾಡಿ ನಾಯಿ ; ಸಾಧಾರಣವಾದ ನಾಯಿ ; ಬೀದಿನಾಯಿ : ಬೂದಿಗುಡ್ಡೆಯಲ್ಲಿಯೊ ಕಸದ ರಾಶಿಯಲ್ಲಿಯೊ ಮುದುರಿ ಮಲಗಿದ್ದ ಮೂಳುನಾಯಿಗಳು ಕಣ್ಣು ಬಿಡಲೂ ಮನಸ್ಸಿಲ್ಲದೆ ಮಲಗಿದ್ದುವು (ಮಲೆಮ. ೨೬೯). [ಮೂಳು + ನಾಯಿ (< ನಾಯ್) ]

**ಮೂಳೆ$_1$** (ನಾ). (ದೇಹದಲ್ಲಿರುವ) ಎಲುಬು ; ಅಸ್ಥಿ : "ಮೂಳೆ ಯೆಸಲ್ಕೆಲುಗಳು" (ಶಾರ. ೪೦) : ಮೂಳೆಯಂ ದಬ್ಬಕದಿಂದೆ ನುಗ್ಗುನುಱು ಯಪ್ಪಿನೆಗಂ ಬಿತೆ ಬೀಸಿ ಪೊಯ್ದು (ಸುಕುಮಾ. ೬-೬) ; ಪೊಲೆಗೇರಿಯಂತೆ ಮೂಳೆಯ ಮಯಮಪ್ಪುದು (ರಮಣಮ್ಮ. ೪-೦೬೩) : ಮೂಳೆಗಳ ತಪ್ಪವಂ ತಲೆಯೋಡಿನೊಳು ಹೊಯ್ದು (ವೀರರ. ಹ. ೪೯೬–೦೦).

ಮೂಳೆಚಕ್ಕಳವಾಗು, **ಮೂಳೆಚಕ್ಕಳ ಆಗು**=ದೇಹದಲ್ಲಿ ಎಲುಬು, ಚರ್ಮ ಎದ್ದು ಕಾಣುವಂತೆ ಆಗು: ಬಹಳ ಬಡವಾಗು : ಈ ಪ್ರಕೃತಿಯ ಕನಿಷ್ಠ ವರ್ಗಕ್ಕೆ ಸೇರಿದವರು ಹೆಚ್ಚು ರಕ್ತಮಾಂಸಗಳಿಲ್ಲದೆ ತೀರ ಮೂಳೆ ಚಕ್ಕಳವಾಗಿರುತ್ತಾರೆ (ಕಖಕೋ. I, ೪೦) ; ಒಂದು ಗರಿ ಹುಲ್ಲು ಸಿಕ್ಕೀತೇ ಎಂದು ದನಗಳು ಬೆಳಗಿನಿಂದ ಸಂಜೆಯವರೆಗೂ ಅಲೆಅಲೆದು ಮೂಳೆಚಕ್ಕಳ ಆಗಿದ್ದುವು (ದೇಶಾಂಕ. ೦). **ಮೂಳೆ ಬಿಟ್ಟುಕೊಳ್ಳು**=ದೇಹದಲ್ಲಿ ರಕ್ತ ಮಾಂಸವಿಲ್ಲದಾಗು : ಮೂಳೆಗಳು ಎದ್ದು ಕಾಣು : ಸಾಯುವುದಕ್ಕೆ ಮುಂಚೆ ಕೆಲವು ದಿನಗಳ ಹಿಂದೆ ಅವಳು ಹೇಗೆ ಮೂಳೆಬಿಟ್ಟುಕೊಂಡು ವರ್ಣವಿಕಾರವಾಗಿದ್ದ ಬೆರಳುಗಳಿಂದ ತನ್ನ ಕೈಯನ್ನು ಅದುಮಿದ್ದಳೆಂಬು

ದನ್ನೂ . . . ಅವನು ಜ್ಞಾಪಿಸಿಕೊಂಡನು (ಭೂಪರು. ೦೩೦).

[ದೇ.॥ ತಮಿ. ಮೂಳೈ=ಮಜ್ಜೆ ; ಮಲ. ಮೂಳ=ಮಜ್ಜೆ ; ಕೊಡ. ಮೂಳೆ ; ತೆಲು. ಮೂಲಗ, ಮೂಲುಗು, ಮೂಲ್ಗ=ಮಜ್ಜೆ ]

**ಮೂಳೆ₂** (ನಾ). ತಿಳಿಗೇಡಿಯಾದ ಹೆಣ್ಣು; ಮೂಢಸ್ವಭಾವದ ಹೆಂಗಸು: ಮೂಳೆಯರರಗುಲಿಗಳ್ ಪೆಣ್ಗಳ್ ಕಿಡುನಡೆಯರ್ (ಶಬ್ದಮಂ. ೮-೩೩).

[ಮೂಳ₁ (< ಮೂಢ) + — ಎ₂]

**ಮೂಳೆದುಪ್ಪ** (ನಾ). ಎಲುಬಿನ ಮಧ್ಯದಲ್ಲಿರುವ ಮಾಂಸಸಾರ ; ಮಜ್ಜೆ : ಮೂಳೆದುಪ್ಪವನೆತ್ತಿ ತವಕದಿಂ ಕುಡಿಕುಡಿದು ಕಾಳಿಜದ ಖಂಡಮಂ ಸವಿಸವಿದು (ಶೀರಿರ. ಜ. ೪೯೬-೦೮). [ಮೂಳೆ₁ + ತುಪ್ಪ]

**ಮೂಳೆರೋಗ** (ನಾ). ದೇಹದ ಮೂಳೆಗಳು ಶಿಥಿಲವಾಗುವ ಒಂದು ಬಗೆಯ ರೋಗ ; ಹಕ್ಕಿರೋಗ : 'ವಿಟಮಿನ್ ಡಿ' . . . ದೇಹಕ್ಕೆ ಹಕ್ಕಿರೋಗ ಎಂಬ ಮೂಳೆರೋಗಗಳು ಬರದಂತೆ ಅವನ್ನು ರಕ್ಷಿಸುತ್ತದೆ (ಗೃಹವಿ. ೩೦). [ಮೂಳೆ₁ + ರೋಗ]

**ಮೂಳ್ನು** 'ಮೂಡ್ಡು₃' ಪರಾ.

**ಮೂಱಂಟೆ** (ನಾ). (?) : ದೇವರ್ಗ್ಗೆಲ್ಲಂ ಮೂಱಂಟೆಯುಂ ಪೊಡರುಂ ಎರಡು ಪೊಟ್ಟುಂ ಸಂಕ × × × ಗೆಯ್ದು ಕಾಸಿಯನುಟ್ಟು (ಎಕ. X. ತಂಕಾರು. ೩೪-೩, 955). [ ? ]

**ಮೂಱಚ್ಚು** (ನಾ). ಮೂಱುಕಣ್ಣುಗಳು : ಮೂಱಚ್ಚುಯುಳ್ಳನ ಮಸ್ತಕಂ ಗಂಡು ಬಹೆನೆಂದು ಭಾಷೆಯುಂ ಕೊಟ್ಟು ಬಂದೆ (ತಂತ್ರ. ೦೬-೪೭). 'ಮೂವಚ್ಚು' ಪರಾ. [ಮೂಱು + ಅಚ್ಚು₃]

**ಮೂಱಡಿ**. ಮೂರಡಿ (ನಾ). ೧. ಮೂರುಹೆಜ್ಜೆ ; ಮೂರುಪಾದ. ೨. ಮೂರುಕಾಲು : ನಡೆವುದಾದಿಯುಗಂಗಳೊಳು ನಾಲ್ಕಡಿಯೊಳುನ್ನತಧರ್ಮವಾ ಮೂಱ[ಕಾಳಿಂ. ವ]ಡಿಯೆ ನಡೆವುದು ಧರ್ಮವಾ ತ್ರೇತಾಯುಗಂಗಳಲಿ (ಜಕಪು. ೨-೫). ೩. ಮೂರುಹೆಜ್ಜೆಗಳಷ್ಟು ; ಮೂರು ಹೆಜ್ಜೆಗಳ ಪ್ರಮಾಣ : ಧರೆಗೊಡೆಯಂ ಚಕ್ರೇಶಂ ತಿರಿವನೆ ಬಲಿಯುಲ್ಲಿ ಬೇಡಿ ಮೂಱಡಿನೆಲನಂ (ಸುಕು. ೮-೦೪೪). ೪. ಮೂರುಅಡಿಗಳ ಒಂದು ಅಳತೆ; ಮೂವತ್ತಾರು ಅಂಗುಲ : ಒಂದು ಕಾಲವರನೊಂದು ಕಣ್ಣವರ ಮೂಱಡಿಗಳವರ . . . ಕುದುರೆಮೊಗದವರ ದೇಶಂಗಳಂ ಕಂಡನಾ ಕಲಿಪಾರ್ಥನು (ಕೃಜಾಭಾ. ೦೬-೨೦). ೫. ಬೆಂಕಿಯ ಅಧಿದೇವತೆ ; ಅಗ್ನಿ : "ಅಗನಿ . . . ಇಂಗಳ ಕರ್ಬಟ್ಟೆಗ ತಾಂ ಮರಗೂಟನಿರದೆ ಮೂಱಡಿಯೆಂಬಂ" (ಕವಿಕಂ. ೩೪). ॥ ಇದು ಸಂಸ್ಕೃತದ 'ತ್ರಿಪಾದ' ಎನ್ನುವುದರಿಂದ ಆಗಿದೆ. ೬. ತನ್ನ ಮೂರು ಹೆಜ್ಜೆಗಳಿಂದ ಮೂರುಲೋಕಗಳನ್ನೂ ವ್ಯಾಪಿಸಿದವನು; ತ್ರಿವಿಕ್ರಮ. ಮೂರಡಿ : ೪. ಒಂದೊಂದೂ ಮೂರಡಿ ಎತ್ತರವಿತ್ತು (ಗಂಶ್ರ. ೪೭).

**ಮೂಱಡಿ ಮಾಡು**=ಮೂರುಹೆಜ್ಜೆಗಳಲ್ಲಿ ಅಳೆ ; ಮೂರುಹೆಜ್ಜೆಗಳ ಅಳತೆಗೆ ಹೊಂದಿಸು : ಮೂಱಡಿ ಮಾಡಿದಂದು ನೆಲನೆಲ್ಲಮನಾ ಬಲಿಗಾದ ರೂಪಮಂ ತೋಱಿದಂ . . . ಮುರಾಂತಕಂ (ಕಂಶಕಾ. ೯-೬೦).

[ಮೂಱು + ಅಡಿ₁]

**ಮೂಱಡಿಗ** (ನಾ).=ಮೂಱಡಿ ೫ : "ಮರಗೂಟಂ . . . ಅಗನಿ ಮೂಱಡಿಗಂ . . . ಎಲರ್ಗೆಳೆಯಂ–ಈ ೧೩ ಅಗ್ನಿ" (ಕಶಾ. ೪೯-೩೩).

[ಮೂಱಡಿ + —ಗ₂]

**ಮೂಱೆರವು** (ನಾ). ನೀರು ಕುಡಿಯುವ ಜಾಗ, ಶತ್ರುವಿನ ಜಾಗ, ತನ್ನ ಮರಿ ಇರುವ ಜಾಗ–ಎಂಬ ಮೂರುಬಗೆಯ ಪ್ರಾಣಿಗಳ ನೆಲೆ: ಮೃಗದ ಮೂಱೆರವುಮನಾಱೂರಯ್ಕೆಯುಮಂ ಗಾಳಿಯ[ಮನೆ]ಱಂಕೆಯುಮಂ ಬಲ್ಲನಾಗಿ (ಕಂಶಕಾ. ೫-೪೩ ವ). [ಮೂಱು+ಇರವು₁(<ಇರಂ)]

**ಮೂಱು**, ಮೂರು (ನಾ). ೧. ಒಂದು ಸಂಖ್ಯೆ : "ಪುರವಹ್ನಿತ್ರಯ ಮೂಱು" (ಮಂಗರಾ. ೦೦೩-೮) ; ಮೂಱುಮನ್ನೆಪ್ಪ ಒಸಗೆ ಉತ್ಸಾಹಂಗಳ್ ಒಂದೊಕ್ಕಲೊನ್ದು ಪುಟ್ಟಿಗೆ (ಎಕ. XIV. ೦೯೦-೦೬; 795); ಪಗರಣದೊಳು ಬೀವ ಮೂಱುಂ ನಗಿಸುಗುಮಪ್ಪುದಱನಲ್ಲಿಗಂತವದೋಷಂ (ಕಂಶಾ. ೦-೬೮); ನಡೆ ನೋಟುಪ್ಪುಡಮಂತುಮಿಂತು ಮೂಱಸಿಯುವು ಮೂಱು ದೊಡ್ಡುದುವು ಮೂಱಿಡೆ ತೆಳ್ಳಿದುವಂಬುಜಾಕ್ಷಿಯಾ (ಕಂಶಕಾ. ೭-೬೨). ೨. ಮಕ್ಕಳು, ಹೆಂಡತಿ ಮತ್ತು ಹಣ ಎಂಬ ಮೂರರ ಮೇಲೆ ಮನುಷ್ಯನಿಗಿರುವ ಮೋಹ ; ಈಷಣತ್ರಯ : ಪ್ರಚುರಂ ಪತ್ರೋಳಗಾಗೆ . . . ಮೂಱ ನಂಬದೆರಡಂ ಬಿಟ್ಟೊಂದಱೊಳ್ ನಿಲ್ಲದಾ ವಚನಬ್ರಹ್ಮದೆ ಮುಕ್ತಿಯೇ (ಸೋಮೇಶ. ೦೦೦). ೩. ಸತ್ತ್ವ, ರಜಸ್ಸು ಮತ್ತು ತಮಸ್ಸುಗಳೆಂಬ ಮೂರುಗುಣಗಳು: ತ್ರಿಗುಣ : ಮೂಱಱಂದಲಿ ಹೊಱಗೆ ತೋಱರುವದನು ಗುರು ಆಱಱಿಂದಱೊಳಗೆ ತೋಱದಡೆ ಶಿಷ್ಯ ತಾನಾಱಡಿಗೊಂಬ (ಸರ್ವಜ್ಞ. ೬೦). ೪. [ವೀಶೈ] ಇಷ್ಟ, ಪ್ರಾಣ ಮತ್ತು ಭಾವ ಎಂಬ ಮೂರು ಲಿಂಗಗಳು : ಅಱಿಕ್ಕೆ ಆಱ ನೆಲೆ ಮಾಡಿ ಮೂಱಕ್ಕೆ ಮೂಱ ಸಂಬಂಧಿಸಿ ಐದಕ್ಕೆ ಇನ್ನು ಪ್ರತಿಯಿಲ್ಲವೆಂದು ಅಱದ ವಿರಕ್ತರು ಪುರಾತನರಂತೆ ಸಮ್ಯಜ್ಞಾನಕ್ರೀಯಿಂದಲೆ ಆಚರಿಸುವುದು (ಶಿಪವ. ೨೯-೨೩). ಮೂರು: ೧. ಅಂತೂ ಮೂರಕಂ ಗ ೬೨ (ಪ್ರಶಂ. ೦೯೪೩, ೪೬-೪೭; 1407); ಅವನಿಗೆ ಮುಗಿಲು ಮೂರೇ ಗೇಣು ಉಳಿದಂತೆ ಭಾಸವಾಯಿತು (ಸ.ಶಿಕ. ೩೬೦).

**ಮೂರುನಾಮ**=ಶ್ರೀವೈಷ್ಣವರು ಹಣೆಯ ಮೇಲೆ ಉದ್ದುದ್ದವಾಗಿ ಧರಿಸುವ (ಎರಡು ಬಿಳಿ ಮತ್ತು ಮಧ್ಯೆ ಒಂದು ಕೆಂಪುಬಣ್ಣದ) ಮೂರು ಗೆರೆ, –ನಾಮ : ಮೂರುನಾಮದವ ಸ್ವರ್ಗಕ್ಕೆ ಹೋದರೆ ಹನ್ನೆರಡು ನಾಮದವ ಎಲ್ಲಿ ಹೋದಾನು ? (ಗಾದೆ). **ಮೂರುನಾಮ ಹಾಕು**= (ಆಲಂ) ನಂಬಿಸಿ ಮೋಸಮಾಡು, – ವಂಚಿಸು : ಅವನು ಕೆಲಸ ಕೊಡಿಸುತ್ತೇನೆಂದು ಹಣ ತೆಗೆದುಕೊಂಡು ಎಲ್ಲರಿಗೂ ಮೂರುನಾಮ ಹಾಕಿ ಹೊರಟುಹೋದ (ರೂಢಿ). **ಮೂವರ್, ಮುವರ್, ಮುವ್ವರು, ಮೂವರು**= ಮೂರುಜನ ; ಮೂರುಮಂದಿ : ತನ್ನ ತಮ್ಮಂ ವಿಚಿತ್ರವೀರ್ಯಂಗಾ ಮೂವರ್ ಕನ್ನೆಯರಂ ಪಾಣಿಗ್ರಹಣಂಗೆಯ್ಯಾಗಳ್ (ಕಂಶಕಾ. ೦-೬೪ ವ) ; ಆನುಂ ದುಶ್ಶಾಸನನುಂ ನೀನುಂ ಮೂವರೆ ದಲಾತನುಂ ಕಟಿದ ಬಟಿಕ್ಕಾನುಂ ನಿನ್ನೆ ದಲ್ (ಗದಾಯು. ೫-೦೦); ನಗರಲ ಪನ್ನಿರ್ವ್ವರು ಮಹಾಪರಿಶೆಯು ಎಡೆಹೊಡ ಮುವನ್ನಾರ್ಟ್ಟಾ ಮುಣ್ಣುಗಳುಂ ಸಕ್ಕಿ (ಎಕ. III. ಶಂಶಶ ೦೫೫-೯; ಸು. 970); ಅತ್ತೆ ಮಾಯೆ ಮಾವ ಸಂಸಾರಿ ಮುವ್ವರು ಮೈದುನರ್ಪುಲಿಯಂಥಾ ಅವದಿರು (ಶುಹಾದೇ. ಐ. ೦೯೩-೩೨೮); ಹಗೆಗಳುಳಿದಿರಿ ಮೂವರೆಂದನು ಭಾನುಸುತ ಮುಳಿದು (ಕುವ್ಯಾಶ. ೯-೦೬); ಮಡದಿಯರು ಮೂವರಿಗೆ . . . ವಿಂಗಡಿಸಿ ಕೊಟ್ಟನು ನೃಪತಿ ಪರಮೋದನವನುಚಿತದಲಿ (ತೊರರಾ. ೦-೬-೫೬). **ಮೂಱುಕೊಡೆ ಅಣ್ಣಿಯರ್**=ಒಬ್ಬಾತನ ಹೆಸರು : ಸಿಯಗೆಲ್ಲರ್ ಮಱುಗೆರೆನಾಡುಮೂನೂಱುವನಾಳೆ ಮೂಱುಕೊಡೆ ಅಣ್ಣಿಯರ್ ಪಿಣ್ಣನೂರಾ ಏಱಿನುಳ್ಳಿಱದು ಬಿಟ್ಟಾರ್ (ಎಕ. XVI. ಕಃಶುಕೂ. ೫೬-೩; 750). **ಮೂಱುಬಟ್ಟೆ** = ೧. ಹುಟ್ಟು, ಬೆಳವಣಿಗೆ ಮತ್ತು ಸಾವುಗಳೆಂಬ ಮೂರು ಪಥ : ಮೂಱುಬಟ್ಟೆಯನಳಿದ ಬಟ್ಟಬಯಲೇ ದಿಟ್ಟದಿಟ್ಟಿಯಿಟ್ಟಪ್ಪ ನಿಜಲಿಂಗದೊಳಗೆಱಕಗೊಳೆ (ಅಪಕಂ. ೨೮೦-೦೨೯೧). ೨. ಮೂರು ದಿಕ್ಕು, – ಹಾದಿ : ನಟ್ಟನಡುವಿನ ಬದುಕಿಗೇಕೆ ಚಿಂತಿಸುತ್ತಿರುವೆ ಕಟ್ಟಕಡೆಯಲಿ ಮೂಱುಬಟ್ಟೆ ತಾನಲ್ಲವೆ (ಪುರಂದ. ದಾ. ೨-೬೯-೦). **ಮೂಱುರಾಯಕಲಿಕಾವರ**=ಒಂದು ಬಿರುದು : ಶರಣಾಗತವಜ್ರಪ್ರಾಕಾರಂ ಮೂಱುರಾಯಕಲಿಕಾವರ . . . ಸೋಮೇಶ್ವರದೇವ (ಕೆಇ. ೫೦-೪೨-೦೬; 1124). **ಮೂಱುರಾಯರ ಗಂಡ**=ಒಂದು ಬಿರುದು : ಮೂಱುರಾಯರ ಗಂಡಾಂಕಃ ಪರರಾಯಭಯಂಕರಃ ಹಿಂದುರಾಯ ಸುರತ್ರಾಣಿಯ (ಇ)ತ್ಯಾದಿ ಬಿಂ(ರು)ದೋಽ(ದೋ)ನ್ವಿತಃ ತಸ್ಮಿಂನಚ್ಯುತಭೂಪಾಲೀ ಪಾಲಯತ್ಯ

ಮೊಳೆಯಿಂದೀ ಮುದ್ದದಿ (ವಂಕಾರಾ. ೬-೯೭-೬). ೨. ಕದವ ಮುಚ್ಚಿದ ಳಿಕೋ ಗಮ್ಯಾಳಿ ಮೂಳಿ (ಧರ್ಮಾಂದ. ೨-೯೬ ಕನ್ನಡ) : ದುಷ್ಟಮೂಳಿ ಪೊಗಲೀ ಯಳು . . . ಎಂದು ಪತಿಕಾರ್ಯರ್ಪಮಂ ನೆನೆದು ಚಿಂತಿಸಿದ ಮರುತಭವನು (ವಂಕಾರಾ. ೩-೩-೦೩). ೩. ಬರಿದಾಗಿರುವಿಕೆ ; ಬೋಳಾಗಿರುವಿಕೆ : 'ಕತ್ತುಮೂಳಿ', 'ಕಾಲುಮೂಳಿ' ಪರಾ. ೪. ಕಿವಿಯಲ್ಲಿ ಯಾವ ಆಭರಣವೂ ಇಲ್ಲದವಳು ; ಬೋಳುಕಿವಿಯವಳು : (?). ೫. ಗಂಡನಿಲ್ಲದವಳು ; ವಿಧವೆ : ನನ್ನ ಮಸ್ತುವನ್ನು ಕಳೆದುಕೊಂಡು ತಲೆಗೆ ಮುಸುಕೆಳೆದುಕೊಂಡು ಮೂಳ್ಳನಾನೊಬ್ಬಳು ನಿನ್ನ ಪ್ರಾಣಕ್ಕೆ ತಗುಲಿ ಬಿದ್ದಿದ್ದೇನೆ (ಕುಹಾಗ. ೨). ೬. (?) : ಹೊಂನು ೧೫ ಮೂಳಿ ತೆಟಿ ಕೊಟರು (ಸೌತಿಇ. ೦೮೨೯, ಉಡುಪಿ. ೪೮೦-೦೪ ; 1201).

[ ಮೊಟ + – ಇ₂./ ತಮಿ. ಮಲ. ಮೂಳಿ ]

**ಮೊಟ್ಟಿ₂** (ನಾ). (ಮುಚ್ಚುಳವನ್ನುಳ್ಳ) ಪಾತ್ರೆಯ ಅಥವಾ ಗಿಂಡಿಯ ಸೊಂಡಿಲಿನಾಕಾರದ ಕೊಳವೆ ; ನಳಿಕೆ : "ಮೊಟ್ಟೆಯೆಂದು ಕಿವಿಯಲ್ಲದಳುಂ ಕರಗದ ಜೂಳಿಮುಂಪುಕ್ಕು" (ಕಮುದ. ಪ. ೩೩ ಪ್ರಯೋ) ; "ಕುಕನ್ನೆಯೊಳ್ ಜೂಳೆಯೊಳ್ ಮೊಟ್ಟೆಯಕ್ಕು" (ಸಂಕೀಪ. ೦೩).

[ ದೇ.? ತಮಿ. ಮೊಟ್ಟಿ ]

**ಮೊಟ್ಟವಳ್ಳಿ** (ನಾ). ಒಂದು ಊರಿನ ಹೆಸರು : ಅರಸಗ್ಗೆ ಬಾಳ್ಗೆಚ್ಚು ಪಲ್ಲಡಿಉಂ ಮೊಟ್ಟವಳ್ಳಿಉಂ ಕೊಟ್ಟಾರ್ (ಪ್ರಕಿಅ. ೦೯೬೩, ೦೬-೦೨ ; 450). [ ? + ಪಳ್ಳಿ₁ ]

**ಮೊಟ್ಟ್ಯಾಡು** (ನಾ). (?) : ಕಸವಯ್ಯ ಆಳ್ವೀನ ಬೆಸದೊಳ್ಬು ವಕ್ಕದ ಮೊಟ್ಟ್ಯಾಡಿನೊಳ್ಕಾದಿ ಇಸ್ವರಂ ಕೊಂದು ತಾನುಂ ಸಗ್ಗಿಯಾದನ್ (ಎಕ. X, ಕೋಲಾರ. ೩೨೯-೬ ; ೬೦೦). [ ? + ಕಾಡು₂ ]

**ಮೊಟಗ್ಗೊಡಿ** (ನಾ). (?) : ಪನ್ನೆರಡುಗದ್ಯಾಣದಿಂದೊಳಗಾದ ದಣ್ಣಮುಂ ಮೊಟಗ್ಗೊಡಿ ಒಳ್ದಣ್ಣೆಯ×ಯುಮ ಬಿಟ್ಟಂ (ಎಕ. XI, ದಾವಣ. ೦೩೨-೩೬ ; ೬೮೦). [ ? ]

**ಮೊಟ್ಟಿಅರಸ** (ನಾ). ಒಬ್ಬಾತನ ಹೆಸರು : ಸಿಯುಕಲ್ಲ ಕೆಸುವಣ್ಣು ನಾಡಾಳೆ ಮೊಟ್ಟಿಅರಸರಾಳ್ ಮೂರಿದಾಸಕರಿಯು ತಮ್ಮನ್ (ಎಕ. XVI, ತುಮಕೂ. ೯೩-೭ ; 780). [ ? + ಅರಸ₁ ]

**ಮೃಗ** (ನಾ). ೧. ಚತುಷ್ಪಾದಿ ; ಪ್ರಾಣಿ ; ಪಶು : "ಮೃಗದಲ್ಲಿಯುಂ ರೂಪಮೆಂಬುದು" (ಶಬ್ದಮ. ೦೩೬-೩೦) : ಮೃಗ ಪಶು ಶಕುನಿಗಣಂಗಳೊಳಗಣಿತನಿಜಜಾತಿಜನಿತಭಾಷೆಗಳೆಂದುಂ ನೆಗಟ್ದಂತಿರೆ (ಕಬಿರಾ. ೦-೭) : ಮೃಗಮೆಲ್ಲಂ ಕೃಷ್ಣಮೃಗಂ ಖಗಮೆಲ್ಲಂ ಕೋಗಿಲೆ . . . ಎನಿಸಿದುದಾಗಳ್ (ವರ್ಧಮಾ. ೬-೩೦). ೨. (ಕಾಡಿನಲ್ಲಿರುವ) ದುಷ್ಟಜಂತು ; ಹಿಂಸ್ರಪ್ರಾಣಿ : ನೆಲನುಂ[ಗಾ]ಳಿಯುಂ ಕೆಯ್ಯುಂ ಮೃಗಮುಮನಣಿದು ಕಾಲಾಳೊಳಂ ಕುದುರೆಯೊಳಮೊಳಗಂ ಬರಲಾನೆ ಬಲ್ಲಂ (ಶಂಕಕಾ. ೩-೯೩ ಪ). ೩. ಜಿಂಕೆ ; ಎರಳೆ : "ವಣಃ, ಕುರಂಗಃ, ಹರಿಣಃ, ಮೃಗಃ — ಈ ೪ ಹುಲ್ಲೆ" (ಶಬ್ದಮ. ೩೯-೩೩) ; ಮೃಗಮಂ ಪವನಂ . . . ವೃಷಭನಂ ಹರನೇಜಿ ಸಭಕ್ತಿ ಸಲ್ಪುದುಂ (ಜಗ. ೦-೩೩) ; ಹೊರಳುತ್ತಿತ್ತಲು ಆತನ ಮೊತೆ ಸರಳುಚಿದ ಮೃಗದೊಲು ವಿಖ್ಯಾತಿ (ಜತೀಕ. ೦೩-೩೦ ರಗಳೆ). ೪. (ಹೊಟ್ಟೆಯ ಗ್ರಂಥಿಯೊಂದರಲ್ಲಿ ಸುಗಂಧದ್ರವ್ಯವನ್ನು ಉತ್ಪತ್ತಿ ಮಾಡುವ) ಕೊಂಬಿಲ್ಲದ ಒಂದು ಜಾತಿಯ ಜಿಂಕೆ ; ಕಸ್ತೂರಿಮೃಗ: ಮೃಗನ ನಾಭಿ ನೊಸಲಿಗೊಪ್ಪುವ ಮೃಗಕಲಾನನೆ ದೇವಿಯು (ಪಿದಾಕ್ಕಿ. ೬೩-೨). ೫. ಕಸ್ತೂರಿಮೃಗದಿಂದ ಉತ್ಪತ್ತಿಯಾಗುವ ಒಂದು ಬಗೆಯ ಸುಗಂಧದ್ರವ್ಯ ; ಕಸ್ತೂರಿ ; ಮೃಗಮದ : ಮೃಗದಂತಿರೆ ಮಗಮಗಿಸುವ ಸುಗಂದ ವರತೈಲಲಕ್ಷಣದ ವೋಷಿನ ಸೊಡರ್ವರ್ಕ್ಕುಗಳಿಂದ ಬೊಟ್ಟನಿಟ್ಟಳ್ ಮೊಗದೊಳ್ಕತ್ತುರಿಯ ತಿಲಕದಂತಿರೆ ಹರಿಯಾ (ಅರ್ಕಕ. ೬-೩೩).

೬. (ದೇಹದ ಮೇಲೆ ವಿಶಿಷ್ಟವಾದ ಗುರುತುಗಳುಳ್ಳ) ಒಂದು ಬಗೆಯ ಆನೆ : "ಭದ್ರಃ, ಮಂದಃ, ಮೃಗಃ— ಎಂದಿಂತು ಆನೆಗಳ್ ಮೂಱುತೆಱನಕ್ಕುಂ" (ಶಬ್ದಮ. ೩೬-೬೨) ; ನಯನಿಪುಣಸೂತ್ರಧಾರರ್ ನಿಯಮಿಸುವರ್ ಭದ್ರಮಂದಮೃಗಸಂಕೀರ್ಣಾನ್ವಯದ ನೃಪಕರಿಗಳಂ (ಧರ್ಮಾ. ೨-೩೬). ೭. ಚಂದ್ರಬಿಂಬದಲ್ಲಿರುವ ಜಿಂಕೆಯನ್ನು ಹೋಲುವ ಗುರುತು : "ಮೃಗಃ, ಅಂಕಃ . . . ಕಳಂಕಃ . . . ಈ ೮ ಚಂದ್ರಮಂಡಲದ ನಡುವಣ ಕರ್ಪು" (ಶಬ್ದಮ. ೯-೯೩). ೮. ಹುಡುಕುವಿಕೆ ; ಅನ್ವೇಷಣೆ : "ಅನ್ವೀಕ್ಷಣಂ, ವಿಚಯನಂ, ಮಾರ್ಗಣಂ, ಮೃಗಣಾ, ಮೃಗಃ — ಈ ೫ ಹುಡುಕಿ ನೋಡುವಿಕೆ" (ಸಿದ್ಧಾಂತಿ. ೩೬೬). ೯. ಬೇಟೆ ; ಶಿಕಾರಿ : 'ಮೃಗವ್ಯಸನ' ಪರಾ. ೧೦. ಯಾಚನೆ ; ಬೇಡಿಕೆ. ೧೧. ಮಾರ್ಗಶೀರ್ಷಮಾಸ. ೧೨. ಒಂದು ಬಗೆಯ ಸಸ್ಯ : "ಮೃಗಃ – ಮೃಗ, ಹುಳಿಮಾವು" (ಔಷಂ. ೦೨೬). ೧೩. [ಜ್ಯೋತಿ] ಒಂದು ನಕ್ಷತ್ರದ ಹೆಸರು ; ಮೃಗಶೀರ್ಷ ನಕ್ಷತ್ರ : "ಮೃಗಶಿರೆಯುಂ ಮೃಗವೆನಿಕ್ಕುಂ" (ಹುಂಗರಾ. ೦೨-೭). ೧೪. ಒಂದು ರಾಶಿಯ ಹೆಸರು ; ಮಕರರಾಶಿ : ಶನಿ ಘಟ ಮೃಗಕ್ಕೆ ಗುರು ಝಷ ಧನುಗೆ . . . ತದಂಶಕಕ್ಕುಮಧೀಶರ್ (ಜಾತಕ. ೦-೨೩). 'ಮೃಗಗೃಹ' ಪರಾ. [ ಸಂ. ]

**ಮೃಗಗೃಹ** (ನಾ). [ಜ್ಯೋತಿ] ಒಂದು ರಾಶಿಯ ಹೆಸರು ; ಮಕರರಾಶಿ : ಬಹುತನಯಂ ಬಹುವಿತ್ತಂ ಮಹೀಶ್ವರಂ ಮೇಣ್ ಮಹೀಶ್ವರಾಧೀಶ ಸಮಂ ಮಹಿತನಯಂ ನೆಲಸಿರೆ ಮೃಗಗೃಹದೊಳ್ ತನ್ನನುಜನೆನಿಸುಗುಂ (ಜಾತಕ. ೧೭-೨೧). [ ಸಂ. ]

**ಮೃಗಜಲ** (ನಾ). ೧. (ವಿಶೇಷವಾಗಿ ಮರಳುಗಾಡಿನ ಪಥದಲ್ಲಿ) ನೀರಿಲ್ಲದಿದ್ದರೂ ದೂರದಲ್ಲಿ ನೀರಿನ ಹರವಿನಂತೆ ಕಾಣುವ ಒಂದು ಭ್ರಮೆಯ ನೋಟ. ೨. (ಅಲಂ) ಬಿಸಿಲುಗುದುರೆ ; ಭ್ರಮೆ ; ಇಂದು ಅವೆಲ್ಲವೂ ಮೃಗಜಲದಂತೆ ಮಾಯವಾದವು (ಶಂಕ. ೩) ; ಅವರು ಧಾವಿಸುತ್ತಿದ್ದುದು ಈ 'ಮೃಗಜಲ'ದ ಬೆನ್ನ ಮೇಲೇರಿ (ಕುಸುಗಿತು. ೬೬). 'ಮೃಗತೃಷ್ಣೆ' ನೋ. [ ಸಂ. ]

**ಮೃಗಜಾಲಿಕ** (ನಾ). (ಬೇಟೆಯಲ್ಲಿ) ಪ್ರಾಣಿಗಳನ್ನು ಹಿಡಿಯಲು ಬೀಸುವ ಬಲೆ : "ಮೃಗಜಾಲಿಕಂ ವಾಗುರಂ ಬೆಳ್ಳಾರವೆನಿಸಿಕ್ಕು" (ಹುಂಗರಾ. ೦೦೨-೩). [ ಸಂ. ಮೃಗಜಾಲಿಕಾ ]

**ಮೃಗಜಾಲಿಕೆ, ಮೃಗಜಾಳಿಕೆ** (ನಾ). = ಮೃಗಜಾಲಿಕ. **ಮೃಗಜಾಳಿಕೆ:** "ಪಾಶಃ, ಬಂಧನಗ್ರಂಥಿಃ, ವಾಗುರಾ, ಮೃಗಜಾಳಿಕಾ — ಈ ೪ ಬೆಳ್ಳಾರಂ" (ಶಬ್ದಮ. ೯೮-೯೯೩). [ಸಂ. ಮೃಗಜಾಲಿಕಾ]

**ಮೃಗಜಾಳಿಕೆ** 'ಮೃಗಜಾಲಿಕೆ' ನೋ.

**ಮೃಗಣೆ** (ನಾ). ಹುಡುಕುವುದು ; ಅನ್ವೇಷಣೆ : "ಅನ್ವೀಕ್ಷಣಂ . . . ಮೃಗಣಾ, ಮೃಗಃ — ೫ ಹುಡುಕಿ ನೋಡುವಿಕೆ" (ಸಿದ್ಧಾಂತಿ. ೩೬೬).

[ ಸಂ. ಮೃಗಣಾ ]

**ಮೃಗತತಿ** (ನಾ). ಪ್ರಾಣಿಗಳ ಗುಂಪು; ಪ್ರಾಣಿವರ್ಗ: ಮೃಗತತಿ ಸುಳಿಯವು . . . ಗಗನದ ಖೇಚರರ್ಾ ಬಟ್ಟೆಗೆ ಸಾರರ್ ನಗಜೆಯುತುಳತಪದಾತಪದೊಳ್ (ಗಿರಿಜಾ. ೯-೦೯) ; ಮೃಗತತಿ ಪೊದಟ್ದು ಮೃಗತೃಷ್ಣೆಗಳಂ ಜಲಮೆಂದು ಪರಿದುಮೋರಂತೊಡಟೊಳ್ ನೆಗೆದ ಕಡುತಾಪದಿಂ ಪೊಗೆ ಮೊಗದಿಂ ಸೂಸಿರ್ದುದಾ ನಿದಾಘದೊಳೆತ್ತಂ (ಕುಸುಮಾ. ೯-೦೨೩). [ಸಂ.]

**ಮೃಗತೃಷ್ಣಿಕೆ** (ನಾ). = ಮೃಗಜಲ ೧ : ವಿಗೆ ತೃಷ್ಣೆ ಪುಟ್ಟಲಿಂದ್ರಿಯ ಮೃಗಂಗಳಂ ಭೋಗಮೆಂಬ ಮೃಗತೃಷ್ಣಿಕೆ ಮೆಯ್ದುಗೆಯಲ್ಕೆ ಬಾರದಂತಿರೆ ತಿಗೆದೊಡಗೋಂಜೊಯ್ಯುದೆಂಬುದೊಂದಚ್ಚರಿಯ (ಕಾದಂಪೂ. ೩೬೬) ; ದೇಸಗೆಯ ಬಿಸಿಲೊಳಾ ಕೈಲಾಸನಗಂ ನೆಱೆಯೆ ಕರಗಿ ಕಗ್ಗಟ್ಟು ಕರಂ ಸೂಸಿ

ಪರಿವಪುಮ ದೆಸೆಗೆಪೆ ಮಾಸರವಾಗಿರ್ದುವೊನೆವ ಮೃಗತೃಷ್ಣಿಕೆಗಳ್ (ಶಂಕ್ರತ್ರಿ. ೯-೭೦) ; ಈ ಹೆಸರು ಮಾತ್ರ ಮೃಗತೃಷ್ಣಿಕೆಯಂತೆ ನನಗೆ ವಿಷಾದ ವನ್ನುಂಟುಮಾಡುವುದು (ಶಾಕುಂತ. ೧೦೭-೦೩).

[ಸಂ. ಮೃಗತೃಷ್ಣಿಕಾ]

**ಮೃಗತೃಷ್ಣೆ** (ನಾ). = ಮೃಗಜಲ ೧ : ಮೃಗತ್ರತಿ ಪೊವಟ್ಟ ಮೃಗತೃಷ್ಣೆ ಗಳ್ ಜಲವೆಂದು ಪರಿದುಮೋರಂತೊಡಲೊಳ್ ಸೆಗೆದ ಕಡುತಾಪದಿಂ ಪೊಗೆ ಪೊಗದಿಂ ಸೂಸಿರ್ದುದಾ ನಿದಾಘದೋಳ್ತೆ (ಕಲಸಮ. ೯-೦೨೫) ; ಮುಸಿವಾಚನವೌತುಷ್ಮಲಲನಾದಿವಿಷಯಮೃಗತೃಷ್ಣಾಪ್ರಾಸಾಸ್ಯಸಿ ಬಲ್ಲನೆ ಧರ್ಮತತ್ವರಹಸ್ಯನಿಶ್ಚಯವ (ಶಬ್ದಾ.ಶ. ೦೯-೯೩). [ಸಂ. ಮೃಗತೃಷ್ಣಾ]

**ಮೃಗದಂಶ** (ನಾ). ನಾಯಿ ; ಶುನಕ : "ಕೌಲೇಯಕಃ, ಸಾರಮೇಯಃ, ಶುನಕಃ . . . ಮೃಗದಂಶಃ, ಶಾಲಾವೃಕಃ— ಈ ೮ ನಾಯ್(ಯಿ)" (ಹಲಾಯು. ೪೭-೦೨೬). [ಸಂ.]

**ಮೃಗದಂಶಕ** (ನಾ). = ಮೃಗದಂಶ : ಕೌಲೇಯಕಃ . . . ಮೃಗದಂಶಕಃ, ಶುನಶ್ಃ, ಭಷಕಃ, ಶ್ವಾನ್ — ೭ ನಾಯಿಯ ಪೆಸರು" (ಶಿಶ್ಯಂಶಿ. ೩೦೩). [ಸಂ.]

**ಮೃಗಧರ** (ನಾ). ೧. ಜಿಂಕೆಯ ಗುರುತನ್ನು ಹೊಂದಿರುವವನು ; ಚಂದ್ರ : ಸುಜಯಮ . . . ಕುರುಕುಳಗಗನಮೃಗಧರು ಬಂದನೆಂದು ಬಿನ್ನಪಂಗೆಯ್ವುದುಂ (ಕಂಕಥಾ. ೦೩-೬೩ ಕ) ; ಮೃಗಧರಸಂಶುಮಾಲೆ ನಸು ಮುಟ್ಟುವುದುಂ ಜಲಶೂಕ್ಷ್ಮ ಬಿಂದುಗಳ್ ಸೊಗದಪುವು (ಜುಲ್ಲತ್ರಿ. ೯-೨೯). ೨. ಜಿಂಕೆಯನ್ನು ಕೈಯಲ್ಲಿ ಧರಿಸಿರುವವನು ; ಶಿವ: (೪). ೩. ಪ್ರಾಣಿಗಳಿಂದ ಕೂಡಿದುದು. ೧ . ೩ : ಕಲಾನಿಧಿಯಂತೆ ಮೃಗಧರಂ ಸಭದಂತೆ ಕುಜಯುತಂ . . . . ದಿನಕರಪ್ರಭೆಯಂತೆ ಪುಂಡರೀಕೋಲ್ಲಾಸಕರಮಾಗಿ ತಚ್ಛೈಲಮೆಸೆದಿರ್ದುದು (ಕೈಬಿಶಾ. ೦೦-೩). ೪. [ಗಣಿತ] ಒಂದು ಎಂಬ ಸಂಖ್ಯೆಯ ಸಂಕೇತ : ಯುಗ ಋತು ಗಜ ನಾಗಾಂಬರ ಮೃಗಧರ ನಗಪಟ್ಟಮೆನಿಪ ವೃತ್ತದ ಲೆಕ್ಕಂ ಸೊಗಯಿಸಿ ತೋರ್ಕುಂ (ಛಂದೋಂಬು. ೨-೨೦೦). [ಸಂ.]

**ಮೃಗಧರಧರ** (ನಾ). ಚಂದ್ರನನ್ನು ತಲೆಯಲ್ಲಿ ಧರಿಸಿದನು ; ಶಿವ: ಮೃಗಧರಧರಂ ನಗುತೆ ನುಡಿದಂ (ಹಾಶಿಶ. ೯-೯೯). [ಸಂ.]

**ಮೃಗಧೂರ್ತ** (ನಾ). ಪ್ರಾಣಿವರ್ಗದಲ್ಲಿ ಅತ್ಯಂತ ಮೋಸಮಾಡುವ ಪ್ರವೃತ್ತಿಯುಳ್ಳುದೆಂದು ಭಾವಿಸಲಾದ ಪ್ರಾಣಿ ; ನರಿ : ಕಂಡಂ ಮೃಗಗಣಪತಿಯಂ ಮೃಗಧೂರ್ತಸದ್ಮಜಕ್ಲೇಶಾರ್ತಂ (ಹಂಕಕಂ. ೪೩-೦೦). [ಸಂ.]

**ಮೃಗಧೂರ್ತಕ** (ನಾ). = ಮೃಗಧೂರ್ತ : "ಜಂಬುಕಃ, ಶಿವಾ . . . ಮೃಗಧೂರ್ತಕಃ — ಈ ೮ ನರಿ" (ಹಲಾಯು. ೩೯-೬೩). [ಸಂ.]

**ಮೃಗನಯನೆ** (ನಾ). ಜಿಂಕೆಯ ಕಣ್ಣುಗಳಂತೆ ಕಣ್ಣುಗಳುಳ್ಳವಳು ; ಸುಂದರಿ : ಮೃಗನಯನೆಯರೊದೆಯುಯುವಪಾಕೆಗಳುದ್ಯನ್ಮದನಮದ್ಯಮಂ ಮುಕ್ಕುಳಿಸಿರ್ದುಗುಟಿಯುಮಶೋಕೆ ವಕುಳದ ಮುಗುಳಲರ್ಪುವು ರಮಣ ವದನಮಲರ್ವಂತೆತ್ತಂ (ಶಾಂತಿಪು. ೭-೦೩೩) ; ಕೋಟಿದೀನಾರವುನಾ ಮೃಗ ನಯನೆ ಕೊಟ್ಟು ಕೊಂಡಳ್ ನೆಗಟ್ತೆವೆತ್ತಿರ್ದ ರತ್ನಮಯಕಂಬಳಮಂ (ಸುಕುಮಾ. ೦೦-೦೦೪). [ಸಂ. ಮೃಗನಯನಾ]

**ಮೃಗನಾಭಿ** (ನಾ). ೧. ಕಸ್ತೂರಿಯೆಂಬ ಸುಗಂಧದ್ರವ್ಯವನ್ನು ತನ್ನ ಹೊಕ್ಕುಳಲ್ಲಿ ಉತ್ಪತ್ತಿಮಾಡುವ ಒಂದು ಜಾತಿಯ ಪ್ರಾಣಿ ; ಕಸ್ತೂರಿಮೃಗ : ಅಧಿಕಕಸ್ತೂರಿಯನು ಕೊಡುವ ಮೃಗನಾಭಿ ತಾನಾವ ಲೇಸು (ಹಶಶಾ. ೬-೮೩). ೨. ಕಸ್ತೂರಿಮೃಗದ ಹೊಕ್ಕುಳಲ್ಲಿ ಉತ್ಪತ್ತಿಯಾಗುವ ಒಂದು ಬಗೆಯ ಸುಗಂಧದ್ರವ್ಯ ; ಕಸ್ತೂರಿ : "ಮೃಗನಾಭಿಃ, ಮೃಗಮದಃ, ಕಸ್ತೂರಿಕಾ — ಈ ೩ ಕಸ್ತೂರಿ" (ಹಲಾಯು. ೬೯-೩೬೦) ; ಮೃಗನಾಭಿಯನಾನೆಯ ಕೊಂಬುಗಳಂ ಪೆರ್ವಿದಿ ತೋರಮುತ್ತಂ ಕಣ್ಬೇಲಿಗಳಂ ಮುಂದಿಟ್ಟೊರ್ವಂ ಪುಗುತಂದಂ ರಾಜಭವನ ದೊಳಗಂ ಶಬರಂ (ಕಂರಾಷಾ. ೯-೦೦೬) ; ಗಂಧಪರಿಮಳದ್ರವ್ಯಮೃಗನಾಭಿ ಮೊದಲಾದ ಚೆಂದದಿಂದೀರ್ವರ್ಗಕೆ ಲೇಪನವ ಮಾಡಿ (ಹಿಶರಾ. ೬-೨೯). [ಸಂ.]

**ಮೃಗನಾಭಿಜ** (ನಾ). = ಮೃಗನಾಭಿ ೨ : ಬೊಟ್ಟಿಡುವೊಡೆ ಫಾಳದಲ್ಲಿ ಮೃಗನಾಭಿಜಮಿಂದ್ರಮಣೀವಿಭೂಷಣಂ ತೊಡುವೊಡೆ ಜೋಡೆಪರ್ಗೆ ಪಿರಿದಾದುದು ಪರ್ಬಿದ ಮರ್ಬು ಲೋಕದೊಳ್ (ರಾಜಶೇ. ೦೦-೨೨). [ಸಂ. ಮೃಗನಾಭಿಜಾ]

**ಮೃಗನಾರಿ** (ನಾ). ಒಂದು ಬಗೆಯ ಔಷಧೀಸಸ್ಯ ; ವಿಡಂಗ : "ಮೃಗನಾರಿಯೆಂದೆನೆ ವಿಳಂಗಮೆನಿಕ್ಕುಂ" (ಮಂಗರಾ. ೪೩-೪೦). 'ಮೃಗಾರಿ' ಹೋ. [ ? ]

**ಮೃಗನೇತ್ರ** (ನಾ). [ಛಂದ] ಪ್ರತಿಪಾದದಲ್ಲಿಯೂ ನಾಲ್ಕು ಅಕ್ಷರಗಳನ್ನುಳ್ಳ 'ಪ್ರತಿಷ್ಠೆ' ಎಂಬ ಛಂದಸ್ಸಿನ ಒಂದು ವೃತ್ತ : ಲಗಯುಗ್ಮಂ ನೆಗಟ್ದುದಾಗಳ್ ಮೃಗನೇತ್ರ; ಮೃಗನೇತ್ರಂ (ಛಂದೋಂಬು. ೨-೬೪). [ಸಂ.]

**ಮೃಗನೇತ್ರೆ** (ನಾ). = ಮೃಗನಯನೆ : ಮೃಗನೇತ್ರೆಯ ತೊಳಗುವ ಕಾಲುಗುರ್ಗಳ ನೂಪುರದ ಪೊಳೆವ ಮಪ್ರಂಗಳ ಕಾಂತಿಗಳಡರೆ ಪರ್ವಿ ಪಚ್ಚೆಯ ಜಗಲಿಯೊಳೊಪ್ಪಿದುವು ರಂಗವಲಿಯನಿಕ್ಕಿದವೊಲ್ (ಜುಲ್ಲತ್ರಿ.೩-೯೫) ; ಮಗನೆ ಕೋಟಿಪುರಲೇಕ ಹೋಗಿ ಬಂದಪೆಯಯ್ಯ ಮೃಗನೇತ್ರೆ ಪರಮೆಯುಂ ಬೇಡಿಕೊಂಡಪೆಯಯ್ಯ (ಜಂಬರ. ೦೩-೦೫೬). [ಸಂ. ಮೃಗನೇತ್ರಾ]

**ಮೃಗಪಂಚಕ** (ನಾ). [ಜ್ಯೋತಿ] ಮೃಗಶಿರಾನಕ್ಷತ್ರದಿಂದ ಆರಂಭವಾಗುವ ಮೃಗಶಿರೆ, ಆರಿದ್ರೆ, ಪುನರ್ವಸು, ಪುಷ್ಯ ಮತ್ತು ಆಶ್ಲೇಷೆ ಎಂಬ ಐದು ಮಳೆಯ ನಕ್ಷತ್ರಗಳು : ಮೃಗಪಂಚಕದಿಂದ ಮಳೆ ಬರುತ್ತದೆ (ರೂಢಿ). [ಸಂ.]

**ಮೃಗಪತಿ** (ನಾ). ೧. ಪ್ರಾಣಿಗಳ ಒಡೆಯ ; ಸಿಂಹ : "ಹರಿಃ, ಮೃಗಪತಿಃ . . . ಕಂಠೀರವಃ—ಈ ೯ ಸಿಂಹದ ಪೆಸರ್" (ಹಲಾಯು. ೩೬-೬೦) ; ಮೃಗಪತಿ ಪೊಜಗಾದ ಕಿಶೋರಕೇಸರಿವಿಧಿಯಿಂದಂ . . . ತನ್ನನ್ವಯ ರಾಜಧಾನಿಯನನುಜಸಮೇತನಪರಾಜಿತನೆಯ್ದೆ ಪಂದು (ಶಾಂತಿಪು. ೦-೯೩ ಕ). ೨. ಹುಲಿ ; ವ್ಯಾಘ್ರ. ೩. ಗುಂಡುಜಿಂಕೆ. ೪. [ಜ್ಯೋತಿ] ಒಂದು ರಾಶಿಯ ಹೆಸರು; ಸಿಂಹರಾಶಿ : ಭೃಗುಜನಿರೆ ಕರ್ಕಿಯೊಳ್ ಪೋಣಾ ಮೃಗಪತಿಯೊಳ್ ದ್ವಾಪರಾರಿನಿಧನಸ್ಥಿತಸೌಮ್ಯಗಣಂ ವೀಕ್ಷಿಸುವೊಡೆ ಪೊಂದುಗುಮಾ ಲಗ್ನೋದ್ಯಮಂ ಷಡ್ವರ್ಗಾಂತರದೊಳ್ (ಜಾತಕ. ೬-೨೩). [ ಸಂ.]

**ಮೃಗಪೋತ** (ನಾ). ಜಿಂಕೆಯ ಮರಿ : "ಕೊಣಸನೆ ಮೃಗಪೋತ" (ಕಬಿಕಂ. ೩೪) ; ಮೃಗಪೋತನನು ಹಜಿಹೊಯ್ವುದುಚಿತವೆ (ಶಬ್ದಾ.ದ್ರೋ. ೬-೦೪). [ಸಂ.]

**ಮೃಗಪೋತಕ** (ನಾ). = ಮೃಗಪೋತ : ವಾನರನ ಹಯಕುಂಜರನ ಪಂಚಾನನನ ಮೃಗಪೋತಕನ ಗುಣವಾ ನರೇಂದ್ರನೋಳರಲುಬೇಹುದು (ಶಬ್ದಾ.ಅ. ೩-೦೦೧). [ಸಂ.]

**ಮೃಗಪ್ಲುತ** (ನಾ). [ನಾಟ್ಯ] ಮಾರ್ಗಆಕಾಶಚಾರಿಯ ಹದಿನಾರು ಪ್ರಭೇದಗಳಲ್ಲಿ ಒಂದು; ೯ "ಒಂದು ಕಾಲನ್ನು ಕುಂಚಿತಮಾಡಿ ಎತ್ತಿ ನೆಗೆದು ನೆಲದ ಮೇಲಿರಿಸಿ ಇನ್ನೊಂದು ಕಾಲನ್ನು ಅಂಚಿತಮಾಡಿ ಕಣಕಾಲನ್ನು ಮೊದಲ ಕಾಲಿನ ಮುಂದೆ ಇರಿಸುವುದು" (ಅಭ್ಯರಂ. ೩೦೬ ಗದ್ಯಾನುವಾದ) : ಚರಣಮನೊಂದಂ ಕುಂಚಿತದಿರವಂಚೆತ್ತಿ ನೆಗೆದು ನೆಲದೊಳ್ ನಿಲಿಸುತ್ತಿರದಂಚಿತಪದಜಂಘೆಯನಿರಿಸಲ್ಕಾ ಪದದೆಸೆಗೆ ಮೃಗಪ್ಲುತಮೆನಿಕುಂ (ಅಭ್ಯರಂ. ೯-೯೩). [ಸಂ. ಮೃಗಪ್ಲುತಾ]

**ಮೃಗಬಂಧಿನಿ** (ನಾ). ಪ್ರಾಣಿಗಳನ್ನು ಹಿಡಿಯಲು ಬಳಸುವ ಬಲೆ: "ವಾಗುರಾ, ಮೃಗಬಂಧಿನೀ—ಮೃಗಗಳ ಹಿಡಿಯುವ ಬಲೆಯ ಪೆಸರುಗಳು" (ಸಿದ್ಧಾಂತಿ. ೩೦೪). [ಸಂ. ಮೃಗಬಂಧಿನೀ]

**ಮೃಗಭೂ** (ನಾ). = ಮೃಗನಾಭಿ ೨: ಮೃಗಭೂಯುದ್ಧ ವಿಳಾಸಿನೀ ಕಬರಿಕಾಬಂಧಂಗಳಂ ಪೊತ್ತು ಮಲ್ಲಿಗೆಯೊಳ್ ಭಾವಿಸಿ ಧೂಪದೊಳ್ ಪೊರೆದು . . . ಪಳಂಚಿ ಸುಚಿಃದತ್ತೇದೊಂದು ಮಂದಾನಿಳಂ (ಶಂಕಪಾ. ೯-೯೦); "ಚೌರಿ" (ಶಂಕಪಾ. ಕೋಶ); ಮೃಗಭೂಕುಂಕುಮಚಂದನದ್ರವ ವಿಲೇಪಂ ನೂತನಾನರ್ಘ್ಯರತ್ನಗುಣಾಲಂಕರಣಂ ವಿಚಿತ್ರವಸನಂ ಚೆಲ್ವಾಗೆ (ಜಗಪ. ೬-೯೩). [ಸಂ.]

**ಮೃಗಮದ** (ನಾ). ಕಸ್ತೂರಿಮೃಗದಿಂದ ಉತ್ಪನ್ನವಾಗುವ ಸುಗಂಧ ದ್ರವ್ಯ; ಕಸ್ತೂರಿ: "ಮೃಗನಾಭಿಃ, ಮೃಗಮದಃ, ಕಸ್ತೂರಿಕಾ—ಈ ೩ ಕಸ್ತೂರಿ" (ಹಲಾಯು. ೯೯-೩೯೦); ಮೃಗಮದಪತ್ರರೇಖೆಗಳನೇಕೆಗೆ ತಾಳ್ದಿರ[ದಾದು]ವೀ ಕದಂಪುಗಳ್ (ಶಂಕಪಾ. ೯-೬೨); ಸುದತಿಗೆ ಮೃಗಮದದ ಪತ್ರಲೇಖೆಗಳೆಸೆಗುಂ (ಜಗಪ. ೧೦-೦೫೩). [ಸಂ.]

**ಮೃಗಮದಾಮೋದ** (ನಾ). ೧. ಕಸ್ತೂರಿಯ ಕಂಪು,—ಸುವಾಸನೆ: ಮೃಗಮದಾಮೋದಾಸ್ಯ ನಿಶ್ವಾಸೆಯುಂ ತಳಿರೇ ತಾವರೆಯೇ ಮಂದಾಳಿ ಕುಲವೇ . . . ಕಂಡಿರೆ (ಶಂಕಪಾ. ೯-೧೦೪). ೨. ಕಸ್ತೂರಿಯೆಂಬ ಸುಗಂಧದ್ರವ್ಯದಲ್ಲಿ ಆಸಕ್ತನಾದವನು; ಒಂದು ಬಿರುದು: ಮೃಗಮದಾಮೋದಶ್ರೀಮತ್ತ್ರಿಭುವನಮಲ್ಲದೇವಪಾದಾರಾಧಕಂ ಪರಬಳ ಸಾಧಕಂ ನಾಮಾದಿ ಸಮಸ್ತಪ್ರಶಸ್ತಿಸಹಿತಂ (ಕಇಅ. ೪೦-೩೯-೦೨; 1087); ವಾಸಂತಿಕಾದೇವೀಲಬ್ಧ ವರಪ್ರಸಾದ ಮೃಗಮದಾಮೋದ ಶ್ರೀಮನ್ಮಹಾ ಮಂಡಳೇಶ್ವರಂ (ಎಕ. V (R), ಅರಸೀ. ೫೪೦-೦೩; 1180). [ಸಂ.]

**ಮೃಗಯಾವ್ಯಸನ** (ನಾ). ಪ್ರಾಣಿಗಳನ್ನು ಬೇಟೆಯಾಡುವ ಹವ್ಯಾಸ: ನಿಮಗೆ ಮೃಗಯಾವ್ಯಸನವ್ಯಾಪಾರಮಾದುದಕ್ಕುಮಲ್ಲದಾಗಳಿದು ನಿಮ್ಮ ದುಷ್ಕರ್ಮದ ಫಲಂ (ಶಂಕಶಂ. ೦೪೬-೪); ದ್ಯೂತ ಮೃಗಯಾವ್ಯಸನವಿವು ನೃಪಜಾತಿಗುಚಿತ ವಿನೋದ (ಕುಮ್ಮಾಗ. ೫-೦೨). [ಸಂ.]

**ಮೃಗಯು** (ನಾ). ಬೇಟೆಯಾಡುವವನು; ಬೇಟೆಗಾರ: "ಮೃಗಯುಃ, ಲುಬ್ಧಕಃ, ವ್ಯಾಧಃ, ವಾಗುರಿಕಃ—ಈ ೪ ಮಾವುಲಿಗಂ" (ಹಲಾಯು. ೯೬-೪೯೨); ಭೂಮಿಕಂಪಮಾಗೆ ಪರಿವ ಮೃಗಯುಗಳಚರಣಘಾತಶಬ್ದಂಗಳೊಳಂ (ಕಾದಂಪೂ. ೦೬೦). [ಸಂ.]

**ಮೃಗಯೆ** (ನಾ). ಪ್ರಾಣಿಗಳ ಬೇಟೆ: ಮೃಗವ್ಯಸನ: "ಆಚ್ಛೋಟನಂ, ಮೃಗಯಾ, ಮೃಗವ್ಯಂ, ಪಾಪರ್ಧಿಃ, ಆಖೇಟಕಃ—ಈ ೫ ಬೇಂಟೆ" (ಹಲಾಯು. ೬೦-೨೪೦); ಮೃಗಯಾವ್ಯಾಜದಿನೊರ್ಮೆ ಶಂತನು ತೊಲಲ್ತರ್ಪಂ ಪಳಂಚಲ್ಕೆ (ಶಂಕಪಾ. ೦-೬೦). [ಸಂ. ಮೃಗಯಾ]

**ಮೃಗರಾಜ** (ನಾ). ೧. = ಮೃಗಪತಿ ೧: ಮೃಗಪ್ರಜದೊಳ್ಳೇಂ ಮೃಗರಾಜನಂ ನಿಜತ್ವದೆ ತಾಂಗಲ್ಕೆ ಸಮ್ಮಾ ಬೃಹದ್ಧ್ವಜನೀಸಂಕುಳಮಿಾ ಜಗೀಮುವನಿದೇಂ ಸಂಗ್ರಾಮದೊಳ್ ಗೆಲ್ಗುವೇ (ಅಜಿಪು. ೦೩-೫೬); ದೊಲ ಕೊಡ್ಡಿದ ಬಲೆಯೊಳ್ ಮೃಗರಾಜಂ ತೊಡರ್ಗುವೆ (ಶಾಂತಿಪು. ೩-೯೩ ವ). ೨. = ಮೃಗಪತಿ ೨. ೩. ಚಂದ್ರ. ೪. = ಮೃಗಪತಿ ೪. [ಸಂ.]

**ಮೃಗರಾಜವಿಷ್ಟರ** (ನಾ). ಸಿಂಹಾಸನ: ಶ್ರೀಮಂಟಪಮಂ ವಿರಚಿಸಿ ಮೃಗರಾಜವಿಷ್ಟರದೊಳ್ ಬಾಲಕನಂ ಪೂರ್ವಾಭಿಮುಖನಿವಿಷ್ಟನಂ ಮಾಡಿ (ಅಜಿಪು. ೭-೬೬ ವ); ಭವ್ಯರತ್ನಾಕರನಂ . . . ಮೃಗರಾಜವಿಷ್ಟರ ದೊಳಿರಿಸಿ (ಧರ್ಮಾ. ೪-೮೨ ವ). [ಸಂ.]

**ಮೃಗರಿಪು** (ನಾ). ಸಿಂಹ: "ಹರಿಃ . . . ಮೃಗರಿಪುಃ, ಸಿಂಹಃ, ಕಂಠೀರವಃ—ಈ ೯ ಸಿಂಹದ ಪೆಸರ್" (ಹಲಾಯು. ೩೬-೬೦); ಮೃಗರಿಪುವಂ ಮೃಗಾಪತಿಯು ನಂದನನೊರ್ವನೆ ನೀಮ ಕೊಂದು (ಪರ್ಶಪು. ೩-೯೩). [ಸಂ.]

**ಮೃಗಲಕ್ಷ್ಮ** (ನಾ). ಜಿಂಕೆಯ ಗುರುತನ್ನು ಉಳ್ಳವನು: ಚಂದ್ರ: ಮೃಗಲಕ್ಷ್ಮಂ ನಯನೇಷು ವಹ್ನಿನಿಧಿಶೈಲಸ್ಥಾನಂಗಳೊಳ್ ಕ್ರೂರರಯ್ದು ಗುಣೇಶರ್ತುಗಳೊಳ್ ಶುಭಗ್ರಹಗಣಾ (ಲೋಕೋಪ. ೨-೩೨). [ಸಂ. ಮೃಗಲಕ್ಷ್ಮನ್]

**ಮೃಗಲಾಂಛನ** (ನಾ). ೧. ಚಂದ್ರಬಿಂಬದಲ್ಲಿರುವ, ಜಿಂಕೆಯನ್ನು ಹೋಲುವ ಗುರುತು: ನಿನ್ನೀ ಪೆಚಿನೊಸಲೊಲೊಟ್ಟ ಮೃಗಮದತಿಲಕ ಮದೆಡೆಗಿಡುವಿನಂ ಮೃಗಲಾಂಛನಮೆನಲ್ಕೆಸೆದುಮೆನ್ನ ಮನಕ್ಕೊಂದು ಲಾಂಛನಮನಾಗಿಪುದಿದೇತಜ ಪರಿ ರಮಣಿ? (ರಾಜಶೇ. ೨೦-೨). ೨. = ಮೃಗಲಕ್ಷ್ಮ: ಮೃಗಲಾಂಛನಮಂಡಳದೊಳ್ ಮೃಗತನು ಮಿಸುಪಂತೆ ನಿನ್ನ ಕುಚಮಂಡಳದೊಳ್ ಮೃಗಮದವಿಚಿತ್ರಪತ್ರಂ ಮೃಗಲೋಚನೆ ಬರೆಯ ದಿರ್ದುದಿಂದಿನ ತೆಂಬಿನೇಂ (ಕಾದಂಪೂ. ೩೩೩); ಜಗಕೆಲ್ಲ ತಂಪನೆಸಗುವ ಮೃಗಲಾಂಛನನಕಟ ತನ್ನ ಹಿಮರಶ್ಮಿಗಳಿಂ . . . ಎನ್ನ ಸುಡುವನೇಗೈದಪ ನಾಂ (ಕಾಕುಂತ. ೩೨ ಆದಿ). [ಸಂ.]

**ಮೃಗಲಿಪಿ** (ನಾ). ಒಂದು ಬಗೆಯ ಲಿಪಿ: ದರ್ಪಣಲಿಪಿ ಮೃಗಲಿಪಿ ಪ್ರಬಂಧಲಿಪಿ . . . ನಂದಿಲಿಪಿ ಈ ಅಗಣಿತ ಲಿಪಿಗಳ ನೋಡಲಚ್ಚಿಯದೆ ಬಿಜ್ಜಳರಾಯನ ಸಭೆಯೊಳು ಕಳಕಳಗೊಳುತ್ತಿದ್ದರು ವಿದ್ವಾಂಸರುಗಳೆಲ್ಲ (ಶಾಸ್ಕರ. ೬೬-೬). [ಸಂ.]

**ಮೃಗಲೋಚನ** (ನಾ). ೧. ಜಿಂಕೆಯ ಕಣ್ಣಿನಂತೆ ಸುಂದರವಾದ ಕಣ್ಣು: ಮೃಗಲೋಚನಂಗಳಿರ್ದುವು ಮೃಗಮಿಲ್ಲದಿರ್ದಪುದು ವೃಷಲಂ ವಟವಿಲ್ಲೀ ಪಗಲುಮೆಸೆವಿಂದುವೆತ್ತಣಿನೊಗೆದುದೊ ಪೇಟಿಂಪು ನೋಡಿವಂ ನಗೆ ಮೊಗಮಂ (ಶಂಕಪಾ. ೯-೭೮). ೨. ಚಂದ್ರ. [ಸಂ.]

**ಮೃಗಲೋಚನೆ** (ನಾ). ಜಿಂಕೆಯ ಕಣ್ಣಿನಂತೆ ಕಣ್ಣುಗಳುಳ್ಳವಳು; ಸುಂದರಿ: ಸಂಘರಥಂಗಂ ಮೃಗಲೋಚನೆ ತತ್ಪ್ರಿಯೆ ಮಿತ್ರಗಂ ಮಗಂ ನಂದಿವರ್ಧನಂ ಪುಟ್ಟುವುದುಂ (ಶಾಂತಿಪು. ೯-೫೬); ಮೃಗಲೋಚನೆಯೊರ್ವಳ್ ಸಂಪಗೆಯೊಳ್ಮುಗುಳಾಯ್ದು ಮಗುಟೆ ಚಳಕೇಶರಕಾಂತಿಗಳಂ ಪೂಣ್ದಳ್ ಮುಯ್ಯಂ ಮುಗುಳಂ ಕೊಂಡಲರನೀವವೋಲ್ ಮಲ್ಲಿಗೆಯಂ (ಲೀಲಾವ. ೦೩-೭೮). [ಸಂ. ಮೃಗಲೋಚನಾ]

**ಮೃಗವಧಾಜೀವ** (ನಾ). ಪ್ರಾಣಿಗಳನ್ನು ಕೊಂದು ಜೀವಿಸುವವನು; ಬೇಟೆಗಾರ: "ವ್ಯಾಧಃ, ಮೃಗವಧಾಜೀವಃ, ಮೃಗಯುಃ, ಲುಬ್ಧಕಃ—ಈ ೪ ಬೇಡರವನ ಪೆಸರು" (ಸಿದ್ಧಾಂತಿ. ೩೦೩). [ಸಂ.]

**ಮೃಗವಧೆ** (ನಾ). ಪ್ರಾಣಿಗಳನ್ನು ಕೊಲ್ಲುವುದು: ವನಚರನು ತನ್ನಯ ಕುಟುಂಬವನನುದಿನವು ಮೃಗವಧೆಯಲೀ ಸಲಹಿದನು (ಕುಮ್ಮಾಕ. ೦೩-೦೪). [ಸಂ. ಮೃಗವಧ]

**ಮೃಗವಾಹನ** (ನಾ). ಜಿಂಕೆಯನ್ನು ವಾಹನವಾಗಿ ಉಳ್ಳವನು; ವಾಯು. [ಸಂ.]

**ಮೃಗವಿಂಡು** (ನಾ). = ಮೃಗತತಿ: ಸಿಲುಕಿದವು ಮೃಗವಿಂಡು ನಾನಾ ಬಲೆಗಳಲಿ (ಕೊರಣ. ೩-೩-೦೩). [ಮೃಗ + ಪಿಂಡು]

**ಮೃಗವ್ಯ** (ನಾ). ಬೇಟೆ; ಮೃಗಯೆ: "ಆಚ್ಛೋಟನಂ, ಮೃಗಯಾ, ಮೃಗವ್ಯಂ, ಪಾಪರ್ಧಿಃ, ಆಖೇಟಃ—ಈ ೫ ಬೇಂಟೆ" (ಹಲಾಯು. ೬೦-೨೪೦); ಅಂತು ನರನಾರಾಯಣರಿರ್ವರುಂ . . . ಮೃಗವ್ಯ ವ್ಯಾಪಾರದಿಂ ಬಟಲ್ದು (ಶಂಕಪಾ. ೫-೫೦ ವ). [ಸಂ.]

**ಮೃಗವ್ಯಸನ** (ನಾ). = ಮೃಗಯಾವ್ಯಸನ: ಅರಸನಾರೋಗಣೆ ವಿಹಾರದೊಳಿರುಳು ಹಗಲು ಮೃಗವ್ಯಸನದೆಚ್ಚೆಚಿನೊಳಿಹುದೆಂದನಿಬರನು ಬೀಳ್ಕೊಟ್ಟನಸುರಾರಿ (ಕುಮ್ಮಾಕ. ೦-೦೦). [ಸಂ.]

**ಮೃಗಶಾಬ** (ನಾ). ಜಿಂಕೆಯ ಮರಿ: ಮೃಗಶಾಬಂ ಮಿಗೆ ಶಾರ್ದೂಲಗರ್ಜಿತ ಕ್ಕಂಜುವಂತೆ ತದ್ಧಾತ್ರಿಯೊಳಾ ಮೃಗಶಾಬನೇತ್ರೆ ಬೆರ್ಚಿದಳಗಣಿತವುರ

ರಕ್ಷಕರ್ಕಳಪ್ಪುರಕಾಗಲ್ (ವಳಕು. ೬-೧೦೩); ಕಾಂತಲೆ ಬೆದರಿದ ಮೃಗಶಾಬದಂತೆ ಕಣ್ಣೆರೆದು ಸುತ್ತಲೂ ನೋಡಿದಾಗ . . . ಕಂಡಳು (ಶಾಂತಲಾ. ೦೫). [ಸಂ.]

**ಮೃಗಶಾಬಾಕ್ಷಿ** (ನಾ). ಜಿಂಕೆಯ ಮರಿಯ ಕಣ್ಣುಗಳಂತೆ ಕಣ್ಣುಗಳುಳ್ಳವಳು : ಸುಂದರಿ: ಮೃಗಯಾವ್ಯಾಜದಿನೊಮ್ಮೆ ಶಂತನು ತೊಟಿಲ್ಪರ್ಪಂ ಪಳಂಚಲ್ಕೆ ತನ್ಮೃಗಶಾಬಾಕ್ಷಿಯ ಕಂಪು ತಟ್ಟೆ ಮಧುಪಂ ಬೋಲ್ ಸೋಲ್ತು (ಕಂಕಥಾ. ೧-೭೦); ಹಸ್ತತಳಮಂ ಸತ್ಪಲ್ಲವಂಗಿತ್ತು ತನ್ಮೃಗಶಾಬಾಕ್ಷಿಯನಿಂತು ಮನ್ಮಥವಶಶ್ರೀಗೆತ್ತು (ಸುಕುಮಾ. ೯-೯೦). [ಸಂ. ಮೃಗಶಾಬಾಕ್ಷೀ]

**ಮೃಗಶಿರ** (ನಾ). [ಜ್ಯೋತಿ] ಇಪ್ಪತ್ತೇಳು ನಕ್ಷತ್ರಗಳಲ್ಲಿ ಐದನೆಯದು: ಮೃಗಶೀರ್ಷ : ಮೃಗಶೀರ್ಷಂ. ಮೃಗಂ. ಚಾಂದ್ರಂ. ಐಂದವಂ. ಹಿಮದೀಧಿತಿ—ಯಾ ೫ ಮೃಗಶಿರ ನಕ್ಷತ್ರಕ್ಕೆ ಪೆಸರು (ಶಾಸ್ತ್ರ. ೬೨-೭). [ಸಂ.]

**ಮೃಗಶಿರೆ** (ನಾ). [ಜ್ಯೋತಿ] ಇಪ್ಪತ್ತೇಳು ನಕ್ಷತ್ರಗಳಲ್ಲಿ ಐದನೆಯದು ಮತ್ತು ಈ ನಕ್ಷತ್ರದಲ್ಲಿ ಬರುವ ಮಳೆ : "ಮೃಗಶಿರೆಯುಂ ಮೃಗಮೆನಿಕ್ಕುಂ" (ಮಂಗರಾ. ೦೨-೭); ಮೃಗಶಿರೆ ಶೀಘ್ರಸ್ಥಿರ ಋಕ್ಷಗಳುದಿತೋದಿತ[ಮು]ಮಾಗೆ ಕರ್ತೃಗೆ ವಸು ವಾರ್ಧಿಗೆ ದಿನಪತಿರಹಿತ ರಾಶಿಗಳುದಯಿಸೆ ಮಾಬ್ಬುದೈ ಸಮಾವರ್ತನೆಯುಂ (ಲೋಕೋಪ. ೨-೩೫); ಅಶ್ವಿನಿ ಭರಣಿ . . . ಮೃಗಶಿರೆ . . . ರೇವತಿಯೆಂಬಿಪ್ಪತ್ತೇಳು ನಕ್ಷತ್ರಂಗಳುಂ ತಮ್ಮ ತಮ್ಮ ಅಧಿಕಾರಮಂ ಘಾಮುತ್ತಿರ್ಪುವು (ಶಿವೇಳ. ೨೦೦); ಮೃಗಶಿರೆಗೆ ಮಿಕ್ಕ ಎಳ್ಳು ಚೆಲ್ಲು (ಗಾದೆ). [ಸಂ. ಮೃಗಶಿರಾ]

**ಮೃಗಶೀರ್ಷ** (ನಾ). ೧. = ಮೃಗಶಿರ : ಮೃಗಶೀರ್ಷಂ ಮೊದಲುಂ ಪೂರ್ವೆಗಳಶ್ವಿನಿಯಾರ್ದ್ರೆ ಚಿತ್ರೆ ಮೂಲಂ ರೇವತಿಯಾಗುರೀವೀ ಪತ್ತುಂ ತಾರೆಗಳೊಳ್ ಮಾಡುವುದು ಸಕಲವಿದ್ಯಾಗಮಮಂ (ಲೋಕೋಪ. ೧-೦೩). ೨. [ನಾಟ್ಯ] ಅಸಂಯುತ ಹಸ್ತಮುದ್ರೆಗಳಲ್ಲಿ ಒಂದು : ನಾಟ್ಯಶಾಸ್ತ್ರದಲ್ಲಿ ಹೇಳಿರುವ ಅಸಂಯುತ ಹಸ್ತಗಳು ಯಾವುವೆಂದರೆ ಪತಾಕ . . . ಮೃಗಶೀರ್ಷ (ಅಭಾಸ. ೯೮). [ಸಂ.]

**ಮೃಗಶೃಂಗ** (ನಾ). ೧. ಜಿಂಕೆಯ ಕೋಡು : 'ಮೃಗಶೃಂಗಧರ' ಪರಾ. ೨. ಬಲಮುರಿ ಎಂಬ ಸಸ್ಯದ ಕಾಯಿ : ಸುಮಾರು ಒಂದು ಒಂದೂವರೆ ಅಂಗುಲ ಉದ್ದವಿದ್ದು ಮೊನೆ ಚೂಪಾಗಿರುತ್ತದೆ : ಇದೇ ಕಾರಣದಿಂದ ಸಂಸ್ಕೃತದಲ್ಲಿ ಮೃಗಶೃಂಗ ಎನ್ನುತ್ತಾರೆ (ಹಸುಹೂ. ೬೦). [ಸಂ.]

**ಮೃಗಶೃಂಗಧರ** (ನಾ). ಜಿಂಕೆಯ ಕೋಡುಗಳನ್ನು ಧರಿಸಿದವನು : ಯಜ್ಞದೀಕ್ಷಿತನಾದವನು : ಉದಿರ [illegible]ಕ್ಷದೊಳ್ ಧರ್ಮಜಂ ಮೃಗಶೃಂಗಧರನಾಗಿ ಯಾಜಮಾನ್ಯದೊಳೆಸೆದನು (ಜೈಮಿಭಾ. ೩೩-೪೦). [ಸಂ.]

**ಮೃಗಾಂಕ** (ನಾ). ೧. ಜಿಂಕೆಯ ಗುರುತುಳ್ಳವನು : ಚಂದ್ರ : "ಇಂದುಃ, ಚಂದ್ರಃ . . . ಮೃಗಾಂಕಃ. ವಿಧುಃ, ದಾಕ್ಷಾಯಣೀರಮಣಃ— ಈ ೨೧ ಚಂದ್ರನ ಪೆಸರ್" (ಕಬ್ಬಿಗ. ೬-೪೩); ಶಾಂತಿನಾಥಜಿನೇಶ ಪ್ರತಾಪಮುಂ ತದ್ವಸುಧೇಶನ ಕಾಂತಿಯುಮೆಂದು ಮೃಗಾಂಕನ ಕಾಂತಿಯುಮೇಂ ದಿಗಂತಮಂ ಪರ್ಪಿದುದೋ (ಶಾಂತಿಪು. ೦೦-೧೩೪). ೨. ಕರ್ಪೂರ. ೩. ಗಾಳಿ. [ಸಂ.]

**ಮೃಗಾಕ್ಷಿ** (ನಾ). ಜಿಂಕೆಯ ಕಣ್ಣುಗಳಂತೆ ಕಣ್ಣುಗಳುಳ್ಳವಳು : ಸುಂದರಿ : ಸೂಸಿ ಕಣ್ಣ ನೀರೊಡನೊಡನುಣ್ಣೆ ಕುಂಕುಮದೊಳರ್ದಿದ ಬಾಳೆಗಳನ್ನವಾಗಿ ಕೆಂಪಡರ್ದಲರ್ಗಣ್ಗಳಿಂದುಗುಬ್ಬು ನೋಡಿದುದಂ ನೆನೆವೇಂ ಮೃಗಾಕ್ಷಿಯಾ (ಆದಿಪು. ೦೨-೨೪); ಎಲೆ ಮೃಗಾಕ್ಷಿ ಪೇಳೇಕೆ ಕರ್ಣಪೂರದ ನೈದಿಲ್ ಕಾರ್ಗಿರುಳೊಳಮರ್ದ ತಾರಗೆಗೋರಗೆಯೆನಿಸಿರ್ದುದಿಲ್ಲ (ರಾಜಶೇ. ೩-೬೩). [ಸಂ. ಮೃಗಾಕ್ಷೀ]

**ಮೃಗಾಜಿನ** (ನಾ). ಜಿಂಕೆಯ ತೊಗಲು : ಮೃಗಾಜಿನಮಂ ಪೊಲುತಿರ್ಪ ಮುಂಜಮೇಖಲೆಗಳನೊಪ್ಪಮಾಡುವ . . . ವ್ಯವಸಾಯಮೆತ್ತಲುಂ (ಕಾದಂಪೂ. ೨೨೨); ಇಟ್ಟ ವಿಭೂತಿಯ ತೊಟ್ಟ ರುದ್ರಾಕ್ಷಿಯುಟ್ಟ ಮೃಗಾಜಿನದ . . . ಕಟ್ಟಣಕದ ಕಡು ಮಹಿಮೆಯೊಂತ ತಪೋಧನರಿರ್ಪ ತಾಣದಲ್ಲಿ (ರಾಜಶೇ. ೦-೦೨೫ ವ). [ಸಂ.]

**ಮೃಗಾದನ** (ನಾ). ನಾಯಿಯ ಜಾತಿಗೆ ಸೇರಿದ ಒಂದು ಬಗೆಯ ಮಾಂಸಾಹಾರಿಪ್ರಾಣಿ ; ಕತ್ತೆಕಿರುಬ : ಶಿವಂಗಿ : "ತರಕ್ಷುಃ, ಮೃಗಾದನಃ—೨ ಶಿವಂಗಿ ಹೆಸರುಗಳು" (ಸಿದ್ಧಾಂತಿ. ೦೫೩). [ಸಂ.]

**ಮೃಗಾಧಿಪ** (ನಾ). = ಮೃಗಪತಿ ೧ : ಮೃಗಾಧಿಪನಿನಂತುಗ್ರದ್ವಿಪಂ . . . ತೆರಳ್ವ ತೆಱದಿಂ ಮಿಥ್ಯಾರಜಂ ತೂಳ್ದು ಪಾಱುವಿನಂ ನಿರ್ಮಳಧರ್ಮಮೊಂದಿ ನಿಲೆ ಪೇಟ್ದಿಂ ಪಂಪನತ್ಯಂತಸೌಷ್ಠವದಿ[ಪಾದಿ]ಪುರಾಣಮಂ (ಸುಕುಮಾ. ೧-೩೭); ಮೃಗಾಧಿಪನಾಗಿನು ಬಗಿದು ತೋಡಿದ ಬಾಣದ . . . ಕಡವೆ ತುಳಿದ ಹೆಜ್ಜೆಗಳ ಚಿಹ್ನದ ಬೇಡನಾಯಕರು ನೆರೆದರು (ಪತಕಾ. ೫-೫). [ಸಂ.]

**ಮೃಗಾರಾತಿ** (ನಾ). ೧. ಸಿಂಹ : "ಹರಿ ಮೃಗೇಂದ್ರಂ . . . ಮೃಗಾರಾತಿ ಕಂಠೀರವಂ ಕರಿವೈರಿ ಕೇಸರಿಯೆನಲ್ ಸಿಂಹಮೆನಿಸಿಕ್ಕುಂ" (ಮಂಗರಾ. ೯೭-೭). ೨. ನಾಯಿ. ೩. ಹುಲಿ. [ಸಂ.]

**ಮೃಗಾರಿ** (ನಾ). ೧. ಸಿಂಹ : 'ಮೃಗಾರಿಪೀಠ' ಪರಾ. ೨. ಹುಲಿ ; ವ್ಯಾಘ್ರ : "ವ್ಯಾಘ್ರಃ . . . ಮೃಗಾರಿಃ—ಈ ೭ ಹುಲಿ" (ಕಬ್ಬಿಗ. ೩೮-೭೩). ೩. ನಾಯಿ. ೪. ಒಂದು ಬಗೆಯ ಮರ. [ಸಂ.]

**ಮೃಗಾರಿಪೀಠ** (ನಾ). ಸಿಂಹಾಸನ : ನಗಪತಿಗಿದೆ ಪೆಱನೊಸಲೆನೆ ಸೊಗಯಿಪ ಪಾಂಡುಕಶಿಲಾಶಿಲೆಯೊಳದೇಂ ದಿಟ್ಟಿಗೆವಂದುದೊ ಮಾಣಿಕ್ಯದ ಮೃಗಾರಿಪೀಠಂ ಲಲಾಮಮೆನೆ ಕುಂಕುಮದಾ (ಚಂದ್ರಪು. ೦೨-೦೦೦). [ಸಂ.]

**ಮೃಗಾಲಯ** (ನಾ). ಸಾರ್ವಜನಿಕರ ನೋಟಕ್ಕಾಗಿ ವಿಸ್ತಾರವಾದ ಪ್ರದೇಶದಲ್ಲಿ ಕಾಡುಮೃಗಗಳನ್ನೂ ವಿಶೇಷವಾದ ಜಲಚರಪ್ರಾಣಿ, ಪಕ್ಷಿ, ಸರ್ಪ ಮುಂತಾದುವುಗಳನ್ನೂ ಕೂಡಿಟ್ಟಿರುವ ಸ್ಥಳ: ಪ್ರಾಣಿಸಂಗ್ರಹಾಲಯ : ಇಲ್ಲಿ ಬಗೆಬಗೆಯ ಮೃಗಪಕ್ಷಿಗಳುಳ್ಳ ಮೃಗಾಲಯವಿದೆ (ಕಠಪು. ೫-೯೯). [ಸಂ.]

**ಮೃಗಾಸನ** (ನಾ). [ಯೋಗ] (ಜಿಂಕೆಯಂತೆ ದೇಹವನ್ನು ಬಗ್ಗಿಸುವ) ಒಂದು ಬಗೆಯ ಆಸನ : ಸಿದ್ಧಾಸನ . . ಮೃಗಾಸನ . . . ಅರ್ಧಾಸನಾದಿ ಎಂಭತ್ತುನಾಲ್ಕು ಆಸನಭೇದಂಗಳು (ಶಿವೇಳ. ೦೩೦). [ಸಂ.]

**ಮೃಗಿ** (ನಾ). ಹೆಣ್ಣುಜಿಂಕೆ : ಮೃಗಕಂತಪಾದ ತತ್ಸಾಯಕಮುರ್ಚಿ ಪೋಗದೆ ಮೃಗೀಯುಗಳಂ ಮಡಿವಂತೆ ಸತ್ತರ್ (ಶಾಂತಿಪು. ೭-೯೪); ಬಾಲತೃಣಂಗಳಿಂದೆಳಸುಗುಂ ಪಸುರ್ಗಲ್ಗಳ ಕಾಂತಿಯಂ ಮೃಗೀಜಾಳಕಂ (ಶಂಬರಾಪು. ೦ ೦೩೭). [ಸಂ. ಮೃಗೀ]

**ಮೃಗಿತ** (ಗು). ೧. ಬೇಟೆಯಾಡಿದ. ೨. ಹುಡುಕಿದ. (ನಾ). ೩. ಹುಡುಕಿದುದು : "ಅನ್ವೇಷಿತಂ . . . ಮೃಗಿತಂ — ೫ ಹುಡುಕಲ್ಪಟ್ಟಿರುವುದು" (ಸಿದ್ಧಾಂತಿ. ೩೩೦). [ಸಂ.]

**ಮೃಗೇಂದ್ರ** (ನಾ). ೧. ಸಿಂಹ : "ಹರಿ ಮೃಗೇಂದ್ರಂ . . . ಕರಿವೈರಿ ಕೇಸರಿಯೆನಲ್ ಸಿಂಹಮೆನಿಸಿಕ್ಕು" (ಮಂಗರಾ. ೯೭-೭); ಇಂದ್ರಂ ಮೃಗೇಂದ್ರನಂತೆ ಗರ್ಜಿಸಿ ಚತುರಂಗಬಲಸಮೇತಂ ಪೊಱಮಟ್ಟು . . . ಬಂದು ತಾಗುವುದುಂ (ಶಾಂತಿಪು. ೭-೮೧ ವ) : ದ್ಯುಮಣಿಗೆ ಕಟ್ಟಲೆ ಶರಭಕ್ಕೆ ಮೃಗೇಂದ್ರಂ ಸೆಡೆದ ಮಾಚಕ್ಕಯಿಂ ಸೆಡೆವನವಂ ನಿಮಗೆ (ಶಂಬರಾಪು. ೭-೦೦೯). ೨. ಹುಲಿ : ವ್ಯಾಘ್ರ. ೩. [ಜ್ಯೋತಿ] ಸಿಂಹರಾಶಿ. [ಸಂ.]

**ಮೃಗೇಂದ್ರವಿಷ್ಟರ** (ನಾ). ಸಿಂಹಾಸನ : ಪುರುದೇವಂ ಮೃಗೇಂದ್ರವಿಷ್ಟರದೊಳಿರೆ (ಆದಿಪು. ೬-೭೦ ವ); ಅಶೇಷವಿದ್ವಜ್ಜನಸಭಾಭ್ಯಂತರ ಮೃಗೇಂದ್ರವಿಷ್ಟರಾರೂಢನಾಗಿರ್ಪುದುಂ (ಸುಕುಮಾ. ೨-೦೯ ವ). [ಸಂ.]

**ಮೃಗೇಕ್ಷಣ** (ನಾ). (ಜಿಂಕೆಯ ದೃಷ್ಟಿಯಂತೆ) ಚಂಚಲವಾದ ನೋಟ: ಮೀನಲೋಚನೆ ಮೃಗೇಕ್ಷಣದೆ ಸಗರನೃಪನನಭಿವೀಕ್ಷಿಸಿದಳ್ (ಅಜಿತಪು. ೯-೩೭). [ಸಂ.]

**ಮೃಗೋತ್ಥ** (ನಾ). ಕಸ್ತೂರಿಮೃಗದಿಂದ ಉತ್ಪತ್ತಿಯಾದುದು; ಕಸ್ತೂರಿಯೆಂಬ ಸುಗಂಧದ್ರವ್ಯ: ಮೃಗಮದ: ಮೃಗೋತ್ಥವಾಸಿತ ಧಾರಾಪರಿಕಲಿತ ಪರಾವೃತಮೌಳಿ ಪರಿಹಸ್ತಾಕೃಷ್ಟಕೇಶಹಸ್ತೆವೊಲೆಸೆದಳ್ (ಜಗನ್ನಾ. ೧೪-೧೧೭); ಪಂಚರತ್ನದ ಘನಸಾರವಾರಿಯ ಮೃಗೋತ್ಥಕುಳತ್ಥದ ಬಾಯಿನಂಗಳಂ ಮುದದೊದವಿಂದಮಿತ್ತು ಮೆಚ್ಚಿದರ್ (ಚಂದ್ರಪು. ೭-೯೦). [ಸಂ.]

**ಮೃಗೋದ್ಭವ** (ನಾ). = ಮೃಗೋತ್ಥ: ಅಡರೆ ಕವಲ್ತುದೊಂದೆಡೆ ಮೃಗೋದ್ಭವದಿಂ . . . ಸರಸೀವಿಭಾಗದೊಳ್ (ಶಾಂತಿಪು. ೬-೨೯); ಶೀತಳಕರ್ಪೂರಮೃಗೋದ್ಭವಾಗುರು ಕುಮುಸ್ತಾಗ್ರಂಥಿಗಂಧಂಗಳಂ ತಳೆದೇಂ ಗಂದಿಗರಂತೆ ಬಂದೊಲೆದುದೋ ಮತ್ತೊಂದು ಮಂದಾನಿಳಂ (ಅರ್ಧನೇ. ೫-೯೭). [ಸಂ.]

**ಮೃಗ್ಯ** (ಗು). ೧. ಹುಡುಕುವ. ೨. ಹುಡುಕಲು ಯೋಗ್ಯವಾದ. (ನಾ). ೩. ಹುಡುಕಬೇಕಾದುದು; ಶೋಧಿಸಬೇಕಾದುದು: ರಾಮಕಾರ್ಮುಕ, ಕೃಷ್ಣಯುಕ್ತಿ, ಗೌತಮಕರುಣೆ ಭೂಮಿಭಾರವನಿಳುಹೆ ಸಾಲದಾಗಿರಲು ಸಾಮಾನ್ಯರೆನಿತು ತಾಂ ಪೆಣಗಿದೊಡಮೇನಹುದು? ಕ್ಷೇಮವೆಂದುಂ ಮೃಗ್ಯ (ಪಂಚಕು. ೬೩೭). [ಸಂ.]

**ಮೃಚ್ಚೂರ್ಣ** (ನಾ). ಮಣ್ಣಿನ ಪುಡಿ; ಧೂಳು: ಅನುನಯದಿ ಸರ್ವಗತನೆಂಬಂತೆ ಮೃಚ್ಚೂರ್ಣವನು ಹೊದ್ದದಿರ್ಪ ವಾಯುವಿನಂತೆ (ಬಸವ ಪು. ೪-೭-೩೯). [ಸಂ.]

**ಮೃಜೆ** (ನಾ). ೧. ತೊಳೆಯುವಿಕೆ: ಶುದ್ಧಿಮಾಡುವುದು: "ಮಾರ್ಷ್ಟಿಃ, ಮಾರ್ಜನಾ, ಮೃಜಾ – ೩ ಶ್ರೀಗಂಧ, ಕುಂಕುಮಕೇಸರಿ ಮುಂತಾದ ದ್ರವ್ಯಗಳನ್ನು ಮೈಗೆ ಹಾಕಿ ಉಜ್ಜಿ ತೊಳಕೊಂಡು ಕೊಳೇ ಹೋಗಲಾಡಿಸುವದಕ್ಕೆ ಹೆಸರುಗಳು" (ಸಿದ್ಧಾಂತಿ. ೨೦೫). ೨. ಶುಚಿ; ನೈರ್ಮಲ್ಯ. [ಸಂ. ಮೃಜಾ]

**ಮೃಡ** (ನಾ). ಈಶ್ವರ: ಶಿವ: "ಈಶಾನಃ . . . ಮೃಡಃ . . . ನೀಲಲೋಹಿತಃ – ಈ ೪೫ ಮಹಾದೇವರ ಪೆಸರ್" (ಹಲಾಯು. ೪-೧೩); ಮೃಡನೊಳ್ ಪಾಶುಪತಾಸ್ತ್ರಂಬಡೆದಂ . . . ನಾರಾಯಣನೊಳ್ ಪಡೆದಂ ಗಾಂಡಿವಿ ಸುಭದ್ರೆಯಂ ಭದ್ರಮನಂ (ಗದಾಯು. ೨-೩೮); ಮನವಿದು ವಿಷಯಕ್ಕೆ ಹರಿವುದು ಮೃಡ ನಿಮ್ಮನನುದಿನ ನೆನೆಯಲೀಯದು. (ಬಸವ. ೩೪). [ಸಂ.]

**ಮೃಡರಿಪು** (ನಾ). ಈಶ್ವರನ ಶತ್ರು; ಮನ್ಮಥ: ಬೆರಲಂ ಮಿಡಿಯುತಿ ರುಕ್ಮಿಣಿ. ಜಗಮಂ ಮೃಡರಿಪು ಬೆರಲೆತ್ತಿ ನಿಲ್ವಿನಂ ಬಗೆಗೊಂಡಳ್ (ಜಗನ್ನಾ. ೧೦-೧೦೯). [ಸಂ.]

**ಮೃಡಸುತ** (ನಾ). ೧. ಈಶ್ವರನ ಮಗ: ಗಣಪತಿ: ಮೃಡಸುತನಂತೆ ದಂತಹತಿ ಪೊರ್ದದೆ ಶೂದ್ರಕನಂತೆ ಶಕ್ತಿಯುಂ ಕಿಡಿಸದೆ (ಮಲ್ಲಿಪು. ೧೩-೯೪). ೨. ಸ್ಕಂದ; ಷಣ್ಮುಖ: [ಸಂ.]

**ಮೃಡಾದ್ರಿ** (ನಾ). ಈಶ್ವರನ ವಾಸಸ್ಥಾನವಾದ ಕೈಲಾಸಪರ್ವತ: ದನುಸುತಂ ಕಿಟಿ ತನ್ನನಾ ಮುಳಿಸಿಂ ಮೃಡಾದ್ರಿಯ ಸಿಂಹವಾಹಿನಿಯ ರೂಪಿನೊಳಾಹುವಕ್ಕೆ ಸಹಾಯಮಾಯ್ತು ರಘೂದ್ವಹಂಗೆನಿಸಿ (ಕಂಠಾಹ. ೧೪-೫). [ಸಂ.]

**ಮೃಡಾನಿ** (ನಾ). ಈಶ್ವರನ ಪತ್ನಿ: ಪಾರ್ವತಿ: "ರುದ್ರಾಣೀ . . . ಮೃಡಾನೀ, ಹೈಮವತೀ . . . . ಮೇನಕಾತ್ಮಜಾ — ಈ ೨೧ ಗೌರೀದೇವಿಯ ಪೆಸರ್" (ಹಲಾಯು. ೪-೧೪); ಅವಳ ನೊಸಲೊಳಗಿನ ಗೋರೋಚನದ ಬೊಟ್ಟು ಬೇಡತಿಯಾದ ಮೃಡಾನಿಯು ಹಣೆಗಣ್ಣಿನಂತೆ ಶೋಭಿಸುತ್ತಿರುವುದು (ಮುಂಬಯಿ. ೫-೩೦೦). [ಸಂ. ಮೃಡಾನೀ]

**ಮೃಡಾಲಯ** (ನಾ). ಈಶ್ವರನ ನಿವಾಸ; ಶಿವಾಲಯ: ಒಡಗೂಡಿರ್ಪ ಲಿಂಗವನಜಿಯದೆ . . . ಅಡವಿಗಿಡುಗಳಲ್ಲಿಪ್ಪ ಮೃಡಾಲಯಮಂ ಕಂಡು ಹೊಕ್ಕು ಸಡಗರಿಸಿಕೊಂಡು ವರವ ಹಡೆವೆನೆಂದು ಅಚ್ಚುಗಬಡುತ್ತಿದ್ದೇನೆ (ಮೋಳಿಗೆ. ೨೦-೯೩). [ಸಂ.]

**ಮೃಣಾಲ, ಮೃಣಾಳ** (ನಾ). ತಾವರೆಯ ದಂಟು. – ದಿಂಡು: "ಮೃಣಾಲಂ, ಬಿಸಂ – ೨ ತಾವರೇ ಕಾವಿನ ಹೆಸರುಗಳು. ಇವೇ ತಾವರೆ ಬಳ್ಳಿಯ ಕೊಳವೆಗಳು" (ಸಿದ್ಧಾಂತಿ. ೯೦). **ಮೃಣಾಳ**: "ಮೃಣಾಳಂ, ಬಿಸಂ – ಈ ೨ ನಾಳಂ" (ಹಲಾಯು. ೧೦೨-೭೦); ಕಣ್ಗೆಗುರ್ವಿಸುವಿನಮೊಕ್ಕು ನೇಲ್ವ ಕರುಳೋಳಿಯೆ ಬಾಳಮೃಣಾಳಮಾಗೆ (ಕಂಠಹ. ೦-೭); ತರುಣ ಮೃಣಾಳಮಂ ತೆಗೆದು ಪೂಗೊಳದಿರ ಪೊಣಗಿಕ್ಕಿದಂದದಿಂ (ಮಲ್ಲಿಪು. ೩-೨೮). [ಸಂ.]

**ಮೃಣಾಳ** 'ಮೃಣಾಲ' ನೋ.

**ಮೃಣಾಳಗುಣ** (ನಾ). ತಾವರೆಯ ದಂಟಿನ ನೂಲು.– ನಾರು: ಬಳಸಿರೆ ಮೃಣಾಳಗುಣಮುಗ್ಗಳಿಸಿರೆ ಮಣಿದರ್ಪಣಂ ಮಹೌಷಧಿಗಳ್ಕಂಗೊಳಿಸಿರೆ ಪಲ್ಲವತತಿ ಸಂಗಳಿಸಿರೆ ಮಣಿಪೂರ್ಣಕುಂಭಮೊಪ್ಪಿದುದದಟಿನೊಳ್ (ರಾಜಶೇ. ೬-೦೦). [ಸಂ. ಮೃಣಾಲಗುಣ]

**ಮೃಣಾಳನಾಳ** (ನಾ). ತಾವರೆಯ ದಂಟು; ಕಮಲದ ನಾಳ: ಶಶಿಕಳೆಗಳಂ ಮೆಲ್ವ ಸೈಂಹಿಕೇಯನಂತೆ ಮೃಣಾಳನಾಳಗಳಂ ಮೆಲ್ದು (ಕಾದಂಬ. ೦೭೪). [ಸಂ. ಮೃಣಾಲನಾಲ]

**ಮೃಣಾಳನಾಳಿಕೆ** (ನಾ). = ಮೃಣಾಳನಾಳ: ಮೃಣಾಳನಾಳಿಕೆಗೆ ಚಂದನದಣ್ಕೆಗೆ ತಣ್ಪುಳಿಲ್ಗೆ ತಣ್ಗರಗದ ಸೂಸುನೀರ್ಗೆ ಕೊಳವೇಗೊಡಲಂ ಗುಜಿಯಾಗೆ ಮಾಡುವರ್ (ಮಲ್ಲಿಪು. ೩-೨೮). [ಸಂ. ಮೃಣಾಲನಾಲಿಕಾ]

**ಮೃಣಾಳಿಕೆ** (ನಾ). ತಾವರೆಯ ದಂಟಿನ ನಾರು; ಬಿಸತಂತು: ಗರ್ಭಿಣಿಗೆ ತತ್ಸಮಯೋಚಿತ ಮಂಗಳಪ್ರಸಾಧನಮೆಸೆದತ್ತು . . . ಮುತ್ತಿನ ತಿಸರಂ ಮೃಣಾಳಿಕೆಯ ಮುದ್ರಿಕೆ ಪೂವಿನ ಪಿಂಡುಗಂಕಣಂ (ಕಂಠಾಹ. ೩-೦೦೭). [ಸಂ. ಮೃಣಾಲಿಕಾ]

**ಮೃತ** (ಗು). ೧. ಸತ್ತುಹೋದ; ಮರಣ ಹೊಂದಿದ. (ನಾ). ೨. ಸಾವು; ಮರಣ. ೩. ಸಾಯುವವನು; ಮರಣ ಹೊಂದುವವನು: ಜೀವನುಂ ಮೃತ ದುಃಖಿ ಅಮೃತಂ ದೇವನಾ ಜೀವನುಮಶುದ್ಧನು ದೇವನತಿಶುದ್ಧನು (ಬಸವ. ೫೦-೨೯); ಕಂದುಕಲೆ ತನಗೆತ್ತಣದು ನಿರ್ದ್ವಂದ್ವನು ಮೃತಜಾತ ತಾನಲ್ಲೆಂದು ಕಂಡರವಂಗೆ ಪಾಪ ವಿಲೇಪವಿಲ್ಲೆಂದ (ಕುಮಾ.ಭೀ. ೩-೪೯). ೪. ಜೀವವಿಲ್ಲದುದು; ನಿರ್ಜೀವವಾದುದು: ಸರ್ವಸೌಂದರ್ಯಾಮೃತಂ ಮೃತವಂತಿಹುದು ನನಗೆ ನೀರಸಂ (ಶ್ರೀರಾಮಾ. ೯-೨೨೭). ೫. ಸತ್ತುಹೋದವನು; ಮರಣವನ್ನು ಹೊಂದಿದವನು: "ಪರಾಸುಃ, ಉಪಸಂಪನ್ನಃ, ಪ್ರಮೀತಃ, ಸಂಸ್ಥಿತಃ, ಮೃತಃ – ಈ ೫ ಸತ್ತಾತಂ" (ಹಲಾಯು. ೦೦೪-೭); ಸ್ವಾಮಿಗಳು – 'ಮೃತನೆಲ್ಲಿ ತೋರಿಸಿ' ಎಂದರು (ಕಥಾ. ೩೪೫). ೬. ಯಾಚನೆಯಿಂದ ಪಡೆದ ಆಹಾರ; ಭಿಕ್ಷೆ. [ಸಂ.]

**ಮೃತಕ** (ನಾ). ೧. ಸತ್ತ ವ್ಯಕ್ತಿ; ಮರಣ ಹೊಂದಿದ ವ್ಯಕ್ತಿ. ೨. ಜೀವವಿಲ್ಲದುದು; ಹೆಣ: ಪ್ರತಿಕೂಲನಾಗಿ ನಿಲೆ ವಿಧಿ ಮತ್ತ ನಯಮನುಕೂಲಮಾಗಿ ನಿಲೆಯುಂ ಕಾರ್ಯಸ್ಥಿತಿಯಂ ಸಾಧಿಸಲಾಗದು ಮೃತಕ ಕೃತೋಪಕೃತಿಯುವೊಲನರ್ಥಾಯಾಸಂ (ಕಥಾ. ೩-೦೪೫); ಮೃತಕಮಂ ಕಂಡನಿಬರುಂ ಮೂರ್ಛೆವೋಗಿ ನೀಡಜೊಂದೆಟ್ಟೆಚ್ಚರ್ತ (ಶಬ್ದಾ.ರಾ. ೩೦-೭); ಈ ಮೃತಕಮಂ ನಿಷ್ಪ್ರಯೋಜನಮಿಂತೇಕೆ ಪೊತ್ತು ತೊಟಲ್ದಪೆಯೆನೆ

(ಶಂಅಶಖ. ೦೩-೩೩ ವ). ೩. ಸಾವು ; ಮರಣ. ೪. ಮರಣಸೂತಕ; ಮೃತಾಶೌಚ. [ಸಂ.]

**ಮೃತಕದುಂದುಭಿ** (ನಾ). ವ್ಯಕ್ತಿಯು ಸತ್ತ ಮೇಲೆ ಕೆಲವರಲ್ಲಿ ಒಂದು ವಿಧಿಯಾಗಿ ಬಾರಿಸುವ ತಮಟೆ : ಗಡಗಡನೆ ಪೊಡವಿ ನಡುಗಿತು. ದುಃಖವಾರ್ತೆಯಂ ಜಗಕೆಲ್ಲ ಕೇಳಿಸುವ ಮೃತಕದುಂದುಭಿಯಂತೆ (ಗೊರೂಥಾ. ೦೩-೩೪೨). [ಸಂ.]

**ಮೃತಕಲ್ಪ** (ಗು). ೧. ಸತ್ತಂತಿರುವ; ಮೈಮರೆತಿರುವ. (ನಾ). ೨. ಹೆಣಕ್ಕೆ ಸಮನಾದುದು: ಸತ್ತಂತೆ ಇರುವುದು : ಕಾಳರಕ್ಕಸ ಲೋಕವೆಲ್ಲವ ಗೋಳುಗುಟ್ಟಿಸೆ ಅಜನು ಕಪಿಸಿದ ಬೀಳು ನೀ ಮೃತಕಲ್ಪನಾಗಿನೆ ನಿದ್ದೆಗೈದಿಹನು (ಕೌಶಿರಾ. ೨೩-೮). [ಸಂ.]

**ಮೃತಕಸೆಜ್ಜೆ** (ನಾ). [ಜೈನ] ತಪಸ್ಸಿನ ಒಂದು ಭಂಗಿ : ಶವಾಸನ(?) : ಪ್ರಾಯೋಪಗಮನವಿಧಾನದಿಂ ಪ್ರಚ್ಛನ್ನಮಪ್ಪೆಡೆಯೊಳ್ ಮೃತಕಸೆಜ್ಜೆಯೊಳಿರ್ದು ಸಂನ್ಯಸನಂಗೆಯ್ದು ಧರ್ಮಧ್ಯಾನ ಶುಕ್ಲಧ್ಯಾನಂಗಳಂ ಧ್ಯಾನಿಸುತ್ತಿರ್ಪನ್ನೆಗಂ (ವಡ್ಡಾರಾ. ೨೯-೦). [ ಮೃತಕ + ಸೆಜ್ಜೆ₂ ]

**ಮೃತಪಟಹ** (ನಾ). = ಮೃತಕದುಂದುಭಿ : ಮೃತಪಟಹಂ ಜಯಪಟಹಂ ಚಿತಾಗ್ನಿಧೂಮಂ ಜಯಧ್ವಜಂ ಜನಕರುಣಾರುತಿ ಜಯಮಂಗಳರುತಿಯೆನೆ ಕೃತಾಂತರಾಜಂಗೆ ರಾಜ್ಯಚಿಹ್ನವಿಂದಲ್ತೆ (ಅಜಿತ.೦೦-೨೯). [ಸಂ.]

**ಮೃತಪತ್ರ** (ನಾ). ವ್ಯಕ್ತಿಯು, ತಾನು ಸತ್ತ ತರುವಾಯ ತನ್ನ ಆಸ್ತಿಯು ಯಾರಿಗೆ ಸೇರಬೇಕೆಂಬ ಹಕ್ಕನ್ನು ಮತ್ತು ತನಗೆ ಸಂಬಂಧಿಸಿದ ಅಂತಿಮ ಇಚ್ಛೆಗಳನ್ನು ಬರೆದಿರುವ ಪತ್ರ; ಉಯಿಲು; ಮರಣಶಾಸನ : ಆ ಮುದುಕರು ಮೃತಪತ್ರ ಬರೆದಿಟ್ಟಿದ್ದಾರೆ (ಕೂಥ). [ಸಂ.]

**ಮೃತಭಾಷೆ** (ನಾ). ಬಳಕೆಯಲ್ಲಿ ಇಲ್ಲದೆ ಕೇವಲ ಗ್ರಂಥಸ್ಥವಾಗಿರುವ ಭಾಷೆ : ಈಗ ವ್ಯವಹಾರದಲ್ಲಿಲ್ಲದೆ ಗ್ರಂಥಗಳಲ್ಲಿ ಮಾತ್ರ ದೊರೆಯುವ ಭಾಷೆಯನ್ನು ಮೃತಭಾಷೆಯೆಂದು ಕರೆಯುತ್ತಾರೆ (ಕೈಶಿರಿ. ೨೯೩).
[ಸಂ. ಮೃತಭಾಷಾ]

**ಮೃತಸಂಜೀವಕ** (ನಾ). ಸತ್ತವರನ್ನು ಬದುಕಿಸುವ ಔಷಧಿ, ರತ್ನ, ಮಂತ್ರ ಇತ್ಯಾದಿ : ತನ್ನ ರಮಣಂ ಬರ್ದುಕಲೆಂತೆ ಮೃತಸಂಜೀವಕದ ಮಣಿಯನೀವುದು (ಕೈಬಿಥಾ. ೨೪-೯). [ಸಂ.]

**ಮೃತಸಂಜೀವನ** (ಗು). ೧. ಸತ್ತವರನ್ನು ಮತ್ತೆ ಬದುಕಿಸುವ. (ನಾ). ೨. ಸತ್ತವರು ಪುನಃ ಬದುಕಿಕೊಳ್ಳುವುದು. ೩. ಸತ್ತವರನ್ನು ಬದುಕಿಸುವುದೆಂದು ಭಾವಿಸಲಾದ ಒಂದು ಮಂತ್ರ: ಮೃತಸಂಜೀವನ ಎಂಬ ಸಂಜೀವನತ್ರಯಮಂತ್ರಂಗಳಂ (ಶಿವೇಕ. ೬೦). [ಸಂ.]

**ಮೃತಸಂಜೀವನೀವಿದ್ಯೆ** (ನಾ). (ಮಂತ್ರ ಮಣಿ. ಔಷಧಿ ಮುಂತಾದುವುಗಳಿಂದ) ಸತ್ತವರನ್ನು ಪುನಃ ಬದುಕಿಸುವ ವಿದ್ಯೆ : ಅಸುರರ ಪುರೋಹಿತನಾದ ಶುಕ್ರಾಚಾರ್ಯನಿಗೆ ಸತ್ತವರನ್ನು ಬದುಕಿಸುವ ಮೃತಸಂಜೀವನೀವಿದ್ಯೆ ಗೊತ್ತಿತ್ತು (ಪಕಥಾ. ೩೯೯).
[ಸಂ. ಮೃತಸಂಜೀವನೀವಿದ್ಯಾ]

**ಮೃತಸಂಜೀವಿನಿ** (ನಾ). ಸತ್ತವರನ್ನು ಪುನಃ ಬದುಕಿಸುವ ಮಂತ್ರ, ಮಣಿ. ಔಷಧಿ ಮುಂತಾದ ಸಾಧನ ಮತ್ತು ವಿದ್ಯೆ : ಮೃತಸಂಜೀವಿನಿಯ ಬಲುಹಿರಲು ಬಹಳ ವ್ಯಾಧಿ ಮಾಡುವ ದುರುಳತನ ತಾನೇನು (ಶುಭ್ಯಾದ್ರೌ. ೦೦-೪೪); ದೇವರಾಪನ ಕಟಕ ಮೃತಸಂಜೀವಿನಿಬಲಸುವಡೆವ ಬಳಿಕ ವಿಭಾವರಿಯೊಳಂದ್ಣಯ್ದು ಲಂಕಾಪುರ ಪುನರ್ದಹನ (ಕೊರಾ. ೩-೩೭ ಸೂಚನೆ). [ಸಂ. ಮೃತಸಂಜೀವಿನೀ]

**ಮೃತಸ್ನಾತ** (ನಾ) ಶವಸಂಸ್ಕಾರವನ್ನು ಮಾಡಿದ ಮೇಲೆ ಸ್ನಾನ ಮಾಡಿದವನು : ಅಂತ್ಯಕ್ರಿಯೆಯ ನಂತರ ಸ್ನಾನಮಾಡಿದವನು.
[ಸಂ.]

**ಮೃತಸ್ನಾನ** (ನಾ). ಶವಸಂಸ್ಕಾರ ಮಾಡಿದ ಮೇಲೆ ಮಾಡುವ ಸ್ನಾನ : ಅಂತ್ಯಕ್ರಿಯೆಯ ನಂತರ ಮಾಡುವ ಸ್ನಾನ : "ಅಪಸ್ನಾನಂ ಮೃತಸ್ನಾನಂ — ಈ ೨ ನೀರಿಳಿಹು" (ಹಲಾಯು. ೦೦೩-೦೭) ; "ಅಪಸ್ನಾನಮೆನೆ ಮೃತಸ್ನಾನಕ್ಕೆ ಪೆಸರೆನಿಕ್ಕುಂ" (ಮಂಗರಾ. ೦೦೭-೩). [ಸಂ.]

**ಮೃತಾಲಕ** (ನಾ). ೧. ಒಂದು ಬಗೆಯ ಜೇಡಿಮಣ್ಣು. ೨. ಸುವಾಸನೆಯುಳ್ಳ ಒಂದು ಬಗೆಯ ಮಣ್ಣು : "ಆಢಕೀ. ಕಾಕ್ಷೀ. ಮೃತ್ಸ್ನಾ, ತುವರಿಕಾ, ಮೃತಾಲಕಂ, ಸುರಾಷ್ಟ್ರಜಂ — ಈ ೬ ಪಲಟ ಮಣ್ಣೆಂಬ ಗಂಧದ್ರವ್ಯ" (ನಾಶರಾ. ೦೦೦). [ಸಂ.]

**ಮೃತಾಶೌಚ** (ನಾ). ಒಬ್ಬ ವ್ಯಕ್ತಿಯ ಮರಣದಿಂದ ಆ ವ್ಯಕ್ತಿಯ ವಂಶಸ್ಥರಿಗೆ ಬರುವ ಮೈಲಿಗೆ ; ಮರಣಸೂತಕ : ವಂಶದಲ್ಲಿ, ಕೆಲವು ತಲೆಮಾರೊಳಗೆ, ಯಾರಾದರೂ ಜನಿಸಿದರೂ ಮೃತರಾದರೂ ನಿಯಮವಾದ ಕಾಲಪರ್ಯಂತವಾಗಿರುವ ಕರ್ಮಕ್ಕೆ ಅಧಿಕಾರವಿಲ್ಲದ ಅವಸ್ಥೆ — ಇದನ್ನು ಜಾತಾಶೌಚ, ಮೃತಾಶೌಚವೆನ್ನುತ್ತಾರೆ (ಆರ್ಯಧ. ೯೩). [ಸಂ.]

**ಮೃತಿ** (ನಾ). ಸಾವು ; ಮರಣ : ಮೃತಿಗನಿಸಪ್ಪೊಡಂ ಸೆಡೆಯದೀ ಭವದೊಳ್ ದೊರೆಕೊಂಡುದಿಲ್ಲ ದುಷ್ಕೃತದೊದವಿಂ ಮನಃಪ್ರಿಯಕರಗ್ರಹಣಂ (ಶಂರಾಮೂ. ೮-೮) ; ಮತಿ ನಿರ್ವೇದ . . . ಮೋಹಾಮಯ ಮೃತಿಗಳಿವಿಂತೆಯ್ದೆ ಸಂಚಾರಿಭಾವಂ (ಕಾವ್ಯಾವ. ೭೯೩) : ಆ ಪಕ್ವಾನ್ನಮೆ ಮೃತಿಗಂ ದ್ವೀಪನ ಪಿಂಡದವೊಲಾಗೆ . . . ವಿಂಧ್ಯದೊಳೊಗೆದಂ (ಜಕೋಶ. ೩-೩೪).
[ಸಂ.]

**ಮೃತಿಸು** (ಕ್ರಿ). ಸಾಯು; ಮರಣಹೊಂದು: ತನುಪತಿ ಚಂಚಲಿಸದಿರುತಿರಲು ಜನಿಸುತ ಸುತರು ಮೃತಿಸುವರು (ಕೇರಶ್ರ. ೮-೨೭). [ಮೃತಿ + -ಸು₂]

**ಮೃತ್ತಿಕೆ₁** (ನಾ). ೧. ಮಣ್ಣು : "ಮೃತ್, ಮೃತ್ತಿಕಾ—ಈ ೨ ಮಣ್" (ಹಲಾಯು. ೨೭-೪) ; ವಿವಾಹಗೇಹಮಂ ಸಮೆಯಿಸಿಯುದಲಿ ನಡುವಣಾದ್ರ್ರ ಮೃತ್ತಿಕಾವಿರಚಿತಮಪ್ಪ ಚತ್ತುರಾಂತರದೊಳ್ . . . ಗುಣಾರ್ಣವನನಾ ದ್ರುಪದಜೆಯನೊಡನೆ ಕುಳ್ಳಿರಿಸಿ (ಶಂಕಭಾ. ೩-೭೪ ವ). ೨. ಪವಿತ್ರವಾದ ಮಣ್ಣು : ಅಗುಟಿದ್ದ ತುದಿಗೊಂಬಿನೊಳ್ ಮೆಲ್ಲಗೆ ಪೊತ್ತಭಿಷೇಕ ಮೃತ್ತಿಕೆಯನೊಡಸಂದತ್ತಗಲದನಿಸಂ ತಪೋವನಮೃಗಮಾ ಮುನಿವರನೊಳಾದ ಪರಿಚಯದಿಂದಂ (ಕಾದಂಪೂ. ೨೦೭) ; ರಾಜರು . . .ಕೈಯಲ್ಲಿದ್ದ ಮೃತ್ತಿಕೆಯನ್ನು ಕೊಟ್ಟು, ಇದನ್ನು ಲೇಪಿಸಿಕೋ ! ನಿನ್ನ ವ್ಯಾಧಿ ಪರಿಹಾರವಾಗುವುದೆಂದರು (ಚಕಿ. ೦೪೭) ; ನಮಿಸಿದನು ಮುಟ್ಟೆ ಮೃತ್ತಿಕೆಯನಾ ರಾಮಚರಣಸ್ಪರ್ಶಪೂಜ್ಯಮಂ (ಶ್ರೀರಾಮಪ. ೦೭೨-೨೭೮). ೩. ಜೇಡಿ ಮಣ್ಣು. ೪. ಒಂದು ಬಗೆಯ ಸುವಾಸನೆಯ ಮಣ್ಣು. ೫. ಒಂದು ನರಕದ ಹೆಸರು : ಪೂತಿವಕ್ತ್ರ ರಕ್ತಪೂತಿ ಮೃತ್ತಿಕೆ ಕಣಧೂಮವೆಂಬೈದು ಮಂತ್ರಿನರಕಂಗಳಿಂ ಬೆಟಿದು ಭೀಮವೆಂಬರಸುನರಕವಿಹುದು (ಶಿವೇಕ. ೦೩೩)'

ಮೃತ್ತಿಕೆಯ ಲವಣ = ಭೂಮಿಯಲ್ಲಿ ಘನರೂಪದಲ್ಲಿ ದೊರೆಯುವ ಉಪ್ಪು ; ಕಲ್ಲುಪ್ಪು : ಮೃತ್ತಿಕೆಯ ಲವಣ ಸ್ವಯಂಪಾಕ ಮಿಕ್ಕಾದ ಲವಣ ಅಪ್ಪುಭೇದ (ಸ್ಥಿ. ಕಲಿಸೆ ೮.I.೯೩೯-೦೭೩೩). [ಸಂ. ಮೃತ್ತಿಕಾ]

**ಮೃತ್ತಿಕೆ₂** (ನಾ). [ಅಶ್ವಶಾ] ಕುದುರೆಯ ಶರೀರದ ಒಂದು ಭಾಗ ; ಗುದದ ಎರಡು ಪಕ್ಕ : ಬಾಲದ ಕೆಟಗುಂ ಗುದಮುಂ ಲೀಲೆಯ ಗುದದೆರಡು ಕೆಲನ ಮೃತ್ತಿಕೆಯೆಂಬರ್ ತಾಲುವ ಮೃತ್ತಿಗೆ ಕೆಟಗುಂ ಪೇಟಾರೋಮಸ್ವಮೆಂಬ ಪೆಸರಂತಪ್ಪುಂ (ಅಶ್ವಶಾ. ೪-೯೭) ; ಬಾಲದ ಕೆಳಗಂ ಗುದವೆಂಬರು ಆ ಗುದದ ಎರಡು ಕೆಲಸಂ ಮೃತ್ತಿಕೆಯೆಂಬರು (ಅಶ್ವಟೀ. ೪-೪೭). [ ? ]

**ಮೃತ್ತಿಗೆ** (ನಾ). ೧. ಮಣ್ಣು : ಮೃತ್ತಿಗೆಯಲ್ಲಿ ಗಂಧಶಕ್ತಿಯಾಗಿಯು ಜಲದಲ್ಲಿ ರಸಶಕ್ತಿಯಾಗಿಯು . . . ಇವುಗಳೆಲ್ಲ ಆದಿಯಾಗಿ

ಇರುವಡೆ ಪಾಪಮು (ತತ್ವಸಂ. ೧೨-೧೧). ೨. ಪವಿತ್ರವಾದ ಮಣ್ಣು. - ಮೃತ್ತಿಕೆ : ನಾನು ಅಪ್ಪಾಜಿಯ ಹತ್ತಿರವಿದ್ದ ತಟ್ಟೆ ಗಿಂಡಿ ವಿಭೂತಿ ಮೃತ್ತಿಗೆ ಹೂವಿನ ಬುಟ್ಟಿಯೆಲ್ಲವನ್ನು ಅವರ ಹತ್ತಿರವಿಟ್ಟೆ (ಕೆಂಗಾಳ. ೦೨). [<ಸಂ. ಮೃತ್ತಿಕಾ]

**ಮೃತ್ತಿಸು** (ಕ್ರಿ). ಮಣ್ಣನ್ನು ಮೆತ್ತು, - ಲೇಪಿಸು : ಕಾಯ್ದು ಕಾಯ್ಗೊಂಡ ದೆಣ್ಣೆಯೊಳರ್ದಿ ಬರ್ದಿಸುತ್ತಮಾಪಾದಮಸ್ತಕಂಬರಂ ಮೃತ್ತಿಸಿ ಪತ್ತಿ ತಿದಿಯುಗಿಯುತ್ತೆ (ಅಜಿತ. ೦೦-೦೦ ವ). [ಮೃತ್ತು + - ಇಸು]

**ಮೃತ್ತು** (ನಾ). ಮಣ್ಣು ; ಮೃತ್ತಿಕೆ : ಮೃತ್ತುವಿನಿಂದಾದ ಮಡಕೆ ಮರಳಿ ಮಣ್ಣಾಪ್ಪುದೆ (ವಿವೇಕ. ೩೯೭-೬೨). 'ಮೃತ್ತಿಸು' ಪರಾ. [<ಸಂ. ಮೃದ್]

**ಮೃತ್ಪಾತ್ರ** (ನಾ). ಮಣ್ಣಿನ ಪಾತ್ರೆ ; ಮಡಕೆ : ತಪೋವನಕ್ಕೆ ಪೋಪ ಭಾರ್ಗವಂ ದ್ರವ್ಯಾರ್ಥಿಯಾಗಿ ಬಂದ ಕುಂಭಸಂಭವನಂ ಕಂಡು ಕನಕಪಾತ್ರಕ್ಕುಪಾಯಮಿಲ್ಲಪ್ಪುದಱಂ ಮೃತ್ಪಾತ್ರದೊಳರ್ಘ್ಯಮೆತ್ತಿ ಪೂಜಿಸಿ (ಸಂಶಪಾ. ೨-೪೩ ವ). [ಸಂ.]

**ಮೃತ್ಪಿಂಡ** (ನಾ). ೧. ಮಣ್ಣಿನ ಮುದ್ದೆ, - ಉಂಡೆ : ಮೃತ್ಪಿಂಡದ ಹದನ ಚಕ್ರಿಯ ಚಿತ್ತದ ಕರದಂತೆ ಚಿತ್ರಜ್ಞನ ಚಿತ್ತದ ಲೆಕ್ಕಣಿಕೆಯ ಒಪ್ಪದಂತೆ (ಶೂನ್ಯಸಂ. ೧೯೯-೬೯೩); ವಿಶ್ವವಿಶ್ವಂಭರೆಯಂ ಮೃತ್ಪಿಂಡಮಾತ್ರಾಕೃತಿಯೆನೆ ಬಗೆದಂ (ಚಂದ್ರಪು. ೧೦-೦೨೯). ೨. (ಅಲಂ) ದೇಹ ; ಶರೀರ : "ಮನುಷ್ಯಶರೀರ, ಪಾರ್ಥಿವದೇಹ. ಮೃತ್ಪಿಂಡ" (slime. ಇಂಕಿವಿ). [ಸಂ.]

**ಮೃತ್ಯು** (ನಾ). ೧. ಸಾವು ; ಮರಣ : "ನಿಧನಂ, ನಾಶಃ, ಮೃತ್ಯುಃ . . . ದೀರ್ಘನಿದ್ರಾ - ಈ ೧೨ ಸಾವು" (ಕಬಾಯು. ೦೦೩-೬); ಮೃತ್ಯು ಮುಟ್ಟದ ಮುನ್ನ ಪೂಜಿಸು ನಮ್ಮ ಕೂಡಲಸಂಗಮದೇವನ (ಬಸವ. ೦೬೦); ಅರಣ್ಯದೊಳಿರುವ ಅರಳಿಯ ಮರನ ಸ್ವಕರದ್ವಯಂಗಳಿಂ ಮುಟ್ಟಿ ಸ್ಮರಿಸಿದೊಡೆ ನೂರೆಂಟು ವೇಳೆಯು ಪರಿದು ಪೋಪುದು ಮೃತ್ಯು (ಗಗಪಾ. ೪-೬೬). ೨. ಸಾವಿನ ಅಧಿದೇವತೆ ; ಯಮ : "ಪ್ರೇತಪತಿ ಸಮವರ್ತಿ ಮೃತ್ಯು ಕಾಳಿಂದಿ . . . ಕೃತಾಂತನಕ್ಕುಂ" (ಮಂಗರಾ. ೦೩-೦೦); ಮೃತ್ಯುವಿನ ಬಾಯಿಗೆ ತುತ್ತಾಗಲೇಕೆ (ಬಸವ. ೦೩೯). ೩. ಸಾವಿನ ದೇವತೆ ; ಮೃತ್ಯುದೇವತೆ : ಬ್ರಹ್ಮನ ಕಿತ್ತಡದ ಕೋಪದಲಿ ಜನಿಸಿದ ರುದ್ರನಿಂ ಬಳಿಕ ಮೃತ್ಯುವೆಂದವಳಾದಳಾ ಸತಿಯುತ್ತ ಕಂಬನಿ ರುಜೆಗಳಾದವು ತತ್ತಿಗರು ಷಡುವರ್ಗ ಕಾಮ ಕ್ರೋಧ ಮೊದಲಾಗಿ (ಕುವ್ಯಾದ್ರೋ. ೬-೩೪). 'ಮೃತ್ಯುದೇವಿ' ಪರಾ. [ಸಂ.]

**ಮೃತ್ಯುಂಜಯ** (ನಾ). ೧. ಯಮನನ್ನು ಜಯಿಸಿದವನು ; ಶಿವ : ತ್ರಾಹಿ ಮೃತ್ಯುಂಜಯ ಪಿನಾಕಿ ತ್ರಾಹಿ ಲೋಕೇಶ (ಕುವ್ಯಾ.ಕ. ೬-೪೩); ಮೃತ್ಯುಂಜಯನನಱಿಯದೆ ಸಂಸಾರವೆಂಬ ಮೃತ್ಯುವಿನ ಬಾಯ ತುತ್ತಾಗಿ ಉತ್ಪತ್ತಿ ಸ್ಥಿತಿ ಪ್ರಳಯಕ್ಕೊಳಗಾದಿರಲ್ಲಾ (ಸಿದ್ಧೇವ. ೩೦-೦೪೦). ೨. (ಸಾವನ್ನು ತಪ್ಪಿಸುವುದೆಂದು ನಂಬಿ ಜಪಿಸುವ) ಒಂದು ಮಂತ್ರ : ಗಾಯತ್ರಿ ಮೃತ್ಯುಂಜಯ . . . ಭೈರವಾದಿ ಮಹಾಮಂತ್ರಂಗಳಂ . . . ಬೇಜಿ ಬೇಜಿ ವಿವೇಕಿಸಿ ನೋಡಿ (ವಿವೇಕ. ೬೩). 'ಮೃತ್ಯುಂಜಯಮಂತ್ರ' ಪರಾ. ೩. [ಜೈನ] ಜಿನ ; ಅರ್ಹಂತ. [ಸಂ.]

**ಮೃತ್ಯುಂಜಯತೆ** (ನಾ). ಸಾವನ್ನು ಗೆಲ್ಲುವ ಶಕ್ತಿ ; ಮರಣವನ್ನು ಜಯಿಸುವ ಬಲ : ಬಿದ್ದುದನು ನಿಲ್ಲಿಪ್ಪುದೆ ನರನ ಮೃತ್ಯುಂಜಯತೆ (ಮಂಕುಕ. ೪೬೪). [ಸಂ. ಮೃತ್ಯುಂಜಯತಾ]

**ಮೃತ್ಯುಂಜಯಮಂತ್ರ** (ನಾ). = ಮೃತ್ಯುಂಜಯ ೨ : ತಾನುಮುರಸಿಯುಂ ತನ್ನ ನೀಶ್ವರದಿವ್ಯವಚನಮೃತ್ಯುಂಜಯಮಂತ್ರಸಾಮರ್ಥ್ಯಸಂಧಾರ್ಯಮಾಣಜೀವಿತರಾಗಿರ್ದರ್ (ಚಂದ್ರಪು. ೩-೩೩ ವ). [ಸಂ.]

**ಮೃತ್ಯುಂಜಯರಸ** (ನಾ). [ವೈದ್ಯಶಾ] ಒಂದು ಬಗೆಯ ಔಷಧಿ : ಮೃತ್ಯುಂಜಯ ರಸ : - (ಸನ್ನಿಗೆ) - ವತ್ಸನಾಭಿ ಗ ೧ ತೂಕ. ನಾಗಭಸ್ಮ ಗ ೧ ತೂಕ, ರಸ ಗ ೨ ತೂಕ, ಇವಂ ಅರ್ಕಕ್ಷೀರದಲ್ಲಿ ಚೆನ್ನಾಗಿ ಮರ್ದಿಸಿ . . . ತೇದು ಹಚ್ಚುವುದು (ವಿವೈವಿ. ೪೪). [ಸಂ.]

**ಮೃತ್ಯುದೇವತೆ** (ನಾ). ಮರಣದ ಅಧಿದೇವತೆ ; ಸಾವಿನ ದೇವತೆ : ಮರ್ತ್ಯಲೋಕದ ಉದರದೊಳಗೆ ಮೃತ್ಯುದೇವತೆ ಕತ್ತೆ ಕುದುರೆಯ ಹಡೆದಛ ಪುತ್ರೋತ್ಸಾಹವ ಮಾಡುವದ ಕಂಡು . . . ಬೆಸಗೊಳಲು (ಸಿದ್ಧೇಪ. ೦೪೬-೪೬೭); ಸ್ವತಃ ಮೃತ್ಯುದೇವತೆ ಬಾಗಿಲೆದುರು ಬಂದರೂ ಕವಿ ಅವಳನ್ನು ಸ್ವಾಗತಿಸುತ್ತಾನೆ (ರವೀಂಕಾ. ೮೬). [ಸಂ. ಮೃತ್ಯುದೇವತಾ]

**ಮೃತ್ಯುದೇವಿ** (ನಾ). = ಮೃತ್ಯುದೇವತೆ : ಕಡಿದ ತಲೆಯ ನಿವಾಳಿಯೆತ್ತುವರುಡಿದ ಕೈಗಳ ಮೃತ್ಯುದೇವಿಗೆ ಕೊಡುವ ಹರಕೆಯ ಕಂಡು ರಾವಣ ನೋಡಿ ಮೆಚ್ಚಿರ್ದ (ತೊರೆರಾ. ೨೦-೦೨). [ಸಂ. ಮೃತ್ಯುದೇವೀ]

**ಮೃತ್ಯುಪತ್ರ** (ನಾ). = ಮೃತಪತ್ರ : ಮೃತ್ಯುಪತ್ರವನ್ನೀಗಲೇ ನಾನೇಕೆ ಬರೆದೆನೊ ತಿಳಿಯದು (ವಲಮು. ೩೨-೩); ರಾತ್ರಿ ಎದ್ದು ಕುಳಿತು ಟಿಳಕರು ತಮ್ಮ ಮೃತ್ಯುಪತ್ರ ಸಿದ್ಧಪಡಿಸಿದರು (ಸ್ವ.ಕಿತ. ೪೪೪). [ಸಂ.]

**ಮೃತ್ಯುಮುಖ** (ನಾ). (ಅಲಂ) ಮರಣದ ಸಾಮಿಪ್ಯ : ಚಕ್ರವರ್ತಿಯು ಮೃತ್ಯುಮುಖದಿಂದ ಪಾರಾದುದು ಇಡೀರಾಜ್ಯವನ್ನೇ ಆನಂದದಿಂದ ತುಂಬಿಸಿತು (ಮಚಿಕ. ೨೦); ಪದಿನೈದುದಿವಸ ಮೃತ್ಯುಮುಖದಲ್ಲಿ ಪ್ರವೇಶಿಸಿದ ಮೆಹಬೂಬ ಒಂದು ದಿನ . . . ಜ್ವರದಿಂದ ಪಾರಾದಳು (ಗಂಪರಾಯು. ೨೦೦). [ಸಂ.]

**ಮೃತ್ಯುರಾಜ** (ನಾ). ಸಾವಿನ ಅಧಿಪತಿ ; ಯಮ : ಅಘವೈರಿಯಲ್ಲದುಟಿದಿಂ ಗೆಲಲಾರ್ಕುಮೆ ಮೃತ್ಯುರಾಜನಂ (ಅದಿತ. ೩-೬). [ಸಂ. ಮೃತ್ಯುರಾಜ್]

**ಮೃತ್ಯುಲೋಕ** (ನಾ). ಯಮಲೋಕ : ಉತ್ತರಲೋಕದಲ್ಲಿ ಸತ್ಯಜ್ಞಾನಾನಂದವೆಂಬ ಅಂಗನೆ ಮೃತ್ಯುಲೋಕವನೆಯ್ದಲು (ಸಿದ್ಧೇವ. ೨೦೪-೬೪೦). [ಸಂ.]

**ಮೃತ್ಯುಶಿಲೆ** (ನಾ). ಮರಣ ಹೊಂದಿದವನ ಸಮಾಧಿಯ ಮೇಲೆ ನೆಡುವ ಕಲ್ಲು : ಅಲ್ಲಿ ಒಂದು ಮೃತ್ಯುಶಿಲೆ(ಕಬರ)ಯನ್ನು ನಿಲ್ಲಿಸಬೇಕೆಂದು ನನ್ನ ಆಪ್ತಮಿತ್ರರು ಇಚ್ಛಿಸುವದಾದರೆ . . . ನನ್ನ ಕವಿತೆಯ ಸಾಲನ್ನು ಕೆತ್ತಿಸಬೇಕು (ಸ್ವ.ಕಿತ. ೪೪೩). [ಸಂ. ಮೃತ್ಯುಶಿಲಾ]

**ಮೃತ್ಯುಸೂತಕ** (ನಾ) = ಮೃತಾಶೌಚ : ಮೃತ್ಯುಸೂತಕವು ಹನ್ನೆರಡು ದಿನವು (ಪುರಂದ. ರಾ. ೨-೨೦-೩) ; ಪೆತ್ತ ಸೂತಕ ಹತ್ತು ದಿನಗಳಿಗೆ ಪರಿಹಾರ ಮೃತ್ಯುಸೂತಕವು ಪನ್ನೊಂದು ದಿನಕೆ (ಕುಶಿ. ೩೩-೪). [ಸಂ.]

**ಮೃತ್ಯುಹರ** (ನಾ). = ಮೃತ್ಯುಂಜಯ ೧ : ಆ ನರನೆಚ್ಚ ಗಱಿಗಣೆ ಗಳಾವರಿಸಿ ಕರಂ ಮುತ್ತೆ ಮೃತ್ಯುಹರನಂಜುವನೇ (ಕಶಿಸಂ. ೪-೪೩). [ಸಂ.]

**ಮೃತ್ಸೆ** (ನಾ). ೧. ಮಣ್ಣು ; ಮೃತ್ತಿಕೆ. ೨. ಫಲವತ್ತಾದ ಮಣ್ಣು ; ಉತ್ತಮವಾದ ಮಣ್ಣು : "ಮೃತ್ಸಾ, ಮೃತ್ಸ್ನಾ - ಈ ೨ ಒಳ್ಳೆಹ ಮಣ್" (ಕಬಾಯು. ೨೬-೪) ; "ಮೃತ್ಸೆಯೆನಲು ಒಳ್ಳಿತಹ ಮಣ್ಣು" (ಮಂಗರಾ. ೨೮-೨). ೩. ಒಂದು ಬಗೆಯ ಸುವಾಸನೆಯ ಮಣ್ಣು. ೪. ಒಂದು ಬಗೆಯ ಸಸ್ಯ ; ತೊಗರಿಗಿಡ. [ಸಂ. ಮೃತ್ಸಾ]

**ಮೃತ್ಸ್ನಾಘಟ** (ನಾ). ಉತ್ತಮವಾದ ಮಣ್ಣಿನಿಂದ ಮಾಡಿದ ಪಾತ್ರೆ : ತಿರಿಪುತ್ತುಂ ಜವದಿಂ ಮುಕುಂದನಿಸೆ ವಿದ್ಯುದ್ವಿಭ್ರೀಕರಂ ವೈರಿಕಂಧರಮಂ ಕೊಂಡು ತದುತ್ತಮಾಂಗದೊಡನುದ್ದಂ ಪಾಱ ಮೃತ್ಸ್ನಾಘಟಂಬೆರಸುದ್ಯದ್ವ್ಯಜದಂಡವರ್ತನದಿನುಗ್ರಾಡಂಬರಂ ಪೋಗೆ ಕೋಪವರಚಕ್ರಂ ಶಿರವಂದದಿಂ ತಿಳಿದುದಾ ಚಕ್ರಂ ವಿಯಚ್ಚಕ್ರದೊಳ್ (ಶಾಂತಿಪು. ೪-೩೪). [ಸಂ.]

**ಮೃತ್ಸ್ನ** (ನಾ). ೧. = ಮೃತ್ಸೆ ೧. **೨.** = ಮೃತ್ಸೆ ೨: "ಮೃತ್ಸಾ, ಮೃತ್ಸ್ನಾ —ಈ ೨ ಒಳ್ಳೆಹ ಮಣ್" (ಹಲಾಯು. ೩೬-೪); ಸುರರಾಜಾಸ್ಥಾನದ ಪೊಣ್ ಸುರಮದಗಜಕೋಡಮಣ್ಣಾಮುಖಿವಂ ನಾಗರಮನೆಯ ಮೃತ್ತಿಕೆಯುಮಾ ನರನಾಥಾಲಯದ ಮೃತ್ಸ್ನೆಯುಂ ಹೃಲ್ಲೇಪಂ (ಅಕ್ಕಾ. ೬-೦೯). ೩. = ಮೃತ್ಸೆ ೩: "ಆಢಕೀ, ಕಾಕ್ಷೀ, ಮೃತ್ಸ್ನಾ . . . ಸುರಾಷ್ಟ್ರಜಂ – ೬ ಪಲಟಮಣ್ಣೆಂಬ ಗಂಧದ್ರವ್ಯ" (ಚಾಕಾ. ೦೦೦). ೪. = ಮೃತ್ಸೆ ೪. [ಸಂ. ಮೃತ್ಸ್ನಾ]

**ಮೃದಂಗ** (ನಾ). ೧. ಒಂದು ಬಗೆಯ ಚರ್ಮವಾದ್ಯ: "ಮೃದಂಗಃ, ಮುರಜಃ—ಈ ೨ ಮದ್ದಳೆ" (ಹಲಾಯು. ೦೭-೯೭); ಉದಿತ ಮೃದಂಗ ಧ್ವಾನವನೃತ್ಯನ್ಮಯೂರಾಂಚಿತವೆಸೆವುದು ಕಾಂತಂ ದೇವಪೂಜಾನಿಶಾಂತಂ (ಚಂದ್ರಪ್ರ. ೦-೦೩೦); ಆಗಿವ ಪಟಹ ಮೃದಂಗ ಕಹಳಾದಿಗಳ ಕಳಕಳರಭಸ ದಶದಿಕ್ಕುಗಳ ಮಾತಾಡಿಸೆ ಮಹಾಬಲ ತೆರಳಿತಿಭಪುರಿಯ (ಭುವ್ಯಾಶೀ. ೦-೯೭). ೨. ಶಬ್ದ; ಘೋಷ. ೩. ಬಿದಿರಿನ ಜಲ್ಲೆ. [ಸಂ.]

**ಮೃದಂಗಫಲಿನಿ** (ನಾ). ಒಂದು ಬಗೆಯ ಸಸ್ಯ: "ಪೀರೆ ಮೃದಂಗ [ಪಾಠಾಂ. ಢಂಗಿ] ಫಲಿನಿ ಜಾಳಿನಿಯಕ್ಕು" (ಮುಂಗಣಾ. ೪೪-೪೪). [ಸಂ. ಮೃದಂಗಫಲಿನೀ]

**ಮೃದಂಗಯತಿ** (ನಾ). [ಸಂಗೀತ] ಆರು ಬಗೆಯ ಯತಿಗಳಲ್ಲಿ ಒಂದು: ಯತಿಯಲ್ಲಿ ಆರು ವಿಧ. ಕ್ರಮವಾಗಿ ಅವು – (೧) ಸಮಯತಿ (೨) ಗೋಪುಚ್ಛಯತಿ (೩) ಶ್ರೋತೋವಾಹಯತಿ (೪) ಡಮರುಯತಿ (೫) ಮೃದಂಗಯತಿ ಮತ್ತು (೬) ವಿಷಮಯತಿ (ಸಂಗೀಸಂ. ೫೭). [ಸಂ.]

**ಮೃದಂಗವಾದಕ** (ನಾ). ಮೃದಂಗವನ್ನು ಬಾರಿಸುವವನು: ಭಾರತ ಸಂಗೀತದಲ್ಲಿ ಮೃದಂಗವಾದಕರು ಸಂಗೀತಗಾರರಿಗೆ ನೀಡುವ ಲಯವಿನ್ಯಾಸದ ನೆರವು . . . ಪಾಶ್ಚಾತ್ಯಸಂಗೀತದಲ್ಲಿ ಕಾಣಸಿಗದಂತಹುದು (ಸಂಗೀತ. ೦೦೬). [ಸಂ.]

**ಮೃದು** (ಗು). ೧. **ಮೆದುವಾದ; ಮೆತ್ತಗಿರುವ**: 'ಮೃದುಗೂಟು'. 'ಮೃದುತಲ್ಪ' ಪರಾ. **೨. ಕೋಮಲವಾದ**; ಸುಕುಮಾರವಾದ; ನಾಜೂಕಾದ: ಮೃದುತರಕಪೋಲಫಲಕಂ . . . ಮುದವಂ ಪಡೆದತ್ತು (ಕಬಿರಾ. ೬-೦೭); ಮೃದುಕುಟಿಲಶಿರೋರುಹಂ ಸರಸೀರುಹವದನಂ (ಅಂತ್ರ. ೦-೩೯); ಮೃದುಕನಕಪದ್ಮಕೋಶಾಗ್ರದೊಳೆಱಗಿದ ತುಂಬಿ ಯೆಸೆದುದು (ಚಂದ್ರಪ್ರ. ೭-೬೦). ೩. ನಿಧಾನವಾದ; ಮಂದವಾದ; ಮೆಲು: ಮಂಡಲದ ತುಡುಗೆಯುಂ ಕಯ್ಯೊಂಡುಂ ಬಗೆಯುಱುದು ತುಡುಕಿಯುಂ ಮದವಶ್ವೇತುಂಡಮೃದುಗತಿಗೆ ಮಾಣಿಕಭಂಡಾರದ ಬೆಸನ ನಮಱಿಯರ್ ನಡೆಯಿಸುವರ್ (ಶಾಂತಿಪು. ೯-೦೫೩); ಮೃದುಗತಿವಿಲೋಲ ಹಾರರ್ ಪ್ರದಕ್ಷಿಣಂ ಬಂದು . . . ಪೂಜಿಸಿದರ್ (ಜಗ. ೦೦-೦೩೩). 'ಮೃದುಯಾನ' ಪರಾ. ೪. ಇಂಪಾದ; ಮಧುರವಾದ: ಮೃದು ಕಳಕಂಠವಾದ್ಯನಿನದಂ ಪೊಣಿಸೊಳ್ಗೆ ಪೊದಱ್ ಭೃಂಗಸಂಘದ ಮೃದುಗೇಯ ನಿಸ್ವನಮುದುಕ್ಕೆ (ಕುಸುಮಾ. ೯-೨೪). 'ಮೃದುವಚನ' ಪರಾ. **೫.** ಶಾಂತವಾದ; ಸೌಮ್ಯವಾದ. ೬. ಅಶಕ್ತವಾದ; ದುರ್ಬಲವಾದ. **೭. ಮೊಂಡಾದ**; ಹರಿತವಲ್ಲದ. (ನಾ). ೮. ಮಿದುವು; ಮೆತುವು: ಎನಿಸು ಕಾಲ ಕಲ್ಲು ನೀರೊಳಗಿರ್ದಲೇನು ನೆನೆದು ಮೃದುವಾಗಬಲ್ಲುದೆ (ಚಾಪ. ೯೯). **೯. ಕೋಮಲವಾಗಿರುವಿಕೆ**; ಸುಕುಮಾರತೆ: "ನಯಃ –ಮೃದುವೆಂ, ಧರ್ಮವುಂ, ನ್ಯಾಯಮುಂ" (ಚಾಕಕ್ಕ. ೦೩೦); ತುಳು ಎಂಬ ಪದಕ್ಕೆ ಮೃದು ಎಂಬ ಅರ್ಥವೆಂದು ಹೇಳುತ್ತಾರೆ (ದ್ರಾವಿಶಿ. ೦೯೨). ೧೦. ಒಂದು ಗ್ರಹದ ಹೆಸರು; ಶನಿಗ್ರಹ. [ಸಂ.]

**ಮೃದುಗಂಧಿ** (ನಾ). ಒಂದು ಬಗೆಯ ಸಸ್ಯ: "ಬಹುಪತ್ರಃ– ಮೃದುಗಂಧಿ" (ಚಿತಧಿ. ೦೯೬). [ಸಂ. ಮೃದುಗಂಧೀ]

**ಮೃದುಗನ್ನಡ** (ನಾ). ಸುಕುಮಾರವಾದ ಕನ್ನಡಭಾಷೆ: ಸಂದರ್ಭಂ ಮೃದುಗನ್ನಡಂ . . . ಬಹುಭೇದ ಕನ್ನಡಗಳಂ ಬಲ್ಲಂ ಕವೀಶಂ ದಿಟಂ (ಕಂಣ. ೯-೩). [ಮೃದು + ಕನ್ನಡ[1]]

**ಮೃದುಗೂಟ್** (ನಾ). ಮೆದುವಾದ ಅನ್ನ; ಮೆತ್ತಗಿರುವ ಅನ್ನ: ನೆಲ್ಲನಟ್ಟು ಮೃದುಗೂಟನಿಜುವ . . . ಕಟ್ಟಿಗ್ಗನಂ ಪೋಲ್ಬುಂ (ರಘುಚ. ೦೨-೨೯ ವ). [ಮೃದು + ಕೂಟ್[1]]

**ಮೃದುಜಲ** (ನಾ). ಗಡುಸಲ್ಲದ ನೀರು; ಕಠಿನವಲ್ಲದ ನೀರು: ನೀರೊಳಗೆ ಕ್ಷಾರಾಂಶವು ಕಡಿಮೆ ಇದ್ದರೆ ಅದಕ್ಕೆ ಮೃದುಜಲವೆನ್ನುವರು (ಮುಂಬಯಿ. ೬-೩೬). [ಸಂ.]

**ಮೃದುತಲ್ಪ**, ಮೃದುತಳ್ಪ (ನಾ). ಮಿದುವಾದ ಹಾಸಿಗೆ: ಮೆತ್ತನೆಯ ಶಯ್ಯೆ: ಪೊಳೆವ ಪಚ್ಚದೊಳೆ ಸೊಗಯಿಸುವ ಮೃದುತಲ್ಪದೊಳ್ . . . ಭಾವಿಜಿನಜನನಿ ಸತಿ ಪವಡಿಸಿ ನಿಶಾಂತದೊಳ್ (ಅಂತ್ರ. ೭-೩೭ ರಗಳೆ). **ಮೃದುತಳ್ಪ**: ನಿಪ್ಪೊತ್ತಸತೆನೆ ಸೊಗಯಿಪ ಮೃದುತಳ್ಪದೊಳಾತಂ ವಿಲಾಸದಿಂ ಪವಡಿಸುವಂ (ಸುಕುಮಾ. ೦೦-೦೦೩). [ಸಂ.]

**ಮೃದುತಳ್ಪ** 'ಮೃದುತಲ್ಪ' ನೋ.

**ಮೃದುತ್ವ** (ನಾ). ಕೋಮಲತೆ; ನಾಜೂಕು; ಸುಕುಮಾರತೆ: ಒಂದು ರೇಖೆ ಮೃದುತ್ವ ಅಥವಾ ಗಡುಸುತನವನ್ನಷ್ಟೇ ಅಲ್ಲ ಮಾನವ ಮನೋಕಾಮನೆಗಳ ಸಮಗ್ರಸಾರವನ್ನೇ ವ್ಯಕ್ತಪಡಿಸಬಲ್ಲದು (ಶಾರದ. ೫೩೦). [ಸಂ.]

**ಮೃದುಪದ** (ನಾ). ೧. ಮೃದುವಾದ ಶಬ್ದ, –ಪದ: ಇಲ್ಲಿಗಿದು ತಕ್ಕುದು ಇಲ್ಲಿಗೆ ಪೊಲ್ಲದಿದೆಂದಱಿದು ಸಮನಱಿ ಬಲ್ಲಂತೆಲ್ಲಂ ಸೆಲ್ಲುಂ ಮೊಸರುಂ ಗುಡಿದಂತಲ್ಲದೆ ತಲ್ಲಣಿಸದಲಸದಿಡು ಮೃದುಪದವಮಂ (ಕಬಿರಾ. ೨-೪). **೨. ಕೋಮಲವಾದ ಪಾದ**: ಸುರಾಸುರೇಂದ್ರವೃಂದವಂದಿತಪಾದಂಗೆ ಮೃದುಪದಂಗಳೊಳ್ ಕಳರವರಣಿತಮಣಿನೂಪುರಂಗಳಂ ತುಡಿಸಿ (ಅಂತ್ರ. ೭-೦೦೬ ವ); ಮೃದುಪದಪಂಕಜಂ ನಡೆದು ಕೆಂಪು ಮರಲ್ದು ನಿಜಾರುಣಾಂಶು ಪಾಸಿದ ದುಗುಲಕ್ಕೆ ಬಾಸರದ ಮಾಸರಮಂ ಕುಡೆ (ಅಪಂತ್ರ. ೯-೦೩). ೧, ೨: ವಿಳಸಿತಮಪ್ಪಲಂಕರಣಶಾಸ್ತ್ರದವೊಲ್ ಪೆಸಗಳ್ ಪ್ರಸನ್ನಮಂ ತಳೆದು . . . ಮೃದುಪದನ್ಯಸನೋಚಿತಮಾಯ್ತಿಳಾತಳಂ (ಶಾಂತೀಶ್ವ. ೦೨-೬೩). [ಸಂ.]

**ಮೃದುಪದಗತಿ** (ನಾ). ೧. (ನರ್ತನದಲ್ಲಿ) **ಕೋಮಲವಾದ ಪಾದಗಳ** ಗಮನ, – ಚಲನೆ: ಮೃದುಪದಗತಿಯಿಲ್ಲದ ಲಾಸ್ಯಮಿಂತದೇಂ ಮೆಱೆದಪುದೇ (ಚಂದ್ರಪ್ರ. ೩-೯೩). ೨. [ವ್ಯಾಕ] ಉಚ್ಚರಿಸಲು ಸುಲಭವಾದ, ಕೋಮಲವಾದ ಅಕ್ಷರಗಳಿಂದ ಕೂಡಿರುವುದು. ೧, ೨: ಮೃದುಪದಗತಿಯಿಂ ರಸಭಾವದ ಮೆರ್ಚಿಂ ಪುಣ್ಯವನಿತೆವೊಲ್ ಕೃತಿ ಸೌಂದರ್ಯದ ಚಾತುರ್ಯದ ಕಣಿಮೆನೆ ವಿದಗ್ಧಬುಧಜನದ ಮನಮುಸಲೆಯಲೆವೇಡಾ (ಅಂತ್ರ. ೦-೦೭). [ಸಂ.]

**ಮೃದುಪಾಕ** (ನಾ). [ವೈದ್ಯ] ಮೃದು, ಮಧ್ಯ (ಚಿಕ್ಕಣ), ಖರಗಳೆಂಬ ಮೂರು ಬಗೆಯ ಪಾಕಗಳಲ್ಲಿ ಒಂದು; (ಔಷಧವಸ್ತುಗಳನ್ನು ತುಪ್ಪ, ಎಣ್ಣೆಗಳಲ್ಲಿ ಕಾಯಿಸಿ ಇಳಿಸುವ) ಎಳೆಯ ಪಾಕದ ಹದ: ಮೃದುಪಾಕಕ್ಕೆ ಕಟ್ಟುವ ತೆಗೆದು ನೋಡಲು ಬೆರಳ ಹತ್ತದೆ ಇಹುದು (ವೈದ್ಯಸಾ. I· ೬೨೦); ನಸ್ಯ ಮಾಡುವುದಕ್ಕೆ ತೈಲವನ್ನಾಗಲೀ ಘೃತವನ್ನಾಗಲೀ ಮೃದುಪಾಕದಲ್ಲಿ ಇಳಿಸಬೇಕು (ಸಕಶ್ಯ. XIII, ಕೃಷ್ಣಾಷಿ). 'ಖರಪಾಕ'. 'ಚಿಕ್ಕಣಪಾಕ' ಪರಾ. [ಸಂ.]

**ಮೃದುಬಂಧ** (ನಾ). ಕೋಮಲವಾದ ಶಬ್ದಗಳ **ಜೋಡಣೆ**, – ರಚನೆ: ಮೃದುತರವರ್ಣಾನುಗಮಾಸ್ಪದವಿರಚನೆಯೊಳಗೆ ತೋರ್ಪುದದು ಮೃದುಬಂಧಂ (ಕಬಿರಾ. ೨-೫೭); ಬಗೆ ಪೊಸತಪ್ಪುದಾಗಿ ಮೃದುಬಂಧದೊಳೊಂದು

ವುದೊಂದಿ ದೇಸಿಯೊಳ್ ಪುಗುವುದು ಪೊಕ್ಕ ಮಾರ್ಗದೊಳೆ ತಳ್ವುದು ತಳ್ವೊಡೆ ಕಾವ್ಯಬಂಧಮೊಪ್ಪುಗುಂ (ಶಂಶಬಾ. ೧-೬). [ಸಂ.]

**ಮೃದುಬಂಧನ** (ನಾ). = ಮೃದುಬಂಧ: ಶಾಂತಿಪುರಾಣಮೇಂ ಕರಂ ನವರಸಮೇಂ ಸಮರ್ಥಯುತಮೇಂ ಮೃದುಬಂಧನಮೇಂ ಪ್ರಸನ್ನಮೋ (ಶಾಂತಿಪು. ೧-೩೭). [ಸಂ.]

**ಮೃದುಯಾನ** (ನಾ). ನಿಧಾನವಾದ ನಡಗೆ; ಮಂದಗಮನ: ಸೋಗೆನವಿಲ್ಪಟಲ್ಮುಡಿಗೆ ಭೃಂಗಂ ಕುಂತಲಕ್ಕಂಚೆಗಳ್ ಮೃದುಯಾನಕ್ಕೆ ಪಿಕಂ ರವಕ್ಕೆಳಸೆ ತಂತಮ್ಮ ಸ್ವಜಾತೀಯ ಸಂಮುದದಿಂ ಪಾಮರಿಯರ್ ಜಿತಾಮರಿಯರಿರ್ಪರ್ಕಾದು ಕೇದಾರಮಂ (ಮಲ್ಲಿಪು. ೨-೨೦); ಮೃದುಯಾನದಿಂ ಪತಿಯುಮಾ ಸತಿಯುಂ ಬರೆ (ತಂಪ್ರಕೃ. ೭-೧೧೯); ಮೃದುಯಾನಂ ಗಜಯಾನಮಂ ಜಜಿಸಿಯೆ . . . ರತ್ನಕಳಶಾದರ್ಶಂಗಳಂ ತಾಳ್ದು ತಾನಿದಿರ್ವಂದತ್ಯುರುಭೂಷಣಾದ್ಯತಿಯುತಾಂಗಂ ಶ್ರೈವಕಾಂತಾಜನಂ (ವೃಷಪು. ೫-೦೫). [ಸಂ.]

**ಮೃದುರೇಖೆ** (ನಾ). ತೆಳುವಾಗಿ ಎಳೆದಿರುವ ಗೆರೆ; ಸೂಕ್ಷ್ಮರೇಖೆ: ಲಾಕ್ಷಾರಸರೇಖಾಶುದ್ಧಿಯುಮಂ ನೇತ್ರಕ್ಕಂ ಸೂತ್ರಕ್ಕಮಳವಡಿಸಿದ ದೇಶೀಯ ಮುಮಪ್ಪ ಭಂಗಿಯುಮಂ ಮೃದುರೇಖಾವಿಳಾಸಮುಮಂ ಪರಿಭಾವಿಸಿ ನೋಡಿ (ಮಲ್ಲಿಪು. ೫-೪೩). [ಸಂ. ಮೃದುರೇಖಾ]

**ಮೃದುಲ, ಮೃದುಳ** (ಗು). ೧. ಮೆದುವಾದ; ಕೋಮಲವಾದ: ಅವನ ಕೈಯು ಟೇಬಲ್ಲಿನ ಕೆಳಗಿನಿಂದ ಹಾಯ್ದು ಪ್ರೈಲಿಸಳ ಕರದ ಮೃದುಲಸ್ಪರ್ಶವನ್ನು ಪಡೆದಿತ್ತು (ಸಪಚೆ. ೯೦೫). ೨. ಇಂಪಾದ; ಮಧುರವಾದ: ಮೃದುಲವಚಶ್ಶೋಭಿತೆ ತಳ್ವದೆ ತಚ್ಛಿವಭವನನಿಂತು ನುಡಿಯಿರ್ದಗೊಳಲಾ ಪುದಿದಸುಗೆಯು ಪೊಸಬನಮಂ ಪತಿದದಿಂ ಪೊಜಮಟ್ಟು ಪೋದಳ್ (ಅನ್ನಟಿ. ೭-೨೭). (ನಾ). ೩. ಕೋಮಲವಾದುದು: ಕಾಣುತಿಹುದದೊ ನೀಲದೂರಕ್ಕೆ ಮೃದುಲಮೆನೆ ತೋರ್ಪ ಶಿಖರೇಶ್ವರಂ (ಶ್ರೀರಾಮಾ. ೦೪೬-೦೨೨); ಸುಜನರ ಚಿತ್ತವು ಸುಖದೊಳು ಮೃದುಲವು ಕಷ್ಟದೊಳ ತುಳಕರ್ಕಶವು (ಬಂಕಾಕ. ೨೦೩-೭೭). ಮೃದುಳ: ೧. ಪಜ್ಜಳಿಪ ಬಜ್ಜರದಸಜ್ಜೆವನೆಯ ಸಿರಿಮಂಚದ ಸಿರಿಸಮೃದುಳತಳ್ಪಸ್ಥಳದಲ್ಲಿ (ರಾಜಶೇ. ೦೦-೦೨೫ ಪ). [ಸಂ.]

**ಮೃದುಲತೆ₁** (ನಾ). ಕೋಮಲವಾದ ಬಳ್ಳಿ: ಮೃದುಲತೆಯಿಂ ಬಿಸಕಾಂಡದ ಮೃದುಲತೆಯುಂ ಜಯಿಸುವಮಳಬಾಹುಲತೆಯೊಳ್ ಪುದಿದೆಳೆದಳಿರಂ ಪೋಲ್ತಿಪ್ಪದಿದೆನೆ ಕರಮೆಸೆದುದವಳ ಕರಸರಸಿರುಹಂ (ರಾಜಶೇ. ೭-೪೩). [ಸಂ. ಮೃದುಲತಾ (ಮೃದು + ಲತಾ)]

**ಮೃದುಲತೆ₂** (ನಾ). ಮಾರ್ದವತೆ; ಕೋಮಲತೆ; ಮೃದುತ್ವ: ಮೃದುಲತೆಯಿಂ ಬಿಸಕಾಂಡದ ಮೃದುಲತೆಯುಂ ಜಯಿಸುವಮಳಬಾಹಾಲತೆಯೊಳ್ ಪುದಿದೆಳೆದಳಿರಂ ಪೋಲ್ತಿಪ್ಪದಿದೆನೆ ಕರಮೆಸೆದುದವಳ ಕರಸರಸಿರುಹಂ (ರಾಜಶೇ. ೭-೪೩); ಕೂರ್ಮೆಗೆ ಮಣಿವ ಮೃದುಲತೆಯಿರ್ಪುದವನೆರ್ದೆಯು ಕರ್ಬುನಕೆ (ಶ್ರೀರಾಮಾ. ೭೦೬-೨೩೫). [ಸಂ. ಮೃದುಲತಾ]

**ಮೃದುವಚನ** (ನಾ). ಮಧುರವಾದ ಮಾತು; ಸವಿನುಡಿ: ಹಿತಮಿತ ಮೃದುವಚನಂ ಲಲಿತಮಧುರಸುಂದರವೇಷಂ (ಆದಿಪು. ೦-೨೯); ಕಂಡ ಭಕ್ತರಿಗೆ ಕೈಮುಗಿವಾತನೇ ಭಕ್ತ ಮೃದುವಚನವೇ ಸಕಲಜಪಂಗಳಯ್ಯಾ (ಬಸವ. ೨೪೪). [ಸಂ.]

**ಮೃದುವಪು** (ನಾ). ೧. ಕೋಮಲವಾದ ಶರೀರ, — ದೇಹ. ೨. ಕೋಮಲವಾದ ಶರೀರವುಳ್ಳವನು: ಇರೆ ಲಗ್ನಕ್ಕೆ ಚತುರ್ಥದೊಳ್ ಹಿಮಕರಂ ಸತ್ಪುತ್ರವಿತ್ತಾಢ್ಯಂ . . . ಅರಾತಿಸ್ಥಾನದೊಳ್ ಕೂಡೆ ನಿಪ್ಪುರ ನಾಲಸ್ಯಸಮನ್ವಿತಂ ಮೃದುವಪುಃಕಾಮಾಗ್ನಿ ನಾಸಾರಿ (ಜಾತಕ. ೦೬-೭). [ಸಂ. ಮೃದುವಪುಸ್]

**ಮೃದುವಾಕ್ಯ** (ನಾ). ೧. = ಮೃದುವಚನ. ೨. ಮಧುರವಾಗಿ ಮಾತನಾಡುವವನು; ಸವಿಮಾತಿನವನು: ಮೃದುವಾಕ್ಯಂ ಸುಭಗಂ ಚಪಲದೃಷ್ಟಿ ಪೇಂಪೊಡೆಯನತಿಧನಾಢ್ಯಂ . . . ಉದಕಚ್ಛಾಯನಕ್ಕು [ಮೊಪ್ಪುವ] ಪುರುಷಂ (ಲೋಕೋಪ. ೦೦-೯೦). [ಸಂ.]

**ಮೃದುವಾತು** (ನಾ). = ಮೃದುವಚನ: ಗಿಳಿಯ ಮೃದುವಾ[ತಾಂ. ಮಾ]ತುಗಳ ಮಜಗೋಗಿಲೆಯ ಮಧುರಧ್ವನಿಯ . . . ವನವನದ ಸಿರಿ ಬಗೆಗೊಳಿಸಿತ್ತೈ ಪೂರ್ವಾಭಿಭಾಷಣದಲಿ ಧನಂಜಯನ (ಕುವ್ಯಾಕ. ೪-೩೭). [ಮೃದು + ಮಾತು₁]

**ಮೃದುವಾಸು** (ನಾ). ಮೆತ್ತಗಿರುವ ಹಾಸಿಗೆ; ಕೋಮಲವಾದ ಶಯ್ಯೆ: ಓರಣಿಸಿದ ಗೋಪುರಮಧ್ಯದ ಚಂದ್ರಪಾರಾವತಶಯ್ಯೆಯೊಳಗೆ ತೋರ ಮಾಣಿಕಮಂಚಮೃದುವಾಸೊಳೊಱಗಿದ ನಾರಾಯಣನ ನೋಡಿದಳು (ವೋಹತ. ೨೯-೪೦). [ಮೃದು + ಪಾಸು₁]

**ಮೃದುವೆಱು** (ಕ್ರಿ). ಕೋಮಲವಾಗಿರು; ಮೃದುತ್ವವನ್ನು ಹೊಂದಿರು: ಲಾಲಿತ ಚೆಂಬಾವುಗೆ ಮೆಟ್ಟಿ ಮೃದುವೆತ್ತ ಸಾಲಿಯ ದುಪ್ಪಟದಾಳ್ದು ಸೋಲಿಸಿ ತೊಲಗಿ ಪೋದವನ ನಿಟ್ಟಿಸುವ ಸಲೀಲೆಯಿಂದೆದ್ದಳಾ ಕುವರಿ (ವೋಹತ. ೨೮-೭). [ಮೃದು + ಪೆಱು₁]

**ಮೃದುಸಂದರ್ಭ** (ನಾ). ಕೋಮಲವಾದ ಸನ್ನಿವೇಶಗಳಿಂದ ಕೂಡಿದುದು; ಸೂಕ್ತವಾದ ವಸ್ತುವಿನ್ಯಾಸವನ್ನುಳ್ಳುದು: ಸುಂದರಂ ಸೂಕ್ತಿಗರ್ಭಂ ಮೃದುಸಂದರ್ಭಂ ವಿಚಾರಕ್ಷಮಂ . . . ಕಾವ್ಯಮೆಂದನ್ವಿತಸುಕವಿಜನಂಮೆಚ್ಚೆ (ಆದಿಪು. ೦-೨೭). [ಸಂ.]

**ಮೃದುಸಿಂಜ** (ನಾ). (ಕಾಲಂದುಗೆ ಮೊದಲಾದುವುಗಳ) ಇಂಪಾದ ಶಬ್ದ: ಮಂಜೀರಕ ಮಂಜುಳ ಮೃದುಸಿಂಜಪರಿಸ್ಫುರಿತಮೆಸೆಯೆ ಭರತದ ಪಲವುಂ ಪಂಜಿಕೆಗಳಂತದೇಂ ಸುರಲಂಜಿಕೆಯರ್ ವಿಷಮಮುಮಂ ಸಮಂ ಮಾಡಿದರೋ (ಶಾಂತಿಪು. ೭-೩೩). [ಸಂ. ಮೃದುಸಿಂಜಾ]

**ಮೃದುಸ್ಮಿತ** (ನಾ). ಮೆಲುನಗೆ; ಮಂದಹಾಸ: ಚಂಡಕೋದಂಡ ಮನೆತ್ತಿ ಪೊಸ್ದು ನವನೀಶನ ಪೇರುರಮಂ ಕಪರ್ದಿ ಮುಂಕೊಂಡು ಮೃದುಸ್ಮಿತಂ ಮಿಸುಗೆ ತದ್ಧನುವಂ ಸೆಳೆದಂ ಕರಾಗ್ರದಿಂ (ಕಬಕಂ. ೪-೩೯). [ಸಂ.]

**ಮೃದುಹೃದಯ** (ನಾ). ಕೋಮಲವಾದ ಮನಸ್ಸು; ಮೃದುವಾದ ಮನಸ್ಸು: ಮೃದುಹೃದಯದ ನಲ್ಲರನೆಂದುದನೆನಿಸಲೆ ನಾಡ ಸುಭಗೆಯರ್ ಸುರತದೊಳುನ್ಮದ ತಮ್ಮಿಂಚರದಿಂದೆಂದುದನೆನಿಪರ್ ಕೃತಕಶೈಲಮಂ ಕಲ್ಲೆರ್ದೆಯಂ (ಮಲ್ಲಿಪು. ೨-೨೪). [ಸಂ.]

**ಮೃದುಳ** 'ಮೃದುಲ' ನೋ.

**ಮೃದೂಕ್ತಿ** (ನಾ). = ಮೃದುವಚನ: ಅತಿಗಂಭೀರಮೃದೂಕ್ತಿ ವಕ್ತ್ರದೊಳೊಡಂಬಟ್ಟೊಪ್ಪೆ (ಶಾಂತಿಪು. ೦-೬); ಕಿವಿಗಳ್ ನಿನ್ನ ಮೃದೂಕ್ತಿಯಂ ಬಯಸಿ ಕೇಳುತ್ತಿರ್ಕೆ (ಸುಕುಮಾ. ೮-೩೭). [ಸಂ.]

**ಮೃದೂಚ್ಚಾರಣೆ** (ನಾ). ಕೋಮಲವಾದ ಉಚ್ಚಾರಣೆ: ಉದಾರತಮಾ ಕರುಣಾರಸಂ ಮೃದೂಚ್ಚಾರಣೆಯಿಂದಂ . . . ಪ್ರಕಟಮಕ್ಕೆ ರಸಂ ಸತತಂ ಪ್ರಶಾಂತ[ದ]ಂ (ಕಂದಾ. ೨-೯೯). [ಸಂ. ಮೃದೂಚ್ಚಾರಣ]

**ಮೃದ್ಭಾಜನ** (ನಾ). ಮಡಕೆ ಮುಂತಾದ ಮಣ್ಣಿನ ಪಾತ್ರೆ: ಪೃಥಿವ್ಯಾದಿತತ್ವಚತುಷ್ಟಯಸನ್ನಿಪಾತಮೆ ಚೈತನ್ಯಮಂ ಪುಟ್ಟಿಸುಗು ಮಪ್ಪೊಡೊಲೆಯ ಕಿಚ್ಚಿನಮೃದ್ಭಾಜನದೆಸಟ ನೀರಬಾಣಸಿಗರುರಿಪುವ ಗಾಳಿಯ ಸಂಯೋಗದೊಳ್ ಚೈತನ್ಯಮದೇಕೆ ಪುಟ್ಟದು (ಶಾಂತಿಪು. ೬-೦೪೭ ವ). [ಸಂ.]

**ಮೃದ್ವಂಗಿ₁** (ನಾ). ಕೋಮಲವಾದ ಶರೀರವನ್ನು ಉಳ್ಳವಳು; ಕೋಮಲಾಂಗಿ: ಮೃದ್ವಂಗಿಯೆಂತಂತು ನುಣ್ಪುವಡೆದುಂ, ಗಾಡಿಯಿಂ ನಡೆವ ಕೃಶೋದರಿಯೆಂತಂತು ಬಳ್ಕಿಯುಂ . . . ಪೂವಳ್ಳಿ ಮಂಡಲೆಸೆಗುಂ (ರಾಮಾಶ್ವ. ೩೩-೨೭). [ಸಂ. ಮೃದ್ವಂಗೀ]

**ಮೃದ್ವಂಗಿ₂** (ನಾ). ೧. ಮೆದುವಾದ ಅವಯವದಿಂದ ಕೂಡಿದ ಹುಳು : ಬಸವನ ಹುಳು ಮೊದಲಾದ ಜಂತು : ಬಾರ್ನಕಲ್ (Barnacle) ಎಂಬ ಕಠಿಣಚರ್ಮಿಯನ್ನು ಲಿನಿಯಸ್ ಮೊದಲಾದ ವೈಜ್ಞಾನಿಕರು ಬಸವನ ಹುಳ, ಕಪ್ಪೆಯ ಚಿಪ್ಪು ನೀರಿನ ಗುಳ್ಳೆಗಳನ್ನು ಒಳಗೊಂಡ ಮೃದ್ವಂಗಿಗಳ (Mollusca) ಗುಂಪಿಗೆ ಸೇರಿಸಿದ್ದರು (ಪ್ರಾಣಿಶಾ. ೧೧); ಕೆಲವು ಜಾತುಗಳು . . . ಮೃದ್ವಂಗಿಗಳನ್ನು ಅಥವಾ ಮೀನುಗಳನ್ನು ಹಿಡಿದು ತಿನ್ನುವುವು (ಕವಿಕೋ. I, ೭೬೬). ೨. ಒಂದು ಬಗೆಯ ಮೆದುಶರೀರದ ಹಕ್ಕಿ : ಕೆಲವು ಪಕ್ಷಿ ಜಾತಿ. ಚಿಪ್ಪುಳ್ಳ ಒಂದು ಜಾತಿಯ ಮೃದ್ವಂಗಿ (Gnper. ೩೦೪೬). [ ಸಂ. ಮೃದ್ವಂಗಿನ್ ]

**ಮೃದ್ವಗ್ನಿ** (ನಾ). ಸಣ್ಣ ಉರಿ : ಮಂದವಾದ ಅಗ್ನಿ : ತೈಲ ಮತ್ತು ಘೃತಗಳನ್ನು ಮಾಡಬೇಕಾದರೆ ಸಾಮಾನ್ಯವಾಗಿ . . . ನಾಲ್ಕನೆಯ ಒಂದು ಭಾಗ ಕಲ್ಕವನ್ನು ಹಾಕಿ ಮೃದ್ವಗ್ನಿಯ ಮೇಲೆ ಕಾಯಿಸಿ ಶೋಧಿಸಬೇಕು (ಸಶಕ್ಕ. XIII, ಪ್ರಸ್ತಾವನೆ). [ಸಂ.]

**ಮೃದ್ವಸ್ಥಿ** (ನಾ). ಮೆದುವಾದ ಮೂಳೆ; ಮೃದುವಾದ ಎಲುಬು : ಮೃದ್ವಸ್ಥಿಯಲ್ಲಿ ರಕ್ತನಾಳಗಳಿರುವುದಿಲ್ಲ (ಪ್ರಾಣಿಶಾ. ೯೦). [ಸಂ.]

**ಮೃದ್ವೀಕೆ** (ನಾ). ದ್ರಾಕ್ಷೆ : "ಮೃದ್ವೀಕಾ. ಗೋಸ್ತನೀ. ದ್ರಾಕ್ಷಾ. ಹಾರಹೂರಾ – ಈ ೪ ದ್ರಾಕ್ಷೆ" (ಕರಾಹು. ೩೨-೪೦); ರತಿಯ ಮದನನ ಮದುವೆಯೊಳ್ ಪೊಸಯಿಸಿದ ಪಸುರ್ವಂದರಂತೆ ಮಿಸುಪ ಮೃದ್ವೀಕಾಲತೆ (ಕಂದ್ರಕು. ೦-೦೦೬ ಪ). [ ಸಂ. ಮೃದ್ವೀಕಾ ]

**ಮೃಧ** (ನಾ). ಕಾಳಗ: ಯುದ್ಧ : "ಯುದ್ಧಂ . . . ಮೃಧಂ . . . ಯುದ್ಧಕ್ಕೆ ಹೆಸರುಗಳು" (ಸಿದ್ಧಾಂತಿ. ೩೬೯). [ಸಂ.]

**ಮೃಲ್ಲಿಂಗ** (ನಾ). ಮಣ್ಣಿನಿಂದ ಮಾಡಿದ ಶಿವಲಿಂಗ : ವಿಚಾರಶರ್ಮರು ಆ ಕೊಡಗಳ ಹಾಲನ್ನು ಆ ಮೃಲ್ಲಿಂಗಕ್ಕೆ ಅಭಿಷೇಕಮಾಡಿಸಿ (ಪುರಾತ. ೦೦೯). [ಸಂ.]

**ಮೃಷ** (ನಾ). ಸುಳ್ಳು: ಹುಸಿ: ಮಿಥ್ಯೆ : "ಕಪಟಂ ನಿಘಂ ಕೈತವಂ ಮೃಷಂ . . . ವ್ಯಾಜಮುಕ್ಕುಂ" (ಮಂಗರಾ. ೦೩೪-೦೦). [ ಸಂ. ಮೃಷಾ ]

**ಮೃಷಾನಂದ** (ನಾ). [ಜೈನ] ಹಿಂಸಾನಂದ, ಮೃಷಾನಂದ, ಸ್ತೇಯಾನಂದ ಮತ್ತು ಪರಿಗ್ರಹಾನಂದ ಎಂಬ ರೌದ್ರಧ್ಯಾನದ ನಾಲ್ಕು ಪ್ರಕಾರಗಳಲ್ಲಿ ಒಂದು : "ಸುಳ್ಳು ಮಾತನಾಡುವುದರಲ್ಲಿ ಆನಂದ ಪಡುವುದು" (ಜೈಪಕೋ. ೨೦೦) : ಸ್ವಸಂವೇದ್ಯಮಪ್ಪ ಆಧ್ಯಾತ್ಮಿಕಮುಂ ಹಿಂಸಾನಂದ ಮೃಷಾನಂದ ಸ್ತೇಯಾನಂದ ಸಂರಕ್ಷಣಾನಂದಮೆಂದುಂ ಚತುರ್ವಿಧಮಕ್ಕುಂ . . . ಸ್ವಮತಿವಿಕಲ್ಪಿತಮತಂಗಳಿಂ ಪಿರಿರ್ ನಂಬುವರೆಂದವರಂ ಬಂಚಿಸಲೆಂದು ನುಡಿವ ಮೃಷಾವಚನದೊಳಪ್ಪ ಸಂಕಲ್ಪಾಧ್ಯವಸಾನಂ ಮೃಷಾನಂದಮೆಂಬುದಕ್ಕುಂ (ಆಕಶು. ೬-೨೬ ಪ). [ಸಂ.]

**ಮೃಷಾಪಾತಕ** (ನಾ). ಸುಳ್ಳಾಡಿದುದರಿಂದ ಬರುವ ದೋಷ,—ಪಾಪ : ಗುರುವಂ ಬ್ರಾಹ್ಮಣನಂ ತೊದಳ್ನುಡಿದು ಕೊಂದಾಗಳ್ ಮೃಷಾಪಾತಕಂ ಪರಮೆಂಬೀ ನುಡಿಯಿಂ ಪೃಥಾಪ್ರಿಯಸುತಂ ಪಾಪಕ್ಕೆ ಪಕ್ಕಾಗನೇ (ಗದಾಯು. ೩-೨೩). [ಸಂ.]

**ಮೃಷಾರೋಪ** (ನಾ). ಸುಳ್ಳಾರೋಪ,—ಕೋಪ : ಮೃಷಾರೋಪದಿಂ ಮಂದಹಾಸದಿಂ ಬಾಬಾ ಒಡನಾಡೆನ್ನುವ ಸನ್ನೆಗೆ ಅಸ್ತು ಎನ್ನುತಾ ಹಿಮಾದ್ರಿಕನ್ನೆಗೆ ಮಾನಟರಾಜಂ ಪೀಠವನುಳಿದಂ (ಗಕೀಕ. ೦೬-೪೭೨). [ಸಂ.]

**ಮೃಷೆ** (ನಾ). ೧. ಸುಳ್ಳು ; ಹುಸಿ; ಮಿಥ್ಯೆ: "ಅಳೀಕಂ, ವಿತಥಂ, ಮಿಥ್ಯಾ, ಮೃಷಾ. ಅನೃತಂ–ಈ ೫ ಅಸತ್ಯದ ಪೆಸರ್" (ಕರಾಹು. ೨೩-೦೪೩); ಮುಳಿಸು ಹೊಲೆ ಮೃಷೆ ರೌದ್ರಮವು ದುರ್ಬಲವೆ ಜೀವನ್ಮೃತವು (ಜೀವಂಕ. ೫-೭೦); ಲಿಂಗಾಭಿಮಾನಿತ್ವವರ್ತನಮಿಾಗಾತ್ಮಸಮರ್ಪಣಂ ಮೃಷೆ ಬಳಿಕ್ಕೆಲ್ಲಂ ಶಿವಾವಲ್ಲಭಾ (ಶಶಕ. ೪೩). ೨. ವ್ಯರ್ಥವಾದುದು : ನಿಷ್ಪ್ರಯೋಜಕವಾದುದು : ಕುಸುಮಕೋಮಲಗಾತ್ರ ಶೂರ್ಪಣಖಿಗರಿದಾಯ್ತು ? ವಿಷದ ಪೂತನಿ ನಯನಪಕ್ಷ್ಮದೊಳಗಿರಳೆ ? ಮುಸಿನಗುವಿನೊಳಗಿರಲಶಕ್ಯವೆ ಪಿಶಾಚಿಕೆಗೆ ? ಮೃಷೆಯೊ ಮೈಬೆಡಗೆಲ್ಲ (ಮಂಕುತ. ೪೦೬). [ಸಂ. ಮೃಷಾ]

**ಮೃಷ್ಟ** (ಗು). ೧. ಉಜ್ಜಿಹಾಕಿದ; ತೊಡೆದು ಹಾಕಿದ; ಅಳಿಸಿದ. ೨. ಬಳಿದ; ಲೇಪಿಸಿದ. ೩. ತೊಳೆದ; ಬೆಳಗಿದ ; ಶುದ್ಧಗೊಳಿಸಿದ. ೪. ರುಚಿಕರವಾದ ; ರಸವತ್ತಾದ : 'ಮೃಷ್ಟಭೋಜನ', 'ಮೃಷ್ಟಾನ್ನ' ಪರಾ. (ನಾ). ೫. ಶುದ್ಧಗೊಳಿಸಿದುದು; ಶುಭ್ರವಾದುದು : "ನಿರ್ಣಿಕ್ತಂ, ಶೋಧಿತಂ, ಮೃಷ್ಟಂ. . . ಕಲ್ಮಷವಿಲ್ಲದ ಹಾಗೆ ಶುದ್ಧಗೊಳಿಸಲ್ಪಟ್ಟದ್ದು" (ಸಿದ್ಧಾಂತಿ. ೩೩೬). ೬. ಮೆಣಸು. [ಸಂ.]

**ಮೃಷ್ಟಭೋಜನ** (ನಾ). ರುಚಿಕರವಾದ ಊಟ; ರಸವತ್ತಾದ ಭೋಜನ: ಮೃಷ್ಟಭೋಜನದಿಂದ ನಾವ್ ಸಂತುಷ್ಟರಾಗೊಲಿದುದನು ಬೇಡನೆ ದುಷ್ಟ ಕೌರವ ನಮ್ಮನಟ್ಟಿದ ಧೂರ್ತವಿದ್ಯೆಯಲಿ (ಕುಮಾ. ೦೩-೪೪). [ಸಂ.]

**ಮೃಷ್ಟಾನ್ನ** (ನಾ). ರುಚಿಕರವಾದ ಆಹಾರ; ರಸವತ್ತಾದ ಊಟ; ರಸಗವಳ : "ಮೃಷ್ಟಾನ್ನಂ ಪರಮಾನ್ನಂ" (ಕಾಕೆ. ೨೯೦); ಒಬ್ಬನೇ ಉಣಬಾರದೈ ಮೃಷ್ಟಾನ್ನ ಫಲಗಳನು (ಕೌಶಿರಾ. ೯-೨೪); ಬಿಡದೆ ಕಳವಿಂದೆ ಲೋಗರ ಮನೆಗಳಂ ಪೊಕ್ಕು ತುಡುತಿಂದವನ ಭೋಜನಕ್ಕೆ ಮೃಷ್ಟಾನ್ನ ಮಾದೊಡೆ ಕೆಲಬಲಂಗಳಂ ನೋಡುವನೆ (ಜೈಮಿಭಾ. ೬-೩೩); ರಾಜಕುಮಾರಿ . . . ಮೃಷ್ಟಾನ್ನವನ್ನು ಭೋಜನಕ್ಕಿಟ್ಟಳು (ಕಿಂಕಥೆ. ೦೬೪). [ಸಂ.]

**–ಮೆ₁** (ಪ್ರ). ಒಂದು ಕೃದಂತಭಾವನಾಮಪ್ರತ್ಯಯ : ಚೇತನವಿಷಯೇ . . . ಮೆ, ತನ ಇತ್ಯೇತೇ ಪ್ರತ್ಯಯಾ ಭವಂತಿ (ಶಾಶಾಭೂ. ೦೭೯ ವೃತ್ತಿ); ಮೆಕಾರಕ್ಕೆ–ಒಲ್ಮೆ, ಬಲ್ಮೆ (ಶಮದ. ೨೦೦ ಪ್ರಯೋ); ಮೆ – ಕೂರ್, ಒರ್ – ಕೂರ್ಮೆ, ಒಲ್ಮೆ (ಕೈಪಿಡಿ. ೦೬).

**–ಮೆ₂** (ಪ್ರ). ಆವೃತ್ತಿ ಎಂಬ ಅರ್ಥದಲ್ಲಿ ಸಂಖ್ಯಾವಾಚಿಗಳಿಗೆ ಹತ್ತುವ ಪ್ರತ್ಯಯ : ಸಂಖ್ಯಾವಾಚಿನಾಂ ವಾರಾರ್ಥೇ ಮೆ ಪ್ರತ್ಯಯೋ ವಾ ಭವತಿ (ಶಾಶಾಭೂ. ೦೭೬); ಮೆ ಯೆಂಬುದಕ್ಕುಮೆಣಿಸುವ ಸೂಟಿಗೊಳ್ . . . ಒರ್ಮೆ, ಇರ್ಮೆ, ಸಾಸಿರ್ಮೆ (ಶಮದ. ೨೦೬); ಒಂದು ಮೊದಲಾದ ಸಂಖ್ಯಾವಾಚಿಗಳಿಗೆ ಆವೃತ್ತಿ ಎಂದರ್ಥದಲ್ಲಿ ಮೆ ಸೇರುವುದು–ಒರ್ಮೆ, ಇರ್ಮೆ (ಕೈಪಿಡಿ. ೫೨).

**–ಮೆ₃** (ಪ್ರ). ಒಂದು ತದ್ಧಿತಭಾವನಾಮಪ್ರತ್ಯಯ : 'ಜಾಣ್ಮೆ', 'ಪಟುಮೆ', 'ಪೆರ್ಮೆ' ಪರಾ.

**ಮೆಂಚಿಗೆ** 'ಮಂಚಿಗೆ' ನೋ.

**ಮೆಂಟಿಕೆ**, ಮೆಂಟಕೆ, ಮಂಟಗೆ, ಮಂಟಿಕೆ, ಮಂಟ್ಟಿಗೆ, ಮಿಂಟಿಗೆ, ಮೆಂಟಿಗೆ (ನಾ). ( ಹೆಂಗಸರು ) ಕಾಲುಬೆರಳಿಗೆ ಹಾಕಿಕೊಳ್ಳುವ ಒಂದು ಬಗೆಯ ಆಭರಣ; ಕಾಲುಂಗುರ : ವೀರಮುದ್ರೆಯ ಮೆಂಟಿಕೆಯ ವಿಸ್ತಾರದಂಗುಲಿಯುಂಗುರಂಗಳ . . . ನಾರಿಯರು ನಡೆತಂದರಾ ಮಾಯಾಂಗನೆಯ ಕೂಡೆ (ಪ್ರಭುಲಿ. ೪-೩೦) ; ಸರಪಣಿ ಪಿಲ್ಲಿ ಮೆಂಟಿಕೆ ಪಾದಸರ . . . ಮುಂತಾದ ಪರಿಪರಿಯಾಭರಣಂಗಳ ಬಿಸುಟರು (ಶಶಕ. ೭೭-೦೨೦); ಅಳವಡಿಸಿ ತೋಳ ಬಾಪುರಿ . . . ಅಂದಿಗೆ ಪಿಲ್ಲೆ ಮೆಂಟಿಕೆಗಳ (ಪಪಕೋ. ೦೦-೨೫). **ಮಂಟಿಕೆ** : ಸ್ತ್ರೀಯರುಗಳು ಕಾಲುಬೆರಳುಗಳಲ್ಲಿ ಉಂಗುರಗಳು, ಪಿಲ್ಲಿ, ಮಂಟಿಕೆ ಮುಂತಾದವುಗಳನ್ನು ಧರಿಸಿದಲ್ಲಿ ಹೆಚ್ಚಾದ ಮಂಗಳವೂ . . . ಸದಾ ಆನಂದವೂ ಆಗುವುವು (ಸಶಕ್ಕ. ೪೦) ; ವೀರಮುದ್ರಿಕೆ ರತ್ನ ಮಂಟಿಕೆ ಪೇರಣೆಯ ವೈಡೂರ್ಯದಂದುಗೆಯೋರಣದ ಕಿರಿಗೆಜ್ಜೆ ಸೊಬಗಿಂದೆಸೆದರನುವಾಗಿ (ಕಂಬಿಶ. ೪೫-೩೫). **ಮಂಟಗೆ** : ಅಂದುಗೆಯ ಮಂಟಗೆಯ ಕಂಕಣದ ರ್ಝಣರವದ ಗೊಂದಳಿಪ ಬಳೆಯ ಕಿಂಕಿಣಿಯ ಗೆಜ್ಜೆಯ . . .

ಕಾಂತೆ ಮಾಳಿಗೆಯ ಭದ್ರದ ಬಯಲೊಳಾಡಿದಳು ಹೊಡೆಸೆಂಡನು (ಹಕಾ. ೯–೧೨). **ಮೆಂಟಿಕೆ** : ಬಾಲೆಯ ಪದದೊಳ್ ಮೆಱೆವವು ಕಾಲುಂಗುರ ವೀರಮುದ್ರೆ ಕಿಱುವುಂಟಿಕೆಗಳ್ (ನೇಕಂ. ೪೦೩) ; ಮುತ್ತಿನ ಮೆಂಟಿಕೆ ಕಾಲಪೆಂಡೆಯ ಮುದವೆತ್ತ ನೂಪುರ ಹೊನ್ನ ದಾರ ಉತ್ತಮ ಮಿಸುನಿಯ ಗಂಟೆಸರಗಳಿಂದ ಮತ್ತೇಭಯಾನೆಯೊಪ್ಪಿದಳು (ಕಂಪಂ. ೯–೭೦). **ಮೆಂಟಿಗೆ**: ಹೊಗಳಿವುಂಗುಟದೆಳೆಗಳ್ ಮೆಂಟಿಗೆಗಳಂ ಪಿಲ್ಲಿಗಳನಿಟ್ಟಂದುಗೆಗಳಂ ಮಣಿ ಪಾಡುವಟ್ಟಂಗಳನರ್ಚಿಸಿದರು (ಶಿಕಪು. ೯–೩೬) ; ಅಸುಗೆಯರಲುಂಗುರ ಮನುತ್ಸಳದ ಮೆಂಟಿಗೆಯುಸುಜ್ವಲಿಪ ಗೊಜ್ಜಗೆಯ ಸಜ್ಜುಕದ ಚಳಕಿಗೆಯು . . . ಎಸಗಿ (ರಾಜಶೇ. ೧೧–೩೭ ರಗಳೆ). **ಮಿಂಟಿಗೆ** : ಸರಪಣಿ ಪಿಲ್ಲಿ ಮಿಂಟಿಗೆ ಪಾದಸರ . . . ಮುಂತಾದ ಪರಿಪರಿಯಾಭರಣಂಗಳ ಬಿಸುಟರು (ಶರಿಕ. ೭೭–೨೩೦): ಉದ್ದಾಮವಹ ವೀರಮುದ್ರಿಕೆ ಮಿಂಟಿಗೆಯ ಪಿಲ್ಲಿಗಳುಮೆಲ್ಲಿಹವೆಂದೊಡೆ (ಕೃಶುಕ. ೯–೬೮). **ಮೆಂಟಿಗೆ** : ಪದಕ ಮೆಂಟಿಗೆ ಪಿಲ್ಲಿ ಅಣಿಮೆಟ್ಟೊದವಿದುಂಗುರ ಗೆಜ್ಜೆ ಸರಪಣಿಯಿಂದ ಸಿಂಗರಿಸಿ (ಹವಕಾ. ೦೭–೨೨). ' ಮೆಟ್ಟು₂ ' ಪರಾ. [ದೇ.॥ ತಮಿ. ಮೆಟ್ಟಿ, ಮೆಟ್ಟು ; ತೆಲು. ಮಟ್ಟೆಯ, ಮಟ್ಟೆ, ಮೆಟ್ಟೆಯ, ಮೆಟ್ಟೆ, ಮೆಂಡಿಯ, ಮೆಂಡೆ, ಮೆಂಡೆಯ = ತೋರಬೆರಳು ಅಥವಾ ತರ್ಜನಿಗೆ ತೊಡುವ ಉಂಗುರ ; ತುಳು. ಮೇಂಟಿಗೆ; ನಾಯ್ಕಿ. ಮಟ್ಟೆ; ಪರ್ಜಿ. ಮಟ್ಟ]

**ಮೆಂಟಿಗೆ** ' ಮೆಂಟಿಕೆ ' ನೋ.

**ಮೆಂಟಿ** ' ಮೇಂಟಿ ' ನೋ.

**ಮೆಂಡಿ** (ನಾ). ಒಂದು ಸ್ಥಳದ ಹೆಸರು : ' ಉತ್ತಮಮೆಂಡಿ ', ' ಮೆಂಡಿಮಂಗಲ ' ಪರಾ. [ ? ]

**ಮೆಂಡಿಮಂಗಲ** (ನಾ). ಒಂದು ಊರಿನ ಹೆಸರು : ನಾಗಯ್ಯನು ಕೊಣ್ಣಯ್ಯನು ಶ್ರೀ ಮೆಣ್ಡಿಮಂಗಲದ ಮಹಾಜನಙ್ಗೆ ಪದಿನಾಱುಗದ್ಯಾಣ ಪೊಱಕ್ಕೊಟ್ಟು ಕೊಂಡ ಧರ್ಮ್ಮ (ಎಕ. X, ಕೋಲಾರ. ೯–೬; 925).
[ಮೆಂಡಿ + ಮಂಗಲ]

**ಮೆಂಡಿಮುದುಳಗಾವುಂಡ** (ನಾ). ಒಬ್ಬಾತನ ಹೆಸರು : ಮಣಿಪಟ್ಟಿಯ ಮಾಣಿಕಾ ಮೆಣ್ಡಿಮುದುಳಗಾಮುಣ್ಡರ ಮಗಂ ಕಸವಯ್ಯ . . . ಕಾದಿ ಇನ್ಬರಂ ಕೊಂದು ತಾನು ಸಗ್ಗ ಯೇದಂ (ಎಕ. X, ಮುಳಬಾ. ೨೨೯–೪: 909). ' ಮೆಂಡೆಗಾವುಂಡ ' ಪರಾ. [ಮೆಂಡಿ + ಮುದುಳ, + ಗಾಮುಂಡ]

**ಮೆಂಡು** (ನಾ). ಹೆಚ್ಚಳ ; ಆಧಿಕ್ಯ ; ಅತಿಶಯ : ಪಿಂಡು ಗೋವು ಹರಿಯ ಕೃತಿಯ ಕಂಡು ಧ್ಯಾನದಲ್ಲಿ ತಂದು ತಂಡ ನೆಗಪಿ ಬಾಲವೆತ್ತಿಕೊಂಡು ನಿಂತವು ತುಡತಂಡ ಒಪ್ಪಿದವು ಹಂಡೆ ಪವಳೆ ಹುಲುಗಚ್ಚಿಕೊಂಡು ನಿಂತ ವಲ್ಲಿಗಲ್ಲಿ ಮೆಂಡಲಿದ್ದವೆ (ಕೃಕಹಾ. ೯೯–೬): ಮದ್ದಾನೆಗಳ ಗಂಡಭಾಗಂಗಳಿಂದ ಪೆಂಡಾಗಿ ಸುರಿಯುವ ಮದಧಾರೆಗಳಿಂದ ಕೆಸರಾಗುವಂತೆ ಮಾಡಿ ವಿತರಣ ಗುಣದಲ್ಲಿ ಕಲ್ಪವೃಕ್ಷಮಂ ಮರಮೆಂದು ಕಾಮಧೇನುವಂ ಪಶುವೆಂದು . . . ತಿರಸ್ಕಾರಮಂಗೈದು (ಕೌಗಂಂ. ೨೨೪–೯). [ದೇ.॥ ತೆಲು. ಮೆಂಡು]

**ಮೆಂಡೆಗಾವುಂಡ** (ನಾ) . ಒಬ್ಬಾತನ ಹೆಸರು : ಬಾಗೆಯೂರ ಕಮ್ಮಾಱ ಗಾವುಣ್ಡನು ಸವುಳಙ್ಗದ ಮೆಣ್ಡೆಗಾವುಣ್ಡನು (ಎಕ. V, ಹಸ್ಸನಾ. ೨೩೦–೦೩ ; 925). [ಮೆಂಡೆ₁ + ಗಾವುಂಡ ( < ಗಾಮುಂಡ ) ]

**ಮೆಂಡೆಯತನ** (ನಾ). ಬಲಾತ್ಕಾರ ; ಬಲವಂತ ; ಜುಲುಮೆ : ಚಿದ್ದ ಯನು ಜಕ್ಕಯ್ಯನುಮೆಂಬ ಪಾರುವರು . . . ಎಡೆಯಾಯ್ಲುತನದಿಂ ರಾಜ ಗಾಮಿತಂಗೆಯ್ದು ಮೆಣ್ಡೆಯತನದಲೂರನೆನ್ನದೆಸ್ದು ಮೂಱುವರಿಪ ದುಣ್ಬಳಿಯ ಪೊಗ ತೊಟ್ಟಿಣುತಮಿರ್ಪುದು ಕಣ್ಡು (ಕೌಇಶಾ.IX–i. ೦೨೩–೦೭: 1059). [ ? + — ತನ]

**ಮೆಂಡೆಹ** (ನಾ). (?) : ಪಡುವನಾಡ ಕೊಟ್ಟುಬಾವಿಯ ಮೆಂಡೆಹ [ಪಾಠಾಂ. ಯ]ವ ಕಾಯಕದ ಚೌಡು ಬಟ್ಟಕೆಱೆಯಲಿ ಬಸವನಳವಿಂಡ್ಯ ಮರುಳಯ್ಯ ಕಟ್ಟಿ ಧಿಕರಿಸಿದವ ಪ್ರಮಥಗಣನಾಯಕರ ಚರಣಾಂಬುಜಕ್ಕೆ ಶರಣು (ಲಶಿಸಂ. ೩೯–೦೩೩). [ ? ]

**ಮೆಂತಯ** ' ಮೆಂತೆಯ ' ನೋ.

**ಮೆಂತೆ** ' ಮೆಂತೆಯ ' ನೋ.

**ಮೆಂತೆಯ**, ಮೆಂತಯ, ಮೆಂತೆ, ಮೆಂತ್ಯ, ಮೆಂಥಿಯ, ಮೆಂಥೆಯ₁ (ನಾ). ಒಂದು ಬಗೆಯ ಧಾನ್ಯ ಮತ್ತು ತರಕಾರಿಯಾಗಿ ಬಳಸುವ ಅದರ ಸೊಪ್ಪು : ಜೀರಿಗೆ ಮೆಂತೆಯಂ ಶುಂಠಿ ನೀರುಳ್ಳಿಯಿಕ್ಕಿಯಿನಿಸಾ ಎಣ್ಣೆಯಿಂಗಿಕ್ಕಿಯೊಗ್ಗರಿಸಿ (ಸೂಶಕಾ. ೩–೨೦) ; ಮೆಂತೆಯ ತೂಕ ೧ ಒಪ್ಪಲಿ ತೂಕ ೯ . . . ಇಷ್ಟನ್ನೂ ಕಲಸಿ ಅಟ್ಟು ತಾರೇಕಾಯಿಯಷ್ಟು ಮೆಲ್ಲಲು ಗೂಡೆ ಮಾಣುವುದು (ವಿಶ್ವಪಿ. ೮೭) ; ಸಾಸಿವೆ ಮೆಂತೆಯ ನೀರುಳ್ಳಿ ಬೆಳುಳ್ಳಿ ಅರಿಸಿನ ಶುಂಠಿ ಮುಂತಾದ ಜಿನಸನು (ಎಕ. VIII, ತೀರ್ಥಹ. ೭೨–೨೦ ; 1711). **ಮೆಂತಯ** : ಜೀರಗೆ ಮೆಂತಯ ಯಿಂಗು ಸಾಸವೆ ಉಪ್ಪು ನಿಂಬೆಯ ಹಂಣು ಸಹ ಕ್ರಮ ವರಹ ಗ ೧ (ಎಕ. XV, ಶೀಲೂರು. ೭೦–೩೭ ; 1484). **ಮೆಂತೆ** : "ಮೆಂತೆ — ಮೇಥಿಕಾ (ಮಂಥಾ) = ಒಂದು ಜೀನಸು" (ಶಬ್ದಕೋ. ೩೬) ; ಸ್ವಾತಿಮಳೆಯಲ್ಲಿ . . . ಮೆಂತೆ ಬಿತ್ತಬೇಕು (ಕೃಷಿಶ್ರ. ೬೨) ; ಮೆಂತೆ ತಿಂದಾಕ್ಷಣ ಕುಂತೀ ಮಗನಾದಾನೇ ? (ಗಾದೆ). **ಮೆಂತ್ಯ** :ಅಜಮೋದ, ಮೊತ್ಯ, ಯಷ್ಟಿ ಮಧುಕ, ಜಟಾಮಾಂಸಿ ಇವುಗಳನ್ನು ಪ್ರತ್ಯೇಕ ಒಂದೊಂದು ಪಲವಂ ಚೂರ್ಣಿಸಿ ಹಾಕಿ . . . ಸೇವಿಸಲು ಶೀತಜ್ವರಂ ಶಮನಮಕ್ಕುಂ (ಸಕಪ್ರ. ೬೨) ; ನೆಲ್ಲಿಕಾಯಿ ಮೆತ್ತಗಾದಾಗ . . . ಓಮಕಣಸು ಮತ್ತು ಮೆಂತ್ಯ ಇವುಗಳ ಒಗ್ಗರಣೆ ಹಾಕಿ, ಆಮೇಲೆ ಭರಣಿಯಲ್ಲಿ ಹಾಕಿ ಮುಚ್ಚಳವಿಕ್ಕಿ ಬಾಯಿಗೆ ವಸ್ತ್ರದ ತುಂಡನ್ನು ಕಟ್ಟಿ ಇರಿಸುವುದು (ಅಡುಗೆ. ೦೦೬). **ಮೆಂಥಿಯ** : " ಮೆಂಥೀ — ಮೆಂಥಿಯ " (ಓಶಧಿ. ೦೨೯). **ಮೆಂಥೆಯ₁**: ''ಪೀತಬೀಜ — ಮೆಂಥೆಯ" (ಓಶಂ. ೯೯) ; ಬೇವಿನೆಲೆ ಬಳಿಯ ಗಣಜಿಲ ಮಾವಿನ ಪಾಲಿಂದಮರೆದು ಶರ್ಕರೆಸಹಿತಂ ಸೇವಿಸೆ ಜೀರಗೆ ಮೆಂಥೆಯಂ ದೋಷದ ವಿಷಹರಮದಕ್ಕುಂ (ಕಮುದ. ೨–೩೬).

**ಮೆಂತ್ಯದ ಸೊಪ್ಪು, ಮೆಂತೆಸೊಪ್ಪು** = ಒಂದು ಬಗೆಯ ತರಕಾರಿ ಸೊಪ್ಪು : ಚಕ್ಕೊತ್ತಿಸೊಪ್ಪು, ಮೆಂತ್ಯದ ಸೊಪ್ಪುಗಳನ್ನು ಸಸಿಗಳಲ್ಲೇ ಕಿತ್ತು ಅಡಿಗೆ ಮಾಡಿದರೆ ಮೇಲು (ತರಶಿ. ೦೭); ಮೆಂತೆಸೊಪ್ಪಿನ ಹುಳಿ ಬಹಳ ಚೆನ್ನಾಗಿರುತ್ತದೆ (ರೂಢಿ).

[ದೇ.॥ ತಮಿ. ಮೆನ್ದಿಯಮ್, ಮೇತಿ, ಮೇನ್ದಿ, ವೆನ್ದಯಮ್, ವೆನ್ತಲ್, ವೆನ್ದಿಯಮ್; ಮಲ. ವೆಂತಯಮ್; ತುಳು. ಮೆಂತಿ, ಮೆಂತೆ, ಮೆತ್ತಲೆ, ಮೆತ್ತಿ, ಮೆತ್ತೆ; ತೆಲು. ಮೆಂತಿ, ಮೆಂತುಲು./ಸಂ. ಮಂಥಾ]

**ಮೆಂತ್ಯ** ' ಮೆಂತೆಯ ' ನೋ.

**ಮೆಂಥಯ** ' ಮೆಂಥೆಯ₂ ' ನೋ.

**ಮೆಂಥಿಯ** ' ಮೆಂತೆಯ ' ನೋ.

**ಮೆಂಥೆಯ₁** ' ಮೆಂತೆಯ ' ನೋ.

**ಮೆಂಥೆಯ₂**, ಮೆಂಥಯ (ನಾ). ಒಂದು ಬಗೆಯ ಬಳ್ಳಿ ಮತ್ತು ಅದರ ಹೂವು ; ಮಾಧವಿ : ''ಮೆಂಥೆಯಮೆನೆ ವಸಂತದೂತಿಕೆಗೆ ಪೆಸರ್" (ಕಕಾ. ೯೨) ; ''ಮದನಿ–ಮೆಂಥೆಯ, ಆದಿರ್ಗಾಂತಿ, ಕಸ್ತೂರಿ" (ಓಶಂ. ೦೦೩). **ಮೆಂಥಯ** : "ಅದಿರ್ಮುತ್ತೆ, ಮೆಂಥಯ [ಪಾಠಾಂ. ಮೊಂದೆ] ಅದಿರ್ಗಾಂತಿ — ಈ ೩ ಮಾಧವಿಲತೆ" (ಕರಣಾ. ೩೯–೦೬೦). [ ? ]

**ಮೆಂದ** ' ಮಯಿಂದ ' ನೋ.

**ಮೆಂದಣ್ಣ** (ನಾ). ಒಬ್ಬಾತನ ಹೆಸರು : ನೊಣಂಬಸೇನಮಾರನ ಮಗ ಮೆನ್ದಣ್ಣ (ಎಕ. IX, ಹಾಸನ. ೫೨–೬: ೯೦೦).
[ಮೆಂದ.( < ಮಯಿಂದ) + ಅಣ್ಣ₁]

**ಮೆಂದಮ್ಮ** (ನಾ). ಒಬ್ಬಾತನ ಹೆಸರು : ಇ ಕೊಡಙ್ಗಿಯ ಬಳಸಿದೋರ್ ನಾಟುಙ್ಗಾವುಣ್ಡ ಬಿಯುಳನುಂ ಏಱಿಯ ಮುಗುಳಿಯ ಕೋಮರಯ್ಯನುಂ ಪಲ್ಮಾಡಿಯ ಮೆನ್ದಮ್ಮ ಬೆಣ್ಣೆಯೂರ ದೇವಗಣನು (ಎಕ. VI. ತಿಕ್ಕವು. ೩-೦೪; 899). [ಮೆಂದ (< ಮಯಿಂದ) + ಅಮ್ಮ$_{1}$]

**ಮೆಂದಯ್ಯ** (ನಾ). ಒಬ್ಬಾತನ ಹೆಸರು : ನಡದೋಕ್ಕರಣಸಹಿತ ಮ್ಮೆನ್ದಯ್ಯನುಂ ಪೆಂನ್ಜಱುವಿನ ಸೊಟಮ್ಮಗಾವುಣ್ಡನುಂ (ಎಕ. XII. ಶಿರಾ. ೨೬-೪೭; 943). [ಮೆಂದ (< ಮಯಿಂದ) + ಅಯ್ಯ$_{1}$]

**ಮೆಂದು** ' ಮೇ$_{1}$ ' ಪರಾ.

**ಮೆಂದೆ** (ನಾ). ಜಮೀನಿನ ಒಂದು ಅಳತೆ (?) : ಐನೂರ್ಬ್ಬರುಂ ಕೂಡಿ ಶ್ರೀ [ಪೊಜ್ಜೀ] ಶ್ವರದೇವರ್ಗ್ಗೆ ಬಿಟ್ಟ ಧರ್ಮ್ಮವೆನ್ತೆಂದಡೆ . . ಹಂನೆರಡು ಮೆಂದೆಯ ಬಂಜರು ಸಮಸ್ತಂ ಕೂಡಿಯಾಳಲು ವೀಸವಂ ಕೊಟ್ಟರ್ (ಕ೩೮. ೩೫-೪೭-೪೦; 1143). [ ? ]

**ಮೆಂಬರು** (ನಾ). ಸಂಘ, ಸಮಿತಿ ಮುಂತಾದ ಘಟಕಗಳಲ್ಲಿ ಸಂವಿಧಾನ ಮೂಲಕವಾದ ಸಂಬಂಧವನ್ನು ಹೊಂದಿರುವವನು : ಸದಸ್ಯ : (೧)ನೆಯ ಉಪಪ್ರಕರಣದಲ್ಲಿ ಹೇಳಿರುವ ಪಟ್ಟಿಯಲ್ಲಿ ನಮೂದಿಸಿರುವ ಯಾವನೊಬ್ಬ ಮನುಷ್ಯನನ್ನಾದರೂ ಸದರಿಬೆಂಚಿನ ಮೆಂಬರಾಗಿ ನೇಮಿಸ ಬಹುದು (ಗ್ರಾಮಾಕ. ೧೭). [←ಇಂ. Member]

**ಮೆಕ್ಕಲು** (ನಾ). ೧. ಬೆಟ್ಟದ ಮೇಲಿನಿಂದ ಹರಿಯುವ ನದಿಗಳು ಮೇಲಿನಿಂದ ದೂಡಿಕೊಂಡು ಹೊತ್ತು ತರುವ ಮೇಲುಮಣ್ಣು ; ರೇವೆಮಣ್ಣು : ಫಲವತ್ತಾದ ಮೆಕ್ಕಲಿನ ಮೈದಾನಗಳಲ್ಲಿ ಇವು ಪ್ರವಹಿಸು ತ್ತವೆ (ಭೂವಿವ. ೨೪೫). ೨. ಮೆಕ್ಕಲುಮಣ್ಣಿನಿಂದ ಕೂಡಿದ ಪ್ರದೇಶ,— ಸ್ಥಳ : ಇವು ದಕ್ಷಿಣ ಭಾರತದ ಪಶ್ಚಿಮ ಮತ್ತು ಪೂರ್ವತೀರಪ್ರದೇಶ ಗಳಲ್ಲಿ ಸಮುದ್ರ ಮತ್ತು ಬೆಟ್ಟಸಾಲುಗಳ ಮಧ್ಯೆ ಇರುವ ಇತ್ತೀಚಿನ ಮೆಕ್ಕಲುಗಳು (ಕವಿಕೋ. XII, ೬೫೪). [ ? ]

**ಮೆಕ್ಕಲುಮಣ್ಣು** (ನಾ). = ಮೆಕ್ಕಲು ೧ : ನದಿಗಳು . . . ಹರಿಯುವಾಗ ಬೆಟ್ಟದಿಂದ ಕಲ್ಲು, ಮಣ್ಣು, ಮರಳು ಮುಂತಾದವುಗಳನ್ನು ದೂಡಿಕೊಂಡು ಬರುತ್ತವೆ . . . ಇದೇ ಮೆಕ್ಕಲುಮಣ್ಣು (ಮಣ್ಣು. ೨೩) ; ಮೆಕ್ಕಲುಮಣ್ಣು ಗಳಲ್ಲಿ . . . ತೀರಪ್ರದೇಶದ ಮಣ್ಣುಗಳು ಮತ್ತು ನದೀಮುಖಜ ಭೂಮಿಯ ಮೆಕ್ಕಲುಮಣ್ಣುಗಳು ಎಂದು ಎರಡುಭಾಗ ಮಾಡಬಹುದು (ಕವಿಕೋ. XII. ೬೫೪). [ಮೆಕ್ಕಲು + ಮಣ್ಣು (<ಮಣ್)]

**ಮೆಕ್ಕೆ$_{1}$** ' ಮುಕ್ಕೆ$_{1}$ ' ನೋ.

**ಮೆಕ್ಕೆ$_{2}$** (ನಾ). ೧. ಒಂದು ಬಗೆಯ ಜೋಳ : 'ಮೆಕ್ಕೆಜೋಳ' ಪರಾ. ೨. ಮೆಕ್ಕೆಜೋಳದ ಹಿಟ್ಟು (?) : ಅಕ್ಕಿಯಿಂ ತೆಂಗು ಜಾನಕ್ಕಿಯಿಂ ಲಂಕೆಯು ಮೆ[ಪಾಠಾಂ. ಮು]ಕ್ಕೆಯಿಂ ಕಣಿಕ ಕೆಡುವಂತೆ ದುರ್ಬುದ್ಧಿ ಹೊಕ್ಕಲ್ಲಿ ಕೇಡು (ಸರ್ವಜ್ಞ. ೬೭೩). [?./ ಮರಾ. ಮಕ್ಕಾ, ಮಕಈ./ಇಂ. Maize= ಮುಸುಕಿನಜೋಳ]

**ಮೆಕ್ಕೆ$_{3}$**, ಮೇಕೆ$_{2}$ (ನಾ). ಒಂದು ಬಗೆಯ ಬಳ್ಳಿ ಮತ್ತು ಅದರ ಕಾಯಿ : "ಉರ್ವಾರುವೆನೆ ಮೆಕ್ಕೆ" (ಮಂಗರಾ. ೪೪-೪೭) ; ಮೆಕ್ಕೆಯ ಕಾಯ್ಗಳ್ ಮೊದಲೊಳ್ ಕೈಪೆಯುಪ್ಪುವು (ರಸರ್ಣವ. ೭-೨೪೦) ; ಎಱೆಯ ಮಂಕಿಯೊ ಕಳಿತ ಮೆಕ್ಕೆಯೊ . . . ತಕ್ಕಿನಂಡೆಯೊ ಸವಿಯ ಚಿತ್ರಕವೊ (ಕುವ್ಯಾಕ. ೮-೭೭) ; ಎಂತು ಕಲ್ಮನನಾಗಿ ಮಾಲತಿಯುಂ ಮೆಕ್ಕೆಯಿಂ ಸಿಂಗರಿಸಿದಾರ್ (ರಾಮಾಶ್ವ. ೩೭-೨೪). **ಮೇಕೆ$_{2}$** : "ಪೃಥುವಿಶಾಲ – ಮೇಕೆ" (ಹಿಕಂ. ೧೦೨). [?./ ಮರಾ. ಮೇಕೀ. ಮೇಕೇ]

**ಮೆಕ್ಕೆಜೋಳ** (ನಾ). = ಮೆಕ್ಕೆ$_{2}$ ೧ : (ಭತ್ತ) . . . (ಮೆಕ್ಕೆಜೋಳ) ಇವುಗಳ ಬೆಳೆಗೆ ಅವಶ್ಯಕವಾದ ಅನುಕೂಲಗಳಾವುವು (ಭೂವಿವ. ೨೦೦). [ಮೆಕ್ಕೆ$_{2}$ + ಜೋಳ./ತಮಿ. ಮೊಕ್ಕೈಚ್ಚೋಳಮ್]

**ಮೆಚ್ಚವಣಿಗೆ** ' ಮೆಚ್ಚುವಣಿಗೆ ' ನೋ.

**ಮೆಚ್ಚಿಕೆ**, ಮಚ್ಚಿಕೆ (ನಾ). ೧. ಇಷ್ಟ : ಪ್ರೀತಿ : ನೀನು ತುಂಬ ಜೋರಿನ ಹುಡುಗಿ ಎಂದೇ ಅವರಿಗೆ ಅದು ಮೆಚ್ಚಿಕೆಯಂತೆ (ಕೇವೋಂಡ. ೧೧೦) : ವೀರಣ್ಣನ ಮೇಲೆ ತೋರಿದ್ದ ಮುನಿಸು ಮೆಚ್ಚಿಕೆಯ ರೂಪ ತಾಳಿತು (ಹಾಹುತ್ತ. ೧೦೭). ೨. ಒಪ್ಪಿಗೆ ; ತೃಪ್ತಿ : ಈ ಅಂಶಗಳನ್ನು ನೀವು ಮನನ ಮಾಡಿಕೊಂಡರೆ ಕುಟುಂಬದವರಿಗೆ ಮೆಚ್ಚಿಕೆಯಾಗುವ ರೀತಿಯಲ್ಲಿ ಮತ್ತು ನಿಮ್ಮ ಹಣಕಾಸಿನ ಸ್ಥಿತಿಗೆ ತಕ್ಕಂತೆ ನಿತ್ಯದ ಅಡುಗೆಗಳನ್ನು ತಯಾರಿಸುವುದು ಕಷ್ಟವಾಗಲಾರದು (ಅಡುಗೆ. ೫೬) ; ಅವುಗೆ ಯಾವು ದೊಂದು ಮೆಚ್ಚಿಕೆಯಾಗುವುದಿಲ್ಲ (ಒಂಟಿದ. ೭). ೩. ಕೊಂಡಾಟ; ಹೊಗಳಿಕೆ: ಅವಳಿಗೆ ಏನಾದರೂ ಒಂದು ಮೆಚ್ಚು ಕೊಡ್ಬೇಕು ಎಂದು ಮೆಚ್ಚಿಕೆಯ ದನಿಯಲ್ಲಿ ಹೇಳಿದ (ಹಾಹುತ್ತ. ೯೩). **ಮಚ್ಚಿಕೆ** : ೧. ಮನವನೀಯಲು ಬಹುದು ಮಚ್ಚಿಕೆಯನುವನಱಿದಾ ಪ್ರಾಣವಂ ಮತ್ತೆಂತು ಕೊಡಲಹುದು (ಬಸವ. ೩೭-೫೬) ; ಸಟಿಸಿ ಪ್ರೇಮದಿ ತೃಪ್ತಿಯೊಂದಿಸುವ ಮಚ್ಚಿಕೆಯ ಗೋವಿನೊಲು (ಗಗತಾ. ೧೦-೯). ೪. ಸಂತೋಷ ; ಹರ್ಷ: ಸಕಲದೇವ ದ್ರೋಹಿಗಳು . . . ವಿಕಟಮತಿಗಳು ಖಳಪತಿಯ ಚಿತ್ತಕೆ ವಿಕಾರವ ಪುಟ್ಟಿಸುತ ಮಚ್ಚಿಕೆಯೊಳಿಹರು ( ಅವಂಕಾ. ೧-೫-೯ ). ೫. (?) : ಫಲರಸ ವರ್ಣ ಕೊಂಡಂತಿರಬೇಕು . . . ದೃಷ್ಟಿಯ ಚಿತ್ತದಂತಿರಬೇಕು ಅಪ್ಪುವಿನ ಮಚ್ಚಿಕೆಯಂತಿರಬೇಕು (ಮೋಕವಾ. ೧೧೧-೪೦೨). 'ಮೆಚ್ಚುಗೆ' ಪರಾ. [ಮೆಚ್ಚು$_{1}$ + —ಇಕೆ./ತೆಲು. ಮಚ್ಚಿಕ]

**ಮೆಚ್ಚಿಗೆ** ' ಮೆಚ್ಚುಗೆ ' ನೋ.

**ಮೆಚ್ಚಿತು, ಮೆಚ್ಚಿದು** (ನಾ). ಪ್ರಿಯವಾದುದು ; ಇಷ್ಟವಾದುದು : ಮೆಚ್ಚಿತು ಮಾಡಲ್ಕೆ ಸಮರ್ಥನಪ್ಪಡಪ್ಪುದು ಗರ್ವಂ (ಸಮುಕ. ೪-೧೧೫) ; ಮುಂದದಿನೀಗಳೆ ಬೇಡು ಮೆಚ್ಚಿತಂ (ಕುಮುರಾ. ೨-೬೩). **ಮೆಚ್ಚಿದು** : ನಿನ್ನ ಮೆಚ್ಚಿದುಗೆಯ್ ಎಂದು ಪರಿಚ್ಛೇದಿಸಿ ನುಡಿವುದುಂ (ಸುಕುಮಾ. ೭-೨೨ ವ).

**ಮೆಚ್ಚಿತ** = ಹೊಗಳಿಸಿಕೊಂಡವನು : ಸ್ತುತ್ಯನಾದವನು : ಪುರಹರ ಮೆಚ್ಚಿತ ಪುರುಷೋತ್ತಮನುತ ಶರಣುಹೊಕ್ಕೆಸು ಸಲಹೆನ್ನ (ಕಕಗಾಂ. ೬೫-೨೪). [<ಮೆಚ್ಚು$_{1}$]

**ಮೆಚ್ಚಿದು** ' ಮೆಚ್ಚಿತು ' ನೋ.

**ಮೆಚ್ಚಿಸು, ಮಚ್ಚಿಸು, ಮರ್ಚಿಸು** (ಕ್ರಿ). ೧. ಒಡಂಬಡಿಸು ; ಒಪ್ಪಿಸು : ಗಂಧಮಿತ್ರ(ಕ್ಷೀಣ)ನಂ ಮೆಚ್ಚಿಸಿ ಬುದ್ಧಿಸೇನೆಯಂ ನಿಗ್ರಹದಿಂ ತನಗೆ ವಶ್ಯಂಮಾಡಿಕೊಂಡು (ಕಾವ್ಯಂಪು. ೦೬೦) ; ಈಕೆಯನು ಮೆಚ್ಚಿಸದು ರಾಜಶಿ ನೀಕ (ಸಂಭಶ. ೩೦-೩೭) ; ನಂಬುಗೆಯಿಲ್ಲದಿದ್ದರೂ ಅಮ್ಮಯ್ಯನ ಮನಸ್ಸು ಮೆಚ್ಚಿಸುವುದಕ್ಕೆ ಹಾಗೆ ಮಾಡಬೇಕಾಯ್ತು (ಜೆಂಗಾಳ. ೦೧೯). ೨. ಸಂತೋಷಗೊಳಿಸು ; ಹರ್ಷಗೊಳಿಸು : ಆ ವಿಮಾನಂ ಸಮಂತೆಚ್ಚು ಮೆಚ್ಚಿಸಿದಂ ದೇವರುಮಂ ಧನುರ್ಧರರುಮಂ (ಪಂಪಭಾ. ೩-೬೩) ; ಪರಿಣತ ರೆನಿಸುವ ನಿರ್ಮತ್ಸರರಂ ಮೆಚ್ಚಿಪುದು ಗಹನಮಲ್ಲದು (ರಸರ್ಣವ. ೧-೪೩) ; ಹ್ಯಾಗೆ ಮೆಚ್ಚಿಸಲಿ ಅರ್ಚಿಸಲಿ ನಿನ್ನ ನಾಗಶಯನನೆ (ಪುರಂದ. ೨-೬೯-೦). **ಮಚ್ಚಿಸು** : ೨. ಮಚ್ಚಿಸುತೆ ತೆಗೆದು ಮುಂಡಾಡುತ್ತ (ಶಿರುಕ. ದೇ. ೫-೦೦) ; ಎನ್ನಯ ತನುವಿನಲಿ ನೀ ಸುಳಿದು ಮಚ್ಚಿಸಿ ಯಿನಿತು ಧಾವತಿ ಗೊಳಿಸಿ (ಶ್ರಖುರಂ. ೭-೮೦) ; ಅಖಂಡೇಶ್ವರನ ಮಚ್ಚಿಸುವಾತನೇ ಮಹಾ ಸದ್ಭಕ್ತನು (ಅಖಂಡೇ. ೭೯-೬೩). **ಮರ್ಚಿಸು** : ೩. ಒಲಿಯುವಂತೆ ಮಾಡು ; ಅನುರಕ್ತಗೊಳಿಸು : ಮನೆಯನಿವಕ್ಕೆ ಮರ್ಚಿಸಿದ ಮರ್ಚಿಸಿ ಕೂರಿಸಿದೆಯ್ದೆ ಕೂರ್ತರ್ ನಚ್ಚಿನ ರುಚಿ ಬೆರ್ಚ ಬಿಚ್ಚತಿಕೆಯಂ ಬಗೆ ಕೂಡಿದಕೆಯ್ಗೆ ಮಾಡಿದೋಪನನುಟಿದೊತ್ತಗಿರ್ದೆಡೆಯೊಳೊಂದೆನಗಿತ್ತಪುದು (ಶಾಂತಿಪು. ೬-೮೦). [ಮೆಚ್ಚು$_{1}$ + – ಇಸು$_{3}$]

**ಮೆಚ್ಚು₁**, ಮಚ್ಚು₁, ಮರ್ಚು₁, ಮೆರ್ಚು (ಕ್ರಿ). ೧. ಒಲಿ ; ಪ್ರೀತಿಸು ; ಬಯಸು : ಸೋಂಬನಂ ಮೆಚ್ಚಿ ಬೇಱಾರ್ಗೆ ಪೋದ ಸೂಳೆಯಂತೆ (ಕಾವ್ಯಸಾ. ೩೨೯ ಶೂದ್ರಕ) : ಸ್ವಯಂಬರದೊಳ್ ಸುಮತಿಬಿಲ್ಲರಂ ನೋಡಿ ಯಾರುಮಂ ಮೆಚ್ಚದೆ ಸಿರಿದಿಣ್ಣಂಗೆ ಮಾಲೆ ಸೂಡಿದೊಡೆ (ವಡ್ಡಾರಾ. ೦೦೬–೨೦). ೨. ಇಷ್ಟವಾಗು ; ಸೇರು : ಒಂದು ಪೊತ್ತಗಲದೆ ಮೆಚ್ಚಿ ಮೆಚ್ಚಿದಂ ತೊಱತಂ ಕಾದಂಬರಿಯೊಳ್ಳಿರದು (ಕಾದಂಬ. ೩೨೬). ೩. (ದೇವರು, ಋಷಿ ಮುಂತಾದವರು) ಅನುಗ್ರಹಿಸು : ಪ್ರಸನ್ನವಾಗು : ಸಹಜಕವಚರತ್ನಕುಂಡಲಂಗಳಂ . . . ಕೊಟ್ಟುವರ್ಕೆ ಮೆಚ್ಚಿ ದೇವೇಂದ್ರ ನಾತಂಗಮೋಘಶಕ್ತಿಯನಿತ್ತಂ (ಪಂಪಭಾ. ೯–೬೩ ವ) : ನೆಚ್ಚಿನಯ್ಯ ಹರಿ ಮೆಚ್ಚಿನಯ್ಯ (ಹರಿಭ. ೨–೬೬ ೦). ೪. ಒಪ್ಪು : ಸಮ್ಮತಿಸು : "ಮೆಚ್ಚು – ಅಭ್ಯುಪಗಮೇ" (ಶಮದ) : ಪರಮಾತ್ಥನಂ ಮೆಚ್ಚಿಸಾನೀ ಧರಣಿಯುಳಿರವಾಸೆನ್ನು ಸನ್ಯಾಸಸಂಗೆಯ್ದು (ಎಕ. II, ೮೮–೩ : ಸು. 700) ; ಇಱಿದು ಬಸಮಱಿ[ಯದೆ] ಬೀೞ್ವೊರನ್, ತೆಱೆ(ಱ)[ನ] ಮೆಚ್ಚದೊಂ (ಎಕ.XXIV, ೧೯೩–೦೨ : ೫೫೨) : ತಾಪಸಾಚರಣಂ ತಪೋರೂಪಮಾರ್ಗಮಂ ಮೆಚ್ಚದೆ ಮಿಥ್ಯಾಂಧಕಾರಾವಕುಂಠಿತಸಮ್ಯಗ್ದರ್ಶನನಾಗೆ (ಶಾಂತಿಪು. ೬–೪೩ ವ). ೫. ಕೊಂಡಾಡು ; ಹೊಗಳು : ಶ್ಲಾಘಿಸು : ತೆತ್ತುತನಕ್ಕೆ ತೆತ್ತುತನಮಂ . . . ಪೊಣರ್ಚಿತ್ತುಮುಪಾಯದಿಂ ಕಳಿಯೆ ಕೂಡುವನಂ ವಿಭು ಕಂಡು ಮೆಚ್ಚಿದಂ (ಕಾವ್ಯಸಾ. ೯೮೫ ಶೂದ್ರಕ) : ಗುಣಯುತನಪ್ಪನಂ . . . ಪರೋಪಕಾರಕಾರಣಪರನಪ್ಪನಂ ಮನದೆ ಮೆಚ್ಚದರಾರಭಿಮಾನಿಯಪ್ಪನಂ (ಕವಿರಾ. ೦–೦೨೩) ; ವಿದ್ವಜ್ಜನಂ ಮೆಚ್ಚೆ ವಿದ್ಯಾವಷ್ಟಂಭಮನಪ್ಪುಕೆಯ್ದು (ಎಕ. II, ೬೪–೮೩ : 1163) ; ತಿಳಿಯ ಹೇಳುವ ಕೃಷ್ಣಕಥೆಯನು ಇಳೆಯ ಜಾಣರು ಮೆಚ್ಚುವಂತಿರೆ (ಕುಮಾವ್ಯಾ. ೦–೦೩). **ಮಚ್ಚು₁** : ೧. ತ್ವದಂಘ್ರಿಪದ್ಮಂಗಳ ನೈದೆ ಮಚ್ಚಿ ನೆಲಸಿರ್ದಪುವೀ ಪುಲಿ ಪಂದಿ ಕೋಡಗಂ ಮುಂಗುರಿ (ಆದಿಪು. ೫–೦೪) : ರಿಪುರಾಜ್ಯಾಂಗನೆ ವಿಜಯಕೆ ಮಚ್ಚಿ ಮನಂಗೊಳ್ವಂತೆ (ಶಾಂತಿಪು. ೦೧–೪೯) ; ಹಣವ ತಕ್ಕೊಂಡು ಧಾಳಕರ ಕ್ಷಣದೊಳೆಬ್ಬಿಟ್ಟು ಮಚ್ಚದಿರೆಂದು ಮಗಳಿಗೆ ಬಣಗು ವೃದ್ಧೆಪ್ಪೆ ಹೇಳಿದಳು (ಮೋಹತ. ೦೬–೬೩). ೩. ದಮಿತಾರಿಯು ಭುಜಬಲವಿಕ್ರಮದಳವಿಗೆ ಮಚ್ಚಿ ಮಚ್ಚುಗುಡಿಸುವವೊಲ್ (ಶಾಂತಿಪು. ೪–೫೮) : ಜಯಸಿಂಹಚಕ್ರಿ ದಯೆಯಿಂ ಕೆಯ್ಕೊಂಡು ಸರ್ವಾಧಿಕಾರಮನಿತ್ತಟ್ಟಿಱೆಕೊಳೆವಿಡ್ಡು ಮಚ್ಚಿ ಪೊರೆದಂ ತಾನೆಂದೊಡೆ . . . ಉನ್ನತಿಕ್ಕೆವಡೆದಂ ಚಾವುಂಡನೇಂ ಧನ್ಯನೋ (ಲೋಕೋಪ. ೦–೦೩ ಪೀಠಿಕೆ) ; ಮಾಡಿದ ಪೂಜೆಯ ಕೊಂಡು ಮಚ್ಚಿ ತಲೆದೂಗಿ ಲಿಂಗಯ್ಯನ ಮನ ಕರಗಿ (ಮೋಹಮ. ೦೨೯ ಪ್ರಸ್ತಾವನೆ). ೪. ಎಂತು ಮಾಡುವೆನೋ ಮನವನ್ನು ಕೂಡಲಸಂಗಮದೇವನ ಶರಣರ ನಚ್ಚುವ ಮಚ್ಚದ ಬೆಂದ ಮನವನು (ಬಸವ. ೩೮) ; ನಚ್ಚುಗೆ ಮನ ನಿಮ್ಮಲ್ಲಿ ಮಚ್ಚುಗೆ ಮನ ನಿಮ್ಮಲ್ಲಿ (ಮಹಾದೇ. ಬಿ. ೩೦–೬೬) : ವೀರಶೈವದಲಿ ಬಳ್ಳಿತೇನುಂಟೆಂದು ಮಚ್ಚಿದನಲ್ಲಮನು ಹೇಳು (ಪ್ರಭುಲಿ. ೨೫–೦೦). ೫. ಕುಮಾರಿಯರ್ ಬೆಸಗೊಳೆ ದಿಕ್ಕುಮಾರಿಯರೆನಲ್ಬೊರೆಯಾದುದವರ್ಕೆ ಮಚ್ಚಿ ಬಣ್ಣಿಸಲಭಿಯೋಗಮಾಯ್ತುಸಗೆ (ಗದಾಯು. ೦–೫೩) ; ಮಚ್ಚದೊನಿಲ್ಲ ನಿನ್ನಳವಂ (ಕಾವ್ಯಾವ. ೪೯೪). Δ **ಮರ್ಚು₁** : ೧. "ಮರ್ಚು- ಅತಿಪರಿಚಯೇ" (ಶಮದ) : ಕಳವನೆ ಮರ್ಚಿ ಪೆರ್ಚಿ ಬೆಸನಂ ಪೆಱರರ್ಥಮನೋಟ್ಟಿಕೊಳ್ವ ತಕ್ಕಳವಿಗಳುಂಬಮಾಗಿ ನಿಲೆ ಕನ್ಯಮನಿಕ್ಕುವ . . . ನಿನ್ನ ಗೊಡ್ಡಮಂ ತಿಳಿದವಧಾರಿಸು (ವರ್ಧಮಾ. ೫–೩೦) ; ಉನ್ನತ ಗುರುಪ್ರಿಯಾದವಂ ಮರ್ಚಿ ಬೆನ್ನನೆ ಪೋದಂತಿರೆ ಮೂರ್ಛೆವೋದನದಂ ವ್ಯಾಮೋಹಮೇಗೆಯ್ದುದೋ (ಅರ್ಜುನೀ. ೨–೪೮). ೪. ಜನಂ ತನಗೊಪ್ಪುತೆ ಮರ್ಚಿ ನಚ್ಚಿ ಮೋದದೆ ಪುದುವಾಳ್ವವೋಲ್ ವಿಧಿಸಂಪ್ರಬಿಸವಂದಮೆ ಶೋಕಶಾಸನಂ (ಸಂಶಪ. ೩೯–೦೦). **ಮೆರ್ಚು** : ೫. ದೇವನಿಕಾಯಂ ನೆಲೆವೆರ್ಚಿ ಮೆರ್ಚಿ ಜಯಮಂ ಕೈಕೊಂಡೆ (ಶಾಂತೀಶ. ೫–೩೦) ; ಮೆರ್ಚಿ ಪಿಡಿದಿರ್ಪವೆಸೆ . . . ಸಲ್ಲಕ್ಷಣಂ (ಜನಮಾ. ೩–೫೯).

[ ದೇ.॥ ತಮಿ. ಮೆಚ್ಚು, ಮೆಯ್ಚ್ಚು : ತುಳು. ಮೆಚ್ಚು : ತೆಲು. ಮಚ್ಚು, ಮೆಚ್ಚು ; ಕೊಡ. ಮೆಚ್ಚ್ ; ಕೋತ. ಮೆಚ್ ]

**ಮೆಚ್ಚು₂**, ಮಚ್ಚು₂, ಮರ್ಚು₂ (ನಾ). ೧. ಪ್ರೀತಿ ; ಇಷ್ಟ ; ಒಲುಮೆ : ಮದನನ ಕಾಯ್ದು ಮಾಣ್ಗೆ ಸರಸೀರುಹಜನ್ಮನ ಮೆಚ್ಚು ತೀರ್ಗೆ (ಪಂಪಭಾ. ೫–೦೬) ; ಮೆಚ್ಚಿದಂತಿರುತಿಹಳು ಮೆಚ್ಚು ಮತ್ತೊಬ್ಬನೊಳು (ಸರ್ವಜ್ಞ. ೦೯೪೦). ೨. ಪ್ರಿಯವಾದುದು ; ಇಷ್ಟವಾದುದು : ಈ ಪುಣ್ಯಕಥೆ ಪುಣ್ಯಜೀವಿಗಳಿಗೆ ಮೆಚ್ಚು ಕಾಪುರುಷರಿಗೆ ಮೆಚ್ಚಲ್ಲ (ಭರತ. ೦–೧೭). ೩. ಇಷ್ಟಪಟ್ಟು ಕೊಡುವ ಕಾಣಿಕೆ : ಬಹುಮಾನ : ತನ್ನ ನಲ್ಲಂಬುಗಳಿಂದೆಚ್ಚೆಚ್ಚು ಮೆಚ್ಚಂ ಸಲಿಸುವಂ (ಪಂಪಭಾ. ೪–೨೩) : ಅರಸುಮಕ್ಕಳ ಮುಂದೋದಿ ಮೆಚ್ಚಂ ಕೊಳ್ವಕ್ಕರಿಗರಬ್ಬರದೊಳಂ (ಕಬ್ಬಿಗ. ೪೪); ಅರಮನೆಯೊಳ್ ರನ್ನಗಡಗಮಂ . . . ಮೆಚ್ಚನೀವರ್ (ರಾಮಾಶ್ವ. ೫–೦೭). ೪. ಒಪ್ಪಿಗೆ : ಸಮ್ಮತಿ : ಮೆಚ್ಚಿಲ್ಲದೆ ಜಡನಾಗಿ ದೇವಗುರುಗಳ ಪೊರ್ದದೆ (ರಮ್ಯಾ. ೫–೦೩೭) ; ಹೆಚ್ಚದೆ ಹಿಗ್ಗದೆ ಇದ್ದರೆ ಲೋಕಕ್ಕೆ ಮೆಚ್ಚು ಕೇಳೆಚ್ಚಱಿಕೆ (ಹರಿಭ. ೨–೪೫ ಅನುಪಲ್ಲವಿ). ೫. ಹೊಗಳಿಕೆ: ಪ್ರಶಂಸೆ: ಬಱಿದಲ್ತು ಮೆಚ್ಚು ಶೌಚು ಕಿಱಿದಲ್ತು . . . ಎನಿಸಿದುದು ನಿಜಗುಣಂ ಬೋಟುಗನ (ಎಕ. XI–i. ೪೦–೨೪: 969). **ಮಚ್ಚು₂** : ೧. ಅರಸರ ಮಚ್ಚು ತಮ್ಮ ಮನದೊಳ್ ನಿಲೆ ಸ್ವೈರಿಸಮಂತನಿತ್ಯಮಾ ನರರ ವಿಭೂತಿಯೆಂಬ ಬಗೆ ಬಂದಿರೆ ಮಾಣದೆ ತಮ್ಮತಮ್ಮ ಪುತ್ರರನಭಿಯೋಗದಿಂದತಿಬಲಂಗೆ ನಿಯೋಜಿಸಿ ಮಾಣ್ದರ್ (ಆದಿಪು. ೨–೫೦); ವಿಷಯಂಗಳೊಳಪ್ಪ ಮಚ್ಚಂ ಕೆಯ್ಕೊಂಡಂಗಾ ಮಚ್ಚು ಕಷಾಯಮಂ ಪುಟ್ಟಿಸುಗುಂ (ಜೀವಸಂ. ೦೪೦–೦೦ ವ) : ಕಳವಿನೊಳ್ ನಡೆವುದೇ ಸುಖದ ಸುಗ್ಗಿ ತಲೆದೋಱುತಿರ್ಪುದೇ ಮಚ್ಚು ನಿನಗೆ (ಶಬರ. ೦೦–೫೨). ೩. ಕೂರ್ತಿಚ್ಚೆ ಬೆಚ್ಚಂತಿರೆ ಮಚ್ಚಂ ಮೆಚ್ಚಿದಂದದೊಳೆ ಸಲಿಪ . . . ವಾರನಾರೀಕದಂಬಂ (ಸುಕುಮಾ. ೯–೬೩) ; ಬೀರಬಲ್ಲನಿಗೆ ಮಚ್ಚು (ಬಹುಮಾನ) ಕೊಡಿಸಬೇಕು (ಬೀರಬ. ೭೦). Δ**ಮರ್ಚು₂** : ೧. ಸಹಜಧಾತುವುಂ ಭಾವಮುಕ್ಕಂ . . . ತಡೆ ನಡೆ ಬಿಸು ಪೆರ್ಚು ಮರ್ಚು (ಶಮದ. ೨೦೩ ಪ್ರಯೋ). ೬. ಅಲಂಕಾರ: ಶೃಂಗಾರ : 'ಮಯ್ಮರ್ಚು' ನೋ.

[< ಮೆಚ್ಚು₁./ತಮಿ. ಮೆಚ್ಚು, ಮೆಯ್ಚ್ಚು: ತೆಲು. ಮೆಚ್ಚು ]

**ಮೆಚ್ಚುಕಾಱ** (ನಾ). ಪ್ರೀತಿಪಾತ್ರನಾದವನು : ಕಡುಚದುರರ ಮೆಚ್ಚುಕಾಱ (ಭರತ. ೬೫–೧). [ಮೆಚ್ಚು₂ + – ಕಾಱ]

**ಮೆಚ್ಚುಕೆಯ್** (ಕ್ರಿ). ಬಯಸಿದಂತೆ ಮಾಡು : ಇಷ್ಟಬಂದ ಹಾಗೆ ಮಾಡು : ಪಡಿಬಡಿವಸದಿಂದೊಳಗೆ ಕಳ್ಳನನಾರಯ್ಯಲಾಱದಾಗಳ್ ದೇವರೆನ್ನಂ ಮೆಚ್ಚುಕೆಯ್ವುದು (ವಡ್ಡಾರಾ. ೦೨೩–೨೩) ; ನೀನಿನ್ನೆನ್ನಂ ಮೆಚ್ಚುಕೆಯಿಮೆಂಬುದುಂ (ಸುಕುಮಾ. ೭–೨೪ ವ). [ಮೆಚ್ಚು₂ + ಕೆಯ್₁]

**ಮೆಚ್ಚುಗ** (ನಾ). ಇಷ್ಟ ಪಡುವವನು; ಬಯಸುವವನು : "ಸ್ತುತ್, ಸ್ತೋಚಃ, ಸ್ತೋಚಕಃ, ಸ್ತೋಚಮಾನಃ – ಈ ೪ ಮೆಚ್ಚುಗಂ" (ಕಾಶಕ. ೯೫) ; ಸಾಹಿತ್ಯರಚನೆಯ ಮೊದಲ ಮೆಚ್ಚುಗ ಸ್ವತಃ ಕೃತಿಕಾರನೇ ಆಗಿರುತ್ತಾನೆ (ಸಂಶೋಧ. ೦೯೬). [ಮೆಚ್ಚು₁ + – ಗ₂]

**ಮೆಚ್ಚುಗಾಣಿಕೆ** (ನಾ). ಇಷ್ಟಪಟ್ಟು ಕೊಡುವ ಬಹುಮಾನ : ತಮ್ಮ ಲೋಕೋತ್ತರವಾದ ಕಲಾವೈಭವಕ್ಕೆ ಬೆರಗಾಗಿ ಬೇಳಾಗಿ ನನ್ನ ನಾಟ್ಯಕಲೆಯ ಮೆಚ್ಚುಗಾಣಿಕೆಯಿತ್ತು ನನ್ನ ಸರ್ವಸ್ವವನ್ನೂ ತಮಗೆ ಎಡೆ ಮಾಡಲು ಬಂದಿದ್ದೇನೆ (ತುಂಗಭ. ೮೬). [ಮೆಚ್ಚು₁ + ಕಾಣಿಕೆ (< ಕಾಣ್ಕೆ)]

**ಮೆಚ್ಚುಗುಡು** 'ಮೆಚ್ಚುಗೊಡು' ನೋ.

**ಮೆಚ್ಚುಗೆ**, ಮಚ್ಚುಗೆ, ಮರ್ಚುಗೆ, ಮೆಚ್ಚಿಗೆ (ನಾ). ೧. ಪ್ರೀತಿ ; ವಿಶ್ವಾಸ : ಅಭಿಮಾನ : ಬಂಧುವರ್ಗದವರೆಲ್ಲಾ ತಮ್ಮನ್ನು ಮೆಚ್ಚುಗೆ

ಯಿಂದ ಕಾಣುತ್ತಾರೆ (ಲೂಪಿ). ೨. ತೃಪ್ತಿ; ಸಂತೋಷ : ತವ್ಮ ಕರ್ಮವಶದಿಂ ಸಂಸಾರಿಜೀವಂಗಳೆಲ್ಲಿ ಪುಟ್ಟುಗುವಲ್ಲಿಯಲ್ಲಿಯುಟ್ಪತ್ತಿಯುಂ ಮೆಚ್ಚುಗೆಯುಮಕ್ಕುಂ (ಶಬ್ದಾ.ರಾ. ೦೩೯-೨೦) ; ಸಹಜಸ್ಥಿತಿಯಲ್ಲಿ ಅವನು ಅತ್ಯಂತ ಚುರುಕಾಗಿರುತ್ತಾನೆ ಎಂದು ಮಾಸ್ಟೆನಿಕೊವ್ ಮೆಚ್ಚುಗೆ ಸೂಚಿಸಿದನು (ಕೃಸು. ೨೫೦). ೩. ಹೊಗಳಿಕೆ : ಕೊಂಡಾಟ; ಪ್ರಶಂಸೆ : ಜಗದೀಶಚಂದ್ರರು . . . ಜನರ ಮೆಚ್ಚುಗೆಗೆ ಮತ್ತು ಕೃತಜ್ಞತೆಗೆ ಪಾತ್ರರಾದರು (ಸಸ್ಯ.ಕ. ೦೦೫). ಮಚ್ಚುಗೆ : ೩. 'ಮಚ್ಚುಗೆವೆಱು' ಪರಾ. ಮರ್ಚುಗೆ : ೧. ನಿಸ್ಸೊಳಭೇದವಾದ ಕೊಂಡಾಟದನಂತಸೌಖ್ಯಮನೆ ಮರ್ಚಿದ ಮರ್ಚುಗೆಯೊಳ್ ತೊಡರ್ಚು . . . ಜಿನೇಶ್ವರಾ (ಶಂರಾಪಜ. ೫-೦೦). ಮೆಚ್ಚಿಗೆ : ೧. ಅವರು ತವ್ಮ ಸರಸಸಜ್ಜನಿಕೆಗಳಿಂದ ಎಲ್ಲರ ಮೆಚ್ಚಿಗೆಯನ್ನೂ ಗಳಿಸಿದ್ದಾರೆ (ಲೂಪಿ). 'ಮೆಚ್ಚಿಕೆ' ಪರಾ.

[ಮೆಚ್ಚು$_1$ +— ಗೆ./ತುಳು. ಮೆಚ್ಚಿಗೆ ; ತೆಲು. ಮಚ್ಚಿಗ]

**ಮೆಚ್ಚುಗೊಡು**, ಮಚ್ಚುಗುಡು, ಮಚ್ಚುಗೊಡು, ಮೆಚ್ಚುಗುಡು (ಕ್ರಿ). ಬಹುಮಾನವನ್ನು ಕೊಡು ; ಉಡುಗೊರೆಯನ್ನು ನೀಡು: ಬಿನ್ನಪಂಗೆಯ್ದು ಬೇಂಟೆಯಾತಂಗೆ ವ್ಯಾಗ ವ್ಯಾಯಾಮ ಕಾರ್ತಿಕೇಯಂ ಮೆಚ್ಚಿ ಮೆಚ್ಚುಗೊಟ್ಟು (ಶಂಶಆ. ೫-೪೭ ವ) ; ಎನ್ನ ಪೆಂಡತಿಯೇನಂ ಪಡೆವಳೆಂದು ಬೆಸಗೊಂಡೊಡೆ ಗಂಡಂಗೂಸಂ ಪಡೆವಳೆಂದು ಪೇೞ್ದೊಡೆ ಕೇಳ್ದಾ ಭಟ್ಟಂಗೆ ಮೆಚ್ಚುಗೊಟ್ಟು (ಶಂಕಶಂ. ೦೬೬-೨೨) ; ಮನವೊಲಿದು ಬೇಡಿದುದ ಮೆಚ್ಚುಗೊಡುವೆ (ಸೌಂದರ್ಯ. ೫-೨೫). ಮಚ್ಚುಗುಡು : 'ಮಚ್ಚುಗುಡಿಸು' ಪರಾ. ಮಚ್ಚುಗೊಡು : ಆಕೆಗಳಾಡಿದಾಟಮನಿಂದ್ರಂ ನೋಡಿ ಮಚ್ಚಿ ಮಚ್ಚುಗೊಟ್ಟು ಪಸಾಯಿಸಿ (ಚಂತಕ್ತ. ೭-೪೯ ವ) ; ಒಸಗೆವಾತಂ ಪೇೞ್ದವಂಗೆ ಮಚ್ಚುಗೊಟ್ಟು (ಕಾದಂಪೂ. ೪೨೬) ; ಮಚ್ಚುಗೊಟ್ಟಪುದೆಂಬ ಮಾಳ್ಕೆಯಿಂ . . .ಕರ್ಣಪೂರಂ ಜಗುಳ್ದು ಬೀಳುತ್ತಿರೆ (ರಾಶಕೇ. ೭-೦೭ ವ). ಮೆಚ್ಚುಗುಡು: ನೆಗೞ್ದಿಂದ್ರಾದ್ಯಮರೌಘಮೋಲಗಕೆ ವಂದು . . . ಮೆಚ್ಚುಗುಡಲ್ಕೊಂಡು ಮಹಾಪ್ರಸಾದಮೆನುತಿರ್ಪರ್ವಿಶ್ವೇಶ್ವರಾಸ್ಥಾನದೊಳ್ (ಜಗಪಿ. ೧೦-೬೬); ವಿಷ್ಣು ಒಪ್ಪುವನು ಮೆಚ್ಚುಗುಡುವನು (ನತಿಪಾ. 1, ೪೪೦). [ಮೆಚ್ಚು$_2$ + ಕೊಡು$_1$]

**ಮೆಚ್ಚುಗೊಳ್** (ಕ್ರಿ). ಬಹುಮಾನವನ್ನು ಪಡೆ; ಉಡುಗೊರೆಯನ್ನು ಹೊಂದು : ನಿಚ್ಚಂ ಮೆಚ್ಚುಗೊಳ್ವೆಂದ್ರನ ಕೈಯೊಳ್ (ಆದಿಪು. ೯-೦೬) ; ಬೇಗಂ ಪರಿದು ಪೋಗಿ ಪರವೋತ್ಸವದಿಂದೆ ಬಿನ್ನವಿಪ ಜನಂ ಕಾದಂಬರಿಯಂ ಮೆಚ್ಚುಗೊಳ್ವರ್ದಿರ್ಕುಮೆ ಪಿರಿದುಂ (ಕಾದಂಬ. ೫೦೪).

[ಮೆಚ್ಚು$_2$ + ಕೊಳ್$_1$]

**ಮೆಚ್ಚುದೋಱು** (ಕ್ರಿ). ಪ್ರೀತಿಯನ್ನು ತೋರು : ಕದೆಗಣ್ಣೊಳ್ ಮಾತಾಡುವುದೆನಸುಡಿಯೊಳ್ ಮೆ[ಪಾಠಾಂ: ಮ]ಚ್ಚುದೋರ್ಪುದು . . . ಇದುವೆ ವೇಶ್ಯಾಧರ್ಮಂ (ದಶಕು. ೬-೨೦). [ಮೆಚ್ಚು$_2$ + ತೋಱು]

**ಮೆಚ್ಚುಮದ್ದು**, ಮಚ್ಚುಮದ್ದು (ನಾ). ಪ್ರೀತಿಯಿಲ್ಲದ ವ್ಯಕ್ತಿಯಲ್ಲಿ ಪ್ರೀತಿಯು ಹುಟ್ಟುವಂತೆ ಮಾಡುವುದೆಂದು ನಂಬಲಾದ ಔಷಧಿ : ವಶೀಕರಣದ ಮದ್ದು : ಇದೋದು ಮೆಚ್ಚುಮದ್ದು . . . ಇದಂ ನಿನ್ನ ಗಂಡನಿಗೆ ಊಟದಲ್ಲಿಯಿಕ್ಕು (ಶುಕಸ. ೦೨೫). ಮಚ್ಚುಮದ್ದು : ಮೋಹದ ಮಚ್ಚುಮದ್ದೊಡಲಿಟ್ಟುದೆನೆ ಸತಿ ಮೆಚ್ಚಿ (ಸಾಸ್ಕಶಾ. ೩೨-೩೦); ಮಚ್ಚುಮದ್ದು ಎಂದು ಕೊಟ್ಟದ್ದು ಹುಚ್ಚುಮದ್ದಾಯಿತು (ಗಾದೆ).

[ ಮೆಚ್ಚು$_2$ + ಮದ್ದು ( < ಮರ್ದು ) ]

**ಮೆಚ್ಚುವಡು** (ಕ್ರಿ). ತೃಪ್ತಿಪಡು ; ಆನಂದಿಸು : ದುರ್ಗುಣದೊಳನು ವಿನಂ ಮೆಚ್ಚುವಟ್ಟಿರ್ದನಂ ಮಾಣಿಸಲೆನ್ನಂ ಬರ್ಕುಮೇ ಸದ್ವಚನಶತದೊಳಂ (ಕಶಿಕ. 11, ೦೦೨, ಅರ್ಥೇಂದು ಮಹಾಶೀಕಶಕ). [ಮೆಚ್ಚು$_2$ + ಪಡು$_1$]

**ಮೆಚ್ಚುವಡೆ**, ಮಚ್ಚುವಡೆ (ಕ್ರಿ). ೧. ಪ್ರೀತಿಯನ್ನು ಹೊಂದು ; ಮೆಚ್ಚಿಗೆ ಹೊಂದು : ಸಂಪಗೆಯಲರ್ ಸುರಪೊನ್ನೆಯ ಪೂಗಳೆಂಬಿವಂ ಮುರಿಪುಗಿತ್ತು ಮೆಚ್ಚುವಡೆವುತ್ಸವದಿಂ ನುಡಿದಂ ಪ್ರಿಯೋಕ್ತಿಯುಂ (ಜಗಪಿ. ೦೪-೪೪): ಕಿಚ್ಚುಗಣ್ಣನ ತಪವಳಿವುದು ಪೂಗೋಲೊಳೆಚ್ಚು ಮನ್ಮಥ ಪೀಡಿಸಲು ಮೆಚ್ಚುವಡೆದು ಪಾರ್ವತಿಯೊಳು ರಮಿಸಲು (ಪೋಹಕ. ೫-೦೬). ೨. ಬಹುಮಾನವನ್ನು ಪಡೆ,— ಹೊಂದು : ಕರವೊಸೆದು ಬೇಡಿಕೊಳ್ಳೆಂದರಸಂ ದಯೆವೆರಸು ನುಡಿಯೆ ಬಲಿಯಿಂದಂ ಭೂಸುರತೇಜ ಮೆಚ್ಚುವಡೆದೆನದಿರಲಿಂ ಭಂಡಾರದೊಳ್ ಜಗತ್ಪ್ರಥಿತಯಶಾ (ಸೇಬಿಚ. ೫-೦೦). ೩. ಕಾಣಿಕೆಯಾಗಿ ಪಡೆ ; ಬಹುಮಾನವಾಗಿ ಹೊಂದು : ತನ್ನ ಮನಮಂ ಮುನ್ನಮೆ ಮೆಚ್ಚುವಡೆದ ಪೇಚರಚರಂಗೆ ನಿಜಹೃದಯದಾನ ಪೌನರುಕ್ತ್ಯಮಂ ಮಾಡಲಿಚ್ಛೈಸಿ (ವರ್ಧಪು. ೪-೬೫ ವ). ಮಚ್ಚುವಡೆ : ೨. ಇಚ್ಚೆಗ್ರಾರ್ತಿ ಪಚ್ಚೆವಿಲ್ಲಿಲ್ಲಿಂ ಮಚ್ಚುವಡೆದಚ್ಚರಿ ಮಿಗೆ ತಳರ್ದೊಚ್ಚೀರೆ ಗಣ್ಣ ಪೆರ್ಚಿನಚ್ಚರಿಯರಿಂ (ರಾಶಕೇ. ೦-೦೩೫ವ). [ಮೆಚ್ಚು$_2$ + ಪಡೆ$_1$]

**ಮೆಚ್ಚುವಣಿಗೆ**, ಮೆಚ್ಚವಣಿಗೆ (ನಾ). ಮೆಚ್ಚಿಗೆಯನ್ನು ಹೊಂದಿರುವುದು; ಪ್ರೀತಿಪಾತ್ರವಾಗುವುದು : "ಮೆಚ್ಚುವಣಿಗೆಯು ಮೆಚ್ಚನುಳ್ಳುದಕ್ಕರ್ಥ" (ಶಬ್ದಮಂ. ೫೭) ; ಮುಳಿಸಿನ ಮೋಪಿನ ಗಂಡವುಚ್ಚರದ ಮೆಚ್ಚುವಣಿಗೆಯಂಕಕಾಱರ್ . . . ಒರ್ವರೊರ್ವರೊಳ್ ಕಾದೆ (ಶಂಶಆ. ೦೨-೭೬ ವ). ಮೆಚ್ಚವಣಿಗೆ : "ಮೆಚ್ಚವಣಿಗೆ = ಮೆಚ್ಚನುಳ್ಳುದು" (ಶಮುದ. ಶಂ. ೨) ; ಓಲಗವುರುಡಿಲ್ಲ ಮೆಚ್ಚವಣಿಗಿಲ್ಲ ಕರಂ ಮುಳಿಸಿಲ್ಲ ಕಾಯ್ದು ಕೆವ್ಮಗೆ ಬಱಿಸಂದು ಕೊಂದಪನಕಾರಣದಿಂ ಪೊೞೆಯೋ ಮನೋಭವಾ (ಆದಿಪು. ೦೨-೩೩) ; ಪೆಱವುಂ ಕಟ್ಟಕಳೆಗಳ ತೊಡರ್ಪಿನ ಮೆಚ್ಚವಣಿಗೆಯಂಕಮಂ ಮಹೀಶಂ ನೋೞ್ಪುಂ (ಕಾವ್ಯಾವ. ೪೪೪) ; ಕೆಲರ್ ನುಡಿವಳಿಗಳಂ ಪೊಗೞಿಸುತ್ತ[ಂ] ಮೆಚ್ಚವಣಿಗೆಯಂಪರಂ ತೆಗೞಿಸುತ್ತಮಿರ್ದರ್ (ಬಿಂಹಂ. ೦೨-೮೦ ವ). [ ಮೆಚ್ಚು$_1$ + — ವಣಿಗೆ ]

**ಮೆಚ್ಚುವೆಣ್** (ನಾ). ಒಲಿದ ಹೆಣ್ಣು : ಮುಚ್ಚರಮನತಿರೂಪಿನಿಂದ ರತಿಯೊಳ್ಮಾಳ್ಪ ಮೆಚ್ಚುವೆಂಗಳ ಮೋಹವೇ ಮುಕ್ತಿಯಲ್ಲವೇ ಭಾವಿಸಲ್ (ಸಮ್ಯಕೌ. ೩-೭). [ ಮೆಚ್ಚು$_1$ + ಪೆಣ್ ]

**ಮೆಚ್ಚುವೇೞ್** (ಕ್ರಿ). ಇಷ್ಟವಾದುದನ್ನು ಹೇಳು ; ಬಯಸಿದುದನ್ನು ತಿಳಿಸು: ಮೆಚ್ಚುವೇೞಾಜಾನೇಯಾಶ್ವೋತ್ಕರಂ ಬಾೞಿತ್ತಿಯೊ ಮಣಿನಿಚಯಂ ಬಾೞಿತ್ತಿಯೋ ಪೇೞುಮೆಂದಾ ದೀನಾನಾಥರ್ಗೆ . . . ಧರ್ಮಜಂ ಸೂೞಗೊಟ್ಟಂ (ಶಂಶಆ. ೬-೪೦). [ಮೆಚ್ಚು$_2$ + ಪೇೞ್]

**ಮೆಚ್ಚೋಲೆ** (ನಾ): ಹೊಗಳಿಕೆಯನ್ನು ವ್ಯಕ್ತಪಡಿಸಿದ ಪತ್ರ; ಪ್ರಶಸ್ತಿಪತ್ರ : ಕೊಟ್ಟುಕೋ ನಿನಗೆ ನೀ ಸೂರು ಮೆಚ್ಚೋಲೆ (ಕಲ್ಲೋ.೧. ೬೭-೪).

[ಮೆಚ್ಚು$_2$ + ಓಲೆ]

**ಮೆಟಕಿ** ' ಮಡಕಿ ' ನೋ.

**ಮೆಟಗುಳಿಹಂಬು** (ನಾ). ಒಂದು ಬಗೆಯ ಬಳ್ಳಿ : (ವೃಕೋ. ೨೬-೪೬೫).

[ಮೆಟಗುಳ್ಳಿ$_0$ + ಹಂಬು$_2$ (< ಪರಪ್ಪು)]

**ಮೆಟರು**, ಮೆಟರೆ, ಮೆಟ್ಟರೆ, ಮೆಟ್ರಿ, ಮೆಡರು (ನಾ). ಕುತ್ತಿಗೆಯ ಮುಂಭಾಗ; ಗಂಟಲು : 'ಮೆಟರುಗಂಟು', 'ಮೆಟರುಗಟ್ಟು' ಪರಾ. ಮೆಟರೆ : ಮುಂಗತ್ತು. ಕೊರಲು. ಮುಂಗೊರಲು. ಮೆಟರೆ. ಗೋಣು. ಗೋನಾಳಿ (Throat. ೩೦೪೩). ಮೆಟ್ಟರೆ : ಅವನ ಜುಟ್ಟನ್ನು ಹಿಡಿದು ನೆಲದ ಮೇಲೆ ಕುಕ್ಕಿ ಹಾಕಿ, ಮೆಟ್ಟರೆ ಮಿಸುಕಿ ಕತ್ತು, ಎದೆ ಕಾಲು ಎಲ್ಲೆಂದರೆ ಅಲ್ಲಿ ಹೊಡೆದನು (ವಶಭಾ. ೪೦೬). ಮೆಟ್ರಿ : ಮೊನ್ನೆ ಯಾರೋ ಅವನನ್ನು ಮೆಟ್ರಿ ಹಿಸುಕಿ ಸಾಯಿಸಿಬಿಟ್ಟು (ಲೂಪಿ). 'ಮೆಟ್ರಿಗಟ್ಟು' ಪರಾ. ಮೆಡರು : ' ಮೆಡರುಗಟ್ಟು ' ಪರಾ. [ದೇ.॥ ತಮಿ. ಮಿಟರು, ಮಿಟಲು; ಮಲ. ಮಿಟಱು; ತೆಲು. ಮೆಡ = ಕುತ್ತಿಗೆ]

**ಮೆಟರುಗಂಟು** (ನಾ). ಒಂದು ಬಗೆಯ ಗಂಟಲುರೋಗ; ಗದ್ದಕಟ್ಟು : ಪಾಂಡಾಗ್ನಿಯವರು. . . ಕುಷ್ಠರೋಗದವರು. ಮೆಟರುಗಂಟಿನ ರೋಗ

ದವರು. . . ಇವರಿಷ್ಟೂ ವಮನಯೋಗ್ಯರೆಂದರಿವುದು (ಸಕಳ. ೨೩). 'ಮೆಟರುಗಟ್ಟು' ಪರಾ. [ಮೆಟರು + ಗಂಟು]

**ಮೆಟರುಗಟ್ಟು, ಮೆಟ್ರೆಕಟ್ಟು, ಮೆಟ್ರೆಗಟ್ಟು, ಮೆಡರುಗಟ್ಟು** (ನಾ). ಗಂಟಲಿನ ನಾಳಗಳು ಊದಿಕೊಳ್ಳುವ ಒಂದು ಬಗೆಯ ರೋಗ; ಗದ್ದ ಕಟ್ಟು: ಮಂಡೆಯ ನೋವು ಕಾಣಿಸಿ, ಮೆಟರುಗಟ್ಟು (?), ಮೈಯುರಿತವುಂಟಾಗಿ ಅಜ್ಞಾನವು, ಶರೀರದಲ್ಲಿ ಕಂಪನವು ಪುಟ್ಟಿ, ಜ್ವರವು . . . ತಾಪವು, ಕಳವಳವು ಉಂಟಾಗಿರ್ಪುದೆ ಕಂಠಕುಬ್ಜ ಸನ್ನಿಪಾತವೆಂದರಿವುದು (ಸಕಳ. ೦೫೯). **ಮೆಟ್ರೆಕಟ್ಟು**: ನರಡೀರೋಗ, ಚಪ್ಪೆರೋಗ, ಮೆಟ್ರೆಕಟ್ಟು ಮುಂತಾದ ರೋಗಗಳು (ಗ್ರಾಮಾಣ. ೦೨೦). **ಮೆಟ್ರೆಗಟ್ಟು**: (*). **ಮೆಡರುಗಟ್ಟು**: ಕುಷ್ಠರೋಗದಲ್ಲಿ, ಮೆಡರುಗಟ್ಟಿನಲ್ಲಿ. . . ವಮನಕ್ರಿಯೆ ಮಾಡಿಸುವುದು (ವೈದ್ಯಶಾ. I, ೩೦). 'ಮೆಟರುಗಂಟು' ಪರಾ. [ಮೆಟರು + ಕಟ್ಟು₂]

**ಮೆಟರೆ** 'ಮೆಟರು' ನೋ.

**ಮೆಟ್ಟಕ್ಕಿ** (ನಾ). ಮದುವೆಯ ಸಮಯದಲ್ಲಿ ವಧೂವರರು ಮೆಟ್ಟಿ ನಿಲ್ಲಲು ಬಿದಿರಿನ ತಟ್ಟೆಯಲ್ಲಿರಿಸಿದ ಅಕ್ಕಿ: ಚಂದ್ರಿಕಾತಂಡುಲವೋ ಎನೆ ತೊಳಗಿ ತೋರ್ಪ ಮೆಟ್ಟಕ್ಕಿಗಳಂ (ಗಿರಿಕ. ೦೦-೯೩); ತರುಣಿ ಸಹಿತ ಕುಮಾರ ಮಣಿವಿಸ್ಫುರಿತ ಮೆಟ್ಟಕ್ಕಿಯನು ಮೆಟ್ಟಿಸೆ (ಜೀಸಂತ. ೯-೩೭); ಮೆಟ್ಟಕ್ಕಿಯ ಮೇಲೆ ನಿಲಿಸಿ ಶ್ರೀಪ್ಪರು ಮಂಗಳಾಷ್ಟಕದಿ ನಿರೀಕ್ಷಣೆಗೊಟ್ಟರು ದಂಪತಿಗಳಿಗೆ (ಮೋಹಕ. ೩-೬೮); ಕಾಂಡಪಟದ ಮುಂದೆ ರಜತಫಲಕದ ಮೇಲೆ ಹರವಿದ್ದ ಮೆಟ್ಟಕ್ಕಿಯ ಮೇಲೆ ಬಂದು ನಿಂತರು (ಶಾಂತಲಾ. ೦೦೬).

[ ಮೆಟ್ಟು₁ + ಅಕ್ಕಿ₁ ]

**ಮೆಟ್ಟಡಿ** (ನಾ). ೧. ಎಕ್ಕಡ ; ಪಾದರಕ್ಷೆ : ಮೆಟ್ಟಡಿಯಂ ಕಳೆದು ಬಟ್ಟೆಯುಂ ತೊಲಗಿ ಸಾಷ್ಟಾಂಗವೆಱಗಿ (ಪೋರಶಾ. ೩೦-೧೨೬); ಮೆಟ್ಟಡಿಯ ಕೊಂಡ ರೊಕ್ಕವ ಕೊಡಿ (ಬಾಧಶೀ. ೯೬೩-೦೭೦೦); ಅಟ್ಟೆಯ ದುರ್ಗುಣ ಕೆಟ್ಟು ಮೆಟ್ಟಡಿಯುವರಿಗೆ ಮೆಟ್ಟಿಸ ಬಂದೆ (ಸರ್ವಪ. ೦೦೨-೫೩೯). ೨. ಪಾವಟಿಗೆ ; ಮೆಟ್ಟಲು : ತಟತಟನೆ ಪೋಳೆದು ಬಿತ್ತರಂಬಡೆದ ಬಿಡುಗಲ್ಲ ಸುತ್ತಣ ಮೆಟ್ಟಡಿಯುಂ (ರಾಮಾಶ್ವ. ೫೨-೦೯); ಆ ಬೆಳ್ಳಿಯ ಮೆಟ್ಟಡಿಗಳನ್ನೇ ಕಳಚಿಕೊಂಡು ಹೋಗಿದ್ದಾರೆ (ಕಟ್ಟಿಕ. ೦೦೬-೨೩).

[ ಮೆಟ್ಟು₂ + ಅಡಿ₁ ]

**ಮೆಟ್ಟರೆ** 'ಮೆಟರು' ನೋ.

**ಮೆಟ್ಟಲಿ** 'ಮಿಟಲಿ' ನೋ.

**ಮೆಟ್ಟಲಿಗೆ** (ನಾ). ಪಾವಟಿಗೆ ; ಮೆಟ್ಟಲು ; ಸೋಪಾನ : ಹೆದರಿಸುವ ಹಿರಿದಾದ ಬಂಡೆಗಲ್ಲುಗಳ ಮೆಟ್ಟಲಿಗೆಗಳು (ಕಗದ್ಯ. ೮೬). [ < ಮೆಟ್ಟಲು ]

**ಮೆಟ್ಟಲು, ಮೆಟ್ಲು** (ನಾ). ೧. ಪಾವಟಿಗೆ ; ಸೋಪಾನ : ಐದಾರು ಮೆಟ್ಟಲುಗಳನ್ನು ಒಟ್ಟೊಟ್ಟಿಗೆ ಹಾರಿ ಮಹಡಿಯನ್ನು ಹತ್ತಿದೆ (ರಾಜಪಾವ. ೦೦೭); ಇಬ್ಬರೂ ಅಲ್ಲಿಯೇ ಇದ್ದ ಒಂದು ಮೆಟ್ಟಲಿನ ಮೇಲೆ ಕುಳಿತವು (ಅಂಹೂ. ೯೩). ೨. ಹಂತ ; ಮಜಲು ; ಘಟ್ಟ : ಕರ್ಮಯೋಗವು ಜ್ಞಾನಯೋಗದಿಂದ ಪಡೆಯಬಹುದಾದ ಸಾಕ್ಷಾತ್ಕಾರಕ್ಕೆ ಒಂದು ಮೆಟ್ಟಲು ಮಾತ್ರ (ಕತ್ಮಪ್ರ. ೩೩೩); ಕರ್ಮ ನಿನ್ನನು ಕಟ್ಟಿ ಕೆಡಹಲದನೇ ಮೆಟ್ಟಿ ಮುಂದೆ ಮೆಟ್ಟಲನೇರು ! (ಶಾಂಕಿ. ೯೯-೩). **ಮೆಟ್ಲು** : ೧. ದೂರಕ್ಕೇ ಆ ಸೌಧದ ಮೆಟ್ಲುಗಳು ಸಾಲಾಗಿ ಕಾಣುತ್ತವೆ (ಜೂಡಿ). 'ಮೆಟ್ಟಲು' ಪರಾ. [ ಮೆಟ್ಟು₁ + — ಅಲು ( < — ಅಲ್₂ ) ]

**ಮೆಟ್ನಾಡು** (ಕ್ರಿ). (ಪ್ರಾಣಿ, ಪಕ್ಷಿ ಮೊದಲಾದುವು) ಸಂಭೋಗಿಸು : ಹೆಣ್ಣುಹಂಸೆಯು ಮೆಟ್ನಾಡುವ ರಾಜಹಂಸೆಯರ ರತಿಕ್ರೀಡೆಯಂ ನೋಡೆಂದು ತೋರಿ (ಶಾಗಂಂ. ೫೬೦-೩). [ ಮೆಟ್ಟು₁ + ಆಡು₁ ]

**ಮೆಟ್ಟಿಗಾಲು** 'ಮೆಟ್ಟುಗಾಲು' ನೋ.

**ಮೆಟ್ಟಿಕೆ** (ನಾ). ಮೆಟ್ಟಲು ; ಸೋಪಾನ : ಕಟ್ಟೆಯ ಕಟ್ಟಿದರು ಭವ ಸಾಗರಕೆ . . . ಮೆಟ್ಟಿಕೆಯಿಂದಲಿ ದಾಟಿ ಪೋದರು (ಏಕಾಕ್ಷ. ೦೯೯-೦); ಹಾವುಗೆಯುಂ ಮೆಟ್ಟಿ ಮೆಟ್ಟಿಕೆಗಳನೇರಿ ಬರುವಾಗ (ಶಾಗಂಂ. ೪೧೦-೩).

[ಮೆಟ್ಟು₁ + — ಇಕೆ ]

**ಮೆಟ್ಟಿಗೆ** 'ಮೆಟ್ಟುಗೆ' ನೋ.

**ಮೆಟ್ಟಿಲು** (ನಾ). ೧. ಪಾವಟಿಗೆ; ಸೋಪಾನ : ಬೆಟ್ಟದ ಮೆಟ್ಟಿಲುಂಗಳಂ ಮೆಟ್ಟಿ ಮುನ್ನಡಿಯಟ್ಟು ಮಾಂಗಿರೀಶನ ನೆನೆದು ಕರಯುಗವ ಮುಡಿಯು ಮೇಲ್ಮುಗಿದಿಟ್ಟ ಭರತನಂ ಶ್ರೀರಾಮನತಿದೂರದೊಳ್ ಕಂಡನು (ಭರಕ. ೯-೦೨೬). ೨. ಹಂತ ; ಘಟ್ಟ: ಆದರೂ ಅಂಕಗಳೇನು? ಅವುಗಳೊಂದು ಸಾಧನವಷ್ಟೆ! ಮೇಲೆ ಮೇಲೆ ಹೋಗಲು ಮೆಟ್ಟಿಲುಗಳು (ಕೋಟಿ೬೦೯ . ೭). 'ಮೆಟ್ಟಲು' ಪರಾ.

**ಮೆಟ್ಟಿಲ ಮಂಚ**= ಪಾವಟಿಗೆಗಳಿರುವ ಎತ್ತರವಾದ ಮಂಚ : ಆ ಮೆಟ್ಟಿಲಮಂಚಕ್ಕೆ ಇಲ್ಲಿಯ ಉಪಸ್ಕರ ಅಲಂಕಾರಗಳಿಗೆ (ಮಂತ್ರಕ. ೨೩-೦೦).

[ಮೆಟ್ಟು₁ + — ಇಲು₂ ( < — ಇಲ್₃)]

**ಮೆಟ್ಟಿಸು** (ಕ್ರಿ). ೧. ಕಾಲಿನಿಂದ ತುಳಿಯುವಂತೆ ಮಾಡು ; ತುಳಿಸು: ಪಸರಿಸಿ ಪಂದಲೆಯಂ ಮೆಟ್ಟಿಸಿ ವೈರಿಯ ಫಲ್ಲ ಪಣೆಗೆಯಿಂ ಬಾರ್ಚಿ . . . ಅವನ ಕರುಳ್ಗಳೆ ಪೊಸವಾಸಿಗವಾಗೆ ಕೃಷ್ಣೆಪಾಂ ಮುಡಿಯಿಸಿದಂ (ಹಂಸಕಾ. ೦೨-೦೫೩); ಕರಿಘಟೆಯಿಂದಿಕ್ಕಿ ಮೆಟ್ಟಿಸವನರ್ದೆಯಂ (ರಕೂರಾವ್ಯ. ೬-೦೯೩); ಆ ಹುಲ್ಲ ಒಕ್ಕಿ ಮೆಟ್ಟಿಸಿ ತೂಱುವಾಗ ಹೊಟ್ಟು ಕಳೆದು ಭತ್ತ ನಿಂದು ಹುಲ್ಲು ಹೋರೆಗಟ್ಟಿತ್ತು (ಪೋರಪಾ. ೦೯೩-೫೫೩); ಅರಗುಂ . . . ಗುಗ್ಗುಲವುಂ ಖುರಮಂ ಪೊಸುಗೆ ಒಟಿಕಾ ಖುರಮಂ ಮೆಟ್ಟಿಸುಗೆ ಕಾಸಿ ತಂದಿಟ್ಟಿಗೆಯುಂ (ಅಶ್ವಶಾ. ೦೫-೩). ೨. (ನರ್ತನದಲ್ಲಿ) ಹೆಜ್ಜೆ ಇಡುವಂತೆ ಮಾಡು; ಹೆಜ್ಜೆಯಿಡಿಸು: ಅಮರರಾಜನೊಡನೆ ಮಹೋತ್ಸವದಿಂ ತಾಳಲಯಕ್ರಮಕೆ ವಿಚಿತ್ರಂ ಮೆಟ್ಟಿಸುತ್ತುಂ (ಅಪ್ರಕೃ. ೫-೩೭). ೩. (ಪಾದರಕ್ಷೆಯನ್ನು) ಕಾಲಿಗೆ ತೊಡಿಸು; ಕಾಲಿನಲ್ಲಿ ಧರಿಸುವಂತೆ ಮಾಡು : ಅಟ್ಟೆಯ ದುರ್ಗುಣ ಕೆಟ್ಟು ಮೆಟ್ಟಡಿಯುವರಿಗೆ ಮೆಟ್ಟಿಸ ಬಂದೆ ಮೆಟ್ಟಡಿಯ ತಪ್ಪಲ ಕಾಯದೆ ಮೆಟ್ಟಡಿಯ ಬಟ್ಟೆಯ ನೋಡಿಕೊಳ್ಳಿ (ಸರ್ವಪ. ೦೦೨-೫೩೯); ರತ್ನಮಯದ ಹಾವುಗೆಯ ಮೆಟ್ಟಿಸಿದರಚ್ಯುತಗೆ (ಮೋಹಕ. ೯೨-೩೬).

[ಮೆಟ್ಟು₁ + — ಇಸು₃]

**ಮೆಟ್ಟು₁** (ಕ್ರಿ). ೧. ಹೆಜ್ಜೆ ಇಡು ; ನಡೆ : "ಮೆಟ್ಟು—ಪದವಿನ್ಯಾಸೇ, ಪಾದರಕ್ಷೇ ಚ" (ಶಮಂದ); ದೇವಾಂಗದ ಸಕಳವಟ್ಟೆಗಳುಮಂ ಮೆಟ್ಟುವೆಡೆಗಳೊಳೆಲ್ಲ ಪಾಸಿ (ಅಂಪು. ೯-೩೯ ಪ); ನಿಮ್ಮ ಶರಣರು ಮೆಟ್ಟಿದ ಧರೆ ಪಾವನವಯ್ಯಾ (ಬಸವಾದೇ. ಬಿ. ೦೦೨-೨೫೭); ಅಗಿದು ಮೆಟ್ಟಿದಡವನಿ ಪಡುವಲು ನೆಗೆದುದಡರಿದು ಮುಂದೆ ಮೆಟ್ಟಲು ಚಿಗಿದುದಿಳೆ ಮೂಡಲು ಮಹಾಗಜವೈದಿ ತಾಹವವ (ಕುಮಾವ್ಯಾಸ. ೩-೯). ೨. ಕಾಲಿನಿಂದ ತುಳಿ; ಪಾದದಿಂದ ಒತ್ತು —ಅದುಮು : ಬಳಿಯ ಪೇಱಿನಾನೆ ಮೆಟ್ಟಿದಂತೆ ನುರ್ಚುನೂಱಪ್ಪಿನಮುಪುಂಕಿ (ಹಂಸಕಾ. ೮-೭೬ ಪ); ಬಲಿಕುಸುಮಂಗಳೊಳ್ ನಲಿವ ಭೃಂಗಮನಂಗನೆ ನೋಯೆ ಮೆಟ್ಟುಗುಂ . . . ಪೇಟಿನೆ ನೂಪುರಂ ತಗುಳ್ದುಲಿಯೆ ಲತಾಂಗಿ ಗರ್ಭಭರದಿಂ ಸುಟಿವಳ್ ನವರತ್ನರಂಗದೊಳ್ (ಶ್ರೀಕೃಷ್ಣ. ೯-೦೯); ಸಜ್ಜನೆ ಸೀಳ್ದಿದಿಗ್ಗಜದ ಮಂಡೆಯುಮೆಟ್ಟಿ (ಮೋಹಕ. ೦೨-೦೦). ೩. ಪಾದರಕ್ಷೆಯನ್ನು ಕಾಲಿನಲ್ಲಿ ಧರಿಸಿಕೊಳ್ಳು, — ಹಾಕಿಕೊಳ್ಳು : ದುಕೂಲಾಂಬರವನುಟ್ಟು ಪೊಸವಾವುಗೆಯುಂ ಮೆಟ್ಟಿ (ಹಂಸಕಾ. ೦೨-೦೦೬ ಪ); ಪಳುಕಿನೊಳ್ಪಾವುಗೆಗಳಂ ಮೆಟ್ಟಿ (ಶಬ್ದಮ. ೨-೫೨); ವ್ಯಾಪಾರ ನಮಗಾಯಿತು . . . ಪರಮಪಾಪಿ ಕಲಿ ಎಂಬೊ ಪಾಪಾಸು ಮೆಟ್ಟಿ ದುರಾತ್ಮರಾದವರ ಎದೆ ಮೇಲೆ ನಡೆವಂಥ (ಪುರಂದ. ೨-೦೫-೦). ೪. ಕುಂದಣಿಸು; ಕೆಚ್ಚು : ಚಿನ್ನದ ಬಳೆಗಳಿಗೆ ಕೆಂಪು ಹರಳು ಮೆಟ್ಟಿದೆ (ಜೂಡಿ). ೫. ಸಸಿಯನ್ನು ಹಾಕು,— ನಾಟು:

ನಿನ್ನ ಮೆಟ್ಟಿದ ನಾಟಿಯ ಮೊನ್ನೆ ಮೇವುದ ಕಂಡೆ (ಸರ್ವಜ್ಞ. ೬-೨೦). ೬. (ಪಕ್ಷಿ, ಪ್ರಾಣಿ ಮೊದಲಾದವು) ನೆರೆ; ಸಂಭೋಗಿಸು: 'ಮೆಟ್ಟಾಡು' ಪರಾ. ೭. (ನೆಲದ ಮೇಲೆ) ಕುಟ್ಟು: ಶಕುನಿ ಮುನ್ನೆ ತನ್ನ ಮಾಡಿದ ನಾಟಿ ವಾಸಗೆಗಳನರಸಾಳಂತೆ ಕಣ್ಣ ಜಿಂದು ಮೆಟ್ಟಿ ಮುಟ್ಟಮುಜಿದಿಕ್ಕುವಾಗಳ್ (ಕಂಕಥಾ. ೬-೬೦ ವ). ೮. (ಪಿಶಾಚಿ, ದೆವ್ವ ಮೊದಲಾದುವು) ಅಮರಿಕೊಳ್ಳು; ಹಿಡಿ: ಬಹಳ ದಿನದಿಂದ ಮೆಟ್ಟಿದ್ದ ದೆವ್ವವನ್ನು ಆ ದೇವಸ್ಥಾನದಲ್ಲಿ ಬಿಡಿಸಿಬಿಟ್ಟರು (ರೂಢಿ). ೯. ಲಿಖಿತವಾಗು; ಬರೆದಿರು: ಪಟ್ಟಿ ಮಂಚ ತಿರುಪಿಟ್ಟರೆ ಫಣೆಯೊಳು ಮೆಟ್ಟಿದ ಭ್ರಮಣೆಯು ಬಿಟ್ಟೀತೇ (ಪುರಂದ. ೦-೦೩೬-೨). ೧೦. ನರ್ತನದ ಹೆಜ್ಜೆಯನ್ನು ಹಾಕು: ಅಂತೆ ಮೆಟ್ಟುವಳ್ ನೋಡಿದರೆಲ್ಲರಂ ಒಡಿದು ಮೆಟ್ಟಿದಳಿಟ್ಟಳಮಾಯ್ತು ದೇಸಿ (ಕಂಕಥಾ. ೬-೯೦); ಚತುರಿಂದಂ ಮೆಟ್ಟಿ ತೋರ್ಪಳೋ (ಅಜಿತ. ೨-೯೩); ಅಚ್ಚರಸಿ . . . ಭೂಮಿಯನ್ನು ಮೆಟ್ಟದೆ ಮೆಟ್ಟುತಿರೆ ಜತಿಗೆ (ಶಾಕ್ಟರಾ. ೩೨-೩೦). ೧೧. (ಆಲಂ) ಸೋಲಿಸು; ಮರುಳಾಗಿಸು: ಅಂತೆ ಮೆಟ್ಟುವಳ್ ನೋಡಿದವರೆಲ್ಲರಂ ಒಡಿದು ಮೆಟ್ಟಿದಳಿಟ್ಟಳವಾಯ್ತು ದೇಸಿ (ಕಂಕಥಾ. ೬-೯೦). ೧೨. ನಾಶಮಾಡು; ಧ್ವಂಸಗೊಳಿಸು: ಪೋಟ್ಟುರ ಮಿಥ್ಯಾತ್ವಪ್ರಮೂಢಸ್ಥಿರತರ ನೃಪನಾನ್ಮೆಟ್ಟಿ ಗನ್ಧೇಭಮುಯ್ದಾನ್ . . . ಚರಿತಶ್ರೀನಾಮಧೇಯಪ್ರಭು ಮುನಿಪ್ರತಗಳ್ಳೋಸ್ತು ಸೌಖ್ಯಸ್ಥನಾಯ್ದಾನ್ (ಎಕ. II, ೦೨-೩; 700).

**ಮೆಟ್ಟಿಕೊಳ್ಳು** = (ಗಾಳಿ, ಪಿಶಾಚಿ, ಗ್ರಹಚಾರ ಮೊದಲಾದುವು) ಅಮರು; ಹಿಡಿ: ಅವನಿಗೂ ಮೆಟ್ಟಿಕೊಂಡಿತು ಗ್ರಹಚಾರ (ಶಾಲಿಮ. ೩೩); ಪಣ ಕೈಗೆ ಸೇರಿತೆಂದರೆ ಕ್ರೋಧ ಲೋಭ . . . ಮೆಟ್ಟಿಕೊಳ್ಳುತ್ತದೆ (ವಚಣಾ. ೩೯೬); ಸ್ತ್ರೀಪುರುಷರಿಗೆ ಮೆಟ್ಟಿಕೊಳ್ಳುವ ಗಾಳಿಯನ್ನು ಬಿಡಿಸುತ್ತಾನೆ (ಮೋದರೆ. ೫೬). **ಮೆಟ್ಟಿಕ್ಕು** = (ಆಲಂ) ನಾಶಮಾಡು; ಹತ್ತಿಕ್ಕು: ನಾನು . . . ಶತ್ರುಗಳ ತಲೆಯನ್ನು ಮೆಟ್ಟಿಕ್ಕಿದೆ (ವಚಣಾ. ೩೦೦). **ಮೆಟ್ಟನಿಲು, ಮೆಟ್ಟನಿಲ್ಲು** = (ಆಲಂ) ಹತ್ತಿಕ್ಕು; ನಿಯಂತ್ರಿಸು: ಕಾಲಕರ್ಮವ ಮೆಟ್ಟನಿಲೆ ಭಗವಂತನೆನಿಸುವೆ (ಕುವ್ಯಾಖಾ. ೯-೮); ಬುದ್ಧಿಶಕ್ತಿಯನ್ನು ಮೆಟ್ಟನಿಲ್ಲುವ ಬೇರೊಂದು ಬಗೆಯ ಮನೋವೃತ್ತಿ ಬೇಕಾಗಬಹುದು (ಯೋಗಶ್ಲೋ. ೯೨). **ಮೆಟ್ಟಿ ಬೀಳು** = (ಆಲಂ) ಬೆಚ್ಚಿ ಬೀಳು: ನಾನು ಮೆಟ್ಟಿಬಿದ್ದೆ. ನನ್ನ ಮನಸ್ಸಿನ ಆಳವನ್ನು ತಿಳಿದುಕೊಂಡಳೇ ಅವಳು? (ದೀಕ್ಷಾ. ೨೯); ಅವನು ಮೆಟ್ಟಿ ಬಿದ್ದು ಹಣೆಹಣೆಗಟ್ಟಿಸಿಕೊಂಡನು (ಇಶ್ವರ. ೩೩೨). [ದೇ.॥ ತಮಿ. ತೆಲು. ಮೆಟ್ಟು]

**ಮೆಟ್ಟು₂** (ನಾ). ೧. ತುಳಿಯುವಿಕೆ: ತುಳಿತ: ಚಿತ್ರಮಿದು ಜಗದೊಳೆತ್ತ ಮೆಟ್ಟೆತ್ತ ಚಪ್ಪಟಿಯೆಂಬ ನಾಣ್ನುಡಿಯನಭಿನಯಿಸುವಂತಾದುದು (ಕಬಿತ. ೩೬-೬೯). ೨. ಪಾದರಕ್ಷೆ; ಚಪ್ಪಲಿ: ಕೆರ: "ಕೆರ್ಜನೊಳ್ ಮೆಟ್ಟು" (ಶಬ್ದಮಂ. ೮೯); ಮೆಟ್ಟಿನ ಹೊಣಗೆ ಕಣ್ಣಿಟ್ಟು ಸಾಧುಗಳನ್ನು ದೃಷ್ಟಿಸಿ ನೋಡಲರೆಕ್ಷಣ ಬಿಡರಮ್ಮ (ಪುರಂದ. ೨-೯೩-೯); ಚುಕ್ಕೆಗಳನು ಮೆಟ್ಟು ಮಾಡಿ ಬರುತಲಿಹಳು ತಾಯಿಯು (ಅರಳು. ೯೯೯-೦೯). ೩. ಒಂದು ಹೆಜ್ಜೆಯಷ್ಟು ಅಳತೆ: ಒಂದು ಪಾದದ ಪ್ರಮಾಣ: ಅಲ್ಲಿ ಬೆಳೆ ನೆಲನೊಂದು ಮೆಟ್ಟಿನೆಡೆಯುಂ ಬಿಡಲಿಲ್ಲದನೇಕಧಾನ್ಯಸಂಕುಳಬಹುವರ್ಣಪೂರ್ಣಕಣಿಶಾವಳಿಯುಂ ನವರತ್ನರಾಶಿಯುಂ ಬೆಳೆದಪ್ಪೊಲಿರ್ಪುದು (ಅನಂತ. ೦-೬೬); ಧರಣಿಯೊಳು ನಿನಗೊಂದು ಮೆಟ್ಟು ಬಾರದು ಸಾರು (ತುರಂಗ. ೬೨-೦೩); ಇದು ಮೂವತ್ತೆರಡುಮೆಟ್ಟಿನಲ್ಲಿ ಅಳೆದು ಬಂದ ಕಂಭವಕ್ಕುಂ (ಕ್ಷೇತ್ರಗ. ೩೩-೦೬;) ಮೆಟ್ಟು ಮಿಸುಕದು ಕಡವಿನಲ್ಲಿ ನನ್ನನಿಲ್ಲಿಗೆ ನಸುಕಿನಲ್ಲಿ ತಂದು ಮುಟ್ಟಿಸಿದಂಬಿ ಎಲ್ಲಿ? (ಗೀತಾ. ೫೯-೦೬). ೪. ನರ್ತನದಲ್ಲಿ ಇಡುವ ಹೆಜ್ಜೆ: ಪಾದವಿಕ್ಷೇಪ: ಲಸನ್ನೇತ್ರಂಗಳಂ ಕೂಡೆ ಬಿಂಬಿಸುತುಂ ಮೆಟ್ಟುವ ಮೆಟ್ಟಿನೊಳ್ಪು ಜನತಾನೇತ್ರಂಗಳಂ ನಾಡೆ ಚಿಲ್ವಿಸೆವತ್ತು . . . ದೇವಾಂಗನಾನರ್ತನಂ (ಆದಿಪು. ೬-೦೨೩). ೫. ಪಾವಟಿಗೆ; ಮೆಟ್ಟಿಲು; ಸೋಪಾನ: ಮೋಕ್ಷನಿಶ್ರೇಣಿಗಿವು ಮೆಟ್ಟಿ ನಿಸಿರ್ಪಪ್ಪತ್ತೆಂಟು ಮೂಲಗುಣಂಗಳುಮಂ (ರಮಾರ್ಣಮ್ನ. ೦-೦೬೬); ಒಡಹುಟ್ಟಿದವರೀ ದೇಹವನೊಯ್ದು ಸುಡುಗಾಡೊಳಿಟ್ಟು ಬರುವರ ಮಡದಿ ಮನೆಯ ಮೆಟ್ಟಿಳಿಯುಳು (ನಾಗಳು. ೩೨-೮೬); ಇದ್ದಾಗ ದಾನ ಧರ್ಮಂಗಳ ಮಾಡೋದು ಕೈವಲ್ಯಕೆ ಮೆಟ್ಟು (ಪಿರಾಕ್ಯ. ೮-೨). ೬. ಸ್ಥಳ; ಜಾಗ: ಆ ಗಾಯದ ಮೆಟ್ಟಿಗೆ ನನ್ನ ಉಟ್ಟ ದುಕೂಲ ಹರಿದು ತೊಯಿಸಿ ಕಟ್ಟಿದೆನು (ಶತಕ. ೦೯೦). 'ಗಂಡುಮೆಟ್ಟು' ಪರಾ. ೭. ಜಾಡು: ಹಾದಿ; ದಾರಿ: ಅನುಭವಿಸುವವರಿಗೇ ಅದರ ಮೆಟ್ಟು ಗೊತ್ತು (ಮೇದಿಮ. ೩೯); 'ನೀನಲ್ಲದೆನಗಿಲ್ಲ' ಎನ್ನುವವರ ಮೆಟ್ಟು ಬೇರೆ (ಶಾಹಿದ. ೦೩೮). ೮. ಕಾಲಿನ ಬೆರಳಿಗೆ ತೊಡುವ ಆಭರಣ; ಕಾಲುಂಗುರ (೯). 'ಮೆಂಟಿಕೆ' ಪರಾ. ೯. "ರಾಶಿಯನ್ನು ಮಾಡುವಾಗ ಮೇದವನ್ನು ತೂರಲು ಉಪಯೋಗಿಸುವ ಎತ್ತರವಾದ 'ತ್ರಿವುಟಿಗೆ' (stand)" (ಕನ್ನಜಾ. ೩೩೨ ಅಡಿಟಿ): ಮೂರು ಕಾಲಿನ ಮೆಟ್ಟು, ಮೂರು ಲಿಂಗಗಳೇನೊ ತೂರುವನು ಜೀವಿ, ಚಿತ್ಕಳಿಯು ವಚನಗಳು ತೂರಿದಾ ರಾಶಿ ಶಿವಮಂತಕ (ಕನ್ನಜಾ. ೦೩೨). ೧೦. ವೀಣೆ ಮುಂತಾದ ತಂತೀವಾದ್ಯಗಳಲ್ಲಿ ಸ್ವರಸ್ಥಾನವನ್ನು ಗುರುತಿಸಲು ಅಳವಡಿಸಿರುವ ಮನೆ, – ಹಂತ: ಎಡಗೈಯೊಳಮರಿಸಿ ವೀಣೆಯನಾಂತು ಮೇಗಡೆ ಮೆಟ್ಟನೊಳು ಬೆರಳಾಡೆ (ಛರತ. ೦೦-೩); ಮೆಟ್ಟುಗಳ ಸರೆ ತಿದ್ದಿ ವೀಣೆಯ ಮುಟ್ಟುವಳು (ದೇಶೀಮ. ೫-೬೬). ೧೧. [ನಾಟ್ಯ] ಹತ್ತುಬಗೆಯ ಅಡವುಗಳಲ್ಲಿ ಒಂದು: ಪ್ರಸಿದ್ಧ ನಾಟ್ಯಚಾರ್ಯರು ಈ ಅಡವುಗಳನ್ನು ಹತ್ತುವಿಧವಾಗಿ ವಿಂಗಡಿಸಿದ್ದಾರೆ: (೧) ತಟ್ಟು, (೨) ಮೆಟ್ಟು . . . (೧೦) ಸಪ್ಪೈ (ಅಭಿನ್ಯ. ೩೨). [< ಮೆಟ್ಟು₁./ತಮಿ. ತೆಲು. ಮೆಟ್ಟು]

**ಮೆಟ್ಟುಂಗುಟ** (ನಾ). (ಶಬ್ದವಾಗದಂತೆ ನಡೆಯಲು ಅಥವಾ ಎತ್ತರದಿಂದ ನೋಡಲು) ಉಂಗುಷ್ಟದ ಮೇಲೆ ನಿಲ್ಲುವಿಕೆ: ಮೆಟ್ಟುಂಗುಟದ ಮೆಲ್ಲಿತ್ತಾದ ಮೃದುಳಯಾನದಿಂದ ಬಂದು, ಅರೆನೋಟದಿಂದ ರಣಧೀರನನ್ನು ಕಂಡು, ಜವನಿಕೆಯ ಹಿಂದಣ್ಗೆ ತೇಲ್ದು ಹೋಗಿ, ಹುದುಗಿ ನಿಲ್ಲುವಳು (ಮಂತ್ರಶ. ೦೦೦-೬). [ಮೆಟ್ಟು₁ + ಉಂಗುಟ]

**ಮೆಟ್ಟುಂಗುಡ್ಡೆ** (ನಾ). ಒಂದು ಸ್ಥಳದ ಹೆಸರು: ಸೂಗಿಲ್ಲವಳ್ಳವೆ ಗುಡ್ಡೆ [ಬಡ]ಗಣ[ದು]ಡ್ಡೆ ಮೆಟ್ಟುಂ[ಗು]ಡ್ಡೆ [ಮೊಳ್ಗೆ]ಜೆಗುಡ್ಡೆ (ಶಾಸನ. XI–i, ೯-೩೬; 802). [ಮೆಟ್ಟು? + ಗುಡ್ಡೆ₁ (< ಗುಡ್ಡ₂)]

**ಮೆಟ್ಟುಕತ್ತಿ** 'ಮೆಟ್ಟುಗತ್ತಿ' ನೋ.

**ಮೆಟ್ಟುಕಲ್ಲು** 'ಮೆಟ್ಟುಗಲ್ಲು' ನೋ.

**ಮೆಟ್ಟುಗಟ್ಟೆ** (ನಾ). ಮೆಟ್ಟಲುಗಳ ಕಟ್ಟೆ; ಸೋಪಾನಕಟ್ಟೆ: ಈ ಉಪ್ಪರಿಗೆಗಳಲ್ಲಿ ಹೋಗಲಿಕ್ಕೆ . . . ಸುತ್ತಿರುಗುವ ಮೆಟ್ಟುಗಟ್ಟೆಗಳಿವೆ (ಮುಂಬಯಿ. ೬-೦೦೬); ತಿರುಗಿ ದೇವಾಲಯದ ಕಡೆಗೆ ಹೊರಟು ಬಂದು ಮೆಟ್ಟುಗಟ್ಟೆಯ ಮೇಲೆ ನಿಂತು . . . ಪ್ರಾರ್ಥನೆಗೆ ಸುರುವು ಮಾಡಿದನು (ಮೂಬಾಪಾ. ೩೮). [ಮೆಟ್ಟು₂ + ಕಟ್ಟೆ₁]

**ಮೆಟ್ಟುಗತ್ತಿ, ಮೆಟ್ಟುಕತ್ತಿ** (ನಾ). ಮೆಟ್ಟಿಕೊಂಡು ಕುಳಿತು (ತರಕಾರಿ ಮೊದಲಾದುವನ್ನು) ಕತ್ತರಿಸುವಂತೆ ಮಣೆಗೆ ಅಳವಡಿಸಿರುವ ಕತ್ತಿ, – ಈಳಿಗೆ: ಸಾಕಿಷ್ಟು ಸುಲಿದುದು ಬಿಡು ಮೆಟ್ಟುಗತ್ತಿಯ (ಕಂದ್ರಶೀ. ೦೨೬-೯); ಅಂಗಳದಲ್ಲಿ ಮೆಟ್ಟುಗತ್ತಿಯ ಮೇಲೆ ಕುಳಿತು ಒಂದೊಂದಾಗಿ ಅಡಿಕೆಗಳನ್ನು ಚುಚ್ಚಿ ಸುಲಿಯತೊಡಗಿದರು (ಕಬ್ಬಿಣ. ೦೨೦). **ಮೆಟ್ಟುಕತ್ತಿ**: ಎಳಚಿತ್ತಾಯರು ಮೆಟ್ಟುಕತ್ತಿಯ ಮೇಲೆ ಕುಳಿತಿದ್ದರು (ಜಗುಳ. ೮೩); ಮೆಟ್ಟುಕತ್ತಿಯೊಂದನ್ನು ತಂದು ಅರ್ಧಹಣ್ಣಾದ ಪೇರ್ಲೆಹಣ್ಣನ್ನು ಹೆಚ್ಚಿ (ಬಾಳ್ವೆ. ೦೬೩). [ಮೆಟ್ಟು₁ + ಕತ್ತಿ]

**ಮೆಟ್ಟುಗಲ್ಲು**, ಮೆಟ್ಟುಕಲ್ಲು (ನಾ). ೧. ಮೆಟ್ಟಲು ; ಸೋಪಾನ : ಕುಟ್ಟಿ ಮುಱಿವುತ ನಿಮ್ಮ ಜಿನನ ರೂಪೆಲ್ಲಮಂ ಮೆಟ್ಟುಗಲ್ಗಳ ಮಾಡನೇ (ಜೀಶ್ಮೃ. ೪-೬-೫) ; ಒಲಿದ ಹೃದಯವೇ ಆಗ ಮಾಡುವುದು ಅದನು ಮೆಟ್ಟುಗಲ್ಲು ! (ಪಥಿಕಂ. ೪೬-೦೭) ; ಎಂದೂ ಇಲ್ಲದೆ ಇಂದು ನೀವು ನಮ್ಮ ಮನೆಯ ಮೆಟ್ಟುಗಲ್ಲನ್ನು ಹತ್ತಿರುವುದೇ ಸಾಕ್ಷಿ (ತುಂಗಭ. ೦೦೯). ೨. "ಹೊಳೆ, ಕೆಸರು, ಮೊ.ನ್ನು ಕಾಲು ಒದ್ದೆಯಾಗದಂತೆ ದಾಟುವುದಕ್ಕಾಗಿ ಹಾಕಿರುವ ಕಲ್ಲು" (stepping-stone. ಇಂಕ.). **ಮೆಟ್ಟುಕಲ್ಲು** : ೧. ಒಮ್ಮೆ ರಾಮರಾಯರು ಹೊಲಗಳೆಡೆಗೆ ಸಾಗಿ ಬಂದು ಮನೆಯ ಮೆಟ್ಟುಕಲ್ಲಿಗೆ ಕಾಲಿರಿಸಿದ್ದರಷ್ಟೆ (ಕುರುಕಾ. ೩೭).

[ಮೆಟ್ಟು$_1$ + ಕಲ್ಲು (<ಕಲ್$_3$)]

**ಮೆಟ್ಟುಗಾಲು**, ಮೆಟ್ಟಿಂಗಾಲು (ನಾ). ಉಂಗುಷ್ಟದ ಮೇಲೆ ನಿಂತ ಕಾಲು. **ಮೆಟ್ಟಿಂಗಾಲು** : ಮೆಟ್ಟಿಂಗಾಲ ಮೇಲೆ ನಿಂತು ನೋಡುತ್ತ (ನಡವಾ. I, ೩೯೩) ; ಅದು ಮೆಟ್ಟಿಂಗಾಲು ಇಟ್ಟುಕೊಂಡು ಸಾಧ್ಯವಾದಷ್ಟು ಮಟ್ಟಿಗೆ ನೆಟ್ಟಗೆ ನಿಲ್ಲುತ್ತದೆ (ಪಿಶಂಥ. II, ೦೦೦).

**ಮೆಟ್ಟುಗಾಲಿನಲಿ ನಿಲ್ಲು. ಮೆಟ್ಟುಗಾಲಲ್ಲಿ ನಿಲ್ಲು** = (ಆಲಂ) ತುದಿಗಾಲಲ್ಲಿ ನಿಲ್ಲು ; ಆತುರಪಡು ; ತವಕಿಸು : ಇವರು ಮಾಡುವ ಭಕ್ತಿ ಮೆಟ್ಟುಗಾಲಿನಲಿ ನಿಂದು ತುತ್ತ ನುಂಗಿದಂತೆ (ಮೋಳವಚ. ೯೬-೦೯೭) ; ಕೆಲವರು ಮೆಟ್ಟುಗಾಲಲ್ಲಿ ನಿಂತರು (ಪುಪರು. ೦೬೪). [ಮೆಟ್ಟು$_1$ + ಕಾಲು$_1$ (<ಕಾಲ್$_1$)]

**ಮೆಟ್ಟುಗೆ**, ಮೆಟ್ಟಿಗೆ (ನಾ). ೧. ಮೆಟ್ಟಲು ; ಸೋಪಾನ : 'ಮೆಟ್ಟುಗೆಗೆಯ್' ಪರಾ. **ಮೆಟ್ಟಿಗೆ** : ೧. ಒಂದು ಮೆಟ್ಟಿಗೆಯೊಳಲ್ಲಿ ಮಾಡಿಸಿ (ನವಮೋ. ೬-೩೭) ; ಅಟ್ಟಳೆಗಟ್ಟಿಸಿದನು ಸ್ವರ್ಗಕಡರುವ ಮೆಟ್ಟಿಗೆಯೆನೆ ಶೋಭಿವೆತ್ತು (ಗೊಮ್ಮಚ. ೭-೨೨೩). ೨. ಹಂತ ; ಘಟ್ಟ ; ಮಜಲು : ಭಾರತದ ಪಾರಾಯಣ . . . ಯೋಗ್ಯ ಮೆಟ್ಟಿಗೆಗೆ ಬಂದಿದ (ಮುಕ್ತಿ. ೨೭). ೩. ಬೀಡು : ನಾನು ನನ್ನ ಮೆಟ್ಟಿಗೆಯನ್ನು ಬನವನ್ನು ಬಿಟ್ಟು ದೂರದಲ್ಲಿ ಬಯಲೊಳಗೆ ಮಾಡಿದ್ದೇನೆ (ಕಾಳರಾ. ೦೦೦).

[ಮೆಟ್ಟು$_1$ + – ಗೆ]

**ಮೆಟ್ಟುಗೆಗೆಯ್** (ಕ್ರಿ). ಮೆಟ್ಟಲನ್ನು ಮಾಡು ; ಸೋಪಾನವನ್ನು ನಿರ್ಮಿಸು : ಪೇರಟ್ಟಗಳನೆ ಮೆಟ್ಟುಗೆಗೆಯ್ದು . . . ದಿಟ್ಟರಡರ್ದರ್ (ಶಳಪ. ೨-೦೦೯). [ಮೆಟ್ಟುಗೆ + ಕೆಯ್$_1$]

**ಮೆಟ್ಟುಗೆಯ್** (ಕ್ರಿ). = ಮೆಟ್ಟುಗೆಗೆಯ್ : ಪಡಲ್ವಟ್ಟಟ್ಟಗಳು ಮೆಟ್ಟುಗೆಯ್ದು (ಶಳಪಂ. ೯೭-೩). [ಮೆಟ್ಟು$_2$ + ಕೆಯ್$_1$]

**ಮೆಟ್ಟುಹುರುಳಿ** (ನಾ). ಒಂದು ಬಗೆಯ ಔಷಧೀಸಸ್ಯ : ಹುಣ್ಣು ಕೆಂಪುಹುಟ್ಟಿದಾಗ ಮೆಟ್ಟುಹುರುಳಿಯ ಹಾಲ ತೊಡೆಯಲು ಮೂಱು ದಿನದಲ್ಲಿ ಮಾಣ್ಗುಂ (ಐವೈಪ. ೭೭). [ಮೆಟ್ಟು$_?$ + ಹುರುಳಿ (<ಪುರುಳ್ಳಿ)]

**ಮೆಟ್ರಿ** ' ಮೆಟರು ' ನೋ.

**ಮೆಟ್ರಿಕಟ್ಟು** ' ಮೆಟರುಗಟ್ಟು ' ನೋ.

**ಮೆಟ್ರಿಗಟ್ಟು** ' ಮೆಟರುಗಟ್ಟು ' ನೋ.

**ಮೆಟ್ಲು** ' ಮೆಟ್ಟಲು ' ನೋ.

**ಮೆಡ** (ನಾ). ಕುತ್ತಿಗೆ : ಕತ್ತು : ' ಮೆಡಶಿರ ' ಪರಾ.

**ಮೆಡಮೆಟ್ಟಿಯನ್ನು ಹತ್ತು** = (ಆಲಂ) ಸವಾರಿಮಾಡು : ಅಧಿಕಾರವನ್ನು ಚಲಾಯಿಸು (?) : ಅವರ ದೂರುಗಳನ್ನು ಕೇಳದೆ ಅವರ ಸಂಗಡ ಮಾತನಾಡದರೆ ತಮ್ಮ ಗೌರವ ಭಂಗವಾಯಿತೆಂದು ಮೆಡಮೆಟ್ಟಿಯನ್ನು ಹತ್ತುತ್ತಾ, ಸುಮ್ಮನಿದ್ದರೆ ಅವರ ದೂರೇ ಏನೂ ಇಲ್ಲವೆನ್ನುತ್ತಾ . . . ಮಾಡುವ ಕೆಲಸವೆಲ್ಲಾ ದೊರೆಯ ಅಪ್ಪಣೆಯಂತೆ ಮಾಡಿದವೆನ್ನುತಾರೆ (ಮಾಮುರಾ. ೩೦). [← ತೆಲು. ಮೆಡ]

**ಮೆಡರು** ' ಮೆಟರು ' ನೋ.

**ಮೆಡರುಗಟ್ಟು** ' ಮೆಟರುಗಟ್ಟು ' ನೋ.

**ಮೆಡಲು**, ಮೆಡ್ಲು (ನಾ). ಪ್ರಶಸ್ತಿಪದಕ : ಯಾರು ಕೊಟ್ಟರೋ ಬಾನಿಗೊಂದು ಬಂಗಾರದ ಮೆಡಲು (ಭಾವಗೀ. ೩೦೮); ಎಷ್ಟು ಬಂಗಾರದ ಮೆಡಲುಗಳು ಬಂದಿತ್ತು (ರಾಧುಳ. ೭೫); ಅನೇಕ ಮೆಡಲುಗಳನ್ನು ಪಡೆದು ಎಂ. ಎಸ್‌ಸಿ. ಪಾಸುಮಾಡಿದ (ಭಾರತಿ. ೦). **ಮೆಡ್ಲು** : ಅವನ ಕಲೆಗೆ ಮೆಚ್ಚಿ ಮೆಡ್ಲು ಕೊಟ್ಟರು (ಜೀದಾನ. ೩೪). [← ಇಂ. Medal]

**ಮೆಡಶಿರ** (ನಾ). ತಲೆಯ ಕೆಳಭಾಗ ; ಕುತ್ತಿಗೆಯ ಹಿಂಭಾಗ ; ಹೆಕ್ಕತ್ತು : ಆವಾಗಿನಿಂದ ರಂಗಪ್ಪನಿಗೆ ಮೆಡಶಿರದ ನೋವು ಬರ್ತಾ ಇದೆ (ಮನೋಽಸಂ. ೧೪೩). [ಮೆಡ + ಶಿರ$_2$]

**ಮೆಡಸಿ** (ನಾ). ಒಂದು ಬಗೆಯ ಸಸ್ಯ : "ಮೆಡಸಿಯೆನಲ್ ಕುಱಿಯ ಮರನಕ್ಕು" (ಮಂಗರಾ. ೩೭-೦೭). [ ? ]

**ಮೆಡಱು** (ಕ್ರಿ). ಹೆಣೆ ; ಕಟ್ಟು : ದೆಸೆಯೆಲ್ಲಂ ತೀವ್ರಬಾಣಾಳಿಯೊಳೆ ಮೆಡಱಿದಂತಂಬರಂ ಬಾಣದಿಂದಂ ಮುಸುಕಟ್ಟುಂತಾಗೆ (ಶಂಕಥಾ. ೦೨-೨೦); ಅತ್ತ ನಿರಂಕುಶಂ ಮೆಡಱಿದಾಳಣೆಯಂ ಮುಱಿದಂಗಜನ್ಮನುನ್ಮತ್ತ ಮತಂಗಜಂಬೊಲೆಸೆದು (ಅರ್ಜಾನ. ೫-೫೫). 'ತಟ್ಟಿಮೆಡಱು' ಪರಾ.

[ದೇ.II ತಮಿ. ಮಿಟೈ, ಮುಟೈ ; ಮಲ. ಮಿಡಯು ; ತುಳು. ಮುಡೆ]

**ಮೆಡ್ಡ** ' ಮೆಳ್ಳೆ ' ನೋ.

**ಮೆಡ್ಡಗಣ್ಣ** ' ಮೆಳ್ಳೆಗಣ್ಣ ' ನೋ.

**ಮೆಡ್ಡಗಣ್ಣು** ' ಮೆಳ್ಳೆಗಣ್ ' ನೋ.

**ಮೆಡ್ಡರಿಸು** (ಕ್ರಿ). ಕಣ್ಣಿನ ಚಲನೆಯು ನಿಂತು ಬಿರುಗಣ್ಣಾಗು: ಇವು ಬೇಟೆಗಳನ್ನು ಎಷ್ಟು ಬಿಗಿಯಾಗಿ ಹಿಡಿಯುತ್ತವೆಂದರೆ ಇವುಗಳ ಮೂಗಿನ ಹೊಳ್ಳೆಗಳಿಗೆ ನೀರನ್ನು ಸುರಿದ ಹೊರತು ಹಿಡಿದ ಬೇಟೆಯನ್ನು ಬಿಡುವುದಿಲ್ಲ. ಕಣ್ಣುಗಳು ಮೆಡ್ಡರಿಸಿಕೊಳ್ಳುವವರೆಗೂ ರೋಷಾವೇಶದಿಂದ ಹಿಡಿಯುತ್ತವೆ (ಶ್ರವಾಇ. I, ೨೭). ' ಮೆಳ್ಳಿಸು ' ಪರಾ. [ ? + — ಇಸು$_3$]

**ಮೆಡ್ಡೆ** ' ಮಡ್ಡಿ$_1$ ' ನೋ.

**ಮೆಡ್ಲು** ' ಮೆಡಲು ' ನೋ.

**ಮೆಣಸಿಕೆ** ' ಮೆಳಸಿಗೆ ' ನೋ.

**ಮೆಣಸಿಗ** (ನಾ). ಮೆಣಸಿನ ವ್ಯಾಪಾರವನ್ನು ಮಾಡುವವನು : ತಂಬುಲಪಂ ಕೊಳ್ವಂ ಮಾಱುವಂ ಪೋೞ್ ತಂಬುಲಿಗಂ. ಏವಂ ದವಸಿಗಂ, ಗಂದಿಗಂ, ಮೆಣಸಿಗಂ, ಪಿಪ್ಪಲಿಗಂ (ಶಬ್ದಾಮ. ೯೦೯ ಪ್ರಯೋ).

[ಮೆಣಸು (<ಮೆಱಿಸು) + — ಇಗ]

**ಮೆಣಸಿಗೆ** ' ಮೆಳಸಿಗೆ ' ನೋ.

**ಮೆಣಸಿನಕಾಯಿ** (ನಾ). ಅಡುಗೆಯಲ್ಲಿ ಕಾರಕ್ಕಾಗಿ ಬಳಸುವ ಒಂದು ಬಗೆಯ ತರಕಾರಿ : ವಹವ್ವಾರೆ ಮೆಣಸಿನ ಕಾಯಿ ಒಣರೊಟ್ಟಿಗೆ ತಾದೆನೊತಾಯಿ (ಪುರಂದ. ೫-೭೫ ಪಲ್ಲವಿ); ಮೆಣಸಿನಕಾಯಿ . . . ಇದು ಮೈಸೂರು ರಾಜ್ಯದ ಕೆಲವುಭಾಗಗಳಲ್ಲಿ ಮತ್ತು ಮುಂಬಯಿರಾಜ್ಯದ ಕೆಲವುಭಾಗಗಳಲ್ಲಿ ಮುಖ್ಯವಾಗಿ ಬೆಳೆಯುತ್ತದೆ (ಸಸ್ಯಶಾ. ೦೩೪) 'ದೊಡ್ಡಮೆಣಸಿನಕಾಯಿ', ' ದೊಣ್ಣೆಮೆಣಸಿನಕಾಯಿ ' ಪರಾ.

[ಮೆಣಸು (< ಮೆಱಿಸು) + ಕಾಯಿ$_4$ (< ಕಾಯ್$_4$)]

**ಮೆಣಸು** ' ಮೆಱಿಸು ' ನೋ.

**ಮೆತು** ' ಮಿದು ' ನೋ.

**ಮೆತುಮನುಷ್ಯ** (ನಾ). ಮೃದುಸ್ವಭಾವದ ಮನುಷ್ಯ ; ಕೋಮಲವಾದ ಮನಸ್ಸಿನವನು : ಮೆತುಮನುಷ್ಯರನ್ನು ಕಂಡರೆ ಎಲ್ಲರೂ ಸವಾರಿ ಮಾಡುತ್ತಾರೆ (ಮಹಾಗ. ೬೭). [ಮೆತು (< ಮಿದು) + ಮನುಷ್ಯ]

**ಮೆತ್ತಗೆ** (ಅ). ೧. ಮೃದುವಾಗಿ ; ಕೋಮಲವಾಗಿ : ನೆಲ ಮೆತ್ತಗೆ ಅಂತ ಗುದ್ದೋ ಜನ ಇದು (ಕಪ್ಪುಲಿ. ೩೭); ಸೆಣೆದ ಕಲ್ಲು ಮೆತ್ತಗೆ ಆದೀತೆ ?

(ಗಾದೆ). ೨. ನಿಶ್ಶಕ್ತವಾಗುವಂತೆ ; ದುರ್ಬಲಗೊಳ್ಳುವಂತೆ : ವಿರುದ್ಧ ಪಕ್ಷದವರನ್ನು ಮೆತ್ತಗೆ ಮಾಡುವ ಮಸಲತ್ತು (ಮುಕಿಹ. ೨೦). ೩. ಮೆಲ್ಲಗೆ ; ನಿಧಾನವಾಗಿ: ಅವನು ಮೆತ್ತಗೆ ನಡೆದುಕೊಂಡು ಬರುತ್ತಾ ಇದ್ದಾನೆ(ರೂಢಿ).

**ಮೆತ್ತಗಾಗು** = ೧. ಮೃದುವಾಗು ; ಕಾಠಿಣ್ಯವನ್ನು ಕಳೆದುಕೊಳ್ಳು : ನೆಲ್ಲಿಕಾಯಿ ಮೆತ್ತಗಾದಾಗ . . . ಮೆಣಸಿನ ಹುಡಿಯನ್ನು ಸೇರಿಸುವುದು (ಅಡುಗೆ. ೦೦೭); ಆ ರಾಜಕುರು ಮೆತ್ತಗಾಯಿತು (ಮುಡಿಸ. ೦೯). ೨. ನಿಶ್ಶಕ್ತವಾಗು ; ದೌರ್ಬಲವಾಗು : ಹೆಚ್ಚೆಚ್ಚು ತೆರಿಗೆಗಳನ್ನು ಈಗಾಗಲೆ ತೆತ್ತು ಪೂರ್ತಿ ಮೆತ್ತಗಾಗಿದ್ದಾರೆ (ಹುತ್ತುಹು. ೬೭).
[< ಮೆತು + – ಅಗ್ಗೆ$_3$]

**ಮೆತ್ತನ** 'ಮೆತ್ತನೆಯ' ನೋ.

**ಮೆತ್ತನೆ** (ಅ). ೧. =ಮೆತ್ತಗೆ ೧ : ಮೆತ್ತನಪ್ಪಂತು ಪಾಕಂ ಮಾಡಿಯೋದನ ಕ್ಕುತ್ತಮದ ಬೆಣ್ಣೆಯಂ ಹುಸಿಯಡಕೆಯನಿತಿಕ್ಕಿ . . . ಬಳಿಕ ಗಂಜಿಯ ಬಸಿಯಲದುವೆ ನವನೀತೋದನಂ (ಸೂಶಾ. ೩-೩). ೨. = ಮೆತ್ತಗೆ ೩: ಮೆಲ್ಲನೆ ಮೆತ್ತನೆ ನಡತರುತಲ್ಲಲ್ಲಿ ಕುನುಂಗಿ ಕುಗ್ಗಿ (ಗಿಂಶ. ೭-೦೩).

**ಮೆತ್ತಮೆತ್ತನೆ** (ದ್ವಿರುಕ್ತಿ) : ಕತ್ತುರಿ ಸಾರಣೆ ಪೂವಲಿ ನೆಲನೊಳು ಮೆತ್ತಮೆತ್ತನೆ ಬರುತಿರ್ದ (ಚಿಕ. ೯೭-೩೬). [< ಮೆತು + – ಅನೆ$_1$]

**ಮೆತ್ತನೆಯ, ಮೆತ್ತನ, ಮೆತ್ತನ್ನ** (ಗು). ಮೃದುವಾದ ; ಕೋಮಲವಾದ : ಮೆತ್ತನೆಯ ಗಾದಿ ವಗೈರೆ ಇರಲಿಲ್ಲ (ಕಂಬಹು. ೦); ಮೆತ್ತನೆಯ ಒರಗುದಿಂಬುಗಳು ಬೇಕು (ಸಾಹಿತಿ. ೧೦): ಮೆತ್ತನೆಯ ಹಾಸಿನೊಳು ಮಲಗಿಸಿದರೊಡನೆ (ಕಾದಂಬ. ೦೦೩-೨೦೯). **ಮೆತ್ತನ** : ಅತ್ತಿತ್ತ ಅಲೆದಾಡಿ ಮೈಯೆಲ್ಲ ಧೂಳಾಗಿ ಮೆತ್ತನ ಮನಕೆ ಗಾಯಾಗಿ (ಸಿದ್ಧ. ೩-೪). **ಮೆತ್ತನ್ನ**: ಮೈಮೇಲೆಲ್ಲ ಮೆತ್ತನ್ನ ಉಣ್ಣೆ ಇರುತ್ತದೆ (ಮುಂಬಹು. ೪-೨೦೬).
[< ಮೆತು + – ಅನೆಯ$_2$]

**ಮೆತ್ತನ್ನ** 'ಮೆತ್ತನೆಯ' ನೋ.

**ಮೆತ್ತಿಗೆ** (ನಾ). ೧. ಹಚ್ಚುವಿಕೆ ; ಬಳಿಯುವಿಕೆ ; ಲೇಪಿಸುವಿಕೆ : ಉರಿಕೊಂಡ ಕರ್ಪೂರಕ್ಕೆ ರೂಪಿಂಗೆಡೆ ಇಲ್ಲ ಬಯಲ ಬಡಿವಡವಂಗೆ ಕೈಗೆ ಮೆತ್ತಿಗಿಲ್ಲ (ಪೋತಿಶು. ೨೦-೭೯೬). ೨. ಅಂಟಿಕೊಂಡಿರುವುದು ; ಮೆತ್ತಿಕೊಂಡಿರುವುದು : ಕರುಳಿನ ಕುಸುರಿಗಳ ತಲೆಮಿದುಳ ಮೆತ್ತಿಗೆವಸೆಯ ತೊರಳೆಯ ತೊಗಲಲಿ ರಂಜಿಸಿತು ರಣಭೂಮಿ (ಕುವ್ಯಾ. ೦೯-೨೦). ೩. ಮೆತ್ತುವ ಸಾಧನ ; ಅಂಟುಲೇಪ : ನಯಗಾರೆ ; ಮೆತ್ತಿಗೆ ; ಅಂಟುಪುಡಿ ; ಅಂಟುಲೇಪ (Compo. ೩೦೪೩). [ಮೆತ್ತು + – ಇಗ್ಗೆ]

**ಮೆತ್ತಿಸು** (ಕ್ರಿ). ಮಣ್ಣು, ಗಾರೆ ಮೊದಲಾದುವನ್ನು ಲೇಪಿಸು : ಈ ವಾರಾಹನಿಗೆ ಆ ಕಟಿಗೆ ಮೆತ್ತಿಸಿ ಧರ್ಮ್ಮದ ಉದಕವನೂ ಇರಿಸಿಸಿ . . . ಆ ಧರ್ಮ್ಮವ ಆಚಂದ್ರಾರ್ಕ್ಕವಾಗಿ ನಡಸುವರು (ಎಕ. IX-ii, ೯೭೬-೩೦; 1506). [ಮೆತ್ತು + – ಇಸು$_3$]

**ಮೆತ್ತು** (ಕ್ರಿ). ೧. (ದಟ್ಟವಾಗಿ) ಬಳಿ ; ಲೇಪಿಸು ; ತೊಡೆ ; ಹಚ್ಚು : ಮೃದುವತ್ತುಷ್ಣಮೆನಿಪ್ಪ ಮಂಡಗೆಯಂ . . . ನಾಳಿಕೇರದ ತೋಯಂ ಸಿತಮಂಬಿವಂ ಕಲಸಿ ಮಣ್ಣೊಳ್ ಭಾಂಡಮಂ ಮೆತ್ತಿ ಸುತ್ತಿದ ಕಿರ್ಚಿಂ ಸುಡೆ (ಲೋಕೋಪ. ೬-೭); ಬಿತ್ತದ ಹೊಲ ಹೊಲ್ಲ ಮೆತ್ತದ ಮನೆ ಹೊಲ್ಲ (ಸರ್ವಜ್ಞ. ೦೦೬೦). ೨. ತುರುಕು ; ಗಿಡಿ ; ಒತ್ತು : ಅದಿರ್ದಾನಕರವದಿಂದೊಡೆದ ದಿಶಾಭಿತ್ತಿಗಳನಮರೆ ಮೆತ್ತಲ್ಕುಯ್ವಂದದಿನನುಕೂಳಾನಿಳಮುಯ್ದುದು ಮದಜಳದೊಡನೆ ಬೆರಸಿ ತದ್ಬಳರಜಮಂ (ಪರ್ವ. ೬-೦೭); ಆ ವಾಟಿಯೊಳಗೆಯುಪ್ಪಿನ ಹುಡಿಯ ತಡಹಿಕೊಂಡು ಗೊಂದಣಾದ ಸಂಭಾರಮಂ ಮೆತ್ತಿ (ಸೂಶಾ. ೪-೭೪); ಇಲೀ ಒಳಗೆ ಬಿಟ್ಟು ಬಿಲಕ್ಕೆ ಮಣ್ಣು ಮೆತ್ತಿದ (ಗಾದೆ). ೩. ಅಂಟಿಕೊಳ್ಳು ; ಹತ್ತಿಕೊಳ್ಳು ; ಕೂಡು : ನೆತ್ತರ ಧಾರೆಯಿಂ ಮೆತ್ತಿದ ಕಣ್ಗಳನೊತ್ತಂಬದಿಂ ತೆರೆದು (ಶಂಶಪು. ೦೩-೦೦೪ ವ); ಪಿರಿದಪ್ಪ ಪುತ್ತಿನೊಳೊತ್ತಿ ಪೋರ್ದ ಮೆತ್ತಿದ ಕರ್ದಮಂ ನಿಟಿಲತಟದೊಳ್ ಪತ್ತಿರ್ದ ಧೂಳಿ ಮೆಯ್ಯೊಳೆ ಮೆಚಿರ್ಯೆ . . . ಕಾಳರಕ್ಕಸರಂತಿರ್ದ ಕಾಳ್ಕೋಣಂಗಳಿಂ (ಗಿಂಶ. ೦-೦೨೬ ವ). ೪. ರಚಿಸು : ನಿರ್ಮಿಸು : ಇನ್ನವಂ ಬಿಲ್ಲೋಜನಾ ಮಣ್ಣ ಗೊಂಬೆಯಂ ಮೆತ್ತದಿರನದರ ಮುನ್ನಿಂದು ಬಿಲುವಿದ್ಯೆಯನ್ನಭ್ಯಾಸ ಮಾಡದಿರನಿಳೆಯೊಳಗೆ ಪಿರಿಯ ಬಿಲ್ಗಾರ ತಾನಾಗದಿರನೀ ಬಾಲ ! (ಹಿಸ್ರ. ೦೩-೦೨೦). ೫. (ಆಯುಧ, ಬಾಣ ಮೊದಲಾದುವುಗಳಿಂದ) ಚುಚ್ಚು ; ನಾಟು : ದುರಿಯೋಧನನ ಮೆಯ್ಯಲಿ ಮೆತ್ತಿದನಾ ಮುಮ್ಮೊನೆಯ ಬೋಳೆಗಳ (ಕುವ್ಯಾದ್ರೋ. ೦೯-೩೦) ; ಪಲವಾಯುಧಂಗಳಿಂ ಮೆತ್ತುವರ್ ಕುತ್ತುವರ್ ಜ್ವಲಿತ ಕೋಪಾಗ್ನಿಯಿಂಧುಟುಬುವರ್ ತಜುಬುವರ್ ಗುಹನನಾ ಖಳನನುಜರು (ಶಂಕ್ಕ. ೩೯-೨೪) ; ಕಣೆಗಳಂ ಕಣೆಗಳಂ ಕತ್ತರಿಸಿ ಮೆತ್ತುವರೊಡಲೊಳಂಬಂ (ಕೃಮಿಶಾ. ೧೨-೨೭). ೬. ಕವಿ ; ಆವರಿಸು; ತುಂಬು : ಪಲವುಂ ವ್ರತತಿಗಳಪ್ಪಿದವೊಲಿಳಾಪತಿ ಮೆಯ್ಯಂ ಪುತ್ತು ಪತ್ತಿ ಮೆತ್ತಿದುವೆನಿತುಂ (ಶಾಂತಿಪು. ೯-೨೯) ; ಜ್ವರಮಾದರಂತೆ ದಾಹದಿಂ ಮೆತ್ತಿ ಕಾಯ್ದ ಕಬ್ಬಿನದಂತೆ ಮೆಯಲ್ ಕಾಯ್ದು (ರಟ್ಟಮ. ೦೩-೦೦೭). [ದೇ.॥ ತಮಿ. ತುಳು. ತೆಲು. ಮೆತ್ತು; ಕೋತ. ಕೊಲಾ. ಪರ್ಜಿ. ನಾಯ್ಕಿ. ಮೆತ್]

**ಮೆತ್ತೆ** (ನಾ). ೧. ಮೃದುವಾದ ಹಾಸು ; ಸುಪ್ಪತ್ತಿಗೆ : ಮಜ್ಜನ ಭೋಜನ . . . ತಾಂಬೂಲ ರತ್ನಾಭರಣ ಮೆತ್ತೆ ಶಯನ ಸ್ತ್ರೀಸಂಸರ್ಗ ಒಡೆಯಂಗೆ ಆಯಿತ್ತೆಂಬುದ ಕೇಳಿ . . . ತನ್ನ ಸ್ವಸ್ತ್ರೀಗೆ ಕೂಟಸ್ಥನಾಗಬೇಕು (ಸಶವ. I, ೯೩೬-೯೨) ; ಅಂತಃಪುರದಲ್ಲಿ ಮೃದುವಾದ ರೇಷ್ಮೆಯ ಮೆತ್ತೆಗಳ ಮೇಲೆಯೂ ಎಷ್ಟೋ ರಾತ್ರಿಗಳನ್ನು ಅವನು ಕಳೆದಿದ್ದನು (ಪಗಹೊ. ೦). ೨. ಮೃದುವಾದ ದಿಂಬು : ಮಂಚಗೆ ಮೆತ್ತೆಗಳು ಬಂದಿವೆ (ಕಹಾರ. ೨೪); ಆ ಆಸನಗಳ ಮೇಲೆ ಕಿಂಕಾಪಿನ ಮೆತ್ತೆಗಳು ಇದ್ದವು (ಶ್ರೀಣಾಯ. ೦೯೬).
[ದೇ.॥ ತಮಿ. ಮೆತ್ತೈ; ಮಲ. ತೆಲು. ಮೆತ್ತ; ಕೊಡ. ಮೆತ್ತೆ]

**ಮೆತ್ತೈಸು** (ಕ್ರಿ). ಮೆತ್ತಗಾಗುವಂತೆ ಮಾಡು ; ಮಿದುವಾಗಿಸು : ಖರ್ಜೂರ ದ್ರಾಕ್ಷಿ ಸಕ್ಕರೆ ಬೆಲ್ಲ ಮೆತ್ತೈಸಿದ ಕಾಯ ಭಾಗ ಒತ್ತದೆ ಕಳಿತ ಪಣ್ಣುಸರಂಗಳಿತ್ತಬದಲಿ ಮಾಜುತಿಹವು (ಪೋಹಕ. ೩-೨೦).
[< ಮೆತು + – ಇಸು$_3$]

**ಮೆದ** (ನಾ). ಸುಗ್ಗಿಯ ಕಣದಲ್ಲಿ ಒಕ್ಕಣೆಯಾದಾಗ ಉಬ್ಬಲುಸಹಿತವಾಗಿರುವ ಕಾಳು : ತೂರುವ ಮೆದಕ್ಕೆ 'ಬಿಳಿಬಂಟ'ನನ್ನೂ ರಾಶಿಗೆ 'ಕರಿಬಂಟ' ಅಥವಾ 'ಬಿಳಿಬಂಟನನ್ನೂ' ಕಟ್ಟುವ ಸಂಪ್ರದಾಯವು ಸುಗ್ಗಿಯ ಕಣದಲ್ಲಿ ಉಂಟು ([illegible]. ೦೩೩). [ ? ]

**ಮೆದಕಟನಿ** (ನಾ). ಬತ್ತವನ್ನು ಬೆಳೆಯುವ ಮೃದುವಾದ ಭೂಮಿ; ಗದ್ದೆ (?) : ಆಯ್ದೂಮುಬ್ಬ ಮೆದಕಟನಿಯು ಎಟ್ಟೊಮುಬ್ಬ ಬಾಳೆ ತೋಟ್ಟ ಪಟ್ಟು ಬ್ರಹ್ಮದೇಯಂ ಕೊಟ್ಟೊದು (ಎಕ. X, ಕೋಲಾರ. ೨೩೦-೪; ಸು. 800?). [P ಇದು 'ಮೆದುಕಟನಿ' ಎಂಬುದರ ಅಪಲಿಖಿತವಿರಬಹುದು]

**ಮೆದಗೊಂಡ** (ನಾ). ಒಬ್ಬಾತನ ಹೆಸರು : ಸ್ವಸ್ತಿಶ್ರೀ ಮೆದಗೊಣ್ಡವರಾಮಗನ್ (ಎಕ. VII, ಶಿಕಾ. ೯೩-೨೪; 890).
[ ? + ಗೊಂಡ$_1$ (< ಗಾವುಂಡ)]

**ಮೆದಡು** 'ಮಿದುಳ್' ನೋ.

**ಮೆದಲು** (ಕ್ರಿ). ಅಲುಗು; ಕದಲು; ಚಲಿಸು : ಕುಮಾರನು ಹರಹರ ಯೆನುತಲಿ ಮೆದಲದೆ ಬಂಡೆಯ ಮೇಲೊರಗಿದನು (ಸಾರಂಗ. ೨೬) ; ಅವನನ್ನು ಹೊತ್ತುಕೊಂಡು ಕಟ್ಟ ಕದಲದೆ ಮೆದಲದೆ . . . ಇದ್ದನು (ಕಥಾಮಂ. IV, ೨೨); ಮೂರನೆಯ ಸಲ ಔಷಧಿಯನ್ನು ಕೊಟ್ಟ ಮೇಲೆ ಲಕ್ಷ್ಮೀದೇವಿಯ ಕೈಕಾಲು ಸ್ವಲ್ಪ ಮೆದಲಿದವು ( ಶಾಂಕರಾ. ೩೯೩ ). 'ಕದಲು$_1$' ಪರಾ. [ದೇ.॥ ತುಳು. ಮೆದುಕು ; ತೆಲು. ಮೆದಲು, ಮೆದುಲು]

**ಮೆದು** ' ಮಿದು ' ನೋ.

**ಮೆದುಗ** ' ಮಿದುಗ ' ನೋ.

**ಮೆದುಗಿ** (ನಾ). ಮೃದುಸ್ವಭಾವದವಳು ; ನಿಧಾನಸ್ಥೆ : ನೀನು ಶುದ್ಧ ಮೆದುಗಿ (ಕಹಾಕೂ. ೨೭) : ನೀನು ಶುದ್ಧ ಮೆದುಗಿ. ಹೀಗೆಯೇ ಇದ್ದರೆ ಆ ಎಲ್ಲರೂ ನಿನ್ನನ್ನೆ ಆಳಿಸಿಬಿಡುತ್ತಾರೆ (ಕಂಕಥ. ೦೨೭).

[ಮೆದುಗ (< ಮಿದುಗ) + — ಇ₂]

**ಮೆದುಗು** (ಕ್ರಿ). ಮೆತ್ತಗಾಗು; ನುರಿ; ನುಣುಪಾಗು : ಸೀಕಲುರೊಟ್ಟಿ ಮೆದುಗದ ಚಟ್ನಿ ತಿಂದು ಮುದುಕಿಗೆ ಬೇಸರವಾಯಿತು (ದೇಶಾಂಕ. ೬೦).

[ ← ತೆಲು. ಮೆದುಗು]

**ಮೆದುಳು** ' ಮಿದುಳ್ ' ನೋ.

**ಮೆದೆ₁** (ನಾ). ೧. ಹುಲ್ಲಿನ ರಾಶಿ,–ಒಟ್ಟಿಲು ; ಬಣವೆ : ಮೆದೆಯಂ ಸುಟ್ಟ ರಳಂ ಕುಱುಕುವ . . . ಪೊನ್ನಂ ಬಿಟ್ಟು ಮುಸಿಯುಂ ಕಟ್ಟುವೆಗ್ಗನಂ ಪೋಲ್ವೆನೀ ದರ್ಶನಮಂ ವ್ರತಮುಮಂ ಬಿಟ್ಟೆನಪ್ಪೊಡೆ (ಧರ್ಮಾಮೃ. ೬-೨೦) ; ಊರು ಮೆದೆಗಳೊಳು ಕಿಚ್ಚಿಕ್ಕುವವರು (ಜಿಕೃಕ್. ೯-೦೭-೨೭) ; ಡಿಳ್ಳಿಯ ಖಾನರೆಂದೆಂಬ ಮೆದೆಗೆ ಬಲುಗೊಳ್ಳಿಯೆಂದೆಂಬ . . . ಕೊಳ್ಳಿಯ ನಾಗ ನೆಯ್ದಿದನು (ಕುಮಾಸಾಂ. ೦೦-೩೩). ೨. ರಾಶಿ; ಒಡ್ಡು ; ಗುಂಪು : ಮಿದುಳ ಕೋಟಿಗೆ ಸಜಿಕೊಳ್ಳೊಕ್ಕು ಕರುಳ ಮೆದೆಯಂ ಪಿಕ್ಕಿ (ಗದಾಯು. ೬-೨೯ ಪ) : ಕಾಱುತಟ್ಟಿನ ಹೆಣನ ಮೆದೆ ಹೇರಾಳ ಶಂಜಿಸಿತು (ಕುಮಾವ್ಯಾದ್ರೋ. ೦೦-೬) ; ಷಣ್ಮಾ ಸೇವಗೆಯ ಮೆದೆ ಎರೆಯಪ್ಪ ದಡಕಿಲ್ (ಸಮ್ಯ ೩. ೭-೨೫). ೩. ಹೆದ್ದತನ; ಮಂಕುತನ (?) : "ತೃಣರಾಶಿ ಹೆದ್ದತ್ವಗಳೊಳೆಸೆಗು ಮೆದೆ" (ಶಬ್ದಮಂ. ೦೦೦).

**ಮೆದೆಮೆದೆ** (ದ್ವಿರುಕ್ತಿ) : ಕದಳಿಯ ಫಲ ನಾಳಿಕೇರ ಖರ್ಜೂರಗಳ್ಮೊದ ವಿದಿದಿಕ್ತುದಂಡಗಳ ಮೆದೆಮೆದೆಯಾಗಿ ಸಾಲ್ಗೊಳಿಸಿ (ಕಂಕಥ. ೨೨-೨೭). **ಮೆದೆಯೊಟ್ಟು** = ಹುಲ್ಲನ್ನು ರಾಶಿಮಾಡು; ಬಣವೆ ಮಾಡು : ಮೆದೆಯೊಟ್ಟುವ ಕೆಲಸ ಮುಗಿಯಿತು (ಊಹಿ). **ಮೆದೆಹಾಕು** = ಮೆದೆಯೊಟ್ಟು : ಮುನಿಯನು ಕುಯ್ದು ಮೆದೆಹಾಕಿದನು (ಪುಂಜಿಕಾ. ೫೦).

**ಮೆದೆ₂, ಮೆದ್ದೆ** (ನಾ). ೧. ಒಂದು ಬಗೆಯ ಸಸ್ಯ : "ಶಲ್ಯವೃಕ್ಷಃ – ಉತ್ತರಣಿ. ಮೆದೆ. ಶಲ್ಯಮೃಗ" (೬ಕಾಧಿ. ೦೬೦). ೨. (?) : ವನ ಗಿರೀ ನದಿ ಮದ ಹೊದರು ಗಹ್ವರ ಹುತ್ತ ವನರಾಶಿ ದ್ವೀಪ ಪಾತಾಳ . . . ಜನನಿಜಠರದೊಳಿರಲು ಅಣುಮಾತ್ರ ತಪ್ಪುವುದೆ ಬರಹ ಪ್ರಾಣಿ (ಹರಿಕೃ. ೯೬-೨೨). **ಮೆದ್ದೆ** : ೧. ' ಮೆದ್ದೆಸೊಪ್ಪು ' ಪರಾ.

[ ದೇ. ೫ ತಮಿ. ಮೆತ್ತೈ]

**ಮೆದೆಗಟ್ಟು** (ಕ್ರಿ). ರಾಶಿಹಾಕು : ಇಂಪುವಾಳೆಯ ಹಣ್ಣಾನ ರಾಯ ಲಾಲಿತಪ್ರತಿಮೆಯ ಭುಜಮುಟ್ಟ ಮೆದೆಗಟ್ಟಿ ಧಾಳಿಪಂತಭಿಷೇಕಗೈದ (ಶಶಿ. ೦೬-೭೯).

[ಮೆದೆ₁ + ಕಟ್ಟು₁]

**ಮೆದೆಗೆಡಹು** (ಕ್ರಿ). ರಾಶಿಯಾಗಿ ಬೀಳಿಸು ; ಹಿಂಡಾಗಿ ಕೆಡವು : ಕರಿಗಳ ಮೊಗ್ಗರವ ಮೆದೆಗೆಡಹಿದನು (ಕುಮಾವ್ಯಾ ೬೬. ೬-೯೬) ; ರಾವುತರ ರಣದೊಳು ಮೆದೆಗೆಡಹಿದನು ಬಾಹುದಂಡ ಪದಾಭಿಘಾತದಲಿ (ಕೂಕಥಾ. ೬-೩೦-೯೯); ಮೆದೆಗೆಡಹುವ ನಿನ್ನ ಬಲವ (ಜೋತಕ. ೯೦-೩೩).

[ ಮೆದೆ₁ + ಕೆಡಹು (< ಕೆಡವು) ]

**ಮೆದೆಗೆಡೆ** (ಕ್ರಿ). ರಾಶಿಯಾಗಿ ಬೀಳು ; ಒಟ್ಟಾಗಿ ಬೀಳು : ಮದವುಡುಗಿ ಮೆದೆಗೆಡೆದು ಮುಂದುಗೆಟ್ಟು (ಗಂಕ. ೬-೩ ಪ); ಎರಡುದಳ ಗಂಟಿಕ್ಕಿದುದು . . . ಹೊಯ್ದುರುಳುವ ಶಿರದ ಬೀಳುವ ಭಟರ ಮೆದೆಗೆಡೆವಾನೆಕುದುರೆಗಳ (ಕುಮಾವ್ಯಾ ೯-೨೯); ಪ್ರಲಯಸಮಯದ ವೀತಿಹೋತ್ರನ ಕಿಡಿಯ ರಾಶಿಯ ರೀತಿಯಲಿ ಮೆದೆಗೆಡೆದವು (ಅಕಂಥಾ. ೬-೨೦-೦೨). [ ಮೆದೆ₁ + ಕೆಡೆ₁ ]

**ಮೆದ್ದು** ' ಮೆಲ್₁ ' ಪರಾ.

**ಮೆದ್ದೆ** ' ಮೆದೆ₂ ' ನೋ.

**ಮೆದ್ದೆಸೊಪ್ಪು** (ನಾ). ಒಂದು ಬಗೆಯ ಸಸ್ಯ : (ವ್ಯಕಿಗ. ೦೦-೦೭೨).

[ ಮೆದ್ದೆ (< ಮೆದೆ₂) + ಸೊಪ್ಪು₂ ]

**ಮೆಪ್ಪಿಕ್ಕು** (ಕ್ರಿ). ಜಾನುವಾರುಗಳಿಗೆ ಮೇವನ್ನು ಹಾಕು : ತುಂಗ ಭದ್ರೆಯಾ ತಡಿಯೊಳ್ ಕಾಣಬೀಡುಗಳಟ್ಟು ರಾಮೇಶ್ವರ ಎಪ್ಪ ತೀರ್ಥ್ಥದಾ ಮೊದಲೊಳ್ ಮೆಪ್ಪಿಕ್ಕಿ ಪೊರದ ಪನ್ನಿಗಳನಿಱಿಯಲ್ ಬನ್ದಲ್ಲೀ(ಲ್ಲಿ) (ಎಕ. XI. ೦೨೭-೯; 803); (ಎಇ. XXXIII. ೩೬೦-೯; 803 ನೋ).

[ ☞ ಇದು 'ಮೇಪಿಕ್ಕು' ಎಂಬುದರ ಅಪಲಿಪಿತವಿರಬಹುದು ]

**ಮೆಮೊ** (ನಾ). "(ಜ್ಞಾಪಕಕ್ಕೆ ತರಲು ಸಹಾಯಕವಾದ) ನೆನಪಿನ ಟಿಪ್ಪಣಿ ; ಜ್ಞಾಪಕಪತ್ರ" (Memo–ಇಂಕಿ) : ಒಂದು ಸಂಕ್ಷೇಪವಾದ ಮೆಮೊ ಬರೆದು ರವಾನಿಸಬೇಕು (ಗ್ರಾಪಂಜಿ. ೦೫೬); ಯಾಕೆ, ಮೆಮೋ ನೋಡಲಿಲ್ಲವೇ ನೀವು ? (ಐಕಹ. ೦೬). [← ಇಂ. Memo]

**ಮೆಮೊರಾಂಡಂ** (ನಾ). = ಮೆಮೊ : ಮೆಮೊರಾಂಡಂನ ಮೂಲಕ ಸ್ಟೇಷನ್‌ಹೌಸ ಆಫೀಸರವರಿಗೆ ತಿಳಿಸತಕ್ಕದ್ದು (ಗ್ರಾಪಂಜಿ. ೯೭).

[ ← ಇಂ. Memorandum ]

**ಮೆಯ್₁** ' ಮೇ₁ ' ನೋ.

**ಮೆಯ್₂**, ಮೆಯಿ, ಮೈ₁ (ನಾ). ೧. ದೇಹ ; ಶರೀರ : ಮೆಯ್ಯೆಲ್ಲಂ ದಿಟ್ಟಿಗಳಾದೊಡಿಂದ್ರನೆನಿಸಲ್ಕಾರ್ತಂ ಮಹೇಂದ್ರಾಂತಕಂ (ಕಾವ್ಯಾ. ೩೩೦ ಕೂರ್ದ್ರ); ಒಡಗೆ ನಿಮ್ಮ ಮೆಯ್ಯ ಪಸಿವು (ಜಂಕಥಾ. ೩-೬೩); ಪುಟ್ಟಿತು ಗದ್ಗದ ಮೆಯ್ದರ್ಘುಮ್ಮು ಝುಮ್ಮೆಂದು ತಟ್ಟಿತು ಮನಮೂರ್ಛೆ ರತಿಗೆ (ಜೋತಕ. ೦೦-೯೨). ೨. ಪಕ್ಕ ; ಪಾರ್ಶ್ವ : ಬಡಗಣ ಮೆಯು ಮದಳ ಗಟ್ಟದ ತಂಕಣ ಮೆಯಲೆರೆ ಮ ೨ . . . ಸರ್ವಬಾಧಾಪರಿಹಾರವಾಗಿ ಮಾ(o)ನ್ಯಮಂ ಬಿಟ್ಟರು (ಶಾಇ. IX–i. ೩೨೦-೦೬; 1191). ೩. ಹುಟ್ಟು; ಜನ್ಮ : ' ಮಱುಮೆಯ್ ' ಪರಾ. ೪. ಧೈರ್ಯ ; ಸ್ಥೈರ್ಯ : 'ಮೆಯ್ಗಿಡು' ಪರಾ. ೫. ಶೌರ್ಯ; ಪರಾಕ್ರಮ : 'ಮೆಯ್ಗಾಣಿಸು' ಪರಾ. **ಮೆಯಿ** : ೧. 'ಮೆಯಿಜೀವಿತ', 'ಮೆಯಿದೆಱೆ' ಪರಾ. **ಮೈ₁** : ೧. ಬೆಡಂಗಿಲ್ಲದ ಮೈ ಕಿರಕಿಂ ತುಱಿಯಿಂ ತೀವಿದ ಕರಚರಣಂ (ಧರ್ಮಾಮೃ. ೭- ೨೨೯); ಬೆಳುದಿಂಗಳಲಿ ಮೈ ಬೆವರುವುದೆ (ಕುಮಾವ್ಯಾದ್ರೋ. ೧-೬೨); ಕಯ್ಯಂ ಪಿಡಿದೊಡೆ ಮೈ ಕಾನೆ ಬಹುದು (ಕೃಪಿಶಾ. ೦೦-೩). ೨. ಹೋದ ಮೈಯಲಿ ಹೋಗಲೆನುತ . . . ಅನಿಲಶರದಿಂದೂದಿದನು ಜಲ ನಿಧಿಯು ತೆಂಕಣತೀರಕಾ ಖಳನ (ಕೂಕಥಾ. ೦-೦೦-೨೦). ೩. 'ಮಱುಮೈ' ಪರಾ. ೫. 'ಮೈದೆಗೆ' ಪರಾ. ೬. ರೀತಿ; ಬಗೆ : ಜನಜೀವನದ ಆರುಮೈಗಳನ್ನು ಗುರುತಿಸಲು ಯತ್ನಿಸಿದೆ (ಕೃಜಿಕ. ಹೂರಣ ಹಾಕು). ೭. [ನಾಟ್ಯ] ಹತ್ತು ಬಗೆಯ ಅಡವುಗಳಲ್ಲಿ ಒಂದು : ಪ್ರಸಿದ್ಧ ನಾಟ್ಯಾಚಾರ್ಯರು ಈ ಅಡವುಗಳನ್ನು ಹತ್ತುವಿಧವಾಗಿ ವಿಂಗಡಿಸಿದ್ದಾರೆ (೧) ತಟ್ಟು . . . (೬) ಮೈ . . . (೧೦) ನತ್ತ (ಕಹಾಕೃ. ೩೨).

**ಮೆಯ್ಮೆಯ್ಗೆ** = ಒಬ್ಬೊಬ್ಬರಿಗೂ; ಪ್ರತಿಯೊಬ್ಬರಿಗೂ: ಎಮ್ಮ ಗಂಡ ವಾತುಮುಳುಂಬ ಭೃತಮಕ್ಕುವೆಂದು ಮೆಯ್ಮೆಯ್ಗೆ ಬೆಸಸೆಂಬುದುಂ (ಜಂಕಥಾ. ೬-೨೭ ಪ). **ಮೆಯ್ಯನಿಕ್ಕು** = ದಂಡಪ್ರಣಾಮಮಾಡು ; ನಮಸ್ಕರಿಸು : ಮಕುಟಬದ್ಧಾಧೀಶರಾಗಳ್ ವಸುಂಧರೆಯಂ ಪರ್ವಿರೆ ಮೆಯ್ಯ[ ಶಾಕಾಂ. ಮೈಯ ]ನಿಕ್ಕೆಯುಂಮುದಾತ್ಮೋತ್ಸಾಹದಿಂ ರಾಜ ಮಂದಿರಮಂ ಪೊಕ್ಕನುಪಾರಸಾರವಿಭವಂ ಸಂಸಾರಸಾರೋದಯಂ (ಅದಿಪು. ೨೨-೦೨೯); ಯುವತಿಮಣಿ ಪೆರ್ಚಿ ಮೆಯ್ಯನಿಕ್ಕಿದಳ್ (ಉದ್ಭಟ. ೦೨-೩); ಭಕ್ತಿಯಿಂ . . . ಮೆಯ್ಯನಿಕ್ಕಿ ಬಳಿಕಿಂತೆಂದನು (ಶಬರ. ೯-೨೯). **ಮೆಯ್ಯಳಿದನ್** = ದೇಹವು ನಾಶವಾದವನು ; ಕಾಮ ; ಮನ್ಮಥ : ಕಾಳರಕ್ಕಸನೆನ್ನ ಕಂಡು ಮೆಯ್ಯ[ಶಾಕಾಂ. ಮೈಯ]ಳಿದನಂಬಿಗೆ ಗುಱಿ

ಯಾವನು (ಸೂರಸೋ. ೭-೩೭). ಮೈಗೆ ಹತ್ತು = ದೇಹಕ್ಕೆ ಹೊಂದಿಕೊಳ್ಳು ; ರಕ್ತಗತವಾಗು : ಅದಕ್ಕೆ ತಿಂದದ್ದು ಮೈಗೆ ಹತ್ತುವುದಿಲ್ಲ (ಗೃಹಸ. ೦೨೯). **ಮೈಬಗ್ಗಿಸು** = (ಅಲಂ) ಶ್ರಮವಹಿಸು ; ಕಷ್ಟಪಡು : ಮಕ್ಕಳು ಮೈಬಗ್ಗಿಸಿ ಕೆಲಸ ಮಾಡುವಂತೆಯೂ . . . ಬೋಧಿಸಬೇಕು (ಕ್ರಿಯಾಶಿ. ೯). **ಮೈಬರು** = ದೇಹವು ದಪ್ಪವಾಗು.—ಸ್ಥೂಲವಾಗು; ಬೊಜ್ಜುಬರು : ಊರಲ್ಲಿ ನಿಮ್ಮ ರುಕ್ಮಿಣಿ ಚೆನ್ನಾಗಿದ್ದಾಳೆ. ಈಗ ಸ್ವಲ್ಪ ಮೈಬಂದಿದೆ (ಸ್ವಕೃಪೊ. ೦೩೩). **ಮೈಮೇಲೆಬರು** = ೧. (ದೆವ್ವ ಅಥವಾ ದೇವರು) ಮನುಷ್ಯನ ಮೇಲೆ ಆವಾಹನೆಯಾಗು : ಆ ಗುಡಿಯ ಪೂಜಾರಿಗೆ ದೇವರು ಮೈಮೇಲೆ ಬರುತ್ತದೆಯಂತೆ (ರೂಢಿ) ; ಅವನಿಗೆ ದೆವ್ವ ಮೈಮೇಲೆ ಬಂದಿದೆ (ರೂಢಿ). ೨. (ಅಲಂ) ಜವಾಬ್ದಾರಿ ಬೀಳು : ಅಪ್ಪ ಸತ್ತ ಮೇಲೆ ಎಲ್ಲ ಅವನ ಮೈಮೇಲೆ ಬಂತು (ರೂಢಿ). **ಮೈಮೇಲೆಬೀಳು** = ಮೈಮೇಲೆ ಬರು ೨ : ಜವಾಬುದಾರಿಯೆಲ್ಲ ಮೈಮೇಲೆ ಬಿದ್ದು ಕುಸ್ತಾದವ (ಮೂರುದಾ. ೫೭). **ಮೈಮೇಲೆ ಹಾಕಿಕೊಳ್ಳು** = (ಅಲಂ) ಎದುರುಹಾಕಿಕೊಳ್ಳು; ದ್ವೇಷವನ್ನು ಗಳಿಸು : ಎಲ್ಲರನ್ನೂ ಮೈಮೇಲೆಹಾಕಿಕೊಳ್ಳುವುದು ಜಾಣತನವಲ್ಲ (ಕಂಠಕಂ. ೦೯೩). **ಮೈಮೇಲೆಹಾಕು** = (ಅಲಂ) ಜವಾಬ್ದಾರಿಯನ್ನು ಹೊರಿಸು : ಅಣ್ಣ ತನ್ನ ತಂಗಿಯ ಮದುವೆಯ ಹೊಣೆಯನ್ನೆಲ್ಲಾ ತಮ್ಮನ ಮೈಮೇಲೆ ಹಾಕಿದನು (ರೂಢಿ). **ಮೈಯೆಲ್ಲಾ ಕಣ್ಣಾಗು** =(ಅಲಂ) ಜಾಗರೂಕವಾಗಿರು ; ಎಚ್ಚರಿಕೆಯಿಂದಿರು : ಮೈಯೆಲ್ಲಾ ಕಣ್ಣಾಗಿ ನಿರೀಕ್ಷಿಸುತ್ತಿರಬೇಕು (ಗ್ರಂಥಾಲ. ೬೬). **ಮೈಹಚ್ಚು**=ದೇಹವನ್ನು ಒರಗಿಸು : ಗೋಡೆಗೆ ಮೈಹಚ್ಚಿ ಕೆಳಗೆ ಮುಖ ಬಾಗಿಸಿ ಕತ್ತೆಯೊಂದು ಸುಮ್ಮನೆ ನಿಂತಿರುತ್ತದೆ (ಅನ್ನ. ೦೧೦). **ಮೈಹತ್ತು** = ಮೈಗೆ ಹತ್ತು : ಯುಧಿಷ್ಠಿರನ ಆ ಐಶ್ವರ್ಯವನ್ನು ನೋಡಿದ ಮೇಲೆ ನನಗೆ ತಿಂದದ್ದು ಮೈ ಹತ್ತುತ್ತಿಲ್ಲ (ವಚಭಾ. ೯೧).

[ದೇ.॥ ತಮಿ. ಮೆಯ್ ; ಮಲ. ಮೆಯ್, ಮೈ ; ತುಳು. ಮಯಿ, ಮೈ ; ಕೊಡ. ಮೆಯ್; ತೆಲು. ಮೆಯಿ, ಮೇ].

**ಮೆಯಿ** ' ಮೆಯ್₂ ' ನೋ.

**ಮೆಯಿಗಂಧ** ' ಮೆಯ್ಗಂಧ ' ನೋ.

**ಮೆಯಿಗೂಟ** ' ಮೆಯ್ಗೂಟ ' ನೋ.

**ಮೆಯಿಜೀವಿತ** (ನಾ). ಉಪಜೀವನ ; ಜೀವನನಿರ್ವಾಹ : ಮಮ್ಮಾಲಿಗೆಯು ಮಾರಯಂಗೆ ಇನಾಗವೇದಿಯು ಮೆಯಿಜೀವಿತಕ್ಕೆ ಕೊಟ್ಟಲ್ಲಿ (ಮೈಕಂ. ೦೯೩೭, ೦೯-೩೭ ; 1289). [ ಮೆಯಿ ( < ಮೆಯ್₂ ) + ಜೀವಿತ]

**ಮೆಯಿದೆಱೆ³, ಮೈದೆಱೆ³** (ನಾ). (ಕೋಣ, ಎತ್ತು ಮುಂತಾದುವುಗಳ ಮೇಲೆ ಹಾಕುವ) ಒಂದು ಬಗೆಯ ತೆರಿಗೆ : ನಾ[ಲ್ಕಂ]ಪಟ್ಟಣಂಗಳು ನೂಲೆನಾಡೊಳಗೆ ಸಂತೆಗಳ ಆಯದಾಯ ಇಪುತು ಕೋಣನ ಮೆಯಿದೆಱೆ³ ಸುಂಕ ಹದಿನೆಂಟ್ಟು (ಎಇ. XXI. ೦೯-೭೭ ; 1260). **ಮೈದೆಱೆ³** : ಗಾಣವಣ ಮೈದೆಱೆ³ ಮನ್ನೆಯ ತಿಪ್ಪೆಸುಂಕ ಸಂಮಾನಿಸುವ ಬೂರಗೂಳ್ಪಳಿವಣಂ (ಎಕ. VIII, ಸೊರಬ. ೨೭೬-೨೭ ; 1070).

[ ಮೆಯಿ ( < ಮೆಯ್₂ ) + ತೆಱೆ³₃ ]

**ಮೆಯ್ಕೊಡು** ' ಮೆಯ್ಗೊಡು ' ನೋ.

**ಮೆಯ್ಕೊಳ್** ' ಮೆಯ್ಗೊಳ್ ' ನೋ.

**ಮೆಯ್ಕೊಳಿಸು, ಮೈಗೊಳಿಸು** (ಕ್ರಿ). ೧. ಉಟ್ಟಿರು ; ಧರಿಸಿರು : ಪೊಳೆವೆಳವಾಳೆ ಚುಂಬಿಸಿ ಮುಟುಂಕಿರಲಂಜಿದಳೆಲ್ಲ ಮೆ[ಳ್]ಯ್ದು ಮೆಯ್ಕೊಳಿಸಿದ ನಾಗವಟ್ಟಳಿಗೆ ನಾಂದು ಪಗಿಲ್ಚಿರೆ ನಾಣ್ಚಿದಳ್ (ಅನಂಪು. ೬-೩೭). **ಮೈಗೊಳಿಸು** : ೨. ರೂಢಿ ಮಾಡಿಕೊಳ್ಳು : ರೆವಿನ್ಯೂ ಡಿಪಾರ್ಟ್‌ಮೆಂಟಿನ ಖಾಸ ಚಟಗಳನ್ನು ಸರಾಗವಾಗಿ ಮೈಗೊಳಿಸಿದ ಅವನಿಗೆ ಅದು ಒಟ್ಟಿನ ಮೇಲೆ ಪಿತ್ರಕರವೇ ಕಂಡಿತು (ಗಂವಶಾಖಿ. ೦೨೩). ೩. ನೆರವೇರಿಸು ; ನಡೆಸು : ಗಂಗೆಯು ತಡಿಯೊಳು ಕರ್ಮವಿಧಿಯ ನಿಯಮಂಗಳ ಮೈಗೊಳಿಸಿದರು (ಕರ್ಣಪ್ಕ. ೨-೩).

[ ಮೆಯ್ಕೊಳ್ ( < ಮೆಯ್ಗೊಳ್ ) + - ಇಸು₃]

**ಮೆಯ್ಗಂಡ** (ನಾ). ಶರೀರದ ಮಾಂಸ : ತತ್ತಳಗುದಿದು ಕೋಟ್ಗುದಿಗೊಳ್ವ ಮೆಯ್ಗಂಡಮಂ ತಾಳಿಸೆ ಸುರುಂಟಿ ಬಗಿದಾ ಮೆಯ್ಯಂ ಸುಡೆ ಬಿಸಿಲ ಬೆಣ್ಣೆಯಂತೆ ಕರಗಿ (ಶಾಂತಿಪು. ೭-೯೫ ವ). [ಮೆಯ್₂ + ಕಂಡ₁]

**ಮೆಯ್ಗಂಧ, ಮೆಯಿಗಂಧ** (ನಾ). ೧. ಶರೀರದ ಸುಗಂಧ : ಚಂದನ ಮೊದಲಾದ ನಿಖಿಲ ಪೂಗಳಿಗೆ ಮೆಯ್ಗಂಧವ ಕಡಗುಡುವಂತೆ ನಂದನವನ ಲಕ್ಷ್ಮಿಯ ಪೋಲ್ದು ಬಾಣಜೆ ಬಂದಳು (ಮೋಹತ. ೨೯-೬೯). **ಮೆಯಿಗಂಧ** : ೨. ದೇಹದ ವಾಸನೆ : ವನಚರಾದ್ರಿಯ ಕುಣಪಾದ್ರಿಗಳೊಳ್ ಮೊಳೆತ ವಾಸನೆಯಪ್ಪುದವನ ಮೆಯಿ[ಪಾಠಾಂ. ಮೈ]ಗಂಧ (ವರ್ಧತ. ೯-೬೪).

[ಮೆಯ್₂ + ಗಂಧ]

**ಮೆಯ್ಗಂಪು, ಮೈಗಂಪು** (ನಾ). = ಮೆಯ್ಗಂಧ ೧ : ನಘನಗುತೆ ಮೆಯ್ಗಂಪನೆಣ್ದೆಸೆಗೆ ಸೂಸುತೆ . . . ಶರಣಪದ್ಮರಸರಿರ್ದೆಡೆಗೆಯ್ದಿ (ಶರ್ಮ್ದಾ. ೫-೯೩) ; ಚಂದನಗಂಧಿ ರುಕ್ಮಿಣಿ ಸತ್ಯಭಾಮೆಯರ್ ನಂದನ ದೊಳಪೊಕ್ಕು ಸುಳಿಯೆ ಸಂವಣಿಸಿದ ವೃಕ್ಷ ಮೆಯ್ಗಂಪಿನಿಂದ ಶ್ರೀಗಂಧವ ಕೆಳ್ಡಿಡಿಸಿದುವು (ಮೋಹತ. ೯-೫೭). **ಮೈಗಂಪು** : ಸಂಪಗೆಯ ಬಿರಿ ಮುಗುಳಿನೋರಗೆಯ ಮೈಗಂಪು (ಸೌಂದಪು. ೭-೩೪).

[ ಮೆಯ್₂ + ಕಂಪು ]

**ಮೆಯ್ಗಚ್ಚು** ' ಮೆಯ್ಗರ್ಚು ' ನೋ.

**ಮೆಯ್ಗಡಿತ** (ನಾ). ದೇಹಕ್ಕೆ ಆದ ಪೆಟ್ಟು.—ಗಾಯ : ಕೆಡೆದವಗ್ಗದ ತುರಗದಳ ಮೆಯ್ಗ[ಪಾಠಾಂ. ಮೈಗ]ಡಿತದಲಿ ಮುಂಕೊಂಡು ಹೊರಳಿತು ಕೂಡೆ ಪಾಯದಳ (ಕುಪ್ಯಾಭಾ. ೯-೦೨). [ಮೆಯ್₂ + ಕಡಿತ₂]

**ಮೆಯ್ಗಣ್, ಮೈಗಣ್₁, ಮೈಗಣ್ಣು** (ನಾ). ೧. ದೇಹದಲ್ಲೆಲ್ಲಾ ಇರುವ ಕಣ್ಣು ; ಮೈತುಂಬ ಇರುವ ಕಣ್ಣು : ' ಮೆಯ್ಗಣ್ಣ ' ಪರಾ. **ಮೈಗಣ್₁** : ಶಿಶುಚೋರಕನ ಶೌರ್ಯಮಂ ಪೊಲಿದು ನೋಡಲ್ಕೆಯಾಗಸವೆಣ್ಣು ಮೈಗಣ್ಣಳಾಂತಂತೆ (ನವವೋ. ೦೦-೩೩). **ಮೈಗಣ್ಣು** : ಕ್ರತುಭುಜರೊಡೆಯನೆಂಬೆನೆ ಮೈಗಣ್ಣಿಲ್ಲ (ಕಂಪವ. ೯-೦೦೯).

[ ಮೆಯ್₂ + ಕಣ್ ]

**ಮೆಯ್ಗಣ್ಣ, ಮೈಗಣ್ಣ** (ನಾ). ೧. ದೇಹದಲ್ಲೆಲ್ಲಾ ಕಣ್ಣುಗಳನ್ನು ಹೊಂದಿರುವವನು ; ಇಂದ್ರ : "ಮೆಯ್ಗಣ್ಣಂ ಸಹಸ್ರಾಕ್ಷಂ" (ಕಶಾರಿ. ೯೯) ; ಮುನ್ನಂ ಮೆಯ್ಗಣ್ಣನಱಿಯನೇ (ಕಬ್ಬಿಕಾ. ೧೬೩) ; ಶಚೀವರಂ ಮೆಯ್ಗಣ್ಣಂ (ಕರ್ಮ್ದಾ. ೯-೧೦) ; ಮೆಯ್ಗಣ್ಣನಿಂದ್ರಾಣಿ ಉಡುಪತಿಯಂ ರಾಗದಿ ರೋಹಿಣಿ ಕಯ್ಯಿಡಿವಂದದಿ (ಜಯುಕಾ. ೨-೦೦). **ಮೈಗಣ್ಣ** : ಬಡವರೊಡವೆಗೆಂಡಂತೆ ಮೈಗಣ್ಣನ ಮಡದಿ ಮೈಮನನೆತ್ತಿಕೊಂಡು ಸಡಗರದಿಂ ಬರೆ (ನೇಮಿಸಂ. ೨೨-೦೨೫). [ಮೆಯ್ಗಣ್ + - ಅ₇]

**ಮೆಯ್ಗರಗು** (ಕ್ರಿ). (ಅಲಂ) (ದೇಹದಲ್ಲಿರುವ ಗೆರೆ, ರೇಖೆ ಮುಂತಾದುವು) ಕಾಣದಾಗು ; ಅದೃಶ್ಯವಾಗು : ಆ ಪದ್ಮಪತ್ರಾಯತಾಕ್ಷಿಯ ತ್ರಿವಳಿಸ್ವರೂಪಗಳ್ ಮೆಯ್ಗರಗಿದುವು (ಮೋಹತ. ೦೭-೭).

[ ಮೆಯ್₂ + ಕರಗು ( < ಕರಂಗು ) ]

**ಮೆಯ್ಗರೆ, ಮೈಗರೆ** (ಕ್ರಿ). ಅಡಗು ; ಮರೆಯಾಗು ; ಮೈಮರೆಸಿಕೊಳ್ಳು : ಸೈಂಧವನವರಂ ಛಿದ್ರಿಸಲೆಂದು ಮೆಯ್ಗರೆದು ಬಂದು (ಕಂಕಭಾ. ೭-೩೦ ವ); ಅಂಜೆ ತಾಂ ಮೆಯ್ಗರೆದಿರ್ದಿರ್ದಾದ್ಯರಂತಾ ನೆವದೊಳ್ ದೆಸೆಯಂ ಕೂಡೆ ಪೊಕ್ಕರ್ (ಕಸುಪುರಾ. ೩-೦೩) ; ಅನಾ ಕಲ್ಪಸುಂದರಿಯ ಬರವನಱಿದು ಲತಾಭವನದ ಮಾಧವೀಗುಲ್ಮದೊಳ್ ಮೆಯ್ಗರೆದಿರ್ಪುದುಂ

(ದಶಕು. ೧೧-೬೪ವ). **ಮೈಗರೆ :** "ಮೈಗರೆವನೆಂದು ಅಡಂಗಿದಂ" (ಶಕಸಾ. ೬೩-೪೩೦) ; ಚಂದ್ರಾರ್ಕರುಂ ಮೈಗರೆದಿರ್ಪರ್ (ಶಂಕಾಖ. ೦-೬೧); ಮೈಗರೆವುತಿರ್ದರ್ ಮಡಿದ ಗಜಹಯಂಗಳ ಮಱೆಯೊಳಳವಳಿದು ದಿವಿಜ ಭಟರು (ಕಶಪು.೨೪-೨೩) : ಈಸುದಿವಸಪರಿಯಂತ ಮೈಗರೆದೆಲ್ಲಿ ವಾಸ ವಾಗಿರ್ದೆ ಚೆನ್ನಿಗನೆ (ಕಂಪಿ. ೦೦-೩೨). [ಮೆಯ್$_2$ + ಕರೆ$_3$]

**ಮೆಯ್ಗರ್ಚು,** ಮೆಯ್ಗಚ್ಚು, ಮೈಗರ್ಚು (ಕ್ರಿ). ದೇಹವನ್ನು ತೊಳೆ ; ಸ್ನಾನ ಮಾಡು : ಅಷ್ಟದಿಙ್ನಾಗರಾಜಿಗೆ ಮೆಯ್ಗರ್ಚಿಕೊಳಲ್ಕಜಂ ಸಮೆದ ತೋಯೋದ್ದೇಶಮೋ (ಗದಾಯು. ೬-೧೦). **ಮೆಯ್ಗಚ್ಚು :** ಸಲೆ ಮೆಯ್ಗಚ್ಚುವ ಪಲ್ಲಂ ಸುಲಿವ ವಿಲೇಪನಮನಾಗಳುಂ ಪೂಸುವ ತಂಬುಲಮಂ ಮೆಲ್ವ ತಪಸ್ವಿಗಳೊಲಿಪರ್ಬಲೆವೆಣ್ಣನೊಲಿಸರಪ್ಪ್ರಾಂಗನೆಯಂ (ಸಮಕ. ಶಂ. ೩೬೭-೧). **ಮೈಗರ್ಚು :** ಮೈಗರ್ಚಿಕೊಳ್ವ ಮದಗಜಂಗಳ ಕಟಿತಟದ ಮದಕರ್ದಮದಿನೊಡವೆರೆದು ಕಲಿಸಿ ಕಲಂಕಿ ಕಡುಗರ್ಪನಾಳ್ದು ಕಾಳಿಂದಿಯಂತೆ ಕಣ್ಗೆವಂದು (ರಾಜಶೇ. ೨- ೯ ವ).

[ಮೆಯ್$_2$ + ಕರ್ಚು$_2$ (< ಕಚ್ಚು)]

**ಮೆಯ್ಗಪ್ಪು,** ಮೈಗಪ್ಪು (ನಾ). ದೇಹದ ಕಪ್ಪುಬಣ್ಣ : ಪರ್ವರಿಕೆ ಯುಮೆಯ್ಗಪ್ಪುಂ ಮೆಯ್ಗಪ್ಪುಂ ಮೊದಲಾಗಿ ರೇಫಸಂಯೋಗಂಗಳ್ (ಶಮಠ. ೩೯). **ಮೈಗಪ್ಪು :** ತೇರ್ಸಿ ಬರ್ಪ ತುಂಬಿಗಳ ಮೈಗಪ್ಪು ಮುಂಗಾರ ಮುಗಿಲಮಟ ಝೇಂಕಾರವೆ ಮೊಳಗು (ಕಶಪು. ೪೩-೨೨).

[ಮೆಯ್$_2$ + ಕರ್ಪು$_1$]

**ಮೆಯ್ಗಲಿ,** ಮೈಗಲಿ (ನಾ). ದೈಹಿಕಬಲವುಳ್ಳವನು : ಶೂರ ; ವೀರ ; ಸಾಹಸಿ : ಇಮು ರಣಮೆನ್ನೊಳಾಂತಿಱವ ಮೆಯ್ಗಲಿಯುಂ ಸಮರ್ಥಿಕ ಮೇರು (ಶಂಕಶಾ. ೧೧-೪೩) ; ಪಲರಿರ್ದು ಕಾದಿದರ್ ಮೆಯ್ಗಲಿಗಳ್ (ಗದಾಯು. ೪-೩೩) ; ಆ ಪೊಱಲ ನೆರೆದ ದರವುರಗಲಿಗಳುಂ ಮೆಯ್ಗಲಿಗಳುಂ ಭೀಮಸೇನನ ಭೀಮಾಕಾರಮುಮಂ . . . ಕಂಡು ಭಯಂಗೊಂಡು ತಮ್ಮೊಳಿಂತೆಂದರ್ (ನೇಮಿಪು. ೦೦-೦೦೦ ವ). **ಮೈಗಲಿ :** ಎಮ್ಮೊಡ ನಾಡಿದ ಕಾರಣದಿಂದೀ ಪುಲಿಯುಮೊದಲಿಯನಪ್ಪೊಡಂ ಕೊಲಲಣ್ಮದಿಂತಪ್ಪ ಮೈಗಲಿಗಳೆನೆ (ಶಂಶಕಂ. ೦೪೦-೦೬) : ಕುಸುಮಬಾಣನ ರೂಪಡಗೆ ಮರ್ದಿಸಿದ ಮೈಗಲಿ ಬೋಧಸಿಂಧುವೆ ಜಯಜಯ (ಶಾಕ್ಯಶಾ. ೦೬-೪೨) ; ಕಾಪಿನಾಳ್ಗಳ್ ತತ್ತಱದಿನೊತ್ತರಿಸಿ ಪತ್ತೆ ಸಾರ್ದು ರಾಯುಗುವರನಂ ಸುತ್ತಂ ಮುತ್ತಿ, ಮೈಗಲಿಯಂ . . . ಎಂದರ್ (ರಾಮಾಶ್ವ. ೯೬-೦೨). 'ಮನಗಲಿ' ಘರಾ. [ಮೆಯ್$_2$ + ಕಲ್$_2$]

**ಮೆಯ್ಗಲಿತನ,** ಮೈಗಲಿತನ (ನಾ). ದೈಹಿಕ ಶೌರ್ಯ,-ಪರಾಕ್ರಮ,-ಸಾಮರ್ಥ್ಯ : ಎಯ್ದೆ ಮೆಯ್ಗಲಿತನಮಂ ಸರಿತ್ಸುತ ಘಟೋದ್ಭವರಂ ಪೊಣರ್ದಿಕ್ಕಿ ಗೆಲ್ದರೊಳ್ ಕಲಹಮೆ ಪೇಟ್ಟುಂ (ಶಂಶಶಾ. ೦೨-೪೮) ; ಮೆಯ್ಗಲಿತನದಿಂ ತೊಡರ್ಚಿಮುವು ಕಾಳೆಗಮಂ ಕಡುಕೆಯ್ದು ಕೋಟೆಗಳ್ (ದಶಕು. ೧೧-೩೦). **ಮೈಗಲಿತನ :** ತಡೆದವರನ್ನು ಇರಿದು ಮೆರೆದು ಕಾದಿ ತಮ್ಮ ಮೈಗಲಿತನವನ್ನು ತೋರ್ಪಡಿಸಿದರು (ಕಪೀರ. ೦೦೪) ; ಕೌರವನ ಮೈಗಲಿತನಕ್ಕೆ ಮೆಚ್ಚಿ ತಲೆದೂಗಿ (ಕಾಮಚ. ೬೦). 'ಮನಗಲಿತನ' ಪರಾ. [ಮೆಯ್ಗಲಿ + ತನ]

**ಮೆಯ್ಗಾಡಿ** (ನಾ). ದೇಹದ ಚೆಲುವು, - ಸೊಬಗು : 'ಮೆಯ್ಗಾಡಿ ವಣ್ಣ' ಪರಾ. [ಮೆಯ್$_2$ + — ಗಾಡಿ$_1$]

**ಮೆಯ್ಗಾಡಿವಣ್ಣ** (ನಾ). ದೇಹದ ಚೆಲುವಿನ ಕಾಂತಿ : ಮೂಡುವೆಳ ನೇಸಱಿಂದುಱಿ ನಮಿಸಿಕೊಳ್ವ ಮೆಯ್ಗಾಡಿವಣ್ಣದಿನೇಳ್ಗೆವೆತ್ತು ಥಳಥಳಿಪ ಶಿಶುಚೂಡಾಮಣಿಯನೀಕ್ಷಿಸುತ್ತೆ (ಶಕ್ರಶಾ. ೨-೬೪). [ಮೆಯ್ಗಾಡಿ + ಬಣ್ಣ]

**ಮೆಯ್ಗಾಣ್,** ಮೈಗಾಣ್ (ಕ್ರಿ). ದೇಹದಲ್ಲಿ ಆಯುಧವು ನಾಟಿ ಹೊರ ಬಂದು ಕಾಣು : ಬಟಿಯಿಂ ಮೆಯ್ಗಂಡು ಪುಂಖಾನುಪುಂಖ ವಿಸುತ್ತಿರ್ಪೆಡೆಯೊಳ್ (ಅದಿಪು. ೦೩-೬೦). **ಮೈಗಾಣ್ :** ಮೈಗಂಡ ಸರಳ ಮೊನೆಯಿಂ ಸುರಿವ ರುಧಿರ ಡೆಂಡಣಿಪ ನಡೆ . . . ಎಳಲ್ವ ಕಿವಿವೆರಸು ಕಂಗೆಟ್ಟೊಂದು ಹರಿಣನೆಯ್ದುಂದು (ಸಿದ್ಧರಾ. ೪-೪೨) ; ಪಿಂಡಭಾರವ ದೇಹಿಯನು ಮೈಗಂಡು ನೋಯಿಸಬಲ್ಲವಲ್ಲದೆ ಖಂಡಿಸುವುದೇ ಬಯಲ ದೇಹಿಯ ನಾವ ಕೈದುಗಳು (ಪ್ರಭುಲೀ. ೦೩-೦೬). [ಮೆಯ್$_2$ + ಕಾಣ್]

**ಮೆಯ್ಗಾಣಿಸು,** ಮೈಗಾಣಿಸು (ಕ್ರಿ). ೧. ಕಾಣಿಸಿಕೊಳ್ಳು ; **ಮೈದೋರು :** ಆದಿನಾಥನೆ ತಾನಿದೊಂದು ವಿನೋದವೇಷವ ಧರಿಸಿ ತನ್ನಯ ಸಾಧಕರ ಸಂಕಲ್ಪಸಿದ್ಧಿ ಯನೀಯಬೇಕೆಂದು ಮೇದಿನಿಗೆ ಮೆಯ್ಗಾಣಿಸಿದನು (ಪ್ರಭುಲೀ. ೦೪-೩೮). **ಮೈಗಾಣಿಸು :** ೨. ಪರಾಕ್ರಮವನ್ನು ತೋರು ; ಶೌರ್ಯವನ್ನು ತೋರಿಸು : ಕ್ಷೋಣಿಪರೆನುತ್ತ ಬರಿ ಹೆಮ್ಮೆಯಿಂ ನೆರೆದೆ ಮೈಗಾಣಿಸದೆ ಜಾರ್ವರಾ ಬಾಳ್ವೆಯಂ ಸುಡಲೆನಲ್ ಮಾಣದತಿರಥರು ಮೂದಲೆಗಂಜಿ ರಣದೀಕ್ಷೆಯಂ ಗೊಂಡರಾಕ್ಷಣದೊಳು (ಕುರಂಗ. ೬೩-೦೬). [ಮೆಯ್ಗಾಣ್ + — ಇಸು$_3$]

**ಮೆಯ್ಗಾಪು,** ಮೈಗಾಪು, ಮೈಗಾಹು (ನಾ). ಮೈಗಾವಲು ; ಅಂಗರಕ್ಷಣೆ : ಮೆಯ್ಗಾಪುವಮಾ ವೇಳೆಗೊಂಡಿರ್ದತ್ಯುಗ್ರಭಟರ್ಕಳುಂ ಕವಚಮುಂ ಮಿತ್ರರ್ಕಳುಂ ಮಿಱ್ಱಿ ಮೇಲೆರ್ದಾಗಳ್ ಶರಣಪ್ಪೊಡೇಕೆ ಮಡಿದರ್ ಪನ್ನಿರ್ವರುಂ ಚಕ್ರಿಗಳ್ (ವರ್ಧಮಾ. ೦೪೩-೦೬) ; ಮೂವತ್ತಿರ್ಛಾಸಿರ್ವರ್ ಮೆಯ್ಗಾಪಿನ ಗಣಬದ್ಧದೇವರುಂ (ಅದಿಪು. ೦೩-೩ ವ) ; ತಂತಮ್ಮಯ ಮೆಯ್ಗಾಪಿನ ಹಯಭಟದಂತಿವರಥವ್ಯೂಹವನ . . . ನಿಲಿಸಿ (ಜಯಸಾ. ೭-೮). **ಮೈಗಾಪು :** ಮೈಗಾಪಿನ ಬಿಚ್ಚಗತ್ತಿಯ ಕುದುರೆಯವರು ಕಾವಲ್ಗುಡುತ್ತ ನಡೆದರು (ಸವತಿ. ೦೮೭). **ಮೈಗಾಹು :** ಸೈಂಧವನ ಮೈಗಾಹ ಬಲಿವೆನು (ಕುಮಾ.ದ್ರೋ. ೯-೬೬); ಈ ಜಗದ ಮೈಗಾಹಿಗೋಸುಗ ಜನ್ಮವೆಂಬಿವು ಜೋಹವೈಸೆ (ಕೊರಂ. ೧-೯-೩೭).

**ಮೈಗಾಹಿನವರು** = ಅಂಗರಕ್ಷಕರು : ಮೋಹದವಳಿ ವೈದ್ಯರಲಿ ಮೈಗಾಹಿನವರಲಿ . . . ಪ್ರತ್ಯೂಹವನು ವಿರಚಿಸಿಯಲೇ ಭೂಪಾಲ ಕೇಳೆಂದ (ಕುಮಾ.ಸ. ೦-೩೬). [ಮೆಯ್$_2$ + ಕಾಪು]

**ಮೆಯ್ಗಾವಲಿಗ** (ನಾ). ಅಂಗರಕ್ಷಕ ; ಮೈಗಾವಲಿನವನು : ತೊಟ್ಟಿಲಯ್ಯ . . . ಮಹಾರಾಜನ ವಿಶೇಷದ ಮೆಯ್ಗಾವಲಿಗ (ಮಂತ್ರಿಶ. ೭ ಶಾತ್ರಶಂಕಯು). [ಮೆಯ್ಗಾವಲು + — ಇಗ]

**ಮೆಯ್ಗಾವಲು,** ಮೈಗಾವಲು (ನಾ). = ಮೆಯ್ಗಾಪು : ಮಂತ್ರೀಶ್ವರನ ಮೆಯ್ಗಾವಲ ರಥರಾಜಿದಂತಿಗಳಾಹವದೊಳಗೆ . . . ತೋಱಿತು ನೀಲಾಂಬರನ (ವೋಹಶ. ೪೦-೬೩). **ಮೈಗಾವಲು** . . . ಹನುಮನ ಮೈಗಾವಲಭಟರು ಬೇಲೂರ ಜನಪನ ಸಮ್ಮುಖದವರು . . . ಚಿನಕಡಿಯಾದರಾ ರಣದೆ (ಕಂಪಿ. ೦೩-೬೩) ; ಪಂಡಿತನಂತೂ ಮೈಗಾವಲಿನ ಭಟನಾಗಿ ಎಡೆಬಿಡದೆ ಇರುತ್ತಿದ್ದ (ಜಡೇಶ. ೨೦).

[ಮೆಯ್$_2$ + ಕಾವಲು (< ಕಾವಲ್$_1$)]

**ಮೆಯ್ಗಾಳಿ** (ನಾ). ದೇಹದ ವಾಸನೆ ; ಶರೀರದ ವಾಸನೆ : ಊರಿಗ ಜವರಲ್ಲದೆ ಪೊಸಬರ ಮೆಯ್ಗಾಳಿ ಸೋಂಬಲು ಖುರದಿಂದ ಪೋಳುಮಾಡುವುದವನಿಯ (ಕುರಾಶಾಂ. ೯-೪೩). [ಮೆಯ್$_2$ + ಗಾಳಿ$_1$]

**ಮೆಯ್ಗುಡು** 'ಮೆಯ್ಗೊಡು' ನೋ.

**ಮೆಯ್ಗುಂದು,** ಮೈಗುಂದು (ಕ್ರಿ). ೧. ಬೆಚ್ಚಿಬೀಳು; ಗಾಬರಿಯಾಗು : ಪಡಿಮೊಗವಾಗಲೊಡಂ ಕನ್ನಡಿಯಂ ನೋಡುವರ ತೆಱದೆ ಮೆಯ್ಗುಂದುವ ರುಗ್ಗಡದರಸುಮಕ್ಕಳ್ (ಕಬ್ಬಿಗಕಾ. ೪೯). **ಮೈಗುಂದು:** ೨. ಬಡವಾಗು; ಸೊರಗು : "ಇಱಿದಂ=ಮೈಗುಂದಿದಂ, ಕೆಟಗಣ್ಗೆವಂದಂ" (ಶಮಠ. ಶಂ. ೧) ; ಮೈಗುಂದದ ಚೆಂದವಿಂಗೊರಲ ಮೆಲ್ಲುಲಿಯೊಪ್ಪಿದುದೊಲ್ದ ಕೂಟದೊಳ್ (ಶಂದ್ರಶೇ. ೮-೬೭). [ಮೆಯ್$_2$ + ಕುಂದು$_1$]

ಮೈಗೊಡಹಿಡಿದುದು ಗಿರಿಯೊಂದು (ಪ್ರಭುಲಿ. ೧೯-೨೯):
[ಮೆಯ್$_2$ + ಕೊಡವು]

**ಮೆಯ್ಗೊಡು.** ಮೆಯ್ಗುಡು, ಮೈಗುಡು, ಮೈಗೊಡು (ಕ್ರಿ). ೧. ದೇಹವನ್ನು (ಪೆಟ್ಟು, ಹೊಡೆತ, ಸಾವು, ಯುದ್ಧ ಮೊದಲಾದುವು ಗಳಿಗೆ) ಗುರಿಯಾಗಿ ಒಡ್ಡು ; ಗುರಿಮಾಡು : ಮೆಯ್ಗೊಡದೆ ಬೀರಮಂ ಮಾಱುವರ್ ಮಾಱುವರ್ ಮೆಯ್ಗಳಂ ವಿಕ್ರಮದ್ರವ್ಯಕಿರ್ದರ್ ಸುಭಟರ್ (ಜಿವಿಪು. ೦೬-೩೯). **ಮೆಯ್ಗುಡು :** ೧. ಪೆಟ್ಟಿಗೆ ಮೆಯ್ಗುಡದೆತಗೆಪ್ಪೊಳಿಸಿದು . . . ನೊಸಲೊಡೆವಂತೆ ಪೆಟ್ಟಿದ ವಜ್ರಮುಷ್ಟಿಯುಲಿ (ಪೋಹಕ. ೦೨-೯೮). ೨. (ಸಂಭೋಗಕ್ಕೆ) ಶರೀರವನ್ನು ನೀಡು : ದೇಹವನ್ನು ಒಪ್ಪಿಸು : ಕೂಡಲೊಡರ್ಚಿರೆ ಲಜ್ಜೆಯೊಕ್ಕು ಮೈವಳಿಯೊಳ್ ಸಂದು ಮೆಯ್ಗು [ಪಾಠಾಂ. ಮೈಗು]ಡುತವಳ್ಪಡಿದಳ್ಕನಮುಂ ಮನೋಜ್ಞನಾ (ರಾಜಶೇ. ೮-೮೩). **ಮೈಗುಡು :** ೧. ಸೋಲದ ಗೆಲುವಿನುದಯ ಮುಹೂರ್ತವಶ ಮೈಗುಡದೆ ಕಾದುವುದು (ಕುಮಾ.ದ್ರೋ. ೦೩-೩೨): ಸಮರವ ಮೆಱೆವುದುಳ್ಳಡೆ ಮೈಗುಡುವುದಗ್ಗಳಿಕೆ ನಿಮಗೆ (ತೊರವೆ. ೩-೯-೨). ೨. ಜವದ ಜಾಣುಮೆಯುಱಿದು ಸೂಳ್ಗಳ ಸವಿಯು ಮುಂದಿಡೆ ಮೆಱೆಪ ಮೈಗುಡೆ ಸವಿಸುಸಿಲ ಸುಖರಸದೊಳೋಲಾಡಿಸಿದನಾ ಕುವರ (ಸಾಳ್ವಭಾ. ೯-೧೧). **ಮೈಗೊಡು :** ೧. ಓವದೆ ಕಾಯ್ದು ಕಡಂಗಿ ಪೊಯ್ಕೆ ಮೈಗೊಟ್ಟ ಸನುಯ್ಕೆ ದೇವತತಿ (ಮೈಅ. ೧೯೩೭, ೨೩-೧೧; 1276 ) : ಕಾಲರುದ್ರನ ಪಡೆಯಲಾಡುವನೀತನೋ ಮೈಗೊಡದಿರೋ (ಕುಮಾ.ಶೀ. ೯-೨೯); ವಿಕ್ರಮ ಜೀಮೂತವಾಹನನರಪಾಲರೀ ಕ್ರಮದೊಳು ಮೈಗೊ [ಪಾಠಾಂ. ಗೆ]ಟ್ಟು ಶಕ್ರಸ್ತುತರಾದುದಿಲ್ಲವೆ (ಶ್ರೀಪಾಂ. ೮-೩೩). ೨. ಪರರಂಗನೆಗೆ ಮೈಗೊಟ್ಟ ವರ ಶಿಕ್ಷಿಸದೆ ಬಿಡೆವು (ತೊರವೆ. ೯-೪-೯೬); ಭಂಡಾಟದಿ ಮೈಗೊಟ್ಟು ಗೋಪಿಯರು ಪಾವನ ನಿನ್ನಿಂದೈ (ತುರಂದ. ೦-೧೬೩-೦). ೩. (ಆಲಂ) ಅವಕಾಶ ಕೊಡು,—ನೀಡು : ವಂದನೆಗೆ ಮೈಗೊಟ್ಟು ನಿಲ್ಲದೆ ನಿಂದೆಗೆದೆ ಗೊಟ್ಟೋಡಿ ಹೋಗದೆ . . . ನಿಂದ ಧೀರೋದ್ಧಾರಗಲ್ಲದೆ ಹುಂದೆಗಹುದೇ ಭಕ್ತಿಯಿಂಬುದು (ಪ್ರಭುಲಿ. ೧೬-೩೭). ೧, ೩ : ಜಗದೊಳ್ಕುಶಾಸ್ತ್ರ ಪ್ರಕರಕೆ ಮೈಗೊಟ್ಟವಂ ವಿಗೆ ಪತಿತನಾಗದಿರ್ದಪನೆ (ಕೈವಿಶಾ. ೨೦-೨೧). ೪. ಪ್ರತಿಫಲ ಕೊಡು ; ಫಲಿಸು : ನಮ್ಮಯ ನುಡಿಯು ನೀ ಪಾಲಿಸಿದಡದು ಮೈಗೊಡುವ ಭಾಗ್ಯದ ಬೆಳಸಲೇ ನಮಗೆ (ತೊರವೆ. ೦-೯-೨೬). [ಮೆಯ್$_2$ + ಕೊಡು$_1$]

**ಮೆಯ್ಗೊಲೆ** (ನಾ). ದೇಹದಿಂದ ಒತ್ತಿ ಮಾಡುವ ಕೊಲೆ : ಕಯ್ಗೊಲೆ ಬಾಯ್ಗೊಲೆ ಮೆ[ಪಾಠಾಂ. ಮು]ಯ್ಗೊಲೆ ಕಾಲ್ಗೊಲೆ ಕೋಳ್ಗೊಲೆಯುಂ ಕಲಿಪ ಕಡುಬಿನ್ನಣಂಬಡೆದು ಕಟ್ಟಾಳ್ತನಂಬೆತ್ತಿಂತು ಗಜಾರೋಹಣಧುರೀಣರಾದಾ ಘೋರಣರ್ನೆರೆದರು (ರಾಜಶೇ. ೬-೧೧೪). [ಮೆಯ್$_2$ + ಕೊಲೆ$_2$]

**ಮೆಯ್ಗೊಳ್.** ಮೆಯ್ಕೊಳ್, ಮೈಗೊಳ್, ಮೈಗೊಳ್ಳು (ಕ್ರಿ). ೧. ಕಾಣಿಸಿಕೊಳ್ಳು ; ಪ್ರಕಟವಾಗು : ವ್ಯಕ್ತವಾಗು : ಮೆಯ್ಗೊಂಡೊಲವಿಂದಗಲ್ಕೆಗಣಮಾಱಿದ ಪಕ್ಕಗಳೆಲ್ಲಮಂ ಮರುಳ್ಗೊಂಡವೊಲೂಳ್ದು ಕೂಡೆ ಬೆಸಗೊಂಡು ಬಱಲ್ದುವು ಜಕ್ಕವಕ್ಕಿಗಳ್ (ಶಂಕರಾ. ೪-೯೮). ೨. ಮೈಮೇಲೆ ಬರು ; ಆವೇಶಗೊಳ್ಳು : ದಿಪೊಸೂಸೊಸ್ ಮೆಯ್ಗೊಂಡಾ ಪೆಣ್ಗಳ ನಾಱಿಸಪೋವನ್ (ಅಂತಿಗು. ೯೩-೮೮೯). **ಮೆಯ್ಕೊಳ್ :** ೩. ತೊಡು : ಧರಿಸು: 'ಮೆಯ್ಕೊಳಿಸು' ಪರಾ. **ಮೈಗೊಳ್:** ೪. ಅವತರಿಸು; ದೇಹವನ್ನು ತಾಳು : ವಿಶ್ವಂಭರಾಭಾರಾಪರೋಪದನಕೆ ಧರಣಿಯುಲಿ ಮೈಗೊಂಡು ದೈತ್ಯರನೊರಸಿದನು (ಕುಮಾ.ಆ. ೨-೪). ೫. ಮನಸ್ಸು ಮಾಡು; ತೊಡಗು : ಕೈಗೊಳ್ಳು : ಮೋಕ್ಷಕ್ಕೆ ಕೊಂಡೊಯ್ವ ದೀಕ್ಷೆಗೆ ಮೈಗೊಳ್ಳದನಿತ್ಯಮೆಂದೆನಿಸುವೀ ಸಾಮ್ರಾಜ್ಯಮೋಹಕ್ಕೆ ದಂದುಗದಿಂ . . . ನೀನಿಂತಿರಲ್ ತಕ್ಕುದೇ (ಅತಿಥಿ. ೬-೭೦). **ಮೈಗೊಳ್ಳು :** ೧. ಕಾದಂಬರಿಯ ದರ್ಶನ ಪ್ರಮುಖವಾಗಿ ಮೈಗೊಂಡಿರುವುದು ಮೂರು ಸಂಪತ್ತುಗಳು (ಸಮೀಕ್ಷೆ. ೨೯ ಟೀಕೆ); ಅರ್ಪಣವೆ ಮೈಗೊಂಡ ಹಾಗೆ ಇರುವೆ (ಜೀವಂ. ೬-೧೧); ಶ್ರೀ ಕನಕದಾಸರ ವಾಣಿಯಲ್ಲಿ ಸಹಜ ಸೊಮ್ಮು, ದೇಸಿಯು ಸವಿತಿರುಳು ಮೈಗೊಂಡಿವೆ (ಜಗದ್ಗು. ೦೨೭). [ಮೆಯ್$_2$ + ಕೊಳ್$_1$]

**ಮೆಯ್ಚಾಚು,** ಮೈಚಾಚು(ಕ್ರಿ). ೧. ದೇಹವನ್ನು ನೀಡು,—ಚಾಚು: ಹೆಡೆಯ ಮಣಿಗಳ ಕಂಡು ಸೂಸಿದ ಕಿಡಿಗಳಹಹಾಯೆನುತ ಶಿರಗಳ ಕೊಡಹಿ ಮುಱುಗಿದರು ರಗಿಯರು ಮಱಿಗಳಿಗೆ ಮೆಯ್ಚಾ [ಪಾಠಾಂ. ಮೈಚಾ] ಚಿ (ಕುಮಾ.ಆ. ೨೦-೬೦). **ಮೈಚಾಚು:** ೧. ನೀವು ಹೋಗಿ ಎಂದು ಯಶೋದೆ ಹೇಳಿ ಅಲ್ಲೇ ಮಲಗಲು ಮೈಚಾಚಿದಳು (ಪಾಕ್ಕ್ಯ. ೦೨). ೨. ದೇಹವನ್ನು ಬಾಗಿಸಿ ನಮಸ್ಕರಿಸು; ದೀರ್ಘದಂಡಪ್ರಣಾಮ ಮಾಡು: ಅವರು. . .ನಮಃಶಿವಾಯ ಎನ್ನುತ್ತ ನೆಲದಲ್ಲಿ ಮೈಚಾಚಿದರು (ಛಾಮುಣಿ. ೯೩). [ ಮೆಯ್$_2$ + ಚಾಚು$_1$ ]

**ಮೆಯ್ಜೋಡು.** ಮೈಜೋಡು (ನಾ). ೧. ಶರೀರದ ರಕ್ಷಣೆಗಾಗಿ ಹಾಕಿ ಕೊಳ್ಳುವ ಕವಚ ; ತನುತ್ರಾಣ : ಚಿಲಖತ್ತು : ಮೆಯ್ಜೋ[ಪಾಠಾಂ. ಮೈಜೋ]ಡು ಹೊರಳಿಯ ಝಲ್ಲಿ ಹರಿಗೆಯ ಬಿರಿದು ಬೂಡಾಯುತ ಬಿಗಿದುಟ್ಟ ದಟ್ಟಿಯ ಹರಿಗೆಯವರು ತಱುಬಿವರು (ಕುರಾಜಾಂ. ೧೧-೩೦): ಪಾಪಂಗಳ ಮೆಯ್ಜೋಡನುಗಿದು ಬಿಸುಡುವ ಗಂಗೆ ಬೆನಱಿದಳು (ಕೈವಿಶಾ. ೯-೨೭). ೨. (ಆಲಂ) ಸಹಾಯ; ರಕ್ಷಣೆ: ನೆರವು: ಮೆಚ್ಚು ಮೆಯ್ಜೋಡಾಗಿ ... ಎರುವಾ ಪ್ರೇಮವೀರಗೆ ಬೇರೆ ಮೋರೆಯನು ತೋರುವುದು (ಅನಿಕೇ. ೨-೧೯). **ಮೈಜೋಡು :** ೧. "ಸವಗವೆಂದು ಮೈಜೋಡಕ್ಕು" (ಕಬ್ಬಿಗ. ೯೨); ಏಱಿದ ಮೈಜೋಡಿನ ದಿಟ್ಟಜೋದರ ಎತ್ತಿದ ಬಲ್ಪಿನ ಬಿತ್ತರದ ಪಟ್ಟೆಯ. . . ಹಿಂದೆ ಮುಂದೆ ಸಂದಣಿಸಿ ಹರಿದಾಡುವ ನಿಟ್ಟೆಕಾಱರ (ಹರಿಶ್ಚ. ೩-೩೩ ವ); ಭೂಪಾಲರ ಪಡೆ. . . ತಳುವದೆ ಮೈಜೋಡು ಧರಿಸಿ ರಥವನೇಱಿ ಕಳಕಳದೊಡನೆ ಕವಿದುದು (ಕರ್ಣವ. ೩-೦೬). ೨. ಇವರ ಕರುಣೆಯೇ ಇವರ ವಿರೋಧಿಗಳ ಮೈಜೋಡು (ತುಂಗಭ. ೯೯).
[ಮೆಯ್$_2$ + ಜೋಡು]

**ಮೆಯ್ಝಳ,** ಮೈಝಳ (ನಾ). ದೇಹದ ಶಾಖ ; ಶರೀರದ ಕಾವು : ಸಾರಿದರು ಪೂಗೊಳನನಾ ಚಂಡಾಂಶುವಿನ ಮೆಯ್ಝಳ [ಪಾಠಾಂ. ಮೈಝ]ಳದ ಝಾಡಿಯ ಜೋಡಿಯಧ್ವಶ್ರಮದ ಭಾರವಲಿ (ತೊರವೆ. ೨-೭-೩). **ಮೈಝಳ :** ತಳಿತ ಕಿಡಿಗಳ ಕೈದುವಿನ ಮೈಝಳದ ಝಾಡಿಯೊಳುಭಯ ಬಲದಗ್ಗಳದ ಹರುಷವಿಷಾದವಾರಿಧಿ ಕಾಲುಹೊಳೆಯಾಯ್ತು (ಕುಮಾ.ದ್ರೋ. ೦೭-೩೦). [ಮೆಯ್$_2$ + ಝಳ (< ಜಲ್$_1$)]

**ಮೆಯ್ದಡವು,** ಮೆಯ್ದಡಹು, ಮೈದಡವು, ಮೈದಡಹು (ಕ್ರಿ). (ಪ್ರೀತಿಯಿಂದ) ದೇಹವನ್ನು ನೇವರಿಸು ; ಶರೀರವನ್ನು ಸವರು : ಸತ್ಕರಿಸಿ ಮೆಯ್ದಡವಿ ಕಣ್ಣೀರ್ಗಳಂ ತೊಡೆದು (ಶಬ್ದಮ. ೩-೨೨); ದಿವ್ಯದೇಹ ಕೂರ್ಗೋಲಿಂದೆ ನೊಂದಿರೆ ಮೆಯ್ದಡವಿದನು (ಮೋಹತ. ೩೩-೩೦). **ಮೆಯ್ದಡಹು :** ಕತ್ತರಿಸಿದ ಬಾಹುಮೂಲದೆ ಚೆಲ್ಲುವ ನೆತ್ತರ ನಿಲಿಸಿ ಮೆಯ್ದಡಹಿ . . . ಕಸ್ತುರಿಸಿದ ಕೃಪೆಯಿಂದೆ (ಮೋಹತ. ೯೦-೮೩). **ಮೈದಡವು :** ಅಂದಗಜೆ ನೋಡಿ ಮೈದಡವಿ ಕೊಂಡಾಡುತಂ (ಐಪಾರ. ದೀ. ೦೨೩-೨೯) ; ಮೈದ[ಪಾಠಾಂ. ಮೆಯ್ದ]ಡವುತ ಕರಗುತ ಒಡನೊಡನೆ ಬಿಗಿದಪ್ಪಿಕೊಳುತಂ ಗುಡಿಯೊಳಾಗಳೆ ಪೊಕ್ಕನು (ಬಸವಪು. ೬೦-೬೨): ಬಾರೈ ಕರ್ಣ ಬಾಯೆನುತ ತುಳುಕಿದನು ಕಂಬನಿಯ ಕೋಮಳತಳದಿ ಮೈದಡವಿದನು (ಕುಮಾ.ದ್ರೋ. ೧-೨೩). **ಮೈದಡಹು :** ಅಕ್ಕಱಿಂ ಮೈದಡಹಿ ಮಗನಂ ತಕ್ಕವಿಸಿ (ಬಸವಪು. ೯-೬೦); ಮಾನಿನಿಯ ಮೈದಡಹಿ ಚಿಂತೆಯದೇನು ತಂಗಿ ಲತಾಂಗಿ ಹೇಳಾ ಮೌನಮುದ್ರೆಯದೇನೆನಲು (ಕುಮಾ.ಆ. ೦೬-೩೩); ತಪ್ಪುಂಟದನು ಮಱೆಯೆಂದು ಮೈದಡಹಿ ಶಂಕರಂ ಕೂರ್ತು . . . ಪಾಡೆಂದು ತಾಳ್ದವನಿತ್ತನು (ಸೌಂದರ. ೩-೨೩). [ಮೆಯ್$_2$ + ತಡವು$_2$]

**ಮೆಯ್ನಡಹು** ' ಮೆಯ್ನಡವು ' ನೋ.

**ಮೆಯ್ನರ್** (ಕ್ರಿ). (ಆಲಂ) ಮನಸ್ಸುಮಾಡು ; ಇಚ್ಛೆಪಡು : ಜೈನದೀಕ್ಷೆಗೆ ಮೆಯ್ವಂ ತರುಣಜನಂಗಳ್ ತರ್ಪರ್ ಪರಿಣತವಯಸ್ಕರ್ಕಳ ಪ್ಪವರ್ ಮೆಯ್ನಾರರ್ (ಆದಿಪು. ೦೩-೪೪); ಇನಿದೆಂಬಯ್ ವಿಷಮಪ್ಪ ದುರ್ವ್ಯಸನಮುಂ ಧರ್ಮಾಮೃತಂ ಕೈಪೆಯೆಂದೆನಸುಂ ಮೆಯ್ನರಲಾಜ (ಶಬ್ದಸಂ. ೦೭೨-೦೭); ಮದಿರಾಪಾನಕ್ಕೆ ಮೆಯ್ನಾರದೆ ಸುಟಿಪೆರಂ ಪಾರದೆ . . . ಏಕಾಂತದೊಳ್ ನಿಲ್ಲದಿರಾಂ ಬರ್ಪನ್ನವಾಯ್ತಂ ನಿನಗಿದು ವಿಗತಾ ಪಾಯಮುಪ್ಪೊಂದುಪಾಯಂ (ಜಗದಿ. ೦೭-೦೨೭). [ಮೆಯ್ $_2$ + ತರ್]

**ಮೆಯ್ವಿಳಿ** (ಕ್ರಿ). ಪ್ರೈಮೇಲಿನ ಪರಿವೆ ಬರು ; ಚೇತರಿಸಿಕೊಳ್ಳು; ಎಚ್ಚರಾಗು : ತುಟಿಲಾಳ್ಗಳ್ ಶೈತ್ಯೋಪಚಾರದತ್ತಣಿಂ ಮೆಯ್ದಿಳಿದೆತ್ತಂ ದಿಟ್ಟಿಸುವ ಭರದೊಳ್ ಇದಿರ್ಗೆ ಬಂದ ತನ್ನಯ್ಯನ ಬೆಂಬಲದ ಸೇನೆಯುಂ ಕಂಡು ತಾನವಜಿಳೊಂದಿದಂ (ರಾಮಾಶ್ವ. ೯೪-೨೪). [ಮೆಯ್ $_2$ + ತಿಳಿ $_1$]

**ಮೆಯ್ನಾಂಟೆ** (ನಾ). ದೇಹದ ತೀಟೆ, - ನಸೆ : ಜೇಂಟದ ಸುಳಿವಿಲ್ಲದೆ ಕಲಾವಿಹೀನತೆಯಿಂದ ಮೆಯ್ನಾಂಟೆಯನ್ನು ಮಸಗಿಸಿ ತುರಿಸಿ ತೀರ್ಚುವ ಮೃಗವೇ ಮೊರತು . . . ಸಂಸ್ಕಾರಕಾರಕನಲ್ಲವಹುದು (ಮಂತ್ರಶ. ೯೯-೦೯).

[ಮೆಯ್ $_2$ + ತೀಂಟೆ $_1$]

**ಮೆಯ್ನಾವಿಗೆ** (ನಾ). (ಆಲಂ) ದೇಹದ ಕಾಂತಿ; ಶರೀರದ ತೇಜಸ್ಸು : ಕೆಯ್ದಾವಿಗೆ ಮುಂದೆ ಸವಕಿರ್ದುದಾ ರಾಯ ಮೆಯ್ದಾವಿಗೆಯೊಳ್ ನಡೆದನು (ಶಶಿ. ೦೨-೦೦). [ಮೆಯ್ $_2$ + ದೀವಿಗೆ]

**ಮೆಯ್ನಾವು** (ಕ್ರಿ). ಶರೀರವನ್ನು ಆವರಿಸು ; ವ್ಯಾಪಿಸು : ಭಾವ ಸುರತಮಂ ಮಾಡಿದ ಸವಿ ಮೆಯ್ದಾವಲ್ಪಟ್ಟದ ಪರವಶವೋ ಎನೆ ತೀವಿದುದಾ ಪ್ರಳಯಂ (ಜಯುಶಾ. ೪-೨೩). [ಮೆಯ್ $_2$ + ತೀವು]

**ಮೆಯ್ದುಂಬು**. ಮೈದುಂಬು (ಕ್ರಿ). ೧. ದೇಹವನ್ನೆಲ್ಲ ಆವರಿಸು; ಶರೀರವನ್ನೆಲ್ಲ ತುಂಬು : ಭಸಿತವಂ ಮೆಯ್ದುಂ[ಪಾಠಾಂ. ಮೈದುಂ] ಬಲುದ್ಧೂಳಿಸುತ (ಬಸವ. ೦೨-೦೭). ೨. ದೇಹವು ಚೈತನ್ಯದಿಂದ ಕೂಡು : ಬಸವನಸು ಉರವಣಿಸಿ ಬಂದಿತು ಕಿನ್ನರಯ್ಯಗಳ ಅಸುವೊದಗಿ ಮೆಯ್ದುಂಬಿ ಬರೆ (ಬಸವ. ೩೫-೫೭). **ಮೈದುಂಬು** : ೧. ಬಿರುಗಾಳಿ ಮೈದುಂಬಿ ಆಗಸದ ಮೂಲೆಮೂಲೆಯಲಿ ಸಿಡಿಲು ಮಿಂಚಿನ ಬಾರುಕೋಲು ಬೀಸಿ ಮಧುರಯಾತನೆ ಬಾಳ ಸುತ್ತುವರಿಯಿತು ಮೊರೆದು (ಪಂಚ. ೪೨-೦೩). ೩. ಶರೀರದ ಮೇಲೆ ದೈವಶಕ್ತಿಯ ಆವಾಹನೆಯಾಗು : ಆ ಮಹಾರಾಯಿತೀಗೆ ಅಮ್ಮ ಮೈದುಂಬಿದೆ . . ಎಂದು ಸಿಡುಕಿದರು (ಪಂಚಿ. ೪೦); ದೇವರು ಮೈದುಂಬಿ ಊರಿಗೆ ಕೇಡು ಅಂತ ಹೇಳಿತು (ರೂಢಿ). [ಮೆಯ್ $_2$ + ತುಂಬು $_1$]

**ಮೆಯ್ದುಡಿಗೆ** ' ಮೆಯ್ದೊಡಿಗೆ ' ನೋ.

**ಮೆಯ್ದುನ**. ಮಇದುನ. ಮಯಿದುನ, ಮಯ್ದುನ. ಮೈದ, ಮೈದುನ (ನಾ). ೧. ಗಂಡನ ಅಥವಾ ಹೆಂಡತಿಯ ತಮ್ಮ. ೨. ತಂಗಿಯ ಗಂಡ: ಎನ್ನ ಮೆ[ಪಾಠಾಂ. ಮ]ಯ್ದುನನಪ್ಪ ವಜ್ರಬಾಹುಗಮೆನ್ನ ತಂಗೆಯಪ್ಪ ವಸುಂಧರೆಗಂ ವಜ್ರಜಂಘನೆಂಬ ತನುಜನಾದಂ (ಆದಿಪು. ೩-೬೩ ವ); ಎನ್ನ ಮೆ[ಪಾಠಾಂ. ಮ]ಯ್ದುನಂ ವಜ್ರಬಾಹುಗಮೆನ್ನ ತಂಗೆ ವಸುಂಧರೆಗಂ ವಜ್ರಜಂಘನೆಂಬ ಮಗನಾದೊಂ (ಪುರುದೇ. ೨೩). **ಮಇದುನ** : ೧. ಶ್ರೀಮನುಮಹಾಪ್ರಧಾನಂ ಜಾತೆಯ ದಣ್ಣಾಯಕರ ಮಇದುನ ಆ ಮಾಳವೂರಧಿಕಾರಿಗಳು ಕೊಮಾರ ಕೇಸವಪ್ಪನೂ (ಎಕ. IX (S), ಚನ್ನಪ. ೭೭-೦೪ ; 1306). **ಮಯಿದುನ** : ೧. ಧೀರಸುದಾರಮೇರು ರಕ್ಷಿ(ಸಿ) ಮಯಿದುನ ಸೊಯ್ದೇವನ್ (ಎಕ. XI, ಚಿತ್ರದು. ೦-೨೦ ; 1310) ; ದೇವಪ ದಣ್ಣಾಯಕರ ಮಯಿದುನ ಬಿಮಳಪನವರು (ಎಕ. XVI, ತುಮಕೂ. ೭೯-೯ ; 1314). **ಮಯ್ದುನ** : ೧. ಭಾನುಮತಿಗೆ ನಿನ್ನಾಣ್ಮನುಮಂ ನಿನ್ನ ಮಯ್ದುನನುಮಂ ನೀನೊಪ್ಪುಗೊಳ್ಳೆಂಬುದುಂ (ಪಂಪಭಾ. ೭-೩೯ ವ); ದಂಡನಾಯಕ ಮಹಾದೇವಮ್ಮಗಳುಂ ಅವರ ಮಯ್ದುನಂ ಶ್ರೀಪುರದ ಹೆರ್ಗಡೆ (ಸೌಇಇ. XI-i, ೩೦-೨೪ ; 1138). ೨. ಕಾಶ್ಯಪಿಯೆಂಬೊಳೆನಗೆ ತಂಗೆಯಿಲ್ಲ ಸೋಮಶರ್ಮನೆಂಬೊಂ ಮಯ್ದುನನುಮಿಲ್ಲ (ವಡ್ಡಾರಾ. ೩-೦೯). ೩. ಪ್ರಿಯ ; ನಲ್ಲ : ' ನೆಯ್ದಿಲಮಯ್ದುನ ' ಪರಾ. **ಮೈದ** : ೧. ಅಂತೂ ಮೈದನ್ನ ಬಯ್ಯೋದರಲ್ಲಿ ನೀವು ನನ್ನ ಮರ್ಯಾದೇನ ತಿಪ್ಪೇಗೆ ಎಸೀತಿದ್ದೀರಿ (ಶಕಟ. ೨೦೩). **ಮೈದುನ** : ೧. ತನ್ನ ಮೈದುನನಪ್ಪ ಮೇಘಮಾಳಿ ವಿದ್ಯಾಧರನಲ್ಲಿಗೆ ಹೆರ್ಗಡೆಗಳಂ ಕೂಸಂ ಬೇಡಿಯಟ್ಟೆ (ವಡ್ಡಾರಾ. ೪೨-೦೨); ಅತ್ತೆ ಮಾವ ಮಾವ ಸಂಸಾರಿ ಮುವ್ವರು ಮೈದುನರು ಹುಲಿಯಂಥಾ ಅವದಿರು (ಜಾನಪದ. ೨. ೦೪೩-೩೨೮). ೨. ಏದೊರೆಯಂ ಯಮನಂದನನೇದೊರೆಯಂ ಭೀಮಸೇನನೇದೊರೆಯಂ ಕಂಜೋದರನ ಮೈದುನಂ (ಪಂಪಭಾ. ೭-೦೭); ಚರಣ ವದನವ ತೊಳೆದು ನಿರ್ಮಳವರಜಲವನೀಂಟಿದರು ನಿರುಪಮಪರಮಕರುಣಾರ್ಣವನು ಮೈದುನ ಸಹಿತ ಸರಸಿಯಲಿ (ಕುಮಾರವ್ಯಾ. ೦೦-೩೭); ಸಹೋದರಿ ಗಿರಿಜೆ ಮೈದುನನು ಶಂಕರನು ಸುರರೆಲ್ಲ ಕಿಂಕರರು (ಹರಿಕಾ. ೨೫).

[ದೇ.೫ ತಮಿ. ಮೈತುನನ್, ಮಚ್ಚಾನ್, ಮಚ್ಚುನನ್; ಮಲ. ಮಚ್ಚುನನ್. ಮಚ್ಚಿನನ್; ತುಳು. ಮೈತಿನೆ. ಮೈದುನೆ; ಕೊಡ. ಮಚ್ಚಣ; ತೆಲು. ಮೇನ : ಗೊಂಡಿ. ಮೈದೂ = ಗಂಡ]

**ಮೆಯ್ದುನಿಸು** (ಕ್ರಿ). ಮೈದುನನೊಡನೆ ತೋರಿಸುವ ಸಲಿಗೆಯನ್ನು ತೋರಿಸು : ಭಾವಾ ನಮೋಸ್ತು ನಿಮ್ಮಡಿ ದೇವಕಿ ಮೆಯ್ನೆಚಿದಳೆಂದು ಬಂದಿರೆ ಲೇಸಾಯ್ತಾವುದನುಡತಂದಿರೆನುತ್ತಾ ವಧು ಮೆಯ್ದುನಿಸಿ ನಗುತು ಮಡ್ಡಂ ಬಂದಳ್ (ಅರ್ಜನೇ. ೭-೩); ಮೆಯ್ದುನಿಸಿ ದೇವಕಿದೇವಿಯಾನಂದ ವಸ್ತ್ರಮಂ ತೋಜಿ ತಚಕಟವಾಡಿದೊಡೆನಗೆ ನಗೆಬೆಂದಜಾಯದತಿಮುಕ್ತಕ ಮುನಿ ಮುನಿದು (ಅರ್ಜನೇ. ೭-೦೫ ವ). [ಮೆಯ್ದುನ + — ಇಸು $_3$]

**ಮೆಯ್ದೂಳು** (ನಾ). ದೇಹಕ್ಕೆ ಅಂಟಿದ ಧೂಳು : ಹತ್ತಿದ ಮೆಯ್ದೂಳ ಕೊಡಹಿ ಕರವ ಪಿಡಿದೆತ್ತಿದಳಬುಜಾಯತಾಕ್ಷಿ (ಮೋಹತ. ೬-೨೭).

[ಮೆಯ್ $_2$ + ದೂಳು ( < ದೂಳಿ) ]

**ಮೆಯ್ದಿಗೆ**, ಮೈದೆಗೆ (ಕ್ರಿ). ೧. ಹೆದರು ; ಅಂಜು ; ಭಯಗೊಳ್ಳು : ತಿರುವಾಯೊಳಡೆ ಸುರರ್ ಪೊಜಿಯಿಟ್ಟರ್ ಭರದೆ ತೆಗೆನೆಚಿಯೆ ಮೆಯ್ದಗೆ ದರವಿಂದೋದ್ಭವನಿನೊಗೆದುದಾ ಬ್ರಹ್ಮಾಂಡಂ (ಪಂಪಭಾ. ೦೨-೦೯೨) ; "ಮೆಯ್ದಿಗೆದ = ಮೈಯಿಳಿದ ಎಂದರೆ ಗರ್ಭಸ್ರಾವವಾದ" (ಪಂಪದೀ. ೪೯೯). ೨. ಹಿಮ್ಮೆಟ್ಟು ; ಓಂಜರಿ ; ಹಿಂದೆಗೆ : "ಅಕ್ಕುಳಿಸಿತೆಂದುಂ, ಮೆಯ್ದಿಗೆದುದೆಂದುಂ. . .ಸುಣ್ಣಿತೆಂದುಂ, ಪಾರಗೆಯ್ಕೆಂದುಂ—ಈ ೧೩ ಅಪಸರಣಕ್ಕೆ ಪೆಸರು" (ಶಬ್ದಸಾ. ೭೨-೭೪೯); ವಲ್ಲಭೆಯ ವಚನಮಂ ಮನವಲ್ಲದ ಮನದೊಳ್ . . . ಸೈರಿಸೆ ಮೆಲ್ಲನೆ ಮೆಯ್ದಗೆವು (ಶಾಂತಿಪು. ೯-೫೦) ; ಅವರ ಬಲಕ್ಕೆ ಸುಗಿದು ಮೆಯ್ದಗೆವ ಬೇಡವಡೆಯಂ (ಪಂಚಾಮಾ. ೪-೬೫ ವ): ಶೃಂಗಾರರಸಕ್ಕೆ ಮನಂದಂದು ವೈರಾಗ್ಯರಸಕ್ಕೆ ಮೆಯ್ದಿಗೆದು (ಗಂಗೇ. ೫-೪೭ ವ); ಜಾಜಿದರು ಪಡಿತಳಕೆ ಮೆಯ್ದಿಗೆದರಡಹೊಯ್ಲಿನಲಿ (ಸಂಭವ. ೦೯-೫೭). ೩. ಕೃಶವಾಗು ; ಸಣ್ಣಗಾಗು : ಬತ್ತು : ಕೊರಗಿ . . . ಮೆಯ್ದಿಗೆದುವೆಂಬಂತೆ ತಾವರೆಗಳ್ಮುಗಿದು (ರಾಜಶೇಖ. ೩೭೫). **ಮೈದೆಗೆ** : ೨. ಮೈದೆಗೆಯದಿರಿ ಕಲಿಯಾಗಿಯೆಂದನು ನೃಪತಿ ಸುಭಟರಿಗೆ (ಕುಮಾರ. ೦-೨೨); ಹುರಿಯೊಡೆದು ಮೈದೆಗೆದು ಸಲೆ ಕೈಮುಚಿದು ಕೈದುವ ಬಿಸುಟು ಪಡೆ ಮೊಗದಿರುಹಲೆಚ್ಚನು ಕೊಚ್ಚಿದನು ಪುಷ್ಕರ ಚತುರ್ಬಲವ (ನಳಚ. ೯-೩೦); ವರ್ತಮಾನ ತಿಳಿಯುವ ಮೊದಲಿಗೇ ಮೈದೆಗೆದುಬಿಡುವ ಎತ್ತುಗಡೆ ಆವನದು (ಐಪ್ಪ.೨೭೨). ೩. ಕೆಜಿ ಹಳ್ಳ ಬಾವಿಗಳು ಮೈದೆಗೆದರೆ ಗುಳ್ಳೆ ಗೊರಜೆ ಚಿಪ್ಪುಗಳ ಕಾಣಬಹುದು (೨ಸವ. ೬೭೦); ಸರೋಧಿ

ವ್ಯೈದೆಗೆದುದು . . . ಗಗನಮಣಿ ಕಿರಣಮಂ ಪಸರಿಸಿದನು (ಸಿದ್ಧರಾ. ೭-೪೩) ; ಭಾರ್ಗವನ ಖಾತಿಗೆ ಕಡಲು ಮೈದೆ [ಪಾಠಾಂ. ತೆ]ಗೆದಂತೆ ತೆಗೆದುದು ನಮ್ಮ ಪರಿವಾರ (ತೊರರಾ. ೬-೦೩-೭). ೪. ದೇಹವನ್ನು (ಆಲಿಂಗನದ ಬಂಧನದಿಂದ) ಬಿಡಿಸಿಕೊಳ್ಳು,-ಹಿಂದಕ್ಕೆ ತೆಗೆದುಕೊಳ್ಳು : ಎಱಗಿದಕ್ರೂರನನು ಕೈದಣಿಯೆ ತೆಗೆದು ತಕ್ಕಯಿಸಿದನು ಮಿಗೆ ಮೈದೆಗೆಯಲೀಯದೆ ಬಿಗಿದ ಪುಳಕಾಳಿಗಳ ಸುಪ್ರೇಮಾರ್ದ್ರಹೃದಯೋಕ್ಷಣದಲಡಿಗಡಿಗೆ (ಸಿಠಾಗ. ೧೦-೪೯-೩). ೫. ಪರಾಕ್ರಮವನ್ನು ತೋರು: ಎಯ್ದೆ ಹಗೆಯಲಿ ಹೂಣಿ ಹೊಗದಿರು ಮೈದೆಗೆದು ಕಾದುವುದು ಜಯಸಿರಿಯ್ಯೆದೆತನ ನಿನ್ನಿಂದ ಮೆಱೆವುದು ಕಂದ ಕೇಳೆಂದ (ಕುಮಾರವ್ಯಾ. ೪-೪೯). ೬. ಕಳೆ ; ಮುಗಿ ; ತೀರು : ಅಗಲದೆ ಕಟ್ಟಿ ಕಱೆವ ಮಱೆಗಾಲಂ ಮೈದೆಗೆದ ಸಮನಂತರದಲ್ಲಿ (ಉದ್ಭಟ. ೦೦-೨ ಪ). [ ಮೆಯ್$_2$ + ತೆಗೆ$_1$ ]

**ಮೆಯ್ದೆರೆ** (ನಾ). ಶರೀರದ ಸುಕ್ಕು,—ಮಡಿಕೆ : ಪಾಮರಿಯರ ಜೋಲ್ವ ಮೆಯ್ದೆರೆಗಳಂ ನೆಱೆ ಭಾವಿಸಿ ಬೀಡುಮೆತ್ತು ಬಿತ್ತರಿಸುವ ದಾಡಿಮಪ್ರಜವಿದೆಂಬಭಿಶಂಕೆಯನಪ್ಪುಕೆಯ್ದು ಪೀವರಕುಚದಲ್ಲಿ ತಾಗಲಸುಗೆಯ್ದುದು ಕೀರಕುಳಂ (ಕುಸುಮಾ. ೨-೪೩). [ ಮೆಯ್$_2$ + ತೆರೆ$_4$ ]

**ಮೆಯ್ದೊಗಲ್,** ಮೆಯ್ದೊಗಲು, ಮೈದೊಗಲ್ (ನಾ). ದೇಹದ ಚರ್ಮ : ಸುಟ್ಟು ಕರಿಮುರಿವೋಗಿ ಚನ್ನಮೆಯ್ದೊಗಲ್ ನಿನತು ಬಣ್ಣ ಪೋಡುವುದು (ಬಿದ್ಯಶ್ರ. ೨-೨೬). **ಮೆಯ್ದೊಗಲು** : ಹಱಿದ ಮೆಯ್ದೊ [ಪಾಠಾಂ. ಮೈದೊ]ಗಲುಗಳ ಸೀಸಕ ಮುಱಿದೊಗುವ ನೆತ್ತರಿನ ನೆತ್ತಿಯ . . . ಮಿಗೆ ತೂಪಿಱಿವ ರಕುತದ ರಣದ ನಾಟಕದಱಿಕೆಗಾಱರು ಠಾವುಠಿಯಲೊದಗಿದರು ಸಸಿದಲಿ (ತೊರರಾ. ೬-೦೪-೨೨). **ಮೈದೊಗಲ್** : ಕಾಸಿದೆಣ್ಣೆಯ ಪೊಯಿಲ್ಗೆ ಪಟುಭಟರ ಮೈದೊಗಲ್ ಕೀಸಿದುದು (ಚಂಕು. ೮೨-೪೪). [ಮೆಯ್$_2$ + ತೊಗಲ್ ( < ತೋಲ್$_1$ ) ]

**ಮೆಯ್ದೊಗಲು** ' ಮೆಯ್ದೊಗಲ್ ' ನೋ.

**ಮೆಯ್ದೊಡವು,** ಮೈದೊಡವು (ನಾ). ದೇಹಕ್ಕೆ ತೊಡುವ ಆಭರಣ,- ಒಡವೆ : ಗಾಡಿ ಮೆಯ್ದೊಡವೆನೆ ಮಾಸಿ ರೂಪುಗರೆದಿರ್ದೊಡಮಾತನ ರೂಪಿದೊಂದು ಕಣ್ದೊಡವೆನೆ (ಕಂಠಾಮ. ೩-೩೯) ; ಕಡೆಗಣ್ಣ ಬೆಳಗು ಪೊಸ ಮೆಯ್ದೊಡವುಜ್ಜ್ವಳಿಪ ಮೊಗಂ ಕನ್ನಡಿಯೆನೆ ಬಳೆದಂ (ಕಬ್ಬಿಗ. ೦೨) ; ಪುಷ್ಪಸರನ ರಾಣಿಗೆ ಮೆಯ್ದೊಡವನುವೊಪ್ಪಿಸಿ ತುತಿಯ ಮಾಡಿದರು (ಪೋಹಕ. ೦೭-೪೩). **ಮೈದೊಡವು** : ತಳಿಣಿತನುಜ ಹಸಾದವೆನುತಾ ಧರಣಿಪತಿಯ ಮೈದೊಡವುಗಳ ಬೈತಿರಿಸಿದನು (ತೊರರಾ. ೪-೨-೦೨) ; ಮುಡಿ ಮೇಘ ಮೈದೊಡವೊಳಪ್ಪು ಬಿಡದಿಂದ್ರಚಾಪದಂತಿರಲಾಗ ಕಾರ್ಗಾಲದೊಡತಿಯೊಲವಳು ನಡೆವಳು (ಕಂಸವಿ. ೯-೪೩). [ಮೆಯ್$_2$ + ತೊಡವು]

**ಮೆಯ್ದೊಡಿಗೆ,** ಮೆಯ್ದುಡಿಗೆ, ಮೈದೊಡಿಗೆ, ಮೈದೊಡುಗೆ (ನಾ). = ಮೆಯ್ದೊಡವು: ರಾಜರಾಜಿಪ ನವ್ಯವಸ್ತ್ರಸಂತತಿ ಸಪ್ತವಾರ ಮೆಯ್ದೊಡಿಗೆ. . . ತೋರಮುತ್ತುಗಳ ಪಾಲಿಸಿದ (ಪೋಹಕ. ೦೩-೦೬) ; ಮೆಯ್ದೊಡಿಗೆಯ ದುಗುಲವನಿತ್ತ ನಿಪನಂತೆ ಕೆಯ್ದೊಱೆವವನಾವನೆನಿಸಿ (ಶಠಶ. ೩೬-೩೬). **ಮೆಯ್ದುಡಿಗೆ** : ತೊಟ್ಟ ಮೆಯ್ದು [ಪಾಠಾಂ. ಮೈದು]ಡಿಗೆಗಳ . . . ಕಾಂತಿ ಸೂಸುತಿರೆ (ಶ್ರೀಬಿಖಾ. ೩೩-೨೨). **ಮೈದೊಡಿಗೆ** : ಮಟ್ಟಿಯ ಧೂಸರದ ಮೈದೊಡಿಗೆ ಮೆಱೆಯೆ ವಿಳಾಸದಲಿ ನಡೆತಂದನರ್ಜುನದೇವನಿದ್ದೆಡೆಗೆ (ಕುಮಾರವ್ಯಾ. ೨೦-೦೩). **ಮೈದೊಡುಗೆ:** ರುದ್ರಾಕ್ಷಿಯೇ ಮೈದೊಡುಗೆಯೆನಗೆ (ಶುಹಾದೀ. ಬಿ. ೩೬-೭೬). [ಮೆಯ್$_2$ + ತೊಡಿಗೆ (<ತೊಡುಗೆ)]

**ಮೆಯ್ದೊಳೆ,** ಮೈದೊಳೆ (ಕ್ರಿ). ಶರೀರವನ್ನು ತೊಳೆ,_ಶುದ್ಧಿಗೊಳಿಸು; ಸ್ನಾನ ಮಾಡು : ಮೆಯ್ದೊ [ಪಾಠಾಂ. ಮೈದೊ]ಳೆದು ನೊಸಲಲಿ ವರಭಸಿತಮಂ ಪೂಸಿ (ಬಸಪು. ೩-೩೨) ; ಬಿಸಿನೀರಿಂದೆ ಮೆಯ್ದೊಳೆದು . . . ಕಟ್ಟಿಟ್ಟು ನಯನೊನದೊಳಸಿತಾಂಜನವನಿಕ್ಕಿದಳು (ಪೋಹಕ. ೦೦-೪೬); ಬಳಲ್ಕೆ ಗಳೆಯಲೆಳಸಿ ಘಳಲನೊಳಪೊಕ್ಕು ಮೆಯ್ದೊ [ಪಾಠಾಂ. ಮೈದೊ]ಳೆದು (ರಾಜಶೇ. ೬-೨೪ ಪ). **ಮೈದೊಳೆ** : ಕುದುರೆಯಂ ನೀರೂಡಿ ಮೈದೊಳೆದು [ಪಾಠಾಂ. ಮಿಸಿಸಿ, ಮೊಸಿ]ಕಟ್ಟಿ ತಾನು ನೀರ್ದು ಕುಡಿದು (ಪಡ್ಮರಾ. ೦೭೨-೨೦). [ಮೆಯ್$_2$ + ತೊಳೆ$_1$]

**ಮೆಯ್ದೋಱಿಸು** (ಕ್ರಿ). ಕಾಣಿಸಿಕೊಳ್ಳು ; ಪ್ರತ್ಯಕ್ಷವಾಗು : ಶ್ರೀಮಹಾದೇವ ದೇವೇಶ ಸರ್ವಜ್ಞ ಶಿರೋಮಣಿ ಮೆಯ್ದೋಱಿಸೆನಗೆ (ಪೋಹಕ. ೨೭-೩೭). [ಮೆಯ್ದೋಱು + — ಇಸು$_3$]

**ಮೆಯ್ದೋಱು,** ಮೈದೋರು, ಮೈದೋಱು (ಕ್ರಿ). ಕಾಣಿಸಿಕೊಳ್ಳು ; ಪ್ರಕಟವಾಗು : ಉಗ್ರಾರಿವಂಶಲತಾವಲ್ಲರಿಗೆ ದಾವ ಶಿ ಖಿ ಪೊ ಲ್ ಮೆಯ್ದೋಱಿ (ಕಂಕಬಾ. ೩-೩೩) ; ದುರಿತಸಂತಾನಾಪ್ಪಕವನಘಹುಸಿ ನಿಜಗುಣವೇಟು ಮೆಯ್ದೋಱಿರಲು (ಶೀಪಂಕ. ೦-೨) ; ಸೋತವಳೊಡನೆ ವಂಚನೆ ಬೇಡ ಮತ್ಪ್ರಾಣನಾಥ ಮೆಯ್ದೋಱೆಂದಳಬಲೆ (ಪೋಹಕ. ೨೭-೪೭). **ಮೈದೋರು:** ಪೂರ ಮೈದೋರೆನೆಂಬಾ ಕಪಟಿಯಂಶಾವತಾರದಿಂದಾರ್ಗೇನು (ಪುಂಕುಳ. ೩೬) ; ದೂರದ ದಿಗಂತದಲಿ ಗಿರಿಯುತ್ತಮಾಂಗದಲಿ ಮೈದೋರಿದನು ಆಹ ಹೊಂಬಿಸಿಲಿನೆಳನೇಸರು ! (ಕಪ್ಪಾಂಗ. ೬-೦೫೯) ; ಮುಗಿಲ ಮರೆಯನ್ನು ಕಳೆದು ಚಂದ್ರಮನು ಶರತ್ಕಾಲದಲ್ಲಿ ಮೈದೋರುವಂತೆ ನಾನು . . . ಬರುವೆನು (ಮಹಿಕ. ೯). **ಮೈದೋಱು** : ಎನ್ನೊಳಗಿರ್ದು ಮೈದೋಱದ ಭೇದವ ನಿಮ್ಮಲ್ಲಿ ಕಂಡೆನು (ಶುಹಾದೀ. ಬಿ. ೨೬-೩೦) ; ಓರಿದೊಂದಜ್ಞಾನದಿಂ ಯೌವನವಿಕಳತೆ ಮೈದೋಱಿ (ರತ್ನಾಕ. ೩) ; ಧರಣಿಯಲಿ ಮೈದೋಱಿದನು ಶಂಕರನು ವೃಷಭಾಕಾರದಲಿ (ತೊರರಾ. ೦-೬-೭೬). [ಮೆಯ್$_2$ + ತೋಱು]

**ಮೆಯ್ನಡುಕ,** ಮೈನಡುಕ (ನಾ). ಶರೀರದ ಕಂಪನ ; ಮೈ ನಡುಗುವಿಕೆ : ತತ್ಪುರವರದಲ್ಲಿ ಸಾತ್ವಿಕದ ಮೆಯ್ನಡುಕಂಗಳ ಮಾಗಿಯಾಗಳಂ (ಅರ್ಜವೀ. ೦-೭೬). **ಮೈನಡುಕ** : ಮೈನಡುಕ ನಿಂತಿತು (ಐಶಿೀ. ೦೦೨). [ಮೆಯ್$_2$ + ನಡುಕ]

**ಮೆಯ್ನಡುಗು ,** ಮೈನಡುಗು (ಕ್ರಿ). ದೇಹವು ಕಂಪಿಸು ; ಶರೀರದಲ್ಲಿ ನಡುಕವುಂಟಾಗು : (ಮೆಯ್ನಡುಗಿ) ಅಯ್ಯೋ ! ಎಂದೂ ಇಲ್ಲದ ಭಯವು ನನಗೇತಕೆಯೋ ಇಂದುಂಟಾಗಿದೆ. (ಸುಸುಗು. ೩-೦೬). **ಮೈನಡುಗು : ಬೆಱ** ಭಯಮವಶದಿಂ ಮೈನಡುಗೆ (ರಡ್ಡ್ ರಾಮ್ನ. ೭-೪೪). [ಮೆಯ್$_2$ + ನಡುಗು$_1$]

**ಮೆಯ್ನವಿರ್,** ಮೆಯ್ನವಿರು, ಮೈನವಿರ್, ಮೈನವಿರು (ನಾ). ಶರೀರದ ಮೇಲಿನ ಕೂದಲು : ಆತನ ನನೆಯಂಬಿನ ಮೊನೆಗಳೆಗಳೆವೆಂಬಿನಂ ಮೆಯ್ನವಿರ್ನಿಱಿದುವು (ಕಾದಂಬ. ೭೩೬) ; ಬಾಷ್ಪಾಂಬು ಕೈಗಳ್ಗೆ ಕಣ್ಮಲರಿಂ ಮೆಯ್ನವಿರ್ಗಳ್ ಪೊದಟ್ಟೊಗೆಯೆ (ಕಂಠಾಮ. ೬-೩೦) ; ಇಷ್ಟಶಿಷ್ಟಜನಕಲ್ಪಮಹೀಜರನೆಯ್ದೆ ಮೆಯ್ನವಿರ್ನಾಳಿಗೆಯೊದಡಂ ಪೊಗಳಲಾರ್ಗಮೆ ವಾಸುಗಿಯಯ್ದುದಿಂಬರ (ಶಶಿಶಾ. IX—i. ೨೩೭-೩೨; 1160). **ಮೆಯ್ನವಿರು:** ಕಾರೊಡಲು ಮೇಗಡರ್ದ ಮೆಯ್ನವಿರು . . . ಕೂರಂಬು ದೀರ್ಘಧನು ವೆರಸಿ ನೆರೆದುದು ಕಾನನಾರಿಗಳೆನಿಪ್ಪ ಶಬರಾಧಿಪರು (ಹಹಕಾ. ೩-೨); ಕರಮೆ ಮೆಯ್ನವಿರೇಳುತಾಲಿವರಲಂತೆ ಕರಗುತ್ತೆ . . . ಅಪಾಲಸಾತ್ತ್ವಿಕವೆ ಸಾಕಾರವಾದಂತೆ ಬಂದು (ಪದ್ಮರಾ. ೦೩-೩೭) ; ಕುಟಿಲಾಳಕಿಯರ . . . ಮೆಯ್ನವಿರ ಸುಟಿಯಿಂದ ಗುಡಿಗಟ್ಟಿಸುವ ಮಾಗಿಯ ಹಿಮ ವಿಟನಂತೆ ಕಣ್ಗೆ ರಂಜಿಸಿತು (ಪೋಹಕ. ೪-೪೩). **ಮೈನವಿರ್** : ಸೀರ್ಪನಿಯಾಂತ ಮೈನವಿರ್ (ಕಬಕ್ಕು. ೩೭-೭೯) ; ಅವಳಾಡಿದ ಮಾತಿಗೆ ಮೈನವಿರ್ಮುರ್ಂದುವರಿದು ಗುಡಿಗಟ್ಟಿ ಕುಂದದ ಗದ್ಗದದುಲುಹಿಂದ ಸಖಿಯೊಡನೆಂದಳು ಮಾಱುತ್ತರವ (ಕಂಸವಿ. ೯-೦೩೬). **ಮೈನವಿರು:** ' ಮೈನವಿರೇಳು ' ಪರಾ. [ಮೆಯ್$_2$ + ನವಿರ್]

**ಮೆಯ್ನವಿರು** ' ಮೆಯ್ನವಿರ್ ' ನೋ.

**ಮೆಯ್ನಾಟು** (ಕ್ರಿ). ದೇಹಕ್ಕೆ ಚುಚ್ಚಿಕೊಳ್ಳು ; ಅಂಗದಲ್ಲಿ ನೆಡು : ಬೇಟಕಾರ್ತಿಯರು ನೋಡಿದರರೆಬರು ಮೆಯ್ನಾಟಿ ಮನಸಿಜನಂಬುಗಳು (ಕುಜಾನಾಂ. ೩೦–೧೦). [ಮೆಯ್$_2$ + ನಾಟು$_1$ (< ನಾಂಟು)]

**ಮೆಯ್ನೀರ್, ಮೈನೀರು** (ನಾ). ಉಚ್ಚೆ ; ಮೂತ್ರ : ಇದು ಪೇಳಿದು ಮೆಯ್ನೀರೆಂಬುದನಱಿಯದೆ ಮೆಯ್ಗ ಪೂಸಿಕೊಳ್ವುವು ಮಕ್ಕಳ್ (ರಹರ್ಜಾಮ್ಯ. ೩–೦೭೬). **ಮೈನೀರು :** ಮಲೆತ ಮೈನೀರೆಂದು ಸಿಂಧುವ ಜಱಿದಿಳೆಗೊಲವೀವ ಕಱಿಗಳೊಪ್ಪಿದುವು (ಪೋಃಹಶ. ೨–೩೭) ; ಬಾಯಾರಿಕೆ ಹೆಚ್ಚಾಗಿ ಮೈನೀರು ಬಹಳವಾದಾಗ ಈ ಮದ್ದು ಉಪಯೋಗಿಸುತ್ತೇವೆ (ಹಸುಹೂ. ೦೦೨). [ಮೆಯ್$_2$ + ನೀರ್]

**ಮೆಯ್ನೆಳಲ್** (ನಾ). ಶರೀರದ ನೆರಳು: ಆಭೀಳಲಯಾಹಿನಿಷ್ಠುರಘಣಾಘದ ಮೆಯ್ನೆಳಲುದ್ಧತಾಂಗೆ . . . ವೀರಬಲ್ಲಾಳನ ತೋಳ ಬಾಳು ನೆಳಲಾದುದು (ಎಕ. VII. ಶಿಕಪು. ೩–೦೩; 1218). [ಮೆಯ್$_2$ + ನೆಳಲ್ (< ನೆೞಲ್$_1$)]

**ಮೆಯ್ನೆಱಿ, ಮೈನಾರು, ಮೈನೆರೆ, ಮೈನೆಱಿ** (ಕ್ರಿ). ಮೊದಲನೆಯ ಸಲ ಮುಟ್ಟಾಗು.–ಋತುಮತಿಯಾಗು ; ಪ್ರಾಯಕ್ಕೆ ಬರು : ಭುವನ ತ್ರಿತಯುಂ ತೃಣದಿಂದ ವಸ್ತುವೆನಿಸಿದುದು ಸುಮತಿ ಮೆಯ್ನೆಱಿಯಲೊಡಂ (ಶಾಂತಿಪು. ೪–೬೮) ; ನಿಮ್ಮಡಿ ದೇವಕಿ ಮೆಯ್ನೆಱಿದಳ್ (ಅರ್ಥನೇ. ೭–೬). **ಮೈನಾರು :** ಹುಡುಗಿ ಮೈನಾರಿದಳು (ರೂಢಿ). **ಮೈನೆರೆ :** ಕನ್ನೆ ಬೆಳೆದು ಮೈನೆರೆಯಲ್ (ಸೌಗಂಧಿ. ೩೩–೭); ಮದುವೆಗೆ ಮೊದಲೇ ಮೈನೆರೆದ ಪಳಸ್ನೂ . . . ಮುಟ್ಟಬಾರದು (ಕೃವಾಅ. ೯೯); ಮೈನೆರೆದ ಮೇಲೆ ಮದುವೆ ಮಾಡುವುದೇನು ಚೆಂದ (ಹೂಸಕ್ಷಿ. ೦೮). **ಮೈನೆಱಿ :** ಇವಳ ತಂದಾ ಮನೆಯುಂಮಿವಳು ಮೈನೆಱಿದ ಸಮಯದೊಳ್ ಹಾಳಾಗುವುದೆ ಸತ್ಯಂ (ಸಮ್ಯಕೌ. ೪–೨೪) ; ದೇವಕಿಯು ಮೈನೆಱಿದಳು (ಶಾಕ್ತಭಾ. ೨೦–೭). [ಮೆಯ್$_2$ + ನೆಱಿ$_1$]

**ಮೆಯ್ನೋಟ, ಮೈನೋಟ** (ನಾ). ೧. ತನ್ನ ಸ್ವರೂಪವು ಇತರರಿಗೆ ಕಾಣುವ ಸ್ಥಿತಿ : ಕೋಟಲೆಯ ಕೊಲ್ಲಣಿಗೆಯಲಿ ಮೆಯ್ನೋ[ಪಾಠಾಂ. ಮೈನೋ]ಟಕಲಸದೆ ಬಿಸಿಲಲಿವರು ಮಹಾಟವಿಯ ಮಧ್ಯವನು ಹೊಕ್ಕರು (ಕುವ್ಯಾಅ. ೬–೯೪). **ಮೈನೋಟ :** ೨. (ಅಜ್ಞಾತದಲ್ಲಿರುವವರನ್ನು) ಎದುರಲ್ಲಿ ಕಾಣುವುದು : ದಾಟಿದವು ನುಡಿದವಧಿಯಾಸು ವೈರಾಟಪುರದಲಿ ತುಱುವಿಡಿದು ಮೈನೋಟಕೋಸುಗ ಬಂದು ನುಗ್ಗಾಯಿತ್ತು ಕುರುಸೇನೆ (ಕುವ್ಯಾವಿ. ೦೦–೩೭). [ಮೆಯ್$_2$ + ನೋಟ]

**ಮೆಯ್ಪಿಂಗಿಸು** (ಕ್ರಿ). ಹಿಮ್ಮೆಟ್ಟಿಸು : ವಿಮುಖವಾಗಿಸು : ಯುಷ್ಮದೀಯ ವಿಲೋಕಂ ಯಮಲೋಕಮಂ ವೃಜಿನದಿಂ ಮೆಯ್ಪಿಂಗಿಸಿತ್ತು (ಜಗವಿ. ೦೦–೦೩). [ಮೆಯ್$_2$ + ಪಿಂಗಿಸು]

**ಮೆಯ್ಪೊರ್ದು** (ಕ್ರಿ). ದೇಹವನ್ನು ತಾಗು, – ಸ್ಪರ್ಶಿಸು .. ಎಸಗಿನ್ನೇ ನೊಳಗಾದಳೆಂದೆಸೆವ ದೇಹಚ್ಛಾಯೆ ಮೆಯ್ಪೊರ್ದೆ ಕಾಮಿಸಿ ತಳ್ತಪ್ಪಿದಳೆಗ ಳೆಂದು ಬಗೆವಂ ಭೂಪಾಲವಿದ್ಯಾಧರಂ (ಕಾದಂಸಾ. ೩೭). [ಮೆಯ್$_2$ + ಪೊರ್ದು]

**ಮೆಯ್ಬಣ್ಣ** ' ಮೆಯ್ವಣ್ಣ ' ನೋ.

**ಮೆಯ್ಬಲಿ** (ಕ್ರಿ). ದೇಹವನ್ನು ದೃಢವಾಗಿಸು, — ಗಟ್ಟಿಗೊಳಿಸು : ಈತನಾರೆಂದಱಿಯದಿವನೌಡೊತ್ತಿ ಮೆಯ್ಬಲಿ[ಪಾಠಾಂ. ಮೈಬಲಿ]ದ (ಕುವ್ಯಾಅ. ೦೪–೦೦). [ ಮೆಯ್$_2$ + ಬಲಿ$_1$ (< ಬಲ್$_1$) ]

**ಮೆಯ್ಬಿಡು** ' ಮೆಯ್ವಿಡು ' ನೋ.

**ಮೆಯ್ಬಿಸುಪು, ಮೈಬಿಸುಪು** (ನಾ). ದೇಹದ ಶಾಖ; ಶರೀರದ ತಾಪ : ಓರೊರ್ವ ಮೆಯ್ಬಿಸುಪಿನೆಸಕಧಿಂ ಪೊಕ್ಕ ನೀರ್ಕದಡ ಕುದಿವಿನಂ ಕೃತ್ರಿಮ ತರಂಗಿಣಿಯ ಪೊನಲೊಳ್ ಪೊರಳ್ದು (ಪರ್ಣತ್ರಿ. ೪–೩೬ ಪ); ಆಕೆಯ ಮೆಯ್ಬಿ ಸುಪೇನಳುಂಬಮೋ (ಕಬ್ಬಿಗಾ. ೩೦೩). Δ **ಮೈಬಿಸುಪು :** ವಿರಹವಿಮ್ಮಡಿಸೆ ಸುಯ್ ಮೂವಡಿಸೆ ಮೈಬಿಸುರ್ಪಿರದೆ ನಾಲ್ವಡಿಸೆ (ಕಶಪು. ೪೬–೦೦). [ಮೆಯ್$_2$ + ಬಿಸುಪು ]

**ಮೆಯ್ಬೆದಱು, ಮೈಬೆದಱು** (ಕ್ರಿ). (ಗಾಬರಿಯಿಂದ) ದೇಹವು ಬೆದರು; ಬೆಚ್ಚಿಬೀಳು : ನಿದ್ರಾಮುದ್ರಿತೇಕ್ಷಣಂ ಪದವ ಹಿಡಿದಲ್ಲಾಡಿದಡೆ ಮೆಯ್ಬೆ[ಪಾಠಾಂ. ಮೈಬೆ]ದಱುತೇನೇನೆನುತ (ಕುವ್ಯಾಗ. ೯–೬). **ಮೈಬೆದಱು :** ಗೋಡೆಗಟ್ಟಾಗಿ ಬಳಸಿಕೊಂಡ ವೀರರ ನೋಡಿ ನಾಗೇಂದ್ರ ಮೈಬೆದಱೆ (ಶರಶ. ೩೬–೪೪). [ಮೆಯ್$_2$ + ಬೆದಱು$_1$]

**ಮೆಯ್ಮರೆ** ' ಮೆಯ್ಮಱಿ ' ನೋ.

**ಮೆಯ್ಮರ್ಚು** (ನಾ). ಶರೀರಕ್ಕೆ ಮಾಡುವ ಅಲಂಕಾರ; ದೇಹಾಲಂಕಾರ : ತಾನೆ ಲಕ್ಷ್ಮಿಗೆ ಮೆಯ್ಮರ್ಚನೊಡಚ್ಚುರ್ತಿರ್ಪ್ಪ ಪುರುಷಂ (ಎಇ. XII. ೪೩–೪೪ ; 1112). [ಮೆಯ್$_2$ + ಮರ್ಚು$_2$ (< ಮೆಚ್ಚು$_2$)]

**ಮೆಯ್ಮಸೆ** (ನಾ). ಶರೀರದ ಮೇಲೆ ಉಂಟಾದ ಸಣ್ಣಸಣ್ಣ ಗಾಯ : ಏಱುವಡೆದರು ಹೊಕ್ಕವರು . . . ತಾರುಥಟ್ಟಿನೊಳಟ್ಟಿ ಮೆಯ್ಮ[ಪಾಠಾಂ. ಮೈಮ]ಸೆ ಸೂಱಿಕಾಱರು ಮಿದುಳ ಜೊಂಡಿನ ಜೋಱುಗಳ ಬೀಱಿದವು ಬೇತಾಳರಿಗೆ ಭಟನಿಕರ (ಕುವ್ಯಾದ್ರೋ. ೦–೩೨) ; ಮೆಯ್ಮ [ಪಾಠಾಂ. ಮೈಮ] ಸೆಯರುಣವಾರಿಯೊ ಮಳೆಗಳಿಲ್ಲದ ಹೊನಲೊ ರಣದಲಿ ಚಿತ್ರವಾಯ್ತು (ಕುವ್ಯಾದ್ರೋ. ೦೪–೭). [ಮೆಯ್$_2$ + ಮಸೆ$_2$]

**ಮೆಯ್ಮಱವೆ** (ನಾ). ಶರೀರದ ಮೇಲೆ ಎಚ್ಚರವನ್ನು ಕಳೆದುಕೊಂಡಿರುವ ಸ್ಥಿತಿ: ಸೋಕುವುದು ಮೆಯ್ಮ [ಪಾಠಾಂ. ಮೈಮ]ಱವೆ ಮಱವೆಯನೋ ಕರಿಸುವುದು ಚಿತ್ತವೃತ್ತಿ (ಕುವ್ಯಾಅ. ೯–೮). [ಮೆಯ್$_2$ + ಮಱವೆ]

**ಮೆಯ್ಮಱುಕ, ಮೈಮಱುಕ** (ನಾ). ೧. ಮನಸ್ಸಿನ ತಾಪ,– ಕಳವಳ : ತನ್ನ ಬಾಳ್ಕೆಯಿನ್ನೇತಱದೆಂಬ ಮೆಯ್ಮಱುಕದಿಂ ನವಚಿತ್ರಪಟಂಬೊಲಿರ್ಪನಾ ಭೂತಳವಲ್ಲಭಂ (ವಳಶಂ. ೬೩). **ಮೈಮಱುಕ :** ೨. ಶಾರೀರಕವಾದ ತಾಪ ; ದೇಹದ ಅಸ್ವಸ್ಥತೆ : ನಿರತಿಶಯಭಕ್ತಿಪೂರ್ವಕಮಾಹಾರದಾನಮ ನೀಯೆ ಮೈಮಱುಕದಿಂದುಚ್ಚಳಿಸಿದ ಪರಿಕ್ಲಿನ್ನಾಂಗಕ್ಕೆ ಪೇಸಿ ಮನೆಯಿಂ ಪೊಱಮಟ್ಟು (ಶಾಂತಿಪು. ೪–೭೭ ಪ). [ಮೆಯ್$_2$ + ಮಱುಕ]

**ಮೆಯ್ಮಱುಗು, ಮೈಮಱುಗು** (ಕ್ರಿ). ೧. ದೈಹಿಕವಾಗಿ ತಾಪಗೊಳ್ಳು; ಶರೀರತಾಪವನ್ನು ಹೊಂದು : ನಿಷ್ಠುರಮೆಯ್ಮಱುಗುವಿನಂ ಪಿಡಿದು ಬಡಿದು ಕಿಚ್ಚಿನೊಳಿಡುವರ್ (ರಹರ್ಜಾಮ್ಯ. ೩.೬೪). ೨. ವ್ಯಸನಗೊಳ್ಳು ; ಸಂತಾಪಗೊಳ್ಳು ; ಮರುಕಪಡು : ಕ್ಷಣಮಗಲ್ದು ನಿಲಲಾಱದೆ ಮೆಯ್ಮಱುಗಿ ಮಱೀಯಮಯಸ್ಕನನಱಸುತ್ತುಂ ( ಕಾದಂಪೂ. ೩೨೪). **ಮೈಮಱುಗು :** ೧. ಬಾಯ್ ಬಱುಬಱಬತ್ತುತ್ತುಂ ಮೈಮಱುಗಿ ಮಹಾಭರದಿನಱಸುತಿರ್ಪವಸರದೊಳ್ (ರಹರ್ಜಾಮ್ಯ. ೬–೨೩). [ಮೆಯ್$_2$ + ಮಱುಗು]

**ಮೆಯ್ಮಱಿ, ಮೆಯ್ಮರೆ, ಮೈಮರೆ$_1$, ಮೈಮಱಿ$_1$** (ಕ್ರಿ). ೧. (ಕೋಪ, ಸೊಕ್ಕು, ಆನಂದ, ಗರ್ವ, ದುಃಖ, ಭಯ ಮೊದಲಾದುವುಗಳಿಂದ) ದೇಹದ ಅರಿವು ಇಲ್ಲದಾಗು ; ಶರೀರದ ಮೇಲೆ ಲಕ್ಷ್ಯವಿಲ್ಲವಾಗು : ಕರ್ಣನೊಳಾದ ಶೋಕಾನಲನೊಳ್ ಬಾಯಟಿದು ಮೆಯ್ಮಱಿದು ಪಳಯಿಸುವ ನಿಜತನೂಜನ ಶೋಕಮನಾಱಿಸಲೆಂದು ಧೃತರಾಷ್ಟ್ರನುಂ ಗಾಂಧಾರಿಯುಂ ಬರೆವರೆ (ಪಂಪಭಾ. ೦೩–೭ ಪ); ಒದವಿದ ನಿರ್ಭರಯೌವನ ಮದದಿಂ ಮೆಯ್ಮಱಿದು (ಕಾದಂಪೂ. ೦೦೦೭) ; ಮದ್ಯವೀಂಟಿ ಸೊರ್ಕಿದಂ ಮೆಯ್ಮಱಿದು (ಶಬ್ದಮಾ. ೦೦–೦೪೯); ಬಸವನಾನಂದದೊಳ್ ಮೆಯ್ಮಱಿದನು (ಕಶಪು. ೪–೨೯). **ಮೆಯ್ಮರೆ :** ೧. ಕುಳಿತಿಲ್ಲಿ ಒಂದಿನಿತುಪೊಳ್ತು ಮೆಯ್‌ಮರೆಯುವಂ ಸೌಂದರ್ಯತೀರ್ಥದಲಿ ಮುಳುಗುತಾನಂದದಿಂ (ಶಂಪ್ರಸ. ೩೦–೧೨). **ಮೈಮರೆ$_1$ :** ೧. ಧರ್ಮರಾಯನು ಸಂಕ್ಷೋಭ ದಲ್ಲಿ ಮೈಮರೆತನು (ರಾಶಸೂ. ೪೨) ; ಅವಳು ಅಂಗಳದಲ್ಲಿ ನಡೆಯುತ್ತಿದ್ದು

ದನ್ನು ನೋಡಿ ಬೆದರಿ ಮೈಮರೆಯುತ್ತಿದ್ದಳು (ಕೃಸರು. ೦೯೨). **ಮೈಮಱ$_1$:** ೧. ಸಂತಸದೆ ಮೈಮಱೆದು ಕೂಡೆ ಕುಣಿವಜ್ಜರಿಂ (ಅಜಕೃ. ೯-೭ ರಗಳೆ); ಮೈಮಱೆದು ತನ್ನ ಕೆಳವಿನ ಮಾರ್ಗಮೆಲ್ಲಮಂ ಪೇೞ್ (ಧರ್ಮಾಮೃ. ೨-೦೦೬); ಮೈಮಱೆದು ಕಣ್ಗೆಡಲಪ್ಪ ಮನೋನುರಾಗದಿಂ ನೆರವೆನದೆಂದೊ (ಶಂಪಾಶ. ೯). ೨. ಮೂರ್ಛೆ ಹೊಂದು; ವಿಸ್ಮೃತಿಗೊಳ್ಳು: ಅರಸಂ ನಿಟಿಲದ ಗಾಯಕ್ಕೆ ತೇಂಕಿ ಮೈಮಱೆದಂ (ದಕಕು. ೨-೩೦); ಜೀವಿತವ ಹಿಡಿದಿರಲಾಱ ನೆನುತವೆ ರಾಮ ಮೈಮಱೆದ (ತೊಶರಾ. ೨೨-೬೩); ಅಂಗಜನ ಹೂಮುಡಿಗೆಯ ಸರಳ್ಗಳೊಳಗಕ್ಕಾಡಿದವು ಮೈಮಱೆದಳು (ತೊರರಾ. ೩-೯-೯). ೩. ಮಾರುವೇಷದಿಂದಿರು; ಅಜ್ಞಾತವಾಗಿರು: ಮತ್ಸ್ಯೇಶನ ಪುರಾಂತರದೊಳಗೆ ಮೈಮಱೆದನುಪಮಿತಭುಜಸತ್ವರಿದ್ದರು (ಕುವ್ಯಾವಿ. ೬೦೩. ೦-೩೨). [ಮೆಯ್$_2$ + ಮಱ$_1$]

**ಮೆಯ್ಮಱಿಪು.** ಮೈಮರೆಹು, ಮೈಮಱಿಪು, ಮೈಮಱಿಹು (ನಾ). ೧. ಶರೀರದ ಮೇಲೆ ಎಚ್ಚರವಿಲ್ಲದಿರುವಿಕೆ,_ಪರಿವೆಯಿಲ್ಲದಿರುವುದು: ಮೆಯ್ಮ[ಶಾಕಾಂ. ಮೈಮ]ಱಿಪಂ ಪುಟ್ಟುವ ಸೊರ್ಕು ಸೂಟ್ಟಿಡದ ಕೂಟಂ . . .ಅಳುಂಬಂ ಕೂಟದೊಳ್ ನಲ್ಲರಾ (ಚಂದ್ರಪು.೮-೭೮). **ಮೈಮರೆಹು:** ೨. ಮೂರ್ಛೆ; ವಿಸ್ಮೃತಿ: ಬೆಳ್ಳುಳ್ಳಿ, ಸೈಂಧವಲವಣ, ಹಿಪ್ಪಲಿ . . . ಬಿಸಿನೀರಿಂದರೆದು . . . ನಸ್ಯಂ ಮಾಡೆ ಅಭಿನ್ಯಾಸಸನ್ನಿಯುಂ ಮೈಮರೆಹುಂ ಗುಣವಾಗಿ ಎಚ್ಚರಗೊಡುವುದು (ಸಕವೈ. ೦೭೮). **ಮೈಮಱಿಪು:** ೧. ಎಳೆನಗೆ ಸವಿಮಾನಿಸು ಮೈಮಱಿಪುಯೆಚ್ಚಱು ಮೇಳ ವೈಸಿಕ ವಿರಹ ಮೋಹನ ಲಲ್ಲೆ ಚಲ್ಲವು (ಶಾಕೃಶಾ. ೦೭-೨೭). **ಮೈಮಱಿಹು:** ೧. "ಅನವಧಾನಮಾ ಪ್ರಮಾದಮೆನಲ್ಕೆ ಮೈಮಱಿಹು" (ಮಂಗರಾ. ೦೩೩-೨೮). [ಮೆಯ್$_2$ + ಮಱಿಪು (<ಮಱಪು)]

**ಮೆಯ್ಮಾಱಿ** (ನಾ). ಉಪಜೀವನಕ್ಕಾಗಿ ತನ್ನ ದೇಹವನ್ನು ಇತರರಿಗೆ ಮಾರಿಕೊಂಡವನು: ಮೆಯ್ಮಾ[ಶಾಕಾಂ. ಮೈಮಾ]ಱಿಗಳ ಮುಕ್ಕುಱಿಕಿ ದಿವದಿರ ತಿದ್ದಿ ಒಹಸಿದೆಯೆನುತ ತೆಗೆದೆಚ್ಚ (ಕುವ್ಯಾದ್ರೋ. ೨-೯೯). 'ಮನ ಮಾಱಿ' ಪರಾ. [ಮೆಯ್$_2$ + ಮಾಱು$_1$ + — ಇ$_3$]

**ಮೆಯ್ಮುಟ್ಟು,** ಮೈಮುಟ್ಟು (ಕ್ರಿ). ದೇಹವನ್ನು ತಾಕು,– ಸ್ಪರ್ಶಿಸು: ಮೆಯ್ಮುಟ್ಟೆ ವಂದೆಡೆಯೊಳ್ ಮಾಣದುರುಳ್ಚಿ ಕಟ್ಟಿ ರಿಪುವಂ ಮುಂದಿಕ್ಕಿದಂ ದ್ರೋಣನಾ (ಶಂಶಥಾ. ೨-೭೨). **ಮೈಮುಟ್ಟು:** ಮೈಮುಟ್ಟೆ ಹೆಣಗಿದನಾ ಕ್ಷಣಕೆ ಸಾಲಿಟ್ಟು ಸರಿದುದು ಸಕಲಕೌರವಸೇನೆ (ಕುವ್ಯಾಕ. ೦೭-೨೯); ಕಣ್ಣು ಕಾಣದೆ ಮೈಮುಟ್ಟಿ . . . ಹೋಗುವಾಕೆ (ಗಂ. ೦೦೭-೨೦). [ಮೆಯ್$_2$ + ಮುಟ್ಟು$_1$]

**ಮೆಯ್ಮುರಿ,** ಮೈಮುರಿ (ಕ್ರಿ). ೧. ದೇಹವನ್ನು ಚಾಚಿ ಮೈ ಕೈಗಳನ್ನು ಸಡಿಲಿಸು,_ ಚೈತನ್ಯಗೊಳಿಸು: ಅಂತು ಮೆಯ್ಮುರಿದೆಚ್ಚತ್ತು ತನ್ನ ತಳ್ತಪ್ಪಿರ್ದ ಗಂಧರ್ವರಾಜನಂದನೆಯಂ ಕಂಡು (ಕಾದಂಉ. ೭೮೭); ತನ್ವಂಗಿ ತಾರುಣ್ಯಭಾರಾತಿನಿರೋಧಾಲಸ್ಯದಿಂ ಮೆಯ್ಮುರಿದಳೆನೆ . . . ಶೋಭೆವೆತ್ತಳ್ (ಜಗವಿ. ೦೯-೦೦೩); ಸದಮಲಶ್ರೈವಸಂಕೀರ್ತನೆಗಳ ಕೇಳ್ದು ಸುದತಿ ಮೆಯ್ಮುರಿದೆದ್ದಳೊಲಿದು (ಮೋಹತ. ೨೭-೬). **ಮೈಮುರಿ:** ೧. ಮೈಮುರಿದೆದ್ದು ಮೆಲ್ಲನೈತಂದು (ಬಸರ. ೯-೦೭೩); ಕಂಗಳ ತೆಱೆದು ಮೈಮುರಿದೆದ್ದ (ತೊಶರಾ. ೨೨-೬೬); ನಗುವಳು ಮೇಲಿಕ್ಕುವಳು ಮೈಮುರಿದೊಡೆ ಮುಗಿದಕ್ಷಿಯಿಂದ ನೋಡುವಳು(ಶಂವಶ.೯-೦೯೩). ೨. ಮೈಯನ್ನು ಬಾಗಿಸು; ನಮಸ್ಕರಿಸು: ಕಾಣಿಕೆಯಿಕ್ಕಿ ಮೈಮುರಿದ ಮೇಲವನಿಗೆ ಕ್ಷೋಣಿಯೊಳೊಡೆತನವುಂಟೆ (ಭರತ. ೩೯-೩೮). ೩. ದೇಹವನ್ನು ದಂಡಿಸು; ಶ್ರಮವಹಿಸು: ರೈತನು ಹೊಲದಲ್ಲಿ ಮೈಮುರಿದು ಕೆಲಸ ಮಾಡುತ್ತಾನೆ (ರೂಢಿ).

ಮೈ ಮುರಿಯ = ದೇಹಕ್ಕೆ ಶ್ರಮವಾಗುವಂತೆ: ಕೂಲಿಗಳ ಜೊತೆಯಲ್ಲಿ ತಾವೂ ಮೈಮುರಿಯ ನಿಂತು ದುಡಿದು (ಹತ್ತುಮ. ೦೭೨). [ಮೆಯ್$_2$ + ಮುರಿ$_1$]

**ಮೆಯ್ಮುರಿಚು** (ಕ್ರಿ). = ಮೆಯ್ಮುರಿ ೧: ಮೆಯ್ಮುರಿಚಿ ಮೆಲ್ಲಗೆ ಎದ್ದು (ಪಟ್ಟಶ. ೦೦-೬). [ಮೆಯ್ಮುರಿ + — ಚು$_1$]

**ಮೆಯ್ಮುಱಿಕ** (ನಾ). ಅಂಗಹೀನವಾದುದು: ಮೆಱೆವ ಗಜಹಯಶಾಲೆಯಲಿ ಮೆಯ್ಮು[ಶಾಕಾಂ. ಮೈಮು]ಱಿಕ ವೃದ್ಧ ವ್ಯಾಧಿತಾವಳಿ ಮಱಿ ಗುದುರೆ ಮಱಿಯಾನೆ ತೆಗೆದವು ಲಕ್ಷಸಂಖ್ಯೆಯಲಿ (ಕುವ್ಯಾಗ. ೯-೦೭). [ಮೆಯ್$_2$ + ಮುಱಿ$_1$ + — ಕ$_3$]

**ಮೆಯ್ಮೆ** 'ಮಯ್ಮೆ$_1$' ನೋ.

**ಮೆಯ್ಮೆಚ್ಚಿಕೆ** (ನಾ). ಮೈಗಾವಲು (?): ಸಕಲದಳಸಹಿತ ಮೈದುನನ ಮೆಯ್ಮೆ [ಶಾಕಾಂ. ಮೈಮೆ]ಚ್ಚಿಕೆಗೆ ಮಖಿತುರಂಗದೊಡನೈದಿದಂ (ಕೃಮಿಛಾ. ೨೩-೨). [ಮೆಯ್$_2$ + ಮೆಚ್ಚಿಕೆ$_?$]

**ಮೆಯ್ಮೆಟ್ಟು** (ಕ್ರಿ). ದೇಹವನ್ನು ಒತ್ತು; ಅಂಗಮರ್ದನ ಮಾಡು: ಸಂವಾಹಕ_ಮೆಯ್ಮೆಟ್ಟುವವನುಂ (ಶೀತಿವಾ. ೦೩-೮). [ಮೆಯ್$_2$ + ಮೆಟ್ಟು$_1$]

**ಮೆಯ್ಮೇಟಿ,** ಮೈಮೇಟಿ (ನಾ). ೧. ಶರೀರವನ್ನು ಒತ್ತುವವನು; ಅಂಗಮರ್ದನ ಮಾಡುವವನು; ಸಂವಾಹಕ: "ಸಂವಾಹಕಃ, ಅಂಗಮರ್ದಃ– ೨ ಮೆಯ್ಮೇಟಿ" (ಹಲಾಯು. ೯೭-೪೩೭). **ಮೈಮೇಟಿ:** ೨. (ಅಲು) ಒಡನಾಡಿ; ಜೊತೆಗಾರ: ತಳೆವಿಡಿದ ಮೈಮೇಟಿ ಬಳಿವಿಡಿಯಲೆಳೆಯರುಂ ಕೆಳವರುಂ ಕೋಲೂರಿ ಪೊರಟರೇಂ ಪೆರ್ಮೆ (ಕಾದೂರ. ೦೯೯-೩೨೭). [< ಮೆಯ್ಮೆಟ್ಟು]

**ಮೆಯ್ಮೇಳ,** ಮೈಮೇಳ (ನಾ). ೧. = ಮೆಯ್ಯೊಗ್ಗಟ: ಜವ್ವನಂ ನೋಟಂ ತಂಬುಲಮುಂಪು ಕಂಪು ವಿಭವಂ ಮೆಯ್ಮೇಳಮೆಂದಿಂತಿವಂ ಬೇಟಕ್ಕಾಗರಂ (ಕಾವ್ಯಾವ. ೬೩೩); ಮೆಯ್ಮೇಳಂ ಮಾಳಂ ತಾಳಿಗೆಯಿಳಿಗೆಯಱುಕುಳಿಯಿ ವಾದಿಯಾಗಱ ಕುಳನಂ (ಕವಿಮ. ೨೭). **ಮೈಮೇಳ:** ೨. ಸಹವಾಸ; ಸಂಪರ್ಕ: ಗಾರುಡವ ನಾ ಬಲ್ಲೆನೆನುತ ಮಹೋರಗನ ಮೈಮೇಳ ಸುಖವೇ (ಶಿಭಾಗ. ೩-೪-೨೭). [ಮೆಯ್$_2$ + ಮೇಳ (= ಮೇಲ)]

**ಮೆಯ್ಯ** (ನಾ). ಒಬ್ಬಾತನ ಹೆಸರು: ಶ್ರೀಮನ್ಮೆಯ್ಯಂ ಬರದೊ ಮಂಗಳ ಮಹಾಶ್ರೀ (ಎಕ. X, ಕೋಲಾರ. ೩೭-೦೯; 925). [ ? ]

**ಮೆಯ್ಯಲಸಿಕೆ** (ನಾ). ದೇಹಾಲಸ್ಯ; ಶರೀರದ ಜಡತೆ: ಮನೆವಾಳ್ತೆ ಮೆಯ್ಯಲಸಿಕೆ ಮಕ್ಕಳ ಮುದ್ದುಬಿನದಂಗಳನು ಬಿಟ್ಟಿದ್ದು . . . ಅನುವಱ ತನುಸರಿಸುವುದು (ಹರಿಶ. ೩-೦೩). [ಮೆಯ್$_2$ + ಅಲಸಿಕೆ]

**ಮೆಯ್ಯಲಸು,** ಮೈಯಲಸು (ಕ್ರಿ). ಶರೀರವು ಆಯಾಸಗೊಳ್ಳು,– ದಣಿ: ಅಂಬುಜೋದರನಂ ಮೆಲ್ಲನೆ ನೋಡಿ ಮೆಯ್ಯಲಸಿದಂತಂತಾನು ಮೆಟ್ಟಿರ್ದುರ್ (ಶಂಶಥಾ. ೯-೩೦). **ಮೈಯಲಸು:** ತನಿಗಂಪಂ ತಣಿದುಂಡು ಮೈಯಲಸಿ ಬಿಟ್ಟಿಂದಿಂದಿರಾನೀಕಮಂ ಮನಮೊಲ್ದತ್ತಿ (ಉದ್ಭಟ. ೮-೨೦). [ಮೆಯ್$_2$ + ಅಲಸು$_1$]

**ಮೆಯ್ಯವುಚು** (ಕ್ರಿ). ದೇಹವನ್ನು ಅಮುಕು; ಶರೀರವನ್ನು ಅದುಮು: ಇವನು ಗಡ ಚಿಕ್ಕಂದು ಮೊಲೆಗೊಟ್ಟವಳ ಹಿಂಡಿದ ಗಂಡಬಂಡಿಯ ಜವಳಿಗಾಲಲಿ ಮುಱಿದನೈ . . . ಸವಡಿಮರ ನೆಗ್ಗಿದವ ಗಡ ಮೆಯ್ಯ[ಶಾಕಾಂ. ಮೈಯ]ವುಚಿದರೆ (ಕುವ್ಯಾಸ. ೦೦-೦೩). [ಮೆಯ್$_2$ + ಅವುಚು (< ಅವುಚು್)]

**ಮೆಯ್ಯವುತೆ** (ನಾ). ದೇಹದ ಕವಚ; ಮೈಜೋಡು: ರಕ್ಕಸನ ಕೈಯ ಕೋಲುಂ ಮೆಯ್ಯವುತೆಯುಂ, ತಲೆಯ ಸೀಸಕಮುಂ ಕಡಿವಡೆದುದು (ರಾಮಾಶ್ವ. ೦೦೩-೨೭). [ಮೆಯ್$_2$ + ಅವುತೆ$_1$]

**ಮೆಯ್ಯಳುಕು** (ಕ್ರಿ). ಶಾರೀರಕ ಅಪಾಯಕ್ಕೆ ಅಳುಕಿ ಹಿಂಜರಿ; ದೇಹಕ್ಕೆ ಒದಗಬಹುದಾದ ಕೇಡಿಗೆ ಹೆದರಿ ಹಿಮ್ಮೆಟ್ಟು: ಅಸಮಸೆಗೆ

ಮೆಯ್ಯ[ಪಾಠಾಂ. ಮೈಯು]ಳುಕದೆಱಗುವ . . . ದಿಬ್ಬವಾಳರು ಹೊಕ್ಕು ಹೆಣಗಿದರು (ಕುವ್ಯಾಸ. ೨-೦೦೫).

[ಮೆಯ್$_2$ + ಅಳುಕು$_1$ (< ಅಳ್ಕು$_1$)]

**ಮೆಯ್ಯಱಿ**, ಮೈಯರಿ (ಕ್ರಿ). ೧. ದೇಹದ ಅರಿವನ್ನು ಹೊಂದಿರು ; ಎಚ್ಚರವಾಗಿರು : ಅಂತು ಕೆಯ್ಯ ತೊವಲ್ವೆರಸು ಮೆಯ್ಯಱಿಯದೆ ಪುಯ್ಯಲಿಡುವ ಪಾರ್ವನ ಪುಯ್ಯಲಂ . . . ಕೇಳ್ದು (ಆಪು. ೧೧-೧೧ ವ); ಸಿರಿಯುಳ್ಳರು ಮದ್ದುಗುಣಿಕೆಯಂ ತಿಂದವರುಂ ಪಿರಿದುಂ ಪಿತ್ತಾಧಿಕರುಂ ಧರೆಯೊಳ್ ಮೆಯ್ಯಱಿಯರೆಂಬ ನುಡಿ ತಪ್ಪುಗುಮೇ (ಧರ್ಮಾಮೃ. ೪-೦೪೬); ಸಿವನೆಂಬ ದುಷ್ಟಗೊರವಂ . . . ಮೇಲೆ ಬಿಟ್ಟ ಪಾವುಂ ನೇವಾಳ ಮಾಗೆ ಮೆಯ್ಯಱಿಯದಿರ್ಪಂ (ಶಬ್ದಮ. ೦೪೫). ೨. ಗಣನೆ ಮಾಡು ; ಲೆಕ್ಕಿಸು : ಸುರಪನಂಕುಶಘಾತಿದರೆ ಮೆಯ್ಯಱಿಯದೈರಾವತಕೆ ಕಬ್ಬಿನ ಲಱಿದರಂಜಿಕೆಯುಂಟೆ (ಕುವ್ಯಾದ್ರೋ. ೫-೩೫). **ಮೈಯರಿ** : ೩. (ವಿಸ್ಮೃತಿಯಿಂದ) ಎಚ್ಚರಗೊಳ್ಳು ; ಮೈತಿಳಿ : ಮೈಯರಿಯುತೊಡನೆದ್ದು ತಬ್ಬಿದಳ್ ಮಗಳಂ (ಕಾಲೂರ. ೦೭೧-೩೮೨). [ಮೆಯ್$_2$ + ಅಱಿ]

**ಮೆಯ್ಯಱಿವು** (ನಾ). ಮೈಮೇಲಿನ ಎಚ್ಚರ ; ಪ್ರಜ್ಞೆ : ಇನ್ನುಮಿರೆ ಮೆಯ್ಯಱಿವು ತೆಗೆದಪ್ಪಿಕೊಂಡನೆ ಕನ್ನೆಯುನ್ (ಕಂತಿಗೊ. ೫೪-೧೦೫೯).

[ಮೆಯ್$_2$ + ಅಱಿವು]

**ಮೆಯ್ಯಱು** (ಕ್ರಿ). ದೇಹವು ಒಣಗು,– ಸೊರಗು : ಗಡಿಯಾಗಲಬುಧಿ ನೀರಸವೆತ್ತು ಚಂದ್ರ ಕೆಂಗಿಡಿಯಾಗಲಗ್ನಿ ಮೆಯ್ಯಱತು ನಿಡಿಯಾದರಾಗ ಬೇಕಲ್ಲದೆ ನೀ ಪೇಳ್ವ ನುಡಿಯೊಳು ಪುಸಿಯಿಲ್ಲ (ಪೋಹತ. ೨೫-೨೯)

[ಮೆಯ್$_2$ + ಅಱು$_1$]

**ಮೆಯ್ಯಳಿ** (ಕ್ರಿ). ದೇಹವು ನಾಶವಾಗು ; ಸಾಯು : ಮೆಯ್ಯಳಿ ವಂತಿರೆ ರಥಮಂ ಪುದಿದು ಕುದಿದು ಫಿರೆ ಕೆಲರ್ ಭಟರ್ (ಶಾಂತಿಪು. ೪-೩೮); ಒಳಿಕಂ ಪಲಗಾಲದ ಮೇಲಿವರೆಲ್ಲರುಂ ಮೆಯ್ಯಳಿಯೆ (ಅದ್ಭುತ. ೦೯-೭).

[ಮೆಯ್$_2$ + ಅಳಿ$_1$]

**ಮೆಯ್ಯಾಟ**, ಮೈಯಾಟ (ನಾ). ದೇಹದ ಅಲುಗಾಟ ; ಶರೀರದ ಚಲನೆ : ನುಡಿಯಱತುದು ನೋಟ ನಿಂದುದು ಮೆಯ್ಯಾಟ ತಡೆದುದು ಚೇತನವಿರದೆ ನಡುನೆತ್ತಿಗೇಱಿತು (ಕುರಾಸಾಂ. ೨೨-೦೨). **ಮೈಯಾಟ** : ನುಡಿ ನಡೆ ನೋಟ ಮೈಯಾಟವಳಿದು ಲೆಪ್ಪದೊಡಲ ಪುತ್ಥಳಿಯಂತೆ ಕುಳಿತು ಮಿಡುಕುವ ಮನವನಾತ್ಮನೊಳಡಗಿಸಲದು ನುಡಿವರೆಲ್ಲರು ಧ್ಯಾನವೆಂದು (ಭರತ. ೬೯-೨೪). [ಮೆಯ್$_2$ + ಆಟ]

**ಮೆಯ್ಯಾನ್**, ಮೈಯಾನ್ (ಕ್ರಿ). ೧. ದೇಹವನ್ನು ಧರಿಸು : ಆಕಾರವನ್ನು ತಳೆ : ಮಿಂಚಿನ ಬೆಳಗು ನೆಲೆ ಮೆಯ್ಯಾಂತುದೆಂಬ ಪೊಗಳ್ತೆಗಿಂಬಾಗಿ (ಸಾಳ್ವಭಾ. ೩-೩೫). ೨. ದೇಹವನ್ನು ಒಡ್ಡು ; ಶರೀರವನ್ನು ಈಡುಮಾಡು : ವಿನತಾಪುತ್ರನ ವಜ್ರತುಂಡಹತಿಗಂ ಮೆಯ್ಯಾಂತು . . . ಜೀಮೂತವಾಹನನೆಂಬಂಕದ ಬಾಗಿ . . . ನಾಗಾನಂದಮಂ ಮಾಡಿದಂ (ಶಂಕಥಾ. ೪-೨೭); ಬಾಡಿಗೆಯ ಮನೆಗೆ ತಿವಿದು ಕೊಳ್ವ ಚತ್ರದ ಕೂಟಿಗೆ ಮೆಯ್ಯಾಂಪ . . . ಪಟ್ಟೆಯಂ ಪಱಿದು ಚೆಂಡಂ ಮಾಡುವ ಕಟ್ಟೆಗ್ಗರಂತೆ (ಧರ್ಮಾಮೃ. ೯-೦೭೨). **ಮೈಯಾನ್** : ೧. ಇವ ಮೈಯಾಂತ ಮದನನೊ ವಿವರಿಸಲಿವ ಜೀವಂಧರನೊ (ಜೀವಂಕ. ೧೭-೩೦) ; ಲಲಿತಮಿಸುನಿಯ ಲತೆಗಳನು ಮಾರ್ಪಳಿವ ತನುರುಚಿಕಿರಣ ಸೂಸುತ ಲಲನೆರಲಶರನರಸಿಯಿಂ ಮೈಯಾಂತಳೆಂಬಂತೆ (ನಾಗಕ. ೭-೦೨).

[ಮೆಯ್$_2$ + ಆನ್$_1$]

**ಮೆಯ್ಯಾನಿಸು** (ಕ್ರಿ). ೧. ದೇಹವನ್ನು ಗುರಿಮಾಡಿಸು ; ಶರೀರವನ್ನು ಒಡ್ಡಿಸು. ೨. ಈಡಾಗುವಂತೆ ಮಾಡು ; ಗುರಿಯಾಗಿಸು. ೧, ೨: ಸಮನಿಸಿ ಮನದೊಳ್ ರತ್ಯುತ್ಸವಮಂ ಶರಜಾತಹತಿಗೆ ಮೆಯ್ಯಾನಿಸಿದಂ ಕ್ರಮದೆ ಬಱಿಕ್ಕಂ ಪ್ರಜೆಯಂ ಪ್ರಮದೆಯನೆಂತಂತೆ ನಯವಿದಂಗರಿದಂಟೇ (ಚಂದ್ರಪ್ರ. ೪-೨೬). [ಮೆಯ್ಯಾನ್ + _ ಇಸು$_3$]

**ಮೆಯ್ಯಾರ್**$_1$ (ಕ್ರಿ). ದೇಹವು ತಣಿ ; ಶರೀರವು ತೃಪ್ತಿಹೊಂದು.

ಮೈಯಾರೆ = ಶರೀರವು ತಣಿಯುವಂತೆ ; ದೇಹಕ್ಕೆ ತೃಪ್ತಿಯಾಗುವಂತೆ : ಸರ್ವಾಂಗವನೆನ್ನಂಗಂಗಳೊಳ್ಗೆಯ್ಗರೆದುವೆನಿಸಿ ಮೆಯ್ಯಾರೆ ತಳ್ತಪ್ಪಿ (ಕಾದಂಉ. ೫೨೨) ; ಒಂದುಗಡಿಯೊಳಗೆ ಮೆ[ಪಾಠಾಂ. ಮೈ] ಯಾರೆ ತನ್ನ ಬಳಲ್ಕೆಗಳೆಯಲಿಕ್ಕಿರ್ದನು (ಸಾಳ್ವಭಾ. ೦೭-೭೮). [ಮೆಯ್$_2$ + ಆರ್$_2$]

**ಮೆಯ್ಯಾರ್**$_2$ 'ಮೆಯ್ಯಾಱು' ನೋ.

**ಮೆಯ್ಯಾಱು**, ಮೆಯ್ಯಾರ್$_2$ (ಕ್ರಿ). (ದೈಹಿಕವಾಗಿ) ಸಮರ್ಥವಾಗು: ಜನಾಗಮದುಡುಗೆಗೆ ಮೆಯ್ಯಾಱದೆ ಕುಬುದ್ಧಿಗಳುಂ ಸೋಂಬರುಂ ಸಪ್ತವ್ಯಸನಾಪೇಕ್ಷಿತರುಂ . . . ಜಿನಧರ್ಮಂ ಪೊಲ್ಲಮೆಂಬರ್ (ಧರ್ಮಾಮೃ. ೬-೭೫). **ಮೆಯ್ಯಾರ್**$_2$ : ಆ ದ್ರೋಹಿ ದಳವಾಯಿಗೆ ನಾವು ಅನುವರ್ತಿಗಳಾಗಿ ಮೆಯ್ಯಾರದ ಮಾನವಿಲ್ಲದ ಕುರುಡ ಕೀಟಗಳಾಗಿದ್ದೇವೆ (ಬಗರ. ೫೦-೦೭) ; ಹೀಗೆ ಮೆಯ್ಯಾತರ್ಾ ನಡೆತ್ಯಂದಿರುವ ಸಾಹಸವು ದಿಟ್ಟತನವು . . . ತಕ್ಕ ದಣ್ಣನ _ಅದನ್ನು ಪ್ರತೀಕ್ಷಿಸುತ್ತಿದೆ ! (ಚಟ್ಟ. ೨೯-೦೪).

[ಮೆಯ್$_2$ + ಆಱು$_1$]

**ಮೆಯ್ಯಿಕ್ಕು**, ಮೈಯಿಕ್ಕು (ಕ್ರಿ). ೧. ದೇಹವನ್ನು ಬಾಗಿಸಿ ವಂದಿಸು,– ನಮಸ್ಕರಿಸು: ಬ್ರಹ್ಮಿಯುಂ ಸೌಂದರಿಯುಂ ಮೆಯ್ಯಿಕ್ಕಿ ದೂರಾಂತರದೊಳ್ ಪೊಡೆವಟ್ಟು (ಆದಿಪು. ೬-೫೭) ; ಎಮಗೆ ಲೇಸಾಯ್ತೆನುತ ಮೆಯ್ಯಿಕ್ಕಿದರು ಶಿವನಂಘ್ರಿಯಲಿ (ಕುವ್ಯಾಉ. ಓಂ೩. ೭-೭೭) ; ಪೇಟ್ದಲ್ಲದೆ ಬಿಡೆಂ –ಎಂದು ಮೆಯ್ಯಿಕ್ಕುವಳ್ (ರಾಮಾಶ್ವ. ೦೦೬-೪). ೨. ಶರೀರವನ್ನು ಒರಗಿಸು ; ಮಲಗು : ಕಣ್ಮುಚ್ಚಿರ್ದು ಮೆಯ್ಯಿಕ್ಕಿ ರ್ಘೋಂಪಿಸೆ ಕಷ್ಟಂ ಜಯಯಾತ್ರೆಯೊಳ್ . . . ವಾರಣಂ (ಲೋಕೋಪ. ೦೨-೨೦) ; ಅಂಗನೆ ಮಿಸುಪಂಭೋರುಹದೆಲೆಯೊಳು ಪಿಂಗದೆ ಮೆಯ್ಯಿಕ್ಕಿದ ಪೆಣ್ಣಂಚೆಯ ಪಾಂಗಿಂ ಪೊಸ ಪಸುರ್ವಟ್ಟೆಯ ಪೆ ಲ್ಪಾಸಿನ ಮೇಲೊಱಗಿದಳು (ಜಯುಕಾ. ೨-೪೦). ೩. (ಯುದ್ಧದಲ್ಲಿ) ಮುನ್ನುಗ್ಗು ; ಮುಂದುವರಿ ; ಮೇಲೆ ಬೀಳು : ಪೂರ್ವಾಪರಪಾರಾವಾರಪತಿಗಳಿರ್ವರುಮೋರೊರ್ವರೊಳ್ ಗರ್ವದಿಂ ಹಸ್ತಿನಿಯುದ್ಧಕ್ಕೆಂದಣೆದು ಬಿಟ್ಟಕ್ಕೆ ಮೊಗಂಬೊಕ್ಕು ಮೆಯ್ಯಿಕ್ಕಿದ ಮದಕರಿಯುಗಳಮನೆ ಪೋಲ್ತು (ಶಾಂತಿಪು. ೩-೦೯ ವ) ; ಹೊಕ್ಕರು ಕೂಟಗಾಱರು ರಾವುತರ ಮೆಯ್ಯಿಕ್ಕಿ ತಿವಿದು ಕಕ್ಕಿದುರೆಗಳ ಲೆಕ್ಕವಿಲ್ಲದೆ ಕೆಡಹಿದರು (ಕುರಾಸಾಂ. ೧೩-೩೬). ೪. ಜಿಗಿ ; ನೆಗೆ ; ಹಾರು : ಸೊಕ್ಕಿದ ಕುಂಭಾಂಡ ರಣದೊಳು . . . ಸಿಕ್ಕಿದ ಸಿಕ್ಕಿದನೆನಲಾಗಿ ಜುಣುಗಿ ಮೆಯ್ಯಿಕ್ಕಿದ ಗಗನಸ್ಥಳಕೆ (ಪೋಹತ. ೪೦-೭೨). ೫. ಸಾಯು ; ಮರಣಹೊಂದು : ಕೂರಾಳ್ಗಳ್ ತಲೆಯೊತ್ತಿ ಕಟ್ಟಿದಲಗಿಂದಂ ಕುತ್ತಿ ಮೆಯ್ಯಿಕ್ಕಿದರ್ (ಶಬ್ದಮ. ೨೭೭). **ಮೈಯಿಕ್ಕು** : ೧. ಮುಂದೆ ಪರಮೋತ್ಸಾಹದಿಂದುಕ್ಕಿ ಮೈಯಿ[ಪಾಠಾಂ. ಮೆಯ್ಯಿ]ಕ್ಕಿ ಇಂದುಮೌಳಿಯ ಕೃಪೆಗೆ ಮತ್ತೊಮ್ಮೆ ಮೈಯಿಕ್ಕಿ (ಬಸರ. ೦-೩೫) ; ಮೂಲೋಕದ ಅರಸಂಗೆ ಮೈಯಿಕ್ಕಿ ತಿರುಪಾಡ ಪಾಡುತ್ತ (ಸೌಂದಪು. ೦೦-೧೧) ; ಮುನಿಪಾದಾಂಬುಜದ ಕೆಲದಲ್ಲಿ ಮೈಯಿಕ್ಕಿದನು ಭಕ್ತಿಯಲಿ (ಸಾಳ್ವಭಾ. ೫-೪೦). ೨. ಇರುಳುಂ ಪಗಲುಂ ನಪುವರೆ ಮೈಯಿಕ್ಕುವನಿತು ಪೊತ್ತಾದೊಡಂ (ಶ್ರಾವಕಾ. ೨೩-೨೨). ೬. (ಅಲಂ) ವಿಸ್ತರಿಸು ; ಅಗಲವಾಗು : ಆ ಸಜ್ಜಿಗೆಯನಾಗಲಿ, ಕಣಿಕವನಾಗಲಿ ಉದಕದಲಿ ನೆನೆಯಿಕ್ಕಿ . . . ಗೋಳಕಗಳ ಮಾಡಿ. ಅವನು ಸೀರೆಯ ಮೇಲೆ ಹಾಕಿ ಮೇಲೆ ಮಡಿ ಒದ್ದೆಪಾವಡೆ ಮುಚ್ಚಲಾಗಿ ಮೈಯಿಕ್ಕುವುದು (ಲೀಮಸೂ. ೨೨). [ಮೆಯ್$_2$ + ಇಕ್ಕು]

**ಮೆಯ್ಯಿಡು**, ಮೈಯಿಡು (ಕ್ರಿ). ೧. ಶರೀರವನ್ನು ಇಡು,– ಒರಗಿಸು ; ತಂಗು : ಅಂಭೋಜಷಂಡಂಗಳಂ ಪುದಿದುಷ್ಣಾಂಶುವಿನೂರ್ಧ್ವಗಾಂಶು

ಸಿವಹಂ ಪೇಯ್ಯಿಟ್ಟಲರ್ಘ್ರತ್ತುವಿರ್ಪುದು (ಶಂಕಳಾ. ೯-೨೨). **ಮೈಯಿಡು:** ೨. = ಮೆಯ್ಯಿಕ್ಕು ೬ : ಕಣಕ ಮೈಯಿಟ್ಟ ಮೇಲೆ ಹೋಳಿಗೆಗೆ ಉರುಳೆ ಮಾಡಬೇಕು (ಸೂಶಾ). [ಮೆಯ್$_2$ + ಇಡು$_1$]

**ಮೆಯ್ಯಿಳುಹು** (ಕ್ರಿ). ದೇಹವನ್ನು ಬಡವಾಗುವಂತೆ ಮಾಡು,– ಕೃಶವಾಗಿಸು,—ಸೊರಗಿಸು : ಅಳುಪಿ ನೋಡಿದಡೊಂದು ಚಿಂತಿಸಿದಡೆರಡು ಸುಯ್ ಮೊಳೆಯೆ ಮೂಱು ಜ್ವರಂ ತೋಱಿದಡೆ ನಾಲ್ಕು ಮೆಯ್ಯಿಳು ಹಲಯ್ದು ಟವಮಂ ಬಿಡಲಾಱು . . . ತನುವಳಿಯೆ ಹತ್ತುವು ದಶಾವಸ್ಥೆಯಿವಱಂದವಮಂ ತಿಳಿಯೆ ಕೇಳು (ಹಶಾ. ೯-೯೩).

[ಮೆಯ್$_2$ + ಇಳುಹು$_1$ (<ಇೞಿಪು)]

**ಮೆಯ್ಯು** ' ಮೇ$_1$ ' ನೋ.

**ಮೆಯ್ಯುಡುಗು**, ಮೈಯುಡುಗು (ಕ್ರಿ). ೧. ದೇಹವು ಕುಗ್ಗು, –ಸಂಕುಚಿತಗೊಳ್ಳು. ೨. ಶಕ್ತಿಗುಂದು : ದಣಿ; ಬಳಲು : ಮೆಯ್ಯು[ಪಾಠಾಂ. ಮೈಯು]ಡುಗಿ ನೊಂದೆಳತಟಕೆ ಬಿದ್ದ ವಾನರ ಶ್ರೇಷ್ಠರಂ ತುದಿತ್ತು (ಕೃಬಿಧಾ. ೨೦-೯೦). ೩. ಪ್ರಭಾವವು ಕಡಿಮೆಯಾಗು,– ಕುಂದು : ಆ ಮೃಡನ ನಟಿಲಾಕ್ಷಶಿಖಿ ಮೆಯ್ಯುಡುಗಿದುದು (ಕುಕುಶೂ. ೬-೦೯). **ಮೈಯುಡುಗು :** ೨. ಮೈಯುಡುಗಿ ನಡುಗುತ್ತ ದನಕರು ಮೇದು ಬರುತಿವೆ ಒಟ್ಟಿಗೆ (ಕಂಕು. ೦೩-೩).

[ಮೆಯ್$_2$ + ಉಡುಗು$_1$]

**ಮೆಯ್ಯುಬ್ಬು$_1$** ' ಮೆಯ್ಯುರ್ವು ' ನೋ.

**ಮೆಯ್ಯುಬ್ಬು$_2$** (ನಾ). (ಅಲಂ) ಸಂತೋಷ ; ಹಿಗ್ಗು : ಭಕುತಿಯ ಭಾವರಸದಲಿ ನೆನೆದು ಹೊಂಪುಳಿವೋಗಿ ರೋಮಾಂಚನದ ಮೆಯ್ಯು [ಪಾಠಾಂ. ಮೈಯು]ಬ್ಬಿನಲಿ . . . ಮನದೊಳಗೆ ಮಿಂದಿಱಿದಳು (ಕುವ್ಯಾ. ೦೩-೬೦).

[<ಮೆಯ್ಯುಬ್ಬು$_1$]

**ಮೆಯ್ಯುರ್ವು**. ಮೆಯ್ಯುಬ್ಬು$_1$, ಮೈಯುಬ್ಬು (ಕ್ರಿ). (ಅಲಂ) ಸಂತೋಷಿಸಂ ; ಹಿಗ್ಗು : ಬೀಗು : ಕಂದನ ತೊದಲ್ನುಡಿಗಳಿಂದು ಮೆಯ್ಯುರ್ವಿ ಪುಳಕಂದಾಳ್ದು (ಕದ್ಯಶಾ. ೦-೩೩). **ಮೆಯ್ಯುಬ್ಬು$_1$ :** ಅಯ್ಯಯ್ಯ ಎಂಬ ಪೂರ್ಲಾಂಡೆಂದು ಹುಳುವರು ಮೆಯ್ಯುಬ್ಬಿ ಕೇಳಬೇಕಣ್ಣ (ಕಕ. ೦-೬). **ಮೈಯುಬ್ಬು :** ಶ್ರೀಶಾರದಾಂಬೆಯುಸದ ಮೊದಲಿಗೆ ನೋಡಿ ಮೈಯುಬ್ಬಿ ಮನವುಬ್ಬಿ ವಣಿದೆ (ಇಂಶಾಕ. ೦೬-೬೩).

[ಮೆಯ್$_2$ + ಉರ್ವು$_1$]

**ಮೆಯ್ಯೇಱು** (ನಾ). ದೇಹದ ಗಾಯ ; ಶರೀರದ ವ್ರಣ : ಜಾಱದೆ ತನ್ನಾನೆಯಿನಾ ಮಾಱಾನೆಯ ಕುಂಬತಳಕೆ ಪಾಯ್ದಳವಿಂ ಕೈದೋಱಿ ಮಱಿವಾನಿಸಂ ಮೆಯ್ಯೇಱಂ ಕಂಡುಗಿದು ಜೋಲೆ ಕೊಂದನದೊರ್ವಂ (ಕವ್ಯಾ. ೨೮೩). [ಮೆಯ್$_2$ + ಏಱು$_4$ (<ಏಱ್$_4$)]

**ಮೆಯ್ಯೊಡ್ಡಿಸು** (ಕ್ರಿ). ದೇಹವನ್ನು ಗುರಿಯಾಗುವಂತೆ ಮಾಡು : ಅವನ ಕಾವನಂಬಿಗೆ ಮೆಯ್ಯೊಡ್ಡಿಸಿ ಸಳಿದು ಸಂಭಾಷಿಸು ಮೋಹರತಿಯೊಳು (ಕಂಶಾ. ೯-೩೬). [ಮೆಯ್$_2$ + ಒಡ್ಡಿಸು]

**ಮೆಯ್ಯೊಡ್ಡು**. ಮೈಯೊಡ್ಡು (ಕ್ರಿ). ೧. ದೇಹವನ್ನು ಈಡು ಮಾಡು ; ಶರೀರವನ್ನು ಅರ್ಪಿಸು : ಕೌರವರ್ ದ್ರುಪದನಂಬೇಱಂಗೆ ಮೆಯ್ಯೊಡ್ಡದೊಡ್ಡಿದೋಡುತ್ತಿರೆ (ಕಂಶಾ. ೨-೬೨); ಮೆಯ್ಯೊಡ್ಡಿದಂ ದುಃಖಿಸಂಕುಲಕೆ (ಕಾರಂಕಾ. ೩೬೬). ೨. ದೇಹವನ್ನು ಚಾಚು, –ನೀಡು : ವಿಳಸಿತೆಯೆಳಸಿ ಮಳೆಗೆ ಮೆಯ್ಯೊಡ್ಡುವವೋಲ್ (ಜಯು. ೨-೯೯) ; ತೆಳುವೆಲರ್ಗೆ ಮೆಯ್ಯೊಡ್ಡಿ ಮಾರ್ಗಶ್ರಮವನು ಕಳೆದರಧ್ವಗರು (ಕೃಬಿಧಾ. ೯-೩). **ಮೈಯೊಡ್ಡು :** ೧. ಪ್ರಕೃತಿವಶಕ್ಕೊಳಗಾಗದೆ ಇಂದ್ರಿಯಂಗಳಿಗೆ ಮೈಯೊಡ್ಡದೆ . . . ಕಾಯವಿದ್ದು ಅಕಾಯರಾಗಿಪ್ಪರಯ್ಯಾ (ಆಹ. ೩೦-೮೬) ; ಮಱಿಗೆ ಮಱಿಯಾಗಿ ಮೈಯೊಡ್ಡಿ ಮಡಿದುವು ಕೆಲವು (ಕೃಬಿಧಾ. ೨೯-೩೦). ೨. ಬಿಸಿಲಿಗೆ ಮೈಯೊಡ್ಡುವುದರಿಂದಲೂ 'ಡಿ' ಜೀವಾತನ್ನು ಪಡೆಯಬಹುದು (ಆಹುಶ. ೬೦); ಹೆಂಗುಸರು ಮರದ ನೆರಳಲ್ಲಿ ಮೈಯೊಡ್ಡಿದ್ದರು (ಶ್ರೀಕೃಶ್ರ. ೦೯೭). [ಮೆಯ್$_2$ + ಒಡ್ಡು$_1$]

**ಮೆಯ್ಯೊಲಪು**, ಮೆಯ್ಯೊಲವು, ಮೈಯೊಲವು (ನಾ). ದೇಹದ ಬಾಗು,— ಒಲೆದಾಟ : ಕಟಿಗೊಂದಿದ ಕರಕಮಲಮಂಗುಷ್ಠದ ನಟನೆಯ ಮೆಯ್ಯೊಲ[ಲ]ಪುಗಳ ಸುಟಿಯೊಳಾವರ್ತ ತಿರುಪುಗೊಂಡು ನಾಟ್ಯವ ಪಟುಗೊಳಿಸಿದರೇವೇಳ್ವೆ (ಕಂಶಾ. ೨೦-೦೦೯). **ಮೆಯ್ಯೊಲವು :** ನೆಲನ ತಗ್ಗಿನಲುಪ್ಪರದ ಮೆಯ್ಯೊಲವಿನಲಿ ಪಾರಗದ ಬವರಿಯ ಸುಳುಹಿನಲಿ . . . ಕಾದಿದರು (ಕುವ್ಯಾದ್ರೋ. ೦೯-೬). **ಮೈಯೊಲವು :** ಮರ್ಝು ಭಾವಿಸುತ ಮೈಯೊಲವಿ[ಪಾಠಾಂ. ಹಿ]ನಲಿ ಮನವುಬ್ಬಿ ನಿಂದಿದಳಧಿಕಹರುಷದಲಿ (ತೊರವ. ೦-೦೦-೩). [ಮೆಯ್$_2$ + ಒಲವು]

**ಮೆಯ್ಯೊಲವು** ' ಮೆಯ್ಯೊಲಪು ' ನೋ.

**ಮೆಯ್ಯೊಲೆ** (ಕ್ರಿ). ದೇಹವನ್ನು ತೂಗಾಡಿಸು,— ಅಲುಗಾಡಿಸು : ಅಡಿಗಡಿಗೆ ಮೈ ಬೆದಱಿ ಬೆಱಗಹನಡಿಗಡಿಗೆ ಮೆಯ್ಯೊಲೆವಾಱುಬ್ಬದ ರೋಮಪುಳಕದಲಿ (ಕುವ್ಯಾಭೀ. ೩-೬೨). [ಮೆಯ್$_2$ + ಒಲೆ$_1$]

**ಮೆಯ್ವಚ್ಚ**, ಮೈವಚ್ಚೆ (ನಾ). ದೇಹಕ್ಕೆ ತೊಡಿಸುವ ಅಲಂಕಾರ, –ಭೂಷಣ: ಪದಿನೆಂಟುಂ ಸ್ಥಲವರ್ಣನವಿವರ್ಕೆ ಮೆಯ್ವಚ್ಚಮೆನಿಸಿ ಪೇಟ್ದಂ (ಕಮರ.ಪ. ೨೦೩ ಪ್ರಯೋ). **ಮೈವಚ್ಚೆ :** ಸೊಬಗಿನ ಕೆಂಬಲರ ಮೈವಚ್ಚೆ ಕೆಂಬಲು ತುಂಬುಗೆಂಕುಮ ಶಿವಿರು ಚೆಂದುಟಿಜಾಟ್ಟರಾಣವಸನ ಕೆಂಬಳಗುಗುಡೆ (ಪಾಳ್ಯಶಾ. ೩-೩೯). [ಮೆಯ್$_2$ + ಪಚ್ಚ$_2$]

**ಮೆಯ್ವಡೆ**, ಮೈವಡೆ (ಕ್ರಿ). ಸಾಕಾರವಾಗು ; ರೂಪುಗೊಳ್ಳು ; ಮೈತಳೆ : ವನಪಾವನದೊಳ್ ಮೆಯ್ವಡೆದ ಮತ್ಸ್ಯಮಕರಸಿಂಹವ್ಯಾಘ್ರಾದಿ ಪತಾಕಾನೀಕದೊಳಂ . . . ಪರಭಾಗಂಬಡೆದು (ಶಾಂತಿಪು. ೦೦-೨೦ ವ); ಆಱುಂ ದ್ರವ್ಯದಿಂ ಮೆಯ್ವಡೆದಖಿಲಜಗಂ ರಜ್ಜುವೀರೇಬಱುದ್ಧಂ ಪಡೆದತ್ತು (ಕಂರಾಕು. ೦-೯೨); ಬಹುಮೃಗ ಪೊಸತುಪ್ಪಿಕಾಂತು ಮೆಯ್ವಡೆಯಲ್ಕೆ ನರರಳಲಿದರು (ಮೋಹಕ. ೯-೯೯). **ಮೈವಡೆ :** ನಲ್ಲೆ ಹೂಬಿಸಿಲಿಂದ ಬೀಸುತಿರುವೆಲರಿಂದ ಕಾಲ್ಪಿಡಿಯುತೋಲಯಿಸಿ ಮೈವಡೆವಳಿಲ್ಲಿ (ಕಾಲೂಕ. ೨೩-೦೦).

[ಮೆಯ್$_2$ + ಪಡೆ$_1$]

**ಮೆಯ್ವಣ್ಣ**. ಮೆಯ್ಬಣ್ಣ, ಮೈಬಣ್ಣ (ನಾ). ದೇಹದ ಬಣ್ಣ, –ರಂಗು : ಇಂತುಟಪ್ಪ ಮೆಯ್ವಣ್ಣಕ್ಕಂತೀ ಪೂವಿನೊಳೀ ತುಡುಗೆಯೊಳೀ ಪುಟ್ಟಿಗೆಯೊಳ್ ಬೆಡಂಗುವಡೆದೆಸೆದಿರ್ಕುಂ (ಕಂಕಳಾ. ೩-೯೩); ಮಾಣಿಕ ಮೆಯ್ವಣ್ಣದ ಚಾಯ ಮಿಾನ . . . ಕೈಗಾಣಿಕೆ ಕೊಟ್ಟ ರಕ್ಕಸಗೆ (ಮೋಹಕ. ೦೦-೩೯). **ಮೆಯ್ಬಣ್ಣ :** ವಿಷಯದ ಬೇರನ್ನು ಬಿಸಿಮಾಡಿ ಕುಡಿದಾತ ಪಶುಪತಿಯಕ್ಕು ಸಟಿನಕ್ಕು ಮೆಯ್ಬಣ್ಣ ಮಿಸುನಿಯಂತಕ್ಕು (ಸರ್ವಜ್ಞ. ೩೦೯). **ಮೈಬಣ್ಣ :** ಮಾಸಲುಕಪ್ಪಾದ ನನ್ನ ಹೆಂಡತಿಯ ಮೈಬಣ್ಣ ಬಿಳಿಧಾಯಯದಾಗಲೆಂದೂ . . . ಮೂರುಸಾಬೂನುಬಿಲ್ಲೆಗಳ ಒಂದು ಪೆಟ್ಟಿಗೆಯನ್ನೇ ಕೊಂಡುಕೊಟ್ಟೆನು (ಪಾರಿಗೀ. ೨೮೩). [ಮೆಯ್$_2$ + ಬಣ್ಣ]

**ಮೆಯ್ವತ್ತಿಸು** (ಕ್ರಿ). ಅನುಸರಿಸುವಂತೆ ಮಾಡು : ಎತ್ತಿಸಿದಂ ಶಿವಗೃಹಮಂ . . . ಮತ್ತನಿಸದೆ ಪ್ರಜೆಯಂ ಮೆಯ್ವತ್ತಿಸಿದಂ ಸತ್ಯದಿಂದೆ ತಾರಕಗೌಣ್ಡಂ (ಎಕ. VIII, ಸೊರಬ. ೨೮೩-೯೩; 1168); ಎತ್ತಿಸಿದಂ ಜಿನೇಂದ್ರಗೃಹಮಂ ಧರೆ ಬಣ್ಣಿಸಲೆಯ್ದೆ ತನ್ನ ಮೆಯ್ವತ್ತಿಸಿದಂ ಪ್ರಜಾಪ್ರಕರಮಂ (ಎಕ. VIII, ಸೊರಬ. ೩೯೩-೩೩; 1171).

[ಮೆಯ್ವತ್ತು + — ಇಸು$_2$]

**ಮೆಯ್ವತ್ತು** (ಕ್ರಿ). ೧. ದೇಹಕ್ಕೆ ಅಂಟು ; ಶರೀರಕ್ಕೆ ಹತ್ತು: ಅರಿಸಿನದಂತೆ ಮೆಯ್ವತ್ತಿ ಓಣವರ್ (ರಚಣಾಕ್ಕು. ೩-೬೩); ವೃಷಭಸ್ವಾಮಿ ಮೆಯ್ವತ್ತಿದನಂತಕರ್ವರ್ಣಭಟರಂ ಷಣ್ಮಾಸಂಬರಮಿಕ್ಕುವ ತಕ್ಕಸಂ ಕೈಯಿಕ್ಕಿ ನಿಲ್ವುದು

(ವರ್ಧಪು. ೧೧-೯೦ ವ) : ಅಂಜನಗಿರಿಯಂ ಚೂರ್ಣಿಸಿ ಪಿಂಜಳಮಪ್ಪಂತೆಯುದಂ ಮೆಯ್ವುತ್ತದವೋಲ್ ರಂಜಿಪಂಜಾಂಡಕರಂಡದೊಳಂಜನಮಂ ತುಂಬಿ ಬೊಮ್ಮನಿರಿಸಿದನೋ (ಹರಿಶ್ಚ.ರ. ೩-೦೩). ೨. ಬೆನ್ನುಹತ್ತು ; ಹಿಂಬಾಲಿಸು : ಅದಟಂ ಬಿಟ್ಟೋಟದಿಂದಂ ಸಡೆದನೆ ನೆಟ್ಟನೆ ಮೆಯ್ವುತ್ತಿ ಲಗ್ಗೆಯಂ ಮಾಟ್ಪೊಗಳ್ (ಪಾರ್ಶ್ವಪು. ೩-೦೯೦). [ಮೆಯ್$_2$ + ಪತ್ತು$_1$]

**ಮೆಯ್ವುತ್ತುಗೆ** (ನಾ). ಹಿಂಬಾಲಿಸುವುದು ; ಅನುಸರಣೆ : ಪರಿಗ್ರಹದ ಮೆಯ್ವುತ್ತುಗೆಯಾಗಲಾವ ರಾಜಕಾರ್ಯಮುಂ ತೀರುವುದೆಂಬುದು ತಾತ್ಪರ್ಯಂ (ಲೀಶಾ. ೨೯-೬೩). [ಮೆಯ್ವುತ್ತು + –ಗೆ]

**ಮೆಯ್ವರ್ಚಿಸು** (ಕ್ರಿ). ಹೊಂದಿಕೊಳ್ಳು ; ಸೇರು : ದೆಸೆಯಂ ಖಿಡ್ಗಾಂಶು ಜಾಲಂ ಬೆಳಗೆ . . . ಮೇಘಾಳಿಯಂ ಧೂಳಿ ಮೆಯ್ವ[ಯ್ವ]ರ್ಚಿಸೆ . . . ದೃಷ್ಟದ್ವಳಂ ಮಾಮಸಕಂಗೊಂಡೆತ್ತಿ ಬಂದಂ (ಚಂದ್ರಪು. ೧೧-೩೯).
[ಮೆಯ್$_2$ + ಪರ್ಚಿಸು$_2$ (< ಪಚ್ಚಿಸು$_2$)]

**ಮೆಯ್ವಸ**, ಮೈವಸ (ನಾ). ಆಶೆ ; ಅಪೇಕ್ಷೆ : ಮೆಯ್ವಸಮೊಂದೆ ಪೂವಿನೊಳಿ ಪೋಗೆ ತೆಱಂದಿರಿದಳ್ಳಿಗೊಂಬಿನೊಳ್ ಪಾಯ್ವುದುಂ (ಶಾಂತಿಪು. ೦-೬೪) ; ಮೆಯ್ವಸದಿಂ ಜವನುಂಡು ಕಾಱಿದಂತಿರೆ ಕಡಿಖಂಡಮಾಗೆ ಕರವಮಸುರಮಾದುದು ಸಂಗರಾರಿಗಣಂ (ಶಂಖಪು. ೦೩-೭೮) ; ಮೆಯ್ವಸದ ಮಾಸರಮಂ ಪಿಡಿವ ಪಾಂಗಂ ಚಿತ್ರವಚನಚಮತ್ಕಾರಮಂ . . . ತೋಱುತ್ತುಮಿರೆ (ಕುಸುಮಾ. ೭-೬೩ ವ). **ಮೈವಸ** : ಸುಳಿಗರೆಯ್ವುಂದು ತಱುಬಿದರೆಂದು ಕೋಟಿಯ ಮೈವಸ[ಪಾಠಾಂ. ಶ]ದೊಳು ಮಿಱುಗೆ ಸುಳಿ ಕಯ್ಕೊಳಗೆ (ಕುಂಜಾಸಾಂ. ೧೧-೩೪). [ಮೆಯ್$_2$ + ಪಸ$_1$]

**ಮೆಯ್ವಸುರ್** (ನಾ). ದೇಹದ ಹೊಂಬಣ್ಣ : ಅವಿರಳಮಾದ ಮೆಯ್ವಸುರ್ಪ ಪಚ್ಚೆದಿವಿರ್ ತಳಿರುಟ್ಟ ಪಟ್ಟೆ (ಚಂದ್ರಪು. ೭-೯೩). [ಮೆಯ್$_2$ + ಪಸುರ್$_2$]

**ಮೆಯ್ವಸೆ**, ಮೈವಸೆ (ನಾ). ದೇಹದಲ್ಲಿರುವ ನೆಣ, – ಕೊಬ್ಬು : ಮಹೋಗ್ರಚಾಪದ ಗುಣವ ಸಡಿಲಿಸಿ ಒಸಿವ ಮೆಯ್ವ[ಪಾಠಾಂ. ಮೈವ] ಸೆಗಳನು ಬಳಿದಿಕ್ಕಿ . . . ರಕ್ಕಸರಣಭಯಂಕರನೈದಿದನು (ತೊರವ. ೩-೬-೩೭). **ಮೈವಸೆ** : ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [ಮೆಯ್$_2$ + ವಸೆ]

**ಮೆಯ್ವಳಲ್ಕೆ**, ಮೈಬಳಲಿಕೆ (ನಾ). ಶರೀರದಲ್ಲುಂಟಾಗುವ ದಣಿವು ; ದೇಹಾಲಸ್ಯ : ಪೊಯ್ದೊಳ್ವಾರ್ ಮೆಯ್ವಳಲ್ಕೆಯಂ ಕಳೆಯಲೆಂದು ಶಯನಂಗೆಯ್ದಾರ್ (ವಿಷ್ಣು. ೨-೮). **ಮೈಬಳಲಿಕೆ** : ಜಳಧಿಮೇರೆಯ ಮಧ್ಯದಲಿ ಭೂವಳಯವೆಲ್ಲವ ಶೋಧಿಸುತ ಮೈ[ಪಾಠಾಂ. ತನು]ಬಳಲಿಕೆಯ ಭಾವಿಸದೆ ನಡೆದರು ಮುಂದೆ ಪಥವಿಡಿದು (ನಳಚ. ೮-೦೩).
[ಮೆಯ್$_2$ + ಬಳಲ್ಕೆ (< ಬಳಲ್ಕೆ)]

**ಮೆಯ್ವಳಿ** 'ಮೆಯ್ವಟಿ' ನೋ.

**ಮೆಯ್ವಳಿಗೊಳ್** (ಕ್ರಿ). ಹತ್ತಿರಕ್ಕೆ ಹೋಗು ; ಸಮೀಪಿಸು : ವಿಧಾತ್ರನಂ ಬಾಳಿಪೆನೆನುತ್ತೆ . . . ಸಡಗರಿಸಿ ಮೆಯ್ವಳಿಗೊಂಡು ಉಳಿವೆತ್ತು (ಸಂಸಪ. ೨೩-೩). [ಮೆಯ್ವಳಿ (<ಮೆಯ್ವಟಿ) + ಕೊಳ್$_1$]

**ಮೆಯ್ವಟಿ**, ಮೆಯ್ವಳಿ, ಮೈವಳಿ, ಮೈವಟಿ (ನಾ). ೧. ಬಳಿ ; ಹತ್ತಿರ ; ಸಮೀಪ : ಅಱಿಪನ್ನಂ ತರಳಿಕೆ ಮೆಯ್ವಟಿಯಿಂ ಪಿಡಿದೊಪ್ಪು ನೆತ್ತಿ ಮೆಲ್ಲನೆ ತಡಿಗಾಗಿಱತಂದೀ ಕೊಳದೊಳ್ ನೀರಿಟ್ಟಿಯಿಸೆ (ಕಾದಂಪೂ. ೯೩೦) ; ಪರಿಚಿತೆಯನೀ ತಳೋದರಿಗೆ ಮೆಯ್ವಟಿಯಿಂ ಮನವಮಂ ತೊಡಂಕೆ ನಾಂ ತುಱಿಪದನಿರ್ದು ನಿಂದಟಲನಾಱಿಸು (ಅನಂಪು. ೧೧-೯೩). ೨. ವಶ ; ಅಧೀನ ; ಪತೋಟಿ : ಮದಕರಿಯ ಮೇಗಣ ಬದಗನಂತೆ ಮೆಯ್ವಟಿಗೆ ಸಂದಳಕೆಗೊಳಿಸುವನಂತೆ ತನ್ನಿಚ್ಚೆಗೆ ತಂದು ಮತಿಯಂ (ಲೀಲಾವ. ೯-೭೩ ವ) ; ಮಾಸದ ವಿಳಾಸಮ ಮೆಯ್ವಟಿಯಾದ ದೇವಿ ತಾಂ ಋತುಮತಿಯಪ್ಪ ದಚ್ಚಳಿಪೋ (ಪುಷ್ಪಪು. ೯-೯೨). ೩. ಸಲುಗೆ ; ಸದರ ; ಅನುನಯ : ಕುದಿವೆರ್ದೆಯೊಳ್ ಪುಲಿಪುಜಪುನೊತ್ತಿ ತಳಿರ ಬಿಜ್ಜಣಿಗೆಯಿಂ ಬೀಸಿ ಬಟಲ್ಕೆಯಂ ಕಳೆದು ಮೆಯ್ವಟಿಯಿಂ ತದ್ವೃತ್ತಾಂತಮಂ ಬೆಸಗೊಳ್ವುದುಂ (ಲೀಲಾವ. ೧೧-೭೮ ವ) ; ಆಗಳುದಾತ್ತರ್ . . . ತದ್ಭೂಪನಂ ಮೆಯ್ವಟಿಯಿಂ ಮಾತಾಡಿಸುತ್ತೊಯ್ಯನೆ ಸಹಜಶರೀರಂಗಳಂ ತಾಳ್ದಿ ನಿಂದರ್ (ಶಸಂ. ೨೩೩). ೪. ಸಾಮರ್ಥ್ಯ ; ಕೆಚ್ಚು : ಅಳವಿಗೆ ಸಾರ್ದನೇ ಬೆಱಗುವಾದನೆ ಮೆಯ್ವಟಿ ಯಿಂದೆ ಪೋರ್ದನೇ (ಜಗಪು. ೭-೨೯). ೫. ಕೋಪ ; ರೋಷ : ತಳೆದು ಕಣ್ಣೀರಂ ಕಯ್ಗುಟಿದಬಲೆಗೆ ಮಗನಂ ಮೆಯ್ವಟಿಯಿಂದಮೆ ನುಡಿದನಂದು ತಾರಾಪೀಡಂ (ಕಾದಂಪೂ. ೯೭೩). **ಮೆಯ್ವಳಿ** : ೧. ಕಯ್ವಳಿಯ ಜಯಶ್ರೀಯುಂ ಮೆಯ್ವಳಿಯ ಶ್ರೀಯುಮಿರುವೆರಲು ಬಲ್ಲಾಳ್ಗಂ ಸಯ್ವಳಿಯ ನಡದು (ಎಕ. XI, ಶಕ್ರದು. ೬೯-೨೦ ; 1214) ; ನೆಳಲಂತೆ ಮೆಯ್ವಳಿಗೆ ಸಾದು . . . ಶುಶ್ರೂಷೆಗಳ ಮಾಡುವ . . . ಮಹಾಪಾತಿವ್ರತಾಜನಂ ಕಂಗೊಳಿಸಿತು (ಶಬಪು. ೨೦-೦೩). ೩. ಕಲಹ ಬೇಡವೆಮ್ಮೊಳಗೆಂದು ಮಂತ್ರಿಗಳು ಮೆಯ್ವಳಿ ಯಲವರ ತಿಳುಪಿದರು (ಕುಂಜಾಸಾಂ. ೦೩-೦೩೮). ೪. ಕಲ್ಪಭೂಜದ ಮೆಯ್ವಳಿಯಂ ತೆಗಳ್ದತಿಕರದರ್ಗೀವನು (ಎಕ. VII, ಶಿಕಾ. ೦೮೩-೩೯ ; 1200). **ಮೈವಳಿ** : ೨. ಧರೆ ನಮಗೆ ಪರವರ್ತಿ ಖಂಡೆಯ ಸಿರಿ ನಮಗೆ ಮೈವಳಿ (ಉಜ್ವ.ಸ. ೨-೩) ; ಕಲಿಸುವನೋಜೆಯ ತನ್ನ ಮೈವಳಿಯೊಳು ನಿಲಿಸುವನನುಭವಿಸಿದ್ದಾ (ಭರತ. ೩-೯೭) ; ಮದಾಂಧಸಿಂಧುರವರ್ಗಮಸ್ತಕ ಮಸಗಿದು ಪೂರ್ಣಾಂಕುಶದೆ ಮೈವಳಿಗೆ ತರ್ಪ ಜೋದರ ಹಿಂಡು ನಡೆಗೊಂಡುದು (ಶಬಪು. ೯೦-೩೦). ೩. ಮುಂದಮಸಗಿ ಮೈವಳಿಯಲಿ ಹದನುಗೊಳಿಸಿ ಸೋಕಿ (ಜನಪ. ೧೧-೩೦) ; ಪರಿಚಿತೆಯಾಗಿ ಮೈವಳಿಯೊಳಾಕೆಗೆ ನೀನು ಪಿರಿದುಪಚಾರವನೆಸಗಿ (ಅನಂತ. ೦೮-೦೦೭). ೪. ಆ ನರವಿಭುವಿ ನೋಲಗದ ಕೆಳದಿಯರ ಕೈಸನ್ನೆಗಳ ಮೈವಳಿಯ ಮಾತಿಂಗೇಳ್ವ ಕುಳ್ಳಿರುವಳವಡಿಕೆ ಬಲ್ಲರಿಗೆ ಬಿಜಗೇಸಲ್ಲವೇ (ತೊರವ. ೦-೯-೭೩). ೬. (ಆಲೋಚನೆ, ಕಾರ್ಯ ಮುಂತಾದುವುಗಳ) ಅನುಸರಣೆ : ಮತ್ತದಂತಿಗಳೊಗ್ಗುವಿಡಿದು ಬಂದವು ಮಾವತಿಗರೆತ್ತ ತಗೆದತ್ತ ಬರುತ ಮೈವಳಿಯಾಗಿ ನೆಗೆವ ಕಾರ್ಮುಗಿಲ ಮೋಹರದಂದದಿಂ (ಶ್ರೀಂ-ಪು. ೦೮-೦೩) ; ದೇವ ಬಿನ್ನಹ ನಿಮ್ಮ ದೇಹವ ಮೈವಳಿಯ ನೆಳಲಾನಲಾ ನೀವೇ ವಿಚಾರಿಸಿ ತನಗೆ ಬೇಱನ್ಯತ್ರ ಗತಿಯುಂಟೆ (ತೊರವ. ೨-೩-೩೩). **ಮೈವಟಿ** : ೩. ಮೈವಟಿಯೊಳೆ ಮೇಲುದಂ ತೊಲಗ ನೂಕಿ ಕುಚದ್ವಯದೊಳ್ ಪಳಂಚಿ ಪೊಕ್ಕುಟಿಳಿಟದಾಡಿ ತೀಡಿದುದು ಪಲ್ಲಘನಂತಿರೆ ಮಂದಮಾರುತಂ (ಸೂಕ್ತಿಸು. ೯-೦೯೦). ೪. ರಾಯಂ ತನ್ನ ಕಿಱುದಮ್ಮನ ಬೀರದ ಮೈಸಿರಿಯ ಬಿಂಕದ ಮೈವಟಿಯ ನುಡಿಗೆ ಸಂತಸಂಗೊಂಡು (ರಾಮಾಶ್ವ. ೯೭-೯).
[ಮೆಯ್$_2$ + ಬಟಿ$_3$ /ತೆಲು. ಮೈಪಡಿ = ಅನುಕೂಲ್ಯ, ನೇರ್ಪು, ರೀತಿ]

**ಮೆಯ್ವಿಡಿ**, ಮೈವಿಡಿ (ಕ್ರಿ). ಮೈತಾಳು ; ಸಾಕಾರವಾಗು : ಕರಮೆ ಮು[ಱುಗಿ ಮೆಯ್ವಿಡಿದುರಿವ] ನ್ನೀಯೆರ್ದೆಯನಾಱಿಸಲ್ [ನೀಂ]ಬಾಯೊಳ್ದಂ ಬುಲುಮನಪ್ಪಿದಂ ದಯೆಗೆಯ್ವೋ (ಶಂಶಪ. ೮-೭೯) ; ಮೆಯ್ವಿಡಿದನುರಾಗ ರಸವೆ ಪೊಱಪೊಣ್ಮೆ ದುದೆನೆ ಮಾಣಿಕಗಂಡ ಬಡನಡುವಿನ ಭಾಮಿನಿ ತಳಿರ್ಗ್ಗ ಯೊಳ್ ಪಿಡಿದಪರಂಜಿಯ ಸೆಳೆ . . . ವಿರಾಜಿಸಿತು (ಜಯುಕಾ. ೨-೯೭). **ಮೈವಿಡಿ** : ಕಡಲುರಿ ಮುಗಿಲುರಿ ಬನದುರಿಗೂಡಿ ಮೈವಿಡಿದಂತಿರ್ದ ಸಿಂಗವ ಕೆಂಡ (ಸೊಬಸೋ. ೩-೩೨). [ಮೆಯ್$_2$ + ಪಿಡಿ$_1$]

**ಮೆಯ್ವಿಡು**, ಮೆಯ್ಬಿಡು, ಮೈಬಿಡು, ಮೈವಿಡು (ಕ್ರಿ). ೧. (ಗಿಡ, ಮರ ಮುಂತಾದುವು) ಕವಲೊಡೆ–ಟಿಸಿಲೊಡೆ : ಮೆಯ್ವಿಟ್ಟು ಕೆಯ್ವಿಟ್ಟಶೋಕೆ ಕರಂ ಪೋಲ್ತುದು ಮಿಂದು ನಿಂದು ಮುಡಿಯಂ ಬಿಟ್ಟಾಱಿಸುತ್ತಿರ್ದ ಕಾಮುಕಿಯಂ (ಶಾಂತಿಪು. ೭-೦೩೯). ೨. ಧೈರ್ಯದಿಂದ ಕೂಡಿರು ; ನಿರ್ಭೀತಿಯಿಂದಿರು : "ಮೆಯ್ವಿಡು (ಮೆಯ್+ಬಿಡು)—ನಿಶ್ಶಂಕತಾಯಾಂ (ನಿರ್ಭಯದಿಂದಿರು)" (ಶಮಣಿ) ; ಎನಸುಂ

ನಿರ್ಝರಚಂದ್ರಿಕಾಜಲದೊಳೊಲ್ದೋಲಾಡಿ ಮೆಯ್ಬಿಟ್ಟು ಮಂಜಿನ ತುಂತುರ್ವನಿಯೊಳ್ ಪೊದಟ್ದು (ಕಾದಂಬ. ೪೨೮). ೩. ಸಲುಗೆಯಿಂದಿರು : ಸದರದಿಂದ ವರ್ತಿಸು : ಮೆಯ್ವಸದಿಂ ಕೆಯ್ವಸದಿಂ ಬಾಯ್ವಸದಿಂ ಮಂತ್ರತಂತ್ರದಿಂದ ಸುಖಿಮಂ ಮೆಯ್ವಿಡೆ ವನಿತೆಗೆ ಪಡೆದಾ ಮೆಯ್ಯೋಗಕ್ಕೆಳಸಿ ಸೋಲ್ವನೆಬ್ಬುವೊಜಂಗಂ (ಕಾಮ್ಯವ. ೬೭). ೪. (?) : ಬಿಟ್ಟೆಯ್ದಿ ಮೆಯ್ಬಿಟ್ಟು ಸಿದ್ಧರಸಂ (ವೆಂಕಟಶಾ. ೦೯೩೭, ಸಿಂದಗಿ. ೮೮-೦೭ ; ?).

**ಮೆಯ್ಬಿಡು** : ೫. ಆಶ್ರಯತಪ್ಪು ; ಆಧಾರವಿಲ್ಲವಾಗು : ತೊಟ್ಟನೆ ಬಳ್ವಳಾ ಲತಾಂಗಿ ಸುಟ್ಟುರಿಯಿಂದೊಳದಿಳಿಯೊಳು ಲತೆ ಮೆಯ್ಬಿಟ್ಟುರುಳುವ ತೆಱನಾಯ್ತು (ಶ್ರೀಪಾಲ. ೭-೭೪). **-ಮ್ಮೆಬಿಡು** : ೬. ಚೆಲ್ಲಾಪಿಲ್ಲಿಯಾಗು ; ಚೆದರು : ಘಟ್ಟ ಮುರಿದುದು ಕೊಂಡ ನೆಲನನು ಬಿಟ್ಟು ಹಿಂಗಿತು ನಮ್ಮ ಬಲ ಮೈಬಿಟ್ಟು ತಲೆದೋಱಿದನು ಸಾತ್ಯಕಿ ದೊರೆಗಳಿದಿರಿನಲಿ (ಕುಮ್ಯಾಭ. ೩-೭). **ಮ್ಮೆವಿಡು** : ೨. ಸಗ್ಗಿಗರಾಣ್ಮನ ಘನಕರಿಘಟೆಗಳ್ ಬೇಸಗೆಯ ಬಿಸರಕ್ಕೆ ಬಸವಱಿದು ಬಾಯಾಱಿ, ಮುನ್ನೀರ ನೀರಂ ಕಂಡು . . . ಪೀರ್ದು, ಸೊರ್ಕಿ ಪೋಪಡೆಯೊಳ್ ಮ್ಮೆವಿಟ್ಟು, ಗೀಱಿಟ್ಟು (ರಾಮಾಶ್ವ. ೩-೦೦). ೭. ದೇಹವನ್ನು ಚಾಚು,—ನೀಡು : ಮುಳ್ಳೊನೆಯಂತೆ ಕ್ರೂರನಾಗಿ ಸತ್ತರಂತೆ ಮ್ಮೆವಿಟ್ಟು (ರಮಾವಿಮ್ಯ. ೨-೦೦೫). [ಮೆಯ್$_2$ + ಬಿಡು$_1$]

**ಮೆಯ್ವಿದಿರ್** (ಕ್ರಿ). ದೇಹವು ಕಂಪಿಸು : ಪುಲ್ಲೆಗಳ ಪಿಂಡೊಡೆಯುದೊಡನೆ ಮೆಯ್ವಿದಿರುತ್ತೆ (ಅನಂತಪು. ೪-೦೭ ರಗಳೆ). [ಮೆಯ್$_2$ + ಬಿದಿರ್$_1$]

**ಮೆಯ್ವೆಂಕೆ** (ನಾ). ದೇಹದ ಉಷ್ಣ : ಶರೀರ ತಾಪ : ನಿಸ್ನ ಮೆಯ್ವೆಂಕೆಯಿಂದೆಮಗಾಹಾರಮಪ್ಪಿಲ್ಲಿಯ ಮೃಣಾಳಂಗಳೆಲ್ಲಮಂ ಕೊರಗಿಸದಿರೆಂದು ಚಪ್ಪರಿಸುವಂತಿರ್ದ ಹಂಸ ಚಕ್ರವಾಕಂಗಳುಲಿಪಕ್ಕೆ ಬೆಗಡುಗೊಂಬಳ್ (ಕಾದಂಬ. ೩೩೪) ; ಪಿರ್ದ ಗಾಡಿಕಾರ್ತಿ ಸಂದಣಿಸಿ ಚೆಂದಂಬಡೆದ ಕೆಂದಳಿರ ಪಂದರಮಂ ಮೆಯ್ವೆಂಕೆಗಂಜಿ ಪತ್ತೆಸಾರ್ದಿಂತೆಂದಳ್ (ಶಬ್ದಶಾ. ೭೦).

[ಮೆಯ್$_2$ + ಬೆಂಕೆ]

**ಮೆಯ್ವೆಚ್ಚು** 'ಮೆಯ್ವೆರ್ಚು$_1$' ನೋ.

**ಮೆಯ್ವೆರಸು** (ಕ್ರಿ). ಒಂದಾಗು ; ಜೊತೆಗೂಡು : ಅವಳ್ವಕ್ಕಿವಿಂಡು ಮೆಯ್ವೆರಸುವ ಕೊಂತಗಾಱರಣೆಯಾಗಿರೆ ಬಂದು ಬಸಂತನೊಲ್ದು ಸುವರಣೆಯನೆಯ್ದೆ ತೋಱಿ ತಲೆದೂಗಿಸಿದಂ ಸನೆವಿಲ್ಲ ಬೀರನಾ (ಶಬ್ದಶಾ. ೨೦೦) : ನೆರೆದೆ ಪುಷ್ಪಿತ ಪದ್ಮಿನಿಯ ಮೆಯ್ವೆರಸಿದೆನು ವಾರುಣಿಯ (ಜೀವಂಧ. ೪-೦೪).

[ಮೆಯ್$_2$ + ಬೆರಸು$_1$ (<ಬೆರೆಯಿಸು)]

**ಮೆಯ್ವೆರ್ಚಿಸು** (ಕ್ರಿ). ಮೈಯುಬ್ಬುವಂತೆ ಮಾಡು ; ಸಂತೋಷಗೊಳಿಸು : ಬಳಕೇಶಪಾಶಕುಸುಮಾಮೋದಾಸವಾಸಕ್ತಭೃಂಗರವಂಗಳ್. . . ವಧೂಕದಂಬಕಮನೇಂ ಮೆಯ್ವೆರ್ಚಿಸಲ್ಕಾರ್ತುದೋ (ಆದಿಪು. ೧೦-೯೨).

[ಮೆಯ್ವೆರ್ಚು$_1$ + —ಇಸು$_3$]

**ಮೆಯ್ವೆರ್ಚು$_1$**, ಮೆಯ್ವೆಚ್ಚು, ಮ್ಮೆವೆಚ್ಚು, ಮ್ಮೆವೆರ್ಚು (ಕ್ರಿ). ೧. ಅಧಿಕವಾಗು ; ಹೆಚ್ಚಾಗು : ಅತಿಶಯಿಸು : ಶೃಂಗಾರವಾರಾಶಿ ಘೋಂಕನೆ ಬೆಳ್ಳಂಗೆಡೆದತ್ತೊ ಕಾಪುನೆಱೆಮೆ[ಯ್ವೆರ್ಚಿ]ತ್ತೊ (ಶಂಶಬಾ. ೪-೪೨); ಪಕ್ಷವಾತಂ ಪೀನಂ ಮೆಯ್ವೆರ್ಚುವನ್ನಂ ಭ್ರಮಿಯಿಸಿ ಸಡೆದಂ . . . ಗರುಡಂ (ಜಗಬಿ. ೧೬-೯೯) ; ವನಜಕೊಕ್ಕಯ್ಯನಲರ್ಕೆಯುಂ ಸಮನಿಸುತ್ತೋರಂತೆ ಮೆಯ್ವೆರ್ಚಿ ತಣ್ಣನೆ ತೀಡಿತ್ತೆಸಸುಂ . . . ಶೀತಾನಿಳಂ (ಶಾಂತೀಶ್ವ. ೦೦-೯೪). ೨. ಕೊಬ್ಬು ; ಬೀಗು : ಆಗಳ್ ಮೆಯ್ವೆರ್ಚಿ ಬಂದು ಪೆಣೆವ ಭೀಮನಕುಳ ಸಹದೇವರುಮಂ ಶಲ್ಯಂ ವಿರಥಮಾಡಿ ಪಿಡಿದುಕೊಂಡು (ಶಂಶಭಾ. ೦೩-೪೦ ಪ) ; ಪಲವುಂ ಶಾಸ್ತ್ರಮನೋದಿದ ಬಲದಿಂ ಮೆಯ್ವೆರ್ಚಿ ಗರ್ವದಿಂ (ರಮಾವಿಮ್ಯ. ೫-೮೮). ೩. ಸಂತೋಷಗೊಳ್ಳು ; ಹಿಗ್ಗು : ಪುತ್ರೋತ್ಸವಂ ತನ್ನನಾಳ್ದಂ ಪೆರ್ಚಿ ಪೊರೆದುದರ್ಕೆ ಕರಂ ಮೆಯ್ವೆರ್ಚಿ ನುಡಿದಂ (ಶಂಶಭಾ. ೦೦-೩೯ ಪ) ; ತನುಜಾತೋದಯಮಪ್ಪ ಪುಣ್ಯದಿನಮಂ ಮೆಯ್ವೆರ್ಚಿ ಕಾಣಲ್ಕೆ ನೋನೆನೊ (ಸುಕುಮಾ. ೬-೦೦೩) ; ರಾಜನ್ಯಕೋತ್ತರಮಾಗಳ್ ಪೊಗಬುತ್ತಿರಲ್ಕೆ ಪಿರಿದುಂ ಮಾದೇವಿ ಮೆಯ್ವೆರ್ಚಿದಳ್ (ಕುಸುಮಾ. ೬-೨೯). ೪. ಮೇರೆಮೀರು ; ಉಕ್ಕು : ಎರಡುಂ ಪಕ್ಕದ ವಜ್ರವೇದಿಕೆಗಳಂ ಮೆಯ್ವೆರ್ಚಿಯುಂ ಕ್ಷೀರಸಾಗರಮುಲ್ಲಂಘಿಸದಂತೆ ಪೆರ್ಚುವಡೆದುಂ ಧರ್ಮಾರ್ಥಮುಂ ಕಾಮರಾಗರಸಮಂ ಮೀಱದೆ . . . ಭೂಚಕ್ರಮಂ ತಾಳ್ದಿದಂ (ಮಲ್ಲಿಪು. ೩-೫೦) ; ಪಿರ್ದ ಬೆಳ್ನಗೆಯೊಳ್ ನಕ್ಕು ಪೊಮ್ಮ ಮೆಯ್ವೆರ್ಚಿ ಸಲಿಲದುಂ . . . ಗಂಗೆ ಕಂಗೊಳಿಸಲೊಡಂ (ರಾಮಾಶ್ವ. ೩೦-೨೭). **ಮೆಯ್ವೆಚ್ಚು** : ೩. ನಿಂದಿಸಿದಡದುವೆ ತೊಡವೆಂದು ಮೆ[ಶಾಶಾಂ. ಮು]ಯ್ವೆಚ್ಚುವಂ (ತಿರುರ. ದೇ. ೨೪-೧). ೫. ವಿಜೃಂಭಿಸು ; ಮೆರೆ : [ಮೆ]ಚ್ಚಿದಳೀಗಳೀಗ ಕಲಿಬಮ್ಮಗೌವುಂಡ × × ಳೊಳಬ್ಬ ಮೆಯ್ವೆಚ್ಚಿದ ವೀರಲಕ್ಷ್ಮಿ (ಶಾಇ. XX, ೭೭-೩೫; 1118). ೬. ಹರಡು; ಪಸರಿಸು : ತಮಮೆತ್ತಲು ಪಸರಿಸಿದುದಾ ಬ್ರಹ್ಮನೆಸುವ ಪ್ರತ್ಯಕ್ಷದೊಂದೆ ಸಕಮಂ ಮೀಱಿ ಮೆಯ್ವೆಚ್ಚಿದುದು (ತೊರೆ. ೪೯-೨೯). **ಮ್ಮೆವೆಚ್ಚು** : ೩. ಗಿರಿಜೇಶನರಮನೆಯನೊಳಪೊಕ್ಕು ಬಿಡದೆ ಮ್ಮೆವೆಚ್ಚುತಲಿ (ಶೀರರ. ೫-೩೨) : ಆ ಸುದತಿಯಾಲಿಂಗಿಸಿದ ನವಮಾಸವಾಯ್ತು ಮ್ಮೆವೆಚ್ಚಿ ಕೈವಿಡಿದ ಪತಿಗೆ (ಸೋಮತ. ೧-೭೨). ೪. ಶರಧಿ ತೆರೆಗಳಿಂ ಮ್ಮೆವೆಚ್ಚಿ ನಾಕವತುಂಡುಕುತೊಪ್ಪಿದುದು (ಕಂನಬಿ. ೪-೨೦). **ಮ್ಮೆವೆರ್ಚು** : ೧. ಪವನವ್ಯೋಮವಸುಂಧರಾಸಲಿಲತೇಜೋಲೀಲೆ ಮ್ಮೆವೆರ್ಚಲುತ್ಸವಮಾದತ್ತು ಸಮಸ್ತಭೂತಳದೊಳ್ (ಜಗಬಿ. ೭-೭೯) ; ಬಲಿಮೆಲ್ಲಂ ಕಡಿಖಂಡಮಾಯ್ತುಪಜಯಂ ಮ್ಮೆವೆರ್ಚಿರಲ್ ದುರ್ಯಶಂ ತಲೆದೋಱಿತ್ತು (ದಕಶ. ೦-೭೪). ೨. ಏನನ್ನು ನುಡಿಯಂ ಕಡೆಗಣ್ಣ ಮತ್ತಂಮತ್ತಂ ಮುತ್ತ ಪೊಣ್ಮಿಸಂತೆ ಮ್ಮೆವೆರ್ಚುವೈ ? (ರಾಮಾಶ್ವ. ೦-೦೨). [ಮೆಯ್$_2$ + ಪೆರ್ಚು$_1$]

**ಮೆಯ್ವೆರ್ಚು$_2$** (ನಾ). ಸೊಕ್ಕು ; ಗರ್ವ : ಮೆಯ್ವೆರ್ಚಿನಿಂ ದೇಹೋಹಂ ಎಂದೆಂಬುದಂ ಮಾಣಿಸು (ಶಂಶಾಶ. ೧೭). [ಮೆಯ್$_2$ + ಪೆರ್ಚು$_2$]

**ಮೆಯ್ವೆಲೆ** (ನಾ). ದೇಹಸುಖಕ್ಕಾಗಿ ವೇಶ್ಯೆಗೆ ತೆರುವ ಹಣ. – ಒತ್ತೆ : ಬೆಲೆವೆಣ್ಗೆ ನಿಚ್ಚಮುಮ್ಮೆಯ್ವೆಲೆಯಾಯದೆ ಠಕ್ಕುದೋಱಿ ನೆರೆವ ಬೊಜಂಗಂ ಸಲೆಯುವಳ ಜೀವಪವನನನೆಲೆ ಪೀರ್ವ ಭುಜಂಗನಲ್ತೆ (ಶೃಶಬಿ. ೨೯-೦೩).

[ಮೆಯ್$_2$ + ಬೆಲೆ$_1$]

**ಮೆಯ್ವಸ** (ನಾ). ೧. ದೇಹದ ಕ್ರಿಯೆ : ತಱಿಂದಿರಿದಾಂತ ಮೆಯ್ವಸಂಸುತ್ತುವ ಬಲ್ಪು . . . ತಮ್ಮೊಳೆಯ್ದೆ ಮೆಯ್ವತ್ತಿರೆ ಬಿಚ್ಚತಂ ಪೊಣರ್ದುವಂದೆರಡುಂ ಬಲದಂಕದಾನೆಗಳ್ (ಶಂಪ್ರಕ. ೦೦-೮೪). ೨. [ಕಾಮಶಾ] ಸ್ತ್ರೀಯ ಕಲಾಸ್ಥಾನಗಳನ್ನು ಮುಟ್ಟಿ ಉದ್ರೇಕಗೊಳಿಸುವ ಕ್ರಿಯೆ : ಮೆಯ್ವಸದಿಂ ಕೆಯ್ವಸದಿಂ ಬಾಯ್ವಸದಿಂ ಮಂತ್ರತಂತ್ರದಿಂದಂ ಸುಖಿಮಂ ಮೆಯ್ವಿಡೆ ವನಿತೆಗೆ ಪಡೆದಾ ಮೆಯ್ಯೋಗಕ್ಕೆಳಸಿ ಸೋಲ್ವನೆಬ್ಬುವೊಜಂಗಂ (ಕಾಮ್ಯವ. ೬೭). [ಮೆಯ್$_2$ + ಬೆಸ$_1$]

**ಮೆಯ್ವೆಳಗು**, ಮ್ಮೆವೆಳಗು (ನಾ). ೧. (ಶರೀರದ) ಹೊಳಪು ; ಕಾಂತಿ: ಅಭ್ರಕಪಟಲಂಗಳ ಮಱೆಯೊಳಿರ್ದಳೆನೆ ಮೆಯ್ವೆಳಗಿಂ ನೆಱೆಯಱಿಯಲಾದುದಿಲ್ಲಂಗನೆಯುಂ (ಕಾದಂಬ. ೭೭೦) ; ಇರದೊಪ್ಪುವ ಪೊಸಚಿನ್ನದ ತಗಡೆನೆ ಕರಮೆಸೆದುದು ಮೆಯ್ವೆಳಗು ಮಹೀಪತಿಯಣುಗಿನ ನಂದನೆಗೆ. (ಜಯಶಾ. ೩-೫೩). **ಮ್ಮೆವೆಳಗು** : ೧. ಚಂದ್ರನ ತಾರಕೆಯ ಮ್ಮೆವೆಳಗು ಮಸುಳದವು (ತೊರೆರಾ. ೧-೦೪-೦) ; ಬಾಲಸೂರ್ಯನ ಪೋಲ್ವ ಮ್ಮೆವೆಳಗಿನಿಂ ಪೊಳವುತ (ಪವಪೋ. ೦೨-೫). ೨. ಶೋಭೆ ; ಒಪ್ಪ : ಇಂತು ಪಂಪಾಪುರದ ಪೆಂಪಿನ ಮ್ಮೆವೆಳಗಂ ಪೇಟ್ದು (ಉದ್ಭಟ. ೩-೮೦ ಪ).

[ಮೆಯ್$_2$ + ಬೆಳಗು$_2$]

**ಮೆಯ್ವೆಱು**, ಮ್ಮೆವೆರು, ಮ್ಮೆವೆಱು (ಕ್ರಿ). ೧. ದೇಹವನ್ನು ಧರಿಸು ; ಹುಟ್ಟು : ಅರಲಿಚನಾರಿಂದ . . . ಅಚ್ಚರರು ಮರುಮರುಪುಟ್ಟಿಂತು

ಮೆಯ್ವೆತ್ತರು (ಕಕಣಾಂ. ೦೩-೭೯). ೨. ಮೈದಾಳು ; ಸಾಕಾರವಾಗು: ಉತ್ತಮತಪಂಗಳಿಂದತ್ಯುತ್ತಮದೇಹರ್ ವಿದೇಹರಪ್ಪುದಱಿಂ ಮೆಯ್ವೆತ್ತನ್ವರ್ಥತೆಯಂ ತಾಳ್ದಿತ್ತು ವಿದೇಹಂ ವಿದೇಹಮೆಂಬೀ ಪೆಸರಂ (ಆದಿಪು. ೦-೩೩) ; ಬೆಡಂಗು ಮೆಯ್ವೆತ್ತಿರೆ ಕಾಲ ಪೊಂದೊಡರ ದೈತ್ಯರ ಹಾಹೆಗಳೊಪ್ಪೆ . . . ಗೋವಳರಾಯನ ಲೀಲೆ ರಂಜಿಕುಂ (ಜಗಂ. ೩-೯೩) ; ರನ್ನದ ನುಣ್ಗದಿರ್ ನೆಗೆದು ನೀಳ್ದೊಂದೊಂದಱೊಳ್ ಕೂಡಿ ಮೆಯ್ವೆತ್ತಿರ್ದಿಂದಿರವಿಲ್ಲ ಪಾಂಗ ನೆನಸುಂ ಬಾಂಬಟ್ಟೆಯೊಳ್ ಬೀಱಿ (ಕಬ್ಬಿಕಾ. ೩೭). ೩. ಪ್ರಕಟವಾಗು; ತೋರು ; ಕಂಡುಬರು : ಕೆತ್ತುವ ಮಿಸೆ ಕಂಪಡರ್ದ ಕಣ್ . . . ಮೆಯ್ವೆ[ಪಾಠಾಂ. ಮೈವೆ]ತ್ತ ಬಮರ್ ಮನಂಗೊಳಿಸೆ (ಶಾಂತಿಪು. ೩-೬೮). ೪. ಒಪ್ಪು ; ಶೋಭಿಸು : ಕವಿಚಕ್ರವರ್ತಿಪೆಸರೇಂ ರನ್ನಂಗೆ ಮೆಯ್ವೆತ್ತುದೋ (ಅಜಿತಪು. ೦-೮೫) ; ನಿರುತಂ ತನ್ನೊಳು ಮೆಯ್ವೆತ್ತಿರೆ ಸಾಸಿರದೆಂಟು ನಾಮಮುಮಂ (ಸಮಯ. ೦-೭೩). ೫. ಎಡೆಬಿಡದಂತಿರು ; ಹೊಂದಿಕೊಂಡಿರು : ಅತ್ತಿತ್ತಂ ಮಿಸುಕದ ಮೆಯ್ವೆತ್ತಿದ ಮನ್ಮಥಸುಖೋತ್ತಮಾಂಗದೊಳಿರುತಂ . . . ಕೋಕಂ (ಗಂಜ. ೯-೭೭). **ಮೈವೆರು :** ೩. ಶವಿ ಮುಮುತೆ ಮೈಪೆತ್ತಿಸುಮು ಮಾತ್ರುಮಾತಿನಲಿ (ಅಜಿದ. ೨೮-೩) ; ಮಾತಿನಲ್ಲಿ ಆತಂಕ ಅಸಹನೆಗಳೆರಡೂ ಮೈವೆತ್ತಿದ್ದವು (ಮುರೇ. ೯೪).
**ಮೈವೆಱು :** ೨. ಆ ಆದಿನಾರಾಯಣನಿಂತು ಮೈಪೆತ್ತು ಪುಟ್ಟಿ . . . ಕಾದಿ ಬೀಡಣದೊಳನಿಬರಂ ಸೈಮಿಸಿಗಟ್ಟನುಮು ಜನಮೆ ಎಂಗುಂ(ರಾಮಾಶ್ವ. ೦೯-೯). [ ಮೆಯ್$_2$ + ಪೆಱು$_1$ ]

**ಮೆಯ್ಪೊಗರ್,** ಮೈಪೊಗರ್ (ನಾ). = ಮೆಯ್ವೆಳಗು ೧ : ಬಾಲ್ಯಮಂ ನಟಿಯಿಸಿ ಲೀಲೆಯಿಂದಾಡುತ್ತ . . . . ಮೆಯ್ಪೊಗರಿಂ ತೊಳಗುತಿರ್ದ ನಾಲ್ವರ್ ಕುಮಾರರ್ಗೆ ಏಳೆಂಟುವರ್ಷಮಪ್ಪುದುಂ (ದಶಾವ. ೬-೭೦ ವ).
**ಮೈಪೊಗರ್ :** ಮೈಪೊಗರ ಜಗುನೆಯೊಳ್ ಕೆಂದಾವರೆ . . . ಈ ವಾರಿಜನಾಭನರುಣಹಸ್ತಸರೋಜಂ (ವತ್ತ. ವಂ. ೦೩-೮೭). [ ಮೆಯ್$_2$ + ಪೊಗರ್ ]

**ಮೆಯ್ಪೊಣರ್** (ಕ್ರಿ). ರಭಸದಿಂದ ಕಾದಾಡು,—ಸೆಣಸು : ಕ್ರಮದಿಂ ಮೆಯ್ಪೊಣರ್ದಾಜಿದಕ್ರಮದೆ ಮಾತಂ ಬಿಟ್ಟು ತನ್ನಿಟ್ಟ ಚಿಕ್ರಮದುಂ ನೀಪ್ರಭವಾಗೆ ಸಿಗ್ಗನೊಳಕೊಂಡು (ಎಕ. II, ೨೩೪-೩ ; ಶು.1180) ; ವಿಧುವ ಪಗೆಯಪ್ಪ ರಾಹುವಿನೊಳ್ ಕಡುಪಿನಿಂ ತೊಡರ್ದು ಮೆಯ್ಪೊಣರ್ದಪ್ಪುದು (ಕಂದ್ರಪು. ೬-೯೩ ವ) ; ಕೈದುಗೊಳ್ಳದೆ ಕೆಲಸುದ್ದು ಮೆಯ್ಪೊಣರ್ದು (ಕಾವ್ಯಸಾ. ೦೦೦೩). [ ಮೆಯ್$_2$ + ಪೊಣರ್$_1$ ]

**ಮೆಯ್ಪೊಣರ್ಚು** (ಕ್ರಿ). ೧. = ಮೆಯ್ಪೊಣರ್ : ರಥಕ್ಕೆವಾಯ್ದುಡಿಗಿಡೆ ಮೆಯ್ಪೊಣರ್ಚುವ ಮಹಾರಥರಾಜಿಯೊಳಂತಗುರ್ವಿನಚ್ಚುಡಿದಿರೆ (ಕಂಶಿಭಾ. ೦೦-೦೦೯) ; ದಮಿತಾರಿ ತನ್ನ ಪರಾಕ್ರಮಮೊಂದಱಿಂದಮೆ ಮೆಯ್ಪೊಣರ್ಚಿ ಗೆಲ್ದ ತನ್ನ ಜಾಗದ ಭೋಗದ ಯಶೋರಾಶಿಯುಮಂ . . . ಪೊಗಟಿಸುವೆನೆಂದು ತಱಿಸಂದು (ಶಾಂತಿಪು. ೯-೭೭ ವ). ೨. ದೇಹವನ್ನು ಚಾಚು, —ನೀಡು : ಭುಜಾಮಂಡಂಗಳಿಂ ಸಾರ್ಚಿ ಬಿರ್ಚಿದಿಳಿಸಂಧಿಗೆ ಮೆಯ್ಪೊಣರ್ಚಿ ನೆಲೆಯಿಂದಕ್ಷೂಣಸತ್ತ್ವಂ . . . ಕಿಟ್ಟಂ . . . ಸಿದ್ಧಶೈಲೇಂದ್ರಮಂ (ಕಂರಾಮಾ. ೧೧-೯). [ ಮೆಯ್$_2$ + ಪೊಣರ್ಚು ]

**ಮೆಯ್ಪೊರೆ** (ಕ್ರಿ). ಸೇರು ; ಕೂಡಿಕೊಳ್ಳು : ಚರುಚಾರುಗಂಧದೊಳ್ ಮೆಯ್ಪೊರೆದು ಪುರೋಡಾಶಪೂರ್ಣತರಪರಿಮಳದೊಳ್ ಪೊರಳ್ದು . . . ಎಸೆವುದು ಪಾವನಂತಪೋವನಪವನಂ(ಚಾದಂಶು. ೨೨೦) ; ಅಂಭಃಕ್ರೀಡೆಯಿಂ ಮೆಯ್ಪೊರೆದ ಮದದ ತೀನೋಡೆ ನೀಡುಂ ಮನಂ ಮೆಚ್ಚುವಿನಂ ಪೊರ್ಕುಡಿ ಕಾಡಾನೆಗಳಿರೆ (ವರ್ಧಪು. ೦೦-೦೩). [ ಮೆಯ್$_2$ + ಪೊರೆ$_2$ ]

**ಮೆಯ್ಪೊಳೆಪು** (ನಾ). = ಮೆಯ್ವೆಳಗು ೧ : ತಿಸರಂಗಳ ನೀಳ್ದ ಡಾಳದಿಂ ಬಳೆದೆಸೆದಿರ್ಪ ಸೆಳ್ಳುಗುರ ಮೆಯ್ಪೊಳೆಪಿಂ ಮಿಗೆ ಪೆರ್ಮೆವೆತ್ತು ಕಣ್ಗೊಳಿಸಿದ ಲಾಕೆ (ಕಬ್ಬಿಕಾ. ೭೯). [ ಮೆಯ್$_2$ + ಪೊಳೆಪು ( < ಪೊಳಪು ) ]

**ಮೆಯ್ಪೋಗ** (ನಾ). ದೇಹಸುಖ ; ದೈಹಿಕಸಂತೋಷ : ಸಂಗಡ ವರ್ಷವರೊಳ್ಪನಿಂದೆ ಮೆ ಯ್ಯೋ [ಯ್ಪೋ] ಗಮುಳುಂಬಮಪ್ಪ ಬಿಯಮಾಗಿರ್ದಗಂ ಬರೆ ಬರ್ಪ ಪಾಂಗಗುರ್ವಾಗಿರೆ (ಕಂಶಭಾ. ೯-೬೭); ಮೆಯ್ವಸದಿಂ ಕೆಯ್ವಸದಿಂ ಬಾಯ್ವಸದಿಂ . . . ವನಿತೆಗೆ ಪಡದಾ ಮೆಯ್ಪೋಗಕ್ಕೆಳಸಿ ಸೋಲ್ವನೆಟ್ಟುವೊಜಂಗಂ (ಕಾವ್ಯಾವ. ೬೭). 'ಮೈಭೋಗ' ಪರಾ. [ ಮೆಯ್$_2$ + ಬೋಗ ]

**ಮೆಯ್ಸನ್ನೆ,** ಮೈಸನ್ನೆ (ನಾ). [ಕಾಮಶಾ] ಸ್ತ್ರೀಯ ಕಲಾಸ್ಥಾನಗಳ ಸ್ಪರ್ಶದಿಂದ ನೀಡುವ ಸಂಜ್ಞೆ,—ಸೂಚನೆ : ಕೈಸನ್ನೆಯಿಂದ ಕಾತರದಿಂದ ಪೊಯ್ವನು . . . ಮೆಯ್ಸ[ಪಾಠಾಂ. ಮೈಸ]ನ್ನೆಯಿಂದ ಚಿತ್ರದೊಳೊಡಗೂಡುವೆನ್ಸರಲನ ಸಮರೂಪ (ಕಂರಾಶಾಂ. ೨೬-೦೪೦). **ಮೈಸನ್ನೆ :** ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [ ಮೆಯ್$_2$ + ಸನ್ನೆ$_2$ ]

**ಮೆಯ್ಸಲ್,** ಮೈಸಲ್ (ಕ್ರಿ). ೧. ದೇಹವನ್ನು ಒಪ್ಪಿಸು,—ಅರ್ಪಿಸು: ಬಂದೊಡೆ ನೋಡೆ ಬಾರದೊಡ ದೂದವಿಯಟ್ಟುವೆ . . . ಸ್ಮಿತಿರೆ ಸಾರ್ಚಿ ಸುಯ್ವ ಮೆಯ್ಸಂ [ಪಾಠಾಂ. ಮೈಸಂ]ದಪುರ್ದಪ್ಪಲಾತುರಿಸೆ (ರಾಜಶೇ. ೦೦-೦೨೩). **ಮೈಸಲ್ :** ೨. ದೇಹಕ್ಕೆ ಹೊಂದಿಕೊಳ್ಳು ; ಮೈಗೂಡು: ನಾನಾಮಣಿಖಿದ ವೀರವೃತ್ತಿ ಮೈಸಂದಿರಲ್ ಕಂಡು ಶಿವನೆತ್ತಿದಂ ಬೊಮ್ಮತಂದೆಯನಲ್ಲಿ (ಬೊಮ್ಮರ. ೦೭೭-೦೩). [ ಮೆಯ್$_2$ + ಸಲ್$_1$ ]

**ಮೆಯ್ಸವಿ** (ನಾ). ಶರೀರದ ಸೊಬಗು ; ದೇಹಸೌಂದರ್ಯ : ಬಾಯ್ಸವಿಗೆ ಮೆಯ್ಸವಿ ಕಣ್ಸವಿಯಪ್ಪ ರೂಪು (ಕಮುದ. ೬೮. ಶೃಯೋ); ಕಾಂಬೆಯೆಂದೆನ್ನ ಮೆಸ್ಸವಿಯಾ (ಗೀರಂ. ೯೬-೦೯). [ ಮೆಯ್$_2$ + ಸವಿ$_2$ ]

**ಮೆಯ್ಸಾರ್,** ಮೈಸಾರ್ (ಕ್ರಿ). (ದೇಹವನ್ನು) ಸಮೀಪಿಸು; ಹತ್ತಿರಕ್ಕೆ ಹೋಗು : ಚೆಲುವೆಟ್ಟಾಣ್ಮನ ಪುತ್ರಿ ಸುರ್ಕಿ ಚಳಿಯಿಂ ಮೆಯ್ಸಾ[ಪಾಠಾಂ. ಮೈಸಾ]ರ್ದು ತಾನಪ್ಪಿ ಸಂಚಳಿಸಲ್ (ರಾಜಶೇ. ೯-೦೭); ಶಶಿಕಾಂತದೊಡ್ಡುಂಗಲ್ಗೊಳ್ ತನ್ನ ಪಡಿನೆಳಲಂ ಕಂಡು ಮೆಯ್ಸಾ[ಪಾಠಾಂ. ಮೈಸಾ]ರ್ದು ಸಂದು (ಶಬರಂ. ೩-೪೩ ವ). **ಮೈಸಾರ್ :** ಮೇಲಿನ ಪ್ರಯೋಗಗಳ ಪಾಠಾಂತರವನ್ನು ನೋಡಿ. [ ಮೆಯ್$_2$ + ಸಾರ್$_1$ ]

**ಮೆಯ್ಸಾರ್ಚು,** ಮೈಸಾರ್ಚು (ಕ್ರಿ). ೧. ದೇಹವನ್ನು ಒಡ್ಡು, —ಅರ್ಪಿಸು : ಶರೀರವನ್ನು ಚಾಚು : ಕೃಷ್ಣಾಹಿಯ ಕೋಳ್ಗೆ ಬೆರ್ಚದಿದಿರೊಳ್ ಮೆಯ್ಸಾರ್ಚಿ ಬಾಳ್ವನ್ನರಾರ್ (ಕಂರಾಮಾ. ೯-೬೯); ಅಂತು ಬಂದ ತೆಂಗಾಳಿಗೆ . . . ಕಂಪಂ ಮೆಚ್ಚುಗುಡುವಂತೆ ಮೆಲ್ಲನೆ ಮೆಯ್ಸಾರ್ಚಿ ಬಟಾಯಂ ಬಸಮಂ ನೋಡಲ್ವೇಟ್ಕುಮೆಂದು ನನೆಯುಂಬಂ ಬಗೆಯೊಳ್ ನೆನೆಯುತ್ತಿರ್ಪನ್ನೆಗಂ (ಕಬ್ಬಿಕಾ. ೬೭). ೨. ವಿಶಾಲವಾಗಿ ಹರಡು,—ಪಸರಿಸು : ಬಾಲರಸಾಲಂಗಳ ಮಕರಂದಘರ್ಮಜಲಕಣಮನುದಿರ್ಚಿ ಮೆಯ್ಸಾ[ಪಾಠಾಂ. ಮೈಸಾ] ರ್ಚಿ ಸರಳ ಶಾಖೆಗಳಂ ಪೊತ್ತೆತ್ತಿ (ರಾಜಶೇ. ೨-೬೭ ವ). **ಮೈಸಾರ್ಚು:** ೧. ದೀಹದ ಚಕೋರಿಕೆಗಳಟ್ಟಱಿಂ ಮುಕ್ಕುಟಿಪ ಮುಂಡಾಡುವ ಕರ್ದುಂಕುವೊದವ. ಚೆಲ್ಲಕೆ ಮೈಸಾರ್ಚಿಯುಂ (ಕಂದ್ರಪು. ೮-೯೩ ವ). [ ಮೆಯ್$_2$ + ಸಾರ್ಚು ]

**ಮೆಯ್ಸಿರಿ,** ಮೈಸಿರಿ (ನಾ). ೧. ದೇಹದ ಸೊಬಗು,—ಚೆಲುವು : ದೇವನಿಕಾಯದೊಳ್ ನೆರೆವುದೊಂದುತ್ಸಾಹಮುಂ ತನ್ನ ಮೆಯ್ಸಿರಿ ಭಾಗ್ಯಂ ನೆರಮಪ್ಪುದೊಂದೆ ರಣದೊಳ್ (ಕಂಶಭಾ. ೦೦-೯೩); ಎಯ್ದೆ ಲೋಕಮಂ ಬಗೆಗೊಳಿಸಿತ್ತು ಮೆಯ್ಸಿರಿಯ ಸೊಂಪು ಧರಾರಮಣೀಶಪುತ್ರಿಯಾ (ವರ್ಧಪು. ೯-೪೨); ಜವ್ವನದೇರೊಳು ಗೆಲವಿನ ಗುಡಿಗಳ ಊರಿದ ಮೆಯ್ಸಿರಿ ಮೊಗ ಮಾಟ (ಶಲ್ಯ. ೩-೦೬). ೨. ಲಾವಣ್ಯ; ಶೋಭೆ : ಮೃದುಪದಬಂಧಮಂ ಬಗೆಯ ಭಾವದ ಮೆಯ್ಸಿರಿಯಂ ರಸಪ್ರವಾಹದ ನೆಲೆವೆರ್ಚನಿಂ

ಬಜೆದು ಭಾವಿಸಿ (ಶಂರಾಪಶಾ. ೦-೨೯); ಪುರುಳಂ ಲಕ್ಕಣಮುಂ ಮೆಯ್ಸಿರಿಯುಂ ತಳ್ಳಿಸೆದು ಪೇಟ್ದು ಕಬ್ಬಂ . . . ರನ್ನದಂತೆರ್ದೆವುಗದೇ (ಶಬ್ದಾ. ೬). ೩. ಸಾಮರ್ಥ್ಯ : ಸತ್ತ್ವ : ಜವನಧಿಕಾರಂ ಮಿಟ್ಟುವ ಜವಕೆ ಮೊಗಂದಿರುಪೆ ಕೊಲ್ವ ಮೆಯ್ಸಿರಿ ನೆಲಸಿತ್ತುವನೊಂದು ಗದೆಯೊಳ್ (ಜಗಪು. ೯-೯೩); ಕದನಕರ್ಕಶವ ಮೆಯ್ಸಿರಿಯು ರಾವುತರ್ ಮಾವುತರ್ ಬಳಸಿ ಪೇಡಯ್ಸಿ ಬರಲ್ (ಶಂಕ್ಷ. ೪೭-೩೨). ಮೈಸಿರಿ : ೧. ಸಿರಿಯ ಮೊಗರಸದ ಪೊಸ ಮೈಸಿರಿಯೆನಿಕುಂ ಪೂಗೊಳಂಗಳ್ (ಶಂರಾಪಶಾ. ೦-೬೪); ಹರಿದ ಪರುಷಣದಾನದ ಮೈಸಿರಿಯುಜಿದು ಕೈಮುಗಿದು . . . ಕೇಳಿದ ನವನಿಜೇಶ್ವರನ (ತೊರರಾ. ೪-೬-೨೩); ತನ್ನ ಕಿಜುದವಮ್ಮನ ಬೀರದ ಮೈಸಿರಿಯು ಬಿಂಕದ ಮೈಪಳಿಯು ನುಡಿಗೆ ಸಂತಸಂಗೊಂಡು (ರಾಮಕೃ. ೪೭-೯). ೩. ಸುಭಟರ ವೀರವೃತ್ತಿಯು ಬಲ್ಲೆ ಮಾನ್ಯರ ಮೈಸಿರಿಯ ತಿಳಿವೆ (ಕುಪ್ಪ್ರಶ. ೩-೨೨); ದಾಶರಥಿಸುತ ಆ ಸರೋಜಾಂಬಕನು ವಿನಯದಲಧಿಕ ತೇಜದಲಿ ಕೇಳ್ ಕಪರ್ದಿಯ ಮೈಸಿರಿಯ ಮಿಕ್ಕನು (ತೊರರಾ. ೨-೪-೦೩).

[ ಮೆಯ್₂ + ಸಿರಿ ]

**ಮೆಯ್ಸಿರಿಗಾಣ್** (ಕ್ರಿ). ಚೆಲುವನ್ನು ಕಾಣು : ಸೊಬಗನ್ನು ನೋಡು : ನಾರಿಯರ ಬಟ್ಟಮೊಗದ ಮೆಯ್ಸಿರಿಗಂಡು (ಶಬ್ದಾ. ೬-೬೩).

[ ಮೆಯ್ಸಿರಿ + ಕಾಣ್ ]

**ಮೆಯ್ಸಿರಿಗುಂದಿಸು** (ಕ್ರಿ). ಸೊಬಗನ್ನು ಕುಗ್ಗಿಸು : ಮದನಮತಂಗಜವಂ ಮೆಯ್ಸಿರಿಗುಂದಿಪ ಮೃದುತರಗಮನಂ (ಜಯುಶಾ. ೨-೬).

[ ಮೆಯ್ಸಿರಿ + ಕುಂದಿಸು ]

**ಮೆಯ್ಸಿರಿಗೆಡು** (ಕ್ರಿ). ಸಾಮರ್ಥ್ಯವಿಲ್ಲದಾಗು; ಸತ್ತ್ವಗುಂದು : ಮೆಯ್ಸಿರಿಗೆಟ್ಟುಮಿಂತು ನೆಲದೊಳ್ ವಾಣ್ಗುಂದಿ ನಿಂದಿರ್ಪರ್ (ಶಬ್ದಾ. ೦೩೨).

[ ಮೆಯ್ಸಿರಿ + ಕೆಡು₁ ]

**ಮೆಯ್ಸಿರಿವೆಱು** (ಕ್ರಿ). ಚೆಲುವನ್ನು ಪಡೆ ; ಶೋಭೆಗೊಳ್ಳು : ಮೆಯ್ಸಿರಿವೆತ್ತ ತಟ್ಟಲಿಂ ಪೆಟ್ಟುವುಡೊಂದು ದಿಟ್ಟಗೆಡೆಯಾದುದು ತೊಟ್ಟನೆ ಕರ್ವುವಿಲ್ಲನಾ (ಶಬ್ದಾ. ೨೨೦). [ ಮೆಯ್ಸಿರಿ + ಪೆಱು₁ ]

**ಮೆಯ್ಸುಕ** 'ಮೆಯ್ಸೊಗ' ನೋ.

**ಮೆಯ್ಸುಖ**, ಮೈಸುಖ (ನಾ). ೧. [ಕಾಮುಶಾ] ಕಾಮಸುಖ ; ಭೋಗ : ಪೊಸಮುಡು ಸಿಚ್ಚಸಿಚ್ಚಂ ಪೊಸಗಂಡರ್ . . . ಭಾವಿಸುವುದು ಮೆಯ್ಸುಖಂ ರಂಜಿಸೆ ಬೆಲೆವೆಣ್ಣಿಕ್ಕುಮುಟಿದ ಸತಿಯುರ್ಗುಂಟೇ (ಶಬಶಾಮ್ಮ. ೩-೦೩೨). ಮೈಸುಖ : ೨. ದೇಹಕ್ಕೆ ಹಿತಕರವಾದುದು : ನಮ್ಮ ಜನಾಂಗದವರ ತಾರತಮ್ಯಪಟ್ಟಿಯಲ್ಲಿ ಮೈಸುಖಕ್ಕಿಂತ ಮನಸ್ಸಿನ ಸುಖ ದೊಡ್ಡದು (ಹಾರೆದ. ೬). [ ಮೆಯ್₂ + ಸುಖ ]

**ಮೆಯ್ಸುಡು**, ಮೈಸುಡು (ಕ್ರಿ). ದೇಹವನ್ನು ತಾಪಗೊಳಿಸು : ಮೆಯ್ಸುಡುವ ಬಿಸಿ ನೋಡಿ ಹೆತ್ತವಳ್ . . . ಕಾಡಿಗೆ ಪೋದೆಯೇಕ ಯಿಂದೆನಲು (ಶಾಲೂರ. ೦೩೨-೨೮೨). ಮೈಸುಡು : ಇವತ್ತು ಮೈಸುಡುವ ರಣಬಿಸಿಲು ಇದೆ (ರೂಢಿ).

ಮೈಸುಟ್ಟುಕೊಳ್ಳು = ಉರಿ ಹಚ್ಚಿಕೊಂಡು ದೇಹವನ್ನು ತಾಪಗೊಳಿಸು : ಹುಲಿ ಬಣ್ಣಕ್ಕೆ ನರಿ ಮೈಸುಟ್ಟುಕೊಂಡ ಹಾಗೆ (ಗಾದೆ).

[ ಮೆಯ್₂ + ಸುಡು ]

**ಮೆಯ್ಸೆಡೆ** (ಕ್ರಿ). ಹಿಮ್ಮೆಟ್ಟು ; ಹೆದರು : ಮುರವಿಧ್ವಂಸಕನಂಜಿ ಮೆಯ್ಸೆಡೆದು ಬೆನ್ನಂ ಪತ್ತುವಂ ಪತ್ತುವಂ (ಜಗಪು. ೬-೩೭).

[ ಮೆಯ್₂ + ಸೆಡೆ₁ ]

**ಮೆಯ್ಸೋಂಕು₁** 'ಮೆಯ್ಸೋಂಕು₁' ನೋ.

**ಮೆಯ್ಸೋಂಕು₂** 'ಮೆಯ್ಸೋಂಕು₂' ನೋ.

**ಮೆಯ್ಸೋಕ** 'ಮೆಯ್ಸೊಗ' ನೋ.

**ಮೆಯ್ಸೊಗ**, ಮೆಯ್ಸುಕ, ಮೆಯ್ಸೋಕ (ನಾ). ದೇಹದ ಸುಖ, –ಸಂತೋಷ: ಅಲಸದೆ ಮಾಡಿ ಬೇಸಱದೆ ಸಾಲ್ಗುಮಿದೆನ್ನದೆ ಮೆಯ್ಸೊಗಕ್ಕೆ ಪಂಬಲಿಸದೆ (ಶಂಶಶಾ. ೦-೦೩೭) ; ಇಪ್ಪತ್ತಯ್ಸಾಸಿರವರ್ಷಂ ಸಿರಿ ಮೆಯ್ಸೊಗವುಂ ಚಕ್ರವರ್ತಿಯೊಳ್ ಭೋಗಿಸಿದಳ್ (ಶಾಂತಿಪು. ೦೦-೫೭). **ಮೆಯ್ಸುಕ** : ಅಕ್ಕರಗೊಟ್ಟಿಯುಂ ಚದುರರೊಳ್ವಾತುಂ ಕುಳಿರ್ ಕೋಟ್ಟ ಜೊಂಪಮುಮೇವೇಟ್ಟುದನುಳ್ಳ ಮೆಯ್ಸುಕಮುಮಿಂತೆನ್ನಂ ಕರಂ ನೋಡಿ ನಾಡೆ ಮನಂಗೊಂಡಿರೆ ತೆಂಕನಾಡ ಮಱಿಯಲ್ಕಿನ್ನೇಂ ಮನಂ ಬರ್ಕುಮೋ (ಶಂಶಶಾ. ೪-೫೦). **ಮೆಯ್ಸೋಕ**: ಬಗೆಯದೆ ಮೆಯ್ಸೋಕ[ಶಾಶಾಂ. ಗ]ಮಂ ಬಗೆ ಪಗೆವರ ಕಡುಪೆರ್ಚಂ (ಶಂಶಶಾ. ೭-೭೭). [ಮೆಯ್₂ + ಸೊಗ]

**ಮೆಯ್ಸೊಬಗು**, ಮೈಸೊಬಗು (ನಾ). ದೇಹದ ಸೌಂದರ್ಯ : ಬಾಯ್ಸವಿಗೆ ಮೆಯ್ಸೊಬಗು[ಶಾಶಾಂ. ಮೆಯ್ಸವಿ] (ಕಪುರ. ೭೬ ಕ್ರಯೋ). **ಮೈಸೊಬಗು** : ಕಂಗಳ ಕಾಂತಿ ಮೊಗೆಯಲು ವಿಜರ ಮೈಸೊಬಗ (ಕಂಸಪಿ. ೨೩-೦೩೦). [ಮೆಯ್₂ + ಸೊಬಗು]

**ಮೆಯ್ಸೋಂಕು₁**, ಮೆಯ್ಸೋಂಕು₁, ಮೈಸೋಂಕು, ಮೈಸೋಕು (ಕ್ರಿ). ೧. ದೇಹವನ್ನು ಮುಟ್ಟು ; ಶರೀರವನ್ನು ತಾಕು : ಅಭೀಳ ಮಹಾವಾಪಾಗ್ನಿ ಮೆಯ್ಸೋಂಕಿದ ತೆಱದೆ ತರುಸ್ತೋಮದು ಸಾರ್ದ್ರಪತ್ರಾಳಿ ಮುರುಂಟಿತ್ತು (ಕುಸುಪಶಾ. ೯-೦೦೯) ; ಕುಳಿರ್ವ ಕರದ ಚಂದ್ರ ತಂಗಾಳಿ ಮೆಯ್ಸೋಂಕಿ ಸುಳಿದುದು ಹರನ ಸಮ್ಮುಖಕೆ (ಸೋಹಶ. ೭-೯). **ಮೆಯ್ಸೋಂಕು₁** : ೧. ಕಿಜುಜದಿರ್ ಮೆಯ್ಸೋಂಕದಿರ್ ಕೈಗಳಂ ಮುಗಿದಿರ್ (ಶಬ್ದಾ. ೦೬೭) ; **ಮೈಸೋಂಕು** : ೧. ಮಂದೇಹದನುಜರೊಡನೆ ಕಾದಲು ರಕ್ತಬಿಂದು ಮೈಸೋಂಕಿ ಕೆಂಪಾಗೆ ಮುಂದದ ತೊಳೆವೂಲು ಪಶ್ಚಿಮಾಂಬುಧಿಗಿನನಂದಿಳಿದನು (ಕಂಶಪಿ. ೯-೦೩೩). **ಮೈಸೋಕು** : ೨. ಎದುರಿಸು ; ಮೇಲೆಬೀಳು : ಆ ಕಿರೀಟಿ ವೃಕೋದರರು ಮೈಸೋಕಿದರೆ ಸಂತೋಷ (ಕುಪ್ಪ್ರದ್ರೋ. ೩-೯೭). [ಮೆಯ್₂ + ಸೋಂಕು₁]

**ಮೆಯ್ಸೋಂಕು₂**, ಮೆಯ್ಸೋಂಕು₂ (ನಾ). ಶರೀರದ ಸಾಮೀಪ್ಯ : ಮಟ್ಗಿಸಿದುದು ಮೆಯ್ಸೋಂಕಿನ ಹರವಸವನಜಿವುಮನರಲೆ (ಶಂದ್ರಪ್ರ. ೬-೯೩). **ಮೆಯ್ಸೋಂಕು₂** : ಮೆಯ್ಸೋಂಕು, ಬಾಯ್ಸವಿ, ಕಯ್ಸೋರೆ (ಕಾಶಾಪಶೂ. ೩೨ ಕಾಡಾ). [ ಮೆಯ್₂ + ಸೋಂಕು₂ ]

**ಮೆರಗು** 'ಮೆರುಗು₂' ನೋ.

**ಮೆರತ** 'ಮೆರೆತ' ನೋ.

**ಮೆರಪು** 'ಮೆರ್ಪು' ನೋ.

**ಮೆರವಣ** 'ಮೆಱವಣ' ನೋ.

**ಮೆರವಣಿಗೆ** 'ಮೆಱವಣಿಗೆ' ನೋ.

**ಮೆರವಳಿಗೆ** 'ಮೆಱವಣಿಗೆ' ನೋ.

**ಮೆರಸು** 'ಮೆಱೆಯಿಸು' ನೋ.

**ಮೆರಿ** (ಕ್ರಿ). ಕುಟ್ಟು ; ತೊಳಸು : ಮುತ್ತಿರು ಮೆರಿಯುಲಿ ಮುಮುಕಿಯು ಕೀರಲಿ . . . ಬಿತ್ತ ಮೆರಿಯುಲು ಮೂಪರನ್ನಿಲ್ಲಿ ಅಪೇಕ್ಷಿಸಿದೆ (ಸಂಕೋಶ. ೦೯೬).

[ ? ]

**ಮೆರುಗು₁** (ಕ್ರಿ). ಮೆರೆ ; ವಿಜೃಂಭಿಸು : ಐಶ್ವರ್ಯ, ವೈಭವಗಳಲ್ಲಿ ಕಲಾನೈಪುಣ್ಯದಲ್ಲಿ ಮೆರುಗುವ ಶ್ರೀದೇವಿಯು ಹೆಚ್ಚೋ ? (ಶ್ರೀಶಾಹು. ೦೦) ; ಮೈಸೂರಿನ ಹೆಸರು ದಕ್ಷಿಣದೇಶದಲ್ಲಿ ಸ್ವಲ್ಪ ಸ್ವಲ್ಪ ಮೆರುಗುತ್ತಿದ್ದಿತು (ಶ್ರೀಶಾಹು. ೬೦). 'ಮಿಱುಗು₁' ಪರಾ. [ ← ತೆಲು. ಮೆಱುಗು ]

**ಮೆರುಗು₂**, ಮೆರಗು (ನಾ). ೧. ಹೊಳಪು ; ಕಾಂತಿ : ವಾರ್ನಿಷ್ ಹಾಕಿಸಿದ ಮೇಲೆ ಆ ಕಿಟಕಿಗಳಿಗೆ ಮೆರುಗು ಬಂದಿದೆ (ರೂಢಿ). ೨. ಗಿಲೀಟು; ಲೇಪನ ವಸ್ತು: ಅವರಡೂ ಚಿನ್ನದ ಮೆರುಗು ಹಾಕಿದ ಬಳೆಗಳು (ರೂಢಿ). ೩. ಶೋಭೆ ; ಕಳೆ : ಸುಧಾ ಮತ್ತು ಶೀಲಾ . . . ಆ ಪೂಜೆಗೊಂದು

ವಿಶೇಷ ಮೆರುಗನ್ನು ತಂದೊಡ್ಡಿದ್ದರು (ಕಂಶಪು. ೧೩೬) ; ಅವನ ಈ ವಿದ್ಯೆಗೆ ಮೆರುಗು ಕೊಟ್ಟವರೂ ನೀವೇ (ಸವಿ. ೬೩). **ಮೆರಗು :** ೧. ಮಾಟ ಕುರ್ಚಿ ಮೇಜುಗಳನ್ನು . . . ಮೆದುವಾದ ಬಟ್ಟೆಯಿಂದ ಉಜ್ಜಿದರೆ. ಅವಕ್ಕೆ ನುಣುಪು ಮತ್ತು ಮೆರಗು ಬರುತ್ತವೆ (ಗೃಹಾ. ೦೬೪). ೩. ಬಾಸಿಂಗ ಈಗ ಲಲಿತೆಯ ಮುಖಕ್ಕೆ ಮೆರಗು ಕೊಡುತ್ತಿತ್ತು (ಅಂಕೂ. ೬೪). 'ಮಿಱುಗು₂' ಪರಾ. [< ಮೆರುಗು₁./ತಮಿ. ಮೆರುಕು; ತುಳು. ಮೆರ್ಪು : ತೆಲು. ಮೆಱುಗು]

**ಮೆರುಗೆಣ್ಣೆ** (ನಾ). ಮರ ಮೊದಲಾದ ಸಾಮಾನುಗಳಿಗೆ ಹೊಳಪು ಉಂಟುಮಾಡಲು ಬಳಸುವ ಒಂದು ಬಗೆಯ ಎಣ್ಣೆ ; ವಾರ್ನಿಷು : ಬರ್ಮಾದೇಶದಲ್ಲಿ ಮೆರುಗೆಣ್ಣೆ (ವಾರ್ನೀಸು) ಬಳಿದ ಇಂಥ ಫಲಕಗಳು ಸಾಮಾನ್ಯ (ಭಾರತ. ೦೪) ; ರಾಳವನ್ನು ಅಗಸೆಎಣ್ಣೆಯಲ್ಲಿಯೋ ಸ್ಪಿರಿಟ್ಟಿನಲ್ಲಿಯೋ ದ್ರಾವಣಮಾಡಿ ಮೆರುಗೆಣ್ಣೆಗಳನ್ನು ತಯಾರಿಸುತ್ತಾರೆ (ಶಿಲ್ಪಾ. ೩೨೬). [ ಮೆರುಗು₁ + ಎಣ್ಣೆ. / ತಮಿ. ಮೆರುಕೆಣ್ಣೈ ]

**ಮೆರೆ** 'ಮೆಱೆ' ನೋ.

**ಮೆರೆಕೋಲು** 'ಮೆಱೆಗೋಲು' ನೋ.

**ಮೆರೆಗೋಲು** 'ಮೆಱೆಗೋಲು' ನೋ.

**ಮೆರೆತ,** ಮೆರತ (ನಾ). ೧. ಉತ್ಸವ : ಮೆರವಣಿಗೆ : ನಮ್ಮೂರಿನ ಜೀವಾಳವಾದ ಹಾಡುಪಾಡುಗಳು, ಕುಣಿತ ಮೆರೆತಗಳು ಕಣ್ಮರೆಯಾದರೆ ಉಳಿಯುವುದೇನು ? (ನಮ್ಮೂರು. ೩೦೭). ೨. ಪ್ರದರ್ಶನ : ಬಹಿರಾಡಂಬರ : ನಿಮ್ಮಂಥ ಹೇಡಿಗಳಿಗಾದ್ರೆ ಅವೆಲ್ಲಾ ಮೆರೆತಾ ಬೇಕು. ನನಗ್ಯಾಕೆ (ಚಾಗಿ. ೩೩). **ಮೆರತ :** ೨. ಆತನಿಗೆ ಮೆರತದ ಮರುಳೂ ಇದೆ, ಹೊಗಳಿಕೆಯ ಹುಚ್ಚೂ ಇದೆ (ತತ್ವಶ. ೩ ಮುನ್ನು೨).

[ ಮೆರೆ (<ಮೆಱೆ) + — ತ₂ ]

**ಮೆರೆಯಿಸು** 'ಮೆಱೆಯಿಸು' ನೋ.

**ಮೆರೆವಣಿಗೆ** 'ಮೆಱೆವಣಿಗೆ' ನೋ.

**ಮೆರೆಸು** 'ಮೆಱೆಯಿಸು' ನೋ.

Δ**ಮೆರ್ಚು** 'ಮೆಚ್ಚು₁' ನೋ.

**ಮೆರ್ಪು,** ಮೆರಪು (ನಾ). ೧. (ಕರಾ) ಧಾನ್ಯವನ್ನು ಸಂಗ್ರಹಿಸಿಡುವ ಸಾಧನ ; ಗಳಗೆ (?) : ಒಳಅಂಗಣದ ಒಂದು ಮಗ್ಗುಲಲ್ಲಿ ಅಕ್ಕಿ ತುಂಬಿಸುವ ಮೆರ್ಪಿತ್ತು (ಶಿರಾಣಿ. ೩೨) ; ಎರಡೆರಡು ಮೆರ್ಪುಗಳ ಅಂಗಡಿಯದು. ಆದುದರಿಂದಲೇ ಕತ್ತಲು ತುಂಬಿದ್ದು (ಜಾರುದಾ. ೨೬). **ಮೆರಪು :** ೨. (ಕರಾ) ಗೋಡೆಯಲ್ಲಿ ಸಾಮಾನುಗಳನ್ನು ಇಡಲು ಕೊರೆದ ಕಿಂಡಿ.

[ ? ]

**ಮೆರ್ಪುದೆಱೆ** (ನಾ). ಒಂದು ಬಗೆಯ ತೆರಿಗೆ : ಸುಂಕ ಮೆರ್ಪುದೆಱೆ ನಮ್ಮಾಳಕ್ಕೆ ದೂಪಕ್ಕೆಱೂ ಬಿಟ್ಟ ಧರ್ಮ್ಮ (ಎಕ. VIII, ಸೊರಬ. ೦೩೭-೪ ; 1272). [ಮೆರ್ಪು₁ + ತೆಱೆ₃]

**ಮೆಲ್₁,** ಮೆಲಿ, ಮೆಲು₁, ಮೆಲ್ಲು (ಕ್ರಿ). ಮೆದ್ದು, ಮೆಲ್ದು (ಭೂಕೃ), ಮೆಲ್ವ(ಭವಿಕೃ). ೧. ತಿನ್ನು : ಪನಕರಿ ಮೆಲ್ಲದೆ ಲಲಿತಸಲ್ಲಕೀಪಲ್ಲವಮಂ ಸ್ಮರವಶದಿಂದಿರ್ದುದು (ಕಲಾ. ೩-೬) : ಇಱಿ ತಱಿ ಕೊಲ್ ಮೆಲ್ (ಅವಿಪು. ೩-೬೩) ; ಹಣ್ಣು ಮೆದ್ದ ಬಳಿಕ ಆ ಮರವನಾರು ತಱಿವರೇನು (ಮುಖಾದೀ. ೭. ೪೯-೦೦೭) ; ವಿಷದ ಲಡ್ಡುಗೆ ಮೆದ್ದಿತು ಕೂಸು (ಕುರಂದ. ೦-೦೯೩-೨). **ಮೆಲಿ :** ೧. ಅಪ್ಪುದರೆ ಸುಖವಿಲ್ಲ ಮೆಲಿದರೆ ರುಚಿಯಿಲ್ಲ (ಬಸವ. ೦೨೬) ; ನೀಬಸುಪತ್ರದೊಳಂ ಬಜೆಯಂ ಬೆರಸದನಡಸಿ ಮೆಲಿದು (ಚಮದ. ೧೦-೨೩). **ಮೆಲು₁ :** ೧. ಅಡಕೆಯ ಭಾಗಂ ಬಾಯಿಂ ಕೆಡದೊಡದಂ ಕಳೆದುಕೊಂಡು ಮೆಲುವವರ್ೞೂಥರ್ (ಸಮುಶ. ೧೨-೬) ; ಮೆಲುವೊಡೆ ಲೋಹಚೂರ್ಣವುಂಟು (ಹಕಶಾ. ೬-೬೨) ; ಕೊಲುವ ಕೈಯೊಳು ಪೂಜೆ ಮೆಲುವ ಬಾಯೊಳು ಮಂತ್ರ (ಸರ್ವಜ್ಞ. ೦೭೬). **ಮೆಲ್ಲು :** ೧. ಸುದತಿ . . . ಬೆಳ್ಳಿಲೆಯ ಮೆಲ್ಲುತೆ ಸಖಿಗೂಡಿ ಬಂದಳು ದಿವಾಣಕ್ಕೆ (ಪೋಹಕ. ೨೭-೭) ; ಜೀರಿಗೆಯಂ ಹುರಿದು ಪುಡಿಮಾಡಿ ಬೆಲ್ಲವೆರಸಿ . . . ಮೆಲ್ಲಲು ಛಳಿಜ್ವರ ಬಿಡುವುದು . (ಸಕವೈ. ೭೪) ; ಮೊಸರು ಅವಲಕ್ಕಿ ಮೆಲ್ಲುವದು ಹಿಟ್ಟು ಮುಕ್ಕುವದು (ಸಮುಕ. ೬೭). ೨. (ಆಲಂ) ಮೆಲುಕುಹಾಕು ; ಹಿಂದಿನದನ್ನು ನೆನಪು ಮಾಡಿಕೊಳ್ಳು : ಗತಕಾಲದ ವೈಭವವನ್ನು ಮೆಲ್ಲುತ್ತಿರುವ ಜನಾಂಗ ಸಾವಾಗಕೂಡದು (ಭಾರತ. ೩೨೪).

[ದೇ.॥ ತಮಿ. ಮೆಲ್ : ಮಲ. ಮೆಲ್ಲು ; ತುಳು. ಮೆಲಿ = ಹಿಟ್ಟಿಸಂತೆ ನಾದು ; ತೆಲು. ಮೆಕ್ಕು ; ಕೋತ. ಮೆಲ್ = ಜಗಿಯುವಿಕೆ ; ತೊದ. ಮೆಳ್ = ಜಗಿಯುವಿಕೆ]

**ಮೆಲ್₂,** ಮೆಲು₂ (ಗು). ೧. ಮೃದುವಾದ ; ಮೆತ್ತನೆಯ : ಕೋಮಲವಾದ: 'ಮೆಲ್ಗಯ್', 'ಮೆಲ್ವಾಸು' ಪರಾ. ೨. ಇಂಪಾದ: ಮಧುರವಾದ : 'ಮೆಲ್ಲುಲಿ' ಪರಾ. ೩. ಸಾವಕಾಶವಾದ : ನಿಧಾನವಾದ : 'ಮೆಲ್ನಡೆ' ಪರಾ. ೪. ಸಣ್ಣ ; ಚಿಕ್ಕ : 'ಮೆಲ್ಗುಟುಕು' ಪರಾ. ೫. ಕೆಳಸ್ವರದ: ತಗ್ಗಿನ: 'ಮೆಲ್ದನಿ' ಪರಾ. **ಮೆಲು₂ :** ೨. 'ಮೆಲುನುಡಿ' ಪರಾ. ೩. 'ಮೆಲುನಡೆ' ಪರಾ. ೫. 'ಮೆಲುನುಡಿ' ಪರಾ. ೬. ತೀಕ್ಷ್ಣವಲ್ಲದ ; ಹಿತವಾದ: 'ಮೆಲುಗಿಚ್ಚು' ಪರಾ.

[ದೇ.॥ ತಮಿ. ಮಲ. ಮೆಲ್ ; ತುಳು. ತೆಲು. ಮೆಲ್ಲ; ಕೊಡ. ಮೆಲ್ಲೆ]

**ಮೆಲಕಾಡಿಸು** 'ಮೆಲುಕಾಡಿಸು' ನೋ.

**ಮೆಲಕಾಡು** 'ಮೆಲ್ಕಾಡು' ನೋ.

**ಮೆಲಕು** 'ಮೆಲ್ಕು' ನೋ.

**ಮೆಲಿ** 'ಮೆಲ್₁' ನೋ.

**ಮೆಲಿಸು,** ಮೆಲ್ಲಿಸು (ಕ್ರಿ). ತಿನ್ನಿಸು : ಉಣ್ಣಿಸು : ಕಲ್ಲನಾದಿಗೆ ಕಬ್ಬು ಮೆಲಿಸಿದನು (ರೇವಣ. ೦-೦೪): ಎಣ್ಣೆಯ ತಲೆಗೂಡಿಮುದಿಲ್ಲ ನೊರೆವಾಲು ಬೆಣ್ಣೆಯ ಮೆಲಿಸಿದುದಿಲ್ಲ (ಮೋಹತ. ೪-೬೦): ದೊರೆತ ದೋರೆಹಣ್ಣನವನಿಗೆ ಮೆಲಿಸುವೆ (ಗೀಲಿಂ. ೬೦-೩೨). **ಮೆಲ್ಲಿಸು :** ಕಜ್ಜಾಯ ತುಪ್ಪ ಸಕ್ಕರೆಯ ಕೊಜ್ಜೆ ಮುರಿಗೆ ಮೆಲ್ಲಿಸುತೆ ಮಿಕ್ಕುದ ಬಾಗಿಲಜ್ಜೆಯರಿಗೆ ತುತ್ತಿಸಿದ (ಮೋಹತ. ೦೬-೦೪) : ವೈಶಂಪಾಯನನಿಗೆ ಹಣ್ಣುಹಂಪಲ ಮೆಲ್ಲಿಸಿ . . . ಕಳುಹಿಸಿಬಿಟ್ಟು ಇದ್ದೇವೆ (ಪಕಶಾ. ೨). [ಮೆಲ್₁ + — ಇಸು₃]

**ಮೆಲು₁** 'ಮೆಲ್₁' ನೋ.

**ಮೆಲು₂** 'ಮೆಲ್₂' ನೋ.

**ಮೆಲುಕಸ್ತೂರಿ** (ನಾ). ಒಂದು ಬಗೆಯ ಕಸ್ತೂರಿ : ಮೆಲುಕಸ್ತೂರಿ ೧ ಹಣ ತೂಕ, ಗುಬ್ಬಚ್ಚಿಪಕ್ಕಿಯ ಹಿಕ್ಕೆ ೧ ಹಣ ತೂಕ (ಸಕವೈ. ೩೭೦).

[ಮೆಲು₂ + ಕಸ್ತೂರಿ]

**ಮೆಲುಕಾಟ** (ನಾ). ನುರಿಸುವಿಕೆ ; ಜಗಿಯುವಿಕೆ : ಅವರ ವಿನೋದದ ಮೆಲುಕಾಟಕ್ಕೆ ಲಾಲಾರಸದ ಅರ್ಘ್ಯವನ್ನರ್ಪಿಸದ ಮತಿವಿಕಾರವುಂಟೇ ? (ಗಾಳಿಕ. X. ಮುನ್ನು೨): ಈ ಅನಂತನರಕದ ಮೆಲುಕಾಟ ಬೇಡ (ದೀಕಪ. II. ೨೨೦). [ಮೆಲುಕು (<ಮೆಲ್ಕು) + ಆಟ]

**ಮೆಲುಕಾಡಿಸು,** ಮೆಲಕಾಡಿಸು (ಕ್ರಿ). ೧. (ಎತ್ತು, ಒಂಟೆ ಮುಂತಾದ ಪ್ರಾಣಿಗಳು) ಅರೆಜೀರ್ಣವಾದ ಆಹಾರಪದಾರ್ಥವನ್ನು ಮರಳಿ ಬಾಯಿಗೆ ತಂದುಕೊಂಡು ಅಗಿ—ನುರಿಸಿ ನುಣ್ಣಗೆ ಮಾಡು : ಮೈ ಮರೆತು ಕಣ್ಮುಚ್ಚಿ ನಿಧಾನವಾಗಿ ಆಗೊಮ್ಮೆ ಈಗೊಮ್ಮೆ ಮೆಲುಕಾಡಿಸುತ್ತ ನಿಂತಿತ್ತು (ತಕಶ. ೨). ೨. (ಆಲಂ) ಹಿಂದಿನ ವಿಷಯಗಳನ್ನು ಪುನಃ ಪುನಃ ನೆನಪು ಮಾಡಿಕೊಳ್ಳು,—ಮಥನ ಮಾಡು: ಮುಲಗಿದ್ದಲಿಂದಲೇ ಪುಷ್ಪಾ ಆ ರಸನಿಮಿಷ ಮತ್ತು ದುಃಖದ ದಿನಗಳನ್ನು ಮೆಲುಕಾಡಿಸಿದಳು (ಕೇಮೋರ. ೬೦). **ಮೆಲಕಾಡಿಸು :** ೧. ಮೆಲಕಾಡಿಸುತ್ತ ಸಂತೋಷದಿಂದ

ಬಿದ್ದುಕೊಂಡಿರುತ್ತವೆ (ಮುಂಬಯಿ. ೩-೧೧); ಎತ್ತುಗಳು ಯಾವ ಸಂಶಯ ವಿಲ್ಲದೆ ಮೆಲಕಾಡಿಸುತ್ತಿದ್ದುವು (ಬಾಬಂ. ೨೨). ೨. ಮನಸ್ಸು ಬೆಳಗಿನ ಮಾತುಗಳನ್ನು ಮೆಲಕಾಡಿಸುತ್ತಿತ್ತು (ಬಾಬಂ. ೬೭).
[ಮೆಲುಕು (<ಮೆಲ್ಕು) + ಆಡಿಸು]

**ಮೆಲುಕಾಡು** 'ಮೆಲ್ಕಾಡು' ನೋ.

**ಮೆಲುಕಿಡು** (ಕ್ರಿ). ಮೆಲುಕು ಹಾಕು ; ಮೆಲುಕಾಡಿಸು : ತಮ್ಮಯ ಮುಖಂಗಳ ಮೇಲಕೆತ್ತಿ ಸಂತಸದಾಳ್ದು ಮೆಲುಕಿಡುತೆ . . . ಮಲಗಿರ್ಪ ಮಹಿಷೀನಿಕರವೆಸದಿರ್ದವು (ಸಿದ್ಧೇಪು. ೦೭-೨೮).
[ಮೆಲುಕು (< ಮೆಲ್ಕು) + ಇಡು$_1$]

**ಮೆಲುಕಿರಿ** 'ಮೆಲ್ಕಿಱಿ' ನೋ.

**ಮೆಲುಕಿಱಿ** 'ಮೆಲ್ಕಿಱಿ' ನೋ.

**ಮೆಲುಕು** 'ಮೆಲ್ಕು' ನೋ.

**ಮೆಲುಗಾಳಿ** (ನಾ). ನಿಧಾನವಾಗಿ ಬೀಸುವ ಗಾಳಿ ; ಮಂದಮಾರುತ : ಸ್ವಾಗತವೀವುದು ಕಮ್ಮನೆ ಮೆಲುಗಾಳಿ (ಇಂಕಾಕ. ೯೪-೯) ; ಹೂಗಂಪು ವೊತ್ತು ಬನಬನವಲೆವ ಮೆಲುಗಾಳಿ (ಕಪ್ಯಾಂಗ. ೩೨-೮೭೯).
[ಮೆಲು$_2$ (< ಮೆಲ್$_2$) + ಗಾಳಿ$_1$]

**ಮೆಲುಗಿಚ್ಚು, ಮೆಲುಗಿರ್ಚು** (ನಾ). ತೀಕ್ಷ್ಣವಲ್ಲದ ಬೆಂಕಿ ; ಸಣ್ಣ ಉರಿ: ತುಪ್ಪಮನಿಂಬಿಂ ಬೆರಸಿ ಕಾಸಿ ಮೆಲುಗಿಚ್ಚಿಂ ತುಪ್ಪಮದುಱಿಯಲಟ್ಟು (ಸಮುದ. ೯-೯). **ಮೆಲುಗಿರ್ಚು** : ಕೈವೆಸೊರೆಯೊಪ್ಪುವ ಕಾಯ ರಸಂ ಬರಲ್ಕದಂ ಒಱೆ ಮೆಲುಗಿರ್ಚಿನಿಂದಡು (ಸಮುದ. ೨-೧೭).
[ಮೆಲು$_2$ (< ಮೆಲ್$_2$) + ಕಿಚ್ಚು]

**ಮೆಲುಗಿರ್ಚು** 'ಮೆಲುಗಿಚ್ಚು' ನೋ.

**ಮೆಲುದನಿ** 'ಮೆಲ್ದನಿ' ನೋ.

**ಮೆಲುದಳ** 'ಮೆಲ್ದಳ' ನೋ.

**ಮೆಲುನಗು** (ನಾ). ಮೃದುವಾದ ನಗೆ ; ಮಂದಹಾಸ : ಅವಳು ಮುಖದ ಮೇಲೆ ಮೆಲುನಗುವನ್ನು ಸೂಸಿದಳು (ಕನಾಖಿ. ೯೩).
[ಮೆಲು$_2$ (< ಮೆಲ್$_2$) + ನಗು$_2$]

**ಮೆಲುನಗೆ** 'ಮೆಲ್ನಗೆ' ನೋ.

**ಮೆಲುನಡೆ** 'ಮೆಲ್ನಡೆ' ನೋ.

**ಮೆಲುನುಡಿ** 'ಮೆಲ್ನುಡಿ' ನೋ.

**ಮೆಲುಪು** 'ಮೆಲ್ಪು' ನೋ.

**ಮೆಲುಮಳಲು** (ನಾ). ಮೆತ್ತನೆಯ ಮರಳು; ಸಣ್ಣನೆಯ ಉಸುಕು : ಸರೋವರದ ಮೆಲುಮಳಲ ಮೌಕ್ತಿಕದ ಪುಳಿನಸ್ಥಳದಲಾಡುವ ಸಿದ್ಧಕಿನ್ನರ ಲಲನೆಯರ ವಿಭ್ರಮದಲೆಸೆದುದು ಗಿರಿವನೋದ್ದೇಶ (ಕಭಾಗ. ೮-೨-೧೧).
[ಮೆಲು$_2$ (< ಮೆಲ್$_2$) + ಮಳಲು$_2$ (< ಮಣಲ್)]

**ಮೆಲುಮಾತು** 'ಮೆಲ್ಮಾತು' ನೋ.

**ಮೆಲುವಾತು** 'ಮೆಲ್ವಾತು' ನೋ.

**ಮೆಲುವಾಸು** 'ಮೆಲ್ವಾಸು' ನೋ.

**ಮೆಲುವು** 'ಮೆಲ್ಪು' ನೋ.

**ಮೆಲುವೆಲೆ** (ನಾ). ತಿನ್ನುವ ಎಲೆ ; ವೀಳ್ಯದೆಲೆ : ಮೆಲುವೆಲೆಯುಂ ಟಂಕಣಮುಂ ಬೆರಸಿ ತಿನಲ್ (ಸಮುದ. ೦೭-೨೦).
[ಮೆಲು$_1$ (< ಮೆಲ್$_1$) + ಎಲೆ$_1$./ ತಮಿ. ಮೆಲ್ಲಿಲೈ]

**ಮೆಲುಹು** 'ಮೆಲ್ಪು' ನೋ.

**ಮೆಲ್ಕಾಡು, ಮೆಲಕಾಡು, ಮೆಲುಕಾಡು** (ಕ್ರಿ). = ಮೆಲುಕಾಡಿಸು ೧ : ರುಚಿರಮರಕತಶ್ಯಾಮದೂರ್ವಾಂಕುರಗ್ರಾಸದೊಳಂ ಅತಿಸ್ವಚ್ಛಸ್ವಾದುಸಲಿಲ ಪಾನದೊಳಂ ಮೆಲ್ಲಮೆಲ್ಲನೆ ಮೆಲ್ಕಾಡಿ (ಕಂಶಕಂ. ೨೯-೦೯) ; ಮೇವು ಮೆಲ್ಕಾಡುವ ಸೈರಿಭಂಗಳ್ . . . ಗರ್ಜಿಪ ತರಕ್ಷುಗಳೊಪ್ಪುಗುಮಾ ವನಾಂತದೊಳ್ (ರಾಜಶೇ. ೫-೬೩) ; ಮಱಿಗೊಣಸುಗಳ್ . . . ಅರೆ ಮುಚ್ಚಿದ ಕಣ್ಗಳಿಂ ಮೆಲ್ಕಾಡುತಿರ್ದುವು (ರಾಮಾಶ್ವ. ೩೦-೨೦). **ಮೆಲಕಾಡು** : ಗೂಳಿ ಗಬಗಬನೆ ತಿಂದ ಹುಲ್ಲನ್ನು ಗಿಡದ ನೆರಳಿನಲ್ಲಿ ನಿವಾಂತ ವಾಗಿ ಮಲಗಿ ಮೆಲಕಾಡುವಂತೆ, ನಿನ್ನನ್ನು . . . ಬಲಿಕೊಳ್ಳದಿರಲಾರದು (ದೀಪಹ. II, ೨೨೦). **ಮೆಲುಕಾಡು** : ಕೆಲದಲ್ಲೊಂದು ಬಂದು ಮೆಲು ಕಾಡಿತ್ತು ನೋಡಾ (ಅವಕಂ. ೧೦-೩೯). [ಮೆಲ್ಕು + ಆಡು$_1$]

**ಮೆಲ್ಕಿಱಿ, ಮೆಲುಕಿರಿ, ಮೆಲುಕಿಱಿ** (ಕ್ರಿ). = ಮೆಲುಕಾಡಿಸು ೧ : ನೀರ್ಗುಡಿಯದ ಮೆಲ್ಕಿಱಿಯದಿರ್ಪೊಡೆ . . . ಪಶುಗಳ್ಗೆಲ್ಲಂ ಕೊಡುವುದು ಬೇವಿನ ಕಷಾಯಮಂ (ಲೋಕೋಪ. ೯-೨೦೭) ; ನಡುಗೊಳ್ವ ಘಾತದಿಂದಂ ಕದಡಾಗಿ ಮೆಲ್ಕಿಱಿವ ಮೆಲ್ನೊರೆಯಿಂ ನೊರೆಯೇಱಿ (ಲೀಲಾವ. ೫-೬೪) ; ಮೆಲ್ಕಿಱಿವ ಕೋಣನೊಪ್ಪುವ ಕಿವಿಯೊಳ್ ಪೊರೆದಿರ್ಪ ಕೊಗ್ಗಿಯಂ ತಂದಿರ ದಿಕ್ಕುಗೆ ಪುಣ್ಗೆ (ಸಮುದ. ೨-೨೦೩). **ಮೆಲುಕಿರಿ** : ಕೆಲದಲ್ಲಿ ಮತ್ತೊಂದು ಬಂದು ಅಲ್ಲಿ ಮೆಲುಕಿರಿವುದ ನಾ ನೋಡಿದೆ ನಿಂದು (ಪ್ರಿಲಾರ. ೦೯೭-೪). **ಮೆಲುಕಿಱಿ** : ವೃಷಭನು . . . ಪುಲುಗಚ್ಚಿ ಹಾಯ್ದುಕ್ಕಿತ ಮೆಲುಕಿಱಿದು ತನು ಹೆಚ್ಚುತುಪರಿಗೆ ನೆಗೆವುತಂ (ಬಸಪು. ೩೨-೨೭) ; ಕುಱಿಗಳೋಪಾದಿ ಯಲಿ ಕಬ್ಬಿನ ಹೊಱಗಣೆಲೆಯನೆ ಮೇದಕಟ ಮೆಲುಕಿಱಿವುತಲ್ಲಸುಖಕ್ಕೆ ಸೋಲದೆ (ಕೃಕುಂ. ೦-೦೪) ; ಮಲಗಿದು ಮೆಲುಕಿಱಿದ ನೊರೆವೆಳಿಯ . . . ಮರಗಾಡುಗಳೊಳಗೆ ಕೆಟ್ಟುಲ್ಘುಹುದೋಱದೆ ಹೊಕ್ಕುದಗಲಕೆ ಶಬರ ಸಂದೋಹ (ಕೂರಂ. ೩-೩-೧೧). [ಮೆಲ್ಕು + ಇಱಿ$_1$]

**ಮೆಲ್ಕು, ಮೆಲಕು, ಮೆಲುಕು** (ನಾ). ೧. (ಎತ್ತು ಮುಂತಾದ ಪ್ರಾಣಿ ಗಳು) ಅರೆಜೀರ್ಣವಾದ ಆಹಾರಪದಾರ್ಥವನ್ನು ಮರಳಿ ಬಾಯಿಗೆ ತಂದುಕೊಂಡು ನುರಿಸಿ ನುಣ್ಣಗೆ ಮಾಡುವಿಕೆ : ಸ್ವಚ್ಛದಿನುಗೆ ನೊರೆ ದುಪ್ಪವಿಶಾಕ್ಷರನೇಂ ಮೇದು ಮೆಲ್ಕನಿಱಿಯದೆ ಕಟುಕಂಠಕ್ವಣಿತ ಮಪರಿಮಿತಪರಿಪಕ್ವತರೋದಾರಕಾವ್ಯಸಸ್ಯೋತ್ಕರವಂ (ಲೀಲಾವ. ೦-೨೦) ; ಬಲ್ಲಾಳನ ರಾಜ್ಯಬಣಬೆ ಕಂಪಿಲಭೂವಲ್ಲಭನಾಳು ಭಾವಿಸಲು ಬಲ್ಲಿದ ಬಸವಗಳಾಗಿ ಪಱಿದು ತಿಂದು ನಿಲ್ಲದೆ ಮೆಲ್ಕು ಮಾಡುವವು (ಕುರಾಸಾಂ. ೧೧-೧). ೨. ಕೆಳ ದವಡೆ : ಕಟುಕತ್ರಯಮುಮನರೆದಚ್ಚುಗೆ ಮೆಲ್ಕು ಸಿಲ್ಕುತಿರ್ಪೊಡೆ (ಲೋಕೋಪ. ೯-೩೦೦) ; ಕರಿಯರಲೆಯ ಮೆಲ್ಕಿನುಗುವ ನೊರೆಗಳ ಸರಿಯೊಂ (ಜಕಬಿ. ೬-೨೭). **ಮೆಲಕು** : ೨. ಆತನ ಮೆಲಕಿಗೆ ಹೊಡೆಯಲು ದೈತ್ಯನ ಕಣ್ಣುಗುಡ್ಡೆಗಳು ಹೊರಬಿದ್ದು ಆತನು ಮರಣ ಹೊಂದಿದನು (ಶಾಪ್ಪುಕ. ೦೦೭). **ಮೆಲುಕು** : ೨. ಹುಲಿ ಹುಲ್ಲೆಯ ಕೋಡಿನಲ್ಲಿ ಸತ್ತು ಗಜ ಅಜದ ಮೆ[ಶಾಕಾಂ. ಮಿ]ಲುಕಿನಲ್ಲಿ ಸಿಕ್ಕಿ (ಕುಱುಗಾ. ೫-೦೭) ; ಅವನು . . . ಫಪ್‌ನ ಮೆಲುಕಿನ ಮೇಲೆ ಜೋರಿನಿಂದ ಪ್ರಹಾರ ಮಾಡಿದನು (ಬಂಗಾಹ. ೯).

**ಮೆಲಕು ಹಾಕು, ಮೆಲುಕುಹಾಕು** = ೧. = ಮೆಲುಕಾಡಿಸು ೧ : ಮೆಲಕುಹಾಕುತ್ತಿರುವ ಗೃಹಧೇನುಗಳ ದವಡೆಗಳಲ್ಲಿ ಕೂಡ ಆಲಸ್ಯ ಉಂಟಾಗಿತ್ತು (ಶಾಡಿಆ. ೨೦೮); ಆಡು : ದನ ಕುರಿಗಳ ಹಾಗೆ ಟೊಳ್ಳು ಕೊಂಬಿನ ಸೀಳುಗೊರಸಿನ ಮೆಲುಕುಹಾಕುವ ದನದ ಬಳಗಕ್ಕೆ (ಬೋವಿಡೆ) ಸೇರಿದ ಸಸ್ತನಿ (ಕಖಕೋ. I, ೭೨೭). ೨. = ಮೆಲುಕಾಡಿಸು ೨: ತನ್ನ ಎಳೇಮನಸ್ಸಿನಲ್ಲಿ ಇವೇ ವಿಚಾರಗಳನ್ನು ಮೆಲುಕುಹಾಕುತ್ತಿದ್ದಾನೆ (ಮುಂಗಾರು. ೩೪) ; ನೆನ್ನೆಗಳನ್ನು ಮೆಲುಕುಹಾಕುವ ಈ ಬಾಳಿ (ಹೊಸಕ್ಷಿ. ೨೭೮). [ದೇ.॥ ತಮಿ. ಮೆಲ್ಕು = ಮೃದುವಾಗು ; ಕೋತ. ಮೆಕ್; ಕುಇ. ಮ್ರೇಡ]

**ಮೆಲ್ಕುರಾಡ** (ನಾ). ಮೃದುವಾದ ಹಾಸುಗೆ (?) : ಬೋಟಿಯ ಮೆಲ್ಕುರಾಡವ ಸೆಳೆಮಂಚಕ್ಕೆ ನಂಬಿಸುತೆನ್ನ ನೀನೊಯ್ದು ಬಿಂಬಾಧರದ

ಸವಿಯ ತೋಳ್ ನೆಳ್ ರಸದಂಬುಲಿಗುಟುಕಿತ್ತು ಕೂಡೊ (ಕಂಸವ. ೯-೦೮೯).
[ಮೆಲ್$_2$ + ಕುರಾಡ ?]

**ಮೆಲ್ಕೊತ್ತು** (ಕ್ರಿ). ೧. = ಮೆಲುಕಾಡಿಸು ೧ : ಸ್ವಕ್ಕಂಗಳಿಂ ಸೂಸೆ ಫೇನಪ್ರಸರಂ ಮೆಲ್ಕೊತ್ತುತುಂ ನಿಂದುದು ವನಮಹಿಷೀವೃಂದಂ (ಶಂಣಪು. ೬-೦೫೬); ಮೆಲ್ಕೊತ್ತುತುಂ ಸಲೆ ವಿಭ್ರಾಜಿಸುತಿರ್ಪುದಾ ವಿಷಯದೊಳ್ ಧೇನುವ್ರಜಂ (ಕುಸುಪು. ೨-೯೦); ಮೆಲ್ಕೊತ್ತುತಿರ್ಪ ಜವಹುರದ ಜಕ್ಕಂದೊಟಲಿಯು ಗೆಲೆವರ್ಪ ಕಾಟಕ್ಕೊಣವಳಿಗದಿಂದೆಯುಂ . . . ವನಾಂತರಂ ಮನೋಹರವಾದುದು (ರಾಪಜಾಕ್ಕ್. ೩-೨೮). ೨. (ಅಲಂ) ಹಿಂದಿನದನ್ನು ನೆನಪು ಮಾಡಿಕೊಳ್ಳು : ಉರ್ವಿ ಗೌರವಿಪವೋಲ್ ಮೆಲ್ಕೊತ್ತುವರ್ ಕಬ್ಬಿಗರ್ (ಸಂಸಶ. ೧೯-೦೨). [ಮೆಲ್ಕು + ಒತ್ತು$_1$]

**ಮೆಲ್ಗಯ್** (ನಾ). ಮೃದುವಾದ ಕೈ ; ಕೋಮಲ ಹಸ್ತ : ಮೆಲ್ಗಯ್ಗಳಿನ್ ಪಿಡಿಯ ಈ ದಿವ್ಯಧನುವನ್ (ಅಕ್ಕಕಾ. ೨೩-೯೭).
[ಮೆಲ್$_2$ + ಕಯ್$_2$ (< ಕೆಯ್$_2$)]

**ಮೆಲ್ಗುಟುಕು**, ಮೆಲ್ಗುಡುಕು (ನಾ). ಸಣ್ಣ ಗುಟುಕು, – ತುತ್ತು : ವಂತ್ರಾಣೇಶ್ವರಿ ಪ್ರೇಮದಿಂದೆಸಗಾಗಳ್ ತಿಳಿದಿಲ್ಲಿ ಮೆಲ್ಗುಟುಕನೀಯುತ್ತಿರ್ದ ತಾವಿಂತಿದು (ಕುಸುಪು. ೪-೨೦). **ಮೆಲ್ಗುಡುಕು** : ಬಿಸಿಲಟ್ಟಿ ಕರಂ ಬಬಲ್ದು ಮೆಲ್ಗುಡುಕುಗೊಳಲ್ಕವೊಲ್ಲದಿರೆ (ಲೀಲಾವ. ೬-೯೮). [ಮೆಲ್$_2$ + ಕುಟುಕು$_2$]

**ಮೆಲ್ಗುಡುಕು** ' ಮೆಲ್ಗುಟುಕು ' ನೋ.

**ಮೆಲ್ಗೆಸಱ್** (ನಾ). ನಯವಾದ ಕೆಸರು : ಕಾಷ್ಠಸಂತತಿ ಮೃಣಾಳಂ ಚಂದನಂ ಮೆಲ್ಗೆಸಱ್ ನಮಸಂದಾವಿಗೆಗಿಚ್ಚು ಮೆಲ್ಗೆರೆಯ ಸೂಡು (ಸೂಕ್ತಿಸು. ೦೭-೩೯). [ಮೆಲ್$_2$ + ಕೆಸಱ್]

**ಮೆಲ್ದಡ** (ನಾ). ಮೃದುವಾದ ಪಾರ್ಶ್ವ, – ಪಕ್ಕ : ಮೈ ಪುಳಕಿಸಿ ನೋಂಕಿ ನುಣ್ಣೊಡೆಯ ಮೆಲ್ದಡಮುಂ ಬಿಡೆ ತಳ್ತು ಮಧ್ಯಮುಂ (ಅಸಂಪು. ೬-೩೩).
[ಮೆಲ್$_2$ + ದಡ$_3$ (< ತಡ$_2$)]

**ಮೆಲ್ದನಿ**, ಮೆಲುದನಿ (ನಾ). ೧. ತಗ್ಗು ಧ್ವನಿ ; ಮೆಲ್ಲಗಿನ ಸ್ವರ : ಅಜ್ಞಾತವ್ಯಕ್ತಿಯು . . . ನಮ್ಮರಸರ ಬಂದೂಕುಧಾರಿದಳಕ್ಕೆ ಇವನೇ ಯೋಗ್ಯನಾಗಿರುವನು ಎಂದು ಮೆಲ್ದನಿಯಿಂದ ಹೇಳಿದನು (ಜೋಳದು. ೬). **ಮೆಲುದನಿ** : ೧. ಅವರಿಬ್ಬರೂ ಮೆಲುದನಿಯಲ್ಲಿ ಮಾತನ್ನಾಡುತ್ತಿದ್ದರು (ರೂಪ). ೨. ಇಂಪಾದ ಧ್ವನಿ : ಮೆಲುದನಿಯ ಬೀರಿವದೆ ತುಂಬಿಯ ಲಲಿತಗೀತವ ವನವನದ ಸಿರಿ ಬಗೆಗೊಳಿಸಿತ್ತೆ (ಕುಪ್ಪಾ೧. ೮-೪೬); ಥಟ್ಟನೆ ಎದ್ದು ಕುಳಿತು ಮೆಲುದನಿಯಲ್ಲಿ ಹೇಳಿದಳು (ಬಾಹಿಕ. ೯೦೬).
[ಮೆಲ್$_2$ + ದನಿ$_1$]

**ಮೆಲ್ದಳ**, ಮೆಲುದಳ (ನಾ) ಕೈ ಅಥವಾ ಕಾಲಿನ ಮೃದುವಾದ ಒಳಭಾಗ : ಅಡಿಗಡಿಗೆ ಮೃದುಪದವಿ ಹುಡಿಯನು ತೊಡೆದು ಮೆಲ್ದಳದಿಂದ ಮೆಲ್ಲನೆ ನಡಿದನು (ಬ೭ಭಾಗ. ೪-೮-೨೨). **ಮೆಲುದಳ** : ಅಸುರರಿಪು ಕೈ ನೀಡಿ ನಿಂದನು ಗರುಡನಂಗದ ಮೇಲೆ ಕರತಳವ ರೂಢಿಯಲಿ ಸಮತಳವಲಕ್ಷ್ಮಿಯ ಜೋಡಿಗಳ ಮೆಲುದಳದೊಟ್ಟಿರೆ ನೋಡುತಿರ್ದನು ನೃಪನನು (ಬ೭ಭಾಗ. ೪-೦೩-೯೦). [ಮೆಲ್$_2$ + ತಳ (= ತಲ)]

**ಮೆಲ್ದೆರಳ್ಕೆ** (ನಾ). ನಿಧಾನವಾದ ಚಲನೆ, – ಅಲುಗಾಟ : ಪೋಗಡಲ ಸುತ್ತೆಲಗ ಬಿಲ್ಲನ ಮೆಲ್ದೆರಳ್ಕೆಯು ಗಾಂಭೀರ್ಯದಿಂದ ಚಳಚಳಿಸುತ್ತ (ಮಂತ್ರಶ. ೭೭-೦೭). [ಮೆಲ್$_2$ + ತೆರಳ್ಕೆ]

**ಮೆಲ್ನಗೆ**, ಮೆಲುನಗೆ (ನಾ). ಮೃದುವಾದ ನಗೆ ; ಮಂದಹಾಸ : ನಗೆಗಣ್ಗಳೊ[ಳಗೆ ಮೆಲ್ನಗೆ]ಸೊಗಯಿಸೆ (ಗದಾಯು. ೮-೩೯); ತನುಭವನೆಲ್ಲಿದೇ . . . ಮೆಲ್ನಗೆಯಿಂಬಿನ ಸೊಬಗನೆಲ್ಲಿದಂ (ರಾಜಶೇ. ೦೩-೦೦೪); ಅವಳು ಮೆಲ್ನಗೆ ನಗುತ್ತ ಪುನರುಚ್ಚರಿಸಿದಳು (ಸೀತಾಯಂತ. ೨೯೬). **ಮೆಲುನಗೆ** : ತಾ ಪೀಳಿಯುವನೆನುತವೆ ಮೆಲುನಗೆಯುಲಿತಿರಥರ ಜಜಿದನು ಕೌರವರ ರಾಯ (ಕುಪ್ಪಾರ್ದ್ರೋ. ೬-೩೬) ; ಸಿರಿಯೊಡನೆ ಸಿರಿರಾಯನುತ್ಸವದಿ ನಿಂತಿಹನು ಕಡುಸವಿಯ ಮೆಲುನಗೆಯೊಳು (ಮಳಿದೇ. ೪೬-೦೦). [ಮೆಲ್$_2$ + ನಗೆ]

**ಮೆಲ್ನಡೆ**, ಮೆಲುನಡೆ (ನಾ). ನಿಧಾನವಾದ ನಡಗೆ ; ಮಂದಗಮನ : ಮೆಲ್ಲನೆ ನಡೆವಂಚೆಯುಂ ಜಡಿವ ಮೆಲ್ನಡೆಯಿಂದೆ . . . ಒಪ್ಪುವಳೊಪ್ಪದಿ ನಿಚ್ಚಗಾರ್ತಿ (ಅಧ್ಯಾ. ೦೨೦); ಅಳಿಕುಂತಳದ ಮೆಲ್ನಡೆಯ ಶಬರಿ ಹಳುವ ದೊಳ್ತನ್ನ ಕಾಂತನ ಬಳಿಯೆ ಬರಲು (ಕೃಪಿಏಾ. ೨೮-೯೯). **ಮೆಲುನಡೆ** : ದಟ್ಟಡಿ ಬಳುಕುನಡೆ ಮೆಲುನಡೆ [ಪಾಠಾಂ. ಮೆಲ್ನಡೆ] (ಕೂರಿಂ. ೦-೮-೬೬).
[ಮೆಲ್$_2$ + ನಡೆ$_2$]

**ಮೆಲ್ನವಿರು** (ನಾ). ಮೃದುವಾದ ಕೂದಲು : ತೋರಕುಚದ ತೋರದುಟಿ ತೋರದುಜುಬಿನ ತೋರಿದ ಮೆಲ್ನವಿರುಗಳ . . . ಚಿಕ್ಕನಿಸಾರಿಯರೆಸೆ ದರತಿಯಲಿ (ಕಂಪಶಿ. ೨೦-೮೦). [ಮೆಲ್$_2$ + ನವಿರು$_2$ (< ನವಿರ್)]

**ಮೆಲ್ನುಡಿ**, ಮೆಲುನುಡಿ (ನಾ). ೧. ಇಂಪಾದ ಮಾತು ; ಸವಿನುಡಿ : ನೋಟದೊಳಟ್ಟಿಜಂಬಡೆದು ಮೆಲ್ನುಡಿಯೊಳ್ ಬಗೆವೊಕ್ಕು (ಶಂಶಧಾ. ೩-೮೨); ದೂದವಿಯರ ಲಲ್ಲೆವೆರಸಿದ ಮೆಲ್ನುಡಿಯೆ ಕರ್ಣಪೂರವಾಗೆಯುಂ (ಮಲ್ಲಕು. ೩-೦೨); ಕೇಳಿದನವರ ಮೆಲ್ನುಡಿಯನು ಹರಿಸವ ತಾಳಿದನನಿಮದ್ಧ (ವೋಕಶ. ೦೮-೬೯); ಗದರಿಸದೆ ಮೆಲ್ನುಡಿಗಳಿಂದಲೇ ಅವನನ್ನು ಮಾತನಾಡಿಸಿ (ಕೃಪುಷ. ೯೩). **ಮೆಲುನುಡಿ** : ೧. ಮೆಲುನುಡಿಗಳಿನಿದಂ ನೆನೆವನು (ಬಸಪು. ೪೨-೨೩); ಮೆಲುನುಡಿಗೆ ಗಿಣಿ ಹೊದ್ದಿದವು . . . ಕಮಲಾನನೆಯರ ಕೆಳದಿಯರ (ಕುಪ್ಪಾ೮. ೮-೦೦). ೨. ಕೆಳಸ್ವರದಲ್ಲಿ ಹೇಳಿದ ಮಾತು : ಲಲಿತೆಯು ಮೆಲುನುಡಿಯಲ್ಲಿ ಎಂದ ಈ ಶಬ್ದಗಳು ಶೇಖರನಿಗೆ ಕೇಳಿಸಲೇ ಇಲ್ಲ (ಶಂಡೇ. ೦೪). [ಮೆಲ್$_2$ + ನುಡಿ$_2$]

**ಮೆಲ್ನುಡಿಗ** (ನಾ). ಸವಿಯಾದ ಮಾತುಗಳನ್ನಾಡುವವನು ; ಮೃದುಭಾಷಿ : ಮೆಲ್ನುಡಿಗರ್ ಅಜಿವರ್ ಆರ್ಪರ್ (ವಕಪಂ. ೦೪೪-೧).
[ಮೆಲ್ನುಡಿ + – ಗ$_2$]

**ಮೆಲ್ನುಡಿಗೇಳ್** (ಕ್ರಿ). ಸವಿಯಾದ ಮಾತುಗಳನ್ನು ಕೇಳು : ಕಿವಿಗೆಣಾತನ ಮೆಲ್ನುಡಿಗೇಳ್ದು ಕೇಳಿ ಮೆಯ್ದೆಗೆವುವು ಕೀಚಕಧ್ವನಿಯೆ ಗೆತ್ತು ವಿಪಂಚಿಯ ನುಣ್ಬರಕ್ಕೆ (ಪರ್ವಪು. ೪-೩೩). [ಮೆಲ್ನುಡಿ + ಕೇಳ್]

**ಮೆಲ್ನುಡಿಗೊಡು** (ಕ್ರಿ). ಇಂಪಾದ ಮಾತುಗಳನ್ನಾಡು : ಕುಮಾರಕಂ . . . ಎಣಗಲೊಡನೆ . . . ಮೆಲ್ನುಡಿಗೊಟ್ಟಳ್ಮದವಾಂತಳಾ ಜನನಿ (ರಾಜಶೇ. ೦೯-೬೩). [ಮೆಲ್ನುಡಿ + ಕೊಡು$_1$]

**ಮೆಲ್ನೆಣ** (ನಾ). ಮೃದುವಾದ ಕೊಬ್ಬು : ತಣಿವನ್ನಂ ರುಧಿರಾಂಬುವಂ ಪಡೆಪಿನಿಂದೀಂಟುತ್ತಮಲ್ಕೊಕ್ಕ ಮೆಲ್ನೆಣನಂ ಗಬ್ಬನೆ ನುಂಗಿ (ಕುಸುಪು. ೦೦-೯೩). [ಮೆಲ್$_2$ + ನೆಣ]

**ಮೆಲ್ನೊರೆ** (ನಾ). ಮೃದುವಾದ ನೊರೆ, – ಬುರುಗು : ಘಾತದಿಂದಂ ಕದಡಾಗಿ ಮೆಲ್ಕಿಱಿವ ಮೆಲ್ನೊರೆಯಿಂ ನೊರೆಯೋಱ್ (ಲೀಲಾವ. ೩-೮೪).
[ಮೆಲ್$_2$ + ನೊರೆ]

**ಮೆಲ್ಪಾಡು** ' ಮೆಲ್ವಾಡು ' ನೋ.

**ಮೆಲ್ಪು**, ಮೆಲುಪು, ಮೆಲುವು, ಮೆಲುಹು (ನಾ). ೧. ಕೋಮಲತೆ ; ಮೃದುತ್ವ : ಪೊಸತಲರ್ದ ಕೆಂದಾವರೆಯ ಕೆಂಪುಮಂ ಮೆಲ್ಪು [ಪಾಠಾಂ. ಬೆಳ್ಪು] ಮನಿಬ್ಕಳಿಗೊಂಡು . . . ಕೆಂಪವಾದಂತಾದುವು (ಶಂಶಧಾ. ೨-೩೯ ವ); ನಗೆಗಣ್ಗಳೊ[ಳಗೆ ಮೆಲ್ನಗೆ] ಸೊಗಯಿಸೆ ಕರಚರಣತಳದ ಮೆಲ್ಪೆಸೆಯೆ (ಗದಾಯು. ೮-೩೯). ೨. ಇಂಪು ; ಮಾಧುರ್ಯ : ನುಡಿ ಬಳಲ್ಪೊಪ್ಪುತಿರೆ ಮೆಲ್ಪಿನ ಗುಣಂಗಳಿಂ (ಶಿಸರ. ೧-೦೦೪); ಹರಭಕ್ತಿ ಹಸರವಿಡಿದಿರದೆ ಹರಿದಾಡಿ ಮೆಲ್ಪೊರೆದ ನುಡಿವದಿನಿಂ ಕೈಮುಗಿವುತಂ (ಸಾನಂಶ. ೩-೩೬). ' ಮೆಲ್ಪುಗುಂದು ' ಪರಾ. ೩. ಮೃದುವಾದ ಸ್ವಭಾವ : ಬಾಳಮುಂ ಮೆಲ್ಪುಂ ನುಡಿಯ ಬಲ್ಪುಂ . . . ಧೈರ್ಯಮುಂ

ಎಂದಿವು ಮೊದಲಾಗೊಡೆಯುಮಾತನೊಳ್ ನೆಲಸಿರ್ದ ಗುಣಂಗಳಂ ನೆನೆನೆನೆದು (ಪಞ್ಚ್ತಂ. ೩೦-೯); ಮೆಲ್ಪಿಂಗೆ ಮೆಚ್ಚಿತ್ತು ತನ್ನ ಸಮಸ್ತಂ ಪರಿವಾರಂ (ಅಭಿಪು. ೦-೭೮). ೪. ನಿಧಾನವಾದ ಚಲನೆ ; ಮಂದಗತಿ : ತೆರೆಗಳ್ಮೆಲ್ಪಿಂದೆ ನೀರ್ವಿಜ್ಜಣಿಗೆಯ ತೆಱದಿಂ ಬೀಸೆ (ಕಾದಂಬ. ೦೪೭). ಮೆಲುಪು : ೧. ಮೆಲುಪು ಬಲುಪಿನ ಕಕುಶಿಗಳುಡುಗಲಿ (ಎಸೀಗೀ. ೦೦೪-೯). ೨. ಗಾನ, ಮೆಲುಪಿನ ಕೊರಲು ಕುಗ್ಗಲು, ಹೊಳಲು ಕೊಡುವುದು ಮನದೊಳು (ಇಂಗೀತ. ೭೫-೦). ೫. ಸಾವಕಾಶ ; ನಿಧಾನ : ಶಿಕ್ಷಿತಮಪ್ಪ ವಾಜಿಯ ಬೆಂಗೆವಾಯ್ದೊಡ್ಡಂ ಮುನ್ನಂ ಮೆಲುಪ [ಪಾಠಾಂ. ಮೆಲ್ಪಿ]ನೊಳ್ ಸ್ವಭಾವ ಮನಾರಯ್ದುಂ (ಶೀವಸಂ. ೫೩-೨೫). ಮೆಲುವು : ೨. ನೀನು ಅದನ್ನು ಎಷ್ಟು ಮೆಲುವಾಗಿ . . . ಎಷ್ಟು ಮೋಹಕವಾಗಿ ನುಡಿಸುತ್ತಿದ್ದೆ (ಹೊಸಕ್ಷಿ. ೮). ಮೆಲುಹು : ೧. ಎನಗೆ ಬಲವುಂ ನೀನೆ ಎನಗೆ ಮೆಲುಹುಂ ನೀನೆ (ಶಿಶ್ಮರ. ೦೦-೨೩); ಮೆಲುಹು ಮರೆಸಿದ ಬಿರುಸು ಮೆಲುಹಾಗಿ ತೋರುವುದು (ಯಶೋಧ. ೫೮). [ಮೆಲ್₂+—ಪು₂]

**ಮೆಲ್ಪುಗುಂದು** (ಕ್ರಿ). ಇಂಪನ್ನು ಕಳೆದುಕೊಳ್ಳು : ಪುಗಲೆನ್ನದೆದಲ್ ಪುಗಿಮೆಂದು ಮೆಲ್ಪುಗುಂದದ ದನಿಯಿಂ ತಳಿರ್ತಸುಗೆಯೊಳ್ ನೆಲಸಿರ್ದ ಪಿಕಾಳಿ ಮೆಲ್ಲನೂಳ್ದುದು (ಶಂಶಭಾ. ೦೯-೦೨).

[ ಮೆಲ್ಪು + ಕುಂದು₁ ]

**ಮೆಲ್ಪುಗೆಡು** (ಕ್ರಿ). ಮೃದುತ್ವವನ್ನು ಕಳೆದುಕೊಳ್ಳು; ಒರಟಾಗು : ಮೆಲ್ಪುಗೆಟ್ಟು ಬಲಿದಿರೆ ಮೆಯ್ . . . ಸತ್ತಪುದಾ ವಾಜಿ (ಅಶ್ವಶಾ. ೭-೪೦).

[ ಮೆಲ್ಪು + ಕೆಡು₁ ]

**ಮೆಲ್ಪುಗೊಳ್** (ಕ್ರಿ). ಮಾರ್ದವವನ್ನು ಪಡೆ ; ಇನಿದಾಗು : ಗುಜ್ಜುಗೊಂಡುದು ನಡೆ ಮೆಲ್ಪುಗೊಂಡುದು ಸರಂ (ಜಗಪ. ೨-೯೫).

[ ಮೆಲ್ಪು + ಕೊಳ್₁ ]

**ಮೆಲ್ಪುದೋಱು** (ಕ್ರಿ). ಮಾರ್ದವದಿಂದ ಕೂಡಿರು ; ಹಿತವಾಗಿರು : ನೆವದಿಂ ಸೋಂಕುವ ಮೆಲ್ಪುದೋಱುವ ಭವಚ್ಚಾತುರ್ಯದಿಂದೆನ್ನೊಳಾನವಲಜ್ಜಾನತಿ ಪಿಂಗೆ ಪಿಂಗಿದುದು ಕನ್ಯಾಭಾವವು (ಜಗಪ. ೦೨-೦೦೦).

[ ಮೆಲ್ಪು + ತೋಱು ]

**ಮೆಲ್ಪುವೆರು** ' ಮೆಲ್ಪುವೆಱು ' ನೋ.

**ಮೆಲ್ಪುವೆಱು, ಮೆಲ್ಪುವೆರು** (ಕ್ರಿ). ಕರ್ಕಶತೆಯನ್ನು ಹೊಂದದಿರು; ಮೃದುವಾಗು: ಸಕ್ಕದಂಗಳ ಪದಂ ಪವಣಾಗಿರೆ ಮೆಲ್ಪುವೆತ್ತು ದಾಂಗುಡಿವಿಡುವಂತೆ ನೀಳ್ದು ನಿಲೆ ಪೇೞ್ವುದು ನೀತಿನಿರಂತರಕ್ರಮಂ (ಕವಿರಾ. ೦-೦೪೯). **ಮೆಲ್ಪುವೆರು** : ಸಂಸ್ಕೃತಪದಗಳು ಹವಣಾಗಿರಬೇಕು. ಮೆಲ್ಪುವೆತ್ತಿರಬೇಕು (ಕನಾತ. ೬೦). [ ಮೆಲ್ಪು + ಪೆಱು₁ ]

**ಮೆಲ್ಪೊಗೆ** (ಕ್ರಿ). = ಮೆಲ್ಪುದೋಱು : ಕಡೆಗಣ್ಗಳೊಳ್ ಪೊಳೆವ ಬೆಳ್ಪು ಶಿಖಾಗ್ರದೊಳೊಂದಿದೊಳ್ಪು ಮೆಲ್ಪೊಗೆದಿರೆ ಕೇಗುವಿಂಚರದ ನುಣ್ಪು ಮನಂಗೊಳೆ ಚೆಲ್ವನಾಳ್ದುದೀ . . . ವಿಚಿತ್ರಶಿಖಂಡಮಂಡಲಂ (ಕಾವ್ಯಾವ. ೬೦೯).        [ ಮೆಲ್ಪು + ಒಗೆ₁ ]

**ಮೆಲ್ಪೊದೆ** (ನಾ). ಮೃದುವಾದ ಹೊದಿಕೆ : ಮುಳಿಸಿಂ ಪೋದರ್ಾನೆ ಮೆಯ್ಯಾತನಾ ತೊವಲಂ ಮೆಲ್ಪೊದೆ ಮಾಡಿ (ಕಬ್ಬಿಗ. ೦೫೮)

[ ಮೆಲ್₂ + ಪೊದೆ₂ ]

**ಮೆಲ್ಮಲರ್** (ನಾ). ಮೃದುವಾದ ಹೂವು ; ಕೋಮಲ ಪುಷ್ಪ : ಮಗಮಗಿಪ ಪರಿಮಳಂ ಪುದಿದ ಮೆಲ್ಮಲರಂತೆ . . . ಸೌಂದರಮಹೀಪಾಲ ನೆಳವರೆಯದಲಿ ಕಂಗೊಳಿಸಿದನು (ಸೌಂದರಕ. ೪-೭). [ಮೆಲ್₂ +ಮಲರ್₃ ]

**ಮೆಲ್ಮುಸುಕು** (ನಾ). ನವಿರಾದ ಮುಸುಕು,–ಅವಕುಂಠನ : ಕೆಳದಿಯರ್ ಸುತ್ತ ಬರುತಿರೆ . . . ಆನೆ ಕುದುರೆಗಳ ಮೇಲೆ ಮೆಲ್ಮುಸುಕಿನಿಂ ಕೆಲಕೆಲಬರು ಬಳಿಕ್ಕೆನಲ್ (ತರಿತ. ೪೭-೩೯). [ಮೆಲ್₂+ಮುಸುಕು₂ (< ಮುಸುಂಕು₂) ]

**ಮೆಲ್ಮೊಗ್ಗೆ** (ನಾ). ಮೃದುವಾದ ಮೊಗ್ಗು : ಕೆಂದಾವರೆಯ ಮಿಸುಪ ಮೆಲ್ಮೊಗ್ಗೆಯಂ ಮಾಣದೆಂದುಂ ನಿನಗೀವೆಂ (ಕಬ್ಬಿಗ. ೩೦೮).

[ ಮೆಲ್₂+ಮೊಗ್ಗೆ ]

**ಮೆಲ್ಲ** (ಅ). ೧. ಮೆಲ್ಲನೆ ; ನಿಧಾನವಾಗಿ : ಧನ್ಯಳಾದೆನು ನಾನು ಪೋಪೆ ಮೆಲ್ಲ (ಸಡಗ. I, ೪೦೮). ೨. ಮೃದುವಾಗಿ; ನಮ್ರವಾಗಿ : ದೊರೆಯ ಕಂಡನು, ನಾಚಿಕೊಂಡನು . . . ಇರದೆ ನಡೆದನು, ಮೆಲ್ಲ ನುಡಿದನು (ಕುಮಾ. ೦೭-೫). [ದೇ.॥ ತಮಿ. ತುಳು. ತೆಲು. ಮೆಲ್ಲ; ಮಲ. ಮೆಲ್ಲೇ; ಕೊಡ. ಮೆಲ್ಲ; ತೊದ. ಮೆಲ್ಯ]

**ಮೆಲ್ಲಗೆ** (ಅ). ೧. ನಿಧಾನವಾಗಿ ; ಸಾವಕಾಶವಾಗಿ : ಲಘುವ್ರಜಂಗಳೆಡೆಯೊಳ್ ನಿಂದಂಕಮಂ ಕೂಡಿ ಮೆಲ್ಲಗೆ ಮತ್ತೊಂದನೆ ಕೂಡು (ಛಂದೋಂಬು. ೭-೨೭೩). ೨. ಮೃದುವಾಗಿ; ನಯವಾಗಿ : ಬಗೆದರ್ಥ ಮನಱಿಪದೆ ಮೆಲ್ಲಗೆ ತಿರ್ದುವ ಒಗೆಯನದಱ ನೆವದಿಂ ಪೇೞ್ತಂ ನಿಗದಿಸುವುದು ಪರ್ಯಾಯೋಕ್ತಗತಾಳಂಕಾರಂ (ಕವಿರಾ. ೩-೦೩೦); ನೀಂ ಬಾ ಪೋಪ ಮೆಂದಂಗೆ ಮೆಲ್ಲಗೆ ತತ್ಕನ್ಯಕೆ ನಾಣ್ಚಿ ಬೇಡುವೊಡೆ ನೀಮೆಮ್ಮಯ್ಯನಂ ಬೇಡಿರೇ ಎಂಬುದುಂ (ಶಂಶಭಾ. ೦-೭೦). ೩. ನೇರವಾಗಿ ; ಸರಿಯಾಗಿ (?) : ಒಂದೆ ಕೆಲ್ಲಂಬಿನಿಂ ಮೆಲ್ಲಗೆ ಪಾದರ್ಾದರ್ೆಚ್ಚಂ (ಶಂಶಭಾ. ೦೨-೦೮).

ಮೆಲ್ಲಮೆಲ್ಲಗೆ (ದ್ವಿರುಕ್ತಿ) : ಹೀಗೆ ಮೆಲ್ಲಮೆಲ್ಲಗೆ ಹೆಜ್ಜೆಯಿಟ್ಟರೆ ಊರನ್ನು ಸೇರುವುದು ಎಂದಿಗೆ ? (ಮುಧ್ಯಮ. ೦೮೨).

[ ಮೆಲ್₂ + ∸ ಅಗೆ₃ ]

**ಮೆಲ್ಲಡಿ** (ನಾ). ಮೃದುವಾದ ಪಾದ ; ಕೋಮಲವಾದ ಅಡಿ : ತಡಕುಂ ಪಿಟ್ಟೆಯುಮೊತ್ತೆ ಮೆಲ್ಲಡಿಗಳಂ (ಶಂಶಭಾ. ೩-೯); ದೆಸೆದೆಸೆಗೆ ಪರಿವರ್ಥಕನ ಮೆಲ್ಲಡಿಗಳೊಡನೆ ದಿಟ್ಟಿಗಳ್ ಪರಿಯೆ (ಮಲ್ಲಿಪು. ೩-೦೦೫); ತಳಿರಡಿಪು ಮೆಲ್ಲಡಿಯೊ ತಾವರೆಗಳಡಿಯ ಥಳಥಳಿಪ ಚೆನ್ನಡಿಗಳಸಿಯಡಿಯ ಲಲಿತಾಂಗಿಯರ್ . . . ತಳರ್ದರ್ (ತರಿತ. ೩೭-೪೦); ತಾವರೆಯಂತಿರೆ ಕೆಂಪನಾಂತು ಕಂಗೊಳಿಸುವ ನಿನ್ನ ಮೆಲ್ಲಡಿಯನೊತ್ತುವೆನು (ಶಾಕುಂತ. ೪೦-೭೨).    [ ಮೆಲ್₂ + ಅಡಿ₁ ]

**ಮೆಲ್ಲಡಿಯ** (ನಾ). ಮೃದುವಾದ ಪಾದವುಳ್ಳವನು : ಕೆಂದಲೆಯುಂ, ಮೆಲ್ಲಡಿಯಂ, ಕುಱುಗೆಯ್ಯಂ (ಶಾಶಾಭೂ. ೧೩೦ ಉದಾ).[ಮೆಲ್ಲಡಿ + – ಅ₇]

**ಮೆಲ್ಲಡಿಯಿಡು** (ಕ್ರಿ). ಮೃದುವಾದ ಪಾದಗಳನ್ನಿಡು ; ಕೋಮಲವಾದ ಹೆಜ್ಜೆಗಳನ್ನಿರಿಸು : ತೊಡರ ಝಣಝಣರವದ ಮೆಲ್ಲಡಿಯಿಡುವ ಗಮನದ ಭರದಿ ಕಿಱುಬೆಮರಿಡುತ ಬಂದಳು (ಪಳಹ. ೭-೭೫) ; ಲಲಿತಚವಲಬೊಂಬಾಳವನೇಱು ಮೆಲ್ಲಡಿಯಿಟ್ಟು ವಿವರವನೇನ ಬಣ್ಣಿಪೆನು (ಮೋಹತ. ೪೨-೨೨).        [ಮೆಲ್ಲಡಿ + ಇಡು₁]

**ಮೆಲ್ಲನೆ** (ಅ). ೧. ನಿಧಾನವಾಗಿ ; ಸಾವಕಾಶವಾಗಿ ; ಮಂದಗತಿಯಲ್ಲಿ : "ಮೆಲ್ಲನೆನೆ ಮಾಂದ್ಯ ನಾಮಂ" (ಕಬಿಕಂ. ೨೭೮) ; ಮೊರೆವಳಿಕುಳಂಗಳುಂ ಮೆಲ್ಲನೆಸೆವ ಮಳಯಾನಿಳನುಂ ಮುಳಿಸಂ ಕಟಿಲ್ತಿ ಕಳಿದುವು . . . ಕಾಮಿಗಳಾ (ಕವಿರಾ. ೨-೭೦) ; ತನಗಂ ಮೆಲ್ಲನೆ ಮೃತ್ಯು ಸಾರೆ (ಶಂಶಭಾ. ೭-೫) ; ಅರವಿಂದಸಖ ಹೊದ್ದಿದನು ಮೆಲ್ಲನೆ ಪಶ್ಚಿಮಾಂಬುಧಿಯ (ಕುಮಾದ್ರೋ. ೦೪-೩೩). ೨. ನಯವಾಗಿ : ನಂಬಿಸಿ ಮೆಲ್ಲನೆ ಬೆಸಗೊಳ್ವುದುಂ (ಧರ್ಮಾಮೃ. ೨-೦೦೭) ; ಮೆಲ್ಲನೆ ನೋಯದಂತೆ ಗಿಳಿಗನ್ನತ ಮಾದುಪಚಾರದೇಟಿಗೆಯಂ ನಿಲ್ಲದೆ ಮಾಡುತುಂ (ಉದ್ಭಟ. ೯-೦೨೮).

ಮೆಲ್ಲಮೆಲ್ಲನೆ, ಮೆಲ್ಲನೆಮೆಲ್ಲನೆ (ದ್ವಿರುಕ್ತಿ) : ವಿಧುಮುಖಿ ಮೆಲ್ಲಮೆಲ್ಲನೆ ಮಧುದ್ರವಮಂ ಸಂದೀಂಟುವಲ್ಲಿ (ಕಾವ್ಯಸಾ. ೯೭೩ ಶೂದ್ರಕ) ; ಮೆಲ್ಲಮೆಲ್ಲನೆ ಕೆಲಕ್ಕೆ ವಂದು (ಶಂಶಭಾ. ೪-೯೨ ವ) ; ಮೆಲ್ಲಮೆಲ್ಲನೆ ಬಂದನೆ ಗೋಪ್ಯಮ್ಮ ಕೇಳೆ (ಪುರಂದ. ೦-೯೦ ಪಲ್ಲವಿ) ; ನೆನೆದು ಚೇತರಿಸಿ ಮೆಲ್ಲನೆ ಮೆಲ್ಲನೆಚ್ಚತ್ತು (ಬಸವ. ೩-೦೨೩).        [ಮೆಲ್₂ + —ಅನೆ₁]

**ಮೆಲ್ಲರಳೆವಾಸು** (ನಾ). ಮೃದುವಾದ ಅರಳೆಯ ಹಾಸುಗೆ: ಒಱಗುವಳತ್ತೆ ಮೆಲ್ಲರಳೆವಾಸಿನೊಳ್ (ಛಶಠ. ೦೦೮-೦೯). [ಮೆಲ್$_2$ + ಅರಳೆ$_1$ + ಪಾಸು$_2$]

**ಮೆಲ್ಲಾಯ** ' ಮೇಲಾಯ್ಮ ' ನೋ.

**ಮೆಲ್ಲಿತು, ಮೆಲ್ಲಿತ್ತು, ಮೆಲ್ಲಿದು** (ನಾ). ೧. ಮೃದುವಾದುದು ; ಕೋಮಲವಾದುದು : "ಮೆಲ್ಲಿತೆನಲು ಮೃದುವಾದುದುಂ" (ಶಶಠ. ೦೨೯) ; ಮೆಲ್ಲಿತಾಸನಕೆ ಸೂಚನೆದೋಱೆ ಕುಳಿತನು (ಛಶಠ. ೩೭-೦೦) ; ಪೂಗುಡಿ ಮಾಡಿ ತೋಱದಿರ್ಪೆಳಲತೆ ಮೆಲ್ಲಿತಲ್ಲದೆಲರಿಲ್ಲೆನೆ ಶದ್ವನಮೇಂ ಮನೋಜ್ಞಮೋ (ರಾಜಶೇ. ೨-೩೪). ೨. ಮೃದುತ್ವ ; ಕೋಮಲತೆ: ಸಲ್ಲದು ಸಲ್ಲದುಂಬಿದನಿಸಲ್ಗಡ ಮೆಲ್ಲಿತರಿಂದೆ ಕೂಡಿದೀ ಪುಲ್ಲೆಯ ಮೆಯ್ಯೊಳ್ (ಶಾಕುಂತ. ೫-೦೦). **ಮೆಲ್ಲಿತ್ತು :** ೧. ಕಲ್ಲೆನ್ನಳ್ ಮುಳ್ಳೆನ್ನಳ್ ಮೆಲ್ಲಿತ್ತಿದು ಬೆಟ್ಟಿತೆನ್ನಳತಿಭಕ್ತಿಯೊಳಂ (೧೦೯. ೩-೦೦೦) ; ಒಳ್ಳಿತ್ತು, ಒಳ್ಳಿತು ; ಮೆಲ್ಲಿತ್ತು, ಮೆಲ್ಲಿತು (ಶಬ್ದಮ. ೫೯ ವೃಯೋ). **ಮೆಲ್ಲಿದು :** ೧. ತಳಿರ್ಗಳಪ್ಪೋಲ್ ಮೆಲ್ಲಿದುವೀ ತಳಂಗಳ್ (ಶಬರ. ೩-೦೭) : ಮೆಲ್ಲಿದು ವಪ್ಪ ಪಾರಿಕಣಜಾಲದೆ ಮೌಕ್ತಿಕಜಾಲಮಪ್ಪಪೋಲ್ (ಕಾದಂಬ. ೩೨೮).
**ಮೆಲ್ಲಿದ** = ಮೃದುಸ್ವಭಾವದ ವ್ಯಕ್ತಿ : ಮೆಲ್ಲಿದರಂತೆ ಬಂದು ಕರೆಯಲ್ ಖಳರುಗ್ರೊಡೆ ಪೋಪೊಡೆ (ಜಮ:ರ. ೦೯-೬೦) : ಬಲ್ಲಿದರ ಮುಂದೆ ತನ್ನನೆ ನೆನೆದುಕೊಳ್ಳುವುದು ತನಗಿಂತ ಮೆಲ್ಲಿದರ ಮೇಲೆ ತಾನೇರಿ ಹೋಗು ವಂದು (ಕುಱಿ. ೦೦೮-೨೩೦). **ಮೆಲ್ಲಿದಳ್** = ವಿನಯದಿಂದ ಕೂಡಿ ದವಳು : ಅಗ್ನಿಭೂತಿರಿಸಿಯರ್ ತಿಳಿಯೆ ಧರ್ಮಮಂ ಪೇಱ್ದೊಡೆರ್ದೆ ಯೊಳ್ ಮೆಲ್ಲಿದಳಾಗಿ ತನ್ನ ಭವಾಂತರಂಗಳಂ ಧರ್ಮಮುಮಂ ಕೇಳ್ದಱದು (ವಡ್ಡಾರಾ. ೦೦-೨೮). [ < ಮೆಲ್$_2$./ತಮಿ. ಮೆಲ್ಲಿತು. ಮೆಲ್ಲಿಚು ; ಮಲ. ಮೆಲಿಚ್ಚಲ್ = ಕೃಶವಾದ ]

**ಮೆಲ್ಲಿತ್ತು** ' ಮೆಲ್ಲಿತು ' ನೋ.

**ಮೆಲ್ಲಿದ** ' ಮೆಲ್ಲಿತು ' ಪರಾ.

**ಮೆಲ್ಲಿದಳ್** ' ಮೆಲ್ಲಿತು ' ಪರಾ.

**ಮೆಲ್ಲಿದು** ' ಮೆಲ್ಲಿತು ' ನೋ.

**ಮೆಲ್ಲಿಸು** 'ಮಲಿಸು' ನೋ.

**ಮೆಲ್ಲು** ' ಮೆಲ್$_1$' ನೋ.

**ಮೆಲ್ಲುಲಿ$_1$** (ಕ್ರಿ). ಇಂಪಾಗಿ ಹೇಳು ; ಮಧುರವಾಗಿ ನುಡಿ : ಚಕ್ರವಾಕ ಗಳಂತೆ ಕೂಡಿ ಮೆಲ್ಲುಲಿದೆವೇ (ಪಸೀಗೀ. ೬೯-೩). [ಮೆಲ್$_2$ + ಉಲಿ$_1$]

**ಮೆಲ್ಲುಲಿ$_2$** (ನಾ). ಮಧುರವಾದ ಧ್ವನಿ : ಇಂಪಾದ ದನಿ : ಎಸೆವ ವಿಮಾನಘಂಟೆಗಳ ಮೆಲ್ಲುಲಿ ಕಿನ್ನರಗೇಯದೊಳ್ ಪೊದಟ್ಟಿಸೆಯ (ಅಜಿತ. ೨-೯೦); ಪಾಡುವ ಗೇಯಮೆಂದು ಮೆಲ್ಲುಲಿ ಕಿವಿಯಂ ಪಳಂಚಲೆಯೆ (ಧರ್ಮಾಮೃ. ೩-೦೭೯) : ಮೆಲ್ಲುಲಿ ನುಣ್ಗೊರಲೊಳುಣ್ಮಲಿಂಚರಂಗೆಯ್ವ ತಿರ್ಪಲರ್ವಕ್ಕಿವಳಗದಿಂ . . . ಆ ಕೊಳಂಗಳ್ ಮೆಱೆದುವು (ಶಬ್ದರಾ. ೬-೩೯). [ಮೆಲ್$_2$ + ಉಲಿ$_2$]

**ಮೆಲ್ಲುಲಿಪು** (ನಾ). = ಮೆಲ್ಲುಲಿ$_2$ : ಪುಲ್ಲೆವಿಂಡು ಬೆಚ್ಚುವ ಬಳೆಗೆಯ್ಯ ಮೆಲ್ಲುಲಿಪೊ ಪೇಳೆಸಲ್ (ಪಠಶಂ. ೬೨೭). [ಮೆಲ್$_2$ + ಉಲಿಪು]

**ಮೆಲ್ಲೆದೆ** ' ಮೆಲ್ಲೆರ್ದೆ ' ನೋ.

**ಮೆಲ್ಲೆರ್ದೆ, ಮೆಲ್ಲೆದೆ** (ನಾ). ೧. ಕೋಮಲವಾದ ವಕ್ಷಸ್ಥಳ, – ಎದೆ: ಪಡಪಡವಾಯ್ತು ಮೆಲ್ಲೆರ್ದೆಗಳಂ ಕರಯುಗ್ಮದಿನೊತ್ತಿ (ಅಜಿತ. ೬-೦೨೦). ೨. ಕೋಮಲವಾದ ಹೃದಯ ; ಮೃದುವಾದ ಮನಸ್ಸು : ನಲ್ಲರ ಮೆಲ್ಲೆರ್ದೆಗಳ್ ಬಸಂತದೊಳ್ ಬರಿದುವು (ಕಂಶಚಾ. ೫-೩೩) : ಮೆಲ್ಲೆರ್ದೆಯೊಳ್ ನಾಣ್ಗೊಳಿತುದು (ಜಯುಶಾ. ೩-೨೫). **ಮೆಲ್ಲೆದೆ :** ೧. ಎಲ್ಲಾ ಕಲೆಗಳನೊಳಕೊಂಡು ರಾಜಿಪೆ ಮೆಲ್ಲೆದೆಗುಱುಪಲ್ಲಿ ತೋಱು (ವೋಠಠ. ೬-೦೩) : ಸುಳಿನಾಭಿಯೊಳು ಪುಟ್ಟಿ ಮೆಲ್ಲೆದೆಯೊಳು ಬೆಳೆದೊಳು ಗೊರಳೊಳು ಪ್ರಾಯಪಡೆದು (ಛಠಠ. ೦೦-೦೩). ೨. ಮೆಲ್ಲೆದೆತಣ್ಪೋ, ಕೊಡುಗೈಯ ಬಣ್ಪೋ ! (ಹೊಂಗಳು. ೦೬-೦೦). [ಮೆಲ್$_2$ + ಎರ್ದೆ]

**ಮೆಲ್ಲೆರ್ದೆಗ** (ನಾ). ಕೋಮಲ ಹೃದಯವುಳ್ಳವನು : ನೀಂ ಜಾಣ ಮೆಲ್ಲೆರ್ದೆಗನಂ ಒಲಿದ ತರಳೆಯೊಳಿಂತು ಮುನಿವರೇ (ಕಬಶು. ೦೦-೬೦). [ಮೆಲ್ಲೆರ್ದೆ + — ಗ$_2$]

**ಮೆಲ್ಲೆಲರ್, ಮೆಲ್ಲೆಲರು** (ನಾ). ನಿಧಾನವಾಗಿ ಚಲಿಸುವ ಗಾಳಿ ; ಮಂದಮಾರುತ : ವಾರವಿಲಾಸಿನಿಯರ್ವೆಲ್ಲೆಲರ ಪೀಲಿಬಿಜ್ಜಣಗೆಯ ನೊಯ್ಯನೆ ಬೀಸುತ್ತಿರೆ (ಕಾದಂಬ. ೪೫೫) ; ತನ್ನ ಮನದನ್ನರಪ್ಪ ಬಸಂತ ಮೆಲ್ಲೆಲರ್ಗಳೆಂಬ ಕೆಳೆಯರೊಡನೆ . . . ಪೇಱೆ (ಶಬ್ದಕಾ. ೦೯೬). **ಮೆಲ್ಲೆಲರು :** ಮೆಲ್ಲೆಲರೊಳು ಸರಸೀರುಹದಂದದಿ ಧ್ಯಾನದಿ ಚಲಿಸುವ ಚರಣಕೆ ನಾಂ ಶರಣೆನುವೆಂ (ಗೋಕುಠ. ೨೨-೨) ; ಕನ್ನಡ ನಾಡ ನಂದನದ ಮೆಲ್ಲೆಲರೊಂದು ತಣ್ಣನಲೆದಾಡುತ್ತಿದ್ದೆ (ನಾಡೋಜ. ೨೨೬). [ಮೆಲ್$_2$ + ಎಲರ್]

**ಮೆಲ್ಲೆಲರು** 'ಮೆಲ್ಲೆಲರ್' ನೋ.

**ಮೆಲ್ಲೆಲುಬು** (ನಾ). ಮೃದುವಾದ ಮೂಳೆ ; ಮೃದ್ವಸ್ಥಿ : ಮೆಲ್ಲೆಲುಬಿ ನಲ್ಲಿ (ಕಾರ್ಟಿಲೇಜ್) ಆಧಾರವಸ್ತು ಧಾರಾಳವಾಗಿದೆ (ಕವಿಕೋ. I, ೫೩). [ ಮೆಲ್$_2$ + ಎಲುಬು (< ಎಲ್ವು) ]

**ಮೆಲ್ಲೆಸಟ್** (ನಾ). ಮೃದುವಾದ ದಳ : ಪಿಡಿದಲರ್ವಿಲ್ಲುಂ ಮೆಲ್ಲೆಸಟಿಂಡೆ ದೊವಲುಂ ಮಿಸುಪ ಸನೆಯ ಮೊನೆಯುಂಬುಂ ನೇರ್ಪಡೆ ಮೇಲೆ ಮೇಲೆ ನಡೆದುದು ಗಡಣದೆ ಮಱಿದುಂಬಿಯೆಂಬ ಬಿಲ್ಲಣಬೀರರ್ (ಶಬ್ದಕಾ. ೨೦೫). [ ಮೆಲ್$_2$ + ಎಸಟ್ ]

**ಮೆಲ್ಲೊಡಲ್** (ನಾ). ಮೃದುವಾದ ದೇಹ ; ಕೋಮಲಶರೀರ : ಬಿಸಖಂಡಂಗಳಿಂ ಪರಿಮಳಿಪ ನಿನ್ನ ಮೆಲ್ಲೊಡಲಿರದೇಳುತ್ತೆಂತಿದೆನ್ನನಿಂದು ಪಚರಿಕುಂ (ಶಾಕುಂತ. ೩೯-೬೯). [ ಮೆಲ್$_2$ + ಒಡಲ್ ]

**ಮೆಲ್ವಚನ** (ನಾ). ಇಂಪಾದ ನುಡಿ, — ಮಾತು : ಪ್ರಿಯಚಿತ್ತದಿಂ ನಿನ್ನ ಮೆಲ್ವಚನಂಗಳಂ ನೆಱೆ ಕೇಳ್ದು ಮುಯ್ಯನೆ ಮಾಡುವೆಂ (ಧರ್ಮಾಮೃ. ೩-೨೨೦). [ ಮೆಲ್$_2$ + ವಚನ ]

**ಮೆಲ್ವಾಡು, ಮೆಲ್ಪಾಡು** (ನಾ). ೧. ಇಂಪಾದ ಹಾಡು : ಪ್ರಾತಃಕಾಲದ ಪದ— ಮೆಲ್ವಾಡುಗಳನ್ನು ಮೇಳದೊಡನೆ ಹಾಡುತ್ತಿದ್ದ ಪಾಠಕರ ಸಂಗೀತ ಘೋಷದಿಂದಲೇ ವಿಚಿತ್ರ ಬಂಕೆಯನು ಮುಖವಜ್ಜನಾದಿಗಳನ್ನು ತೀರಿಸಿದನು (ಶೀಠಶಂ. ೦೨). ೨. [ಕಾವ್ಯಮೀ] ಒಂದು ಪದ್ಯಜಾತಿಯ ಹೆಸರು : ಸಂದಿಸಿರೆ ಕಂದಮುಂ ಪೆಱತೊಂದಱೆಯ ವೃತ್ತಜಾತಿಯುಂ ಪದಮವು ತಳ್ತೊಂದಿರೆ ಪನ್ನೆರಡುವರಂ ಸಂದುದು ಮೆಲ್ವಾಡೆನಿಕ್ಕುಮದು ಕನ್ನಡದೊಳ್ (ಕಾವ್ಯಾವ. ೯೩೨). **ಮೆಲ್ಪಾಡು :** ೧. ಭಾವದೆಸಕಂ ಮೆಲ್ಪಾಡಿನೊಳ್ಪಂತೆ ಕೂಡಿದ ನಾನಾರಸಸಾರದಾನಮೆಸೆದತ್ತು (ಸೂಕ್ತಿಸು. ೬-೧೦೦). [ ಮೆಲ್$_2$ + ಪಾಡು$_2$ ]

**ಮೆಲ್ವಾತು, ಮೆಲುಮಾತು, ಮೆಲುವಾತು** (ನಾ). ೧. = ಮೆಲ್ವಚನ : ಸಾತಿಶಯಾರ್ಥಮುಮಂ ಮೆಲ್ವಾತುಮನೊಸೆದಿತ್ತರೊಲಿದು ತವಗಿಲ್ಲದುಮಂ (ಶಮುಠ. ೬೬ ವೃಯೋ) ; ಮೆಲ್ವಾತಿನೊಳಕ್ಕಱೆಂ ನೆಗಳ್ವ ಬಿನ್ನಪಕುದ್ಯತ ನಾದಂ (ರಾಸ್ಕರಂ. ೦-೨). **ಮೆಲುಮಾತು :** ೧. ನಗುನಗುತ್ತ ಮೆಲು ಮಾತಿನ, ಕುಲುಕುಲುನಗುವಿನ ಹೊನಲನ್ನು ಹರಿಸುತ್ತಿದ್ದಾನಲ್ಲ (ರೂಶಸಂ. ೯೬). ೨. ಇತರರಿಗೆ ಕೇಳಿಸದಂತೆ ಮೆಲ್ಲನೆ ಆಡುವ ಮಾತು : ಅವರ ಬಾಯಿಯ ಗೊಣಗು, ಇಲ್ಲವೆ ಮೆಲುಮಾತುಗಳು ಒಂದು ರೀತಿಯಿಂದ ಅವರ ಆತ್ಮಗತಗಳು (ಶುೂಕಶ. ೨೦೯). **ಮೆಲುವಾತು :** ೨. ಆಯುರ್ವೇದವನ್ನು ಕಲಿತು . . . ವೈದ್ಯರಾಜನೆನಿಸಿಕೊಳ್ಳಬೇಕೆಂದಿರುವೆನು ಎಂದು ಮೆಲುವಾತಿ ನಿಂದ ನುಡಿದನು (ಮುಠಸ. ೩). [ ಮೆಲ್$_2$ + ಮಾತು$_1$ ]

**ಮೆಲ್ವಾಸು**, ಮೆಲುವಾಸು (ನಾ). ಮೆತ್ತನೆಯ ಹಾಸುಗೆ : ಮೃದು ತಲ್ಪ : ಹಂಸೆಯ ತುಳಿಯ ಮೆಲ್ವಾಸಿನಲಿ ಪವಡಿಸುವೀಕೆಗಿಂದೀಗ . . . ಕಲುನೆಲದೊಳೊಱಗಿದಳು (ಕುವ್ಯಾಕ. ೯-೩೦) ; ರಾರಾಜಿಸಿದನವಂ ಮೆಲ್ವಾಸಿನೊಳ್ಮೆಱೆವ ಮಣಿಮಂಚದಾಸನದೊಳು (ಸ್ವಬಿಭಾ. ೧೧-೨೪). **ಮೆಲುವಾಸು** : ಸ್ವಯಂಪ್ರಭೆಯೊಳು ಕೂಡಿ ಮೆಲುವಾಸಿನೊಳೊಱಗಿದನು (ವರ್ಧಚ. ೬-೯). [ ಮೆಲ್$_2$ + ವಾಸು$_2$ ]

**ಮೆಲ್ವಿನ್ನಣಿ** (ನಾ). ವಿನಯಶೀಲನಾದ ಕಲಾನಿಪುಣ : ಬಹುವ್ರೀಹಿಗೆ . . . ಚಲವಾದಿ, ಮೆಲ್ವಿನ್ನಣಿ (ಕಮರ. ೧೬೩ ಕೃಯೋ).
[ ಮೆಲ್$_2$ + ಬಿನ್ನಣಿ ( < ಬಿನ್ನಾಣಿ$_2$) ]

**ಮೆಲ್ವಿಲ್** (ನಾ). ಮೃದುವಾದ ಬಿಲ್ಲು : ಬೆಳ್ಗಬ್ಬಿನ ಮೆಲ್ವಿಲ್ಲೀವು ದೊಗೆದ ಕಾಮನ ಬಿಲ್ಲುಳ್ಳೊಡೆನುತ್ತೆ ಕಂತು ಮುಯ್ಯಾಂತಿರ್ಪಂ (ಚಂದ್ರಕು. ೪-೯೩). [ ಮೆಲ್$_2$ + ಬಿಲ್$_2$ ]

**ಮೆಲ್ವೆಣ್ಣು** (ನಾ). ಕೋಮಲೆ ; ಸುಕುಮಾರಿ : ನೆಲೆವೊಲೆ ಸುಣ್ಣಿಲ್ಲ ಮೆಱೆಯೆ ಮೆಱೆವ ಮೆಲ್ವೆಣ್ಣು ಮೇಲಿಕ್ಕೆ ಮೆಯ್ ಮಱೆದನೆ ಮದನಾಸ್ತ್ರದಿಂದ (ಕುರಾಸಾಂ. ೩೩-೪). [ ಮೆಲ್$_2$ + ಪೆಣ್ಣು ( < ಪೆಣ್ ) ]

**ಮೆಲ್ಸರ** (ನಾ). ಮೃದುವಾದ ಸ್ವರ : ಇಂಪಾದ ಧ್ವನಿ : ಪಾದ ಸಂಚರಣದಿನುಣ್ಮೆ ನೂಪುರದ ಮೆಲ್ಸರಂ (ಚಂದ್ರಕು. ೩-೯೩) ; ಎನ್ನನೆ ಕೂರ್ತರ್ ಮೆಲ್ಸರದೆ ಪಾಡುತೆ ಪಟ್ಟಿರೆ (ರಸರ. ೧-೪೯). [ಮೆಲ್$_2$ + ಸರ$_1$]

**ಮೆಲ್ಸರಿ** (ನಾ). ಸಣ್ಣದಾಗಿ ಬೀಳುವ ಮಳೆ : ಪೆವ್ವುಟಿ ಮೆಲ್ಸರಿ ತುಂತುಱ್ . . . ನಟ್ಟು ಬಡಪಮೆನಲ್ಸುರಿದುವು (ಜಗಾ. ೪-೩೨) ; ಕಾಲ್ಸ ಮನಿಸೆ ಪೊಸಬುಂಡಿನ ಮೆಲ್ಸರಿಯಂ ಸುರಿಯುತಿರ್ಪ ಸಂಪಗೆವೂಗಳ್ ಬಲ್ಸೞೆ ಪಿಡಿವಂತಿರ್ದುವು ಮೆಲ್ಸರದಿಂ ಪಾಡುತಿರ್ಪ ಪೆಣ್ದುಂಬಿಗಳಂ (ಕಬ್ಬಿಕಾ. ೬೦); ಮೆಲ್ಸರಿ ಸೂಳ್ಸರಿ ಮುಗಿಲೊಳ್ಗಲ್ಸರಿ ತಳ್ಸರಿ . . . ಸುರಿದು ಕಱೆದುವಿರುಳುಂ ಪಗಲುಂ (ರಾಜಶೇ. ೯-೧೧೨). [ಮೆಲ್$_2$ + ಸರಿ$_5$]

**ಮೆಲ್ಸುಯ್** (ನಾ). ನಿಧಾನವಾದ ಉಸಿರು : ಮೆಲ್ಸುಯ್ಯುಗ್ಗಿ ನಿಂದೋಂದಿದ ಹೃದಯಮುಮಸ್ಪಂಗಪದ್ಮಂಬೊಲುನ್ಮೀಳಿಸೆ (ಕಾದಂಬ. ೭೬೭).
[ ಮೆಲ್$_2$ + ಸುಯ್$_2$ ]

**ಮೆಲ್ಸೋಂಕು** (ನಾ). ಕೋಮಲವಾದ ಸ್ಪರ್ಶ ; ಮೃದುಸ್ಪರ್ಶ : ಆ ಗಾಳಿಯ ಮೆಲ್ಸೋಂಕೀವಾಗಳೆ ಬೆಮರೊಡನೆ ಬಳೆದ ಸೇದೆಯುದೆತ್ತಂ ಪೋಗೆ (ಕಬ್ಬಿಕಾ. ೯೯). [ ಮೆಲ್$_2$ + ಸೋಂಕು$_2$ ]

**ಮೆಷಿನ್ನು** 'ಮಿಷನ್ನು' ನೋ.

**ಮೆಸ್ಟರ** (ನಾ). ಒಬ್ಬನ ಹೆಸರಿನ ಹಿಂದೆ ಗೌರವಸೂಚಕವಾಗಿ ಸೇರಿಸುವ ಪದ : ಮೆಸ್ಟರ ಶೇಂಡಿ ಪೋಲು ಸಾಹೇಬರನ್ನು (ರಾಜೇಂದ್ರ. ೩೩).
[ ← ಇಂ. Mister ]

**ಮೆಹನತು** 'ಮೆಹನತ್ತು' ನೋ.

**ಮೆಹನತ್ತು**, ಮೆಹನತು, ಮೋನತ್ತು, ಮೇಹನತ್, ಮೇಹನತ್ತು (ನಾ). ೧. ಪರಿಶ್ರಮ ; ಪ್ರಯತ್ನ : ಈ ಮೆಹನತ್ತು ಮಾಡಿ ಐದು ದಿವಸಗಳಲ್ಲಿ ಆ ಕೋಟೆಯನ್ನು ತೆಗೆದುಕೊಂಡರು (ರಾಜೇಂದ್ರ. ೨೭) ; ದೊರೆಗಳವರು ಹೈದರಲ್ಲೀಖಾನನು ಮಾಡಿದ ಮೆಹನತ್ತು ಎಲ್ಲವನ್ನೂ ಚಿತ್ತಕ್ಕೆ ತಂದು (ಮಹಾಪಂ. I, ೧೮೨). ೨. ಮೆಚ್ಚುಗೆ ; ಶಹಭಾಸ್‌ಗಿರಿ : ನಿಮ್ಮನ್ನು ನಾಯಿಗಳಂತೆ ಗುಂಡಿಕ್ಕಿ ಕೊಲ್ಲಿಸುತ್ತೇನೆ. ಅದರಿಂದ ನನಗೂ ಮೇಲಿಂದ ಮೆಹನತ್ತು ದೊರಕುತ್ತದೆ (ಕುಶರು. ೪೪೭). **ಮೆಹನತು** : ೧. ಯೆಳನಡಿವಿನ ಗ್ರಾಮದ ಕೋಟೆ ಕೊತ್ತಲ ಹೊಸ್ತಾಗಿ ಹಾಕಿಸಿ ಬಹಳ ಮೆಹನತು ಮಾಡಿ ಏಕನಿಷ್ಠೆಯಲ್ಲಿ ನಡಕೊಂಬದರಿಂದಲ್ಲು (ಎಕ. XVI, ಕಳ್ಳಿಪಾ. ೯೪-೧೨ ; 1746). **ಮೋನತ್ತು** : ೧. ಪತ್ತಲನ್ನೆ ಲಕ್ಷಣವಾಗಿ ಸುತ್ತಿ . . . ಮೋನತ್ತಿನಿಂದ ಅಲಂಕರಿಸಿಕೊಂಡಳು ಗಿರಿಜ (ದೇವಹೊ. ೯೩). **ಮೇಹನತ್** : ೧. ಪರುಷಾರು ತಿಂಗಳು ಬಹಳ ಮೇಹನತ್ ಮಾಡಿ. ಒಮ್ಮೆ ಪರೀಕ್ಷೆಯು ಕುತ್ತಿನಿಂದ ಗೆದ್ದೆಪ್ಪ (ದೇಶಹ. II, ೨೩೦). **ಮೇಹನತ್ತು** : ೧. ಬೊಪ್ಪರಿವಿಶ್ಲೆ ಪಬ್ಬಿಯೊಳಗಿಂದ ಬೇಡಿದ್ದಾದರೆ ಬಹಳ ಮೇಹನತ್ತು ಮತ್ತು ವೇಳೆ ಮುರಿಯುತ್ತದೆ (ಮುಂಬಿವ್ಯಾ. ೦೯೩).
[←ಅರ. ಮೇಹನತ್. ಮಿಹನತ್ : ಹಿಂ, ಮರಾ. ಮೇಹನತ್]

**ಮೆಹರಬಾನಗಿ** 'ಮೆಹರ್ಬಾನಗಿ' ನೋ.

**ಮೆಹರೆ** (ನಾ). ಒಂದು ಸ್ಥಳದ ಹೆಸರು ( ? ) : ಅಸ್ತೆ ಬನ್ನು ಮೆಹರೆಯ ಕೊಳ ಅಸ್ತೆ ಬನ್ನು ಕೊಟ್ಟಿಲೆವಳ್ಳದ ಅಲಕಿಜುಕಿಯ ಕಗ್ಗಲ್ಲ ಒಳ್ಗೆಯ (ಮೈಆ. ೦೯೦೯, ೧೨-೬೧ : ೯೦೧). [ ? ]

**ಮೆಹರ್ಬಾನ್**$_1$ (ನಾ). ದಯಾಳು; ಉಪಕಾರಿ : ಮೆಹರ್ಬಾನರೆ ದಾನಿಶ್ ಮಂದರ್ಬಾನರು ಜ್ಞಾನಿಗಳ ಶಿರೋಮಣಿಗಳು (ಶಿರಂಗ. ೩೪); ಮೆಹರ್ಬಾನ್ ಮದಪ್ರಿಸ್ ಗವರ್ನರ್ ಸಾಹೇಬರವರು (ಕಂಜಿನ. ೯೦). [←ಅರ. ಪಾರ. ಹಿಂ. ಮೆಹರ್ಬಾನ್: ಮರಾ. ಮೆಹರ್ಬಾನ್, ಮೆಹರ್ವಾನ್]

**ಮೆಹರ್ಬಾನ್**$_2$, ಮೇರುಮಾನಿ (ನಾ). ಅನುಗ್ರಹ; ಕೃಪೆ: ಉಪಕಾರ : ನಿನಗೆ ಮೆಹರ್ಬಾನಾಗಿ ಪಡಿಗೇನಹಳ್ಳಿ . . . ಉಂಬಳಿಯಾಗಿ ಕೊಟ್ಟು ಯಿದ್ದೇವೆ (ಎಕ. IX, ದೇವನ. ೩೪-೪; ಸು. 1700). **ಮೇರುಮಾನಿ** : ಕಾಶೀ ಪಂತುಗೆ. . . ದವಲತ್ತು ಕೊಟ್ಟು ಬಹಳ ಮೇರುಮಾನಿಯಂ ಮಾಡಿ (ಕಳಸ್ಮ. ೯-೩೯). [←ಅರ. ಪಾರ. ಹಿಂ. ಮೆಹರ್ಬಾನೀ; ಮರಾ. ಮೆಹರ್ಬಾನೀ, ಮೆಹರ್ವಾನೀ]

**ಮೆಹರ್ಬಾನಗಿ**, ಮೆಹರಬಾನಗಿ. ಮೆಹೆರಬಾನಗಿ, ಮೋಹರ್ಬಾನಗಿ (ನಾ). ಅನುಗ್ರಹ; ದಯೆ : ನಿನ್ನ ಮೇಲೆ ಕೊಡಗಿನ ರಾಜರ ಬಹಳ ಮೆಹರ್ಬಾನಗಿ ಇದೆ (ರಾಜೇಂದ್ರ. ೪೦): ತಮ್ಮ ಮೆಹರ್ಬಾನಗಿ ಇದ್ದರೆ ತಿರುಗಿ ಈ ಸ್ಥಲಕ್ಕೆ ತಾವು ಬರಬಾರದು (ಮುಂಬಯು. ೩-೬೭). **ಮೆಹರಬಾನಗಿ** : ಇನಶಾಅಲ್ಲಾಹು ಕಾಲದ ಮೆಹರಬಾನಗಿಯಿಂದ ಸ್ವಲ್ಪ ದಿವ್ಸದಲೇ. . . ಎಂದು ತಿಳಿಯುತ್ತೇನೆ (ಮುದತ. ೯-೩). **ಮೆಹೆರಬಾನಗಿ** : ಇನಾಮು ತಮಗೆ ಅಯೋಗ್ಯವಾಗಿ ಕಂಡಲ್ಲಿ, ಮೆಹೆರಬಾನಗಿಯೊಂದಾದರೂ ತಮ್ಮ ಲಕ್ಷ್ಯವು ಈ ಕಾರ್ಯದಲ್ಲಿರಲಿ (ಕನ್ಯಾ . ೩೦). **ಮೋಹರ್ಬಾನಗಿ** : ದಾದಲ್ಯಾನ ಸಲುವಾಗಿಯಾದರೂ ಅಡ್ಡಿಯಿಲ್ಲ_ಮೋಹರ್ಬಾನಗೀ ಮಾಡಿ ಅವನ ಸಚ್ಚಿಷ್ಯಳನ್ನು . . . ಮ್ಯಾಟ್ರಿಕ್‌ಕ್ಲಾಸಿಗೆ ಧಕಲಾಯಿಸುವ ಬಗ್ಗೆ ವಚನ ತೆಗೆದುಕೊಂಡೆವು (ದೇಶಹ. II, ೦೯).
[←ಅರ. ಪಾರ. ಮೆಹೆರ್ಬಾನಗೀ; ಹಿಂ. ಮೆಹರ್ಬಾನ್‌ಗಿ ; ಮರಾ. ಮೆಹರ್ಬಾನಗೀ, ಮೆಹರ್ವಾನಗೀ]

**ಮೆಹೆತರಿ**. ಮೆಹೆತ್ರಿ (ನಾ). ೧. ಝಾಡಮಾಲಿ : ತೋಟಿ : ಇವನ್ನು ಒಬ್ಬ ಮೆಹೆತರಿಯು (ಹಲಾಲಖೋರನು) ಕಟ್ಟಿಸಿದನೆಂದು ಹೇಳುತ್ತಾರೆ (ಮುಂಬಯು. ೬-೧೦೬). **ಮೆಹೆತ್ರಿ** : ೨. ಒಬ್ಬನ ಹೆಸರಿನ ಮುಂದೆ ಸೇರುವ , ನಾಯಕ ಎಂಬ ಅರ್ಥದ ಪದ : ಜನ್ಮ ಕೊಮಾರಪೈಕರ ಜನ್ಮ ಭಾಷೆ ಕೊಂಕಣೀ ಮಿಶ್ರ ಕನ್ನಡ. ಇವರು ತಮ್ಮ ಹೆಸರಿನ ಮುಂದೆ ನಾಯಕ, ಇಲ್ಲವೆ ಮೆಹೆತ್ರಿ ಎಂಬ ಉಪಪದವನ್ನು ಧರಿಸುವರು (ಕಥಾಗ. ೦೭೬). [←ಅರ. ಪಾರ. ಮಿಹತರ್ ; ಹಿಂ. ಮೆಹತರ್; ಮರಾ. ಮೆಹತರ್, ಮೆಹಾತರ್]

**ಮೆಹೆತ್ರಿ** 'ಮೆಹೆತರಿ' ನೋ.

**ಮೆಹೆರಬಾನಗಿ** 'ಮೆಹರ್ಬಾನಗಿ' ನೋ.

**ಮೆಳ್** 'ಮೆಟ್' ನೋ.

**ಮೆಳಸಿಗೆ**, ಮೆಣಸಿಕೆ, ಮೆಣಸಿಗೆ (ನಾ). ೧. ಒಂದು ಬಗೆಯ ಸಸ್ಯ ಮತ್ತು ಅದರ ಕಾಯಿ : ಕರಮೆಸೆವ ಮಾಮಿಡಿಗಳ ಬೆಳಲ ಕಿಱುಗಾಯನಿರದೆಸೆವ ಮೆಳಸಿಗೆಯ ತೋಳ್ಗಡಣಗಳನೆಯ್ದೆ ಭರದಿಂದೆ ತಿಱಿದುಕೋಡು

(ಅರಾಕ. ೩-೬-೨೩). **ಮೆಣಸಿಕೆ :** ೨. ಒಂದು ಬಗೆಯ ಸಸ್ಯ ಮತ್ತು ಅದರ ಬೇರು : ಮೆಣಸಿಕೆ ಕೃಷ್ಣನೀಲಿ ಕುಟಜಂ ನಿ(ಗಿ)ಡುಗೊಂಡೆಯೆನಿಪ್ಪ ವೆಲ್ಲಮಂ ಗುಣನಿಧಿ ಸಾಧಿಸಿಟ್ಟಿಡಿದು (ಖಸುರ. ೧೬-೧೦೯). **ಮೆಣಸಿಗೆ :** ೨. "ಮರೀಚಿಕಾ-ನಾಯಿತೊಳಸಿ, ಮೆಣಸಿಗೆ" (೬೩೦. ೦೦೬) ; ಕ(ಕೊ)ಡಸಿಗೆ ಮೆಣಸಿಗೆ . . . ತೊಟ್ಟೆ (ಖಸುರ. ೦೬-೧೦೩). ೩. ಒಂದು ಬಗೆಯ ಬತ್ತ : ಶ್ರೀಶಾಲಿ . . . ರಾಜಾನ್ನಂ ನಾನಾಶಾಲಿ ಕಟವೆ ಮೆಣಸಿಗೆ ಕೇಸರಿವೆಸರಿಪ್ಪೆಗಟವೆ ಶಾಲಿವಿಶೇಷಂ (ಪಶಸಂ. ೬೨೩). [< ಮೆಟಿಸು]

**ಮೆಳಸು** ' ಮೆಟಿಸು ' ನೋ.

**ಮೆಳಿ ?** (ಕ್ರಿ). (?) : ಪುಸಿವಂಗಂ ಕಂಡಲ್ಲಿ ಸಿಡಿವಂಗಂ ಕಳ್ಳೊತ್ತಿಯಿಡು ವಂಗಂ ಮೆಳಿವ[ ಪ್ ]ಂಗಂ . . . ಕಿಸುಗುಳ್ಳಸಪ್ಪಂಗಂ ಸೂಳೆಸುಖಂ ಸಲ್ಲ ದಲ್ತೆ (ಮರತ. ೦೦-೬೬). [ ? ]

**ಮೆಳೆ₁** (ನಾ). ದಟ್ಟವಾಗಿ ಬೆಳೆದ ಗಿಡಗಳ ಗುಂಪು ; ಪೊದರು : "ನಿಕುಂಜಃ, ಕುಂಜಃ — ಈ ೨ ಬೆಟ್ಟದ ಮೆಳೆಯ ಪೆಸರು" (ಶಾಶಂರಾ. ೦೦೩); ಪುಲಿಪುಲಿ ಪರಿಪರಿ. . . ತೊಲತೊಲಗೀ ಮೆಳೆಗೆ (ಕವಿರಾ. ೨-೨೬); ಕಲದ ಲತೆಯ ಮೆಳೆಯೊಳ್ ಬಿಲ್ಲುಮಂಬುಮಂ ಸಾರ್ಚಿ ಕೊಳನಂ ಪೊಕ್ಕು (ಸಂಕರಾ . ೬-೩೬ ಪ); ಧರಣಿಗೆ ಮೆಳೆ ಪಿಡಿದ ತಳೆಗಳಾದುವು ಮಳೆಯೊಳ್ (ಗಿರಿಕ. ೯-೩೬); ಎಳೆಯ ಬಾಳೆಯ ಸುಳಿಗೆ ಸೀಗೆಯ ಮೆಳೆಯೊಡನೆ ಸರಸವೆ (ಕುಮಾ.ರಾಮ.ಸಾ. ೦೨-೨೯). [ದೇ.॥ ತಮಿ. ಮಿಳೈ]

**ಮೆಳೆ₂** ' ಮಾಳ₂ ' ನೋ.

**ಮೆಳೆಗುತ್ತಿ** (ನಾ). ಪೊದರನ್ನು ಕತ್ತರಿಸಿದಾಗ ಉಳಿಯುವ ಕೂಳೆ : ಮೆಳೆಗುತ್ತಿಯ ನೈಷ್ಪುರ್ಯದ ಜೀವನವಿಲ್ಲಿಲ್ಲ; ತುಂಬಿದ ಬಾಳ್ವೆಯ ಸಂತಸ ಹೊರಹೊಮ್ಮಿದೆ ಇಲ್ಲಿ (ಅಹಲ್ಯ. ೦೦೦-೦೩). [ಮೆಳೆ₁ + ಕುತ್ತಿ₁]

**ಮೆಳೆದಾಗುಡಿ** (ನಾ). ಒಂದು ಬಗೆಯ ಬಳ್ಳಿ : "ಪಾತಾಳಗರುಡಿ_ಮೆಳೆ ದಾಗುಡಿ" (೬೩೦. ೯೬). [ಮೆಳೆ₁ + ದಾಗುಡಿ]

**ಮೆಳೆವಕ್ಕೆ** (ನಾ). ಪೊದರಿನ ಆಶ್ರಯ, —ನೆಲೆ : ಮೆಳೆವಕ್ಕೆಯೊಳ್ ಮೃಗ ಮನಂದೊಡ್ಡೊಡ್ಡಿ ಸುತ್ತಾರ್ಪಿನುಗ್ಗಡದಿಂ ತೀಡಿದುದೊಂದು ಘೋರಪವನಂ (ದಶಸು. ೩-೬೦). [ಮೆಳೆ₁ + ಪಕ್ಕೆ₁ (< ಪಟ್ಟೆ)]

**ಮೆಳೆವಱಿ**[5] (ನಾ). ಪೊದರಿನ ಹಿಂಭಾಗ : ಕುತ್ತುಱು ಮೆಳೆವ[ಱಿಂ. ಮ] ಱಿಗಳೊಳು ತುತ್ತುಱುಬಾಗಿ ನಿಂದರು . . . ಕಾಲಪರು (ಕುಂರಾಸಾಂ. ೩೯-೬).
[ಮೆಳೆ₁ + ಮಱಿ₂]

**ಮೆಳ್ಪಡು** ' ಮೆಟ್ಪಿಡು₁ ' ನೋ.

**ಮೆಳ್ಪಡೆ** ' ಮೆಟ್ಪಿಡೆ ' ನೋ.

**ಮೆಳ್ಳ** ' ಮೆಳ್ಳೆ ' ನೋ.

**ಮೆಳ್ಳಗಣ್ಣ** ' ಮೆಳ್ಳೆಗಣ್ಣ ' ನೋ.

**ಮೆಳ್ಳಗಣ್ಣು** ' ಮೆಳ್ಳೆಗಣ್ ' ನೋ.

**ಮೆಳ್ಳಗವಾಸಗುರವ** (ನಾ). ಒಬ್ಬಾತನ ಹೆಸರು : ಸ್ವಸ್ತಿಶ್ರೀ ಇನು ಜೂರಾ ಮೆಳ್ಳಗವಾಸಗುರವರ್ ಕಬ್ಬಪ್ಪಬೆಟ್ಟಮ್ಮೇಲ್ಮಾಲಂಕೆಯ್ವಾರ್ (ಎಕ. II. ೨೮-೦ ; ಸು. ೨೦೦). [ಮೆಳ್ಳೆಗವಾಸ₁ + < ಗುರು₂]

**ಮೆಳ್ಳಿ** (ನಾ). ಮಾಲುಗಣ್ಣಿನವಳು ; ಕೋಸುಗಣ್ಣಿ : ಆ ಹೆಣ್ಣು ಹಾಗೆಂದು ಈ ಹೆಣ್ಣು ಹೀಗೆಂದು ದೂಷಿಸಿ ಮರಳಿದ ನೀನು ಈ ಮೆಳ್ಳಿ ಮಳ್ಳಿಯನೊಪ್ಪಿದೆ ಹೇಗೆ (ಕಂಪ್ರ.ಶೀ. ೦೯೬-೬೨). [ಮೆಳ್ಳ (< ಮೆಳ್ಳೆ) + – ಇ₂]

**ಮೆಳ್ಳಿಸು** (ಕ್ರಿ). ಕಣ್ಣುಗುಡ್ಡೆಯನ್ನು ಹೊರಳಿಸು; ಕಣ್ಣನ್ನು ಸುತ್ತು ತಿರುಗಿಸು : ಅಳ್ಳಿಯನೆರಡುಕರದಿ ಬಿಡಿಟುತ್ತಂ ಮೆಳ್ಳಿಸಿ ನೋಡುತ ಪುರ್ಬುಗಾ ಕೆತ್ತುತೆ (ಕೃಂಗೀರ. ೩. ೯೬೩-೬) ; ಕಂಗಳಂ ಮೆಳ್ಳಿಸುತೆ ಪಲ್ಗಿರಿದು . . ಭೃಂಗಿ ನಗಿಸುತ್ತೀಡಿಸುತ ಶಿವನದಿರೊಳಾಡುತ್ತ (ಬಸತು. ೦-೪೯) ; ನೋಡುತಂ ಕಣ್ಣ ಮೆಳ್ಳಿಸಿ ಕಿವಿಯನಲುಗಿಸುತ . . . ನಾಟ್ಯವಾಡುವ ಭೃಂಗಿಪನ ಕಂಡು ಪರಶಿವಂ ನಸುನಗುತಿರೆ (ಶ್ರಿಬಸ. ೨-೬೯).
[ಮೆಳ್ಳ (< ಮೆಳ್ಳೆ) + – ಇಸು₃]

**ಮೆಳ್ಳು** ' ಮೆಳ್ಳೆ ' ನೋ. .

**ಮೆಳ್ಳುಗಣ್ಣು** ' ಮೆಳ್ಳೆಗಣ್ ' ನೋ.

**ಮೆಳ್ಳೆ**, ಮೆಡ್ಡ, ಮೆಳ್ಳ, ಮೆಳ್ಳು (ನಾ). ೧. ಕಣ್ಣು ಓರೆಯಾಗಿರುವಿಕೆ.— ಮಾಲಿರುವಿಕೆ : ಕುರುಡಿಗಿಂತ ಮೆಳ್ಳೆ ವಾಸಿ (ಗಾದೆ). (ಗು). ೨. ಓರೆಯಾದ ; ಸೊಟ್ಟಗಿರುವ : ' ಮೆಳ್ಳೆಗಣ್ ' ಪರಾ. **ಮೆಡ್ಡ :** ೩. ಮಾಲುಗಣ್ಣುರುವವನು ; ಕೋಸುಗಣ್ಣಿನವನು : ಹೆಡ್ಡನ ನೆರೆ ಹೀನ ಮೆಡ್ಡನ ಗುರಿ ಹೀನ (೩ಂಕಾಕ. ೯೬-೬೩). **ಮೆಳ್ಳ :** ೨. ' ಮೆಳ್ಳಗಣ್ಣು ' ಪರಾ. ೩. ಪ್ರಸಂಗಾವಧಾನವುಳ್ಳ, ಬಾವಪಹಸನು ಮೆಳ್ಳನಂತೆ ಕಣ್ಣು ಸೊಟ್ಟ ಮಾಡಿಕೊಂಡು ನಿಂತನು (ಅಕ್ಕರ. ೦೬೨) ; ಕುರುಡರೊಳಗೆ ಮೆಳ್ಳನೇ ಶ್ರೇಷ್ಠ (ಗಾದೆ). **ಮೆಳ್ಳು:** ೧. ಎಡದ ಕಣ್ಣು ಮೆಳ್ಳಾಗಲೂ ಪುರುಷನಂ ಧಿಕ್ಕರಿಸುವಳು (ಕಾಶೀಪು.೦೯೬-೩).
[ದೇ.॥ ತೆಲು. ಮೆಲ್ಲ]

**ಮೆಳ್ಳೆಗಣ್**, ಮೆಡ್ಡಗಣ್ಣು, ಮೆಳ್ಳಗಣ್ಣು. ಮೆಳ್ಳುಗಣ್ಣು, ಮೆಳ್ಳೆಗಣ್ಣು (ನಾ). ಓರೆಯಾಗಿರುವ ಕಣ್ಣು; ಮಾಲುಗಣ್ಣು; ಕೋಸುಗಣ್ಣು : ತಱಟದಲೆಗಳ ಮೆಳ್ಳೆಗಂಗಳ ಬೆಱತ ಮೋಱೆಯ . . . ಕ್ಷಿಬಿಂಕುಲರು ಬಂದರು (ಬಸತು. ೩೮-೪೯). **ಮೆಡ್ಡಗಣ್ಣು :** ಸೆರೆವಾಸವಾಸ ಅನುಭವಿ ಸುತ್ತಿದ್ದ ಮೆಡ್ಡಗಣ್ಣಿನ ಹೆಂಗಸೂ ಅವಳ ಚಿಕ್ಕಮಗಳೂ . . . ಬಂದರು (ಕೃಪರು. ೦೯೬). **ಮೆಳ್ಳಗಣ್ಣು :** ಮೂಗನ್ನೇ ನೋಡಿ ನೋಡಿ ಅವಳಿಗೆ ಮೆಳ್ಳಗಣ್ಣಾಗಿತ್ತು (ತುಟಿರಾ. ೬೯) ; ಮೆಳ್ಳಗಣ್ಣುಮಾಡುವುದು . . . ಕಾರಣವಿಲ್ಲದೆ ರೇಗುವುದು ಮುಂತಾದ ಚಿಹ್ನೆಗಳು ದೃಷ್ಟಿದೋಷವಿದ್ದಲ್ಲಿ ಕಾಣಿಸಿಕೊಳ್ಳುವುವು (ಶಿಮ್ಮುದ್ರ. ೩೨). **ಮೆಳ್ಳುಗಣ್ಣು:** ಕುಂಟಕಾಲು ಬಚ್ಚು ಬಾಯಿ ಮೆಳ್ಳುಗಣ್ಣು, ನಿಮ್ಮ ಸೇವೆ ಮಾಡಲಾರೆನು (ಕಸಿಸೋ. ೬೦-೬). **ಮೆಳ್ಳೆಗಣ್ಣು:** "ವಲಿರಃ, ಕೇಕರಃ_ ಮೆಳ್ಳೆಗಣ್ಣಿನವನು" (ನಾಶರಾ. ೬); ಗಂಟುಮೂಗಿನ ಮೆಳ್ಳೆಗಣ್ಣಿನ ಅಂಟುಪುರ್ಬಿನ ಜೋಲುದುಟಿ (ಅರಪ. ೨೨-೩); ಆ ಹುಡುಗಿಗೆ ಮೆಳ್ಳೆಗಣ್ಣು ಇತ್ತು (ಉರುಳ. ೦೯೨). [ಮೆಳ್ಳೆ + ಕಣ್]

**ಮೆಳ್ಳೆಗಣ್ಣ**, ಮೆಡ್ಡಗಣ್ಣ, ಮೆಳ್ಳಗಣ್ಣ (ನಾ). ಮಾಲುಗಣ್ಣಿರುವವನು; ಕೋಸುಗಣ್ಣಿನವನು : ಧರ್ಮಿಷ್ಠರಂ ಮುಳಿವುತಜ್ಞಾನದಿಂ ನೋಡಿದರ್ ಮೆಳ್ಳೆಗಣ್ಣರಹರ್ (ಏಕತ್ವ. ೯-೨೨-೩೩). **ಮೆಡ್ಡಗಣ್ಣ :** ಶಸ್ತ್ರಚಿಕಿತ್ಸೆಯ ನಂತರ ಆ ಮೆಡ್ಡಗಣ್ಣನ ಕಣ್ಣುಗಳು ಸರಿಹೋಗಿವೆ (ರೂಢಿ). **ಮೆಳ್ಳಗಣ್ಣ :** ಸರಿಯಾದ ವೈದ್ಯರ ಬಳಿಗೆ ಹೋದರೆ ಆ ಮೆಳ್ಳಗಣ್ಣನ ಕಣ್ಣುಗಳು ಸರಿ ಹೋಗುವುವು (ರೂಢಿ). [ಮೆಳ್ಳೆಗಣ್ + – ಅ₇]

**ಮೆಳ್ಳೆಗಣ್ಣು** ' ಮೆಳ್ಳೆಗಣ್ ' ನೋ.

**ಮೇಱವಣಿ**, ಮೆರವಣಿ, ಮೇಱುವಣಿ, ಮೇಱೆವಣಿ (ನಾ). ೧. ಹೆಚ್ಚು ಗಾರಿಕೆ ; ಅತಿಶಯ ; ಹೆಚ್ಚಳ : ನೈವೇದ್ಯವೇಳೆಯೊಳಮರ್ದು ಮೇಱವಣಿ ಯಲಿ ಸುರಗಿಯಂ ಕಿತ್ತು ಹರಣಕ್ಕೆ ಅಮಮಪೂರೆಯಂ ಕೊಯ್ವುವೋಲುತ್ತ ಮನದಂ ಕೆಲದಲಿ ಮಡಗಿ (ಬಸತು. ೩೩-೦೦). **ಮೆರವಣಿ :** ೨. ದೇವರು. ಪೀಠಾಧಿಪತಿಗಳು. ವಧೂವರರು ಮುಂತಾದವರನ್ನು ಆಡಂಬರ ದಿಂದ ಊರಲ್ಲಿ ಸುತ್ತಾಡಿಸಿಕೊಂಡು ಬರುವುದು ; ಉತ್ಸವ : ಸಂದೀಧ್ವಜದ ಮೆರವಣಿ ಕಾಯಕಗಳೆಂಬ ಸಂಗವನು ಪರಿಹರಿಸಿ (ಬಸತು. ೬೮-೦೦). **ಮೇಱುವಣಿ :** ೧. ಮೇಱುವಣಿಯ ನೆಱೆ ಬೇಂಟೆಕಾಱಗುಱು ಮೃಗಂಗಳನಸುಗಳೆವುದೇತಱ ಘನಂ (ಬಸತು. ೩೯-೩೬). **ಮೇಱೆವಣಿ :** ೧. ಪುರಹರಂ ಮೇಱೆಮಿಂಡದೇವನ ನಿರತಭಕ್ತಿಯ ಮೇಱೆವಣಿಗೆ ಕೂರ್ತು (ಬಸತು. ೨೬-೬೩). [< ಮೇಱೆ./ತಮಿ. ಘೆರುವಣ್ಣೈ; ತೆಲು. ಮೆಱವಡಿ. ಮೆಜವಣಿ. ಮೆರವಡಿ. ಮೆರವಣ್ಣಿ]

**ಮೆಱವಣಿಗೆ, ಮೆರವಣಿಗೆ, ಮೆರವಳಿಗೆ, ಮೆರೆವಣಿಗೆ** (ನಾ). ೧. ಮೇಲ್ಮೆ : ಹೆಚ್ಚಳ ; ಅತಿಶಯ : ವರಚರಿತಗಳನೆಯ್ದೆ ನಾದಸಭರಿತ ಮಾಗಿರೆ ಪಾಡುತೊಬ್ಬೊಬ್ಬರ ಮಹಾಭಕ್ತರ ಮೆಱವಣಿಗೆಗಳ ಶಿವನ ಮುಂದೆ ಪರಮಭಕ್ತನು ನಂಬಿ ಪೊಗಳುವ ಪರಿಯುಮೀ ಪರಿ ಕೇಳು ನೀನು (ಬಸವು. ೨೭-೬೯). **ಮೆರವಣಿಗೆ :** ೨. = ಮೆಱವಣಿ ೨ : ರಾಜಮಾರ್ಗದಲ್ಲಿ ಒಂದು ದೊಡ್ಡ ಮೆರವಣಿಗೆ ಹೋಗುತ್ತಿತ್ತು (ಬಾಡಿಲ. ೦೨) : ನದಿಯಂತೆ ಪರಿದಿರ್ದ ನಾಗರಿಕನರನಾರಿಯರ ದಳದ ಮೆರವಣಿಗೆ ಚಲಿಸಿತು ಕಡಲ ತಡಿಗೆ (ಚಿತ್ರಾಂಗ. ೬೬-೨೪೪೦). **ಮೆರವಳಿಗೆ :** ೨. ಪಡುವಣ ಬಾಗಿಲು ಸನಕ ಮಾಡಿದ ಮೇರೆಯೊಳಗೆ ಶುಭಶೋಭನ ಮೆರವಳಿಗೆ ಮಾಡಿಕೊಂಬುದು (ಎಕ. XI. ಹಿಂಯೂ. ೪೭-೦೩ ; 1732). **ಮೆರೆವಣಿಗೆ :** ೨. ಈ ಪ್ರಕಾರ ನಿರ್ವಾಣದ ಸ್ವಾಮಿಗಳು ಮೆರೆವಣಿಗೆಯಿಂದ ಅರಮನೆಗೆ ದಯಮಾಡಿಸ ಬೇಕೆಂತ ಗೊತ್ತಾಯಿತು (ಮುಸುಗ. ೩೯) ; ಒಂದರ ಹಿಂದೆ ಒಂದರಂತೆ ವ್ಯವಸ್ಥಿತವಾದ ಸಾಲಿನಲ್ಲಿ ಜನರ (ಅಥವಾ ದೋಣಿ, ಮೊ. ಗಳ) ತಂಡ ಮುಂದುವರಿಯು(ತ್ತಿರು)ವುದು. . . ಮೆರೆವಣಿಗೆ (Procession. ಇಂಕಪ).

[ಮೆಱವಣಿ + – ಗೆ./ತುಳು.ಮೆರವಣಿಗೆ, ಮೆರಣಿಗೆ]

**ಮೆಱವಣೆ** ' ಮೆಱವಣಿ ' ನೋ.

**ಮೆಱಸು** ' ಮೆಱೆಯಿಸು ' ನೋ.

**ಮೆಱಹು, ಮೆಱೆಹು** (ನಾ). ೧. ಕಾಂತಿ ; ಪ್ರಕಾಶ : ಪೊಱಮಟ್ಟುದ ಖಿಳಪುರಜನಮೈದೆ ಸಿಂಗರದ ಮೆಱಹುಗಳ ಮಾಳೆಯಿಂ ಮೇಳವದ ರಚನೆಗಳ ತರತರದ ವಿದ್ಯಾವಿನೋದದಿಂ (ಕೈಮಿಶಾ. ೩೩-೦೯). **ಮೆಱೆಹು :** ೨. ಶೋಭಿಸುವಂಥದು : ಬರೆದೋಲೆಯಟ್ಟಿದೆ ಸಖಿನನಟ್ಟಿದೆನದು ಮೆಱೆಹಾದುದಿಲ್ಲೆಂದು ನೊಂದ (ಶಬಕ. ೪೯-೩೭).

[ಮೆಱೆ + – ಹು( < – ವು)]

**ನೆಱೆ, ಮೆರೆ** (ಕ್ರಿ). ೧. ಹೊಳೆ ; ಪ್ರಕಾಶಿಸು : ಅಖಿಳರಾಯರ ಮೌಳಿ ಮೌಕ್ತಿಕಮಣಿಮಯೂಖನಿವಾಳಿಯಲಿ ನೆಱೆ ಮೆಱೆವುದಾತನ ಪಾದಪದ್ಮ ಯುಗ (ಕುವ್ಯಾ.ಪ. ೦-೨೦) ; ಮಿಗೆ ಹುರುಡಿಸುತ ಪೂರ್ವದಿಶಾನಿತಂಬಿನಿ ಸಿಲಿತಕೋಪದ ಕಿಡಿಯನುಗುಳಿದಳೆನಲು ರವಿ ಮೆಱೆದ (ಕುವ್ಯಾದ್ರೋ.೨-೦೩). ೨.ಎದ್ದು ತೋರು : ವ್ಯಕ್ತವಾಗು ; ಸ್ಪಷ್ಟವಾಗಿ ಕಾಣಿಸಿಕೊಳ್ಳು : ಕುಱಿತಂತೆ ಪೇೞ್ವ ಪದದೊಳ್ ಮೆಱೆಯದೊಡಲ್ಲಂ ವಿವಕ್ಷಿತಾರ್ಥಮಶೇಷಂ (ಕವಿರಾ. ೦-೧೦೦) ; ನಿನ್ನೀವ ತನ್ನಯ ಕೀರ್ತಿ ಮೆಱೆವುದು ಮೂಱು ಲೋಕದಲಿ (ಕುವ್ಯಾದ್ರೋ. ೯-೩೦). ೩. ಒಪ್ಪು ; ಶೋಭಿಸು : ತಮ್ಮಯ್ಯರುಮೊಡನೆ ಮೆಱೆದು ಪರಮಾನುರಾಗದಿಂ ಬಂದು ಪೊಕ್ಕರಂದರ ಮನೆಯಂ (ಶಂಶಖಾ. ೩-೨೩); ಇಂತೀ ಐವತ್ತೆರಡು ವಿಧದಲ್ಲಿ ನಿಪುಣನಾಗಿ ಮೆಱೆವ ನಮ್ಮ ಬಸವಣ್ಣನು (ವೀಶಾದೀ. ಬ. ೬೩-೨೦೬); ಜಯಸಿರಿಯೈದೆತನ ನಿನ್ನೀವ ಮೆಱೆವುದು (ಕುವ್ಯಾದ್ರೋ. ೪-೪೪) ; ಪರಮತೇಜೋ ಮಯನು ಮೆಱೆದನು ಪಂಚವಕ್ತ್ರದಲಿ (ಕೊರಶಾ. ೦-೨-೨). ೪. ಪ್ರಸಿದ್ಧವಾಗು : ಪ್ರಖ್ಯಾತವಾಗು : ಶಾನಿಱಿವಂ ಪೆಱರ್ಗಿಱಿವಂ ತನಗಿಱಿವಂ ಮೇಣ್ ಮೆಱೆವನೋವನಱಿವ ಬೆಡಂಗಂ (ಗದಾಯು. ೦-೨೯); ಬಾಗೆವಾಡಿಯೊಳಗೆ . . . ಕಮ್ಮೆಕುಲದಿಂದೆ ಮೆಱೆದಿರ್ಪ ವಿಪ್ರನಿರ್ಪಂ (ಬಸರ. ೦-೯೯); ವರಮಹಾಭಾರತವಿದೊಂದೇ . . . ಪರಮಶ್ರುತಿಯೆಂದೆನಿಸಿ ಮೆಱೆವುದೀರೇಳು ಲೋಕದಲಿ (ಸಂಪಶ. ೨೦೩). ೫. ತೋರಿಸು; ಪ್ರದರ್ಶಿಸು : "ಮೆಱೆ ಪಿಡಂಬೇ" (ಶಮದ); ಅರಸಂ ತನ್ನ ಬಿಸ್ನಣಮಂ ನೆರೆದ ನೆರವಿಗೆ ಮೆಱೆಯಲ್ವೇಡಿ ಗೆಂಟಱಿಂ ಚಕ್ರದಿಂ ನಾಲ್ಕುಕಾಲುಮ ನೊಮ್ಮೊಡದಲೆ ಪಱಿಯಿಟ್ಟೊಡೆ (ವಡ್ಡಾರಾ. ೧೨೦-೦೬) ; ಮಣಿಕನಕಂ ವಸ್ತುವಿಭೂಷಣಂಗಳಂ ಕೊಟ್ಟು ಪೆಂಡಿರೊಲ್ವರೆ ಗಂಡರ್ ಗುಣಮನೆ ಮೆಱೆವುದೋ (ಗದಾಯು. ೨-೩) ; ನೀಮ್ಮೆಱೆವುದು ನಿನ್ನ ಭಕ್ತಿಯಂ ಶಕ್ತಿಯು ಮಂ (ಸುಕುಮಾ. ೦೧-೪); ಭಕ್ತಾಧೀನ ನೀನೆಂಬ ಬಿರುದು ಮೆಱೆವುದು ಜೀಯ (ಕೊರಶಾ. ೦-೬-೭೦). ೬. ಅಲಂಕರಿಸು; ಸಿಂಗರಿಸು : ಸೂಳೆಯಂತೆ ಚೆನ್ನಂ ಮೆಱೆಯದೆ ಬಾಲಕನಂತೆ ಪೊಲ್ಲಮಂ ಪಿಡಿಯದೆ (ಧರ್ಮಾಮೃ. ೩-೯೯); ಬಲಗೈಯೊಳೊಪ್ಪಿರೆ ವನಜವೆಡಗೆಯ್ಯ ಮೆಱೆದಿರೆ ಮಾತುಳಂಗಫಲ (ಶಾಶ್ವಶಾ. ೦-೯). ೭. ಅಹಂಕರಿಸು; ಬೀಗು : ಪೆಱರಂ ನುಡಿಯದೆ ತನಗೊಂದಱಿತವೆನಲ್ ತನ್ನ ಮೊಗದೊಳೊಂದಕ್ಕರಮಂ ಪೊಱಮಡ ಸಲಱಿಯದಱಿತಮನಱಿಯದರೊಳ್ ಮೆಱೆವ ನಾಸಿಗಂಗಿದಿರುಂಟೆ (ಮಲ್ಲಕು. ೦-೩೩); ಮೆಱೆದಿದಿರಾಗಿ ಶಾಗಿದ ಗಜಾಸುರನಂ ಪಿಡಿದೆತ್ತಿ ಚರ್ಮ ಮಂ ಸಱಿಸಱಿಸಱನೆ ಸೀಳ್ದು (ಎಕ. XVI. ಹಕ್ವಪಾ. ೭೦-೨೩; 1235). **ಮೆರೆ:** ೧. ಕಗ್ಗತ್ತಲೆಯ ರಾತ್ರಿ ನಕ್ಷತ್ರಮಾಲೆಯಿಂ ಮೆರೆವಂತೆ . . .ಮೆರೆದಳಾ ಪಾರ್ಥಿವ ಕುಮಾರಿ (ಚಿತ್ರಾಂಗ. ೦೯-೩೦೦). ೩. ಪುಷ್ಪೋಪಹಾರದಿಂ ಮೆರೆವ ಮಂಗಲ ಚಂದ್ರಮಾಳಿಗೆ ಮಣಿದು (ಚಿತ್ರಾಂಗ. ೩೦-೦೩೭೭). ೪. ಆ ತರುಣಿಯ ನಾಣಂ ಮದನಂ ನೆರೆ ಮರೆಯೆನಿಸಿಲ್ಲಮಂತೆ ಮೆರೆದನು ಮಲ್ಲಂ (ಶಾಕುಂತ. ೨೩-೪೭). ೫. ದಿವ್ಯತರಶಕ್ತಿಯಂ ಮೆರೆದೆಮ್ಮ ಸಲಹಿದಯ್ಯ (ಕವಿಸೋ. ೦೬-೪); ಮುಕ್ತಾಯಕ್ಕ . . . ದೊಡ್ಡತನವನ್ನೇ ಮೆರೆದಿದ್ದಾಳೆ (ಕಮ್ಮಕು. ೦೦೩). ೭. ಮೆರೆಯದೆಯೆ ಹಡೆದ ಮಾತೆಯ ಸೇವೆಯನು ಮಾಡಿ ಮಾನದಿಂ ಮಡಿದವನು ಧನ್ಯ ಸತ್ಯಾಗ್ರಹಿ! (ಶಾಂಕಚ. ೨೦-೦೯); ನಾಳೆ ಆ ಸೀರೆಯ ನೀನುಟ್ಟು ಮೆರೆದಂತೆ ಕನಸನು ಕಾಣೆನ್ನ ಚನ್ನ (ಇಂಕಾಕ. ೯೦-೪೩).

[ದೇ.II ತುಳು. ಮೆರೆ; ತೆಲು. ಮೆಱಚು, ಮೆಱಯು, ಮೆಱುಂಗು; ಕೋಲಾ. ನಾಯ್ಕಿ. ಮೆರ್ಪ್]

**ಮೆಱೆಕೋಲು** ' ಮೆಱೆಗೋಲು ' ನೋ.

**ಮೆಱೆಗಾಱ** (ನಾ). ಕಾಳಗದಲ್ಲಿ ವಿಜೃಂಭಿಸುವವನು ; ವೀರ : ವಾಮ ಶಕ್ತಿದೇವರ ಬಂದಿಯ ಹಿಡಿದಲ್ಲಿ ತೋಣವತ್ತಿಯ ಮೆಱೆಗಾಱ ಬಾಚಿಯ ನಾಯಕ ಕಾದಿ ಸ್ವರ್ಗಸ್ಥನಾದಲ್ಲಿ (ಎಕ. VII. ಶಿಕಾ. ೦೩೯-೪: 1160).

[ಮೆಱೆ + – ಕಾಱ]

**ಮೆಱೆಗೋಲು, ಮೆರೆಕೋಲು, ಮೆರೆಗೋಲು, ಮೆಱೆಕೋಲು** (ನಾ). ಹೊಲಗದ್ದೆಗಳಲ್ಲಿ ಚೆಲ್ಲಾಡಿದ ಹುಲ್ಲನ್ನು ಒಟ್ಟುಗೂಡಿಸಲು ಬಳಸುವ ಕೊಕ್ಕೆಕೋಲು : "ಉತ್ಕಲಿಯೆನಲು ಮೆಱೆಗೋಲು" (ಮಂಗರಾ. ೦೦೯-೩). **ಮೆರೆಕೋಲು :** ಮೆರೆಕೋಲು ಹಿಡಿದು, ಕಣದಲ್ಲಿ ಹರಡಿರುವ ಹುಲ್ಲು ಸೊಪ್ಪನ್ನು ಕೆದರುತ್ತಿದ್ದರೆ ಅವನ ಮನಸ್ಸೂ ಕೆದರಿಕೊಳ್ಳುವುದು (ಶಲಮ. ೦೯೦). **ಮೆರೆಗೋಲು :** ಆತ ಮೆರೆಗೋಲಿನಿಂದ ಹುಲ್ಲನ್ನು ಒಟ್ಟು ಗೂಡಿಸಿದನು (ಕೂಶಿ). **ಮೆಱೆಕೋಲು :** ವೃಷಭನವಯವದಿಂ ನೋಡಿ ಕೊಣ್ಡು ಕಡುಮೂರ್ಖತೆಯಿಂ ಮೆಱೆಕೋಲ ಕಟಿದುಕೊಳ್ಳುತ ಬಱ ಸಿಡಿಲ್ ಎಱಿವನ್ತೆ ಬನ್ದು ವಾಮನಭಟ್ಟಂ ಕಱುಪಿನ್ನ ಮೆಯ್ದು ಪೊಯ್ಯಲು (ವೃಲಂ. ೦೯೩೭, ೩೯-೨; 11ನೆಯ ಶತ).

[ಮೆಱೆ, ( ? ← ಕೋತ. ಮಾರ್ = ಕಬ್ಬಿಣದ ಕೊಕ್ಕೆಯುಳ್ಳ ಉದ್ದ ಮರದ ಹಿಡಿಕೆಯುಳ್ಳ ಸಾಧನ) + ಕೋಲು$_1$ ( < ಕೋಲ್$_1$)]

**ಮೆಱೆಯಿಸು, ಮೆರಸು, ಮೆರೆಯಿಸು, ಮೆರೆಸು, ಮೆಱಸು, ಮೆಱೆಸು** (ಕ್ರಿ). ೧. (ವಿಜೃಂಭಣೆಯಿಂದ) ಮಾಡಿಸಿಕೊಳ್ಳು – ನೆರವೇರಿಸಿ ಕೊಳ್ಳು : ಬಿಜರಾಜನಿಂದೆನಗೆ ರಾಜರಾಜಾಭಿಷೇಕಮಂ ಮೆಱೆಯಿಸುವೆಂ (ಜಗಂ. ೫-೭೬ ವ). **ಮೆರಸು :** ೨. ಪ್ರಕಾಶಗೊಳಿಸು; ಹೊಳೆಯುವಂತೆ ಮಾಡು : ಕಣ್ಣಿಗಳವಡುವಲ್ಲ ವಸ್ತುಗಳು ಮೆರಸುವೋಲು ತಮ್ಮ ಹೊಳೆ ಸುವ ರವಿಯ ತೇಜದಲೆಯ ಗವಿಯೊಳದ ಹೊನಲಿನಂತಿವರೆನಗೆ ಹೊಳೆಸು ವರು ಗುಡಿಯೆಲ್ಲೆಯನು ಕಳೆದ ದೇವಕಳೆಯ (ಮಲೆದೇ. ೪೯-೩). **ಮೆರೆಯಿಸು:** ೩. ಪ್ರದರ್ಶಿಸು ; ತೋರಿಸು : ನೀನು ಭುಜಬಲವನ್ನೂ ಚಾತುರ್ಯ ವನ್ನೂ ಮೆರೆಯಿಸುತ ಭೀಮಸೇನನೊಡನೆ ಮಹಾಯುದ್ಧಕ್ಕೆ ಉದ್ಯೋಗಿಸು

(ಶೃಪಾಶ. ೭೭). **ಮೆರೆಸು** : ೪. ಪ್ರಕಟಗೊಳಿಸು; ವ್ಯಕ್ತವಾಗುವಂತೆ ಮಾಡು : ವರುಷ ಮಾಸಗಳುರುಳಿ ಉರಿಸಿ ಕಾಯಕ ಬತ್ತಿ ಮೆರೆಸುದಕೆ ಬಂತು ಚಳಿಗಾಲ (ಕನ್ನಕಾ. ೨೦೪). ೫. ಮೆರವಣಿಗೆ ಮಾಡು : ಅಣ್ವಸ್ತ್ರಗಳ ಹಿಡಿದು ಹೊರಟವರ ತಲೆಯ ಸುಣ್ಣಗೆ ಮಾಡಿ . . . ವಿಶ್ವಸಂಸ್ಥೆಯ ಮುಂದೆ ಮೆರೆಸೋಣ (ಹೇವ. ೦೭-೯). ೬. ಶೋಭಿಸುವಂತೆ ಮಾಡು; ರಾರಾಜಿಸುವಂತೆ ಮಾಡು : ಇನ್ನು ಉಷಸ್ . . . ಸುಮಾರು ೨೦ ಸೂಕ್ತಗಳಲ್ಲಿ ಅವಳನ್ನು ಮೆರೆಸಿದ್ದಾರೆ (ಭಾರಧ. ೨೨). **ಮೆಱಿಸು** : ೫. ವಿಹಾರ್ಯ— ಎಲ್ಲಾ ಎಡೆಯೊಳಂ ಮೆಱಿಸಿ, ಆರೋಹಯೇತ್— ಧ್ವಜದಂಡದ ಮೇಲೆ ಏರಿಸುವುದು (ಶ್ರೀಕಾ. ೧೭-೯). **ಮೆಱಿ³ಸು**: ೩. ಮಾಣಿಕವೆಸದ ಹೊನ್ನಂಮಣಿದೊಳು ಕಂತುರಾಣಿಯು ಮುಚ್ಚಿ ಬೈತಿಟ್ಟು ಓಣಿಯೊಳ್ ಮೆಱಿ³ಸುತ ಕರಕೊಂಡು ಬಂದಾಗ ಕಾಣಿಸಿದರು ಶಂಬರಗೆ (ಮೋಹತ. ೦೦-೧೦). ೭. ಆಚರಿಸುವಂತೆ ಮಾಡು : ಮತ್ತಾನುಂ ಬ್ರತ ಮೆಱಿ³ಸಿ ವೃತ್ತಿಗರಂ ಕಿಡಿಸಲಾಗದು (ಕಶಾಇ. IX-i, ೦೦೭-೩೯; 1055). [ಮೆಱಿ³ + — ಇಸು₃]

**ಮೆಱಿ³ವಣಿ** 'ಮೆಱಿವಣಿ' ನೋ.

**ಮೆಱಿ³ಸು** 'ಮೆಱಿ³ಯಿಸು' ನೋ.

**ಮೆಱಿ³ಹು** 'ಮೆಱಿಹು' ನೋ

**ಮೆಟ್**, ಮೆಳ್ (ನಾ). ೧. ಮರುಳು; ಮೋಹ : 'ಮೆಟ್ಟಿಡಿಸು' ಪರಾ. ೨. ತಬ್ಬಿಬ್ಬು : ದಿಗ್ಭ್ರಮೆ ; ಭ್ರಾಂತಿ : 'ಮೆಟ್ಟಿಡು₁' ಪರಾ. ೩. ಮೋಸ; ವಂಚನೆ : 'ಮೆಟ್ಟಿಡಿಸು' ಪರಾ. **ಮೆಳ್**: ೨. 'ಮೆಳ್ಪಡೆ' ಪರಾ. ℗ 'ಮೆಟ್ಟಿಡಿಸು', 'ಮೆಟ್ಟಿಡು' ಮುಂತಾದ ಶಬ್ದಗಳನ್ನು ವ್ಯಾಪಕವಾಗಿ ಕವಿಗಳು ಬಳಸಿದ್ದಾರೆ. ಇಲ್ಲಿ 'ಪಡಿಸು', 'ಪಡು' ಮುಂತಾದುವು ಸೇರಿರುವುದರಿಂದ ಇವುಗಳ ಮೂಲಶಬ್ದ 'ಮೆಟ್' ಇದ್ದಿರಬೇಕೆಂದು ಊಹಿಸಲಾಗಿದೆ. ಇದಕ್ಕೆ ಪ್ರತ್ಯೇಕವಾಗಿ ಕಾವ್ಯಪ್ರಯೋಗಗಳು ದೊರಕಿಲ್ಲ.

**ಮೆಟಪಯ್ಯ** (ನಾ). ಒಬ್ಬಾತನ ಹೆಸರು : ಮೆಟಪಯ್ಯ (ಎಕ. II, ೪೩೨; 1000). [ ? + ಅಯ್ಯ₆₁ ]

**ಮೆಟಸು**, ಮೆಣಸು, ಮೆಳಸು, ಮೆಳಸು (ನಾ). ೧. ಒಂದು ಬಗೆಯ ಬಳ್ಳಿ ಮತ್ತು ಸಂಭಾರಕ್ಕೆ ಉಪಯೋಗವಾಗುವ, ಕಾರವಾದ ಅದರ ಕಪ್ಪು ಕಾಳು : ಶಬ್ದಮೊಂದವಿರ್ದೊಡೆ ಮುತ್ತುಂ ಮೆಟಸುಂ ಕೋದಂ ತಕ್ಕುಂ (ಶಬಾ. ೨-೩) ; ಬೊದಿಜೆಡೆ . . . ಶರಾಸನಂ ಕವಚಮಿಪೆಂತುದುಪೊ ಮುತ್ತುಂ ಮೆಟಸುಂ ಕೋದಂತುಟೆ ನಿನ್ನ ಪಾಂಗೆಂತು ಗಡಾ (ಶಂಕಶಾ. ೭-೯೨): ಸುಂಟಿ ಪಿಪ್ಪಲಿ ಮೆಟಸೆಂಬೀ ಮೂಱನಾತ್ಮಜಲದಿಂ . . . ನಸ್ಯಂಗೆಯ್ದಂ (ದಶಕು. ೯-೧೦೦). **ಮೆಣಸು** : ೧. ಮೆಣಸು ಸುಂಟಿ ಪೊಸ ಸುಣ್ಣಮಿವಂ ಚಪ್ಪರಿಸಿ (ಧರ್ಮವ್ಯ. ೭-೩೦): ಮೆಣಸು ಹುಳಿತಡೆ ಜೋಳದಿಂ ಕುಂದೆ (ಪಕಶಾ. ೦೧-೦೯) ; ಉಪ್ಪು ಮೆಣಸುಗಳ ಹಿರಿಯ ಮೂಗಿನ ಹೋರು ತುಂಬಲು (ಕೌಶಿಕಾ. ೨೪-೩) : ಮೆಣಸಿನ ಬಳ್ಳಿಯು ಎಲೆಯು ಬಳ್ಳಿಯ ಹಾಗೆ ಇರುತ್ತದೆ (ಕೃಷಿಶ್ರ. ೦೯೩). ೨. ಒಂದು ಬಗೆಯ ಗಿಡ ಮತ್ತು ಹಸಿಯಾಗಿಯೂ ಒಣಗಿಸಿಯೂ ಅಡುಗೆಗೆ ಬಳಸುವ, ಕಾರವಾಗಿರುವ ಅದರ ಕಾಯಿ : ನೀರುಳ್ಳಿ, ಬೇವುಸೊಪ್ಪು ಮತ್ತು ಮೆಣಸನ್ನು ಸಣ್ಣದಾಗಿ ಕೊಚ್ಚಿ. ಅನಂತರ ಎಲ್ಲ ಪದಾರ್ಥಗಳನ್ನು ಮಿಶ್ರ ಮಾಡಿ ಸ್ವಲ್ಪ ನೀರು ಹಾಕಿ ಕಲಸುವುದು (ಅಡುಗೆ. ೦೦೦). **ಮೆಳಸು** : ೧. ಮೆಳಸಿವು ಪೆರ್ಚ್ಚಿಸಡವಿಯು ಬೆಳಸು ಪಿರಿದು (ಎಕ. VIII, ಸಾಗರ. ೦೦೯-೪೮: 1042) ; ಕಾರಡಕೆ ಮೆಳಸಿನ ಪೇಱಿಂಗೆ ಅರೆಪೇಸೆ (ಕಶಾಇ. IX-i. ೨೨೩-೪೪: 1127): ಕಬ್ಬು ಜೇನು ಮೆಳಸು ಎಲ್ಲೆಲ್ಲು ಎಲ್ಲವೂ ತಿರುಳಟ್ಟು ಹೊರವಾಗುತಿರಲಿ (ಅಪತಂ. ೨೪-೯). **ವೆಳಸು** : ೧. ವೆಳಸಿನ ಪೇಱಿಂಗೆ ಪದಿನ (ನಾ) ಱುಪಲಂ (ಎಕ. IX, ೨೨-೯; 800).

ಮೆಣಸಿನಪುಡಿ. ಮೆಣಸಿನಹುಡಿ=೧. ಒಣಗಿದ ಮೆಣಸಿನಕಾಯನ್ನು ಕುಟ್ಟಿ ಮಾಡಿದ ಪುಡಿ : ಪದಾರ್ಥಗಳು . . . ೬ ಚಮಚ ಮೆಣಸಿನ ಪುಡಿ; ೧ ಚಮಚ ಸಾಸಿವೆ (ಅಡುಗೆ. ೦೦೭); ನೆಲ್ಲಿಕಾಯಿ ಮೆತ್ತಗಾದಾಗ . . . ಸಾಸಿವೆ ಹುಡಿ ಮತ್ತು ಮೆಣಸಿನ ಹುಡಿಯನ್ನು ಸೇರಿಸುವುದು (ಅಡುಗೆ. ೦೦೭). ೨. ಒಣಮೆಣಸಿನ ಕಾಯಿ, ಧನಿಯ, ಕರಿಮೆಣಸು, ಜೀರಿಗೆ ಮುಂತಾದುವನ್ನು ಹುರಿದು ಮಾಡಿದ ಪುಡಿ : ಸಾರಿನ ಪುಡಿಯನ್ನು ಮೆಣಸಿನ ಪುಡಿಯೆಂದೂ ಹೇಳುತ್ತಾರೆ (ರೂಢಿ). ಮೆಟಸಿನಕರೆ. ಮೆಣಸಿನಕರೆ = ಕರಿಮೆಣಸಿನ ಗೊಂಚಲು.—ಗುತ್ತಿ: ಎಳಮಾವಿನ ಮಿಡಿ ಮಾಗುಳ ಮೆಟಸಿನ ಕರೆ . . . ಈಳೆಯ ಗೊಲೆಯಿಂದಳವಟ್ಟಿರೆ ಲಾವಣಕಂಗಳನಿಕ್ಕಿದರಾಗಳ್ (ಸುಕುಮಾ. ೦೦-೩೦); ನಳನಳಿಸುವ ಮೆಣಸಿನ ಕರೆ . . . ಕಱಿವೆಯ ಕಾಯ್ಬೇಱಿ³ವೇಱಿ³ ಸವಿವಡೆದಿರವೇ (ಸರಶಂ. ೪೭೩).

[ದೇ.॥ ತಮಿ. ಮಿಳಕು; ಮಲ. ಮಿಳಕು, ಮುಳಕು; ತುಳು. ಮೆಣಂಚಿ, ಮಣ್ಚಿ ;ಕೊಡ. ಮಳು./ಸಂ. ಮರಿಚ]

**ಮೆಟುವಿಡು** (ನಾ). ಒಂದು ಸ್ಥಳದ ಹೆಸರು: ℗ ಈಗಿನ ಧಾರವಾಡ ಜಿಲ್ಲೆಯ ಮೇವುಂಡಿ : ಸುಖದಿಂ ನಿಜರಾಜರಾಜಧಾನಿ ಮೆಟುವಿಡು ನೊಳಿನ್ದ್ರವಿಮಾನಸಮಾನಮಪ್ಪ [ದೇಗು]ಲಮಂ ಮಾಡಿ (ಕಶಾಇ. XI-i. ೨೨-೮; 897). [ ? + < ಬೀಡು ]

**ಮೆಟ್ಕಿಸು** (ಕ್ರಿ). ಗಂಧ ಮೊದಲಾದುವನ್ನು ಬಳಿ; ಲೇಪಿಸು; ಹಚ್ಚು: ಕಲ್ಲೊತ್ತಿಗರ್ಕದುಗ್ಧವ ಮೆಳ್ಳ[ಟ್ಕಿ]ಸಿಯೊಲೆಗಲ್ಲ ಸೇಕಗೆಯ್ಯಲ್ ಮಾಣ್ಗುಂ (ಲೋಕೋಪ. ೯-೦೭೩). [ಮೆಟ್ಕು + — ಇಸು₃]

**ಮೆಟ್ಕು**, ಮೇಕ್ಕು₁ (ಕ್ರಿ). ೧. (ಗಂಧ ಮೊದಲಾದುವನ್ನು) ಬಳಿ ; ಹಚ್ಚು; ಲೇಪಿಸು : 'ಮೆಟ್ಕಿಸು' ಪರಾ. ೨. (ಆಲಂ) ನಾಶಗೊಳ್ಳು ; ನಿರ್ನಾಮವಾಗು : ಇಂದ್ರಂ ತನ್ನ ಬಲಮೆಲ್ಲಮಟ್ಟು ಮೆಟ್ಕಿದಂತಾದುದೆಂಬುದಂ ಕೇಳ್ದು (ಶಂಕಶಾ. ೩-೧೦೦ ವ) : "ಅಟ್ಟು ಮೆಟ್ಕಿದಂತಾದುದು—ನಾಶವಾಗಿ ಸಾರಿಸಿದಂತಾಗಲು" (ಶಂಕಟೀ. ೨೦೨) : ಬಾಂಧವಜನಮುಂ ಪ್ರಿಯಾನುಜಾತ್ಮಜಪ್ರಕರಮುಮಟ್ಟು ಮೆಟ್ಕಿದಂತಾಗೆ ಶೋಕರಸಮುಂ ಕೋಪರಸಮುಮೊಡನೊಡನೊದವಿ ಬಳೆಯೆ . . . ಮಿಳಿರ್ದ ಮಿಳ್ಳಿಗೊಂಡು (ವರ್ಧಮಾ. ೪-೯೦ ವ). **ಮೇಕ್ಕು₁** : ೩. (ಗಂಧ ಮೊದಲಾದುವನ್ನು) ಬಳಿದುಕೊಳ್ಳು : ಹಚ್ಚಿಕೊಳ್ಳು : ತಲೆಮೞಿದುಟ್ಟುದಂ ಬಿಸುಟು ಮಿಾಯದೆ ಮೇಕದೆ ದಂತಪಂತಿಯಂ ಸುಲಿಯದೆ . . . ಉಪಾಸಕವಾಸದೊಳೇಕಭುಕ್ತಮಂ ಸಲಿಸುವ ಘೋರವೀರತಪಮಾ ತಪಮಾತಪದಿಂದಮುಗ್ಗಳಂ (ಸುಕುಮಾ. ೩-೨೯).

[ದೇ.॥ ತಮಿ. ಮಲ. ಮೆಟುಕು; ತೆಲು. ಮೇಂಗು, ಮೇಗು, ಮ್ರೇಗು; ಕೋತ. ಮೆಕ್ = ಸಾರಿಸು; ಕೋಲಾ. ಮೇಗ್ ; ನಾಯ್ಕಿ. ಮೇಘ್]

**ಮೆಟ್ಟಿಡಿತು** (ನಾ). ಮೋಸ : ವಂಚನೆ : ಭೀಮಸೇನಂ ಧರ್ಮಪುತ್ರಂಗೆಂದನುಪ್ಪಿಕ್ಕಿದೊಡೆ ತುಪ್ಪದ ಮೆಟ್ಟಿಡಿತೆಂಬಂತೆ ನಮ್ಮ ಕಮ್ಮನಿರ್ಪ ವಿವೇಕಾರಣಂ (ಶಂಕಶಾ. ೭-೦೭ ವ). [ < ಮೆಟ್ಟಿಡು₁ ]

**ಮೆಟ್ಟಿಡಿಸು** (ಕ್ರಿ). ೧. ಮರುಳುಮಾಡು : ವಶಪಡಿಸಿಕೊಳ್ಳು : ಒಡಮೆಯಹುನೀಯದಿತ್ತೆನೆನಿಸಲ್ ಕಿಱಿದಂ ಪಿರಿದಾಗೆ ಕೊಟ್ಟು ಮೆಟ್ಟಿಡಿಸಲ್ (ಶಾಂತಿಪು. ೬-೫೦); ಆತನಂ ಮದನರಾಗೋಪೇತನಪ್ಪಂತು ಮೆಟ್ಟಿಡಿಸು (ನೇಮಿಪು. ೪-೪೪ ವ). ೨. ಮೋಸಮಾಡು ; ವಂಚಿಸು : ಪಾಸಂಗೆಯಂ ಪೊರಳ್ಚಿ ಮುನ್ನಂ ನೆತ್ತಮನಱಿಯನಂತವರ ದಾಯಮನಾಡೆ ಮಡಿಮಡಿಗುಱುವುದು ಮೊಂದು ಪತ್ತೆಂಟು ಪಲಗೆಯಂ ಮೆಟ್ಟಿಡಿಸಲೆಂದು ಸೋಲ್ತು (ಶಂಕಶಾ. ೬-೭೦ ವ). [ಮೆಟ್ + ಪಡಿಸು]

**ಮೆಟ್ಟಿಡು₁**, ಮೆಳ್ಪಡು (ಕ್ರಿ). ೧. ಮರುಳಾಗು ; ಮೋಹಗೊಳ್ಳು : ತಡೆಯದೆ ನಿನಗಪ್ಪುದನೀಗಡೆ ಒಗೆ ಮೆಟ್ಟಿಪ್ಪದಿರ್ (ಅಂಕು. ೩-೭೨); ಇಂದ್ರ

ಜಾಲದ ಸಿರಿಗೇಕೆ ಮೆಟ್ಟಿಡುವಿರಿ (ಗದಾಯು. ೧-೩೫); ನುಡಿಗೆ ಮೆಟ್ಟಿಟ್ಟು ನೋಟಕ್ಕೆ ಬಸವಾಗಿ ಮಡದಿಯೊಡವಟ್ಟಿನೆಂದನೊರ್ವಂ (ಸುಕುಮಾ. ೬-೧೫). ೨. ತಬ್ಬಿಬ್ಬಾಗು ; ದಿಗ್ಭ್ರಮೆಹೊಂದು: ಎಡೆವೆತ್ತೊ ಮೆರ್ಯಿಪ ಮುಪ್ಪು ಕುತ್ತದೊಳೊಡಂಬಟ್ಟೊತ್ತೆ ಮತ್ತಲ್ಲಿ ಮೆಟ್ಟಿಡದಾರ್ತಣ್ಮ ತಪಕ್ಕೆ ಪೋಪ ಪದದೊಳ್ (ಆದಿಪು. ೨-೩೮). **ಮೆಳ್ಪಡು :** ೩. ಮಿತಿಮೀರು; ವಿಕೋಪಕ್ಕೆ ಹೋಗು : ಮೆಳ್ಪಟ್ಟು ಕುಳಿರಿರುಳ್ ಬಾಳ್ಗಳಂ ಜುರ್ಜುರ್ತಿದೆ (ಕಾಂತಿ. ೭೭-೦೭೨). [ಮೆಟ್ಟ್ + ಪಡು₁]

**ಮೆಟ್ಟಿಡು₂** (ನಾ). ೧. ಮೋಹ ; ಮೈಮರೆವು : ತೊಡರ್ದೀ ಪುತ್ರ ಕಲತ್ರಮೋಹದೊಳಿದೇಕಟ್ಟಿರ್ದಪೈ ನಿನ್ನ ಮೆಟ್ಟಿಡಿದೇ ಕಾರಣಂ (ಆದಿಪು. ೦-೭೯). ೨. ಭ್ರಾಂತಿ: ಭ್ರಮೆ : ಎಮಗಾರ್ ಶರಣೆಲ್ಲಿಗೆ ಪೋಪೆವೆಂದು ಮೆಟ್ಟಿಡಿನಸಿಪತ್ರನಂದನಮುಸೊಯ್ಕನೆ ಸಾರ್ವುದುಂ (ಆದಿಪು. ೫-೮೮) ; ನೋಟ್ಟಂಗೆ ಮೆಟ್ಟಿಡಂ ಪಡೆದು ತೋಱುವಸಿಪತ್ರವನಮುಂ . . . ಎಯ್ದಿ ವಂದು ಸಾರ್ವುದುಂ (ವರ್ಧಮಾ. ೫-೪೬ ವ). [< ಮೆಟ್ಟಿಡು₁ ]

**ಮೆಟ್ಟಿಡೆ, ಮೆಳ್ಪಡೆ** (ನಾ). ಭ್ರಮೆ ; ಭ್ರಾಂತಿ : "ಮೆಟ್ಟಿಡೆಯೆಂದು ಮರುಳ್ತನಮಿರ್ಪುದು" (ಕರ್ನಾಟಿ. ೩೬). **ಮೆಳ್ಪಡೆ :** ಮೊಡಮಿಯೊಳವಸಂ ನೀಂ ಪೆಸರ್ವಿಡಿವರೆ ಕೇಳ್ಕುನಿಯೆ ನಿನಗೆ ಮೆಳ್ಪಡೆಯುಂಟೇ (ಶೀರಾ. ೦೦-೦೭). [< ಮೆಟ್ಟಿಡು₁]

**ಮೇ₁, ಮೆಯ್₁, ಮೆಯ್ಯು, ಮೇಯು** (ಕ್ರಿ). ಮೇದ₁(ಭೂತಕೃ). ಮೆಂದು, ಮೇದು₂ (ಭೂತನ್ಯೂ). ೧. ದನ ಮುಂತಾದ ಪ್ರಾಣಿಗಳು ಹುಲ್ಲು ಮುಂತಾದ ಆಹಾರಪದಾರ್ಥಗಳನ್ನು ತಿನ್ನು,- ಸೇವಿಸು : "ಮೇ-ತಿರ್ಯಕ್ಖಾದನೇ (ಮೇಯು)" (ಶಮಂಧಾ ) ; ಬೇಲಿ ಹೊಲನೆಲ್ಲಂ ಮೇದೊಡಂ . . . ಹರ ಕೊಲ್ಲಲ್ ಪರಕಾಯ್ವನೇ (ಸೋಮೇಶ. ೨೯) ; ಅನಿತುಂ ಗಿರಿಗಳು ಖಾಂಡವವನಮುಂ ಹಸಿವೋಗೆ ಮೇದು ಮೆಲೊಕ್ಕುತ್ತುತಿರಲ್ ವನಪಾಲಕನೀಕ್ಷಿಸಿ . . . ಪುಯ್ಯಲನಿಟ್ಟಂ (ಧರ್ಮಶ. ೩-೩೪) ; ಗೋವ್ಗಳೆಲ್ಲ . . . ದಟ್ಟೈಸಿದಾ ಸಸಿಗಳೆಡೆಯೊಳು ಮುಟ್ಟಿ ಮೇದವು ಹುಲ್ಲನು (ಗೋಹಾಡು. ೯-೪೪). **ಮೆಯ್₁:** ೧. ಹಸಲೆಗೊಳಿಸಿದು ಮೆಯ್ವೆಳಕಱುಗಳ್ ಕಡೆವಾಯಿನೊಱೆವ ನೀರ್ವೆರಸುಗುತ್ತೆ ಪೋದ ಹರಿಣಹರಿಣೀವೃಂದದ ಮಂದವಜ್ಜೆಗಳುಮಂ ಕಂಡು (ಕುಸುಮಾ. ೦೪-೨೯ ವ) ; ಓಂಗದೆಡೆಗೆಡೆಗಾಕಳುಗಳುದರಂಗಳಾಗಳು ತುಂಬ ಮೆಯ್ದು ದಕಂಗಳಂ ಕುಡಿವುತ್ತೆ (ಬಸವ. ೬೦-೩೪) ; ಅಲಸದೆ ಓರಿದುಂ ಮೆಯ್ಯುಂ . . . ತುರಗಂ (ಅಕ್ಕಿಕಾ. ೫-೨೭). **ಮೆಯ್ಯು :** ೧. ದುರ್ಗದ ದನಗಳು ತನ್ನ ಸೀಮೆಯು ಸರಹದ್ದಿನಲ್ಲಿ ಬಂದು ಮೆಯ್ಯುತಾ ಇವೆ (ಪತ್ರಕಾ. ೬೨). ೨. (ಆಲಂ) ಕಷ್ಟಪಡದೆ ಹೊಟ್ಟೆ ತುಂಬಿಸಿಕೊಳ್ಳು : ಬಸಗೋಂಡನ ಹೆಂಡತಿ, ಬಸವಂತಿ ಕೂತು ಮೆಯ್ಯಲಿಕ್ಕೆ ಬಂದವಳೆಂದು ಚುಚ್ಚುತ್ತಿದ್ದಳು (ದೀಪಕ. II, ೦೪೧). **ಮೇಯು :** ೧. ಮೃಗಸಂತತಿ ಗಹ್ವರದಿಂ ಪೊಱಮಟ್ಟು ಮೇಯುತಿವೆ ಮೊಳೆವುಲ್ಲಂ (ಗಿರಿಜಾ. ೯-೬೩) ; ಆ ಕುದುರೆಯು ಒಂದು ಹುಲ್ಲುಗದ್ದೆಯಲ್ಲಿ ಮೇಯುತ್ತ ನಿಂತಿರುವುದು ಅವನ ದೃಷ್ಟಿಗೆ ಬಿತ್ತು (ಮುಂಬಯು. ೪-೭೯) ; ಹೊಲದಲ್ಲಿ ಚೆನ್ನಾಗಿ ಮೇದು ಬಂದ ಎತ್ತುಗಳು ಆನಂದದಿಂದ ಬಾಲವನ್ನಾಡಿಸುತ್ತಾ ತಮ್ಮ ಮೈಮೇಲೆ ಕುಳಿತ ನೊಣವ ನ್ನೋಡಿಸುವ ಕಾರ್ಯದಲ್ಲಿ ತೊಡಗಿದ್ದುವು (ಚತಸ. ೧). ೩. ನಾಶಮಾಡು : ಧ್ವಂಸಗೊಳಿಸು : ದೇಶದುದ್ಧಾರಕ್ಕೆ ದೇಹವನು ತೇಯುಬಲ್ಲ ; ಮಂದಿ ಹೊಲಗಳ ನುಗ್ಗಿ ಮೇಯುಬಲ್ಲ (ನರಿಮು. ೨೯-೦). ೪. ಆವರಿಸು : ಆಕ್ರಮಿಸು : ಚಿಮಣಾಳ ಆಸಕ್ತಿ . . . ಅವನ ಹೃದಯವನ್ನೇ ಮೇಯ ಹತ್ತಿತು (ಗ್ರಾಮಾಯ. ೫೬೮).

[ದೇ.॥ ತಮಿ. ಮಲ. ಕೊಡ. ಕೋತ. ಪರ್ಜಿ. ಮೇಯ್ ; ತುಳು. ಮೇಯು, ಮೇಪು ; ತೆಲು. ಮೇಯು ; ನಾಯ್ಕಿ. ಮಿಹಾಯ್ ; ಕುವಿ. ಮೆಯಲಿ ; ಕುರುಖ್, ಮೆನ್ನಾ ; ಮಲ್ತೊ. ಮಿನೆ]

**ಮೇ₂** ' ಮೇಂ ' ನೋ.

**ಮೇ₃** (ನಾ). ಕುರಿ, ಮೇಕೆ ಮುಂತಾದುವುಗಳ ಕೂಗನ್ನು ಅನುಕರಿಸುವ ಒಂದು ಶಬ್ದ: ಮಗುವಿನ ಧ್ವನಿಯಂತೆ 'ಮ್ಯೇ' ಎನ್ನುವ ಧ್ವನಿಯೂ ಕೇಳಿಸಿತು . . . ಹುಲಿ ಅವನ ದನವನ್ನು ಕಡಹಿ ಹಿಡಿದಿತ್ತು (ಕಾರಂತ. ಕಥಾಸಾರ. ೬).

**ಮೇಂ, ಮೇ₂** (ಸಪೂರೂ) ' ಮೇಲ್ ' ಎಂಬ ನಾಮಪದಕ್ಕೆ, ಸಮಾಸ ಪದಗಳಲ್ಲಿ ಬರುವ ಆದೇಶರೂಪ : 'ಮೇಂಗಾಲ್', 'ಮೇಂಗೆಯ್' ಪರಾ. ಮೇ₂ : 'ಮೇಗರೆ', 'ಮೇಗಾಲ್' ಪರಾ. [<ಮೇಲ್₁]

**ಮೇಂಗಣ್ಣು** (ನಾ). ಹಣೆಯ ಮೇಲುಭಾಗದಲ್ಲಿರುವ ಕಣ್ಣು : ಹಣೆಗಣ್ಣು : ಅಂತ್ಯವರು ವಿಕ್ರಮಶಾಲಿಗಳು . . . ಕೆಂಗಣ್ಣಸಗುತ ನಗನಂದನೆಯ ಕಾಂತನ ಪಂಚಮುಖದ ಮೇಂಗಣ್ಣುರಿಯಂತೀಯಂದಮನನುಕರಿಸಿದು ಪೇಬಂತಿರೆಯುಗ್ರತೆಯಿಂ ಸಂಹರಿಸಿದರಸುಹೃದ್ವಾಹಿನಿಯ (ಜಮುಕಾ. ೬-೫೦). [ಮೇಂ (< ಮೇಲ್₁) + ಕಣ್ಣು (< ಕಣ್)]

**ಮೇಂಗಯ್** ' ಮೇಂಗೆಯ್ ' ನೋ.

**ಮೇಂಗಾಲ್, ಮೇಗಾಲ್, ಮೇಗಾಲು** (ನಾ). ಕಾಲಿನ ಮೇಲುಭಾಗ : ಕಾಮನ ಕಿಳಿಗೊಳವೆನಿಪ ನಿಕಾಮನಖದ್ಯುತಿಜಲಪ್ರವಾಹದೊಳೆಸೆವಾ ಪಾಮೆಯ ಮೇಂಗಾಲ್ ಸೊಗಯಿಸುವಾಮೆಯನನುಕರಿಸಿ ಮನಮನಿಟ್ಟುಳಿಗೊಳ್ಗುಂ (ಜಗಿ. ೦೦-೨೦) ; ಪಡೆದುವೆ ನಮ್ಮುನ್ನತಿಯಂ . . . ಇಂತೀ ಪಡಮುಂ ಬೆರಲ್ಗಳುಂ ಕಿತ್ತಡಿಯುಮೆನುತ್ತುರ್ವಿದಂತೆ ಮೇಂಗಾಲೆಸೆಗುಂ (ಕೃಷ್ಣಕೃ. ೩-೨೯) ; ಅಂಗಯ್, ಅಂಗಾಲ್ ; ಮೇಂಗಯ್, ಮೇಂಗಾಲ್, (ಶಮದ. ೦೬೫ ಪ್ರಯೋ). **ಮೇಗಾಲ್ :** ಕಿಟ್ಟೊಡೆ ಮೇಗಾಲ್ ಪೆರಲುಂ ಗುಟಂ ಬರಿ ನೊಸಲ್ ನಿಟ್ಟೆಲ್ವು ಗೋಣಾಟ ಬೆನ್ . . . ಕಾಲಡಿಯಿಂದಿಂ ತಿವನುರ್ಚಿ ಪೋದುವಿಸೆ ತತ್ತಾಸಜನ್ಯಕಂದಾಂಕುರಂ (ಶಾಂತಿಪು. ೪-೦೭); ನದೀಲತಾಂಗಿಯ ಮೇಗಾಲ್ಗಳೆನಿಪ್ಪ ಪರಿಕಾಲ್ಗಳುಂ . . .ಅನೂನಶೋಭೆಯಂ ಪಡೆಯೆ (ಕೃಷ್ಣಕೃ. ೯-೨೨ ವ) ; ಜನನುತಮಪ್ಪುತ್ತಮಗತಿಯಂ ಪಡೆದನಿಶಂ ತನಗೆ ವಿರಕ್ತರನೆಱಗಿಪ ವನಿತೆಯ ಮೇಗಾಲ್ಗಳ ಪಾಸಟಿಯಂ ನಾವೆಯ್ದುವೆ ವೆದು ಮನದೊಳ್ ಭಾವಿಸಿ (ಜಯು. ೩-೨೮). **ಮೇಗಾಲು :** "ಪದಾಶ್ರಂ, ಪ್ರಪದಂ ಈ ೨ ಮೇಗಾಲು" (ನಾಚರಾ. ೧೨೦) ; ಶಿವೆ ಬ್ರಾಹ್ಮಣ ನಯನ ಕ್ಷತ್ರಿಯ . . . ಮೇಗಾಲು ಮುಚ್ಚಿಗ (ಸರ್ವಜ್ಞ. ೦೬೨-೬೬೬) ; ಹೆಬ್ಬೆಟ್ಟುಗಳು, ಪದತಳಗಳು, ಮೇಗಾಲು, ಹರಡು . . . ಕಣ್ಣುಗಳು, ಶಿರಸ್ಸು ಮುಂತಾದ ಸ್ಥಾನಗಳೇ ಸ್ತ್ರೀಯರುಗಳಿಗೆ ಕಳಾಸ್ಥಾನಗಳೆನಿಸಿಕೊಂಬುವು (ಸಕಲ. ೬೦) ; ಕೀಳ ಕೆಣಕಬೇಡ ಮೇಗಾಲು ತುರಿಸ ಬೇಡ (ಗಾದೆ). [ಮೇಂ (< ಮೇಲ್₁) + ಕಾಲ್₁]

**ಮೇಂಗೆಯ್, ಮೇಂಗಯ್, ಮೇಂಗೈ, ಮೇಗೆಯ್, ಮೇಗೈ** (ನಾ). ೧. ಮಣಿಕಟ್ಟಿನಿಂದ ಹಿಡಿದು ಕಿರುಬೆರಳಿನ ವರೆಗಿನ ಭಾಗ ; ಕೈಯ ಮೇಲುಭಾಗ : ಕಿಟ್ಟೊಡೆ, ಮೇಂಗೆಯ್, ಮೇಂಗಾಲ್ (ಶಾಶಾಕೂ ೦೨೯ ಉದಾ). **ಮೇಂಗಯ್ :** ೧. ಅಂಗಯ್ ; ಮೇಂಗಾಲ್, ಮೇಂಗಯ್ (ಶಮದ. ೦೬೫ ಪ್ರಯೋ) ; ಕಯ್ಯ ಮೇಗು ಮೇಂಗಯ್ (ಶಬ್ದಾನು. ೩೪೮ ಪ್ರಯೋ). **ಮೇಂಗೈ :** ೨. (ಆಲಂ) ಜಯ ; ಗೆಲುವು ; ಮೇಲುಗೈ : ಬೆಂಗಯ್ಗಳ್ಸಲೆ ಸಾಸಿರಂಗಳೆಮಗುಂಟೆಂದೆಂಬ ಗರ್ವಂಗಳಿಂ ಮೇಂಗೈಯಪ್ಪೆವೆನುತ್ತೆ ಬಂದಿರಿಂ (ಶೀರಾ. ೦೦-೪೮). **ಮೇಗೆಯ್ :** ೧. "ಕರೋರ್ಧ್ವ ಮನಲ್ಕೆ ಮೇಗೆಯ್ಗೆ ನಾಮಮಕ್ಕುಂ" (ಮಂಗರಾ. ೯೫-೮). **ಮೇಗೈ :** ೧. ಮೊಳಕೈ ಮುಂಗೈಗಳನಾಡಿಸುತಂ ಮೊಳಕಾಲಿಕ್ಕುತೆಱಗುತೆ ನಿಲುತಂ ಅಂಗೈ ಮೇಗೈಗಳನಾಡಿಸುತಂ [ಶಾಸಂ. ಕಾಲುಂ ಕಯ್ಯುಂ] ಬೆಂಗೊಂಡಾಗಿರೆ (ಶೃಂಗಾರ. ಹ. ೪೬೩.೨). [ಮೇಂ (< ಮೇಲ್₁) + ಕಯ್₂]

**ಮೇಂಗ್ಯೆ** 'ಮೇಂಗೆವರ್' ನೋ.

**ಮೇಂಟಿ**, ಮೆಂಟೆ, ಮೇಂಟೆ, ಮೇಟಿ, ಮೋಟಿ, ಮೇಣಿ, ಮೇಳಿ, ಮೇಟ್ಪಿ$_1$ (ನಾ). ೧. (ಶೌರ್ಯದ ಅಥವಾ ಗೆಲುವಿನ ನೆನಪಿಗಾಗಿ ನೆಡುವ) ಕಂಬ ; ಸ್ತಂಭ : ಬೆಳೆ ಮತರು ಕೊಟು ನಿ[ಂ]ತಾ ಮೇಂಟಿಯನಃ (ಶಾಇ. XVIII. ೪೦೦-೯ ; ಸು. ೩ನೆಯ ಶ) ; ಧರಣೀ ಮಧ್ಯದೊಳೊಪ್ಪೆ ಮೇಂ[ಟಿ]ಯುವೊಲಿರ್ಕ್ಕುಂ ಮೇರು[ವಾ] ಮೇರು ಮಂದಿರದಿಂ ದಕ್ಷಿಣಭಾಗದಲ್ಲಿ ಭರತಕ್ಷೇತ್ರಂ (ಕಇ. IV. ೦೦-೨ : 1121) ; ಆದ್ಯಕ್ಷರದ ಬಿಂದುವಿಂಗೆ . . . ಮರ್ಕಟ — ಮಂಕಡ, ಮಕ್ಕಡ ; ಮೇಥಿ— ಮೇಂಟಿ (ಕಮರ. ೨೧೩ ಶ್ರ ಟೊ). ೨. ಕಟಾವಿನ ಕಾಲದಲ್ಲಿ ಧಾನ್ಯವನ್ನು ಒಕ್ಕಲು ಕಣದಲ್ಲಿ ನೆಡುವ ಕಂಬ : ಮೇಟಿಗಂಬ : ಮೇಂಟಿ (ಮೇಟಿ) — ಮೇಠಿ (ಮೇಥಿ) = ಒಕ್ಕುವ ಕಂಬ . ಕೃಷಿ" (ತದ್ಭಕೋ. ೩೬). ೩. ಬೇಸಾಯ ; ಉಳುಮೆ : ಕೃಷಿ : ಮೇಲಿನ 'ತದ್ಭಕೋ' ಪ್ರಯೋಗವನ್ನು ನೋಡಿ. ೪. (ಗ್ರಾಮದ ಮುಖ್ಯಸ್ಥನಿಗೆ ಕೊಟ್ಟ) ಮಾನ್ಯದ ಭೂಮಿ : ವೈಸಕ × × [ಗಾ]ಮುಣ್ಡಾಗಂ[ಬೇರ] ಗಾಮುಣ್ಡಾಗಂ . . . ನಾಲ್ಕು ಬರಿಸ ಪರಿಯಾರವು ಐದಾನೆ ವರಿಸ ಪಡು ವಾರಮುಂ ಮೇಣ್ಟಿಯು ಸಕ್ತಿಗವು ಇನಿತ್ತುವಾ[ನ್]ಪ್ರಸಾದಂಗೆಯ್ದಾರ್ (ಶಾಇ. IX-i. ೫೦-೦೬ ; ೯ನೆಯ ಶ) ; ಸ್ವಸ್ತಿ ಸಮಸ್ತಗುಣಸಂಪನ್ನರಪ್ಪ ಊ ವಕ್ತೊಕ್ಕಲುಮಿರ್ದು ಬಿಟ್ಟ ಧರ್ಮ್ಮಮಾವುದೆಂದಡೆ ಮೇಂಟಿಯಲು ಪಣ ೧ ತೋಂಟದಲು ಪಣ ೧ (ಶಾಇ. XI-ii. ೦೫೮-೦೬ ; 1109). **ಮೆಂಟೆ** : ೧. ಆತನನೀಗಳೆ ಅಜನರಮನೆಯುಂಗಣಕ್ಕೆ ಮೆಂಟೆಯನಾಗಿಸುವೆನು (ರಾವಶಕ. ೦೦೦-೦೨). **ಮೇಂಟಿ** : ೫. ಒಂದು ಬಗೆಯ ತೆರಿಗೆ : ಆ ನಾಂಡು ಅರಸು ಮಾಡಿಕೊಟ್ಟ ಮಾನ್ಯ × × × ಪಾಳು ಮೇಂಟಿ ಸೇಸೆ ಸಿದ್ದಾಯ ಹೊದಕೆ ಹದಿಕೆ × × × ಬೇಡು ಬಿಟ್ಟು . . . ಮೊ[ದ]ಲಾಗಿ ಆವು ದೊಂದುಯಿಲ್ಲದೆ × × × ಸರ್ವ್ವಬಾಧೆ ಪರಿಹಾರ (ಶಾಇ. IX-ii. ೪೦೬-೩೦ ; 1364). ೬. ಒಂದು ಪ್ರದೇಶದ ಹೆಸರು : ಅಣಿಲಾಪುರದ ಪೆರ್ವ್ವಟ್ಟೆ ತೆಂಕಣ ಸೀಮೆ ಮೇಣ್ಟಿಯು ಪೆರ್ವ್ವಟ್ಟೆ ಪಡುವಣಸೀಮೆ ಮತ್ತಮಾ ಸಮಣ್ಗೆಟಿಯೋಟಿಯ ಬಡಗಣ ಕೋಡಿಯ ಪಡುವಲ್ವಾಳಕಟ್ಟಿನ ಮೋ[ಗ] ಳೆಯ ಬರುಹು ತೋಂಟಯಾಗಿ ಪಡುವಣಭಾಗದೊಳ್ ಮೇಣ್ಟಿಯ ಬಟ್ಟೆಯುಂ ಮುಟ್ಟೆ ಬಡಗಣ ಸೀಮೆ (ಶಾಇ. XI-i. ೭೬-೫೦ ; 1045). **ಮೇಟಿ** : ೧. ದ್ರವಿಳಾಳೀಪತಿಯೆಂಬ ಚೋಳಕರ ರಾಜ್ಯಾಪಕ್ರಮಶ್ರೀಗೆ ಕಾಂಚಿ ಪೊಲಿರ್ದ್ದೊಪ್ಪುವ ಕಂಚಿ ಸಂಚಳಿಸೆ ತೆಂಕಲಘಟ್ಟಮಂ ದಾಂಟೆ ನಾನಾವಿನೊಳ್ ರಾಜಿಗನೊಕ್ಕಲುಂ ಬಡಿದು ತಂದೊಕ್ಕಲ್ ಜವಂ ನಟ್ಟ ಮೇಟಿವೊಲಾದತ್ತನೆ ನೆಟ್ಟನೊಟ್ಟಜಿಕೆಯಿಂ ತಂಬಂ ಜಯಸ್ತಂಭಮಂ (ಪ್ರಕಿಂ. ೦೯೩೦. ೭೭-೨೭ : 1080) : ಇಳಾತಳವೆಂಬ ಕಳದೊಳು ಓತು ವಿಲಯಕರ್ತ್ತು ನಿಲಿಸಿದ ಮೇಟಿಯ ರೀತಿಯಾಯ್ತಾ ಮೇರುಶಿಖರಿ (ನೇಶಸಂ. ೧-೫೦) ; ಆ ಸ್ವರ್ಲೋಕ ವೈಭವವನಾರು ಬಣ್ಣಿಪರಲ್ಲಿಯಾ ಧೃವಂ ಮಿಸುಪ ನೀಲದ ಲಿಂಗಮಂ ಶ್ರೀ ಭಕ್ತಿಯಿಂ ಭಜಿಸಿ ಬುವಿಗೆ ಮೇಟಿಯವೋಲು ಮಹಾಭಾಸದಿಂದಿಹಂ (ಏಕ್ಕೆ ಕೃ. ೯-೦೩-೬). ೩. ಮೇಟಿಯಿಂ ಜೂಟ ನಡೆದುದಲ್ಲದೆ ದೇಶದಾಟವೆ ಕೆಡುಗು (ಸರ್ವಜ್ಞ. ೦೩೩೭) ; ಮೇಟಿ ಬಲವಿದ್ದರೆ ಕೋಟಿ ಗೆಲಬಹುದು (ಗಾದೆ). ೭. ಶ್ರೇಷ್ಠವಾದುದು ; ಉತ್ತಮವಾದುದು : ಮೇಟಿ ಪುರುವಳ್ಳಿ ಎಲೆಯುತ್ಪಾಟಿಸುಗುಂ ನಸ್ಯಕರ್ಮದೊಳ್ ವಿಪಮಿಸದುಂ ಪಾಟಿಸಿ ಮರಿಚದೋಳೀಯಲ್ ಕೋಟಿಲತಾಕುಲಮದೇವುದಿಂತಿದಜಿಂದಿರೊಳ್ (ಕಮರ. ೭-೯೯). ೮. ಶ್ರೇಷ್ಠ ವ್ಯಕ್ತಿ : ಸವಿನಯಂಗಳ ಮೇಟಿ ದಾಸೋ ಹವನಲರ್ಚುವ ಚೇಟಿ . . . ದಯಾಳುಶಂಕರನೊಲುಮೆಯುಳ್ಳಾಳು (ಬಸಪು. ೬-೦೦). ಮಾರನೃಪತಿಯ ತೇಜಿ ಭೂರಿಮೋಹನರಾಜಿ . . . ತೋರ ಮುಡಿಯ ವಧೂಟಿ ನಾರಿಯರೊಳುಂ ಮೇಟಿ (ವಂಶಾರಾ. ೫-೬-೩೭) : ತಾವು ಎಷ್ಟು ಶಾಸ್ತ್ರವನೋದಿ ತಪಗಳನು ಗೆಯ್ದರೂ ಸಿದ್ಧಿಯಲಿ ಕಸಕಣ್ಣ ನಿಜದಿ ತಮಗೂ ಮೇಟಿ (ನವರಾ. IV. ೬೯). ೯. ಮುಂದಾಳು ; ಮುಖಂಡ ; ನಾಯಕ : ಸೀತಾರಾಮು ಮತ್ತು ರಾಮಚಂದ್ರು ಇಬ್ಬರೂ ಮೇಟಿಗಳಾಗಿ ಒಂದು ಕಲ್ಲುಬಂಡೆಯ ಮೇಲೆ ಕುಳಿತಿದ್ದರು (ಕಕಹು. ೦೪). ಬಾರಾ, ಓ ಬಾನ್ ಮಿನ್ಗಳ ಮೇಟೀ . . . ಬಾರಾ, ನಲ್ಲಿರುಳುಲಿ ಗಳ್ಗೊಡೆಯಾ ! (ಅಂತಿಗೂ. ೩೦-೦೦೬೮). ೧೦. ಮುಖ್ಯ ಸೇವಕ : ಮೇಟಿಯ ಉಸ್ತುವಾರಿಯಲ್ಲಿ ಕೆಲಸಗಾರರು ಅಚ್ಚುಕಟ್ಟಾಗಿ ಕೆಲಸವನ್ನು ಪೂರೈಸಿದರು (ರೂಢಿ). ೧೧. ನಡುವಿನ ಭಾಗ ; ಕೇಂದ್ರ : ಮೇಟಿ ಶೀಲವ್ರತಶಿವೈಕ್ಯರ ಪಾಟಿಯೆಸೆವುಪ್ಪರಗುಡಿಗಳಿಂ ಮಾಟಕೂಟದ ಮಹ ಮನೆಗಳೆನಿಸಿದವು (ಬಸಪು. ೩೫-೫೫). **ಮೇಟೆ** : ೨. ಹೊಟ್ಟ ಕಳೆದು ಭತ್ತ ನಿಂದು ಹುಲ್ಲು ಹೊಜೆಗಟ್ಟಿತ್ತು ಒಕ್ಕದ ಮೇಟೆ ಕಿತ್ತಿತ್ತು ಹುಲ್ಲು ಮೆದೆಗೆ ಹೋಯಿತ್ತು (ಪೋಳವಪು. ೦೪೩-೫೫೩) ; ಕಳನ ಕೆತ್ತುವ ಮೇಟಿಯುಂ ನೆಡುವ ಕುಡುಗೋಲನುಳಿಯದೇ ಮಾಸಯಿಸುವ ಗೋದಣಂ ಕುಡಿಯುರುಗಳೊಳ ಗೊಪ್ಪಮಂ ಪಡೆದುದು (ಸಪ್ತ್ಯಶಾ. ೦-೨೪) ; ಹೂದುಂಡೆಯನ್ನು ಮೇಟಿಗೆ ಕಟ್ಟಿ ಉಳಿದ ಉಪಕರಣಗಳಿಗೆ ಸಾಲುಶರಣರೆಂದು ಹೂಮಾಲೆಗಳನ್ನು ಹಾಕಿ ಪೂಜೆ ಮಾಡುವರು (ಕನ್ನಜಾ. ೦೩೪). **ಮೇಣಿ** : ೧೨. ನೇಗಿಲು ; ರೆಂಟೆ : ಪೂಜಿಸಿ ಪೊಡವಟ್ಟೊಪ್ಪೆ ವಿರಾಜಿಸಿ(ಬ)ದೆಯನಜಿದು ಪರಿವುವು ದಾಂಟದೆ ನೀನೋಜೆಯ ಬಲ್ಲೆಟ್ಟುಗಳಂ ಯೋಜಿಸಿ ಸಲೆ ಪಿಡಿದು ಮೇಳೆ(ಣಿ) ಯುಂ ತತ್ಕ್ರಮದಿಂ (ಅಟ್ಟಿಮ. ೯-೩೯) ; ಆರು ಕಟ್ಟ ಉಳುತ್ತಿದ್ದ ಆ ಮನೆಯ ಮುದುಕಯಜಮಾನ ಗಾಡಿಯನ್ನು ಗುರುತಿಸಿ, ಮೇಣಿಯನ್ನು ಬೇರೆಯವರ ಕೈಗೆ ಕೊಟ್ಟು, ಓಡಿ ಬಂದು (ಪುಶಿಪು. ೪೯೪). ೧೩. ನೇಗಿಲಿನ ಹಿಡಿ.—ಗೂಟ : ಏಟೋದಿದ್ರೇನು ಮೇಣಿ ಮೇಲೆ ಕೈ ಮಡ್ಗೋದು ತಪ್ಪ (ಹುಟ್ಟುಕ. ೦೬೪) ; ನೇಗಿಲಿನ ಮೇಣಿಯನ್ನು ಮಾತ್ರ ಕೈಯಲ್ಲಿ ಹಿಡುಕೊಂಡ ರಾಮಯ್ಯನು ಮೇಲಿನ ಗದ್ದೆಯಲ್ಲಿಯೆ ನಿಂತಿದ್ದನು (ಕಾನೂರು. ೨೦೦). **ಮೇಳಿ** : ೧೨. ಉತ್ತಪೆನೆಂದು ಮೇಳಿಯ ಓಡಿ ದಾಯೆರತೆತ್ತದಾಯೇದು ನಡೆಸಲು (ಧನ್ಯಕ. ೦೬೮) ; ಎತ್ತು ಜತ್ತಗಿ ನುಂಗಿ ಭತ್ತ ಬಾನವ ನುಂಗಿ ಮುಕ್ಕಟತಿರುವೂ ಅಣ್ಣನ ಮೇಳಿ ನುಂಗಿತ (ಕಂಕಕ. ೨೯-೪). ೧೩. ಪೂರ್ವಕ್ಕೆ ತಳವಾಗಿ ಉತ್ತರಕ್ಕೆ ತಲಹಾಗಿ ಬಿದ್ದ ಮರನ ತಂದು ನಿಬದ್ಧಿಯ ಕಾರುಕನ ಕೈಯಲ್ಲಿ ಸುಬದ್ಧಿಸಿ ಶುದ್ಧೈಸಿ ಅನಾದಿಯೆಂಬ ಹುಗಿಲುದೆಗೆದು . . . ಇಪ್ಪವೆಂಬ ವಿಶ್ವಾಸದ ಮೇಳಿಯುಂ ಬೆಟ್ಟ (ಸಕವ. III. ೯೭-೯೯). **ಮೇಟ್ಪಿ**$_1$ : ೧೨. ಧನ್ಯ ಕುಮಾರಂ ಉಟ್ಟು ನೋಟ್ಟಿನೆಂದು ಮೇಟಿಯುಂ ಪಿಡಿದು ಪಿಡಿದೊತ್ತಿ ಪೊಡೆಯ ನೇಗಿಲ್ ನಡೆಮೊನೆಯೊಳ್ ನೆಗೆದ ಕಳಶಮಂ ಕಂಡು (ವ್ಯಡ್ಡಾರಾಧನೆ. ೦೯೯-೩೪ ವ).

**ಮೇಣಿಮುರುಕ** = ಭೂಮಿಯ ಮೇಲೆ ನೇಗಿಲನ್ನು ತಿರುಗಿಸಿ ವ್ಯವಸಾಯ ಮಾಡುವವನು ; ಕೃಷಿಕ ; ಒಕ್ಕಲಿಗ : ಸಾಕುಯೆಲೊ ಮೇಣಿಮುರುಕ ಒಕ್ಕಲಿಗನೆ ಭರದಿ ಸೀಳುಕ್ಕೆಯುತ್ತುತ್ತು (ಜ್ಞಾನತ. ೦೩-೬) ; ಇಷ್ಟೊಂದು ಓದಿ ಮತ್ತೂ ಮನೆಗೆ ಬಂದು 'ಮೇಣಿಮುರುಕ'ನಾಗಬೇಕು ಅನ್ನು (ಬೆಳುವು. ೨೨೬). [ದೇ.॥ ತಮಿ. ಮೇಟ್ಟಿ, ಮೇಟಿ ; ಮಲ. ಮೇಜಿ ; ತುಳು. ಮೇಟಿ ; ತೆಲು. ಮೇಟರಿ. ಮೇಟಿ, ಮೇಡಿ ; ಕೋತ. ಮೇಯ್ತ್ ; ಕುವಿ. ಮೇರಿ. /ಸಂ. ಮೇಠೀ, ಮೇಢೀ, ಮೇಥಿ]

**ಮೇಂಟಿಖಂಡುಗ** 'ಮೇಂಟಿಗಂಡುಗ' ನೋ.

**ಮೇಂಟಿಗಂಡುಗ**, ಮೇಂಟಿಖಂಡುಗ, ಮೇಟಿಗಂಡುಗ (ನಾ). ೧. ಒಂದು ಬಗೆಯ ತೆರಿಗೆ ; "ಧಾನ್ಯದ ರಾಶಿಗೆ ಹಾಕುತ್ತಿದ್ದ ತೆರಿಗೆ " (ಕಶಾಅ. ೪೦೦) : ಧನಬಳಂ ಕಾಳಗೊಲ್ಗು ಮೇಂಟಿಗಂಡುಗ (ಓಂಕಶಾ. ೦೯೩೬. ಅಕ್ಕೀಕ್ರ. ೨೯-೩೩ ; ೪೪೮) ; ಅಲ್ಲಿ ಮನ್ನೆಯ ನಿಬನ್ಧದ ಕಿಜುದೆಜೆಗಳವಾವು

ವೆನ್ನಡೆ ಮನೆವಣಂ ಪರಿವಾರವಣಂ ಧನಬಳಂ ಕಾಳೆಗೊಲ್ಲು ಮೇಂಟೆ ಗಣ್ಣುಗವಂಗಡಿಯ ತಿಂಗಳನ ಬೇಳೆಯೊನ್ದು (ಶಾಶಾ. XX. ೪೭-೩೭; 1074).
**ಮೇಂಟೆಖಂಡುಗ :** ೨. ಒಂದು ಬಗೆಯ ಅಳತೆ : ಮೇಂಟೆಖಂಡುಗ ದೇವರ್ಗ್ಗೆ ಇನ್ತೀ ಧರ್ಮವಂ ಪ್ರತಿಪಾಳಿಸಿದವರ್ ವಾರಣಾಸಿ ಕುರುಕ್ಷೇತ್ರ ಪ್ರಯಾಗಾಗ್ರ್ವತೀರ್ತ್ಥಂಗಳೊಳ್ ಪತ್ತು[ಸಾ]ಸಿರಕಪಿಳೆಯಂ ದಾನಂಗೊಟ್ಟ ಫಳಮಕ್ಕುಂ (ಶಾಶಾ. XI-i, ೨೩-೪೦ : 897). **ಮೇಟೆಗಂಡುಗ :** ಮೇಟೆಗಂಡುಗಮುಮಂ ಹಸ್ತರಹಣಮುಮಂ ಬಿಟ್ಟರು (ಶಾ. IV. ೩೯-೨೭; 1111). [ ಮೇಂಟೆ + ಕಂಡುಗ (< ಖಂಡುಗ) ]
**ಮೇಂಟೆ** ' ಮೇಂಟೆ ' ನೋ.
**ಮೇಂಡ** (ನಾ). ಟಗರು ; ಕುರಿ : "ಅವಿಃ. ಊರ್ಣಾಯುಃ . . . ಮೇಷಃ, ಮೇಂಡಃ—ಈ ೮ ಕುರಿ" (ಹಲಾಯು. ೪೭-೧೨೪). [ಸಂ. ಮೇಂಢ]
**ಮೇಂದು** (ನಾ). ೧. ಮಿದುಳು : ' ಮೇಂದುಜ್ವರ ' ಪರಾ. ೨. ಬುದ್ಧಿ : ಮಲಗಿಕೊಂಡಲ್ಲಿಯೇ ವಿಷ್ಣು 'ಕಮ್ಯುನಿಜಂ'ದ ಭಕ್ತನಾದ. ಮಂದವಾದ ಅವನ ಮೇಂದೊ ಈ ವಿಚಾರಪ್ರವಾಹವನ್ನು ತಡೆಯಲಸಮರ್ಥವಾಯಿತು (ಸಮಾಜ. ೦೦೦೦). [← ಮರಾ. ಮೇಂದೂ]
**ಮೇಂದುಜ್ವರ** (ನಾ). ಮಿದುಳಿಗೆ ಬರುವ ಜ್ವರ : ಊರ ಜನರನೆಲ್ಲ ಉರಿದಾಡಿಸುವ ನಿಮಗೆ ಹುಚ್ಚು ಹಿಡಿದಿಲ್ಲವಷ್ಟೆ ? ಮೇಂದುಜ್ವರ ಬಂದಿಲ್ಲ ವಷ್ಟೆ ? (ಶವನಾ. ೬೯). [ಮೇಂದು + ಜ್ವರ]
**ಮೇಂಬೊಲ, ಮೇಬೊಲ** (ನಾ). ಪ್ರಾಣಿ, ಪಕ್ಷಿಗಳು ಆಹಾರವನ್ನು ಹುಡುಕಿ ಮೇಯುವ ಭೂಮಿ.—ಸ್ಥಳ : ಆ ಧೀವರಂ ನಲಿಯು ತೊಂದುದಿನದುದಯದೊಳಗಾ ಹಕ್ಕಿ ದೆಸೆದೆಸೆಗೆ ಮೇಂ[ಪಾಠಾಂ. ಮೇ] ಬೊಲಕೆ ಹದವು ಮಿಗೆ ಹಾರಿ ಪೋದುದನರಿತು (ಸಮ್ಯಕ್. ೨-೩೨) ; ಎಳಗರುವಿಗೆಳ್ಪು ಮೊಲೆಯಂ ಕೊಟ್ಟು ಮೇಂ[ಪಾಠಾಂ. ಮೇ]ಬೊಲಕೆ ತಳರಿದವು ಬಹುವಿಧಂಬಡೆದ ಮೃಗನಿಕುರುಂಬ (ಸಮ್ಯಕ್. ೦೦-೩೮).
**ಮೇಬೊಲ :** ಮೇಲಿನ ಪ್ರಯೋಗಗಳ ಪಾಠಾಂತರವನ್ನು ನೋಡಿ. [ಮೇ$_1$ + ಪೊಲ]
**ಮೇಕು$_1$** ' ಮೇಟ್ಕು ' ನೋ.
**ಮೇಕು$_2$** ' ಮೇಗು ' ನೋ.
**ಮೇಕು$_3$** ' ಮೇಖು ' ನೋ.
**ಮೇಕುದೋಟ್** ' ಮೇಗುದೋಟು ' ನೋ.
**ಮೇಕುದೋಟು** ' ಮೇಗುದೋಟು ' ನೋ.
**ಮೇಕೆ$_1$** (ನಾ). ಆಡು : ಕರಿಯ ಮೇಕೆ [ಪಾಠಾಂ. ಮೆಕ್ಕೆ]ಯ ಕಾಳಸರ್ಪನ ತರಿಸಿ ತಾಟಿಯ ಸಮಿತೆಗಳ ಸಂವರಿಸಿ ದೀಕ್ಷಿತನಾದನಾ ಖಳ ಮಾರಣಾಧ್ವರಕೆ (ಕೊರಠಾ. ೭-೪೨-೭) ; ಜವಾನನು ಒಂದು ಮೇಕೆಯನ್ನು ಹಿಡಿದುಕೊಂಡು ಬಂದ (ರಾಯುಕ. ೧೯) ; ನೂಕಿಸಿಕೊಂಡು ಹೋಗುವುದಕ್ಕಿಂತ ಮೇಕೆ ಕಾಯೋದು ಲೇಸು (ಗಾದೆ).
[< ಸಂ. ಮೇಕ./ ತೆಲು. ಮೇಂಕ, ಮೇಕ; ಕೋಲಾ. ನಾಯ್ಕಿ. ಮೇಕೆ; ಪರ್ಜಿ. ಮೇವ ; ಗದಬ. ಮೇಗೆ ; ಗೊಂಡಿ. ಮೇಕಾ]
**ಮೇಕೆ$_2$** ' ಮೆಕ್ಕೆ$_3$ ' ನೋ.
**ಮೇಕೆಕೊಂಬುಬಳ್ಳಿ** (ನಾ). ಹೋತದ ಕೊಂಬಿನಂತೆ ಕಾಣುವ ಕಾಯಿ ಗಳನ್ನು ಬಿಡುವ ಒಂದು ಬಗೆಯ ಬಳ್ಳಿ : ಮಾಧೀಫಲ, ಮಗ್ಗಿಕ. ಮೇಕೆಕೊಂಬುಬಳ್ಳಿ (ವೈಶಿಗ. ೩೯-೦೦೭೮). ' ಮೇಷಶೃಂಗಿ ' ಪರಾ. [ಮೇಕೆ$_1$ + ಕೊಂಬು$_1$ + ಬಳ್ಳಿ]
**ಮೇಖಲೆ, ಮೇಖಳೆ** (ನಾ). ೧. ಹೆಂಗಸರು ಸೊಂಟದಲ್ಲಿ ಧರಿಸುವ ಒಂದು ಬಗೆಯ ಒಡವೆ; ಒಡ್ಯಾಣ ; ಡಾಬು: ಆ ಖರಾರಿಗೆ ವಿಜಯವಿಭ ವವು ಲೇಖವಾದುದುಯೆಂದು ಸಿಂಧುಸಮೇಖಲಾಲಂಕೃತೆಯ ಸುತೆಕೊಂಡಾಡಿ ದಳು ಕಪಿಯ (ಕೊರಠಾ. ೬-೩೨-೭) ; ಸುಲಲಿತ ಜಘನಸ್ಥಳ ಮೇಖಲೆಯಗ್ರ ದೊಳೆಸೆವ ಮಂಜುಮಣಿದೀಪದ ಕಜ್ಜಲರೇಖೆ ನೆಗೆದುದೆನೆ ಕಣ್ಗೊಲವಿತ್ತುದು ರೋಮರಾಜಿ ರಾಜಾನನೆಯಾ (ರಾಜಶೇ. ೭-೩೪). ೨. ಗಂಡಸರು ಧರಿಸುವ, ಮುಂಜತೃಣದಿಂದ ಮಾಡಿದ ಉಡಿದಾರ : "ರಸನೆ ಮೇಖಲೆ ಕಾಂಚಿ ಸಪ್ತಕಿ ಕಳಾಪಿ ಸಾರಸನಘನಲುಡಿದಾರವುಕ್ಕು" (ಮಂಗರಾ. ೦-೩೦); ಜಲರುಪಬೀಜರಾಜಿಗಳನಾಜಿಪ . . . ಮುಂಜಮೇಖಲೆ ಗಳನೊಪ್ಪಮಾಡುವ ಸಮಿತ್ಕುಶಮಂ ತರವೋಪ . . . ವ್ಯವಸಾಯ ಮೆತ್ತಲುರ(ಕಾದಂಪೂ. ೨೨೨). ೩. ಕತ್ತಿ ಮುಂತಾದುವನ್ನು ಸಿಕ್ಕಿಸುವ ಸೊಂಟದ ಪಟ್ಟಿ ; ನಡುಕಟ್ಟು : " ಮೇಖಲಾ . . . ಆಯುಧವು ಜಾರಿ ಹೋಗದ ಹಾಗೆ ಕಟ್ಟಿದ ಕಟ್ಟು" (ಸಿದ್ಧಾಂತಿ. ೨೭೫). ೪. ನಡುವಿನ ಭಾಗ ; ಮಧ್ಯಭಾಗ : ಮಲಯಮೇಖಲೆಯಂತೆ ಚಂದನಪಲ್ಲವಾವ ತಂಸೆಯುಂ . . . ಯಕ್ಷಾಧಿಪಲಕ್ಷಿಯುಂತಳಕೋದ್ಭಾಸಿ[ಯು. ಮ]ನಿಸಿ ದೇಜುಂಜವ್ವನೆಯ ರೂಪಾತಿಶಯುಮನೆಮೆಯಿಕ್ಕದೆ ನೋಡುತ್ತಂ (ಕಾದಂಪೂ. ೪೯). ೫. ಸೊಂಟದ ಹಿಂದಿನ ಕೆಳಭಾಗ ; ಜಘನ ; ನಿತಂಬ : "ತಿಗದಲ್ಲಿ ಮೇಖಲೆಯೆನಿಪ್ಪುದು" (ಮಂಗರಾ. ೦೪೨-೦೯). ೬. ಪರ್ವತದ ಸಾನು,—ತಪ್ಪಲು. ೭. ಪರ್ವತದ ಅಗ್ರಭಾಗ ; ಶಿಖರ ; "ಕಾಂಚಿಯುಂ ವಸ್ತ್ರಂ ಪರ್ವತದಗ್ರಮುಂ ಜಘನಮಿಂತುಂ ಮೇಖಲಾ ವಾಚಕಂ" (ನಾನಾರ. ೦೦೯). ೮. [ಅಶ್ವಶಾ] ಕುದುರೆಯ ಒಂದು ಅವಯವ : ರಂಧ್ರದ ನಾಭಿಯೆಡೆಗೆ ಉಪರಂಧ್ರಮೆಂಬ ಪೆಸರಕ್ಕು ರಂಧ್ರದ ಉಪರಂಧ್ರದ ನಡುವೆ ಮೇಖಲೆಯೆಂಬ ಪೆಸರಕ್ಕುಂ (ಅಶ್ವಶಾ. ಪುಟ. ೬೯).
**ಮೇಖಳೆ :** ೧. ಮತ್ತೊರ್ವಳತಿಸಂಭ್ರಮತ್ವರಿತದಿಂ ಮೇಖಳಾ ಕಳತ್ರನುಚಿರ ಲಾಳಿತಾಧರಪಲ್ಲವೆ ನೋಟ್ಟ ದಂಡುಗಳೊಳಂಡುಗೊಂಡು ಸೊರ್ಕಿದಾನೆ ಬರ್ಪಂತೆ ಬಂದು (ಶಂಕರಾ. ೪-೩೭ ವ) ; ಮೇಖಳೆ ಘನಾಗಮಲಕ್ಷ್ಮಿಗೆ ದೀಪಮಾಲೆ ಜಾರಾಗಮನಕ್ಕೆ . . . ಎನಲ್ ನಭೋಭಾಗದೊಳಂದು ಬಿತ್ತರಿಸಿದತ್ತು ತಟಿಲ್ಲತೆ (ಮಲ್ಲಿಪು. ೮-೬೯) ; ನಕ್ಷತ್ರ ಖಚಿತಮೇಖಳೆಯಾದು ದಯ್ ವೇಳೆ ಕೃಷ್ಣಾಂಬರಾನಿಶಿ ಚತುರ್ದಶಿಗೆ (ಶ್ರೀರಾಮಪ. ೩೩೭-೦). ೨. ಸಲೆ ಭೈಕ್ಷವಶನಮಜಿನಂ ಪಲಾಶದುಡಂ ಜಟಾಳಿ ಕೌಪೀನಂ ಮೇಖಳೆಯೆಂಬಿಂತಿವೆ ಪೇಟ್ದಾತ್ಮಲಿಂಗದೊಳ್ ಬ್ರಹ್ಮಚಾರಿವರ್ಣಯೆನಿಕ್ಕುಂ (ವಸ್ತುಕೋ. ೩೭-೩೦). ೬. ಮಂದರಮಹೀಧರದ ನಂದನಮೆಂಬ ಮೇಖಳೆಯಿಂ ಸಾಸಿರದ ನೂರಿಪ್ಪ ತ್ತೊಂದು ಯೋಜನಮಗಲದಿಂ ತಾರಾಗಣವಿಮಾನಂಗಳಿರ್ಕಂ (ಸುಕುಮಾ. ೧೦-೫೯ ವ); ಶ್ರೀಜಿನಭವನಚತುಷ್ಟಯರಾಜಿತಮೊಂದೊಂದೆನಿಪ್ಪ ಮೇಖಳೆ ನಾಲ್ಕುಂ ರಾಜಿಸೆ ಮಂದರಮೆಂತಾರಾಜಿಸಿದುದು ಲಕ್ಷಯೋಜನೋನ್ನತಿ ಯಿಂದಂ (ಮಲ್ಲಿಪು. ೨-೦). ೮. ರಂಧ್ರದ ನಾಭಿಯೆಡೆಯೊಳುಪರಂಧ್ರ ಮೆನಿಕ್ಕುಂ ಸರಂಧ್ರದುಪರಂಧ್ರದ ನಡುವಂದಕ್ಕುಂ ಮೇಖಳೆಯುಂ (ಅಶ್ವಶಾ. ೯-೪೨). [ಸಂ. ಮೇಖಲಾ]
**ಮೇಖಳೆ** ' ಮೇಖಲೆ ' ನೋ.
**ಮೇಖು, ಮೇಕು$_3$** (ನಾ). ೧. ಕೋಲು ; ಬೆತ್ತ : ಸಕಲಪಣಕಟ್ಟುಗಳ ಅಧಿಕಾರಿಗಳನ್ನು ಹಿಡಿತರಿಸಿ ನಯದಿಂದಲೂ ಮೊಂಡರಿಗೆ ಮೇಖು ಛಡಾಯಿಸಿ ಕೊರಡೆಗಳಿಂದಲೂ ಸಹ ಗರಮಾಗರಮಿ ಮಾಡಿ ಜನರಿಂದ ನಜರಾನೆ ತೆಗೆದು (ಕೃದರ. ೩೯). **ಮೇಕು$_3$ :** ೨. ಗೂಟ ; ಬೆಣೆ ; ದಸಿ : "ಸ್ಥಾಣುಃ, ಧ್ರುವಃ, ಶಂಕುಃ – ೩ ಮೋಟಿನ ಹೆಸರು. ಗೂಟ, ಮೇಕು" (ಸಿದ್ಧಾಂತಿ. ೦೦೦) ; ಬಲುವೆಯ ಕಾಲ ಪೆಂಡೆವುಹು ಮಾಸ್ಗರಿ ಭಾರಿ ನಗಾರಿ ಮೇಕು ಮಂಗುಲಿಪ ಸುರಾಂತ ಸತ್ತಿಗೆ ನಿಶಾನೆಯು ಮಾಯ್ಮರುತಾಪು ಸಿಂಪನಿಂದುಲಿವ ಸುಡೆಕ್ಕೆ ವೀರ್ಜಡೆಯು ಶಂಖ ಸುಚಕ್ರವು ರಾಜರಾಜನಿಂದಲಿ ಪಡೆದಾತ ಘಂಟೆಯ ನರೇಶ್ವರ ಭೀಕರ ಶತ್ರುಸಂಹರಾ (ಬೀಳಖಂ. ೦-೦೫೭). ೩. " ಮಾಂಸವನ್ನು ಬೇಯಿಸುವಾಗ ಅದನ್ನು ಸರಿಯಾಗಿ ಹಿಡಿದಿಟ್ಟು

ಕೊಳ್ಳುವ ಮರದ ಅಥವಾ ಲೋಹದ ಕೋಲು. ಕಂಬಿ. ಸಲಾಕಿ. ಮೇಕು" (skewer. ೩೦೪೩). [← ಪಾರ. ಹಿಂ. ಮರಾ. ಮೇಖ್]

**ಮೇಗ** (ನಾ). ಮೋಡ : ಮುಗಿಲು : "ಮೇಗಂ ಮುಗಿಲೆಂದು ನೀರ ತೇರೆಂದು ಘನಂ" (ಕಂಕಂ. ೯೬); "ಮೇಗ – ಮೇಘ = ಮೋಡ" (ತದ್ಭಕೋ. ೩೬). 'ಮೇಗವಣ್ಣಗೆ' ಪರಾ. [< ಸಂ. ಮೇಘ]

**ಮೇಗಡೆ** (ನಾ). ೧. ಮೇಲುಭಾಗ : ಉಪರಿ : ವ್ಯಗ್ರವಾನೆಯು ಸುಂಡಿಲಂ ಹಸ್ತಾಗ್ರದಿಂ ಪಿಡಿದೊತ್ತಿ ಬರಸೆಳೆದಾಗ್ರಹಿಸಿ ಹಿಂದಕ್ಕೆ ತೆಗೆದಾ ಮೇಗ [ಪಾಠಾಂ. ಮೇಲ್ಗಡೆ]ಗೆ ಪಾಯ್ದು (ಜಸೂ. ೨೨-೦೫) : ಗಗನದ ನಡುವೆ ಪರಿದುಂ ಬಳಸಿದಾ ತ್ರಿತಯದೊಳರ್ದಮಪ್ಪಳಿಯಾ ತಳೆಯ ಮೇಗಡೆ ನಿಲಿಸಿದಿಡಿಮಪ್ಪಳಿಯೆನಲದಸ್ತ್ರಿರ್ಯಗೂರ್ಧ್ವೋಜ್ವಳವಿಭೇದದಿ ಮೂಜಗಂ ಷಡ್ದ್ರವ್ಯಭರಿತವದು (ಶಾಕ್ಪಾ. ೧-೫೦): ಅಂಬುಪೂರಿತೋದರಮೆನಿಪಂಬು ದಾವಳಿಯ ಮೇಗಡೆಯ್ಯೆತರುತಿರ್ಪ ಪಾಂಗ ಶೀಕರದೊಳೆ ನಾಂದ ನೇಮಿಗಳನಾಂತ ಭವದ್ರಥಮಿಲ್ಲ ಸೂಚಿಕುಂ (ಶಾಸಂತ. ೧೧೧-೧೭೦). ೨. ಬಹಿರಂಗ: ಬಾಹ್ಯ : ಬಚ್ಚಿದೆ ಬೋಳೈಸದಿರು ಕಾರ್ಯದ ಹೊಚ್ಚಿಗೆಯೇನದ ಹೇಳು ಮೇಗಡೆ ಮೆಚ್ಚಿಪವರು ನಾವಲ್ಲ (ಶುವ್ಯಾಕ. ೫-೦೬).

[ಮೇ$_2$ (< ಮೇಲ್$_1$) + ಕಡೆ$_3$]

**ಮೇಗಣ್** 'ಮೇಗು' ಪರಾ.

**ಮೇಗಣ** 'ಮೇಗು' ಪರಾ.

**ಮೇಗರೆ** (ನಾ). ೧. ಮೇಲಿನ ತುದಿ : ಮೇಲುಭಾಗ : ಅವನಾಗಮೋಕ್ತದಿ ಮತ್ತೆ ಲಿಂಗದ ಮೇಗರೆಯ ನಿರ್ಮಾಲ್ಯವನು ಬೇರ್ಚಿರಿಸಿ ಭಕ್ತಿಯಲಿ . . . ನಮಃಶಿವಾಯೆನುತಿತ್ತ ಮುಂದಾದ (ಶುವ್ಯಾಅ. ೬-೯೬) ; ಸುರಿದುದತಿಮಳೆಯೆಂದು ಕುಲಗಿರಿ ಕರಗುವುದೆ ಮೇಗರೆಯ ಶಿಲೆಯುಬ್ಬೆರಳು ನೆನೆವುದೆ (ಶುವ್ಯಾಕ. ೯-೩೩). ೨. ಮೇಲುಮೇಲಿನದು ; ತೋರಿಕೆ : ಬಾಹ್ಯ : ಮೇಗರೆಯ[ಪಾಠಾಂ. ಯೆ] ಮಾತಲ್ಲ ಬಾಲಕನಾಗುಹೋಗಿನ ಕೊಚಿತ ನಿನ್ನನು ತಾಗುವುದು ನೀ ಸೈರಿಸು (ಶುವ್ಯಾಸ. ೧೧-೪೫) ; ನಿಜಬಂಧುಜನದನುರಾಗ ಮುನ್ನಿನ ಪರಿಯಲಿರದಸ್ಮದ್ವಿರೋಧದಲಿ ತಾಗಿ ಬಾಗಲದೇಕೆ ದೇಹತ್ಯಾಗ ಪರಿಯಂತಹುದವಜ್ಞೆಗೆ ಮೇಗರೆಯ ಮಾತಲ್ಲವೆಲೆ ನಳಿನಾಕ್ಷಿ (ಜೈಭಾಗ. ೯-೦-೩೦): ಚಾರುನ ಹೃದಯಕ್ಕೆ ಗಭೀರತೆ ಎಂಬುದೇ ಇಲ್ಲವೇ ? ಕೇವಲ ಅವಳು ಮೇಗರೆಯ ಚೆಲ್ಲಾಟವನ್ನಷ್ಟೇ ಬಲ್ಲಳೇ ? (ಇಶ್ಚಕ. ೨೭೭).

[ಮೇಗು + ಕರೆ$_4$./ತುಳು. ಮೇಗರೆ. ಮೇಗಲೆ, ಮೇಗಳ=ಆರೋಪ]

**ಮೇಗವಣ್ಣಗೆ** (ನಾ). ೧. ಮೋಡದ ಬಣ್ಣ : ಮೇಘವರ್ಣ : ಚಂದ್ರಿಕೆ ತಾಂಬೂಲಾದಿ ಮೇಘವಣ್ಣಗೆಸೀರೆ . . . ಕಂದವಾಣದ ಸೀರೆ ಕೈಬರಹದ ಬಣ್ಣವಂಡಪನೇಸ ಬಣ್ಣಿಸುವೆ (ಅಮುಸಾಂ. ೯-೯). ೨. ಮೇಘವರ್ಣದ ರೇಷ್ಮೆ ಬಟ್ಟೆ : ಮೇಗವಣ್ಣಗೆಯ ಪೊದಕೆಯ ಪೊದೆದು ಪರಮಾನುರಾಗದಿಂದಪಿಳಿಲಿಪಭಕ್ತಜನಮಂ ಪೊರೆಯುತ . . . ಇರ್ಪ ಚರಮೂರ್ತಿಯಾರಿ (ಸಿದ್ಧೇಪು. ೦೫-೯೫). [ಮೇಗ + ಬಣ್ಣಗೆ$_1$]

**ಮೇಗಳ** 'ಮೇಗು' ಪರಾ.

**ಮೇಗಚು** (ಕ್ರಿ). ೧. ಒಳ್ಳೆಯದನ್ನು ಗ್ರಹಿಸು : ಹಿತವನ್ನು ಮನಗಾಣು : ಮೇಗಚುವುದಬಳೆಯರ್ ಗತರಾಗಿಗಳಾಗಿಸಿದ ಕೃತ್ರಿಮಂಗಳ್ ಕಿಡುಗುಂ (ಜಮುದ. ೦೯-೫೯). ೨. ಮುಂದೆ ಆಗುವುದನ್ನು ತಿಳಿ .–ಗ್ರಹಿಸು : ಮೇಗರೆ[ಚು]ಯದುಬ್ಬಿನಲಿ ಸಕ್ಕರೆ ಹೋಗಿಬಿಡುವೆನೆ ಸೋಲಿಸದೆ ಹೊಚಿಸಾಗುವೆನೆಯೆನ್ನೊಡನೆ ಸೆಣಸು (ಶುವ್ಯಾವಿ. ೬೦೩. ೯-೫೭).

[ಮೇಗು + ಅಚು]

**ಮೇಗಾಲ್** 'ಮೇಂಗಾಲ್' ನೋ.

**ಮೇಗಾಲು** 'ಮೇಂಗಾಲ್' ನೋ.

**ಮೇಗಾಲ್ತುಡಿಗೆ** (ನಾ). ಕಾಲಿಗೆ ತೊಡುವ ಆಭರಣ ; ಕಾಲಿನ ಸರ : ಉಡೆನೂಲ್ ಸಡಿಲ್ದು ಮೇಗಾಲ್ತುಡಿಗೆಯ ಕುಸುರಿಯೊಳೆ ತೊಡರೆ ಕಾಮಿನಿ ಮಿಡುಕಲ್ (ಕಾರುಂಜ. ೦೩೯).

[ಮೇಗಾಲ್ (< ಮೇಂಗಾಲ್) + ತುಡಿಗೆ (< ತೊಡುಗೆ)]

**ಮೇಗಾವಲು** (ನಾ). ಮೇಲ್ವಿಚಾರಣೆ ; ಉಸ್ತುವಾರಿ : ಬಲದ ಮುಂಗುಡಿ ನೀಲನದು ಪಿಂಗಲಿಯ ಕಾಹು ಸುಷೇಣನದು . . . ವೀರ ಕಳ್ಳೆಚುಗಳ ಮೇ [ಪಾಠಾಂ. ಮ್ಯ] ಗಾವಲು ವಿಭೀಷಣದೇವನದು (ತೊರರಾ. ೬-೬-೬). [ಮೇ$_2$ (< ಮೇಲ್$_1$) + ಕಾವಲು (< ಕಾವಲ್$_1$)]

**ಮೇಗಾಹು** (ನಾ). ಮಿಗಿಲಾದ ಕಾವಲು ; ಭದ್ರವಾದ ರಕ್ಷಣೆ : ಬಟ್ಟಿದೇವನ ಮೇಗಾಹಿನ ಲೆಂಕ . . . ನಿಲಿಸಿದ ಕಲ್ಲು (ಮೈಆಂ. ೦೯೯೦, ೦೦-೫ ; 1194). [ಮೇ$_2$ (< ಮೇಲ್$_1$) + ಕಾಹು$_1$ (< ಕಾಪು)]

**ಮೇಗಾಳಿ** (ನಾ). ಮೇಲುಗಡೆಯ ದಿಕ್ಕಿನಿಂದ ಬೀಸುವ ಗಾಳಿ : ಬೇಟೆಯಾಡುವ ಮೃಗ ಅಥವಾ ಬೇಟೆಗಾರನಿರುವ ದಿಕ್ಕಿನಿಂದ ಬೇಟೆಗೆ ಗುರಿಯಾಗುವ ಪ್ರಾಣಿಯ ಕಡೆಗೆ ಬೀಸುವ ಗಾಳಿ : ಗೋರಿವೇಂಟೆಯ ನಾಡಿ ಭೂಪರಂ ತಿರುಗಿ ಕಾಂತಾರದೊಳು ಮೃಗವ ನೆಲೆಗೊಳಿಸಿ ಮೇಗಾಳಿಯಿಂ ದೂರದಿಂ ತೋಚಿತ್ತಸೊಡ್ಡಿ ಕಿಗ್ಗಾಳಿಯಿಂ ಬಂಡಿಯಿಂ ದಿಳುಹಿ ಹುಲಿಯ (ಹಕಶಾ. ೫-೩೦) ; ಹಿಡಿಂಬನೆಂಬವನು . . . ಮುರಿ ಮುರಿದು ಮೇಗಾಳಿಯಲಿ ಮೂಗರಳೆ ಮಾನವಗಂಧವಿದು ಗೋಚರಿಸಿತ್ತೆ ತ್ತಣದೋ ಮಹಾದೇವೆನುತ ಬೆಜಗಾದ (ಶುವ್ಯಾಆ. ೯-೧೦) ; ಬೇಟೆಯಾಡುವ ಮೃಗದ ಮೇಲಿಂದ ಬೇಟೆಗೆ ಗುರಿಯಾದ ಪ್ರಾಣಿಯ ಕಡೆಗೆ ಬೀಸುವ ಗಾಳಿಗೆ ಮೇಗಾಳಿಯೆಂದೂ ಪ್ರಾಣಿಯ ಕಡೆಯಿಂದ ಆ ಮೃಗದ ಕಡೆ ಬೀಸುವ ಗಾಳಿಗೆ ಕಿಗ್ಗಾಳಿಯೆಂದೂ ಹೆಸರು (ಸಂಭಾನಿ. ೨೦೫). 'ಕಿಗ್ಗಾಳಿ' ಪರಾ.

[ಮೇ$_2$ (< ಮೇಲ್$_1$) + ಗಾಳಿ$_1$]

**ಮೇಗು.** ಮೇಕು$_2$ (ನಾ). ೧. ಮೇಲುಭಾಗ ; ಮೇಲುಗಡೆ : ಆ ನಾಗಶರ್ಮಂ ರಾಗಿಸಿ ಮೇಗಂ ನೋಡಿ ತನ್ನೊಡನೆಯ ಬಡಪಾರ್ವರ್ಗಿಂತೆಂದಂ (ಪಂತಕಂ. ೦೯೬-೩) ; ಉರಗಂ ಕೊಂಡಲ್ಲಿಂ ನಾಲ್ವೆರಲನಿತಂ ಕಳೆದು ಕಟ್ಟಿ ಮೇಗಂ ಬೇಗಂ ಸೆರೆವಿಡುಗೆ ಸುಡುಗೆ . . . ನಿರ್ವಿಷಮಕ್ಕುಂ (ಕಾವ್ಯಾವ. ೨೬೮) ; ನೆರವಿಗರ್ಬಳಿಕ ಸುಮ್ಮಾನವೆ ಮೇಗ ನಿಟ್ಟಿಸುತ ಮಾನಿನಿಯಾಸ್ಯೇಂದುಮಂಡಲವನು ಕಂಡಾನಂದಪಿಡಿದು ನುಡಿವರು (ಕಂನವಿ. ೯-೮೯). ೨. ಮಿಗಿಲು : ಮೇಲು : ಉತ್ತಮ : ಜಗತ್ತ್ರಿತಯ ಗಳೊಳ್ ಜನಕ್ಕಾಗರಮಾದ ಬದ್ದೆಗನಾ ನರಸಿಂಹನಿನತ್ತ ನಾಲ್ವೆರಲ್ ಮೇಗು ಪೊದಟ್ಟ ಜಾಗದೊಳಮೊಂದಿದ ಬೀರದೊಳಂ ಗುಣಾರ್ಣವಂ (ಪಂಪಭಾ. ೧-೫೦) ; ಸಿರಿಯು ಸಾರ್ಕಗಮೂಮುಶಿಯಿರ್ಕೆಗಂ ಪೆಜರ್ ಮೇಗೆನಲಿಲ್ಲದಂತು ನೆಗಟ್ಟುರ್ದದಜಿಂ (ಪಾಂತಿಪು. ೦-೬೮) ; ಇದೆ ದಿವ್ಯಶ್ರೀ ವಿಲಾಸಾಲಯಮಿದೆ ಸುರಭೋಗೋಪಭೋಗಾಸ್ಪದಂ ಮತ್ತಿದಜಿಂ ಮೇಗಿಲ್ಲ ಕಲ್ಪಂ (ಸುಕುಮಾ. ೯-೨೭). ೩. ಘನತೆ ; ಹಿರಿಮೆ : ಗೌರವ : ದ್ರುಪದಂ ರಾಜ್ಯಮದಿರಾಮದೋನ್ಮತ್ತನುಂ ಗರ್ವಗ್ರಹವ್ಯಗ್ರಚಿತ್ತನುಮಾಗಿ ಮೇಗಿಲ್ಲದೆ . . . ನುಡಿದಂ (ಪಂಪಭಾ. ೨-೯೭ವ). ೪. ಒಳ್ಳೆಯದು : ಹಿತವಾದುದು : ಮೇಗಂ ಬಗೆವೊಡೆ ವಧೆ ಹಿತಮಾಗದು ಮರ್ತ್ಯಂಗೆ (ರಾಶೋಕ. ೩-೦೫) ; ಜ್ಞಾನವಪ್ಪಿಯ ಬಾಗು ಸಾರಾನೂನಭಕ್ತಿತ್ರಯದಾಗು ಸುಮಾನಸದ ಬ್ರತಿಗಳಿಗೆ ಲಾಗುವದನ್ನರಿಗೆ ಮೇಗು (ಬಸಪು. ೬-೯). ೫. ಆಡಂಬರ : ಡೌಲು ; ಒಣಜಂಭ : 'ಮೇಗುದೋಚು' ಪರಾ. ೬. ಮುಂದೆ ಆಗುವುದು.–ನಡೆಯುವುದು : 'ಮೇಗುಗಾಣ್' ಪರಾ. ೭. (?) : ದೀವದ ಬೇಂಟೆಯುಂ ಬಿನ್ನಪಂಗೆಯ್ವೊಡೆ ಗಾಳಿಯುಂ ಕಟುವುಮುಚ್ಚುವುಂ ಕಾಪುಂ ಮೇಪುಂ ತೋಡುಂ ಬೀಡುಂ ದೆಸೆಯುಂ ಕೊಸೆಯುಂ ಮೆಚ್ಚುಂ ಬೆಚ್ಚುಂ ಪೋಗುಂ ಮೇಗುಂ ಬೆದಜುಂ [ಕೆದಜುಂ] ಪೆರ್ಚುಂ ಕುಂದುಮುನ ಚಿದು (ಪಂಪಭಾ. ೫-೪೩ ವ). ಮೇಕು$_2$ : ೮. ಒನಪು ; ಬೆಡಗು ;

ಒಯ್ಯಾರ : ಅರಲಂಬನಂಗಡಿ ರತಿಯ ರಾಗದೋವರಿ ಪದಿರ ಪಾಳಯಂ ಮೇಕಿನಾಟಕೆ ಗಾಡಿಯ ಗಡಿ ಕುವರಿಯುಂಪರಿಯೆನಿಪುದಂಗಜನ ಘಾರಾಘಾರಿ ರಾಜಿಸುವ ಸೂಳೆಗೇರಿ (ಶಕ್ಮರಾ. ೯-೬೮). ೯. ಮೇಲಾಟ ; ಹುರುಡು ; ಪ್ರತಿಸ್ಪರ್ಧೆ : ಇವು ಇವನ ಹಿರಿಮೆಗೆ ತಕ್ಕುದಲ್ಲ. ಇದೆಲ್ಲ ಮಕ್ಕಳಾಟ, ಮಕ್ಕಳ ಮೇಕಿನಾಟ (ಶುಂಗಶ. ೦೦೩). ೧೦. ದ್ವೇಷ ; ಸೇಡು : ಆ ರೇವಕ್ಕನ ಮೇಕಿನ ಮೇಲೆ, ಆ ಮಾದನ ಮೇಕಿನ ಮೇಲೆ ಮದುವೆ ಮಾಡಿಕೋತೇನೆ (ಶಳುಮ. ೦೦೬).

**ಮೇಮೇಗು, ಮೇಗುಮೇಗು** (ದ್ವಿರುಕ್ತಿ) : ಮೇಮೇಗು, ಮೂಮೂಗು (ಶಬ್ದಾಮ. ೩೯೨ ಪ್ರಯೋ) ; ಮೇಗು ಮೇಗು—ಮೇಮೇಗು (ಕೃಬಿ. ೩೦). **ಮೇಕುಡಾಕು** = ಡೌಲು ; ಆಡಂಬರ : ಅಟವಾಸಿಯು ಮಾಗಿ ಬರುವ ಸಮನಂತರದಿ ಕೂಟಸಾಕ್ಷಿಯಲಿ ನೆತ್ರಗಳನಲ್ಲೆಂಬರತಿ ಮಿಡಾದ ಮೇಕುಡಾಕುಗಳ ತೋರ್ದಣಗಿವರು (ರಿಕ್ಕ್ ಶಾ. ೨-೩-೩೪). ಮೇಗಂ ತೋಱು = ಹೆಚ್ಚೆಂದು ತೋರ್ಪಡಿಸು ; ಮೇಲೆನಿಸು : ಮೇಗಂ ತೋಱದೆ ನಲ್ಮೆಯನಾಗಳುಮೊಲಿದಂತೆಮಾಡಿ ಸುರತೋತ್ಸವದೊಳು ರಾಗವುನೆ ಪಡೆದು ಗೆಯ್ವುದು ಬೇಗಂ . . . ಚದುರವಿಟಂ (ಮದಶಿ. ೯-೦೦). **ಮೇಗಣ್** = ಮೇಲಿನ ದಿಕ್ಕು ; ಮೇಲುಗಡೆ ; ಮೇಲುಭಾಗ : ಅನ್ತೆ ಬನ್ದು ಭಾಣಗಗೆಱೆಯ ಏರಿಯ ಮೇಗಣಂ (ಎಕ. IV, ಹಂಶಪ. ೦೩೬—೨೨ ; ೩೨೩ ?) ; ಅಡಿಯಂ ಮೇಗಣ್ಗೆತ್ತುವ ಕತುಗಾಳಿಯ ಪೊಯ್ಲೊಳಿದಱ ನೀರೊಗೆದವುದು (ಅಜಿಪು. ೦೩-೩೨) ; ಕಾಗೆ ಮರದ ಮೇಗಣ್ಗೆ ಪೋದುದು (ಕಂಶಕಂ. ೩೭೯-೬). **ಮೇಗಣ, ಮೇಗಳ** = ೧. ಮೇಲಿರುವ ; ಮೇಲಿನ : ಕರುಗೋಷ್ಠಿಯ ಪೊಲ ಮೇಲೆ ವಾಯವ್ಯದ ಮಿಡಿಯ ಮೇಗಣ . . . ಪುಣುಸೆಯಿನ್ದೆ ನಕ್ಕಿಕೊಣ್ಬೆಯನ್ದೆ (ಎಕ. X (8), ತಕ್ಕ್ವಿ. ೦೦೬-೬೮ ; 850) ; ಮೇಗಣ ನಾಲ್ಕುಜೊಳ್ಳಿದಱ ಮೇಗಣ ಭಾಗದೊಳಗುರ್ವ ಘರ್ಮಂ ಓಮ್ದಿಂದಾಗಳೆ ಮುರುಂಟುವರ್ (ಅಜಿಪು. ೩-೬೨) ; ಮುತ್ತು ಮಾಣಿಕ ನವರತ್ನ ತೆತ್ತಿಸಿದಂತಿಹ ಉಪ್ಪರಿಗೆ ಮೇಗಳ ಶಿವಾಲಯವ ಕಂಡು . . . ನಿಜಮುಕ್ತಳಾದೆನಯ್ಯ (ಉಂಗವ. ೪. ೭೭-೮೦) ; ಕುಚಯುಗಗಳವರಿ ಬಾಳರಕ್ತವನೀಂಟುವ ಜಿಗುಳೆಯೊಲಿರ್ಪ ತೋಳ ಮೇಗಳ ಸೀಳ್ಗ ಳೇನೇ (ಮೋಹತ. ೦೪-೬೭). ೨. ಹೊರಗಿನ ; ಬಾಹ್ಯದ : ರಾಗಿಸಿ ಸಮಯಿಗಳಂ ಕಂಡಾಗಳೆ ಸಂತುಷ್ಟಿ ಮಾಟ್ಟರಲ್ಲದೆ ಕೊರ್ಳಿಂ ಮೇಗಣ ಮಾತಂ ನುಡಿಯುರದೇಗೆಯ್ದುಂ (ಸಮಹ. ೪-೬೩). **ಮೇಗಳ್ವಣ** = ತೆರಿಗೆಯ ಮೇಲೆ ಕೊಡಬೇಕೆಂದು ಕೇಳುವ ಹೆಚ್ಚಿನ ಹಣ : ಅರ ಸರ್ಗ್ಗೆ ಸೇಸೆಯೆನ್ದ ರಸರ ಕಾಣಿಕೆಗಾಯ ಧರ್ಮಮುಪ್ಪಾದೆಱೆಯಂದರುವಣ ಮೇಗಳ್ವಣಮೆನ್ದರೆಗಾಣೆಯುನಕ್ಕಿ ಕೊಣ್ಣವರ್ಟಾಪ್ಪಾಳರ್ (ಸೌಇಇ. XI-ii, ೦೬೩-೬೦ ; 1113). [ ದೇ. ಶ ತಮಿ. ಮೇಕ್ಕು : ತುಳು. ಮೇಕ್ ]

**ಮೇಗುಗಾಣ್** (ಕ್ರಿ). ಮುಂದಾಗುವುದನ್ನು ಕಾಣು ; ಭವಿಷ್ಯವನ್ನು ತಿಳಿ : ಅರಸನೀತನ ಭಕ್ತಿಗಂ ವ್ಯವಸಾಯಕ್ಕಂ ಮೆಚ್ಚಿ ತನ್ನ ತಂದೆರ್ಮ ಗಳೊಳೊಂದುಮಂ ಕೊಳ್ಳದೆ ನೀನೆ ಕೊಳ್ಳೆಂದು ಕೊಟ್ಟೊಡಾ ದಯೆಗೆ ನಯಂ ಬಡೆದೆನೆಂದು ತಲೆಕೆಟಗಾಗಿ ಮೇಗುಗಾಣದೆ . . . ಚಂದ್ರಮತೀಮಹಾ ದೇವಿಯ ಕೀಲಾರದ ಧೇನುಗಳಂ ಸೂಱೆಗೊಳ್ವಂತೆ ಕೊಂಡುಪೋದೊಡೆ (ಶುಕುಪಪಾ. ೭-೩೩ ವ). [ ಮೇಗು + ಕಾಣ್ ]

**ಮೇಗುತಿ** (ನಾ). ಜೈನರ ಒಂದು ಬಸದಿಯ ಹೆಸರು : ಮೇಗುತಿ ಎಂಬ ಜೈನದೇವಾಲಯವು ಎರಡನೆ ಪುಲಿಕೇಶಿಯ ಕಾಲದಲ್ಲಿ (ಕ್ರಿ.ಶ. ೬೩೪) ನಿರ್ಮಿತವಾಯಿತು (ಭಾರದ. ೩೦೨) ; ಗ್ರಾಮದ ಪೂರ್ವಕ್ಕೆ ಸ್ವಲ್ಪ ಮೇಲ್ಭಾಗದಲ್ಲಿ ಮೇಗುತಿ ದೇವಾಲಯವಿದೆ. ಮೇಗುತಿ ಎನ್ನುವುದು ಮೇಗುಡಿ (ಮೇಲಿನ ಗುಡಿ) ಎಂಬುದರ ಅಪಭ್ರಂಶವೆಂದು ಹೇಳುತ್ತಾರೆ (ವೈವಾಸ್ತು. ೬೯). [ ? ]

**ಮೇಗುದೋಱ್** 'ಮೇಗುದೋಱು' ನೋ.

**ಮೇಗುದೋಱು, ಮೇಕುದೋಱ್, ಮೇಕುದೋಱು, ಮೇಗು ದೋಱ್** (ಕ್ರಿ). ೧. ಮೇಲಾಗಿ ಕಾಣುವಂತೆ ಮಾಡು ; ಹೆಚ್ಚೆಂದು ತೋರ್ಪಡಿಸು ; ಮೇಲೆನಿಸು : ರಾಜ್ಯಲಕ್ಷ್ಮಿಯಂ . . . ದುಸ್ಸಹ ಮಹಾಕಲುಷಕಲುಷಿತಸ್ವಭಾವೆಯೆಂದು ಪರಪುರುಷಕಂಠಗ್ರಹಾನುರಕ್ತಭಾವ ರಸಿಕೆಯೆಂದು ಮನದೊಳೇವಯಿಸಿ ಪುರುಡು ಪುಟ್ಟೆ ಮೇಗುದೋಱೆ ಸಪತಿ ಮಾಡುವಂತೆ . . . ಚಂದ್ರಿಕಾದೇವಿಗೆ . . . ಇತ್ತನಗ್ರಮಹಿಷೀಪದಮಂ (ಕುಕ್ಕಿ. ೦೩-೭ ವ). ೨. ಆಡಂಬರವನ್ನು ತೋರಿಸು ; ಡೌಲನ್ನು ಪ್ರದರ್ಶಿಸು : ಮೇಗುದೋಱುವಳ್ಳುಳ್ಳು ಪಣಂ ನೊಯ್ವರ್ಮೆಳ್ವೆಡಂ ನುಡಿವರ್ಥಿದ್ರುಮನೆ ಪಾರ್ವರ್ (ಮಿರಕಿ. ೦೦-೬೩). **ಮೇಕುದೋಱ್** : ೩. ಬೀಗು ; ಗರ್ವಿಸು : ಡಾಳನಂ ಸೆಗಪು ಟಕ್ಕಿಪನಂ ತುಱ ಮೇಕು [ಶಾಶಾಂ. ಗು]ದೋರ್ಪನಂ ಮಾಳಬೆಗಿಕ್ಕು (೦೬ಆವ. ೨-೦೮೬). ೪. ಒಯ್ಯಾರವನ್ನು ಮಾಡು ; ಬಿಂಕವಮಾಡು : ಕಾಡುವ ಬೇಡುವ ಮೇಕುದೋರ್ಪ . . . ಮನಂಗುಡದಿರ್ಪ ಕೈತವಂಗಳೊಳಿರುತಾಗಳುಂ ಹಳೆಯಮಿಲ್ಲದೆಯುಂ ನೆಱೆದಿರ್ದಳೋ ಇವಳ್ (ಶೃಂಗಾರ. ೩-೪೭). **ಮೇಕುದೋಱು** : ೨. ಅನೃತವಾದಿಯೊಳು ಮಾತಿನೊಳ್ಮೇಕುದೋಱುವ ನೊಳಾಡುವುವದು ನೀತಿಯಲ್ಲಱ ಬೆಲೆವೆಣ್ಗೆ (ಶುವಾಕಾಂ. ೨೮-೬೪) ; ಬೆಲೆವೆಣ್ಣೆ [ಣ್ಗೇ]ಯದ ಮೇಕುದೋಱುವವನಂ . . ಅವಗಂ ಒಲಿಯರ್ (ಪೀಶಶ. ೬-೦೦೯). ೪. ನೀಱರೊಡನೆ ಮೇಕುದೋಱೆ ಬೇಕಾದ ಭಂಗಾರ ಪಡೆವುದದೇಗೆಯ್ತು (ನಾಗಳು. ೩೦-೦೫೦). ೫. ಸ್ಪರ್ಧಿಸು ; ಪೈಪೋಟಿ ನಡೆಸು : ಮೇಕುದೋಱೆ ಒರೊರ್ವರ ಗುಣಕ್ಕೆ ಮಚ್ಚರಿಸಿ ತೋಱು ತ್ತಿರ್ಪರೀ ಕಾಲದರಸುಗಳ್ (ಕಂಶಕಂ. ೫೦-೦೩). **ಮೇಗುದೋಱ್** : ೬. ಮೋಸಮಾಡು ; ವಂಚಿಸು : ಬೆಸವರಿಗೆಯ್ದು ಬೇಸ[ಱ]ಸುವಿತ್ತುದ ನೆತ್ತುವ ಮೇಗುದೋರ್ಪ ಕಂಟಸುವ ಕನಲ್ದ ಕಡ್ಡಯಿಸುವೇಟೆದನಂ ತಿಳಿಪಲ್ ಮನಂಗೊಳಲ್ (ಕಾಂತಿಪು. ೯-೦೦೩). [ಮೇಗು + ತೋಱು]

**ಮೇಗುವೇಟ್** (ಕ್ರಿ). ಮೋಸದ ಮಾತನ್ನಾಡು : ಎನಗಂ ಮೇಗು ವೇಟ್ಟಪ್ಪೆಯಲ್ಲಾಪೊರ್ಡೆ ನಿನ್ನಂ ಕಾವ ಗಂಧರ್ವರೆ ಬಿಡಿಸುಗೆ ಪೋಗು (ಕಂಶಶಾ. ೮-೭೦). [ಮೇಗು + ಪೇಟ್]

**ಮೇಗುಸಿರ್** (ನಾ). ಏದುಬ್ಬಸ ; ಮೇಲುಸಿರು : 'ಮೇಗುಸಿರಿಡು', 'ಮೇಗುಸಿರ್ಗೊಳ್' ಪರಾ. [ಮೇಗು + ಉಸಿರ್$_2$]

**ಮೇಗುಸಿರಿಡು** (ಕ್ರಿ). ಮೇಲುಸಿರು ಬಿಡು ; ತೇಕು : ಮೇಗುಸಿರಿಡುಗುಂ ತಲೆಯಂ ಬಾಗುಗುಮಂಘ್ರಿಗಳು ನಡುಗಳುಂ ಕಂಪಿಸುಗುಂ (ಅಶ್ವಶಾ. ೦೦-೦೬) ; ಮೇಗುಸಿರಿಡುಗುಂ ತಲೆಯಂ ಬಾಗಿರ್ಪಂ ಮೇಯದಿರ್ಪಂ (ಅಶ್ವಶಾ. ೦೦-೩೩). [ಮೇಗುಸಿರ್ + ಇಡು$_1$]

**ಮೇಗುಸಿರ್ಗೊಳ್** (ಕ್ರಿ). = ಮೇಗುಸಿರಿಡು : ಬೇಗಮುಸಿರ್ ಮುಟ್ಟಗೆ ವರೆ ಮೇಗುಸಿರ್ಗೊಳ್ವರ್ಗೊರ್ವರ್ಗಗಿವೊಟ್ಟದೆ ಬಂದಾಗಳೆಱೆಗಿರ್ಪ ನಂದು ನಭೋಗತಿಯೊರ್ವಂ ನೃಪೇಂದ್ರಪದಸರಸಿಜದೊಳ್ (ಶಾಂತಿಪು. ೯-೬೩). [ಮೇಗುಸಿರ್ + ಕೊಳ್$_1$]

**ಮೇಗುಸಿರ್ವಡು** (ಕ್ರಿ). = ಮೇಗುಸಿರಿಡು : ಮೇಗುಸಿರ್ವಟ್ಟು ಸುಯ್ಯುತ್ತುಂ . . . ಬೇತಾಳನ ಬಸಿಱಿಂತೆ ಬೆನ್ನಂ ಪತ್ತಿದ ಬಸಿಱುಂಬೆರಸು ಬರ್ಪ ವೃದ್ಧ ತಾಪಸನಂ ಕಂಡು (ಕಂಶಕಂ. ೭೩-೬). [ಮೇಗುಸಿರ್ + ಪಡು$_1$]

**ಮೇಗುಸಿರ್ವಿಡು** (ಕ್ರಿ). = ಮೇಗುಸಿರಿಡು : ಪಂದೆಯಂ ಪಾವಡರ್ದಂತೆ ಮೇಗುಸಿರ್ವಿಟ್ಟು ಹಮ್ಮುದಂಬೋಗಿ (ಕಂಶಕಂ. ೪೭-೦೬). [ಮೇಗುಸಿರ್ + ಬಿಡು$_1$]

**ಮೇಗೆ** (ಅ). ೧. ಮೇಲಕ್ಕೆ ; ಮೇಲೆ : ನೆಲಕ್ಕೆ ವರುತಿರ್ಪ ವಿಮಾನಂ ಬಾರದೆಡೆಯಿಂದ ಮೇಗೆ ಮಗುಟ್ಟುದುಮಂ . . . ಕಂಡೆನೆಂದು (ವಡ್ಡಾರಾ.

೯೩-೨೪) ; ನಿಜಪಾದಾಂಬುರುಹಕ್ಕೆ ಪಾದ್ಯವಿಧಿಯಂ ನೇತ್ರಾಂಬುವಿಂ ಮಾಡುವಗ್ರಜನತ್ಯುನ್ನತಮಪ್ಪ ಮಸ್ತಕದ ಮೇಗೋರಂತೆ ಪಾಯ್ವತ್ತ ಬಾಷ್ಪಜಲೌಘಂಗಳಿಂ (ಅದಿಪು. ೧೪-೧೪೩) ; ಆ ಗಿರಿಯ ಮೇಗೆ ರಂಜಿಪುದತುಳವೀರಶೈವಾಗಮದ ಕೋಂಟೆಯಿಂದಮೃತದಗಳಿಂದೆ . . . ಪುಣ್ಯಂಗಳ ನಿವಾಸಮಘನಾಶಮಾ ಕೈಲಾಸವಾಸಂ (ಶಬಪು. ೨-೧೨). ೨. ಮತ್ತು ; ಅದರೊಂದಿಗೆ : ಇನ್ನು : ಮಡಗಿನ ಮಣ್ಣ ಮೇಗೆ ಒನ್ದು ಕೊಲಿಮೆಗೆ ಒರ್ಕಣ್ಡುಗ ಮಣ್ಣು (ಸೌಇಇ. IX-i, ೧೬-೧೭ ; 883). ೩. ಮುಂದಕ್ಕೆ; ಮುಂದೆ : ನಿಯಮಿತಕಾಲದುಪರಿತನ ಕಾಲದೊಳ್ ಸೋಕಪರ್ಯಾಹಾರಮುಂಟಪ್ಪುದರಿಂದಂ ಹಾರಕಂಗಳುಮಕ್ಕುಮಲ್ಲಿಂ ಮೇಗೆ ಯಥಾಗತಿ ಪರಿಣತ್ಯನುಸಾರಿಯಾಗಿ ಯೋಜಿಸಿಕೊಂಬುದು (ಶಸಾರ. ೧೦೪೭) ; ಪುರದಿಂ ಪಡುವಲು ತೊಱೆಯ ಕೂಡಿದ ಹಳ್ಳ ನೀರುವರಿವ ಮೇರೆಯಾಗಿ ಮೇಗೆ ಕಲುಕಟಗಗೆಱೆ ಬಸಪಗೋಡಿ ಬಡಗಲು ಮೊಸರಗುತ್ತಿವ ರಾರವಿಡಿ[ದು] ಮೂಡಲು ಜಂಭೆಗಲ್ಲ ಕಣಿ ಕುಚ್ಚಗೋಡಿಯಿಂ ಬಂದ ಹಳ್ಳ ನೀರುವರಿವ (ಎಇ. XXI, ೦೪-೭೮; 1260). ೪. ಬಳಿಕ; ಆಮೇಲೆ; ನಂತರ : ಮದುವೆ ಮಾಡಿದಾ ಮೇಗಾ ಸಂಡಗೆಯ ನೀಡಲಾಗದೆಂಬಮರ್ಯಾದೆಯರ್ (ಸಮಖ. ೦೨-೭೪); ಸ್ವಸ್ತಿಶ್ರೀ ಶಕಾಬ್ದ ೧೩೫೫ ಱ ಮೇಗೆ ಸಲುವ ಪ್ರಮಾದೀಚ ಸಂವತ್ಸರದ ವಯಿಶಾಖ ಶು ೧೩ (ಎಕ. IX (S). ಹೊಸಕೋ. ೦೪೪-೨ ; 1433); ಈತ ವೈರೋದ್ಯೋಗಗತಿಗೊಡರಿಸಿದನಾದೊಡೆ ಕಾಗೆ ಹದ್ದಿಗೆ ಹರಹುವೆನು ಕಡಿದೀ ಚತುರ್ಬಲವ ಮೇಗೆ ಬರಲಪಕೀರ್ತಿಯದಕೇನ್ನಿಗಲೆಣಿಕೆ (ಕೊರರಾ. ೨-೭-೦೯). ೫. ಎದುರಾಗಿ; ವಿರುದ್ಧವಾಗಿ : ವಿಭೀಷಣನ ಮೇಗಾಕ್ಷೇಪದಿಂ ಪೋಗಿ ವಸ್ತುಗಳಂ ಕಪ್ಪಮನಲ್ಲಿ ಕೊಣ್ಡು (ಎಕ. VII, ಶಿಕಾಂ. ೦೨೭-೩; 1036). [ < ಮೇಗು ]

**ಮೇಗೆಯ್** ' ಮೇಂಗೆಯ್ ' ನೋ.

**ಮೇಗೆರೆ** (ನಾ). ಮೇಲೆ ಎಳೆದ ಗೆರೆ,—ರೇಖೆ : ಮೂರ್ತಿಯು ಕಣ್ಮರೆಗಾದರು ಕೀರ್ತಿಯು ಕಣ್ಮರೆಯೋ ? ನೆನವಿನ ಹಿಮಗಿರಿ ಕೊರೆದಿದೆ ಒಲವಿನ ಮೇಗೆರೆಯೋ? (ಅರಳು. ೩೯೦-೨೦).

[ ಮೇ$_2$ ( < ಮೇಲ್$_1$ ) + ಗರೆ ( < ಗೆಱೆ ) ]

**ಮೇಗೈ** ' ಮೇಂಗೆಯ್ ' ನೋ.

**ಮೇಗೊಗೆ** (ಕ್ರಿ). ಮೇಲಕ್ಕೆ ನೆಗೆ, – ಹಾರು : ನಿಮ್ನನಾಭಿಮಂಡಳಮನೊಳಪೊಕ್ಕು . . . ಮೇಗೊಗೆದು ಬಟ್ಟಮೊಲೆಯುಬ್ಬಿಡೆಯೊಳ್ ಬಟ್ಟೆಗಾಣದೆ ಬಳಸಿ ಸುೞಿದಾಡಿಯುಂ ಸಾಯಂತನಸಮಯಸಮೀರಣಂ ಸೌಖ್ಯಸಾರಸರ್ವಸ್ವಮೆನಿಸಿದಾಗಳ್ (ಚಂಪ್ರಪು. ೬-೪೫) ; ಬೆಳೆದನಾ ವೈಕುರ್ವಣದಲರೆಗಳಿಗೆಯೊಳು ಮುಗಿಲುಚ್ಚಳಿಸಿ ಮಿಂಗಳೆ ತನಗೆ ಕಣ್ಕಾಲಗೆಜ್ಜೆಗಳೆನಿಸಿ ಮೇಗೊಗೆದು (ಶಾಳ್ವಭಾ. ೦೬-೨೮). [ ಮೇಗೆ + ಒಗೆ$_1$ ]

**ಮೇಗೋಲ್** (ನಾ). (ಕಬ್ಬಿನ) ಜಲ್ಲೆಯ ಮೇಲುಭಾಗ : ಆಗರದೊಳು ರಸದಾಳಿ ತೆಂಗಾಳಿಯಿಂ ತಾಗಲೊಂದಱೊಳೊಂದು ಹಳಚಿ ಮೇಗೋಲ್ಗಳೊಡೆದಿನಿರಸದ ಪರಿಯೊಳಿಕ್ಷುಸಾಗರ ತುಂಬಿದಂತಾಯ್ತು (ಮೋಹತ. ೨-೪೮).

[ ಮೇ$_2$ ( < ಮೇಲ್$_1$ ) + ಕೋಲ್$_1$ ]

**ಮೇಘ** (ನಾ). ೧. ಮೋಡ ; ಮುಗಿಲು: "ವಾರಿಧರಮಬ್ದಮಭ್ರಂ . . . ಜೀಮೂತಮೆನಲು ಮೇಘಕ್ಕೆ ನಾಮಂ" (ಮಂಗರಾ, ೧೩-೩); ಮೇಘಮುಖರೆನಿಸಿ ಸಂದುರಘೌಘದಿನಂದೋಘಮೇಘಮಾನೊಡೆ ಮಱೆ ಶೌರ್ಯಾಘಾತಂ ನೆಗೞೆ ಬಲವ್ಯಾಘಾತಂ ನಿನ್ನ ಪತಿಗಾದುದು ಪೇಸಿಯೇ (ಅದಿಪು. ೦೪-೭೧); ಆಲದಮರದಮೊಲೊಗೆದು ವಿಶಾಲತೆಯಿಂ ವರ್ತಿಪ್ಪ ಮೇಘದಿಂ ಮಱೆಯುಕ್ಕುಂ (ಅಟ್ಟಿಮ. ೬-೨೦); ಬೆಟ್ಟದ ಬುಡದಲ್ಲಿ ತರೆತೆರೆಯಾಗಿ ಹೊಯ್ದಾಡುತ್ತಿದ್ದ ಮೇಘಗಳು ಕ್ಷಣಕ್ಷಣಕ್ಕೂ ಹೆಚ್ಚು ಹೆಚ್ಚು ಕಪ್ಪಾಗುತ್ತಿದ್ದುವು (ಮಲೆಗಳ. ೩೦). ೨. ಗುಂಪು : ರಾಶಿ : ಮೊತ್ತ. ೩. ಪರಿಮಳಯುಕ್ತವಾದ ಒಂದು ಬಗೆಯ ಹುಲ್ಲು ; ಕೊನ್ನಾರಿ. ೪. ಒಂದು ಬಗೆಯ ಔಷಧದ್ರವ್ಯ; ಅಜಾಜಿ : "ಅಜಾಜಿ :–ಎಲೆಗಳ್ಳಿ, ಜೀರಿಗೆ, ಮೇಘ, ಓಮ" (೬ಕಂ. ೨). ೫. ಕಾಗೆಬಂಗಾರ ; ಅಭ್ರಕ. ೬. [ಸಂಗೀತ] ಒಂದು ರಾಗದ ಹೆಸರು : ತಾನು ಮೊದಲವು ಮುನ್ನವಪಱೊಳು ಗಾನವೊಪ್ಪುವ ದಂಡಿಗೆಯನವಧಾನಿಸುತ ಮಿಗೆ ಮೇಘ ಚಾಳವನೊಡನೆಯಾಳಾಪ . . . ಪೊಟ್ಟವಣಿ ಸಾರಣಮುಲಿರ್ದಿರಲು (ಬಸವು. ೦೯-೪). [ ಸಂ. ]

**ಮೇಘಕಾಲ** (ನಾ). ಮೋಡಗಳು ಮಳೆಯನ್ನು ಸುರಿಸುವ ಸಮಯ; ಮಳೆಗಾಲ ; ಇದಮೋಘಂ ಮೇಘಕಾಲಂ ಬರೆ ಗಗನಗೃಹದ್ವಾರದೊಳ್ ತೋರಣಂ ಕಟ್ಟಿದುದೋ . . . ಎಂಬಿನಂ ಕಣ್ಗೆಸೆದುದು ಶಬಲಚ್ಛಾಯೆಯಿಂ ಶಕ್ರಚಾಪಂ (ಶಂರಾವಿ. ೭-೦೪೩). [ ಸಂ. ]

**ಮೇಘಕುಸುಮ** (ನಾ). ಮೋಡದಿಂದ ಹುಟ್ಟುವಂಥದು ; ನೀರು : "ಅಂಭಸಮಂಬು ತೋಯಂ ಜಲಂ ಜೀವನಂ ಮೇಘಕುಸುಮಮುದಕಂ" (ಮಂಗರಾ. ೦೦೯-೦). [ ಸಂ. ]

**ಮೇಘಘಟೆ** (ನಾ). ಮೋಡಗಳ ಗುಂಪು,— ಸಮೂಹ : ಮಾರನಂ ಮುಟ್ಟಿದನಿಲ್ಲ ಮೇಘಘಟೆಯೊಳ್ಕಾಲೂರಿದನಿಲ್ಲಿಲ್ಲ ಭೂಧರಮಂ ದಾಂಟಿದನಿಲ್ಲ (ಅರ್ಜನೀ. ೬-೨೭). [ ಸಂ. ಮೇಘಘಟಾ ]

**ಮೇಘಚುಂಬಿ** (ಗು). ಗಗನವನ್ನು ತಾಕುವ; ಮುಗಿಲು ಮುಟ್ಟುವ : ರಾಯನಡಿದಾವರೆಗೆ ತನ್ನ ಹಣೆಮಣಿಯೊಡ್ಡಿ ತಲೆ ನಿಮಿರ್ದುದಾ ಮೇಘಚುಂಬಿಶೃಂಗೋತ್ತಮಂ (ಶ್ರೀರಾಮಾ. ೩೩೩-೩೪೪). [ ಸಂ. ಮೇಘಚುಂಬಿನ್ ]

**ಮೇಘಜ್ಯೋತಿ** (ನಾ). ಮುಗಿಲುಗಳ ಪರಸ್ಪರ ಘರ್ಷಣೆಯಿಂದುಂಟಾಗುವ ಬೆಳಕು ; ಮಿಂಚು ; ವಿದ್ಯುತ್ತು : "ಮೇಘಜ್ಯೋತಿಃ, ಇರಮ್ಮದಃ — ೨ ಮೇಘದೊಳಗಿರುವ ತೇಜಸ್ಸಿನ ಹೆಸರುಗಳು" (ಸಿದ್ಧಾಂತಿ. ೨೮). [ ಸಂ. ಮೇಘಜ್ಯೋತಿಸ್ ]

**ಮೇಘಡಂಬರ** (ನಾ). ೧. ಮೋಡಗಳ ಸಮೂಹ,– ಗುಂಪು. ೨. ಮೋಡಗಳ ಪರಸ್ಪರ ಘರ್ಷಣೆಯಿಂದುಂಟಾಗುವ ಧ್ವನಿ; ಗುಡುಗು : ಗಭೀರದುಂದುಭಿರವಂ ಮೊಳಗಂ ಮಿಗೆ ಮೇಘಡಂಬರಂ ಘಟಿಯಿಸೆ ಮೇಘಡಂಬರಮನೇಂ ಕಱೆದತ್ತೊ ವಿಭೀತಿಯೆಂಬ ಪರ್ಮಟಿಯಂ (ಚಂದ್ರಪು. ೦೦-೨೭). ೩. ಆತಪತ್ರ; ಕೊಡೆ; ಛತ್ರಿ : "ತಟ, ಕೊಡೆ, ಮೇಘಡಂಬರಂ — ಈ ೩ ಆತಪತ್ರಂ" (ಕಶಾ. ೭೦-೩೨೭); ತಲೆವಱಿದಾನೆ ಸುತ್ತಿ ಪಲವುಂ ಬರೆ ತಳ್ತಿರೆ ಮೇಘಡಂಬರಂ . . . ಬರ್ಪಲಘುಪರಾಕ್ರಮಂ ದಶರಥಂ (ಶಂರಾವಿ. ೫-೦೦೪); ಎತ್ತಿದ ಹೀಲಿಯ ಸತ್ತಿಗೆ ಮುತ್ತಿನ ಕೊಡೆ ಮೇಘಡಂಬರಂ ಗೆಲೆ . . . ಬರುತ್ತಿರ್ದುದು ಜನಕೆ ಪೆಂಡವಾಸದ ತಂಡಂ (ಜಗಿಪು. ೦೪-೫೨); ಎಳೆಮುತ್ತಿನ ಮೇಘಡಂಬರಂ ಬಗೆಗೊಳಿಕುಂ (ರಾಜಶೇ. ೬-೦೫). [ ಸಂ. ]

**ಮೇಘದ್ವಾರ** (ನಾ). ೧. ಆಕಾಶ; ಗಗನ : "ವಿಹಾಯಸಃ, ನಾಕಃ . . . ಮೇಘದ್ವಾರಂ, ಮಹಾಬಿಲಂ—೭ ಆಕಾಶದ ಹೆಸರುಗಳು" (ಸಿದ್ಧಾಂತಿ. ೨೭). ೨. ಸ್ವರ್ಗ. [ ಸಂ. ]

**ಮೇಘನಂದಿ** (ನಾ). ಒಬ್ಬ ಜೈನಯತಿಯ ಹೆಸರು : ಶ್ರೀ ಮೇಘನನ್ದಿಮುನಿ ಜ್ಞಾನ್ನಮಿಲಿಪೂರ್ವ್ವರಸಂಘದಾ × × × ತೀರ್ಥ್ಥದಿ ಸಿದ್ಧಿಯಾನ್ (ಎಕ. II. ೦೦೪-೮; ಕ್ರಿ. 700). [ ಸಂ. ಮೇಘನಂದಿನ್ ]

**ಮೇಘನಾದ** (ನಾ). ೧. = ಮೇಘಡಂಬರ ೨. ೨. ವರುಣನ ಹೆಸರುಗಳಲ್ಲಿ ಒಂದು. ೩. ರಾವಣನ ಮಗ ; ಇಂದ್ರಜಿತು. ೪. ಘಟೋತ್ಕಚನ ಮಗ : ಈ ಘಟೋತ್ಕಚನ ತನುಸಂಭವಂ ಬಡವನೇ ಮೇಘನಾದಂ (ಜೈಮಿಭಾ. ೦೨-೩೮). ೫. ಮುತ್ತುಗದ ಮರ, ಪಲಾಶ : ಸುರೂಪೆಯು ಪಾಣ್ಣೆಯು ಮೇಘನಾದ

ದಿಂದಿರೆಯು . . . ಕೇಡದಬ್ಬ್ವಿನ್ನೀವರನಭಿಧಾನವುಂ ತಳೆದ ಭೂರುಹಮೊಪ್ಪುಗುಂ (ರಾಜಶೇ. ೫-೫೬). ೬. ಒಂದು ಬಗೆಯ ಸಸ್ಯ. [ಸಂ.]

**ಮೇಘನಾದಿ** (ನಾ). ಒಂದು ಬಗೆಯ ಸೊಪ್ಪು ; ಕಿರುಕುಸಾಲೆ : "ಕಿಱುಕುಸಾಲೆಯುಂಪುದಕ್ಕುಂ ನಿರುತಂ ತಾಂ ಮೇಘನಾದಿ" (ಕರಿಕಂ. ೭೦). [ಸಂ. ಮೇಘನಾದಿನ್]

**ಮೇಘನಿನದ** (ನಾ). ೧. = ಮೇಘಡಂಬರ ೨ : ಪಱಿಗೋಪಾಲಪದಕ್ಕೆ ತೂರ್ಯಪಟುಘೋಷಂ . . . ಕಳಹಂಸಯೂಥಗಮನೋದ್ಯೋಗಕ್ಕೆ ಭೇರೀಗಭೀರರವಂ ತಾನೆನೆ ಸನ್ನ ಮೇಘನಿನದಂ ಪೊಣ್ಮಿತ್ತು ರೋದೋಂತದೊಳ್ (ಶಬ. ೯-೬). ೨. ಒಂದು ಬಗೆಯ ಸೊಪ್ಪು ; ಕಿರುಕುಸಾಲೆ : (?). [ಸಂ.]

**ಮೇಘನಿರ್ಘೋಷ** (ನಾ). = ಮೇಘಡಂಬರ ೨. [ಸಂ.]

**ಮೇಘನಿಸ್ವನ** (ನಾ). = ಮೇಘಡಂಬರ ೨ : ಪರೆವ ಕಱಂ ಮುಗಿಲ್ ಕರತಳಾಹತಿಯಿಂ ಪಱಿದೊಕ್ಕ ಮುಕ್ತಿಕಾಭರಣದ ಮುತ್ತುಮಾಲೆವರಲಾ ಸುಗಳಧ್ವನಿ ಮೇಘನಿಸ್ವನಂ (ಸೂಕ್ತಿಸು. ೦೦-೨೦೩).  [ಸಂ.]

**ಮೇಘಪರ್ವತ** (ನಾ). ಕುಲಪರ್ವತಗಳಲ್ಲಿ ಒಂದು : ಶಂಖಕೂಟ . . . ಮೇಘಪರ್ವತ ಹೇಮಪ್ರಭಾ ವರಾಹಗಿರಿ ಮಯೂರನಗ ಚಾರುಧಿಕ್ಕೆಲೇಂದ್ರವೆಂಬ ಹದಿನೇಳು ಕುಲಗೋತ್ರಂಗಳೇ ಪೂರ್ವೋಕ್ತ ಸುಪಾರ್ಶ್ವವೆಂಬ ಕೀಲಕಪರ್ವತಕ್ಕೆ ಬಡಗಣದಿಕ್ಕಿನಲಿಹವು (ವಿವೇಕ. ೦೬೩). [ಸಂ.]

**ಮೇಘಪಾಷಾಣ** (ನಾ). [ಜೈನ] ಮುನಿಗಳ ಒಂದು ವರ್ಗ : ಗಚ್ಛಗಳು : ಪೊಗು, ಪುಸ್ತಕ, ತಗರಿಗಲ್, ಸರಸ್ವತಿ . . . ಮೇಘಪಾಷಾಣ (ಕಶಾ. ೯೬). [?]

**ಮೇಘಪುಷ್ಪ** (ನಾ). ೧. = ಮೇಘಕುಸುಮ : "ಅಪಃ (ವ್), ತೋಯಂ, ಘನರಸಂ, ಪಯಃ, ಪುಷ್ಕರಂ, ಮೇಘಪುಷ್ಪಂ . . . ಜೀವನೀಯಂ — ಈ ೨೬ ನೀರ್" (ಹಲಾಯು. ೦೦೭-೨೬) ; ಹರಿಸದಿ ಮೇಘರಂಜಿಗೆ ಮೇಘಪುಷ್ಪವ ತೂರಿದ ಮೇಘದ ತೆಜನಾಯ್ತು (ಶ್ರೀಶಾಂ. ೫-೯೬). ೨. ವಿಷ್ಣುವಿನ ನಾಲ್ಕು ಕುದುರೆಗಳಲ್ಲಿ ಒಂದು : ಎಡಗಡೆಯಲ್ಲಿ ಕಟ್ಟಿರುವುದು ವೇಗದಲ್ಲಿ ಮೇಘಪುಷ್ಪವೆಂಬ ಕುದುರೆಗೆ ಸದೃಶವಾದದ್ದು (ಪಕಶಾ. ೨೦೬). [ಸಂ.]

**ಮೇಘಮಲ್ಲಾರ** 'ಮೇಘಮಲ್ಹಾರ' ನೋ.

**ಮೇಘಮಲ್ಹಾರ್** 'ಮೇಘಮಲ್ಹಾರ' ನೋ.

**ಮೇಘಮಲ್ಹಾರ.** ಮೇಘಮಲ್ಲಾರ. ಮೇಘಮಲ್ಹಾರ್ (ನಾ). [ಸಂಗೀತ] ಒಂದು ರಾಗದ ಹೆಸರು ; P ಈ ರಾಗವನ್ನು ಹಾಡಿದರೆ ಮಳೆ ಸುರಿಯುವುದೆಂಬ ನಂಬಿಕೆಯಿದೆ : ಸಮ್ಮಲ್ಲಿ . . . ಅಮೃತವರ್ಷಿಣಿ ಮತ್ತು ಮೇಘಮಲ್ಹಾರ ರಾಗಗಳು ಮಳೆ ಬರಿಸುವುದು ಮುಂತಾದ ಭಾವನೆಗಳೂ ಅದರ ಕಥೆಗಳೂ ಇವೆ (ಭಾರಕ. ೩೯೯). **ಮೇಘಮಲ್ಲಾರ** : ಮೇಘಮಲ್ಲಾರದಲ್ಲಿ ಜಗತ್ತಿನ ಎಲ್ಲ ಮಳೆಯ ಅಶ್ರುಪಾತಧ್ವನಿ ಸೇರಿ ಅದೇ ಒಂದು ನವತರ ಭಾಷೆಯಾಗುತ್ತದೆ (ಬಿಂಂಕ. I, ೨೬೦). **ಮೇಘಮಲ್ಹಾರ್** : ಮೇಘಮಲ್ಹಾರ್ ಹಾಡಿ ಮಳೆ ಬರುವಂತೆ . . . ಮಾಡಿದ ತಾನಸೇನರ ಕಥೆಗಳನ್ನು ಕೇಳದವರಿಲ್ಲ (ಸಂಗೀತಸಂ. ೨೦೩) ; ಮೇಘಮಲ್ಹಾರ್ ಅಂತ ಹಿಂದೂಸ್ಥಾನಿಯವರು ಹೇಳುವ ಒಂದು ರಾಗವನ್ನು ಕೆಲವು ದಿನದ ಹಿಂದೆ ನಾನು ಕೇಳಿದ್ದೇನೆ (ರೂಕಸ. ೫೪).
[←ಮರಾ. ಮೇಘಮಲ್ಹಾರ್. / ಸಂ. ಮೇಘಮಲ್ಲಾರಿಕಾ]

**ಮೇಘಮಾರ್ಗ** (ನಾ). ಆಕಾಶ : ನಾಕಜರನೆರ್ಲಂಬಿಡದದೇಂ ನಡೆಗೊಂಡರೊ ಮೇಘಮಾರ್ಗದೊಳ್ (ಜಗಖ. ೦-೯೦). [ಸಂ.]

**ಮೇಘರಂಜಿ** (ನಾ). [ಸಂಗೀತ] ಒಂದು ರಾಗದ ಹೆಸರು ; ಸರಸಪಿಕಾಲಾಪಿಯು ಸವಿವಾಡುಗೇಳ್ದರಲೇಜುಮದು ನವಮೋರು ಹರಿಸದಿ ಮೇಘರಂಜಿ[ಶ್ರೀಶಾಂ. ಪಿ]ಗೆ ಮೇಘಪುಷ್ಪವ ತೂರಿದ ಮೇಘದ ತೆಜನಾಯ್ತು (ಶ್ರೀಶಾಂ. ೫-೯೬) : ಮೇಘರಂಜಿಯನೊರ್ವನಾಲಾಪಿಸಿದರೆ ಸದಾಘಕಾಲದೊಳು ತತ್‌ಕ್ಷಣವೆ ಮೇಘ ಕವಿದು ಮಳೆಗಱೆವುತಿರಲು ಕಂಡು ಮೇಘರಂಜಿಯ ನಿಲಿಸಿದನು (ಭರತ. ೬೪-೬). [ಸಂ. ಮೇಘರಂಜೀ]

**ಮೇಘರಂಜಿನಿ** (ನಾ). = ಮೇಘರಂಜಿ : ಕೌಶಿಕಿ ವೇಳಾವಳಿ . . . ಮೇಘರಂಜಿನಿ [ಶಾಕಂ. ಮೇಘರಂಜಿ] . . . ಎಂಬ ಮೂವತ್ತುನಾಲ್ಕು ಭಾಷಾಂಗದಿಂದಾದ ರಾಗಂಗಳು (ವಿವೇಕ. ೦೬೬). [ಸಂ. ಮೇಘರಂಜಿನೀ]

**ಮೇಘಲೋಕ** (ನಾ). ಆಕಾಶ ; ಗಗನತಳ : ಸಂಧ್ಯಾಶಿಲ್ಪಿಯು ಸುವರ್ಣಯಕ್ಷಿಣಿ ಮೇಘಲೋಕಕೆ ಓಕುಳಿಯೆರಚಿದೆ (ಶಕ್ತಿಕಾ. ೬೬-೨). [ಸಂ.]

**ಮೇಘವಣ್ಣಿಗೆ** (ನಾ). ೧. = ಮೇಗವಣ್ಣಿಗೆ ೧. ೨. ಆಕಾಶಬಣ್ಣದ ಒಂದು ಬಗೆಯ ರೇಷ್ಮೆಬಟ್ಟೆ : ಅಲ್ಲಲ್ಲಿ ಕಟ್ಟಿದ ಪುಲ್ಲಿಯ ಪಟ್ಟೆಗಳ ಮೇಲೆ ಬಳಸಿದ ಮೇಘವಣ್ಣಿಗೆಯು ಚೌಕದ ವಿಳಾಸದ ಕಥಾಯಿಯ ಸುಚ್ಚಿಯನೀವ ಪಚ್ಚೆಯ ಪಟ್ಟೆಗಳ (ಗಂಕ. ೦೦-೨೮ ವ) ; ಪಳಿ ಪಟ್ಟೆ ಪುಲ್ಲಿ ಚೀನಾಂಬರ ದಸರಿಗಬ್ಬುಳಗಂಡಿ ಮೇಘವಣ್ಣಿಗೆಯು ತಲೆಯ ಮೇಲಲ್ಲಿರ್ಗೆ ಕಱಿದರು ವಸ್ತ್ರದ ಮಳೆ ತಾನೆ ಕಱಿದುದೆಂಬಂತೆ (ಭರತ. ೬೩-೦೦೩) ; ವಿಶಾಲವಾದ ಸ್ತಂಭಗಳ ನಡುವೆ ಮೇಘವಣ್ಣಿಗೆಯ ಮೇಲುಕಟ್ಟು, ಚೌಕವಿಲಾಸದ ಕಡೆಗಟ್ಟು . . . ನೇತ್ರಾವಳಿ, ರತ್ನಾವಳಿಗಳಿಂದ ಮಂಟಪ ಸುಂದರವಾಗಿ ರಾರಾಜಿಸುತ್ತಿತ್ತು (ಗಂಸ. ೦೨೩).
[ಮೇಘ + ಬಣ್ಣಿಗೆ$_1$. / ತೆಲು. ಮೇಘವನ್ನೆ]

**ಮೇಘವರ್ಣ** (ನಾ). ಮುಗಿಲಿನ ಬಣ್ಣ ; ಬೂದುಬಣ್ಣ. [ಸಂ.]

**ಮೇಘವಹ್ನಿ** (ನಾ). ಮುಗಿಲುಗಳ ಪರಸ್ಪರ ಘರ್ಷಣೆಯಿಂದ ಭೂಮಿಗೆ ಇಳಿಯುವ ವಿದ್ಯುತ್ಪ್ರವಾಹ ; ಸಿಡಿಲು ; ಅಶನಿ : "ಮೇಘವಹ್ನಿಃ, ಇರಮ್ಮದಃ — ಈ ೨ ಮುಗಿಲ ಕಿಚ್ಚು" (ಹಲಾಯು. ೦೩-೭೦) ; ಮೇಘವಹ್ನಿ ಧರೆಗೆಱಗುತ್ತ ಲೋಕವ ಬೆಸಗೊಂಡಿತ್ತೆ (ಅಪತಂ. ೨೪೭-೦೦೨೪). [ಸಂ.]

**ಮೇಘವಾಹನ** (ನಾ). ೧. ಮುಗಿಲನ್ನು ವಾಹನವಾಗಿ ಉಳ್ಳವನು : ಇಂದ್ರ : "ಇಂದ್ರಃ . . . ಮರುತ್ವಾನ್, ಮೇಘವಾಹನಃ — ಈ ೩೯ ದೇವೇಂದ್ರನ ಪೆಸರ್" (ಹಲಾಯು. ೦೦-೫೩) : ಸ್ವಸ್ತಿಸಮಸ್ತಜಗದ್ವಿನಮಿತವೀರ್ಯ್ಯರುಂ ಭೂದೇವಿಲಬ್ಧವರಪ್ರಸಾದರುಂ ಮೇಘವಾಹನಪ್ರಸಾದಜನಿತಜೀಪನರು . . . ಎಂಭತ್ತನಾಲ್ಕುಲಕ್ಷ್ಮಿಯೋನಿಮುಖಜೀವಕ್ಕಾದರರುಂ ಎಲ್ಲಾ ಸಮಯುಕ್ತ್ಯುತ್ತವರ್ಮಸಿಯಿಸಿಪನುಂ (ಎಕ. IV (R), ಶಾಸನ. ೨೩೬-೦೦ ; 1289). ೨. ಶಿವ ; ಈಶ್ವರ. [ಸಂ.]

**ಮೇಘವಿಸ್ಫೂರ್ಜಿತ** (ನಾ). ೧. = ಮೇಘಡಂಬರ ೨. ೨. [ಛಂದ] ಅಕ್ಷರ ಛಂದಸ್ಸಿನಲ್ಲಿ ಪ್ರಸಿದ್ಧವಾದ ಇಪ್ಪತ್ತಾರು ಬಗೆಯ ಛಂದಸ್ಸುಗಳಲ್ಲಿ ಹತ್ತೊಂಬತ್ತನೆಯದಾದ, ಅತಿಧೃತಿಯೆಂಬ ಛಂದಸ್ಸಿನ ಒಂದು ವೃತ್ತ : ವಸಕ್ಕಾನಾಕೇಂದ್ರಂ ಹುತವಹಸಮಂ ವಹ್ನಿಯುಗ್ಮಂ . . . ಜನಪ್ಯಾತಂ ನೂತ್ನಂ ಬುಧಜನಹಿತಂ ಮೇಘವಿಸ್ಫೂರ್ಜಿತಾಖ್ಯಂ (ಛಂದೋಂಬು. ೩-೦೭೨). [ಸಂ.]

**ಮೇಘಶಿಖಾವಹ** (ನಾ). = ಮೇಘವಹ್ನಿ : ಗಜದಜಿನಂ ಮುಗಿಲ್ ಗಜಱಿ ಗರ್ಜಿಪ ರುಂಡಕದಂಬ ಘೋಷಂ . . . ಭಾಲಶಿಖಿ ಮೇಘಶಿಖಾವಹನಾಗೆ ನರ್ತಿಪಂ ಗಜಱಿಪವೊಲ್ ಘನಾಗಮಮುಮದೇಂ ಬಗೆಗೊಂಡುದೊ ನೋಟಕರ್ಗಳಾ (ರಾಜಶೇ. ೬-೦೦೭). [ಸಂ.]

**ಮೇಘಶ್ಯಾಮಳ** (ಗು). ಮೋಡದಂತೆ ನೀಲಮಿಶ್ರಿತ ಕಪ್ಪಾಗಿರುವ : ಶ್ಯಾಮವರ್ಣದ : ಮೇಘಶ್ಯಾಮಳಾಂಗಂ ತ್ರಿಭಂಗದಿನಿಂಬಾಗಿರೆ . . . ತಾನಾಗಳಾಡಿದಳ್ . . . ಕನ್ನೆ ರೋದೋಂತದೊಳ್ (ಜಗಖ. ೭-೦೭).
[ಸಂ. ಮೇಘಶ್ಯಾಮಲ]

**ಮೇಘಾಗಮ** (ನಾ). ಮೋಡಗಳು ಮಳೆಯನ್ನು ಸುರಿಸುವ ಕಾಲ ; ಮಳೆಗಾಲ : ಉದ್ದಾಮನಿದಾಘಮಂ ಬಿದಱಿ ಬೆಂಕೊಂಡತ್ತು ಮೇಘಾಗಮಂ (ಕಾದಂಬ. ೫೪೦); ನಿದಾಘಘೂಪನ ಪಿಡಿದು ಪೆಕ್ಕಳಿಸಿದನು ಮೇಘಾಗಮಮಹೀಪಾಲ (ತೊರವೆ. ೪-೬-೪). [ಸಂ.]

**ಮೇಘಾಧ್ವ** (ನಾ). ಆಕಾಶಮಾರ್ಗ ; ಗಗನ : ಮೇಘಾಧ್ವದೆ ಪರಬಲಶಬಲೌಘದ ಭಟಕೋಟಿ ಕಱಿವ ಶಸ್ತ್ರಾಸ್ತ್ರಚಯಂ ಜ್ಯಾಘಾತಜಾತ ಪವನವ್ಯಾಘಾತದೆ ಮಸುಳಲಸುರಪರನಿಸುತಿರ್ದಂ (ಜಗ. ೦೬-೬೪).
[ಸಂ. ಮೇಘಾಧ್ವನ್]

**ಮೇಘೇಶ್ವರ** (ನಾ). ಮುಗಿಲುಗಳ ಒಡೆಯ ; ಇಂದ್ರ : ಜಯನ ಭುಜವಿಜಯಸೂಚಕವಾಗಿ ಮೇಘನಾದಸಮಾನವಾದ ಸಿಂಹನಾದಕ್ಕೆ ಚಕ್ರವರ್ತಿ ಮೆಚ್ಚಿ ಮೇಘೇಶ್ವರ [ಪಾಠಾಂ. ಮೇಘಸ್ವರ]ನಾಮಮಂ ವೀರಾಗ್ರಗಣ್ಯಪದವಿಯಂ ದಯೆಗೆಯ್ದು (ಆದಿಪು. ೦೩-೬೭ ವ). [ಸಂ.]

**ಮೇಚಕ** (ಗು). ೧. ಕಡುನೀಲಿ ಬಣ್ಣದ ; ದಟ್ಟನೀಲಿಯ ಬಣ್ಣದ. ೨. ಕಪ್ಪು ಬಣ್ಣದ ; ಕರಿಯ : ಆ ವಿಕಚಮೇಚಕೋತ್ಪಲಲೋಚನೆಯರೊಳಾ ವಿಮುಕುಲಕಮಲದಲವಿಲೋಲಲೋಚನಂ . . . ನೆರೆದಿರೆ (ಆದಿಪು. ೬-೨೩ ವ); ಭೃಂಗಚಯಕ್ಕೆ ಮೇಚಕೋದಂಚಿತ ದರ್ಪಮುಬ್ಬರಿಸದಿರ್ಕೆ (ಚಂದ್ರಪು. ೭-೬೬); ಮುರಿದ ಮೀಸೆಯ ಮೇಚಕಾದ್ರಿಯ ಸರಿಸದವನವನೀಗ ಮುಂಡೋದರಿಯ ಮಗನು (ತೊರವೆ. ೬-೪-೬). (ನಾ). ೩. ಕಡುನೀಲಿಬಣ್ಣ ; ದಟ್ಟವಾದ ನೀಲವರ್ಣ : ನಾಚಿ ನೇಱಲಘಲ ಮೇಚಕವಾಗಲು (ಕರಿಷಾ. ೩-೨೪). ೪. ಕಪ್ಪುಬಣ್ಣ : "ಅಸಿತಂ, ಶಿತಿಃ, ಕೃಷ್ಣಂ, ಕಾಳಂ, ನೀಳಂ, ಮೇಚಕಂ_ಈ ೬ ಕರಿದು " (ಕರ್ಣಾಟಶ. ೦೨೦-೯೪); ಘೋರಾಂಧಕಾರಕ್ಕೆ ಮಾಡಿದ ಕೂಪಂ . . . ತಾನೆ ದಲೆಂಬಂತಿರೆ ಕಾಚಮೇಚಕಚಯಚ್ಛಾಯಾಂಬುವಿಂ ಗುಣ್ಪಿನಿಂ ಪುದಿದಿರ್ದತ್ತು ಸರೋವರಂ (ಶಂಕರಾ. ೦೩-೬೨); ತೊಲಗೆ ರಜಂ ತಮಮದು ಪೊಜತೊಲಗುವಂತೆಸೆಯೆ ಮೇಚಕಂ ಚೂಚಕಂ (ರಾಜಶೇ. ೪-೩೩). ೫. ದಟ್ಟವಾದ ಹಸುರುಬಣ್ಣ : ಮಂಗಳಮಾಗಳ್ಕೆ ನೆಲಸಿದಾ ಜಿನಗೇಹದ ಪಂಚರತ್ನಕೂಟಂಗಳ ತಳ್ತ ಮೇಚಕಮರೀಚಿಲತಾಳಿಯ ಪರ್ವಿನಿಂ ನಭೋರಂಗಮದೊಪ್ಪಿ ತೋಱಿದುದು (ಲೀಲಾವ. ೮-೬೭). ೬. ನವಿಲು ಗರಿಯಲ್ಲಿರುವ ಕಣ್ಣು ; ಚಂದ್ರಕ : " ಚಂದ್ರಕಃ, ಮೇಚಕಃ _ಈ ೨ ಪೀಲಿಯ ಕಣ್ಣು " (ಕರ್ಣಾಟಶ. ೧೦-೬೪); ಆ ಪುರುಷಕೇಕಿ ಬರ್ಹಿಣಿಯ ಸಮ್ಮುಖದಿ ಬಿರ್ಚಿತ ಕಲಾಪಮೇಚಕಸಹಸ್ರಂಗಳಂ ರಚಿಸಲುಗೆಯ್ದ ಪುದು ಪ್ರಣಯಮಯನರ್ತನದಿ ದೇವಪ್ಸರಲಾಸ್ಯಮಯನಂದನೋದ್ಯಾನಮಂ (ಚಿತ್ರಾಂಗ. ೩೪-೦೪೬೭). ೭. ಮೋಡ ; ಮುಗಿಲು. ೮. ಕತ್ತಲೆ ; ಅಂಧಕಾರ. ೯. ಕೃಷ್ಣಪಕ್ಷ : ಮೇಚಕಚತುರ್ದಶಿಯ ರಾತ್ರಿಯಲಿ ಮತ್ತಮಾ ಮೇಚಕಾಷ್ಟಮಿಯ ರಾತ್ರಿಯಲಾರ್ದ್ರೆಯಲ್ಲಿ ಬಿಡದಾಚರಿಸಿಯುಕ್ಷತೆಯುತ್ಸರ್ಗ ಸಲ್ಕಧಿಕ ಫಲಂ (ಚಕುಪು. ೬-೪-೩೯). [ಸಂ.]

**ಮೇಚಕತೆ** (ನಾ). ಕಪ್ಪುಬಣ್ಣ : ತದ್ವನಿತೆಯ ಹೃದಯದ ಕಾಳಿಕೆಯೆನೆ ಸೊಗಯಿಸಿದತ್ತು ಮೇಚಕತೆ ಚೂಚುಕದೊಳ್ (ಚಂದ್ರಪು. ೩-೬೭). [ಸಂ.]

**ಮೇಚಕಿತ** (ಗು). ೧. ಕಡುನೀಲಿಯ ಬಣ್ಣದ ; ದಟ್ಟವಾದ ನೀಲವರ್ಣದಿಂದ ಕೂಡಿದ : ಉತ್ತುಂಗಮಣಿವಿಭೂಷಣಮರೀಚಿಮೇಚಕಿತದೇವಾಂಗನಾನಿಕಾಯಸಮೇತನೀಶಾನ ಕಲ್ಪದಕೃತ್ರಿಮಚೈತ್ಯಾಲಯಂಗಳಂ ಅರ್ಚಿಸಿ (ಆದಿಪು. ೨-೬೯ ವ); ಬಿಸ್ಸಿಟ್ಟರೋ ಮುಗಿಲೆನೆ ದಂತಿದಾನರಸಮೇಚಕಿತಾಂಬುಸರಂ ವಿರಾಜಿಕುಂ (ಚಂಶಂ. ೨-೫೦). (ನಾ). ೨. ಕಪ್ಪು ಮಿಶ್ರಿತವಾದ ನೀಲಿಯ ಬಣ್ಣ : ಪಕ್ಷಿಸ್ಥಿತೋಭಯಕುಲಶುದ್ಧನೃಪತಿಮಣಿಮಕುಟಮರೀಚಿಮೇಚಕಿತಮುಮಪ್ಪ ಸಂಗ್ರಾಮಭೂಮಿಯ ನಡುವೆ (ಶಂಕರಾ. ೦೩-೫೫ ವ). [ಸಂ.]

**ಮೇಚಣಿಗೆ** (ನಾ). (ಕರಾ) ಗರ್ಭಿಣಿಯಾದ ಹೆಂಗಸಿಗೆ, ಆರಂಭದಲ್ಲಿ ಬೆಳಗಿನ ಹೊತ್ತು ಉಂಟಾಗುವ ಓಕರಿಕೆ, ಅರುಚಿ ಮೊದಲಾದುವು.
[ ? ]

**ಮೇಚು** (ನಾ). ಒಂದು ಬಗೆಯ ತಂತಿ (?) : ನಾರ ಸೀರೆಯನುಟ್ಟು ನಲಿದು ಕಿನ್ನರಿಗಳ ತೋರಮೊಲೆಗಳ ಮೇಲಿಟ್ಟು ಸೇರಿಸಿ ತಂತ್ರಿಯ ಸಂಚಿನಿಂ ಮೇಚನು ಬಾರಿಸುತಸೆಯೆ ಭಾವೆಯರು (ಜೀವಂಧರಾ. ೨೦-೦೩). [ ? ]

**ಮೇಜ** ' ಮೇಜು ' ನೋ.

**ಮೇಜರ್** ' ಮೇಜರು ' ನೋ.

**ಮೇಜರು, ಮೇಜರ್** (ನಾ). ೧. ಸೈನ್ಯದಲ್ಲಿ ಕ್ಯಾಪ್ಟನ್ ಹುದ್ದೆಗೆ ಮೇಲ್ಪಟ್ಟ ಮತ್ತು ಲೆಫ್ಟಿನೆಂಟ್ ಕರ್ನಲ್ ಹುದ್ದೆಗೆ ಕೆಳಗಿನ ಹುದ್ದೆಯಲ್ಲಿರುವ ಒಬ್ಬ ದೊಡ್ಡ ಅಧಿಕಾರಿ : ಸಾಮಾನ್ಯ ಯೋಧನಾಗಿದ್ದ ಅವನು ಇಂದು ಮೇಜರು ಹುದ್ದೆಗೆ ಬಂದಿದ್ದಾನೆ (ರೂಢಿ). **ಮೇಜರ್ :** ೧. ನೀನು ಕುಡಿದು ಕುಡಿದು, ಇನ್ನೂ ಯೋಧನಾಗೇ ಉಳಿದಿದ್ದೀಯೆ ನೋಡು, ನಾನಾಗಲೇ ಮೇಜರ್ ಆಗಿದ್ದೇನೆ (ಪಾಠಗ. ೪೦). ೨. ಕಾನೂನಿನ ಗಣನೆಗೆ ಬರುವ ವಯಸ್ಸಿನ (ಹದಿನೆಂಟು ವರ್ಷಗಳಿಗೆ ಮೇಲ್ಪಟ್ಟ) ವ್ಯಕ್ತಿ : ಅವರ ಮಗ ಮೇಜರ್ ಆಗಿರುವುದರಿಂದ ಅವನ ಒಪ್ಪಿಗೆಯಿಲ್ಲದೆ ಪಿತ್ರಾರ್ಜಿತ ಆಸ್ತಿಯನ್ನು ಮಾರುವಂತಿಲ್ಲ (ರೂಢಿ). [←ಇಂ. Major]

**ಮೇಜವಾಣಿ** ' ಮೇಜವಾನಿ ' ನೋ.

**ಮೇಜವಾನಿ, ಮೇಜವಾಣಿ, ಮೇಜುವಾನಿ** (ನಾ). ಸತ್ಕಾರ ; ಆತಿಥ್ಯ ; ಔತಣಕೂಟ : ಒಂದು ದಿನ ಆ ಗೃಹಸ್ಥನು ತನ್ನ ಸ್ನೇಹಿತನಲ್ಲಿ ಮೇಜವಾನಿಗೆ ಹೋದಾಗ . . . ಪ್ರಬಲವಾದ ಅಜೀರ್ಣವಿಕಾರವಾಯಿತು (ಮುಂಬಯಿ. ೪-೦೦೬); ಎರಡು ಮೂರು ದಿವಸ ತನಕ ಮೇಜವಾನೀ ಸಮಾರಂಭವು ನಡೆಯಿತು (ಮುಂಜುಶ. ೪೬). **ಮೇಜವಾಣಿ :** ಸಂತೇಮರಹಳ್ಳಿಯಲ್ಲಿ ಚಾಮರಾಜನಗರ ಜಮಾಬಂದಿ ಮುಗಿಸಿದ ಮೇಜವಾಣಿಯಾದ್ದಕ್ಕೆ . . . ನಾನೂ ಹೋಗಿದ್ದೆ (ಕಲಿಸ. ೩೩೭). **ಮೇಜುವಾನಿ :** ಕುರೀರದ ದನಕರುಗಳಿಗೂ ಅಕ್ಕೀ ಸಕ್ಕರೆಯ ಮೇಜುವಾನಿ ಮಾಡುವಂತೆ ಸಾಹೇಬರು ಅನುಗ್ರಹಿಸಿದರಲ್ಲಾ ಎಂಬ ಒಂದು ಕಡೆ . . . ಸಂತಸವಾದರೆ ಇನ್ನೊಂದು ಕಡೆ ತಡೆಯಲಾರದ ನಗು (ಚಕಿಕ. ೪೬); ದೊಡ್ಡ ಬೆಟ್ಟದ ಚಹವೋ ? . . . ಬಿದ್ದಣ ? ಮೇಜುವಾನಿ ? (ಶಂಕಪ. ೬೯-೦೨).

[←ಪಾರ. ಮೇಜಬಾನೀ, ಮೇಹ್ಮಾನೀ; ಹಿಂ. ಮೇಜಬಾನೀ ; ಮರಾ. ಮೇಜಬಾನೀ, ಮೇಜವಾನೀ]

**ಮೇಜಿಟ್ಟಿಗೆ** (ನಾ). ಆಕಾರವನ್ನು ನಿಷ್ಕೃಷ್ಟವಾಗಿಡಲು ಮೇಜಿನ ಮೇಲಿಟ್ಟು ತಯಾರಿಸುವ ಇಟ್ಟಿಗೆ : ಒಳ್ಳೆಯ ಇಟ್ಟಿಗೆಗಳನ್ನು ಮೇಜಿನ ಮೇಲೆ ತಯಾರಿಸುತ್ತಾರೆ . . . ಮೇಜಿಟ್ಟಿಗೆಗಳನ್ನು ಚೌಕಟ್ಟುಗಳ ಮೇಲೆ ಬಿಸಿಲಿನಲ್ಲಿ ಒಣಗಿಸುತ್ತಾರೆ (ಶಿಲ್ಪ ಪಾ. ೨೬೦).

[ ಮೇಜು + ಇಟ್ಟಿಗೆ (< ಇಟ್ಟಿಗೆ₁) ]

**ಮೇಜು, ಮೇಜ** (ನಾ). ೧. ನಾಲ್ಕುಕಾಲುಗಳು ಮತ್ತು ಮೇಲೆ ಚಪ್ಪಟೆಯಾದ ಹಲಗೆ ಇದ್ದು, ಓದುವುದು, ಬರೆಯುವುದು ಮುಂತಾದ ಕೆಲಸಗಳಿಗೆ ಉಪಯೋಗಿಸುವ ಮರ, ಲೋಹ ಮುಂತಾದವುಗಳಿಂದ ಮಾಡಿದ ಉಪಕರಣ : ಮಂಚ ಖುರ್ಚಿ ಮೇಜು ಪೆಟ್ಟಿಗೆ ಮೊದಲಾದ ಸಾಮಾನುಗಳನ್ನು ನೋಡಿರಿ (ಕೃಷಿಶ್ರ. ೨೬೩) ; ಸಂಜೆಯಾದ ಬಳಿಕ ಮೇಜಿನ ಬಳಿ ಕುಳಿತು ಕೆಲಸಮಾಡುವುದು ಅಶಕ್ಯವಾಗುತ್ತದೆ (ಪಂಚರು. ೪೩). ೨. ಇಸ್ಪೀಟು, ಜೂಜು ಮೊದಲಾದುವುಗಳಲ್ಲಿ ಮೇಜಿನ ಮೇಲೆ ಪಂದ್ಯವಾಗಿಡುವ ಹಣ ; ಒಡ್ಡು ; ಪಣ : ಅವನು ದಿನದಿನಕ್ಕೆ ಮೇಜು ಹೆಚ್ಚಿಸುತ್ತ ಹೋಗುತ್ತಾನೆ (ಶಾಯಿಕ. ೪೦). **ಮೇಜ :** ೧. ನಾವು ಸಾಮಾನ್ಯಜ್ಞಾನದಿಂದ ಮೇಜ

ಒಂದು ವಸ್ತು ಮರ ಒಂದು ಪದಾರ್ಥ ಎಂದು ಅವುಗಳು ಅನೇಕ ಭಾಗ ದಿಂದ ಆಗಿದ್ದಾಗ್ಲೂ ಹೇಳಬಹುದು (ತತ್ವಶಾ. ೦೯೪); ಆಚಾರ್ಯರ ಸೂಚನೆಯಂತೆ ತಿನಸುಗಳ ತಟ್ಟೆಗಳೂ, ಕಾಫಿಯ ಕಪ್ಪುಗಳೂ ಬಂದು ನಮ್ಮ ಮುಂದಿನ ಮೇಜವನ್ನು ಅಲಂಕರಿಸಿದುವು (ಕಾಲಚಕ್ರ. ೦೦).

[ ←ಪಾರ. ಹಿಂ. ಮರಾ. ಮೇಜ್ ]

**ಮೇಜುಕಟ್ಟು₁** (ಕ್ರಿ). ಜೂಜಿನ ಮೇಜಿನ ಮೇಲೆ ಪಣವಾಗಿ ಹಣವನ್ನು ಒಡ್ಡು ; ಪಂದ್ಯಕಟ್ಟು : (೬). [ ಮೇಜು + ಕಟ್ಟು₁ ]

**ಮೇಜುಕಟ್ಟು₂** (ನಾ). ಗೋಡೆಯ ಕೆಳಭಾಗದಲ್ಲಿ ಮೇಲುಗೋಡೆಗಿಂತ ಸ್ವಲ್ಪ ಉಬ್ಬಿರುವಂತೆ ಕಟ್ಟಿರುವ ಭಾಗ : "ಗೋಡೆಯ ತಳದಿಂದ ಸ್ವಲ್ಪ ಎತ್ತರದವರೆಗೂ ಹಲಗೆ ಸೇರುವೆಯಿಂದಲೊ, ಮೇಲ್ಭಾಗದಂತಲ್ಲದೆ ಬೇರೆ ಬಣ್ಣ ಹಾಕಿರುವುದರಿಂದಲೊ, ಅಳವಡಿಸಿರುವ ಗೋಡೆಯ ಅಡಿಭಾಗ ಮೇಜುಕಟ್ಟು" (Dado. ೩೦೫೬). [ ಮೇಜು + ಕಟ್ಟು₂ ]

**ಮೇಜುವಾನಿ** 'ಮೇಜವಾನಿ' ನೋ.

**ಮೇಟ** 'ಮೇಂಟಿ' ನೋ.

**ಮೇಟಿಕಂಬ** 'ಮೇಟಿಕಂಭ' ನೋ.

**ಮೇಟಿಕಂಭ, ಮೇಟಿಕಂಬ** (ನಾ). ಧಾನ್ಯವನ್ನು ಒಕ್ಕುವ ಅಂಗಳದ ಅಥವಾ ಕಣದ ನಡುವೆ ಎತ್ತುಗಳನ್ನು ಕಟ್ಟಿ ತುಳಿಸಲು ಅನುಕೂಲ ವಾಗುವಂತೆ ನಟ್ಟ ಕಂಬ : ಮೇಟಿಕಂಭದ ಹತ್ತಿರದ ಮಂಚದ ಮೇಲೆ ಶೀನಪ್ಪ ಒರಗಿಕೊಂಡು ಆಕಾಶವನ್ನೇ ನೋಡುತ್ತಿದ್ದ (ಅನಾಥ. ೨೪೦). **ಮೇಟಿಕಂಬ :** ಹನ್ನೆರಡೆತ್ತಿನ ಬಾರಿ ಹೊನ್ನ ಮೇಟಿಕಂಬ ಬಾಸಿಂಗ್ದ ಬಲಗೈಯ ಕೊಳಗಾದಿ ಕಂದಯ್ಯ ರಾಶಿ ಅಳೆಯೋದೆ ಬೆಳಗಾಯ್ತು (ಜಲ್ಪಾ. ೯). [ ಮೇಟ (<ಮೇಂಟಿ) + ಕಂಭ ]

**ಮೇಟಿಕೊಳವೆ** (ನಾ). ಕಿವಿಗೆ ತೊಡುವ ಮೇಟಿಯ ಆಕಾರದ, ಒಂದು ಬಗೆಯ ಆಭರಣ : ಕೊಪ್ಪು : ಹೆಂಗಸರ ಒಡವೆಗಳನ್ನು ಹೀಗೆ ಪಟ್ಟಿ ಮಾಡಬಹುದು . . . ಕಿವಿಗೆ : ೧. ಮೇಲುಕಿವಿಗೆ ಬುಗಡಿ, ಸಿಂಹನ ಮೊಟ್ಟೆದ ಮುರುವು ; (ಮುತ್ತಾಕಿದ ಮುರುವು, ಹಲಸಿನಕಾಯಿ ಮುರುವು, ಕಪ್ಪಾಕಿದ ಮುರುವು) ; ತಟ್ಟು ಬಾಬುಲು, ಮೇಟಿಕೊಳವೆ, ಇತ್ಯಾದಿ (ಕರಿಕೋ. I, ೬೨೪). [ ಮೇಟ (<ಮೇಂಟಿ) + ಕೊಳವೆ (<ಕೊಟವಿ) ]

**ಮೇಟಿಗಂಡುಗ** 'ಮೇಂಟಿಗಂಡುಗ' ನೋ.

**ಮೇಟಿಗೂಟ** (ನಾ). = ಮೇಟಿಕಂಭ : ಕಲ್ಲಪ್ಪನನ್ನೂ ದರದರನೆ ಎಳೆದುಕೊಂಡು ಹೋಗಿ ಕಣದ ಮಧ್ಯದ ಮೇಟಿಗೂಟಕ್ಕೆ ಅಲುಗಾಡದಂತೆ ಬಿಗಿದರು (ಏಪಾಶ. ೩). [ ಮೇಟ (<ಮೇಂಟಿ) + ಗೂಟ (<ಗೂಂಟ) ]

**ಮೇಟಿಗೊಳಗ, ಮೇಟುಕೊಳಗ, ಮೇಟೆಗೊಳಗ** (ನಾ). ಧಾನ್ಯಗಳನ್ನು ಅಳೆಯುವ ಒಂದು ಪ್ರಮಾಣ : ಶ್ರೀಕಾರ್‍ಯ ನಡೆವಂತಾಗಿ ಕೊಟ್ಟ ಮೇಟಿಗೊಳಗವೊಂದು (ಮುಂಬರಾ. ೨೯೯-೭೮ ; 1219). **ಮೇಟುಕೊಳಗ :** ಆನುಪು ಕೊಡವೀಸ ಹಂದರಹಣ ಹರವಿಗೂಳು ಮೇಟುಕೊಳಗ . . . ಮುಂದೆ ಹುಟ್ಟುವ ಪೂರ್ವಾದಾಯ ಸಹವಾಗಿ ಸರ್ವಬಾಧೆ ಪರಿಹಾರಕ್ಕೆ ಗದ್ಯಾಣ ಗ ‖ (ಶ್ರುಅಂ. ೦೯೩೯, ೨೭-೨೨ ; 1430). **ಮೇಟೆಗೊಳಗ :** ಮತ್ತಮಾ ಹಂನಿರ್ವರ್ ಗಾವುಂಡುಗಳ್ ಮುಖ್ಯಸಮಸ್ತಪ್ರಜೆಗಳುಂ ದೇವರ ನಿತ್ಯೋಪಹಾರಕ್ಕೆಂದು ಚಂದ್ರಾರ್ಕಸ್ಥಾಯಿಯಾಗಿ ಮೇಟೆಗೊಳಗವ ಕೊಟ್ಟರ್ (ಶಾಶಾ. XX, ೨೪೬-೬೮ ; 1228).

[ ಮೇಟ (<ಮೇಂಟಿ) + ಕೊಳಗ₁ ]

**ಮೇಟಿಪಾಲು, ಮೇಣಿಪಾಲು** (ನಾ). ವ್ಯವಸಾಯ ಮಾಡಲು ನೆರವು ನೀಡಿದವನಿಗೆ ಹೊಲದ ಒಡೆಯನು ಕೊಡಬೇಕಾದ ಫಸಲಿನ ಭಾಗ : (೬). **ಮೇಣಿಪಾಲು :** (೬).

[ ಮೇಟ (<ಮೇಂಟಿ) + ಪಾಲು₂ (<ಪಾಲ್₂) ]

**ಮೇಟಿವಿದ್ಯ** (ನಾ). ವ್ಯವಸಾಯ ಮಾಡುವ ತಿಳಿವಳಿಕೆ ; ಕೃಷಿಯ ಅರಿವು : ಕೋಟಿ ವಿದ್ಯೆಗಳಲ್ಲಿ ಮೇಟಿವಿದ್ಯವೆ ಮೇಲು ಮೇಟಿಯಿಂ ರಾಟಿ ನಡೆದುದಲ್ಲದೆ ದೇಶದಾಟವೆ ಕೆಡುಗು (ಸರ್ವಜ್ಞ. ೧೩೫೭).

[ ಮೇಟ (<ಮೇಂಟಿ) + ವಿದ್ಯ ]

**ಮೇಟಿಹುರುಳಿ, ಮೇಟುಹುರುಳಿ** (ನಾ). ಒಂದು ಬಗೆಯ ಔಷಧೀ ಸಸ್ಯ : ಮೇಟಿಹುರುಳಿಯ ಬೇರ ತಂದು ಮೇಗಣ ತಿಗಡ ತೆಕ್ಕೊಂಡು ಸಣ್ಣನೆ ಅರೆದು ಅವರೆಪ್ರಮಾಣ ಗುಳಿಗೆಯಂ ಮಾಡಿ ಒಂದು ಗುಳಿಗೆ ಅಕ್ಕಿಗಚ್ಚಿನಲ್ಲಿ ಕೊಂಬುದು (ಏವೈಶಿ. ೦೬೭). **ಮೇಟುಹುರುಳಿ :** ತೂಲಫಲಾ—ಎಲವ, ಎಕ್ಕೆ, ಮೇಟುಹುರುಳಿ (೭೩೨. ೬೨). [ ? ]

**ಮೇಟುಕೊಳಗ** 'ಮೇಟಿಗೊಳಗ' ನೋ.

**ಮೇಟುಹುರುಳಿ** 'ಮೇಟಿಹುರುಳಿ' ನೋ.

**ಮೇಟೆ** 'ಮೇಂಟಿ' ನೋ.

**ಮೇಟೆಗೊಳಗ** 'ಮೇಟಿಗೊಳಗ' ನೋ.

**ಮೇಠಿ** (ನಾ). ೧. ಸ್ತಂಭ ; ಕಂಬ. ೨. = ಮೇಟಿಕಂಭ. ೩. ಪಶುಗಳನ್ನು ಕಟ್ಟುವ ಗೂಟ. ೪. ಬಂಡಿಯ ಮೂಕಿಗೆ ಆಧಾರ ವಾಗಿರುವ ಆನಿಕೆ. [ ಸಂ. ]

**ಮೇಡ₁** (ನಾ). (ಕರಾ) ಮರದ ಚಿಲಕ.—ಅಗಳಿ : ನಾನು ಬರಲು ತಡವಾದರೆ ಕದದ ಮೇಡ ಹಾಕಿಕೊಂಡು ಮಲಗಿಕೊ (ಕೂಶಿ).

[ ←ತುಳು. ಮೇಡೆ ]

**ಮೇಡ₂** (ನಾ). [ಸಂಗೀತ] ವೀಣೆ ಮುಂತಾದ ವಾದ್ಯಗಳಲ್ಲಿ ಬೇರೆ ಬೇರೆ ಸ್ವರಸ್ಥಾನಗಳನ್ನು ನಿರ್ದೇಶಿಸುವ (ಅರಗಿನ) ರಚನೆ.—ಕಟ್ಟಣೆ.—ಮೆಟ್ಟಿಲು : ಅರಗಿನ ಮೇಡವನ್ನು ಮಾಡಿಸಿದರೆ ಅದು ದಂಡಿಯ ಸುಲಭವಾದ ಸ್ಪಂದನವನ್ನು ತಡೆಯುತ್ತದೆ (ಸಂಗೀತ. ೬೮). [ < ಮೇಳ ]

**ಮೇಡಂ, ಮಡ್ಡಮ್ಮ, ಮೇಡವಮ್, ಮೇಡಮ್ಮ** (ನಾ). ಹೆಂಗುಸನ್ನು ಕುರಿತ ಗೌರವಸೂಚಕವಾದ ಸಂಬೋಧನೆ : P ಈ ಶಬ್ದವು ಉಪಾಧ್ಯಾಯಿನಿ, ಆಂಗ್ಲಸ್ತ್ರೀ, ಶ್ರೀಮಂತ ಹೆಂಗಸು, ಯಜಮಾನಿ ಮುಂತಾದ ವಿವಿಧಾರ್ಥಗಳಲ್ಲಿ ಇಂದು ಬಳಕೆಯಾಗುತ್ತಿದೆ : ಕ್ಷಮಿಸಿ ಮೇಡಂ ಈ ದಿನ ವಠಾರದಲ್ಲಿ ಒಂದು ಮದುವೆ. ಅದ್ದರಿಂದ ತಡ ಆಯ್ತು (ಶಿಂದೆಸ. ೪) ; ಮೇಡಂಗಳನ್ನು ಕಟ್ಟಿಕೊಂಡು ತೊಲಗು (ಅಗಸ್ತ್ಯ. ೭೮). **ಮಡ್ಡಮ್ಮ :** ಸಂಬಳವಾದ ಮರುದಿನ ಸಾಹೇಬರ ಮಡ್ಡಮ್ಮರು . . . ಲೆಕ್ಕ ಚುಕ್ತಾಮಾಡಿಬಿಡುತ್ತಿದ್ದರು (ಏಕಶ. I, ೬೪); ನನ್ನ ಹಿಂದೆ ಮನೆಯ ಮಕ್ಕಳು . . . ಎದುರಿಗೆ ಟಿಳಕರು ಮತ್ತು ಆ ಮಡ್ಡಮ್ಮ (ಸ್ವಕಿತ. ೨೨೦). **ಮೇಡವಮ್ :** ಮೇಡವಮ್ . . . . ಮಿಸ್ ವೇದವಲ್ಲಿ ! (ಶಿಂದೆಸ. ೪). **ಮೇಡಮ್ಮ :** ಆಕೆ ನಮ್ಮ ಹುಡುಗರ ಅಚ್ಚುಮೆಚ್ಚಿನ ಮೇಡಮ್ಮ (ಕೂಶಿ).

[← ಇಂ. Madam]

**ಮೇಡವಮ್** 'ಮೇಡಂ' ನೋ.

**ಮೇಡಮ್ಮ** 'ಮೇಡಂ' ನೋ.

**ಮೇಡಿ** (ನಾ). ಒಂದು ಬಗೆಯ ಮರ; ಅತ್ತಿ ; ಉದುಂಬರ : (೬).

[ದೇ.‖ ತಮಿ. ಮೇಡಿ]

**ಮೇಡು** (ನಾ). ೧. ಎತ್ತರವಾದ ನೆಲ; ದಿಣ್ಣೆ ; ದಿಬ್ಬ: ಕಾಡುವೊಂದು ಮೇಡುವೈದು ಓಡುವೊಂದು ಒಲೆಯು ಮೂಜು ನಾಡನಾಯ ಕೂಡಿಕೊಂಡು . . . ಜೋಡುಮುಖದ ಕಪಿಯನೆಚ್ಚು ಓಡಿನಲ್ಲಿ ತಿಂದು ತನ್ನ ನೀಗಲಾಡಿದ (ಅಪಶಂ. ೨೯೯-೦೪೦೪); ತೆಂಕಣ ಕೋಟೆಯ ಮೇಡಿನ ಕೇರಿಯ ಮನೆಯನು ಹದಿಮೂಜು ನಿವೇಶನವನು ಮಾಡಿ (ಎಕ. XIV, ಶ್ರೀರಂಗ. ೯೭-೪೦; 1471); ನಾಡು ಮೇಡು ಕಾಡೊಳೆಲ್ಲು ಸೊಗವು ಮೂಡಿ ಬರುತಿದೆ (ಮುಂಜೀ. ೬-೭). ೨. (ಪಶುಗಳ) ಓಣಲು; ಡುಬ್ಬ: ಅಗ್ಗದ

ನಿಡುಗೋಡು ಮೇಡುಮುಮರುತ್ತುಮಿಱುಂಕಿದ ಕೆಚ್ಚಲೆತ್ತುಮೆತ್ತಿದ ಕುಡಿವಾಲಮುಂದೆಸೆಯೆ ಕರ್ಱಸುಗಳ್ ಪರಿಗೊಂಡುಮಾಱಿಯೊಳ್ (ಶಂಶಭಾ. ೬-೧೦೪). 'ಮಿಟ್ಟೆ' ಪರಾ. [ದೇ.II ತಮಿ. ಮೇಟು, ಮುಟ್ಟು, ಮೆಟ್ಟು; ಮಲ. ಮೇಟು. ಮಾಟು: ತೆಲು. ಮಿಟ್ಟ, ಮೆಂಡು, ಮೆಟ್ಟ, ಮೆಟ್ಟು; ಕೋಲಾ. ಮೆಟ್, ಮೆಟ್ಟಾ, ಮೆಟ್ಟ್; ನಾಯ್ಕಿ. ಮೆಟ್ಟ್; ಗೊಂಡಿ. ಮಟ್ಟಾ, ಮೆಟಾ, ಮೆಟ್ಟೆ]

**ಮೇಡುಗದ್ದೆ** (ನಾ). ಎತ್ತರದಲ್ಲಿರುವ ಗದ್ದೆ : ಅಣಹಳ್ಳಿ ತೋಪಿನಲ್ಲಿ ನೂತನವಾಗಿ ಮಠ ಕಟ್ಟಲಾಗಿ . . . ಕೆಲಉ ಭೂಮಿ ತೆಗೆದುಕೊಂಡ ಬದಲಿಗೆ ಹಾಗಲವಾಡಿ ಕೆರೆ ತುಂಬಿ ಜೇರಿಗೆ ಮೇಡುಗದ್ದೆಗ್ಯೆಯ್ವಲ್ಲಿ ಸಣ್ಣ ಹಳ್ಳಿಭೂಮಿಯಲ್ಲಿ ಮಂಡು ಖಂಡುಗ ಗದ್ದೆಗೆ ನೀರ ಅಪ್ಪಣೆ ಪಾಲಿಸಿಯಿರ್ಧೇವೆ (ಎಕ. XII, ತಿಪ್ಪನಾ. ೩೮–೫೮: 1669). [ಮೇಡು + ಗದ್ದೆ (< ಗಬ್ದೆ)]

**ಮೇಢಿ** (ನಾ). ೧. ಸ್ತಂಭ : ಕಂಬ. ೨. = ಮೇಟಿಕಂಭ. ೩. ಪಶುಗಳನ್ನು ಕಟ್ಟುವ ಗೂಟ. ೪. ಬಂಡಿಯ ಮೂಕಿಗೆ ಆಧಾರವಾಗಿರುವ ಆನಿಕೆ. [ಸಂ. ಮೇಢೀ]

**ಮೇಢ್ರ** (ನಾ). ೧. ಟಗರು; ಗಂಡುಕುರಿ. ೨. ಪುರುಷನ ಜನನೇಂದ್ರಿಯ; ಶಿಶ್ನ : "ಶಿಶ್ನಃ, ಶೇಫಃ, ಮೇಢ್ರಃ . . . ಶೇಫಸ್–ಈ ೬ ಶೇಫಂ" (ಪರಾಮು. ೬೫–೩೭೦); ಖರ ಮೇಢ್ರ ಮುಷ್ಕವಾಲಧಿ ಶಿರದೊಳೆ ಕರಿದಾಗಿ ತೋರ್ಪೊಡಂತದು ಕಷ್ಟಂ (ಅಶ್ವಶಾ. ೨–೪೨) ; ತಿಂಗಳ್ ನಾಲ್ಕಕಕ್ಷಿನಾಸಾಪುಟಂ ಶ್ರವಣ ಗುದ ಮೇಢ್ರ ರೋಮಂಗಳಪ್ಪುವು (ಕಬಿಕ್ಷ. ೫೬–೭); ಮೇಢ್ರದಲ್ಲಿಯೂ ತೊಡೆಸಂದಿನಲ್ಲಿಯೂ ಬಹಳವಾದ ವೇದನೆಯುಂಟಾಗಿರ್ಪುದು (ಸಕವೈ. ೩೭೦). [ಸಂ.]

**ಮೇಣ್**. ಮೇಣು (ಅ). ೧. ಇನ್ನು; ಮತ್ತು ; ಜೊತೆಗೆ; ಹಾಗೂ ; ಅಲ್ಲದೆ : ಕಟ್ಟಿದ ಸಿಂಘಮನ್ ಕೆಟ್ಟೊಡೇನೆಮಗೆಂದು ಬಿಟ್ಟವೊಲ್ ಕಲಿಗೆ ವಿ[ಪ]ರೀತಂಗಹಿತರ್ಕಳ್ ಕೆಟ್ಟರ್ಮೇಣ್ ಸತ್ತರ ವಿಚಾರವುವ್ (ಇಅ. X, ೭೦–೧೦; ಸು. 700); ಒಡನೆ ಸುರಾಸುರರ್ ಕನಕಪರ್ವತಮಂ ಕಡೆಗೋಲ ಮಾಡಿ ಮೇಣ್ ಪೆಡೆ ಪಲವಪ್ಪ ವಾಸುಕಿ ಮಹೋರಗನಂ ಕಡೆಗಣ್ಣೆ ಮಾಡಿ ಪಾಲ್ಗಡಲನುಪಾಯದಿಂ ಕಡೆಯೆ (ಕಾವ್ಯಸಾ. ೯೩೮ ಕೂಡ್ರ೪); ಫಲ್ಲಿ ಮೇಣಾವ ಸ್ವರೂಪದಿಂ ಬಂದಿರಿದನೆಸಗೆ ತಿಳಿಯೆ ಪೇೞಿಂ (ಪದ್ಮಾಣ. ೫೭–೦): ಕಾವಡೆನ್ನಳವಲ್ಲ ಮೇಣ್ ಗಾಂಡೀವಿ ಕೊಲುವವನಲ್ಲ (ಕುಮಾದ್ರೋ. ೬–೭೦). ೨. ಅಥವಾ ; ಇಲ್ಲವೆ : ಏನಾಗಿಯುಮೇನೋ ತೀರ್ದಪುದೆ ತೀರದೊಡಂ ಮಱಿದುಂಬಿಯಾಗಿ ಮೇಣ್ ಕೋಗಿಲೆಯಾಗಿ ಪುಟ್ಟುವುದು ನಂದನದೊಳ್ ವನವಾಸಿದೇಶದೊಳ್ (ಶಂಶಭಾ. ೪–೨೯);ಲಿಂಗಜಂಗಮವೊ ಮೇಣ್‌ಜಂಗಮವೆ ಲಿಂಗವೋ (ಬಸರ. ೩–೦೫೩); ಮರ್ತ್ಯಂಗೆ ನಿಟ್ಟೆಯೇ ಮಾನಸವಾಟೀಗಳೊ ಮೇಣಾಗಳೊ ಮೇಣ್ ಸಾಗುದುರೆಗೆ ಪುಲ್ಲನಡಕಿ ಕೆಡುವನೆ ಚದುರಂ (ಯಕೋಶ. ೩–೦೫); ನಿನ್ನ ಮಕ್ಕಳ ಸಲಹು ಮೇಣ್ ಕೊಲ್ಲೆನುತ ನುಡಿದನು ವಿನಯದಲಿ ಪಾರ್ಥ (ಕುಮಾದ್ರೋ. ೯–೪೮). ೩. ಖಂಡಿತವಾಗಿಯೂ ; ನಿಶ್ಚಯವಾಗಿಯೂ : ಮಗನಂ ಪಡೆವಂತಿರೆ ಬಂಜೆಗೆ ಮರ್ದಂ ಮಾಟ್ಪೆನೆಂಬ ನಾಸಿಗನೇಂ ತಾಂ ಪುಗಿಸುವನೆ ಜೀವಮಂತದುವೆ ಗರ್ಭದೊಳು ಮರ್ದಿ ಮೇಣದಕ್ಕುಮೆ ಜೀವಂ (ಸಮಶ. ೧೨–೩೫); ಕುಡುವಿಲ್ಲನೆಚ್ಚ ಸರಲುಂನಡದು ದಲಂದೊರ್ವನೆರ್ದೆಯನೊಳ್ಗಬ್ಬಮುಮೊಳ್ನುಡಿಯುಂ ಗೇಯಮುಮುರ್ಚದ ಕಡುಗಲ್ಲೆರ್ದೆಯೆರ್ದೆಯಸಂಬ್ಸು ಮೇಣುರ್ಚಗುಮೇ (ಕಾವ್ಯಾವ. ೨೦೪). **ಮೇಣು:** ೨. ವೈರಿನಾಯಕರು ಕೊಂದರೆಂಬೆನೊ ಮೇಣು ನಾನೇ ಕೊಂದೆನೆಂಬೆನೊ (ಕುಮಾದ್ರೋ.೭–೧೧) : ಜವನ ಜನನಿಯೊ ಮೇಣು ಲಯಭೈರವನ ಭಗಿನಿಯೊ . . ಎಂಬವೊಲು ನಡೆತಂದಳಿದಿರಿನಲಿ (ತೊರರಾ. ೦–೧೧–೭): ಕಾಮಪಶ್ಯದ ಘುಟಿಕೆಯ ರಾಶಿಯೊ ಮೇಣು ಕಾಮನ ಹಾಱುಗುಪ್ಪೆಗಳೊ (ವರ್ಧಶ. ೦–೧೦೪) : ಅಸಮಸಮ್ನುರು ಮರದಯಾಮ್ಯತರಸಸರೋವರ ಮಧ್ಯದಲಿ ಪದಬಿಸರುಹಂಗಳು ಮೇಣು ವಿಕಸನವಾದವು (ಬಸಶ್ರ. ೩೯–೩೭). ☞ ಈ ಶಬ್ದವು ಅನೇಕ ವೇಳೆ ಪಾದಪೂರಣಾರ್ಥವಾಗಿ ಉಪಯೋಗವಾಗುತ್ತದೆ. 'ಮೇಗು' ಪರಾ.

**ಮೇಣ** 'ಮಯಣ' ನೋ.

**ಮೇಣಗಟ್ಟು** (ಕ್ರಿ). ಜಿಡ್ಡುಗಟ್ಟಿ ಕೊಳೆಯಾಗಿರು : ಅವಳ ತೊಡೆಯ ಮೇಲೆ ಒಂದು ವರ್ಷದ ಕೂಸೊಂದು. ಅದರ ತಲೆಗೆ ಒಂದು ಮೇಣಗಟ್ಟಿದ ಕುಲಾವಿ (ರಾವಊಸ. ೧೧೦). [ಮೇಣ (<ಮಯಣ) + ಕಟ್ಟು$_1$]

**ಮೇಣಗಪಟ** 'ಮೇಣಗಪ್ಪಡ' ನೋ.

**ಮೇಣಗಪ್ಪಟ** 'ಮೇಣಗಪ್ಪಡ' ನೋ.

**ಮೇಣಗಪ್ಪಡ**, ಮೇಣಗಪಟ, ಮೇಣಗಪ್ಪಟ, ಮ್ಯಾಣಗಪ್ಪಟ (ನಾ). ಎಣ್ಣೆ, ಮೇಣ ಮೊದಲಾದುವುಗಳಿಂದ ಪರಿಷ್ಕರಿಸಿ ನೀರಿಳಿಯದಂತೆ ಮಾಡಿದ ಬಟ್ಟೆ : ಕೊಡೆ ಮೇಣಗಪ್ಪಡ ಗೊಂಗಡಿ ಬಹುರಮ್ಯವಡೆದಿರ್ದ ಸಕಲಾತಿದಳೆದು . . . ನೀಮರ್ನುಜರಂತೆಡೆಯಾಡುತಿರ್ದರೂರುಗರು (ಮೋಹತ. ೪–೪೦) ; ಅಪಾದಮಸ್ತಕ ಮೇಣಗಪ್ಪಡದ ನಿಲುವಂಗಿ ಹೊದ್ದು ಅಡ್ಡಾಡಲು ಹೊರಬಿದ್ದೆ (ಇಶ್ಯಶ. ೦೯೦). **ಮೇಣಗಪಟ** : "ಎಣ್ಣೆಯಿಂದ ಪರಿಷ್ಕರಿಸಿ ನೀರಿಳಿಯದಂತೆ ಮಾಡಿದ ಬಟ್ಟೆ ; ಮೇಣಗಪಟ ; ತೈಲಪಟ" (oilcloth. ೩೦೪೩). **ಮೇಣಗಪ್ಪಟ** : ಮಗುವಿಗೆ ನ್ಯಾಪ್‌ಕಿನ್ . . . ಮೇಣಗಪ್ಪಟ, ಬ್ಲಾಂಕೆಟ್ . . . ಹತ್ತಿಯ ಸುರಳಿ, ಇವುಗಳನ್ನು ಸಿದ್ಧ ಮಾಡಿಕೊಳ್ಳಬೇಕು (ಗೃಹವಿ. ೦೦೨). **ಮ್ಯಾಣಗಪ್ಪಟ** : ಗಾಡಿಗೆ ಮ್ಯಾಣಗಪ್ಪಟದ ಗೌಸು (ಎಕ. XIV, ನಂಜನ. ೨೯೨ ; 1847). [ಮೇಣ (<ಮಯಣ) + ಕಪ್ಪಡ]

**ಮೇಣದಬತ್ತಿಮರ** (ನಾ). ಅಂಟುದ್ರವವನ್ನು ಸ್ರವಿಸುವ ಒಂದು ಬಗೆಯ ಮರ : (ವೃಶಿಗ. ೭೯–೦೩೯೫). [<ಮೇಣ + ಬತ್ತಿ + ಮರ$_1$]

**ಮೇಣಬತ್ತಿ** (ನಾ). ಮೇಣದಿಂದ ಮಾಡಿದ ಬತ್ತಿ; ಮೋಂಬತ್ತಿ: ಮೇಣಬತ್ತಿಯ ಪೆಟ್ಟಿಗೆಯಲ್ಲಿ ೩೦ ಪುಡಿಗಳಿರುತ್ತವೆ . . . ಎಲ್ಲಾ ಕೂಡಿ ೧೮೦ ಮೇಣಬತ್ತಿಗಳು ಒಂದು ಪೆಟ್ಟಿಗೆಯಲ್ಲಿರುತ್ತವೆ (ಮುಂಬವ್ಯಾ. ೧೩೭). [ಮೇಣ (< ಮಯಣ) + ಬತ್ತಿ]

**ಮೇಣಾ** 'ಮೇನಾ' ನೋ.

**ಮೇಣಿ** 'ಮೇಂಟಿ' ನೋ.

**ಮೇಣಿಪಾಲು** 'ಮೇಟಿಪಾಲು' ನೋ.

**ಮೇಣು** 'ಮೇಣ್' ನೋ.

**ಮೇಣುಹುಣ್ಣು** (ನಾ). ಒಂದು ಬಗೆಯ ಹುಣ್ಣು : ಸರ್ವವ್ರಣಗಳಿಗೆ . . . ಜೇನುತುಪ್ಪದಲ್ಲಿ ಒಂದು ಗುಳಿಗೆಯಂ ನುಂಗುವುದು . . . ಮೇಣುಹುಣ್ಣು, ಗಂಡುಹುಣ್ಣು, ಸರ್ವವ್ರಣಗಳು ಗುಣ (ಐವೈಶಿ. ೭೬). [ಮೇಣು$_2$ + ಹುಣ್ಣು (< ಪುಣ್)]

**ಮೇಣೆ** 'ಮೇನಾ' ನೋ.

**ಮೇತ** (ನಾ). ಮೇಯುವಿಕೆ ; ಮೇಯುವುದು : ಸುಟಿಯದು ಗಾಳಿ ಮೃಗಂ ಕೆಯ್ವಟಿಗಳ ಮೇತದೊಳ್ ತಣಿದಪ್ಪುವು (ಶಂಶಭಾ. ೫–೩೬) ; ಕುದನಂ ಹಸ್ತಾಗ್ರದಿಂ ಘ್ರಾಣಿಸಿ ಬೆದೆವಿಡಿಯಂ ಮೆಚ್ಚ ಮೇತಕ್ಕೆ ಮೆಯ್ಯಾಡಲಿದೆ ನೀಡುಂ ನಿದ್ದೆಯಂ ತೀನುಮನಱಿಯದೆ . . . ಇರ್ದುದು ಗಿಡಿಗಿಡಿಜಂತ್ರಂಬೊಲಂ ದೊಂದಿಭೇಂದ್ರಂ (ಲೀಲಾವ. ೬–೩). [ಮೇ$_1$ + –ತ$_2$]

**ಮೇಥಿಕೆ** (ನಾ). ಮೆಂತ್ಯ. [ಸಂ. ಮೇಥಿಕಾ]

**ಮೇಥಿನಿ** (ನಾ). = ಮೇಥಿಕೆ. [ಸಂ. ಮೇಥನೀ]

**ಮೇದ$_1$** 'ಮೇ$_1$' ಪರಾ.

**ಮೇದ$_2$**, ಮೇದರ, ಮೇದಾರ (ನಾ). ಬಿದಿರಿನಿಂದ ಬುಟ್ಟಿ, ಚಾಪೆ, ಮೊರ ಮೊದಲಾದುವನ್ನು ಹೆಣೆದು ಮಾರಿ ಜೀವಿಸುವ ವೃತ್ತಿಯ

ವರನ್ನುಳ್ಳ ಒಂದು ಜನಾಂಗ ಮತ್ತು ಆ ಜನಾಂಗಕ್ಕೆ ಸೇರಿದ ವ್ಯಕ್ತಿ: "ವಂಶಚ್ಛೇದಿ ಚಪಕಾರಕಂ ಮೇದಂ" (ಮಂಗರಾ. ೦೦೦-೨) : ಕಮ್ಮಾಜನಂತೆ ಕಾಸಿ ಬಡಿವರ್ ಮೇದನಂತೆ ಸೀಳ್ವರ್ (ಧರ್ಮಾಮೃ. ೩-೭೩) : ಮೇದರೊಳಲ್ಲದೆ ವಂಶಚ್ಛೇದಂ ಗಾರುಡದೊಳಲ್ಲ (ಸೂಕ್ತಿಸು. ೯-೧೪) : ಮೇದನ ಕೈಗತ್ತಿ ಕೇದಗೆ ರಾಜವಾಣೀಧವರುಗಳಂತಲ್ಲ (ಶೃಂಗರವೇ. ೩-೯೭). **ಮೇದರ** : ಶರಣ ಮೇದರ ಕೇತಿದೇವನ ಹರಣವಂ ಬಸವಣ್ಣನಸುವಂ ಹರನ ಕೈಯಲ್ಲಿ ಮರಳಿ ಪಡೆದನು ಮಾಚಿದೇವಯ್ಯ (ಬಸವ. ೩೭ ಸೂತನ) : ಇನ್ನು ಅಂಬಿಗ ಚವುಡ ಮೇದರಗ[ನ]ನ್ನು ಕೇತನು ಚನ್ನ ಮಾದಿಗ[ನ]ನ್ನು ನುಲಿಚಂದ್ಯೆಯ್ಯ ಕೂಗಿನ ಮಾರನೆನ್ನುವನು (ಚೆನ್ನಶೃ. ೯೭-೯೩). **ಮೇದಾರ** : ಈತನೇ ಮೇದಾರ ಕೇತಯ್ಯನೆಂಬಾತನೀತನೇ ಡೋಹಾರ ಕಕ್ಕಯ್ಯನೆಂಬಾತನು (ತಿಂತ್ರಿಣಿ. ೩೭-೩೭); ಮೇದಾರರು ಇಲ್ಲವೆ ಬುರುಡರು—ಇವರು ದೊಡ್ಡಹಳ್ಳಿಗಳಲ್ಲಿಯೂ ಪಟ್ಟಣಗಳಲ್ಲಿಯೂ ವಾಸಿಸುತ್ತಾರೆ (ಕರಾಗ. ೧೩೪).

[ದೇ. ■ ತಮಿ. ಮೇತರ್. ಮೇತರವರ್. ಮೇತವರ್: ತೆಲು. ಮೇದರ. ಮೇದರಿ./ಸಂ. ಮೇದ = ಒಂದು ಮಿಶ್ರಜಾತಿ]

**ಮೇದ₃** (ನಾ). ಕೊಬ್ಬು ; ಮೇದಸ್ಸು: "ವಸೆ ಮೇದಂ ವಪೆ" (ಪಸ್ತುಕೋ. ೬೨-೨೪). [ಸಂ. ಮೇದ. ಮೇದಸ್]

**ಮೇದಕ** (ನಾ). ಭಟ್ಟಿಯಿಳಿಸಲು ಉಪಯೋಗಿಸುವ ದ್ರವ,—ಮದ್ಯ : "ಮೇದಕಃ. ಜಗಲಃ— ೨ ಮದ್ಯ ಮಾಡುವುದಕ್ಕೆ ನಾನಾದ್ರವ್ಯಗಳೂ ಕೂಡಿಸಿದ ಮುದ್ದೆಯ ಹೆಸರು" (ಬಿಲ್ಲಾಂಕಿ. ೩೦೯). [ಸಂ.]

**ಮೇದರದೆಜು** (ನಾ). ಮೇದರು ತೆರಬೇಕಾದ ತೆರಿಗೆ,—ಸುಂಕ : ಪೊಡ್ಡದೆಜು ಮೇದರದೆಜು ಸಾದದೆಜು ಉದುವಲುದೆಜು. . .ಇನ್ನಿನಿಸಜಿ ತೆಜಿಯನು ಧಾರಾಪೂರ್ವಕಂ ಮಾಡಿಬಿಟ್ಟರು (ಎಕ. IV (R), ಹುಣಸೂ. ೨೪-೪೦ ; 1843). [ ಮೇದ₂ + ತೆಜು₃ ]

**ಮೇದನಾಗಿಡ** (ನಾ). ಒಂದು ಬಗೆಯ ಸಸ್ಯ : ಮದನಬುಡಮೆ ಗಿಡ, ಮೇದನಾಗಿಡ. ಮದನಗಂಟೆ (ವೃಕ್ಷಶಿ. ೦೩-೨೩೫). [? + ಗಿಡ (<ಗಿಡು)]

**ಮೇದಯ್ಯ** (ನಾ). ಒಬ್ಬಾತನ ಹೆಸರು : ಪೊಕ್ಕುಂದದ ತು. ಗೋಳೆ ಕೊಜ್ಜ ಮಂಗಲದ ಮೇದಯ್ಯ ಕಾದಿ ಸತ್ತು ಸ್ವರ್ಗ್ಗಯ್ದದ (ಎಕ. X. ಬಾಗೇಪ. ೪೦-೪ ; ಸು. 950). [ಮೇದ₂ + ಅಯ್ಯ₁]

**ಮೇದರ** ' ಮೇದ₂ ' ನೋ.

**ಮೇದಸ್ಸು** (ನಾ). ೧. ದೇಹದ ರಕ್ತ. ಮಾಂಸ. ಚರ್ಮ. ಮೇದಸ್ಸು. ಸ್ನಾಯು. ಅಸ್ಥಿ. ಮಜ್ಜೆಗಳೆಂಬ ಸಪ್ತಧಾತುಗಳಲ್ಲಿ ಒಂದು; ಕೊಬ್ಬು, ನೆಣ: ಹರಿ. . .ದಾನವರ ಸೀಳಿ ಬಿಸುಟನು ಖಳರ ಮೇದಸ್ಸಾಳಿ ಮುಳುಗಿತು ಜಲದೊಳದಜುಂ ಮೇಲುವಸರಾಯ್ತಿಳೆಗೆ ಮೇದಿನಿಯೆಂಬ ನಾಮದಲಿ (ಕುಮಾವ್ಯಾಸ. ೯-೨೪) : ಪರಿಕಿಸಲ್ ಪಿತ್ತಮುಂ ಶ್ಲೇಷ್ಮಮುಂ ತಿಳಿಯಲೊಂದೆರಡು ಬಳ್ಳಂ ಮಾಂಸ ಬಸೆ ರಕ್ತ ಮೇದಸ್ಸು . . . ನಿರುತ ಮುಸ್ಸೂಜಿಬು ವತಸ್ಥಿಗಳಿ ಸೇರಿರ್ಪುವು (ಕಿರಾಶೃ. ೩೬-೧೨) ; ಪಂಡಿತನೆ ಪಂಡ ಅಥವಾ ಪೂಂತ ಪಶುಕಲಿಯ ಖಂಡದಲಿ ಮೇಧಸ್ಸು ; ಮೇದಸ್ಸು (ಸರ್ವಜ್ಞ. ೦೩-೦೨). ೨. ಬೊಜ್ಜು : ಮೇದಶ್ಛೇದನದಿಂದೆ ಕೃಶೋದರಮೆಂದೆನಿಸಿದೊಡಲಿ ದುತ್ಸಾಹಕ್ಕಾಬಾವಪುದು (ಶಾಕುಂತ. ೨೨-೩೯). ೩. [ವಿಜ್ಞಾ] ದೇಹಕ್ಕೆ ಬೇಕಾಗುವ ಜೀವಸತ್ವಗಳಲ್ಲೊಂದಾದ ಜಿಡ್ಡಿನ ಅಂಶ : ಭೇದಿ ಮಾದರೆ ಸಾರಜನಕ ವಸ್ತುಗಳು . . . ಹೆಚ್ಚಾಗಿರುವ ಮತ್ತು ಮೇದಸ್ಸು (Fat) ಕಡಮೆಯಾಗಿರುವ ಆಹಾರವಸ್ತುಗಳನ್ನು ಕೊಡಬೇಕು (ಶರೀರಾ. ೬೨) : ಮೇದಸ್ಸು. ಇಂಗಾಲ, ಜಲಜನಕ ಮತ್ತು ಆಮ್ಲಜನಕ ಇವುಗಳ ಸಂಯುಕ್ತವಸ್ತು (ಗೃಹಶಾ. ೦೪) ; ಕೀಟಗಳು ಶರ್ಕರಪಿಷ್ಟಗಳಿಂದ ಅಥವಾ ಸಸಾರಜನಕದಿಂದ ಮೇದಸ್ಸುಗಳನ್ನು ಸಂಯೋಜಿಸುತ್ತವೆ (ಕೀಟಶಾ. ೩೦). [ಸಂ. ಮೇದಸ್]

**ಮೇದಾರ** ' ಮೇದ₂ ' ನೋ.

**ಮೇದಿನಿ** (ನಾ). ೧. ಭೂಮಿ : ಇಳೆ ; ಪೃಥ್ವಿ : "ಸ್ಥಿರೆ ಧರಣಿ ಧಾತ್ರಿ ಮೇದಿನಿ ಧರಿತ್ರಿ ಧರೆಯವನಿ . . . ಭೂಮಿ ಭೂ ಗೋತ್ರ ನೆಲಂ" (ಪಸ್ತುಕೋ. ೨೭-೦) : ಜಲ ಕೂರ್ಮ ನಾಗ ಮೇದಿನಿ ಸಪ್ತಸಾಗರ ಅಬ್ಬಾಂಡ ಭಾಂಡ ಹರಿವಿರಿಂಚಿಗಳು ನಿಮ್ಮ ಉದರದ ಕೊನೆಯ ಪ್ರಾಣಿಗಳಯ್ಯ (ಬಸವ. ೩೩೫) ; ಮಂಗಳಂ ಮೇದಿನಿಗೆ ಸುರರಿಗೆ ಮಂಗಳಂ ಕೇಳ್ದರಿಗೆ ಪೇಳ್ದಗೆ ಮಂಗಳಂ (ಕೌಶಿರಾ. ೪೪-೩೯). ೨. ದೇಶ ; ರಾಜ್ಯ : ಮೇದಿನಿಯಂ ಕೆಯ್ಕೊಳ್ ಪದನಾದುದು ಜಿನದೀಕ್ಷೆಗೆನಗೆ ಮಗನೇ (ಶಾಂತಿಪು. ೭-೩೬) ; ತನಗುಳ್ಳ ಸರ್ವರಾಜ್ಯವನು ವಿಶ್ವಾಮಿತ್ರಮುನಿಗೆ ಧಾರೆಯನೆಜಿದನವನೀಶ ನೆಂದು ಮೇದಿನಿಯೊಳೆಲ್ಲಂ ಸಾಜು (ಹರಿಶ್ಚಂ. ೯-೩೩).

**ಮೇದಿನೀಮಿಸೆಯರ ಗಂಡ**, **ಮೇದಿನೀಮಿಸರಗಂಡ**=ಜಗತ್ತಿನಲ್ಲೇ ಶೂರರೆನಿಸಿಕೊಂಡವರನ್ನು ಸೋಲಿಸುವಂತಹ ವೀರ ; ಒಂದು ಬಿರುದು: ಶ್ರೀಮನ್ ಮಹಾ ಮೇದಿನೀಮಿಸೆಯರ ಗಂಡ ಕಠಾರಿಸಾಳುವ ನರಸಿಂಗರಾಯ . . . ಸುಖದಿಂ ರಾಜ್ಯವನಾಳುತ್ತುಮಿರ್ದು (ಎಕ. III (R). ಹೆಗ್ಗಡ. ೦೪೩-೬ ; 1497) ; ಶ್ರೀಮನ್ಮಹಾಮಂಡಳೇಶ್ವರ ಮೇದಿನೀಮಿಸರ ಗಂಡ ಕಠಾರಿಸಾಳ್ವ . . . ಶ್ರೀ ನರಸಿಂಗರಾಯ ಮಹಾರಾಯರು ಪ್ರಿಥ್ವೀರಾಜ್ಯಂಗೆಯಿಉತ್ತಿರಲು (ಎಕ. IX, ಬೆಂಗಳೂ. ೧೨೩-೫; 1495). [ಸಂ. ಮೇದಿನೀ]

**ಮೇದಿನಿಪ** (ನಾ). ಭೂಮಿಯ ಒಡೆಯ : ದೊರೆ ; ರಾಜ : ಬೂದಿಗುಂಪಿನಲಿ ಕಾಯಂಗಡಿಯೊಳಿಟ್ಟರಲು ಮೇದಿನಿಪ ಕಂಡು . . . ಪೇಳಿ (ಗುರುಚಾ. ೮-೨೧). [ಮೇದಿನಿ + – ಪ₃]

**ಮೇದಿನೀಧರ** (ನಾ). ಭೂಧರ ; ಬೆಟ್ಟ: ಪರ್ವತ : ನಾಲ್ಕುಕುಭೇದ ದೌಷಧಿಯುಂಟು . . . ಆ ದಿವಿಜಗಿರಿಯಿಂದ ಮುಂದಣ ಹಾದಿಯಲಿ ಹರಿದಶ್ವನಾಮದ ಮೇದಿನೀಧರವಮಲಚಂದ್ರುದಶ್ರೀಣನಾಮಕದ (ಕೂರ್ಮಾ. ೬-೦೬-೨೬).

**ಮೇದಿನೀಧರರಾಜ** = ಪರ್ವತರಾಜ: ಮೇದಿನೀಧರರಾಜಮೇನೆಯರ್ ಬಹಳ ಹರುಷೋದಧಿಯೊಳಾಳ್ದವರ್ಗಂಗಚಿತ್ರವನಿತ್ತಿದಿರ್ಗೊಳಲ್ ಪೂಜಿ ಮುಟ್ಟರು (ತಿಂತ್ರಿಣಿ. ೪೬-೦೬). [ಸಂ.]

**ಮೇದಿನೀಪತಿ** (ನಾ). = ಮೇದಿನಿಪ : ಮೇದಿನೀಪತಿ ಪಾಂಡು ಸೋಮಕ ರಾದಿಯಾದನ್ವಯವನಗಣಿತ ಬಂಧುಬಳಗವನು ಆದರಿಸಿದನು (ಕುಮಾವ್ಯಾ. ೦೦-೬೦) ; ಒಂದು ಜೋಧ್ಯಪ ನೋಡು ಬಾರೆಂದು ಮೇದಿನೀಪತಿಯ ಕೈವಿಡಿದು . . . ಆದಿದೇವನ ಏಡ್ಗೈದಿ (ಹಂಪಾಶ. ೦೯-೯೦). [ಸಂ.]

**ಮೇದಿನೀಪಾಲ** (ನಾ). ಭೂಮಿಯನ್ನು ರಕ್ಷಿಸುವವನು ; ದೊರೆ ; ರಾಜ : ಮೂಲೋಕದೊಳ್ಳನಗೆ ಸಮರಾದ ಮೇದಿನೀಪಾಲರಂ ಸುಭಟರಂ ಕಾಣೆನು (ಕೈಬರಾ. ೪-೩೦). [ಸಂ.]

**ಮೇದಿನೀಸುತೆ** (ನಾ). ಭೂಮಿಯ ಮಗಳು ; ಸೀತೆ : ಮೇದಿನೀಸುತೆ ಬಸುರಿ ಬಿಡಿದಳುವಂತೆ ಮಾಡುವೆನು (ಕೌಶಿರಾ. ೨೬-೪). [ಸಂ. ಮೇದಿನೀಸುತಾ]

**ಮೇದಿನೀಸುರ** (ನಾ). ಭೂಸುರ ; ಬ್ರಾಹ್ಮಣ : ವಾದಿಸದೆ ಬಸವಣ್ಣ ಕೇಳಾ ಮೇದಿನೀಸುರ ಮಾರ್ಗದಿರವಂ (ಬಸವ. ೩-೩೨) ; ಅಂದಿನ ಜಾತ ಕರ್ಮದಿ ಮೇದಿನೀಸುರವರ್ಗ ವಣಿದುದು ಗೋಧನ . . . ಹಿರಣ್ಯದಾನದಲಿ (ಕೌಶಿರಾ. ೦-೩೭). [ಸಂ.]

**ಮೇದಿಸು** (ಕ್ರಿ). ೧. ನೆನೆಯುವಂತೆ ಮಾಡು; ಅದ್ದು ; ತೋಯಿಸು : ಮೊಮ್ಮನ ಹಣೆಯ ಮೇಲೊಗಿಸಿದನು ಪನ್ನೀರಿನಲಿ ಮೇದಿಸಿದ ಕಣಿಲಿಗೆಯ ಕುಸುಮಂಗಳನು (ಕೂರ್ಮಾ. ೬-೪೦-೯೩). ೨. ಲೇಪನಮಾಡು ; ಬಳಿ ; ಲೇಪಿಸು : ರಾಯ ಪರಘನಸುಮಿಸಂಚಿತಕಾಮುವನು ನವತಪ್ತತೈಲದ

ಲಾಯಸಂಬಡಿಸಿವರು ಮೇದಿಸಿವರು ಸುಗಂಧವಳಿ (ಕೂರಣ. ೨-೬-೧). ೩. ಸಿಂಪಡಿಸು ; ತಳಿ : ಜಾವಿಯರಲ್ಲಿ ಜವಾದಿಯನೊಲವಿಂ ಮೇದಿದವರಲ್ಲದೆ ಕಾಬ್ರುಜುಡಿಗವಂ ಮೇದಿಪರೇ ನಿಜಕಾಂತೆಯರೊಲವಂ ಸಾಧಿಸುವರು ಸಕಲಕ್ಕೆಳಸುವರೇ (ಅಸುವು. ೬-೪೯) ; ಜೀದಿಬೀದಿಗಳೊಳಗೆ ಕತ್ತುರಿ ಸಾದುಗಳ ಸಾರಣೆಯು ಪರಿಮಳ ಮೇದಿಸಿದ ಪನ್ನೀರ ಚಳೆಯದ ಪಡಿಸಣಗೈದ ಧೂಪದ ಧೂಮಪಪನನಲೆಸೆದುದಾ ನಗರ (ಕೂರಣ. ೨-೧-೨೬).

[ಮೇದು₁ + — ಇಸು₃. / ತೆಲು. ಮೇದಿಂಚು]

**ಮೇದು₁** (ಕ್ರಿ). ೧. ನೆನೆಯಿಸು ; ಅದ್ದು : ತೋಯಿಸು. ೨. ಬಳಿ : ಲೇಪಿಸು. ೩. ಸಿಂಪಡಿಸು; ತಳಿ : 'ಮೇದಿಸು' ಪರಾ.

[ದೇ.॥ ತೆಲು. ಮೇದು]

**ಮೇದು₂** 'ಮೇ₁' ಪರಾ.

**ಮೇದುರ** (ಗು). ೧. ನುಣುಪಾದ ; ಮೃದುವಾದ : ಪ್ರತಿಲೇಖನದೊಳ ನಾಲೋಕಿತಮನುಚಿತಮೆಂದು ಪಲವು ಕಣ್ಬಡೆದವೊಲಾ ಯತಿಪತಿಯು ದಯಾ ಧ್ವಜಮೇನತಿಶಯಮಾದತ್ತೊ ಮೇದುರಂ ಮಾಯೂರಂ (ಮಲ್ಲಿಪು. ೧೦-೦೩೩). ೨. ದಟ್ಟವಾದ ; ಸಾಂದ್ರವಾದ; ಒತ್ತಾಗಿರುವ : ಮೇದುರ ನೀಲಾಶ್ಮಮನಂಭೋದಭ್ರಾಂತಿಯೊಳೆ ನೋಡಿ ಕುಣಿದುವು ಶಿಖಿಗಳ್ (ಜಗಿ. ೧೬-೩೩). ೩. ಸ್ಥೂಲವಾದ ; ತೋರವಾದ : ನೆಲಸಿರೆ ಮೇದುರೋದರದೊಳಂದು ಜಿನಾರ್ಭಕನಂತರಂಗದೊಳ್ ನೆಲಸಿದುದೆಯ್ದೆ ಸಂತಸದ ಸಂತತಿ (ಶಂಪ್ರಕೃ. ೦೨-೨೨). ೪. ಅತಿಶಯ ; ಆಧಿಕ್ಯ : ಪೆಚ್ಚಳ : ದ್ವಿಜತತಿಗೆ ಮೇದುರದ ದುಮ್ಮಾನಮೆನಿಸೆ (ಶಂಕರಾ. ೫-೨-೨೬). (ನಾ). ೫. ಶ್ರೇಷ್ಠನಾದವನು; ಉತ್ಕೃಷ್ಟವ್ಯಕ್ತಿ: ಭರದೆ ನಟಿಪೆಡೆಯೊಳಂತಸ್ಸ್ವರ ಸಂಪನ್ನನುರುಪರಮಗಗನಮಧ್ಯಸ್ಥಂ ಪರಾನಂದತರಮೇದುರಂ ಮಹಾವಿಮಲಬೋಧಸುಧಾರಸಮುಪಾರಮತುಲವಿಭವಂ (ಶಬ್ದಾ. ೦೦-೨೦೩).

[ಸಂ.]

**ಮೇದೆ** (ನಾ). ಔಷಧಕ್ಕೆ ಬಳಕೆಯಾಗುವ ಎಂಟು ವಿಧವಾದ ಮೂಲಿಕೆಗಳಲ್ಲಿ ಒಂದು; ಶುಂಠಿಯನ್ನು ಹೋಲುವ ಒಂದು ಬಗೆಯ ಬೇರು : ಕಾಕೋಳಿ, ಮೇದೆ, ಮಹಾಮೇದೆ . . . ಕಾಡಹೆಸರು ಇವಿಷ್ಟನ್ನೂ ಪ್ರತ್ಯೇಕ ನಾಲ್ಕು ವರಹ ತೂಕವನು ಸಣ್ಣನಾಗಿ ಚೂರ್ಣಿಸಿ ಹಾಕಿ (ವೈದ್ಯಸಾ. 11, ೩೯) ; ಶ್ರೀಗಂಧ, ಮುಡಿವಾಳ . . . ಮೇದೆ, ಮಹಾಮೇಧೆ . . . ಕಾಯಿಸಿ ಪಾಕದಲ್ಲೆಳೆದು ಶರೀರಕ್ಕೆ ಲೇಪಿಸೆ ಪಿತ್ತಜ್ವರ, ಉನ್ಮಾದ, ಮೂರ್ಛೆ ಸಹ ಮಾಣುವುವು (ಸಿವೈ. ೬೫) ; ಮೇದೆ ಅತಿಮೇಧಿ ಕಾಕೋಳ ಕ್ಷೀರ ಕಾಕೊಳ ಚಂಗಲಕೋಷ್ಠ . . . ಇವು ಪ್ರತ್ಯೇಕ ನಾಲ್ಕು ತೂಕ ಚೂರ್ಣಿಸಿ ಹಾಕಿ ಕಾಸಿ ಹದವಲ್ಲಿ ಇಳುಹಿ (ವೈದ್ಯಸಾ. ೩-೧). 'ಅಷ್ಟವರ್ಗ' ಪರಾ.

[ಸಂ. ಮೇದಾ]

**ಮೇದೋಜೀರಕ** (ನಾ). [ವೈದ್ಯ] ಆಹಾರವನ್ನು ಪಚನಗೊಳಿಸುವುದರಲ್ಲಿ ಸಹಾಯಕವಾಗುವ ರಸಗಳಲ್ಲಿ ಒಂದು : ಈ ಮೇದೋಜೀರಕವು ಸೇರಲು ಆಹಾರದಲ್ಲಿನ ಹಿಟ್ಟು, ಪ್ರೋಟೀನಪದಾರ್ಥಗಳು ಚೆನ್ನಾಗಿ ರೂಪಾಂತರವಾಗುವುವು (ಶಾಂಶ್ರ. I, ೨೫೦). [ಸಂ.]

**ಮೇದೋಜೀರಕಗ್ರಂಥಿ** (ನಾ). ಜಠರದ ಸಮೀಪದಲ್ಲಿ ಇರುವ, ಮೇದೋಜೀರಕರಸವನ್ನು ಸ್ರವಿಸುವ ಒಂದು ಗ್ರಂಥಿ : ಆಹಾರದ ಪಚನಕ್ರಿಯೆಗೆ ಸಹಾಯಕವಾಗುವ, ಮುಖ್ಯವಾದ ಗ್ರಂಥಿಗಳಲ್ಲಿ ಒಂದು : ಹಿಟ್ಟು ಪದಾರ್ಥಗಳ ಜೀರ್ಣತೆಗೆ ದೇಹದಲ್ಲಿರುವ ಮೇದೋಜೀರಕಗ್ರಂಥಿಯು ಬಹಳ ಮುಖ್ಯವಾದ ಅವಯವವಾಗಿರುತ್ತದೆ (ಒಮ್ಮಶ್ರ. ೦೦೯). [ಸಂ.]

**ಮೇದೋಧಾತು** (ನಾ). ದೇಹದ ಸಪ್ತಧಾತುಗಳಲ್ಲಿ ಒಂದು; ಮೇದಸ್ಸು : ಧಾತುಗಳು ರಸಧಾತು, ರಕ್ತಧಾತು, ಮಾಂಸಧಾತು, ಮೇದೋಧಾತು, ಅಸ್ಥಿಧಾತು, ಮಜ್ಜಧಾತು, ಶುಕ್ಲಧಾತು ಎಂದು ಏಳು ತೆರನಾಗಿವೆ (ಸಿವೈ. ೯೪). [ಸಂ.]

**ಮೇಧ** (ನಾ). ಯಜ್ಞ ; ಯಾಗ : ಮೇಧಾದಿ ಕರ್ಮಗಳು ಮಾಡಿದರೇನು ಬ್ರಹ್ಮವಾದಿಗಳ ಸಂಗವಿಲ್ಲದನಕ (ಪಿಶಾಸು. ೬೨-೧). [ಸಂ.]

**ಮೇಧಾಯುಕ್ತ** (ನಾ). ಬುದ್ಧಿಶಕ್ತಿಯುಳ್ಳವನು ; ಬುದ್ಧಿವಂತ : ದಿನನಾಥಂ ಸಿಂಹದೊಳ್ ಕೂಡೆ . . . ಅತಿ ಮೇಧಾಯುಕ್ತನಕ್ಕುಂ ನರಂ (ಜಾತಿ. ೦೬-೦೫). [ಸಂ.]

**ಮೇಧಾವಂತ** (ನಾ). = ಮೇಧಾಯುಕ್ತ. [ಸಂ. ಮೇಧಾವತ್]

**ಮೇಧಾವಿ** (ನಾ). ೧. ಬುದ್ಧಿಶಕ್ತಿಯು ಬಲವಾಗಿರುವವನು; ಬುದ್ಧಿವಂತ : ಕನ್ಯೆಯೊಳ್ ಚಂದ್ರ ಕೂಡಿರೆ ಮೇಧಾವಿ ಮಹಾಗುಣಾಂಬುನಿಧಿ . . . ವಿತರಣವ್ಯಾಪಾರಶೂರಂ ನರಂ (ಜಾತಿ. ೦೬-೨೩) ; ಮೇಧಾವಿಗಳಾದ ಯಜ್ಞಕರ್ತರು ಉದಕದ ಸ್ಥಾನವನ್ನು ರಕ್ಷಿಸುತ್ತಾರೆ (ಋಕ್ಸಾ. ೩೬); ಇಡೀ ಕಾಲೇಜಿಗೆ 'ಮೇಧಾವಿ' ಎಂದು ಅರಿಸಲ್ಪಟ್ಟನು (ಸಸ್ಯ. ೦): ೨. ವಿದ್ವಾಂಸ; ಪಂಡಿತ : "ಸೂರಿ ಮೇಧಾವಿ . . . ಎನಲ್ಕೆ ವಿದ್ವಾಂಸ ನೆನಿಸಿಕ್ಕು" (ಮಂಗರಾ. ೬೬-೨) ; ತಾವು ನಿಜವಾಗೂ ಮೇಧಾವಿಗಳು (ದಾಸಕಿಂ. ೭೦). ೩. ಗಿಳಿ; ಶುಕ. ೪. ಅಗ್ನಿಕಾರ್ಯ ಮುಂತಾದುವುಗಳನ್ನು ಮಾಡಿದ ಮೇಲೆ ಅಗ್ನಿಕುಂಡದ ಅವಶೇಷದಿಂದ ಹಣೆಯ ಮೇಲೆ ಇಟ್ಟುಕೊಳ್ಳುವ ಬಟ್ಟು.—ರಕ್ಷೆ : ಪಿಡಿವ ಪಾತ್ರೆ ಪಿತಾಮಹನ ತಲೆ . . . ಇಡುವ ಮೇಧಾವಿಯೆ ಭಸಿತವೆಡಬಿಡದೆಸೆವ ಚಂಡಿಕೆಗಳ್ಳೆದುಂ ಜಡೆ ಕೊರಳ ಕೃಷ್ಣಾಜಿನವೆ ಕರಿಯುಜಿನವಾಗಿರಲು (ಬಸವ. ೬–೫೪).

[ಸಂ. ಮೇಧಾವಿನ್]

**ಮೇಧಾವಿತನ** (ನಾ). ಬುದ್ಧಿವಂತಿಕೆ : ಮಗನ ಮೇಧಾವಿತನವನ್ನು ಬೇಸರದಿಂದಲೇ ಹೇಳಿದ ವರದಪ್ಪನಾಯಕ (ಹೇಮು. ೯).[ಮೇಧಾವಿ + — ತನ]

**ಮೇಧಾವಿಳ** (ನಾ). ಬುದ್ಧಿವಂತ ; ಮೇಧಾವಿ : ಮೇಧಾವಿಳನೆನಿಸಿರ್ದುಂ ಮೇಧಾವಿಳಮತಿಗಿದೆಲ್ಲ ತಕ್ಕುದೆ (ಕುಸುಮಾ. ೦೦-೩೯). [ಸಂ. ಮೇಧಾವಿಲ?]

**ಮೇಧಾಶಕ್ತಿ** (ನಾ). ಬುದ್ಧಿಶಕ್ತಿ : ಅಸ್ಸರೆಯರಿಗೆ ವಿಚಿತ್ರವಾದ ಒಂದು ಮೇಧಾಶಕ್ತಿಯಿರುವುದು (ಮಹಾಚ. ೦೬೨); ಧನ ವ್ಯಯವಾದೀತೆಂದು ಈ ಕಾರ್ಯ ಸಾಧಿಸಲು ಹಿಂಜರಿಯುವುದಾದರೆ ನಾಡಿನ ಮೇಧಾಶಕ್ತಿ ಉಚಿತ ಮಾರ್ಗದಲ್ಲಿ ಪ್ರವಹಿಸಲಾರದೆ ಬಹುವಾಗಿ ಅಡ್ಡದಾರಿ ಹಿಡಿದು ವ್ಯರ್ಥವಾದೀತು (ಶಿಕ್ಷಣ. ೦೬೯). [ಸಂ.]

**ಮೇಧೆ** (ನಾ). ೧. ಬುದ್ಧಿಶಕ್ತಿ ; ಪ್ರತಿಭೆ : "ಪ್ರತಿಭಾ ಸಂವಿತ್ಪ್ರಜ್ಞಾ ಮತಿ ಮೇಧಾ ಬುದ್ಧಿ" (ಅಭಿಧಾ. ೯೬-೩); ವಿರತಿ . . . ಮೇಧಾ . . . ನಿಷ್ಠೆಯ ಮುಂತಾದ ಸಾತ್ವಿಕಗುಣಗಳಿಂ (ಒವೀಕ. ೨೯೭); ಶೇಷಣ್ಣನವರು ರಸಿಕರು. ಸುಕುಮಾರರು. ಬಹಳ ಚುರುಕಾದ, ಕದಡಿಲ್ಲದ ಮಿದುಳು, ಮರವಿಯದ ಮೇಧೆ (ಗಾಪಿ. ೪೦). ೨. ಮನಸ್ಸಿನ ಷೋಡಶವಿಕಾರಗಳಲ್ಲಿ ಒಂದು : ಐತರೇಯೋಪನಿಷತ್ತಿನಲ್ಲಿ ಸಂಜ್ಞಾನ (ಚೇತನಭಾವ), ಆಜ್ಞಾನ (ಈಶ್ವರಭಾವ), ವಿಜ್ಞಾನ (ಕಲಾದಿಪರಿಜ್ಞಾನ), ಪ್ರಜ್ಞಾನ, ಮೇಧಾ, ದೃಷ್ಟಿ, ಧೃತಿ . . . ಸಂಕಲ್ಪ, ಕ್ರತು, ಅಸು, ಕಾಮ, ವಶ ಈ ಹದಿನಾರು ಮನಸ್ಸಿನ ವಿಕಾರಗಳೆಂದಿರುವವು (ಅಮ್ನಿಕ. ೬-೨೬ ೫೬೯).

**ಮೇಧಾದಕ್ಷಿಣಾಮೂರ್ತಿ** = ೧. ಶಿವ. ೨. ಅಪೂರ್ವವಿದ್ವತ್ತನ್ನು ಗಳಿಸಿದ ಹಿರಿಯರನ್ನು ಗೌರವಸೂಚಕವಾಗಿ ಸಂಬೋಧಿಸುವ ಶಬ್ದ: ಈ ಶತಮಾನದ ಪ್ರಾರಂಭದಲ್ಲಿ ಅಪೂರ್ವವಿದ್ವತ್ತು ಗಳಿಸಿದ ಹಿರಿಯರನ್ನು 'ಮೇಧಾದಕ್ಷಿಣಾಮೂರ್ತಿ' ಎಂದು ಸಂಬೋಧಿಸುತ್ತಿದ್ದರು (ಕೂಶಿ).

[ಸಂ. ಮೇಧಾ]

**ಮೇಧ್ಯ** (ಗು). ೧. ಯಜ್ಞ, ಯಾಗಗಳಿಗೆ ಯೋಗ್ಯವಾದ. ೨. ನಿರ್ಮಲವಾದ : ಶುಚಿಯಾದ. ೩. ತಿನ್ನಲು ಯೋಗ್ಯವಾದ ;

ಸೇವಿಸಲು ಅರ್ಹವಾದ. (ನಾ). ೪. ಶುಚಿಯಾದುದು ; ಪವಿತ್ರವಾದುದು : "ಶುಚಿ, ಮೇಧ್ಯಂ, ಪವಿತ್ರಂ, ಪುಣ್ಯಂ, ಪಾವನಂ–ಈ ೫ ಶುದ್ಧಮಪ್ಪ ವಸ್ತು" (ಹಲಾಯು. ೨೨–೦೩೨); "ಪಾವನಂ ಶುಚಿ ಮೇಧ್ಯವೆನೆ ಪವಿತ್ರಮುದಕ್ಕಂ" (ಮಂಗಂ. ೯–೨೪). ೫. ಶುಚಿಯಾಗಿದ್ದು, ತಿನ್ನಲು ಯೋಗ್ಯವಾದುದು : ಬೇಂಟೆಯಾಡಿದರಲ್ಲಿ ಮೇಧ್ಯಂಗಳಂ ಮೃಗಗಳಂ (ಶ್ರೀರಾಪು. ೦೩೯–೪೯೩). ೬. ಆಡು ; ಮೇಕೆ. ೭. ಮುಂಜಹುಲ್ಲು. ೮. ಕಗ್ಗಲಿಮರ. [ಸಂ.]

**ಮೇನ** 'ಮೇನಾ' ನೋ.

**ಮೇನಕಾತ್ಮಜೆ** (ನಾ). ಮೇನಕೆಯ ಮಗಳು ; ಪಾರ್ವತಿ : "ರುದ್ರಾಣೀ, ಶರ್ವಾಣೀ... ಗಿರಿಜಾ, ಮೇನಕಾತ್ಮಜಾ–ಈ ೨೧ ಗೌರೀದೇವಿಯ ಪೆಸರ್" (ಹಲಾಯು. ೪–೦೬). [ಸಂ. ಮೇನಕಾತ್ಮಜಾ]

**ಮೇನಕೆ** (ನಾ). ೧. ಅಪ್ಸರಸ್ತ್ರೀಯರಲ್ಲಿ ಒಬ್ಬಳು ; ದುಷ್ಯಂತನ ಪತ್ನಿಯಾದ ಶಕುಂತಲೆಯ ತಾಯಿ : "ಘೃತಾಚೀ, ಮೇನಕಾ, ರಂಭಾ, ಊರ್ವಶೀ, ತಿಲೋತ್ತಮಾ, ಸುಕೇಶೀ, ಮಂಜುಘೋಷಾ–ಇವರು ಮೊದಲಾದವರ್ ಅಚ್ಚರಸಿಯರ್" (ಹಲಾಯು. ೦೫–೮೬) ; ದನಿಯಿಂಪು ಬೀಣೆಯಂ ಮಿಡಿವವೊಲಾಗೆ ಗಾನದೊಳೊಡಂಬಡೆ ಮೇನಕೆ ಮುಂದೆ ಪಾಡಿದಳ್ (ಶಂಪರಾ. ೭–೬೯); ಮೇನಕೆ ರಂಭೆ... ಮಂಜುಘೋಷೆಯೆಂಬೀ ನೆಗೞ್ದಗ್ಗದಚ್ಚರಿಯರಚ್ಚರಿಯಪ್ಪ ವಿಳಾಸಮಂ ಘಜಭ್ರೂನಟನೈಕದೇಶಮೆ ತಱುಂಬಿದುದು (ಪುಷ್ಪ. ೨–೭೬). ೨. ಪರ್ವತರಾಜನ ಪತ್ನಿ ; ಪಾರ್ವತಿಯ ತಾಯಿ : ಮಗೆ ಬಾಸೆ ಬಣ್ಣವೇಱಿತು... ಬಳಲ್ಕೆಯ ನೊಗೆದುವು ನವನವಮನೋರಥಂ ಮೇನಕೆ [ಪಾಠಾಂ. ಮೇನೆ]ಯಾ (ಗಿಂಶ. ೩–೩೯). [ಸಂ. ಮೇನಕಾ]

**ಮೇನತ್ತು** 'ಮೆಹನತ್ತು' ನೋ.

**ಮೇನಾ, ಮೇಣಾ, ಮೇಣೆ, ಮೇನ, ಮೇನೆ$_2$, ಮ್ಯಾನಾ** (ನಾ). ಹಿಂದೆ ಸಿರಿವಂತರು ಉಪಯೋಗಿಸುತ್ತಿದ್ದ ಸಾಮಾನ್ಯವಾಗಿ ಬೋಯಿಗಳು ಹೊರುತ್ತಿದ್ದ, ಬಾಗಿಲುಗಳುಳ್ಳ ಪಲ್ಲಕ್ಕಿಯಂತಹ ಒಂದು ವಾಹನ : ಇವರಲ್ಲಿ ಕೆಲವರು... ಡೋಲಿ ಮತ್ತು ಮೇನಾಗಳನ್ನು ಸಾಗಿಸುವುದಕ್ಕೂ ನೇಮಕವಾಗಿದ್ದರು (ಮುಜಾಪಂ. II, ೨೦); ಮಧ್ಯೆ ಮಧ್ಯೆ ಗಲ್ಲಿಯಿಂದ ಮೇನಾ ಹೊರುವವರ ಹಾಂ ಹೂಂ ಎಂಬ ಕೂಗೂ... ಕಿವಿಗೆ ಬೀಳುತ್ತಿತ್ತು (ಚಿಂಂರ. II, ೩). **ಮೇಣಾ** : "ಶಿಬಿಕಾ, ಯಾಪ್ಯಯಾನಂ, ೨ ಅಂದಲದ ಹೆಸರು, ಮೇಣಾ, ಡೋಲಿ, ಪಾಲಕ್ಕಿ" (ಸಿದ್ಧಾಂತ. ೨೩೨). **ಮೇಣೆ** : ಕೂಡಲೆ ಅವರು ಅವಳನ್ನು ಹೊರಗಿದ್ದ ಮೇಣೆಯಲ್ಲಿ ಕೂಡ್ರಿಸಿಕೊಂಡು ನಡೆದರು (ಅಂಶ. ೬೮); ಆ ಕೋಣೆಯಿಂದ ಕೆಳಗಿಳಿದು ಬಂದು ಈ ಮೇಣೆಯಲ್ಲಿ ಕುಳಿತು... ಬೆಳಗಿನಲಿ ಶಾಂತವಾಯ್ತು (ನಲಮು. ೩೭–೧). **ಮೇನ** : ಇಂದಿರೆಯು ಮಹೇಶಪುರದ ಊರ ಹೊರಗೇ ಮೇನವನ್ನು ನಿಲ್ಲಿಸಿ ತಂದೆಯ ಮನೆಗೆ ನಡೆದು ಹೋದಳು (ಬಂಕಮ. ೦೨೨). **ಮೇನೆ$_2$** : ಮೇನೆಯು ಆ ಗುಡ್ಡಗಾಡಿನ ಕಾಲುದಾರಿಯಲ್ಲಿ ಸಾಗಿಬರುತ್ತಿತ್ತು (ಕಲಪ. ೦೫); ಶಾಂತಲಾದೇವಿಯೂ... ಮೇನೆಯಲ್ಲಿ ಕುಳಿತು ಅಂತಃಪುರವನ್ನು ಸೇರಿದಳು (ಸಶಾ. ೬). **ಮ್ಯಾನಾ** : ಬೆಳ್ಳಿ ಪಾಲಿಕಿ ೧ ಸಾದಾ ಪಾಲಿಕಿ ೧ ಮ್ಯಾನಾ ೨ ರಥಗಳು ೪ (ಗುರುರ. ೦೦); ಶ್ರೀದೇವಿಯನ್ನು ಎತ್ತಿ ಮ್ಯಾನಾದಲ್ಲಿ ಮಲಗಿಸಬೇಕೆಂದು ಸಂಕಲ್ಪ ಮಾಡಿದನು (ಶ್ರೀರಾದು. ೦೬೨). [←ಪಾರ. ಮಿಯಾನಾ, ಮ್ಯಾನ್; ಹಿಂ. ಮಿಯಾನಾ ಮೇನ; ಮರಾ. ಮೇಣಾ, ಮೇನಾ]

**ಮೇನಾಗಿಡ** (ನಾ). ಒಂದು ಬಗೆಯ ಸಸ್ಯ : (ವೈಶಿಂ. ೩೬–೭೩೦).
[ಮೇಣಾ$_1$ + ಗಿಡ (< ಗಿಡು)]

**ಮೇನಾತ್ಮಜೆ** (ನಾ). = ಮೇನಕಾತ್ಮಜೆ : "ಉಮೆ ಪಾರ್ವತಿ ಕಾತ್ಯಾಯನಿ ಹಿಮವತ್ಸುತೆ ಚಂಡಿ ದುರ್ಗೆ ಮೇನಾತ್ಮಜೆ... ಎಂಬಿವಂಬಿಕೆಯ ಪೆಸರ್" (ನಸ್ತು. ೩–೦೬) ; ಮೇನಾತ್ಮಜಾನಾಥ ಕೋಪಿಸಲು ಕೊಲ್ಲುವನು ತಾನು ಒಲಿದಡೆ ಕಾಯ್ವನು (ಪಪಶೋ. ೬–೬೨). [ಸಂ. ಮೇನಾತ್ಮಜಾ]

**ಮೇನಿಯ** (ನಾ). (ಕರಾ) ಎಣ್ಣೆ ತೆಗೆಯುವವನು; ಗಾಣಿಗ : ಮಳೆಗೆ ಮುಂಚೆಯೇ ಆ ಕಾಯಿಗಳನ್ನು ಒಡೆದು ಬಿಸಿಲಿಗೆ ಹಾಕಿದ್ದರೆ, ಮೇನಿಯನಿಗೆ ಕೊಡಬಹುದಿತ್ತು (ಪಾರಮ. ೨೫) ; ಆದರೆ ತಿಮ್ಮಪ್ಪ ಈಗಲೂ ಮುದುಕನಾಗಿ ಮೂರುವರೆ ಹಲ್ಲು ಮಾತ್ರ ಉಳಿದರೂ ಎಣ್ಣೆ ಮೇನಿಯನಾಗಿಯೇ ಇದ್ದಾನೆ (ಹಹಸ. ೬೩). [ ? ]

**ಮೇನೆ$_1$** (ನಾ). = ಮೇನಕೆ ೨ : ಮೇನೆಯ ನಿನ್ನ ತಪಕ್ಕತಿ ಮಾನಿ ಮಹಾದೇವಿ ಕರುಣದಿಂ ನಿನ್ನುದರಸ್ಥಾನದೊಳಂ ಜನಿಯಿಸೆ ಸುಜ್ಞಾನಿಯನೆನೆ ಪುತ್ರಿಯೆಂಬರೇ ಧಾರಿಣಿಯೊಳ್ (ಗಿಂಶ. ೪–೫೦); ಮೇದಿನೀಧರರಾಜಮೇನೆಯರ್ ಬಹಳ ಹರುಷೋದಧಿಯೊಳಾಳ್ದು ... ಪೊಱಮಟ್ಟರು (ಕವಿಶ್ರೀ. ೩೭–೦೬). [ಸಂ. ಮೇನಾ]

**ಮೇನೆ$_2$** 'ಮೇನಾ' ನೋ.

**ಮೇಪು, ಮೇಹು** (ನಾ). ೧. ಜಾನುವಾರುಗಳು, ಹುಲ್ಲು ಮೊದಲಾದ ಆಹಾರವನ್ನು ಮೇಯುವಿಕೆ : ದೀಪದ ಬೇಂಟೆಯುಂ ಬಿನ್ನಪಗೆಯ್ವಡೆ ಗಾಳಿಯುಂ ಕಟಿಪುಮುಂಟಿಪುಂ ಕಾಪುಂ ಮೇಪುಂ ತೋಡಮುಂ ಬೀಡಮುಂ... ಪೆರ್ಚುಂ ಕುಂದುಂಮನಱಿದು (ಶಂಪರಾ. ೫–೪೩ ವ). ೨. ಜಾನುವಾರುಗಳು ತಿನ್ನುವ ಆಹಾರ ; ಜಾನುವಾರುಗಳಿಗೆ ಹಾಕುವ ಆಹಾರ : ದನಿಯ ಪೊಗರ್ ಮನೋಭವನ ಬಾಳ್ದೊಗರಂತಿರೆ ಚಿತ್ರಮಿತ್ತು, ಮೇಪನೆ ಮಱಿದಾಲಿಸುತ್ತಿಪೆವ ಪುಲ್ಲೆಯುಂ (ಲೀಲಾವ. ೮–೩೨); ಮೇಪಿಂ ಪುಲ್ಲಿಗಮುಂ ಬೆಳ್ಳಿಗಮುಂ ಪಳ್ಳಿಗಮುಂ ತಣಿಮುವು (ಅಸಂಕು. ೦೦–೩೯); ಆನೆ ಕುದುರೆಗಳ ಮೇಪುಗಳ್ಗಂ ಜೋದರಾವುತಪಾಯದಟದ ಜೀವಿತಂಗಳ್ಗಂ ... ದಂಡುಗಂಗೊಂಬುದೆನಿತಾನುಮುಂಟು (ಜಕಪಂ. ೪೫–೦೨). ೩. ಜಾನುವಾರುಗಳನ್ನು ಮೇಯಿಸುವುದು : ಮೇಪಿನ ಮಂಜ ಹಳೆ ಅಳಿಯ ಬಯಲಾಟಕ್ಕೆ ಹೋದವನು ಬೆಳಗಿನ ಜಾವ ವಾಪಸು ಬರುವಾಗ ಕತ್ತಲೇ ಆವರಿಸಿತ್ತು (ದೇಶಹಂ. ೫೫); ದನಕರುಗಳು ಹಾಯಾಗಿ ಮೇಯುತ್ತಿದ್ದಲ್ಲಿ ; ಮೇಪಿನ ಹುಡುಗರು ತಾಳ ಹಾಕುತ್ತ ಹಾಡತೊಡಗಿದರು (ನಡೆದಾ. I, ೪೪೨). ೪. ಜಾನುವಾರುಗಳು ಮೇಯುವ ಸ್ಥಳ,– ಪ್ರದೇಶ ; ಹುಲ್ಲುಗಾವಲು : ಮೇಪಿನ ದಾರಿಯಲ್ಲಿದ್ದ ಹುಣಸೆಮರದಲ್ಲಿ ಈ ಬೊಬ್ಬರ್ಯ ಇತ್ತಂತೆ (ದೇಶಹಂ. ೫೭). **ಮೇಹು** : ೨. ಮೇಹನಿಕ್ಕಿ ಮೈಯನೊರಸಿದಡೆ ಪಶುಗಳ್ ಮೆಚ್ಚುವವು ಅನ್ನವನಿಕ್ಕಿ ಹಿರಣ್ಯವ ಕೊಟ್ಟಡೆ ಜಗವೆ ಪೊಗಳುವುದು (ಸವಚಾವ. ೪. ೬೦೨–೬೩); ತುರಗಾನೀಕದ ಮೆಯ್ಯೋಸ್ತೊತ್ತಿಸುವ ನಿಚ್ಚಂ ಮೇಹನಾರೈವ ... ಚಿಂತೆಯಿಂ ನೇಲಿಸಿದಂ ಸೌಹಾರ್ದದಿಂ ಬಾಹುಕಂ (ನಳಕಂ. ೬೪೮) ; ಪೊರೆವ ದೀಹದ ಮಿಗಂಗಳ್ಗೆ ಮೇಹಂ ನೀಡಿ ಕರೆದು ಬೇಂಟೆಗಳನುಱಿ ಕಲಿಸುತಂ (ಕವಿಶ್ರೀ. ೫೩–೨೦).
[ಮೇ$_1$ + – ಪು$_2$/ತುಳು. ಮೇಪು]

**ಮೇಪುಗಾಡು, ಮೇಹುಗಾಡು** (ನಾ). ೧. ಜಾನುವಾರುಗಳು ಆಹಾರವನ್ನು ಹುಡುಕಿ ತಿನ್ನುವ ಸ್ಥಳ,– ಮೇಯುವ ಸ್ಥಳ : ಹುಲ್ಲುಗಾವಲು ; ಗೋಮಾಳ : ಮೇಪುಗಾಡಿಂ ಹಕ್ಕಲೆಗೆ ಹರಿಯಿಡುವ ಹರಿಣೀಗಣದ ಕಡೆವಾಯೊಳೆರೆಮೆಲ್ದುಟಿದೆಳಗಱುಂಕೆಯುಸಟ್ಟಳಂ ಸೆಳೆದು ತಂದಾ ಬಯಲೊಳ್ ಬಳ್ಳಿವಸಲೆಯುಂ ಪೊಸಯಿಸಿಯುಂ (ಕಂದ್ರಶ. ೬–೪ ವ); ಹುಲ್ಲೆಯ ಹಿಂಡು ಮಲ್ಲಣಿಸಿ ತಲ್ಲಣಗೊಂಡವು ಬೊಬ್ಬೆಯುಬ್ಬರ ಕ್ಕೊಲ್ಲದೆ ಮೇಪುಗಾಡೊಳರದೋಡಿತು ಪೆರ್ಮರೆ ... ಮೃಗಂಗಳಂ ಮಿಡುಕುಗೆಟ್ಟರುತಿರ್ದುದು ಕೂಡೆ ಬೇಂಟೆಯೊಳ್ (ಸೂಕ್ತಿಸು. ೩–೦೦೬). **ಮೇಹುಗಾಡು** : ೧. ಮೇಹುಗಾಡಿನೊಳವರ ಮೈ ಮಿಗೆ ಸೋಹಿದರೆ

ಪುವ್ವಳಿಯು ಸುಬ್ಬಲಿಯಾಹವದಲೇ ತೋಳ ತಕ್ಕೆಯು ತೋಟ ತೇಗುವರೆ (ಕುವ್ಯಾಕ. ೦೩-೦೭) ; ತುರುವುಂದೆ ಮೇಹುಗಾಡಿಂದ ಝುಣಝುಣಸಿ ಮನೆ ಮರಳುತಿರೆ (ವೃಶಾವ. ೭೪-೨೬೪). ೨. ಹುಲಿ ಮುಂತಾದ ಪ್ರಾಣಿಗಳು ತಮ್ಮ ಆಹಾರವನ್ನು ಹುಡುಕಿ, ಬೇಟೆಯಾಡಿ ತಿನ್ನುವ ಸ್ಥಳ : ಮರೆ ಲುಲಾಯ ವ್ಯಾಘ್ರ . . . ಕರಿಕಳಭ ಖಡ್ಗಿಪ್ರತಾನದ ಮೇಹುಗಾಡಿನಲಿ ಪರಿದು ಬೆರಸಿತು ಬೇಡಪಡೆ (ಕುರಾರಾ. ೩-೩-೦೩). ೩. (ಅಲಂ) (ಅಗ್ನಿಗೆ) ಆಹಾರವಾಗುವ ಸ್ಥಳ ; ಗ್ರಾಸವಾಗುವ ಪ್ರದೇಶ : ಊಹೆದೆಗಹಿನ ಕಂಬನಿಯ ತನಿಮೋಹರದ ಘನಶೋಕವಹ್ನಿಯ ಮೇಹುಗಾಡಿನ ಮನದ ಕೌರವನಿತ್ತನೋಲಗವ (ಕುವ್ಯಾದ್ರೋ. ೪೦-೧೨). [ಮೇಪು + ಕಾಡು$_2$]

**ಮೇಪುಗೊಳ್**, ಮೇಹುಗೊಳ್ (ಕ್ರಿ). ಮೇವನ್ನು ತೆಗೆದುಕೊಳ್ಳು ; ಮೇಯು : ಮೃಗಾಳಿ . . . ಪೊಱಗುಗೇಳ್ದು ಜಗದ್ವಿಪರಾಂತಪುಷ್ಪ ರಾವಣನ ಘನಚಾಪದಂಡರವಮಂ ನೆನೆದೆತ್ತಲುಮಿಾಕ್ಷಿಸುತ್ತೆ ಕಂಪಿಸಿಗಳಸಿಕ್ಕಿ ಮೇಪುಗೊಳಲೊಲ್ಲವು ರೂಢಿಯ ಶಾಡ್ವಲಂಗಳೊಳ್ (ಶಾರಂಕೃ. ೦೦೧); ನಿಶ್ಚೇಷ್ಟೆಯಿಂ ಮೇಪುಗೊಳ್ಳದೆ ಕಣ್ಮುಚ್ಚಿ ಹಿಮಾನಿಯಿಂ ನಡುಗುತಿರ್ಪಾ ಪುಲ್ಲೆಯುಂ ಕಂಡಿಸಲ್ ಪದಸೆಂದೇಟಿಲೊಡರ್ಚಿಯುಂ . . . ಪಟ್ಟಿದರ್ಪದು ಕೂಡೆ ಬೇಡಪಡೆ (ಜಗಪಿ. ೦೪-೦೪) ; ತ್ರೊಱ್ಗದಡಿಳಿದು ಪರಿದವು ಪಂಸೆರಳ ಕೊಳಸ ಸಾರಿದವು ಪಶುವ್ಯಾಗಂ ಮೇಪುಗೊಂಡು (ಸಂಧವಿ. ೨೨-೩೪).

**ಮೇಹುಗೊಳ್**: ಚರಣಮುಸಾಪಗಂ ಒಡಿಯೆ ಜೀಪಘನಂ ತನುಬೀಡೆ . . . ನಿರುಜನಡುತರ್ಪ ಮೇಹುಗೊಳುತುಂ ಒಡವಪ್ಪೊಡೆ ಹಾನಿ ರಾತ್ರಿಯೊಳ್ ಕಱಿಯೆ ನಿರಾಕುಳಂ ಬಱಡು ತತ್ಪತಿಗಾಗಳೆ ಕೇಡ ಮಾಡುಗುಂ (ಲೋಕೋಪ. ೪-೭೯); ಮೇಪುಗೊಳ್ಳದು . . . ಜ್ವರವಿಕಾರಮಾದೊಡೆ (ಷಯುಕಂ) ತುರಗಂ (ಅಶ್ವಶಾ. ೦೩-೧). [ಮೇಪು + ಕೊಳ್$_1$]

**ಮೇಪುದೊಱೆ** (ಕ್ರಿ). ಮೇಯುವುದನ್ನು ಬಿಡು ; ಆಹಾರವನ್ನು ತೊರೆ : ಪುಲಿ ಬಿರಿತೋಡೆ ಋಕ್ಷವಪನೀಜಪನೇಱ ರುರುವ್ರಜಂ ಮಹಾಕುಲತೆಯನೆಯ್ದೆ ಮೇಪ[ಶಾಕಾಂ. ವು]ದೊಱದೇಣ[ಣ]ಗಳೊಗ್ಗೊಡ ದೆಯ್ದೆ . . . . ಬೇಂಟೆವಱಯುಬ್ಬರಮುಣ್ಮಿತು ತದ್ವನಾಂತದೊಳ್ (ತ್ರಿಪುದ. ೨೭-೪೯). [ಮೇಪು + ತೊಱ$_1$]

**ಮೇಪುವಿಡು** (ಕ್ರಿ). = ಮೇಪುದೊಱೆ : ಕತ್ತರಿಸಿರೆ ಮೇಪುವಿಟ್ಟು ಕಿವಿಯಂ ಹುಯುಸಂತತಿ ಕರ್ಣತಾಳವಿಸ್ಫುರಿತಮನೊಲ್ಕು ಕೇಳೆ ಗಜರಾಜಿ ಲಯಾಂತಕಘೋಷಭೀಷಣಂ ಪುರದೊಳಗುಣ್ಮಿದತ್ತು ಭಯವಿಪ್ಲವಪೌರಕೃತಂ ಮಹಾರುತಂ (ಸಂಪ್ರಕು. ೯-೬೪). [ಮೇಪು + ಬಿಡು$_1$]

**ಮೇಬಳ್ಳಿ** (ನಾ). (ಕರಾ) (ಮೇಯಲು ಬಿಟ್ಟಾಗ ಓಡಿಹೋಗಲು ಸಾಧ್ಯವಾಗದಂತೆ) ದನಗಳ ಒಂದು ಕಾಲನ್ನು ಕುತ್ತಿಗೆಗೆ ಅಥವಾ ಮೂಗುದಾರಕ್ಕೆ ಸೇರಿಸಿ ಕಟ್ಟುವ ಬಳ್ಳಿ, —ಹಗ್ಗ : ಅಯ್ಯೋ ಮದುವೆಯೆಂದರೆ ಮೇಬಳ್ಳಿ ಹಾಕಿದ ಹಸುವಿನ ಹಾಗಾಯಿತು. ಇದೇನಿಲ್ಲ, ಗೋ ಬಿಟ್ಟ ಬಸವನಂತೆ ತಿರುಗಬಹುದಲ್ಲ (ಸರಸ. ೨೮). [ಮೇ$_1$ + ಬಳ್ಳಿ]

**ಮೇಬೊಲ** ' ಮೇಂಬೊಲ ' ನೋ.

**ಮೇಯ** (ಗು). ೧. ಅಳತೆಗೆ ಸಿಗುವ ; ಅಳೆಯಬಹುದಾದ : ಹಾಲಿನೊಳು ಬೆಣ್ಣೆಕಡಲೊಳಗೆ ನೀರ್ಗಲ್ಲಪೊಲು ತೇಲುವುದಮೇಯಸತ್ತ್ವದಲಿ ಮೇಯ ಜಗಮೂಲವರೆಯೊಳಗೊಂದು. ಮಾಪನದ ಬಗೆಗೆರಡು ಗಾಳಿಮುಸಿರುಗಳಂತೆ (ಮಂಕುತಿ. ೦೦೦). ೨. ತಿಳಿಯಬಹುದಾದ : ಅರಿಯಲು ಶಕ್ಯವಾದ. (ನಾ). ೩. ಅಳತೆಗೆ ಸಿಗುವಂಥದು : ಅಳೆಯಬಹುದಾದುದು. ೪. ತಿಳಿಯಲಾಗುವಂಥದು; ಅರಿಯಲು ಶಕ್ಯವಾದುದು : ಮೇಯವಲ್ಲದ ಮಹಿಮೆ ಛಾಯೆಯಾ ಬ್ರಹ್ಮನದು ತಾಯವಳು ನೀಂ ಮಗುವು (ಮಂಕುತಿ. ೦೪೫). [ಸಂ.]

**ಮೇಯರ್** ' ಮೇಯರು ' ನೋ.

**ಮೇಯರು**, ಮೇಯರ್ (ನಾ). ಪುರಸಭೆಯ ಅಧ್ಯಕ್ಷ ; ಮಹಾಪೌರ : ಹಿಂದೆ ನಮ್ಮ ಚಿಕ್ಕಪ್ಪ ಈ ಊರಿನ ಮೇಯರು ಆಗಿದ್ದರು (ರೂಢಿ). **ಮೇಯರ್** : ಇಂದು ನಾಗರಿಕಸೌಲಭ್ಯಗಳ ವಿಸ್ತರಣೆಯ ಬಗೆಗೆ ಮೇಯರ್‌ರವರು ಮಾತನಾಡಿದರು (ರೂಢಿ). [ ← ಇಂ. Mayor]

**ಮೇಯಿಸು**, ಮೇಸು (ಕ್ರಿ). ೧. ದನಕರುಗಳು, ಪಕ್ಷಿ ಮುಂತಾದುವು ಹುಲ್ಲು, ಆಹಾರಗಳನ್ನು ತಿನ್ನುವಂತೆ ಮಾಡು; ಮೇವನ್ನು ನೀಡು : ವಿಷಯರಹಿತನ ಮಾಡಿ ಭಕ್ತಿರಸವ ದಣಿಯೆ ಮೇಯಿಸಿ . . . ಸಲಹಯ್ಯಾ (ಬಸವ. ೫೦); ಗೋಕದಂಬಮಂ ಕರೆದು ಮುರಾರಿ ಮೆಯ್ದೊಡೆದು ಮೇಯಿಸಿ ಯುಂ ತಿಳಿನೀರನೂಡಿಯುಂ . . . ಮೆಱೆದಂ ನಿಜಗೋಪಲೀಲೆಯಂ (ಜಗಪಿ. ೫-೪೨); ಕರುಣಾ ಮಿಗೆಯೊಳ್ಗುಡುಕುಗಳಂ ಮುಂಬರಹಿ ವಿನೋದದಿ ಮೇಯಿಸಿ ಬಳಿಕಱ ಹರಿಸದಿನಾ ಪೆಣ್ಬಕ್ಕಿಯನುಡನಿಜೀವಱಯೊಳಡಂಗಿಸುತ (ಶಯುಶಾ. ೦೨-೪೦). ೨. (ಅಲಂ) ಲಂಚವನ್ನು ಸ್ವೀಕರಿಸುವಂತೆ ಮಾಡು ; ಲಂಚವನ್ನು ಕೊಡು : ಅವನಿಂದ ಏನಾದರೂ ಕೆಲಸವಾಗ ಬೇಕಾದರೆ ಮೊದಲು ಅವನಿಗೆ ಚೆನ್ನಾಗಿ ಮೇಯಿಸಬೇಕು (ರೂಢಿ).

**ಮೇಸು** : ೧. ಹರುಷದಿ ಎಲ್ಲರು ಹರಿಯ ಗುಣಂಗಳ ಸ್ಮರಿಸುತ ಗೋಗಳ ಮೇಸಿದರು (ಕೃಸಖಾ. ೨೭-೭); ಕೂಡಿ ತುರುಗಳ ಮೇಸುತಿರೆ ಕೈನೀಡಿ ಸನ್ನೆಯದೋರಿ (ಕಸಖಾ. ೫೬-೨೩) ; ಒಬ್ಬ ಕುರುಬಹುಡುಗನು ಕುರಿಗಳನ್ನು ಮೇಸುವುದಕ್ಕೆ ದಿನಾಲು ಅಡವಿಗೆ ಹೋಗುತ್ತಿದ್ದನು (ಮುಂಬಯು. ೨-೩೪). [ಮೇ$_1$ + — ಇಸು$_3$]

**ಮೇಯು** ' ಮೇ$_1$ ' ನೋ.

**ಮೇರಯ** (ನಾ). ಒಂದು ಬಗೆಯ ಮಾದಕಪಾನೀಯ. – ಸುರೆ : ಸುರಾ ಮೇರಯ ಮದ್ಯಗಳನ್ನು ಸೇವಿಸುವುದರಿಂದ ಆಗುವ ಕೇಡು ಆರು (ಬುದ್ಧಪ. ೧೭೯). [ < ಸಂ. ಮೈರೇಯ]

**ಮೇರು$_1$** (ನಾ). ೧. ಪುರಾಣೋಕ್ತವಾದ ಒಂದು ಪರ್ವತದ ಹೆಸರು ; ಹೇಮಾದ್ರಿ ; ಕನಕಾದ್ರಿ ; ℗ ೮೪,೦೦೦ ಯೋಜನಗಳ ಎತ್ತರದ ಈ ಪರ್ವತವು ಜಂಬೂದ್ವೀಪದ ನಡುವೆ ಇದ್ದಿತೆಂದೂ ಚಿನ್ನ ಮತ್ತು ಮುತ್ತುರತ್ನಗಳನ್ನು ಒಳಗೊಂಡ ಇದು ಬ್ರಹ್ಮನ ವಾಸಸ್ಥಳವೆಂದೂ ಪುರಾಣಗಳಲ್ಲಿ ವರ್ಣಿತವಾಗಿದೆ : " ಮೇರುಃ, ಸುರಪರ್ವತಃ, ಸುಮೇರುಃ – ಈ ಮೂಱು ಮೇರುಪರ್ವತಂ" (ಶಬ್ದಮಂ. ೨೨-೦೩೫); ಮೇರುಗುಣವನಱಸುವುದೆ ಕಾಗೆಯಲ್ಲಿ (ಬಸವ. ೭೭) ; ಕೈಲಾಸವಮಕೆ ಹುರುಡಿಸುತಲಿರ್ಪುದು ನೋಡ ಮೇಲೆನಿಪ ಮೇರು ನೆಣಸುತ್ತಿರ್ಪುದು ನೋಡ (ಶರುಶ. ದೇ. ೩-೨೦). ೨. ಜಪಸರದ ನಡುವೆ ಇರುವ ದೊಡ್ಡ ಮಣಿ, – ನಾಯಕಮಣಿ : ಜಪವ ಮಾಡುತ ನುಡಿದಿರೋ . . . ಜಪಸರದಿ ಮೇರುವಿಗೆ ಬಾರದೆಯರ್ಧಮಣಿಯೊಳಗೆ ಜಪವ ಬಿಟ್ಟರೊ (ಸಂಕನಾ. ೭-೦೩). ೩. ಶ್ರೇಷ್ಠವಾದುದು ; ಮಿಗಿಲಾದುದು ; ಉತ್ತಮವಾದುದು : ಕಳೆಗಳೊಳು ನಾಸಿಕವಿುಗಿಲುಯಾಭರಣಂಗಳೊಳು ಮೇರು ಮೂಗುತಿಯು (ಪಪಮೋ. ೦೦-೨೫). ೪. ನಡುವೆ ಇರುವಂಥ ವ್ಯಕ್ತಿ, ಕೇಂದ್ರವ್ಯಕ್ತಿ ; ಅಗ್ರೇಸರ : ಕಟ್ಟಾಯದ ಕಣೆ ಪೆಂಪಿನ ಕಟ್ಟಳೆ ಚೌಪಟದ ಮೇರು ಸನ್ನಿಯ ತವರೂರ್ ನೆಟ್ಟನೆನಿಸಿದ ಜಸಂ ನೇರ್ಪಟ್ಟರೆ ನಿಟ್ಟಾಯುವಕ್ಕೆ ದುಟ್ಟತಳಕ್ಕಂ (ಕಾವ್ಯಾವ. ೨೨೯). [ಸಂ.]

**ಮೇರು$_2$** (ನಾ). ಎಲ್ಲೆ ; ಗಡಿ ; ಸೀಮೆ : ಜಾಲಿಪುರದ ಬೇಗೂರ ಮಧ್ಯದ ಹಳಸಾಗರ ಮೇರುವಾಗಿ ಸಲುವುದು (ಎಕ. XIV, ಗುಂತ್ರು. ೦೨೭-೨೧; ?).

[ ℗ ಇದು 'ಮೇರೆ' ಎಂಬುದರ ಅಪಲಿಖಿತವಿರಬಹುದು ]

**ಮೇರುಕೃತಿ** (ನಾ). ಅತ್ಯಂತ ಶ್ರೇಷ್ಠವಾದ ಕೃತಿ ; ಅತ್ಯುತ್ತಮವಾದ ಗ್ರಂಥ : ಶ್ರೀ ಕುವೆಂಪುವ ಸೃಜಿಸಿದೀ ಮಹಾಛಂದಸಿನ ಮೇರುಕೃತಿ ಮೇಣ್ ಜಗದ್ಭವ್ಯ ರಾಮಾಯಣಂ! (ಶ್ರೀರಾಮಾ. iv. ೨೭ ಮುನ್ನುಡಿ): ಷೆಲ್ಲಿ

ಪ್ರಮಿಥ್ಯೂಸ್ ಕತೆಯನ್ನು . . . ತನ್ನ ಪ್ರತಿಭೆಯ ಪ್ರಭಾವದಿಂದ ಬೌದ್ಧಿಕ ತಾತ್ತ್ವಿಕ ನೈತಿಕಮೂಲಗಳನ್ನುಳ್ಳ ಮೇರುಕೃತಿಯಾಗಿ ಮಾರ್ಪಡಿಸಿದನು (ಐಶ್ವತ್ಥ. LXXi, ೩೬೩೪) ; ಸಮಾರಂಭಗಳಲ್ಲಿ ಪಂಪರನ್ನರ ಮೇರುಕೃತಿಗಳ ಬಗ್ಗೆ . . . ಉಪನ್ಯಾಸಗಳನ್ನೇರ್ಪಡಿಸುವುದುಂಟು (ಕಥಕ. ೩). [ಸಂ.]

**ಮೇರುದಂಡ** (ನಾ). [ಯೋಗ] ಮೆದುಳುಬಳ್ಳಿ ; ಬೆನ್ನುಹುರಿ : ಮೇರುದಂಡವು ಚಾಗಿತು ಹೊತ ಹಾಗೆ ಹೃದಯವಾಕೂತಿಗಿದೆ ಕಣ್ಣು ಮೇಗೆ (ಸೂರ್ಯಕಾ. ೦-೦೨). [ಸಂ.]

**ಮೇರುದಂಡೆ** (ನಾ). = ಮೇರುದಂಡ : ಬೆನ್ನಿನ ಮೇರುದಂಡೆಯ ಎರಡೂ ಪಕ್ಕಗಳಲ್ಲಿ ವಿದ್ಯುಚ್ಛಕ್ತಿಯು ಹರಿವಂತಾಗಿ . . . ಸ್ಫೋಟಿಸುತ್ತದೆ (ವಾಹೋಸಂ. ೩೦೦). [ಸಂ. ಮೇರುದಂಡ]

**ಮೇರುನಗ** (ನಾ). ಪುರಾಣೋಕ್ತವಾದ ಒಂದು ಪರ್ವತದ ಹೆಸರು; ಮೇರುಪರ್ವತ : "ಸುರಗಿರಿ ಮೇರುನಗಂ ಮಂದರಾದ್ರಿ ಕನಕಾಚಳಂ ಸುಮೇರುಮಹೀಧ್ರಂ" (ಪತ್ತುಕೋ. ೦೦-೫೭) ; ಮೇರುನಗಾಗ್ರದಿಂ ಧರೆಗುರುಳ್ವುವೆನೋ . . . ನಾರಕದುಃಖಮಂ ಸೆಣಿಸಿ ಯೊಳೂಡುವೆನೋ ಪಲಕಾಲಮಾತನಂ (ಚಂದ್ರಶೃ. ೫-೬೭) [ಸಂ.]

**ಮೇರುಪರ್ವತ** (ನಾ). = ಮೇರುನಗ : ಈ ಶಾಸ್ತ್ರದ ಪ್ರಚಾರ ಮೇರುಪರ್ವತದ ಮೇಲೆ ಆಯಿತು (ಭಾರದ. ೨೬೩). [ಸಂ.]

**ಮೇರುಪ್ರಸ್ತಾರ** (ನಾ). [ಛಂದ] ಎಂಟು ಬಗೆಯ ಪ್ರಸ್ತಾರಗಳಲ್ಲಿ ಒಂದು; ಒಂದು ಛಂದಸ್ಸಿನ ಪ್ರಸ್ತಾರದ ಎಲ್ಲ ಪ್ರಕಾರಗಳನ್ನೂ ತಿಳಿಸುವ ಚಿತ್ರರೂಪವಾದ ಪ್ರಸ್ತಾರ : "ಒಂದುದಿಯಿಂದಿಪ್ಪತ್ತಾಱು ಛಂದಂಬರಂ ಮೇರುಪ್ರಸ್ತಾರಮಕ್ಕುಂ" (ಛಂಗರಾ. ೦೦೬-೨೩). [ಸಂ.]

**ಮೇರುಮಂದರ** (ನಾ). [ಜೈನ] ಬಾಹುಬಲಿವಿಗ್ರಹದ ಮುಂದಿರುವ ಮಂದರವೆಂಬ ತೇರಿನ ಭೇದಗಳಲ್ಲೊಂದು : ಬಾಹುಬಲಿವಿಗ್ರಹ . . . ಇದರ ಮುಂದಿರುವ 'ತೇರಿ'ಗೆ ಮಂದರವೆಂದು ಹೆಸರು. ಮಂದರಗಳಲ್ಲಿ ನಂದೀಶ್ವರ ಮತ್ತು ಮೇರು ಎಂಬ ಭೇದಗಳಿವೆ ಎಂದೂ ಇದು ಮೇರುಮಂದರವೆಂದೂ ಹೇಳಲಾಗಿದೆ (ಶೊಧ್ಯವಾ. ೨೦೭). 'ನಂದೀಶ್ವರ' ಪರಾ. [ಸಂ.]

**ಮೇರುಮಾನಿ** 'ಮೆಹರ್ಬಾನ್$_2$' ನೋ.

**ಮೇರುವೆ** (ನಾ). ೧. ಶತ್ರುಗಳ ಕೋಟೆಯನ್ನು ಕೆಡವಲು ಕೋಟೆಗಿಂತ ಎತ್ತರವಾಗಿರುವಂತೆ ಕಟ್ಟುವ ಪ್ರತಿಕೋಟೆ : ಇಡು ಕೋಟೆಯ ಫಿರಂಗಿಪುಲಿಯಗಳ ಹೂಳು ಬಿಡದೆಬ್ಬಿಸು ಮೇರುವೆಯ (ಕಂಪಬಿ. ೦೩-೪೫) ; ಆಗಸವನು ತುಡುಕುವ ಮೇರುವೆಗಳ ಮೇಗೇಱಿ ಖಾನನ ಭಟರು ಬೇಗದೆ ಪಟಲಗುಂಡುಗಳ ಮಳೆಯನು ಸರಾಗದೊಳುಬ್ಬಿ ಕಱೆದರು (ಕಂಪಬಿ. ೦೪-೦೩). ೨. ಕೋಟೆಗಳ ಮೇಲೆ ಮಾಡಿರುವ ಅಲಂಕಾರಸಾಧನ : ತಳಿರ ಗುಡಿತೋರಣದ ಸಾಲ್ಗಳಿಂದೆಡೆಗೆಡೆಗೆ ತೊಳಪ ಮುಕುಳದ ಮಕರತೋರಣಗಳಿಂದೆ ಪೂಗಳ ಕುರುಜು ದೊಡ್ಡ ಮೇರುವೆಗಳಿಂದ . . . ಚೆಲ್ವಾದುದಾ ಬಸಂ (ಕಬಿತ್ಥ. ೪೫-೨೭); ಬಳಸಿದ ತಳಿಯ ಮುರಿವ ಕೋಟೆಯ ಮೇರುವೆಗಳಿಗೆ ಕಿಚ್ಚನ್ನಿಕ್ಕಿದರು (ಕಬೀರ. ೦೦೩). 'ಮೇರು$_1$' ಪರಾ. [ ? ]

**ಮೇರೆ$_1$** (ನಾ). ೧. ಎಲ್ಲೆ ; ಗಡಿ ; ಸೀಮೆ ; ಸರಹದ್ದು : ಪರಿಹಾರಸಮಾನ್ವಿತಮುಂದಕಪೂರ್ವನ್ದತ್ತ ಪೊಲ ಮೇರೆ (ಎಕ. X (8), ಮುಳಬಾ. ೩೨೬-೪೪; 650); ಎಮ್ಮಾಳ್ವ ಪಟ್ಟಂಡಕಿಂತಿದಱಿಂದಿತ್ತೆಯ ಮೇರೆ ನೋಡಿಮೆಮಗೀ ಶೈಳೇಂದ್ರಮೆಂದೆಂದು ತೋಱಿದಂ . . . ಹೈಮಾದ್ರಿಯಂ (ಅಜಿತ. ೦೩-೬೪): ಮೂಡಲು ಸುಗ್ಗಾವೆಯ ಪೊಲ ಮೇರೆ ಬಡಗಲು ಬಟ್ಟೆ ತೆಂಕಲು [ಎಲವದ] ಮೇರೆ (ಪಾಂಡೇಶ. ೬-೩೫; 1055); ಪಿಡಾಱಿದ ಜಕ್ಕಮನ್ನೆಯನ ಮೇರೆಯಿಲ್ಲದ ಬಲವಾರಿಧಿಯನು ನೋಡಿದಾರುಭಟೆಯನೇವೇಳ್ವೆ (ಕಂಪಬಿ. ೩-೬೪). ೨. ಮಿತಿ : ಸಹನಶಕ್ತಿಗೂ ಒಂದು ಮೇರೆಯಿದೆ (ಹಾಹುತ್ತ. ೪೪). ೩. ಆಶ್ರಯ ; ನೆಲೆ ; ಬೀಡು : "ಇಕ್ಕೆ, ಇಂಬು, ಗೊತ್ತು, ನೆಲೆ, ತಾಣಂ, ತಾಯ್ವನೆ, ಮೇರೆ . . . ಆಗರಂ – ಈ ೧೫ ಆಶ್ರಯಕ್ಕೆ ಪೆಸರ್" (ಕ೭ನಾ. ೫೯-೨೯೦). ೪. ಅಭಿಪ್ರಾಯ : ಅರ್ಥವ್ಯಾಪ್ತಿ : ಈ ಶಾಸನದ ಮೇರೆಯೊಳ್ ಸ್ವಯಂಬುದೇವರ್ಗೆ ಬಿಟ್ಟ ಧರ್ಮ್ಮಮಂ ರಕ್ಷಿಸಿದಾತಂ . . . ಕ್ರತುಶತಮಂ ಯ × ಕೊಟ್ಟ ಫಲಮನೆಯ್ದುಗುಂ (ಸೌಇಇ. XI-i, ೪೯-೨೭; 1002).

[ದೇ.೫ ತಮಿ. ಮೇರೈ; ಮಲ. ತೆಲು. ಮೇರ ; ತುಳು. ಮೆಯಿರೆ, ಮೇರೆ. / ಸಂ. ಮರ್ಯಾ]

**ಮೇರೆ$_2$** (ಅ). ಪ್ರಕಾರವಾಗಿ ; ರೀತಿಯಲ್ಲಿ : ಈ ಮೇರೆ ತಿಳಿಯತಕ್ಕದ್ದು (ಸಿದ್ಧಾಂತ. ೨೫೩) ; ಈ ಮೇರೆ ಊಹಿಸತಕ್ಕದ್ದು (ಸಿದ್ಧಾಂತ. ೩೫೪). 'ಮೇರೆಗೆ' ಪರಾ. [< ಮೇರೆ$_1$]

**ಮೇರೆಗಟ್ಟು** (ಕ್ರಿ). (ಆಲಂ) ಅಧಿಕಾರದ ಪರಿಮಿತಿಯನ್ನು ನಿಶ್ಚಯಿಸು : ಆ ವೇಂಕಟಪತಿರಾಯನು ಈ ಶಾಸನದಲ್ಲಿ ಈ ಪಟ್ಟಣದ ರಾಜ್ಯಶ್ರೀಯ ಅರಸುತನವನ್ನು . . . ರಾಜಒಡೆಯನಿಗೆ ವಹಿಸಿಕೊಟ್ಟು . . . ಮಾಣ್ಡಲಿಕ ಎಂದು ಮೇರೆಗಟ್ಟಿ ಮುದ್ರಿಸಿದ್ದರೆ ? (ಮಂಶ್ರಕ. ೦೨-೯).

[ಮೇರೆ$_1$ + ಕಟ್ಟು$_1$]

**ಮೇರೆಗಲ್ಲು** (ನಾ). ಗಡಿಯನ್ನು ಸೂಚಿಸಲು ಗುರುತಾಗಿ ನೆಡುವ ಕಲ್ಲು ; ಗಡಿಕಲ್ಲು : ಬಾಂದುಕಲ್ಲು : ವೈಷ್ಣವದಾನವಾಗಿದ್ದರೆ ಗರುಡನ ಕೆತ್ತನೆಯುಳ್ಳ ಮೇರೆಗಲ್ಲುಗಳನ್ನೂ ನಿಲ್ಲಿಸಬೇಕು (ಶಾಸಗ. ೫) ; ಕಾಲಪಥದಲ್ಲಿ ನನ್ನ ಪ್ರೇಯಸಿಯ ಮರಣವು ನೆಟ್ಟ ಮೇರೆಗಲ್ಲನ್ನು ದಾಟಿ . . . ಬರೆಯಲು ಹೊರಟರೆ (ಹೋದಕ. ೪೭). [ಮೇರೆ$_1$ + ಕಲ್ಲು ( < ಕಲ್$_3$)]

**ಮೇರೆಗಳೆ** (ಕ್ರಿ). ೧. ಗಡಿಯನ್ನು ಮೀರು ; ಎಲ್ಲೆಯನ್ನು ದಾಟು ; ಅತಿಕ್ರಮಿಸು : ಮಾರಯ್ಯನ ಪರಮಾನಂದ ಮೇರೆಗಳೆದ ಮಹಾಸಾಗರದಂತೆ ಹರಿಯಿತು (ಮೋಳಿಷಾ. ೭೪ ಕ್ರಸ್ತಾವನೆ). ೨. (ಕವಿವರ್ಣನೆಯಲ್ಲಿ) ಲೋಕಸ್ಥಿತಿಯ ಎಲ್ಲೆಯನ್ನು ಮೀರು : ಮೇರೆಗಳೆದಿರೆ ವಿಶೇಷವಿಚಾರಮನಧಿಕೋಕ್ತಿಯೊಳ್ ತಗುಳ್ಚುವುದಕ್ಕುಂ (ಕಬಿರಾ. ೩-೯೦). [ಮೇರೆ$_1$ + ಕಳೆ$_1$]

**ಮೇರೆಗಿಡು** 'ಮೇರೆಗೆಡು' ನೋ.

**ಮೇರೆಗೆ** (ಅ). ರೀತಿಯಲ್ಲಿ; ಪ್ರಕಾರವಾಗಿ ; ಅನುಗುಣವಾಗಿ : ಇವಳ ಪ್ರಾರ್ಥನೆ ಮೇರೆಗೆ ರಾಯನು ಅಲ್ಲಿ ಒಂದು ದೊಡ್ಡಕೆರೆಯನ್ನು ಕಟ್ಟಿಸಿದನು (ಕೃದೇವ. ೦೪); ನಿನಗಿಂತ ಹಿರಿಯರಾದವರು ಹೇಳಿದ ಮೇರೆಗೆ ನಡೆ (ಮುಂಬಯಿ. ೪-೩೯); ವಿಶ್ವದ ಚಟುವಟಿಕೆಗಳೆಲ್ಲ ಪ್ರಕೃತಿಯ ಆಜ್ಞೆಯ ಮೇರೆಗೆ ಸಾಗುತ್ತವೆ (ಧರ್ಮಗಾ. ೦೩೨). 'ಮೇರೆ$_2$' ಪರಾ.

[ < ಮೇರೆ$_1$ ]

**ಮೇರೆಗೆಡಿಸು** (ಕ್ರಿ). (ಆಲಂ) ಅಸ್ತಿತ್ವವಿಲ್ಲದಂತೆ ಮಾಡು ; ಲಯಗೊಳಿಸು ; ಪ್ರಳಯಮಾಡು : ಆ ರಜೋಗುಣದಿಂದ ನೀನೇ ಘೋರಿ ಜಗವನು ಮಾಳ್ಪೆ ಸಲಹುವೆ ಸಾರಸತ್ವಗುಣಾವಲಂಬನದಿಂದ ಮತ್ತಿದನು ಮೇರೆಗೆ[ಡಾಕಾಂ. ೧]ಡಿಸುವೆ . . . ಪಂಪನಕ್ರೂರ (ಜೈಭಾಗ. ೦೦-೪೫-೨೩).

[ಮೇರೆ$_1$ + ಕೆಡಿಸು$_1$]

**ಮೇರೆಗೆಡು, ಮೇರೆಗಿಡು** (ಕ್ರಿ). ಮಿತಿಮೀರು ; ಅಳವಿಗೆ ಸಿಗದಿರು : ಮೇರೆಗೆಟ್ಟ ಕೋಟಲೆಗಳನುಣ್ಣನೆಂಬಟಲ ಸ್ವೈರಣೆಯೋ (ಕಾದಂಬೂ. ೯೨೦) ; ಮೂದಲಿಸಿ ಹಾಡುತಂ ಮುದ್ದಿಸುತೆ ಹಾಡುತಂ ಆದರಿಸಿ ಹಾಡುತಂ ಮೇರೆಗೆಡೆ ಹಾಡುತಂ (ಬಸರ. ೯-೦೯೬). **ಮೇರೆಗಿಡು** : ಬಾರಾ. ಉಮೇ ನಮ್ಮ ಭಕ್ತನಂ ನೋಡುವಂ ಮೇರೆಗಿಡೆ ಜೀವಪರಿಯಂತರಂ ಕಾಡುವಂ (ಅಂರ. ಲೀ. ೦೭೫-೦೦). [ಮೇರೆ$_1$ + ಕೆಡು$_1$]

**ಮೇರೆಗೊಳ್** (ಕ್ರಿ). ಎಲ್ಲೆಯನ್ನು ಅನುಸರಿಸು: ಮೂಡಲು ಹಳ್ಳಸಾಗರ ಮೇರೆಗೊಂಡು ಬಂದು ಪಟ್ಟದರಸೀ ಆಲದ ತಾಳ್ಕಿನಲ್ಲಿ ದೇವರಾಯಪುರದ ಕಲ್ಲುವತ್ತಿನಲ್ಲಿ ನೆಟ್ಟ ಕಲ್ಲು ೧ (ಎಕ. XIV. ಮೈಸೂರು. ೦೦೬-೬೬; 1664). [ ಮೇರೆ$_1$ + ಕೊಳ್$_1$ ]

**ಮೇರೆದಪ್ಪು** (ಕ್ರಿ). ೧. ಗಡಿ ಅಥವಾ ದಡವನ್ನು ಮೀರು ; ಎಲ್ಲೆಯನ್ನು ದಾಟು : ಅತಿಕ್ರಮಿಸು :. ಪ್ರಳಯಕಾಲದ ಸಮುದ್ರಂ ಮೇರೆದಪ್ಪಿದಂತೆ ಚಾತುರ್ದಂತಬಲಂಬೆರಸು ಬಂದು ಪೊಟಲಂ ಮೂವಳಸಾಗಿ ಮುತ್ತಿದೊಡೆ (ವಡ್ಡಾ. ೦೯೯-೩) ; ಪ್ರಳಯಕಾಲಜಳನಿಧಿಗಳಂತೆ ಮೇರೆದಪ್ಪಲ್ ಬಗೆದ ತನ್ನ ನಾಲ್ವರ್ ತಮ್ಮಂದಿರ ಮುನಿದ ಮೊಗಮಂ ಕಂಡು (ಶಂಕಥಾ. ೬-೮ ವ) ; ಈ ಟಿಟ್ಟಿಭನ ತತ್ತಿಗಳಂ ವಾರಿಧಿ ಮೇರೆದಪ್ಪಿಕೊಂಡುಯ್ದೊಡೆ ಪುಯ್ಯಲಿಡಲ್ಬಂದವು (ಪಂತಕಂ. ೦೬೩-೭) ; ಅಂಭೋನಿಧಿ ಮೇರೆದಪ್ಪಿದ ತೆಱಂ ಬಂದತ್ತನೀಕಾರ್ಣವಂ (ಕಾವ್ಯಸಾ. ೯೬೩). ೨. ಅಧಿಕವಾಗು; ಅತಿಶಯಿಸು : ಸತತಂ ಪೊರೆವಾಳ್ದನೆ ಬಾರ ಮೇರೆದಪ್ಪಿದ ಕರುಣಾಬ್ಧಿ ಬಾರ (ಶಂಬಾಶ. ೦೬) ; ಮೇರೆದಪ್ಪಿತು ಕೌರವನ ಪರಿವಾರದಲಿ ಜೇಹವರು ಮಕುಟದ ಭಾರಿಯಾಳುಗಳಾಂತುಕೊಂಡರು ಪಾರ್ಥನಂದನನ (ಕುಮಾವ್ಯದ್ರೋ. ೬-೦). [ಮೇರೆ$_1$ + ತಪ್ಪು$_1$]

**ಮೇರೆಮೀರು** 'ಮೇರೆಮೀಱು' ನೋ.

**ಮೇರೆಮೀಱು. ಮೇರೆಮೀರು** (ಕ್ರಿ). ೧. (ಯಾವುದೇ ವಿಷಯದಲ್ಲಿ) ಪರಿಮಿತಿಯನ್ನು ಮೀರು : ಅತಿಕ್ರಮಿಸು ; ಉಲ್ಲಂಘನೆ ಮಾಡು : ಮೇಳಗೊಳುವುದವನೊಳು ಮೇರೆಮೀಱದೆ (ಹರಿಶ. ೩-೯೯). **ಮೇರೆ ಮೀರು** : ೨. ಅತಿಶಯವಾಗು : ಅಧಿಕವಾಗು : ಮೇರೆಮೀರಿದ ವಾತ್ಸಲ್ಯ ಕಕ್ಕುಲತೆಯು ಇದಕ್ಕೆ ಕಾರಣವಾಗಿರುತ್ತವೆ (ಮುಕ್ತಶ್ರ. ೦೩೩). [ಮೇರೆ$_1$ + ಮೀಱು]

**ಮೇರೆಯಱಿ** (ಕ್ರಿ). (ನಡವಳಿಕೆಯ) ಪರಿಮಿತಿಯನ್ನು ತಿಳಿ ; ಇತಿಮಿತಿಯನ್ನು ಅರಿತುಕೊಳ್ಳು : ನಾರಿ ಕೇಳ್ನಿನ್ನ ಮನೋರಥ ನೆಱೆ ಕೈಸಾರಿತು ಜಲುವರೆಱೆಯನ ಮೇರೆಯಱಿತು ನಡಿಸು (ಕಂಪಹ. ೦೦-೩೬). [ಮೇರೆ$_1$ + ಅಱಿ]

**ಮೇರೆವರಿ** (ಕ್ರಿ). ಎಲ್ಲೆ ಅಥವಾ ದಡವನ್ನು ಮೀರಿ ಮುನ್ನುಗ್ಗು : ಅಂತಾಗಸಮಿಾಂದಂತೆಯುಮೆಳೆ ಬೆಸಲಾದಂತೆಯುಂ ಮುನ್ನೀರ್ ಮೇರೆವರಿದಂತೆಯುಂ ನಡೆದು . . . ನಿಲಲೊಡನೆ (ಕಬ್ಬಿಗಾ. ೨೩೬) ; ಶ್ರೀವಧುವಿನಂಬಕಚಕೋರಕಂ ಪೊರೆಯೆ ಭಕ್ತಾವಳಿಯ ಪ್ರತ್ಯುಮುದಕೋರಕಂ ಬಿರಿಯೆ ಜಗತೀವಲಯದಮಲಸೌಭಾಗ್ಯರತ್ನಾಕರಂ ಪೆರ್ಚ ನಿಂ ಮೇರೆವರಿಯೆ (ಕೃಪಾಭಾ. ೦-೦). [ಮೇರೆ$_1$ + ಪರಿ$_2$]

**ಮೇರೆವಿಡಿ** (ಕ್ರಿ). = ಮೇರೆಗೊಳ್ : ಮೇರೆವಿಡಿದು ವೃತ್ತಾಕಾರದಿಂದಾಗ ಸೂರಮಂಡಲವ ತುಡುಕುತ ಚಾರುತರದ ದಿವ್ಯನಪರತ್ನದ ಕೋಟೆ ತೋಱಿತು ಕಣ್ಗೆ ಕೌತುಕವ (ಕಂಪಹ. ೨-೩೯). [ಮೇರೆ$_1$ + ಪಿಡಿ$_1$]

**ಮೇರೆಸಾಲು** (ನಾ). ಗಡಿಯನ್ನು ಸೂಚಿಸಲು ನೆಟ್ಟ ಕಲ್ಲುಗಳ ಸಾಲು. -ಶ್ರೇಣಿ : ಮುಂದಣ ಕೆಱೆಯ ಒಂದೆ ಗದ್ದೆ ಕೊ ೧೦ ಹಿರೆಯತಿಲಮಾಳ ಕೆಯ ಬೊಮ್ಮಸಮುದ್ರದ ಹಿಂದಣ ಪರಳ ಕೆಯಿ ಇವೆಲ್ಲ ತೋಱಮಣ್ಣು ಚಿತುಸೀಮೆಗೆ ನಟ್ಟ ಕಲ್ಲ ಮೇರೆಸಾಲು (ಎಕ. XVI. ತಕ್ಕನಾ. ೩೮-೨೯; 1260). [ ಮೇರೆ$_1$ + ಸಾಲು$_2$ ( < ಸಾಲ್$_3$) ]

**ಮೇರ್ತಲೆ** (ನಾ). (ಅಲಂ) ಶ್ರೇಷ್ಠವ್ಯಕ್ತಿ : ಮೇರ್ತ್ತಲೆಯೆನಿಸಿದೊಂ ಕಲಿ ತೋಱಲ್ಪಿದುದಿಕ್ಕೆ ಪರೆಯ ಭಾನೂದಯದೊಳ್ಕರ್ತಲೆಯನ್ನಿರೆ ರಿಪುಗಳ್ಕರ್ತ್ತಲೆವೆಸರಾದುದಾತನೊಕ್ಕಲ್ವೆಸರುಂ (ಸೌಇಇ. XI-i. ೯೩-೯ ; 980). [ < ಮೇಲ್$_1$ + ತಲೆ$_1$. / p ಇದು ಪ್ರಾಸಕ್ಕಾಗಿ ಮಾಡಿಕೊಂಡ ರೂಪವಿರಬಹುದು].

**ಮೇಲ್$_1$, ಮೇಲು$_1$** (ನಾ). ೧. ತುದಿ ; ಅಗ್ರಭಾಗ ; ಉಪರಿಭಾಗ : ಅದ್ರಿ ಮೇಲಶನಾದಿವಿಟ್ಟ ಪುನರ್ಭವಕ್ಕೆಱೆ ಆಗಿ (ಎಕ. II. ೩೦-೯; ಸು. 650); ಕಾಲ್ಗಳಂ ನೀಡಿ ಬರಿಯಂ ಬೆರಂಟೆ ಬಿಸಿಲ್ಗಾಯ್ದು ಪಸಿವೆತ್ತಿ ಮೇಲಂ ನೋಡಿ (೧೦ಕ. ೦-೦೨೮ ವ): ಶಾಖಾಗ್ರದೊಳಡರ್ದಲುಗಲ್ಪೊಸೆ ಮೇಲ್ಕೆಕಿತ್ತಂ ನಾಳೀಜಂಘಂ ಕರಂ ಪಲ್ದೆಱೆದು ನಡುಗಿ ಪಱ್ಱಿಂದು ಪುರ್ಬ್ಬಿಕ್ಕಿತಾಗಳ್ (ರಾಜಶೇ. ೯-೨೯). ೨. ದೇಹ, ವಸ್ತು ಮುಂತಾದುವುಗಳ ಹೊರಭಾಗ,– ಮೇಲ್ಮೈ: ಪಂದೆಯ ಮೇಲ್ಪಾವಡರ್ದಂತಿರೆ ದೇಹಂ ಮರವಡೆ ಕಣ್ಣೀರ್ಸುರಿಯೆ ತಳದಿನದನೊತ್ತುತ್ತುಂ (ಧರ್ಮಾಮೃ. ೦-೦೪೨). ೩. ಹೆಚ್ಚಿನದು; ಅತಿಶಯವಾದುದು ; ಅಧಿಕವಾದುದು : ಮೇಲೆಬ್ಬಿ ಬಲಂ ಕೋಟೆಗೆ ಮೇಲಪ್ಪೊಡಮನ್ಯವನಿತೆ ನೆಗೞ್ದೊರ್ವಶಿಗಂ ಮೇಲಪ್ಪೊಡಮಕ್ಕೆ (ಶಂಕಥಾ. ೦-೯೭); ಹರಹಾಸಕ್ಕೊಂದೆ ರಚನ್ . . . ಕೈಲಾಸಧಾತ್ರೀಧರಕೆಂಟೊಂಬತ್ತು ಮೇಲಾಗಿರೆ [ಪಾಠಾಂ. ಪತ್ತೊಂದೆನೆ] ಪಸರಿಸಿದಂ ಕೀರ್ತಿಯಂ ನಾಗವರ್ಮಂ (ಛಂದೋಂಬು. ೦-೨೩). ೪. ಶ್ರೇಷ್ಠವಾದುದು : ಉತ್ತಮವಾದುದು : ದಿವದೊಳ್ ಮೇಲಪ್ಪ ರತ್ನಂಗಳೆಂತನಿತಂ ಮುಂ ಮಣಿಮಾಳಿಗಿತ್ತಂ (ಅದಿಪು. ೨-೦೮); ಸೊಗಯಿಪ ಭೋಗಾವತಿಗಂ ಮಿಗಿಲಮರಾವತಿಗಮಿಂದುವೆ ಮೇಲೆನಿಸುವುದೀ ಜಗದೊಳ್ . . . ಉಜ್ಜೇನಿಪುರಂ (ಸುಕುಮಾ. ೯-೬೬); ಆಳಿಗೊಳುತಂ ಬಿಡಿವರಲ್ಲದೆ ಲಾಲಿಸುವರೇ ಸುಕವಿಯೆಂದಡೆ ಮೇಲಹುದು ಕೃತಿ ಕುಕವಿಯೆಂದಡದೇನ ಹುದು ಕಡೆಗೆ (ಬಸವ. ೦-೨೦). ೫. ಶ್ರೇಷ್ಠನಾದ ವ್ಯಕ್ತಿ ; ಉತ್ತಮನಾದ ಮನುಷ್ಯ: ಮೇಲಾದ ಪಾಂಡುಸುತರನುಪಾಲಂಭಗೆಯ್ಯುತಿರ್ಪ ದುರ್ಯೋಧನನಂ ಲೀಲೆಯಿಂ ನುಂಗುವ ಮೃತ್ಯುವ ನಾಲಗೆಯೆನೆ ನೆಗೆದುವುರಿಯ ನಾಲಗೆ ಪಲವುಂ (ಶಂಕಥಾ. ೩-೬) ; ಜಗದೊಳ್ ನೀಮಿರೆ ಮೇಲೆನಿಸುವರಾರೊ ಕುಲದೊಳಂ ಶೀಲದೊಳಂ (ಧರ್ಮಾಮೃ. ೬-೦೨೯) ; ಕೀಳಾರು ಮೇಲಾರು ಹದುಳಿಪ್ಪ ನಾನು ಚಾಂಡಾಳನೋ ಹುಸಿಯ ಹೋಯ್ಯಂ ಪೊಱುವ ನೀನು ಚಾಂಡಾಳನೋ (ಹರಿಶ. ೧೦-೨೦). ೬. ಒಳ್ಳೆಯದು; ಶುಭ; ಮಂಗಳ: ನಿನಗೆ ಮೇಲಕ್ಕೆ ! ಮೇಣ್ ಪಯಣಾ ಸೊಗಮಕ್ಕೆ ! (ರಾಮಾಶ್ವ. ೩೮-೨೬). ೭. ಪಶ್ಚಿಮದಿಕ್ಕು: ಪಡುವಣ ದೆಸೆ: ಬಡಗ್ಗೆ ನಿಟ್ಟುರುಳಿಎ ಕರಡಿಗುಱುಕೆ ಮೇಲ ಕೋಡುಙ್ಗಲ್ ಮೂಡ್ಡ ನೋಡಿ ನಡದು (ಎಕ. X (S), ಶಕ್ಶ. ೬೬-೨೦; 850). ೮. ಉಚಿತವಾದುದು ; ಯುಕ್ತವಾದುದು ; ಲೇಸು : 'ಮೇಲಱಿ' ಪರಾ. ೯. ಏಳಿಗೆ ; ಅಭಿವೃದ್ಧಿ : 'ಮೇಲ್ಪೋಗು' ಪರಾ. ೧೦. ಮುಂದಾಗುವುದು ; ಅನಂತರದ ಪರಿಣಾಮ : ಮೇಲನಱಿಯದೆ ಮಿಕ್ಕು ನುಡಿದಪೆ (ಬಸವ. ೨೦-೨೩). (ಗು). ೧೧. ಮೇಲ್ಭಾಗದ ; ಮೇಲಿನ : 'ಮೇಲಂತಸ್ತು', 'ಮೇಲ್ಬೆರೆ' ಪರಾ. ೧೨. ಎತ್ತರವಾದ : ಎತ್ತರದ: 'ಮೇಲ್ನಾಡು', 'ಮೇಲ್ಮಕ್ಕೆ' ಪರಾ. ೧೩. ಹೆಚ್ಚಾದ : ಮಿಗಿಲಾದ ; ಅತಿಶಯವಾದ : 'ಮೇಲೊಡ್ಡ' ಪರಾ. ೧೪. ಮುಂದಿನ ; ಅನಂತರದ : 'ಮೇಲ್ಗತೆ' ಪರಾ. ೧೫. ಉತ್ತಮವಾದ; ಶ್ರೇಷ್ಠವಾದ: 'ಮೇಲಕ್ಕಿ', 'ಮೇಲ್ಪರ' ಪರಾ. ೧೬. ಹೊರಭಾಗದ ; ಸ್ಥೂಲ : 'ಮೇಲ್ನೋರಿಕೆ', 'ಮೇಲ್ನೋಟ' ಪರಾ. **ಮೇಲು$_1$** : ೧. "ಅಯ್ಯೋ ಮುಳುಗಿದೆನು ಯಾರಾದರೂ ಬಂದು ಮೇಲಕ್ಕೆ ತೆಗೆಯಿರೋ" ಎಂದು ದೀನಸ್ವರದಿಂದ ಕೂಗಹತ್ತಿದನು (ಮುಂಬಯಿ. ೯-೩೮). ೪. ಖೂಳನನು ಹಿಡಿತಂದು ಧರಣೀಪಾಲರಲಿ ಸರಿ ಮಾಡಿ ರಾಜ್ಯದ ಮೇಲೆ ನಿಲಿಸಿದೆ . . . ಕೀಳು ಮೇಲಿನ ಸೀಮೆ ನಿನ್ನಲಿ ಬೀಳುಕೊಂಡುದು (ಕುಮಾವ್ಯಕ. ೩-೨೩). ೫. ಕಾಲಿಲ್ಲವಲೆ ಹರಿಗು ತೋಳಿಲ್ಲದಲೆ ಹೊಱಗು ನಾಲಿಗಿಲ್ಲವಲೆ ಉಲಿವುದು ಕವಿಕುಲದ ಮೇಲುಗಳು ಪೇಳಿ (ಸರ್ವಜ್ಞ. ೨೦೨೯) ; ಅವರೆಲ್ಲರಲಿ ಅರ್ಜುನನೆ ಮೇಲುಗಳ ಮೇಲು (ಹದ್ಬೆರ. ೮-೦೧); ಬಲದಲ್ಲಿ ವಾಲಿ ಮೇಲು. ಛಲದಲ್ಲಿ ರಾಮ ಮೇಲು (ಗಾದೆ).

ಸೂತ್ರಧಾರಿಯಾಗಿರು : ಸ್ವಸ್ತಿಶ್ರೀ ಸಕಳೇಸಿವಾದಿಗಳ ಪಾದಧೂಳಿ ಲೋಕೇಶ್ವರದ ಮೇಲ್ಗಣ್ಣಾಗೆಯ್ದೊನ್ ಆದಿತ್ಯ ಶ್ರೀಹಡದೇವಪುತ್ರಂ (ಶಿಶಾ. X, ೧೬೭-೩ ; ೩೬ಯು ೬೩). [ಮೇಲ್$_1$ + ಕಾಣ್]

**ಮೇಲ್ಗಾಪು.** ಮೇಲುಗಾಹು (ನಾ). (ವ್ಯಕ್ತಿಗೆ ಅಪಾಯವಾಗದ ಹಾಗೆ ಅಥವಾ ಆ ವ್ಯಕ್ತಿಯು ತಪ್ಪಿಸಿಕೊಂಡು ಹೋಗದ ಹಾಗೆ ಮಾಡುವ) ಮೇಲಿನ ಕಾವಲು, – ಪಹರೆ : ತನ್ನಯ ಮೇಲ್ಗಾ[ಪಾಠಾಂ. ಮೆಯ್ಗಾ]ಪಿನ ಭಟರುನ್ನತವಿಕ್ರಾಂತನಿಳದುರೆಯ್ತಂದಾಗಳ್ (ಕುಶಾ.ಸ್ವ. ೩-೨೪) ; ತೆರಕಣಾಂಬಿಯ ಬೇಹಾರಿ, ರಣಧೀರನ ಮೇಲ್ಗಾಪಿಗೆ ಬಂದಿರುವ ವೀರ (ಪಟ್ಟಿಶ. ೭-೬). **ಮೇಲುಗಾಹು :** ಮೇಲುಗಾಹಿಗೆ ಜಟಿ ತ್ರಿಜಟೆಯರು . . . ಕಾಳರಕ್ಕಸಿಯರ ಸಮೂಹದ ಸೂಳು ಪ್ರಹರಿಗಳುಲುಹುಗಳ ಕರವಾಳು ಕೈದುಗಳಾಂತು ಕಾದಿಹರಯುತರನು ದಿನವು (ಉತ್ತ.ಕ. ೪೦-೨೨). [ಮೇಲ್$_1$ + ಕಾಪು]

**ಮೇಲ್ಗಾವಲು,** ಮೇಲುಗಾವಲು (ನಾ). ಮೇಲ್ವಿಚಾರಣೆ; ಉಸ್ತುವಾರಿ (೪). **ಮೇಲುಗಾವಲು :** ಭಕ್ಷಿ ಜಲಾಲುದ್ದೀನರೇ ಮೇಲುಗಾವಲನ್ನು ನೋಡಿಕೊಳ್ಳಬೇಕೆಂದು ಹುಕ್ಕುಂ ಆಯಿತು (ರಾಜಕ್. ೬೯).

[ಮೇಲ್$_1$ + ಕಾವಲು (< ಕಾವಲ್$_1$)]

**ಮೇಲ್ಗಾಳಿ** (ನಾ). ಆಕಾಶದ ಎತ್ತರದಲ್ಲಿ ಬೀಸುವ ಗಾಳಿ : ಸಲ್ಗೆಯೊಳಲ್ಲಿಯ ಕೋಡುಂಗಲ್ಗಳಿ ಪೇಚರತೆವಡದು ಪಾಱುವ ತೆಱದಿಂ ಮೇ[ಪಾಠಾಂ. ಮೆ]ಲ್ಗಾಳಿಯುಲೆಯೆ ಬಿಳಿಯ ಮುಗಿಲ್ಗಳ್ ಪಾಱುವುವು ಖಚರಗಿರಿ ವನತಟದೊಳ್ (ಅರ್ಧನೇ. ೨-೭೩). [ಮೇಲ್$_2$ + ಗಾಳಿ$_1$]

**ಮೇಲ್ಗುಡಿ** (ನಾ). ಮೇಲಕ್ಕೆ ಎತ್ತಿ ಹಿಡಿದಿರುವ ಬಾವುಟ, –ಧ್ವಜ : ನವೀನಚೀನದಿಂ ಬಿತ್ತರಪೆತ್ತ ಮೇಲ್ಗುಡಿ ನಿರ್ಮಿರ್ಚಿದ ಬಜ್ಜರಗೇಬಂ . . . ವಿರಾಜಿತಮಾಯ್ತು ವಿವಾಹಗೇಹದೊಳ್ (ರಾಜಶೇ. ೬-೨). 'ಮೇಲ್ಗುಡಿಗಟ್ಟು' ಪರಾ. [ಮೇಲ್$_2$ + ಗುಡಿ$_2$]

**ಮೇಲ್ಗುಡಿಗಟ್ಟು** (ಕ್ರಿ). (ಸೊಂಡಿಲನ್ನು) ಧ್ವಜದಂತೆ ಮೇಲೆತ್ತಿ ಹಿಡಿ : ನಂಬಿಯಣ್ಣನಲ್ಲಿಗೆ ಸೊಕ್ಕಿದಾನೆ ಮಿಕ್ಕು ಮಿಱಿ ಬಂದು ಮುಂದೆ ನಿಂದು . . . ಬಂಡಿಯಂ ಬಲವಂದು ಕಾಲ್ಗೆಱಗಿ ಮೇಲ್ಗುಡಿಗಟ್ಟಿ ಪಱಿವಟ್ಟಿ ಸಱನೆ ತಿರುಗಲ್ (ನಂಬಿರ. ೨-೩೯). [ಮೇಲ್ಗುಡಿ + ಕಟ್ಟು$_1$]

**ಮೇಲ್ಗೆಯ್,** ಮೇಲುಗೆಯ್, ಮೇಲುಗೈ, ಮೇಲ್ಗೈ (ನಾ). ೧. ಮೇಲಕ್ಕೆ ಎತ್ತಿದ ಕೈ; ಮೇಲೆತ್ತಿ ಹಿಡಿದ ಹಸ್ತ : ಕೋಲ್ಗಱಿಯ ಲಾನೆಗಳ ಸುಂಡಿಲ್ಗಳುಂ . . . ಮೇಲ್ಗೆಯ್ಯ [ಪಾಠಾಂ. ಲ್ಗೈಯ] ರಥಿಕರ ಧನುರ್ದಂಡಮುಂ . . . ಸಾರ್ತೊಂಡಪೊಳ್ದುವು (ತ್ರಿಪುರ. ೨೦-೧೪). **ಮೇಲುಗೆಯ್ :** ೧. ಕಾಳೆಗಕ್ಕನುವಾಗಿ ರಥ ತುರಗಾಳಿ ಕರಿ ಕಾಲಾಳು ದೊರೆಗಳ ಮೇಲುಗೆಯ[ಪಾಠಾಂ. ಗೈ] ಚಮರಿಗಳನೀಕ್ಷಿಸುತ್ತಿದ್ದುದುಭಯಬಲ (ಕುಮಾ.ಭೀ. ೨-೧). **ಮೇಲುಗೈ :** ೨. (ಅಲಂ) ಮಿಗಿಲು; ಹೆಚ್ಚುಗಾರಿಕೆ; ಹಿರಿಮೆ : ಬುದ್ಧಿಯ ಸೆಣಸಾಟ ಮೇಲುಗೈ ಆಗಿ ವಾಸ್ತವಿಕ ನಿಲುವಿನಿಂದ ದೂರಸರಿಯುವರು (ದ್ರಾವಿ. ೭೮); ಇದರಲ್ಲಿ ಆಕರ್ಷಣವೇ ಕ್ರಮೇಣ ಹೆಚ್ಚುಹೆಚ್ಚಾಗಿ ಮೇಲುಗೈ ಪಡೆಯುತ್ತಿದೆ (ಕೂಹುಟ್ಟು. ೩೦) ; ಅಭ್ಯಾಸದಲ್ಲಿ ಯಾವಾಗಲೂ ಅವನದೇ ಮೇಲುಗೈ (ರಂಗರೂ. ೬೪). ೩. ಮಿಗಿಲಾದ ವ್ಯಕ್ತಿ : ಮೇಲುಗೈ ನೀನಾದೆ ಕುಸಿದರು ಪಾಂಡುನಂದನರು (ಕುಮಾ.ಸ. ೧೩-೩೦). **ಮೇಲ್ಗೈ :** ೨. ಮುಂದೆ ನನ್ನನ್ನು ಮೀರಿಸಿ ನನಗೆ ಮೇಲ್ಗೈಯಾದಾಳು (ಪತಾ. ೧೪). [ಮೇಲ್$_2$ + ಕೆಯ್$_2$]

**ಮೇಲ್ಗೈ** 'ಮೇಲ್ಗೆಯ್' ನೋ.

**ಮೇಲ್ಗೊಳಗ** (ನಾ). ಗೇಣಿದಾರನು ಮಾಲೀಕನಿಗೆ ತನ್ನ ಗೇಣಿಯನ್ನು ಕೊಡುವಾಗ ಅದರ ಜೊತೆಗೆ ಗೌರವಕ್ಕೆಂದು ಉಚಿತವಾಗಿ ಕೊಳಗದಲ್ಲಿ ಅಳೆದು ಕೊಡುವ ಹೆಚ್ಚಿನ ಧಾನ್ಯ: ಗೇಣಿದಾರರು ಗೇಣಿಯನ್ನು ಕೊಡುವುದರ ಜೊತೆಗೆ ತರಕಾರಿ, ತರಪಡಿ, ತಳರಾಸಿ, ಮೇಲ್ಗೊಳಗ, ಲಾಭಸೆರೆ ಮುಂತಾದ ಮರ್ಯಾದೆಗಳನ್ನು ಭೂಮಾಲೀಕರಿಗೆ ಕೊಡಬೇಕಾಗಿತ್ತು (ಕಂಜಕಂ. ೧೦). 'ಮೇಲ್ತೂಕ' ಪರಾ. [ಮೇಲ್$_1$ + ಕೊಳಗ$_1$]

**ಮೇಲ್ಚಾವಣಿ** 'ಮೇಲ್ಛಾವಣಿ' ನೋ.

**ಮೇಲ್ಚೀಟು,** ಮೇಲುಚೀಟಿ (ನಾ). ಅಡವು, ಹಕ್ಕು ಮೊದಲಾದುವುಗಳಿಗೆ ಸಂಬಂಧಿಸಿದಂತೆ ಕೋರ್ಟಿನಲ್ಲಿ ವ್ಯವಹಾರನಡೆಸಲು ಒಬ್ಬನು ಮತ್ತೊಬ್ಬನಿಗೆ ಅಧಿಕಾರವನ್ನು ವಹಿಸಿ ಕೊಡುವ ಪತ್ರ, –ಅಧಿಕಾರ ಪತ್ರ: ನರಸಿಂಹಭಟ್ಟರು ತಮ್ಮ ಹೆಸರಲ್ಲಿರುವ ಸೆಟ್ಟರ ಆಸ್ತಿಯ ಅಡವಿನ ಮೇಲ್ಚೀಟನ್ನು ಕೃಷ್ಣಭಟ್ಟರಿಗಿಟ್ಟರು (ಮಹ.ನಂ. ೬೨). **ಮೇಲುಚೀಟಿ :** ನಾಗರಾಜ ಕೊಡುವ ಹಣಕ್ಕೆ ಠೋಕರ ಕೊಟ್ಟಾಯಿತು . . . ಈಗ ಅದನ್ನು ಪೇಟೆಯ ಸಾಹುಕಾರರಿಗೆ ಮೇಲುಚೀಟಿಗೆ ಕೊಟ್ಟಿದ್ದಾನೆಂದೂ ಕೇಳಿದೆ (ಕುಂಗಿಯು. ೨೩೯). [ಮೇಲ್$_1$ + ಚೀಟು$_2$]

**ಮೇಲ್ಛಾವಣಿ,** ಮೇಲ್ಚಾವಣಿ (ನಾ). ಮನೆಯ ಮೇಲುಭಾಗದ ಸೂರು; ಮಾಡು : ಇದರ ಎತ್ತರ ಸಾಮಾನ್ಯವಾಗಿ ನೆಲದಿಂದ ಮೇಲ್ಛಾವಣಿಯ ವರೆಗೂ ಇರುತ್ತದೆ (೪೭ಕೋ. I. ೨೨೨); ಆಳವಾಗಿ ನೆಟ್ಟ ಸ್ತಂಭವು ಮನೆಯ ಮೇಲ್ಛಾವಣಿಯನ್ನು ಭದ್ರವಾಗಿ ಹಿಡಿದಿರುವಂತೆ ನೀನು (ದೇವಮಾನವಾದಿಗಳಿಗೆಲ್ಲ) ಅವಲಂಬನವನ್ನು ಕೊಟ್ಟು ನಿಲ್ಲಿಸಿದ್ದೀಯೆ (ಋಗ್ವೇ.ಕ. ೧). **ಮೇಲ್ಚಾವಣಿ :** ಮೇಲ್ಚಾವಣಿಯ ಮೇಲೆ ಪಾರಿವಾಳ ಗೂಡು ಕಟ್ಟಿದೆ (ಕೂಪ). [ಮೇಲ್$_1$ + ಛಾವಣಿ]

**ಮೇಲ್ತನಿಖೆ** (ನಾ). ಪುನಃ ಪರೀಕ್ಷಿಸುವುದು ; ಮತ್ತೊಮ್ಮೆ ಮಾಡುವ ವಿಚಾರಣೆ : ಮೇಲ್ಕಂಡ ತೀರ್ಪನ್ನು ರದ್ದುಗೊಳಿಸಬೇಕೆಂದೂ ಮೇಲ್ತನಿಖೆಗಾಗಿ ಈ ಮೊಕದ್ದಮೆಯನ್ನು ಅದೇ ಕೋರ್ಟಿನ ಮತ್ತೊಂದು ಶಾಖೆಗೆ ವರ್ಗಾಯಿಸಬೇಕೆಂದೂ ಮನವಿ ಮಾಡಿಕೊಳ್ಳುತ್ತೇನೆ (ಛನರು. ೨೦೩).

[ ಮೇಲ್$_2$ + ತನಿಖೆ (< ತನಕಿ) ]

**ಮೇಲ್ತರ** ಮೇಲುತರ (ನಾ). ೧. ಉತ್ತಮ ಮಟ್ಟ ; ಶ್ರೇಷ್ಠ ದರ್ಜೆ. ೨. ಜೀವವಿಕಾಸದ ಮೇಲಿನ ಮಟ್ಟ, –ಹೆಚ್ಚಿನ ಸ್ತರ : ಎಲ್ಲಕ್ಕಿಂತಲೂ ಉತ್ತಮವಾದುವು ಐದು ಇಂದ್ರಿಯಗಳನ್ನು ಪಡೆದಿರುವ ಪಂಚೇಂದ್ರಿಯ ಜೀವಗಳು. ಇವಕ್ಕೆ ಮೇಲಿನ ನಾಲ್ಕು ಇಂದ್ರಿಯಗಳಲ್ಲದೆ ಶ್ರವಣೇಂದ್ರಿಯವೂ ಇದೆ. ಮೇಲ್ತರದ ಪ್ರಾಣಿಗಳೆಲ್ಲ ಈ ವರ್ಗಕ್ಕೆ ಸೇರಿವೆ (ತತ್ತ್ವಶ್ರಾ. ೦೪೬). **ಮೇಲುತರ:** ೧. ಮೇಲುತರದ ಪಟ್ಟೆ ಪರಸೂಪು ಸಕಲಾತಿ ಜೂಲುಗಳಿಂದ ರಂಜಿಸುವ ಕಾಲುವೇಗದ ಕುನಿವಿಡಿದ ಕಿರಾತರು ಸಾಲಿಟ್ಟು ನಡೆದರೊಗ್ಗಿನಲಿ (ಮೋಹತ. ೧೪-೭೦). [ಮೇಲ್$_1$ + ತರ$_3$]

**ಮೇಲ್ತರಗತಿ** (ನಾ). = ಮೇಲ್ತರ.೧ : ೧೦ನೆಯ ಶತಮಾನದ ಶಾಸನ ಸಾಹಿತ್ಯವು ಹಿಂದಿನ ಶತಮಾನಗಳಿಗಿಂತ ಮೇಲ್ತರಗತಿಯದಾಗಿದೆ (ಸಾಹಿಶ. ೯); ಮೇಲ್ತರಗತಿಯ ರಾಗಾಲಾಪನೆಯನ್ನು ತಾಳವಿಶಿಷ್ಟವಾಗಿ ಮಾಡಲು . . . ಹೊಸವಾದರಿಯ ಸಾಹಿತ್ಯವನ್ನು ಕನ್ನಡಿಗರು ಪ್ರಚಾರದಲ್ಲಿ ತಂದರು (ಜಗದಾ. ೬೩). [ಮೇಲ್$_1$ + ತರಗತಿ]

**ಮೇಲ್ತುಟಿ** 'ಮೇಲ್ದುಟಿ' ನೋ.

**ಮೇಲ್ತೂಕ** (ನಾ). ವ್ಯಾಪಾರದಲ್ಲಿ ತೂಕಕ್ಕಿಂತ ಮತ್ತಿಷ್ಟು ಕೊಡುವ ಹೆಚ್ಚಿನ ಪದಾರ್ಥ ; ಕೊಸರು : "(ವ್ಯಾಪಾರ) ಕೆಲವು ಸರಕುಗಳ ಮಾರಾಟದಲ್ಲಿ ಕೊಂಡುಕೊಂಡ ಪ್ರತಿ ೧೦೪ ಪೌಂಡು ತೂಕಕ್ಕೆ ಕೊಸರಾಗಿ ಕೊಡುತ್ತಿದ್ದ ೪ ಪೌಂಡು ತೂಕ ; ಮೇಲ್ತೂಕ, ಕೊಸರು"(Tret. ೩೦೪೩).

[ಮೇಲ್$_1$ + ತೂಕ]

**ಮೇಲ್ತೆರಿಗೆ,** ಮೇಲುತೆರಿಗೆ (ನಾ). ಒಂದು ಗೊತ್ತಾದ ಮೊತ್ತವನ್ನು ಮೀರಿದ ಆದಾಯದ ಮೇಲೆ, ಸಾಧಾರಣ ಆದಾಯತೆರಿಗೆಯ ಜೊತೆಗೆ ಹಾಕುವ ಹೆಚ್ಚಿನ ತೆರಿಗೆ : "ಮೇಲ್ತೆರಿಗೆ, ಸೂಪರ್‌ಟ್ಯಾಕ್ಸ್"

(Super-tax. ಕಶ್ರಾ. ೭೯). **ಮೇಲುತೆರಿಗೆ :** " (ಒಂದು ಗೊತ್ತಾದ ಮೊತ್ತಕ್ಕೆ ಮೇಲ್ಪಟ್ಟ ಆದಾಯದ ಮೇಲೆ, ಸಾಧಾರಣ ಆದಾಯ ತೆರಿಗೆಯ ಜೊತೆಗೆ ಹಾಕುವ) ಮೇಲುತೆರಿಗೆ " (Super-tax. ಇಂಕಶ). [ಮೇಲ್$_1$ + ತೆರಿಗೆ (<ತೆಱುಗೆ)]

**ಮೇಲ್ತೋರಿಕೆ** (ನಾ). ಹೊರನೋಟ ; ಸ್ಥೂಲದೃಷ್ಟಿ : ಮಾನವ ಸಮಾಜದಲ್ಲಿ ಕಂಡುಬರುವ ಅಜ್ಞಾನ, ಅಸಮಗ್ರಜ್ಞಾನ, ಮೇಲ್ತೋರಿಕೆಗೆ ದುಷ್ಟ ಎಂದೆನಿಸತಕ್ಕ ಪ್ರವೃತ್ತಿಗಳು . . . ಪರಮಾತ್ಮನ ಲೀಲೆಯ ಅಭಿವ್ಯಂಜನೆಗಳೆಂದು ಭಾವಿಸಲ್ಪಟ್ಟಾಗ ಅವುಗಳ ಬಣ್ಣವೇ ಬದಲಾಯಿಸು ತ್ತದೆ (ಕಶ್ಯಪಾ. ೦೨೬). [ಮೇಲ್$_1$ + ತೋರಿಕೆ ( < ತೋಱಿಕೆ )]

**ಮೇಲ್ದಂಡೆ** (ನಾ). ಮೇಲುಭಾಗದ ತೀರ : ಕೃಷ್ಣಾನದಿಯ ಮೇಲ್ದಂಡೆಯ ಕಾಲುವೆಯಲ್ಲಿ ಈಗ ಹೆಚ್ಚಾಗಿ ನೀರು ಹರಿಯುತ್ತಿದೆ (ಲಂಖ). [ಮೇಲ್$_1$ + ದಂಡೆ$_2$]

**ಮೇಲ್ದರ್ಜೆ** (ನಾ). ಉತ್ತಮಮಟ್ಟ ; ಶ್ರೇಷ್ಠ ದರ್ಜೆ : " ಧನಿಕರು ಮತ್ತು ವಿದ್ಯಾವಂತರು ; ಮೇಲ್ದರ್ಜೆಯವರು " (The classes. ಕಶ್ರಾ. ೦೭). [ಮೇಲ್$_1$ + ದರ್ಜೆ]

**ಮೇಲ್ದಾಯ.** ಮೇಲುದಾಯ (ನಾ). ೧. ಪಗಡೆಯಾಟದಲ್ಲಿ ಬೀಳುವ ಉತ್ತಮವಾದ ಗರ, – ಸಂಖ್ಯೆ : ಶಕುನಿಯೊಡನಂಧಕಾವನಿಪಕುಮಾರ [ನುಮಾ]ಡೆ ನೆತ್ತಮಂ ಧರ್ಮಜನಾ ಶಕುನಿಗೆ ಮೇಲ್ದಾಯಮನಱೆ ಕುಡುತ್ತಿರೆ (ಮಹಾನೇ. ೦೦-೯ ವ). ೨. ಚದುರಂಗದಾಟದ ಒಂದು ಉತ್ತಮವಾದ ನಡೆ : ಓಡಿಯಾನೆಗಳ ನಾಳೊತ್ತು ರಥಕ ಕೈವುಡುಕು ಮಂತ್ರಿಯ ಮೇಲಕೇಱು ಕಡುಗುವುರೆಯ ಸೊಕ್ಕ ಮುಱಿಯೆಂದು ಚದುರಂಗದಡಿಯ ಮೇಲ್ದಾಯ ಪೇಳ್ವಳು (ಕಂಸಪ. ೬-೧೨೦). **ಮೇಲುದಾಯ :** ೩. ಒಳ್ಳೆಯ ಯುಕ್ತಿ ; ಉತ್ತಮವಾದ ಹಂಚಿಕೆ : ಹೇಳರೇ ಭೀಷ್ಮಾದಿ ಹಿರಿಯರು ಮೇಲುದಾಯವ ಬಲ್ಲವರು ಹೆಚ್ಚಾಳು ತನವಲಿ ಹಿಗ್ಗಿ ಕಂಡಿರೆ ಜಯದ ಜಾಜುಗಳ (ಕುವ್ಯಾ.ಕ. ೦-೦). ೪. ಅತಿಶಯವಾದ ಶಕ್ತಿ, –ಸಾಮರ್ಥ್ಯ : ಲಲಿತ ಹೇಷಾಧ್ವನಿಯ ಹಯ ಮಂಡಲದ ವಘೌಳಿಯ ಮೇಲುದಾಯದ ಉಳಿಯ ಚಿತ್ಕೃತಿರವದ . . . ರಥದೊಳಗೆ ನಿಂದಾ ಶಕ್ರಸಾರಥಿ ನುಡಿಸಿದನು ನರನ (ಕುವ್ಯಾಕ. ೭-೦೯). [ಮೇಲ್$_1$ + ದಾಯ$_1$]

**ಮೇಲ್ದುಟಿ.** ಮೇಲುದುಟಿ. ಮೇಲ್ತುಟಿ (ನಾ). ಮೇಲಿನ ತುಟಿ, – ಓಷ್ಠ : ಮೇಲ್ದುಟಿಯೊಳ್ ಸುಳಿಯುತ್ತಶ್ವಕ್ಕಾಲ್ದಿರಲಾ ತುರಗಂ ತಾಂ ಕೊಲ್ದಪುದಾಳ್ದನ ತಾಯುಂ ಬಲ್ದಿಟವಿಂತಿದು (ಹಾಲಾಸ. ೪-೦೦-೯೦). **ಮೇಲುದುಟಿ :** (೪). **ಮೇಲ್ತುಟಿ :** Labrum ಮೇಲ್ತುಟಿ (ಕೀಟಶ. ೦೦). [ಮೇಲ್$_1$ + ತುಟಿ]

**ಮೇಲ್ದುಡುಗೆ** (ನಾ). ದೇಹದ ಮೇಲುಭಾಗಕ್ಕೆ ತೊಡುವ ವಸ್ತ್ರ, ಆಭರಣ ಮುಂತಾದುವು : ತಕಾರದ ತೃತೀಯತ್ವಕ್ಕೆ – ಕಣ್ಗೆಱವು ; ಮೇಲ್ದುಡು [ಕಾಣಾಂ ಡಿ]ಗೆ (ಶಮದ. ೬೩ ಶ್ರಯೋ.). [ಮೇಲ್$_2$ + ತುಡುಗೆ (<ತೊಡುಗೆ)]

**ಮೇಲ್ದೆಸೆ** (ನಾ). ಮೇಲಿನ ದಿಶೆ ; ಊರ್ಧ್ವದಿಕ್ಕು : ಥಳಥಳಿಸಿ ಬೆಳುಪೊವಗಿ ಬಿಣ್ಪಿಯ ಬಳ್ಳಿಗಳ ಛಂದದಿ ಬೆಳೆದು ಮೇಲ್ದೆಸೆಗೆ ಪಸರಿಸಿ ಸಲೆ ಬೆಳಗುತಿರಲು (ಬಸಪು. ೩೯-೩). [ಮೇಲ್$_1$ + ದೆಸೆ$_2$]

**ಮೇಲ್ದೊಟೆ** (ನಾ). ಹೊರಭಾಗದ ತೊಗಟೆ, –ಸಿಪ್ಪೆ : ಜಾಗ್ರತೆ ಯಿಂದ ಮೇಲ್ದೊಟೆಗೆ ಚೂರಿಯಿಂದ ಕಚ್ಚುಹಾಕುವರು (ವುಂಬಯು. ೪-೩೯). [ಮೇಲ್$_1$ + ತೋಟೆ$_1$ (<ತೊಗಟು)]

**ಮೇಲ್ನಾಡು.** ಮೇಲುನಾಡು (ನಾ). ೧. ಎತ್ತರವಾದ ಪ್ರದೇಶದ ನಾಡು ; ಪ್ರಸ್ಥಭೂಮಿ : " ಮಲೆನಾಡು ; ಮೇಲ್ನಾಡು ; ಪ್ರಸ್ಥಭೂಮಿ " (Highlands. ಇಂಕಶ). ೨. ಮೇಲಿನ ನಾಡು ; ದೇವಲೋಕ ; ಸ್ವರ್ಗ : ನಡುನಾಡು ಮೇಲ್ನಾಡು ಕೀಳುನಾಡೆಂಬ ಮುಪ್ಪೊಡವಿಯೊಡೆಯನ ಹೆಮ್ಮಗಗೆ ತಡೆಯುಂಟೆ (ಶಠತ. ೪೪-೬೭). **ಮೇಲುನಾಡು :** ೨. ನೋಡುತ ಸುಮ್ಮನಿಪ್ಪುದು ಲೇಸೆ ಬಾ ಮೇಲು ನಾಡಿನರಸ ಸ್ವಾಮಿಗುಸುರು (ಶಠಶ. ೭೦-೩೭). [ಮೇಲ್$_1$ + ನಾಡು]

**ಮೇಲ್ನೀರು** (ನಾ). ೧. ಪ್ರವಾಹದ ಮೇಲುಭಾಗದ ನೀರು : " ನೆಲ, ಮೊಗಳ ಮೇಲ್ಮೈಯಲ್ಲಿ ಸೇರಿ ಹರಿದು ಹೋಗುವ ನೀರು ; ಮೇಲ್ನೀರು" (Surface-water. ಇಂಕಶ) ; ನದಿಯ ಮೇಲ್ನೀರಿನಲ್ಲಿದ್ದ ದೋಣಿ ಪ್ರವಾಹದ ವೇಗದಿಂದ ಬಹುಬೇಗನೆ ದಡ ಸೇರಿತು (ಪ್ರವರು. ೩೩೬). ೨. ಸ್ನಾನಾನಂತರ ಅಥವಾ ಪಾತ್ರೆ, ಪರಡಿ, ಬಟ್ಟೆ ಇತ್ಯಾದಿಗಳನ್ನು ಸ್ವಚ್ಛಗೊಳಿಸಿದ ನಂತರ (ಮಡಿಯ ಕಾರಣಕ್ಕಾಗಿ) ಹಾಕಲಾಗುವ ನೀರು. [ಮೇಲ್$_1$ + ನೀರು$_1$ (<ನೀರ್)]

**ಮೇಲ್ನೆಲ,** ಮೇಲುನೆಲ (ನಾ). ೧. ಊರ್ಧ್ವಲೋಕ ; ಸ್ವರ್ಗಲೋಕ : ಮೇಲ್ನೆಲವನೀ ನೆಲಕೆ ಹೊಸೆದ ತೆರನಾಯ್ತು (ಕಾಂಪುರ. ೩೦-೭೭). **ಮೇಲುನೆಲ :** ೨. ಎತ್ತರವಾದ ಸ್ಥಳ, –ಪ್ರದೇಶ : ದಿನಕರನುದಯ ದಲಿ ಮುಂಗಾಳೆಗದ ಗಾಢಾಭಿಲಾಷರು ಬಂದು ಕಣನೊಳಗೆ ಮೇಲು ನೆಲನಱದುಬಿಳಕುರುಭೂಪಾಲನವರೊಡ್ಡಿದರು (ಕುವ್ಯಾಭೀ. ೬-೦). [ಮೇಲ್$_1$ + ನೆಲ]

**ಮೇಲ್ನೆಲೆ** (ನಾ). ೧. ಮೇಲಿನ ಮಹಡಿ, —ಅಂತಸ್ತು : ಪೊನ್ನ ಕರುಮಾಡದ ಮೇಲ್ನೆಲೆಯುಲ್ಲಿ ಗಾಡಿಯುಂಬೆನೆ ನೆರೆದೋಲಗಂ ನಲವು ಕೈ ಮಿಗೆ ತನ್ನನೆ ನೋಡುತಿರ್ಪನಂ (ಕಬ್ಬಿಗಾ. ೬೨) ; ಮೇಲ್ನೆಲೆಯ ಕನಕ ಪರ್ಯಂಕಪೀಠದೊಳ್ಗಡಿಯಿಂ ಕುಳ್ಳಿರ್ದು (ರಾಜಶೇ. ೬-೦೭೫ ವ). ೨. ಮೇಲಿನ ತುದಿ, –ಅಗ್ರಭಾಗ : ಗಿರಿಯುನತಱ ಮೇಲ್ನೆಲೆಯನೆಯ್ದುವ ಭೂವರನುದಯಾದ್ರಿಯಗ್ರದೊಳು . . . ತರಣಿಯುಂದದವೊಲೊಪ್ಪಿದನು (ಶ್ರೀಬಾಂ. ೪-೮೭). ೩. ಉತ್ತಮವಾದ ಮಟ್ಟ ; ಶ್ರೇಷ್ಠವಾದ ಸ್ಥಿತಿ : ಹಾರೂನ್ ಮತ್ತು ಮಾಮೂನ್ ಅವರ ಆಳಿಕೆಯಲ್ಲಿ ಮುಸ್ಲಿಂ ಸಂಗೀತಕಲೆ ತನ್ನ ಮೇಲ್ನೆಲೆಯನ್ನು ಮುಟ್ಟಿತು (ಇಸ್ಲಾಂಸಂ. ೦೪೦). [ಮೇಲ್$_1$ + ನೆಲೆ$_1$]

**ಮೇಲ್ನೋಟ,** ಮೇಲುನೋಟ (ನಾ). ೧. ಹೊರನೋಟ ; ಸ್ಥೂಲ ದೃಷ್ಟಿ : ಮೇಲ್ನೋಟಕ್ಕೆ ಪರಸ್ಪರ ವಿರುದ್ಧಗಳಾಗಿ ಕಾಣುವ ಈ ಎರಡು ದರ್ಶನಗಳನ್ನು ಸಮನ್ವಯಗೊಳಿಸಿ ಎರಡರ ಆತ್ಯಂತಿಕಗುರಿ ಒಂದೇ ಎಂಬುದನ್ನು . . . ಮನಗಾಣಬಹುದು (ಪಾರಶ. ೦೨೬). ೨. (ಅಲಂ) ಮೇಲ್ವಿಚಾರಣೆ ; ಮೇಲ್ತನಿಖೆ ; ಉಸ್ತುವಾರಿ : ನನ್ನ ಮೇಲ್ನೋಟ ದಲ್ಲಿಯೇ ನಡೆಯುವ ಸಮ್ಮುಖದ ಚಾವಡಿಯಲ್ಲಿ ಕರಣಿಕನಾಗಿ ಸೇರಿಕೊಂಡಿರ ಬೇಕು (ಕುಂಗಶ. ೮). **ಮೇಲುನೋಟ :** ೧. ಮೇಲುನೋಟಕ್ಕೆ ನಿನ್ನ ಈ ತೀರ್ಮಾನ . . . ನಿರ್ದೋಷವಾಗಿ ಕಾಣುತ್ತ (ಹಿರಿಯೋ. ೪೭) ; ವಾಸ್ತವಿಕತೆಯ ಗುರಿ ಗ್ರಾಹ್ಯವೆಂದೇ ಮೇಲುನೋಟಕ್ಕೆ ತೋರುತ್ತದೆ (ಕವನಾಲೋ. ೦೦೨) ; ಇದು ನಾಟಕದ ಮೇಲುನೋಟದ ಮುಖ್ಯಾಯದ ಸ್ವರೂಪ (ಐಶ್ರೈಶ್ರ. XXXIV. ೩೬೩). ೨. ಆಳಿಕಲುಗಳ ಕಡಿವಡುಕ್ಕಿನ ಚೀಲಣದ ಹಂಗೇಕೆ ನಿಮ್ಮಡಿ ಮೇಲುನೋಟವ ನೋಡೆ ರಥಪರಿಯಂತ ಕಾಳೆಗವೆ (ಕುವ್ಯಾದ್ರೋ. ೦೦-೩೦). ೩. ಶುಭ ; ಮಂಗಳ : ಕಾಲ ಕೈಗೂಡಿ ದರೆ ಬ್ರಾಹ್ಮರು ಲೋಲರೇ ದೊರಕುವರು ಪುಣ್ಯದಲೇಳಿಗೆಯ ಹರಿ ಮೇಲು ನೋಟವ ನೋಡಿಸುವನೆಂದ (ಕಂಭಕ. ೨೭-೦೯). [ಮೇಲ್$_1$ + ನೋಟ]

**ಮೇಲ್ಪಂಕ್ತಿ,** ಮೇಲುಪಂಕ್ತಿ (ನಾ). ೧. (ಅನುಕರಿಸಲು ಯೋಗ್ಯವಾದ) ಉತ್ತಮವಾದ ಮಾದರಿ ; ಉಚಿತವಾದ ಆದರ್ಶ ; ಆ ರಚನೆಗಳೇ

ಅವರಿಗೆ ಮೇಲ್ಪಂಕ್ತಿ (ಭಾರತ. ೫೩೭) ; ಪಂಪನು ಒಂದು ಆಗಮಿಕಕಾವ್ಯವನ್ನೂ ಇನ್ನೊಂದು ಲೌಕಿಕಕಾವ್ಯವನ್ನೂ ಬರೆದು ಕವಿಕುಲಕ್ಕೇ ಮೇಲ್ಪಂಕ್ತಿಯಾದನು (ಸಾಹಿಸ. ೨೨). **ಮೇಲುಪಂಕ್ತಿ :** ೧. ನಿನ್ನ ಕೈಕಾಲ್ ಬೆರಳುಗಳ ಮಾಟವ ನೋಡಿ ಹೊಳೆಯುವುದು —ಕೈವಾಡದವರ ಕೈಚಳಕದ ಕುಸುರಿನ ಮೇಲುಪಂಕ್ತಿ (ಕಾವ್ಯಾರ. ೯೭-೦೩) ; ಇವು ಬಹುಮಟ್ಟಿಗೆ ಪಾಶ್ಚಾತ್ಯವಿಮರ್ಶೆ ಪ್ರಬಂಧಗಳ ಸತ್ವವನ್ನು ಹೀರಿ ಆ ಮೇಲುಪಂಕ್ತಿಯಲ್ಲಿ ಬಂದವು (ಬಂಕಿಮ. ೯, ಮುನ್ನುಡಿ). ೨. ಮೊದಲ ಸಾಲು ; ಮುಂದಿನ ಸಾಲು ; ಅಗ್ರಪಂಕ್ತಿ : ನೀವು ಬಂದೀ ಮೇಲುಪಂಕ್ತಿ[ಸಾಕಾಂ. ತಿ]ಯ ಠಾವಿನಲಿ ಕುಳ್ಳಿರೆ ಎನುತ . . . ವಿಗೆ ನಯಪ್ರೋವಿ ಮಾತಾಡಿಸುತ (ಬಸವ. ೫೯-೯). [ಮೇಲ್$_1$ + ಪಂಕ್ತಿ]

**ಮೇಲ್ಪಂಗ್ತಿ** 'ಮೇಲ್ಪಂತಿ' ನೋ.

**ಮೇಲ್ಪಂತಿ, ಮೇಲ್ಪಂಗ್ತಿ** (ನಾ). = ಮೇಲ್ಪಂಕ್ತಿ ೧ : ಮದನು ತ್ರಿಜಗದ ಚೆಲ್ವಿಂಗಿದೆ ತಾಂ ಮೇಲ್ಪಂತಿಯೆಂದಳಿಕಫಲಕದೊಳುನ್ಮದದಿಂ ಬರೆದಂಜನವರ್ಣದ ಸಾಲೆನೆ ಕುಂತಳಾಳಿಯೊಪ್ಪಿದುವವಳಾ (ಉದ್ಭಟ. ೬-೧೦೨); ಇನ್ನಪ್ಪ ಸತಿಯರಿಗೆ ಮೇಲ್ಪಂತಿಯೆನೆ ಸಂಪನ್ನೆ ಪೆಸರು ಪಡೆದಿಹಳು (ಶ್ರೀಕಾಂ. ೨-೯). **ಮೇಲ್ಪಂಗ್ತಿ** : ಹಿಂದಿನವರ ಆದರ್ಶಗಳು ಬರುವ ಪೀಳಿಗೆಗೆ ಮೇಲ್ಪಂಗ್ತಿಯಾಗುತ್ತವೆ (ಶಿಕ್ಷರ. ೩೨೦). [ಮೇಲ್$_1$ + ಪಂತಿ]

**ಮೇಲ್ಪಹರಿ, ಮೇಲ್ಪಾರಿ** (ನಾ). (ಕೋಟೆಯ) ಮೇಲ್ವಿಚಾರಣೆಯ ಕಾವಲು : ಒಡನೊಡನೆ ಸುಳಿವ ಮೇಲ್ಪಹರಿಯಾಳ್ಗಳ್ ಬೀಱುತಿಹ ಕಹಳೆಗಳ್ . . . ಎಸೆದುದಾಗಳಾ ತ್ರಿಪುರದಾಳ್ವೇರಿಯೆಡೆಯೆಡೆಯೊಳತಿ ನಿಬಿಡವಾಗಿ (ತಿಶಿಕ್ಷ. ೯೨-೧೦). **ಮೇಲ್ಪಾರಿ** : ಚೆಂಗಣಿಗಿಲ ದಿವ್ಯಪವಿಮಳ ಕೆಱಗುವ ಭೃಂಗವಿಂಡುಗಳ ಝೇಂಕಾರ ಅಂಗಜವನದುರ್ಗಕಿಟ್ಟ ಮೇಲ್ಪಾ[ಲ್ಪಾ]ರಿಯ ಪೊಂಗಿದಾಳ್ದನಿಗಳಂತಿಹುವು (ಶಂಪಾ. ೫-೧೦೨). [ಮೇಲ್$_1$ + ಪಹರಿ]

**ಮೇಲ್ಪಾಟಿ** (ನಾ). ಒಂದು ಊರಿನ ಹೆಸರು: ಚೋಳ ಚೇರ ಪಾಣ್ಡ್ಯಾದೌ ನಿರ್ಜ್ಜಿತೇ ವಿಜಯಸ್ಕನ್ಧಾವರೇ ಮೇಲ್ಪಾಟ್ಯಾಂ ಸ್ಥಿರಾಸೀನೇ ಸತೇ (ಎಪಿಕ. ೦೯೩೫, ೪೦-೪೭ : 951). [ ಮೇಲ್$_1$ + < ಪಾಡಿ$_2$ ]

**ಮೇಲ್ಪಾಟು** 'ಮೇಲ್ಪಾಡು' ನೋ.

**ಮೇಲ್ಪಾಡು, ಮೇಲ್ಪಾಟು** (ನಾ). ಉತ್ತಮರೀತಿಯ ಸ್ಥಿತಿ ; ಪ್ರಗತಿ ; ಸುಧಾರಣೆ : ಹೊಸ ಬಂದರುಗಳನ್ನು ಕಟ್ಟಿ ಹಳೆಯ ಬಂದರುಗಳನ್ನು ಮೇಲ್ಪಾಡು ಮಾಡಿದರು (ಶಿಲ್ಪಾಪಾ. ೭೭) ; ಪರಿಹಾರದ್ರವ್ಯವನ್ನು ಕೊಡುವ ಘನವಾದ ಮೇಲ್ಪಾಡನ್ನುಂಟುಮಾಡಿದರು (ಕಾಗ್ರಹಿ. ೨೩). **ಮೇಲ್ಪಾಟು** : ಸರ್ವತೋಮುಖವಾದ ಭಾರತೀಯಸಾಮಾಜಿಕಜೀವನದ ಮೇಲ್ಪಾಟುಗಳು ನಡೆದು . . . ಮಹಾತ್ಮಾಗಾಂಧಿಯವರು ಹೇಳಿರುವ ಭವಿಷ್ಯವಾಣಿಯು ದಿಟವಾಗಲೆಂಬುದೇ ದೇಶಭಕ್ತರೆಲ್ಲರ ಹಾರೈಕೆ (ಭಾರದ. ೩೯೩) ; ಆರ್ಥಿಕ ಸ್ಥಿತಿಯಲ್ಲಿ ಮೇಲ್ಪಾಟು ತಂದು . . . ನಾಡನ್ನು ಕಟ್ಟಬಯಸಿ ದುಡಿಯುವವರಿಗೆ ಮೊದಲು ಗ್ರಹಿಸಿಕೊಂಡಿರಬೇಕಾದ ಅಗತ್ಯದ ಆಧಾರಗಳೆಲ್ಲ (Data) ಇಲ್ಲಿ ಸಿಕ್ಕುತ್ತವೆ (೪೭ನಾ. ೦೯೫). [ಮೇಲ್$_1$ + ಪಾಡು$_3$ ]

**ಮೇಲ್ಪಾಯ** (ನಾ). (ಮೇಲಿನ ಕಟ್ಟಡದ ಭದ್ರತೆಗಾಗಿ ಹಾಕುವ) ಅಡಿಪಾಯದ ಮೇಲಿನ ಮತ್ತು ಕಟ್ಟಬೇಕಾಗಿರುವ ಗೋಡೆಯ ಕೆಳಗಿನ ಭಾಗ ; ಅಡಿಪಾಯ ಮತ್ತು ಮೇಲಿನ ಗೋಡೆಯ ನಡುವಿನ ಭಾಗ: ನೆಲಮಟ್ಟದ ಕೆಳಗಿರುವ ಗೋಡೆಯ ಭಾಗವನ್ನು ಮೇಲ್ಪಾಯ (ಬೇಸ್‌ಮೆಂಟ್) ಎನ್ನುತ್ತಾರೆ (೪೭ಕೋ. I, ೨೦೮). 'ತಳಪಾಯ' ನೋ. [ ಮೇಲ್$_1$ + ಪಾಯ$_2$ ]

**ಮೇಲ್ಪಾರಿ** 'ಮೇಲ್ಪಹರಿ' ನೋ.

**ಮೇಲ್ಪಾಳ್** (ನಾ). ಒಂದು ಊರಿನ ಹೆಸರು : ಪೃಥಿವೀಕೊಙ್ಗಣಿಮುತ್ತರಸರನುಮತದೊಳು ಪಲ್ಲವೇಳಾರಸರ್ಪೆರ್ಮ್ಮಾಡಿಯ್ಯಾರ್ ಕೊಕಂದಿಯುಂ ಮಯಿಲಾರಗಯುಂ ಮೇಲ್ಪಾಳುಂ ಜಾದಿಗಾಲು ಕೊಲಿಗನ್ಕೆಙಿಕ್ಕಾಲು ಒನ್ದು ತೋಟ್ಟಮುಂ (ಎಪಿಕ. ೦೯೨೫, ೦೦೭-೦೯ : ೩ಶಯ ೫೪). [ ಮೇಲ್$_1$ + ಪಾಳ್ ( < ಪಾಟು ) ]

**ಮೇಲ್ಪೊರೆ** (ನಾ). ಮೇಲ್ಭಾಗದ ಆವರಣ : ಭೂಮಿಯ ಮೇಲ್ಪೊರೆಯಲ್ಲಿ ಅತಿ ಹೇರಳವಾಗಿ ದೊರೆಯುವ ಮೂಲಧಾತು ಅಲ್ಯುಮಿನಿಯಂ (ಶಿಲ್ಪಾಪಾ. ೦೭೯). [ ಮೇಲ್$_1$ + ಪೊರೆ$_6$ ]

**ಮೇಲ್ಪೊೞ್ತು** (ನಾ). ಉತ್ಕೃಷ್ಟವಾದ ಮುಹೂರ್ತ; ಶುಭಸಮಯ : ಓಹೋ ಹರಿ ಗೆಲ್ದನೀ ಗಜಮನೆಂದಿಂದ್ರಾದಿಗಳ್ ಕೀರ್ತಿಸುತ್ತಿರೆ ಮೇಲ್ಪೊೞ್ತಿನೊಳಂದು ತೋಱಿ ಮೆಱೆದಂ ಕೃಷ್ಣಂ ಬಲಾಟೋಪಮಂ (ಜಗನ್ನಾ. ೬-೫೪). [ ಮೇಲ್$_1$ + ಪೊೞ್ತು ]

**ಮೇಲ್ಪೋಗು, ಮೇಲುಪೋಗು** (ನಾ). ೧. ಏಳಿಗೆಯ ಅಳಿವು — ನಾಶ : ತಾಗಿ ಮುಱಿದನೆ ಭೀಮನೀ ಮೇಲ್ಪೋಗಿನಾಹವವೇನು ರಾಯನ ತಾಗುಥಟ್ಟೇನಾಯ್ತು ಸಂಜಯ ತಿಳಿಯಹೇಳೆಂದ (ಕುಮಾವ್ಯಾ.ಗ. ೯-೨೦). **ಮೇಲುಪೋಗು :** ೧. ಕಂಗಜಿಗೋಲ ಮಂಚದ ಮಹಿಮಾನಿರವನು ಮೇಲುಪೋಗಿನ ಕಥೆಯನವಧಾನವಲಿ ಕೇಳೆಂದ (ಕುಮಾವ್ಯಾ.ದ್ರೋ. ೦-೦). ೨. ಊರ್ಧ್ವಲೋಕಕ್ಕೆ ಹೋಗುವುದು ; ಸಾವು ; ಮರಣ : ಕಾಲವಶದಲಿ ಕೌಶಿಕನನಾ ಕಾಲದೂತರು ತಂದರಾತನ ಮೇಲುಪೋಗಿನ ಸುಕೃತ ದುಷ್ಕೃತವನು ವಿಚಾರಿಸಲು (ಕುಮಾವ್ಯಾ.ಕ. ೦೭-೦೭). [ಮೇಲ್$_1$ + ಪೋಗು$_2$]

**ಮೇಲ್ಪೋಟಿ** (ನಾ). ಮೇಲಾಟ ; ಸ್ಪರ್ಧೆ ; ಪೈಪೋಟಿ : ಅವರ ಮೇಲ್ಪೋಟಿಯಲ್ಲಿ ಆತ್ಮಪ್ರಶಂಸೆಯೂ ಪರದೂಷಣೆಯೂ ಮಿತಿಯಿಲ್ಲದೆ ಹರಿದುಬರುತ್ತವೆ (ಸಾಹಿಕ. ೦೩). [ ಮೇಲ್$_1$ + ಪೋಟಿ$_1$ ]

**ಮೇಲ್ಬಂದಿ** (ನಾ). ಸೀರೆ (?) : ಅಂದವಾದಾ ಹಸುರು ಮೇಲ್ಬಂದಿಯ ನುಟ್ಟಳು ದೂತಿ ಕೆಂದಾವರೆ ಮಗ್ಗಿಯ ಕುಪ್ಪಸವ ತೊಟ್ಟಳು (ಶ್ರೀಕೃಪಾ. ೦೭).

[ ? ]

**ಮೇಲ್ಬಟ್ಟೆ, ಮೇಲುಬಟ್ಟೆ** (ನಾ). ೧. ಮೈಮೇಲೆ ಹೊದೆಯುವ ವಸ್ತ್ರ — ಬಟ್ಟೆ; ಉತ್ತರೀಯ: ತನ್ನ ಮೇಲ್ಬಟ್ಟೆಯನ್ನು ನೀರಿನಲ್ಲಿ ನೆನಸಿಯೂ ತಾವರೆಎಲೆಗಳಿಂದ ದೊನ್ನೆಗಳನ್ನು ಮಾಡಿಯೂ ತಣ್ಣೀರು ತೆಗೆದುಕೊಂಡು ಬಂದು ಕುಂತೀದೇವಿಗೂ ಸಹೋದರರಿಗೂ ಕೊಟ್ಟನು (ವ್ಯಾಸಭಾ. ೩೭). **ಮೇಲುಬಟ್ಟೆ :** ೨. ಉತ್ತಮವಾದ ಬಟ್ಟೆ ; ಶ್ರೇಷ್ಠವಾದ ವಸ್ತ್ರ : "ಸುಚೇಲಕಃ, ಪಟಃ — ೨ ಒಳ್ಳೆಸೀರೆ . . . ಮೇಲುಧೋತ್ರ, ಮೇಲುಬಟ್ಟೆ, ಉತ್ತಮ ವಸ್ತ್ರ" (ಸಿದ್ಧಾಂತಿ. ೨೦೪). [ ಮೇಲ್$_2$ + ಬಟ್ಟೆ$_2$ ]

**ಮೇಲ್ಭಾಗ, ಮೇಲುಭಾಗ** (ನಾ). ಎತ್ತರದ ಭಾಗ ; ಉಪರಿಭಾಗ : ಹುಬ್ಬುಗಳ ಮೇಲ್ಭಾಗದಲ್ಲಿ ಹಣೆ ಇರುತ್ತದೆ (ಮುಂಬಯಿ. ೪-೯೩). **ಮೇಲುಭಾಗ** : ಗಗನವೀತನ ನಾಭಿ ದಶದಿಕ್ಕುಗಳು ಕಿವಿ ಫಣಿಲೋಕ ವಿಮಳಾಂಘ್ರಿಗಳು ಧ್ರುವನಿಂ ಮೇಲುಭಾಗ ಪುರಾಂತಕನ ಮುಕುಟ (ಕುಮಾವ್ಯಾ.ಸ. ೯-೨೩). [ ಮೇಲ್$_2$ + ಭಾಗ ]

**ಮೇಲ್ಮಕ್ಕಿ, ಮೇಲುಮಕ್ಕಿ** (ನಾ). ಎತ್ತರದಲ್ಲಿರುವ ನೀರಾವರಿ ಪ್ರದೇಶ, — ಜಮೀನು : ತಮ್ಮ ಉಂಬಳಿಯ ಮೇಲ್ಮಕ್ಕಿಯ ಗದ್ದೆಯನು ತತ್ಕಾಲೋಚಿತ ಕ್ರಯವಾಗಿ . . . ಕೊಟ್ಟರು (ಎಕ. VI. ಕಡೂರು. ೧೨-೩೩ : 1233). **ಮೇಲುಮಕ್ಕಿ :** ಮೇಲುಮಕ್ಕಿಯಾ ಗಡಿಯ ತೋಟಗಟ್ಟು ಕಮ್ಮ ೪೦೦ (ಸೌಇಇ. IX—i. ೯೫-೫೦; 1041) ; ಶ್ರೀರಾಮೇಶ್ವರದೇವರ್ಗ್ಗೆ . . . ಬ್ರಹ್ಮಗಟ್ಟದ ಕೆಱೆಯ ಕೆಳಗಣ ಕೆಱೆಯುಂ ಮೇಲುಮಕ್ಕಿಯುಂ ಸಲಗೆ (ಎಕ. VI. ಕಡೂರು. ೨-೦೮ : ಸು. 1110). [ ಮೇಲ್$_1$ + ಮಕ್ಕಿ$_1$ ]

**ಮೇಲ್ಮಚ್ಚು, ಮೇಲುಮಚ್ಚು** (ನಾ). ಮೇಲಿನ ಉಪ್ಪರಿಗೆ.— ಮಾಳಿಗೆ: ಮಾಳಿಗೆಮನೆಯ ಮೇಲ್ಮಚ್ಚುಚಪ್ಪರದಲಿ . . . ಮುದ್ದು ಪೆಣ್ಣುಗಳರಸ

ಭೂಪಾಲನ ನೋಡುತೊಪ್ಪಿದರು (ಕಂಪಿ. ೨೫-೧೯) ; ನಾನು ದಾನವರಿಗೆ . . . ಕೋಟೆಕೊತ್ತಲ ಮೇಲ್ಮಚ್ಚು ಗೋಪುರಗಳುಳ್ಳಂತಹ ಪಟ್ಟಣಗಳನ್ನೂ . . . ನಿರ್ಮಿಸಿದಂತಹವನು (ಕೃಪಾಶ. ೨) . **ಮೇಲುಮಚ್ಚು** : ಪುರ ವೀಥಿಯೊಳ್ ಪುರಿಚಿತ್ರುದಿಂ ಮೆರೆವ ಧ್ವಜಕಲಶಗಳ್ ಮೇಲುಮಚ್ಚುಗಳನು ನೋಡುತ . . . ಬರುತಿರ್ದ ರಾಯನು (ಶೌಗಂಧಿ. ೩೦-೫); ನಾರಿಯ ರೆಲ್ಲರು ಮೇಲುಮಚ್ಚುಗಳ ಸೇರಿದರಾಕ್ಷಣದಲ್ಲಿ (ಶೌಗಂಕ. ೬-೨).

[ ಮೇಲ್$_1$ + ಮಚ್ಚು$_4$ ]

**ಮೇಲ್ಮಟ್ಟ**. ಮೇಲುಮಟ್ಟ (ನಾ). ೧. ಮೇಲಿನ ಸ್ತರ : ಸಮುದ್ರದ ಮೇಲ್ಮಟ್ಟವು ಬಾಗಿರುವುದನ್ನು ತೋರಿಸುವ ಚಿತ್ರ (ಭೂವಿ. ೩). ೨. ಎತ್ತರದ ಮಟ್ಟ : ಹೆಚ್ಚಿನ ಮಟ್ಟ : ಮತ್ತಂ ಮೇಲ್ಮಟ್ಟ [ಪಾಠಾಂ. ಮೇಲುಮಟ್ಟ]ದಾ ಸರಮಂ ಕೇಳ್ದು ಆ ಪಡೆ ಪಯಣಮನಂದುಂ ಮಾಣ್ದುದುಂ (ಶಂಶಕಂ. ೧೨೬-೫). ೩. ಉತ್ತಮವಾದ ಸ್ಥಿತಿ : ಊರ್ಜಿತಾವಸ್ಥೆ : ನಮ್ಮ ದೇಶವನ್ನು ಮೇಲ್ಮಟ್ಟಕ್ಕೆ ತರುವುದು ಬೇಡವೆ ? (ಕೃಶಾಕ. ೯೯) ; ಅವರು ಅನುಭಾವಿಗಳಾಗುವ ಮೊದಲು ಅವರಿಗೆ ಕೆಲವು ಗುಣಗಳಿರಬೇಕು. ಅವರು ಹಲವು ಹಂತಗಳನ್ನು ಹತ್ತಿ ಈ ಮೇಲ್ಮಟ್ಟವನ್ನು ಮುಟ್ಟಬೇಕು (ಅಗದಾ. ೫). ೪. ಶ್ರೇಷ್ಠದರ್ಜೆ ; ಉತ್ತಮ ದರ್ಜೆ ; ಆವನ 'ಸುಂದರವಿಲಾಸ' . . . ಸಾಹಿತ್ಯವೃಷ್ಟಿಯಿಂದಲೂ ಮೇಲ್ಮಟ್ಟದ ಕಾವ್ಯ (ಕಾರಿಚ. ೯೫೯). **ಮೇಲುಮಟ್ಟ** : ೫. ಮೇಲಿನ ಹಂತ ; ತುಟ್ಟ ತುದಿ : "೧. ಒಳಮಾಳಿಗೆ. ೨. ಮೇಲುಮಟ್ಟ, ಪರಮಾವಧಿ" (ceiling. ಶಬ್ದಾ. ೦೩).      [ಮೇಲ್$_1$ + ಮಟ್ಟ$_1$]

**ಮೇಲ್ಮನವಿ** (ನಾ). ಪುನಃಪರಿಶೀಲನೆಗಾಗಿ (ಮೇಲಿನ ನ್ಯಾಯಾಲಯಕ್ಕೆ) ಕೊಡುವ ಅರ್ಜಿ, – ಅಪೀಲು : ಸೆನೆಟ್ಟಿನಲ್ಲಿ ಮೇಲ್ಮನವಿ ತಿರಸ್ಕೃತವಾದರೆ ಚಕ್ರವರ್ತಿಗೆ ಕ್ಷಮಾಯಾಚನೆಯ ಅರ್ಜಿ ಸಲ್ಲಿಸಬೇಕೆಂದೂ ನೆಕ್ಲುದೋವ್ ನಿಶ್ಚಯಿಸಿಕೊಂಡಿದ್ದನು (ಪುನರು. ೨೬೦). [ಮೇಲ್$_1$ + ಮನವಿ]

**ಮೇಲ್ಮನೆ** (ನಾ). ೧. ಮೇಲಿನ ಮನೆ ; ಉಪ್ಪರಿಗೆ : ಮೇಲ್ಮಾಳಿಗೆ : ಅವನೀಶನಾ ನಳಿನಾಕ್ಷಿಯರು ಸಹವಾಗಿ ನೆಲೆಮಾಡವೇಱಿ ಮೇಲ್ಮನೆಯೊಳು ಕುಳಿತು ಪೆಂಗಳಗಂಬುನಿಧಿಯ ತೋಱಿದನು (ಭರತ. ೨೩-೯೨); ಯಾವಾಗಲೂ ಮೇಲ್ಮನೆಯಲ್ಲೇ ಮುಖ ಮರೆಸಿಕೊಂಡು ಇರತೊಡಗಿದರು (ಮರಳ. ೦೬೨). ೨. ರಾಜ್ಯದ ವಿಧಾನಪರಿಷತ್ತು ಅಥವಾ ಕೇಂದ್ರದ ರಾಜ್ಯ ಸಭೆ : ಈ ದಿನ ಮೇಲ್ಮನೆಯಲ್ಲಿ ಬಹುಮುಖ್ಯವಾದ ಮಸೂದೆ ಅಂಗೀಕಾರವಾಯಿತು (ರೂಢಿ). P ಇದು ಇಂಗ್ಲಿಷಿನ 'Upper house' ಎಂಬುದರ ಅನುವಾದ. [ಮೇಲ್$_1$ + ಮನೆ ]

**ಮೇಲ್ಮರ** (ನಾ). ಉತ್ತಮ ಜಾತಿಯ ಮರ : ಪರಭೃತ ಭೃಂಗ ಕೀರ ಕಳಹಂಸೆಗಳಲ್ಲದೆ ಕಾಕ ಘೂಕ ಭೀಕರಖಗಮಿಲ್ಲ ಮೇಲ್ಮರಗಳಲ್ಲದೆ ಕೀಟ್ಮರನಿಲ್ಲ (ಅರ್ಜನೇ. ೦-೫೮).      [ಮೇಲ್$_1$ + ಮರ$_1$]

**ಮೇಲ್ಮಲೆಗೆಯ್** (ಕ್ರಿ). ೧. ತೋರಿಕೆಗಾಗಿ ಪ್ರತಿಭಟಿಸು; ಮನಃಪೂರ್ವಕವಲ್ಲದ ಕಾಳಗವನ್ನು ಮಾಡು : ಕುರುಪತಿಗಿಲ್ಲ ದೈವಬಲಮಾಜಿಗೆ ಮೇಲ್ಮಲೆಗೆಯ್ವರಾಗಳುಂ ಗುರು ಗುರುಪುತ್ರ ಸಿಂಧುಸುತರ್ (ಪಂಪಭಾ. ೯-೬೦). ೨. ಬಾಹ್ಯದಲ್ಲಿ ವಿರೋಧಿಸು ,– ಕೆರಳು : ಅಱಿಯದಂದದಿ ನುಱಿ ಸೆಱಿಗೆಯ್ದು ಪೆಱರ ಮಾರ್ಗದೊಳಿರ್ದಪಲ್ಲದೆ ತಱಿಸಿಂದು ನೆಗಟಿರೆಂದು ಮೇಲ್ಮಲೆಗೆಯ್ಯದೆ ಬಲ್ಮೊಗಂ ಮಾಡಿ ತನ್ನಳಿಯಂದಿರ ಮೊಗಮಂ ನೋಡಿ (ಸುಕುಮಾ. ೨-೫೨ ವ).      [ಮೇಲ್$_2$ + ಮಲೆ$_1$ + ಕೆಯ್$_1$]

**ಮೇಲ್ಮಾಳಿಗೆ**, ಮೇಲುಮಾಳಿಗೆ (ನಾ). ಮೇಲಿನ ಅಂತಸ್ತು,–ಮಹಡಿ ; ಮೇಲುಪ್ಪರಿಗೆ : (+). **ಮೇಲುಮಾಳಿಗೆ** : (+).

[ಮೇಲ್$_1$ + ಮಾಳಿಗೆ$_1$]

**ಮೇಲ್ಮಾಳಿಗೆಹುಲ್ಲು** (ನಾ). ಒಂದು ಬಗೆಯ ಹುಲ್ಲು : ಮೇಲ್ಮಾಳಿಗೆ ಹುಲ್ಲು, ಕೌಬಿನ ಹುಲ್ಲು (ವೈಶಿಗಿ. ೨೦-೩೬೦).

[ಮೇಲ್ಮಾಳಿಗೆ$_?$ + ಹುಲ್ಲು (< ಪುಲ್)]

**ಮೇಲ್ಮಿತಿ** (ನಾ). ಅತಿ ಹೆಚ್ಚಿನ ಅಥವಾ ಪರಮಾವಧಿಯ ಒಂದು ಮಿತಿ, – ಎಲ್ಲೆ : ಅಂತಹ ರಾಷ್ಟ್ರಗಳಿಗೆ ನೀಡಬಹುದಾದ ಹಣದ ಮೊಬಲಗಿಗೆ ಒಂದು ಮೇಲ್ಮಿತಿಯನ್ನು ವಿಧಿಸಬೇಕಾಗಿ ಬರಬಹುದು (ಅಂಕಸಂ. ೦೩೦).      [ಮೇಲ್$_1$ + ಮಿತಿ]

**ಮೇಲ್ಮುಚ್ಚಳ**, ಮೇಲುಮುಚುಳಿ, ಮೇಲುಮುಚ್ಚಳ (ನಾ). ೧. (ಮನೆಯ) ಮೇಲಿನ ಛಾವಣಿ ; ಸೂರು : "ವಲೀಕಂ, ನೀವ್ರಂ, ಪಟಲಪ್ರಾಂತಂ – ೩ ಪಪ್ಪಾರದ ಚೂರು, ಲೋವೆಚೂರು, ಮನೆಯ ಚುಂಚು, ಹೊದಿಕೆಚೂರು. ಮನೆಯ ಮೇಲ್ಮುಚ್ಚಳದ ಅಂಚು. ಇದನ್ನು ಸೂರೆಂತಲೂ ಅನ್ನುವದು" (ನಿಘಂಟು. ೦೦೩). **ಮೇಲುಮುಚುಳಿ** : ೧. × × × ರವನು ತಿದ್ದಿಸಿ ಮೇಲುಮುಚುಳಿಯನ್ನು ಮುಚಿಸಿದನು (ಎಕ. III, ಮಂಡ್ಯ. ೬೫-೬: 1221 ?). **ಮೇಲುಮುಚ್ಚಳ** : ೧. "ಪಟಲಂ, ಛದಿ: – ೨ ಮನೆಯ ಮೇಲುಹೊದಿಕೆಯ ಹೆಸರು. ಮನೆಯ ಮೇಲು ಮುಚ್ಚಳ" (ನಿಘಂಟು. ೦೦೩). ೨. ಭರಣಿ ಅಥವಾ ಸಂಪುಟದ ಮೇಲ್ಭಾಗವನ್ನು ಮುಚ್ಚುವ ಸಾಧನ ; ಭರಣಿಯ ಮೇಲಿನ ಮುಚ್ಚಳ : ಮೇಲೆ ಭೂಮಂಡಲವಾಸಂತರದ ಭರಣಿಗಳ ಮೇಲುಮುಚ್ಚಳ ಪಾಂಗಿನಿಂ ತೋರ್ಪುತಿಹುದು (ತರಕು. ೦೫-೯) ; ಒಂದು ಉಪಾಯವನ್ನು ನನ್ನ ಕೈ ಬಳಿಗೆ ಉರುಳಿಸಿದರು. ಮೇಲುಮುಚ್ಚಳವನ್ನು ತೆಗೆದರು (ಗಂಶ್ರ. ೮).

[ಮೇಲ್$_1$ + ಮುಚ್ಚಳ (< ಮುಚ್ಚಣ)]

**ಮೇಲ್ಮುದ್ದೆ**. ಮೇಲುಮುದ್ದೆ (ನಾ). ಮಾಳಿಗೆಯ ಮೇಲೆ ಹಾಕುವ ಕಲಸಿದ ಮಣ್ಣಿನ ಮೆತ್ತಿಗೆ, – ಮುದ್ದೆ : ಬೆಳವಲಿನಲ್ಲಿ ಮಳೆ ಕಡಿಮೆ ಯಾದ್ದರಿಂದ ಮೇಲ್ಮುದ್ದೆಯ ಮಾಳಿಗೆಯ ಮನೆಗಳೇ ವಿಶೇಷವಾಗಿರುವುವು (ಕರ್ನಾಇ. ೮). **ಮೇಲುಮುದ್ದೆ** : ಹಲಕೆಲವು ಮೇಲುಮುದ್ದೆಯ ಮಾಳಿಗೆಗಳನ್ನು ನೋಡಬಹುದು (ಕಥಾಗಿ. ೫).      [ಮೇಲ್$_2$ + ಮುದ್ದೆ$_1$]

**ಮೇಲ್ಮುಸುಕು**, ಮೇಲುಮುಸುಕು, ಮೇಲ್ಮುಸುಗು (ನಾ). ೧. ಮೈ ಮೇಲೆ ಹೊದೆಯುವ ವಸ್ತ್ರ,–ಹೊದಿಕೆ; ಉತ್ತರೀಯ : "ರ್ಷುಳಂಬ ಮೆಂದು ಮೇಲ್ಮುಸುಕು" (ಕಲ್ಪಾ. ೨೦-೩೯೮). ೨. ಅವಕುಂಠನ, ಮುಖಕ್ಕೆ ಹಾಕಿಕೊಳ್ಳುವ ಮುಸುಕು : ಅಗಣಿತಮಾನ ಕುದುರೆಗಳ ಮೇಲೆ ಮೇಲ್ಮುಸುಕಿನಿಂ ಕೆಲಕೆಲಬರು ಬಳಿಕ್ಕದಲಿತ್ತ . . . ಬಂದತ್ತು ವಾರಾಂಗನಾನಿವಹಂ (ತರಕು. ೯೬-೩೯). **ಮೇಲುಮುಸುಕು** : ೧. "ಪ್ರಾವಾರಃ, ಉತ್ತರಾಸಂಗಃ, ಬೃಹತಿಕಾ, ಸಂವ್ಯಾನಂ, ಉತ್ತರೀಯಂ–೫ ಉತ್ತರೀಯದ ಹೆಸರು. ಮೈಮೇಲೆ ಹೊದ್ದಿರುವ ವಸ್ತ್ರ . . . ಮೇಲು ಹೊದಿಕೆ, ಮೇಲುಮುಸುಕು" (ನಿಘಂಟು. ೨೦೯) ; ಮೇಲುಮುಸುಕಿನ ಹೊತ್ತ ದುಗುಡದ . . . ನೃಪಾಲ ಹೊಕ್ಕನು ನಡುವಿರುಳು ನಿಜರಾಜ ಮಂದಿರವ (ಕುವ್ಯಾಸ. ೦೨-೦) : ಮೇಲುಮುಸುಕಿನ ಮನದ ಮಱುಕದ ಜಾಳಿಸುವ ಕಂಬನಿಯ ಸುಯಿಲಿನ ಸೂಳುಗಳ ಸಂತಾಪದಲಿ ತಿರುಗಿದನು ಪಟ್ಟಣಕೆ (ತೊರವಿ. ೨-೫-೦). ೨. ನಮ್ಮ ಪಟ್ಟಣದಲ್ಲಿರುವ ಕನ್ನೆಯರು ಮೇಲುಮುಸುಕಿಲ್ಲದೆ ಕೃಷ್ಣನನ್ನು ನೋಡುವುದಕ್ಕೆ ಹೋಗಲಿ (ಕೃಪಾಶ. ೦೯೯) ; ಎಲೆ ಮಗಳೆ, ಒಂದು ಮುಹೂರ್ತ ಲಜ್ಜೆಪಡದಿರು ; ನಿನ್ನ ಮೇಲುಮುಸುಕನ್ನು ತೆಗೆಯುವೆನು (ಶಾಕುಂತ. ೩೬-೬). ೩. (ಅಲಂ) ತೋರಿಕೆ ; ಠಕ್ಕು : ಕಾಲ ಮಹಿಬವ ಕಲಿಸಲೋಸುಗ ಕೋಲಗುರು ಜಾಱಿದನು ಶಲ್ಯನ ಮೇಲುಮುಸುಕನುವಾಯ್ತು ಬಿರುದೇನಾಯ್ತು ಗುರುಸುತನ (ಕುವ್ಯಾದ್ರೋ. ೬-೨೪). **ಮೇಲ್ಮುಸುಗು** : ೪. ಪುಸ್ತಕದ ಹೊರಭಾಗಕ್ಕೆ ಹಾಕುವ ಹೊದಿಕೆ ; ರಟ್ಟು : ಇದು ಪುಸ್ತಕದ ಮೇಲ್ಮುಸುಗು (ಸುಪಕಂ. ೪). [ಮೇಲ್$_2$ + ಮುಸುಕು$_2$ (<ಮುಸುಂಕು$_2$)]

**ಮೇಲ್ಮುಸುಗು** 'ಮೇಲ್ಮುಸುಕು' ನೋ.

**ಮೇಲ್ಮುಳಿ** (ನಾ) ಮಲ್ಲಯುದ್ಧದ ಒಂದು ಪಟ್ಟು : ಕಳಗುಮೇಲೆಡಬಲನ ತಿರುಹಿನ ಸುಳಿವುಗಳ ಕಳವುಗಳ ಮೇಲ್ಮುಳಿ ಮೊಳಗುಗಳ ಮಂಡಿಗಳ . . . ಲಗ್ಗೆಗಳ ಬೊಬ್ಬೆಗಳಳಿಯೊಳವರಿರ್ವರಿಗೆ ಸಮಜೋಳಿಗಳದಾರೆಂದ (ಕೃಷ್ಣಾ. ಕಾ. ೨೧-೯). [ ? ]

**ಮೇಲ್ಮೆ** (ನಾ). ಉನ್ನತಿ ; ಶ್ರೇಷ್ಠತೆ ; ಹಿರಿಮೆ : ಇಲ್ಲಿಯವರೆಗೆ ಉಪಲಬ್ಧವಾಗಿರುವ ಗ್ರಂಥ ಮತ್ತು ಲೇಖನಸಂಪತ್ತನ್ನು ಸೂರೆಗೊಂಡಿರುವ ವಿಷಯವೈಪುಲ್ಯ ಈ ಗ್ರಂಥದ ಮೇಲ್ಮೆಗೆ ಕಾರಣವಾಗಿದೆ (ದ್ರಾಬಿ. v. ಮುಖ್ಯ) ; ಗುರುದೇವನ ಕಾವ್ಯಗಳಲ್ಲಿರುವ ಒಂದು ಹೆಚ್ಚಿನ ಮೇಲ್ಮೆ ಅವನ ನಾಟಕ, ಕಾದಂಬರಿ, ಕಥೆಗಳಲ್ಲಿ ಕಾಣಬರುವುದಿಲ್ಲವೆಂಬ ಮಾತು ನಿರ್ವಿವಾದ (ರವೀಂದ್ರ. ೯೦) ; ತಪಶ್ಚರ್ಯೆಯ ಮೇಲ್ಮೆ ವರ್ಣಿತವಾಗಿದೆ (ಕನ್ನ್ನಾ. ೬೩). [ಮೇಲ್$_1$ + — ಮೆ$_3$]

**ಮೇಲ್ಮೈ** (ನಾ). ಹೊರಭಾಗ ; ಮೇಲ್ಭಾಗ ; ಹೊರ ಆವರಣ : ಸೂರ್ಯನ ಮೇಲ್ಮೈ ಮಿಂಚುವ ಅನಿಲಹಬೆಗಳಿಂದ ರಚಿತವಾಗಿದೆ (ಆಕಾಶ. ೯) ; ಭೂಮಿಯು ಒಳ್ಳೆಯ ಉಷ್ಣವಾಹಕವಸ್ತುವಾಗಿಲ್ಲದಿರುವುದರಿಂದ, ಭೂಮಿಯ ಒಳಭಾಗದಿಂದ ಅದರ ಮೇಲ್ಮೈಗೆ ಬರುವ ಉಷ್ಣ ಪ್ರಸಾರವು ಸೂರ್ಯನಿಂದ ಬರುವುದಕ್ಕಿಂತಲೂ ೫,೦೦೦ ದಷ್ಟು ಕಡಿಮೆಯಾಗಿರುತ್ತದೆ (ಭೂಹುಟ್ಟು. ೮೭); ಕನ್ನಡಿಯಂತೆ ಸ್ವಚ್ಛವಾದ ನದಿಯ ಮೇಲ್ಮೈಯಲ್ಲಿ ಒಂದೊಂದು ಕೆಂಪುಮೋಡದ ಪ್ರತಿಬಿಂಬ (ಯೋರಕು. ೬೯). [ ಮೇಲ್$_1$ + ಮೈ$_{01}$ (< ಮೆಯ್$_2$) ]

**ಮೇಲ್ವಟ್ಟ** (ನಾ). ಮೇಲುಕಟ್ಟು; ವಿತಾನ : "ವಿಚಾರದೊಳು ಮೇಲ್ವಟ್ಟದೊಳವಧಿಯೊಳು ಶೂನ್ಯದೊಳ್ಕಖದೊಳು ವಿತಾನಮಕ್ಕುಂ" (ಮಂಗರಾ. ೦೯೩-೨೯). [ ಮೇಲ್$_1$ + ಪಟ್ಟ$_3$ ]

**ಮೇಲ್ವಟ್ಟೆ** (ನಾ). ಒಂದು ಸ್ಥಳದ ಹೆಸರು (?) : ಇನ್ನುದಯಾದಿತ್ಯ ದಣ್ಣಾಧಿಪತಿ ಬನವಾಸೆ ಪನ್ನಿಚ್ಛಾಸಿರಮುಮಂ . . . ಮೇಲ್ವಟ್ಟೆಯ ವಡ್ಡರಾವುಳದ ಸುಂಕಮುಮಂ ಸುಖಸಂಕಥಾವಿನೋದದಿಂದಾಳ್ದು ರಾಜ್ಯಂಗೆಯ್ಯುತ್ತಮಿರೆ (ಎಕ. VIII, ಸೊರಬ. ೨೯೯-೮೯; 1074); ಶ್ರೀಮದ್ದಣ್ಣನಾಯಕಂ ಶ್ರೀರಿದರಯ್ಯಂಗಳುಂ ದಣ್ಣನಾಯಕಂ ಅೆಸಪಯ್ಯಂಗಳುಂ ಮೇಲ್ವಟ್ಟ ವಡ್ಡರಾವುಳವೆರಡುಂ ಬಿಲ್ಕೊಡೆಯ ಸುಂಕನಾಳುತ್ತಮಿರೆ (ಶಾಇ. XX. ೬೦-೯; 1088). 'ಕೀಳ್ವಟ್ಟೆ' ಪರಾ. [ಮೇಲ್$_1$+ಪಟ್ಟೆ$_1$./ ☞ ಇದು 'ಮೇಲ್ವಟ್ಟೆ' ಎಂಬುದರ ಅಪಲಿಖಿತವಿರಬಹುದು ]

**ಮೇಲ್ವಡೆ** (ಕ್ರಿ). ಶುಭವನ್ನು ಪಡೆ : ಮೇಲ್ವಡೆವೆನೆಂದು ಕುಂದಿಸಿ ಪೆರ್ಚಿಸಿ ಸನ್ನೆಗೆಯ್ಯುತ್ತುಂ (ರಸಾರ್ಣವ. ೩-೦೩೬). [ಮೇಲ್$_1$ + ಪಡೆ$_1$]

**ಮೇಲ್ವಣೆ** (ನಾ). ಮೇಲಿನ ದಂಡೆಯ ಕೃಷಿಭೂಮಿ : ನೊಸಪಳ್ಳ ಆಗ್ನೇಯಾಂ ದಿಶಿ ಗದಿಗನ ಮಲೆಯ ಪಡುವಣಭಾಗೆ ನಾಲೆಗೋಡಲಪ್ಪುಡಣ ಭಾಗೆ ದಕ್ಷಿಣಾಂದಿಶಿ ತೊಡೆ ನಡಿಕಿನ ಮೇಲ್ವಣೆ ಮುನ್ನೆ ನಡೆದು ಎಳತು ಮೆಟ್ಟಿನ ಹೆಬ್ಬಟೆ ಮುನ್ದೆ . . . ಆ ಕೆಱೆಯ ತೆಂಕಣ ಕಡೆಗೋಡಿ ಏರಿಯ ಮೇಲೆ ಬನ್ದು (ಎಕ. XIV, ಎಳಂದೂ. ೦೬೦-೦೦; ಸು. 12ನೆಯ ಶತ). [ ಮೇಲ್$_1$ + ಪಣೆ$_2$ ]

**ಮೇಲ್ವಣ್ಣ** (ನಾ). ಶ್ರೇಷ್ಠವಾದ ಬಣ್ಣ : ಮೇಲ್ವಣ್ಣಂ, ಮೇಲ್ವಾತು, ಸೂಳ್ವಾತು (ಶಬ್ದಾನು. ೯೨ ಪ್ರಯೋ). [ ಮೇಲ್$_1$+ಬಣ್ಣ ]

**ಮೇಲ್ವರಿ**, ಮೇಲುವರಿ$_1$ (ಕ್ರಿ). ೧. ತುಂಬಿ ಹೊರಸೂಸು,-ಪ್ರವಹಿಸು: ಹರುಷ ವಿಗೆ ಶೈಲಾದಿ ಕರುಣರಸವೊಸರಿ ಮೇಲ್ವರಿವಂತೆ ನೋಡಿ (ಶಾಮಂಕ. ೦-೩೦); ವೀರಭಕ್ತನ ಪದನಿಹತಿಗೆ ಶಿರೋರು ಗಂಗಾಪಾರಿ ತುಳುಕಿಯುಪಾರಪಾದೋದಕವೆನಿಸಿ ಮೇಲ್ವರಿದು ಪೂರಿಸಲು (ಬಸವ.೦೬-೪೮); ಉಪ್ಪವಡಮಂ ಪಾಡುವ ರಾಗಾಧರೆಯರ ರಾಗರಸಪೂರಂ ಮೇರೆದಪ್ಪಿ ಮೇಲ್ವರಿಯೆ (ರಾಜಶೇ. ೦೬-೪೩ ಪ). ೨. ಮೇಲೆಬೀಳು; ಎರಗು : ಪೊಸ ಪಾವಿನಂತೆ ಮೇಲ್ವರಿವರ್ ಕೆರಳ್ದ ತಗರಂತೆ ತಾಗುವರ್ (ಕಬ್ಬಿಗ. ೪೯-೩೪); ಪುಲಿ ಗರ್ಜಿಸುತ ಬರಲ್ಬಿಳ್ಕೋಲದಳಿವನಿತಜೀಳಗೆ ಸೊಕ್ಕಾನೆ ಮೇಲ್ವರಿಯೆ (ರಾಜಶೇ. ೦೭-೬೦). **ಮೇಲುವರಿ$_1$** : ೨. ಕೊಬ್ಬಿ ಕೂಗುವ ಕುಹಕ ಸತ್ಕಥೆಗುಬ್ಬಿ ಸಂತಸಪಟ್ಟು ಕೇಳ್ವನೆ ಅಬ್ಬರಿಪ ತಲೆಗೊಡಹಿ ತುಡುಗುಣಿ ಮೇಲುವರಿವಂತೆ (ಜಾಗತ. ೦-೩೪). ೩. ಅತಿಶಯವಾಗು; ವಿಜೃಂಭಿಸು: ಮೇಲುವರಿವ ಜಲ್ಲಿ ಪಟ್ಟೆಯ ಮೇಲ್ಕಟ್ಟು ಸಾಲುಗೊಂಡಸೆವ ಪೂಮಾಲೆ (ಕಂಪಿ. ೨೨-೬೨). ೪. ಮುಂದುವರಿ ; ಮುನ್ನುಗ್ಗು : ಅತಿಭೀತಿಯಿಂದನುಗೆಟ್ಟು ಚಿಂತೆಗೆಯುದೆ ಮಿತಿ ಮೀಱಿ ಮೇಲುವರಿಯುದೆ . . . ಪತಿ ಸೇವೆಗೈದು ಬಾಳುವುದು (ಹರಿಶ. ೩-೩೦). [ ಮೇಲ್$_2$ + ಪರಿ$_2$ ]

**ಮೇಲ್ವಲಗೆ**, ಮೇಲುವಲಗೆ(ನಾ). ೧.(ಚಾವಣಿಗೆ ಸೇರಿಸಿದ ಹಾಗಿರುವ) ಮೇಲ್ಭಾಗದ ಹಲಗೆ : ಸುರುಚಿರ ರತ್ನದ ತೊಟ್ಟಿಲ ಪೂಜಿಸಿ ತರಳನ ತುಂಬಿ ಸನ್ನಿಧಿಯಿಂ ಪರಮಂದಿರದ ಮೇಲ್ವಲಗೆಯ ಕೊಂಡಿಗೆ ಸರಪಳಿಯನು ತೊಡಚಿವರ್ (ಪೋಚಕ. ೦೭-೪೯) ; ಕಡುಚೆಲ್ವ ಮೇಲ್ವಲಗೆ ನೆಲಗಟ್ಟು ಗೋಡೆಗಳ ಗಡಣಮಂ ಧವಳಿಸಲು ನೃಪಕೀರ್ತಿ ದಶದಿಕ್ಕನೆಡೆಗೆ ಕೀವಿದ ತೆಱದೊಳೆಸೆಯೆ (ಶಾಕಸಂ. ೩-೨೩). **ಮೇಲುವಲಗೆ** : ೧. ರನ್ನದ ತೊಳೆ ಪಚ್ಚೆಯ ಮೇಲುವಲಗೆ ರಂಜಿಸಿದುದು (ತ್ರಿಪುರ. ೩-೩೦). ೨. ಗುರಾಣಿಯ ಮೇಲುಭಾಗ ; ಹರಿಗೆಯ ಮೇಲುಭಾಗ : ಮೇಲುವಲಗೆಯುಲಿದು ಹಾಯ್ದನು ಬಾಲಕನು ಘಾಯವನು ನಸುನಗುತೇಳಿಸುತ ದಂಡೆಯುಲಿ ಕಳೆದನು ತಿವಿದನವನುರವ (ಕುಮಾರರಾ. ೬-೩೯). [ ಮೇಲ್$_1$ + ಪಲಗೆ ]

**ಮೇಲ್ವಾಯ್**, ಮೇಲುವಾಯ್ (ಕ್ರಿ). ೧. ಮೇಲೆ ಹಾಯ್ದು ಬರು,- ಬೀಸು : ವಸುಧಾರೆ ನಾಡೆಯುಂ ಕಣ್ಗೆಸದಳಮಾಯ್ತುಮುರಕರಪರಿಚ್ಯುತ ಮೆತ್ತಂ ಪೊಸಪೂವಿನ ಸರಿ ಬರಿದಾಯ್ತುಸದಳಮೆನಿಪೆಲರದೊಂದು ಮೇಲ್ವಾಯ್ದಾಗಳ್ (ಆದಿಪು. ೧೦-೨). ೨. ಮೇಲಕ್ಕೆ ಹಾರು,-ನೆಗೆ : ಸೀಯೆ ತಲೆ ಬೇಯೆ ಮೆಯ್ ಮೇಲ್ವಾಯೆ ಕರು ಪಸಿದ ಪುಲ್ಮರುಳ್ ಬಿಱಿಕಿನಿಗಳ್ ಬೇಯುತ್ತುಮಿರ್ದ ಪೆಣನಂ ನಾಯುಗಿವಂತುಗಿದು ತಿಂದು ಪೋರೆಹೊಂದೆಡೆಯೊಳ್ (ಕಾವ್ಯಸಾ. ೩೬೭ ಕೂಪ್ರ೪) ; ಮೆಲ್ಲಡೆದೋರ್ಪುದ್ಯನ್ಮರಾಳಾವಳಿಯಿಸೊಳಗೆ ಮೇಲ್ವಾಯ್ವ ಮತ್ಸ್ಯಂಗಳಿಂ ಪೆಂಪಿಡಿದೊಪ್ಪಿತ್ತಲ್ಲಿ ಫೇನಸ್ಮಿತೆಯೆನಿಸುವ ಪೊಚ್ಚಂ ಪೊದಳ್ದೊಪ್ಪದಿಂದಂ (ರಾಜಶೇ. ೬-೨೩). ೩. ಉದುರು ; ಚೆಲ್ಲು : ನಿಱಿಗನ ನಿಱಿದಳಿರ ಗೊಂಚಲ್ಗಳುಮಾತನ ಮೇಲ್ವಾಯೆ ರಾಗಿಸಿ ರೋಮಾಂಕುರಮೊಗೆದಂತೊಗೆದ ಕಳಿಕಾಂಕುರಂಗಳುಂ (ಶಂಕರಾ. ೨-೧೨ ವ). ೪. ಮುನ್ನುಗ್ಗು ; ಧಾವಿಸು : ತಾನಾಱದೊಯ್ಯನೆ ಕಣ್ಬಲರ್ವಲರೆ ನೃಪನಂ ಭೋಂಕಲ್ ಮೇಲ್ವಾಯ್ದು ತಳ್ತಿರದಪ್ಪಿದಳ್ (ಕಾದಂಬ. ೭೯೬) ; ಲಜ್ಜೆಗೆಟ್ಟ ಪೆಣ್ಗಳಂತೆ ಮೇಲ್ವಾಯ್ದು ಪೆರ್ಬುಲಿವಿಂಡಿಂ (ರಸಾರ್ಣವ. ೩-೩೩). ೫. ಧಾಳಿಮಾಡು ; ಎರಗು; ಮೇಲೆಬೀಳು : "ಅವ್ವಳಿಸುವುದೆನಲ್ಕೆ ಮೇಲ್ವಾಯ್ವುದು" (ಶಬ್ದಮಂ. ೨೩೦) ; ಅಡವಿಯೊಳ್ ಕಳ್ಳರ್ ಬಟ್ಟೆಗಟ್ಟಿ ಮೇಲ್ವಾಯ್ದುಱಿದೊಡೆ (ಪಂಪಭಾ. ೭೬-೦೩); ವಿರಥರತಿರಥರರೆಬರ್ ಮೇಲ್ವಾಯ್ದು ರಥಿಗಳಂ ಸುರಿಗಿಱಿದರ್(ಶಂಕರಾ. ೦೦-೯೯). ೬. ಸಿಟ್ಟುಗೊಳ್ಳು; ಕೋಪಗೊಳ್ಳು: (?). **ಮೇಲುವಾಯ್**: ೪. ಹೇಳಲಱಿಯೆನು ಹರುಷದುದಯವನಾಲಿ ಹೂಳಿದವಶ್ರುಜಲದಲಿ ಮೇಲುವಾಯ್ದಪ್ಪಿದನು ದೇವನ ಪಾದಪಂಕಜವ (ಕುಮಾರರಾ. ೦೩-೦). ೫. ಆಲಿಕಲುಗಳು ಸಿಡಿಲ ಮಱಿಗಳ ಮೇಲು ವಾಯ್ದವು ಗಡ (ಕುಮಾರ. ೦೦-೨೭). [ ಮೇಲ್$_2$ + ಪಾಯ್$_1$ ]

**ಮೇಲ್ವಾಸು**, ಮೇಲುವಾಸು (ನಾ). ಹಾಸಿಗೆ, ಹಸೆಮಣೆ ಮುಂತಾದುವುಗಳ ಮೇಲೆ ಹಾಸುವ ಬಟ್ಟೆ : ಗಿಂಡಿ ಪಡಿಗ ಮೇಲ್ವಾಸು ಮಂಚಗಳ ಗಡಣವೆಯ್ದಿತು (ಕುರಾಸಾಂ. ೨೭-೪೭) ; ಬಾಳೆಯ ಕಂಬ ತಳಿರುತೋರಣ

ಜಾಮುರು ಮೇಲ್ವಾಸುಗಳಿಂದ ಆ ಭಾಗವೆಲ್ಲ ಅಲಂಕೃತವಾಗಿದ್ದಿತು (ಜಂಅಂ. ೦೨) ; ಹೊಸಬರಿಗಾದರೂ ಮದುವೆಯಾದ ಮೇಲಲ್ಲವೆ ಮೇಲ್ವಾಸು ? (ಏಕಕಂ. ೫೯). **ಮೇಲುವಾಸು** : ಈ ಎರಡೂ ಮಣೆಗಳಿಗೆ ಮೇಲುವಾಸಿಲ್ಲಿ ? (ಏಕಕಂ. ೫೯). [ ಮೇಲ್$_2$ + ವಾಸು$_2$ ]

**ಮೇಲ್ವಿಚಾರಕ** (ನಾ). ಮೇಲುಸ್ತುವಾರಿ ಮಾಡುವವನು : ಜಮೀನಿನ ಮೇಲ್ವಿಚಾರಕ ವಾಸವಾಗಿದ್ದ ಕಟ್ಟಡ ಅಡುಗೆಮನೆ . . . ಕುಸಿದುಬೀಳುವ ಸ್ಥಿತಿಯಲ್ಲಿದ್ದುವು (ಕುಶು. ೨೭೩) ; ನೀವು ಒಳ್ಳೆಯ ಪುಸ್ತಕಾಲಯದ ಮೇಲ್ವಿಚಾರಕರಾಗಲು ಕಲಿಯಬೇಕು (ಶಾರಶು. ೨೦೦).

[ ಮೇಲ್$_1$ + ವಿಚಾರಕ ]

**ಮೇಲ್ವಿಚಾರಕಿ** (ನಾ). ಮೇಲುಸ್ತುವಾರಿ ನೋಡಿಕೊಳ್ಳುವವಳು : ಕಟ್ಟು ಗರತಿಯರಾದ ನತದೃಷ್ಟೆಯರಿಗೊಂದು ಅನಾಥಾಶ್ರಮವಿದೆ. ಅಲ್ಲೆನ್ ಅದರ ಮೇಲ್ವಿಚಾರಕಿ (ಕುಶು. ೩೨೮). [ಮೇಲ್ವಿಚಾರಕ + —ಇ$_2$]

**ಮೇಲ್ವಿಚಾರಣೆ** (ನಾ). ಮೇಲ್ವಿಚಾರಣೆ ; ಮೇಲುಸ್ತುವಾರಿ: ಕಾಫಿ ಕಷಾಯವನ್ನು ರಾಯರ ಮೇಲ್ವಿಚಾರಣೆಯಲ್ಲಿ ಕಲಕಿದೆ (ಕಾಮುಶ. ೦೦೯) ; ನನಗೆ ಪ್ರೌಢವಯಸ್ಸು ಬರುವವರೆಗೂ ನನ್ನ ಮಾವನವರನ್ನು ಆ ಗ್ರಾಮದ ಮೇಲ್ವಿಚಾರಣೆಗೆ ನೇಮಿಸಿದರು (ಶ್ರೀಕಾಶ. ೪೯). [ಮೇಲ್$_1$ + ವಿಚಾರಣೆ]

**ಮೇಲ್ವೀಟ್** (ಕ್ರಿ). ಮೇಲೆ ಎರಗು ; ದಾಳಿ ಮಾಡು : ಬಡಿಯಲೀಟಿಯಲ್ ಪೊಯ್ಯಲ್ ಮೇಲ್ವೀಟ್ಟ ರಾಕ್ಷಸತಂಡದಿಂ . . . ಇವು ಮೊದಲಾದ ನೇಕೋಪಸರ್ಗಂಗಳಂ ಮಾಡಿಯುಂ (ಧರ್ಮಾಮೃ. ೨-೨೪೦) ; ಮೇಲ್ವಿಟ್ಟ ತುಱುಗಳನ್ ತಱಿದನ್ (ಅಕ್ಕಶಾ. ೩-೯೩). [ ಮೇಲ್$_2$ + ಬೀಟು$_1$ ]

**ಮೇಲ್ವೊದಕೆ**, ಮೇಲುವೊದಕೆ, ಮೇಲುಹೊದಕೆ, ಮೇಲುಹೊದಿಕೆ, ಮೇಲ್ವೊದಿಕೆ (ನಾ). ೧. ಮನೆ, ಚಪ್ಪರ ಮುಂತಾದುವುಗಳ ಮೇಲ್ಭಾಗಕ್ಕೆ ಹಾಕುವ ಹೊದಿಕೆ, — ಪ್ರಚ್ಛಾದನ : ಉಟ್ಟುಡಿಗೆ ಬಳಸಿದ ನೆರಕೆ ತೊಡೆಯ ಕಂಬವಳಮಟ್ಟು ಕಟ್ಟು ಸಡಿಲ್ದ ಮೆಱೆವ ಮುಡಿ ಮೇಲ್ವೊದಕೆ . . . ಅಗಲ್ . . . ಅತನುವಱಿವಟ್ಟಿಗೆಯೊಯೆಂಬವೊಲ್ ಪ್ರಪಾಕಾಂತಾಜನಂ (ಕರ್ಣಾ. ೬-೦೦) ; ಚಂದನರಸಂಗಳಿಂ ತೊಯ್ದೆಳೆಯ ದವನದ ಮೇಲ್ವೊದಕೆಯಿಂದೊಳಗೆ ಬಾಳೆಲೆಯ ಪಲಗೆಗಳ ಪರಿಸರದೊಳೊಂದಿ ಸಂದುವಿಡದಂತೆ ತರಂಗೊಳಿಸಿ (ರಾಶಕೇ. ೦೦-೩೦ ಪ). ೨. ಮುಚ್ಚಲು ಬಳಸುವ ಸಾಧನ ; ಮುಸುಕು: ' ಮೇಲ್ವೊದಕೆದೆಗೆ ' ಪರಾ. **ಮೇಲುವೊದಕೆ** : ೧. ಬಿಸುಜಂತೆ ಜವ್ವಳಿಗಂಭ ಲೇಸಾಯಿತ್ತು ಮನೆ ಲೇಸಾಯಿತ್ತು ಮೇಲುವೊದ[ಪಾಠಾಂ. ದಿ]ಕೆ (ಅವತಂ. ೨೪-೯೯) ; ಮೇಲುವೊದ [ಪಾಠಾಂ. ದಿ]ಕೆಯು ಕರ್ಪೂರದ ಹೊಂಬಾಳೆಗಳ ಮಲಯಜದ ಕಂಬದ ಸಾಲುಗಳೆಲೊಪ್ಪಿದುದು ಚಪ್ಪರವೆರಡು ಯೋಜನದ (ಕುವ್ಯಾಕ. ೦೨-೦೦). **ಮೇಲುಹೊದಕೆ** : ೧. ಜಾಲಿ ಜೇನೊಡವಿಪ್ಪೆ ಒಪ್ಪಲ ಮಾಲೆಯುವ ನೋಡಬಲೆ ಲತೆಗಳ ಮೇಲುಹೊದಕೆಯ ಬಂದಣಿಕೆಗಳ ಭಾರಿ ಪೂಲೆಗಳಲಿ (ಕೂರರಾ. ೩-೦-೨೮). **ಮೇಲುಹೊದಿಕೆ**: ೧. "ಪಟಲಂ, ಛದಿ: — ೨ ಮನೆಯ ಮೇಲುಹೊದಿಕೆಯ ಪೆಸರು. ಮನೆಯ ಮೇಲು ಮುಚ್ಚಳ" (ಸಿದ್ಧಾಂತಿ. ೦೦೩). ೩. ಮೈಮೇಲೆ ಹೊದೆಯುವ ಬಟ್ಟೆ ; ಉತ್ತರೀಯ : ಪ್ರಾವಾರಃ, ಉತ್ತರಾಸಂಗಃ, ಬೃಹತಿಕಾ, ಸಂವ್ಯಾನಂ, ಉತ್ತರೀಯಂ '— ೫ ಉತ್ತರೀಯದ ಹೆಸರು. ಮೈ ಮೇಲೆ ಹೊದ್ದಿರುವ ವಸ್ತ್ರ . . . ಮೇಲುಹೊದಿಕೆ, ಮೇಲುಮುಸುಕು" (ಸಿದ್ಧಾಂತಿ. ೨೦೯). **ಮೇಲ್ವೊದಿಕೆ** : ೩. ತಕ್ಕನಿಂ ಮಿಕ್ಕುಪೋರ್ದಾನೆ ರಕ್ಕಸನ ಸಮ್ಮುದ ಮೇಲ್ವೊದಿಕೆಯೊಳಂ ಚೆಲ್ವನಾಂತು (ಕ್ಕಾಶಾ. ೦೬೭); ಲೇಸಿಗುಬ್ಬುತ ಮೇಲ್ವೊದಿಕೆಯಂ ಹಾಸಿಯಗಲಕೆ ಮಿಸುಪ ಪೂಗಳ ರಾಶಿಯಂ ತೆಗೆತೆಗೆದು ಭಕ್ತ ಮೊಟ್ಟೆಯಂ ಕಟ್ಟಿ (ಬಸಪು. ೨೯-೦೨).

[ಮೇಲ್$_2$ + ಪೊದಕೆ$_1$ ]

**ಮೇಲ್ವೊದಕೆದೆಗೆ** (ಕ್ರಿ). ಮೇಲೆ ಹೊದಿಸಿದ ಮುಸುಕನ್ನು ತೆಗೆ; ಆಚ್ಛಾದನೆಯನ್ನು ಓಸರಿಸು : ಓಡಿಸೈ ಕಲ್ಯಾಣಿತವಹನಂ ಮೂಡಿ ಬರುತಿದೆ ಎನುತ ಕೋಪಿಸಿ ಊಡಿಸಿದ ಸಿದ್ಧಪ್ರಸಾದದ ಮೇಲ್ವೊ [ಪಾಠಾಂ. ಲ್ವೊ]ದಕೆದೆಗೆದು (ಬಸಪು. ೫೬-೩೦). [ ಮೇಲ್ವೊದಕೆ + ತೆಗೆ$_1$ ]

**ಮೇಲ್ವೊದಿಕೆ** ' ಮೇಲ್ವೊದಕೆ ' ನೋ.

**ಮೇಲ್ಸಕ್ಕರೆ** (ನಾ). ೧. ಉತ್ತಮವಾದ ಸಕ್ಕರೆ. ೨. (ಆಲಂ) ಉಪ್ಪು. ಮೇಲ್ಸಕ್ಕರೆಯವರು = ಉಪ್ಪನ್ನು ತಯಾರಿಸುವ ಜಾತಿಯವರು; ಉಪ್ಪಾರರು: (ಎಕವ್ಯ. XXI. ೦). [ ಮೇಲ್$_1$ + ಸಕ್ಕರೆ ]

**ಮೇಲ್ಸೀಮೆ** (ನಾ). ಎತ್ತರದ ಭೂಮಿ ; ಘಟ್ಟದ ಪ್ರದೇಶ : (*).

[ ಮೇಲ್$_1$ + ಸೀಮೆ ]

**ಮೇಲ್ಸೆಱಗು**, ಮೇಲುಸೆಱಗು (ನಾ). ೧. ಸೀರೆಯ ಮೇಲ್ಭಾಗದ ಅಂಚು: ಕಂದನಂ ನೋಡುತ್ತ ಕೌಂಕುಳಿಯಿಂದವಪ್ಪುತ ತಾಯಿ ಮೇಲ್ಸೆಱಗಿಂದ ಪೊದಿಸುತ ತೆಱೆವುತಂ ಹೊದಿಸುತ್ತ ತೆಱೆವುತ್ತ . . . ಬಾಯ್ದುಟ್ಟೊಱಲುವಳು (ಬಸಪು. ೦೫-೨೦). **ಮೇಲುಸೆಱಗು** : ೨. ಉತ್ತರೀಯದ ತುದಿ : ಸುಯಿಧಾನ ಸವೆಯದೆ ಆರೋಗಣೆಯ ಮಾಡಿ ಉಂಡು ಬಾಯ್ದೊಳೆದರೆ ಸಂದೇಹವಾದುದೆಂದು ಮೇಲುಸೆಱಗಿನೊಳು ತೊಡೆದುಕೊಂಡ (ಸಿದ್ಧಪ. ೪. ೩೦೬-೦೦೩). [ಮೇಲ್$_1$ + ಸೆಱಗು (< ಸೆಱಂಗು) ]

**ಮೇಲ್ವಾಸ** (ನಾ). ಮೇಲಿನ ಶ್ವಾಸ ; ಮೇಲುಸಿರು; ಉಚ್ಛ್ವಾಸ : ಮೇಲ್ವಾಸ [ಪಾಠಾಂ. ಲ್ವಾಸ]ಮೆತ್ತ ಸೆಡೆದಳ್ಕೆ ಬಲಂ ಪಱಿವಡೆ ಜೊಮ್ಮನೆ ಜೋಲ್ದು ೦ ಕಿಱುಕುಳಿ. ಪಾರ್ದರದೆ ತಡೆಯದೊರ್ವೆಯೆ ಮುನಿಪಂ . . . ಓಮೆಂದೋಕರಿಸಿ ಸರೇಶ್ವರನ ಮೇಲೆ ಕಾಱಿದನಾಗಳ್ (ಧರ್ಮಾಮೃ. ೪-೦೬೨).

[ಮೇಲ್$_1$ + ಸ್ವಾಸ]

**ಮೇವಳಿ** (ನಾ). ಮೇಯುವ ಸ್ಥಾನ, — ಎಡೆ : ಸೋವಳಿ ಮೇವಳಿ ಬಿಸುವಳಿಯಂ ಬಲಮಂ ಶಕುನಮನೊಳ್ಳಿತ್ತುಪಾಯಮಂ ಓಡಿವಂದೀತನೆ ವಂದಿ ಕುರುಡು ಕುಂಟೆಂದಲಸದಱಿದಿಂತು . . . ನಿಱಿಸುವೆಂ ಪಂದಿಯಂ ನೀಂ ಮೆಚ್ಚಲುಂ(ಶಂಕರಾ. ೫-೪೩); ಪಟಿನವಿರೆಲ್ಲಂ ಮೆಯ್ಯಂ ಕಟಿದುಂ (?) [ಪಾಠಾಂ. ತಟಿದುಂ] ಬೆಳ್ಳಿಗಗಳಾಗಿ ತಿಳಿದಿರ್ದುವು ಮೇ [ಪಾಠಾಂ. ಮೆಯ್] ವಟ್ [ ಳಿ ] ಗಳೊಳಾಡುತ್ತುಂ ಪಿಂಡಟಿಯದೆಯಾ ಬೆಳ್ಳಿಗಂಗಳುಂ ಪಂದಿಗಳುಂ (ಸೂಕ್ತಿಸು. ೩-೩೪). [ಮೇ$_1$ + — ವಳಿ$_3$]

**ಮೇವು** (ನಾ). (ಜಾನುವಾರುಗಳ) ಆಹಾರ; ದನಕರುಗಳಿಗೆ ಹಾಕುವ ಹುಲ್ಲು, ದಂಟು ಇತ್ಯಾದಿ : ತಿಳಿನೀರನೀಂಟಿ ನೆಳಲೊಳ್ ಪಟ್ಟಿರ್ದು ಬೆಂಡೇಳ್ವ ಲೋಳೆ ಹಿಂಡಿಲ್ಗಟ್ಟಿ ಮೇವಂ ಮಗುಳ್ಚಿ (೧೦೪. ೦-೦೨೬ ಪ); ಹಸುವಿಂಗೆ ಮೇವು ಶಿಶುವಿಂಗೆ ನವನೀತವಂ . . . ಬೆಸಗೊಂಬು ದಕ್ಕಿದೇ ಕುಱುಹೆಂದು . . . ಮೆಱೆವ ಮಿಸುನಿಗಳ ಗಂಟೆಯಿಂದೆಸೆವ ಚೆಲುವಿಕೆಯನವನೀಶ ನೋಡುತ ಬಂದನು (ಜಕಕಾ. ೪-೪೦); ನಮ್ಮ ದನಕರುಗಳನ್ನು ಮೇವಿಗೆ ಬಿಟ್ಟದ್ದೆವು (ಅರ್ಧಾಶ. ೦೦).

**ಮೇವುವಿಂಡಚಿ** (ಉಕ)=ದನಕರುಗಳಿಗೆ ಹಾಕುವ ಆಹಾರ, ಹುಲ್ಲು ಮುಂತಾದುವು ಎಂಬ ಅರ್ಥವನ್ನು ಸೂಚಿಸುವ ಒಂದು ನುಡಿಗಟ್ಟು: ಮೇವುವಿಂಡಚಿ ಹೊಟ್ಟು ಹುಲ್ಲು ಯಾವುದೂ ಉಳಿಯಲಿಲ್ಲ (ಕೆಳಾ. ೩); ನನಗೂ ಮೇವುವಿಂಡಚಿ ಇಡಾಕ ತಾಂವ ಬೇಕಲ್ಲಾ (ಜಾಂಬ. ೭).

[ಮೇ$_1$ + — ವು]

**ಮೇಷ** (ನಾ). ೧. ಕುರಿಜಾತಿಯಲ್ಲಿ ಗಂಡು; ಟಗರು : "ಅವಿಃ . . . ಮೇಷಃ, ಮೇಂಡಃ — ಈ ೮ ಕುಱಿ" (ಹಲಾಯು. ೪೭-೦೨೯); ಕರಿಮಹಿಷ ಮೇಷಮಲ್ಲಸ್ವರೂಪದಿಂ ತಮಗೆ ತಾಮೆ ಪೋಱಿ (ಅಕಪು. ೫-೬೦); ಅಂಜೆಯ ನಜಂ ಗಜಮಂ ಬಳಪ್ಪೆರಿ ಮೇಷಮಂ ಮಾರುತಬಂಧು . . . ವೃಷಭನಂ ಹರನೇಱಿ ನಭಕ್ಕೆ ಸಲ್ವುದುಂ (ಜಗನ. ೦-೩೩). ೨. ಒಂದು ನರಕದ

ಹೆಸರು : ನಾದಪ್ರವಾಹ ರುಕ್ಷಸುಪ್ರವಾಹ ಮೇಷವೆಂಬೈದು ಮಂತ್ರಿ ನರಕಂಗಳ ಮಧ್ಯದಲ್ಲಿ ಚಂಡವೆಂಬರಸುನರಕವಿಹುದು (ಶಿವೇಳ. ೦೩೨). ೩. [ಜ್ಯೋತಿ] ದ್ವಾದಶರಾಶಿಗಳಲ್ಲಿ ಮೊದಲನೆಯದು ; ಹನ್ನೆರಡು ರಾಶಿಗಳಲ್ಲಿ ಒಂದು : ಕನಕಂ ವೃಶ್ಚಿಕ ಮೇಷದೊಳ್ ನಿಲೆ ಚವಮಾನನಾಥಂ . . . ಎನಿಕ್ಕುಂ (ಜಾತಕ. ೦೭-೦೪); ಮೇಷ ವೃಷಭ . . . ಮೀನವೆಂಬ ಹನ್ನೆರಡು ರಾಶಿಗಳುಂ (ಶಿವೇಳ. ೨೦೦). ' ದ್ವಾದಶರಾಶಿ' ಪರಾ. ೧, ೩: ಸಿಂಗದ ಮುಂದಣ ಕನ್ನೆಯದೇಂ ಗಡ ಮೇಷಕ್ಕೆ ಸಾಟಿಯೆನಿಕುಮೇ (ಶಂಕ್ರಶ. ೬-೨೫). ೪. ಒಂದು ಬಗೆಯ ಸಸ್ಯ. [ಸಂ.]

**ಮೇಷಕಂಬಲ**, ಮೇಷಕಂಬಳ (ನಾ). ಉಣ್ಣೆಯಿಂದ ತಯಾರಿಸಿದ ಕಂಬಳಿ; ಉಣ್ಣೆಯ ಕಂಬಳಿ. **ಮೇಷಕಂಬಳ** : "ಊರ್ಣಾಯು ಮೇಷ ಕಂಬಳಮಕ್ಕುಂ '' (ವಸ್ತುಕೋ. ೬೮-೦೪). [ಸಂ.]

**ಮೇಷಕಂಬಳ** ' ಮೇಷಕಂಬಲ ' ನೋ.

**ಮೇಷಜ** (ನಾ). [ಜ್ಯೋತಿ]ಮೇಷರಾಶಿಯಲ್ಲಿ ಹುಟ್ಟಿದವನು: ಚಲವಿತ್ತಂ . . . ಮಾನಾನ್ವಿತಂ ಮೇಷಜಂ (ಜಾತಕ. ೦೭-೦). [ಸಂ.]

**ಮೇಷಪಂಥ** (ನಾ). ಟಗರುಗಳನ್ನು ಹುರಿದುಂಬಿಸಿ ಹೋರಾಟ ಮಾಡಿಸುವ ಒಂದು ಬಗೆಯ ಪಂದ್ಯ. — ಜೂಜು, — ಸ್ಪರ್ಧೆ : ಸಂತಸದೊಳೊಂದು ದಿನ ದಂತಿ ಮಹಿಷವು ಮೇಷಪಂಥದಾ ಮಲ್ಲ ಚರಣಾ ಯುಧವು ಲಾವುಗೆಯು ಮುಂತಾದ ಯುದ್ಧಗಳ ನೋಡಿ (ಕೃಶಂಅ. ೯-೨೩). [ಸಂ.]

**ಮೇಷಮಾಸ** (ನಾ). [ಜ್ಯೋತಿ] ಸೂರ್ಯನು ಮೇಷರಾಶಿಯಲ್ಲಿ ಇರುವ ಒಂದು ತಿಂಗಳ ಅವಧಿ : ವಸಂತಕಾಲಾರಂಭದಿಂದ ನಡೆಯುವ ಒಂದು ತಿಂಗಳು — ಈಗಿನ ಮಾರ್ಚ್ ೨೧ ರಿಂದ ಏಪ್ರಿಲ್ ೨೧ — ಈಜಿಪ್ಟಿನ ಕುರಿಗಳು ಹೆಚ್ಚಾಗಿ ಮರಿಗಳನ್ನು ಹಾಕುವ ಕಾಲ. ಇದನ್ನು ಸೂಚಿಸುವುದಕ್ಕಾಗಿ ಆ ತಿಂಗಳನ್ನು ಮೇಷಮಾಸವೆಂದು ಕರೆದು ಆ ತಿಂಗಳಲ್ಲಿ ಸೂರ್ಯನು ತುಳಿಯುವ ಖಗೋಳಪ್ರದೇಶವನ್ನು . . . ಮೇಷರಾಶಿ ಎಂದು ಕರೆದರು (ನಕ್ಷತ್ರ. ೯೪). [ಸಂ.]

**ಮೇಷಯುದ್ಧ** (ನಾ). = ಮೇಷಪಂಥ : ಬೆಸಸುವೊಡೇಳೇಳೆಲೆ ಸುಕುಮಾರ . . . ಮಲ್ಲಮೇಷಯುದ್ಧವ[ಪಾಠಾಂ. ಯಜ್ಞವ]ನೋಡೇಳಾ (ಶಶಕಾ. ೦೨-೩೦ ರಗಳೆ). [ಸಂ.]

**ಮೇಷಶೃಂಗಿ** (ನಾ). ಹೋತದ ಕೊಂಬಿನಂತೆ ಕಾಣುವ ಕಾಯಿಗಳನ್ನು ಬಿಡುವ ಒಂದು ಬಗೆಯ ಸಸ್ಯ : ಮೇಷಶೃಂಗಿಯ ಮರದ ತಿಗುಡು, ಕೇಬಲಿಯ ತಿಗಡೆ . . . ಇಷ್ಟು ಔಷಧಿ ಸಮನಾಗಿ ಕೂಡಿ, ಗ ೧೨ ತೂಕ ವನ್ನು ೧೪ ಸಲ ನೀರೊಳಗೆ ಹಾಕಿ . . . ಕೊಡುವುದು (ವೈದ್ಯಶಿ. ೦೫೩). 'ಅಜಶೃಂಗಿ' ಹೋ. [ಸಂ. ಮೇಷಶೃಂಗೀ]

**ಮೇಷಸಂಕ್ರಮಣ** (ನಾ). [ಜ್ಯೋತಿ] ಸೂರ್ಯನು ಮೇಷರಾಶಿಯನ್ನು ಸೇರುವ ಕಾಲ : ಸೂರ್ಯನು ರೇವತೀತಾರೆಯನ್ನು ಸೇರಿದ ಕ್ಷಣವೇ ಮೇಷಸಂಕ್ರಮಣ (ನಕ್ಷತ್ರ. ೯೩). [ಸಂ.]

**ಮೇಷಿ** (ನಾ). ಹೆಣ್ಣುಕುರಿ. [ಸಂ. ಮೇಷೀ]

**ಮೇಷ್ಟರು** ' ಮಾಸ್ಟರು ' ನೋ.

**ಮೇಷ್ಟ್ರು** ' ಮಾಸ್ಟರು ' ನೋ.

**ಮೇಸ** (ನಾ). = ಮೇಷ ೧ : ಮೇಷ — ಮೇಸ ; ರೋಷ — ರೋಸ (ಕಸುಶ. ೨೩೩ ಕೃದೋ). [< ಪ್ರಾ. ಮೇಸ./ಸಂ. ಮೇಷ]

**ಮೇಸು** 'ಮೇಯಿಸು' ನೋ.

**ಮೇಸ್ತ್ರಿ** (ನಾ). ಕೆಲಸಗಾರರ ಕೆಲಸದ ಮೇಲ್ವಿಚಾರಣೆ ಮಾಡುವವನು; ಕೆಲಸಗಾರರ ಮುಖಂಡ, — ಮುಖ್ಯಸ್ಥ : ಉಪಾಧ್ಯಾಯನು ಬೋಧಕನೂ ಅಲ್ಲ ಅಥವಾ ದುಡಿಸುವ ಮೇಸ್ತ್ರಿಯೂ ಅಲ್ಲ (ಕ್ರಿಯಾಶಿ. ೦೩೭) ; ಅನೇಕ ಮನೆಗಳನ್ನು ದಾಟಿ ಒಬ್ಬ ಬಂಗಾಲಿ ಮೇಸ್ತ್ರಿಯ ಮನೆಯನ್ನು ಹೊಕ್ಕರು (ಚಾರಿತ. ೬೬); ಅದು ಮೇಸ್ತ್ರಿ ಕಟ್ಟಿದ ಈ ಕಲ್ಲುಗೋಡೆಯಿಂದ ಸಿದ್ಧವಾದ್ದಲ್ಲ (ಶಿಶಿಂಧ. I. ೨೧೩). [← ಪೋರ್ಚ್. ಮೇಸ್ತರ್, ಮೇಸ್ತ್ರೆ./ ಹಿಂ. ಮಿಸ್ತ್ರೀ, ಮಿಸ್ತರೀ = ಕೈಕೆಲಸಗಳಲ್ಲಿ ಕುಶಲನಾದವನು; ಚತುರ ಶಿಲ್ಪಕಾರ; ಮರಾ. ಮೇಸ್ತ್, ಮೇಸ್ತರೀ, ಮೇಸ್ತ್ರೀ]

**ಮೇಹ** (ನಾ). ೧. ಮೂತ್ರ. ೨. ಮೂತ್ರಸಂಬಂಧವಾದ ರೋಗ : ಸಕ್ಕರೆಕಾಯಿಲೆ. ೩. ಜನನೇಂದ್ರಿಯ ಸಂಬಂಧವಾದ ರೋಗ: ಗುಹ್ಯರೋಗ : ''ಜ್ವರ ಕುಷ್ಠ ಭಗಂದರ ಮೇಹ ರಾಜಯಕ್ಷ್ಮಾದಿ ಭೇದಭಿನ್ನಂ ರೋಗಂ'' (ವಸ್ತುಕೋ. ೬೨-೩೩). ೪. ಟಗರು; ಮೇಷ.[ಸಂ].

**ಮೇಹನ** (ನಾ). ೧. ಮೂತ್ರವಿಸರ್ಜನೆ. ೨. ಮೂತ್ರ. ೩. ಪುರುಷನ ಜನನೇಂದ್ರಿಯ; ಶಿಶ್ನ: ''ಶಿಶ್ನಂ, ಶೇಫಂ, ಮೇಢ್ರಂ, ಲಿಂಗಂ, ಮೇಹನಂ, ಶೇಫಸ್ — ಈ ೬ ಶೇಫಂ'' (ಕರಾಯು. ೬೩-೩೬೦); ತಲೆ ಮೇಷಂ ವಕ್ತ್ರಮುಂ ಕಂಠಮುಮೆನಿಪೆರಡುಂ ಸ್ಥಾನಮುಕ್ಷಂ . . . ವೃಶ್ಚಿಕವಸ್ತಿ ಗುದಂ ಮೇಹನಂ . . . ಮೀನೋದಯಂ ಬಾಲಮಕ್ಕುಂ (ಜಾತಕ. ೩-೩). ೪. ಕೂಟ ; ಸಂಭೋಗ. [ಸಂ.]

**ಮೇಹನತ್** ' ಮೆಹನತ್ತು ' ನೋ.

**ಮೇಹನತ್ತು** ' ಮೆಹನತ್ತು ' ನೋ.

**ಮೇಹನದ್ವಾರ** (ನಾ). ಮೂತ್ರದ್ವಾರ ; ಜನನೇಂದ್ರಿಯದ ನಾಳ : ಭಾರ್ಗವನು ನುಂಗಿದನು ರೋಷದಿ ಭರ್ಗನಾ ಸಮಯದಲಿ ಕವಿಯಾ ದುರ್ಗಿಯಧಿಪನ ಜಠರಮಧ್ಯದಿ ತೊಳಲಿ ಮಿಗೆ ಬಳಲಿ ನಿರ್ಗಮಿಸುವರೆ ಬೇಜ಼್ ಕಾಣದೆ ಮಾರ್ಗವನು ಪುರಹರನ ಗರ್ಭದೊಳೊರ್ಗುಡಿಸಿ ತನು ಮೇಹನ ದ್ವಾರದಲಿ ಪೊಣಿಮಟ್ಟು (ಕುಮಾಶಾಂ. ೯-೪) ; ಮುದದಲತಿತೇಜಸ್ವಿ ಯನು ಮಾಡಿದನು ತನ್ನಯ ಮೇಹನದ್ವಾರದಲಿ ಸಂಜನಿಸಿದುದಜಿಂದಾ ದೈತ್ಯ ಸಚಿವನನು (ಕುಮಾಶಾಂ. ೬-೬). [ಸಂ.]

**ಮೇಹರೋಗ** (ನಾ). = ಮೇಹ ೩: ಮೇಹರೋಗ, ಊರುಸ್ತಂಭ, ಕುಷ್ಠ . . . ನೇತ್ರರೋಗಗಳಿಂದ ಪೀಡಿತರಾದವರು, ಅತಿಸ್ನಿಗ್ಧರು—ಲಂಘನಚಿಕಿತ್ಸೆಗೆ ಅರ್ಹರು (ಕಶಕೋ. I. ೯೩೨). [ಸಂ.]

**ಮೇಹರ್ಬಾನಗಿ** ' ಮೆಹರ್ಬಾನಗಿ ' ನೋ.

**ಮೇಹು** ' ಮೇವು ' ನೋ.

**ಮೇಹುಗಾಡು** ' ಮೇವುಗಾಡು ' ನೋ.

**ಮೇಹುಗಾಬಿ** (ನಾ). (ಆಲಂ) ಜಾನುವಾರುಗಳಂತೆ ಕಂದಮೂಲಾದಿ ಗಳನ್ನು ತಿನ್ನುವವನು; ಸಾಹಸಿಗಳಲ್ಲಿಲ್ಲ ಹರಿ ತುಬುಗಾಬಿ ಪಾಂಡವರೈವರ ಡವಿಯ ಮೇಹುಗಾಬಿರು ಬಂದ ಭೂಭುಜರೆಲ್ಲ ತಾ ನೆರವಿ (ಕುವ್ಯಾ ಶೀ. ೦-೦೦). [ ಮೇಹು (< ಮೇವು) + — ಕಾಬಿ ]

**ಮೇಹುಗೊಳ್** ' ಮೇವುಗೊಳ್ ' ನೋ.

**ಮೇಳ** ' ಮೇಲ ' ನೋ.

**ಮೇಳಂಗೆಯ್** (ಕ್ರಿ). ಶ್ರುತಿಯನ್ನು ಮಾಡು; ಶ್ರುತಿ ಕೂಡಿಸು : ಚಿನ್ನಕಿನ್ನರಿಯುಂ ತೆಗೆದು ಮೇಳಂಗೆಯ್ದಾ [ಪಾಠಾಂ. ಗೈದಾ]ಳಾಪಿಸಿ (ರಾಜಶೇ. ೦-೦೩೩ ವ) ; ಮೇಳಂಗೆಯ್ದು[ಪಾಠಾಂ. ಗೈದು]ವಿಸುತ್ತ ಶ್ರುತಿಯುಂ ವೀಣೆಯುಂ ವಕ್ಷದೊಳ್ ಮೇಣ್ ತಾಳುತ್ತುಂ (ರಾಜಶೇ. ೦೦-೯೭).

[ ಮೇಳ (= ಮೇಲ) + ಕೆಯ್$_1$ ]

**ಮೇಳಂಗೊಳ್**, ಮೇಳಗೊಳು, ಮೇಳಗೊಳ್ಳು (ಕ್ರಿ). ಸೇರಿಕೊಳ್ಳು; ಹೊಂದಿಕೊಳ್ಳು : ಓರೆಂಜಲ್ಗೊರ್ಗಂತಿಗೆ ವಾರವ ಖಳರೊಡನೆ ಬೆರಸಿ ಮೇಳಂಗೊಂಡಂದಾರುಂ ಲಘುಮಪ್ಪರ್ ಪ್ರಸ್ತಾರದೊಳೆಮರ್ದಂಬ 'ಶಿಥಿಲ ಸಂಯೋಗದವೊಲ್' (ಛಂದೋಂ. ೨೩೯) ; ಮೇಳಂಗೊಂಡ ಕುಂಭಸ್ಥಲದ ಸಾಂದ್ರಸಿಂದೂರರೇಣುಪ್ರಸರಮುಂ (ಜಗಿರ. ೬-೩೩ ವ). **ಮೇಳಗೊಳು** :

ಮೇಳಗೊಳುವುದವನೊಳು ಮೇರೆ ಮೀಜಿದೆ (ಹರಿಶ. ೩-೪೪) ಮೇಳಗೊಳ್ಳು: ಅವರ ಶಾರೀರಿಕ ಮಾನಸಿಕ ಬಯಕೆಗಳೂ ಮೇಳಗೊಳ್ಳಬೇಕು (ಹುಡುಗಾಟ. ೦೦೭). [ ಮೇಳ (= ಮೇಲ) + ಕೊಳ್$_1$ ]

**ಮೇಳಂಬ** (ನಾ). ದುಂಬಿ ; ಭ್ರಮರ : "ಮೇಳಂಬ=ತುಂಬಿ" (ಕಮುದ. ಕಾ. ೨); "ಮಲ್ಲಿಕೆ ಪಜಿಮೆ . . . ಮೇಳಂಬವಲರುಣಿ ಬಂದು ಣಯ ಚಿತ್ರವಿಹಗಮಕ್ಕುಂ" (ಕವ್ಯಕ್ಕ. ೦೩); ಅಡಿಗಡಿಗೆ ಜಗ್ಗಿಪ ಮೇಳಂಬದ ಮೊರೆಯ ಗುಡುಗುವ ಬಲ್ದನಿಯಾಗೆ (ರಾಮಾಶ್ವ. ೫೪-೦೩).

[ ?./ ತೆಲು. ಮೊಗರಯು ]

**ಮೇಳಕ** ' ಮೇಲಕ ' ನೋ.

**ಮೇಳಕಟ್ಟು** ' ಮೇಳಗಟ್ಟು ' ನೋ.

**ಮೇಳಗಟ್ಟು**, ಮೇಳಕಟ್ಟು (ಕ್ರಿ). ೧. ಜೊತೆ ಸೇರು; ಸಹವಾಸ ಮಾಡು : ಉಡಾಳರ ಮೇಳಗಟ್ಟಿ ಇಸ್ಪೀಟು ಆಡುವುದರಲ್ಲಿ ವೇಳೆಗಳೆಯುತ್ತಾನೆ (ಗಂಪಾಡು. ೧೫೭). **ಮೇಳಕಟ್ಟು** : ೨. ಯಕ್ಷಗಾನ, ನೃತ್ಯ ಮುಂತಾದುವುಗಳ ಪ್ರಸಂಗವನ್ನು ಏರ್ಪಡಿಸು : ಇವತ್ತು ಪಕ್ಕದ ಊರಿನಲ್ಲಿ ಮೇಳಕಟ್ಟುತ್ತಾರಂತೆ (ರೂಢಿ). ೩. ವೀಣೆ ಮುಂತಾದ ವಾದ್ಯಗಳಲ್ಲಿ ಬೇರೆಬೇರೆ ಸ್ವರಸ್ಥಾನಗಳನ್ನು ನಿರ್ದೇಶಿಸುವ ಮೆಟ್ಟಿಲನ್ನು ಕಟ್ಟು.– ರಚಿಸು : ಅವರು ಹಳೆಯದಾಗಿದ್ದ ವೀಣೆಯನ್ನು ಮೇಳ ಕಟ್ಟಿ ಸರಿ ಮಾಡಿದರು (ರೂಢಿ). [ಮೇಳ (= ಮೇಲ) + ಕಟ್ಟು$_1$]

**ಮೇಳಗಾನ** (ನಾ). ೧. (ನಾಟ್ಯಕ್ಕೆ) ಹೊಂದಾಣಿಕೆಯಾಗುವ ಗಾಯನ : ಮೇಳಗಾನಧ್ಯಾನದಿನವನು ಕೇಳಿ ಸಿಕ್ಕವರಾರು (ಶ್ರೀಕುರೀ. ೪-೭೦). ೨. ಸಾಮೂಹಿಕವಾಗಿ ಹಾಡುವುದು ; ಸಮೂಹಗಾಯನ : ಸಂಜೆಯ ವೇಳೆ ಮೇಳಗಾನ ನಡೆಸಬಹುದಿತ್ತು (ಕುವರು. ೫೦೨). [ಸಂ. ಮೇಲಗಾನ]

**ಮೇಳಗಾರ** ' ಮೇಳಗಾಜಿ ' ನೋ.

**ಮೇಳಗಾರ್ತಿ** (ನಾ). ಜೊತೆಗಾತಿ ; ಒಡನಾಡಿ : "ಸಬ್ಬವಕಾರ್ತಿಯ ಘಟಿಸಿದನೆ ತಾಂ ಮೇಳಗಾರ್ತಿ[ಪಾಠಾಂ. ದಾಕಿ]ಯೆನಿಪಳ್" (ಕವಿಕಾಂ. ೧೭೦).

[ಮೇಳಗಾಜಿ + – ತಿ$_1$ (< – ಇತ್ತಿ)]

**ಮೇಳಗಾಳೆಗ** (ನಾ). ತೋರಿಕೆಯ ಹೋರಾಟ ; ಕ್ರೀಡಾಯುದ್ಧ : ಕಾದುವ ಮಾಟ್ಕೆಯಲ್ಲವಿದು ಕಮ್ಮನೆ ನಣ್ಪನೆ ಮೇಳಗಾಳೆಗಂಗಾದುವ ಮಾಟ್ಕೆ (ಶಂರಶಾ. ೦೩-೪೩). ' ಮೇಲುಗಾಳೆಗ ' ನೋ.

[ಮೇಳ (= ಮೇಲ) + ಕಾಳೆಗ]

**ಮೇಳಗಾಜಿ**. ಮೇಳಗಾರ (ನಾ). ೧. ಜೊತೆಗಾರ ; ಒಡನಾಡಿ : ' ಮೇಳಗಾರ್ತಿ ' ಪರಾ. ೨. (ಹಿನ್ನೆಲೆಯಲ್ಲಿ) ವಾದ್ಯ ಬಾರಿಸುವವನು ಅಥವಾ ಗಾಯನ ಮಾಡುವವನು : ನೆಗಟ್ತೆಯ ಮಿಂಡರ ಮೇಳಗಾಜಿರಕ್ಕರಿಗರ ಸಂದ ಕಬ್ಬಿಗರ . . . ಬಾಜಪ ಬೀಣೆಗಾಜಿರಾಗರಮೆಸೆಪೆಂಪು ಸೊಂಪನೊಳಕೊಂಡೆಸೆದಿರ್ಪುವು ಸೂಳೆಗೇರಿಗಳ್ (ಕಬ್ಬಿಕಾ. ೪೨) ; ಭರತಜ್ಞ ಮೇಳಗಾಜಿರಿಗೆ ಭೂಷಣಗಳ ಸುರುಚಿರ ವಸನಕರ್ಪೂರದ ಪರಿಮಳ ವೆರೆದ ವೀಳಯಂಗಳನಿತ್ತಾಗ ನರಸರಾಜೇಂದ್ರ ಮನ್ನಿಸಿದ (ಕಂಪಪ. ೯-೭೯). **ಮೇಳಗಾರ** : ೨.ಗುಡುಗಿನ ದನಿಯು ಕೇಳಿದ ಕೂಡಲೇ ಆ ಮೇಳಗಾರರು ತಮ್ಮ ವಾದ್ಯಗಳನ್ನು ಗಟ್ಟಿಯಾಗಿ ಬಾರಿಸಬೇಕೆಂದು ಅವನ ಅಪ್ಪಣೆ ಯಾಯಿತು (ಮಡಕ. ೫೪). [ಮೇಳ (= ಮೇಲ) + – ಕಾಜಿ]

**ಮೇಳಗೀತ** (ನಾ). ಸಾಮೂಹಿಕವಾಗಿ ಹಾಡುವ ಹಾಡು : ಇದರಲ್ಲಿ ಎರಡು ಪ್ರಕಾರಗಳಿದ್ದುವು. ಒಬ್ಬನೇ ಹಾಡುವಂತಹ ಏಕಗಾಯಕಗೀತ, ಮತ್ತು ಸಮೂಹದಲ್ಲಿ ಹಾಡುವ ಮೇಳಗೀತ (ಕಂಕಾ. ೨೦೯). ᴘ ಇದು ಇಂಗ್ಲಿಷಿನ ' Chorus ' ಎಂಬ ಶಬ್ದದ ಅನುವಾದರೂಪ.

[ಸಂ. ಮೇಲಗೀತ]

**ಮೇಳಗೀತೆ** (ನಾ). = ಮೇಳಗೀತ : ರಂಗವಾಜಿಗೆ ಹೀಗೆ ಒಯ್ಯಲ್ಪಟ್ಟ ಮೇಳದವರು . . . ಮುನ್ನೆಲೆಯ ಮೇಳರಂಗದಲ್ಲಿ ಬಂದಿದ್ದು ತಮ್ಮ ಮೇಳಗೀತೆಯನ್ನು ಹಾಡಿರಬಹುದು (ಶಿದ್ಧಶ್ರ. LVi, ನಾಟಕದ ಸಮಸ್ಯೆ).

[ಸಂ. ಮೇಲಗೀತಾ]

**ಮೇಳಗೂಡು** (ಕ್ರಿ). ಒಟ್ಟಿಗೆ ಸೇರು; ಒಟ್ಟುಗೂಡು : ಆ ತೆರೆಯ ಹಿಂದೆ ಮೇಳಗೂಡಿ ಚಿಕ್ಕಗಳೆಲ್ಲ ಸೌಂದರ್ಯಶಕ್ತಿಯನ್ನು ಕುರಿತು ಇಂತು ಪಾಡಿದುವು (ಕೃಶಾಕು. ೨-೭). [ಮೇಳ (= ಮೇಲ) + ಕೂಡು$_1$]

**ಮೇಳಗೊಳು** ' ಮೇಳಂಗೊಳ್ ' ನೋ.

**ಮೇಳಗೊಳ್ಳು** ' ಮೇಳಂಗೊಳ್ ' ನೋ.

**ಮೇಳಣೆ** (ನಾ). ಕೂಡುವಿಕೆ : ಸೇರುವಿಕೆ; ಹೊಂದಾಣಿಕೆ : "ಮೇಳಣೆ— ಮೇಲನ = ಕೂಡುವಿಕೆ, ಬೆರಕೆ" (ಶಬ್ದಕೋ. ೩೭). ' ಮೇಳಣೆವಡೆ ' ಪರಾ. [ಮೇಳ (= ಮೇಲ) + – ಅಣೆ$_4$]

**ಮೇಳಣೆವಡೆ** (ಕ್ರಿ). ಹೊಂದಿಕೊಳ್ಳು; ಸೇರಿಕೊಳ್ಳು : ಸುರವಾದಕರ ವಾದ್ಯಪ್ರಹರಣಪದ್ಧತಿಯೊಳ್ ಪವಣ್ಪಡೆದ ತಾಳದೊಳ್ ಮೇಳಣೆ ವಡೆದು . . . ನಾನಾಪ್ರಬಂಧಾದಿ ನಿಬದ್ಧಗೀತಂಗಳ ಮಧುರಧ್ವಾನ ಮಾನಂದಮಂ ಪುಟ್ಟಿಸೆ (ಶಾಂತೀ. ೦೪-೫೯ ವ). [ಮೇಳಣೆ + ಪಡೆ$_1$]

**ಮೇಳನ** ' ಮೇಲನ ' ನೋ.

**ಮೇಳಯ**, ಮೇಳವ. ಮೇಳೆಯ (ನಾ). ೧. ಕೂಟ ; ಸೇರಿಕೆ ; ಹೊಂದಿಕೆ ; ಸಾಮರಸ್ಯ. ೨. ಗುಂಪು; ಸಮೂಹ : ಕೋಲ ಕೋಳಾಹಳಕೆ ತೇರಿನ ಗಾಲಿಗಳನೊಡ್ಡಿದರು ಹರಿಗೆಯ ಹೇಳಿದರು ಹಮ್ಮುಗೆಯ ಕೊಯ್ದೊಡ್ಡಿದರು ಜೋಡಿಗಳ ಮೇಳ[ಪಾಠಾಂ. ಳೆ]ಯವ ಮೋಹಿದರು (ಕುವ್ಯಾಕ. ೨೪-೦೪) ; ಕೋಳಿ ತಗರು ಕಾಡಕೋಣ ಕೂರಾನೆ ಮಾಸಾಳು ಮಲ್ಲರು ಮೊದಲಾದ ಮೇಳಯದಲ್ಲಿ[ಪಾಠಾಂ. ಮೇಳದಲ್ಲಿ, ಮೇಳಯದರ್ತಿ] ಗಾಳೆಗದೊಳಗಾ ನೃಪಬಾಲಕ ದಿನವ ನೂಕುವನು (ಶ್ರೀಪಾಂ. ೨-೯೯). **ಮೇಳವ** : ೧. ಪಯದಳದ ಸುಭಟರ ಸಿಂಹಗರ್ಜನೆಯ ಮೇಳವದ ಲೆನ್ನಾನೆಗಳ ಬರಹೇಳು (ಕುವ್ಯಾದ್ರೋ. ೪-೨೦) : ಆಶೆ ಬೀತುದು ನಮಗೆ ರಾಜ್ಯಶ್ರೀಸತಿಯ ಮೇಲಣ ಮನಕ್ಕಫಲಾಷೆಯಾದುದು ಮುಕ್ತಿವನಿತೆಯ ಕೇಳಿಮೇಳವ (ತೊರರಾ. ೨-೦-೦೨). ೨. ಶಾಲಿಗೆಜಗಿದ ಗಿಳಿಯನಬಲೆಯರಾಲಿವರಲಿಂದಿಡಲು ತಪ್ಪಿ ವಿಶಾಲಪುಂಡ್ರೇಕ್ಷುಗಳ ಕೊಳೆ ಗಂಟೊಡೆದು ರಸವಿಳಿಯೆ ಮೇಳವದಿ ಪಥಿಕರ್ಕಳೆಂಟೆ (ಕೇವಂಶ. ೨-೦೦) ; ಮೇಳವದ ರೆಘೋಂಕೃತಿಯ . . . ಕೈರವಸಂಚಯದ ಸೌರಭ್ಯಪವನನಿನೆಸೆವುದಾ ಸರಸಿ (ತೊರರಾ. ೨-೪-೨೦). ೩. ಸಭೆ; ಸಮಿತಿ; ಗೋಷ್ಠಿ : ಅಂಧಾಸುರನ ರಾಜ್ಯದ ಮೇಳವನ[ವ]ನೇನೆಂಬೆ . . . ಏಳುವರೆಯೋಜನದಲೋಲಗಶಾಲೆ ತುಂಬಿತು ಸಂಭಟಸಮುದಯದೋಳಿಯಲಿ (ಕಂಶಪ. ೫-೯೮). ೪. ಗಾನ, ವಾದ್ಯಗಳಿಂದ ಕೂಡಿದ ನೃತ್ಯ : ಗೀತ ಜತಿಗಳ ಮೇಳವಕೆ ಕೆಲರೋತು ಕುಣಿವರು ಚಪ್ಪಳಿಕ್ಕಿ ಪುರಾತನರ ಶತ್ವಾರ್ಥಮಂ ವಿಸ್ತರಿಸುವರು ಕೆಲವರು (ಬಸಪು. ೪-೯) ; ಸರಸತರಸಂಗೀತನರ್ತನದ ಮೇಳವದ ನೆರೆ ನೆರೆದ ಚತುರಂಗದೊಡ್ಡುಗಳ ಸಂದಣಿಯ ದೊರೆದೊರೆಗಳೈತಂದರುತ್ಸವ ದೊಳರಸನಂ ಕಾಣಲಚ್ಯುತನ ಕೂಡೆ (ಕೃಬಶಾ. ೩೩-೨೭). **ಮೇಳೆಯ** : ೧. ನಿನ್ನಾಳ ಜಯಸಿರಿ ಸರ್ಪಬಾಣದ ಮೇಳೆಯದ ಸೀಮೆಯಲಿ ನಿಂದುದು (ಕುವ್ಯಾಕ. ೨೭-೧). ೨. ಒದವಿ ಪೊದಟ್ಟಿ ಮೇಳೆಯದ ಕೇತನಮಾಳಿಕೆ ವೀರಪಕ್ಷಿ ದೂರದ ಭಟರಂ ನಿಜೋಚ್ಛಲ ಪಟಾಂಚಲದಿಂ ಕರೆವಂತುಟಾಗೆ (ಕೃಶು. ೨-೭೦) ; ಕೋಲಂಗಳನಾ ಹರಿಗೆ ಹಲಗೆಯ ಮೇಳೆ[ಪಾಠಾಂ. ಳ] ಯವನಾ ಮುಟಿಯಲುಗಿದೆಸುವಾಳನೋಂದಂಬಿನಲಿ ಸಂದಣಿಗೆಡಹಿದನು ಪಾರ್ಥ (ಕುವ್ಯಾಕ. ೨೦-೨೩) : ತಳಿಯ ಮೇಳೆಯದ ಸಂಚರಿಪ ಪತಾಕಾಕುಳ ದಿಂದುರುವೀರಲಕ್ಷ್ಮಿ ಕಲಿಗಳ ಕೈವೀಸಿ ಕರೆವಂತಿಹವಲ್ಲಿ (ಕುರಾಶಾಂ. ೪-೭೪):

[ < ಪ್ರಾ. ಮೇಲಯ, ಮೇಲವ. / ಸಂ. ಮೇಲಕ]

**ಮೇಳಯಿಸು** ' ಮೇಳಿಸು ' ನೋ.

**ಮೇಳಯ್ಸು** ' ಮೇಳಿಸು ' ನೋ.

**ಮೇಳರಂಗ** (ನಾ). (ಪುರಾತನ ಗ್ರೀಕ್‌ನಾಟಕಶಾಲೆಗಳಲ್ಲಿ ಬಳಕೆಯಿದ್ದ) ರಂಗದ ಮುಂಭಾಗದಲ್ಲಿ ಮೇಳದವರು ಹಾಡಲು ಮತ್ತು ಕುಣಿಯಲು ರಚಿಸುತ್ತಿದ್ದ ಅರ್ಧವೃತ್ತಾಕಾರವಾದ ವೇದಿಕೆ.— ಜಗಲಿ: ರಂಗದಾಚೆಗೆ ಹೀಗೆ ಒಯ್ಯಲ್ಪಟ್ಟ ಮೇಳದವರು ತಾತ್ಕಾಲಿಕವಾಗಿ ಒಂದೆಡೆಯಿದ್ದು ಅಥವಾ ಮುನ್ನೆಲೆಯ ಮೇಳರಂಗದಲ್ಲಿ ಬಂದಿದ್ದು, ಮೇಳಗೀತೆಯನ್ನು ಹಾಡಿರಬಹುದು (ಐದ್ಯಕ್ರ. ೩vi. ಪಾಟಿಕರ ಸಮುಸ್ಯ) : (ಪುರಾತನ ಗ್ರೀಕ್‌ನಾಟಕಶಾಲೆಗಳಲ್ಲಿ ರಂಗದ ಮುಂಭಾಗದಲ್ಲ ಮೇಳದವರು ಹಾಡುತ್ತ ಕುಣಿಯುತ್ತಿದ್ದ ಅರ್ಧವೃತ್ತಾಕಾರದ) ಮೇಳರಂಗ (Orchestra. ೩೦೪೩). [ಸಂ. ಮೇಲರಂಗ]

**ಮೇಳವ** ' ಮೇಳಯ ' ನೋ.

**ಮೇಳವಡೆ** (ಕ್ರಿ). ಜೊತೆ ಸೇರು; ಒಟ್ಟುಸೇರು : ತಾಳಧಾರಿಗ ನಟುವಿಗ ಗಾಯಕರುಂ ನೆಱೆ ಮೇಳವಡೆದ ವಾದ್ಯದವರು ಸೂಳೆಯರುಗಳು ಸುವರ್ಮಾನಿಗಳ್ ಪಣ್ಯಲಜಾಲದೆ ಪಣಿದರಾಕ್ಷಣದೆ (ಕಂಪಿ. ೨೬-೨೭).

[ಮೇಳ (= ಮೇಲ) + ಪಡೆ$_1$]

**ಮೇಳವಣೆ** (ನಾ). ೧. ಕೂಟ ; ಹೊಂದಿಕೆ ; ಸಾಮರಸ್ಯ : ಧರ್ಮದ ಮೇಳವಣೆಯಿಲ್ಲದೊಡೆ ಕೊಲುವಿರೆ ಪಾಲಕನ (ಶಿಶಾಗ. ೬-೨-೦) : ಮೇಳವಣೆಯುಸು ನೆನದು ಲೋಕದಿ ಕೋಳುಹೋದನು ಹಿಂದೆ ತನಗಾಳಾಗಿ ಬಳಲಿದ ವಾನರರ ನೆನನೆನದು ಮರುಕೊಳಿಸಿ (ಮುಷಿರಾ. ೬-೦). ೨. ಗುಂಪು ; ನೆರವಿ : ಸಮೂಹ : ಗಾಳುಗಜಱಿನ ಕಹಳೆಗಳ ಕಳಕಳದ ಬೊಗ್ಗುಗಳ ಮೇಳವಣೆ ಭುಗಿಲಿಡಲು . . . ಎರಡುಬಲ ಹೊಯ್ದಾಡಿತೊಡಗಲಸಿ (ಶಿವ್ಯಾಶಿ. ೬-೯). ೩. ಗಾನವಾದ್ಯಗಳಿಂದ ಕೂಡಿದ ನರ್ತನ : ತಾಳಧರರೊಂದೆಸೆಗೆ ಅವುಜಗರೊಂದೆಸೆಗೆ ಮೇಳವಣೆಯೊಂದೆಸೆಗೆ (ಶಾಚೊಮ್ಮ. ೦೪೦-೨೯) ; ತಾಳಂ ನರ್ತನಮುಂ ಕರೆವುತ್ತಿರೆ ಮೇಳವಣೆಗೆ ಶಬ್ದಂ ಕೊಡುತ್ತಿರೆ (ಶೃಂಗಾರ. ಹ. ೪೬೬-೧೬) ; ಸೊಗಸಿನ ಮೇಳವಣೆಗಳ ಬೇಂಟೆಯಾಯಿತು ದ್ರುಪದಪುರಿಯೊಳಗೆ (ಸಂಶಕ. ೨೮-೨೨). 'ಮೇಳಣೆ' ಪಾಠ.

[ಮೇಳವ (<ಮೇಳಯ) + —ಅಣೆ$_4$]

**ಮೇಳವಾಡು** (ಕ್ರಿ). ೧. ಜೊತೆ ಸೇರು ; ಒಡಗೂಡು : ಮಲ್ಲೀರಾಮೆಯುಂ ಮೇಳವಾಡಿ ವನೇಜಾತಿನಿಯುಂ ಏಡುಂಬಿಸಿ ವಿನೋದಂಬೆತ್ತು ಬಂದತ್ತು . . . ಮಾರುತಂ (ಜಗಿ. ೦೬-೧೧೦) ; ಹೇಳುಹೇಳನ್ನೇನು ಮಾರಿಯ ಮೇಳವಾಡಿದನೇ ಜಯದ್ರಥನಾಳುತನವನು ಬವರದಲಿ ತನ್ನೊಡನೆ ತೋಱಿದನೆ (ಕುವ್ಯಾದ್ರೋ. ೮-೩೯). ೨. ವಿನೋದವಾಡು ; ಕ್ರೀಡಿಸು : ಕೂಡಲಸಂಗಮದೇವಾ ನಿಮ್ಮ ಹೇಳಿದ ಹೇಳಿಕೆಯಿಂದ ಪಿಂಬೇರ ಮ್ಯಲಿಗೆ ಮೇಳವಾಡುತ್ತಿದ್ದ ಕಳಾಕಾ ತ್ರೈಜಗದೊಳಗೆ (ಬಸವ. ೩೬೭).

[ಮೇಳ (=ಮೇಲ) + ಆಡು$_1$]

**ಮೇಳವಿಕೆ** (ನಾ). ಹೊಂದಾಣಿಕೆ ; ಸಂಯೋಜನೆ : ಪಾತ್ರಗಳ ದಿವ್ಯ ಮಾನವಅಂಶಗಳ ಮೇಳವಿಕೆಯಲ್ಲಿ ಹೊಂದಿಕೆ ಕಡಿಮೆಯಾಗಿದೆ (ಕನಾಕ. ೦೭೪).

[ಮೇಳವ (< ಮೇಳಯ) + — ಇಕೆ]

**ಮೇಳವಿಡಿ** (ಕ್ರಿ). ಜೊತೆಯಲ್ಲಿ ಸೇರು ; ಹೊಂದಿಕೊಳ್ಳು : ನೀಲದ ತನ್ಮುರಸದೊಳಗೊಂದು ಕಗ್ಗಳ ಮೇಳವಿಡಿದು ಕಳೆಗೊಂಡು ಶೂಲಿ ಯರ್ಧಾಂಗಿಪೊಪ್ಪಿರ್ದಳು ನಿರ್ಮಲಕಾಳಿಕಾಂಬಿಕೆ ಸಲಹೆನ್ನ (ಅಭ್ಯರಾ. ೦-೩).

[ಮೇಳ (=ಮೇಲ) + ಪಿಡಿ$_1$]

**ಮೇಳವಿಸು** ' ಮೇಳಿಸು ' ನೋ.

**ಮೇಳವೆಣ್ಣು** (ನಾ). ಮೇಳದವಳು ; ನರ್ತಕಿ : ದೊರೆರಾಯನ ಸಾರಿಯ ಮೇಳವೆಣ್ಣುಗಳುಱೆ ನಾಲ್ಕುದೆಸೆಯ ದೇಸಗಳ ಬಿರುದಿನ ಗಣಿಕೆಯರ್ಪುರವರನಾರಿಯರಿರದೆ ಸಿಂಗರಿಸಿಯ್ದೈದಿದರು (ಕೊಪಿ. ೨೦-೬೪).

[ಮೇಳ (=ಮೇಲ) + ಪೆಣ್ಣು (<ಪೆಣ್)]

**ಮೇಳಾಪ** ' ಮೇಲಾಪ ' ನೋ.

**ಮೇಳಾಪಕ** ' ಮೇಲಾಪಕ ' ನೋ.

**ಮೇಳಾಪಿಸು** ' ಮೇಲಾಪಿಸು ' ನೋ.

**ಮೇಳಾವ** (ನಾ). ಕೂಟ ; ಸೇರಿಕೆ ; ಹೊಂದಿಕೆ : ಅವರಿಸಿದುದು ಮತ್ತೆ ಹೊಸಮೇಳಾವದಲಿ ಕುರುಸೇನೆ (ಕುವ್ಯಾಕ. ೦೯-೨೮).

[< ಪ್ರಾ. ಮೇಲಾವ./ಸಂ. ಮೇಲಾಪ]

**ಮೇಳಿ** ' ಮೇಂಟಿ ' ನೋ.

**ಮೇಳಿಸು**, ಮೇಳಯಿಸು, ಮೇಳಯ್ಸು, ಮೇಳವಿಸು, ಮೇಳೈಸು (ಕ್ರಿ). ೧. ಸೇರು ; ಜೊತೆಯಾಗು : ಜೊತೆಗೂಡು : "ಮೇಳಿಸು – ಸಂಯೋಗೇ" (ಕಮುದ) ; ಪಾಂಡವರೊಳ್ ನೀಂ ಮೇಳಿಸಿ ನಣ್ಪನೆ ಬಗೆದಿರ್ ಜೋಳದ ಪಾಟಿಯುಮನಿಸು ಬಗೆಯಿಂ ನಿಮ್ಮೊಳ್ (ಪಂಭಾ. ೦೦-೦೩) : ನೆನೆಯಿಸಿದಳಬಳೆ ಮಧುಲಕ್ಷ್ಮಿ ಮೇಳಿಸಿರ್ದಳಲತೆಯಂ (ವರ್ಧಪು. ೩-೪೩) ; ಶ್ರೀಮದಮಳಮಹಿಮ ಕ್ಷೀರಾಂಬುಧಿಸೋಮನುದಗ್ರಬಲೋದ್ಭಟದೇವಂ ವಾಮೆಯೊಡನೆ ಮೇಳಿಸುತುರ್ವಿಯನುರ್ವಿಂ ಪಾಲಿಸುತಿರ್ದಂ (ಉದ್ಯರೀ. ೨ ಸೂಕನ). ೨. ಕೂಡು ; ಸಂಭೋಗಿಸು : ನಯದೊಳೆ ನೋಡಿ ನೋಟದೊಳೆ ಮೇಳಿಸಿ ಮೇಳದೊಳಪ್ಪಕೆಯ್ಯ (ಪಂಪಭಾ. ೪-೯೪) ; ಮಾಣಿಕದ ಕಂಬೊಳಪಂ ಬಿಸಿಲೆಂದು ನಟ್ಟಿರುಳ್ ಮೇಳಿಸುಗುಂ ರಥಾಂಗು (ಶಾಂತಿಪು. ೦-೦೨೭). ೩. ಹತ್ತಿರ ಬರು ; ಸಮೀಪಿಸು : ರೂಕ್ಷಾಳಕಂಗಳನೋಸರಿಸುತ್ತುಂ ಮೆಲ್ಲನೆ ಮೇಳಿಸಿ ಕನ್ನೆಯುಂ ನುಡಿವಳ್ (ಆದಿಪು. ೩-೩೦) : ಮೆಲ್ಲನೆ ಮೇಳಿಸಿ ಪರ್ಚುವ ಲಲ್ಲಯಿಸುವ . . . ಮುನಿಯಲ್ಲಿ ಜಿನೋಕ್ತಿಯನೆ ಕೇಳಲಾಗದು ಚತುರಂ (ರಮಾಣಿಮ್ಮ. ೬-೨೦೩). ೪. ಕೂಡಿಸು ; ಸೇರಿಸು : ಹೊಂದಿಸು : ಅಳವಡಿಸು : ಕೆಂಗಱೆಯಂ ಸರಂಗಳೊಳ್ ಮೇಳಿಸಿ ಸುತ್ತುಮಿರ್ಪ ಶಬರರ್ಕಳಿನೊಪ್ಪಿದುದೊಂದು ಪಕ್ಕಣಂ (ಕಸುಪಾ. ೧೦-೦೯೮) ; ಕರ್ಮವು ಮೇಳಿಸಿದ ಬೇಳಂಬವಲ್ಲದೆ ಬೇಱೆ ಪೆಱತಲ್ಲ (ಶಾಸ್ಪಶಾ. ೦೭-೩೪). ೫. ಆಕರ್ಷಿಸು ; ಸೆಳೆ : ಬಾಳ್ದಿನೇಶಬಿಂಬದ ನೆಟಿಲ್ ಜಲದೊಳ್ ನೆಲಸಿತ್ತೊ ಮೇಣ್ ಘನೇಂದ್ರಾಳಿಯ ದಿಂದಮುರ್ಚಿವ ಫಣಾಮಣಿಮಂಗಳಚೆಸ್ಮಿಯೋ ಕರಂ ಮೇಳಿಸಿದಪ್ಪುದೆನ್ನೆರ್ದೆಯನೆಂದು ಬೊದಿಲ್ಲನೆ ಪಾಯ್ದು ನೀರೊಳಾ ಬಾಳನನಾದಮಾದರದೆ ಕಂಡೊಸೆದಂ ನಿಧಿಗಂಡನಂತೆವೋಲ್ (ಪಂಪಭಾ. ೦-೯೭). ೬. ಒಟ್ಟುಗೂಡು; ಗುಂಪುಸೇರು ; ಒಟ್ಟಾಗು : ಕುಳದ ಲಯಮುಂ ನಿಱಿ ನೀಳಾಳಕ ಹಾರವ ಪೊದಟ್ಟ ಮುತ್ತಂಬಿವು ಮುಮ್ಮೇಳಿಸಿ ಕೈಕೊಂಡುವು ಲಳಿತಾಳಕ ಕೈಕೊಂಡಳೆಂಬುದೊಂದಚ್ಚರಿಯೋ (ಆದಿಪು. ೯-೨೪) ; ಬಾಳನ ನಱಸುಪುಟದೊಳ್ ಮೇಳಿಸೆ ದುಗ್ಧೋದಬಿಂದುಸಂದೋಹಂಗಳ್ (ಆದಿಪು. ೪-೬೩) ; ಜಸಮುಂ ತೊಡೆವಂತೆ ವೈಜಯಂತಿಗಳೆಡೆಪರಿಯದೆ ಮುಂದೆ ಮಿಳ್ದುರ್ ಮೇಳಿಸಿ ತೋರ್ಕುರ್ಗಂ (ಕಾದಂಪೂ. ೩೩೭). ೭. ಒಟ್ಟುಗೂಡುವಂತೆ ಮಾಡು; ಒಟ್ಟುಗೂಡಿಸು : ಮೇಳಿಸಿ ಜೀವಾವಳಿಗಳ ತಾಳಿಸುವರನಜ್ಜಗೆಂಡದೊಳ್ ಕಾವಲಿಯೊಳ್ ತಾಳಿಸುವರ್ (ಸುಕುಮಾ. ೦೦-೪೭) ; ಅತಿಭೀಮರೆನಿಪ್ಪ ಸಮಸ್ತಮಲ್ಲರಂ ಮೇಳಿಸಿ ಕೃಷ್ಣನು ಕೊಲಲೊಡರ್ಚಿದಂ (ನೇಮಿಪು. ೬-೦೩೨). ೮. (ಕೃತ್ರಿಮವಾಗಿ) ಪ್ರೀತಿ, ಸ್ನೇಹಗಳನ್ನು ವ್ಯಕ್ತಪಡಿಸು : ಅರಸನ ಮೊದಲೆ ಮನದೊಳಗಿರೆ ಮೇಳಿಸಿಕೊಂಡು ಬಂದು ಪಾತಕಿ ಕೊಂದಳ್ ಗರದಿಂ ಗಂಡನನು (ಧುಕೋತ. ೩-೩೩), ೯. ಉಂಟಾಗು : ಒದಗು : ಸ್ಮರವಹ್ನಿಜ್ವಾಲೆ ಮೆಯ್ಯಿಂದೊಗೆದು ಪೊಗೆಮನುಳ್ಕೊತ್ತೆಯುಂ ಪುಷ್ಪಶಯ್ಯಾಂತರದೊಳ್ ಸುಯ್ವೆಂಕೆಸಾಲ್ ಮೇಳಿಸೆಯುಂ . . . ಕೋಮಲೆ ರಣರಣಕಾವಸ್ಥೆಯಿಂದಿರ್ದಳ್ (ಕುಸುಪಾ. ೦೩-೦೦೭) ; ದೇವಕಿಯು ಮನ

ದೊಳು ಮೇಳಿಸಿತು ನಿಜಪುತ್ರನನು ಕಾಣ್ಬೆಂದು ಕಾತರವು (ಜಾಳ್ಕಾ. ೨೨-೦). ೧೦. ಉಂಟುಮಾಡು ; ದೊರಕಿಸು ; ಒದಗಿಸು : ವಾಸರಚತುಷ್ಕಮಾತ್ರದೊಳಾವುಪಾಯದಿಂ ಮೇಳಿಸಿ ತಾದುಕೊಂಡು ಕುಡುವೆಂ ನಿನಗರ್ಥಮನೆಂದು ಲೋಳನೀಳಾಳಕಿ ಪುಣ್ಯದು ತಂದೆಯು ಮನಃ ಕ್ಷತಮಂ ಮನದಿಂದಗಲ್ಚಿದಳ್ (ಸುಕುಚ. ೭-೯). ೧೧. ಸಿದ್ಧಪಡಿಸು ; ಅಣಿಗೊಳಿಸು ; ಸಜ್ಜುಗೊಳಿಸು : ಮೇಳಿಸಿದ ಸಜ್ಜರದಿನೇಟಿಉಜ್ಜುಗಂ ಗೆಯ್ಯು ವಿಜಯಕುಂಜರದ ಮಂಜೀರಸಿಂಜಿತಕ್ಕೆ ಪಕ್ಕಾಗಿಯುಂ (ಪುಕ್ಕ ಪು. ೬-೦೯ ಪ). **ಮೇಳಯಿಸು :** ೧. ಪೂರ್ವದೇಶಗಳಿಂದ ಮುಸ್ಲಿಮರು ಕ್ರಮೇಣ ಬರುವುದಕ್ಕೆ ಆರಂಭಿಸಿ ಎರಡು ಪದ್ಧತಿಗಳೂ ಮೇಳಯಿಸಿ ದುವು (ಇಶ್ಯಾಸಂ. ೦೯೨). ೪. ಸರ್ವಾಂಗವಂ ಪ್ರತ್ಯಂಗದೊಳ್ ಮೇಳಯಿಸಿ ಕುಸುಮಾಯುಧಸುಖತರಂಗಿಣಿಯ ಸುಳಿಯೊಳ್ ಮನಂ ಮುಳುಂಗಿರ್ದ ಸುಖಸಮಯದೊಳ್ (೧೦ಳ. ೨-೦೦೩ ಪ) ; ಅಗಿಲು ಸಾದು ಜವಾದಿ ಚಂದನ ಮೃಗಮದಂ ಘನಸಾರ ಗಂಧಾದಿಗಳನೆಲ್ಲಂ ತೆಗೆದು ಪನ್ನೀರಿಂದ ಮೇಳಯಿಸಿ (ಬಸಪು. ೪-೩೩). ೭. ರಾಗಬಂದವರಿಗೆ ಅಭಿಮತ ವಿತ್ತ ಮೇಳಯಿಸಿದನು ಬಲವನು (ಜುಣ್ಯಾ. ೭-೩). ೧೧. ಮೇಳಯಿಸಿ [ಪಾಠಾಂ. ಳೈಸಿ] ನಿಲಿಸಿದಂ ನಿಜಬಲದ ಪೌಜುಗಳನರ್ಧಚಂದ್ರಾಕೃತಿಯೊಳು (ಕೈಪುತಾ. ೨೩-೦೦). ೧೨. (ಆಭರಣವನ್ನು) ತೊಡಿಸು : ಬಾಳಸ್ಥಳ ದೊಳ್ ಕಣ್ಗಡ ಶೂಳಿಗೆ ಪಾರ್ವತಿಗೆ ಕೊರಲೊಳೊಗೆದುದು ನಯನಂ ಕೇಳೆಂಬಾಳಾಪಂ ವಿಗೆ ಮೇಳಯಿಸಿದ [ಪಾಠಾಂ. ಯ್ಸಿದ]ರೈರದಾಳಿಯುಂ ಬಾಳಕಿಯರ್ (೧೦ಳ. ೦೦-೩೬). **ಮೇಳಯ್ಸು :** ೨. ಕ್ಷಣಪಗಲಿದಡೆ ಮೇಲೆ ಬಿದ್ದುರವಣಿಸಿ ಒಡಿದಡೆ ಸುಕ್ಕಿ ಹೊಯ್ದಡೆ ಮಣಿದೊಡಲನಾಂತೊಂದಿದಡೆ ನೆರೆದೊಂದಿ ಮೇಳಯ್ಸಿ[ಪಾಠಾಂ. ಳೈಸಿ] (ಬಸಪು. ೪೨-೦೪) ; ಸೂಳೆ ಸೂತ್ರದ ನೇಣು ಗಾಳವಾಕೆಯ ಮೊಗವು ಮೇಳಯ್ಸಿಪವಳು ಸಲೆ ಬೆಂಡು ಮಿಂಡ ತಾ ಬಾಳೆಮೀನೆಂದ (ಸರ್ವಜ್ಞ. ೦೯೯೪). **ಮೇಳವಿಸು :** ೧. ಕೀಳು ಜಾತಿಗೆ ತಕ್ಕ ನುಡಿಗಳು ಮೇಳವಿಸಿದುವು ಕುಲವ ನಾಲಿಗೆ ಹೇಳಿತೆಂಬುದು ತಪ್ಪದಾಯಿತು (ಕುವ್ಯಾಶಿ. ೭-೦೩); ತಾರ್ಕ್ಷ್ಯನ ಕೂಡೆ ಕಾರ್ಕೋಟಕ ಮೇಳ ವಿಪುದೆ (ಕೋಚಚ. ೦-೩). ೪. ಹುಲ್ಲು ಹೊಲನೆಲ್ಲವಂ ಪೊಗಳ ಸುಧೆಯೊಳಗೆ ನಂಜಿಡುವಂತೆ ಮೇಳವಿಸಿ ಪೇಳೆ ನಾನು (ಸಿದ್ಧರಾ. ೦-೩) ; ಮೂಹುರಿಗಳಲಿ ಮೇಳವಿಸಿದುಡಿದಾರವಂ ಬಂಧಿಸಿ . . . ರುದ್ರಾಕ್ಷಿಯುಂ ಸ್ಪಟಿಕಂಗಳಂ ಕಟ್ಟಿ (ಬಸಪು. ೩೬-೦೪); ಹೋಳಿಸಿರ್ದಡಕೆಗಳ ಭಾಗವ ಮೇಳವಿಸಿ ಕರ್ಪೂರದ . . . ವೀಳೆಯವನಿತ್ತು (ಶ್ರೀಕುರಿ. ೪-೯೭). ೬. ಮೇಳವಿಸಿದ ತನ್ನ ಸಕಲಗುಣಂಗಳ ಎಣಿಕೆಯು ಗುಣತಕ್ಕೆ ಅಗಣಿತನಾದವನು (ಶಿವಗೀ. ೩೨-೨೩೦); ಚೇಳುಗಳು ಕಾವೆಂಟುಸಾವಿರ ಮೇಳವಿಸಿ ಬಂದೊಡಿದಂದದಿ ಮೇಲುನೋವಹುದೆಂದು ಶಾಪವ ಕೊಟ್ಟನೊಬ್ಬಂಗೆ (ಸಂಭಶ. ೦೨-೦೯). ೭. ಇಲಿಯನೂ ಬೆಕ್ಕನೂ ಹುಲಿಯನೂ ಹುಲ್ಲೆಯನೂ ಮೇಳವಿ[ಪಾಠಾಂ. ಮೇಳೈ]ಸುವಂತೆ ಮೇಳವಿಲ್ಲ ದವನ ಒಗತನ ಅಳಿಯ ಬಾಳುವೆ (ಅಪಸಂ. ೦೩೩-೬೦೭); ಕರಿತುರಗರಥವನು ಮೇಳವಿಸುವೆನು ಕಾದಿ ಗೆಲುವೆನು ರಾಘವೇಶ್ವರನ (ಕೌಶಿರಾ. ೩೩-೨). ೯. ಕೇಳಿ ವಳು ಗಾಂಧಾರಿ ಕುಂತಿಗೆ ಬಾಲಕೇಳಿವಿನೋದವೆಂಬುದು ಮೇಳವಿಸಿತಾ ಮುನ್ನ ಮಾಡಿದ ತಪದ ಫಲವೆನುತ [ಪಾಠಾಂ. ವಿನೋದವೇಕೈ ಮೇಳವಿಸಿತೇ ಮುನ್ನ ಹಾ ತಪ್ಪೇನು ತಪ್ಪೇನು] (ಕುವ್ಯಾಆ. ೪-೪೦); ಹೇಳುಹೇಳೀ ನಾಸಿಕಚ್ಯುತಿ ಯಾರ ದೆಸೆಯಿಂದೆ ಮೇಳವಿಸಿದುದನು (ಕೊರರಾ. ೩-೩-೪); ಯಾವುದೋ ಕೆಲಸಕ್ಕಾಗಿ ಅಪ್ಪನ ಮನೆಗೆ ಬಂದಾಗ, ಈ ಉತ್ಸವವು ಅವನಿಗೆ ಮೇಳವಿಸಿತು (ಚಟ್ಟಿಕೂ. ೦೪). ೧೧. ಬಡಿಕೋಲುಗಳನೆಕ್ಕಡವನೆತ್ತುಜುಹಾರಿಯುದಕುಪ್ಪಸವ ಮೇಳವಿಸಿ ಹೊಜವಂಟನವಸೀಪಾಲ ಬೇಂಟೆಗೆ (ಕುವ್ಯಾಆ. ೨೩-೬); ಮೇಳವಿಸಿ ನೇಣುಗಳನೆನುತ ನೃಪಾಲನವದಿರು ಗುಜಬಜಿಸುವುದನಾಲಿಸುತ ಸಾತ್ಯಕಿ ಯೊಡನೆ ಕೃತವರ್ಮನಜುಹಿದನು (ಕುವ್ಯಾಅ. ೯-೪೨). ೧೩. ವಟ್ಟವಾಗು ; ದಟ್ಟೈಸು : ಅಲ್ಲಿ ಕೆನೆ ಮೇಳವಿಸೆ ಯಾದವಮಲ್ಲಗಾಯಿತು ಶ್ವೇತದೀಪವದಲ್ಲಿ ತಾ ದಧಿಯಾಯ್ತು ಮಂಗಳವೃಂದ ಮೇಳವಿಸೆ (ಸಂಭಶ. ೬-೦೦). ೧೪. ಮಾಡು; ಆಚರಿಸು: ಕಾಲಕಾಲದ ನಿತ್ಯಕರ್ಮವ ಮೇಳವಿಸಿ ಬಳಿಕಾ ಕ್ಷುಧಾಗ್ನಿ ಜ್ವಾಲೆಯಾಹುತಿಗಾಗಿ ಬಹ ಭಿಕ್ಷುಕಮುನೀಶ್ವರರ ಪೇಳೆಯುಜಿದುಚಿತದಲಿ ಸಂಫಲದಾಳಿಗಳನೊಲಿದೀವ ತರುಲತೆಯೋಳಿ ವನದಲಿ ಮೆಜಿವುತಿರ್ದವು (ಕ್ರಕುರಿ. ೨೦-೦೬). ೧೫. ಮೇಲಾಗು ; ಅಧಿಕವಾಗು : ಕೇಡುಗರ ಕೈ ಮೇಳವಿಸಿದುದು ದೈವಗತಿಯಿಂದ (ಪಳಕ. ೪-೩೦). **ಮೇಳೈಸು:** ೧. ದಿವಿಜ ಸ್ತ್ರೀಯೊರ್ವಳ್ . . . ತಾಂಡವಾಡಂಬರಮನೊಡರಿಸಲ್ ಚಾರುಮಾಣಿಕ್ಯ ಭೂಷಾರವಮುಂ ನಾನಾಸುತಾಳಧ್ವನಿಯುಮೊಡನೆ ಮೇಳೈಸಿ . . . . ಚೆಲ್ವಾಗೆ ದೇಹಪ್ರಭೆಯೊಡನೆ ದಲಾಡುತ್ತುಮಿರ್ದಳ್ ವಿಚಿತ್ರಂ (ಜಾಧಪು. ೭-೯೦) ; ಖಳನೊಡನೆ ಮೇಳೈಸುತಸುರತತಿ ಕರವ ಬಿಲ್ಪೆದೆಯಂ ಚಡಾಳೈಸುತಾಗ ಶತಮಾಯನಿಂದ್ರನ ಸರಿಸದೊಳ್ ನಿಂದು ನಿನ್ನ ಕೊಂದು ಪಾಳೈಸುವೆಂ . . . ಎನುತಾ ಖಳಂ ಕೋಲ್ಗಳಿಜಿದನು (ಕಬಪು. ೪೯-೨೦). ೪. ಭಸಿತದೊಳು ಬೆರಸಿದ ಕತ್ತುರಿಯ ಸಾರಮಂ ನೊಸಲೊಳು ಮೇಳೈಸಿ ಪರಿಮಳದಲರ್ಗಳಂ ಸಿರಿಮುಡಿಗೆ ಸಿಂಗರಿಸಿ (ಬಸರ. ೬-೦೩); ಲಸದ್ಭ್ರಮರಿಯುಂ ಮೇಳಾಪದೊಳ್ಪಿಂ ತ್ರಿಭಂಗದ ಸೊಂಪಿಂ ಸಲೆ ರಾಗಮಂಜರಿ ಕರಂ ಮೇಳೈಸಿದಳ್ ಲಾಸ್ಯಮಂ (ದಕಳು. ೬-೦೩೬) ; ಕೀಲಚ್ಚುಗಳ್ ಮೇಳೈಸಿದರು ಬಲುನಂಬುಗೆಯ ಬದ್ಧರ ದೊಳಗೆ ತುಂಬಿವರಸ್ತ್ರಶಸ್ತ್ರಗಳ (ಕುವ್ಯಾಶಿ. ೪-೯೦). ೬. ರಾಜಮಂದಿರಾಂತ ಬಹಿರ್ಭಾಗಭೂಮಿತಳಪ್ರದೇಶದೊಳ್ ಮೇಳೈಸಿ ಬಂದು ನಿಂದ ಸೈನಿಕ ಪ್ರಧಾನರೊಳ್ (ಶಾಂತಿಪು. ೩-೦೦೦ ಪ); ವೀಳಯಂಗುಡತಲೆಂದು ಮೇಳೈಸುವ ತಾಂಬೂಲಕರಂಡವಾಹಿನಿಯರಂ ಪೌರ್ವಿನಿಂ ಜರ್ವಿಯುಂ (ಜಗಪು. ೦೦-೭ ಪ); ತಗ್ಗಿ ತುಜಿಜು ಕಳಕಳ ವಿಷಾದದ ಸುಗ್ಗಿ ಬೀತುದು ರಾಯರೀಚೆಯು ಮಗ್ಗುಲಲಿ ಮೇಳೈಸಿ ಮೆಜಿದರು (ಕುವ್ಯಾಸ. ೦೦-೭೯). ೭. ವಿಪ್ರನಿಕಾಯ ವೆಲ್ಲವ ನಿಳಯದಲೆ ಮೇಳೈಸಿ ಧಾರೆಯ ನಳಿನಸಂಭವ ಮೆಚ್ಚಲೆಜಿದನು ಸಲ ವಿಪ್ರರಿಗೆ (ಸಂಭಶ. ೨೩-೭೯). ೧೧. ರಥವ ಮೇಳೈಸಿದನು ಹೊಸಸಾರಥಿಯ ಕರಸಿದನು (ಕುವ್ಯಾದ್ರೋ. ೦೩-೪೦); ಘೃತಪಾತ್ರಾದಿ ಮುಖಪರಿಕರವ ಮೇಳೈಸಿದರು ತತ್ಕ್ರತುಕುಂಡವಳಯದಲಿ (ಕೊರರಾ. ೦-೭-೩೪). ೧೪. ಕೇಳಲೆ ಕುಮಾರಕನೆ ದಕ್ಷನೆಂಬವನೆಮ್ಮನೋಲಗಿಪ ಹರಿಯಜೇಂದ್ರಗರ್ಗಡಿ ಯ್ಯಾಗವಂ ಮೇಳೈಸಲಾ ಕಥಾಂತರವೋಳೀಶ್ವರಿಯುಳಿದಳು (ಕಬಪು. ೩೦-೦೩). ೧೬. ಈಡೇರಿಸು ; ನೆರವೇರಿಸು ; ಪೂರ್ಣಮಾಡು : ಹೇಳುವದು ಕೇಳುವದು ಆಳ್ವ ಭೂಪನೆ ಉಂಟು ಮೇಳೈಸು ನಮ್ಮ ಕೋರಿಕೆಯ (ಕವ್ವಚಾ. ೨೪೭). ೧೭. ಹೆಚ್ಚಿಸು ; ಅಧಿಕಗೊಳಿಸು : ಜನಿಸಿದ ದನುಜ ವೀರ್ಯನು ಕುಮತಿಯಲಿ ನವಮಾಸ ತೀರಲಿಕಮಿತಪೌರುಷದಿಂದ ಸೇನೆಯ ಬಲುಹ ಮೇಳೈಸಿ . . . ಕೊಂದನು ಮನ್ನೆಯಾದಿಗಳ (ಸಂಭಶ. ೨೩-೦೦೦).

[ಮೇಳನ (=ಮೇಲನ) +— ಇಸು₃]

**ಮೇಳು** (ನಾ). ಜೊತೆ ; ಒಡನಾಟ : 'ಮೇಳುಗೂಡು' ಪರಾ.

[ < ಸಂ. ಮೇಲ ]

**ಮೇಳುಗೂಡು** (ಕ್ರಿ). ಜೊತೆ ಸೇರು ; ಒಡಗೂಡು : ಮಳೆಯ ಕಾಲದ ಜಲದ ಪುಂಜಿಗೆ ಕಳೆಯ ತಾಳಿರಲದಕೆ ಶಕ್ರನ ಚೆಲುವ ಚಾಪದ ಮೇಳು ಗೂಡಲು ಚಂದ ಕಾಣ್ಬಂತೆ (ಕಳುಸಂ. ೦೦-೬೦). [ಮೇಳು + ಕೂಡು₁]

**ಮೇಳೆ₁** (ನಾ). ಗಂಟಲುಮಣಿ ; ಗೋನಾಳಿ : ಕರೆಯದ ಕಾಡಿ ಕಂಟಸುವ ಕೂಂಟಣಿಯುಂ ನೊಣೆಗಬ್ಬೆ ತಿಂಗೆ ಬೆಂಗುರುಟೆ ಬಳಾರಿ ಬಾಡಿಸುಗೆ . . . ಮೇಳೆಯುಂ ಮುಜಿಗೆ ಮಾಳಬೆಗಿಂದು ಮೊಗಾರಮೆತ್ತುವೆಂ (ಲೀಲಾವ. ೨-೦೦೬); ಮಜಹನಿಕ್ಕಿಯೆ ಕೊರಳ ಮೇಳೆಯ ಮುಜಿದ ಪಂ ಶಿಶುವಿಂಗೆ ವಿಷವನುಯೆಜಿದವೋಲು (ಕೌಶಿರಾ. ೪-೦೨) ; ದಡಿಗರೂಪಿನಿಂದಿಹ ಹರಿಯ ಮೇಳೆಯಂ ಒಡಿದೊತ್ತಿಯೊಡೆದೆಲುವ ನೆಗ್ಗಲು (ಲೀಕೃಕ. ೩-೦೪-೩೦).

**ಮೇಳೆ$_{2}$** (ನಾ). ಮೆಳೆ ; ಪೊದರು : ಪಾರ್ತ್ಥನ ಮೇಳೆಯಲ್ಲಿ ನಿಜಂಗಲ್ಲು (ಎಇ. XV. ೬೬–೨೨; 1074). [P ಇದು 'ಮೆಳೆ' ಎಂಬುದರ ಅಪಲಿಖಿತ]

**ಮೇಳೆಯ** ' ಮೇಳಯ ' ನೋ.

**ಮೇಳೈಸು** ' ಮೇಳಿಸು ' ನೋ.

**ಮೇಟಿ$_{1}$** ' ಮೇಂಟಿ ' ನೋ.

**ಮೇಟಿ$_{2}$** (ನಾ). ಒಬ್ಬಾತನ ಹೆಸರು : ಕಕ್ಕರ ಮಡಲೂರೆಱಿದು ತೊಱು ಗೊಣ್ಕೊಡೆ ತಿಂಗಣಿಮಾರ ಶ್ರೀಮೇಟಿ ತಿಂಗಣಿಮೂರುಳ್ಳಿಗಿ ಪಲರನ್... ಎಱಿದು ಸಗಮೇಱಿದನ್ (ಎಕ. X. ಶಿಡ್ಲ. ೩೨–೪: ಸು. 870 ?). [ ? ]

**ಮೇಟಿಮಡು** (ನಾ). ಒಂದು ಊರಿನ ಹೆಸರು : ಶ್ರೀಮತ್ಕಪ್ಪೆಯರಸರ ××× ಮಗನಣ್ಣಿಗ ರಟ್ಟಿಯ[ಣ್ಣ] ××× [ಸಂ] ಬೆಳಾ[ವ]ಡಿಚ ಮೇಟಿಮಡುವಿ ×× ಟ್ಟ (ಕೌಇಇ. XI–i, ೦೦–೦೫: 865). [ ? ]

**ಮೈ$_{1}$** ' ಮೆಯ್$_{2}$ ' ನೋ.

**ಮೈ$_{2}$** (ನಾ). ೧. ಕಪ್ಪು : ಕರಿದು : 'ಮೈಗುಂಜಿ' ಪರಾ. ೨. ಕಾಡಿಗೆ: 'ಮೈಗಣ್$_{2}$' ಪರಾ. [ದೇ. ॥ ತಮಿ. ಮಲ. ಮೈ; ತುಳು. ಮೈಯಿ]

**ಮೈಂದವಾಟಿ** ' ಮಯಿಂದವಾಳೆ ' ನೋ.

**ಮೈಕ** ' ಮಯುಕ ' ನೋ.

**ಮೈಕಟ್ಟು** ' ಮೈಗಟ್ಟು ' ನೋ.

**ಮೈಕದಿ** (ಕ್ರಿ). (ಕೆಲಸ, ಜವಾಬ್ದಾರಿ ಇತ್ಯಾದಿಗಳಿಂದ) ತಪ್ಪಿಸಿಕೊಳ್ಳು: ಮೈಗಳ್ಳನಾಗು : ವಸಂತನಿಗೆ ಆಶ್ಚರ್ಯ, ರಘುಪ್ಪ ಹೀಗೇಕೆ ಮೈಕದಿಯ ತೊಡಗಿದ್ದಾನೆ, ಎಂದು (ಗಂಪಾಊ. ೨೪೬).

[ ಮೈ$_{1}$ ( < ಮೆಯ್$_{2}$) + ಕದಿ$_{1}$ ]

**ಮೈಕಳೆ** (ಕ್ರಿ). ೧. ಗರ್ಭಸ್ರಾವವಾಗು : ಮೈ ಇಳಿ : ನಿನ್ನೆ ತಾನೇ ಮೈ ಕಳೆದ ಗೌರಿ. ನನ್ನ ಹಣೆಯಲ್ಲಿ ಬರೆದುದೇ ಹಾಗೆ ಎಂದು ಹೇಳಿ ತೆಪ್ಪಗಾಗು ವಷ್ಟು ಎದೆಗಾರ್ತಿಯಲ್ಲ (ಮುಂಗಾಮು. ೨೫). ೨. ಹೆರಿಗೆಯಾಗು : ಪ್ರಸವವಾಗು : ಇದೊಂದು ಸಾರಿಗೆ ಸುಲಭವಾಗಿ ಮೈಕಳೆದರೆ ಸಾಕು (ರತಿ).

[ ಮೈ$_{1}$ ( < ಮೆಯ್$_{2}$ ) + ಕಳೆ$_{1}$ ]

**ಮೈಕಾಂತಿ** (ನಾ). ದೇಹದ ತೇಜಸ್ಸು. – ಪ್ರಕಾಶ, – ಶೋಭೆ : ಬಿಲು ರವದ ಮೊಳಗಿನಲಿ ಕೃಷ್ಣನ ಮೈಕಾಂತಿ ಮೇಘಾವಳಿಗಳಲಿ . . . ನಿಲುವ ಹಂಸವ್ಯೂಹವೆಲ್ಲಿಯದೆಲೆ ಮಹೀಪತಿ (ಕುಪ್ಯಾದ್ರೋ. ೬೦–೨೦).

[ ಮೈ$_{1}$ ( < ಮೆಯ್$_{2}$) + ಕಾಂತಿ ]

**ಮೈಕು** (ನಾ). ಧ್ವನಿವರ್ಧಕ ಯಂತ್ರ : ಮೈಕಿನ ಗಲಾಟೆಯೂ ಇರಲಿಲ್ಲ ? (ಹೇಶ. ೦೬): ಮೈಕಿನಲಿ ಕೊಕ್ಕೊಕ್ಕೋ ಕೂಗಿ ತುರಾಯಿ ಕುಣಿಸಿ ಬೆಳ ಗಾಯಿತೆಂದು ಭ್ರಮಿಸಿದ್ದೇವೆ (ಪಂಪು. ೩೨–೦). [P ಇದು ಇಂಗ್ಲಿಷಿನ Microphone ಎಂಬ ಶಬ್ದದ ಸಂಕ್ಷಿಪ್ತರೂಪ]

**ಮೈಕುತ್ತಿ** (ನಾ). ಶರೀರವನ್ನು ಇರಿಯುವವನು : ಮಹಾಸಾಮನ್ತ ಬಿರುದರ ಜಿಟ್ಟಿ ಬಿರುದರ ಮೈಕುತ್ತಿ ಶ್ರೀಮಾಣ್ ಬಿಜ್ಜ ಕೋಗಲ ಯೆಯಪ್ನಾಲು (ಕೌಇಇ. IX–i. ೫೬–೬ ; 922).

[ ಮೈ$_{1}$ ( < ಮೆಯ್$_{2}$) + ಕುತ್ತು$_{1}$ + - ಇ$_{3}$ ]

**ಮೈಕೆಬೇರು** (ನಾ). ಔಷಧಕ್ಕೆ ಬಳಸುವ ಒಂದು ಬಗೆಯ ಮೂಲಿಕೆ : ಚಿಕ್ಕಮರುಳು. ಮೈಕೆಬೇರು, ಗಂಡರಸಿನವಲ್ಲಿ ನಿಂಬೇಕಾಯಷ್ಟು ಕುಡಿಯೆ ಬಾಣಂತಿರೋಗ ಬಿಸುಟೀವರು ಮಾಣ್ಗಂ (ಶಿಶ್ವೈ. ೯೦).

[ ಮೈಕೆ + ಬೇರು ( < ಬೇರ್$_{1}$) ]

**ಮೈಕೊಡವು** ' ಮೆಯ್ಗೊಡವು ' ನೋ.

**ಮೈಕ್ರೋಸ್ಕೋಪ್** (ನಾ). [ವಿಜ್ಞಾ] ಬರಿಯ ಕಣ್ಣಿಗೆ ಕಾಣದ ವಿವರ ಗಳನ್ನು ಅಥವಾ ಆಕೃತಿಗಳನ್ನು ಲೆನ್ಸುಗಳ ಮೂಲಕ ವಿಸ್ತರಿಸಿ ತೋರುವ ಒಂದು ಸಲಕರಣೆ : ಸೂಕ್ಷ್ಮದರ್ಶಕ : ಇಂಥ ಕೆಲವು ಕನ್ನಡಿಗಳನ್ನು ಜತೆಗೊಳಿಸಿ. ಒಂದು ನಳಿಗೆಯಲ್ಲಿಟ್ಟು 'ಮೈಕ್ರೋಸ್ಕೋಪ್' ಎಂಬ ಉಪಕರಣಗಳನ್ನು ಮಾಡುತ್ತಾರೆ (ಶಾಂಶ್ರ. II. ೯೩೪).

[ ← ಇಂ. Microscope ]

**ಮೈಗಂಡಿ** (ನಾ). (ಬಾಣ ಮುಂತಾದ ಶಸ್ತ್ರಗಳ ಆಘಾತದಿಂದ) ಶರೀರ ದಲ್ಲಿ ಉಂಟಾಗುವ ತೂತು,—ರಂಧ್ರ : ಅದ ಮೈಗಂಡಿಯೊಳು ರಕುತವ ಶೋಧಿಸುತ ಹಳಮುಪ್ಪವನು ತೊಡೆದಾವರಿಸಿದುದು ವೈದ್ಯಸಂತತಿ ವೀರಭಟರುಗಳ (ಕುವ್ಯಾವೀ. ೫–೪೦).

[ ಮೈ$_{1}$ ( < ಮೆಯ್$_{2}$) + ಕಂಡಿ$_{1}$ ]

**ಮೈಗಂದೆ** (ನಾ). ಮೈಮೇಲೆ ಏಳುವ (ನವೆಯನ್ನುಂಟುಮಾಡುವ) ಗುಳ್ಳೆ : ಶಿವಜಿಜ್ಞಾನೋದಯವಾದ ಲಿಂಗಾಂಗಿಗಳಿಗೆ ಎನ್ನ ನುಡಿ ಮೈಗಂದೆಯಂ [ಶಾಟಾಂ. ಮಸದ ಗಂದೆಯ] ತುಱಿಸಿದಂತೆ ಹಾಲುಸಕ್ಕರೆಯ ನುಂಡಂತೆ ಸವಿದೋಱುತ್ತದೆ (ಕಪಪ. ೩೦–೨೩).

[ ಮೈ$_{1}$ ( < ಮೆಯ್$_{2}$) + ಗಂದೆ ]

**ಮೈಗಂಪು** ' ಮೆಯ್ಗಂಪು ' ನೋ.

**ಮೈಗಟ್ಟು$_{1}$, ಮೈಕಟ್ಟು** (ನಾ). ದೇಹದ ರಚನೆ ; ಅಂಗಸೌಷ್ಠವ : ಅವನು ಎಳೆಯ ವಯಸ್ಸಿನವನೆಂದು ಅವನ ಮೈಗಟ್ಟು ಸೂಚಿಸುತ್ತಿತ್ತು (ಪುಜಿಗ. ೬೦). **ಮೈಕಟ್ಟು** : ಮೈಕಟ್ಟು ತಂದೆಯಂತೆಯೇ ಇದ್ದರೂ ಮುಖ ದೊಡ್ಡಪ್ಪನ ಮುಖವನ್ನೇ ಹೋಲುತ್ತಿತ್ತು (ವಾತ್ಸಾ. ೦೪): ಜನರೂ ಪುಷ್ಟಿಕರವಾಗಿ ಬೆಳೆದು ಬಲವಾದ ಮೈಕಟ್ಟುಳ್ಳವರಾಗಿಯೂ ಆರೋಗ್ಯ ವಂತರಾಗಿಯೂ ಇರುವರು (ಗ್ರಹಪ. ೦).

[ ಮೈ$_{1}$ ( < ಮೆಯ್$_{2}$ ) + ಕಟ್ಟು$_{2}$ ]

**ಮೈಗಡ** (ನಾ). ಒತ್ತೆ, ಆಧಾರಗಳೇನೂ ಇಲ್ಲದೆ ವ್ಯಕ್ತಿಯ ಮೇಲಿನ ನಂಬಿಕೆಯ ಆಧಾರದ ಮೇಲೆ ಕೊಡುವ ಸಾಲ ; ಮೈಸಾಲ : " ಮೈಗಡ_ಕೈಗಡ " (ತಾಪಕೋ. ೩೬).

[ ಮೈ$_{1}$ ( < ಮೆಯ್$_{2}$) + ಕಡ$_{1}$ ]

**ಮೈಗಣ್$_{1}$** ' ಮೆಯ್ಗಣ್ ' ನೋ.

**ಮೈಗಣ್$_{2}$** (ನಾ). ಕಾಡಿಗೆ ಹಚ್ಚಿದ ಕಣ್ಣು : ಓ ! ಎನ್ನ ಎಚ್ಚ ಮೈಗಣ್ಣ ಪೆಣ್ಣೆ ! (ರಾಮಾಶ್ವ. ೫೦–೦೦). [ ಮೈ$_{2}$ + ಕಣ್ ]

**ಮೈಗಣ್ಣ** ' ಮೆಯ್ಗಣ್ಣ ' ನೋ.

**ಮೈಗಣ್ಣು** ' ಮೆಯ್ಗಣ್ ' ನೋ.

**ಮೈಗತ್ತಲೆ** (ನಾ). ದೇಹದ ನೆರಳು : ಮುಳುಗಿಸಿದುದಾ ಏಳನ ಮೈಗತ್ತಲೆ ದಿವಾಕರಬಿಂಬವನು (ಕೂರಶಾ. ೩–೦–೪).

[ ಮೈ$_{1}$ ( < ಮೆಯ್$_{2}$) + ಕತ್ತಲೆ$_{1}$ ( < ಕಟ್ಬಲೆ ) ]

**ಮೈಗಪ್ಪು** ' ಮೆಯ್ಗಪ್ಪು ' ನೋ.

**ಮೈಗರೆ** ' ಮೆಯ್ಗರೆ ' ನೋ.

**ಮೈಗರ್ಚು** ' ಮೆಯ್ಗರ್ಚು ' ನೋ.

**ಮೈಗಲಿ** ' ಮೆಯ್ಗಲಿ ' ನೋ.

**ಮೈಗಲಿತನ** ' ಮೆಯ್ಗಲಿತನ ' ನೋ.

**ಮೈಗಳ್ಳ** (ನಾ). ಕೆಲಸಮಾಡುವುದಕ್ಕೆ ತಪ್ಪಿಸಿಕೊಳ್ಳುವವನು ; ಸೋಮಾರಿ : ಕಳ್ಳ ಕೈಗಳ್ಳ ಮೈಗಳ್ಳನೊಮ್ಮೆ ತಾ ಕೊಳ್ಳಗಾಣುವನು (ಸರ್ವಜ್ಞ. ೦೦೬೬) : ಮೈಗಳ್ಳರಾಗಿ ದರಿದ್ರರಾಗಬಾರದು (ಕೃಷಿಶ್ರ. ೦೪) ; ಈ ಮೈಗಳ್ಳನಿಗೆ ತಪ್ಪಿಸಿಕೊಳ್ಳಲು ಒಂದು ನೆವ (ಹೊಸಕ್ಷಿ. ೩೦).

[ ಮೈ$_{1}$ ( < ಮೆಯ್$_{2}$ ) + ಕಳ್ಳ$_{1}$ ]

**ಮೈಗಳ್ಳತನ** (ನಾ). ಕೆಲಸ ಮಾಡುವುದಕ್ಕೆ ತಪ್ಪಿಸಿಕೊಳ್ಳುವಿಕೆ ; ಸೋಮಾರಿತನ : ಮೈಗಳ್ಳತನಕ್ಕೆ ಅಲ್ಲಿ ಆಶ್ರಯವಿಲ್ಲ ಎಂಬುದನ್ನು ಶರಣರು ಸಂತರು ಸ್ಪಷ್ಟಪಡಿಸಿದರು (ಶರಣಶ. ೩೬): ಅವುಗಳನ್ನು ಮೈಗಳ್ಳ

ತನವ ಮಂತಗಳನ್ನಾಗಿ ಮಾರ್ಪಡಿಸಿದ್ದೇವೆ (ಅಕನಾ. ೨೨೦).

[ ಮೈಗಳ್ಳ + — ತನ ]

**ಮೈಗಾ** (ಕ್ರಿ). ಮೈಗಾವಲಾಗಿರು; ಅಂಗರಕ್ಷಣೆ ಮಾಡು : ಆವ ಶರವಿದ್ದೇಗುವುದು ಮೈಗಾವನಸುರಾಂತಕನಲ್ಲೈ (ಕುಮ್ಮಾದ್ರೌ. ೦೯-೪೯).

[ ಮೈ$_{ೞ1}$ ( < ಮೆಯ್$_2$ ) + ಕಾ$_1$ ]

**ಮೈಗಾಣ್** ' ಮೆಯ್ಗಾಣ್ ' ನೋ.

**ಮೈಗಾಣಿಸು** ' ಮೆಯ್ಗಾಣಿಸು ' ನೋ.

**ಮೈಗಾಪು** ' ಮೆಯ್ಗಾಪು ' ನೋ.

**ಮೈಗಾಯ** (ನಾ). ಶರೀರದ ಮೇಲೆ ಆದ ಗಾಯ : ಕಾಲೊಳು ಮೂಡಿದ ದಸಿಮುಳ್ಳುಗಳು ತಾಕಿ ಸೀಳಿದ ಮೈಗಾಯದಿಂದ ಜೋರಿ ಸುರಿವ ಬಿಸು ರಕ್ತದಿಂದಾ ಜನಜಾಲವೈದಿತು ದೆಸೆದೆಸೆಗೆ (ಕಂಪಬ. ೦೦-೩೦).

[ಮೈ$_{ೞ1}$ (< ಮೆಯ್$_2$) + ಗಾಯ]

**ಮೈಗಾವಲು** ' ಮೆಯ್ಗಾವಲು ' ನೋ.

**ಮೈಗಾವಲೂಳಿಗ** (ನಾ). ಅಂಗರಕ್ಷಣೆ ಮಾಡುವ ವೃತ್ತಿ.–ಉದ್ಯೋಗ : ಚಿನ್ನದ ಹರಡೆ . . . ಹೊನ್ನ ಭೂಷಣದ ಮೈಗಾವಲೂಳಿಗದರ ಸನ್ನಾಹ ವೈತಂದುದಾಗ (ಕಂಪಬ. ೨೩-೬೮).

[ಮೈಗಾವಲು (< ಮೆಯ್ಗಾವಲು) + ಊಳಿಗ (< ಊಳಿಗ)]

**ಮೈಗಾಹು** ' ಮೆಯ್ಗಾಪು ' ನೋ.

**ಮೈಗುಂಜಿ** (ನಾ). ಕಪ್ಪು ಚುಕ್ಕೆಯನ್ನು ಹೊಂದಿರುವ ಗುರುಗುಂಜಿ : ತಲೆಯ ನವಿರು, ಕೈಕಾಲುಗುರು, ಓಲಿ ಮೈಗುಂಜೆಯಿಂ ಧೂಪವಿಕ್ಕುವುದು (ಶಾಂಕ. ೦೨೯-೦೩). [ಮೈ$_2$ + ಗುಂಜಿ]

**ಮೈಗುಂದು** ' ಮೆಯ್ಗುಂದು ' ನೋ.

**ಮೈಗುಡು** ' ಮೈಯ್ಗೊಡು ' ನೋ.

**ಮೈಗುಣ** (ನಾ). ಶರೀರದ ಸ್ವಾಭಾವಿಕಸ್ಥಿತಿ ; ದೇಹಪ್ರಕೃತಿ : ವ್ಯವಸ್ಥೆ, ರಚನೆ . . . (ಆರೋಗ್ಯ, ದಾರ್ಢ್ಯ, ಮೊ.ಗಳ ವಿಷಯದಲ್ಲಿ) ದೇಹಸ್ಥಿತಿ. ಪ್ರಕೃತಿ ; ದೇಹಪ್ರಕೃತಿ ; ಮೈಗುಣ (Constitution. ೩೦೪೩). [ಮೈ$_{ೞ1}$ ( < ಮೆಯ್$_2$ ) + ಗುಣ]

**ಮೈಗುತ್ತ** (ನಾ). ದೇಹದ ಅನಾರೋಗ್ಯ ; ರೋಗ : ಮೈಗುತ್ತದಿಂ ಬಾಡಿಹಂ (ವೈಸಂಪು. ೪-೪೨). [ಮೈ$_{ೞ1}$ (< ಮೆಯ್$_2$) + ಕುತ್ತ]

**ಮೈಗುಜುಹು** ' ಮೆಯ್ಗುಜುಹು ' ನೋ.

**ಮೈಗೂಡಿಸು** (ಕ್ರಿ). ೧. ಮೈತುಂಬಿಕೊಳ್ಳುವಂತೆ ಮಾಡು : ಶಕ್ತಿ ಹೆಚ್ಚುವಂತೆ ಮಾಡು : ನಿಶ್ಯಕ್ತವಾಗಿದ್ದ ನನ್ನ ದೇಹಕೋಸ್ಕರ ಸೀಸೆಗಟ್ಟಲೆ ಬಲವರ್ಧಕಗಳನ್ನು ತಂದು ಕುಡಿಸಿ ಮೈಗೂಡಿಸಿದೆ (ಚಿಕಾ. ೨೫೭). ೨. ತನ್ನದಾಗಿ ಮಾಡಿಕೊಳ್ಳು : ಹೊಂದಿಸಿಕೊಳ್ಳು : ಇವರು . . . ದ್ರಾವಿಡದೇಶದ ವಾಸ್ತುಶಿಲ್ಪಶೈಲಿಯನ್ನು ಮೈಗೂಡಿಸಿಕೊಂಡು ತಮ್ಮದೇ ಆದ ವಿಶಿಷ್ಟಶೈಲಿಯನ್ನು ಪ್ರತಿಪಾದಿಸಿದರು (ಚಾಳಂಪ. ೦೦೩); ಭಾರತೀಯ ವಿಚಾರ ಮತ್ತು ಸಂಸ್ಕೃತಿಗಳ ಸಾರವನ್ನು ರಜಪೂತಕಲೆ ಮೈಗೂಡಿಸಿಕೊಂಡಿತು (ಭಾರದ. ೫೨೯).

[ ಮೈಗೂಡು ( < ಮೆಯ್ಗೂಡು) + — ಇಸು$_3$) ]

**ಮೈಗೂಡು** ' ಮೆಯ್ಗೂಡು ' ನೋ.

**ಮೈಗೂದಲು** ' ಮೆಯ್ಗೂದಲ್ ' ನೋ.

**ಮೈಗೆಡು** ' ಮೆಯ್ಗೆಡು ' ನೋ.

**ಮೈಗೆಲಸ** ' ಮೆಯ್ಗೆಲಸ ' ನೋ.

**ಮೈಗೊಡಹು** ' ಮೆಯ್ಗೊಡಪು ' ನೋ.

**ಮೈಗೊಡು** ' ಮೆಯ್ಗೊಡು ' ನೋ.

**ಮೈಗೊಳ್** ' ಮೆಯ್ಗೊಳ್ ' ನೋ.

**ಮೈಗೊಳಿಸು** ' ಮೆಯ್ಗೊಳಿಸು ' ನೋ.

**ಮೈಗೊಳ್ಳು** ' ಮೆಯ್ಗೊಳ್ ' ನೋ.

**ಮೈಚಳಿ, ಮೈಛಳಿ** (ನಾ). (ಆಲಂ) ಸಂಕೋಚ : ದಾಕ್ಷಿಣ್ಯ: ಭಿಡೆ. **ಮೈಛಳಿ** : ಆಫೀಸಿನಲ್ಲಿ ಕೂಡ ಮೊದಲಿದ್ದ ಮೈಛಳಿ ಈಗ ಮಾಯವಾಗ ತೊಡಗಿತ್ತು (ವಾತ್ಸಲ್ಯ. ೦೬೩).

**ಮೈಚಳಿಬಿಡು, ಮೈಛಳಿಬಿಡು** = ಭಯ ಸಂಕೋಚಗಳನ್ನು ಬಿಡು : ನಿಸ್ಸಂಕೋಚವಾಗಿ ವ್ಯವಹರಿಸು : ಸುಶೀಲೆಯೂ ಆಕೆಯೊಡನೆ ಈಗ ಮೈಚಳಿಬಿಟ್ಟು ಮಾತನಾಡಿದಳು (ಸವಾಜ. ೪೬೭) ; ಉನ್ನೀಸಳು . . . ಮೈಚಳಿಬಿಟ್ಟು ಕುಳಿತಿದ್ದಾಳೆ (ಪೂರಜ. ೦೨); ಅಲ್ಲಿ ಮೈಚಳಿಬಿಟ್ಟು ಹಾಡಿದಂತೆ ಬೇರೆಲ್ಲಿಯೂ ನೀವು ಹಾಡಲಾರಿರಿ (ಗಾಕಪ. ೩೯) ; ಮೈಛಳಿಬಿಟ್ಟು ಮಾತನಾಡುವುದು ಮಾತ್ರ ನನ್ನಿಂದಾಗಲೇ ಇಲ್ಲ (ವೃಹಿ. ೫೮).

[ ಮೈ$_{ೞ1}$ ( < ಮೆಯ್$_2$ ) + ಚಳಿ$_2$]

**ಮೈಚಾಚು** ' ಮೆಯ್ಚಾಚು ' ನೋ.

**ಮೈಛಳಿ** ' ಮೈಚಳಿ ' ನೋ.

**ಮೈಜಂಗಳ** (ನಾ). ಮೈಯಿಂದ ಉಂಟಾಗುವ ಸ್ರಾವ.– ಸುರಿತ : ಓಂಗಿದಸುಪಿನ ದುಂದುಭಿಯ ಮೈಜಂಗಳದ ಜರಿದರುಣಜಲ ಮುನಿಯಂಗಲತೆಯುಲಿ ಪಿಡಿಯೆ (ಕೊರಂ. ೪-೨-೩೮).

[ಮೈ$_{ೞ1}$ ( < ಮೆಯ್$_2$ ) + ಜಂಗಳ್]

**ಮೈಜೋಡು** ' ಮೆಯ್ಜೋಡು ' ನೋ.

**ಮೈಝುಳ** ' ಮೆಯ್ಝುಳ ' ನೋ.

**ಮೈತ** (ನಾ). ತೀರಿಕೊಂಡವನು ; ಸತ್ತವನು : ಭೀಮರಾಯರು ಮೈತ ಆದದ್ದು ೧೩-೮-೧೯೮೮ ರೊಳಗ (ಗ್ರಾಬಯು. ೦೫೪); ಬಹಳ ಮಾಡಿ ಮೈತನು ನನ್ನ ಕಕ್ಕನೇ ಆಗಿರಬಹುದು (ಮಬಿಬ. ೮೪).

[ ← ಅರ. ಮಯುತ್; ಮರಾ. ಮಯುತ್, ಮೈಯುತ್, ಮೈತ್./ ಸಂ. ಮೃತ]

**ಮೈತಳೆ** ' ಮೈದಳೆ ' ನೋ.

**ಮೈತಾಳು** ' ಮೈದಾಳು ' ನೋ.

**ಮೈತಿಮಿರ್, ಮೈದಿಗುರು** (ನಾ). ಮೈಗೆ ಲೇಪಿಸುವ ಸುಗಂಧ ವಸ್ತು.– ಪರಿಮಳದ್ರವ್ಯ : ಉಮೆಯು ಮೈತಿಮಿರ ಪೆತ್ತಳೆಯ ಮಾಡಿ ಜೀವನವಿತ್ತಳೆಂದುಸುರ್ವರು (ಶ್ರೀಶಾ. ೦-೩). **ಮೈದಿಗುರು** : ನಿಡಿಗಣ್ಣ ಬೆಳ್ದೊಗರು ಕಂತುವಿನ ಮೈದಿಗುರು . . . ಎನೆ ನಿಳಾಸನಿಯರುಗಳೊಳ್ಪರೆಯ ದೆಸಕದಿಂ ಬಂದರ್ (ಅದ್ಭುದೇ. ೫-೨೪); ಗಿರಿಸುತೆಯ ಮೈದಿಗುರಿನಿಂದಾದ ನಂದನಂ ಹರನ ತಡೆಯಲ್ ಖಡ್ಗದಿಂದೆ ತಲೆಯರಿದು ನಭಕಟ್ಟು ಶಿವನೊಳ ಪೊಕ್ಕನು (ಚಂಡಿ. ೨೮-೩೪). [ಮೈ$_{ೞ1}$ (< ಮೆಯ್$_2$) + ತಿಮಿರ್$_2$]

**ಮೈತಿಮಿರ** (ನಾ). ೧. ದೇಹದ ನವೆ.– ಕಡಿತ : ಮೈತಿಮಿರ, ಮದ, ಬಾಯಾರಿಕೆ, ಈ ಲಕ್ಷಣಂಗಳು ಕೃಷ್ಣಜಿಹ್ವಕವೆನಿಸಿಕೊಂಬ ಸನ್ನಿದೋಷ ಜ್ವರದಲ್ಲಿ ಉಂಟಾಗಿಹವು (ವೈದ್ಯಶಾ. I, ೦೦೩). ೨. (ಆಲಂ) ಕೊಬ್ಬು : ಪೊಗರು ; ಸೊಕ್ಕು : ಅವನಿಗೆ ಮೈತಿಮಿರ ಹೆಚ್ಚಾಗಿದೆ (ರೂಢಿ).

[ಮೈ$_{ೞ1}$ ( < ಮೆಯ್$_2$ ) + ತಿಮಿರ$_1$]

**ಮೈತ್ರ** (ಗು). ೧. ಮಿತ್ರನಿಗೆ ಸಂಬಂಧಿಸಿದ ; ಗೆಳೆಯನ. (ನಾ). ೨. ಗೆಳೆತನ : ಸ್ನೇಹ : "ಪ್ರೀತಿ ಸಖ್ಯಂ ಸ್ನೇಹಮೆನಲು ಮೈತ್ರಕ್ಕೆ ನಾಮಂ" (ಮಂಗರಾ. ೦೨೬-೮) ; ತ್ರಿನೇತ್ರನ ನೇತ್ರಮಂ ಶೋಧಿಸುವ ನಾಸಟದೆ ಮೈತ್ರದಿಂ ಕೈವೆರಳೊಳ್ (ಬಸವು. ೦೮-೫೯). ೩. ಗೆಳೆಯ : ಸ್ನೇಹಿತ : ಕಾಂಬೆನೆಂದು ಬಂದ ಮೈತ್ರನ್ನವಲಕ್ಕಿ ತಿಂದ ವದನ (ಕೀರ್ತನು. ೦೩೦-೫) ; ಚೈತ್ರದಲ್ಲಿ ಮೈತ್ರನಾದರೂ ಮೈತಗಲಿಸಕೂಡದು (ಗಾದೆ). ೪. [ಜೈನ] ಅರವತ್ತು ಮೂರು ಇಂದ್ರಕಗಳಲ್ಲಿ ಒಂದು :

೧. ಋತು ೨. ವಿಮಳಂ . . . ೩೦. ಮೈತ್ರಂ . . . ೬೩. ಸರ್ವಾರ್ಥಸಿದ್ಧಿ ಎಂಬಿವು ಅನುಕ್ರಮದಿಂ ಅಱುವತ್ತುಮೂಱು ಇಂದ್ರಕಂಗಳ ಪೆಸರ್ಗಳ್ (ತತ್ತ್ವಕ್ರ. ೨೦೩). [ಸಂ.]

**ಮೈತ್ರಾಯಣೀಯ** (ನಾ). ಶತೋಪನಿಷತ್ತುಗಳಲ್ಲಿ ಒಂದು : ಶ್ರೀರುದ್ರ ಬೃಹದಾರಣ್ಯಕ . . . ಮೈತ್ರಾಯಣೀಯ . . . ಮುಂಡಕವೆಂಬಿವು ಮೊದಲಾದವೇ ಶತೋಪನಿಷತ್ತುಗಳು (ಬಿವೇಕ. ೩). [ಸಂ.]

**ಮೈತ್ರಾವರುಣ** (ಗು). ೧. ಮಿತ್ರ ಮತ್ತು ವರುಣದೇವತೆಗಳಿಗೆ ಸಂಬಂಧಿಸಿದ. (ನಾ). ೨. ವಾಲ್ಮೀಕಿಋಷಿ : " ಪ್ರಾಚೇತಸಃ ವಾಲ್ಮೀಕಿಃ, ಮೈತ್ರಾವರುಣಃ—(ಈ ೩) ವಾಲ್ಮೀಕಿ" (ಹಲಾಯು. ೬೮-೨೩೮). ೩. ಅಗಸ್ತ್ಯಋಷಿ. ೪. ವಸಿಷ್ಠಋಷಿ : ಅಗ್ನೀಂದ್ರ . . . ಮೈತ್ರಾವರುಣ . . . ವೇಷ್ಟರೆಂಬವರ್ಮೊದಲಾದ ಪದಿನೈದು ಋತ್ವಿಕ್ಕುಗಳೊಡಗೂಡಿ (ಬಿವೇಕ. ೦೨೦). [ಸಂ.]

**ಮೈತ್ರಾವರುಣಿ** (ನಾ). ಅಗಸ್ತ್ಯಋಷಿ : ನಿರುಪಮಚರಿತ್ರದಿಂ ಮಿಕ್ಕರುಂಧತಿ ವಸಿಷ್ಠನಂಗನೆ ತಾಂ ಮೈತ್ರಾವರುಣಿಯಗಸ್ತ್ಯನ ಸಾಧ್ವಿ[ಯೆ ಪರ] ಲೋಪಾಮುದ್ರೆ ತನ್ಮುನೀಶ್ವರವಧುಗಳ್ (ವಸ್ತುಕೋ. ೦೪-೭೭) ; ಇರಲು ತಿಂಗಳ ಮೇಲೆ ಮೈತ್ರಾವರುಣಿಯನು ಬೀಳ್ಕೊಂಡು ಬರೆ (ಕೂರಚಾ. ೩-೩-೬೬) ; ಮೈತ್ರಾವರುಣಿ ಶಿಷ್ಯಂಗೂಡಿ ಬರುತುಮಿರ್ಪುದಂ ಕಟ್ಟದಿರೊಳ್ ಕಂಡು (ರಾಜಶೇ. ೦೦-೨೩). [ಸಂ.]

**ಮೈತ್ರಾಸನ** (ನಾ). [ರಾಜನೀ] ಮಿತ್ರನಾಗಿದ್ದೂ ಉದಾಸೀನನಾಗಿರುವ ಸ್ಥಿತಿ : ಮತ್ತಮಲ್ಲಿ ಕೆಲರಂ ಮೈತ್ರಾಸನವೃತ್ತಿಯೊಳ್ ನಿಱಿಸಿ ಕೆಲರನು ದ್ದತಾಪ್ರತಿಮಹಿತರ್ಮಾಡಿ ಕೆಲರನುಚ್ಚಾಟಿಸಿ ಸರ್ವಹರಣಂಗೆಯ್ದು (ಶಂಕಚಾ. ೭-೩೦ ವ). 'ಆಸನಸ್ಥಾನ' ಪರಾ. ಪ "ಇಲ್ಲಿ 'ಮೈತ್ರಾಸನವೃತ್ತಿ' ಎಂಬುದು 'ವೈತಸೀವೃತ್ತಿ' ಎಂದಿರಬಹುದು" (ಶಂಕದೀ. ೨೨೪). [ಸಂ.]

**ಮೈತ್ರಿ** (ನಾ). ಸ್ನೇಹ ; ಗೆಳೆತನ ; ಪ್ರೀತಿ : "ಸ್ನೇಹಮುಜರ್ಯಂ ಸಖ್ಯಂ ಸೌಹಾರ್ದಂ ಪ್ರೀತಿ ಮೈತ್ರಿ . . . ಸೌಹೃದಮುಮದು" (ವಸ್ತುಕೋ. ೦೦೧-೪) ; ಅವಿನಯರೊಳ್ ಮೈತ್ರೀಪ್ರಮೋದಕಾರುಣ್ಯಮಾಧ್ಯಸ್ಥವೃತ್ತಿಯುಂ ಭಾವಿಸುತ್ತುಂ (ಸುಕುಮಾ. ೪-೨೧ ವ) ; ವಿಶ್ವದ ಮೈತ್ರಿಯಲಿ ಮನಸಂದು ಪಾತ್ರಾಪಾತ್ರವೆನ್ನದೆ ಬೆರಸಿ ಬದುಕುವುದಧಿಕಗುಣವೆಂದ (ಕುಮಾವ್ಯಾ. ೪-೭). [ಸಂ. ಮೈತ್ರೀ]

**ಮೈತ್ರಿಣಿ** (ನಾ). ಗೆಳತಿ; ಸ್ನೇಹಿತೆ : ನಾವು ಒಮ್ಮೆ ತಮ್ಮ ಮೈತ್ರಿಣಿಯೊಬ್ಬರನ್ನು ಕಾಣಲಿಕ್ಕೆಂದು ಹೋದಾಗ ಹತ್ತು ನಿಮಿಷ ಮೊದಲೇ ಹೋದುದಕ್ಕಾಗಿ ಅವರ ದ್ವಾರವನ್ನು ಹತ್ತು ನಿಮಿಷ ಕಾಯ್ದರಂತೆ ! (ಮುಂಗಾಪು. ೭೪) ; ಅವೊತ್ತು ನಿಮ್ಮ ಮೈತ್ರಿಣೀ ನಿಮ್ಮನ್ನು ಕೂಗಿದಾಗಲೇ ಗೊತ್ತು (ಕೃಪಿ. ೪೨೪). [← ಮರಾ. ಮೈತ್ರಿಣೀ, ಮೈತ್ರಣೀ, ಮೈತ್ರೀಣ]

**ಮೈತ್ರೇಯ** (ಗು). ೧. ಸ್ನೇಹಪೂರ್ಣವಾದ ; ಸ್ನೇಹದಿಂದ ಕೂಡಿದ. (ನಾ). ೨. ಒಬ್ಬ ಋಷಿಯ ಹೆಸರು. [ಸಂ.]

**ಮೈತ್ರ್ಯ** (ನಾ). ಸ್ನೇಹ ; ಗೆಳೆತನ : ಪ್ರವಹಿಸಲಿ ವಾತ್ಸಲ್ಯ ಮೈತ್ರ್ಯಗಳ ನೆನೆಕೆಯಿಂ ನೆನೆದೆನ್ನ ಮನವಾ ಕರುಣೆ ತವರಿನೆಡೆಗೆ (ಶುಲವೇ. ೨೦-೦೩). [ಸಂ.]

**ಮೈಥುನ** (ನಾ). ೧. ಸ್ತ್ರೀಪುರುಷರ ಕೂಟ; ಸುರತ ; ಸಂಭೋಗ : "ನಿಧುವನ ರತ ಯಾಭಗ್ರಾಮ್ಯಧರ್ಮನಾಮಂ ವ್ಯವಾಯಮದು ಮೈಥುನಮುಂ" (ವಸ್ತುಕೋ. ೩೪-೦೨); ನೆಗಟ್ದಾಹಾರಂ ಭಯಮೊಳ್ಪುಗೆಟ್ಟ ಮೈಥುನ ಪರಿಗ್ರಹಂಗಳ್ ಸಂಸಾರಿಗಳೊಳ್ ಸಾಮಾನ್ಯದಿನೆಯ್ದುಗುಂ (ಸುಕುಮಾ. ೬-೭); ಮೈಥುನದಲಾಚಾರದಲಿ ಬಳಸಂದು ಕೈತವದ ಉದ್ಯೋಗದಲಿ ದುರ್ನೀತಿಯಲಿ ಪರಸತಿಯರಲಿ ಸಂಪ್ರೀತಿ ಬಲಿವುದು ಬೆದಕ ಬೆದಕಲು (ಕುಮಾವ್ಯಾ. ೪-೯೩). ೨. ಮದುವೆ; ವಿವಾಹ. ೩. ಸಂಪರ್ಕ. [ಸಂ.]

**ಮೈದ** ' ಮೆಯ್ದುನ ' ನೋ.

**ಮೈದಡವು** ' ಮೆಯ್ದಡವು ' ನೋ.

**ಮೈದಡಹು** ' ಮೆಯ್ದಡವು ' ನೋ.

**ಮೈದಣಿ** (ಕ್ರಿ). ೧. ದೇಹವು ಆಯಾಸಗೊಳ್ಳು, — ಬಳಲು : ಮೈದಣಿಯೆ ರಿಪುಭಟನ ಹೊಯ್ಲಲಿ ಛಾಯವನು ಪಡೆದು (ಕುಮಾವ್ಯಾ. ೬-೪೦). ೨. ಶರೀರವು ತೃಪ್ತಿಗೊಳ್ಳು,— ಸಮಾಧಾನ ಹೊಂದು : ಅರುಣಾಬ್ಜಭಾಸುರ ಪದದ್ವಂದ್ವದಿದಿರಲ್ಲಿ ಸಾಷ್ಟಾಂಗಪ್ರಣಾಮಮಂ ಮೈದಣಿವಿನಂ ಎಱಗಿ . . . ಪಾಡಿದಂ ಭಕ್ತಿಯಿಂದಲಾ ನಂದಿಯಾಗ (ಶಂಕಪ್ರಾ. ೦೩-೩೪).

[ಮೈ$_1$ (< ಮೆಯ್$_2$) + ದಣಿ$_1$ (< ತಣಿ$_1$)]

**ಮೈದಳೆ. ಮೈತಳೆ** (ಕ್ರಿ). ಆಕಾರವನ್ನು ಹೊಂದು ; ಸಾಕಾರವಾಗು : ಪೆಳಱುವ ರೌದ್ರೋತ್ಕಟದ ಮೈದಳೆದು ಜವ್ವನದೊಡೆಗಳೋಯೆನೆ ಹೊಳವ ಪಲ್ಗಳ ಪಡೆದಗುರುವಿಸಿ × × × ಶಾರ್ದೂಲ (ಸಾಳ್ವಭಾ. ೩-೩೦). **ಮೈತಳೆ** : ಮುಗ್ಧತೆ ಮೈತಳೆದಂತೆಪ್ಪೋಲಿರುವವರು ಪರಿಶುದ್ಧಚೇತನರುವರು (ಇಂಗಾಶ. ೩೭-೭೬) ; ಸ್ವಲ್ಪ ಸ್ವಲ್ಪವಾಗಿ ಮೈತಳೆದು . . . ಕಾಲಕ್ರಮದಲ್ಲಿ ಪೂರ್ಣತೆಯನ್ನು ಪಡೆದಿದೆ (ಕಾಸಗಿ. ೩೦). [ಮೈ$_1$ (< ಮೆಯ್$_2$) + ತಳೆ$_1$]

**ಮೈದಾ** (ನಾ). (ಪೂರಿ ಮುಂತಾದ ಖಾದ್ಯಗಳನ್ನು ತಯಾರಿಸಲು ಬಳಸುವ) ಒಂದು ಬಗೆಯ ನಯವಾದ ಹಿಟ್ಟು : ಮೈದಾಹಿಟ್ಟನ್ನು ಸ್ವಲ್ಪಸ್ವಲ್ಪವಾಗಿ ಸೇರಿಸಿ ಮಿಶ್ರಣವು ನಯವಾದ ಅಂಟನಂತಾಗುವಂತೆ ಕಲಸುವುದು (ಅಡುಗೆ. ೯೭). [← ಪಾರ. ಮೈದಹ್ ; ಹಿಂ. ಮರಾ. ಮೈದಾ]

**ಮೈದಾನ,ಮೈದಾನು** (ನಾ). ಸಮತಟ್ಟಾದ ವಿಸ್ತಾರವಾದ ಭೂಮಿ ; ಬಯಲು : ತಿಳಿವೆ ನಾನದನೆಲ್ಲ ಗದೆಗಳೊಳೊಲವರೀ ಮೈದಾನದೊಳು ನಿಲುತೊಲಿವುದೆಂದನು ಭೀಮ ಕೌರವರೊಡನೆ ಗುರುದ್ರೋಣ (ಜಚಾ. ೯-೩೦); ಪಟ್ಟಣದ ಮಧ್ಯಭಾಗದಲ್ಲಿ ಹತ್ತು ಗಜ ವಿಸ್ತೀರ್ಣವುಳ್ಳ ಮೈದಾನವಿದೆ (ಕ್ರವಾ. II. ೦೩೩). **ಮೈದಾನು** : " ಮೈದಾನು = ಪಟಾಂಗಣ " (ಸಾಪಕೋ. ೩೭) ; ಒಂದು ಕಡೆಯಲಿ – ನೆಲವು ಮೈದಾನುಭೂಮಿಯಂತೆ ಬಲುದೂರದ ತನಕ ಹರಡಿಕೊಂಡಿರುವುದು (ಬಾಲಕ್ರ. I. ೨೦).

[← ಪಾರ. ಅರ. ಹಿಂ. ಮರಾ. ಮೈದಾನ್]

**ಮೈದಾನು** ' ಮೈದಾನ ' ನೋ.

**ಮೈದಾಳು, ಮೈತಾಳು** (ಕ್ರಿ). ಆಕಾರವನ್ನು ಪಡೆ ; ಸಾಕಾರವಾಗು : ಶ್ರೀಗುರು ಕುವೆಂಪು ಅವರ ಕಣ್‌ಬೆಳಕಿನ ನಿರ್ದೇಶನದಲ್ಲಿ . . . ಮೈದಾಳಿದ್ದು ಸೌಂದರ್ಯಸಮೀಕ್ಷೆ ಎಂಬ ಈ ಒಂದು ಕೃತಿ (ಸೌಂದಸ. i. ಮೊದಲ ಮಾತು). **ಮೈತಾಳು** : ಉಳಿದ ತ್ರಿಷಷ್ಟ್ಯಕಲೆಗಳೇ ಈ ತ್ರಿಷಷ್ಟ್ಯಿಯಲ್ಲಿ ಮೈತಾಳಿದಂತಿವೆ (ಮುಂಗಾಪು. ೪) ; ಯುಗಯುಗಕೂ ಉರುಳುತಿಹುದು ಜಗದ ರಥದ ಗಾಲಿ ಹಗಲು ಇರುಳು ಮರಳಿ ಮಸೆದು ಸಾಹಸ ಮೈತಾಳಿ (ಕಂಠಮು. ೨೪-೪). [ಮೈ$_1$ (< ಮೆಯ್$_2$) + ತಾಳು$_1$ (< ತಾಳ್$_1$)]

**ಮೈದಿಗುರು** ' ಮೈತಿಮಿರ್ ' ನೋ.

**ಮೈದಿಲು** ' ಮೇಲುದು ' ನೋ.

**ಮೈದುಂಬು** ' ಮೆಯ್ದುಂಬು ' ನೋ.

**ಮೈದುನ** ' ಮೆಯ್ದುನ ' ನೋ.

**ಮೈದುನತನ** ' ಮಯ್ದುನತನ ' ನೋ.

**ಮೈದೆಗಹು** (ನಾ). ಶರೀರದ ಸೊಬಗು,— ಆಕರ್ಷಣೆ : ಸೋಲವಂದು ಮೈದೆಗಹಿನೊಳ್ ಕಲಕಲಬರಂ ಮರುಳ್ಮಾಡುತೀಶ್ವರನಡಿಯಿಡುತಿರ್ದನು (ತಿರುಪು. ೦೪-೩೩). [ಮೈ$_1$ (< ಮೆಯ್$_2$) + ತೆಗಹು]

**ಮೈದೆಗೆ** ' ಮೆಯ್ದೆಗೆ ' ನೋ.

**ಮೈದೆರೆ** (ಕ್ರಿ). ಮೈಯನ್ನು ಒಡ್ಡು : ಶಕ್ತಿಕಂದ ಶಿವನಂದನ ಶಿಖಿಸ್ಯಂದನ ಕರವೆ ವಾಹನವಾಗಲು ಅರ್ಚಿಸಿ ಅವನಲಿ ಮೈದೆರೆವೆ (ಅಕಳು. ೪೦೩-೨).

[ಮೈ$_1$ (< ಮೆಯ್$_2$) + ತೆರೆ$_1$ (< ತೆಱೆ$_1$)]

**ಮೈದೆಱ³** ' ಮೆಯಿದೆಱ³ ' ನೋ.
**ಮೈದೊಗಲ್** ' ಮೆಯ್ದೊಗಲ್ ' ನೋ.
**ಮೈದೊಡವು** ' ಮೆಯ್ದೊಡವು ' ನೋ.
**ಮೈದೊಡಿಗೆ** ' ಮೆಯ್ದೊಡಿಗೆ ' ನೋ.
**ಮೈದೊಡುಗೆ** ' ಮೆಯ್ದೊಡಿಗೆ ' ನೋ.
**ಮೈದೊಡೆ** (ಕ್ರಿ). ಮೈಯನ್ನು ತಡವು.— ನೇವರಿಸು : ಹಿಡಿದೆತ್ತಿ ಕುಳ್ಳಿರಿಸಿ ನೆಳಲೊಳಗೆ ಬೀಸಿ ಮೈದೊಡೆದು (ಸಿದ್ಧರಾ. ೨-೪೨).
[ಮೈ$_1$ (< ಮೆಯ್$_2$) + ತೊಡೆ$_1$]
**ಮೈದೊರೆ** (ಕ್ರಿ). ದೇಹವನ್ನು ತ್ಯಜಿಸು : ಶರೀರವನ್ನು ತ್ಯಾಗಮಾಡು: ಅವನು ಕೇವಲಿಯಾಗಿ ಮೈದೊರೆವವರೆಗಿನ ವಿಷಯಗಳನ್ನು ಚಿತ್ರಿಸುವ ಅಂಶವೇ ಕಡೆಯದು (ನಾತೋಜ. ೩೩೬).
[ ಮೈ$_1$ (< ಮೆಯ್$_2$) + ತೊರೆ$_1$ (< ತೊಱೆ³$_1$) ]
**ಮೈದೊಳೆ** ' ಮೆಯ್ದೊಳೆ ' ನೋ.
**ಮೈದೋರು** ' ಮೆಯ್ದೋಱು ' ನೋ.
**ಮೈದೋಱಿಕೆ** (ನಾ). ಪ್ರತ್ಯಕ್ಷವಾಗಿ ಕಾಣಿಸಿಕೊಳ್ಳುವಿಕೆ : ತೋಱುವೀ ಸಚರಾಚರದ ಮೈದೋಱಿಕೆಯ ಮಹಿಮನು ಕಣಾ (ತೊರರಾ. ೬-೩-೨೬).
[ಮೈದೋಱು (< ಮೆಯ್ದೋಱು) + — ಇಕೆ]
**ಮೈದೋಱು** ' ಮೆಯ್ದೋಱು ' ನೋ.
**ಮೈನ** (ನಾ). ಕಿತ್ತಳೆಯ ಬಣ್ಣ ಅಥವಾ ಹಳದಿಯ ಬಣ್ಣದ ಕೊಕ್ಕನ್ನುಳ್ಳ, ಗೊರವಂಕದ ಜಾತಿಗೆ ಸೇರಿದ ಒಂದು ಬಗೆಯ ಕಪ್ಪುಬಣ್ಣದ ಪಕ್ಷಿ : ಮೈನಂ ಎರಳೆ ನವಿಲ್ಗಳಾಗೆ ಪೆಟ್ಟಿ ಪೋದಗೆಕರಭಂ ಶಸತಮಿವು ಪೋಗೆ ಶಾರುಂಬರೆ ಪಡಕೆಯಂ ಮೂರೊಳೆದಳ್ಪುಮಚಳಿತವಚನ (ರಾಜಶೇಖ. ೦೨-೦೬); ಮೈನಹಕ್ಕಿ ; ಗೊರವಂಕ (Mina. ೪೦೪೭).
[← ಹಿಂ. ಮರಾ. ಮೈನಾ./ಪ್ರಾ. ಮಯಣಾ./ಸಂ. ಮದನ]
**ಮೈನಂಬಿಗೆ** (ನಾ). ಸಾಲ ಕೊಡುವಾಗ ಒತ್ತೆ, ಅಡವುಗಳಿಲ್ಲದೆ ವ್ಯಕ್ತಿಯ ನಂಬಿಕೆಯೇ ಆಧಾರವಾಗಿರುವಿಕೆ : ಮೈನಂಬಿಗೆಯ ಸಾಲಕ್ಕೆ ಬಡ್ಡಿ ಹೆಚ್ಚು ಪೊತ್ತಿಯ ಸಾಲಕ್ಕೆ ಕಡಿಮೆ (ಕಜಾಗ. ೨೮೪).
[ ಮೈ$_1$ (< ಮೆಯ್$_2$) + ನಂಬಿಗೆ (< ನಂಬುಗೆ) ]
**ಮೈನಡುಕ** ' ಮೆಯ್ನಡುಕ ' ನೋ.
**ಮೈನಡುಗು** ' ಮೈಯ್ನಡುಗು ' ನೋ.
**ಮೈನವಿರ್** ' ಮೆಯ್ನವಿರ್ ' ನೋ.
**ಮೈನವಿರು** ' ಮೆಯ್ನವಿರ್ ' ನೋ.
**ಮೈನವಿರೇಳು** (ಕ್ರಿ). ಮೈಮೇಲಿನ ಕೂದಲು ನೆಟ್ಟಗೆ ನಿಲ್ಲು ; ರೋಮಾಂಚ ವಾಗು : ಕಾಳಿಂಗವೂ ಅದೇ ವೇಗದಲ್ಲಿ ಓಡಿ ಬರುತ್ತಿತ್ತು. ನನಗೆ ಮೈನವಿರೆದ್ದಿತು (ಹಸುಹೂ. ೬೪): ಲಕ್ಷ್ಮಿಯು ಮಾಡಿದ ಕೆಲಸ ಕೇಳಿದಾಗ ಅವನಿಗೂ ಮೈನವಿರೆದ್ದಿತು (ಕಾಸುಸಂ. ೧೬೦).
[ ಮೈನವಿರು (< ಮೆಯ್ನವಿರ್) + ಏಳು$_1$ (< ಏೞ್$_1$)]
**ಮೈನಾರು** ' ಮೆಯ್ನಾಱ³ ' ನೋ.
**ಮೈನಿಗ್ಗು** (ನಾ). (ಅಲಂ) ಮೈಮೇಲೆ ಧರಿಸಿರುವ ಆಭರಣಸಮೂಹ : ಚಕಚಕಿಸುವ ಮೈನಿಗ್ಗುಗಳಿಂ ದಿಕ್ಕುಗಳಂ ಬೆಳಗಿಸುವಳೋ ಅಂತಿರ್ಪ ಚಿತ್ರಿಣೀ ಜಾತಿ ಮಿಂಚಾರಿಯನ್ನುಉತ್ತಮಳೆಂದು ಪೇಳುವರು (ಸೌಗಂ೨. ೪೯೯-೦೦).
[ಮೈ$_1$ (< ಮೆಯ್$_2$) + ನಿಗ್ಗು]
**ಮೈನಿಡಿ** (ಕ್ರಿ). ದೇಹವನ್ನು ನಿಮಿರಿಸು : ಎಳಚಿತ್ತಾಯರು . . . ಮೈನಿಡಿದು ನಿಂತರು (ಜಗುಳ. ೭೩). [ಮೈ$_1$ (< ಮೆಯ್$_2$) + ನಿಡಿ$_0$]
**ಮೈನೀರು** 'ಮೆಯ್ನೀರ್' ನೋ.
**ಮೈನೀಳ** (ನಾ). ಆಕೃತಿಯು ದೀರ್ಘವಾಗಿ ಚಾಚಿರುವುದು : ನೀಲಗಿರಿಯಿಕ್ಕೆಲಕೆ ವಾರಿಧಿ ಮೇಲೆ ನಿಪ್ಪತ್ತಿಶ್ರುಂಗವಿತ್ತ ಮೈನೀಳದಲಿ ಪೂರ್ವಾಪರದ ಜಲನಿಧಿಯ ಮುಟ್ಟಿಹವು (ಕುವ್ಯಾಅ. ೭-೪೬).
[ಮೈ$_1$ (< ಮೆಯ್$_2$) + ನೀಳ$_1$]
**ಮೈನುಸುಳು** (ನಾ). ಮೈ ತೂರಿಕೊಳ್ಳುವ ಅವಕಾಶ.—ಜಾಗ: ಎಡೆ: ಏನ ಹೇಳುವೆನರಸ ದಿವಿಜರ ಸೇನೆಯಲ್ಲಾ ಛತ್ರ ಚಮರ ವಿತಾನದಲಿ ನಭವಿಲ್ಲ ನೆಗಹಿದ ಸಬಳ ಶಲ್ಲೆಹಕೆ ಮೈನುಸುಳ ಕಾಣೆನು (ಕುವ್ಯಾಅ. ೦೪-೮).
[ ಮೈ$_1$ (< ಮೆಯ್$_2$) + ನುಸುಳು$_2$ (< ನುಸುಳ್$_2$) ]
**ಮೈನೆರೆ** ' ಮೆಯ್ನೆಱ³ ' ನೋ.
**ಮೈನೆಱ³** ' ಮೆಯ್ನೆಱ³ ' ನೋ.
**ಮೈನೋಟ** ' ಮೆಯ್ನೋಟ ' ನೋ.
**ಮೈನೋವು** (ನಾ). ದೇಹದ ನೋವು.— ಬಾಧೆ: ದಶಾನನನು ಮನಸಿಜನ ಶರಸಂಧಾನದೆಸುಗೆಯ ಮಸೆಯ ಮೈನೋವಿನಲಿ ಕಳವಳಿಸಿ (ತೊರರಾ. ೩-೩-೩೦). [ಮೈ$_1$ (< ಮೆಯ್$_2$) + ನೋವು]
**ಮೈಪರಚು** (ಕ್ರಿ). ಮೈಯನ್ನು ಉಗುರಿನಿಂದ ಗೀರು.— ಕೆರೆ.
ಮೈಪರಚಿಕೊಳ್ಳು = (ಜುಗುಪ್ಸೆ, ಕೋಪ, ಬೇಜಾರು ಮೊದಲಾದ ಭಾವನೆಗಳಿಂದ) ಮೈಯನ್ನು ಗೀರಿಕೊಳ್ಳು : ನನ್ನ ಮೇಲೆ ಕೋಪ ಬಂದು ಮೈ ಪರಚಿಕೊಂಡುಬಿಡುವ ಹಾಗಾಗುತ್ತದೆ (ದೂತಿಲ್ಲ. ೧೩೨) ; ನನ್ನ ವಿಷಯ ಹೇಳಿಕೊಳ್ಳುವ ಸಂಭ್ರಮದಲ್ಲಿ ಯಮುನೆಯ ಸಂಗೀತದ ವಿಷಯ ಯಾಕೆ ಹೇಳಿದನೋ ಎಂದು ನನಗೆ ಮೈಪರಚಿಕೊಳ್ಳುವ ಹಾಗಾಯಿತು (ಅಂಹೂ. ೭೩): ಕೈಲಾಗದವ ಮೈಪರಚಿಕೊಂಡ (ಗಾದೆ).
[ಮೈ$_1$ (< ಮೆಯ್$_2$) + ಪರಚು]
**ಮೈಪು** (ನಾ). ದೇಹವನ್ನು ಹೊಂದಿರುವ ಸ್ಥಿತಿ: ಐಪಡಗಿದಷ್ಟಾಂಗಯೋಗ ಶಿವಕಜ್ಜದಿಂ ಮೈಪಳಿದ ಪೂಗೋಲ ಮಥನಪ್ರಸಂಗದಿಂ ಸೈಪಡೆದ ಸದಮಲ ಜ್ಞಾನಪ್ರಮಥರೆಸೆಪರೇಂ ಪೊಗಳ್ದಪೆಂ ಶರಣರ (ಲಿಂಗಪು. ೩-೦೬).
[ಮೈ$_1$ (< ಮೆಯ್$_2$) + — ಪು$_2$]
**ಮೈಬಣ್ಣ** ' ಮೆಯ್ವಣ್ಣ ' ನೋ.
**ಮೈಬಲ** (ನಾ). ದೇಹದ ಬಲ : ಶಾರೀರಿಕ ಶಕ್ತಿ : ಉದ್ಯಮ ಸಾಹಸ ಬುದ್ಧಿ ಪರಾಕ್ರಮ ಧೈರ್ಯವು ಮತ್ತೆ ಮೈಬಲವು (ಇಂಶಾಜ. ೦೬೪-೮).
[ಮೈ$_1$ (< ಮೆಯ್$_2$) + ಬಲ$_3$]
**ಮೈಬಲ್ಮೆ** (ನಾ). ಶರೀರದ ಶಕ್ತಿ : ದೇಹದ ಸಾಮರ್ಥ್ಯ.—ಬಲ: ನನ್ನ ಮೈನವಿರನೊಂದಾದಡಂ ಕೀಳಲಾರದು ನಿಮ್ಮ ಮೈಬಲ್ಮೆ (ವಗಾ೪. ೭೦); ನೆಲದ ಸಿರಿ, ಬಿಲ್ಬಿದ್ದೆ, ಮೈಬಲ್ಮೆ, ರಣಕೀರ್ತಿ ಮೇಣ್ ಅರಸುಕುವರಿಯ ತನಂ ತೃಣವಾಗಿ ಋಣವಾಗಿ ಕಾಣಿಸಿದುವು (ಚಿತ್ರಾಂಗ. ೨೩-೬೪೧).
[ಮೈ$_1$ (<ಮೆಯ್$_2$) + ಬಲ್ಮೆ]
**ಮೈಬಳಲಿಕೆ** ' ಮೆಯ್ವಳಲ್ಕೆ ' ನೋ.
**ಮೈಬಳಸು** (ಕ್ರಿ). ಶರೀರವನ್ನು ಸುತ್ತಿಕೊಳ್ಳು: ದೇಹವನ್ನು ಆವರಿಸು : ಮಲೆತು ಧಾಳಾಧೂಳಿಯಲಿ ಬಲಸುಳಿ ಮಸಗಿಯೆನ್ನೊಬ್ಬನನು ಮೈಬಳಸಿ ಕಾದಿತು ವೀರಕರ್ಣನ ಕೂಡೆ ತಲೆಯೊತ್ತಿ (ಕುವ್ಯಾಕ. ೦೬-೨೬).
[ಮೈ$_1$ (<ಮೆಯ್$_2$) + ಬಳಸು$_1$]
**ಮೈಬಾಯು** (ಕ್ರಿ). (ಅಲಂ) ಉಬ್ಬು : ಹಿಗ್ಗು: ತೆರೆಯ ಮಱೆಯೊಳಿದ್ದ ನಮಿವಿನಮಿಗಳ ಪೆಂಡಿರು ಸಿಂಧು ಗಂಗಾಸತಿಯರು ಭರತೇಶ ತಂಗಿಯರೆನೆ ಕೇಳ್ದು ಚಿತ್ರದೊಳರಳಿ ಮೈಬಾತರಾ ಕ್ಷಣದೆ (ಭರತ. ೪೨-೦೨೯).
[ಮೈ$_1$ (<ಮೆಯ್$_2$) + ಬಾಯು (<ಬಾ$_1$)]
**ಮೈಬಾವು** (ನಾ). ಶರೀರದ ಊತ : ಅರಿದಾಳದ ಸುಟ್ಟು, ಸೈಂಧವ, ಗಂಜಿ, ಗಂಧಕ, ಇವು ಎಣ್ಣೆಯೊಳು ಪೂಸೆ ಮೈಬಾವು ಮಾಣ್ಗುಂ (ವಿದ್ಯಾಶಿ. ೮೬). [ಮೈ$_1$ (<ಮೆಯ್$_2$) + ಬಾವು]

**ಮೈಬಿಡು** ' ಮೆಯ್ಬಿಡು ' ನೋ.

Δ **ಮೈಬಿಸುರ್ಪು** ' ಮೆಯ್ಬಿಸುಪು ' ನೋ.

**ಮೈಬೇನೆ** (ನಾ). ಶರೀರಕ್ಕೆ ಉಂಟಾಗುವ ಬೇನೆ; ಮೈನೋವು: ಕೆಮ್ಮು, ಮಂದಾಗ್ನಿ, ಮೂಲವ್ಯಾಧಿ, ಹೊಟ್ಟೆ ಮೈಬೇನೆಗಳೆಂಬಿವು ಪರಿಹಾರವಾಗುವುವು (ವಿಶ್ವಕಿ. ೩೬). [ಮೈ$_1$ (<ಮೆಯ್$_2$) + ಬೇನೆ]

**ಮೈಭುಲ್ಲಣೆ** (ನಾ). (ಮನಸ್ಸಿನಲ್ಲಾದ ಸಂತೋಷ, ಸಂಭ್ರಮ, ಹೆಮ್ಮೆಗಳಿಂದ) ದೇಹವು ಬೀಗುವಿಕೆ: ಬಿಲ್ಲ ಕೊಪ್ಪಿನ ಮೇಲೆ ಚಾಚಿದ ಗಲ್ಲದುಪಹಾಸದ ನುಡಿಯ ಮೈಭುಲ್ಲಣೆಯು ರೋಮಾಂಚನದ . . . ನಗೆಯ ಚೌಪಟವಲ್ಲನಿದ್ದನು ರಿಪುಬಲವ ಲೆಕ್ಕಿಸದೆ (ಕುಮಾವ್ಯಾ. ೦೭-೩೭). [ಮೈ$_1$ (<ಮೆಯ್$_2$) + ಭುಲ್ಲಣೆ (<ಬುಲ್ಲವಣೆ)]

**ಮೈಭೋಗ**, ಮಯಿಭೋಗ (ನಾ). ೧. ವಸ್ತ್ರ, ಭೂಷಣ ಇತ್ಯಾದಿಗಳಿಂದ ಶರೀರಕ್ಕೆ ಒದಗುವ ಸುಖ: ಉಡುಗೊರೆಗಳ ವಸನದ ಮೈಭೋಗದ ಮಡಿಯ ನಾನಾದೊರೆಗಳಿಗೆ ಕೊಡುವ ಬಂಗಾರದ ಪೆಟ್ಟಿಗೆಗಳ ಬಲುಗಡಣ ಸಾಗಿದುದವರೊಡನೆ (ರಾಮಾಶ್ವ. ೭-೦೪); ಪಟ್ಟೆಚೀನಾಂಬರಗಳನು ಸ್ಪರ್ಶಿಸನ ಮೈಭೋಗಕೆ ತಂದೀವ ಸೆಟ್ಟಿಗಳು (ಕಂಪಶ. ೨೩-೦೦೦). ೨. ದೇವರ ವಿಗ್ರಹಕ್ಕೆ ವಸ್ತ್ರ, ಭೂಷಣ ಇತ್ಯಾದಿಗಳನ್ನು ಅರ್ಪಿಸುವ ಸೇವೆ; ಅಂಗಭೋಗ: ಸೋಮಂಣವೊಡೆಯರ ಅಂಮ್ಮ ಸಾಯಂಮ್ಮನವರ ಮೈಭೋಗಕ್ಕೆ ಕೊಟ್ಟಹ ದಕ್ಷಿಣಾವಾರಣಾಸಿಯಾದ ಕಾವೇರಿಯ ದಕ್ಷಿಣ ಭಾಗದ . . . ಕೆರಿಯ ಸೀಮೆಯಲು (ಎಕ. XIV, ತಿರುಮ. ೨೨೨-೬; 1482). **ಮಯಿಭೋಗ**: ೨. ಮಯಿಭೋಗದ ಜವಳಿ ೧೦ಕ್ಕೆ ಗ ೧೫ (ಎಕ. VI (R), ಶ್ರೀರಂಗ. ೨೩೬-೦೦: 1544). 'ಮೆಯ್ಬೋಗ' ಪರಾ. [ಮೈ$_1$ (<ಮೆಯ್$_2$) + ಭೋಗ]

**ಮೈಮ** (ನಾ). ಮಹಿಮಾಶಾಲಿ; ಮಹಾತ್ಮ: ಒಪ್ಪಿರ್ಪಾ ಮೈಮಂ ವಿಶ್ವನಾಥಂ (ಕುಸುಮಾ. ೦-೦); ಬಡವರೊಡವೆಗೆಂಡಂತೆ ಮೈಗಣ್ಣನ ಮಡದಿ ಮೈಮನನೆತ್ತಿಕೊಂಡು (ಶೇಕರುಷಂ. ೨೨-೦೨೩). 'ಮಯ್ಮೆ$_2$' ಪರಾ. [<ಸಂ. ಮಹಿಮನ್]

**ಮೈಮಗುಚು** (ಕ್ರಿ). ದೇಹವನ್ನು ಹೊರಳಿಸು,-ತಿರುಗಿಸು: ಕೈ ಮಗುಚಿ ಶತ್ರುಘ್ನ ಬಾಣವ ಮೈಮಗುಚಿ ದಾನವನ ಮಾರ್ಗಣ ವೈಭವದ ನೆರೆ ಕೈಚಳಕವನು ಕಂಡು ಮೆರವುತಿರೆ (ತೊರವೆರಾ. ೩-೯೨). [ಮೈ$_1$ (<ಮೆಯ್$_2$) + ಮಗುಚು (<ಮಗುಟ್ಚು)]

**ಮೈಮರವು**, ಮೈಮರೆವು (ನಾ). ೧. ಶರೀರದ ಮೇಲೆ ಎಚ್ಚರವಿಲ್ಲದಿರುವುದು; ಮೂರ್ಛೆ: ಮರವರಿಸಿ, ಕೊಡನಾಗಿಗೆಡ್ಡೆ . . . ಕಷಾಯ ವಿಕ್ಕಿ ಕೊಡಲು ಭಗ್ನನೇತ್ರಸನ್ನಿಯಿಂದುಂಟಾದ ಮೈಮರವು ಗುಣವಾಗಿ ಜ್ಞಾನವಕ್ಕುಂ (ಕಳವ್ಯ. ೦೬.೨). **ಮೈಮರೆವು**: ೨. ಲಕ್ಷ್ಯವಿಲ್ಲದಿರುವುದು; ಪರಿವೆಯಿಲ್ಲದಿರುವುದು: ಆ ನಿಮಿಷದಲ್ಲಿ ಏನೋ ಒಂದು ಬಗೆಯ ಮೈಮರೆವು. ಆ ಮೈಮರೆವಿನ ಶಾಂತಿಯಲ್ಲಿ ಒಂದೆರಡು ಅಲೆಗಳು ಮೆಲ್ಲನೆದ್ದು ಅಳುಕಿಸುತ್ತಿದ್ದುವು (ಅಂತಃಪು. ೯೩). [ಮೈ$_1$ (<ಮೆಯ್$_2$) + ಮರವು (<ಮಱವು)]

**ಮೈಮರೆ$_1$** ' ಮೆಯ್ಮಱೆ 'ನೋ.

**ಮೈಮರೆ$_2$** ' ಮೈಮಱೆ$_2$ ' ನೋ.

**ಮೈಮರೆತ** (ನಾ). ತಲ್ಲೀನತೆ; ಪರವಶತೆ: ಅವನ್ನು ಮಾಡುವ ತನಕ ಅವರ ಮೈಮರೆತ ಹೋಗಲಿಲ್ಲ (ಹುಚ್ಚಾರ. ೧೦೭); ನಾಟಕ ಬರೆಯುವಾಗ ಹಿಂದೆ ಎಂದೂ ಇಲ್ಲದ ಮೈಮರೆತ ನನ್ನ ಮೇಲಿತ್ತು (ಅಮೃ. ೯ ಹಿಪ್ಪರಿ). [ಮೈಮರೆ$_1$ (<ಮೆಯ್ಮಱೆ) + —ತ$_2$]

**ಮೈಮರೆವು** ' ಮೈಮರವು ' ನೋ.

**ಮೈಮರೆಹು** ' ಮೆಯ್ಮಱೆಪು ' ನೋ.

**ಮೈಮಸಕ** (ನಾ). ಶಾರೀರಕಬಲ,-ಸಾಮರ್ಥ್ಯ: ಆವ ಸಾಧನೆಯೋ ವಿಘಾತಿಯ ರಾವಣನೆಗೆಗದ್ರಿಗಳು ಬಿಱಿದವು ಮೈವಳಿಯಲುಕ್ಕಿದುದು ಕಡು ಹಿನ ಖತಿಯ ಮೈ [ಶಾಕಾಂ. ಕೈ]ಮಸಕ (ಕುವ್ಯಾಕ. ೨-೦೦೬); ಉಸಿರಿಡುವ ಹೆಣವಾಗಿ ಬಾಳುವೆನೆ ? ಚಲದ ಮೈಮಸಕವಂ ಮೆರೆಯದೆಯೆ ಹಿಂದೆ ಜರುಗಿ! (ಶಾರಂಗ. ೭-೨೪). [ಮೈ$_1$ (<ಮೆಯ್$_2$) + ಮಸಕ$_1$]

**ಮೈಮಱಿಸು** (ಕ್ರಿ). ಮೈಮರೆಯುವಂತೆ ಮಾಡು: ಆ ಮಹೀಪತಿಯಂಗನೆಯನುದ್ದಾಮಬಲ ದಶಕಂಠ ಬನದಲಿ ಮೈಮಱಿ[ಶಾಕಾಂ. ಱಿ]ಸಿಕೊಂಡೊಯ್ದ ಗಡ (ತೊರರಾ. ೫-೯-೦೭); ಮಾಯವವನನುಗೊಳಿಸದೆ ಮೈಮಱಿಸದೆ . . . ಆಯಸದಿಂದಳವಳಿಯದೆ ಪತಿಯನುಪಾಯದಿಂದುಪಚರಿಸುವುದು (ಹರಿಶ. ೩-೯). [ಮೈಮಱಿ$_1$ (<ಮೆಯ್ಮಱಿ) + —ಸು$_1$]

**ಮೈಮಱುಕ** ' ಮೆಯ್ಮಱುಕ ' ನೋ.

**ಮೈಮಱುಗು** ' ಮೆಯ್ಮಱುಗು ' ನೋ.

**ಮೈಮಱೆ$_1$** ' ಮೆಯ್ಮಱೆ ' ನೋ.

**ಮೈಮಱೆ$_2$**, ಮೈಮರೆ$_2$ (ನಾ). ೧. ಉದಾಸೀನತೆ; ಮೈಮರೆವು: ಸತಿಯ ಹೋಗಾಡಿದೆವು ಮಾನಸ್ಥಿತಿಗೆ ಮೈಮಱೆಯಾಯ್ತು ಬಂದೆವು ಗತಿವಿಡಿದು ದಶಶಿರನ ಮೇಲಣ ವೈರಬುದ್ಧಿಯಲಿ (ತೊರರಾ. ೯-೦-೦೩). **ಮೈಮರೆ$_2$**: ೨. ದೇಹವನ್ನು ಮರೆ ಮಾಡುವ ಅಥವಾ ಮುಚ್ಚುವ ಸಾಧನ; ದೇಹರಕ್ಷಣೆಯನ್ನು ಮಾಡುವ ಕವಚ: ಇನ್ನು ಮೈಮರೆಯನ್ನು ಆಸೆಪಡುವುದು ನನಗೊಪ್ಪುವುದಿಲ್ಲ ಎಂದುಕೊಂಡು ಅದಟನಾದ ಆ ರಾಧೇಯನು ಕವಚವನ್ನು ತೊಡಲೇ ಇಲ್ಲ (ಕಾಮಿವ. ೨೩). [ಮೈ$_1$ (<ಮೆಯ್$_2$) + ಮಱೆ$_2$]

**ಮೈಮಱೆಪು** ' ಮೆಯ್ಮಱೆಪು ' ನೋ.

**ಮೈಮಱೆಹು** ' ಮೆಯ್ಮಱೆಪು ' ನೋ.

**ಮೈಮಾಟ** (ನಾ). ದೇಹರಚನೆ; ಮೈಕಟ್ಟು: ಮಗು ದೊಡ್ಡದಾದ ಹಾಗೆ ಬಿಂದಣ್ಣನ ಮೈಮಾಟವನ್ನೇ ಅನುಕರಿಸಿ ಬೆಳೆಯತೊಡಗಿದನು (ಕೃ.ಕಿ. ೦೪೪); ಅವಳು ಬುದ್ಧಿವಂತೆ. ಒಳ್ಳೆಯ ಮೈಮಾಟ (ಸ್ವತಿತ. ೯೯). [ಮೈ$_1$ (<ಮೆಯ್$_2$) + ಮಾಟ$_1$]

**ಮೈಮಿನುಗು** (ನಾ). (ಬಾಣದ) ಕಾಂತಿ,- ಹೊಳಪು: ದನುಜಹರ ಮಂತ್ರವನು ಮನದಲಿ ನೆನೆದು ಕೈನೀಡಿದನು. . . ಕನಕರಸರೇಖಾವಳಿಯ ಮೈಮಿನುಗುಗಳ ಹೊಂಗಱಿಯ ನಾರಾಯಣಮಹಾಶರಕೆ (ಕುವ್ಯಾದ್ರೋ. ೦೯-೦೯). [ ಮೈ$_1$ (< ಮೆಯ್$_2$) + ಮಿನುಗು$_3$ (<ಮಿನುಕು$_3$) ]

**ಮೈಮುಟ್ಟು** ' ಮೆಯ್ಮುಟ್ಟು ' ನೋ.

**ಮೈಮುದುಡು** (ಕ್ರಿ). ದೇಹವನ್ನು ಮುದುರಿಕೊಳ್ಳು; ಶರೀರವನ್ನು ಸಂಕುಚಿತಗೊಳಿಸು: ಪುಟ್ಟ ರಾಧಾ ಈಗಲೂ ತಾಯಿಯ ಜತೆಯಲ್ಲೇ ಮೈಮುದುಡಿಕೊಂಡು ಮಲಗುತ್ತಿದ್ದಳು (ರಂಗವ. ೨೬). [ ಮೈ$_1$ (< ಮೆಯ್$_2$) + ಮುದುಡು$_1$ (< ಮುದಿರ್) ]

**ಮೈಮುರಿ** ' ಮೆಯ್ಮುರಿ ' ನೋ.

**ಮೈಮುರುವು**, ಮೈಮುರುಹು (ನಾ). ದೇಹವನ್ನು ತಿರುಗಿಸುವಿಕೆ; ಮೈಮುರಿಯುವಿಕೆ: ವಾಮಕರ ದಂಡೆಗಳ ದಂಡೆಯ ಮೈಮುರುವಿ[ಶಾಕಾಂ. ಹಿ]ನುಪ್ಪರದ ಮುಷ್ಟಿಯ . . . ತಪಕಿಗರು ತಿವಿದಾಡಿದರು ತೀವ್ರದಲಿ (ತೊರರಾ. ೬-೦೭-೩೮). **ಮೈಮುರುಹು**: ಮೈಭಾರ, ದೈನ್ಯೋಕ್ತಿ, ಮೈಮುರುಹು . . . ದಾಹ ಇವು ರಸಗತಜ್ವರದಲ್ಲಿ ಉಂಟಾಗಿಹವು (ವೈದ್ಯಸಾ. I, ೯೩). [ ಮೈ$_1$ (< ಮೆಯ್$_2$) + ಮುರುವು$_1$ (< ಮುರಿವು) ]

**ಮೈಮುರುಹು** ' ಮೈಮುರುವು ' ನೋ.

**ಮೈಮೆ** ' ಮಯ್ಮೆ$_1$ ' ನೋ.

**ಮೈಮೆಗಾಱ** (ನಾ). ಮಹಿಮೆಯುಳ್ಳವನು; ಮಹಿಮಾವಂತ : ಆಃ ! ನೀನುಂ ಬಲ್ಮೈಮೆಗಾಱಂ (ರಾಜಶೇ. ೦೦೭-೨೭).

[ ಮೈಮೆ (< ಮಯ್ಮೆ$_1$) + — ಕಾಱ ]

**ಮೈಮೆಟ್ಟ** (ನಾ). ಒಂದು ಮನೆತನದ ಹೆಸರು (?) : ಇವರೊಳಗಾದ ಸಮಸ್ತಪ್ರಜೆಗಳು ಮೇಲಾಳಿಕೆ ಮೈಮೆಟ್ಟ ಬಲ್ಲೆಯ ಮೈಮೆಟ್ಟ ಕೇಶವ ಮೈಮೆಟ್ಟ ಹರಿಯಣ ಇಂತಿನಿಬರುಂ (ಎಪಿ.ಕ. ೦೯೨೮, ೧೫-೦೯; 1200).

[ ? ]

**ಮೈಮೆದಳೆ** (ಕ್ರಿ). ಘನತೆಯನ್ನು ಹೊಂದು ; ಗೌರವವನ್ನು ತಳೆ : ಅಶ್ವತ್ಥಾಮನಂ ಸಂಗ್ರಾಮಮಂ ತೊಱೆದು ಪೋಪಂತು . . . ಕೈಮಿಕ್ಕು ಮೈಮೆದಳೆಯಲುಂ (ಶಗಪ. ೦೫-೫ ಪ).

[ ಮೈಮೆ (< ಮಯ್ಮೆ$_1$) + ತಳೆ$_1$ ]

**ಮೈಮೆವಡೆ** (ಕ್ರಿ). ಮಹತ್ವವನ್ನು ಪಡೆ ; ಘನತೆಯನ್ನು ಹೊಂದು : ಅಂತು ಮೈಮೆವಡೆದ ಪಟ್ಟದ ಮೇಲೆ ಕೈದೆತ್ತಿ (ಚಂ.ಕಾ. ೨೨೭) ; ಅಂತು ಮನೋನುರಾಗದಿಂ ಮೈಮೆವಡೆದು (ದಕೆ. ೨-೨ ಪ); ಮೈಮೆವಡೆದ ಜನಸೇನಸ್ವಾಮಿಯ ನಿರ್ಮಲತರ ಪೂಜ್ಯಪದಸ್ವಾಮಿಯ ಪದಮಂ ನೆನೆದು (ಶಬ್ದಾ. ೦-೯). [ ಮೈಮೆ (< ಮಯ್ಮೆ$_1$) + ಪಡೆ$_1$ ]

**ಮೈಮೆವೆಱು** (ಕ್ರಿ). = ಮೈಮೆವಡೆ : ಮುಖರೋಗಮಾದವ್ವೋಲಿನಿ ತಾನುಂ ಬಸವಲ್ಲದುಸಿರ್ವರೆಂದುಂ ಪೊಸಸಿರಿಯಿಂ ಮೈಮೆವೆತ್ತ ಮಾಯ್ದ ಮನುಷ್ಯರ್ (ಕಾದಂಪೂ. ೫೬೨) ; ಮೈಮೆವೆತ್ತೋಲಗದ ನಡುವೆಯಾರ ಮನೋಸರಿಸದೆ ಬಿಗಿದ ಪಾಸಮಿದೆಂಬಂತೆ ನೀಳ್ದ ಕೆಂಜೆಡೆಗಳೊಳಂ (ಚಂ.ಕಾ. ೦೭೭); ಮೈಮೆವೆತ್ತಸುಪಮಮೋಹಶ್ಯಲಪವಿ (ಕಬಕಂ. ೨-೬).

[ ಮೈಮೆ (< ಮಯ್ಮೆ$_1$) + ಪೆಱು$_1$ ]

**ಮೈಮೇಟ** ' ಮಯ್ಮೇಟ ' ನೋ.

**ಮೈಮೇಳ** ' ಮಯ್ಮೇಳ ' ನೋ.

**ಮೈಯಂತಿ** (ನಾ) (ಕರಾ) ಒಂದು ಹೆಣ್ಣು ಭೂತ [ — ತುಳು ಮಯೆಂತಿ ]

**ಮೈಯರಿ** ' ಮೆಯ್ಯಱಿ ' ನೋ.

**ಮೈಯಲಸು** ' ಮೆಯ್ಯಲಸು ' ನೋ.

**ಮೈಯಾಟ** ' ಮೆಯ್ಯಾಟ ' ನೋ.

**ಮೈಯಾನ್** ' ಮೆಯ್ಯಾನ್ ' ನೋ.

**ಮೈಯಿಕ್ಕು** ' ಮೆಯ್ಯಿಕ್ಕು ' ನೋ.

**ಮೈಯಿಡು** ' ಮೆಯ್ಯಿಡು ' ನೋ.

**ಮೈಯಿಳಿ** (ಕ್ರಿ). ಗರ್ಭಸ್ರಾವವಾಗು : ನಾಗವಲ್ಲಿ . . . ಮೈಯಿಳಿದು ತೀರಿಕೊಂಡಳು (ಮುಮುಕ್ಷು. ೦೧೯).

[ ಮೈ$_1$ (< ಮೆಯ್$_2$) + ಇಳಿ$_1$ (< ಇೞಿ) ]

**ಮೈಯಿಳಿತ** (ನಾ). "ಗರ್ಭಪಾತ : ಗರ್ಭಸ್ರಾವ ಮಾಡಿಸುವುದು" (Abortion. ೩೦೯೭). [ ಮೈಯಿಳಿ + — ತ$_2$ ]

**ಮೈಯಿೞ** (ಕ್ರಿ). ದೇಹವನ್ನು ಒರಗಿಸು : ಮಾನಿನಿಯು ಮರಕೆ ಮೈಯಿತ್ತು ಕುಳ್ಳಿರ್ದಳುಂ (ಸವಮೋ. ೯-೪೨).

[ ಮೈ$_1$ (< ಮೆಯ್$_2$) + ಈ$_2$ ]

**ಮೈಯುಕ್ಕು** (ಕ್ರಿ). (ಸಂತೋಷದಿಂದ) ದೇಹವು ಉಬ್ಬು : ಕಱಕಂಠಂ ಬಂದನೆಂಬ ಭಾವಕ್ಕೆ ಮೈಯು[ಪಾಠಾ. ವು]ಕ್ಕಿ ನಿಂದ ನಂಬಿಯಲ್ಲಿಗೆ ನಡೆತಂದು (ನಂಬಿ. ೦೭-೪೨).

[ ಮೈ$_1$ (< ಮೆಯ್$_2$) + ಉಕ್ಕು$_1$ (< ಉಕ್ಕರ್$_1$) ]

**ಮೈಯುಡುಗು** ' ಮೆಯ್ಯುಡುಗು ' ನೋ.

**ಮೈಯುಣ್**, **ಮೈಯುಣ್ಣು** (ಕ್ರಿ). (ಆಲಂ) ಅಭ್ಯಾಸವಾಗು ; ರೂಢಿಯಾಗು : ಸಂಯೋಗದ ಸುಖ ಮೈಯುಂಡವಂಗೆ ಲೋಕದ ನಚ್ಚುಮಚ್ಚಿನ ಬಲೆದೊಡಕು ತಪ್ಪದು (ಮೋಹಿನಿ. ೨೯೭-೬೮). **ಮೈಯುಣ್ಣು** : ಪ್ರತ್ಯಕ್ಷದಲ್ಲಿ ಮೈಯುಂಡ ಅವಮಾನದ ಕಹಿಯನ್ನು ಕಲ್ಪನೆಯ ಲೋಕದಲ್ಲಿ ತನ್ಮಯನಾಗಿ ಮರೆತು ವಿಹರಿಸುತ್ತಾನೆ ಸಿದ್ಧಣ್ಣ (ಒಡ.ಕಾ. ೩೮); ಈ ಕೆಲಸ ನಮ್ಮ ವಂಶಗತವಷ್ಟೆ ಆದ್ದರಿಂದ ಮೈಯುಂಡಿದೆ (ಕುಂಹಿಂ. ೦೯೩). [ ಮೈ$_1$ (< ಮೆಯ್$_2$) + ಉಣ್ ]

**ಮೈಯುಣ್ಣು** ' ಮೈಯುಣ್ ' ನೋ.

**ಮೈಯುಬ್ಬು** ' ಮೆಯ್ಯುರ್ಬು ' ನೋ.

**ಮೈಯುರಿ** (ನಾ). ೧. ದೇಹದಲ್ಲಿ ಉಂಟಾಗುವ ತಾಪ,. ಉರಿ : ನಾಲ್ಕು ದಿನಗಳಿಂದ ನಾನು ಕಣ್ಣುರಿ, ಮೈಯುರಿಗಳಿಂದ ನರಳುತ್ತಿದ್ದೇನೆ (ರೂಢಿ). ೨. (ಆಲಂ) ಸಿಟ್ಟು; ಅಸಹನೆ : ಅವಳನ್ನು ಕಂಡರೆ ಇವನಿಗೆ ಎಲ್ಲಿಲ್ಲದ ಮೈಯುರಿ ಉಂಟಾಗುತ್ತದೆ (ರೂಢಿ).

[ ಮೈ$_1$ (< ಮೆಯ್$_2$) + ಉರಿ$_2$ ]

**ಮೈಯೊಡ್ಡು** ' ಮೆಯ್ಯೊಡ್ಡು ' ನೋ.

**ಮೈಯೊಲವು** ' ಮೆಯ್ಯೊಲಪು ' ನೋ.

**ಮೈರೇಖೆ** (ನಾ). ಮೈಮಾಟ ; ಶರೀರದ ರಚನೆ : ಬಲು ಸರಳವಾಗಿಯೂ ನೈಸರ್ಗಿಕವಾಗಿಯೂ ಜೀವಿಸುವುದರಿಂದ ಅವರ ಮೈರೇಖೆಯಲ್ಲಿ ಒಂದು ಸೊಬಗಿದೆ (ಜಾಂಕ್ರ. II, ೦೦೩೦).

[ ಮೈ$_1$ (< ಮೆಯ್$_2$) + ರೇಖೆ ]

**ಮೈರೇಯ** (ನಾ). ಒಂದು ಬಗೆಯ ಮಾದಕಪಾನೀಯ : "ಮಧು, ಆಸವಃ . . . ಮೈರೇಯಂ, ಕಾಪಿಶಾಯನಂ, ಮಾಧ್ವೀಕಂ, ಆಸವಃ, ಪರಿ(ಸ್ರು)ಶ್ರುತ್, ವಾರುಣೀ, ಮಧು — ಈ ೨೪ ಕಳ್ಳು" (ಹಲಾಯು. ೫೫-೧೭೫); ಮಿಸಾರಿ ಮೈರೇಯಮಂ ಓರಿ ಬಹುಮಾತ್ರ ಮಾಪವೇರಿ . . . ನಡೆತಂದರು (ಶೀಹರಾ. ೦೪-೨೫). [ಸಂ.]

**ಮೈರೊಳೆ** (ನಾ). ಒಂದು ಬಗೆಯ ಸಸ್ಯ : ನವುಲಾದಿ, ಮೈರೊಳೆ, ಭರಣಿಗೆ (ಎಪಿ.ಕಿ. ೭೮-೦೫೯೭). [ ? ]

**ಮೈರೋಚಿ** (ನಾ). ದೇಹದ ಕಾಂತಿ ; ಶರೀರದ ಹೊಳಪು : ಖೇಚರಿಯರು . . . ಬಂದು ಮೈರೋಚಿ ಬೆಳಗಿಂ ಕೋಂಟೆ ಸುತ್ತುವಳಯದಿ ಕುಳಿತ ತೆರದಿ ಪೊಂದೆನೆಗಳೆಸೆಯೆ (ಸವಮೋ. ೨-೨೫).

[ ಮೈ$_1$ (< ಮೆಯ್$_2$) + ರೋಚಿ ]

**ಮೈಲ** ' ಮೈಲಿ$_1$ ' ನೋ.

**ಮೈಲಗೆ** ' ಮೈಲಿಗೆ ' ನೋ.

**ಮೈಲಗೆವೆಳ್ದಿಂಗಳ್** (ನಾ). ಮಾಸಲಳಿದ ಬೆಳುದಿಂಗಳು ; ಉಪಯೋಗ ಹೊಂದಿದ ಬೆಳುದಿಂಗಳು : ನಗರೀನಾಯಕನಾಯಿಕಾವದನವೃತದಿಂ ಸುತ್ತಿ ಸೊಪ್ಪಾದ ಮೈಲಗೆವೆಳ್ದಿಂಗಳ ಸೊಂಪಂ ಸೈರಿಸದವೊಲ್ ಭೋಂಕಲ್ ಮರಳ್ದಂದು (ಅನಂಪು. ೯-೭೦); ಇರುಳು ಚಕೋರಿಗಳೆಲ್ಲ ನೆರೆದು ಚಂದ್ರನರದ ಸಾರವನೆಲ್ಲ ಕೊಳಲು ಹರುಷವಱತು ಮೈಲಗೆವೆಳ್ದಿಂಗಳೊಳ್ವೆರಸಿರ್ದ ನಸ್ಯಾದ್ರಿಯೇಱಿ (ಅನಂತ. ೦೦-೧೯೮).

[ ಮೈಲಗೆ (< ಮೈಲಿಗೆ) + ಬೆಳ್ದಿಂಗಳ್ ]

**ಮೈಲತುತ್ತ**, ಮಯಿಲತುತ್ತ, ಮೈಲುತುತ್ತ, ಮೈಲುತುತ್ತು, ಮೈಲುತುತ್ಥ (ನಾ). ತಾಮ್ರ ಮತ್ತು ಗಂಧಕಗಳ ಸಂಯೋಗದಿಂದಾಗುವ ಒಂದು ಬಗೆಯ ಖನಿಜಲವಣ : ಕ್ಷಾರ ವಿಷಗ್ನ್ಯಾರ್ದೀ — ಕ್ಷಾರ ಮೈಲತುತ್ತ ಮೊದಲಾದವು (ಶಾಹಟಿ..೨-೪-೭೦). **ಮಯಿಲತುತ್ತ** : ಇದಕ್ಕೆ ಬಹುಶಃ ಮಯಿಲತುತ್ತವನ್ನು (Copper sulphate) ಸ್ವಲ್ಪ ಬೆರಕೆ ಮಾಡುತ್ತಿದ್ದಿರಬಹುದು (ಕಶ್ವಸಂ. ೪೪). **ಮೈಲುತುತ್ತ** : ಮೈಲುತುತ್ತದ ಒಂದು ಹರಳನ್ನು ಅದೇ ವಸ್ತುವಿನ ಪರ್ಯಾಪ್ತದ್ರಾವಣ (Saturated Solution) ದಲ್ಲಿಟ್ಟರೆ, ಹರಳು ಕ್ರಮವಾಗಿ ದೊಡ್ಡದಾಗು

ತ್ತದೆ (ಪ್ರಾಚಿಶಾ. ೩). **ಮೈಲುತುತ್ತು :** ದೊಡ್ಡ ದೊಡ್ಡ ಟಾಂಕಿಗಳಲ್ಲಿ ಮೈಲುತುತ್ತಿನ (ಇದು ತಾಮ್ರದ ಒಂದು ಲವಣ) ಪಾನಕವನ್ನು ತುಂಬಿ ಅದಕ್ಕೆ ಸ್ವಲ್ಪ ಗಂಧಕದ ದ್ರಾವಕವನ್ನು ಹಾಕುವರು (ಭಾರಶಿ. II. ೬೬೩). **ಮೈಲುತುತ್ಥ :** "ದಾರ್ವಿಕಾ, ಕ್ವಾಥೋದ್ಭವಂ, ತುತ್ಥಂ, ರಸಾಂಜನಂ, ರಸಗರ್ಭಂ, ತಾರ್ಕ್ಷ್ಯಶೈಲಂ—೬ ರಸಾಂಜನದ ಹೆಸರುಗಳು . . . ಮೈಲುತುತ್ಥದ ಹೆಸರುಗಳೆಂದು ಕೆಲವರನ್ನುವರು" (ಸಿದ್ಧಾಂತಿ. ೪೦೩); ರಸರತ್ನಸಮುಚ್ಚಯವು ಖನಿಜಪ್ರಪಂಚವನ್ನು ಹೀಗೆ ವರ್ಗೀಕರಣ ಮಾಡಿದೆ. ೧. ಅಷ್ಟರಸಗಳು . . . ಮೈಲುತುತ್ಥ (ತತ್ವಪ್ರಾ. ೩೦೩).

[ < ಸಂ. ಮಯೂರತುತ್ಥ ]

**ಮೈಲರಾ** 'ಮೈಲಾರ$_2$' ನೋ.

**ಮೈಲವಣ, ಮೈಲವಣೆ** (ನಾ). ಮಲ್ಲಯುದ್ಧದ ಒಂದು ವರಸೆ : ಮೇಣದ ಪುತ್ಥಳಿಗಳೊ ಉಕ್ಕಿನ ಬಲು ಚೇಣವೊ ಸಿಡಿಲ ಕುಡುಹುಗಳೊ ಹೂಣೆ ಮೈಲವಣೆ ತಿರುವು ಚದುರಿಂದ ಬಿನ್ನಾಣಿಗರೊದಗಿ ಹೆಣಗಿದರು (ಸೌಂದರ್ಯ. ೭-೯೩). **ಮೈಲವಣೆ :** ಹೊಯ್ಲು ಹೊದರೆದ್ದವು ವಿಘಾತದ ಕಯ್ಲುಳಿಯ ಕಡುಘಾಯ ಘಾಯಕೆ ಮೈಲವಣೆ [ಪಾಠಾಂ. ಮೆಯ್ಲುವಣೆ] ಲಂಬಿಸಿತು . . . ಮುಷ್ಟಾಮುಷ್ಟಿ ಗತಿಯ ದೃಢಾಯ್ಲರಪ್ಪಳಿಸಿದರು (ಕುಮಾ.ಸ. ೨-೦೦೬). [ ಮೈ$_1$ (<ಮೆಯ್$_2$) + ಲವಣಿ$_2$ ]

**ಮೈಲವಣೆ** 'ಮೈಲವಣ' ನೋ.

**ಮೈಲಾಗು** (ನಾ). ದೇಹದ ಚುರುಕುತನ,— ಚಳಕ : ತೂಗಿ ನೋಡಿ ನೊಮ್ಮೆ ನುತ ಮೈಲಾಗಿನಲಿ ಹೊಳೆಹೊಳೆದು ಕೈದುವ ತೂಗಿ ತುಡುಕಿ ದನರಸನನು ಬೊಬ್ಬಿಟಿದು ಕಲಿಭೀಮ (ಕುಮಾ.ಗ. ೬-೦೩) ; ಆದಿಜಿನನ ಕೈಲೇಸಿನಿಂದ ದೀಕ್ಷೆಯ ಕೊಂ[ಬೆ]ವೆನುತಾಗ ಮೈಲಾಗಿನಿಂದೆದ್ದರವರು (ಭರತ. ೬೩-೪೪). [ ಮೈ$_1$ (<ಮೆಯ್$_2$) + ಲಾಗು$_2$ ]

**ಮೈಲಾಪ** (ನಾ). [ಜೈನ] ಜೈನಮುನಿಗಳ ಒಂದು ಶಾಖೆ,— ಅನ್ವಯ : ವಿದಿತಾಶೇಷಶಾಸ್ತ್ರರುಮಪ್ ಮೈಲಾಪಾನ್ವಯಮುಮ್ . . . ಅಪ್ಪ ದೇವಕೀರ್ತಿ ಪಂಡಿತದೇವರ ಕಾಲಮ್ ಕರ್ಚ್ಚಿ (ಇಎ. XVIII. ೩೦೦-೦೩; ಸು. 11ನೆಯ ಶತ).

[ ? ]

**ಮೈಲಾರ$_1$** (ನಾ). ೧. ಒಬ್ಬ ಕ್ಷುದ್ರದೇವತೆಯ ಹೆಸರು : ಪರವೀಗುಮೆ ಮೈಲಾರಂ ಕೇತಂ ಕಾಟಂ ಮಾರಿಗೆ ಮಸಣಿಯೆನಿಪ್ಪ ಕೊಟೆಯಾಂಗಳ್ (ಸಮುಕ. ೯-೧೨೬) ; ವಾಂತಿಯ ಪೆಸರ್ ಮೈಲಾರವೆಂಬಂತೆ ಪೊಲೆಯರಾಡಿನ ಪೆಸರ್ ಪಾಣಿಕದೇವಿಯೆಂಬಂತೆ (ಧರ್ಮಾಮೃ. ೬-೧೭೭) ; ರಕ್ಷಾಂಬು ಮಜ್ಜನಮಂ ಮಾಡಿಸಿ ಮಸ್ತಕಾಂಬುರುಹದಿಂದಂ ಪೂಜೆಗೆಯ್ದಾಂತೊಡಾತನ ಕೂರ್ವಾಳ್ಗಳರಮಾಳ್ದಲಂತು ಪುರವಾಳ್ವಟೂರ ಮೈಲಾರನಾ (ಅನಂತ. ೦೨-೨೭). ೨. ಮೈಲಾರಲಿಂಗನ ದೇವಾಲಯವಿರುವ ಬಳ್ಳಾರಿ ಜಿಲ್ಲೆಯ ಒಂದು ಊರಿನ ಹೆಸರು : ಒಡ್ಡಿದ ಶೂಲವ ಹಾಯ್ದು ಮೈಲಾರದ ದೊಡ್ಡಿಯ ದೇವರೆಂದವನ ಆಡ್ಡಾಕ್ಕಿಲ್ಲದೆ ತರಿಸಿ ನಿನ್ನಯ ಕಾಲಿಗಡ್ಡಗೆಡಹುವೆನು (ಕುಮಾರರಾ. ೨೪-೩೭) ; ಕೊಂಕಣಾ ಸುತ್ತಿ ಮೈಲಾರಕ್ಕೆ ಹೋದ ಹಾಗೆ (ಗಾದೆ). [ದೇ.೫ ತಮಿ. ಮೈಲಾರು = ಒಬ್ಬ ಹೆಣ್ಣುದೇವತೆ : ತೆಲು. ಮೈಲಾರು. ಮಯಿಲಾರು ]

**ಮೈಲಾರ$_2$, ಮೈಲರಾ** (ನಾ). ನಾನಾ ವಿಧವಾದ ಬಣ್ಣಗಳಿಂದ ಕೂಡಿದ ಕಂಬಳಿ ; ಚಿತ್ರಕಂಬಲ : ಚಂದ್ರಾಪೀಡನು . . . ಸೂರ್ಯಪುಟದ ಸುಪ್ಪತ್ತಿಗೆಯಲ್ಲಿ ಒರಗಿನ ಮೇಲೆ ಒರಗಿಕೊಂಡು ಮೈಲಾರತೊಡೆಯ ಮೇಲೆ ಕಾಲ ನೀಡಿಕೊಂಡು . . . ಚಿಂತಿಸಿದನು (ಕಕಕಾ. ೩೯). **ಮೈಲರಾ :** ಕಲಾಬತ್ತಿನ ಕೆಲಸದ ಆನೆಜೀನು ಮೈಲರಾ ಜಲ್ಲಿ ಆನೆ ಕಾಣಿಸಿರಿ ಕಲಾಬತ್ತು ಕೆಲಸದ್ದು (ಎಕ. XIV, ಪಂಜಸ. ೨೯೨-ಪುಟಿ.೦೯೩; 1847). [ ? ]

**ಮೈಲಿ$_1$, ಮಯ್ಲಿ, ಮೈಲ, ಮೈಲು$_3$, ಮೈಲೆ$_2$** (ನಾ). ೧. ಒಂದು ಬಗೆಯ ಸಾಂಕ್ರಾಮಿಕರೋಗ ; ಸಿಡುಬು : ಅವಳ ಮೈಮೇಲೆ ಕೆಂಪಕೆಂಪಗೆ ಏನೋ ಎದ್ದವು . . . ನೀವು ಅಂದುಬಿಟ್ಟರಿ ಮೈಲಿ ಎಂದು (ಇಕ್ಕೆ.೯. ೯೩೯) ; ದನದ ಮೈಲಿಯನ್ನು ಜನರಲ್ಲಿ ಹಬ್ಬಿಸಿದರೆ ಸಿಡುಬಿನ ಗಂಡಾಂತರದಿಂದ ಅವರನ್ನು ಪಾರಾಗಿಸಬಹುದು (ಪ್ರಾಣಿಸಾ. ೩) ; ಮುಖದ ಮೇಲೆರಡು ಮೈಲಿಯ ಕಲೆಗಳು (ಶ್ರೀರಾಂಕ. I, ೩). **ಮಯ್ಲಿ :** ೧. 'ಮಯ್ಲಿತೆಗೆ' ಪರಾ. **ಮೈಲ :** ೨. ಕಾಂತಿಹೀನತೆ : ಮಸುಕು ; ಮಬ್ಬು : ಕಣ್ಣುಗಳು ಖರಕಠಿನವಾಗಿ, ಧೂಸರಾಣ— ಮೈಲಾಗಿರುವಂಥಾವು (ಪಾಕಶಿ. ೨-೩-೬೯ ಬ). ೩. (ಕೆಂಪು, ಬಿಳಿ, ಹಸಿರು, ಕಪ್ಪು ಇತ್ಯಾದಿಗಳ) ಮಿಶ್ರವರ್ಣ : 'ಮೈಲ್ಹೋರಿ' ಪರಾ. **ಮೈಲು$_2$ :** ೪. ಕೊಳಕು ; ಕಶ್ಮಲ : ಇಲ್ಲಿ ಹುಟ್ಟುವ ಉಪ್ಪು ಬೆಳ್ಳಗಿರುತ್ತದೆ. ಅದರಲ್ಲಿ ಮೈಲು ಇರುವುದಿಲ್ಲ (ಕಡಾಗ. ೨೯). 'ಮೈಲುತೆಗೆ' ಪರಾ. **ಮೈಲೆ$_2$ :** ೧. ಬೇಸಿಗೆಯಲ್ಲಿ ಮೈಲೆಯು ಪಿಡುಗು ವಾಡಿಕೆಯಾಗಿ ಬರುತ್ತದೆ (ಕಕಾಗ. ೧೦೩) ; ಕೆಲವು ವೇಳೆ ದೇಹದ ಮೇಲೆಲ್ಲಾ ಮೈಲೆಗಳೇಳುವುದುಂಟು (೧೦ರೋ. ೦೦). 'ಮೈಲೆ ರೋಗ' ಪರಾ.

[ <ಪ್ರಾ. ಮಇಲ./ಸಂ. ಮಲ./ ಹಿಂ. ಮರಾ. ಮೈಲ್ ]

**ಮೈಲಿ$_2$** 'ಮೈಲು$_3$' ನೋ.

**ಮೈಲಿಕಲ್ಲು** 'ಮೈಲಿಗಲ್ಲು' ನೋ.

**ಮೈಲಿಕಾರಕೂನ** (ನಾ). ಸಿಡುಬನ್ನು ತಡೆಗಟ್ಟುವ ಚುಚ್ಚುಮದ್ದನ್ನು ಕೊಡುವವನು ; ದೇವಿ ಹಾಕುವವನು : ಮೈಲಿಕಾರಕೂನರ ಆಗಮನ ವಾಗುತ್ತದೆ (ಗಾಂಗು. ೯). [ ಮೈಲಿ$_1$ + ಕಾರಕೂನ ]

**ಮೈಲಿಗಲ್ಲು, ಮೈಲಿಕಲ್ಲು** (ನಾ). ೧. ಒಂದು ಊರಿನಿಂದ ಇನ್ನೊಂದು ಊರಿಗೆ ಇರುವ ದೂರದ ಅಂತರವನ್ನು ಸೂಚಿಸಲು ದಾರಿಯ ಪಕ್ಕದಲ್ಲಿ ನೆಟ್ಟಿರುವ ಕಲ್ಲು : ಮೈಲಿಗಲ್ಲಿನ ಮೇಲೆ ಸೂಚಿಸಿದ್ದ ಸಂಖ್ಯೆ ಹಳೆಯದಾಗಿ ಮಾಸಿ ಸ್ಪಷ್ಟವಾಗಿ ಕಾಣಲಿಲ್ಲ (ರೂಪಾ). ೨. (ಅಲಂ) ಮುಖ್ಯವಾದ ಘಟ್ಟ,— ಹಂತ,— ಮಜಲು : ದ್ರಾವಿಡಭಾಷಾ ಜ್ಞಾತಿಕೋಶ ಈ ಕ್ಷೇತ್ರದಲ್ಲಿ ಒಂದು ಮಹತ್ತರವಾದ ಮೈಲಿಗಲ್ಲು (ದ್ರಾಶಿಪಿ. ೨ ಹಿನ್ನುಡಿ) ; ಈ ದಿಕ್ಕಿನಲ್ಲಿ ಮಾಡುತ್ತಿರುವ ಪ್ರಯಾಣದ ಮೊದಲ ಮೈಲಿಗಲ್ಲು. ವಿಶ್ವವಿದ್ಯಾನಿಲಯ ಪ್ರಕಟಿಸುತ್ತಿರುವ ಈ ಪಠ್ಯಪುಸ್ತಕಮಾಲೆ (ಗೃಹಶಿ. iii, ಮುನ್ನುಡಿ). **ಮೈಲಿಕಲ್ಲು :** ೧. "ಮೈಲಿಕಲ್ಲಿಲ್ಲದ ಹಾದಿಯಲ್ಲಿ ನಡೆಯುವವರು ಮತಿಹೀನರು" ಎಂದು ನಾವೆಲ್ಲರೂ ತೀರ್ಮಾನಿಸಿದೆವು (ಮೈಲಿಪಾ. ೦೦). ೨. ಅಂದೇ ಪಾಕಿಸ್ತಾನದ ಬೇರು ಭಾರತಭೂಮಿಯಲ್ಲಿ ಊರಿತು. ಅದೊಂದು ಮೈಲಿಕಲ್ಲು (ಭಾರಿದ. ೪೦೯).

[ ಮೈಲಿ$_2$ (<ಮೈಲು$_3$) + ಕಲ್ಲು (<ಕಲ್$_3$) ]

**ಮೈಲಿಗೆ, ಮೈಲಗೆ** (ನಾ). ೧. ಮಲಿನತೆ ; ಅಪವಿತ್ರತೆ : ಸೂತ್ರಧಾರಿಯ ಮನದ ಮೈಲಿಗೆಯ ಕಳೆಯ ಬಂದನಯ್ಯ ಮಡಿವಾಳನು (ಬಸವಸಂ. ೦೭೭-೦೪) ; ಮತ್ಸರಮತಿಯ ಮೈಲಿಗೆ ಬಿದ್ದುದಾತ್ಮಜ್ಞಾನ ದೃಷ್ಟಿಯಲಿ . . . ಈತನ ತಪದ ತೇಜದ ಹೊವಿಟಿ ಹೊಯ್ಲಿನಲಿ (ಕುಮಾ.ಅ. ೬೦೩. ೬-೦೩) ; ಮಡಿಯು ನೀನೆ ಮೈಲಿಗೆ ನೀನೆ ಸುಡಲಿ ನಿನ್ನ ಮಡಿ ಬಿಕನಾಸಿ (ಪುರಂದ. ೦-೦೦೩ ಅನುಪಲ್ಲವಿ). ೨. ಕೊಳೆ ; ಹೊಲಸು : ಮೈಲಿಗೆಯ ಸೀರೆಯನ್ನುಟ್ಟು ತನು ಕಳೆತಗೆಯೆ ಕೈಗಲ್ಲದಲಿ ನಿಂದಿಹ ಸತಿಯನೀಕ್ಷಿಸಿದ (ವಕಿಶ. ೬-೨೪). ೩. ವಿಧವೆಯರು ಕೇಶಮುಂಡನ ಮಾಡಿಸಿಕೊಳ್ಳುವಿಕೆ,—ತಲೆಗೂದಲನ್ನು ತೆಗೆಸಿಕೊಳ್ಳುವಿಕೆ : ಹಾಂಗಾರ ನಮ್ಮ ಗಂಗತ್ತ್ಯಾ ತಿಂಗಳಿಗೊಮ್ಮೆ ಮೈಲಿಗ್ಯಾಗಲಿಕ್ಕಿಲ್ಲೇ ಬರ್ರ್ಯಾಳ ಕಾಣಸ್ತದವ್ವಾ (ಹೂಬಿ. ೯). ೪. ಸಿಡುಬು : 'ಮೈಲಿಗೆಗಣ್ಣು' ಪರಾ. ೫. ತೊಟ್ಟು ಬಿಚ್ಚಿದ ಬಟ್ಟೆ : ಉಟ್ಟು ಹೊಲಸಾದ ಬಟ್ಟೆ ;

ಮಲಿನವಸ್ತ್ರ: ಬಳಿಕವರ್ . . . ಉಟ್ಟು ಕಳೆದ ಮೈಲಿಗೆ ಸವಿದೊಗಡಿಸಿದ ಕೂಳ್ಗೆ ಕೈಯಾಂತವಂ ಬೇಡಿ ಸಂದೆಗವಿಲ್ಲ (ಪಕಶಾ. ೧-೨೬) ; ಕಾದಿಸಿ ಉದಕದೊಳಲಂಬಿ ಬೀಸುತ್ತೊಗೆದು ಪರಡಿ ತಗೆತೆಗೆದು ಘಳಿಗೆಯನೊದಗಿಪುದು ಮೈಲಿಗೆ [ಪಾಠಾಂ. ಮಯ್ಲಿಗೆ] ಮಡಗಳಹುದಕ್ಕಲಾ ಮುನಿದೆ (ಬಸಪು. ೩೬-೪೭). ಮೈಲಗೆ: ಉಟ್ಟ ವುಟ್ಟಗೆಗಳವಂತ ಮೈಲ[ಪಾಠಾಂ. ಲಿ]ಗೆಗಳಪ್ಪವು (ಅಪು. ೨-೩೦) ; ಪಾತಕಜೀವಂಗಳ್ ಎಳ್ಳಿನಂತೆ ಗಾಣಕ್ಕೆ ವಂದು . . . ಮೈಲಗೆಯುತೊಗೆಪಕ್ಕೆ ವಂದು (ಧಪುರಾಣ. ೩-೭೭ ಪ); ಮಡಿವಳನ ಮುಂದಣ ಮಡಿಯುಮಂ ತನ್ನೊಡನೆಪು ಗೋವಳಿಗರುಟ್ಟ ಮೈಲಗೆಯುಮಂ ಮಧುಸೂದನಂ ಕಂಡು (ಅರ್ಜುನ. ೬-೭೩ ಪ). ೬. (ಸಿಡುಬಿನಿಂದಾದ) ಒಂದು ಬಗೆಯ ಕಣ್ಣಿನ ದೋಷ : ಅಲಿ ನೊಂದುದೊ ಕಣ್ಣ ಬೇನೆಯೊ ಮೈಲ[ಪಾಠಾಂ. ಲಿ]ಗೆಯೊ ಹೂ ಹುಟ್ಟಿದುದೊ (ಬಸಪು. ೧೮-೩೩).

**ಮೈಲಿಗೆ ಕಲಸು** = ಮಲಿನತೆಯನ್ನು ಬೆರಸು ; ಅಶುದ್ಧವಾಗು : ಹೊಸಾ ಕಲ್ಗಡಗೀ ಒಡೆದು ಹೋತು ಮೈಲಿಗಿ ಕಲಸಿವಕ್ಕ (ಹೊಸಂಶಾ. ೭೪). **ಮೈಲಿಗೆಯಾಗು**=ಮೈಲಿಗೆ ಕಲಸು : ದೊಡ್ಡವರ ಹೆಸರು ಹೇಳಬಾರದಂತೆ ಕಣೊ. ಅವರಿಗೆ ಮೈಲಿಗೆಯಾಗುತ್ತದಂತೆ (ಶಂದ್ರಸ. ೩-೨೩).

[ಮೈಲಿ$_1$ + – ಗೆ]

**ಮೈಲಿಗೆಗಣ್ಣು** (ನಾ). ಸಿಡುಬು ಹತ್ತಿದ ಕಣ್ಣು : ಅಳಿಗಣ್ಣೊ ಪರೆಗಣ್ಣೊ ಪೊಸ ನೀಲಿಗಣ್ಣೊ ಮೈಲಿಗೆಗಣ್ಣೊ (ಶುಮಾತ. ೪-೨೯೨).

[ಮೈಲಿಗೆ + ಕಣ್ಣು (<ಕಣ್)]

**ಮೈಲಿಗೆಸಂತೆ** (ನಾ). ಮೀನು, ಮಾಂಸಗಳನ್ನು ಮಾರಲಾಗುವ ಸಂತೆ: ಜೂದಿನ ಕಟ್ಟೆ ಮೈಲಿಗೆಸಂತೆಯಂಗಡಿಬೀದಿ ಚವುಪಟ್ಟೆಗಳೊಳಗೆ ಬ್ರಾಹ್ಮರನವರ ಕಾಣದೆ ಬಾದುರ ನೋಡಿ ಹೋದನೆಂದೆಬಿದರಲ್ಲಲ್ಲಿ (ಶುರಾಶಾಂ. ೧೬-೦೨೬). [←ತೆಲು. ಮೈಲಸಂತ]

**ಮೈಲಿತೆಗೆ**, ಮಯಿಲ್ಲಿತೆಗೆ, ಮೈಲುತೆಗೆ (ಕ್ರಿ). ೧. ಸಿಡುಬನ್ನು ತಡೆಗಟ್ಟಲು ದೇವಿ ಹಾಕು : ಹಳ್ಳಿಹಳ್ಳಿಗೆ ಹೋಗಿ ಮೈಲಿತೆಗೆಯಲಿಕ್ಕೆ ವ್ಯಾಕ್ಸಿನೇಟರರೆಂಬ ಅಧಿಕಾರಸ್ಥರು ಇರುವರು (ಶಾಕಪಾ. ೭೪) ; ಮೈಲಿ ತೆಗೆಯುವ ಯುಕ್ತಿಯನ್ನು ಇಂಗ್ಲಂಡದೇಶದೊಳಗಿನ ಒಬ್ಬ ಬುದ್ಧಿವಂತನಾದ ಶಸ್ತ್ರವೈದ್ಯನು . . . ಮೊದಲು ಹುಡುಕಿ ತೆಗೆದನು (ಶುಂಬಿಯು. ೪-೨೦೭). **ಮಯಿಲ್ಲಿತೆಗೆ** : ೧. ತಮ್ಮ ಮಕ್ಕಳಿಗೆ ಮಯ್ಲಿ ತೆಗೆಯಗೊಡುವುದಿಲ್ಲ (ಶುಂಬಿಯು. ೪-೨೨೩). **ಮೈಲುತೆಗೆ** : ೨. ಶುದ್ಧಗೊಳಿಸು : ಶುಚಿಮಾಡು : ಪಿತ್ತಕೋಶದೊಳಗೆ ಸಬ್ಬಕಾರದಂತೆ ಮೈಲುತೆಗೆಯುವ ಗುಣವಿರುತ್ತದೆ (ಶುಬಿಯು. ೬-೩೦೦). [ಮೈಲಿ$_1$ + ತೆಗೆ$_1$]

**ಮೈಲು$_1$** ' ಮಯ್ಯು ' ನೋ.

**ಮೈಲು$_2$** ' ಮೈಲಿ$_1$ ' ನೋ.

**ಮೈಲು$_3$**, **ಮೈಲಿ$_2$** (ನಾ). ದೂರವನ್ನು ಅಳೆಯುವ ಒಂದು ಮಾನ ; ಎಂಟು ಫರ್ಲಾಂಗುಗಳಷ್ಟು ದೂರ : ಉದ್ದಳತೆ ಸುಮಾರು ೨೧೦ ಮೈಲು ; ಪರಮಾವಧಿ ಅಗಲಳತೆ ಸುಮಾರು ೧೬೭ ಮೈಲು (ಕಭಾಗ. ೦) ; ಈ ಬಿಸಿಲಲ್ಲಿ ಎರಡುಮೈಲು ನಡೆವರೆ ನಮಗೇ ಪ್ರಾಣಕ್ಕೆ ಬರುತ್ತದೆ (ತಸುತ. ೦೭೩) : ಶ್ರೀ ಗಣೇಶ ಹೆಗ್ಗಡೆಯವರು ನನಗಾಗಿಯೇ ಹತ್ತಿಪ್ಪತ್ತು ಮೈಲು ದೂರ ನಡೆದಾಡಿದುದೂ ಉಂಟು (ಯುಕ್ಷಬ. v, ಶುಮ್ಮ). **ಮೈಲಿ$_2$** : "ಉದ್ದಳತೆಯ ಮಾನ: ಮೈಲಿ" (ಇಂಗ್ಲೆಂಡು ಮೊ.ದೇಶಗಳಲ್ಲಿ ಈಗ ೧,೭೬೦ ಗಜಗಳು)" (Mile. ೩೪೬೩) ; ಸುಮಾರು ಮೂವತ್ತು ಮೈಲಿಗಳಷ್ಟು ದೂರ ಶತ್ರುಸೀಮೆಯಲ್ಲಿ ನುಗ್ಗಿ ಹೋಗಿ ದಾರಿಯಲ್ಲಿ ಸಿಕ್ಕಿದ ದನಕರುಗಳನ್ನೂ . . . ಜಾನುವಾರುಗಳನ್ನೂ ಲೂಟಿ ಮಾಡಿದರು (ಕೃದೇಶ. ೨೩). [←ಇಂ. Mile]

**ಮೈಲುತುತ್ತ** ' ಮೈಲತುತ್ತ ' ನೋ.

**ಮೈಲುತುತ್ತು** ' ಮೈಲತುತ್ತ ' ನೋ.

**ಮೈಲುತುತ್ಥ** ' ಮೈಲತುತ್ತ ' ನೋ.

**ಮೈಲುತೆಗೆ** ' ಮೈಲಿತೆಗೆ ' ನೋ.

**ಮೈಲುವಾಹನ** (ನಾ). ನವಿಲನ್ನು ವಾಹನವನ್ನಾಗಿ ಉಳ್ಳವನು : ಷಣ್ಮುಖ.

**ಮೈಲುವಾಹನಪಿತ** = ಷಣ್ಮುಖನ ತಂದೆ ; ಶಿವ : ಕೈಲಾಸವೆಂಬೋದು ಕಣ್ಣಲಿ ಕಾಣೆ ಮೈಲುವಾಹನಪಿತ ಎತ್ತ ಪೋದನೊ ಕಾಣೆ (ಕುರಂದ. ೩೦೩-೦). [ಮೈಲು$_1$ (<ಮಯ್ಯು) + ವಾಹನ]

**ಮೈಲುಳಿ** (ನಾ). ಶರೀರದ ಚಟುವಟಿಕೆ ; ದೇಹದ ಲಾಘವ : ಇತ್ತಲೀ ಮಹದೇವಿ ಮಿಗೆ ಬಳೆಯುತ್ತಿರ್ದ್ದಳು . . . ಉತ್ತಮದ ಮೈಲುಳಿಯ ಕಾಂತಿಯ ಮತ್ತಗಜಗಮನದ ವಿಳಾಸದ . . . ಜಾತಿಭಾವದಲಿ (ಕ್ರಶುಂ. ೦೦-೨) ; ಸುತ್ತಿದ ಉಡಿನೂರೆಯ ಕಟವಾಯ ಲೋಳೆಯ ನಿರ್ಮಿದ ಮೈಲುಳಿಯ . . . ರಥ ತುರಗ ಮಿಕ್ಕವು (ಶುವ್ಯಾದ್ರೋ. ೦೦-೨೪) ; ಪಯಪಾಡು ಮುರಿಪು ಮೈಲುಳಿ ಲಾಗು ಲವಣಿ ಲಕ್ಷ್ಯಂಗಳಿಂ ಧುರದೊಳೇಡಿಂ ತೋಜಿ ಮಿಡಿಜುತ (ಶಂತ. ೩೮-೩೬). [ಮೈ$_1$ (<ಮೆಯ್$_2$) + ಲುಳಿ$_1$]

**ಮೈಲೆ$_1$** ' ಮಯ್ಯು ' ನೋ.

**ಮೈಲೆ$_2$** ' ಮೈಲಿ$_1$ ' ನೋ.

**ಮೈಲೆರೋಗ** (ನಾ). ಸಿಡುಬಿನ ಬೇನೆ : ಈ ಎಲೆಯುಂ ನೀರಲ್ಲಿ ಅರೆದು ಕುಡಿಯೆ ಮೈಲೆರೋಗ ಗುಣ (ವೈಪ. ೩).

[ಮೈಲೆ$_2$ (<ಮೈಲಿ$_1$) + ರೋಗ]

**ಮೈಲ್ಪೋರಿ** (ನಾ). ಮಿಶ್ರವರ್ಣದ ಹೋರಿ : ಬೆಚ್ಚುವ ಬೆಳ್ಳಿ ಬೆದಜುವ ಚೆಲುವ ಮೈಲ್ಪೋರಿ ಘಟಸೆಗೆವ ಕೆಂದನು ಪಜುವ ಕಾರಿ ಮೊದಲಾದವಜೊಳು . . . ಪಲವುಪರಿಯೆತ್ತು ತೊಂಭತ್ತಾಱುಲಕ್ಷ ಮೇಳೈಸಿ ಒಡಿದುವು ಗೆಲ್ಲಕೆ (ಸಂಶರಾ. ೩೩-೭). [<ಮೈಲ + ಹೋರಿ (<ಪೋರಿ$_2$)]

**ಮೈವಚ್ಚ** ' ಮೆಯ್ವಚ್ಚ ' ನೋ.

**ಮೈವಡೆ** ' ಮೆಯ್ವಡೆ ' ನೋ.

**ಮೈವಣ್ಣು** (ನಾ). ದೇಹದ ಮೇಲಿನ ಬೆವರಿನಿಂದಾದ ಕೊಳೆ,_ ಕಲ್ಮಷ : ಗಿಡಿಜೆ ಮೈವಣ್ಣಿಂದಲೊರ್ವ ಸುತನಂ ಪಡೆದು ಬಾಗಿಲೊಳ್ ಕಾಪಿಟ್ಟಿರೆ (ಗುರುಚಾ. ೬-೩೦). 'ಮೈತಿಮಿರ್' ಪರಾ.

[ಮೈ$_1$ (<ಮೆಯ್) + ಪಣ್ಣು (<ಪಣ್)]

**ಮೈವಶ** (ನಾ). ಅಧೀನತೆ : ಪತೋಟಿ : ಮೈವಶವ ಮಾಡಿದರಲ್ಲೆ ಬಲುದೈವವನು ಕುರುಕುಲದ ಜೇರನು ಕೊಯ್ವನೀ ಹರಿ (ಕುವ್ಯಾ. ೬೦೨. ೦೭-೪೬) ; ಈ ಬಲದ ಮೈವಶವವರ ಕೈವಶವೇನು ಹೊಸತೆಂದ (ಕುವ್ಯಾದ್ರೋ. ೦೦-೨೦). [ಮೈ$_1$ (<ಮೆಯ್$_2$) + ವಶ$_2$]

**ಮೈವಸ** ' ಮೆಯ್ವಸ ' ನೋ.

**ಮೈವಸೆ** ' ಮೆಯ್ವಸೆ ' ನೋ.

**ಮೈವಳಯ** (ನಾ). ಪೊರವಳಯ ; ಆವರಣ : ಗಿರಿಯ ಮೈವಳಯದಲಿ ವಿದ್ಯಾಧರರು ಖೇಚರಗುಹ್ಯಕರು ಇಳಿವರಿವ ಜಡೆಗಳ ಘೋರತಪಸಿನ ಪೂರ್ವದೇಹಿಗಳು (ಅಂಬಶಾ. ೨-೬).

[ಮೈ$_1$ (<ಮೆಯ್$_2$) + ವಳಯ(=ವಲಯ)]

**ಮೈವಳಿ** ' ಮೆಯ್ವಟಿ ' ನೋ.

**ಮೈವಳಿಸು** (ಕ್ರಿ). ಹೊಂದಿಸು ; ಜೋಡಿಸು ; ಅಳವಡಿಸು : ಹಿಳುಕ ಮಂತ್ರಿಸಿ ಬಿಲ್ಲೆದೆಗೆ ಮೈವಳಿಸಿವನಿತಕೆ ಶರ ಮುಖಾಗ್ನಿಯ ರ್ಝುಳದ ಸೆಗಳಿಕೆ ಧಾತುಗಿಡಿಸಿತು ಸಕಲಲೋಕಗಳ (ಉದ್ಯೋ. ೦೩-೪೭).

[ಮೈವಳಿ (<ಮೆಯ್ವಟಿ) + – ಸು$_2$]

**ಮೈವಟಿ** 'ಮೆಯ್ವಟಿ' ನೋ.

**ಮೈವಿಡಿ** 'ಮೆಯ್ವಿಡಿ' ನೋ.

**ಮೈವಿಡು** 'ಮೆಯ್ವಿಡು' ನೋ.

**ಮೈವೆಚ್ಚು** 'ಮೆಯ್ವೆರ್ಚು$_1$' ನೋ.

**ಮೈವೆರು** 'ಮೆಯ್ವೆಱು' ನೋ.

**ಮೈವೆರ್ಚು** 'ಮೆಯ್ವೆರ್ಚು$_1$' ನೋ.

**ಮೈವೆಳಗು** 'ಮೆಯ್ವೆಳಗು' ನೋ.

**ಮೈವೆಱು** 'ಮೆಯ್ವೆಱು' ನೋ.

**ಮೈವೇದನೆ** (ನಾ). ಶರೀರಕ್ಕೆ ಉಂಟಾಗುವ ನೋವು, – ಬೇನೆ ; ಮೈನೋವು : ಕಿಡದು ಮೈವೇದನೆಗೆ ನರಳುವ ನಿಡುಸರದ ಖಗ ಜಂಬುಕೌಘವ ನಿಡುವ ಕೈಗಲ್ಲುಗಳ ನೃಪತಿಯ ಕಂಡರಿವರೆಂದು (ಕುಮಾ.ಗ. ೬-೫೩).
[ಮೈ$_1$ (<ಮೆಯ್$_2$) + ವೇದನೆ]

**ಮೈವೊಗರ್** 'ಮೆಯ್ವೊಗರ್' ನೋ.

**ಮೈವೊತ್ತುಗೊಡು** (ಕ್ರಿ). ಶರೀರವನ್ನು ಆಸರೆಯಾಗಿ ಕೊಡು : ಹತ್ತು ದೆಸೆಗಳು ವಿಮಲತೆಗೆ ಮೈವೊತ್ತುಗೊಟ್ಟವು ಸಕಲಜೀವರ ಚಿತ್ತ ನಿರ್ಮಳ ವಾಯ್ತು (ನಿಜಗ. ೬-೨೦-೫೬). [ಮೈ$_1$ (<ಮೆಯ್$_2$) + ಒತ್ತುಗೊಡು]

**ಮೈವೊಯ್** (ಕ್ರಿ). ಶರೀರದ ಮೇಲೆ ಎರಗು : ಮೈವೊಡ್ಡಬಹುದು ಮೃತ್ಯುವಿನಿಜಿತಕ್ಕೆ ಮೈವೊಯ್ದು ಹರಸುರಿಗಣಕ್ಕೆ ಮೈವೊಡ್ಡಬಹುದು ಬಂಧಕಿ ಯರ ಕೂಟಕ್ಕೆ ಮೈವೊಡ್ಡುವುದಘಟಿತವು (ಪ್ರಭುಲಿಂ. ೩-೬೨).
[ಮೈ$_1$ (<ಮೆಯ್$_2$) + ಪೊಯ್$_1$]

**ಮೈಸನ್ನೆ** 'ಮೆಯ್ಸನ್ನೆ' ನೋ.

**ಮೈಸರಸ** (ನಾ). (ಅಲಂ) ಮಲ್ಲಯುದ್ಧ ; ಗುದ್ದಾಟ : ಮೈದುನನ ಮೈಸರಸಕೀ ಹುಲುಗೈದು ಸಾಲದೆ ತಂಗಿ ದುಸ್ಸಳೆಯೈದೆತನ ಬಯಲಾಯ್ತು ನುತ ಬೆಂಬತ್ತಿದರು ಖಳನ (ಕುಮಾ.ಭಾ. ೨೨-೨೫).
[ಮೈ$_1$(<ಮೆಯ್$_2$) + ಸರಸ]

**ಮೈಸಲ್** 'ಮೆಯ್ಸಲ್' ನೋ.

**ಮೈಸಲಿಗೆ** (ನಾ). ದೇಹದ ಸಂಗ, – ಸಹವಾಸ : ನೀನು ದೊಡ್ಡವಳಾದೆ ಮೈಸಲಿಗೆ ಬೆಳಸಿದೆ ಏಕಾಂತಕೆಳಸಿದೆ ಎಲೆ ಕೆಳದಿಯೆ (ಸೌಂದ. ೯-೫೪).
[ಮೈ$_1$ (<ಮೆಯ್$_2$) + ಸಲಿಗೆ$_1$ (<ಸಲ್ಗೆ)]

**ಮೈಸಾರ್** 'ಮೆಯ್ಸಾರ್' ನೋ.

**ಮೈಸಾರ್ಚು** 'ಮೆಯ್ಸಾರ್ಚು' ನೋ.

**ಮೈಸಾಲ, ಮಯಿಸಾಲ** (ನಾ). ೧. ಒತ್ತೆ, ಆಧಾರಗಳೇನೂ ಇಲ್ಲದೆ ವ್ಯಕ್ತಿಯ ಮೇಲಿನ ನಂಬಿಕೆಯ ಆಧಾರದ ಮೇಲೆ ಕೊಡುವ ಸಾಲ : ಅಡವು ಮೈಸಾಲದ ಪತ್ರಗಳು . . . ಸಿಕ್ಕಿ ಇರಲಾಗಿ (ಎಕ. VI. ಕೊಪ್ಪ. ೩-೯; 1569). ೨. (ಅಲಂ) ಸೇಡು ; ಮಯ್ಯಿ : ಸೋಲವಿದು ಕಾಲಾಂತಕನ ಮೈಸಾಲ (ಕುಮಾ.ಕ. ೦೩-೭೦); ಕಳಸೋಳಗೆ ಸರಳ ಮೊನೆ ಯಿಂದಲೊಂದಕೆ ನೂರ ಬೆಳಸಿ . . . ತಿದ್ದುವರು ಮೈಸಾಲವ (ತುರಂಗ. ೨೯-೦೭). **ಮಯಿಸಾಲ** : ೧. ಸಮುಸ್ತರಿಗೆ ಮಯಿಸಾಲವಾಗಿ ಕೊಟ್ಟ ದೊಡ್ಡ ವರಹ ಗ ೮೨ (ಕಾರಿಇ. IX-ii. ೪೭೦-೨೯; 1482). 'ಕೈಸಾಲ' ಪರಾ. [ಮೈ$_1$(<ಮೆಯ್$_2$) + ಸಾಲ]

**ಮೈಸಾಲಪತ್ರ** (ನಾ). ಆಧಾರ, ಭೋಗ್ಯಗಳೇನೂ ಇಲ್ಲದೆ ಬರೆದು ಕೊಡುವ ಸಾಲಪತ್ರ : ಸಾಹುಕಾರರು ದೀಡು, ಭೋಗ್ಯ, ಮೈಸಾಲ ಪತ್ರಗಳ ಮೇಲೆ ಸಾಲಕೊಡುವುದನ್ನು ಕಡಮೆಮಾಡಿದ್ದರು (ಗಂಗಾಳ. ೯೦); ಅಂಡಿಮ್ಯಾಂಡ್, 'ಮೈಸಾಲ 'ಪತ್ರ, ಹಣ ಸಂದ ರಸೀದಿ . . . ಶಿಥಿ ಲಾಗದ – ಇವನ್ನೆಲ್ಲ ಬರೆಯುವುದಕ್ಕೆ ಆಚಾರ್ಲೇ ಗತಿ (ಪಪ್ಪೂರು. ೦೮೦).
[ಮೈಸಾಲ + ಪತ್ರ]

**ಮೈಸಾಲೆ** (ನಾ). ಒಂದು ಬಗೆಯ ಸಸ್ಯ : "ಹರಿಯಾಗೆ, ಮಹೋದಲೆ, ಮೈಸಾಲೆ, ತಗಡಕ, ತಗಡರೆ, ಮಾಯಿಸಲೆ" (ಸಸ್ಯಪಿ. ೯೩); ತಗಡತಿ, ಹರಿಯಾಗೆ, ಮೈಸಾಲೆ (ಪ್ರಶಿಗಿ. ೫೦-೧೦೦೦). [ ? ]

**ಮೈಸಿ** (ನಾ). ಎಮ್ಮೆ ; ಮಹಿಷಿ : ಅತ್ವಕ್ಕೆತ್ವಂ – ಮಹಿಷ – ವೆಮ್ಮೆ ; ಮಹಿಷಿ – ಮೈಸಿ (ಶಬ್ದರ. ೨೭೩ ಶ್ರಯೋ); ಮಹಿಷಿ, ಮೈಸಿ ; ಪತ್ತನ, ಪಟ್ಟಣ (ಶಬ್ದಾ.ಸು. ೦೬೦ ವ್ಯಾಖ್ಯಾ). [< ಸಂ. ಮಹಿಷೀ]

**ಮೈಸಿರಿ** 'ಮೆಯ್ಸಿರಿ' ನೋ.

**ಮೈಸುಖ** 'ಮೆಯ್ಸುಖ' ನೋ.

**ಮೈಸುಡು** 'ಮೆಯ್ಸುಡು' ನೋ.

**ಮೈಸುನಾಡು** 'ಮಯ್ಸೂರ್ನಾಡು' ನೋ.

**ಮೈಸೂರ್‌ಪಾಕ್** 'ಮೈಸೂರುಪಾಕು' ನೋ.

**ಮೈಸೂರು** 'ಮಯ್ಸೂರ್' ನೋ.

**ಮೈಸೂರುಪಾಕು, ಮೈಸೂರ್‌ಪಾಕ್** (ನಾ). ಕಡಲೆಹಿಟ್ಟು, ತುಪ್ಪ, ಸಕ್ಕರೆಗಳಿಂದ ತಯಾರಿಸುವ ಒಂದು ಬಗೆಯ ಸಿಹಿತಿಂಡಿ : ಮೈಸೂರುಪಾಕು : ಪದಾರ್ಥಗಳು : ಒಂದು ಕಪ್ಪು ಕಡಲೆಹಿಟ್ಟು; ೨ ಕಪ್ಪು ಸಕ್ಕರೆ . . . ೩ ಕಪ್ಪು ಡಾಲ್ಡ (ಅಡುಗೆ. ೦೦೦). **ಮೈಸೂರ್ ಪಾಕ್** : ಮೈಸೂರ್‌ಪಾಕ್ ನಾಲ್ಕು ಪ್ಲೇಟು ಬಂತು (ಪಪ್ಪೂರು. ೨೬೦).
[ಮೈಸೂರು$_0$ (P← ಸಂ. ಮಸೂರ) + ಪಾಕು$_0$ (P← ಸಂ. ಪಾಕ)]

**ಮೈಸೆ** (ನಾ). ಒಂದು ಊರಿನ ಹೆಸರು : ಭತ್ತಗಾವೆ ಹಾದಿಗಾಳ ಕಡ ಗೋಡ ಮೈಸೆ ಪನ್ನೆರಡುಮನೆಲಿವಯಲುಂ (ಪ್ರಾಆ. ೧೯೩೦, ೭೯-೦೦೯; 1053?). [ ? ]

**ಮೈಸೆಕೆ** (ನಾ). ಶರೀರದ ಕಾವು, – ಶಾಖ ; ಜ್ವರ : ಗೋಣೀಕಾಯಿ ಚುಜ್ಜಲಚೆಕ್ಕೆ ಇವುಗಳ ರಸವನ್ನು ತೆಗೆದು ಸಕ್ಕರೆ ಹಾಕಿ ಕುಡಿಯಲು ಮೈಸೆಕೆ ಬಿಡುವುದು (ಸಸ್ಯ. ಶಂ ೯೦೦). [ಮೈ$_1$ (<ಮೆಯ್$_2$) + ಸೆಕೆ]

**ಮೈಸೊಕ್ಕು** (ನಾ). ದೇಹದ ಕೊಬ್ಬಿನಿಂದುಂಟಾದ ಮದ, – ಗರ್ವ, – ಅಹಂಕಾರ : ತಮ್ಮ ಮೈಸೊಕ್ಕಿನ ಫಲವನ್ನು ಉಣ್ಣುತ್ತಾರೆ (ಹ್ಯಾಂಬಂ. ೦೬೭); ಇರಬೇಕು ಎಲ್ಲೋ ಯಾರಿಗೋ ಮೈಸೊಕ್ಕು (ಸಂಕು. ೦೯-೦೭).
[ಮೈ$_1$ (<ಮೆಯ್$_2$) + ಸೊಕ್ಕು$_3$ (<ಸೊರ್ಕು$_2$)]

**ಮೈಸೊಬಗು** 'ಮೆಯ್ಸೊಬಗು' ನೋ.

**ಮೈಸೋಂಕು** 'ಮೆಯ್ಸೋಂಕು$_1$' ನೋ.

**ಮೈಸೋಂಬತನ** (ನಾ). ಮೈಗಳ್ಳತನ ; ಸೋಮಾರಿತನ : ಕಾಯಕ ಕಾಜದ ಮೈಸೋಂಬತನದಿಂದ ಬೇಜಿಕೆ ಕೂಳ ಗಳಿಸಲಾಗದೆ ಹಸಿದಿಪ್ಪರಯ್ಯ (ವಚನ. II. ೪೦೯). [ಮೈ$_1$(<ಮೆಯ್$_2$) + ಸೋಂಬತನ]

**ಮೈಸೋಕು** 'ಮೆಯ್ಸೋಂಕು' ನೋ.

**ಮೈಸೋಲು$_1$** (ಕ್ರಿ). ದೇಹವು ಆಯಾಸಗೊಳ್ಳು, – ದಣಿ, – ಬಳಲು : ದಯ ಬಾರದೆ ಈ ಎನ್ನ ದೀನದೆಸೆಯ ನೋಡಿ ? ಸಾಕಿನ್ನು, ದೇಸತ್ತ ಮೈಸೋತೆ (ಅಂತರಂ. ೦೦).
[ಮೈ$_1$ (<ಮೆಯ್$_2$) + ಸೋಲು$_1$ (<ಸೋಲ್)]

**ಮೈಸೋಲು$_2$** (ನಾ). ದೇಹದ ಬಳಲಿಕೆ, – ಆಯಾಸ, – ದಣಿವು : ವಾತ, ಶ್ಲೇಷ್ಮ, ಮೈಸೋಲು, ಎದೆಸೋಲು, ಗುಲ್ಮ, ಸರ್ವವಾತ ಹರ (ವೈದ್ಯಪಿ. ೯೯).
[ಮೈ$_1$ (<ಮೆಯ್$_2$) + ಸೋಲು$_2$ (<ಸೋಲ$_1$)]

**ಮೈಹಸ** (ನಾ). ದೇಹದ ಕೆಚ್ಚು, – ಸಾಮರ್ಥ್ಯ (?) : ಬೆಸುವುದರಿ ವುದು ಚಾಚುವುದು ಜಾಳಿಸುವುದೊತ್ತಂಬರಿಸುವುದು ಕೈಹಸದ ಮೈಹಸ ದಬ್ಬರದ ಸಮರಂಗದುಬ್ಬರದ ರಸವನೇನೆಂಬೆನು (ಕೊರಟಾ. ೬-೦೩-೩೬). 'ಕೈಹಸ' ಪರಾ. [ಮೈ$_1$ (<ಮೆಯ್$_2$) + ಪಸ$_1$]

**ಮೈಹಳುವಾಯಿ** (ನಾ). ೧. ಮೈ ಹಗುರವಾಗಿರುವುದು; ದೇಹಲಾಘವ. ೨. ದೇಹದ ನಿತ್ರಾಣ,-ದೌರ್ಬಲ್ಯ : ಬಾಯ ಲೋಳೆಗಳಳಿದು ಮೈಹಳುವಾಯಿ ಮಿಗೆ ತುದಿಮೊರವನೂಡಿ ನವಾಯಿ ಮಿಗಲು . . . ವಾನಾಯುಜದ ಸಾಲೆಸೆದುದು (ಉಭ್ಯಾದ್ರೋ. ೦೭-೯).

[ಮೈ$_{1}$ (<ಮೆಯ್$_{2}$) + ಹಳುವಾಯಿ]

**ಮೈಹಿರ** (ನಾ). ೧. ಸೂರ್ಯ : ಮೂಲೋಕದೆಡೆಯ ಮೇರುಸದನ ಮೈಹಿರನ ಘನತೇಜಃಪ್ರಭ ಮೋಕ್ಷಪ್ರದ ಮೌಲಿನಿಯುಕ್ತಸುಧಾಕರ ಮಂಗಲವರ್ಧನ ಮಂಡಿತ ಸಮವರ್ತಿ ಸಲಹು ನಲಪಿಂ ಶ್ರೀಶಾಂತೇಶಂ (ಅಧ್ಯರೇ. ೧-೨೯). ೨. ಸೂರ್ಯನ ಕಾಂತಿ : ತಾಳ್ದತ್ತು ಮೈಹಿರವಂ ಕೇಳಿರಸಾರ್ಥವಿಶ್ರಮಿತ ನಾನಾದ್ಯೈವತಂ ರೈವತಂ (ಜಗಂ. ೦೭-೩೩).

[<ಸಂ. ಮಿಹಿರ]

**ಮೈಹುಳಿ** (ಕ್ರಿ). ೧. ದೇಹವು ಹುಳಿತು ಹೋಗು. ೨. (ಆಲಂ) ಬಹಳ ಘಾಯವಾಗು,-ಹುಣ್ಣಾಗು : ತೊಲಗು. ಇಲ್ಲವಾದಲೆ ಬೆತ್ತದಿಂದ ಮೈಹುಳಿಯುವಂತೆ ಥಳಿಸುವೆ (ಕೃಶಲಾ. ೪೯); ನೋಡುತ್ತೇನು ನಿಂತಿ, ಪೆದ್ದನಂತೆ ! ಮೈಹುಳಿಯ ಜಡಿ, ಅಂದರೆ ಎಚ್ಚರಾಗುತ್ತಾನೆ (ಹುಚ್ಚಾಟ. ೬೦). [ಮೈ$_{1}$ (<ಮೆಯ್$_{2}$) + ಹುಳಿ$_{1}$ (<ಪುಳಿ)]

**ಮೈಹೊರೆ** (ಕ್ರಿ). ಶರೀರವನ್ನು ತಾಳು; ಮೈದಳೆ : ಅಲರುತಿದ ಮೂರುಲೋಕದ ಮೋಹ ಕರೆವಂತೆ ದುಗ್ಧಧವಳಮಮುಗ್ಧತೆಯೆ ಮೈಹೊರೆಯುವಂತೆ (ಅಶೀ. ೨೩-೯).

[ಮೈ$_{1}$ (<ಮೆಯ್$_{2}$) + ಹೊರೆ$_{2}$ (<ಪೊರೆ)]

**ಮೈಳಲದೇವಿ** (ನಾ). ಒಬ್ಬಾಕೆಯ ಹೆಸರು : ಜನಕನುಪ್ಪೇಜಾತೆ ಪ್ರತ್ಯಕ್ಷಗೋಮಿನಿ ತಾಯಿ ಮೈಳಲದೇವಿ (ಶಾಇ. XX. ೩೦-೨೯ ; ೩೨. 1089 ೫೫). [ಮೈಳಲ$_{0}$ (ಪ್ರ ← ತಮಿ. ತೆಲು. ಮೈಲಾರು= ಒಂದು ಕ್ಷುದ್ರ ದೇವತೆ) + ದೇವಿ]

**ಮೈಳಾಪತೀರ್ಥ** (ನಾ). ಒಂದು ಸ್ಥಳದ ಹೆಸರು : ಶ್ರೀಮನ್ಮೈಳಾಪ ತೀರ್ಥಸ್ಯ ಗಣೇಶಾರೇಯನಾಮನಿ ಬಭೂವೋಗ್ರತಪೋಯುಕ್ತಃ ಮುಳ್ಳ ಭಟ್ಟಾರಕೋ (ಶಾಇ. XX. ೦೩-೬ : 876). [ಮೈಳಾಪ$_{0}$ + ತೀರ್ಥ]

**ಮೊಂಗರವಳ್ಳಿ** 'ಮಂಗುಲಿವಳ್ಳಿ' ನೋ.

**ಮೊಂಗುರಿ** 'ಮುಂಗುರಿ' ನೋ.

**ಮೊಂಟು$_{1}$** (ಕ್ರಿ). ಶಿವಿ ; ಚುಚ್ಚು (?) : ತನ್ನಂಗವಂಗವಂ ಕಡಿದು ಖಂಡವಂ ತೆಗೆದು ಸೋದಿಸಿ ಕಿಚ್ಚೊಳಿಕ್ಕಿ ತಾಂ ಮಿಗೆ ಮೊಂಟೆ ಪೊರಳ್ಚಿ ಸುಂಟಿಗೆಯಿಂದೆ ಪಚಿಸಿ (ಉಭಚ್ಛ. ೪-೨೨೩). [<ಮೊಟ್ಟು$_{1}$ ?]

**ಮೊಂಟು$_{2}$** 'ಮುಂಡು$_{2}$' ನೋ.

**ಮೊಂಡ** 'ಮುಂಡು$_{2}$' ನೋ.

**ಮೊಂಡಕ್ಕಿ** 'ಮಂಡಕ್ಕಿ' ನೋ.

**ಮೊಂಡಗತ್ತಿ**, ಮಂಡಕತ್ತಿ, ಮೋಂಡುಕತ್ತಿ (ನಾ). ಹರಿತವಾಗಿರದ ಖಡ್ಗ : ಮೊಂಡಾಗಿರುವ ಕತ್ತಿ : (೯). **ಮಂಡಕತ್ತಿ** : ಮುರುಕುಬಂದೂಕು ಮತ್ತು ಮಂಡಕತ್ತಿಗಳನ್ನೇ ಎತ್ತಿಕೊಂಡು . . . ಸಿದ್ಧರಾದರು (ಇಶ್ವೀ. ೦೬೯). **ಮೊಂಡುಕತ್ತಿ** : (ಕತ್ತಿವರಸೆಯಲ್ಲಿ ಉಪಯೋಗಿಸುವ ತುದಿಗೆ ಗುಂಡಿ ಹಾಕಿದ) ಮೊಂಡುಗತ್ತಿ (Foil. ೨೦೪೩).

[ಮೊಂಡ (<ಮುಂಡು$_{2}$) + ಕತ್ತಿ]

**ಮೊಂಡಗಳ್ಳಿ** 'ಮುಂಡಗಳ್ಳಿ' ನೋ.

**ಮೊಂಡತನ** 'ಮೊಂಡುತನ' ನೋ.

**ಮೊಂಡರಳು** 'ಮಂಡರಳು' ನೋ.

**ಮೊಂಡಾಟ** (ನಾ). ಹಟಮಾರಿತನ : ಪಟ್ಟುಹಿಡಿಯುವಿಕೆ ; ಆಗ್ರಹ : ಈ ಮೊಂಡಾಟದಲ್ಲಿ ಯಾರೂ ಸೋಲುವಂತೆಯೂ ಇರಲಿಲ್ಲ, ಗೆಲ್ಲುವಂತೆಯೂ ಇರಲಿಲ್ಲ (ಅಜ್ಞಾ. ೩೬) ; ದೀವಿಗೆಗಳಿಗೆ ಎಣ್ಣೆ ಬಡಿಸಿಕೊಂಡು ಮೊಂಡಾಟ ಮಾಡಿ ಕಾಸು 'ವಸೂಲು' ಮಾಡಿಕೊಂಡು ಮುಂದಿನ ಮನೆಗೆ ಹೋಗುವರು (ಸುವಸಂ. ೩೩) : ಮಕ್ಕಳ ಸ್ವಾಭಾವಿಕಆಸಕ್ತಿಗಳಿಗೆ ಅಡ್ಡಿಬಂದು ಮೊಂಡಾಟ ಮಾಡುವುದು, ತುಂಟಾಟ ಮಾಡುವುದು ಮೊದಲಾದುವು ಆರಂಭವಾಗುತ್ತವೆ (ಶಿಕ್ಷಣ. ೬೩೬). [ಮೊಂಡ (<ಮುಂಡು$_{2}$) + ಆಟ]

**ಮೊಂಡಿ**, ಮಂಡ್ಕಿ, ಮೊಣ್ಣೆ (ನಾ). ೧. ಮೊಂಡುತನ ಮಾಡುವವಳು ; ಹಟಮಾರಿ : ಆ ಮೊಂಡಿಯನ್ನು ಈ ಕೆಲಸಕ್ಕೆ ಒಪ್ಪಿಸುವಷ್ಟರಲ್ಲಿ ಸಾಕಾಗಿ ಹೋಯಿತು (ರೂಢಿ). **ಮಂಡ್ಕಿ** : ೧. ಅದ್ಯೇ ಹೇಳಾದು, ನೀನು 'ಮಂಡಿ' ಅಂತಾ (ಕುಲಮ. ೬೮೦). **ಮೊಣ್ಣೆ** : ೨. ಅಂಗಹೀನಳಾದವಳು : ಅಂಗವಿಕಲೆ : ಬಲಗೈಬೆರಳೊರ್ವಳಿಗಿತ್ತ ಮೊಣ್ಣೆಯೆಂದು ಲಿದು ಭಂಗಿಸರೆ ಕಂಡವರು (ಕಂಪಾ. ೬-೦೬೪).

[ಮೋಂಡು (<ಮುಂಡು$_{2}$) + — ಇ$_{2}$]

**ಮೊಂಡು** 'ಮುಂಡು$_{2}$' ನೋ.

**ಮೊಂಡುಕತ್ತಿ** 'ಮೊಂಡಗತ್ತಿ' ನೋ.

**ಮೊಂಡುಗರೆ** (ಕ್ರಿ). ಮೊಂಡುತನಮಾಡು; ಪಟ್ಟುಹಿಡಿ; ಹಟ ಹಿಡಿ : ಪ್ರಮಿಾಲ ಎಳೆಯ ಮಗುವಿನಂತೆ ಮೊಂಡುಗರೆಯುತ್ತಾ . . . ಗೋಗರೆದಳು (ಮರೀ. ೦೩೯). [ಮೋಂಡು (<ಮುಂಡು$_{2}$) + ಕರೆ$_{1}$]

**ಮೊಂಡುಗಳ್ಳಿ** 'ಮುಂಡಗಳ್ಳಿ' ನೋ.

**ಮೊಂಡುತನ**, ಮೋಂಡತನ (ನಾ). ಹಟಮಾರಿತನ; ಹಿಡಿದ ಪಟ್ಟು ಬಿಡದಿರುವಿಕೆ; ಆಗ್ರಹ : ಗಂಡ ಮಾಡಿದ ಪ್ರಯತ್ನಗಳೆಲ್ಲ ಅವಳ ಮೊಂಡುತನದ ಕಲ್ಲುಗೋಡೆಗೆ ಬಡಿದು ನುಚ್ಚುನೂರಾದವು (ಭಜು. ೩೬೦). **ಮೊಂಡತನ** : ನಾವು ರಾಯರೆಂದು ಮೋಂಡತನದಿಂದ ಉಳಿತುಯಿರುವವು (ಶಾಗಂಧಿ. ೨೦೩-೦೦) : ಅವಳು ಮೊದಲು ಬಹಿಷ್ಕೃತ ಹುಡುಗಿಯನ್ನು ಮನೆಯಲ್ಲಿಟ್ಟುಕೊಳ್ಳಲು ಸಿದ್ಧಳಾಗಿದ್ದಳು ; ಗಂಡನ ಮೋಂಡತನದಿಂದ ಅದು ಸಾಧ್ಯವಾಗಲಿಲ್ಲ. ಅಷ್ಟೇ (ಬಂಕಿಮ. ೨೯೨) ; ಹಾಗೂ ಹೀಗೂ ಮೂರು ನಾಲ್ಕು ನಿಮಿಷ ಮೊಂಡತನದಿಂದ ಮಾತಾಡಿದೆ (ಕಂಬಿರು. ೩೯).

[ಮೋಂಡು (<ಮುಂಡು$_{2}$) + — ತನ]

**ಮೊಂಡುವಾದ** (ನಾ). ಹಟಹಿಡಿದು ಮಾಡುವ ವಾದ ; ಹಟದಿಂದ ಕೂಡಿದ ಮಾತಿನ ಸರಣಿ : ಇದಕ್ಕೆ ನಾವು ಮೊಂಡುವಾದವೆಂದು ಹೇಳುತ್ತೀವಿ (ದೂಶಿಕ್ಷ. ೦೦೩) ; ಫಾದರ್ ಕ್ಲೊಸೆಟ್‌ನ ಮೊಂಡುವಾದವನ್ನು . . . ನಿಜವೆಂದು ಹೇಳಲು ಸಾಧ್ಯವಿಲ್ಲ (ಪ್ರಾಶಿಶಿ. ೨೬).

[ಮೊಂಡು (<ಮುಂಡು$_{2}$) + ವಾದ$_{2}$]

**ಮೊಂಬತ್ತಿ** 'ಮೋಂಬತ್ತಿ' ನೋ.

**ಮೊಕ** 'ಮೊಗ' ನೋ.

**ಮೊಕಚಿಟ್ಟು** (ನಾ). ಯಾವುದಾದರೊಂದು ಬಗೆಯ ಆಹಾರದ ಅತಿಸೇವನೆಯಿಂದ ಬಾಯಿರುಚಿ ಕೆಟ್ಟು ಜುಗುಪ್ಸೆಯುಂಟಾಗುವುದು : ಮೊಕಚಿಟ್ಟುಯಾದೊಡೆ ಹುಳಿದಾಳಲುಗಳ ನಿಕರವ ಸವಿವರೇನೆಂಟೆ (ಪ್ರಾಪಠ. ೩೯-೧೨೮). 'ಮುಖಚಿಟ್ಟು' ಪರಾ.

[ಮೊಕ (<ಮೊಗ) + ಚಿಟ್ಟು$_{2}$]

**ಮೊಕತ** 'ಮೊಖ್ತಾ' ನೋ.

**ಮೊಕದ್ದಮೆ**, ಮುಕದಮಿ, ಮೊಖದ್ದಮೆ (ನಾ). ಎರಡು ಪಕ್ಷಗಳ ನಡುವಿನ ಧನ, ಅಧಿಕಾರ ಇತ್ಯಾದಿಗಳಿಗೆ ಸಂಬಂಧಿಸಿದ ಯಾವುದಾದರೂ ಜಗಳ ಅಥವಾ ಮತ್ತಾವುದಾದರೂ ಅಪರಾಧದ ವಿಷಯವಾಗಿ ನ್ಯಾಯಾಲಯದಲ್ಲಿ ಹೂಡುವ ವ್ಯಾಜ್ಯ,-ಖಟ್ಲೆ : ಇಡೀ ಮೊಕದ್ದಮೆಯೇ ಮುರಿದು ಬೀಳುವ ಪರಿಸ್ಥಿತಿ ಒದಗಿತ್ತು (ಆತ್ಮಾರ್ಶ. ೦೪೦) : ದರಬಾರಿನಲ್ಲಿ ಮೊಕದ್ದಮೆಗಳಾವವೂ ವಿಚಾರಣೆಯಾಗ

ತಕ್ಕುದಲ್ಲ (ದೇವೀಭಾ. ೧೦೩). **ಮುಕದಮಿ :** ಮುಕದಮಿಯು ಕಾಗದ ತಕೊಂಡು ಓರ್ವ ಸ್ತ್ರೀಯು ಅವರ ಕಡೆಗೆ ಬಂದಳು (ಪ್ರಹ್ಲಾ. ೬೨). **ಮೊಖದ್ದಮೆ :** ದಸ್ತಾವೇಜು, ಮೊಖದ್ದಮೆ (ಶಾಶಾಶಾ. ೧೭೬).

**ಮೊಕದ್ದಮೆ ಹೂಡು, ಮೊಖದ್ದಮೆ ಹೂಡು** = ವ್ಯಾಜ್ಯವನ್ನು ನ್ಯಾಯಾಲಯದ ವಿಚಾರಣೆಗೆ ಒಳಪಡಿಸು,– ಕೋರ್ಟಿಗೆ ಹಾಕು : ಮುಂಬಯಿಯ ಆಸ್ವಾಮಿಯ ಮೇಲೂ ಮೊಕದ್ದಮೆ ಹೂಡಲಾಯಿತು (ನಾಕೋದೀ. ೧೯೩) ; ಚೌರ್ಯಗೋಪನಕ್ಕಾಗಿ ಅವಳ ಮೇಲೆ ಮೊಕದ್ದಮೆ ಹೂಡಲಾಗಿತ್ತು (ಕೃಪರು. ೧೯೨) ; ಅಪರಾಧಕ್ಕಾಗಿ ಮೊಖದ್ದಮೆ ಹೂಡಿದರು (ತಂಪತೊ. ೨೮೪). [ ←ಅರ. ಮುಕದ್ದಮಹ್, ಮುಕದ್ದಮಾ ; ಹಿಂ. ಮರಾ. ಮುಕದಮಾ, ಮುಕದ್ದಮಾ. ಮೊಕದಮಾ ]

**ಮೊಕರ** ‘ ಮೊಗ್ಗರ ’ ನೋ.

**ಮೊಕರಂಬ** ‘ ಮೊಗರಂಬ ’ ನೋ.

**ಮೊಕರಂಬೆ** ‘ ಮೊಗರಂಬ ’ ನೋ.

**ಮೊಕರರ** ‘ ಮೊಕರರು ’ ನೋ.

**ಮೊಕರರು, ಮೊಕರರ, ಮೊಕರಾರು, ಮೊಕರೂರು** (ನಾ). ೧. ನಿಶ್ಚಯ ; ನಿರ್ಧಾರ : ವೀರರಾಜೇಂದ್ರವಡೆಯರ ಹುಡುಕುವ ಬಗ್ಗೆ ಮೊಕರರು ಮಾಡಿ ಕಳುಹಿಸಿದ್ದರಿಂದ (ರಾಜೇಂದ್ರ. ೦೮). **ಮೊಕರರ :** ೧. ಐದು ಹಣಾ ಮೊಕರರ ಮಾಡಿ ಅಂಗಿರಸದವರಿಗೆ . . . ನೇಮಕಾ ಮಾಡಿ (ಮೈಆ. ೧೪೨೯, ೯೪-೦೩ ; 1813). **ಮೊಕರಾರು :** ೧. ಇಲಾಖೆಯ ಸಿಬ್ಬಂದಿಗಳಲ್ಲಿ ಕಾಲಾನುಗುಣವಾಗಿಯೂ ಆಯಾ ಅಧಿಕಾರಿಗಳ ಮರ್ಯಾದೆಗನುಸಾರವಾಗಿಯೂ ಅವರವರಿಗೆ ತಲಾಬು ಮೊಕರಾರಾಗುತ್ತಿತ್ತು (ಮುಶಾಪಂ. II. ೩೩). **ಮೊಕರೂರು :** ೨. ನೇಮಕ ಮಾಡುವಿಕೆ ; ನಿಯೋಜಿತಗೊಳಿಸುವುದು ; ನಿಯೋಜನೆ : ಹೈದರಸಾಬರು ದೈವಾಧೀನವಾದ್ದರಿಂದಾ ಆ ರಿಸಾಲೆ ಖಿಜಮತ್ತು ಶಾಬಾಸಾಬರು ಹೆಸ್ರಿಗೆ ಮೊಕರೂರಾಗಿಯಿರುತ್ತಾ ಇದ್ದರು (ಹೈದರ. ೨೩) ; ಭದ್ರಪ್ಪನಾಯಕನ ಮಗನಿಗೆ ರಾಜ್ಯಾಧಿಕಾರಕ್ಕೆ ಮೊಕರೂರು ಮಾಡಬೇಕುಯೆಂಬುದಾಗಿ (ಕೆಳದಿ. ೩೨-೯). [ ← ಅರ. ಹಿಂ. ಮುಕರ್‌ರರ್ : ಮರಾ. ಮುಕರರ್, ಮುಕರ್‌ರ್, ಮುಕ್ರರ್]

**ಮೊಕರವಲೆ** (ನಾ). ಒಂದು ಬಗೆಯ ಬಲೆ : ಕರಿಯ ಜಮಿವಲೆ ಮುಸುಕುವಲೆ ಬಿತ್ತರದ ನೇಣ್ವಲೆ ಮೊಕರವಲೆ ಬೇಡರ ಸಿರದೊಳೊಪ್ಪಿದುದು (ಸಾಳ್ವಭಾ. ೩-೧೯). [ ಮೊಕರ, + ಬಲೆ$_1$ ]

**ಮೊಕರಾರು** ‘ ಮೊಕರರು ’ ನೋ.

**ಮೊಕರೂರಾತಿ** (ನಾ). ನೇಮಕಾತಿ : ಗ್ರಾಮಮುನಸಿಫರ ಮೊಕರೂರಾತಿಗೆ ಕೊಡುವ ಹುಕುಮುಗಳೆಲ್ಲವೂ ಸರ್ಕಾರದವರ ಪುನರ್ವಿಮರ್ಶೆಗೆ ಒಳಪಟ್ಟಿರತಕ್ಕದ್ದು (ಗ್ರಾಪಾಕ. ೦೦). ‘ ಮಂಜೂರಾತಿ ’ ಹೋ. [ < ಮೊಕರೂರು ]

**ಮೊಕರೂರು** ‘ ಮೊಕರರು ’ ನೋ.

**ಮೊಕವಾಡ** ‘ ಮೊಗವಡ ’ ನೋ.

**ಮೊಕಸ್ತ** (ನಾ). ಮುಖ್ಯಸ್ಥ : ಯಿ ನಾಡುತಕ್ಕ ಮೊಕಸ್ತರೂ ಆದಿಯಾಗಿ (ಎಕ. IX, ಕೊಡಗು. ೨೯-೩ ; 1867). [ < ಮುಖ್ಯಸ್ಥ ]

**ಮೊಕಾಂ** ‘ ಮುಕ್ಕಾಂ ’ ನೋ.

**ಮೊಕಾಬಲಾ** ‘ ಮೊಕಾಬಿಲೆ ’ ನೋ.

**ಮೊಕಾಬಿಲೆ**, ಮಕಾಬಲಿ, ಮುಖಬಿಲೆ, ಮುಖಾಬಿಲೆ, ಮೊಕಾಬಲಾ, ಮೊಖಾಬಿಲೆ (ನಾ). ೧. ಎದುರು ; ಅಭಿಮುಖ ; ಸಮ್ಮುಖ : ಯಾವತ್ತು ಗೈರವಾಜಬೀ ಲೆಕ್ಕಾಚಾರ ಸಾಕ್ಷಿ ರುಜು ಮೊಕಾಬಿಲೆಯಿಂದ ಕೂಲಂಕಷ ದರಿಯಾಫ್ತು ಮಾಡಿ (ಮುಶಾಪಂ. II. ೩೯). **ಮಕಾಬಲಿ :** ೨. ಎದುರೆದುರು ಮಾಡುವ ಕಲಹ : ಪ್ರತ್ಯಕ್ಷವಾಗಿ ಮಾಡುವ ಕಾಳಗ : ನಾವು ಸುಮ್ಮನ ಕೂತರೂ ಅವ ನಮಗ ಕಾಡತಾನ ಅಂದ ಮ್ಯಾಲ ಮಕಾಬಲಿ ಆಗೇಹೋಗಲಿ ನೋಡೋಣಾ (ಗಂಮಾಖು. ೨೨೭). **ಮುಖಬಿಲೆ :** ೩. ಭೇಟಿ ; ಸಂದರ್ಶನ : ತಕ್ಷಣವೇ ನನ್ನನ್ನು ಸಿನಿಮಾ ಮಾಲೀಕರ ಹತ್ತಿರ ಕರೆದುಕೊಂಡುಹೋಗಿ ಮುಖಬಿಲೆ ಮಾಡಿಸಿ ಮಧ್ಯಾಹ್ನದ ಮೋಟಾರಿಗೇ ಮೇಷ್ಟರು ಹಿಂತಿರುಗಿದರು (ದರ್ಪಣಶ್ರೀ. ೪೦). **ಮುಖಾಬಿಲೆ :** ೩. ‘ ಪಿಂಡ ’ ಕಾಗೆಗೆ ಬಿತ್ತು, ಎಂತಾದರೆ ಅವರವರ ಮುಖಾಬಿಲೆ ಮುಂದಿನ ಶ್ರಾದ್ಧಕ್ಕೇ ಸರಿ (ಹಹಸ. ೨). ೪. ಸಮ್ಮುಖದಲ್ಲಿ ಆಗುವ ತೀರ್ಮಾನ : ಈಗ ನಮ್ಮ ಲೆಕ್ಕದ ಮುಖಾಬಿಲೆಯಾಗಲಿ ! (ಬಾಲಕೃ. II, ೭೪೯). **ಮೊಕಾಬಲಾ :** ೩. ನಿಮಗೆ ಅವಳಿಗೆ ಮೊಕಾಬಲಾ ಮಾಡಿಸುವೆನು (ರಕ್ತಧ್ವ. ೨೦೪). **ಮೊಖಾಬಿಲೆ :** ೧. ಮೊಖಾಬಿಲೆಯಾಗಿ ಶಾನುಭೋಗರುಗಳು ಆ ರಸೀತಿಗಳಿಗೆ ಪಟೇಲನ ಜೊತೆಯಲ್ಲಿದ್ದು ರುಜುಮಾಡಬೇಕು (ಗ್ರಾಪಾಕ. ೬೮). ೩. ನೀವು ಒಪ್ಪಿದರೆ ಆತನನ್ನು ನಿಮಗೆ ಮೊಖಾಬಿಲೆ ಮಾಡಿಸುತ್ತೇನೆ (ರಘುನಾಥ. ೧೩೭).

[ ← ಅರ. ಮುಕಾಬಲಹ್ ; ಹಿಂ. ಮುಕಾಬಲಾ : ಮರಾ. ಮುಕಾಬಲಾ, ಮುಕಾಬಿಲಾ, ಮೊಕಾಬಲಾ ]

**ಮೊಕ್ಕ**, ಮೊಕ್ಕೆ, ಮೋಕ$_1$ (ನಾ). ಒಂದು ಬಗೆಯ ಮರ : “ ಮೋಕ್ಷಃ– ಮೊಕ್ಕ ” (ಚಿಕಧಿ. ೧೩೦) ; ಮೊಕ್ಕದ ಮರ, ಚಿತ್ರಮೂಲದ ಕಣೆಕೆ, ಕಳ್ಳಿ – ಇವಂ ಸಮೂಲಗಳಂ ತಂದು ಸರಿಗೂಡಿ ಸುಟ್ಟು (ವಿಶ್ವಕ. ೪). **ಮೊಕ್ಕೆ :** “ ಗೋಲೀಢಃ . . . ಮೋಕ್ಷಃ ಮುಷ್ಕಕಃ – ೬ ಮೊಕ್ಕೇ ಮರದ ಹೆಸರು ” (ಸಿದ್ಧಾಂತ. ೧೨೦). **ಮೋಕ$_1$ :** ಮೋಕ – ಮಧ್ಯಮ ಆಕಾರದ್ದು, ಕಟ್ಟಿಗೆ ಬಿರುಸು (ಕಕಾಗ. ೪೭). [ದೇ.॥ ತೆಲು. ಮೊಕ್ಕ, ಮುಕ್ಕಿಡಿ ; ಕುಇ. ಮೊಕೊ. / ಸಂ. ಮೋಕ್ಷ ]

**ಮೊಕ್ಕನೆ** (ಅ). ಒಂದು ಅನುಕರಣಾವ್ಯಯ : ತಲೆಯಂ ಮೊಕ್ಕನೆ ಪೊಗೆಚ್ಚಂ (ವರ್ಧಮಾ. ೬೨-೦೩) ; ಸಿಡಿದು ಸಾಬಿ[3] ತಲೆಗಳ್ ಬಟ್ಟವು ಸಂಧಿಸಂಧಿಗಳ್ ಮೊಕ್ಕನೆ ಕೀಳದವು (ವರ್ಧಮಾ. ೪-೬೨) ; ಮೇಘರಥನೆಯ್ದೆ ವಂದು ಮೊಕ್ಕನೆವೋಗಿ ನೆಲಕ್ಕೆ ಬಿಟ್ಟ ಬಿನಿರ ಪೊದಳುವಂ . . . ಕಂಡು (ಶಾಂತಿ. ೧೦-೩೭ ವ). [ ಮೊಕ್ಕು$_2$ + – ಅನೆ$_1$ ]

**ಮೊಕ್ಕಳ**, ಮೊಗ್ಗಳ (ನಾ). ೧. ಹೆಚ್ಚಳ ; ಆಧಿಕ್ಯ; ಅತಿಶಯ : ಮೇಗಾಳಿಕಿಗ್ಗಾಳಿಯ ಮೊಕ್ಕಳದ ತಿಳಿದು (ಸೌಂದರ. ೧೮-೪೩) ; ತನ್ನಂಗಿಯನುರು ಮುದದಿಂ ಕಂಚುಕಿಯೊರ್ವಳ್ ತನ್ನ ಪರದಟಿನ ಪೆಂಪಂ ಸಿರಿಯುಗ್ಗಳವಂ ಸೊಬಗಿನ ಮೊಕ್ಕಳವಂ ವಿದಿತಾನ್ವಯಶುದ್ಧದ ಹೆಚ್ಚುಗೆಯಂ . . . ತೋರುತ್ತುಂ ಪೇಳುತ್ತುಂ ಮೆಲ್ಲನೆ ನಡೆಸಿದಳು (ಜಯನೃ. ೩-೪೭). ೨. ಮೊತ್ತ ; ಗುಂಪು ; ಸಮೂಹ : “ಬಂಬಲ್ . . . ಮೊಕ್ಕಳಂ . . . ಗೊಂದಣಿ (ಉಂದಲ್) _ ಈ ೪೦ ಸಮೂಹಂ ” (ಕಕಶಾ. ೩೭-೨೨೨); ಎಲ್ಲಾ ಕಳೆಗಳ ಬರ್ದಿನ ಮೊಕ್ಕಳದಿಂ ನುಡಿವೆಣ್ಣಂ ಗೆಲ್ವಳಂ . . . ಅಳವೇ ಬಣ್ಣಿಪೊಡೆ (ಉದ್ಭಟ. ೨-೪೮) ; ತಿಳಿಗೊಳನುಂಟು ತಾವರೆಯುಂಟು . . . ಅಂಚೆ ಕೊಂಚೆಗಳ್ಕೊಳರ್ವಕ್ಕಿಗಳು ಮೊಕ್ಕಳವು (ನಾಗಕು. ೨೦-೩೪) ; ಅರಮಕ್ಕಳ ಮೊಕ್ಕಳಕಿಂತು ಪೆರ್ಚಳಂ (ಕಳಾ. ೩-೭೦). ೩. ಬಾಧೆ ; ತೊಂದರೆ ; ಪೀಡೆ. **ಮೊಗ್ಗಳ :** ೪. ಶೌರ್ಯ ; ಪರಾಕ್ರಮ : ಹೆಗ್ಗಡೆ ಬಲ್ಲಾಳರ್ಕಳ ಮೊಗ್ಗಳವಂ ಮುರಿದುಕೊಂಡು ತದ್ಭೂತಳವಂ ಬಗ್ಗದ ಮನ್ನೆಯರದಟಂ ಮುಗ್ಗಿಸಿ ತತ್ತದ್ವರಿತ್ರಿಯಂ ವಶಗೈದಂ (ಕಳಸ. ೩-೬೨).

**ಮೊಕ್ಕಳಕೊಳಗು ಮಾಡು** = ತೊಂದರೆಗೆ ಗುರಿಪಡಿಸು ; ಹಿಂಸೆಗೆ ಈಡು ಮಾಡು : ಸೊಕ್ಕಿನ ನಡೆಮತ್ತ ಸೊಬಗಿಯರ್ . . . ಮದನನ ಮೊಕ್ಕಳಕೊಳಗು ಮಾಡಿದರು (ಪೋಹಕ. ೨೪-೦೩). **ಮೊಕ್ಕಳಕ್ಕಿಕ್ಕು** = ಮೊಕ್ಕಳಕೊಳಗು ಮಾಡು: ಎಮ್ಮಾ ಸಂಕೇತವೃತ್ತಾಂತವಂ ದೇವಿ ತಿಳಿದು

ಚಂದ್ರಲೇಖೆಯುಂ ಮೊಕ್ಕಳಕ್ಕಿಕ್ಕಿದಳ್ (ಚಿತ್ರಗೋ. ೯೭). **ಮೊಕ್ಕಳವನಿಕ್ಕು** = ಮೊಕ್ಕಳಕೊಳಗುಮಾಡು : ವಿಳಸದಧ್ವರದಕ್ಷಿಣೆಗೆ ಮೊ[ಶಾಕಾಂ. ಹೆ] ಕ್ಕಳವನಿಕ್ಕಿದನೊಬ್ಬ (ಕೊರಡಾ. ೩-೨-೨೮). [ದೇ.॥ ತೆಲು. ಮೊಕ್ಕರ, ಮೊಕ್ಕಲ]

**ಮೊಕ್ಕಳಂ** (ಅ). ಅತಿಶಯವಾಗಿ ; ವಿಶೇಷವಾಗಿ ; ಚೆನ್ನಾಗಿ ; ಕೊಬ್ಬೆ ಮೊಕ್ಕಳಂ ನೆಜೆದುದಜಿಂದೆ . . . ಪ್ರೋಲ್ಲುವ ಮಹಾನದಿ ರುಂದ್ರ ಫಣೀಂದ್ರರಾಜನಂ (ಕಾವ್ಯಸಾ. ೭೯೭ ಕೂದ್ರಕ) ; ಮೊಕ್ಕಳಂ ಕವಿಮುಘುಗ್ರ ಲಯಾಗ್ನಿಗಳಂತೆ ಬೆಟ್ಟುಗಳ್ (ಶಂಪರಾ. ೨-೭೭) : ಮಜಿಸಿಂಗನ ಬಾಲಕ್ಕೆ ಗಂಟಿಕ್ಕುವ, ಗಂಟಿಕ್ಕಿ ನಗುವ, ನಕ್ಕು ಮೊಕ್ಕಳಂ ನಲಿವ . . . ಚಿಣ್ಣರಾಟಂ ಮಾತೆಸೀತೆಯ ತೆರೆಮಸಕದ ಸಂತಸಗಡಲನಿರ್ಮಡಿಯುಬ್ಬಿಸಿದತ್ತು (ರಾಮಾಕ. ೦೫೦-೩). [< ಮೊಕ್ಕಳ]

**ಮೊಕ್ಕಾಂ** ' ಮುಕ್ಕಾಂ ' ನೋ.

**ಮೊಕ್ಕಾಮ** ' ಮುಕ್ಕಾಂ ' ನೋ.

**ಮೊಕ್ಕಾಮು** ' ಮುಕ್ಕಾಂ ' ನೋ.

**ಮೊಕ್ಕು₁** ' ಮೊಟ್ಟು₁ ' ನೋ.

**ಮೊಕ್ಕು₂** (ನಾ). ಒಂದು ಅನುಕರಣ ಪದ : 'ಮೊಕ್ಕನೆ' ಪರಾ.

**ಮೊಕ್ಕುಮೊಕ್ಕು** (ದ್ವಿರುಕ್ತಿ) : ನಿಶಾತಶರಾಳಿಗಳೆಯ್ದೆ ಚಕ್ಕುಚಕ್ಕನೆ ಕೊಳೆ ಮೊಕ್ಕುಮೊಕ್ಕನೆ ಶಿರಂಗಳುರುಳ್ವವು ವೈರಿಭೂಪರಾ (ಶಂಕರಾ. ೦೨-೦೦೯).

**ಮೊಕ್ಕೆ** ' ಮೊಕ್ಕ ' ನೋ.

**ಮೊಕ್ತ** ' ಮೊಖ್ತಾ ' ನೋ.

**ಮೊಕ್ತಾ** ' ಮೊಖ್ತಾ ' ನೋ.

**ಮೊಕ್ತಿಯಾರಿ** (ನಾ). ಮತ್ತೊಬ್ಬರು ಕೊಟ್ಟ ಸಂಪೂರ್ಣಅಧಿಕಾರ ; ಪ್ರತಿನಿಧಿತ್ವ : ಪ್ರಾತಿನಿಧ್ಯ : (?). [← ಪಾರ. ಹಿಂ. ಮುಖತಾರೀ, ಮುಖ್ತಾರೀ ; ಮರಾ. ಮುಖತ್ಯಾರೀ, ಮುಖ್ತಾರೀ]

**ಮೊಕ್ತೇಸರ್** ' ಮೊಖ್ತೇಸರ್ ' ನೋ.

**ಮೊಕ್ತೇಸರಿಕೆ** (ನಾ). ಮುಖ್ಯಾಧಿಕಾರಿಯ ಸ್ಥಾನ, – ಪದವಿ : ಹತ್ತು ವರುಷಗಳ ತನಕ ಈ ಮೊಕ್ತೇಸರಿಕೆಗೆ ನನ್ನ ಆಯ್ಕೆಯು ವರುಷಂಪ್ರತಿ ನೆರವೇರುತ್ತ ಬಂದಿತ್ತು (ಬಂಜನ್. ೦೯೫).

[ಮೊಕ್ತೇಸರ್ (< ಮೊಖ್ತೇಸರ್) + – ಇಕೆ]

**ಮೊಖದ್ದಮೆ** ' ಮೊಕದ್ದಮೆ ' ನೋ.

**ಮೊಖಮಂಟಪ** (ನಾ). ದೇವಾಲಯಗಳಲ್ಲಿ ನವರಂಗದ ಮುಂಭಾಗದಲ್ಲಿ ಇರುವ ಮಂಟಪ : ದೇವರ ಮೊಖಮಂಟಪ ತಗ್ಗಿದಲ್ಲಿ . . . ದುಗಂಮನು ಉನ್ನತವಾಗಿ ಕಟಿಸ್ತ ಸಿವೆ (ಪ್ಯಾಲಿ. ೦೯೩೪, ೫೪-೨; 1753). ' ಮೊಗಮಂಟಪ ' ಪರಾ.

[P ಇದು 'ಮುಖಮಂಟಪ' ಎಂಬುದರ ಅಪಲಿಖಿತವಿರಬಹುದು]

**ಮೊಖರಿ** (ಗು). ೧. ಅನುರಣನಗೊಳ್ಳುವ ; ಪ್ರತಿಧ್ವನಿಸುವ. (ನಾ). ೨. (ದೇವಾಲಯದಲ್ಲಿ) ಅನುರಣನಗೊಳ್ಳುವಂತೆ ಹಾಡನ್ನು ಹಾಡುವ ವ್ಯಕ್ತಿ : ಹಾಡುವ ಮೊಖರಿಗಂ ಬೀಹಳಿಯುರ್ವ್ವರ್ಗಂ ಎರೆಮತ್ತ ೧೬ (ಸೌಇಇ. XX. ೩೦೦-೭ : 12ನೆಯ ಶತ) ; ಆ ನಾಯಕಂಗೆ ಗ ೬ ರಂಗ ಭೋಗದ ನಾಗವಾಸದ ಮೊಖರಿಗೆ ಗ ೩೦ (ಎಕ. III, ತಿರುಮ. ೧೦೦-೮೭ ; 1276). [< ಸಂ. ಮುಖರ]

**ಮೊಖರಿಗಾಳೆ** (ನಾ). (ಯಾವುದಾದರೂ ಉತ್ಸವದಲ್ಲಿ) ಅನುರಣನಗೊಳ್ಳುವಂತೆ ಊದುವ ಕಹಳೆ, – ಕಾಳೆ : ಮೊಖರಿಗಾಳೆಯ ವಾಸಿಕಾಜಿ ಬಸವ ಮಾದಳೆಗೆಲ್ಲ ಕಸಪಸಿದ ಅ[ವು]ಜಗ ಬೀಚ ಇತಮಲ್ಲ ಇಂತಿವರು ಬಿಟ್ಟ (ಸೌಇಇ. XVIII. ೨೦೭-೫ ; 1227).

[ಮೊಖರಿ + ಕಾಳೆ (< ಕಹಳೆ)]

**ಮೊಖಾಂತರ** (ಅ). ಮುಖಾಂತರ ; ಮೂಲಕ: ಬಾಲೂರ ವೀರೈಯಗೌಡರ ಹೊಕಣದ ದೇವ ಪೆ × × × ಮೊಖಾಂತರ ಆತನ ಬವಸೆ ಸನ್ನಿಧಾನದಲು ಕರಿಸಿ ಕೇಳಿದಲ್ಲಿ (ಎಕ. VIII, ಸೊರಬ. ೨೭೭-೦೭ ; 1620). [< ಮುಖಾಂತರ]

**ಮೊಖಾಬಿಲೆ** ' ಮೊಕಾಬಿಲೆ ' ನೋ.

**ಮೊಖಾಮು** ' ಮುಕ್ಕಾಂ ' ನೋ.

**ಮೊಖಾಸ**, ಮುಖಾಸಿ, **ಮುಖಾಸೆ**, ಮೊಖಾಸಿ (ನಾ). ೧. ತಾನು ಮಾಡಿದ ಸೇವೆಗೆ ಪ್ರತಿಯಾಗಿ ರಾಜನಿಂದ ಪಡೆದ ಭೂಮಿ, ಗ್ರಾಮ ಇತ್ಯಾದಿ ; ಉಂಬಳಿ : ಕೊಡುಗೆ : ಚಿಂತಗೋಪಿನಾಯಕನು ಹಿರೆ ಮುರಾಳದ ಮೊಖಾಸವನ್ನು ಹೊಂದಿದ್ದನು (ಪ್ಯಾಲಿ. ೦೯೩೦, ೨೯ ; ?). ೨. ಚೌಥಾಯಿಯಲ್ಲಿ ರಾಜನ ಪಾಲನ್ನು ಕೊಟ್ಟ ಮೇಲೆ ಉಳಿದ ಹಣ. **ಮುಖಾಸಿ** : ೧. ಪಟಣದ ಹೋಬಳೀಸೀಮೆ ವಿಚಾರದ ಚಾವಡಿವಳಿತದ ತುರುವೆಕೆರೆಸ್ಥಳದ ಮುಖಾಸಿ ಚಿಕ್ಕ ಡೊಂಕಿ ಹಳಿಗ್ರಾಮಕೆರೆ ೧ ಅಣೆ ೧ (ಎಕ. XIV. ನಂಜನ. ೨೯೮-೦೦ : 1761) ; ತಳಕಾಡು ನಂಜರಾಜಯ್ಯನು ಪೂರ್ವದಲ್ಲಿ ವಿಠಣ್ಣನಿಗೆ ಮುಖಾಸಿಯಾಗಿ ಕೊಟ್ಟಿದ್ದ ಮದ್ದೂರು (ಮಹಾಶಂ. I. ೫೦). **ಮುಖಾಸೆ** : ೧. ಶ್ರೀವೀರಪ್ರತಾಪ ಕೃಷ್ಣರಾಯ ಮಹಾರಾಯರು ನಮಗೆ ಮುಖಾಸೆ ಕುದುರೆಗೆ ಪಾಲಿಸಿದ ಯಳಪೆಯ ಗ್ರಾಮದಲು ಬಂದಂಥಾ ಬ್ರಾ(ಂ)ಹ್ಮರಿಗೆ ದಿನವೊಂದಕ್ಕಂ ಹನ್ನೆರಡು[ಮಂ]ದಿ ಬ್ರಾ(ಂ)ಹ್ಮರಿಗೆ ಅ(ಂ)ನ್ನದಾನ ತಿಂಗಳುವೊಂದಕ್ಕೆ ಘಟ್ಟಿ ವರಹ ಗ ೩ ರ ಲೆಖದಲು . . . ಧಾರೆಯನೆರದು ಕೊಟ್ಟೆಉ (ಸೌಇಇ. IX-ii. ೫೨೯-೭ ; 1530). **ಮೊಖಾಸಿ** : ೧. ಭದ್ರಾಪುರದ ಹಳೆಮೊಖಾಸಿಯು ಆ ಗ್ರಾಮದ ವಕ್ಕಲುಮಕ್ಕಳ ಕೈಯ ದಂಡವ ಕೊಂಡ ಸಂಮ[ಂ]ಧ ಯಲ್ಲಾ ಬಿಟ್ಟು ಹೋಗಿ ಊರು ಹಳಾಗಿಯಿರಲಾಗಿ (ಸೌಇಇ. XVIII. ೯೩೯-೯ ; 1643). ೩. ಉಂಬಳಿಯನ್ನು ಪಡೆದವನು ; ಇನಾಂದಾರ : ಆ ಗ್ರಾಮದ ಮೊಖಾಸಿಗಳು (ಇಬ. ೦೯೯೭, ರಾಣಿಬೆನ್ನೂರ್. ೨೯೮-೦ ; ?) : ಕೂಸನೂರ ಮೊಖಾಸಿ ಕೊಂಡಪ್ಪ (ಇಬ. ೦೯೯೭. ರಾಣಿಬೆನ್ನೂರ್. ೨೯೮-೩ ; ?).

[← ಅರ. ಮುಕಾಸಾ ; ಮರಾ. ಮೊಕಾಸ್, ಮೊಕಾಸಾ, ಮೊಕಾಶೀ, ಮೊಕಾಸೀ]

**ಮೊಖಾಸಿ** ' ಮೊಖಾಸ ' ನೋ.

**ಮೊಖಾಳ** ' ಮಕಾಳ ' ನೋ.

**ಮೊಖೂಫು** ' ಮೋಕೂಫ್ ' ನೋ.

**ಮೊಖ್ತ** ' ಮೊಖ್ತಾ ' ನೋ.

**ಮೊಖ್ತಾ**, ಮೊಕತ, ಮೊಕ್ತ, ಮೊಕ್ತಾ, ಮೊಖ್ತ (ಅ). ಎದುರಿನಲ್ಲಿ ; ಸನ್ನಿಧಿಯಲ್ಲಿ ; ಸಮಕ್ಷಮವಾಗಿ : ದರಶನಾ ತೆಗೆದುಕೊಂಡು ಖಾವಂದರು ಆಜ್ಞೆ ಮಾಡಿದ್ದು ಮೊಖ್ತಾ ವಿನಂತಿ ಮಾಡುತ್ತ (ಮುದಸ. ೩-೦); ಪಂಚಾಯಿತರ ಮೊಖ್ತಾ ಮಹಜರು ಮಾಡಿಸಿ (ಗ್ರಾಮಾಕ. ೭೭) ; ನಮ್ಮ ಯಜಮಾನರೂ ದಿವಾನ್ ಸಾಹೇಬರನ್ನು ಮೊಖ್ತಾ ಕಂಡು ಹೇಳಿಕೊಂಡರು (ಇಬದು. ೮೧). **ಮೊಕತ** : ಮೊಕತ ಶಕ್ತಿಯ ಪರಿಯ ತೋರುವುದೀಗ (ತಪರಾ. ೦೨-೨೦). **ಮೊಕ್ತ** : ನಮ್ಮ ಮೊಕ್ತ ನೀನು ಬನ್ದು ನಮ್ಮ ಸ್ತಳದಲ್ಲಿ ಅಜಿಕೆಮಾಡಿಕೊಂಡು (ಎಕ. XI. ಹಿರಿಯೂ. ೩೭-೦೯; 1533 ?). **ಮೊಕ್ತಾ** : ಅವರ ತಂದೆ ಎಷ್ಟೋ ಸಲ ಲಿಖಿತ ಮೂಲಕವಾಗಿಯೂ ಮತ್ತು ಮೊಕ್ತಾ ಮನೆಗೆ ವಾಪಸು ಕರಕೊಂಡು ಹೋಗಬೇಕೆಂದು ಪ್ರಾರ್ಥನೆ ಮಾಡಿದಾಗ್ಯೂ ನೀವು ಎಲ್ಲವನ್ನೂ ನಿರಾಕರಿಸಿದ್ದೂ ಸರಿಯಷ್ಟೆ ? (ಬಿಕಾಂಗಿ. ೦೯೭) ; ತಾನೇ ಮೊಕ್ತಾ ಕಂಡು ಮಾತನಾಡಿಯೂ ಹೆಣ್ಣು ನಿಶ್ಚಯಪಡಿಸಿಕೊಂಡು . . . ಕುರುಡುಮಗನಿಗೆ ಮದುವೆಮಾಡಿದನು (ಕಥಾಮಂ. IV. ೨೯). **ಮೊಖ್ತ** : ಏನಿದ್ದರೂ ಆಂಗ್ಲೇಯದಲ್ಲಿ ಮೊಖ್ತ ಹೇಳಬಹುದು (ಭೂರಾಜ. ೦೦೭).

[< ಸಂ. ಮುಖತಸ್./ತುಳು. ಮೊಕತಾ]

**ಮೊಖ್ತಿಯಾರ್,** ಮುಖ್ತ್ಯಾರ್, ಮೊಖ್ತ್ಯಾರ (ನಾ). (ನ್ಯಾಯ ಸಂಬಂಧವಾದ ವ್ಯವಹಾರಗಳಲ್ಲಿ) ಮತ್ತೊಬ್ಬನಿಗಾಗಿ ಕಾರ್ಯ ನಿರ್ವಹಿಸಲು ನೇಮಕನಾದ ಅಧಿಕಾರಿ ; ಪ್ರತಿನಿಧಿ : ದಂಡಾಜ್ಞೆ ಅವರ ಕೈಸೇರುವ ತನಕ ಭೇಟಿಯ ಪರವಾನಿಗೆ ಮೊಖ್ತಿಯಾರ್ ಸಂಪೂರ್ಣ ಜವಾಬ್ದಾರನೆಂದೂ ದೌವಾರಿಕ ಸ್ಪಷ್ಟಪಡಿಸಿದನು (ಭುವರು. ೦೩೭). **ಮುಖ್ತ್ಯಾರ್** : (Attorney. ಕಾಂಪಿ. ೭). **ಮೊಖ್ತ್ಯಾರ** : ಮೊಗಲ ಚಕ್ರವರ್ತಿಗಳು . . . ಆ ಬಗ್ಗೆ ಮೊಖ್ತ್ಯಾರರನ್ನು ನಿಯಮಿಸಿದ್ದರು (ಹಿಂದುಇ. ೨೮೦). [← ಅರ. ಮುಖ್ತಾರ್; ಹಿಂ. ಮುಖ್ತಾರ್, ಮುಖ್ತಾರ್; ಮರಾ. ಮುಖತ್ಯಾರ್, ಮುಖ್ತ್ಯಾರ್. ಮುಖ್ತಾರ್]

**ಮೊಖ್ತಿಯಾರ್‌ನಾಮು,** ಮುಖ್ತ್ಯಾರನಾಮೆ, ಮೊಖ್ತ್ಯಾರ್‌ನಾಮೆ (ನಾ). ಮತ್ತೊಬ್ಬನಿಗಾಗಿ ಕೆಲಸ ನಿರ್ವಹಿಸಲು ಕೊಟ್ಟ ಅಧಿಕಾರ; ವಕಾಲತ್ತು: (ಮೈಗೆತ. IV, ೭೭೯). **ಮುಖ್ತ್ಯಾರನಾಮೆ** : (power of attorney. ಕಾಂಪಿ. ೭). **ಮೊಖ್ತ್ಯಾರ್‌ನಾಮೆ:** (Letter of administra tion. ಕಾಂಪಿ. ೩). [←ಅರ. ಪಾರ. ಮುಖತಾರ್‌ನಾಮಹ್; ಹಿಂ. ಮುಖತಾರ್‌ನಾಮಾ ; ಮರಾ. ಮುಖತ್ಯಾರ್‌ನಾಮಾ]

**ಮೊಖ್ತೇಸರ್,** ಮುಕ್ತೇಸರ, ಮೊಕ್ತೇಸರ್, ಮೊಖ್ತೇಸರ (ನಾ). ಮುಖ್ಯಾಧಿಕಾರಿ ; ಪ್ರಧಾನ ಅಧಿಕಾರಿ : ವಿದ್ಯಾಭ್ಯಾಸದ ಇಲಾಖೆಯ ಮೊಖ್ತೇಸರ್ ಅಧಿಕಾರಿಗಳಾಗಿದ್ದ . . . ಎಂ. ಶಾಮರಾವ್ ಎಂ. ಎ. ಯವರಿಗೆ ನನ್ನ ಕೃತಜ್ಞತೆಯನ್ನು ಇಲ್ಲಿ ನಮೂದಿಸದೆ ಬಿಟ್ಟಿಲ್ಲಿ (ಚತ್ರಶಾ. ೬ ೨೯೦೪). **ಮುಕ್ತೇಸರ** : ಆಡಳಿತೆಯನ್ನು ಸರ್ಕಾರ ವಹಿಸಿಕೊಂಡು ೧೪೩೭ರ ವರೆಗೆ ಇವರನ್ನೇ ಆಡಳಿತೆ ಮುಕ್ತೇಸರರನ್ನಾಗಿ (Trustee) ಮಾಡಿತ್ತು (ಕುಳುವಾ. ೦೦೫). **ಮೊಕ್ತೇಸರ್**: 'ಮೊಕ್ತೇಸರಿಕೆ' ಪರಾ. **ಮೊಖ್ತೇಸರ**: ಗೂಳಿಯ ಸರ್ ಮೊಖ್ತೇಸರನ ಹಾಗೆ ಅರಮನೆಯಲ್ಲಿ ಎಲ್ಲಿ ಬೇಕಾದರೂ ಅಲೆದುಕೊಂಡಿರಲಿ ಎಂದು ಅರಸನು ಬಿಟ್ಟಿದ್ದನು (ದೇಶಾಂಕ. ೩೭); ಕೋರ್ಟಿ ನಲ್ಲಿ ಮೊಖ್ತೇಸರರಾಗಿದ್ದ ಸೋಮೇಶ್ವರಐಯ್ಯರ್ ಮಾಧವರಾಯ, ಜವರೇಗೌಡರು ಇಬ್ಬರಿಗೂ ಬೇಕಾದವನಾಗಿದ್ದ (ಗೃಹಂ. ೨೨೬).
[←ಅರ. ಪಾರ. ಹಿಂ. ಮೊಖ್ತೇಸರ್]

**ಮೊಖ್ತೇಸರ** ' ಮೊಖ್ತೇಸರ್ ' ನೋ.

**ಮೊಖ್ತ್ಯಾರ್‌ನಾಮೆ** ' ಮೊಖ್ತಿಯಾರ್‌ನಾಮು ' ನೋ.

**ಮೊಖ್ತ್ಯಾರ** ' ಮೊಖ್ತಿಯಾರ್ ' ನೋ.

**ಮೊಗ,** ಮಕ. ಮುಕ, ಮೊಕ (ನಾ). ೧. ಮುಖ ; ಮೋರೆ: "ವದನ ಮಾನನಮಾಸ್ಯಂ . . . ವಕ್ತ್ರಂ ಮೊಗಕ್ಕೆ ನಾಮಂ" (ವಸ್ತುಕೋ. ೬೯-೦೫); ಮೊಗಮೆಂಬಂಬುಜದಲರು . . . ಎನೆ ಸುಯುಕ್ತರೂಪಕಮಕ್ಕುಂ (ಕವಿರಾ. ೩-೨೫) : ಮೊಗಮಂ ತಾವರೆ ಕಣ್ಣನುತ್ಪಳದಳಂ ಧಮ್ಮಿಲ್ಲಮಂ ಸೋಗೆ . . . ಆರಾಧಿಸಿ ಪೋಲ್ತುವು (ಆದಿಪು. ೬-೮೫); ಯಮರಾಜನ ಕುಮಾರನ ಮೊಗವ ನೋಡಿದನು (ಕುಮಾರವ್ಯಾ. ೮-೦೭). ೨. ಬಾಯಿ: ಮೊಗದೊಳ್ ವಾಗ್ವಧು ಸಂತತಮಗಲದೆ ನಿಲೆ . . . ತಪಮುಜ್ಜುಗ ಮೆಂತುಟೋ ಮೇಘಚಂದ್ರಮುನಿಪುಂಗವರಾ (ಶಶಾಶ. ೧-೨೦) ; ತನ್ನ ಮೊಗ ದೊಳೊಂದಕ್ಕರಮಂ ಪೊಱಮಡಿಸಲಱಿಯದಱಿತಮನಱಿಯದರೊಳ್ ಮೆಱೆವ ಸಾಸಿಗಂಗಿದಿರುಂಟೇ (ಮಲ್ಲಿಪು. ೦-೩೩); ವಿಮಾನಂಗಳ ಪೇರಣೆ ಪೋಲ್ತುದು ತೆಱೆದ ಮೊಗದ ಪೇಟಿಗಳಿರವಂ (ಶಂತ್ರಪು. ೬-೩೯). ೩. ದಿಕ್ಕು; ದೆಸೆ : ಪಡುವಮೊಗವಾಗಿ ರೋಮಂ ಗಡ ತಲೆಯಂ ಪೆಕ್ಕಲೊಡನೆ ಓರಿಯುಂ ಪೋದಂತೊಡನಾರು ನುಡಿವರುಮಿಲ್ಲ (ಶಶಾಶ. ಅನುಬಂಧ. I, ೩೮೩-೯೭): ಶುಭದಿನದೊಳ್ಪೊಱಮಟ್ಟು ಪಡುವಮೊಗದೆ ಪಯಣಂಬೋಗಿ (ಶಂಹಂ. ೭-೬ ವ); ಎನಗಾವ ಮೊಗಮೊ! ಸುಡು ಸೀತೆಯಿಲ್ಲದೀ ನಾಡಂ! (ರಾಮಾಶ್ವ. ೯೭-೦೨). ೪. ಎದುರು ; ಸಮ್ಮುಖ : ಅವರಿರ್ವರುಮೆನ್ನ ಮೊಗದೊಳ್ ನಿಲ್ಲದೆ ಪೋದೊಡೆ (ಕಾವ್ಯಂಕ. ೦೮). ೫. (ಆಲಂ) (ಮುಖ ವನ್ನು ತೋರಿಸುವ) ಧೈರ್ಯ; ಆತ್ಮವಿಶ್ವಾಸ : ಅಂಧನರೇಂದ್ರನ ಮೊಗಮಂ ಗಾಂಧಾರಿಯ ಮೊಗಮನಾವ ಮೊಗದೊಳೆ ನೋಟ್ಪೆಂ (ಗದಾಯು. ೩-೭೦); ಆಗಳವರ್ ತಾಯ ಮೊಗಮನಾವ ಮೊಗದೊಳು ನೋಡುವಮೆಂದು ನಾಣ್ಚಿ (ಸುಕುಮಾ. ೨-೩೨ ವ). ೬. ಮೊದಲು; ಆರಂಭ: 'ಮೊಗಗಳ್ತಲೆ' ಪರಾ. ೭. ಮುಂಭಾಗ; ಅಗ್ರಭಾಗ: 'ಮೊಗ ಸೂನಿಗೆ' ಪರಾ. **ಮಕ** : ೧. ನಾಯಿಲ್ಲಿ ಮಾತಾಡಿಸ್ತೀನಿ. ಅಲ್ಲಿ ನೀವು ಒಬ್ಬರೊಬ್ಬರ ಮಕ ನೋಡ್ತಾ ನಿಂತೀರಲ್ಲ? (ಕಮ್ಮಟಿ. ೬); ನಿಮ್ಮ ಮಕಾ ನೋಡಿದರ ಏನೋ ಚಿಂತಿ ಹಿಡಿದ್ಹಂಗ ಕಾಣತೇತಿ (ಗ್ರಾಮಾಯ. ೦೩೦). **ಮುಕ** : ೧. ಖಕಾರಕ್ಕೆ ಕಕಾರಂ . . . ಮುಖಿ—ಮುಕ. ಶಂಖಿ—ಸಂಕ (ಶಮಂದ. ೨೫೫ ಸೂತ್ರ); ಯಾಕೆ ಗೌರಿ. ಬೆಳಗ್ನಿಂದ ಮುಕ ಗಡಿಗೆಗಾತ್ರ ಮಾಡ್ಕೊಂಡು ಕುಂತಿದೀಯ? (ಅಮ್ಮಾವ. ೯೦). ೬. 'ಕಾಮುರ್ಕ$_1$' ಪರಾ. **ಮೊಕ** : ೧. ನಾವು ಟೀಪೂಸುಲ್ತಾನರಿಂದ ಸ್ನೇಹದ ಮೊಕ ತಿರಗಿಸಿ ಇಂಗ್ರೇಜ್‌ಸರಕಾರದ ದೋಸ್ತಿ ಮಾಡಗಿ (ರಾತೇಂದ್ರ. ೪೯); ಮೊಕಾ ನೋಡಿ ಮಣೇ ಹಾಕುತ್ತಾರೆ (ಹುಟ್ಟಿಹ. ೦೯೫); ಕೆಂಪಿ ಬಂದು ಮೊಕ ನೋಡಿದಳು (ಮಲ್ಲಿ. ೦೨). ೩. ಅಲ್ಲಿ ಮೂಡಣ ಮೊಕಿಂದಿಳಿದು ಬರಲು (ಎಕ. XII. ಚಿಕ್ಕನಾ. ೯೨-೬೭; 1226).

**ಮಕಾಡಿ, ಮಕಾಡೆ, ಮಖಾಡೆ** = ಮುಖಕೆಳಗಾಗಿ ; ಬೋರಲಾಗಿ: ಮಗು ಮಕಾಡಿ ಬಿತ್ತು (ರೂಢಿ); ಮಂಚದ ಹಾಸಿಗೆ ಹಂಚ್ಯಾಡಿ ಹೋಗಿತ್ತು ಮೈಚಾಚಿ ಮಕಾಡೆ ಮಲಗ್ಯಾಳೆ (ಗೌರಕ. ೨); ಅವನ ಮುತ್ತಾತ . . . ಹೂತಿಟ್ಟ ಗೊಂಬೆಗಳು 'ಥಕ್ಕಥೈ' ಎಂದು ಕುಣಿಯುವುದನ್ನು ನೋಡಿ ಅವನ್ನು ಎಕ್ಕಡದ ಕಾಲಿನಲ್ಲಿ ಒದ್ದು ಮಕಾಡೆ ಮಾಡಿ ಬರೋನಂತೆ (ನವಿಲ್ಮರು. ೦೭೭); ಪಟ್ಟೆಮಂಚದ ಮೇಲೆ ಮಖಾಡೆ ಮಲಗ್ಯಾಳೆ (ಜಾನಪದ. ೦೭೫). **ಮಖಾಡೆಯಾಗಿ, ಮುಖಾಡಿಯಾಗಿ, ಮೊಕಾಡೆಯಾಗಿ, ಮೊಕ್ಕಡೆಯಾಗಿ** = ಮುಖಕೆಳಗಾಗಿ; ಬೋರಲಾಗಿ: ಮುದುಕನು ಪುನಃ . . . ಕಣ್ಣು ಮುಚ್ಚಿಕೊಂಡು ಮಖಾಡೆಯಾಗಿ ಮಲಗಿಬಿಟ್ಟನು (ಶ್ರೀಕಥ. ೦೦೨); ಈ ಶಂಕೆಯಿಂದ ಆರ್ಧಕುಳಿತಿದ್ದ ನಾನು ಹಾಗೇ ಮುಖಾಡಿಯಾಗಿ ಕೆಳಕ್ಕೆ ಮಲಗಿದೆ (ಕೆಂಪ. ೦೭೭); ಮೊಕಾಡೆಯಾಗಿ ಬಿದ್ದರೂ ಮಿಸೆ ಮಣ್ಣಾಗಲಿಲ್ಲ ಅಂದನಂತೆ (ಗಾದೆ); ಚಿಂತಾಕುಲನಾಗಿ ಮಂಚದ ಮೇಲೆ ಮೊಕ್ಕಡೆಯಾಗಿ ಮಲಗಲು (ಹುಟ್ಟಿಹ. ೭೩). **ಮೊಕ ಕಟ್ಟಿಕೊಳ್ಳು** = ವಿರೋಧ ಕಟ್ಟಿಕೊಳ್ಳು; ಮುಖ ಕೆಡಿಸಿಕೊಳ್ಳು: ಸನ್ನಂತವರ ಸಂಗಡ 'ಮೊಕ ಕಟ್ಟಿಕೊಂಡ' (ಬೆಳಮು. ೦೭೦). **ಮೊಗಮಾಡು** = ಎದುರಿಗೆ ನಿಲ್ಲುವಂತೆ ಮಾಡು; ಎದುರಾಗಿಸು: ತೆಗೆದು ಹಿಮ್ಮೆಟ್ಟುವ ಬಲವ ನಿಲಿಸಿಕೊಂಡು ಮೊಗಮಾಡಿ ಮತ್ತೆ ಮೋಹರವ ಧಿಗಿಲನೆ ಬಂದಪ್ಪ ಲಾವನು (ಕುಮಾರಾಮ. ೦೩-೯೨). [<ಸಂ. ಮುಖ./ ತಮಿ. ಮುಕ. ಮೊಕ್ಕು; ಮಲ. ಮುಕ; ತುಳು. ಮೊಗ. ಮುಗನು; ತೆಲು. ಮೊಗ್ಗು; ಕೋಲಾ. ನಾಯ್ಕಿ. ಮೊಕಮ್; ಪರ್ಜಿ. ಮೊಕೊಮ್]

**ಮೊಗಂ** 'ಮೋಘಮ್' ನೋ.

**ಮೊಗಂಗಿಡಿಸು,** ಮೊಗಗೆಡಿಸು (ಕ್ರಿ). ೧. (ಆಲಂ) ಅವಮಾನಮಾಡು: ಪಡಿದಟವಾಂತು ಬಂದ ಸಿಂಗಳರಾಯನಂ ಮೊಗಂಗಿಡಿಸಿ ಜಸಂ ಬೆಸಂಬಡೆಯೆ ಬಲ್ಲಿಗನೀ ಪರಿ ಚಲ್ಲವಾಡಿದಂ (ಚಕಂ. ೨-೬೮). **ಮೊಗಗೆಡಿಸು:** ೧. ಲೋಕದಲ್ಲಿ ಗುಣವಂತರ್ಗೆ ಯಾವನಾನೊರ್ವಂ ತಪ್ಪಿದೊಡೆ ಮೊಗಗೆಡಿಸು ವುದು ಧರ್ಮವೇ (ಸಮ್ಯಕ್ತ್ವ. ೦೦-೩೯). ೨. ದಿಕ್ಕೆಡುವಂತೆ ಮಾಡು; ದಿಗ್ಭ್ರಮೆಗೊಳಿಸು : ಕರಿತುರಗ ಕಾಲಾಳ ಮೋಹರ **ಮೊಗಗೆಡಿಸೆ** ಲೋಕವನು (ಕುಮಾರಾಮ. ೦೭-೦೦೬); ಸರಸಿಜೋದ್ಭವನ **ಮೊಗಗೆಡಿಸಿ** ಮಿಱಿದಳು (ಸರ್ವಜ್ಞ. ೦೭೫೮). [ಮೊಗ + ಕಿಡಿಸು (< ಕೆಡಿಸು$_1$)]

**ಮೊಗಂಗಿಡು** (ಕ್ರಿ). ೧. ಮುಖವು ವಿಕಾರವಾಗು; ಮುಖವು ಬಾಡು. ೨. (ಅಲಂ) ಆಹಾರ ಮುಂತಾದುವುಗಳ ಅತಿಸೇವನೆಯಿಂದ ಅಸಹ್ಯಪಡು : ಬಿರಿದೊಂದು ಮುಗುಳ ಕಂಪಿನೊಳ್ ಮೊಗಂಗಿಡುವುವು ತುಂಬಿಗಳ್ (ಕಂಕಥಾ. ೧-೫೬). [ಮೊಗ + ಕಿಡು (< ಕೆಡು$_1$)]

**ಮೊಗಂಗುಡು** ' ಮೊಗಂಗೊಡು ' ನೋ.

**ಮೊಗಂಗೊಡು**, ಮೊಗಂಗುಡು, ಮೊಗಗುಡು, ಮೊಗಗೊಡು (ಕ್ರಿ). ಮುಖವನ್ನು ತೋರಿಸು: ಎದುರಾಗು : ಹೊರೆಗಾಣದಿಹ ನೇಹಗಲ ಹದ ಮೊಗಂಗೊಡದ ಗಿರಿಸುತೆಯು ಬೇಗಡೆಗೆ ಸೊಪ್ಪುಳಾಗದ ತೆಱದೊಳಿರದೆ ಬಳಸಂದು (ಕಂಪು. ೩೮-೧). **ಮೊಗಂಗುಡು** : ನುಡಿಯದೆ ಕೆಮ್ಮನಿರ್ಪರ ಪಿದಾವುದು ಕಾರಣಮಾವುದೀ ಮೊಗಂಗುಡದಿರವು (ಕಂಕಥಾ. ೮-೭೬) : ಎಡೆಗುಡೆ ಸಾರ್ದು . . . ತಾಂ ಮೊಗಂಗುಡೆ ಪದವೆತ್ತು ಚುಂಬಿಸಿ (ಕಂದ್ರಪ. ೬-೮೨). **ಮೊಗಗುಡು** : ಬೊಮ್ಮರಸ :– (ಮೊಗಗುಡದೆ) ಇರಬೇಕು, ಇರಬೇಕು . . . ನನಗೆ ಸರಿಯಾಗಿ ನೆಸಪಿಲ್ಲ (ಕಟ್ಟಿ. ೧೫-೯). **ಮೊಗಗೊಡು** : ತವಕದನುವಱದಪ್ಪಿ ಮೊಗಗೊಡೆ ಪವಣಱದು ಚುಂಬಿಸುತೆ ಇಂದುಟಿ ಸುಧೆಯನೊಸೆದೀಂಟಿ (ಸಾಳ್ವಭಾ. ೪-೧೧). [ಮೊಗ + ಕೊಡು$_1$]

**ಮೊಗಂಚಿತ** (ನಾ). ಮುಖದಲ್ಲಿರುವುದು : ಪಂಚಲಪನಪಂಚಪಂಚಾಕ್ಷರಗಳೆ ಮೊಗಂಚಿತವಾಗಿರಲಪಕೆ ನಾಂ ಚೆಲ್ವ ಕಾಣ್ಕೆಯೆಂದುಂ ಚಮೂಪನ ಶಿರಕಾಂತಿಗಂ ಪಡಿಯಪ್ಪೆನೆಂದು (ಭೈರವೇ. ೧-೨೬೪). [< ಸಂ. ಮುಖಾಂಚಿತ]

**ಮೊಗಂದಿರಿ** (ಕ್ರಿ). ಮುಖವನ್ನು ತಿರುಗಿಸು ; ವಿಮುಖವಾಗು : ಉಱದರಸುಮಕ್ಕಳೆಲ್ಲಂ ಕರ್ಣ ಶಲ್ಯರ್ ಮೊಗಂದಿರಿದುದಂ ಕಂಡು ಮನಂಗೆಟ್ಟು (ಗಂಕಥಾ. ೩-೭೧ ವ) ; ಮಾರ್ಮಲೆದಿಸಲ್ಕೆ ಮೊಗಂದಿರಿದಂದವಂದಿರುಂ ತುಱುಗಿರೆ ಬೆನ್ನೊಳಂಬುಗಳುಮಂಬನೆ ಕಾಱತುಮೋಡೆ ಭೀತಿಯಿಂ (ಶೇಬಾಪು. ೧೨-೨೬೧). [ಮೊಗ + ತಿರಿ$_1$]

**ಮೊಗಂದಿರಿಪು**, ಮೊಗಂದಿರುಪು, ಮೊಗಂದಿರುವು, ಮೊಗಂದಿರುಹು, ಮೊಗದಿರುಹು (ಕ್ರಿ). ೧. = ಮೊಗಂದಿರಿ : ಅಂತತಿಬಪಿತಕಿಶೋರಕೇಸರಿಯಂತೆ ಪರಾಕ್ರಮೈಕಸಹಾಯನಾಗಿ ಮದಾಂಧಗಂಧಸಿಂಧುರಘಟೆಯುಂ ಮೃಗಣ ನಿಷಾದಿಯೋಧಾಗ್ರಗಣ್ಯರುಮಂ ಮೊಗಂದಿರದೆ ಮೊಗಂದಿರಿಸು [ಪು] ವ ಬೆಸದೊಳ್ ತೊಡರ್ದು (ಶಾಂತಿಪು. ೪-೨೧ ವ) ; ಬಲ್ಪುಗೆಯುಂ ಕಂಡಂತೆ ಮೊಗಂದಿರಿಪುತ್ತುಂ (ರಮಾಣವ್ಯ. ೪-೭೭). **ಮೊಗಂದಿರುಪು** : ೧. ಜವನಧಿಕಾರಂ ಮಿಱುವ ಜವಕೆ ಮೊಗಂದಿರುಪೆ ಕೊಲ್ವ ಮಿಱುವರಿ ನೆಲಕಿತ್ತವನೋದು ಗದೆಯೊಳೆಸಲ್ (ಜಗಪು. ೯-೫೫). **ಮೊಗಂದಿರುವು** : ೧. ಸಂಪಗೆಯು ಕಂಪಿಂಗೆ ಕಂಪಿಸಿ ಮಲ್ಲಟಿಗೊಂಡೊಲ್ಲದೆ ಮೊಗಂದಿರುವಿ ಪರಿತಂದು ಸಾದರದಿಂ ಪೂದೋಂಟದ ಪ್ರಸೂನಕುಲ ಮನಂಡಲೆದು ಬಂಡುಣ್ಬಲ್ಲಿ (ಗಿಂಶ. ೨-೭೧ ವ). **ಮೊಗಂದಿರುಹು** : ೨. ಮುಖವನ್ನು ಹೊರಳಿಸು: ಅಭಿಮುಖವಾಗು : ರಾಜಕಾರ್ಯಮಂ ಬೆಸವೇಳ್ವುದೆನುತೆ ಭೀಮನ ಕಡೆಗೆ ಮೊಗಂದಿರುಹಿದರಸಂಗೆ ನಳಿನಾಕ್ಷ ನಿಂತೆಂದನು (ಕೃಷಿಂಶ. ೨-೫೩). **ಮೊಗದಿರುಹು** : ೧. ಮಳೆಗೆ ಮೊಗದಿರುಹುವುದೆ ಬಡಬಾನಳನು (ಕುಮ್ಯಾದ್ರೌ. ೫-೫೬) ; ಹೊಂದಿಕೆಯು ಹೊಲಬಲ್ಲವೀ ನುಡಿಯೊಂದು ಸತಿ ಮೊಗದಿರುಹಲೊಡನಿಂತೆಂದನಾ ಹನುಮಂತ (ತೊರರಾ. ೫-೩-೭೫). [ಮೊಗ + ತಿರಿಪು$_1$]

**ಮೊಗಂದಿರುಪು** ' ಮೊಗಂದಿರಿಪು ' ನೋ.

**ಮೊಗಂದಿರುವು** ' ಮೊಗಂದಿರಿಪು ' ನೋ.

**ಮೊಗಂದಿರುಹು** ' ಮೊಗಂದಿರಿಪು ' ನೋ.

**ಮೊಗಂದೋಱು**, ಮೊಗದೋರು, ಮೊಗದೋಱು$_1$ (ಕ್ರಿ). ಮುಖವನ್ನು ತೋರಿಸು: ಕಾಣಿಸಿಕೊಳ್ಳು; ಗೋಚರಿಸು; ಪ್ರತ್ಯಕ್ಷವಾಗು : ವಿನಸ್ಸಂತಾನವೆಂಟುಂ ಕಿಡೆ ನಿಜಗುಣಮೆಂಟುಂ ಮೊಗಂದೋಱೆ (ಕಂಠಾವಶಾ. ೧-೨) ; ಶರತ್ಕಾಲಮತಿಕ್ರಮಿಸಿ ಮೇಲೆತ್ತಿ ಬಂದು ಮೊಗಂದೋಱೆ ವರ್ಷಾಕಾಲಮುಂ ಪಲಾಯನಮನೆಯ್ದುಸುವುದುಂ (ಶಾರಕು. ೪-೬೪ ವ). **ಮೊಗದೋರು** : ಬಾಲಭಾಸ್ಕರನು ಮೊಗದೋರೆ ಸರಸಿಜಮರಳ್ದು ಮಾನಂದಿಪಂತೆ (ನವಮೋ. ೧೩-೨೨) ; ಆಗ ಹೋದವ ತಿರುಗಿ ಈಗ ಮೊಗದೋರಿಪನು (ವಿಸೇಗೀ. ೨೬-೧೩) ; ಪತ್ತೂರ ಕೊಡತಿನಿ ಮೊಗದೋರು (ರೋಕಗೀ. ೨೩೦). **ಮೊಗದೋಱು$_1$** : ಬಾ ಮಗನೆ ಮೊಗದೋಱೆನುತ ಹಲುಬಿದನು ಕಲಿಪಾರ್ಥ (ಕುಮ್ಯಾದ್ರೌ. ೮ ಸೂಕಿಸಿ) ; ಕಾನನದೊಳಗೆ ನಂಬಿದ ನಾರಿಯನು ಬಿಸುಡುವರೆ ತನಗಿನ್ನಾರು ಗತಿ ಮೊಗದೋಱೆನುತ ಹಲುಬಿದಳು (ವಳಶ. ೫-೨೨). [ಮೊಗ + ತೋಱು]

**ಮೊಗಂನೋಡು** (ಕ್ರಿ). (ವಸ್ತುವಿನ ಬೆಲೆ ಇತ್ಯಾದಿಗಳ ಕಡೆ) ಗಮನಿಸು; ಲಕ್ಷಿಸು : ಬಣ್ಣವಣ್ಣಗೆಯ ಜವಳಿಗಳನೆ ಮೊಗಂನೋಡದೆ ಸೂಸಿದಾಗಳ್ (ಆದಿಪು. ೪-೩೪ ವ). [ಮೊಗ + ನೋಡು]

**ಮೊಗಂಬಡೆ** (ಕ್ರಿ). ೧. ರೂಪು ತಳೆ ; ಆಕಾರ ತಾಳು; ಮೂರ್ತಿವತ್ತಾಗು : ತುಂಬಿ ತುಳ್ಕುವ ಮೊಗದ ಮೊಗಂಬಡೆದ ಸೊಬಗು ಪದ್ಮಸದ್ಮನ ಮೊಗಸಿರಿಯನೆಡವುತೆಡಂ ಮಾಡೆ (ರಾಮಾಶ್ವ. ೧೩೯-೧೧). ೨. ನಯವಾದ ಮಾತುಗಳಿಂದ ಮನವೊಲಿಸು; ಸರಸಸಲ್ಲಾಪವಾಡು ; ಅನುನಯಿಸು : " ಮೊಗಂಬಡೆ–ಅನುನಯನೇ " (ಶಮಧಾ. ವ) ; ಕಲಭಾಷಿತಸುಧಾಜಲದಿಂ ಸರಸ್ವತಿಯ ಕಲಾವಲೇಪಮುಂ ಕರ್ಚಿ ಕಳೆವಂತೆ ಮೊಗಂಬಡೆದು (ಕಂಠಾವಶಾ. ೩-೯ ವ). [ಮೊಗ + ಪಡೆ$_1$]

**ಮೊಗಂಬುಗಿಸು** (ಕ್ರಿ). ಮುಖಾಮುಖಿಯಾಗಿಸು: ಸಮ್ಮುಖವಾಗಿಸು : ಅಂತಾ ದಂತಿಘಟೆಗಳನಾರೋಹಕರ್ ತೋಱ ಕೊಟ್ಟೊಂದೊಂದರ್ಕೆ ಮೊಗಂಬುಗಿಸಿದಾಗಳ್ (ಕಂಕಥಾ. ೧೧-೯೩ ವ). [ಮೊಗಂಬುಗು (< ಮೊಗಂಬೊಗು) + – ಇಸು$_3$]

**ಮೊಗಂಬುಗು** ' ಮೊಗಂಬೊಗು ' ನೋ.

**ಮೊಗಂಬುಗುತರ್** (ಕ್ರಿ). ಮುಖಾಮುಖಿಯಾಗಿ ತಾಗು: ಎದುರಿಸು : ಅಗದೊಳಗಂ ಮೊಗಂಬುಗುವವೋಲ್ಮದದಾನೆಗಳಾನೆಯೊಳ್ಮೊಗಂಬುಗುತರೆ (ಕಂಠಾವಶಾ. ೧೩-೮೦). [ಮೊಗ + ಪುಗುತರ್ (< ಪೊಗುತರ್)]

**ಮೊಗಂಬೊಗು**, ಮೊಗಂಬುಗು (ಕ್ರಿ). ೧. ಮುಖಾಮುಖಿಯಾಗಿ ಮೇಲೆ ಬೀಳ್ಳು : ಮೊಗಂಬೊಕ್ಕದು ಭೀಮಂ ದೇವ ದುಶ್ಶಾಸನರುಧಿರಮುಮಂ ಪೀರ್ದ ತಾಣಂ (ಗದಾಯು. ೫-೨) ; ಪತ್ತುವ ಲಗ್ಗೆಗೆ ಮಾರಿಯೊಳ್ ಮೊಗಂಬೊಕ್ಕವೊಲಾಗೆ ಬೆರ್ಚಿದನವಂ (ಕಂದ್ರಪ. ೫-೮೦). **ಮೊಗಂಬುಗು** : ೧. ದಿಗಿಭಂ ದಿಗಿಭಕ್ಕೆ ಮೊಗಂಬುಗುವಂತಿರೆ ಸಂಚವಾರದಿಂ ಧನದೀದಂ ಮಿಗಿಲುದ್ದಾನಿಯ ದಾನಂ (ಶಾಂತಿಪು. ೧-೩೦) ; ಅಗದೊಳಗಂ ಮೊಗಂಬುಗುವವೋಲ್ಮದದಾನೆಗಳಾನೆಯೊಳ್ಮೊಗಂಬುಗುತರೆ (ಕಂಠಾವಶಾ. ೧೩-೮೦). ೨. ಮುಖವನ್ನು ಮುತ್ತು,—ಕವಿ : ನಗೆಮೊಗಮುಂ ಪೊದಳ್ದಲರ್ದ ತಾವರೆಯೆಂಬ ವಿಮೋಹದಿಂ ಮೊಗಂಬುಗಲೊಡಂ (ಕಂಕಥಾ. ೫-೧೧). ೩. ಎದುರಿಗೆ ಕಾಣಿಸಿಕೊಳ್ಳು : ದೆಸೆದೆಸೆಯೊಳಂ ತಳಪೆಳಗಾಗಿ ಪರಿತಂದು ನಾಣ್ಚಿ ಮೊಗಂಬುಗದೋರೆರ್ವರ ಪೆಱಗಡಂಗಿ ಗೆಂಟೆಸೊಳೆ ಘೊಲ್ಲಮೊಲ್ಲನೆಱಗುವ ರಾಜಪುತ್ರಸಹಸ್ರಂಗಳ ಮೊಗಮುಂ ನೋಡಿ (ಕಾದಂಬ. ೪೩೬). [ಮೊಗ + ಪೊಗು]

**ಮೊಗಂಮುರಿ**, ಮೊಗಮುರಿ (ಕ್ರಿ). ೧. (ನೋವು, ಬೇಸರ, ಜುಗುಪ್ಸೆಗಳಿಂದ) ಮುಖವನ್ನು ವಿಕಾರ ಮಾಡು : ಅಣಂ ಮೊಗಂಮುರಿಯದಳ್ಕದೆ ಬೇನೆಗಳೊಳ್ ಮೊಗಂಗಳಂ ಬಿನ್ನಗೆ ಮಾಡದಿರ್ದರಳವಚ್ಚರಿಯಾಗೆ ಕೆಲರ್ ಮಹಾರಥರ್ (ಕಂಕಥಾ. ೧೧-೩) ; ಚಿಂತಿಸುತ್ತವಿವಾದ ಮೊಗಂ

ಮುರಿದೀವ . . . ಗುಣಂ ಗುಣದಂಕಕಾರ್ತಿಯೂ (ಅಜಿತ. ೦೨-೦೭); ಇಂತಪ್ಪವಮಾನಮಾದುದೆಂದು ಮೊಗಂಮುರಿಯೆಯುಂ (ಜಗಂ. ೦೩-೭೭ ವ); ಅಮಂಗಳವನೀಕ್ಷಿಸಿದಂತೆ ಮೊಗಂಮುರಿದು ಮಾತು ನಿಲ್ಲಿಸಿದರ್ (ಶ್ರೀರಾಪ. ೨೦-೩೯೨). ೨. ಮುಖವನ್ನು ಬೇರೆಕಡೆಗೆ ತಿರುಗಿಸು; ಪರಾಙ್ಮುಖನಾಗು; ವಿಮುಖನಾಗು : ಮದ್ರರಾಜನಳಿಯನ ಪರಾಕ್ರಮಕ್ಕೊಸೆದು ಮೊಗಂಮುರಿಯದೆ ಪೆಱತುಂ ರಥಮಂ ಕರಿಸಿ ಕನಲ್ದು ಡರ್ದು ಕದನಕಾಗಳೆ ನೆಱೆದಂ] (ಶಂಕರ. ೦೦-೦೦೭). ಮೊಗಮುರಿ : ೨. ಸುಯೋಧನನ ಮೊಗಮುರಿಯಲೆಚ್ಚು . . . ಪಾಯ್ದನು ಮತ್ತೆ ಸೈವರಿದು (ಕುಮಾ.ಕ. ೦೯-೨೭). [ಮೊಗ + ಮುರಿ$_1$]

**ಮೊಗಂಸಾರ್ಚು** (ಕ್ರಿ). ಮುಖವನ್ನು ಹತ್ತಿರ ತರು : ಮೊಗಂಸಾರ್ಚಿ ನಾನಾರಸಂ ಕಣ್ಗೊಳಿಪನ್ನಂ ಮೂರ್ತಿನಾರಾಯಣನ್ನಪನನವಳ್ ಮೆಚ್ಚಿ ನೋಡುತ್ತಮಿರ್ದಳ್ (ರಾದಂಅ. ೦೩೭). [ಮೊಗ + ಸಾರ್ಚು$_1$]

**ಮೊಗಗತ್ತಲೆ** 'ಮೊಗಗಳ್ತಲೆ' ನೋ.

**ಮೊಗಗನ್ನಡಿ** (ನಾ). (ಆನೆ, ಕುದುರೆಗಳಿಗೆ) ಮುಖದ ಮೇಲೆ ತೊಡಿಸುವ, ಕನ್ನಡಿಗಳನ್ನು ಅಳವಡಿಸಿರುವ ಒಂದು ಬಗೆಯ ಅಲಂಕಾರ ಸಾಧನ : ಮಿಸುನಿಯ ನಿಗಳದ ಮೊಗಗನ್ನಡಿ ಕಾಂತಿವಿಸರದ ಚಿನ್ನ ಹಕ್ಕರಿಕೆ ಪೊಸಸಮುಕಟ್ಟಿನ ಝಲ್ಲಿಗಳಿಂದ ರಾಜಿಸುವ ದಿವ್ಯಾಶ್ವವೈದಿದುವು (ಸಂಪಅ. ೨೩-೯೦). [ಮೊಗ + ಕನ್ನಡಿ$_1$]

**ಮೊಗಗಳ್ತಲೆ, ಮೊಗಗತ್ತಲೆ** (ನಾ). ಕತ್ತಲೆಯ ಮೊದಲು; ರಾತ್ರಿಯ ಆರಂಭ; ಪ್ರದೋಷಸಮಯ : ಪಗಲಾಣ್ಮನೆಯ್ದುದನಸ್ತಗಿರಿಯ ಬಂದು ಮೊಗಗಳ್ತಲೆ ಮೊಗದೋಱೆ (ಕುಮಾಸಾಂ. ೩೩-೭೯). **ಮೊಗಗತ್ತಲೆ** : ಮೊಗಗತ್ತಲೆಯೊಳಿಂದುವಿನುದಯರಾಗ ಸೊಗಸಿದುದಿಂದ್ರದಿಕ್ಕನೊಳು (ಶ್ರೀಪಾಂ. ೬-೦೭); ಆಮೇಲೆ ಮೊಗಗತ್ತಲೆಯಾಗಲಾಗಿ ಕಾದಂಬರಿ ಉಪ್ಪರಿಗೆಯಿಂದಿಳಿದಳು (ವತಕಾ. ೬೦).

[ಮೊಗ + ಕಳ್ತಲೆ (< ಕಟ್ತಲೆ)]

**ಮೊಗಗುಡು** 'ಮೊಗಂಗೊಡು' ನೋ.

**ಮೊಗಗೆಡಿಸು** 'ಮೊಗಂಗಿಡಿಸು' ನೋ.

**ಮೊಗಗೊಡು** 'ಮೊಗಂಗೊಡು' ನೋ.

**ಮೊಗಚು** 'ಮಗುಚ್ಚು' ನೋ.

**ಮೊಗಡು** (ನಾ). ಎತ್ತರವಾದ ಪ್ರದೇಶ; ದಿಣ್ಣೆ : ಊರ ಮುಂದಣ ಬಸವನ ಗುಡಿಗೆ ಮೂಡಲ ಮೊಗಡಿನಲ್ಲು ಮೂಡಮುಖವಾಗಿ (ಎಕ. III. ತಿರುಮ. ೬೩-೦೦೬೩ : 1748). 'ಮುಗುಟ$_2$', 'ಮೋಟೆ' ಪರಾ.

[ದೇ. II ತಮಿ. ಮುಕಟು; ಮಲ. ಮುಗಡು; ತೆಲು. ಮೊಗಡು]

**ಮೊಗತುತಿ** (ನಾ). ಎದುರಿಗೇ (ಅಕಾರಣವಾಗಿ) ಹೊಗಳುವುದು : ಮುಖಸ್ತುತಿ : ಅರಸಂಗೆ ಧನಿಕರಿಗೆ ಮೊಗತುತಿಯೆ ರಸವು (ಕರುಕಾ. ೦೨-೦೩); ನಿಷ್ಠುರವಾದಿ ಹೇಗೆ ತಾನೇ ಮೊಗತುತಿ ಮಾಡಬಹುದು (ಶೂಬಿಕಾ. ೭೨). [ಮೊಗ + ತುತಿ]

**ಮೊಗದಿರುಹು** 'ಮೊಗಂದಿರಿಪು' ನೋ.

**ಮೊಗದುಂಸಕ್ಕರೆ** 'ಮುಗದುಮ್ಮಿಸಕ್ಕರೆ' ನೋ.

**ಮೊಗದುಗುಲ** (ನಾ). ಮುಖದ ಮೇಲಿನ ಮುಸುಕು : ಅವಗುಂಠನ : ತಣ್ಣಗಿರಗ ಮೊಗದುಗುಲ ಕೈಪಿಡಿ ಡವಕೆ ಬೀಣೆ . . . ಕರ್ಪುರದ ನಾಳಿಗಳ ಪಿಡಿದೊಡನೆ ನಡೆವರೊಲಿದು (ಶದ್ಮಣಾ. ೬-೭). [ಮೊಗ + ದುಗುಲ$_1$]

**ಮೊಗದುಮ್ಮಾನ** (ನಾ). ಮುಖದಲ್ಲಿ ಎದ್ದು ಕಾಣುವ ಚಿಂತೆ. — ಮುಗುಡ : ಏನು ಹೇಳುವೆನವರ ರಣಸುಮ್ಮಾನವನು ನಮ್ಮವರ ಮೊಗದುಮ್ಮಾನವನು (ಕುಮಾ.ದ್ರೋ. ೦೩-೩೨). [ಮೊಗ + ದುಮ್ಮಾನ]

**ಮೊಗದೆಗೆ** (ಕ್ರಿ). ಬೇರೆಯ ಕಡೆಗೆ ಮುಖಮಾಡು. — ಮುಖವನ್ನು ತಿರುಗಿಸು : ಹೆಣ್ಣು ಕೊಡೆಂದು ನಮ್ಮಯ ತಂಗಿಯಿಂದಟ್ಟುವುದುಚಿತವಹುದು ಎಂದು ಮೊಗದೆಗೆಯಲ್ಕವರು (ಶಾಶ್ವಶಾ. ೩೦-೦೦). [ಮೊಗ + ತೆಗೆ$_1$]

**ಮೊಗದೆರೆ** (ನಾ). ಮುಖದ ಮೇಲಿನ ಮುಸುಕು : ಅವಗುಂಠನ : ಎಳೆವೆಂಡಿರತ್ತತ್ತ ಮೊಗದೆರೆಯ ಕೀಳ್ವರ್ (ಶಾರಸಿ. ೨೦-೫). [ಮೊಗ + ತೆರೆ$_4$]

**ಮೊಗದೆಱೆ** (ಕ್ರಿ). ಬಾಯಿ ತೆಗೆ; ಬಾಯಿಬಿಡು : ಮೊಗದೆಱೆದ ಹುತವಹನ [ಪಾಠಾಂ. ಹೊಗೆದೆಗೆದ ಹೆಬ್ಬುಲಿಯ]ವೊಲು ಝುಗರ್ಝುಗಿಪ ತೇಜದ . . . ಜವಗಿವರುಗಳ ಲೆಕ್ಕಿಸವದಟನು (ಕೊರಂ. ೭-೯-೭). [ಮೊಗ + ತೆಱೆ$_1$]

**ಮೊಗದೊಳೆ** (ಕ್ರಿ). ನೀರಿನಿಂದ ಮುಖದ ಮಲಿನತೆಯನ್ನು ತೊಳೆ; ಮುಖಮಾರ್ಜನ ಮಾಡು : ಮುನ್ನೇಸಬಿ ಕಾಣುತ ಮೊಗದೊಳೆದು (ಕೃಶಂತ. ೦-೯೭); ನಿದ್ರೆಯಂ ತ್ಯಜಿಸಿ ಮೊಗದೊಳೆದು ಮುಕ್ಕುಳಿಸಿ ಕಪ್ಪುರವೀಳೆಯಂಗೊಂಡು (ಕೈವಿಶಾ. ೩೦-೯೨). [ಮೊಗ + ತೊಳೆ$_1$]

**ಮೊಗದೋರು** 'ಮೊಗಂದೋಱು' ನೋ.

**ಮೊಗದೋಱು$_1$** 'ಮೊಗಂದೋಱು' ನೋ.

**ಮೊಗದೋಱು$_2$** (ನಾ). ಮುಖದಲ್ಲಿ (ಗಾಯದಿಂದ) ಉಂಟಾದ ತೂತು. — ಡೊಗರು : ಮೊಗದೋಱುಗಳ ಪೂರಾಯಘಾಯದ ತಾಱು ಥಟ್ಟಿನ ಹೆಣನ ಮೆದೆ ಹೇರಾಳ ರಂಜಿಸಿತು (ಕುಮಾ.ದ್ರೋ. ೦೦-೬).

[ಮೊಗ + ದೋಱು (< ಡೊಂಗಱು)]

**ಮೊಗನಹಱುವೆ** (ನಾ). ಒಂದು ಬಗೆಯ ಔಷಧೀಸಸ್ಯ : ನಾಂಗಲಿಕ, ಮೊಗನಹಱುವೆ . . . ಕಲಸಿ ಗುದದಲ್ಲಿ ಪೂಸೆ ಎಲ್ಲಾ ಮೂಲವ್ಯಾಧಿ ಕೆಡುಗುಂ (ಅಶ್ವವೈ. ೦೭೭). [? + ಹಱುವೆ (< ಹಱುಹೆ)]

**ಮೊಗನಾಯಕ** (ನಾ). ಸೈನ್ಯದ ಅಗ್ರನಾಯಕ; ಸೇನಾಪತಿ : ಮರುತಸುತ . . . ಮುರಿದು ಮೊಗನಾಯಕರ ಹರಣಮಂ ಕೊಂಡು . . . ಕುಪ್ಪಳಿಸಿ ಕುಣಿದಾಡಿದಂ (ಜೈರಂಗ. ೭೭-೦೨). [ಮೊಗ + ನಾಯಕ]

**ಮೊಗನೆಗಹು** (ಕ್ರಿ). ಮುಖವನ್ನು ಮೇಲಕ್ಕೆತ್ತು : ಮೊಗನೆಗಹಿ ಭೀಮನ ಪದಾಯನಾಲಿಪುದು . . . ಬಲುಕಣೆಯ ಹಿಡಿಹೀಂಗೆ ಬಾಗಿಸುತಿರ್ದನಾ ದಂತಿ (ಕುಮಾ.ದ್ರೋ. ೩-೩೭).

[ಮೊಗ + ನೆಗಹು$_1$ (< ನೆಗಪು$_1$)]

**ಮೊಗಪಟ** (ನಾ). ಹಡಗಿನ ಮುಂಭಾಗದ ಹಾಯಿಯ ಬಟ್ಟೆ : ಹಾಯಿಪಟ : "(ಹಡಗಿನ) ಮುನ್‌ಕೂವೆಯ ಮೇಲಿನ ಮುಖ್ಯಪಟ: ಮೊಗಪಟ: ಮುಂಪಟ" (Foresail. ಇಂಕಶ). [ಮೊಗ + ಪಟ]

**ಮೊಗಪಾವಡ** 'ಮೊಗವಾವುಡ' ನೋ.

**ಮೊಗಪು, ಮೋಪು$_3$** (ನಾ). ೧. ಮುಂಭಾಗ; ತುದಿ; ಮುಖ : ಕಾಳೆಯ ಮೊಗಪಿನಲ್ಲಿ ಒಂದು ಜೀಱುಂಡೆ ಹುಟ್ಟಿ ಅದು ಆರ ಮಾತನೂ ಕೇಳಲೀಸದು (ಸಕವ. ೪. II. ೬೩೭-೩೩); ಹೊಂಗರಡಿಗೆಗಡೆದು ಕರ್ವುಣೆಯ ಬಿರುಡೆಯ ಬಿಗಿದಿಟ್ಟನೆಂಬಂತೆ ಬಲ್ಮೊಲೆಯೆರಡಱ ಮೊಗಪು ತೋಱೆದುವು (ಮೋಹತ. ೨೩-೨೩). **ಮೋಪು$_3$** : ೨. ಸರ, ಡಾಬು ಮುಂತಾದುವುಗಳಲ್ಲಿರುವ ಚೌಕಾಕೃತಿಯ ಬಿಲ್ಲೆ : ಈಗಿನ ಕಾಲದಲ್ಲಿ ಮೋಪು ಇರುವ ಸರಗಳನ್ನು ಹೆಚ್ಚಾಗಿ ಯಾರೂ ಹಾಕುವುದಿಲ್ಲ (ರೂಢಿ).

[ದೇ. II ತಮಿ. ಮಲ. ಮುಕಪ್ಪು; ತುಳು. ತೆಲು. ಮೊಗಪು]

**ಮೊಗಪೆ** (ನಾ). ೧. (ದ್ರವಪದಾರ್ಥಗಳನ್ನು ಮೊಗೆಯಲು ಬಳಸುವ) ಸಣ್ಣ ಪಾತ್ರೆ : ಮೊಗೆ : ಪ್ರತಿದಿನಕ್ಕೊಂದು ಮಲ್ಲಲ ಕೂಟುಮನೊಂದು ಮೊಗಪೆ ನೀರುಮಂ ನೆಲಮನೆಯೊಳಗಣ್ಗೆ ನೀಡಿದೊಡ ನಿಬರುಂ ಪಚ್ಚುಗೊಂಡುಣ್ಬರ್ (ವಡ್ಡಾರಾ. ೧೬೨-೦೦) : ಈ ಖಳಸಂಸ್ಕೃತಿಯೊಂದಿದೊಂದು ಜೂಜಿನೊಳಗಮ್ಮ ನೀಂ ಮೊಗಪೆಯಾಗದೆ ತಾಳ್ದಪ

ವರ್ಗವರ್ಗವಾಂ (ಆದಿಪು. ೩-೭೦) ; ಕುಂಬಾರನ ಚಕ್ರದಂತೆ ಮಕ್ಕಳಿಟ್ಟ ಬವರಿಯಂತೆ ಬೂಟಣದ ಮೊಗಪೆಯಂತೆ (ಧರ್ಮಾಮೃ. ೯-೨೩). ೨. ಒಂದು ಊರಿನ ಹೆಸರು : ಬೂತರಸ ತೊಱೆಕಾರಟ್ಟಿಯಂ ಪದಿಯ ಳಿಯು ನೆಲೆಗೂಱು ಮೊಗಪೆ ಅಳಿಯುವು ಬಿಟ್ಟ (ಎಕ. IV, ಗುಂಡ್ಲುಪೇ. ೯೪-೩ :890). [< ಮೊಗ್ಗೆ₂]

**ಮೊಗಬೀಣೆ, ಮೊಗವೀಣೆ** (ನಾ). ಬಾಯಿಂದ ಊದುವ (ಕೊಳಲಿ ನಂತಹ) ಒಂದು ಬಗೆಯ ವಾದ್ಯ ; ಮುಖವೀಣೆ : ದೀಹಪಕ್ಕಿ ಗಳಿಂಚರದ ಕೊಳಲ್. ಮೊಗಬೀಣೆಗಳಿಂದರೆವಱಿದೂರ್ವಂದಿಗಳ್ ಚೀಱುವ ದನಿಯ ಬುರುಗುಗಳಿಂ (ಶಬರಂ. ೬-೩). **ಮೊಗವೀಣೆ** : ವೇಣುವ ನುಡಿಯಿಸುತ ಕಿನ್ನರಿಯ ಕೌಶಲವಿಡಿದು ನಾದಿಸುತೆಸೆವ ಮೊಗವೀಣೆಯನು ಕೇಳಿಸುತ . . . ಸತಿಯರೆಯ್ದಿದರು (ಸನಕು. ೦೩-೫೯).

[ < ಸಂ. ಮುಖವೀಣಾ]

**ಮೊಗಬೀರಚೆಟ್ಟು** (ನಾ). ಒಂದು ಬಗೆಯ ಸಸ್ಯ : ಗಂಡುಬೀರನ ಗಿಡ. ಗಂಡುಕರೀತುಂಬೆ ಮೊಗಬೀರಚೆಟ್ಟು (ವ್ಯಾಶಿಗ. ೭-೧೦೭).

[ ← ತೆಲು. ಮೊಗಬೀರಚೆಟ್ಟು ]

**ಮೊಗಮಂಟಪ** (ನಾ). ದೇವಾಲಯ, ಅರಮನೆ ಮುಂತಾದುವುಗಳ ಮುಂಭಾಗದಲ್ಲಿರುವ ಮಂಟಪ ,– ಹಜಾರ ; ಮುಖಮಂಟಪ : ಮಣಿಸತ್ತಿಗೆಯ ಮೊಗಮಂಟಪದ ಬಣ್ಣವಟ್ಟಿಗೆಯ . . . ಮದನಗೈಯ ಬಾಗಿಲ್ವಾಡದ ಸಿಂಗರದೊಂದು ದೇಗುಲಂ ಕಣ್ಗೆಡ್ಡವಾಗಿ ರಂಜಿಸುಂ (ರಾಮಾಶ್ವ. ೩೪-೨೪). [ < ಸಂ. ಮುಖಮಂಡಪ]

**ಮೊಗಮಜ್ಜನ** (ನಾ). ನೀರಿನಿಂದ ಮುಖವನ್ನು ತೊಳೆಯುವುದು ; ಮುಖಮಾರ್ಜನ : ಮೊಗಮಜ್ಜನಮಂ ನೆಱೆ ಮಾಡಿ ದೇವಿಯರ್ ನಡೆಗೊಳಲಿರ್ದಪರ್ ಮನೆಗೆ (ಶಾಮಂಘೂ. ೭೭೨); ಪಗಲಣ್ಣನ ಕಾಂತಿ ಪಸರಿಸಲಿರ್ದರು ಮೊಗಮಜ್ಜನವ ಮಾಡಿದರು (ಪೋಹಚ. ೩೦-೩).

[ < ಸಂ. ಮುಖಮಾರ್ಜನ]

**ಮೊಗಮರಸು** (ಕ್ರಿ). ಮುಖವನ್ನು ಮರೆಮಾಡಿಕೊಳ್ಳು; ಮುಖವನ್ನು ಮುಚ್ಚಿಕೊಳ್ಳು : ಚಿಂತೆಯಿಂದಿನನಂದು ಮುಗಿಲ ಮುಸುಕಂ ತೊಟ್ಟು ಮೊಗಮರಸೆ (ಗೊಮ್ಮಟ. ೧-೦೨). [ಮೊಗ+ಮರಸು₁ (< ಮಱಿಯಿಸು)]

**ಮೊಗಮರೆ** (ನಾ). ಗುರುತು ಸಿಕ್ಕದಂತೆ ಮುಖವನ್ನು ಮರೆಸುವ ಸಾಧನ : ಏನೋ ಒಂದು ಧೂರ್ತತ್ರಯ ಮೊಗಮರೆಯ ಗುರುತೋ (ಕಾದಂಬ. ೩). [ಮೊಗ + ಮರೆ₂ ( <ಮಱಿ₂ ) ]

**ಮೊಗಮಿಕ್ಕು, ಮೊಗವಿಕ್ಕು** (ಕ್ರಿ). ೧. ಎದುರಾಗು; ಅಭಿಮುಖವಾಗು: ರಾಘವನ ಜನ್ನದ ಬಣ್ಣಗುದುರೆ ತೆಂಕಲ್ಗೆ ಮೊಗಮಿಕ್ಕಿ ನಡೆಯುತ್ತು ಮಿರ್ಪುದಂ (ರಾಮಾಶ್ವ. ೯೩-೦೯). ೨. ಎದುರುಬೀಳು ; ಎದುರಿಸು : ಪ್ರತಿಭಟಿಸು : ಅಂತು ದಂತಿಘಟೆ ದಂತಿಘಟೆಯೊಳಾಂತು ಮೊಗಮಿಕ್ಕೆಯುಂ (ಶಂರಾಮಾ. ೦೩-೭೭ ವ). ೩. ಮುಖವಿಡು; ಮುಖಹಾಕು : ನಗೆ ಮೊಗದೊಳ್ ತಱಿಂಬೊಳೆದು ನುಣ್ದುಟಿಯೊಳ್ ಮೊಗಮಿಕ್ಕಿ . . . ಕಾಲುಗುರ್ಗಳೊಳ್ಪಿದೆ ಮಾರ್ಪೊಳೆದು (ಕಬ್ಬಿಗ. ೩೩೦); ಪುತ್ರಿನೆಡೆಯೊಳ್ ಮೊಗಮಿಕ್ಕು ತಿಱುಂಪೆಗೆಂದು ಮತ್ತೆಡೆವಿಡದೂದುತಿರ್ಪನಮದೊಂದು ಮಹೋರಗಮಾನ ನಾಗ್ರುಮಂ ಪಿಡಿವಡರ್ಪಲ್ಲಿ ನೇಲುತಿರೆ ಸುಂಡಿಲವೋಲ್ . . . ಎಸೆದತ್ತು ಬಳ್ಳುರಿಡಿ ಕಾನನದೊಳ್ ಕರಿಪೋತದಂತೆವೋಲ್ (ರಾಜಶೇ. ೩-೭೯). ೪. ತೊಡಗು: ಎಡೆಯಱಿದು ತೊಳಗುವಂತಿರೆ ಸಿ [ ಸ ] ಡಿಲ್ಬು ಪೊ [ ಪೋ ] ಯ್ತುಟ್ಟುದಾಗಳಂಗಜಕಲೆಯೊಳ್ ನಡೆ ಮೊಗಮಿಕ್ಕಿ ಲಯಂಗಿಡದೊಡ ನುಲಿದುವು ಬೆರಲ ಕೊರಲ ನಾಲಗೆಯುಲಿಗಳ್ (ಕಾವ್ಯಸಾ. ೬೩೬ ಶೂದ್ರಕ). **ಮೊಗವಿಕ್ಕು:** ೫. ಮುಖವನ್ನು ತಿರುಗಿಸು,–ಹೊರಳಿಸು: ಮೊಗವಿಕ್ಕಿದತ್ತಲು ಮೊಱೆವ ಹೆಣಮಯಮೇನೆನುಸುರುವೆನು (ಕುಮಾವ್ಯಾ. ೦೭-೨೭); ಕೈ ಮಾಡಿದತ್ತಲು ಕರುಳ ಮಯ ಮೊಗವಿಕ್ಕಿದತ್ತಲು ಮೊಱೆವ ಹೆಣನ ಮಯ (ಶಲ್ಯಂತ. ೪-೯೪). [ ಮೊಗ + ಇಕ್ಕು ]

**ಮೊಗಮಿಡು. ಮೊಗವಿಡು** (ಕ್ರಿ). = ಮೊಗಮಿಕ್ಕು ೩: ಕುರಂಗಸಂಕುಳ: ಭಿಲ್ಲರ ಬಿಲ್ಲ ಮೇಲೆ ಮೊಗಮಿಟ್ಟು . . . ನೋಡುತಿರ್ಪುವು ನಗೇಂದ್ರ ಮುನೀಂದ್ರರ ಶಾಂತಮೂರ್ತಿಯಂ (ಗಿರಿಜಾ. ೦-೭೯); ಗರುಡೋದ್ಗಾರದ ಪಚ್ಚೆಯಕಿರಣದೊಳಿಳವುಲ್ಲ ಶಂಕೆಯಿಂ ಸ್ಫಟಿಕಾಂಶೂತ್ಕರದೊಳ್ ಜಳಶಂಕೆಯಿ ನಾದರದಿಂ ಮೊಗಮಿಡುವವಲ್ಲಿ ಮೃಗಶಾಬಂಗಳ್ (ಜಾರಪು. ೧-೦೬೦); ಅಧರದಿನಿದಂ ಬೆರಸುವಂತೆ ಮೊಗಮಿಟ್ಟು ಪೊಂಬಟ್ಟಲೊಳ್ಪವಿದು ಮಿಕ್ಕ ಮಧುವಂ (ಕೃಬಿಕಾ. ೦೩-೪೩). **ಮೊಗವಿಡು:** ಅಧ್ವಶ್ರಮದ ಢಗೆ ಪರಿಹರಿಸೆ ನೀರೊಳು ಹೊಗಿಸಿದನು ಹರಿ ಹಯಚತುಷ್ಟಯವ ಸರಸಿಯಲಿ ಮೊಗವಿಟ್ಟು ಮೊಗೆದವು ವರಜಲವನು (ಕುಮಾವ್ಯಾ. ೧೦-೩೪); ಅಂಬುರುಹಾನನ ದೊಳ್ಮೊಗವಿಟ್ಟತಿಘರದಿ ನವೀನಲತಾಂಗಮನವರ್ದಪ್ಪಿ (ಜಯಿಕಾ. ೪-೪೨): ನೀಱಿನ ಮೊಗದೊಳು ಮೊಗವಿಟ್ಟು ಮುಂಡಾಡಿ (ಕಂಸವ. ೯-೦೦೯).

[ಮೊಗ + ಇಡು₁]

**ಮೊಗಮಿಱ** (ಕ್ರಿ). ಮುಖವನ್ನು ತಿವಿ,–ಚುಚ್ಚು: ಸೊಪ್ಪು ಸೊವಡಾಗದೆ ಸಟಿಸಟ್ಟಿಪ್ಪದೆ ಮೊಗಮಿಱಿದು ಕಾರ್ದು ಚಪ್ಪಲರ್ಪಿನೆಗಂ ಸಿಪ್ಪಿಟ್ಟು ಕೆದು ಕೊಂಡುವು ಸಪ್ಪದಮುಪ್ಪಳದಿನೊಱೆವ ನಱುವಂಡುಗಳಂ (ಲೀಲಾವ. ೯-೮೭). [ಮೊಗ + ಇಱಿ₁]

**ಮೊಗಮೀ** (ಕ್ರಿ). ಮುಖವನ್ನು ತಿರುಗಿಸು ; ಅಭಿಮುಖವಾಗು ದಶರಥನೃಪಂ ಮುನೀಶ್ವರರಿರ್ದಾ ದೆಸೆಗೆ ಮೊಗಮಿತ್ತು ತನ್ನಿರ್ದ ಸಿಂಹ ವಿಷ್ಟರದಿನೆಟ್ಟು ವಿನಮಿತನಾದಂ (ಶಂರಾಮಾ. ೭-೨೭). [ಮೊಗ + ಈ₂]

**ಮೊಗಮೀಸೆ** (ನಾ). (ಹೊಸಹರೆಯದ ಗುರುತಾಗಿ) ಮುಖದ ಮೇಲೆ ಮೂಡುವ ಮೀಸೆ : ಮೊಗಮೀಸೆ ಬಾರದಿರ್ದಂ ಸೊಗಯಿಪ ತನ್ಮನಿಕುಮಾರವದನಾಬ್ಜಂ ದಿಟ್ಟಿಗೆ ಚೆಲ್ವುವೆತ್ತು ಮಱಿದುಂಬಿಗಳೆಱಗದ ಕನಕಮಲವಂ ನೆನೆಯಿಸುಗುಂ (ಶಾಮಂಘೂ. ೭೩೪). [ಮೊಗ + ಮೀಸೆ]

**ಮೊಗಮುಟ್ಟು** (ನಾ). (ಆನೆ, ಕುದುರೆ ಮುಂತಾದುವುಗಳ) ಮುಖಕ್ಕೆ ತೊಡಿಸುವ ಒಂದು ಬಗೆಯ ಅಲಂಕಾರಸಾಧನ: ಮೊಗಮುಟ್ಟನಾಂತ ಮೊಗಮಾಗಿರೆ ತಾರ್ಕ್ಷ್ಯನನೇಱುವಂ ಕದಕ್ಕದಿಸೆ ನಿರರ್ಗಳಂ ಪೊಳೆದು ಪಾಱುವಿನಂ ವಸುದೇವವಲ್ಲಭಂ (?) (ಅರ್ಜನೇ. ೪-೦೩೯); ಮಿಸುನಿಯ ಟಂಕೆ ಸೇರಿದ ಮೊಗಮುಟ್ಟಿನ ಮಿಸಿಕಿಯನಾ ವಾಹಕರು ಒಸೆದು ಸೇರಿಸಿದರು . . . ಆ ಜಾತಿತುರಗಕೆ (ಕುರಾಕಾಂ. ೯-೮೭) ; ಮೊಗಮುಟ್ಟು ಮುಂತಾದ ಸಂಜೋಗಕಿಕ್ಕಿರ್ದ ಕೇಗೆಗಳೊಳೆಡೆವಿಡದೆ ಕೀಲಿಸಿದ ಮುಕ್ಕಣ್ಣ ರುದ್ರಾಕ್ಷಿಯಿಂ . . . ರಾಜಾಶ್ವವಾಶೀತಿಸಾಹಸ್ರವಿಕ್ಕಿಲದ ಹೇಷಾರವಂಗಳಿಂ ದಂದು ಗಗನಕ್ಕೆ ಕಾಲಿಡುತಿರ್ದುವು (ಚೆರಮ. ೦೦-೪೩).

[ಮೊಗ + ಮುಟ್ಟು₂. / ತೆಲು. ಮೊಗಮುಟ್ಟು]

**ಮೊಗಮುರಿ** ' ಮೊಗಂಮುರಿ ' ನೋ.

**ಮೊಗಮೋಟ** (ನಾ). (ಆಲಂ) ಭಂಗಿತನಾದವನು ; ಅವಮಾನಗೊಂಡವನು : ಮರುಳಾಗಿ ಮಂದಮತಿಯಾಗಿ . . . ಮೊಗಮೋಟ [ಪಾಠಾಂ. ಮಟ್ಟ]ನಾಗಿ ಎಂದುವರೆ ಕಾಡಿದಪೆ ತಂದೆ (ಸೋಮಚ. ೩-೭೭).

[ಮೊಗ + ಮೋಟ₂]

**ಮೊಗರಂಬ**, ಮುಖರಂಬ, ಮೊಕರಂಬ, ಮೊಕರಂಬೆ (ನಾ). ಆನೆ, ಕುದುರೆ ಮುಂತಾದುವುಗಳ ಮುಖಕ್ಕೆ ಹಾಕುವ ಒಂದು ಬಗೆಯ ಅಲಂಕಾರದ ಸಾಧನ: ಭಾಳದ ಚಂದ್ರದ ಚಿತ್ರದ ಮೊಗರಂಬದ ಕೈವಾಳಿನ ಕಾಲ್ಗಾಪಿಂ ಹಡೆಯುಂ ಪಣ್ಣಿದ ಕರಿಘಟೆ ನೆರೆದುವು ಬಲದೊಳಗೆ (ವೀರೇಶ. ೨-೨೬); ರನ್ನದ ಮೊಗರಂಬಂ ಪಡೆಯನ್ನೆಟ್ಟನೆ ಪೋಲೆ (ಧರ್ಮನಾ. ೪-೦೯); ಇಳುಹಿದನು ಬಲುಗುಳವ ಬಿಂಡಿಸಿ ಕಳಚಿದನು ಮೊಗರಂಬವನು

(ಕುವೆಂಪು ಶ್ರೀ. ೩-೩೨); ಮೊಗರಂಬ ಲೋಹಪಕ್ಕರಿಕೆಯು ಹುಸುಗಳು . . . ಬಂದುವು (ನಾಗಕು. ೧೬-೬೮). **ಮುಖರಂಬ:** ಬಂದ ಬೇಗದಿ ಹರಸ ವಾಹನ ಬಸವಣ್ಣ ಚಿನ್ನದ ಹಕ್ಕರಿಕೆಯು ಮುಖರಂಬವು . . . ಸರಗೆಜ್ಜೆ ಉಲಿಯಲು ಚೆನ್ನಮಾದೇಶನೋಲಗಕೆ (ಮಾದೇಶಾಂ. ೨-೦೪೩). **ಮೊಕರಂಬ :** ರಂಗಾನ ತೇಜೀಗೆ ಹೊಂಬಾಳೆವಲ್ಯಾಣ ದುಂಡುಮಲ್ಲೀಗೆ ಮೊಕರಂಬ (ಹಳ್ಳಿ ಹಾ. ೩೨); ಮಾನವ . . . ಮೊಕರಂಬಗಳನ್ನು ಹಾಕಿ ತೋರಿಗಳ ಬೆಡಗನ್ನು ನೋಡು ತ್ತಾನೆ (ಕವಿಕೋ. I. ೬೨೩). **ಮೊಕರಂಬೆ :** ಸಾವಿರ ಎತ್ತಿನ ಮುಂದೆ ಹೋಗೋದು ನಮ್ಮೆತ್ತು ಪಾದಕ್ಕೆ ಜುಂಗು ಮೊಕರಂಬೆ (ಜಾನ ಪ. ೩೪); ಗಾಣಿಗರ ಕುಂಟೆತ್ತಿಗೆ ಯಾಕೆ ಮೊಕರಂಬೆ (ಜಾನಪ. ೧೩). [?]

**ಮೊಗರಸ** (ನಾ). ಮುಖದ ಕಾಂತಿ. – ತೇಜಸ್ಸು : ಘುಗುಘುಗನುರ್ಚಿ ಪಾಯ್ದು ಸಲೆ ದೇಹರಸಂ ಬಿಡುತೋಡಿತ್ತಲ್ಲಿಯುಂ ಮೊಗರಸಮೋಡಿತಿಲ್ಲ (ಸುಕುಮಾ. ೦೨-೪೦) ; ವೀರರಸ ಬಿಡದೊಸರ್ವ ಮೊಗರಸದ ಸ್ಮರವಿಕಾರದ ಮನವ ನೋಟದ ಗರುವಿಕೆಯುಲೀ ಮಾತ ನುಡಿದನು (ತೊರವೆ. ೩-೯-೩೭); ಬಿಡದೆಸೆದವು ವೀರಭಟರ ತಲೆಗಳಾ ಎಡೆಯೊಳು ಮೊಗರಸದಿಂದ (ಕುಮಾರಾಂ. ೩೭-೬೦). [< ಸಂ. ಮುಖರಸ]

**ಮೊಗರಾಗ** (ನಾ). ಮುಖದ ಬಣ್ಣ,– ರಂಗು : ವನಜಮುಖಿ ಪಿರಿದು ಮನುರಾಗದಿಂದಡಿಗಡಿಗೆ ಸೊಗಯಿಸಿದಳಾಗ ಮೊಗರಾಗದಿಂ (ಅಜಿತ. ೭-೨೭ ರಗಳೆ) ; ಬೇಗು ಜಿನಚಂದ್ರನ ಮೊಗರಾಗಂ ಬೇಸಗೆಯು ಬಿಸಿಲೊಳಟ್ಟಿದ ಹರಿದ್ರಾರಾಗದ ತೆಜದಿಂ ಕಂದಿ ಕುಂದಿದಾಗಳ್ (ಶಾಂತಿಪು. ೭-೯೦) ; ಗತದೋಷಿಗೆ ಕೃತದೋಷಿಗೆ ಹಿತಹಿತಮಾಟ್ಟಲ್ಲಿ ಸರಿಯೆ ಮೊಗರಾಗಂ ಭೂಪತಿಗೇತನೆ ಪಾಲ್ ದೋಷೋದ್ಧತರು ಕೊಲ್ವಲ್ಲಿ ತನ್ನ ಮೆಯ್ಗಿಂದಿ ಮದೇ (ಕಾವ್ಯಸಾ. ೯೨೧). [<ಸಂ. ಮುಖರಾಗ]

**ಮೊಗರಾಗಂಗಿಡು** (ಕ್ರಿ). ಮುಖದ ಬಣ್ಣವು ಕೆಡು,– ಕಾಂತಿಹೀನ ವಾಗು : ಘನಸಮಯಮತಿಕ್ರಮಿಸೆ . . . ಗಿರಿಮಲ್ಲಿಗೆ ಬೀತು ಬಿನ್ನ ನಾಗೆಯುಂ ಕಡವು ಮೊಗರಾಗಂಗಿಡೆಯುಂ (ಶಂರಾಪಾ. ೭-೦೭೩ ವ).

[ಮೊಗರಾಗ + ಕಿಡು (< ಕಡು$_1$)]

**ಮೊಗರು$_1$** (ನಾ). ೧. ಎಳೆಗಾಯಿ ; ಮಿಡಿ ; ಹೀಚು : ಕಲ್ಬಾಳೆಯು ದಾಂಗುಡಿಯು ಮೊಗರಂತೆಸೆವ ನಾಸಾವಂಶಮುಮಂ (ಚಳವಂ. ೬೮-೦೯) ; ತಳಿರಿಂದ ಮೊಗರಿಂದ ಕಾಯಿ ಪಣ್ಣಿಂದ ಚೆಲುವೆಸೆವ ಪುಷ್ಪಗಂಧದ ಪರಿಮಳ ಗಳಿಂದ ಪುಷ್ಪದಿಂದಲಿ ಶಿವನ ಪೂಜಿಸುವ ನಾರಿ (ಶರಣ. ೨-೦೬). (ಗು). ೨. ಎಳೆಯದಾದ : ಹೀಚಾದ : ಆ ಹುಡುಗಿ ಎಳೆಮೊಗರು ಬದನೇಕಾಯಿ ಕೊಂಡುಕೊಳ್ಳುತ್ತ ಇದ್ದಳು (ಹೊಸತ್ತೆ. ೦೬೩). [ದೇ.॥ ತುಳು. ಮುಗುರು]

**ಮೊಗರು$_2$** (ನಾ). ಒಂದು ಬಗೆಯ ಭೂಮಿ (?) : ಬಿಜಮೊಗರಿಂ ವೂ ೩೧ ಕಾಗ ೧೮೨ (ಕ್ಷೇತ್ರಾ. ೧೯೨೯, ಉಡುಪಿ. ೯೯೭–೨೩; 1310); ಭೂಮಿ ಯಲ್ಲಿ ನೀರು ಜಾಸ್ತಿ ನಿಂತ ಮೊಗರುಭೂಮಿ (ಕೃಪಾಕೋ. ೧೨೭).

[?·/ ತುಳು. ಮೊಗರ್=ಮರಳಿನಿಂದ ಕೂಡಿದ]

**ಮೊಗಲ, ಮೊಘಲ್** (ನಾ). ೧. ಒಂದು ಜನಾಂಗದ ಹೆಸರು : ಮಧ್ಯ ಏಷ್ಯಾದಿಂದ ಭಾರತಕ್ಕೆ ಬಂದು ನೆಲಸಿದ ಒಂದು ಮುಸಲ್ಮಾನ್ ಪಂಗಡ : ಕಾಂಭೋಜ ಕೊಂಕಣ ಮೊಗಲ ದ್ರಾವಿಡ ಗೌಡ ಗುರ್ಜರ . . . ಮಹಾರಾಷ್ಟ್ರಗಳ ನೃಪರೆಲ್ಲಂದರು (ಮರೇಪು. ೪-೦೪) : ಈ ಕುಪಟೂರ ಸೀಮೆಗೆ ಮೊಗಲರ ಬಗೆ ಹಣ (ಎಕ. VIII, ಸೊರಬ. ೨೩೭-೦೪ ; 1629 ?); ಅರಬರು, ಬೆಲೂಚಿಯರು, ಚೀನೀಯರು, ಮೊಗಲರು (ತುಕಾರಾ. ೦೭೪). **ಮೊಘಲ್:** (ಗು). ೨. ಮೊಗಲರಿಗೆ ಸಂಬಂಧಿಸಿದ: ಮೊಘಲ್‌ವಾಸ್ತು ಶಿಲ್ಪವು ಭಾರತೀಯವಾಸ್ತುಶಿಲ್ಪದಲ್ಲಿ ಮುಖ್ಯವಾದದ್ದು (ಶಾರದ. ೩೦೬)

[←ಪಾರ. ಮುಘೋಲ್; ಹಿಂ. ಮುಗಲ್; ಮರಾ. ಮೊಗಲ್. ಮೋಗಲ್]

**ಮೊಗಲಾಯ್**, ಮೊಗಲಾಯಿ (ಗು). ೧. ಹಳೆಯ ಹೈದರಾಬಾದಿಗೆ ಸೇರಿದ. ೨. ಬಹಳ ಹಳೆಯದಾದ. (ನಾ). ೩. ಮೊಗಲರಿಗೆ ಸಂಬಂಧ ಪಟ್ಟುದು : ಮೊಗಲಾಯ್‌ಸಾಮ್ರಾಜ್ಯದ ಪತನಕ್ಕೆ ಅವರ ದರ್ಪ ಕಾರಣ ವೆನ್ನುತ್ತಾರೆ (ರಜಿ). **ಮೊಗಲಾಯಿ :** ೩. ಆ ಕಾಲದಲ್ಲಿ ಮೊಗಲಾಯಿ ಚಕ್ರವರ್ತಿಯ ಪ್ರಭುತ್ವವು ಹಿಂದುಸ್ಥಾನದ ಅನೇಕ ಪ್ರದೇಶಗಳಲ್ಲಿ ಹಬ್ಬಿದ್ದಿತು (ಹಿಂಕಿರು. ೪೩).

**ಮೊಗಲಾಯ್‌ದೌಲತ್ತು** = (ಆಲು) ಸರ್ವಾಧಿಕಾರದ ದರ್ಪ.– ಠೀವಿ : ಆಕೆಯ ಮೇಲೆ ಮೊಗಲಾಯ್‌ದೌಲತ್ತು ನಡೆಸಿದೆಯಲ್ಲ ! (ಮುಹಾಗ. ೬೭).

[← ಹಿಂ. ಮುಗಲಈ. ಮುಗಲಾಈ ; ಮರಾ. ಮೋಗಲಾಈ ]

**ಮೊಗಲಾಯಿ** 'ಮೊಗಲಾಯ್' ನೋ.

**ಮೊಗಲಿಂಗಮರ** (ನಾ). ಒಂದು ಬಗೆಯ ಸಸ್ಯ : ಮೊಗಲಿಂಗಮರ. ಕಲ್ಗೋಟೆ. ಕಲಗಂಟೆ, ಗಂಟೆ (ವೃಕೋ. ೭೬-೦೩೯೭).

[ಮೊಗಲಿಂಗ? + ಮರ$_1$./ತೆಲು. ಮೊಗಲಿಂಗ]

**ಮೊಗಲೂರ್** (ನಾ). ಒಂದು ಊರಿನ ಹೆಸರು : P ಮುತ್ತಗಿ ಅಥವಾ ಮುಳ್ತಗಿ ಎಂಬ ಗ್ರಾಮವಿರುವ ಈಗಿನ ಬಳ್ಳಾರಿಜಿಲ್ಲೆ : ಮೊಗಲೂರ್ವಿಷಯೇ ಕಿಜುವಾಸಾಣಿನಾಮಧೇಯಗ್ರಾಮಸ್ಯ ಪೂರ್ವ್ವದಿಗ್ಭಾಗೆ ಮುಟ್ಟಗಿನಾಮಧೇಯ ಪ[ಲ್ಲೀ]ಮ್ಮಟಾಕ್ಯುಸಹಿತಾಂ . . . ಸರ್ವ್ವಪರಿಹೃತಪರಿಹಾರಂಸಂಪ್ರ[ದತ್ತ][ವಾನ್] (ಎಇ. VIII. ೦೪೬-೭; ೭ನೆಯ ೩೩). [ ? + ಊರ್ ]

**ಮೊಗವಚ್ಚ** (ನಾ). ಮುಖದಲ್ಲಿ ಧರಿಸುವ ಒಲೆ, ಮೂಗುಬಟ್ಟು ಮುಂತಾದ ಒಡವೆ : ನಿಜದಿಗ್ವಿಜಯೋದ್ಗತಿವಿಕ್ರಮಪ್ರಭಾವಂ ತನಗೆಂಪು ಸೊಂಪೆಸೆವ ಸಂದುರದಂಗಮಂದಾಗೆ ನೋಡ ಭೂಕಾಂತೆಗೆ ಮೆಚ್ಚುವೆತ್ತ ಮೊಗವಚ್ಚಮನಾಗಿಸಿದಾ ಚಳುಕ್ಯರೋಳ್ (ಕ್ಷೇತ್ರಾ. XVIII, ೨೯೭–೧೨;1188); ನಾಗಾರಿ ಧಮ್ಮಿಲ್ಲ ನಾಗಾರಿ ಮೊಗವಚ್ಚ . . . ನಾಗಾರಿ ಪಗೆಯಂತಿರೂಪ್ಪ ಕುಚಕುಟ್ಮಳಂ . . . ನಾಗಮೋಹಿಸಿಯೆಸೆದಳು (ಲಂಗಪು. ೨೩-೩೬).

[ ಮೊಗ + ಪಚ್ಚ$_2$ ]

**ಮೊಗವಟ್ಟ** (ನಾ). ಆನೆ, ಕುದುರೆ ಮುಂತಾದ ಪ್ರಾಣಿಗಳ ಮುಖಕ್ಕೆ ಹಾಕುವ ಒಂದು ಬಗೆಯ ಅಲಂಕಾರಸಾಧನ : "ಮೊಗವಡಮುಶ್ರೀಭಂಗಳ ಮೊಗವಟ್ಟಂ" (ಕರ್ಣಾಟ. ೩೯). 'ಮುಖಪಟ್ಟೆ' . 'ಮೊಗವಡ' ಪರಾ. [ < ಸಂ. ಮುಖಪಟ್ಟ ]

**ಮೊಗವಟ್ಟವ** (ನಾ). ಸಮ್ಮುಖ; ಎದುರು : ಶ್ರೀಪೃಥುವಿಗಂಗನ ಸೂಳೆ ಬೀರಕ್ಕನ ಮಗಂ ಎಜಿಕಳಿಂಗಂ ಪೃಥುವಿಗಂಗ ಮೊಗವಟ್ಟವದೊಳೆ ತಲೆಗಳಯಿಸಿ ಸತ್ತಂ (ಪ್ರಾಆ. ೦೯೪೪, ೦೦-೨ ; ಸು. ೨ನೆಯ ೩೩).

[ ಮೊಗ + ? ]

**ಮೊಗವಡ**, ಮುಕಾಡು, ಮುಖವಾಡ, ಮುಖಾಡ. ಮೊಕವಾಡ. ಮೊಗವಾಡ, ಮೊಗಾರ (ನಾ). ೧. ಮೇಲುಮುಸುಕು; ಅವಗುಂಠನ: ಮೊಗವಡಂಗವಿದಿರ್ದ ಕೂಸು ಭಟ್ಟವಿತ್ರಂಗೆ ಕುಡಿವೆಂದು ಕೀಜು ಚಿಲಾತ ಪುತ್ರಂ ಬೇಡಿದೊಡಂ ಕುಡದಿರ್ದೊಡೆ (ವಡ್ಡಾರಾ. ೦೭೭-೩). ೨. ಆನೆ, ಕುದುರೆ. ಎತ್ತು ಮೊದಲಾದುವುಗಳ ಮುಖಕ್ಕೆ ಹಾಕುವ ಒಂದು ಬಗೆಯ ಅಲಂಕಾರಸಾಧನ: ಇಕ್ಕಿದ ಲೋಹವಕ್ಕರಿಕೆಗಳುಮುರ್ಚಿದ ಮೊಗ ವಡಂಗಳುಂ . . . ಬೆರಸೆಱಂಕೆವೆರಸಿದ ಕಾಲಗಿರಿಗಳೆ ತಳರ್ವಂತೆ ತಳರ್ವ ಮದಾಂಧಗಂಧಸಿಂಧುರಂಗಳುಮಂ (ಶಂಕಥಾ. ೦೦-೩೦ ವ): ಮದನಮಂದ ಗಜಕ್ಕೆ ಪಿಡಿದ ಮೊಗವಡಮೆನಿಸಿ (ವರ್ಧಕ. ೭-೦೨ ವ); ಪೊರ್ಕುಳ ಗಂಟೆಯ ಮೋಹಿಸುವ ಮೊಗವಡದ ರೂಹಿಸುವ ನೊಸಲ ಕನ್ನಡಿಯ ಕಡುಚೆಲ್ವ ಕೊಡಂಕೆಯ ಲಂಬಿಸುವ ಚಮರದ ಚಾರುತರಭೂಷಣಂ ಭೀಷಣಮಾಗೆ

(೧೦೪೬-೬-೩೩ ವ). ೩. (ಅಲಂ) ಮುಖಭಾವ; ಮುಖಮುದ್ರೆ: ಭೂಪಾಲಕನ ಮೊಗವಡದ ದುಗುಡವನುಗಿವೆ ನಾನೆಂದ (ಕುವ್ಯಾ.ಕ. ೨೦-೨). **ಮಕಾಡು:** ೪. ಪ್ರಾಣಿಗಳ ಬಾಯಿಗೆ ಕಟ್ಟುವ (ಹಗ್ಗದ) ಕುಕ್ಕೆ : ಒಂದು ಗಟ್ಟಿಯಾದ ಮಕಾಡು ಕೊಡುವೆ; ಬಿಗಿದುಕೊಂಡು ಹೋಗು (ಹೊಂಮು.೩೨). **ಮುಖವಾಡ :** ೩. ಸಮಾಧಾನದ ಮುಖವಾಡವನ್ನು ತಾಳಿ ಕುಳಿತಿದ್ದಳು ಶಾಂತಲೆ (ಶಾಂತಲಾ. ೨೬೬). ೫. ಮುಖಕ್ಕೆ ಹಾಕಿಕೊಳ್ಳುವ ಬೇರೆ ವ್ಯಕ್ತಿ, ಪ್ರಾಣಿ ಇತ್ಯಾದಿಗಳ (ಕೃತಕವಾದ) ಮುಖಾಕೃತಿ : ಈ ಭೂತಾರಾಧನೆಯಲ್ಲಿ ಹೆದಿಯ ಮುಖವಾಡವನ್ನು ಅದರ ಪಾತ್ರಿಯು ಧರಿಸಿ ಕುಣಿಯುವುದು ವಾಡಿಕೆಯಾಗಿದೆ (ಜಾನಗೀ. ೬೦); ಕಂಡೆ ನನ್ನ ಅಂತರ್ಯಾದಮರಪುರುಷನನು ತೆರೆಯಲಿಹನ ಮನದ ಮುಖವಾಡ ತೊಟ್ಟುಕೊಂಡ ಭದ್ರಾಕಾರ ಘನನ (ಅರಳು. ೦೬೯-೨); ಎಲ್ಲರೂ ಸೀನುಗಳ ಬೊಬ್ಬೆಯನ್ನೇ ಎಬ್ಬಿಸಿದ್ದರೂ ನಾನು ಮಾತ್ರ ಶೀತನಿರೋಧಕ ಮುಖವಾಡವನ್ನು ಧರಿಸಿದಂತೆ ಪ್ರಶಾಂತನಾಗಿದ್ದೆ (ಪಂಬಿರು. ೩೬).. ೬. (ದೇವರಿಗೆ ತೊಡಿಸುವ) ಚಿನ್ನ, ಬೆಳ್ಳಿ ಮುಂತಾದ ಲೋಹಗಳಿಂದ ತಯಾರಿಸಿದ ಮುಖದ ಆಕೃತಿ : ಇಂದೂ ಮಾನ್ಯಿಯಲ್ಲಿ. . . ಅವರು ಸಾಮಾನ್ಯವಾಗಿ ಕೂಡುತ್ತಿದ್ದ ಸ್ಥಳ ಮತ್ತು ನಿರ್ಯಾಣ ಹೊಂದಿದ ಕಾಲದಲ್ಲಿ ಒರಗಿಕೊಂಡು ಕುಳಿತಿದ್ದ ಕಂಬಕ್ಕೇ ಮುಖವಾಡವನ್ನಿಟ್ಟು ಪೂಜಿಸುವ ಸಂಪ್ರದಾಯವನ್ನು ನೋಡಬಹುದು (ಜಗಜ್ಯೋ. ೦೩೬) ; ಮಾರುತಿಯ ಮುಖಕ್ಕೆ ಬೆಳ್ಳಿಯ ಮುಖವಾಡದ ಗಂಭೀರತೆ ಭವ್ಯತೆಯನ್ನೇ ತಂದುಕೊಟ್ಟಿತ್ತು (ಹಬ್ಬ. ೫). ೭. (ಅಲಂ) ಸೋಗು; ನಟನೆ : ದೇಶಸೇವೆ ನಿಖಿಲನಂತಹ ಉದಾತ್ತರಿಂದ ಆಗುತ್ತದೆಯೋ ? ಅಥವಾ ದೇಶಸೇವೆಯ ಮುಖವಾಡವನ್ನು ಧರಿಸಿದ ಸಂದೀಪನಿಂದಲೋ ? (ರವೀಂದ್ರ. ೩೩) ; ಸಭ್ಯತೆ ಒಂದು ಸಾಮಾಜಿಕ ಮುಖವಾಡ (ಪಾಶ್ಚಾ. ೨೯೦). **ಮುಖವಾಡ :** ೫. ಹೊಗರೊಗುವ ಬಚ್ಚಳೆಯ ನಂದಿಯ ಮೊಗದ ಮಾಳ್ಕೆಯೊಳಹ ಮುಖಾಡವ ನಗುತ ಶಂಕರದಾಸಿಮಯ್ಯನ ಮುಖಕೆ ಸೇರಿಸಿದ (ಶಂಕದಾ. ೬-೫). **ಮೊಕವಾಡ :** (೪). **ಮೊಗವಾಡ :** ೧. ಒಜತೆಯಗ್ಗಣಿಯನತಿಭಕ್ತಿಯ ಕರದೊಳು ಚೆಚ್ಚರದೆ ಮೊಗವಾಡದಾ ಕೇಶಿರಾಜಯ್ಯಂಗೆ ತರಿಸುತಿರೆ (ಪಾಸೋಕ. ೩-೨೫). ೫. ನಿಮ್ಮ ಶರಣರ ಸಂಗದಿಂದೆ ಎನ್ನ ನಂದಿಯ ಮೊಗವಾಡ ನೊಸಲ ಕಣ್ಣೆಂಬ ಅಹಂಕಾರವ ಮುಂದುಗೊಂಡಿದ್ದೆನಯ್ಯ (ಶೂನ್ಯಸಂ. ೩೬೫-೧೬೬) ; ಆನೆಯು ಮೊಗವಾಡವ ಧರಿಸಿದವನೇ (ಗಣೇಶ. ೦-೦೧). ೮. ಮುಖಮಂಟಪ ; ಮೊಗಸಾಲೆ : ಕಿಱುವಱಿಯನೆಱಂಕೆಯೊಳ್ ಪುದುಗಿಗೂಡಿನ ಮೊಗವಾಡದೊಳಿರೆಯಿರೆ . . . ಜೋಡಿಗನ ಬರವನೆ ಪಾರ್ವ ಪೆಣ್ಬಕ್ಕಿಗಳ ತಂಡದಿಂದೆಯುಂ (ರಾಮಾಶ್ವ. ೪-೦); "ಉದಿರ್ದ ಪೂವುಡಿ ಬನರಾಣಿಯ ಮೊಗವಾಡದ ಪಳಿಕನ ಪೊಸಂತಿಲೊಳ್ ಬರೆದ ರಂಗವಲ್ಲಿ"ಯಂತಿದ್ದಿತು (ಹಸುಹೂ. ೨೩೪); ಮಂದಾಕಿನಿ ಉಪ್ಪರಿಗೆಯ ಮೊಗವಾಡದಿಂದ ಕೂಗಿ ಕೇಳಿದಳು (ಇಕ್ಷ್ವ. ೨೩೦). **ಮೊಗಾರ :** ೮. ಕರೆಯದೆ ಕಾಡಿ ಕಂಟಿಸುವ ಕೊಂಟಣಿಯುಂ ನೊಣಗಜ್ಜಿ ತಿಂಗೆ . . . ಕಾಳಿ ಕೊಳ್ಗಱಿಯುಮಂ ಮುಱಿದಿಕ್ಕಿಗೆ ಮಾರಿ ಭೈರವಂ ಹರಹುಗೆ ಮೇಳೆಯುಂ ಮುಱಿಗೆ ಮಾಳಬಿಗಿಂಪು ಮೊಗಾರಮೆತ್ತುವೆಂ (ಲೀಲಾವ. ೨-೦೦೬; ಸೂಕ್ತಿಸು. ೮-೩೬೯ ನೋ). 'ಮುಖಾರ' ಪರಾ. [< ಸಂ. ಮುಖಪಟ್ಟ./ತಮಿ. ಮುಕಪಟ್ಟು, ಮುಕ್ಕಾಟು ; ಮಲ. ಮುಕಪಟ್ಟು, ಮುಕ್ಕಾಡು ; ತೆಲು. ಮೊಗವಡ, ಮೊಗವಾಡ, ಮೊಗವಾಳ. / ಮರಾ. ಮುಖವಟ, ಮುಖವಟಾ, ಮುಖವಟೀ, ಮುಖೋಟಾ]

**ಮೊಗವಡಂಗಳೆ** (ಕ್ರಿ). ಆನೆ, ಕುದುರೆ ಮುಂತಾದುವುಗಳ ಮುಖಕ್ಕೆ ಹಾಕಿರುವ ಅಲಂಕಾರಸಾಧನವನ್ನು ಕಳಚು, –ತೆಗೆ : ಅಗಳಾಕೆಯ ಮೇಲುದೋಸರಿಸೆ ಮೊಗವಡಂಗಳೆದ ಮದನಮಾತಂಗಕುಂಭಯುಗಳದಂತಿರ್ದ ನೆಲೆಮೊಲೆಯಂ ಕಂಡು (ಅಸಂಕ. ೬-೯ ವ): ಪರಿಚಾರಕಿಯರ್ ಬರುತಿರ್ದರೊಡ್ಡಿ ಸುತ್ತವರನೆ ಕೆಯ್ಯದಿಂ ಮೊಗವಡಂಗಳೆದಂಗಜಕುಂಭಿಯೆಂಬಿನಂ (ಪಾರ್ಶ್ವಪು. ೬-೯೪). [ ಮೊಗವಡ + ಕಳೆ$_1$ ]

**ಮೊಗವಡದೆಱೆ**[3] (ಕ್ರಿ). ಮುಖದ ತೆರೆಯನ್ನು ಸರಿಸು ; ಮೇಲುಮುಸುಕನ್ನು ತೆಗೆ : ಮಾರಿ ಮೊಗವಡದೆಱೆವವೊಲು ಜಜ್ಝಾರಮಾನಾಳುಗಳು ನಿಜದಾತಾರನವಸರಕೊದಗಿ ಹಣವಿನ ಋಣನ ನೀಗಿದರು (ಕುವ್ಯಾದ್ರೋ. ೦-೫೦). [ ಮೊಗವಡ + ತೆಱೆ$^3_1$ ]

**ಮೊಗವರಿಕೆ** 'ಮೊಗವಱಿಕೆ' ನೋ.

**ಮೊಗವರಿಗೆ** (ನಾ). (ಆನೆಗಳ) ಮುಖಕ್ಕೆ ಹಾಕುವ ಗುರಾಣಿಯಾಕಾರದ ರಕ್ಷಣೆಯ ಸಾಧನ : ಗುಳ ಬಿಗಿದ ಱೆಂಚೆಯಂ ಮೊಗವರಿಗೆ ಕವಳಿಕೆಯಗಳೆ ನಿಂದ ಸಬಳಿಗರು ಜೋದಸಂಕುಳ . . . ವೀರಡಾಡೆಗಳುವೆರಸಿ ನಿಂದವು ಕರಿಗಳು (ಸೋಮಶ. ೫-೩೦) ; ಕರಿಗಳ ಕೊರಳ ಮುಱಿಯೆಸು ಪೋರಣದ ಮೊಗವರಿಗೆಗಳ ಖಂಡಿಸುವ . . . ಜೋದರ ಧುರಚಮತ್ಕೃತಿ ಬೆಡಗನಿತ್ತುದು ದೇವಸಂತತಿಗೆ (ಕುವ್ಯಾಶ. ೪-೬೬). [ ಮೊಗ + ವರಿಗೆ ]

**ಮೊಗವಱಿಕೆ**, ಮೊಗವರಿಕೆ (ನಾ). ಮುಖಪರಿಚಯ ; ಗುರುತು : "ಪರಿಚಯಂ ಸಂಸ್ತವಮೆನಲ್ಕೆ ಮೊಗವಱಿಕೆ [ಶಾಂ. ತ]" (ಮಂಗರಾ. ೦೩೪-೩೨). **ಮೊಗವರಿಕೆ :** ಈ ಮುಖದ ಮೊಗವರಿಕೆಯು ನನಗಿಲ್ಲದಿದ್ದಿರಬಹುದು (ಮಂತ್ರಶ. ೯೦-೦೫). [ ಮೊಗ + ಅಱಿಕೆ ]

**ಮೊಗವಱಿತ** (ನಾ). = ಮೊಗವಱಿಕೆ: "ಸಂಸ್ತವಃ, ಪರಿಚಯಃ– ಈ ೨ ಮೊಗವಱಿತಂ" (ಹಲಾಯು. ೦೨೬-೪೮); ಮದುವೆಯ ತುಪ್ಪವಂ ಬಡಿಸಿ ಮೊಗವಱಿತವಂ [ಶಾಶಂ. ಮುಖದಱಿತವಂ, ಮುಖವನಱಿತವ] ಮಾಡಿಕೊಂಬೆನು (ಸೋಮಶ. ೩-೩೬). [ ಮೊಗ + ಅಱಿತ ]

**ಮೊಗವಾಡ** 'ಮೊಗವಡ' ನೋ.

**ಮೊಗವಾಡನಾಟಕ** (ನಾ). ಮುಖವಾಡವನ್ನು ಹಾಕಿಕೊಂಡು ಆಡುವ ನಾಟಕ: "(ಕಲಾವಿನೋದಿಗಳು ಮೊಗವಾಡ ಧರಿಸಿ ಆದಿಯಲ್ಲಿ ಮೂಕನಾಟಕವಾಗಿ ಆಡುತ್ತಿದ್ದ, ಅನಂತರ ಸಂವಾದ, ಸಂಭಾಷಣೆ, ಸಂಗೀತ, ಮೊ.ನ್ನೊಳಕೊಂಡಿದ್ದ) ನಾಟಕವಿನೋದ ; ಮೊಗವಾಡನಾಟಕ" (Masque. ೩೦೪೩). [ ಮೊಗವಾಡ ( < ಮೊಗವಡ ) + ನಾಟಕ ]

**ಮೊಗವಾವುಡ**, ಮೊಗಪಾವಡ (ನಾ). ೧. ಮುಖದ ಮೇಲೆ ಹಾಕಿಕೊಳ್ಳುವ ಮುಸುಕು : ಅವಗುಂಠನ : ಸಂಬಳಿಗೆಯ ಸಂಚಿ ಮೊಗವಾವುಡ ರನ್ನಗಂಬಳಿ ಹೊನ್ನ ಹಾವುಗೆಯ ಹೊಂಬಣ್ಣ ಮೆಯ್ಯ ಮಾನಿನಿಯರಾ ಕುವರಿಯ ಬೆಂಬಳಿವಿಡಿದೆಯ್ದಿದರು (ಸೋಹಶ. ೨೪-೬). ೨. ಮುಖವನ್ನು ಒರೆಸಿಕೊಳ್ಳುವ ಬಟ್ಟೆ: ಬಿಡದೆ ಚುಂಬಿಸಿದಧರವನು ತೊಡೆದಲ್ಲದೆ ಯೋಗ್ಯವಲ್ಲೆಂದು ಮೊಗವಾವುಡವಿಡಿದಿರ್ದಳೊತ್ತಿನಲಿ (ಸೋಹಶ. ೪-೬). **ಮೊಗಪಾವಡ :** ೧. ಮುನ್ನೆ ಶಿವಮುಗ್ಧ ದೇವರೆಂದುಂ ನಾಡೆ ಮೊಗಪಾವಡವ ಮಾಡಿಕೊಂಡಿರ್ದದೊರ್ಪಿ ನೆಲದೊಳ್ಬೀಳೆ ತನ್ನ ಮುಖಪದ್ಮವನದಂ ಭವಿ ಕಂಡನೆಂದಸುವ ಬಟ್ಟು (ಪಾಸೋಕ. ೦೦-೪೬).

[ ಮೊಗ + ಪಾವುಡ$_1$ ]

**ಮೊಗವಾಸ** (ನಾ). ಬಾಯಿಯನ್ನು ಸುವಾಸನೆಗೊಳಿಸಲು ಬಳಸುವ ಒಂದು ಬಗೆಯ ಸುಗಂಧದ್ರವ್ಯ ; ಮುಖವಾಸ: ಸುಖಿಸುವರೊಂದು ತಿಂಗಳುತ್ತಮ ಸುಗಂಧಾನುಲೇಪನದಿಂದೆ ಮೊಗವಾಸದಮಲತಾಂಬೂಲದಿಂ ಮಧುರ ಮಧುಪಾನದಿಂದೆಸೆವ ಸಂಯೋಗದಿಂದೆ (ಕೈವಲ್ಯ. ೦೫-೪೪).

[ < ಸಂ. ಮುಖವಾಸ ]

**ಮೊಗವಾಳೆ** (ನಾ). ೧. ಒಂದು ಬಗೆಯ ಬಾಳೆ : ಕಳಿದುರುಳಿದ ಗಜದಂತೆ ಕೈಕಾಲ್ಪಾಲಗಳಿನಾ ನೆಲನೊಪ್ಪಿದುದು ಕಳಲೆ ಕದಳಿ ಮೊಗವಾಳೆ ಬಲ್ಲಿಸಿಕಿಲ ಹಳುವ ಕುಮ್ಮರಿಗಡಿದಂತೆ (ಸೇಬಸಂ. ೨೬-೬೦). ೨. ಪರಿಮಳದಿಂದ

ಕೂಡಿದ ಹೂವುಗಳನ್ನು ಬಿಡುವ ಒಂದು ಬಗೆಯ ಸಸ್ಯ (?) : ಸುರಗಿ ಮೊಗವಾಳೆ ಬಂದುಗೆ ಪರಿಪರಿಯ ಸುಗಂಧಕುಸುಮ ವಳಕುಳಮಿರ್ಕುಂ (ಹರಿಶ್ಚಂ. ೬-೯೭). [ ಮೊಗ₂ + ಬಾಳೆ₁ (< ಬಾಟಿ³) ]

**ಮೊಗವಿಕ್ಕು** ' ಮೊಗಮಿಕ್ಕು ' ನೋ.

**ಮೊಗವಿಡು** ' ಮೊಗಮಿಡು ' ನೋ.

**ಮೊಗವೀಣೆ** ' ಮೊಗಬೀಣೆ ' ನೋ.

**ಮೊಗವೀರ** ' ಮೊಗೇರ ' ನೋ.

**ಮೊಗವೂಱು** (ಕ್ರಿ). ಮುಖವನ್ನು ಊರು.—ಶಿಮಿ.– ಚುಚ್ಚು: ತೋರಿದು ವಾದ ಮಲ್ಲಿಗೆಯ ಮೊಗ್ಗೆಗಳೊಳ್ ಮೊಗವೂಱಿ ಬಿಟ್ಟು ಭ್ರೋರ್ಭ್ರೋಲೆನೆ ಪಾಯ್ದು . . . ಕಾಱಿ ಕಡಲಿಟ್ಟುವು ಮತ್ತಮಧುವ್ರತಾಳಿಗಳ್ (೧೮ಶಾಪ. ೯-೧೦೬). [ ಮೊಗ + ಊಱು₁ ]

**ಮೊಗವೆಱು ?** (ಕ್ರಿ). ಕಾಣಿಸಿಕೊಳ್ಳು (?) : ಅಗಣಿತ ಬುದ್ಬುದ ತೆರೆ ನೊರೆ ಸುಳಿ ನಾಭಿ ಮೊಗವೆತ್ತು ಜಂತು ಮೇಲಕ್ಕೆ ನೆಗೆವ ನೀರ್ವನಿಗಳು ಮುತ್ತಿನಂದದಿ ಕಣ್ಗೆ ಸೊಗಯಿಸಿತಾ ಪುಣ್ಯಗಂಗೆ (ವೀರಭದ್ರ. ೭-೩೩). [ ಮೊಗ + ಪೆಱು₁ ? ]

**ಮೊಗಶಾಲೆ** ' ಮೊಗಸಾಲೆ ' ನೋ.

**ಮೊಗಸಂದಿಸು** (ಕ್ರಿ). ಅಭಿಮುಖವಾಗು ; ಎದುರಾಗು: ಮೊಗಸಂದಿಸಿದವರಂಗಭವಗ್ರಹವಡರ್ದಂದದಿ ನೋಡಿದರು . . . ಪೂರ್ಣೇಂದುವದನೆ ನಟಿತರ್ಪಗಳ್ (ಜಯಿನಾ. ೩-೩೩). [ ಮೊಗ + ಸಂದಿಸು ]

**ಮೊಗಸನ್ನೆ** (ನಾ). ಮುಖಭಾವದಿಂದ ತಿಳಿಸುವ ಸೂಚನೆ ; ಮುಖದ ಮೂಲಕ ಮಾಡುವ ಸಂಜ್ಞೆ : ಬಂದ ನೃಪಾಲಕರ ಮೊಗಸನ್ನೆಯೊಳು ಕಳುಹಿದನು ಮನೆಗಳಿಗೆ (ಕುಮಾ.ಅ. ೬-೦); ಅರಸೆ ನಿನ್ನನುಮತವೆಯೆನೆ ನುಡಿಯದೆ ಭರತೇಶ ಮೊಗಸನ್ನೆಗೊಟ್ಟು (ಭರತೇ. ೩೯-೯೦) ; ಅಸುರಪರ್ದನನುಜೆ ಮೊಗಸನ್ನೆಯಲಿ ಬೀಳ್ಕೊಳುತ (ಕೋಣಗಯ. ೦೩-೯೩). [ ಮೊಗ + ಸನ್ನೆ₂ ]

**ಮೊಗಸಾಲೆ**, ಮುಖಸಾಲೆ, ಮೊಗಶಾಲೆ (ನಾ). ದೇವಸ್ಥಾನ, ಅರಮನೆ, ಭವನ ಇತ್ಯಾದಿಗಳ ಮುಂಭಾಗದ ಹಜಾರ ; ಪಡಸಾಲೆ ; ಮುಖಮಂಟಪ : " ಪ್ರಘಣಃ, ಪ್ರಘಾಣಃ, ಅಳಿಂದಕಃ – ಈ ೩ ಮೊಗಸಾಲೆ " (ಹಲಾಯು. ೩೦-೧೪೪); ಸಪ್ತತಾಳೋತ್ತುಂಗರವ್ಯಹರ್ಮ್ಯದರಡನೆಯ ಮೊಗಸಾಲೆಯೊಳಿಟ್ಟ ಪೊನ್ನ ಪಡಿಗಂಗಳೊಳಂ (ಶಂಕಪು. ೪-೯೩ ಪ); ರಾಜಧಾನಿ ಬನವಾಸಪುರದ ಜಯಂತೀ ಮಧುಕೇಶ್ವರದ ಮೊಗಸಾಲೆಯುಮಂ (ಕ್ರಿಶಾ. XI-i. ೦೦೩-೨೫ ; 11ನೆಯ ಶಶ) ; ನೆರೆಮನೆಯ ಮೊಗಸಾಲೆಯನ್ನು ಪ್ರವೇಶಿಸಿದನು (ಪುನರು. ೩). **ಮುಖಸಾಲೆ** : ಮುಂದಣ ಸೋಭನ × ಮಂತವುಂ ಪುರವುಂ ಮುಖಸಾಲೆಮಾಡಮುಂ ಮಾಡಿಸಿ ಚಕ್ರಿಯೊಳ್ಪಡೆದು ಶಾಸನಮುಂ (ಕ್ರಿಶಾ. XI-i. ೬೪-೦೪; 1028). **ಮೊಗಶಾಲೆ** : ಬಂದವನು ಮೊಗಶಾಲೆಗೆ ಕೋಪಾಟೋಪದಿಂದ ಮೆಟ್ಟಿ ಱಿದು ಕಂಪಿಲನು (ಕುಮಾರರಾ. ೩೪-೦೫೫); ಛಪ್ಪಮಂಟಪದ ಮುಂದಣ ಮುತ್ತಿನ ಮೊಗಶಾ[ಪಾಠಾಂ. ಸಾ]ಲೆಯೊಳ್ . . . ಓಲಗಂಗೊಟ್ಟು (ರಾಜಶೇ. ೦೩-೬೦ ಪ); ಆಕೆ ನೇರವಾಗಿ ಮೊಗಶಾಲೆಗೆ ಬಂದಳು (ಐರಾವ. ೦೭). [< ಸಂ. ಮುಖಶಾಲಾ./ತುಳು. ಮೊಕಸಾಲೆ, ಮೊಗಸಲೆ, ಮೊಗಸಾಲೆ; ತೆಲು. ಮೊಗಸಾಲ, ಮೊಗಸಲ]

**ಮೊಗಸಿಂಡರಿಸು** (ಕ್ರಿ). ತಿರಸ್ಕಾರ, ಜುಗುಪ್ಸೆ, ಕೋಪ ಮೊದಲಾದ ಭಾವಗಳನ್ನು ವ್ಯಕ್ತಪಡಿಸಲು ಮುಖವನ್ನು ಗಂಟುಹಾಕಿಕೊಳ್ಳು: ''ಮೊಗಸಿಂಡರಿಸು—ಮೋರೆಯ ಗಂಟಿಕ್ಕು'' (ಪಾಪಶಬ್ದ. ೩೭). [ಮೊಗ + ಸಿಂಡರಿಸು]

**ಮೊಗಸಿರಿ**, ಮುಖಸಿರಿ (ನಾ). ೧. ಮುಖದ ಚೆಲುವು. ..ತೇಜಸ್ಸು,– ಕಾಂತಿ : ಕೋಡಗದ ಮೊಗಸಿರಿಗೆ ಕಾವಲಿಯೋಡು ಕನ್ನಡಿಯಾಯ್ತು (ಕುಮಾ.ಕ. ೯-೦೩); ಬಿಂಬಾಧರದ ಕೆಂಬೆಳಗಿನೊಡನೆ ಸುಲಿಪಲ್ಲ ನುಣ್ಬೆಳಗು ಮೊಗಸಿರಿಯ ಪ್ಪುಸಿರಿಯಂ ಪಸರಿಸೆ (ರಾಜಶೇ. ೦-೦೩೫ ಪ). **ಮುಖಸಿರಿ** : ೨. ಮುಖಭಾವ; ಮುಖಮುದ್ರೆ : ತಿರಿವ ಗೊರವಾಗಿ ಕಂಡಕಂಡವರೆಲ್ಲ ನಗುತಿರೆ ಮುಂಡೆಯರ ಮುಖಸಿರಿಯ ತಾಳಿದುಕೊಂಡು ಬಂದುದು ಭಂಗವಲ್ಲವೆ ಪತಿಯೆ ಬಿಡು ಸತಿಯ (ಕೌಶಿರಾ. ೩೬-೦೪). ೩. (ಕರಾ) ವಿಗ್ರಹಗಳಿಗೆ ತೊಡಿಸುವ ಚಿನ್ನ ಅಥವಾ ಬೆಳ್ಳಿಯ ಮುಖವಾಡ. [< ಸಂ. ಮುಖಶ್ರೀ]

**ಮೊಗಸು₁**. ಮೊಗೆಸು (ಕ್ರಿ). ೧. ತೊಡಗು ; ಉಪಕ್ರಮಿಸು ; ಆರಂಭಿಸು : ''ಮೊಗಸು–ಉದ್ಯೋಗಾರಂಭೇ'' (ಶಮಣಿ) ; ಮನೆಗೆಲಸಕ್ಕೆ ಸಯ್ಯು ಮೊಗಸಲ್ಕಣಮಾಱದೆ ನೋಡಿ ಹೂಂಕೃತಧ್ವನಿ ಮಿಗಲಿತ್ತಲಾಗುಳಿಸಿ (ಸಮಶ. ೯-೦೦೯); ಮಂತ್ರಿಪುತ್ರರುಮಂ ಕೂಡಿಕೊಂಡು ನವಕ್ರೀಡೆಗೆ ವಿನೋದಜಳಕೇಳಿಗಳಂ ಮೊಗಸಲೊಡನೆ (ಅರ್ಧನೇ. ೪-೦೩೨ಪ); ಪೊಗಸಿನೊಳ್ ಮೊಗಸಿ ಬೈಗುಂಪರೆಗಂ ಬೇಟೆಮೆಸದಿನಸುವರೆಯಾಗಿ (ತಂತ್ರಪು. ೬-೪ ಪ). ೨. ಎದುರಿಸು; ಪ್ರತಿಭಟಿಸು; ಹೋರಾಡು : ಕಾಲನಕವಿಗೆ ಮೊಗಸಿನಿಂದ ಕಪಾಲಿಗಿಮ್ಮಿಗಿಲೆನಬಹುದು (ತೊರರಾ. ೩-೨೦-೬೦); ಇವನ ಭೇದಿಪೊಡವನೆಡೆ ಗಾಣನವನ ತಾನಿವನು ಭೇದಿಪೊಡೆಡೆಯಿಲ್ಲ ಅವಿರಣದಂತೆ ಮೊಗಸಿ ಬಾಣಬಾಣಗಳ್ ತವೆಯುರುಳಿದವಂತರದಲಿ (ವರ್ಧಕ. ೭-೦೪); ತುಡುಕು ಮೊಗಸಡಗು ಮುರಕಡರೊಡರ್ಚು(ಕೃಷ್ಣರಾ. ೨೮-೪೫).೩.ಸುತ್ತುವರಿ; ಆಕ್ರಮಿಸು; ಆವರಿಸು : ಕಳ್ಳ ಗಂಧಕ್ಕೆ ಮೊಗಸಿದ ನೊಣಂಗಳೆಲ್ಲಂ ಸಾವುದಂ ಕಂಡು (ಧರ್ಮಾಮೃ. ೧೨-೦೯೬). ೪. ಧಾಳಿಮಾಡು; ಎರಗು : ಲತಾಂಗಿಯರ ಸುಯ್ಯ ಕಂಪಿಂಗಳಿಗಳ್ ಮೊಗಸಿ ಮುಸುಱಿದುವು (ಅದಿಪು. ೦೦-೭೦); ತಳರ್ದು ಕುರುಕ್ಷೇತ್ರಕ್ಕೆ ಮೊಗಸಿಪಾಗಳ್ (ಶಂಕಭಾ. ೧೦-೨೭ ಪ); ಗಿಳಿವಿಂಡ್ಗಿಡಿಗನು ಮೊಗಸಿದಂತೆ (ಲಕ್ಷ್ಮಭಾ. ೭-೩-೩). ೫. ಇಚ್ಛಿಸು; ಬಯಸು; ಅಪೇಕ್ಷಿಸು : ವಸುಷೇಣಂ ಲಗ್ಗೆಮಾಡಲ್ಕೊಗಸಿ ಪೊಗಿಸಿ ದುರ್ಗಕ್ಕಭ್ಯಾತ್ರಮಂ (ಅನಂಪು. ೦೨-೨೦); ವಿಮಲಾಂಗಿಯುನ್ನತದ ರೂಪಪೇಕ್ಷಿಸಿ ಮೊಗಸಿ (ಪಾಶೋತ್ತ. ೦೦-೩೦); ನೀರ್ವಕ್ಕಿಗಳ್ ಜಳಕೇಳಿಗೆ ಮೊಗಸಿದುವು (ರಾಮಾಶ್ವ. ೩೦-೨೪). ೬. (ಪ್ರಯಾಣಕ್ಕೆ) ಹೊರಡು; ಸಾಗು: ಅಟ್ಟಿಱಿನೊಳಯೋಧ್ಯೆಗೆ ಮೊಗಸಿದ್ದನಱಿಕೆಯ ಪಱಿ ಪಲವುಮೆಸೆಯ ಭರತಮಹೀಶಂ (ಆದಿಪು. ೦೪-೨); ಕಳದ ಹೆಣನೊಟ್ಟಿಲಲಿ ಮೊಗಸುಪೊಡಳುಕಿಹರು (ಕುಮಾ.ಶೀ. ೩-೦). ೭. ಮೂಡಿಸು; ಪ್ರಕಟಿಸು : ಸೊಕ್ಕುಜವ್ವನೆ ತರುಣವರಹಾಸವುಂ ಮೊಗಸೆ ಕೆಂಬಲ್ಲಿನುರು ರಶ್ಮಿ ಪರಹಿಕೊಂಡುದು (ಶರಶು. ೭-೨೩). **ಮೊಗೆಸು** : ೮. ತುಂಬಿ ಹೊರಸೂಸುವಂತೆ ಮಾಡು : ಹಾಲುಹೊಳೆ ಮೊಗೆಸಿದನು (ಪಪರಾ. 1,೯೭೦). ೯. (?): ಯಿದಕೆ ಆವವ ಅಳುಪಿದವರಿಗೆ ವಾರಣಾಸಿ ಆ ಗಂಗೆಯ ತಡಿಯಲಿ ಯೇಳುನೂರು[ಕ]ಪಿಲೆ ತಂಮ ತಂದೆ ತಾಯಿಯನು ಕೊಂದವರು ಮೊಗೆಸುಗೆ (ಎಕ. VIII (R), ಹಾಸನ. ೦೨೫-೨೦ ; 1458).

**ಮೊಗಮೊಗಸು** (ದ್ವಿರುಕ್ತಿ) : ಮೊಗಮೊಗಸಿ ಮುಂಬರಿವ ಕುದುರೆ ಸಾರಥಿಗಳಂ. . . ತಱಿವವನ ಬಿಲ್ಲನಿಕ್ಕಡಿಗೈದು ಬೊಬ್ಬಿಱಿದು (ಕೃಷ್ಣಾ.ಭಾ. ೦೨-೨೨). [ಮೊಗ₁ + – ಸು₁./ತಮಿ. ಮುಯಲ್; ತೆಲು. ಮೊಗಿಯು]

**ಮೊಗಸು₂** (ನಾ). ೧. ತೊಡಗುವಿಕೆ; ಪ್ರಾರಂಭಿಸುವಿಕೆ : ಮೊಗಸಂ ಮೆಲ್ಲನೆ ಪರಿಪೂರ್ಣತೆಗೊಳ್ದೇರುವಾರ್ಪನವರ ತನಿವ ಗೆಲ್ಲವ ಕವಿ ಸಿರಿವಿಪಂ (ಶಂಕಶ. ೦೫-೮). ೨. ಬಯಕೆ; ಅಪೇಕ್ಷೆ: ''ಬಾಕುಳಿ, ಮೊಗಸು, ಪಸಂ, ಇಚ್ಛೆ – ಈ ೪ ಇಚ್ಛೆ'' (ಕಶಪಾ. ೩೭-೨೩೩); ''ಇಚ್ಛೆಯು ಮೊಗ[ಪಾಠಾಂ. ಮುಗು]ಸೆಂದೆನಿಕ್ಕು'' (ಕಬ್ಬಿಕೈ. ೭೨); ಜೊಬ್ಬಲಸ್ನೀಯೆ ಸನಿಹಿಸಿದ ಶಾಪೊಗ್ರಗಸಂ (ಗಿರಿಜಾ. ೨೭-೦೪). [< ಮೊಗಸು₁./ ತುಳು. ಮೊಗಸ್]

**ಮೊಗಸುತ್ತು** (ನಾ). ೧. ತಲೆಗೆ ಸುತ್ತುವ ವಸ್ತ್ರ; ಪಾಗು : ಅಂತು ಬಂದು ಮೊಗಸಾಲೆಯೊಳ್ಮೆಯ್ಯಿಕ್ಕಿ ಮೊಗಸುತ್ತಿನ ದುಗುಲದ ಬಿನ್ನಪದ ಸೆಜಗನಧರಪಲ್ಲವಕ್ಕೆ ತೆಗೆದು . . . ಉದಯಸುಂದರಕುಮಾರನರಮನೆಯ ಬಾಗಿಲೊಳ್ಬಂದು ನಿಂದಿರ್ದಪನೆಂದು ಬಿನ್ನವಿಸೆ (ಶಂರಾವಿ. ೨-೨೮). ೨. ದಿಗ್ಭ್ರಮೆ; ಕಕ್ಕಾಬಿಕ್ಕಿ; ಗೊಂದಲ : ಅವರು ಮೊಗಸುತ್ತಿನ ನಿರಾಶೆಯ ದುರ್ಮನದಿಂದ ಅವುದಾದರೂ ಅನಾಹುತಕ್ಕೆರಗಿ ದಾರಿಗಿಡದಂತೆ ನೀನು ನೋಡಿಕೊಳ್ಳುತ್ತಿರಬೇಕು (ಚಿಟ್ಟಿಕ. ೩೯-೨೨). 'ಮುಖಸುತ್ತು' ಪರಾ. [ಮೊಗ + ಸುತ್ತು$_2$]

**ಮೊಗಸೂನಿಗೆ** (ನಾ). (ರಥದ) ಮುಂಭಾಗದಲ್ಲಿ ಸಿಕ್ಕಿಸಿರುವ ಕಠಾರಿ : ಚೂರಿಸುವ ಮೊಗಸೂನಿ[ಪಾಠಾಂ. ಲಿ]ಗೆಯ ಕೊಲ್ಲಾರಿಗಳ ಶರಬಂಡಿಗಳ ಹೋದೇರು ಕವಿದವು (ಕುವ್ಯಾಕ. ೨-೪೪).

[ಮೊಗ + ಸೂನಿಗೆ (< ಸೂಲಿಗೆ)]

**ಮೊಗಳು. ಮುಗುಟು** (ನಾ). ೧. ಎಳನೀರಿನ ಮೇಲುಭಾಗದ (ಕೆತ್ತಿ ತೆಗೆಯುವ) ಸಿಪ್ಪೆಯ ಭಾಗ : ಎಳನೀರ ಕುಯಿದಿಳುವಿ ತಣ್ಣಸವಾದ ತಾಣದೊಳಗಿರಿಸಿ ಮುಱುದಿನ ಮೊಗಳ ಕಳೆದು ನಿಂಬೆಯ ಹಣ್ಣಿನ ಹೊಸ ಹುಳಿಯ ಹಿಳಿದು (ಸೂಶಾ. ೨-೩೦); ಎಳನೀರಂ ಮೊಗಳ ತೆಗೆದು ಅದರಲ್ಲಿ ೧ರತೂಕ ಅಳಲೆಕಾಯ ಚೂರ್ಣವ ಹಾಕಿ ತಕ್ಷಣವೆ ಕುಡಿಯಲು ರಕ್ತಾತಿಸಾರಂ ಕೆಡುಗುಂ (ಸಕವೈ. ೩೦೦); ಹನ್ನೆರಡು ಎಳನೀರುಗಳನ್ನು ಕಿತ್ತು, ಕೆತ್ತಿ ಮೊಗಳು ತೆಗೆದುಕೊಟ್ಟನು (ಶಂಗಾಳ್ವ. ೩೦೯). **ಮುಗುಟು** : ೨. (ಕರಾ) ತೆಂಗಿನಕಾಯಿಯ ತೊಟ್ಟು. ೩. (ಕರಾ) ಗಡ್ಡೆಗಳ ಮೊಳಕೆ.

[ದೇ.॥ ತಮಿ. ಮುಕಿಟು; ತುಳು. ಮುಗಡ್, ಮುಗಡ, ಮುಗಡೆ]

**ಮೊಗಾರ** 'ಮೊಗವಡ' ನೋ.

**ಮೊಗುಂ** 'ಮೋಘವು' ನೋ.

**ಮೊಗುಚು** 'ಮಗುಚ್ಚು' ನೋ.

**ಮೊಗೆ$_1$** (ಕ್ರಿ). ೧. ದ್ರವಪದಾರ್ಥವನ್ನು ಬೊಗಸೆ ಅಥವಾ ಪಾತ್ರೆಯ ಮೂಲಕ ತೋಡು, – ತುಂಬಿಕೊಳ್ಳು : "ಮೊಗೆ – ಜಲಾಕರ್ಷಣೇ, ಭೂಭೇದೇ ಚ, ಘಟಭೇದೇ ಚ" (ಕವಿಪ್ರ); ಮಹಾಂಬುಧಿಯ ಗೆತ್ತು ಮುಗಿಲ್ವಿಡಿಗಿ ನೀರ ಮೊಗೆವವೊಲ್ . . . ನೀರಾಡುತ್ತಿರ್ದುವು ಸುತ್ತ ಮಲ್ಲಿ ವನಕರಿನಿವಹಂ (ಶಾಂಪು. ೦೦೮); ಬೆಲಗನೆ ಶಿವಿಕೊಂಡು ಕುಡಿಯಲ್ ಮೊಗೆಯಲ್ ಕೊಡಗೊಂಡು . . . ಬಗೆದುದಂದು ಜನಂಘ ನಚಂದ್ರಿಕಾಂಬುವಂ (ಅಜಿತ. ೬-೧೫); ತಲೆಗಳ ಬಟ್ಟಲಿಂ ಮೊಗೆದು ನೆತ್ತರನಾಗಳೆ ಈಂಟಿಯಿಾಂಟಿ . . . ಕೈಪಱಿಯೊಳಾಡುವ ರಕ್ಕಸಿಯರ್ಕಳೊಪ್ಪಿದರ್ (ಕದ್ವಿ. ೨೯೫); ಜಲವನಂಜುಳಿಯಿಂದ ಮೊಗೆದೀಂಟಲು (ಕುವ್ಯಾಭೀ. ೨೩-೦೮). ೨. ಬಾಚು; ಗೋರು : ಸಹಕಾರದಾಡಿಮಫಲವ್ರಾತಂಗಳಂದಾಗಳುಂ ತನಿಗಂಪು ಮೊಗೆದತ್ತಿ (ಅರ್ಜನೀ. ೨-೭೦); ಸಿಂಹಪೀಠದ ಸಿಂಗರದ ಶಿಶುವ ಮೊಗೆದಪ್ಪಿ ತೆಗೆದಪ್ಪಿ (ಗಿರಿಜಾ. ೩-೦೦೯ ವ); ಸೂಸುವ ಮಿದುಳ ಮೊಗೆದೆಣ್ಣೆಸಗೆ ಸಾಲಿಡುವ ಅಪಗನಾಯಿದು ಕೆದಱಿ ರಕುತವ ತುಡುಕಿ ಚೆಲ್ಲುವ ಕರಿಯ ಬರಿಕೈ ಬಿಡಿಸಿದವು ಹುಟ್ಟಾಗಿ ಯಮರಾಜನ ಪರಿಗ್ರಹಕೆ (ಕುವ್ಯಾಭೀ. ೪-೮೨). ೩. ಕುಡಿ; ಈಂಟು : ಅಮೃತವೃಷ್ಟಿಗಳಂ ಕಱೆವಂತು ಪೇಟ್ವ ತಿರ್ದಿದ ಕೃತಿಯಂ ಬುಧರ್ ಕಿವಿಗಳಿಂ ಮೊಗೆವರ್ (ಪಮುಪ. ೦-೩೪); ಸರಸಿಯುಲಿ ಮೊಗವಿಟ್ಟು ಮೊಗೆದವು ಪರಜಲವನೆರಡಳ್ಕಿ ಹಿಗ್ಗಲು (ಕುವ್ಯಾದ್ರೋ. ೦೦-೩೪). ೪. ಹೊರಹೊಮ್ಮಿಸು; ಹೊರಹಾಕು : ತರುಣಿ ಪೀಣೆಯ ಮಿಡಿವಳು . . . ಮಧುರಗೀತದ ನುಡಿಯೊಳು ತನ್ನೆದೆಯ ಭಾವವ ಮೊಗೆವಳು (ಪಾಂದೀ. ೩೨-೮); ಪ್ರತಿಕ್ಷಣಕ್ಕೂ ಮಾಡಿದ ಪಾಪವೆಲ್ಲ ಇತಿಹಾಸವಾಗಿ ಅವಳ ದುಃಖವನ್ನು ಮೊಗೆಯುತ್ತಿತ್ತು (ಗ್ರಾಮಾಯ. ೨೩೪). ೫. (ತುಂಬಿ) ಹೊರಸೂಸು : ತುಳುಕು : ಸುರರಳ್ಕೆ ದಿಗಿಭಂಗಳ್ ಬಳ್ಕೆ . . . ಬೆಟ್ಟುಗಳ್ ಜರಿಯೆ ಕಡಲ್ ಮೊಗೆಯೆ ಔತ್ಪಾತಕಮೊಗೆಯೆ ಸಬ್ಬಸಬ್ಬರಂ ಕಡಿದಾಯ್ತು (ರಾಮಾಶ್ವ. ೦೩೦-೨೭); ಇವಳ ರಸದೆದೆಯ ಮುನ್ನೀರು ಮೊಗೆದೆದ್ದು ನೊರೆಯ ಚಿಮ್ಮಿತ್ತು (ಪಚಿರಾ. I, ೪೩೪). ೬. ಎರೆ; ಸುರಿ : ತರಕಾರಿ ಗಿಡಗಳಿಗೆ ಏತದ ನೀರು ಮೊಗೆಯಲು . . . ಉದಾಸೀನಪಟ್ಟುದಿಲ್ಲ (ಶ್ರೀಂಶಿಸು. ೩). ೭. ಧಾಳಿಯಿಡು; ಅಕ್ರಮಿಸು : ಏನ ಹೇಳುವೆನದನು ನೃಪ ತವಸೂನುವಿನ. ಮೋಹರದೊಳಳ್ಳಿಱಿವಾನೆಗಳನುಪ್ಪರಿಸಿ ಗಗನವ ಮೊಗೆವ ಕುದುರೆಗಳ (ಕುವ್ಯಾದ್ರೋ. ೪-೨೦); ಹಾಯಿತುರಿ ಹೊದಱಿದ್ದ ಕೊಡಲಿಯ ಬಾಯ ಧಾರೆಯಲಱಿಳಜಗ ಜರಿದಾಯೆನಲು ಸೀವರಿಸಿ ಶಿಖಿ ಮೊಗೆದುದು ಮರುತ್ಪಥವ (ತೊರಾ. ೧-೦೭-೦೦). ೮. (ಅಲಂ) ಸೆರೆ ಹಿಡಿ : ಉತ್ತರಗೋಗ್ರಹಂ ಪಿರಿದುಮಾಗ್ರಹಮಂ ಮನದೊಳ್ ತಗುಳ್ಚೆ . . . ಬಂದು ಮುತ್ತಿ ಮೊಗೆದಂ ವಿಭು ಗೋಕುಲಮಂ ವಿರಾಟನಾ (ಶಂಕರಾ. ೮-೯೨). ೯. ನುಂಗು; ಕಬಳಿಸು : ಅಡವಿಯಂ ಮೊಗೆದು ಸುಡುವಗ್ನಿ ಗಾವೋಶನದ ಗೊಡವೆಯೇವುದು (ಹತಳಾ. ೮-೪೫); ಭುಗಿಲು ಭುಗಿ ಭುಗಿ . . . ಎಂದೊಗೆದು ವಳ್ಳುರಿಯುಗಳಲಂಬರಕುಗಿದು ಜಿಗಿದುದು ಮತ್ತೆ ಹರಿದುದು ಲೋಕ ಬೆದಱುತಿರೆ ಮೊಗೆದು ಮುಕ್ಕಿತು ಕೊರಳ ಕಡಿಯಲು ನೆಗೆದು ಹಾಱಿತು ರುಂಡ ಶೋಣಿತವೊಗುತ (ಕೌಶಿರಾ. ೩೭-೭೪).

**ಮೊಗೆಮೊಗೆ** (ದ್ವಿರುಕ್ತಿ) : ಮೊಗೆಮೊಗೆದು ನೆತ್ತರಂ ಪವನಸುತಂ ನೆತ್ತಿಯೊಳೆಱೆದೆಱೆದಿನಿಸಱಿಯೊತ್ತಿ . . . ಕೇಶಮನೆತ್ತಂ ಪಸರಿಸಿದಂ (ಶಂಕಭಾ. ೧೨-೦೫೩); ಶಂಭುಯೋಗಸುಧಾಮೃತವನೆಯ್ದೆ ಮೊಗೆಮೊಗೆದು ಪೀರ್ದು (ಶವ್ಯಕಾ. ೨-೭೮); ಒಡೆದು ಬೊಮ್ಮನಜಾಂಡವೊಂದೆಡೆ ಕಡಲ ಮೊಗೆಮೊಗೆದಲ್ಲಿ ತುಂಬುದೆ (ಕೌಶಿರಾ. ೦೫-೪೩).

[ದೇ.॥ ತಮಿ. ಮುಕ; ತುಳು. ಮುಗವು. ಮೊಗವು; ಕೋತ. ಮುಪ್]

**ಮೊಗೆ$_2$. ಮುಗೆ$_1$. ಮೊಘೆ** (ನಾ). (ನೀರು ಮುಂತಾದ ದ್ರವಪದಾರ್ಥವನ್ನು ತುಂಬಿಕೊಳ್ಳಲು ಬಳಸುವ) ಮಣ್ಣಿನ ಪಾತ್ರೆ : ಎಮ್ಮಾಕೆಯ ಕೈಯ ಮೊಗೆಬು ನೀರಿನಲ್ಲಿ ನಾಮುವ ತೇಯಲಾಗಿ ನಾಮವುಳಿದು ನೀರಳಿಯಿತ್ತು (ಸಕವ. ೪. II, ೨೦೮-೩೩೦); ಒಂದು ಮೊಗೆಯಕ್ಕಿಗಚ್ಚೊಂದು ಮೊಗೆ ಮಜ್ಜಿಗೆಯನೊಂದಾಗಿ ಬೆರಸಿ (ಸೂಶಾ. ೨-೪೯); ಪೊಸಮೊಗೆಯೊಳುಂ ಸುಣ್ಣ ತುಂಬಿರಿಸಿರೆ (ಗುರುಜಾ. ೦೫-೭೫). **ಮುಗೆ$_1$** : ಇಪ್ಪತ್ತು ಮುಗೆ ನೀರು ಹೊಯ್ದು (ಸಕವೈ. ೨೨೩). **ಮೊಘೆ** : ಅರವಟ್ಟಿಗೆಗೆ ಗುಡಾಣ ಬಿಂದಿಗೆ ಕರಗ ಮೊಘೆಗಳ ಕ್ರಯಕ್ಕೆ (ಶಾಇ. IX-i. ೪೩೬-೨೪; 1412).

[< ಮೊಗೆ$_1$./ತಮಿ. ಮುಕ್ಕೈ; ತುಳು. ಮುಗಯಿ. ಮುಗೆ. ಮುಗ್ಯೆ]

**ಮೊಗೆ$_3$** (ನಾ). ಒಂದು ಬಗೆಯ ಭೂಮಿ; ಹಳದಿಬಣ್ಣದಿಂದ ಕೂಡಿದ ಫಲವತ್ತಾದ ಭೂಮಿ : ಸರ್ವನಮಸ್ಯ ಮೊಗೆ ಮತ್ತರಾಱಕಂ (ಶಾಇ. XI-ii. ೦೦೯-೫೨; 948); ದೇವರ್ಗ್ಗೆ ಬಿಟ್ಟ ಬೆದ್ದಲು ಮೊಗೆ ಮತ್ತ ೬ (ಶಾಇ. IX-i. ೯೬-೦೫; 1050 ?); ಶ್ರೀಮಾನ್ಯವಾಗಿ ಬಿಟ್ಟ ಕೆಯಿ ಹಗರೆಯಿಂ ಪಡುವಲು ಮೊಗೆ ಮತ್ತರು ೪ (ಶಾಇ. IX-i, ೩೦೭-೩೭; 1223). 'ಮೊಗರು$_2$' ಪರಾ. [ ? ]

**ಮೊಗೆತರ್** (ಕ್ರಿ). ತುಂಬಿಕೊಂಡು ತರು : ಛಂದೋಂಬುರಾಶಿಯೊಳ್ ಮೊಗೆತಂದದವನಾತ್ಮೀಯಸತಿಗೆ ನಾಕಿಗನುಸಿರ್ದಂ (ಛಂದೋಂಬು. ೧-೩೦).

[ಮೊಗೆ$_1$ + ತರ್]

**ಮೊಗೆಬಲೆ** 'ಮೊಗೆವಲೆ' ನೋ.

**ಮೊಗೆವಲೆ. ಮೊಗೆಬಲೆ** (ನಾ). ಮೀನನ್ನು ಹಿಡಿಯಲು ಬೆಸ್ತರು ಉಪಯೋಗಿಸುವ ಒಂದು ಬಗೆಯ ಬಲೆ : ಆವ ಹಂಜರಕೂಳಿ ಮೊಗ[ಗೆ]ವಲೆ ಯಾವ ಗಾಣವು ಬೀಸುವಲೆಯುಱಿ ತೀವಿದುದಕದ ಮಡುವೆಯಿಂದು ಸಂಗ್ರಾಮಭೂಮಿ ೯ಣಾ (ಕುವ್ಯಾಕ. ೨೨-೨೮). **ಮೊಗೆಬಲೆ** : "ದೊಡ್ಡ

ಬಲೆಯಲ್ಲಿ ಮೀನು ಹೆಚ್ಚಾಗಿ, ಆ ಬಲೆಯನ್ನು ದಡಕ್ಕೆ ಎಳೆಯಲಾಗದೆ ಹೋದಾಗ, ಕೆಲವು ಮೀನುಗಳನ್ನು ತೆಗೆದುಬಿಡುವುದಕ್ಕಾಗಿ ಅದರೊಳಕ್ಕೆ ಹಾಕುವ ಬೇರೆ ಸಣ್ಣ ಬಲೆ: ಮೊಗೆಬಲೆ" (spiller. ೩೦೪೩).

[ಮೊಗೆ$_1$ + ಬಲೆ$_1$]

**ಮೊಗೆವಾಲು** (ನಾ). ಮಡಕೆಯ ತುಂಬ ಇರುವ ಹಾಲು : ಶುನಕಿ ಮೊಗೆವಾಲಂ ಕುಡಿದು ಪೋಗೆ (ಬಸವ. ೦-೨೦).

[ಮೊಗೆ$_2$ + ಪಾಲು$_1$ (< ಪಾಲ್$_1$)]

**ಮೊಗೆಸು** 'ಮೊಗಸು$_1$' ನೋ.

**ಮೊಗೇರ,** ಮೊಗವೀರ (ನಾ). (ಕರಾ) ಮೀನುಹಿಡಿಯುವವನು ; ಬೆಸ್ತ ; ಮೀನುಗಾರ : ಫಡ ಮೊಗೇರರ ಮಗನೆ (ಕುಮುದಾ. ೩೭) ; ಎಲೆ ಮೊಗೇರನ ಮಗನೆ ಗಳಹದಿರು (ಕರ್ಣಾಕಾ. ೭) : ಕನ್ನಡ – ತುಳು ನಾಡುಗಳಲ್ಲಿ ಸ್ವಭಾವತಃ ಅತಿಶೂರರೂ ಧರ್ಮಶ್ರದ್ಧಾಳುಗಳೂ ಆದ ಮೊಗೇರರೆಂಬ ಅಂಬಿಗರಿರುತ್ತಾರೆ (ಕನ್ನ೩. ೯೩). **ಮೊಗವೀರ :** ಕಡಲಲ್ಲಿ ತಮ್ಮ ಭಾಗ್ಯವನ್ನು ಅರಸಲು ಹೋದ ಮೊಗವೀರರ ದೋಣಿಗಳು ಪುಟ್ಟ ಬಾತುಕೋಳಿಗಳಂತೆ ಕಾಣುತ್ತಿದ್ದುವು (ಕಡಲು. ೬-೫೩) ; ತರುವಾಯ ಮೊಗವೀರ ಹುಡುಗಿಯರನ್ನು ಬ್ರಾಹ್ಮಣಕನ್ಯೆಯರನ್ನಾಗಿ ಪರಿವರ್ತಿಸಿ . . . ಮದುವೆ ಮಾಡಿಕೊಂಡರು (ದೇವಹೊ. ೪೪). [← ತುಳು. ಮೊಗೇರೆ]

**ಮೊಗೇರತಿ** (ನಾ). ಬೆಸ್ತರವಳು ; ಮೀನುಗಾತಿ : ಯಾರೋ ತನ್ನೀತೆಯೇ ತಡ ಮಾಡಿ ಹೊರಟ ಮೊಗೇರತಿ ಇರಬೇಕು (ಹೊಸಕ್ಕ. ೫೦).

[ಮೊಗೇರ + – ತಿ$_1$ (< – ಇತ್ತಿ)]

**ಮೊಗ್ಗಂಬ** (ನಾ). ಮೊಗ್ಗುಗಳನ್ನೇ ತನ್ನ ಬಾಣಗಳಾಗಿ ಉಳ್ಳವನು ; ಮನ್ಮಥ : (ಶಕುಂ. ೬. II. ೯೫).

[ಮೊಗ್ಗು$_3$ (< ಮೊಗ್ಗೆ) + ಅಂಬು$_2$ + – ಅ$_7$]

**ಮೊಗ್ಗರ,** ಮೊಕರ (ನಾ). ೧. ಮೊತ್ತ ; ರಾಶಿ : "ಮೊತ್ತಮೊಬ್ಬುಳಿಯು ಮೊಗ್ಗರಂ" (ಶಬ್ದಕಂ. ೧೦೭) ; ಅಬಲೆಯ ಕಣ್ಣ ಬೆಳಗಿಂಗೆ ಬೆದಱ ಕಟ್ಟಿಲೆಯ ಮೊಗ್ಗರಂ ಮುಗುಳ್ದು ಮೂದಲಿಸಿ ಕವಿವಂತೆ (ಅರ್ಧನೇ. ೪-೫೦ ವ) ; ಕೋರಕದ ಕುಟ್ಮಲದ ಮೊಗ್ಗೆಯ ಮೊಗ್ಗರ ಗಳನಾಯ್ದು ಕೊಯ್ದು (ಅನಂಪು. ೭-೧೪ ವ). ೨. ಗುಂಪು ; ತಂಡ ; ಸಮೂಹ : ಕರಿಗಳ ಮೊಗ್ಗರವ ಮುರಿಗೆಡಹಿದನು (ಕುಮಾ ಭೀ. ೬-೪೭) : ಹೆಗ್ಗರಡಿಯ ಹಿಂಡಿದೆ ಕಾಳ್ಕೋಣನ ಮೊಗ್ಗರವಿದೆ (ಕುಮಾಸಾಂ. ೨೭-೭೦) ; ಮಗ್ಗಿಯನು ಗುಣಿಸುವ ಮೊಗ್ಗರವ ಜೋಯಿಸರು ಅಗ್ಗವನು ಮಳೆಯನಱಿಯರು (ಸರ್ವಜ್ಞ. ೦೭೦೪). ೩. ದಂಡು ; ಸೈನ್ಯ : ಬಲ : "ಮೊಗ್ಗರಮೆನೆ ಬಲಂ" (ಶಬ್ದಕ. ೦೭) ; ಬಿಲ್ಲನೀಟ್ಟುಕೊಂಡೆತ್ತುತೆ ಮೊಗ್ಗರಂ ಕೆಡೆವಿನಂ ಬಿಡದೆಚ್ಚು (ಚಂದ್ರಪು. ೫-೧೧೧) : ಮೊಗ್ಗರವ ಕೆದಱದರು ಹೊಯ್ದರೆ ನುಗ್ಗಿದರು (ಕುಮಾ ಭೀ. ೪-೪) ; ಲಗ್ಗೆ ಮಸಗಿತು ಕೂಡೆ ರಕ್ಕಸ ಮೊಗ್ಗರದ ಮುಂಬಿನಲಿ (ತೊರರಾ. ೭-೨೦-೫೦). **ಮೊಕರ :** ೪. (ಸೈನಿಕರ) ಪಂಕ್ತಿ ; ಸಾಲು : ಎಟ್ಟಿದಿಸ್ವರು ನರಮೊಕರಮನೊಡೆದೊಡಪ್ಪಡೆತ್ತದು ಪುಣಿ ಸೂರ್ಪ್ಪಾಲ ನೆಲ್ಲುಪಾಣ್ಮಯುವಳೆವದು (ಪ್ರಾ ಅಂ. ೦೯೩೦. ೩೭-೭ ; ಸಂಕಿಸದು ೬೪). [ದೇ. ॥ ತೆಲು. ಮೊಗ್ಗರ, ಮೊಗರ]

**ಮೊಗ್ಗರಂಬಾಯ್,** ಮೊಗ್ಗರವಾಯ್ (ಕ್ರಿ). ಒಟ್ಟಾಗಿ ನುಗ್ಗು : ಗುಂಪಾಗಿ ಮೇಲೆ ಬೀಳು : ಮುಂ ಗುಡಿಗೆದಱ ಮೊಗ್ಗರಂಬಾ[ಶಾಕಾಂ. ಬೊ. ವಾ. ಬ]ಯ್ದು (ಸಂಬರ. ೦೮-೩೫). **ಮೊಗ್ಗರವಾಯ್ :** ಮಾರಿ ಕನಲ್ದು ಸಂಗರಕೆ ಮೊಗ್ಗರವಾಯ್ದುವೊಲ್ (ದಶಕು. ೭-೭೫) ; ಉಲಿದು ಘೂರ್ಮಿಸಿ ಕೆರಳಿ ಮೊಗ್ಗರವಾಯ್ವುದೆ ಬಱಿದೆ (ಪ್ರಭುಲೀ. ೦೩-೦೦).

[ಮೊಗ್ಗರ + ಪಾಯ್$_1$]

**ಮೊಗ್ಗರಂಬೊಯ್** (ಕ್ರಿ). ಗುಂಪಾಗಿ ನುಗ್ಗಿ ಹೊಡೆ, – ಧಾಳಿಮಾಡು : ಮುಸಗಿ ಬೊಬ್ಬಿಟ್ಟು ವೆಸೆಗೆಸಗೆ ಪರಿದು ಮೂದಲಿಸಿ ಮುಂಗುಡಿಗೆದಱ ಮೊಗ್ಗರಂಬೊಯ್ದು (ಗಂಟ. ೭-೭೭ ವ). [ ಮೊಗ್ಗರ + ಪೊಯ್$_1$ ]

**ಮೊಗ್ಗರಣೆ** (ನಾ). ಒಂದು ಬಗೆಯ ಆಯುಧ : ಗದೆ ಚಂದ್ರಹಾಸ ವಿಚಂಡಿ ಮೊಗ್ಗರಣೆ ಕೃಪಾಣ ದಂಡರತ್ನಾಯುಧಾವಳಿಗಳಿದ್ದುವು ಸರ್ವಮಂಡಲವೆನೆ ಭುಗಿಲಿಡುತ (ಭರತ. ೨೦-೦೩೩). [ ? ]

**ಮೊಗ್ಗರವಾಯ್** 'ಮೊಗ್ಗರಂಬಾಯ್' ನೋ.

**ಮೊಗ್ಗರಿಸು** (ಕ್ರಿ). ಒಟ್ಟಾಗು ; ಸೇರು ; ಗುಂಪುಗೂಡು : ಬಗ್ಗಿಸಿ ಮೊಗ್ಗರಿಸುತ್ತೊಗ್ಗುಗೆಡದೆ ನಡೆಗೋಂಟೆಯಂತೆ ನೆಲೆವೆರ್ಚಿ ನಿಂದು (ಗಂಟ. ೩-೫೫ ವ); ಅರ್ವ ಪೋರ್ವ ಮೊಗ್ಗರಿಪ ತೊಡಂಕುವಗ್ಗಲಿಪ ಬಿನ್ನಣಮೊಪ್ಪೆ ಕಡಂಗಿ ಕಾದಿದರು (ರಾಜಶೇ. ೭-೫೩) : ಮೊಗ್ಗರಿಸಿ ಮೊರೆ ಮುಗಿಲೆ! ಮಿನುಗು ಮೊನೆಮಿಂಚೇ ! (ಗರಿಬಂ. ೪೮-೨).

[ ಮೊಗ್ಗರ + – ಇಸು$_3$ ]

**ಮೊಗ್ಗಳ** 'ಮೊಕ್ಕಳ' ನೋ.

**ಮೊಗ್ಗಿಸು$_1$** 'ಮೊಟ್ಟಿಗಿಸು' ನೋ.

**ಮೊಗ್ಗಿಸು$_2$** (ಕ್ರಿ). ಬಗುಳು : ಗಗನದೊಳಗೆ ಹುಣ್ಣಿಮೆ ಹೋದ ಮುಱುದಿನ ಪಗಲೆಸೆದಿರಲಾತನೊಡಲ ಮೃಗ ಮೊಲಗಂಡು ಮೊಗ್ಗಿಸು ವೊಂದಂದದಿ ಮೊಗವೆತ್ತಿ ಗಳಹುತೆಯ್ದಿದುವು (ಮೋಹತ. ೦೪-೦೫).

[ ಮೊಗ್ಗು$_?$ + – ಇಸು$_3$ ]

**ಮೊಗ್ಗು$_1$** 'ಮೊಟ್ಟು$_1$' ನೋ.

**ಮೊಗ್ಗು$_2$** 'ಮೊಟ್ಟು$_2$' ನೋ.

**ಮೊಗ್ಗು$_3$** 'ಮೊಗ್ಗೆ' ನೋ.

**ಮೊಗ್ಗೆ,** ಮುಗ್ಗು$_2$, ಮುಗ್ಗೆ$_1$, ಮೊಗ್ಗು$_3$ (ನಾ). ೧. ಪೂರ್ತಿಯಾಗಿ ಅರಳದೆ ಇರುವ ಹೂವು ; ಮುಗುಳು ; ಕುಟ್ಮಲ : "ಸಜ್ಜುಕಮುಂ ಮುಗುಳು ಮೊಗ್ಗೆ ಕುಟ್ಮಳಮದು ತಾ" (ಶಬ್ದಕಂ. ೭೪); ಜಳಜದ ಮೊಗ್ಗೆಯಂತೆ ಮುಗುಳಂತೆ . . . ಕೆಂಪನಾಳ್ದ ಕೋಮಳಶುಕಶಾಬಕ ಪ್ರಕರಮಂ ತೆಗೆದಂ ದಯೆಗೆಟ್ಟು ಲುಬ್ಧಕಂ (ಕಾದಂಪೂ. ೦೭೮) ; ಪೊಕ್ಕತ್ತು ತುಂಡಾಗ್ರದಿಂದೊಡೆದಂಭೋಜದ ಮೊಗ್ಗೆಯಂ ಮಧುಕರಂ (ಅರ್ಧನೇ. ೨-೫೭) ; ಕುಸುಮದ ಮೊಗ್ಗೆಯಲಿ ರಚಿಸಿದರು ಸಿರಿಮುಡಿಯ (ಕುಮಾ ಆ. ೮-೨) ; ಮಲ್ಲಿಗೆಯ ಮೊಗ್ಗೆಗಳನಮಲೋತ್ಪಲ್ಲಕುಂದಪ್ರಸವದೂರ್ವ . . . ಸಲ್ಲಲಿತ ಪುಷ್ಪಂಗಳಲಿ ಭೂವಲ್ಲಭನು ಪೂಜಿಸಿದನು ಜಗದೇಕವಲ್ಲಭನ (ಸಭಾಗ. ೫-೫-೦೨). **ಮುಗ್ಗು$_2$ :** ೧. ಅವು ತದ್ದಶನನಿಕರಮಲ್ಲಳ ಮೊಲ್ಲೆ ಮುಗ್ಗಲ್ಲ (ಶರಶು. ೮-೭) ; ಮಾವನ ಮಗಾ ಮುಗ್ಗಾಗಿ ಬಾರೊ, ತುರುಬಿಗೆ (ಹುಟ್ಟಿಹ. ೮೭). **ಮುಗ್ಗೆ$_1$ :** ೧. ಚೆಲ್ಲಿದುವು ಸಹದೇವ ಶಿರದಲಿ ಮಲ್ಲಿಗೆಯ ಮು[ಶಾಕಾಂ. ಮೊ]ಗ್ಗೆಗಳು (ಕುಮಾ ಸ. ೯-೭೫). ೨. (ಬಟ್ಟೆಯ ಮೇಲೆ ಮೂಡಿಸಿದ) ಮೊಗ್ಗಿನಾಕಾರದ ಚಿತ್ರ,— ಮಾದರಿ : ಕೆಂದಾವರೆಮುಗ್ಗೆಯ ಕುಪ್ಪಸವ ತೊಟ್ಟಳು (ಶ್ರೀಕೃಪಾ. ೦೭). **ಮೊಗ್ಗು$_3$ :** ೧. ನನೆ ಮೊಗ್ಗು ಅರಳು ಮೊದಲಾದವರಲ್ಲಿಯ ಗಂಧವ ನಱಿವುದು (ಅದವ. ೫-೦೨) ; ಗಿಡದ ಕೈಮುಗಿಹ ಮೊಗ್ಗಾಗಿ ಮೈದೋರು ತಿದೆ (ಅನಿಕೇ. ೨೨-೨) ; ಅಜ್ಞನ ಬುದ್ಧಿ ಮೊಗ್ಗಿನ ಹಾಗೆ, ಪ್ರಾಜ್ಞನ ಬುದ್ಧಿ ಫಲದ ಹಾಗೆ (ಗಾದೆ).

[ದೇ. ॥ ತಮಿ. ಮುಕ್ಕೈ, ಮೊಕ್ಕು ; ಮಲ. ಮೊಟ್ಟು ; ತುಳು. ಮುಗ್ಗೆ, ಮೊಗ್ಗೆ ; ಕೊಡ. ಮೊಗ್ಗ್ ; ತೆಲು. ಮೊಗ್ಗ, ಮೊಗಡ; ಕುಇ. ಮೊಕೊ]

**ಮೊಗ್ಗೆಗೋಲ** (ನಾ). ಹೂವಿನ ಮುಗುಳುಗಳನ್ನೇ ಬಾಣವಾಗಿ ಉಳ್ಳವನು ; ಪುಷ್ಪಾಸ್ತ್ರ ; ಮನ್ಮಥ : ಅಗ್ಗದ ದೊರೆಯ ಕೆಳೆಯನೆಂಬ ಗರ್ವವೋ ಮೊಗ್ಗೆಗೋಲನ ಸಭೆಗಿನಿಸು ತಗ್ಗಿ ಬಾ (ಭರತ. ೪೭-೭೦).

[ ಮೊಗ್ಗೆ + ಕೋಲ್$_1$ + – ಅ$_7$ ]

**ಮೊಗ್ಗೊಡೆ** (ಕ್ರಿ). ಮೊಗ್ಗು ಅರಳು ; ಹೂವಾಗು : ಜಲಜಾಪ್ತಮಂಡಲಂ ಕಡುರೈಮಮನಾಗೊಪ್ಪಿಡುತ್ತ ಚಿತ್ತರದೊಳೆಡೆನೊಡೆಯಲ್ ಚಕೋರಿ ಸುಖವಡೆಯಲು ರಥಾಂಗ ಮೊಗ್ಗೊಡೆಯಲಾ ಮಲ್ಲಿಗೆಗಳು (ಪಂಪಭಾ. ೨೨-೯೭). [ ಮೊಗ್ಗು$_3$ ( <ಮೊಗ್ಗೆ) + ಒಡೆ$_1$ ]

**ಮೊಘಲ್** 'ಮೊಗಲ' ನೋ.

**ಮೊಘೆ** 'ಮೊಗ್ಗೆ$_2$' ನೋ.

**ಮೊಚ್ಚಿಗ**, ಮುಚ್ಚಿಗ$_2$ (ನಾ). ಚಪ್ಪಲಿಯನ್ನು ಹೊಲಿಯುವವನು ; ಮೋಚಿ : ದೊರೆಗಳ ಮನೆಮೊಚ್ಚಿನ ಮೊಚ್ಚಿಗ [ಪಾಠಾಂ. ಮುಚ್ಚಿಗ] ರಿಪರೊಂದೆಸೆಯು (ಅಭ್ಯಲೂ. ೩-೯೦). **ಮುಚ್ಚಿಗ$_2$** : ಎಲುಫ ನಾಯಿಗೆ ಹೊಲೆಯಗಂ ಮಾಂಸವನು ಮು[ಪಾಠಾಂ. ಮ]ಚ್ಚಿಗಗೆ ಬಳಿಕ ತೊವಲೆಂಬಂತೆ (ಬಸಪು. ೨೧-೯೪) ; ಗಾಣಿಗರ್ ಚಿಪ್ಪಿಗರ್ ಮುಚ್ಚಿಗರ್ . . . ಜೂಜುಗಾಜರ್ ಮುಮ್ಮುರೊದಗಿ ಬರುತಿರ್ಪರು(ಚಬಪು. ೯೭-೯೦) ; ಮುಚ್ಚಿಗರ ಕೇರಿಯಲ್ಲಿ ಬಹಳ ಜನಗಳು ಉಳಿದಿರಲಿಲ್ಲ (ಶೀಶ್ರಶ್ರ. ೧೯೩).

[ ಮೊಚ್ಚೆ (<ಮೊಚ್ಚೆಯ) + -ಇಗ ]

**ಮೊಚ್ಚೆ** 'ಮೊಚ್ಚೆಯ' ನೋ.

**ಮೊಚ್ಚೆಗಾರ** 'ಮೊಚ್ಚೆಗಾಜಿ' ನೋ.

**ಮೊಚ್ಚೆಗಾಜಿ, ಮೊಚ್ಚೆಗಾರ** (ನಾ). ಜೋಡುಗಳನ್ನು ಹೊಲಿಯುವವನು : ಮೋಚಿ : ಮೊಚ್ಚೆಗಾಜಿ ಸಕಲಾತ್ಯೇನು ಬಲ್ಲ (ಕುರಂದ. ೨-೫೭-೯). **ಮೊಚ್ಚೆಗಾರ** : ಎಣ್ಣೆ ಹಂಚುವವರು ಮೊಚ್ಚೆಗಾರರು, ಕೊರಮರು, ಮಾದಿಗರೇ ಮೊದಲಾದ ಜಾತಿಯ ಹೆಂಗಸರ ಮೈಸೋಕುವುದೆಂದು ಅಂಜಿ ದೂರದಿಂದ ಎಣ್ಣೆ ಕೊಡುತ್ತಿದ್ದರು (ಪಿಬಿಂಧ. I, ೪೯) : ಇವನು ಮೊಚ್ಚೆಗಾರನ ಮಗನೆಂದು ಹೇಳುತ್ತಾರೆ (ಜಂಗ್ಮ ೩. ೨೦).

[ ಮೊಚ್ಚೆ (<ಮೊಚ್ಚೆಯ) + -ಕಾಜಿ ]

**ಮೊಚ್ಚೆಯ**, ಮುಚ್ಚೆ$_3$, ಮೊಚ್ಚೆ, ಮೋಜ, ಮೋಜಾ, ಮೋಜು$_1$ (ನಾ). ೧. ಮುಂಭಾಗದಲ್ಲಿ ಒಳಮುಖಕ್ಕೆ ಬಾಗಿರುವ, ಅಲಂಕಾರಯುಕ್ತವಾದ ಒಂದು ಬಗೆಯ ಮೆಟ್ಟು, — ಪಾದರಕ್ಷೆ, — ಜೋಡು : ಚಿನ್ನದ ಸಮಂಗಮಪೂರ್ವದ ಮೊಚ್ಚೆಯುಂ ಪವಣ್ಬಡೆದ ಸುವರ್ಣಪಾರಿವದ ಕುಪ್ಪಸಮೊಪ್ಪೆ ಬೆಡಂಗನಾಳ್ದು (ಪಂಪಭಾ. ೯-೦೦೩) : ಗುಡಿ ನೇಣ್ ಕಂಟಣೆ ಗೋಣಿ ದಂಡಿಗೆ ಸಮಂಗಂ ಮೊಚ್ಚೆಯುಂ ಹಲ್ಲಣಂ . . . ಎಂಬಿವಿನಿತುಂ ದಂಡಿಂಗೆ ಸಾಮಗ್ರಿಗಳ್ (ಸೂಕ್ತಿಸು. ೦೮-೨೩) ; ಶಿರದೊಳಂತರು ಮೊಚ್ಚೆಯವನಾ ಚರಣದಲಿ ಸೀಸಕವ . . . ಬತ್ತಳಿಕೆಯನು ಬಲುದಿರುವಿನಲಿ ಮೋಹಿದರು (ಕುಮಾವ್ಯದ್ರೋ. ೮-೯೩). **ಮುಚ್ಚೆ$_3$** : ೧. ನಿಚ್ಚಳಗೆಲಸ ರೇಶಿಮೆಚಿತ್ರಗೆಲಸದ ಹೆಚ್ಚಿನ ಜರತಾರ ಕೆಲಸ ಮೆಚ್ಚುವಂದದಿ ಮುಚ್ಚೆ ತರತರ ಮಾಡುವ ಮುಚ್ಚಿಗಾಜರ ಕೇರಿಯೆಸೆಯೆ (ಅಭ್ಯಲೂ. ೩-೯೦) ; ಬಾಗಿಲ ಬಳಿಯಲ್ಲಿ ವಿಜಾಪುರದ ಮುಚ್ಚೆಯ ಜೋಡುಗಳು (ಶಿತುಗು. ೩೦) ; ಮಾದಿಗರಿಂದ ಮುಚ್ಚೆಯನ್ನು, ಪುರೋಹಿತರಿಂದ ಮಂತ್ರವನ್ನೂ . . . ಪಡೆಯಬೇಕಾಗುತ್ತದೆ (ಮಕಪಾದ. ೦೦೯). **ಮೊಚ್ಚೆ** : ೧. ಕಿಚ್ಚಿಂಗೆ ತಣಿವಿಲ್ಲ ಮೊಚ್ಚೆಗೆ ಹೊಲೆಯಿಲ್ಲ (ಸರ್ವಜ್ಞ. ೯೮೯) ; ಮದುವೆಯಲ್ಲಿ ವರನಿಗೆ ಕೊಡುವುದು ಕಾಲ್ಮರೆಯಲ್ಲ ; ಮೊಚ್ಚೆ (ಕರ್ನಾಟಪು. ೧೯೭) ; ಕಾಲಲ್ಲಿ ಪೂಣೆಯ ಮೊಚ್ಚೆಗಳಿದ್ದು ಕೈಯಲ್ಲಿ ಬೆತ್ತದ ಛಡಿಯಿತ್ತು (ದೇವಪ. ೮). **ಮೋಜ** : ೧. "ಹರಡಿನ ಮೇಲಕ್ಕೆ ಒಂದು ಪಾದವನ್ನೆಲ್ಲಾ ಮುಚ್ಚುವ, ಪೂರ್ತಿಯಾಗಿ ಅಥವಾ ಬಹುಭಾಗ ಚರ್ಮದಿಂದ ಮಾಡಿದ, ಪಾದರಕ್ಷೆ ; ಮೋಜ ; ಬೂಟು" (Boot. ೩೦೪೩) ; ಅವರು ಹೊಸ ಚಕ್ಕಳದ ಮೋಜಗಳನ್ನು ಹಾಕಿಕೊಂಡು (ಬಾಳಕ. ೭). **ಮೋಜಾ** : ೧. ಕಾಲಿಗೆ ಬೆಲೆಯುಳ್ಳ ಮೋಜಾ ಧರಿಸಿ ಸುಬ್ಬಣ್ಣನವರು ಸಭೆಗೆ ದಯಮಾಡಿಸುತ್ತಿದ್ದುದೇ ಒಂದು ವೈಖರಿ (ಸಂಗೀತಸಂ. ೨೬೩). **ಮೋಜು$_1$** : ೨. ಪಾದತಳದಿಂದ ಹಿಡಿದು ಮಂಡಿಯವರೆಗೂ ಬರುವಂತಹ, ಚಿನ್ನದ ಗಿಲೀಟು ಹಾಗೂ ಸರಿಗೆಗಳಿಂದ ಕೂಡಿದ ಒಂದು ಬಗೆಯ ಕಾಲುಚೀಲ : ಮಂಡಿಯವರೆಗೆ ಬರುವಂಥ ಬಹು ಲಕ್ಷಣವಾದ ಮೋಜುಗಳನ್ನು ಹಾಕಿಕೊಳ್ಳುತ್ತಾರೆ. ಈ ಮೋಜುಗಳಿಗೆ ಚಿನ್ನದ ಗಿಲೀಟು ಮತ್ತು ಸರಿಗೆ ಹಾಕಿರುತ್ತಾರೆ (ಕೃಪಾಇ. II, ೨೭೭).

[ < ಪ್ರಾ. ಮೋಚ. / ಸಂ. ಮೋಚಕ. / ಪಾರ. ಮೂಜಾ, ಮೋಜಹ್ ; ಹಿಂ. ಮೋಜಾ ; ಮರಾ. ಮೋಚಾ, ಮೋಜಾ ]

**ಮೊಟಕಿಸು** (ಕ್ರಿ). ೧. ಕುಗ್ಗಿಸು ; ಕಡಮೆಮಾಡು : ನನ್ನ ಪ್ರಶ್ನಾವಳಿಯನ್ನು ಇಲ್ಲಿಗೆ ಮೊಟಕಿಸಿದೆ (ಹಸುಹೂ. ೨೬೯). ೨. ಬಗ್ಗಿಸು ; ಬಾಗಿಸು: ಆತ ಕಾಲು ಮೊಟಕಿಸಿಕೊಂಡು, ಮೇಲಕ್ಕೆದ್ದು ನಿಂತ (ಕುಬಕೂ. ೭೮).

[ ಮೊಟಕು$_2$ + -ಇಸು$_3$ ]

**ಮೊಟಕು$_1$**, ಮುಟಕು$_1$ (ಕ್ರಿ). ತಲೆಯನ್ನು ಮುಷ್ಟಿಯಿಂದ ಗುದ್ದು, — ತಿವಿ : ಮೊಟ್ಟು : ಪಾಠದ ಕಡೆಗೆ ನಿಗವಿಲ್ಲದೆ ಕಿಟಕಿಯಾಚೆಗೆ ನೋಡುತ್ತಿದ್ದ ಹುಡುಗನ ತಲೆಗೆ ಮಾಸ್ತರು ಮೊಟಕಿದರು (ರೂಢಿ). **ಮುಟಕು$_1$** : ಲೆಕ್ಕ ಸರಿಯಾಗಿ ಮಾಡಲಿಲ್ಲವೆಂದು ಅವನು ತಂಗಿಯ ತಲೆಗೆ ಮುಟಕಿದ (ರೂಢಿ).

[ < ಮೊಟ್ಟು$_1$ ]

**ಮೊಟಕು$_2$**, ಮುಟಕು$_2$ (ನಾ). ೧. ಮೋಂಡಾದುದು ; ಮೋಟು ; ಚಿಕ್ಕದು : (ಕ). (ಗು). ೨. ಮೊಂಡಾದ ; ಮೋಟಾದ ; ಚಿಕ್ಕದಾದ : ಮೊಟಕು ಮೂಗು, ಅಗಲ್ತೆಬಾಯಿ (ಶ್ರೀರಾಪ. ೭೭). **ಮುಟಕು$_2$** : ೩. ಹ್ರಸ್ವವಾದುದು ; ದೀರ್ಘವಲ್ಲದುದು.

ಮುಟಕುಮುಟಕಾಗಿ = ಹ್ರಸ್ವವಾಗಿ ; ದೀರ್ಘವಾಗಿಲ್ಲದೆ : ಯಾವ ಅಶ್ವಗಳು ಮುಟಕುಮುಟಕಾಗಿ ಸೂಕ್ಷ್ಮವಾಗಿ ಗದ್ಗದವಾಗಿ . . . ವರಾಹ ಉಷ್ಟ್ರ ಮೊದಲಾದ್ದಕ್ಕೆ ಸಮಾನವಾಗಿಯಿರುವ ಧ್ವನಿಯುಳ್ಳವೊ ಆ ಕುದುರೆಗಳು ಶುಭಕರಗಳಲ್ಲ (ಶಾಸಂ. ೩೦೩-೧). **ಮೊಟಕಾಗು** = ಕುಗ್ಗು ; ಕಡಮೆಯಾಗು ; ಚಿಕ್ಕದಾಗು : ಮಾನನಷ್ಟದ ಆಪಾದನೆಯಿಂದ ಪತ್ರಿಕಾ ಸ್ವಾತಂತ್ರ್ಯ ಮೊಟಕಾಗುವಂತಿತ್ತು (ಕುವರು. ೩೭೩) ; 'ಮತ್ತೆ ಭೆಟ್ಟಿಯಾಗೋಣ' ಎಂದಿಷ್ಟೇ ಮೊಟಕಾಗಿ ನುಡಿದು . . . ಮುಖವನ್ನು ಹೊರಳಿಸಿದಳು (ಹೊಸಕ್ಷಿ. ೧೯೯). **ಮೊಟಕುಮಾಡು** = ಕುಗ್ಗಿಸು ; ಕಡಮೆಮಾಡು : ತಮ್ಮ ಅತ್ತೆತನದ ದರ್ಪವನ್ನು ಮೊಟಕುಮಾಡಿದರು (ಶವ್ಯಸ. ೧೭) ; ಪಕ್ಷಿಗಳು ಚಿಲಿಪಿಲಿಯನ್ನು ಮೊಟಕುಮಾಡಿ . . . ಕುಳಿತವು (ಹಸುಹೂ. ೩೦೦): ಅವರ ಆಸೆಗಳನ್ನು ಮೊಟಕು ಮಾಡಬಾರದು (ಶಿಕ್ಷದ. ೦೯೯).

[ < ಮುಟ್ಟು$_1$. / ನಾಯ್ಕ. ಮೊಟ್ಕೆರ್ ]

**ಮೊಟಲೆ** (ನಾ). ಒಂದು ಬಗೆಯ ಸಸ್ಯ : ವನಸುಂಟಿಗೆ, ಮೊಟಲೆ, ಕಿರಿಮೊಟಲೆ . . . ಲತೆಗಳಿಂದಲು (ಕೃವಾಸ. ೫೦). [ ? ]

**ಮೊಟವಣ** (ನಾ). ಒಂದು ಬಗೆಯ ತೆರಿಗೆ : ತೆರುವ ಸಿದ್ಧಾಯ ಗ ೨೩೨ ಪ ೮ ಹೊದಕೆ ಗ ೨೦ ತೂಕದ ಕುನ್ದ ಮೊಟವಣ ಗ ೩ ನೆಲೆಯ ಕಾಣಿಕೆ ಗ ೧ (ಎಕ. XV, ಬೇಲೂರು, ೨೯೮-೭೦; 1278). [ ? + ಪಣ$_3$ ]

**ಮೊಟ್ಟ** 'ಮುಟ್ಟ$_1$' ನೋ.

**ಮೊಟ್ಟನೆ** (ಅ). ಒಂದು ಅನುಕರಣಾವ್ಯಯ : ಮೊಟ್ಟನೆ ಮುಚೀದಲುಗಳುಂ ಸಿಡಿಲ್ದು ಪಾಱುವ ಸಿರಂಗಳುಂ . . . ಮಹಾಭಯಂಕರವಾಗೆ (ಪುಹಾನೇ. ೦೩-೩೯ ವ). [ ಮೊಟ್ಟ? + -ಅನೆ$_1$ ]

**ಮೊಟ್ಟಣಿಕೆ** 'ಮುಟ್ಟಣಿಕೆ' ನೋ.

**ಮೊಟ್ಟಿತ** (ನಾ). [ನಾಟ್ಯ] ಆಯತ, ಅವಹಿತ್ಥ, ಅಶ್ವಕ್ರಾಂತ, ಗತಾಗತ, ವಲಿತ, ಮೊಟ್ಟಿತ, ವಿನಿವರ್ತಿತಗಳೆಂಬ ಏಳು ಬಗೆಯ ಸ್ತ್ರೀಸ್ಥಾನಕಗಳಲ್ಲಿ ಒಂದು; **P** "ಒಂದು ಕಾಲನ್ನು ಸ್ವಭಾವವಾಗಿರಿಸಿ ಇನ್ನೊಂದು ಕಾಲನ್ನು ಅರ್ಧ ಕುಂಚಿತ ಮಾಡಿ, ಮುಂದುಗಡೆ

ಕೈಗಳನ್ನು ಮೇಲಕ್ಕೆತ್ತುವುದು : ಕಾಮರೂಪಾವಸ್ಥೆಯನ್ನು ತೋರಿಸು ವಾಗ ಇದನ್ನು ವಿನಿಯೋಗಿಸಬೇಕು '' (ಭಾಸ್ಕರಂ. ಗದ್ಯಾನುವಾದ. ೩೪೯) : ಒಂದು ಪದಂ ಸಮದಿಂ ಮತ್ತೊಂದು ಪದಂ ಕುಂಚಿತಾರ್ಥತಲದಿಂ ಮತ್ತಂ ಮುಂದಿರೆ ಕೈಗಳ್ ನಲವಿಂ ಚಂದದೆ ಮೇಲಕ್ಕೆ ನೆಗೆಯೆ ಮೊಟ್ಟಿತ ಮೆನಿಕುಂ (ಭಾಸ್ಕರಂ. ೭-೩೦). [ < ಸಂ. ಮೋಟಿತ ]

**ಮೊಟ್ಟು₁** 'ಮೊತ್ತು' ನೋ.

**ಮೊಟ್ಟು₂** (ನಾ). ಮುಷ್ಟಿಯಿಂದ ಕೊಡುವ ಹೊಡೆತ. — ಏಟು : ಕಾದಾಟದಲ್ಲಿ ಅವನಿಗೆ ನಾಲ್ಕು ಮೊಟ್ಟು ಬಿತ್ತು (ರೂಢಿ). [< ಮೊಟ್ಟು₁]

**ಮೊಟ್ಟು₃** 'ಮುಟ್ಟಿ₂' ನೋ.

**ಮೊಟ್ಟೆ₁** 'ಮುಟ್ಟೆ₁' ನೋ.

**ಮೊಟ್ಟೆ₂** (ನಾ). ತತ್ತಿ ; ಅಂಡ : '' ಪೇಶೀ, ಕೋಶಃ. ಅಂಡಂ — ಈ ೩ ಮೊಟ್ಟೆ '' (ಹಲಾಯು. ೪೦-೯೭) ; ಮೊಟ್ಟೆಗಳನು ಮಾಱುವ ಬೇಹಾರಿಗಳಿ ಟ್ಟಣಿಸುತಲೈದಿದರು (ಕಂಸವ. ೦೦-೪೦) ; ಹಕ್ಕಿಯ ಗೂಡಿನ ಮುತ್ತಿನ ಮೊಟ್ಟೆಯೋ (ಅಸಕೀ. ೩೦-೩) ; ಕೇಡುಗಾಲಕ್ಕೆ ನಾಯಿಮರಿ ಮೊಟ್ಟೆ ಇಕ್ಕಿತು (ಗಾದೆ). [ದೇ.॥ ತಮಿ. ಮುಟ್ಟೈ ; ಮಲ. ಮುಟ್ಟ, ಮೊಟ್ಟ : ಕೊಡ. ಮುಟ್ಟೆ ; ಕೋತ. ಮೊಟ್ : ತುಳು. ಮೊಟ್ಟೆ]

**ಮೊಟ್ಟೆ₃** 'ಮೂಡೆ' ನೋ.

**ಮೊಟ್ಟೆ₄** 'ಮುಟ್ಟು₁' ನೋ.

**ಮೊಟ್ಟೆ₅** (ನಾ). (ಎತ್ತುಗಳನ್ನು ಹೂಡಿ) ಬಾವಿಯಿಂದ ನೀರನ್ನು ಎತ್ತಲು ಬಳಸುವ ಒಂದು ಸಾಧನ, —ಚರ್ಮದ ಚೀಲ; ಕಪಿಲೆ : '' ಸಮ್ಮದ ತಿತ್ತಿಯಂಡಂಗಳೊಳ್ಮೊಟ್ಟೆ '' (ಶಬ್ದಮಂ. ೯೦); ಹಳ್ಳದ ನೀರು, ಹೊಳೆಯ ನೀರು. ಭಾವಿಯ ಮೊಟ್ಟೆಯ ನೀರು (ಕೃಷಿಶ್ರ. ೩೪); ಮೊಟ್ಟೆಯ ಹಗ್ಗವನ್ನೆಳೆದುಕೊಂಡು ಮುಂದೆ ಹೋಗುವುದು. . . ಮತ್ತೆ ನಿಧಾನವಾಗಿ ಹಿಂದೆ ಹಿಂದೆ ಬರುವುದು (ಗ್ರಾಕಂಕೃ. ೬೪).

**ಮೊಟ್ಟೆಹೊಡೆ** = ಕಪಿಲೆಯ ಮೂಲಕ ಬಾವಿಯ ನೀರನ್ನೆತ್ತು; ಕಪಿಲೆಹೊಡೆ : ಆಮೇಲೆ ಹತ್ತಿರದಲ್ಲಿರುವ ಒರತೆ, ಹಳ್ಳಗಳೊಳಗಿಂದ ಮೊಟ್ಟೆಹೊಡೆದು ನೀರು ಕೊಡುವರು (ಮುಂಬಯಿ. ೩-೨೦೩): ಕಟ್ಟು ಬೇಲಿಯ ಭದ್ರ ಮೊಟ್ಟೆಹೊಡೆ ದಿನದಿನವು (ನಂಮು. ೨೨-೨೦); ಮೊಟ್ಟೆ ಹೊಡೆಯುವ ಸಪ್ಪಳ. . . ಪಾರ್ಶ್ವಸಂಗೀತವಾದಂತಿತ್ತು (ಸ್ವಕ್ಷರ. ೦೨೭).
[← ಮರಾ. ಮೋಟ್]

**ಮೊಟ್ಟೆಕಟ್ಟು** 'ಮೂಡೆಗಟ್ಟು₁' ನೋ.

**ಮೊಟ್ಟೆಕಾಱ**, ಮೊಟ್ಟೆಗಾರ (ನಾ). ಗಂಟು, ಮೂಟೆ ಹೊರುವವನು : ಮೊಟ್ಟೆಕಾಱರು ತಂದು ಮಾಱಿದ ಭತ್ತಧಾನ್ಯವೊಳಗಾಗಿ ಹೊಂಗೆ ಮಾನ ವೊಂದು (ಕಶಾ. II, ೨೦-೨೨; 1147). **ಮೊಟ್ಟೆಗಾರ :** ಬೀದಿಯ ಮೊಟ್ಟೆ ಗಾರರು, ಕೂಲಿಯ ಆಳುಗಳು ಕೂಡ ನಿಶ್ಚಿಂತೆಯಿಂದ ಓಡಾಡುತ್ತಾರೆ (ಇಶ್ರ. ೨೬೩). [ಮೊಟ್ಟೆ₃ (< ಮೂಡೆ) + — ಕಾಱ]

**ಮೊಟ್ಟೆಕೋಳಿ** (ನಾ). ಮೊಟ್ಟೆ ಇಡುವ ಕೋಳಿ ; ಗಬ್ಬದ ಕೋಳಿ : ಸಾಯಂಕಾಲ ಮೊಟ್ಟೆಕೋಳಿ ಕೊಯ್ಯಿಸಿ, ಹಸುವಿನ ತುಪ್ಪ ಹಾಕಿ ಅಡುಗೆ ಮಾಡಿಸಿ, ಕಟ್ರೆ ಆಗುವಂತೆ ತಿನ್ನಿಸಿದರು (ನಶ್ವರು. ೨೭); ನೀನು ಹೊಟ್ಟೆ ಕಿಚ್ಚಿನ ಮೊಟ್ಟೆಕೋಳಿಯಾಗಿದ್ದ (ಹಾಮತ. ೪).
[ಮೊಟ್ಟೆ₂ + ಕೋಳಿ₁ (<ಕೋೞಿ₁)]

**ಮೊಟ್ಟೆಗಟ್ಟು** 'ಮೂಡೆಗಟ್ಟು₁' ನೋ.

**ಮೊಟ್ಟೆಗಾರ** 'ಮೊಟ್ಟೆಕಾಱ' ನೋ.

**ಮೊಟ್ಟೆಗೂಳ್** (ನಾ). ಪೊಟ್ಟಣ ಕಟ್ಟಿದ ಆಹಾರ ; ಬುತ್ತಿ : ಕಾಡ ಮುಳು ನಟ್ಟು ಕುಂಟುವ ಪದಂ ಬೆನ್ನ ಬಿಗುಹಳಿದೆಲ್ಲ ಮೊಟ್ಟೆಗೂಳೆಡಹಿ ಕೆಡೆದೊಡದ ಮೊಳಕಾಲ್ ತೇಕುವಳ್ಳೆಗಳುವೆರಸೊಱಲುತ ಕಟ್ಟೋಡುತಿರಲು (ಪಶಕಾ. ೬-೦೭). [ಮೊಟ್ಟೆ₃ (< ಮೂಡೆ) + ಕೂೞ್ (<ಕೂೞು₁)]

**ಮೊಟ್ಟೇರು** (ನಾ). ಪೆಟ್ಟು ಬಿದ್ದಾಗ ರಕ್ತ ಸುರಿಯದೆ ಉಂಟಾಗುವ ಊತ : ಮೂಗೇಟು : ಕೈಗೆ ಬರಿಯ ಮೊಟ್ಟೇರಾಯಿತು. ರಕ್ತ ಹೊರ ಬರಲಿಲ್ಲ (ರೂಢಿ). [ಮೊಟ್ಟು₁ (< ಮೊತ್ತು) + ಏರು₀ (< ಏಱು₄)]

**ಮೊಡಕು** 'ಮುಡುಕು₂' ನೋ.

**ಮೊಡಗು** 'ಮಡಗು' ನೋ.

**ಮೊಡಮೆ** 'ಮೊಡವೆ' ನೋ.

**ಮೊಡವೆ**, ಮಡಿಮೆ, ಮಡುವೆ, ಮೊಡಮೆ, ಮೊಡವು, ಮೊಡವೆ (ನಾ). ಪ್ರಾಯಕ್ಕೆ ಬಂದಾಗ ಮುಖದ ಮೇಲೆ ಏಳುವ ಬೊಕ್ಕೆ ; ಹರೆಯದ ಬೊಕ್ಕೆ : ಕೌಂಕುಳನೆತ್ತಿ ಕಂಪನಾರಯ್ವುತುಮೊತ್ತುತುಂ ಮೊಡವಿಯಂ ಮೊಗಮಂ ಮೃಗನೇತ್ರೆ ದರ್ಪಣಕ್ಕುಯ್ವುದುಂ (ಲೀಲಾವ. ೭-೩೦) ; ಮೊಡವಿ ಮೂಡಿದ ಮೊಗಂ ಸೊಗಡುಗಂಪೊಗೆದ ಮೈ (ಕೃಖಿಶಾ. ೦೮-೨೩) ; ಮೊಡವಿಗಳಂತೆ ಮೂಡೆ ಪೊಸ ಮೊಗ್ಗೆಗಳಾ ಮಧುದೂತಿಯಲ್ಲಿ (ರಾಜಶೇ. ೯-೯೬). **ಮಡಿಮೆ :** ಅಪಚೂರ್ಣಗಳನ್ನು ಉಜ್ಜುವುದರಿಂದ . . . ಮಡಿಮೆ, ಬಂಗು ಮುಂತಾದುವು ಉಂಟಾಗುವುದಿಲ್ಲ (ಕವಿಶೋ. I. ೩೭). **ಮಡುವೆ :** ಪ್ರಾಯ ಬಂದ ಗಿಡಕ್ಕೆ ಮಡುವೆಗಳೆದ್ದ ಹಾಗೆ ಮಲ್ಲಿಗೆ ಮೊಗ್ಗುಗಳು ಗಿಡದಲ್ಲಿ ಮೂಡಿದ್ದವು (ಅವತಂ. ೮) ; ಮುಖದ ಮೇಲೆಲ್ಲಾ ಮಡುವೆಗಳು ಹರಡಿಕೊಂಡಿದ್ದವು (ಕಂಕಣ. ೦೪೮); ಮುಖದ ಮೇಲಿನದೊಂದು ಮಡುವೆಯನ್ನು ಮರೆಮಾಡಿಕೊಳ್ಳುತ್ತಿದ್ದನು (ನಾಳ್ಮು. ೬೮). **ಮೊಡಮೆ :** ಯಾವ ಮದ್ದು ಹಾಕಿದರೂ ಮುಖದ ಮೇಲಿನ ಮೊಡಮೆ ಕಡಿಮೆಯಾಗಲೇ ಇಲ್ಲ (ರೂಢಿ). **ಮೊಡವು :** ಸಿರಿಸ ಬೀಜವಂ ಗೋಮೂತ್ರದಲ್ಲರೆದು ಪೂಸೆ ಮೊಡವು ಮಾಣ್ಗುಂ (ವಿಶ್ವವಿ. ೬೩). **ಮೊಡವೆ :** ನನೆಗಳೆಂಬನಂ ಮುದ್ದುವೊಗದಿ ಮೊಡವೆ ತೋಱಿ (ನಾಗಳು. ೩-೨). [ ದೇ.॥ ಮಲ. ಮುತುಕ್ಕ; ತೆಲು. ಮೊಟಿಮ ]

**ಮೊಡವು** 'ಮೊಡವಿ' ನೋ.

**ಮೊಡವೆ** 'ಮೊಡವಿ' ನೋ.

**ಮೊಡೆ** (ನಾ). ದುರ್ನಾತ : ಕೊಳಕುನಾತ : 'ಮೊಡೆನಾತ' ಪರಾ.
[ ದೇ.॥ ತಮಿ. ಮುಟ್ಟೈ ; ಮಲ. ಮುಡ, ಮುಡಯು ]

**ಮೊಡೆನಾತ** (ನಾ). ಕೆಟ್ಟವಾಸನೆ ; ದುರ್ಗಂಧ : ಪೆಣಮೆಂಬ ಪೆಸರಾಗಿ . . . ಮೊಡೆನಾತಕೆಡೆಯಾಗಿ (ಶಿಪಸಂ. ೦೬೪-೩೨). [ಮೊಡೆ + ನಾತ]

**ಮೊಡೆನಾಱು** (ಕ್ರಿ). ಕೆಟ್ಟ ವಾಸನೆ ಬರು ; ದುರ್ಗಂಧ ಬೀರು : ರಸದ ಬಾವಿಯಂ ಮೊಡೆನಾರ್ಪುದಂ ಕಂಡು (ವಡ್ಡಾರಾ. ೦೩೭-೬); ನಾಲ್ಕು ತಿಂಗಳ ಕೂಸಂ ಪಿಂಗಳಾಕ್ಷಿ ಎಂಬ ದೇವತೆ ಪಿಡಿದೊಡೆ ಆಗುಳಿಸುಗುಂ ಬಾಯೂ ಱುಗುಂ ಮೈ ಮೊಡೆನಾಱುಗುಂ (ಬಾಲಗ್ರ. ೦೨೬-೭). [ಮೊಡೆ + ನಾಱು₁]

**ಮೊಡೆವೆಣ** (ನಾ). ಕೊಳೆತ ವಾಸನೆ ಬರುತ್ತಿರುವ ಹೆಣ : ಬುಡಬುಡಿಸು ವೆಱಿಸಲಿ ದುರ್ವರ್ಣದೊಡನೆ ಸೂಸುವ ಬಸೆಯ ನಾಱುವ ಮೊಡೆವೆಣನ . . . ಕಂಡು (ತೊರರಾ. ೩-೯-೪). [ ಮೊಡೆ + ಪೆಣ ]

**ಮೊಣ** 'ಮೊೞ' ನೋ.

**ಮೊಣಕಾಲ್** 'ಮೊೞಕಾಲ್' ನೋ.

**ಮೊಣಕಾಲು** 'ಮೊೞಕಾಲ್' ನೋ.

**ಮೊಣಕೆಯ್** 'ಮೊೞಕೆಯ್' ನೋ.

**ಮೊಣಕೈ** 'ಮೊೞಕೆಯ್' ನೋ.

**ಮೊಣಗಂಟು** (ನಾ). ಕಾಲಿನ ನಡುಗಂಟು ; ಮಂಡಿ : ಜಗಿತದಲ್ಲೂ ಪಾವಗಳು ಸಮೀಪ ಬಂದು ಮೊಣಗಂಟುಗಳು ಅಗಲಿಸಿ ಕಾಲು ಮಡಿಕೆ ಗೊಳ್ಳಬಹುದು (ಯುಕ್ಸಾಂ. ೦೨೮); ಮೊಣಗಂಟಿಗೆ ನಿರಿಗೆ ಬರುವ ಕಿರಿಯ ಸೀರೆ ಯನ್ನು ಧರಿಸಿ (ಒಂಟಿದ. ೩೩). [ ಮೊಣ (< ಮೊೞ) + ಗಂಟು ]

**ಮೊಣಸಂದು** ' ಮೊಳಸಂದು ' ನೋ.

**ಮೊಣ್ಣ** ' ಮುಂಡ್ಡು ' ನೋ.

**ಮೊಣ್ಣಮಂಡಲ** (ನಾ). ಒಂದು ಬಗೆಯ ಮಂಡಲದ ಹಾವು : ಮೊಸಳೆಯ ಹಿಡಿದ ಮೊಣ್ಣ (ಮಣ್ಣ ?) ಮಂಡಲದ ವಿಷ ಹತ್ತಿ ಜಗವೆಲ್ಲಾ ಮುಸಳಿಸಿ ಮಚೀಡೊಜಗಿದುದ ಕಂಡೆನಮ್ಮಾ (ಸಿದ್ಧೇಶ. ೧೨೪-೩೭೩).

[ ಮೊಣ್ಣ$_2$ + ಮಂಡಲ ]

**ಮೊಣ್ಣೆ** ' ಮೋಡಿ ' ನೋ.

**ಮೊಣ್ಣು** ' ಮುಂಡ್ಡು ' ನೋ.

**ಮೊತ್ತ** (ನಾ). ೧. ರಾಶಿ ; ಒಟ್ಟಿಲು : " ಮೊತ್ತಮೊಬ್ಬಳಿಯು ಮೊಗ್ಗರಂ" (ಶಬ್ದಮ. ೦೦೭); ಮೊತ್ತದ ಮಾಮರಸಾಲಿಯಿತ್ತ ಕಂಡೆ (ಅಪಕಂ. ೯೬-೪೩೯); ತಂತಮ್ಮ ಬೇರ್ಗಳ ಮೊತ್ತಕ್ಕೆವೃಕ್ಷಾಂಬುಪೂರಮು ನೊಡರ್ಚುತ್ತಿರ್ಪುದೆಂಬಂತೆ. . .ಒಪ್ಪಿರ್ಪುವಿವಿಮ್ಮಾವುಗಳ್ (ಕುಸುಮಾ.೧-೯೩); ಕರ್ಣಿಕಾರದ ಮೊತ್ತವಿದೆ ನೋಡಬಲೆ (ಕೂರಂ. ೩-೦-೨೭). ೨. ಕೂಡಿದುದು ; ಒಟ್ಟಾದುದು : ವ್ಯಕ್ತಿತ್ವದಲ್ಲಿ. . . ಅಂಗರಚನೆ, ಅಂಗವ್ಯಾಪಾರ, ಮಾನಸಿಕಸ್ವರೂಪ ಇತ್ಯಾದಿಗಳೆಲ್ಲವೂ ಸೇರಿವೆ. ಆದರೂ ವ್ಯಕ್ತಿತ್ವ ಇವುಗಳ ಮೊತ್ತವೆಂದು ಭಾವಿಸಬೇಕು (ಶಿಕ್ಷಣ. ೬೨೪); ಊರ ಜನರು ತಮ್ಮಿಬ್ಬರ ಬಗ್ಗೆ ತೋರುತ್ತಿದ್ದ ಅನಾದರದ ಬಗ್ಗೆ ತೀವ್ರವಾದ ತಿರಸ್ಕಾರ-ನೋವು ಆ ಮಾತುಗಳಲ್ಲಿ ಮೊತ್ತವಾಗಿ ಮೂಡಿದ್ದುವು (ಅಪೋರೀ.೬೩). ೩. ಸಮೂಹ ; ತಂಡ : "ವೃಂದಂ, ನಿಕುರುಂಬಂ, ಕದಂಬಂ_ಈ ೩ ಮೊತ್ತದ ಪೆಸರು" (ನಾಚರಾ. ೦೦೩); ಕೋಣೆಯ ಗಂಗನ ಮೊತ್ತಮೆಲ್ಲವಂ ಬಿದಱು ವಿನಂ ತೆರಳ್ಚಿ (ಎಕ. II, ೦೩೬-೦೦; 940); ಪತ್ರಿಸಾರ್ದ ಮರುಳ ಮೊತ್ತಮಂ ಬುಸ್ಸೆಂದು ಬೆದಱಿಸುವ ಪಾವಿನ ತೊಡವುಗಳೊಳಂ (ಕಬ್ಬಿಗಾ. ೦೬೭) ; ಮುನಿಗಳ ಮೊತ್ತದಲಿ ಹರಿಕಥೆಯ ಕೇಳುತ್ತ ಪರಮಹರುಷದಲಿ . . . ವತ್ಸರ ಹತ್ತ ನೂಕಿದಳು (ಸಂಭಕ. ೦೬-೩೫). ೪. ಒಟ್ಟು ಹಣ ; ಮೊಬಲಗು : ಅರಮನೆಯರ [ಮೊತ್ತವನೂ] ತಪ್ಪದೆ ತೆಱುವೆವು (ಶಾಇ. IX-ii, ೪೩೩-೪೯; 1408); ನಾಲ್ಕೈದರಷ್ಟು ಮೊತ್ತಕ್ಕೆ ಅವನ್ನು ಹರಾಜು ಮಾಡಿ (ಕೃಷಿಹ. ೦೨೨).

**ಮೊತ್ತಮೊತ್ತ** (ದ್ವಿರುಕ್ತಿ) : ಬಂದು ಪೋಪರು ಮೊತ್ತಮೊತ್ತದೆ (ಗಿರಿಜಾಂ. ೩೪-೩). [ ದೇ.॥ ತಮಿ. ಮಲ. ತೆಲು. ಮೊತ್ತ ]

**ಮೊತ್ತಂಗಟ್ಟು**, ಮೊತ್ತಗಟ್ಟು (ಕ್ರಿ). ೧. ಒಟ್ಟಾಗು; ಗುಂಪಾಗು : ನವಿರ್ಮುಡಿಸುಗಂಪ ಘ್ರಾಣಿಸುವ ಷಟ್ಚರಣಾಳಿ ಪಾರ್ದಂತರಾಳದೊಳು ಸುತ್ತ ಮೊತ್ತಂಗಟ್ಟಿಯಗಲದಿರ್ಪ (ನವಮೋ. ೨೯-೯೩). ೨. ಒಟ್ಟುಗೂಡಿಸು; ಸಂಗ್ರಹಿಸು; ಸೇರಿಸು : ಅಮೃತಪಯೋಧಿಯಂ ಪೊಗೆದು ಮೊತ್ತಂಗಟ್ಟಿ ತಂದೊತ್ತರಿಸಿ ನೀಡುವುದುಂ (ಮಹಾಸೀ. ೬-೦೨೩ ವ).

**ಮೊತ್ತಗಟ್ಟು**: ೧. ಮೊತ್ತಗಟ್ಟದ ರಥದ ಮುಱಿದನು ಮೂಱುಸಾವಿರದ (ಕೌರಾ. ೩೭-೨೩); ರೋಲಂಬನಿಚಯ ಜೇಂಕರಿಸುತ್ತಲಾವರಿಸೆ. . .ಪಾರ್ದು ಗಂಟೊಡೆಯದೆ ಮೊತ್ತಗಟ್ಟಿ ಮೇಲೆ ಮೆರೆದವು (ನವಮೋ. ೦೦-೭೪).

[ ಮೊತ್ತ + ಕಟ್ಟು$_1$ ]

**ಮೊತ್ತಂಗೊಳ್** (ಕ್ರಿ). = ಮೊತ್ತಂಗಟ್ಟು ೧ : ಬ್ರಹ್ಮರ್ಷಿಗಳುಂ ದೇವರ್ಷಿಗಳುಂ ವಿಪ್ರೋತ್ತಮರುಂ . . . ಮೊತ್ತಂಗೊಂಡು ಸಾರ್ತಂದು ಧರ್ಮರಾಯನಂ ಕಂಡು (ಭಾರತಂ. ೦-೨). [ ಮೊತ್ತ + ಕೊಳ್$_1$ ]

**ಮೊತ್ತಂಬೆಱು** (ಕ್ರಿ). = ಮೊತ್ತಂಗಟ್ಟು ೧ : ನಲಿವೇಳ್ತರುತಿರೆ ಶರಣಸಮೂಹಂ ಮುತ್ತಿನ ಸತ್ತಿಗೆ ಮೊತ್ತಂ[ಪಾಠಾಂ. ಪೊತ್ತಂ]ಬೆತ್ತಿರೆ (ವೃಷಭ. ೩-೨೨ ರಗಳೆ). [ ಮೊತ್ತ + ಪೆಱು$_1$ ]

**ಮೊತ್ತಕಾಱ** (ನಾ). ಗುಂಪಿನ ಮುಖ್ಯಸ್ಥ,—ನಾಯಕ : ಮುತ್ತಂ ಪನ್ನವಣದ ದಾಸಿಸೆಟ್ಟಿಯುಂ ನಗರಮುಂ ಮೊತ್ತಕಾಱ ರೇವಿಸೆಟ್ಟಿಯುಂ. . . ಈ ಧರ್ಮ್ಮಕ್ಕನುಕೂಲರಾಗಿ (ಕಇ. XVIII, ೭೬-೨೪; 1072); ದೇವರುಪಹಾರಕ್ಕೆ ಮೊತ್ತಕಾಱ ಬಮ್ಮಣಂ ಮುಖ್ಯವಾಗಿ (ಕಇ. XI-ii, ೦೩೨-೪೦; 1103); ಕೆಱೆಯ ಸತೆಯ ಮಹದೇವ ಗ ೧ ಮೊತ್ತಕಾಱ ಸಾಕಿ ಪ ೫ (ಎಕ. XV, ಅರಸೀ. ೨೦೭-೬; 1221).

[ ಮೊತ್ತ + –ಕಾಱ. / ತೆಲು. ಮೊತ್ತಗಾಡು ]

**ಮೊತ್ತಗಟ್ಟು** ' ಮೊತ್ತಂಗಟ್ಟು ' ನೋ.

**ಮೊತ್ತಗೊಳಿಸು** (ಕ್ರಿ). ಒಟ್ಟಿಗೆ ಸೇರಿಸು ; ಕಲೆಹಾಕು : ತನ್ನ ನಿಳಯಕ್ಕೆ ತಂದು ಮೊತ್ತಗೊಳಿಸಲು ಮುನ್ನ ಕೈಕೊಂಡುಹೋದುದಿಪ್ಪತ್ತು ಬಳಿಕುಂಬ ಹೊತ್ತಿಂಗೆ ಹರಿತಂದುದ್ಯೈವತ್ತಾಗೆ (ಸೋವಾತ. ೨-೯೩).

[ಮೊತ್ತ + ಕೊಳ್$_1$ + – ಇಸು$_3$]

**ಮೊತ್ತಮೊದಲ್** ' ಮೊದಲ್$_1$ ' ಪರಾ.

**ಮೊತ್ತಮೊದಲಿಗ** ' ಮೊದಲ್$_1$ ' ಪರಾ.

**ಮೊತ್ತಮೊದಲು** ' ಮೊದಲ್$_1$ ' ಪರಾ.

**ಮೊತ್ತವೆತ್ತಿಸು** (ಕ್ರಿ). ಒಟ್ಟಾಗಿ ಮೇಲಕ್ಕೆ ಹಿಡಿ ; ಗುಂಪಾಗಿ ಎತ್ತಿ ಹಿಡಿ : ಪಲತೆಱದ ಸತ್ತಿಗೆಯನಭವಂಗೆ ಮೊತ್ತವೆತ್ತಿಸಿ (ಸಾಶ್ವರಾ. ೩೩-೩೭).

[ಮೊತ್ತ + ಎತ್ತಿಸು]

**ಮೊತ್ತವೆಱು** (ಕ್ರಿ). ಒಟ್ಟಾಗು ; ಗುಂಪಾಗು : ಎತ್ತಿ ಚೆಲ್ಲಿದ ಮಳಲು ಬೀಳದ ಮೊತ್ತವೆತ್ತಡವಿಯಲಿ ನಮವೆತ್ತು ಬೆಳೆದಿಟ್ಟಯ ಮರಂಗಳು ಏರಿದು ಫಲವಾಗಿ . . . ಪೊಳೆಯಲು (ಬಸವ. ೩೨-೩). [ಮೊತ್ತ+ಪೆಱು$_1$]

**ಮೊತ್ತವೇಂಟೆ** (ನಾ). ಗುಂಪಾಗಿ ಆಡುವ ಬೇಟೆ : ಪರ್ಮರೆಯ ಬೇಂಟೆ ವಿಹಂಗದ ಮೊತ್ತವೇಂಟೆ . . . ಸಿಂಹಶರಭಂಗಳ ಬೇಂಟೆಗಳಾದಿಯಾದ ಭೀಕರಮೃಗಸಂಘಸಂಹನನಮುಖ್ಯಮೃತು ಪರ್ವಿಪರಣ್ಯಮಧ್ಯದೊಳ್ (೧೦ಕ. ೦-೮೦). [ಮೊತ್ತ + ಬೇಂಟೆ]

**ಮೊತ್ತು**, ಮುಟ್ಟು$_1$, ಮೊಟ್ಟು$_1$ (ಕ್ರಿ). ೧. ಹೊಡೆ : ಮೋದು : ಒತ್ತುತೆ ಪೊತ್ತುವ ತೆಱದಿಂದತ್ತಿತ್ತಲ್ ವಿಡುಂಕಬಾರದವಗುದ್ದ ತೆಯಿಂ (ಧರ್ಮಾಮೃ. ೩-೮೦). ಮುಟ್ಟು$_1$ : ೨. ತಲೆಯನ್ನು ಮುಷ್ಟಿಯಿಂದ ಗುದ್ದು._ ತಿವಿ : ಹುಟ್ಟಿನರ್ಥವಾಗಿ ಮಂದನಾಗಿದ್ದವಗೆ ಮುಟ್ಟಿದಲ್ಲದೆ ಬುದ್ಧಿ ಬರುವದೆಂತೊ (ಏಕಾಕ್ಷ. ೦೧೪-೦). ಮೊಟ್ಟು$_1$ : ೨. ಘಾತಿಸಿದನೋ ರೋರ್ವರಿಂದಿಟ್ಟು ಗುದ್ದಿ ತಿವಿದಾ ತಳದೊಳೆರಪಿನಂ ಮೊಟ್ಟಿಗ್ರಮಸ್ತಕವ ಭೂತಸತ್ಯೋಪೇತನಟ್ಟುಳಿಗೆ ಬಳಲಿ (ಜಪವೂ. ೯-೦೭); ಹೇಳದೆ ಹೋದರೆ ತಲೆಯ ಮೇಲೆ ಮೊಟ್ಟಿ ಬೆನ್ನಿನ ಮೇಲೆ ಥಪ್ಪೆಂದು ಗುದ್ದುತ್ತಿದ್ದರು (ಸಾಹಿಜ್. ೬೯); ತಲೇ ಮೇಲೆ ಮೊಟ್ಟದಿದ್ದರೆ ಇವರಿಗೆ ಭಯ ಇಲ್ಲ (ಕಶರಾ. ೦೬೬). ' ಮೋದು$_1$ ' ಪರಾ.

[ದೇ.॥ ತಮಿ. ಮುಟ್ಟು, ಮೊತ್ತು ; ಮಲ. ಮುಟ್ಟು ; ಕೊಡ. ಪರ್ಜಿ. ಮುಟ್ಟ್ ; ತೆಲು. ಪೊಟ್ಟು, ಮೊತ್ತು]

**ಮೊದಭಾಗೆ** (ನಾ). ಒಂದು ಊರಿನ ಹೆಸರು : ಬೆಳ್ಗಱೆಯೊಡೆಯರುಂ ಮೊದಭಾಗೆವಿಟ್ಟದಿಮ್ಮರುಂ . . . ಸಾಕ್ಷಿಯಾಗೆ ಕೊಟ್ಟತ್ತು (ಎಕ. XII, ಗುಬ್ಬಿ. ೬೦-೯೬; 812). [ ? ]

**ಮೊದಯರ್ಸ** (ನಾ). ಒಬ್ಬಾತನ ಹೆಸರು : ಪೆರಮೆಣ್ಣ ಮಗಂ ಮೊದಯರ್ಸ್ಸನೆಮಲದ ತೊರೆಗೊಳಂಳ್ಳಿಱಿದು ಸ್ವರ್ಗ್ಗಾಲ (ಎಕ. X, ಶಂಕಾಪು. ೦೦೯-೦೨; ಸು. 1000). [ ? + < ಅರಸ$_1$]

**ಮೊದಲ್$_1$**, ಮುದಲ್, ಮುದ್ದಲು, ಮೊದಲು$_1$ (ನಾ). ೧. ಆರಂಭ; ಅದಿ ; ಪ್ರಥಮ: ಮೊದಲಿನನಿತ್ತೋರಾನಿತ್ತನ್ನೆ ಬಿಟ್ಟ (ಎಕ. VI, ಕೊಪ್ಪ. ೩೬-೭ ; ಸು.675 ?); ಇನಿಯವು ಮೊದಲೊಳ್ ಸಂಜೆನ ಪನಿಪೊಲ್ ಬಱಿಕೆಯ್ದೊ ಮುಳಿದು ಕೊಂದಿಕ್ಕುವುವು (ಅಂಪು. ೦೪-೦೨೩); ವಿಸ್ತಾರದ ಜೈನಧರ್ಮದ ಮೊದಲ್ ಪರಮೇಶ್ವರರೆಂಬಿನಂ ಸದಾಚಾರಸಮೇತರಾದ

ರೆಮಗೀಗೆ ಶಿವಾಸ್ಪದ ಮುಖ್ಯಸೌಖ್ಯಮಂ (ಶಾಂತಿಪು. ೧-೩); ಅಭಿಮಾನದ ಜನ್ಮಭೂಮಿ ಮಾನ್ಯನದ ಮೊದಲ್ (ಸೌಇಇ. XI-i; ೩೫-೩೯; 1028). ೨. ಪಕ್ಕ ; ಬದಿ ; ಪಾರ್ಶ್ವ : ರಾಮೇಶ್ವರ ಎಮ್ಬ ತೀರ್ತ್ಥದಾ ಮೊದಲೊಳ್ ಮೆಪ್ಪಿಕ್ಕಿ ಪೊರದ ಪನ್ನಿಗಳನಿಱಿಯಲ್ ಬನ್ದಲ್ಲೀ(ಲ್ಲಿ) (ಎಇ. XXX. III, ೩೩೦-೯; 804). ೩. ಬೇರು ; ಬುಡ ; ಮೂಲ : ಮೊದಲಿಂ ತಗುಳ್ದು ತುದಿವರಂ . . . ಇದಱ ವಿಧಿಯಿಂತುಟು ಮಂತ್ರಪೂರ್ವಕಂ ನೆಗಬ್ದುದು (ಅಂಪು. ೧೫-೧೭) ; ಮಣಿದೀಪದ ಸರಮೊಪ್ಪಿದುದುಂ ಪಾದಪೀಠದ ಮೊದಲೊಳ್ (ಅಜಪು. ೭-೫); ಎಕ್ಕೆಯ ಮಾದಲಿಂಗಳ ಮೊದಲ್ಗಳ ನೊಂದೊಂದಱೊಳ್ . . . ಪಲ್ಲಟಿಸಿ (ಬಮಧ. ೧೭-೧೭೦). ೪. ಆಧಾರ ; ಆಶ್ರಯ : ' ಮೊದಲ್ಗೆಡಿಸು ' ಪರಾ. ೫. ತುದಿ ; ಅಗ್ರಭಾಗ : ಕಱಯಲರಾದ ಸಂಪಗೆಯ ಬಣ್ಣದವೋಲೆ ಬೆಳರ್ತ ಬಣ್ಣದೊಳ್ ಗಱಯಿಸೆ ಕೆಂಪು ಕಣ್ಗಳ ಮೊದಲ್ಗಳೊಳೊಯ್ಯನೆ ತೋ[ಱ³] ಬಾಡಿ ಪಾಡಱದು ಬಱಲ್ದು . . . ತಾಮೆ ಕನ್ನಡಿಸಿದಪ್ಪುವು ಕನ್ನೆಯ ಕನ್ನೆವೇಟಮಂ (ಶಃಶಆ. ೯-೭೦) ; ಮನಮಿರೆ ಪುರ್ವಿನ ಮೊದಲೊಳ್ . . . ಯೋಗೀಂದ್ರನಾತ್ಮಚಿಂತೆಯೊಳಿರ್ದಂ (ಅಪಂಪು. ೯-೧೦೯). ೬. ಮುಖ್ಯವಾದುದು ; ಪ್ರಧಾನವಾದುದು ; ಶ್ರೇಷ್ಠವಾದುದು: ಅದೆ ಕಂದರ್ಪಂಗೆ ದೋರ್ದರ್ಪದ ಮೊದಲ್ (ಅಪ್ಪು. ೨-೯೭) ; ಬಳೆಯೇ ಸರ್ವವಿಭೂಷಣಕ್ಕೆ ಮೊದಲ್ಕೆ (ಕೋಪೀಶ. ೧೪). ೭. ಮೂಲಧನ ; ಬಂಡವಾಳ ; ಅಸಲು : ಇನ್ನಿನಿತುಮಂ ಮೊದಲಂ ಕಿಡಲೀಯದೆ ವೃದ್ಧಿಯೊಳೆ ಧರ್ಮ್ಮಮಂ ತಮ್ಮ ಸನ್ತತಿಯುವನ್ನಡೆಯಿಸುವರ್ (ಸೌಇಇ. XI-i, ೬೯-೩೦ : 1028) : ಒಂದು ಪಣವಿನ ಮೊದಲ್ಗೊಂಡಂದಿನ ದಿನದೊಳೆ ಸಹಸ್ರಪಣಮಂ ಪಡೆವಂ (ಶಬಸಂ. ೨೦೫-೪೮) ; ಆಚನ್ದ್ರಾರ್ಕತಾರಂಬರಂ ಸಲುವನ್ತಾಗಿ ಹಣವೊಂದಱ ಮೊದಲಿಂಗೆ ಎಂಟು ಹಣವಂ ತೆತ್ತು (ಎಕ. II, ೩೩೩-೦೭ ; 1206?). ಮುದಲ್ : ೭. ಒಮಾನೂಟ್ಟುವೊದು ಮುದಲ್ಲೂರ್ಕಂಡುಗ ಭಕ್ತ ಪೊಲಿಯೆ ಕೊಂಡುಟ್ಟುವೊದು(ಎಕ. X. ಕೋಲಾರ. ೬-೮ ; 753). ಮುದ್ದಲು : ೭. ಮುದ್ದಲು ಇಮ್ಮಡಿಸಿದರೆ ಬಡ್ಡಿಯು ಬೆಳೆಯುವಂತಿದ್ದಿಲ್ಲ . . . ಇಂಥ ಮುದ್ದಲು ಆರೇಳು ಪಟ್ಟು ಹೆಚ್ಚಾದರೆ ಬಡ್ಡಿಯು ಬೆಳೆಯುವಂತಿದ್ದಿಲ್ಲ (ಶ್ರೀಶಹಿಂ. ೯೦). ಮೊದಲು₁ : ೧. ಮಡಕೆಯ ಮಾಡುವರೆ ಮಣ್ಣೇ ಮೊದಲು (ಬಸವ. ೭೦) ; ಮೊದಲಿದ್ದುದು ಜೀವಕಳೆ ಹೃದಯದಲಿ (ಕುವ್ಯಾಕ. ೧-೪) ; ಮೊದಲ ಬೊಬ್ಬೆಗೆ ಬಿಸಜಸಂಭವ ಬೆದಱ ಬಿದ್ದನು (ಕೊರಶಾ. ೪-೧೨-೨೮). ೩. ತುದಿ ಮೊದಲಿಲ್ಲದೆ ಪರಿದಿಂಪ ನೊಂದೆ (ಪುರುದ. ೨-೩೫-೧) ; ನಿಡುದೋಳುಗಳ ಮೊದಲೊಳು ಮುಗಮುಗಿಸಿದುದದೊಂದು ಪೊಸಗಂಪು (ಸಾಕ್ಷಶಾ. ೩-೩). ೫. ಸುರಗಿರಿಯ ಮೊದಲಲ್ಲಿ ಕೀಲಕಗಿರಿಯು (ಕುವ್ಯಾಆ. ೭-೩೭). ೭. ಮೊದಲಿಗೆ ಮೋಸವಾದಲ್ಲಿ ಲಾಭವನಱಸಿದರುಂಟೆ (ಮೋಹಪಶಾ. ೪೫-೦೬೭). ' ಮೊದಲುಗೆಡು ' ಪರಾ.

ಮುಮ್ಮೊದಲ್, ಮೊಮ್ಮೊದಲು = ಪ್ರಪ್ರಥಮವಾಗಿ : ತಪ್ಪದೇನ್ ಬಂದಪುದು ಎಂಬುದನ್ ನಿರ್ಣ್ಣಯಿಸೆ ನಾನೆ ಮುಮ್ಮೊದಲ್ ಕಲಿಸಿದೆನ್ (ಬಧ್ವಶ್ರ. ೨೭-೫೩೦) ; ಮಹಾಭಾರತ ಮೊಮ್ಮೊದಲು ಇಲ್ಲಿ ನಡೆವ ಮಹಾಯುದ್ಧದ ಕಥೆ (ಶಾರದ. ೦೩೯). ಮೊಟ್ಟಮೊದಲಿಗ, ಮೊತ್ತಮೊದಲಿಗ = ಆರಂಭಿಗ ; ಆದಿಪುರುಷ : ಪಂಚಮಹಾಪಾತಕಕ್ಕೆ ಮೊಟ್ಟಮೊದಲಿಗರೆಂಬಿಂತೆ (ವಾಗೀಶ. ದೇ. ೨೭೭-೨) ; ಶ್ರೀಗಂ ವಿಜಯಕ್ಕಂ ಮೊತ್ತಮೊದಲಿಗನಾಗಿಯೆ ಸಮಸ್ತರಾಜಕಮನೆಱಗಿಸಿ (ಶಾಂತಿಪು. ೫-೭೩ ವ) ; ರವಿನಂದನ ನನ್ನಿ ಚಾಗಮಣ್ಮೆಂಬಿನಿತರ್ಕಂ ನೀನೆ ಮೊತ್ತಮೊದಲಿಗನಾದೈ (ಗದಾಯು. ೫-೦೭) ; ಮತ್ತೊರ್ವಂ ಖೇಚರಭೂಚರಪತಿಪ್ರತಾನದ ಮೊತ್ತಮೊದಲಿಗಂ ಮುಂಗೆಯ್ಯ ಕಂಕಣಮಂ ತಿರಿಂಪಿ (ಅಪಂಪು. ೦೩- ೯೭ ವ). ಮೊಟ್ಟಮೊದಲು ಮೊತ್ತಮೊದಲ್, ಮೊತ್ತಮೊದಲು, ಮೊದಮೊದಲು = ತೀರ ಮೊದಲು ; ಪ್ರಪ್ರಥಮ : ಮೊಟ್ಟಮೊದಲು ಜನರಿಗೆ ಧಾತುಗಳು ಹ್ಯಾಗೆ ಗೊತ್ತಾದವು (ಮುಂಬಯಿ. ೪-೯೦) ; ಸಿದ್ಧರಾಮ ಮೊಟ್ಟಮೊದಲಿನ ಮಾತು ಆಡಿದನು (ಸಿದ್ಧಪು. ೩-೬೮) ; ನಿರಂತರಂ ಸುಖವ್ಯಾಪ್ತಿಗೆ ನೀನೆ ಮೊತ್ತಮೊದಲಾಗರಿಕೇಸರಿ ಲೋಕಮುಳ್ಳಿನಂ (ಪಂಪಭಾ. ೦-೦೯೯) ; ಸಿದ್ಧಮಾತೃಕಾಪದವಿಗೆ ತಾನೆ ಮೊತ್ತಮೊದಲಾದುದು (ಅಜಪು. ೧-೨) ; ಸುದತಿಯ ತೊಳಗುವ ತೋಳ ಮೊದಲ್ಗಳ್ ಮದನವಿಲಾಸದ ಮೊತ್ತಮೊದಲ್ಗಳ್ (ಸುಕುಮಚ. ೫-೫೦) ; ಈ ಬಗೆಯ ಆನಂದವನ್ನು ಪಡೆಯುತ್ತಿರುವುದು ನನ್ನ ಜೀವಮಾನದಲ್ಲಿಯೇ ಮೊತ್ತಮೊದಲನೆಯ ಸಲ (ಕ್ರಶಾಕ. ೦೯) ; ಹಿಂದಿನ ಕಾಲದಲ್ಲಿ ಮೊದಮೊದಲು ಅವರು ಈ ಗ್ರಹನಕ್ಷತ್ರಗಳನ್ನು ಬರೀ ಕಣ್ಣಿನಿಂದ ನೋಡುತ್ತಿದ್ದರು (ಅಕಾಶ. ೫) : ಮೊದಮೊದಲಿನ ವಿಗ್ರಹಗಳ ಅಳತೆಗೆ 'ಅಂಗುಲ'ವನ್ನೂ . . . ಮೂಲಪ್ರಮಾಣವಾಗಿಟ್ಟುಕೊಂಡು ವ್ಯವಹರಿಸುತ್ತಿದ್ದರು (ಶಾರದ. ೫೦೭). ಮೊದಲಬಾಡ = ಮುಖ್ಯಪಟ್ಟಣ ; ರಾಜಧಾನಿ : ಪರ್ವ್ವನಿಮಿತ್ತದಿಂದಲಂದೆಸಾಸಿರವ ಮೊದಲ ಬಾಡವಲಂ[ದಾ]ಪುರದ [ಸ್ವಯಂ]ಭು (ಎಇ. XXVIII, ೩೫-೩೫ ; 1082). ಮೊದಲಾಗಿ, ಮೊದಲಾಗೆ = ೧. ಮುಂತಾಗಿ ; ಇತ್ಯಾದಿಯಾಗಿ : ಸ್ಥೂಲಭದ್ರಾಚಾರ್ಯರ್ ಮೊದಲಾಗಿ ಕೆಲಂಬರ್ . . . ಅರ್ಧಗಪ್ಪಡವ ಶೀರ್ಷಮಂ ನೆಗಬ್ದಿದರ್ (ವಡ್ಡಾರಾ. ೯೩-೧) ; ರುದ್ರಭಟೋಪಾಧ್ಯಾಯರುಮೀಶ್ವರದಣ್ಣನಾಯಕರ್ಮ್ಮೊದಲಾಗಿ (ಸೌಇಇ. XX, ೪೭-೩೦; 1072); ನಾಡೆ ರುಚಿವೆರಸಿದ ಲಡ್ಡುಗೆ ಚಕ್ಕುಲಿ ಗಾರಿಗೆ ಪೂರಿಗೆ ಮೊದಲಾಗಿರ್ದ ಭಕ್ಷ್ಯಮನಾಗಳ್ ಆಜ್ಯಯುತಮಪ್ಪುವಂ ಮೆಲ್ದು (ಧರ್ಮಾಮೃ. ೦-೦೯೭) ; ಲಕ್ಕಣಂ ಮೊದಲಾಗೆ ನೂರ್ವರ್ ಮಕ್ಕಳುಮಂ ಮುಂತಿರಿಸಿ (ಪಂಪಭಾ. ೯-೨೮ ವ) ; ಮರೀಚಿಯುಂ ಮೊದಲಾಗೆ ನಾಲ್ಸಾಸಿರ್ವರರಸುಮಕ್ಕಳ್ ಪೋಗಲೊಲ್ಲದೆ (ಶಾಪುಂಪು. ೩೮). ೨. ಪ್ರಾರಂಭಿಸಿ ; ಮೊದಲ್ಗೊಂಡು : ಪೆಂಡಿರೆಂಬರೊಳ್ ಕೂಡುವನಲ್ಲೆನಿಂದು ಮೊದಲಾಗಿರೆ ನಿಕ್ಕುವಂ (ಪಂಪಭಾ. ೦-೭೩) ; ನಾಳೆ ಮೊದಲಾಗ ಜರ್ನನ ನಾವ್ ಕಾಳೆಗಕೆ ಬರಲೀಯೆವು (ಕುವ್ಯಾದ್ರೋ. ೨-೫); ಚಿಕ್ಕಂದು ಮೊದಲಾಗೆ ನೀನಲ್ಲದೂರ್ವರ ಲೆಕ್ಕಿಸಿದೆವಳು ತಾನಲ್ಲ (ಕಂನಪಿ. ೨-೧೦೫). ಮೊದಲಾಗು = ಆರಂಭವಾಗು: ಮರ ಗಿಡಂ ಬಾನ್ನೆಲಂ ತೂನೆದಾಡಿ ನಡುಗಿದುವು ಮೊದಲಾಯ್ತು ಮಳೆಗೆ (ಕಾಂಚಾರ. ೪೫-೬೦) ; ಕುಣಿತ ಮೊದಲಾಯಿತು! (ಸವಿ. ೩). ಮೊದಲಾದ = ಮುಂತಾದ : ಇತ್ಯಾದಿಯಾದ : ಹರಿ ಬ್ರಹ್ಮಾದಿಗಳು ಮೊದಲಾದ ತೆತ್ತೀಸಾದಿದೇವರ್ಕಳು ಉಘೆ ಉಘೆ ಎನುತಿರಲು (ಬಸವ. ೬೯೪); ಸಹದೇವ ನಕುಳರ ತಿವಿದು ಧೃಷ್ಟದ್ಯುಮ್ನ ಮೊದಲಾದಗಣಿತರ ಗೆಲಿದ (ಕುವ್ಯಾದ್ರೋ. ೫-೬೫); ಹಳ್ಳಿ ಹಿರಿಯೂರು ಪುರಗಳು ಮೊದಲಾದ ಪ್ರತ್ಯೇಕಗ್ರಾಮಗಳಂದ (ಎಕ. XIV, ಗುಂಡ್ಲುಪೇ. ೬-೦೦; 1520).

[ದೇ.॥ ತಮಿ. ಮುತಲ್ ; ಮಲ. ಮುದಲ್ ; ತುಳು. ಮುದೆಲು ; ತೆಲು. ಮೊದಲು]

**ಮೊದಲ್₂, ಮೊದಲು₂** (ಅ). ೧. ಪ್ರಾರಂಭ ಮಾಡಿ ; ಮೊದಲ್ಗೊಂಡು : ಆ ಅಂದಿನಿಂದುಮೊದಲ್ ಪತ್ತುವಿಟ್ಟು ನಡೆವೆನೆಂಬುದುಂ (ಪಂಪಶಂ. ೦೩೫-೦೪). ಮೊದಲು₂: ೧. ಇಂದುಮೊದಲಿಕ್ಕೆಯಿಂ ತಾಪತ್ರಯಂ ಪಿಂಗಿದವೆನಲು ವಳಿತ್ರಯುಮಡಂಗಿದವು (ಸಿದ್ಧರಾ. ೦-೯೯); ಇಳೆ ಮೊದಲು ಹದಿನಾಲ್ಕು ಲೋಕದ ಬಳೆಯಿಕೆವರಿಂದಾಯ್ತು (ಸಂಭಶ. ೫-೩೮) ; ನಿನ್ನ ಮೊದಲು ನಿನ್ನಾಣೆ ನಿನ್ನನು ಕಾಣದನ್ನಪಾನಂಗಳಳಿಯದೆ ಬನ್ನದೊಳಾಳಿದೆ (ಕಂನಪಿ. ೨-೦೦೪). ೨. ಮುಂಚೆ ; ಹಿಂದೆ ; ಪೂರ್ವದಲ್ಲಿ : ಪುಣ್ಯಪಾಪಂಗಳನಱಿಯದ ಮೊದಲು ಅನೇಕ ಭವಂಗಳಲ್ಲಿ ಬಂದೆನಯ್ಯಾ (ಮಹಾದೇ. ಬ. ೦೫-೦೯). [< ಮೊದಲ್₁]

**ಮೊದಲಗಿತ್ತಿ**, ಮದಲಗಿತ್ತಿ (ನಾ). ಮದುವಣಗಿತ್ತಿ; ಮದುಮಗಳು; ನವವಧು : ಮೊದಲದಿನದ ಮೊದಲಗಿತ್ತಿಗೆ ಮುನ್ನೂರು ಮುತ್ತಿನ ಸರ ಮಾಲೆ (ತುಂಗಳ. ೦೦೦); ಮೂರು ಮಕ್ಕಳ ತಾಯಿ ಮೊದಲಗಿತ್ತಿಯಂತೆ ಕುಣಿ ಯಲು ಹೇಗೆ ಸಾಧ್ಯವಾದೀತು (ಮಕ್ಕವು. ೯೨); ಭೂಮಿತಾಯಿಯಂತೆ ನೀನು ಒಬ್ಬ ಚಿರಂತನ ಮೊದಲಗಿತ್ತಿ (ಗಾಳಿ. ೦೮೨). **ಮದಲಗಿತ್ತಿ :** ಸೌಂದರದ ಮೇರುಮಿಂತೊಳಗೆ ಮದಲಗಿತ್ತಿಯ ಮದಕರಿಯು ಕೊಂದು (ಶಿರಾಗೋ. ೦೦-೯೦) ; ಆಗ ಆ ಮದಲಗಿತ್ತಿಯು ಮನೆಯ ಗೋಡೆಯಲ್ಲಿ (ಕಥಾಮಂ. IV· ೦೬). [< ಮದುವಳಗ + - ಇತ್ತಿ]

**ಮೊದಲಚ್ಚು** (ನಾ). ಮೂಲಆಕೃತಿ; ಮೂಲರೂಪ : ಆ ಮೂರ್ತಿ ಗಳೆಲ್ಲ ಮೊದಲಚ್ಚು, ನಾವು ಪಡಿಯಚ್ಚು (ಸಾಹಿಪ. ೩೫). [ಮೊದಲ್$_1$ + ಅಚ್ಚು$_3$]

**ಮೊದಲಾಣ್ಮ** (ನಾ). ಮೊದಲನೆಯ ಗಂಡ : ಮೊದಲಾಣ್ಮನೊಲ್ಲೆಂ ದೊರ್ವ ಬಲವಂತನಂ ಬಯಸಿ ಬಾಳ್ವೊಗಲ್ ಒಡಿವ ಗಂಡಂ ದೊರಕಿದಂತೆ (ತೆಪಿತ್ರ. ೩೩-೭). [ಮೊದಲ್$_1$ + ಆಣ್ಮ (< ಆಳ್ಮ)]

**ಮೊದಲಾರಿ** (ನಾ). ಮುಖಂಡ ; ನಾಯಕ; ಪ್ರಧಾನವ್ಯಕ್ತಿ : ಇರುತಿರೆ ಸಾಂಬಳ್ಳಿಯ ಮೊದಲಾರಿಯ ಹಿರಿಯ ತನುಜ ಪಟ್ಟದಯ್ಯ ಪಿರಿದು ಗರ್ವಿಸಿ . . . ಧುರವನೆಸಗಿದ (ಕಂಪಿ. ೦೭-೨). [← ತಮಿ. ಮುತಲಾಳಿ]

**ಮೊದಲಿ**, ಮುದಲಿ (ನಾ). ೧. ಮೊದಲಿಗ ; ಪ್ರಮುಖನಾದವನು : ಕಸವನು ಗುಡಿಸುತ ಕಸವೇ ಆಗಿ, ಕಸಕೂ ಕಡಮೆ. ಅಧಮರ ಮೊದಲಿ (ಸುಶೀತ. ೨). **ಮುದಲಿ :** ೨. ತಮಿಳು ಭಾಷೆಯನ್ನಾಡುವ ಒಂದು ಜನಾಂಗ ಮತ್ತು ಆ ವರ್ಗಕ್ಕೆ ಸೇರಿದ ಜನರ ಹೆಸರಿನ ಕೊನೆಯಲ್ಲಿ ಸೇರುವ ಶಬ್ದ : ಯಾವ ತಪ್ಪಿಗಾಗಿ ನಮ್ಮ ಪ್ರತಾಪಮುದಲಿಯನ್ನು ಬಂಧಿಸಬೇಕೆಂದು ಹೇಳುವಿರಿ ? (ಶ್ರಿಕಾಶ. ೩೭). 'ಮುದಲಿಯಾರ್' ಪರಾ. [ದೇ.॥ ತಮಿ. ಮುತಲಿ; ತೆಲು. ಮೊದಲಿ]

**ಮೊದಲಿಕ್ಕು** (ಕ್ರಿ). ಪ್ರಾರಂಭಿಸು ; ತೊಡಗು : ಭಯಮಂ ಚಿತ್ತಕ್ಕೊದವಿಸಿ ಬಲಗಣ್ಕೆತ್ತಲ್ಮೊದಲಿಕ್ಕಿತು (ಕಾದಂಪೂ. ೬೬೮); ನೆರೆವೆಂಡಿರ ಸುಖ ಗೋಷ್ಠಿಗಳ್ ನಾರಿಯರೊಳ್ ಮೊದಲಿಕ್ಕುಗುಂ (ರಾಮಾಶ್ವ. ೦೭-೨೮). [ಮೊದಲ್$_1$ + ಇಕ್ಕು]

**ಮೊದಲಿಗ** (ನಾ). ಪ್ರಥಮಸ್ಥಾನದಲ್ಲಿರುವವನು ; ಪ್ರಮುಖನಾದ ವನು : ಚಾಳುಕ್ಯಾರ್ಜುನಂ ಚಲಕೆ ಮೊದಲಿಗಮ್ (ಎಕ. XIV, ಮೈಸೂರು. ೦೨೭-೯; ೯೦೦); ಕಡುಪೆಂಪಿನ ಪೂಜೆಗೆ ನೀವು ಮೊದಲಿಗರಾದಿರ್ (ಶಂಶಭಾ. ೬-೦೨); ಹದುಳವಿಡುವವರಿಲ್ಲ ಸೇನೆಯ ಮೊದಲಿಗರು (ಕುವ್ಯಾಭಾ. ೯-೨೭); ವಿಜ್ಞಾನವನ್ನು ಬೆಳೆಸಿದವರಲ್ಲಿ ಗ್ರೀಕರು ಮೊದಲಿಗರು (ಜ್ಞಾನ್ಯಾರ ೭ ೬೯೪). [ಮೊದಲ್$_1$ + - ಇಗ]

**ಮೊದಲಿಡು** (ಕ್ರಿ). = ಮೊದಲಿಕ್ಕು : ಮೊದಲಿಟ್ಟಂ ಕೊಲಲೆಂದು ಕೌರವರಂ (ಶಂಶಭಾ. ೧೦-೧೦); ಮಾಗಿ ಬರಲ್ ಮೊದಲಿಟ್ಟಿತು (ಶಿಪ. ೦೯-೬); ಸಂಭ್ರಮಂ ಮೊದಲಿಡು[ಶಾಕಾಂ. ಪೊದವಿಸು]ತಿರ್ದುದಾ ನೃಪನ ದೇಶ ದೊಳಂ ತಿರುನಾವಲೂರೊಳಂ (ಶಂಚರ. ೫ ೭೩೬೧). [ಮೊದಲ್$_1$+ ಇಡು$_1$]

**ಮೊದಲಿಯಾರ್**, **ಮುದಲಿಯಾರ್**, **ಮುದ್ಲಿಯಾರ್** (ನಾ). = ಮೊದಲಿ ೨. P ಕನ್ನಡನಾಡಿನಲ್ಲಿ ಈ ಶಬ್ದರೂಪವೇ ಹೆಚ್ಚು ಪ್ರಚಾರದಲ್ಲಿದೆ. **ಮುದಲಿಯಾರ್ :** ಇವರ ಮುಖಲಕ್ಷಣಗಳು ಮುದಲಿಯಾರರಂತೆ ಇರುತ್ತವೆ (ಕಥಾಗ. ೦೦೦); ತೊಂಡಮಂಡಲ ಮುದಲಿ ಯಾರರ ವಂಶದಲ್ಲಿ ನಾನು ಜನಿಸಿದೆ (ಶ್ರಿಕಾಶ. ೧). **ಮುದ್ಲಿಯಾರ್ :** ವಿಜಾಪುರಜಿಲ್ಲೆಯ ಮುದ್ಲಿಯಾರರು ವ್ಯಾಪಾರದ ಹೊರ್ತು ಬೇರೆ ಹೋರ ಯನ್ನು ಬಹುತರ ಮಾಡುವುದಿಲ್ಲ (ಕಥಾಗ. ೯೦). [ದೇ.॥ ತಮಿ. ಮಲ. ಮುತಲಿಯಾರ್ ; ತೆಲು. ಮೊದಲಾರಿ]

**ಮೊದಲಿಸು** (ಕ್ರಿ). = ಮೊದಲಿಕ್ಕು : ರಾಜುವೇ ಯಾವುದಾದರೂ ವಿಷಯವನ್ನೆತ್ತಿಕೊಂಡು ಮಾತಿಗೆ ಮೊದಲಿಸುವನು (ಜೀವಪ. ೨೦); ನನಗೆ ಫಿಲಾಸಫಿ ಕಂಡರೆ ಆಗುವುದಿಲ್ಲ. ನೀವು ಅದನ್ನೇ ಹೆಚ್ಚಾಗಿ ಓದಲು ಮೊದಲಿ ಸಿದರೆ ಮುಂದೆ ನಿಮ್ಮನ್ನು ಕಂಡರೂ ಆಗದೇ ಹೋದೀತು (ದೂರಸ. ೩೬). [ಮೊದಲು$_1$ (<ಮೊದಲ್$_1$) + - ಇಸು$_3$]

**ಮೊದಲು$_1$** 'ಮೊದಲ್$_1$' ನೋ.

**ಮೊದಲು$_2$** 'ಮೊದಲ್$_2$' ನೋ.

**ಮೊದಲುಗಣ್** (ನಾ). ಕಣ್ಣಿನ ಬುಡ ; ಮೂಗಿನ ಮೇಲ್ತುದಿಯ ಕಣ್ಣಿನ ಭಾಗ : ಅಕ್ಷಿಮೂಲಂ ಪೂರ್ವನೇತ್ರಮೆನೆ ಮೊದಲು [ಶಾಕಾಂ. ಲ] ಗಣ್" (ಪಂಗಿರಾ. ೯೯-೩). [ಮೊದಲು$_1$ (< ಮೊದಲ್$_1$ ) + ಕಣ್]

**ಮೊದಲುಗೆಡು** 'ಮೊದಲ್ಗೆಡು' ನೋ.

**ಮೊದಲುಗೊಂಬು** (ನಾ). ಆನೆಯ ಕೋರೆಹಲ್ಲುಗಳ ಬುಡ; ದಂತ ಮೂಲ : " ಕರೀರಂ, ದಂತಮೂಲಂ ಈ ೨ ಮೊದಲುಗೊಂಬು " (ಕರಾಯು. ೩೭-೭೦). [ಮೊದಲು$_1$ (<ಮೊದಲ್$_1$) + ಕೊಂಬು$_1$]

**ಮೊದಲುಗೊಳ್** 'ಮೊದಲ್ಗೊಳ್' ನೋ.

**ಮೊದಲುಜುಬು** (ನಾ). ಆರಂಭದ ರಭಸ,-ಆವೇಗ : ಕಾರ್ಮುಟಿಯ ಬಿಜುಗಾಳಿ ಮೊದಲುಜುಬು ಸಯ್ತು (ಅಕ್ಕತಾ. ೦೦-೨೨೫). [ಮೊದಲ್$_1$ + ಉಜುಬು$_0$ (<ಉಜುಂಬು$_2$)]

**ಮೊದಲೇರಿ**, ಮೊದಲೇಜಿ (ನಾ). ಕೆರೆಯ ಕೋಡಿಯಿಂದ ಹರಿಯುವ ನೀರಿನ ಮೊದಲ ಪರಿಸರ, -ಭಾಗ : ಮೊದಲೇರಿಯೊಳ್ಸಾಯಿರ ಬಳ್ಳಿಯ ತೋಣ್ಟಮುಂ ಅಯ್ವತ್ತೆಣ್ಟಗ್ರಹಾರಮುಮಜಿಯೆ ಸರ್ವ್ವಬಾದ ಪರಿಹಾರನ್ ದೇವಭೋಗಂ ಮಾಡಿಕೊಟ್ಟರ್(ಎಕ. XI, ಹೊಳಲ್ಕೆ. ೨೩-೨೦; 968); ಅಂಕಲಿಗೆಜೆಯ ತುಂಬಿನ ಮೊದಲೇರಿಯ ಕೆಳಗೆ ದೇವರ್ಗ್ಗೆ ಕೊಟ್ಟ ಗದ್ದೆ ಕಮ್ಮ ೫೦ (ಸೌಇಇ. XX, ೯೯-೯೨; 1123); ಹಿರಿಯ ಕೆಜೆಯ ಹಿಂದಣ ಮೊದಲೇರಿ ಅಡಕೆದೋಟ . . . ಮೇರೆಯಾಗಿ (ಎಕ. VI, ಕಡೂರು. ೦೨೯-೯೭; 1272 ?). **ಮೊದಲೇಜಿ :** ಮೊದಲೇಜಿಯೊಳ್ ಇರ್ಪ್ಪಂಡುಗ ಪೆದೆಗಟ್ಟಿ . . . ಅಯ್ನೂಱು ಬಳ್ಳಿಯತೋಣ್ಟ ಅಲಕೆಱ್ ಇವನಾವನೊರ್ವ್ವ ನಡೆಯಿಸಿದನಾತನದೆ ಧರ್ಮ (ಎಕ. XI, ದಾವಣ. ೦೭-೦೩; 889). [ಮೊದಲ್$_1$ + ಏರಿ$_1$]

**ಮೊದಲೇಜಿ** 'ಮೊದಲೇರಿ' ನೋ.

**ಮೊದಲ್ಗಾಲ್** (ನಾ). ಕೆರೆಯ ತೂಬಿನಿಂದ ಹೊರಟ ಕಾಲುವೆಯ ಪ್ರಾರಂಭದ ಭಾಗ : ಆ ಸಿರಿವೊಳಲ ಕೆರೆಯ ಕೆಳಗೆ ಮೊದಲ್ಗಾಲ ಗರ್ದ್ದೆಯ ಹಂನೆರಡು ಖಂಡುಗದ ಬಯಲು (ಎಕ. XI, ಹಳ್ಳಿ. ೨೦-೨೨ ; 1087). [ಮೊದಲ್$_1$ + ಕಾಲ್$_2$]

**ಮೊದಲ್ಗಿಡು** 'ಮೊದಲ್ಗೆಡು' ನೋ.

**ಮೊದಲ್ಗೆಡಿಸು** (ಕ್ರಿ). ಆಧಾರವಿಲ್ಲದಂತೆ ಮಾಡು ; ನಾಶಗೊಳಿಸು : ನೀಱರ ಸೊಬಗಂ ಮೊದಲ್ಗೆಡಿಸಿ ತೋಳ ಮೊದಲ್ಮನೆವೂವನೆತ್ತುವಂತಿರೆ ನನೆಯಂಬುಗಳ್ಗೆ ಬೆರಲೆತ್ತುವರಲ್ಲಿಯ ಮಾಲೆಗಾರ್ತಿಯರ್ (ಮಲ್ಲಿಕಾ. ೨-೫೯). [ಮೊದಲ್ಗೆಡು + - ಇಸು$_3$]

**ಮೊದಲ್ಗೆಡು**, ಮೊದಲುಗೆಡು, ಮೊದಲ್ಗಿಡು (ಕ್ರಿ). ೧. ಬೇರುಸಹಿತ ನಾಶವಾಗು ; ನಿರ್ಮೂಲವಾಗು ; ಸಂಪೂರ್ಣವಾಗಿ ಅಳಿಸಿಹೋಗು: ವಿಂಧ್ಯವಿತಾನಪ್ರಾಂತದೊಳ್ ತಿಱ್ಱನೆ ತಿರುಗಿ ಮೊದಲ್‌ಗೆಟ್ಟು ಬೇಬಿಳ್ದು (ರಕ್ಷಾಶ. ೦೯). ೨.(ವ್ಯಾಪಾರದಲ್ಲಿ) ಮೂಲಧನವನ್ನು ಕಳೆದುಕೊಳ್ಳು; ನಷ್ಟ ಹೊಂದು : ಮೊದಲ್ಗೆಟ್ಟ ಪರದನಂತೆ ಘಳಿಗೆಗೊಂದಂ ನೆನೆಯದೆ (ರವರ್ಣಮ್ಮ. ೦೯-೫೯). **ಮೊದಲುಗೆಡು :** ೨. ಮೊದಲುಗೆಟ್ಟು ಲಾಭವ ನಟಿಸುವ ಪರಿ ಇನ್ನೆಂತೋ (ಮೋಳವಾ. ೬೯-೨೬೦); ಮೊದಲುಗೆಡವ

ಹರದೆನಗಾದುದುವಮ್ಮ ಮೊದಲುಗೆಡದ ಹರವು (ಶಿವಗೀ. ೬೪-೪೦೨).

**ಮೊದಲ್ಗಿಡು** : ೧. ಕ್ಷಿತಿಯೊಳಗುಳ್ಳ ಭೂಭುಜರ ಬಿತ್ತು ಮೊದಲ್ಗಿಡೆ ಮುನ್ನಮೇಕವಿಂಶತಿ ಪರಿಸಂಖ್ಯೆಯಿಂ ತವಿಸಿ (ಶಂಕಥಾ. ೨-೯೩); ಮತಿಯುಂ ಮೊದಲ್ಗಿಡಲೀಯದೆ ಮದನವಿಕಾರಮನೊದವಲೀಯದೆ (ರೀರಾವ. ೪-೭೬ ವ); ಎಜಗದ ಶಿರಭೂರುಹಮನೆಯ್ದೆ ಮೊದಲ್ಗಿಡೆ ಕೀಲ್ತು . . . ಎಜಗದರಂ ತಡಂಗಿಡಿಪ ನಮ್ಮರನುರ್ವಿಪ ರಾಜಲೀಲೆ ಕಣ್ಚೆಟಿದುದು(ಪುಶ.ಕೃ. ೦೩-೬).
[ ಮೊದಲ್$_1$ + ಕೆಡು$_1$ ]

**ಮೊದಲ್ಗೆಯ್** (ಕ್ರಿ). ಆರಂಭಿಸು; ಮೊದಲು ಮಾಡು; ಉಪಕ್ರಮಿಸು: ಅರಣ್ಯಕನಿಂತು ಕತೆಗೆ ಮೊದಲ್ಗೆಯ್ದಂ (ರಾಮಾಶ್ವ. ೦೦೯-೬).
[ ಮೊದಲ್$_1$ + ಕೆಯ್$_1$ ]

**ಮೊದಲ್ಗೊಳ್**, ಮೊದಲುಗೊಳ್, ಮೊದಲ್ಗೊಳು (ಕ್ರಿ). ೧. ಆರಂಭವಾಗು; ಮೊದಲಾಗು : ಪುಟ್ಟಿದಂದು ಮೊದಲ್ಗೊಂಡಗಲದ ಚಂದ್ರಾಪೀಡನನಗಲ್ದಿರಲ್ನೀನದೆಂತು ಪೇಚ್ಚಗೆದಂದಪಯ್ (ಕಾದಂಬ. ೯೭೦); ಅವಳ್ ಮೆಲ್ಲಡಿ ಮೊದಲ್ಗೊಂಡು ಮೆಲ್ಲಮೆಲ್ಲನೆ ಮೇಗಸರ್ದ ನೀಳ್ದ ಕಣ್ಗಳುಂ ಸೆಳೆನಡುವಿನಲ್ಲಾಟಮಂ ಕಂಡು ಪೊಜಮಾಱಿದೇಜಲಾರ್ತುದಿಲ್ಲ (ಕನ್ನಕಾ. ೬೮). ೨. ಬಂಡವಾಳವನ್ನು ಪಡೆದುಕೊಳ್ಳು; ಮೂಲಧನವನ್ನು ತೆಗೆದುಕೊಳ್ಳು : ಕನಕರಾಶಿಯಂ ಬಸನಕ್ಕೆ ತವಿಸಿ ಬಿಯಂ ನಡೆಯದಿರೆ . . . ಸೋದರಮಾವಂ ಭದ್ರಮಿತ್ರನಲ್ಲಿ ಮೊದಲ್ಗೊಂಡು ಸ್ಥಳಯಾತ್ರೆಗೆ ಪೋಗಿ ಸಂಖ್ಯಾತೀತಸಾರಧನಮಂ ಪಡೆದು ಬರ್ಪೆಡೆಯೊಳ್ (ಶಾಂತಿಪು. ೯-೯೦ ವ). **ಮೊದಲುಗೊಳ್** : ೧. ಈ ಹೊತ್ತು ಮೊದಲುಗೊಂಡು ಯುದ್ಧವಿಲ್ಲದ ರೀತಿಗೆ ಮಾಡುತಲಿಧ್ದೇನೆ (ಕೃಪಾಶೀ. ೯೯); ಪ್ರಕಾಂಡಃ . . . ಬೇರು ಮೊದಲುಗೊಂಡು ಲಂಬೆಗಳವರೆಗೂ ಗಿಡದ ಮಧ್ಯಭಾಗದ ಹೆಸರುಗಳು (ಸಿದ್ಧಾಂತ.೦೦೨). **ಮೊದಲ್ಗೊಳು**: ೧. 'ಮೊದಲ್ಗೊಳುಹ' ಪರಾ. [ ಮೊದಲ್$_1$ + ಕೊಳ್$_1$ ]

**ಮೊದಲ್ಗೊಳು** ' ಮೊದಲ್ಗೊಳ್ ' ನೋ.

**ಮೊದಲ್ಗೊಳುಹ** (ನಾ). ಆರಂಭ ; ಪ್ರಾರಂಭ : " ಉಪಜ್ಞಃ, ಉಪಕ್ರಮಃ, ಆರಂಭಃ— ಈ ೩ ಮೊದಲ್ಗೊಳುಹ " (ಹಲಾಯು. ೦೦೬-೨೨).
[ಮೊದಲ್ಗೊಳು (< ಮೊದಲ್ಗೊಳ್) + — ಹ$_2$ ( < —ಪ$_2$ )]

**ಮೊದಳೆ**, ಮೊಸಳೆ (ನಾ). ಒಂದು ಬಗೆಯ ಜಲಚರಪ್ರಾಣಿ; ನಕ್ರ : 'ಮೊದಳೆಮಡು' ಪರಾ. **ಮೊಸಳೆ** : "ಕುಂಭೀರಃ, ನಕ್ರಃ – ಈ ೨ ಮೊಸಳೆ" (ಹಲಾಯು. ೦೦೬-೩೯); ಮೀನುಂ ಮೊಸಳೆಯುಂ ನೆಗಳು ಮಾಮೊಯುಂ . . . ಮೊದಲಾಗೊಡೆಯ ಜಲಚರಂಗಳುಂ (ಪದ್ಮಾಂತ. ೯೭-೭); ಮೊಸಳೆಯಂ ಪಿಡಿವಂತಿರೆ ನೀರೊಳೊತ್ತಿ ಭೀಮಸೇನನತಿಗರ್ವದಿಂ ಪಿಡಿಯೆ (ಶಂಕಥಾ. ೦-೨೬); ಆ ಪಣ್ಗಳಂ ಕ್ರಕಚನೆಂಬುದೊಂದು ಮೊಸಳೆ ಪ್ರತಿದಿನಮೊಲ್ದು ಮೆಲ್ದು (ಶುಕಶಂ. ೨೭೭-೨೦); ಉಷ್ಣಪ್ರದೇಶಗಳೊಳಗಿನ ನದಿಗಳಲ್ಲಿಯೂ ಸರೋವರಗಳಲ್ಲಿಯೂ ಮೊಸಳೆಗಳುಂಟು (ಮುಂಬಯಿ. ೯-೨೬).

**ಮೊಸಳೆಕಣ್ಣೀರು** = (ಅಲಂ) ಮೋಸಗೊಳಿಸಲು ಸುರಿಸುವ ಕಂಬನಿ ; ಕಪಟದ ಕಣ್ಣೀರು : ಅವರ ಆಶ್ವಾಸನೆಗಳೆಲ್ಲ ಸುಳ್ಳೋ ಸುಳ್ಳು ! ಅದು ದೊಡ್ಡವರ ಮೊಸಳೆಕಣ್ಣೀರು ! (ಕೃಲಾಕ. ೭೯). **ಮೊಸಳೆತುಪ್ಪ** = (ಔಷಧಿಯಂತೆ ಬಳಸುವ) ಮೊಸಳೆಯ ಕೊಬ್ಬು : ಉಳುಕಿದಾಗ ಮೊಸಳೆತುಪ್ಪ ಸವರಿ ತಿಕ್ಕುತ್ತಾರೆ (ರೂಢಿ).

[ದೇ.॥ ತಮಿ. ಮುತಲೈ, ಮುತಳೈ, ಮುಚಲಿ ; ಮಲ. ಮುತಲ ; ತುಳು. ಮುದಲೆ, ಮುದಳೆ, ಮೊಸಳೆ; **ಕೊಡ.** ಮೊಸಲೆ ; **ತೆಲು.** ಮೊದಲಿ, ಮೊಸಡಿ, ಮೊಸಲಿ ; **ಕೋತ.** ಮೊಚಳ್ ; **ಕೋಲಾ.** ಮೊಸೆಲಿ ; **ಪರ್ಜಿ.** ಮೋಚ. /ಸಂ. ಮುಸಲೀ]

**ಮೊದಳೆಮಡು**, ಮೊಸಳೆಮಡು (ನಾ). ೧. ಮೊಸಳೆಗಳು ವಾಸ ಮಾಡುವ ನದಿ. ಹೊಳೆ ಮುಂತಾದುವುಗಳ ಆಳವಾದ ಭಾಗ : ತೆಸ್ಸಾಯ್ತಲೆಮೊಜಪಡೆ ಬೆದಕಿರೆಲಿ ಮೊದಳೆಮಡುವ ಪಡುವಾಯ್ವೆಲ್ಗೊಳ ಕಾಲುವೆಪದುಂ ಒಳಗಾಗಿ (ಪುಕಂ. ೦೯೨೬, ೦೦೪-೯೭ ; ೪ನೆಯ ೫೫).

**ಮೊಸಳೆಮಡು** : ೧. ಅದು ಮೊಸಳೆಮಡುವಾದುದರಿಂದ ಅಲ್ಲಿ ಈಜಲು ಹೋಗಬಾರದೆಂದು ಎಚ್ಚರಿಕೆ ನೀಡಿದ್ದಾರೆ (ರೂಢಿ). ೨. ಒಂದು ಸ್ಥಳದ ಹೆಸರು : ಶ್ರೀಮತ್ಸ್ವರುದೇವಕ್ಕೊರ್ಗಳೆಯಯ್ಯಾ ಪಟ್ಟೊಳಗಣಮೊಸಳೆ ಮಡುವನಾಳುತ್ತಮಿರ್ದು (ಕೌಇ. IX-i, ೯೦-೦೦; 1036).
[ಮೊದಳೆ + ಮಡು$_2$]

**ಮೊದಿರಕಣ್ಣಿ** (ನಾ). ಒಂದು ಬಗೆಯ ಸಸ್ಯ : ಮುಳ್ಳುಅಂಕೋಲೆ, ಮೊದಿರಕಣ್ಣಿಗಿಡ (ಪುಸಿ. ೪೪-೮೭೭). [ ? ]

**ಮೊದೀಖಾನೆ** ' ಮೋದೀಖಾನೆ ' ನೋ.

**ಮೊದೆ** (ನಾ). ೧. ಒಂದು ಬಗೆಯ ಹುಲ್ಲು; ಮುಂಜ; ನೊದೆಹುಲ್ಲು : " ಶರಃ, ಮುಂಜಃ—ಇವೆರಡುಂ ಮೊದೆ" (ಹಲಾಯು. ೩೨-೩೮) ; ಮದನಂ ಬೆಳ್ಮುಗುಳಂಬಿನಿಂದಿಸೆ ಜಗಿಲ್ತಿರ್ದಂಬುಗಳ್ ಚಿತ್ರದೊಳ್ ಮೊದೆಯುಂ ಬೈತವೊಲಾಗೆ (ಕಾವ್ಯಸಾ. ೩೪೮ ಶೂದ್ರಕ) : ಅಬಲಾಸ್ತನಜಳದೊಳ್ ಮೊ(ಪು)ದೆಯ ಬೂದಿಯಂ ಕಲಸಿ . . . ಬಜಿಕ್ಕದನೆಚ್ಚುಗೆ ಕಣ್ಣ ಬೇನೆ ಮಾಣ್ಗುಂ (ಲೋಕೋಪ. ೯-೬೯) ; ಕಣ್ಕೆವಚ್ಚೆ ಮೊದೆ ಬೆಳೆದಿದ್ದ ತವರೇ ಮೇರೆಯಾಗಿ (ಎಕ. III, ಶ್ರೀರಂಗ. ೦೩೩-೯೯; 1458). ೨. (?) : ತಟಿ ಕಾಪ ಪೆಚ್ಚಿಡಿಯ ಮೊದೆಯ ಕಲಾಪಕದ ಗುರವಡಿಗಳ್ (ಎಕ. II, ೩೩-೩; ಸು. 700).

[ದೇ.॥ ತೆಲು. ಮೊದಯು; **ಕೊಡ.** ಮೊದೆ = ಹುಲ್ಲುಗಿಡದ ಪೊದರು]

**ಮೊದೆಕರನಿ** (ನಾ). (?) : ಕೌಣ್ಡಿನ್ಯ ಸಗೋತ್ರಾಪು . . . ದೇವಶರ್ಮ್ಮಣೇ ಮೊದೆಕರನಿನಾಮಹಲಮ್ ರಾಜಮಾನೇನ ದಿಂಶತಿನಿವರ್ತನವಮ್ ಕೇದಾರಂ ದ[ತ್ತ]ವಾನ್ (ಎಇ. VI, ೦೯-೦೦; ಸು. 400). 'ಮೆದಕಟನಿ' ಪರಾ. [?]

**ಮೊದ್ದ** (ನಾ). ತಿಳಿವಳಿಕೆಯಿಲ್ಲದವನು ; ದಡ್ಡ ; ಪೆದ್ದ : ಇವನು ತುಂಬಾ ಮೊದ್ದ (ರೂಢಿ). [ಮೊದ್ದು + — ಅ$_6$]

**ಮೊದ್ದಿ** (ನಾ). ತಿಳಿಗೇಡಿ ಹೆಣ್ಣು ; ಮಂದಬುದ್ಧಿಯುವಳು ; ದಡ್ಡಿ : ಈ ಮೊದ್ದಿ ಏನು ಹೇಳಿಕೊಟ್ಟರೂ ಕಲಿಯುವ ಹಾಗಿಲ್ಲ (ರೂಢಿ).
[ ಮೊದ್ದು + — ಇ$_2$ ]

**ಮೊದ್ದು** (ನಾ). ೧. ತಿಳಿಗೇಡಿವ್ಯಕ್ತಿ; ಮಂದಬುದ್ಧಿಯ ವ್ಯಕ್ತಿ : ನಿನಗೇನೂ ತಿಳಿಯದು, ನೀನೊಂದು ಮೊದ್ದು (ತ್ಯಾಗಜಾ. ೨೭); ಪಾಪ ! ಅವನು ಮೊದ್ದು (ಬಿಲ್ವಪೂ. ೦೩೦); ನಮ್ಮ ಹುಡುಗನು ಮೊದ್ದು (ಉಡುಗೂ. ೯೦). (ಗು). ೨. ತಿಳಿಗೇಡಿಯಾದ ; ದಡ್ಡನಾದ : ಹಿಂದೆ ಅವನು ಎಷ್ಟು ಚುರುಕು ವಿದ್ಯಾರ್ಥಿಯಾಗಿದ್ದನೋ ಈಗ ಅಷ್ಟೇ ಮೊದ್ದುಹುಡುಗನಾಗಿದ್ದಾನೆ (ದೂರಕ. ೨೬೦); ಎಷ್ಟು ಹೇಳಿದರೂ ನಿನ್ನ ಮೊದ್ದುಬುದ್ಧಿ ಎಲ್ಲಿ ನೆಟ್ಟಗಾದೀತು? (ಸಪ್ಯಕ್ಕ. ೪); ಗೋಂಬೆಯಂತಿರುವ ಮೊದ್ದು ಹುಡುಗಿಯನ್ನು ಕೈಹಿಡಿದು ಬರುವ ಭಾಗ್ಯವಾವರೂ ಏನು ? (ಕೆಪೋತ. ೦೦೦).

**ಮೊದ್ದುಮಣಿ** = (ಹಿರಿಯರ ಮುದ್ದು ಹೆಚ್ಚಾಗಿ) ದಡ್ಡನಾದವನು ; ಅವಿವೇಕಿ ; ತಿಳಿಗೇಡಿ : ಅಮ್ಮನಿಗೆ ಮಾತ್ರ ಬೇಕಾಗಿದ್ದ ಮೊದ್ದುಮಣಿ ನಾನಾಗಿದ್ದೆ (ಕಮ್ಮಕ. ೨೦೭).
[ ದೇ.॥ ತಮಿ. ಮೊತ್ತು: ತೆಲು. ಮೊದ್ದು ]

**ಮೊದ್ದುಗಳಹು** (ಕ್ರಿ). ಪೆದ್ದುಪೆದ್ದಾಗಿ ಹರಟು ; ತಿಳಿಗೇಡಿಯಾಗಿ ಮಾತಾಡು : ನೀ ಮೊದ್ದುಗಳಹುವುದನರಿಶಿದ್ದೆನೇ (ಮೂರುಪಾ. ೦೦೨-೪೪೭).
[ ಮೊದ್ದು + ಗಳಹು (< ಗಲಪು) ]

**ಮೊನಗು** ' ಮಿನುಕು₂ ' ನೋ.

**ಮೊನಚು** (ನಾ). ೧. ಚೂಪಾಗಿರುವಿಕೆ ; ಹರಿತವಾಗಿರುವಿಕೆ : ಮೊನಚುಳ್ಳ ಕತ್ತಿಯನ್ನು ಹಿಡಿದು . . . ಮೆರೆಯಲು (ಸ್ವಾಭೀ. ೧೨೩); ಇರ್ಕಡೆಯೊಳು ಸೂಜಿ ಮೊನಚಾದುದಾದರೆ ಪೊಲಿಯಬಹುದೇನನು ನೀನು (ಇಂಡಾಶ. ೭೩-೬೪). (ಗು). ೨. ಚೂಪಾದ; ಹರಿತವಾದ: ನಡನಡುಗಿ ಮುಂದಕಡಿಯಿಡುತಿರಲು ಮತ್ತೆ ತಲೆಯೆತ್ತಿ ಕಾಲ್ಗಡಿವಪುದು ಮೊನಚು ಮುಳ್ಳು ! (ಕವಿಶಾ. ೩೭-೨). [ಮೊನೆ + —ಚು₂]

**ಮೊನಚುಗಣ್ಣು** (ನಾ.) ಹರಿತವಾದ ನೋಟ ; ತೀಕ್ಷ್ಣವಾದ ದೃಷ್ಟಿ : ಮೊನಚುಗಣ್ಣುಗಳನ್ನು ಮಾಡಿಕೊಂಡು, ಜಾತಕವನ್ನೆ ನೋಡಿದರು (ತಗುಕ. ೭೭). [ಮೊನಚು + ಕಣ್ಣು (< ಕಣ್)]

**ಮೊನಚುಗೊಳಿಸು** (ಕ್ರಿ). ಚೂಪಾಗುವಂತೆ ಮಾಡು ; ಹರಿತ ಮಾಡು : ಕಲ್ಲುಮುಳ್ಳುಗಳನು ಮೊನಚುಗೊಳಿಸುವರ್ಯಾರು (ಇಂಡಾಶ. ೬೦-೧೨).

[ಮೊನಚು + ಕೊಳ್₁ + — ಇಸು₃]

**ಮೊನಚುಗೊಳ್ಳು** (ಕ್ರಿ). ಹರಿತಗೊಳ್ಳು ; ತೀವ್ರವಾಗು ; ತೀಕ್ಷ್ಣವಾಗು : ಹೇಗೆ ಮೂಡಿ ಬರವಣಿಗೆಗಿಳಿಯುವಷ್ಟು ಮೊನಚುಗೊಂಡಿತೋ ಕಾಣೆ (ರಾವೂನ. ೧೩). [ಮೊನಚು + ಕೊಳ್ಳು₁ (< ಕೊಳ್₁)]

**ಮೊನಸು** (ಕ್ರಿ). ೧. ಮೂಡು ; ಅಂಕುರಿಸು : ಮೊನಸಿದ ಮೆಯ್ನವಿರಿಂದಾನನಾಬ್ಜವಿಕಸನವಿಶೇಷದಿಂದ . . . ಪೇಟ್ಟಿಳು (ರೀಲಾವ. ೧೦-೯೦); ನನೆಯುಂ ಪೆತ್ತುದು ಮಾಧವಿ ಮೊನ[ಪಾಠಾಂ. ನೆ]ಸಿದುವಂಕುರಿಪ ತೃಣ ವಿಮ್ಮಾವುಗಳೊಳ್ (ಗಿಂಕ. ೭-೩೭) ; ತುಱುಬುಂ ತಿರ್ದುತ್ತುಂ ಮೊನಸಿದ ಪಳಿತಮನೆ ಕಂಡು (ಪುಣ್ಯಾಸ್ರ. ೦೧-೧೦). ೨. ಮೊಳಕೆ ಏಳು : ಪದಿನಾಲ್ಕು ದಿನಕೆ ನೆತ್ತರ ಘಟ್ಟಿಯೆನಿಪಮಂ ಪಡೆದು ಮೊಳೆ ಮೊನಸಿದಿಪ್ಪತ್ತೈದು ದಿನದವಂ (ಸಾಪಂತ. ೪-೩೦). [ಮೊನೆ + — ಸು₂]

**ಮೊನೆ** (ನಾ). ೧. ತುದಿ ; ಕೊನೆ : ಸೈನ್ಯಮೆಲ್ಲಮುಂಬಿನ ಮೊನೆಯೊಳ್ ಪಡಲ್ವಡೆ (ಶಃಶಬಾ. ೩-೦೦೪) : ಎಸಟಿ ಮೊನೆ ಕೂರಿತಡಿಗೆಂಬ ಸಂಕೆಯಿಂ ಮೆಟ್ಟದಂತೆ ಮುಟ್ಟದೆ ಕುಣಿವಾಗಃಮೆಂಬ ರಂಗದೊಳ್ (ಶಾಂತಿಪು. ೦೦-೦೭); ಮೊದಲೊಳ್ ಮುಳ್ಳಿನ ಮೊನೆಗಳ್ ಮೃದುವಪ್ಪುವು (ಧರ್ಮಾಮೃ. ೬-೦೦೭). ೨. ಹರಿತವಾದುದು ; ಚೂಪಾದ ತುದಿಯುಳ್ಳುದು : ಮೊನೆ ತಪ್ಪಿದ ಬಳಿಕ ಅಲಗೇನ ಮಾಡುವುದು (ಬಸವ. ೬೬೯) ; ಗಗನಧ್ವನಿಯೊಳಾದುದು ವಾರ್ತೆ ಚಿತ್ರಕೆ ಮೊನೆಯು ಸರಳಿನೆ (ಕುಮಾವ್ಯಾದ್ರೋ. ೯-೭) : ಹುಲಿಯ . . . ಮೊನೆಯಾದ ಕೋರೇಹಲ್ಲುಗಳೂ ಬಲು ಭಯಂಕರವಾಗಿ ತೋರುವುವು (ಮುಂಬಿಜು. ೪-೩೫). ೩. ಮುಳ್ಳು : ತಾ ನಡೆಯಲಱಿಯದೆ ಮೊನೆಯ ಮೆಟ್ಟಿ ಬಯ್ಯುವಂತೆ (ಮೋಳಿವಚ. ೩೩-೦೩೭). ೪. ಆಯುಧಗಳ ಹರಿತವಾದ ಬಾಯಿ ; ಧಾರೆ ; ಅಲುಗು : ಮತ್ಸ್ಯಾಸನನ ಮಗನಿದಿರಾಗಿ ಏಡುಗದ ಮೊನೆಯ ಚೂರಿಸಿ . . . ಅರ್ಜುನಕುಮಾರನ ಕರೆದು ಹಳಚಿದನು (ಕುಮಾವ್ಯಾದ್ರೋ. ೬-೩೭). ೫. ತೀಕ್ಷ್ಣತೆ ; ಚುರುಕು : ಅವಳ ಆಸೆಗಳು ಹೆಚ್ಚು ಮೊನೆಯಾದುವು (ಮುನಿಮಾ. ೯೭) ; ಆಕೆಯ ಮಾತಿನಲ್ಲಿ ಮೊನೆ ಇರುತ್ತಿತ್ತು (ಗಂಪೂಜು. ೦೦) ; ಭಕ್ತಿಭಾವಕೊಂದು ಮೊನೆಯನಿಟ್ಟನು (ಕವಿಶಾ. ೪೩-೦೭). ೬. ಶೌರ್ಯ ; ಕೆಚ್ಚು ; ಕಲಿತನ : ' ಮೊನೆದೋಱು ' ಪರಾ. ೭. (ಸೈನ್ಯದ) ಮುಂಭಾಗ ; ಅಗ್ರಭಾಗ: ತನ್ನೊಡ್ಡಿದ ಮಕರವ್ಯೂಹದ ಮೊನೆಯೊಳ್ ಸುತ್ತಿಱಿದೆತ್ತಿದ ಪೊನ್ನ ಪಟಿಯಿಗೆಗಳುಂ (ಶಂಪಭಾ. ೦೦-೩೨ ವ). ೮. ದಳ ; ಬಲ ; ಪಡೆ : ಇತ್ತ ತ್ರಿಪೃಷ್ಠನುಂ ವಿಜಯನುಮರ್ಕಕೀರ್ತಿಯುಂ ಜ್ವಳನಜಟಿಯುಂ ಸರಿಸಿ ಸಮಕಟ್ಟಿ ಮೂಱು ಮೊನೆಯಾಗೊಡ್ಡಿ (ಶಾಂತಿಪು. ೩-೩೦ ವ) ; ವಿಶ್ವಾವಸು ಮಹಾರಾಜನುಂ ರುಗ್ಮಿಣಕುಮಾರನುಮೊಂದು ಮೊನೆಯಾಗಿ ಬಂದೊಡ್ಡಿದರ್ (ಬಿಂಹಂ. ೭-೩೯ ವ) ; ಈತನಳವಿಯ ಕೆಡಿಸಿ ತಲೆಯೊತ್ತಿದರು ಭೂಪನ ಮೊನೆಯ ನಾಯಕರು (ಕುಮಾವ್ಯಾದ್ರೋ. ೬-೩೪). ೯. ಜಗಳ ; ಕಲಹ : ಮುಳಿಸು ಬೇಸಱು ಮೋಡಿಯಲಸಿಕೆ ಮೊನೆ ಮನದಳಲಂಜಿಕೆ ದುಗುಡದೊಳು ತಿಳಿತಿಳಿದಿನಿಯನಿಂಗಿತಭೇದಂಗಳನಳುಕಿಯಳುಕಿ ಅನುಸರಿಸು (ಹರಿಬಿ. ೩-೩೯). ೧೦. ಕಾಳಗ ; ಯುದ್ಧ : " ಮೊನೆ=ಕಾಳಗಂ " (ಶಮದ. ಶಂ. ೨) ; ಕಲಿಯೆನೆ ನೆಗಟ್ದಳ್ ಕಸವರಗಲಿಯೆನೆ ಗುಣದಂಕಕಾರ್ತಿ ಮೊನೆಯೊಳ್ ಮನೆಯೊಳ್ (ಅಜಪು. ೦-೭೩); ಮೊನೆಯೊಳು ಮತ್ಕರವಿಳ್ಗಂ ಮನೆಯೊಳು ಮನುಮಂತ್ರಸಿದ್ಧಿ ಸಂಕಟದೊಳು ಮಿತ್ರನು ಮೆನಿಪ ಪತಿಹಿತಂ (ಸೌಇಇ. IX-i, ೩೪೩-೦೦ ; 1226) ; ನಿನ್ನಾಳ್ದನೆಮ್ಮಂ ಮೊನೆಯೊಳ್ಬಂದಾಂತು ಕೈಮಾಡಿದೊಡೆ (ಅಸಂಪು. ೦೩-೩೦). ೧೧. ಶಕ್ತಿ : ಬಲ : ' ಮೊನೆಪುಱಿ ' ಪರಾ. ೧೨. (ಅಲಂ) ಅಡ್ಡಿ ; ವಿರೋಧ: ' ಮೊನೆದೋಱು ' ಪರಾ. (ಗು). ೧೩. ಚೂಪಾದ : ಹರಿತವಾದ : ತೀಕ್ಷ್ಣವಾದ : ' ಮೊನೆಗಣೆ ' ಪರಾ.

**ಮೊನೆಮಸೆ** = ತೀಕ್ಷ್ಣವಾಗು: ಅಧಿಕವಾಗು; ಹೆಚ್ಚಾಗು: ಮೊನೆ ಮಸೆವಕ್ಕಱು ಬಾಯ್ದೆಱಗೆಡೆವಿಡದೆಡೆಯಾಡುವ ನಱುದಂಬುಲ . . . ನೆಱೆ ಸೊಗಯಿಸಿದುವು ನವಸುರತಕ್ರೀಡೆಯೊಳಾ ದಂಪತಿಗೆ (ಜಯುಕಾ. ೯-೩೩). **ಮೊನೆಮಾಡು** = ೧. ಚೂಪಾಗಿ ಮಾಡು : ಹರಿತಗೊಳಿಸು : ಮೊನೆಮಾಡಿದ ಪೆನ್ಸಿಲ್‌ನಿಂದ ರೇಖಾಚಿತ್ರ ಬಿಡಿಸಬೇಕು (ರೂ೨). ೨. ಏಕಾಗ್ರಗೊಳಿಸು : ಮನಸ್ಸನ್ನು ಒಂದಂಶದ ಮೇಲೆ ಮೊನೆಮಾಡಿದರೆ ವಿಷಯ ಚೆನ್ನಾಗಿ ಗೊತ್ತಾಗುತ್ತದೆ (ಶಿಕ್ಷದ. ೪೭೩). **ಮೊನೆಮುಟ್ಟೆಗಂಡ** = ಯುದ್ಧಕ್ಕೆ ನಿಂತರೆ ಸೋಲದ ವೀರ.— ಪರಾಕ್ರಮಿ ; ಒಂದು ಬಿರುದು : ಕವಿಜನವಿನುತಂ ಮೊನೆಮುಟ್ಟೆಗಣ್ಡನಾಹವಸೌಣ್ಡ (ಎಕ. II, ೦೩೪-೭೭ ; 982) ; ಮೊನೆಮುಟ್ಟೆಗಣ್ಡಂ ಶ್ರೀಮನ್ಮಹಾಮಣ್ಡಳೇಶ್ವರಂ (ಸೌಇಇ. IX-i, ೨೮೭-೧೦ ; 1200 ?).

[ದೇ.॥ ತಮಿ. ಮುನೈ ; ಮಲ. ಮುನ ; ತುಳು. ಮುನೆ, ಮೊಣೆ, ಮೊನೆ ; ಕೊಡ. ಮೊನೆ ; ತೆಲು. ಪರ್ಜ. ಮೊನ ]

**ಮೊನೆಕಟ್ಟು** (ನಾ). ಆಯುಧಗಳ ತುದಿಯು ನಿಷ್ಪ್ರಯೋಜಕವಾಗುವಂತೆ ಮಾಡುವ ಒಂದು ಬಗೆಯ ತಂತ್ರವಿದ್ಯೆ: ಮಂತ್ರ. ತಂತ್ರ . . . ದಾರೆಕಟ್ಟು. ಮೊನೆಕಟ್ಟೆಂಬ ಕುವಿದ್ಯದಿಂ ಗೆಲುವೆನು (ಭೈರಕೂ. I. ೩೭೭).

[ ಮೊನೆ + ಕಟ್ಟು₂ ]

**ಮೊನೆಕಾಱಿ** ' ಮೊನೆಗಾಱಿ ' ನೋ.

**ಮೊನೆಗಣೆ** (ನಾ). ಹರಿತವಾದ ಬಾಣ : ಆತನ ನನೆಯಂಬಿನ ಮೊನೆಗಣೆಗಳಿವೆಂಬಿನಂ ಮೆಯ್ನವಿರ್ನೆಸೆದುವು (ಕಾದಂಬ. ೭೭೯); ಕೈಚಳಕದಲಿ ಮುಸುಕಿದನು ಮೊನೆಗಣೆಯಿಂದ ರಿಪುಭಟನ (ಕುಮಾವ್ಯಾಕ. ೪-೦೨); ತಿರುವಿಗೆ ತೊಡಿಸಿ ಸೆಳೆದನು ಮೊನೆಗಣೆಯನು (ಏಭಾಗ. ೪-೨೩-೭). [ಮೊನೆ + ಕಣೆ₁]

**ಮೊನೆಗಯ್ಯಿ** (ನಾ). ಕತ್ತಿವರಸೆಯ ಒಂದು ಪಟ್ಟು : ಇಬ್ಬರಿಂದ ಗತಿಮಧ್ಯದಲ್ಲಿ ಇಬ್ಬರ ಹಸ್ತಗಳಿಂದ ಅನ್ಯೋನ್ಯವಾಗಿ ತಾಗುವದು ಆವದು ಅದು ಮೊನೆಗಯ್ಯಿಯೆಂದು ಸಮ್ಮತವು (ಏದ್ಗರು. ೪-೪೭).

[ ಮೊನೆ + ಕಯ್ಯಿ (<ಕೆಯ್₂) ]

**ಮೊನೆಗಲ್ಲು** (ನಾ). ಚೂಪಾದ ಕಲ್ಲು ; ಮೊನಚಾಗಿರುವ ಕಲ್ಲು : ಮೊನೆಗಲ್ಲು ಗುಂಡುಗಲ್ಲುಗಳರೆಗಲ್ಲುಗಳ್ . . . ವನಮಾರ್ಗವ ತುಂಬಿಹುವು (ಕಂನವಿ. ೦೯-೪೪). [ ಮೊನೆ + ಕಲ್ಲು (<ಕಲ್₃)]

**ಮೊನೆಗಾಣಿಸು** (ಕ್ರಿ). ೧. ಆಯುಧದ ತುದಿ ಕಾಣುವಂತೆ ಹಿಡಿದುಕೊಳ್ಳು : ಹೊಂಗಠಾರಿಯ ಕೋಲುಮಿಡಿದು . . . ಮುಂಗೈದಂಡೆಗೊಡುತಂ ಜಾಳಿಬಿಡಿಯಿಡುತ ರಂಗಿಸುತ ಮೊನೆಗಾಣಿಸುತ್ತಂ (ಬಸವು. ೨೭-೦೨). ೨. ಆಯುಧದ ತುದಿ ಕಾಣಿಸಿಕೊಳ್ಳು; ಅಲಗು ಕಾಣಿಸಿಕೊಳ್ಳು. —ಮೂಡು : ನೀನಡಪ್ಪುದೀ ಶೂಲಮನೆನಲ್ಕಿತ್ತದೊಸಗೆ

ಯಿಂದೇಱಲಾತನ ಶಿರದೊಳೆದಱಿ ಮೊನೆಗಾಣಿಸಲ್ಬಡ್ಡೆಗೊಳದೆ ಎಸೆದಿರಲ್ (ಶಾಸೋಪು. ೭-೪೨). [ ಮೊನೆ + ಕಾಣಿಸು ]

**ಮೊನೆಗಾತಿ** (ನಾ). ೧. ಜಗಳವಾಡುವ ಸ್ವಭಾವದವಳು: ಜಗಳಗಂಟಿ: ಮುನಿದು ಮೂದಲಿಸಿ ಮೋಡಿಯೊಳಿದ್ದು ಮೂರ್ಛಿಪ ಮೊನೆಗಾತಿಯಿಾ ಕೃತಿಗೇಳೆ ಇನಿಯನ ಮೊಗವ ನೋಡದ ಮುನ್ನ ಮೋಹಿಸಿ ಮನಗರಗುವಳು (ಹರಿಬ. ೧-೩೩). ೨. ಸರಸದಿಂದ ಜಗಳವನ್ನಾಡುವವಳು; ಪ್ರೇಮ ಕಲಹವನ್ನಾಡುವವಳು : ತನಗೆಱಗಿದ ಪೆಣ್ಣ ನೋಡಿ ಮೊನೆಗಾತಿ ಬಲುಮೋಡಿಗಾತಿ ಮುಱುಗಾತಿ ಮಮ್ಮಾಯೆಂದ (ಶರಶ. ೯-೧೩೭).

[ಮೊನೆ + — ಕಾತಿ$_5$]

**ಮೊನೆಗಾಯ** (ನಾ). ಆಯುಧಗಳ ಚೂಪಾದ ತುದಿಯಿಂದ ಉಂಟಾದ ಗಾಯ ; ಶಸ್ತ್ರಾಘಾತ : ಅರಿಗಳ ಕೆಯ್ಯ ಕೂರಸಿಧಾರೆ ಮೊನೆಗಾಯ ಶರೀರದೊಳಗೆ ಸಂಧಿಸಲು (ಮೋಹತ. ೩೩-೩೯). [ಮೊನೆ + ಗಾಯ]

**ಮೊನೆಗಾರ** ' ಮೊನೆಗಾಱ ' ನೋ.

**ಮೊನೆಗಾರತನ** ' ಮೊನೆಗಾಱತನ ' ನೋ.

**ಮೊನೆಗಾರು** (ನಾ). ಲೋಹದ ತಂತಿಯನ್ನು ಪಱಡಲು ಉಪಯೋಗಿಸುವ ಒಂದು ಬಗೆಯ ಚಿಮುಟ : (+). [ ? ]

**ಮೊನೆಗಾಲ್**, ಮೊನೆಗಾಲು (ನಾ). ೧. [ನಾಟ್ಯ] ಒಂದು ಬಗೆಯ ಪಾದವಿನ್ಯಾಸ : ಚಿಂದು ಜಕ್ಕಡಿ ಕೋಲಚಾರಿಗಳ್ ಮೊನೆಗಾಲ್ ಕಳಾಸ ಕೈಮುಱ ತಿವುಡೆ ಮುಡುಹುಮುಳ್ಳನಿತು ಭೇದಂಗಳಿಂ ನರ್ತಿಸುವ ನೃತ್ಯದಬಲಾಜನಂ ಕಣ್ಗೆಸೆದುದು (ಚಿಬಪು. ೨-೨೯). **ಮೊನೆಗಾಲು**: ೨. ಕತ್ತಿವರಸೆಯಲ್ಲಿನ ಒಂದು ಪಟ್ಟು : ಸಮಪಾದದಿಂದ ನಿಂತು ತುದಿಗಾಲ್ಗಳಿಂದ ಭೂಮಿಯನ್ನು ಮುಟ್ಟಬೇಕು . . . ಅದರ ಹೆಸರು ಮೊನೆಗಾಲು ಯೆಂಬುದು (ಜಗ್ಗಬೀ. ೪-೪೩). [ಮೊನೆ + ಕಾಲ್$_1$]

**ಮೊನೆಗಾಲು** ' ಮೊನೆಗಾಲ್ ' ನೋ.

**ಮೊನೆಗಾಱ**, ಮೊನೆಕಾಱ, ಮೊನೆಗಾರ (ನಾ). ೧. ಯುದ್ಧಮಾಡುವವನು : ಯೋಧ ; ವೀರ : ಅರಸಿಯರನಣುಗರಂ ಬೇಟ್ಟಿರುಪಂ ಮೊನೆ [ಪಾಠಾಂ. ಪೊಣೆ] ಗಾಱರಂ ಪ್ರಗೀತರನಿಂಬಾಗಿರೆ ಚೌಪಳಿಗೆಗಳೊಳ್ ಕುಳ್ಳಿರಿಸಿದರ್ (ಶಂಶಖ. ೨-೬೭) ; ಮೊನೆಗಾಱ ನೀನೋ ನಮ್ಮರಸನೊ (ಭರತ. ೩೮-೭೮) ; ಆತನ ದಾಯಿಗ ಮೊನೆಗಾಱ ಸೋಮಪ್ರಭನು (ನಾಗಕು. ೧೪-೧೩) ; ಪಗೆಗಾಱರ ಮೊನೆಗಾಱರ ಬೀರ ! (ರಾವಾಶ್ವ. ೮೦-೩). **ಮೊನೆಕಾಱ** : ೧. ದಿಂಡುಕಾಱಿಂ, ಬಿಲ್ಕಾಱಿಂ, ಮೊನೆಕಾಱಿಂ (ಧಾತುಭೂ. ೧೭೦ ಉದಾ). **ಮೊನೆಗಾರ** : ೧. ಪ್ರತಿಜ್ಞೆಯಂ ಮಾಡಿದ ಮೊನೆಗಾರನು ಯಿಾ ಆಯುಧವನೆತ್ತಲಾರನೇ (ಸೌಗಂಧಿ. ೨೩೩-೮) : ಮೊನೆಗಾರರು ಅರಿಬಲದ ಮೊನೆ ಮುರಿವರು (ಕಬೀರ. ೧೨೯). ೨. ಮೈಸೂರು ಅರಸರಿಗಿದ್ದ ಒಂದು ಬಿರುದು : ಜನಪು ಮೊನೆಗಾರನೆಂಬ ಬಿರುದಂ ಪಡೆದಂ (ಮರಾಜ. ೧-೪೦) ; ' ಮೊನೆಗಾರ ' ಎಂಬ ಬಿರುದೂ ಶ್ರೀಮನ್ಮಹೀಶೂರ ಮಹಾರಾಜವಂಶವನ್ನು ಸಿಕ್ಕಿ ಬಂದು ಕೃತಾರ್ಥವಾಯಿತು (ಬಿರುಗಂ. ೩೨-೨೦).

[ಮೊನೆ + — ಕಾಱ]

**ಮೊನೆಗಾಱತನ**, ಮೊನೆಗಾರತನ (ನಾ). ಯುದ್ಧಕೌಶಲ : ಎಟ್ಟಿರಂಬೆತ್ತ ಶಕ್ತಿಯನೆ ಕೊತ್ತಳಮುಮಂ . . . ಮೊನೆಗಾಱತನಮನೆ ಮುಗಿಲಟ್ಟಳೆಗಳುಮಂ ಗೆಯ್ದು ಕಾದುತ್ತೆ (ಶಕಪಂ. ೩೯-೯). **ಮೊನೆಗಾರತನ** : ಕೋಟೆಗಳಂ ನೋಟದಿಂದಲೆ ಮಿಾಟುವ ಮೊನೆಗಾರತನದಿಂ (ಸೌಗಂಧಿ. ೧೩೦-೧). [ಮೊನೆಗಾಱ + — ತನ]

**ಮೊನೆಗಾಱಿಕೆ** (ನಾ). ಜಗಳ ; ಕಲಹ : ಸರಸಮೋಹಕೆ ಮೊನೆಗಾಱಿಕೆ ಸಲ್ಲದೆಂದೊರೆದು ನಿಲಿಸಿದನಾ ವಿಟನು (ಭರತ. ೩೮-೧೫).

[ಮೊನೆಗಾಱ + — ಇಕೆ]

**ಮೊನೆಗುತ್ತು** (ನಾ). = ಮೊನೆಗಾಯ : ಪಿರಿದು ಮೊನೆಗುತ್ತಿನಲಿ ನೆತ್ತರು ಸುರಿದುದಡಹೊಯ್ಲಿನಲಿ ಖಂಡದ ಹೊರಳಿ ತಳಿತುದು (ಕುವ್ಯಾಶೀ. ೮-೧೭).

[ಮೊನೆ + ಕುತ್ತು$_2$]

**ಮೊನೆಗೂಡು** (ಕ್ರಿ). ತುದಿಯನ್ನು ಮುಟ್ಟು: ಹೂಂಗಳಸ ಮಿರುಗುವೆಡೆ ಮೊನೆಗೂಡುವಾಗಸದ . . . ಮಂದಿರದಿ ಸಂಘಟಿಸಿತಷ್ಟಧಾಭಿನ್ನವಾದೀಶ್ವರ ಪ್ರಕೃತಿರೂಪಂ (ಮಲದೇ. ೩೪-೧). [ಮೊನೆ + ಕೂಡು$_1$]

**ಮೊನೆಗೈ** (ಕ್ರಿ). ಹರಿತಗೊಳಿಸು ; ಚೂಪುಮಾಡು : ಮಾರನಂಬಿನ ಮೊನೆಯ ಮಗುಳೆ ಮೊನೆಗೈಯುತಿಪ ವಾರನಾರೀವಾರ (ಪಂಶಾರಾ. ೧-೭-೨೯). [ ಮೊನೆ + ಕೈ$_1$ (<ಕೆಯ್$_1$) ]

**ಮೊನೆಗೊಡು** (ಕ್ರಿ). (ಮುಖಾಮುಖಿಯಾಗಿ) ಯುದ್ಧಕ್ಕೆ ತೊಡಗು ; ಹೋರಾಡು : ನಿಟ್ಟಿಸಿ ಹಣುಗಿ ಮೊನೆಗೊಡೆ ದಂಡೆಯೊಳು ಖಣಖಣಿಲು ರವವೆಸೆಯಲ್ಕೆ ಕಾದಿತು ಸುರಗಿಯತಿಬಲರು (ಕುವ್ಯಾಶೀ. ೪-೨೩) ; ನುಗ್ಗಿಸಲೆಡೆಗುಡದೆ ನಿಂದು ಮೊನೆಗೊಡಿರನುವಿಂ ಹಿಗ್ಗಿ ಪೆಱಸಾರದಿರಿ (ಹವ್ಯಾರ. ೩-೩೯). [ಮೊನೆ + ಕೊಡು$_1$]

**ಮೊನೆಗೊಳ್ಳು** (ಕ್ರಿ). ತೀಕ್ಷ್ಣತೆಯನ್ನು ತಳೆ : ತೀವ್ರವಾಗು : ಅಹಿತ ಸಂತತಿಜಾಲ ಮೊನೆಗೊಂಡು ಮುಸುಕಿರಲು ಮಹಿಯ ಮಂಗಳವೆಳಸಿ ಮರುಗುವಾತ್ಮವನು (ಏಸಿಗೀ. ೧೭-೯).

[ಮೊನೆ + ಕೊಳ್ಳು$_1$ (<ಕೊಳ್$_1$)]

**ಮೊನೆಗೋಲು** (ನಾ). (ಅಂಕುಶದಂತೆ) ಚೂಪಾದ ತುದಿಯುಳ್ಳ ಕೋಲು : "(ದನಗಳನ್ನು ಚುರುಕುಮಾಡುವ) ಮೊನೆಯುಳ್ಳ ಕೋಲು ; ಮೊನೆಗೋಲು, ಚುಚ್ಚುಗೋಲು" (Goad. ೩೦೪೩).

[ ಮೊನೆ + ಕೋಲು$_1$ (< ಕೋಲ್$_1$) ]

**ಮೊನೆದಿವಿಗುಳು** (ನಾ). ಚೂಪಾದ ಆಯುಧದ ತಿವಿತ,—ಇರಿತ : ಮೇಲ್ಕೀಳ್ವಾಯಿಲ್ಮೊನೆದಿವಿಗುಳಿಂದೆ ಮೆಯ್ಗಳ ತುಂಡುಗಳ್ ಬೀಳೆ (ತಬಪು. ೪೮-೩೦). [ಮೊನೆ + ತಿವಿಗುಳು]

**ಮೊನೆದುಱುಗಲ್** (ನಾ). ಚೂಪಾದ ಮೊನೆಗಳ ಗುಂಪು : ಪಲಸಿನ ಪಣ್ಣನನುಕರಿಪ ಮೊನೆದುಱುಗಲ ವಜ್ರದ ಶಿಲೆಯೊಳಪ್ಪಳಿಸಿ (ವರ್ಧಪು. ೧೧-೧೩ ವ). [ಮೊನೆ + ತುಱುಗಲ್ (<ತುಱುಂಗಲ್)]

**ಮೊನೆದೋಱ್** ' ಮೊನೆದೋಱು ' ನೋ.

**ಮೊನೆದೋಱು**, ಮೊನೆದೋಱ್ (ಕ್ರಿ). ೧. ಆಯುಧದ ಚೂಪಾದ ತುದಿಯನ್ನು ತೋರಿಸು : ಉಱುಬಿವರೆ ವಡಬಾನಲನ ಮುಖದಿರವು ಮೊನೆದೋಱಿದರೆ ಭುಜಗನ ಬಿಱುಬು (ಕುವ್ಯಾಭೀ. ೪-೩೪). ೨. ಮೊಳಕೆದೋರು ; ಕಾಣಿಸಿಕೊಳ್ಳು : ಅಂತು ಬೆಡಂಗನಾಂತ ಕಳಿಕಾನಿವಹಂ ಮೊನೆದೋಱದನ್ನಂ . . . ತಲೆದೋಱಿದತ್ತು ವಾಸಂತಿ (ಜಗಪ. ೧೪-೨೦). ೩. ಶೌರ್ಯವನ್ನು ತೋರು : ಬಲವೆರಸಿ ತಾನೊಡ್ಡಿ ನಿಲಲೀ ಇಳೆಯ ನಡುಗಿಸಿ ಸಮರಭೇರಿಯು ಮೊಳಗೆ ಯಾದವಬಲವು ಮೊನೆದೋಱಿದುದು ಚೂಣಿಯಲಿ (ಸಾಳ್ವಭಾ. ೧೯-೧೨) ; ಮೊನೆದೋಱಿ ಹೆಣ್ಣ ಭೋಗಿಸುವುದು ಸೊಗಸಲ್ಲ ವಿನಯದೊಲುಮೆ ಸೊಗಸು (ಭರತ. ೧೧-೧೭). ೪. (ಆಲಂ) ಅಡ್ಡಿಯನ್ನುಂಟುಮಾಡು ; ವಿರೋಧವನ್ನು ವ್ಯಕ್ತಪಡಿಸು : ಯತಿಗಳಿಗೆ ಮೊನೆದೋಱಿ ತಣಿಸದ [ಪಾಠಾಂ. ಱವಣಿಸನು] ವ್ರತಿಗಳಿಗೆ ಬೀಱುತ ಸಮಾಧಿಸ್ಥಿತರ ಮೂಗಿನ ಮೇಲಡಾಯುಧಧಾರೆಗಳನೆಳೆದು . . . ನಡೆದುದು ಯುವತಿಜನಕಟಕ (ಕುವ್ಯಾಆ. ೧೩-೩೭) ; ಕೇಳ್ದು ಮಾನಿನಿ ನನೆಗೋಲನರ್ಧಾಂಗನೆಗೆ ಮೊನೆದೋಱಿ ಮೃದುವಾಕ್ಯದಿಂದಡಿಗೆಯ ಮನೆಗೆಲಸಕೆ ಸಾರ್ಚಿದಳು (ಮೋಹತ. ೧೧-೪೦). **ಮೊನೆದೋಱ್** : ೫. ಜಗಳವನ್ನು ಆರಂಭಿಸು : ಮೊನೆದೋರ್ಪರ್ಕಲಸಾರ್ಪರುಮ್ಮಳಿಪರ್ (ಶಕಪ. ೭-೯೭). [ಮೊನೆ + ತೋಱು]

**ಮೊನೆನಗೆ** (ನಾ). ಮುಗುಳುನಗೆ ; ಮಂದಹಾಸ : ಮೊನೆನಗೆಯ ಸಿರಿ ಮೊಗದ ನೆಗಳ್ದ ಜನದಭಯಪಸ್ತಾಂಬುಜದ ಹರಿ ವಿನುತಸಿಂಹಾಸನವನಿಳಿದಾ ಧುರಕೆ ಹೊಱಮಟ (ಕುವ್ಯಾಸ. ೧೦-೬೧); ಮೊನೆನಗೆಯಿಂದ ಆಡಿದ ಮಂದಿಮಾತನು ಮನ್ನಿಸಿ (ಕಲ್ಕಿ. ೦೯-೨೦). [ಮೊನೆ + ನಗೆ]

**ಮೊನೆನೋಟ** (ನಾ). ಕಡೆಗಣ್ಣಿನ ನೋಟ; ಕುಡಿನೋಟ : ಅಪಾಂಗ ದೃಷ್ಟಿ : ಮೊನೆನೋಟದಿಂ ಚುಚ್ಚಿ ಜೆಳ್ಳಿ ನೋಡುವಳೊಬಳೆ (ಶಾಂಚರ. ೯೨-೩೯). [ಮೊನೆ + ನೋಟ]

**ಮೊನೆಪಾಡು** (ನಾ). ಕಾಳಗದ ಸ್ಥಿತಿ,–ಇರವು : ಅನುವರದೊಳಗೆಚ್ಚಱಲಿ ಬಾನ ಮುಲುಕರ ಮೊನೆಪಾಡ ಮುಱಿದೆಬ್ಬಿಸೆಂದ (ಕಂಸವಿ. ೦೯-೬೮). [ಮೊನೆ + ಪಾಡು$_3$]

**ಮೊನೆಮಗುಚು** (ಕ್ರಿ). (ಖಡ್ಗದ) ತುದಿಯನ್ನು ಒರೆಯೊಳಗೆ ನೂಕು: ಬಿಗಿದ ಗಂಡುಡಿಗೆಯಲಿ ಹೊನ್ನಾಯುಗದ ಹೊಳೆವ ಕಠಾರಿಯನು ಮೊನೆ ಮಗುಚಿ . . . ಆಹವಕ್ಕನುವಾದನಭಿಮನ್ಯು (ಕುವ್ಯಾದ್ರೋ. ೯-೯೯). [ಮೊನೆ + ಮಗುಚು (< ಮಗುಚ್ಚು)]

**ಮೊನೆಮಲ್ಲಿಗೆ** (ನಾ). ಚೂಪಾದ ತುದಿಯುಳ್ಳ ಒಂದು ಬಗೆಯ ಮಲ್ಲಿಗೆ ಮತ್ತು ಅದರ ಗಿಡ ; ಸೂಜಿಮಲ್ಲಿಗೆ : ಎಳನನೆ ತೀವಿ ತೋರ್ಪ ಮೊನೆಮಲ್ಲಿಗೆ ತಾವರೆ ತೀವಿ ತೋರ್ಪ ತಂಗೊಳಂ (ರಾಜಶೇ. ೨-೬೭). [ಮೊನೆ + ಮಲ್ಲಿಗೆ]

**ಮೊನೆಮಾತು** 'ಮೊನೆವಾತು' ನೋ.

**ಮೊನೆಮಿಂಚು** (ನಾ). (ಕಣ್ಣನ್ನು ಕೋರೈಸುವ) ತೀಕ್ಷ್ಣವಾದ ಮಿಂಚು: ಮೊಗ್ಗರಿಸಿ ಮೊರೆ ಮುಗಿಲೆ! ಮಿನುಗು ಮೊನೆಮಿಂಚೇ! (ಗೀತಾಂ. ೯೮-೨). [ಮೊನೆ + ಮಿಂಚು$_2$]

**ಮೊನೆಮುಗುಳು** (ನಾ). ಚೂಪಾದ ತುದಿಯುಳ್ಳ ಮೊಗ್ಗು : ಮೊನೆ ಮುಗುಳ ಶಸ್ತ್ರಂಗಳಂ ಪಾಯ್ದು ಮಾಮಿಡಿಯ ಜೊಂಪದ ವಜ್ರಮುಷ್ಟಿಯುಂ ಜಡಿದು (ಕೈಪಿಡಿ. ೩-೩೨). [ಮೊನೆ + ಮುಗುಳು$_2$ (<ಮುಗುಳ್$_2$)]

**ಮೊನೆಮುಳ್ಳು** (ನಾ). ಚೂಪಾದ ಮುಳ್ಳು : ಸಲೆ ಪಜ್ಜೆಯನಿಡೆ ನಾಂಟುವ ಮೊನೆಮುಳ್ಳಿನಿಂದೊಳುಗಾಡೆಸೆದುದೇಸೆಂಬೆ (ಕಂಸವಿ. ೦೮-೯೭). [ಮೊನೆ + ಮುಳ್ಳು (<ಮುಳ್$_2$)]

**ಮೊನೆಮುಱಿ** (ಕ್ರಿ). ಶಕ್ತಿಗುಂದಿಸು ; ನಿರ್ವೀರ್ಯಗೊಳಿಸು : ಚೆನರಾಯಪಟ್ಟಣದ ಭಟರು ಬರುತಿಹ ಘನವಾದ ತುರುಕರ ಬಲವ ಮೊನೆಮುಱಿದು . . . ಮನಹರುಷದೊಳ್ಹೈದಿದರು (ಕಂಸವಿ. ೦೩-೬೦). [ಮೊನೆ + ಮುಱಿ$_1$]

**ಮೊನೆಮೊಳೆ** (ನಾ). ಚೂಪಾದ ತುದಿ ; ಹರಿತವಾದ ಕೊನೆ : ಹೊನ್ನಿನ ಹೊಳೆವ ಕಠಾರಿಯ ಮೊನೆಮೊಳೆ ಬೆನ್ನೊಳು ತಲೆದೋಱಿಸಲು (ವೀರಹಕ. ೦೨-೬೮). [ಮೊನೆ + ಮೊಳೆ$_2$]

**ಮೊನೆಯಂಬು** (ನಾ). ಹರಿತವಾದ ಬಾಣ ; ಕೂರ್ಗಣೆ : ಕಾಸಿದ ಮೊನೆಯಂಬುಳ್ಳವನ[ವ]ಱಿಂ ಮೆಯ್ಯನನೇಕಶರಸಂಘಾತಂಗಳಿಂಪಮೆಚ್ಚೊಡೆ (ವಡ್ಡಾರಾ. ೦೭೩-೦೫) ; ವಿದ್ವಿಷ್ಟವಿದ್ರಾವಣನ ಮೊನೆಯಂಬಿನಂಬೇಱಿಂಗಳ್ಕಿ ಹತವಿಹಿತಕೋಳಾಹಳರಾಗಿ (ಚಂಪಭಾ. ೫-೮೮ ವ) ; ಅದೇನನುಕರಿಸಿದುದೆಂದೊ ಮನ್ಮಥನ ನನೆಯ ಮೊನೆಯಂಬಿದೆಂಬ ಮಾತಮರ್ಪಿನೆಗಂ (ಸುಕುಮಾ. ೦೦-೨೧) ; ಪೋದಪೊದಸುಮೀಗಳೆ ಮದನನಿಸುವ ಪೊಸಕೆಂದಳಿರ್ಗಳ ಕೆಂಗಱಿಯ ನನೆಯ ಮೊನೆಯಂಬುಗಳಿಂ (ಜಗವಿ. ೦೦-೦೪). [ಮೊನೆ + ಅಂಬು$_2$]

**ಮೊನೆಯಲಗು** (ನಾ). ೧. (ಆಯುಧ, ಬಾಣ ಇತ್ಯಾದಿಗಳ) ಹರಿತವಾದ ಅಲಗು ; ಚೂಪಾದ ತುದಿ : ಮೊನೆಯಲಗಿನಂಬುಗಳ ಬಿಱುಸರಿಗನಿಬರಂಗವ ತೆತ್ತು ಮಾತಾಯುನಿತವಿಗ್ರಹವಾಯ್ತು ನಿಗ್ರಹದತಿ ಮಹಾರಥರು (ಕುವ್ಯಾದ್ರೋ. ೦೨-೨೨). ೨. ಹರಿತವಾದ ಬಾಣ ; ಕೂರ್ಗಣೆ : ಮದನನ ಮೊನೆಯಲಗಿನಲಿ ಬಳಲ್ವ ಸತಿಯನು ಕಂಡು (ಪಳಕ. ೨-೨೯). [ಮೊನೆ + ಅಲಗು$_2$]

**ಮೊನೆಯಾಳ್**, –**ಮೊನೆಯಾಳು** (ನಾ). ಯುದ್ಧ ಮಾಡುವವನು ; ಯೋಧ ; ಸೈನಿಕ : ಕುಸುಮಾಸ್ತ್ರ ತನ್ನಯ ಮೊನೆಯಾಳ್ಗಳಿದಿರಲಿ ಮಿಸುಗುವರಿಲ್ಲೆಂದು ನಗುತ (ಕಂಸವಿ. ೭-೯೫). **ಮೊನೆಯಾಳು** : ಸಾಹಸಿಕರಳುಕಿದರು ಕೌರವಮೋಹರದ ಮೊನೆಯಾಳುಗಳು (ಕುವ್ಯಾದ್ರೋ. ೦೮-೯೭) ; ಸೇವಕ ವಜೀರ ಮೊನೆಯಾಳು ಮಾಡಿಸ್ತ ಸ್ತಂಭ ಘಂಟೆ (ಎಕ. XV, ಅರಕ. ೦೩೭-೩ ; 1559) ; ಕೋಪದಲಿ ಜನನಾಥ ಕಂಠೀರವೇಂದ್ರನ ದಳಪತಿ ಮೊನೆಯಾಳು ಸಹಿತುಱುಬಿದನು (ಕಂಸವಿ. ೦೮-೦೦೨). [ಮೊನೆ + ಆಳ್$_3$]

**ಮೊನೆಯಾಳು** 'ಮೊನೆಯಾಳ್' ನೋ.

**ಮೊನೆಯಿಟ್ಟಿ**, **ಮೊನೆಯಿಟಿ** (ನಾ). ಚೂಪಾದ ಈಟಿ ; ಹರಿತವಾದ ಭರ್ಜಿ : ಜಕ್ಕಿಯನಾಯಕಂ ಮೊನೆಯಿಟ್ಟಿಗೊಂಡ ನಾಯಕರ ಮೇಲೆ ಪಾಯ್ಪಲು ತಳಿಯ ಮಱಿವಿಡಿದು (ಮೈಅರಿ. ೦೯೯೦೬ ೯೨-೦ ; 13ನೆಯ ಶತ). **ಮೊನೆಯಿಟಿ** : ಕುಣಿಕುಣಿದು ಮಣಿದು ಮೊನೆಯಿಟಿಗಳ ಸಾಚರ್ಯತ್ತೆ (ಪಪಪೋ. ೨೩-೩೮). [ಮೊನೆ + ಇಟ್ಟಿ$_2$]

**ಮೊನೆಯಿಡು** (ಕ್ರಿ). ಚೂಪಾದ ತುದಿಯಿಂದ ತಿವಿ, — ಚುಚ್ಚು : ಒರ್ಮೆಯೆ ಮುಟ್ಟೆವಂದುದು ಬೆಱೆಟುತ್ತುಂ ಮಹೀರಂಗವಂ ಕಲೆದುರ್ಬೆಟಿಸುತಂಗವಂ ಮೊನೆಯಿಡುತ್ತುಂ ಶೃಂಗವಂ ಪುಂಗವಂ (ಜಗವಿ. ೫-೩೩). [ಮೊನೆ + ಇಡು$_1$]

**ಮೊನೆಯಿೞ** (ಕ್ರಿ). ತೀಕ್ಷ್ಣತೆಯನ್ನು ನೀಡು ; ಮೊನೆಗೊಳಿಸು : ಸುಭ್ರೂ ಕಟಾಕ್ಷಕ್ಕೆ ಮೊನೆಯಿೞವ ಬಲವೇ (ಮಲೆರೇ. ೨೫-೯). [ಮೊನೆ + ಈ$_2$]

**ಮೊನೆಯಿಟಿ** 'ಮೊನೆಯಿಟ್ಟಿ' ನೋ.

**ಮೊನೆಯೇಡು** (ನಾ). ಅದೇ ತಾನೆ ಕಳೆದುಹೋದ ಕಾಲ; ಭೂತಕಾಲ: ಸಮಸಂದ ಕಾಲವಾಚಕಮಿವು ನಾಡಿದು ನಾಳೆ ನಿನ್ನೆ ಮೊನ್ನೆಗಳೆಂದಂ ವಿವರಿಪುವೀಮಱ ಮೊನೆಯೇಡವು ಕಿಂಚಿದ್ಭೂತಭೂತಕಾಲದ್ವಯದೊಳ್ (ಶಮದ. ೩೨೨); ಮೊನೆಯೇಡಿನ ನೆರೆವಾಳ್ವೆಂದಿನಿವಂ ಕವಿ ಬಸುಟು ಲೋಕ ಮೆಂತಿರವೇಳ್ಕುಂ (ಸಂಸಕ. ೮-೦). 'ಇಯಾಂಡು', 'ಯಾಂಡು' ಪರಾ. [ಮೊನೆ, + ಏಡು$_1$]

**ಮೊನೆಯೇಱು** (ಕ್ರಿ). ಕಾಳಗಕ್ಕೆ ತೊಡಗು : ಕೈದು ಮೊನೆಯೇಱುವುದಕ್ಕೆ ಮೊದಲೇ ಕಟ್ಟಬಲ್ಲಡೆ ಕೈದೇನ ಮಾಡುವುದು (ಸರ್ವಜ್ಞ. ೯೨-೨೦೭). [ಮೊನೆ + ಏಱು$_1$ (< ಏಱ್$_1$)]

**ಮೊನೆವಲ್ಲು** (ನಾ). ಚೂಪಾದ ಹಲ್ಲು; ಮೊನಚಾದ ಹಲ್ಲು : ಕುಲಿಶದ ಪಂತಿವಲ್ಲ ಕಂಗೊಳಿಪ ಮೊನೆವಲ್ಲುಗಳ ನಾರಿಯರ್ ಶೃಂಗಾರಹಾರಿಯರ್ ಬರುತಿರ್ದರು (ಶಬ್ದ. ೩೭-೯೫): ಸೊಗಯಿಸುವ ಗೋಣ್ಕೊಳಗಿನಿಂಚರಂಗಳನೆಸಗಿ ಮೊನೆವಲ್ಲ ಕರ್ದರ್ಕನುಗುರೊತ್ತುಗಳನು . . . ಕೈಗೊಳಿಸಿ (ಕೈಪಿಡಿ. ೦೦-೨೨). [ಮೊನೆ + ಪಲ್ಲು (< ಪಲ್)]

**ಮೊನೆವಾತು**, **ಮೊನೆಮಾತು** (ನಾ). ತೀಕ್ಷ್ಣವಾದ ನುಡಿ: ಚುಚ್ಚು ಮಾತು; ವ್ಯಂಗ್ಯೋಕ್ತಿ : ಮೊನೆವಾತಿನೊಳಿಂತು ಜಡಿದು ನುಡಿದಳ್ (ಗೀತಗೋ. ೨೭-೯೭); ಮುನಿದಿನಿಯನ ಕಡುಮೊನೆವಾತಿಗೆ ನೊಂದು ಕನಲದೆ (ಹರಿಶ. ೩-೨೩). **ಮೊನೆಮಾತು** : ಆ ಮೊನೆಮಾತುಗಳಿಂದ ತಂದೆಯ ಬಗ್ಗೆ ಜುಗುಪ್ಸೆಯುಂಟಾಯಿತು (ಶ್ರೀಬಂ. ೦೭). [ಮೊನೆ + ಮಾತು$_1$]

**ಮೊನೆವೆಳಗು** (ನಾ). ತೀಕ್ಷ್ಣವಾದ ಬೆಳಕು : ಜಾರುಗೆನ್ನೆಯ ಕಡೆಗೆ ಸುಳಿವಾಸೆದಿಟ್ಟಿಗಳ ದಟ್ಟಿಸುತ ಒಲಿಮಣಿ ಮೊನೆವೆಳಗನೆಸೆಯೆ (ಮಲೆರೇ. ೩೦-೨). [ಮೊನೆ + ಬೆಳಗು$_2$ (< ಬೆಳಕು$_2$)]

**ಮೊನೆಸರಳು** (ನಾ). = ಮೊನೆಗಣೆ : ಮೊನೆಸರಳು ಮಾನ್ಯರನರಿವವೇ ನೀವೇಕೆ ರಣವೇಕೆ (ಕುಮಾ.ಕ. ೪-೩೦). [ಮೊನೆ + ಸರಳು$_1$ (< ಸರಲ್)]

**ಮೊನೆಸುರಗಿ** (ನಾ). ಹರಿತವಾದ ಕಠಾರಿ ; ಚೂಪಾದ ಕಿರುಗತ್ತಿ : ಕೂರಂಬಿನಲಿ ಮೊನೆಸುರಗಿಯನು ಖಂಡಿಸಿದನು (ಕುಮಾ.ದ್ರೋ. ಕಂ. ೨೮೮-೨೦). [ಮೊನೆ + ಸುರಗಿ$_2$ (< ಸುರಿಗೆ$_2$)]

**ಮೊನೆಹಾರೆ** (ನಾ). ಚೂಪಾದ ತುದಿಯುಳ್ಳ ಹಾರೆ : ಗುದ್ದಲಿ ಮೊನೆ ಹಾರೆಗಳ್ ಪಿಡಿದ ಕರದ ಕುಡುಗೋಲು . . . ಸಹ ಬಹ ಕಾಮಾಟದ ಬಿಡುಮಂದಿಗೆ ಲೆಕ್ಕವಿಲ್ಲ (ಕಂಸವಿ. ೧೧-೪೦). [ಮೊನೆ + ಹಾರೆ (< ಪಾರೆ$_1$)]

**ಮೊನ್ನೆ$_1$** (ನಾ). ನಿನ್ನೆಯ ಹಿಂದಿನ ದಿನ : ವನಜಮುಖಿ ಕೇಳ ನೀಂ ಮೊನ್ನಿನ ಶೂನ್ಯವಚನಮಂ ನುಡಿಯದೆ ನೆಟ್ಟನೆ ಬರ್ಪುದು (ರಾಜಶೇಖರ. ೫-೨೨೮); ಸವಸಂದ ಕಾಲವಾಚಕಮಿವು ನಾಡಿದು ನಾಳೆ ನಿನ್ನೆ ಮೊನ್ನೆಗಳ್ (ಶಮದ. ೩೨೨); ನಿನ್ನವೊಲು ಸಿದ್ಧಾರ್ಥನೆಂಬವ ಮೊನ್ನೆ ಬಂದನು (ಸಾಳ್ವಭಾ. ೦೬-೪೮). [ದೇ. ॥ ತಮಿ. ಮುನ್ನಾನ್ನಾಳ್, ಮುನ್ನೈನಾಳ್; ಮಲ. ಮುನಿನಾನ್ನು; ತುಳು. ಮೊರಣೆ, ಮೊರಾನಿ; ತೆಲು. ಮೊನ್ನ]

**ಮೊನ್ನೆ$_2$** (ಅ). ಇತ್ತೀಚೆಗೆ ; ಕೆಲ ಸಮಯದ ಹಿಂದೆ : ಮೊನ್ನೆ ಮದಿವ್ಯಾದೆನ್ನ ಕಟಿವದೊಂದೆರಡಮ್ಮ (ಪುರಂದ. ೨-೬೩-೫); ಬಲರಾಮರ್ ಮೊನ್ನೆ ಮಾಡುಗುಂ ಬಲಿವಧಮಂ (ಕಣ್ಣ.ಪು. ೪೬೩ ಕ್ರಿಯೋ); ಮೊನ್ನೆ ತದಡಿಯಿಂದ ಮಗಳೂ ಬಂದಾಳಂತಲ್ಲ (ಮೂರುದಾ. ೧೪೨).

**ಮೊನ್ನೆಮೊನ್ನೆ** (ದ್ವಿರುಕ್ತಿ) : ಮೊನ್ನೆಮೊನ್ನೆ ತನಕ ಸಕ್ಕರೆ ಮುಕ್ತ ಮಾರ್ಕೆಟ್‌ನಲ್ಲಿ ಸಿಗುತ್ತಿತ್ತು (ರೂಢಿ). [< ಮೊನ್ನೆ$_1$]

**ಮೊಬಲಗು** (ನಾ). ಹಲವು ಅಂಶಗಳನ್ನು ಕೂಡಿದಾಗ ಬರುವ ಒಟ್ಟು ಹಣ ; ರಕಮು : ಅವರು ಸಂದಾಯ ಮಾಡಬೇಕಾದ ಮೊಬಲಗನ್ನು ಪಾವತಿ ಮಾಡುವವರೆಗೂ ಸೆರೆಯಲ್ಲಿಟ್ಟು ಅವರಿಗೆ ಎದುರುಕಕ್ಷಿಗಾರರಿಂದ . . . ಭತ್ಯ ಕೊಡಿಸುತ್ತಿದ್ದರು (ಮಹಾಪಂ. II. ೪೬) : ಅವರಿಗೆ ಸಲ್ಲಬೇಕಾಗಿದ್ದ ಬಾಕಿಯ ಮೊಬಲಗನ್ನು ಒಟ್ಟಿಗೆ ಸಲ್ಲಿಸತಕ್ಕುದು (ಜಗಕಂ. ೨೦).
[ ← ಅರ. ಮುಬ್ಲಘ : ಹಿಂ. ಮುಬಲಗ್ ; ಮರಾ. ಮುಬಲಕ, ಮುಬ್ಲಗ ]

**ಮೊಬ್ಬು** ' ಮಬ್ಬು$_2$ ' ನೋ.

**ಮೊಮುಜಾಮೆ** (ನಾ). ಎಣ್ಣೆ, ಮೇಣ ಮುಂತಾದುವುಗಳಿಂದ ಪರಿಷ್ಕರಿಸಿ ಒದ್ದೆಯಾಗದಂತೆ ತಯಾರಿಸಿದ ಬಟ್ಟೆ ; ಮೇಣಗಪ್ಪಟ : ಚಮೇಜೋಡಿ ೨ ಬುರಕೀಕಾರ್ಪೆ ೧ ಮೊಮುಜಾಮೆದು ೧ ಸಹ (ಎಕ. XIV. ನಂಜನ. ೨೮೯-೬ನೆಯ ೪೦೦'; 1847).
[ ←ಹಿಂ. ಮರಾ. ಮೋಮ್‌ಜಾಮಾ ]

**ಮೊಮ್ಮ** ' ಮರ್ಮ$_1$ ' ನೋ.

**ಮೊಮ್ಮಕ್ಕಳು** ' ಮೊಮ್ಮಗು ' ಪರಾ.

**ಮೊಮ್ಮಗ**, ಮಮ್ಮಗ (ನಾ). ಮಗನ ಅಥವಾ ಮಗಳ ಮಗ ; ಪೌತ್ರ : ನಿಮ್ಮ ಮಗಳುಂ ನಿಮ್ಮ ಮೊಮ್ಮಗನುಂ ಪಿಂದೆ ಬರ್ಪುದು (ಪುಣ್ಯಾಸ್ರ. ೩-೨೩ ವ); ಗೌಡರ ಮೊಂಮ್ಮಗ ಮಲ್ಲಿಗೌಡರಿಗೆ (ಎಕ. VIII. ಸಾಗರ. ೩-೬ ; 1460 ?) ; ಬೆಸಗೊಂಡಳಂಗನೆ ಪೊಡೆಯಲರನ ಮೊಮ್ಮಗನ (ಮೋಹತ. ೩೧-೦೬) ; ಮೊಮ್ಮಗನನ್ನು ನೋಡಬೇಕೆಂಬ ಹಂಬಲ (ಕಳಹು. ೮). **ಮಮ್ಮಗ** : ಅವರಿಗೆ ಮಮ್ಮಗನನ್ನು ಕಂಡರೆ ತುಂಬ ಪ್ರೀತಿ (ರೂಢಿ).
[ ಮೊಮ್ಮ (< ಮರ್ಮ$_1$ ) + ಮಗ ]

**ಮೊಮ್ಮಗಳು**, ಮಮ್ಮಗಳು (ನಾ). ಮಗನ ಅಥವಾ ಮಗಳ ಮಗಳು; ಪೌತ್ರಿ : ಒಳಕಿನಲ್ಲಿ ತಾಯಿ ಹುಟ್ಟಿದಳು ಮಧ್ಯದಲ್ಲಿ ಮಗಳು ಹುಟ್ಟಿದಳು ಮೊನೆಯಲ್ಲಿ ಮೊಮ್ಮಗಳು ಹುಟ್ಟಿ ಹೆತ್ತೆಯ ತಿಂದು ತಾಯಿಗೆ ಎಸರನೆತ್ತಿತ್ತೈದಾಳೆ (ಸಕಪ. ೪. I. ೦೪೦-೦೩೫) ; ನಂಮ ಮೊಂಮಗಳು ಹೊಂನ್ನಮ ಸೆಟ್ಟಿತಿಗೆ (ಸೌಇಇ. ೦೯೩೦, ಕುಂದಾಪುರ. ೫೬೩-೮ ; 1498). **ಮಮ್ಮಗಳು** : ಮಮ್ಮಗಳ ಸಂಗಡ ಜಗಳವಾಡುತ್ತಿದ್ದ ಅಜ್ಜಿಯೂ ಸಮಾಚಾರವನ್ನು ಕೇಳಿದೊಡನೆ . . . ಮಮ್ಮಗಳ ಕೈಯನ್ನು ಹಿಡಿದುಕೊಂಡು ಕೊಳದ ವರೆಗೆ ಬಂದಳು (ದೇವೀತ. ೦೬೬). [ ಮೊಮ್ಮಗ + – ಅಳ್$_5$ ]

**ಮೊಮ್ಮಗು**, ಮಮ್ಮಗು (ನಾ). ಮಗನ ಅಥವಾ ಮಗಳ ಮಗು : ನಾಳೆ ನಮ್ಮ ಮೊಮ್ಮಗುವಿನ ಹುಟ್ಟುಹಬ್ಬ (ರೂಢಿ). **ಮಮ್ಮಗು** : ಅವರ ಮಮ್ಮಗು ಮುದ್ದಾಗಿದೆ (ರೂಢಿ).

**ಮೊಮ್ಮಕ್ಕಳು**, ಮಮ್ಮಕ್ಕಳು (ಬಹುವ) : ಎಂತು ಕಾದುವೆ ನೆನ್ನಯ ಮಕ್ಕಳೊಳುಮೆನ್ನ ಮೊಮ್ಮಕ್ಕಳೊಳಂ (ಕಂಕಥಾ. ೧೧-೦೨) ; ಬೈಚವೆಗ್ಗಡೆಯ ಮೊಮ್ಮಕ್ಕಳು (ಚೊಂಕಶಾ. ೦೯೩೩. ಹಾವೇಂ. ೦೬೦-೬ ; 1334); ನಾಗಮಯ್ಯನ ಮೊಮ್ಮಕ್ಕಳು ನನಗೂ ಮೊಮ್ಮಕ್ಕಳೇ ! (ದಾವಡಂ. ೩೩) ; ಯೀ ಧರ್ಮ್ಮವನಿವರ ಮಕ್ಕಳ ಮ(೦)ಮ್ಮಕ್ಕಳು ಧನಕವಾಚಂದ್ರಾರ್ಕ್ಕ ತಾರಂಬರಂ ಸಲಿಸುವರು (ಸೌಇಇ. IX-i, ೨೬೬-೫೧ ; 1183) ; ಆದಿತ್ಯದೇವಗಳ ಮಮ್ಮಕ್ಕಳು ದೇವಯ್ಯ ಓವಪವೋಬಯರವರು . . . ಮಾಡಿದ ವಿವರ (ಎಕ. XII. ಪಾವುಗ. ೬೯-೬೪ ; 1447). [ < ಮೊಮ್ಮಗ ]

**ಮೊಮ್ಮು** ' ಮಮ್ಮು ' ನೋ.

**ಮೊರ** ' ಮೊಜ ' ನೋ.

**ಮೊರಂಟೆ** (ನಾ). ಒಂದು ಬಗೆಯ ಮೀನು : ಚಕ್ರಕ್ಕೆ ಮೊರಂಟೆಯಾದರೆ ಆರು, ಬೈಗೆಯಾದರೆ ನಾಲ್ಕು (ಹೊಸಕ್ಷಿ. ೪೯). [ ← ತುಳು. ಮೊರಂಟೆ ]

**ಮೊರಗಿವಿ** ' ಮೊಜಗಿವಿ ' ನೋ.

**ಮೊರಗುಟ್ಟು** (ಕ್ರಿ). ಮೊರೆ ; ಅಬ್ಬರಿಸು ; ಆರ್ಭಟಿಸು : (+).
[ ಮೊರೆ$_2$ ( < ಮೊಜೆ$^3{}_1$) + ಕುಟ್ಟು$_1$ ]

**ಮೊರಟ** ' ಮುರುಡ$_1$ ' ನೋ.

**ಮೊರಟಿ$_1$** ' ಮೊರಡು$_2$ ' ನೋ.

**ಮೊರಟಿ$_2$** ' ಮೊರಟೆ ' ನೋ.

**ಮೊರಟು** (ನಾ). ಮುರುಟಿರುವುದು ; ಸುರುಟಿರುವುದು : ಅವರ ಆದರ್ಶ ಆಕಾಂಕ್ಷೆಗಳು ಸ್ವಲ್ಪ ದೂರ ಬೆಳೆದು ಮೊರಟಾಗಿ ನಿಂತುಬಿಡುತ್ತವೆ (ಅಂಕಪು. ೦೫೦). [< ಮುರುಂಟು$_2$]

**ಮೊರಟುತನ** ' ಮೊರಡುತನ ' ನೋ.

**ಮೊರಟೆ**, ಮೊರಟಿ$_2$ (ನಾ). ಒಂದು ಬಗೆಯ ಸಸ್ಯ ; ಪ್ರಿಯಾಲ : ಈ ಮೊದಲು ತಂದ ಪತ್ರ ಪುಷ್ಪ ಉದಕವೆ ದೇವರೋ ಈ ಹರಡಿಕೊಂಡಿರುವ ಸೊರಟೆ ಮೊರಟೆಗಳೆ ದೇವರೋ (ವಚಸಂ. ೦೯೩-೩೮). **ಮೊರಟಿ$_2$** : "ರಾಜಾದನಂ, ಪ್ರಿಯಾಲಃ, ಸನ್ನಕದ್ರುಃ, ಧನುಃಪಟಃ — ೪ . . . ಮೊರಟೀಗಿಡ" (ನಿಘಂಟು. ೦೨೦). ' ಮೊರಲೆ ' ಹೋ.
[←ತೆಲು. ಮೋರಟಿ. /ಸಂ. ಮೋರಟ=ಕುರುಟಿಗೆ ಸಸ್ಯ]

**ಮೊರಡ** ' ಮುರುಡ$_1$ ' ನೋ.

**ಮೊರಡಿ$_1$** ' ಮೊರಡು$_2$ ' ನೋ.

**ಮೊರಡಿ$_2$**. ಮುರಡಿ$_2$ (ನಾ). ೧. ಒಂದು ಬಗೆಯ ಮರ : " ಮೊರಡಿಯೆಂದೆನೆ ಕುಜವಿಶೇಷದಭಿಧಾನ " (ಕಶಠ. ೯೩); ಕಗ್ಗಲೀ ಉತ್ತರಾಣೀ ಬೆಳ್ಳಿ ಮೊರಡೀ ಗುಳ್ಳಾ ಹೇರುಳೆ ಪಾಲುಳ್ಳ ಮರಗಳಲ್ಲಿ ದಂತಕಾಷ್ಠವಂ ಗ್ರಹಿಸಿ (ಆಶೀವಾ. ೦೮೪-೪). ೨. ಒಂದು ಬಗೆಯ ಸಸ್ಯ ಮತ್ತು ಅದರ ಎಲೆ : ಕರಿಯನು ಸೇವಿಪ ಸಿಂಹಕೆ ಮೊರಡಿಯ ಸೇವಿಪ ಮೊಲಂ ಪಾಸಟಿಯೇ (ವೃಕಪ, ೩-೩೬). **ಮುರಡಿ$_2$** : ᵔ ಎಮ್ಮೆಮುರಕಲುಗಿಡ, ಮುರಡಗಿಡ, ಮೊರವೆ, ಶಾರಪಪ್ಪು (ಪ್ಯಶಿಗ. ೦೪-೨೬೦). [ ? ]

**ಮೊರಡಿದಾಮರೆ** (ನಾ). ಗುಡ್ಡದ ಮೇಲೆ ಬೆಳೆಯುವ ತಾವರೆ ; ಬೆಟ್ಟದಾವರೆ : ತರಣಿ ತೆರಳಲಾ ಕಡಗೆಯಲವರ್ೞಗದಿರಿವ ಮೊರಡಿದಾಮರೆಯ

ಬನಂಬೊಲ್. . . ಅರಮಗನೇಕಡೆಗೆಯ್ದುಲ್ಕಾ ಕಡೆಗೆ. . . ನಾರಿಯರೊಪ್ಪ ವಡೆವರು (ಜಜು೪ಾ. ೧೦-೩೬). [ಮೊರಡಿ₁ (<ಮೊರಡು₂) + ತಾವರೆ]

**ಮೊರಡು₁** 'ಮುರುಡು₃'ನೋ.

**ಮೊರಡು₂**, ಮಂಟೆ, ಮಡ್ಡಿ₃, ಮರಡಿ, ಮೊರಟೆ₁, ಮೊರಡಿ₁, ಮೊರಡೆ, ಮೊಱಡಿ (ನಾ). ದಿಣ್ಣೆ; ತೆವರು; ಗುಡ್ಡ: ಎಱಗುವ ಮುಟಿ ಕಡಡಿ ಬರ್ಪ ತೊಱೆ ಬೆಟ್ಟು ತವರ್ ಮೊರಡುಪಜಲಧಿಗಳೆನೆ ಜನ ಮಱಿಯುಱಿಯಿ ದಲುದ್ದಬಿದ್ದವಾಯ್ತುವನಿತಳಂ (ಆದಿಪು. ೬-೬೨); ದರಿಯುಂ ಮಂಕುಮ್ಮರಿಯುಮಂ ಮೊರಡುವುಂ ಕೊರಡುವುಂ . . . ಕಳೆದುಪೋಗಿ (ಲೀಲಾವ.೬-೧೬ ವ); ಚತುಸ್ಸೀಮೆಗಳೊಳಗಾದ ಮೊರಡು ಸಹ ಕಟ್ಟಿದ ಗುತ್ತಗೆ ಖ ರ (ಎಕ. VIII, ಸಾಗರ. ೬೦-೩೦ ; 1472). **ಮಂಟೆ**: ಮಂಟೆಯಲ್ಲಿ ಮನೆ ಮಾಡಿದ ನಮ್ಮ ಶಿವ (ಕೃಶಂದ. ೦-೦೯೬-೨). **ಮಡ್ಡಿ₃**: ಮಾದಿಗರ ಮಡ್ಡಿಯ ಮೇಲಿದ್ದ ಹತ್ತಿಪ್ಪತ್ತು ಗುಡಿಸಲು (ಮಲ್ಲಿಪ್ಪ. ೩); ದಿನ್ನಿ ಮಡ್ಡಿ ಗುಡ್ಡ ಅದರ್ಯಾವ ಅದನ ತಾ ಕಂಡು ನೊಂದಾಳೊ (ಸಜೀಗೀ. ೦೦೦-೦೬). **ಮರಡಿ**: ಕೂಚಣನ ಮರಡಿಯು ದೇವಪ್ಪನವರ ಕೈಯಲು ತತ್ಕಾಲೋಚಿತಕ್ರಯದ್ರವ್ಯವನು . . . ಕೊಟ್ಟು (ಎಕ. V (R), ಅರಸೀ. ೨೩-೩೦೬ ; 1290); ಮೂಡಲು ಬಡಗಲು ಬೀಚನ ಮರಡಿ (ಎಕ. X (S), ಮುಳಬಾ. ೦೯೬-೦೦ ; 1498); ಆ ಮರಡಿಯು ಸುತ್ತಮುತ್ತಲಿನ ಗಿಡಗಂಟಿಗಳನ್ನೂ ಮುಳ್ಳುಕಲ್ಲುಗಳನ್ನೂ ನೋಡಿದರೆ, ಇಲ್ಲಿ ಮನುಷ್ಯರು ಇರಬಹುದೆಂದು ಯಾರಿಗೂ ತೋರುವ ಹಾಗಿದ್ದಿಲ್ಲ (ಧಾರ್ಮಿಕಕ. ೨೨೭). **ಮೊರಟೆ₁**: ಯಿಾ ಕೆರೆಗೆ ದಕ್ಷಿಣಪಾರ್ಶ್ವದಲ್ಲಿ ಕೊತ್ತಿಗನ ಮೊರಟೆಯು ಪಡುಪಟಾರಿಕಿಬ್ಬೆಯಲ್ಲಿ ದಕ್ಷಿಣಮುಖವಾಗಿ ನಟ್ಟ ಕಲ್ಲು (ಎಕ. III, ಶ್ರೀರಂಗ. ೦೯.೦೩೨; 1686). **ಮೊರಡಿ₁**: ಮೂಳೆಯ ಮೊರಡಿಗಳನೇಱಿ ನೋಡಿಯುಂ . . . ದುರ್ಯೋಧನನನಱಿಸಿ ಕಾಣದೆ ವಿಸ್ಮಯಂಬಟ್ಟು (ಗದಾಯು. ೬-೨೬ ವ); ದೇಹವಿಾದಂ ನೆಟ್ಟನೆ ಪೊತ್ತು ಸುಖಮನಱಿಸುವ ಮನುಜಂ ಮೊರಡಿಯೊಳೆ ಮಾದು ಪಟಮಂಱಸದಿರಂ (ಉ.ಕೋಟಕ. ೦-೩೦); ನರ ವೃಕೋದರ ನಕುಲ ಮೊದಲು ಮರು ಕುತೂಹಲವಿ[ದಿ]ವರ ಸುತ್ತಣ ಮೊರಡಿಗಳ ಮೇಲಿದ್ದು ನೋಡಿದರೀ ಮಹಾಹವವ (ಕುಮ್ಯಾಭ. ೦೯-೩೭); ಮಲೆನಾಡ ಭಾಗದಲ್ಲಿ ಮೊರಡಿ, ಕೆಂಪುನೆಲ ಬಹಳ (ಮುಂಬಯಿ.೩-೦೯೬). **ಮೊರಡೆ**: ಮೊರಡೆಯ ಮೇಲಾಗಲಿ ಗುಡ್ಡದ ಮೇಲಾಗಲಿ ಹುಲ್ಲು ತಿಂದು ಉಲ್ಲಾಸದಿಂದ ಜಿಗಿದಾಡುವ ಕುರಿ ಮರಿಗಳನ್ನು ನೋಡುತ್ತೇವೆ (ಮುಂಬಯಿ. ೬. ೩-೯೦). **ಮೊಱಡಿ**: ಪೂರ್ಬ್ಬಸ್ಯಂದಿಸಿ ಕೆಂಜಿಗೆ ಮೊಱಡಿವ (ಎಕ. I, ೧-೨೨ ; 466 ಕ್ರಿಶ); ಪೂರ್ವ್ವಸ್ಯಾಂದಿಸಿ ನೊಲಿ ಬೆಳದಾ ಬೆಳ್ಗಲ್ಮೊಱಡಿ (ಎಕ. VII (R), ನಾಗಮಂ. ೦೯೯-೬೦; 776); ಮೊಱಡಿಯ ಮೇಲೆ ಮಾಮುಫಲಮಾದವೊಲಾದುದು (ಎಕ. VI, ಕಂ೦೯. ೯೩-೬೨ ; 1196). 'ಮೊರಬು' ಪರಾ.

**ಮೊರಡಿಯಣುಗಿ** = ಪರ್ವತರಾಜನ ಮಗಳು; ಗಿರಿಜೆ: ವೃಷಭನಂ ಮೊರಡಿಯಣುಗಿ ನಾಲ್ಮೊಗನಂ ನುಡಿವೆಣ್ಣಂಬುರುಹೋದರನಂ ಸವಿಗಡಲ ಕುವರಿ . . . ಕಯ್ವಿಡಿವಂದದಿ (ಜಯು೪ಾ. ೨-೦೦).

**ಮೊರಡುಕಲ್ಲು** 'ಮುರುಡುಗಲ್ಲು' ನೋ.

**ಮೊರಡುಗೋಡು** (ನಾ). ಗುಡ್ಡದ ಶಿಖರ, ಕೋಡುಗಲ್ಲು: ಹೊತ್ತರೆಯ ಬೆಟ್ಟನೆತ್ತಿಯ ಕಲ್ಲರೆಯ ಮೊರಡುಗೋಡಂತೆ ಭೀಮಾತನು (ಶ್ರೀನಾಮಾ. ೬೯೨-೦೩). [ಮೊರಡು₂ + ಕೋಡು₅]

**ಮೊರಡುತನ**, ಮೊರಟುತನ (ನಾ). ನಯವಿಲ್ಲದಿರುವಿಕೆ; ಒರಟುತನ: ಅಜ್ಞತೆ ಅನನುಭವ ಮೊರಡುತನಗಳು ಸೇರಿದರೆ ಅನಾಹುತವಾಗುತ್ತದೆ (ದಂಕಿಮು. ೩೩೪). **ಮೊರಟುತನ**: ಪತಿಯ ಮೇಲೆ ಹರಿದ ನನ್ನ ಪ್ರೇಮವು ಅವರ ಮೊರಟುತನದಿಂದ ಮತ್ತೆ ನನ್ನ ಹೃದಯದೊಳಗೇ ಹುದುಗಿ ಹೋಯಿತು (ಕಕಿ. ೩೬). [ಮೊರಡು₁ (< ಮುರುಡು₃) + – ತನ]

**ಮೊರಡುಬೀಳು** (ಕ್ರಿ). (ಆಲಂ) ಜಡ್ಡುಗಟ್ಟು; ಜಡವಾಗು: ಹತ್ತುದಿವಸ ಒಂದೇ ತೆರನಾಗಿದ್ದು ಬಿಡಿ, ಮೊರಡುಬೀಳುತ್ತೆ ಮನಸ್ಸು (ಕೆಂಗೂರಿ. ೬೬). [ಮೊರಡು₁ (<ಮುರುಡು₃) + ಬೀಳು₁(<ಬೀೞ್₁)]

**ಮೊರಡೆ** 'ಮೊರಡು₂' ನೋ.

**ಮೊರಬಿಡು** (ಕ್ರಿ). (?): ಪಾರ್ವನ ಮಣ್ಣಲ್ಲೆ ಕೊಡತಿ ಕಾಯ ಬಿಟ್ಟಣ್ಣುಂ ಅರಸಣ್ಣಂ ಅಯ್ದೊನ್ದಿ ಒತ್ತಿಮಣ್ಣತ್ತು ಪಾದಂತ್ತಿತ್ತುನ್ಮೊರಬಿಟ್ಟಂ ಪರಿಯಾರವಾನ್ಕೆಡಿಸಿದೊನ್ಪಞ್ಚಮಹಾಪಾತಕನಕ್ಕೆ (ಎಕ. XIV, ತಿರುಮ. ೨೩೩-೯ ; 800). [?]

**ಮೊರಬು** (ನಾ). ೧. ಕಲ್ಲು: "ಶರ್ಕರಿಲಃ, ಶಾರ್ಕರಃ – ಈ ೨ ಮೊರಬುಳ್ಳ ಭೂಮಿಯ ಪೆಸರು" (ಣಾಣರಾ. ೦೦೨). ೨. ರತ್ನದ ಒಂದು ದೋಷ (?): ಅಕ್ಕರಿಂ ಧರಿಸಿದವರಿಗೆ ಫಲವ ಪೇಳುವೆ ಕರ್ಕರಕೆ ಛನ್ನಪೆಂದೊಡದು ಘುಟ್ಟಿಪುದೆಂದು ಅಕ್ಷದ ಮೊರಬು ಲುಳಿಯಾಣ ಸಸುನಗಳೆಂದು ಪುಟದೋಷಮೊಂದಿರ್ಪುದು (ರತ್ನಶಾ. ೯-೩).

[ದೇ.॥ ತಮಿ. ಮುರಮ್ಬು; ತುಳು. ಮೊರ, ಮುರ=ಕಲ್ಲುಕಲ್ಲಾದ; ತೆಲು. ಮೊರಪ=ಕಲ್ಲುಗಳಿಂದ ಕೂಡಿದ]

**ಮೊರಬ್ಬ** 'ಮುರಬ್ಬ' ನೋ.

**ಮೊರಲೆ** (ನಾ). ಒಂದು ಬಗೆಯ ಸಸ್ಯ; ಪ್ರಿಯಾಲ: "ರಾಜಾದನಃ, ಪ್ರಿಯಾಳಃ, ಸನ್ನಕದ್ರುಃ, ಧನುಃಪಟಃ_ಈ ೪ ಮೊರಲೆ" (ಣಾಣರಾ. ೦೦೬); "ಪಟಃ–ಮೊರಲೆ" (೬ಕಂ. ೯೦). 'ಮೊರಟೆ' ಹೋ. [ದೇ.॥ ಮಲ. ಮುಱಿಳ್, ಮುರಳ್; ತೆಲು. ಮೊರಲಿ, ಮೊರಳಿ, ಮೋರಲಿ]

**ಮೊರವು** 'ಮೊಱವು' ನೋ.

**ಮೊರವೆ** (ನಾ). ಒಂದು ಬಗೆಯ ಸಸ್ಯ: ಎಮ್ಮೆಮುರುಕಲುಗಿಡ, ಮುರಡಿಗಿಡ, ಮೊರವೆ, ಶಾರಪಪ್ಪು (ಮೃಶಿಗಿ. ೦೯-೨೬೦). [?]

**ಮೊರಸು₁** (ಕ್ರಿ). ಆರ್ಭಟಿಸುವಂತೆ ಮಾಡು; ಗರ್ಜಿಸುವಂತೆ ಮಾಡು: ಮಿಂಚಿನ ಮರಿ ಮುಂಚಿ ಮೆರಸೆ ಹೃದಯಶಿಖಿಯ ಹೊನ್ನ, ಗುಡುಗಿನ ಮಗು ಮುಡುಗಿ ಮೊರಸೆ ಕಿನ್ನರಿಗಿರಿಯನ್ನ (ಗಳಿಗಿಂ. ೯೪-೦೦).

[ಮೊರೆ₂ (<ಮೊಱೆ₁) + –ಇಸು₃]

**ಮೊರಸು₂** (ನಾ). ಒಂದು ಪ್ರದೇಶದ ಹೆಸರು: ಶ್ರೀಪೆರ್ಮ್ಮಾನಡಿ ಪ್ರಿಥಿವೀರಾಜ್ಯಂಗೆಯೆ ನೊಣಂಬಳಿವಮಾರಂ ಮೊರಸುನಾಡನಾಳುತ್ತಿರೆ (ಎಕ. IX, ದೇಂಗಳೂ. ೯೦-೪ ; 820); ಮಣಲಿನಾಡ ಮೊರಸು ಹಂನೆರಡು ನೆಕ್ಕುನಾಡ ಬೆಡಗೆಱ (ಎಕ. V, ಬೇಲೂರು. ೭೦-೨೩೯ ; 1117); ಪುಂಗನೂರ್ ಮಾಗಡಿ ಬೆಂಗಳೂರ್ ಮೊದಲಾದ ಮೊರಸುನಾಡ ಮೋಹರದೊಳ್ (೩೪ವಂ. ೨೨-೪). [?]

**ಮೊರಹ** (ನಾ). ಸದ್ದು; ಧ್ವನಿ: "ಗಾವರಮೆಂದೆನೆ ಮೊರಹವೆನಿಪ್ಪರ್ಥಮಪ್ಪುದು" (ಕಕುಶಿ. ೩೩). [ಮೊರೆ₁ + – ಹ₂ (< –ಪ್ಪ)]

**ಮೊರಹತ್ತು** (ಕ್ರಿ). (?): ಹೆರಳೆಯ ಹಣ್ಣಿನ ಕುಸುರಿಯ ತೆಗೆದು ಮೊರಹತ್ತಿ ಕೊಚ್ಚಿದ ರಾಗಿಹಿಟ್ಟನೂ ಕಲಸಿ ಉಂಡೆಮಾಡಿ ಮೆಲ್ಲಲು ಅಜೀರ್ಣಂ ಮಾಣ್ಗುಂ (ಸಕವೈ. ೩೬೩). [?]

**ಮೊರಹು** (ನಾ). ದುಂಬಿಯ ಧ್ವನಿ; ಝೇಂಕಾರ: ಅಳಿಕುಳದ ಮೊರಹು ನಿಂತಿತು (ಜಕಪು. ೦೦-೯೭); ಅಳಿಗಳ ಮೊರಹಿನಾ ಕೋಲಾಹಲಕೆ ಮುಡಿಯನಸಲುಗಿದೊಡೆ ಮೊಳಗವಾರ್ದ ಕಾಲಮೇಘಂ ತೋಱುತಿದೆ (ಶಬ್ದರಾ. ೯-೯೩). [ಮೊರೆ₁ + – ಹು₂ (<–ಪ್ಪು₂)]

**ಮೊರೆ₁** (ಕ್ರಿ). ೧. ದುಂಬಿಯಂತೆ ಧ್ವನಿಮಾಡು, ಝೇಂಕರಿಸು: "ಮೊರೆ (ಮುರೆ) — ಭ್ರಮರಾದಿನಿನದೇ, ಕಿನ್ನರಿಕ್ರಿಯಾಯಾಂ" (ಕಮಧಾ); ತೊಳಪೆಳವೆಱಿಯುಂ ಮೊರೆವಳಿಕುಳಂಗಳುಂ ಮೆಲ್ಲನೆಸೆವ ಮಳಯಾನಿಳನುಂ ಮುಳಿಸಂ ಕಟಲ್ಚಿ ಕಳೆದುವು (ಕಬಾ. ೨-೭೦); ಮದಗಜ

ಗಂಡಸ್ಥಳಂಗಳೊಳೆಱಗಿ ಮೊರೆವ ತುಂಬಿಯು ಬಂಬಲ್ಗಳೆ ವಿಮುಖೀಭೂತಂಗಳಾದುವು (ಶಂಕಪಾ. ೪-೯೯ವ) ; ಬಂಡನುಂಡು ನಗೆಗೊಂಬುಗಳಿಂ ಮೊರೆದೆೞ್ವ ಭೃಂಗಝಂಕಾರಮೆ ಮಾಱ್ಪುದಾರ ಬಗೆಗಂ ಮದನೋತ್ಸವ ಹರ್ಷಭಾರಮಂ (ಶಂಖಾಪಾ. ೦-೦೦೬). ೨. ಸಣ್ಣದನಿಯಲ್ಲಿ ಶಬ್ದ ಮಾಡು ; ಕಿರುಗುಟ್ಟು : ಕುರುಬಲಕ್ಕಿ ಮಿಟ್ಟು ಪಲ್ಮೊರೆವಂತೆ ಮೊರೆದು ಪರಿವ ತನ್ನ ಕಿಸುವೊನ್ನ ರಥಮುಂ ಭಯಂಕರಾಕಾರಮಾಗೆ (ಶಂಪಖಾ. ೧೦-೯೭ ವ); ತರತರದಿಂ ತೆರಳೆ ರಸಂ . . . ಮೊರೆವುವು ಗಾಣಂಗಳಿಕ್ಷುವಾಟಾಂತರದೊಳ್ (ಶುಕುಪಾ. ೯-೫೭); ಕೊರೆದುಂ ಸುಯ್ದುಂ ಸೀಂಕೆಂ ಮೊರೆದುಂ ನಿದ್ರೆಯನೆ ಕೆಡಿಪ ಮುದುಪೊರಸಂ ಮತ್ತೆರಡಿಲ್ಲದೊಲ್ಲೆನೆಂದೊಡೆ (ರರ್ಪಾಪು. ೨-೩೪); ಮೊರೆವ ಸಮ್ಮಾವುಗೆಯ ಮುಱುಂದಿಂ ತೆಗೆದುಟ್ಟ ಪರಮುಗಿಲದ ಮುಂಜೆಱಗಿನಿಂ . . . ಸಿಂಗರಕ್ಕಿಟ್ಟ ತಿಟ್ಟವೊಯಿದೆನಿಸಿ (ಶಬ್ದಾ. ೫-೯೨). ೩. ವಾದ್ಯದಂತೆ ಶಬ್ದಮಾಡು,– ಧ್ವನಿಸು : ಮೊರೆವ ಪಟಹ ಮೃದಂಗ ಘನಜರ್ಜರಿತವಹ ನಿಸ್ಸಾಳಚಯದಬ್ಬರಣೆ ಗಬ್ಬರಿಸಿದುದು ಕಮಲಭವಾಂಡವಿವರವ (ಶುವ್ವಾದ್ರೋ. ೪-೨೯); ತಮ್ಮಟೆಗಳು ಕಿವಿಚಿಟ್ಟಾಗುವಂತೆ ಮೊರೆದವು (ಶಾಂಕಲಾ. ೦೪೪). 'ಮೊಱೆ$^3_1$' ಪರ್ಯಾ.

[ದೇ.॥ ತಮಿ. ಮುರಜ್ಜು ; ಮಲ. ಮೊರವ್ವು ; ತುಳು. ಮುರೆಸು, ಮೊರೆಸು ; ಕೊಡ. ಮೊರಪ್ ; ತೆಲು. ಮೊರೆಯು ; ಕೋಲಾ. ನಾಯ್ಕಿ. ಮೊರಪ್ ; ಪರ್ಜಿ. ಮುರ್ ; ಕುರುಖ್. ಮುರ್ರ್‌ನಾ ; ಮಾಲ್ತೊ. ಮುರೆ]

**ಮೊರೆ$_2$** 'ಮೊಱೆ$^3_1$' ನೋ.

**ಮೊರೆ$_3$** (ನಾ). ದುಂಬಿಯ ಧ್ವನಿ : ಝೇಂಕಾರ : 'ಪರಮೆಮೊರೆ' ಪರಾ. [<ಮೊರೆ$_1$./ತುಳು. ಮುರಿಯು]

**ಮೊರೆ$_4$** 'ಮೊಱೆ$^3_2$' ನೋ.

**ಮೊರೆ$_5$** 'ಮಱೆ$^3_2$' ನೋ.

**ಮೊರೆ$_6$**(ನಾ). (?) : ಅಶ್ವರತ್ನದ ಆಭರಣದ ಲೆಕ್ಕ. . . ೨ ಸಿಂಹ ೧೬ ಮೊರೆ ೧೦ ಕಟಕಟೆತಂಡು (ಎಕ. XIV. ಸಂಜಪ. ೨೯೩-೯ನೆಯ ಕಲಂ; 1847). [ ? ]

**ಮೊರೆಗೇಳು** 'ಮೊಱೆಗೇಳು' ನೋ.

**ಮೊರೆಜ್ವರ** (ನಾ). ಬಿಟ್ಟು ಬಿಟ್ಟು ಬರುವ ಒಂದು ಬಗೆಯ ಜ್ವರ : ಜವುಗುಪ್ರದೇಶವಾಸಿಗಳಲ್ಲಿ ಕಂಡುಬರುವ, ಮೊರೆಜ್ವರವೂ ಗುಲ್ಮ ಶೋಫೆಯೂ ಲಕ್ಷಣಗಳಾಗುಳ್ಳ ಒಂದು ರೋಗಸ್ಥಿತಿ (Impaludism. ಇಂಕೊ). [ಮೊರೆ$_4$ (<ಮೊಱೆ$^3_2$) + ಜ್ವರ]

**ಮೊರೆತ$_1$** (ನಾ). ಝೇಂಕಾರ : ಸೊಳ್ಳೆಗಳು ಮುತ್ತಿಗೆ ಹಾಕಿ ಝೇಂಕಾರ ಮಾಡುತ್ತಿರುತ್ತವೆ : ಅವುಗಳ ಮೊರೆತವೇ ಮಲಗಿದವನಿಗೆ ಜೋಗುಳವಾಗ ಬೇಕು (ಸಂಟಿಕು. ೯೩). [ಮೊರೆ$_1$ + — ತ್ನ]

**ಮೊರೆತ$_2$** (ನಾ). ಅಬ್ಬರ ; ಆರ್ಭಟ : ಕಾವ್ಯದಲ್ಲಿರಬೇಕಾದ ಗುಣವಿಶೇಷಗಳೂ ಭಾವಾವೇಶದ ಮೊರೆತಗಳೂ . . . ಬಸವಣ್ಣನವರ ವಚನಗಳಿಗೆ ವಿಾಸಲು (ಛಾವಗೀ. ೦೬೭); ಸಮುದ್ರದ ಮೊರೆತ ಮನೆಯವರೆಗೂ ಕೇಳಿಸುತ್ತಿತ್ತು (ಕೂಹಿ). [ಮೊರೆ$_2$ (<ಮೊಱೆ$^3_1$) + — ತ್ನ]

**ಮೊರೆಪ** (ನಾ).=ಮೊರೆತ$_1$ : ಅಲರ್ವಡಸುಂಡು ಸೊಕ್ಕಿ ಮೊರೆವ ಮೊರೆಪದಿಂ ತುಂಬಿಗಳುಂ ಪಲ್ಬುಱಿಗುಟ್ಟಿದಪುವೆಂಬಂತೆಯುಮಿಂ (ಕಾಪಂಕಾ. ೨೦೯); ತುಂಬಿಗಳ ಪಲ್ಮೊರೆಪದಿಂ . . . ಮೆಱೆದುದಾ ವನಂ (ಶಬ್ದಾ. ೯-೨೫).

[ಮೊರೆ$_1$ + – ಪ$_2$]

**ಮೊರೆಯಿಡು** 'ಮೊಱೆಯಿಡು' ನೋ.

**ಮೊರೆಹೊಗು** 'ಮಱೆವೊಗು' ನೋ.

**ಮೊರೆಹೋಗು** 'ಮಱೆವೋಗು' ನೋ.

**ಮೊರೈಡಿವಾಡಿ** (ನಾ). ಒಂದು ಊರಿನ ಹೆಸರು : ಪೂಲಿಕೆಱೆ ಕಾಪವಾನ್ ಕೆಸ್ ಮೊರೈಡಿವಾಡಿ ಕೊಪುರಮಂಗಲಕ್ಕೆಱೆಪಳ್ಳವ್ಬ್ (ಪ್ಯಿಆಂ. ೧೯೨೪. ೯೦-೦೨೦; ೬೦೦). [? + ಪಾಡ್ಡಿ]

**ಮೊರೊಪ್ಪೂರ್** (ನಾ). ಒಂದು ಊರಿನ ಹೆಸರು : ಗಂಗಱುಸಾಸಿರಮುಮ ಆಳೆ ಮೊರೊಪ್ಪೂರಾ ಗವುಣ್ಡನ್ ಆಜಕೆಱೆ ಹಾಯಿ(ಲೊ)ಳು ಸತ್ತನ್ (ಪ್ಯಿಆಂ. ೦೯೨೬. ೯೦-೩; ೧೦ನೆಯ ಶತ). [ ? + ಊರ್]

**ಮೊರ್ಕು** 'ಮುಱುಕು$_1$' ನೋ.

**ಮೊಲ** (ನಾ). ಉದ್ದಕಿವಿಗಳು, ಮೊಂಡುಬಾಲ ಹಾಗೂ ಸೀಳಿದ ತುಟಿಯೂ ಉಳ್ಳ ಒಂದು ಬಗೆಯ ಸಸ್ಯಾಹಾರಿ ಪ್ರಾಣಿ ; ಶಶ : "ಮೊಲಂ ಶಶಮೆನಿಕ್ಕುಂ" (ಪುಂಗಾ. ೯೯-೮); ಒಂದು ಮೊಲಂ ಕಿಚ್ಚಿನಿಂದಂ ಬೆಂದುರಿಯ ಬಣ್ಣಮಾಗಿ ಪರಿತಂದು ತನ್ನ ಕಾಲ ಕೆಳಗೆ ಪೊಕ್ಕೊಡೆ (ಪಶ್ಪಾರಾ. ೦೫೭-೩); ಆ ಪಡೆಯೊಳ್ ಗಂಡನುಮಾ ಮೊಲಂ ದ್ರುಪದನುಂ ಪೇರೊಟ್ಟೆಯಾ ಮತ್ಸ್ಯನುಂ (ಶಂಪಖಾ. ೦೦-೯); ವ್ಯಾಧನೊಂದು ಮೊಲನ ತಂದರೆ ಸಲುವ ಹಾಗಕ್ಕೆ ಜಲಿವರಯ್ಯ (ಬಸವ. ೦೫೮); ಮೊಲನ ಬಲೆಯುಲಿ ವನದ ಮಧ್ಯದಲಿ ಸಿಲುಕಲರಿವುದೆ (ಕುವ್ಯಾದ್ರೋ. ೦೦-೩); ಆ ಕಾಡಿನಲ್ಲಿದ್ದ ಮೊಲಗಳೆಲ್ಲಾ ತಂಪಾಗಿದ್ದ ಈ ಸ್ಥಳಕ್ಕೆ ಬಂದು ಸೇರಿಕೊಂಡವು (ಪಂತಿಪಂ. II, ೨೨).

**ಮೊಲದ ಕೋಡು** = (ಅಲಂ) ಪಡೆಯಲು ಅಸಾಧ್ಯವಾದುದು; ಅಸಂಭವವಾದುದು : ಮುದಿಗೂನಿ ಮಂಥರೆಗೆ ಮೊಲದ ಕೋಡಾದುದು ಸೊಗಂ (ಕ್ರಿರಾಪಾ. ೨೯-೬೯೨).

[ದೇ.॥ ತಮಿ. ಮುಯಲ್, ಮುಂಚಲ್ ; ಮಲ. ಮುಯಲ್ ; ತುಳು. ಮೊಲ ; ಕೊಡ. ಮೊಸ ; ಗೊಂಡಿ. ಮಲೋಲ್, ಮೊಲೊಲ್ ; ಕೊಂಡ. ಮೊರೊಲ್ ; ಕುವಿ. ಪ್ರಾಲೂ ; ಕುರುಖ್. ಮುನ್ಯಾ ; ಬ್ರಾಹುಈ. ಮುರೂ]

**ಮೊಲಕಿವಿ** 'ಮೊಲಗಿವಿ' ನೋ.

**ಮೊಲಗತ್ತಲೆ** 'ಮೊಲಗಟ್ಟಲೆ' ನೋ.

**ಮೊಲಗರ್ತಲೆ** 'ಮೊಲಗಟ್ಟಲೆ' ನೋ.

**ಮೊಲಗಳೆಯ** (ನಾ). ಮೊಲದ ಗುರುತುಳ್ಳವನು ; ಶಶಾಂಕ ; ಚಂದ್ರ: ಒಂದು ಕಂತುಕವ ತಳೆದ ಕಾಂತೆಯ ಕರತಳ ಕಣ್ಗೆ ಕಡುರಮ್ಯವಾಯ್ತು ಮೊಲಗಳೆಯನನಮರ್ದಪ್ಪಿದ ತಾವರೆಯಲರ ಚೆಲ್ವಿಕೆಯನೇಳಿಸುತ (ಕುರಾಗಾಂ. ೩೨-೯). [ಮೊಲ + ಕಳೆ$_6$ ( = ಕಲೆ$_3$) + – ಅ$_7$]

**ಮೊಲಗಳ್ತಲೆ** 'ಮೊಲಗಟ್ಟಲೆ' ನೋ.

**ಮೊಲಗಟ್ಟಲೆ, ಮೊಲಗತ್ತಲೆ, ಮೊಲಗರ್ತಲೆ, ಮೊಲಗಳ್ತಲೆ** (ನಾ). ೧. ದಟ್ಟವಾದ ಕತ್ತಲೆ ; ಗಾಢಾಂಧಕಾರ : ಕಣ್ಪೊಲದೊಳಮಿರುಳೊಳ್ ಮೊಲಗಟ್ಟಲೆ ಚಂದ್ರದ್ಯುತಿಗೆ ಕಾಳತಾಳೀವನದೊಳ್ (ಶಾಂತಿಪು. ೫-೦೦೩) ; ಮೊಲಗಟ್ಟಲೆಯುಂ ಕಾಮಿಗೆ ಪುಟ್ಟಿಸುವ ಮೊಲಂ ಕಾಮುಗ್ರಹವಾಲಮೆನಿಸಿ ತಿಂದುಕಳಂಕಂ (ಪದ್ಮಪು. ೭-೩೬) ; ಲಲಿತ ಹರಿನೀಲಹರ್ಮ್ಯಾವಲಿಶಿಖರೋಚ್ಚಳಿತರುಚಿಗಳೆರುಳೊದವಿ ಸಭಸ್ಥಲದೊಳೊಡರ್ಚುವುದೀದುವ ಮೊಲಕ್ಕೆ ಕಟ್ಟಲೆಯಿದೆನಿಪ ಮೊಲಗಟ್ಟಲೆಯುಂ (ಚಂದ್ರಪ್ರ. ೦೧-೭೭). ೨. (ಅಲಂ) ಅಜ್ಞಾನ ; ಮೌಢ್ಯ : ಅಜಸಂ ತಗುಳ್ದೆಂತಾಗಿಯುಮೆಂಬ ನಿನ್ನ ಮೊಲಗಟ್ಟಲೆಗಾಂ ಬೆಱಗಾದೆಂ (ಅಂಪು. ೩-೬೩). **ಮೊಲಗತ್ತಲೆ :** ೧. ಜಲಜಲಿಸುವ ಬೆಳ್ದಿಂಗಳ್ ತೊಲಗಲೊಡಂ ಮುಂದುಗೆಟ್ಟು ಶಶಿಮಂಡಲದೊಳ್ ಮೊಲನೆಡಪೆ ಹರಿಣನಡಿಗೆಡೆ ಮೊಲಗತ್ತಲೆಯಾಯ್ತು ಯಾಮಿನೀವಿರಸನದೊಳ್ (ಅನಂಪು. ೬-೬೪). **ಮೊಲಗರ್ತಲೆ :** ೧. ನಾಣ ಪುತ್ತು ಮೊಲಗರ್ತಲೆಯಾ ವಟವಿಪ್ಪರ್ ಭಂಗಿ (ಸೌಇಇ. XVIII, ೨೯೬-೦೮; 1188). ೨. ಚದುರೆಕ್ಕಸೆಕ್ಕಮುಱಿತಂ ಮೊಲಗರ್ತಲೆಯಾಗಿ ವರ್ತಿಪೀಗಡಿನವರಂ

ಪಳಂಚಲೆವುದುದ್ವೃಗುಣಂ ರವಿದಣ್ಣನಾಥನಂ(ನ) (ಎ೭. XII, ೨೬೦-೦೬೩; 1077). **ಮೊಲಗಳ್ತಲೆ :** ೨. ದುರಭಿಪ್ರಾಯದ ಮೊಲಗಳ್ತಲೆಯಿಂದಜನಂ ಭಾವಿಸದಾ ಜೀವಂ ಆಯುಂ ತವೆ ತೀರ್ದು (ಶಯುಕಾ. ೦೦-೨೦); ಅರಮನೆಗೆ ಪ್ರಜಾಲೋಕಕ್ಕೆ . . . ಮೊಲಗಳ್ತಲೆಯನ್ನು ಕವಿಯಿಸಿ (ಮುಂಕ್ರಶ. ೦೩೯-೨೯). [ ಮೊಲ, + ಕಟ್ಟಲೆ ]

**ಮೊಲಗಿವಿ**, ಮೊಲಕಿವಿ (ನಾ). ಮೊಲದ ಕಿವಿಯ ಆಕಾರದ ಎಲೆಗಳುಳ್ಳ ಒಂದು ಬಗೆಯ ಔಷಧೀಸಸ್ಯ : ವಿನುತಂ ವೆಗ್ಗುರುಟಿಗೆಯೆಂಬಿನ ಮೊಲಗಿವಿಯೆಂಬಿವಲ್ತೆ ಸಸ್ಯದೊಳ್ ಪಿತಂ (ಶವುದ. ೭-೩೭). **ಮೊಲಕಿವಿ :** "ಶಶಕರ್ಣೀ—ಮೊಲಕಿವಿಗಿಡು" (೭ಶಂ. ೦೩೯); ಮೊಲಕಿವಿಗೆಡ್ಡೆಯಂ ನೀರಿಂದ ಅರೆದು ಪಾನ, ಲೇಪನಂಗಳ ಮಾಡಿಸಲು ಮೊಲದ ವಿಷ ಪರಿಹರವಹುದು (ವೈದ್ಯಸಾ. 11, ೨೦೯). [ ಮೊಲ + ಕಿವಿ₂ ]

**ಮೊಲಗಿವಿಗ** (ನಾ). = ಮೊಲಗಿವಿ : ಮೊಲಗಿವಿಗನ ಗೆಡ್ಡೆಯುಮಂ ಜಲದಿಂದರೆದದಜಿ ಪಾನ ಲೇಪಾದಿಗಳಿಂ ತೊಲಗುಗುಮಾಗಳೆ ತನುವಿಂ ಮೊಲನ ವಿಷಂ (ಶಮುತ. ೦೩-೭೯). [ < ಮೊಲಗಿವಿ ]

**ಮೊಲನಾಗರ** ' ಮಲರೋಗ ' ನೋ.

**ಮೊಲನಾಗರು** ' ಮಲರೋಗ ' ನೋ.

**ಮೊಲಪಡಿ** (ನಾ). ಒಂದು ಸ್ಥಳದ ಹೆಸರು : ದಕ್ಷಿಣಂ ನೋಡಿ ವಟವೃಕ್ಷಮೆ ಮೊಲಪಡಿವ(ಯ) ವಟವೃಕ್ಷಮೆ ಕಡಸಿಗೆಮೊಜಿಡಿಯ (ಇಆ. VIII, ೨೦೪-೩೯; 10ನೆಯ ಶತ). [ ? ]

**ಮೊಲೆ₁** (ನಾ). ಹೆಂಗಸು ಅಥವಾ ಸಸ್ತನಿಪ್ರಾಣಿಯು ತನ್ನ ಮಗು ಅಥವಾ ಮರಿಗೆ ಹಾಲೂಡಿಸಲು ಉಪಯೋಗಿಸುವ ಅಂಗ; ಸ್ತನ : "ವಕ್ಷೋಜ ಕುಚ ಸ್ತನಮುಪಲಕ್ಷಿಸೆ ಮೊಲೆ" (ವಸ್ತುಕೋ. ೩೬-೪) ; ಮೊಲೆ ಪೊಣರ್ವೆಟ್ಟು ರೋಮಲತೆ ಬಟ್ಟೆ . . . ಮನ್ಮಥಾನಿಳಶಿಖಿ ಬೇಗೆಯಾಗೆ ಮದನಾಟವಿಯಂತೆವೊಲೊಪ್ಪೆ ತೋಱಿದಳ್ (ಕಾವ್ಯಸಾ. ೭೦೨, ಶೂದ್ರಕ) ; ಗಿರಿಸುತೆಯ ಮೊಲೆಗಳಳ್ಳೇಱಿಂ ನೀರೇಱಿಸುತಿರೆ (ಕಂಶಕಾ. ೦೨-೦೩೯) ; ಮೊಲೆ ಮೂಡಿ ಬಂದರೆ ಹೆಣ್ಣೆಂಬರು (ದೇದಾವ. ೭೩-೦೩೩).

**ಮೊಲೆಬಿಡಿಸು** = ಮಗುವಿಗೆ ಎದೆಹಾಲು ಕೊಡುವುದನ್ನು ನಿಲ್ಲಿಸು : ಅನೇಕ ಮಕ್ಕಳು ಮೊಲೆಬಿಡಿಸುವ ಸಮಯದಲ್ಲಿ ಚಂಡಿಮಾಡುತ್ತವೆ (ರೂಂ). **ಮೊಲೆಬೀಳು** = ಸ್ತನಗಳು ಜೋತುಬೀಳು: ಇದರಲ್ಲಿ . . . ಕೈಗಡಿಕೆಯರು ಮೊಲೆಬಿದ್ದವರು ಮುದುಗಾಂಟಣಗಳು (ಕೂರಂ. ೩-೨-೩೯). [ದೇ. II ತಮಿ. ಮುಲೈ; ಮಲ. ಮುಲ; ತುಳು. ಮಿರೆ; ಕೊಡ. ಮೊಲೆ; ಕೋತ. ಮೊಲ್ ]

**ಮೊಲೆ₂** (ನಾ). ಒಂದು ಬಗೆಯ ಸಸ್ಯ : "ಬಾಲಪುಷ್ಪಿಕಾ — ಮೊಲೆ, ರಸಾಂಜನ" (೭ಶಂ. ೦೦೬). [ ?./ತೆಲು. ಮೊಗಲಿ, ಮೊಗಿಲಿ ]

**ಮೊಲೆಕಟ್ಟು** ' ಮೊಲೆಗಟ್ಟು ' ನೋ.

**ಮೊಲೆಕುಡಿ** (ಕ್ರಿ). ಎದೆಹಾಲನ್ನು ಕುಡಿ ; ಸ್ತನ್ಯಪಾನ ಮಾಡು : ಮೊಲೆಕುಡಿಯುವುದನ್ನು ಬಿಡುವಷ್ಟೇ ವಯಸ್ಸುಳ್ಳ ಅವಳಿಮಕ್ಕಳನ್ನು . . . ವಾಲ್ಮೀಕಿಮುನಿಗಳಿಗೆ ತಂದುಕೊಟ್ಟಳು (ಉರಾತ. ೯೦).

[ ಮೊಲೆ₁ + ಕುಡಿ₁ ]

**ಮೊಲೆಕುಡಿಸು** (ಕ್ರಿ). ಎದೆಯ ಹಾಲನ್ನು ಕುಡಿಸು ; ಸ್ತನ್ಯಪಾನ ಮಾಡಿಸು : ತಾಯಿ ನಿನಗೆ ಮೊಲೆಕುಡಿಸುತ್ತಿದ್ದಳು (ಮುಂಬಯಿ. ೦-೨೯).

[ ಮೊಲೆಕುಡಿ + – ಇಸು₃ ]

**ಮೊಲೆಕೂಸು** ' ಮೊಲೆಗೂಸು ' ನೋ.

**ಮೊಲೆಕೊಡು** ' ಮೊಲೆಗೊಡು ' ನೋ.

**ಮೊಲೆಗಟ್ಟು**, ಮೊಲೆಕಟ್ಟು (ನಾ). ಹೆಂಗಸರು ಧರಿಸುವ ಒಳಕುಪ್ಪಸ : ಬೆಲೆಯಿಲ್ಲದ ಮುತ್ತುರತ್ನಂಗಳಡಸಿದ ಮೊಲೆಗಟ್ಟು ಕಾಸೆ ಕಾಲ್ಗೆಸೆವ ಸಲೆ ಶುದ್ಧ ಗೀತಚಾರಿಗೆ ಬಲುಬಿರುದಾಂತ ಕಲೆಯ ನರ್ತಕಿಯರೊಪ್ಪಿದರು (ಬೋಹಶ. ೨೦-೦೭); ಕಾಲ ಕುಪ್ಪಸ ಕಸೆ ಮೊಲೆಗಟ್ಟು ಜಡೆ ರತ್ನಕೀಲಣಗೆಲಸದೊಡ್ಯಾಣ (ಶರತ. ೩೦-೬೦). **ಮೊಲೆಕಟ್ಟು :** ಜಡೆ ಕಾಲ್ಕುಪ್ಪಸ ಮೊಲೆಕಟ್ಟು . . . ಪೇಡೆಯವೆಸಿಯಲಸುರನ ಮುಂಗಡೆಯೊಳೆಯ್ದಿದರಂಗನೆಯರು (ಕುರಾಸಾಂ. ೦೬-೦೭); ಮೈದಿಲ ಸೆಜಿಗಿನ ಮೊಲೆಕಟ್ಟು ದುಗುಲದೊಳ್ಳಿದಿದ ನಿಱಿಗಾಸೆಯಿಂದ ಐದುಬನ ಮಸದಾಸೆಗಳಂದದೊಳ್ಳೆದಿದರ್ಜಲಕೇಳಿಗಾಗ (ಕಂಸಪಿ. ೨೩-೦೦೬). [ಮೊಲೆ₁ + ಕಟ್ಟು₂]

**ಮೊಲೆಗುಡಿ** (ನಾ). ಎದೆಯ ತುದಿ ; ಕುಚಾಗ್ರ : ಮೊಲೆಗುಡಿಯೊಡನೆ ಕಕ್ಷಪುಟವಸಿತಮಾಗೆ (ಸಿದ್ಧರಾ. ೦-೩೨). [ಮೊಲೆ₁ + ಕುಡಿ₂]

**ಮೊಲೆಗುಡು** ' ಮೊಲೆಗೊಡು' ನೋ.

**ಮೊಲೆಗೂಸು**, ಮೊಲೆಕೂಸು (ನಾ). ಎದೆಹಾಲು ಕುಡಿಯುವ ಮಗು ; ಹಸುಗೂಸು ; ಹಸುಳೆ : ಆ ಬಡಹೆಂಗಸು ಮೊಲೆಗೂಸನ್ನೂ ಬಿಟ್ಟು ಕೆಲಸಕ್ಕೆ ಬಂದಿದ್ದಾಳೆ (ರೂಂ). **ಮೊಲೆಕೂಸು :** ಮೊಲೆಕೂಸು ಮೊದಲು ಮಾಡಿಕೊಂಡು ಹೆಂಗಸರೂ ಹುಡುಗರೂ . . . . ನೋಡಿಯೇ ನೋಡಿದರು (ಬಟ್ಟೆಹೊ. ೩). [ಮೊಲೆ₁ + ಕೂಸು]

**ಮೊಲೆಗೆಲ** (ನಾ). ಎದೆಯ ಪಕ್ಕ ; ಸ್ತನಪಾರ್ಶ್ವ : ಕಸ್ತೂರಿಯಿಂದೆನ್ನಯ ಮೊಲೆಗೆಲದೊಳ್ ಪತ್ರಭಂಗಂಗಳಂ ಚಿತ್ರಿಸುವಂ (ಕಾದಂಬ. ೩೦೩); ಮೊಲೆಗೆಲದೊಳ್ ಕಸ್ತೂರಿಕಾಪತ್ರಭಂಗಮಂ ಚಿತ್ರಿಸಿಯುಂ (ಚಂದ್ರಪ್ರ. ೭-೭೩ ವ): ನೋಡಿದಳ್ ಕುವರಿ ತನ್ನಯ ಮೊಲೆಗೆಲದಲ್ಲಿ ಮೂಡಿರ್ದ ಮೋಹನಗೆಱೆಯ (ಮೋಹತ. ೨೬-೦೦). [ಮೊಲೆ₁ + ಕೆಲ₁]

**ಮೊಲೆಗೊಟ್ಟು**(ನಾ). = ಮೊಲೆಗುಡಿ: ಬೆಳರ ಮೊಗಂ ಮೊಲೆಗೊಟ್ಟನೊಳಿಸಿದಿರೆ ಕರ್ಪು . . . ಬೆಳದುದೆ(ದು) ಗರ್ಭಂ (ಕಇ. 1, ೨೩-೩೦ ; 1186).

[ಮೊಲೆ₁ + ಕೊಟ್ಟು₁]

**ಮೊಲೆಗೊಡು**, ಮೊಲೆಕೊಡು, ಮೊಲೆಗುಡು (ಕ್ರಿ). ಎದೆಹಾಲನ್ನು ಕುಡಿಸು; ಸ್ತನ್ಯಪಾನ ಮಾಡಿಸು : ಇವನು ಗಡ ಚಿಕ್ಕಂದು ಮೊಲೆಗೊಟ್ಟವಳ ಹಿಂಡಿದ (ಕುವ್ಯಾಕ. ೦೦-೦೩); ದಾದಿಯರಬಲಂಗೆ ಮೊಲೆಗೊಟ್ಟು (ಮೋಹತ. ೦೭-೨೯). **ಮೊಲೆಕೊಡು :** ದಿಟ್ಟ ಶ್ರೀಪುರಂದರವಿಠಲಗೆ ಮೊಲೆಕೊಡು ಬಾರೆ ಗೋಪಮ್ಮ (ಪುರಂದ. ೨-೦೭೯-೭). **ಮೊಲೆಗುಡು :** ಪಾರ್ಥನನೆತ್ತಿ ಮೊಲೆಗುಡುತನುನಯದಿ (ಸಂಶಶ. ೦೩-೯೭) ; ಚಂದ್ರಸುರಧೇನು ಕೂತರ್ು ಚಕೋರಪಸ್ಸಗೆ ಮೊಲೆಗುಡಲು (ಮೋಹತ. ೦೭-೩೩).

[ಮೊಲೆ₁ + ಕೊಡು₁]

**ಮೊಲೆಗೊಳಿಸು** (ಕ್ರಿ). =ಮೊಲೆಗೊಡು: ಮೇಲುದ ಕೆಲಕಡೆಗೆ ಮಱಿಮಾಡಿ ಮುದ್ದಿಸಿ ಮೊಲೆಗೊಳಿಸಿ ತೂಪಿಱಿದು (ಕೂರಂ. ೭-೯೩-೨೬); ಮಾಯೆಯನೆ ಮೊಲೆಗೊಳಿಸಿ ಹಾಲ್ಗುಡಿಸಿ. ಈ ತಾಯಿ ಗಾಯತ್ರಿಮಂತ್ರಕ್ಕೆ ಭಾಷ್ಯ ಬರೆದವಳು (ಅರಳು. ೨೯-೯). [ಮೊಲೆ₁ + ಕೊಳ್₁ + – ಇಸು₃]

**ಮೊಲೆತುದಿ** ' ಮೊಲೆದುದಿ' ನೋ.

**ಮೊಲೆತೊಟ್ಟು** 'ಮೊಲೆದೊಟ್ಟು' ನೋ.

**ಮೊಲೆತೊರೆ** (ಕ್ರಿ). ಸ್ತನದಲ್ಲಿ ಹಾಲು ಚಿಮ್ಮಿಬರು : ತಾಯ್ಗಳುಮ್ಮಳಿಸಲಾಗದು ಕಱುಗಳಂ ಬಿಡಿರೆ ಬೇಗ ಮೊಲೆತೊರೆದು ಮಱುಗುವವು ಕಱುವಂ ಬಿಡಿರೆ (ಬಸರ. ೯-೦೦೭); ಅಳುವ ಕಂದನ ದನಿಯು ಕೇಳುತೆ ಮೊಲೆತೊರೆಯೆ (ಕಾಳ್ಗಿಚ. ೩-೦೩). [ಮೊಲೆ₁ + ತೊರೆ₂]

**ಮೊಲೆದಾಣ** (ನಾ). = ಮೊಲೆಗೆಲ : ನಿನ್ನೆಡೆಯೊಳಗೆಳ್ಳನಿತೂಣೆಯವಿಡಿದ ಕಾರ್ಯಗಳ ಕಾಣಿಸಿಕೊಂಡನಾದೊಡೆ ಕೇಳು ಮುಂಡಿ ಮೊಲೆದಾಣವ ನಿನಗಿತ್ತಳ್ಲ (ಕಂಸಪಿ. ೭-೦೭೬). [ಮೊಲೆ₁ + ತಾಣ]

**ಮೊಲೆದುದಿ**, ಮೊಲೆತುದಿ (ನಾ). = ಮೊಲೆಗುಡಿ : ತನ್ನೆಡಗೈಯ ಕೊನೆವೆರಳಿಂ ಬಲದ ಮೊಲೆದುದಿಯುಮಂಕಿ ಕಡೆಗಣ್ಣಲಿ ಮೊಗವನಿರೆ ನೋಡ

. . . ನಲಿವ ಕಂದನನೇವು ಪಡೆದಪೆನೋ (ಸಾಳ್ವಭಾ. ೩-೦೩) : ಲಲನೆ. . . ಮೊಲೆದುದಿಯೊಳಗಿಜಿವವನೆದೆಧೈರ್ಯವ ತೊಲಗಿಸುತಿರ್ದಳೇನೆಂಬೆ (ಕಂಕವಿ. ೬-೮೬). **ಮೊಲೆತುದಿ :** (೪). [ಮೊಲೆ$_1$ + ತುದಿ]

**ಮೊಲೆದೊಟ್ಟು**, ಮೊಲೆತೊಟ್ಟು (ನಾ). = ಮೊಲೆಗುಡಿ : ಆ ಮಗುವಿನ ಬಾಯೊಳು ಮೊಲೆದೊಟ್ಟು ಕಿತ್ತುಹೋಹಂದದಿ ತುಯ್ದು (ನೇಮಿಸಂ. ೦೫-೬೬); ತೊರೆದ ಸುಗಳ್ಮೊಲೆಯನೀಂಟುತೆ ಪೆಸರ್ಗಾಯದ ಬೆರಲೊಳು ಮೊಲೆದೊಟ್ಟ ಪಿಡಿದು ಮರಳ್ದುಣೆ (ನೋಹಚ. ೦೭-೬೬). **ಮೊಲೆತೊಟ್ಟು :** ಮಗು ಮೊಲೆಯುಣ್ಣುವಾಗ ಮೊಲೆತೊಟ್ಟಿನ ರಕ್ಷಣೆಗಾಗಿ ಹಾಕುವ ಕಾಪು (Nipple. ೩೦೫೦). [ಮೊಲೆ$_1$ + ತೊಟ್ಟು$_1$]

**ಮೊಲೆನಾಗ** ' ಮಲರೋಗ ' ನೋ.

**ಮೊಲೆನಾಗರ** ' ಮಲರೋಗ ' ನೋ.

**ಮೊಲೆನಾಗರು** ' ಮಲರೋಗ ' ನೋ.

**ಮೊಲೆನೀರು**, ಮಲನೀರು, ಮಲ್ನೀರು (ನಾ). ಮದುವೆಯ ದಿನವಂದು ವಧು ಮತ್ತು ವರ – ಇವರಿಗೆ ಬೇರೆಬೇರೆಯಾಗಿ, ಅವರವರ ತಾಯಿ, ಅಕ್ಕ, ತಂಗಿ ಮೊದಲಾದ ಸುಮಂಗಲಿಯರೊಂದಿಗೆ ಚಪ್ಪರದಲ್ಲಿ ಕೂರಿಸಿ, ಅರಿಸಿನ ಬೆರಸಿದ ನೀರಿನಲ್ಲಿ ಮಾಡಿಸುವ ಮಂಗಳಸ್ನಾನ : ಮೊಲೆನೀರ ಮಿಂದವರೆಲ್ಲರೂ ಹೆಂಡತಿಯರಾಗಬಲ್ಲರೆ (ಅವಕಂ. ೨೯೬-೦೦೨೯); ಜಲದುಡಿಕೆಯ ತುಂಬಿ ಮೊಲೆನೀರ ಮೀವವರೆಲ್ಲರು ಅಮಲನ ಗುಣನೇಮವ ಮಾತಾಡಲೇಕೆ (ಕೋಲಶಾಂ. ೦೬-೨); ಮಗನ ಮದುವೆಯೊಳು ಮೊಲೆನೀರಿನೊಳು ಮೆಟ್ಟ ಮೀಗೆ ಹರುಷದಿ ಮಿಯಬೇಕು (ಷಟಿಸಂ. ೦೯-೨೦೦); ಸುದತಿ ಮೊಲೆನೀರ ಮೀವಳು ಮಗನ ಮದುವೆಯಲಿ (ಸಾಳ್ವಭಾ. ೨೭-೪). **ಮಲನೀರು :** (ಏಕಪ್ಸ. VIII, ೪). **ಮಲ್ನೀರು :** ಆ ಅಲೆಗುರುಳಿನ ರಾಶಿಯನ್ನು ಆ 'ಮಲ್ನೀರಿ'ನ ದಿನವೇ ನೋಡಿ ಆನಂದಪಟ್ಟಿರಲಿಲ್ಲವೆ? (ಬಾಳಹೊ. ೯೬). [ಮೊಲೆ$_1$ + ನೀರು$_1$ (<ನೀರ್). **P** ಈ ಶಬ್ದಕ್ಕೆ ಸಂಬಂಧಿಸಿದಂತೆ ತಮಿಳು, ಮಲಯಾಳಂ, ತೆಲುಗು ಭಾಷೆಗಳಲ್ಲಿ ಜ್ಞಾತಿಶಬ್ದಗಳಿಲ್ಲ. ಆದರೆ ತಮಿಳಿನ 'ಮಣ್ಣುನೀರ್' (= ಸ್ನಾನಯೋಗ್ಯವಾದ ನೀರು), 'ಮಣ್ಣುಜು' (= ಸ್ನಾನ ಮಾಡಿಸು) ಎಂಬ ಶಬ್ದಗಳನ್ನು ಇದರೊಂದಿಗೆ ಹೋಲಿಸಬಹುದು]

**ಮೊಲೆಬರ್**, ಮೊಲೆಬರು (ಕ್ರಿ). ಸ್ತನಗಳು ಮೂಡು : ರಜನಿ ಕೃತಾಂಜಲಿ ಕಳವಿಗೆ ಬಜೆ ಗಂಧಕ ಪೂಪಮೆಂಜಿನ ತವೆ ತಿಲತೈಲಜಲ್ಪಾನಿತ ಘೃತದಿಂದಂಬುಜಾಕ್ಷಿಯರ್ಗೆಜಿಯೆ ನಸ್ಯಮಂ ಮೊಲೆಬರ್ಕುಂ (ಲೋಕೋಪ. ೯-೦೭೦). **ಮೊಲೆಬರು :** ಗಜಪಿಪ್ಪಲಿಯನು ಅರಗು, ಬಜೆ ಸಹ ಮೊಸರು ಎಣ್ಣೆಯಲ್ಲಿ ಪೂಸಲು ಮೊಲೆಬರುವುದು (ವೈವಿ. ೦೦೭).

[ಮೊಲೆ$_1$ + ಬರ್ (<ವರ್)]

**ಮೊಲೆಬರು** ' ಮೊಲೆಬರ್ ' ನೋ.

**ಮೊಲೆಬಾವು** (ನಾ). ಮೊಲೆಹಾಲು ಹೆಚ್ಚಾಗಿ, ಮೊಲೆಯು ಬಿರುಸಾಗಿ ಊದಿಕೊಳ್ಳುವ ಒಂದು ಬಗೆಯ ಬಾಣಂತಿರೋಗ : ಮಗುವಿಗೆ ಹಾಲು ಕೊಡುವುದರಿಂದ ಅಥವಾ ಹಿಂಡಿ ತೆಗೆಯುವುದರಿಂದ ಮೊಲೆಬಾವನ್ನು ಶಮನಮಾಡಬಹುದು (ಕೂಶ). [ಮೊಲೆ$_1$ + ಬಾವು]

**ಮೊಲೆಮರಿ** (ನಾ). ತಾಯಿಯು ಹಾಲುಕುಡಿಯುವ ಮರಿ; ಎಳೆಯ ಮರಿ : ಈದಿಹ ಕೇಸರಿಯಾ ಹಲ ಮೊಲೆಮರಿಯಾ ಎಳತರುತವನಾಂ ಪಳಗಿಸುವೆ! (ಹಪ್ಪರ. ೦-೨). [ಮೊಲೆ$_1$ + ಮರಿ (< ಮಜಿ)]

**ಮೊಲೆಯುಣ್**, ಮೊಲೆಯುಣು, ಮೊಲೆಯುಣ್ಣು (ಕ್ರಿ). ಎದೆ ಹಾಲನ್ನು ಕುಡಿ ; ಸ್ತನ್ಯಪಾನ ಮಾಡು : ಬೆಸಕಯ್ವ ಪೆಂಡಿರ ಮೊಲೆಗಳಂ ಸೀರೆಯಿಂ ಕಟ್ಟಿಸಿ ಕೂಸುಗಳಂ ಮೊಲೆಯುಣಲೀಯದೆ ಬೆಸಕೆಯ್ಯಿಸುಗುಂ (ವಡ್ಡಾರಾ. ೧೭೦ – ೦೨) ; ಮೊಲೆಯುಂಬ ಭಾವ ತಪ್ಪಿ ಅಪ್ಪಿದವರ ತಲೆಯ ಕೊಂಬ ಕೂಡಲ ಸಂಗಮದೇವ (ಬಸವ. ೬೯೦); ಸಿಂಗದ ಮೊಲೆಯುಂಬ ಮಜಿಯಾನೆ . . . ಮುಂಗುಲಿಯೊಡನಾಡುವೆಳ ನಾಗನ ಕಂಡಂಗಜ ವಿಸ್ಮಿತನಾದ (ನೋಹಚ. ೬-೫೩). **ಮೊಲೆಯುಣು :** ಬಿನದದಿಂ ಮೊಲೆಯುಣುವ ತಾಯಾನನವ ಕಿಗ್ಗಣ್ಣಿಂದ ನೋಡುತ (ಸಾಳ್ವಭಾ. ೨೭-೪೭). **ಮೊಲೆಯುಣ್ಣು :** ಘನನಿತ್ಯತೃಪ್ತನಂ ಮೊಲೆಯುಣ್ಣನೆಂದು . . . ಅಳುವರಾ ಮಾತಪಿತರು (ಸಿದ್ಧರಾ. ೨-೦೦).

[ಮೊಲೆ$_1$ + ಉಣ್]

**ಮೊಲೆಯುಣಿಸು** (ಕ್ರಿ). ಮಗುವಿಗೆ ಎದೆಹಾಲು ಕುಡಿಸು. – ಸ್ತನ್ಯಪಾನ ಮಾಡಿಸು : ಒಮ್ಮೆ ಕಳುಹಿ ಕೊಡು; ಮರಳುವೆನು ಮೊಲೆಯುಣಿಸಿ ಕಿರುಬಾಲನಾಣೆ (ಕುವ್ಯ. ೩೩-೬); ಮೊಲೆಯುಣಿಸಿದ ನಂತರ ಈ ಭಾಗವನ್ನು ಚೊಕ್ಕಟವಾಗಿ ತೊಳೆದು ಒರಸಲು ಅಸಡ್ಡೆ ಮಾಡಿದುದರಿಂದ ಹೀಗಾಗುವುದು (ಮಸಿವು. ೭೬). [ಮೊಲೆ$_1$ + ಉಣಿಸು$_1$]

**ಮೊಲೆಯುಣು** ' ಮೊಲೆಯುಣ್ ' ನೋ.

**ಮೊಲೆಯುಣ್ಣು** ' ಮೊಲೆಯುಣ್ ' ನೋ.

**ಮೊಲೆಯೂಡು** (ಕ್ರಿ). = ಮೊಲೆಯುಣಿಸು : ಸುಕೌಸಳಸ್ವಾಮಿಯಂ ಮೊಲೆಯೂಡುವ ದಾದಿ ಸುಬ್ರತೆಯೆಂಬೊಳ್ (ವಡ್ಡಾರಾ. ೯೩.-೦೨); ಆ ಗೃಹಸ್ಥನ ಹೆಂಡತಿ ಸೆಜಿಂಗನಿಕ್ಕಿಕೊಂಡು ಮಗಂಗೆ ಮೊಲೆಯೂಡುವುದಂ ಕಂಡು (ಕುಕಕಂ. ೨೪೯-೩); ಈ ಮನೋಹರಕ್ರೀಡನನೆತ್ತಿಕೊಂಡು ಮೊಲೆಯೂಡಿದ . . . ಈ ಭುವತ್ಸತಿ ಯಶೋದೆ ಕುಲಕ್ಕೆ ಯಶೋದೆಯಲ್ಲಳೆ (ಜಗಾ. ೩-೬೪). [ಮೊಲೆ$_1$ + ಊಡು$_1$]

**ಮೊಲೆವಾಲ್**, ಮೊಲೆವಾಲು, ಮೊಲೆಹಾಲು (ನಾ). ಮಾನವಸ್ತ್ರೀ ಮತ್ತು ಸಸ್ತನಿಸ್ತ್ರೀಪ್ರಾಣಿಗಳ ಎದೆಯಲ್ಲಿ ಉತ್ಪತ್ತಿಯಾಗುವ ಹಾಲು ; ಎದೆಹಾಲು ; ಸ್ತನ್ಯ : ಮದಂ ಮದಮನಾಳ್ದವಿವೇಕತೆಯಿಂದಮಲ್ತೆ ತೊಟ್ಟಿನ ಮೊಲೆವಾಲನುಂಡ ಗುಣಮೀಂತಿಪನಾರ್ ಕಿಡಿಪರ್ ನರೇಂದ್ರರೊಳ್ (ಕಂಪಭಾ. ೦೨-೬೩); ಉಂಡ ಮೊಲೆವಾಲ ಪವಣಂ ಕೊಂಡು ಬಿಸುಟಿಟ್ಟೊಡಲ ಪವಣನಿದು ಪವಣೆಂದು (ಸುಕುಪಚಾ. ೬-೮) ; ಪಾದವೆ ತೊಟ್ಟಿಲ್ ರೇಣುವೆ ಬಾಯ್ವೆಣ್ಣೆ ಸವಿರುಚಿಯೆ ಮೊಲೆವಾಲ್ (ಚಾರ. ೬-೭). **ಮೊಲೆವಾಲು :** ಕಜುಪನಗಲಿಸಿ ತಾಯ ಮಜುಗಿಸಿ ಮೊಲೆವಾಲ ಕಜೆದುಣಬೇಡವೊ (ಬಸವ. ೯೯೯) ; ನಿಮ್ಮವ್ವೆಯಾ ಮೊಲೆವಾಲ ಬಲುಹಿನಲಿ ರಾಯನೀ ಕ್ಷತ್ರಿಯನು (ಕುವ್ಯಾಕ. ೦-೩೩); ಹಸಿದತ್ತು ಮೊಲೆವಾಲಿಂಗೆ ಮೊಗಸುವಡಿದು ವಿಚಿತ್ರವಲ (ತೊರರಾ. ೦-೮-೭೪). **ಮೊಲೆಹಾಲು :** ಅಂಕೋಲೆಯ ಬೇರಂ ಮೊಲೆಹಾಲಲ್ಲಿ ತೇದು ಹಚ್ಚಲು ಕಣ್ಣುಹೂವು ಮಾಣ್ಗುಂ (ವೈವಿ. ೦) ; ಸಾರಗದ ಕೊಂಬನ್ನು ಮೊಲೆಹಾಲಿನಲ್ಲಿ ತೇದು ಕದಡಿ ಸೇವಿಸಿದರೆ ದಾಹಜ್ವರ ಗುಣಮಕ್ಕುಂ (ಸಕವ್ಯ. ೭೪). [ಮೊಲೆ$_1$ + ಪಾಲ್$_1$]

**ಮೊಲೆವಾಲು** ' ಮೊಲೆವಾಲ್ ' ನೋ.

**ಮೊಲೆವಿಡಿ** (ನಾ). ಮೊಲೆತೊಟ್ಟು ಒಳಗೆ ಸೇರಿಕೊಳ್ಳುವ ಒಂದು ಬಗೆಯ ಸ್ತನರೋಗ : ಕೊಗ್ಗಿಯಂ ತಂದು . . . ಇಕ್ಕಿ ಹಿಮ್ಮಡಗಲು ಮೊಲೆವಿಡಿ ಮಾಣ್ಗುಂ (ವೈವಿ. ೦೯೬). [ಮೊಲೆ$_1$ + ಪಿಡಿ$_2$ ?]

**ಮೊಲೆವೆಟು** (ಕ್ರಿ). ಮೊಲೆಯನ್ನು ಹೊಂದಿರು ; ಹೆಣ್ಣುತನವನ್ನು ಪಡೆದಿರು ; ಹೆಣ್ಣಾಗಿರು : ನಿನ್ನಂ ಪೆತ್ತಳ್ ಮೊಲೆವೆತ್ತಳೆ ವೀರಜನನಿ ಪೆಸರಂ ಪೆತ್ತಳ್ (ಗದಾಯು. ೪-೫೩). [ಮೊಲೆ$_1$ + ಪೆಜು$_1$]

**ಮೊಲೆವೊಜು** (ಕ್ರಿ). = ಮೊಲೆವೆಟು: ಮೊಲೆವೊತ್ತ ತೈಲಜನನಿಯ ಕೆಲದೊಳ್ ರಂಜಿಪರೆ ಮಿಸೆವೊತ್ತಣ್ಣಂಗಳ್ (ಅಕ್ರೂ. ೦-೬೫); ತೆಂಗಿನಕಾಯ ತೋರದ ಮೊಲೆವೊತ್ತ ಲತಾಂಗಿಯ ಬಂದುಗೆವಾಯ ರಂಗಿನ ಚೆಂದುಟಿ (ವೋಹಚ. ೦-೩೭). [ಮೊಲೆ$_1$ + ಪೊಜು]

**ಮೊಲೆಹಾಲು** 'ಮೊಲೆವಾಲ್' ನೋ.

**ಮೊಲ್ಲಾಗರ** 'ಮಲರೋಗ' ನೋ.

**ಮೊಲ್ಲೆ**, ಮಲ್ಲೆ (ನಾ). ಮಲ್ಲಿಗೆಯ ಜಾತಿಗೆ ಸೇರಿದ ಒಂದು ಬಗೆಯ ಬಳ್ಳಿ ಮತ್ತು ಅದರ ಹೂವು : "ಮಾಘ್ಯ, ಕುಂದಃ — ಈ ೨ ಮೊಲ್ಲೆ" (ನಾವರ್ಮ. ೧೦೬) ; ಫುಲ್ಲಶರಂಗಿಸುವೆಡೆಗಿವೆ ನಲ್ಲಂಬುಗಳೆನಿಸಿ ತುಱುಗಿ ಮುಲ ರ್ದಲರ್ದೆಸೆವೀ ಮೊಲ್ಲೆಯುಮೊಲಿಸಿದ ನಲ್ಲರ ಲಲ್ಲೆಯುಮಪೂರ್ವರ ಮನಮುಮಂ ಸೋಲಿಸದೇ (ಆದಿಪು. ೧೦-೧೦೧) ; ಸರಸಿರುಹಂ ಸುರಗಿ ಮೊಲ್ಲೆ ಪೊಸಸಂಪಗೆಯೂ ಅರಲಿಂ . . . ಜಿನೇಶ್ವರನ ಪಾದಮಂ ಪೂಜಿಸಿದಂ (ಧರ್ಮಾಮೃ. ೫-೩೬) ; ಇರವಂತಿಯ ಕಂಪು ಮೊಲ್ಲೆಯೊಂದುರವಣೆಗೆಂಪು ಮಲ್ಲಿಗೆಯ ಕಂಪು (ಗಿರಿ. ೨-೬೦). **ಮಲ್ಲೆ**: ಪರಿಮಳವಾಂತ ಮಲ್ಲೆಯ ಮುಗುಳ್ಗಳೊಪ್ಪಿದುವು (ಕಂಸವ. ೫-೯೬).

[ದೇ.॥ ತಮಿ. ಮುಲ್ಲೈ ; ಮಲ. ಮುಲ್ಲ ; ತೆಲು. ಮೊಲ್ಲ]

**ಮೊಲ್ಲೆಗ** (ನಾ). ದಿಕ್ಕಿಲ್ಲದವನು ; ನಿರ್ಗತಿಕ : ಮಲ್ಲಿಗೆಯೆ ಹೇಳವಧಿಯಂ ನಿಮ್ಮಲ್ಲಿಗೆಯ್ತಂದಿದ್ದೆನಲ್ಲಾ ಮೊಲ್ಲೆಯೇ ಹೇಳಿದಕೆ ಮೊಲ್ಲೆಗನಾದನೇಗುವೆನು (ಬಸವ. ೯೫-೪೦). [ಮೊಲ್ಲೆ$_?$ + –ಗ$_2$]

**ಮೊಲ್ಲೆಯ** (ನಾ). (?) : "ಮೊಲ್ಲೆಯಂ ನಿಷ್ಠೂರವು" (ಕಕರ. ೦೨೯).

[ ? ]

**ಮೊಸರ್**, ಮೊಸರು, ಮೋರ್ (ನಾ). ಹಸುಬಿಸಿಯಾದ ಹಾಲಿಗೆ ಹೆಪ್ಪುಹಾಕಿದ ನಂತರ ಉಂಟಾಗುವ ಗಟ್ಟಿಗೊಂಡ ಪದಾರ್ಥ ; ದಧಿ : ನೆಲ್ಲುಂ ಮೊಸರುಂಗುಡದಂತಲ್ಲದೆ ತಲ್ಲಣಿಸಲಲಸದಿತು ಮೃದುಪದಮಂ (ಕವಿರಾ. ೨-೪) ; ಪೆಸರ್ ನಿನಗೆ ಕೇಳ್ ಮೊಸರ್ (ಅದಿಪು. ೩-೬೦); ಹೆಪ್ಪಿಟ್ಟೊಡೆ ಪಾಲ್ ಮೊಸರಾಗಿಪ್ಪಂತಿರೆ ನೀರ್ಗಳಾಗಲರಿಗುಮೆ (ಧರ್ಮಾಮೃ. ೧೦-೦೯೭). **ಮೊಸರು** : ಚಂದವೋಗರದೊಳಗೆ ಚಂದ್ರಿಕೆಯ ಹೊಸ ಹಳುಕಿನಂದದೆಮ್ಮೆಯ ಮೊಸರು. . . ಎಲ್ಲವನಿರಿಸಿ ಕಟ್ಟಿಕೊಟ್ಟಳು (ಸಿದ್ಧರಾ. ೨-೩೩) ; ಮೊಸರ ಮಾಜಲು ಪೋದರೆ ನಿನ್ನಯ ಕಂದ ಹೆಸರೇನೆಂದೆಲೆ ಕೇಳಿದ (ಪುರಂದ. ೦-೯೦-೨) : ಯಾವಾಗಲೂ ಮಜ್ಜಿಗೆ ಅಥವಾ ಮೊಸರು ಸೇವಿಸಲು ಮರೆಯದಿರಿ (ಅತುಶಾ. ೬೯) ; ಒಲ್ಲದ ಗಂಡನಿಗೆ ಮೊಸರಲ್ಲಿ ಕಲ್ಲು (ಗಾದೆ). **ಮೋರ್** : ಸಾರತರೋಕ್ತಿಗೆ ನೆಲ್ಲುಂ ಮೋರುಂಗೋದಂತೆ ಸೇರಿ ಕಲ್ಪಾರ್ಪರವರ್ಗೋರೆ ನಿಬಂಧನಟೀಕಾಕಾರಂಗಲ್ಲದೆ ಪೆಱಂಗೆ ಕೋ[ಳ್ವೊ]ದಪುದೇ (ಶಾಂತಿಪು. ೦೦-೦೮೨). [ದೇ.॥ ತಮಿ. ಮುಚರ್, ಮೋರ್; ಮಲ. ತೊದ. ಮೋರ್ ; ತುಳು. ಮೊಸರು ; ಕೊಡ. ಮೋರೀ ; ಕೋತ. ಮೊಬ್ರ್]

**ಮೊಸರಣ್ಕೆ** (ನಾ). (ಶುಭಕಾರ್ಯದಲ್ಲಿ ಬಳಸುವ ಮಂಗಳದ್ರವ್ಯಗಳಲ್ಲೊಂದಾದ) ಮೊಸರಿನ ಲೇಪನ : ರನ್ನದ ಕನ್ನಡಿವೆರಸು ಸರ್ವಧಾನ್ಯದ ನಡುವಿರೆ ಮೊಸರಣ್ಕೆವೆರಸಿದೆಳದಳಿರ್ಗಳಸಂ (ಆದಿಪು. ೪-೩೩) : ಸಿರಿಗನ್ನಡಿ ಮೊಸರಣ್ಕೆವೆರಸಿದೆಳದಳಿರ್ಗಳಸಂಗಳ ಲೀಲೆವೆರಸಿ ದಂಪತಿಯಂ ಪೋ ಬರವೇಟೆಂಬ ತೆಱದಿಂ ಸೊಗಯಿಸಿದುದು (ಸುಕುಮಾ. ೦೦-೬೬ ರಗಳೆ) ; ಸರ್ವಧಾನ್ಯಂ ಮೊಸರಣ್ಕೆ ಕಱುಂಕೆ . . . ಕಣ್ಗೊಳಿಸುತಿರ್ದುವು (ಕೃಷ್ಣಪು. ೪-೬೯).

[ಮೊಸರ್ + ಅಣ್ಕೆ]

**ಮೊಸರನ್ನ** (ನಾ). ೧. ಮೊಸರಿನಲ್ಲಿ ಕಲಸಿದ ಅನ್ನ : ಸುನಂದ ಬರೀ ಮೊಸರನ್ನ ತಿಂದು ಹೊರಗೋಡಿ ಬಂದಿದ್ದಳು (ದೂಬೆಟ್ಟ. ೬) ; ಕತ್ತೆ ಮೊಸರನ್ನದ ರುಚಿ ಬಲ್ಲುದೆ ? (ಗಾದೆ). ೨. ಮೊಸರಿಗೆ ಉಪ್ಪು, ಹಸಿ ಮೆಣಸು, ಒಗ್ಗರಣೆ ಮುಂತಾದುವನ್ನು ಹಾಕಿ ಕಲಸಿದ ಅನ್ನ : ಪ್ರಯಾಣಕಾಲದಲ್ಲಿ ತಿನ್ನಲು ಮೊಸರನ್ನ ಮತ್ತು ಪುಳಿಯೋಗರೆಯನ್ನು ಮಾಡಿಕೊಂಡು ಬಂದಿದ್ದೇನೆ (ರೂಢಿ).

[ಮೊಸರು (< ಮೊಸರ್) + ಅನ್ನ$_3$]

**ಮೊಸರವಲಕ್ಕಿ** (ನಾ). ಹಸಿಮೆಣಸಿನಕಾಯಿ, ಕೊತ್ತಂಬರಿಸೊಪ್ಪು, ಉಪ್ಪು ಮತ್ತು ಒಗ್ಗರಣೆಯೊಂದಿಗೆ ಮೊಸರಿನಲ್ಲಿ ಕಲಸಿದ ಅವಲಕ್ಕಿ : ಅಡಕೆಹಾಳೆಯ ಪೊಟ್ಟಣಗಳಿಂದ ಮೊಸರವಲಕ್ಕಿ . . . ಮೊದಲಾದ ತಿಂಡಿಗಳನ್ನು ರಾಮಚಂದ್ರನಿಗೆ ಕೊಟ್ಟರು (ಕಳಹು. ೫).

[ಮೊಸರು (< ಮೊಸರ್) + ಅವಲಕ್ಕಿ]

**ಮೊಸರು** 'ಮೊಸರ್' ನೋ.

**ಮೊಸರುತನ**(ನಾ). ಹಾಲು ಹೆಪ್ಪಾಗುವಿಕೆ,– ಗಟ್ಟಿಯಾಗುವಿಕೆ : ಹುಳು ಕುರೆಯ ಚೂರ್ಣವನು ನೀರಿಲ್ಲದೆ ಕಡೆದ ಮಜ್ಜಿಗೆಯಲ್ಲಿ . . . ಇಕ್ಕಿ . . . ನೆನೆದ ಮಳಲಿನಲ್ಲಿ ಹೂಳುವುದು . . . ಹೊತ್ತಿನಿಂದ ಮೊಸರುತನವನೆಯ್ದುವುದು (ಶಿವತತ್ತ್ವ. ೭). [ಮೊಸರು (<ಮೊಸರ್) + – ತನ]

**ಮೊಸರುಭೋಜನ** (ನಾ). = ಮೊಸರನ್ನ ೧ : ರಾಮೇಲಿಂಗ × × ಉದಯದ ಕಾಲದಲ್ಲಿ ಮೊಸರುಭೋಜನದ ನೈವೇದ್ಯ . . . ಕೊಟ್ಟ ಮಾನ್ಯ (ಎಕ. XI. ಹೊಳಲ್ಕೆ. ೬೩-೦೦; 1518).

[ಮೊಸರು ( < ಮೊಸರ್) + ಭೋಜನ]

**ಮೊಸರುವಡೆ**, ಮೊಸರೊಡೆ (ನಾ). ಮೊಸರಿನಲ್ಲಿ ನೆನಸಿದ ವಡೆ : ತೈರು ವಡೆ : ಮಧ್ಯಾಹ್ನದ ತಿಂಡಿಗೆ ಮೊಸರುವಡೆ, ಜಾಮೂನು ಮಾಡಿದ್ದ (ರೂಢಿ). **ಮೊಸರೊಡೆ** : ತಿಳಿದುಪ್ಪದಿಂದ ಬೆಂದೊಡೆಯ . . . ಮೊಸರಿನೊಳಗಿಕ್ಕೆ ಮೊಸರೊಡೆಯೆಂಬ ಹೆಸರಾಯ್ತು (ಸೂಪಶಾ. ೦-೬೦); ಶಿವೂ ಪೇಟೆಯಲ್ಲಿ ಮೊಸರೊಡೆ ಕೊಂಡು ಹೊಟ್ಟೆತುಂಬ ತಿಂದ (ಕುಂಹಿಂ. ೬೩).

[ಮೊಸರು (< ಮೊಸರ್) + ವಡೆ]

**ಮೊಸರೊಡೆ** 'ಮೊಸರುವಡೆ' ನೋ.

**ಮೊಸರೋಗರ** (ನಾ). =ಮೊಸರನ್ನ ೧ : ಪಸಿವನ್ನೆ . . . ಮೊಸರೋಗರವೆ ಸಾಲ್ಪುದೆಮ್ಮ ದೇವಂಗೆ (ಬಸವ. ೭-೦೩೪); ಒಬಳ ಅಕಿ ಮೊಸರೋಗರ (ಶಾಇ. IX-i. ೭೬೬-೯; 1276). [ಮೊಸರ್ + ಓಗರ]

**ಮೊಸಗರ್ೞಟಿಲ್** (ನಾ). = ಮೊಸರನ್ನ ೧ : ಮೊಸಗರ್ೞಟಿಲಂ ವಿಧಿಯಿಂದೆ ಸೂಸೆ ಭರದಿಂ ಬೀಱ್ಬಾಲಿಕಲ್ಲಂ ನಿವಾರಿಸುಗುಂ (ಲೋಕೋಪ. ೬-೦೦).

[ಮೊಸರ್ + ಕೂೞ್$_1$]

**ಮೊಸರ್ವೊಟ್ಟು** (ನಾ). ಮೊಸರಿನ ಹನಿ : ದೂರ್ವೆಯಿಂದಮೆ ಮೊಸರ್ವೊಟ್ಟನಿಟ್ಟು (ಪಾರ್ಶ್ವಪು. ೩-೦೯). [ಮೊಸರ್ + ಬೊಟ್ಟು$_2$]

**ಮೊಸಳೆ** 'ಮೊದಳೆ' ನೋ.

**ಮೊಸಳೆಮಡು** 'ಮೊದಳೆಮಡು' ನೋ.

**ಮೊಸಳೆಯರಸ** (ನಾ). ಒಬ್ಬಾತನ ಹೆಸರು : ಜಗಳೆ[ಪು]ಗದ ಮೊಸಳೆಯರಸರ ಪ × × × (ಶಾಇ. IX-i. ೩೦-೫ ; 966). [ಮೊಸಳೆ$_?$+ಅರಸ$_1$]

**ಮೊಹತರ್ಫ** (ನಾ). ಅಂಗಡಿ, ಎಣ್ಣೆಗಿರಣಿ, ಮಗ್ಗ, ಮನೆ ಮುಂತಾದುವುಗಳ ಮೇಲೆ ಹಾಕುವ ಒಂದು ಬಗೆಯ ತೆರಿಗೆ : (ರೈಸ್‌ಗೆ. II, ೫೫೬) ; (ಮೈಗೆಜೆ. IV. ೬೬೯).

[←ಪಾರ. ಮುಹತರಿಫಾ ; ಮರಾ. ಮೋಹತರಫಾ, ಮೋಹತರ್ಫಾ]

**ಮೊಹಬತ್** 'ಮೊಹಬತ್ತು' ನೋ.

**ಮೊಹಬತ್ತು**, ಮೊಹಬತ್ (ನಾ). ಪ್ರೀತಿ ; ಅಕ್ಕರೆ : ಮೊಹಬತ್ತಿನಿಂದ ಬರದು ಇದ್ದ ಕಾಗದ ಬಂದು ತಲಪಿ ಬಂದ ವಿವರ ಖುಷಿಯಿಂದಾ ತಿಳಿದು ಬಂದು (ರಾಜೇಂದ್ರ. ೦೪೪). **ಮೊಹಬತ್** : ತಾವು ನನ್ನನ್ನು ಒಂದು ವಸ್ತಾ ಅಂತ ಮೊಹಬತ್‌ನಿಂದ ಕಾಪಾಡಿದ್ರಿ (ಮುಳ್ಳಿ. ೨೯೬).

[←ಅರ. ಹಿಂ. ಮುಹಬ್ಬತ್ ; ಮರಾ. ಮೋಹಬತ]

**ಮೊಹರ** 'ಮೊಹರು' ನೋ.

**ಮೊಹರಂ**, ಮುಹರ್ರಮ್ (ನಾ). ಮಹಮ್ಮದೀಯವರ್ಷದ ಮೊದಲನೆಯ ತಿಂಗಳು ಮತ್ತು ಹಸನ್, ಹುಸೇನ್ ಎಂಬಿಬ್ಬರು ನಾಯಕರ ಸಾವಿನ ಪವಿತ್ರಸಂದರ್ಭದ ನೆನಪಿನಲ್ಲಿ, ಆ

ತಿಂಗಳಿನಲ್ಲಿ ಆಚರಿಸುವ ಹಬ್ಬ: ಅಲಾಬಿಹಬ್ಬ; ಬಾಬಯ್ಯನ ಹಬ್ಬ : ಒಂದು ಮಸೀದಿ ಇದೆ. ಹಾಗೇದ ಮೇಲೆ 'ಮೊಹರಂ' ಇರಬೇಡವೆ ? (ಶಾರುದಾ. ೯೦). **ಮುಹರ್ರಮ್** : 'ಮುಹರ್ರಮ್' ಎಂಬುದು ಮುಸ್ಲಿಂ ವರ್ಷದ ಮೊದಲನೇ ತಿಂಗಳಿನ ಹೆಸರು. ಅರಬ್ಬೀ ಭಾಷೆಯಲ್ಲಿ 'ಮುಹರ್ರಮ್' ಎಂದರೆ 'ಪವಿತ್ರ' ಎಂದು ಅರ್ಥವಾಗುತ್ತದೆ (ರಾಮುರಾ. ೬೨). [←ಅರ. ಹಿಂ. ಮುಹರ್ರಮ್: ಮರಾ. ಮೋಹರಮ್]

**ಮೊಹರಿ$_1$** 'ಮೌರಿ$_1$' ನೋ.

**ಮೊಹರಿ$_2$** 'ಮೊಹರು' ನೋ.

**ಮೊಹರಿ$_3$** 'ಮೋರಿ$_2$' ನೋ.

**ಮೊಹರು**, ಮೊಹರ, ಮೊಹರಿ$_2$, ಮೊಹರೆ, ಮೋಹರ$_2$, ಮೋಹರಿ$_2$ (ನಾ). ೧. ಒಂದು ಬಗೆಯ ಚಿನ್ನದ ನಾಣ್ಯ : ಪಾಂಡವರಿಗೆ . . . ದಿವ್ಯಭೂಷಣಗಳನ್ನೂ ಒಂದೊಂದು ಲಕ್ಷ ಮೊಹರುಗಳನ್ನೂ ಒಬ್ಬೊಬ್ಬರಿಗೂ ಪ್ರೀತಿಪೂರ್ವಕವಾಗಿ ಕೊಟ್ಟನು (ಕೃಷ್ಣಾಅ. ೩೫೫): ಇತರ ಬಂಗಾರದ ನಾಣ್ಯಗಳು ವಿಶೇಷವಾಗಿದ್ದವು. ಯಾವವೆಂದರೆ :– ೧ ಗಬರು . . . ೧ ಮೊಹರು, ೧ ಪುತಲಿ (ಪತ್ರಾಶಾ. ೦೦೪). ೨. ದಾಖಲೆ, ಪತ್ರ ಮುಂತಾದುವುಗಳ ಮೇಲೆ ಮುದ್ರಿಸಲು ಬಳಸುವ ಯಾವುದಾದರೂ ಲಾಂಛನವಿರುವ ಸಾಧನ, ಉಂಗುರ ಮುಂತಾದುವು ಮತ್ತು ಅವುಗಳಿಂದ ಒತ್ತುವ ಮುದ್ರೆ; ಉಂಡಿಗೆ ; ಶಿಕ್ಕಾ : ದಸಕತು ಮೊಹರಾ ಶ್ರೀಚಾಮರಾಜವಡೇರ ತನುಜ ಕೃಷ್ಣರಾಜವಡೇರು ಯೆಂಬುದಾಗಿ (ಎಕ. VI. ಕೊಪ್ಪ. ೪೬. ೩೭; 1811); ಬರೆದು ವಿಸ್ತರ ಪತ್ರಮಂ . . . ದುರುಳಂ ಮಡಿಚಿಕ್ಕಿ ಮುದ್ರೆಗೆಯ್ದುಂ ಮೊಹರಿಂ (ಚಂದ್ರಶ್ಯ. ೦೩-೦೦೨); ಇವರ ತಾಮ್ರಪಟ್ಟಿಕೆಗಳ ಮೊಹರುಗಳ ಮೇಲೆ ಸಿಂಹಲಾಂಛನವಿರುತ್ತದೆ (ಕರ್ನಾಆ. ೬). **ಮೊಹರ** : ೧. ರಾಧೆಯು ಚಿನ್ನದ ಮೊಹರವನ್ನು ಫಕೀರನ ಕೈಗೆ ಕೊಡುವುದಕ್ಕೆ ಹೋದಳು (ದೌಲತ್. ೩); ರಾಜ ಒಡೆಯನು ಒಂದು ಮೊಹರವನ್ನು ತೆಗೆದು ಅಂಬಿಗನ ಕೈಗಿಟ್ಟು (ಶ್ರೀರಾಘು. ೯೩). ೨. ಕರಾರುನಾಮಾ ದಸ್ಕತು ಮೊಹರದಿಂದ ಬರವರಲ್ಲಿ (ರಾಜೇಂದ್ರ. ೬); ರಾಕ್ಷಸನ ಮುದ್ರೆಯುಂಗುರದಲ್ಲಿ ಮೊಹರಮಂ ಮಾಡಿಸಿ ಕಳಿಸುವೆನು (ಕಗದ್ಯ. II. ೬). **ಮೊಹರಿ$_2$** : ೧. ತಿಂಗಳ ಬಡ್ಡಿ ಎಂಬುದಾಗಿ ಹದಿನೈದುರೂಪಾಯಿ ಮೊಹರಿಯನ್ನು ಕೊಟ್ಟು (ಕಥಾಮಂ. IV. ೪); ವಾಗೀಶಗವರು ಕೊಡುವ ಮೊಹರೀ ಚಿಟ್ಟೆಯಿಲ್ಲದೇ ಮಾರುತ್ತದೆ (ಕುರಾಅ. ೦೬೨). **ಮೊಹರೆ** : ೧. ಸಹಸ್ರಚಿನ್ನದ ಮೊಹರೆಗಳನ್ನು ಕೊಡುವುದಾಗಿ ಡಂಗೂರ ಹೊಡೆಸಿದನು (ಶ್ರೀರಾಘು. ೦೩೨). **ಮೋಹರ$_2$** : ೧. ಹನ್ನೆರಡುಲಕ್ಷ ಮೋಹರವನ್ನು ಭದ್ರಭಟಾದಿಸೇನಾನಾಯಕರಿಗೆ ಕೊಡುವಂತೆ . ... ಹುಂಡೀಕಾಗದಮಂ ಬರೆಸಿ (ಮುದ್ರಾಮಂ. ೨೯೦). ೨. ಸಿದ್ಧಾರ್ಥಕನು ಆ ಕಾಗದದಲ್ಲಿ ಒತ್ತಿರುವ ಮೋಹರದ ಪ್ರಕಾರ ಸುವರ್ಣದಿಂ ಮುದ್ರೆಯು ಮಾಡಿಸಿ (ಮುದ್ರಾಮಂ. ೨೯೩). **ಮೋಹರಿ$_2$** : ೧. ಬೊಕ್ಕಸಗಳು ಹಣಗಳು ವರಹಗಳು ಮೋಹರಿಗಳು ನವರತ್ನಗಳು (ಶಿವರ. ೦೦೩-೪).

**ಮೊಹರುಮಾಡು**, **ಮೋಹರುಮಾಡು** = ಲಕೋಟೆ, ಭರಣಿ, ಬಾಗಿಲು ಮುಂತಾದುವನ್ನು ತೆರೆದು ನೋಡದಂತೆ ಅರಗು ಅಂಟಿಸಿ ಅವರ ಮೇಲೆ ಮುದ್ರಿಕೆಯನ್ನು ಒತ್ತು : ಬರೆದಂಥ ಕಾಗದವ ಮೊಹರುಮಾಡ್ಯಾರೆ (ಜಾಪದ. ೦೬೬) ; ಬರೆದು ಮೊಹರುಮಾಡಿ ಕುಮುದಿಸಿಯ ಕೈಲಿ ಕೊಟ್ಟುಹೋಗುತ್ತೇನೆ (ಬಂಕಿಮ. ೦೨೨); ಈ ಮುಂಜೂಷಮಂ ಮೋಹರುಮಾಡು (ಮುದ್ರಾಮಂ. ೩೦೬).

[← ಪಾರ. ಮುಹರ್; ಹಿಂ. ಮೋಹರ್ ; ಮರಾ. ಮೋಹರ್, ಮೋಹೋರ್]

**ಮೊಹರೆ** 'ಮೊಹರು' ನೋ.

**ಮೊಹರೆಯಕೊಳ** (ನಾ). ಒಂದು ಕೊಳದ ಹೆಸರು : ಉತ್ತರಸ್ಯಸ್ಮಿರಿ ರಜಪಸ್ತ ಅನ್ತೆ ಬನ್ದು ಮೊಹರೆಯಕೊಳ (ಎಕ. XVI. ತಿಪಟೂ. ೦೪೦-೬೦ ; 900). [ಮೊಹರೆ$_?$ + ಕೊಳ$_2$]

**ಮೊಹರ್ಚು** 'ಮೋರ್ಚೆ' ನೋ.

**ಮೊಹರ್ಚೆ** 'ಮೋರ್ಚೆ' ನೋ.

**ಮೊಹಲ್ಲ** 'ಮೊಹಲ್ಲಾ' ನೋ.

**ಮೊಹಲ್ಲಾ**, ಮೊಹಲ್ಲ, ಮೊಹಲ್ಲೆ (ನಾ). ಊರಿನ ಒಂದು ಭಾಗ : ಬಡಾವಣೆ ; ಹರಹು : ಪಟ್ಟಣವನ್ನು ಮೊಹಲ್ಲಾಗಳಾಗಿ ಭಾಗಮಾಡಿ . . . ಅಧಿಕಾರಿಯನ್ನು ನೇಮಿಸಿದ್ದರು (ಇತಾಸಂಗ. ೪೦); ನರಸಿಂಹರಾಯ ಠೋರಿಯನೂ ಕೂಡ ದಾಕ್ಷಿಣೀಯರ ಮೊಹಲ್ಲಾದಲ್ಲಿ ಒಂದು ಆಖಾಡವನ್ನು ತೆರೆದನು (ಧೂರಾಚ. ೧೬೦). **ಮೊಹಲ್ಲ** : ಒಂದೊಂದು ಜಾತಿಗೂ ಪ್ರತ್ಯೇಕ ಅಗ್ರಹಾರಗಳೂ ಮೊಹಲ್ಲಗಳೂ ಏರ್ಪಟ್ಟಿರುವುದನ್ನು ಇಂದಿಗೂ ನೋಡಬಹುದು (ಶಿಕ್ಷವ. ೬೨). **ಮೊಹಲ್ಲೆ** : ನಮ್ಮ ಮೊಹಲ್ಲೆಯಲ್ಲಿ ಒಂದು ಕಡೆ ಇವತ್ತು ಆಟವಾಡುತ್ತಾರೆ ಎಂತ ಕೇಳಿದೆ (ಕಮಳ. ೦೬೦).

[←ಅರ. ಮಹಲ್ಲಾ: ಹಿಂ. ಮುಹಲ್ಲಾ: ಮರಾ. ಮೊಹಲ್ಲಾ]

**ಮೊಹಲ್ಲೆ** 'ಮೊಹಲ್ಲಾ' ನೋ.

**ಮೊಹಸಲೆ**, ಮೋಹಸಲೆ (ನಾ). ಒಬ್ಬ ವ್ಯಕ್ತಿಯು ತಪ್ಪಿಸಿಕೊಂಡು ಹೋಗದಂತೆ ಹಾಕುವ ನಿರ್ಬಂಧ ಅಥವಾ ಒಬ್ಬ ವ್ಯಕ್ತಿಯು ಕೊಡಬೇಕಾದ ಹಣದ ವಸೂಲಿಗಾಗಿ ಅವನ ಮೇಲೆ ವಿಧಿಸಲಾಗುವ ನಿರ್ಬಂಧ : (೬). **ಮೋಹಸಲೆ** : ಸಾಗುವಳಿ ಸಹ ಮಾಡತಕ್ಕದ್ದಕ್ಕೆ ಶೇಕದಾರ ಗೌಡ ಶ್ಯಾನುಭಾಗರಿಗೆ ಸಹ ಮೋಹಸಲೆ ಮಾಡಿ (ಮಹಾಮಂ. II. ೬೪). 'ಮಹಸೂಲು' ಪರಾ.

[ ← ಅರ. ಮುಹಸ್ಸಿಲ್ = ಕಂದಾಯ ವಸೂಲುಮಾಡುವವನು ; ಹಿಂ. ಮುಹಸಿಲ್ = ಕಂದಾಯ ವಸೂಲುಮಾಡುವವನು]

**ಮೊಹಿಮ್ಮು**, ಮೋಹಿಂ, ಮೋಹಿಮು, ಮೋಹೀಮ್ (ನಾ). ದಾಳಿ : ಮುತ್ತಿಗೆ ; ಆಕ್ರಮಣ : ತರುವಾಯೂ ಯಿಾ ಮೊಹಿಮ್ಮು ಮೂರುವರುಷ ಪಟ್ಣದ ಖಜಾನೆಹಣವೆಲ್ಲಾ ವೆಚ್ಚವಾಗಿ (ಹೈದರ. ೩೩). **ಮೋಹಿಂ** : ಹನುಮಂತರಾವ್‌ರಣಸವರೆ ಎಂಬ ಒಬ್ಬ ಸವಾರನು . . . ಅನೇಕ ಮೋಹಿಂಗಳ ಸಂಗಡ ಹೋಗಿ ಒಂದೊಂದರಲ್ಲಿಯೂ ಖಾಡಾಖಾಡಿ ಲಡಾಯಿ ಮಾಡಿ . . . ತುಕಡಿದಾರ ಪದವಿಗೆ ಬಂದಿದ್ದನು (ಮುಸುಗ. ೦೩); ಈ ಜನರು ಈ ಬಗೆಯಾದ ಮೋಹಿಂ ಹೊರಡುವುದಕ್ಕೆ ಕೆಲವು ದಿವಸ ಮುಂಚೆ ಇನ್ನೊಂದು ಕೆಲಸವನ್ನು ಮಾಡುತ್ತಿದ್ದರು (ವಡಮುರಾ. ೪೬). **ಮೋಹಿಮು** : ಮೂರುಮಂದಿ ಪಾದುಷಹರ ಸೈನ್ಯವೂ ಕರ್ನಾಟಕರಾಜ್ಯದ ಮೇಲೆ ಮೋಹಿಮು ಹೊರಡಲಿರುವ ಸಮಾಚಾರವನ್ನು . . . ಬರೆಸಿ ಕಳುಹಿಸಿದನು (ಬಖೈರು. ೬). **ಮೋಹೀಮ್** : ಜ್ಯೇಷ್ಠಮಾಸದಲ್ಲಿ ಮೋಹೀಮ್ ಹೊರಡುವ ವೇಳೆಯಲ್ಲಿ ಶ್ರೀರಂಗಪಟ್ಟಣದಲ್ಲಿ ಗಣನೆಮಾಡಿದ ಒಟ್ಟು ಫೌಜಿನ ಜನಗಳು ೨,೨೬,೦೦೦ ಕ್ಕೆ ವಿವರ (ಮಹಾಮಂ. I. ೨೨೬).

[← ಅರ. ಹಿಂ. ಮುಹಿಮ್; ಮರಾ. ಮೋಹಿಮ್. ಮೋಹೀಮ್]

**ಮೊಳ** 'ಮೊಟಿ' ನೋ.

**ಮೊಳಕಯ್** 'ಮೊಟಿಕೆಯ್' ನೋ.

**ಮೊಳಕಾಲ್** 'ಮೊಟಿಕಾಲ್' ನೋ.

**ಮೊಳಕಾಲು** 'ಮೊಟಿಕಾಲ್' ನೋ.

**ಮೊಳಕೆ** (ನಾ). ೧. ಬೀಜದಿಂದ ಹೊರಬರುವ ಗಿಡದ ಮೊದಲನೆಯ ಸುಳಿ ; ಅಂಕುರ : ಕುಡಿ : "ಮೊಳಕೆಯೆಸಲ್ಕಂಕುರ" (ಶಾರಶಿ. ೩೭) ; ಪಾಂಚಾಲಕನ ಭೀತಿಯ ಮೊಳಕೆಯುರಿದುದು (ಕುಮ್ಯಾಆ. ೦೬-೪) ;

ಮೊಳಕೆ ಮೂಡದ ಬೀಜ, ಜ್ವಾಲ ವಿಾರಿದ ತೇಜ (ಶರಟು. ೦೯೨-೦೦). ೨. (ಅಲಂ) ಪ್ರಾರಂಭ : ಕ್ರಾಂತಿಯ ಮೊಳಕೆಯು ತಲೆಯುರಲೇಬೇಕು (ಕಲಿತೋ. ೦೩-೯).

**ಮೊಳಕೆಕಟ್ಟಿದ ಕಾಳು** = ಹೆಸರು ಮುಂತಾದ ಕಾಳುಗಳನ್ನು ನೆನೆಸಿ, ನಂತರ ಬಟ್ಟೆಯಲ್ಲಿ ಕಟ್ಟಿ ಮೊಳಕೆ ಬರಿಸಿರುವ ಕಾಳು : ಮೊಳಕೆಕಟ್ಟಿದ ಕಾಳಿನಲ್ಲಿ ಮಾಡಿದ ಪದಾರ್ಥಗಳು ದೇಹಕ್ಕೆ ಪುಷ್ಟಿಕರ (ಕೂಂ).

[ಮೊಳೆ$_1$ + — ಕೆ./ ತುಳು. ಮೊಳಿಕೆ ; ತೆಲು. ಮೊಲಕ, ಮೊಳ್ಕ, ಮೊಕ್ಕ]

**ಮೊಳಕೆಗಾಣು** (ಕ್ರಿ). ಅಂಕುರಿಸು ; ಕುಡಿಯೊಡೆ : ಅಜ್ಜ ಬಿತ್ತಿದ ಬೀಜ ಮೊಳಕೆಗಂಡಿವೆ ಈಗ (ನಂವು. ೨೦-೦೩). [ಮೊಳಕೆ+ಕಾಣು (<ಕಾಣ್)]

**ಮೊಳಕ್ಕೆ** 'ಮೊಟಕೆಯಮ್' ನೋ.

**ಮೊಳಗಾಡು** (ಕ್ರಿ). ಧ್ವನಿಯು ಹೊಮ್ಮು : ದೇವಕುವರಂ ಮುರಳಿ ಬಹನೆಂಬ ಗೆಲುಮೆಯದ ದೇವವಮೂತರೆ ಬಾರಿಸುವರೊ ಮಂಗಲವಾದ್ಯವೆನಲು ಮುಂಬಕ್ಕಿಗಳ ಮೇಳವಂ ಮೊಳಗಾಡೆ (ಗೂರ್ಲ್ಮೊ ಥಾ. ೦-೯).

[ಮೊಳಗ್ಮು$_2$ (< ಮೊಬಗು$_2$) + ಆಡು$_1$]

**ಮೊಳಗಿಸು** 'ಮೊಬಗಿಸು' ನೋ.

**ಮೊಳಗು$_1$** 'ಮೊಬಗು$_1$' ನೋ.

**ಮೊಳಗು$_2$** 'ಮೊಬಗು$_2$' ನೋ.

**ಮೊಳಗು$_3$** 'ಮೊಬಗು$_3$' ನೋ.

**ಮೊಳವು** (ನಾ). ಒಂದು ಬಗೆಯ ಬೆಲೆಬಾಳುವ ಹರಳು (?) : ಮಾರಿದಡಂ ಹೊಂಗೆ ಹಾಗ ಮೊಳವಿನ ಕಲ್ಲಿಗೆ ವೀಸಪೊಂದು ಉಪ್ಪಿನ ಹಡಗೆಗೆ ಪೊಂಸವುಪ್ಪ (ಕಶಾಇ. XV, ೨೦೦-೯೭ ; 1196). [?]

**ಮೊಳಸಂದು, ಮೊಣಸಂದು** (ನಾ). ಮೊಳಕ್ಕೆ : ಅಗಲವಾದ ಬೀಚು ಹಣೆಯ ಮನುಷ್ಯನೊಬ್ಬ ಮಂಡಿಯ ಮೇಲೆ ಮೊಳಸಂದೂರಿಕೊಂಡು ಕುಳಿತಿದ್ದನು (ಕುಪರು. ೨೫೦). **ಮೊಣಸಂದು :** ಎಡಗೈ ಮೇಲೆ ಬಲದೋಳ ಮೊಣಸಂದನ್ನೂರಿಕೊಂಡು, ಬಲಗೈ ಮೇಲೆ ಕೆನ್ನೆಯೊರಗಿಸಿ ಕೊಂಡು ಮುಂದುಕಿ ಅವನೆದುರಿಗೆ ನಿಂತುಕೊಂಡಳು (ಕುಪರು. ೨೬೩).

[ಮೊಳ (< ಮೊಟ) + ಸಂದು$_2$]

**ಮೊಳಸು$_1$** (ನಾ). ೧. ಮೊಳಕೆಯೊಡೆಯುವಿಕೆ; ಅಂಕುರಿಸುವಿಕೆ : (ಕ). ೨. ಗಂಟಲಿನಲ್ಲಿ ಏಳುವ, ಮುಳ್ಳಿನಂತೆ ಚೂಪಾಗಿರುವ ಗುಳ್ಳೆ : ಅಂತಕಗಾಯ್ತುಪಥ್ಯವು ಅರಗಲಾಜದೆ ಮೃತ್ಯುದೆಸೆಗೆ ಮೊಳಸುಗಳು ಪೊಳೆಯೆ . . . ಅಡಗುಬೋನದಿ ಮರುಳುಪಡೆಗಳು ಉಂದು ಪರಸಿದ ಪಂದು ರಾಘವನ (ಕೌತಿರಾ. ೨೨-೯೯). [ಮೊಳೆ$_1$ + — ಸು$_3$]

**ಮೊಳಸು$_2$** (ನಾ). ೧. ಒಂದು ಬಗೆಯ ವಾದ್ಯ (?) : ಪಟುವದ ತಿವಳಿಯ ಜಂಕದ ಮೊಳಸಿನ ಜೇಕಿರದ ಸಿವಿಜಿ ಸಿಪ್ಪಿನ ಲಯದಿಂದೆ ಬಲದೆ ಕುಣಿವರ್ ಕೆಲಬರ್ (ಅತಕ. ೩-೩೦). ೨. ಮಲ್ಲ ಯುದ್ಧದ ಒಂದು ಚಲನೆ (?) : ಮೇಲ್ಮುಳಿ ಮೊಳಸು [ಶಾತಾಂ. ಗು, ಹು]ಗಳ ಮಂಡಿಗಳ . . . ಜೊಬ್ಬೆಗಳೆಳೆಯೊಂವರಿವರಿಗೆ ಸಮಜೋಳಿ ಗಳದುರೆಂದ (ಕೃಪಾ.ಇ. ೨೦-೬). [?]

**ಮೊಳಿಯನೂರ್** (ನಾ). ಒಂದು ಸ್ಥಳದ ಹೆಸರು : ಮೊಳಿಯನೂರ ದೇವಯ್ಯನುಂ ಪಂಪಯ್ಯನುಂ . . . ಧರ್ಮ್ಮರಾಶಿಭಟ್ಟರರ ಕಾಲಂ ಕರ್ಚ್ಚಿ ಕೊಟ್ಟ ಸ್ಥಿತಿ ಯಾವುದೆನ್ದೊಡೆ (ಎಕ. XI, ಚಿತ್ರದು. ೭೭-೨೦ ; 937).

[ ? + ಊರ್]

**ಮೊಳೆ$_1$** (ಕ್ರಿ). ೧. ಚಿಗುರು ; ಕೊನರು ; ಅಂಕುರಿಸು : ಮೊಳೆ– ಪ್ರರೋಹಕ್ರಿಯಾಯಾಂ (ಅಂಕುರಿಸು), ಅಂಕುರೇ ಚ" (ಕಮಧಾ) ; ಪೊಸತೆ ಮೊಳೆತ ಧಾನ್ಯಂಗಳನಾ ಧರಣೀಶಂ ಕೆವಜಿಸಿದಂ (ಅಪು. ೦೩-೬) ; ಬೀಜವಿಲ್ಲದೆ ಮೊಳೆತ ಸಸಿಯನಾವಂ ಬಲ್ಲಂ (ಸಿದ್ಧರಾ. ೦-೯೭) ; ಹುರಿದು ಬಿತ್ತಿದ ಬೀಜ ಮೊಳೆವುದೆ (ಶರತ. ೨-೩೩). ೨. (ಉಗುರು. ಕೂದಲು ಮುಂತಾದುವು) ಮೂಡು; ಹುಟ್ಟು; ಕಾಣಿಸಿಕೊಳ್ಳು : ಪೊಳೆವಿಂದುಗಳ್ಗೆ ಬೆಂಗುಡೆ ಮೊಳೆದುವು ಬೆನ್ನಿಂದಮೆರ್ದೆಗೆ ಕದಿರ್ದುಟುಂಗಲ್ ತೊಳಗಿದುವು ಮದನಶಿಖಿವಿಹ್ವಳಹೃದಯವ್ಯಸ್ತಹಸ್ತನಖದೀಧಿತಿಗಳ್ (ಲಾದಂಪೂ. ೯೦೭); ಸತ್ಯಹರಿಶ್ಚಂದ್ರರಾಯನ ವಾಕ್ಯದೊಳು ಹುಸಿಗಳು ಮೊಳೆಯವು (ಹತಾ. ೨-೦೯); ಬೇಗದು ಮೊಳೆತುದು ಭೀಷ್ಮ ವಿದುರಾದಿಗಳ ಮನದಲಿ (ಕುಭಶ. ೦೮-೩೬); ಅವನಿಗೆ ಮೀಸೆ ಕೂಡ ಮೊಳೆತಿಲ್ಲ (ಅಂತೂ. ೨೦).

[ದೇ.II ತಮಿ. ಮುಳೈ; ಮಲ. ಮುಳ; ತುಳು. ಮುಳಿ, ಮುಳೆ, ಮೊಳಿ, ಮೊಳೆ; ತೆಲು. ಮೊಲಚು, ಮೊಲುಚು, ಮೊಳ್ಚು]

**ಮೊಳೆ$_2$** (ನಾ). ೧. ಕುಡಿ: ಮೊಳಕೆ : "ಅಗೆಯೆಂದುಂ ಮೊಳೆಯೆಂದುಂ ಅಂಕುರಂ" (ಕಶಾ. ೩೩-೦೯೩); ಶುದ್ಧಗರ್ಭಗೃಹದೊಳ್ ತೇಜೋನಿಲಯಂ ಬೆಳಗಿದನಚಿವಿನ ಬೆಳಗಿನ ಮೊಳೆ ಮೊಳೆತು ಬೆಳೆವುದೊಂದಚ್ಚರಿಯೆ! (ಅಂಪು. ೭-೩೩); ವಿರಕ್ತಿ ಬೀಡಾಗಿ ಭಕ್ತಿ ಮೊಳೆಯಾಗಿ . . . ನಿಮ್ಮ ಭಕ್ತನ ಮನೆ ಯಂಗಳ ವಾರಣಾಸಿಯಿಂದಧಿಕ ನೋಡಾ (ದುಹಾದೇ. ಬ. ೭೦-೦೭೩); ಬಿಲ್ಲಿನಿ ಮೊಳಗು ಕೆನ್ನೀರ್ಜಲ ಪೆಣ ಬಿತ್ತು ನೆಣ ಮೊಳೆಯಾಗೆ ರಣಭೂಮಿ. . . ಮೆಚಿದುದು (ಕುಂಠಕಾಂ. ೦೨-೬೩); ಬೆಳೆಯು ಗುಣ ಮೊಳೆಯಲ್ಲಿ ಕಾಣು ವುದು (ಮಾನಸಾ. ೩೯). ೨. ಮೂಲವ್ಯಾಧಿಯಲ್ಲಿ ಗುದಪ್ರದೇಶದಲ್ಲಿ ಮೊಳಕೆಯಾಕಾರದಲ್ಲಿ ಕಾಣಿಸಿಕೊಳ್ಳುವ ದುರ್ಮಾಂಸ : ಚಿತ್ರಕಮಂ ಗೋಜಲದೊಳ್ ಕುಡಿದಳೆಗೂಟುಣೆ ಕೆಲವು ದಿವಸಕ್ಕೆ ಕಿಡುಗುಮರುಸಿಯ ಮೊಳೆಗಳ್ (ರೋಕೋತ. ೯-೦೯೩); ಮೂಲವ್ಯಾಧಿಗೆ:—ಭೂಚಕ್ಕಗೆಡ್ಡೆ . . . ಹೊಗೆಯನ್ನು ಆಸನಕ್ಕೆ ಹಿಡಿದರೆ ಮೊಳೆ ಕರಗಿ ಹೋಗುವುದು (ವಿಮ್ಯ. ೦೭೭). ೩. ಮೊಡವೆ ಮೊದಲಾದ ಗುಳ್ಳೆಗಳ ತುದಿ : ಮೊಡವೆಯ ಮೊಳೆಯನೊತ್ತುತ ಶ್ವೇತಸೂಜಿಮರ್ದಜದ ಸೊಗದ ವಾಸಿ ಸುತ . . . ಪುಷ್ಟಿಣಿಯರೊಪ್ಪಿದರು (ಮೋಪತ. ೦೬-೩೨). ೪. (ಪಟ ಮುಂತಾದುವುಗಳನ್ನು ನೇತುಹಾಕಲು ಬಳಸುವ) ಒಂದು ತುದಿ ಅಗಲವಾಗಿಯೂ ಮತ್ತೊಂದು ತುದಿ ಚೂಪಾಗಿಯೂ ಇರುವ ಲೋಹದ ಉಪಕರಣ; ಆಣಿ : ನಡುಮರ್ಗೋಳೆಯಂ (ಸಪುಶ. ೦೨-೩೪); ಬೆಟ್ಟದ ಬೆಳ್ಳಿಯ ಮೊಳೆಗಳೆನಲು ತೊಳಗಿ ಬೆಳಗಿದುವು ತಾರೆಗಳ್ (ಚಗಂ. ೦೭-೯೯); ಮಿಳಿ ನೊಗನು ಕೀಲಚ್ಚು ಕೂಬರ ಬಳೆ ಮೊಳೆಯನಾರೈದು ಹರೆ ಯನು ಬಳಿದು ಹೂಡಿದರು (ಕೂರಂ. ೩-೭-೩). ೫. ಗಾಡಿಯ ಚಕ್ರಕ್ಕೆ ಸಿಕ್ಕಿಸುವ ಗೂಟ; ಕಡಾಣಿ : ಹರಿಯ ಗಾಲಿಯು ನಾಭಿ ಮೊಳೆಜಿಸ್ತರಿಯ ಚಾತುರ್ಮಾಸಗಳು. . . ವಿದ್ವತ್ಸರವು ವತ್ಸರವೆನಿಪ ಮೊಳೆಯಾಯ್ತು (ಕುಪ್ಪಾ. ೭-೭೩). ೬. ನಾಣ್ಯ ಮುಂತಾದ ಲೋಹವಸ್ತುಗಳ ಮೇಲೆ ಅಕ್ಷರಗಳನ್ನು ಕೊರೆಯುವ ಚೂಪಾದ ಸಾಧನ : ಪೃಥ್ವಿಯೊಳುದು ಕರ್ತಾರನ ಕಮ್ಮಟ ಅಚ್ಚಿನ ಮೊಳೆ ಬಾಣಸದ ಮನೆ (ಅವಂ. ೨೨೯-೦೦೦೩); ಚಿನ್ನಗೆಯ್ಮದ ಸಬಿರಂಗಳುಂ ಕೂಡಿ ಅಚ್ಚಿನ ಮೊಳೆಯಲ್ಲಿ ಕೊಟ್ಟ ದಳಕ್ಕೆ ವೀಸ ೨ ಕಾಣ ೨ (ಎಇ. XIV, ೨೭೩-೩೦; 1173). ೭. ಮುದ್ರಣ ಕಾರ್ಯದಲ್ಲಿ ಉಪಯೋಗಿಸುವ ಅಕ್ಷರಗಳ ಗುರುತಿರುವ ಸಾಧನ; ಟೈಪು : ಮುದ್ರಣಾಕ್ಷರಯೋಜಕನು ಮೊದಲು. . . ಅಕ್ಷರದ ಮೊಳೆಗಳು ಯಾವ ಯಾವ ಅಂಕಣಗಳಲ್ಲಿವೆ ಎಂಬುದನ್ನು ಮನದಟ್ಟು ಮಾಡಿಕೊಳ್ಳ ಬೇಕು (ಮುದ್ರಶ. ೨೩). ೮. (ಅಲಂ) ಅಭಿವ್ಯಕ್ತಿ; ತೋರಿಕೆ : ಕೊಡುಪಡಿದು ವರವಲ್ಲದಿದ್ದರೆ ನುಡಿಗೆ ಮೊಳೆ ಹೊಮ್ಮುವರೆ ನಿಮ್ಮಾಯ ತೊಡಕನೊಬುಂವವನಲ್ಲ (ಕುಪ್ಪಾದ್ರೋ. ೯. ೦-೯೦).

[< ಮೊಳೆ$_1$./ ತಮಿ. ಮುಳೈ; ಮಲ. ಮುಳ; ತುಳು. ಮುಳಿ, ಮೊಳಿ; ತೆಲು. ಮೊಲ, ಮೊಲಚ]

**ಮೊಳೆಗತ್ತಿ** (ನಾ). ಮೊಳೆಯಾಕಾರದ ಒಂದು ಬಗೆಯ ಖಡ್ಗ : ಮೊಳೆಗತ್ತಿ ಕೋಲ್ಗತ್ತಿ ಕೊಂಕಣ ಬಿಡೆಗತ್ತಿ ಸಳೆಗತ್ತಿ (ರೇವಾಂಕು. ೩-೨೦೦). [ಮೊಳೆ$_2$ + ಕತ್ತಿ]

**ಮೊಳೆಗದ** (ನಾ). ಲೋಹದ ಚೂಪುಗೂಟಗಳನ್ನು ಅಳವಡಿಸಿರುವ ಕದ ; ಗುಬ್ಬಿಕದ : ಕಾರ್ಯಕುಶಲದಿಂ ಕೋಟೆ ಕೊತ್ತಳ . . . ದಿಡ್ಡಿ ಮೊಳೆಗದಂಗಳ್ನಿರ್ಮಿತಮಾಗಲೊಡನೆ (ಹಾಲಾಸ್ಯ. ೧-೪-೬೫ ವ). [ಮೊಳೆ$_2$ + ಕದ (< ಕದವು$_1$)]

**ಮೊಳೆಗಱಿಕೆ** (ನಾ). ಆಗ ತಾನೆ ಮೂಡುತ್ತಿರುವ ಹುಲ್ಲು ; ಎಳೆ ಕರಿಕೆ : ಸುಳಿವಾಳೆಲೆಯ ಬಣ್ಣ ಮೊಳೆಗಱಿಕೆವಣ್ಣ ಪೊಂಬಣ್ಣ ಮೆಯ್ಯಬಲೆಯರ್ ಸುಳಿಯೆ (ತಬಕು. ೩೭-೪೭). [ಮೊಳೆ$_2$ + ಕಱಿಕೆ$_1$ (< ಕಱುಂಕೆ)]

**ಮೊಳೆಗಾಣಿಸು** (ಕ್ರಿ). (ಅಲಂ) ವ್ಯಕ್ತಪಡಿಸು ; ಪ್ರಕಟಿಸು : ಕೆಳದಿಯರ ನುಡಿಗೆ ನಸುನಗುತ ನಿಜಭಾವಮಂ ಮೊಳೆಗಾಣಿಸದೆ ಪುಸಿಗೆ ಸರಸವಾಡುತೆ . . . ತಿರುಗಿದಳ್ಬನದಿಂದೆ ಮನೆಗೆ ಚಂಪಕಮಾಲಿನಿ (ಕೃಮಿಚಾ. ೩೦-೩೨). [ಮೊಳೆ$_2$ + ಕಾಣಿಸು]

**ಮೊಳೆಗೊಂಬು** (ನಾ). ಆಗ ತಾನೆ ಹೊಮ್ಮಿದ ಕೊಂಬೆ ; ಎಳೆಯ ರೆಂಬೆ : ಸುರಕುಜದ ಮೊಳೆಗೊಂಬುಗಳಿಗೆ ಚಿಂತಾರತ್ನಪರಿಖಚಿತವಾದ ಮಿಸುನಿಯ ಕಟ್ಟನಿಡುವೊಂದು ಪರಿಯಿಂದ ರಂಗುವಡೆದಿರ್ದ ಮಾಣಿಕ ದುಂಗುರಂಗಳಂ ಬೆರಲೊಳಿಟ್ಟು (ಗಾಂಜಕು. ೪-೨೪). [ಮೊಳೆ$_1$ + ಕೊಂಬು$_1$]

**ಮೊಳೆಗೊಳ್ಳು** (ಕ್ರಿ). ನಿಮಿರು ; ನೆಟ್ಟಗಾಗು : ಮೋಹದಿನಿಯರ ಮೆಯ್ಯ ಸೋಂಕಿನಿಂ ಮೊಳೆಗೊಂಡ ಪುಳಕಾಳಿ (ಮಲ್ಲಾ೦. ೪-೧೨). [ಮೊಳೆ$_2$ + ಕೊಳ್ಳು$_1$ (< ಕೊಳ್$_1$)]

**ಮೊಳೆಗೋಲು** (ನಾ). ಚಾವಟಿ ; ಸೆಳೆಗೋಲು (?) : ಮಣಿರಥಂಗಳನು ಶೃಂಗರಿಸಿ ದಿವ್ಯಾಶ್ವಂಗಳನು ಪೂಡಿ ಮೊಳೆಗೋಲನಾಂತು ವಾಗೆಯ ಪಿಡಿದು (ಪಪಮೋ. ೩೦-೬). [ಮೊಳೆ$_2$ + ಕೋಲು$_1$ (< ಕೋಲ್$_1$)]

**ಮೊಳೆಜವ್ವನ** (ನಾ). ಅಂಕುರಿಸುತ್ತಿರುವ ಪ್ರಾಯ ; ಎಳೆಪ್ರಾಯ : ಗೊಜ್ಜಿಗೆಗೆಳಜವ್ವನಂ, ಮಲ್ಲಿಗೆಗೆ ಮೊಳೆಜವ್ವನಂ, ಸುರಯಿಗೆ ನೆರೆಜವ್ವನಂ . . . ಒದವಿತ್ತು (ರಾಶಾಶ್. ೧೧೪-೮೯). [ಮೊಳೆ$_1$ + ಜವ್ವನ]

**ಮೊಳೆದೊಡಕು** (ನಾ). ಒಂದು ಬಗೆಯ ಬಾಣ : ಒಳಿಕು ಕವಲಂಬು ಬೋಳೆವಿದಿರೆಲೆ ಮಿಟ್ಟೆಯಾ ಮೊಳೆದೊಡಕು ನಾರಾಚ ಕಣೆಗೆಲೆತೆ ಸಿಲುಕುಬಳೆ . . . ಸವಿವಾಯುನೆಂಬ ನಾನಾಸರಳನು ಸೆಳೆದು (ಕೋಮಕ. ೫-೨೭). [ ? ]

**ಮೊಳೆದೋರು** ' ಮೊಳೆದೋಱು' ನೋ.

**ಮೊಳೆದೋಱಿಸು** (ಕ್ರಿ). (ಅಲಂ) ವ್ಯಕ್ತಪಡಿಸು ; ತೋರಿಸು : ಮುನ್ನೊಂದು ಹಳೆಯಾನೆಯ ಮೆಟ್ಟಿ ಸೀಳಿ ತೊಳೆಯದೆ ತೊವಲು ವಸ್ತ್ರವನುಟ್ಟು ಧೈರ್ಯವ ಮೊಳೆದೋಱಿಸು (ಮೋಹತ. ೩೪-೩೦). [ಮೊಳೆದೋಱು + — ಇಸು$_3$]

**ಮೊಳೆದೋಱು, ಮೊಳೆದೋರು** (ಕ್ರಿ). ೧. ಮೊಳಕೆಯೊಡೆ ; ಅಂಕುರಿಸು : ಸಂಗದಿಂದಲ್ಲದೆ ಬೀಜ ಮೊಳೆದೋಱದು (ಮಹಾದೇ. ೨. ೭೪-೧೭೨) ; ಮೊಳೆದೋಱಿ ಮುಗ್ಗದ ಮುನ್ನ . . . ಬಳಸುವುದಖಿಳವಸ್ತುವನು (ಹರಿಶ. ೬-೧೫). ೨. ಕಾಣಿಸಿಕೊಳ್ಳು ; ಮೂಡು ; ತೋರು : ಆದಿ ಅನಾದಿ ಇಲ್ಲದಂದು ನಾದ ಬಿಂದು ಕಳೆ ಮೊಳೆದೋಱದಂದು . . . ಸೌರಾಷ್ಟ್ರಸೋಮೇಶ್ವರಲಿಂಗವದೆ ಕಂಡಾ (ಆದಯ. ೧-೨) ; ಮೊಳೆದೋಱುತ ಪುಟ್ಟುತಿಹೆಳೆಮೀಸೆಗಳ ಕಟ್ಟೆಚಿಕದ ಚೆಲುವನ ಕಂಡು ಮೈ ಜುಮ್ಮು ದಟ್ಟಿತು (ಕಂಸಬಿ. ೯-೧೧೫). **ಮೊಳೆದೋರು** : ೨. ಹೊಸಗನಸನು ಮೊಳೆದೋರುತ್ತ ಪಾವನಪವನನು ಬರುತಿಹನು (ಶಾಂತಾ. ೨೩-೧೮). [ಮೊಳೆ$_2$ + ತೋಱು]

**ಮೊಳೆನಗೆ** (ನಾ). ಮುಗುಳುನಗೆ ; ಮಂದಹಾಸ : ಮೊಳೆನಗೆಯಿಂದ ಹರಸಿದಳಪನಿಜೇಶ್ವರನ (ಕೂರಚಾ. ೨-೩-೪೫) : ಸಖಿ . . . ಮೊಳೆನಗೆ ಮಿನುಗೆ ಹಾಸ್ಯವ ನುಡಿದಾಕೆಯ ತಲೆಗುತ್ತಿಸಿದಳು (ಕಂಸಬಿ. ೭-೧೭೦) ; ಕುಡಿನೋಟ ಬೀರುತ ಮೊಳೆನಗೆ ತೋರುತ ಬಳಿನಿಂದು ಮನಸೆಳೆವವಳು (ಇಂಚಾಕ. ೧೭೮-೨೭). [ಮೊಳೆ$_1$ + ನಗೆ]

**ಮೊಳೆನುಡಿ** (ನಾ). ಚಮತ್ಕಾರದ ಮಾತು ; ಹದಿರು : ಸ್ಮೇರಾಸ್ಯಂ ಮೊಳೆನುಡಿ ಗತಸಾರಂಭಂ ಸುರತಸಂಭ್ರಮಂ ಜಾರೆಯರಾ (ಗಿರ್ಕ. ೪-೯೪). [ಮೊಳೆ$_1$ + ನುಡಿ$_2$]

**ಮೊಳೆಮೊಲೆ** (ನಾ). ಆಗ ತಾನೆ ಮೂಡುತ್ತಿರುವ ಸ್ತನ : ಮೊಳೆಮೊಲೆಯರು . . . ಸಳಿಸಮೊಗ್ಗೆಯ ಮೊಲೆಯವರು (ಅಂಜಕ. ೩-೧೧೨) ; ಮೊಳೆಮೊಲೆಯೊಳೆಸೆವ ಸಸಿವದನದೊಳ್ . . . ಒಪ್ಪಿರ್ದರೆಳವೆಣ್ಗಳ್ (ಕೃಮಿಚಾ. ೭-೨೭). [ಮೊಳೆ$_1$ + ಮೊಲೆ$_1$]

**ಮೊಳೆಯಲ್ಲ** (ನಾ). ಎಳೆಯ ಶುಂಠಿ : ಮೊಳೆಯಲ್ಲಮನುಪ್ಪಿನೊಳಂ ಪುಳಿಯೊಳಮಲೆದಿಟ್ಟು (ಲೋಕೋಪ. ೮-೧೮) ; ಬೆಟಸು ಮಾಗುಳವೇರ್ಮೊಳೆಯಲ್ಲವೇಲೆ . . . ಆದಿಪಮಾಮುಪ್ಪಿನ ಕಾಯ್ಗಳಂ ಮಗಮಗಿಪ್ಪುವನಿಕ್ಕಿದ ಸಬ್ಬಪತ್ರದೊಳ್ (ಲೀಲಾವ. ೫-೭೩). [ಮೊಳೆ$_2$ + ಅಲ್ಲ$_1$]

**ಮೊಳೆಯಿಸು, ಮೊಳೆಸು** (ಕ್ರಿ). ೧. ಕುಡಿಯಿಡುವಂತೆ ಮಾಡು ; ಅಂಕುರಿಸುವಂತೆ ಮಾಡು. ೨. ಉಂಟುಮಾಡು ; ಹುಟ್ಟಿಸು : ಆಲೋಚನೆಯೊಂದನ್ನು ಮೊಳೆಯಿಸಿದನು (ಕಬಿಕ. ೪೭). **ಮೊಳೆಸು** : ೧. ಕ್ಲೇಶಬೀಜವ ಬಿತ್ತಿ ಮೊಳೆಸಿದ ಘಾಸಿಯಾಗದ ಕಪಿಗಳಿಲ್ಲವನಿಪನ ಪಡೆಯೊಳಗೆ (ಕಾಶಿರಾ. ೨೮-೭೨) ; ನೀರು ಬಿದ್ದು ಹದವಾದ ನೆಲವು ತನ್ನಲ್ಲಿ ಬಿದ್ದ ಬೀಜವನ್ನು ಮೊಳೆಸುವಂತೆ ಕರ್ಮವು ಮನುಷ್ಯನ ಪುನರ್ಜನ್ಮವು ಮೊಳೆಯುವಂತೆ ಮಾಡುತ್ತದೆ (ಪತಭಾ. ೩೫೨). [ಮೊಳೆ$_1$ + — ಇಸು$_3$]

**ಮೊಳೆರೋಗ** (ನಾ). ಗುದಪ್ರದೇಶದಲ್ಲಿ ಮೊಳಕೆಯಾಕಾರದ ದುರ್ಮಾಂಸ ಬೆಳೆಯುವ ರೋಗ ; ಮೂಲವ್ಯಾಧಿ : ಮೂಲವ್ಯಾಧಿ_ಮೊಳೆರೋಗ_ಇದರಲ್ಲಿ ಎರಡು ವಿಧಗಳುಂಟು (ಬಶಿ. ೪೦). [ಮೊಳೆ$_2$ + ರೋಗ]

**ಮೊಳೆವಣೆ** (ನಾ). ಆನೆಯ ಹಣೆಗೆ ತೊಡಿಸುವ ಒಂದು ಬಗೆಯ ಅಲಂಕಾರಸಾಧನ : ಅರೆಗಟ್ಟಿಗೆ ಮೊಳೆವಣೆ ಕೂರಂಕುಶ ಸೇರಿ ಬಾಜಿಸುವ ಡೌಡೆಗಳ ಕೂರಾನೆಗಳನೇಱಿ ಮಾವಟಿಗರು ಬಂದರು (ಕುಂಚಾಂ. ೧೧-೨೭). [ಮೊಳೆ$_2$ + ಪಣೆ$_1$]

**ಮೊಳೆವರೆಯ** (ನಾ). = ಮೊಳೆಜವ್ವನ : ನನ್ನ ಮಗಳಿಗೆ ಮೊಳೆವರೆಯದಲಿ ವಿಧವತೆಯನಿತ್ತವನು ಭೂಮಿಯಲಿ ಉಳಿಯಬಲ್ಲನೆ (ಶಾಳ್ವಭಾ. ೨೩-೧೮). [ಮೊಳೆ$_1$ + ಪರೆಯ$_2$ (< ಪರಯ)]

**ಮೊಳೆವಲ್, ಮೊಳೆವಲ್ಲು** (ನಾ). ಆಗ ತಾನೆ ಹುಟ್ಟುತ್ತಿರುವ ಹಲ್ಲು ; ಪನೆ : ಎಳೆಯನ ಪುಟ್ಟಬಾಯೊಳು ಮೆಲ್ಲಮೆಲ್ಲನೆ ಮೊಳೆವಲ್ಗಳೊಡೆದು ಮೂಡಿದವು (ಮೋಹತ. ೧೭-೭೦) ; ಮೊಳೆವಲ್ಲುಗುಱ ಜೊಲ್ಲು ದಟ್ಟಿತಡಿ ತೊದಲನುಡಿ (ಕೃಮಿಚಾ. ೨೮-೧೮) ; ಮೊಳೆವಲ್ ಶೋಭಿಸೆ ನಿರ್ನಿಮಿತ್ತಹಸಿತಂ ಚೆಲ್ವಾಗೆ (ಶಾಕುಂತ. ೧೧೫-೧೯೦). **ಮೊಳೆವಲ್ಲು** : ಜೀವಂಧರಂ . . . ಕೆಂಬಾಯ ಮೊಳೆವಲ್ಲು ಮಿನುಗೆ ನಗುವ ತೊದಲಿಂಬು ವಡೆಯಲೊಪ್ಪಿದನು (ಜೀವಂಸಾಂ. ೭-೪) ; ಚೆನ್ನಬಸವ . . . ಮೊಳೆವಲ್ಲು ಜೊಲ್ಲುಂ ಪೊಳೆಯೆ ನಸುನಗುತ್ತುಂ ಬಾಲಲೀಲೆಯಂ ತೋಱಿಸಿದನು (ತಬಕು. ೫-೪೦). [ಮೊಳೆ$_1$ + ಪಲ್]

**ಮೊಳೆವಲ್ಲು** ' ಮೊಳೆವಲ್ ' ನೋ.

**ಮೊಳೆವಿತ್ತು** (ನಾ). ಮೊಳಕೆಯೊಡೆದ ಬೀಜ : ಮೊನ್ನೆ ಬಿತ್ತಿರ್ದ ಮೊಳೆವಿತ್ತನೆತ್ತಿಯ ತಂದು ಪನ್ನಗಾಭರಣನ ಮಸಿವನಾಱಿಸುವುದು (ಇಳೆರ. ದೇ. ೫೩-೨೦). [ಮೊಳೆ$_1$ + ಬಿತ್ತು$_2$ (< ಬಿಱು)]

**ಮೊಳೆವುಲ್** (ನಾ). ಅದೇ ತಾನೇ ಚಿಗುರಿದ ಹುಲ್ಲು ; ಎಳೆಯ ಹುಲ್ಲು: ಮೊಳೆವುಲ್ಗಳಿನೀ ಧರಣೀವಿಭಾಗಮೊಪ್ಪಿರೆ (ಶಂಕಪ್ರಾ. ೭-೨೩) ; ಜಳದ ಗ್ರೀಷ್ಮಹಿಮಂಗಳಿಲ್ಲ ಮೊಳೆವುಲ್ಗಾಲ್ಯಂಗುಳಂಗಳ್ವರಂ ಬಳೆಗುಂ (ಶಾಂತಿಪು. ೬-೧೦೨) : ಮೃಗಸಂತತಿ ಗಹ್ವರದಿಂ ಪೊಱಮಟ್ಟು ಮೇಯುತಿವೆ ಮೊಳೆವುಲ್ಲಂ (ಗಿರಿಜಾ. ೯-೭೩). [ ಮೊಳೆ₁ + ಪುಲ್ ]

**ಮೊಳೆವೊಯ್** (ಕ್ರಿ). ಮೊಳಕೆಯಾಗು ; ಅಂಕುರಿಸು : ಮೊಳೆವೊಯ್ದು [ಪಾಠಾಂ. ಕೊನೆವಾಯ್ದು] ಕಂಗಳವಟ್ಟು ಬೆಳೆದೆಳೆಯ ದರ್ಭೆಯಂ ಕಂಡು (ಹರಿಶ. ೦೨-೮). [ ಮೊಳೆ₂ + ಪೊಯ್₂ ]

**ಮೊಳೆವೋಗು** (ಕ್ರಿ). ೧. ಚಿಗುರುಬಿಡು : ಕೊನರು ; ಕುಡಿಯಿಡು : ದಾಂಗುಡಿಯಿಟ್ಟುದಿಂಗಡಲ ಬೆಳ್ಪು ಕರಂ ಮೊಳೆವೋದುದಿಂದುಕಾಂತಂಗಳ ಬೆಳ್ಪು ಮೂಡಿದುದು ನೆಯ್ದಿಲ ಬೆಳ್ಪು (ಲೀಲಾವ. ೨-೨೦) ; ಕಂದಿದುವಂ ಮೊಳೆವೋದುದನೆಂದುಂ ಕಟ್ಟಲ್ಕೆವೇಡ ಪಾಷಾಣದಿಗಳಂ (ಅಕ್ಷರಾ. ೭-೩೮) ; ಮೊಳೆವೋದತ್ತಬ್ಜಕಂದಂ ಕೊಳದೊಳೆ (ರಾಜಶೇ. ೬-೨). ೨. ಮೂಡು : ಹುಟ್ಟು ; ಹೊಮ್ಮು : ಆ ದೇವಿಯ ಜಾತ್ರೆಗೆ ಮೊಳೆವೋದಳವೆಱ . . . ಕೈವೋದಸುಕೆ ಕೋಕಿಲಧ್ವನಿ ಮೂದಲೆಯುಲಿಯಾಗೆ ಬಂದುದಂದು ಬಸಂತಂ (ಯಶೋಧ. ೦-೩೬). [ ಮೊಳೆ₂ + ಪೋಗು₁ ( < ಪೋ₁ ) ]

**ಮೊಳೆಸು** 'ಮೊಳೆಯಿಸು' ನೋ.

**ಮೊಳೇಬ್ರೊದ್ರ್** (ನಾ). ಒಂದು ಊರಿನ ಹೆಸರು : ಶ್ರೀ × × ತ್ರೈವರ್ಮ್ಯನಡಿಗಳು × × ಮೊಳೇಬ್ರೊದ್ರ ಮಹಾ × × ನಕ್ಕೆ ಬಿಟ್ಟ ಸ್ಥಿತಿ (ಎಕ. IV (R), ಪಾವುರಾ. ೪೦೮-೩ ; ಸು. 9 ನೆಯ ಶತ). [ ? + ಊರ್]

**ಮೊಳ್ಗು** 'ಮೊಟ್ಟು₁' ನೋ.

**ಮೊಳ್ಳೆ** (ನಾ). ೧. ಉಬ್ಬಿಕೊಂಡುದು : ಹೀಗಲ್ಲದೆ ಮೊಳ್ಳೆಯಾಗಿ ದಪ್ಪನಾಗಿ ಕೀವು ರಕ್ತ ಉಳ್ಳದಾಗಿಯಿದ್ದರೆ ಅರಿಷ್ಟ (ಶಾಙ್ಗಂಧ. ೬೩೦-೦೯). ೨. ಉಬ್ಬಿದ ಹೊಕ್ಕುಳು,— ನಾಭಿ : (ಶ). [ ? ]

**ಮೊಱ**. ಮೊರ್ಱ, ಮಱ, ಮೊರ (ನಾ). (ಮುಖ್ಯವಾಗಿ) ಕಾಳನ್ನು ಕೇರಿ. ಕೊಚ್ಚಿ ಹಸನುಮಾಡಲು ಬಳಸುವ ಬಿದಿರಿನ ಸಾಧನ ; ಶೂರ್ಪ: ಮೂಱು ಮೊಱ [ಪಾಠಾಂ. ಕಂಚು] ತೀವಿದಮೋಧ್ಯಮಂ ಭಕ್ಷಣಂಗೆಯ್ದು (ಪಾವುಂಶ. ೦೩೬) ; ಮಱುಗೋಲೊಳ್ ಪಾಯ್ವಂತಿರೆ ತೊಱೆಯಂ ಮೊಱದಿಂದೆ ಪಾಮುಲೇಂ ಬಂದಪುದೇ (ನವುಶ. ೦೩-೩೦) ; ಮುತ್ತನೊಗು ವರೆ ಮೊಱನ ತೌಡಿಗೆ (ಕೌಶಿರಾ. ೨೩-೩೦). **ಮರ್ಱ** : ಭಂಗಾರಿಯು . . . ಜೋಳವನ್ನು ಮರದಲ್ಲಿ ಹಾಕಿಕೊಂಡು . . . ಬೀಸುತ್ತಿದ್ದಳು (ತಂತ್ರಶಾ. ೦). **ಮಱ** : ಸುರಿದು ನೆನೆಗಡಲೆಗಳ ರಾಶಿಯ ಮಱನ ಬಿಚ್ಚೋಲೆಗಳ ಬಣ್ಣದ ಹೊಸ್ನ ನೂಲುಗಳ ಗಿರಿಗಳೀ ಫಲವಾದುವಾಸುರ ಕರಿಯ ನೋಂಪಿಯ ದಾನಕೆ (ಸಂಶಶ. ೨೦-೨೦). **ಮೊರ** : ಜಾಣರಂಗೈಗೆ ಕೊಳಲಾದೆ ಸಿರಿಬಿದಿರೆ ಮುತ್ತು ಕೇರೋಕೆ ಮೊರನಾದೆ (ಹಳ್ಳಿಬಾ. ೦೪) ; ಇಲಿಗಳು . . . ಹತ್ತು ಇಪ್ಪತ್ತು ಮೊರಗಳ ತುಂಬ ಬೀಳಲು ಪ್ರಾರಂಭವಾಯಿತು (ಶಿವರಾ. ೦೯).

[ ದೇ.॥ ತಮಿ. ಮಲ. ಮುಱಮ್ : ಕೊಡ. ಮೊರ ; ತೆಲು. ಮೊರೀಟೆ ; ಕೋತ. ಮೊರ್ಮ್ ; ತೊದ. ಮುರ್ಮ್ ]

**ಮೊಱಕು₁** 'ಮುಱುಕು₁' ನೋ.

**ಮೊಱಕು₂** 'ಮುಱುಕು₂' ನೋ.

**ಮೊಱಗಿವಿ**. ಮೊರಗಿವಿ (ನಾ). ಮೊರದಂತೆ ಅಗಲವಾದ ಕಿವಿ : ಕವಿ ಮಧುರನ ಮಾತುಗಳೀಂ ಸವಿಯೋ . . . ತನ್ನಯ ಮೊಱಗಿವಿಯಿಂ ಮೊಗೆಮೊಗೆದು ಸುಮುಖನಾಸ್ವಾದಿಸುವಂ (ಕರ್ಣಪಾ. ೦-೭೪) ; ಕಾಂತೆಯರ ಮೊಗದಲಿ ಮಿಸೆ ಸುಂಡಿಲನು ಮೊಱಗಿವಿಯ ಪರ್ಮೊಲೆಯ ಬೆನ್ನಲಿ ಪಿರಚಿಸಲು ಗಂಡರು ಟಿಱಗುಗೊಳೆ (ಸಾಳ್ವಭಾ. ೩೦-೩೭). **ಮೊರಗಿವಿ** : ಮೊರಗಿವಿಗಳಂ ಬೀಸಿ, ಘೀಳಿಟ್ಟೊಡನೆ ಮುನ್ನುಗ್ಗಿ ಹೋರಾಡಲನುವಾದುದಾ ಹೋರಿಹೇರಾನೆ (ಶ್ರೀರಾಮಾ. ೪೩೮-೩೩೮). [ಮೊಱ + ಕಿವಿ₂]

**ಮೊಱಡಿ** 'ಮೊರಡು₂' ನೋ.

**ಮೊಱವು**, ಮೊರವು (ನಾ). ೧. ಸಮುದ್ರ ಮುಂತಾದುವುಗಳ ಅಬ್ಬರ,— ಮೊರೆತ : ಮೊಱವುದೋಱದೆ ತೆರೆಮಸಗದಿಳೆಗೆ ಕ್ಷೀರಶರಧಿಯ ಕವಿತಂದುದು (ಪಾಗಳು. ೩೦-೭೮). **ಮೊರವು** : ೨. ದೊಡ್ಡಧ್ವನಿ : ಆರ್ಭಟೆ : ಮೆರಸಿ ನಂದೀಧ್ವಜವ ಕರಡಿಯ ಮೊರವಿನೊಳಗೀ ಲಿಂಗವೀರರ ನೆರವಿನೊಳಗೆ (ಬಿಜ್ಜಪು. ೯೨-೩); ಮುಂದಡಿಯ ಬಿಟ್ಟು ಮೊರವಂ ಬಿಟ್ಟು ಮಧ್ಯದೊಳ್ನಿಂದಿರ್ಪ ಬಾಣಮಂ ಕಂಡು (ವಂಶಾರಾ. ೩-೦೭-೩೩).

[ಮೊಱೆ₁ + — ವು]

**ಮೊಱಹಾರ** (ನಾ). (?) : ಮೊ[ಪಾಠಾಂ. ತೊ]ಱಹಾರ ನೀಡಿದಡೆ ತೆಱಹಾರ ಕೈಕೊಳ್ಳುತ್ತೈದಾನೆ (ಬಸವ. ೪. ೩೩೮-೦೩೯೦). [ ? ]

**ಮೊಱಹು** 'ಮೊಱೆಪು' ನೋ.

**ಮೊಱಹುಗುಂದು** (ಕ್ರಿ). ಆರ್ಭಟವು ಕುಗ್ಗು : ಅಬ್ಬರವು ಕಡಮೆಯಾಗು : ಖಗಸೇನೆ ಮೊಱಹುಗುಂದಿದ ಕಡಲಂತೆ ಮೋನದೊಳು ಬಂದಿರದಿಳಿದುದು ಹಜಾರದೊಳು (ಪಾಗಳು. ೨೦-೮).

[ಮೊಱಹು (<ಮೊಱೆಪು) + ಕುಂದು₁]

**ಮೊಱುಕ** (ನಾ). ಒಂದು ಜನಾಂಗದ ಹೆಸರು ( ? ) : ಶ್ರೀಮಾಸೊಲಿಪಯ್ಯ ಪೃಥಿವೀರಾಜ್ಯಂಗೆಯ್ಯೆ ಬಲ್ಲದ ಪಱುವ ಮೊಱುಕರ್ಕೊಳೆ ಬೆಣ್ಣರ ಮಾಕ ಕಾದಿ ಇಕ್ಕಿಸಿ ಸತ್ತು ಸಗ್ಗಸ್ತನಾದಂ (ಎಕ. X (ಸ), ಮುಳಬಾ. ೩೦೭-೨; 950). [ ? ]

**ಮೊಱೆ₁**, ಮೊರೆ₂ (ಕ್ರಿ). ೧. ಸಮುದ್ರ, ಸಿಂಹ ಮೊದಲಾದುವು ಆರ್ಭಟಿಸು.— ಗರ್ಜಿಸು,—ಅಬ್ಬರಿಸು : ಬೇತಾಳಂಗಳ್ ಮೊಱೆದು ತೆಱೆದು ಬಾಯ್ಗಳನಾ ಪಾತಾಳಬಿಲಂಗಳವೋಲ್ . . . ಕುಣಿಯೆ ಭಯಮಯನಾದೇಂ (ಕಬರಾ. ೩-೦೯೪); ಆ ಗುಹೆಯನಾಂ ಪುಗಲೊಡನೊಂದು ರೂಪು ಮೊಱೆದು ಪರಿತಂದು ಮೇಲ್ವಾಯಲೊಡಂ (ಸಂಕಶಂ. ೨೮೪-೦): ಸಿಡಿಲು ಮೊಱೆದರೆ ಸರ್ಪನುಜುವುದಗುವನೆ ಗರುಡನು (ಕುವ್ಯಾದ್ರೌ. ೦೩-೬೬) ; ಈಶ್ವರಸಖನೂರ್ಗಂ ದಾಳಿಯನಿರದೆಯ್ದುವ ತೆಱಮೊಳಬ್ಧಿ ಮೊಱೆದಂದು ಪೆಂಪಿಂ (ಜಗನ್ನಾಥ. ೦-೩೯) ; ೨. ಬುಸ್ಸೆನ್ನು ; ಬುಸುಗುಡು : ಅದಂ ಹರಿವ ನೀರ್ ಮೊಱೆವ ಹಾವುರಿವ ಕಿಚ್ಚಿನ ಹೊರೆಯೊಳಿರಿಸಲು (ಭಾವತಂ. ೬-೦). ೩. ಸಂಕಟದಿಂದ ಕೂಗಿಕೊಳ್ಳು ; ಚೀರು ; ಆರ್ತನಾದಮಾಡು : ಅರಸ . . . ಮೊಗವಿಕ್ಕಿದತ್ತಲು ಮೊಱೆವ ಪೆಣನ ಮಯ (ಜೀವಂಧ. ೪-೯೪); ತೊರೆಯುತ ಮೊಱೆಯುತ ಸುರಿಯುತ ರಕ್ತವ ಕರಚರಣಗಳಾಡಿಸುತ ಅರಿಪೆಣಗಳು . . . ಒಪ್ಪಿದುವು (ಕಂಪವ. ೦೩ ೭೦): ಹುಲಿಯ ಬಾಯಲಿ ಸಿಕ್ಕ ಹುಲ್ಲೆಯಂದದಿ ಮೊಱೆವೆ (ಸರ್ವಜ್ಞ. ೦೦೩). ೪. ಕೆರಳು ; ವ್ಯಗ್ರವಾಗು : ಇಳಾಮಂಡಲದ ರಾಯರು . . . ಇವನೊಳಗೆ ಮಾತೇಕೆನುತ ಮಿಗೆ ಮೊಱೆದಿದ್ದರಲ್ಲಲ್ಲಿ (ಕೊರಾ. ೦-೦೩-೨೯). **ಮೊರೆ₂** : ೧. ಮೊರೆದು ನೊರೆಗರೆದು ಮಿರುಮಿರುಗಿ ಶಿಲೆಯಿಂ ಶಿಲೆಗೆ ಚಿಮ್ಮಿ ನೆಗೆಯುವ ತೊರೆಯ ಲೀಲೆಯ ಮನೋಹರತೆ (ಕಾವ್ಯಾಂಗ. ೨೯-೮೦೩). ೩. ತೆತ್ತ ಹಣ. ಸತ್ತ ಹೆಣ ಹೋಯ್ತೆಂದು ಮೊರೆಯದಿರು ! (ಬಾಂತಜ. ೩-೦೭). [ದೇ.॥ ತುಳು. ಮೊರೆಮುನಿ ; ತೆಲು. ಮೊಱುಗು. ಮೊಱುವು ; ಕೋತ. ಮುರ್ಗ್, ಮೊರ್ಗ್]

**ಮೊಱೆ₂**, ಮೊರೆ₄ (ನಾ). ೧. ಗೋಳಾಟ : ಆರ್ತಧ್ವನಿ ; ಹುಯ್ಯಲು : ಏಕೆನ್ನ ಮೊಱೆಯ ಕೇಳೆ ನೋಡೆಯೆನ್ನ ದುಃಖವ ಚನ್ನಮಲ್ಲಿಕಾರ್ಜುನಯ್ಯ (ಮಹಾದೇ. ವ. ೩೮-೮೦); ಮೊಱೆಯ ಬಾಯ್ಗಳ . . . ತರದ ಬೈಗಳ ೭ಳಕಳವ ಕೇಳದನು ಕಲಿಪಾರ್ಥ (ಸಂಶಶ. ೩೭-೨); ತರಳನ

ಮೊಱೆ ಕೇಳಿ ತ್ವರಿತದಿಂದಲಿ ಬಂದು ದುರುಳನ ಕರುಳ ತನ್ನ ಕೊರಳಲ್ಲಿ ಧರಿಸಿದ (ತುರಂಭ. ೩-೪-೦). ೨. ದೂರು ; ಅಹವಾಲು : ಮೊಱೆಯ ವಿಚಾರಿಸದೆ ಮುಖಮಜ್ಜನವ ಮಾಡದಿರು (ಕಂಕನಾ. ೦೩-೩). ೩. ರೀತಿ ; ಪರಿಪಾಟಿ ; ಕ್ರಮ : ತಾಂ ಜಾತಿಯೊಳ್ ಪರಪಪ್ಪುದಱಿಂ ಮೊಱೆಯಂ ಧರ್ಮಮುಮನಱಿಯದಾ ಮೂಢಂ (ಶುಕಸಂ. ೯೨-೦೩); ಮೊಱೆಯಱಿನೆಂಬವನೇನೆಂದಱಿಯೆಂ (ಧರ್ಮಾಮೃ. ೨-೦೩೩). ೪. ಕಟ್ಟುಪಾಡು; ಎಲ್ಲೆ; ಮಿತಿ : ಮೊಱೆಯಂ ಮಿಱುವ ಮಾತು . . . ಅಳುಂಬಂ ಕೂಟದೊಳ್ ಸಲ್ಲರಾ (ಚಂದ್ರಪು. ೬-೩೬) ; ಮೊಱೆಯನುಳಿದ ಮೆಲ್ನುಡಿ ಮೊನೆಮಸೆವಕ್ಕಱು . . . ಸೊಗಯಿಸಿದುವು ನವಸುರತಕ್ರೀಡೆಯೊಳಾ ದಂಪತಿಗೆ (ಜಯನೃ. ೬-೩೩). ೫. (ರಕ್ತಸಂಬಂಧ ಅಥವಾ ವಿವಾಹದಿಂದ ಉಂಟಾದ) ನಂಟಸ್ತಿಕೆ; ಸಂಬಂಧ; ವಾವೆ : ಇದನಾವ ನಾನುನ್ನದತ್ತಂಗೆಯ್ದಂ ಪೆಣ್ಣರ ಪಸುಪಾರ್ವರ ಊರಱಿವಿನ ಮೊಱೆಯಱಿದ ಕೃತಘ್ನ (ಶಾಇ. IX-ii, ೭೦೭-೭; ಸು. ೩ನೆಯ ೪೪ ?) ; ನಾಣ್ಗೆಡೆಗುಡದಿರ್ಪುದೊಂದು ನುಡಿಗಳ್ ಮೊಱೆಯಂ ಮಱೆಯಿಪ್ಪುದೊಂದು ಕಳ್ಗುಡಿದವರಂದಮಿಂತು ಸಿರಿ ಸ್ವಾರ್ತರೆ ಸಾರ್ವುದು (ಚಂಪಥಾ ೨-೯೯) ; ಕಡುನೀಱಿಯರು ಮುಂದೆ ನಿಲೆ ಮೊಱೆಧರ್ಮವ ಬಿಡುವರು ಮೋಹಿ ಜನಗಳು (ಕುಮಾರಾಂ. ೨೬-೯೦): ಆವ ಮನೆ ಆವ ಮೊಱೆ ಎನಗೆ (ಅಕ್ಕಕಾ. ೨೦-೪೩೨). ೬. ಒಳ್ಳೆಯ ನಡತೆ; ಶೀಲ : ಮೊಱೆಯಿಲ್ಲದಳಂಗುಲಿನಿಯಂ . . . ವಯೋಧಿಕೆಯುಮಾಗದು ಕೂಡಲ್ (ಮದನ. ೯-೩). ೭. (ರಕ್ತ ಸಂಬಂಧದಿಂದ ಅಥವಾ ವಿವಾಹದಿಂದಾದ) ನಂಟ; ಬಂಧು : ನೀನಲ್ಲದೆನಗುಱಿದ ಪುರುಷರ್ ಮೊಱೆಯಲ್ಲರ್ (ವಡ್ಡಾರಾ. ೦೭೩-೬); ಪನ್ನಗಭೂಷಣರಲ್ಲದ ಗಂಡರು ಇನ್ನೆನಗಾಗದ ಮೊಱೆ ನೋಡವ್ವಾ (ಬಸವ. ೩೦೪); ಮೊಱೆಯೆಂಬುದು ನಂಟರೊಳ್ (ಶಬ್ದಕಾ. ೨೩). **ಮೊಱೆ$_4$** : ೧. ಮಾನವನೆದೆಗೆ ಧೀರತೆಯ ಕಿಡಿಗರೆದು ಸಾಹಸಕ್ಕೆಳೆದೊಯ್ವ ಕರೆ ನಿನ್ನ ಮೊರೆ, ನಿರಂತರ ಚೇತನದ ಜಲಧಿ! (ಕಿನ್ನರಿಂಗ. ೬೩-೦೭೭೦) ; ಮೊರೆಯು ಕೇಳಿಸದು (ಪಾಂಚಜ. ೭೯-೬). ೨. ಬಡವನ ಮೊರೆ ಕೇಳಿಕೊಂಡು . . . ತಕ್ಕ ಉಪಾಯವನ್ನು ಹೇಳುವಿರೆಂದು ನಂಬಿದ್ದೇನೆ (ಮುಂಬಯಿ. ೪-೦೦೩); ಈಗಲಾದರೂ ನಮ್ಮ ಮೊರೆಯು ಕೇಳಿತೆ ? (ದೀಕ್ಷು. ೩೧). ೩. ಚಿಕ್ಕಮಾವಾಜಿಯವರ, ಮೊರೆಯ ಈ ನಮ್ಮ ತಮ್ಮಾಜಿಯವರನ್ನು – ನಮ್ಮನ್ನೂ ಏಕವಚನದ ಅತಿಪರಿಚಯದಿಂದ ಎಳೆದಾಡುತ್ತಿರುವುದರ ಅರ್ಥ . . . ನಿಳ್ಳುದುಬಿಲ್ಲ! (ಚಿಟ್ಟೆ. ೨೬-೦೯). ೭. ಮಲೆತ ಯವನರುರ್ಕು ಮುರಿಯೆ ತಾನೆ ಪೋದ ನಮ್ಮ ದೊರೆ, ಸಾಸಿರ ಸತ್ರುಪರ ಮೊರೆ (ತಾರಸಿ. ೦-೦೦).

**ಮೊಱೆ**ಮುಟ್ಟು=ರೀತಿ; ಕ್ರಮ : ಬಹುಶಾಸ್ತ್ರಪ್ರಜ್ಞನಪ್ಪ ಮಹಾಕವಿಯಂ ಕಂಡೊಡೆ ದಗ್ಧವಾಣಿಯನವನಿಂತಾರ್ಪ ಹಾಸ್ಯೋಕ್ತಿಯಿಂ ಕವಿಗಳ್ ಪರ್ತಿಪರಲ್ಲದಾವ ಮೊಱೆಮುಟ್ಟಿಂದಂತವರ್ ಪರ್ತಿಪರ್ (ಸೂಕ್ತಿಸು. ೦-೩೭). [<ಮೊಱೆ$_1$./ತಮಿ. ಮುಱೈ, ಮುಱೈಮೈ; ಮಲ. ಮುಱ, ಮುಱಮ ; **ತುಳು**. **ಕೊಡ**. ಮೊರೆ ; **ತೆಲು**. ಮೊಱ, ಮೊಱ್ಱ, ಮೊರ, ಮೊರ್ರ ; **ಕೋತ**. ಮೊಯ್ರ್; **ತೊದ**. ಮುಱ್ಯ ; **ಕೊಂಡ**. ಮುರ್]

**ಮೊಱೆ$_3$** 'ಮಱೆ$_2$' ನೋ.

**ಮೊಱೆಕಾಱ** (ನಾ). ಮೊರೆಯಿಡುವವನು : ಆರ್ತನಾದ ಮಾಡುವವನು : ಕರೆದು ತಂದರು ಕವಿದ ಗಾವಳಿಯ ಗಜಬಜದ ಮೊಱೆಕಾಱರಂ ಮೊಱೆಗೆ ಗುಱಿಯಾದ ಪಾತಕನನು (ಸಿರ್ಯಾ. ೬-೭).

[ಮೊಱೆ$_2$+ – ಕಾಱ]

**ಮೊಱೆಗಿಡಿಸು** (ಕ್ರಿ). ಸಂಬಂಧವನ್ನು ಕಡಿದುಹಾಕು; ವಾವೆ ತಪ್ಪಿಸು : ಮೊಱೆಗಿಡಿಸಿ ಕೂಡುವುದು ಕುಲದಱಿತವನೆಬ್ಬಿಟ್ಟಿ ನೆರಪುವುದು . . . ಕಾಮನ ಕೆಯ್ಮೆ (ಚಂತೀಕ್ಷೆ. ೬-೭೧).

[ಮೊಱೆಗಿಡು (< ಮೊಱೆಗೆಡು) + – ಇಸು$_3$]

**ಮೊಱೆಗಿಡು** 'ಮೊಱೆಗೆಡು' ನೋ.

**ಮೊಱೆಗೆಡು, ಮೊಱೆಗಿಡು** (ಕ್ರಿ). ೧. ಕ್ರಮತಪ್ಪು; ರೀತಿಗೆಡು : ತನಗಣಂ ನಾಣ್ ಮುನ್ನವಿಲ್ಲೆಂಬುದಂ ಮೊಱೆಗೆಟ್ಟುರ್ಚಿಪ ಲಿಂಗದಿಂ . . . ಅಱಿದು (ಕವಿತ. I, ೧೩ ಕ್ರೌರೋಕ್ತಸೂಡಾಮಣಿಸ್ತೋತ್ರ). ೨. ಕಟ್ಟುಪಾಡಿಲ್ಲದಿರು ; ಸ್ವೇಚ್ಛೆಯಿಂದ ಕೂಡಿರು: ಪೊಱಲವರೆಲ್ಲಂ . . . ನಿನ್ನ ಮೊಱೆಗೆಟ್ಟ ನಡವಳಿಯ[ನಾಕ್ಷೇಪಿಸೆ] (ಅರ್ಜವೀ. ೩-೭ ವ); **ಮೊಱೆಗೆಟ್ಟು** ಮಾತನಾಡುವರು ಮಿಡುವರು (ಮೋಹತ. ೦೬-೯೩). ೩. **ನೀತಿತಪ್ಪು**: ಶಿಷ್ಟಾಚಾರವಿಲ್ಲದಾಗು : ಎಮ್ಮ ತಂಗಿಯರೈವರು ಮೊಱೆಗೆಟ್ಟು **ಹೆಂಡಿರಾದರೆನಗೆ** (ಅವತಂ. ೨೦೦-೯೪೩) ; ಅತ್ತೆಯನಳಿಯ ಮದುವೆಯಾಗಿ **ಅವರಿಬ್ಬರ** ಸಂಗದಿಂದ ಹುಟ್ಟಿತ್ತೊಂದು ಮಗು ಮೊಱೆಗೆಟ್ಟು ತಂದೆ ಮಗಳ **ಮದುವೆ**ಯಾಗಿ ತ್ರಿಪುರದ ಮಧ್ಯದೊಳಗೆ ಕ್ರೀಗಳ ದೇಗುಲ ನಿಂದಿತ್ತು (ಸಕವ. ೪. III, ೦೯೦-೩೩೬). ೪. ನಡತೆಯ ಹಾಳಾಗು ; ಶೀಲವಿಲ್ಲದಿರು : **ಅರಸಿಯಂ** ಮೊಱೆಗೊ[ಗೆ]ಟ್ಟ ಪೆಣ್ಣಾವಗಮಿರವೆ . . . ಪೋಲಿಪರ್ (**ಶಾಕ್ಯಶಾ**. ೨೪-೦೩). **ಮೊಱೆಗಿಡು**: ೫. ಸಂಬಂಧವು ಕಡಿದುಹೋಗು : '**ಮೊಱೆ**ಗಿಡಿಸು' ಪರಾ. [ಮೊಱೆ$_2$ + ಕೆಡು$_1$]

**ಮೊಱೆಗೆಯ್** (ಕ್ರಿ). ಚೀರು : ಆರ್ತನಾದ ಮಾಡು : ತಬ್ಬಿಬ್ಬುಗೊಂಡು ಮೊಱೆಗೆಯ್ವರಿಂ ಸುಯ್ವರಿಂ . . . ಮೇಲಿದ್ಯೋತಮಾದುದು (ಚಂಪೃ. ೪೭-೨೦). [ಮೊಱೆ$_2$ + ಕೆಯ್$_1$]

**ಮೊಱೆಗೇಡಿ** (ನಾ). ಸಂಬಂಧವನ್ನು ಹಾಳುಮಾಡಿದವನು : ಮದನಾರಿಬಿರ್ದದ ನಾರಿ ಹರಿ ತಾ ಹೇರುರದ ತಂಗಿಯಱ ಚೊಮ್ಮನು **ಮಗಳ** ಮೊಱೆಗೇಡಿ (ಕುವ್ಯಾಕ. ೦೩-೩೭). [ಮೊಱೆ$_2$ + ಕೇಡಿ$_1$]

**ಮೊಱೆಗೇಳು**. ಮೊರೆಗೇಳು (ಕ್ರಿ). ಆರ್ತನಾದವನ್ನು **ಕೇಳು** ; ಗೋಳಾಟವನ್ನು ಆಲಿಸು : ಗಜರಾಜನ ಮೊಱೆಗೇಳಿ ನರಹರಿ . . . ಸಿರಿ ಸಹ ನಡೆತಂದ (ಕಂಪಟಿ. ೨೩-೩೦) ; ಮೊಱೆಯಿಸುವ್ವ ನಾಗಪತಿಶಯನ ರಕ್ಷಿಸೆ ಲೋಗರ ಮೊಱೆಗೇಳಲಿತ್ತಿಯುಭಯದ ಕರವಂ (ವಸ್ತುವಂ. ೩-೦೯). **ಮೊರೆಗೇಳು** : ಪುರಜನರಿಟ್ಟ ಮೊರೆಗೇಳದಲೆ ಗುಣಗಳನೊಟ್ಟಿ**ಗಿರಿಸಿದ** ರಾಘು ಗುಣವತಿಯಂಗಶೀಮೆಯಾಲಿ (ದಶ್ಕಕೃ. ೪-೩).

[ ಮೊಱೆ$_2$ + ಕೇಳು (< ಕೇಳ್) ]

**ಮೊಱೆಗೊಡು** (ಕ್ರಿ). = ಮೊಱೆಗೆಯ್ : ಹಾವಿಯ ಬೆಳ್ಳನ ಕಳ್ಳರು ತಾಕದಡ ಇನ್ನಾರಿಗೆ ಮೊಱೆಗೊಡುವ (ಸಕವ. ೪. II, ೨೯೩-೦೨).

[ಮೊಱೆ$_2$ + ಕೊಡು$_1$]

**ಮೊಱೆಗೊಳ್** (ಕ್ರಿ). ನೀತಿಮಾರ್ಗವನ್ನು ಹಿಡಿ : ಲಾವಣ್ಯಸಂಪನ್ನೆಯಪ್ಪ ಕನ್ನೆಯಂ ತನಗಾಟಿಸಿ ಬಂದೊಡಮೊಲ್ಲದೆ ಮೊಱೆಗೊಂಡು **ಕಱಿದ** (ಸುಳುವಣ. ೭-೨೭ ವ). [ಮೊಱೆ$_2$ + ಕೊಳ್$_1$]

**ಮೊಱೆದಪ್ಪು** (ಕ್ರಿ). ನೀತಿಗೆಡು : ವಾರಿಜನೇತ್ರೆಯರಿಗೆ ಮೊಱೆದಪ್ಪದ ವೀರರುಂಟೇ ಲೋಕದೊಳಗೆ (ಕುಮಾರಾಂ. ೨೭-೧೦೩). [ಮೊಱೆ$_2$ + **ತಪ್ಪು$_1$**]

**ಮೊಱೆಪಾರ್** (ಕ್ರಿ). ಆಶ್ರಯವನ್ನು ನಿರೀಕ್ಷಿಸು ; ರಕ್ಷಣೆಯನ್ನು ಬಯಸು : ನಾನ್, ಇನ್ನೇಕೆ ದೇವರನ್ ಮೊಱೆಪಾರಮೇಳ್ಕುಮೇ (ಅಂತಿಗೊ. ೪೦-೯೩೩). [ಮೊಱೆ$_3$ (< ಮಱೆ$_2$) + ಪಾರ್$_1$]

**ಮೊಱೆವು**, ಮೊಱಹು (ನಾ). ೧. ಸಮುದ್ರ, ನದಿ ಮುಂತಾದುವುಗಳ ಮೊರೆತ. — ಅಬ್ಬರ: ನರೆ ನೊರೆ ತೆರೆ ತೆರೆ ಮೊಱೆವು ಕೆಮ್ಮಾಗೆ ಜಜ್ಝರಿತ ಪಲ್ಗಳ ತಡಿವರನ ಜರೆ ನದಿ ಪರಿಯಲು (ಶರಣ. ೭-೩೬). **ಮೊಱಹು** : ೧. ಇಂತಪ್ಪ ಶರಧಿಯ ಸಂಭ್ರಮದ **ಮೊಱಹಿನಲ್ಲಿ ಶಂಭುವೇ** ನಿನ್ನನೊಡಗೂಡಿದೆನಯ್ಯ (ಸವಚ. ೦೯೨-೬೦೪). ೨. ದೊಡ್ಡಧ್ವನಿ :

ಆರ್ಭಟ : ಸುರಬಲದ ನಿಸ್ಸಾಳಕೋಟಿಯ ಮೊಱಹು ಮೊಳಗಿತು (ಕುಮಾ.ಶ. ೭-೦೯) ; ತಂಬಟದ ಮೊಱಹು ಕೋಟ್ಯಾಕೋಟಿ ಪೆಟಲಿರ್ಪು ದಶದಿಕ್ಕುಭರಿತದಿ ಘರ್ಮಿಸಲಾಯ್ತು (ಭರತ. ೪೦-೯) ; ಮೃಗಗಳ ಮೊಱಹು ಮುಸುಕಲು (ಉತ್ತ.ಶ. ೪೬-೩). ೩. (ಅಲಂ) ಸಿಟ್ಟು : "ಕೋಪ" (ಶಕುಂ. ೬ I, ೭೨) : ಸಿಡಿಲುಗಳ ಗರ್ಜನೆಯು ಗಗನವ ತುಡುಕುವಾಗುಳಿಕೆಗಳ ಮೊಱಹಿನ ಮಿಡುಕುಗಳ ನಾಯ್ ನೂಕಿದವು ಹಾಸದ ವಿಳಾಸದಲಿ (ಕುಮಾ.ಶ. ೦೩-೨೦). [ಮೊಱೆ$_1$ + — ಪು$_2$ . / ತಮಿ. ಮುಱುಪ್ಪು, ಮುಱೈಪ್ಪು : ತೆಲು. ಮುಱಿಪಮು, ಮುಱಿಪೆಮು]

**ಮೊಱೆಮುಗಿಲು** (ನಾ). ಗರ್ಜಿಸುವ ಮೇಘ ; ಗುಡುಗುವ ಮೋಡ : ಮೊಱೆಮುಗಿಲ ಮದವಂದದಲಿ ಮೊಳಗುವ ವಾದ್ಯರಘಸದಲಿ . . . ಮೋಹರ ತೆಗೆದುದೀಚೆಯಲಿ (ಕುಮಾ.ಶ. ೦-೭).

[ಮೊಱೆ$_1$ + ಮುಗಿಲು (< ಮುಗಿಲ್) ]

**ಮೊಱೆಯುಳಿ** (ಕ್ರಿ). ೧. ಕಟ್ಟುಪಾಡುಯಿಲ್ಲದಾಗಿಸು : ಧರ್ಮವನ್ನು ನಾಶಮಾಡು : ಮೊಱೆಯುಳಿವ ಮದ್ಯಪಾನಮುನಱಿಸೆಂದುಂ ಮಧುಪನೀಂಟೆ (ಪರ್ವಶೃ. ೦೦-೨೦). ೨. ನೀತಿಮಾರ್ಗವನ್ನು ಬಿಡು; ಶಿಷ್ಟಾಚಾರವಿಲ್ಲದಾಗು : ಅರಸಂ ತನ್ನ ಮಗಳಂ ತಾನೆ ಕೊಂಡು ಮೊಱೆಯುಳಿದಂ (ವಡ್ಡಾರಾ. ೦೦೮-೨೫). [ಮೊಱೆ$_2$ + ಉಳಿ$_1$]

**ಮೊಱೆಯಿಕ್ಕು** (ಕ್ರಿ). ಆರ್ತನಾದ ಮಾಡು : ಮೊಱೆಯಿಕ್ಕುತಿರ್ದನೋಹಿಲದೇವಂ (ಉದ್ಭಟ. ೧೨-೩೯). [ಮೊಱೆ$_2$ + ಇಕ್ಕು]

**ಮೊಱೆಯಿಡಿಸು** (ಕ್ರಿ). ಸಂಕಟದಿಂದ ಕೂಗಿಕೊಳ್ಳುವಂತೆ ಮಾಡು ; ಗೋಳುಗುಟ್ಟಿಸು : ಮೊಱೆಯಿಡಿಸಿತಿಂತಿವರನೆನ್ನ ಮಹಿಮೆಯ ಭಕ್ತಿ (ಹರಿಶ್ಚ. ದೇ. ೨೦-೦೬) ; ಓರಿದು ಮಾರ್ಜಲಗೂಡಿ ಬಂದು . . . ಮೊಱೆಯಿಡಿಸಿದ ವೈರಿಭಟರ (ಕಂಠವ. ೩-೫೭). [ಮೊಱೆಯಿಡು + — ಇಸು$_3$]

**ಮೊಱೆಯಿಡು**, ಮೊರೆಯಿಡು (ಕ್ರಿ). ೧. ಆರ್ತನಾದ ಮಾಡು ; ಗೋಳಾಡು; ಆಕ್ರಂದಿಸು : ರೌದ್ರಶರದ ದೋಣಿಗೆ ಕಯ್ಯಂ ನೀಡಿದಾಗಳ್ . . . ಸುರರ್ ಮೊಱೆಯಿಟ್ಟರ್ (ಕಂಠಶಾ. ೧೩-೦೯೨); ಉಱೆ ಕಾವ ಸೂರ್ಯರಶ್ಮಿಗೆ ಮೊಱೆಯಿಡಲೆಂದೆತ್ತಿ ಪಿಡಿದ ತೊವಲೆಂಬಿಸೆಗಂ ತುಱುಗಿರ್ದಾವರೆಗೊಂಬಂ ಮುಱೆದು ನೆಟಲಾಡಿಕೊಂಡು ನಡೆವರ್ ಪಥಿಕರ್ (ಜಗಂ. ೦೭-೭೦); ಅರಸಿಯರು ಸಚಿವರು ಕುಮಾರರು ಮೊಱೆಯಿಡಲು ಫಲುಗುಣನ ಬಡಿಸಿದ ಪರಿಯ . . . ಮಱೆಪರೆ (ಕುಮಾ.ಶ. ೯-೯); ದೂರದಿ ನಿಂತು ಮೊಱೆಯಿಟ್ಟು ಕೂಗಲು ಚೋರಗೆ ದಯವು ಪುಟ್ಟಿತೆ (ಪುರಂದ. ೦-೦೫೭-೦). ೨. ದೂರು ; ಅಹವಾಲು ಹೇಳು : ಕಳವಳಿಸಿದುದು ಮೊಱೆಯಿಟ್ಟು ದಧಿವನ ಮುಂದೆ ಭುವನಜನ (ಕುಮಾ.ಶ. ೭-೪೩). ೩. ಬೇಡಿಕೊಳ್ಳು ; ಪ್ರಾರ್ಥಿಸು : ಕಷ್ಟದಿರಿಮೆಂದು ಭಯದಿಂ ನಿಚ್ಚಂ ಮೊಱೆಯಿಟ್ಟು ಪುತ್ರನರ್ಚಿಸುತಿರೆಯುಂ (ಸವಶ. ೯-೬೦). **ಮೊರೆಯಿಡು** : ೧. ಪಟ್ಟಣದ ಬಾಗಿಲೊಳ್ ಕುಳಿತು ಮೊರೆಯಿಡುವ ಪರಿಯೇನು (ಸೌಗಂಧಿ. ೪೫೭-೦೩) ; ನೀನು ಅರಸಾಗಿ ನಮ್ಮನ್ನೂ ರಕ್ಷಿಸೆಂದು ಮೊರೆಯಿಟ್ಟರು (ಕೃವಾಣ. ೨೩೩) ; 'ಯಾಕೆ ಈ ದಾಸ್ಯ?' ಎಂದು ಒಮ್ಮೊಮ್ಮೆ ಹೃದಯ ಮೊರೆಯಿಡುತ್ತಿತ್ತು (ಕವುಶ. ೨೦೦). ೩. ದೇವರು ದಯಪಾಲಿಸುತ್ತಾನೆ, ಆದುದರಿಂದ ಅವನಿಗೆ ಮೊರೆಯಿಡು (ಕುಂಭಾಯ. ೯-೦೪೦). [ಮೊಱೆ$_2$ + ಇಡು$_1$]

**ಮೊಱೆಯೊಗು** ' ಮಱೆವೊಗು ' ನೋ.

**ಮೊಱೆಯೋಗು** ' ಮಱೆವೋಗು ' ನೋ.

**ಮೊಱೆವುಗು** ' ಮಱೆವೊಗು ' ನೋ.

**ಮೊಱೆವೆಱು** (ಕ್ರಿ). ತಕ್ಕುದಾಗಿರು ; ಹೊಂದಾಣಿಕೆಯಿಂದಿರು (?) : ಮೊಱೆವೆತ್ತ ಲಕ್ಷ್ಮೀವಾತುಗಳಷ್ಟುಗೆಯಿಂದೆ ನೆಱೆ ಮಾರ್ಥಿತೆಯನೆಯ್ದಿದರು (ಮೋಹತ. ೩೨-೦೬). [ಮೊಱೆ$_2$ + ಪೆಱು$_1$]

**ಮೊಱೆವೇಳ್** (ಕ್ರಿ). ಆರ್ತನಾದ ಮಾಡು ; ಮೊರೆಯಿಡು : ಮೊಱೆವೇಳ್ವ ದೂತರಂ ಗರ್ಜಿಸುತೆ . . . ಭರತಂ ನುಡಿದನು (ಕೃಪಾಣಾ. ೨೦-೬).

[ಮೊಱೆ$_2$ + ಪೇಳ್ (<ಪೇೞ್)]

**ಮೊಱೆವೇಱ್** (ಕ್ರಿ). ಸಹಾಯವನ್ನು ಕೇಳು; ಆಶ್ರಯವನ್ನು ಬೇಡು: ಮಹಾಪದ್ಮನೃಪನುಂ ಬಲಕ್ಷಾಮುಂ ಮಾಮುಂ ನಿಮಗೆ ಮೊಱೆವೇಱ್ದಟ್ಟಿದ [ನಿದ]ಿ (ಶುಕ್ರಕೃ. ೭-೬೦). [ಮೊಱೆ$_3$ (<ಮಱೆ$_2$) + ಪೇಱ್]

**ಮೊಱೆಸರ** (ನಾ). ಆರ್ತನಾದ; ಚೀರಾಟ : ಅಕ್ಕಟಕ್ಕಟದೇನೊ ಮೊಱೆಸರ ತಮ್ಮನೊಂದೊಕ್ಕಲೊಳಗೆ ಕೇಳಲಾಯ್ತು (ಪರ್ವಶ. ೬-೩೦).

[ಮೊಱೆ$_2$ + ಸರ$_1$]

**ಮೊಱೆಹೊಗು** ' ಮಱೆವೊಗು ' ನೋ.

**ಮೊಟ**, ಮೊಣ, ಮೊಳ (ನಾ). ೧. ಮೊಳಕೈಯಿಂದ ಹಸ್ತದ ತುದಿಯವರೆಗಿನ ಅಳತೆ ; ಎರಡು ಗೇಣು ; ಅರತ್ನಿ: "ಅರತ್ನಿನಾಮಂ ಸಕನಿಷ್ಠಕಂ ಮೊಟಂ" (ವಸ್ತುಕೋ. ೬೯-೦೪) ; ಏೞ ಧನು ಮೂಱು ಮೊಟನಿಂ ಪೇೞ ಷಡಂಗುಲಮೆ ಮೊದಲ ನಾರಕರೊಡಲುಂತೇೞುವರಂ ತದ್ವಿಗುಣಮೆ ಸೂೞೊಳ್ ನಾರಕರ ಕಠಿನದೇಹೋತ್ಸೇಧಂ (ಆದಿಪು. ೫-೯೨) ; ಮೊಟ ಮೂಱಳತೆಯ ತನುರುಚಿ ಕಂಪಿನ ಪೊಳಪಿನ ಕೌಮುದಿಯನೇಂ ಕಡಲ್ವಿಱೆಯಿಪುದೋ (ಅಪಂಪು. ೪-೯೬). **ಮೊಣ** : ೨. ಮೊಳಕೈ ಹಾಗೂ ಮೊಳಕಾಲುಗಳಲ್ಲಿರುವ ಮೂಲೆಯ ಸಂದು : "ಮೊಣ (ಮೊಳ), ಜಾನು, ಮೊಣಗಂಟು" (ಸಿಂಕೋ. ೪೪೨). 'ಮೊಣಗಂಟು' ಪರಾ. **ಮೊಳ** : ೧. ಮತ್ಸ್ಯದೇವರ ಹವಣಸಾರೆಣಿಸುವರು . . . ಅವನಿಪತಿ ಕೇಳ್ ವೇದವಾಕ್ಯಕೆ ಹತ್ತುಮೊಳ ಮಿಗಿಲು (ಸಂಥಶ. ೪-೨೭) ; ಕಪಿಯ ಬಾಲವು . . . ಮುಂದೆ ಗೇಣರೆಗೇಣು ಮೊಳ ತೋಳನಿತು ಬೆಳೆವುತಿರೆ (ಕೌಶಿಂ. ೦೨-೪) ; ಮೊಳನನಿಕ್ಕಲು ಸೊಂಡಿಲಂ ಗುಹಂ (ಲೀಕ್ಷ್ಮೃ. ೨-೭-೦) ; ಧರ್ಮಕ್ಕೆ ದಟ್ಟಿ ಕೊಟ್ಟರೆ ಓತ್ರಲಿಗೆ ಹೋಗಿ ಮೊಳ ಹಾಕಿದ (ಗಾದೆ).

[ದೇ.॥ ತಮಿ. ಮಲ. ಮುಟಮ್ ; ತುಳು. ಮೊಳ, ಮೊರ, ಮುರ ; ಕೊಡ. ಮೊಳ ; ತೆಲು. ಕೋಲಾ. ಪರ್ಜಿ. ಮೂರ]

**ಮೊಟಂಗಾಲ್** ' ಮೊಟಕಾಲ್ ' ನೋ.

**ಮೊಟಂಗು$_1$** ' ಮೊಟಗು$_1$' ನೋ.

**ಮೊಟಂಗು$_2$** ' ಮೊಟಗು$_2$' ನೋ.

**ಮೊಟಕಯ್** ' ಮೊಟಕೆಯ್ ' ನೋ.

**ಮೊಟಕಲಿಸು** (ಕ್ರಿ). (?) : ಪಾಯ್ದಂಬಸಂಬಟ್ಟುವವೊಲ್ ಪುಂಖಾನುಪುಂಖಂ ಮೊಟಕಲಿಸೆ ಮನೋವೇಗದಿಂ ಬೇಗಮೆಚ್ಚಂ (ಅರ್ಜವೀ. ೩-೪೧) ; ಮುರಿದಂಗಂ ನೀಳ್ದ ಗಾತ್ರಂ ಮೊಟಕಲಿಸಿ ಕರಂ ದಂಡೆಯುಂ ನೀಡಿದಂದು (ಅರ್ಜವೀ. ೭-೭೫). [? + — ಇಸು$_3$]

**ಮೊಟಕಾಲ್**, ಮಣಕಾಲು, ಮಣಿಕಾಲ್, ಮಣಿಕಾಲು, ಮೊಣಕಾಲ್, ಮೊಣಕಾಲು, ಮೊಳಕಾಲ್, ಮೊಳಕಾಲು, ಮೊಟಂಗಾಲ್ (ನಾ). ಕಾಲು ಮತ್ತು ತೊಡೆ ಸೇರುವ ಭಾಗ ; ಮೊಳಸಂದು ; ಜಾನು : ನರಿಗಳ್ ಬಂದು . . . ಎರಡುಂ ಕಾಲ್ಗಳಂ ಮೊಟಕಾಲ್ವರೆಗಮೊಂದು ದಿವಸಂ ತಿಂದತ್ತು (ವಡ್ಡಾರಾ. ೨೯-೦೩) ; ಅಂತು ಬಿಟ್ಟು ಸುಲಿದ ಮೊಟಕಾಲ್ಗಳುಂ . . . ಉಡಿದ ಕೈಗಳುಮಾಗಿ ಬೆರಸಟುತ್ತುಂ ಬಂದು (ಕಂಪಶಾ. ೨-೩೦ ವ) ; ಸಾವಂಗೆ ಸಮುದ್ರಂ ಮೊಟಕಾಲುದ್ದಂ (ಕಂಪಶಂ. ೬೯-೪). **ಮಣಕಾಲು** : "ಜಂಘಾ_ಮಣಕಾಲು" (ಅಕಾಶ. ೦೦-೨೭). **ಮಣಿಕಾಲ್** : ನೋಡಿ ಗುಱಿಯಂ ಮಣಿಕಾಲ್ ಮಣಿಯೆ ಭುಜಮೊಗೆಯೆ . . . ಧನುರ್ಧರರ್ಕಳದಟಿಂದೆಚ್ಚರ್ (ರಾಜಶೇ. ೭-೪೫) ; ಎಳ್ತರದ ಕುರುಳ್ಗಳಂ ಪರೆಪಿ ಜಲ್ಲಿಮಿಗಕ್ಕೆ ವರಾಹಯೂಥಮೇಳ್ತರೆ ಮಣಿಕಾಲ್ಗಳಂ ಮಡಿದು ತೋಱಿದರೊಯ್ಯನೆ ಸನ್ನೆವೇಂಟೆಯೊಳ್ ( ಶಬಶಂ.. ೩-೪೭ ). **ಮಣಿಕಾಲು** :

ಮಣಿಕಾಲು ಈಡಿಗ ಕಣಕಾಲು ಸಮ್ಮಗಾಣಿ . . . ಅಂಗಾಲು ಶುದ್ಧಮಾದಿಗ ಕಾಣಿರೋ (ಸರ್ವ. ೧೭೨–೭೭೭). **ಮೊಣಕಾಲ್**: ಸಿರಿ ಬರೆ ಮೊಣಕಾಲನಾಂಪ ಗಾಂಪರುಮೊಳರೇ (ಧರ್ಮಾಮೃ. ೧೦–೦೭); ಬಟ್ಟಲು ಕಬಿಲ್ದ ಮೊಣಕಾಲ್ಗಳುಂ ಮೊಟ್ಟನೆ ಮುಱಿದ ನಿಟ್ಟೆಲುಗಳುಂ . . . ಮಹಾಭಯಂಕರಮಾಗೆ (ಮಹಾಪು. ೦೨–೩೪ ವ). **ಮೊಣಕಾಲು**: "ಜಾನುಃ, ಊರುಪರ್ವಃ, ಅಸ್ಥಿಪರ್ವಃ — ಈ ೩ ಮೊಣಕಾಲು" (ನಾಚಿರಾ. ೦೨೦): ಮೊಣಕಾಲೊಳಸಂಮಗಳು ಬಾತುಕೊಂಡು . . . ಕ್ರೋಷ್ಟುಶೀರ್ಷವೆನಿಸಿಕೊಂಬುದು (ವೈದ್ಯಶಾ. I, ೪೦೭); ಕಣಕಾಲ ಕುಣಿಸುವಳು ಮೊಣಕಾಲ ಮಣಿಸುವಳು (ಸರ್ವಜ್ಞ. ೦೬೪೫); ತಲೆ ಇರುವಾಗ ಮೊಣಕಾಲಿಗೆ ಪಟ್ಟ ದೊರೆಯಲಾರದು (ಗಾಂಧಿಹು. ೦). **ಮೊಳಕಾಲ್**: ಪಱಿದ ಮೂಳೆಯಂ ಮೊಳಕಾಲಂ ಕಾರ್ವ್ವ (ಎಪಿ. VIII, ಸಾಗರ. ೦೦೬–೦೯; 1042); ಕಣಕಾಲ್ ಮೊಳಕಾಲ್ಮುಖಂ ಘುಟಿಂ (ಎಪಿ. VIII, ಸೊರಬ. ೦೭೫–೧೨ ; 1156); ಮೊಳಕಾಲ್ಗಳಲಿ ಘಾಯವ ನೋಡಿರ್ದ್ದ ನೀವು (ಸಂಕಹ. ೦೭–೭). **ಮೊಳಕಾಲು**: "ಜಾನುಃ, ಊರುಪರ್ವನ್, ಅಷ್ಠೀವತ್ — ೩ ಮೊಳಕಾಲಿನ ಹೆಸರುಗಳು" (ಸಿದ್ಧಾಂತಿ. ೦೯೦); ಬೊಬ್ಬಿಱಿದು ಮೊಳಕಾಲನೂಱಿದರು (ಕುಮಾರಿ. ೪–೦೨); ರಕ್ಕಸರಾಯನೆತ್ತಿದನೊಡನೆ ಬೊಬ್ಬಿಱಿದವುಕಿದನು ಮೊಳಕಾಲಲಾಧನುವ (ಕೊರಟಾ. ೧–೦೫–೨೦). **ಮೊಟಂಗಾಲ್**: ಪನಿತು ಮೊಟಂಗಾಲೊಳ್ ಕಾಲ್ವರಿವ ನೊರೆಯ . . . ಕಾರೊಡಲ ಪೇರಾನೆಗಳ (ರಾಮಾಶ್ವ. ೯೪–೪).

[ದೇ.॥ ತಮಿ. ಮಲ. ಮುಟಙ್ಕಾಲ್; ತುಳು. ಮೊರಂಪು, ಮೊಲಂಕು : ತೆಲು. ಮೋಕಾಲು ; ಕುರುಖ್. ಮುಕಾ ; ಮಲ್ತೊ. ಮುಕೆ ]

**ಮೊಟಕೆಯ್**, **ಮೊಣಕೆಯ್**, **ಮೊಣಕ್ಕೈ**, **ಮ್ಮೊಳಕಯ್**, **ಮೊಳಕ್ಕೈ**, **ಮೊಟಕಯ್**, **ಮೊಟಕ್ಕೈ** (ನಾ). ಕೈಯ ನಡುಗಂಟು ; ಕಣಕ್ಕೈ ಮತ್ತು ತೋಳುಗಳ ನಡುವಿನ ಭಾಗ: "ಕಫೋಣಿಃ, ಕೂರ್ಪರಃ — ಈ ೨ ಮೊ(ಟ)ಣಕೆಯ್" (ಹಲಾಯು. ೬೬–೩೭೯); "ಮೊಟಕೆಯ್ಯ ಕೆಳಭಾಗವು ಪ್ರಕೋಷ್ಠ, ಮುಂಗೆಯ್" (ನಾಚಿರಾ. ೪). **ಮೊಣಕೆಯ್**: "ಪ್ರಕಾಂಡ ಮೆಂಬುದು ಮೊ(ಟ)ಣಕೆಯ್ಯಿಂದ ಮೇಗಣ ಭಾಗ" (ಹಲಾಯು. ೬೬–೩೭೯). **ಮೊಣಕ್ಕೈ**: ತೋಳುಗಳನ್ನು ಮೊಣಕ್ಕೈಯವರೆಗೆ ಮಡಿಸಿಕೊಂಡಿದ್ದರಿಂದ ಹೊರದೋರುವ . . . ರೋಮತುಂಬಿದ ಕಪ್ಪುಕೈಗಳು (ಅಕ್ಕೋರ. ೦೩೦). **ಮೊಳಕಯ್**: ಚಂದನಕ್ಕುಮ್ಮಳಿಸಲೇಕೆ ನೀನೆಲೆ ಮಗನೆ ಚಂದನಂ ನಿನ್ನ ಮೊಳಕಯ್ಯೊಳದೆ ಎಲೆ ಮಗನೆ (ಬಿಲ. ದೇ. ೪೯೦–೭). **ಮೊಳಕ್ಕೈ**: ಮೊಳಕ್ಕೈ ಮುಂಗೈಗಳನಾಡಿಸುತಂ (ಶೃಂಗಾರ. ಹ. ೪೭೨–೨೯); ತೊಡೆಗಳಂ ಮೊಳಕ್ಕೈಯೊಳೂಱುತೆ (ಬಸವು. ೪–೧೨); ಮೊಳಕ್ಕೈಯೊಳಗೆ ಯಿಱುಕಿದ್ದೆರಡು ಹಸ್ತಂಗಳಲ್ಲಿ ಚಾಪದ ಕಿರುವನೇಱಿಸಿ ಶರವ ತೊಡಚಿದನು (ಸಂಕಹ. ೦೬–೨೭); ನಿನ್ನ ಮೊಳಕ್ಕೈಯಲ್ಲೇನು ಗಾಯ ಶಾರದ ? (ತ್ರಿಶ. ೫೪). **ಮೊಟಕಯ್**: ಒಳಕಯ್, ಮೊಟಕಯ್, ಪೊಱಕಯ್ (ಶಬ್ದಾನು. ೦೦೦ ಪ್ರಯೋ). **ಮೊಟಕ್ಕೈ**: "ಕಫೋಣಿ, ಕೂರ್ಪರಃ — ಈ ೨ ಮೊಟಕ್ಕೈ" (ನಾಚಿರಾ. ೦೨೦); ಮೊಟಕ್ಕೈಯಂ ಕೊಂತದಿಂ ಕುತ್ತಿ (ಧರ್ಮಾಮೃ. ೭–೨೦೫). [ದೇ.॥ ತಮಿ. ಮಲ. ಮುಟಙ್ಕೈ ; ತುಳು. ಮೊರಂಗೆ ; ಕೊಡ. ಮೊಳಕಯ್ : ತೆಲು. ಮೋಚೆಯ್ಯಿ]

**ಮೊಟಕ್ಕೈ** 'ಮೊಟಕೆಯ್' ನೋ.

**ಮೊಟಗಿಸು**, **ಮೊಳಗಿಸು** (ಕ್ರಿ). ಧ್ವನಿಯುಂಟಾಗುವಂತೆ ಮಾಡು ; ಶಬ್ದಮಾಡಿಸು : ಸುಘುಷಂ . . . ವಿಕ್ಕಿನ ಸೇನೆ ನಡೆದು ಬಹಣಂತು ರಣದುಂದುಭಿಯಂ ಮೊಟಗಿಸಿದಂ (ರಾಮಾಶ್ವ. ೯೭–೨೬). **ಮೊಳಗಿಸು**: ಜನಪಱೆಯ ಹಱೆಯ ಮೊಳಗಿಸುತ (ಜಕಶಾ. ೦೦–೩೭).

[ ಮೊಟಗು$_{1}$ + — ಇಸು$_{3}$ ]

**ಮೊಟಗು$_{1}$**, **ಮೊಳಗು$_{1}$**, **ಮೊಟಂಗು$_{1}$** (ಕ್ರಿ). ೧. (ವಾದ್ಯಗಳು) ಧ್ವನಿ ಮಾಡು ; ಶಬ್ದಮಾಡು : "ಮೊಟಗು — ವಾದನಕ್ರಿಯಾಯಾಂ ಸ್ತನಿತೇ ಚ (ಗುಡುಗು), ವೃಕ್ಷಭೇದೇ ಚ" (ಕವುಧಾ) : ಆಗಳ್ ಕುಂಭಸಂಭವನುಲಿವ ಜನರ ಕಳಕಳರವಮುಮಂ ಮೊಟಗುವ ಪಱೆಗಳುಮಂ ಬಾರಿಸಿ (ಸಂಕಥಾ. ೨–೭೪ ವ); ಮೊಟಗುವ ಪಱೆಯುಮನಾನೆಯ ಪಟಯಿಗೆಯುಮನಾಂತ ಬಲಮುಮಂ ಕಂಡು (ಎಪಿ. XV, ಅರಸೀ. ೨೩೭–೪ ; 971). ೨. (ಮೋಡಗಳು ಒಂದಕ್ಕೊಂದು ತಗುಲಿ) ಗುಡುಗುಡು ಎಂಬ ಶಬ್ದವುಂಟಾಗು ; ಗುಡುಗು : ಕೆಳದರ್ಗ ವಿಳಯಕಾಳಮೇಘದಂತೆ ಮೊಟಗಿ ಮಹಾಪ್ರಳಯಭೈರವನಂತೆ ಮಸಗಿ (ಸಂಕಥಾ. ೦೦–೪೦ ವ) ; ಉರಿದುದು ನಭಂ ನೆಲಂ ಮೊಟಗಿದುದು (ಶಾಂತಿಪು.೩–೦೦೩) ; ನೆಲಂ ಮೊಟಗಿದ್ದಂತಪ್ಪದೊಂದು ಭಯಂಕರಧ್ವಾನಮಾಗಲ್ (ಸಂಕಕಂ. ೪೦–೧೦). ೩. ಆರ್ಭಟಿಸು ; ಗರ್ಜಿಸು : ದೆಸೆಗಳ್ಗೆ ಕೆಮ್ಮನೆ ಮೊಟಗುವಿರೇಂ ಮೊಟಗಿದಂತೆ ಕೊಳ್ಳುವೆ ಮಟೆಗಳ್ (ಕಾವ್ಯಸಾ. ೪೩೭ ಸೂತ್ರ ೪). **ಮೊಳಗು$_{1}$**: ೧. ರಾಯರಥಿಕರು ಚಟುಳಚರಣಚಡಾಯುವಮಾನಿತರಿಳಿದುದಾ ಖಳರಾಯ ದುರ್ಗವ ಮೊಳಗುವಗಣಿತವಾದ್ಯಘೋಷದಲಿ (ಕೊರಟಾ. ೭–೦೬–೪); ಸನ್ನಾಹಭೇರಿಗಳ್ಮೊಳಗಲು ಖಾನ ಬಪ್ಪನ್ನತಗಳನೇವೇಳ್ವೆ (ಗಂಪಿಹಿ. ೦೦–೦೬); ಮಂಗಳವಾದ್ಯಗಳು ಮೊಳಗಿದವು (ಅತ್ತಾಶ. ೦೯೦). ೨. ಹಲಬಾರಿ ಕೇಳಿಹೆನು; ಮೋಡಗಳ ಮಧ್ಯದಿಂ ಮೊಳಗಿ ಮೂರ್ದನಿಗುಡುವ ನಿನ್ನ ದನಿಯ (ಪಸೀರಾ. ೨೩–೦೦). ೪. ಶಬ್ದಮಾಡಿಸು; ಮೊಳಗಿಸು: ನಳಿನನಾಭನು ಪಾಂಚಜನ್ಯವ ಮೊಳಗಿದನು (ಕುಮಾರವ್ಯಾ. ೬–೪೦). ೫. ಮೆರೆ; ವಿಜೃಂಭಿಸು: ಹಳೆವಿದಿರ ಮಳೆಯಲಿ ಮೊಳಗಿದುರಿಯುವೊಲುರುಹಿದನು ದ್ರೋಣ (ಕುಮಾರವ್ಯಾ. ೦೭–೨೫); ವೈರಿಸೇನೆಯ ಕುತ್ತಿ ತೇಗುವ ಮನದ ಮಾರುತಿ ಮೊಳಗಿದನು ಮುಂದೆ (ಕುಮಾಭೀ. ೦೨–೨೦). **ಮೊಟಂಗು$_{1}$** : ೧. ಊರೇ ಮೊಟಂಗದೇ ಗೋಳಾಟವಿಟ್ಟು! (ಅಶ್ವತ್ಥಾ. ೩೪–೭೭೩).

[ದೇ.॥ ತಮಿ. ಮುಟಙ್ಕು; ಮುಟಕ್ಕು ; ಮಲ. ಮುಟಙ್ಙು, ಮುಟಕ್ಕು ; ತೆಲು. ಮ್ರೋಗು, ಮ್ರೋಯು, ಮ್ರೋವು]

**ಮೊಟಗು$_{2}$**, **ಮೊಳಗು$_{2}$**, **ಮೊಟಂಗು$_{2}$** (ನಾ). ೧. (ವಾದ್ಯದ) ಧ್ವನಿ; ಸದ್ದು; ಘೋಷ : "ಮೊಟಗು = ಮುಗಿಲ ದನಿ, ಒಂದು ಮರದ ಪೆಸರ್, ವಾದನವಿಧಿ, ವಾದ್ಯಂ" (ಕಬುಕ. ಹ. ೦). ೨. (ಮೋಡಗಳ ಘರ್ಷಣೆಯಿಂದುಂಟಾಗುವ) ಗುಡುಗುಡು ಎಂಬ ಶಬ್ದ: "ಮೊಟಗೆಂದು ಸಿಡಿಲ್" (ಕರ್ಣಾಟಿ. ೩೦); ವಿಳಯಕಾಳಾಂಬುದದಂತೆ ಮೊಟಗುಮಂ ಸಿಡಿಲ ಬಳಗಮನೊಳಕೊಂಡ. . . ಮುಗಿಲ್ಗಳಂ ಬೆಸಸಿದಾಗಳ್ (ಸಂಕಥಾ.೫–೯೫ ವ); ಕಾರ ಮೊಟಗಂ ಕೇಳ್ದ ನವಿಲಂತೆ ನಲಿದು (ಅರ್ಥಸೀ. ೦–೭೯ ವ) ; ಗುಡುಗುಡಿಪ ಮೊಟಗಂ ಕಡುಕಾಯ್ಪೇಱಿದ ಸಿಂಗದ ದನಿಗೆತ್ತು (ರಾಮಾಶ್ವ. ೩–೦೬). **ಮೊಳಗು$_{2}$**: ೧. ಬಹುವಿಧದ ವಾದ್ಯದ ಮೊಳಗುಗಳ ತುದಿ ತುಡುಕಿತಾ ಬ್ರಹ್ಮಾಂಡಮಂಡಲವ (ಕುಭಾಶ. ೨–೪೦); ಪನ್ನೆರಡು ಭೇರಿಗಳ ಕಟ್ಟಿದರಾಗಳೆ ಜಗವೆಲ್ಲ ಮೊಳಗಿನ ಮೊಟ್ಟೆಯ ಕಟ್ಟಿದಂತಾಯ್ತು (ಶರಕ. ೨೩–೩); ಒದಗಿರ್ಪ ಪರೆ ಕೊಂಬು ಮುರಿಕೊಂಬುಗಳ ಮೊಳಗು (ಕಾಂಚೀರ. ೧೪೭–೩೧೬). ೨. ಆಕ್ಕಾಶವ ವಿದ್ಯುಲ್ಲತೆಯ ಘರ್ಜನೆಯ ಮೊಳಗಿನಂತೆ (ಮೋಳಿವರಾ. ೦೦–೪೦) : ಘಳಘಡಫುಡಿಲೆಂದು ಮೊಳಗು ಮೊಳಗಿತು (ಗಿರಿಕ. ೯–೪೦) ; ಮೊಳಗಂ ಕೇಳ್ದರಸಂಚೆಯ ತೆಱದಿ ಆವರಿಸಿದವಸ್ಥೆಯೊಳಿರದೆಯ್ತಂದು (ಜಯನೃ. ೨–೪೨). **ಮೊಟಂಗು$_{2}$** : ೩. ಅಬ್ಬರ ; ಆರ್ಭಟೆ : ಓವೋ. ಕನ್ನಡದ ನಾಡೇ, ಮುನ್ನೀರ್ ಮೊಟಂಗು ಕರೆನಾಡೇ (ಅಶ್ವತ್ಥಾ. ೦೭–೩೫೨). [<ಮೊಟಗು$_{1}$. /ತಮಿ. ಮುಟಕ್ಕು. ಮುಟಕ್ಕಮ್; ಮಲ. ಮುಟಕ್ಕಮ್; ತೆಲು. ಮ್ರೋಗುಡು, ಮ್ರೋತ]

**ಮೊಟಗು$_{3}$**, **ಮೊಳಗು$_{3}$** (ನಾ). ಒಂದು ಬಗೆಯ ಮರ: "ಮೊಟಗೆಬರೀ ವಾದ್ಯಮುಮನಿಜಭೇದದಲ್ಲಿಯುಂ ಗುಡುಗಿನೊಳ್ ಪೊಟಗೆನಿಕ್ಕುಂ"

(ಸಂಜೀವ. ೩) ; ಮೊೞಗಿನ ಕಾರ್ಯ ನೆಲ್ಲಿಯ ಕಾಯ್ ಉಱಿವೆಯ ಕಾಯ್ ಬೇಱೆವೇಱೆ ಸವಿವಡೆದಿರವೆ: (ವಚನ. ೯೬೩). **ಮೊಳಗು₃** : ಮತ್ತಿ ಮೊಳಗರನೆಲ್ಲಿ ಮಾಡಲಿ . . . ಕರ್ಣಿಕಾರದ ಮೊತ್ತವಿದೆ ನೋಡಬಲೆ (ತೊರವೆ. ೩-೦-೨೬) ; ತಮಾಲಂ ಮೊಳಗಾಱುಂ ನೆಲ್ಲಿ ನೇಱಿಲ್ ತಮಕು ಪನೆಗಳೊಪ್ಪಿರ್ಕುಮಾ ಕಾಡೊಳೆತ್ತಂ (ಶಬಶಂ. ೩-೩೨).

[ದೇ.॥ ತೆಲು. ಮೊಲುಗು, ಮೊಲ್ಗು, ಮ್ರೋಲುಗು, ಮ್ರೋಲ್ಗು]

**ಮೊೞಗುಗೇಳ್** (ಕ್ರಿ). ಗುಡುಗಿನ ಧ್ವನಿಯನ್ನು ಕೇಳು; ಮೇಘಧ್ವನಿಯನ್ನು ಆಲಿಸು : ಮೃಗಾಳಿ ಘೋಂಕನೆ ಮುೞಿಗಾಲದೊಳ್ ಮೊೞಗು ಗೇಳ್ದು . . . ರಾವಣನ ಘನಚಾಪವಂಡರವಮಂ ನೆನೆದು . . . ಮೇಘಗೊಳ ಲೊಲ್ಲವು (ಕಾದಂಬ. ೧೧೦). [ಮೊೞಗು₂ + ಕೇಳ್]

**ಮೊೞವೆಱೆಯಾರ್ಮ** (ನಾ). ಒಬ್ಬಾತನ ಹೆಸರು : ಚೋೞಗ ಮೊೞವೆಱೆಯಾರ್ಮರ್ಗೆ ಕಱೆಗೊಡಗೆಯ ರಾಜಮಾನಂ ಮೂಗಂಡುಗ ಗೞ್ದೆ . . . ಸಲ್ವುದು (ಎಕ. XII, ಮಧ್ಯಗಿ. ೧೦೨-೦೪; ಸು. ೯೦೦ ?). [ ? ]

**ಮೊೞ್ಗಿಸು**, ಮುಗ್ಗಿಸು, ಮೊಗ್ಗಿಸು₁ (ಕ್ರಿ). ೧. ತಗ್ಗಿಸು ; ಶಮನಗೊಳಿಸು ; ಕುಗ್ಗಿಸು : ಹಯಲಾಳಾಜಳಮುಂ ಮದೇಭಮದ ಮೊತ್ತಾಸಾರಮುಂ ರೇಣುಸಂಚಯಮಂ ಮೊೞ್ಗ [ಶಾಶಾಂ. ತರ್ಗ]ಸಿ (ಪುಷ್ಪ. ೩-೪೫). **ಮುಗ್ಗಿಸು** : ೨. ನಮಸ್ಕರಿಸು ; -ಬಾಗು : ಉಲ್ಲಾಸದಿಂ ನಡೆತಂದು ತಮ್ಮಣ್ಣನಾ ಮೆಲ್ಲಡಿಯೊಳು ಮುಗ್ಗಿಸಿದನು (ಶ್ರೀಕೃ. ೨-೨೩). ೩. ಮುಗ್ಗರಿಸು ; ಎಡವು : ಫಗ್ಗಳಿಪ ನೀರಾಜನ ಪ್ರಭೆ ಕುಗ್ಗಿ ಮಸುಳಿಸಿತೋ ಮಱೆದು ನೀ ಮುಗ್ಗಿಸಿದೊ ಏಕಾರತಿಯನಯ್ಯಂಗೆ ಕೊಡುವಾಗ (ಬಸವ. ೪೭-೦೬). ೪. ನಾಶಮಾಡು ; ಧ್ವಂಸಗೊಳಿಸು : ನೀನಿಟ್ಟ ಸೂತ್ರದಿಂ ಚಲಿಪವು ಕೈಕಾಲುಗಳು ನೀನೆ ಮುಗ್ಗಿಸಲು ಮುಗ್ಗುವ ದೇಹದವನು (ಪುರಂದ. ೨-೯೮-೦); ಚಿಂತಿಸಬೇಡ ತಾಯಿ ನಾ ಮುಗ್ಗಿಸುವೆ ಸವತಿಮಕ್ಕಳನೆಲ್ಲ ನುಂಗಿ ನಾ ಬಗ್ಗಿಸುವೆನವ್ವ ಸಂಶಯ ಬೇಡ (ತುರಂಗ. ೩-೩೨); ಟೊಪ್ಪಿಗೆಯ ಉದ್ಯೋಗವನ್ನು ಮುಗ್ಗಿಸಿ ಕೆಲಸಿಗನ ಕೈಮೇಲಾಯಿತೆಂದು ನಾನು ಹೇಳುವುದಿಲ್ಲ (ಗಾಳಕ. ೦೩೫). ೫. ವಶಪಡಿಸಿ ಕೊಳ್ಳು ; ಅಧೀನಗೊಳಿಸು : ಸುಗ್ಗಿಯ ಸೂಳೆಯರಿಹರಲ್ಲಿ ನೋಟದಿಂ ಮುಗ್ಗಿಸಿಕೊಳುತ ಮುನಿಗಳ (ಸರಾಶಾಂ. ೪-೦೦೩). **ಮೊಗ್ಗಿಸು₁** : ೬. ಬಾಗಿಸು ; ಬಗ್ಗಿಸು : ಕರ್ಣಿಕೆಗಳಂ ತೆಗೆದು ಧನುವಿಗಂ ಮೊಗ್ಗಿಸುತ ಕರ್ಣಪೂರಂತೆಳೆದು ತಾಳಿಕೊಳಲೆಂದೆನುತ ತೆಗೆದೆಚ್ಚನು (ತುರಂಗ. ೫೨-೮೩). 'ಮುೞ್ಗಿಸು' ಪರಾ. [ಮೊೞ್ಗು₁ + — ಇಸು₃]

**ಮೊೞ್ಗು₁**, ಮುಗ್ಗು₁, ಮುಗ್ಗರ್, ಮುಳ್ಗು, ಮುೞ್ಗು₂, ಮೊಕ್ಕು₁, ಮೊಗ್ಗು₁, ಮೊಳ್ಗು (ಕ್ರಿ). ೧. ಬಾಗು ; ಮಣಿ ; ಬಗ್ಗು : ಕನಕಶಾಂತಿಮುನೀಂದ್ರಕೇವಳಿಗಳ ಪೊಱಅಡಿಗಳೊಳಂ ಮಣಿಮಯ ಮಕುಟಮಲೆಯೆ ಮೊೞ್ಗಿ ಪೊಡೆವಟ್ಟು (ಶಾಂತಿ. ೯-೨೩ ವ) ; ಪೋಗಿ ತನ್ನ ಹೀಂದ್ರೋಪಕಂಠದೊಳ್ಮೊೞ್ಗಿ ಪೊಡೆವಟ್ಟು (ಸುಕುಮಾ. ೪-೩೬ ವ) ; ಮೇಗಣಧಿಕಾರಕಂತಪ್ಪ ರೌದ್ರಮುಂ ಶಕ್ತಿಯುಂ ಮೊೞ್ಗುವುದು (ಅಕ್ಷರಾ. ೨೬-೫೩೦). ೨. ನಮಸ್ಕಾರ ಮಾಡು ; ವಂದಿಸು ; ಎರಗು : "ಮೊೞ್ಗು-ನಮನೇ" (ಶಬ್ದಾ) ; ನಿಜಾನುಜನ್ಮನ ಕಳೇವರದ ಕಾಲ ಮೊದಲೊಳ್ ಮೊೞ್ಗಿ (ವರ್ಧ. ೯-೬೦ ವ) ; ಪಿರಿಯರ್ಗೆ ಮೊೞ್ಗ ಜನಮಂ ಕೈಕೊಳ್ (ಶಕಟಿ. ೩-೦೨೦). ೩. ಕುಗ್ಗು ; ಅಡಗು : ಕುಸಿ : ಪವನಾತ್ಮಜಂ ಗದೆಯನೆಲ್ಪಡಗಾಗಿರೆ ಪೋದೆ ಮೊೞ್ಗ ಬಿೞ್ದುವು ಮದವಾರಣಂಗಳ್ (ಶಂಕರ. ೦೩-೫೩) ; ಆ ಸಂಗ್ರಾಮದೊಳ್ ತನ್ನನುಜ ತನುಜ ಜಾಮಾತೃವರ್ಗಂ ಮಡಲ್ಪಟ್ಟಂತವಗಳ್ ಮೊೞ್ಗ ತೞ್ಗಿರ್ಪುದುಂ (ಶಾಂತಿ. ೫-೫೯). **ಮುಗ್ಗು₁** : ೧. ಗುರುಪಾದಾಂ[ಬುರುಹಕ್ಕೆ] ಮುಗ್ಗಿ ಪೊಡೆವಟ್ಟು (ಗವಾಯು. ೮-೬೩). ೨. ಭೂಪರೆಲ್ಲರು ಭಯಭಕ್ತಿಯಿಂ ನೇಮಿಯ ಶ್ರೀಪಾದಕೆ ಮುಗ್ಗುತಿರಲು (ನೇಮಿಸಂ. ೩೨-೨) ; ಪರಿವರ್ತಕೀರ್ತ್ಯಾದಿ ರಾಜರು ಕಣ್ಣೀರು ಸುರಿವುತ ಮುಂದಡ್ಡಗಟ್ಟಿ ಚರಣಾಬ್ಜದೊಳು ಮುಗ್ಗಿ ಕೆಡೆವರು (ಭರತ. ೬೬-೬೭). ೩. ರಿಪುಭಟನ ಮೊಮ್ಮುಗ್ಗಳ ಧರಧುರಕೆ ಕಲಿ ಸಾತ್ಯಕಿಯ ತರಹರಣೆ ತಗ್ಗಿತು ಮಹಿಮೆ ಮುಗ್ಗಿತು (ಕುಮಾ.ದ್ರೋ. ೦೪-೧೧). ೪. ಎಡವು ; ಮುಗ್ಗರಿಸು : "ಮುಗ್ಗು — ಜೀರ್ಣಾವಗಂಧೇ, ಗತಿಭಂಗೇ ಚ (ಮುಗ್ಗರಿಸು)" (ಶಬ್ದಾ) ; ಮುಂದೆ ಮುಗ್ಗುತ್ತೆಡಬಲದೊಳಗಾಂ ಬೀೞುತುಂ ಪಕ್ಕಗೂಡಾಗೊಱಗುತ್ತಂ ಪೋಗಿ (ಕಾದಂಬ. ೦೯೦) ; ಕರ್ಣನ ಕುದುರೆಗಳು ಮುಗ್ಗಿದವು (ಕುಮಾ.ಕ. ೬-೨೬). ೫. ಕೆಡು ; ನಾಶವಾಗು : ಓಗ್ಗುವೆ ಯಾಕೋ . . . ಮುಗ್ಗುವ ಕುಗ್ಗುವ ಅಗ್ನಿಯೊಳಗೆ ಬಿದ್ದು ದಗ್ಧವಾಗುವ ದೇಹಕ್ಕೆ (ಪುರಂದ. ೦-೦೨೨ ಅಮುಕ್ಲಿಪಿ) ; ಪಡೆ ಕಡಲೊಳದ್ದಿ ಜೀಮೂತಾದಿಗಳ್ ನೀರ ಕುಡಿಕುಡಿದು ಮುಗ್ಗಿತೇವೊಗಳ್ವೆಂ (ಸಿಂಗರಾ. ೩-೨೦). ೬. ಕವಿ ; ಮೇಲೆ ಬೀಳು ; ಆವರಿಸು : ಮುಗ್ಗಿ ಬೀಳುವ ಪಾಯದಳವನು ನುಗ್ಗುನುಸಿ ಮಾಡಿದನು (ಕುಮಾ.ಶಲ್ಯ. ೬-೪೭); ಲಗ್ಗೆಯೊಡೆದು ದಾನೆಯ ಮೋಹರ ಮೇಲೆ ಮುಗ್ಗುವ ಕುದುರೆಯ ಪೌಜು ಒಗ್ಗೊಡೆಯಿತು (ಕುರಾಶಾಂ. ೦೩-೦೨೫) ; ಸಲೆ ಮುಗ್ಗಿದಮರ್ಗಿಲ ಮೊಗ್ಗರದಂತೆ (ಕೃಷ್ಣಾ. ೬-೩೨). ೭. ಜಗಳವಾಡು ; ಕಾದಾಡು : ಮುಳಿದವರೊಳು ಮೊಗವಂಟಿ ಮುಗ್ಗದೆಯಾಡಿ ಪಳಿಪವರೊಳು ಪೋರುಗೊಳದೆ . . . ಒಳುವೆಂಡಿರೊಳ್ಪುವಡೆವುದು (ಹರಿ. ೪-೪೦). ೮. ಕೊನೆಗಾಣು ; ಮುಗಿ ; ನಿಲ್ಲು : ಈ ವೃಷಕೇತುವಿನಲ್ಲಿಯೆ ನನ್ನ ಸಂತತಿ ಇಂದಿಗೆ ಮುಗ್ಗಿ ಹೋಯಿತು (ಜದುರ. ೦೦೩). **ಮುಗ್ಗರ್** : ೧. ಕಡುವಿರಿಯವು ಪೊಱಗಳನೆಡೆಮಡಗದೆ ಮೇಲೊಟ್ಟಿ ಮತ್ತೆ ಮೆಲ್ಪುರಮುಮನಾಗಡೆ ಕಟ್ಟಿ ಕುಸಿದು ಕುಸಿದಡಿ ಮಿಱುಕದೆ ಸುಗಿದಗಿದು ಮುಗ್ಗರ್ ತರ್ಗುವ ಪದದೊಳ್ (ಸುಕುಮಾ. ೫-೦೪). **ಮುಳ್ಗು** : ೩. ಜವದೊಳಿಱದಾಡಿದರ್ ಮುಳ್ಗಿದರ್ ತಳ್ಗಿದರ್ ಸಂಗರಾವೇಶದಿಂದೆ (ಜಗನ್ನಾ. ೨೬-೦೯); ಇರದಿಱಿಯೆ ಕಣ್ಗೆಟ್ಟು ತಳ್ಗುವರ್ ಮುಳ್ಗುವರ್ (ಜಗನ್ನಾ. ೨೯-೨೬). ೪. ಜನ್ನಗದುರೆ . . . ಪೊದರಂ ಪಾಯ್ದು ಮುಳ್ಗಿ ನಡೆಗೆಟ್ಟು ತಡವಟ್ಟು ಕೊಱಗಂ ಪೞಗದ ನೆರೆಯ ಮಱಯಱೆಯೊಳ್ ತಾಂಟಿದತ್ತು (ರಾಮಾಶ್ವ. ೦೩೫-೨೩); ಮುಳ್ಗಿ ಕೆಡದುದು ಭದ್ರಹಸ್ತಿಯು ಖಳ್ಗಮೊರ್ವನ ಕರದಿ ಬಿರ್ದುದು (ನಾಗಕ. ೦೯-೫೪). **ಮುೞ್ಗು₂** : ೨. ಆಕೆ ವಿನಯದಿಂ ತನ್ನ ಪದಾಬ್ಜದ ಮೇಲೆ ಮುೞ್ಗಿಲೊದವಿದ ಪದಪಿಂ ತೆನೆದೆತ್ತಿ ನೃಪಸುತಂ ಮನ್ನಿಸಿದಂ (ಕಾದಂಬ. ೦೦೯); ಎೞ್ದು ವಂದು ಕಾಲ ಮೇಲೆ ಮುೞ್ಗಿದ ವಿನಯಾಭಿರಾಮನಂ ತೆಗೆದು ತೞ್ಕೈಸಿ (ಕಾದಂಬ. ೨೬೫). ೩. "ಮುೞ್ಗು — ಪತನೇ" (ಶಬ್ದಾ). **ಮೊಕ್ಕು₁** : ೨. ಮೊಕ್ಕಿದೆನು ಒಡತಿಯರೇ (ಸವ. ೧೨): ಅನೇಕ ದೇವರಿಗೆ ಮೊಕ್ಕಿದಳು (ಪಂಚಕೊ. ೨೫). **ಮೊಗ್ಗು₁**: ೩. ಅಳ್ಳಾಡಿದನೆಂದ್ರಂ ಮೊಗ್ಗಿದಂ ಪಾವಕನದಿಱದನುಗ್ರಾಂತಕಂ (ಎಕ. VII, ಶಿಕಾ. ೦೭೦-೮; 1065). ೫. ನಿನ್ನ ಸೂತ್ರವು ತಪ್ಪಿದರೆ ಮೊ[ಶಾಶಾಂ. ಮು]ಗ್ಗುವವು ಹೂಹೆಗಳು (ಹಂಸಾ. ೬೯). ೬. ಭೂಸುರವ್ರಾತವೈರಿಯು ಪರಶುರಾಮನ ಚೇದಮಱಿಯದೆ ಬಂದು ಪಳಚಿದನಾ ಪತಂಗಗಳ ಗೊಂದಣಮದುರಿಯೊಳಗೆ ಮೊಗ್ಗುವ ಚಂದದಲಿ (ಸಂಭಕ. ೨೬-೮೫). ೯. ಬಾಡು ; ಒಣಗು : ಮಾಯದ ಪುಷ್ಪಗಳು ಮೊಗ್ಗಿ ಕಂದಿದವು (ಸುವಸಂ. ೨೨). **ಮೊಳ್ಗು** : ೧. ಒಂಟಿ ಸಲಗ . . . ಸೊಂಡಿಲನೆತ್ತಿ ಮೊಳ್ಗಿ ಮುಂಗಾಲ ಮೊಣಕಾಲ ಮೇಲೆ ಕುಳಿತುಕೊಳ್ಳುತ್ತದೆ (ಸವಾ. ೦೭೮). ೨. ಸತ್ಯೇಂದ್ರಚೋಳೇಂದ್ರಸತ್ತ್ವದ ಪದ್ಮಕ್ಕೆ . . . ಮೊಳ್ಗಿದಂ (ರಾಜಶೇ. ೪-೦೦೩); ನಾರಾಯಣನ ಪದಕೆ ಮೊಳ್ಗುವೆನೀಗಳ್ (ವಿಷ್ಣುಪು. ೦-೨-೦೫೩). ೬. ಅರಿಭಟರ ಮಿಗೆ ಬೀಳಲಿಱಯೆಂಬ ಖಾನರಬ್ಬರವಾಗ ಗಗನಮಂಡಲವ ಮೊಳ್ಗಿದುದು (ಶಂಕರ. ೦-೪೯). 'ಮುೞ್ಗು' ಪರಾ.

[ದೇ.॥ ತೆಲು. ಮೊಕ್ಕು, ಮ್ರೊಕ್ಕು, ಮೊಗ್ಗು, ಮ್ರೊಗ್ಗು ; ನಾಯ್ಕಿ. ಮೊಕ್ಕ ; ಪರ್ಜಿ. ಮೊರ್ಕ್ : ಗದಬ. ಮುಂಲ್ಕ್ ; ಕುಇ. ಮ್ರೋಂಗ ; ಮಾಲ್ತೊ. ಮುರ್ಗ್ರು]

**ಮೊಟ್ಟು₂, ಮೊಗ್ಗು₂** (ನಾ). ೧. ನಮಸ್ಕಾರ ; ವಂದನೆ : "ತುಟಿಲಿ ಬಿಗು ಮೊಟ್ಟು ಮಣಿ ಕುಂಬಿ ಪೊಡಮಡಿಕೆಯುಂ ನಮಸ್ಕಾರಕೆ ತವೆ ಸಂದ ನಾಮ" (ಶಬ್ದಮಂ. ೩೩). ೨. ಅಧೀನ ; ವಶ : 'ಮೊಟ್ಟಿಸು' ಪರಾ. **ಮೊಗ್ಗು₂** : ೧. "ಮೊಗ್ಗು[ಪಾಠಾಂ. ಟ್ಟು] ತುಬಿರ್ಲ್ಗೆಯ್ಮನ್ನರ್ ಬಿಡಪದುವೆ ವಂದನಾರ್ಥದಿ ತೊಡರ್ಗುಂ" (ಕವಿಕಾ. ೧೮೯). ೨. "ಮೊಗ್ಗನೆ ವಶದೊಳ್ (ಕರ್ಣಾಟಶ. ೯೭); "ಮೊಗ್ಗನೆ ವಶವೆಂದುಂ" (ಶಶುಶ. ೯೭). ೩. ಕೊಳ್ಳೆ ; ಸೂರೆ: "ಮೊಗ್ಗನೆ ತಾಂ ಸೂಟೆಯೆಂಬ ತೆಱನದು" (ಶತುಶ. ೧೩೦); ಗೆಲ್ದು ಜಮುವಗ್ಗದ ಸುಗ್ಗಿಯ ಮೊಟ್ಟುದೆಂದು ಬಂದಿರದೆ ಪೊಣರ್ಚೆ (ಪುಷ್ಪಶಿ. ೧-೦೨). ೪. ಸುಲಭಸಾಧ್ಯವಾದುದು : ಆ ಬೇಳುನುಡಿಗೇಳ್ದು ಕಮ್ಮನೆ ಬೇಳಲ್ ನಿಮಗಂತು ರಾಜಸೂಯುಂ ಮೊಗ್ಗೇ (ಶಂಕರಾ. ೭-೨೪); ನರೇಂದ್ರಸೇನ ಮುನೀಂದ್ರಂಗೇಕಾಕ್ಷರಂ ಪೆಱರಿಗಿವು ಮೊಗ್ಗೇ (ಎಪಿ. XVI. ೩೩-೨೩ ; 1053); ನೀನಲ್ಲದಂಗನೆಗೆ ಕಾಣ್ಬುದು ಮೊಗ್ಗೇ (ಪುಷ್ಪಪು. ೯-೦೦೦). ೫. ಸಾಮರ್ಥ್ಯ ; ಶಕ್ತಿ : ಗುಗ್ಗುರಿಯುಂ ತಿಂಬ ಮೊಗ್ಗು ಸುಣ್ಣದೊಳುಂಟೇ (ರಮಾಶ್ಮ. ೭-೦೭೦); ಅತ್ತಲಿತ್ತಲು ಹರನ ಬಿಟ್ಟವ ಕಿತ್ತ ಮೊಗ್ಗಲ್ಲ (ಕೌಶರಾ. ೨೧-೯೩). ೬. (?): ಬಗ್ಗಿಸಿದವೊ ಕೋಗಿಲೆಗಳ್ ಮೊಗ್ಗಪ್ಪ ವಿಯೋಗಿಯಂ ಪುಗಲ್ ಪುಗಲೆನುತಂ (ಕಾವ್ಯಾವ. ೬೯೨). [< ಮೊಟ್ಟು₁]

**ಮೋಂಕು** 'ಮೋಕು' ನೋ.

**ಮೋಂಬತ್ತಿ, ಮೊಂಬತ್ತಿ** (ನಾ). ಮೇಣದಿಂದ ತಯಾರಿಸಿದ ಬತ್ತಿ ; ಮೇಣದ ಬತ್ತಿ : ಸಮಯಕ್ಕೆ ಅಂತ ಮೋಂಬತ್ತಿ ಬೆಂಕಿಪೊಟ್ಟಣ ಎರಡನ್ನೂ ಇರಿಸಿರುವರು (ತಂಗೂಶಿ. ೧೯೦); ಬಾಗಿಲಿಗೆದುರಾಗಿ ಮೋಂಬತ್ತಿ ಅಂಟಿಕೊಂಡಿದ್ದ ಕಪ್ಪುಬಣ್ಣದ ವಿಗ್ರಹವೊಂದನ್ನು ತೂಗುಹಾಕಿತ್ತು (ಫ್ರಸಹು. ೧೯೦). **ಮೊಂಬತ್ತಿ** : ಹಳೆಯ ಲಾಂದ್ರಗಳನ್ನೂ ಮೊಂಬತ್ತಿಗಳನ್ನೂ ಹಣತೆಗಳನ್ನೂ ಹುಡುಕಿ . . . ಇಟ್ಟಿದ್ದಾಯಿತು (ಮಹಾಗ. ೨೨೩). [← ಹಿಂ. ಮರಾ. ಮೋಮ್‌ಬತ್ತೀ]

**ಮೋಂಬತ್ತಿಬೀಜ** (ನಾ). ಒಂದು ಬಗೆಯ ಸಸ್ಯ : ಪಿಂಡಿ. ಮೋಂಬತ್ತಿ ಬೀಜ (ವ್ಯಶಿಗ. ೪೦-೬೦೪). [ಮೋಂಬತ್ತಿ + ಬೀಜ]

**ಮೋಕ₁** 'ಮೊಕ್ಕ' ನೋ.

**ಮೋಕ₂** (ನಾ). ೧. ಯಾವುದಾದರೂ ಪ್ರಾಣಿಯ ಕಳಚಿದ ಚರ್ಮ. ೨. ಚತುಷ್ಪಾದಪ್ರಾಣಿ. ೩. ವಿದ್ಯಾರ್ಥಿ. [ಸಂ.]

**ಮೋಕಳೀಕ, ಮೋಕಳೀಕು** (ನಾ). ೧. ಬಂಧನವಿಲ್ಲದಿರುವುದು ; ಸ್ವತಂತ್ರವಾದುದು : ತೆರಪಾದುದು : ನಿನಗ ಎರಡ ದಾರಿ ಮೋಕಳೀಕ ಅವ (ಲೀಶಶ. ೦೩೨). ೨. ಸ್ವತಂತ್ರನಾದವನು : ಅವರಿವರ ಪುಣ್ಯದಿಂದ ಮೋಕಳೀಕ ಆಗೀನಿ (ಗ್ರಾಪಶಯು. ೪೪೩); ಗೌಡರು . . . ನಿರಾಯಾಸವಾಗಿ, ನಿಃಶಂಕವಾಗಿ ಅಲೆದಾಡಲು ಮೋಕಳೀಕರಾದರು (ಲೀಶಹ. II. ೪೩). ೩. ವಿವಾಹವಿಚ್ಛೇದನ ; ಸೋಡಚೀಟಿ : ನಮ್ಮ ಅಂತೂನಕಿಂತ ಎರಡ ವರ್ಷ ದೊಡ್ಡಾಕಿ, ಮೋಕಳೀಕ ಹ್ಯಾಂಗ ಮಾಡಿರ ? (ಶಿಸರ್ಗ. ೦೯೩). **ಮೋಕಳೀಕು** : ೪. ಹಕ್ಕು ; ಸ್ವಾಮ್ಯ : ಮಾಲ ಕೊಡುವ ಮೋಕಳೀಕು ನಮಗೆ ಕೊಟ್ಟಿದ್ದಾದರೆ ವಿಕ್ರಿ ಮಾಡುವದಕ್ಕೆ ಅಡಚಣೆ ಬೀಳಲಿಕ್ಕಿಲ್ಲ (ಮುಂಬವ್ಯಾ. ೩೩). [← ಮರಾ. ಮೋಕಳೀಕ್]

**ಮೋಕಳೀಕು** 'ಮೋಕಳೀಕ' ನೋ.

**ಮೋಕು, ಮೋಂಕು**(ನಾ). ತುದಿ; ಅಗ್ರಭಾಗ; ಮೇಲುಭಾಗ: ಮುಂಡದ ಮೋ[ಪಾಠಾಂ. ಮೂ]ಕಿನಲಿ ಬಗಿದೊಗುವ ನೆತ್ತರು ನಾಕವನು ನಾದಿತ್ತೆನಲು ಸವಱಿದನು ಪರಬಲವ (ಕುವ್ಯಾದ್ರೋ. ಪಾ ೭-೪೩); ಒಂದೆಂತೂ ಸುಯ್ಯನೆ ಒಂದು ಮೋಕಿಗೆ ಅಪ್ಪಳಿಸಿ ಪುಟಿದು ಬೀಳುತ್ತಿತ್ತು (ಶುಂಗಾಕಿ. ೭೦); ಅವಳು ಮುಂದಿದ್ದ ಹೊರಸಿನ ಕಾಲಿನ ಮೋಕಿಗೆ ರಪರಪನೆ ಜೋರಾಗಿ ಹಣೆ ಹಾಯಿಸಿ ಅಳತೊಡಗಿದಳು (೪೩ಗಕ. ೬೨). **ಮೋಂಕು** : ಅಲ್ಲಿಂ ಮುಂದೆ ಕೆಂದರಿಯ ಮೋಂಕಿನೊಳ್ ನಟ್ಟ ಕಲ್ಲ್ (ಎಪಿ. XIII. ೩೦-೪೨; 1204). [ದೇ.॥ ತೊದ. ಮುಕ್. ಮೊಕ್ ; ಕೊಂಡ. ಮುಸ್ಕು]

**ಮೋಕೂಫ್, ಮುವಕುಫ್, ಮುಕೋಪು, ಮೊಖೂಫು, ಮೋಖೂಫ್, ಮೌಕೂಫ್** (ನಾ). ೧. ತೆಗೆದುಹಾಕುವಿಕೆ ; ವಜಾ ; ರದ್ದು : ಅವರ ಕಡೆಯ ಜನಗಳ ಅಧಿಕಾರವನ್ನು ತೆಗೆದು, ಪ್ರಧಾನರೆಂಬ ಹೆಸರನ್ನು ತಪ್ಪಿಸಿ ಆ ಅಧಿಕಾರವನ್ನು ಮೋಕೂಫ್ ಮಾಡಿಸಿದರು (ಮಹಾಶಾ. I. ೨೨೪). **ಮುವಕುಫ್**: ೧. ನಾಲ್ಕು ಹಣ ಅಮಬ್ಯಾಳೆಯನ್ನು ಚತ್ರದ ತಸದೀಕಿನ ಐವಜಿನಲ್ಲಿ ಶ್ರೀಮಠಕ್ಕೆ ಸಲ್ಲುತಾಯಿದದನ್ನು ಮುವಕುಫ್ ಮಾಡ್ಸಿ (ಮ್ಯಆರ. ೧೯೩೮. ೨೭-೯; 1830). **ಮುಕೋಪು**: ೨. (ಕೋರ್ಟು, ಕಚೇರಿ ಮುಂತಾದುವನ್ನು) ಮುಚ್ಚಿರುವುದು ; ಬಂದುಗೊಳಿಸಿರುವುದು ; ಸ್ಥಗಿತಗೊಳಿಸಿರುವುದು : ರಜಾಸಮಯವಾದುದರಿಂದ ಕೋರ್ಟು ಮುಕೋಪು ಆಗಿ ಐಶಾಳರ ಅಪ್ಪರಲ್ಲಿ ಒಬ್ಬರಾದ ವಕೀಲ ನಾಗಪ್ಪಯ್ಯನವರೂ ಅಲ್ಲಿಗೆ ಚಿತ್ತೈಸಿದ್ದರು (ಮರವು. ೦೯೭). **ಮೊಖೂಫು** : ೧. ಹೆಚ್ಚಿಗೆ ಹಣ ಬೇಕಾದರೆ ಕೊಡುವೆವೆಂದು ಹೇಳಿ ಪಾರ್ಲಿಮೆಂಟನ್ನು ಮೊಖೂಫು ಮಾಡಿದರು (ಇಂಗ್ಲಂಡ. ೦೩೭). **ಮೋಖೂಫ್**: ೧. ಕುದುರೆರಿಜಿಮೆಂಟನ್ನು ಮೋಖೂಫ್ ಮಾಡಿ . . . ದಾಖಲೆಗಳನ್ನು ನೋಡಬೇಕೆಂಬ ಅಭಿಪ್ರಾಯದಿಂದ ಜಪ್ತಿಮಾಡಿದರು (ಮಹಾವಂ. II. ೧೦೦). **ಮೌಕೂಫ್** : ೧. ಗ್ರಾಮದ ಅಥವಾ ಗ್ರಾಮಗಳ ಭಾಗಗಳಲ್ಲಿನ ಯಾವುದಾದರೂ ಗ್ರಾಮ ನೌಕರಿಯು ಮೌಕೂಫ್ ಆಗತಕ್ಕದ್ದು (ಗ್ರಾಪಶಾಕ. ೮೭).

[← ಅರ. ಮುವಕುಫ್. ಮೌಕೂಫ್ ; ಹಿಂ. ಮೌಕೂಫ್; ಮರಾ. ಮೋಕೂಫ್. ಮೋಕೂಬ್. ಮೋಹಕೂಬ್. /ತುಳು. ಮುಕೂಬ್]

**ಮೋಕ್ಕಕ** (ನಾ). ಒಂದು ಬಗೆಯ ಸಸ್ಯ : "ಮೋಕ್ಕಕಃ – ಮೊಟಗಿನ ಮರ" (೬ಕರಿ. ೦೩೦). [?]

**ಮೋಕ್ಷ** (ನಾ). ೧. ಬಿಟ್ಟುಕೊಡುವುದು. ೨. (ಬಂಧನ, ದಾಸ್ಯ ಮುಂತಾದುವುಗಳಿಂದಾಗುವ) ಬಿಡುಗಡೆ ; ವಿಮೋಚನೆ : ನಿನ್ನ ಬಂಧನಮೋಕ್ಷಮಂ ಮಾಡಿ ರಾಜ್ಯಮಂ ಪೊಗಿಸಿ ಮುನ್ನಿನ ಪರಿಯಲಿರಿಸುವೆಂ (ಹರಿಶ. ೦೩-೦೭). ೩. ಬಿಚ್ಚುವುದು ; ಕಳಚುವುದು. ೪. (ಬಾಣದ) ಎಸೆತ. ೫. ಋಣದ ನಿವಾರಣೆ, – ಪರಿಹಾರ. ೬. ಮನುಷ್ಯನ ಚತುರ್ವಿಧಪುರುಷಾರ್ಥಗಳಲ್ಲಿ ಕೊನೆಯದು; ಆತ್ಮವು ಜನನಮರಣಗಳಿಂದ ದೂರವಾಗುವುದು ; ಮುಕ್ತಿ : "ಅಪವರ್ಗಂ . . . ಮೋಕ್ಷಂ . . . ನಿರಾಮಯಂ ನಿರ್ವಾಣಂ" (ಪಶ್ವಕೋ. ೨೦-೦೯); ಮೋಕ್ಷ ಪ್ರಾಸಾದಾಧಿರೋಹಣನಿಶ್ರೇಣೀಭೂತ ಕ್ಷಪಕಶ್ರೇಣಿಪ್ರಾಯೋಗ್ಯಾಥಃಪ್ರವೃತ್ತಿಕರಣ ಪರಿಣಾಕನಪೂರ್ವಕರಣಕ್ಷಪಕ ಪ್ರಥಮಶುಕ್ಲಧ್ಯಾನಪರಿಣತನಾಗಿರ್ದು (ಶಂಕ. ೦೦-೦೪ ಪ); ಕ್ರಮದಿಂ ಪೂಜಿಸುವಂ ಶತಕ್ರತುವೆ . . . ಪೂಜಾಲಭ್ಯಮಕ್ಷೂಣಮೋಕ್ಷಮೆ (ಧಿಸ್ತ. ೦೦-೩೭); ಧರ್ಮಅರ್ಥಕಾಮಮೋಕ್ಷವೆಂಬ ಚತುರ್ವಿಧ ಫಲಪದಂಗಳ ನಾನೊಲ್ಲೆನಯ್ಯಾ (ಅಲಂದೇ. ೦೩೦-೨೨). ೭. ಸುರಿಸುವುದು ; ಹರಿಸುವುದು : ಕಾಮಗ್ರಹಗೃಹೀತಯಾಗಿರೆ . . . ವ್ಯಾಮೋಹಗದ್ಗದಾಶ್ರುಮೋಕ್ಷಮೂರ್ಛಾದಿ ನಾನಾವಿಕಾರಂಗಳನೊಡನೊಡನೆ ತೋಱುವುದುಂ (ಶಂಕರಾ. ೪-೩೯ ವ). ೮. ತ್ಯಾಗ ; ವಿಸರ್ಜನೆ : ಘಟೋತ್ಕಚವಧೆ ದ್ರೋಣಚಾಪಮೋಕ್ಷಂ ದ್ರೋಣವಧೆ . . . ಪೆಱವುಮುಪಾಖ್ಯಾನ ಕಥೆಗಳೊಳ್‌ಪೊಂದಂ ಕುಂದಲೀಯದೆ ಪೇಟ್ದಿಂ (ಶಂಕರಾ. ೦೪-೩೨ ವ). ೯. ಒಂದು ಬಗೆಯ ಮರ ; ಪಾಟಲಿ : "ಮೋಕ್ಷದ ಮರ – ಗೋಲೀಥ.

ರ್ಘಾಟಲ, ಘಂಟಾ, ಪಾಟಲಿ, ಮೋಕ್ಷ, ಮುಷ್ಕಕ" (ನಾಶರಾ. ೯). ೧೦. ಒಂದು ಬಗೆಯ ಸಸ್ಯ; ಜಟಾಮಾಂಸಿ: "ಮೋಕ್ಷಾ — ಜಟಾಮಾಂಸಿ" (೬ಶವ. ೦೩೦). ೧೧. ನಿಧನ; ಸಾವು; ಮರಣ. ೧೨. [ಜ್ಯೋತಿ] ಸೂರ್ಯ ಅಥವಾ ಚಂದ್ರಗ್ರಹಣಕಾಲದಲ್ಲಿ ಗ್ರಹಣದ ನಂತರ ಉಂಟಾಗುವ ಬಿಡುಗಡೆ: ಇಂದೆನ್ನ ದೇಹಕ್ಕೆ ಗ್ರಹಣವಾಯಿತ್ತು ಇನ್ನೆಂದಿಗೆ ಮೋಕ್ಷವಹುದೋ ಕೂಡಲಸಂಗಮದೇವಾ (ಬಸವ. ೯). ೧೩. [ತತ್ತ್ವಶಾ] ಎಂಟು ಬಗೆಯ ಅವಸ್ಥೆಗಳಲ್ಲಿ ಒಂದು; ಸೃಷ್ಟಿಪ್ರಕರಣದಲ್ಲಿ ಪ್ರವೃತ್ತವಾದ ವೇದವಾಕ್ಯಗಳ ದೃಷ್ಟಿಯಿಂದ ಪ್ರಪಂಚವಸ್ತುಗಳಿಗೆ ಒಟ್ಟಿನಲ್ಲಿ ಸಂಭವಿಸುವ ಅವಸ್ಥೆಗಳು ಎಂಟು—ಉತ್ಪತ್ತಿ ಸ್ಥಿತಿ, ಸಂಹಾರ, ನಿಯಮನ, ಜ್ಞಾನ, ಅಜ್ಞಾನ, ಬಂಧ ಮತ್ತು ಮೋಕ್ಷ ಎಂದು (ಶಾತತ್ತ್ವ. ೪೯೭). ೧೪. [ಜೈನ] ಜೀವ, ಅಜೀವ, ಆಸ್ರವ, ಬಂಧ, ಸಂವರ, ನಿರ್ಜರೆ ಮತ್ತು ಮೋಕ್ಷ ಎಂಬ ಏಳು ತತ್ತ್ವಗಳಲ್ಲಿ ಒಂದು; ಬಂಧನಕ್ಕೆ ಕಾರಣವಾದ ಸರ್ವಕರ್ಮಗಳಿಂದಲೂ ಬಿಡುಗಡೆ ಹೊಂದಿ ಆತ್ಮದ ಶುದ್ಧಸ್ವಭಾವವನ್ನು ಗಳಿಸಿಕೊಳ್ಳುವಿಕೆ: ಜೀವಾಜೀವಾಸ್ರವ ಬಂಧಸಂವರನಿರ್ಜರಾಮೋಕ್ಷ ಭೇದದಿಂ ಸಪ್ತವಿಧಂ. . . ಮೂಲೋತ್ತರಾದಿಭೇದಭಿನ್ನಕರ್ಮಪ್ರಕೃತಿಗಳ ನಿರ್ಮೂಲೋಚ್ಛಿತ್ತಿ ಮೋಕ್ಷ ಮೆಂಬುದು (ಆರಪು. ೦೦–೬೬ ವ); ಆತ್ಮನ ಭಿಮರಾಚಿತ್ಕ ಸ್ವಾಭಾವಿಕ ಜ್ಞಾನಾದಿ ಗುಣಗಣಾವ್ಯಾಬಾಧಸುಖಸಂಯುಕ್ತಾತ್ಯಂತಿಕಾವಸ್ಥಾಂತರಂ ಮೋಕ್ಷಂ (ತತ್ತ್ವಸೂ. ೨). ೧೫. ಜೀವ, ಅಜೀವ, ಪುಣ್ಯ, ಪಾಪ, ಆಸ್ರವ, ಸಂವರ, ನಿರ್ಜರ, ಬಂಧ ಮತ್ತು ಮೋಕ್ಷಗಳೆಂಬ ಒಂಬತ್ತು ತತ್ತ್ವಗಳಲ್ಲಿ ಒಂದು; ನವಪದಾರ್ಥಗಳಲ್ಲಿ ಒಂದು: ಜೀವಾಜೀವಪುಣ್ಯಪಾಪಾಸ್ರವಸಂವರ ನಿರ್ಜರಬಂಧಮೋಕ್ಷಮೆಂದಿಂತು ನವಪದಾರ್ಥಂಗಳುಂ ಪಂಚಾಸ್ತಿಕಾಯಷಡ್ದ್ರವ್ಯಂಗಳುಮೆಂಬಿವಜಿಳ್ಳಾದ ಮಾನುಮುಚಿತಮುಂ . . . ಗುಣಾಂಗಳುಮನಜಿದು (ವರ್ಧಮಾ. ೬-೦೬).

[ಸಂ.]

**ಮೋಕ್ಷಕ** (ನಾ). ೧. ಬಿಡುಗಡೆ ಮಾಡುವುದು. ೨. ಮುಕ್ತಿ; ವಿಮೋಚನೆ. ೩. ವಿಮೋಚನೆ ಮಾಡುವವನು; ಮುಕ್ತಿಯನ್ನು ಕೊಡುವವನು. [ಸಂ.]

**ಮೋಕ್ಷಕಾಲ** (ನಾ). ಗ್ರಹಣವು ಬಿಡುವ ಸಮಯ: ಖಗೋಳಶಾಸ್ತ್ರಜ್ಞರು . . . ಗ್ರಹಣಗಳ ಸ್ಪರ್ಶ ಮತ್ತು ಮೋಕ್ಷಕಾಲಗಳು, ಮಧ್ಯಗ್ರಹಣಕಾಲ ಮುಂತಾದ ಎಲ್ಲ ವಿವರಗಳನ್ನು ಕೊಡುತ್ತಾರೆ (ಸಾಕೋ. VI. ೬೪೯). [ಸಂ.]

**ಮೋಕ್ಷಗತಿ** (ನಾ). ಬಿಡುಗಡೆ; ಮುಕ್ತಿ: ವೀತರಾಗತ್ವಮಂಬುರುಹ ಶ್ರೇಣಿಗೆಯುದಾತ್ತ ಮೋಕ್ಷಗತಿ ಪೌಷ್ಯಕ್ಕಾದುದಾವಂ ದಿಗಂಬರಸಾಂಗತ್ಯತಪಃ ಪ್ರಭಾವಮೆನಸುಂ ಮೆಯ್ವೆತ್ತೊ ಪೇನಾಗದೋ (ಧರ್ಮಾಮೃ. ೬-೩೩). [ಸಂ.]

**ಮೋಕ್ಷಗಾಮಿ** (ನಾ). ಕೈವಲ್ಯಕ್ಕೆ ಹೋಗುವವನು; ಮುಕ್ತಿಯೋಗ್ಯನಾದವನು: ಸಗರಸುತರೆಲ್ಲರುಂ ಮೋಕ್ಷಗಾಮಿಗಳ್ (ಅಜಿತಪು. ೦೨–೨೯); ಭೂಮಿಯೊಳಾಕಾಶವನು ತಂದು ಹೂಳಿದಂತೀ ಮೈಯೊಳಾತ್ಮತುಂಬಿಹುದು ಭೂಮಿಗಚ್ಚರಿಯಲ್ಲವೆಯೆಂದರಾ ಮೋಕ್ಷಗಾಮಿಗಳಧ್ಯಾತ್ಮ ಮಜಿದು (ಭರತೇ. ೬೪-೬೬). [ಸಂ. ಮೋಕ್ಷಗಾಮಿನ್]

**ಮೋಕ್ಷಣ** (ನಾ). ೧. ಬಿಡುಗಡೆ ಮಾಡುವುದು; ವಿಮೋಚನೆಗೊಳಿಸುವುದು. ೨. (ಬಾಣವನ್ನು) ಎಸೆಯುವುದು. ೩. [ನಾಟ್ಯ] ಇಪ್ಪತ್ತು ಬಗೆಯ ಕರಕರ್ಮಭೇದಗಳಲ್ಲಿ ಒಂದು: ಧೂನನ, ಶ್ಲೇಷ, ವಿಶ್ಲೇಷ, ಕ್ಷೇಪ, ರಕ್ಷಣ, ಮೋಕ್ಷಣ . . . ತರ್ಜನ ಈ ಇಪ್ಪತ್ತು ಕರಕರ್ಮಭೇದಂಗಳ್ (ನಾಟ್ಯರಂ. ೯-೧೩ ವ). [ಸಂ.]

**ಮೋಕ್ಷದಾಯಕ** (ನಾ). ೧. ಕೈವಲ್ಯವನ್ನು ಕೊಡುವಿಕೆ. ೨. ಕೈವಲ್ಯವನ್ನು ಕೊಡುವವನು: ಪರಮಾತ್ಮ. [ಸಂ.]

**ಮೋಕ್ಷದಾಯಕಿ** (ನಾ). ಮುಕ್ತಿಯನ್ನು ಕೊಡುವ ದೇವತೆ: ಮೋಕ್ಷದಾಯಕಿ ಸಕಲಮಂತ್ರನಾಯಕಿ ಮಾಯೆ ಸಾಕ್ಷಾಜ್ಜಗನ್ಮಾತೆ (ಕೈಬಲಾ. ೦೩–೨೩). [ಮೋಕ್ಷದಾಯಕ + – ಇ₂]

**ಮೋಕ್ಷಪದ** (ನಾ). ೧. ಕೈವಲ್ಯದ ಪದವಿ; ಮುಕ್ತಿ: ಸತತಮೋಕ್ಷಪದೇಚ್ಛುಮಹಾತಪಸ್ವಿ . . . ಸೈದ್ಧಾಂತಿಕಚಕ್ರವರ್ತಿ ಮುನಿಚಂದ್ರ ಮುನೀಂದ್ರನೆ ವಂದ್ಯಸುರ್ವಿಯೊಳ್ (ಶಂಪ್ರಕೃ. ೦–೭೭). ೨. ಮುಕ್ತಿದಾಯಕನಾದವನು: ಮೋಕ್ಷಪದರ್ ಸದೇಷ್ಯಗಳಕ್ಷಮಮುನಿಗಳ ಸುವಾಕ್ಯದೊಳಮೆಣಿಸಲ್ ಪ್ರತ್ಯಕ್ಷಪ್ರಮಾಣವಚನಮಸಕ್ಷಮ ಮೂಢಾತ್ಮನೀನದಂ ತಿಳಿದಿರ್ಪ್ಪೆ (ಯಶೋಧಚ. ೧೧–೬೯). [ಸಂ.]

**ಮೋಖೂಫ್** 'ಮೋಕೂಫ್' ನೋ.

**ಮೋಗ** (ನಾ). (?): ಬಾಗಿಸೆ ಶಿರವ ಕೂರ್ಮಗಳ ಗ್ಲೌ ಮೇಗಾಲುಗಳ ಸೊಗಸುಗಳ ನವ್ಯಮೋಗದಂತಹ ಹರಡುಗಳ ಬಂದು (ಕುಕೋಟೋ. ೩೯-೯). [ಸಂ.]

**ಮೋಗಮ್** 'ಮೋಘಮ್' ನೋ.

**ಮೋಗುಮ** 'ಮೋಘಮ್' ನೋ.

**ಮೋಘ** (ಗು). ೧. ಇಲ್ಲದಿರುವ; ವಿಹೀನವಾದ. ೨. ಬಿಟ್ಟ; ತ್ಯಜಿಸಿದ. ೩. ವ್ಯರ್ಥವಾದ; ಫಲವಿಲ್ಲದ: ಮಚ್ಚರಮುಂ ಮೋಘಮೊಡಂಬಡುಂ ಕಲುಷಮುಂ ಮುನ್ನುಳ್ಳುದು (ಶಂಶಖಾ. ೭-೩೩). ೪. ಉದ್ದೇಶರಹಿತವಾದ; ಗುರಿಯಿಲ್ಲದ. (ನಾ). ೫. ವ್ಯರ್ಥವಾದುದು; ನಿಷ್ಪ್ರಯೋಜಕವಾದುದು: "ವೃಥೆ ಮೋಘಂ" (ವಸ್ತುಕೋ. ೦೧೨-೦೦); ಮೋಘಮನಖಿಲಪರಿಗ್ರಹದಾಘಮನೀ ಕೈಕೆ ಬೇಡೆ ಧರೆಯುಂ ತೃಣದಿಂ ಲಾಘವಮೆನೆ ಬಗೆದೀಗಂ ರಾಘವನೌದಾರ್ಯತುಂಗನೀಯದುದುಂಟೇ (ಶಂರಾಮಾ. ೬-೦೦೯); ಲೋಕ ಶಾಶ್ವತ, ಇದೇ ಸತ್ಯ, ಮಿಕ್ಕುದು ಮೋಘ (ಬುದ್ಧಕ. ೧೬). [ಸಂ.]

**ಮೋಘತೆ** (ನಾ). ಅಪ್ರಯೋಜಕವಾದುದು; ನಿರರ್ಥಕವಾದುದು: "ಮೋಘತೆ ತಾಂ ವೈಯರ್ಥಂ" (ವಸ್ತುಕೋ. ೦೦೩-೨೯). [ಸಂ. ಮೋಘತಾ]

**ಮೋಘಮ್**, ಮಗುಂ, ಮೊಗಂ, ಮೊಗುಂ, ಮೋಗಮ್, ಮೋಗುಮ, ಮೋಘಮ (ಗು). ೧. ಅನಿಶ್ಚಿತವಾದ; ಅಸ್ಪಷ್ಟವಾದ; ನಿರ್ದಿಷ್ಟವಲ್ಲದ: ಕೊಟ್ಟ ಮನೀಗೆ ಹೋಗ್ರೀನಿ ಅಂಬೋ ಮೋಘಮ್ ಮಾತು ಏನುಪಯೋಗ? (ಭಾಗ್ಯಶ್ರೀ. ೪); ಕೇಶವರಾಯ ಮೋಘಮ್ ಮಾತಾಡಿ ಕೈಬಿಟ್ಟ (ಗ್ರಾಮಾಯ. ೧೦೬). **ಮಗುಂ**: (ನಾ). ೨. ಅಸ್ಪಷ್ಟ; ಅನಿಶ್ಚಯ: ಆಫೀಸಿನಲ್ಲಿ ಇರುವ ಇತರರಿಗೆ ವಿಷಯ ತಿಳಿಯದಂತೆ ಮಗುಂ ಆಗಿ ಉತ್ತರ ಕೊಡುವುದು ಮತ್ತೂ ಕಷ್ಟ (ಅರಮ. ೦೦೬). **ಮೊಗಂ**: ೨. ಸುಂಕೆ ಅಲ್ಲಮಾತಂತ ಅಂಗೆಲ್ಲ ಮೊಗಂ ಆಗಂದ್ರೆ ನಡೀತದ ರತ್ನ? (ಕರಾರ. ೧೬೨). **ಮೊಗುಂ**: ೧. ಉಭಯತ್ರರಿಗೂ ಅನುಕೂಲವಾಗುವಂತೆ ಮೊಗುಂ ಕರಾರು ಮಾಡಿಸಿದೆ (ಕಲ್ಯಾ. ೩೨೯); ಮಹಲಿಂಗಯ್ಯ ಮೊಗುಮ್ಮಾಗಿ. . . ಅಂಗಲಾಚಿದ (ಮಾಮಬಕ. ೩೦). **ಮೋಗಮ್**: ೧. ಹೊಸ ಎಸ್. ಈ. ಯ ನೇಮಣೂಕೀ ಆಜ್ಞೆಗಳು ಹಿಂಬಾಲಿಸಲಿವೆ ಎಂಬ ಮೋಗಮ್ ವಾಕ್ಯವಿತ್ತು (ದೀಕಶ. II. ೩೭೪). ೨. ಅರ್ಜೀ ಒಳಗ ಎಲ್ಲಾ ಮೋಗಮ್‌ನ ಅವ (ದೀಕಶ. II. ೩೩೦); ಹಿಂಗ ಮೋಗಮ್ ಬ್ಯಾಡಪ. ಬಿಡಬಿಡಿಸಿ ಹೇಳನ್ನು ಮಾರಾಜರಿಗೆ (ವಾಧಾಂ. ೯೭). **ಮೋಗುಮ**: ೧. ಖರೀದಿ ಬರಿಯುವಾಗ್ಗೆ ಉತ್ತಮ, ಮಧ್ಯಮ, ಸುಮಾರ ಈ ಪ್ರಕಾರದ ಮೋಗುಮ ವರ್ಣನೆಯು ಬರಿಯದೆ, ಯಾವ ಪ್ರಕಾರದ ಮಾಲು ಬೇಕಾಗುತ್ತದೆಯೋ ಅದರ ಅಜಮಾಸದಿಂದ ಭಾವವು ಸಹಾ ಬರಿಯಬೇಕು (ಮುಂಬಿವ್ಯಾ. ೬೮). **ಮೋಘಮ**: ೧. ಏನೋ ವಿಚಾರಿಸಿದಂತೆ ಮಾಡಿ . . . ಮೋಘಮ

ಮಾತಾಡಿ ಬಿಟ್ಟ (ಗ್ರಾಮಜ್ಞಾ. ೨೬೯). [ ← ಅರ. ಮುಗ್ಹ್ವಮ್ ; ಹಿಂ. ಮುಗ್ದ್ವಮ್; ಮರಾ. ಮೋಘವಮ್, ಮೋಹಗವಮ್ ]

**ಮೋಘವು** ' ಮೋಘವಮ್ ' ನೋ.

**ಮೋಘೆ** (ನಾ). ೧. ಒಂದು ಬಗೆಯ ಸಸ್ಯ; ಪಾದರಿಗಿಡ. ೨. ಕ್ರಿಮಿನಾಶಕಬೀಜವನ್ನು ಹೊಂದಿರುವ ಒಂದು ಬಗೆಯ ಸಸ್ಯ ; "ವಾಯಿವಿಡಂಗ" (ಗುಣಾಮು. ೬). [ಸಂ. ಮೋಘಾ]

**ಮೋಚ** (ನಾ). ೧. ಮರದ ತೊಗಟೆಯಿಂದ ಸುರಿಯುವ ರಸ; ಹಗಿನ. ೨. ಬಾಳೆಯ ಗಿಡ ಮತ್ತು ಅದರ ಹಣ್ಣು; ಕದಳಿ : "ಕದಳೀರಂಭಾಫಿಕ್ಕುಮಂತದಕ್ಕುಂ ಮೋಚಂ" (ವಸ್ತುಕೋ. ೩೪-೬); ಉನ್ನತಚಂಪಕಚೋಚಮೋಚಪಾಟಳಪನಸಾಂಬ್ರ ಪೂಗವನನಾಗಲತಾಳಿಯಿಂ ... ಒಪ್ಪುವುದು (ಶಾಸನ. IX–1, ೦೦೬–೨೩; 1057); ಮಣಿಕನಕರಜತಪಾತ್ರಂಗಳೊಳ್ ... ದ್ರಾಕ್ಷಾಚೋಚಮೋಚಾದಿ ಫಳಕುಳಂಗಳಂ ಸೊಗಯಿಪುವು (ಶಂಪ್ರಪು. ೬-೩೪ ವ). ೩. ಒಂದು ಬಗೆಯ ಮರ ಮತ್ತು ಅದರ ಕಾಯಿ ; ನುಗ್ಗೆ : ಪೊಸತವರೆ ತೊಂಡೆ ಪಡಲಂ ಮೋಚಂ ಕೂಗರಿ ಬದನೆಯೆನಿಪ ಪೇರೋಗರಮಂ ಪಲವನಿಕ್ಕಿದರ್ ಶಶಿಮುಖಿಯರ್ (ಶ್ರೀಪು. ೦೦-೩೨). ೪. ಬೂರುಗದ ಮರ; ಶಾಲ್ಮಲಿವೃಕ್ಷ: "ಸ್ಥಿರಜೀವಿ ಮೋಚ ಶಾಲ್ಮಲಿಯೆಲವವಕ್ಕು" (ಬಂಗಣಾ. ೩೬-೦೭). [ಸಂ.]

**ಮೋಚಕ** (ನಾ). ೧. ಬಿಡುಗಡೆ ಮಾಡುವುದು ; ವಿಮೋಚನೆ ಮಾಡುವುದು. ೨. ಬಿಡುಗಡೆ ; ಮುಕ್ತಿ : ಬಲುಕರ್ಮಬಂಧಗಳು ಮೋಚಕವಾಗುವಲಿ (ಶಿದಾಕೃ. ೦೪-೩). ೩. ಮುಕ್ತಿದಾಯಕವಾದುದು : ಆಸಕ್ತಿಯಿಂದ ಮಾಡಿದ್ದು ಹೇಯ. ಬಂಧಕ, ಕಹಿ ; ಅನಾಸಕ್ತಿಯಿಂದ ಮಾಡಿದ್ದು ಶ್ರೇಯ, ಮೋಚಕ. ಸಿಹಿ (ಅಂತರಾ. ೦೨). ೪. (ಐಹಿಕ ಬಂಧನದಿಂದ) ಬಿಡುಗಡೆ ಹೊಂದಿದವನು ; ಮುಕ್ತ : ತ್ರಿವಿಧ ತಾಪಗಳಿಂದ ತಪಿಸುತ್ತ ಮೋಚಕರಾಗಲು ಯಾಚಕರಾಗಿ ಬಂದ ಜನಕೋಟಿಯನ್ನು ನೋಡಿ ಅನಂತ ಅಚ್ಚರಿಗೊಂಡ (ಚಲಾಪ. ೦೦೩). ೫. ವಿರಕ್ತ; ಯತಿ. ೬. ಅನಾಸಕ್ತಿ; ವೈರಾಗ್ಯ. ೭. ಬಾಳೆಯ ಗಿಡ ಮತ್ತು ಅದರ ಹಣ್ಣು; ಕದಳಿ : "ಮೋಚಕಂ – ಬಾಳೆಯ ಹಣ್ಣು" (ಚಿತ್ರಧಿ. ೦೩೦); ಮೋಚಕಂ ಬಳುಕಿದುವು ನುಣ್ದೊಡೆಗೆ (ಶಂಕರಾ. ೩-೯-೩). ೮. ನುಗ್ಗೆಯ ಮರ ಮತ್ತು ಅದರ ಕಾಯಿ : "ಶೋಭಾಂಜನಃ ಶಿಗ್ರುಃ ತೀಕ್ಷ್ಣಗಂಧಕಃ ಅಕ್ಷೀಬಃ, ಮೋಚಕಃ – ಈ ನುಗ್ಗೆಮರದ ಹೆಸರು" (ಸಿದ್ಧಾಂತಿ. ೦೦೬). ೯. ಶಾಲ್ಮಲಿ ; ಬೂರುಗದ ಮರ. ೧೦. ಮರ; ವೃಕ್ಷ : ಬಾಳೆಯೊಳು ನುಗ್ಗೆಯೊಳು ಭೂರುಹದೊಳು ಸ್ಥಿರಾಯುವಿನೊಳು ವಿರಾಗದೊಳು ಮುಕ್ತಿಯೊಳು ಮೋಚಕಾಖ್ಯಂ" (ಬಂಗಣಾ. ೦೪೯-೩೬). [ಸಂ.]

**ಮೋಚಕರಿ** (ನಾ). ಒಂದು ಬಗೆಯ ಸಸ್ಯ : "ಮೋಚಕರೀ – ಮಾದವೃಕ್ಷ (ಮಾಚಡ ವೃಕ್ಷ)" (ಚಿತ್ರಧಿ. ೦೩೦). [ ? ]

**ಮೋಚಜ** (ನಾ). ಬೂರುಗದ ಮೇಣ ; ಎಲವದ ಹಗಿನು : "ಮೋಚಜಃ – ಎಲವದ ಹಗಿನು" (ಚಿತ್ರಧಿ. ೦೩೦). [ಸಂ.]

**ಮೋಚನ** (ನಾ). ೧. ಬಂಧನದಿಂದ ಬಿಡುಗಡೆ ಮಾಡುವುದು, — ಬಿಡಿಸುವುದು. ೨. ಬಿಡುಗಡೆ ; ವಿಮೋಚನೆ ; ಮುಕ್ತಿ : ಎಲ್ಲಿ ಚೇತನವೆಸುವುದಲ್ಲಿಯೆ ಪ್ರಾಣವದವಲ್ಲಿ ಪ್ರಾಣಂ ಬಲಿವುದಲ್ಲಿಯ ಮೋಚನಂ (ಅಂಗಕ್ಕೆ. ೦೩-೨೯). ೩. ಬಿಡಿಸುವಿಕೆ ; ಕಳೆಯುವಿಕೆ ; ನಿವಾರಣೆ. ೪. ನಿವಾರಣೆ ಮಾಡುವವನು : ನಿರ್ಭರಾಶಾಪಾಶಮೋಚನ ಕರ್ಮಕರ್ಮಠನು (ಬಸಪು. ೩೩-೩); ಶೋಕಮೋಚನನೆಂದು ವೇದಗಳೂ ಕೂಡ ಆತನ ಯಶಸ್ಸಿನ ಗಾಯನ ಮಾಡುವವು (ತುಳಸೀ. ೦೭).. ೫. ಎಸೆಯುವುದು. ೬. ಗರ್ವ. ೭. ಮೋಸ ; ವಂಚನೆ. [ಸಂ.]

**ಮೋಚನಿರ್ಯಾಸ** (ನಾ). = ಮೋಚಜ : "ಮೋಚನಿರ್ಯಾಸಃ– ಎಲವದ ಹಗಿನು" (ಚಿತ್ರಧಿ. ೦೩೦). [ಸಂ.]

**ಮೋಚಶ್ರಾವ** (ನಾ). = ಮೋಚಜ : "ಮೋಚಶ್ರಾವಃ, ಮೋಚಸಾರಃ – ಈಯೆರಡುಂ ಎಲವದ ಹಗಿನು" (ಚಿತ್ರಧಿ. ೦೩೦). [ಸಂ.]

**ಮೋಚಸಾರ** (ನಾ). = ಮೋಚಜ : "ಮೋಚಶ್ರಾವಃ, ಮೋಚಸಾರಃ – ಈಯೆರಡುಂ ಎಲವದ ಹಗಿನು "(ಚಿತ್ರಧಿ. ೦೩೦). [ಸಂ.]

**ಮೋಚಾಶ್ರು** (ನಾ). = ಮೋಚಜ : "ಮೋಚಾಶ್ರುಃ – ಎಲವದ ಹಗಿನು" (ಚಿತ್ರಧಿ. ೦೩೦). [ ಸಂ. ]

**ಮೋಚಿ**$_1$ (ನಾ). ಬಾಳೆ; ಕದಳಿ : "ಮೋಚೀ–ಬಾಳೆ" (ಚಿತ್ರಧಿ. ೦೩೦). [ ಸಂ. ಮೋಚೀ ]

**ಮೋಚಿ**$_2$ (ನಾ). ಚಪ್ಪಲಿ ಮುಂತಾದ ಚರ್ಮದ ಕೆಲಸ ಮಾಡುವವನು; ಚಮ್ಮಾರ : ಜೋಡನು ಹೊಲಿಯಲು ಬಾರದ ಪಂಡಿತ ಮೋಚಿಯು ತಾನಲ್ಲ (ಅರಲೋ. ೨೫).
[ ← ಹಿಂ. ಮರಾ. ಮೋಚೀ; ಬಂಗಾಲಿ. ಮುಚಿ. / ಸಂ. ಮೋಚಿಕ ]

**ಮೋಚಿಕೆ** (ನಾ). ಕತ್ತರಿಸಿರುವ ಸ್ಥಿತಿ : ಇತ್ತ ಮೂಗಿನ ಮೋಚಿಕೆಯ ಭಟ ಖತಿಯ ಭರದಲಿ ಬಂದನಾಹವಕೆ (ಕೊರಾಠಾ. ೬-೨೮-೪).
[ ಮೋಚು$_1$ + – ಇಕೆ ]

**ಮೋಚಿಗ** (ನಾ). ಮೊಚ್ಚೆಯನ್ನು ಹೊಲಿಯುವವನು : ಕವಲೆಯವನಳಿದೋಂ [ಮೋ]ಚಿಗನುಂ . . . ಧರ್ಮ್ಮವಂ ಬಿಟ್ಟೋನ್ (ಇಂ. ೦೧೪೬, ಶಾಸಗಳ್. ೨೦೭–೦೦; 781).
[ ಈ ಇದು ' ಮೊಚ್ಚಿಗ ' ಎಂಬುದರ ಅಪಲಿಖಿತವಿರಬಹುದು ]

**ಮೋಚು**$_1$, **ಮೋಸು**$_1$ (ಕ್ರಿ). ೧. ಕತ್ತರಿಸು ; ತುಂಡುಮಾಡು ; 'ಮೋಚಿಕೆ' ಪರಾ. ೨. ವೈಧವ್ಯಸೂಚಕವಾಗಿ ತಲೆಯನ್ನು ಬೋಳಿಸಿಕೊಳ್ಳು : "ಮೋಚು—ವೈಧವ್ಯೇ" (ಕಮುಂ) ; ಈಚಲಮರ ಹೀನ ನೀಚರ ನೆರೆ ಹೀನ ಮೋಚಿದ ಹೆಣ್ಣು ತರ ಹೀನ (ಸರ್ವಜ್ಞ. ೦೭೩೭). ೩. ವೈಧವ್ಯಸೂಚಕವಾಗಿ ತಲೆಯಮೇಲೆ ಸೆರಗು ಹಾಕಿಕೊಳ್ಳು– ಮುಸುಕು ಹಾಕಿಕೊಳ್ಳು: (೬). ೪. (ಅಲಂ) ಹಾಳುಮಾಡು ; ನಾಶಗೊಳಿಸು : ನಾಚಿ ಪುಷ್ಕರ ಸಿಂಹಪೀಠವ ಮೋಚಿದವನಂ ತಿಳಿದು ನಿಳಯಕ ಕೋಚೆಯಿಂದೈದಿದನು ನಳನೃಪ ನಿಜನಿಕೇತನಕೆ (ಕಂಬಿಶಾ. ೧೯–೬೪). ಮೋಸು$_1$ : ೪. ಮಾಂಡವ್ಯಪುರವರಾಧೀಶನತಿಕೋಪವಮಾನುಸನಾಗಿ ಜಂಗಮನ ಮೋಸಿ ಬಾ ಕಡ್ದೊಯ್ದು ಚರಚೋರ ಕಳವುರವ . . . ಎನುತಲಿ ಯತಿಯ ರೋಷದಿಂ ಕಿಡಿಕಿಡಿಯನುಗುಳುತಿರೆ (ಕೋರಠಾ. ೩–೨).

**ಮೋಚಿಕೊಳ್ಳು** = ವೈಧವ್ಯಸೂಚಕವಾಗಿ ತಲೆಯನ್ನು ಮುಂಡನ ಮಾಡಿಸಿಕೊಳ್ಳು : ನಿನ್ನ ಅಪ್ಪ ಅಂತೀಯಲ್ಲ, ಅವರು ಸತ್ತಾಗ ನಾನು ಮೋಚಿಕೊಂಡೆ (ಸಣ್ಣ. ೮. ೯–೩೭).. ' ಲೋಚು ' ಪರಾ.
[ ದೇ.॥ ತೆಲು. ಮೋಯು ]

**ಮೋಚು**$_2$ (ನಾ). ಬೋಳಿಸುವಿಕೆ ; ಮುಂಡನ : ಓಡಾಂತು ಕಯ್ಯಲ್ಲಿ ಮೋಚಾಂತು ತಲೆಯಲ್ಲಿ . . . ಪರಿಜು ಸೊಡರಂತವಂ ಬಿಕ್ಕು ನಿಕ್ಕುವಮಲ್ತು (ಶಾಸಂದ. ೭-೪೬). [ <ಮೋಚು$_1$ ]

**ಮೋಚೆ** (ನಾ). ೧. ಬಾಳೆ ; ಕದಳಿ : "ರಂಭಾ, ಕದಳೀ, ಮೋಚಾ— ಈ ೩ ಬಾಳೆ" (ಶಬ್ದಾಮ. ೩೨-೩೯). ೨. ಹತ್ತಿಯ ಗಿಡ. ೩. ನೀಲಿ ಗಿಡ : "ಮೋಚಾ—ಬಾಳೆ, ನೀಲಿ, ಎಲವ, ತದುಕು" (ಚಿತ್ರಧಿ. ೦೩೦). ೪. ಶಾಲ್ಮಲಿ ವೃಕ್ಷ; ಬೂರುಗದ ಮರ: "ಪಿಚ್ಛಿಲಾ, ಪೂರಣೀ, ಮೋಚಾ, ಚಿರಾಯುಃ, ಶಾಲ್ಮಲಿಃ —ಈ ಬೂರುಗದ ಗಿಡ" (ಸಿದ್ಧಾಂತಿ. ೦೨೨).
[ ಸಂ. ಮೋಚಾ ]

**ಮೋಜ** ' ಮೊಚ್ಚೆಯ ' ನೋ.

**ಮೋಜಣಿ** (ನಾ). ಭೂಮಿಯನ್ನು ಅಳತೆ ಮಾಡುವಿಕೆ ; ಭೂಮಿಯ ಮಾಪನ : ಮೋಜಣೀ ಎಂಬುವದು ಅಳತೆಯನ್ನೂ ಮೋಜಣೀದಾರ್ ಎಂಬುವದು ಅಳತೆ ಮಾಡುವವನನ್ನೂ ತಿಳಿಸುವದು (ಭೂಮಿಅ. ೧) ; ನೆಲವನ್ನೆಲ್ಲ ಅಳೆದು ವಿಂಗಡಿಸಿ ಕಂದಾಯ ಗೊತ್ತುಮಾಡುವ 'ಮೋಜಣಿಯವರ' ಕಾರ್ಯರೀತಿಯನ್ನು ಇದು ವಿವರಿಸುತ್ತದೆ (ಪಾಕಪ. ೦೩೩). [ ←ಮರಾ. ಮೋಜಣೀ ]

**ಮೋಜಣಿದಾರ** 'ಮೋಜಣೀದಾರ' ನೋ.

**ಮೋಜಣೀಖಾತೆ** (ನಾ). ಭೂಮಿಯ ಅಳತೆ, ಪರಿಶೀಲನೆ ಮೊದಲಾದ ಕಾರ್ಯವನ್ನು ಮಾಡುವ ಇಲಾಖೆ : ಮೋಜಣೀಖಾತೆಯಲ್ಲಿ ಅವನಿಗೊಂದು ಕೆಲಸವಿತ್ತು (ರಂಗಶೋ. ೯೯). [ ಮೋಜಣಿ + ಖಾತೆ$_2$ ]

**ಮೋಜಣೀದಾರ, ಮೋಜಣಿದಾರ, ಮೋಜಿನಿದಾರ, ಮೋಜಿನೀದಾರ** (ನಾ). ಭೂಮಿಯನ್ನು ಅಳತೆ ಮಾಡುವವನು : ಕೆಲವು ವೇಳೆ ಮೋಜಣೀದಾರನು ಅಳತೆಯ ಕೆಲಸದಲ್ಲಿರುವಾಗ ನಿಶಾನಿ ಹಿಡಿಯುವವನು ನಿಶಾನಿ ಕೆಳಗಿಟ್ಟು ನಿದ್ದೆ ಮಾಡುವುದುಂಟು (ಭೂಅಿಶಿ. ೦೩). **ಮೋಜಣಿದಾರ** : "ಮೋಜಣಿದಾರ, ಪೈಮಾಷಿದಾರ'' (Surveyor. ೩೦೫೨). **ಮೋಜಿನಿದಾರ** : ಮೋಜಿನಿದಾರನ ದಿಗ್ದರ್ಶಕ (Compass. ಶಾಶಿ. ೦೮). **ಮೋಜಿನೀದಾರ**: ತಮ್ಮ ಜಮೀನನ್ನು ಪಕ್ಕದ ಜಮೀನಿನವನು ಒತ್ತುವರಿ ಮಾಡಿಕೊಂಡಿದ್ದಾನೆಂದು ಮೋಜಿನೀದಾರರನ್ನು ಕರೆಸಿ, ಅಳತೆ ಮಾಡಿಸಿ, ಸರಿಯಾದ ಸ್ಥಳಕ್ಕೆ ಬಾಂದುಕಲ್ಲು ನೆಡಿಸಿದ್ದವನು (ಊಪಾ. ೩೩). [← ಮರಾ. ಮೋಜಣೀದಾರ್]

**ಮೋಜನ** (ನಾ). ವಿಮೋಚನೆ ; ಬಿಡುಗಡೆ : 'ಮೋಜನ—ಮೋಚನ = ಬಿಡುಗಡೆ" (ಕನ್ನಕೋ. ೩೭) ; ಮೋಚನ, ಮೋಜನ (ಕರ್ನಾಸು. ೧೯೩ ಕ್ರಯೋ). [ <ಸಂ. ಮೋಚನ]

**ಮೋಜನಿ** (ನಾ). ಮಾವಿನ ಮರ : "ಮೋಜನ್ನಿ—ಮಾವು" (೬೪೦.೦೩೦). [ ? ]

**ಮೋಜಾ** 'ಮೊಚ್ಚೆಯ' ನೋ.

**ಮೋಜಿನಿದಾರ** 'ಮೋಜಣೀದಾರ' ನೋ.

**ಮೋಜಿನೀದಾರ** 'ಮೋಜಣೀದಾರ' ನೋ.

**ಮೋಜು$_1$** 'ಮೊಚ್ಚೆಯ' ನೋ.

**ಮೋಜು$_2$, ಮೌಜು** (ನಾ). ೧. ವಿನೋದ; ತಮಾಷೆ : ಈ ಸನ್ನಿವೇಶವು ಬಲು ಮೋಜಿನದಾಗಿದೆ (ಪಾಪಿಕ. ೦೯೯) ; ಫಕೀರನೊಬ್ಬನು ಬಂದು ಅಮುಲನಿಗೆ ಮೋಜಿನ ಕತೆಗಳನ್ನು ಹೇಳುತ್ತಾನೆ (ಧರ್ಮಸಾ. ೬೯) ; ಆಗಾಗ ಮೋಜಿಗೆಂದು ಮುಕ್ಕಾಲು ಹಣ್ಣುಗಳನ್ನು ತನ್ನ ತುಟಿಗಳ ಮಧ್ಯೆ ಇರಿಸಿಕೊಳ್ಳುವಳು (ಅಕ್ರಮ. ೬೩). ೨. ವಿಲಾಸ : ಮನೋರಂಜನೆ ; ಸುಖಭೋಗ : ಗಾಜು ನೋಟಕೆ ಲೇಸು ಮೋಜು ಇರುಳಲಿ ಲೇಸು (ಸರ್ವಜ್ಞ. ೦೦೩೩) ; ಕೆಲವೊಂದು ಸಲ ಮೋಜಿಗಾಗಿ ಕುದುರೆಸವಾರಿ ಮಾಡುತ್ತಿದ್ದುದುಂಟು (ಸಸ್ಯಕ. ೯೯). ೩. ಷೋಕಿ ; ಮಜ : ನಮ್ಮ ಕ್ರಿಶ್ಚನ್ನರಿಗೆ ಸ್ವಲ್ಪಿಲ್ಲ ಸ್ವಲ್ಪ ಮೋಜಿದೆ ಜೀವನದಲ್ಲಿ-ನಿಮಗೆ? (ಹೂಸಕ್ಕಿ. ೧೩೯); ಗೊಂಬೇ ಮದಿವಿ ಮಾಡಿ ಮಾಡಿ ಸಾಕಾಯ್ತು. ಹೋಡಿ-ಅವರೊಳಗೆ ಮೋಜೇ ಇಲ್ಲ (ಮುಕ್ಕೃ. ೩೦). ೪. ಸಂತೋಷ ; ಆನಂದ : "ತುಷ್ಟಿ=ಮೋಜು" (ಶಾಕಶ. ೩೭). ೫. ಸಂಭ್ರಮ ; ಸಡಗರ : ಗೌಜಲಹಕ್ಕಿಯ ಕಾಳಗವನು ಬಲು ಮೋಜಿನಿಂದಲಿ ಮಾಡಿಸುವರು (ಕಂಪಲಿ. ೭-೦೯) ; ರಾಜರಾಜರು . . . ಮೋಜಿನಿಂ ಮುಂದೆ ಹಿಂದೆ ಪಾಸಗಿ ಬರುತಿರಲು (ಶ್ರೀಗಂಂ. ೧೩೩-೨) ; ಇಬ್ಬರೂ ಮೋಜಿನಿಂದ ಜಾತ್ರೆ ಮಾಡಿ ತೃಪ್ತಿ ಹೊಂದುತ್ತಾರೆ (ಕನ್ನಡಾ. ೦೦೭). ೬. ಸೊಗಸು ; ಅಂದ : ಮುಂಗಾರುಮಳೆಯ ಮೋಜನ್ನು ದಿಟ್ಟಿಸುತ್ತ . . . ಕುಳಿತುಕೊಂಡಿದ್ದೆ (ಪಾಕೋಲಿ ೯). **ಮೌಜು** : ೧. ಮಾಯೆಯನು ಮುರಿದೆತ್ತಿ ಮೌಜಲಿ (ಕಂಟಕ. ೦೦). ೩. ಗೆಳೆಯರೂ ಬಂದಾಪವರಿಂದ ಅವನಿಗೆ ಒಳ್ಳೇ ಮೌಜಿನಿಂದ ಕಾಲ ಕಳೆಯಲಿಕ್ಕೆ ಅನುಕೂಲವಾಗಿತ್ತು (ಅವಳಕ. ೪). ೭. ಲಹರಿ ; ಗುಂಗು : ನಾನೀಗ ಒಳ್ಳೆಯ ಮೌಜಿನಲ್ಲಿದ್ದೇನೆ ! (ಅಶಿಗ. ೧೩೦). ೮. ಉತ್ಸವ ; ಸಮಾರಂಭ : ಜಾತ್ರೆ ಮೌಜುಗಳಲ್ಲಿ . . . ಭಾಗವಹಿಸಿ ಜನತೆಯನು ಭಕ್ತಿರಸದತ್ತ ಆಕರ್ಷಿಸುತ್ತಿದ್ದರು (ಕಂಠಫ. ೫೭).

**ಮೋಜಿನ ವೇಷ** = ಮನೋರಂಜನೆಗಾಗಿ ಧರಿಸುವ ವಿಚಿತ್ರವೇಷ : ಮೋಜಿನ ವೇಷ ಹಾಕಿದವರಿಗೆ . . . ಬಹುಮಾನಗಳನ್ನು ಹಂಚಿದರು (ಕಶಕೃ. ೩-೪೦). **ಮೋಜಿನಾಟ**=ತಮಾಷೆಯ ಪ್ರಸಂಗ : ಅವರಿಗೆ ಹೆದರಿಕೆಯೆಲ್ಲ ಹೋಗಿ ಇದೊಂದು ಮೋಜಿನಾಟವೆಂದು ಕಾಣತೊಡಗಿತ್ತು (ಮುಂಗಾಮು. ೫). [←ಅರ. ಹಿಂ. ಮರಾ. ಮೌಜ್]

**ಮೋಜುಗಾರ** 'ಮೋಜುಗಾಟಿ' ನೋ.

**ಮೋಜುಗಾರಿಕೆ** (ನಾ). ವಿಲಾಸ ; ಸುಖೋಪಭೋಗ : ಆ ಹಣ ಮ್ಯಾನೇಜರನ ಮೋಜುಗಾರಿಕೆಗೆ ದುರ್ವ್ಯಯವಾಗಿತ್ತು (ಐದುಶ್ಮ. ೪೩) ; ನಿನ್ನ ಕಕ್ಷಿಗಾರರ ಮೋಜುಗಾರಿಕೆಯ ರಭಸದಿಂದ ಪತಿಯ ಪ್ರಾಣವನ್ನು ಹೋಗಲಾಡಿಸಿಕೊಂಡಳೆಂದು ಹೇಳವಲ್ಲೆಯಾ ? (ವಾಗ್ವೈಶಿ. ೨೨೦). [ಮೋಜುಗಾರ (<ಮೋಜುಗಾಟಿ) + – ಇಕೆ]

**ಮೋಜುಗಾಟಿ, ಮೋಜುಗಾರ** (ನಾ). ೧. ವಿಲಾಸಿ ; ರಸಿಕ ; ಗುರುಭಕ್ತಿಯೆಂಬೋದೆ ಕೊಳವಿಯಾಕಾರ ಸಿರಿನಾರಾಯಣನೆಂಬೊ ನೀರ ಅವನಜಿಸು ತುಂಬಿಕೊಳ್ಳೊ ಎಲ ಮೋಜುಗಾಟಿ (ಶ್ರೀಂದ. ೩-೯೭-೨). **ಮೋಜುಗಾರ** : ೧. ರಾಜಬೀದಿಗಳಲ್ಲಿ ತಿರಳುವ ಮೋಜುಗಾರರ ಬಳಿಯ ಬಟ್ಟೆಗಳೊಳ್ ಪೋಕಳಿಗಳನಿಟ್ಟಂತೆ (ಶ್ರೀಗಂಂ. ೦೪೩-೦೨). ೨. ತಮಾಷೆ ಮಾಡುವವನು ; ಹಾಸ್ಯಗಾರ : ಒಳ್ಳೆಯ ಮೋಜುಗಾರರು ! ಉದ್ದ ಪಾದ ಲಂಗಗಳನ್ನು ತೊಟ್ಟು ಮೇಳದವರು (ಹುಲಿಪಾ. ೭೯). [ಮೋಜು$_2$ + — ಗಾಟಿ]

**ಮೋಟ$_1$** (ನಾ). ದಡ್ಡತನ ; ಅಜ್ಞಾನ : 'ಮೋಟವಾದ' ಪರಾ. [ದೇ.॥ ತಮಿ. ಮೋಟು ; ತೆಲು. ಮೋಟ ; ಬ್ರಾಹುಈ. ಮೋಟ್ = ತಿಳಿಗೇಡಿಯಾದ]

**ಮೋಟ$_2$** (ನಾ). ೧. ಕೈ, ಕಾಲು ಮುಂತಾದ ಅವಯವಗಳಿಲ್ಲದವನು ; ಅಂಗಹೀನ : ಕೈಯಿಲ್ಲದ ಮೋಟನಂತು ಕಾಲಿಲ್ಲದ ಪಂಗುವನೆಂತು ಶುಭಕಾರ್ಯಕ್ಕಂ ರಾಜಸಭೆಗಂ . . . ಒಳ್ಪಂಗಂ ಸಲ್ಲಂ (ರವರ್ತಾಪ್ಮ. ೯-೩) ; ಮೂಳನಂ ಮೂಳನಂ ಮೋಟನಂ ಮುಕ್ಕನಂ . . . ಬೇಳಿ ಬೆಳೆಯಿತ್ತೊಡವನಂ ಕಾಮನೆಂಬ ದುಶ್ಶೀಲೆಯರು ಕಣ್ಗೆ ಸೆದರು (ಹಕಶಾ. ೯-೪೪) ; ಮೋಟಂಗೆ ಕೈಗಳು ಮೊಳೆತವಂಗುಳಿಸಹಿತವಾ ದಸರಯ್ಯನ ಭಾವದಲಿ (ಬಿಸಕೃ. ೩೬ ಸಚಶಪ) ; ಲೀಲೆಯಿಂ ಬಸವನಾ ಮೋಟಂಗೆ ಕೊಡನೆ ಕೈಕಾಲ (ಚಂಪ್ರ. ೫೭-೮೨). (ಗು). ೨. ಕೈಕಾಲಿಲ್ಲದ ; ಅಂಗಹೀನನಾದ : ಮೋಟ ಗಂಡನ ಮೂಕೊಜಿತೆ ಹೆಂಡತಿ ಬೇಟವ ಮಾಡಿದಂತಾಯಿತ್ತು ಕಾಣಾ (ವಚಸಂ. ೨೦೩-೭೦). ೩. ಬೋಳಾದ ; ಬರಿದಾದ : ಸಾಕ್ಷಾತ ವಡಬಾಗ್ನಿಯೆ ವಿಗ್ರಹವೆಸಿ ತಪವಂ ಮಾಳ್ಪುದೊಯ್ಯಂಬ ಹಾಗೆಯು ಮೋಟಮರದಂತೆ ಕವಲದೆಯಿಪ್ಪಂಥಾ (ಕಾಶೀಖಂ. ೦೭-೪). ೪. ಚಿಕ್ಕದಾದ ; ಗಿಡ್ಡ : 'ಮೋಟಗೆಯ್' ಪರಾ. [ < ಮೋಟು + – ಅ$_7$. / ತಮಿ. ಮೊಣ್ಣೈ ; ತೆಲು. ಮೊಂಡಿ, ಮೊಂಡೆಮು ; ಕೋತ. ಮೊಂಡ್ಯ ; ತೊದ. ಮುಡ್ಯ]

**ಮೋಟ$_3$** (ನಾ). ಒಂದು ಬಗೆಯ ಸಸ್ಯ : "ವಿಪ್ರಾ—ಮೋಟ, ಬೋಟತಟಿ" (೬೪೦. ೦೫೨). [ಸಂ. ಮೋಟಾ]

**ಮೋಟಕೆಯ್** 'ಮೋಟಗೆಯ್' ನೋ.

**ಮೋಟಗಯ್ಯಿ** 'ಮೋಟಗೆಯ್' ನೋ.

**ಮೋಟಗೆಯ್, ಬೋಟಕೆಯ್, ಮೋಟಗಯ್ಯಿ** (ನಾ). ಪೂರ್ಣವಾಗಿ ಬೆಳೆಯದೆ ಗಿಡ್ಡಾಗಿರುವ ಕೈ ; ಮೊಂಡುಕೈ : ಹೋಗಿ ದಸರಯ್ಯಗಳ ಮಂಡೆಯನೀಗ ನಿನ್ನಯ ಮೋಟಗೆಯ್ಯಲಿ [ಪಾಠಾಂ. ಕೈಯಲಿ] ಬೇಗದಲಿ ತಿವಿ (ಬಸ್ತು. ೩೭-೧೭). **ಮೋಟಕೆಯ್ :** ಭಂಡನೀತನು ಕಪಟವೇಷದ ತೊಂಡು ಕಾಜನು ಮೋಟಕೆಯ್ [ಪಾಠಾಂ. ಕೈ] ಗಳ ಮುಂಡನೆನ್ನದೆ ತನ್ನ ಭಾವಕೆ ಜಂಗಮಾಕೃತಿಯ ಕಂಡು (ಬಸ್ತು. ೩೭-೩೩). **ಮೋಟಗಯ್ಯಿ :** ಅಂಗ ಜೋದ್ರೇಕದಿಂದವಗಡಿಸಿ ಮೋಟನೊಡನಿರಲವಂ ಕಳ್ಳಿ ಡಿದು ತಿವಿಯೆ ತನ್ನಯ ಮೋಟಗಯ್ಯಿಂದೆ (ಕೊಟ್ಟೂ ಬ. ೪-೨೭). [ಮೋಟ$_2$ + ಕೆಯ್$_2$]

**ಮೋಟನ** (ನಾ). ೧. ನಾಶಮಾಡುವುದು. ೨. [ನಾಟ್ಯ] ಇಪ್ಪತ್ತು ಬಗೆಯ ಕರಕರ್ಮಭೇದಗಳಲ್ಲಿ ಒಂದು : ಧೂನನ, ಶ್ಲೇಷ . . . ಮೋಟನ, ವಿಸರ್ಜನ, ಆಹ್ವಾನ, ತರ್ಜನ–ಈ ಇಪ್ಪತ್ತು ಕರಕರ್ಮಭೇದಂ ಗಳ್ (ಲಾಸ್ಯರಂ. ೪-೦೩ ಪ). [ಸಂ.]

**ಮೋಟರು** 'ಮೋಟಾರು' ನೋ.

**ಮೋಟವಾದ** (ನಾ). ಅಜ್ಞಾನದಿಂದ ಕೂಡಿದ ಚರ್ಚೆ : ಹುರುಳಿಲ್ಲದ ಮಾತು : ಪೂರ್ವಕರ್ಮಶುಭಾಶುಭವೆನಿಪ್ಪ ಮೋಟವಾದಂ ಸಲ್ಲದು (ಬಸವ. ೫೪-೧೭). [ಮೋಟ$_1$ + ವಾದ$_2$]

**ಮೋಟಾರ್** 'ಮೋಟಾರು' ನೋ.

**ಮೋಟಾರು, ಮೋಟರು, ಮೋಟಾರ್** (ನಾ). ೧. ಯಾಂತ್ರಿಕ ಚಲನೆಯನ್ನು ಉತ್ಪಾದಿಸುವ ಯಂತ್ರ ; ಚಾಲಕಯಂತ್ರ : ಈ ಮುದ್ದಲೆಯನ್ನೂ ಸ್ಪರ್ಶಕಾರಿಯನ್ನೂ (ಕಾಂಟೆಕ್ಟ್ ಮೇಕರ್) ಒಂದು ಸಣ್ಣ ಸಮಕಾಲಿಕ ಮೋಟಾರು ಓಡಿಸುತ್ತದೆ (ಕಶಿಕೋ. I, ೬೩೪). ೨. ಚಾಲಕ ಯಂತ್ರದಿಂದ ನಡೆಯುವ ಕಾರು, ಬಸ್ಸು ಮುಂತಾದ ವಾಹನ : ಈ ಕೋಲಾಹಲವನ್ನು ಕೇಳಿ ಮೋಟಾರಿನೊಳಗಿನ ಜನರು ಸುತ್ತಲಿನ ಪರದೆ ಎತ್ತಿ ಹೊರಗಿನವರನ್ನು ನೋಡುತ್ತಲಿದ್ದಾರೆ (ಕೃಪಸ. ೬೬) : ಅವನು ಕೋಪದಿಂದ ಎಸೆದ ಆಟದ ಮೋಟರು ತಳಮೇಲಾಗಿ ಬಿದ್ದು ಕಾಲಿಗೆ ಸಿಕ್ಕುತ್ತದೆ (ಅಲಪು. ೪೪). **ಮೋಟರು :** ೨. ನಮ್ಮ ದೇಶದಲ್ಲಿ ನೂರಾರು ಮೋಟರುಗಳು ಬಳಕೆಯಲ್ಲಿವೆ (ವಾಲ್ಲ. I, ೪೦೩) ; ಉಳಿದ ಪಯಣಿಗರಿಗೆ ಮೋಟರು, ಟಾಂಗ ಮೊದಲಾದ ವಾಹನಸೌಕರ್ಯಗಳು ಸಿಗುತ್ತವೆ (ಅಕಸ. ೨). **ಮೋಟಾರ್ :** ೨. ಬೈಸಿಕಲುಗಳ್ ಮೋಟಾ ರ್ಗಳಿದ್ದು . . . ಮೊತ್ತಮನಿವಂ ಬಣ್ಣಿಪ್ಪನಂ ಕಾಣೆನಾ (ಮೈಸೂರು. ೩-೦೦೭). [← ಇಂ. Motor]

**ಮೋಟಾಳು** (ನಾ). ಕುಳ್ಳ ; ಗಿಡ್ಡ : ಆಟಾಳೊಂದು ಮೋಟಾಳೇ ? (ಗಾದೆ). [ಮೋಟು + ಆಳು$_3$ ( < ಆಳ್$_3$ ) ]

**ಮೋಟಿ** (ನಾ). ೧. ಮುಂಗೈ ಇಲ್ಲದವಳು. ೨. ಕುಳ್ಳಗಿರುವವಳು: (೬). [ಮೋಟ$_2$ + — ಇ$_2$. / ತುಳು. ಮೋಟಿ, ಮೋಂಟಿ]

**ಮೋಟು** (ನಾ). ೧. ತುದಿ ಮುರಿದುದು : ಮೊನಚಾಗಿಲ್ಲದುದು ; ಮೊಂಡು : ಹಾರೆ ಮೋಟು, ಗುದ್ದಲಿ ಬೊಪ್ಪು, ಗೈಯುವವನಿಗೆ ಒಕ್ಕಿ (ಗಾದೆ). ೨. ತುಂಡಾದ ಕೈ ; ಮೊಂಡುಕೈ : ಕೇಶವನ ಬೇಟವಳಿವಾ ಸುರದ ಮೋಟುಳಿನ ವ್ಯಾಸನುಚ್ಯುತ ತೃಣವಿದೇವೆಂದು ಹೇಸಿಯುವನಂ ಬಿಸುಟುಯಿವಾಲಂಘ್ರಿಪಿಡಿದುಳಿದ ವ್ಯೋಸಿಯಂ ಕಾಳಿಕಾಖಂಡದಲ್ಲಿ (ಶಾಪಂತ. ೨-೩೦) ; ದಂಡಿಸಿರದ ವಸಂತಮೋಕುಳಿಯಂಜೆಯಿಂನೆ ಮೋಟಿರಡಜಲಿ ತೊಜಿಮಂದುವರುಣಜಲೌಘ ತೊಜಿದುದು ದಿಕ್ತಟಾವಳಿಯ (ಕೊರಂ. ೬-೨೬-೪೯). ೩. ಕೊಂಬೆ, ರೆಂಬೆಗಳಿಲ್ಲದ ಮರದ ಭಾಗ ; ಬೊಡ್ಡೆ: "ಸ್ಥಾಣುಃ, ಧ್ರುವಃ, ಶಂಕುಃ – ಈ ೩ ಮೋಟಿನ ಹೆಸರು " (ನಿಘಂ. ೦೩. ೦೦೦). ೪. ಕೊಯ್ಲಾದ ಮೇಲೆ ಉಳಿಯುವ ಪೈರು : ಕೂಳೆ : ಮೇಯದ ಮೋಟು ಕಾಣದು, ಹೋದ ಹೆಜ್ಜೆ ಕಾಣದು (ಗಾದೆ). ೫. ಊನ; ನ್ಯೂನತೆ : ನಮಗೆ ಅನುಕೂಲವಾಗಿದ್ದರೆ . . . ಬೇಕಾದದ್ದು ಮಾಡು ತ್ತಿದ್ದೆವು ಎಂಬ ಅಹಂಭಾವಕ್ಕೆ ಒಳಗಾಗಿ ನಮ್ಮ ಮೋಟು ಮೇಲೆ ಮಾಡಲಿಕ್ಕೆ ಹವಣಿಸುವೆವು (ಕುಟುಂಬ. ೨೪). (ಗು). ೬. ಕುಳ್ಳಾದ ; ಗಿಡ್ಡವಾದ : ಮೋಟುಗೋಡೆಯನ್ನು ಹಾರುವುದು ಇವನೊಬ್ಬನಿಗೇ ಸಾಧ್ಯ ! (ಜಾತಿಗೆ. ೩೬) ; ಮೋಟುಗೋಡೆಯ ಮೇಲೆ ಕುಳಿತು ತಲೆ ಕೊಂಕಿಸಿ ನಗು ಬೀರುತ್ತಿರುವಾಗ ಶೇಖರ ಒಂದು ಫೋಟೋ ತೆಗೆದ (ಬೂಪಟ್ಟಿ. ೬೭). [ದೇ.॥ ತಮಿ. ಮೊಟ್ಟೈ, ಮೊಣ್ಣೈ ; ಮಲ. ಮೊಟ್ಟ ; ತುಳು. ಮೋಂಟು, ಮೋಂಟ್, ಮೋಂಟ ; ಕೊಡ. ಮೋಟ್; ತೆಲು. ಮೋಟು, ಮೋಡು]

**ಮೋಟುಕೈ** 'ಮೋಟುಗೆಯ್' ನೋ.

**ಮೋಟುಗೆಯ್, ಮೋಟುಕೈ** (ನಾ). ೧. ಕತ್ತರಿಸಿದ ಕೈ: ತುಂಡುಗೈ : (೬). **ಮೋಟುಕೈ :** ೨. ಗಿಡ್ಡವಾಗಿರುವ ಕೈ : ಮೋಟುಕೈಗಳನ್ನು ತಿರುವುತ್ತ, ಕಂಬಗಳನ್ನಿತ್ತಿದ್ದ ಆ ಕಾಲುಗಳಿಗೆ ಕಿರುಗೆಜ್ಜೆಗಳ ಸರಗಳನ್ನು ಕಟ್ಟಿಕೊಂಡು ನಾಟ್ಯರಂಗವೇರಿದ ಗಣಪತಿ (ಶಾಂತಲಾ. ೨೩೪). [ಮೋಟು + ಕೆಯ್$_2$]

**ಮೋಟೆ** (ನಾ). ದಿಣ್ಣೆ : ಗುಡ್ಡ : ಗದ್ದೆಗೆ ಸೀಮೆ ಯಾವುದೆನೆ . . . ಬಡ ಗಣದ ಮೋಟೆಯ ದಣ್ಣೆಯ ಪಸಿನಕ್ಕೆ ನಟ್ಟ ಕಲ್ಲು (ಶಾಸ. XI–ii, ೦೬೭-೮೯; 1125); ಭಾಗಮಂಡಲದ ಕೋಟೆಗೆ ಹೋಗಿ, ಮುತ್ತಿಗೆ ಹಾಕಿ, ಮುಂಬಾರತ್ತು ಎಂಬ ಮೋಟೆಯಲ್ಲಿ ಫಿರಂಗಿ ಮಡಗಿ . . . ಕೋಟೆಗೆ ಇಡು ತ್ತಿದ್ದರು (ರಾಜೇಂದ್ರ. ೪೯). 'ಮುಂಗುಲಿ$_2$', 'ಮೊಗಡು' ಪರಾ. [ದೇ.॥ ತಮಿ. ಮೋಟು]

**ಮೋಟ್ಟಾಯಿತ** (ನಾ). [ಕಾವ್ಯಮೀ] ಹತ್ತುವಿಧವಾದ ಶೃಂಗಾರ ಚೇಷ್ಟೆಗಳಲ್ಲಿ ಒಂದು ; ಪ್ರಿಯಕರನ ವಾರ್ತೆಯನ್ನು ಕೇಳಿದಾಗ ಇಲ್ಲವೆ ಆತನನ್ನು ನೆನೆದಾಗ ಸ್ತ್ರೀಯ ಸ್ವಾಭಾವಿಕವಾದ ಅಂಗಚೇಷ್ಟೆ ಗಳ ಮೂಲಕ ಸೂಚಿತವಾಗುವ ಪ್ರೀತಿಯ ಅಭಿವ್ಯಕ್ತಿ : ಬಿಬ್ಬೋಕ ಮೋಟ್ಟಾಯಿತ . . . ಕುಟ್ಟಮಾಗಳೆಂಬ ದಶವಿಧಕೇಳೀಭಾವಂಗಳುಳ್ಳ ವಿಲಾಸಿನಿಯರಿಂ (ಅಜಿತ. ೨೨೪). [ಸಂ.]

**ಮೋಡ$_1$** (ನಾ). ೧. ಮುಗಿಲು ; ಮೇಘ : "ನೀರ್ದೇಮುರ್ಗಿಲ್ ಮೋಡ ಮೇಘದ ನಾಮ" (ಕಬ್ಬಿಗರ. ೦೩); ತೊಲಗದ ಮೋಡವೊಡಿ ದುದು . . . ಶರತ್‌ಪ್ರಥಮಪ್ರವೇಶದೊಳ್ (ಜಗ. ೪-೩೭); ಮೋಡವ ಗಲ್ಚ ಚಂಪಕರನಂತೆ . . . ಮನೋಹರಾಕೃತಿಯೊಳಿರ್ದನತಿದ್ಯುತಿಯಿಂದಿ ಳಾಧಿಪಂ (ನಳಚಂ. ೬೨೭); ಆಕಾಶದಲ್ಲಿ ಮೋಡಗಳು ಮುಚ್ಚಿಕೊಳ್ಳು ತ್ತಿದ್ದುವು (ರಾಜ. ೨೩). ೨. ಮೋಡ ಕವಿದ ವಾತಾವರಣ ; ಮಬ್ಬು : "ದುರ್ದಿನವಭ್ರತಿಮಿರಮೆನೆ ಮೋಡಮೆಂದೆನಿಸಿಕ್ಕು" (ಕುಂಗರ. ೦೩-೪). ೩. (ಅಲಂ) ಚಿಂತೆಯ ನೆರಳು : ಅವನ ಮೊಗದಲ್ಲಿ ಕಿರು ಮೋಡ ಸುಳಿಯಿತು (ಪಾತುಕ. ೬೩). ೪. ಅಜ್ಞಾನ ; ಮೌಢ್ಯ: ಮೋಡಮುಟೆಯ ಕಳೆದ ಕಳೆಗಳಿಂ ಬೆಳಗುವ ಚಂದ್ರಮನಂತೆ ಮೋಡ ಮುಟೆಯ ಕಳಿದ ಕಳೆಗಳಿಂ ಬೆಳಗಿವರ್ ಯಮುಳರ್ (ರಾಜಶೇ. ೦೫೦-೦೬).

**ಮೋಡ ಕವಿ** = ೧. ಮುಗಿಲು ಮುಚ್ಚಿಕೊಂಡು ಮಬ್ಬಾಗು : ದೂರ ಪಶ್ಚಿಮದಿಗಂತದತ್ತ ಮೋಡ ಕವಿದು ಮಿಂಚುತ್ತಿತ್ತು (ಮರಳು. ೪೭೭). ೨. (ಅಲಂ) ಚಿಂತೆ ಆವರಿಸು : ಮೋಡ ಕವಿದಾ ಮೊಗದಿ ನಿನ್ನ ದೆಸೆಯಿಂದಂ ಮೂಡಿತೇ ಅರೆಗಳಿಗೆಯಾದೊಡಾನಂದಂ ? (ಕುಪು. ೩೭-೨). **ಮೋಡಮುಚ್ಚಿಕೊಳ್ಳು** = ಮೋಡಕವಿ ೧ : ಒಂದೇ ಒಂದು ಕ್ಷಣದಲ್ಲಿ ಮೋಡಮುಚ್ಚಿಕೊಂಡು ಮಳೆ ಬರುವ ಹಾಗಾ ಯಿತು (ಕೂಡಿ). **ಮೋಡ ಹಾಕಿಕೊಳ್ಳು** = ಮೋಡ ಕವಿ ೧ : ಮೋಡ

ಹಾಕಿಕೊಂಡಿದೆ. ಹೊರಗೆ ಹೋರಬೇಡ (ರೂಢಿ). **ಮೋಡ ಹಾಕು** = ಮೋಡ ಕವಿ ೧ : ಮೋಡ ಹಾಕಿದರೆ ಶೀತ, ನೆಗಡಿ (ರಂಗನಾ. ೯೩). [ದೇ.॥ ತಮಿ. ಮೋಟಮ್, ಮೂಟಮ್, ಮೂಟ್ಟಮ್ ; ಮಲ. ಮೂಟಲ್ ; ತುಳು. ಮೂಡ, ಮೋಡ, ಮೋಡು ; ಕೊಡ. ಮೋಡ ; ತೆಲು. ಮೋಡಮು ; ಕುಇ. ಮುಡೆಂಗಿ]

**ಮೋಡ$_2$** (ನಾ). ಹೆಡ್ಡ ; ತಿಳಿಗೇಡಿ : ಮೂಢ : "ಗಾಂಪನೊಳು ಮೋಘದೊಳು ಮೋಡಪದ" (ಕಬ್ಬಕಾಂ. ೯೮) ; ಊಕಾರಕ್ಕೆ ಓತ್ವಂ_ಕೂಟ —ಕೋಡು. ಮೂಢ–ಮೋಡ (ಶಮದ. ೨೭೦ ಪ್ರಯೋ) ; ಈ ರೀತಿ ನಮ್ಮ ಜನಗಳು ಮೋಡರು ಎನ್ನುತ್ತಿದ್ದರು. ಇದೇನೋ ನಿಜ. ಇದಕ್ಕೆಲ್ಲ ಅವಿದ್ಯೆಯೇ ಮೂಲಕಾರಣ (ಹುಬ್ಬಹ. ೬೦). [<ಸಂ. ಮೂಢ. / ತಮಿ. ಮೋಟನ್ ; ತೆಲು. ಮೋಡಿ ; ತುಳು. ಮೋಡೆ]

**ಮೋಡಂಗಪ್ಪು** (ನಾ). ಮೋಡ ಕವಿಯುವುದರಿಂದ ಉಂಟಾಗುವ ಮಬ್ಬು : ಶರದಾಗಮನಕೆಂತು ಮೋಡಂಗಪ್ಪು ತೊಲಗಿದಪುದಂತೆ ಮೂಡಿದುದು ರಾಮನ ಮನಕೆ ನಿಶ್ಶಂಕೆ (ಶ್ರೀರಾಮಾ. ೩೪೯–೨೩೭).

[ಮೋಡ$_1$ + ಕಪ್ಪು$_4$ (<ಕರ್ಪು$_1$)]

**ಮೋಡಕಾ** (ನಾ). ಹಳೆಯ ವಸ್ತು, –ಪದಾರ್ಥ.

**ಮೋಡಕಾ ಅಂಗಡಿ** = ಹಳೆಯ ಸಾಮಾನುಗಳನ್ನು ಮಾರುವ ಅಂಗಡಿ ; ಗುಜರಿ : ಒಂದು ಮೋಡಕಾ ಅಂಗಡಿಯ ಒಂದು ಮೂಲೆಯಲ್ಲಿ ತೂಗಾಡುತ್ತಿದ್ದ ಮೂಲಚಿತ್ರವು ನನ್ನ ದೃಷ್ಟಿಯನ್ನು ಆಕರ್ಷಿಸಿತು (ಹೇಮಂತ. ೪೦೦) ; ಅವನ ಮೋಡಕಾ ಅಂಗಡಿಯ ಮುಂದಿದ್ದ ಒಂದು ಪೆಟ್ಟಿಗೆಯ ಮೇಲೆ ಕುಳಿತುಕೊಂಡ (ಎತಹ. ೭೬). [←ಮರಾ. ಮೋಡಕಾ]

**ಮೋಡಗತ್ತಲೆ** (ನಾ). = ಮೋಡಂಗಪ್ಪು : ದಳವೇಱಿತೊತ್ತರಿಸಿ ಮೋಡಗತ್ತಲೆ ಗಾಳಿ ಹನಿ ಮೊಳಗು ಸಹಿತ (ಸಿದ್ಧರಾ. ೭–೩೭) ; ಕಾಡು ಗತ್ತಲೆಗೆ ಮೋಡಗತ್ತಲೆಯೂ ಸೇರಿ ಮಸಿಮುದ್ದೆಯಾಗಿ ಅಳಿಸಿ ಹೋಗಿಹುದೆಲ್ಲ (ಕಂಬ್ರಸ. ೦೦೦). [ಮೋಡ$_1$ + ಕತ್ತಲೆ$_1$ (<ಕಟ್ತಲೆ)]

**ಮೋಡಾಮೋಡಿ** (ನಾ). ೧. ಸೊಗಸಾದ ರೀತಿ,—ಶೈಲಿ ; ಅಂದವಾದ ವೈಖರಿ : ಕೆಲಕೆಲಬರು ಮೋಡಾಮೋಡಿಗಳು ಕೆಲಕೆಲಬರು ಗುಂಥಾಗುಂಥಿಗಳಂ ಕೆಲಕೆಲಬರು ಧಾರಾಪಂಚಕಮಂ ಮುಂದೆಯೆ ತೋಱುತ್ತಂ ಜಲಧಿತರಂಗದ ತೆಱದಿಂದಾ ಹಯಬಲವಿಘಟಂಗಳ್ ಕಾಲ್ಗಾಪಿನೊಳಿಕ್ಕಿಲದೊಳಮತಿಶಯಮಾಗಿರೆ ನಡೆದವು ಹಿಂದೆಮುಂದೆ ಸಂದಣಿಸಿ (ಕುಮುರಾ. ೯–೨೬) ; ಡಾಬುಗಳ ಘಾಯದ ಕಳವುಗಳ ಕೈಮೆಗಳ ಮೋಡಾಮೋಡಿಯುಬ್ಬಣದ ಲಲಿತಚಿತ್ರದ ಚದುರಭಟರವ್ವಳಿಸಿ ಹೊಯ್ದಾಡಿದರು (ಕುವ್ಯಾದ್ರೋ. ೦೪–೬) ; ಆಗಲಂಬರ ಧರಣಿತಳಮೆಲ್ಲ ತುಂಬಿ ಬರೆ ಚೈತ್ರನುಱೆ ಸ್ಮರಗೆ ಪೇಳಿದ ತನ್ನ ಬಲದ ವೈಭವದ ಮೋಡಾಮೋಡಿಯಂ ಗಾಡಿಯಂ (ಕಕುಕ್ಕು. ೩–೯–೬). ೨. ಚಾತುರ್ಯ; ಕೈಚಳಕ : ಲುಳಿಯಲೊಯ್ಯಾರದಲಿ ಮೋಡಾಮೋಡಿಯಂದದಲಿ . . . ಶಸ್ತ್ರಾವಳಿಯ ಸಾಂಗೋಪಾಂಗಶ್ರಮವನು ತೋಱಿದನು ಪಾರ್ಥ (ಕುವ್ಯಾಆ. ೭–೪೦) ; ಹೊಗೆದುದ್ದೆ ಹೆಬ್ಬಾಳುಗಳ ನಗೆಮೊಗವ ಮೋಡಾಮೋಡಿಯಲಿ ಕೈಮುಗುಚಿ ಕಳೆದನು ನಿಮಿಷದಲಿ ಹೇರಾಳ ರಾಶಿಗಳ (ಕುವ್ಯಾದ್ರೋ. ೦೭–೩) ; ಬೆರಸಿ ಧಾಳಾಧೂಳಿಯಲಿ ಬೊಪ್ಪರಿಸಿ ಬಾಡಾಬಾಡಿಯಲಿ ಮೋಹರಿಸಿ ಮೋಡಾಮೋಡಿಯಲಿ ಮುಟ್ಟಿ ಪ್ರಹಾರದಲಿ . . . ಕಾದಿತು ಸೇನೆ ಸೇನೆಯಲಿ (ತೊರರಾ. ೭–೩೫–೩). ೩. ಬೆಡಗು ; ಬಿನ್ನಾಣ ; ವಿಲಾಸ : ಪರಿಮಿತದ ಮೋಡಾಮೋಡಿ ಯನುಭವದೊಳ್ ವಲ್ಲಭನ ಮನಂ ಪಲ್ಲಟಿಸುವ ಕಾಲಮನಱಿದು (ಗಂಳ. ೨–೦೦೩ ಪ) ; ಸುಳಿದುದು ಸವಿಹಾರಣನಾ ಮಹಾದ್ರಿಯಲಿ . . . ಮೊಱೆದೊಗುವ ಮಱಿದುಂಬಿಗಳ ಮೋಹರದ ಮೋಡಾಮೋಡಿಯಲಿ ಡಾವರಿಸಿ ತ್ಯದಿಂದ್ರಿಯದಲೊಂದಿರೆ ಸಕಲಮುನಿಜನವ (ಕುವ್ಯಾಅ. ೦೦–೩).

೪. ಮೆರೆತ ; ಪ್ರದರ್ಶನ : ಅಖಿಳ ಪೃಥ್ವೀಶ್ವರರ ಬಹಳಾಸ್ಥಾನದಲಿ ಮೋಹರಿಸಿದರು ಮೋಹನದ ಮೋಡಾಮೋಡಿಯುಬ್ಬೆಯುರು (ಕುವ್ಯಾಅ. ೦೩–೪೪) ; ಭರತಾಧಿದೇವತೆಯಂತೆ ನಿಂದಳಾ ತಾಣದೊಳಗಾ ದಿವ್ಯವನಿತೆ ಮೋಹನದ ಮೋಡಾಮೋಡಿ ಮೋಹರಿಸಿ ನಿಂದುಂದದಿಂ (ಸೌಂದಕು. ೬–೯). ೫. ರಭಸ ; ವೇಗ : ಕವಿಮುಱಿದು ಗಱಿಗಟ್ಟಿ ಕಾಪವನಿವಹ ಮೋಡಾಮೋಡಿಯಲಿ ರಣದವಕ ಕರ್ಣದ್ರೋಹಿಯಾವೆಡೆ ತೋಱು ತೋಱೆನುತ (ಕುವ್ಯಾಕ. ೦೩–೯). ೬. [ಸಂಗೀತ] ಒಂದು ರಾಗದ ಹೆಸರು : ಶ್ರೀಯು ಮೋಡಾಮೋಡಿ ಸರಸೋಪಾಯ ಸದುಪಾಯಂ ಮೆಱೆಯೆ . . . ಧರೆಯೊಳಿವು ಮೊದಲಾಗಿ ಸೊಗಸುವ ಒರಿಯ ರಾಗಂಗಳು (ಬಸಪು. ೦೯–೦೩).

[< ಮೋಡಿ$_1$ / ತಮಿ. ಮೋಟಾಮೋಟಿ ; ತೆಲು. ಮೋಡಾಮೋಡಿ]

**ಮೋಡಿ$_1$** (ನಾ). ೧. (ನಡೆ, ನುಡಿ ಇತ್ಯಾದಿಗಳ) ರೀತಿ ; ವೈಖರಿ ; ಶೈಲಿ ; ವರಸೆ : ನೋಡಿದನು ಕುರುರಾಯನಲಿ ಹೊಯ್ದಾಡಿ ಬರಬೇಕೆಂಬ ಭೀಮನ ಮೋಡಿಯನು ನೃಪನಱಿದು ಸಂತೈಸಿದನು ಸಾಮದಲಿ (ಕುವ್ಯಾಅ. ೦೬–೩೦) ; ನಮ್ಮ ನಗರವನೊರೆಸಿ ಮೋದುವ ಮೋಡಿ ಮೋಱಿಯೊಳವನಲ ದೆಯೆಂದ (ತೊರರಾ. ೭–೬–೩) ; ಪರಿಚರರೋಡಿದರು ದೆಸೆದೆಸೆಗೆ ದೈತ್ಯನ ಮೋಡಿಯೆಂತುಟೊ (ಅನಂರಾ. ೦–೩–೭೩). ೨. ಸ್ಥಿತಿ ; ವೃತ್ತಿ : ಪ್ರಿಯೆಯ ಮುಖವೆನ್ನೊಳಗೆ, ನಿನ್ನೊಳಗೆ ಚಂದಿರನು, ನಮ್ಮಿಬ್ಬರಾ ಮೋಡಿಯನಿತು ಸಮವು (ಶ್ವಾನ್ಯಾರೋ. ೮೭). ೩. ಠೀವಿ ; ಗಾಂಭೀರ್ಯ; ಗತ್ತು : ಮೇಳವದ ಮೋಡಿ [ಶಾಕಾಂ. ರೂಢಿ, ವೇಢ]ಯಲಿ ರಥದುಮ್ಮಳಿಸಿತು (ಕುವ್ಯಾಕ. ೩–೭೩) ; ಹನುಮನ ಮೊಗದ ಮೋಡಿಯ ಧೂರ್ತವಚನದ ಬಗೆಯ ಭಂಗಿಯನಾ ಪ್ರಹಸ್ತ ವಿವೇಕದಿಂದಱಿದು . . . ಇವನ ನುಡಿಸಿದು ನೋಡಬೇಕೆಂದ (ತೊರರಾ. ೫–೭–೨೩); ಮೋಡಿಯೊಳಬಱೆ ನಿಂದಡಿಯೊಳಿರ್ಕಲಕಂ ಮುಱಿಗೊಂಬ ಮುದ್ದುಮೊಯ್ . . . ಕಳೆಗು ಮೆಲ್ಲರ ದೃಷ್ಟಿ ಮನತ್ರಮಂಗಳಂ (ತಕಾ. ೪–೦೩೭) ; ನಿಲುವಿನ ಮೋಡಿಯಲ್ಲಿ ಉಡುಗೆಯ ಗಾಡಿಯಲ್ಲಿ . . . ವಿಲಾಸದ ಒಳ್ಪು ಸೇರಿಕೊಂಡಿತು (೭ಬ್ರಉ. ೪೫). ೪. ಬಿಗುಮಾನ ; ಗರ್ವ : ಮುನಿವುದೆತ್ತಣದಿನ್ನು ಮೋಡಿಯೆತ್ತಣದು ಮನವ ಬೈತಿಟ್ಟು ಮಾರ್ಮಲೆವುದೆತ್ತಣದು (ಗೀತಗೋ. ೩೦) ಏನೆಂದಱಿಯದೆಳವೆಯೊಳಿನಿಯಳಭಿಮಾನಗೊಂಡಿರೆ ಮಚ್ಚರಿಸದೆ ಮೋನದೊಳಿರದೆ ಮೋಡಿಯ ಕಾಣಿಸದೆ ಸನ್ಮಾನದಿ ಮನಗರಗಿಪುದು (ಹರಿಶ. ೩–೦೩) ; ಪೆಣ್ಮಕ್ಕಳುಂ ಠಕ್ಕಿನಿಂದೊಲ್ಮೆಗರೊಳ್ ಮುನಿವರ್ ಮೋಡಿಯೊಳ್ ಪರ್ರೇಡಿಪರ್ (ತಕಾ. ೩–೯೭). ೫. ಬಿಂಕ ; ಬಿನ್ನಾಣ ; ಬೆಡಗು : ಹಿರಿಯಳಿರ್ದಂತವಳಿಗಿಷ್ಟೇಕುರವಣಿಯು ಯಿಾ ಗಾಡಿ ಮೋಡಿಯು (ಪಾಗಸ. ೪–೦೭) ; ಕಿಱುನಗೆಯ ಮೋಡಿಯೊಳೊರ್ಮೆ, ತಾಂ ಬಱಲ್ದಂ–ನಲ್ಲ ! ಬಱಲ್ದೆಯ ! ಕುಳ್ಳಿರ ಎಂದು ಪಾಸಱೆಯಂ ತೋಱೆ ತಾನುಮೊತ್ತಿನೊಳ್ ಮಂಡಿಸಿ (ರಾಜಶೇ. ೪೫–೨೩). ೬. ಸೊಗಸು ; ಅಂದ : ಅಗಡು ಮೋಡಿ [ಶಾಕಾಂ. ರೆ]ಯ ಹೊಗಱ ಹೊಸಜವ್ವನದ ಭಟನಿಕರ ಜಗವರಸ ರಾಮಂಗೆ ಕೈಗಳ ಮುಗಿಮುಗಿದು ಕೆಲಸಾರುತಿರ್ದುದು (ತೊರರಾ. ೪–೬–೨); ಆಗಮವಧ್ಯಾತ್ಮವಳವಟ್ಟು ಶೃಂಗಾರತ್ಯಾಗಭೋಗದ ಮೋಡಿ ಮೆಱೆಯೆ . . . ಸೊಲ್ಲಿಸುವೆನಾಲಿಸಿರೋ (ಶರತ. ೦–೦೪) ; ಮೋಡಿಯನೇವೇಟ್ವಿನೀ ಮನೋಮೋಹಕನಾ (ಪತ್ತಪಂ. ೯–೩೪). ೭. ಆಕರ್ಷಣೆ ; ಸೆಳೆತ : ವಿನೋದದಾಗರಂ ಮೋಡಿಯ ಮಂಟಪಂ (ಹಸ್ತಿಮಾ. ೦–೨೪) : ಈ ನಲ್ಲೆಯಾ ಗಾಡಿ ಯಾ ಮೋಡಿ . . . ಅಧಿಗಳವಡದು (ವೆಂಕಾರಾ. ೫–೪–೦೦) ; ಇವಳ ಮುಖದಲ್ಲಿ ಇನ್ನೂ ಆ ಮೋಡಿಯಿತ್ತು (ರಂಗಶಾ. ೪೭). ೮. ವೈಶಿಷ್ಟ್ಯ ; ವಿಶೇಷತೆ : ಅರಲಂಬಗರಸನಿಮ್ಮಡಿ ಚೆಲ್ವನವನ್ಯೆದು ಸರಲನಾಂತೊಡೆ ಹತ್ತು ಸರಲಾ ದೊರೆ ಒಡಿವುದು ಮೋಡಿಯೆನೆ ಕರಗಳ ಹತ್ತು ಬೆರಳೆಸೆದುವು ಸರಲದೊಳು (ಶರತ. ೭–೫೮). ೯. ಕೈಚಳಕ :

ಚಾಕಚಕ್ಯತೆ ; ಚಾತುರ್ಯ : ಆಡಲೇನವನಿಂದ್ರಜಿತುವಿನ ಮೋಡಿ ಬೇಜಿಳೋಸರಿಸಿ ದಿನದಿನಕೋಡಿ ಹಿಂಗಿದ ಜಯವಧುವ ತಿರುಹಿದನು ನಿಮಿಷದಲಿ (ತೊರಗಾ. ೬-೩೩-೯೮) ; ಘನಸಂಚುಗಾತ್ರ ಮೋಡಿಯಲಿ ವಲ್ಲಕಿಗಳಂ ಬಿನದಮೆನೆ ಬಾಜಿಸುವ ವೈಣಿಕೋತ್ತಮರುಗಳ ಮನೆಗಳಂ. . . ಕಾಣುತಚ್ಚರಿಗೊಂಡನು (ವಂಕಾರಾ. ೩-೩-೨೬) ; ರೂಢಿಸಿದ ಭಟನೆಂಬುದಂ ಬಲ್ಲೆ ಕರ್ಣ ಕೇಳ್ ಮೋಡಿ ಬೆರಗಾಗಿಹುದು ಪವನಜಂಗಿಂದು ನೀ ನೋಡಲವೊ (ತುರಂಗ. ೬೩-೮). ೧೦. (ಯಕ್ಷಿಣಿಗಾರನು ಯಾವು ದಾದರೂ ವಸ್ತುವನ್ನು ಮಂತ್ರಪೂರ್ವಕವಾಗಿ ನೆಲದಲ್ಲಿ ಹೂಳಿ ಅದನ್ನು ತನ್ನ ಪ್ರತಿಸ್ಪರ್ಧಿಯು ತನ್ನ ಮಂತ್ರಬಲದಿಂದ ತೆಗೆಯಲು ಹೇಳುವ) ಯಕ್ಷಿಣಿ ; ಇಂದ್ರಜಾಲ ; ಮಾಟ : ಪರದೆ ಬಿದ್ದ ಮೇಲೂ ಕೆಲವು ಕ್ಷಣಗಳು ನಾಟಕಮಂದಿರ ಮೋಡಿಯಲ್ಲಿದ್ದಂತೆ ಮೌನ ವಾಗಿತ್ತು (ರಂಗಪಾ. ೦೬೬) ; ಮೋಡಿಗೆ ಸಿಕ್ಕಿದಂತೆ ಅವಳ ದೃಷ್ಟಿ ಅಲ್ಲೆ ನೆಲಸಿತು (ರೂಪತ. ೩೩೦). ೧೧. ಮಾಯೆ ; ಗಾರುಡಿ : ಮತ್ಸ್ಯ ನೃಪ ನಗುತ . . . ನಿಮ್ಮಯ ಮೃದುವಚನ ಬಲು ಮೋಡಿ ಗಾಡಿಕೆಗಾರು ಸರಿಯೆಂದ (ಕುಮ್ಮಾರಿ. ೬೦೩: ೯-೩೨) ; ಈವರೆಗೂ ಬಾಡಿ ಬತ್ತಿದಂತಿದ್ದ ನೀನು ಅದಾವ ಮೋಡಿಯಿಂದ ಅರಳುಮಲ್ಲಿಗೆಯಾದಿ ? (ಕೀಪೋತ. ೧೬). ೧೨. ಮಂತ್ರ ; ತಂತ್ರ : ತಮ್ಮ ಮಾತು ಕೇಳದರೆ, ನಮ್ಮ ಮೋಡಿಯನ್ನು ನಮ್ಮ ಮೇಲೆ ತಿರುಗಿಸುತ್ತಿರುವಂತಿದೆ (ಚಕಂಬಾ. ೪) ; ವಿಠಲರಾಯರು ಈ ಎದುರುಮೋಡಿ ಎದುರಿಸಲೇಬೇಕಾಯ್ತು (ವೃದ್ಧಿ. ೨೩). ೧೩. ಮೋಸ ; ವಂಚನೆ : ಕೃತಕಮಾರ್ಗದ ಮೋಡಿಯಲಿ ಪರಿಚಿತನು ನೀನಲ್ಲಕ್ಷವಿಮಲಕ್ರತುವಿಧಾನವನಕ್ಷದೀಕ್ಷಿತರಜಾಪರಿದನೆಂದ (ಕುಮ್ಮಾಸ. ೬೦೩-೦೯-೬೬). ೧೪. ಹಠ ; ಮೊಂಡಾಟ : ನನಗೆ ಆಣತಿ ನೀಡಿ ಎಂದಂದೆ ಬೇಡಿದೆನು ಬೇಡವೆಂದರು, ಮೋಡಿ ಬೇಡೆಂದು ಬೇಡಿದರು (ಯುಕೋರ. ೪). ೧೫. (ಬಣ್ಣದ) ಛಾಯೆ,— ಪ್ರಭಾವ,—ಛಾಪು : ಎಳೆಹರೆಯದ ಹುಡುಗಿ ಆಕೆ. ತುಸುಕೆಂಪು ಮೋಡಿಯ ಮೇಲಿದ್ದಳು (ಸಮುಶ. ೨೯೬) ; ಎಳೆಬಿಸಿಲು ಶಿವಮೊಗ್ಗದ ಮೇಲೆ ಸುವರ್ಣಾಲಂಕಾರದ ಮೋಡಿಯನ್ನು ಹರಡಿತ್ತು (ಮಹಾಗ. ೨೬೩). ೧೬. ಕುದುರೆಸವಾರಿಯಲ್ಲಿ ಒಂದು ಬಗೆ : ದಾಟು ದೀಟು ಹೊಳಹು ಹೊಮ್ಮಚ್ಚುವೆಡೆ ಮೋಡಿ . . . ವರತರಹಮೆಂಬ ನವ[ಪಾಠಾಂ. ನವೀನ]ಗತಿಗಳೊಳು ತನ್ನ ಮಹಿಮೆ ಹಯದ ತನುಗತಿಗಳಾದಂತೆ ವಾಹಕವಿನ್ಯಾಣಂಗಳಂ ತೋರುತ (ಭುವ್ಯಾಸ್ರ. ೭-೩೦ ವ). ೧೭. ವೇಗದ ಬರವಣಿಗೆಗಾಗಿ ಅಕ್ಷರಗಳನ್ನು ಮೊಟಕು ಮಾಡಿ ಬರೆಯುವ ಲಿಪಿವಿನ್ಯಾಸ ; ಅಕ್ಷರಗಳನ್ನು ಒಂದಕ್ಕೊಂದು ಸೇರಿಸಿ ಬರೆಯುವ ಬರವಣಿಗೆ : ನೋಡಿದು ತಮ್ಮ ತಂದೆಯ ಸ್ವಹಸ್ತದ ಮೋಡಿಯ ಬರೆದ ಬರಹನು (ಕಂಪ್ರಹಾ. ೩-೩೦) ; ಉರ್ದುಮೋಡಿ ಬಳಕೆಯ ಮಟ್ಟಿಗೆ ರೂಢಿಯಿಂದ ಕಲಿತರು (ಕಂಅಶ. ೩೬) ; ನಾನು ಆ ಪ್ರಕಾರ ಬರೆದು ಕೊಟ್ಟೆ. ಅದರ ಕೆಳಗೆ ಅವರು ಮೋಡಿಯಲ್ಲಿ ಸಹಿ ಹಾಕಿ . . . ಹೇಳಿದರು (ಪಾಳೋಳಿ. ೩೮). ೧೮. ಹಸನು ಮಾಡಿದ ಅಡಕೆಯಲ್ಲಿ ಒಂದು ಬಗೆ : ಬಹಳ ಎಳಕಾದ ಅಡಕೆಗಳನ್ನು ಸಣ್ಣಾಗಿ ಕೊರೆದು ಚೂರುಮಾಡಿ ಕುದಿಸುತ್ತಾರೆ. ಅದರಲ್ಲಿ ಚತುರ್ಭಾಗ ಕೊರಪ, ಲವಂಗ ಚೂರು, ಮೋಡಿ, ಅಣ್ಣಾವಾರ, ದೇಶಾವಾರ ಎಂದು ಬೇರೆಬೇರೆ ರಾಶಿಗಳನ್ನು ಮಾಡುತ್ತಾರೆ (ಕೃಷಿತ್ರ. ೦೩೨). ೧೯. [ಸಂಗೀತ] ಮದ್ದಳೆಯನ್ನು ಬಾರಿಸುವ ಒಂದು ಬಗೆಯ ವೈಖರಿ,—ಗತ್ತು : ಆ ಸಮಯದೊಳ್ ಮದ್ದಳಿಗಂ ಮದ್ದಳೆಯಂ . . . ಲಾಗು ಮೋಡಿ ಚಮತ್ಕಾರ ತುಡುಕು ರಿಗ್ಗವಣೆ ಪಹರಣೆಗಳೆಂಬ ನಾನಾಶಬ್ದಂಗಳಂ ಬಾಜಿಸೆ (ರಾಜಶ. ೨-೨೩ ವ) ; ಬಾಜಿಸಿದನೊರ್ವನಮರ ಮದ್ದಳೆಯ ಲೀಲೆಯೊಳು ತುಡುಕುಪಹರಣೆ ರಿಗ್ಗವಣೆ ಮೋಡಿಗಳನು ನುಡಿಸೆ (ಗೋಪಾದೀ. ೭-೦೭).

**ಮೋಡಿತೆಗೆ** = (ಮಾಟದ ಪ್ರಭಾವವನ್ನು ಕಡಿಮೆ ಮಾಡಿ) ಮಾಟ ಮಾಡಿ ಹೂಳಿದ ವಸ್ತುವನ್ನು ಹೊರಗೆ ತೆಗೆ : (೯). **ಮೋಡಿ ಮಾಡು** = ೧. ಮಾಟ ಮಾಡು; ಇಂದ್ರಜಾಲ ಮಾಡು : ಹಳ್ಳಿಗಳಲ್ಲೆಲ್ಲ ಮೋಡಿ ಮಾಡುತ್ತಾರಂತೆ. ಅದರಲ್ಲಿ ನಿಮಗೆ ವಿಶ್ವಾಸ ವಿದೆಯೇ ? (ಪವಾ. ೬೦); ಯಾವ ಮೋಡಿ ಮಾಡಿ ಸುಬ್ರಾಯರನ್ನು ಒಳಗೆ ಹಾಕಿಕೊಂಡನೋ ಏನೋ ? (ಚಾರವ್ಯ. ೦೦೦); ಹಾವಾಡಿಗ ಮೋಡಿ ಮಾಡ್ದಂಗೆ ಮಾಡಿಬಿಟ್ಟು ಈಗ ಹಿಂಗಂತೀಯಾ ? (ಶೀಮಕಾ. ೮೦೯). ೨. ಮಂತ್ರಮುಗ್ಧನನ್ನಾಗಿ ಮಾಡು ; ಸೆಳೆ : ಈ ಕುಣಿತಗಳಂತೂ ಜನತೆಗೆ ಮೋಡಿ ಮಾಡಿಯೇ ಬಿಡುವುವು (ಕನ್ನಜಾ. ೩೯). **ಮೋಡಿ ಹಾಕು** = ೧. ಮಂತ್ರಪೂರ್ವಕವಾಗಿ ಯಾವುದಾದರೂ ವಸ್ತುವನ್ನು ನೆಲದಲ್ಲಿ ಹೂಳು : (೯). ೨. ಮಾಟ ಮಾಡು ; ಮಂತ್ರದ ಪ್ರಭಾವಕ್ಕೆ ಒಳಪಡಿಸು : ಮೋಡಿ ಹಾಕಿದಂತಾಗಿ ಅವನನ್ನೇ ದಿಟ್ಟಿಸಿ ನೋಡು ವಂತಾಗುತ್ತಿತ್ತು (ಅಂಹೂ. ೦೦೬); ಜನರೆಲ್ಲರೂ ಮೋಡಿ ಹಾಕಿದ್ದಂತೆ ಎವೆಯಿಕ್ಕದೆ ಸಂಗೀತ ಕೇಳುತ್ತ ತಲ್ಲೀನರಾದರು (ಹಂಗೀಕ. ೬೨). ೩. ಮಂತ್ರಮುಗ್ಧನನ್ನಾಗಿ ಮಾಡು ; ಸೆಳೆ ; ಮೋಡಿ ಮಾಡು : ಡಾ. ನರೋತ್ತಮರು ಮೋಡಿ ಹಾಕುವಂತಹ ಭಾಷಣಕಾರರು (ದೂರಕ. ೩೦೬); ಎರಡು ದಿನದಲ್ಲಿ ಅಂಥೋಣಿ ಸುಬ್ಬುವಿಗೆ ನಿಜವಾಗಿಯೂ 'ಮೋಡಿ' ಹಾಕಿದ್ದ (ಶೀಮಕಾ. ೨೯); ನಿಮಗೆ ಮೋಡಿ ಹಾಕೋ ವಿದ್ಯೆ ಬರಬಹುದು (ದೂಶಿಟ್ಟ. ೯೩).

[ದೇ.॥ ತಮಿ. ಮೋಟಿ ; ಮಲ. ತುಳು. ತೆಲು. ಮೋಡಿ. / ಹಿಂ. ಮರಾ. ಮೋಡೀ]

**ಮೋಡಿ$_2$** (ನಾ). ಒಂದು ಬಗೆಯ ಮೂಲಿಕೆ: ಹಿಪ್ಪಲೀಮೂಲ : "ಮೋಡಿ – ಶಿರ, ಹಿಪ್ಪಲೀಬೇರು" (ಗಂಗಾಪು. ೯); ಗಂಟು ಭಾರಂಗಿ, ಹಿಪ್ಪಲಿಮೂಲ (ಮೋಡಿ), ಚವ್ಯ, ಬೆಳ್ಳುಳ್ಳಿ, ಅಗರಧೂಮ ಇವುಗಳನ್ನು ನಾಲ್ಕು ನಾಲ್ಕು ತೂಕ ಚೂರ್ಣವ ಮಾಡಿ (ಸಳವ. ೬೩); ಕಾಡುಮೆಣಸಿನ ಬಳ್ಳಿಯ ಬೇರು ಮತ್ತು ಮೋಡಿಕಡ್ಡಿಗಳು ಗುಣದಲ್ಲಿ ಮೆಣಸಿನಂತೆ (ಅಷ್ಟಾಂಗ. ೦೫೬-೦೬೩ ಅರ್ಥ). [ ದೇ.॥ ತಮಿ. ಮೋಟಿ ]

**ಮೋಡಿ$_3$** (ನಾ). ಬುದ್ಧಿಯಿಲ್ಲದವಳು ; ದಡ್ಡಿ : ಅಕಲಂಕಕುಲದೊಳ ವತರಿಸಿ ನಿಯಮಾಚಾರ ಸುಕುಮಾರತೆಯನರಿತಳಲ್ಲದೀ ಪ್ರಾಕೃತರ ಪಾಸಟಿಯ ಮೇಢಿ[ ಮೋಡಿ ]ಯಲ್ಲ (ವಂಕಾರಾ. ೨-೦೦-೮). 'ಮೋಡೆ' ಪಾಠ. [ ಮೋಡ$_2$ + – ಇ$_2$ ]

**ಮೋಡಿಕಾರ** ' ಮೋಡಿಗಾರ ' ನೋ.

**ಮೋಡಿಕಾರ್ತಿ** (ನಾ). ಗಾರುಡಿ ಮಾಡುವವಳು ; ಮಾಟಗಾತಿ : ನೀನಾರು ? ನೀನು ಮೋಡಿಕಾರ್ತಿಯೋ ? (ಹಾಂಹೀ. ೩೮).

[ಮೋಡಿಕಾರ (< ಮೋಡಿಗಾರ) + –ತಿ$_1$ (< –ಇತ್ತಿ) ]

**ಮೋಡಿಗಾರ, ಮೋಡಿಕಾರ** (ನಾ). (ಹಣದ ಸಂಪಾದನೆಗಾಗಿ) ಇಂದ್ರ ಜಾಲ ಮಾಡುವವನು; ಯಕ್ಷಿಣಿ ಮಾಡುವವನು; ಮಾಟಗಾರ : ನಾಡು ಓಡುವಾಗ ಮೋಡಿಗಾರ ಬಂದ (ಗಾದೆ). **ಮೋಡಿಕಾರ:** ನರಿಯೇ ಮುತ್ಸದ್ದಿ, ಮೋಡಿಕಾರನೇ ತತ್ವಜ್ಞಾನಿ, ತೇಪೆ ಅನುಕರಣಗಳೇ ಕಲೆ ಇರುವ ದೇಶಕ್ಕಾಗಿ ಕನಿಕರ ಪಡಿ (ಕೃಪಾಕೋ. ೦೦); ನಿಜವಿದ್ದುದನ್ನು ಸುಳ್ಳು, ಸುಳ್ಳಿದ್ದುದನ್ನೂ ನಿಜವೆಂಬ ಮಾಟ ಮಾಡಿ ತೋರಿಸುವ ಬಾಯ್ಬಡಕ ಮೋಡಿಕಾರರ ಕುಲ, ಯಾವ ಕುಲ ? (ಯುಕ್ತಕ್ರ. ೦೩೯).

[ ಮೋಡಿ$_1$ + –ಕಾರ$_1$ (< –ಕಾಐ) ]

**ಮೋಡಿಗೊಳ್, ಮೋಡಿಗೊಳು** ( ಕ್ರಿ ). ೧. ಅಂದವಾಗು ; ಚೆಲುವಾಗು : ಮೋಡಿಗೊಂಡಿರ್ಪ ನಾಸಂ ತೊಳಪ ಮುಖವಿಕಾಸಂ

ತುಂಬಿಕುಂ ಕಣ್ಗೆ ಲೇಸಂ (ಶಶಿವ. ೩-೯೭). **ಮೋಡಿಗೊಳು :** ೨. ಹಠ ಮಾಡು; ಮೊಂಡಾಟ ಮಾಡು : ಕೋಪವೆಸಗದೆ ಮೂಗುವಡದೆ ಮೋಡಿಗೊಳದೆ ಲೋಗರುಚಿತಮೆನಲೊಯ್ಯನೊಯ್ಯನೆಯನುವಾಗಿ ನಡಿವು ದವರೊಡನೆ (ಹರಿ. ೪-೧೦). [ಮೋಡಿ$_1$ + ಕೊಳ್$_1$]

**ಮೋಡಿಗೊಳು** ' ಮೋಡಿಗೊಳ್ ' ನೋ.

**ಮೋಡಿಸು** (ಕ್ರಿ). ಆಕರ್ಷಿಸು ; ಸೆಳೆ ; ಮೋಡಿ ಮಾಡು : ಸ್ಮರನಿನ್ನಾ ನಿಲ್ಲದಂದೀ ಜನಮನೆಬಿಗಿಸಲ್ಕೋಡಿಸಲ್ ಮೋಡಿಸಲ್ ಮಚ್ಚರದಿಂಪಲ್ಲಾ ಡಿಸಲ್ . . . ಅದೇನೊರ್ವನೆ ನೆಟೆವನೆ ಪೇಟೆಂದು ಲೋಕಕ್ಕೆ ಪೇಟ್ಟಂತಿರೆ ಬಂದರ್ ಬಿಂಕದಿಂ ಸಂಕಿಸದೆ ಸಕಲವಿದ್ಯಾಧರಸ್ತ್ರೀಸಮೂಹಂ (ಧರ್ಮಾಮೃ. ೬-೨೦೪). [ಮೋಡಿ$_1$ + — ಇಸು$_3$]

**ಮೋಡೆ** (ನಾ). ಬುದ್ಧಿ ಇಲ್ಲದವಳು ; ಮೂಢೆ : ಆನೇಂ ಮೋಡೆಯೆ ! ಪೋ ! ತನ್ನಾಣೆ, ಕಣ್ಣಾಣೆ, ಕೇಳ್ವೆಂ (ರಾಮಾಶ್ವ. ೦೦೬-೦೪). ' ಮೋಡಿ$_3$' ಪರಾ. [ಮೋಷ$_2$ + — ಎ$_2$]

**ಮೋಣ** (ನಾ). ಒಣಗಿದ ಹಣ್ಣು. [ಸಂ.]

**ಮೋತಾದಾರ** (ನಾ). ಕುದುರೆಗಳ ಆರೈಕೆ ಮಾಡುವವನು ; ಕುದುರೆ ಗಳ ಮೇಲ್ವಿಚಾರಕ ; ಕಾಸ್ತಾರ : (*).

[←ಮರಾ. ಮೋತಾದ್ದಾರ್, ಮೋತದ್ದಾರ್]

**ಮೋತಿ** ' ಮೂತಿ' ನೋ.

**ಮೋತಿಖಾನೆ** ' ಮೋದೀಖಾನೆ' ನೋ.

**ಮೋತಿಬಿಂದು** (ನಾ). ಕಣ್ಣಿನ ಗುಡ್ಡೆಯ ಮೇಲೆ ಬಿಳಿಯ ಚುಕ್ಕೆ ಅಥವಾ ಹೂ ಕಾಣಿಸಿಕೊಳ್ಳುವ ಒಂದು ಬಗೆಯ ಕಣ್ಣಿನ ರೋಗ : ದಿನಪತ್ರಿಕೆಗಳಲ್ಲಿ ಹೊರಬೀಳುವ ಗುಣಕಾರಿಗಳಲ್ಲದ "ಮೋತಿಬಿಂದುನಾಶಕ" ತೊಟ್ಟುಗಳನ್ನು ಉಪಯೋಗಿಸಲು ತವಕ ಪಡುವುದು ಸಹಜವೇ ಸರಿ (ಆಪ್ಟನ್ಯ. ೦೬೦). [←ಮರಾ. ಮೋತಿಬಿಂದು, ಮೋತಿಬಿಂಬ, ಮೋತ್ಯ ಬಿಂದು, ಮೋತ್ಯಬಿಂಬ ; ಹಿಂ. ಮೋತಿಯಾಬಿಂದ್]

**ಮೋತೀಖಾನೆ** ' ಮೋದೀಖಾನೆ ' ನೋ.

**ಮೋತೀಚೂರು** (ನಾ). ೧. ದುಂಡಾದ ಸಣ್ಣ ಸಣ್ಣ ಕಾಳುಗಳಿಂದ ಕೂಡಿದ ಬೂಂದಿಯ ಲಾಡು ; ಗುಂಜಾಲಾಡು : ಮಾಮನೀಪ್ರಸ್ನ ಕ್ಕೇನು ಒಂದು ಮೋತೀಚೂರು, ಇಲ್ಲಾ ಮುಂಡಿಗಿ ಮಾಡ್ಲಿ ಬಡೂಣು (ತತುಗು. ೩೪) ; ಹೆಣ್ಣಿನ ಕಡೆಯವರು ದಿಬ್ಬಣದ ಆನೆಗೆ ತುಪ್ಪ ಮೋತೀ ಚೂರನ್ನು ತಿನ್ನಿಸಬೇಕೆಂಬ ಹವಣಿಕೆಯಲ್ಲಿದ್ದರು (ಜಾಬಾಲ್ಯಾ. ೭) ; ಉತ್ತರಾದಿ ಮಠದ ಮೋತೀಚೂರಿನ ಸಮಾರಂಭಕ್ಕೆ . . . ಊಟಕ್ಕೆ ಹೋದ ಬ್ರಾಹ್ಮಣ ರುಂಟು (ಯಜ್ಞಕ್ರ. ೦೬೬). ೨. ದೋತ್ರದ ಅಲಂಕಾರಯುಕ್ತವಾದ ಜರಿ ಅಂಚು : (*). [←ಹಿಂ. ಮರಾ. ಮೋತೀಚೂರ್]

**ಮೋತೆ** (ನಾ). ೧. ಬಾಳೆಯ ಗೊನೆಯ ತುದಿಯಲ್ಲಿ ಇರುವ ದೊಡ್ಡ ಆಕಾರದ ಹೂವು : ಬಹುಮೂತ್ರಕ್ಕೆ ಪಥ್ಯಾಪಥ್ಯಂಗಳು— ಹಳೆಅಕ್ಕಿಅನ್ನ, ಗೋಧಿ . . . ಬಾಳೆಯ ಮೋತೆ, ಕಾರೆಸೊಪ್ಪು (ಸಕಲವೈ. ೪೦೦) ; ಬಾಳೆಯ ಮೋತೆಯ ಗಾತ್ರದ ಕಿವಿಗಳ ಮೃಗವಿದಿಗೋ ಗುಡ್ಡೆಯ ಕಣ್ಣುಗಳ (ಶಾಕುಂ. ೪೪೭). ೨. (ಕೇದಗೆ ಮುಂತಾದುವುಗಳ) ತೆನೆ ; ಹೊಡೆ ; ಗುಚ್ಛ : ಚೂಡಾಲಾ, ಚಕ್ರಲಾ, ಉಚ್ಚಟಾ—ಇ ಎಂಬ ಗಡ್ಡೆ ವಳಗೆ ಅನೇಕ ಮೋತೆಗಳುಳ್ಳ ಗಂಟುಮುಸ್ತೆಗಳು (ಸಿದ್ಧಾಂತಿ. ೦೪೯) ಅಗಿದು ಪಣ್ಗಳನಡಸಿ ತ್ರೋರುವ ಮುಗುಳು ಮೋತೆಯು ಮುರಿವು ಕೆದರು ! ಹಗರಣದ ಕಪಿಮೃಗವ ನೋಡುವ ತರುಶಿಖಾಗ್ರದಲಿ (ಕುಂದನಾ. ೩-೨೮) ; ದಾರಿಯಲ್ಲಿ ಒಬ್ಬ ಗೌಡ ನಾಲ್ಕು ಮೋತೆ ತಾಳೇಹೂವನ್ನೂ . . . ಇಟ್ಟು ಕೊಂಡು ಯಾರಾದರೂ ಕೊಂಡುಕೊಳ್ಳುತ್ತಾರೆಯೋ—ಎಂದು ಕಾದು ಕೊಂಡಿದ್ದನು (ಖಾದು. ೦೧). [ದೇ. ? ತಮಿ. ಮೋತ್ತೈ ]

**ಮೋದ$_1$** (ನಾ). ೧. ಸಂತೋಷ : ಹಿಗ್ಗು ; ಆನಂದ : ಇಹಗೆ ಮಾಡುವೆನಾವರದೊಳೆಂದೆನುತ ಮನದೊಳು ಮೋದವೆ [ದಾಶಾಂ. ವ] ಯ್ದಲು (ಜಕವು. ೩೭-೦೭) ; ಮೋದದಿಂದ ವಿದುರನ ಮನೆಗಯ್ದಿ ಆದರದ ಪಾಲ ಕುಡಿದುಳಿದುದ ನೀ ಮೇದಿನಿಗಿಳಿಸಿದೆಲ್ಲಿ ಕಲಿತ್ಯೋ ರಂಗ (ಪುರಂದ. ೪-೦೩೭-೯) ; ಲಕ್ಷ್ಮಣಂ ಲಜ್ಜಾವಿಷಾದಮಂ ತುಳಿದಿಕ್ಕಿ, ಮೋದದಿಂ ಕಣ್ಣಾವನತ್ರಕ್ಕೆ (ಶ್ರೀರಾಮಾ. ೦೫೯-೨೦೩). ೨. ಸುಗಂಧ ; ಸುವಾಸನೆ : ' ಮೋದೋಪಚಾರ ' ಪರಾ. ೩. ಮಾವು : " ಮೋದಾಖ್ಯಃ — ಮಾವು " (೬೫೦. ೦೪೦); ಬಾಳೆ ಕಾಬಾಳೆ ಮೋದ ಸಕ್ಕರೆಮಾವು ನೇಜಲಂದಣ್ಣಳ ಯಾವಪರಿತ್ತರಾಳ್ದನಿಗೆ (ಮೋಹತ. ೦೯-೩೩). ೪. ತೆಂಗು : " ಮೋದಃ — ತೆಂಗು " (೬೫೧. ೧೪೦). ೫. [ಜೈನ] ಐವತ್ತ್ಮೂರು ಗರ್ಭಾನ್ವಯಕ್ರಿಯೆಗಳಲ್ಲಿ ಐದನೆಯದು ; P ' ೯ನೇ ತಿಂಗಳ ಗರ್ಭವತಿಗೆ ಪೂರ್ವವತು ಮಂಗಳಸ್ನಾನಾದಿಗಳಂ ಬೆಳಯಿಸಿ ಅಲಂಕಾರವಂ ಮಾಡಿ ಹಸೆಯ ಮೇಲೆ ಕುಳ್ಳಿರಿಸಿ ಪತಿಯ ಹಸ್ತದಿಂ ರಕ್ಷಾಯಂತ್ರವಂ ಕಟ್ಟಿಸುವದೇ ಮೋದವೆಂಬ ಐದನೇ ಕರ್ಮವು " (ಪುರುಷ. ೦೯೯) : ಆದಾನ ಪ್ರೀತಿ ಸುಪ್ರೀತಿ ಧೃತಿ ಮೋದ . . . ಎಂಬಯ್ವತ್ತುಮೂಜು ಗರ್ಭಾದಿನಿರ್ವಾಣಪರ್ಯಂತಂಗಳಪ್ಪ ಗರ್ಭಾ ನ್ವಯಕ್ರಿಯೆಗಳುಂ (ಆದಿಪು. ೦೫-೦೩ ವ); ಆಧಾನಮುಂ ಪ್ರೀತಿಯುಂ ಸುಪ್ರೀತಿಯುಂ ಧೃತಿಯುಂ ಮೋದಮುಂ . . . ಎಂದಾದಾ ನಾದಿನಿರ್ವಾಣಪರ್ಯಂತಮಪ್ಪಯ್ವತ್ತುಮೂಜುಗರ್ಭಾನ್ವಯಕ್ರಿಯೆಯೊಳ್ (ಶಾಪುಂ. ೨೦೨). ' ದೀಕ್ಷೆ ' ಪರಾ. [ಸಂ.]

**ಮೋದ$_2$** (ನಾ). ಅಜವಾನ ; ಅಜಮೋದ ; ಓಮು : " ಮೋದ — ಅಜಮೋದ " (೬೫೦. ೦೪೦); ಒಂದು ಬೆಟ್ಟದೆಗೆಯಲ್ಲಿ ಕಾದ ಹಂಚನಿರಿಸಿ ಅಡಕೆಯಷ್ಟು ಮೋದವನಿಕ್ಕಿ ಮೇಲೊಂದು ಲೋಟ ಮುಚ್ಚಿ . . . ಏಲಕ್ಕಿಯ ಚೂರ್ಣವ ತಳೆದಲ್ಲಾಡಿಸುವುದು (ಶೀವಸಕಿ. ೩೦). ' ಮೋದೆ ' ಪರಾ. [ಸಂ. ಮೋದಾ]

**ಮೋದಂಡ** (ನಾ). ೧. ಅನಿಶ್ಚಿತತೆ ; ಸಂದೇಹ : (*). ೨. ಸುಮ್ಮ ನಿರುವುದು ; ಮೌನ (?) : ಇಕ್ಷ್ವಾಕುಕುಲವೌಳಿಮಣಿಗೆಯ್ದ ಪ್ರಾರ್ಥ ನೆಗೆ ಸಾಗರನು ಕಿವಿಗೊಡದೆ ಮೋದಂಡವಾಗಿರಲು ದಾಶರಥಿ ಇವನ ಅಭಿ ಸಯಕೆ ತಗುವಂದದಲಿ (ಪವಾ. ೨-೬೪). [←ತುಳು. ಮೋದಂಡ]

**ಮೋದಂಬೆಜು** (ಕ್ರಿ). ಹರ್ಷವನ್ನು ಹೊಂದು ; ಸಂತೋಷವನ್ನು ತಾಳು : ಶಶಿಶೇಖರಂ ಗುರುವಿರೂಪಾಕ್ಷಂ ಭವಾನೀಪ್ರಿಯಂ ಮೋದಂಬೆತ್ತಿರೆ ತಾಳ್ದು ರಂಜಿಪುದು ಪಂಪಾಕ್ಷೇತ್ರಂ (ಉದ್ಭಟ. ೩-೬೩).

[ಮೋದ$_1$ + ಪೆಜು$_1$]

**ಮೋದಕ$_1$** (ಗು). ೧. ಸಂತೋಷವನ್ನುಂಟುಮಾಡುವ ; ಉಲ್ಲಾಸ ಕರವಾದ : ಆನಂದದಾಯಕವಾದ : ಧರಣೀಭಾರಮನಾಂ ಬಿಸುಟಿಪ್ಪೊ ಡದು ಚಿಃ ಲೋಕಕ್ಕೆ ಬಾತ್ವಾಸಮಾಕರಣಂ ಭೌತಿಕಮೋದಕವ್ಯತಿಕರಂ ತಾನೆಂ ಬುದಂ ಮಬುದೇ (ಆದಿಪು. ೪-೮೦). (ನಾ). ೨. ಒಂದು ಬಗೆಯ ಸಿಹಿರುಚಿಯಾದ ಖಾದ್ಯ ; ಕಡುಬು : ಓರೊರ್ವರೊಳ್ ವಿಷಯುಮಿಶ್ರ ಮೋದಕಾದಿ ಖಾದ್ಯಪ್ರವೇಶಮಂ ಮಾಡುತ್ತಮಿರ್ಪುದಂ ಕಂಡು (ಶಾಕಾಶೀ. ೩-೦೩೪ ವ); ಮೋದಕ ನೈವೇದ್ಯವನಣಿಗೆಯೆ ನೆಪವೇನಂ ಪೇಳಲಿ ನಾನರಿಯೆ (ಗಣೇಶ. ೩-೩೩); ಮನಸ್ಸಿನಲ್ಲಿ ಮೋದಕವನ್ನು ತಿಂದರೆ ಹಸಿವೆಯು ಶಾಂತ ವಾಗಲಾರದು (ತುಳಸೀ. ೬೩). [ಸಂ.]

**ಮೋದಕ$_2$** (ನಾ). ಅಜಮೋದ ; ಓಮು : ಮೋದಕದಿಂ ಮಧು ಪೀಲಿಯ ಬೂದಿ ಕಣಾಚೂರ್ಣಮೆಂಬಿವಂ ತಿನೆ ರುಜೆಯಿಂದಾದಿರ್ಕುಟುಂ . . . ಕಂಠರೋಗಮುಂ ಪ್ರಶಮಿಸುಗುಂ (ಲೋಕೋಪ. ೯-೩೨).

[< ಮೋದ$_2$]

**ಮೋದಗೆ** (ನಾ). ಮೋದಕ ; ಕಡುಬು : ಆಕೆಗೆ ಗರ್ಭಮಾಗಿ ಮೋದಗೆ [ಪಾಠಾಂ. ಮೊಜಗೆ, ಮೊದಜಗೆ]ಯ ಮೇಗೆ ಬಯಕೆಯಾದೊಡೆ (ವಡ್ಡಾರಾ. ೦೬-೦೯). [<ಸಂ. ಮೋದಕ]

**ಮೋದನ** (ನಾ). ೧. ಸಂತೋಷ ; ಹರ್ಷ : "ಮುತ್, ಮುದಂ, ಪ್ರೋದಂ, ಮೋದನಂ, ಮುದಿತತ್ವಂ . . . ಮೋದ್ಯಂ ಈ ೧೨ ನಲಿವು" (ಅಭಿಧಾ. ೬೩) ; ಪೋ [ಪಾಠಾಂ. ಪೋ]ದನವಿಲ್ಲದುಣ್ ಪುಸಿಯಂಜದೆ ಪಣಮಂ ನೆಚ್ ಕೊಳಲಜ್ಯೋದು ಸುತ್ತಗೆ ಕಲಿಸಿದರೊರ್ವಳ್ (ತ್ರಿಷ. ೨೪-೦೯೪). ೨. ಸಂತೋಷಗೊಳಿಸುವುದು ; ಆನಂದವನ್ನುಂಟು ಮಾಡುವುದು. ೩. ಸಂತೋಷಗೊಳಿಸುವವನು ; ಆನಂದವನ್ನುಂಟು ಮಾಡುವವನು : ಯಾದವಯಿನ ಯಾಶಯುಕ್ತಿದಯುಧಪವೋದನ . . . ದಯೆದೋಟು (ಕಕಸಾಂ. ೭೭-೯೪). [ಸಂ.]

**ಮೋದನೀಯ** (ಗು). ೧. ಸಂತೋಷಿಸಬೇಕಾದ. ೨. ಸಂತೋಷವನ್ನುಂಟುಮಾಡುವ. (ನಾ). ೩. ಮಲ್ಲಿಗೆ : "ಮೋದನೀಯ – ಮಲ್ಲಿಗೆ" (೬ಕಂ. ೦೬೦). [ಸಂ.]

**ಮೋದವಿ** (ನಾ). ಒಂದು ಬಗೆಯ ಸಸ್ಯ : "ಮೋದವೀ – ಮಲ್ಲಿಗೆ, ಸೇವಂತಿಗೆ, ಮೊಸ್ನಾಮರೆ". (೬ಕಂ. ೦೬೦). [ ? ]

**ಮೋದಿ** (ಗು). ೧. ಸಂತೋಷಪಡಿಸುವ. ೨. ಮಿಶ್ರಮಾಡುವ. (ನಾ). ೩. ನಲಿವನ್ನು ನೀಡುವವನು ; ಸಂತೋಷಗೊಳಿಸುವವನು: ಎನ್ನ ಪಾಲಿಸಿದಂದದಿ ಸಕಲಪ್ರಾಪ್ಸನ್ನರ ಸಲಹೊ ಮೋದಿ (ಜಗದಾ. ೦೩೨). ೪. [ಸಂಗೀತ] ಒಂದು ರಾಗದ ಹೆಸರು : ಕೌಶಿಕಿ . . . ಮೋದಿ . . . ಶಯಸೋದರಿಯೆಂಬ ಮೂವತ್ತುನಾಲ್ಕು ರಾಗಂಗಳೇ ಭಾಷಾಂಗದಿಂದ ಪುಟ್ಟಿದವು (ಪಶೇಳ. ೨೩೩). [ಸಂ. ಮೋದಿನ್]

**ಮೋದಿಕೆ** (ನಾ). ಹೊಡೆಯುವಿಕೆ ; ತಾಡನ : ಮೋದಿಕೆಗಳ್, ಮೋದುಗಳ್ (ಶಬ್ದಾ.ಸು. ೩೬೯ ಪ್ರಯೋ). [ಮೋದು₁ + – ಇಕೆ]

**ಮೋದಿಖಾನೆ** ' ಮೋದೀಖಾನೆ ' ನೋ.

**ಮೋದಿತ** (ಗು). ೧. ಸಂತೋಷಗೊಂಡ ; ಆನಂದಿತನಾದ : ಮೋದುವಲರಲ್ ಸೋಮವಾರಮದಾದಿಯಾಡೊಂಭತ್ತುದಿವಸಂ ಮೋದಿತೋತ್ಸುಕ ಭಕ್ತಿ [ಪಾಠಾಂ. ವೇದಿತೋತ್ಸುಖವೃತ್ತಿ]ಯಿಂ ಸಲೆ ನೋಂತು (ಬಸವು. ೨-೩೦). (ನಾ). ೨. ಸಂತೋಷ ; ಆನಂದ. [ಸಂ.]

**ಮೋದಿನಿ** (ನಾ). ಒಂದು ಬಗೆಯ ಸಸ್ಯ ; ಅಜಮೋದ : "ಮೋದಿನೀ – ಅಜಮೋದ, ಮದ್ಯ, ಉಗುನಿ, ಹಿಟ್ಟಳಿಕ" (೬ಕಂ. ೦೬೦). [ಸಂ. ಮೋದಿನೀ]

**ಮೋದಿರ, ಮೋಯಿರ** (ನಾ). ಉಂಗುರ : ಮೋದಿರ ನಿನಗೆಲ್ಲಿ ಸಿಕ್ಕಿತು ? (೧೧೪. ೨೩೪). 'ಪೊನ್ಮೋದಿರ' ಪರಾ. **ಮೋಯಿರ** : 'ಮೋಯಿರ ಮುಹೂರ್ತ' ಪರಾ. [ದೇ. ತಮಿ. ಮೋತಿರ ; ಮಲ. ಮೋದಿರ; ಕೊಡ. ಮೋದ್‌ರ./ಸಂ. ಮುದ್ರಾ]

**ಮೋದಿಸು₁** (ಕ್ರಿ). ೧. ಹೊಡೆಯುವಂತೆ ಮಾಡು ; ಬಡಿಯಿಸು : ಒರ್ವರಿಂದಮೊರ್ವರನಜ್ಯುಟ್ಟ ಮೋದಿಸುತಮಿಾ ತೆಜನಿಂ ನಗುತಿರ್ಪನಾವಗಂ (ಧರ್ಮಾಮೃ. ೨-೯೨). ೨. ಹೊಡೆ ; ಕುಟ್ಟು : ಪುಡಿಸೇಲದಿ ಪೊರಳುವ ಮೋದಿಸುವ ತಲೆಗಳನು ಕಗ್ಗಲ್ಲುಗಳಿಗೆ . . . ಭರತಭೂರ್ಯೆಯರಾ ದಿನದ ದುಃಖವನು ಪೇಳುವೆನೆನ್ನಳವೆ (ತಿಮ್ಮಣ್ಣ. ೩-೩೬). [ಮೋದು₁ + – ಇಸು₃]

**ಮೋದಿಸು₂** (ಕ್ರಿ). ೧. ಸಂತೋಷಪಡಿಸು ; ಆನಂದಗೊಳಿಸು : ಆದಿಮುಖದಿಂದಲಚ್ಚಿದ ದೃವ್ಯಮಂ ರೂಪು ಮೋದಿಸುವ ಗಂಧರಸಮಾಸ್ಪರ್ಶ ಶಬ್ದ ಲಿಂಗಾದರ ತೃಪ್ತಿಯಾಯಾಯ್ತು ರೂಪಾದಿ ಸದ್ರವ್ಯಂಗಳು (ಏಕೋತ್ತ. ೬-೦೬-೦೬) ; ಗುಣಯ್ಯನೆದೆಯೊಳಗೆ ಮೋದಿಸಲು ಕುಣಿವ ತಲೆಯೂಗಿ (ಕಸ್ಟ್ರಜಾ. ೩೦೦). ೨. ಆನಂದವನ್ನು ಹೊಂದು : ಉಲ್ಲಾಸವನ್ನು ತಳೆ : ಬಸವಂತಿಯ ಮಾತು ನಗೆಯ ಮುಕರಂದವನ್ನು ಮೂಸಿ, ಮೋದಿಸಿಯೇ ಬಂದಂತಿತ್ತು (ದೀಕಕ. II, ೦೬೦). [ಮೋದ₁ + – ಇಸು₃]

**ಮೋದೀಖಾನೆ, ಮೊದೀಖಾನೆ, ಮೋತಿಖಾನೆ, ಮೋತೀಖಾನೆ, ಮೋದಿಖಾನೆ** (ನಾ). ಸೈನಿಕರಿಗೆ ಒದಗಿಸುವ ಆಹಾರ ಸಾಮಗ್ರಿ ಮುಂತಾದುವುಗಳನ್ನು ಸಂಗ್ರಹಿಸಿಡುವ ಸ್ಥಳ.– ಉಗ್ರಾಣ; ಗೋದಾಮು; P ಅಠಾರಖಾನೆಗಳಲ್ಲಿ ಒಂದು : ಅಕ್ಕಿಯನ್ನು ಕೂಡಿಗೆ ಮಾಡಿಸಿ, ಕಿಗ್ಗಟ್ಟನಾಡ ಮೋದೀಖಾನೆಯಲ್ಲಿ ಜೋಪಾನದಿಂದ ಮಡಗಿ . . . ಅಕ್ಕಿ ಕೇಳಿದರೆ ಅಳೆದು ಕೊಡುವಂತೆ ಠಾಕೀದಿ ಮಾಡಿದ್ದೇವೆ (ರಾಜೇಂದ್ರ. ೬೬): ಹಜೂರು ಮೋದೀಖಾನೆ ಸಾವಕಾರ ಬೆಟ್ಟದ ಪುರದ ಮೇಗಳ ಮನೆ ಲಿಂಗಣ್ಣನ ಮಗ (ಎಕ. XIV, ಹುಣಸೂ. ೦೪೩-೩; 1867); ಕಚೇರಿಗಳು ೧. ದಿವಾನ್ ಕಚೇರಿ . . . ೧೦. ಮೋದೀಖಾನೆ, ೧೧. ಕಂದಾಚಾರ ಕಚೇರಿ (ಮುಕಾಶಾ. II, ೬೬). **ಮೊದೀಖಾನೆ** : ಅರಮನೆ ಶಿರಸ್ತೆದಾರ ಹಿರಣ್ಣಯ್ಯನ ಮಗ ಮೊದೀಖಾನೆ ಶಿರಸ್ತೆದಾರ ನರಸೈಯ್ಯನು (ಎಕ. XIV, ಕಂಪ್ನ. ೦೩೯-೬; 1865). **ಮೋತಿಖಾನೆ** : ಮೋತಿಖಾನೆ ಬಕ್ಷಿ ದೊಡಬಳಾಪುರದ ದೇಶಕುಲಕರಣಿ ನರಸಿಂಗರಾಯನ ಶೇವೆ (ಎಕ. V (R), ಮೈಸೂರು. ೬೩-೦; 19ನೆಯ ಶತ). **ಮೋತೀಖಾನೆ** : ರಾಜ್ಯಪ್ರಾಪ್ತಿಯಾದೊಡನೆ ಈ ಯುವಕರಾಜನು ಮೋತೀಖಾನೆಯ ಅಕ್ಕಿ ಬೇಳೆಗಳ ಲೆಖ್ಖಾಚಾರಕ್ಕೆ ಹೊರಟನು (ಕಥಾ. ೬೦೦). **ಮೋದಿಖಾನೆ** : ಮೋದಿಖಾನೆ ಶಿರಸ್ತೆದಾರ ಸುಬ್ಬಯ್ಯನ ಸೇವಾರ್ಥ (ಎಕ. IV (R), ಪಾಮರಾ. ೯೭-೨; ?). ' ಅಠಾರಖಾನೆ ' ಪರಾ. [←ಹಿಂ. ಮರಾ. ಮೋದೀಖಾನಾ]

**ಮೋದು₁** (ಕ್ರಿ). ೧. ಹೊಡೆ; ಬಡಿ ; ಅಪ್ಪಳಿಸು : "ಮೋದು–ತಾಡನೇ" (ಕಮಾ); ಮೋದಿದ ನೀಲಸರೋಜಮಾಲೆಯಿಂದುದಿರ್ದು ಪದಂಗಡೊಳ್ ತೊಡರ್ದು ತೋರ್ಪ ದಳಂಗಳೊ ಪೇಟಿಮಾಪುದೆಂಬುದನೆನೆ ಕಾದಿ ಮೋದಿದವಿನಾಣಮದಿಲ್ಲಿ ದಲಿಲ್ಲ ಸಲ್ಲಳಾ (ಆದಿಪು. ೯-೧೦); ಅಸಿತೇಂದೀವರಲೋಲ ಲೋಚನೆಯನಂದಂತಾ ಸಭಾಮಧ್ಯದೊಳ್ ಪಸುವಂ ಮೋದುವವೋಲೆ ಮೋದೆಯುಂ (ಶಂಕರಾ. ೭-೩೬); ಕೆಲಂ ತೆಗಳ್ದಿಯ ಹ್ಯ ಕರಂ ತೆಗಳ್ದಯೆಂದೆನೆ ಪುತ್ರಿಯುನಟ್ಟ ಮೋದಿದಳ್ (೧೧೪. ೯-೦೩೩). ೨. ಹೊಡೆದುಕೊಳ್ಳು; ಬಡಿದುಕೊಳ್ಳು : ಇಚಿವ ಖಿಣಿಲ್ ತರಳ್ದೊಜಿವ ಕಣ್ಬನಿ ಮಾಣದೆ ಮೋದೆ ಶೋಕವಚ್ಚಿಬಿದವೊಲಿರ್ದ ಬಾಸುಬಿನೊಳಟ್ಟು ಕಸಲ್ದು ಬಟಲ್ದು ಜೋಲ್ದ ಮೆಯ್ (ಶಂಕರಾ. ೧೯-೩); ಜನಕಜೆ ಬಸಿಱಂ ಮೋದಿ ಪುಯ್ಯಲ್ಚಿ ಕೇಳ್ವಾ ನಾಮುಕ್ಕಾನೆಯ್ದಿದಂ (ಶಂರಾಪು. ೦೦-೩೬); ಆರ್ತವರಾರ್ಶರಣೆಂದಾ ಕಳಕಂಠನಾದೆ ಬಸಿಱಂ ಬಾರೇಟ್ಟಿನಂ ಮೋದಿದಳ್ (ಅಸಂಪು. ೦೦-೯೬). ೩. ಎರಗು ; ಮೇಲೆ ಬೀಳು : ಹರಿಣವೈರಿಗಳು ಮೃಗವ ಹರಿದಟ್ಟಿ ಓಡಿದಡಸಿ ಮೋದಿ ಮುಜಿಯದೆ ನಿಂದು ಮಡಿವಟ್ಟ ಕಾರಣವನಜುಪಬೇಕೆಂದೆಯ್ದಿ (ಹಕಾ. ೩-೩೩); ಮೊಳಗಿ ಮೋದುವ ಸಿಡಿಲ್ಗಳಂಬಿನ ಮೊನೆಯೊಳುದಿಸಿದುದೊ (ಕುಬ್ಜಾರೀ. ೯-೦೯). ೪. ಮುಟ್ಟು; ತಗಲು ; ಸೋಕು : ಫಲವ್ರಾತದಿಂ ನೆಲನಂ ಮೋದುವ ಮಾತುಳುಂಗಪುಸಗುಂ ವಿದ್ಯಾಧರೋದ್ಯಾನದೊಳ್ (ಆದಿಪು. ೦-೬೬) ; ಕದಪಂ ಮೋದುವ ಕುಂಡಲ ದ್ವಿತಯಮುಂ ಚೆಲ್ವಾಗೆ (ಜಗದ. ೩-೦೩); ನೆಲನಂ ಸಲೆ ಮೋದುತಿರ್ಪ ಪೀವರ ಫಲಮಾತುಳಂಗತತಿ ಸಂತತಮೊಪ್ಪುವುದಾ ವನಾಂತದೊಳ್(ಕುಸುಮಾ. ೨-೩೬); ಬೆನ್ನಂ ಮೋದೆ ಕೇಶಾಳಿ ಗಂಡಮಂಸೋರಂತಿರೆ ಪೊಯ್ಯೆ ಕುಂಡಲಯುಗಂ (ಕಾವ್ಯಸಾ. ೬೫೬). ೫. ಒದೆ; ಪಾದದಿಂದ ಪ್ರಹಾರ ಮಾಡು : ಪಾರ್ವನ ಕಾಲ್ ಮೋದೆ ನಚುತಲೆಯುರ್ಪುದುಮಾದುದು ನಿಮಗೆಂದು ನುಡಿದು ಕಾಯ್ಪಿನೊಳೊದೆದಂ (ಶಂಕರಾ. ೨-೬೪): ಅನಾಥೆಯುಂ ಮೋದಿದ ಕಾಲ್ಗಳನಾವ ಜನ್ಮ ಜನ್ಮಂಗಳೊಳಗಾಗಿಯುಂಮಕ್ಕೆ ಮುಂದೆ ಕೇಳ್ವೆನ್ನದಿರಂ

(ಸುಕುಮಾ. ೩-೬). ೭. ಜಜ್ಜು ; ಕುಟ್ಟು; (ಮುಷ್ಟಿಯಿಂದ) ಗುದ್ದು: ಎಲುವ ಮುಱಿ ಮೂಳೆಯುಂ ಮೋದು ಬಸಿನೆತ್ತರುಂ ಕುಡಿಯೆಸುತ್ತೆ ನಾಲ್ದೆಸೆಗಳಿಂದುಲಿದೆಸುತ (ಹರಿಶ. ೬-೦೪); ಒದೆದು ಕೆಲವನು ಮುಷ್ಟಿಯಲಿ ಮೋದಿದನು ಕೆಲವನು (ಕುಮಾ.ದ್ರೋ. ೨-೬೦); ಅಬ್ಬರಿಸಿ ಖಳ ಮೋದಿದನು ಮುರಹರನ ವಕ್ಷಸ್ಥಳವ ಮುಷ್ಟಿಯಲಿ (ಶಿಭಾಗ. ೩-೯-೨೦). ೭. ಸದೆಬಡಿ ; ಅಜಿಗಿಜಿಯಾಗುವಂತೆ ಮಾಡು : ರಿಪುರಾಜರಂ ಮೋದಿ ಮುಱಿದು ಮೆಲಲೆಂದು ದುರ್ಗ ಬಾಯ್ದೆಱೆದೆಸೆವ ದಂತವೋ ತಿಳಿಯಲರಿದೆನಲ್ . . . ರನ್ನದ ತೆನೆಯ ತೆಕ್ಕೆ ಮಿಕ್ಕೊಪ್ಪಿದವು ಮೇಘಮಂಡಲವ ಬಗಿದು (ಹರಿಶ. ೦-೩೮); ಅಕಟ ಹಂಸೆಯ ಮಱಿಯ ಮೋದುವ ಬಕನ ತೆಗೆಸೈ (ಕುಮಾ.ಸ. ೧೪-೦೨೩) ; ವಿಱಿದ ಜಕ್ಕವಕ್ಕಿಯನ ಮೇರೆಯಿಲ್ಲದ ಬಲವಾರಿಧಿಯಸು ಮೋದಿದಾರುಭಟೆಯನೇವೇಳ್ವೆ (ಕಂಸವಿ. ೩-೬೪). ೮. ನಾಶಮಾಡು ; ಇಲ್ಲವಾಗಿಸು : ಲಕ್ಷ್ಮಣನೆಕ್ಕತುಳದಲಿ ಬಂದನಾ ಲಯಕಾಲದಲಿ ಜಗವ ಮುಕ್ಕಿ ಮೋದುವ ಮದನಹರನವೊಲ್ (ತೊರರಾ. ೨-೩-೦೦) ; ವೇದಮಂತ್ರವ ಹೇಳಿ ಕಾದ ತುಪ್ಪದಿ ತೊಳೆಯೆ ಹಾದರದ ಪಾಪ ಹೋಯ್ತೆಂಬ ಹಾರುವನ ಮೋದದೆ ವಿಧಿಯು (ಸರ್ವಜ್ಞ. ೯೩೨); ಶ್ರೀದಿವ್ಯಾಪಾಂಗಂಗಳಿನಾ ದಿನದೊಳ್ ಕಲ್ತ ಪೊಳಪ ನೊವವಿಂ ತನುಸಂ ಮೋದಿ ನಿಗಮಂಗಳಂ ತಂದಾದಿಯ ಮಿನಾಳ್ದನಕ್ಕೆ ನರಪತಿಗನಿಶಂ (ಚಿಕವಿ. ೨-೦). ೯. ಮುಕ್ಕು ; ಕಬಳಿಸು : ವೇದಬಾಹ್ಯರ ಮೃತ್ಯುದೇವತೆ ಮುಱಿದು ಮೋದದೆ ಬಿಡುವಳೇ (ಕುಮಾ.ಆ. ೪-೦೦೦) ; ನಮ್ಮ ನಗರವನೊರೆಸಿ ಮೋದುವ ಮೋಡಿ ಮೋಱೆಯೊಳವನಲದೆ (ತೊರರಾ. ೬-೯-೩): ಪಾತಕರನಂತಕ ಮುಱಿದು ಮೋದುವನೆಂದು ವೇದಂ ಘೂರ್ಮಿಸುತ್ತಿಹುದು (ಕಂಕರಾ. ೬-೧೦); ಹಣ್ಣುಗಳನ್ನು ಮೋದಿದನು . . . ಚಕ್ಕುಲಿಗಳನ್ನು ಕಟಕಿಸಿದನು (ಪೀತಿಜಂ. II, ೦೬). ೧೦. ಸವಿ ; ಆಸ್ವಾದಿಸು ; ತಿನ್ನು : ಓದದ ಬಾಯಮೃತಾನ್ನವ ಮೋದದ ಬಾಯ್ . . . ತಾಂ ಮೇದಿನಿಯೊಳ್ ಬಿಲದ ಬಾಯಿ (ಪೀತಿಸಾ. ೨೦). ೧೧. (ಆಲಂ) ಹಿಡಿದುಕೊಳ್ಳು ; ಮೆಟ್ಟಿಕೊಳ್ಳು : ಕಾದುಕೊಂಡಿರ್ದ ದಂದುಗ ಮದುವೆಗೈತಂದು ಮೋದಿತೇಂ ನಿನ್ನ ಬಾಳ್ವೆಯನೆನ್ನ ಮಗಳ (ಕಾಂಚಿಕ. ೦೬೬-೩೯೬). ೧೨. [ಗಣಿತ] ಗುಣಾಕಾರ ಮಾಡು ; ಗುಣಿಸು : ಬಡಿ, ಮೋದು, ಒತ್ತು . . . ಬೆಳಸೆಂದು ಇಂತಿನಿತುಂ ಗುಣಿಸೋದಕ್ಕೆ ಹೆಸರು (ವ್ಯವಹಾ. ೦೦). [ದೇ.॥ ತಮಿ. ಮೋತು; ಮಲ. ಮೋದು : ತೆಲು. ಮೋಂದು]

**ಮೋದು₂** (ನಾ). ೧. ಏಟು ; ಹೊಡೆತ : ಒದುಗಳ್, ಮೋದುಗಳ್, ತಿರ್ದುಗಳ್ (ಶಬ್ದಾಸು. ೩೪೯ ಪ್ರಯೋ). 'ಮೋದುವೆಱು' ಪರಾ. ೨. ಹೊಡೆತದಿಂದ ಉಂಟಾದ ಬಾವು; ಪೆಟ್ಟಿನಿಂದಾದ ಬಾಸುಂಡೆ : 'ಮೋದುಗಟ್ಟು' ಪರಾ. ೩. ಒಂದು ಬಗೆಯ ಗುಹ್ಯರೋಗ : (ಕ)
[< ಮೋದು₁./ ತಮಿ. ಮೋತು; ತೆಲು. ಮೋಂದು, ಮೋಂದ]

**ಮೋದುಗಟ್ಟು** (ಕ್ರಿ). ಪೆಟ್ಟಿನಿಂದ ಗಂಟುಕಟ್ಟು; ಹೊಡೆತದಿಂದ ಬಾಸುಂಡೆಯೇಳು : (ಕ). [ಮೋದು₂ + ಕಟ್ಟು₁]

**ಮೋದುವೆಱು** (ಕ್ರಿ). ಏಟು ತಿನ್ನು ; ಹೊಡೆತವನ್ನು ಪಡೆ : ಏಕಾಂತದೊಳ್ ನೂಪುರರವವಿಳಸದ್ವಾಮಪಾದಪ್ರಹಾರಕ್ಕೆದೆಱೆಯೊಳ್ ಪಕ್ಕಾಗಿ ಗೋತ್ರಸ್ಖಲನೆ ನೆಗಟೆ ಪೂಮಾಲೆಯಿಂ ಮೋದುವೆತ್ತಂ (ಅದಿಪು. ೪-೯).
[ಮೋದು₂ + ಪೆಱು₁]

**ಮೋದೆ** (ನಾ). ಅಜಮೋದ ; ಅಜವಾನ ; ಓಮು : (ಕ).
[ಸಂ. ಮೋದಾ]

**ಮೋದೋಪಚಾರ** (ನಾ). ಬಾಣಂತಿ ಹಾಗೂ ಎಳೆಯ ಮಕ್ಕಳಿಗೆ ಸ್ನಾನಾನಂತರ ಸುವಾಸನಾಯುಕ್ತವಾದ ಧೂಪದಿಂದ ಮಾಡುವ ಉಪಚಾರ : ಆ ಶಿಶುವಿಗೆ ಸಾದರದಿ ಪ್ರಕಾ[ಕ್ಷಾ]ಳನಂಗೈದುವೊಲಿದು ಕೊಂಡೊಯ್ದು ತಜ್ಜನನಿವತ್ತಿನಲಿ ಮಲಗಿಸಿ ಪುಷ್ಪ ಮೋದೋಪಚಾರವು ಮಾಡುತಿರಲು (ನವಮೋ. ೦೧-೨೧). [ಸಂ.]

**ಮೋನ** (ನಾ). ೧. ಮಾತನಾಡದಿರುವಿಕೆ ; ಮೌನ : ಗುರುಚರಣಂಗಳ್ಗೆಱಗದೆ ಪರಕೆಯನಾದರದಿನಾಂತುಕೊಳ್ಳದೆ ಮೋನಂಬೆರಸಿರ್ಪುದು ನಿನಗುಚಿತಮೆ (ಗದಾಯು. ೩-೬೦) ; ಸೊಬಗಿಯ ಗಾಂಪಿನಂತೆ ನುಡಿಜಾಣನ ಮೋನದಂತೆ (ರಾಜಾಭ್ಯು. ೬-೯೪); ಮೋನವಿತ್ತಲು ರಭಸವತ್ತಲು ಹಾನಿಯಿತ್ತಲು ವೃದ್ಧಿಯತ್ತಲು (ಕುಮಾ.ದ್ರೋ. ೪-೦) ; ಶಿಶಿರಕಾಲದ ಕೋಗಿಲೆಯವೊಲು ಉಸುರದತಿಮೋನದಲಿ ಜೀವಂಜನಯಿರಲು (ಸಾಳ್ವಭಾ. ೨೦-೦೩). ೨. ಮಾತನಾಡದಿರುವ ನಿಯಮ ; ಮೌನವ್ರತ : ಮನಸಿಜರಾ × × × ಗನಾ ಅಪಸಿ ಬೇನೆವತ್ತಿ ಮೋನಮುಜ್ಜವಿಸುವಲ್ಲಿ ಕೊಟ್ಟದು (ಎಕ. II, ೩೩-೩, ಸು. ೪೦೦). ೩. [ಕಾವ್ಯಶಾ] ವಿರಹದ ಹತ್ತು ಅವಸ್ಥೆಗಳಲ್ಲಿ ಎಂಟನೆಯದು : ಎಱಗಿ ನೋಡುವುದೊಂದಱಲಿ . . . ಎಂಟಱಲಿ ಮೋನಂ ಬಱಿತುಸುರುವೊಂಬತ್ತಱಲಿ ಮೋಹ್ ಹತ್ತಱಲಿ ಮರಣ ಇವು ದಶಾವಸ್ಥೆಗಳೆನಲು ಪೇಳ್ವವು ವಿರಹಿಜನರ್ಗೆ (ರಸಕ. ೩೩-೩೨). ☞ ಕೆಲವು ಗ್ರಂಥಗಳಲ್ಲಿ ಮಾತ್ರ ದಶಾವಸ್ಥೆಗಳಲ್ಲಿ ಮೌನದ ಉಲ್ಲೇಖವಿದೆ. [< ಪ್ರಾ. ಮೋಣ./ಸಂ. ಮೌನ]

**ಮೋನಂಗೆಡು** (ಕ್ರಿ). ಮೌನವು ಭಂಗವಾಗು : ಕೇಳಣ್ಣ ಕವಿಯ ಕೊಪ್ಪಂ ನೀಂ ಕೊಳ್ಳೊಡೆ ನೋಯದಂತೆ ತೆಗೆಯೆಂದೊಡೆ ಮೋನಂಗೆಟ್ಟಳಿವಳೆ ನೋಲ್ಪವಳೆಂದಂ (ಧರ್ಮಶ. ೯-೨೦). [ಮೋನ + ಕೆಡು₁]

**ಮೋನಂಗೊಳ್**, ಮೋನಗೊಳ್, ಮೋನಗೊಳ್ಳು (ಕ್ರಿ). ೧. ಸುಮ್ಮನಿರು ; ಮೌನವಾಗಿರು : ಭಟ್ಟಾರರುಂ ಮೋನಂಗೊಂಡು ನುಡಿಯದೆ ಕೆಮ್ಮಗಿರ್ದೊಡೆ (ವಡ್ಡಾರಾ. ೬೯-೧೦) ; ದಿವ್ಯನಿನಾದಮನಾಲಿಸಿಯುಂ ಮಿಡುಕದಿನಿರದೆ ನುಡಿಯದೆ ಮೋನಂಗೊಂಡಿನಿಸಿರ್ದಧಿಪತಿಗೆ ನಿಚ್ಚಂ [ಮೆಚ್ಚಂ] ಪಡೆದು (ಶಾಂತಿಪು. ೦೦-೮೭) ; ಆನೇನಂ ಪೇೞ್ದೊಡಂ ನೀಂ ಮೋನಂಗೊಂಡಿರ್ದಪೆ (ಶಂಖಶಂ. ೦೨೦-೨೨). ೨. ಮೌನವಾಗಿರುವುದನ್ನು ಆಚರಣೆಯಲ್ಲಿ ತರು ; ಮೌನವ್ರತವನ್ನು ಪಾಲಿಸು : ಮೌನಾನುಷ್ಠಾನವನ್ನು ಮಾಡು : ನಿಮ್ಮಡಿ ನೀವೀ ಚಾತುರ್ಮಾಸವಿಲ್ಲಿರ್ಪನ್ನೆಗಂ ಸ್ವಾಧ್ಯಾಯಾಧ್ಯಯನಾನುಷ್ಠಾನನಿಯಮದಿಂ ಮೋನಂಗೊಂಡಿರ್ಪುದು (ಸುಕುಮಾ. ೧೧-೩೮ ವ) ; ನಿಶ್ಚಲಮತಿಯಿಂ ಮೋನಂಗೊಂಡು ಪಂಚನಮಸ್ಕಾರಮಂ ಜಪಿಸುತ್ತುಮಿರ್ದಿರ್ಪುದುಂ (ಧರ್ಮಾಮೃ. ೩-೯೮). ಮೋನಗೊಳ್ : ೧. ಚಿತ್ತದನುರಾಗವಿಲ್ಲದೆ ಮೋನಂಗೊಂಡಿರುಳ ಬಳಸಿಗೊಳಗಾಗಿರ್ದ ಸರಸಿರುಹವಂತೆ . . . ತಾಪವಡೆದು (ಹರಿಶ. ಶಂ. ೨೦೯). ಮೋನಗೊಳ್ಳು : ೧. ಜಯಂತನು ಮೋನಗೊಂಡು ಆಕೆಯ ಬೆನ್ನು ಹತ್ತಿ ನಡೆದನು (ಜಯಂತ. ೩೭). [ಮೋನ + ಕೊಳ್₁]

**ಮೋನಗೊಳ್** 'ಮೋನಂಗೊಳ್' ನೋ.

**ಮೋನಗೊಳ್ಳು** 'ಮೋನಂಗೊಳ್' ನೋ.

**ಮೋನದಳೆ** (ಕ್ರಿ). = ಮೋನಂಗೊಳ್ ೨ : ಚಳಿಗಾಳಿ ಮಳೆ ಬಿಸಿಲನ ಱಿಯದಚಲತ್ವದಿಂ ಮೋನದಳೆದು ಅನುದಿನ ತಪಂಗೈವ ಮುನಿವರ್ಗಮೆನೆ (ನಂದಿಪು. ೩-೨೦). [ಮೋನ + ತಳೆ₁]

**ಮೋನಾನುಷ್ಠಾನ**, ಮೋನಾನುಷ್ಠಾಣ, ಮೋನಾನುಷ್ಠಾನ (ನಾ). ಮೌನವಾಗಿರುವುದನ್ನು ಪಾಲಿಸುವಿಕೆ ; ಮೌನವ್ರತದ ಆಚರಣೆ : ಧ್ಯಾನಧಾರಣ ಮೋನಾನುಷ್ಠಾನ ಜಪಸಮಾಧಿಶೀಲಸಂಪನ್ನರಪ್ಪ . . . ಸಾಸಿರದ ಮೂನೂರ್ವ್ವರೆಂತೆನೆ (ಎಕ. VII, ಶಿಕಾ. ೦೮-೧೮ ; ೩೧೫೮). ಮೋನಾನುಷ್ಠಾಣ : ಧ್ಯಾನಧಾರಣ ಮೋನಾನುಷ್ಠಾಣ ಸಮಾಧಿ ಸಮ್ಪನ್ನರಪ್ಪ ಶಕ್ತಿಪರ್ಸೆಯ ಲೋಕಾಭರಣಪಣ್ಡಿತರ[ಕಾ]ಲಂ ಕರ್ಚಿ

(ಶಾಶಾಇ.XX, ೩೮-೨೮ ; 1058). ಮೋನಾನುಷ್ಠಾನ : ಧ್ಯಾನಧಾರಣ ಮೋನಾನುಷ್ಠಾನ ಜಪಸಮಾಧಿಶೀಳಸಂಪನ್ನರ್ (ಶಾಶಾಇ. XX, ೪೬-೦೭ ; 1072) ; ಮೋನಾನುಷ್ಠಾನ ಜಪಸಮಾಧಿ ಶೀಲಗುಣ ಸಂಪನ್ನರ್ (ಶಿಇಆ. ೦೩-೪-೦೦೩ ; 1093). [< ಸಂ. ಮೌನಾನುಷ್ಠಾನ]

**ಮೋನಾನುಷ್ಠಾಣ** ' ಮೋನಾನುಷ್ಠಾನ ' ನೋ.

**ಮೋನಾನುಷ್ಠಾನ** ' ಮೋನಾನುಷ್ಠಾನ ' ನೋ.

**ಮೋನಿ** (ನಾ). ೧. ಮಾತನಾಡದಿರುವವನು ; ಮೌನವಾಗಿರುವವನು : ಆಂ ಪೇೞದಿರ್ದೊಡೆ ಮಹಾಕಷ್ಟಮಕ್ಕುಂ ಸೆಟ್ಟಿಯ ಭಕ್ತಿಯುಂ ಕಿಡುಗು ಮೆಂಬ ನೆವದಿಂ ಮೋನಿಯಾಗಿ (ಧರ್ಮಾಮೃ. ೬-೫೬). ೨. ಮೌನವ್ರತವನ್ನು ಪಾಲಿಸುತ್ತಿರುವ ಮುನಿ,—ತಪಸ್ವಿ : ಪೇನಿಗಳಂ ಪೊಗೞದಿರ್. . . ಪಸುಮತಿಯೊಳ್ ದಾನಿಗಳನೂನಮಿಲ್ಲದ ಮೋನಿಗಳಂ ಪೋಗಿ ಪೊಗೞ ಕಲ್ಲಂಗೆಱೆಯೊಳ್ (ಎಕ. V, ಬೇಲೂರು. ೦೨೩–೨೪; 952); ಜಯಪಾಲನ ಅಸತ್ಯಸಂಗತಿಗಳಿಗೆ ಜಯಂತನು ಮೋನಿಯಾಗಿ ಅನುಮೋದಿಸಿದುದು ಉಪ ಕಾರವೆನಿಸಿ ಹೇಳುವುದನ್ನು ಕಡಿಮೆ ಮಾಡಿದನು (ಜಯಂತ. ೧೦೮).

[<ಪ್ರಾ. ಮೋಣಿ. / ಸಂ. ಮೌನಿನ್]

**ಮೋನಿಗುರವ** (ನಾ). = ಮೋನಿ ೨ : ಶ್ರೀಅಗೞಿಯ ಮೋನಿಗುರವರ ಶಿಷ್ಯ ಕೊಟ್ಟುರದ ಗುಣಸೇನಗುರವರ್ನ್ನೋರ್ನ್ನು ಮುಡಿಪ್ಪಿದಾರ್ (ಎಕ. II, ೮-೦ ; ಸು. 700) [< ಮೋನಿಗೊರವ]

**ಮೋನಿಗುರವಡಿ** (ನಾ). = ಮೋನಿ ೨ : ಅದೆಯೞಿನಾಡ ಚಿತ್ತೂರ ಮೋನಿಗುರವಡಿಗಳ ಶಿಷಿತ್ತಿಯರ್ ನಾಗಮತಿಗನ್ತಿಯರ್ . . . ಮುಡಿಪ್ಪಿ ದರ್ (ಎಕ. II, ೨೦-೦; ಸು. 700). [ಮೋನಿ + ಗುರವಡಿ]

**ಮೋನಿಗೊರವ** (ನಾ). = ಮೋನಿ ೨ : ವೈಶಾಖಮಾಸದ ಪೌರ್ಣ್ಣಮಾಸೆ ಯನೆಟ್ಟುಣಾಸೆಯ ನಾಲ್ವದಿವ್ಸಪ್ರ್ಮಹಾಜನಮುಂ ಮೋನಿಗೊರವರುಂ . . . ಕೊಟ್ಟರ್ (ಕಇ. I, ೧೩-೮; 805). [ಮೋನಿ + ಗೊರವ]

**ಮೋನಿಭಟಾರ** (ನಾ). = ಮೋನಿ ೨ : ಇನ್ತು ಕೆಲ್ಲಙ್ಗೆಱೆಯಮ್ಪ್ಪಲ ಪ್ಪೊಗೞ್ ಮೋನಿಭಟಾರರೆನುತ್ತು ಲೋಕಮೆಲ್ಲಙ್ಗಡೆಗೊಣ್ಡುಗೊಣ್ಡು ಕೊನೆದಪ್ಪುದು (ಎಕ. V, ಬೇಲೂರು. ೦೨೩-೩೬; 952). [ಮೋನಿ + ಭಟಾರ]

**ಮೋಪೞ್** (ಕ್ರಿ). ಬಯಕೆಯನ್ನು ಅರಿ,– ತಿಳಿ : ಪ್ರಸಾದಮುಂ ಮುಕ್ಕುಳಿಸಿ ಕುಕ್ಷಿಯಂ ಅಕ್ಕುಳಿಸಿ ಕಣ್ಣೀಱಾದುದೇದು ಮೋಪೞಿದು ತೂಪೞಿದು ತೊಡೆಗಳಂ ತಟ್ಟಿ (ಕೃಷ್ಣಲೀಲಾ. ೬-೨). [ಮೋಪು$_3$ + ಅಱ್]

**ಮೋಪು$_1$** (ನಾ). ೧. (ಕಟ್ಟಡಗಳ ಕಂಬ, ಬಾಗಿಲು ಮೊದಲಾದುವು ಗಳಿಗೆ ಬಳಸುವ) ಮರದ ದಿಮ್ಮಿ,–ತೊಲೆ ; ಮುಂಡಿಗೆ ; ನಾಟಾ : ಎರಡು ತಿಂಗಳು ಪರಿಯಂತವೀ ರೀತಿಯೊಳ್ಮರ ಮೋಪುಗಳ ತರಿಸಿದನು (ಗೋವಿಂದ. ೦೬-೬೬); ಮೋಪು. ಅಣಿಲೆ, ಸೀಗೆ_ಎಂದು ಯಾವತ್ತು ಸಾಮಾನು ಸರಂಜಾಮು ಅವರ ಮೂಲಕವಾಗಿ ಸಾಗಿ ಸರಿಯಬೇಕು (ಹಹಸ. ೦೮); ಬೆಟ್ಟದ ತುದಿಯಿಂದ ಬುಡದ ತನಕ ಮತ್ತಿ, ಜಂಬೆ, ನಂದಿ ಮೊದಲಾದ ಮೋಪಿಗೆ ಬರುವ ಮರಗಳಿವೆ (ಕುಬಳಾ. ೦೦೫). ೨. ಒಳ್ಳೆಯ ಅಂಗಸೌಷ್ಠವ : ರೂಪು ತಲೆದೂಗಿಸಿತು ಸತಿಯರ ಮೋಪು ಕೊಂಡಾಡಿಸಿತು ಮದನನ ಚಾಪಕಂಬೇರಿಸಿತು (ಅಂಬಿಕಾ. ೩೪-೭೬); ಆದರೂ ಕೆಂಪಿ ಒಳ್ಳೆ ಮೋಪಾದ ಹೆಂಗಸು : ಕಾವೇರಿತೀರದ ಹೆಣ್ಣುಗಳನ್ನು ನೋಡಿದ್ದವರಿಗೇ ಆ ಮೋಪು ಅನ್ನುವುದರ ಅರ್ಥವಾಗುವುದು (ಮಲ್ಲ. ೯). ೩. ಭಾರ ; ಹೊರೆ : (*). ೪. ಹೊರೆಯ ಒಜ್ಜೆ,–ತೂಕ : (*). ೫. ಏಟಿನ ಅಥವಾ ಗಾಯದ ತೀವ್ರತೆ,– ತೀಕ್ಷ್ಣತೆ : (*). ೬. ಹಿಡಿತದ ಬಿಗಿ : (*). ೭. ಅನುಕೂಲವಾದ ಅವಕಾಶ,– ಆಸ್ಪದ ; ಸಕಾಲ : (*).

[ದೇ.॥ ತುಳು. ಮೋಪು, ಮೂಪು; ತೆಲು. ಮೋಪು; ಕೊಡ. ಮೋಪ್]

**ಮೋಪು$_2$** ' ಮೊಗಪು$_1$ ' ನೋ.

**ಮೋಪು$_3$** (ನಾ). ೧. ಆಸೆ; ಬಯಕೆ; ಬೇಟ : ಮತ್ತೊರ್ವ ಬೇಟಕಾರ್ತಿ ತಾಯ ಕಣ್ಣಂ ಬಂಚಿಸಿ . ತನ್ನ ಮೋಪಿನಾ [ಶಾಕುಂ. ಹಿಪಾ]ಕೆಯ ಮನೆಗೆ ಪೋಪ ಬೇಟದಾಣ್ಮನಂ ಪಿಡಿದು (ಶಂಕರಾ. ೯-೯೮ ವ); " ಪ್ರೇಮ, ಪ್ರೀತಿ " (ಶಂಕರ. ೦೭೩). ೨. ಶ್ರದ್ಧೆ ; ಆಸಕ್ತಿ : ಅಂತು ಮುಳಿಸಿನ ಮೋಪಿನ ಗಂಡಮಚ್ಚರದ ಮೆಚ್ಚುವಣಗೆಯಂಕಕಾಱರೆಕ್ಕತುಳಕ್ಕೆಕ್ಕೆಯಿಂ. . . ಕಾದೆ (ಶಂಕರಾ. ೦೨-೭೬ ವ); ಈ ಪರಿಯ ಗಮಕದಿಂ ಕಾರ್ತವೀರ್ಯಾರ್ಜುನಂ ಮೋಪಿನಿಂದರ್ಚಿಸಿದ ಹಯವು ನಡೆಯಲ್ಕೆ (ಜರಸ. ೯-೨೬).

[ದೇ.॥ ತಮಿ. ಮೋಪ್ಪು]

**ಮೋಪುಗಾರಿಕೆ** (ನಾ). ಮರದ ದಿಮ್ಮಿಗಳನ್ನು ಕೊಯ್ಯುವ ಉದ್ಯಮ : ಸ್ವೀಡನಿನ ಮಧ್ಯಭಾಗವು ತುಂಬಾ ಕಾಡುಗಳಿಂದ ತುಂಬಿದೆ. ಆದರಿಂದ ದೇಶವು ಮೋಪುಗಾರಿಕೆಗೆ (Lumber Industry) ಹೆಸರುಗೊಂಡಿದೆ (ಬಾಲಕೃ. III, ೧೩೨೭).

[ಮೋಪು$_1$ +— ಗಾರ (<— ಕಾಱ) +— ಇಕೆ]

**ಮೋಬದಲಿ** ' ಮುಬಾದಲೆ ' ನೋ.

**ಮೋಬೆದ** (ನಾ). (ಪಾರಸಿಗಳ) ಧರ್ಮಾಧಿಕಾರಿ; ಪುರೋಹಿತ : ದಾದಾಭಾಯಿಯು ತನ್ನ ಆರಂಭಸಂಸ್ಕಾರವನ್ನು ಹೊಂದುವವರೆಗೆ ಅವನ ತಂದೆ ಬದುಕಿದ್ದಲ್ಲಿ ಮೋಬೆದನಾಗಿ ತನ್ನ ಜನದ ಮತಧರ್ಮಕಾರ್ಯಗಳಲ್ಲಿ ತೊಡಗುವಂತೆ ಅವನನ್ನು ಪ್ರಾಯಶಃ ಒತ್ತಾಯಪಡಿಸುತ್ತಿದ್ದನು (ದಾದಾನ. ೩). [← ಪಾರ. ಮೂಬಿದ್, ಮೂಬದ್, ಮೂಬಿಜ್, ಮೂಬಜ್, ಮೌಬದ್, ಮೌಬಜ್]

**ಮೋಯಿರ** ' ಮೋದಿರ ' ನೋ.

**ಮೋಯಿರಮುಹೂರ್ತ** (ನಾ). ಮದುವೆಯ ನಿಶ್ಚಿತಾರ್ಥದ ಸಂಕೇತ ವಾಗಿ ವರನು ವಧುವಿಗೆ ಉಂಗುರವನ್ನು ತೊಡಿಸುವ ಮುಹೂರ್ತ : ಅವರು ಮಾತಾಡಿ ಮೋಯಿರಮುಹೂರ್ತದ ದಿನವನ್ನು ನಿಶ್ಚಯಿಸಿಕೊಂಡು ಬಂದರು (ವಠರಾ. II, ೦೦೩೨). ' ಉಂಗುರವುಡಿಕೆ ' ಪರ್ಯಾ.

[ಮೋಯಿರ (< ಮೋದಿರ) + ಮುಹೂರ್ತ]

**ಮೋರ್** ' ಮೊಸರ್ ' ನೋ.

**ಮೋರ** (ನಾ). ನವಿಲು; ಮಯೂರ : " ಮೋರವೆಂದುಂ ಸೋಗೆಯೆಂದುಂ ನವಿಲ್ " (ಕಕಸಾ. ೩೦-೯೬); ಮದನನ ಮುಂಗಡೆ ಮೋರ ಹೆಗ್ಗಾಳೆ ಸಾಱಿದುದು (ಮೋಹತ. ೬-೦೫); ವರಬರ್ಹಂಗಳಿನೊಲ್ದು ಬೀಸುವುದು ಮೋರಂ ಹೋಬುಸಪ್ರಾರ್ಚಿಯಂ (ಶಂಬ್ರಶ್ಯ. ೧-೧೨೭); ಉಜ್ಜ್ವಳತರದ ನೃತ್ಯ ಮಾಡುತ್ತಿದ್ದುದೊಂದು ಮೋರಂ ಸುತಸಂದಾಳುತೆ (ಸಿದ್ಧೇಶ್ವ. ೦೭-೨೬).

[< ಸಂ. ಮಯೂರ./ಪ್ರಾ. ಮೋರ್./ಹಿಂ. ಮರಾ. ಮೋರ್]

**ಮೋರಚೂತ** (ನಾ). ಒಂದು ಬಗೆಯ ಖನಿಜಲವಣ; ಮೈಲುತುತ್ತ : " ಮಯೂರಕ – ಮೋರಚೂತ " (ಗಂಗಾಮ. ೨೫೦).

[← ಮರಾ. ಮೋರಚೂತ್, ಮೋರಚೂದ್]

**ಮೋರಟ** (ನಾ). ೧. ಕಬ್ಬಿನ ಬೇರು : " ಮೋರಟಂ, ಐಕ್ಷವಮೂಲಂ– ಕಬ್ಬಿನ ಬೇರುಗಳಿಗೆ ಪೆಸರು" (ಸಿದ್ಧಾಂತ. ೩೦೭). ೨. ಒಂದು ಬಗೆಯ ಮರ : ಪೆಗ್ಗೋಳಿಜಾಲವು ಬೆಳಲು ಮೋರಟ. . . ಹಾದರಿಯ ಮರ ಮೊದಲಾದವೃಕ್ಷಹವು (ಶಾಕ್ಷಾ. ೫-೩). ೩. ಒಂದು ಬಗೆಯ ಸಸ್ಯ; ಕುರಟಿಗೆ : " ಮೋರಟ–ಕುರುಟಿಗೆ, ಸಿಗುಡಿತೆ " (ಚಿಕಂ. ೦೩೦). ೪. ಅಂಕೋಲೆಯ ಹೂವು. ೫. ಕರು ಹಾಕಿದ ಏಳುದಿನಗಳ ನಂತರದ ಹಸುವಿನ ಹಾಲು. [ಸಂ.]

**ಮೋರಟೆ** (ನಾ). ೧. = ಮೋರಟ ೧ : " ಮೋರಟಾ_ಕಬ್ಬಿನ ಬೇರು " (ಚಿಕಂ. ೦೩೦). ೨. ಒಂದು ಬಗೆಯ ಸಸ್ಯ; ಕುರಟಿಗೆ : " ಮೂರ್ವಾ,

ದೇವೀ, ಮಧುರಸಾ, ಮೋರಟಾ. . . ಪೀಲುಪರ್ಣೀ–೧೦ ಹೆಗ್ಗುರುಟಕೆಯು ಹೆಸರುಗಳು" (ಸಿದ್ಧಾ.ಚಿ. ೦೪೦). [ ಸಂ. ಮೋರಟ ]

**ಮೋರಟಿಕ್ಕೆಯ** (ನಾ). ನವಿಲಿನ ಗುರುತು ಇರುವ ಬಾವುಟ; ಮಯೂರಧ್ವಜ : ಮುರಿದುದು ಬಾಣನ ಮೋರಟಿಕ್ಕೆಯ ಮತ್ತೆ ಮುರಿದುವು ಹಲವು ಹರ್ಮ್ಯಗಳು (ಪೋಚಚ. ೩೬-೩೬).

[ ಮೋರ + ಟಿಕ್ಕೆಯ (< ಟಕ್ಕೆಯ) ]

**ಮೋರಿ**₁ 'ಮೌರಿ' ನೋ.

**ಮೋರಿ**₂, ಮೊಹರಿ₃ (ನಾ). ೧. (ಸಾಮಾನ್ಯವಾಗಿ ಕೊಳಕು ಅಥವಾ ಮೈಲಿಗೆ) ನೀರು ಹರಿಯಲು ಮಾಡಿರುವ ಸಣ್ಣ ಕಾಲುವೆ; ಚರಂಡಿ; ಗಟಾರ : ನರನರದ ಮೋರಿಯಲಿ ಇಲಿ ಹೆಗ್ಗಣದ ಮೇಳ (ಕಂಕೆಮ. ೩-೦೨); ಎಡಬಲದ ಮೋರಿಗಳಲ್ಲಿ ಮಳೆಯ ನೀರು ಹರಿಯುತ್ತಿತ್ತು (ಕಥಚ. ೯-೦೭); ನಿಮ್ಮ ನಾಲಿಗೆಗೆ ಗುರುತು ಸಿಕ್ಕರ ತಿನ್ನರಿ. ಇಲ್ಲಾದಿರ ಬಚ್ಚಲ ಮೋರಿ ಐತೆಲ್ಲಾ (ಬಾಬಂ. ೩೬). ೨. ರಸ್ತೆಯ ಕೆಳಗೆ, ರಸ್ತೆಗಡ್ಡವಾಗಿ ನೀರನ್ನು ಸಾಗಿಸುವ ಕಾಲುವೆ : ಒಂದೆ ಕಮಾನಿನ ಚಿಕ್ಕ ಸೇತುವೆಗಳಿಗೆ "ಮೋರಿ" (Culvert) ಎನ್ನುವ ರೂಢಿಯಿದೆ (ಬಾಂಶ್ರ. I, ೨೬೮). **ಮೊಹರಿ**₃ : ೧. ನಾಲಾಗಳ ಬಚ್ಚಲು ಮೊಹರಿ ಹಳ್ಳಕಟ್ಟೆಗಳು ಮುಂತಾದವುಗಳ ಸ್ವಾಧೀನಗಾರರು (ಗ್ರಾಮಾಕ. ೦೦೬); ಊರಿಗೆ ಅಗತ್ಯವಾದ ರಸ್ತೆ, ಚರಂಡಿ, ಕಲ್‌ವರ್ಟುಗಳು, ಮೊಹರಿ, ಭಾವಿ ಮುಂತಾದ ಕಾಂಗಾರಿಗಳಿಗೆ ಸರ್ಕಾರ. . . ವೆಚ್ಚವನ್ನು ವಹಿಸಿಕೊಳ್ಳುತ್ತ (ಪಮ್ಮಾ. ೪೩) ; ನನ್ನೂರಿಗೆ ಈಗ ಜಲ್ಲಿಕಲ್ಲಿನ, ಚರಂಡಿ ಮೊಹರಿಗಳ ರಸ್ತೆ ಆಗಿದೆ (ಪಮ್ಮಾರು. ೩೦೩). ೨. ದಾರಿಯಲ್ಲಿದ್ದ ಒಂದು ಮೊಹರಿಯ ಮೇಲೆ ಕೂತುಕೊಂಡು ಅಳುತ್ತಿದ್ದನು (ಕಂಕಶ. ೨೦೨).

[← ಹಿಂ. ಮೋರೀ; ಮರಾ. ಭೋರೀ, ಮೋಹರೀ]

**ಮೋರಿಯ** 'ಮೋರ್ಯ' ನೋ.

**ಮೋರು** (ಕ್ರಿ). ಹೀರು ; ಸುರಿದುಕೊಳ್ಳು : ರಾಮಪ್ಪ. . . ಕಳ್ಳು ಮೋರುವುದಕ್ಕೆ ಆರಂಭಿಸಿ, ಅದರಲ್ಲೆ ಸುಖದ ಪರಾಕಾಷ್ಠೆಯನ್ನು ಕಾಣ ತೊಡಗಿದ (ಬಿ.ಉ. ೦೦೩). [ ? ]

**ಮೋರುಂಡೆ** (ನಾ). (ಮೊಸರನ್ನು ಪಯೋಗಿಸಿ ತಯಾರಿಸುವ) ಒಂದು ಬಗೆಯ ಉಂಡೆ,– ಭಕ್ಷ್ಯ : ನಚಿಗಂಪೊಪ್ಪುವ ಮೋರುಂಡೆ ಮನ ಕೊಪ್ಪಿಸಿದುವು ಮಧುರರಸದ ಸುಧೆಯಂ ಬುಧರೊಳ್ (ಪಶಕಂ. ೪೯೩) ; ಪೂರಿಗೆ ಮಂಡಿಗೆ. . .ಮೋರುಂಡೆಗಳೆಂಬಿವನಾ ನಾರೀತತಿ ಮುನಿಜನಕ್ಕೆ ಬಡಿಸಿದುದಾಗಳ್ (ಶ್ರೀಕೃಪು. ೦೦-೩೯); ಬಿಳಿಯ ಬೆಲ್ಲವು ಮೋರುಂಡೆ ಎಳ್ಳುಂಡೆಯು (ಹ್ಮಾ.ಪಶ. ೩೬-೦೦೩) ; ಮೂಡು ಮೋರುಂಡೆಯುಂ ಚರುವನಿಡುವುದು (ಸೋಂಬಿಕ. ೨೬-೦೦).

[ ಮೋರ್ (< ಮೊಸರ್) + ಉಂಡೆ./ತೆಲು. ಮೋರುಂಡ./ಪ್ರಾ. ಮೋರಂಡ = ಕರಿದ ಕಡುಬು, ಕರಿಗಡುಬು ]

**ಮೋರೆ** 'ಮೋಡೆ³' ನೋ.

**ಮೋರ್ಚಂಗ್**, ಮೋರ್ಸಿಂಗ್ (ನಾ). (ತಾಳವನ್ನು ಸೂಚಿಸುವ) ಒಂದು ಬಗೆಯ ಲೋಹದ ಮುಖವಾದ್ಯ : ಚಂದದಿಂ ಮುಖವೀಣೆ ಮೋರ್ಚಂಗ್ ಪಿಟೀಲುಗಳ ಪಿಂದೆ ನುಡಿ ಪಿಮ್ಮೇಳದವರೊಡನೆಯೊಲ್ಪಿನಿಂ ನಿಂದು ಕುಣಿಯುತ್ತಿರುವ ವಾರಕಾಂತವೃಂದವಂ ನೋಡು ರಮಣಿ ನೀನು (ಅಶಾಂಪ. ೨೬-೩೦); ಚಂದದಿಂ ಮುಖವೀಣೆ ಮೋರ್ಚಂಗ್ಪಿಟೀಲುಗಳ (ಪಶಾಪ. ೩-೩೦). **ಮೋರ್ಸಿಂಗ್** : ಅಲಗನುಳ್ಳ ಕಂಚಿನ ವಾದ್ಯವೊಂದು. ಬಾಯಲ್ಲಿಟ್ಟು, ಅಲಗಿನ ತಾಡನದಿಂದ ಲಯವಾದ್ಯವಾಗಿ ಉಪಯೋಗದಲ್ಲಿದೆ. ಇದಕ್ಕೆ 'ಮೋರ್ಸಿಂಗ್' ಎಂದು ಹೆಸರು (ಸಂಗೀತಂ. ೦೨೨).

[ ← ಹಿಂ. ಮೋರ್‌ಚಂಗ್, ಮುರ್‌ಚಂಗ್; ಮರಾ. ಮೋರ್‌ಚಂಗ್, ಮೋರ್‌ಶಿಂಗ್ ]

**ಮೋರ್ಚಾಲ್** (ನಾ). (ದೇವರು, ದೊರೆಗಳು ಮತ್ತು ಪೂಜ್ಯರಾದವರ ಬಳಿ ಗೌರವದ ಚಿಹ್ನೆಯಾಗಿ ಹಿಡಿಯಲಾಗುವ) ನವಿಲುಗರಿಗಳಿಂದ ಮಾಡಿದ ಚಾಮರ : ರಥೋತ್ಸವ ಮುಂತಾದ ಉತ್ಸವಗಳಿಗೆ ಕಲಾಬತ್ತು, ಪಲ್ಲಕ್ಕಿ, ಛತ್ರಿ, ಚೌರಿ, ಸೂರಿಪಾನೆ, ಮೋರ್ಚಾಲ್ . . . ಚಂದ್ರಮಂಡಲ ಮುಂತಾದ ನಾನಾವಿಧಗಳಾದ ವಾಹನಗಳನ್ನು ಒಪ್ಪಿಸಿದರು (ಮಹಾಪಂ. II, ೦೨೯) ; ರಾಜಬಿರುದುಗಳು— ನವಪತ್, ಮೋರ್ಚಾಲ್, ಸೂರ್ಯಪಾನ, ಮಕರತೋರಣ, ಹಗಲು ದೀವಟಿಗೆ, ಧವಳಶಂಖ (ಗುಡುದ. ೦೦).

[ ← ಹಿಂ. ಮೋರ್‌ಛಲ್; ಮರಾ. ಮೋರ್‌ಚಲ್, ಮೋರ್‌ಛೇಲ್ ]

**ಮೋರ್ಚೆ**, ಮೊಹರ್ಚು, ಮೊಹರ್ಚೆ (ನಾ). ೧. ಕೋಟೆಯ ಬತೇರಿಯ ಮೇಲೆ ತುಪಾಕಿಯನ್ನು ಇರಿಸುವ ಜಗಲಿ : ಇಂಗ್ರೇಜ ಬಹಾದ್ದರವರ ಫೌಜಿನವರು ಮುಂತಾಗಿ ಬತ್ತೇರಿಗಳ ಮೋರ್ಚೆ ಮೇಲೆ ಯೇರಿಸಿ ಇದ್ದ ಪಿರಂಗಿಗಳನ್ನು ಇಳಿಸಿದರು (ರಾಕೆಂಚ್ರ. ೪೪). ೨. ಲಗ್ಗೆ; ಧಾಳಿ; ಮುತ್ತಿಗೆ : ಅತ್ಲಾಗಿ ಟೀಪುಸುಲ್ತಾನರು ಮಹಾಕೋಪದಿಂದ ತಮ್ಮ ಯಾವತ್ತು ಫೌಜು ತೆಗದುಕೊಂಡು ಹೋಗಿ, ಬೆಟ್ಟಕೋಟೆಗೆ ಮೋರ್ಚೆಗಳ ಹಾಕಿ, ಲಡಾಯಿ ಮಾಡಿ . . . ಪಟ್ಟಣದ ಕಡೆ ಹೊರಟರು (ರಾಕೆಂಚ್ರ.೬೩) ; ಕರ್ನಾಡ ಕಚೇರಿಯ ಮೇಲೆ ನಮ್ಮ ಮೊದಲನೆಯ 'ಮೋರ್ಚೆ' ಹೋಯಿತು (ಕ್ರತಿಸ. ೬೦). **ಮೊಹರ್ಚು** : ೩. ಸೈನಿಕರು ನಿಲ್ಲುವ ಕೋಟೆಯ ಆಯಕಟ್ಟಿನ ಸ್ಥಳ : ನೂರಾರು ಜನ ಹೊರ ಹೊರಟು ಮೊಹರ್ಚು ಮ್ಯಾಲೆ ಬಿದ್ದು ಜನರ ಗಾಶಿಮಾಡುವುದನ್ನು ಶಾಬಾಸ್ಸಾಬರು ಕಂಡು (ಹೈದರ. ೨೩). **ಮೊಹರ್ಚೆ** : ೧. ಅಗಸನ ಕಲ್ಲು ದಿಣ್ಣೆ . . . ರಂಗಯ್ಯನ ಬಾಗಿಲು ಎದುರಿಗೆ, ಬುದ್ಧಿವಂತನ ಮರಡಿ ಬಳಿಯಲ್ಲಿ ಈ ಕಡೆಗಳಲ್ಲಿ ಮೊಹರ್ಚೆ ಕಟ್ಟಿಸಿ ಫಿರಂಗಿಗಳನ್ನು ಹೂಡಿಸ ತಕ್ಕದ್ದು (ಶಕ್ರಪಾ. ೬೨).

[←ಹಿಂ. ಮೋರ್ಚಾ ; ಮರಾ. ಮೋರ್ಚಾ, ಮೋರಚಾ, ಮೋರಚಾಲ್, ಮೋರ್ಚಾಲ್ ; ಪಾರ. ಮೋರ್ಚಾಲ್]

**ಮೋರ್ಚೆಕಟ್ಟು** (ಕ್ರಿ). ಮುತ್ತಿಗೆ ಹಾಕು ; ದಾಳಿಮಾಡು ; ಲಗ್ಗೆ ಹಾಕು : ಬಹದ್ದರ್‌ಹೈದರಲ್ಲೀಖಾನನು ಸತ್ಯಮಂಗಲದ ಕೋಟೆಗೆ ಮೋರ್ಚೆಕಟ್ಟಿ ತೋಪುಗಳನ್ನು ಹೊಡೆಸಿ . . . ಶ್ರೀರಂಗಪಟ್ಟಣಕ್ಕೆ ಬಂದು ಸೇರಿದನು (ಮಹಾಪಂ. I, ೦೬೩).

[ ಮೋರ್ಚೆ + ಕಟ್ಟು₁₁ ]

**ಮೋರ್ತಬ್ಬ** (ನಾ). ಮುದ್ರೆ ; ಠಸ್ಸೆ : 'ಶಿಕ್ಕಾಮೋರ್ತಬ್ಬ' ಪರಾ.

[ ← ಮರಾ. ಮೋರ್ತಬ್, ಮೋರತಬಾ ]

**ಮೋರ್ಯ**, ಮೋರಿಯ (ನಾ). ಒಂದು ವಂಶದ ಹೆಸರು : ಅಲ್ಲಿಂದಂ ತೆಂಕಲು ಮೋರ್ಯ್ಯರ್ ಮಾಳಸಮೂಹಂ ಅಲ್ಲಿಂದ ತೆಂಕಲು ಬೆದಿರೂರ(ರ) ತೊಡೆ³ (ಮೈಶಂ. ೦೬೨೩, ೦೦೩–೯೦ ; ೯೩೪). **ಮೋರಿಯ** : ಸರವಿಯ ಕೆಯ್ಗೆ ಪಣಮಾಡು ಮೋರಿಯರ ಕೆಯ್ಗೆ ಪಣಂ ಮೂಡು ಕಡಿಯೆತ್ತಿಂಗೆ ಗರುಡನ ಕಂಭದಿಂ ಮೂಡಲ್ ಮನೆಪೊನ್ನು (ಶಾಇ. XVIII, ೦೦೦–೪೯ ; 1115). [ < ಪ್ರಾ. ಮೋರಿಯ = ಒಂದು ಕ್ಷತ್ರಿಯ ವಂಶ./ಸಂ. ಮೋರೀ=ಒಂದು ವಂಶದ ಹೆಸರು./ತಮಿ. ಮೋರಿಯ=ಮೌರ್ಯ]

**ಮೋರ್ಸಿಂಗ್** 'ಮೋರ್ಚಂಗ್' ನೋ.

**ಮೋಲು** (ನಾ). ಬೆಲೆ ; ಕಿಮ್ಮತ್ತು ; ಮೌಲ್ಯ : ಏನು ನಿಮ್ಮ ಮೋಲು—ಲೋಕದಾಗ ? ನಾವು — ಮರತೇವದನ: ಹ್ಯಾಂಗೆ ? (ಕೃಶ್ಯಾಕು. ೯೦-೦೦). [← ಮರಾ. ಹಿಂ. ಮೋಲ್./ಸಂ. ಮೌಲ್ಯ ]

**ವೋವೆ** (ನಾ). ಅಗ್ರಭಾಗ ; ಮುಂಭಾಗ : ಅರಸ ಕೇಳಾಕ್ಷಣಕೆ ಸುಳಿವಳು ಸರಸಿರುಹಮುಖಿಯೊಬ್ಬಳಾ ಮೋಹರದ ಮೋವೆಯು ಮುಂದೆ ಮುಜುಕಪ ಮಿಂಚಿನಂದದಲಿ (ಐರಾವ.೯-೯-೦೦). [ ← ತೆಲು. ಮೋವಿ ]

**ವೋಷ** (ನಾ). ೧. ಕಳ್ಳತನ ; ಕಳವು. ೨. ಕೊಳ್ಳೆ ; ಸುಲಿಗೆ ; ಲೂಟಿ : ಅಸತ್ಯಮೋಷವಾಗ್ಯೋಗರಾಶಿಸಾಧಿಕಂ ದ್ವೀಂದ್ರಿಯಪರ್ಯಾಪ್ತಕಂಗಳ್ ಅಸಂಖ್ಯಾತಭಾಗಂ (ತತ್ತ್ವಸೂ. ೨೩). [ಸಂ.]

**ವೋಷಕ** (ನಾ). ಕಳ್ಳ : " ಚೋರಃ, ಐಕಾಗಾರಿಕಃ, ಸ್ತೇನಃ, ದಸ್ಯುಃ, ತಸ್ಕರಃ, ಮೋಷಕಃ . . . ಮಲಿಮ್ಲುಚಃ – ೧೦ ಕಳ್ಳನ ಪೆಸರುಗಳು" (ನಿಘಂಟು. ೩೦೪). [ಸಂ.]

**ವೋಷ್ಟಿಕ** (ನಾ). ದಾನವಾಗಿ ಪಡೆದ ಮುಷ್ಟಿಧಾನ್ಯದಿಂದ ಜೀವನ ನಡೆಸುವವನು (?) : ತಿರುನಾರಾಯಣಪುರಮುಖ್ಯವಾದ ಸಕಳಾಚಾರ್ಯ್ಯರೂ ಸಕಳಸಮಯಿಗಳೂ ಸಕಳಸಾತ್ವಿಕರೂ ಮೋಷ್ಟಿಕರು . . . ಹದಿನೆಣ್ಟುನಾಡ ಶ್ರೀವೈಷ್ಣವರ ಕೈಯ್ಯಲು ಮಹಾರಾಯನು ಜೈನರ ಕೈವಿಡಿದು ಕೊಟ್ಟು (ಎಕ. II, ೩೪೪-೧೨ ; 1363). [ ? ]

**ವೋಸ** (ನಾ). ೧. ಕಪಟ ; ವಂಚನೆ : ದುಷ್ಟ ಮೋಸದೊಳಿಜಿದನೆಂಬರು (ಕೌಶಿಕಾ. ೧೯-೫೯) ; ಮುಱುಗಿವನು ಮನದೊಳಗೆ ಮೋಸದ ಮುಱಿಯ ರಕ್ಕಸಗದನಕೆ (ತೊರವೆ. ೬-೩೬-೪) ; ಇಂತಾ ಮೋಸ ಎಲ್ಲಿ ಕಲಿತಿರಿ? (ರಾಯಾಳ. ೬೨). ೨. ಅಪಾಯ ; ಆಪತ್ತು ; ಗಂಡಾಂತರ : ದೇಶಾಧಿಪ ಕೃಷ್ಣರಾಯಂಗೆ ಖಳರಿಂದ ಮೋಸವ ಬರಗುಡನೆಂದು ಶೇಷ ಮಂಡಳಿಸಿ ಪಂದದಿ ವಜ್ರದಾಳ್ವೇರಿ ಲೇಸಾದುದು (ಮೋಹತ. ೩-೮) ; ಇವರುತಲ್ಪ ಮಹೀಶೂರವರದಟಪು ಬೇಱೆ ಮಿಱಿ ಪೋಪುದು ಮೋಸಂ (ತಿಶಿ. ೨-೧೧೦) ; ಅವರ ಮಂತ್ರಬಲ ಸಾಲದಿದ್ದರೆ ಮಂತ್ರವಾದಿಗೆ ಮೋಸ (ಸರಕ. ೬೩). ೩. ತಪ್ಪು ; ಅಪರಾಧ : (+). ೪. ನಷ್ಟ ; ಹಾನಿ : (+).

**ವೋಸ ಮಾಡು**=ವಂಚಿಸು ; ಮೋಸಗೊಳಿಸು : ನನಗೆ ಅವರು ಮೋಸಮಾಡಬಹುದು (ಅಶಾ. ೩೩) ; ಇವರು ಮೂವ್ವರೂ ಸೇರಿ ನಿನಗೆ ಮೋಸಮಾಡಲು ಹೊಂಚುಹಾಕುತ್ತಿದ್ದಾರೆ (ಕೊಕಶಾ. ೫೬). **ವೋಸವಾಗು**=ವಂಚನೆಯಾಗು : ವ್ಯಾಪಾರದ ವಹಿವಾಟಿನಲ್ಲಿ ಅವನಿಗೆ ಜೊತೆಗಾರನಿಂದ ಮೋಸವಾಗಿದೆ (ರೂಢಿ). **ವೋಸಹೋಗು**=ವಂಚನೆಗೆ ಗುರಿಯಾಗು ; ಠಕ್ಕಿಗೆ ಒಳಗಾಗು : ಮೋಸಹೋಗುವನಲ್ಲಯ್ಯ . . . ನಮ್ಮ ವಾಸುದೇವ ತಿಮ್ಮಯ್ಯ (ಪುರಂದ. ೧-೩೭-೧೧) ; ದ್ರೋಣನು ನಿನ್ನ ಮಾತಿನಿಂದ ಮೋಸಹೋದನು (ಸೀತಾಪ. IV, ೩೨).

[<ಪ್ರಾ. ಮೋಸ./ ಸಂ. ಮೋಷ]

**ವೋಸಂಬಿ** 'ಮೂಸಂಬಿ' ನೋ.

**ವೋಸಕಾಱ** 'ಮೋಸಗಾರ' ನೋ.

**ವೋಸಕೂಪ** (ನಾ). ಕೃತಕವಾಗಿ ನಿರ್ಮಿಸಿದ ಬಾವಿ : ನಂಜಿನ ಮಡುಹು ಹೆಬ್ಬುಲಿ ಕರಗಸಂಗಳು ಅಡಿಯನೂಱಿದರೊಡನೆ ನುಂಗುವ ಮೋಸಕೂಪಗಳು (ಕೌಶಿಕಾ. ೦೬-೪೦). [ಮೋಸ + ಕೂಪ₂]

**ವೋಸಗಾತಿ** (ನಾ). ವಂಚನೆ ಮಾಡುವವಳು ; ಮೋಸಗೊಳಿಸುವವಳು ; ವಂಚಕಿ : ಅರಸನು ಅತಿವ್ಯಗ್ರನಾಗಿ ಮೈಮರೆತು ಬಾಯಿಗೆ ಬಂದಂತೆಲ್ಲ ಮಗಳನ್ನು ಬಯ್ದು ಮೋಸಗಾತಿಯೆಂದೂ . . . ದೂಷಿಸಿದನು (೪೭ಕ. ೩೨). [ಮೋಸ + – ಕಾತಿ]

**ವೋಸಗಾರ**, **ಮೋಸಕಾಱ** (ನಾ). ವಂಚನೆ ಮಾಡುವವನು ; ಮೋಸಗೊಳಿಸುವವನು : ಕಪಟಿ : "ಠಕ್ಕ, ಬೊಂದುಕ, ಚಲ್ಲವತ್ತ, ನಂಬಿಸಿ ಕಿಂಬವ, ಮೋಸಗಾರ, ಕಾಕ, ದುರುಳ" (ಕಂಪುಹು. ೯೪) ; ಅವರು ತುಂಬಾ ಮೋಸಗಾರರೆಂದು ತಿಳಿಯತಕ್ಕದ್ದು (ಮುಂಬಯು. ೪-೦೦೩). **ವೋಸಕಾಱ** : ಆಟಕಾಱಂ, ಮೋಸಕಾಱಂ (ಶಬ್ದಾನು. ೪೨೩ ಪ್ರಯೋ).

[ ಮೋಸ + –ಗಾರ (< –ಕಾಱ) ]

**ವೋಸಗಾರಿಕೆ** (ನಾ). ವಂಚನೆ ; ಕಪಟ ; ಠಕ್ಕು : ಇವರ ಮೋಸಗಾರಿಕೆ ನಮ್ಮ ಬಳಿ ನಡೆಯುವಂತಿಲ್ಲ (ಪುನರು. ೨೯೫) ; ಈ ಪ್ರಕರಣದಲ್ಲಿ ಮೋಸಗಾರಿಕೆಯು ತುಂಬಿ ತುಳುಕುವಂತೆ ತೋರುವುದು (ಸ್ವಾರಾಬಿ. ೦೭೪).

[ಮೋಸಗಾರ + – ಇಕೆ]

**ವೋಸಗಾರ್ತಿ** (ನಾ). = ಮೋಸಗಾತಿ : (+).

[ ಮೋಸಗಾರ + – ತಿ₁ (< – ಇತ್ತಿ) ]

**ವೋಸಗೊಳಿಸು** (ಕ್ರಿ). ವಂಚನೆ ಮಾಡು ; ಠಕ್ಕಿಸು : ಧೂರ್ತರು ತರತರದ ಹುಂಚಿಕೆಗಳಿಂದ ಜನರನ್ನು ಮೋಸಗೊಳಿಸಲಿಕ್ಕೆ ಹವಣಿಸುತ್ತಾರೆ (ಮುಂಬಯು. ೪-೦೯) ; ಜನ ನಮ್ಮನ್ನು ಮೋಸಗೊಳಿಸಲು ಬಂದರೆ ನಾವು ಸತ್ಯವನ್ನೇ ನುಡಿಯುತಕ್ಕದ್ದು (ಠರ್ಮಕಾ. ೦೪೮). [ಮೋಸಗೊಳು + – ಇಸು₃]

**ವೋಸಗೊಳು**, **ಮೋಸಗೊಳ್ಳು** (ಕ್ರಿ). ವಂಚನೆಗೆ ಒಳಗಾಗು; ಕಪಟಕ್ಕೆ ಗುರಿಯಾಗು : 'ಮೋಸಗೊಳಿಸು' ಪರಾ. **ವೋಸಗೊಳ್ಳು** : ಬಹಳ ಸ್ನೇಹವಿರುವ ವ್ಯಕ್ತಿಯಿಂದಲೇ ಅವರು ಮೋಸಗೊಂಡರು (ರೂಢಿ).

[ ಮೋಸ + ಕೊಳು (< ಕೊಳ್₁) ]

**ವೋಸಗೊಳ್ಳು** 'ಮೋಸಗೊಳು' ನೋ.

**ವೋಸನಿಗೆ** (ನಾ). ಜಾರೆ ; ವೇಶ್ಯೆ ; ಸೂಳೆ (?) : ಮೋಸನಿಗೆಯರೊಳ್ಪರಿದಪ್ಪರ್ಥವ್ಯಯಮಿಲ್ಲದೆ ತನ್ನಿಚ್ಛೆ ಸಲ್ವುದೆಂಬುದು ತಾತ್ಪರ್ಯಂ (ಶೀಶಿವಾ. ೨೬-೪೦). [ ? ]

**ವೋಸವ್** 'ಮೋಸಮು' ನೋ.

**ವೋಸಮು**, **ಮೋಸಮ್**, **ಮೋಸಮ್ಮು**, **ಮೋಸುಂ** (ನಾ). ೧. ಅನುಕೂಲವಾದ ಕಾಲ ; ಸಕಾಲ : "ಮೋಸಮು—ಯೋಗ್ಯಸಮಯ (ಶಾಸಕೋ. ೩೩). **ವೋಸಮ್** : ೨. ಋತು ; ಕಾಲ : ಏನು ಮನೆ ತುಂಬ ಮಾಡಿಟ್ಟಿರುವ ಧನಕನಕವೋ? ಬರಲು ಪ್ರತಿ 'ಪೀ'ದ ಮೋಸಮ್? (ಬಂಶಪ. ೬೯-೦೦). **ವೋಸಮ್ಮು** : ೧. ಆಟದ ಮೋಸಮ್ಮು ಇಲ್ಲದಾಗ ಊರಾಗ ಮುಕ್ಕಾಮು ಇರತಿತ್ತಿರಿ (ದೀಶಹ. II, ೩೯೬). **ವೋಸುಂ** : 'ಅವಲ್‌ಮೋಸುಂ' ಪರಾ.

[ ← ಅರ. ಮೌಸಿಮ್ ; ಹಿಂ. ಮೌಸಮ್, ಮೌಸಿಮ್ ; ಮರಾ. ಮೋಸಮ್ ]

**ವೋಸಮ್ಮು** 'ಮೋಸಮು' ನೋ.

**ವೋಸವಡೆ** (ಕ್ರಿ). ಮೋಸಗೊಳ್ಳು ; ವಂಚನೆಗೊಳಗಾಗು : ವ್ಯಾಸನಂದನನಿರ್ದ ಬಳಿಗೆ ರಂಭಾನಾರಿ ಮೋಸವಡೆದು ನಡೆತಂದು ಪೂಸರ ನಾಗಮುಕವನ ಕರೆದು ಪರಿಹಾಸಕಕೊಳಗಾದಳವಳು (ಕಂಸವ. ೯-೦೪೪).

[ಮೋಸ + ಪಡೆ₁]

**ವೋಸು₁** 'ಮೋಚು₁' ನೋ.

**ವೋಸು₂** (ನಾ). ೧. ಕುಡಿ; ಚಿಗುರು ; ಮೊಳಕೆ : ಎನಿತೇ ಬೀತರು ಈ ಎಡೆ ಮತ್ತೂ ತಲೆಯಿಡುವುದು ಬಯಕೆಯ ಮೋಸು (ಪವರಾ. ೫-೩೦) ; ಕಲ್ಲುಗೋಡೆಯ ಮೇಲೆ ಸರಿವ ತುಂತುರು ಬಳ್ಳಿ, ಬೆಳ್ಳಿಯೆಲೆ, ಬೆಳ್ಳಿಮೋಸು (ಶಿಲಾ೦. ೭೦-೦೨) ; ಈ ಜಾತಿಯ ಗಿಡಗಳು ಕಾಂಡವಿಲ್ಲದ, ಒಂದೇ ಸಸ್ಯದಿಂದ ಮೋಸುಗಳು ಹೊರಬಂದು ಗುಂಪಾಗಿ ಬೆಳೆಯುವ, ಸಕ್ಯೂಲೆಂಟ್ ಸಸ್ಯಗಳು (೪೨ಕೋ. I, ೮೭೭). ೨. ಮೂಲ ; ಉಗಮಸ್ಥಾನ : ಕರೆಕರೆಯ ಮೋಸು ಸಂತಾಪದೊಬ್ಬುಳಿ . . . ಲಘುತ್ವದ ಗೆರಸೆಯಿಾ ದೇಹವು (ಕೈಶಪ. ೧-೦೬-೦೦). [ ? ]

**ವೋಸುಂ** 'ಮೋಸಮು' ನೋ.

**ವೋಹ₁** (ನಾ). ೧. ಎಚ್ಚರತಪ್ಪುವಿಕೆ ; ಜ್ಞಾನಹೋಗುವಿಕೆ ; ಮೂರ್ಛೆ : " ಮೂರ್ಛಾ, ಕಶ್ಮಲಂ, ಮೋಹಃ– ೩ ಮೈಮರೆಯುವಿಕೆ,

ಮೂರ್ಛೆ " (ಸಿದ್ಧಾಂತಿ. ೨೭೦). ೨. ಭ್ರಾಂತಿ; ಭ್ರಮೆ : ವೈದೇಹೀ ವೈದೇಹಿಯೆಂದು ಪ್ರದಿದಿರೆ ಮನಮಂ ಮೋಹತಮಂ ದೀಪಂ ವಾತಾಪತಿಯಿಂ ನಂದುವಂತೆ ಮೂರ್ಛೆಗೆ ಸಂದಂ (ಶಂರಾಪೂ. ೯-೦೧೭) ; ಜಂತ್ರವಿಡಾಗಕೆ ಹರನು ತಂತ್ರಚಕ್ರಕೆ ಹರಿಯು ಮಂತ್ರಮೋಹಕ್ಕೆ ಬೊಮ್ಮನು ಜಗದಿ ಸ್ವತಂತ್ರನಾರುಂಟು (ಸರ್ವಜ್ಞ. ೨೦೦) ; ಇಂಥ ಹಲವು ಬಗೆಯ ಮೋಹ ಮೋಸಗಳಿಗೆ ಒಳಗಾಗಿ, ಅವನು ಅಲ್ಲಿ ಇರುವ ತನಕ ತುಂಬ ಅವಮಾನಪಟ್ಟು ಹೊರಟನು (ವತಖ. ೬೭). ೩. ದಿಕ್ಕುತೋಚದಿರುವಿಕೆ ;. ದಿಗ್ಭ್ರಮೆ; ಕಕ್ಕಾಬಿಕ್ಕಿ. ೪. ಮೂರ್ಖತನ; ಅವಿವೇಕ. ೫. ತಪ್ಪು; ದೋಷ. ೬. ಅಭಿಮಾನ; ಪ್ರೀತಿ; ವಿಶ್ವಾಸ : " ಕೂರ್ಮೆಯೆನಲ್ ಮೋಹ " (ತತ್ತ್ವ.೯೦); ಈಕೆ ಸಾಮಾನ್ಯವನಿತೆಯಲ್ಲವಳ್ ಗಂಧರ್ವವನಿತೆಯೆನ್ನೊಳಾದ ಮಚ್ಚುಂ ಮೋಹಮುಂ ಕಾರಣಮಾಗಿರ್ಪಳ್ (ಶಂಕರಭಾ. ೬-೭೩ ವ) ; ಮೋಹಕ್ಕೆ ಮಗಳಾಗಿ ಹುಟ್ಟಿದಳು ಮಾಯೆ (ಬಸವ. ೦೩) ; ಚಿಕ್ಕಮಾದಣ್ಣಗಳ ಮಹದೇವಿಯರ ಮೋಹದ ಕಂದನೋಯೆನುತ ಹಾಡುವನು (ಬಸವೃ. ೯೭-೩೮). ೭. ಮರುಳುಗೊಳಿಸುವಿಕೆ; ಆಕರ್ಷಣೆ; ಸೆಳೆತ : ಭವದೀಯ ರೂಪಲಂಪಟ ವಿಟರಂ ಮರುಳ್ಗೊಳಿಸಿತುತ್ಕಟಮೋಹತ್ರಮ್ಯಪಟಂ ಪಟಂ (ಅದಿಪು. ೩-೯೦) ; ಮೋಹದಿಂದಾ ಮೂರ್ಛೆಪೋಗರು ಮೋಹದಿಂದಾ ಮರಣವಯಿದರು ಮೋಹದಿಂದಾರ್ಕೆಡರು (ಸಾಳ್ವಭಾ. ೩-೩೭) ; ಹಳ್ಳಿಯ ಹೆಂಗಸು ನನಗೆ ಜಿಹಾಸೆ ಹುಟ್ಟಿಸಲಿಲ್ಲ, ಅಯ್ಯರ ಹೆಂಡತಿ ಮೋಹವನ್ನೂ ಹುಟ್ಟಿಸಲಿಲ್ಲ (ಗಾಮೂತ. ೦೦೩). ೮. ಮರೆತು ಹೋಗುವಿಕೆ; ಮರವು : ರಾಹು ತೊರೆದೊಡನೆ ಶಶಿಯುಂ ರೋಹಿಣಿ ಬಳಿವೊರ್ದಿದಂತೆ ನೆನಪಿಂದಿರದಾ ಮೋಹತಮಮಳಿಯೆ ಸುಕೃತದೆ ನೀಹಾರಕರಾಸ್ಯೆ ಸೇರ್ದೆಯೆನ್ನಯ ಬಳಿಯಂ (ಶಾಕುಂತ. ೦೯೩). ೯. (ಶತ್ರುವನ್ನು ದಿಗ್ಭ್ರಮೆಗೊಳಿಸಲು ಮಾಡುವ) ಇಂದ್ರಜಾಲ ; ಯಕ್ಷಿಣಿ. ೧೦. [ವೇದಾಂತ] ಅರಿಷಡ್ವರ್ಗಗಳಲ್ಲಿ ಒಂದು ; ಸತ್ಯವನ್ನು ತಿಳಿಯಲು ಅಡ್ಡಿ ಬರುವ ಮನಸ್ಸಿನ ಭ್ರಾಂತಿ; ಅಜ್ಞಾನ : ಮಾಯೆ : ಅವಿದ್ಯೆ : ಇನ್ನಿಂದ್ರಿಯಶಕ್ತಿಯಂ ಜರೆ ಭರಂಗೆಯ್ದಿರ್ದ್ದಿ ಬೆನ್ನಟ್ಟಿ ವಿಸ್ಫುಟಮಿಲ್ಲಿಚ್ಚೆಯ ಮುಚ್ಚು ಮೋಹ ಧನಮುಂ ಮುಂದಿಟ್ಟು ದರ್ ತೃಷ್ಣೆ ಲಂಪಟೆ ಬೆನ್ನಿಂ ಬಿಡದೊಲ್ಲೆ ಮೊಲ್ಲೆ ಮೊನೆಯುಂ ದೂದಟ್ಟಿ ದುರ್ಬುದ್ಧಿಯುಂ (ಶಾಂತಿಪು. ೭-೬೭) ; ಮೋಹ ಮನೊಕ್ಕು ಗೆಲ್ದು . . . ತಾಳ್ದಿ ಮಹಾವ್ರತಂಗಳಂ (ಜೀವಸಂ. ೦೫೯-೨೦). ೧೧. [ಕಾವ್ಯಮೀ] ಮೂವತ್ತುಮೂರು ಸಂಚಾರಿಭಾವಗಳಲ್ಲಿ ಒಂದು ; ಮೈಮರೆಯುವಿಕೆ ; ಪರವಶತೆ : ಮತಿ ಲಜ್ಜೆ . . . ಮೋಹ . . . ಅಪಸ್ಮಾರವೆಂಬ ಮೂವತ್ತುಮೂಱು ಸಂಚಾರೀಭಾವಂಗಳಂ ಪರಿವರ್ಧಿಸಿ (ಶಿವೇಕ. ೦೫೦) ; " ಚಿತ್ತಮೂಢತ್ವಂ ಮೋಹಂ ". ಎಂದರೆ. ಎಚ್ಚರತಪ್ಪುವುದು; ಇದು ಸುಖದ ಘಳಿಗೆಯಲ್ಲೂ ಉಂಟಾಗಬಹುದು (ಶಾರದಾ. ೩೯೭). ೧೨. [ತತ್ತ್ವಶಾ] ಅಜ್ಞಾನದ ಐದು ಬಗೆಗಳಲ್ಲಿ ಒಂದು : ಮತ್ತಂ ತಮಸ್ಸು ಮಾಯೆ ಮೋಹ ಅವಿದ್ಯೆ ಅನ್ಯತಾತ್ಮರೆಯೆಂಬಪೇ ಮಾಯಾಪಂಚಕಂಗಳವಱಲ್ಲಿ . . . ಆ ತೋಱಿದ ಜಗತ್ತಿನಲ್ಲಿ ಶುಕ್ತಿರಜತಾದಿ ವಿಪರೀತಜ್ಞಾನಮಂ ಪುಟ್ಟಿಪುದಱಿಂ ಮೋಹವೆನಿಸುವುದು (ಶಿವೇಕ. ೩೦) ; ಪ್ರಾಣಗಳಲ್ಲಿ . . . ಪರಮಾತ್ಮನು ಇದ್ದು ತಾಮಸರ ಶಬ್ದಾದಿ ಮಾತ್ರಾಗುಣಗಳಿಗೆ ವಿಷಯೀಭೂತವಾದ ತಾಮಿಸ್ರ ಅಂಧತಾಮಿಸ್ರ ಮಹಾಮೋಹ ಮೋಹ ತಮಸ್ ಎಂಬ ಅಜ್ಞಾನವೃತ್ತಿಗಳಲ್ಲಿ ಪ್ರೇರಿಸುವನು (ಹಸಾರ. ೭-೦೨ ಟೀಕು) ; ಅಜ್ಞಾನವು ತಮಸ್ಸು, ಮೋಹ, ಮಹಾಮೋಹ, ತಾಮಿಸ್ರ, ಅಂಧತಾಮಿಸ್ರ ಎಂದು ಐದು ವಿಧ . . . ಒಂದಲ್ಲೊಂದು ಪದಾರ್ಥವನ್ನು ತನ್ನದೆಂದು ತಿಳಿಯುವುದೇ ಮೋಹ (ಶಾತತ್ತ್ವ. ೩೨೮). ೧೩. [ದ್ವೈತ] ಜೀವನಿಗಿರುವ ಐದು ಬಗೆಯ ಅವಸ್ಥೆಗಳಲ್ಲಿ ಒಂದು : ಸಾಮಾನ್ಯವಾಗಿ ಜೀವಾತ್ಮರಿಗೆ ಜಾಗ್ರತೆ, ಸ್ವಪ್ನ, ಸುಷುಪ್ತಿ, ಮೋಹ, ತುರೀಯ ಎಂದು ಐದು ಅವಸ್ಥೆಗಳು ಇರುವುವು (ಹಿಂತಾಸ. ೨೮೪).

**ಮೋಹಪಡು** = ಮರುಳಾಗು ; ಮನ ಸೋಲು : ಸಕಲರೂ ಮೋಹಪಟ್ಟರು (ಅರ್ಗವಾ. ೩) ; ಶ್ರೀಪಾದಂಗಳವರು ನಿನ್ನ ಮೇಲೆಮೋಹ ಪಟ್ಟಿರುವರೆಂಬ ತಾತ್ಪರ್ಯ ನಿನಗೆ ಸೂಚಿಸಿದೆ (ವಾಗ್ಮಿ. ೦೪). **ಮೋಹ ಸಲ್** = ಬಯಕೆಯನ್ನು ಹೊಂದು ; ಅಪೇಕ್ಷೆ ಪಡು : ದೇವಾರಕ್ಕೆ ಕೊಟ್ಟ ಕೆಯ್ಗ ಅವುತವೂರ್ಗಂ ಕಾಲಾನ್ತರದೊಳ್ ಮೋಹಸನ್ದೊಂ ಪಞ್ಚಮಹಾಪಾತಕನಕ್ಕುಂ (ಎಕ. VII, ಶಿಕಾ. ೨೦೯-೩೦; 918). [ಸಂ.]

**ಮೋಹ$_2$** (ನಾ). ಒಂದು ಬಗೆಯ ಮರ ; ಹಿಪ್ಪೆ ; ಮಧೂಕ : ಇಪ್ಪೆ(ಮೋಹ) . . . ಇದರ ಕಟ್ಟಿಗೆಯು ತಾಳಿಕೆಯುಳ್ಳದ್ದು (ಕಶಾಗ. ೩೭) ; ಮೋಹದ ಬೀಜಾ, (ಇಪ್ಪಿ ಬೀಜಾ) ಬಣ್ಣದಲ್ಲಿ ಕೆಂಪಾಗಿದ್ದು ಎಣ್ಣೆ ಉಳ್ಳದ್ದಿರತಕ್ಕದ್ದು (ಮುಂಬಾ. ೩೭). [← ಮರಾ. ಮೋಹ. ಮೋಹೋ./ಪ್ರಾ. ಮಹು, ಮಹುಅ./ಸಂ. ಮಧುಕ]

**ಮೋಹಕ** (ಗು). ೧. ದಿಗ್ಭ್ರಮೆಗೊಳಿಸುವ ; ತಬ್ಬಿಬ್ಬುಮಾಡುವ. ೨. ಮರುಳುಗೊಳಿಸುವ ; ಮನೋಹರವಾದ ; ಅಂದವಾದ : ಶ್ರೀಕೃಷ್ಣಪರಮಾತ್ಮನು ಬಲಶಾಲಿ ಮತ್ತು ಮೋಹಕರೂಪುಳ್ಳವನು (ಹೇಮಂತ. ೦೦೨). (ನಾ). ೩. ಭ್ರಮೆ ; ಭ್ರಾಂತಿ : ಅಕ್ಕಿತೇ ದುಷ್ಕೀರ್ತಿ ತಮ್ಮನನಿಕ್ಕಿದೆನಲಾ ರಣಕೆ ಮಾಯೆಯು ಠಕ್ಕಿನಬಲೆಯ ಮೋಹಕದಲೆಂದರಸನಳವಳಿದ (ಕೊರಾ. ೭-೯೭-೨೮) ; ಇನಿತೆಲ್ಲ ಮಾಯ ಮೋಹಕವೆಂಬ ಶರಧಿಯೊಳು ಅನುದಿನವು ಮುಳುಗಿ (ಭರಂದ. ೧-೨೨೨-೩). ೪. ಆಕರ್ಷಿಸುವಂಥದು ; ಅಂದವಾದುದು : ಅವಳ ನಿಡಿದಾದ ಮೂಗೂ ಮಣಿದ ಹುಬ್ಬುಗಳೂ ದುಂಡುಮುಖವೂ ಒಳ್ಳೇ ಮೋಹಕವಾಗಿ ಕಂಡವು (ಮಾದಿಮ. ೦೦೭). [ಸಂ.]

**ಮೋಹಗೊಳಿಸು** (ಕ್ರಿ). ಮರುಳುಗೊಳಿಸು; ಮನಸ್ಸನ್ನು ಆಕರ್ಷಿಸು : ಭಾವಕ–ಮೋಹಗೊಳಿಸುವದಕ್ಕಾಗಿ ತೋರಿಸುವ ಹಸ್ತದ ಅಭಿನಯ (ಗಂಗಾಪು. ೨೯೩). [ಮೋಹ$_1$ + ಕೊಳ್$_1$ + – ಇಸು$_3$]

**ಮೋಹಗೊಳ್ಳು** (ಕ್ರಿ). ಮರುಳಾಗು ; ಆಕರ್ಷಣೆಗೆ ಒಳಗಾಗು : ಸರಿಯಾದ ಕಾಗುಣಿತ ವ್ಯಾಕರಣಾಂಶಗಳು ಇದ್ದಾಗ ಮೋಹಗೊಂಡು ಹೆಚ್ಚು ಅಂಕಗಳನ್ನು ಕೊಟ್ಟುಬಿಡಬಹುದು (ಶಿಕ್ಷರ. ೩೯೩).

[ಮೋಹ$_1$ + ಕೊಳ್ಳು$_1$ (< ಕೊಳ್$_1$)]

**ಮೋಹತಮಿಾಮು** (ನಾ). ಪರೀಕ್ಷಾಧಿಕಾರಿ : ಹೈದರಾಬಾದಿನಲ್ಲಿ ಕರೋಡಗಿರಿಯ ಮೋಹತಮಿಾಮರಾದ ಸುಬ್ಬರಾಯರು ನಮ್ಮ ತಂದೆಯವರ ಬಾಲ್ಯಸ್ನೇಹಿತರು (ಕೊಳವು. ೨೨೭). [←ಅರ. ಹಿಂ. ಮುಹತಮಿಮ್]

**ಮೋಹನ** (ಗು). ೧. ಮೂರ್ಛೆಗೊಳಿಸುವ ; ಜ್ಞಾನ ತಪ್ಪಿಸುವ. ೨. ತಬ್ಬಿಬ್ಬುಗೊಳಿಸುವ ; ಭ್ರಾಂತಿಗೊಳಿಸುವ ; ಭ್ರಮೆ ಹಿಡಿಸುವ : ಅದಾವ ಮೋಹನವಶ್ಯವಿದ್ಯೆಯ ಕಲಿತೆಯೋ ದಿಟಕೆ (ವೃಷಭೇ. ೩-೩೯). ೩. ಮರುಳುಗೊಳಿಸುವ ; ಆಕರ್ಷಿಸುವ : ಮೋಹನ ಮೊಲೆ ಮುದ್ದುಮೊಗದ ಭಾವಕಿಯರ ಲಲ್ಲೆನುಡಿಯೆಂಬ ನಯಗತ್ತಿ ಎಲ್ಲರ ಹೃದಯವ ಕೊಱೆವುತ್ತಿದೆ ನೋಡಾ (ವಚಸಂ. ೭೪-೯೦); ತ್ರಿಭುವನಮೋಹನ ದೀಪಪ್ರಭೆ . . . ಪುಟ್ಟಿದಳೆಸೆವ ಶಶಿಪ್ರಭೆ (ಚಂದ್ರಪು. ೬-೦೨); ಯಾವ ಮೋಹನ ಮುರಲಿ ಕರೆಯಿತು ದೂರತೀರಕೆ ನಿನ್ನನು ? (ಭಾವಗೀ. ೩೯೨). (ನಾ). ೪. ಮೂರ್ಛೆ ; ಮೈಮರೆವು : ತೇಟ್ಟ(ರುಗ)ಉಬ್ಬರದಿಂದಂ ಮಿಡಿವೆಂದು ಲೋಳೆ ಪರಿಚಿಕಂ ಶೋಕಂ ಬೆಮರ್ ಮೋಹನಂ . . . ತದುಗ್ರಜಾತಿವಿಷದಿಂ ಮರ್ತ್ಯರ್ಕಳೊಳ್ ತೋಱುಗುಂ (ಲೋಕೋಪ. ೦೦-೨೩). ೫. ಭ್ರಾಂತಿ ; ಭ್ರಮೆ : ' ಚಿತ್ತಮೋಹನ ' ಪರಾ. ೬. ಆಕರ್ಷಣೆ ; ಸೆಳೆತ : ಬಂದ ಬಸಂತದ ಕಮ್ಮನಸ್ಪಲರ್ ತಾಂ ಗುರುವಾಗೆ

ಕಲ್ಮುದೊ ವಿಳಾಸವತೀನಯನತ್ರಿಭಾಗದೊಳ್ ಸಂಗಳಿಸಿತ್ತೊ, ಮೋಹನ ಮನಗ್ಗಳ ನಿನ್ನಯ ವಾಕ್ಯಗುಂಭನಂ (ಚಂದ್ರಶೃ. ೧-೩೯); ಪನ್ನೀರು ಕರ್ಪೂರ ವೀಳೆಯ ಮೋಹನದನುಲೇಪನಾದಿ ವಸ್ತುಗಳ ಪನಿತೆಯು ಮುಡಿಮೊಲೆಯೆಡೆ ಬಾಯಿ ಕೊರಳಿಗಂದಸುಗೋಳಿಸಿದನೇವೇಳ್ವೆ (ಕಂಸವಿ. ೧೦-೩೯). ೭. ಸೌಂದರ್ಯ ; ಮನೋಹರತೆ ; ಚೆಲುವು : ಕಿಬಸಗೆಯ ಕದಪುಗಳ ಕುಂಡಲದ ಚೆಲ್ವಿನಿಂ ಮೆಱೆವ ಸದ್ವದನವಂ ಮೋಹನದ ಸದನನಂ . . . ಕಂಡನವನೀಪಾಲನು (ಕೃಷರಾ. ೨-೪೯); ತರುಣಿ ಮೋಹನದರಗಿಣಿ ಸೌಂದರ್ಯದ ಸರಣಿಯೊಪ್ಪಿದಳಾ ವೇಳೆ (ಕಂಸವಿ. ೯-೭೭). ೮. ಮನೋಹರವಾದ ರೂಪುಳ್ಳವನು ; ಕೃಷ್ಣ : ಕೊಳಲ ದನಿಯೊಡನಗೋ ಬಂದ ಮೋಹನ ಬಾಲಕೃಷ್ಣ ರಾಧೆಯ ಹೃದಯನಂದನಕ್ಕೆ (ಶಂಗಮ. ೩೭-೩); ಶ್ರೀ ಕೃಷ್ಣಪರಮಾತ್ಮನು ಬಲಶಾಲಿ ಮತ್ತು ಮೋಹಕರೂಪುಳ್ಳವನು. ಅವನಿಗೆ ಮೋಹನನೆಂದೂ ಕರೆಯುತ್ತಾರೆ (ಹೇಮಂತ. ೦೦೨). ೯. ಸಂಭೋಗ ; ಸುರತ : "ಸಂವೇಶನಂ . . . ಸುರತಂ, ಮೋಹನಂ—ಈ ೭ ಸುರತಂ (ಹಲಾಯು. ೯೩-೪೦೩); ಸಿರಿಗಂಧದೆಣ್ಣೆಗೆ ಪನ್ನೀರ್ಗೆ ಏರಿದು ಬಯಸುತವ ರಿರ್ಪರೆಸೆದರಾಗ ಸ್ಮರಮೋಹನದ ಸೊಕ್ಕೇಱಿ (ಕಂಸವಿ. ೧೦-೩೨); ಮೋಹನ ಮೆಂಬುದು ಮದನಯುದ್ಧಮೆಂಬುದು ಸುರತಕ್ಕೆ ಪೆಸರು (ಶಬ್ದಮ. ೨೯೦). ೧೦. ಮಂತ್ರಬಲದಿಂದ ಮೋಹಗೊಳ್ಳುವಂತೆ ಮಾಡುವ ತಂತ್ರ ; ಮಾಟ ; ಇಂದ್ರಜಾಲ : ಶತ್ರುಗಳ ಮೇಲೆ ಜಯ ಗಳಿಸುವುದಕ್ಕೆ ಅಭಿಚಾರಿಕಕರ್ಮಗಳೂ ಉಂಟು. ಮಾರಣ, ವಶೀಕರಣ, ಮೋಹನ, ಸ್ತಂಭನ, ಉಚ್ಚಾಟನ ಇತ್ಯಾದಿ (ಧಾರದ. ೨೮). ೧೧. ಮನ್ಮಥನ ಐದು ಬಾಣಗಳಲ್ಲಿ ಒಂದು : ಉನ್ಮದನ ಮದನ ಮೋಹನ ಸಂತಾಪನ ವಶೀಕರಣಮೆಂಬ ಪಂಚಬಾಣಪ್ರತಾಪಪ್ರವೀಣರಿಂ (ಶಿವೇಶ. ೦೬೯). 'ಮೋಹನಬಾಣ', 'ಮೋಹನಶರ' ಪರಾ. ೧೨. ಒಂದು ಬಗೆಯ ಸಸ್ಯ ; ದತ್ತೂರಿ ಗಿಡ : "ಮೋಹನಃ _ಉಮ್ಮತ್ತ, ನೀರುಳ್ಳಿ, ಬೇಳ" (ಓಷಧಿ. ೦೩೦). ೧೩. [ಸಂಗೀತ] ಒಂದು ರಾಗದ ಹೆಸರು : ಪರಮಲಲಿತಕುರಂಜಿ ಮಂಗಳ ಸರಸತರ ಮೋಹನದ ರಾಗಂಗಳಲಿ ಪಾಡಿದರು (ಯಾದವ. ೦೦-೪೯) ; ಮೋಹನಾನಂದಭೈರವಿ . . . ಮೋಹ ಸರ್ವಸ್ವಗಳ ರಾಗಾಬ್ಧಿಯೋ ಬ್ರಹ್ಮಗಾ ಏಸದರೊಳಗೆ ನೀಂ (ಮಂಕುತಿ. ೯೩೨) ; ಮೋಹನ – ಈ ರಾಗದ ಜನಕರಾಗದ ವಿಷಯದಲ್ಲಿ ಮತಭೇದವುಂಟು (ಸಂಗೀತಂ. ೦೯೦). [ಸಂ.]

**ಮೋಹನಗಾರ** (ನಾ). ಮರುಳುಗೊಳಿಸುವವನು ; ಆಕರ್ಷಿಸುವವನು ; ಚೆಲುವ : ಮೂಱಲೋಕಮೋಹನಗಾರನತುಳಿತಪುಷ್ಪಗೋಲನಪ್ರತಿಮ ಸತ್ಪುತ್ರ (ನವಮೋ. ೦೩-೨೮). [ಮೋಹನ + –ಗಾರ (< –ಕಾಱ)]

**ಮೋಹನಗೌಳ** (ನಾ). [ಸಂಗೀತ] ಒಂದು ರಾಗದ ಹೆಸರು : ಸೌರಾಷ್ಟ್ರ ಗೌಳ . . . ಮೋಹನಗೌಳವೆಂಬಷ್ಟಗೌಳಂಗಳೀ ಸಾಳಗದ ಮಿತ್ರರಾಗಂಗಳು (ಶಿವೇಶ. ೧೬೯). [ಸಂ. ಮೋಹನಗೌಲ]

**ಮೋಹನಚೂರ್ಣ** (ನಾ). ಮರುಳುಗೊಳಿಸುವ ಪುಡಿ ; ಮೆಚ್ಚು ಮದ್ದು ; ಮಂಕುಬೂದಿ : ಹುಬ್ಬಳ್ಳಿಯ ರಂಗಭೂಮಿಯ ಮೇಲೆ ಬಾಲಗಂಧರ್ವನು ಮೋಹನಚೂರ್ಣವನ್ನು ಎಸೆಯುತ್ತಿರುವ ಕಾಲದಲ್ಲಿಯ ವೆಂಕಣ್ಣನ ಸರಸಸಂಭ್ರಮದಿಂದ ಆರಂಭವಾಗುವ ಕಥೆ (ಶಾಸವಾ. ೦೭೬) ; ಆ ರೂಪು . . . ನಾಗಶ್ರೀಯ ಎಚ್ಚರದ ಕಣ್ಣಿಗೆ ಮೋಹನಚೂರ್ಣವನ್ನೆರಚಿತು (ಶಿಲಾಶ. ೯೦). [ಸಂ.]

**ಮೋಹನಬಾಣ** (ನಾ). ಮನ್ಮಥನ ಪಂಚಬಾಣಗಳಲ್ಲಿ ಒಂದು : ಮೋಹನಬಾಣಮುಚ್ಚಿದೊಡೆ ಮಸ್ತಕಕಂಪನಮಾದುದೆಂಬನಂ ಸಾಹಸಿಕರ್ ಕುಮಾರವರರಾಕೆಯ ಚೆಲ್ವನಭೀಕ್ಷಿಸುತ್ತುಮಿರ್ದರ್ . . . ತಲೆದೂಗುತಿರ್ದರ್ (ಸಾರಕ್ಕೆ. ೦೦-೯೯). [ಸಂ.]

**ಮೋಹನಮಾಲೆ** (ನಾ). ಚಿನ್ನದ ಗುಂಡುಗಳಿಂದ ಮಾಡಿದ, ಆಕರ್ಷಣೀಯವಾದ ಹಾರ : ಬಿಲ್ಲೆ ಮೋಹನಮಾಲೆ . . . ಮೊದಲಾದ ಪೊಸಮಿಸುನಿದೊಡವುಗಳಿಂ ತೊಂಡಿಲ್ಗಳಿಂದಲಂಕೃತೆಯಾದ . . . ಕನ್ನೆಯುಂ (ಹಾಲಾಸ್ಯ. ೪-೯-೬೪ ವ) ; ಕಂಠಭೂಷಣಗಳು–ತಾಳಿ, ಚಂದ್ರಹಾರ, ಮೋಹನಮಾಲೆ . . . ಮಾವಿನಕಾಯಿ ಸರ, ಮಲ್ಲಿಗೆ ಮೊಗ್ಗಿನ ಮಾಲೆ, ಪದಕ ಇತ್ಯಾದಿ (ಕವಿಕೋ. I, ೬೨೦) ; ಅಳಿಯಂದಿರಿಬ್ಬರಿಗೂ ಚಿನ್ನದ ಗಡಿಯಾಳ, ಮೋಹನಮಾಲೆಗಳನ್ನು ಕೊಟ್ಟರು (ಶ್ರೀವಾತ್ಸ. ೨೩೩).
[ಸಂ. ಮೋಹನ ಮಾಲಾ. / ಹಿಂ. ಮೋಹನ್‌ಮಾಲಾ ; ಮರಾ. ಮೋಹನ್‌ಮಾಳ]

**ಮೋಹನವಡೆ** (ಕ್ರಿ). ಚೆಲುವನ್ನು ಪಡೆ ; ಸುಂದರವಾಗು : ಮೋಹನವಡೆದ ಪದಕ ಪೈಠಣಿಯ ಕಡುಸೊಬಗಿನ ಬಲ್ವೇಟದ ಸುಕುಮಾರ ನಡೆದನು ಸಪಿರ ಮೇಳದಲಿ (ಕಂಸವಿ. ೧೦-೨೦). [ಮೋಹನ + ಪಡೆ$_1$]

**ಮೋಹನಶರ** (ನಾ). = ಮೋಹನಬಾಣ : ಕಾಮಂ ಹೂಡಿದನುಣ್ಮುಣ್ಮೆನುತ್ತೆ ಮೋಹನಶರಮಂ (ಗಿರಿಕ. ೬-೨೯). [ಸಂ.]

**ಮೋಹನಶಾಸ್ತ್ರ** (ನಾ). ಅವಿದ್ಯೆಯನ್ನುಂಟುಮಾಡುವ ಶಾಸ್ತ್ರ ; ಅಜ್ಞಾನವನ್ನುಂಟುಮಾಡುವ ಶಾಸ್ತ್ರ : ಮಾಯಿಗಳ ಗೆಲಿದು ಮೋಹನಶಾಸ್ತ್ರಬಲೆಯನರಿದು . . . ವಿಷ್ಣು ಪರದೈವವೆಂದಱುಹಿದಾ ಅಲವಬೋಧರ ಭಜಿಸಿರೈ (ಹರಿಕಥ. ೧೨. ೦-೪೭-೩). [ಸಂ.]

**ಮೋಹನಾಂಗ** (ನಾ). ಮರುಳುಗೊಳಿಸುವ ರೂಪವುಳ್ಳವನು ; ಸುಂದರ ; ಚೆಲುವ : ಇದು ಏನಂಗ ಮೋಹನಾಂಗ ಮದನಜನಕ ತೊರವೆಯ ನರಸಿಂಹ (ಹರಿಕಥ. ೦-೯೯ ಶಿಲ್ಪ) ; ಸಂತೋಷದೊಳು ಮೋಹಿಸುತೆನ್ನನೊಡಗೂಡೊ ಕಂತುಸನ್ನಿಭ ಮೋಹನಾಂಗ (ಕಂಸಾ. ೯-೧೯೦) ; ನೀ ತಾಯಿಯೆನಲೊ ನೀ ಮಾಯಿಯೆನಲೊ ಮೋಹಿನಿಯ ಮೋಹನಾಂಗ ? (ಸೂರ್ಯಶಾ. ೩೭-೯). [ಸಂ.]

**ಮೋಹನಾಂಗಿ** (ನಾ). ಮರುಳುಗೊಳಿಸುವ ರೂಪುವುಳ್ಳವಳು ; ಚೆಲುವೆ : ಅನಿಮಿಷಪತಿಸುತ ನರಲೋಕದ ಭೋಗದನುವನೀಕ್ಷಿಸಬೇಕೆನುತ ಜನಿಸಿದ ನರರೂಪಿನೊಳಗೆಂಬೊಲು ತನ್ನ ಮನಕೆ ತೋಱದೆ ಮೋಹನಾಂಗಿ (ಕಂಸವಿ. ೯-೦೩೦) ; ಬೇರೆ ಯಾವ ಮಾರ್ಗವಿದೆ ಮೋಹನಾಂಗಿ? (ವಾಮನ. ೨೬೦). [ಮೋಹನಾಂಗ + –ಇ$_2$]

**ಮೋಹನಾಸ್ತ್ರ** (ನಾ). ಪ್ರಜ್ಞೆ ತಪ್ಪಿಸುವ ಅಸ್ತ್ರ. [ಸಂ.]

**ಮೋಹನಿ** (ನಾ). ಒಂದು ಬಗೆಯ ಸಸ್ಯ : "ಮೋಹನೀ -- ಚಿಬ್ಬಸಲಿ" (ಓಷಧಿ. ೦೩೦). [ಸಂ. ಮೋಹನೀ ?]

**ಮೋಹನಿದ್ರೆ** (ನಾ). ಕೃತಕವಾಗಿ ಉಂಟುಮಾಡುವ ನಿದ್ದೆ ; ಮಾಯಾನಿದ್ರೆ : ಭಟರ್ ಕಾಪುಳಿದು ಮೋಹನಿದ್ರೆಗೆ ಸಂದರೆಂಬರ್ ! (ಶ್ರೀರಾಮಪ. ೩೨೩-೬೯೪). [ಸಂ. ಮೋಹನಿದ್ರಾ]

**ಮೋಹನೀಯ** (ಗು). ೧. ಭ್ರಮೆಗೊಳಿಸುವ ; ಕಕ್ಕಾಬಿಕ್ಕಿಮಾಡುವ. (ನಾ) ೨. ಅಜ್ಞಾನ ; ಮಾಯೆ : ಬಗೆಗಿಡಿಸೆ ಮೋಹನೀಯಂ ನಗಧರ ಶವಧಾರಿಯಾಗೆ ಷಣ್ಮಾಸಮದೇಂ ನೆಗೞ್ದುದೊ ಸಲೆ ಬಲದೇವನ ಪೆಗಲ ಪೆಣಂ ಕುಂದದೆಂಬ ನಾಣ್ನುಡಿ ಜಗದೊಳ್ (ಶಂಖಾವಮ. ೦೭-೩೩). ೩. [ಜೈನ] ಆತ್ಮನನ್ನು ಬಂಧಿಸುವ ಎಂಟು ಮೂಲಕರ್ಮಗಳಲ್ಲಿ ಒಂದು : ಮುಕ್ತಿರ್ಪತ್ತೆಂಟುತೆಱದ ಮೋಹನೀಯವೆಂಬ ಕರ್ಮದ ಕೇಡಿನಿಂ ಅನಂತಸುಖಿಗಳಾದರ್ (ವಡ್ಡಾರಾ. ೧೩೪-೨೩) ; ಪಂಚೇಂದ್ರಿಯಂಗಳ್ . . . ಮೂಲಪ್ರಕೃತಿಭೇದದಿಂದೆಂಟುತೆಱನಕ್ಕುಂ ಅವಾವುವೆನೆ ಜ್ಞಾನಾವರಣೀಯಂ ದರ್ಶನಾವರಣೀಯಂ ವೇದನೀಯಂ ಮೋಹನೀಯಂ ಆಯುಷ್ಯಂ ನಾಮಗೋತ್ರಮಂತರಾಯಂ (ಶಾಂತಿಪು. ೦೨-೦೦ ವ) ; ದರ್ಶನ ಮೋಹನೀಯಮುಂ ಚಾರಿತ್ರಮೋಹನೀಯಮುಂ ಎಂದು ಮೋಹನೀಯಂ ದ್ವಿವಿಧಮಕ್ಕುಂ (ಕರ್ನ್ನಾಕು. ೭೯). [ಸಂ.]

**ಮೋಹನೀಯಕರ್ಮ** (ನಾ). = ಮೋಹನೀಯ ೩ : ಬಱಯಂ ಮೋಹನೀಯಕರ್ಮೋಪಶಮದೊಳ್ ವಿಶುದ್ಧ್ಯತಿಶಯವಿಶೇಷದಿನುಪಶಮ ಶ್ರೇಣ್ಯಾರೋಹಣಂಗೆಯ್ದು (ಆದಿಪು. ೬-೩೩ ವ) ; ಅಂತತಿವ್ಯಾಮೋಹದಿಂ ಬಂದು ಸಕಲಲೋಕಾಧಿಪರಿಂ ಪರಿವೃತರಾಗಿರ್ದ ಸಕಲಭೂಷಣಕೇವಲಿಗಳ ಸಭೆಯನೆಯ್ದಲೊಡಂ ರಾಮನ ಮೋಹನೀಯಕರ್ಮಮುಪಶಮಕ್ಕೆ ಸಲ್ವುದುಂ (ಕಂರಾಮಾ. ೦೬-೩೩ ವ) ; ಜೀವನ ಸಮ್ಯಕ್ತ್ವವನ್ನೂ ಚಾರಿತ್ರಗುಣವನ್ನೂ ಘಾತಿಸಿ ಜೀವನಿಗೆ ಆ ತತ್ವಗಳಲ್ಲಿ ಶ್ರದ್ಧೆಯನ್ನೂ ಲೋಭವನ್ನೂ ಉಂಟುಮಾಡುವುದು ಮೋಹನೀಯಕರ್ಮವು (ಕೈಸಥ. ೩).
[ ಸಂ. ಮೋಹನೀಯಕರ್ಮನ್ ]

**ಮೋಹನೆ** (ನಾ). ಮೋಹಕವಾಗಿರುವವಳು ; ಮರುಳುಗೊಳಿಸುವ ರೂಪವನ್ನು ಹೊಂದಿರುವವಳು ; ಸುಂದರಿ : ಬಾ ಬಾ ಮೋಹನೆ ಬೇಗ . . . ನಸುನಗುವ ಹುಸಿಮುಳಿವ ಬಿಸವಂದದ ಸುಂದರಿ ನೀ ಬೇಗ ಬಾ (ಗಕೇಶ. ೩೩-೦). [ ಸಂ. ಮೋಹನಾ ]

**ಮೋಹಪರವಶ** (ನಾ). ವ್ಯಾಮೋಹವನ್ನು ಹೊಂದಿದವನು ; ಮರುಳಾದವನು : ಅತನು . . . ಈ ಹುಡುಗಿಯನ್ನು ಕಂಡು ಅವಳ ರೂಪಲಾವಣ್ಯಾದಿಗಳಿಗೆ ಆಶ್ಚರ್ಯಪಟ್ಟು ಮೋಹಪರವಶನಾದನು (ಕಪಕ. ೯). [ಸಂ.]

**ಮೋಹಪಾಶ** (ನಾ). ಲೌಕಿಕ ವಿಷಯಗಳ ಬಂಧನ.— ಸೆಳೆತ; ಮಾಯಾಜಾಲ : ಅಪಗತದುರಿತಂ ತನ್ಮೋಹಪಾಶಮಂ ಪಱಿದ ತೆಱದೆ ತಲೆಯಂ ಪಱಿದಂ (ಶಾಂತಿಪು. ೯-೬೩) ; ದೇಹಸಂಬಂಧಿಗಳಾದವರ್ಯಾವರು ಮೋಹಪಾಶದಿ ಕಟ್ಟಿ ಬಗಿದಿಹಲ್ಲೆ (ಪುರಂದ. ಧಾ. ೨-೧೨-೧). [ಸಂ.]

**ಮೋಹಭಾವ** (ನಾ). ಪ್ರೀತಿಯ ಭಾವನೆ ; ಅಕ್ಕರೆಯ ಭಾವನೆ : ಎನ್ನ ಮೇಲಣ ಮೋಹಭಾವದೊಳಿನ್ನುಮ ಸಲಪಲ್ಕೆ ಬಂದಿರೊ (ಬಸವು. ೦೬-೦೩) ; ಅವುಬ್ಬರಲ್ಲಿ ಪರಸ್ಪರ ಮೋಹಭಾವಗಳ ಐಕ್ಯತೆ ಒಡನೆ ಉಂಟಾಯಿತು (ವಾಗ್ಭಿ. ೪೯). [ಸಂ.]

**ಮೋಹರ$_1$** (ನಾ). ೧. ಸೈನ್ಯ; ದಂಡು; ಪಡೆ; ದಳ : "ಮೋಹರಮೆನೆ ನೃಪಸೈನ್ಯಂ" (ಛಾರಿಸಿ. ೩೦); ಅರಗಿಳಿವಿಂಡು ಪಾರುವವ ಮೋಹರವಾಱವಿಂಡು ಬಿಲ್ಲುಬೀರರ ಪಡೆ (ಕಬ್ಬಿಗಕಾ. ೨೦೦) ; ಕಲಿ ರಾಧೇಯನೇ ವಜ್ರಾಂಗಿಯಲ್ಲಾ ನಮ್ಮ ಮೋಹರಕೆ (ಕುವ್ಯಾಕ. ೧-೨೩) ; ಕರಡಿಯ ಮೋಹರವ ಜಾಂಬವರು ತೋಱಿದರ್ಪೆದು ನಿರ್ಬುದವ (ತೊರರಾ. ೪-೬-೨೨). ೨. ಯುದ್ಧ; ಕದನ : ರಕ್ಕಸನಾಥ ಬೈಪುದ ಕೇಳಿ ನೀಲಸು ನಡೆದ ಮೋಹರಕೆ (ಕೌರರಾ. ೩೪-೦೨) ; ಅಳಿಯನೀ ಮೋಹರದೊಳಲ್ಲದೆ ಫಲುಗುಣನ ಮಗನಿವನು ಬಲುಗೈಯುಳುಹುವಾರದು (ಕುವ್ಯಾದ್ರೋ. ೪-೨೮). ೩. (ಕಾಳಗದ) ಕಣ; (ರಣ)ರಂಗ : ಕಲಿಗೆ ಕಾಳಗದ ಮೋಹರದಂತೆ ಭಕ್ತಿಯ ಛಲಿಗೆ ಮುಕ್ತಿಯ ಬಿಡಿನಂತೆ . . . ಕಂಗೊಳಿಸುವುದು ಗೌರನ ಕಾವ್ಯ (ಪೋಳಪು. ೩-೨). ೪. ಗುಂಪು; ಸಮೂಹ : "ಒಡ್ಡನೆ ಮೋಹರಂ" (ಕರ್ಣಾಟ. ೧೮) ; ಮಂಜಿನ ಮೋಹರ ರವಿಯ ಕಿರಣದ ಕೆಡಿಸಲಾಪುದೆ (ಕನ್ನವ.ಕ. ೪೩೬-೬೨೯); ಗಗನದ ಮುಗಿಲ ಮೋಹರವ ದಾಳಿಯಲಿಯಱಿಯಟ್ಟಿ ಸುಂಟರುಗಾಳಿಯುರವಣೆ ನಿಂದವೊಲು (ಕುವ್ಯಾದ್ರೋ. ೬-೬೦); ಮತ್ತದಂತಿಗಳೊಗ್ಗಿ ವಿಡಿದು ಬಂದವು . . . ಕಾರ್ಮುಗಿಲ ಮೋಹರದಂದದಿಂ (ಸೌಂದರ. ೦೬-೦೩). [ದೇ.॥ ತೆಲು. ಮೋಹರ]

**ಮೋಹರ$_2$** 'ಮೊಹರು' ನೋ.

**ಮೋಹರ$_3$** (ನಾ). [ಸಂಗೀತ] ಮದ್ದಳೆಯನ್ನು ಬಾರಿಸುವ ಒಂದು ಬಗೆಯ ಗತ್ತು : ಬೊಟ್ಟು ಮೋಹರ ಅರಿದೆಂಬಿವಂತದಿರಾ ಎಂಬ ಕೂಱು ತಪ್ಪದೆ ಶುದ್ಧಭಾರಿ ಅವಣಿಯೆಂಬ ಮದ್ದಳೆಗಳಂ ಬಾರಿಸುವ ಮದ್ದಳೆಕಾಱರಿಂ (ದಶಾವ. ೨-೧೦ ವ); ಓರಿದು ಬಾರಿಸಿ ತೋಱಿದರು ಮೋಹರಗಳನು ಮರ್ದಳೆಯವರು (ಕುಶವಾ. ೨-೬೩). [ ? ]

**ಮೋಹರಂಬಡೆ** (ಕ್ರಿ). ಗುಂಪುಗೂಡು ; ಹಿಂಡುಗಟ್ಟು : ಅಂತೊಯ್ಯನೆ ಮುಂದೆ ಮೋಹರಂಬಡೆದು ತಳರ್ವ ಪುಸಿವಡೆಯಲ್ಲಿ (ಕಬ್ಬಿಗಕಾ. ೨೦೨).
[ಮೋಹರ$_1$ + ಪಡೆ$_1$]

**ಮೋಹರಂಬೆಱು** (ಕ್ರಿ). = ಮೋಹರಂಬಡೆ : ಸುರವ್ಯೂಹಮುಂಬರದಲ್ಲಿ ಹೂಮಳೆಗಳಂ ಹಿಡಿದು ಮೋಹರಂಬೆತ್ತು ನೋಡುತ್ತಿರಲು (ಹಕಕಾ. ೦೩-೦೩).
[ಮೋಹರ$_1$ + ಪೆಱು]

**ಮೋಹರದೆಗೆ** (ಕ್ರಿ). ೧. ಸೈನ್ಯವನ್ನು ಒಡ್ಡು. — ಸಜ್ಜುಗೊಳಿಸು; ಯುದ್ಧಕ್ಕೆ ತೊಡಗು : ಧರ್ಮಜನಲ್ಲಿ ಮೋಹರದೆಗೆವನತ್ತಲೆ ರಥವ ಹರಿಸೆಂದ (ಕುವ್ಯಾದ್ರೋ. ೨-೩೦). ೨. ಗುಂಪುಗೂಡು; ಸಂದಣಿಸು: ಜಗದ ನಿಡುನಿದ್ರೆಯಲಿ ಮೋಹರದೆಗೆದ ಮುಗಿಲೋ . . . ಕೈಕಾಲ್ ಮೂಡಿತೋ ನಭಕೆ (ಕುವ್ಯಾದ್ರೋ. ೩-೯); ಜಗದ ವಿಲಯದ ಮುಗಿಲ ಮೋಹರದೆಗೆವ ವೊಲು ನಭವೈದೆ ಶಾಖಾಮೃಗದ ಮಯಮಾಯ್ದುಣಂಗ ಕೇಳುಬ್ಬರದ ಕಪಿಬಲವ (ತೊರರಾ. ೬-೬-೦೪). [ಮೋಹರ$_1$ + ತೆಗೆ$_1$]

**ಮೋಹರಮಲ್ಲ** (ನಾ). ಯುದ್ಧದಲ್ಲಿ ಶೂರನಾದವನು ; ಕಲಿ : ಶಲ್ಯಭಾರದ್ವಾಜನಿರ್ದಾನಿಪೊಳಲೊಡೆಯನೆಸೆವ ಮೋಹರಮಲ್ಲ ಕೃಷ್ಣಮನ್ಮಥ ಶೋಭೆಯಿಂದೆದಾಗಳ ಲಲಿತ ಸೈನಿಕಮಲ್ಲ ಭೀಮವಿಜಯಾಸ್ಪದಂದಳೆದು . . . ಕಣ್ಗೆ ಮಂಗಳಮಾನಾಗಿಸಿದುದಾ ಗೋತ್ರಂ (ಶಂಪಮಾ. ೨-೪೦).
[ಮೋಹರ$_1$ + ಮಲ್ಲ]

**ಮೋಹರಸ** (ನಾ). ೧. ಅನುರಾಗ ; ಪ್ರೀತಿ : ಕೌತುಕದಿಂ ಪೆಂಡಿರೊಳಂ ಭೀತಿರಸಂ ಮೋಹರಸಮನೊತ್ತರಿಸುಗುಮೇ (ಜಗಧ. ೩-೨೩). ೨. ಮದನಜಲ ; ಮದನದ್ರವ : ನಿಟ್ಟಿಸಿ ನೋಡಿದ ಪುರುಷಗೆ ಮೈ ಜುಮ್ಮುದಟ್ಟಿ ರೋಮಾಂಚನವೆಸಗಿ ಕಟ್ಟಿಟಿಕದೆ ಮೋಹರಸವುಬ್ಬಿ ನೆಱಿ ಪೊಱಿಮಟ್ಟು ಸೂಸುವುದಂಗದಿಂದ (ಕಂಸವಿ. ೦೦-೦೪). [ಸಂ.]

**ಮೋಹರಿ$_1$** 'ಮೌರಿ' ನೋ.

**ಮೋಹರಿ$_2$** 'ಮೊಹರು' ನೋ.

**ಮೋಹರಿಸು, ಮೋಹಳಿಸು** (ಕ್ರಿ). ೧. ಮುತ್ತಿಗೆ ಹಾಕು ; ಧಾಳಿಮಾಡು : ಮೋಹರಿಸಿದುದಾದೀಶನ ಚತುರಂಗವಾಹಿನಿಯುತಿರೋಷದಲಿ (ಶ್ರೀಕೃಷಾಂ . ೦೬-೨೦೪) ; ತುಱುಗಿ ಗಂಧೋತ್ಕಟನ ನಿಜಮಂದಿರದ ದಳ ಮೋಹರಿಸೆ (ಜೈಮಿನಿ. ೦೧-೪) ; ಸೈಂಧವ ಬಿಱುದುಡುಕೆ ಮೋಹರಿಸಿದರು ಭೂರಿಶ್ರವಾದಿಗಳು (ಕುವ್ಯಾದ್ರೋ. ೪-೦೪). ೨. ಎದುರಿಸು ; ಪ್ರತಿಭಟಿಸು : ಇದುವೆ ನೀಂ ಮೋಹರಿಸಿ [ಶಾಶಾಂ. ಮೋಹಿಸಿ] ನಿಂದುದಕಿದು ಬಳಿಕೊಂದುತ್ತರ ಮುಗುಳ್ದುದಕಿದು ನಿನಗೆ ಕೊಳ್ಳೆಂದು ಮೂದಲಿಸುತ ರಘುಜನೆಚ್ಚಂ (ಕುಮುರಾ. ೨-೩೩) ; ಶಕುನಿ ಮೋಹರಿಸಿದನು ಸಮಸಪ್ತಕರು ಬೇಱೊಡ್ಡಿದರು (ಕುವ್ಯಾಶ. ೨-೯). ೩. ಮುತ್ತು ; ಆವರಿಸು ; ಕವಿ : ಸತ್ಯಲೋಕದ ಧಾಮವನು ಮೋಹರಿಸಿ ಮುಚ್ಚಿತು ತಮಸಿನೊಡ್ಡವಣೆ (ಕಂಶಕ. ೪-೦೨) ; ಪರಿದು ಕಾರ್ಮುಗಿಲು ಚಂದ್ರಗೆ ಕವಿದಂತೆ ಮೋಹರಿಸುವುದೊಡನಂಧಕಾರ (ಶಶಕ. ೦೬-೩೦) ; ಬಗೆಬಗೆಯ ಮುಗುಳು ಗೊಂಚಲಿನ ಹೂಜಲ್ಲಿಗಳ ಕಣಿಗೊಟ್ಟು ಮನವ ಮೋಹರಿಸುತ್ತಿದೆ (ಪಕ್ಕ. ೪೩-೦೪). ೪. (ಸೈನ್ಯವು) ಸಜ್ಜಾಗು ; ಅಣಿಯಾಗು : ಕಾಲಾಳು ಮುಂಕೊಳಿಸಿ ಅರಸನನುಜರುಸಹಿತ ಕೃಷ್ಣನ ಬೆರಳ ಸನ್ನೆಯೊಳೈದೆ ಬಿಡೆ ಮೋಹರಿಸಿ ನಿಂದುದು (ಕುವ್ಯಾದ್ರೋ. ೪-೨೨) ; ಮೋಹರಿಸಿ ಕಳದೊಳಗೆ ನಿಲೆ ಕಱುಗಾಹಿಯೆಳೆಗೊರಳನು ಮುಱಿಯ ಬಿಸುಟಾ ಹಡೆದ ತಾಯ್ಗಾವೆ ಶೋಣಿವನೆಂದ ಚಾಣೂರ (ಜಾಳ್ಗಶಾ. ೨೨-೩೦) ; ಸರಕಾರದ ಪಡೆಯವರೂ ಸತ್ಯಾಗ್ರಹಿಗಳೂ . . . ಎದುರಾಗಿ ಮೋಹರಿಸಿ ನಿಂತರು (ಕರಬೀ. ೦೬). ೫. ಯುದ್ಧಕ್ಕೆ ಸೈನ್ಯದ ವ್ಯೂಹವನ್ನು ರಚನೆಮಾಡು: ಸಾಹಸ ವನಜಾನನಾಹವವನೊಡ್ಡುವೆ ತನಗೆ ಮೋಹರಿಪೆ[ಶಾಶಾಂ. ಸೆ] ಶಿವ [ಶಾಶಾಂ.

ಮೋಹರಿಸುವೆನು] ಸದಾಚಾರ ವ್ಯಾಹವ ತನಗೆ (ದೀಕ್ಷಾಬೋ· ೨೦-೩೭೦) ; ತನ್ನ ಸಚಿವನೊಳು ಬಲವಂ ನೆರಪಿ ಮೋಹರಿಪ್ಪುದೆಂದು ಬೆಸನನು ಕೊಡಲು (ಸೌಂದಪು· ೬-೩೩). ೬. ಸಜ್ಜುಗೊಳಿಸು ; ಅಣಿಮಾಡು : ಸಿದ್ಧಪಡಿಸು : ತಂದು ಮಣಿಮಯಸಾರಿವಲಗೆಯನಂದು ಮೋಹರಿಸಿದರು ಜೂಜಿಂಗೆ (ಕುವ್ಯಾಸ. ೦೭-೪೩). ೭. ಗುಂಪುಗೂಡು ; ಸಂದಣಿಸು ; ಒಟ್ಟಾಗು : ತರಣಿ ಶಶಿ ರುದ್ರಾದಿಗಳು ಮೋಹರಿಸಿದರು ಮುಂಗುಡಿಯಲಿಂದ್ರನ (ಸಂಭಶ· ೩೭-೩೬) ; ಧರಣಿಪನ ಕೈಸನ್ನೆಯಲಿ ಮೋಹರಿಸಿ ನಡೆದುದು ಸೇನೆ (ತೊರವಾ · ೯-೩-೨) ; ಮೋಹರಿಸಿ ಬಂದು ಮುತ್ತಿಗೆಯನಿಕ್ಕಿಕೊಂಡಿರ್ಪೆಳವಿಸಿಲ್ಗಳೆಸಲು . . . ಪೊನ್ನ ಕೋಂಟೆಗಳ ಕಾಂತಿಗಳ್ಪೆದೆ ಮುಸುಕಿಕೊಂಡೆಸೆದಿರ್ದುವು (ಕೃಬಿಳಾ. ೦೭-೭) ; ಸಿಡಿಲ ಪಡೆಯಂತೆ ಮೋಹರಿಸಿ ಶರವರ್ಷಮಂ ಕಱೆವುತ್ತೆ ನಿಜಬಲಂಬೆರಸು ಕಡಂಗಿ ಕವಿಯಲೊಡನೆ (ರಾಜಶೇ· ೭-೦೦೦ ವ). ೮. ಹೆಚ್ಚಾಗು : ಅಧಿಕವಾಗು : ಜಿಷ್ವೆ ನಲಿದಾಡೆ ಸುಖಂ ಸುಳಿದಾಡೆ ಲೀಲೆ ಮೋಹರಿಸೆ ಗಳಂ ಚಮತ್ಕರಿಸೆ . . . ಕೂಡಿದರ್ (ಗಿಂಳ. ೩-೨೬); ಮೋಹನಂ ಮೋಹರಿಸೆ ಗಾಡಿ ಪರಿದಾಡೆ ಪೊಸ ದೇಶಿ ಸೂಸೆ . . . ಪಡೆದು ಕೃತಿಯಂ ಶಿವಾರ್ಪಿತವನೆಸಗುವ ನಿನ್ನ ಸೈಪಿಂಗೆ ಸಾಟಿಯುಂಟೇ (ಶದ್ಮರಾ· ೦-೩೦) ; ಮೋಹರಿಸಿದ ಮಮತೆಯೊಳೆಯ್ತರುತತಿ ಹಾಹಾಕ್ರಂದನಮಂ ಮಿಗೆ ಮಾಡುತ್ತ (ಜಯಲಾ· ೯-೨೬). ೯. ಗುರುತಿಸು ; ಕಾಣಿಸು : ಶ್ರೀಹರಿಯಣುಗಿನಣುಗನತಿಮುದದಿಂ ತನ್ನೆಳವರೆಯದೊಳು ಮೋಹರಿಸಿದ ಮೂರೇಖೆಯು ತೆಱನೆಸಲಾ ಹೆಣ್ಗಳ ರನ್ನಗೆ . . . ರಾಜಿಸಿದುವು ತಿವಳಿಗಳು (ಜಯಲಾ. ೩-೩೩). ೧೦. ಸೇರು : ಜೊತೆಗೂಡು : ಏಕೆ ನಿಮಗೀ ಚಿಂತೆಯಿಂದೆರಡೌಕದವು ದುಷ್ಕಾರ್ಯಸಂಧಿವಿವೇಕನಿಕರದಲೊರೆದು ಮೋಹರಿಸೊಂದು ಬಾಹೆಯಲಿ (ಕುವ್ಯಾಸ. ೦೨-೭೦); ನಳಭೂವರನು ನಿಜಸತಿಸಹಿತ ಹೊಕ್ಕನು ನಿಷಧಪಟ್ಟಣವ ಮೊಱೆವ ಶಂಖ ಮೃದಂಗ ಭೇರಿಗಳುಬ್ಬಿ ಧಂಧಣಿರೆನಲು ಮೋಹರಿಸಲಾ ನಿಸ್ಸಾಳತತಿ ಘನವಾದ್ಯ ಘೋಷಿಸಲು (ನಳಚ. ೩-೭೩). ೧೧. ಒಟ್ಟುಗೂಡಿಸು; ಸೇರಿಸು: ಸರಸಿಜಾಯತದಂಡವನು ಮೋಹರಿಸಿ ಮುಂಚುವ ಪರಿಮಳವನಂದರಸಿ ಬೀಱುತ ಬಂದು ಹೊಕ್ಕಳು ರಾಜಮಂದಿರವ (ಕುವ್ಯಾಖ.೦-೨೬). ೧೨. ತುಂಬಿಕೊಂಡಿರು ; ತುಂಬಿರು : ಮೋಹರಿಸಿ ಪೊದಟ್ಟ ಪೊಚ್ಚಪೊಸಜೇನ್ಗೊಡನಂ ಪಿಱಿದು ಸೋರ್ವ ಜೇಂಜರಿ . . . ದೊರೆವಡದೀ ಕುಮಾರ ಚಿಕದೇವನ ತಾಸದ ಪೋಡಶಾಂಶಮಂ (ಚಿಕವಿ· ೯-೦೦೭). ಮೋಹಳಿಸು : ೧೧. ಲಳಿಯ ಲಹರಿಯ ಲಗ್ಗೆಗಳ ಮೋಹಳಿಸಿ ಬಬ್ಬುರ್ಣಿಂಕಾರರವದಿಂದುಲಿವವನು ಕಲಿಕರ್ಣನು (ಕುವ್ಯಾಖ. ೭-೩೭). P ಇದು ಪ್ರಾಸಕ್ಕಾಗಿ ಮಾಡಿಕೊಂಡಿರುವ ರೂಪ.

[ಮೋಹರ$_1$ + —ಇಸು$_3$./ತೆಲು. ಮೋಹರಿಂಚು. ಮೊಹರಿಂಚು]

**ಮೋಹಲತೆ** (ನಾ). (ವಶೀಕರಣದ ಮದ್ದಿಗೆ ಬಳಸುವ) ಒಂದು ಬಗೆಯ ಬಳ್ಳಿ : ಮೋಹಲತೆಯುಂ ಧೂಮಕುಣಿಕೆಯುಂ ಗಿರಿಕರ್ಣಿಕೆಯುಂ ರುದಂತಿಯುಂ ಚಾರಿಕೆಯುಂ ಅಧೋಪುಷ್ಪಿ ಎಂದು ಸಪ್ಪುಸೀಗೆಬೀಜವುಂ . . . ಕೂಡಿ ತಿಲಕವನಿಡಲು ತ್ರೈಲೋಕ್ಯವಶಮಪ್ಪುದು (ಕಾಮಪಿ. ೨೭೨).

[ಸಂ. ಮೋಹಲತಾ]

**ಮೋಹವೆಚ್ಚು** (ಕ್ರಿ). ಪ್ರೀತಿಯು ಹೆಚ್ಚಾಗು; ಅನುರಾಗವು ಅಧಿಕವಾಗು: ಒಚ್ಚೇರೆಗೈಯೊಳು ನೀರ ಮೊಗೆದು ಮೋಹವೆಚ್ಚಿ ರಂಗನ ಮೇಲಿಡಲು (ಕಂಸವ. ೨೩-೦೨೨). [ ಮೋಹ$_1$ + ಪೆಚ್ಚು$_{ii1}$ (<ಪೆರ್ಚು$_1$) ]

**ಮೋಹವೆಣ್** (ನಾ). ೧. ಮರುಳುಗೊಳಿಸುವ ಹೆಣ್ಣು; ಆಕರ್ಷಿಸುವ ಹೆಂಗಸು. ೨. ಜಾರೆ ; ವೇಶ್ಯೆ.

**ಮೋಹವೆಂಗಳು** (ಬಹುವ): ಮುದದಿಂದ ರಾಜಿಸುತಿಹ ಮೋಹವೆಂಗಳ ಸದನಪಂಕ್ತಿಯು ಲೋವೆಯೊಳಗೆ ಮದನವಿಲಾಸವ ತೋರ್ಪ ಪುತ್ತಳಿಗ ಳೊಪ್ಪುದುವತಿಚೆಲುವಿಕೆಯಿಂದ (ಕಂಸವ· ೭-೯೯). [ಮೋಹ$_1$ + ಪೆಣ್]

**ಮೋಹಶಾಸ್ತ್ರ** (ನಾ). ಅವಿದ್ಯೆಯನ್ನುಂಟುಮಾಡುವ ಶಾಸ್ತ್ರ ; ಅಜ್ಞಾನವನ್ನುಂಟುಮಾಡುವ ಶಾಸ್ತ್ರ: ಅವು ತಾಮಸಂಗಳುಂ ಮೋಹಶಾಸ್ತ್ರಂಗಳುಂ ಅಸಾಕ್ಷಿಕಂಗಳುಮಾಗಲಾಗಿ ಪ್ರಮಾಣಂಗಳಾಗಲರಿಯವು (ಶಾತ್ಯಿ. ೯೯).

[ಸಂ.]

**ಮೋಹಸಲೆ** 'ಮೊಹಸಲೆ' ನೋ.

**ಮೋಹಳ** (ನಾ). ಕತ್ತಿಯ ಹಿಡಿ ; ಕಠಾರಿಯ ಹಿಡಿಕೆ : "ಪಾಳೆ ಪರಂಜುಪೆನಲು ಮೋಹಳಮುಕ್ಕು" (ಮಂಗರಾ. ೬೬-೩೭) : ಖಡ್ಗದ ಮೋಹಳ [ಪಾಠಾಂ· ರ]ಕೆ ಕೈದುಡುಕಿ . . . ತ್ರಿಪುರಾಂತಕಾ ಎನಲು (ಬಸಪು. ೨೬-೩೪); ಕಠಾರಿಯ ಮೋಹಳದ ಮೇಲಿಟ್ಟ ಗಲ್ಲದ . . . ಘನಶೋಕವಹ್ನಿಯ ಮೋಹುಗಾಡಿನ ಮನದ ಕೌರವನಿತ್ತನೋಲಗವ (ಕುವ್ಯಾದ್ರೋ· ೦-೦೨) ; ಹೊನ್ನ ಮೋಹಳದ ಕಠಾರಿ ಕತ್ತುರಿಬೊಟ್ಟು ಚಿನ್ನದ ಕಯ್ಯುಂಬು ಮೊಱೆಯ (ಕುರಾಸಾಂ· ೪೦-೯೭). [←ತೆಲು· ಮೋಹಣ]

**ಮೋಹಳಿಸು** 'ಮೋಹರಿಸು' ನೋ.

**ಮೋಹಾಂಧ** (ನಾ)· ವ್ಯಾಮೋಹದಿಂದ ಕುರುಡಾದವನು ; ಮುಂದುಗಾಣದವನು: ಕಪಟಪ್ರಪಂಚಜಾಳಾವೃತನೆನಧಿಕಮೋಹಾಂಧನೆಂ (ಸುಕುಮಾ. ೩-೪೩); ಮಂತ್ರಿಪುತ್ರಮೋಹಾಂಧನಾಗಿ ಕುಬನಿಗರೆಯತೊಡಗಿದ (ಅಕ್ರಮು. ೭೦).

[ಸಂ.]

**ಮೋಹಾತುರ** (ನಾ). ವ್ಯಾಮೋಹದಿಂದ ತವಕಿಸುವ ವ್ಯಕ್ತಿ: ಸುವಿವೇಕವುಂಟೆ ಮೋಹಾತುರರೊಳ್ (ಪ್ರಭು. ೩-೦೬೩). [ಸಂ.]

**ಮೋಹಾಪೋಹ** (ನಾ). [ಕಾವ್ಯಮೀ] ಅಪಹ್ನುತಿಅಲಂಕಾರದ ಒಂದು ಪ್ರಭೇದ ; P ಮೋಹಪರವಶತೆಯಿಂದಾಗಿ ವಸ್ತುವಿನಲ್ಲಿರುವ ಗುಣಗಳನ್ನು ಅಲ್ಲಗಳೆದು ಬೇರೆ ಗುಣಗಳನ್ನು ಆರೋಪಿಸಿ ವರ್ಣಿಸುವುದು : ಅಮೃತಮಯುಕಿರಣನೆಂಬುದುಮಮರೆದು ಶಿಶಿರಾಂಶುವೆಂಬುದುಂ ಶಶಿಗೆಂದುಂ ಸಮನಿಸಿ ವಿಷಕಿರಣನುಮನಲಮರೀಚಿಯುಮೆಂದೆನಲ್ಕೆ ಮೋಹಾಪೋಹಂ (ಕಾವ್ಯಾ. ೩-೦೬೩). [ಸಂ.]

**ಮೋಹಾಲಸ್ಯ** (ನಾ). ಎಚ್ಚರ ತಪ್ಪುವುದರಿಂದುಂಟಾಗುವ ಜಡತೆ : ನಿದ್ರಾಲಸ್ಯ ಹೆಚ್ಚಾಗಿರುತ್ತದೆ. ಕೆಲವುವೇಳೆ ಮೋಹಾಲಸ್ಯವುಂಟಾಗುತ್ತದೆ (ಕಂಠೀರ. ೭೩). [ಸಂ.]

**ಮೋಹಿ** (ಗು). ೧. ತಬ್ಬಿಬ್ಬುಗೊಳಿಸುವ ; ದಿಗ್ಭ್ರಮೆ ಹಿಡಿಸುವ. ೨. ಮರುಳುಗೊಳಿಸುವ. ೩. ಮೋಹಕವಾದ; ಆಕರ್ಷಕವಾದ; ಸುಂದರವಾದ : 'ಮೋಹಿವೆಣ್' ಪರಾ. (ನಾ). ೪. ಅಂದ ; ಮನೋಹರತೆ. ೫. ಮೋಹಕ್ಕೊಳಗಾದವನು ; ಮೋಹಪರವಶನಾದವನು : ಮೋಹಿಯಲ್ಲದನ ನೋಡದಿರು ಮೋಹವ ಬಲ್ಲವನಲ್ಲವ ಬಲ್ಲನೆಂದಾ ಪಾದಿಯೊಳಗಾಡುತಿಪರು (ಭರತ. ೪೭-೨೯). [ಸಂ. ಮೋಹಿನ್]

**ಮೋಹಿಂ** 'ಮೊಹಿಮ್ಮು' ನೋ.

**ಮೋಹಿಚಕ** (ನಾ). ಒಂದು ಬಗೆಯ ಸಸ್ಯ; ಕಿಂಶುಕ : "ಮೋಹಿಚಕ [ಪಾಠಾಂ. ಹೀಚಕ, ಹಿತಚಕ]ಮಾ ತ್ರಿಪತ್ರಕಂ ಕಿಂಶುಕಾಖ್ಯಂ" (ಮಂಗರಾ. ೩೭-೨೦).

[ ? ]

**ಮೋಹಿತ** (ಗು). ೧. ತಬ್ಬಿಬ್ಬಾದ ; ಭ್ರಮೆಗೊಂಡ. ೨. ಮರುಳಾದ; ಆಕರ್ಷಣೆಗೊಂಡ. (ನಾ). ೩. ಮರುಳಾದವನು ; ಆಕರ್ಷಣೆಗೊಂಡವನು ; ಮೋಹಗೊಂಡವನು : ಆನು ಘಳಿಸಿದ ಒಮ್ಮನಕ್ಕೆ ಅಗಲದೆ ಮೋಹಿತನಾದ (ಬಸವ· ೯೦೪); ಅಂಗರಕ್ಷೆಯ ಮಾಡಿ ಮೋಹಿತನಲ್ಲ ಮೂಜಗಕೆ . . . ಪರತರವಸ್ತು ನೋಡೀತ (ಕುವ್ಯಾಅ. ೯-೭೦); ದಾರುವನದಲ್ಲಿ ಮೋಹಿನಿ ನಾರಾಯಣಿ ಸುಳಿಯಲೊಡಂ ಮೋಹಿತರಾದರ್ ಧೀರಯತಿರಾಜರ್ (ಹರಿಶ್ಚಂರ. ೩-೨೭). [ಸಂ.]

**ಮೋಹಿನಿ** (ನಾ). ೧. ಮೋಹಕವಾದ ರೂಪವುಳ್ಳವಳು ; ಚೆಲುವೆ : ಮೋಹಿನಿಯರ ಮೋಹಪಾಶ ಹೊಂಬಣ್ಣದ ರಾಹುಗಳೆಸೆ ವೈರಿಶರಿಗೆ ರೂಪಿಸಿ ಶೃಂಗಾರವೀರದೊಳಾಜಾನುಬಾಹುಗಳೆಸೆದುವಾ ನೃಪನ (ಧರಪ. ೬-೩೬); ತನ್ನ ಮನಸ್ಸನ್ನು ಮರುಳುಮಾಡಿರುವ ಮೋಹಿನಿಯು ಕೈ ಹಿಡಿಯುವ ಹಾಗಿಲ್ಲ ! (ಜೂಹನ್ನು. ೧೯೫); ನೀ ತಾಯಿಯೆನಲೊ ನೀ ಮಾಯಿಯೆನಲೊ ಮೋಹಿನಿಯು ಮೋಹನಾಂಗ ? (ಸೂರ್ಯಶಾ. ೩೭-೯). ೨. ಒಬ್ಬ ಅಪ್ಸರೆಯ ಹೆಸರು : ಧರೆಯು ನಾರಿಯರ ಚೆಲ್ವಿಕೆಯು ತೆಗೆದು ನೆಱೆ ಸರಸಿಜಭವ ನಿರ್ಮಿಸಿದ ತರಳಾಕ್ಷಿ ಮೋಹಿನಿ ಯಾ ಬೆಳೆವೆಣ್ಣಿನ ಚರಣದುಂಗುಟಕೆಣೆಯಹಳೆ (ಕಂಪಣ. ೧೧-೧೬). ೩. ಸಮುದ್ರಮಥನದ ನಂತರ, ಅಮೃತವನ್ನು ಹಂಚುವ ಕಾಲದಲ್ಲಿ ರಾಕ್ಷಸರನ್ನು ವಂಚಿಸಲು ವಿಷ್ಣುವು ಧರಿಸಿದ ಸ್ತ್ರೀರೂಪ : ಮೋಹಿನಿ . . . ೪ ಚಾಮುಂಡಿ ೫ ಯಿಂದ್ರಾಣೀ (ಎಕ. V (R), ತಿರುವ. ೨೭೭-೨; 19ನೆಯ ಶತ). ೪. ಸುಂದರಸ್ತ್ರೀಯ ರೂಪವನ್ನು ಧರಿಸುವ ಒಂದು ದುಷ್ಟಶಕ್ತಿ; ಹೆಣ್ಣುಪಿಶಾಚಿ : ಹೊನ್ನೆಮರದಲ್ಲಿ ಬೊಬ್ಬರ್ಯ . . . ತೆಂಕಿನ ಪಾವಟಿಗೆಯ ಎಡದ ನೆಲ್ಲಿಮರದಲ್ಲಿ ಮೋಹಿನಿದೆವ್ವ . . . ಇವುಗಳೆಲ್ಲಾ ಕೋಳದ ಸುತ್ತಲಿನ ಮರಗಳಲ್ಲಿವೆ (ಕನ್ನಸ. ೨೭). ೫. ಆಕರ್ಷಿಸುವವಳು; ವಶೀಕರಣ ಮಾಡುವವಳು : ಈಗಿನ ಹುಡುಗಿಯರೇನು, ಮಾಯಾವಿನಿಯರು, ಮೋಹಿನಿಯರು (ಸುಬ್ಬಣ್ಣ. ೧೨). ೬. ಒಂದು ಬಗೆಯ ಯಕ್ಷಿಣಿ, ಇಂದ್ರಜಾಲ : ಮಣ್ಣಿನ ಮನೆಯ ಕಟ್ಟಿ ಮಾಯಾಮೋಹಿನಿಯೆಂಬ ಮಹೇಂದ್ರಜಾಲದೊಳಗಾಗಿ (ಮಹಾದೇ. ಬಿ. ೦೩೩-೩೦೨). ೭. ಮೂರ್ಛೆಬರಿಸುವ ಒಂದು ವಿದ್ಯೆ : ಜೃಂಭಿನಿ ಸ್ತಂಭಿನಿ ಮೋಹಿನಿ ಸರ್ಷಪಿ ತಾಳೋದ್ಘಾಟಿನಿ ವಿದ್ಯಾಮಂತ್ರಚೂರ್ಣ ಯೋಗಘುಟಿಕಾಂಜನಮೆಂದಿವು ಮೊದಲಾಗೊಡೆಯ ತಸ್ಕರಶಾಸ್ತ್ರಂಗಳೊಳಾದಮಾನುಂ ಕುಶಲನಂತಪ್ಪ ಕಳ್ಳಂ (ವಡ್ಡಾರಾ. ೧೨೨-೦೬). ೮. ಒಂದು ಬಗೆಯ ಸಸ್ಯ : "ಮೋಹಿನೀ–ಮೂರುಸಿಲೆಯುಮ್ಮತ್ತ, ಎಲಚಿ, ಆಲದೆಲೆ" (೬ತಂ. ೦೬೦). [ಸಂ. ಮೋಹಿನೀ]

**ಮೋಹಿನಿಆಟ್ಟಂ** (ನಾ). (ಕೇರಳದಲ್ಲಿ ಪ್ರಚಾರದಲ್ಲಿರುವ) ಒಂದು ಬಗೆಯ ನಾಟ್ಯಪ್ರಭೇದ : ಕಥಕ್ಕಳಿಯಲ್ಲದೆ, ಕೇರಳದಲ್ಲಿ ಓಟ್ಟಂ ತುಳ್ಳಾಳ್, ಮೋಹಿನಿಆಟ್ಟಂ ಮುಂತಾದ ನಾಟ್ಯಪ್ರಭೇದಗಳು ಇವೆ (ಭಾರದ. ೩೬೭) ; ಕಥಕಳಿಯ ಜೊತೆಗೆ ಕೇರಳದಲ್ಲಿ ಮೋಹಿನಿಆಟ್ಟಂ ಎಂಬ ಕಲೆಯೂ ಪ್ರಚಾರದಲ್ಲಿದೆ (ಅಭಾನೃ. ೦೭) ; ಮೋಹಿನಿಆಟ್ಟಂ ಕೂಡಾ ಕೊಂಚಮಟ್ಟಿಗೆ ಶಾಸ್ತ್ರೀಯನೃತ್ಯವೆನಿಸಿದ್ದು ಪೂರ್ಣ ಜಾನಪದನೃತ್ಯವಲ್ಲ (ಭಾರನಾ. ೦೨೯). ' ಕಥಕ್ಕಳಿ ' ಪರಾ. [← ಮಲ. ಮೋಹಿನೀಯಾಟ್ಟಮ್]

**ಮೋಹಿನೀಗಜ** (ನಾ). ಶ್ರೀಶೈಲದಲ್ಲಿರುವ ಒಂದು ಕಲ್ಲಿನ ಆನೆ ; P " ಶ್ರೀಶೈಲದ ಬಿಲ್ವವನಕ್ಕೆ ಸೇರಿದ ಕಲ್ಲಾನೆ. ಅದರ ಮೇಲೆ ಸಾಧಕನು ಹತ್ತಿದರೆ ಅದು ಎತ್ತರಕ್ಕೆ ಎದ್ದು ನೆಲಕ್ಕೆ ಕುಗ್ಗಿ ಸಾಧಕನು ಬೀಳುವ ಹಾಗೆ ಮೈಕೊಡವಿ ಮೊರಳಿ ಹಾರಿ ಚಕ್ರದಂತೆ ಗಿರ್ರನೆ ತಿರುಗಿ ಘೀಳಿಟ್ಟು ಬೆದರಿಸುತ್ತದೆ. ಇದಕ್ಕೆಲ್ಲ ಸಾಧಕನು ಹೆದರದಿದ್ದರೆ ಆಗ ಅದು ಮೆಚ್ಚಿ ಇಷ್ಟಸಿದ್ಧಿಯನ್ನು ಕೊಡುತ್ತದೆ " (ಸಿದ್ಧರಾ. ಟಿಪ್ಪಣಿ. ೦೭೭) : ಮೋಹಿನೀಗಜವನದರುತ್ತಾ ಕುಮಾರಧಾರೆಯ ನಾನುತ . . . ನಡೆದು ಭಾವು ಸಿದ್ಧಕುಲಪತಿಯೆಂದು ಭೈರವಂ ಕೈ ಮುಗಿವನು (ಸಿದ್ಧರಾ. ೩-೮) ; ಮೋಹಿನೀಗಜವನಡರ್ದಿಳಿದು (ರೇವಣ. ೦೦೯-೨೨) ; ಅಲ್ಲಿಯುಜ್ಜ್ವಲವೆಸಿಪ ಕಲ್ಲಾನೆ ಮೋಹಿನೀಗಜವೆಂಬ ಪೆಸರಿಂದ ಮೆಸೆದಿರ್ಪುದು . . . ಇಷ್ಟಸಿದ್ಧಿಯನೀವುದಾ ಮೋಹಿನೀಗಜಂ ಬಿಲ್ವವನದೆ (ಶಾಕೋಶ. ೩-೩೭). [ಸಂ.]

**ಮೋಹಿಮು** ' ಮೊಹಿಮ್ಮು ' ನೋ.

**ಮೋಹಿವೆಣ್**, **ಮೋಹಿವೆಣ್ಣು** (ನಾ). ೧. ಮೋಹಕವಾದ ರೂಪವುಳ್ಳವಳು ; ಚೆಲುವೆ : ಮೋಹ ರಾಗ ದ್ವೇಷ ಪಾಶ . . . ಮೋಹಿವೆಣ್ಣಾಸೆಯಿಂತೀರೇಳ ಬಿಡಬೇಕು (ಧರ್ಮ. ೬೦-೮೦). ಮೋಹಿವೆಣ್ಣು : ೧. ಮುಡಿಯ ಕಟ್ಟುವರು ದಿವ್ಯಾಂಗಕಾಭರಣವ ತೊಡಿಸುವ ಮೋಹಿವೆಣ್ಣುಗಳು ಬಿಡದಾಗ ಪರಿಮಳವನು ತಿಗುರುವ ಹೆಂಗಳೊಡನೈತಂದರತಿಯಲಿ (ಕಂಪಣ. ೯-೭೯). ೨. ಮರುಳಾದವಳು ; ಮೋಹಕ್ಕೆ ಸಿಲುಕಿದವಳು : ಕಡುಕೂರ್ತ ನಲ್ಲರ . . . ಬಿಗಿಯಪ್ಪಿಕೊಳ್ಳದೆ ಬಿಡುವರೆ ಮೋಹಿವೆಣ್ಣುಗಳು (ಭಾರಾಸಾಂ. ೩೨-೩).

**ಮೋಹಿವೆಂಗಳು** (ಬಹುವ) : ನಿಟ್ಟಿಪ ಮೋಹಿವೆಂಗಳ ದಿಟ್ಟಿ ಕದಪಿಗೆ ತೊಟ್ಟನೆ ತಾಕದಂದದಲಿ ಇಟ್ಟ ಕಸ್ತೂರಿರೇಖೆಯೊಲೆಪನ್ನ ಬವರಿಯ ಸೃಷ್ಟೀಶನಾರೆನಗುಸಿರೆ (ಕಂಪಣ. ೨೫-೩೮). [ಮೋಹಿ + ಪೆಣ್]

**ಮೋಹಿವೆಣ್ಣು** ' ಮೋಹಿವೆಣ್ ' ನೋ.

**ಮೋಹಿಸು₁** (ಕ್ರಿ). ೧. ಮೋಹಪಡುವಂತೆ ಮಾಡು ; ಬಡಿಯುವಂತೆ ಮಾಡು ; ಅಪ್ಪಳಿಸುವಂತೆ ಮಾಡು : ಆತನ ನಿವಾಸದೊಳು ಬೆಟ್ಟವಂ ಕೈಯಿಕ್ಕಿ ಸೆಳೆದು ವಾರಾಸಿಗಡುಕುವ ಕರಿಗಳುಂಟವಂ ತಂದೀ ಕದಕ್ಕೆ ಮೋಹಿವೆವೆಂದರು (ಸೋಮಶ. ೪-೩೩). ೨. ಒಂದರೊಡನೊಂದು ಬಡಿದಾಡು ; ತಾಕಲಾಡು : ಅಲಗಲಗು ಮೋಹಿಸಿದಲ್ಲದೆ ಕಲಿತನವ ಕಾಣಬಾರದು (ಬಸವ. ೬೬೭). ೩. ಮೇಲೆಬೀಳು ; ಮೇಲೆ ಎರಗು : ಅಜಸಿ ಚಾಚಿದ ಶೂಲಿಗೆಯ ರಥಗಡಣೆಯಲಿ ಕರಿಘಟೆಗೆ ಜೋದರು ಕಡಿದು ನೂಕಿದರವಮ ತೇಜಿಯ ನಿಲಿಸಿ ಮೋಹಿಸಿದ (ಕುಮಾರವ್ಯಾ. ಶಂ. ೨೭೫-೨). ೪. ಅಡ್ಡಗಟ್ಟಿ ನಿಲ್ಲು ; ಪ್ರತಿಭಟಿಸು : ಆ ಹಿರಣ್ಯಕನಸಮುದ್ಯತ್ಕದಂಬದಲಿ ರೂಪಿಸಿದ ನರಕೇಸರಿಯು ರೌದ್ರಾಟೋಪದಂದದಲಿ ಮಸಗಿ ಮಾರ್ಜಾಲದಿದಿರಿನಲಿ ಮೋಹಿಸಿದನೈ (ತೊರವೆ. ೩-೬-೬). ೫. ತಿವಿ ; ಚುಚ್ಚು ; ಇರಿ : ಮಸೆದ ಸೂಲಗು ಸಹಸ್ರ ಮೋಹಿಸುವಂತೆ ರಸಘುಟಿಕೆಯೊಂದೆ ಮೊನೆಮೊನೆಗೆ ಬಂದಾನುವಂತೆ (ಕನ್ನಡ. ಕೆ. ೬೦೩-೦೩೪೫); ಬಂದು ಸಾಷ್ಟಾಂಗಪ್ರಣಾಮದಿಂ ವಂದಿಸುತ್ತಿರೆ . . . ತನ್ನ ಕರವಾಳ ಮುಂದೆ ಕೊರಳಿಗೆ ಮೋಹಿಸಲು (ಬಸವ. ೨೭-೩೦); ಓಸರಿಸಿ ಕರವನವನಿಯೊಳ್ಪರ್ದಿ ಮಿಂಡೆಯುವನಾಸುರದಿ ಜಡಿದು ಹೆಡತಲೆಗೆ ಮೋಹಿಸುತ್ತಿತ್ತಿಯಾ ಸುಭಟನಾದರ್ನ ಸುಕುಮಾರಂಗೆ ಬಿನ್ನೈಸುತಿರ್ದನೇಂ ಬಣ್ಣಸುವೆನು (ಭಾವತಂ. ೯-೨೨); ಪೇರುರಕೆ ಮೊನೆಗಣೆಗಳಂ ಮೋಹಿಸಿದನು (ಕೃಷ್ಣಭಾ. ೦೨-೪೯). ೬. ಚುಚ್ಚಿಕೊಳ್ಳು ; ತಿವಿದುಕೊಳ್ಳು : ಈ ಶರೀರತ್ಯಾಗವೇ ಕೃತದೋಷಹರವೆನುತುಗಿದು ಸುರಗಿಯನಾ ಸುಮಿತ್ರಾಸೂನು ಮಿಗೆ ಮೋಹಿಸಿದ ನುದರದಲಿ (ತೊರವೆ. ೩-೩-೨೩). ೭. ಇಡು ; ಇರಿಸು ; ಹೊಂದಿಸು : ಉರುತರ ರುದ್ರಾಕ್ಷಿಗೆ ಇನಿತು ಫಲಂ . . . ಕರ್ಣದೊಳಿರಿಸಲು ದಶಕೋಟಿ ಫಲಂ ಮೋಹಿಸೆ ಗ್ರೀವಕೆ ಶತಕೋಟಿಫಲಂ (ದೀಕ್ಷಾಬೋ. ೬೦-೨೨೭); ನಿಱಿಯುಡಿಗೆಯಲಿ ಮಲ್ಲಗಂಟಿನ ಸೆಱಗ ಮೋಹಿಸಿ ಬೆರಳ ದರ್ಭೆಯ ಹಱಿದು ಬಿಸುಟನು . . . ಕಲಿದ್ರೋಣ (ಕುಮಾರವ್ಯಾ. ೯-೦೩). ೮. (ಅಲಂ) ನಾಶಮಾಡು ; ಹಾಳುಮಾಡು : ಬಲು ಮಗಧಯುವನೇಶ್ವರರ ಬಲಜಲಧಿಯನು ಬಹಳಾಸ್ತ್ರವಡಬಾನಲನ ಮುಖದಲಿ ಮೋಹಿಸಿದನು (ಜೈಮಿ. ೩-೨-೩೨). [ಮೋಹು₁ + – ಇಸು₃]

**ಮೋಹಿಸು₂** (ಕ್ರಿ). ೧. ಮೈಮರೆ; ಎಚ್ಚರ ತಪ್ಪು : ಜೋಲ್ದುಂ ನೆಱಲ್ದುಂ ಸಮಾಕುಲಿತರ್ ಮೋಹಿಸಿ ಮುಚ್ಚೆವೋಗೆ (ಶಾಂತಿಪು. ೭-೯೭) ; ಆ ಮಾತಂ ಕೇಳ್ದನಭ್ರವಜ್ರಾಭಿಘಾತಮಾದಂತೆ ಸಭಾಜನವೆಲ್ಲಂ ಮೋಹಿಸೆ (ಅಜಿತ. ೦೦-೩೩) ; ಮೆಯ್ಯ್ ರ್ಣೋಂಪಿಸುವೊಡೆ ಬಾತೊಡೆ ಮಿಗೆ ಮೋಹಿಸುವೊಡೆ ರಾಸ್ನಾದಿತೋಯಮುಂ ಕುಡೆ ತೀರ್ಗುಂ (ಲೋಕೋಪ. ೯-೨೩೯). ೨. ಎಚ್ಚರ ತಪ್ಪುವಂತೆ ಮಾಡು ; ಪ್ರಜ್ಞೆ ತಪ್ಪಿಸು : ಮುಸುಕಿದರೆ ಮಂತ್ರಾಸ್ತ್ರದಲಿ

ಮೋಹಿಸಿದ (ಕುಮ್ಮಾಕ. ೨೦-೩೪). ೩. ಮಾಯೆಗೆ ಸಿಲುಕು ; ಭ್ರಾಂತನಾಗು : ಬಗೆಯದೆ ತಡೆಯದೆ ಸುಟಿಯದೆ ಮೋಹಿಸದೆ ಎಲ್ಲಾ ವಸ್ತುಗಳನೊಪ್ಪೊಡದಲಜಾವ ಕಾಣ್ಬಸಂತಜ್ಞಾನಮುಮಸಂತದರ್ಶನಮುಮ ನೊಡೆಯರಾದರ್ (ವರ್ಧಮಾ. ೦೩೪-೨೦): ಬೇಡಿಂತೀ ವಿಷಾದಂ ನಿರಸ್ತವಿದೇಕಂ ಜೊಲ್ದಿದೇಕೆ ಮೋಹಿಸಿದಪ್ಪೈ ನೀಂ (ಆದಿಪು. ೦೭-೩೯); ಮನೋಹರ ಯುವ್ವನಮುದು ಮುಪ್ಪಿಂಗುರು ಕಾರಣಮೆಂದು ಬಲ್ಲೊಡಂ ಮೋಹಿಸುವರ್ (ಪಾರ್ಶ್ವ. ೩-೪೨). ೪. ಭ್ರಮೆಗೊಳಿಸು; ಭ್ರಾಂತಿಯನ್ನುಂಟುಮಾಡು: ಮೋಹಿಸಿತು ಘುಳುಘುಳುನಿನಾದ ವರಾಹನಿಸ್ವನದಂತೆ ಮುನಿಯೆಂಬೂಹೆ ಕೊಳ್ಳದೆ ಕೊಂಡು ಹರಿದುದು ಚಿತ್ರವಘಪಘಕೆ (ತೊರಟಾ. ೨-೩-೧೦). ೫. ಪ್ರೀತಿಸು ; ಒಲುಮೆಯನ್ನು ತೋರು : ಮೋಹಿಸಿ ಮುದ್ದಿಸಿ ಮರುಳಾದೆನವ್ವ (ಮಹಾದೇ. ೭. ೯೩-೯೯); ನೀ ಮೋಹಿಸಿದೆ ನಿನ್ನಲ್ಲಿ ತಪ್ಪಿಲ್ಲ ಕೇಳಬಲೆ (ಕಂಸವ. ೯-೦೩೪); ಇನಿಯನ ಮೊಗವ ನೋಡದ ಮುನ್ನ ಮೋಹಿಸಿ ಮನಗರಗುವಳು (ಹರಿಶ. ೦-೩೩). ೬. ಇಷ್ಟಪಡು; ಬಯಸು: ವಿಷವ ಮೋಹಿಸುವಂತೆ ಉದುವುದೀತಂಗೆ (ಕೈವಲ್ಯ. ೩೦-೨೬). ೭. ಆಕರ್ಷಿಸು ; ಮೋಹಗೊಳಿಸು ; ಮರುಳುಮಾಡು : ಶುಚಿಯೇ ನಿರೀಕ್ಷಿಸಿದವನ್ನಿರ್ಗಪ್ಪಾಟಿಗಳ್ ಚೆಲ್ವನೇ ಹರನು ಮೋಹಿಸಲೆಂತುವಾಪ್ಪರ್ನ ಧಿಕಂ ಶ್ರೀವಿಷ್ಣುಭೂಪಾಳಕಂ (ಎಕ. V, ಹಾಸನ. ೩೩-೦೩ : 1170) : ಬಗೆ ಬಗೆ ಆಟಗಳಲ್ಲಿ ಕಲಿತೆಯ್ಯ ಜಗವ ಮೋಹಿಪನೆ (ಪುರಂದ. ೦-೯೬ ಪಲ್ಲವಿ); ಪುಷ್ಪಾಂಜಲಿಗೆವದರ್ ಮೋಹಿಸಿ ನಿಂದು . . . ನರ್ತನಮಂ ಬಿತ್ತರಿಪ ರಂಭಾದಿ ದಿವ್ಯನರ್ತಕಿಯರಿಂ (ಶಬಕಂ. ೧-೭೯ ವ). ೮. ಆಕರ್ಷಿತನಾಗು ; ಮರುಳಾಗು ; ಮನಸೋಲು : ಮುಂದೆ ಮೋಹಿಸಿ ನೆರೆದ ಭಕ್ತರ ಸಂದಣಿಗಳುಘೆ ವಿನಲು (ಕೃಶುಂಠ. ೨೩-೬೦) ; ಮಾತನಡಿಯುವ ಬಾಲ ನಿಮ್ಮನು ಕಂಡು ಸೋತು ಮೋಹಿಸಬಲ್ಲನೆ (ಪುರಂದ. ೩-೦೯೩-೨). ೯. ಕಂಗೊಳಿಸು : ರಂಜಿಸು ; ಶೋಭಿಸು : ಪೊರ್ಕುಳ ಗಂಟಿಯ ಮೋಹಿಸುವ ಮೊಗವಡವ . . . ಚಾರುತರಭೂಷಣಂ ಭೀಷಣಮಾಗೆ (೧೦೪. ೬-೩೩ ವ); ಕಾಮಂ ಕಿಜುಸೂಜಿಗೆ ಸೇರಿಸಿದ ಪೊಸ ಮುತ್ತುಗಳೋ ಎಂಬಂದದೊಳಾ ಅಸಿಯಳ ಮೆಯ್ಯೂಗದಲ ಮೊದಲೊಳ್ಮೋಹಿಸಿದುವು ಸಣ್ಣ ಬೆವರ ಬಿಂದುಗಳರಮ್ಯಗನಂ ಕಾಣಾಂತ್ರವೆ (ಜಗನ್ನಾ. ೪-೦೬); ಹೊಂಬಣ್ಣ ಮೈಗೆ ಮೋಹಿಸುವ ಕಾಗಿನ ದಟ್ಟಿ . . . ಮುಂಜಾಯ ಕರ್ಪೂರ ವೀಳೆಯದಿಂದ ಕಣ್ಗೆಂಬಾದನಾ ಗಾಡಿಕಾಂ (ಶರತ. ೦-೩೩).

[ಮೋಹ$_1$ + — ಇಸು$_3$]

**ಮೋಹೀವ್** ' ಮೊಹಿಮ್ಮ ' ನೋ.

**ಮೋಹು$_1$** (ಕ್ರಿ). ೧. ಗುರಿಯಿಡು ; ಈಡನ್ನು ಇಡು : ಖಡ್ಗವ ಸೆಳೆದು ಜಡಿದು ನೋಡಿ ಹೆಡತಲೆಗೆ ಮೋಹಿ ಕಯ್ಯೆತ್ತಿ ಕಂಧರ ಹಜೆಯಲಸುವಾದೆನು (ಹರಿಶ್ಚಂ. ೦೩-೬೨); ಹೆಡತಲೆಗೆ ಮೋಹಿದ ಕೃತಾಂತನ ಖಡುಗವನು ಕಂಗಾಣ ದೇತಕೆ ... ಬಜಿದ ಕೆಡುವರಜ್ಞಾನದಲಿ (ಬಾಗ. ೨-೦-೬). ೨. (ತಲೆಯಿಂದ ತಲೆಯನ್ನು) ತಾಟಿಸು ; ಡಿಕ್ಕಿ ಹೊಡೆ : ಎನ್ನ ತಲೆಯಲಿ ತನ್ನ ತಲೆ ಮೋಹಿ ನಸುನಗುವನು (ಬಸವ. ೯೬-೩೦). ೩. ಮುಷ್ಟಿಯಿಂದ ಹೊಡೆ; ಗುದ್ದು : ಮೊಗಕೆ ಮೋಹುತಲೆದೆಯಲೂಜುವ ವಿಗಡಬಲದಲಿ ಮಸಗಿ ಸೂಳಗರಿರದೆ ಕಾದಿದರು (ತಿಮ್ಮ. ೬-೯೮). ೪. ಎರಗು ; ಮೇಲೆ ಬೀಳು : ಕನಲಿದಡೆ ಕಲ್ಪಾಂತರುದ್ರನ ಮೊನೆಗೆ ಮೋಹುವ ಮೋಹಿ ದೇತಕನನು ನಿತಾಂತಭುಜಪ್ರತಾಪದಲಸುವನಸಬಡಿವ ಘನಪರಾಕ್ರಮ ಚಕ್ರಗಳ . . . ತೋಜಿದರು (ತೊರಟಾ. ೯-೭-೦೭); ಒಂದು ಕಡೆಯೊಳಿಭತತಿ ಮೋಹಿ ಒಂದು ದಿಕ್ಕಿನೊಳತಿರಥರೊತ್ತಿ ಸಾಹಸದಿಂದವನಿದಿರಾಗಿ ಕವಿದರು (ತ್ರಿಶುಂ. ೦೮-೩೪); ಸಂದಣಿಸಿ ನಾಯಕರ ದಳ ನಡೆಯೆ . . . ದಂತಿಗಳ ವೃಂದಗಳು ಮೋಹಿದುವು (ತುರಂಗ. ೩೨-೨). ೫. ಚುಚ್ಚು : ತಿವಿ : ರಜನಿಯೆಂಬ ಮದೋತ್ಕಟದ ದಿಗ್ಗಜದ ಕುಂಭಸ್ಥಳಕೆ ಮೋಹಿದ ವಿಜಿತ ಬಲನಂಕುಶದ ತಲೆಮಾಣಿಕವಿದೆಂಬಂತೆ ಗಜಗಲಿಸಿತಿನಬಿಂಬ (ತೊರಟಾ. ೦-೦೪-೨). ೬. ಚುಚ್ಚಿಕೊಳ್ಳು ; ನಾಟಿಕೊಳ್ಳು : ಬೆನ್ನಲಿ ಮೋಹಿದಲಗಿನ ಪೇರುರದ ಕಂಪನದ ಕಿಂಗಜಿಯ . . . ಹಾಪೆಯವೊಲೆಸೆದಿರ್ದನಾಹವ ರಂಗಮಧ್ಯದಲಿ (ತೊರಟಾ. ೪-೪-೩೨). ೭. (ಬಾಗಿಲು ಮುಂತಾದುವನ್ನು) ರಭಸದಿಂದ ಮುಚ್ಚು : ಬಾಗಿಲ ಕದವನುಜಿ ಮೋಹಿ ಬೀಯಗವಿಕ್ಕಿ ಅನಿಬರು ಗಹಗಹಿಸಿ ನಗುತ (ಬಸವ. ೪೩-೪೬). ೮. ಮೃದುವಾಗಿ ಒತ್ತು.— ಅದುಮು : ವೈದ್ಯನು ತನ್ನ ಎಡದ ಕೈಯಲ್ಲಿ ರೋಗಿಯ ಬಲದ ಕೈಯ ಹೆಬ್ಬೆಟ್ಟಿನ ಮೂಲದಲ್ಲಿ ಮೂರು ಬೆರಳನ್ನೂ ಅಂಕುಶಾಕಾರವಾಗಿ ಒತ್ತಿ ಹಿಡಿದು ಆ ಮೂರು ಬೆರಳ ತುದಿಗಳಿಂದ ಮೋಹಿ ನೋಡಲಾಗಿ ಸಣ್ಣನಾಗಿ ಆಡುವ ನಾಡಿಯು . . . ಮನಸ್ಸಿಗೆ ತಿಳಿವುದು (ಸಕಲವೈ. ೦೧). ೯. ಜೋಡಿಸು ; ಹೂಡು : ಶಿರದೊಳಾಂತರು ಮೊಚ್ಚೆಯವನು . . . ಸುರಗಿಗಳನೀಡಾಡಿ ತಿರುಹಿನರೊರೆಗಳನು ಬತ್ತಳಿಕೆಯನು ಬಿಲುದಿರುವಿನಲಿ ಮೋಹಿದರು (ಕುಮಾರವ್ಯಾ. ದ್ರೋ. ೮-೯೬). ೧೦. ವ್ಯೂಹವನ್ನು ರಚಿಸು : ವ್ಯೂಹರಚನೆ ಮಾಡು : ಗರುಡನಾಕಾರದಲಿ ಬಲವನು ಸರಿಸ ಮಿಗೆ ಮೋಹಿದನು (ಕುಮಾರವ್ಯಾ. ದ್ರೋ. ೨-೨೦). ೧೧. ಇಡು ; ಇರಿಸು : ಈ ಹರಣವಿನ್ನೇಕೆನುತ ಕಾಳಾಹಿಯಾ ಬಾಯೊಳಗೆ ಕೈಯನು ಮೋಹಿ ವಿಷಮುಬ್ಬೇಗದಿನ್ನುಳಿದಳು ತನ್ನ ಕಾರೊಡಲ (ಸಾಳ್ವಭಾ. ೩-೩೬). ೧೨. ಬಳಿ ; ಲೇಪಿಸು : ಬಾಲಕರಲೇ ಖಡ್ಗಧಾರೆಯ ಮೇಲೆ ಮೋಹಿದ ಮಧುವ ಸವಿಯಲಿ ನಾಲಗೆಯಲಿವರೊಲ್ಲರೆಂದನು ನಗುತ ಕಲಿದ್ರೋಣ (ಕುಮಾರವ್ಯಾ. ದ್ರೋ. ೦೮-೩೨). ೧೩. ಒಡ್ಡು ; ಚಾಚು ; ನೀಡು : ಬೀದಿಗಳೊಳಗೆ ಬರಬರೆ ಮುಂದೆ ಮೋಹಿದ ತಳಿಗೆ ದಂಬುಲ ವೀರಸೇಸೆಯ . . . ಮನ್ನಿಸಿಕೊಳುತ ಪಾಳೆಯದಿಂದ ಹೊಜವಂಟ (ಕುಮಾರವ್ಯಾ. ಕ. ೦೯-೦೪). ೧೪. (ಗೌರವಸೂಚಕವಾಗಿ) ಬೀಸು; ಗಾಳಿಹಾಕು : ಸೀಗುರಿ ಮೊಗವ ಮೋಹಿಪವು . . . ಚೌರಿಗಳ ಡೊಂಕಣಿ ತುಜುಗಿದವು ಪತಾಳಿಗಳ ಮಸ್ತಕದವರು ನೆಲನುಗ್ಗಡಿಸಲೈತಂದ (ಕುಮಾರವ್ಯಾ. ದ್ರೋ. ೮-೩೩). ೧೫. ಆವರಿಸು ; ವ್ಯಾಪಿಸು : ಚಡ್ಡಣೆಯ ಚಪಳಕ್ರೋಧಶಿಖಿ ಮೋಹಿದುದು ಮೋಜಿಯಲಿ (ಕುಮಾರವ್ಯಾ. ಕ. ೨೦-೯). 'ಮೋದು$_1$' ಪರಾ.

**ಮೋಹು$_2$** (ಕ್ರಿ). ೧. ಸಿಲುಕು ; ಒಳಗಾಗು : ಹಾಹ ಮಾನಿನಿಯೆನುತ ಭೀತಿಗೆ ಮೋಹಿ ಮೌಳಿಯನಣೆದು ಗೇಹದ ದೇಹಳಿಯಲಪ್ಪಳಿಸಿ ಬಿದ್ದನು ರಾಮ ಮೂರ್ಛೆಯಲಿ (ತೊರಟಾ. ೩-೦೦-೦೮). ೨. ಒಲಿ ; ಅನುಗ್ರಹಿಸು: ಬೇಹ ವರವನು ಬೇಡಿಕೊಳ್ಳೆನಲೆಜಗಿ ಕೈಮುಗಿದು ದೇಹಿಯೆಂದೆನು ನಾಗ ಪಾಶವ ಮೋಹಿ ಕೊಡು ಕೋದಂಡ ಕವಚವ ದ್ರೋಹಿಕಪಿಗಳ ಪಡೆಯ ಗೆಲಲಿನ್ನುಳಿದವರ ಬೇಡ (ತೊರಟಾ. ೦೯-೩೮). [< ಮೋಹ$_1$ ?]

**ಮೋಹೋಪಮಿತ** (ನಾ). [ಕಾವ್ಯಮೀ] ಉಪಮಾಲಂಕಾರದ ಒಂದು ಪ್ರಭೇದ ; P ಎರಡು ವಸ್ತುಗಳಲ್ಲಿರುವ ಹೋಲಿಕೆಯು ಒಂದು ಮತ್ತೊಂದೆಯೆ ಎಂಬ ಭ್ರಮೆಯನ್ನು ಉಂಟುಮಾಡುತ್ತದೆ ಎಂದು ವರ್ಣಿಸುವುದು : ಕಮಳವಿಮೋಹದಿನೀ ನಿನ್ನ ಮೊಗಕ್ಕೆಜಗುವುದು ತ್ರೊಟಿವುದಾ ಸರಸಿಜಮಂ ಭ್ರಮರಂ ವದನಮಿದಲ್ತೆಂದು ಮೋಹದಿಂದೆಂಬು ದಿದುವೆ ಮೋಹೋಪಮಿತಂ (ಕವಿರಾ. ೩-೬೯). [ಸಂ.]

**ಮೋಳ$_1$** ' ಮಾಳ$_1$ ' ನೋ.

**ಮೋಳ$_2$** (ನಾ). (?) : ಅರಮನೆಯರ [ಮೊತ್ತವನೂ] ತಪ್ಪದೆ ತೆಱುವೆಉ ಅರಮನೆಇಂದ ಬಾಣಧಾನ್ಯ ಯೆತ್ತು ತುಪ್ಪ ಸಬರ ಮಾಟ್ಟದಳ ಮೋಳ ಮುಂತಾದ ಪೆಚ್ಚ ವಿರಾಡವನು ಕುಳ ಸರದಿಯಲಿ ತೆಱುವೆಊ (ಸೌಇಇ. IX-ii, ೪೩೩-೩೦ : 1408). [ ? ]

**ಮೋಳಬೆಕ್ಕು** ' ಮಾಳಬೆಕ್ಕು ' ನೋ.

**ಮೋಳಿಗೆ** (ನಾ). ೧. ಸೌದೆಯ ಕಟ್ಟು : ಕಟ್ಟಿಗೆಯ ಹೊರೆ : ಅಷ್ಟಮದವೆಂಬ ಬಳ್ಳಿಯ ಸೀಳಿ ಏಳು ಕಟ್ಟಿನ ಮೋಳಿಗೆಯನೆ ಹೊತ್ತು ನಡೆದನಯ್ಯಾ (ಶಪ್ಪವ. ೪. ೧೧೯-೨೬೬) : ತಾಳೆಕಾಯ ಮೋಳಿಗೆಯೊಂದಂದದ ಮುರುಡ ನಪ್ಪವಕ್ರಂ (ಯಶೋಚ. ೨-೪೦) ; ಮಾರಯ್ಯ ಮನೆಗೆ ಬಂದು ಮೋಳಿಗೆಯನ್ನು ಬಾಗಿಲ ಮುಂದಿಳುಹಿದ (ಮೋಳಿಗೆ. ೬೦ ಶ್ರಿಸ್ತಪ). ೨. ಕಟ್ಟು ; ಹೊರೆ : ಪೂಗೊಂಚಲಂ ಮುಱಿದು ಮೋಳಿಗೆಗಳಂ ಬಿಗಿದು ತುಱುಗಿ ಕೇದಗೆಪೂವಸವಟಿ ನಡುವಂ ಬಿಗಿದು . . . ಬಂದರತಿವೇಗದಿಂ (ಲೀಲಾವ. ೧೦-೧೧) ; ಹಸಿಯ ಮುತ್ತುಗಳ ಮೂಡೆ ಮೋಳಿಗೆಯ ದಂತಂ ಕಯ್ಯ ಮೊಲ . . . ಹೆಬ್ಬುಲಿಯ ಬಂಡಿಗಳನೇಱಿದ ಕೋಣವೆರಸಿ ತಿರುಗಿದ ಬೇಡರಂ ಕಂಡು ಬೆಱಗಾದನು (ಸೋಮಶ. ೩-೧೮).

**ಮೋಳಿಗೆಯ ಕಾಯಕ** = ಕಟ್ಟಿಗೆಯ ಹೊರೆಗಳನ್ನು ಮಾರುವ ವೃತ್ತಿ ; ಸೌದೆಯ ಹೊರೆಯನ್ನು ಮಾರುವ ಕಾಯಕ : ಸತಿಪತಿಗಳೀರ್ವರು ಕಲ್ಯಾಣಕ್ಕೆ ಬಂದು ಮೋಳಿಗೆಯ ಕಾಯಕವಂ ಮಾಡಿಕೊಂಡು ಜಂಗಮಾರ್ಚನೆಯ ಮಾಡುತ್ತಿರೆ (ಶೂನ್ಯಸಂ. ೨೩೭-೧೨).

[< ಸಂ. ಮೂಲಿಕಾ./ಮರಾ. ಮೋಳೀ = ಕಟ್ಟಿಗೆಯ ಹೊರೆ ; ಮೋಳವಿಕ್ಯಾ, ಮೋಳಕ್ಯಾ = ಕಟ್ಟಿಗೆ ಮಾರುವವನು]

**ಮೋಳಿಡು** (ಕ್ರಿ). "ಉಪ್ಪಕ್ಕೆ ಒಂದೇ ಸಮನೆ ಕೂಗು" (ಮುಂಕುಳ. ೪೦೮) : ಕತ್ತಲೆಯೊಳೇನನೋ ಕಂಡು ಬೆದರಿದ ನಾಯಿ . . . ಕತ್ತೆತ್ತಿ ಮೋಳಿಡುತ ಬೊಗಳಿ ಹಾರಾಡುವುದು (ಮುಂಕುಳ. ೪೮೪). 'ಊಳಿಡು' ಪರಾ. [ ? + ಇಡು$_{1}$]

**ಮೋಳೆ$_{1}$** (ನಾ). ೧. ಬತ್ತದ ಗದ್ದೆಯ ಬದುವಿನಲ್ಲಿ ಅಥವಾ ಕೆರೆಯ ಒಡ್ಡುಗಳಲ್ಲಿ (ಏಡಿ ಮುಂತಾದುವುಗಳು) ಮಾಡುವ ತೂತು,–ರಂಧ್ರ,–ಸೀಳು ; "ಬತ್ತದ ಗದ್ದೆಯಲ್ಲಿಯ ನೀರಿನ ಒಡಕು" (ಜಾನಕೋ. ೩೮) : ಮೋಳೆಯಿಂ ಕೆರೆ ಕೆಡುಗು ಆಳು ಇಲ್ಲದನ ಹೊಲ ಕೆಡುಗು (ಸರ್ವಜ್ಞ. ೧೪೭೩) ; ಕೆರೆಯು ತುಂಬುತ್ತದೆ ನೀರು ನಿಲ್ಲುವುದಿಲ್ಲ. ಮೋಳೆಯು ಗೊತ್ತಾಗುವುದಿಲ್ಲ (ಹುಟ್ಟಿಹ. ೧೮೮). ೨. ಹಳ್ಳ : ಎರನುಂ ಮುತ್ತುಮುಮೊಂದಿದಲ್ಲಿ ಪಡುವಲ್ ಮೂಗಯ್ಯಿರಲ್ ತೋಡಲೊಪ್ಪುರುಷಂ ಪೋಪುದು ಮೋಳೆಯುಕ್ಕುಂ (ಅಭಿಮ. ೧೧-೭). [ದೇ.॥ ತಮಿ. ಮೋಟ್ಟೈ]

**ಮೋಳೆ$_{2}$** 'ಮಾಳ$_{2}$' ನೋ.

**ಮೋಳೆಯೋಗು** (ಕ್ರಿ). ತೂತಾಗು ; ರಂಧ್ರವಾಗು : ಮೋಳೆಯೋಗುತ್ತಿರ್ದೊಡೇರಿ ಬಿರಿದಿರ್ದೊಡನುಕೂಲಬದ್ಧೋಪಲಂಗಳ್ ಸಡಿಲ್ದಿರ್ದೊಡೆ. . . ಅಂಭೋವಾಟಮಾ ಪ್ರಸರಮುಮುದಕಸೂತ್ರಕ್ಕೆ ಹರಿಯಾದೊಡೆ (ಶಪ್ಪರಾ. ೬-೪೦). [ಮೋಳೆ$_{1}$ + ಪೋಗು$_{1}$ (< ಪೋ$_{1}$)]

**ಮೋಱೆ**, ಮೋರೆ (ನಾ). ೧. ಮುಖ ; ಆನನ : "ವದನಂ ಮುಖಂ . . . ಆಸ್ಯಂ ಮೋಱೆ" (ಮಂಗರಾ. ೯೩-೮); ಕೊರಲಂ ಕುಸಿಯುತ್ತುಮುತ್ತರಿಸಿದ ಕುದುರೆಯಂತೆ ಮೋಱೆಯಂ ನೆಗಪುತ್ತುಂ (ರವರ್ಣಾಶು. ೭-೦೩೬) ; ಹಸ್ತಿನಪುರಿಗೆ ಧಾಳಿಯನಿಡುವೆನವರರ ಮೋಱೆಗಳ ತಿವಿದು (ಕುಮಾವ್ಯಾ. ೦-೦೭). ಮೋರೆ : ೧. ಮಹಿಳೆಯ ಸುತರೆಂದು ನಂಬುವನಾ ಮೋರೆಯನುಗುಳೋನ (ಶದಾವ. ೦೪-೬೦೪); ನರಿಯ ಮೋರೆಯ ನೋಡಿ ಪರಿತೋಷದಲಿ ನಡೆಯುತಿರೆ (ಸುದಾವು. ೨-೦೭) ; ತೆಂಗಿನಕಾಯ ತಿಳಿನೀರ ತಕೊಂಡು ಬಂಗಾರವೋರೆ ತೊಳೆದೇನು (ಜಾಪಗೀ. ೨೦೪). ೨. ಸಮ್ಮುಖ; ಮುಂಭಾಗ ; ಇದಿರು : ಕೋತಿಯ ಮೋರೆಯಲಿ ನಿಲಲಂಜಿ ಮೋಸದಿ ಕೊಂದ ಭಟನೆಂದ (ಕೋಗಯು. ೨೨-೩೬).

**ಮೋರೆಗೆ ಮಂಗಳಾರತಿಯಾಗು** = ಮುಖಕ್ಕೆ ಮಂಗಳಾರತಿಯಾಗು; ಅವಮಾನವಾಗು; ಮುಖಭಂಗವಾಗು : ಹೀಗೆ ಮೋರೆಗೆ ಮಂಗಳಾರತಿಯಾಗಿ ಹಿಂದಿರಳಿದ ತನ್ನ ಪರಿವಾರದವನ್ನು ಕಂಡು (ಕೆಂಪುಹು. ೨೨೩).

**ಮೋರೆ ತಪ್ಪಿಸು** = ಮುಖ ತಪ್ಪಿಸು; ಮರೆಯಾಗು : ಅವರ ಮೋರೆ ತಪ್ಪಿಸಬೇಕೆಂದು ಮೌನವ್ರತವು ಚಡಪಡಿಸತೊಡಗಿತು (ಕವಕ. ೦೦೨). **ಮೋರೆ ಮಾರುದ್ದವಾಗು** = (ಕೋಪ, ಬೇಸರ ಇತ್ಯಾದಿಗಳನ್ನು ಸೂಚಿಸಲು) ನೀಳಮುಖವಾಗು : 'ಅವನ ಮೋರೆ ಕೋಡಾಗಿದೆ ; ಅವನ ಮೋರೆ ಮಾರುದ್ದವಾಗಿದೆ' ಎಂಬ ಮಾತು ನಮ್ಮ ತ್ರಣ ಕನ್ನಡದಲ್ಲಿ ರೂಢವಾಗಿದೆ (ನಾಡೋಜ. ೪೭). **ಮೋಱೆಯಂ ಮುರಿ, ಮೋರೆಮುರಿ, ಮೋಱೆಯ ಮುರಿ** = ೧. ಮುಖವನ್ನು ತಿರುಗಿಸು,–ಹೊರಳಿಸು : ಒತ್ತರಿಸುತಂ ಮೋಱೆಯಂ ಮುರಿವುತ್ತ ನಕ್ಕುತ. . . ಚವುಡರಾಯನ ಹತ್ತಿರಕೆ ಬಂದೀಕ್ಷಿಸುತ (ಬಸವು. ೩೨-೨೮). ೨. (ಬೇಸರ, ತಿರಸ್ಕಾರ ಇತ್ಯಾದಿಗಳನ್ನು ಸೂಚಿಸುವಂತೆ) ಮುಖವನ್ನು ಗಂಟುಹಾಕಿಕೊಳ್ಳು; ಮುಖವನ್ನು ಸಿಂಡರಿಸು : ಕಕ್ಕ ಮೋರೆಮುರಿದು ಉತ್ತರವಿತ್ತಳು (ಶ್ರೀಮಾಕ್ರ. ೨೨). ೩. ಪರಾಙ್ಮುಖವಾಗು; ವಿಮುಖವಾಗು : ಗುರು ಪಿತೃಮಾವರಿಂದ ಮೋಱೆಯ ಮುರಿದ ವಿಜಯವಧೂಕಟಾಕ್ಷವ ತಿರುಹಿ ಹಾಯ್ಕುವ ಗಂಡನಾವನು ನೀವು ತಪ್ಪಿಡದೆ (ಕುಮಾವ್ಯಾ. ೪. ೭-೩೭).

[ದೇ.॥ ತಮಿ. ಮೋಱೈ, ಮೋರೈ; ಮಲ. ಮೋರ್; ತುಳು. ಮೋರೆ, ಮೋನೆ; ತೆಲು. ಮೋರ]

**ಮೌಂಜ** (ಗು). ಮುಂಜಹುಲ್ಲಿನಿಂದ ಮಾಡಿದ ; ನೊದೆಹುಲ್ಲಿನಿಂದ ತಯಾರಿಸಿದ. [ಸಂ.]

**ಮೌಂಜಿ** (ನಾ). ಮುಂಜಹುಲ್ಲಿನಿಂದ ಮಾಡಿದ ದಾರ,–ಹುರಿ ; P ಬ್ರಹ್ಮಚಾರಿಯು ಧರಿಸುವ ಮುಂಜಹುಲ್ಲಿನ ದಾರದ ಉಡಿದಾರ, –ಕಟಿಸೂತ್ರ : ಜನರೂಪಮಂ ಬಿಸುಟ್ಟು ಮೌಂಜಿವಲ್ಕಲಕೌಪೀನದಂಡಧರನಾಗಿ ಪರಿವ್ರಾಜಕವೇಷಮಂ ಕೆಯ್ಕೊಂಡು (ತ್ರಿಪುರಾ. ೬-೧೦ ವ) ; ಪೋತಿನ ಗಂಟಲಂ ಬಿಗಿವಂತಿರ್ದ ಮೌಂಜಿಯಂ ಪಱಿದು ಬಿಸುಟು (ಬಸರ. ೨-೪೩) ; ಹಣೆಗೆ ಗೋಪೀಚಂದನವನ್ನಿಟ್ಟು ನಡುವಿಗೆ ಮೌಂಜಿಯನ್ನು ಕಟ್ಟಿ . . . ಶ್ರೀನಿವಾಸ ಶ್ರೋತ್ರಿ ಎಂಬ ತನ್ನ ಅಭಿಧಾನದೊಡನೆ ಪ್ರವರವನ್ನು ಹೇಳಿದ (ವಂಕಪ್ಪ. ೩೨೦). [ಸಂ. ಮೌಂಜೀ]

**ಮೌಂಜೀಧಾರಣ** (ನಾ). ಮುಂಜದ ಹುರಿಯ ಕಟಿಸೂತ್ರವನ್ನು ಕಟ್ಟುವ ಸಂಸ್ಕಾರ ,– ವಿಧಿ : ಮಹಿಳೆಯರಿಗೆ ಮೌಂಜೀಧಾರಣ ಮತ್ತು ಉಪನಯನಸಂಸ್ಕಾರಗಳು ನಡೆಯುತ್ತಿದ್ದುವು (ಕಾರೆವ. ೩೯೦). [ಸಂ.]

**ಮೌಂಜೀಬಂಧ** (ನಾ). = ಮೌಂಜೀಧಾರಣ : ವಟುವಿಗೆ ಮೌಂಜೀಬಂಧ, ಯಜ್ಞೋಪವೀತಧಾರಣ, ಬ್ರಹ್ಮೋಪದೇಶಗಳು ನಡೆದವು (ಶಾಂಕರಾ. ೩೬). [ಸಂ.]

**ಮೌಂಜೀಬಂಧನ** (ನಾ). = ಮೌಂಜೀಧಾರಣ : ಯಥಾವಿಧಿಯಾಗಿ ಅತಿ ವಿಜೃಂಭಣೆಯಿಂದ ಮೌಂಜೀಬಂಧನವನ್ನು ಮಾಡಿದನು (ಕೃವಸು. ೨೩೮); ದ್ವಿಜರ ಮುಖ್ಯಸಂಸ್ಕಾರವಾದ ಮೌಂಜೀಬಂಧನವೂ ಅವರಲ್ಲಿ ಶಾಸ್ತ್ರೋಕ್ತ ನಡೆದ ಹಾಗಾಯಿತು (ಮೂರವ. II, ೨೭). [ಸಂ.]

**ಮೌಕೂಫ್** 'ಮೋಕೂಫ್' ನೋ.

**ಮೌಕ್ತಿಕ** (ನಾ). ನವರತ್ನಗಳಲ್ಲಿ ಒಂದು ; ಮುಕ್ತಾಫಲ; ಮುತ್ತು : "ಮುಕ್ತಾ, ಮೌಕ್ತಿಕಂ, ಶೌಕ್ತಿಕೇಯಂ _ ಈ ೩ ಮುತ್ತು" (ಹಲಾಯು. ೧೧೯_೪೦) : ಜಗಮಿದು ಮೌಕ್ತಿಕದಿಂದಂ ತೆಗೆದುದೊ ದಂತದೊಳೆ ಸಮೆದುದೊ ಪಾಲ್ಗಡಲಿಂದೊಗೆದುದೊ ಪೇಟ್ಟೆಂಬಿನೆಗಂ ಸೊಗಯಿಸಿದುದು ಸಾಂದ್ರಚಂದ್ರಿಕಾವಿಸ್ತಾರಂ (ಕಾದಂಬಾ. ೦೪೭) ; ರತ್ನ ಮೌಕ್ತಿಕದಚ್ಚು ಕೂಡಲಸಂಗಮದೇವಾ ನಿಮ್ಮ ಶರಣರು (ಬಸವ. ೪೦೦) ; ಹಾರ ಹಱಿದುದು ಕರ್ಣಪೂರದ ಚಾರುಮೌಕ್ತಿಕನಿಕರ ಸಿಡಿದವು (ಕುಮಾವ್ಯಾ. ಗ. ೬-೩೨).

[ಸಂ.]

**ಮೌಕ್ತಿಕಕ್ಷಾರ** (ನಾ). ಮುತ್ತಿನ ಬೂದಿ : ಮೌಕ್ತಿಕದ ಭಸ್ಮ (?) : ೨೦೦ ಭಾಗ ಸಿಂದೂರ ೧೦೦ ಭಾಗ ಮೌಕ್ತಿಕಕ್ಷಾರ (ಪುಂಬಯು. ೪-೩೯). [ಸಂ.]

**ಮೌಕ್ತಿಕಶಿಲಾಲಿಂಗ** (ನಾ). (ಮುತ್ತಿನ ಬಣ್ಣದ) ಚಂದ್ರಕಾಂತಶಿಲೆಯಿಂದ ನಿರ್ಮಿಸಿದ ಲಿಂಗ : ನಿರ್ಮಲದಿವ್ಯಮೌಕ್ತಿಕಶಿಲಾಲಿಂಗಂ ಚತುರ್ವಕ್ತ್ರಸುಂದರಮುಕ್ತಿರ್ಮದು ರತ್ನಪೀಠಘಟಿತಂ ದೇದೀಪ್ಯಮಾನಪ್ರದಂ (ಪ್ರಾರಂಭ. ೭೩೭). [ಸಂ.]

**ಮೌಖರ್ಯ** (ನಾ). ೧. ಬಹಳ ಮಾತನ್ನಾಡುವಿಕೆ ; ವಾಚಾಳತ್ವ. ೨. [ಜೈನ] ಐದು ಬಗೆಯ ಅನರ್ಥದಂಡವಿರತಿವ್ರತಾತಿಚಾರಗಳಲ್ಲಿ ಒಂದು : ಪುದಿದ ಸಮೀಕ್ಷಾಧಿಕರಣಮುದಯಿಪ ಕಂದರ್ಪಮಂತೆ ಕೌತ್ಕುಚ್ಯಂ ಪೆರ್ಚಿದ ಮೌಖರ್ಯಮನರ್ಥಕ್ಯದೊಳ್ ವ್ಯತಿಕ್ರಮಮತಿಪ್ರಸಾ[ಧ]ನ ಸಹಿತಂ (ಸುಕುಮಾ. ೭-೨೦) ; ಮೌಖರ್ಯ — ಧಾರ್ಷ್ಟ್ಯದಿಂ ಬಹುವಕ್ರಪ್ರಲಾಪವುಂ ಮಾಟ್ಟ ಮೌಖರ್ಯಮುಂ (ಕತ್ರ್ಯಕ್ರ. ೨೬೩). [ಸಂ.]

**ಮೌಖಿಕ** (ಗು). ಮಾತಿನ ; ವಾಚಿಕವಾದ : 'ಮೌಖಿಕಪರೀಕ್ಷೆ' ಪರಾ. [ಸಂ.]

**ಮೌಖಿಕಪರೀಕ್ಷೆ** (ನಾ). ಮಾತಿನ ಮೂಲಕ ನಡೆಸುವ ಪರೀಕ್ಷೆ ; ವಾಚಿಕಪರೀಕ್ಷೆ : ತೋಂಡಿಪರೀಕ್ಷೆ : ಬರೆಯತೊಡಗಿದರೆ ಶಬ್ದಗಳೇ ಹೊರಡವು _ ಮೌಖಿಕಪರೀಕ್ಷೆಯಲ್ಲಿ ಪರೀಕ್ಷಕರೆದುರಿಗೆ ಬಾಯಿಯಿಂದ ಶ್ವಾಸ ಕೂಡಾ ಹೊರಡದಿರುವಂತೆ ! (ರೂಕಸಂ. ೪೦). [ಸಂ. ಮೌಖಿಕಪರೀಕ್ಷಾ]

**ಮೌಗ್ಧ್ಯ** (ನಾ). ೧. ಏನೂ ಅರಿಯದಿರುವಿಕೆ ; ಮುಗ್ಧತನ : ಶಬರಬಾಲಕಿಯರ್ ವಿಧುಬಿಂಬದಲ್ಲಿ ತಮ್ಮಾನನಮಂ ನಿರೀಕ್ಷಿಸಿ ಮದಾಂಬುಲಲ್ಪಾಮಾನುಯ್ಯು ಬಿಂಬಮಾಧ್ಯಾನನದಲ್ಲಿ ಬಿತ್ತರಿಸೆ ಮೌಗ್ಧ್ಯದೊಳಾಯ್ತು ತದಂಕಮೆಂಬೆಂ (ಕಂದ್ರಪ್ರ. ೦೦-೩೨). ೨. ಲಾವಣ್ಯ ; ಸೊಬಗು. [ಸಂ.]

**ಮೌಜು** ' ಮೋಜು₂ ' ನೋ.

**ಮೌಜೆ, ಮುವುಜೆ** (ನಾ). ಸಣ್ಣಹಳ್ಳಿ ; ಸಣ್ಣಗ್ರಾಮ ; ಕಸಬಾ : ನನ್ನ ಅಣ್ಣಂದಿರಾದ ಸದರಿ ರಾಘವೇಂದ್ರವಾಮನಬಿಂದಗೋಳ ಅವರೇ ನಮ್ಮ ಬಿಂದಗೋಳ ಮೌಜೆಯಲ್ಲಿ ಇರುವ ಏಕತ್ರ ಆಸ್ತಿಯ ವಹಿವಾಟು ಮಾಡುತ್ತ ಬಂದಿರುತ್ತಾರೆ (ಗಂಪತಾಯ. ೨೦೦). **ಮುವುಜೆ :** ಶ್ರೀಕೃಷ್ಣಾನಂದಸ್ವಾಮಿಗಳವರಿಗೆ ಮುವುಜೆ ಮಜಕೂರಿನಲ್ಲೂ ಪ್ರಾಕಾರೇಖೆ ಭೂಮಿವೃತ್ತಾರಯಿದ್ದದ್ದು . . . ಹಾಲಿಯಿನಾಮತ್ತಿಯಲ್ಲು ಜಾರಿಯಿರುವುದು (ವ್ಯಾಅಂ. ೧೯೩೪, ೩೨-೭; 1812). [←ಅರ. ಮೌರ್ಝಾ ; ಹಿಂ. ಮೌಜಾ ; ಮರಾ. ಮೌಜಾ, ಮೌಜೇ]

**ಮೌಢ್ಯ** (ನಾ). ದಡ್ಡತನ ; ಮೂಢತನ : ಅಹಿಮಕರಕುಲ ತನ್ನ ಮೌಢ್ಯದಿ ಬಹಳಶೋಕದಲಿರಲು (ಕೌಶಿರಾ. ೦-೩೨); ಓದಿರುವಾತಗೆ ಮೌಢ್ಯವೆಂಬುದಿಲ್ಲ (ಇಂಶಾಶ. ೬೦-೯೦); ತನ್ನ ಜಾಡ್ಯ ಮೌಢ್ಯ ದೊಳಗೆ ಸಾಧಿಸಿಹುದು _ಗೊತ್ತು ನನಗೆ (ಪಾಂದೇ. ೪೦-೩). [ಸಂ.]

**ಮೌದ್ಗ** (ನಾ). ಹೆಸರುಕಾಳನ್ನು ಬೆಳೆಯುವ ಹೊಲ : ಪರಿಪಾಲಿಸಿದುವು ಕಣ್ಗೆ ನಾಡೆ ಮೌದ್ಗ[ಪಾಠಾಂ. ದ್ಯ] ಮಾಷ್ಯಂ ಶಾಲೇಯಂ ವ್ರೈಹೇಯಂ (ಕಂದ್ರಪ್ರ. ೦-೯೦). [ಸಂ.]

**ಮೌದ್ಗೀನ** (ನಾ). = ಮೌದ್ಗ : "ಹೆಸಱ ಕೆಯ್ ಮೌದ್ಗೀನಮೆಂಬುದು" (ಕರಾಯು. ೨೭-೭); ಏನೆಸೆವುವೊ . . . ತೈಳೀನದ ಮಾಷೀಣದ ಮೌದ್ಗೀನದ ಬಹುಸಾರಸಸ್ಯಸಕಳಫಳಂಗಳ್ (ಕೃಕ್ರಪ್ರ. ೨-೦೨). [ಸಂ.]

**ಮೌನ** (ನಾ). ೧. ಮಾತನ್ನಾಡದಿರುವಿಕೆ ; ಸುಮ್ಮನಿರುವುದು: ಮೌನಂ ಸರ್ವಾರ್ಥಸಾಧನಂ (ಗದಾಯು. ೩-೩೬ ವ); ಮೌ[ಪಾಠಾಂ. ಮೋ]ನದಲುಂಬುದು ಆಚಾರವಲ್ಲ ಲಿಂಗಾರ್ಪಿತವ ಮಾಡಿದ ಬಳಿಕ ತುತ್ತಿಗೊಮ್ಮೆ ಶಿವಶರಣೆನ್ನುತ್ತಿರಬೇಕು (ಬಸವ. ೭೬೬); ಬಯಕೆಯೊಳು ಬಜಮುಂಮಂ ಮೌನದೊಳು ನುಡಿಯುಮಂ . . . ಬೈತಿಡುತೆ (ಶಿರುಕ. ದೀ. ೭-೯); ಮುಖಸರಸಿರುಹ ಬಾಡಿದವು ಮುಸುಕಿತು ಮೌನಮಯಜಲಧಿ (ಕುಮ್ಮಾಸ. ೦೪-೩೦). ೨. ಮಾತನ್ನಾಡದೆ ಇರುವ ಸಮಯ : 'ಮೌನವ್ರತ ' ಪರಾ. ೩. ಸದ್ದಿಲ್ಲದೆ ಇರುವುದು ; ನೀರವತೆ : ಸುತ್ತಲು ಮೌನ ! ಶ್ಮಶಾನ ಮೌನ ! (ಶಾಂಕಸ. ೭೭-೨೦). ೪. [ಕಾಮಶಾ] ವಿರಹದ ಹತ್ತು ಅವಸ್ಥೆಗಳಲ್ಲಿ ಒಂದು : ಅಭಿಲಾಷೆ ಚಿಂತೆ ಸ್ಮೃತಿ ವಿಭುಗುಣನುತಿ ಸಂತಾಪನ ಕ್ರಿಯಾದ್ವೇಷ ವಿಕಳ ಮೌನ ಮೂರ್ಛೆ ಮರಣವೆಂಬ ದಶಾವಸ್ಥಾದಿ ವಿಚಾರಪರರಿಂ (ಏರೇಕ. ೦೬೪). [ಸಂ.]

**ಮೌನಂಗೊಳ್, ಮೌನಗೊಳ್** (ಕ್ರಿ). ೧. ಮಾತನ್ನಾಡದಿರು ; ಸುಮ್ಮನಿರು : ಮುಜುಮಾತುಗುಡಲಱಿಯದೆ ಧರ್ಮಪುತ್ರಂ ಮೌನಂಗೊಂಡುಸಿರದಿರೆ (ಕಂಕಭಾ. ೭-೨೪ ವ). **ಮೌನಗೊಳ್ :** ೧. ಏನೂ ಅಱಿಯೆನೆಂದು ಮೌ[ಪಾಠಾಂ. ಮೋ]ನಗೊಂಡಿರಬೇಡ (ಬಸವ. ೧೭೭); ಬಂದಿಹ ಮಹಂತರು ಮೌನಗೊಂಡಿದ್ದಿಹರು (ಬಸಪ್ರ. ೩೭-೯). ೨. ಸದ್ದುಮಾಡದಿರು : ಮೌನಗೊಂಡುವು ಭೇರಿನಿಸ್ಸಳವೇನ ಹೇಳುವೆ ದನುಜರುಬ್ಬಟೆ ಹಾನಿಯಾದುದು (ಕೌಶಿರಾ. ೨೦-೩೩). [ಮೌನ + ಕೊಳ್₁]

**ಮೌನಕಲಹ** (ನಾ). ಮಾತಿಲ್ಲದ ಜಗಳ ; ಮೌನವಾದ ಕಲಹ : ತಮ್ಮ ಈ ಕೆಲದಿನಗಳ ಮೌನಕಲಹವನ್ನು ಇಂದು ಬಗೆಹರಿಸಿಬಿಡಲೇಬೇಕು (ಇಕ್ಕಶ. ೨೭೨). [ಸಂ.]

**ಮೌನಗೊಳ್** ' ಮೌನಂಗೊಳ್ ' ನೋ.

**ಮೌನಮುದ್ರೆ** (ನಾ). ಸುಮ್ಮನೆ ಇರುವುದು : ಏನು ಸಿದ್ಧಿಯಿದಕ್ಕೆ ಮೋಹಿದ ಮೌನಮುದ್ರೆಯ ಬಿಸುಟು ಹೇಳು (ಕುವ್ಯಾಶ. ೨೦-೨೭); ಇನ್ನು ನಮಗೆ ಗುಡಗಜ್ಜನ ಬಾಧೆ ತಟ್ಟದು ಎಂದು ಹೇಳಿ ಮೌನಮುದ್ರೆಯನ್ನು ತಾಳಿದರು (ಮುಣಸ. ೩೭). [ಸಂ. ಮೌನಮುದ್ರಾ]

**ಮೌನವಡು** (ಕ್ರಿ). ಮಾತನ್ನಾಡದಿರು; ಸುಮ್ಮನಿರು : ಗಾನವಿದ್ಯಾಲೋಲರಾದರು ನೀನೆ ಗುರು ಮೂಲೋಕಕೆನ್ನುತ ಮೌನವಟ್ಟುದು ಸರ್ವನೃಪಜನ (ಪಾಗಪ. ೦೨-೭೩). [ಮೌನ + ಪಡು₁]

**ಮೌನವ್ರತ** (ನಾ). ಮಾತನ್ನಾಡದೆ ಇರುವ ವ್ರತ; ಮೌನದ ಆಚರಣೆ : ಇತ್ತ ವೃಷಭನಾಥನುಂ ಮೌನವ್ರತದಿಂ ಯೋಗಯೋಗ್ಯಪ್ರದೇಶದೊಳು ಅವಹಿತಧ್ಯಾನನಾಗಿ ವಿಹಾರಿಸಿ, (ಶಾಪುಂಪ್ರ. ೪೦); ಮೌನವ್ರತಕ್ಕೆ ದೀಕ್ಷಿತರಾಗಿ ಮೌನರಂಗದಲಿ ಇಳಿದಿಹರು (ಮುಂ೪೯೦. ೪೯-೦೨). [ಸಂ.]

**ಮೌನಾಧ್ಯಯನವೃತ್ತಿ** (ನಾ). [ಜೈನ] ಐವತ್ತುಮೂರು ಗರ್ಭಾನ್ವಯಕ್ರಿಯೆಗಳಲ್ಲಿ ಒಂದು; ಉಪವಾಸಾನಂತರದ ಪಾರಣೆಯ ಸಮಯದಲ್ಲಿ ವಾಙ್ನಿಯಮವನ್ನು ತಾಳುವುದು ಹಾಗೂ ಶಾಸ್ತ್ರಾಭ್ಯಾಸವನ್ನು ಮೌನವಾಗಿ ಮಾಡುವುದು : ಮೌನಾಧ್ಯಯನವೃತ್ತಿಯುಂ ತೀರ್ಥಕರತ್ವಭಾವನೆಯುಂ . . . ಅಪ್ಪುಯ್ವತ್ತುಮೂಱುಗರ್ಭಾನ್ವಯಕ್ರಿಯೆಯೊಳು (ಶಾಪುಂಪು. ೨೦೨). [ಸಂ.]

**ಮೌನಿ** (ನಾ). ೧. ಮಾತನ್ನಾಡದೆ ಸುಮ್ಮನಿರುವವನು : ಮೌನಿಯಾದನು ರಾಮ (ತ್ರೀರಾಪಾ. ೦೩೯-೨೦೪); ಮೌನಿಯಾದವನಿಗೆ ಕಲಹವೆಂಬುವುದಿಲ್ಲ (ಇಂಶಾಶ. ೬೦-೯೦); ಹಾಗೆ ನೋಡಿದರೆ ರಾಯರು ದೊಡ್ಡಮೌನಿ ! (ಕಂಬಿಪು. ೧೨೦). ೨. ಮುನಿ ; ತಪಸ್ವಿ ; ಋಷಿ : ಮಾನಿಗಳು ಮೌನಿಗಳು ಸ್ವಚ್ಛ ಶಿವಾನುಭಾವೇಚ್ಛಾತ್ಮಸುಖಿಗಳು (ಬಸಪು. ೭-೧೭). [ಸಂ. ಮೌನಿನ್]

**ಮೌರಜಿಕ** (ನಾ). ಮದ್ದಲೆಯನ್ನು ಬಾರಿಸುವವನು : "ಮಾರ್ದಂಗಿಕಃ, ಮೌರಜಿಕಃ – ೨ ಮದ್ದಲೆ ಬಡಿಯುವವನ ಪೆಸರು, ಮದ್ದಳಿಗ" (ಸಿದ್ಧ್ಯಾಂತ. ೩೦೦). [ಸಂ.]

**ಮೌರಜಿಗ** (ನಾ). = ಮೌರಜಿಕ : "ಮೌರಜಿಗ – ಮೌರಜಿಕ=ತಮಟೆ ಬಾರಿಸುವವ" (ಕದ್ಯಕೋ. ೩೭) ; ಸುರಪುರದ ಮೌರಜಿಗನಾವೆಡೆ ಕುರುಬಲದ

ಗಜಬಜದ ಗರುವನ ತೋಟಿಸುತ ತೂಳಿಸನು ಕಲಿಪಾರ್ಥ (ಕುವ್ಯಾ.ಶ. ೨೦-೨೩).
[< ಸಂ. ಮೌರಜಿಕ]

**ಮೌರವಪಾಶ** (ನಾ). ಮುರು ಎಂಬ ಕಬ್ಬಿಣದಿಂದ ಮಾಡುವ ಒಂದು ಬಗೆಯ ಸರಪಣಿ – ಸಂಕೋಲೆ : ಖಚರಕಿನ್ನರವಿದ್ಯಾಧರರಂ ಕಡುಖಂಡವಾಗೆ ಕತ್ತರಿಸಿ ಕೊಲ್ವ ಮೌರವಪಾಶಮಿರ್ಪುದು (ಜಗಪ. ೧೧-೮೯ ವ); ನರಸೇನೆಗರಿವು ಲಂಕಾಪುರದ ಬಹಿರ್ಜಲಧಿ ದಾಂಟಲಿಂತಿದು ದೇವಾಸುರರ್ಗ ಮರಿದೆನಿಸಿ ನರಕನ ಪುರಮಂ ಬಳಸಿರ್ದುದೊಂದು ಮೌರವಪಾಶಂ (ಜಗಪ. ೦೨-೩). [< ಸಂ. ಮೌರ್ವಪಾಶ]

**ಮೌರಿ$_1$**. ಮವುರಿ, ಮುಹುರಿ, ಮೂವುರಿ, ಮುಹರಿ, ಮುಹುರಿ, ಮೊಹರಿ$_1$, ಮೋರಿ$_1$, ಮೋಹರಿ$_1$, ಮೌವರಿ (ನಾ). ಒಂದು ಬಗೆಯ ಊದುವ ವಾದ್ಯ : ವೇಣು ವೀಣೆ ಮೌರಿ ವಾದ್ಯಂಗಳಲ್ಲಿ ವಾಯು ಅಂಗುಲಿಯ ಭೇದದಿಂದ ರಚನೆಗಳ ತೋಱುವಂತೆ (ಶ್ರಿಶೋಗ. ೪. ೩೦೩-೯೪) ; ಕುಂಬಿಡುವ ಕೊಂಬುಗಳ ರಣದಿತ್ತಿರಿಯ ಮೌರಿ ಹಲಹಲವು ರೀತಿರೀತಿಯ ಚಿನ್ನದಾ ತಂಬಟದ ನಾನಾಭಿಧವ . . . ನಿಸ್ಸಾಳಕುಳವಳ್ಳಿಱಿದುದು (ಸೋಮಶ. ೩-೯೨); ತಿತ್ತಿರಿ ಮೌರಿ ತಾಳ ದಂಡಿಗೆ ಮದ್ದಲೆ ಉತ್ತಮದ ಶಂಖಶಬ್ದನಾದಗಳಿಂದ. . . ಕುಣಿಸುವರು (ಕುರಂದ. ೪-೧೩೬-೨). **ಮವುರಿ** : (೬). **ಮುಹುರಿ** : ಕೊಳಲು ಮುಹುರಿ ರಣಮವುರಿ ದವಳಸಂಕ (ದೇವಾಂಕು. ೩-೨೦೦). **ಮೂವುರಿ** : ಬಾಯಿಂದೆ ಕೊಂಬು ಮೂವುರಿ ಕಹಳೆಗಳನೂದಿ ಬಾಯಿಂದೆ ಕರಡೆಯಂ ಬಾರಿಸುತೆ ಕೊಳಲೂದಿ (ಕಣ್ಣ.ರ. ದೇ. ೦೩೯-೩). P ಇದು ಛಂದಸ್ಸಿಗಾಗಿ ಮಾಡಿಕೊಂಡಿರುವ ರೂಪವಿರಬಹುದು. **ಮುಹರಿ** : ಮುಹರಿಯ ಮಧುರತೆಯುಂ ಬೀಣೆಯ ಬಹುಲಿಕೆಯುಂ ಎಸೆಯೆ (ವರ್ಧಕು. ೯-೪೩ ವ). **ಮುಹುರಿ** : ವೇಣು ಮುಹುರಿಗಳಲ್ಲಿ ಮೂವತ್ತೆರಡುರಾಗಮಿಶ್ರಂಗಳ ಅಱುವತ್ತುನಾಲ್ಕರಲ್ಲಿ ಕೂಡಿ ನುಡಿವುದು ಒಂದೋ ಎರಡೋ (ಮೋಳಮೂ. ೦೨೭-೪೯೩) ; ಮುಹುರಿಶೃಂಗವಂಶ ಕಹಳಾಶಂಖಪಾವಪ್ರಭೃತಿಸುಷಿರವಾದ್ಯಚಯಮಂ . . . ತಾಳಾನುಗತವಾಗಿ ಬಾಜಿಸುತ್ತ ತತ್ಕುಶಲಗತಿಯಿಂ (ಶದ್ಯರಾ. ೩-೩೩); ಭೇರಿ ನಿಸ್ಸಾಳಗಳು ವಾಣದತಿಸ್ವರಗೆಯ್ವ ಮುಹುರಿ ವೀರಣವಾದ್ಯ ವಿದ್ವಜ್ಜನಾನಿಕರವು . . . ಎಸಕದಿಂ ರಾಜಿಸಲು (ಶ್ರಶುಕು. ೯-೩೩). **ಮೊಹರಿ$_1$** : ಹೊನ್ನಿನ ಕಹಳೆಗಳಂ ಪೊಸರನ್ನದ ವಾಸಂಗಳಂ ಸುಶಂಖಂಗಳುಮಂ ಚೆನ್ನಿನ ಮೊಹರಿ[ಪಾಠಾಂ. ಮೌರಿ]ಗಳಂ ಸುರಚ್ಚೆಯರೊರ್ವೊರ್ವರೂದಿದರ್ ಕಡುಸಲವಿಂ (ಶಾಂತಿಕು. ೬-೯೧) ; ಕಿವಿಗೆ ಇಂಪಾದ ಮೊಹರಿ ಶ್ರುತಿಗಳ ನಾದವೂ ಕೇಳಿ ಬಂತು (ಕಂಗಾಳ. ೩೦೬). **ಮೋರಿ$_1$** : ಮದುವೆಯ ನಾಲ್ಕುದಿನ, ಮೋರಿ ಹಿಡಿದ ಕೊರಗನಿಗೇನೆ ಅವನ ವಾದ್ಯ ಕೇಳಿಸಿತೋ ಇಲ್ಲವೋ (ಮುಕಪು. ೨); ಶಿವಗುಡಿಯಲ್ಲಿ ಮೋರಿ ಬಾರಿಸುತ್ತಿದ್ದ (ಶದ್ಯಸ. ೦೯೧). **ಮೋಹರಿ$_1$** : ಅಲರ್ವಿಂಡುಗೆಱಗಿ ರ್ಝೇಂಕರಿಪಳಿ ಶಿಶುಗಳನ್ನೊಲೆವ ನೈದಿಲ ನಿಡಿದಂಟು ಜಲದೇವಿಯರಂಗಜವೀರವನೋದು ತೊಲೆವ ಮೋಹರಿಯಂತಾಯ್ತು (ಶ್ರೀಪಾಂ. ೦೨-೨೩) ; ನೀರದಗಳಂತೆ ನಭದೊಳುಲಿದವಾಗ ಕಹಳಾಳಿಗಳು ಮೋಹರಿಗಳು (ಮುಲ್ಲಾಂ. ೬-೩೭). **ಮೌವರಿ** : ಪಟಹ ಭೇರಿ . . . ಕಹಳೆ ಡಿಂಡಿಮರವದಿ ಸಂಘಟಿಸಿದುಱಿ ಚೀರಣದ ಬೊಂಬುಳಿ ದೋಳು ಮೌವರಿಯ ಪಟುತರ ಧ್ವನಿ ತೀವಿದುದು ದಿಕ್ತಟಗಳನು (ಕಸತ್ಯ. ೦೩-೭೪). [ ದೇ. ॥ ತೆಲು. ಮೌರಿ, ಮವುರಿ ]

**ಮೌರಿ$_2$** (ನಾ). [ಸಂಗೀತ] ಒಂದು ರಾಗದ ಹೆಸರು : ಮೋಪದಿಂದ ಗಾಯಕರು ಮೌರಿ ಪಾಡಲು (ವಾದಿಕೀ. ೯೦-೬). [< ಸಂ. ಮಾಹುರೀ]

**ಮೌರ್ಖ್ಯ** (ನಾ). ದಡ್ಡತನ ; ಅವಿವೇಕ ; ಮೂರ್ಖತನ : ಕ್ಷಿತಿಯೊಳ್ ದೇಹಿಗಳು ಪಶುಗಳಂದದಿ ತಿಳಿಯದತಿಶಯದ ಸುಖಗಳನು ಹಾರೈಪರನುದಿನದಿ ಮೌರ್ಖ್ಯದಿಂದೀ ಪುಸಿಯನು (ವಂಕಾರಾ. ೨-೯-೨೨). [ಸಂ.]

**ಮೌರ್ವ** (ಗು). ೧. ಮುರು ಎಂಬ ಕಬ್ಬಿಣದಿಂದ ಮಾಡಿದ. (ನಾ). ೨. ಕಂದುಬಣ್ಣದ ಕುದುರೆ : "ತುರಗವರ್ಣಂ . . . ಮಾಸರವಾಗೆ ಮೌರ್ವನಕ್ಕು" (ಮಂಗರಾ. ೬೦-೦೪). [ಸಂ.]

**ಮೌರ್ವಿ** (ನಾ). ಬಿಲ್ಲಿನ ಹೆದೆ ; ನಾರಿ ; ಸಿಂಜಿನಿ : "ಮೌರ್ವೀ, ಜ್ಯಾ, ಶಿಂಜಿನೀ, ಗುಣಃ, ಜೀವಾ — ಈ ೫ ಬಿಲ್ಲ ತಿರು" (ಹಲಾಯು. ೭೬-೩೦೦) ; ಲಲಿತಭ್ರೂಕಾರ್ಮುಕಂ ಕೇಕರರುಚಿ ನನೆಗೋಲ್ ಕುಂತಳಂ ಮೌರ್ವಿ ಮಂಜೀರಲಸದ್ಧ್ವಾನಂ ಧನುಷ್ಟಂಕೃತಮೆನೆ . . . ಎಸೆಗುಂ ವಾರನಾರೀಕದಂಬಂ (ಜಗಪ. ೨-೩೩) ; ಧನುವಿಗೆ ಮೌರ್ವಿಯ ತೊಡಿಸಿ ಗುಱಿಯನೆಚ್ಚ ಘನಮಹಿಮನಿಗೆ ಸೂಡೆಂದು ತನುಜೆಯ ಕೈಯಲಿ ಮಂದಾರಮಾಲೆಯ ಘನತರರಾಗದಿಂದಿತ್ತು (ಪೀಮಂಸಾಂ. ೧೬-೪೩). [ಸಂ. ಮೌರ್ವೀ]

**ಮೌರ್ವೀನಾದ** (ನಾ). ಬಿಲ್ಲಿನ ಹೆದೆಯ ಠೇಂಕಾರ ; ಜ್ಯಾನಾದ : ಸಂಸ್ಫಾಳಿತೋದ್ವೃತ ಚಪಳಚಾಪಕರಾಳಮೌರ್ವೀನಾದಭೀಷಣನಾದನಾ ಭೀಮ (ಕುವ್ಯಾಶ. ೦೨-೦೩). [ಸಂ.]

**ಮೌಲ** (ಗು). ೧. ಬಹಳ ಹಿಂದಿನ ; ಪ್ರಾಚೀನವಾದ. ೨. ಮುಖ್ಯವಾದ ; ಮೂಲಭೂತವಾದ. (ನಾ). ೩. ಗೃಹ, ಕ್ಷೇತ್ರ ಮುಂತಾದುವುಗಳ ಹಿಂದಿನ ಸ್ಥಿತಿಗತಿಗಳನ್ನು ತಿಳಿದು ವಂಶಪರಂಪರೆಯಾಗಿ ಅಧಿಕಾರ ನಿರ್ವಹಿಸುವ ಮಂತ್ರಿ ಮೊದಲಾದ ರಾಜಸೇವಕ : ಮೌ[ಲ]ಭೃ[ತ್ಯ]ಸುಹೃತ್ ಶ್ರೇಣಿಮಿತ್ರಾಟವಿಕತಂತ್ರಂಗಳ್ ಪಣ್ಣದ ಜಂತ್ರಂಗಳಂತೆ ಕಟಕುಟಿಮಾದುವು (ಶಂಪಠಾ. ೦೩-೨೦ ವ). [ ಸಂ. ]

**ಮೌಲಬಲ** (ನಾ). ಪ್ರಧಾನವಾದ ಸೈನ್ಯ ; ಮೂಲಬಲ : ನಿಜರೂಢವ್ಯಾಳಶುಂಡಾಲವ್ರಂ ಬಳಸಿ ನಿಂದ ಮೌಲ[ಪಾಠಾಂ. ಳ]ಬಲಮನರನೆಲೆಗೆ ನೂಂಕಲ್‌ವೇಟ್ಟು (ಚಂದ್ರಪು. ೧೦-೪೪ ವ). [ಸಂ.]

**ಮೌಲಿ, ಮೌಳಿ** (ನಾ). ೧. ತುದಿ ; ಶಿಖರ ; ಅಗ್ರಭಾಗ : ಫಣಿ ಗರುಡ ಗಜ ಮಕರ . . . ಚಿಹ್ನಂಗಳ್ ಯಥಾಕ್ರಮದಿಂ ತನ್ಮೌಲಿಗಳೊಳ ಪ್ಪುವು (ತತ್ತ್ವಶ್ರ. ೧೮೬). ೨. ತಲೆ : 'ಚಂದ್ರಮೌಲಿ' ಪರಾ. ೩. ಕಿರೀಟ ; ಮಕುಟ : ಆ ಸತ್ಯೇಂದ್ರಚೋಳೇಂದ್ರಸತ್ಪದಪದ್ಮಕ್ಕೆ ಮರಂದಮಂ ಪಡೆದು ಮೌಲಿದ್ಯೋತಿಯಿಂ ಪೊಳ್ಗದಂ (ರಾಜಶೇ. ೪-೧೧೩). ೪. ಜಡೆ ; ಮುಡಿ. **ಮೌಳಿ** : ೨. "ಮುಂಡಃ, ಉತ್ತಮಾಂಗಃ, ಮಸ್ತಕಃ, ಮೌಳಿಃ, ಶಿರಃ, ಶೀರ್ಷಃ, ಮೂರ್ಧಾ, – ಈ ೮ ಮಂಡೆ" (ಹಲಾಯು. ೮೩-೩೬೩). ೩. "ಮೌಳಿಂನಲ್ ಮಕುಟ [ಪಾಠಾಂ. ಮುಕುರ, ಮಕುರ]" (ರಾರತಿ. ೭) ; ಮೋಟನ ಮೌಳಿ ಮೂಕೊಱತಿಯ ಶೃಂಗಾರ ಬೇಟ ಕುರುಡಂಗೆ ನಗೆಗೆಡೆಯಾಯಿತ್ತು (ಬಸವ. ೩೩೦). ೫. (ಆಲಂ) ಮುಂದಾಳು ; ನಾಯಕ : ಓಲಗದೊಳಿರ್ದಖಿಳಮೂರ್ಖರ ಮೌಳಿಯನು ಕಂಡಪಥರಿಸು ಸಿರಿಲೋಲ ಬಿಜಯಂಗೈಯಲವಸರವುಂಟೆ ಹೇಳೆನಲು (ಕುವ್ಯಾಅ. ೬-೨೬). ೬. ಮುಖದ ಸೌಂದರ್ಯ (?) : ಎಱದಳೋ ಸುರರಿಂಗೆ ಸತಿ ಕೈದೊಱದಳೋ ದನುಜರಿಗೆ ಮೌಳಿಯ ಮೊಱದಳೋ ಅಸುರರಿಗೆ ಸುರರಿಗೆ ಸುರದಳೋ ಸುಧೆಯ . . . ಎನೆ ಮುನಿನಿಕರ ಸಲಹಿದಳು ಸುರಕುಲವ (ಜಿಭಾಗ. ೬-೯-೩೨). [ಸಂ.]

**ಮೌಲಿಕ** (ಗು). ೧. ಮೂಲರೂಪದ ; ಮೂಲಭೂತವಾದ : ಗೀತಾರಹಸ್ಯದಲ್ಲಿ ವ್ಯಕ್ತವಾದ ಟಿಳಕರ ಮೌಲಿಕ (original) ವಿಚಾರಗಳನ್ನು ಸ್ಪಷ್ಟಪಡಿಸುವುದು ಕ್ರಮಪ್ರಾಪ್ತ (ರವಃಗಾ. ೦೪೯) ; ಅವು ಮೌಲಿಕ ಬಾಲಬೋಧಪದ್ಧತಿಯವಾಗಿದ್ದು ಗೀತೆಯ ತತ್ತ್ವಜ್ಞಾನ ಹೇಳುವಂಥವಾಗಿರುವುದನ್ನು ಕಂಡು ಮತ್ತೊಂದು ಬಗೆಯ ಕೌತುಕವೆನ್ನಿಸುವುದು (ಸ್ವತಃಇ. ೧). (ನಾ). ೨. ಪ್ರಾಚೀನವಾದುದು ; ಮೂಲಭೂತವಾದುದು. ೩. ಮುಖ್ಯವಾದುದು ; ಮಹತ್ತ್ವವಾದುದು : ಈ ಪುಸ್ತಕವು ಸ್ವತಂತ್ರವೆ ?

ಮೌಲಿಕವೆ ? (ಮೂಖಾರ. ೩) ; ಈ ಪಂಥದಲ್ಲಿ ಐವರ ಅಧಿಕಾರವು ಮೌಲಿಕವಾಗಿದೆ (ಮಾಕಾಹಿ. ೦೦) ; ಮೌಲಿಕವಾಗಿ ನೋಡಿದರೆ ಸಾಹಿತ್ಯವೆಂಬುದೂ ಒಂದು ಮೌಲ್ಯವೇ (ಮಂಕಪ್ರ. ೧೦. ಹಿಪ್ಪುಣಿ). ೪. ಒಂದು ಬಗೆಯ ತೆರಿಗೆ: ತ್ರಿಭೋಗಾಭ್ಯಂತರಮಷ್ಟಭೋಗತೇಜಃಸ್ವಾಮ್ಯಯುಕ್ತ (ಕ್ತಂ) ಶುಲ್ಕ ದಂಡ ಸಾದಕಾರುಕಕರಮೌಲಿಕಾರ್ಹಣಾದಿ ಸಕಲದ್ರವ್ಯಾಪಾರ್ಜನೋಪೇತಂ (ಇಆ. IV, ೨೭೬–೩೬ ; 1253). [ಸಂ.]

**ಮೌಲಿಕತೆ** (ನಾ). ಬಹಳ ಹಿಂದಿನಿಂದಲೂ ಉಳಿದುಬಂದಿರುವ ಗುಣ, – ಸ್ವಭಾವ : ಈಗ ಅವರ ಮೌಲಿಕತೆ ಶಿಥಿಲ ಬಂತು (ಸ್ವಪ್ರತಿ. ೯೬).

[ ಸಂ. ಮೌಲೀತಾ ]

**ಮೌಲ್ಯ** (ನಾ). ೧. ಬೆಲೆ ; ದರ ; ಧಾರಣೆ : "ವೃತ್ತಿಕ್ಲಪ್ತಂ ಭೃತಿ ವೇತನಂ ಮೌಲ್ಯಮೆನೆ ಹೊತ್ತ ಬೆಲೆ" (ಪಾಂಗರಾ. ೦೦೨–೨) ; ಎರಡು ತರ ಮೌಲ್ಯಂಗಳೆಲ್ಲಕಂ ಲೋಕದಲಿ ಪರಮಾರ್ಥಕೊಂದು, ಸಾಂಪ್ರತದರ್ಥಕೊಂದು (ಮುಂಕುಕ. ೭೭೩). ೨. ಉಪಯುಕ್ತವಾದುದು ; ಬೆಲೆಯುಳ್ಳುದು : ಅನಘರತ್ನಾಲ್ಯವಕ್ಷಯಮೌಲ್ಯ [ಪಾಕಾಂ. ಮೂಲ್ಯ]ಮಭವ ಸ್ಥೌಲ್ಯವಹ ಕೈವಲ್ಯಮೀ ನಿರ್ಮಾಲ್ಯ (ಬಸಪು. ೪೩–೬೬). ೩. ಜೀವನದಲ್ಲಿ ಬೆಲೆಯುಳ್ಳದ್ದೆಂದು ಭಾವಿಸುವ ಅಂಶ ; ಆದರ್ಶ : ಜೀವನದ ಮೂಲಭೂತಕ್ರಿಯೆಗಳ ಗುರಿಯಾಗಿ ನಿಂತು ಜೈವಿಕ ಚಟುವಟಿಕೆಗಳಿಗೆ ಮಾರ್ಗದರ್ಶನ ಮಾಡುವ ಆದರ್ಶಗಳಿಗೆ ಮೌಲ್ಯಗಳೆನ್ನಬಹುದು (ಮಂಕಪ್ರ. ೮ ಹಿಪ್ಪುಣಿ); ನವ್ಯಕಾವ್ಯದಲ್ಲಿ ಈ ವ್ಯಕ್ತ್ಯತೀತಮೌಲ್ಯಗಳಿಗೇ ಪ್ರಧಾನತೆಯುಂಟಾಗುವುದೆಂದು ತೋರುತ್ತದೆ (ಪವ್ಯಕಾ. ೯೯). [ಸಂ.]

**ಮೌಲ್ಯಧನ** (ನಾ). ಒಂದು ವಸ್ತುವನ್ನು ಮಾರಿದಾಗ ಅದರ ಬೆಲೆಯಾಗಿ ಬರುವ ಹಣ ; ಬೆಲೆಯ ಹಣ : ಈ ಆಭರಣಂಗಳಂ . . . ಕ್ರಯಕ್ಕೆ ಹೊಂದಿಸಿ ಅದರ ಮೌಲ್ಯಧನವನ್ನು ನೀವೇ ಯಾಗಾರ್ಥವಾಗಿ ತೆಗೆದುಕೊಳ್ಳುವರಾಗಿ (ಮುದ್ರಾಮಂ. ೨೯೭). [ಸಂ.]

**ಮೌಲ್ಯನಿರ್ಣಯ** (ನಾ). ಯಾವುದಾದರೊಂದು ವಸ್ತು, ಕಲಾಕೃತಿ ಇತ್ಯಾದಿಗಳ ಬೆಲೆ ಅಥವಾ ಉಪಯುಕ್ತತೆಯನ್ನು ನಿಗದಿಪಡಿಸುವುದು,– ಗೊತ್ತುಮಾಡುವುದು : ಸಾಹಿತ್ಯದ ಮೌಲ್ಯನಿರ್ಣಯದ ಸಮಸ್ಯೆಯೊಡನೆ ಸ್ವತಃ ಸಂಬಂಧಿಸಿದಂತೆ, ಆಚರಣೆಯ ತತ್ತ್ವವೊಂದು ಪ್ರಾರಂಭದಲ್ಲಿ ನಮಗೆ ಇದ್ದೇ ಇದೆ (ಸಾಹಿತ್ರ. ೩೦೭). [ಸಂ.]

**ಮೌಲ್ಯಮಾಪನ** (ನಾ). ಯಾವುದಾದರೊಂದು ವಸ್ತು, ಕಲಾಕೃತಿ, ಗ್ರಂಥ, ಲೇಖನ ಇತ್ಯಾದಿಗಳ ಬೆಲೆಯನ್ನು ಅಳೆಯುವಿಕೆ,–ಅರ್ಹತೆಯನ್ನು ಗುರುತಿಸುವಿಕೆ,–ಯೋಗ್ಯತೆಯನ್ನು ನಿರ್ಣಯಮಾಡುವಿಕೆ : ನರನಾರಿವೃಂದವು . . . ತಮ್ಮ ಆತ್ಮಪರಿತೋಷದಿಂದ ಪ್ರಯೋಗದ ಸಿದ್ಧಿಯ ಮೌಲ್ಯಮಾಪನವನ್ನು ಮಾಡಬೇಕು (ಪ್ರಬಂಧ. ೩೪) : ಸಾಹಿತ್ಯದ ಮೌಲ್ಯಮಾಪನವನ್ನು . . . ವಿವೇಚಿಸುವುದು ನಮಗೀಗ ಉಳಿದಿದೆ (ಸಾಹಿತ್ರ. ೨೯೬). [ಸಂ.]

**ಮೌಲ್ವಿ** (ನಾ). ಮುಸಲ್ಮಾನರ ಧರ್ಮಗುರು : ಅವನ ಬೋಧನೆಯನ್ನನುಸರಿಸಿ ಮೌಲ್ವಿಗಳೂ ಉಲಮಾಗಳೂ ದೇಶದೇಶಗಳಿಗೂ ಹೋಗಿ . . . ಗ್ರಂಥರಚನೆ ಮಾಡಿ (ಪೈಗಂಬ. ೦೭೩) ; ಅಲ್ಲಿಯ ಮೌಲ್ವಿಯೇ ಅವನಿಗೆ ಒಂದು ಕಂಬಳಿಯನ್ನು ಕೊಟ್ಟಿದ್ದರು (ದೂರಕ. ೦೨೬) ; ದೊಡ್ಡ ದೊಡ್ಡ ಅಧಿಕಾರಿಗಳೂ, ಮೌಲ್ವಿಗಳೂ . . . ರಾಜಾಗಮನಕ್ಕೆ ಪೂರ್ವಭಾವಿಯಾಗಿ ಸಿದ್ಧರಾಗಿ ಕಾದಿದ್ದರು (ಳಕಂ. ೩೪೧).

[ ←ಅರ. ಮವ್‌ಲ್ವೀ: ಪಾರ. ಮರಾ. ಹಿಂ. ಮೌಲವೀ ]

**ಮೌವರಿ** 'ಮೌರಿ$_1$' ನೋ.

**ಮೌಷಿ** 'ಮೂವಶಿ' ನೋ.

**ಮೌಸೂಫ** (ಗು). ೧. ಮೇಲೆ ಹೇಳಿದ ; ಹಿಂದೆ ಹೇಳಿರುವ. (ನಾ). ೨. (ಹಿಂದೆ) ಸೂಚಿಸಲಾದ ವ್ಯಕ್ತಿ : ನಿಮ್ಮ ಋಣಾನುಬಂಧ ಪೂರ್ವದಿಂದ ಸರಿಯಾಗಿ ನಡೆದು ಬರುತಿರಲಿಕ್ಕೆ ನಿಮ್ಮಿಂದಾ ಇಂಥಾದ್ದು ಬರಲಿಕ್ಕೆ ಇಲ್ಲ, ಸಾಹೇಬ ಮೌಸೂಫರಿಗೆ ಬಿಟ್ಟು ಕಳುಹಿಸುವಂತೆ ಮಾಡಿಸಬೇಕು (ಐಪ್ರಪಾ. ೭೬). [← ಅರ. ಮವ್‌ಸೂಫ್; ಹಿಂ. ಮೌಸೂಫ್; ಮರಾ. ಮೌಸುಫ್, ಮೌಸೂಫ್]

**ಮೌಹಳಿಗ** (ನಾ). ಒಂದು ಬಗೆಯ ಕುದುರೆ : ಜನ್ನನಂ ನೀಲನನಳಗನಂ ತನ್ನ ಕತ್ತಳ ಮೌಹಳಿಗನಂ ತನ್ನ . . . ವಾಹಕರಿರಾ ನೀವು (ಚಕಪು. ೬೦–೪೦).

[ ? ]

**ಮೌಹೂರ್ತ** (ನಾ). ಮುಹೂರ್ತಜ್ಞಾನವನ್ನು ಬಲ್ಲವನು; ಜೋಯಿಸ: "ಸಾಂವತ್ಸರಃ . . . ಮೌಹೂರ್ತಃ, ಜ್ಞಾನಿನ್, ಕಾರ್ತಾಂತಿಕಃ – ರ ಜ್ಯೋತಿಷ್ಕನ ಹೆಸರುಗಳು, ಜೋಯಿಸನು" (ಸಿದ್ಧಾಂತಿ. ೨೩೮). [ಸಂ.]

**ಮೌಹೂರ್ತಿಕ** (ಗು). ೧. ಕ್ಷಣಿಕವಾದ ; ಕ್ಷಣದ. ೨. ಮುಹೂರ್ತಕ್ಕೆ ಸಂಬಂಧಿಸಿದ, – ಸೇರಿದ. (ನಾ). ೩. = ಮೌಹೂರ್ತ : "ಸಾಂವತ್ಸರಃ, ಜ್ಯೋತಿಷಿಕಃ, ಜ್ಞಾನೀ, ಮೌಹೂರ್ತಿಕಃ . . . ಗಣಕಃ – ಈ ರ ಜೋಯಿಸಿಗಂ" (ಕಲಾಯು. ೬೭–೨೯೯); ಆತ್ಮೀಯಪುತ್ರೀವಿವಾಹೋತ್ಸವಕ್ಕೆ ಮೌಹೂರ್ತಿಕರಂ ಕರೆದು ದಿವಸಮಂ ಬೆಸಗೊಳ್ವುದುಂ (ಶೌಪು. ೪–೩೦ ವ) ; ನೆಟಿಕೆಯ ಕಯ್ಗೆಯ್ದು ವಧೂವರರಂ ಮೌಹೂರ್ತಿಕ ನಿರೂಪಿತ ಶುಭಮುಹೂರ್ತದೊಳ್ . . . ಪಾಣಿಗ್ರಹಣಾಂಗೆಯ್ಸಿದಾಗಳ್ (ಸುಕುಮಾ. ೧೦–೧೦೦ ವ). [ಸಂ.]

**ಮೌಳಿ** 'ಮೌಲಿ' ನೋ.

**ಮೌಳಿಕಾಜಿ** (ನಾ). (ಆಲು) ನಾಯಕ; ಮುಖಂಡ: 'ಮೌಳಿಕಾಜಿತನ' ಪರಾ. [ಮೌಳಿ (=ಮೌಲಿ) + – ಕಾಜಿ]

**ಮೌಳಿಕಾಜಿತನ** (ನಾ). (ಆಲು) ನಾಯಕನಾಗಿರುವಿಕೆ ; ಮುಖಂಡನಾಗಿರುವಿಕೆ : ಮೌಳಿಕಾಜಿತನದಿಂದೊಮ್ಮೊಮ್ಮೆ ತನ್ನ ಭುಜಾದಂಡಮಂ ತಿರುಗಿ ನೋಡುತುಂ (ಪಂಪರ. ೪–೯೭). [ಮೌಳಿಕಾಜಿ + – ತನ]

**ಮೌಳಿಮಣಿ** (ನಾ). ಕಿರೀಟದ ರತ್ನ ; ಮಕುಟ ಮಣಿ : ಪೃಥುತಪೃಥಿವೀಪಾಲೌಘಾನಮ್ರಮೌಳಿಮಣಿ ಪ್ರಭಾಗ್ರಥಿತಪದಪೀಠಾಗ್ರಂ ಕೇಯೂರಮಂ ತಳೆವಂದದಿಂ ಪೃಥುಳಭುಜದಿಂ ಪೃಥ್ವೀಶಂ ತಾಳ್ದಿದಂ ನೆಲನೆಲ್ಲಮಂ (ಕಾದಂಪೂ. ೦೭) ; ಯಾದವಮಹೀಭುಜಮೌಳಿಮಣಿಬ್ರಜಪ್ರಭಾಲಿಂಗಿತಪಾದಪೀಠಂ (ಕಾಇಆ. XX, ೪೭–೭ ; 1074) ; ಓಲಗಿಸುವುದು ಮಿತ್ರರಾಯರ ಮೌಳಿಮಣಿ ಪಾಂಡುವಿನ ಚರಣನಖಾಳಿಯನು ಸೆಣಸುವ ಮಹೇಶ್ವರ ಮೌಳಿಮಣಿಕಿರಣ ಓಲಗಿಸಿತು ಪ್ರಣಯದಮರೀ ಬಾಲೆಯರ ಪದನಖವನು (ಕುವ್ಯಾಆ. ೪–೭). [ಸಂ. ಮೌಲಿಮಣಿ]

**ಮ್ಯಾಚು** (ನಾ). ೧. ಸರಿಹೊಂದುವುದು ; ಜೋಡಿ : ಇದಕ್ಕೆ ಮ್ಯಾಚು ಆಗೋ ಬ್ಲೌಸುಪೀಸು ತಂದುಕೊಡಿ (ಅವ್ಯಾಕ. ೬೦). ೨. (ಆಟಗಾರರು) ಪರಸ್ಪರ ಪ್ರತಿಸ್ಪರ್ಧಿಗಳಾಗಿ ನಿಂತು ಆಡುವ ಆಟ ; ಪಂದ್ಯ : ಅಂದು ಅವರ ಶಾಲೆಯಲ್ಲಿ ಹಾಗು 'ಹಾಕಿ' ಮ್ಯಾಚು ಬೇರೆ ಇತ್ತಂತೆ (ತೆಂದುಟಿ. ೦೩) ; ಅದು ಹೋಗಲಿ ಬಿಡು, ಮ್ಯಾಚಿನಲ್ಲಿ ಏನಾಯಿತು ? (ಪುಹಾಗ. ೦೭). [←ಇಂ. Match]

**ಮ್ಯಾಜಿಸ್ಟ್ರೇಟ್** (ನಾ). ರಾಜ್ಯಸಂಸ್ಥಿತಿಶಾಖೆಯ ದಂಡಾಧಿಕಾರಿ : ನ್ಯಾಯಾಧಿಪತಿ ; ನ್ಯಾಯಾಧಿಕಾರಿ : ಪೋಲಿಸ್ ಮತ್ತು ಮ್ಯಾಜಿಸ್ಟ್ರೇಟ್ ಅಡಳಿತಗಳು (ಗ್ರಾಮಾಕ. ೪೩) ; ನಿಮ್ಮ ರೆಸಿಡೆಂಟ್ ಮ್ಯಾಜಿಸ್ಟ್ರೇಟರು ಕೂಡ (ಪುತ್ರ್ಯಕ. ೭೭). [←ಇಂ. Magistrate]

**ಮ್ಯಾಣ** 'ಮಯಣ' ನೋ.

**ಮ್ಯಾಣಗಪ್ಪಟ** 'ಮೇಣಗಪ್ಪಡ' ನೋ.

**ಮ್ಯಾನಾ** 'ಮೇನಾ' ನೋ.

ಯತಿ ಪರಸಿ ಯಥೋದ್ದಿಷ್ಟವಿಷ್ಟರದೊಳ್ ಕುಳ್ಳಿರ್ದು (ಶಾಂತಿಪು. ೨-೨೦ ವ). [ಸಂ.]

**ಯಥೋಪದಿಷ್ಟ** (ಗು). = ಯಥೋದ್ದಿಷ್ಟ : ಮಹೀತಳಾಶ್ಲಿಷ್ಟ ಲಲಾಟಪಟ್ಟನೆಜಿಗಿ ಪೊಡವಟ್ಟು ಯಥೋಪದಿಷ್ಟಾಸನದೊಳ್ ಕುಳ್ಳಿರ್ದು (ಶಾಂತಿಪು. ೫-೩೦ ವ). [ಸಂ.]

**ಯದು** (ನಾ). ೧. ಯಯಾತಿ ಮತ್ತು ದೇವಯಾನಿಯರ ಹಿರಿಯ ಮಗನೂ ಕೃಷ್ಣನ ವಂಶದ ಪೂರ್ವಜನೂ ಆದ ಒಬ್ಬ ದೊರೆ. ೨. ಯದುವಂಶದಲ್ಲಿ ಹುಟ್ಟಿದವನು ; ಯಾದವ : ಯದು ನಾಶಕ್ಷಮಪುತ್ರನು ಪಡೆವೆಂ (ಜಗಂ. ೬-೦೭) : ಯದುಗಳು ಗೋವಳರು ದನ ಗಾರರೆಂಬ ಬಗ್ಗೆ ಭಿನ್ನಾಭಿಪ್ರಾಯವೇ ಇಲ್ಲ (ಕರ್ನಾಪೂ. ೯೫). ೩. ಯಮುನಾ ನದಿಯ ಪಶ್ಚಿಮದಲ್ಲಿದ್ದ ಒಂದು ದೇಶ ; ಯಾದವರ ದೇಶ. [ಸಂ.]

**ಯದುಕುಲ**, ಯದುಕುಳ (ನಾ). ೧. ಯದುವಿನ ವಂಶ : ಯಾದವ ವಂಶ : ಯದುಕುಲಜಲನಿಧಿಯೊಳ್ ಪುಟ್ಟಿದೆಯುಮರ್ಮಂ ಸಜು ಮೊದಸೆ ಪುಟ್ಟುವಪ್ಪೊಲ್ (ಗದಾಯು. ೬-೫೫). ೨. ಯದುವಂಶದವರು ; ಯಾದವರು : ಯದುಕುಲದುರ್ಜಯನಪ್ಪಂತದೊಂದು ವರಮಂ ತ್ರಿಣೇತ್ರ ರೂಪದೆ ತಾನಿತ್ತುದನಜಿದು (ಜಗಂ. ೯-೯೦) ; ಯದುಕುಲಸಹಿತ ದೇವ ಮುಕುಂದ ಬಿಜಯಂಗೈದು ಹೊಕ್ಕನು ದ್ವಾರಕಾಪುರವ (ಕುಮಾವ್ಯಾ. ೦-೦೯). ೩. ಮೈಸೂರಿನ ಅರಸರ ವಂಶ : ಯದುಕುಲವ ಕಾಯುವಾ ಶಕ್ತಿಗಳ ದಿವ್ಯಪ್ರಸಾದವಕ್ಕೆ (ಹೊಂಗಳು. ೩೨-೦೬). **ಯದುಕುಳ** : ೪. ಹೊಯ್ಸಳ ವಂಶ : ಯದುಕುಳಕುಳಾದ್ರಿಶಿಖರದೊಳುದಿಯಿಸಿದಂ . . . ವಿನಯಾದಿತ್ಯ (ಎಕ. V. ಹಸ್ನ. ೦೯೯-೯ ; 1124). [ಸಂ.]

**ಯದುಕುಲಕಾಂಭೋಜಿ** (ನಾ). [ಸಂಗೀತ] ಒಂದು ಮೇಳ ರಾಗದ ಹೆಸರು : ಯದುಕುಲ ಕಾಂಭೋಜಿ :— ಈ ರಾಗದ ನಿಜನಾಮ 'ಎರುಕಲ ಕಾಂಭೋಜಿ'. ಎರುಕಲ ಜಾತಿಯ ಅಂಬಿಗರ ದೋಣಿ ಹಾಡುಗಳ ಧಾಟಿ ಯಿಂದ ಈ ರಾಗ ರೂಪುಗೊಂಡಿತೆಂದು ತಿಳಿದುಬಂದಿದೆ (ಸಂಗೀತಂ. ೦೩೫). [ಸಂ. ಯದುಕುಲಕಾಂಭೋಜೀ]

**ಯದುಕುಲನಂದನ** (ನಾ). ಯಾದವ ವಂಶಕ್ಕೆ ಸಂತೋಷವನ್ನುಂಟು ಮಾಡುವವನು : ಕೃಷ್ಣ : ಯಾದವ ಸಿರಿ ಬಾ ಯದುಕುಲನಂದನ ಮಾಧವ ಮಧುಸೂದನ ನೀ ಬಾರೊ (ಪುರಂದ. ೦-೦೩ ಪಲ್ಲವಿ). [ಸಂ.]

**ಯದುಕುಳ** 'ಯದುಕುಲ' ನೋ.

**ಯದುಕುಳತಿಳಕ** (ನಾ). ೧. ಯಾದವ ವಂಶಕ್ಕೆ ಭೂಷಣಪ್ರಾಯ ನಾದವನು. ೨. ಹೊಯ್ಸಳವಂಶದಲ್ಲಿ ಶ್ರೇಷ್ಠನಾದವನು : ಯದುಕುಳತಿಳಕಂ ವೀರ ವಿಷ್ಣುಕ್ಷಿತೀಶಂ (ಎಕ. V, ಹಸ್ನ. ೦೯೯-೦೦ ; 1124). [ಸಂ. ಯದುಕುಲತಿಲಕ]

**ಯದುವಂಶ** (ನಾ). ೧. = ಯದುಕುಲ ೧ : ಯದುವಂಶಶ್ರೀಲಲಾಮಂ ರಿಪುಗಿರಿಕುಳಿಶಂ . . . ಅರಮನೆಯಂ ತೋರಣಾದ್ಯುನ್ನತಸೋಭಾಸ್ಪದಮಂ ಪೊಕ್ಕಂ ನೃಪೇಂದ್ರಂ (ನೇಮಿಪು. ೭-೨೦೫). ೨. ಯದುಕುಲದಲ್ಲಿ ಹುಟ್ಟಿದವನು ; ಕೃಷ್ಣ : ಪಗೆಗೆ ವಧಮಂ ಯದುವಂಶಂ [ಶಾಕಾಂ. ಶ್ಲೋ] ವಿಜಿತಂಪಾಯಂಬಂ ಚಿಂತಿಸಿನಂ (ಜಗಂ. ೯-೯೦). ೩. ಮೈಸೂರಿನ ಅರಸರ ವಂಶ : ಯದುವಂಶಂ ಪಿರಿದಾಯ್ತು . . . ಮಹೀಶೂರಣ್ಣಾರಿ ಚಕ್ರಮಂ ಪದಪಿಂ ಪಾಲಿಪ ಕಾಲಮಾಗಳೊದವಿತ್ತು (ಶಕಪ. ೩-೦೨೬). [ಸಂ.]

**ಯದೃಚ್ಛೆ** (ನಾ). ೧. ತನ್ನ ಅಪೇಕ್ಷಾನುಸಾರವಾಗಿ ನಡೆದುಕೊಳ್ಳುವಿಕೆ ; ಸ್ವೇಚ್ಛಾವರ್ತನೆ : ಸ್ವಚ್ಛಂದ ವರ್ತನೆ : "ಸ್ವಚ್ಛಂದ ನಿರ್ನಿಮಿತ್ತಂ ಯದೃಚ್ಛೆಯುಮ ತನ್ನಿಚ್ಛೆ" (ಪಂಂಗರಾ. ೦೩೩-೩೦) ೨. ಆಕಸ್ಮಿಕ : ಅನಿರೀಕ್ಷಿತವಾದ ಘಟನೆ : "ತಾಂ ನಿರ್ಹೇತುಕಮಕ್ಕುಂ ಯದೃಚ್ಛೆ" (ವಸ್ತುಕೋ. ೦೦೫-೨೭) ; ಯದೃಚ್ಛಾಲಾಭದಿಂದ ಸಂತುಷ್ಟನಾಗಿದ್ದ ವಾಜಶ್ರವಸ, ಈಗ ತನ್ನ ವಿದ್ಯೆಯಿಂದ ಧನಸಂಗ್ರಹವಾದೀತೇ . . . ಎಂದು ದಾರಿ ಕಾಯ ತೊಡಗಿದ (ಜಿತಂಪಾ. ೬೯) ; ಆ ವಿಶ್ವರೂಪಸಂದರ್ಶನದಿ ಹೊಂದಿಹುವು ಜೀವ ನಿರ್ಜೀವಗಳು, ಕ್ರಮ ಯದೃಚ್ಛೆಗಳು (ಮಂಂಕತ. ೩೨೨). ೩. [ವ್ಯಾಕ] ನಿರ್ದಿಷ್ಟವಾದ ಅರ್ಥವಾಗಲಿ, ನಿಷ್ಪತ್ತಿಯಾಗಲಿ ಇಲ್ಲದ ನಾಮಪದ : (೩). [ಸಂ. ಯದೃಚ್ಛಾ]

**ಯದ್ಭವಿಷ್ಯ** (ನಾ). ದೈವದಲ್ಲಿ ಇದ್ದಂತಾಗಲಿ ಎಂದು ನಂಬುವವನು : ದೈವವಾದಿ : "ಯದ್ಭವಿಷ್ಯಃ ದೈವಪರಃ–ಈ ೨ ದೈವಂಬೊಳ್‌ಸಿರ್ಪವಂ" (ಶಬ್ದಾದು. ೬೨-೨೨೨). [ಸಂ.]

**ಯದ್ಯಪಿ** (ಅ). ಆದರೂ ಕೂಡ ; ಆದಾಗ್ಯೂ : ನಾನು ನಾಸ್ತಿಕನೆಂದೇ ಇಟ್ಟುಕೊಳ್ಳಿ. ಯದ್ಯಪಿ ತಂದೆ ತಾಯಿಗಳ ಮೇಲೆ ನನಗೆ ಭಕ್ತಿಯಿದೆ (ರಂಣ). [P ಸಂಸ್ಕೃತದಲ್ಲಿ ಇದು 'ಯದಿ', 'ಅಪಿ' ಎಂದು ಎರಡು ಭಿನ್ನಪದಗಳು]

**ಯದ್ವಾತದ್ವಾ** (ಅ). ಅವ್ಯವಸ್ಥಿತವಾಗಿ ; ಸಿಕ್ಕಾಪಟ್ಟೆ ; ಯಾವ ಒಂದು ಕ್ರಮವೂ ಇಲ್ಲದೆ : ಹೀಗೆ ಯದ್ವಾತದ್ವಾ ಗಳಹುವುದು ನಿನ್ನ ಸ್ವಭಾವವೇ ಆಗಿದೆ (ಅಕ್ರಮ. ೯೦) ; ಈಚೆಗಂತೂ ಉಕ್ಕಿನ ಕಂಬಿಗಳ ಬೆಲೆಯೂ ಯದ್ವಾತದ್ವಾ ಏರಿಹೋಗಿದೆ (ಶಿಲ್ಪಾ. ೨೯೩). [P ಸಂಸ್ಕೃತದಲ್ಲಿ ಇದು 'ಯದ್ ವಾ', "ತದ್ ವಾ" ಎಂಬ ಎರಡು ಭಿನ್ನ ಪದಗಳು]

**ಯಮ** (ನಾ). ೧. ತಡೆದಿರುವಿಕೆ ; ಹತೋಟಿ ; ನಿಗ್ರಹ. ೨. ಇಂದ್ರಿಯನಿಗ್ರಹ ; ಆತ್ಮಸಂಯಮನ : ಇದು ಧರ್ಮಶಾಸ್ತ್ರಸಂಜನಿತ ರಹಸ್ಯಮೋ ಯಮಮೋ ಪಟ್ಟು (ಶಾಂಂಪು. ೯೯೬) ; ಯೋಗವಾರ್ಗದಲೀ ತನುವು ಮೊದಲಾದಿಂದ್ರಿಯಂಗಳ ಘನವಿರತಿಯದೆ ಯಮವೆನಿಪುದು (ಗಗಪಾ. ೨೨-೩೯). ೩. ಪಿತೃಲೋಕಾಧಿಪತಿಯೂ ದಕ್ಷಿಣದಿಕ್ಕಿನ ಅಧಿಪತಿಯೂ ಆದ ದೇವತೆ ; ಮೃತ್ಯುದೇವತೆ : "ಪ್ರೇತಪತಿ ಸಮವರ್ತಿ ಮೃತ್ಯು ಕಾಳಿಂದಿಸಹಜಾತಂ ಯಮಂ ಧರ್ಮನಂತಕಂ . . . ಕೃತಾಂತನಕ್ಕುಂ" (ಪಂಂಗರಾ. ೦೫-೦೦) : ಅಪುರಾಧಿರಾಜ ಹುತವಹ ಯಮ . . . ಯಕ್ಷೇಶಾನಕ್ರಮದಿನವರಣ್ಬರಂತುತ್ತಮನೆಯ್ ನೀಂ ನವಮಲೋಕಪಾಳನೆ ಅವರೊಳ್ (ಶಬರಾ. ೩-೯೬) ; ಯಮಜಠರಾ ನಳಮೋನಧಿಕಮೊ (ಮಲ್ಲಿಪು. ೦೩-೦೦೦) ; ಈ ಪ್ರಾಣಿಗಳನ್ನೆಲ್ಲ ಒಂದು ನಿಯಮದ ಕಟ್ಟಿನಲ್ಲಿ ಇಟ್ಟಿದ್ದೀಯೆ . . . ಆದ್ದರಿಂದಲೇ ನಿನಗೆ 'ಯಮ' ನೆಂದು ಹೆಸರು (ಪಶಾ. ೧೬೨). ೪. ಶನಿಗ್ರಹ : ಯಮ ದನುಜೇಂದ್ರ ವಂದ್ಯರಹಿತಂ ರವಿಮಂಡಲದೊಳ್ ಗ್ರಹೇಗಳಸ್ತಮಿಸಿದೊಡೆ . . . ತದರ್ಧಮನ [ಟೀಕು] . . . ಕುಡುವಾಯುವಿನೊಳ್ (ಜಾತಕ. ೬-೪). ೫. ಜೊತೆ ; ಜೋಡಿ. ೬. ನಿತ್ಯವೂ ಮಾಡಬೇಕಾದ ಧಾರ್ಮಿಕ ಕ್ರಿಯೆ ; ನಿತ್ಯಕರ್ಮ : "ನಿತ್ಯಕರ್ಮಮದು ಯಮಮುಕ್ಕುಂ" (ವಸ್ತುಕೋ. ೫೬-೩೬). ೭. [ಗಣಿತ] ಎರಡು ಎಂಬ ಸಂಖ್ಯೆಯ ಸಂಕೇತ : ಯಮ ನಯನ. . .ಕಿವಿಗಳೆರಡಱ ನಾಮಂ (ವೃಪಶಾ. ೯-೨). ೮. [ಯೋಗ] ಅಷ್ಟಾಂಗಯೋಗದ ಎಂಟು ಅಂಗಗಳಲ್ಲಿ ಮೊದಲನೆ ಯದು ; ಹಿಂಸೆ, ಅಸತ್ಯ, ಕಳವು, ದುರಾಚಾರ, ಪರಿಗ್ರಹ ಈ ಐದನ್ನು ಬಿಡುವುದು : "ಯಮ ನಿಯಮಾದಿ ನಿಜಯೋಗಮಕ್ಕು" (ಪಂಂಗರಾ. ೬೬-೦೨) ; ಯಮ ನಿಯಮ ಸ್ವಾಧ್ಯಾಯಕ್ರಮದಿಂದ ನೆಗಟಿರ್ದೊಡಲ್ಲದಾಗದು (ಜಪಾಕ. ೨೬) ; ಯಮ ನಿಯಮ ಸ್ವಾಧ್ಯಾಯ ಧ್ಯಾನ ಧಾರಣ ಮೌನಾನುಷ್ಠಾನ ಜಪ ಸಮಾಧಿಶೀಳಸಂಪನ್ನರ್ . . . ಶ್ರೀಮದಯ್ಯಗಳ್ (ಕೌ೨೩. XX, ೯೬-೦೬ ; 1072) ; ಯಮನಿಯಮಾ ಸನಾದಿ ವಿವಿಧಕ್ರಮದಿಂ ಗಿರಿತಳ್ಪದೊಳ್ ಮನೋರಮಣೆಯುಂತು ತಪಶ್ಚರಣಮಂ ತಳೆದು (ದಶಕು. ೫-೭೦). ೯. (ಆಲು) ಅಧಿಕ ವಾದುದು ; ಹೆಚ್ಚಾದುದು : 'ಯಮಭಾರ' ಪರಾ.

ಯಮನವರು = ಯಮಧರ್ಮರಾಯನ ಭಟರು ; ಯಮ ದೂತರು : ಸಾಯಲಾಜಿನು ಎನಲು ಕುಸುರಿದಬಿಡದೆ ಬಿಡರು ಯಮನವರು (ಪುರಂದ. ೨-೬೦-೩). [ಸಂ.]

**ಯಮಕ** (ನಾ). ೧. ನಿಗ್ರಹ ; ತಡೆ ; ಹತೋಟಿ. ೨. ಧಾರ್ಮಿಕ ಕರ್ತವ್ಯ ; ನಿತ್ಯಕರ್ಮ. ೩. ಅವಳಿ ; ಯಮಳ. ೪. ಜೊತೆ ; ಜೋಡಿ : 'ಯಮಕಗಿರಿ' ಪರಾ. ೫. ಇಮ್ಮಡಿ ; ಎರಡು ಪಟ್ಟು. ೬. ಎಣ್ಣೆ ಮತ್ತು ತುಪ್ಪದ ಮಿಶ್ರಣ : ಈ ಘೃತ ತೈಲಗಳ ಸಂಯೋಗಕ್ಕೆ ಯಮಕವೆಂದು ವೈದ್ಯಶಾಸ್ತ್ರದಲ್ಲಿ ಹೆಸರಿದೆ (ಶೀಮುಸೂ. ೫-೧೧ ೬೨೪). ೭. ಗದಾಯುದ್ಧದ ವರಸೆಗಳಲ್ಲಿ ಒಂದು ; ಒಂದು ಗತಿ ವಿಶೇಷ : ಭೀಮನು ಅದನ್ನು ಅರ್ಥಮಾಡಿಕೊಂಡು, ಮಂಡಲಗಳು, ಯಮಕಗಳು, ಗೋಮೂತ್ರಿಕೆ ಮುಂತಾದ ಚಿತ್ರವಿಚಿತ್ರವಾದ ಗತಿಗಳಲ್ಲಿ ಓಡಾಡುತ್ತ ಎದುರಾಳಿಯನ್ನು ಬುದ್ಧಿಭ್ರಮೆಗೊಳಿಸುವುದಕ್ಕೆ ಪ್ರಯತ್ನ ಪಟ್ಟನು (ವಚಭಾ. ೩೧೭). ೮. [ಕಾವ್ಯಮೀ] ಶಬ್ದಾಲಂಕಾರಗಳಲ್ಲಿ ಒಂದು ಪ್ರಭೇದ ; "ಮೂರು ಅಥವಾ ಅದಕ್ಕಿಂತ ಹೆಚ್ಚಿನ ಅಕ್ಷರ ಗಳುಳ್ಳ ಪದವೋ ಪದಭಾಗವೋ ಒಂದು ಪದ್ಯದ ಆದಿ, ಮಧ್ಯ, ಅಂತ್ಯ ಈ ಸ್ಥಾನಗಳಲ್ಲಿ ನಿಯತವಾಗಿ ಪುನಃಪುನಃ ಬಂದರೆ ಅದಕ್ಕೆ ಯಮಕವೆಂದು ಹೆಸರು" (ಕೈಪಿ. ೨೫೪) : ಯಮಕಂ [ಪ]ದಾ ಪಾದಾರ್ಧ ಸಮಶ್ಲೋಕ[ಸು]ಗೋಚರಂ ಪ್ರಮಿತಾದ್ಯಂತದೂಷ್ಮೋಪ ಕ್ರಮಾನೇಕ ಪ್ರಕಲ್ಪಿತಂ (ಕವಿರಾ. ೨-೦೨೪) ; ಯಮಕದ ಗಮಕದ ಬಿನ್ನಣ ಮಮರ್ವಿನೆಗಂ ತತ್ತ್ವಮುಂ ಕವಿತ್ವಮುಮೆತ್ತಂ ಸಮಸಂದಿರೆ ಪೇಟ್ಸ್ಟೋಜಿಗೆ ಸಮನಿಲ್ಲ ಧನಂಜಯಂಗೆ ಕವಿತಾಗಮಿಕರ್ (ಸುಕುಮಾ. ೦-೩೬) ; ಇವು. . . ಪ್ರಾಸದೆಡೆಗೆ ಸಲ್ಲವು ಯಮಕವ್ಯವಹೃತಿಗಾಗವು (ಶಬ್ದ. ೦೯). [ಸಂ.]

**ಯಮಕಗಿರಿ** (ನಾ). ಜೋಡು ಬೆಟ್ಟ: ಇರ್ಕೆಲದೊಳ್ . . . ಎರಡೆರಡುಂ ಯಮಕಗಿರಿಗಳಪ್ಪುವು (ತತ್ತ್ವಕ್ರ. ೦೫೩). [ಸಂ.]

**ಯಮಕಿಂಕರ** (ನಾ). ಯಮನ ಆಳು ; ಯಮದೂತ : ಸಿರಿ ಬ್ರಹ್ಮಾದಿ ಗಳೊಡೆಯನು ಪರಿಯಿರಲಾಗಿ ಹಿರಿಯನೊಡೆಯನೆಂದು ಕಲ್ಪಿಸುತ ಸರತೊಟ್ಟಲೇಬಿಸಿ ಪೆಸರಿಟ್ಟು ಕರೆವೆ ನಿನ್ನವರೆ ಯಮಕಿಂಕರರ ಕೇಳಿ ಮಾಳಿ (ಪುರಂದ. ೪-೫೦-೯). [ಸಂ.]

**ಯಮಕು** (ನಾ). ಜಂಬ ; ಠೀವಿ ; ದಿಮಾಕು : ಶಾಂತರಾಜನು ನಮ್ಮ ನಾಗಿದ್ದರೂ ಯಮಕಿನಿಂದ ನುಡಿದನು (ಯದುಂಗ. ೬೨) ; ಹೌದ ಹುಡುಗೀ! ಏನು ಯಮಕು ಅಂದೀ ! ಕಾರಿನೊಳಗಿಂದ ಇಳಿಯೋದೂ ಒಂದು ಸೊಬಗು (ಬಾಂತಹು. ೫). [ ? ]

**ಯಮಗಂಡಕಾಲ** (ನಾ). [ಜ್ಯೋತಿ](ಪ್ರಾಣಾಪಾಯವನ್ನು ಸೂಚಿಸುವ) ಅಶುಭಕಾಲ : ಯಮಗಂಡಕಾಲದಲ್ಲಿ ಪ್ರಯಾಣ ಹೊರಟಿದ್ದಕ್ಕೆ ಸರಿಯಾಗಿ ಆ ಗುಂಪು ಅಪಘಾತಕ್ಕೀಡಾಯಿತು (ರೂಢಿ). [ಸಂ.]

**ಯಮಗೊಲೆ** (ನಾ). (ಅಲಂ) ನರಕಯಾತನೆ ; ಭೀಕರವಾದ ಹಿಂಸೆ : ಬೇಡಿಕೊಂಬುವೆ ನಿನ್ನಾ . . . ಕೆಂಗೆಂಡದೊಳು ಹುರಿವ ಯಮಗೊಲೆಗಳುಕಿ ಸಾಯಲಾಜಿದಲೆ (ಕೃಕವ. ೦-೦೯-೯). [ಯಮ + ಕೊಲ್ಲೆ]

**ಯಮಜ** (ನಾ). ೧. ಅವಳಿ. ೨. ಯಮಧರ್ಮರಾಯನ ಮಗ ; ಯುಧಿಷ್ಠಿರ : ಯಮಜನೊಳ್ ಪುದುವಾಟಿಂ (ಗದಾಯು. ೪-೧೧). [ಸಂ.]

**ಯಮತಾತ** (ನಾ). ಯಮನ ತಂದೆ ; ಸೂರ್ಯ : ಪೂತಾತ್ಮ ಮುನಿ ಹೃದಯವನಜಾತ ಯಮತಾತ . . . ಸಂಗಮೇಶ್ವರ ಓತು ರಕ್ಷಿಸೆನ್ನಂ (ಶ್ರೀಶರಾ. ೪-೧).
[ಸಂ.]

**ಯಮದಂಡ** (ನಾ). ೧. ಯಮನ ಆಯುಧ, – ಗದೆ : ಮತ್ತೇಭವಧ ಪ್ರಚಂಡ ಯಮದಂಡವದೇಂ ಮಾಣ್ಬುದೆ ಪಿಪೀಲಿಕಾವಧವಿಧಿಯಂ (ಜಗಪು. ೨-೫೪) ; ಯಮದಂಡಾ [ಕಾಕಾಂ. ತಾ]ಶನಿಪಾತದೊಂದು ಸವಿಯಂ ಶ್ರೀಸಿಂಹಸೇನಪ್ರತಾಪವಮುಸುಗ್ರಾಜಿಯೊಳುಂಡು ಕೇಡು ಬಟ್ಟಿಯುಂ ಪ್ರಾಣೈಕಮಾತ್ರಾಪ್ರಾಣವಮಹಾಲಾಭದಿಂ . . . ಬಾ ಬ್ಬ ರಿ ಳೆ ಯೊ ಳ್ ವೀರಾರಿಭೂಪಾಲಕರ್ (ಅನಂತ. ೨-೮) ; ಯಮದಂಡವಮಂ ಪೋಲ್ವ ಗದೆಯುಂ ಕೊಂಡು ಮತ್ತೆ ಪೂರುತಸುತಂ ಮೇಲ್ವಾಯ್ದು ಬರಲ್ (ಕೃಪಿಚಾ. ೬-೯೯). ೨. ಯಮನು ಕೊಡುವ ಶಿಕ್ಷೆ ; ಸಾವು : ಕಂಡು ಲಿಂಗವನು ಪೂಜಿಸದವಗೆ ಯಮದಂಡ ಕಾಣಯ್ಯ (ಸರ್ವಜ್ಞ. ೦೫೯). [ಸಂ.]

**ಯಮದಶಮ** (ನಾ). [ಯೋಗ] ಅಷ್ಟಾಂಗಯೋಗಗಳಲ್ಲಿ ಮೊದಲನೆಯ ದಾದ ಯಮದ ಹತ್ತು ಪ್ರಕಾರಗಳು ; ೯ ಅಹಿಂಸೆ, ಸತ್ಯ, ಅಸ್ತೇಯ, ಬ್ರಹ್ಮಚರ್ಯ, ಕ್ಷಮೆ, ಧೃತಿ, ದಯೆ, ಆರ್ಜವ, ಮಿತಾಹಾರ ಮತ್ತು ಶೌಚ : ವಿಸ್ತರಿಸುವೆವು ಯಮದಶಮಗಳ ಮತ್ತೆ ತಿಳಿಯಲಹಿಂಸೆ ಸತ್ಯಾಸ್ತೇಯದಾ ಬಳಿಕ ತನಯ ತಿಳಿಯಾ ಬ್ರಹ್ಮಚರ್ಯವು ಕ್ಷಮೆಯು ಧೃತಿ ದಯೆ ಆರ್ಜವವು ಅನುದಿನದಿ ಮಿತಭೋಜನವು ಶೌಚಾದಿಗಳು ಯಮವಹವು (ಗಗತಾ. ೦೦-೬೬). [ಸಂ.]

**ಯಮದೂತ** (ನಾ). ೧. ಮೃತ್ಯುದೇವತೆಯ ಆಜ್ಞಾನುಸಾರವಾಗಿ ಜೀವಗಳನ್ನು ಯಮನ ಆಸ್ಥಾನಕ್ಕೆ ಎಳೆದೊಯ್ಯುವ ದೂತ ; ಯಮದೇವನ ಆಳು : ಕಣೆಗಳ್ ನೆಱನಂ ಬಿಡೆ ನಟ್ಟು ಸುಭಟರಸುವಂ ನಡೆಯಿಸಿದುವು ಯಮಪುರಕ್ಕೆ ಯಮದೂತರವೋಲ್ (ಶಂಠಾಪಮಾ. ೦೩-೪೨) ; ಲಿಂಗವ ಪೂಜೆಯ ಮಾಡಿ ಜಂಗಮವ ಕಂಡುದಾಸೀನವ ಮಾಡಿದರೆ . . . ಲೋಕದ ಕರ್ಮಿಗಳಿಗೆ ಮಾಡಿದ ಯಮದೂತರ ದಂಡವೆಂಬುದು (ಬಸವ. ೪೨೩) ; ಯಮದೂತರು ಬಂದು ಎಳೆದಾಗ . . . ಪುರಂದರವಿಠಲನ್ನ ನಾಮವು ಕಾಲವಾಗೋ ಸಮಯಕ್ಕೆ ಬರುವುದೇನಯ್ಯ (ಪುರಂದ. ೦-೦೫೫-೩). ೨. (ಅಲಂ) ಸ್ಥೂಲವಾಗಿಯೂ ಒರಟಾಗಿಯೂ ಇರುವ ವ್ಯಕ್ತಿ ; ದಾಂಡಿಗ. [ಸಂ.]

**ಯಮದ್ವಿತೀಯೆ** (ನಾ). ಕಾರ್ತಿಕ ಶುದ್ಧ ಬಿದಿಗೆಯಂದು ಸೋದರಿ ಯರು ಅಣ್ಣತಮ್ಮಂದಿರನ್ನು ಬರಮಾಡಿಕೊಂಡು ಸತ್ಕರಿಸುವ ಹಬ್ಬ ; ಭಾವಬಿದಿಗೆ : ಯಮಧರ್ಮ ತನ್ನ ಸೋದರಿಯಾದ ಯಮಿ ಅಥವಾ ಯಮುನೆಯ ಮನೆಗೆ ಈ ದ್ವಿತೀಯೆಯ ದಿವಸ ಬಂದಿದ್ದ . . . ಈ ಕಥಾ ಸಂಬಂಧದಿಂದ ಇದು ಯಮದ್ವಿತೀಯೆಯಾಗಿದೆ (ಹಾಹಬ್ಬ. ೦೫೦). 'ಭಾವಬಿದಿಗೆ' ಹೋ. [ಸಂ. ಯಮದ್ವಿತೀಯಾ]

**ಯಮಧರ್ಮ** (ನಾ). = ಯಮ ೩ : ಜರುಗಿದ ಪಾಪಂಗಳೆಲ್ಲ ಅನ್ಯ ನರರೇನ ಬಲ್ಲರು ಯಮಧರ್ಮ ಬಲ್ಲ (ಪುರಂದ. ಭಾ. ೨-೨೩-೩) ; ಯಮಧರ್ಮ ನಮ್ಮಂಥವರಿಗೆ, ನಿನ್ನ ಹಾಗೆ ಪ್ರಾಯದ ಹುಡುಗರಿಗೆ ಅಲ್ಲ (ಮರಪು. ೩೨೦). [ಸಂ.]

**ಯಮಧರ್ಮರಾಯ** (ನಾ). = ಯಮ ೩ : ಸುಮ್ಮನೆ ಕಾಲವ ಕಳೆವರೆ ಯಮಧರ್ಮರಾಯನ ದೂತರೆಳೆಯರೆ (ಪುರಂದ. ಭಾ. ೨-೬ ಪಲ್ಲವಿ) ; ಯಮಧರ್ಮರಾಯನ ರಾಜಧಾನಿಯಾದ ಸಂಯಮನೀನಗರದಲ್ಲಿಂದು ಏನೋ ಒಂದು ಬಗೆಯ ಅಪೂರ್ವಉತ್ಸಾಹ (ಬಿಕಂಬಾ. ೦೬೩). [ಸಂ.]

**ಯಮನ** (ನಾ). ಹತೋಟಿ ; ನಿಗ್ರಹ. [ಸಂ.]

**ಯಮನಂದನ** (ನಾ). = ಯಮಜ ೨ : ಅನ್ನೆಗಮತ್ತ ಯಮನಂದನನಂ ಮೂವರ್ ತಮ್ಮಂದಿರ ಬರವಂ ಕಾಣದೆ ಭಗ್ನಮನನಾಗಿ (ಶಂಪಭಾ. ೮-೯೦ ವ) ; ಯಮನಂದನನಾದಿಗಳಳಲಿ ನುಡಿದರು ದೈತ್ಯಜಯಸಂಶಯದ ಭೇದದಲಿ (ಕುವ್ಯಾಕ. ೦೦-೨೦). [ಸಂ.]

**ಯಮನಗರಿ** (ನಾ). ಯಮನ ಪಟ್ಟಣ ; ಯಮಪುರ : ಮಾನವೇಂದ್ರನು ಮಡಿದೊಡಾತನನೂನಲಕ್ಷ್ಮಿಯಲಕ್ಷ್ಮಿಯಾಯಿತ್ತಾ ನಗರಿಯಾ ಯಮನಗರಿ ಯೊಲಾಯ್ತು (ಬಿಕಪು. ೬೦-೩೯). [ಸಂ. ಯಮನಗರೀ]

**ಯಮನಿ** (ನಾ). ಒಂದು ಬಗೆಯ ಸಸ್ಯ : "ಗಿಣಿಗಿಣಿಕೆ ಯಮನಿ [ಪಾಠಾಂ. ವರುಣ]ಯಕ್ಕು" (ಪಾಂಗರಾ. ೪೨-೩೭).
[< ಸಂ. ಯಮಾನೀ = ಅಜವಾನ ]

**ಯಮನಿಕೇತನ** (ನಾ). ಯಮನ ನಿವಾಸ ; ಯಮಲೋಕ : ಈತನಂ ಯಮನಿಕೇತನಕ್ಕಟ್ಟುವುದೆ ನಯಂ (ಪಂಪಭಾ. ೨೪೪-೮). [ಸಂ.]

**ಯಮಪಾಕುಳ** (ನಾ). (ಅಲಂ) ಅತ್ಯಂತ ಹೇಸಿಗೆಯಾದುದು : ಬಸವನ ಹೆಸರ ಬಸದಿಯಂ ಕಟ್ಟಿಸಿ ತನ್ನ ಪಾತ್ರಕವ ಕಳೆದುಕೊಂಬವನ ದೇವರೆಂದು ಬೊಗಳುವ ನಾಯ ಬಾಯಿ ಯಮಪಾಕುಳ ತಪ್ಪದು (ಅಪ್ರಬಂ. ೧೨೮-೭೨೦); ನಿಮಗೆ ಕಿಱುಕುಳದೈವಂಗಳ ಸಮವೆಂದು ಬಗುಳುವನ ಬಾಯಿ ಯಮ ಪಾಕುಳ ತಪ್ಪದು (ಗಣಭಾ. ೭೮-೦). [ಯಮ + ಪಾಕುಳ]

**ಯಮಪಾಶ** (ನಾ). ಯಮನ ಹಗ್ಗ,— ಉರುಳು : ಯಮಪಾಶಂ ಪಗೆವಂಗೆ ಕಲ್ಪಲತೆ ಕೈಯಾಂತಂಗೆನಲ್ ಚಂಡವಿಕ್ರಮಮುಂ ಚಾಗದ ಪೆರ್ಮೆಯುಂ ಮೆಱೆಯದನ್ಯಸ್ತ್ರೀ ಕಚಾಕರ್ಷಣ ಶ್ರಮಸಂಭೋಗ ವಿಳಾಸಮುಂ ಮೆಱೆವ ಬಾಹಾಸಂಗದಿಂ ಪಿಂಗದಿರ್ಪಮೆ ವೀರಾಂಗನೆ (ಶಂಕರಪಟ. ೧೨-೭೦) ; ಯಮಪಾಶದಿಂದ ತಪ್ಪಿಸಿಕೊಂಡವನು ಅಮರನಾಗುವನು (ಮಹಾಪ. ೯೫).
[ಸಂ.]

**ಯಮಪುತ್ರ** (ನಾ). = ಯಮಜ ೨ : ದೊರೆ ಯಮಪುತ್ರನಿರ್ದಿರವು ವಾಯುಜನಿರ್ದಿರವು . . . ಮತ್ಸ್ಯನಿವಾಸದೊಳಿಲ್ಲಮಂತೆ ಮೆಯ್ಗರೆದಿರೆ (ಗದಾಯು. ೩-೩೦). [ಸಂ.]

**ಯಮಪುರ** (ನಾ). ಯಮನ ಪಟ್ಟಣ ; ಸಂಯಮನೀನಗರ : ಈ ದೊರೆಯಱಮಗನುಂ ವೃಷಪಾದಂ ನೋಡೆಂದು ಧರ್ಮನಂ ಮೂದಲಿಸಲ್ ಪೋದಂ ಪುತ್ರನನಱಸಲ್ಪೋದನೆ ಯಮಪುರಕೆ ಮುಕ್ತಬಾಣಂ ದ್ರೋಣಂ (ಗದಾಯು. ೩-೨೫) ; ಮುಂದಣಸುರರು ಹಾದಿಯನು ಸವೆಱಿದರು ಯಮ ಪುರದತ್ತ ಪಯಣಕ್ಕೆ (ಕೌಶಿರಾ. ೨೦-೧೭). [ಸಂ.]

**ಯಮಬಲ** (ನಾ). ಅಧಿಕವಾದ ಶಕ್ತಿಯುಳ್ಳವನು ; ಮಹಾಬಲಶಾಲಿ : ಯಮಬಲನಪ್ಪ ಬಲಂ ... .ರಣೋದ್ಯಮನಾದಂ ಭುಜಬಲವದ್ವಿತಾರಿಗೆ ಪಾರಿಜಾಕ್ಷನಭಿಮುಖನಾದಂ (ಶಾಂತೀಶ. ೮-೯೩). [ಸಂ.]

**ಯಮಬಾಧೆ** (ನಾ). ೧. ನರಕದಲ್ಲಿ ಯಮನು ಕೊಡುವ ಹಿಂಸೆ. ೨. (ಅಲಂ) ತೀವ್ರವಾದ ಹಿಂಸೆ. [ಸಂ. ಯಮಬಾಧಾ]

**ಯಮಭಾರ** (ನಾ). (ಅಲಂ) ಅತ್ಯಂತ ಭಾರವಾದುದು : ಆಯಾಸದಿಂದ ಯಮಭಾರವಾಗಿತ್ತು ಮೈ (ತಗಃಶ. ೬೨) ; ಎರಡು ಪಾಲಿನ ಹಸಿ ಮಿಾನು, ಯಮಭಾರ (ಹೊಸಕ್ಷ. ೫೦). [ಸಂ.]

**ಯಮಮಾಯೆ** (ನಾ). ಒಂದು ನರಕದ ಹೆಸರು: ಯಮಾನುಗ . . . ಅಚಿರಂತನವೆಂಬೈದು ಮಂತ್ರಿನರಕಂಗಳಿಂ ಸಂಪನ್ನಮಾಗಿ ಯಮಮಾಯೆ ಯೆಂ[ಪಾಠಾಂ. ಮಾಯಾಖ್ಯಮೆಂ]ಬರಸುನರಕಮಿಹುದು (ವಿವೇಕ. ೧೫೩).
[ಸಂ. ಯಮಮಾಯಾ]

**ಯಮಯಾತನೆ** (ನಾ). ೧. = ಯಮಬಾಧೆ ೧. ೨.(ಅಲಂ) ತೀವ್ರವಾದ ಹಿಂಸೆ : ಕಡುಕಷ್ಟ : ನೋವು . . . ಯಮಯಾತನೆಯನ್ನು ಹಲ್ಲುಕಚ್ಚಿ ಸಹಿಸಿಕೊಂಡು ಮೇಲೆದ್ದು ಕಾಲ ಮೇಲೆ ನಿಲ್ಲಲು ಮಹಾಸಾಹಸ ಮಾಡಿದನು (ಕಾಮರು. ೪೨೩). [ಸಂ. ಯಮಯಾತನಾ]

**ಯಮರಾಜ** (ನಾ). = ಯಮ ೩ : ಯಮರಾಜನನದ್ಭುತತೇಜನಂ ಸರೋಜಾನನೆ ಜಾನದಿ ಬರಿಸೆ (ಶಂಕಭಾ. ೦-೦೦೯) ; ಯಮರಾಜಂ ತಂದೆ ಭೋಜಪ್ರಭವೆ ತನಗೆ ತಾಯ್ ಮಯ್ದುನಂ ವಾಸುದೇವಂ (ಗದಾಯು. ೩-೧೮). [ಸಂ. ಯಮರಾಜನ್]

**ಯಮಲ**, ಯಮಳ (ನಾ). ೧. ಜೊತೆ: ಜೋಡಿ: 'ಯಮಲಮರ್ದಲ' ಪರ್ಯಾ. ೨. [ಗಣಿತ] ಎರಡು ಎಂಬ ಸಂಖ್ಯೆಯ ಸಂಕೇತ. ಯಮಳ : ೧. "ಯಮಳಂ=ಜೋಡು" (ಶಾಶ್ವ. ೦೪೪). ೨. ಯಮಳಾಂಘ್ರಿ ದ್ವಿಯಕ್ಷಿ ಪಕ್ಷ ನೇತ್ರಂ . . . ಎರಡಱ ನಾಮಂ (ವ್ಯವಹಾ. ೯-೨). ೩. ಒಂದೇ ಹೆರಿಗೆಯಲ್ಲಿ ಹುಟ್ಟಿದ ಎರಡು ಮಕ್ಕಳು ; ಅವಳಿಜವಳಿ : ಬಿಸಜಾತಪ್ರಿಯ ಮಂತ್ರಿಗಳ್ ಬಳಯಾತ್ರರ್ ಮಧ್ಯಂಗಳೊಳ್ ನಿಂದೊಡಿಂದು ಸುತಂ ವೀಕ್ಷಿಸೆ ಕೂಡುಗುಂ ಯಮಳಪುಂಜನ್ಮಂ ಬಱಿಕ್ಕಲ್ಲಿ ಸೋಮ ಸಿತ್ಕಾರರ್ ನಿಲೆ ಚಾಂದ್ರಿ ನೋಡೆ ಯಮಳಸ್ತ್ರೀಜನ್ಮಂ (ಜಾತಕ. ೩-೦೩) ; ಧರಿಸಿದಳು ದಿತಿ ಗರ್ಭವನು . . . ಕಾಲಾಂತರಕೆ ಪಡೆದಳು ಯಮಳರನು (ಶಿಭಾಗ. ೩-೮-೦). ೪. ಅವಳಿಮಕ್ಕಳಾದ ನಕುಲ ಮತ್ತು ಸಹದೇವ : ಅಡವಿಯ ಕಾಯಂ ಪಣ್ಣುಮನುದಿರ್ಪ ತಿಂದಗಲದೆ ನಿಂದೀ ಯಮಳರಾವ ತೆಱದಿಂ ನೋಯಿಸರಯ್ ನಿನ್ನ ನನ್ನಿಕಾಱನ ಮನಮಂ (ಶಂಕಭಾ. ೭-೪೮) ; ಮಧ್ಯಮದ ಪಾಂಡವನೈತರುತ . . . ಸರಸಿಯ ತೀರದಲಿ ಕೀಲಿಸಿದ ಮಗ್ಗುಲಲಿ ಯಮಳರೊಱಗಿರೆ ಕಂಡು ಮನದಲಿ ತಮವ ಹಿಡಿದನು (ಕುಮಾ. ೨೩-೨೩). ೫. ಅವಳಿ ಮಕ್ಕಳಾದ ಲವ ಮತ್ತು ಕುಶ : ಜಾನಕಿಯ ಶುಶ್ರೂಷೆಯೊಳ್ಸಂದು ಋಷಿಯ ಚಿತ್ರಕ್ಕೆ ಬಂದು ಯಮಳರಿರೆ ಕಂಡು ಸಂಪ್ರೀತಿಯಿಂ ತಾಪಸೋತ್ತಮನಿತ್ತನಿಷುಚಾಪಚರ್ಮಖಡ್ಗಂಗಳಂ (ಜೈಮಿಭಾ. ೨೦-೦). ೬. ಅಶ್ವಿನೀದೇವತೆಗಳು : ಎಲೈ ಯಮಳರೆ, ತಾವು ಹೇಳಿರುವ ವಿಧಾನವನ್ನು ಮಾಡುವುದು ತಮ್ಮಿಂದಲೇ ಸಾಧ್ಯ (ಮಹಾಪ. ೯೫). [ಸಂ.]

**ಯಮಲಮರ್ದಲ**, ಯಮಳಮರ್ದಳ (ನಾ). ಜೋಡಿಮದ್ದಳೆ ; ಮದ್ದಳೆಗಳ ಜೊತೆ : (೬). **ಯಮಳಮರ್ದಳ** : ಯಮಳಮರ್ದಳ — ಜವಳಿಮದ್ದಳೆ (ಕಮದ. ೨೯೨ ಪ್ರಯೋ). [ಸಂ.]

**ಯಮಲಿ** (ನಾ). ಬಟ್ಟೆಯ ಎರಡು ತುಂಡುಗಳಿಂದ ರಚಿಸಿದ ಪೋಷಾಕು,—ಉಡುಪು. [ಸಂ. ಯಮಲೀ]

**ಯಮಲೋಕ** (ನಾ). ಯಮಧರ್ಮರಾಯನ ಲೋಕ : ನಾನು ಯಜ್ಞ ಬಲಿಯಾಗಿ ಯಮಲೋಕಕ್ಕೆ ಬಂದಿದ್ದೇನೆ (ಬಕಂಬಾ. ೧೮೦). [ಸಂ.]

**ಯಮಸಮಾಧಿ** (ನಾ). [ಯೋಗ] ಇಂದ್ರಿಯನಿಗ್ರಹದಿಂದ ಕೂಡಿದ ಸಮಾಧಿ : ಯಮಸಮಭೀಕರಂ ಯಮಸಮಾಧಿಯಿನೀಶ್ವರನಿಂ ವರಂ ವರಂ ಸಮನಿಪ ಬಾಣನೀ ಸುರರ್ಗೆ ಹೃದ್ಗತಬಾಣನೆ ಬಲ್ಲಿಂ (ಜಗಭಿ. ೧-೭೨).
[ಸಂ.]

**ಯಮಸುತ** (ನಾ). = ಯಮಜ ೨ : ಯಮಸುತನಣ್ಮ ಸತ್ತೆಯೆನುತುಂ ನಿಶಿತಾಸ್ತ್ರಮನುರ್ಚಿಕೊಂಡು ವಕ್ಷಮನಿರದೆಚ್ಚೊಡೆ (ಶಂಕಭಾ. ೧೨-೦೧೭) ; ಯಮಸುತನಿಂಬುಕೆಯ್ವನೆಮಗಿನ್ನುಮೊಡಂಬಡು ಕಂದ ಸಂಧಿಯಂ ಸಮ ಗೊಳಿಸಲ್ಕೆ ಸಂಜಯನನಟ್ಟುವೆ (ಗದಾಯು. ೩-೬೫) ; ಯಮಸುತನ ರಾಣಿಗಕ್ಷಯವಸನವನಿತ್ತೆ (ಕಪಕ. ೦೩೭-೩). [ಸಂ.]

**ಯಮಹರ** (ನಾ). ಯಮನನ್ನು ಜಯಿಸಿದವನು ; ಶಿವ : ಅಸಮನೇತ್ರನು ಯಮಹರನು ಮೃತ್ಯುಭಯಹರನು (ಬಸವ. ೪೭-೩೩). [ಸಂ.]

**ಯಮಳ** 'ಯಮಲ' ನೋ.

**ಯಮಳಕಂಟಕ** (ನಾ). ಒಂದು ಬಗೆಯ ಸಸ್ಯ : "ಯಮಳಕಂಟಕಃ— ಮುಂಡಗಳ್ಳಿ" (ಓಷಧಿ. ೧೩೨). [ ? ]

**ಯಮಳಮರ್ದಳ** 'ಯಮಲಮರ್ದಲ' ನೋ.

**ಯಮಳೆ** (ನಾ). (ವಾಂತಿಯೊಡನೆ ಬರುವ) ಒಂದು ಬಗೆಯ ಬಿಕ್ಕಳು : ಆಹಾರವ ತೆಗೆದುಕೊಳ್ಳುವಲ್ಲಿ ವಮನಾಕಾರವಾಗಿ ಆಗುವ ಬಿಕ್ಕಳು ಯಮಳೆ ಎನಿಸಿಕೊಳ್ಳುವುದು (ಸಕವ್ಯ. ೨೪೦). [ಸಂ. ಯಮಲಾ]

**ಯಮಾನುಗ** (ನಾ). ಒಂದು ನರಕದ ಹೆಸರು : ಯಮಾನುಗ . . . ತೀವ್ರ ಅಚಿರಂತನವೆಂಬೈದು ಮಂತ್ರಿನರಕಂಗಳಿಂ ಸಂಪನ್ನಮಾಗಿ ಮಾಯಾಖ್ಯ ಮೆಂಬರಸುನರಕಮಿಹುದು (ವಿವೇಕ. ೧೫೩). [ಸಂ.]

**ಯಮಾನುಜೆ** (ನಾ). ಯಮುನಾ ನದಿಯ ಹೆಸರು : "ಯಮಾನುಜೆಯೆನಲು ಯಮುನೆಯಕ್ಕುಂ" (ಮಂಗರಾ. ೦೨೨-೦೦).
[ಸಂ. ಯಮಾನುಜಾ]

**ಯಮಾಸೆ** (ನಾ). ಯಮನ ದಿಕ್ಕು; ದಕ್ಷಿಣದಿಕ್ಕು : ಅಮರಾಸೆಯನಜ ಹರಿ ಧನು ಯಮಾಸೆಯಂ ವೃಷಭ ಕನ್ಯಕಾಮಕರಂ . . . ಆಳ್ಗುಂ (ಜಾತಿತಿ. ೦-೨೯). [ಯಮ + ಆಸೆ]

**ಯಮಿ₁** (ನಾ). ಇಂದ್ರಿಯನಿಗ್ರಹ ಮಾಡಿದವನು ; ಸಂಯಮಿ ; ತಪಸ್ವಿ: ಯಮಿಗಳುಮಂ ಮೋಹಿಪ ವಿಷ್ಣುಮಾಯೆ ಮೋಹಿಸದೆ ಗೋಪರಂ (ಜಗಂ. ೩-೬೩) ; ಯಮಿಗಳ್ ವಿಶಾಖದತ್ತಪ್ರಮುಖರ್ . . . ತೊಳಗಿದರ್ (ವರ್ಧಮ. ೦೬-೮೮) ; ಯಮಿಗಳ ಅಂಗಳಕಸಮಂ ಸಮಯಂದಪ್ಪದೆ ತೊಡೆವುವು ಚಮರೀಮೃಗಂ (ಮಲ್ಲಿಕಾ. ೩ ೬೯). [ಸಂ. ಯಮಿನ್]

**ಯಮಿ₂** (ನಾ). ಯಮುನಾ ನದಿ. [ಸಂ. ಯಮೀ]

**ಯಮುನಾನದಿ** (ನಾ). ೧. ಭಾರತದ ಪವಿತ್ರವಾದ ಒಂದು ನದಿಯ ಹೆಸರು : ಯಮುನಾನದೀತರಂಗಮುಮಮಂಕಿ ವನಲತೆಯ ಮನೆಗಳಂ ಸೋಂಕಿ ವನ ಭ್ರಮಣಪರಿಶ್ರಮಮಂ ಮುನ್ನಮೆ ಕಳೆದುದು ಬಂದದೊಂದು ಮಂದಶ್ವಸನಂ (ಕಂಕಾ. ೩-೩೩) ; ಯಮುನಾನದಿಯೊಳ್ಪಾರ್ಲೆವಮೃತಾಂಶು ಮರೀಚಿಜಾಳಮೆಂಬಿನೆಗಂ ತದ್ರಮಣಿಯ ಕಚಮಂ ಪಿಕ್ಕಿದಳಮಳಿನ ನಖನಿಕರದಿಂ ಮಧೂಮಣಿಯೊರ್ವಳ್ (ಉದ್ಭಟ. ೮-೨೩). ೨. ಈಡಾ ಎಂಬ ನಾಡಿಯ ಹೆಸರು ; ಚಂದ್ರನಾಡಿ : ವಾಮಭಾಗದ ಈಡಾನಾಡಿಯೇ ಚಂದ್ರನಾಡಿಯೆಂದು ಯಮುನಾನದಿ [ಶಾಕಾಂ. ಯಮುನ ನಾಡಿ] ಎಂದು ಪೇಳಲ್ಪಡುವುದು (ಅಬಂಡೇ. ೨೨೮-೩೮). [ಸಂ. ಯಮುನಾನದೀ]

**ಯಮುನೆ** (ನಾ). ೧. = ಯಮುನಾನದಿ ೧ : "ಕಾಳಿಂದಿ ದಿನಕರಾತ್ಮಜೆ ಯಮಾನುಜೆಯೆನಲು ಯಮುನೆಯಕ್ಕುಂ" (ಮಂಗರಾ. ೦೨೨-೦೦) ; ಯಮುನೆಯ ಮಧ್ಯದಲಿ . . . ಸರಸತಿಯ ಸಂಗಮದಲಿ ಮೆರೆಯುವ ತ್ರಿವೇಣಿಯೆನಿಸುವ ತೀರದಲ್ಲಿ ವಟತರುಛಾಯೆಯಲ್ಲಿಹುದು ದೇವಋಷಿಮೌನಿಗಣ (ತುರಂದ: ರಾ. ೩-೪೪-೩). ೨. = ಯಮುನಾನದಿ ೨ : ಈಡೆಯೆ ಯಮುನೆ ಪಿಂಗಳೆಯೆ ಗಂಗೆಯು (ಕೈಶವ. ೪-೪-೦). ೩. ದುರ್ಗೆಯ ಒಂದು ಹೆಸರು. [ಸಂ. ಯಮುನಾ]

**ಯಮೆ** (ನಾ). ಒಂದು ಬಗೆಯ ಬಳ್ಳಿ : "ಅಶ್ಮಪಿಟ—ಕೊಸರಿ, ಯಮೆ" (ಓಷಧಿ. ೩). [ ? ]

**ಯಯು** (ನಾ). ೧. ಕುದುರೆ : "ಅರ್ವಾ . . . ತುರಂಗಃ. ಯಯುಃ, ಘೋಟಕಃ, ಹಯಃ, ವಾಹಃ — ಈ ೧೪ ಕುದಿರೆ" (ಹಲಾಯು. ೬೨-೨೮೨). ೨. ಅಶ್ವಮೇಧಯಾಗಕ್ಕೆ ಅರ್ಹವಾದ ಕುದುರೆ ; ಯಜ್ಞಾಶ್ವ : "ಯಯುವೆಂಬುದಶ್ವಮೇಧದ ಹಯಮುಂ ಸಾಮಾನ್ಯ ಹಯಮುಮಕ್ಕುಂ" (ಪಸ್ತುಕೋ. ೧೪೦-೧೩೧). [ಸಂ.]

**ಯಲ್ಲಕ** (ನಾ). ಆತುರ ; ಕಾತರ ; ಉತ್ಕಂಠೆ : ಯಲ್ಲಕಂ ಜಗುಬಿಲ್ಕು ಮಾರಿಕೆಯೆಬ್ಬು ಪೇಣ್ಯಶಿಲೇಬಿಯುಂ ಮೆಲ್ಲಸಂಚಿತ ಲಜ್ಜೆಯಿಂ ನಡೆನೋಡಲ್ (ಉದ್ಭಟ. ೭-೬೩). [< ಸಂ. ಆಯಲ್ಲಕ]

**ಯವ** (ನಾ). ೧. ಒಂದು ಬಗೆಯ ಗೋದಿ ; ಜವೆಗೋದಿ : ಮೃಣಾಳನಾಳದೆಳಲ್ ಸಮೆದ ಸರಿಗೆಗಂಕಣಂಗಳುಮಂ ಯವಕಳಿಕೆಗಳೊಳ್ ಸಮೆದ ಕಟಿಸೂತ್ರಮುಮಂ . . . ತೊಟ್ಟು (ಕಂಕಾ. ೩-೬ ವ). ೨. ಉದ್ದವನ್ನು ಅಳೆಯುವ ಒಂದು ಪ್ರಮಾಣ : ಅಂಗುಲದ ಎಂಟನೆಯ ಒಂದು ಭಾಗ : ಯೂಕಮೆಂಟಾಗಲೊಂದು ಯವವೆನಿಸುವುದು. ಆ ಯವವೆಂಟಾಗಲೊಂದುತ್ತಮ ಮಾನಾಂಗುಳವೆನಿಸುವುದು (ಏವೇಳ. ೩೨೦) : ಎಂಟು ಜೂಗಳಿಂದ ಒಂದು ಯವ (ಯವ— ಮಧ್ಯ) ಎಂಟು ಯವಗಳಿಂದ ಒಂದು ಅಂಗುಲವಾಗುತ್ತದೆ (ಕೃಪಶ. ೩೦೮). ೩. ಒಂದು ದೇಶದ ಹೆಸರು : ಲಾಳ ಚೋಳ ವರಾಳ ಯವ ಬಂಗಾಳ . . . ವಿದರ್ಭಧರಣೀಪಾಲತತಿ ಸಂದಣಿಸಿದುದು ಸಾಕೇತನಗರಿಯಲಿ (ಕೂರರಾ. ೦-೭ ೧೮). ೪. [ಭೌತಪ] ಮಧ್ಯದಲ್ಲಿ ಬಾಗುಳ್ಳ ಗಾಜಿನ ಬಿಲ್ಲೆ ; ಅಂತರ್ವಕ್ರ, ಬಹಿರ್ವಕ್ರ ಅಥವಾ ಪೀನಮಧ್ಯವಾದ ಗಾಜು ; ಲೆನ್ಸು : ಗಾಜಿನ ಕೆಲಸ ಮಾಡುವವರು ಯವಗಳನ್ನು (lenses) ಜೋಡಿಸಿ, ಪದಾರ್ಥಗಳು ದೊಡ್ಡದಾಗಿ ಕಾಣುವ ಒಂದು ಉಪಾಯವನ್ನರಿತರು (ಗಡತ. ೧೦೨). ೫. [ಸಾಮುದ್ರಿ] ಅಂಗೈ ಮೇಲೆ ಜವೆಗೋದಿಯಾಕಾರದಲ್ಲಿ ಇರುವ ಸುದೈವಸೂಚಕವಾದ ಚಿಹ್ನೆ. ೬. [ಜ್ಯೋತಿ] "ಆಕೃತಿಯೋಗಗಳಲ್ಲಿ ಒಂದು [ಲಗ್ನ ಮತ್ತು ಏಳನೆಯ ಸ್ಥಾನಗಳಲ್ಲಿ ಪಾಪಗ್ರಹಗಳೂ ನಾಲ್ಕು ಮತ್ತು ಹತ್ತನೆಯ ಸ್ಥಾನಗಳಲ್ಲಿ ಶುಭಗ್ರಹಗಳೂ ಇರುವುದು]" (ಜಾತಕ. ಶಂ. ೩-೩೪೪) : ಉದಯದೊಳಸ್ತದೊಳ್ ನಿಲೆ ಶುಭಗ್ರಹಮುಗ್ರಗಣಂ ಚತುರ್ಥಕರ್ಮದೊಳಿರೆ ವಜ್ರಯೋಗಮದು ತದ್ವಿಪರೀತತೆಯಿಂ ಯವಂ (ಜಾತಕ. ೦೩-೭). 'ಯವಯೋಗ' ಪರಾ. [ಸಂ.]

**ಯವಕ** (ನಾ). ೧. = ಯವ ೧ : (?). ೨. (ಜವೆಗೋದಿಯ ಬೂದಿಯಿಂದ ಸಿದ್ಧಪಡಿಸುವ) ಒಂದು ಬಗೆಯ ಔಷಧಿದ್ರವ್ಯ : ಪೆಟ್ಲುಪ್ಪು : "ಯವಜಃ, ಯವಕಃ, ಯವಾಹ್ವ ... ಈ ಮೂಱು ಯವಕ್ಷಾರ" (ಓಷಂ. ೦೩೦). [ಸಂ.]

**ಯವಕಾರ** (ನಾ). ಒಂದು ಬಗೆಯ ಸಸ್ಯ (?) : "ಕಾಸಹಾ — ತಾಳೀಸಪತ್ರ, ಯವಕಾರ, ಎಲಹುರಿ" (ಓಷಂ. ೨೯). [ ? ]

**ಯವಕೆ** (ನಾ). = ಯವ ೧ : "ಯವ್ಯಂ, ಯವಕ್ಯಂ, ಷಷ್ಟಿಕ್ಯಂ— ಇನ್ನು ಕ್ರಮವಾಗಿ . . . ಯಾವ ಭೂಮಿ ಯವೆಗಳು, ಯವಕೆಗಳು, ಷಷ್ಟಿಕೆಗಳು ಬೆಳೆಯುವ ಕ್ಷೇತ್ರವಾಗಿದೆಯೋ ಅದರ ಪೆಸರುಗಳು" (ಸಿದ್ಧಾಂತ. ೨೭೩).
[ಸಂ. ಯವಃ]

**ಯವಕ್ಷಾರ** (ನಾ). (ಜವೆಗೋದಿಯ ಬೂದಿಯಿಂದ ಸಿದ್ಧಪಡಿಸುವ) ಒಂದು ಬಗೆಯ ಔಷಧಿದ್ರವ್ಯ; ಪೆಟ್ಲುಪ್ಪು : "ಯವಭಸ್ಮೋದ್ಭವಂ.. ಯವಕ್ಷಾರ" (ಓಷಂ. ೦೩೦) ; ಹಿಪ್ಪಲ್ಯಾದಿಗಣದ ಕಷಾಯವನ್ನು ಯವಕ್ಷಾರ ಬೆರಸಿ ಸೇವಿಸೆ ಶ್ಲೇಷ್ಮಜ್ವರ ಪರಿಹಾರವಾಗುವುದು (ಕಳವೈ. ೮೯). [ಸಂ.]

**ಯವಜ** (ನಾ). = ಯವಕ್ಷಾರ : " ಯವಜಃ, ಯವಕಃ, ಯವಾಹ್ವ.. ಈ ಮೂಱುಂ ಯವಕ್ಷಾರ" (ಓಷಧಿ. ೦೩೦). [ಸಂ.]

**ಯವನ** (ನಾ). ೧. ವೇಗ; ಶೀಘ್ರತೆ. ೨. ವೇಗವಾಗಿ ಓಡುವ ಕುದುರೆ. ೩. ವಿದೇಶೀಯನಾದ ವ್ಯಕ್ತಿ ; ಪರಂಗಿಯವನು : "ಯವನಃ = ಪರಂಗಿ" (ಕಾಲ್ಕ. ೦೬೩). ೪. ಗ್ರೀಸ್ ದೇಶದವನು ; ಗ್ರೀಕ : ಇದರಲ್ಲಿ ಯವನರು, ಕಾಂಭೋಜರು, ಪಲ್ಲವರು . . . ಆಂಧ್ರರ (X ೪೮) ಹೆಸರು ಬರುವುದರಿಂದ ಇದು ಕ್ರಿ. ಪೂ. ೩ನೆಯ ಶತಮಾನದ ಒಂದೆ ರಚಿತವಾಗಿರಬೇಕೆಂದು . . . ಅಭಿಪ್ರಾಯಪಡುತ್ತಾನೆ (ಬಂರದ. ೩೨). ೫. ತುರುಕ ; ಮುಸಲ್ಮಾನ : "ತುರುಕಂ ತುರುಷ್ಕಂ ಯವನ [ಶಾಕಾಂ. ಯಾವ]ನೆನೆ ಜೋನೆಗಂ" (ಮಂಗರಾ. ೧೦೨ ೭) ; ಈ ವೀರ ಯುವಕನನ್ನು ಯವನ ಯುದ್ಧಕ್ಕೆ ಕರೆದುಕೊಂಡು ಹೋಗುವೆನು (ಕೋಹಿವಾ. ೧೦). ೬. ಒಂದು ಬಗೆಯ ಧೂಪದ್ರವ್ಯ : "ಯವನಃ— ಸಜ್ಜರಸ, ಧೂಪ" (ಓಷಂ. ೦೩೦). ೭. (ಅಲಂ) ಅಧರ್ಮಿ: ಕ್ರಿಯೆಯಿಲ್ಲದ ಪ್ರಸಾದಿ ಯವನ (ಶನ್ನವ. ೪. ೧೧೩-೨೩೭). [ಸಂ.]

**ಯವನಕ** (ನಾ). ವಿದೇಶೀಯನಾದ ವ್ಯಕ್ತಿ ; ಯವನ— ಸಾಗಲವೆಂಬ ಹೆಸರಿನ ಯವನಕರ ನಗರವುಂಟು (ಬುದ್ಧಶ. ಬುಂದ. ೦೬). [ಸಂ.]

**ಯವನಾನಿ** (ನಾ). ೧. ಯವನರ ಲಿಪಿ. ೨. ಪರಂಗಿ ಹೆಂಗಸು ; ಯವನ ಸ್ತ್ರೀ : " ಯವನಾನೀ = ಪರಂಗಿತಿ " (ಕಾಲ್ಕ. ೦೬೩).
[ಸಂ. ಯವನಾನೀ]

**ಯವನಾಲ** ಯವನಾಳ (ನಾ). ೧. ಒಂದು ಬಗೆಯ ತೃಣಧಾನ್ಯ : (?). ೨. ಜೋಳ. **ಯವನಾಳ** : ೨. "ಯವನಾಳವಮಾ ಕಳಿಕಮೆನೆ ಜೋಳಮಕ್ಕುಂ" (ಶಬ್ದಮ. ೦೦೦-೩). [ಸಂ.]

**ಯವನಾಳ** 'ಯವನಾಲ' ನೋ.

**ಯವನಿ** (ನಾ). ೧. ಯವನರ ಹೆಂಗಸು : ಯವನೀಮುಖಾಬ್ಜಮಧುಪಾಟವಮಂ ಸೇನಾನಿ ಕಳೆದಂ (ಶಾಂತಿ. ೦೦-೨೨) ; ರಘುರದರ್ಭುಲ್ಲರಿಯ ಜವನಿಕೆಯೊಳು ನರ್ತಿಸುವ ಯೌವನಾಯುವನಿಯು ಕರವ ಪೊಂಜುರಿಗೆಯಂತೆ ಸುಮನೋಜ್ಞವಾದಾ . . . ಮುಂಗಾರ್ ಮೊದಲ್ (ಶ್ರೀಉಪಾ. ೩೮೦-೩೬). ೨. ಪರದೆ ; ಜವನಿಕೆ ; ತೆರೆ. [ಸಂ. ಯವನೀ]

**ಯವನಿಕೆ** (ನಾ). ೧. = ಯವನಿ ೧. ೨. ಪರದೆ ; ತೆರೆ ; ಜವನಿಕೆ : "ಅಪಟೀ . . . ಯವನಿಕಾ. ತಿರಸ್ಕರಿಣೀ– ಈ (೫) ತೆರೆ" (ಶಬ್ದಮು. ೩೨-೦೩೯) ; ನವಮೇಘಧ್ವನಿ ಪುಷ್ಕರಧ್ವನಿ ಲಸತ್ತಾರಾಳಿ ಪುಷ್ಪೋಪಹಾರವಿಲಾಸಂ ರುಚಿರಾಂಬುದಂ ಯವನಿಕಾವಿನ್ಯಾಸಂ (ಆದಿಪು. ೬-೬೨) ; ಗಗನಗಂಗಾತಟೋದ್ವೃತ್ತವನಾಳೀವನವೋ ವಿದ್ಯುತ್ಸ್ಫುಟೀಕರ್ಬುರ ಯ[ಶಾಕಾಂ. ಜ]ವನಿಕೆಯೋ . . . ಎನೆ ನೆಗೆದುದಲೆಕ್ಯಾಮಾಳಂ ಮೇಘಮಾಳಂ (ಚಂದ್ರಪ್ರ. ೪-೩೦). [ಸಂ. ಯವನಿಕಾ]

**ಯವಫಲ** (ನಾ). ೧. ಬಿದಿರು : "ವಂಶಃ . . . ಯವಫಲಃ, ವೇಣುಃ, ಮಸ್ಕರಃ, ತೇಜನಃ—೧೦ ಬದುರು ಹೆಸರುಗಳು" (ಸಿದ್ಧಾಂತಿ. ೦೯೯). ೨. ಕೊಡಸಿಗೆ ; ಕುಟಜ ವೃಕ್ಷ. ೩. ಪ್ಲಕ್ಷವೃಕ್ಷ. ೪. ಈರುಳ್ಳಿ. [ಸಂ.]

**ಯವಯೋಗ** (ನಾ). [ಜ್ಯೋತಿ] "ಲಗ್ನ ಮತ್ತು ಸಪ್ತಮ ಸ್ಥಾನಗಳಲ್ಲಿ ಪಾಪಗ್ರಹಗಳೂ ಚತುರ್ಥ ಮತ್ತು ದಶಮ ಸ್ಥಾನಗಳಲ್ಲಿ ಶುಭಗ್ರಹಗಳೂ ಇದ್ದರೆ ಯವಯೋಗ" (ಜಾತಕ. ೦೩-೬ ಅವತ). 'ಯವಯೋಗಜ' ಪರಾ. [ಸಂ.]

**ಯವಯೋಗಜ** (ನಾ). [ಜ್ಯೋತಿ] ಯವಯೋಗದಲ್ಲಿ ಹುಟ್ಟಿದವನು : ಮನುಜಂ . . . ಯವಯೋಗಜಂ ಶಿಶುತೆಯೊಳ್ ವೃದ್ಧತ್ವದೊಳ್ ದುಃಖ ಭಾಜನನಕ್ಕುಂ (ಜಾತಕ. ೦೩-೦೭). [ಸಂ.]

**ಯವಸ** (ನಾ). ಮೇವು ; ಹುಲ್ಲು : "ಘಾಸಃ, ಯವಸಃ—ಈ ೨ ದಮಸಂ" (ಶಬ್ದಮು. ೩೨-೩೭) ; ವನದಲಿ ಪುಲಿಯಿರಲು ಗೋಧನ ಕುಲಕೆ ಯವಸಾಂಬುಗೋಚರವೆ (ಕುಮಾ.ಶ. ೩-೪). [ಸಂ.]

**ಯವಹಿತ್ರ** (ನಾ). ಒಂದು ಬಗೆಯ ಔಷಧೀದ್ರವ್ಯ : ಯವಹಿತ್ರ, ಚಿಕರ್ಮದ ಈ ಎರಡನ್ನು ಜೇನುತುಪ್ಪದಲ್ಲಿ ಹಚ್ಚಲು ಇರುಳುಗಣ್ಣು ಮಾಣ್ಗುಂ (ವೈದ್ಯ. ೩೩). [ ? ]

**ಯವಾಗು** (ನಾ). ಬಾರ್ಲಿ ಮುಂತಾದ ಧಾನ್ಯದ ಅಥವಾ ಅನ್ನದ ಗಂಜಿ : "ಗಂಜಿ ಯವಾಗು" (ಕನ್ನಡಕೋ. ೬೨-೪) ; "ಯವಾಗುವೆನೆ ಗಂಜಿ" (ಶಬ್ದಮ. ೩೩-೦). [ಸಂ. ಯವಾಗೂ]

**ಯವಾಗ್ರಜ** (ನಾ). = ಯವಕ್ಷಾರ : "ಯವಕ್ಷಾರಃ, ಯವಾಗ್ರಜಃ, ಪಾಕ್ಯಃ – ೩ ಯವಕ್ಷಾರದ ಪೆಸರುಗಳು" (ಸಿದ್ಧಾಂತಿ. ೩೦೭). [ಸಂ.]

**ಯವಾನಿ** (ನಾ). ೧. ಅಜವಾನ ; ಓಮು : "ಜೋಪಾರನಾಮುಂ ಯವಾನಿಯೆನಲ್" (ಶಬ್ದಮ. ೪೦-೩೪) ; "ಯವಾನೀ–ಓಮ, ರಸದಾಳಿ, ಅಜಮೋದ" (೬೩೦. ೦೩೦). ೨. ತುರುಕರ ಹೆಣ್ಣು ; ಯವನ ಸ್ತ್ರೀ : "ಯವಾನೀ–ತುರುಕಿತಿ" (ಕಾಶಕ್ಯ. ೦೩೩). [ಸಂ. ಯವಾನೀ]

**ಯವಾನಿಕೆ** (ನಾ). = ಯವಾನಿ ೧ : "ಅಜಮೋದಾ, ಉಗ್ರಗಂಧಾ, ಬ್ರಹ್ಮದರ್ಭಾ, ಯವಾನಿಕಾ–೪ ಅಜಮೋದದ ಹೆಸರುಗಳು. ಓಮು ಕಾಳು" (ಸಿದ್ಧಾಂತಿ. ೦೯೩). [ಸಂ. ಯವಾನಿಕಾ]

**ಯವಾಸ** (ನಾ). ೧. ಒಂದು ಬಗೆಯ ಸಸ್ಯ : ನಸುಗುನ್ನಿ ; "ಯಾಸಃ, ಯವಾಸಃ . . . ದುರಾಲಭಾ – ೧೦ ತೀಟಿಕಸಂಧಿ ಹೆಸರುಗಳು" (ಸಿದ್ಧಾಂತಿ. ೦೩೩). ೨. ಒಂದು ಬಗೆಯ ಖದಿರವೃಕ್ಷ. ೩. ಬೇವಿನ ಮರ : "ಯವಾಸಃ – ಬೇವು" (೬೩೦. ೦೬೦). [ಸಂ.]

**ಯವಿಷ್ಠ** (ನಾ). (ಅಣ್ಣತಮ್ಮಂದಿರಲ್ಲಿ) ಎಲ್ಲರಿಗಿಂತ ಕಿರಿಯವನು : ಕಿರಿಯ ಸಹೋದರ. [ಸಂ.]

**ಯವೀಯಾಂಸ** (ನಾ). = ಯವಿಷ್ಠ : ಯವೀಯಸ್–ಯವೀಯಾಂಸನು, ಯವೀಯಸ್ಸು, ಯವೀಯನು (ಹೊಸಗ. ೦೦೭). [< ಸಂ. ಯವೀಯಸ್]

**ಯವೆ**[1] (ನಾ). ಜವೆಗೋದಿಯನ್ನು ಬೆಳೆಯುವ ಭೂಮಿ : "ಜವೆಯ ಕೆಯ್ ಯವೆಯುಕ್ಕು" (ಶಬ್ದಮ. ೨೮-೩). [< ಸಂ. ಯವ್ಯ]

**ಯವೆ**[2] (ನಾ). ೧. ಒಂದು ಬಗೆಯ ಗೋದಿ ; ಜವೆಗೋದಿ : "ಯವೆ ಯೆನಲು ಜವೆ" (ಶಬ್ದಮ. ೦೦೦-೩) ; ಅಕಳಿಗೆಮ್ಮಯಂ ಯ [ಶಾಕಾಂ. ಜ] ವೆಗೆ ಗೋದುಮೆಯುಂ ತುರಗಕ್ಕೆ ಕತ್ತೆಯುಂ . . . ಪ್ರತಿ ಮಾಡಿದನೋರ್ವ ಜೀಮನೆಂದೇಕೆಂಪೊ ಮೂಢರೊಳ್ತುರ್ (ಸಮುಕ. ೦೦ ೦೨೦) ; ಯ [ಶಾಕಾಂ. ಜ]ವೆ ದಿವ್ಯೌಷಧಿ ಪಾರಿಜಾತಕುಸುಮಂ ಸಿದ್ಧಾರ್ಥವಾರ್ದ್ರಾಕ್ಷತಂ . . . ಎಂಬಿವಜಿಂ ತೆಕ್ಕನೆ ತೀವಿ ಪೊಂಬರಿಯಣಂ ಚೆಲ್ವಾದುದು (ಜಗ. ೦೦-೯೬) ; ಯವೆಯನ್ನು ಚಳಿಸಿ ಅಕ್ಕಿ ಮಾಡಿ ಕುದುರೆಗೆ ತಿನ್ನಿಸುವುದು (ಅಶ್ವಶಾ. ೩೨-೦). ೨. ಉದ್ದವನ್ನು ಅಳೆಯುವ ಒಂದು ಪ್ರಮಾಣ; ಅಂಗುಲದ ಎಂಟನೆಯ ಒಂದು ಭಾಗ : ಮೂಜುತಿಲಕೊಂದು ಯವೆ . . . ಆ ಯವೆ ಮೂಜ ಸೇರಿಸೆ ತದಂಗುಲವ ನಾಲ್ಕ ಕೂಡಲು ಮುಷ್ಟಿ (ಶಾಸ್ತ್ರ. ೩೨-೯); ಆ ಯೂಕವೆಂಟಾದರೆ ಒಂದು ಯವೆ ಯೆನಿಸಿಕೊಂಬುದು (ಜಕಣ. ೬೮-೪). ೩. ಒಂದು (ಗೋದಿ ಕಾಳಿನಷ್ಟು) ತೂಕದ ಪ್ರಮಾಣ : ಯವೆ ನಾಲ್ಕು ಐದಾರು ಸವಸಿದ ಗಾತ್ರದಿಂದವ ತವಕ ತೂಕ ತಂಡಿಲ ಪ್ರಮಾಣದೊಳಿರಲು ತವೆ ಮೌಲ್ಯ ಪನ್ನೆರಡು ಪದಿನಾರು ವಿಂಶತಿಯೊಳನುವರಿಸಿ ಪೇಳ್ವುದದನು (ರತ್ನಶಾ. ೩-೦೭). [ಸಂ. ಯವ]

**ಯವ್ಯ** (ಗು). ೧. ಜವೆಗೋದಿಯನ್ನು ಬೆಳೆಯಲು ಯೋಗ್ಯವಾದ.–ಹಿತವಾದ. ೨. ಜವೆಗೋದಿಯನ್ನು ಬಿತ್ತಿದ. (ನಾ). ೩. ಜವೆಗೋದಿಯನ್ನು ಬೆಳೆಯುವ ಭೂಮಿ : "ಜವೆಯ ಕೆಯ್ ಯವ್ಯವೆಂಬುದು" (ಶಬ್ದಮು. ೨೭-೬); ಲೀಲೆಯಿನಸದಟ ನೆಲಂ ಪರಿಪಾಲಿಸಿದುವು ಕಣ್ಗೆ ನಾಡೆ ಮೌದ್ಗಂ ಮಾಷ್ಯಂ ಶಾಲೇಯಂ ವ್ರೈಹೇಯಂ ತೈಲೀನಂ ಕೌದ್ರವೀಣ ಮೌಮ್ಯಂ ಯವ್ಯಂ (ಚಂದ್ರಪ್ರ. ೦-೯೦). [ಸಂ.]

**ಯವ್ವನ** (ನಾ). ಹರೆಯ ; ಪ್ರಾಯ ; ತಾರುಣ್ಯ : ನಿಮ್ಮ ರೂಪು ಯವ್ವನಮುಮಂ ಲಾವಣ್ಯಮುಮಂ ಕಂಡು (ವಡ್ಡಾರಾ. ೬೬-೦೦); ಆ ಯವ್ವನದೊಳವರ ಚರಿತಂ ಕರಂ ಪೊಸತು (ಕಬ್ಬಿಗ. ದೇ. ೪-೩). 'ಜವ್ವನ' ಪರಾ. [< ಸಂ. ಯೌವನ]

**ಯವ್ವನಶಾಲಿ** (ನಾ). ತರುಣ ; ಯುವಕ : ದೊಡ್ಡವಂಶದಲ್ಲಿ ಹುಟ್ಟಿ ಯವ್ವನಶಾಲಿಗಳಾಗಿರುವರನೇಕರು . . . ಅಮಿತವ್ಯಯ ಮಾಡಿ ದುಷ್ಟಕ್ರೀಡಾಗುವರಲ್ಲವೇ ? (ಕಾಳಿ. I, ೨). [< ಸಂ. ಯೌವನಶಾಲಿನ್]

**ಯವ್ವನಿಗ** 'ಜವ್ವನಿಗ' ನೋ.

**ಯವ್ವನಿಗತನ** (ನಾ). ಹರೆಯ ; ತಾರುಣ್ಯ : ಯವ್ವನಿಗತನದಲ್ಲಿಯೇ ಆ ಜಾತಿಗೆ ರಾಜಪದವೆಂದೇ ಅಭಿಧಾನವಹುದು (ಶಂಕರ. ೦೦-೬).
[ಯವ್ವನಿಗ (< ಜವ್ವನಿಗ) + – ತನ]

**ಯವ್ವನೆ** 'ಜವ್ವನೆ' ನೋ.

**ಯಶ** (ನಾ). ೧. ಖ್ಯಾತಿ ; ಕೀರ್ತಿ : ಪೊಟಲೊಳ್ ನೆಗಟ್ಟ ಪಂಡಿತರ್ಕಳೊಡನೆ ವಾದಂಗೆಯ್ದು ಗೆಲ್ದು ಪರದಿಶೆಗಳೊಳೆಲ್ಲಂ ತನ್ನ ಪಾಂಡಿತ್ಯದ ಯಶಮಂ ಪಸರಿಸಿ (ವಡ್ಡಾರಾ. ೬೪-೨೦): ಕಾರ್ಯಕ್ಕೆ ಯಶವು

ದೊರೆತಾಗ ಸಂತೋಷಸಾಗರದಲ್ಲಿ ಮೀಯುವುದು . . . ಮಂಕು ಮಾನವ ಬುದ್ಧಿ (ತರ್ಕಶಾ. ೦೦೬). ೨. ಗೆಲವು : ವಿಜಯ : ' ಯಶಂಬಡೆ ' ಪರಾ. [ಸಂ. ಯಶಸ್]

**ಯಶಂಬಡೆ** (ಕ್ರಿ). ಗೆಲವನ್ನು ಗಳಿಸು ; ವಿಜಯಿಯಾಗು : ಒಡನೆಯುವ ರೊಂದೆ ಮಾರ್ಬಲವಿಡಮಡಗದೆ ಪೊಗಟಿ ತಾಗಿ ತಳ್ತಿಱಿದು ಯಶಂ ಬಡೆದಂ ಗೊಗ್ಗಿ (ಎಕ. XI, ಹೆಳ್ಳ್ಕೆ. ೬-೫ : ಹು. 925). [ಯಶ + ಪಡೆ]

**ಯಶಃಪಟಹ** (ನಾ). ಒಂದು ಬಗೆಯ ವಾದ್ಯ ; ಢಕ್ಕೆ : ಮದನಯಶಃ ಪಟಹಧ್ವನಿ ಪುದಿಯೆ ವಿಯಚ್ಚರನ ಕರ್ಣಮುಂ ಹೃದಯಕ್ಕೆಯ್ದುದಿಲ್ಲ ದಿವ್ಯವಚನಂ (ಶಂರಾನಾ. ೬-೯೪). ' ಯಶೋದುಂದುಭಿ ' ಹೋ. [ಸಂ.]

**ಯಶಃಪಿಂಡ** (ನಾ). ೧. ಕೀರ್ತಿಯ ಸಮೂಹ. ೨. ಅತಿಶಯವಾದ ಕೀರ್ತಿಯನ್ನು ಪಡೆದವನು : ವಿಪುಳಯಶಃಪಿಂಡಂ ಪುಣ್ಯಪುಂಜಮಾ ಕ್ಷತ್ರಧಾಮಧಾಮಂ ತಾನಾ ನೃಪಸುತಂ (ಆದಿಪು. ೮-೪೪). [ಸಂ.]

**ಯಶಸ್ಕರ** (ಗು). ೧. ಕೀರ್ತಿಯನ್ನು ತರುವಂತಹ ; ಶ್ರೇಯಸ್ಕರವಾದ. (ನಾ). ೨. ಶ್ರೇಯಸ್ಕರವಾದುದು : ಅಪವಾದವೆನಿಪುದು ಕಡುತಾಪ ವಾದರು ಅದು ನಮಗತಿ ಯಶಸ್ಕರವು (ಇಂಕಾಶ. ೨೨೫-೦೫). [ಸಂ.]

**ಯಶಸ್ಕೀರ್ತಿ** (ನಾ). [ಜೈನ] ಎಪ್ಪತ್ತೆರಡು ನಾಮಪ್ರಕೃತಿಗಳಲ್ಲಿ ಒಂದು; ಜೀವನಿಗೆ ಲೋಕದಲ್ಲಿ ಕೀರ್ತಿ ಹಬ್ಬುವಂತೆ ಮಾಡುವ ಪ್ರಕೃತಿ : ಅನ್ಯತರ ವೇದನೀಯ . . . ಬಾದರಯಶಸ್ಕೀರ್ತಿರುಚ್ಚೈರ್ಗೋತ್ರ ತೀರ್ಥಕರ ನಾಮಂಗಳೆಂಬ ಪದಿಮೂಱುಂ ಪ್ರಕೃತಿಗಳುಮಂ ನಿರ್ಮೂಲಂ ಕಿಡಿಸಿ (ಆದಿಪು. ೦೬-೯೯ ವ) ; ವೇದನೀಯ . . . ಯಶಸ್ಕೀರ್ತ್ಯಯಶಸ್ಕೀರ್ತಿ ನಿರ್ಮಾಣ ನೀಚೈರ್ಗೋತ್ರಂಗಳೆಂಬೆಪ್ಪತ್ತೆರಡುಂ ಪ್ರಕೃತಿಗಳಂ ದೂರೀಕೃತಂ ಮಾಡಿ (ಶಂರಾಪು. ೦೬-೬೦ ವ). [ಸಂ.]

**ಯಶಸ್ತಂಭ** (ನಾ). ಗೆಲುವಿನ ಸ್ಮಾರಕವಾಗಿ ನಿಲ್ಲಿಸುವ ಕಂಬ ; ವಿಜಯಸ್ತಂಭ : ನೀಮುಂ . . . ಇಲ್ಲಿಯೆ ಬೀಡುವಿಟ್ಟು ನಿಱಿಸಲ್ವೇಟ್ಕುಂ ಯಶಸ್ತಂಭಮಂ (ಕುಶ್ಕಿ. ೬-೦೬). [ಸಂ.]

**ಯಶಸ್ವಿ** (ಗು). ೧. ಶ್ರೇಯಸ್ಸನ್ನು ಪಡೆದ ; ಹೆಸರುವಾಸಿಯಾದ. ೨. ಅತ್ಯುತ್ತಮವಾದ. (ನಾ). ೩. ಗೆಲುವನ್ನು ಪಡೆಮುದು ; ಜಯಪ್ರದವಾದುದು : ನಮ್ಮ ಚಲಚಿತ್ರಗಳಲ್ಲಿ ಹತ್ತು ಹದಿನೈದಕ್ಕೆ ಕಡಿಮೆ ಹಾಡುಗಳಿಲ್ಲದಿದ್ದಲ್ಲಿ ಅವು ಯಶಸ್ವಿಯಾಗಲು ಸಾಧ್ಯವೇ ಇಲ್ಲ (ಶಾರದ. ೫೩೫). [ಸಂ. ಯಶಸ್ವಿನ್]

**ಯಶಸ್ಸು** (ನಾ). ಕೀರ್ತಿ ; ಖ್ಯಾತಿ : ಯಶ. ಯಶಸ್ಸು ; ತೇಜ, ತೇಜಸ್ಸು ; ವಯ, ವಯಸ್ಸು (ಕಮವ. ೮೬ ಪ್ರಯೋ) ; ಕವಿಗಳು ಬೆಳಗಿದ ರಾಜರ ಯಶಸ್ಸು ಸ್ಥಿರವಾಗಿರುತ್ತದೆ (ಶಾರದ. ೪೪೫). [ಸಂ. ಯಶಸ್]

**ಯಶೋದುಂದುಭಿ** (ನಾ). ಯಶಸ್ಸನ್ನು ಸಾರುವ ವಾದ್ಯ ; ವಿಜಯ ದುಂದುಭಿ : ಪ್ರಕಟ ಯಶೋದುಂದುಭಿ ಸಿಂಹಾಸನಸುರದುಂದುಭಿ ಪತಿಚರಣಕಮಳಭೃಂಗಂ ಪಂಪಂ (ಆದಿಪು. ೦-೩೩). [ಸಂ.]

**ಯಶೋದೆ** (ನಾ). ೧. ಯಶಸ್ಸನ್ನು ಕೊಡುವವಳು. ೨. ಕೃಷ್ಣನ ಸಾಕುತಾಯಿ ; ನಂದಗೋಪನ ಹೆಂಡತಿ: ಮತ್ತೊಂದು ಸಮಯದೊಳ್ ಪಾಲ್ಗುಡಿಯಲೊಲ್ಲದಾಟಿಗುಟ್ಟುವ ದಾಮೋದರನಂ ಯಶೋದೆ ಕಂಡು (ಜಗಶಿ. ೩-೫೦ ವ) ; ಯಶೋದೆ ನಿನ್ನ ಕಂದಗೆ ವಿಶ್ವರೂಪವೆ (ಪುರಂದ. ೪-೦೦೮ ಪಲ್ಲವಿ). ೧, ೨ : ಅಬ್ಧಿಶಯನಂ ಗಡ ನಂದನನೀ ಮನೋಹರ ಕ್ರೀಡನನೆತ್ತಿಕೊಂಡು ಮೊಲೆಯೂಡಿದ . . . ಭವತ್ಸತಿ ಯಶೋದೆ ಕುಲಕ್ಕೆ ಯಶೋದೆಯಲ್ಲಳೇ (ಜಗಶಿ. ೫-೯೪). [ಸಂ. ಯಶೋದಾ]

**ಯಶೋಧನ** (ನಾ). ಕೀರ್ತಿಯೇ ಧನವಾಗಿರುವವನು ; ಮಹಾಖ್ಯಾತಿ ವಂತ : ಬಱುವನನಾಜಿಶ್ರಾಂತನಂ ಯಶೋಧನನಿಱಿಯಂ (ಶಾಂತಿಪು. ೪-೫೦). [ಸಂ.]

**ಯಶೋಧರ** (ನಾ). ೧. ಕೀರ್ತಿಯನ್ನು ಹೊಂದಿದುದು. ೨. [ಜೈನ] ಅರುವತ್ತುಮೂರು ಇಂದ್ರಕಗಳಲ್ಲಿ ಒಂದು : ೧. ಋತು. ೨. ವಿಮಳಂ . . . ೫೬. ಯಶೋಧರಂ . . . ಅಱುವತ್ತಮೂಱು ಇಂದ್ರಕಂಗಳ ಪೆಸರ್ಗಳ್ (ಕಕ್ಕ್ರ. ೨೭೩). [ಸಂ.]

**ಯಶೋಧಿಕ** (ನಾ). ಅಧಿಕವಾದ ಖ್ಯಾತಿಯನ್ನು ಪಡೆದವನು : ಕುಲಜ ನೀತನೆ ಪಂಡಿತನೀತನುಜ್ವಲಯಶೋಧಿಕನೀತನೆ (ಕವಿರಾ. ೧-೦೩೪). [ಸಂ.]

**ಯಶೋನಿಧಿ** (ನಾ). ಕೀರ್ತಿಗೆ ನೆಲೆಯಾದವನು : ಮಲ್ಲಿಪಾರ್ಯನು ಮುದಾತ್ತಯಶೋನಿಧಿಪುನ್ನಮಾರ್ಯನುಂ ಸವಿ ತಪದಂಶು ಪೇಟಿಸಿದರ್ (ಶಾಂತಿಪು. ೦-೫೩) ; ಆ ಯಶೋನಿಧಿಗೆ ವಲ್ಲಭೆಯಾದಳ್ ವಾಯುವೇಗೆ (ವರ್ಧಪು. ೩-೦೬). [ಸಂ.]

**ಯಶೋನಿಳಯ** (ನಾ). ಯಶೋನಿಧಿ : ಪ್ರಕಟ ಯಶೋನಿಳಯರ್ ತಾರ್ಕಿಕಚೂಡಾಮಣಿಗಳ್ . . . ಅಕಳಂಕದೇವರ್ (ಸುಕುಮಾ. ೧-೩೪). [ಸಂ. ಯಶೋನಿಲಯ]

**ಯಶೋಭಾಗಿ** (ನಾ). ಕೀರ್ತಿಯುಳ್ಳವನು : ಕಾದಿ ರಾಜಸುತರೊಳ್ . . . ಏಂ ಭೀಷ್ಮಂ ಯಶೋಭಾಗಿಯೋ (ಶಂಶರಾ. ೦.೬೪). [ಸಂ. ಯಶೋಭಾಗಿನ್]

**ಯಶೋರ್ಥಿ** (ನಾ). ಶ್ರೇಯಸ್ಸನ್ನು ಬಯಸುವವನು : ಧರ್ಮ ಪುತ್ರನಪ್ಪ ಯುಧಿಷ್ಠಿರಂ ಧರ್ಮಾರ್ಥಿಯುಂ ಯಶೋರ್ಥಿಯುಮಾಗಿ ರಾಜ ಸೂಯಯಾಗಂ ಮಾಡಲುದ್ಯೋಗಂಗೆಯ್ದು (ಶಂಶಶಂ. ೨೩೫-೨೦). [ಸಂ. ಯಶೋರ್ಥಿನ್]

**ಯಶೋವಂತ** (ನಾ). ಕೀರ್ತಿಶಾಲಿಯಾದವನು : ಯಶೋವಂತನಾಗು, ಅಪ್ರತಿಮ ವೀರನಾಗು, ಮಹಾತ್ಯಾಗಿಯಾಗು (ಶಾಂಶಲಾ. ೪೪). [ಸಂ. ಯಶೋವತ್]

**ಯಶೋವತಿ** (ನಾ). ಖ್ಯಾತಿಯಿಂದ ಕೂಡಿದುದು ; ಕೀರ್ತಿಯಿಂದ ಕೂಡಿದುದು : ದ್ವಾರವತಿಯು ಯಶೋವತಿಯಾದ ಮಹಾಪಟ್ಟಣ ವಾಯಿತು (ಶಾಂಶಲಾ. ೦೨೦). [ಸಂ. ಯಶೋವತೀ]

**ಯಷ್ಟಿ** (ನಾ). ೧. ಕೋಲು ; ಬಡಿಗೆ : ತ್ರಿಶೂಲಂ ಕೊಡೆಯ ಕಾವಾಗೆ ಖಟ್ವಾಂಗಂ ಯಷ್ಟಿಯಾಗೆ . . . ಮಹಾವೃದ್ಧನಾಗಿ (ಶಂಬರ. ೬-೦೬ ವ) ; ದರ್ಪದಿಂ ಮುಂದುಗಾಣದ ಗಾಂಪರೆನಿಪರ್ ಪಳಿವರೆಂದು ಸಮ್ಯಕ್‌ಕಾವ್ಯಮಂ ರಚಿಸದಿರ್ಪರೇ ದಿವ್ಯಮಂತ್ರಂ ಕೆರ್ವು ಯಷ್ಟಿ ವಾಗ್ಬಂಧನಂಗಳ್ ತಮಗಿರೆ (ಶದ್ಯರಾ. ೦-೩೪). ' ಅಂಧಯಷ್ಟಿ ' ಪರಾ. ೨. ಕಂಬ ; ಸ್ತಂಭ. ೩. ಗದೆ : ''ಯಷ್ಟಿಃ, ಪಟ್ಟಿಶಃ . . . ಗದಾದಂಡಃ, ಚಕ್ರಂ –ಇವು ಮೊದಲಾಗುಳ್ಳುವು ಕೈಯ್ದುಗಳ ಭೇದಂಗಳ್'' (ಶಬ್ದಮ. ೬೮-೩೨೨) ; ಕುಮಾರನಂ ಯಷ್ಟಿ ಮುಷ್ಟಿ ಪ್ರಹಾರಾದಿಗಳಿಂ ಗೆಲ್ದಿ ದ್ರೋಣನೆತ್ತಿಕೊಂಡು (ಶಬ್ದಾರಾ. ೫೬-೨೬). ೪. ಬಾವುಟದ ಕಂಬ ; ಧ್ವಜಸ್ತಂಭ. ೫. ಕಾಂಡ ; ದಂಟು. ೬. ಮರದ ಕೊಂಬೆ,–ರೆಂಬೆ. ೭. ಕತ್ತಿಯ ಓಡಿ. ೮. ದಾರ ; ಎಳೆ. ೯. ಮರಣ ಹೊಂದಿದವರ ಜ್ಞಾಪಕಾರ್ಥವಾಗಿ ನಿಲ್ಲಿಸುವ ಸ್ಮಾರಕಸ್ತಂಭ. ೧೦. ಮುತ್ತು ಮೊದ ಲಾದುವುಗಳ ಸರ,–ಹಾರ : " ದೇವಚ್ಛಂದಂ ಯಷ್ಟಿ ಶತಾವಚ್ಛಿನ್ನಂ " (ವಸ್ತುಕೋ. ೬೫-೩) ; ಕೈವಲ್ಯಬೋಧರಮಾ ಮೌಕ್ತಿಕಹಾರಯಷ್ಟಿ . . . ವಿದ್ಯಾನಟಿ ನಾಟಕಂ ನಲಿಗೆ ಮುಕ್ತ್ಯಾವ್ಯಸ್ಥಲೀರಂಗದೊಳ್ (ಶಂರಾಮೂ. ೧-೬). ೧೧. ದೇವಪೂಜೆ ; ದೇವತಾರ್ಚನೆ : '' ಇಷ್ಟಿಃ, ಯಷ್ಟಿಃ . . . ಯಾಜ್ಯಂ – ಈ ೧೦ ದೇವರ ಪೂಜೆ'' (ಶಾಕಕ್ಕ. ೦೬೦). ೧೨. ತೆಳು ವಾದುದು ; ತೆಳ್ಳಗೆ ಇರುವುದು : 'ಅಂಗಯಷ್ಟಿ' ಪರಾ. ೧೩. ಒಂದು ಬಗೆಯ ಔಷಧೀಸಸ್ಯ ; ಅತಿಮಧುರ : " ಯಷ್ಟಿಃ – ಯಷ್ಟಿಮಧುಕ" (೬ಶಧಿ. ೧೩೦). [ಸಂ.]

**ಯಷ್ಟಿಕೆ** (ನಾ). ೧. ಕೋಲು ; ಬಡಿಗೆ. ೨. (ಒಂದೆಳೆಯ) ಮುತ್ತಿನ ಹಾರ : ' ಏಕಯಷ್ಟಿಕೆ ' ಪರಾ. [ಸಂ. ಯಷ್ಟಿಕಾ]

**ಯಷ್ಟಿಮಧು** (ನಾ). ಒಂದು ಬಗೆಯ ಔಷಧೀಸಸ್ಯ. [ಸಂ.]

**ಯಷ್ಟಿಮಧುಕ** (ನಾ). = ಯಷ್ಟಿಮಧು : "ಮಧೂಕಯಷ್ಟಿಃ, ಮಧುಯಷ್ಟಿಕಾ – ಈ ಯೆರಡುಂ ಯಷ್ಟಿಮಧುಕ" (ಓಷಧಿ. ೧೨೦); ದ್ರಾಕ್ಷೆ ಮಧು ಖಂಡಶರ್ಕರೆ ಗೋಕ್ಷೀರಂ ಯಷ್ಟಿಮಧುಕಮಿವು ಪಿತ್ತಹರಂ (ಅಶ್ವಶಾ. ೭–೪೩). [ಸಂ. ಯಷ್ಟಿಮಧುಕಾ]

**ಯಷ್ಟೃ** (ನಾ). ಯಾಗ ಮಾಡುವವನು ; ಯಜ್ಞಕರ್ತ. [ಸಂ.]

**ಯಸ** (ನಾ). ಒಳ್ಳೆಯ ಹೆಸರು ; ಕೀರ್ತಿ : ಯಸಕ್ಕನಲ್ಲಾತಂ (ಎಪಿಇ. XI-i, ೪೩–೯ ; 970). 'ಜಸ$_1$' ಪರಾ. [< ಸಂ. ಯಶಸ್]

**ಯಹೂದ್ಯ**, ಯೆಹೂದಿ, ಯೆಹೂದ್ಯ (ನಾ). ಪ್ಯಾಲಸ್ಟೈನ್ ಅಥವಾ ಇಸ್ರೈಲ್ ದೇಶದಲ್ಲಿ ವಾಸಿಸುವ ಒಂದು ಕುಲದ ಹೆಸರು ಮತ್ತು ಆ ಕುಲಕ್ಕೆ ಸೇರಿದ ವ್ಯಕ್ತಿ : ಪಶ್ಚಿಮದಲ್ಲಿ ಸುಮಾರು ಒಂದು ಲಕ್ಷ ಪಾರಿಸೀ ಜನರೂ ಕೆಲವುಂದಿ ಜೂಜನರೂ (ಯಹೂದ್ಯರೂ) ವಾಸವಾಗಿದ್ದಾರೆ (ಭೂಗೋಳ. ೭೦) ; ಮತ್ತೊಬ್ಬ ಯಹೂದ್ಯ ಕುಟುಂಬಕ್ಕೆ ಸೇರಿದವನು (ಕೃಪರು. ೨೩). **ಯೆಹೂದಿ:** ಯುನಾನಿಯರ ಮೂಗು ಒಂದು ತೆರನಾಗಿದ್ದಲ್ಲಿ ರೋಮನರ, ಯೆಹೂದಿಯರ, ನೀಗ್ರೋಗಳ ಮೂಗುಗಳು ಬೇರೆಬೇರೆಯಾಗಿರುತ್ತವೆ (ಜೀವಶಾ. ೨೨೦). **ಯೆಹೂದ್ಯ** : ಇದೊ ಯೆಹೂದ್ಯರೆ ಇವನೊಳೇನುಮಪರಾಧಮಂ ಕಾಣೆ (ಗೊಲ್ಗೊ. ೩–೦೩೩) ; ಯೆಹೂದ್ಯರು, ಮುಸಲ್ಮಾನರು ಮತ್ತು ಕ್ರೈಸ್ತರು ಇವರ ವಿನಾ ಉಳಿದ ಎಲ್ಲಾ ಜನಾಂಗದವರಲ್ಲಿ ಈ ಸಿದ್ಧಾಂತ ಪ್ರಚಾರದಲ್ಲಿತ್ತು (ಜೀವಶಾ. ೦೬೪).

[←ಹೀಬ್ರು. ಯಹೂದೀ ; ಲ್ಯಾಟಿನ್. ಇಯೂದ್ಯುಸ್./ಇಂ. Jew]

**ಯಾ$_1$** ' ಯಾವುದು ' ಪರಾ.

**ಯಾ$_2$** (ಅ). ಅಥವಾ ; ಇಲ್ಲವೆ : ಅಂಥ ವಾವತಿ ಯಾ ಸಮಾಧಾನವು ಗ್ರಾಮ ಮುನಸಿಫರಿಂದ . . ನಮೂದು ಮಾಡಲ್ಪಡಬೇಕು (ಗ್ರಾಪಂಶ. ೩೪).

[←ಪಾರ. ಹಿಂ. ಮರಾ. ಯಾ]

**ಯಾಂಡು** (ನಾ). ವರ್ಷ ; ಸಂವತ್ಸರ : ಶ್ರೀರಾಜೇನ್ದ್ರಚೋಳದೇವರ್ಗೆ ಯಾಣ್ಡು ೧೯ ಬಾವುದಾ ಸಕವರಿಷ ೯೫೩ನೆಯ . . . ಬ್ರಿಹಸ್ಪತಿವಾರದಸ್ದು (ಪ್ರೆಇಂ. ೦೯೯೦, ೭೩–೭; 1030); ಶ್ರೀ ರಾಜೇನ್ದ್ರಚೋಳದೇವರ್ಗೆ ಯಾಣ್ಡು ಇಪ್ಪತ್ತ ನಾಲ್ಕಾವುದು (ಎಪಿ.ಕ. ೯ಕೋಲಾರ.೦೪–೩; 1035). 'ಇಯಾಂಡು', ' ಎಡು ', ' ಪೊನೆಯೇಡು ' ಪರಾ.

[ದೇ.॥ ತಮಿ. ಯಾಣ್ಡು ; ಮಲ. ಆಣ್ಡು ; ತೆಲು. ಏಡು]

**ಯಾಂತ್ರಿಕ** (ಗು). ೧. ಯಂತ್ರಕ್ಕೆ ಸಂಬಂಧಿಸಿದ. ೨. ಯಂತ್ರದಿಂದ ತಯಾರಾದ ; ಯಂತ್ರಸಿದ್ಧವಾದ. (ನಾ). ೩. (ಭೂತ, ಪಿಶಾಚಿಗಳ ಪೀಡಾ ಪರಿಹಾರಕ್ಕಾಗಿ) ಯಂತ್ರ ಬರೆದು ಕಟ್ಟುವವನು : ಯಾಂತ್ರಿಕನ ಯಂತ್ರ ಮಂತ್ರ ಸಂಬಂಧದಿಂದ ಪಿಶಾಚಗ್ರಸ್ತನ ಪಿಶಾಚಿಯು ಪಲಾಯನ ಮಾಡುವಂತೆ (ಕನ್ನಪ. ೪. ೦೯–೪೦). ೪. (ಆಲಂ) ಯಂತ್ರದಂತೆ ಕೆಲಸ ಮಾಡುವಿಕೆ ; ಯಾವ ವಿವೇಚನೆಯೂ ಇಲ್ಲದಿರುವಿಕೆ : ಮಹಾರ್ಥ್ಯ ರೀತಿಯಲ್ಲಿ ಯಾಂತ್ರಿಕವಾಗಿ ನಡೆಯುವುದು ಶ್ರೀಕೃಷ್ಣನ ಯೋಗಮತವಲ್ಲ (ಭಾರರ. ೦೦೯). [ಸಂ.]

**ಯಾಕೂತ** (ನಾ). ೧. ಕೆಂಬಣ್ಣದ ರತ್ನ ; ಮಾಣಿಕ್ಯ ; ಪದ್ಮರಾಗ. ೨. ಬೂದಿ ಬಣ್ಣದ ರತ್ನ : ಯಾಕೂತವೂ ಅಪೂರ್ಣ ಸ್ಫಟಿಕರೂಪವಾದ ಸಾಧಾರಣ ಖನಿಜವು ; ಇದಕ್ಕೆ ಬೂದಿ ಬಣ್ಣವಿರುವುದು (ಮುಂಖಯು. ೬–೪೭). ೩. ನೀಲವರ್ಣದ ಹರಳು : ಇದರೊಳಗೆ (Quartz) ನೀಲವರ್ಣವು ಮಿಶ್ರವಾಗಿದ್ದರೆ ಯಾಕೂತವೆನ್ನುವರು (ಮುಂಖಯು. ೬–೨೩೯).

[←ಅರ. ಹಿಂ. ಮರಾ. ಯಾಕೂತ್ ; ಪಾರ, ಯಾಖೂತ್]

**ಯಾಕೆ** ' ಏನ್$_1$ ' ಪರಾ.

**ಯಾಗ** (ನಾ). ೧. ಯಜ್ಞ ; ಕ್ರತು : ದಿವಿಜಾಪಗೆ ನೋಡೆ ಕೂಡೆ ಕರ್ಪಡರ್ದಣೆಯಾದುದಾ ಯಮುನೆಗಗ್ಗದ ಯಾಗದ ಧೂಮದೇಟಿಗೆಯೊಳ್ (ಶಂಕರಾ. ೬–೩೭) ; ವಿಗಡ ಯಾಗಕೆ ಸಕಲ ರಾಯರು ಹಗೆ (ಕುಮಾ ನ. ೨–೩೪). ೨. ದೇವಪೂಜೆ ; ಭಗವದರ್ಚನೆ : "ಯಜ್ಞಃ, ಯಾಗಃ . . . ಯಾಜ್ಯಂ, ಈ ೧೦ ದೇವಪೂಜೆ" (ಅಶಕ್ಶ. ೦೭೪). [ಸಂ.]

**ಯಾಗಕುಂಡ** (ನಾ). ಹೋಮಕ್ಕಾಗಿ ರಚಿಸುವ ಅಗ್ನಿಯ ಕುಂಡ ; ಅಗ್ನಿಕುಂಡ ; ಯಜ್ಞಕುಂಡ : ಯಾಗಕುಂಡವನು ಬೇಗನೆ ಮಾಡಿ (ಕೋಗಿಲ. ೨೨–೪). [ಸಂ.]

**ಯಾಗಗೆಯ್** (ಕ್ರಿ). ಯಜ್ಞವನ್ನು ಮಾಡು : ಯಾಗಗೆಯ್ವಂ ಸ್ಥಪತಿ ಯಕ್ಕು (ಪಂಗರಾ. ೭೭–೦೪). [ಯಾಗ + ಕೆಯ್$_1$]

**ಯಾಗದೀಕ್ಷೆ** (ನಾ). ಯಜ್ಞ ಮಾಡುವುದಕ್ಕೆ ಮುಂಚೆ ಯಜಮಾನನಿಗೆ ಅಧಿಕಾರವನ್ನು ಕೊಡುವುದು ; ಯಜ್ಞದೀಕ್ಷೆ : ಯಾಗದೀಕ್ಷೆಯು ನೃಪಂ ಮಂತ್ರವಾರಿಸ್ನಾತನಾಗಿ ಬಳಿಕ . . . ಹಯಮಂ ತರಿಸಿ (ಕೈಮಿನಿ. ೩೪–೦೨). [ಸಂ. ಯಾಗದೀಕ್ಷಾ]

**ಯಾಗದ್ವೇಷಿ** (ನಾ). ಯಜ್ಞಕ್ಕೆ ವೈರಿಯಾದವನು ; ಯಜ್ಞವಿರೋಧಿಯಾದವನು: ಈಸು ಘನವೇ ಕೃಷ್ಣ ಯಾಗದ್ವೇಷಿಗಳು ಓರಿದಾಗಲವಗಿನ್ನೆ ಸಲೇ ವರರಾಜಸೂಯಾಧ್ವರಕೆ ಸಂಸ್ಕಾಸ (ಕುಮಾ ನ. ೨–೨೩).

[ಸಂ. ಯಾಗದ್ವೇಷಿನ್]

**ಯಾಗಧ್ವಂಸಕ** (ನಾ). ಯಜ್ಞವನ್ನು ಹಾಳುಮಾಡುವವನು : ರಾಕ್ಷಸ ಇವ ನಿಸ್ಸಂಶಯನು ವಿಜಯವಲಿ ಯಾಗಧ್ವಂಸಕನ ನೆಱೆ ಮುರಿವುಪಾಯವ ಕಾಣೆ ನಾನು (ಕುಮಾ ನ. ೨–೨೪). [ಸಂ.]

**ಯಾಗಪ್ಪ** (ನಾ). ಕಲ್ಲನ್ನು ಸೀಳಲು ಉಪಯೋಗಿಸುವ ಉಳಿ : (೬).

[ ? ]

**ಯಾಗಮಂಟಪ** (ನಾ). ಯಜ್ಞಕಾರ್ಯಕ್ಕಾಗಿ ನಿರ್ಮಿಸಿದ ಚಪ್ಪರ : ಇಂದ್ರಪ್ರಸ್ಥಕ್ಕೆ ಉತ್ತರದಿಗ್ಭಾಗದೊಳ್ . . . ಯಾಗಮಂಟಪಮಂ ಪಮೆದು (ಶಂಕರಾ. ೬–೩೩ ವ). [< ಸಂ. ಯಾಗಮಂಡಪ]

**ಯಾಗರಕ್ಷೆ** (ನಾ). ಯಜ್ಞಕಾರ್ಯವು ಸುಸೂತ್ರವಾಗಿ ನಡೆಯುವಂತೆ ಕಾಪಾಡುವುದು ; ಯಜ್ಞರಕ್ಷಣೆ: ವರಮುನೀಂದ್ರರ ಯಾಗರಕ್ಷೆ ಬಲವಳಿಯುತಿದೆ (ಪತಣ. ೯–೦೦). [ಸಂ. ಯಾಗರಕ್ಷಾ]

**ಯಾಗವ್ರತ** (ನಾ). ಯಜ್ಞದ ಆಚರಣೆ ; ಯಾಗಕರ್ಮ : ಅಘ ಯಾಗವ್ರತಕೆ ಭಂಗವ ತಹುದೆ ಜೀಯ (ಕುಮಾ ನ. ೨–೨೭). [ಸಂ.]

**ಯಾಗಶಾಲೆ** (ನಾ). ಯಜ್ಞಕಾರ್ಯ ನಡೆಯಲು ನಿರ್ಮಿಸುವ ಚಪ್ಪರ; ಯಜ್ಞಶಾಲೆ : ಪುರೋಹಿತಾನುಮತದಿಂ ನಾಲ್ಗಾವುದದಳತೆಯೊಳ್ ಯಾಗಶಾಲೆಯಂ ನೇರ್ಪಡಿಸಿ . . . ಯಾಗಂಗಳಂ ನೆರೆಯಿಸುತಿರ್ದರ್ (ರಾಮಾಶ್ವ. ೧೭–೪). [ಸಂ. ಯಾಗಶಾಲಾ]

**ಯಾಚಕ** (ನಾ). ೧. ಬೇಡುವವನು ; ಪ್ರಾರ್ಥಿಸುವವನು : ಯಾಚಕ ವಾಚಕ . . . ಸಮಸ್ತಜನಕ್ಕಂ ಬೇಡಿದುದಂ ಕೊಟ್ಟು (ಸುಕುಮಾ. ೬–೨೩ ವ); ರತುನಭಂಡಾರವನು ತೆಗೆತೆಗಸಿ ಮನದಣಿಯೆ ಯಾಚಕರಿಗಿತ್ತುದನೆನಗೆ ಬಣ್ಣಿಸಲಳವೆ (ಕುಮಾ ಕ. ೬–೧೮). ೨. ತಿರುಕ ; ಭಿಕ್ಷುಕ : ಯಾಚಕ ನಡಿಸೆಂದು ಕನವರಿಸಿ ಯಾಚಿಸಲು ನಾಚಿಕೊಂಡಂತೆ (ಸರ್ವಜ್ಞ. ೩೪೭). [ಸಂ.]

**ಯಾಚಕತ್ವ** (ನಾ). ಬೇಡುವಿಕೆ ; ಯಾಚನೆ : ಸ್ಥಲಜ್ಞಾನ ಯಾಚಕತ್ವವು ಸ್ಥಲಭರಿತನ ಮುಟ್ಟಬಲ್ಲುದೆ (ಪೋಕವಾ. ೯–೩೨). [ಸಂ.]

**ಯಾಚನಕ**(ನಾ). = ಯಾಚಕ ೧ : " ವನೀಪಕಃ, ಯಾಚನಕಃ, ಮಾರ್ಗಣಃ, ಯಾಚಕಃ, ಅರ್ಥೀ — ೫ ಕೇಳುವವನ ಹೆಸರು ; ಬೇಡುವವನು " (ಸಿದ್ಧಶಬ್ದ. ೩೩೬). [ಸಂ.]

**ಯಾಚನೆ** (ನಾ). ಬೇಡುವಿಕೆ ; ಬೇಡಿಕೆ ; ಪ್ರಾರ್ಥನೆ : "ಅಧ್ಯೇಷಣಾ, ವಿಷಣಾ, ಯಾಞ್ಞಾ, ಯಾಚನಾ, ಪ್ರಾರ್ಥನಾ, ಅರ್ಥನಾ—ಈ ೬ ಬೇಡುಹ" (ಶಬ್ದಮ. ೩೯-೨೦೫); ಪ್ರಯತ್ನದಿಂ ಯಾಚನೆಯಂ ಮಾಡಿ ಭಕ್ತಿಯಿಂದ ಬ್ರಾಹ್ಮಣರಿಗೆ ದಾನವ ಕೊಡು (ಕಕುಚಾ. ೬೬-೦೩). [ಸಂ. ಯಾಚನಾ]

**ಯಾಚಿತ** (ಗು). ೧. ಬೇಡಿದ ; ಕೇಳಿಕೊಂಡ ; ಪ್ರಾರ್ಥಿಸಿದ. (ನಾ). ೨. ಬೇಡಿ ಪಡೆದುದು ; ಭಿಕ್ಷೆ : ವ್ಯತಮೆನೆ ಪಡೆಗುಂ ತಾಂ ಯಾಚಿತಮುಂ ಮತ್ತಮಮೃತಶಬ್ದಮುಂ ಪಡೆಗುಮಯಾಚಿತಮುಂ (ವಸ್ತುಕೋ. ೦೩೬-೦೦೯). ೩. ತಿರುಪೆ ; ಭಿಕ್ಷಾವೃತ್ತಿ. [ಸಂ.]

**ಯಾಚಿತಕ** (ನಾ). ಬೇಡಿ ಸಂಪಾದಿಸಿದುದು ; ಕೇಳಿ ಪಡೆದುದು : "ಯಾಚಿತಕಂ, ಯಾಂಚಯಾ ಆಪ್ತಂ—೨ ಕೇಳುವುದರಿಂದ ಹೊಂದಲ್ಪಟ್ಟದ್ದು ಎರವು ತಂದದ್ದಕ್ಕೂ ಹೆಸರು" (ಸಿದ್ಧಾಂತಿ. ೨೭೪). [ಸಂ.]

**ಯಾಚಿಸು** (ಕ್ರಿ). ಬೇಡಿಕೊಳ್ಳು ; ಯಾಚನೆ ಮಾಡು : ಅಲಸದೆ ಯಾಚಿಪುದಕ್ಕಂ . . . ಅರ್ಜರ್ ಪಾರ್ವತ್ (ಸಮಸ. ೧೦-೩೪); ನರರುಮಂ ಯಾಚಿಸದ ಭಾಷೆಯಿತರಜಸಕೆ ಕೈಮುಗಿಯದದು ನಿಬ್ಬರದ ಭಾಷೆ (ಬಸವ. ೩-೬) ; ಯಾಚಿಸಿದನಂಗವುಂ ಸುತನನಾಳುಹೇಂದೆಸಗೆ ಸೂಚಿಸಿದನೀ ದ್ವಿಜಂ (ಜೈಮಿಭಾ. ೨೬-೪೪). [(ಸಂ. ಯಾಚನ) + — ಇಸು]

**ಯಾಜ** (ನಾ). ಯಜ್ಞ ಮಾಡುವವನು : ದ್ರೋಣಭಯದಲಿ ಸಕಲ ವಿಪ್ರಶ್ರೇಣಿಯಿರೆ ಯಾಜೋಪಯಾಜರು ಪ್ರಾಣನಿಸ್ಪೃಹರಾಗಿ ಮಾಡಿಸಿದರು ಮಹಾಕ್ರತುವ (ಕುವ್ಯಾಆ. ೭-೭೦). [ಸಂ.]

**ಯಾಜಕ** (ನಾ). ೧. ಯಜ್ಞವನ್ನು ಮಾಡುವವನು ; ಯಾಗಕರ್ತ. ೨. ಯಜ್ಞವನ್ನು ಮಾಡಿಸುವವನು ; ಯಜ್ಞಪುರೋಹಿತ ; ಋತ್ವಿಕ್ಕು : ಯಾಜಕಂ ತಾನಪ್ಪೆನಧ್ವರಕೆ (ಜೈಮಿಭಾ. ೫-೩೫); ಈರೆಣ್ಬರ್ ಯಾಜಕರೋರೊಂದು ದೆಸೆಯೊಳ್ ಸಾಮಗಾನಮಂ ಪಾಡುತುಂ (ರಾಜಶೇಖ. ೦೩೬-೪): ೩. ಧರ್ಮಗುರು ; ಪೂಜಾರಿ : ನಿನ್ನ ಜನಪದವೆ ನಿನ್ನ ಯಾಜಕರೆನಗೆ ನಿನ್ನನೊಪ್ಪಿಸುವಂತೆ ನೀನೇನ ಗೆಯ್ದೆ ? (ಗೂರ್ಕ್ರೊಭಾ. ೫-೦೨೫). [ಸಂ.]

**ಯಾಜನ** (ನಾ). ೧. ಯಜ್ಞವನ್ನು ಮಾಡಿಸುವಿಕೆ ; ಯಜ್ಞ ಕಾರ್ಯಕ್ಕೆ ತೊಡಗಿಸುವಿಕೆ ; ಬ್ರಾಹ್ಮಣನು ಆಚರಿಸಬೇಕಾದ ಷಟ್ಕರ್ಮಗಳಲ್ಲಿ ಒಂದು : ಭವಿಷ್ಯದ್ವಿಜನ್ಮವರ್ಣಕಧ್ಯಯನಾಧ್ಯಾಪನ ದಾನಪ್ರತಿಗ್ರಹ ಯಜನ ಯಾಜನ ವಿಶಿಷ್ಟವೃತ್ತಿಯುಮಂ . . . ನಿಜಿಸಿ (ಆದಿಪು. ೬-೭೩ ಪ) ; ಯಜ[ನಯಾ]ಜನಾಧ್ಯಯನಾಧ್ಯಾಪನ ದಾನ ಪ್ರತಿಗ್ರಹ ಷಟ್ಕರ್ಮನಿರತರುಂ . . . ಅಪ್ಪ ಶ್ರೀಮನ್ಮಹಾಗ್ರಹಾರಂ ಪೂಲಿ ಯೂರಡೆಯ ಪ್ರಮುಖಸಾಸಿರ್ವ್ವರ್ಮ್ಮಹಾಜನಂಗಳ ದಿಬ್ಯಶ್ರೀಪಾದಂಗಳ ನಾರಾಧಿಸಿ (ಶಾಸ. V. ೬೪೬-೨೫ : 1097). ೨. ಅರ್ಚನೆ ; ದೇವಪೂಜೆ : "ಇಷ್ಟಂ . . . ಯಾಜನಂ . . . ಯಾಜ್ಯಂ—ಈ ೧೦ ದೇವಪೂಜೆ" (ಶಾಶಕ. ೦೩೦). [ಸಂ.]

**ಯಾಜಮಾನ್ಯ** (ನಾ). ೧. ಯಜ್ಞಕರ್ತನಾಗಿರುವಿಕೆ : ಹುದಿದ ನವನೀತಾನುಲೇಪದ ಹೊದೆದ ಕೃಷ್ಣಾಜಿನದ ಹಸ್ತಾಗ್ರದಲೆಸೆವ ಸಾರಂಗಶೃಂಗದ ಯಾಜಮಾನ್ಯದಲಿ . . . ಅಂತರ್ವೇದಿಗೈತಂದನು ಮಹಿಪಾಲ (ಕುವ್ಯಾಸ. ೬-೨೮); ಯಾಜಮಾನ್ಯದೊಳೆಸೆವ ಭೂಪಾಲನಂ ಕಂಡು ವಾಜಿಗಳನೊಪ್ಪಿಸಿ ಪದಾಂಬುಜಕೆ ಪೊಡಮಟ್ಟೊಡೆ (ಜೈಮಿಭಾ. ೩೩-೨೯). ೨. ಒಡೆತನ ; ಯಜಮಾನಿಕೆ : ರಾಮಾಯಣದ ಕಾಲದಲ್ಲಿದ್ದ ರಾಜ್ಯಗಳೆಲ್ಲ ತಂದೆಯ ಯಾಜಮಾನ್ಯವನ್ನುಳ್ಳ ಕುಟುಂಬದ ಮಾದರಿಯಲ್ಲಿ ಇದ್ದಂಥವು (ಭಾರದ. ೬೫) ; ಈ ಮನೆಯ ಸ್ವಾಮಿತ್ವ, ಯಾಜಮಾನ್ಯವೆಲ್ಲ ತನ್ನ ಪಾಲಿನದು (ಪಾತ್ರಸ್ರೀ. ೩೦೩); ತಾಯಿ ರೋಗದಿಂದ ಹಾಸಿಗೆ ಹತ್ತಿ ಮಲಗಿದ್ದಳು ; ಆದ್ದರಿಂದ ಅವಳದೇ ಯಾಜಮಾನ್ಯ (ಬಂಕಿಮ. ೦೯೦). [ಸಂ.]

**ಯಾಜಿ** (ನಾ). ೧. ಯಾಗ ಮಾಡಿಸುವವನು ; ಯಜ್ಞ ಪುರೋಹಿತ : ಅರಿದ ಯಾಜಿಗೆ ಬಾಹ್ಯಯಜ್ಞದಲೇಸು ಫಲ (ಗಗತಾ. ೦೬-೪೦); ನಾನು ನಿನ್ನನ್ನಿಲ್ಲಿಗೆ ಕರೆತಂದುದು ಮುಖ್ಯವಾಗಿ ಇದು ಯಾಜಿಗಳ ಸ್ಥಳವೆಂದು (ದೇವಮೂ. ೦೫೪). ೨. ಪೂಜಿಸುವವನು ; ಅರ್ಚಕ : "ಯಟ್, ಯಾಟ್, ಯಾಜೀ . . . ಯಾಯಜೂಕಃ — ಈ ೭ ಪೂಜಿಸುವಂ" (ಶಾಶಕ. ೦೩೦). ೩. ಯಜ್ಞ ; ಯಾಗ. ೪. = ಯಾಜಕ ೧. 'ಸೋಮಯಾಜಿ' ಹೋ. [ಸಂ.]

**ಯಾಜ್ಞ** (ಗು). ಯಜ್ಞಕ್ಕೆ ಸಂಬಂಧಿಸಿದ ; ಯಜ್ಞದ ಕಾರ್ಯಕ್ಕೆ ಸಂಬಂಧಪಟ್ಟ. [ಸಂ.]

**ಯಾಜ್ಞವಲ್ಕ್ಯಸ್ಮೃತಿ** (ನಾ). ಪ್ರಸಿದ್ಧವಾದ ಹತ್ತೊಂಬತ್ತು ಸ್ಮೃತಿಗಳಲ್ಲಿ ಒಂದು ; ಯಾಜ್ಞವಲ್ಕ್ಯ ಎಂಬ ಮುನಿಯಿಂದ ರಚಿತವಾದ ಸ್ಮೃತಿ : ಯಾಜ್ಞವಲ್ಕ್ಯಸ್ಮೃತಿಯು ವಿಷ್ಣುಸ್ಮೃತಿಗಿಂತ ಹಿಂದಿನದಲ್ಲ (ಭಾರದ. ೫೦). [ಸಂ.]

**ಯಾಜ್ಞಸೇನಿ** (ನಾ). ಯಜ್ಞಸೇನನೆಂಬ ನಾಮಾಂತರವನ್ನು ಹೊಂದಿದ್ದ ದ್ರುಪದರಾಜನ ಮಗಳು ; ದ್ರೌಪದಿ : ಯಜ್ಞವೇದೀಸಂಭವೆಯುಂ ಯಾಜ್ಞಸೇನಿಯುಂ . . . ಎನಿಸಿದ ಪಾಂಚಾಲರಾಜತನೂಜೆ ಪವಮಾನ ತನೂಜನಲ್ಲಿಗೆ ಬಂದು . . . ನೊಂದು ನುಡಿಯೆ (ಗದಾಯು. ೦-೩೫ ವ).
[ಸಂ. ಯಾಜ್ಞಸೇನೀ]

**ಯಾಜ್ಞಿಕ** (ಗು). ೧. ಯಜ್ಞಕ್ಕೆ ಸಂಬಂಧಪಟ್ಟ. (ನಾ). ೨. ಯಜ್ಞಕರ್ತ ; ಯಾಜಕ : ಯಜ್ಞರಿಪುಗಳು ನಿಪುಣರಿಗೆ ವರಯಾಜ್ಞಿಕರಿಗಾಚಾರಹೀನರು (ಕುವ್ಯಾಸ. ೦೦-೩೨). ೩. ಯಜ್ಞ ಮಾಡಿಸುವವನು ; ಯಜ್ಞಪುರೋಹಿತ. ೪. (ಯಜ್ಞಕಾರ್ಯದಲ್ಲಿ ಉಪಯೋಗಿಸಲಾಗುವ) ಅರಳಿ, ಮುತ್ತುಗ ಮೊದಲಾದ ಮರ : "ಯಾಜ್ಞಿಕಃ—ಅರಳಿ, ಮುತ್ತುಗ" (೬ಶಂ. ೦೩೨). [ಸಂ.]

**ಯಾಜ್ಞೀಯ** (ಗು). ಯಜ್ಞಕ್ಕೆ ಸಂಬಂಧಿಸಿದ ; ಯಜ್ಞಕ್ಕೆ ಸೇರಿದ : ಇದೀಗಳ್ ಸಮಯಂ ಯಾಜ್ಞೀಯಾಶ್ವಮಂ ಪೂಜಿಸಲ್ಕೆ (ರಾಜಶೇಖ. ೦೭-೯). [ಸಂ.]

**ಯಾಜ್ಯ** (ಗು). ೧. ಯಜ್ಞಕ್ಕೆ ಸಂಬಂಧಿಸಿದ. (ನಾ). ೨. ಯಾಗ ಮಾಡಲು ಅರ್ಹನಾದವನು ; ಯಜ್ಞಕರ್ತ ! ಯಾಜ್ಯ ಯಾಜನಕೆ ವರಿಸುವೊಡಂಗಿರಸನ ಸುತಂ ಪೂಜ್ಯನೆವಿಪ್ರಾ ಕುಲದವರ್ಗೆ (ಜೈಮಿಭಾ. ೫-೨೯). ೩. ಇನ್ನೊಬ್ಬರಿಗಾಗಿ ಯಜ್ಞಮಾಡುವವನು. ೪. ಅರ್ಚನೆ ; ದೇವಪೂಜೆ : "ಇಷ್ಟಂ, ಇಷ್ಟಿಃ . . . ಯಾಜ್ಯಂ—ಈ ೧೦ ದೇವಪೂಜೆ" (ಶಾಶಕ. ೦೩೦). [ಸಂ.]

**ಯಾಣ** (ನಾ). ಯಾನ ; ಸಂಚಾರ : ಜಗಪ್ರವಾಸದ ಖಗಪ್ರಯಾಣ ಗುಹ್ಯಾತ್ ಗುಹ್ಯತರಂ ಈ ಯಾಣ (ಅರಳು. ೪೯೭-೦೫).
[ < ಪ್ರಾ. ಯಾಣ./ಸಂ. ಯಾನ]

**ಯಾತ$_1$** 'ಏತ$_1$' ನೋ.

**ಯಾತ$_2$** (ಗು). ೧. ನಡೆದ ; ಮುಂದೆ ಚಲಿಸಿದ. (ನಾ). ೨. ಹೋಗುವಿಕೆ ; ಹೋಗುವುದು ; ಗಮನ : 'ಯಾತಾಯಾತ' ಪರಾ. ೩. ಅಂಕುಶಪ್ರಯೋಗದಿಂದ ಆನೆಯನ್ನು ಮುಂದಕ್ಕೆ ನಡೆಸುವುದು : "ಅಂಕುಶ(ವಾ)ಚಾರಣಮಂ ಯಾತಮೆಂಬುದು" (ಶಬ್ದಮ. ೩೭-೬೯). ೪. ಕಾಲಾಳು : ಪದಾತಿ : "ಯಾತಂ ಪದಾತಿಕಂ ಪಾಯದಳ ಪತ್ತಿ ಪಾದಾತಂ ಪದಾಜಯ ಪದಿಕನೆನೆ ಕಾಲಾಳ್" (ಮಂಗರಾ. ೬೫-೨೬).
[ಸಂ.]

**ಯಾತಕೆ** 'ಏನ್$_1$' ಪರಾ.

**ಯಾತಕ್ಕೆ** 'ಏನ್$_1$' ಪರಾ.

**ಯಾತನ** (ನಾ). ತೀವ್ರವಾದ ಹಿಂಸೆ ; ಯಾತನೆ : "ಆ ಯಾತನಂ ಕಾರಣಾಂ ದಂಡಣೆ(ನೆ)ಯೆನಿಕ್ಕುಂ" (ಮಂಗರಾ. ೧೦೬-೧) ; ಪುಣ್ಯದ ಹಾದಿಗಳ ಬಿಟ್ಟು ಅಂತಕನ್ನ ಯಾತನದಿ ನೀ ಕಷ್ಟಪಟ್ಟು (ಪುರಂದ. ೩-೧೪-೩).
[ಸಂ. ಯಾತನಾ]

**ಯಾತನೆ** (ನಾ). ತೀವ್ರವಾದ ಹಿಂಸೆ, –ಬಾಧೆ ; ಉತ್ಕಟವಾದ ದುಃಖ : "ಯಾತನೆ ಗುರುವೇದನೆ" (ವಸ್ತುಕೋ. ೨೦-೧೧) ; ನಮ್ಮ ಎರಡು ಕಣ್ಣುಗಳಲ್ಲಿ ಯಾವುದನ್ನು ಚುಚ್ಚಿದರೆ ತಾನೆ ಯಾತನೆಯಾಗುವುದಿಲ್ಲ ? (ಹೀಕಿಶಂ. X. ೧೮) ; ಅವಳು ಅನುಭವಿಸಿದ ಮಾನಸಿಕಯಾತನೆಯನ್ನು ಮರೆಮಾಚಲೂ ಸಹ ಪ್ರಯತ್ನಿಸಲಿಲ್ಲ (ಬಾಡಿಲ. ೧೦೯).
[ಸಂ. ಯಾತನಾ]

**ಯಾತನೆಗೊಳ್** (ಕ್ರಿ). ತೀವ್ರವಾದ ಬಾಧೆಗೊಳಗಾಗು, – ವೇದನೆಯನ್ನು ಅನುಭವಿಸು : ಮನೆಯೆಂದುಂ ಮಕ್ಕಳೆಂದುಂ . . . ತಾಪತ್ರಯದೊಳ್ ಕುದಿದೆಂ ಬತ್ತಿದೆಂ ಬಾಡಿದೆಂ ಯಾತನೆಗೊಂಡೆಂ ದೇವ (ರತ್ನಾಕ. ೨೨). [ಯಾತನೆ + ಕೊಳ್$_1$]

**ಯಾತಯಾಮ** (ಗು). ೧. ಒಂದು ರಾತ್ರಿಯಷ್ಟು ಹಳೆಯದಾದ : ತಂಗುಳಾದ. ೨. ಹಳಸಿದ ; ಕೆಟ್ಟುಹೋದ ; ನಿಷ್ಪ್ರಯೋಜಕವಾದ. ೩. ವಯಸ್ಸಾದ ; ಜೀರ್ಣವಾದ ; ಶಿಥಿಲವಾದ. (ನಾ). ೪. ಹಳಸಿಹೋದುದು : "ಯಾತಯಾಮಂ — ಹಳಸಿಹೋದದ್ದು, ಅನುಭವಿಸಿಯಾದ್ದು; ತಿಂದು ಜೀರ್ಣಿಸಿಹೋದದ್ದು" (ಸಿದ್ಧಾಂಶಿ. ೪೧೮). ೫. ಮುದುಕ ; ವೃದ್ಧ : "ಯಾತಯಾಮಂ ವೃದ್ಧಂ ಸ್ಥವಿರಂ ತಾಂ" (ವಸ್ತುಕೋ. ೫೬-೨೭). [ಸಂ.]

**ಯಾತವ್ಯ** (ನಾ). ಯುದ್ಧದಲ್ಲಿ ಎದುರಿಸಲು ಯೋಗ್ಯನಾದವನು ; ಶತ್ರು : ಆತನಿನ್ನೆವರೆಗಂ (ವ್ಯಾನರು) ಯಾತವ್ಯರುಮಾಜ್ಞಾವಿಧಾನಸ್ಥಾನರುಮಪ್ಪ ನಮ್ಮೊಳಾದುದು ಸಯೋಪಾಯಂ ವ್ಯವಹಾರಸಮಾನನುಮಪ್ಪಮಾನಸುಮಲ್ಲದಿರ್ಪರ್ಗಳಲ್ಲಿಗೇ ವಿಧೇಯಂ ಮಾಟ್ಬುದೆಂದು . . . ನುಡಿದು (ಶಾಂತಿಪು. ೨-೩೫ ವ). [ಸಂ.]

**ಯಾತಾಯಾತ** (ನಾ). ಹೋಗುವುದು ಮತ್ತು ಬರುವುದು : ಸಂಚಾರ ; ಓಡಾಟ : ಯಾತಾಯಾತ ಮಾಡುವುದನ್ನು ಚೆನ್ನಾಗಿ ಬಲ್ಲೆನು. ಎಲ್ಲಿಗೆ ಹೋಗೆಂದರೆ ಅಲ್ಲಿಗೆ ಹೋಗಬಲ್ಲೆನು (ದೇಶೀಶಾ. ೫೦) ; ಊರ ದಾರಿಗಳಲ್ಲಿ ಯಾತಾಯಾತ ಒಂದು ಬಗೆಯಾಗಿ ನಿಂತೇ ಹೋಗಿದೆ (ಇಶ್ಮಶ. ೪). [ಸಂ.]

**ಯಾತು** (ನಾ). ೧. ದಾರಿಗ ; ಪ್ರಯಾಣಿಕ. ೨. ರಾಕ್ಷಸ. ೩. ಪಿಶಾಚಿ. ೪. ಮಾಟ ; ಮಾಯಾವಿದ್ಯೆ. ೫. ನೈಋತ್ಯ ದಿಕ್ಕಿನ ಅಧಿಪತಿ ; ನಿಋತಿ : "ಯಾತು, ಯಾತುಧಾನಃ, ಕ್ರವ್ಯಾತ್, ರಾಕ್ಷಸಃ, ರಕ್ಷಸ್ . . . ಕೈಕಸೇಯಃ — ಈ ೯ ನೈಋತಿಯ ಪೆಸರ್" (ಹಲಾಯು. ೦೩-೭೩). [ಸಂ.]

**ಯಾತುಧಾನ** (ನಾ). ೧. = ಯಾತು ೨ : "ರಕ್ಷಃ ಕೋಣಪ ನೈಋತ ರಾಕ್ಷಸಪುಣ್ಯಜನ ಯಾತುಧಾನ ಕ್ರವ್ಯಾದ ಕ್ಷಣದಾಚರರೆಂದು ಸದ್ಯಕಾರ್ಥಂಗಳ್ ನಿಶಾಟ ಪರ್ಯಾಯಂಗಳ್" (ವಸ್ತುಕೋ. ೬-೪೨). ೨. = ಯಾತು ೩. ೩. = ಯಾತು ೫ : "ಯಾತು, ಯಾತುಧಾನಃ, ಕ್ರವ್ಯಾತ್, ರಾಕ್ಷಸಃ, ರಕ್ಷಸ್ . . . ಕೈಕಸೇಯಃ — ಈ ೯ ನೈಋತಿಯ ಪೆಸರ್" (ಹಲಾಯು. ೦೩-೭೩) ; ಯಾತುಧಾನ ಕುಬೇರ ಕಿನ್ನರ ಮಾತೃಗಣ ಕರ್ಣಸಲಿ ಸುಮನೋಜಾತ ಚಿತ್ರರಥಾದಿ ಗಂಧರ್ವರು ವಿಪಕ್ಷದಲಿ ಭೂತಗವೀಚಿಯಲಿ . . . ನಾರದಾದಿ ಮಹಾತಪಸ್ವಿಗಳತ್ತಲಾಯಿತು (ಕುಮಾವ್ಯ. ೨೨-೮). [ಸಂ.]

**ಯಾತೃ** (ನಾ). ೧. = ಯಾತು ೧. ೨. ರಥವನ್ನು ನಡೆಸುವವನು ; ಸಾರಥಿ. ೩. ನೆಗಣ್ಣಿ ; ಓರಗಿತ್ತಿ : "ಯಾ(ತಾ)ತೃವೆಂಬುದು ನಗೆವೆಣ್ಣು" (ಹಲಾಯು. ೯೪-೩೮೪). [ಸಂ.]

**ಯಾತ್ಯ** (ಗು). ೧. ಚಿತ್ರಹಿಂಸೆಗೆ ಗುರಿಯಾಗುವ : ನರಕಯಾತನೆಗೆ ಗುರಿಯಾಗುವ. (ನಾ). ೨. ನರಕಯಾತನೆಗೆ ಈಡಾದ ಜೀವ : ಪ್ರೇತ : "ನಾರಕಾಃ, ಪ್ರೇತಾಃ, ಯಾತ್ಯಾಃ, ಆತಿವಾಹಿಕಾಃ — ಈ ೪ ನಾರಕರ್" (ಹಲಾಯು. ೧೦೩-೩). [ಸಂ.]

**ಯಾತ್ರಾದಾನ** (ನಾ). ೧. (ರಾಜನು ತನ್ನ) ಪ್ರಯಾಣದ ಆರಂಭ ಕಾಲದಲ್ಲಿ ಮಾಡುವ (ನವಧಾನ್ಯಗಳ) ದಾನ : ಧರ್ಮರಾಯನು ಬ್ರಾಹ್ಮಣೋತ್ತಮರಿಗೆ ಅನೇಕ ಧನಗಳನ್ನು ಯಾತ್ರಾದಾನವಾಗಿ ಕೊಟ್ಟು . . . ಹಸ್ತಿನಾಪುರಕ್ಕೆ ಹೊರಟನು (ಕೃವಾಕ. ೦೨೬). ೨. ರಥೋತ್ಸವದ ಆರಂಭದಲ್ಲಿ ಪೂಜಾರಿಯು ಕೊಡುವ ದಾನ : (೬). [ಸಂ.]

**ಯಾತ್ರಾರ್ಥಿ** (ನಾ). ತೀರ್ಥಕ್ಷೇತ್ರಗಳ ದರ್ಶನಾರ್ಥವಾಗಿ ಹೊರಟವನು ; ಯಾತ್ರಿಕ : ಅನಂತರ ಕೃಷ್ಣದೇವರಾಯನು ವಾನಪ್ರಸ್ಥಾಶ್ರಮ ಸ್ವೀಕಾರ ಮಾಡಿದವನಂತೆ ಯಾತ್ರಾರ್ಥಿಯಾದನು (ಕಥಾ. ೧೧೦).
[ಸಂ. ಯಾತ್ರಾರ್ಥಿನ್]

**ಯಾತ್ರಾಸ್ಥಳ** (ನಾ). ಪುಣ್ಯಕ್ಷೇತ್ರ ; ಪವಿತ್ರಸ್ಥಳ : ತೀರ್ಥಕ್ಷೇತ್ರ : ಯಾತ್ರಾಸ್ಥಳಗಳಿಗೆ ಜನರು ಹೋಗಿ ಬರುವುದು ಹೆಚ್ಚಾಗಿರುವುದರಿಂದ ಅಲ್ಲಿಗೆ ರಸ್ತೆಗಳನ್ನು ಸಾಮಾನ್ಯವಾಗಿ ಹಾಕಿರುವರು (ಭೂವಿವ. ೩೧).
[ಸಂ. ಯಾತ್ರಾಸ್ಥಲ]

**ಯಾತ್ರಿಕ** (ನಾ). ೧. ಯಾತ್ರೆ ಮಾಡುವವನು; ದಾರಿಕಾರ; ಪ್ರವಾಸಿ : ಯಾತ್ರಿಕರು ಮೈಸೂರು ತುಂಬುವ ಕಾಲ ತಪ್ಪಿದರೆ, ಅಲ್ಲಿ ಹೆಚ್ಚಿಗೆ ವ್ಯಾಪಾರವಿಲ್ಲ (ಮರಮ. ೫೨೩). ೨. = ಯಾತ್ರಾರ್ಥಿ : ಮೂವರು ಯಾತ್ರಿಕರೂ ಒಬ್ಬರ ಮುಖವನ್ನೊಬ್ಬರು ನೋಡತೊಡಗಿದರು (ಶ್ರೀರಾಯು. ೩). [ಸಂ.]

**ಯಾತ್ರೆ** (ನಾ). ೧. ಪಯಣ ; ಪ್ರಯಾಣ : "ಯಾತ್ರೆ ಪ್ರಸ್ಥಾನಮೆನೆ ಪಯಣಮದು" (ಮಂಗರಾ. ೬೫-೨೭); ಮಂದಹಾಸದಲಸುರರಿಪು ನಗುತೆಂದ ನೆಲ್ಲಿಗೆ ಯಾತ್ರೆ ಕೋಪಿಸುವಂದವಾರೊಡನೆನಲು (ಶಿಭಾಗ. ೧೧-೭೨-೩೧) : ಅಜ್ಜನ ಮನೆಯ ಯಾತ್ರೆಯು ಇದಕ್ಕೆ ಅನುಕೂಲವಾಯಿತು (ಮರಮ. ೨೬೭). ೨. ಪುಣ್ಯಕ್ಷೇತ್ರಗಳ ದರ್ಶನಾರ್ಥವಾಗಿ ಮಾಡುವ ಪ್ರಯಾಣ : ಇಂದು ನಾಳೆಯೆನುತ್ತ ಯಾತ್ರೆಗೆ ಬಂದವರ ಬೀಳ್ಕೊಡದೆ ಪರಮಾನಂದವನು ನಿತ್ಯಾತ್ಮ ಕೃಷ್ಣನು ಸಲಿಸಿದನು ಜಗಕೆ (ಶಿಭಾಗ. ೧೧-೭೩-೪೫) ; ಯಾತ್ರೆಗೆ ಬರುವವರನ್ನು ಬೇಡವೆಂದಾರೆ ? (ಶ್ರೀರಾಯು. ೨೦೮). 'ಕಾಶೀಯಾತ್ರೆ', 'ತೀರ್ಥಯಾತ್ರೆ' ಪರಾ. ೩. ಯುದ್ಧಕ್ಕಾಗಿ ಸೈನ್ಯ ಹೊರಡುವುದು; ಕಾಳಗ ಅಥವಾ ಧಾಳಿಗಾಗಿ ಶಿಸ್ತಿನಿಂದ ಹೊರಡುವ ದಂಡಯಾತ್ರೆ : ಪ್ರಸ್ಥಾನ : "ಯಾತ್ರಾ, ವ್ರಜ್ಯಾ, ಅಭಿನಿರ್ಯಾಣಂ, ಪ್ರಸ್ಥಾನಂ, ಗಮನಂ, ಗಮಃ — ೬ ಜಯಾರ್ಥವಾಗಿ ಹೊರಟ ಅರಸಿನ ಪ್ರಯಾಣಕ್ಕೆ ಹೆಸರುಗಳು" (ಸಿದ್ಧಾಂಶಿ. ೨೬೭). ೪. (ಯಾವುದಾದರೂ ದೇವತೆಗೆ ವರ್ಷಕ್ಕೊಂದು ಸಲದಂತೆ ನಿಯತಕಾಲದಲ್ಲಿ ನಡೆಸುವ ತೇರಿನ) ಉತ್ಸವ ; ಜಾತ್ರೆ. ೪. ಮೆರವಣಿಗೆ : ವಾದಿತ್ರಾರಾವಂ ವಂದಿವೃಂದಧ್ವನಿ ಜಯಜಯಕೋಲಾಹಲಂ ಮಂಗಲಾಲಂಕಾರಂ ಯಾತ್ರೋತ್ಸವ ಪ್ರಸ್ತುತಮೆನೆ ತಳರ್ದಂ ರಾಗದಿಂ ರಾಜರಾಜಂ (ಅದಿಪು. ೦೩-೪೩) ; ಉಣ್ಮದತ್ತು ಪೊಟಲೊಳ್ . . . ಬಂಧುರಂ ಮದನಾ ಯಾತ್ರೋತ್ಸಾಹನಿವೇದಕಂ ಕನಕಕೋಣಾಘಾತಭೇರೀರವಂ (ಶಂಪ್ರಕೃ. ೨-೧೦೯). ೫. ಅನುಸರಣೆ; ಹಿಂಬಾಲಿಸುವುದು : "ಅನುಸರಿಸುವಲ್ಲಿಯುಂ ಯಾತ್ರಾ ಎಂಬುದು" (ಹಲಾಯು. ೦೩೬-೩೨). ೬. ಜೀವನಾಧಾರ ; ಜೀವನೋಪಾಯ. ೭. ಪದ್ಧತಿ ; ಸಂಪ್ರದಾಯ ; ರೂಢಿ.
[ಸಂ. ಯಾತ್ರಾ]

**ಯಾಥಾತ್ಮ್ಯ** (ನಾ). ನಿಜಸ್ಥಿತಿ ; ಸ್ವಭಾವ : ಸಂಶಯವಿಪರ್ಯಯಸಾವದ್ಯಾನವದ್ಯವಸಾಯ ಸ್ವಭಾವರಹಿತಮಾಗಿ ಜೀವಾದಿಪದಾರ್ಥಯಾಥಾತ್ಮ್ಯ

ವಗಮುಂ ಸಮ್ಯಗ್‌ಜ್ಞಾನಂ (ಆದಿತ್ಯ. ೧೦-೬೬ ವ). [ಸಂ.]

**ಯಾಥಾರ್ಥ್ಯ** (ನಾ). ವಸ್ತುಸ್ಥಿತಿ ; ನಿಜಸ್ಥಿತಿ : ಯಾಥಾರ್ಥ್ಯವೆಂಬ ಪ್ರಾಮಾಣ್ಯವು ಸ್ವತಃಗ್ರಾಹ್ಯ (ಹಿಂದಣ. ೧೭೭). [ಸಿರಿ.]

**ಯಾದ**$_1$ (ನಾ). (ಮರವನ್ನು ಹತ್ತುವ) ಒಂದು ಬಗೆಯ ಇಲಿ : ಎಳನೀರುಗಳನ್ನೆಲ್ಲಾ ಯಾದ ಕುಡಿದು ಉದುರಿಸಿದ್ದುವು (ಪಡುವಾರು. ೨೭೦).

**ಯಾದ**$_2$ (ನಾ). ಕ್ರೂರವಾದ ಜಲಚರಪ್ರಾಣಿ : "ಅಂಭಶ್ಚರೋಗ್ರಸತ್ವಂ ಯಾದಂ" (ಪತ್ತುಕೋ. ೨೨-೯). [< ಸಂ. ಯಾದಸ್]

**ಯಾದ**$_3$ (ನಾ). ನೆನಪು ; ಸ್ಮರಣೆ ; ಜ್ಞಾಪಕ : ತರ್ಕಾ ಮತ್ತ ಯಾದ ಹಚ್ಚಿ ಶೋಧ ಮಾಡಿ ಕೇಳತೀನಿ ಒಂದ ಸೋಕಾ (ಶುಬ್ಬ ಹ. ೯೨); ಒಂದಿಷ್ಟು ಯಾದ ಇರಲಿ ಅವರ ಅನ್ನದ್ದು (ರಿಷಹ. II, ೯೨೨).

[← ಪಾರ. ಹಿಂ. ಮರಾ. ಯಾದ್]

**ಯಾದಃಪತಿ** (ನಾ). ೧. ಸಮುದ್ರ; ಕಡಲು : "ಸಮುದ್ರಃ, ಅಬ್ಧಿಃ . . . ಯಾದಃಪತಿಃ, ಅಪಾಂಪತಿಃ — ೧೫ ಸಮುದ್ರದ ಹೆಸರುಗಳು, ಅಂದರೆ ಕಡಲು" (ಸಿದ್ಧಾಂತಿ. ೬೬). ೨. ಪಶ್ಚಿಮದಿಕ್ಪಾಲಕ : ವರುಣ : ದಂತವಕ್ತ್ರಂ . . . ವನಮಾಲಾಸ್ಪದನೆಂದು ಯಾದಃಪತಿಯುನದಿಷ್ಟಿಯುಂ ಅದ್ರಿಧರನೆಂದು ಪವಮಾನನನವಮಾನಿಸಿಯುಂ (ಜಗನ್ನಿ. ೯-೫೬ ವ). [ಸಂ.]

**ಯಾದಗಾರಿ** (ನಾ). ನೆನಪು ; ಸ್ಮೃತಿ : ಈ ಮಿತ್ರತ್ವ ಶಾಶ್ವತವಾಗಿ ನಡೆದು ಬರುವುದಕ್ಕೆ ಯಾದಗಾರಿ ಗುರ್ತು ದೋಸ್ತಿಮಾರ್ಗದಿಂದ ಕೇಳುತ್ತೇವೆ (ರಾಜೇಂದ್ರ. ೯೮). [← ಪಾರ. ಹಿಂ. ಮರಾ. ಯಾದ್‌ಗಾರೀ]

**ಯಾದವ** (ಗು). ೧. ಯದುವಿನಿಂದ ಬಂದ ; ಯದುಕುಲಕ್ಕೆ ಸೇರಿದ : ಯಾದವವಂಶದೊಳ್ ನೆಗಟ್ದ ಚಕ್ರಧರಂಗೆ ಮುರಾಂತಕಂಗೆ . . . ಸೇಸೆಯು ನಿಕ್ಕಿದರ್ (ಬಂಹಂ. ೦೨-೬೨). (ನಾ). ೨. ಯದುವಂಶಕ್ಕೆ ಸೇರಿದವನು : ಧನ್ಯರೆಮ್ಮವೊಲದಾರ್ ಮುನ್ನಾದವರ್ ಯಾದವರ್ (ಜಗನ್ನಿ. ೩-೫) ; ಯಾದವರು ಕೌರವರೊಳುಂಟೇ ಭೇದ (ಕುಮಾ. ಉ. ೦-೨೭). ೩. ಕೃಷ್ಣ : ಯಾದವ ನೀ ಬಾ ಯದುಕುಲನಂದನ (ಪುರಂದ. ೦-೦೩ ಪಲ್ಲವಿ). ೪. ಹೊಯ್ಸಳವಂಶ ಮತ್ತು ಆ ವಂಶಕ್ಕೆ ಸೇರಿದವನು : ಸಳನೆಂಬ ಯಾದವಂ ಪೊಯ್ಸಳನಾದಂ (ಎಕ. V, ಅರಸೀ. ೦೨೭-೦೦; 1185). 'ಯಾದವಕುಳ' ಪರಾ. ೫. ಸೇವುಣವಂಶದವನು : ಈ ಪ್ರಕಾರ ಯಾದವ ಅರಸರು ಕರ್ನಾಟಕದ ಉತ್ತರಭಾಗವನ್ನು ಕ್ರಿ.ಶ. ೧೩೧೧ನೇ ವರ್ಷದವರೆಗೆ ಆಳಿದರು (ಕಭಾಗ. ೩೩೦).

**ಯಾದವರೆಜಿಯ** = ಯಾದವರ ಒಡೆಯ ; ಕೃಷ್ಣ : ಅವಧಾನ ಜೀಯ ನಮ್ಮಾ ಪೊಳಲ ಪೊರೆಗೆ ಯಾದವರೆಜಿಯನಿದೆ ಬಂದನು (ಕೈಬಿಡಾ. ೨-೯೬). [ಸಂ.]

**ಯಾದವಕಲಹ** (ನಾ). ೧. ಯಾದವರಲ್ಲಿಯೇ ಉಂಟಾದ ಜಗಳ, ಹೊಡೆದಾಟ. ೨. (ಅಲಂ) ಅಂತಃಕಲಹ ; ಒಳಜಗಳ : ಈ ಯಾದವ ಕಲಹದಿಂದ ಅವರೆಲ್ಲರೂ ಹತರಾದರು (ಮಣಿಸ. ೯೫). [ಸಂ.]

**ಯಾದವಕುಲ**, ಯಾದವಕುಳ (ನಾ). ೧. ಯಾದವರ ವಂಶ ; ಯದುಕುಲ. ೨. = ಯಾದವ ೩ : ಯಾದವಕುಲನಿಸೆ ತಿಂತಿಣಿಯಾದವನೀ ಪಾಲಕುಲದ ಹಯಸಂತತಿಯಂ ಸಾದಿಗಳಂ ರಣರಾದ್ರರಸಾದಿಗಳಂ ತುಱುಗಿ ನಟ್ಟುವಸ್ತ್ರಾವಳಿಗಳ್ (ಜಗನ್ನಿ. ೪-೫೪). **ಯಾದವಕುಳ** : ೩. = ಯಾದವ ೪ : ದ್ವಾರಾವತೀಪುರವರೇಶ್ವರಂ ಯಾದವಕುಳಾಂಬರದ್ಯುಮಣಿ . . . ವೀರ ವಿಷ್ಣುವರ್ಧನದೇವಂ (ಎಕ. V, ಚನ್ನರಾ. ೦೪೯-೨ ; 1125). [ಸಂ.]

**ಯಾದವಕುಳ** 'ಯಾದವಕುಲ' ನೋ.

**ಯಾದವಿ**$_1$ (ಗು). ೧. ಯಾದವರಿಗೆ ಸಂಬಂಧಿಸಿದ. (ನಾ). ೨. (ಅಲಂ) ಅಂತಃಕಲಹ ; ಒಳಜಗಳ : ಅದೊಂದು ಯಾದವಿಯ ಪರಿಣಾಮ ಬಡೆನ್ (ಪೂರಿಪ. ೩೬). [< ಸಂ. ಯಾದವೀಯ]

**ಯಾದವಿ**$_2$ (ನಾ). ೧. ಯದುವಂಶಕ್ಕೆ ಸೇರಿದವಳು. ೨. ವಸುದೇವನ ಸಹೋದರಿಯೂ ಶಿಶುಪಾಲನ ತಾಯಿಯೂ ಆದ ಸಾತ್ವತಿ : ದಿಗಿಲಿನ – ದುಃಖಗಳಿಂದ ಯಾದವಿಯು ಕೃಷ್ಣನಿರಿದ ವರವನ್ನು ಕೇಳಿದಳು (ರಜಾ. ೯೯). ೩. ದುರ್ಗೆ; ಪಾರ್ವತಿ. ೪. ಕುಂತಿ. [ಸಂ. ಯಾದವೀ]

**ಯಾದವೀಕಲಹ** (ನಾ). (ಅಲಂ) ಒಳಜಗಳ ; ಅಂತಃಕಲಹ : ಹನ್ನೊಂದನೆಯ ಶತಮಾನದಿಂದಾಚೆ . . . ಯಾದವೀಕಲಹಗಳು ಎದ್ದು, ದೇಶ ನಾನಾ ರಾಜರ ಕೈಸೇರಿತು (ಶಾರದ. ೩೯೭). [ಸಂ.]

**ಯಾದಸ** (ನಾ). ೧. = ಯಾದ$_2$ : ಉದಧಿಯೊಳ್ಮಣುಗಲೋರಂತೆ ಯಾದಸಗಳುಂಡು ಸುಖಿಸಲಿ (ವಂಶಾರಾ. ೫-೫-೧೫). ೨. ನೀರು ; ಜಲ. [ಸಂ. ಯಾದಸ್]

**ಯಾದಸಾಂನಾಥ** (ನಾ). ಜಲಚರಗಳ ಅಧಿಪತಿ; ವರುಣ. [ಸಂ.]

**ಯಾದಸಾಂಪತಿ** (ನಾ). = ಯಾದಸಾಂನಾಥ : "ಪ್ರಚೇತಾ, ವರುಣಃ. ಪಾಶೀ, ಯಾದಸಾಂಪತಿಃ, ಅಪ್ಪತಿಃ – ೫ ವರುಣನ ಹೆಸರುಗಳು" (ಸಿದ್ಧಾಂತಿ. ೨೯). [ಸಂ.]

**ಯಾದಾಸ್ತ** 'ಯಾದಾಸ್ತು' ನೋ.

**ಯಾದಾಸ್ತು**, ಯಾದಾಸ್ತ (ನಾ). ೧. ನೆನಪಿಗೆ ಬರಲು ಸಹಾಯಕವಾದ ಟಿಪ್ಪಣಿಕಾಗದ, ಸೂಚನಾಪತ್ರ ; ಜ್ಞಾಪಕಪತ್ರ : ಮುತ್ತುಭಟ್ಟನ ಕೈಯಲ್ಲಿ ಒಂದು ಯಾದಾಸ್ತು ಬರಕೊಟ್ಟು ಕಳುಹಿದಲ್ಲಿ (ರಾಜೇಂದ್ರ. ೫೯) ; ಒಂದು ಯಾದಾಸ್ತು ತೋರಿಸಿದರು. ಅದು ಸಭೆಯ ನೋಟೀಸು (ಕರವೀ. ೦೦೫). ೨. "ಸರಿಸಮಾನರಾದ ಅಧಿಕಾರಿಗಳಿಗೆ ಬರೆಯುವ ಸರ್ಕಾರಿ ಒಕ್ಕಣೆ" (ಪಡುವಾರು. ೩೫೩ ಟಿಪ್ಪಣಿ) : ಇತ್ತಿಲ್ಲೇ ಅಂತ ಬರೆಯಬೇಕಾದಲ್ಲಿ ಯಾದಾಸ್ತು ಅಂತ ಬರೆಯುತ್ತಿದ್ದರು (ಪಡುವಾರು. ೦೫೩). **ಯಾದಾಸ್ತ** : ೧. ಶ್ರೀ ಪರಕಾಲಸ್ವಾಮಿಗಳವರ ಮಠಕ್ಕೆ ಸಾಗ್ಸಿಕೊಂಡು ಬರುವ ಅಕ್ಕಿ ಗೋಣಿಗೆ ಮಠದ ಪಾರಪತ್ಯಗಾರ ಯಾದಾಸ್ತ ಮೇರೆಗೆ . . . ಸುಂಕದ ಬಗ್ಗೆ ತಡಿಯದೆ ಬಿಡುವುದು (ಮೈಅಂ. ೦೯೩೮, ೨೦-೩ ; 1810].

[← ಪಾರ. ಹಿಂ. ಯಾದ್‌ದಾಶ್ತ್; ಮರಾ. ಯಾದ್‌ದಾಸ್ತ್]

**ಯಾದಿ** (ನಾ). ನೆನಪಿಗಾಗಿ ಬರೆದಿಟ್ಟುಕೊಂಡ ವಸ್ತುಗಳು, ವ್ಯಕ್ತಿಗಳ ಹೆಸರು ಮೊದಲಾದುವುಗಳ ಪಟ್ಟಿ : ಒಂದೇ ಸಾರಿಗೆ ಎಲ್ಲ ಸಾಮಾನುಗಳನ್ನು ತಂದುಬಿಡಬೇಕೆಂದು ಎಲ್ಲದರ ಯಾದಿ ಮಾಡಿಕೊಳ್ಳುತ್ತೇನೆ (ಸಂಬಿಗ. ೩); ಹೊಸಪುಸ್ತಕಗಳ ಯಾದಿಯನ್ನು . . ನಿನಗೆ ತರಿಸಿಕೊಡುತ್ತೇನೆ (ಸವಃಶೀ. ೩೦೩) ; ನಾನು ಈಗಾಗಲೇ ಈ ಹಳ್ಳಿಯಲ್ಲಿ ಹೊಲವಿಲ್ಲದ ಜನರ ಯಾದಿಯನ್ನು ಸಿದ್ಧಪಡಿಸಿದ್ದೇನೆ (ಮುಕ್ತಿಮ. ೩೯೯). [← ಮರಾ. ಯಾದೀ]

**ಯಾದೃಚ್ಛಿಕ** (ಗು). ೧. ಸ್ವಚ್ಛಂದವಾದ ; ನಿಯಮಕ್ಕೆ ಒಳಪಡದ : ಒಂದು ಪರಿಮಾಣದ ಅಳತೆಯನ್ನು ಹತ್ತಾರು ಸಾರಿ ಮಾಡಿದಾಗ ಅವರ ಲೋಪ ಪ್ರತಿಸಾರಿಯೂ ಒಂದೊಂದು ಬೆಲೆಯುಳ್ಳದ್ದಾದರೆ ಅದನ್ನು ಯಾದೃಚ್ಛಿಕಲೋಪವೆನ್ನುತ್ತಾರೆ (ಭಔಕೋ. I, ೩೩೦). ೨. ಅನಿರೀಕ್ಷಿತವಾದ; ಆಕಸ್ಮಿಕವಾದ : ಕೇವಲ ಬಾಹ್ಯಸುಖಗಳಲ್ಲಿ ಆಸಕ್ತನಾಗಿರುವವನು ಕರ್ಮಪರಿಪಾಕದಿಂದಲೋ, ಯಾದೃಚ್ಛಿಕ ಸುಕೃತದಿಂದಲೋ ಅಧ್ಯಾತ್ಮ ವಿಷಯವನ್ನು ಅರಿಯುವನು (ಶಾರದ. ೨೬೫). [ಸಂ.]

**ಯಾದೃಚ್ಛಿಕಂ** (ಅ). ಮನ ಬಂದಂತೆ ; ಸ್ವಚ್ಛಂದವಾಗಿ ; ಬೇಕಾದ ಹಾಗೆ : ಪದ್ಮಣಾರ್ಯಂ . . . ಶಿವೈಕ್ಯಪ್ರಕರಸಹಿತನಾಗಿ ಲಿಂಗಾರ್ಚನಮುನಾಕೆಜೀಯೊಳುರುತರಾನಂದದಿಂ ಯಾದೃಚ್ಛಿಕಂ ರಚಿಸಿ ಹರ್ಷದಿಂ ಬಂದು ನಿಂದು (ಪದ್ಮರಾ. ೬-೯೩). [ಸಂ.]

**ಯಾದೃಚ್ಛಿಕವಾದ** (ನಾ). ಕಾರ್ಯಕಾರಣಭಾವವನ್ನು ಒಪ್ಪದೆ, ಎಲ್ಲವೂ ತನ್ನಿಂದ ತಾನೆ ಆಗುವುದೆಂದು ಹೇಳುವವರ ವಾದ ; ಸ್ವಭಾವವಾದ ; ನಿರಪೇಕ್ಷವಾದ : ಒಬ್ಬ ಪುರುಷನ ಬುದ್ಧಿಪೂರ್ವಕ

ಇಚ್ಛಾಸಂಕಲ್ಪ ಪ್ರಯತ್ನಗಳಿಂದ ಈ ಪರಿಣಾಮಪರಂಪರೆ ಉಂಟಾಗುವ ಹಾಗೆ ಕಂಡುಬರುವುದಿಲ್ಲ. ಇದಕ್ಕೆ ನಿಯತವಾದ ನಿಯಾಮಕವಿಲ್ಲದಿರುವುದರಿಂದ ಇದೇ ಯಾದೃಚ್ಛಿಕವಾದವು (ಹಿಂದಸಾ. ೦೫). [ಸಂ.]

**ಯಾದೃಶ** (ಗು). ಯಾವುದರಂತಹ ; ಯಾವ ಬಗೆಯ ;. ಯಾವ ರೀತಿಯ. [ಸಂ.]

**ಯಾದೋಜಾತಿ** (ನಾ). (ಉಗ್ರವಾದ) ಜಲಚರಗಳ ವರ್ಗ : ಹೇಳಲಾರಳವು ಗುರುಕಥನವಿಳೆಯಂ ಬಳಸಿ ವೇಳಾತಟಂಗಳಿಂ . . . ಕರಿ ಮಕರ ನೀರಾನೆ ಯಾದೋಜಾತಿ ಜಾಳವಿದ್ರುಮರತ್ನಬುದ್ಬುದಾಫೇನಂಗಳೊಳಿಯಿಂದೆಸೆವ ನೀರಾಕರಂ ಭೂಮಂಡಲಕ್ಕೆ ಪರಿವೇಷದಂತೆ (ಸಿದ್ಧರಾ. ೦-೦೩). [ಸಂ.]

**ಯಾದೋನಾಥ** (ನಾ). = ಯಾದಸಾಂನಾಥ : " ವರುಣಂ ಪಶ್ಚಿಮದಿಕ್ಪತಿ ಶರನಿಧಿಪತಿ ಪಾಶಪಾಣಿ ಯಾದೋನಾಥಂ " (ವಸ್ತುಕೋ. ೬-೯೩). [ಸಂ.]

**ಯಾನ** (ನಾ). ೧. ಹೋಗುವಿಕೆ ; ಚಲನೆ ; ಸಂಚಾರ : ಹಕ್ಕಿಗೊದಗಿತು ಮತ್ತೆ ಬಾನಯಾನ (ಖಾವಗೀ. ೧೦೦). ೨. ಪಯಣ ; ಪ್ರವಾಸ : ಯಾನಶ್ರಮಹರವಾಗೆನಿತಾನುಂ ವಿಜಯಾರ್ಧಶೈಲಸಾನುಸ್ಥಳದೊಳ್ ತಾನಿರ್ದಂ ವಜ್ರಾಯುಧಭೂನಾಥಂ ಸೇನೆವೆರಸು ಕೆಲವಾನು ದಿನಂ (ಶಾಂತೀಶ್ವ. ೦೨-೦೬). ೩. ನಡೆ ; ನಡಗೆ : ಯಾನಸೌಖ್ಯದೊಲವಿಂ ನೆಲನುಗ್ಗಡಿಪಂತೆ ಮುಂದೆ ಸಂಧಿಸಿದುದು ನೂಪುರಸ್ವನಸಮಾಪ್ತತಗೇಪಮರಾಳಮಂಡಲಂ (ತಂತ್ರಪು. ೦೦-೯) ; ಕಳರವಮಂ ಪಿಕಾಂಗನೆಗೆ ಮಂಜು ಮೃದೂಕ್ತಿಗಳಂ ಪೊದಳ್ದ ಪೆಣ್ಗಿಳಿಗೆ ನವೀನಯಾನಮನಸೂನಮರಾಳಿಗೆ ಶಿಕ್ಷೆಗೆಯ್ಕಲೋಪಳಿ ನಡೆ ನಂದನಕ್ಕೆ (ರಾಜಶೇ. ೧೦-೦೦). ೪. ಪಲ್ಲಕ್ಕಿ ; ಮೇಣೆ : ಮೀನು ಹಿಡಿಯುವವನು . . . ರಥದ ಮೇಲಾಗಲಿ ಯಾನದ ಮೇಲಾಗಲಿ ಹೋಗುವುದನ್ನು ನೀವು . . . ಕಂಡಿರುವಿರ ? (ಬುದ್ಧಕ. ೦೬೨). ೫. ರಥ ಮೊದಲಾದ ಯಾವುದಾದರೂ ವಾಹನ : " ಯಾನಂ, ಯುಗ್ಯಂ, ಪತ್ರಂ, ಧೋರಣಂ – ೪ ಸರ್ವಂ ವಾಹನಂ. ನಾನಾ ಬಗೆಯಾದ ಸಕಲ ವಾಹನಗಳಿಗೂ ಹೆಸರುಗಳು" (ಸಿದ್ಧಾಂತಿ. ೨೩೪). ' ಯಾನಶಾಲೆ ' ಪರಾ. ೬. ವಾಹಕ ; ಮಾಧ್ಯಮ : ಪರಮಾನುಭವಗಳುಲಿಯನುಭವಿಗಳೊಳ ಕಿವಿಗೆ ಒರಟು ಯಾನವೂ ಭಾಷೆ (ಮಂಕುತಿ. ೬೩). ೭. ಕಾಲುವೆ ; ನಾಲೆ : " ಯಾನಂ, ಸಾರಿಣೀ – ಈ ೨ ಹರಿಕ್ಕೇಣಿ" (ಹಲಾಯು. ೦೫೦-೬೩). ೮. ಮಾರ್ಗ ; ದಾರಿ : ' ಯಾನಯುಗಳ ' ಪರಾ. ೯. [ರಾಜನೀ] ರಾಜನ ಷಡ್ಗುಣಗಳಲ್ಲಿ ಒಂದು ; ವೈರಿಗಳ ಮೇಲೆ ಏರಿ ಹೋಗುವುದು ; ಯುದ್ಧಕ್ಕೆ ಹೊರಡುವುದು : ಕಿಕ್ಕಿಱಿಗಿಱಿದ ಧವಳಚ್ಛತ್ರಂಗಳೊಳ್ ತಳ್ಪೊಯ್ದು ಯಾನವಿಮಾನಂಗಳೊಳ್ ಪಾಯ್ದಾಯ್ದು ತಬ್ಬಿಕ್ಕುವ ಧವಳಚಮರರುಹಂಗಳ ಮುಂದೆ ಪೊಳೆವ ದುಗ್ಧಾಬ್ಧಿ ಫೇನಪಿಂಡಪಾಂಡುರಂಗಳಪ್ಪೊಪ್ಪುರಂಗಳೊಳಂ . . . ಪರಭಾಗಮುಡೆದು (ಶಾಂತಿಪು. ೦೦-೨೦ ವ); ಯಾನಲೀಲೆಯುಮಂ ನೋಟ್ಟಿ ವಿಯಚ್ಚರರ್ಗೆ ತೆಱಪಂ ಮಾಡಿತ್ತು ಕಣ್ಣಾರ್ವಿನಂ (ಪುಷ್ಪಪು. ೩-೯೩). ' ಷಾಡ್ಗುಣ್ಯ ' ಪರಾ. ೧೦. [ಬೌದ್ಧ] ಜ್ಞಾನದ ಅರಿವನ್ನು ಉಂಟುಮಾಡುವ ಕ್ರಮ ; ನಿರ್ವಾಣಪ್ರಾಪ್ತಿಯ ಮಾರ್ಗ : ' ಮಹಾಯಾನ ', ' ಹೀನಯಾನ ' ಪರಾ. [ಸಂ.]

**ಯಾನನಾಗ** (ನಾ). ಸವಾರಿಯ ಆನೆ ; ಪ್ರಯಾಣಕ್ಕೆ ಬಳಸುವ ಆನೆ ; ದಿಗ್ವಿಜಯಕ್ಕೆ ಜನೇಂದ್ರಚಂದ್ರದೇವಂ ಪೊಱಮಟ್ಟನೇಱಿ ಜಯಮುಮಂ ಜಯಪರ್ವತಯಾನನಾಗಮಂ (ಶಾಂತಿಪು. ೦೦-೦೪೪). [ಸಂ.]

**ಯಾನಪಾತ್ರ** (ನಾ). ದೋಣಿ ; ನಾವೆ : ಪರಿವೃತ್ತಸತ್ತ್ವಪತ್ತುಂಗದೇಪ ಮಾರ್ಗಾಂತರಗತಬೋಧವಿಶೇಷಯಾನಪಾತ್ರಂ ಪರಮಗುಣಪರೀತ ಕಾವ್ಯ ರತ್ನಾಕರದುರುಪಾರಮನೆಯ್ದುಗುಂ ಮಹಾತ್ಮಂ (ಕವಿರಾ. ೩-೨೩೦) ; ದ್ರೋಣಿ ಯಾನಪಾತ್ರಾದಿಗಳೊಳ್ ಜಲದುರ್ಗೋತ್ತರಣಮುಮನುಪದೇಶಂಗೆಯ್ದು (ಅದಿಪು. ೬-೬೨ ವ). [ಸಂ.]

**ಯಾನಯುಗಳ** (ನಾ). [ವೇದಾಂತ] ಪರಲೋಕಕ್ಕೆ ಹೋಗುವ ಎರಡು ಮಾರ್ಗ ; ಬ್ರಹ್ಮಲೋಕವನ್ನು ಸೇರುವ ಎರಡು ಮಾರ್ಗ ; ದೇವಯಾನ ಮತ್ತು ಪಿತೃಯಾನ : ಯಾನಯುಗಳದ ಜನನಮಾರ್ಗ ವಿಧಾನ ನಿರ್ಣಯಮವರುಹಿದನು (ಗಗತಾ. ೮ ಕೊತನ). [ಸಂ. ಯಾನಯುಗಲ]

**ಯಾನಶಾಲೆ** (ನಾ). ರಥ ಮೊದಲಾದ ವಾಹನಗಳನ್ನು ಇಟ್ಟಿರುವ ಸ್ಥಳ ; ವಾಹನಶಾಲೆ : ಯಾನಶಾಲೆಗೆ ನಡೆದನೇರಿದನು ಧನದನಿಂ ಗೆಲ್ದು ತಂದಾ ಕಾಮಗಮನದ ವಿಮಾನವಂ (ಶ್ರೀರಾಮಪಟ್ಟಾ. ೨೦೬-೦೩೬). [ಸಂ. ಯಾನಶಾಲಾ]

**ಯಾನಹಸ್ತಿ** (ನಾ). = ಯಾನನಾಗ : ವಿಜಯಾರ್ಧಪರ್ವತಮೆಂಬ ಯಾನ[ಪಾಠಾಂ. ಗ]ಹಸ್ತಿಯುಂ ಪವನಂಜಯಮೆಂಬ ತುರಗರತ್ನಮುಂ (ಅಂಪು. ೦೩-೩ ವ). [ಸಂ. ಯಾನಹಸ್ತಿನ್]

**ಯಾನೆ** (ಅ). ಎಂದರೆ ; ಅರ್ಥಾತ್ ; ಅಂದರೆ : ' ಮದ್ದು ' ಯಾನ 'ಮಾಧವ' ಶಾಲೆಯ ವೇಳೆಯನ್ನು . . . ವ್ಯಯಿಸಿದವನಲ್ಲ (ಕಾರುಶಾ. ೩೩); ಹೆಂಡತಿಯ ತಾಯಿಯ ಸಹೋದರ ಯಾನೆ ಹೆಂಡತಿಯ ಸೋದರಮಾವನು ಸಾಧುವಾದ ಪ್ರಾಣಿಯೆಂದು ಲೋಕದ ಜನರ ನಂಬಿಕೆ (ಪಿಶಿರವಾ. ೩೭). [ ← ಅರ. ಯಅನೀ ; ಹಿಂ. ಮರಾ. ಯಾನೇ, ಯಾನೀ ]

**ಯಾಪನ** (ನಾ). ೧. (ಸಮಯವನ್ನು) ಕಳೆಯುವುದು, – ಸವೆಸುವುದು ; ಕಾಲಕ್ಷೇಪ. ೨. ತಡ ; ವಿಳಂಬ ; ನಿಧಾನ ಮಾಡುವಿಕೆ. ೩. ಜೀವನೋಪಾಯ ; ಜೀವನಾಧಾರ. ೪. ನಡೆ ; ನಡಗೆ : "ಯಾನಂ, ಯಾಪನಂ, ಯಾಪನೀಯಂ, ಯಾತ್ರಾ—ಈ ೪ ನಡೆ" (ಕಾಶಿಕ್ನ. ೦೬೩). [ಸಂ.]

**ಯಾಪನೀಯ** (ನಾ). ೧. ನಡೆ ; ನಡಗೆ : " ಯಾನಂ, ಯಾಪನಂ, ಯಾಪನೀಯಂ, ಯಾತ್ರಾ—ಈ ೪ ನಡೆ " (ಕಾಶಿಕ್ನ. ೦೬೩). ೨. [ಜೈನ] ಜೈನರಲ್ಲಿ ಒಂದು ಪಂಗಡ : ಜೈನರಲ್ಲಿ ಯಾಪನೀಯ, ನಿರ್ಗ್ರಂಥ, ಕೂರ್ಚಕ, ಶ್ವೇತಪಟ, ಅಹರಿಷ್ಟಿ ಸಂಘಗಳೆಂಬ ಪಂಗಡಗಳಿದ್ದುವು (ಕರ್ನಾಕ. ೫೦); ಉತ್ತರ ಕರ್ನಾಟಕದಲ್ಲಿ ಯಾಪನೀಯದ ಅನೇಕ ಕೇಂದ್ರಗಳು . . . ನವಲ್‌ಗುಂದ ಮುಂತಾದ ಕಡೆ ಇದ್ದುವು (ಕಪಾಅ. ೭೫). ' ಯಾಪನೀಯ ಸಂಘ ' ಪರಾ. [ಸಂ.]

**ಯಾಪನೀಯಸಂಘ** (ನಾ). [ಜೈನ] ದಿಗಂಬರ ಮತ್ತು ಶ್ವೇತಾಂಬರ ಪಂಗಡಗಳ ಮಿಶ್ರಣವೆನಿಸುವ ಸಂಘ ; ೩ ಕಲ್ಯಾಣವೆಂಬ ನಗರದಲ್ಲಿ ವಿಕ್ರಮನ ಮರಣಾನಂತರ ೯೦೫ನೇ ವರ್ಷ ಕಳೆದಾಗ (ಇಲ್ಲಿ ಕಾಲದ ಬಗ್ಗೆ ಭಿನ್ನಾಭಿಪ್ರಾಯಗಳಿವೆ. ಕೆಲವರು ೨೦೫ ವರ್ಷಗಳೆನ್ನುತ್ತಾರೆ) ಶ್ರೀಕಲಶ ಎಂಬ ಹೆಸರಿನ ಶ್ವೇತಾಂಬರಸಂಪ್ರದಾಯದ ಸಾಧು ಈ ಸಂಘವನ್ನು ಸ್ಥಾಪಿಸಿದನು. ಇದು ದಿಗಂಬರ ಮತ್ತು ಶ್ವೇತಾಂಬರ ಸಂಘಗಳೆರಡರ ತತ್ತ್ವವನ್ನೂ ಒಪ್ಪುತ್ತದೆ. ಇದರಲ್ಲಿ ಗುರುಗಳ ಪರಂಪರೆ ದೊರೆತಿಲ್ಲ : ನುತ ಯಾಪನೀಯಸಂಘ[ಪ್ರ]ತೀತ ಕಣ್ದೂರ್ಗಣಾಬ್ಧಿಚಂದ್ರಮರೆಂದೀ ಕ್ಷಿತಿವಳೆಯಂ ಪೊಗಳ್ವಿನಮುನ್ನತಿವೆತ್ತರ್ಮೌನಿದೇವದಿವ್ಯಮುನೀಂದ್ರರ್ (ಶಾಇಇ. XX. ೦೬-೪೦; ೧೮೦) ; ಯಾಪನೀಯ ಸಂಘಕ್ಕೆ ಕಾರಣಕರ್ತನಾದವನು ಉತ್ತರಭಾರತದ ಶ್ವೇತಾಂಬರಸಂಪ್ರದಾಯದ ವ್ಯಕ್ತಿ (ಕಪಾಅ. ೭೬). [ಸಂ.]

**ಯಾಪೆ** (ನಾ). (ಕರಾ) ಬಿದಿರಿನಿಂದ ಹೆಣೆಯುವ ಒಂದು ಬಗೆಯ ಚಾಪೆ : ಬೇಸಾಯಗಾರರ ಗಮನವೆಲ್ಲ . . . ಹಳ್ಳಕ್ಕೆ ಯಾಪೆ ಕಟ್ಟುವುದು, ಹತ್ತು ಮೀನು ಕಡಿಯುವುದು ಮೊದಲಾದ ಮೀನುಬೇಟೆಯ ವ್ಯಾಸಂಗದಲ್ಲಿಯೂ ಆಸಕ್ತವಾಗಿತ್ತು (ಮಲೆಮ. ೬೨೭). [ ? ]

ಗರ್ಭಾನ್ವಯಕ್ರಿಯೆಗಳಿಂ (ಆದಿಪು. ೦೫-೦೫ ವ) . 'ದೀಕ್ಷೆ' ಪರಾ. [ಸಂ.]

**ಯೋಗಪಟ** (ನಾ). ಧ್ಯಾನಕಾಲದಲ್ಲಿ ಯೋಗಿಯು ಬೆನ್ನು ಮತ್ತು ಮೊಳಕಾಲುಗಳ ಸುತ್ತ ಕಟ್ಟಿದಂತೆ ಸುತ್ತಿಕೊಳ್ಳುವ ವಸ್ತ್ರ : "ಯೋಗಪ[ಪಾಠಾಂ. ವ]ಟ ವ್ಯಾಪಿಯಕ್ಕು" (ಮಂಗರಾ. ೭೬-೯). [ಸಂ.]

**ಯೋಗಪಟ್ಟ** (ನಾ). = ಯೋಗಪಟ : ಯೋಗಪಟ್ಟವನ್ನು ಮೊಣಕಾಲುಗಳ ಮೇಲೆ ಕಟ್ಟಿ ಪದ್ಮಪೀಠದ ಮೇಲೆ...ಕುಳಿತಿರುವವನು (ಹೊಯ್ಸಳಾ. ೯೩). [ಸಂ.]

**ಯೋಗಪಟ್ಟಿಕೆ** (ನಾ). = ಯೋಗಪಟ : "ಜೋಗವಟ್ಟಿಯೆಂದು ಯೋಗ ಪಟ್ಟಿಕೆ" (ಕಶಶಾ. ೭೯-೪೭೯). [ಸಂ. ಯೋಗಪಟ್ಟಿಕಾ]

**ಯೋಗಪಟ್ಟಿಗೆ** ' ಯೋಗವಟ್ಟಿಗೆ ' ನೋ.

**ಯೋಗಪಾದ** (ನಾ). [ಶೈವ] ಆಗಮದ ಕ್ರಿಯಾಪಾದ, ಚರ್ಯಾ ಪಾದ, ಯೋಗಪಾದ ಮತ್ತು ಜ್ಞಾನಪಾದಗಳೆಂಬ ನಾಲ್ಕು ಭಾಗ ಗಳಲ್ಲಿ ಒಂದು ; ಮೋಕ್ಷಸಾಧನೆಯ ಮಾರ್ಗವನ್ನು ವಿವರಿಸುವ ಭಾಗ : ಸಕಲಾಗಮಂಗಳಲ್ಲಿಯೂ ಕ್ರಿಯಾಪಾದ ಚರ್ಯಾಪಾದ ಯೋಗ ಪಾದ ಜ್ಞಾನಪಾದಮೆಂಬ ನಾಲ್ಕು ಪಾದಂಗಳು (ಏಪೇಶ. ೬೭) ; ಯೋಗ ಪಾದವು ಮೋಕ್ಷವನ್ನು ಸಾಧಿಸುವ ಅಭ್ಯಾಸಗಳನ್ನು ತೋರಿಸುತ್ತದೆ (ಶಾರದಾ. ೩೦೦). [ಸಂ.]

**ಯೋಗಪಾದುಕ** (ನಾ). ಯೋಗಿಗಳು ಮೆಟ್ಟುವ ಹಾವುಗೆ : "ಜೋಗ ಪಾವುಗೆಯುಮೆನೆ ಯೋಗಪಾದುಕಂ" (ಶಬ್ದಕೈ. ೩೨). [ಸಂ.]

**ಯೋಗಪಾದುಕೆ** (ನಾ). ೧. = ಯೋಗಪಾದುಕ : "ಯೋಗಪಾದುಕಾ —ಜೋಗಪಾವುಗೆ" (ಶಮಶ. ೨೯೩ ವೃತ್ತಿ). ೨. ಧರಿಸಿದವನನ್ನು ಅವನ ಇಚ್ಛೆ ಬಂದಲ್ಲಿಗೆ ಕೊಂಡೊಯ್ಯಬಲ್ಲ ಮಾಯಾಶಕ್ತಿಯುಳ್ಳ ಪಾದ ರಕ್ಷೆ ; ಮಾಟದ ಹಾವುಗೆ. [ಸಂ. ಯೋಗಪಾದುಕಾ]

**ಯೋಗಪೀಠ** (ನಾ). ೧. ಯೋಗಸಾಧನೆಯಲ್ಲಿ ಕುಳಿತುಕೊಳ್ಳುವ ಒಂದು ರೀತಿ ; ಒಂದು ಬಗೆಯ ಯೋಗಾಸನ : ಯೋಗಪೀಠಂಗಳವು ಪದಿನೆಂಟಾಗಿ ಪಾಸಿಗೆ ಪರುಷಪರುಷರೆ ಹೋಗಿ ವಂದಿಸಿ ಕಪ್ಪವಂ ತಮೆ ತೆತ್ತು ಬದುಕುವವು (ಶಶಕ. ೨೩-೨೦). ೨. ಶಿವಲಿಂಗದ ಪೀಠಗಳಲ್ಲಿ ಒಂದು ಬಗೆ : ಶಿವಾರ್ಚನೆಗುಪಯುಕ್ತವಾಗಿ ಅನಂತಪೀಠ ಕಮಠ ಪೀಠ ಶೇಷಪೀಠ ಸಿಂಹಪೀಠ ಪದ್ಮಪೀಠ ವಿಮಲಪೀಠ ಭದ್ರಪೀಠ ಯೋಗಪೀಠ ಪ್ರಣವಪೀಠಗಳ ಭಾವನೆಯಿಂದುಪಕಲ್ಪಿತವಾದ ದಿವ್ಯಮಂಟಪ ಮಧ್ಯಗತಸಿಂಹಾಸನಕ್ಕೆ (ಏಪೇಶ. ೦೦೦). [ಸಂ.]

**ಯೋಗಪುರುಷ** (ನಾ). ೧. ಅದೃಷ್ಟಶಾಲಿ ; ಭಾಗ್ಯವಂತ : ನಿಜಕ್ಕೂ ಅವನ ರಾಜಕಳೆ ಯೋಗಪುರುಷನೆಂದೇ ಸಾರುತ್ತೆ (ಹೇಮಲತಾ .೦೬). ೨. ಗೂಢಚಾರ. [ಸಂ.]

**ಯೋಗಮಾರ್ಗ** (ನಾ). ೧. ಧ್ಯಾನಮಾರ್ಗ : ತಪೋಮಾರ್ಗ : ಧರೆ ಯೊಳಗೆ ರವಿಮಂಡಲವನೊಡೆದುರವಣಿಸಿ ಹಾಯ್ವರು ತಾವಿಬ್ಬರು ಕಣಾ ಸನ್ಯಾಸಿಯಾಗಿಯೆ ಯೋಗಮಾರ್ಗದಲಿ ಹರಣವನು ಬಿಟ್ಟವರುಗಳು ಸಂಗರ ದೊಳಭಿಮುಖರಾಗಿ ಮರಣಾಂತರವನೆಯ್ದುವರವರು (ಕುಮ್ಯಾ. ಉ. ೩-೦೯). ೨. [ಶೈವ] ಶೈವಸಿದ್ಧಾಂತದ ನಾಲ್ಕು ಮಾರ್ಗಗಳಲ್ಲಿ ಒಂದು : ದಕ್ಷಿಣದೇಶದ ಶೈವಸಿದ್ಧಾಂತಗಳಲ್ಲಿ ಚರ್ಯಾಮಾರ್ಗ, ಕ್ರಿಯಾಮಾರ್ಗ, ಯೋಗಮಾರ್ಗ, ಜ್ಞಾನಮಾರ್ಗಗಳೆಂಬ ನಾಲ್ಕು ಅಂತಸ್ತಿನ ಸಾಧನಗಳಿವೆ . . . ಯೋಗಮಾರ್ಗದಲ್ಲಿ (ಸಖ್ಯಮಾರ್ಗ) ಪ್ರಾಣಾಯಾಮದ ಮೂಲಕ ದೇಹದಲ್ಲಿರುವ ಷಟ್ಚಕ್ರಗಳಲ್ಲಿ ವಾಯುವನ್ನು ನಿಲ್ಲಿಸಿ ನಿಷ್ಕಲಮೂರ್ತಿ ಯನ್ನು ಆರಾಧಿಸುವುದರ ಮೂಲಕ ಶಿವಸ್ವರೂಪವಾದ ಸ್ವರೂಪ ಮುಕ್ತಿ ಯನ್ನು ಪಡೆಯುವನು (ಶಾರದಾ. ೩೦೭). [ಸಂ.]

**ಯೋಗರೂಢ** (ನಾ). [ವ್ಯಾಕ] ಯೋಗ, ರೂಢ ಮತ್ತು ಯೋಗರೂಢ ವೆಂಬ ಪದಪ್ರಕಾರಗಳಲ್ಲಿ ಒಂದು ; ರೂಢಿಯಿಂದ ನಿರ್ಧಾರಗೊಂಡ ವಾಚ್ಯಾರ್ಥ ; ಶಬ್ದಶಕ್ತಿ ; ವಾಚಕತ್ವ ಶಕ್ತಿ : ಅವಯವಾರ್ಥವಿದ್ದರೂ ಸಮುದಾಯದಿಂದ ಒಂದು ಅರ್ಥವನ್ನೇ ರೂಢವಾಗಿ ಹೇಳಿದರೆ ಅದು ಯೋಗರೂಢವು. ಪಂಕಜವು, ನೀರಜವು ; ಇಲ್ಲಿ ನೀರಲ್ಲಿಯೂ ಕೆಸರಲ್ಲಿಯೂ ನೈದಿಲೆ ಕಪ್ಪೆ ಮೊದಲಾದುವು ಎಲ್ಲಾ ಅವಯವಾರ್ಥದಿಂದ ಹೇಳಲ್ಪಟ್ಟರೂ ಸಮುದಾಯವು ತಾವರೆಯಲ್ಲೇ ರೂಢವಾದ್ದರಿಂದ ಇದು ಯೋಗರೂಢವು (ಹೊಸಗ. ೧೪೦). [ಸಂ.]

**ಯೋಗರೂಢಿ** (ನಾ). = ಯೋಗರೂಢ : ಶಾಸ್ತ್ರಕಲ್ಪಿತವಾದ ಅವ ಯವಾರ್ಥದಿಂದ ಸಹಿತವಾದ ವಿಶೇಷ್ಯಭೂತವಾದ ಅರ್ಥದಿಂದ ನಿರೂಪಿತ ವಾದಶಕ್ತಿಗೆ ಯೋಗರೂಢಿ ಎಂದು ಹೆಸರು (ಶಾಶತ್ತ್ವ. ೭೯೭). [ಸಂ.]

**ಯೋಗವಂಟಿಗೆ** ' ಯೋಗವಟ್ಟಿಗೆ ' ನೋ.

**ಯೋಗವಂತ** (ನಾ). ೧. ಧ್ಯಾನಯೋಗದಲ್ಲಿ ತೊಡಗಿದವನು : ಯೋಗವಂತರಿಗೆ ಹೃದಯದಲ್ಲಿ ಬ್ರಹ್ಮಭಾವನೆಯು ಗೃಹಸ್ಥರಿಗೆ . ವೇದಾಧ್ಯ ಯನವು ವೇದಾಂತಾರ್ಥದ ವಿಚಾರವು (ಅರ್ಕವಿಪಾ. ೯೭). ೨. ಸುದೈವಿ ; ಅದೃಷ್ಟಶಾಲಿ : (ಕ). [ಸಂ. ಯೋಗವತ್]

**ಯೋಗವಟ್ಟಿಗೆ**, ಯೋಗಪಟ್ಟಿಗೆ, ಯೋಗವಂಟಿಗೆ (ನಾ). = ಯೋಗ ಪಟ್ಟಿಕೆ : ಕಾಯುವೆ ಕಡವಸವಾಗಿ ಮನವೆ ಯೋಗವಟ್ಟಗೆಯಾಗಿ ಇಂದ್ರಿಯ ವಿಸಂಚಿಸಿಂದಾಮುಪಮೆಯಯ್ಯ (ಅವಶಂ. ೦೯೦-೯೬೩); ಯೋಗವಟ್ಟಗೆಯ ಮರ ಸಡಿಲಿಸಿ ಧಿಗಿಲನೆದ್ದನು . . . ದಕ್ಷಾಧ್ವರಧ್ವಂಸಿ (ಶಿಶಾಗ. ೪-೩-೩೩).
**ಯೋಗಪಟ್ಟಿಗೆ :** ವರದ ಶ್ರೀಕಂಠಬ್ರತಿಪರಿಕ್ಕಿದರ್ ಶಾಂತಿ[ಜಿ]ನ ಗ್ರಿಹಾಚಾರ್ಯ್ಯಗ್ಗೊಪ್ಪಿರೆ ಯೋಗಪಟ್ಟಗೆಯನಾದರದಿಂದಂ ವಜ್ರಪಂಜರ ಮನಿಕ್ಕುವವೊಲು (ಎಕ. VIII, ಸೊರಬ. ೨೬-೬೭; 1208 ?). **ಯೋಗವಂಟಿಗೆ :** ಕುಂಚಿಯ ಕಂಥಿಯು ಕೈಯ ಲಾಗಲು ಸುಚಿಯ ಅವುಗೆ ಯೋಗವಂಟಿಗೆ ವಚನದಲಿ ಬಿಜ್ಜಳ ಹರಸಿ ವಿಭೂತಿಯನು ಇಟ್ಟು ವಿಚಿತ್ರದಿಂದಲಿ ಸಿದ್ಧ ಬಂದನು (ಶೀವಶಾ. ೭-೦೪). ' ಜೋಗವಟ್ಟಿಗೆ ' ಪರಾ. [< ಸಂ. ಯೋಗಪಟ್ಟಕಾ]

**ಯೋಗವರ್ತನ** (ನಾ). ೧. ತಪಸ್ಸನ್ನು ಆಚರಿಸುವಿಕೆ ; ತಪಶ್ಚರಣ. ೨. [ಜೈನ] ಮನಸ್ಸು, ಕಾಯ, ವಾಕ್ಕುಗಳ ಮೂಲಕವಾಗಿ ಕರ್ಮಾಸ್ರವವಾಗುವ ಸಂದರ್ಭ,– ಸಂಬಂಧ. ೧, ೨ : ನಿರಂಜನ ರಾಗಿರ್ದುಮಶೇಷಲೋಕಹಿತಾರ್ಥಗ್ರಾಹಿಗಳ್ ಯೋಗವರ್ತನಮೊಂದುಂ ತಮಗೆಂದುಮಿಲ್ಲೆನಿಸಿಯುಂ ಸಿದ್ಧರ್ಕಳ್ (ಪುಷ್ಪಪು. ೦-೨). [ಸಂ.]

**ಯೋಗವಾವುಗೆ** (ನಾ). = ಯೋಗಪಾದುಕ : "ಯೋಗವಾವುಗೆ [ಪಾಠಾಂ. ಜೋಗಪಾವುಗೆ] ಯುಮೆನೆ ಯೋಗಪಾದುಕಂ" (ಶಬ್ದಕೈ. ೩೨); ಅದ್ವೈತವೆ ಯೋಗವಟ್ಟಗೆ ಅಗಮ್ಯವೆ ಯೋಗವಾವುಗೆ (ಅವಶಂ. ೯೩-೩೩೪). [< ಸಂ. ಯೋಗಪಾದುಕಾ]

**ಯೋಗವಾಹ** (ನಾ). [ವ್ಯಾಕ] ಇನ್ನೊಂದು ವರ್ಣದ ಸಹಾಯದಿಂದ ಮಾತ್ರ ಉಚ್ಚಾರಣೆಯನ್ನು ಪಡೆಯುವ ಸಂಜ್ಞೆ,– ವರ್ಣ ; ಅನುಸ್ವಾರ, ವಿಸರ್ಗ, ಜಿಹ್ವಾಮೂಲೀಯ ಮತ್ತು ಉಪಧ್ಮಾನೀಯ (ಂ, ಃ, ×ಕ, ೦೦ಪ) ಎಂಬ ಈ ನಾಲ್ಕು ಸಂಜ್ಞೆಗಳಿಗೆ ಇರುವ ಹೆಸರು : ಸಮಸಂದಿರ್ದ ×ಕ ಮುಮಂ ೦೦ಪಮುಮೊಂದಿದ ಬಿಂದುವುಂ ವಿಸರ್ಗಮುಮೆಂದಕ್ಕುಮಿವೆಯ್ದೆ ಯೋಗವಾಹಂ ಕ್ರಮದಿಂ ಕಪಯುಗಳ ಮಿವಜೆೞೊಳನುಬಂಧಂಗಳ್ (ಶಮಶ. ೦೭). [ಸಂ.]

**ಯೋಗವಿಜ್ಞಾನ** (ನಾ). = ಯೋಗದರ್ಶನ : ಬ್ರಹ್ಮಸತ್ಯೆಯನಾವ ಪರ ಬ್ರಹ್ಮಸತ್ಯೆಯಿಂ ಮಾತ್ರಮೆಯಿ ದರ್ಶಿಸುತಿದಂ ಮಿಥ್ಯೆಯೆಂಬುದೇಂ ಪೂರ್ಣಸತ್ಯಮೆ ? ಯೋಗವಿಜ್ಞಾನಮೊಪ್ಪದು ಕಣಾ! (ಶ್ರೀರಾಮಾಪಾ. ೩-೭೦). [ಸಂ.]

**ಯೋಗವಿಡಿಸು** (ಕ್ರಿ). [ಜೈನ] ಕರ್ಮಗಳ ಆಸ್ರವ ಸಂಬಂಧವನ್ನು ನಿಲ್ಲಿಸು.— ಬಿಡಿಸು : ಸುಕುಮಾರನ ಮೋಹಬಂಧದ ಬಳ್ಳಿವಳ್ಳಿಯ ತೊಡರ್ಪಂ ಪಱಿಪಡೆ ಬಿಡಿಸುವಂತೆ ಯೋಗವಿಡಿಸಿ . . . ತ್ರಿಲೋಕ ಪ್ರಜ್ಞಪ್ತಿಯಂ ಪರಿವಡಿಗೆಯ್ವಾಗಳ್ (ಸುಕುಚ. ೧೧-೩೬ ವ).
[ಯೋಗ + ಬಿಡಿಸು]

**ಯೋಗಶಾಸ್ತ್ರ** (ನಾ). = ಯೋಗದರ್ಶನ : ಭರತಸುತಂ ಮರೀಚಿಪರಿಗೃಹೀತಪರಿವ್ರಾಜಕವೇಷಂ . . . ಕಾಪಿಲಸಿದ್ಧಾಂತಮುಮಂ ಯೋಗಶಾಸ್ತ್ರಮುಮಂ ತೋಱಿ ಲೋಕಮಂ ಸಮ್ಯಗ್‌ಜ್ಞಾನಪರಾಙ್ಮುಖಂ ಮಾಡಿದಂ (ಆದಿಪು. ೯-೯೩ ವ). [ಸಂ.]

**ಯೋಗಸನ್ನಾಹ** (ನಾ). [ಜೈನ] ಐವತ್ತು ಮೂರು ಗರ್ಭಾನ್ವಯಕ್ರಿಯೆಗಳಲ್ಲಿ ಒಂದು ; ಕೇವಲಜ್ಞಾನವನ್ನು ಹೊಂದಿದ ಬಳಿಕ ಪಡೆಯುವ ಪೂಜೆ.— ಉತ್ಸವ : ನಾಮಕರ್ಮ . . . ಯೋಗಸನ್ನಾ [ಹಾಖ್ಯಂ. ಮ್ಮ] ಹಾರ್ಹಂತ್ಯವಿಹಾರ ಯೋಗತ್ಯಾಗನಿರ್ವೃತಿಯೆಂಬುಯ್ವತ್ತುಮೂಱು ಗರ್ಭಾದಿನಿರ್ವಾಣಪರ್ಯಂತಂಗಳಪ್ಪ ಗರ್ಭಾನ್ವಯಕ್ರಿಯೆಗಳುಂ (ಆದಿಪು. ೦೩-೦೫ ವ). ' ದೀಕ್ಷೆ ' ಪರ್ಾ. [ಸಂ.]

**ಯೋಗಸಮಾಧಾನ** (ನಾ). = ಯೋಗನಿದ್ರೆ ೧ : ಶ್ರೀನನ್ದಿಪಣ್ಡಿತದೇವರ್ . . . ಯೋಗಸಮಾಧಾನಾಧೀನಚಿತ್ತರಾಗಿ [ಶ] [ಮಿತ] ಪರಿತ್ಯಾಗದಿನಮಂ ಲೋಕಾವಲೋಕನಕೌತುಕದಿಂ ದೇವಲೋಕಕ್ಕೆ ವಿಜಯಂಗೆಯ್ದರ್ (ಕಶಾಇ. XX. ೫೩-೫೭ ; 1077). [ಸಂ.]

**ಯೋಗಸಮಾಧಿ** (ನಾ). = ಯೋಗನಿದ್ರೆ ೧ : ಕೆಡಿಸುವ ನಿದ್ರೆಯನೆ ಯೋಗಸಮಾಧಿಯ ಮಾಡಿ ಜಗವ ಗೆದ್ದ ಶರಣರ ಬುದ್ಧಿಹೀನರೆತ್ತ ಬಲ್ಲರೊ (ಅಂಗವ. ೨೨-೬೯). [ಸಂ.]

**ಯೋಗಸಿದ್ಧಿ** (ನಾ). ಅಷ್ಟಾಂಗಯೋಗದಿಂದ ಕ್ರಮಕ್ರಮವಾಗಿ ಇಷ್ಟಾರ್ಥಗಳನ್ನು ಪಡೆದುಕೊಳ್ಳುವಿಕೆ ; ಯೋಗದಲ್ಲಿ ಪರಿಣತಿ : ಕಾಯ ದಿಗ್ಬಂಧ ಪ್ರಣಾಮ ವಿಧೇಯವರ್ತನೆ ಯೋಗಸಿದ್ಧಿ ನಿಕಾಯ ನಾಲ್ಕುಱ ಇಂದ್ರಿಯಸ್ಥಿತಿಗತಿಯನಾರೈದು ಆಯವನು ವಿವರಿಸುತ ಮೇಲಣ ಬೀಯವಿದು ತನಗೆಂಬುದನು ನಿರ್ಣಯದಲಿ ನಿಶ್ಚಯಿಸಬೇಹುದು (ಕುವ್ಯಾಉ. ೯-೫೩). [ಸಂ.]

**ಯೋಗಾಂಗ** (ನಾ). ೧. ಪತಂಜಲಯೋಗಸಿದ್ಧಾಂತದಲ್ಲಿ ವಿವರಿಸಿದ ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧ್ಯಾನ, ಧಾರಣ, ಸಮಾಧಿ ಎಂಬ ಎಂಟು ಅಂಗಗಳು : ಯಾವ ಮನುಷ್ಯನಲ್ಲಾದರೂ ಎಂತಹ ಸ್ಥಿತಿಯಲ್ಲಿಯೂ ಯೋಗಾಂಗಗಳ ಅಭ್ಯಾಸವನ್ನು ಮಾಡಬಹುದು (ಭಾರಿದ. ೦೩೯). ೨. [ವೀಶೈ] ಅಂಗಸ್ಥಲದ ಯೋಗ, ಭೋಗ ಮತ್ತು ತ್ಯಾಗ ಎಂಬ ಮೂರು ಪ್ರಕಾರಗಳಲ್ಲಿ ಒಂದು : ಸರ್ವವನಱಿದು ತ್ಯಾಗಾಂಗನಾಗಿ ಭೋಗಾಂಗನಾಗಿ ಯೋಗಾಂಗನಾಗಿ ತಾಮಸ ನಿರಸನವೆಂಬ ಭೂತ ಭವಿಷ್ಯ ವರ್ತಮಾನಕ್ಕೆ ಹೊಱಗಾಗಿ ನಿಂದ ನಿಜತತ್ವದಂಗಕ್ಕೆ ಬೇಱೆ ಮಂಗಲೋತ್ತರವನಱಸಲಿಲ್ಲ (ಮೋೞವಚ. ೯೭-೦೯೦) ; ಯೋಗಾಂಗವು ಶರಣ, ಐಕ್ಯನೆಂದೂ, ಭೋಗಾಂಗವು ಪ್ರಾಣಲಿಂಗಿ ಪ್ರಸಾದಿಯೆಂದೂ ತ್ಯಾಗಾಂಗವು ಮಹೇಶಭಕ್ತನೆಂದೂ ಒಂದೊಂದರಲ್ಲಿ ಎರಡು ತೆರನಾಗುವುದು (ಶಿವಾಸೂ. ೯೯ ಅಖಬ). [ಸಂ.]

**ಯೋಗಾಕ್ಷರ** (ನಾ). [ವ್ಯಾಕ] ಎರಡು ಅಥವಾ ಹೆಚ್ಚು ವ್ಯಂಜನಗಳು ಕೂಡಿದ ಅಕ್ಷರ : ಒತ್ತಕ್ಷರ ; ಸಂಯುಕ್ತಾಕ್ಷರ : ಬೆರಸಿರೆ ಮುಂದಂ ಯೋಗಾಕ್ಷರಂಗಳೇಕಸರಂಗಳಿಂ ಸುಪ್ರಾಸಂ (ಛಂದೋಂಬು. ೦-೯೭ ಅಖರದ). [ಸಂ.]

**ಯೋಗಾಕ್ಷಿ** (ನಾ). ಜ್ಞಾನದೃಷ್ಟಿ : ಅಂತರ್ದೃಷ್ಟಿ : ಯೋಗಾಕ್ಷಿಯಿಂದೆ ಕಂಡು ಮನೋಗೃಹದೊಳ್ ನಿಲಿಸಿ ಭಾವಕುಸುಮೋತ್ಕರದಿಂ ಯೋಗಿಗಳರ್ಚಿಪ ನಿನ್ನನದೇಗಾಣ್ಬೆವಬಲೆಯರಾವದೆಂತರ್ಚಿಪೆವೋ (ಜಗಪು. ೩-೦೦೬). [ಸಂ.]

**ಯೋಗಾಚಾರ** (ನಾ). ೧. ಯಮ ನಿಯಮಾದಿಗಳ ಅನುಷ್ಠಾನ ; ಯೋಗಾಭ್ಯಾಸ. ೨. ವಿಜ್ಞಾನವಾದವನ್ನು ಪುರಸ್ಕರಿಸುವ ಬೌದ್ಧ ಮತ ಮತ್ತು ಅದರ ಅನುಯಾಯಿ : ಮಹಾಮತಿ ಸಂಭಿನ್ನಮತಿ ಶತಮತಿಗಳ್ ಲೋಕಾಯತಿಕ ಯೋಗಾಚಾರ ಮಾಧ್ಯಮಿಕಮತ ವಿತಥಾಭಿಧಾಯಿಗಳ್ . . . ಆತ್ಮನಿರಾಕರಣಮನೆ ನುಡಿದು ಮಾಣೆ (ಆದಿಪು. ೨-೭ ವ); ಬಾಹ್ಯಾರ್ಥಾಕಾರಸಹಿತವಾದ ಬುದ್ಧಿ ಎಂಬ ವಸ್ತುವೇ ಯೋಗಾಚಾರರಿಗೆ ಸಮ್ಮತ (ಭಾರಿದ. ೨೦೯) ; ಯೋಗಾಚಾರರು . . . ಬಾಹ್ಯವಸ್ತುಗಳೆಲ್ಲವನ್ನೂ ವಿಜ್ಞಾನವೆಂಬ ಮನಸ್ಸಿನಲ್ಲಿ ಸೇರಿಸಿ ಮನೋನಿಯಮನದಿಂದ ವೈರಾಗ್ಯೋಪದೇಶದಲ್ಲಿರುವರು (ಹಿಂದಸಾ. ೨೪). [ಸಂ.]

**ಯೋಗಾಭ್ಯಾಸ** (ನಾ). ಯೋಗಶಾಸ್ತ್ರವನ್ನು ಅಭ್ಯಾಸ ಮಾಡುವುದು ; ಅಷ್ಟಾಂಗಯೋಗದ ಅನುಷ್ಠಾನ : ಉಪವಾಸ ಮಿತಾಹಾರಾದಿಗಳಿಂದ ಯೋಗಾಭ್ಯಾಸಕ್ಕೆ ವಿರೋಧವಿಲ್ಲದಂತೆ ಶರೀರವನ್ನು ಆರೋಗ್ಯವಾಗಿಟ್ಟುಕೊಳ್ಳತಕ್ಕದ್ದು (ಹಿಂದಸಾ. ೯೯). [ಸಂ.]

**ಯೋಗಾಯೋಗ** (ನಾ). ಅದೃಷ್ಟವು ಕೂಡಿಬರುವುದು ; ದೈವಯೋಗ ; ಅನಿರೀಕ್ಷಿತವಾಗಿ ಒದಗುವ ಘಟನೆ : ನಿಮ್ಮಂತವರ ಸಹವಾಸವೇ ಒಂದು ಯೋಗಾಯೋಗ (ಹೊಸಕ್ಷೆ. ೩೭) ; ಅದೊಂದು ಯೋಗಾಯೋಗದ ಮಾತು (ಮೂರುಬರಾ. ೨೩೭) ; ಯೋಗಾಯೋಗದಿಂದ ಗಿರಿದಾಸರು ಮಗನ ಸಾಲೆಯ ಚೀಲವಿರುವ ಸ್ಥಳಕ್ಕೆ ಹೋದರು (ಕಂಬನಿ. ೯೨). [ಸಂ.]

**ಯೋಗಾರೂಢ** (ನಾ). ಧ್ಯಾನದಲ್ಲಿ ಮಗ್ನನಾದವನು : ಯೋಗಸಮಾಧಿಯನ್ನು ಪಡೆದವನು : ಭೂರಿಶ್ರವಕ್ಷಿತಿಪ . . . ಪದ್ಮಾಸನವನನುಕೊಳಿಸಿ ಯೋಗಾರೂಢನಾದನು ವರಸಮಾಧಿಯಲಿ (ಕುವ್ಯಾದ್ರೋ. ೦೯-೨೦) ; ಯೋಗಾರೂಢನಾಗಿದ್ದ ಅವನ ಬಾಯಿಂದ ಬೆಳ್ಳಗೆ ಸಾವಿರ ಹೆಡೆಯಿದ್ದ ಒಂದು ಸರ್ಪವು ಹೊರಟು ಸಮುದ್ರವನ್ನು ಹೊಕ್ಕಿತು (ವ್ಯಾಪಾ. ೩೬೦). [ಸಂ.]

**ಯೋಗಾವತಿ** (ನಾ). [ಸಂಗೀತ] ಒಂದು ಮೇಳರಾಗದ ಹೆಸರು : ಶ್ರೀರಾಗದೊಳ್ ನಟನಾರಾಯಣಿ ಯೋಗಾವತಿಯಾಗಿರ್ಪುಂ ಘಂಟಾರಾಗಂ ನಾದವತಿಯಾಗಿರ್ಪುದು (ಪಟ್ಟಾರ. ೨-೯೦ ವ). [ < ಸಂ. ಯೋಗವತಿ]

**ಯೋಗಾಸನ** (ನಾ). [ಯೋಗ] ಯೋಗಾಭ್ಯಾಸವನ್ನು ಮಾಡುವಾಗ ಕುಳಿತುಕೊಳ್ಳುವ ಒಂದು ವಿಶೇಷ ಭಂಗಿ : ಯೋಗಾಸನ :— ಚಕ್ರಮಟ್ಟ ಹಾಕಿ ಕುಳಿತು, ಹಸ್ತಗಳನ್ನು ತೊಡೆಯ ಮೇಲೆ ಇಟ್ಟರುವಂತೆ ರಚಿತವಾದರೆ ಈ ಹೆಸರು (ಭಾರಿದ. ೫೦೫) ; ಕೊಂಡುಗ್ರರೂಪವ. ಬಳಿಕೀ ಯೋಗಾಸನದೊಳಗದ ಶಮಿಸುವ ಭಾಸುರ ನರಸಿಂಹನೆಮಗೆ ಮಂಗಳನಕ್ಕೆ (ಮಲಕೆ. ೫೯-೦೭). [ಸಂ.]

**ಯೋಗಿ** (ನಾ). ೧. ಚಿತ್ತವೃತ್ತಿ ನಿರೋಧ ಮಾಡುವವನು ; ಯತಿ ; ತಪಸ್ವಿ : "ಯತಿ ಸಂಯಮಿ ಋಷಿ . . . ಯೋಗಿ ತಾಪಸನಾತಂ" (ನಸುಕೋ. ೩೭-೩೩); ಯೋಗಿಗೆ ಯೋಗಿಣಿಯಾಯಿತು ಮಾಯೆ (ಮಹಾದೇ. ೩. ೦೬-೨೭); ಸಂಸೃತಿ ಫಲವತಿಯಾಗಿರೆಯುಂ ಯೋಗಿಗುತ್ಸವಂ ಪುಟ್ಟದವೋಲ್ (ಜಗಪು. ೨-೫೩); ಕಾವಿಯ ಹೊದೆದು ಹೋದಾತ ಯೋಗಿಯೆನಬೇಡ ಇಂದ್ರಿಯಮ ಕಾದಾತ ಯೋಗಿ (ಸರ್ವಜ್ಞ. ೯೯೯). ೨. ಶೈವಭಕ್ತನಾಗಿದ್ದು ಭಿಕ್ಷಾವೃತ್ತಿಯಿಂದ ಜೀವಿಸುವವನು ; ಜೋಗಿ : (೬). ೩. ಯೋಗಸಿದ್ಧಾಂತವನ್ನು ಅನುಸರಿಸುವವನು. ೪. ಮಂತ್ರಗಾರ; ಮಾಟಗಾರ ; ಐಂದ್ರಜಾಲಿಕ. [ಸಂ. ಯೋಗಿನ್]

**ಯೋಗಿಣಿ** (ನಾ). ೧. ಮಾಟಗಾತಿ ; ಮಾಯಾವಿನಿ. ೨. ದುರ್ಗಾದೇವತೆಯ (ಅಥವಾ ಶಿವನ) ಸೇವೆಗೆ ಇರುವ ಎಂಟು ಜನ

ಶಕ್ತಿಯರು, – ಅಷ್ಟಶಕ್ತಿ ದೇವತೆಗಳು : ಭೋಗಕ್ಕೆ ಭೂಬಲಂ ದಿಗ್ವಿಜಯೋದ್ಯೋಗಕ್ಕೆ ಯೋಗಿಣೀಬಲಂ ಭಂಡಾರದ ಭಾಗ್ಯಪೋಲಗದ ಮಯಿಸಿರಿದಶಕ್ಕೆ ದೀಕ್ಷಾಗುರು ರಾಜ್ಯಕ್ಕೆ ರಕ್ಷಾಮಣಿಯೆನಿಸಿದ ಪ್ರಧಾನ ಚೂಡಾಮಣಿಗಳ್ (ಶಾಸ. XX, ೨೦೨–೧೦; 1244). ೩. ಯೋಗಾಭ್ಯಾಸ ಮಾಡುವವಳು ; ತಪಸ್ವಿನಿ : ಯೋಗಿಗೆ ಯೋಗಿಣಿಯಾಯಿತ್ತು ಮಾಯೆ (ಪುರಾ. ೬. ೦೯–೨೭) ; ಸ್ಪರ್ಶಮಣಿಯ ಸ್ಪರ್ಶದಿಂದ ಯೋಗಿಣಿಯು ಗೃಹಿಣಿಯಾದಳು (ಕಬ್ಬಿ. ೯೩). 'ಜೋಗಿಣಿ' ಪರಾ.

[< ಸಂ. ಯೋಗಿನೀ]

**ಯೋಗಿತ** (ಗು). ೧. ಮಂತ್ರಮುಗ್ಧವಾದ ; ಮಾಟಕ್ಕೆ ಒಳಗಾದ. ೨. ಮರುಳು ಹಿಡಿದ ; ಹುಚ್ಚು ಹಿಡಿದ ; ಬುದ್ಧಿಭ್ರಂಶವಾದ. [ಸಂ.]

**ಯೋಗಿನಿ** (ನಾ). ೧. = ಯೋಗಿಣಿ ೨ : ಅಷ್ಟಯೋಗಿನಿಯರಣಿಮಾದಿಗಳ್ . . . ಸೃಷ್ಟಿಯ ಸಮಸ್ತಾಭಿಮಾನ ದೇವತೆಯರಿರ್ದರು ದೇವಿಯಂ ಸೇವಿಸಿ (ಕೈವಲ್ಯ. ೦೫–೨೦). ೨. ಅರುವತ್ತು ನಾಲ್ಕು ಜನ ಉಗ್ರದೇವತೆಗಳು: ರಕ್ತಜಳಾಸವಮತ್ತಯೋಗಿನೀವ್ರಾತಪರೀತ ಭೂತ ಸದನಂ ಕದನಂ ಕದನತ್ರಿಣೇತ್ರನಾ (ಶಂಕರ. ೦೯–೩) ; ಅಷ್ಟದಿಕ್ಪಾಲರ್ಗೆ ಪೂಜೆಯಂ ಮಾಡಿ ಚೌಷಷ್ಟಿಯೋಗಿನಿಯರ್ಗೆ ಬಲಿಗೊಟ್ಟು . . . ಹೃಷ್ಟತೆಯೊಳರ್ಥಮಂ ಸಾಗಿಸಿದನಿಭಪುರಿಗೆ (ಕೈವಲ್ಯ. ೫–೬೨). ೩. =ಯೋಗಿಣಿ ೩: ಸರ್ವರತಸೌಖ್ಯದೊಳ್ ಸತಿ ದಿಗಂಬರವೇಷಮನಾಂತು . . . ತನ್ನನೋಹೃನ್ನಿಧಾನಮನುಪಾರ್ಜಿಪ ಯೋಗಿನಿಯಂತಿರೊಪ್ಪಿದಳ್ (ಕಾವ್ಯಸಾ. ೬೬೩ ಕುರ್ರಿ).

[ಸಂ. ಯೋಗಿನೀ]

**ಯೋಗಿಪ್ರತ್ಯಕ್ಷ** (ನಾ). ಯೋಗಿಗಳಿಗೆ ಮಾತ್ರ ಕಾಣುವಂತಹುದು ; ಯೋಗದೃಷ್ಟಿಗೆ ಗೋಚರವಾದುದು : ಪ್ರತ್ಯಕ್ಷವು ಲೌಕಿಕ, ದಿವ್ಯವೆಂದು ಎರಡು ಪ್ರಕಾರ . . . ದಿವ್ಯವು ಭಗವದನುಗ್ರಹದಿಂದ ಬರತಕ್ಕ ಯೋಗಿಪ್ರತ್ಯಕ್ಷ (ಹಿಂದಸಾ. ೨೪೦). [ಸಂ.]

**ಯೋಗಿಸು** (ಕ್ರಿ). ಅನುಷ್ಠಾನ ಮಾಡು : ತೂಗಿ ನಿಮ್ಮಾತ್ಮಸಾಕ್ಷಿಯೊಳೇನು ವ್ರತವೆಂದು ಯೋಗಿಸಿದಿರೆ ಸತಿಯರಿರಾ (ಭರತ. ೪–೪೦). [ಯೋಗ + — ಇಸು]

**ಯೋಗೀಶ್ವರ** (ನಾ). ಯೋಗಿಗಳಲ್ಲಿ ಶ್ರೇಷ್ಠನಾದವನು : ಯೋಗೀಶ್ವರರ ತತ್ತ್ವವಿಚಾರ ಮಂತ್ರಿಜನಕ್ಕೆ ಬುದ್ಧಿಗುಣ . . . ಕಾವ್ಯಕೆ ಗುರುವೆನಲು ರಚಿಸಿದ ಕುಮಾರವ್ಯಾಸ ಭಾರತವ (ಕುವ್ಯಾಆ. ೦–೦೯). [ಸಂ.]

**ಯೋಗು** (ನಾ). ತಪಸ್ಸು; ಧ್ಯಾನ : ಯೋಗಿನ ದಿವಸಂ ಸಾರ್ಚಿದುದಾಗಿ . . . ಈಗಳ್ ಬೇಗಂ ಚಾತುರ್ಮಾಸದ ಯೋಗಂ ಕೈಕೊಂಡಂ (ಸುಕುಮಾ. ೦೦–೩೬). 'ಜೋಗು' ಪರಾ. [< ಸಂ. ಯೋಗ]

**ಯೋಗೇಶ್ವರ** (ನಾ). ೧. ಯೋಗವಿದ್ಯೆಗೆ ಪ್ರಭುವಾದವನು : ಯೋಗೇಶ್ವರ ಹರಿ ಒಳಗಿದ್ದು ನುಡಿದ ಹೀಗೆ ಹಾಗೆ ಎನ್ನ ಸಲ್ಲ (ವಿದಾಕೃ. ೪೪–೫). ೨. ಶಿವ. [ಸಂ.]

**ಯೋಗೇಷ್ಟ** (ನಾ). ೧. ತವರ. ೨. ಸೀಸ : "ನಾಗಂ, ಸೀಸಕಂ, ಯೋಗೇಷ್ಟಂ, ವಪ್ರಂ – ೪ ಸೀಸದ ಹೆಸರುಗಳು" (ಸಿದ್ಧಾಂತ. ೩೦೭). [ಸಂ.]

**ಯೋಗ್ಯ** (ಗು). ೧. ನೊಗಕ್ಕೆ ಹೂಡಲು ತಕ್ಕುದಾದ. ೨. ಯೋಗಾಭ್ಯಾಸಕ್ಕೆ ತಕ್ಕ,—ಅರ್ಹವಾದ. ೩. ಒಪ್ಪುವ ; ಸರಿಹೋಗುವ ; ಸಮರ್ಪಕವಾದ. ೪. ತಕ್ಕ; ಅರ್ಹ; ಉಚಿತವಾದ : ವಿಷ್ಣುವು ಈ ಮಹಾತ್ಮರನ್ನು ಕಂಡ ಕೂಡಲೇ ಎದ್ದು ಯೋಗ್ಯವಾದ ಪೀಠದಲ್ಲಿ ಕುಳ್ಳಿರಿಸಿದನು (ಶ್ರೀಭಾ. IV, ೦೨). ೫. ಉಪಯುಕ್ತವಾದ : ಪ್ರಯೋಜನವುಳ್ಳ. (ನಾ). ೬. ಯೋಗ್ಯತೆ ; ಅರ್ಹತೆ : ನಿನ್ನ ಭಕ್ತರ ಯೋಗ್ಯವ ನೀನೆ ಬಲ್ಲೆ (ಏಕಾಪು. ೯೭–೬). ೭. ಸರಿಯಾದುದು ; ತಕ್ಕುದು : ಅರ್ಹವಾದುದು : ಇದು ಯೋಗ್ಯಮಯೋಗ್ಯಮಿದೆನ್ನದೆ ವಿಷಯದಲಂಪು ನಿಮಿರೆ ಗತಿ ಹಾಸಗಮಟ್ಟದೆ ನಡೆವ ಕಾತರಂಗಾಗದು ಸಕಳತ್ಯಾಗಸಾಧಕಂ ಜೈನಮತಂ (ವರ್ಧಮಾ. ೦೦–೬೨). ೮. ಅರ್ಹನಾದ ವ್ಯಕ್ತಿ ; ಯೋಗ್ಯತೆಯುಳ್ಳವನು : ನಿಮ್ಮನೋದಿಸಿ ಯೋಗ್ಯರಂ ಮಾಡುವಂತಿರೆ ನಿರೂಪಿಸಿ ಕಲ್ಪಿಸಿಯೋಲೆಯಂ ಬರೆಯಿಸಿ ನಿಮ್ಮ ಕಯ್ಯೊಳ್ ಟ್ಟದಪೆಂ (ತತ್ತ್ವರಾ. ೩–೫) ; ಬಸವನೆಂಬ ಗಣೇಶ್ವರನ ಮಾಡಿ . . . ನಿಮ್ಮೊಕ್ಕುದ ಮಿಕ್ಕುದಕ್ಕೆ ಯೋಗ್ಯನಾಗಲೆಂದಿರಿಸಿಕೊಂಡಿರ್ದಿರಯ್ಯಾ (ಬಸವ. ೪). ೯. ಚಂದನ ; ಶ್ರೀಗಂಧ. ೧೦. ಒಂದು ಬಗೆಯ ಔಷಧಿದ್ರವ್ಯ : "ಯೋಗ್ಯಂ, ಋದ್ಧಿಃ, ಸಿದ್ಧಿಃ, ಲಕ್ಷ್ಮೀ – ೪ ಋದ್ಧಿಯೆಂಬುವ ಗಂಧಿಕದ್ರವ್ಯದ ಹೆಸರುಗಳು" (ಸಿದ್ಧಾಂತ. ೦೩೭). [ಸಂ.]

**ಯೋಗ್ಯತಾಪತ್ರ** (ನಾ). ೧. ಪರೀಕ್ಷೆಯಲ್ಲಿ ನಿರೀಕ್ಷಿತ ಮಟ್ಟವನ್ನು ಮುಟ್ಟಿದವರಿಗೆ ಕೊಡುವ ಅರ್ಹತೆಯ ಪತ್ರ : ತೇರ್ಗಡೆಯಾದ ವಿಷಯದಲ್ಲೇ ಯೋಗ್ಯತಾಪತ್ರ . . . ತರಬೇಕು (ಶಿಕ್ಷಣ. ೩೭೭). ೨. "(ಒಬ್ಬನ ಶೀಲ, ನಡತೆ, ಯೋಗ್ಯತೆ—ಇವನ್ನು ಕುರಿತು ಕೊಟ್ಟ) ಯೋಗ್ಯತಾ ಪತ್ರ, ಪ್ರಮಾಣ ಪತ್ರ" (Testimonial.ಇಂಕಂ). [ಸಂ.]

**ಯೋಗ್ಯತಿಕೆ** (ನಾ). ಅರ್ಹತೆ ; ಯೋಗ್ಯತೆ : ಯೋಗ್ಯರಲ್ಲದರಾರು ಮುಕುತಿಗೆ . . . ಯೋಗ್ಯತಿಕೆ ಸಪ್ರವೃತ್ತಿಯೊಂದೇ ಯೋಗ್ಯತಿಕೆ ನೆಟಿ ಸಂಬ ಬಲ್ಲಡೆ (ಸಿಶಾಗ. ೬–೩–೪೮). [ಯೋಗ್ಯತೆ + — ಇಕೆ]

**ಯೋಗ್ಯತೆ** (ನಾ). ೧. ಅರ್ಹತೆ ; ದಕ್ಷತೆ : ಗುರು ಮೊದಲು ಶಿಷ್ಯರ ಯೋಗ್ಯತೆಯನರಿದು . . . ಬೋಧಿಸಿ ರಕ್ಷಿಸುವನು (ಗಗಶಾ. ೦೩–೦೩). ೨. ಸಮರ್ಪಕವಾಗಿರುವಿಕೆ ; ಸಮುಚಿತತೆ. ೩. (ಅಲಂ) ಗೌರವ ; ಅಂತಸ್ತು ; ಘನತೆ : ಕೈಕೆಳಗಿನವರ ಕೂಡ ನಯದಿಂದ ನಡೆದರೆ ತಮ್ಮ ಯೋಗ್ಯತೆಯು ಕಡಿಮೆಯಾಗುವುದೆಂದು ಕೆಲವರು ತಿಳಿಯುವರು (ಮುಂಬಯಿ. ೪–೬೩). ೪. [ತರ್ಕಶಾ] ಪದಗಳ ಅರ್ಥಗಳಲ್ಲಿ ವಿರೋಧವಿಲ್ಲದಿರುವಿಕೆ : ಅರ್ಥಗಳಿಗೆ ಪರಸ್ಪರಾನ್ವಯಕ್ಕೆ ವಿರೋಧವಿಲ್ಲದಿರುವುದು ಯೋಗ್ಯತೆ (ಹಿಂದಸಾ. ೦೪೫) ; ಯೋಗ್ಯತೆಯೆಂದರೆ ವಾಕ್ಯದಲ್ಲಿ ಸೇರುವ ಪದಗಳ ಅರ್ಥಗಳು ಒಂದರೊಡನೊಂದು ವಿರೋಧವಿಲ್ಲದೆ ಹೊಂದಿಕೊಂಡಿರುವುದು (ಭಾರತಿ. ೨೪೦). [ಸಂ. ಯೋಗ್ಯತಾ]

**ಯೋಗ್ಯಾರಥ** (ನಾ). ಸೈನ್ಯದಲ್ಲಿ ಅಭ್ಯಾಸಕ್ಕಾಗಿ ಬಳಸುವ ರಥ. [ಸಂ.]

**ಯೋಗ್ಯೆ** (ನಾ). ೧. ಅಭ್ಯಾಸ; ಆಚರಣೆ. ೨. ಸೈನಿಕ ವ್ಯಾಯಾಮ; ಕವಾಯತು. ೩. ತಕ್ಕವಳು ; ಅರ್ಹತೆಯುಳ್ಳವಳು : (೬).

[ಸಂ. ಯೋಗ್ಯಾ]

**ಯೋಚಕ** (ನಾ). ಯೋಚನೆ ಮಾಡುವವನು ; ಆಲೋಚಿಸುವವನು ; ವಿಚಾರ ಮಾಡುವವನು : "ಜೇಹಕಃ, ಜೇಹಮಾನಃ, ಈ ೨ ಯೋಚಕಂ" (ಶಾಕಶ. ೦೨೪) ; ಆ ಕೊಲೆಗಾರನ ಹೃದಯದ ಮಸೀಮಯ ಭೀಷಣತೆಯಿಂದ ಯೋಚಕರ ಹೃತ್ಪಿಂಡವು ನಡುಗಿ ಹೋಗುತ್ತಿತ್ತು ! (ಅಂದಕ. ೨೦). [< ಯೋಚನ ?]

**ಯೋಚನ** (ನಾ). ೧. ವಿಚಾರ ; ಆಲೋಚನೆ. ೨. ದುಃಖದ ವಿಚಾರ; ಚಿಂತೆ : (೬). 'ಆಲೋಚನ', 'ಯೋಚಿಸು' ಪರಾ.

[< ಸಂ. ಯೋಜನ ?./ ತಮಿ. ಯೋಚನೈ ; ತೆಲು. ಯೋಚನ]

**ಯೋಚನಾಪರ** (ಗು). ಆಲೋಚನೆಯಲ್ಲಿ ತೊಡಗಿದ ; ಚಿಂತಾಪರವಾದ : ರಾಯರು . . . ಒಂದೆರಡು ಕ್ಷಣ ಯೋಚನಾಪರದೃಷ್ಟಿಯಿಂದ ನೋಡುತ್ತಾರೆ (ವೀರಭೋ. ೩೪). [P ಇದು 'ಆಲೋಚನಾಪರ' ಎಂಬ ಶಬ್ದದ ರೂಪಸಾದೃಶ್ಯದಿಂದ ನಿರ್ಮಿತವಾದ ಪದ]

**ಯೋಚನಾಶಕ್ತಿ** (ನಾ). ಆಲೋಚಿಸುವ ಶಕ್ತಿ ; ವಿಚಾರಶಕ್ತಿ : ಯೋಚನಾಶಕ್ತಿ, ಒಂದು ವಿಧದ ಜೀವಶಕ್ತಿ (ನಿಶಲು. ೨೩೪).

[P ಇದು 'ಆಲೋಚನಾಶಕ್ತಿ' ಎಂಬ ಶಬ್ದದ ರೂಪಸಾದೃಶ್ಯದಿಂದ ನಿರ್ಮಿತವಾದ ಪದ]

**ಯೋಚನೆ** (ನಾ). ೧. ಆಲೋಚನೆ ; ವಿಚಾರ ; ಎಣಿಕೆ : ಈ ಯೋಚನೆಗಳ ತುಯ್ದಾಟದೊಡನೆ . . . ಹೊಸನಗರ ತಲುಪಿದ್ದನು (ಬಾಳ್ವೆ. ೦೯೯). ೨. ಯೋಚಿಸುವಿಕೆ ; ಚಿಂತನೆ : ಏಕಾಂತ ಕೆಲರೊಳು ಯೋಚನೆ ಕೆಲರೊಳು ಮಂತ್ರ ಕೆಲರೊಳೊಂದೆರಡು ವಾಕು ಕೆಲರೊಳಿರೆ . . . ಭೂಕಾಂತ ನುಡಿದನು (ಭರತ. ೪-೩೬) ; ಮೈತಳೆದ ಕರುಣೆ ಮೈಮರೆತು ಕುಳಿತಿದೆ ನೋಡು ಯೋಚನೆಯು ಯೋಜನೆಯು ಕರಿತು ಬೆರೆತು (ಉಯ್ಯಾಲೆ. ೪೪-೨). ೩. ಚಿಂತೆ ; ಕಳವಳ : ಪ್ರಾಚೀನಕರ್ಮವು ಬಿಡಲರಿಯದು ಯೋಚನೆಯ ಮಾಡಿ ನೀ ಬಳಲಬೇಡ (ಪುರಂದ. ೪-೦೭ ಕಲ್ಲಿ) ; ಬಡ್ಡಿಗೆ ಯಾತಕೆ ಬದುಕಿನ ಯೋಚನೆ ? (ಗಾದೆ). 'ಆಲೋಚನೆ' ಪರಾ.

[<ಯೋಚನ./ತಮಿ. ಯೋಚನೈ ; ತುಳು. ಯೋಚನೆ]

**ಯೋಚನೆಗೈ** (ಕ್ರಿ). ಆಲೋಚಿಸು ; ಯೋಚಿಸು : ಎಂತು ನಾವಿಲ್ಲಿಂದ ಹೊರಡುವ ಯತ್ನವೆಂದಂತದ ಯೋಚನೆಗೈದು . . . ವಿಪ್ರರು ಕಪಟದ ಗೋವ ನಿರ್ಮಿಸಿದರು ಕ್ಷಣದೆ (ಕಂಸವಧೆ. ೩-೦೫).

[ಯೋಚನೆ + ಗೈ (<ಕೆಯ್$_1$)]

**ಯೋಚಿಸು** (ಕ್ರಿ). ೧. ವಿಚಾರ ಮಾಡು ; ಆಲೋಚಿಸು ; ಆಲೋಚನೆ ಮಾಡು : ಕಡುಗೂರ್ಮೆ ಕೂರ್ತವ್ರೋಲ್ವೀರಮನಾಕೆಗಳ್ಗೆ ಪಡೆದೊರ್ಬರ ನೊರ್ಬರು ಗೆಲ್ವ ಭೇದಮುಮಂ ವಾರಿಜವಕ್ತ್ರೆ ಯೋಚಿಸುವವಂ ಚದುರಂ (ಮಾದಿ. ೦೦-೬೨) ; ಈ ಲಿಪಿಗಳಂ ತಿಳಿದು ಯೋಚಿಸಿ ಹೇಳುವೊಡೆ . . . ಮಾನವರಿಗರಿದು (ಬಸವ. ೩-೩೩) ; ಯೋಚಿಸಿ ಮಾತಾಡು ಪರಹಿತಕಾಗಿ ದಧೀಚಿ ತನ್ನೊಡಲ ಮಾಂಸವನು . . . ಸುರಪಂಗೆ ಕುಡನೆ (ಬೋಹಕ. ೩-೩೨). ೨. ಭಾವಿಸು ; ಎಣಿಸು ; ತಿಳಿದುಕೊಳ್ಳು : ಮಹೇಶ್ವರಂ ಮಿಗೆ ಯೋಚಿಸುತ್ತಿರ್ದನೆನ್ನ ಪಣೆಯಿಂದಾದ ರುದ್ರನೇ ತನ್ನಯ ಸ್ವರೂಪ ಮೆಂದು (ಕಣ್ವ. ೧೩-೬). [ಯೋಚನ + _ ಇಸು$_3$]

**ಯೋಜಕ** (ನಾ). ೧. ಹೊಂದಿಸುವಂತಹುದು ; ಹೊಂದುವುದಕ್ಕೆ ಕಾರಣವಾದುದು : ಸಕಲಮಹೀಚರಖೇಚರನಿಕಾಯ ಸೇವ್ಯತೆಗೆ ವೃದ್ಧ ಸೇವಿತ್ವಮೆ ಯೋಜಕವಾದುದು (ಶಾಂತಿಪು. ೨-೩೯). ೨. ಹೊಂದಿಸುವವನು ; ಯೋಜನೆ ಮಾಡುವವನು ; ವ್ಯವಸ್ಥಾಪಕ : ನಮ್ಮ ದೇಶದಲ್ಲಿ ಒಳ್ಳೆಯ ಯೋಜಕರ ಸಂಖ್ಯೆ ವಿರಳ (ರೂಢಿ). ೩. ಅಗ್ನಿ. [ಸಂ.]

**ಯೋಜನ** (ನಾ). ೧. ಹೊಂದಿಸುವುದು ; ಕೂಡಿಸುವುದು ; ಅಳವಡಿಸುವುದು. ೨. ಏರ್ಪಾಡು ; ವ್ಯವಸ್ಥೆ : ಮೂರು ಭಾಗಗಳ ಯೋಜನ ಮಾಡಿರುತ್ತದೆ (ಮುಂಬಿಪ್ರಾ. ೪ ಪ್ರಸ್ತಾವನೆ). ೩. ದೂರದ ಅಳತೆಯ ಒಂದು ಪ್ರಮಾಣ ; ಎರಡು ಗಾವುದ ; ನಾಲ್ಕು ಹರದಾರಿ : "ದಂಡವೆರಡು ಸಾವಿರವಾಗೆ ಕ್ರೋಶಮಕ್ಕುವು ನಾಲ್ಕುವರಲು ಯೋಜನಮಕ್ಕು" (ಮಂಗರಾ. ೯೬-೦೦) ; ಅಲ್ಲಿ ಖರಭಾಗಂ ಪದಿನಾಱುಸಾಸಿರಯೋಜನಂ (ಸುಕುಮಾ. ೦೦-೪೦ ವ) ; ಒಂದು ಯೋಜನವರೆಗೆ ತಿರುಗಿತು ಒಂದಕಹಿತನ ತೇರು ತಾನೆಸಲೊಂದು ಬಿಲ್ಲಂತರಕೆ ತೊಲಗಿತು ನಮ್ಮರಥ (ಕುಮಾವ್ಯ. ೩೩-೨೦) ; ಕ್ರೋಶವೆರಡಾಗಲೊಂದು ಗವ್ಯೂತಿ . . . ಗವ್ಯೂತಿಯೆರಡಾಗಲೊಂದು ಯೋಜನವೆನಿಸುವುದು (ವಿವೇಕ. ೨೩೦). ೪. ಮನಸ್ಸಿನ ಏಕಾಗ್ರತೆ ; ಧ್ಯಾನ ; ಚಿತ್ತವೃತ್ತಿನಿರೋಧ. [ಸಂ.]

**ಯೋಜನಗಂಧಿ** (ನಾ). ಒಂದು ಯೋಜನದ ವರೆಗೆ ಸುತ್ತಲೂ ಹರಡಬಲ್ಲಂತಹ ಸುವಾಸನೆಯುನ್ನುಳ್ಳವಳು ; P ವ್ಯಾಸಮಹರ್ಷಿಯ ತಾಯಿಯಾದ ಸತ್ಯವತಿ : ಬಳಿಕ ಯೋಜನಗಂಧಿಯಲ್ಲಿಂದಿಳಿದನಭ್ರಶ್ಯಾಮಸುರುಪಿಂಗಳಜಟಾಬದ್ಧ ವೇದವ್ಯಾಸಮುನಿರಾಯ (ಕುಮಾವ್ಯಆ. ೨-೨೩).

[<ಸಂ. ಯೋಜನಗಂಧಾ]

**ಯೋಜನಗಂಧಿತ್ವ** (ನಾ). ಸುತ್ತಲೂ ಒಂದು ಯೋಜನದವರೆಗೆ ಹರಡುವಂತಹ ಶರೀರಸುಗಂಧವನ್ನು ಹೊಂದಿರುವಿಕೆ : ಮುನೀಂದ್ರನಾಕೆಯೊಡಲೀ ದುರ್ಗಂಧಮೋಪಂತೆ ಯೋಜನಗಂಧಿತ್ವಮನಿತ್ತು . . . ಕೂಡುವೆಡೆಯೊಳ್ ಜ್ಞಾನಸ್ವರೂಪಂ ಮಹಾಮುನಿಪಂ ಪುಟ್ಟಿದಂ (ಕಂಸಭಾ. ೦-೬೯). [ಸಂ.]

**ಯೋಜನವಲ್ಲಿ** (ನಾ). ಒಂದು ಬಗೆಯ ಸಸ್ಯ ; ಮಂಜಿಷ್ಠೆ : "ಮಂಜಿಷ್ಠಾ, ವಿಕಸಾ . . . ಭಾಂಡೀ, ಯೋಜನವಲ್ಲೀ – ೯ ಮಂಜಿಷ್ಠೇ ಹೆಸರುಗಳು" (ನಿಘಂಟು. ೦೩೨). [ಸಂ. ಯೋಜನವಲ್ಲೀ]

**ಯೋಜನೆ** (ನಾ). ೧. ವ್ಯವಸ್ಥಿತವಾಗಿ ಮಾಡಬೇಕಾದ ಕಾರ್ಯಗಳ ರೂಪರೇಷೆ ವಿಧಾನಗಳನ್ನು ಮುಂಚಿತವಾಗಿ ರೂಪಿಸಿಕೊಳ್ಳುವುದು, ಏರ್ಪಾಟು ; ವ್ಯವಸ್ಥೆ. ೨. ವ್ಯವಸ್ಥಿತವಾಗಿ ನಿರೂಪಿಸಿಕೊಂಡ ಕಾರ್ಯಕ್ರಮ : ಹಾರ್ವರ್ಡ್ . . . ತನ್ನ ಯೋಜನೆಗಳನ್ನು ಕಾರ್ಯಗತ ಮಾಡಲು ಉದ್ಯುಕ್ತನಾದನು (ಸಸ್ಯಕ. ೩೩) ; ಇತ್ತೀಚೆಗೆ ಗ್ರಾಮಗಳ ಉದ್ಧಾರಕ್ಕಾಗಿ ಹಲವಾರು ಯೋಜನೆಗಳು ಪ್ರಚಾರಕ್ಕೆ ಬರುತ್ತಿವೆ (ವ್ಯವಮ. ೬೩); ಯೋಚಿಸಿ ಯೋಜನೆಯೊಂದನು ಹೊಂದಿಸು ಅದರಂತೆ ಬಾಳನು ನಡಸು (ಇಂಚರ. ೦೦೬-೭೦). ೩. [ವ್ಯಾಕ] ನಿಯಮದಂತೆ ಪದ, ಅರ್ಥ ಮೊದಲಾದುವುಗಳನ್ನು ಹೊಂದಿಸುವಿಕೆ.

[ಸಂ. ಯೋಜನಾ]

**ಯೋಜಿತ** (ಗು). ೧. ಕೂಡಿಸಿದ ; ಹೊಂದಿಸಿದ. ೨. ಉಪಯೋಗಿಸಿದ ; ಬಳಸಿದ. ೩. ಕೊರತೆಯಾಗಿದ್ದುದನ್ನು ಭರ್ತಿ ಮಾಡಿದ ; ಹೊಸದಾಗಿ ಒದಗಿಸಿದ. [ಸಂ.]

**ಯೋಜಿಸು** (ಕ್ರಿ). ೧. ಹೂಡು: ಸಂಧ್ಯಾರಾಗವುಳ್ಳ ರಶ್ಮಿಗಳು ಅವರ ರಥಕ್ಕೆ ಯೋಜಿಸಲ್ಪಡುತ್ತವೆ (ಹುಣ್ಣಿರ. ೦೪೦). ೨. ಹೊಂದಿಸು; ಅಳವಡಿಸು ; ಕೂಡಿಸು : ಲೋಕಮುಂ ಧರ್ಮಪಥಪ್ರಸ್ಥಾನದೊಳ್ ಯೋಜಿಸಿ (ಶಂರಾಮ. ೦-೨೮) ; ಸಮ್ಯಗೆಂಬುದರರ್ಥಂ ಪ್ರಶಂಸೆಯೊಳ್ವರ್ತಿಸುವುದಱಿಂ ಸಮ್ಯಗ್ದರ್ಶನಂ ಸಮ್ಯಗ್‌ಜ್ಞಾನಂ ಸಮ್ಯಕ್ಚಾರಿತ್ರಮೆಂದು ಅದು ಬೇಱೆಬೇಱೆ ಯೋಜಿಸೆ ಪಡುಗುಂ (ತತ್ತ್ವಸೂ.೩). ೩. ಧರಿಸುವಂತೆ ಮಾಡು ; ಧಾರಣ ಮಾಡಿಸು: ಜನನಾಥಂ . . . ರಾಜ್ಯಮುಂ ನಂದನನೊಳ್ ಶ್ರೀಕಾಂತನೊಳ್ ಯೋಜಿಸಿ ತಳೆದರ್ ತಪೋಲಕ್ಷ್ಮಿಯಂ ತಾಳ್ದಿದಂ (ಶಂಪ್ರಪು. ೪-೩೦) ; ಮತ್ತೊರ್ವಳ್ . . . ಪಯೋಧರತಟದೊಳ್ ಸೊಗಯಿಪ ನಕ್ಷತ್ರಮಾಲೆಯಂ ಯೋಜಿಸಿದಳ್ (ಪುಷ್ಪಪು. ೯-೭೬). ೪. ನಿಯಮಿಸು ; ನೇಮಕಮಾಡು ; ನಿಯೋಜಿಸು: ಆಂ ಪರೀಕ್ಷಿಸಿ ನಿನ್ನಂ ... ಈ ರಾಜ್ಯಭಾರಕ್ಕೆ ಯೋಜಿಸಿದೆಂ (ಕಾದಂಬ. ೩೦೮); ಕನಕೆ ಮೊದಲಹ ಪಲವು ದೇವತೆಯರನು . . . ಹಲವು ಸೇವೆಗೆ ಯೋಜಿಸಲು ನೆರೆತಂದುದೋರಂತೆ (ಶಾಲ್ಯಶಾ. ೩೨-೦೩). ೫. ಉಪಯೋಗಿಸು ; ಬಳಸು : ಕ್ರಮದಿಂ ಷಾಡ್ಗುಣ್ಯಮಂ ಯೋಜಿಸುವುದೆ ಸುನಯಂ ಪ್ರಾಪ್ತಕಾಲಾನುರೂಪಂ (ಶಂಶತಂ. ೨೦೯-೯); ಪಡುಗೇರಿಯ ಮನೆಯುಮಂ ಧರ್ಮ್ಮದೊಳ್ ಯೋಜಿಸುವಂ × × × (ಶಾಸನ. XI-i. ೭೩-೩೬; 1040). ೬. ತೊಡಗಿಸು ; ಪ್ರವೃತ್ತಗೊಳಿಸು : ಜನನೀಸ್ತನ್ಯಾಮೃತಸೇವನೆ ಮಾಣ್ದ ಬೞಿಕ್ಕಮಖಿಳವಿದ್ಯಾಮೃತಸೇವನೆಯೊಳೆ ಯೋಜಿಪುದುಚಿತಂ ತನಯನಂ (ಶಂಪ್ರಪು. ೯-೩). ೭. ಸಮ್ಮತಿಸು ; ಒಪ್ಪಿಗೆ ಕೊಡು ; ಅನುಮತಿಸು : "ಯೋಜಿಸು_ಅನುಮತೌ"(ಶಮಣಿ).

[ಯೋಜನ + — ಇಸು$_3$]

**ಯೋತ್ರ** (ನಾ). = ಯೋಕ್ತ್ರ : "ಯೋತ್ರಮುಮಾಬಂಧ ಯೋಕ್ತ್ರ ರಶ್ಮಿಸಮಾಖ್ಯಂ" (ವಸ್ತುಕೋ. ೬೩-೬೯). [ಸಂ.]

**ಯೋದ್ಧ** (ನಾ). ಯುದ್ಧಮಾಡುವವನು ; ಯೋಧ ; ಸೈನಿಕ : ನಿಂತಿಹರು ಕಾಣಲ್ಲಿ ದೀರ್ಘಾಸಿ ಕಟಿಬದ್ಧಸನ್ನದ್ಧ ಯೋದ್ಧರುಂ (ಶ್ರೀರಾಮಾ. ೬೦-೦೬೦). [< ಸಂ. ಯೋದ್ಧೃ]

**ಯೋದ್ಧೃ** (ನಾ). = ಯೋದ್ಧ. [ಸಂ.]

**ಯೋಧ** (ನಾ)· = ಯೋದ್ಧ : ಅತನ ಮುಂಗೆಯ್ ಧಾತ್ರಿಪಾಪನನ ಯೋಧನಿಂ ಚಕ್ರಪಾಣಿಯಿಂ ಖಂಡಿಸೆಪಟ್ಟುದಾಗಿ ನೆಲದೊಳ್ ಬಿರ್ದುದಂ ಪರ್ದು ಕಂಡು (ಪಮ್ಪಭಾ· ೦೯೬-೯); ಯುದ್ಧವೊಂದೇ ಯೋಧನಾದ ಕ್ಷತ್ರಿಯನಿಗೆ ವಿಧ್ಯುಕ್ತಧರ್ಮವೂ ಕರ್ಮವೂ ಆಗಲಿ (ಭಾರತ· ೧೦೭)· [ಸಂ.]

**ಯೋಧನ** (ನಾ)· ಕಾಳಗ ; ಸಮರ ; ಯುದ್ಧ : ವಾಸಿಗೆಟ್ಟು ಯೋಧನದೆ ದೈತ್ಯರೊಡನೆ . . . ಗಾಂಧರ್ವಸಮುದಾಯಮೇ ಸುರುಳಿತೆನೆ ಲೆಕ್ಕಿಸಲ್ವೇಳ್ಕು (ವೆಂಕಾರಾ· ೭-೦೭-೪೦). [ಸಂ.]

**ಯೋನ** (ನಾ)· ಯವನ ; ಗ್ರೀಸ್‌ದೇಶದವನು : ನಾವೆಗಳನು ಮುಳುಕಿ ನೂಕಿ, ಯೋನರಿಂದ ಮುರಿದರು (ಕಾರಸಿ· ೨೧-೩). [ < ಸಂ. ಯವನ ]

**ಯೋನಿ** (ನಾ)· ೧. ಸ್ತ್ರೀಯ ಜನನಾಂಗ ; ಭಗ : "ಭಗಃ, ಯೋನಿಃ, ಉಪಸ್ಥಃ, ವರಾಂಗಂ· ಸ್ಮರಮಂದಿರಂ—ಈ ೫ ಉಪಸ್ಥಂ" (ಹಲಾಯು. ೬೩-೩೭೦) ; ರುದ್ರನಾವ ಯೋನಿಯಲ್ಲಿ ಬಂದನೆಂದು ನೀವು ಹೇಳಿರೋ (ಬಸವ. ೪೫) ; ಬಂದ ಯೋನಿಯೆಂಬುದನರಿಯದೆ ಉಂಡ ಮೊಲೆಯೆಂಬುದನರಿಯದೆ ಕಾಮವಿಕಾರ ತಲೆಗೇರಿ ವಿಷಯಾತುರನಾಗಿ . . . ಆತ್ಮ ಕೆಟ್ಟು ನಷ್ಟವಾಗಿ ಹೋಯಿತು (ಅಖಂಡೇ· ೦೦·೭). ೨. ಗರ್ಭಕೋಶ ; ಗರ್ಭಾಶಯ : ನೆಲಸದ ಯೋನಿ ಮುಟ್ಟದೆಡೆ ಕಾಣದ ಕಾಲಮಾತ್ರದೊಳ್ ಮನಂ ನಿಲಿಸದ ಭಾವಮಟ್ಟಿಸದ ಪುದ್ಗಳಮಿಲ್ಲೆನೆ ಕರ್ಮಬಂಧದಿಂ . . .ಭವಾಂಬುನಿಧಿಯೊಳ್ ತಿರಿತಪ್ಪವು ಜೀವರಾಶಿಗಳ್ (ಸುಕುಮಾ. ೩-೩೨). ೩. ಜನ್ಮ ; ಹುಟ್ಟು : ಹಿಂದೆ ನಾನಾ ಯೋನಿಯಲ್ಲಿ ಬಂದೆನೆಂಬ ಹೇಯವಿಲ್ಲ (ಬಸವ· ೦೭) ; ಜೀವದೊಳಗುಂಟೆಂದರೆ ನಾನಾ ಯೋನಿಯವನಲ್ಲ (ಮೋಹತರ. ೩-೬) ; ಹುಟ್ಟುವ ಯೋನಿಗಳಿಲ್ಲ ಮೆಟ್ಟುವ ಭೂಮಿಗಳಿಲ್ಲ (ಕನಕ· ೦೩೨-೦). ೪. ಜನ್ಮಸ್ಥಾನ ; ಉತ್ಪತ್ತಿಸ್ಥಾನ. ೫. ವಂಶ ; ಜಾತಿ. ೬. [ವೇದಾಂತ] ಮೂಲಕಾರಣ; ಹೇತು : ಋಗ್ವೇದವೇ ಮುಂತಾದ ಮಹಾ ಶಾಸ್ತ್ರಕ್ಕೆ 'ಯೋನಿ' ಅಂದರೆ ಕಾರಣವಾಗಿರುವದು (ಬ್ರಹ್ಮಸೂ· ೨೭). ೭.[ಜೈನ] ಜನ್ಮ ಅಥವಾ ಉತ್ಪತ್ತಿಗೆ ಆಧಾರವಾದುದು: ಜೀವಸಮಾಸದಲ್ಲಿ . . . (೧) ಸ್ಥಾನ (ಏಕೇಂದ್ರಿಯ ಮೊದಲಾದ ಜಾತಿಭೇದ), (೨) ಯೋನಿ (ಕಂದ, ಮೂಲ, ತತ್ತಿ, ಗರ್ಭ, ರಸ, ಬೆವರು ಇತ್ಯಾದಿ ಉತ್ಪತ್ತಿಯ ಆಧಾರಗಳು), (೩) ದೇಹಾವಗಾಹನ (ಶರೀರದ ಆಕಾರ), (೪) ಕುಲ . . . ಈ ಕಾರಣಗಳಿಂದಲೂ ಉತ್ತರೋತ್ತರಭಾಗಗಳು ಅಸಂಖ್ಯಾತವಾಗಿವೆ (ಜೈನಸ. ೩೦೦)· [ಸಂ.]

**ಯೋನಿಜ** (ನಾ). ಗರ್ಭಕೋಶದಿಂದ ಹುಟ್ಟುವ ಜೀವ : ಇವರೆಲ್ಲರು ಯೋನಿಜರೆಂಬುದ ತ್ರೈಜಗ ಬಲ್ಲುದು (ಬಸಪು. ೫೪೭) ; ಜನಿಸದಯೋನಿಜಂಗಂ ಪಿರಿದು ಜನನುಗಳಲಿ ಜನಿಸುವ ಯೋನಿಜರು ಸರಿಯೇ (ಬಸಪು. ೫೪-೨೭) ; ಶರೀರವು ಯೋನಿಜ ಮತ್ತು ಅಯೋನಿಜ ಎಂದು ಎರಡು ವಿಧ (ಭಾತತ್ತ್ವ· ೨೯೦). [ಸಂ.]

**ಯೋನಿದೋಷ** (ನಾ)· ಸ್ತ್ರೀಯ ಜನನಾಂಗಕ್ಕೆ ಸಂಬಂಧಿಸಿದ ವ್ಯಾಧಿ : ನೈದಿಲಗೆಡ್ಡೆ, ಅರಿವಳ, ಓಪ್ಪಲಿ ಇವ ಸಣ್ಣನಾಗಿ ಅರೆದು ಯೋನಿಯೊಳೊತ್ತೆ ಯೋನಿದೋಷ ಮಾಣ್ಗುಂ (ವೈದ್ಯಾ. ೬೨). [ಸಂ.]

**ಯೋನಿನೆತ್ತರು** (ನಾ). ಯೋನಿಯಿಂದ ಅತಿಯಾಗಿ ರಕ್ತಸ್ರಾವವಾಗುವ ಒಂದು ಬಗೆಯ ರೋಗ : ಯೋನಿನೆತ್ತರಿಗೆ :— ಮೊಸರು, ಹಾಲು, ಎಳ್ಳೆಣ್ಣೆ, ಹಾಲು ಈ ಎರಡನ್ನೂ ಸಮಮಂ × × × ಹಾಕಿ ಓಗೆ ಮೂಜುದಿನ ಕುಡಿಸಿದರೆ ನೆತ್ತರು ನಿಲ್ಲುವುದು (ವೈದ್ಯಾ. ೦೭೪).

[ಯೋನಿ + ನೆತ್ತರು (<ನೆತ್ತರ್)]

**ಯೋನಿಮುದ್ರೆ** (ನಾ). ಶಕ್ತಿಪೂಜೆಯ ಸಂದರ್ಭದಲ್ಲಿ ಮಾಡುವ ವಿವಿಧ ಕರನ್ಯಾಸಗಳಲ್ಲಿ ಒಂದು.– ಒಂದು ಬಗೆಯ ಹಸ್ತ ಮುದ್ರೆ : ಅಸ್ತ್ರಮುದ್ರೆ, ಚಕ್ರಮುದ್ರೆ . . . ಯೋನಿಮುದ್ರೆ . . . ಸಂಹಾರಮುದ್ರೆಯೆಂಬ ಸಕಲ ಮುದ್ರಾಲಕ್ಷಣವನರಿದಾಪಾ ಕ್ರಿಯೆಗಳಲ್ಲಿ ಪ್ರಯೋಗಿಸಿ (ವಿವೇಕ. ೪೩)· [ಸಂ. ಯೋನಿಮುದ್ರಾ]

**ಯೋನಿರಕ್ತ** (ನಾ)· = ಯೋನಿನೆತ್ತರು : ಎಮ್ಮೆಯ ಹಾಲನು ಚೆನ್ನಾಗಿ ಕಾಸಿ ಸಕ್ಕರೆ ಜೇನುತುಪ್ಪವೆರಸಿ ಕುಡಿಯೆ ಯೋನಿರಕ್ತಂ ಪರಿಹರದಹುದು (ಸಕಲ್ಪ. ೦೯೩). [ಸಂ.]

**ಯೋನಿಶೂಲೆ** (ನಾ)· ಯೋನಿಯಲ್ಲಿ ಉಂಟಾಗುವ ನೋವು : ಸೋಮಸಾಥನ ಇಂಗು ೧ ತೂಕ ಅರೆದು ಆಡಿನ ಹಾಲಲ್ಲಿ ಕಲಸಿ ೨೨ ದಿನ ಕೊಳ್ಳಲು ಯೋನಿಶೂಲೆ ಗುಣ (ವೈದ್ಯಾ. ೦೦೪) ; ನೇರಳೆಚಿಕ್ಕೆಸಾರು, ಬೋರೆಚಿಕ್ಕೆಸಾರು . . . ಬೆಣ್ಣೆ ಮೊಸರನ್ನು ಹಾಕಿ ಕಲಸಿ ಕುಡಿಯಲು ಯೋನಿರಕ್ತ, ಯೋನಿಶೂಲೆಗಳು ನಿಲ್ಲುವುವು (ಸಕಲ್ಪ. ೪೩೦). [ಸಂ. ಯೋನಿಶೂಲ]

**ಯೋಷಿಜ್ಜನ** (ನಾ)· ಹೆಂಗಸರು; ಸ್ತ್ರೀವರ್ಗ : ದ್ವೇಷಂ ವಿರಹಿಗಳೊಳ್ ಪರಿತೋಷಂ ಮಧುಮತದೊಳಗೆ ಬಂದರ್ ಕೆಲರುಂ ಯೋಷಿಜ್ಜನಂ (ಶಾಂತಿಪು. ೬-೨೩) ; ಜಗಜ್ಜನೈಕವಿಭುವಂ ಯೋಷಿಜ್ಜನಂ ಮಜ್ಜನಂಬುಗಿಸಿತ್ತು (ಜಗಾ. ೦೦-೧೦೦)· [ಸಂ.]

**ಯೋಷಿತೆ** (ನಾ)· ೧. ಹೆಂಗಸು ; ಸ್ತ್ರೀ : ನೆರೆದ ಯೋಷಿತೆಯರತಿ ಯೋಚಿಸಿದರು (ತಂಕವ· ೦೦-೧೭). ೨. ಹೆಂಡತಿ ; ಪತ್ನಿ. 'ಗುರು ಯೋಷಿತೆ' ಪರಾ· [ ಸಂ. ಯೋಷಿತಾ ]

**ಯೋಷಿತ್ತು** (ನಾ)· = ಯೋಷಿತೆ ೧ : "ವನಿತೆ ವಧು ನಾರಿ ಸೀಮಂತಿನಿ ಯೋಷಿದ್ಭಾಮೆ ಕೇವಳಂ ಸ್ತ್ರೀನಾಮಂ" (ವಸ್ತುಕೋ· ೫೨-೦).

[ ಸಂ. ಯೋಷಿತ್ ]

**ಯೋಷೆ** (ನಾ)· = ಯೋಷಿತೆ ೧ : ನಯವಿನಯಮೊಯ್ಯಾರ ಸಂಸ್ಕೃತಿಗಳೊಂದಾಗಿ ಮೆಯ್ವೆತ್ತವೋಲ್ ಬಂದಳಾ ವಿಯಚ್ಚರಯೋಷೆ (ಶ್ರೀರಾಮಾ. ೨೦೫-೩೦೨). [ ಸಂ. ಯೋಷಾ ]

**ಯೌಕ್ತಿಕ** (ಗು)· ೧. ಯುಕ್ತಿಯಿಂದ ಕೂಡಿದ ; ತರ್ಕಸಮ್ಮತವಾದ. ೨. ಯೋಗ್ಯವಾದ ; ಅರ್ಹವಾದ. (ನಾ)· ೩. ಶತ್ರುಗಳನ್ನು ಭೇದಿಸುವ ಐದುಸಾಧನಗಳಲ್ಲಿ ಒಂದು ; ಯುಕ್ತಿ ; ಉಪಾಯ; ತಂತ್ರ : ಮಾಂತ್ರಿಕ ದೈವಿಕ ನೈಸರ್ಗಿಕ ಯೌಕ್ತಿಕ ವಾಸ್ತವಿಕವೆಂಬ ಪಂಚಭೇದಸಾಧನಂಗಳಿಂದಲುಂ ಪರಭಯಂಕರ ವೇಷಭಾಷಾಕಾರಂಗಳುಳ್ಳ ಘನದೇವರ್ಕಳಿರ್ಕುಂ (ವಿವೇಕ. ೨೬೩). ೪. ತರ್ಕವನ್ನೇ ಅವಲಂಬಿಸುವವನು; ತಾರ್ಕಿಕ : ತಾರ್ಕಿಕರಿಗೆ ಯೌಕ್ತಿಕರೆಂದು ವ್ಯವಹಾರವಿರುವುದು (ಹಿಂದಶಾ· ೦೦೪). ೫. ಅರಸನ ಬಳಿ ಇರುವ ನರ್ಮಸಚಿವ. [ಸಂ.]

**ಯೌಗಿಕ** (ಗು)· ೧. ಉಪಯುಕ್ತವಾದ ; ಪ್ರಯೋಜನವುಳ್ಳ. ೨. ಯೋಗ್ಯವಾದ ; ತಕ್ಕ. ೩. ರೂಢವಾದ ; ಸಾಂಪ್ರದಾಯಿಕವಾದ. ೪. ಯೋಗಕ್ಕೆ ಸಂಬಂಧಿಸಿದ· (ನಾ)· ೫. [ವ್ಯಾಕ] ಅವಯವಾರ್ಥವನ್ನುಳ್ಳ ಪದ ; ವ್ಯುತ್ಪತ್ತಿಯನ್ನು ಹೊಂದಿಕೊಳ್ಳುವ ಪದ. ೬. ರಾಸಾಯನಿಕ ಮಿಶ್ರಣ : (*)· [ಸಂ.]

**ಯೌಗಿಕಿ** (ನಾ)· [ಕಾವ್ಯಮಿ] ಶಬ್ದಗುಣಗಳಲ್ಲಿ ಒಂದು; ಅವಯವಾರ್ಥವನ್ನುಳ್ಳ ಪದ : ಅಗ್ನಿಪುರಾಣದಲ್ಲಿ . . . ಶ್ಲೇಷ· ಲಾಲಿತ್ಯ, ಗಾಂಭೀರ್ಯ· ಸೌಕುಮಾರ್ಯ, ಉದಾರತಾ· ರೂಢಿ· ಯೌಗಿಕೀ – ಇವು ಏಳೂ 'ಶಬ್ದಗುಣ'ಗಳೆಂದೂ ಮಾಧುರ್ಯ . . . ಸಾಮಯಿಕತಾ ಇವು ಆರೂ 'ಅರ್ಥಗುಣ'ಗಳೆಂದೂ . . . ಹೇಳಿದೆ (ಕೃಮಿ. ೨೬೨, ೬೩೪).

[ ಸಂ. ಯೌಗಿಕೀ ]

**ಯೌತಕ** (ನಾ)· ಮಗಳು ಮತ್ತು ಅಳಿಯನಿಗೆ ಮದುವೆಯ ಕಾಲದಲ್ಲಿ ಕೊಡುವ ಬಳುವಳಿ.– ಉದಾಗೊರೆ : "ಯೌತಕಂ . . . ಮದಿವೆ ಮುಂತಾದುವುಗಳಲ್ಲಿ ಮಗಳಿಗೂ ಅಳಿಯನಿಗೂ ಕೊಡತಕ್ಕ ಬಹುಮಾನಕ್ಕೆ ಹೆಸರು" (ಹಿಂದ್ಯೋಶಾ. ೨೯೩)· [ಸಂ.]

**ಯೌತವ** (ನಾ). ಒಂದು ಅಳತೆ – ಮಾನ. [ಸಂ.]

**ಯೌವತ** (ನಾ). ೧. ತರುಣಿಯರ ಗುಂಪು ; ಯುವತಿಯರ ಸಮೂಹ : "ಯೌವತಮದು ಯುವತಿಜನರ ಸಂಘಾತಂ" (ನಸ್ತುಕೋ. ೧೦೩-೩೨); ಇದು ಪಿರಿದುಂ ವಸಂತಸಖಿ ಯೌವತರತ್ನನಿಧಾನವಂತದಲ್ಲಿದು . . . ರತಿನಾಥಕಲ್ಪಲತಿಕಾಪ್ರಕರೈಕಕೃತಾಳವಾಳಂ (ಚಂದ್ರಪ್ರ. ೭-೦೨೭). ೨. ಯುವತಿಯ ಗುಣಧರ್ಮ; ಯುವತಿಯಾಗಿರುವಿಕೆ. [ಸಂ.]

**ಯೌವನ** (ನಾ). ೧. ಹರಯ ; ತಾರುಣ್ಯ ; ಆ ಕನ್ನೆಗೆ ಯೌವನಂ ನೆಱೆದಂದು ಮದುವೆಯಾದೊಡೆ (ಪದ್ಮರಾ. ೦೩-೨೭); ಯೌವನವನ ವಸನ್ತಲಕ್ಷ್ಮಿ ಸೌಭಾಗ್ಯನಿಧಾನದೀಪವರ್ತ್ತಿ . . . ಶ್ರೀಮತ್ಪಿರಿಯರಸಿ ಕಂಚಲಮಹಾದೇವಿಯರ್ (ಸೌಇಇ·XX. ೯೭-೦೩; 1072); ಭವವ ಬಳಸುವ ತನುವಿನಲಿ ಕೌಮಾರ ಯೌವನ ವಾರ್ಧಿಕಂಗಳಲಿ ತನು ವಿಕಾರಿಸುವದು (ಕುಮಾ.ಶೀ. ೪-೯೯); ಚಿಂತೆಯೇ ಮುಪ್ಪು, ಸಂತೋಷವೇ ಯೌವನ (ಗಾದೆ). ೨. ತಾರುಣ್ಯವನ್ನು ಉಳ್ಳವನು; ಯೌವನವನ್ನು ಹೊಂದಿದವನು: ಸುಕುಮಾರಸ್ವಾಮಿಯುಂ ಯೌವನನಾಗಿ ಅತ್ಯಂತ ರೂಪಲಾವಣ್ಯ ಸೌಭಾಗ್ಯಕಾಂತಿಯಿಂದಂ ಕೂಡಿದೊಂ (ಪದ್ಮರಾ. ೨೩-೦೦); ಬಳಿಕ ಯೌವನನಾಗಿ ಪರಮಂಡಲಕೆ ನಡೆದನು (ಕುಮಾರರಾ. ೭-೩೦). [ಸಂ.]

**ಯೌವನಗಾತ್ರಿ** (ನಾ). ಜವ್ವನೆ ; ತರುಣಿ ; ಯುವತಿ : ಅತ್ಯಂತ ರೂಪಯೌವನಗಾತ್ರಿಯರು . . . ಸತ್ಯಭಾಮೆಯನು ಸಾರಿದರು (ಮೋಹತ. ೦೯-೬೨). [ಯೌವನ + – ಗಾತ್ರ + – ಇ$_1$ (< – ಇತ್ರಿ)]

**ಯೌವನಮದ** (ನಾ). ಹರಯದ ಸೊಕ್ಕು : ಯೌವನಮದದಿಂದಲೂ ಅಸಹನೆಯಿಂದಲೂ ಮೌಢ್ಯದಿಂದಲೂ ತುಂಬಿರುವ ಅವರಿಗೆ ವಿವೇಕವನ್ನು ಹೇಳಿದರೆ ಅದು ಅವರ ಮನಸ್ಸಿಗೆ ಇಳಿಯುವುದಿಲ್ಲ. (ವಕಥಾ. ೨೩೦). [ಸಂ.]

**ಯೌವನಸ್ಥ** (ನಾ). ಯುವಕ ; ತರುಣ : ಯೌವನಸ್ಥನಾದ ಮಾಧವನು . . . ತಂದೆಗೆ ಬಲವಾದ ಎರಡು ಪೆಟ್ಟುಗಳನ್ನು ಕೊಟ್ಟನು (ಪೀಠಿಕಾ. X. ೨೪). [ಸಂ.]

**ಯೌವನಾವಸ್ಥೆ** (ನಾ). ತಾರುಣ್ಯ ; ಯುವಾವಸ್ಥೆ : (೯). [ಸಂ. ಯೌವನಾವಸ್ಥಾ]

**ಯೌವನೆ** (ನಾ). ಯುವತಿ : ತರುಣಿ : ವಯಸವಿಭೇದದಿಂ ಬಾಲೆ ಯೌವನೆ ಪ್ರೌಢೆ ಲೋಲೆಯೆಂದಿಂತು ಧರಿತ್ರಿಯೊಳಪ್ಪರ್ ನಾಲ್ವರ್ಕಾಂತೆಯರ್ (ಮದತಿ. ೭-೦). [ಯೌವನ + – ಎ$_2$]

**ಯೌವನೋದಯ** (ನಾ). ಹರಯದ ಆರಂಭ ; ತಾರುಣ್ಯದ ಪ್ರಾರಂಭ : ವಿಜೃಂಭಿಸಿದುದು ಯೌವ[ಪಾಠಾಂ. ಯುವ್ವ]ನೋದಯವಿಲಾಸಮಸುಕ್ರಮದಿಂ ಮದಂಗದೊಳ್ (ಕಾದಂಪೂ. ೭೧೯) ; ಆ ವಧು ಯೌವನೋದಯ ರಸಾಯನಸಿದ್ಧಿ ಮನೋವಿಮೋಹ ಸಂಭಾವನವಿದ್ಯೆ . . . ಎನಿಪ್ಪಳದೇಂ ಸುರೂಪೆಯೋ (ಚಂಪ್ರಪು. ೩-೨೭). [ಸಂ.]

**ಯೌವರಾಜ್ಯ** (ನಾ). ೧. ಯುವರಾಜನ ಪದವಿ, – ಅಧಿಕಾರ : ಮೊದಲೊಳ್ ತಾಂ ಯೌವರಾಜ್ಯಂ ಬಱಿಕೆ ನಡುವೆ ಸಂದಾಧಿರಾಜ್ಯಂ ಬಱಿಕ್ಕಂ ತುದಿಯೊಳ್ ಕೈವಲ್ಯಸೌಖ್ಯಪ್ರದಮೆನಿಪ ತಪೋರಾಜ್ಯಮೆಂದಿಂತು ಮಾಯ್ದಂದದೆ ಸೇವ್ಯಂಗಳ್ ಮದೀಯಾನ್ವಯನೃಪರ್ಗೆ (ಚಂದ್ರಪ್ರ. ೨-೩೦). ೨. [ಜೈನ] ಐವತ್ತು ಮೂರು ಗರ್ಭಾನ್ವಯಕ್ರಿಯೆಗಳಲ್ಲಿ ಒಂದು : ಯೌವರಾಜ್ಯ . . . ನಿರ್ವೃತಿಯೆಂಬಯ್ವತ್ತುಮೂಱು ಗರ್ಭಾದಿನಿರ್ವಾಣಪರ್ಯಂತಂಗಳಪ್ಪ ಗರ್ಭಾನ್ವಯಕ್ರಿಯೆಗಳುಂ (ಆದಿಪು. ೦೩-೦೩ ವ). [ಸಂ.]

**ಯೌವರಾಜ್ಯಪದ** (ನಾ). ಯುವರಾಜನ ಪದವಿ, — ಅಧಿಕಾರ : ಅನಂತವೀರ್ಯನಪಾರಬಲಂ ಯೌವರಾಜ್ಯಪದದೊಳ್ ನಿಂದು (ಶಾಂತಿಪು. ೨-೧). [ಸಂ.]

**ಯೌವರಾಜ್ಯಾಭಿಷೇಕ** (ನಾ). ಯುವರಾಜಪದವಿಯನ್ನು ಕೊಡುವಾಗ ಮಾಡುವ ಅಭಿಷೇಕ : ಶುಭದಿನದೊಳಿಳಾಧೀಶ್ವರಂ ಮಾಡೆ ತೂರ್ಯಸ್ವರದೊಳ್ ತಳ್ತೊಪ್ಪಿದೇಂ ಶೋಭಿಸಿದುದೊ ಪಿರಿದುಂ ಯೌವರಾಜ್ಯಾಭಿಷೇಕಂ (ಚಂದ್ರಪ್ರ. ೨-೭೯) ; ಕುವರವಿಷ್ಣುವಿಗೇ ಯೌವರಾಜ್ಯಾಭಿಷೇಕವನ್ನು ಮಾಡಿದರಾಯಿತು (ಶಾಂತಲಾ. ೨೯). [ಸಂ.]

*

**ರ₁** (ನಾ). ಕನ್ನಡವರ್ಣಮಾಲೆಯ ನಲವತ್ತೇಳನೆಯ ಅಕ್ಷರ : ರಕಾರ ; ರೇಫ : ಅವರ್ಗೀಯ : ಯ ರ ಲ ವ ಸ ಹ ಳ ಱ ೞ (ಶ಼ಬ್ದ. ೩).

**ರ₂** (ನಾ). ೧. [ಗಣಿತ] ಎರಡು ಎಂಬ ಸಂಖ್ಯೆಯ ಸಂಕೇತ :"ಖಶಘರ ಮದೆರತಕ್ಕು" (ಮಂಗರಾ. ೦೦೪-೦೦). ೨. [ಛಂದ] ಆದಿ ಮತ್ತು ಅಂತ್ಯಗಳಲ್ಲಿ ಎರಡು ಗುರುಗಳೂ ಮಧ್ಯೆ ಒಂದು ಲಘುವೂ ಉಳ್ಳ ಒಂದು ಗಣದ ಹೆಸರು ; ರಗಣ (–◡–) : ಮಲ್ಲಿಕಾಯುತ ಮಾಲೆಯಪ್ಪುದು ರಂ ಸಜಂಜಭರಂ ಬರಲ್ (ಶ಼ಬ್ದ. ೯೩). [ಸಂ.]

**ರಂಕ** (ಗು). ೧. ಆತ್ಮಾಸೆಯಿಂದ ಕೂಡಿದ ; ಲೋಭಿಯಾದ. (ನಾ). ೨. ನಿರ್ಗತಿಕ ; ಭಿಕ್ಷುಕ ; ತಿರುಕ : ಅಂಕೆಯಿಲ್ಲದ ರಾಜ್ಯವನು ನಿಶ್ಶಂಕೆಯಿಂದಾಳುವ ನೃಪಾಲಗೆ ಮಂಕುಹಿಡಿಯಲು ತನ್ನನೇ ತಾ ರಂಕನೆಂಬಂತೆ (ಅದ್ಭುತ. ೩-೦೩) ; ರಾಜ ರಂಕನಾಗುವುದು ಕಾಲಗತಿಯ ಪರಿಣಾಮ (ಹಂಪಾ. ೦೯೩) ; ರಾಜನಿಂದ ರಂಕನವರೆಗೂ ಅವನಿಗೆಲ್ಲರೂ ಒಂದೇ (ಪಾಂಗೀ. ೩೯). [ಸಂ.]

**ರಂಕರಾಟಣ** (ನಾ). (ಜಾತ್ರೆ, ಪರಿಸೆ ಮೊದಲಾದುವುಗಳಲ್ಲಿ) ಮಕ್ಕಳನ್ನು ಕೂರಿಸಿ ತಿರುಗಿಸುವ ಗಿರಗಿಟ್ಲೆ : "ಮರದ ಕುದುರೆಗಳು. ತೊಟ್ಟಿಲುಗಳು ಮೊ. ಗಳುಳ್ಳ ತಿರುಗುಯಂತ್ರ ; ರಂಕರಾಟಣ" (Merry-Go-round. ೩೦೯೨). [←ತೆಲು. ರಂಕುಲರಾಟ್ನ]

**ರಂಕು** (ನಾ). ಮೈಮೇಲೆ ಕಪ್ಪುಮಚ್ಚೆಗಳಿರುವ ಒಂದು ಬಗೆಯ ಜಿಂಕೆ : "ಆ ರಂಕು ನ್ಯಂಕುವೆನೆ ಮರೆಗೆ ಪೆನರಕ್ಕು" (ಮಂಗರಾ. ೯೬-೦೦) ; ಮೆಲ್ಲನಿಟ್ಟದತ್ತು ವಿಯತ್ತಳಮಧ್ಯಭಾಗದಿಂ ಪರಿಣತ ರಂಕುರೋಮತತಿ ಪಾಂಡುರಮುಂದು ಶಶಾಂಕಮಂಡಲಂ (ಕಾದಂಭೂ. ೦೩೬). [ಸಂ.]

**ರಂಕೆ** 'ಜಿಗಾಂಕು' ನೋ.

**ರಂಗ** (ನಾ). ೧. ಬಣ್ಣ : ವರ್ಣ. ೨. ಬಣ್ಣದ ಪುಡಿ : ಜೇನಸಗಳು . . . ೬೫, ರಂಗ, ಸರ್ವಜಾತಿಯದು (ಮಂಜಿವ್ಯಾ. ೦೩೦). ೩. ಬಣ್ಣದ ಪುಡಿಯಿಂದ ರಚಿಸುವ ಹಸೆ, ಚಿತ್ರ ಮೊದಲಾದುವು : ನಡುಬೀದಿಯೊಳಂ ಪಸುಗೆಪಡುವೆಡೆಯೊಳಮೂರಪಿರಿಯ ಚೌವಟ್ಟದೊಳಂ ತೊಡೆದು ಬರೆದಲ್ಲಿ ರಂಗಮಸುಡಿಗೆಗಳಂ ಸುರಿದು ಸೂಸಿ ಕಡುವಮೂರ್ಧರ್ (ಸವಚ. ೯-೦೩೦). ೪. ನಾಟಕ, ಮೇಳ ಮೊದಲಾದುವುಗಳನ್ನು ಆಡುವ ಸ್ಥಳ : ವೇದಿಕೆ : "ಆಡುವ ಠಾವು ರಂಗವೆಂಬುದು" (ಹಲಾಯು. ೦೭-೯೭) ; ಧರೆ ರಂಗಂ ಗಗನಂ ಮನೋಹರತರಂ ನಾಟ್ಯಾಲಯಂ ನರ್ತಕಂ ಸುರರಾಜಂ (ಅದಿಪು. ೭-೦೨೭) ; ನನಗೆ ನನ್ನೋರಗೆಯವರಿಗೆ . . . ಉಡಿಗೆ ತೊಡಿಗೆಯನಣಿಮಾಡಿ ರಂಗಕೆ ಬಿಟ್ಟರು ಬಣ್ಣವ ಬಳಿಸಿ (ಜಂಪಾಕ. ೦೦-೯೫). 'ರಂಗಪೂಜೆ' ಪರಾ. ೫. ಸಭೆ ಸೇರುವ ಸ್ಥಳ : ಸಭಾಮಂದಿರ. ೬. ನಾಟಕ ಮೊದಲಾದುವನ್ನು ನೋಡಲು ಸೇರಿರುವ ಜನಸಮೂಹ : ಪ್ರೇಕ್ಷಕವರ್ಗ. ೭. ಯುದ್ಧಭೂಮಿ : ಕಳ : ರೋಷದಿಂ ಘೀಂಕರಿಸಿ ರಂಗಮಂ ಪೊಕ್ಕಾ ಮದದ್ವಿಪಂ ಬೆರ್ಚಿ ನಿಂದುದು ಫಕ್ಕನೆಯು (ಶ್ರೀರಾಮಾ. ೯೩೬ ೩೩). 'ರಣರಂಗ' ಪರಾ. ೮. ನೃತ್ಯ ; ನರ್ತನ. ೯. ಹಿಗ್ಗು : ಸಂತೋಷ. ೧೦. ತವರ : " ತ್ರಪು. ಪಿಚ್ಚಟಂ, ರಂಗಂ. ಮಗಂ — ೪ ತವರದ ಹೆಸರುಗಳು " (ಸಿಮ್ಹೊಅ. ೩೦೭). ೧೧. ಕೃಷ್ಣ : P ಈ ಅರ್ಥವು ಸಂಸ್ಕೃತ ಕೋಶಗಳಲ್ಲಿಲ್ಲ : ರಂಗ ಬಾರೋ ಕೃಷ್ಣ ಬಾರೋ ಮಂಗಳಾತ್ಮಕ ಮನಸಿಜನಯ್ಯನೆ . . . ಬಾರೋ (ಪುರಂದ. ೩-೭೭ ಪಲ್ಲವಿ) ; ರಂಗ ನಿನ್ನಯ ರಂಗುವಡೆದ ಜಂಘೆಯ ಚೆಲ್ವ ಮುಂಗುಡಿವರಿದು ಮುದದೊಳು ಹಿಂಗದೆ . . . ಹೃದಯಾಂಗಣದೊಳಿರುತಿರ್ಕೆ (ಕಕಸಾಂ. ೦-೩). ೧೨. ಹೊಳಪು ; ಪ್ರಕಾಶ : 'ಪಿಂಡರಂಗ' ಪರಾ.

**ರಂಗಕುಣಿ** = ನರ್ತನ ಮಾಡು ; ನಾಟ್ಯವಾಡು : ಅವರೂ . . . ತಮಟೇ ಸದ್ದಿಗೆ ಸರಿಯಾಗಿ ಪಾದವಿನ್ಯಾಸ ಮಾಡುತ್ತಾ ರಂಗಕುಣಿಯುವರು (ಹುಟ್ಟಿಪ. ೨೦). **ರಂಗದ ಕುಣಿತ** = ಸುಗ್ಗಿಯಲ್ಲಿ ನಡೆಯುವ ಒಂದು ಬಗೆಯ ಕುಣಿತ : 'ರಂಗದ ಕುಣಿತ' ಮಂಡ್ಯ ಜಿಲ್ಲೆಯಲ್ಲಿ ವಿಶೇಷವಾಗಿಯೂ . . . ಕಂಡುಬರುತ್ತದೆ (ಕಜಳ. ೦೩೨). [ಸಂ.]

**ರಂಗಂಬೊಗು** (ಕ್ರಿ). ನೃತ್ಯ, ನಾಟಕ ಮೊದಲಾದುವುಗಳನ್ನು ಪ್ರದರ್ಶಿಸಲು ರಂಗಸ್ಥಳಕ್ಕೆ ಬರು : ಮಂಗಲಾಲಂಕಾರಾಲಂಕೃತನಾಗಿ ನಾಟ್ಯವಿದ್ಯಾಚಾರ್ಯನಂ ಪೋಲ್ತು ರಂಗಂಬೊಕ್ಕು ಲೋಕಾಕಾರಮನಭಿನಯಿಪಾಕಾರಂ ನೆಗಳೆ³ (ಆದಿಪು. ೭-೦೦೩ ವ) ; ನಿನ್ನ ರಂಗಂಬೊಕ್ಕು ಚಿತ್ರವೆನೆ ನರ್ತಿಸಿದ ಕನ್ನೆ ನಿನ್ನಯ ಕುಮರಿಯೇ (ಶಾಂತಪು. ೬-೭೧).

[ರಂಗ + ಪೊಗು]

**ರಂಗಕಾಜಿ** 'ರಂಗಗಾಜಿ' ನೋ.

**ರಂಗಗಾಜಿ**, ರಂಗಕಾಜಿ (ನಾ). ಬಟ್ಟೆಗಳನ್ನು ಶುಭ್ರಮಾಡುವವನು : ಅಗಸ ; ರಜಕ : ಬಲ್ಲಿದನು ನೀ ರಂಗಗಾಜಿರಿಗೆಲ್ಲರಿಗೆ ಲೇಸಾಯಿತ್ತು ಕೊಡು ನಿನಗುಳ್ಳ ವಸನದಲುತ್ತಮವನೆಮಗೆಂದನಸುರಾರಿ (ಪಿರಾಗ. ೦೦-೩೭-೨). **ರಂಗಕಾಜಿ** : ವನಮಾಳಿ ಮಾಳಾಪ್ರಪಂಚಂ ಬೇಡ ಬಿಡುಬಿಡೆಂದು ರಣರಂಗಾರ್ಥಿಯಾಗಿ ರಂಗಕಾಜಿನ ಕಯ್ಯ ಸೀರೆಯುಂ ಸೆಳೆಯಲ್ (ಅರ್ಜುನ. ೬-೭೭ ವ) ; ಇರದೆಯ್ದಿ ರಂಗಕಾಜಿನೊಳುರವಣೆಯಿಂ ಕೊಂಡ ಮೌಲ್ಯಮೆನಿಸಿದ ನೀಲಾಂಬರಮಂ ರಾಮಂಗಿತ್ತು ಸೆದಿರೆ ಕೃಷ್ಣನನರ್ಘ್ಯಪೀತವಸನಮನುಟ್ಟಂ (ಜಗಾ. ೭-೯).

[ರಂಗ₁ + — ಕಾಜಿ / ಸಂ. ರಂಗಕಾರ = ಬಣ್ಣಗಾರ, ಚಿತ್ರಗಾರ]

**ರಂಗಗೀತೆ** (ನಾ). ನಾಟಕರಂಗದ ಮೇಲೆ ಹಾಡುವ (ವಿಶಿಷ್ಟವಾದ ಮಟ್ಟುಗಳನ್ನೊಳಗೊಂಡ) ಹಾಡು : ಹಳೆಯ ರಂಗಭೂಮಿಯ ನಟರಲ್ಲಿ ಕೆಲವರು ಇಂದೂ ಆ ಕಾಲದ ರಂಗಗೀತೆಗಳನ್ನು ಸುಶ್ರಾವ್ಯವಾಗಿ ಹಾಡುತ್ತಾರೆ (ಕೂ೨). [ಸಂ. ರಂಗಗೀತಾ]

**ರಂಗತಂತ್ರ** (ನಾ). ನಾಟಕರಂಗದ ಮೇಲೆ ಬಳಸುವ ವಿಶಿಷ್ಟವಾದ ತಂತ್ರ, — ವಿಧಾನ : ಶುದ್ಧಸಾಂಪ್ರದಾಯಿಕ ರಂಗತಂತ್ರಗಳ ಬಳಕೆ ಅನಿವಾರ್ಯವೆಂದು ಒಪ್ಪಬೇಕಾಗಬಹುದು (ಕಾಚಿತ್ರ. ೨೦೦). [ಸಂ.]

**ರಂಗತಾಲೀಮು** (ನಾ). ನಾಟಕಪ್ರದರ್ಶನಕ್ಕಾಗಿ ಮಾಡುವ ಪೂರ್ವಸಿದ್ಧತೆ ; ನಾಟಕದ ಅಭ್ಯಾಸ : ನಾಟಕೀಯವಾಕ್ಯಗಳ ಹಾಗು ಪದಪುಂಜಗಳ 'ರಂಗತಾಲೀಮು' ಕಟ್ಟೆಯ ಮನಸ್ಸಿನಲ್ಲಿ ನಡೆದಿರುತ್ತಿತ್ತು (ಗಂಡಾಬಿ. ೦೨೦) ; ಯಾವ ಮಾತನ್ನು ಹೇಗೆ ಆಡಬೇಕೆಂಬ ರಂಗತಾಲೀಮನ್ನು ಅವರು ಆಗಲೇ ಮಾಡಿಕೊಂಡಿದ್ದರು (ಮಕ್ಕಮ. ೩೦೨).

[ರಂಗ + ತಾಲೀಮು]

**ರಂಗಪಂಚಮಿ** (ನಾ). ಫಾಲ್ಗುಣ ಕೃಷ್ಣಪಂಚಮಿಯ ದಿನ ಮತ್ತು ಅಂದಿನ ಓಕುಳಿಯ ಎರಚಾಟ : ಓಕಳಿಯಾಡುವ ಜೇಕಳಿಯಂತೆ. ಹಗಲು ಹನ್ನೆರಡು ತಿಂಗಳೂ ರಂಗಪಂಚಮಿಯನ್ನು ನೆರವೇರಿಸುವವರಂತೆ. ಒಬ್ಬ

ಒಟ್ಟಿ ಎಲೆಗಳನ್ನು . . . ಉಗಿದು ಪಿಚಿಪಿಚಿ ಉಗುಳುವ . . . ಬಗ್ಗೆ ನಾನಿಲ್ಲಿ ಬರೆಯಲು ಬಯಸುವದಿಲ್ಲ (ಸಿರಾಕ. ೦೩೯).

[←ಮರಾ. ರಂಗಪಂಚಮಿಾ]

**ರಂಗಪರಿಕರ** (ನಾ). ನಾಟಕಕ್ಕೆ ಬೇಕಾಗುವ ಬಣ್ಣ, ಭೂಷಣ, ಪರದೆ, ದೀಪ ಮೊದಲಾದ ಸಾಧನ : ಸಂಪೂರ್ಣ ರಂಗಪರಿಕರವುಳ್ಳ ಬಯಲಾಟದ ಸಂಪ್ರದಾಯ ಒಂದಾದರೆ ಅದಿಲ್ಲದಂಥ ತಾಳಮದ್ದಲೆಯ ರೂಪ ಎರಡನೆಯದು (ಯಕ್ಷಬಿ. ೦೯೩). [ಸಂ.]

**ರಂಗಪೀಠ** (ನಾ). ನೃತ್ಯ, ನಾಟಕ ಮುಂತಾದುವನ್ನು ಅಭಿನಯಿಸುವ ಸ್ಥಳ.— **ವೇದಿಕೆ** : (ಈ ಎರಡು ಬಾಗಿಲುಗಳ ನಡುವೆ ರಂಗಶೀರ್ಷ ನೇಪಥ್ಯಗಳಿಗೆ ಮಧ್ಯೆ 'ಜವನಿಕೆ' ಅಥವಾ ತೆರೆ ಇರುತ್ತಿತ್ತು). ಈ ಭಾಗದ ಮುಂದೆ ಇರುವ . . . ಭಾಗವು "ರಂಗಪೀಠ" ವೆನ್ನಿಸಿಕೊಳ್ಳುತ್ತದೆ (ಸಂವಾಲಿ. ೨೩). [ಸಂ.]

**ರಂಗಪೂಜೆ** (ನಾ). ೧. ನಾಟಕ, ನೃತ್ಯ ಮೊದಲಾದುವುಗಳನ್ನು ಪ್ರಾರಂಭಿಸುವುದಕ್ಕೆ ಮುಂಚೆ ರಂಗಕ್ಕೆ ಮಾಡುವ ಪೂಜೆ ; ರಂಗದೇವತಾಪೂಜೆ : ನಾಟಕ ಆರಂಭವಾಗುವುದಕ್ಕೆ ಮುಂಚೆ ರಂಗಪೂಜೆ ಮಾಡುವುದು ವಾಡಿಕೆ (ರೂಂ). ೨. ದೇವರ ಉತ್ಸವಮೂರ್ತಿಯನ್ನು ಕೂರಿಸಿ ಮಾಡುವ ಪೂಜೆ : ಪಡುವಕೇರಿಯ ಮಹಾದೇವರ ಸಂನಿಧಿಯಲಿ ಮಾಡಿದ ಧರ್ಮದ ವಿವರ ರುದ್ರಪೂಜೆಯಿಬ್ಬರು ದೀವಳಿಗೆಯ ಹಬ್ಬದಲಿ ರಂಗಪೂಜೆ ೧ (ಸೌಇಇ. IX-ii, ೯೯೬-೦೦ ; 1442) ; ಕಾರ್ತ್ತಿಕ ಶುಧ ೧೧ ದಿನ ದೇವಿ ಬಿಜಯಂ ಮಾಡಿದಾಗ ರಂಗಪೂಜೆಗೆ ಲ್ ೨. (ಮೈಆ. ೦೯೩೯. ೦೯-೦೩ ; 1516) ; ಸೋಣೆತಿಂಗಳಿನ ರಂಗಪೂಜೆಯಲ್ಲಿ ಒಂದು ದಿನದ ಹೂವಿನ ಪೂಜೆ ಹೆಗಡೆಯದು (ದೇವಹೂ. ೦೯೦). [ಸಂ. ರಂಗಪೂಜಾ]

**ರಂಗಭೂಮಿ** (ನಾ). ೧. ನಾಟಕ, ನೃತ್ಯ ಮೊದಲಾದುವುಗಳನ್ನು ಅಭಿನಯಿಸಿ ತೋರಿಸುವ ಸ್ಥಳ ; ರಂಗಸ್ಥಳ : ಪಾಂಡುಕಶಿಲಾತಳಮೆ ರಂಗಭೂಮಿಯಾಗೆ . . . ನಿಳಿಂಪಭಾರತಿಕರೆ ನಟ್ಟುವರಾಗೆ (ಶಾಂತಿಪು. ೦೦-೬೦ ವ) ; ರಂಗಭೂಮಿ ಎಂಬ ಕಲ್ಪನೆಯಲ್ಲಿ ನೃತ್ಯ, ಸಂಗೀತ, ನಟನೆ ಇವುಗಳಿಂದ ಮನೋರಂಜನೆ ಎಂಬ ಮಾತು ಅಡಕವಾಗಿದೆಯಷ್ಟೆ ? (ಕಾರಿದ. ೩೬೯). ೨. (ಯಾವುದಾದರೂ ಕಾರ್ಯವನ್ನು ನೆರವೇರಿಸುವ) ವೇದಿಕೆ ; ಜಗಲಿ : ರತ್ನದಿಂ ಬೆರಸಿದ ಬಣ್ಣದೊಳ್ ಮೆಚ್ಚೆಯೆ ಕಟ್ಟಿಸಿ ಘಟ್ಟಿಸಿ ರಂಗಭೂಮಿಯಂ (ಶಂಕರಾ. ೩-೯೦). ೩. ಯುದ್ಧಭೂಮಿ ; ಕಳ : ಗಂಗಾಕುಮಾರನ ಕಳಶಜನ ರಾಧಾತನೂಜನ ರಂಗಭೂಮಿಯಿದು (ಕುವ್ಯಾಕ. ೩-೨೬). [ಸಂ.]

**ರಂಗಭೂಮಿಕೆ** (ನಾ). = ರಂಗಭೂಮಿ ೧ : ಕೆದಱಿದ ಪುಷ್ಪಾವಳಿ ರಂಗದೊಳ್ ಸಮುಂಬಡೆಯೆ ರಂಗಭೂಮಿಕೆ ಪೂತೊಪ್ಪಿದಪುದು (ಶಾಂತಿಪು. ೬೦-೩೨). [ಸಂ. ರಂಗಭೂಮಿಕಾ]

**ರಂಗಭೋಗ** (ನಾ). ದೇವರ ವಿಗ್ರಹದ ಎದುರಿನಲ್ಲಿ ನೃತ್ಯ, ಸಂಗೀತ ಮೊದಲಾದುವುಗಳ ಮೂಲಕ ಸಲ್ಲಿಸುವ ಸೇವೆ, –ಉಪಚಾರ : ಸಂಕ್ರಾನ್ತಿನಿಮಿತ್ತವಾಗೆ ದೇವರಂಗಭೋಗಕ್ಕಂ ರಂಗಭೋಗಕ್ಕಂ . . . ಕಂಬುಮುಡುವುಮಂ . . . ಕೊಟ್ಟರ್ (ಕಇಅ. ೨೨-೬-೩೨ : 1083) ; ಮಾಳ್ಕೇಶ್ವರದೇವರ ನಿತ್ಯಪೂಜೆ ಪಳ್ಳಿಪರ್ಬ್ಬ ಅಜ್ಜಭೋಗ ರಜ್ಜಭೋಗ ಖಣ್ಡಸ್ಫುಟಿತಜೀರ್ಣ್ಣೋದ್ಧಾರಕಂ . . . ಬಿಟ್ಟ ದತ್ತಿ (ಎಕ. XII ತಿಪಟೂ. ೧೨೩-೯೩ ; 1286). 'ಅಂಗಭೋಗ' ಪರಾ. [ಸಂ.]

**ರಂಗಮಂಟಪ** (ನಾ). ೧. = ರಂಗಭೂಮಿ ೧ : ರಂಗಮಂಟಪ, ಸಭಾಗೃಹ, ನೇಪಥ್ಯಸಂಬಂಧವಾದ ಎಲ್ಲ ವಿಷಯಗಳಲ್ಲೂ ಆಗಿನ ದಿವಸಗಳಲ್ಲಿ ಪಕ್ವವಾದ ಅಭಿಪ್ರಾಯಗಳಿದ್ದಂತೆ ಕಾಣುವುದು (ಬಾಲಕೃ. III, ೦೨೯೯) ; ಶಾಲೆಯ ಬಾಗಿಲಿಗೂ ರಂಗಮಂಟಪಕ್ಕೂ ತಳಿರುತೋರಣಗಳನು ಕಟ್ಟಿದರು (೯ಕಥ. ೩-೯೦). ೨. = ರಂಗಭೂಮಿ ೨ : ತಿರುವೆಂಗಳನಾಥಗೆ ಕಟಿಸಿದ ರಂಗಮಂಟಪ (ಮೈಆ. ೦೯೩೯, ೯-೦೦ ; 1465).

[ರಂಗ + ಮಂಟಪ]

**ರಂಗಮಂಡಪ** (ನಾ). = ರಂಗಭೂಮಿ ೧ : ವಿಮಾನ, ಅರ್ಧಮಂಡಪ, ಮಂಡಪ ಮತ್ತು ತೆರೆದಿರುವ ರಂಗಮಂಡಪಗಳು ಮೊದಲು ಕಂಡು ಬರುತ್ತವೆ (ಹೊಯ್ಸಳಾ. ೦೦). [ಸಂ.]

**ರಂಗಮಹಲು** (ನಾ). ಭೋಗವಿಲಾಸವನ್ನು ನಡೆಸುವ ಸ್ಥಳ : ವಿಲಾಸ ಮಂದಿರ : ಅವನು ಅಲ್ಲಿಂದ ಜಾಗ್ರತೆಯಾಗಿ ಹಿಂದಿರುಗಿ ರಂಗಮಹಲಿನಲ್ಲಿ ರಾಣಿಯ ಬಳಿಗೆ ಬಂದನು (ಝಾಂಶಿ. ೬೦).

[ ← ಪಾರ. ಮರಾ. ರಂಗಮಹಾಲ್; ಹಿಂ. ರಂಗಮಹಲ್ ]

**ರಂಗವಲಿ**, ರಂಗವಾಲಿ, ರಂಗವಾಲೆ, ರಂಗಾವಲಿ, ರಂಗೋಲಿ, ರಂಗೋಲೆ (ನಾ). ನೆಲದ ಮೇಲೆ ಬರೆಯುವ ಹಸೆ ಮುಂತಾದ ಅಲಂಕಾರ ಮತ್ತು ಅದಕ್ಕೆ ಬಳಸುವ ಅಕ್ಕಿಹಿಟ್ಟು, ಬಿಳಿಯ ಕಲ್ಲಿನ ಪುಡಿ, ಬಣ್ಣದ ಪುಡಿ ಮೊದಲಾದುವು : "ಪೂವಲಿಯೆನುತಂ ಧರೆಯೊಳ್ ಭಾವಿಸೆ ತಾಂ ರಂಗವಲಿಗೆ ನಾಮಂ" (ಶಬ್ದಮ. ೦೬೬) ; ಕತ್ತುರಿಯ ಸಗಣನೀರ್ ಬಿಡುಮುತ್ತಿನ ರಂಗವಲಿ ಮಿಳ್ರ್ವ ದುಗುಲದ ಗುಡಿ . . . ಮನೆಗಳೊಳೆಲ್ಲಂ (ಶಂಕಥಾ. ೩-೨) ; ಮೆಚ್ಚಿದ ರಂಗವಲಿ ದಿವ್ಯಪರಿಮಳವೆರೆದಿಹ ಪನ್ನೀರ ಚಳೆಯ (ಕಂಪವಿ. ೨೨-೬೩). **ರಂಗವಾಲಿ** : "ಗೃಹಲಕ್ಷಣಮೆನಿಪ್ಪ ಬಂಧು ರಂಗವಾಲಿಯಕ್ಕು" (ಮಂಗರಾ. ೬೦-೦೯) ; ಕುಂಕುಮದ ಕಾರಣೆಯಿಂ ಕರ್ಪೂರದ ರಂಗವಾಲಿಯಿಂ . . . ಅಲಂಕರಿಸಿದ ಮಕರಧ್ವಜ ಮಂಟಪವು (ನಂಬಿರ. ೦೦-೩೯) ; ಗಂಧಗಜದಾನಜಲಂಗಳಿನಾದ ಪಂಕದೊಳ್ ವೇಗಿಗಳಪ್ಪ ವಾಜಿಗಳ ಫೇನಲವಂಗಳವಲ್ಲಿಗಿಲ್ಲಿಗಿಂಬಾಗಿಯೆ ಬೀಟ್ ಪೋಲ್ತು ದದು ಪದಕದೊಳಿಕ್ಕಿದ ರಂಗವಾಲಿಯಂ (ಜಾರಪು. ೮-೦೯೯). **ರಂಗವಾಲೆ** : ರಂಗವಾಲೆ ಎಂದರಂಗವಿಸದಯ್ಯಾ ಎನ್ನ ಮನವು (ಬಸಹ. ೦೦೬-೩೩೨) ; ರಂಗವಾಲೆ ಹಿಟ್ಟಿನಾರತಿಗೆ ವೋಲಗ ನಾಲ್ಕಕ್ಕಂ ಗದ್ಯಾಣಂ ಹದಿನಾಱು (ಎಕ. III ತಿರುಮ. ೯೬-೯೩ ; 1276) ; ಮಠಗಳಲಿಕ್ಕುತಿಹ ರಂಗವಾಲೆಯ ಸಾಸಿ ದೇವಿಯರ್ಬಂದರಾನಂದದಿಂದ (ಮದೇಪು. ೨೯-೨೩). **ರಂಗಾವಲಿ** : ಲಲಿತಮೌಕ್ತಿಕಮಣಿಗಣಶ್ರೀಕಲಿತರಂಗಾವಲಿಯ ತೊಳಗುವ ಜಾಗದೊಳಿಗಳ (ಶಷತ. ೯-೦೦೩). **ರಂಗೋಲಿ** : ಚಿನ್ನದ ನೇಸರುಕೋಲ್ಗದಿರಿಂ ಚೆಂಬಿಸಿಲಿನ ರಂಗೋಲಿಯನೆಸೆದಿತ್ತು (ಶಾಶ್ವೆ. ೨೬-೬) ; ಗೋಬೆಯಾಟ, ಹಾಡುವುದು, ಕಥೆ ಹೇಳುವುದು–ಕೇಳುವುದು ಮತ್ತು ರಂಗೋಲಿ ಹಾಕುವುದು–ಇವೇ ಆ ನಾದಗಳು (ಸ್ವಾತಿ. ೯೦). **ರಂಗೋಲೆ** : ಅಂಗಳದೊಳಗೆ ರಂಗೋಲೆ ಹಾಕುವಾಗ ಶೃಂಗಾರದಂಗದ . . . ಹೆಂಗಳ ವ್ರತವನು ಭಂಗಮಾಡಿದ ಶ್ರೀರಂಗನೆಂಬವನು (ಪುರಂದ. ೦-೬೩-೨) ; ಅಂಗಳ ತುಂಬಾ ಅವಳು ಬಗೆಬಗೆಯ ರಂಗೋಲೆಗಳನ್ನು ಬಳೆದಿದ್ದಳು (ಹಾಕುತ. ೯೯).

**ರಂಗವಾಲೆಯ ನಿಯೋಗ**=ರಂಗೋಲೆಯನ್ನು ಹಾಕಲು ನೇಮಿಸಿದ ಸೇವಕವರ್ಗ : ಪಾಯಸ ಪಕ್ವಾನ್ನದಡಿಗೆಗೂಡಿದ ರಂಗವಾಲೆಯ ನಿಯೋಗಕ್ಕೆ ಜೀವಿತಗದ್ಯಾಣವೆರಡು (ಎಕ. XII, ಶಿಗ್ರಾ. ೨-೨೦ ; 1261).

[ < ಸಂ. ರಂಗವಲ್ಲೀ. / ತಮಿ. ರಜ್ಜವಲ್ಲಿ ; ತೆಲು. ರಂಗವಲ್ಲಿ. / ಮರಾ. ರಾಂಗವಳೀ, ರಾಂಗೋಳೀ ]

**ರಂಗವಲ್ಲಿ** (ನಾ). = ರಂಗವಲಿ : ಅರಸರಾ ಬರ್ಪ ಬಟ್ಟೆಯೊಳೆಲ್ಲಂ ಪಂಚರತ್ನಂಗಳಿಂ ರಂಗವಲ್ಲಿಯನಿಕ್ಕಿ ನೇತ್ರವಟ್ಟು ದುಕೂಲ ಚೀನಾದಿ ದಿವ್ಯವಸ್ತ್ರಂಗಳಂ ಪಾಸಿ (ವಡ್ಡಾರಾ. ೨೬-೨) ; ತಟ್ಟು ಕಟ್ಟಿದ ಗುಡಿ ರಂಗವಲ್ಲಿಗಳೆದಾಂಗುಡಿಯಂತಿರೆ . . . ಪೊಕ್ಕನಂದು ನಿಜಮಂದಿರಮಂ ಪರಸೈನ್ಯಭೈರವಂ (ಶಂಕರಾ. ೩-೦೦೩) : ಬೀದಿಗಳಂ ಗಂಧೋದಕದಿಂ ಸಾರಣೆಗೆಯ್ದು ರಂಗವಲ್ಲಿಗಳನಿಟ್ಟು (ಅದ್ಭುತ. ೦೦-೨೩). [ ಸಂ. ರಂಗವಲ್ಲೀ ]

**ರಂಗವಳಿ** (ನಾ). (?) : "ರಂಗವಳಿಗಳೆನೆ ಪಿರಿದುಮಪಂಗಾಯ್ತರೆನಲ್ಕ ಡಂಗಕಾಜರೊಳಪ್ಪರ್" (ಕಣಾಶಿ. ೨೪). [ ? ]

**ರಂಗವಾಲಿ** 'ರಂಗವಲಿ' ನೋ.

**ರಂಗವಾಲೆ** 'ರಂಗವಲಿ' ನೋ.

**ರಂಗಶಿಲ್ಪಿ** (ನಾ). ನಾಟಕರಂಗವನ್ನು ಸಜ್ಜುಗೊಳಿಸುವವನು,– ಸಿದ್ಧಗೊಳಿಸುವವನು : ಬಹಿರಂಗಪ್ರದರ್ಶನ ಮತ್ತು ನಟರುಗಳಿಲ್ಲದಿದ್ದರೂ ರುದ್ರಪ್ರಭಾವವು ಸಾಧ್ಯ. ಅದೂ ಅಲ್ಲದೆ, ದೃಶ್ಯದ ರಚನೆಯು ಕವಿಗಿಂತಲೂ ಹೆಚ್ಚಾಗಿ ರಂಗಶಿಲ್ಪಿಯ ಕೆಲಸ (ಅರಿಕಾ. ೭೮). [ ಸಂ. ರಂಗಶಿಲ್ಪಿನ್ ]

**ರಂಗಶೀರ್ಷ** (ನಾ). ಪ್ರಾಚೀನ ರಂಗಸ್ಥಳದಲ್ಲಿ ನಟರು ಅಭಿನಯಿಸಲು ಉಪಯೋಗಿಸುತ್ತಿದ್ದ ವೇದಿಕೆ : "ನಾಟ್ಯರಂಗ" : ಇದರಲ್ಲಿ ೮ × ೩೨ ಹಸ್ತಗಳ ಅಳತೆಯಲ್ಲಿ ಎರಡು ಭಾಗಗಳಿದ್ದು ಹಿಂದಿನ ಭಾಗವು ಜಗಲಿಯ ಹಾಗೆ ಸುಮಾರು ಒಂದು ಮೊಳ ಎತ್ತರವಾಗಿರುತ್ತದೆ; ಇದಕ್ಕೆ "ರಂಗಶೀರ್ಷ" ವೆಂದು ಹೆಸರು (ಸಂನಾಟ. ೨೩). [ಸಂ.]

**ರಂಗಸಜ್ಜಿಕೆ** (ನಾ). ೧. ನಾಟಕದ ಅಭ್ಯಾಸ ; ರಂಗತಾಲೀಮು : ಗೋಖಲೆಯವರು . . . ಏಕಾಂತಸ್ಥಳದಲ್ಲಿ ತಮ್ಮ ಭಾಷಣಗಳ ಸಾಭಿನಯವಾದ 'ರಂಗಸಜ್ಜಿಕೆ' ಮಾಡುತ್ತಿದ್ದರಂತೆ (ಕಥಳ. ೭೩). ೨. = ರಂಗಪರಿಕರ : ಈಚೆಗೆ ನಾಟಕಗಳ ರಂಗಸಜ್ಜಿಕೆ ತುಂಬಾ ಅಚ್ಚುಕಟ್ಟಾಗಿರುತ್ತದೆ (ರೂಢಿ). [ ರಂಗ + ಸಜ್ಜಿಕೆ$_1$ ]

**ರಂಗಸಾಮಗ್ರಿ** (ನಾ). = ರಂಗಪರಿಕರ : ಇದರಲ್ಲಿ ಪರದೆಗಳು, ವೇಷಭೂಷಣಗಳೇ ಮೊದಲಾದ ರಂಗಸಾಮಗ್ರಿ, ದೃಶ್ಯೋಪಕರಣಗಳೆಲ್ಲವೂ ಸೇರಿವೆ (ಅಂನಾ. ೭೯ ಅ೨೮). [ಸಂ.]

**ರಂಗಸಾಲೆ** (ನಾ). ನಾಟಕರಂಗ ; ನಾಟ್ಯವೇದಿಕೆ : ನಾನು ಬಡವಿ ಆತ ಬಡವ . . . ಹತ್ತಿರಿರಲಿ ದೂರವಿರಲಿ ಅವನೆ ರಂಗಸಾಲೆ (ನಾದೀ. ೩೯-೬). [ ರಂಗ + ಸಾಲೆ$_4$ ]

**ರಂಗಸಿದ್ಧತೆ** (ನಾ). ನೃತ್ಯ, ನಾಟಕ ಮುಂತಾದುವಕ್ಕೆ ಅಗತ್ಯವಾದ ಪರಿಕರಗಳನ್ನು ಸಿದ್ಧಪಡಿಸುವುದು : ದೇವತೆಗಳು ಏನೋ ಒಂದು ಮಹತ್ಕಾರ್ಯಕ್ಕೆ ರಂಗಸಿದ್ಧತೆ ಮಾಡುತ್ತಿರುವಂತಿದೆ (ಶಿಕಂಬಾ. ೬). [ಸಂ. ರಂಗಸಿದ್ಧತಾ ]

**ರಂಗಸ್ಥಲ**, ರಂಗಸ್ಥಳ (ನಾ). ೧. = ರಂಗಭೂಮಿ ೧ : ನಟರಿಗಾಗಿ ಒಂದು ಎತ್ತರದ ರಂಗಸ್ಥಲ, ಶ್ರೋತೃಗಳಿಗಾಗಿ ನೆಲ (ಬಾರಿದ. ೩೭೩). **ರಂಗಸ್ಥಳ** : ೧. ರಂಗಸ್ಥಳದ ಮೇಲೆ ದೊಡ್ಡದೊಂದು ರತ್ನಗಂಬಳಿ ಹಾಸಿತ್ತು (ಕಾರಿಮ. ೧೨೦). ೨. ವೇದಿಕೆ, ಜಗಲಿ: ಮೂಡುವನು ರವಿ . . . ಮೂಡಣ ರಂಗಸ್ಥಳದಲಿ ನೆತ್ತರು ಮಾಡುವನು (ಕಪಕ್ಕ. ೩-೦). [ಸಂ.]

**ರಂಗಸ್ಥಳ** 'ರಂಗಸ್ಥಲ' ನೋ.

**ರಂಗಳಿಸು** (ಕ್ರಿ). ೧. ನೀರು, ಹಾಲು, ಜೇನುತುಪ್ಪ ಮೊದಲಾದುವುಗಳಲ್ಲಿ ಔಷಧಿಯ ಪುಡಿಯನ್ನು ಕದಡು : ಇವುಗಳ ಅರೆದು ಹಾಲಿನಿಂದ ರಂಗಳಿಸಿ . . . ಬೆಳಗ್ಗೆ ತೆಗೆದುಕೊಳ್ಳುವದು (ಕಾಪುಣ. ೨೬೬) ; ಆ ಹಾಲಿಗೆ ಈ ಪುಡಿಯನ್ನು ಸೇರಿಸಿ ರಂಗಳಿಸಿ ಕೈಯಲ್ಲೆತ್ತಿಕೊಂಡಳು (ಕುಸುಸಂ. ೨೯೬). ೨. ಅಂಗೈಯಲ್ಲಿ ಯಾವುದಾದರೂ ಸಣ್ಣ ವಸ್ತುವನ್ನು ಇಟ್ಟು ಪೂಳಪು ಬರುವಂತೆ ಬೆರಳುಗಳಿಂದ ತಿಕ್ಕು : (ಕ). ೩. (ಆಲಂ) ನಾಶಮಾಡು : ಕಂಗಳಲಿ ಕಿಡಿಸೂಸಿ ಕರಿಬಳ ಮುಂಗಡೆಯ ಶಿವಭಟರ ಗಡೆಯಿಂದ ರಂಗಳಿಸಿ ಸಂಗರದೊಳೆಸಗುತ . . . ಐತರೆ (ಅಂದಶಾ. ೨೯-೨೦). [ ? + — ಇಸು$_3$./ತುಲು. ರಂಗಲಿಂಚು, ರಂಗರಿಂಚು ]

**ರಂಗಾಜೀವ** (ನಾ). ೧. ಬಣ್ಣದ ವೃತ್ತಿಯಿಂದ ಜೀವಿಸುವವನು ; ಬಣ್ಣಗಾರ ; ಚಿತ್ರಕಾರ : "ರಂಗಾಜೀವಃ, ಚಿತ್ರಕೃತ್ — ಈ ೨ ವ್ಯಾಖ್ಯೆಗಾಚಿಂ [ಬಣ್ಣಗಾಚಿಂ, ಚಿತ್ರಕಾರಂ]" (ಹಿಹಾಯು. ೯೬-೪೩೬). ೨. ರಂಗಭೂಮಿಯ ಮೇಲೆ ನಟನೆಮಾಡಿ ಜೀವಿಸುವವನು : ನಟ. [ಸಂ.]

**ರಂಗಾಣಿ** (ನಾ). ಚಿಕ್ಕಮಕ್ಕಳ ಒಂದು ಬಗೆಯ ಆಟಿಕೆ ; ಗಿಲಿಕೆ : ಆಳು ಮಗುವಿನ ಬೆಳ್ಳಿಯ ರಂಗಾಣಿಯನ್ನು ಕೈಯಲ್ಲಿ ಹಿಡಿದುಕೊಂಡು ಇಂದಕ್ಕನ ಬಳಿ ಬಂದ (ಸಂಶಕ್ರ. ೧೨೬). [← ತುಳು. ರಂಗಾನಿ, ರಂಗಣಿ]

**ರಂಗಾರಿ**, ರಂಗಾರೆ (ನಾ). ಬಣ್ಣದ ಕೆಲಸ ಮಾಡುವವನು; ಬಣ್ಣಗಾರ : ನಾನಾಬಗೆಯ ಕೈಮಾರಿ ಶಿಲ್ಪಿಗರು ರಂಗಾರಿ ಚಿತ್ರಿಗರು (ಕರಾಮಾ. ೨೬-೪೬) ; ರಂಗಾರಿಗಳು ಮುಂಡಾಸ, ಶಲ್ಲೆ, ಧಡಿಕೆ ಮುಂತಾದ ಬಿಳಿವಸ್ತ್ರಕ್ಕೆ ಬಣ್ಣ ಕೊಡುವರು (ಕಭಾಗ. ೧೩೩). **ರಂಗಾರೆ** : ರಂಗುಹಾಕುವವನು ; ಬಣ್ಣಗಾರ ; ರಂಗಾರೆ (Dyer. ೩೦೮೩). [ ← ಹಿಂ. ರಂಗಾರಾ ; ಮರಾ. ರಂಗಾರೀ./ಸಂ. ರಂಗಕಾರ ]

**ರಂಗಾರೆ** 'ರಂಗಾರಿ' ನೋ.

**ರಂಗಾವಲಿ** 'ರಂಗವಲಿ' ನೋ.

**ರಂಗಿಗ** (ನಾ). ಬಣ್ಣಗಾರ : ಸ್ಫಟಿಕದ ಘಟದೊಳಗಿದ್ದ ಬಹುರಂಗಿಗರಂತೆ ಎನ್ನಂಗವಾಯ ನೀನಾಗಿ ಹಿಂಗಲೇಕೆ (ಮೋಕ್ಷಮಾ. ೧೯-೩೨). [ರಂಗು + — ಇಗ]

**ರಂಗಿಣಿ** (ನಾ). ೧. ಒಂದು ಬಗೆಯ ಗಿಡ; ನೀಲಿಗಿಡ : "ನೀಲಿ ರಂಗಿಣಿಯಕ್ಕ್ಯ" (ಮಂಗರಾ. ೩೯-೨೯). ೨. ಒಂದು ಬಗೆಯ ಮುಳ್ಳುಗಿಡ; "ಮಹಾಶತಾವರೀ" (ಶಂಬಕ. ೨೩೪). [ಸಂ. ರಂಗಿಣೀ]

**ರಂಗಿಸು** (ಕ್ರಿ). ೧. ಬಣ್ಣಕೊಡು : ರಂಗುಗೊಳಿಸು : ಏಕಾವಳಿಯ ಮುತ್ತಿನೊಳುವೆಳಗು ಬೆಳುದಿಂಗಳ ರಂಗಿಸಲು ಶೃಂಗಾರನಿಧಿ ಸೌಂದರೇಂದ್ರಂ . . . ನಡೆತಂದನು (ಸೌಂದಪು. ೮-೬೩). ೨. ಕೆಂಪುಬಣ್ಣದಿಂದ ಕೂಡಿರು; ಕೆಂಪಾಗಿರು : ತೆಂಗಿನಕಾಯ ತೋರದ ಮೊಲೆವೊತ್ತ ಲತಾಂಗಿಯ ಬಂದುಗೆವಾಯ್ ರಂಗಿಪ ಚುಂಬಟಿಯಿನಿದೆನೆ ಮೋಹತರಂಗಿಣಿವೇಳ್ಕೆ (ಮೋಹತ. ೦-೩೭). ೩. ಹೊಳೆ ; ಪ್ರಕಾಶಿಸು : ರಂಗಿಸುವನರ್ಘ್ಯರತ್ನದ ಮಾಪುಗೆಯ ತೊಟ್ಟು (ರಂಗಕ. ೩೭-೨೩). ೪. ಉತ್ಸಾಹಗೊಳ್ಳು; ಉಬ್ಬು: ರಂಗಿಸಿದಂ, ರಾಗಿಸಿದಂ, ಭೋಗಿಸಿದಂ (ಕವಂತ. ೭೪ ಪ್ರಯೋ) ; ರಂಗಿಸುತ ಮೊನೆಗಾಣಿಸುತ್ತಂ ಸಂಗಡಿಗರಂ ಹಿಂಗಿಸುತ ತನ್ನಂಗವಂ ತಾನೇಜಲಿಳಿಯಲು ನೋಡುತಾಡುತ್ತ (ಬಸವು. ೨೬-೧೨). ೫. ಉದ್ವೇಗಗೊಳ್ಳು : (ಕ). ೬. ಕರಗು; ದ್ರವಿಸು : ತಿಂಗಳ ಬೆಳಗು ಸೋಂಕಲು ಕೂಡೆ ಶಶಿಕಾಂತ ರಂಗಿಸುವಂತೆವ್ಲ್ಮ ನೃಪನ ಕಂಗಳ ಪ್ರಭೆ ತಾಗಲೊಡನೆ ಕಾಂತೆಯರಂತರಂಗ ಪೊಸರುವುದು (ಶಿಕಶ. ೬-೪೬). [ರಂಗು + — ಇಸು$_1$]

**ರಂಗು** (ನಾ). ೧. ಬಣ್ಣ; ವರ್ಣ : "ರಂಗು — ರಂಗ = ಬಣ್ಣ" (ಕದ್ಯಕೋ. ೩೭) ; ನಸುಬಿರಿವ ಕುಸುಮಕೆ ಸುಗಂಧ ರನ್ನಕೆ ರಂಗು ದೊರಕೊಂಡ ಮಾಳ್ಕೆಯಿಂ ಪಸರಿಸಿಮಾದೆಳೆವಪ್ಪ್ನ (ಸೌಂದಪು. ೭-೨) ; ಪೊಂಗೆ ಪೊಸಮಿಸುಗು ರನ್ನಕೆ ರಂಗು ಸುಧಾರುಚಿಗೆ ಜೊನ್ನವುಮಿನಾಭಾವಂ ಸಂಗಳಿಸಿಮಿಸುಪ ತೆಜದಿಂ ಕಂಗೊಳಿಪುದು ಭಕ್ತಿ (ವೃಷಶ. ೩-೬೯) ; ಗುಲಾಬಿಯ ರಂಗು ಮೂಡುವೆಣ್ಣಿನ ಕೆನ್ನೆಗಳಲರಳಿ ಕೆಂಪೇರೆ (ಕತ್ರಾಂಗ. ೩೬-೦೩೪೦). ೨. ಕೆಂಪುಬಣ್ಣ: 'ರಂಗುದುಟಿ' ಪರಾ. ೩. ಶೋಭೆ ; ಕಾಂತಿ ; ಕಳೆ : "ಒಜಿಪಿನೊಳ್ ಕಾಂತಿಯೊಳ್ ರಮ್ಯದೊಳ್ ರಂಗೆನಿಕು" (ಕಬ್ಬಸುಂ. ೬೯). 'ರಂಗುಮಾಣಿಕ', 'ರಂಗುಮಹೆ' ಪರಾ. ೪. ಆವೇಶ ; ಉದ್ರೇಕ ; ಆವೇಗ : ಒಗ್ಗಾಲಿಯು . . . ರಂಗಿನಲ್ಲಿ ಮಾತಾಡುತ್ತಿದ್ದ (ಸಂಬಹು. ೦೯). ೫. ಸಡಗರ ; ಉತ್ಸಾಹ : ತುಂಗಘಣಿಶಿಬಿರಂಗಳಲಿ ದಿವಿಜಾಂಗನಾಜನ ಹೇಮಕೃತಪೀಠಂಗಳಲಿ ಕುಳ್ಳಿರ್ದ ನವರಸಮೊಗಲು ವೀಣೆಗಳಾ ರಂಗುರಕ್ತಿಗಳಿಂದ ಬಾಜಿಪ ಸಿಂಗರದ ಶಿಲೆ ಕರಗಿ ವಿವಿಧ ಮುಖಂಗಳಲಿ ರ್ಝರಿಯಾಗಿ ಸುರಿವುತಲಿರ್ಪವೆಲ್ಲೆಡೆಯು (ಅಶಂಡ. ೦-೨-೯).

'ರಂಗುಗೊಳಿಸು' ಪರಾ. ೬. (ನಾಟಕ, ಗಾಯನ, ನೃತ್ಯ ಮೊದಲಾದುವುಗಳಂಥ) ಮನರಂಜನೆಯ ಒಂದು ಪ್ರಕಾರ: ರಾಜರು ಸಂಗೀತ, ಸಾಹಿತ್ಯ, ನಾಚು, ರಂಗು ಮುಂತಾದುವುಗಳಲ್ಲಿಯೇ ಆಸಕ್ತರಾಗಿದ್ದರು (ಒಡೆ. ೫೫); ದಿನಂಪ್ರತಿ ನಾಚು, ರಂಗು . . . ಅನೇಕ ಸಮಾರಂಭಗಳು ನಡದೇ ಇದ್ದವು (ಮುಂಬಾಳೆ. ೧೯೦). ೭. ಲಾವಣಿಯಲ್ಲಿ ಒಂದು ಬಗೆ: 'ರಂಗು' ಎಂದು ಹೆಸರಾದ ಶೃಂಗಾರಪದಗಳು ಇನ್ನೊಂದು ಜಾತಿ:—ಲಾವಣಿಗಳಲ್ಲೆಲ್ಲ ಇದೇ ಬಹಳ ಸ್ವಾರಸ್ಯವಾದುದು . . . ಈ ರಂಗುಲಾವಣಿಗಳು ಬಹುಶಃ ತಮಿಳಿನ ಕಡೆಯಿಂದ ಬಂದವುಗಳ ಸಂತಾನವಿರಬಹುದು (ಕರ್ನಾಟಕಸಂ. ೩೯).

**ರಂಗಾಗು** = ೧. ಬಣ್ಣವೇರು: ಕಾಂತಿಯಿಂದ ಕೂಡು: ಕುಣಿಯುವ ಕಣ್ಣ ನೋಟ, ಯಾವಾಗಲೂ ರಂಗಾಗಿರುತ್ತಿದ್ದ ಆ ತುಟಿ ಎಲ್ಲಾ – ಅವನ . . . ಉತ್ತರವನ್ನು ನಿರೀಕ್ಷಿಸಿಯೇ ಇರುತ್ತವೆ (ಪತಿತ. II. ೯೦೯). ೨. ಉತ್ಸಾಹಪಡು: ಕವಿಯ ವಿಷಯವಾಗಿ ಅವಳು ರಂಗಾಗಿ ಮಾತನಾಡುತ್ತಿದ್ದಳು (ಅಂಕು. ೧೩೯). **ರಂಗಿನ ನುಡಿ** = (ಅಲಂ) ಬಣ್ಣದ ಮಾತು; ಬಿನ್ನಾಣದ ನುಡಿ: ನೀನು ಹನುಮಣ್ಣನ ರಂಗಿನ ನುಡಿಗಳಿಗೆ ಮನಸೋತು ನಿನ್ನ ಆತ್ಮವನ್ನು ಅವನಿಗೆ ಮಾರಿಕೊಂಡೆ (ಜಾಹುತ್ತ. ೨೯).

[← ಪಾರ. ಹಿಂ. ಮರಾ. ರಂಗ್./ಸಂ. ರಂಗ]

**ರಂಗುಗೊಳಿಸು** (ಕ್ರಿ). ಉತ್ತೇಜನ ನೀಡು; ಹುರುಪುಗೊಳಿಸು: ಕೆಲಬರ ನಪಲಾಪಿಸಿ ಕೆಲವರಂ ಚತುರಂಗದಾಟದೊಳ್ ರಂಗುಗೊಳಿಸಿ (ಶ್ರೀಗಂಧ. ೬-೧). [ರಂಗು + ಕೊಳ್$_1$ + – ಇಸು$_3$]

**ರಂಗುದುಟಿ** (ನಾ). ಕೆಂಪುಬಣ್ಣದ ತುಟಿ; ಚೆಂದುಟಿ: ರಂಗುದುಟಿ ಸೆಳ್ಳುಗುರು ಬಳಲ್ನಡು ನಾಡೆ ನಳಿತೋಳು (ಶಬ್ದಮಂ. ೧೧೯); ಪೊಂಗೊಡ ಮೊಲೆಗಳ ನೋಡುವನಪ್ಪವ ರಂಗುದುಟಿಯ ಕಚ್ಚಿ ಪೀರ್ವ (ಶರಕ. ೪೧-೬೯); ರತ್ನದಂತೆ ಬೆಳಗುವ ರಂಗುದುಟಿಯು . . . ರವಿಕೋಟಿಪ್ರಭೆಯಂತೆ ರಾಜಿಸುವ ರಾಜಾಧಿರಾಜ ನಮ್ಮ ಅಖಂಡೇಶ್ವರನು (ಅಖಂಡೇ. ೨೬೨-೨೫).

[ರಂಗು + ತುಟಿ]

**ರಂಗುಬಾಟಿ**[3] (ನಾ). ಕೆಂಪುಬಣ್ಣದ ಬಾಳೆ; ಚಂದ್ರಬಾಳೆ: ಪಣ್ಣಪೊಂಬಾಟಿ[1]ಯ ಚೆಂಬಾಟಿ[3]ಯ ರಂಗುಬಾಟಿ[3]ಯ ತೋಟಂ (ಚಾಮಾಕ್ಯ. ೧೧೧-೨೯). [ರಂಗು + ಬಾಟಿ[3]]

**ರಂಗುಮಾಣಿಕ** (ನಾ). ಪ್ರಕಾಶಮಾನವಾದ ಕೆಂಪುಹರಳು, — ಮಾಣಿಕ್ಯ: ಮಂಗಳಂ ಜಯಮಂಗಳಂ . . . ಗಂಗೆಯ ಪಡೆದ ಶ್ರೀರಂಗನಿಗೆ ರಂಗುಮಾಣಿಕದುಂಗುರದವಗೆ (ಪುರಂದ. ೪-೨೦೪-೨); ಗಗನಮಣಿ ಪಶ್ಚಿಮಾಂಗನೆಯ ಚೈತಲೆಯ ರಂಗುಮಾಣಿಕದಂತೆ ಕಣ್ಗೆ ಕಾಣಿಸುತಿರ್ದುದಸ್ತಗಿರಿಮಸ್ತಕದೊಳು (ಕೃಷ್ಣಾಭ್ಯು. ೬-೪೫).

**ರಂಗುಮಾಣಿಕದಂಬುಲ** = ಮಾಣಿಕ್ಯದಂತೆ ಕೆಂಪಾದ ತಂಬುಲ: ಚುಂಬನಗೊಟ್ಟು ಚುಂಬಿಸಿ ರಂಗುಮಾಣಿಕದಂಬುಲವಿತ್ತು ಮುದ್ದಿಸಿದ (ಸೋಡಶ. ೩೩-೪೯). [ರಂಗು + ಮಾಣಿಕ]

**ರಂಗುವಡೆ** (ಕ್ರಿ). ಕಾಂತಿಯನ್ನು ಹೊಂದು; ಬಣ್ಣವೇರು: ಸಡಗರಿಸಿದರು ಬಾಣಜೆಯ ಹರ್ಮ್ಯದಿ ರಂಗುವಡೆದ ಮಾಣಿಕ್ಯಮೊಯ್ಲಳಗು ಸೊಡರಿನೇಳ್ಗೆಯ ಹೊನ್ನ ಕಳಸಂಗಳಾಕಾಶದೆಡೆಯಲ್ಲಿ ಜಗಜಗಿಪಂತೆ (ಸೋಡಶ. ೪೦-೬); ರಂಗುವಡೆದ ಪವಳದ ತೋರಣದ ಕಾಂತಿ ಕಂಗೊಳಿಸುವ ಬೀದಿಯಲಿ (ಕಂಪಿಲಿ. ೨೦-೧೭). [ರಂಗು + ಪಡೆ$_1$]

**ರಂಗುವಾಲ** (ನಾ). ಒಂದು ಬಗೆಯ ಗಿಡ; ಅರುಟಾಳ: "ಅರಿಷ್ಟಃ. ಫೇನಿಲಃ – ೨ ರಂಗುವಾಲದ ಗಿಡ" (ಸಿದ್ಧಾಂತಿ. ೦೦೯). [ ? ]

**ರಂಗುವಿಡಿ** (ಕ್ರಿ). ಕೆಂಪುಬಣ್ಣವನ್ನು ಹೊಂದು; ಕೆಂಪಾಗು: ಶೃಂಗಾರಶಾಲಿಯ ಕೋಮಲಗರ್ಭದ ರಂಗುವಿಡಿದ ಮೊತ್ತದಂತೆ ಜಂಘೆಗಳಿಂದ ರಾಜಿಸುವನಾರೀತನ ಸಂಗಕೆಳಸಿತೆನ್ನ ಮನವು (ಕಂಪಿಲಿ. ೯-೦೦೬).

[ರಂಗು + ಹಿಡಿ$_1$]

**ರಂಗುವೆಱು** (ಕ್ರಿ). ಕಾಂತಿಯನ್ನು ಪಡೆ; ಶೋಭಿಸು: ರಂಗ ನಿನ್ನಯ ಪೊಡೆ ಕಣ್ಗಳ ಮಂಗಳ ಸಿಂಗಾರ ತ್ರೈಜಗತ್ತಿಂಗೆ ರಂಗುವೆತ್ತಾಳ್ವನೆಯೆನಲದು ಎನ್ನಂತರಂಗದೊಳಾವಗಮಿರ್ಕೆ (ಕಕಗಾಂ. ೨-೬). [ರಂಗು + ಪೆಱು$_1$]

**ರಂಗೇರು** (ಕ್ರಿ). ೧. ಬಣ್ಣವೇರು; ರಂಗಾಗು: ಇಗೊ ಸಂಜೆ. ಸವಿ. ಚೆಂಬೊಗರಿಂ ರಂಗೇರಿಹ ಜಲದಾಬ್ಜಮುಖಿ . . . ಶಿಶುಚಂದ್ರನ ನಗೆ ನಗುವಳು (ಗಡೀಕ. ೩೦-೨); ಅವನಿಗೆ ಇದ್ದಕ್ಕಿದ್ದಂತೆ ಮುಖ ರಂಗೇರಿತು (ಅಂಕು. ೭೯). ೨. ಕಳೆಗಟ್ಟು: ರಂಜಿಸು: ಹೆಚ್ಚು ಜನ ಇದ್ದರೂ ಆಟ ರಂಗೇರುತ್ತದೆ (ಸಂಕೋ. I, ೭೦೯).

[ರಂಗು + ಏರು$_1$ (< ಏಱು$_1$)]

**ರಂಗೋಲಿ** 'ರಂಗವಲಿ' ನೋ.

**ರಂಗೋಲೆ** 'ರಂಗವಲಿ' ನೋ.

**ರಂಚೆ** 'ಚಂಚೆ' ನೋ.

**ರಂಚೆಗಾಣು** (ಕ್ರಿ). (?): ಪಂಚವಿಂಶತಿತತ್ವರೂಪದ ಸಂಚವಿಚಾಯದೆ ನೀತಿಮುಖದಲಿ ರಂಚೆ [ಪಾಠಾಂ. ದಿಂ ಅಂಚೆ]ಗಾಣದೆ ಸಗುಣಮಾಯಾ ನೀಹಾರದಲಿ ಮುಳುಗಿ ಮಿಂಚುವೆಳಗಿನ ಬಳಕೆಯಲಿ ಮನಮುಂಚಿ ಮೈಗೊಂಡಳಲು ಪಾತುಪಾವಂಚಕರು ನೀವ್ ಪಶುಗಳೆಂದರೆ ಬೇದವೇಕೆ (ಕುವ್ಯಾಸ. ೬-೨೭).

[ ರಂಚೆ$_?$ + ಕಾಣು (< ಕಾಣ್) ]

**ರಂಜ, ರಂಜಿ, ರೆಂಜೆ** (ನಾ). ಒಂದು ಬಗೆಯ ಗಿಡ ಮತ್ತು ಅದರ ಹೂವು; ಪಗಡೆ: ಶಶಿಮುಖಿಯೋರ್ವಳು ರಂಜದೆಡೆಗೆ ಎಯ್ದಿ ಕುಸುಮರಂಜನಿಯೆಂದೆಂಬ ಪೊಸರಾಗವ ಪಾಡೆ (ಜ್ಞಾನಸ. ೨೫-೯೩); ಗರುಡಾಚಾರ್ಯನಲ್ಲಿ ರಂಜ, ದಾಸಾಚಾರ್ಯನಲ್ಲಿ ಮಂದಾರ; ದುರ್ಗಾಭಟ್ಟನಲ್ಲಿ ಶಂಖಪುಷ್ಪ, ಬಿಲ್ವಪತ್ರೆ (ಸಂಸ್ಕಾರ. ೧೭). **ರಂಜಿ**: ಕುರವಕ ಬೇಲ ರಂಟಾಳ ಸಿರಿಸ ರಂಜಿಯ ಗೋಳಿ ಲೊದ್ದಸಲುಕವಾದ ಮೆರೆವ ಕಮ್ಮರವನು ಕಂಡ (ಜ್ಞಾನಸ. ೦೦-೦೯). **ರೆಂಜೆ**: ಬೊಗಸೆ-ಬೊಗಸೆ ರೆಂಜೆ ಮತ್ತು ಸುರಗಿಯನ್ನು ಇಲ್ಲಿ ಸಂಗ್ರಹಿಸುವುದು ಸಾಧ್ಯವೇ? (ವಾತ್ಸಲ್ಯ. ೯).

[ದೇ.॥ ತುಳು. ರೆಂಜ, ರೆಂಜಿ, ರೆಂಜೆ. ರೆಂಜೆಯು]

**ರಂಜಕ$_1$** (ಗು). ೧. ಬಣ್ಣಹಾಕಿದ. ೨. ಸಂತೋಷಗೊಳಿಸುವ. ೩. ಚೆಲುವಾದ; ಮನೋಹರವಾದ. (ನಾ). ೪. ಅಂದ; ಶೋಭೆ: ಮಾಯದ ಬೊಂಬೆಯ ಮಾಡಿ ಕಂಗಳಿಗೆ ಕಾಮನ ಬಾಣವ ಹೂಡಿ ನಡೆ ನುಡಿಯೊಳಗೆ ರಂಜಕದ ತೊಡಿಗೆಯನೆ ತೊಡಿಸಿ . . . ಸಂದೇಹದಲ್ಲಿ ಸತ್ತು ಹುಟ್ಟುವ ಈ ಭವಬಂಧನಗಳೆತ್ತ ಬಲ್ಲರೋ ಈ ಶರಣರ ನೆಲೆಯ (ಬಂಗವ. ೪. ೫೭-೩೫). ೫. ಆಕರ್ಷಕವಾದುದು: ಮನೋಹರವಾದುದು: ಜೀವನ—ನಿಸರ್ಗಗಳಲ್ಲಿಯ ಮನೋಧರ್ಮ. . . ಇವುಗಳೊಳ ಹೊಕ್ಕು ನೋಡುವ ರಂಜಕವೂ ರಮ್ಯವೂ ಆದ ಪ್ರಯತ್ನ ಮೊದಲಾಯಿತು (ವಚ್ಚಸಾ. ೦೦೭). ೬. ಸಂತೋಷವನ್ನುಂಟುಮಾಡುವಂತಹುದು; ಆನಂದಗೊಳಿಸುವಂತಹುದು; ನಾಲ್ಕುಭಿನಯಮುಮಂ ಸಕಲಪರೀಷಹಮೇನೆ ರಂಜಕಮಾದುವು (ಅಕಪು. ೫-೯); ಏನು ಮಾಡಲಯ್ಯ . . . ರಮ್ಯಣೀರ ರಂಜಕದ ನುಡಿಯನ್ನು ಕೇಳಿ . . . ತೋಷಿಸುವ ಕರ್ಣೇಂದ್ರಿಯಕೆ (ಕಪಕ. ೬೯-೪); ಅಂಜದಿರು ಗಂಧರ್ವ ತಮ್ಮದು ರಂಜಕದ ಮಾತಲ್ಲ ನಿನ್ನನು ಭಂಜಿಸಲು ಬಂದವನನಟ್ಟುವೆ ನಿನ್ನ ರಕ್ಷಿಸುವೆ (ಕೋಗಮು. ೦೦-೪೭). ೭. ಮನವೊಲಿಸುವಂತೆ ಮಾತನ್ನಾಡುವವನು; ರಂಜಿಸುವವನು: ಮುನ್ನಿನ ಪುರಾತನರ ನೆನೆದು ಧನ್ಯನಾದಹೆನೆಂಬ ಮಾತಿನ ರಂಜಕರನೇನೆಂಬೆ (ಬಸವ. ೭೩೮): ರಂಜಕರು ಪಾಂಡವರು ನಿನ್ನನು ಭಂಜಿಸುವರಾವ್ಂಗದಲಿ (ಕುವ್ಯಾಸ. ೮-೫೨). ೮. ಒಂದು ಬಗೆಯ ಗಂಧ; ರಕ್ತಚಂದನ. [ಸಂ.]

**ರಂಜಕ₂** (ನಾ). (ಸಿಡಿಮದ್ದು, ಬೆಂಕಿಕಡ್ಡಿ ಮುಂತಾದುವನ್ನು ತಯಾರಿಸಲು ಬಳಸುವ) ಒಂದು ಬಗೆಯ ಅಲೋಹಮೂಲಧಾತು : ಮತ್ತೊಂದು ಕೋವಿ ರಂಜಕ ಮಾತ್ರ ಹತ್ತಿ . . . ಆ ರಂಜಕದ ಕಿಡಿ ಹಾರಿ ಸುಟ್ಟಿತು (**ರಾಜೇಂದ್ರ. ೨೬೬**) ; ಸಾರಜನಕ, ಗಂಧಕ, ರಂಜಕ . . . ಕಬ್ಬಿಣ ಮೊದಲಾದ ನಿರವಯವವಸ್ತುಗಳು ಸಸ್ಯಗಳ ಆಹಾರದ ಘಟಕವಸ್ತುಗಳು (**ಪ್ರಾಣಿಶಾ. ೬**) ; ರಂಜಕದ ಅಭಾವದಿಂದ ಮೂಳೆರೋಗವಾದ ಹಕ್ಕಿರೋಗ ಸಂಭವಿಸುವುದು (**ಗೃಹವಿ. ೨೦**). [ ← **ಪಾರ. ಹಿಂ. ಮರಾ. ರಂಜಕ** ]

**ರಂಜಕಿ** (ನಾ). [ಸಂಗೀತ] ಮಧ್ಯಮಸ್ವರದಿಂದ ಹುಟ್ಟುವ ನಾಲ್ಕು ಶ್ರುತಿಗಳಲ್ಲಿ ಒಂದು : ರಂಜಕಿ **ಪೂರ್ಣೆ** ಅಲಂಕಾರಿಣಿ ಮಾಂದೆಯೆಂಬ ನಾಲ್ಕು ಶ್ರುತಿಗಳೇ ಮಧ್ಯಮಸ್ವರದಿಂ **ಪುಟ್ಟಿದವು** (**ಶಿವೇಶ. ೨೩೨**). [**ಸಂ.** ರಂಜಕೀ]

**ರಂಜಣಿಗೆ**, ರಂಜಳಿಗೆ (ನಾ). ೧. (ಪನ್ನೀರು, ಗಂಧ ಮುಂತಾದುವುಗಳನ್ನು ತುಂಬಿಡುವ) **ದೊಡ್ಡ** ಪಾತ್ರೆ ; **ಕೊಪ್ಪರಿಗೆ** : ಚಂದನವಾರಿ ಪೂರವಪ್ಪ ರಜತದ ರಂಜಣಿಗೆಗಳಿಂ . . . **ಕಣ್ಗೊಳಿಸಿ** (**ಆಸುವಹಾ. ೩-೦೨೬ ಪ**) ; ಲಲಿತಮಣಿರಂಜಣಿಗೆಯೊಳಗುಜ್ಜ್ವಳಿಪ ಸಾದುಜವಾದಿ ಕರ್ದಮು ಬಳಸಿತೆನಲಿನ್ನುಳಿದುವನು ವರ್ಣಿಸುವವನಾರು (**ಜೈಮಿಂಕ. ೬-೨೯**) ; ಸದ್ಯೋಘೃತದ ರಂಜಣಿಗೆಗಳ ಸಾಲ್ಗಳುಹಿದವು ಪಾನರಸಾಯನಾದಿಗಳ ಝಗಝಗಿಪ ಹೊಂಗೊಪ್ಪರಿಗೆಗಳ ಬಗೆ ವಿರಾಜಿಸಿತು (**ಕೌರಭಾ. ೬-೫೫-೩೩**). ೨. ದವಸಧಾನ್ಯಗಳನ್ನು ತುಂಬುವ ಗುಡಾಣ : ಒಂದು ರಂಜಣಿಗೆ, ಅವರಲ್ಲಿ ಮನೆಯ ನಗನಾಣ್ಯಗಳನ್ನು ಇಡಲಾಗಿತ್ತು (**ಸ್ವಪ್ನಶಾ. ೨೨೬**). ೩. ವನಕರುಗಳ ಹಟ್ಟಿ; ಕೊಟ್ಟಿಗೆ: ಈ ಹುಲ್ಲನ್ನು ರಾತ್ರಿ ಹಾಸಿಕೊಂಡು ವನದ ರಂಜಳಿಗೆಯೊಳಗೆ ಬಿದ್ದುಕೊಳ್ಳುತಿದ್ದೆವು (**ವನವಾಸ. ೦೬೨**); ಬರೀ ಪ್ಯಾಂಟಲ್ಲಿ ಎಂದಿನ ರಂಜಳಿಗೆಯಲ್ಲಿ **ಕೂತುಕೊಂಡೆವು** (**ವನವಾಸ. ೦೬೯**). [<**ಪ್ರಾ.** ರಂಜಣ./**ಮರಾ.** ರಾಂಜಣೀ, ರಾಂಝಣೀ]

**ರಂಜನ** (ನಾ). ೧. ಬಣ್ಣ ಹಾಕುವಿಕೆ. ೨. ಬಣ್ಣ; ವರ್ಣ. ೩. ಸಂತೋಷವನ್ನುಂಟು ಮಾಡುವಂತಹುದು. ೪. ಸಂತೋಷ ; ಆನಂದ. ೫. ಕೆಂಪುಚಂದನ : "**ಶಿಲಪರ್ಣೀ**, **ಪತ್ರಾಂಗಂ**, ರಂಜನಂ, ರಕ್ತಚಂದನಂ, ಕುಚಂದನಂ – **ಇ** ಕೆಂಪುಬಣ್ಣದ ಚಂದನವೃಕ್ಷದ ಹೆಸರುಗಳು" (**ಸಿದ್ಧಾಂತಿ. ೨೦೯**). [**ಸಂ.**]

**ರಂಜನಿ** (ನಾ). ೧. ಒಂದು ಬಗೆಯ ಗಿಡ ; ನೀಲಿಗಿಡ. ೨. ಅರಿಸಿನ. ೩. [ಸಂಗೀತ] ಒಂದು ರಾಗದ ಹೆಸರು: ರಂಜನಿ–**ಖರ್ಣ** ಮೇಳಕರ್ತ ಧರ್ಮವತಿಯಲ್ಲಿ **ಜನ್ಯ** (**ಸಂಗೀತಂ. ೧೫೬**). [**ಸಂ.** ರಂಜನೀ]

**ರಂಜನೆ** (ನಾ). ೧. **ಬಣ್ಣ** ; ವರ್ಣ. ೨. ಮೆರುಗು ; ಕಾಂತಿ. 'ರಂಜನೆಗೈ' ಪರಾ. ೩. ಅಲಂಕಾರ ; ಶೋಭೆ : ಸಗಣಿಯ ಬೆನಕಂಗೆ ಸಂಪಗೆಯರಳಲ್ಲಿ **ಪೂಜಿಸಿದರೆ** ರಂಜನೆಯಲ್ಲದೆ ಅದರ ಗಂಜಳ ಬಿಡದಣ್ಣಾ (**ಬಸವ. ೯೩**). 'ರಂಜನೆವಡೆ' ಪರಾ. ೪. ಉಲ್ಲಾಸ ; ಸಂತೋಷ: ಆ ಮಾತು ಆ ಕಥೆ ಆ ನಗೆ ಆ ಬಗೆ **ಮೆಚ್ಚುವೊಲೊರೆವ** ಕೌಶಲವು ರಂಜನೆಯಾಯಿತು ಸುತ್ತಣ ಜನರಿಗೆ (**ಶಂಕ್ಷಕ. ೦೦-೩೬**). [**ಸಂ.** ರಂಜನ]

**ರಂಜನೆಗೈ** (ಕ್ರಿ). ಬಣ್ಣ ಹಾಕು : ಮುನ್ನುಳ್ಳ ಮಣಿಪುಂಜಮಂ ರಂಜನೆಗೈದು ತರವಚಿದು ಸರಂಗೊಳಿಸಿ **ನವೀನಕಂಠಾಭರಣವೆನಿಸುವಂತೆ** (**ಅಪೇಶ. ೨**). [ರಂಜನೆ + ಗೈ (<ಕೆಯ್₁)]

**ರಂಜನೆವಡೆ** (ಕ್ರಿ). ಶೋಭೆಯನ್ನು ಪಡೆ ; ಚೆಲುವಾಗು : ಭರತಮಿಳಿತ ದಿಂಡಾ ನೀರ ಭಂಡಾರವು **ತಿರಿದು** ರಂಜನೆವಡೆದಿತ್ತು (**ಶ್ರೀಶಾಂ. ೦–೨೯**). [ರಂಜನೆ + ಪಡೆ₁]

**ರಂಜಳಿಗೆ** ' ರಂಜಣಿಗೆ ' ನೋ.

**ರಂಜಾನ್** ' ರಮಜಾನು ' ನೋ.

**ರಂಜಿ** ' ರಂಜ ' ನೋ.

**ರಂಜಿಕೆ** ' ಬಿಂಜಿಕೆ₂ ' ನೋ.

**ರಂಜಿತ** (ಗು). ೧. ಬಣ್ಣ ಹಾಕಿರುವ. ೨. ಸಂತೋಷಪಡಿಸುವ ; ಆನಂದವನ್ನುಂಟುಮಾಡುವ : ರಂಜಿತಮಧುಮಧುಕರಚಯಮಂ **ಚಿತ** ನಾನಾಪ್ರಸೂನಚಯ(ಮಂ). . . **ಕೊಯ್ದಾಳ್** (**ಕುಶ್ಲೃ. ೬-೬೩**). ೩. **ಸಂತೋಷಗೊಂಡ**. (ನಾ). ೪. ಚೆಲುವಾದುದು; ಮನೋಹರವಾದುದು. [**ಸಂ.**]

**ರಂಜಿಸು** (ಕ್ರಿ). ೧. **ಹೊಳೆ** ; ಪ್ರಕಾಶಿಸು : ಅರ್ಥಾಭಾಸದನಕ್ಷರಸಾರ್ಥಮನುಚ್ಚರಿಸೆ . . . ರಂಜಿಸದ ಪಳಕು ಮಣಿಯವೊಲಿರದೇ (**ಶಗಿಂ. ೦-೦೯**) ; ಚಕ್ರವಾಕದ ತಗಹು ಕಟ್ಟುದು ಹೇಳಿಸಲು ರಂಜಿಸಿತು ದೀಪಾಳಿ (**ಕುವ್ಯಾರ್ತೃ. ೦೩-೩೯**). ೨. ಶೋಭಿಸು ; ಮನೋಹರವಾಗು : "**ರಂಜಿಸು–ಶೋಭಾ**ಯಾಂ, ರಾಗೇ ಚ (ಬಣ್ಣ ಹಾಕು)" (**ಶಬ್ದಾ**) ; ಅವುದು **ಚೆಲ್ವುವೆತ್ತು** ರಂಜಿಸುಗುಮದರ್ಕದಂ ಸಮಚಿ . . . ಭೋಗಿಸಿದಂ **ಗುಣಾರ್ಣವಂ** (**ಶಂಕಾ. ೦೯-೩೮**) ; ಆತನ **ಕಯ್ಯೊಳ್** ರಂಜಿಪಕ್ಷಾವಳಿ **ನಡುಗಿದುದು** (**ಶಾರಂಭೂ. ೬೫೬**); ನವಾಕಾಶಸ್ಫಟಿಕದ ಪಾವುಗೆಯಂ ಮೆಟ್ಟುತ್ತ ಬರ್ಪ ಸುಂದರೀಮಣಿ ರಂಜಿಸಿವಳ್ (**ಶವು. ೨-೫೦**). ೩. ಉದ್ರೇಕಗೊಳಿಸು; ರಾಗಾವೇಶಗೊಳ್ಳುವಂತೆ ಮಾಡು : ಒಸಗೆಗವುತ್ಸಾಹಕ್ಕಂ ಸಸಿಯುದಯಂ ರಂಜಿಪಂತೆ ಕಳ್ಗಂ . . . ಆ **ತೆಜದಿಂ** ರಂಜಿಸಲಕ್ಕುಮೆ (**ಧರ್ಮಾಮೃ. ೪-೨೯**) ; ಉತ್ತಮರತಿಸಾಮ್ರಾಜ್ಯವ ಹರುಷದ ಮೊತ್ತದೆ ರಂಜಿಸಿ ಬೇಗ (**ಕಂಪವಿ. ೦೦-೫೦**). ೪. ಸಂತೋಷಗೊಳಿಸು ; ಹಿಗ್ಗುವಂತೆ ಮಾಡು : ವಿನಯಂ ಸಹಜಂ ಕೃತ್ರಿಮವೆನಿಸಿದವು ಇವೆರಡುಂ ನಿನಗೊಳವಾರಾರ ಮನಮುಮಂ ರಂಜಿಸವೇ (**ಆದಿಪು. ೦೯-೬೩**); **ಸೊಕ್ಕಾನೆ** ಕುದುರೆಯ ಪ್ರೈಪಾಳಿಯಂಕಣದಿಕ್ಕ ಕಣ್ಮನಕೆ ರಂಜಿಸಿತು (**ಜೋಜಕ. ೨-೫೫**) ; ಸಜ್ಜಾತಿಸತಿಯರಿನಿಯರ ಸನ್ನಿಧಿಯೊಳು ಲಜ್ಜೆವೆರಸಿ ರಂಜಿಪುದು (**ಪಂಪ. ೩-೩೯**). ೫. ಬೆಳಗಿಸು ; ಪ್ರಕಾಶಗೊಳ್ಳುವಂತೆ ಮಾಡು : **ಸಕಿವನಾ**ವತ್ತುಗಳನಂತೋಡಿಸುವನಾಶಾಪಾಶವಂ ಭೇದಿಸುವೆನೂರ್ಜಿತಭಕ್ತಿಯುಂ ರಂಜಿಸುವವನನವರತ (**ಬಸವ ೩೯-೭೯**). [ರಂಜನ + – ಇಸು₂]

**ರಂಜು** (ನಾ). ಧೂಳು ; ರಜ : ' ಕಾಲುರಂಜು ' ಪರಾ. [<ರಜ₁]

**ರಂಜೆ** ' ಬಿಂಚೆ ' ನೋ.

**ರಂಟೆ** ' ರೆಂಟೆ₁ ' ನೋ.

**ರಂಡೆ** (ನಾ). ೧. ಗಂಡನನ್ನು ಕಳೆದುಕೊಂಡಿರುವವಳು : ವಿಧವೆ : ಸುರಲೋಕವೆ ಪಾಳಾದ್ಯೆ ಸರಸ್ವತೀದೇವಿ ರಂಡೆಯಾದಾ (**ಶಾರಂಭೂ. ೯೦೦**); ಜೋಯಿಸನ ಮಗಳ್ ಪಸೆಯ ಮೇಲೆ ರಂಡೆಯಾದಳ್ (**ಧರ್ಮಾಮೃ. ೦೨-೩೮**): ಅನ್ಯಕಾರಿ ಅತ್ತೆ ಗನ್ನಘಾತಕಿ ರಂಡೆ ಅತ್ತಿಗೆಯು ಎನ್ನ ಗೋಳು ತಾನೆ ಹಾಸವೆಂದಿಗಹುದೊ (**ಪುರಂದ. ೨-೬೪-೩**). ೨. ಹಾದರ ಮಾಡುವವಳು ; **ಸೂಳೆ** ; ಜಾರೆ : ರಂಡೆಯೊಳಂ ಧೃಷ್ಟೆಯೊಳಂ . . . ನೆರೆದೊಡಬೀಗುಮಾಯುಂ ಶ್ರೀಯುಂ (**ಚಂದ್ರ. ೯-೪**); ರಂಡೆ ರಜಕಾಂಗನೆ . . . **ವೇದಡ** ಗಿತ್ತಿಯರೆಂಬ ಪೆಂಡಿರ ನೆರೆಗೊಂಡೊಡಂದಚಿಗೆ ಸಜ್ಜನವೆಂ**ದಿತಿ** ಕೆಟ್ಟಳೆಂಬುದಂ (**ಕೋಟಸು. ೯-೦೦೭**); ರಂಡೆಯಾಸೆಗೆ ರಮಣಿಯಂದದವ ಕೆಡಿಸಿದಂತಾಯ್ತು (**ಶೌರಾ. ೩೯-೩೦**). ೩. ಒಂದು ಬಯ್ಗುಳು : " ನಾನು ರಂಡೆಯೋ ? ನೀವು ರಂಡೆ " ಎಂದು ಗದರಿಸಿ, ಬಾಗಿಲು ಮುಚ್ಚಿ ಒಳಗೆ ಮಲಗಿಕೊಂಡಳು (**ಪಶ್ಚಿಮಾ. ೦೦೯**). ೪. ಒಂದು ಬಗೆಯ ಔಷಧಿಸಸ್ಯ [**ಸಂ.** ರಂಡಾ]

**ರಂಡೆತನ** (ನಾ). ವಿಧವೆಯಾಗಿರುವಿಕೆ ; ವೈಧವ್ಯ : ದಾಯಬಿಡದಟ್ಟಿ ಮೆಟ್ಟಿಡಿಪ ಡಂಬಿಪ ರಂಡೆತನಕ್ಕೆ ಪೂಣ್ದಭಿಪ್ರಾಯಮೆ **ಸಿಂಹನಂದಿಗಮ** ನಿಂದಿತಗಂ (**ಶಾಂತಿಪು. ೬-೯೯**); ಮುಂದಿನ ವರ್ಷದಿಂದ **ಅತ್ತೆಯ** ರಂಡೆತನವನ್ನೂ ನೋಡತೊಡಗಿದರು (**ಮರಳ. ೯೦**). [ರಂಡೆ + – ತನ]

**ರಂಡೆಹುಣ್ಣಿವೆ** (ನಾ). ಮಾರ್ಗಶೀರ್ಷಮಾಸದ ಹುಣ್ಣಿಮೆ ; ॥ ಕಾರ್ತವೀರ್ಯನು ಜಮದಗ್ನಿಯಿಂದ ಕಾಮಧೇನುವನ್ನು ವಶಪಡಿಸಿಕೊಳ್ಳಲು ಪ್ರಯತ್ನಪಟ್ಟು ಜಮದಗ್ನಿಯು ಮೂರ್ಛೆ ಹೋಗುವಂತೆ ಆಘಾತಗೊಳಿಸಿದನು. ಆಗ ರೇಣುಕೆಯು ವೈಧವ್ಯದ ಹೆದರಿಕೆಯಿಂದ ಗೋಳಾಡಿದಳು. ಇದು ಮಾರ್ಗಶೀರ್ಷಮಾಸದ ಹುಣ್ಣಿಮೆಯಂದು ನಡೆದುದೆಂಬ ನಂಬಿಕೆಯಿದೆ : ಮಾರ್ಗಶೀರ್ಷಪೂರ್ಣಿಮೆಗೆ ರಂಡೆಹುಣ್ಣಿವೆಯೆನ್ನುವರು. ಈ ಜಾತ್ರೆಯಲ್ಲಿ ದೇವತೆಯ ಕೈಯೊಳಗಿನ ಬಳೆಗಳನ್ನು ಒಡೆದು ರಂಡೆತನ ಬಂದಂತೆ ತೋರಿಸುವರು (ಕರ್ನಾಗ. ೫೦೭) ; ರೇಣುಕಾ ಭಕ್ತರು ಆ ದಿನವನ್ನು ರಂಡೆಹುಣ್ಣಿವೆ ಎಂದು ಹೇಳುತ್ತಾರೆ (ಜಾಹಬ್ಬ. ೭೦).

[ ರಂಡೆ + ಹುಣ್ಣಿವೆ (< ಪುಣ್ಣಮೆ) ]

**ರಂಡೋಲು** ' ರಮಡೋಲು ' ನೋ.

**ರಂಢೋಲು** ' ರಮಡೋಲು ' ನೋ.

**ರಂದಣ**, ಲಂದಣ (ನಾ). ಅಡುಗೆಯ ಕೆಲಸ ; ಅಡುಗೆಮಾಡುವಿಕೆ : ' ರಂದಣಿಗ ' ಪರಾ. **ಲಂದಣ** : ' ಲಂದಣಿಗ ' ಪರಾ.

[ < ಸಂ. ರಂಧನ ]

**ರಂದಣಗಿತ್ತಿ**, ಲಂದಣಗಿತ್ತಿ (ನಾ). ಅಡುಗೆ ಮಾಡುವವಳು : ಅನುಶ್ರುತವ ಮಾಡಿಹನೆಂದು ಉಪ್ಪರಗುಡಿಯನೆತ್ತಿ ಮಾಡುವ ಭಕ್ತನ ಮನೆ ಅಟ್ಟಿಕ್ಕುವ ರಂದಣ [ಪಾಠಾಂ. ಲಂದಣ, ಅಂದಣ]ಗಿತ್ತಿಯು ಮನೆ (ಶಪ್ಷವ. ೪. ೩೩೬–೭೦೬). ' ಅಂದಣಗಿತ್ತಿ ' ಪರಾ. **ಲಂದಣಗಿತ್ತಿ** : ಅನವರತ ಮಾಡಿಹನೆಂದು ಉಪ್ಪರಗುಡಿಯ ಕಟ್ಟಿ ಮಾಡುವ ಭಕ್ತನ ಮನೆಯುದು ಲಂ[ಪಾಠಾಂ. ಅಂ]ದಣಗಿತ್ತಿಯು ಮನೆ (ಬಸವ. ೨೨೭) ; ಲಂದಣ [ಪಾಠಾಂ. ೪] ಗಿತ್ತಿಯಂತೆ ಬಂದ ನಿಂದ ಭಕ್ತರಲ್ಲಿ ಹೊಸತನದಂದವ ಹೇಳಿ (ಸಶವ.೯. II, ೯೨೦-೦೨೦೧).

[ರಂದಣಿಗ + — ಇತ್ತಿ]

**ರಂದಣಿಗ**, ಲಂದಣಿಗ (ನಾ). ಅಡುಗೆಯ ಕೆಲಸವನ್ನು ಮಾಡುವವನು ; ಬಾಣಸಿಗ : ' ರಂದಣಗಿತ್ತಿ ' ಪರಾ. **ಲಂದಣಿಗ** : ಭಕ್ತರೆಲ್ಲರೂ ಲಂ[ಪಾಠಾಂ. ಅಂ]ದಣಿಗರಾಗಿ ಹೋಯಿತ್ತು ಜಂಗಮವೆಲ್ಲವು ಉಪಜೀವಿಗಳಾಗಿ ಹೋಯಿತ್ತು (ಅವತಂ. ೦೦೭–೯೬೦) ; ತತ್ಪುರದೊಳಿರ್ದ ವಿಶಾಖನಂದಿ ಪೆಸಿವಂ ನಂದಿಸಲೆಂದು ಲಂದಣಿಗರ ಮಂದಿರಕ್ಕೆ ಪೋಪವಂ ಮುಂದೆ ಸಂದಣಿಸಿ ನಿಂದ ನೆರವಿಯುಂ ಭೋಂಕನೆ ಕಂಡು (ಶರ್ಗಪು. ೩–೦೨ ವ).

[ರಂದಣ + — ಇಗ]

**ರಂದಿ**, ರಂದೆ (ನಾ). ೧. (ಉಕ) ಅಸ್ತವ್ಯಸ್ತವಾಗಿ ಹರಡಿದ ವಸ್ತು ; ಕಸ : ಒಲೆಯ ಮುಂದೆ ರಂದಿ ಹರಡಿತ್ತು (ಸ್ವ.ಶಿಪ. ೨೭೬) ; ಸಿಗರೇಟಿನ ಬೂದಿ . . . ತುಂಡು, ಟೇಬಲ್ಲಿನ ಆಸುಪಾಸು ರಂದಿ ಹರವಿದ್ದವು (ಬೀಕಹ. II, ೨೯೭). ೨. ಗೊಂದಲ ; ಗಲಾಟೆ : ಮಾತುಮಾತಿಗೆ ಸಿಟ್ಟು ಸಿಡವು, ರಂದಿ, ರಸಕಸಿ (ಹೊಸಕ್ಷ. ೦೯೭) ; ಇಷ್ಟೆಲ್ಲ ರಂದಿಯಾದರೂ ಆಗುವ ಕಾರಣವಿರಲಿಲ್ಲ (ಮಬಗಬು. ೧೦೭). **ರಂದೆ** : ೨. ನಮ್ಮ ಖಾನಾವಳಿಗೆ ಪ್ರವಾಸಿಗರ ರಂದೆ ಇಲ್ಲ (ರಕ್ತರ್ಕ. ೬೦) [← ಮರಾ. ರೇಂದ, ರೇಂದಾ]

**ರಂದು** (ನಾ). ಒಡಕು ; ನ್ಯೂನತೆ ; ದೋಷ : ಸೋತವರುಗಳು ಬಿರಬೇಕು ಪನ್ನೆರಡುವರುಷ ವನವಾಸಂಗಳ ಪೊಂದೊಂದು ವರುಷ ಮಜ್ಞಾತವಾಸಬಿದರೊಳಗೆ ರಂದು ಕಂಡರೆ ಮರಳಿಯಿರಬೇಕು ಮತ್ತೆ ನಾ ಹಿಂದೆ ಪೇಳಿರ್ದ ಮರಿಯಾದೆಯೋಳ್ (ತುರಂಗ. ೨೫–೯೯).

[ < ಪ್ರಾ. ರಂಧ. / ಸಂ. ರಂಧ್ರ]

**ರಂದೆ** ' ರಂದಿ ' ನೋ.

**ರಂಧ್ರ** (ನಾ). ೧. ಕಂಡಿ ; ತೂತು : "ನಿಮ್ಮಂ . . . ರಂಧ್ರಾ ರೋಕಃ . . . ಈ ೧೫ ಕಂಟು" (ಹರಾಯು. ೦೦೩–೨) ; ಗೋಡೆಗೆ ತಗಲು ಹಾಕಿರುವ ಪಟಗಳ ಅಂಚಿನಲ್ಲಿ ಅಲ್ಲಿಯ ಸಣ್ಣ ರಂಧ್ರಗಳ ಸುತ್ತಮುತ್ತ . . . ತಗಣೆಗಳ ಬೀಡು (ಶಂಬಶಾ. ೯೭). ೨. ಸೀಳು ; ಬಿರುಕು : (೪). ೩. ಮನುಷ್ಯನ ಶರೀರದಲ್ಲಿರುವ ಬಾಯಿ, ಮೂಗು, ಕಿವಿ ಮೊದಲಾದ ಒಂಬತ್ತು ತೂತು ; ನವದ್ವಾರ: ಪ್ರಚುರಂ ಪತ್ರೊಳಿಗಾಗೆ ರಂಧ್ರವನೆ ಕೈಗೊಂಡೆಂಟನೀಗೇಳ ಬಿಟ್ಟು (ಸೋಮೇಶ. ೦೦೦). ೪. ತಪ್ಪು ; ನ್ಯೂನತೆ ; ದೋಷ : ' ರಂಧ್ರಾನ್ವೇಷಣ ' ಪರಾ. ೫. [ಗಣಿತ] ಒಂಬತ್ತು ಎಂಬ ಸಂಖ್ಯೆಯ ಸಂಕೇತ : ಭಾವ ರಂಧ್ರನಂದಪದಾರ್ಥಂ . . . ನವಮುಮೊಂಭತ್ತೆನಿಸ್ಕುಂ (ವ್ಯವಗ. ೯–೯). ೬. [ಜ್ಯೋತಿ] ಎಂಟನೆಯ ರಾಶಿ : ವೃಶ್ಚಿಕರಾಶಿ : ರಂಧ್ರಗತಿಯಾದಿತ್ಯರೊಂದಾಗಿ ಅರ್ಥಿಸುತ ಅಂದಿನ ತಿಥಿಯನೊಡಗೂಡೆ ನಕ್ಷತ್ರ ಮುಂದೆ ಬಂದಕ್ಕು (ಸರ್ವಜ್ಞ. ೧೫೭೭).

[ಸಂ.]

**ರಂಧ್ರಪಾತ್ರೆ** (ನಾ). ೧. (ದೇವತಾವಿಗ್ರಹಗಳಿಗೆ ಅಭಿಷೇಕಮಾಡಲು ಬಳಸುವ) ತೂತಿರುವ ಪಾತ್ರೆ ; ಧಾರಾಪಾತ್ರೆ. ೨. ತೂತುಮಾಡಿದ ಪಾತ್ರೆಯನ್ನು ನೀರಿನಲ್ಲಿ ಇಟ್ಟು, ಅದು ತುಂಬಿಕೊಳ್ಳುವಷ್ಟು ಕಾಲವನ್ನು ನೋಡಿ, ಸಮಯವನ್ನು ಅಳೆಯುತ್ತಿದ್ದ ಪಾತ್ರೆ ; ಗಳಿಗೆ ಬಟ್ಟಲು : ಆಗ ಅರ್ಧರಾತ್ರಿ ಕಳೆದು ಒಂದು ಜಾವಕಾಲವಾಗಿತ್ತು. ಕಾತರರಾಗಿದ್ದ ಜನಗಳ ದೃಷ್ಟಿ ಈಗ ರಂಧ್ರಪಾತ್ರೆಯ ಮೇಲೆ ಬಿದ್ದಿತು (ಶಾಂತಲಾ. ೨೫೭).

[ಸಂ. ರಂಧ್ರಪಾತ್ರ]

**ರಂಧ್ರಾನ್ವೇಷಣ** (ನಾ). ಮತ್ತೊಬ್ಬರ ತಪ್ಪನ್ನು ಹುಡುಕುವಿಕೆ ; ದೋಷಾನ್ವೇಷಣೆ : ಕೃತಿಗಳನ್ನು . . . ತುಂಡುತುಂಡಾಗಿ ಕತ್ತರಿಸಿ, ರಂಧ್ರಾನ್ವೇಷಣ ಅಥವಾ ರಂಧ್ರೀಕರಣ ಮಾಡಲು ಸ್ವಭಾವತಃ ಪ್ರವೃತ್ತಿ ಉಂಟಾಗಿಲ್ಲ (ಶಿಬಿಂರ. II, ೦೭). [ಸಂ.]

**ರಂಧ್ರಾನ್ವೇಷಿ** (ಗು). ೧. ತಪ್ಪನ್ನು ಹುಡುಕುವ : ತಪ್ಪುಹಿಡಿಯುವ ; ಹುಳುಕು ಹುಡುಕುವ ; ದೋಷದೃಷ್ಟಿಯ ; ರಂಧ್ರಾನ್ವೇಷಿ (Censorious. ಇಂಕಶ). (ನಾ). ೨. ತಪ್ಪು ಹುಡುಕುವವನು : ರಂಧ್ರಾನ್ವೇಷಿಗಳ ಸ್ನೇಹ ಅಪಾಯಕಾರಿಯಾದುದು (ರಜತ). [ಸಂ. ರಂಧ್ರಾನ್ವೇಷಿನ್]

**ರಂಧ್ರಿ** (ನಾ). (ಹಿಟ್ಟು, ತರಿ ಮುಂತಾದುವನ್ನು ಶೋಧಿಸಲು ಬಳಸುವ) ಸಣ್ಣ ತೂತುಗಳಿರುವ ಒಂದು ಬಗೆಯ ಸಾಧನ ; ಜರಡಿ ; ಒಂದರಿ : "ಚಾಳನಿ ರಂಧ್ರಿ ಸಾರಣಿಗೆ" (ಶಬ್ದಗಣ. ೬೨–೨೦). [ಸಂ. ರಂಧ್ರಿನ್]

**ರಂಧ್ರಿಸು** (ಕ್ರಿ). ತೂತು ಕೊರೆ ; ಛಿದ್ರಿಸು : ಹೂಸಿ ಹತ್ತಿನ ಮಣ್ಣ ರಂಧ್ರಿಸಿ ಕಾಸಿದವು ಫಣಿಕುಲವ. ಮೇಣ್ಕೊಳನ್ಯಸದಲಿ ಡಾವರಿಸಿದವು ಕಿಡಿ ಧೂತಧೂಮದಲಿ (ಕುಮಾವ್ಯಾ. ೨೦–೭೦). [ರಂಧ್ರ + — ಇಸು₃]

**ರಂಧ್ರೀಕರಣ** (ನಾ). = ರಂಧ್ರಾನ್ವೇಷಣ ; ಕೃತಿಗಳನ್ನು . . . ತುಂಡು ತುಂಡಾಗಿ ಕತ್ತರಿಸಿ, ರಂಧ್ರಾನ್ವೇಷಣ ಅಥವಾ ರಂಧ್ರೀಕರಣ ಮಾಡಲು ಸ್ವಭಾವತಃ ಪ್ರವೃತ್ತಿ ಉಂಟಾಗಿಲ್ಲ (ಶಿಬಿಂರ. II, ೦೭). [ಸಂ.]

**ರಂಪ₁** (ನಾ). ೧. ಚರ್ಮ ಮೊದಲಾದುವನ್ನು ಕತ್ತರಿಸುವ ಸಾಧನ : ಘೋರರಂಪಗಳಿಂದ ಮನುಜರನ್ನು ವೀರರು ಕಡಿದು ಹಾಕಿದರು (ಸಾವಂಗ. ೩೬). ' ರಂಪಿಗೆ ' ಪರಾ. ೨. ಗರಗಸ : ಗರಗಸ, ರಂಪ (Saw. ಇಂಕಶ). [ದೇ.॥ ತಮಿ. ಇರುಮ್ಬು ; ತೆಲು. ಉಂಪ ; ಪರ್ಜಿ. ರಂಪ]

**ರಂಪ₂**, ರಂಪು (ನಾ). ಗದ್ದಲ ; ರಗಳೆ ; ಹಗರಣ : ಕಾರ್ತವೀರ್ಯಾರ್ಜುನನೆಂಬವಂ ರಂಪದಿಂ ನೀರ್ತರುಬಿ ಬಿಡುತಲ್ಲಿ ನಾರಿಯರ ಲಂಪಟದಿ ಕ್ರೀಡಿಸುತ್ತಿರ್ದಪಂ (ಕರಕು. ೦೩–೩೩) ; ನೀವು ಹಾದಿ – ಬೀದಿ ರಂಪ ಎಬ್ಬಿಸಬೇಡಿ (ಗಂಗಾವ. ೯೬). **ರಂಪು** : ಆ ಆಯೋಗ್ಯನ ಬಳಿ ನಾನು ಹೆಣ್ಣು ಕೇಳಲು ಹೋಗುವುದಿಲ್ಲವೆಂದು ಮೊದಲು ಗುಂಡೂರಾಯರು ರಂಪು ಮಾಡಿದ್ದರು (ಮಹಿಳಾವ. ೩೫); ಅವಳ ಜತೆಗೆ ಲಲಿತೆಯದೂ ರಂಪು. ನನಗೆ ಉಭಯಸಂಕಟ (ಕಾವಣಾಂ. ೨೯೫). ' ರಂಪಾಟ ' ಪರಾ.

[ದೇ.॥ ಕೊಡ. ರಂಪ ; ತೆಲು. ರೇಪು. ಉಂಪು ; ಕೋಲಾ. ರಂಪಂ]

**ರಂಪಣೆ₁** (ನಾ). = ರಂಪ₂ : ಹರಕಂತ್ರರ ಮಾತೃಭಾಷೆ ಕನ್ನಡವಾದರೆ, ಗಾಬೀತರ ಭಾಷೆ ಮರಾಠಿ. ಈ ಎರಡು ಪಾಡೆಗಳಲ್ಲಿ ಎಷ್ಟೋ ರಂಪಣೆಗಳು ನಡೆಯುತಿದ್ದವು (ಶಾವಳ. ೭). [< ರಂಪ₂]

**ರಂಪಣೆ₂** (ನಾ). (ಕರಾ) ದೊಡ್ಡ ಬಲೆ : ಈ ಹೊತ್ತು ರಂಪಣಿ ಹಾಕಿದ್ದರೆ ಬಂಗಡೆ ರಾಶಿಗಟ್ಟಲೆ ಬೀಳಬಹುದಿತ್ತು (ಮೂರುದಾ. ೭೫) ; ಬಂಗ್ಡೆ, ಕಾಣೆ ಇವತ್ತು ಇಲ್ಲ. . . ನಿನ್ನೆಯ ರಂಪಣೆಗೆ ಬೀಳಲಿಲ್ಲ (ಹೊಸಕ್ಕಿ. ೪೯).
[ ← ತುಳು. ರಂಪೊಣಿ ]

**ರಂಪಾಟ**, ರಂಬಾಟ, ರಂಭಾಟ (ನಾ). = ರಂಪ₂ : ಯಾಕೆ ಗಂಗವ್ವ ಇಷ್ಟು ರಂಪಾಟ (ಮುಳ್ಳುಹಾ. ೦೩೪) ; ಈ ವಿಚಾರವು ನಮ್ಮ ಭಂಡವಾಳದ ಮಾಲಕರಿಗೆ ತಿಳಿದುಹೋದರೆ ಬಹಳ ರಂಪಾಟವಾದೀತು (ಕೃಂಶ. ೭೫). **ರಂಬಾಟ** : ತಾಯಿಯ ರಂಬಾಟಕ್ಕೆ ಹಾಗೂ ಗೆಳೆಯರ ಸಲಹೆಗೆ ಸೋತು ಹಸೆಯ ಮೇಲೆ ಕುಳಿತಿದ್ದನು (ಕಮಾಕ್ಷೀ. ೦೬೦) ; ಬಾಯಿಗೆ ಬಂದ ಹಾಗೆ ಬೈದು ಬಹಳ ರಂಬಾಟ ಮಾಡಿದ್ದರು (ಮುಂಜಾ. ೪-೦೬೦). **ರಂಭಾಟ** : ಹಿರಿಯ ಹೆಂಡತಿ ಲಕ್ಷ್ಮಿಬಾಯಿ ಅತ್ತು ರಂಭಾಟ ಮಾಡಿದ್ದರೂ ಮದುವೆ ನಡೆದೇ ಹೋಯಿತು (ಗ್ರಾಮಾಯ. ೦೩೪) ; ಸುಮಿತ್ರೆ. . . ಬೆಳಗ್ಗೆ ಎಣ್ಣೆ ನೀರು ಹಾಕಿಕೊಳ್ಳುವಾಗ ರಂಭಾಟ ಹೂಡಿದಳು (ಏದ್ಯಾ. ೪೪).
[ ರಂಪ₂ + ಆಟ./ ತುಳು. ರಂಭಾಟ ]

**ರಂಪಿಗೆ** (ನಾ). ಚರ್ಮವನ್ನು ಕತ್ತರಿಸುವ ಸಾಧನ : ಶಿವನು. . . ಉಳಿ ರಂಪಿಗೆ ಚರ್ಮಗಳಂ ಪೊತ್ತುಕೊಂಡು ಮನೆಗೆ ಬರಲು (ಭೈರಸೂ. I. ೩೮೫); ಪಾದರಕ್ಷೆಯನ್ನು ಹೊಲಿಯುತ್ತಲಿದ್ದ ಶಿವಗಂಗೆಗೆ ಒಮ್ಮಿಂದೊಮ್ಮೆಲೆ ಜ್ವರ ವೇರಿತು. ರಂಪಿಗೆ, ಉಳಿ, ದಾರ ಮೊದಲಾದ ಸಾಮಾನುಗಳನ್ನೆಲ್ಲ ಡಬ್ಬಕ್ಕೆ ತುಂಬಿ. . . ದೇಹವನ್ನೊರಗಿಸಿದಳು (ಶೀವಮು. ೪೩).
[ ರಂಪ₁ + — ಇಗೆ₀./ ತುಳು. ರಂಪಿ ; ತೆಲು. ರಂಪಿಯ, ರಂಪೆ./ ಹಿಂ. ರಾಂಪೀ ; ಮರಾ. ರಾಂಪಾ, ರಾಂಪೀ ]

**ರಂಪಿಣೆ** (ನಾ). = ರಂಪಿಗೆ : " ರಂಪಿಣೆ= ಚರ್ಮಪ್ರಭೇದಿಕೆ ; ಚರ್ಮವನ್ನು ಕತ್ತರಿಸುವ ಕತ್ತಿ " (ಶ್ರೀಧ). [ < ರಂಪ₁ ]

**ರಂಪು** ' ರಂಪ₂ ' ನೋ.

**ರಂಬಾಟ** ' ರಂಪಾಟ ' ನೋ.

**ರಂಬಾರೂಟಿ**, ರಂಭಾಲೂಟಿ (ನಾ). = ರಂಪ₂ : ಇಜಾವುತ ಜವಾಂಗಳ ರಂಬಾರೂಟಿಯ ಹರಿದಾಡುತ ಕೊಲ್ಲುವರು (ಶ್ರಾನಕ. ೦೩-೪೭). **ರಂಭಾಲೂಟಿ** : ಒಂದೇ ಕೋವಣ ಧರಿಸಿ ಹೆಗಲಿಗೆ ಒಂದೇ ಅರಿವೆ ಹಾಕಿಕೊಂಡು ಎಷ್ಟೆಲ್ಲ ರಂಭಾಲೂಟಿ ಮಾಡಿ ಓಡಿದ್ದಾರೆ (ಕೃಮಾಂಕ. ೨೬).
[ದೇ.॥ ತುಳು. ರಂಬಾರೂಟಿ, ರಂಭಾರೂಟಿ, ರಂಬಾರೊಟ ; ತೆಲು. ರಂಬಾರೂಳ್ಲು ]

**ರಂಬಿಸು** ' ರಮಿಸು ' ನೋ.

**ರಂಬೆ** (ನಾ). ೧. ಒಬ್ಬ ಅಪ್ಸರಸ್ತ್ರೀ ; ರಂಭೆ : "ರಂಬೆ — ರಂಭಾ= ಒಬ್ಬಳು ದೇವಸ್ತ್ರೀ " (ಕರ್ನಕೋ. ೩೭). ೨. ಸುಂದರಿ ; ಚೆಲುವೆ : ತಿಂಗಳಿಗೆ ನೂರು ಮದುವೆಯು(ಯೂ)ಗಲೆಂದು ರಂಬೆ ತಕ್ಕೊಳ್ಳಿ ಕಳಸವ (ನಾಜಪ. ೦೦೯). [ < ಸಂ. ರಂಭಾ]

**ರಂಭ₁** (ನಾ). ಬಾಳೆ ; ಕದಳಿ : ಊರುದಂಡಂ ರಂಭಗಳ ಸೊಬಗನಿಳಿ ಸುತಿರೆ (ಬಸರ. ೦-೦೦೭). [ ಸಂ. ರಂಭಾ]

**ರಂಭ₂** (ನಾ). (?) : ಎನ್ನ ಮಾತು ನಿಮಗೆ ಅನ್ಯವೆ ರಂಭದ ಸಂಚಾರ ರಂಭಕ್ಕೆ ಕೇಡು ಕುರುಂಬದ ಸಂಚಾರ ರಂಭದ ಕೇಡು (ಸಳವ. II. ೪೨೦-೩೨). [ ? ]

**ರಂಭಣ** (ನಾ). ೧. ದನದ ಕೂಗು. ೨. ಅಪ್ಪುಗೆ ; ಆಲಿಂಗನ : ಕುಂಭಕರ್ಣನನೆಬ್ಬಿಸುವ ಸೌರಂಭವನು ಸಲೆ ನೋಡಲೆಂದಾ ಜಂಭಭೇದಿ ದಿಶಾಂಗನಾಸುರತೋಪಚಾರಕದ ರಂಭಣದ ರಮಣೀಯತರದೋಸ್ತಂಭ ಗಳನಗಲಿಸುತ ತಿಮಿರ ವಿಜೃಂಭಣನು ಅಡರ್ದನಂಬರವ (ತೊರರಾ. ೭-೨೬-೦೯) ; ನಾನಾಪ್ರಕಾರದಿಂದೀಕ್ಷಿಸುತ್ತಿರುತಿರ್ದರೇನೆಂಬೆ ಕಣ್ಗೆದಿರ ಮಾಲೆಗಳ್ಪಟುಭಟರ ಸೇನೆಯುಂ ಪರಿವೇಷ್ಟಿಸೊಪ್ಪಿರ್ದವಗಲದೊಳ್ ಸೌರಂಭರಂಭಣದೊಳು (ವಂಶಾರಾ. ೦-೭-೦೪). ☞ ಇಲ್ಲಿ ಕವಿಗಳು ಸಂಸ್ಕೃತದ ' ಪರಿರಂಭಣ ' ಎಂಬ ಶಬ್ದದ ಅರ್ಥವನ್ನು ಈ ಶಬ್ದಕ್ಕೂ ಸ್ವೀಕರಿಸಿರುವಂತಿದೆ. [ಸಂ.]

**ರಂಭಾಟ** ' ರಂಪಾಟ ' ನೋ.

**ರಂಭಾಲೂಟಿ** ' ರಂಬಾರೂಟಿ ' ನೋ.

**ರಂಭಾಶೂಲ್ಯಕ** (ನಾ). ಬಾಳೆಕಾಯಿಯನ್ನು ಬೆಂಕಿಯಲ್ಲಿ ಸುಟ್ಟು ತಯಾರಿಸುವ ಒಂದು ಬಗೆಯ ಖಾದ್ಯ : ಮಿಗಿಲಾದಿ ಬಲಿದ ಬಾಳೆಯ ಕಾಯ ಸಿಪ್ಪೆಯಂ ತೆಗೆದು . . . ಕರ್ಬೊನ್ನ ಸಲಗೆಯೊಳು ಕೆಂಪೊಗೆವಂತೆ ಕೆಂಡದೊಳು ತಿರಿತಿರಿಹಿ ಕಾಸಿ . . . ಹುಡಿಪುಣಸನಿಕ್ಕಲವು ತಾನೆ ರಂಭಾ ಶೂಲ್ಯಕಂ (ಸೂಪಶಾ. ೪-೬೭). [ಸಂ.]

**ರಂಭಾಸ್ತಂಭ** (ನಾ). ಬಾಳೆಯ ಗಿಡದ ಕಾಂಡ,– ಬುಡ : ಕದಳೀಸ್ತಂಭ: ರಂಭಾಸ್ತಂಭೋಪಮಾನೋರುಯುಗಳೆಯರ್ ಶಾತಕುಂಭರಂಭಾವನಂ ಗಳುಮಂ . . . ತೊಟಲ್ವಲ್ಲಿ (ಆದಿಪು. ೦೦-೯೩ ವ); ತೊಡೆಗಳ್ ರಂಭಾಸ್ತಂಭದ ಗೆತ್ತೆಗಳ್ (ಕಮುದ. ೯೫ ಪ್ರಯೋ). [ಸಂ.]

**ರಂಭೆ** (ನಾ). ೧. ಒಂದು ಬಗೆಯ ಗಿಡ ; ಬಾಳೆಯ ಗಿಡ : ಕದಳಿ : " ರಂಭಾ, ಕದಳೀ, ಮೋಚಾ _ ಈ ೩ ಬಾಳೆ³ " (ಹಲಾಯು. ೩೨-೩೬) ; ಸಹಕಾರ ರಂಭೆ ದಾಡಿಮಫಲಂ (ಶ್ರೀಶುಕ. ೩-೨೦). ೨. ದೇವಲೋಕದ ಒಬ್ಬ ಸ್ತ್ರೀ,_ ಅಪ್ಸರೆ : " ಘೃತಾಚೀ. ಮೇನಕಾ. ರಂಭಾ. ಊರ್ವಶೀ . . . ಅಚ್ಚರಸಿಯರ್" (ಹಲಾಯು. ೦೫-೬೬) : ರಂಭೆ ರಂಗಂಬೊಕ್ಕಳ್ (೦೦ಲಾವ. ೪-೦೦೭) ; ಹೇಷಿತಘೋಷಣಶ್ರವಣಮಾತ್ರವಿತ್ರಾಸನ ರಚಿತ ಜಂಭಾರಿ ದೇಹಪರಿರಂಭರಂಭಾತಿಲೋತ್ತಮೋರ್ವಶೀಸುಕೇಶಿಯೆಂಬ ಕೇಶಿಯುಮಂ. . . ಕರೆದು (ಜಗಪ. ೩-೨೨ ವ). ೩. ಸುಂದರಿ ; ಚೆಲುವೆ : ಈಗ ಊರಿಗೆಲ್ಲ ತಾನೇ ರಂಭೆಯೆಂದು ಮೆರೆದಾಡುತ್ತಿದ್ದಾಳೆಂತಲ್ಲ (ಮೂರುದಾ. ೧೬೦). ೪. ವೇಶ್ಯೆ ; ಸೂಳೆ. [ಸಂ. ರಂಭಾ]

**ರಂಭೋರು** (ನಾ). ೧. ಬಾಳೆಯ ದಿಂಡಿನಂತೆ ನುಣುಪು ಹಾಗೂ ದುಂಡಗಿರುವ ತೊಡೆ; ಸುಂದರವಾದ ತೊಡೆ : ಅಬ್ಜಗಂಧಮಿಭಕುಂಭ ಶ್ರೋಣಿ ರಂಭೋರು ಕಂತುನಿಷಂಗೋಪಮಜಂಘೆ (ಮದು. ೨-೦) ; ಆ ತರುಣಿ . . . ರಂಭೋರುವಿಭವಾನ್ವಿತೆಯಾಗಿಯುಂ (ರಾಜಶೇ. ೭-೬೦ ವ). ೨. ಬಾಳೆಯ ದಿಂಡಿನಂಥ ತೊಡೆಯುಳ್ಳವಳು : ರಂಭೋರು ಜಗದ್ವಿಜಯಾರಂಭಿ ಮನೋಭವಕರೇಣುವಂತೊರ್ವಳ್ ಕಿಟ್ಟಿಂಭೋಜದಲರ್ಗಳಂ ಕುಚಕುಂಭಂಗಳೊಳೊಟ್ಟಿಕೊಳ್ವಳೇನೊಪ್ಪಿದಳೋ (೦೦ರಾವ. ೦೩-೦೨೭). [ಸಂ.]

**ರಂಹ** (ನಾ). ರಭಸ ; ವೇಗ : ಝಂಝಾನಿಲನು ಪ್ರಚಂಡರಂಹದಿಂದ ಮೇಘಪಟಲವನ್ನು ಓಡಿಸಿ (ಶ್ರೀರಾಕ. ೭೬). [ಸಂ. ರಂಹಸ್]

**ರಕಂ**, ರಕಮು, ರಖಂ (ನಾ). ೧. ಧನ ; ಹಣ : ಅವನ ಪತ್ತೆಯನ್ನು ಹಚ್ಚಿದವರಿಗೆ ಕೆಲ ರಕಂನ್ನು ಕೊಡುವದಾಗಿಯೂ ಜಾಹೀರಪಡಿಸಲಾಗಿತ್ತು (ಸಮಾಶ. ೭೫). ೨. ರೀತಿ; ಬಗೆ : ಮೂವತ್ತು ವರುಷ ಆಗಿಹೋಯಿತು . . . ಆದರೂ ಇನ್ನೂ ಇದರ ರಕಂ ಸರಿಯಾಗಿ ಅರ್ಥವಾಗಿಲ್ಲ ನನಗೆ (ಸಾಹೇಬ್. ೦೨೯). **ರಕಮು** : ೧. ರಕಮು ಸಹಿತ ಲೆಕ್ಕದ ಹೊಣೆಯನ್ನು ಅರ್ಧಾಂಗಿನಿಗೆ ಒಪ್ಪಿಸಿದವನು ತನ್ನ ಪರಮವಿಶ್ವಾಸವನ್ನು ವ್ಯಕ್ತಪಡಿಸುತ್ತಾನೆ (ಗಾಳಿಶ. ೦೯೨) ; ಭಾರಿ ರಕಮಿನ ವ್ಯವಹಾರಗಳಿಗೂ ಒಂದು ಮಿತಿಯೆನ್ನುವುದಿರುವುದಿಲ್ಲ (ರತ್ನಗೋ. ೨೦). **ರಖಂ** : ೧. ಅವರಿಗೆ ರಖಂ ಬರೆಯುದ

ಚೆಕ್ಕನ್ನು ಕೊಡುವ ಯೋಜನೆಯು ಅದಾಗಿತ್ತು (ಕೆಂಡಸ್. ೦೯೬). ೨. ರಾಜಕೀಯ ಒರಟು ಕೆಲಸ. ಅದಕ್ಕೆ ಬೇಕಾದದ್ದು ಮೊದಲನೆಯ ರಖಂ ಬುದ್ಧಿಶಕ್ತಿಯಲ್ಲ (ಅಕ್ಕಶಾ. ೩೨೦). ೩. ಒಟ್ಟು : ಸಗಟು : ಆದರೆ "ರಖಂ" ವ್ಯಾಪಾರವಾಗುವಾಗಲೂ, ಎರಡು ದೂರದ ಊರಿನ ವ್ಯಾಪಾರಿಗಳೊಡನೆ ವ್ಯಾಪಾರ ನಡೆಯುವಾಗಲೂ ಹೀಗೆ ನಡೆಯಲು ಸಾಧ್ಯವಿಲ್ಲ (ಶಾಂಕೃ. II. ೯೯೩). [← ಅರ. ರಕ್ಮ್ : ಹಿಂ. ರಕಮ್ ; ಮರಾ. ರಕಮ್, ರಕ್ಕಮ್]

**ರಕಂವಾರು** (ಅ). ವಸ್ತುಗಳ ಬೆಲೆ ಮತ್ತು ದರ್ಜೆಯನ್ನು ಅನುಸರಿಸಿ : ಅಂಗಡಿಯಲ್ಲಿ ಬಟ್ಟೆಯನ್ನು ರಕಂವಾರು ಜೋಡಿಸಿದ್ದಾರೆ (ಲೂ). [← ಅರ. ಹಿಂ. ಮರಾ. ರಕಮ್‌ವಾರ್]

**ರಕಮು** ' ರಕಂ ' ನೋ.

**ರಕಾಬು** ' ರಿಕಾಬು ' ನೋ.

**ರಕಾರ** (ನಾ). ' ರ ' ಎಂಬ ಅಕ್ಷರ : ಹಳಗನ್ನಡಪದಗಳಲ್ಲಿ ರಕಾರ ಬಂದರೇ ಒಂದರ್ಥ, ಱಕಾರ ಬಂದರೇ ಮತ್ತೊಂದು ಅರ್ಥ (ದ್ರಾ.ವಿ. ೩೫೦). [ಸಂ.]

**ರಕುತ**, ರಗುತ (ನಾ). ನೆತ್ತರು ; ರಕ್ತ : ರಕುತದ ಕಡಲೊಳರೆಜೀವದ ಭಟರು ಬಾಯ್ಬಿಡುತ ತೇಲಾಡಿದರು (ಕುವ್ಯಾ.ದ್ರೋ. ೩-೧೧): ಸೊಕ್ಕಿದ ಕುಂಭಾಂಡ ರಣದೊಳು ರಕುತದ ಕಕ್ಕಿದ (ಮೋಹತ. ೪೦-೬೨). **ರಗುತ** : "ಕೆನ್ನೀರು ರಗುತ ನೆತ್ತರು ಶೋಣಿತಂ" (ಕಬ್ಬಿಗ. ೯೩): ರಗುತಗಳ ತೋಳದಂಬಸುಗಿದೇಱುಗಳೌಷಧಿಯು ಬಗೆಗೊಳಿಸಿ (ಕೊರಟಾ. ೬-೯೩-೦೯). [< ಸಂ. ರಕ್ತ]

**ರಕುತಗುಡುಹಿ** (ನಾ). ರಕ್ತವನ್ನು ಕುಡಿಯುವವನು ; ರಾಕ್ಷಸ : ಕೂಡಿದ ಕಪುಪುಕಾಜರ ರಕುತಗುಡುಹಿಗಳೊಡಲ ತುಂಬಿದು ತುದಿವೆರಳಲುಬ್ಬಿಜೀವನಾ ಹನುಮ (ಕೊರಟಾ. ೩-೩-೨೩). [ರಕುತ + ಕುಡುಹಿ (< ಕುಡಿಹಿ)]

**ರಕುತಜಾಟಳ** (ನಾ). ರಕ್ತವನ್ನು ಚಿಮ್ಮುವ ಘಟೀಯಂತ್ರ : ಗುರುಸುತ ತುಳುಕಿದನು ಫಲುಗುಣನ ಮೈಯಲಿ ರಕುತಜಾಟಳವ (ಕುವ್ಯಾ.ಕ. ೦೯-೦೯). [ರಕುತ + ಜಾಟಳ (<ಜಾಟಣ)]

**ರಕುತಿ** (ನಾ). ಒಲವು : ಪ್ರೀತಿ : ರಕ್ತಿ : ತನುದಂಡಸ್ಯೆಗೈದು ರಕುತಿಯುಂಟೇನಬಲೆ (ಕಂಠಾ. ೩-೪-೦೩). [<ಸಂ. ರಕ್ತಿ]

**ರಕ್ಕಸ**, ರಾಕಾಸ (ನಾ). ೧. ಅಸುರ ; ರಾಕ್ಷಸ : "ಚುಕ್ಕಿಗುವರರು ರಕ್ಕಸರು ಮಬ್ಬಿಗರುಮೆನಲ್ಕೆ ಅಸುರಾಭಿಧಾನದೊಳ್" (ಕಬ್ಬಿಗ. ೦೦): ಪೊಟಲಿಂ ಬಂಡಿಯನಟ್ಟಿಕೊಂಡು ರಕ್ಕಸನಿರ್ದೆಡೆಗೆಯ್ದಿಂದು (ಕಂಶಿಶಾ. ೩-೩೬ ವ). ೨. ಕ್ರೂರಿ ; ಹಿಂಸಕ : ' ರಕ್ಕಸಿ ' ಪರಾ. ೩. (ಅಲಂ) ದೊಡ್ಡದು ; ಭಾರಿಯಾದುದು : ' ರಕ್ಕಸವಕ್ಕಿ ', ' ರಕ್ಕಸವಲಗೆ ' ಪರಾ. **ರಾಕಾಸ** : ೧. ಮಾತಳಸಮೇತದಿಂ ರಾಕಾಸರಿಹ ಪಟ್ಟಣದ ಪೊಗಲ್ಕೆ (ರಕ್ಷ್ಮಶಾ. ೩-೬-೦೯).

**ರಕ್ಕಸರೋಜ** = ರಾಕ್ಷಸರ ಗುರು ; ಶುಕ್ರಾಚಾರ್ಯ : "ರಕ್ಕಸರೋಜ ಚುಕ್ಕಿಯೆನಲು ಸಂಗಳಿಕುಮುಸುರಗುರುವಿನೊಳು" (ಕಬ್ಬಿಗ. ೦೬). [< ಪ್ರಾ. ರಕ್ಖಸ. / ಸಂ. ರಾಕ್ಷಸ]

**ರಕ್ಕಸಂಕಲೆ** (ನಾ). ರಕ್ಷಣೆಗಾಗಿ ಕಟ್ಟುವ ಕಾಪು : ಎರಡುಪದಂಗಳಪಭ್ರಂಶಕ್ಕೆ . . . ರಕ್ಷಾಶೃಂಖಲ – ರಕ್ಕಸಂಕಲೆ (ಶಮದ. ೨೬೬ ಪ್ರಯೋ). [< ಸಂ. ರಕ್ಷಾಶೃಂಖಲ]

**ರಕ್ಕಸಗಂಡಪೆಂಡ್ಯ** (ನಾ). ರಾಕ್ಷಸರನ್ನು ಸೋಲಿಸಿದ ವೀರನೆಂಬ ಬಿರುದನ್ನು ಸೂಚಿಸುವ, ಕಾಲಿಗೆ ತೊಡಿಸುವ ಒಂದು ಬಗೆಯ ಬಳೆ: ಚರಣಯುಗಳದ ಸರಪಣಿಯ ನೂಪುರದ ರಕ್ಕಸಗಂಡಪೆಂಡ್ಯದ ಬೆರಳ ಮುದ್ರಿಕೆ . . . ನೇರಿಸಿ ಲಕ್ಷ್ಮೀರಮಣನೋಲಗಗೊಡುತರ್ದರುತಿರ್ದ (ಅನಂರಾ. ೦-೩-೩೬). [ರಕ್ಕಸ + ಗಂಡ$_1$ + ಪೆಂಡ್ಯ (<ಪೆಂಡೆಯ)]

**ರಕ್ಕಸಜೂಜು** (ನಾ). ರಾಕ್ಷಸರಿಗೆ ಭಯವನ್ನುಂಟುಮಾಡುವವನು : ದೈತ್ಯಮರ್ದನನ ದಾನವಾರಿಯ ರಕ್ಕಸಜೂಜಿನ ಪಟ್ಟೆಯ ಪರಿಗೆಯ ಪಸರದ . . . ಹರಿಗೆಕಾಜರ ಪರಿವೀಥಿಯೊಳಂ (೧೦ಕ. ೩-೩೩ ವ). [ರಕ್ಕಸ + ಜೂಜು$_1$]

**ರಕ್ಕಸದಲ್ಲಣ** (ನಾ). ರಾಕ್ಷಸರನ್ನು ತಲ್ಲಣಗೊಳಿಸುವವನು : ರಂಗನ ನೋಡಿರೆ . . . ರಕ್ಕಸದಲ್ಲಣ ರಾವಣಾಂತಕನ (ಪುರಂದ. ೪-೩೬-೨). [ರಕ್ಕಸ + ತಲ್ಲಣ (< ತಲ್ಲಟ)]

**ರಕ್ಕಸದಿಂಡೆಯ** (ನಾ). ರಾಕ್ಷಸರಲ್ಲಿ ಶೂರನಾದವನು ; ದೈತ್ಯವೀರ : ದಿಂಡುಗೆಡೆದುದು ನೆಲಕೆ ರಕ್ಕಸದಿಂಡೆಯನ ರೌಕುಳದ ರಕುತದ ಮುಂಡ (ಕೊರಟಾ. ೧-೧೧-೦೬). [ರಕ್ಕಸ + ದಿಂಡೆಯ]

**ರಕ್ಕಸನೂರ್** (ನಾ). ಒಂದು ಊರಿನ ಹೆಸರು : ಪುಬ್ಬ ರಕ್ಕಸನೂರು ಕೊಳ್ವಲ್ಲಿ ಪಾರ್ವರೊಡೊಳ್ ಸತ್ತಾನ್ (ಪ್ಯ ಕಂ. ೦೯೦೭, ೦೦-೩ : ೯ನೆಯ ೬೬). [ರಕ್ಕಸ + ಊರ್]

**ರಕ್ಕಸಪಾರ್ವ** (ನಾ). ಬ್ರಾಹ್ಮಣವರ್ಗದ ರಾಕ್ಷಸ ; ಬ್ರಹ್ಮರಾಕ್ಷಸ : ಪಿಶಾಚಾನಿವಹಮನಡಗುಣಿಮೆಂದು ಸವವೇದಮಂ ಪೇಟ್ವರಲ್ಲಿ ರಕ್ಕಸಪಾರ್ವರ್ (ಗದಾಯು. ೪-೩೯); ಪೊಲಸಂ ಪಸುತಿರ್ಪ ನಿಶಾಚರರ್ಕಳಂ ಗ್ರಾಸಮನುಣ್ಬುದೆಂದೊಡಣಮೋಳಿಯ ರಕ್ಕಸಪಾರ್ವರಿರ್ದುದೊಂದಾಸೆಗೆ (ಕಾವ್ಯಸಾ. ೩೩೩). [ರಕ್ಕಸ + ಪಾರ್ವ]

**ರಕ್ಕಸಬಣಗು** (ನಾ). ಕ್ಷುದ್ರರಾಕ್ಷಸ : ಕೆಣಕಿದರಲಾ ರಣದ ರಕ್ಕಸಬಣಗುಗಳು (ಕುವ್ಯಾ.ದ್ರೋ. ೦೩-೬೦). [ರಕ್ಕಸ + ಬಣಗು$_2$]

**ರಕ್ಕಸಬೇರ** ' ರಕ್ಕಸವೇರ ' ನೋ.

**ರಕ್ಕಸರಾಯ** (ನಾ). ರಾಕ್ಷಸರ ರಾಜ,–ಒಡೆಯ : ರಕ್ಕಸರಾಯ ಕರೆಸಲು ನಾಗಕಂಕಣನೈತಂದ (ಮೋಹತ. ೩೩-೩೩). [ರಕ್ಕಸ + ರಾಯ]

**ರಕ್ಕಸವಕ್ಕಿ** (ನಾ). ದೈತ್ಯಾಕಾರದ ಪಕ್ಷಿ ; ರಣಹದ್ದು : ಕುಡಿದವರು ಕಾಂಬುವಸು ಮರದುದಿಗಡರಿ ರಕ್ಕಸವಕ್ಕಿಗಳು (ಕೊರಟಾ. ೬-೦೯-೩೯). [ ರಕ್ಕಸ + ಪಕ್ಕಿ ]

**ರಕ್ಕಸವಗೆ** (ನಾ). ೧. ರಾಕ್ಷಸರ ದ್ವೇಷ,– ಶತ್ರುತ್ವ: 'ರಕ್ಕಸವಗೆಯ' ಪರಾ. ೨. ರಾಕ್ಷಸರ ಶತ್ರು : ಅಸುರಾರಿ ; ವಿಷ್ಣು : ಮೋಕ್ಕಳಂ ಸೃಷ್ಟಿ ಸ್ಥಿತಿ ಪ್ರಭೃತಿಗೆಯ್ವವಂ ರಕ್ಕಸವಗೆಯನಾಳ್ವವಂ ಸರ್ವಜಂತುಸಂಘಕ್ಕೆ ಮೋಕ್ಷವನೀವವಂ ಸರ್ವಪತಿ ಸರ್ವಶಕ್ತನಾಂ (ಕಪ್ಪರಾ. ೦೦-೨೪); ರಕ್ಕಸವಗೆ ಖಗರಾಜಂಗೆ ಪೇಳ್ದ . . . ನೀ ತಳರೆಂದು (ಮೋಹತ. ೪೨-೬). [ರಕ್ಕಸ+ಪಗೆ$_2$]

**ರಕ್ಕಸವಗೆಯ** (ನಾ). = ರಕ್ಕಸವಗೆ ೨ : "ರಕ್ಕಸವಗೆಯನೆಯ್ದೆ ನಾಲ್ದೋಳ ನೆನೆ . . . ಉಪೇಂದ್ರ" (ಕಬ್ಬಿಗ. ೬). [ರಕ್ಕಸವಗೆ + –ಅ$_7$]

**ರಕ್ಕಸವಡೆ** (ನಾ). ರಾಕ್ಷಸರ ಸೈನ್ಯ ; ಅಸುರದಳ : ಮೂಱುಂಯೋಜನದಳವಿಯ ಸಭಾಮಂಟಪಮನೊಂದುಲಕ್ಕ ರಕ್ಕಸವಡೆಯಿಂ ಪೊತ್ತು ತರಿಸಿ (ಕಂಶಿಶಾ. ೬-೨ ವ); ಬಂದಿದೆ ದಱಗ ರಕ್ಕಸವಡೆ ಬಾಗಿಲೊಳ್ ನಿಂದಿದೆ ಘುಡಘುಡಿಸುತ್ತೆ (ಮೋಹತ. ೩೩-೪೦). [ರಕ್ಕಸ + ಪಡೆ$_2$]

**ರಕ್ಕಸವಲಗೆ** (ನಾ). ದೊಡ್ಡ ಗುರಾಣಿ : ಕಳಲಿ ರಣದಲಿ ಕೆಡೆದ ರಕ್ಕಸವಲಗೆಯಿರಲದ ಕೊಂಡು ಮುಂಗೈಗೊಳಿಸಿ ಯಜ್ಞದ ವೀರಭದ್ರನ ರಣಕೆ ಗುರುಬಾದ (ಕೊರಟಾ. ೩-೬-೪೦). [ರಕ್ಕಸ + ಪಲಗೆ]

**ರಕ್ಕಸವೇರ**, ರಕ್ಕಸಬೇರ (ನಾ). = ರಕ್ಕಸವಗೆ ೨ : "ಅರಲ್ದೊಡೆಯಂ . . . ರಕ್ಕಸವೇ [ಪಾಠಾಂ. ಬೇ] ರಂ, ತಾವರೆಗಣ್ಣಂ . . . ಕಾವನಯ್ಯಂ– ಈ ೧೨ ವಿಷ್ಣುಗೆ ಪೆಸರ್" (ಕಶಬ್ದಾ. ೦-೯). **ರಕ್ಕಸಬೇರ** : "ರಕ್ಕಸಬೇರಂ ತಾವರೆಗಣ್ಣಂ ಕಾವನಯ್ಯನುಂ . . . ಹರಿಯೆಂದು" (ಕಪಕಂ. ೨೪). [ರಕ್ಕಸ + ಬೇರ$_1$]

**ರಕ್ಕಸಿ, ರಾಕಾಸಿ** (ನಾ). ೧. ರಾಕ್ಷಸರ ಹೆಣ್ಣು ; ಅಸುರಸ್ತ್ರೀ ; ದೈತ್ಯೆ : ರಕ್ಕಸಿಯರ ಕಂಡ ಕುಂಬಳದ ಮಾಟಿಕ್ಕೆವೊಲಾಗಿರೆ ಮಾಡದಿರ್ಪರೇ (ಶಂಕಥಾ. ೯-೪೯); . ರಕ್ಕಸಿಯುಂ ಮಾನಿಸಂ ಸಿಂಹಮನಾನೆ ಲೋಗರಂ ಶಿಶು . . . ಪೊರ್ದದಂತೆ (ಧರ್ಮಪು. ೩-೧೨೩); ಹೆದಜದಿರು ಚಿತ್ರದಲಿ ಬಾಣಣ ಹೆದೆಗೊಳಿಸು ರಕ್ಕಸಿಯು ಹರಣವನೊದೆದು ಹಾಯ್ಕು (ಕೊರಣಾ. ೧-೦೦-೫). ೨. ಕ್ರೂರ ಸ್ತ್ರೀ : ನಿನ್ನನಿಂತು ಮಗುಟ್ದುಂ ಮಗುಟ್ದುಂ ಕೊಲವೇಟ್ಟುದೆಂದು ವೇಟಿನ್ನನಿದಿಂತು ಪುಟ್ಟಿಸಿದನೇ ವಿಧಿ ರಕ್ಕಸಿಯುಂ ಮನಃಪ್ರಿಯಾ (ಕಾದಂಬ. ೬೨೦); ತಾಯಿ ರಕ್ಕಸಿಯಾದಂತೆ ಕಾಯುವಿಕಾರವು (ಮಹಾದೇ. ಬ. ೬೪-೦೩೭). ೩. ಒಂದು ಬಗೆಯ ಸಸ್ಯ : "ಛಿನ್ನರೋಹ – ಕೆಂಪಿನ ಬಳ್ಳಿ, ರಕ್ಕಸಿ " (೭೩೦. ೩೯). ೪. (ಅಲಂ) ದೊಡ್ಡದು : 'ರಕ್ಕಸಿದಬ್ಬೆ' ಪರಾ. **ರಾಕಾಸಿ** : ೨. ಪಂಚಪಾತಕನಾ ಕೈಯಲ್ಲಿ ಹಿಡಿದೂ ಈ ರಾಕಾಸಿ ಮನೆಗೇ ಸೊಸೆಯಾದೆ (ಹುಟ್ಟಿಹ. ೯೯); ತವರಿಗೆ ಯಾಕ್ಬಂದೆ ತಂಗ್ಯವ್ವಾ ರಾಕಾಸಿ ಅವಳೆ ಮನೆಯಲ್ಲಿ (ಹಳ್ಳಿಹ. ೦೧೩).

[ <ಪ್ರಾ. ರಕ್ಖಸೀ. / ಸಂ. ರಾಕ್ಷಸೀ ]

**ರಕ್ಕಸಿದಬ್ಬೆ** (ನಾ). ಒಂದು ಬಗೆಯ ದೊಡ್ಡ ಜಾತಿಯ ಹುಲ್ಲು : ನಾಲಗರುಗ ರಕ್ಕಸಿದಬ್ಬೆ ಕಾರೆ ಕಱುಂಕೆ (ಶ್ರೀಪಾಲ. ೭-೦೩).

[ ರಕ್ಕಸಿ + ದಬ್ಬೆ₂ (<ದರ್ಭೆ ) ]

**ರಕ್ಕಿಸು.. ರಖಿಸು** (ಕ್ರಿ). ಕಾಪಾಡು ; ರಕ್ಷಿಸು : ಬಿಸುಗೊರಲ ರಕ್ಕಿಸು ಪೊಗುವರತತ್ತಿಯುಂ (ಬಿಕೋಪು. ೩-೩). **ರಖಿಸು** : ಆವನೊರ್ವ ಸ್ವಧರ್ಮವೆನ್ನದೆ ರಖಿಸಿದ ಪುಣ್ಯಮಾತಂಗೆ (ಪ್ಪ್ರಆ. ೦೯೩೦, ೭೬-೪೯; 1080).

[ ರಕ್ಕೆ + — ಇಸು₃ ]

**ರಕ್ಕೆ** (ನಾ). ೧. ರಕ್ಷಿಸುವುದು ; ಕಾಪಾಡುವುದು ; ಪಾಲನೆ : "ರಕ್ಕೆ ರಕ್ಷೆ" (ಶಬ್ದಾಸಿ. ೭೨); ಒಮ್ಮ್ಯತ್ತ್ರಕ್ಕಿಯು ಉಂನಿದ[ಱ]ರಕ್ಕೆಗೆ (ಪ್ಪ್ರಆ. ೦೯೪೦, ೨೯-೪ ; ಸು. 797) ; ಹುತವಹುಂ ರಿಸಿಗೆಱಿಗ ರಕ್ಕೆಯಕ್ಕೆ . . . ಎಂದು ಕಣ್ಣೀರಿಡುವುದುಂ (ರಾಮಾಶ್ವ. ೬೩-೦೦). ೨. ಕಾಪು ; ರಕ್ಷಣೆ : ನುಡಿದನೆ ಕಾವುದನೇ ಎರ್ದೆಗಿಡದಿರು ಜಾನಿಟ್ಟ ರಕ್ಕೆ ನಿನಗೆ (ಕಾವ್ಯಾವ. ೪೯). ೩. ಭೂತ, ಗ್ರಹಪಿಶಾಚಾದಿಗಳ ಶಂಕೆ ತಟ್ಟದಿರಲೆಂದು ಧರಿಸುವ ಯಂತ್ರ, ಭಸ್ಮ, ಅಂಜನ ಮುಂತಾದುವು : ಮಣಿಕಿಂಕಿಣಿ ಗೆಜ್ಜೆ ರಕ್ಕೆ ಕುಂಡಲಯುಗ ಮುತ್ತು ಕಾಲ್ಗಡಗ ಪನೆಸದಿರ್ದುದೊ ಬಾಲಪುಂಡನಾ (ಆದಿಪು. ೩-೬೨) ; ಪಿಡಿಪಶೋಕೆಯ ಬಿಲ್ಲು ಚಿಂದಳರುಡಿಗೆ ಕೆಂಗಜಿಗೋಲು ಹೊದೆಯೆಳೆಮಿಡಿಯ ರಕ್ಕೆಗಳರಳ ಕಂಕಣ ಖಿಡೆಯ (ಶಾಲ್ಯಾ. ೩-೯) ; ರಕ್ಕೆಯುಂ ಪಣೆಗಿಟ್ಟು ತೂಪಿಱಿದು (ಶಂಕ. ೩-೨೯). [< ಸಂ. ರಕ್ಷಾ ]

**ರಕ್ಕೆಗಟ್ಟು** (ಕ್ರಿ). ರಕ್ಷಾಯಂತ್ರವನ್ನು ಕಟ್ಟು : ಪದಪಿಂ ಪ್ರಭುಸೂನುಗೆ ತಾನೆ ರಕ್ಕೆಗಟ್ಟುವ ತೆಱದಿಂದೆ ಕಟ್ಟಿದನಿಳಾಪತಿ ತನ್ನಧಿರಾಜಪಟ್ಟಮಂ (ಚಂದ್ರಕ. ೬-೦೦೨).

[ ರಕ್ಕೆ + ಕಟ್ಟು₁ ]

**ರಕ್ಕೆಯಾಳ್** (ನಾ). ರಕ್ಷಣೆ ನೀಡುವವನು : ಕಾವಲುಗಾರ : ಜನವ ಬಾಗಿಲಂ ಬೇಗದಿಂ ಪೊಕ್ಕು ರಕ್ಕೆಯಾಳ್ಗಳಂ ಲೆಕ್ಕಿಸಿ ನೋಡಿ (ಶರಶ. ೨-೩೮ ವ).

[ ರಕ್ಕೆ + ಆಳ್₃ ]

**ರಕ್ಕೆವಣಿ** (ನಾ). ರಕ್ಷೆಗಾಗಿ ಕಟ್ಟುವ ಮಣಿ ; ರಕ್ಷಾಮಣಿ : ರೋಚನದಿಂ ರಂಜಿಪ ನೂಲ ರಕ್ಕೆವಣಿಗಳ್ಗಳ್ವಾಗೆ (ಕಾದಂಪೂ. ೩೩೩) ; ರಕ್ಕೆವಣಿ ಪುಲಿಯುಗುರ್ ಗೆಜ್ಜೆ . . . ಪರಿಪರಿಯ ಬಾಲದೊಡಿಗೆಗಳನಾಂತು (ಶಬರ. ೩-೩೬).

[ ರಕ್ಕೆ + ಮಣಿ₃ ]

**ರಕ್ಕೆವೊಟ್ಟು** (ನಾ). ಭೂತ, ಪಿಶಾಚಾದಿಗಳಿಂದ ಉಂಟಾಗುವ ತೊಂದರೆಗಳಿಂದ ರಕ್ಷಿಸುವುದಕ್ಕಾಗಿ ಇಡುವ ಬೊಟ್ಟು ; ದೃಷ್ಟಿ ಬೊಟ್ಟು : ತದಂಘ್ರಿಯ ರೇಣುವಕ್ಕ ಜಂಬೊರೆಯುದ ರಕ್ಕೆವೊಟ್ಟೆನಿಸಿರಲ್ಕೆ (ಶಶಶ. ೩-೯೮) : ಲೋಕಲೋಚನಪರಿಪಾತದೋಷಹರಕಾರಣದಿಂದವಳಿಟ್ಟ ರಕ್ಕೆವೊಟ್ಟಿನೆ ನಸುಗರ್ಪು ಕಣ್ಗೊಳಿಸಿದತ್ತು ಕುಚಂಗಳ ಚೂಚುಕಂಗಳೊಳ್ (ಶಾಂತೀಶ್ವ. ೪-೨೭).

[ ರಕ್ಕೆ + ಬೊಟ್ಟು₃ (<ಬಟ್ಟು) ]

**ರಕ್ತ** (ಗು). ೧. ಬಣ್ಣ ಹಾಕಿದ ; ಬಣ್ಣ ಬಳಿದ. ೨. ಕೆಂಪುಬಣ್ಣದಿಂದ ಕೂಡಿದ ; ಕೆಂಪಾದ : ವನಕರಿಕುಂಭಪಾಟನ ಪಟಿಷ್ಠ ಕಠೋರ ನಖಪ್ರಹಾರಭೇದನ ಗಳಿತಾ[ಸ್ರು] ರಕ್ತನವಮೌಕ್ತಿಕ ಪಂಕ್ತಿವಿಳಾಸ ಭಾಸುರಾನನನೆನೆ (ಶಂಕಥಾ. ೦೩-೩೦). ೩. ಅಕ್ಕರೆಯ ; ಪ್ರೀತಿಯ. (ನಾ). ೪. ಕೆಂಪು ; ಕೆಂಪುಬಣ್ಣ : "ಅರುಣಃ, ಶೋಣಃ, ರಕ್ತಃ . . . ಲೋಹಿತಃ — ಈ ೭ ಕೆಂಪು" (ಹಲಾಯು. ೦೨೦-೪೯) ; ಸುರಗಿಪ್ರಸೂನಮಂ ಕೊಂಡು ಧೃತರಕ್ತಕರವೀರನೇಟ್ಟಂದು (ಕಾವಶಂ. ೪-೦೭). ೫. ಅನುರಾಗ ; ಪ್ರೀತಿ : "ಅನುರಾಗದೊಳು ಕೆಂಪಿನೊಳು ಕುಂಕುಮದೊಳು ರುಧಿರದೊಳು ರಕ್ತಂ" (ಮಂಗರಾ. ೦೩೦-೩೪). ೬. ಅನುರಾಗವುಳ್ಳ ವ್ಯಕ್ತಿ ; ಅನುರಕ್ತ : ಕೆಂಪೇಱಿ ನೈಜಾಂಶುರಕ್ತಂ ಭಗಣಂ ತತ್ಸೀಕರಂಬೊಲ್ ಮೆಱೆಯೆ (ರಾಜಶೇ. ೬-೨೯). ೭. ಜೀವಿಗಳ ದೇಹದಲ್ಲಿ ಇರುವ ಜೀವದಾಯಕವಾದ ಕೆಂಪುಬಣ್ಣದ ದ್ರವ ; ನೆತ್ತರು : ರುಧಿರ : "ಕ್ಷತಜಂ . . . ಶೋಣಿತಂ, ರಕ್ತಂ— ಈ ೭ ನೆತ್ತರು" (ಹಲಾಯು. ೦೦೪-೧೦) : ಖಳದುಶ್ಶಾಸನವಕ್ಷಸ್ಥತೋಚ್ಚಲತ್ಕೃಷ್ಣರಕ್ತಜಲದಿಂ ಕೋಪಾನಳನಂ ಮನ್ನಿಸದಿನ್ನುಂ ಗಳಗಳಿತ ಸರೋಪ ನಿರ್ಪ ತೆಱದಿಂದಿರ್ದ್ದ (ಗದಾಯು. ೧-೩೭) ; ಆರುಕೋಶಗಳು ಯಾವುವೆಂದರೆ—ಪಿತೃಶರೀರದಿಂದ ಬರುವ ಅಸ್ಥಿ ಸ್ನಾಯು ಮಜ್ಜ, ಮಾತೃಶರೀರದಿಂದ ಬರುವ ರೋಮ ಮಾಂಸ ರಕ್ತ (ಹಿಂದಶಾ. ೩೪). ೮. ಕೆಂಪು ಬಣ್ಣದ ಚಂದನ : "ತ್ರಿಚಂದನಂ — ರಕ್ತ, ಪೀತ, ಸಿತಚಂದನ" (೭೩೦. ೬೦). ೯. ಕುಂಕುಮಕೇಸರಿ : "ಕಾಶ್ಮೀರಾರುಣಮೋಹರಕ್ತಮಿವು ರಕ್ತಾಖ್ಯಂ" (ಶಾಶಾಠ. ೧೨೭). ೧೦. ಕುಸುಂಬೆ ಗಿಡ ಮತ್ತು ಅದರ ಹೂವು. ೧೧. ಅಗ್ನಿಯ ಏಳು ನಾಲಗೆಗಳಲ್ಲಿ ಒಂದು. ೧೨. ತಾಮ್ರ. ೧೩. ಮುಟ್ಟು ; ರಜಸ್ಸು.

**ರಕ್ತದ ಒತ್ತಡ** = (ಶರೀರದ) ರಕ್ತದ ಏರಿಳಿತ : ವಯಸ್ಸಾದವರು ರಕ್ತದ ಒತ್ತಡವನ್ನು ಆಗಿಂದಾಗ್ಗೆ ಪರೀಕ್ಷೆ ಮಾಡಿಸಿಕೊಳ್ಳುವುದು ಒಳ್ಳೆಯದು (ರೂಢಿ). **ರಕ್ತ ಹೀರು** = ೧. ರಕ್ತವನ್ನು ಕುಡಿ; ನೆತ್ತರನ್ನು ಹೀರು: ಜಚ್ಚಿದ ತಗಣೆ ಕಣ್ಣಿಗೆ ಬೀಳುತ್ತದೆಯೆ ? ಅದು ನಿಮ್ಮ ಉಡುಪಿನ ಹೊರಗಿನಿಂದಲೇ ರಕ್ತಹೀರಬಲ್ಲದು (ವಂಟಿರು. ೪೬). ೨. (ಅಲಂ) ತೊಂದರೆ ಕೊಡು ; ಕಾಡು : ಬಾಕಿ ಬರಲಿಲ್ಲವೆಂದು ಅವರು ರಕ್ತಹೀರುತ್ತಾ ಇದ್ದಾರೆ (ರೂಢಿ). [ಸಂ.]

**ರಕ್ತಕ** (ಗು). ೧. ಕೆಂಪಾದ. ೨. ಮೋಹಗೊಂಡ. (ನಾ). ೩. ಕೆಂಪು ಬಣ್ಣ. ೪. ಕೆಂಪುಬಟ್ಟೆ. ೫. ಒಂದು ಬಗೆಯ ಮರ. [ಸಂ.]

**ರಕ್ತಕಂಬಲ, ರಕ್ತಕಂಬಳ** (ನಾ). ಕೆಂಪುಬಣ್ಣದ ಕಂಬಳಿ: ಪಾಂಡುಕಪಾಂಡುಕಂಬಲ ರಕ್ತಕಂಬಲಾ [ಶಾಶಾ. ಶಾ]ಶಿರಕ್ತಕಂಬಲ . . . ಸಿಂಹಾಸನಾಲಂಕೃತಮುಮಾಗಿ (ಆದಿಪು. ೯-೪೯ ವ). **ರಕ್ತಕಂಬಳ**: ರಕ್ತಕಂಬಳಮನಿದನೆಲ್ಲಿ ಪಡೆದೆ (ಶಾಪುಂಶ. ೭೩). [ಸಂ.]

**ರಕ್ತಕಂಬಳ** 'ರಕ್ತಕಂಬಲ' ನೋ.

**ರಕ್ತಕಟ್ಟು** (ನಾ). ದನಗಳಿಗೆ ಬರುವ ಒಂದು ಬಗೆಯ ರೋಗ : ಆಮಶಂಕೆ : (ಎಸಪ್ಪ. XV. ೪೦). [ರಕ್ತ + ಕಟ್ಟು₂]

**ರಕ್ತಕಣ** (ನಾ). ರಕ್ತದ ಸೂಕ್ಷ್ಮಾಂಗ: ಕಾಯಿಲೆಯು ಹೆಚ್ಚಾದಾಗ ರಕ್ತಕಣಗಳು ವೇಗವಾಗಿ ಕಳಮಟ್ಟಕ್ಕಿಳಿಯುತ್ತವೆ (ಕಿಲಕೋ. ೦೯); ರಕ್ತಕಣಗಳೂ ಜೀವದೆಣಗಳೂ ಕುಣಿಯ ಕೊಡುತ ಹೊಳಲು! (ಕೃಶಾಕು. ೨೭-೦೩). [ಸಂ.]

**ರಕ್ತಕರ್ದಮ** (ನಾ). ಕೆಂಪುಬಣ್ಣದ ಸುಗಂಧದ ಕಲ್ಕ. – ಮಂದವಾದ ದ್ರವ: ಪೀನಕ್ಷು ರಕ್ತಕರ್ದಮನೂನ ಸುಗಂಧಾಧಿಕಾರಮರ್ದನಕುಶಲಂ

ಕಾನಿಂಗಿತಜ್ಞನುಂ ವಿಜ್ಞಾನಿಹಿತಂ ಶಾಚಿ ಪೀಠವರ್ಧನನೆನಿಕುಂ (ಮಲ್ಲಿ. ೧೧-೪೦). ' ಯಕ್ಷಕರ್ದಮ ' ಪರಾ. [ಸಂ.]

**ರಕ್ತಕಾಸ** (ನಾ). ಕೆಮ್ಮಿದಾಗ ರಕ್ತ ಬೀಳುವ ಒಂದು ಬಗೆಯ ರೋಗ : ತಡಕಲು ಬೇರನ್ನು ಗೋಮೂತ್ರದಲ್ಲರೆದು ಕುಡಿಯಲು ರಕ್ತಕಾಸ ನಿಲ್ಲುವುದು (ಸಕವೈ. ಕಾ. ೪೩೩). [ಸಂ.]

**ರಕ್ತಕೃಚ್ಛ್ರ** (ನಾ). (ಮೂತ್ರದಲ್ಲಿ ರಕ್ತಬೀಳುವ) ಒಂದು ಬಗೆಯ ರೋಗ : ರಕ್ತಕೃಚ್ಛ್ರಕ್ಕೆ : – ಮಡುಹಾಗಲಗೆಡ್ಡೆ ಇದಂ ಅರೆದು ಮೊಸರುನೀರಲ್ಲಿ ಕವಡಿ ಸಕ್ಕರೆ ಸಹ ಕೊಳ್ಳಲು, ರಕ್ತಕೃಚ್ಛ್ರಹರ (ಖಸ್ವ. ೦೯೯). [ಸಂ.]

**ರಕ್ತಕೊಡಗೆ,** ರಕ್ತಕೊಡಿಗೆ, ರಕ್ತಗೊಡಿಗೆ (ನಾ). ನಾಡಿಗಾಗಿ ಅಥವಾ ಅರಸನಿಗಾಗಿ ಪ್ರಾಣ ತೆತ್ತ ವೀರನ ಕುಟುಂಬದವರಿಗೆ ಕೊಡುವ ದಾನ, – ಉಂಬಳಿ : ನೆತ್ತರಕೊಡಿಗೆ : ಭಟ್ಟಮಾನ್ಯ ಉಂಬಳಿ ರಕ್ತಕೊಡಗೆ ಮುಂತಾದುವೇನೂ ಹೆಚ್ಚು ಕಡಮೆಯಾಗದಂತೆಯೂ . . . ಕರಣಿಕರು ವಿಚ್ಚತ್ತಿಸಬೇಕು (ಚಕಾಗಂ. ೩೬-೨೨). **ರಕ್ತಕೊಡಿಗೆ** : ಹರತಿ ಬೋತಿ ಚನ್ನನು ಹರತಿ ಮುತ್ತಿಗೆಯಲು ಪೂ × × ಹೊರಟು ತಲೆಮೇಲೆ ಬಿದ್ದು ಜಗಳದಲಿ ಮ್ರುತವಾಗಲಾಗಿ ಕೊಟ ರಕ್ತಕೊಡಿಗೆ ಮಾನ್ಯದ ಹೊಲವನ್ನು . . . ಅನುಭವಿಸಿಕೊಂಬುದು (ಎಕ. XI. ಹಿಂಯೂ. ೦೯-೦೪; 1705); ಯುದ್ಧದಲ್ಲಿ ತೀರಿಹೋದ ಜನಗಳ ಹೆಂಡಿರು ಮಕ್ಕಳಿಗೆ ರಕ್ತ ಕೊಡಿಗೆ ಎಂಬದಾಗಿ ಭೂಮಿಯನ್ನು ಕೊಟ್ಟು (ಮಹಾವಂ. I. ೦೯೨). **ರಕ್ತಗೊಡಿಗೆ** : ಆಯ ಗಉಡರು ಅವನ ಕೆಸಿದೋಜನು ಮಗನಿಗೆ ರಕ್ತ ಗೊಡಿಗೆ ಮಾನ್ಯ (ಎಕ. X (೮). ಕಿನ್ನ. ೦೨೦-೩; 15ನೆಯ ಶತ).

[ರಕ್ತ + ಕೊಡಗೆ (< ಕೊಡಂಗೆಯ್$_2$)]

**ರಕ್ತಕೊಡಿಗೆ** 'ರಕ್ತಕೊಡಗೆ' ನೋ.

**ರಕ್ತಕೋಷ್ಠ** (ನಾ). ಒಂದು ಬಗೆಯ ಮರ : "ರಕ್ತಸೇತ್ರಃ – ರಕ್ತಕೋಷ್ಠ, ಪತಂಗ" (ಒಕಂ. ೦೩೯). [ಸಂ.]

**ರಕ್ತಕ್ಷಯ** (ನಾ). ದೇಹದಲ್ಲಿ ರಕ್ತವು ಕಡಮೆಯಾಗುತ್ತಾ ಹೋಗುವ ಒಂದು ಬಗೆಯ ರೋಗ : ಬಿಳಿಚುರೋಗ : ಕೆಲವು ಜಾತಿಯ ಅಣಬೆಗಳಲ್ಲಿ ಫೋಲಿಕ್ ಆಮ್ಲ ಹೆಚ್ಚಾಗಿರುವುದೆಂದು ತಿಳಿದುಬಂದಿದೆ. ಈ ಆಮ್ಲವನ್ನು ರಕ್ತಕ್ಷಯದಿಂದ ನರಳುವ ರೋಗಿಗಳಿಗೆ ಕೊಡುತ್ತಾರೆ (ಕವಿಕೋ. I. ೨೨೩) ; ರಾಘಪ್ಪನ ಹೆಂಡತಿ ಬಹುದಿನಗಳಿಂದ ರಕ್ತಕ್ಷಯ ದಿಂದ ಬಳಲುತ್ತಿರುವಳು (ಗಂಡಾಹು. ೪೩). [ ಸಂ. ]

**ರಕ್ತಗತ** (ಗು). ೧. ರಕ್ತದಲ್ಲಿ ಹೊಕ್ಕ, – ಸೇರಿದ. ೨. ಬಹುಕಾಲ ದಿಂದ ಇರುವ : ತಾವರೆಪಿಲೆ, ರಂಜಕ . . . ಇವು ಸಮಭಾಗ ಕಷಾಯವಿಕ್ಕಿ ಸೇವಿಸೆ, ರಕ್ತಗತಜ್ವರ ಗುಣವಹುದು (ಸಕವೈ. ೦೦೭). (ನಾ). ೩. ರಕ್ತದಲ್ಲಿ ಸೇರಿರುವುದು. ೪. (ಅಲಂ) ಹುಟ್ಟಿನಿಂದ ಬಂದುದು ; ವಂಶಪಾರಂಪರ್ಯವಾದುದು.

**ರಕ್ತಗತವಾಗು** = ೧. ರಕ್ತದಲ್ಲಿ ಸೇರು : ಖರ್ಜೂರದಲ್ಲಿರುವ ಸಕ್ಕರೆಗೆ ಬಹುಬೇಗನೆ ರಕ್ತಗತವಾಗುವ ಗುಣವಿದೆ (ಆಹಾರ. ೭೯) ; ಮೇವನ್ನು . . . ರಕ್ತಗತವಾದ ಮೇಲೆ, ಇವನ್ನು ದೇಹವು ಶಕ್ತಿ ಉತ್ಪತ್ತಿಗೆ ಉಪಯೋಗಿಸಿಕೊಳ್ಳುವುದು (ಗೃಹವಿ. ೦೪). ೨. ಬಹಳ ಕಾಲದಿಂದ ಇರು ; ವಂಶಾನುಗತವಾಗಿರು : ಸಹನೆ ಶ್ರದ್ಧೆ ತನ್ನ ಹಿರಿಯರಿಂದ ಪಡೆದ ಪ್ರಸಾದಗುಣ. ಈ ಸಂಸ್ಕಾರ ಅವಳಂತಹ ಹೆಣ್ಣಿಗೆ ರಕ್ತಗತವಾದದ್ದು (ಹೊಸತು ೨೦). [ಸಂ.]

**ರಕ್ತಗುಂಜಿ** (ನಾ). ಕೆಂಪುಬಣ್ಣದ ಗುಲಗಂಜಿ : "ರಕ್ತಗುಂಜೀ .. ಅರಗು. ಮಂಜಿಷ್ಠ. ರಕ್ತಗುಂಜಿ" (ಒಕಂ. ೦೩೩). [ < ಸಂ. ರಕ್ತಗುಂಜಾ ]

**ರಕ್ತಗೊಡಿಗೆ** ' ರಕ್ತಕೊಡಗೆ' ನೋ.

**ರಕ್ತಗ್ರಹಣಿ** (ನಾ). ಗ್ರಹಣಿರೋಗದಲ್ಲಿ ಒಂದು ಬಗೆ ; ರಕ್ತಬೇಧಿ : ಅತ್ತಿತಿಗುಡು, ಕೊಡಸಿಗೆತಿಗುಡು . . . ಚೂರ್ಣಂ ಮಾಡಿ . . . ತಿಳುಪ್ಪದಲ್ಲಿ ಕಲಸಿ ಕೊಳ್ಳಲು ರಕ್ತಗ್ರಹಣಿ ಮಾಣ್ಗುಂ (ಸಕವೈ. ೩೯೮). [ಸಂ.]

**ರಕ್ತಚಂಚು** (ನಾ). ೧. ಕೆಂಪುಬಣ್ಣದ ಕೊಕ್ಕು. ೨. ಕೆಂಪುಬಣ್ಣದ ಕೊಕ್ಕಿರುವ ಪಕ್ಷಿ ; ಗಿಳಿ : ಪಿಂಗಳವಾದ ನೆಲ್ಲ ತೆನೆಯಂ ನಸುಗರ್ಚಿದ ರಕ್ತಚಂಚು ಪಕ್ಷಂಗಳ ಹಾದ್ವಲಚ್ಛವಿ ಮನಂಗೊಳೆ ಪಾಱುವ ಕೀರಮಾಲೆ . . . ರಂಜಿಕುಂ (ಜಗಂ. ೪-೬೬). [ಸಂ.]

**ರಕ್ತಚಂದನ** (ನಾ). ಚಂದನದಲ್ಲಿ ಒಂದು ಬಗೆ ; ಕೆಂಪು ಶ್ರೀಗಂಧ : "ಕರತ್ — ರಕ್ತಚಂದನ" (ಒಕಂ. ೨೦) ; ಶಾರಿಬಾದಿಗಣ : — ಸೊಗದೆ ಬೇರು . . . ಇಪ್ಪೆ ಹೂವು, ಶ್ರೀಗಂಧ, ರಕ್ತಚಂದನ, ಅತಿಮಧುರ (ಸಕವೈ. ೮೦ ೩೦೬). [ಸಂ.]

**ರಕ್ತಚಲನೆ** (ನಾ). (ದೇಹದಲ್ಲಿ) ರಕ್ತವು ಹರಿಯುವಿಕೆ ; ರಕ್ತಸಂಚಾರ : ವಿಟಮಿನ್‌ಗಳು ದೇಹದ ಬೆಳವಣಿಗೆಗೆ ರಕ್ತಚಲನೆ, ಪಚನಕಾರ್ಯ ಇತ್ಯಾದಿ ಕೆಲಸಗಳು ಸುಗಮವಾಗಿ ವ್ಯವಸ್ಥಿತವಾಗಿ ನಡೆಯುವಂತೆ ಸಹಾಯಕ ವಾಗುವುವು (ಗೃಹವಿ. ೬). [ ಸಂ. ರಕ್ತಚಲನ ]

**ರಕ್ತಚ್ಛದ** (ನಾ). ಕೆಂಪುರೆಕ್ಕೆಗಳುಳ್ಳ ಒಂದು ಬಗೆಯ ಹಕ್ಕಿ : "ರಕ್ತಚ್ಛದಂ ಪಿಕ್ಕುಳಿಕೆ" (ಮಂಗರಾ. ೩೨-೯). [ಸಂ.]

**ರಕ್ತಜಿಹ್ವಕ** (ನಾ). ನಾಲಗೆಯು ಕೆಂಪುಬಣ್ಣಕ್ಕೆ ತಿರುಗುವ ಒಂದು ಬಗೆಯ ರೋಗ : ನಾಲಗೆ ರಕ್ತವರ್ಣವಾಗಿ ಒಣಗಿ ಮುಳ್ಳುಮುಳ್ಳಾಗಿ ರ್ಪದು . . . ರಕ್ತಜಿಹ್ವಕಸನ್ನಿದೋಷಮೆಂದರಿವುದು (ಸಕವೈ. ೦೭೦). [ಸಂ.]

**ರಕ್ತತುಂಡ** (ನಾ). = ರಕ್ತಚಂಚು ೨ : ಪಸರಿಸಿ ಶಾಖಾಭುಜದೊಳ್ ಮಿಸುಗುವ ನಖಪದಮನಧರಪಲ್ಲವಮಂ ಖಂಡಿಸಿ ರಕ್ತತುಂಡನೇಂ ಪುಟ್ಟಿಸಿದುದೊ ಸಹಕಾರಲತಿಕೆಗಂಗಜಶರಮಂ (ಮಲ್ಲಿಪು. ೩-೩೪). [ಸಂ.]

**ರಕ್ತತ್ವ** (ನಾ). ೧. ಕೆಂಪುಬಣ್ಣ : ಸುದತಿಯ ಚಳನತಳಕ್ಕತಿಮೃದುತ್ವ ರಕ್ತತ್ವ ಮುಚಿತಮೆಂಸೆ ಸೊಗಯಿಸುಗುಂ (ಚಂದ್ರಪ್ರ. ೦೦-೦೦೪). ೨. ಅನುರಾಗ ; ಪ್ರೀತಿ. ೧, ೨ : ಅನುಂ ಪ್ರತೀಚೀಸಮಾಗಮಸಂತುಷ್ಟನೆನಪ್ಪೆನೆಂದು ದಿನಪಂ ರಕ್ತತ್ವದಿಂ ಪೋಗೆ ರಾಗಮೆ ತತ್ಕುಂಕುಮರಾಗಮಾದುದಪರಾಲಂ ಕಾರವಿಸ್ತಾರದೊಳ್ (ಶಾಂತಿಪು. ೬-೩೦). [ಸಂ.]

**ರಕ್ತದಾಹ** (ನಾ). (ಕೊಲೆ, ಯುದ್ಧ ಮುಂತಾದ ಸಂದರ್ಭಗಳಲ್ಲಿ ಜನರ) ರಕ್ತವನ್ನು ಚೆಲ್ಲುವ ಬಯಕೆ : ರಕ್ತದಾಹಕ್ಕೆ ಮಾಡಿದ ಕೃತ್ಯ ಅಂತಾನೂ ಹೇಳೋ ಹಾಗಿಲ್ಲ (ಪೀರಯೋ. ೦೦). [ಸಂ.]

**ರಕ್ತದೇಶಿ** (ನಾ). [ಸಂಗೀತ] ಒಂದು ರಾಗದ ಹೆಸರು : ಗುಂಡಾಕ್ರೀ ರಕ್ತದೇಶಿ ಲಲಿತಾ . . . ವಸಂತರಾಗಂ ಇವಾದಿಯಾದ ರಾಗಂಗಳಂ ಪಾಡುತ್ತಿರೆ (ಹರಿಶ್ಚ. ೨-೯೦). [ ? ]

**ರಕ್ತಧಾತು** (ನಾ). ೧. ಕೆಂಪುಬಣ್ಣದ ಕಲ್ಲು ; ಕಾವಿ. ೨. ರಕ್ತದ ಮೂಲಾಂಶ : ಧಾತುಗಳು ರಸಧಾತು, ರಕ್ತಧಾತು, ಮಾಂಸಧಾತು . . . ಶುಕ್ಲಧಾತು ಎಂದು ಏಳು ತೆರನಾಗಿವೆ (ಸಕವೈ. ೯೮). ೩. ತಾಮ್ರ. [ಸಂ.]

**ರಕ್ತಧಾರೆ** (ನಾ). ನೆತ್ತರ ಪ್ರವಾಹ, – ಹೊನಲು : ಮುಂಚೆ ಮುನ್ನವೆ ಸಚಿವಾಶ್ವಪ್ಪೈದೆ ಕೊಳಗಿಂ ತಲೆ ಬಿಂಪಿಸಿ ಪಾಱೆ ಮೆಟ್ಟಿತಂದವಿರಳರಕ್ತಧಾರೆ ಪೊಜಿಸೂಸಿರೆ ಬಾಲನ ಕಂಠನಾಳಮಂ (ರಾಜಶೇ. ೦೩. ೯೬). [ಸಂ. ರಕ್ತಧಾರಾ]

**ರಕ್ತನಾಳ** (ನಾ). ದೇಹದಲ್ಲಿ ರಕ್ತ ಚಲಿಸುವ ನಾಳ ; ನರ ; ಸೆರೆ : ರಕ್ತದ ಒತ್ತಡವನ್ನು ಮತ್ತೆ ಏರಿಸಲು ಇದನ್ನು ನಿಧಾನವಾಗಿ ರಕ್ತನಾಳದ ಮೂಲಕ ಕೊಡಬಹುದು (ಕವಿಕೋ. I. ೨೨೩). [ಸಂ. ರಕ್ತನಾಲ]

**ರಕ್ತನೀರು** (ನಾ). ಕೆಂಪುಬಣ್ಣದ ನೀರು : ಓಕುಳಿ : ಆರತಿಯಿಂ ರಕ್ತನೀರಿಂದ ಕುಸುಮೋಪಹಾರದಿಂ . . . ಮಂಗನನಾ ನಾರಿ ಸತ್ಕರಿಸಿ ದಳಂದು (ಕುಮಾರಾ. ೦೩-೦೬೩). [ರಕ್ತ + ನೀರು$_1$ (< ನೀರ್$_1$)]

**ರಕ್ತಪ** (ನಾ). ರಕ್ತವನ್ನು ಕುಡಿಯುವವನು; ರಾಕ್ಷಸ. [ಸಂ.]

**ರಕ್ತಪದಿ** (ನಾ). ಒಂದು ಬಗೆಯ ಸಸ್ಯ; ಶೀಘ್ರಿ : "ಹತ್ತಿಪದಿ ಮುರುಟುಪಂ ರಕ್ತಪದಿ ಶೀಘ್ರಿ" (ಶಬ್ದಮಣಿ. ೯೩-೯೩). [ಸಂ. ರಕ್ತಪದೀ]

**ರಕ್ತಪರಿಚಲನೆ** (ನಾ). = ರಕ್ತಚಲನೆ : ರಕ್ತಪರಿಚಲನೆ (ರಕ್ತಕೋಶದಿಂದ ಅಪಧಮನಿಗಳಲ್ಲಿ ಹೊರಟು ಮರಳಿ ಅಭಿಧಮನಿಗಳ ಮೂಲಕ ರಕ್ತಕೋಶವನ್ನು ಸೇರುವುದು) (circulation. ಜಂಕಶ); ಕೀಟಗಳಲ್ಲಿ ರಕ್ತಪರಿಚಲನೆ ಪ್ರಧಾನಪ್ರಾಣಿಗಳಂತಲ್ಲದೆ, ಮುಖ್ಯವಾಗಿ, ಅಂಗಾಂಗಗಳ ರಾಸಾಯನಿಕ ಬದಲಾವಣೆಗಳ ಮಾಧ್ಯಮ (ಕೀಟಪ. ೩೦). [ಸಂ. ರಕ್ತಪರಿಚಲನ]

**ರಕ್ತಪಾತ** (ನಾ). (ಅಲಂ) ಸಾಮೂಹಿಕವಾದ ಕೊಲೆ : ಕನ್ಯಾಕುಮಾರಿಯಿಂದ ಕಾಶ್ಮೀರದವರೆಗೆ ರಕ್ತಪಾತವಾದೀತು (ದ್ರಾಶಿವ. ೭೪). [ಸಂ.]

**ರಕ್ತಪಾನ** (ನಾ). ರಕ್ತವನ್ನು ಕುಡಿಯುವಿಕೆ : ರಣದೊಳಭಿಲಾಷೆಯಿಂ ಪೈಶಾಚರಂತೆ ಹೇಸದೆ ರಕ್ತಪಾನಮಂ ಮಾಡಿಯೊಡಲ ಪೋಷಿಸಿದೆ (ಕೈ ಐಶಾ. ೨-೩೦). [ಸಂ.]

**ರಕ್ತಪಾಯಿ** (ನಾ). ೧. ರಕ್ತವನ್ನು ಕುಡಿಯುವವನು; ರಾಕ್ಷಸ. ೨. ತಿಗಣೆ. [ಸಂ. ರಕ್ತಪಾಯಿನ್]

**ರಕ್ತಪಿಂಡಾಲ** (ನಾ). ಒಂದು ಬಗೆಯ ಔಷಧೀಸಸ್ಯ : "ಅಲುಃ — ರಕ್ತಪಿಂಡಾಲು" (ಓಷ. ೦೦). [< ಸಂ. ರಕ್ತಪಿಂಡಾಲು]

**ರಕ್ತಪಿಂಡಾಲು** (ನಾ). = ರಕ್ತಪಿಂಡಾಲ : "ಪತ್ರಾಲುಃ—ರಕ್ತಪಿಂಡಾಲು" (ಓಷಧಿ. ೯೦). [ಸಂ.]

**ರಕ್ತಪಿತ್ತ** (ನಾ). ಒಂದು ಬಗೆಯ ರೋಗ; ಪಿತ್ತವಿಕಾರದಿಂದ ಉಂಟಾಗುವ ರಕ್ತಪರಿಚಲನೆಯ ವಿರುಪೇರು : ನೆಲ್ಲಿಚೆಟ್ಟಿನ ಚೂರ್ಣವ ಮಾಡಿ ಸಕ್ಕರೆಯ ಬೆರಸಿ, ತುಪ್ಪವ ಕಲಸಿ ಮೆಲ್ಲಲು ರಕ್ತಪಿತ್ತ ಹರ (ವೈದ್ಯಶಿ. ೦೦); ನಾಡಿಯು . . . ಹಲ್ಲಿಯ ಹಾಗೆ ಆಡಿದರೆ ರಕ್ತಪಿತ್ತವೆಂಬುವ ಹಾಗೂ . . . ತಿಳಿವುದು (ಸಕವ. ೦೨). [ಸಂ.]

**ರಕ್ತಪಿಪಾಸಿ** (ನಾ). ರಕ್ತವನ್ನು ಕುಡಿಯುವ ದಾಹವುಳ್ಳವನು : ಪೋಲೀಸರ ದೃಷ್ಟಿಯಲ್ಲಿ ಈತ ರಕ್ತಪಿಪಾಸಿ ದೈತ್ಯ (ಅಶ್ವರ್ಶ. ೩೩). [ಸಂ. ರಕ್ತಪಿಪಾಸಿನ್]

**ರಕ್ತಪಿಪಾಸೆ** (ನಾ). = ರಕ್ತದಾಹ. [ ಸಂ. ರಕ್ತಪಿಪಾಸಾ ]

**ರಕ್ತಪುಚ್ಛ** (ನಾ). ಕೆಂಪುಬಣ್ಣದ ಕೊಂಡಿಯಿರುವ ಒಂದು ಬಗೆಯ ಚೇಳು; ಕೆಂಚೇಳು : ಕುಂದುರುಜ, ರಕ್ತಪುಚ್ಛ, ಎಮ್ಮೆಚೇಳು, ಶುಕ್ಲಕೀಟ ಎಂದು ಚೇಳುಗಳು ನಾಲ್ಕು ತೆರ (ವೈದ್ಯಶಾ. II, ೯೦). [ಸಂ.]

**ರಕ್ತಪುನರ್ನವ** (ನಾ). ಕೆಂಪು ಹೂವುಗಳನ್ನು ಬಿಡುವ ಒಂದು ಬಗೆಯ ಸಸ್ಯ : ಅಡಕುಪುಟ್ಟನ ಗಿಡ, ಬಸವಡಿಕೆ, ಸನಾದಿಕಾ, ಗೊನೆಜಾಲಿ, ರಕ್ತಪುನರ್ನವ (ವೃಕ್ಷಶಿ. ೦೩-೨೩೦). [ಸಂ. ರಕ್ತಪುನರ್ನವಾ]

**ರಕ್ತಪುರ** (ನಾ). ಒಂದು ಊರಿನ ಹೆಸರು; P ಈಗಿನ ವಿಜಾಪುರ ಜಿಲ್ಲೆಯ ಪಟ್ಟದಕಲ್ಲು. ಇದು 'ಕಿಸುವೊಳಲ್' ಎಂಬುದರ ಸಂಸ್ಕೃತೀಕರಣ : ರಕ್ತಪುರಮಧಿವಸತಿ ವಿಜಯಸ್ಕನ್ಧಾವಾರೇ (ಎಇ. IX, ೨೦೯-೩೩; 750). [ಸಂ.]

**ರಕ್ತಪುಷ್ಪ** (ನಾ). ೧. ಕೆಂಪುಹೂವು : ರಕ್ತಪುಷ್ಪವು ಗಂಧಭೂಷಣರಕ್ತಕರಪಾತ್ರೇ (ದೇವೀಮ. ೩೯೬). ೨. ಕೆಂಪುಹೂವುಗಳನ್ನು ಬಿಡುವ ಮುತ್ತುಗ ಮೊದಲಾದ ಮರಗಳು. [ಸಂ.]

**ರಕ್ತಪೈತ್ಯ** (ನಾ). = ರಕ್ತಪಿತ್ತ : ದಾಹ, ಮೂರ್ಛೆ, ಭ್ರಮೆ, ರಕ್ತಪೈತ್ಯಮುಂತಾದ ಸಕಲರೋಗಗಳೂ ತತ್‍ಕ್ಷಣವೇ ನಾಶವಾಗುವುವು (ಸಕವ. ೯೩). [ರಕ್ತ + ಪೈತ್ಯ]

**ರಕ್ತಪ್ರಕೋಪ** (ನಾ). = ರಕ್ತಪಿತ್ತ : ರಕ್ತಪ್ರಕೋಪಕ್ಕೆ :– ಪಥ್ಯ ರಾಜಾನ್ನ, ಹೆಸರು, ತೊಗರಿ ಇಷ್ಟು ಪಥ್ಯ (ವೈದ್ಯಶಿ. ೦೯೦). [ಸಂ.]

**ರಕ್ತಪ್ರಮೇಹ** (ನಾ). ಮೂತ್ರದಲ್ಲಿ ರಕ್ತವು ಹೋಗುವ ಒಂದು ಬಗೆಯ ರೋಗ : ರಕ್ತಪ್ರಮೇಹ . . . ಕಲ್ಲುದೀಳುವುದು ಇವಕ್ಕೆಲ್ಲಾ ಅಮರದ ಬಳ್ಳಿಯಲ್ಲಿ ೨೧ದಿನ ಕೊಡುವುದು (ವೈದ್ಯಶಿ. ೯೨). [ಸಂ.]

**ರಕ್ತಪ್ರಸೂನ** (ನಾ). = ರಕ್ತಪುಷ್ಪ ೧ : ಮೊದಲೊಳ್ ಮುಳ್ ಮೇಗೆ ವಿಚಿತ್ರದಳತ ರಕ್ತಪ್ರಸೂನಮೆಂಬಿನಿತಜಿಹೊಳಗಾಗದು ಶಾಲ್ಮಲಿವನರುಹಮಾವುದುತ್ತರಂ ನಿನಗಮಿಂದಿರವಾದಿಗಮಧಿಪಾ (ಶಾಂತಿಪು. ೯-೦೩೨). [ಸಂ.]

**ರಕ್ತಬೀಜ** (ನಾ). ೧. ದಾಳಿಂಬೆ ಗಿಡ. ೨. ಒಬ್ಬ ರಾಕ್ಷಸನ ಹೆಸರು : ಕುಸುರಿದರಿವುದು ರಕ್ತಬೀಜನಂ (ಅಂಬಿಕಾ. ೯೦-೯೮). [ಸಂ.]

**ರಕ್ತಬೋಳ** (ನಾ). ಒಂದು ಬಗೆಯ ಔಷಧೀಸಸ್ಯ ಮತ್ತು ಅದರ ಅಂಟು : ಬಾಣಂತಿಬೋಳ, ರಕ್ತಬೋಳ . . . ತಗೆದುಕೊಳ್ಳಲು ಕ್ಷಯ, ಪಾಂಡು, ಕಾಮಾಲೆ, ಪೈತ್ಯರೋಗ ಸಹ ಗುಣಮಕ್ಕುಂ (ಸಕವ. ೨೩೨); ಒಂದು ಚೂರು ಡಿಕ್ಕಮಾಲಿ ಮತ್ತು ರಕ್ತಬೋಳ (ಯಾವುದಾದರೊಂದು ಸಾಕು) ವನ್ನು ನೀರಲ್ಲಿ ತೇದು . . . ಕೆಳಹೊಟ್ಟೆಗೆ ತೆಳುವಾಗಿ ಹಚ್ಚುವುದು (ಮನೆಮ. ೬). [ರಕ್ತ + ಬೋಳ$_3$ ( < ಬೋಟ$_3$ )]

**ರಕ್ತಭೇದಿ** (ನಾ). ಮಲದಲ್ಲಿ ರಕ್ತ ಹೋಗುವ ಒಂದು ಬಗೆಯ ರೋಗ : ಆಡುಸೋಗೆ . . . ಎಲೆಗಳ ರಸವನ್ನು ಅಮಶಂಕೆ ರಕ್ತಭೇದಿಗಳಿಗೆ ಔಷಧವಾಗಿ ಉಪಯೋಗಿಸುವರು (ಸಸ್ಯಕೋ. I, ೩೨೯). [ಸಂ.]

**ರಕ್ತಮಂಡಲ** (ನಾ). ೧. ರಕ್ತಮಾಲಿನ್ಯದಿಂದ ಚರ್ಮದ ಮೇಲೆ ತೋರುವ ಕೆಂಪು ಕಲೆ, –ಚುಕ್ಕೆ : ಎಕ್ಕ, ಕಳ್ಳಿಯ ಹಾಲನ್ನರೆದು ಪಂಚಲವಣಂ ಬೆರಸಿ, ಅದನ್ನು ಆಡು, ಹಸು, ಕತ್ತೆ, ಕುದುರೆ ಇವುಗಳ ಮೂತ್ರದೊಳು ಹಾಕಿ ಎಣ್ಣೆಯನ್ನೆರೆದು ತೈಲವನಟ್ಟು ಪೂಸಿದರೆ ರಕ್ತಮಂಡಲ, ಕುಷ್ಠ . . . ಇವೆಲ್ಲವನ್ನೂ ಕೆಡಿಸುಗುಂ (ವೈದ್ಯಶಿ. ೦೫೯). ೨. ಮೈಮೇಲೆ ಕೆಂಪುಮಚ್ಚೆಗಳಿರುವ ಒಂದು ಬಗೆಯ ಹಾವು. [ಸಂ.]

**ರಕ್ತಮುಖ** (ನಾ). (ಕೋಪದಿಂದ) ಕೆಂಪಾದ ಮುಖವುಳ್ಳವನು : ಹೊರಳಿದನು ಹಮ್ಮೈಸಿ ವಧಿಮುಖ ರಕ್ತಮುಖನಾಗಿ (ಕೌರವ. ೩೨-೩೮). [ಸಂ.]

**ರಕ್ತಮೂತ್ರ** (ನಾ). ಮೂತ್ರದಲ್ಲಿ ನೆತ್ತರು ಬೀಳುವ ಒಂದು ಬಗೆಯ ರೋಗ : ಆಲದ ಬಿಳಲು, ಅದರ ಮೊಗ್ಗುಗಳು ಎರಡನ್ನೂ ಮಜ್ಜಿಗೆಯಲ್ಲಿ ಅರೆದು . . . ತುಪ್ಪ ಸಹ ಮೂರು ದಿವಸ ಉಣ್ಣಲು ರಕ್ತಮೂತ್ರರೋಗ ಗುಣ (ವೈದ್ಯಶಿ. ೦೦೯). [ಸಂ.]

**ರಕ್ತಮೂಲವ್ಯಾಧಿ** (ನಾ). ಮಲದಲ್ಲಿ ರಕ್ತ ಹೋಗುವ ಮೂಲವ್ಯಾಧಿ ರೋಗ : ಬೋಳ, ನಾಗಕೇಸರ, ಖಂಡಸಕ್ಕರೆ ಇವಂ ಎಳದಿನ ಗಟ್ಟಿ ಬೆಣ್ಣೆಯಲ್ಲಿ ಮೆಲೆ ರಕ್ತಮೂಲವ್ಯಾಧಿ ಪರಿಹರ್ಗಂ (ವೈದ್ಯಶಿ. ೬೨). [ಸಂ.]

**ರಕ್ತಮೇಹ** (ನಾ). = ರಕ್ತಮೂತ್ರ : ಉಪ್ಪುಂ ಕರ್ವಿನ ರಸಮುಂ ಪಿಪ್ಪಲಿಯುಂ ಘೃತಮುಮೆಳ್ಳುಮಿನಿತುಮನೋರಂತಪ್ಪಿನಮಾ[ಮೂ]ತುಗೆ ಸ್ಥಾಲಿಯೊಳ್ ತಪ್ಪಿಲ್ಲದೆ ಹಯಕ್ಕೆ ರಕ್ತಮೇಹಂ ಕಿಡುಗುಂ (ಅಶ್ವಶಾ. ೦೦-೨೩); ಶುಕ್ಲವೂ ರಕ್ತವೂ ಮೂತ್ರವೂ ಮೂರೂಕೂಡಿ ಬೀಳುವುದು. ಈ ಲಕ್ಷಣಗಳುಳ್ಳುದೆ ಕ್ರಮದಿಂದ ರಕ್ತಮೇಹ, ಶುಕ್ಲಮೇಹವೆಂದರಿವುದು (ಸಕವ. ೩೩೦). [ಸಂ.]

**ರಕ್ತಮೋಹನೆ** (ನಾ). = ರಕ್ತಮೂತ್ರ : ಎ(ಯ)ಲವ[ದ]ಗೊಟ್ಟೆಯುಪ್ಪಮಧುಕಂ ಮಧು ಮಂಜಿಟೆ ತುಪ್ಪಮಿಂತಿವಂ ಕಲಸಿ ಹಯಕ್ಕೆ ಕೊಟ್ಟು ಬಟಿಕ . . . ರಕ್ತಮೋಹನ ಪರಂ ತುರಗಕ್ಕೆ (ಅಶ್ವಶಾ. ೦೦-೨೯). [ಸಂ.]

**ರಕ್ತಮೋಕ್ಷ** (ನಾ). (ಜಿಗಣೆಯಿಂದ ರಕ್ತವನ್ನು ಹೀರಿಸಿ ಮಾನವರ ಶರೀರದಿಂದ) ರಕ್ತವನ್ನು ತೆಗೆಯುವುದು : (ಶೋಧನವು) ನಿರೂಹಣ-

ವಮನ. ವಿರೇಕ, ನಸ್ಯ, ರಕ್ತಮೋಕ್ಷಂಗಳೆಂಬೈದು ತೆರನಾಗಿರುವುದು (ಸಕವೈ. ೧೮). [ಸಂ.]

**ರಕ್ತವಮನ** (ನಾ). ರಕ್ತವನ್ನು ಕಕ್ಕುವಿಕೆ ; ನೆತ್ತರನ್ನು ಕಾರುವುದು : ರಕ್ತವಮನಕ್ಕೆ :–ಮರಗಡ್ಡೆಸೊಪ್ಪು, ಮರಹತ್ತಿಸೊಪ್ಪು. ಈ ಎರಡನ್ನೂ ಸಮಾನವಾಗಿ ತೆಗೆದುಕೊಂಡು ತುಳಿದು . . . ಮೂಜುದಿನ ತೆಗೆದುಕೊಳ್ಳಿ ಸಿಲ್ಲುವುದು (ವಿವೈಶಿ. ೬೦). [ಸಂ.]

**ರಕ್ತವಾತ** (ನಾ). ಒಂದು ಬಗೆಯ ವಾತರೋಗ : ಏಲಕ್ಕಿ ನಾಗಕೇಸರಿ ಲವಂಗಚಕ್ಕೆ . . . ಸೇವಿಸೆ . . . ರಕ್ತವಾತ, ಕ್ಷಯರೋಗ . . . ಸಮ ಗುಣವಾಗುವುದು (ಸಕವೈ. ೮೪). [ಸಂ.]

**ರಕ್ತಶಾಲಿ, ರಕ್ತಶಾಳಿ** (ನಾ). ಕೆಂಪುಜಾತಿಯ ಬತ್ತ ; ಕೆಂಬೂತಿ : "ಕೆಂಪುಭತ್ತ, ಕೆಂಬೂತಿಭತ್ತ" (ಅಸಂನಾ). **ರಕ್ತಶಾಳಿ** : "ರಕ್ತ ಶಾಳಿಃ, ಮಹಾಶಾಳಿಃ, ಕಳಮಃ — ಇವು ಮೊದಲಾಗುಳ್ಳುವು ಕಳಮೆಯ ಭೇದಂ" (ಹಲಾಯು. ೯೫-೪೨೭). [ಸಂ.]

**ರಕ್ತಶಾಳಿ** 'ರಕ್ತಶಾಲಿ' ನೋ.

**ರಕ್ತಶೂಲೆ** (ನಾ). ಹೆಣ್ಣಿರೋಗದಲ್ಲಿ ಒಂದು ಬಗೆ : ಯೋನಿಯಿಂದ ರಕ್ತ ಸುರಿಯುವುದು : ತ್ರಿಕಟುಕ, ಭಾರಂಗಿ, ಬೆಲ್ಲಪತ್ತ್ರದ ತಿರುಳು, ಇವಂ ಸಮಾನಂಗೊಂಡು ಅರೆದು ತುಪ್ಪದಿಂದ ಕಲಸಿ ಕುಡಿಯೆ ರಕ್ತಶೂಲೆ ಕೆಟ್ಟು ಗರ್ಭಮಕ್ಕುಂ (ಖವೈಶಿ. ೧೦೭). [ಸಂ. ರಕ್ತಶೂಲಾ]

**ರಕ್ತಶೋಷಣ** (ನಾ). ರಕ್ತವು ಹೋಗುವುದು : ರಕ್ತಶೋಷಣದಿಂದಾದ ಮೂತ್ರಕೃಚ್ಛ್ರದಲ್ಲಿ ರಕ್ತವೇ ಬೀಳುವುದು (ಸಕವೈ. ೩೭೦). [ಸಂ.]

**ರಕ್ತಸಂಬಂಧ** (ನಾ). ಅಣ್ಣತಮ್ಮಂದಿರು, ದಾಯಾದಿಗಳು ಮೊದಲಾದವ ರಲ್ಲಿರುವ ಬಾಂಧವ್ಯ ; ಜ್ಞಾತಿಸಂಬಂಧ : ಪ್ರತ್ಯಕ್ಷ ರಕ್ತಸಂಬಂಧ ವುಳ್ಳವರನ್ನು ಸಂಟರ ಪಟ್ಟಿಯಿಂದ ತೆಗೆದುಹಾಕಬೇಕು (ಸಂಟಿರು. ೫) ; ರಕ್ತ ಸಂಬಂಧ, ಎಷ್ಟು ಆದರೂ ಜೀವ ಹೆಂಗ ನಿಲ್ಲಬೇಕು ನೋಡಿರಿ ! (ಗಂಪಾಯು. ೦೦೩). [ಸಂ.]

**ರಕ್ತಸಂಬಂಧಿ** (ನಾ). ರಕ್ತ ಸಂಬಂಧವುಳ್ಳ ವ್ಯಕ್ತಿ ; ಜ್ಞಾತಿ : ನಾನೇನು ರಕ್ತಸಂಬಂಧಿಯೆ ? . . . ಎಲ್ಲಿಂದಲೊ ಬಂದವಳು (ವಾಕ್ಯ. ೧೫೨). [ಸಂ. ರಕ್ತಸಂಬಂಧಿನ್]

**ರಕ್ತಸಿಂಹಾಣ** (ನಾ). ಸಿಂಬುಳದೊಂದಿಗೆ ರಕ್ತ ಬೀಳುವ ಒಂದು ಬಗೆಯ ರೋಗ : ಕುರು ಮೂಡಿದಂತೆ ಗಂಟುಗಳಿರೆ ನಾಸಿಕದೊಳಗೆ ರಕ್ತಸಿಂಹಾಣ[ಮು]ಂ ನೀರ್ಪರಿಯಲ್ಪಡೆಯದೆ ಕೀತೊಡೆ ತುರಗಕ್ಕದು ಮರಣಚಿಹ್ನಂ (ಅಶ್ವಶಾ. ೦೦-೫೫). [ಸಂ.]

**ರಕ್ತಸಿರೆ** (ನಾ). ಕಣ್ಣಿನಲ್ಲಿ ರಕ್ತನಾಳಗಳು ಕೆಂಪಾಗುವ ಒಂದು ಬಗೆಯ ರೋಗ : ರಕ್ತಸಿರೆ ಹರಡಿದರೆ ಎಸಗದ ಸೊಪ್ಪಿನ ರಸದಿಂ ಜೀರಿಗೆ, ಸಾರಂಗದ ಕೊಂಬು ಅರೆದು ಮಾವಡೆಯೊಳಗಿಕ್ಕಿ ಕಣ್ಣಿಗೆ ಹಿಂಡಲು ಸೆರೆ ಹರ (ಖವೈಶಿ. ೦೪೭). [ ರಕ್ತ + ಸಿರೆ$_1$ (< ಸೆರೆ$_4$) ]

**ರಕ್ತಸೇಕ** (ನಾ). ರಕ್ತವು ಸುರಿಯುವುದು ; ರಕ್ತದ ಸೇಚನ : ತೋರಣ ಕನನ್ಮುಕುರಂ ದೊರೆಯಾಗಿ ತೋಱಿದತ್ಯಾತನೊಳಾಂತು ಪುಣ್ಪಡೆದ ಖೇಚರ ಸೇನೆಯ ರಕ್ತಸೇಕದಿಂ (ಚಂದ್ರಪು. ೬-೩೭). [ಸಂ.]

**ರಕ್ತಸ್ರಾವ** (ನಾ). ರಕ್ತ ಸುರಿಯುವಿಕೆ ; ನೆತ್ತರು ಸೋರುವುದು : ರಕ್ತಸ್ರಾವವಾಗುವುದನ್ನು ಮತ್ತು ಕರುಳು ತೂತುಬೀಳುವುದನ್ನು ತಪ್ಪಿಸ ಬೇಕು (ಆರೋಗ್ಯ. ೬೦) ; ದೇಹವು ಗಾಯಗೊಂಡು ರಕ್ತಸ್ರಾವವಾದಾಗ ಆ ರಕ್ತವು ಹೆಪ್ಪುಕಟ್ಟುವುದಕ್ಕೆ ಕ್ಯಾಲ್ಸಿಯಂ ಅತ್ಯಾವಶ್ಯಕ (ನ್ಯಹವಿ. ೦೯). [ಸಂ.]

**ರಕ್ತಾಂಗ** (ನಾ). ೧. ತಿಗುಣೆ. ೨. ಒಂದು ಬಗೆಯ ಸಸ್ಯ ; ಕಾಂಪಿಲ್ಲ. ೩. ಹವಳ. ೪. ಕುಂಕುಮಕೇಸರಿ. ೫. [ಜ್ಯೋತಿ]ಮಂಗಳಗ್ರಹ. [ಸಂ.]

**ರಕ್ತಾಂಗಿ** (ನಾ). ಒಂದು ಬಗೆಯ ಸಸ್ಯ : ಮಂಜಿಷ್ಠೆ : "ಮರ್ತಿ ರಕ್ತಾಂಗಿ ಮಂಜಟಿಯು ಮಂಜಿಷ್ಠೆ" (ಮಂಗರಾ. ೪೨-೩೮). [ಸಂ. ರಕ್ತಾಂಗೀ]

**ರಕ್ತಾಂಬರ** (ನಾ). ೧. ಕೆಂಪುಬಣ್ಣದ ಬಟ್ಟೆ : ಅವನಿ ರಕ್ತಾಂಬರ ವನುಟ್ಟಂತೆಸೆದುದೊಗುನೆತ್ತರಿನ ಪೂರದಲಿ (ತೊರರಾ. ೬-೪೦-೨೭). ೨. ರಕ್ತದಲ್ಲಿ ನೆನಸಿದ ಬಟ್ಟೆ : ಘಾಯವನು ಪಡೆದು ಹಾಯ್ದು ಕರುಳಿನ ಮಿದುಳ ಜೋರಿನ ತೊಯ್ದು ರಕ್ತಾಂಬರದಿ ತಾನಿರಲ್ಕೆದಿ ಕುರುಪತಿ ಕಂಡ ನಾದರೆ ಧನ್ಯ ತಾನು (ಕುವ್ಯಾಶ. ೮-೪೦). [ಸಂ.]

**ರಕ್ತಾಂಬು** (ನಾ). ಕೆನ್ನೀರು ; ನೆತ್ತರು : ಪುಷ್ಪಚಾಪಾಸ್ತ್ರಟಂಕಾರ ರವೋದ್ಭಿನ್ನಪ್ರವಾಂಥಪ್ರಕರಹೃದಯರಕ್ತಾಂಬುಗಳ್ ಕೂಡೆ ಮಾರ್ಗಾಂತರ ದೊಳ್ ಸೂಸುತ್ತಿರಲ್ ಬಂದುದು . . . ವಸಂತಂ (ಕಾದಂಪೂ. ೭೨೦) ; ಸುರಿವ ರಕ್ತಾಂಬುಗಳಲಂಬಿನಲುರವಣಿಪ ಬಿಱುಗಾಳಿ ಸೂಸಿತು ಸುರರ ಮೈಗಳಲಿ (ತೊರರಾ. ೬-೪೦-೨೭). [ಸಂ.]

**ರಕ್ತಾಕ್ಷ** (ಗು). ೧. ಕೆಂಪುಕಣ್ಣುಳ್ಳ. ೨. ಭೀಕರವಾದ. (ನಾ). ೩. ಕೋಣ : "ಮಹಿಷಂ. . . ರಕ್ತಾಕ್ಷನ[ಶಾಕಾಂ. ಕ್ಷಿಯ]ಶ್ವಾರಿ ಕೋಣ ನಕ್ಕು" (ಮಂಗರಾ. ೪೮-೦೦). ೪. ಪಾರಿವಾಳ. ೫. ಸಾರಸಪಕ್ಷಿ. ೬. ಚಕೋರಪಕ್ಷಿ. [ಸಂ.]

**ರಕ್ತಾಕ್ಷಿ** (ನಾ). ೧. ಕೆಂಪುಬಣ್ಣದ ಕಣ್ಣುಳ್ಳುದು : ಕೋಣ : "ಮಹಿಷಂ . . . ರಕ್ತಾಕ್ಷಿಯ [ಶಾಕಾಂ. ಕ್ಷನ]ಶ್ವಾರಿ ಲೋಣನಕ್ಕು" (ಮಂಗರಾ. ೪೮-೦೦); ಶಾರ್ದೂಲ ರಕ್ತಾಕ್ಷಿ ಮುಂಗಾರಿ ಮುಂತಾದ ಮೃಗಂಗಳಬ್ಬರವದಂ ಕಂಡಾಗ ಪೋಪರ್ಗೆ ಭೀಕರವಂ ಮಾಡುತ . . . ಕಣ್ಗೊಪ್ಪುಗುಂ (ವನ್ನಶಾ. ೨-೮೪). ೨. ಅರುವತ್ತು ಸಂವತ್ಸರಗಳಲ್ಲಿ ಐವತ್ತೆಂಟನೆ ಯದು : ಪ್ರಭವ. . . ರಕ್ತಾಕ್ಷಿ. . . ಅಕ್ಷಯನೆಂದರುವತ್ತು ತೆಱನಾಗಿ ಹುದು (ಬವೇಶ. ೩೨೦). [ ಸಂ. ರಕ್ತಾಕ್ಷೀ ]

**ರಕ್ತಾಣು** (ನಾ). ರಕ್ತದಲ್ಲಿರುವ ಸೂಕ್ಷ್ಮಾಂಶ.—ಅಣು ; ರಕ್ತಕಣ : ಒಂದು ಘನ ಇಂಚಿಗೆ ಸಾಧಾರಣ ೧೫೦ ಮಿಲಿಯದಷ್ಟು ರಕ್ತಾಣು (Red Corpuscles) ಗಳಿವೆ (ಜಾರಿಕ. I. ೩೦೯). [ಸಂ.]

**ರಕ್ತಾತಿಸಾರ** (ನಾ). = ರಕ್ತಭೇದಿ : ಮಡುವಾಗಲದ ಗೆಡ್ಡೆಯಂ. . . ದಾಳಿಂಬದಲ್ಲೂ, ಅಲ್ಲ ಹಾಲಲ್ಲೂ ಕುಡಿಯೆ ರಕ್ತಾತಿಸಾರ ತೀರ್ಗುಂ (ಖವೈಶಿ. ೯೫). [ಸಂ.]

**ರಕ್ತಾಭಿಸರಣ** (ನಾ). = ರಕ್ತಚಲನೆ : ಸಿರ್ಗಂಧವಾಯುವುಳ್ಳ ಆಹಾರವು ಕಡಿಮೆಯಾದರೆ, ರಕ್ತಾಭಿಸರಣ, ಶ್ವಾಸೋಚ್ಛ್ವಾಸ, ಅನ್ನಪಚನ. . . ಉಂಟಾ ಗುತ್ತದೆ (ಮುಬದು. ೫-೧೭೨). [ಸಂ.]

**ರಕ್ತಾರ್ಜುನ** (ನಾ). ಕೆಂಪು ಮತ್ತಿಯ ಮರ : "ನದೀಸರ್ಜಃ. . . ಅರ್ಜುನಃ—ಶಿ ತೋರಮತ್ತಿಗಿಡ, ಕೆಂಪುಮತ್ತೀಗಿಡ, ರಕ್ತಾರ್ಜುನವೃಕ್ಷ ". (ಸಿದ್ಧಾಂಶಿ. ೦೨೨). [ಸಂ.]

**ರಕ್ತಾರ್ಶ** (ನಾ). ಒಂದು ಬಗೆಯ ಮೂಲವ್ಯಾಧಿ : ನೆಲದಾಳುಗೆಡ್ಡೆ, ಒಂದೆಲೆಹೊನ್ನೆ — ಇವಂ ಸಮಾಂಶವಾಗಿ ಅರೆದು . . . ತುಪ್ಪದಲ್ಲಿ ಕಲಸಿ ಕೊಡಲು ರಕ್ತಪಿತ್ತ, ರಕ್ತಾತಿಸಾರ, ಯೋನಿದೋಷ, ಬಿಳಿಸೀರೆ, ರಕ್ತಾರ್ಶ– ಇವೆಲ್ಲ ಪರಿಹಾರಮಕ್ಕುಂ (ಸಕವೈ. ೦೮೯). [ ಸಂ. ರಕ್ತಾರ್ಶಸ್ ]

**ರಕ್ತಾಶೋಕ** (ನಾ). ಕೆಂಪುಬಣ್ಣದ ಅಶೋಕವೃಕ್ಷ : ಭವ್ಯಹೃತ್ಕಮಳಕ್ಕಂ ಮುದಮಂ ಜಪಾಪ್ರಸವರಕ್ತಾಶೋಕಬಂಧೂಕಶೋಣಮಣಿಜ್ಯೋತಿಗಳೆ ಕೈಯಿಂ ಕುಡೆ ಜಯಂ ಭದ್ರಂ ಶುಭಂ ಮಂಗಳಂ (ಆದಿಪು. ೦೭ ೩). [ಸಂ.]

**ರಕ್ತಿ** (ನಾ). ಒಲವು : ಆಸಕ್ತಿ ; ಪ್ರೀತಿ : ಪಿರಿದುಂ ರಕ್ತಿ ವಿರಕ್ತಿಗಳುಂ ಬಂಧುರಭೋಗಂ ಯೋಗಮುಮಿಹಪರಮುದ್ಧುರಸಂಸಾರಂ ನಿಸ್ಸಂಸಾರಂ ಜೂದುಂ ಪೂಜೆಯುದು (ಉದ್ಭಟ. ೩-೬೮) ; ಕೇಳಲ್ಕೆಂದೈತರೆ ವಿಟವೃಗಂ ಬಾಜಿಸುತ್ತಿರ್ದಗಳೋರ್ವಳ್ಳೀಲಾವಲ್ಯಾದ್ಯುಳಿವಿಲಸದ್ರಾಗವಂ ರಕ್ತಿಯಿಂದಂ

(ರಾಜಶೇ. ೧೧-೯೭) ; ತಂತ್ರೀವಾದ್ಯದ ರಕ್ತಿ ಪಣ್ಯಾದಿಳೆಯೊಳ್ (ಚಿಕದೇ. ೪-೧೧೨). [ಸಂ.]

**ರಕ್ತಿಮೆ** (ನಾ). ಕೆಂಪುಬಣ್ಣ ; ಅರುಣರಾಗ : ಸೌಂದರಿಯಧರದ ರಕ್ತಿಮೆಯನು ಕಂಡು ಚಂದವಿಲ್ಲೆನ್ನ ಮೈಬಣ್ಣ (ಚಾಕ್ರವತ. ೨-೧೪). [ಸಂ. ರಕ್ತಿಮನ್]

**ರಕ್ತೆ** (ನಾ). ೧. ಅರಗು. ೨. ಗುಲಗಂಜಿ. ೩. ಪ್ರೀತಿಯುಳ್ಳವಳು ; ಅನುರಕ್ತೆ : ರಕ್ತೆಯುಸುರಕ್ತೆಯುತಿರಕ್ತೆಯೆಂದಿಂತು ಮಾಣಿಜಾತೆಜದಿಂ ಬೇಟವಾಕ್ಯಂ (ಮದನ. ೧೧-೨೬). [ಸಂ. ರಕ್ತಾ]

**ರಕ್ತೋತ್ಪಲ, ರಕ್ತೋತ್ಪಳ** (ನಾ). ಕೆಂದಾವರೆ : ಕೆಂಪುಬಣ್ಣದ ಕಮಲ : ಎಳೆಯ ರವಿರಶ್ಮಿಗಳು ರಕ್ತೋತ್ಪಲದೊಳಗೆ ಹೊಳೆವಂತೆ ಹೊನ್ನರೆ ಬಣ್ಣವುಳ್ಳ ಕಣ್ಣನೆ ಕಾಣಲಾದಂದು ಭಟನ ಕಾಯದೊಳ್ (ಕುಮಾರರಾ. ೩-೫೦). ರಕ್ತೋತ್ಪಳ : "ಚೆಂಗಲವೆಯುಮುದನಲ್ ಸಲೆ ರಕ್ತೋತ್ಪಳ ವಾಕ್ಯಂ" (ಶಬ್ದಮ. ೯೩). [ಸಂ.]

**ರಕ್ತೋತ್ಪಳ** 'ರಕ್ತೋತ್ಪಲ' ನೋ.

**ರಕ್ಷ** (ನಾ). ೧. ಕಾಪಾಡುವಿಕೆ. ೨. ಕಾಪಾಡುವವನು ; ರಕ್ಷಕ : ರಕ್ಷರಾನೀಕಿನಿಯೊಳನೆ ಅಧ್ಯಕ್ಷ (ಜಗನ್ನಾ. ೯೬೨-೧೨). [ಸಂ.]

**ರಕ್ಷಕ** (ಗು). ೧. ಪೋಷಿಸುವ ; ಪಾಲಿಸುವ : ಹಣ್ಣು, ತರಕಾರಿ ಮತ್ತು ಹಾಲು ಸಹ ರಕ್ಷಕಆಹಾರಗಳೆಂದು ಕರೆಯಲ್ಪಡುವುವು (ಗೃಹವಿ. ೬). (ನಾ). ೨. ಕಾಪಾಡುವವನು ; ರಕ್ಷಿಸುವವನು : ಇನಜಂ ಮೇಷದೊಳೊಂದಿದಂದು . . . ನಿರ್ಲಜ್ಜಕಂ ರಕ್ಷಕಂ (ಜಾತಕ. ೧೭-೩೨); ಜನಕಂ ರಕ್ಷಕನಂತೆ ನನಾದಿಮಧ್ಯಾಂತ ನಿನಗದಾವನಸಂಗಂ ಜನಕಂ ರಕ್ಷಕನಂತಕ ನೆನಸಿದ ಪೊಗಟ್ಟುರಳವೆ ನಿನ್ನ ಮಹತ್ವಂ (ಜಗ. ೩-೯೭). [ಸಂ.]

**ರಕ್ಷಣ** (ನಾ). ೧. ಕಾಪಾಡುವುದು : 'ರಕ್ಷಿಸು' ನೋಡಿ. ೨. [ನಾಟ್ಯ] ಒಂದು ಬಗೆಯ ಕರವಿನ್ಯಾಸ : ಧೂನನ . . . ರಕ್ಷಣ . . . ಈ ಇಪ್ಪತ್ತು ಕರಕರ್ಮಭೇದಂಗಳ್ (ಲಾಸ್ಯಕಂ. ೪-೬೦). [ಸಂ.]

**ರಕ್ಷಣಾಖಾತೆ** (ನಾ). (ದೇಶವನ್ನೂ ಜನರನ್ನೂ) ರಕ್ಷಿಸುವ ಸೈನ್ಯ, ಪೋಲೀಸು ಮುಂತಾದ ಇಲಾಖೆ : ಜೋಳನು ರಕ್ಷಣಾಖಾತೆಯವರಲ್ಲಿಗೆ (ಪೋಲಿಸ್) ಮೊರೆಯೋಲೆ ಕೊಟ್ಟು . . . ಮೊರೆಯಿಟ್ಟನು (ಕಾರಂತ. ೧೦ ಕತಾಸಂ). [(ಸಂ. ರಕ್ಷಣ) + ಖಾತೆ]

**ರಕ್ಷಣಾದಳ** (ನಾ). ಕಾವಲುಪಡೆ : ಆತನು ರಕ್ಷಣಾದಳವನ್ನು ಸೇರಿ . . . ಹಣ ಪೋಲುಮಾಡಿದ ಪರಿಣಾಮವಾಗಿ ತಾನು ಮೂಲನಿಧಿಗೂ ಕೈಹಾಕಬೇಕಾಗಿ ಬಂದಾಗ ಅವನಿಗೆ ಸ್ವಲ್ಪವೂ ವ್ಯಥೆಯಾಗಲಿಲ್ಲ (ಕೃಷ್ಣ. ೬೦). [ಸಂ. ರಕ್ಷಣಾದಲ]

**ರಕ್ಷಣಾವ್ಯವಸ್ಥೆ** (ನಾ). ರಕ್ಷಣೆಗಾಗಿ ಮಾಡುವ ಏರ್ಪಾಡು, ವ್ಯವಸ್ಥೆ : ಆ ಕಾಲದಲ್ಲಿ ಈಗಿನಂತೆ ದೇಶದ ನಾನಾಭಾಗಗಳಲ್ಲಿ ಆಡಳಿತವರ್ಗದಿಂದ ನೇಮಿತವಾದ ರಕ್ಷಣಾವ್ಯವಸ್ಥೆಯಿರಲಿಲ್ಲ (ಕಣಾಟ. ೨೯೭). [ಸಂ. ರಕ್ಷಣಾವ್ಯವಸ್ಥಾ]

**ರಕ್ಷಣೀಯ** (ಗು). ೧. ಕಾಪಾಡಬೇಕಾದ ; ರಕ್ಷಿಸಬೇಕಾದ : ಸೀತೆಯ ರಕ್ಷಣೀಯ ರೂಪ, ತ್ಯಾಗ, ಪಾತಿವ್ರತ್ಯಗಳು ಭಾರತೀಯ ಸಾಮಾಜಿಕ ಹಾಗು ಕೌಟುಂಬಿಕ ಜೀವನದ ಅನೇಕಸಮಸ್ಯೆಗಳನ್ನು ಬಿಡಿಸಲು ಕಾರಣವಾಗಿವೆ (ಕರ್ಣಾಟ. ೬). (ನಾ). ೨. ಕಾಪಾಡಲು ಅರ್ಹನಾದ ವ್ಯಕ್ತಿ : ಕೊಲುವುದೊ ವಧ್ಯನೆ ನಿನ್ನಂ ಸಲುಹುವುದೋ ರಕ್ಷಣೀಯನಾದಾ ದ್ವಿಜನಂ (ಶಾಕುಂತ. ೯೬-೦೩೯). [ಸಂ.]

**ರಕ್ಷಣೆ** (ನಾ). ೧. ಕಾಪಾಡುವಿಕೆ ; ಸಂರಕ್ಷಿಸುವಿಕೆ : ದೇಶದ ವ್ಯವಸಾಯಕ್ಕೆ ಅನೇಕ ಬಗೆಯ ರಕ್ಷಣೆಯನ್ನೂ ಪ್ರೋತ್ಸಾಹವನ್ನೂ ಕೊಡುತ್ತಾರೆ (ಹಣಕ್ರ. ೦೨೨) : ಒಂದೊಂದು ಗ್ರಾಮದಲ್ಲೂ ಅದರ ರಕ್ಷಣೆಗಾಗಿ ಆ ಊರಿನ ಒಂದು ವೀರರ ತಂಡವೇ ಸಿದ್ಧವಾಗಿರುತಿತ್ತು (ಕಣಾಟ. ೨೯೭). ೨. ಕಾವಲು : ಕಾಯುವಿಕೆ. [ಸಂ. ರಕ್ಷಣಾ]

**ರಕ್ಷಣೋಪಾಯ** (ನಾ). ಕಾಪಾಡುವ ಮಾರ್ಗ : "ರಕ್ಷಣೋಪಾಯ. ಸಂರಕ್ಷಣೆ" (Safo-Guard. ಪತ್ರಿ.ಸ. ೬೨). [ಸಂ.]

**ರಕ್ಷಸ್ಸು** (ನಾ). ೧. ಕಾಪಾಡುವಂಥವನು : ರಿಜರ್ವ್‌ಬ್ಯಾಂಕು ಹಣದ ಪೇಟೆಯ ರಕ್ಷಸ್ಸು, ಅಲ್ಲಿಯ ಪರಮಾಧಿಕಾರಿ (ಹಣಕ್ರ. ೩೦೨). ೨. ರಾಕ್ಷಸ : ಮದನವಿಲಾಸದಿಂ ಸಂಚರಿಸುತಿರ್ಪ ವಿದ್ಯಾಧರ . . . ರಕ್ಷಸ್ಸು . . . ದೇವಜೋನಿವಿಶೇಷಂಗಳು (ಚಿದೇಶ. ೨೦೩). [ಸಂ. ರಕ್ಷಸ್]

**ರಕ್ಷಾಂಕಿತ** (ಗು). ವಿಭೂತಿಯನ್ನು ಲೇಪಿಸಿಕೊಂಡ ; ಭಸ್ಮಲೇಪಿತವಾದ : ರಕ್ಷಾಂಕಿತತನು ಮೆಲ್ಲನೆ ವೃಕ್ಷಂಗಳ ಕೆಳಗೆ ಪೋಗಿ ನಿಂದಿರ್ದಾಗಳ್ ಭಿಕ್ಷಾಂ ದೇಹಿಯೆನಲ್ಕೆ (ಗಾದಂಪು. ೩೯೪). [ಸಂ.]

**ರಕ್ಷಾಂಜನ** (ನಾ). ರಕ್ಷೆಗಾಗಿ ಇಡುವ ಕಾಡಿಗೆ ಬೊಟ್ಟು : ತತ್ಕಾಮಿನೀಪುಣ್ಯದೇವತೆ ಕಣ್ಣಂಜಲ ದೋಷಮಂ ಪರಿಹರೆ ಪಲಂಪಂದಿಟ್ಟ ರಕ್ಷಾಂಜನಾಕೃತಿಯಿಂ ಪೀನಪಯೋಧರಾನನಮಮೇಂ ಕರ್ಪಂಗಡರ್ಪಾದುವೋ (ಮಲ್ಲಿಕಾ. ೪-೯೬). [ಸಂ.]

**ರಕ್ಷಾಕವಚ** (ನಾ). ೧. (ಯುದ್ಧದಲ್ಲಿ) ದೇಹದ ರಕ್ಷಣೆಗಾಗಿ ತೊಟ್ಟುಕೊಳ್ಳುವ ಉಕ್ಕಿನ ಅಂಗಿ : ರಕ್ಷಾಕವಚವನ್ನು ಅಳವಡಿಸು (Armour, ಇಂಕಅ). ೨. ಪುಸ್ತಕಗಳ ಮೇಲೆ ಹಾಕುವ ಕಾಗದದ ಅಥವಾ ಬಟ್ಟೆಯ ಹೊದಿಕೆ ; ರಟ್ಟು : ಕವಿತಾಸ್ರೋತದ ತಿ ಮನೋಹರ ಅಲೆಗಳ ಸಮ್ಮಿಲನವೇ ಆ ಕವನಸಂಕಲನ . . . ಎಂದುಕೊಂಡು ಸಂತಸದಿಂದ ರಕ್ಷಾಕವಚವನ್ನು ತೆಗೆದ (೬೬ಣ. ೩೩); ಜಿರಳೆಗಳು . . . ಪುಸ್ತಕಗಳ ತೊಗಲಿನ ರಕ್ಷಾಕವಚವನ್ನು ಕೂಡ ತಿನನುತ್ತದೆ (ಅತುಜ. ೯೯). [ಸಂ.]

**ರಕ್ಷಾಪತ್ರ** (ನಾ). = ರಕ್ಷಾಕವಚ ೨ : ಪುಸ್ತಕದ ರಕ್ಷಾಪತ್ರದ ಮೇಲೆ ಸುಂದರವಾದ ಚಿತ್ರವಿದೆ (ರೂಢಿ). [ಸಂ.]

**ರಕ್ಷಾಬಂಧ** (ನಾ). ಯಜ್ಞಕಾರ್ಯ, ಮದುವೆ, ಉಪನಯನ ಮುಂತಾದ ಸಂದರ್ಭಗಳಲ್ಲಿ ದುಷ್ಟಶಕ್ತಿನಿವಾರಣೆಗಾಗಿ ಕರ್ತನು ರಕ್ಷಣೆಗಾಗಿ ಕೈಗೆ ಕಟ್ಟಿಕೊಳ್ಳುವ ಬಂಧ ; ಕಾಪು. [ಸಂ.]

**ರಕ್ಷಾಬಂಧನ** (ನಾ). ೧. ದುಷ್ಟಶಕ್ತಿಗಳ ಬಾಧೆ ತಟ್ಟದಂತಿರಲು ಧರಿಸುವ (ತಾಯಿತ ಮುಂತಾದ) ಸಂರಕ್ಷಣೆಯ ಸಾಧನ : ಯುದ್ಧೋತ್ಸಾಹದಿಂದ ಹೊರಡುವ ಇಂದ್ರನಿಗೆ ಶಚೀದೇವಿ ರಕ್ಷಾಬಂಧನ ಎಂದು ಮುಂಗೈಕಟ್ಟನ್ನು ಕಟ್ಟುತ್ತಿದ್ದಳಂತೆ (ಶಾಹಬ್ಬ. ೦೦೭). ೨. ಶ್ರಾವಣಪೂರ್ಣಿಮೆಯಂದು ಒಡಹುಟ್ಟಿದವಳು ತನ್ನ ಒಡಹುಟ್ಟಿದವನ ಬಲಗೈಗೆ ಕಟ್ಟುವ ರಕ್ಷೆಯ ದಾರ ಮತ್ತು ಅಂದು ಆಚರಿಸುವ ಹಬ್ಬ ; ರಾಖಿ : ಶ್ರಾವಣಹುಣ್ಣಿಮೆಯ ದಿನ ನಡೆಯುವ ರಕ್ಷಾಬಂಧನ ಪದ್ಧತಿ ಸಂರಕ್ಷಣೆಯ ಜತೆಗೆ ಆತ್ಮಸಂರಕ್ಷಣೆಯ ಸಾಧನವಾಗಿದೆ (ಶಾಹಬ್ಬ. ೦೦೭); ಈ ಹಬ್ಬದಲ್ಲಿ ತಂಗಿಯು ಅಣ್ಣನಿಗೆ ರಕ್ಷಾಬಂಧನಗೈಯುವಳು (ಕೃಷಕ. ೩೭೦). [ಸಂ.]

**ರಕ್ಷಾಮಣಿ** (ನಾ). ೧. ದುಷ್ಟಶಕ್ತಿಗಳ ಬಾಧೆ ತಟ್ಟದಂತಿರಲು ಧರಿಸುವ ಸಂರಕ್ಷಣೆಯ ಸಾಧನ, – ಮಣಿ : ರಕ್ಷಾಮಣಿ ಮೊದಲಾದುವನ್ನು ಮಕ್ಕಳಿಗೋ ಬಂಧು-ಬಾಂಧವರಿಗೋ ಕೊಡುವ ಇಡುವ ಪದ್ಧತಿ ಎಂದಿನಿಂದಲೂ ಇದೆ (ಶಾಹಬ್ಬ. ೦೦೭). ೨. ಕಾಪಾಡುವ ವ್ಯಕ್ತಿ ; ರಕ್ಷಿಸುವ ವ್ಯಕ್ತಿ : ಶ್ರೀಜೈನಧರ್ಮೋನ್ನತಿಯ ಮಹಿಮೆಯುಂ ಭಕ್ತಿಯುಂ ಕಾವ ರಕ್ಷಾಮಣಿಯುಂ . . . ಶ್ರೀದಾನಚಿಂತಾಮಣಿಯೆ (ಅಜಿತ. ೦೨-೦೪). [ಸಂ.]

**ರಕ್ಷಾಮಾರಿ** (ನಾ). ಕಾಪಾಡುವ ದೇವತೆ ; ಅಂಗರಕ್ಷಕಿಯಾದ ದೇವತೆ : ಎಳೆಮಿಂಚುಂ ಸಿಡಿಲುಂ ಬಂದೆಳಸಿದ ಘನದೊಳೆ ರಂಜಿಪಂಜಿಪ ತೆಜನಂ

ಲಳಿತೆಯ ರಕ್ಷಾವುರಿಯುರೀ ತಳೆದರ್ ಭೂಷಣದ ಬಾಳ ಪೊಳೆಪುಗಳಿಂದಂ (ಪುಷ್ಪಕ. ೯-೬೯). [ಸಂ. ರಕ್ಷಾಮರೀ]

**ರಕ್ಷಾಯಂತ್ರ** (ನಾ). = ರಕ್ಷಾಬಂಧನ ೧ : ರಕ್ಷಾಯಂತ್ರವು ಈತನ ಮುಂಗೈಯಲ್ಲಿ ಕಾಣುವುದಿಲ್ಲ ! (ಕಾಶೀಖಂ. ೧೦೭-೨೦). [ಸಂ.]

**ರಕ್ಷಾವಿಧಿ** (ನಾ). ರಕ್ಷಣೆಯುಂಟಾಗಲೆಂದು ಮಾಡುವ ಧಾರ್ಮಿಕ ಸಂಸ್ಕಾರ, – ವಿಧಿ : ವಿವಿಧ ರಕ್ಷಾವಿಧಿಯಂ ವತ್ಸಂಗೆ ನೆಗಟ್ದು . . . ನಂದನಿರ್ದಂ ಸುಖದಿಂ (ಜಗಂ. ೩-೨೬). [ಸಂ.]

**ರಕ್ಷಿತ** (ಗು). ೧. ಕಾಪಾಡಿದ; ಪಾಲಿಸಿದ. (ನಾ). ೨. ಕಾಪಾಡಿದುದು: "ರಕ್ಷಿತಮವಿತಂ" (ಚನ್ನಸೂ. ೦೦೫-೯೩). [ಸಂ.]

**ರಕ್ಷಿವರ್ಗ** (ನಾ). ೧. ಮೈಗಾವಲಿನ ಪಡೆ ; ಅಂಗರಕ್ಷಕರ ಸೈನ್ಯ. ೨. ಸೇನೆಯ ಮುಖಂಡ ; ಸೇನಾಪತಿ : "ರಕ್ಷಿವರ್ಗಃ . . . ವಾಹಿನೀಪತಿಃ — ಈ ೪ ದಂಡನಾಯಕಂ" (ಶಬ್ದಮ. ೬೦-೨೭೯). [ಸಂ.]

**ರಕ್ಷಿಸು** (ಕ್ರಿ). ಕಾಪಾಡು ; ಕಾಯು ; ಪಾಲಿಸು : "ರಕ್ಷಿಸು — ಪಾಲನೇ" (ಕರ್ನಾಟ) ; ಮಹಾಯಕ್ಷನಾದರದಿಂ ರಕ್ಷಿಸುತಿರ್ಪುಪಾಸಕಗಣ ಶ್ರೀಸೇವ್ಯರಂ ಭವ್ಯರಂ (ಅಕಥ. ೦-೦೫) ; ಅಭಿಮಾನದ ಪೆರ್ಚಂ ರಕ್ಷಿಸಲುಂ ಕಾರ್ಯಮಂ ಸಾಧಿಸಲುಂ . . . ಸತ್ಪುರುಷರ್ ಅರಸನನಾಶ್ರಯಿಸಿರ್ಪರ್ (ಪಂಚತಂ. ೦೬೩-೦೩) : ಶರೀರವನ್ನು ರೋಗರುಜಿನಗಳಿಂದ ರಕ್ಷಿಸುವುದು— ಇದು ಮುಖ್ಯವಾಗಿ ಜೀವಾತುಗಳ ಕೆಲಸ (ಅಮೃತಾ. ೩೭). [ ರಕ್ಷಣ + – ಇಸು₃ ]

**ರಕ್ಷಿಸುವಣ** (ನಾ). ಕಾಪಾಡುವುದು ; ರಕ್ಷಿಸುವಿಕೆ : ಸ್ವಾಮಿರಕ್ಷಾ ಆಳ್ದನ ರಕ್ಷಿಸುವ [ಪಾಠಾಂ. ಹ]ಣಮುಂ (ಅಂತಿವಾ. ೦೭-೩). [ ರಕ್ಷಿಸು + – ಅಣ ]

**ರಕ್ಷೆ** (ನಾ). ೧. ಕಾಪು ; ರಕ್ಷಣೆ : ಜಗತ್ತ್ರಯರಕ್ಷಾಪ್ರಿಯನಪ್ಪ ಕೃಷ್ಣನ ಚರಿತ್ರಂ ಭೀತಿಯಂ ಮಾಟ್ಕುಮೇ (ಜಗಂ. ೩-೩೮) ; ನೀಂ ಪೂಜೆಗೈದಿರ್ಪ ದೇವಾನುದೇವತೆಗಳೆಲ್ಲರೂ ನಿನಗಕ್ಕೆ ರಕ್ಷೆ ! (ಶ್ರೀರಾಮಾಪಟ್ಟಾ. ೬೩-೦೯೯). ೨. (ಗ್ರಹಾದಿಗಳ ಭೀತಿಯನ್ನು ತಡೆಗಟ್ಟಲು ಕಟ್ಟುವ) ತಾಯಿತ, ಯಂತ್ರ ಮೊದಲಾದುವು: ಧರಣಿಪತಿ ತೆಗೆದೀಕಯನು ಕಳ್ಳರಿಸಿ ತನ್ನಯ ತೊಡೆಯ ಮೇಲಾದುರಿಸಿ ಮಂತ್ರಿಸಿ ನೀರ ತಳಿದನು ರಕ್ಷೆಗಳ ರಚಿಸಿ (ಕುಮಾ. ೯-೨೮) ; ಶಾಂತಿಯ ಬದುಕಿಗೆ ಕಟ್ಟಿದ ರಕ್ಷೆ (ಕವಿಕೋ. ೦೫೦೩). ೩. (ಹವನ ಹೋಮಾದಿಗಳಲ್ಲಿ . ಪವಿತ್ರವೆಂದು ಹಣೆಯಲ್ಲಿ ಧರಿಸುವ ಹವಿಸ್ಸಿನ) ಭಸ್ಮ : "ಭೂತಿಃ . . . ರಕ್ಷಾ — ಈ ೫ ಬೂದಿ" (ಶಬ್ದಮ. ೦೩-೬೯). ೪. ಬಳೆಯ ಚೂರು ಇತ್ಯಾದಿ ಗಳಿಂದ ಹಾಕುವ ಬರೆ ; ಚಿಟಿಕೆ : ಈ ಸನ್ನಿಪಾತಕ್ಕೆ ಸಂದುಸಂದಿಗೆ ವಾತಹರವಾದ ತೈಲಂಗಳನಿಕ್ಕಿಸಿ ಅಲ್ಲಲ್ಲಿಗೆ ನರಭೇದಗಳನರಿದು ರಕ್ಷೆಯ ಹಾಕಿಸಿ (ಸಸವೈ. ೦೫೦). [ ಸಂ. ರಕ್ಷಾ ]

**ರಕ್ಷೆಗಟ್ಟು** (ಕ್ರಿ). ಯಂತ್ರ, ತಾಯಿತ ಮೊದಲಾದುವನ್ನು ಕಟ್ಟು : ಪದಪಿಂ ಪ್ರಭುಸುತನುಗೆ ತಾನೆ ರಕ್ಷೆ[ಪಾಠಾಂ. ಕೈ]ಗಟ್ಟುವ ತೆಜದಿಂದೆ ಕಟ್ಟಿದ ನಿಳಾಪತಿ ತನ್ನಧಿರಾಜಪಟ್ಟಮಂ (ಚಂದ್ರಪು. ೬-೦೦೨) ; ಮುಡಿಯ ಭಾರ ಗಳ ನಾರಿಯರ ಕಂಬುಗ್ರೀವ ಬಿಡದಾನಲಾಜಿವೆಂದೆನುತ ಕುಡುವಿಲ್ಲ ರಕ್ಷೆಗಟ್ಟಿದ ಮಂತ್ರಿಲೇಖಿನದಡಹೆನೆ ಪುಸ್ಯಿಯೊಪ್ಪಿದುವು (ಶಂಕರ. ೨೪-೩೨). [ ರಕ್ಷೆ + ಕಟ್ಟು₁ ]

**ರಕ್ಷೆಬೊಟ್ಟು** (ನಾ). ಅನಿಷ್ಟನಿವಾರಣೆಗಾಗಿ ಹಣೆಯ ಮೇಲೆ ಇಡುವ ಬೊಟ್ಟು : (ಸ). [ ರಕ್ಷೆ + ಬೊಟ್ಟು₂ ( < ಬಟ್ಟು ) ]

**ರಕ್ಷೆಯಿಕ್ಕು** (ಕ್ರಿ). = ರಕ್ಷೆಗಟ್ಟು : ಅಶ್ವಯುಜಶುದ್ಧಬಿದಿಗೆಯೊಳ ಶ್ವಾನೀಕಕ್ಕೆ ರಕ್ಷೆಯಿಕ್ಕುವುದು ಧರಾಧೀಶ್ವರಂ (ಅಶ್ವಶಾ. ೬-೨). [ ರಕ್ಷೆ + ಇಕ್ಕು ]

**ರಕ್ಷೆಯಿಡು** (ಕ್ರಿ). ರಕ್ಷೆಬೊಟ್ಟನ್ನು ಇಡು : ಪಕ್ಷಿವಾಹನದೇವ ಅಂಜಿ ದಂಜಿದನೆಂದು ರಕ್ಷೆಯಿಡುವ ಪುಣ್ಯವೆಲ್ಲಿ ಪಡೆದಳೊ (ಪುರಂದ. ೪-೦೦೩-೦) ; ಹೆಣ್ಣುಮಕ್ಕಳಿಗೆ ಯಾರೊಬ್ಬರ ಕೆಟ್ಟಕಣ್ಣು ತಾಗದಿರಲೆಂದು ರಕ್ಷೆಯಿಟ್ಟರು (ಕಾಂತಲಾ. ೬೦). [ ರಕ್ಷೆ + ಇಡು₁ ]



**ರಕ್ಷೆವೆರು** (ಕ್ರಿ). ರಕ್ಷಣೆಯನ್ನು ಹೊಂದು : ದಾದಿಯೊರ್ವಳ ಅಕ್ಕರೆಯ ಸಾಹಸದಿ ರಕ್ಷೆವೆತ್ತು . . . ಕಡೆಗೆ ಕುಂತಳನಗರವೀಥಿಯಲಿ ಮುಗಿಯುವುದೆ ಅವನ ಬಾಳ್ ? (ಚಂದ್ರಹಾ. ೨-೦೫). [ರಕ್ಷೆ + ಪೆರ್₁ (< ಪೆಱು₁)]

**ರಕ್ಷೋಗಣ** (ನಾ). ರಾಕ್ಷಸರ ಸಮೂಹ : ಲೀಲೆ ಮಿಗೆ ರವಿಸುತಿಹ ಯಕ್ಷಕಿನ್ನರಕಿಂಪುರುಷಗರುಡಗಂಧರ್ವರಕ್ಷೋಗಣಂಗಳಿಂದೆ . . . ಅಚಲೇಂದ್ರ ಮೆಸೆದಿರ್ದುದು (ಕೃಷ್ಣರಾ. ೦೦-೪). [ಸಂ.]



**ರಕ್ಷೋಗಾಂಧಾರಿ** (ನಾ). [ಸಂಗೀತ] ಒಂದು ರಾಗದ ಹೆಸರು : ಗಾಂಧಾರಿ ರಕ್ಷೋ[ಪಾಠಾಂ. ರಕ್ಷ]ಗಾಂಧಾರಿ . . . ಕೌಶಿಕೆಯೆಂಬ ಹತ್ತೇ ಮಧ್ಯಮಗ್ರಾಮದಿಂದಾದ ರಾಗಂಗಳು (ಪಂಪಸ. ೦೫೬). [ ಸಂ. ? ]

**ರಕ್ಷೋಗುರು** (ನಾ). ೧. ರಾಕ್ಷಸರ ಗುರು ; ಶುಕ್ರಾಚಾರ್ಯ. ೨. [ಜ್ಯೋತಿ] ಶುಕ್ರಗ್ರಹ : ಹರಿಜನ್ಮಮಾಗೆ ಮಂದಂ ಬೆರಸಿನಸಿರೆ ನಿಧನದೊಳ್ ನಿರೀಕ್ಷಿಸೆ ರಕ್ಷೋಗುರು ಲಗ್ನದಿನಪ್ಪಮಮಂದಿರಕ್ಕಜಾಳಿಯನೆ ತತ್ಪ್ರಮಾಣಕ್ಕೆ ಲಯಂ (ಜಾತಕ. ೩-೩೩). [ಸಂ.]



**ರಕ್ಷೋಘ್ನ** (ಗು). ರಾಕ್ಷಸರನ್ನು ಕೊಲ್ಲುವ ; ಅಸುರರನ್ನು ನಾಶ ಮಾಡುವ : ಉಪಚರಿಸಿ ರಕ್ಷೋಘ್ನಸೂಕ್ತದ ಜಪವ ಮಾಡಿಸಿ ವಚನ ಮಾತ್ರದ ರಪಣದಲಿ ರಚಿಸಿದನು ಗೋಧನಭೂಮಿದಾನವನು (ಕುಮಾ. ೯-೨೯) ; ಅರ್ಜುನಂ ನಗುತೆ ರಕ್ಷೋಘ್ನಬಾಣವನೆ ಪೂಡಿ ಬೇಗದಿಂದಿಸಲು (ಕೃಷ್ಣರಾ. ೦೬-೩೯); ಯಾಗಶಾಲೆಯೊಳೆಣ್ಡೆಸೆಯೊಳಂ ಬಾಗಿಲೊಳೋರಿರ್ವರ್ ಮುನಿಗಳ್ ರಕ್ಷೋಘ್ನಸೂಕ್ತಮಂ ಪಠಿಸುತ್ತೆ ಕಾವಲಿರಿಸಿದರ್ (ರಾಮಾಶ್ವ. ೦೬೬-೩). [ಸಂ.]





**ರಖಂ** 'ರಕಂ' ನೋ.

**ರಖಂವ್ಯಾಪಾರ** (ನಾ). ಒಟ್ಟುಗಟ್ಟಳೆ ವ್ಯವಹಾರ; ಸಗಟುವ್ಯಾಪಾರ : ನಾರಾಯಣ ರಖಂವ್ಯಾಪಾರ ಮಾಡುವುದಕ್ಕಾಗಿ ಸಾಟಿ ಮಾಡುತ್ತಿರುವಾಗ ಕೇಶವ ಚಿಲ್ಲರೆವ್ಯಾಪಾರವನ್ನು ದೊಡ್ಡದಾಗಿ ಮಾಡುವ ಹಂಚಿಕೆ ಹೂಡು ವನು (ರಾಜಂದ್ರ. ೯). [ರಖಂ (< ರಕಂ) + ವ್ಯಾಪಾರ]



**ರಖಾವು** (ನಾ). ೧. ಕಾಪಾಡುವುದು ; ರಕ್ಷಿಸುವುದು. ೨. ಉಪಪತ್ನಿ ಯನ್ನು ಇಟ್ಟುಕೊಳ್ಳುವುದು : ಚಿಕ್ಕಬಾಬುಗಳಿಗೆ ಇರೋದು ಆಕೆ ಒಬ್ಬಳೇ. ರಖಾವು ಹೆಂಗಸು (ಶಾಹೇಬ್. ೩೭೭). [← ಹಿಂ. ರಖಾವ್]

**ರಖಾವುದಾರ** (ನಾ). ಉಪಪತ್ನಿಯನ್ನು ಇಟ್ಟುಕೊಂಡಿರುವವನು. **ರಖಾವುದಾರಳು** = ಇಟ್ಟುಕೊಂಡಿರುವವಳು; ಉಪಪತ್ನಿ : ಅವನ ಹೆಂಡತಿಗೆ ಅವನ ರಖಾವುದಾರಳು ಅಗಸಗಿತ್ತಿಯ ದೆಸೆಯಿಂದ ಅವನಲ್ಲಿ ದ್ವೇಷವಿದ್ದರೂ ಪ್ರಾಣಭಯದಿಂದ ಅನಾಥಳಾಗಿದ್ದಾಳೆ (ಕಲಪ. ೦೬೩). [ರಖಾವು + – ದಾರ₄]



**ರಖಿಸು** 'ರಕ್ಷಿಸು' ನೋ.

**ರಖೇಲಿ** (ನಾ). ಉಪಭೋಗಿಸುವ ಹೆಣ್ಣು ; ಉಪಪತ್ನಿ : ಬಸವಂತಿ ಶ್ಯಾಮರಾಯನ ಕೇವಲ ರಖೇಲಿ . . . ಅಲಗರ್ಜಿ ಜಾತಿಯ ಹೆಣ್ಣಲ್ಲವೆಂದು ಖಾತ್ರೀಯಾಯಿತು (ದೀಕ್ಷಕ. II, ೦೭೭). [← ಹಿಂ. ಮರಾ. ರಖೇಲೀ]



**ರಖೋಲೆ** (ನಾ). ಕಾವಲು; ರಕ್ಷಣೆ: ರಾಮಣ್ಣನನ್ನು ಇಲ್ಲಿಯ ರಖೋಲೆಗೆ ಹೇಳಿದ್ದೇನೆ. ಬರುತ್ತೇನೆ ಎಂದಿದ್ದಾನೆ (ಶಿರಾಅ. ೨೩೨); ಅಗೋ ಅಲ್ಲಿ ತೋಟ. ಇಂದಿನಿಂದ ಅದರ ರಖೋಲೆ ನಿನಗೆ ಸೇರಿದ್ದು (ಕರಂಜಿ. ೦೨). [← ಹಿಂ. ರಖವಾಲೀ]

**ರಗಟೆ** (ನಾ). ೧. ಹರಿದ ಬಟ್ಟೆ; ಜೀರ್ಣವಸ್ತ್ರ; ಚಿಂದಿ : ಅಘದ ಬೀಡು ಮುಕುತಿಗೇಡು ಜನಿಸಿ ಕಿಡುವ ತನುವ ರಗಟೆಗಿಂತ ಕಡೆಯ ಕಾಂಬುದೆಂದಿಗವ್ವದೊ (ಸುಹಾಕ. ೬೨-೨). ೨. ಜೀರ್ಣವಾದ ಬಟ್ಟೆಗಳನ್ನು ಸೇರಿಸಿ ಹೊಲಿದ ಹೊದಿಕೆ ; ಕವುದಿ : ಕ್ಷುತ್ತಿಂಗೆ ಭಿಕ್ಷ ಶೀತಕ್ಕೆ ರಗಟೆ ಮಾತಿಂಗೆ ಮಂತ್ರ (ಅವಹೊ. ೨೦೫-೯೨೪) : ಪ್ರಾಣಲಿಂಗದಲ್ಲಿ ಪರಿಣಾಮಿಯಾಗಿ ಕ್ಷುತ್ತಿಂಗೆ ಭಿಕ್ಷೆ ಶೀತಕ್ಕೆ ರಗಟೆಯಾಗಿ ಮೋಕ್ಷಗಾಮಿಯಾಗಿಪ್ಪದೇ ಮಧ್ಯ (ಶಿಪಪ. ೦೦-೬) ; ಬಾವಿಯಲ್ಲಿ ಸೀರೆ ರಗಟೆ ಕವದಿ ಮೊದಲಾದ ಮಲಿನ ವಸ್ತ್ರಗಳನ್ನು ತೊಳೆಯಲಾಗದು (ಕೃಷಿಕ್ರ. ೦೬೫).

[← ಮರಾ. ರಕಟೀ, ರಗಟಾ, ರಗಟೀ]

**ರಗಡ** ' ಲಗಡು ' ನೋ.

**ರಗಡು** (ನಾ). (ಉಕ) ಹೆಚ್ಚು; ತುಂಬ : ನೀ ನೋಡಿದಾಗ್ಲೂ ಈಗ್ಲೂ ರಗಡ ಫರಕ ಆಗೇದ (ಗಂಪಹಾಯ. ೦೨) ; ನೀನೂ ರಗಡು ಸಹಾಯಾ ಮಾಡಿದೀ. ಆದರೂ ಪೂರಾ ಸಾಧಿಸಲಿಲ್ಲ (ತಿತುಸು. ೬೩).

**ರಗಡಾಗು** = (ಕ್ರಮವು) ಬಹಳವಾಗು ; ಹೆಚ್ಚಾಗು : ಅವರ ಚಕ್ರವ್ಯೂಹದಿಂದ ಪಾರಾಗಬೇಕಾದರೆ ಆವನಿಗೆ ರಗಡಾಯಿತು (ಅಶ್ವ. ೨೫); ಮಳೆಯಾಗ ಗುಡ್ಡದಿಂದ ಬರಬೇಕಾದ್ರ ರಗಡಾಗಿ ಹೋತು (ಸಜಿಶಾ. II, ೦೦೬೦). [← ಅರ. ರೆಘದ್; ಹಿಂ. ಮರಾ. ರಗಡ್]

**ರಗಣ** (ನಾ). [ಛಂದ] ಎರಡು ಗುರುಗಳ ಮಧ್ಯೆ ಲಘುವುಳ್ಳ ಅಕ್ಷರ ಗಣ (– ᴗ –) : ಮಗಣಂ ಭೂಮಿಯೆನಿಕ್ಕುಂ ಯಗಣಂ ಜಲ ರಗಣಮಗ್ನಿ ಸಗಣಂ ವಾತಂ (ಛಂದೋಂಬು. ೦-೩೯ ಅಡಿಟಿ). [ಸಂ.]

**ರಗಣಲಿಪಿ** (ನಾ). ಒಂದು ಬಗೆಯ ಲಿಪಿ : ಪ್ರಬಂಧಲಿಪಿ ರಗಣಲಿಪಿ ಶೈಲಲಿಪಿ . . . ಈ ಅಗಣಿತ ಲಿಪಿಗಳ ನೋಡಲಚ್ಚರಿಯದೆ (ಭಾಸ್ಕರ. ೬೬-೬).

[ರಗಣ$_1$ + ಲಿಪಿ]

**ರಗಳು** (ಕ್ರಿ). ಕೋಪದಿಂದ ಹರಟು ; ಗಳಹು : ಬಾಯಲ್ಲಿ ಬೇಕಾದಷ್ಟು ರಗಳಿಕೊ ; ಕೈಯಲ್ಲಿ ಮಾತ್ರ ಮುಟ್ಟಬೇಡ ! (ಚಟ್ನಿ. ೯೦-೨೦).

[ ← ತೆಲು. ರಗುಲು = ಕೋಪಗೊಳ್ಳು ]

**ರಗಳೆ**, ರಘಟೆ (ನಾ). ೧. ಗದ್ದಲ ; ಗೊಂದಲ : ಯಾವ ವಿಧವಾದ ರಗಳೆ ರಾದ್ಧಾಂತಗಳೂ ನಡೆಯುತ್ತಿರಲಿಲ್ಲ (ಕರಾಸಾ. ೫೨) ; ಮದುವೆ ಯಾದ ಬಳಿಕ ಒಂದು ರಗಳೆಯುಂಟಾಯಿತು (ದೇಜಿಶ್ರೀ. ೯). ೨. ಕರೆಕರೆ; ಉಪದ್ರವ ; ಪೀಡೆ : ಆ ರಗಳೆಯನ್ನೆಲ್ಲಾ ಯೋಚಿಸಿಕೊಂಡರೆ ಹೋಗುವುದು ಬೇಡವೆನ್ನಿಸುತ್ತದೆ (ವಡಚಾ. ೦೫೯) ; ಒಮ್ಮೆ ಇಲ್ಲಿಂದ ಹೊರಬಿದ್ದರೆ ಮತ್ತೆ ಅವಳ ರಗಳೆ ಇಲ್ಲವಲ್ಲ (ದೀಪಪ. ೦೦೮). ೩. ಬೇಸರ ತರುವ ದೀರ್ಘವಾದ ಮಾತುಕತೆ ; ತಲೆಬಿಟ್ಟು ಹಿಡಿಯುವ ದೀರ್ಘ ಚರ್ಚೆ : ಮಂತ್ರವಾದಿಯ ಕುತಂತ್ರದ ರಗಳೆಗೆ ಜೋರಾಗಿ ರೇಗಿದನು (ಪನ್ನಿಧ. ೬೫) ; ಮುಗಿಯದೇ ನಿನ್ನ ರಗಳೆ (ಕಂಡಮ. ೦೦-೦೫). ೪. ಬಗೆಹರಿಯದುದು ; ಕೊನೆಗಾಣದುದು : ಈ ರಗಳೆಗೆ ಕೊನೆಯೇ ಇಲ್ಲ (ರೂಢಿ). ೫. (ಮಗುವಿನ) ಚಂಡಿ ; ರಂಪ : ಮಗುವಿನ ರಗಳೆ ಇನ್ನೂ ನಿಂತಿಲ್ಲ (ರೂಢಿ). ೬. [ಛಂದ] ಒಂದು ಬಗೆಯ ಮಾತ್ರಾಗಣದ ಛಂದ : "ಸಮಾನವಾದ ಮಾತ್ರಾಗಣಗಳುಳ್ಳ ಬಹು ಪಾದಗಳಿಂದ ಕೂಡಿದ ವೃತ್ತವು ರಗಳೆಯೆನಿಸುವುದು" (ಕೃಪಿಬ. ೯೬) : ರಗಳೆಯ ಲಕ್ಷಣಮಂ ಕಂದಪದ್ಯದಿಂ ಪೇಟ್ದಿಂ (ಛಂದೋಂಬು. ೩-೨೨೨) ; ಹರಿಯರಸನೆಂಬಾತ ಶಿವಕವೀಶ್ವರನು ಗಡ . . . ಪರಿರಚಿಸುತಿಹ ಕಬ್ಬ ರಗಳೆಗಿಗಳೆಗಳು ಗಡ (ರಾಶಿಶ. ೦೪-೨೬) ; ಗಿರಿಜಾಕಲ್ಯಾಣವನ್ನು ಆತನು ರಚಿಸಿದೆ ಹೋಗಿದ್ದರೂ ರಗಳೆಗಳಿರುವ ತನಕ ಆತನ ಮಹಿಮೆಯಲ್ಲಿ ಲವ ಲೇಶವೂ ಕಡಿಮೆಯಾಗುತ್ತಿರಲಿಲ್ಲ (ಅಮೃತ. ೨). **ರಘಟೆ** : ೬. ಮಾಲಾ ವೃತ್ತದಂಡಕ[ಂಗಳುಂ] ರಘಟೆ (ರಗಳೆ) ಮಾತ್ರಾರ್ಯ – ತ್ರಿಪದಿ, (ಛಂದೋಂಬು. ೩. ೦-೬೬ ವ); ರಘಟೆಗಳ (ತೆಲುಗು–ರಗಢ) ಪ್ರಭೇದಗಳನ್ನು ತಿಳಿಸುವ. . . ಎರಡು ಪದ್ಯಗಳು (ಕೃಪಿಬ. ೦೩೬).

[?./ ಹಿಂ. ರಗಡ./ತೆಲು. ರಗಡ]

**ರಗುತ** ' ರಕುತ ' ನೋ.

**ರಗ್ಗು** (ನಾ). ಉಣ್ಣೆಯಿಂದ ನೆಯ್ದು ಮಾಡಿದ ದಪ್ಪಹೊದಿಕೆ ; ನಯಗಂಬಳಿ : ನಾನು ರಗ್ಗನ್ನು ಮುಖದ ಮೇಲೆಳೆದು ಬಿದ್ದುಕೊಂಡೆ (ಬೀಗಾರ. ೫೬) ; ನೆಲಕ್ಕೆ ಚಾಪೆ ಅಥವಾ ಸಾಧ್ಯವಾದರೆ ರಗ್ಗುಗಳನ್ನು ಹಾಸಬೇಕು (ಗೃಹಶಿ. ೬೬). [ ←ಇಂ. Rug]

**ರಘಟಾಪ್ರಬಂಧ** (ನಾ). = ರಗಳೆ ೬ ; ಮಹಾಪುರಾತನರ ಸತ್ಕಥೆಗಳಂ ರಘಟಾಪ್ರಬಂಧದಿಂ ಪೊಗಳುತ್ತಲಿ (ರಾಶಿಶ. ೦೪-೦೩೨).

[<ರಘಟೆ + ಪ್ರಬಂಧ]

**ರಘಟಾಬಂಧ** (ನಾ). = ರಗಳೆ ೬ : ಗುಣಾಗ್ರಣಿಯ ಮತದಿಂದೆ ತಾಳದ ಗಣನೆಗೊಡಂಬಟ್ಟೊಡದುವೆ ರಘಟಾಬಂಧಂ (ಛಂದೋಂಬು. ೩-೨೨೨).

[<ರಘಟೆ + ಬಂಧ]

**ರಘಟೆ** ' ರಗಳೆ ' ನೋ.

**ರಚನ** (ನಾ). ೧. ನಿರ್ಮಾಣ ; ಸೃಷ್ಟಿ : ' ರಚನಕಾರ ' ಪರಾ. ೨. ಆಕರ್ಷಕವಾದುದು : ಎನ್ನ ಕಣ್ಮನದ ಪುಣ್ಯಾದಿ ಶಕ್ತಿಯೆ ಕೇಳೆನ್ನ ಸವಿವಚನ ನಿನ್ನ ಕಿವಿಗತಿರಚನವಪ್ಪ ಮೇಲ್ಗಥೆಯನುಸುರ್ವೆ (ಪಪವೋ. ೦೨-೪). ೩. ಅಣಿ; ಸಜ್ಜು. ೪. ಸಿದ್ಧಿ ; ಸಾಧನೆ: 'ರಚನಂಗೆಯ್' ಪರಾ.[ಸಂ.]

**ರಚನಂಗೆಯ್** (ಕ್ರಿ). ೧. ನಿರ್ಮಿಸು ; ಸೃಷ್ಟಿಸು. ೨. ಸಾಧಿಸು ; ಸಿದ್ಧಿಯನ್ನು ಹೊಂದು: ರಚನಂಗೆಯ್ಯದೆ ಧರ್ಮಕೀರ್ತಿಯೆರಡಂ ಸದ್ವರ್ಮವಂ ಪಾಪದಾ ನಿಚಯಕ್ಕಿಕ್ಕದೆ . . . ಪಾದಿಪಾ ವಚನಬ್ರಹ್ಮದೆ ಮುಕ್ತಿಯೇ (ಸೋಮೇಶ್ವರ. ೯೯). [ರಚನ + ಕೆಯ್$_1$]

**ರಚನಕಾರ** (ನಾ). ಕಾವ್ಯ ಮುಂತಾದುವನ್ನು ರಚಿಸುವವನು ; ಕೃತಿ ಕರ್ತ : ತ್ಯಾಗರಾಜರ ಅನಂತರದ ಶ್ರೇಷ್ಠ ರಚನಕಾರ – ಸಂಗೀತಗಾರರಲ್ಲಿ ಮಹಾವೈದ್ಯನಾಥಅಯ್ಯರವರದು ಬಹಳ ಉಚ್ಚವಾದ, ಗೌರವಾನ್ವಿತವಾದ ಸ್ಥಾನ (ಸಂಗೀತ. ೨). [ಸಂ.]

**ರಚನೆ** (ನಾ). ೧. ನಿರ್ಮಾಣ ; ಸೃಷ್ಟಿ : ಅಚ್ಯುತನುವಿನೊಳಗಾದ ಜಗದ ರಚನೆ ಆರಿಂದ ಜನಿಸಿತ್ತು (ಕ್ಷಾಪ. ೩೭೦೦). ೨. ಕಾವ್ಯ, ಚಿತ್ರ ಮೊದಲಾದುವನ್ನು ಬಗೆಯುವುದು, — ಸೃಷ್ಟಿಸುವುದು : " ಶಂಥನಂ, ಗ್ರಂಥನಂ, ಗುಂಫಃ, ಸಂದರ್ಭಃ, ರಚನಾ__ಈ ೫ ರಚನೆ " (ಪಲಾಯು. ೦೨೦-೪೫); ಒಂದು ನಾದವೇ ಗಾಯಕನ ಗಾಯನದ ರಚನೆಲೀ ಚಂದಚಂದದ ರಾಗಮೆನಿಪಂತೆ (ಗಗಾ. ೦೪-೬). ೩. ಬರೆದ ಕಾವ್ಯ, ಕೃತಿ, ಗ್ರಂಥ ಮುಂತಾದುವು : ಅವನು ಮಾಡಿದ ರಚನೆಯನ್ನು ಬಾಯಿಂದಾಗಲಿ, ವಾದನಗಳ ಮೇಲಾಗಲಿ ಹಾಡಿ ತೋರಿಸಬಲ್ಲವನು ಗಾಯಕ (ಬಾಂಶ್ರ. II, ೦೦೯೦). ೪. ಕ್ರಮ ; ರೀತಿ. [ಸಂ. ರಚನಾ]

**ರಚನೆವಂತ** (ನಾ). ನಿರ್ಮಾಣ ಮಾಡುವವನು : ಕಟ್ಟುವವನು; ಕರ್ತೃ: ಭಜನೆವಂತರೆಲ್ಲರು ಪುರಾಣದ ಪುಣ್ಯವಂತರು ಶಾಸ್ತ್ರದ ಸನ್ನಿಹಿತರು ವಚನದ ರಚನೆವಂತರು (ಪೋಳಿಪಬ. ೦೦೬-೯೨೬). [ರಚನೆ + — ವಂತ ]

**ರಚಯಿತ** (ನಾ). = ರಚನೆವಂತ : ಇಂಥ ಹಾಡುಗಳನ್ನು ಅವುಗಳ ರಚಯಿತರು ಬರೆದಿರಿಸಲಿಲ್ಲ (ಜಾಪಗೀ. ೯); ಸಂಗೀತವು ಎರಡು ಮುಖ್ಯ ವ್ಯಕ್ತಿಗಳನ್ನು ಹೊಂದಿಕೊಂಡಿದೆ. ಮೊದಲನೆಯದು ಸಂಗೀತ ರಚಯಿತನನ್ನು (ಬಾಂಶ್ರ. II, ೦೦೯೦). [ಸಂ. ರಚಯಿತೃ]

**ರಚಯಿತಾರ** (ನಾ). = ರಚನೆವಂತ : ಈ ಕವಿತೆಯ ತಿಬೇಟಭಾಷೆಯ ಅನುವಾದದಲ್ಲಿ ರಚಯಿತಾರನ ಹೆಸರು ' ಅಮೋಘೋದಯ ' ಎಂದಿದೆ (ಕಸಾಶ. ೦೬). [ಸಂ. ರಚಯಿತೃ]

**ರಚಯಿಸು** ' ರಚಿಸು ' ನೋ.

**ರಚಿತ** (ಗು). ೧. ಉಂಟಾದ ; ಒದಗಿದ : ರಜತಗಿರಿಶಿಖರದೊಳ್ ಮದನಾರಿಯುಂ ಗೌರಿಯುಮುಚಿತಲೀಲಾರಚಿತಸುಖಸಂಕಥಾಪ್ರಿಯಕೌತುಕದೊಳಿರಲು (ಬಸವ. ೦-೩೨). ೨. ಸಿದ್ಧಪಡಿಸಿದ ; ಅಣಿಗೊಳಿಸಿದ : ರಚಿತರುಚಿನಿಚಿತಶುಚಿಸಾಜ್ಯಭೋಜ್ಯಾಳಿಯಿಂ . . . ಪೂಜಿಸಿದಂ (ರಾಜಶೇ. ೦೬-೫೦ ರಗಳೆ). ೩. ಮಾಡಿದ. ೪. ಬರೆದ ; ರಚಿಸಿದ. (ನಾ). ೫. ಸೃಷ್ಟಿಯಾದುದು ; ನಿರ್ಮಿತವಾದುದು : ರಚಿತಂ ನಯುಂಗ ಸಪ್ತಸಪ್ತಾರ್ಚಿಯಿಂ ದಂಡಕಂ (ಛಂದೋಂಬು. ೩-೨೨೩). [ಸಂ.]

**ರಚಿಸು,** ರಚಯಿಸು (ಕ್ರಿ). ೧. ನಿರ್ಮಿಸು ; ಕಟ್ಟು : ನವರತ್ನಮಯ ಶಿವಭವನಮಂ ರಚಿಸಿ (ಬಸವ. ೩೩-೨೯); ಬಿಳಿಯ ಚೌರಿಯ ಮೇಲುಗಟ್ಟಿನ ಹೊಳಹು ಮಿಗೆ ರಚಿಸಿದರು ಸತಿಯ ವಿವಾಹಮಂಟಪವ (ಪಳಕ. ೩-೬). ೨. ಮಾಡು : ವಿಧ್ಯುಕ್ತಮಾಗಿ ರಚಿಸಿರ್ದ ಜಪಮಾಲೆಯಂ ಮಧ್ಯಮಾನಾಮಿಕಾಂಗುಷ್ಠದಿಂ ಗ್ರಹಿಸಿ . . . ಜಾನಿಸುತೆ (ಶಿವ್ಯಾ. ೭-೨೯) ; ಭಕ್ತಿ ಶುಕ್ತಿಯಲಿ ಮುತ್ತುಗಳ ರಚಿಸಿ ಕೋದಿಹೆ ವರಣಮಾಲೆಯಂ (ಶಿಪ್ರಾಂಗ. ೩೭-೦೦೦೯). ೩. ಅಣಿಮಾಡು ; ಸಜ್ಜುಗೊಳಿಸು : ನೆರೆದರವನೀನಿರ್ಜರರು ಕೇಸರಿಯ ಪೀಠವ ರಚಿಸಿ ವೈದಿಕಪರಿಣತರ ಮತದಿಂದ ವಿಸ್ತರಿಸಿದರು ಮಂಗಳವ (ಕುಮಾ.ಭೀ. ೦-೩೦). ೪. ನೆರವೇರಿಸು ; ಜರುಗಿಸು : ತನ್ನುನಿಪನುಪನಯನಾದಿ ಕರ್ಮವ ರಚಿಸಿ (ಕೆಶರಾ. ೦-೩-೦೦); ಪನ್ನೆರಡನೆಯ ದಿವಸ ನಾಮಕರಣವ ಚೆನ್ನಾಗಿ ರಚಿಸಲು ದ್ವಿಜರ . . . ಕರಸಿ (ಕಂಠಿವ. ೯-೬೪). ೫. (ಕಾವ್ಯ, ಚಿತ್ರ ಮೊದಲಾದುವುಗಳನ್ನು) ಬರೆ ; ಸೃಷ್ಟಿಮಾಡು : ಅಸದೃಶಮೆನಿಸಿ ಲೋಕಕ್ಕೆಸೆಯೆ ಮನೋವಚನಕಾಯಮಳಮಂ ಕಳೆಯಲ್ಕೆ ಸಮರ್ಥಮೆನಿಪುವಂತೆ ರಚಿಸಿದರ್ಕೆವಳಮ ಪೂಜ್ಯಪಾದಮುನೀಂದ್ರರ್ (ಶಮುಶ. ೦-೯) ; ಕಟ್ಟಿದರೋದುಗಬ್ಬವ ಹಾಡುಗಬ್ಬವ ಕಬ್ಬದೊಳೊರೆವರಿವೆರಡು ಕಬ್ಬಿನಂತಿರಬೇಕು ಬಿದಿರಂತೆ ರಚಿಸಲೇಕಬ್ಬ ಹೇಳಲಿ ಸರಸ್ವತಿಯೆ (ಶರಶ. ೦-೩); ಇವರು ರಚಿಸುವ ಕಾವ್ಯವು ಒಬ್ಬ ಮನುಷ್ಯನು ರಚಿಸಿದ್ದೆಂದು ಮನಸ್ಸಿಗೆ ತೋರುವುದಿಲ್ಲ (ಕಾಶೀಗೀ. ೩). **ರಚಯಿಸು :** ೫. ಪುರಾಣಮಾರ್ಗಪದಪದ್ಧತಿಬಂಧುರಬಂಧಮೆಂಬಿನಂ ರಚಯಿಸಿ (ಛಂದೋಂಬು. ೦-೭). ೬. ತಿದ್ದು ; ರೇಖಿಸು : ಮಂಗಮಂಗಿಸುತಿಹ ಪರಿಮಳದ ಪನ್ನೀರಿನಿಂ ಮಜ್ಜನಂಬುಗಿಸಿ ಪರದುಕೂಲಮನುಡಿಸಿ ಪಣೆಯೊಳಗೆ ಮೃಗಮದಲಲಾಮಮಂ ರಚಯಿ [ಪಾಠಾಂ. ವಿರಚಿ] ಸಿದರು (ಶಿವಪು. ೩೭-೯).

[ರಚನೆ + –ಇಸು₁]

**ರಚ್ಚ** ' ರಚ್ಚೆ₂ ' ನೋ.

**ರಚ್ಚಿಸು** (ಕ್ರಿ). ಗುಂಪಾಗು ; ಒಟ್ಟಿಗೆ ಸೇರು; ಒಟ್ಟುಗೂಡು : ಪಾರಿವಾಳವು ಹೆಚ್ಚಿನಾ ಗೌಜೀನ ಹಕ್ಕಿಯು ಕಚ್ಚಿ ಆಡುವ ಸಿಪಲೆ ಹಕ್ಕಿಯು ರಚ್ಚಿಸಿ ಮೆರೆವವರಣ್ಯದಿ (ಗೋಹಾಡು. ೩-೦೩). [ರಚ್ಚೆ₂ + –ಇಸು₁]

**ರಚ್ಚು** ' ಱಚ್ಚೆ ' ನೋ.

**ರಚ್ಚುಳಿ** (ನಾ). ಅತಿಶಯ ; ಆಧಿಕ್ಯ (?) : ಪಚ್ಚೆಗುಳ ಗಂಟಾಳಿ ರಾಶಿಯ ನಿಚ್ಚಳಿಪ ಕಡಿಯಣದ ಕವಚದ ಪಚ್ಚಡಿಯ ರಚ್ಚುಳಿಯೊಳೊಪ್ಪಿದುದೊಡನೆ ರಣಭೂಮಿ (ಕಂಠಿರಾ. ೦೭-೩೯); ಎಲವೋ ಚಚ್ಚರವು ಲೇಸಾಯ್ತು ತಾಂ ಘಡ ವಿರುಪಲೋಚನನ ಅಚ್ಚರಿಯ ಮಗನೆಂದು ಸೈರಿಸಿ ಹೆಚ್ಚಿತಹುದೈ ಶೌರ್ಯ ನಮ್ಮಯ ರಚ್ಚುಳಿಯ ಬಳಿಕಿನ್ನು ನೋಡೆನುತೆಚ್ಚ ಮತ್ಸರಿಸಿ (ಕಂಠಿರಾ. ೨೬-೩೦). [ ? ]

**ರಚ್ಚೆ₁** ' ಱಚ್ಚೆ ' ನೋ.

**ರಚ್ಚೆ₂,** ರಚ್ಚ (ನಾ). ೧. ಕಟ್ಟೆ; ವೇದಿಕೆ; ಜಗಲಿ : ಮಲ್ಲಿಗೌಡನ ತಾಯ ಹೆಸರಿನಲ್ಲಿ ಮಂಟಪವ ಕಟ್ಟಿಸಿದಳೆತ್ತರದ ರಚ್ಚೆಯಿಕ್ಕಿ (ಗೌಮಲ್ಲಿ. ೨೭). ೨. ಚಾವಡಿ ; ಪಂಚಾಯಿತಿ ಸಭೆ : ದೇವರೊಳು ವಿಲಗವನು ಮಾಡಿ ರಚ್ಚೆಗೆ ತಪ್ಪಡಾವು ಬಲ್ಲಿದರೆ (ಶಾಂಡಕ್ಷ. ೫-೯). ೩. ಪ್ರತಿಪಾದನೆ ; ವಿವರಣೆ ; ನಿರೂಪಣೆ : ಬೀದಿಯಲ್ಲಿ ನಿಂದು ನುಡಿವ ಅನುಭಾವದ ರಚ್ಚೆ ನಗೆಗೇಡೆ ನೋಡಯ್ಯಾ (ಶಪ್ನ.ಶ. ೪. ೫೬೩-೦೨೩೭). ೪. ಮುಚ್ಚುಮರೆಯಿಲ್ಲದ ಸ್ಥಿತಿ ; ಬಹಿರಂಗ : ರಚ್ಚೆಯ ನೆರವಿಗೆ ನಾಣಾನುಡಿಯಿಲ್ಲದಿಹುದೆ ಅದೆಬಿಂತೆ ಎನಬಹುದೆ ಸಜ್ಜನಸ್ತ್ರೀಯ (ಬಸವ. ೬೨೩); ದನಿಗೆಯ್ಯೆ ಕೋಗಿಲೆಯುಲಿದು ಲಜ್ಜೆಯಂ ಕಡಿಸಿ ರಚ್ಚೆಗೆ ತಂದವನ್ನಾಯವಿನ್ನುಳಿದ ನರರೊಳಾವಂ ಹಿತವನು (ಶಶಕ. ೯-೩೦) ; ಮಾತಾಪಿತರ ಹಾದರವನು ರಚ್ಚೆಯೊಳು ಪೇಳ್ವಾತ ಸತ್ಪುತ್ರನಪ್ಪನೇ (ಗುರುಬಾ. ೯-೫೦). ೫. ಗುಂಪು ; ಸಮೂಹ : ' ರಚ್ಚಿಸು ' ಪರಾ. ರಚ್ಚ : ೫. ತೇರ್ಬೀದಿ ನಂಜನಗೂಡು ನಂಜುಂಡಗೆ ರಾಗದಿಂದ ಕೋಲು ಕೊಡಿ ರಚ್ಚದಿಂದ ಕೋಲು ಕೊಡಿ ಬಾಗಿ ಬಾಗಿ ಕೋಲು ಕೊಡಿ (ಜಕ್ಕಿಹಾ. ೨೦-೨).

**ರಚ್ಚೆಕಚ್ಚು** = ಚರ್ಚಾಗೋಷ್ಠಿ; ವಾದಭೂಮಿ (?) : ಭೂಲೋಕದಲ್ಲಿ ಹುಟ್ಟಿದ ಮನುಜರು ಶಿವಲಾಂಛನವ ಧರಿಸಿದವರಿಗೆಲ್ಲಕ್ಕು ಶಿವತತ್ತ್ವ ಉಂಟೇ ? ಇವರ ಕೂಡೆ ರಚ್ಚೆಕಚ್ಚಿನಲ್ಲಿ ವಾದವಮಾಡಲಾರದೆ ಕರಣಂಗಳ ಚಲನತ್ವವಿಲ್ಲದ ಶರಣನು ಮರ್ತ್ಯದ ಉಪಾಧಿ ಜಂಗಮಕ್ಕೆ ವಿಲಕ್ಷಣನು (ಪೋಳವಾ. ೦೬೭-೭೦೩ ಅರ್ಥ). **ರಚ್ಚೆಗೆ ತರು** = ಬಯಲಿಗೆ ತರು ; ಬಹಿರಂಗಪಡಿಸು : ಕೋದಂಡವಮಾ ತೆಗೆದಾರ್ಭಂ ಮುಚಿದಿಕ್ಕಿ ಗಾಢಗುಣದಿಂದಂ ತೋಳ್ಗಳಂ ಕಟ್ಟಿ ರಚ್ಚೆಗೆ ತಂದು (ರಘುಸಾ. ೧-೫) ; ನೀನೇಕಾಂತದಲ್ಲಿ ಗಿಳಿಯೊಳಾಡಿದುದನು ಎಲ್ಲರ ಮುಂದೆ ರಚ್ಚೆಗೆ ತಂದು (ಶರತ. ೭-೦೭). **ರಚ್ಚೆಗೆ ಬೀೞ್** = ಬಯಲಾಗು ; ಬಹಿರಂಗವಾಗು : ತನ್ನ ಮರುಳಂ ಮುಚ್ಚಿ ನುಡಿದೊಡಂ ರಚ್ಚೆಗೆ ಬಿರ್ದುದೆಂಬರಸನನು ಕೂಳಾಧಿಗಳೊಳ್ ನುಡಿಯುತ್ತುಂ ನಡೆಯೆ (ಅಪಂಶ್ಚ. ೯-೦೦ ಪ).

[ ದೇ.॥ ತೆಲು. ರಚ್ಚ ]

**ರಚ್ಚೆ₃** (ನಾ). [ಸಂಗೀತ] ಒಂದು ಬಗೆಯ ತಾಳ : ಪಡಿಮಳೆಯ ರಚ್ಚೆ ಮುಂತಾದ ದೇಶಿಯಲೆ ತಾಳಂಗಳಂ ಬಿತ್ತರಿಸಿ ಬಿನ್ನಣದಲಿ (ಶಾಂಡಕ್ಷ. ೯-೫) ; ಏಕ್ಕಸರ ರಚ್ಚೆ ಉತ್ತರಪಾಣಿ ಪಂಚಪಾಣಿ (ವಿವೇಕ. ೦೯೨); ಏಕ್ಕತಾಳ ರೂಪಕ ರಚ್ಚೆಯೆಂಬೀ ಕ್ರಮಗಳು ಏಳುವಿಧವು (ಶರ್ಕರ್. ೭-೫೭). [ ? ]

**ರಚ್ಚೆಕಟ್ಟೆ** (ನಾ). ಪಂಚಾಯತಿ ಕಟ್ಟೆ; ಚಾವಡಿ : ಪಟೇಲನ ಮನೆಯ ಮುಂದಿನ ರಚ್ಚೆಕಟ್ಟೆಯ ಮೇಲೆ . . . ಗಣ್ಯವ್ಯಕ್ತಿಗಳು ಸಭೆ ಸೇರಿದ್ದರು (ಊರುಕ. ೯೭). [ರಚ್ಚೆ₂ + ಕಟ್ಟೆ₁]

**ರಜ₁** (ನಾ). ೧. ಸಣ್ಣಹುಡಿ ; ಧೂಳು : "ಚೂರ್ಣಂ ಧೂಳಿ ಪಾಂಸು ರೇಣು ಕ್ಷೋದಮಾ ರಜಂ ಸಣ್ಣಹುಡಿ" (ಶುಂಗರಾ. ೬೯-೨೩); ಸಮರರಸಪ್ರಿಯರೊಳ್ ಸತ್ವಮುಮಿಳಿಯೊಳ್ ರಜಮುಮೊದವೆ ರಣಗಟ್ಟಲೆಯೊಳ್ ತಮಮುಂ ಮಿಗೆ ಸತ್ತ್ವರಜಸ್ತಮಂಗಳುಂ ಕಾಣಲಾದುವೆರಡುಂ ಪಡೆಯೊಳ್ (ಶಂಕರಾ. ೦೦-೬೯) ; ಅತಿಬಹುಳರಜದೊಳ್ ಪೊರೆದ ಪೊನಲ್ಗಳಂತೆ (ಕಾದಂಪೂ.೯೯೬). ೨. ಹೂವಿನಲ್ಲಿರುವ ಪುಡಿ ; ಪರಾಗ : " ಪರಾಗಮೆನೆ ರಜಮಕ್ಕುಂ " (ಮಂಗರಾ.೩೩-೬); ಕನಕಾಂಭೋಜರಜಂ ನಿಜಾಂಗರುಚಿಯಂ . . . ಕೈಕೊಳ್ವಿನಂ (ಆದಿಪು. ೦-೬೨); ದರವಿಕಸಿತಮಂ ರಜದೊಳ್ ಪೊರೆದಾತ್ಮಜಮುಖಸರೋಜಮಂ ಮೋಹರಸಂ ತೆರೆಮಸಗೆ (ಮಲ್ಲಿಪು. ೩-೦೨೦). ೩. ಕಸ : ಮನೆಯೊಳಗೆ ಮನೆಯೊಡೆಯನಿದ್ದಾನೊ ಇಲ್ಲವೊ ಹೊಸ್ತಿಲಲ್ಲಿ ಹುಲ್ಲು ಹುಟ್ಟಿ ಮನೆಯೊಳಗೆ ರಜ ತುಂಬಿ (ಬಸವ. ೯೭). ೪. ಕಳಂಕ ; ದೋಷ : ಕಲೆಯಿಲ್ಲದ ಮಹೌಕ್ತಿಕದಂತೆ ರಜ[ಪಾಠಾಂ. ಜರ]ವಿಲ್ಲದ ರತ್ನದಂತೆ (ಪೋಳವಾ. ೦೦೦-೯೩೬). ೫. ಕೆಂಪುಬಣ್ಣ ; ಕೆಂಬಣ್ಣ : ಲಲನೆ ಮೂಗಿನೊಳುಸುರನಳ್ಳಿಯೊಳು ಹೊಯ್ಲುನುಗುರೊಳು ರಜವನೆದೆಯೊಳಲ್ಲಾಟವಂ . . . ಅರಯುದ್ಧ ಕಾಣದೆ ನೊಂದಳು (ಶಶಕ. ೦೨-೨೩). ೬. ಮುಟ್ಟು ; ರಜಸ್ಸು : " ಆರ್ತವಮುದು

ರಜಮೆಂದುಂ ಪುಷ್ಪಮೆಂದುಮವಿಭೇದ[ದಿಂದೆ ಪೇೞಲ್ಪ]ಡುಗುಂ" (ಶಬ್ದಮಣಿ. ೩೪–೦೩). 'ರಜೋದರ್ಶನ' ಪರಾ. ೭. ಕತ್ತಲೆ ; ತಮಸ್ಸು ; ಅಂಧಕಾರ : ಗೂಗೆವೊಂಗುವೊಂಗದೆ ರಜದಿಂ (ಶಾಂತಿಪು. ೨–೩೩). ೮. ಸತ್ತ್ವ, ರಜ ಮತ್ತು ತಮವೆಂಬ ಮೂರು ಮೂಲ ಗುಣಗಳಲ್ಲಿ ಎರಡನೆಯದು ; ರಜೋಗುಣ : ಹಿರಣ್ಯಗರ್ಭನೆಂದೆನಿಸಿಯುದಾರನೆಂಬ ರಜಮೊಂದಿಯೆ ಸತ್ತ್ವನಿಧಾನನೆಂಬ . . . ಚತುರ್ಮುಖನೀಗೆ ರಾಗಮಂ (ಜಗು. ೦–೨). ೯. ಕುಂಕುಮಕೇಸರಿ. [ಸಂ. ರಜಸ್]

**ರಜ₂** 'ರಜಾ' ನೋ.

**ರಜಂಬೊರೆ** (ಕ್ರಿ). ೧. ಹುಡಿಯಿಂದ ಕೂಡಿರು : ಪರಿಜನಮನಿತುಂ ತುರಿಪದೆ ಪರಿತಂದಿನ್ನೇವೆಂದು ಕಪ್ಪುರದ ರಜಂಬೊರೆದ ಕರಕಾಂಬುವಂ ತಳಿದು (ಅಂತು. ೪–೦೩೭). ೨. ಹೂವಿನ ಪರಾಗದಿಂದ ಕೂಡಿರು : ಪರಮಜಿನಜನನಿಗೊರ್ವಳ್ ಸುರಪಥು ಕೊಡೆವಿಡಿದು ನಳಿನಿಯೊಡವೆಳೆದು ರಜಂಬೊರೆದು ಕೊಡೆಯೆಲೆಯು ಕಟಗಿರ್ದ ರಾಜಹಂಸಿಯು ವಿಳಾಸಮಂ ನೆನೆಯಿಸಿದಳ್ (ಶಾಂತಿಪು. ೯–೦೭೬). ೩. ರಜೋಗುಣವನ್ನು ಉಂಟುಮಾಡು ; ರಾಜಸಗುಣವನ್ನು ಆರೋಪಿಸು. ೧, ೩ : ಇರದೊಯ್ಯದು ತನ್ನಿಚ್ಚೆಗೆ ಪರಯೌಪನದಂದು ಪುರುಷನಂ ಪ್ರಕೃತಿ ರಜಂಬೊರೆದು ತಿರುಪುತ್ತೆ ಸುಟ್ಟುರೆ ತೆರಳ್ಚಿ ತಟಗೆಳೆಯನುಯ್ವ ತೆಱದಿಂದೆತ್ತಂ (ಕಾದಂಪೂ. ೩೩೩). [ರಜ₁ + ಪೊರ್ಯೆ]

**ರಜಕ** (ನಾ). ಬಟ್ಟೆಗಳನ್ನು ಮಡಿ ಮಾಡುವವನು; ಅಗಸ ; ಮಡಿವಾಳ: "ನಿರ್ಣೇಜಕಃ, ರಜಕಃ – ಈ ೨ ಅಗಸಂ" (ಹಲಾಯು. ೯೭–೪೩೯) ; ಒಗೆದೊಗೆದು ಮುರಿದು ಜಗುನೆಯೊಳಗಲೊಗೆದುಂ ಪಿಂಡುತಿರ್ಪ ರಜಕನನೀ ಸೀರೆಗಳನುಡಲೀವುದೆಮಗೆನೆ ಜಗಳಂ ಜಕ್ಕುಲಿಸಿದಂತೆ ನಕ್ಕಂ ರಜಕಂ (ಅರ್ಧನೇ. ೬–೭೭); ಚದುರಕಶ್ಯಪ ಕಾರುಕಂ ನಾರದಂ ರಜಕ ವ್ಯಾಸ ಕಬ್ಬಿಲತಿಯಣುಗಂ (ಏಕೋತ್ತ. ೯–೬೨); ನಮ್ಮ ರಜಕಶಿಖಾಮಣಿ ಖಾದಿ ತೊಟ್ಟುಕೊಳ್ಳದಿದ್ದರೂ ಪಕ್ಕಾ ಸ್ವದೇಶಿ (ದೇಶಭ್ಯ. ೩೦). [ಸಂ.]

**ರಜಕಿ** (ನಾ). ೧. ಮಡಿವಾಳನ ಹೆಂಡತಿ. ೨. ಅಗಸಗಿತ್ತಿ. ೩. ಮುಟ್ಟಾದ ಮೂರನೆಯ ದಿನದ ಹೆಂಗಸು. [ಸಂ. ರಜಕೀ]

**ರಜಕೀಶೋಕ** (ನಾ). (?) : ಕೇಳು ರಜಕೀಶೋಕದೊಲು ಮನ ಹೇಳ ಹೇಳಲು ದೊಡ್ಡಿತಾಗಿಯೆ ಭಾಳನೇತ್ರಾದಿಗಳನೇಡಿಸಿ ಕಾಡಿತೆಂದೆನಲು (ಸರ್ವಜ್ಞ. ೬–೨೦). [ಸಂ.]

**ರಜತ** (ಗು). ೧. ಬೆಳ್ಳಗಿರುವ ; ಬಿಳುಪಾದ. ೨. ಬೆಳ್ಳಿಯಿಂದ ಮಾಡಿದ : ಮಣಿಕನಕರಜತವಸ್ತುಗಳನಿತ್ತು (ಶಂಕರಾ. ೪–೪೦ ರಗಳೆ). (ನಾ). ೩. ಬಿಳಿಬಣ್ಣದ ಒಂದು ಲೋಹ ; ಬೆಳ್ಳಿ : "ರಜತಂ, ಕಳಧೌತಂ, ರೂಪ್ಯಂ, ತಾರಂ – ಈ ೪ ಬೆಳ್ಳಿ" (ಹಲಾಯು. ೨೬–೦೬). ೪. ಮುತ್ತಿನ ಹಾರ : "ಮುತ್ತಿನ ಹಾರದಲ್ಲಿಯುಂ ರಜತಮೆಂಬುದು" (ಹಲಾಯು. ೦೩೦–೩). ೫. ಚಿನ್ನ ; ಸುವರ್ಣ. ೬. ಆನೆಯ ದಂತ. ೭. ರಕ್ತ. ೮. [ಗಣಿತ] ಕಳೆಯುವುದು ; ವ್ಯವಕಲನ : ರಜತಂ, ರಜಿತಂ, ಉವಿತಂ . . . ಕಳೆ ಇಂತಿನಿತುಂ ಕಳೆವುದಕ್ಕೆ ಪೆಸರು (ವ್ಯವಹಾ. ೦೦). [ಸಂ.]

**ರಜತಗಿರಿ** (ನಾ). ಬೆಳ್ಳಿಯ ಬೆಟ್ಟ ; ಕೈಲಾಸಪರ್ವತ : ರಜತಗಿರಿ ನಿಜ ಖಗೇಶಾತ್ಮಜೆಯ ವಿವಾಹಕ್ಕೆ ಕಟಿಪಿದುದು ಸಿಬ್ಬಣಮಂ ನಿಜಕಾಂತಿಸಂತತಿಯನೆನೆ ವಿಜೃಂಭಿಸಿತ್ತಪುಳಕೌಮುದೀವಿಸ್ತಾರಂ (ಪರ್ಶ್ವ. ೬–೪೪); ದಯಾಂಬುಧಿ ರಜತಗಿರಿವೊಕ್ಕು ಗಿರಿಜೆಯೊಡಗೂಡಿ ಸುಖದಿಂದಿರ್ದನು (ಶಿಂಪು. ೪೭–೪). [ಸಂ.]

**ರಜತಪರದೆ** (ನಾ). ಸಿನಿಮಾಮಂದಿರಗಳಲ್ಲಿ ಚಲನಚಿತ್ರಗಳನ್ನು ಪ್ರದರ್ಶಿಸುವ ಬಿಳಿಯ ತೆರೆ : ಕೆಲವರು ತಮ್ಮ ನೆಚ್ಚಿನ ನಟನನ್ನು ರಜತಪರದೆಯ ಮೇಲೆ ಕಂಡು ಸಂತೋಷದಿಂದ ಚಪ್ಪಾಳೆ ತಟ್ಟಿದರು (ರೂಢಿ). [ರಜತ + ಪರದೆ]

**ರಜತಪರ್ವತ** (ನಾ). = ರಜತಗಿರಿ : ಕನಕದಿವ್ಯವಿಮಾನಪಂಕ್ತಿಗಳನುನಯದಿ ಬಂದೀಶ್ವರೇಶ್ವರ ಘನರಜತಪರ್ವತಕೆ ಕೊಂಡೊಯ್ದುವು ವಿಳಾಸದಲಿ (ಬಸವಪು. ೩೪–೦೯). [ಸಂ.]

**ರಜತಪಾತ್ರ** (ನಾ). ಬೆಳ್ಳಿಯ ಪಾತ್ರೆ : ಪರಶುರಾಮನ ಬರವಂ ಗಾಂಗೇಯಂ ಕೇಳ್ದಿದಿರ್ವಂದು ಕನಕರಜತಪಾತ್ರಂಗಳೊಳರ್ಘ್ಯಮಂ ಕೊಟ್ಟು ಪೊಡವಟ್ಟು (ಶಂಕರಾ. ೦–೭೭ ವ). [ಸಂ.]

**ರಜತಪಾತ್ರೆ** (ನಾ). = ರಜತಪಾತ್ರ : ಅನೇಕ ರಜತಪಾತ್ರೆಗಳ ಸಮರ್ಪಣೆಯೂ ಆಯಿತು (ಸಸ್ಯಕ. ೪೦). [ಸಂ. ರಜತಪಾತ್ರ]

**ರಜತಪೀಠ** (ನಾ). ಬೆಳ್ಳಿಯ ಆಸನ : ದೇವರನ್ನು ರಜತಪೀಠದಲ್ಲಿ ಇರಿಸಿ ಆರತಿ ಬೆಳಗಿದರು (ರೂಢಿ). [ಸಂ.]

**ರಜತಮಹೋತ್ಸವ** (ನಾ). (ಸಂಘ, ಸಂಸ್ಥೆಗಳಿಗೆ) ಇಪ್ಪತ್ತೈದು ವರ್ಷಗಳು ತುಂಬಿದಾಗ ಆಚರಿಸುವ ಉತ್ಸವ–ಸಮಾರಂಭ : ಬೆಳ್ಳಿಹಬ್ಬ : ೧೯೧೬ರಲ್ಲಿ ಚಿಕಾಗೋ ವಿಶ್ವವಿದ್ಯಾಲಯದ ರಜತ ಮಹೋತ್ಸವವು ನಡೆದಾಗ . . . ಒಂದು ಉದ್ಗ್ರಂಥವನ್ನು . . . ಸಮರ್ಪಿಸಿದರು (ಸಸ್ಯಕ. ೪೦). [ಸಂ.]

**ರಜತಮಾಲಿಕೆ** (ನಾ). ಬೆಳ್ಳಿಯ ಸರ : ರಜತಮಾಲಿಕೆಯ ಗುಣ-ಮನೋಹರವಾದ ಬಿಳುಪಾದ ಬೆಳ್ಳಿಯಿಂದ ಮಾಡಲ್ಪಟ್ಟ ಸರಗಳನ್ನು ಧರಿಸಿದ್ದಲ್ಲಿ . . . ಸಕಲಪಾಪಸಮೂಹಂಗಳಂ ನಾಶಮಾಡುವುದು (ಸಕಲ್ಪ. ೩೬). [ಸಂ. ರಜತಮಾಲಿಕಾ]

**ರಜತಶಾಸನ** (ನಾ). ಬೆಳ್ಳಿಯ ಫಲಕದ ಮೇಲೆ ಕೆತ್ತಿರುವ ಶಾಸನ : ಓಜೆಗೊಳೆ ರಜತಶಾಸನ ರಾಜಪತ್ರಕದೊಳೆಸೆಯೆ ಬರೆಯಿಸುವಂತಾ ರಾಜತ ಶೈಲೇಂದ್ರದೊಳೆ ಮಹಾಜಿನಚಂದ್ರಂ ಪ್ರಶಸ್ತಿಯಂ ಬರೆಯಿಸಿದಂ (ಶಾಂತಿಪು. ೪–೩೯). [ಸಂ.]

**ರಜತಾದ್ರಿ** (ನಾ). = ರಜತಗಿರಿ : "ಪಿಂಜರಿವೆಟ್ಟು . . . ರಜತಾದ್ರಿಗೆಸೆವ ನಾಮಮದಕ್ಕುಂ" (ಕವಿಕಂ. ೪೬); ರಜತಾದ್ರಿಮುದ್ರಿತಮಹೀತಳಮಂ ಬೆಸಕೆಯ್ಸಿ (ಆದಿಪು. ೦೪–೬೦); ಹಿಮಾಲಯದೊಳೆಸೆವ ರಜತಾದ್ರಿಯೊಳ್ ತೇಜೋಮಯಂ ಸದಾಶಿವನಪ್ಪನು (ಕೃಷ್ಣರಾಜ. ೩–೩೩). [ಸಂ.]

**ರಜತೋತ್ಸವ** (ನಾ). = ರಜತಮಹೋತ್ಸವ : ಶಾಲೆಯ ವಾರ್ಷಿಕೋತ್ಸವ, ರಜತೋತ್ಸವ . . . ಮುಂತಾದ ಸ್ಮಾರಕಗಳನ್ನು ಆಚರಿಸುವುದು (ಶಿಕ್ಷಣ. ೩೨೦). [ಸಂ.]

**ರಜನ** (ನಾ). ೧. ಬಣ್ಣ; ರಂಗು. ೨. ಬಣ್ಣ ಬಳಿಯುವುದು ; ರಂಗು ಹಾಕುವುದು. ೩. ಕದಿರು; ಕಿರಣ. ೪. ಕುಸುಂಬೆ ಹೂವು. [ಸಂ.]

**ರಜನಿ** (ನಾ). ೧. ಇರುಳು ; ರಾತ್ರಿ : "ತಮಿಸ್ರಾ . . . ರಜನೀ, ಯಾಮಿನೀ . . . ರಾತ್ರಿಃ – ಈ ೧೯ ಇರುಳಿನ ಪೆಸರ್" (ಹಲಾಯು. ೦೮–೧೦೭); ರಜನಿಗಳ್ಯೆಂದವಬಿಂಬವ್ರಜದಿಂ ಜ್ಯೋತ್ಸ್ನಾಪ್ರವಾಹಮಂ ಪಸರಿಪವೋಲ್ ರಜತಕಲಶಂಗಳಿಂ ಮಳಯಜಜಳಮಂ ಸುರಿದರಸಿತನಳಿನೇಕ್ಷಣೆಯರ್ (ಕಾದಂಪೂ. ೭೪); ರಜನಿಗಾ ಚಂದ್ರಂ ಮಹಾಭೂಷಣಂ (ಸೋಮೇಶ. ೩). ೨. ದುರ್ಗೆಯ ಹೆಸರುಗಳಲ್ಲಿ ಒಂದು. ೩. ಅರಿಸಿನ : "ಅರಸಿನಂ ಸಿತಂ ಹರಿದ್ರೆ ರಜನಿಯೆನಿಕ್ಕು" (ಮಂಗರಾ. ೩೯–೨೬); ತ್ರಿಫಲೆಯಿಂ ನೆಲ್ಲಿಯುಮಂ ಪಂತಿಯುಮಂ ರಜನಿಯುಮನರೆದು ಪೂಸಿದೊಡೆ . . . ಭಗಂಧರಂ ಪ್ರಶಮಿಸುಗುಂ (ಲೋಕೋಪ. ೯–೦೩೯); ರಜನಿ ಬರಿಪದಣೆ ಕಟುಕವ್ರಜಮಿಸಿತುಮಂ . . . ಕುಡೆ . . . ಸಿಂ(ಘಾ)ಣಾಣ ಹರಂ (ಅಶ್ವಶಾ. ೦೦–೩೦). ೪. ಅರಗು. ೫. (ಆಲಂ) ಅಜ್ಞಾನ ; ಮಾಯೆ : ಗಜಬಜಿಸುವ ಪಂಚಭೂತಗಳ ರಜನಿಗೆ ಸಿಲ್ಕದೆ (ಕವಳ-ಭಾ. ೧೨೬–೦). [ಸಂ.]

**ರಜನಿಕರ** (ನಾ). ೧. ಚಂದ್ರ: "ವಿಧು ಚಂದ್ರಂ ರಜನಿಕರಂ . . . ತಾರಾಧೀಶಂ" (ವಸ್ತುಕೋ. ೧೨-೬೭) ; ಅಭಿನವೋದಯರಾಗರಂಜಿತನಪ್ಪ ರಜನಿಕರನಂ ನೋಡಲೊಡಂ (ಕಾದಂಪೂ. ೬೬೦). ೨. ಕರ್ಪೂರ. ೩. [ಗಣಿತ] ಒಂದು ಎಂಬ ಸಂಖ್ಯೆಯ ಸಂಕೇತ; ಏಕ: "ರಜನಿಕರಂ . . . ಒಂದಱ ನಾಮಂ" (ವ್ಯವಹಾ. ೯-೧) [ಸಂ.]

**ರಜನಿಚರ** (ನಾ). ೧. ರಾತ್ರಿಯಲ್ಲಿ ಸಂಚರಿಸುವವನು. ೨. ರಾಕ್ಷಸ. ೩. ಕಳ್ಳ. ೪. ಚಂದ್ರ. ೫. ರಾತ್ರಿಯಲ್ಲಿ ಗಸ್ತು ತಿರುಗುವವನು. [ಸಂ.]

**ರಜನಿಚರಾಂಗನೆ** (ನಾ). ೧. ರಾತ್ರಿಯಲ್ಲಿ ಸಂಚರಿಸುವವಳು. ೨. ರಾಕ್ಷಸಿ: ತುಂಗಬಲ ಸೌಮಿತ್ರಿಯಿಂದುಚಿತ ಭಂಗಬಟ್ಟ ಮಹೋಗ್ರರಜನಿ ಚರಾಂಗನೆಯ ದೂಱಿನಲಿ ಖರನೈತಂದನಾಹವಕೆ (ತೊರರಾ. ೩-೩ ಸೂಚನೆ). [ಸಂ. ರಜನಿಚರಾಂಗನಾ]

**ರಜನೀಗಂಧ** (ನಾ). ರಾತ್ರಿಯಲ್ಲಿ ಸುಗಂಧ ಬೀರುವ ಹೂವುಗಳನ್ನು ಬಿಡುವ ಒಂದು ಬಗೆಯ ಬಳ್ಳಿ; ರಾತ್ರಿರಾಣಿ : ಬಂಗಲೆಯ ಆವರಣ ದೊಳಗಿನ ರಜನೀಗಂಧದ ಅರಳಿದ ಹೂಗಳು ತಮ್ಮ ಮಾದಕಸುಗಂಧವನ್ನು ಸುತ್ತಮುತ್ತಲೆಲ್ಲ ಪರಡಿದ್ದವು (ಮ್ಯಜಿ. ೦೦೯). [ಸಂ.]

**ರಜನೀಚರ** (ನಾ). ೧. ರಾತ್ರಿಯಲ್ಲಿ ಸಂಚರಿಸುವವನು. ೨. ಚಂದ್ರ. ೩. ರಾಕ್ಷಸ ; ಅಸುರ : ರಜನೀಚರರ ಘಟ್ಟಣೆ ಧಾತುಗೆಡಿಸಿತು ದಿಟ್ಟರುಬ್ಬಟೆಯ (ಕುಮಾರರಾ. ೦೩-೨೩). ೪. ಕಳ್ಳ; ತಸ್ಕರ. ೫. ರಾತ್ರಿ ಪಹರೆಯವನು: ಕರಸಿ ರಜನೀಚರನ ಆ ತೆರನರುಹಿ ತಿಳಿಯೆನಲು (ಬಜ್ಞಪು. ೦೩-೦೭). ೬. ರಾತ್ರಿಯಲ್ಲಿ ಸಂಚರಿಸುವ ಗೂಬೆ ಅಥವಾ ಬಾವಲಿ. [ಸಂ.]

**ರಜನೀಚರಿ** (ನಾ). ೧. ರಾತ್ರಿಯಲ್ಲಿ ಸಂಚರಿಸುವವಳು. ೨. ರಾಕ್ಷಸಿ : ರಜನೀಚರಿಯರ್ಕಳ ಮಿಕ್ಕ ಪೆಕ್ಕಣಂ ಬಳ್ಳುವ ಸಾಹಣಂ ತಲೆಯ ಪುಂಜಿಗೆ ಕುಂದವು ತತ್ಪ್ರದೇಶದೊಳ್ (ಕಾವ್ಯಸಾ. ೫೬೦ ಸೂತ್ರ ೪). [ಸಂ. ರಜನೀಚರಿ]

**ರಜನೀಚಾರಿ** (ನಾ). ೧. ರಾತ್ರಿಯಲ್ಲಿ ಸಂಚರಿಸುವವನು. ೨. ಚಂದ್ರ. ೧, ೨ : ದೋಷಾಕರಾಹ್ವಾನಮಿಾ ರಜನೀಚಾರಿಗೆ ಸಲ್ಲದೇ ಕುವಲಯಾಪ್ತಂ ರಾಜನೇಸಲ್ಲವೇ (ರಾಜಶೇ. ೧೦-೭೪). ೩. ರಾಕ್ಷಸ : ತೀರಿತಂದಿನ ರಜನಿ ರಜನೀಚಾರಿಯಾಯುವಿನಂತೆ (ತೊರರಾ. ೬-೯-೩೨). [ಸಂ. ರಜನೀಚಾರಿನ್]

**ರಜನೀಮುಖ** (ನಾ). ರಾತ್ರಿಯ ಪ್ರಾರಂಭ; ಸಂಜೆ : ಶಶಿಮುಖಿಯ ಮಾಯೆಯ ಬಳಸಿ ರಜನೀಮುಖದೊಳಗೆ ತಂದಧಮರ್ಕನಿವರೇಳಾರು (ತೊರರಾ. ೬-೦೦-೩೨); ಭೂಮಂಡಿದ ಮನೆಮನೆಯೊಳ್ ಸೊದರುಮೆಸದುವು . . . ರಜನೀಮುಖಮೆಡ್ಡಮಾದುದು (ರಾಜಶೇ. ೨೩-೨). [ಸಂ.]

**ರಜನೀರಜ** (ನಾ). ಅರಿಸಿನದ ಪುಡಿ : ಪೆರ್ದೊಱೆಗಳೊಳ್. . . ನೀರಾಟ ಮನಾಡಿ ಪೋದ ವಾರನಾರಿಯರ ಪೊಂಜಳೆಮೆಯ್ಯೊಳ್ ರಂಜಿಸಿರ್ದ ರಜನೀ ರಜಂಗಳಿಂ ಕದಡಳ್ದು ಪರಿದಪುದು (ರಾಜಶೇ. ೧೨-೭೯ ವ). [ಸಂ.]

**ರಜನೀವಲ್ಲಭ** (ನಾ). ಇರುಳಿನ ಒಡೆಯ ; ಚಂದ್ರ.

**ರಜನೀವಲ್ಲಭ ವಾರ** = ರಾತ್ರಿಯ ಒಡೆಯನಾದ ಚಂದ್ರನ ದಿನ; **ಸೋಮವಾರ** : ಮಾರ್ಗಶಿರಶುದ್ಧೈಕಾದಶೀವಾಸರಂ ರಜನೀವಲ್ಲಭವಾರ ಮಶ್ವಿನಿನಿಶಾನಾಥಾಂಶಕಂ ಕೂಡೆ . . . ಪುಟ್ಟಿದಳ್. . . ಅತ್ತಿಮಬ್ಬೆ (ಅಜಪು. ೦೨-೩೨). [ಸಂ.]

**ರಜನೀಶ** (ನಾ). = ರಜನೀವಲ್ಲಭ : ವಿಯೋಗಿ ರಜನೀಶ ಮರೀಚಿಯ ನೊಲ್ಲದಿರ್ದೋಡೇನಾದುದು (ಶ್ರೀಪು. ೦-೨೦); ರಜನೀಶಂಗಬ್ಜಿನೀಕಾಂತ ನೀಂ ತಲಿಪಂ ಮಾಡು (ಶಬಶಂ. ೦-೬೩). [ಸಂ.]

**ರಜಪಂಥ** (ನಾ). ರಾಜಬೀದಿ ; ರಾಜಮಾರ್ಗ ; ಉತ್ತರಸ್ಯನ್ದಿಶಿ ರಜಪನ್ಥ ಅನ್ತೆ ಬಂದು ಮೊಹರೆಯ ಕೊಳ ಅನ್ತೆ ಬಂದು ಕೊಟ್ಟಲೆವೆಳ್ಳದ ಅಲಕಿಬಾಕೆಯ (ಎಕ. XVI, ತಿಕಬೂ. ೦೧೦-೭೦ ; ಸು. ೧೫ನೆಯ ಶಕ). [೯ ಇದು 'ರಾಜಪಂಥ' ಎಂಬುದರ ಅಪಲಿಖಿತವಿರಬಹುದು]

**ರಜಪುತ**, ರಜಪೂತ (ನಾ). ಒಂದು ಕ್ಷತ್ರಿಯ ವಂಶ ಮತ್ತು ಅದಕ್ಕೆ ಸೇರಿದ ವ್ಯಕ್ತಿ : ರಜಪುತರಲ್ಲಿಯೂ ಗುಜರಾಥೀಜನರಲ್ಲಿಯೂ ಅವು ತಿನ್ನುವ ಚಟ ಹೆಚ್ಚು (ಮುಂಬಯಿ. ೪-೪೦). **ರಜಪೂತ** : ರಜಪೂತ ಕೃಷ್ಣಕೀರ್ತಿಯನೊಮ್ಮೆ ಕಣ್ದಣಿಯೆ ನೋಡುತ್ತ (ಕೃಷ್ಣಕು. ೪-೪). [ < ಸಂ. ರಾಜಪುತ್ರ ]

**ರಜಪುಷ್ಪಿ** (ನಾ). ಒಂದು ಬಗೆಯ ಸಸ್ಯ : ಆವರಿಕೆ : "ರಜಪುಷ್ಪಿ ಆವರವೆನಲ್ಕಾವರೆಯೆನಿಕ್ಕು" (ಮಂಗರಾ. ೪೦-೬೦). [< ಸಂ. ರಾಜಪುಷ್ಪಿ]

**ರಜಪೂತ** 'ರಜಪುತ' ನೋ.

**ರಜಪೊರಿಗೆ** (ನಾ). ಧೂಳನ್ನು ಉಡುಗುವ ಸಾಧನ ; ಕಸಪೊರಕೆ : ಆನೆ ಮೊಱವಾಕಾರವೆಂದ ಕಿವಿಯ ಮುಟ್ಟಿದಾತ ಆನೆ ರಜಪೊರಿಗೆ [ಪಾಠಾಂ. ಬರಿಗೆ, ಪುಡಿಗೆ] ಯಾಕಾರವೆಂದ ಬಾಲವ ಮುಟ್ಟಿದಾತ (ಶಿವವ. ೪೩-೪೦). [ರಜ$_1$ + ಪೊರಿಗೆ(< ಪೊರಕೆ)]

**ರಜಬ** 'ರಜಬು' ನೋ.

**ರಜಬು**, ರಜಬ (ನಾ). ಮಹಮ್ಮದೀಯ ವರ್ಷದ ಏಳನೆಯ ತಿಂಗಳು : ರಜಬು ತಿಂಗಳು ೯ನೇ ತಾರೀಕು (ರಾಜೇಂದ್ರ. ೦೫೭). **ರಜಬ** : ಈ ಯುದ್ಧವು ರಜಬ ತಿಂಗಳಲ್ಲಾಯಿತು (ಹಮಶ. ೨೨). [ ← ಅರ. ಪಾರ. ಮರಾ. ರಜಬ್ ]

**ರಜಯ್ಯ** (ನಾ). ಒಬ್ಬಾತನ ಹೆಸರು : ಶ್ರೀಮಂತ್‌ಗಂಗಿಗವುಣ್ದನ ಮಗ ರಜಯ್ಯ ತುಱುವನಿಕ್ಕಿಸಿ ಸತ್ತಂ (ಎಕ. XIV, ನಾಗಮಂ. ೦೩೯-೩ ; 950). [ ? + ಅಯ್ಯ$_1$ ]

**ರಜರೂಪಿ** (ನಾ). (ಅಲಂ) ಸೂಕ್ಷ್ಮರೂಪದಲ್ಲಿರುವವನು : ರಜರೂಪಿ ಭಗವಂತನೆಂದಿಗೈತಹನೆಂದೆ ಅವನೆಯೆ ಗತಿ ಸನಗೆಂದೆ (ಇಂಕಾಶ. ೦೦೩-೭೬). [ ಸಂ. ರಜರೂಪಿನ್ ]

**ರಜಸ್ವರ** (ನಾ). ಹೂವಿನ ಹುಡಿ ; ಪರಾಗ : ಸಮೀರನುದಾರಕವೆಂಬ ಕೇತಕೀಪ್ರಸರರಜಸ್ವರಪ್ರಕಟವಾಂಸುಳವಮಾದುದು ಮೇಘಕಾಲದೊಳ್ (ಶಂಕಶಾ. ೭-೨೨). [ < ಸಂ. ರಜಸ್ವಲ ]

**ರಜಸ್ವಲೆ** (ನಾ). ಮುಟ್ಟಾದ ಹೆಂಗಸು; ಬಹಿಷ್ಠೆ: "ಅವೀ, ಉದಕ್ಯಾ, ರಜಸ್ವಲಾ, ಆತ್ರೇಯಿಕಾ, ಪುಷ್ಪವತೀ—ಈ ೫ ಮುಟ್ಟುವೆಗಂಡವಳ್" (ಹಲಾಯು. ೬೦-೩೩೪) ; ರಜಸ್ವಲೆಯಾಗಿರ್ದಂ ಮುಟ್ಟಲಾಗದೆನೆಯುಂ. . . ಮುಡಿಯುಂ ಪಿಡಿದು (ಶಂಕಶಾ. ೭-೪ ವ) ; ಸ್ವೈರಿಸಿದರೇ ಪಾಂಡುಸುತ ರಂಭೋರುಹಾಕ್ಷಿ ರಜಸ್ವಲೆಯ ಸುಲಿಸೀರೆಯಲಿ (ಕುಮಾಗ. ೦೦-೪). [ ಸಂ. ರಜಸ್ವಲಾ ]

**ರಜಸ್ಸು** (ನಾ). ೧. ಧೂಳು ; ಹುಡಿ. ೨. ಸತ್ವ, ರಜ ಮತ್ತು ತಮಗಳೆಂಬ ಮೂರು ಗುಣಗಳಲ್ಲಿ ಒಂದು ; ರಜೋಗುಣ. ೧, ೨ : ಕೆಸಱೊಳ್ ಪುಟ್ಟಿದುದುಂತುಮಲ್ಲದೆ ರಜಸ್ಸಂಲೀಢಮುಂತುಂ ಜಡಾವಸಥಂ (ಜಗಪು. ೦-೬). [ಸಂ. ರಜಸ್]

**ರಜಾ**, ರಜ್ಜ, ರಜೆ (ನಾ). ೧.ಶಾಲೆ, ಕಾಲೇಜು, ಕಚೇರಿ ಮೊದಲಾದವು ಗಳಿಗೆ ಕೊಡುವ ಬಿಡುವು ; ಸೂಟಿ : ಶಾಲೆಯ ವಿದ್ಯಾರ್ಥಿ ರಜಾದಿನ ಗಳಲ್ಲಿ ಮಾಡಬೇಕಾದ ಕೆಲಸ ; ರಜಾಕಾಲದ ಕೆಲಸ (Holiday-Task. ಇಂಕಹ). ೨. ನೌಕರನು ಮೇಲಧಿಕಾರಿಯ ಅನುಮತಿಯಿಂದ ಪಡೆಯುವ ಬಿಡುವು : ರಜಾದ ಮೇಲೆ ಹೋಗುವ ಕಾಲ ವಿನಹಾ ಮತ್ತಾರ್ಯಾರನ್ನು ಬದಲಿಯಾಗಿ ಇಡಕೂಡದು (ಗ್ರಾಪಾಕ. ೩). **ರಜ್ಜ** : ೧. ಅಕ್ಕಾ! ನಾಳೆ ದೀಪಾವಳೀ ಹಬ್ಬವಂತಲ್ಲೇ! ನಮಗೆ ರಜ ಬಿಟ್ಟು ಬಿಟ್ಟಿದ್ದಾರೆ (ಕೊಗ್ಗು. ೫೩). ೨. ರಂಗಣ್ಣ ಎರಡು ತಿಂಗಳು ಕಾಲ ರಜ

ತೆಗೆದುಕೊಂಡು ಬೆಂಗಳೂರಿಗೆ ಬಂದು ವಾಸಮಾಡುತ್ತಿದ್ದನು (ರಂಗೇ. ೦); ಸರಕಾರದವರು . . . ಅವರಿಗೆ ಹೆಚ್ಚಿನ ರಜವನ್ನು ಮಂಜೂರುಮಾಡಿ ಬೇಕಾದ ಅನುಕೂಲತೆಗಳನ್ನು ಮುಂದುವರೆಸಿಕೊಟ್ಟರು (ಸಸ್ಮೃ. ೦೦೨).

**ರಜೆ** : ೧. ಅಂದು ಕ್ರಿಶ್ಚಿಯನ್ನರ ಯಾವುದೋ ಹಬ್ಬಕ್ಕಾಗಿ ರಜೆಯಿತ್ತು (ಧಾರೆ. ೯) ; ನಿನ್ನೆಯಿಂದ ದುರ್ಗಾಪೂಜೆಯ ರಜೆ ಆರಂಭವಾಗಿದೆ (ಶಾಂಹಿಂ. ೦). ೨. ಅವನು ಒಂದು ವರ್ಷದ ರಜೆಯನ್ನು ಕೇಳಿದನು (ಸ್ವೂಂಬಿ. ೨೬) ; ನಾನು ಕಳೆದ ತಿಂಗಳಿನಲ್ಲಿ ಮೂರು ದಿನ ರಜೆಗೆ ಬರೆದಿದ್ದೆ (ಮಗವೂಂ. ೬೦).

**ರಜದ ಊಳಿಗ**=ರಜ ಪಡೆದುಕೊಂಡ ದಿನಗಳಿಗೆ ಬದಲಾಗಿ ಕೆಲಸ ಮಾಡುವುದು : ಅರಮನೆಯಲ್ಲಿ ಸಮ್ಮುಖದೊಳು ನಿತ್ಯಕಟ್ಟಳೆಯಲ್ಲಿ ನಡೆಯುವ ಊಳಿಗಗಳು – ಸಂಚಿಯ ಊಳಿಗ . . . ಅವಸರದ ಊಳಿಗ, ರಜದ ಊಳಿಗ (ಮುಹಾವಂ. I. ೯೩). [←ಅರ. ಹಿಂ. ಮರಾ. ರಜಾ]

**ರಜಾಕಾರ** (ನಾ). ಭಾರತಕ್ಕೆ ಸ್ವಾತಂತ್ರ್ಯ ಬಂದ ತರುಣದಲ್ಲಿ ಹೈದರಾಬಾದಿನಲ್ಲಿ ಸ್ಥಾಪಿತವಾಗಿದ್ದ, ಒಂದು ರಾಷ್ಟ್ರವಿರೋಧಿ ಮುಸ್ಲಿಂ ದಳ : ಆಗಲೇ ರಜಾಕಾರರ ಚಟುವಟಿಕೆಗಳು ತೆರೆಯ ಹಿಂದೆ ಏಳಹತ್ತಿದ್ದವು (ಶೀರಾವ. ೬೦) : ಈ ರಜಾಕಾರರಂತಹ ಮಕ್ಕಳ ಕಾಟಕ್ಕೆ ಅದಾವ ಗಿಡ ಬದುಕಲು ಸಾಧ್ಯ ? (ಹುಕ್ಕುಹು. ೭೨). [←ಹಿಂ. ರಜಾಕಾರ್]

**ರಜಾಮಂದಿ, ರಜಾವಂದಿ** (ನಾ). ಸಮ್ಮತಿ ; ಒಪ್ಪಿಗೆ : ಸುಮಾರಾಗಿ ಊಟ ಅಥವಾ ತಿಂಡಿಯ ಹೊತ್ತಿಗೆ ಜಗಳ ಬರುವದು ವಾಡಿಕೆ. ಊಟ ಅಥವಾ ತಿಂಡಿ ತಯಾರಾಗಿ ಬಾಯಿಗೆ ಸಿದ್ಧವಾಯಿತೊ, ಕೂಡಲೇ ರಜಾಮಂದಿ ' (ಕಕಗಾ. ೦). **ರಜಾವಂದಿ** : ರಾಜರು . . . ತಮ್ಮ ಹೆಸರು ಸಹಿ ಹಾಕಿ, ರಜಾವಂದಿಯಿಂದ ಕೊಡದೆ (ರಾಕೇಂದ್ರ. ೦೯).
[←ಪಾರ. ಹಿಂ ರಜಾಮಂದೀ ; ಮರಾ. ರಜಾಮಂದೀ, ರಜಾವಂದೀ, ರಜಾವಂತೀ]

**ರಜಾಯಿ** (ನಾ). ೧. ತೆಳ್ಳಗಿರುವ ಹಾಸುಗೆ ; ಲೇಪು : ಮೆತ್ತನೆಯ ಪದಾರ್ಥವನ್ನಿಟ್ಟು ಅಡ್ಡ ಹೊಲಿಗೆ ಹಾಕಿ ಮಾಡಿದ ಹಾಸಿಗೆ, ಮೆತ್ತೆ ; ರಜಾಯಿ (Quilt. ಇಂಕಿ) ; ಶಿವಮೊಗ್ಗೆಯಲ್ಲಿ ಚಳಿ ಹೆಚ್ಚೆಂದು . . . ರಗ್ಗುಗಳನ್ನೂ, ರಜಾಯಿಗಳನ್ನೂ, ರುಮಾಲುಗಳನ್ನೂ ಕಡ ತಂದವರೆಷ್ಟೊ (ಕಹಾತ್ರ. ೩೦). ೨. ಅರಳೆ ತುಂಬಿ ಮಾಡಿದ ತೆಳುವಾದ ಹೊದಿಕೆ : ಹುಡುಗಿಗೆ ರಜಾಯಿಯೊಂದನ್ನು ಹೊದಿಸಿದಳು (ತಕತ್ರ. ೨೦).
[←ಪಾರ. ಹಿಂ. ರಜಾಈ ; ಮರಾ. ರಜಾಈ, ರಜಈ]

**ರಜಾವಂದಿ** ' ರಜಾಮಂದಿ ' ನೋ.

**ರಜೆ** ' ರಜಾ ' ನೋ.

**ರಜೋಗುಣ** (ನಾ). ರಾಜಸ, ತಾಮಸ ಮತ್ತು ಸಾತ್ತ್ವಿಕಗಳೆಂಬ ಮೂರುಗುಣಗಳಲ್ಲಿ ಒಂದು ; ಕಾಮಕ್ರೋಧಗಳಿಂದ ಕೂಡಿರುವ ಸ್ವಭಾವ ; ರಾಜಸಗುಣ : ಘನರಜೋಗುಣದಲ್ಲಿ ಚತುರಾನನ ತಮೋಗುಣದಲ್ಲಿ ಶಂಕರನೆನಿಸಿ (ಕುವ್ಯಾಸ. ೯-೩) ; ರಜೋಗುಣಭರಿತಂ . . . ಲಂಕಾನಾಥಂ (ತೊರರಾ. ೬-೭-೦). [ಸಂ.]

**ರಜೋಗ್ರಹ** (ನಾ). ಬುಧ, ಶುಕ್ರ ಮುಂತಾದ ರಾಜಸಗುಣವುಳ್ಳ ಗ್ರಹ : ಶಶಾಂಕಜನುಂ ಭಾರ್ಗವನುಂ ರಜೋಗ್ರಹಂ ಭಾನವನುಂ ಮಾಹೇಯನುಂ ತಮೋಗ್ರಹಮೆನಿಪರ್ (ಜಾತಕ. ೯-೦). [ಸಂ.]

**ರಜೋದರ್ಶನ** (ನಾ). (ಮೊದಲನೆಯ ಬಾರಿಗೆ) ಮುಟ್ಟಾಗುವಿಕೆ ; ರಜಸ್ವಲೆಯಾಗುವಿಕೆ. [ಸಂ.]

**ರಜೋವಿಕೃತಿ** (ನಾ). ೧. ಧೂಳು ತುಂಬಿರುವುದು. ೨. ಹೂವಿನ ಧೂಳು ಏಳುವುದು ; ಪರಾಗ ಉಂಟಾಗುವುದು. ೩. ರಜೋಗುಣದಿಂದ ಉಂಟಾಗುವ ಮನೋವಿಕಾರ. ೨, ೩ : ರಜೋವಿಕೃತಿ ಜಾತಿಸಂಕರಂ . . . ಇಲ್ಲ ಬನದೊಳಲ್ಲದೆ ಜನದೊಳ್ (ಧಕ್ಕುಕ. ೨-೨೬). ೪. ಮುಟ್ಟಾಗುವುದು. ೧, ೪ : ಉಪಶಾಂತರಜೋವಿಕೃತಿಯಿನುಪಾತ್ತಕಾಳಿಮಪಯೋಧರಾಸ್ಯತೆಯಿಂ ಮತ್ತುಪಚಿತ ಜಡವೃತ್ತಿಯಿನೆಯ್ದೆ ಪೋಲ್ತುದಭ್ರಾಗಮಂ ಸಗರ್ಭಾಂಗನೆಯಂ (ಕಂಪ್ರಕು. ೯-೯೩). [ಸಂ.]

**ರಜ್ಜು** (ನಾ). ೧. ಹಗ್ಗ ; ಪಾಶ : "ಶುಲ್ಬಾ, ರಜ್ಜುಃ, ವಟಾರಃ, ವಟಃ, ತಂತ್ರೀಗುಣಃ – ಈ ೫ ನೇಣ್" (ಕರಾಯು. ೯೬-೯೯೩) ; ಅತಿಚಪಳ ಮೆನಿಪ್ಪಿಂದ್ರಿಯತತಿಯಂ ತೆಗೆದೊಳಗೆ ಪಿಡಿದು ಕಟ್ಟಿದ ರಜ್ಜುಪ್ರತತಿಯಿದೆಂಬಿನೆಗಂ ಯತಿಪತಿಗೆಸೆದುವು ಕೊರಳೊಳಮರ್ದ ಸಿರೆಗಳ ತುಱುಗಲ್ (ಶಾರಂಪೂ. ೨೩೯) ; ಅಗ್ನಿ ರಜ್ಜುವಿನಿಂದ ಕಟ್ಟುವಡೆವುದೆ (ವಚಸಂ. ೯೭೬-೦೬೩); ಪ್ರಭುಗಳು . . . ಕುದುರೆಗಳ ಕಡಿವಾಣದ ರಜ್ಜುಗಳನ್ನು ಕೈಗೆ ತೆಗೆದುಕೊಂಡರು (ಶಾಂಕಲಾ. ೩೨೦). ೨. ಜಡೆ ; ಹೆರಳು. ೩. ಬೆನ್ನುಮೂಳೆಯಿಂದ ಹೊರಡುವ ಸ್ನಾಯು. ೪. [ಜೈನ] ಲೋಕಾಕಾರ ವರ್ಣನೆಯಲ್ಲಿ ಬರುವ ಉದ್ದಳತೆಯ ಒಂದು ಪ್ರಮಾಣ ; ಎಂಟುಹಸ್ತಗಳಷ್ಟು ಪ್ರಮಾಣ : ಏಕರಜ್ಜುಪ್ರಮಾಣಂ ತಿರ್ಯಗ್ಲೋಕಂ (ಅಂಕು. ೦-೯೬) ; ರಜ್ಜುಗಳೇಳು ಕಳಗೆ . . . ನಿರ್ಜರನಿಳಯದಗ್ರದೊಳೊಂದು ಪದಿನಾಲ್ಕು ರಜ್ಜುದ್ದ ಲೋಕವೊಪ್ಪುವುದು (ಅನಂತ. ೦-೩೦) ; ತ್ರಿಲೋಕವು ಆದಿಯಿಂದ ತುದಿಯವರೆಗೆ ದಕ್ಷಿಣೋತ್ತರ ೧೪ ರಜ್ಜು ಉದ್ದವಾಗಿದೆ (ಕೈಪಧ. ೩೩). ೫. ರೇಖಾಗಣಿತ: ರಜ್ಜು (= ಹಗ್ಗ) ಎಂಬುದು ರೇಖಾಗಣಿತಕ್ಕೆ ಪ್ರಾಚೀನ ನಾಮಧೇಯ (ಗಣಕ. ೨೦೨). ೬. [ಜ್ಯೋತಿ] ಆಶ್ರಯ ಯೋಗಗಳಲ್ಲಿ ಒಂದು ; ಏಳುಗ್ರಹಗಳೂ ಚರರಾಶಿಗಳಲ್ಲಿರುವುದು : ಚರರಾಶಿಯೊಳೇಳುಗ್ರಹಮಿರೆ ಯೋಗಂ ರಜ್ಜುವೆನಿಸುಗುಂ (ಜಾತಕ. ೦೩-೧); "ಚರರಾಶಿ (ಮೇಷ ಕರ್ಕಟಕ ತುಲಾ ಮಕರ)ಗಳಲ್ಲಿ ಏಳುಗ್ರಹಗಳೂ ಇದ್ದರೆ ರಜ್ಜುಯೋಗ" (ಜಾತಕ. ೦೩-೦ ಟೀಕೆ).

**ರಜ್ಜುಸರ್ಪನ್ಯಾಯ** = ಲೌಕಿಕನ್ಯಾಯಗಳಲ್ಲಿ ಒಂದು ; ಹಗ್ಗವನ್ನು ಹಾವೆಂದು ತಿಳಿಯುವುದು : ಆ ಮನವೆಂಬ ಕರಣದಲಿ ರಜ್ಜುಸರ್ಪನ್ಯಾಯ ಸ್ಥಾಣುಚೋರನ್ಯಾಯದಂತೆ ತಾನು ಪರವಸ್ತುಸ್ವರೂಪನು (ಕರಹ. ೩೯). [ಸಂ.]

**ರಟನ** (ನಾ). ಕೂಗುವಿಕೆ ; ಅಬ್ಬರ : ನಿಬಿಡತರ, ಪಟುರಟನದೊಡನೆ ಘುಡಿಘುಡಿಪ ಸುಭಟಪಟಲಕಳಕಳಂ . . . ಅಳುರ್ಕೆಗೊಳೆ (ರಾಜಶೇ. ೬-೦೦ ವ). [ಸಂ.]

**ರಟಿಸು** (ಕ್ರಿ). ಕೂಗಿ ಹೇಳು : ಉದ್ಘೋಷಿಸು : ಕನ್ನಡ ಹುರುಮುಂಜಿ ಸೊರಟ ಗುಜ್ಜರಾದಿ ನಾಡಿನೊಳು ರಟಿಸುತನಂತವೀರ್ಯಸ್ವಾಮಿಯುರು ಗಂಧಕುಟಿ ಬಂದುದು (ಭರತ. ೩೯-೭). [ರಟನ + – ಇಸು₃]

**ರಟ್ಟ, ಱಟ್ಟ** (ನಾ). ೧. ಹಿಂದೆ ಕರ್ನಾಟಕದಲ್ಲಿ ಸಾಮಂತರಾಗಿದ್ದ ಒಂದು ಅರಸುಮನೆತನದ ಹೆಸರು : ಧರಣಿಗೆ ನೆಗೞ್ದರ್ ರಟ್ಟರಾಜ್ಯದೊಳ್ ಮುನ್ನೆ ಪಂಪನುಂ ಪೊನ್ನಿಗನುಂ (ಅಜಪು. ೦೨-೯೦) ; ರಣರಂಗಭೀಷಣಂ ರಟ್ಟವಂಶೋದ್ಭವಂ ಸೆನ್ದ್ರಕ ಲಾ[ಂ]ಛನಂ ಬಿರುದರ ಸಿಂಗಂ . . . ಶ್ರೀಮನ್ಮಹಾಸಾಮನ್ತನೆಱೆಯಮ್ಮಂ (ಕಶಾಇ. XI-i, ೭೯-೯; 1041). ೨. ಒಬ್ಬಾತನ ಹೆಸರು : ಪೊಸವೂರ ಜೇದಮ್ಮನುಂ ಕನ್ನರನುಂ ಕಳ್ಳವೃಣಾಸಿಯ ರಟ್ಟನು (ಎಕ. XI, ಚಿತ್ರದು. ೭೯-೨೬ ; 968). **ಱಟ್ಟ** : ೧. ಱ[ಟ್ಟ]ರ ಪಟ್ಟಜಿನಾಲಯಕಟ್ಟಳೆವಾದಯ್ವತ್ತೊಕ್ಕಲನುಮತದಿಂದಂ ಕೊಟ್ಟರ್ ಜಿನೇಂದ್ರಪೂಜೆಗೆ (ಕಶಾಇ. XX. ೦೬-೨; 980) ; ಅವಿಹಿತವೇಗಂ . . . ಅಂಬರಕ್ಕೆ ನಿಳ್ಕುವ ಜಯಕೇತು ಸಂದೆಯದೆ ದಂಡುಗವುಂ ಕಿಡಿಸಿತ್ತು ಮುಂದಣೋಡುವ ರಿಪುದಂತಿಗಂ ಪೆಱಗಣಟ್ಟುವ ಱಟ್ಟರ ಮೇರುದಂತಿಗಂ (ಕಾವ್ಯಾವ. ೬೨೦). ೩. ' ಱಟ್ಟಮತ ' ಎಂಬ ಕಾವ್ಯವನ್ನು ಬರೆದ ಒಬ್ಬ ಕನ್ನಡಕವಿಯ ಹೆಸರು : ಗುರುಮೀರೇಟುಂ ಮಾಸಮುಮಿರೆ ಪ್ರಾಜಾಪತ್ಯಂ

ದೈವಮಪಚಿ ಪೆಸರ್ಂತಿರೆ . . . ಜಟ್ಟನಾ ವಂತ್ರದಿಂದಂ (ಅಶ್ವಿಪು. ೦೨-೦೬೫).

**ರಟ್ಟಕಂದರ್ಪ** = ರಟ್ಟವಂಶದವರಲ್ಲಿ ಮನ್ಮಥನಂತಿರುವವನು ; ಒಂದು ಬಿರುದು : ಪೊಜಗೊಳಗೆಡದೊಳಂ ಬಲದೊಳಂ ಕಡುಗಡುಪಿನ್ನೆ ಬಪ್ಪ ವಳಯಮನ್ನಪ್ಪಡೆ ಚಾರಿಪಾಪ್ಪೋಜೆಯಂ ರಟ್ಟಕನ್ದರ್ಪನಪ್ಪಾವಂ ಬಲ್ಲಂ (ಎಕ. II, ೦೩೩-೯೫ ; 982). **ರಟ್ಟಘರಟ್ಟ** = (ಅಲಂ) ರಟ್ಟರನ್ನು ನಾಶಮಾಡಿದವನು ; ಒಂದು ಬಿರುದು : ರಟ್ಟರಾಜ್ಯದರಸುಗಳ ಮುಂ ಬಿಟ್ಟು ತಱಿದೊಟ್ಟಿ ರಟ್ಟಘರಟ್ಟಂ ಚಾಳುಕ್ಯರಾಜ್ಯಪಟ್ಟಮನಾತಂ (ಎಕ. V. ೦೫-೦೨ ; 1019). **ರಟ್ಟಮಾರ್ತಂಡ** = ರಟ್ಟರಲ್ಲಿ ಸೂರ್ಯನಂತಿರುವವನು ; ಒಂದು ಬಿರುದು : ರಟ್ಟಮಾರ್ತಣ್ಡಂ . . . ಶ್ರೀಮನ್ಮಹಾಸಾಮನ್ತನೆಱಿಯಮ್ಮಂ (ಸೌಇಇ. XI-i. ೬೯-೯ : 1041). **ಱಟ್ಟವೆಡಂಗ** = ಚೆಲುವನಾದ ರಟ್ಟ ; ರಟ್ಟಕವಿಯ ಒಂದು ಬಿರುದು : ಮನಸಿಜಸನ್ನಿಭನೆನಿಸಿದ ವಿನಯಗುಣೋತ್ತುಂಗನೆನಿಪ ಱಟ್ಟವೆಡಂಗಂ (ಅಶ್ವಿಪು. ೦-೨೩). P ಈ ಶಬ್ದದಲ್ಲಿರುವ 'ಱ' ಕಾರದ ಅಸ್ತಿತ್ವ ವಿಚಾರಣೀಯವಾದುದರಿಂದ ಕಾವ್ಯಪ್ರಯೋಗಗಳನ್ನು ದೊರಕಿದ ರೂಪದಲ್ಲಿಯೇ ಕೊಡಲಾಗಿದೆ. [< ಸಂ. ರಾಷ್ಟ್ರಕೂಟ]

**ರಟ್ಟಕುಳ, ಱಟ್ಟಕುಲ, ಱಟ್ಟಕುಳ** (ನಾ). ಒಂದು ವಂಶದ ಹೆಸರು ; ರಾಷ್ಟ್ರಕೂಟವಂಶ : ರಟ್ಟಕುಳಾನ್ವಯನೃಪರುಂ ಪಟ್ಟದ ಶ್ರವಮ್ಮರ್ನೆಗಳೆನಿಪ ಗಾವುಂಡುಗಳುಂ ಬಿಟ್ಟರ್ಜಿನೇಂದ್ರಪೂಜೆಗೆ (ಸೌಇಇ. XX. ೦೬-೦; 980). **ಱಟ್ಟಕುಲ** : ಱಟ್ಟಕುಲಾಗ್ರಣಿ ಧರಣೀಪಟ್ಟಂ ನಿಜನೊಸಲೊಳೆಸೆಯೆ (ಕೊಲ್ಲಾಶಾ. ೨೨-೨೫ : 1209). **ಱಟ್ಟಕುಳ** : ಱಟ್ಟಕುಳಭೂಷಣಂ ಸಿಂಧೂರ ಲಾಂಛನಂ (ಕೊಲ್ಲಾಶಾ. ೨೩-೦೦; ೯). [ರಟ್ಟ + ಕುಳ$_5$ (= ಕುಲ)]

**ರಟ್ಟಗಡ** (ನಾ). ಒಂದು ಊರಿನ ಹೆಸರು : ಪಣರವಾಡಿಯ ರಟ್ಟಗಡ ಸಣ್ಣಪಯ್ಯನ ಮಗ ಅಸಗಯ್ಯ (ಎಕ. V. ಕನ್ನರಾ. ೨೬೭-೦೨; 971). [ರಟ್ಟ + ಗಡ$_3$]

**ರಟ್ಟಪಳ್ಳಿ** (ನಾ). ಒಂದು ಊರಿನ ಹೆಸರು ; P ಈಗಿನ ಧಾರವಾಡ ಜಿಲ್ಲೆಯ ಹಿರೇಕೆರೂರು ತಾಲ್ಲೂಕಿನ ರಟ್ಟಪಳ್ಳಿ : ಬನವಾಸಿನಾಡಂ ಭಲದಜ್ಜರಾಮನ್ ಸಾಸ್ತ್ರರನಾಳೆ ರಟ್ಟಪಳ್ಳಿಯ ಪೊಲಗನು × × × (ಎಕ. VII. ಹೊನ್ನಾ. ೨೩-೪; 934). [ರಟ್ಟ + ಪಳ್ಳಿ$_1$]

**ರಟ್ಟಪಾಡಿ** ' ರಟ್ಟವಾಡಿ ' ನೋ.

**ರಟ್ಟವಾಡಿ, ರಟ್ಟಪಾಡಿ** (ನಾ). ರಾಷ್ಟ್ರಕೂಟರು ಆಳುತ್ತಿದ್ದ ಪ್ರದೇಶ ; ರಾಷ್ಟ್ರಕೂಟರ ನಾಡು : ಪನ್ನಿರುವರುಂ ರಟ್ಟವಾಡಿ ಮೇಗೆ ವಣ್ಣುವೋದಲ್ಲಿ (ಎಕ. XII. ಮಧುಗಿ. ೯೨-೨ ; ಸು. 750). **ರಟ್ಟಪಾಡಿ** : ಪೊಗಟೆಪ್ಪಡುಪಡಿಯ ರಟ್ಟಪಾಡಿಯೇೞ[ಱ] ಲಕ್ಕಮುಂ (ಎಕ. VII (R). ಶಿಂಕ. ೩೩-೩೫ ; 1024) ; ಅವರು ಆಳಿದ ನಾಡಿಗೆ ರಟ್ಟಪಾಡಿಯೆಂದು ಹೆಸರು (ಶಾಇಶ್ರೆ. ೨೯೬). [ರಟ್ಟ + ಪಾಡಿ$_2$]

**ರಟ್ಟಿಕ್ಕು** (ಕ್ರಿ). ಕೂಗು ; ಕಿರುಚು : ಕೊಡುಕೊಡೀಕ್ಷಣ ಸಲ್ಲದೊಡೆ ನಾ ನುಡಿದ ಶಪಥವನಾಂತೊಪ್ಪಲ್ಲದೆ ಬಿಡೆನೆನುತ್ತೊರಂತೆ ಶಿವಘೋಷಮೆನುತ ರಟ್ಟಿಕ್ಕೆ (ಬಸಪು. ೨೬-೬೯). [< ರಟನ + ಇಕ್ಕು]

**ರಟ್ಟು$_1$** (ನಾ). ೧. ಎರಡೆಳೆಗಳನ್ನು ಜೊತೆಯಾಗಿ ಹಾಕಿಕೊಂಡು ನೆಯ್ದ ದಪ್ಪಬಟ್ಟೆ : ಒರಟುಬಟ್ಟೆ : (೯). ೨. ಪುಸ್ತಕಕ್ಕೆ ಹಾಕುವ ದಪ್ಪಬಟ್ಟೆ ಅಥವಾ ದಪ್ಪಕಾಗದದ ಮೇಲುಹೊದಿಕೆ ; ಬೈಂಡು : ಕಡತವನ್ನು . . . ಮಡಿಸಿ ಎರಡುಕಡೆಗಳಿಗೂ ರಟ್ಟನ್ನು ಹಾಕಿ ಕಟ್ಟುತ್ತಿದ್ದರು (ಕನ್ನಸಂ. ೯೦). ೩. ಪುಸ್ತಕವು ಕೊಳೆಯಾಗದಂತಿರಲು ಮೇಲೆ ಹಾಕುವ ಕಾಗದದ ಹೊದಿಕೆ : ಪುಸ್ತಕಕ್ಕೆ ದಪ್ಪಕಾಗದದಿಂದ ರಟ್ಟು ಹಾಕಿದರೆ ಚೆನ್ನಾಗಿ ಬಾಳಿಕೆ ಬರುತ್ತದೆ (ರೂಢಿ). [ದೇ. ಇ ತೆಲು. ರೆಟ್ಟ, ರೆಟ್ಟು]

**ರಟ್ಟು$_2$** (ನಾ). ಯಾವುದಾದರೂ ವಿಷಯವನ್ನು ಬಹಿರಂಗ ಪಡಿಸುವಿಕೆ, — ಹೊರಗೆಡಹುವಿಕೆ, –ಪ್ರಕಟಿಸುವಿಕೆ : ಮರುಳಿ ರಟ್ಟಾದ ಹಾದರಗಿತ್ತಿ . . . ರೋಗಿಯೆಂಬರ ಕೂಡೆ ರತಿಗೆಯ್ಯದವನೆ ಚದುರು (ಜನಪ. ೦೨-೦೬); ರಟ್ಟುಮಾಡುವದಾಯತವಲ್ಲ ಹೇಳ್ನೊಡಂಬಟ್ಟುದೆ ಸ್ಮರಕುಮಾರನಿಗೆ (ಮೋಹತ. ೩೬-೩೫) ; ಸಾಕುಮಾಡಿರವ್ವ . . . ಭ್ರಷ್ಟಮಾತುಗಳನೆಷ್ಟೋ ಕಲ್ಪಿಸಿ ಪಟ್ಟುಪಟ್ಟಿಗೆ ರಟ್ಟುಮಾಡುವುದ (ಪುರಂದ. ರಾ. ೯-೬೬-೦) ; ಸಂಸಾರ ಗುಟ್ಟು, ರೋಗ ರಟ್ಟು (ಗಾದೆ). [ದೇ. ಇ ತೆಲು. ರಟ್ಟು]

**ರಟ್ಟುಕಟ್ಟು$_1$** (ಕ್ರಿ). ಪುಸ್ತಕ ಮೊದಲಾದುವುಗಳಿಗೆ ಹೊದಿಕೆಯನ್ನು ಹಾಕು ; ರಟ್ಟುಹಾಕು : ನನ್ನಲ್ಲಿ ಗ್ರಂಥದ ರಟ್ಟುಕಟ್ಟಿದ ಪ್ರತಿಗಳಿಲ್ಲ. ನಿಮಗೆ ಬೇಕಾದರೆ ಬಿಡಿಪುಸ್ತಕವನ್ನು ಕೊಡುತ್ತೇನೆ (ಕನ್ನಸಂ. VI, ೫೦೯).

[ರಟ್ಟು$_1$ + ಕಟ್ಟು$_1$]

**ರಟ್ಟುಕಟ್ಟು$_2$** (ನಾ). ಪುಸ್ತಕಗಳ ಹೊದಿಕೆ, –ಕವಚ : ಹೊಸ ಗ್ರಂಥಗಳು ಭಂಡಾರವನ್ನು ಸೇರಿದೊಡನೆಯೆ ಅವುಗಳ ರಟ್ಟುಕಟ್ಟು, ಅಚ್ಚು . . . ಸರಿಯಾಗಿವೆಯೋ ಎಂದು ಪರೀಕ್ಷಿಸಬೇಕು (ಗ್ರಂಥಾಲ. ೮೯).

[ರಟ್ಟು$_1$ + ಕಟ್ಟು$_2$]

**ರಟ್ಟೆ** 'ಱಟ್ಟೆ' ನೋ.

**ರಟ್ಟೆಗೆಡಹು** (ಕ್ರಿ). ತೋಳನ್ನು ಕಡಿದು ಬೀಳಿಸು,– ಕತ್ತರಿಸಿ ಹಾಕು : ಅರಿಮನೊಗ್ಗರಿಯ ರಟ್ಟೆಗೆಡಹಿ ರಣರಂಗವೀರನು ಜಗಜಟ್ಟಿ ನಟ್ಟಾಳು ರಾಜರಿಗೆ (ಸೌಂದಕಾ. ೯-೯೬). [ರಟ್ಟೆ (<ಱಟ್ಟೆ) + ಕೆಡಹು (<ಕೆಡಪು)]

**ರಟ್ಟೆಪಲ್ಲವಿ** (ನಾ). [ಸಂಗೀತ] ಜೊತೆಪಲ್ಲವಿ ; ಜೋಡಿಪಲ್ಲವಿ : ರಟ್ಟೆಪಲ್ಲವಿ ಎಂಬುದು ನಿಜವಾಗಿ ಎರಡು ಬೇರೆ ಬೇರೆ ಪಲ್ಲವಿಗಳು. ಆದರೆ ಎರಡನ್ನೂ ಮಾಧುರ್ಯದಿಂದ ಒಂದುಗೂಡಿಸಿ ಒಂದೇ ಪಲ್ಲವಿಯೆನ್ನುವಂತೆ ಹೆಣೆದುದು (ಸಂಗೀತ. ೩೯). [ರಟ್ಟೆ$_0$ (P←ತಮಿ. ಇರಟ್ಟೈ = ಜೊತೆ; ತೆಲು. ರೆಟ್ಟ = ಜೊತೆ) + ಪಲ್ಲವಿ]

**ರಡ್ಡಿ** ' ರೆಡ್ಡಿ ' ನೋ.

**ರಣ$_1$** ' ಬ್ರಣ ' ನೋ.

**ರಣ$_2$** (ನಾ). ೧. ಕಾಳಗ; ಯುದ್ಧ : "ಸಂಗ್ರಾಮಃ . . . ರಣಂ . . . ವಿಗ್ರಹಃ – ಈ ೩೫ ಕಾಳೆಗಂ" (ಪಲಾಯು. ೬೫-೩೦೦); ವಿಶ್ವರೂಪಮನಾಂ ತೋಱಿದೆನಿಂ ಕಡಂಗಿ ರಣದೊಳ್ ನೀಂ ತೋಱು ನಿನ್ನಾರ್ಪುಮಂ (ಪಂಪಭಾ. ೯-೮೯); ರಣದೊಳ್ ಮಾಱಾಂತ ಚೂಡಾಮಣಿಗೆ ಮಣಿಯ ದುದ್ವೃತ್ತನಂ ಗೆಲ್ದ ವಿದ್ಯಾಮಣಿ (ಅಜಪು. ೦೨-೦೫). ೨. ಯುದ್ಧರಂಗ; ಸಮರಭೂಮಿ ; ಕಳ : ರಣಮಂ ಪೊಱಿಸಪೇೞ್ದು (ಅನಂಪು. ೦೯-೨೩); ಉರೆ ಮಹಾರಥಸಮರಥಾದಿಗಳುರುಳೆ ರಣದೊಳಗೆ (ಗಗಭಾ. ೦೯-೯೩); ನಾನಾಶ್ರುಮುಂಲಭಾವಘರ್ಷಣೆಗೆ ರಣನಾದ ರಾವಣಂ (ಶ್ರೀರಾಮಪು. ೩೨೫-೦೬೬). ೩. ಸಂತೋಷ ; ಆನಂದ. ೪. ಶಬ್ದ; ಧ್ವನಿ. ೫. ಉಗ್ರವಾದುದು : 'ರಣಗುಟ್ಟು', 'ರಣಬಿಸಿಲು' ಪರಾ. ೬. ದೊಡ್ಡದು; ಗಾತ್ರವಾದುದು : ' ರಣಪರ್ದ ' ಪರಾ. ೭. ದೆವ್ವ; ಭೂತ : ಅಂದಿನ ಮಲೆನಾಡಿನಲ್ಲಿ ಭೂತ, ಪ್ರೇತ, ಪಿಶಾಚಿ, ಪಂಜರವಳ್ಳಿ, ರಣ, ಮಾರಿ . . . ಕಲ್ಲುಕುಟಿಗ ಮುಂತಾದ ಹಲವು ಹೆಸರಿನ ಹಲವು ಜಾತಿಯ ದೆವ್ವಗಳಿದ್ದವು (ಕಾಸಹೆಸಂ. ೨). ' ರಣಹೊಡೆ ' ಪರಾ. [ಸಂ.]

**ರಣ$_3$** (ನಾ). ಹಡಗಿನ ಒಂದು ಭಾಗ : ಅಂತು ಸಮುದ್ರಂ ಬಹಿತ್ರಂ ಬಿದಱುವಂದು ಶಿಟ್ಟನೆ ತಿಱಿದು ಕಲ್ಲೆಯುಂ ಕವಿಯುವಾಗ ನಿರ್ಜೀವನು ಮೆದರ್ದ ಪೋಗೆ ಕೂಪಕಂಭಂ ಮುಱಿಯೆ ಬಂಧಂ ಬಿರಿಯೆ ರಣಂ ಮುಱಿಯೆ ಕೀಲ್ ಕಟಿಲೆ (ಬಂಹಂ. ೪-೦೯ ವ). [ ? ]

**ರಣಕಂಬ** (ನಾ). (ಜಾತ್ರೆ ಮೊದಲಾದ ಸಂದರ್ಭಗಳಲ್ಲಿ) ಕುರಿ, ಕೋಣ ಇತ್ಯಾದಿಗಳನ್ನು ಬಲಿಕೊಡುವ ಸ್ಥಳದಲ್ಲಿ ನಿಲ್ಲಿಸುವ ಕಂಬ ;

ವಧಸ್ತಂಭ : ಕೋಣವನ್ನು . . . ಸಂಭ್ರಮದಲ್ಲಿ ಕರೆತಂದು. ಗುಡಿಯ ಮುಂದೆ ಇದ್ದ ರಣಕಂಬಕ್ಕೆ ಅದನ್ನು ಕಟ್ಟಿದ್ದ (ಊರುಳ. ೬).
[ ರಣ$_2$ + ಕಂಬ$_1$ (< ಕಂಭ) ]

**ರಣಕಣ** ' ರಣಕಳ ' ನೋ.

**ರಣಕಬಳ** (ನಾ). ಯುದ್ಧಸಮಯದಲ್ಲಿ ಅಗತ್ಯವಾಗುವ ಆಹಾರ : ರಣಕಬಳ ರಕ್ಕಮರ್ದಗಳ್ಪುದಿದ ಭರಣಿಗಳ (ರಾಜಶೇ. ೬-೧೧ ವ). [ಸಂ.]

**ರಣಕರ್ಕಶ** (ನಾ). ಯುದ್ಧದಲ್ಲಿ ಗೆಲ್ಲಲು ಕಠಿಣನಾದವನು : ರಣಕರ್ಕಶನಸುರಕುಲಾಗ್ರಣಿ ವಿರಥಂ ಮಾಡಿ ವೀರನಂ . . . ಪಿಡಿದಂ (ಶಂಖವಾ. ೦೩-೦೯೬). [ಸಂ.]

**ರಣಕಲಿ** (ನಾ). ಕಾಳಗದಲ್ಲಿ ಶೌರ್ಯದಿಂದ ಹೋರಾಡುವವನು ; ಯುದ್ಧವೀರ : ಮಡಿದುದೌ ನಿನ್ನ ರಣಕಲಿಕುಮಾರನ ಕೈಲಿ ಕದನಮುಖದಲಿ ಫಲ್ಗುಣನ ಸೇನೆಯಲಿ ಜನಂ ವಿಪುಲಸಂಖ್ಯೆಯಲಿ (ಚತ್ರಾಂಗ. ೬೩-೨೨೮೬). [ಸಂ.]

**ರಣಕಹಳೆ** ' ರಣಗಹಳೆ ' ನೋ.

**ರಣಕಳ**, ರಣಕಣ (ನಾ). ರಣರಂಗ ; ಯುದ್ಧಭೂಮಿ : ಮಾಯೆಯಿಂದ . . . ಭೀಷ್ಮರು ರಣಕಳದಲ್ಲಿ ಎಲ್ಲಿ ನೋಡಿದರೂ ಕಾಣಲ್ಪಟ್ಟರು (ವ್ಯಾಸಭಿ. ೩೩೫). **ರಣಕಣ** : ಊರೂರೆ ರಣಕಣವು ತಾಂಡವವು ಗೊಂದಣವು (ಸೂರ್ಯಶಾ. ೭೩-೯). [ರಣ$_2$ + ಕಳ$_3$]

**ರಣಕಾಳಿ** (ನಾ). ಯುದ್ಧದೇವತೆ ; ರಣಚಂಡಿ ; ದುರ್ಗೆ : ರಣಕಾಳಿ ರುಂಡಮುಂಡಗಳ ಚೆಂಡಾಟವಾಡಿದಳಲ್ಲಿ (ಚತ್ರಾಂಗ. ೬೨-೨೨೫೯); ಕರೆಯುತ್ತಿ ಹಳದೊ ರಣಕಾಳಿ (ಕೋಗಿಲೆ. ೩೩-೬). [ಸಂ. ರಣಕಾಲೀ]

**ರಣಕೋಲಾಹಲ** (ನಾ). ಯುದ್ಧರಂಗದಲ್ಲಿ ಗದ್ದಲವನ್ನು ಉಂಟು ಮಾಡುವಂಥದು : ರಣಕೋಲಾಹಲನಂ ಕರ್ಣಾಳರದನಂ ನೀಲಾಚಲಸ್ಪರ್ಧಿಯಂ . . . ದ್ವಿಪೇಂದ್ರಮಂ ತನ್ನಿ (ವೃಷಭ. ೪೦-೯೨). [ಸಂ.]

**ರಣಖೇಡ** (ನಾ). ಯುದ್ಧಕ್ಕೆ ಹೆದರುವವನು ; ರಣಹೇಡಿ : ಓಡಿ ನಾಚಿಸುವವರು ನಿಳಿ ರಣಖೇಡರೀಗಳೆ ಮರಳಿ (ಕುಮಾ್ರ. ೯-೩೦). [ರಣ$_2$ + ಖೇಡ]

**ರಣಗಬ್ಬಿ** (ನಾ). ಕಾಳಗ ಮಾಡಬೇಕೆಂಬ ಸೊಕ್ಕುಳ್ಳವನು : ಬೊಬ್ಬಿಡುವ ರಣಭೂತಗಳ ಕಂಡುಬ್ಬಿ ಬಹಳಾನಂದದಲಿ ರಣಗಬ್ಬಿ ಮೆರೆದ. ನೃಸಿಂಹನಾಹವರಂಗಮಧ್ಯದಲಿ (ಕೃಷ್ಣ ಕ. ೧೫-೫೫). [ರಣ$_2$ + ಗಬ್ಬಿ$_1$]

**ರಣಗಲಿ** (ನಾ). = ರಣಕಲಿ : ರಣಗಲಿಯೆ ಚಿತ್ತೈಸು (ತೊರವೆ. ೬-೦೯-೩). [< ರಣಕಲಿ]

**ರಣಗಹಳೆ**, ರಣಕಹಳೆ, ರಣಗಾಳೆ (ನಾ). ೧. (ಅಲಂ) ದೊಡ್ಡಧ್ವನಿ; ಅಬ್ಬರ ; ಆರ್ಭಟ : ಐತಾಳರ ಗಂಟಲ ರಣಗಹಳೆ ಕೇಳಿ ದಬಕ್ಕನೆ ಎಚ್ಚರವಾಯಿತು (ಮರಳು. ೭೯). **ರಣಕಹಳೆ** : ೨. ಯುದ್ಧ ಪ್ರಾರಂಭದಲ್ಲಿ ಊದುವ ಕಹಳೆ : ಸೌಮಿತ್ರಿ ರವಿಯುದಯದೃಶ್ಯಮಂ ನಿಟ್ಟಿಸುತ್ತಿರೆ, ಕೇಳ್ದುದೊಂದದ್ಭುತಂ ರಣಕಹಳೆ (ಶ್ರೀರಾಮಾ. ೩೦೨-೪೦). **ರಣಗಾಳೆ** : ೨. ರಣದಲ್ಲಿ ಮಸದಲ್ಲಿ ಬೀಸುವುದು ಬಿರುಗಾಳಿ ರಣದಲ್ಲಿ ಕಿವಿಯಲ್ಲಿ ಕೂಗುವುದು ರಣಗಾಳೆ (ಕೃಷ್ಣಕು. ೫-೧೧). [ರಣ$_2$ + ಕಹಳೆ]

**ರಣಗಳ್ಳ** (ನಾ). ಕಾಳಗದಿಂದ ಓಡಿಹೋಗುವವನು ; ರಣಹೇಡಿ : ಜಳ್ಳು ರಕ್ಕಸನವನನೀ ಹೆಂಗಳ್ಳನನು ಸಂತಾಪಿಸುವ ರಣಗಳ್ಳನನು ಗತಿಗೇಡುಗನನೀ ದ್ರೋಹಿರಕ್ಕಸನ . . . ಹೊಳ್ಳುವಾಳಿಸಲೂದುವೆನು (ತೊರವೆ. ೫-೬-೩೬). [ರಣ$_2$ + ಕಳ್ಳ$_1$]

**ರಣಗಟ್ತಲೆ** (ನಾ). ಯುದ್ಧರಂಗದಲ್ಲಿ ಧೂಳು, ಬಾಣಸಮುದಾಯ, ಧ್ವಜ ಮೊದಲಾದುವುಗಳಿಂದ ಉಂಟಾಗುವ ಕತ್ತಲೆ : ರಣಗಟ್ತಲೆಯೊಳ್ ತಮಮುಂ ಮಿಗೆ (ಶಂಕರಾ. ೧೧-೬೯) ; ರಣಗಟ್ತಲೆ ಕೈಮಿಗೆ ಬಿಲ್ಲಣ ಕಡುಕೆಯ್ದುಭಯಬಲದೊಳಂಬಿಕ್ಕುವುದಂ (ಶಂಖವಾ. ೦೩-೩೯). [ ರಣ$_2$ + ಕಟ್ತಲೆ ]

**ರಣಗಾಳೆ** ' ರಣಗಹಳೆ ' ನೋ.

**ರಣಗೀತೆ** (ನಾ). ಯುದ್ಧವನ್ನು ಕುರಿತಂತೆ ರಚಿಸಿದ, ವೀರಾವೇಶವನ್ನುಂಟುಮಾಡುವ ಹಾಡು : ರಣಪ್ರಣಯದ ಉತ್ಸಾಹವನ್ನು ಸೂಚಿಸುವ ರಣಗೀತೆಯೊಡನೆ ಕುಣಿತ ಆರಂಭವಾಯಿತು (ಸವತಿ. ೩) ; ಒಂದು ರಾಷ್ಟ್ರವನ್ನು ಯುದ್ಧೋನ್ಮುಖವಾಗಿ ಮಾಡುವಾಗ ಹಾಡುವ ರಣಗೀತೆಗಳು. . . ಉತ್ಸಾಹವನ್ನು ತುಂಬಿರುವುದೂ ಉಂಟು (ಸಾಂದಶ. ೭೪). [ಸಂ. ರಣಗೀತಾ]

**ರಣಗುಟ್ಟು** (ಕ್ರಿ). ೧. ತೀಕ್ಷ್ಣವಾಗು ; ಉಗ್ರವಾಗು : ತಲೆಯ ಮೇಲೆ ಬಿಸಿಲಂತು ರಣಗುಟ್ಟುತ್ತಿರುತ್ತದೆ (ಮುಂಬಯಿ. ೫-೦೯೫). ೨. (ಅಲಂ) ಶೂನ್ಯವಾಗು ; ಭಣಗುಡು : ರಾಜಮಾರ್ಗ . . . ಜನರಹಿತವಾಗಿ ಸ್ಮಶಾನದಂತೆ ರಣಗುಟ್ಟುತ್ತಲಿವೆ (ಕುಬ್ಜಪ್ಪ. ೩) ; ತೆರವಾಗಿ ರಣಗುಟ್ಟುವ ಈ ಎನ್ನ ಹೃದಯಮಂದಿರವನ್ನು ಇನ್ನಾರಿಂದ ತುಂಬಲಿ (ಅಂಕಣ. ೬). [ರಣ$_2$ + ಕುಟ್ಟು$_1$]

**ರಣಗುಡು** (ಕ್ರಿ). ೧. = ರಣಗುಟ್ಟು ೧ : ಹೊರಗಡೆ ಮಧ್ಯಾಹ್ನದ ಉರಿಬಿಸಿಲು ರಣಗುಡುತ್ತಿತ್ತು (ಕವಿನ. ೦೭೦) ; ಬಿಸಿಲೇನೋ ಇನ್ನೂ ರಣಗುಡುತ್ತಲೆ ಇತ್ತು (ಕೃಣಸ. ೫). ೨. ಅಧಿಕವಾಗು; ತೀವ್ರವಾಗು : ರಣಗುಡುವ ಸಾಮೂಹಿಕ ಅಳಲಿನೊಂದಿಗೆ ತಿಮ್ಮಯ್ಯನವರ ಅಂತ್ಯವಿಧಿ ಕೊನೆಗೊಂಡಿತು (ಕಾಗೆ. ೨೦). ೩. = ರಣಗುಟ್ಟು ೨ : ಹಸಿರುಹಣೆಯಂತೆ ಬಿಕೋ ಎನ್ನುವ ಅಂಗಳ ಏನನ್ನೊ ಕಳೆದುಕೊಂಡಂತೆ ರಣಗುಡುತ್ತದೆ (ಗಾಳಿ. ೦೦೦). [ರಣ + ಕುಡು$_1$ (< ಕೊಡು$_1$)]

**ರಣಗೇಡಿ** (ನಾ). = ರಣಖೇಡ : ಹರಿಬದಾಹವವೆಂಬರಾವೆಡೆ ಹರೆದರೀ ರಣಗೇಡಿಗಳು ನುಡಿಯುರಿಯ ಹೊಯ್ವುದು ಛಾಯವತಿಶೀತಳ ಮಹಾದೇವ (ಕುಮಾ್ರಾರ. ೮-೪೫). [ ರಣ$_2$ + ಕೇಡಿ$_1$ ]

**ರಣಚಂಡಿ** (ನಾ). = ರಣಕಾಳಿ : ಆಕೆಯು . . . ಹಟಯೋಗಿನಿಯಾಗಿ, ರಣಚಂಡಿಯಾಗಿ, ಕಾಣಿಸುತ್ತಾಳೆ (ಭಾರತ. ೪೮೫) ; ರಣಚಂಡಿ ಕತ್ತಿ ಕಡಿಯಮು, ಯುದ್ಧ ಸುಡಲರಿದು ನಿನ್ನ ನೆನಪಿನ ಕವನ ಜೀವಂತದಾಖಲೆಯು (ನಲಮು. ೬೨-೬). [ ಸಂ. ರಣಚಂಡೀ ]

**ರಣಚೌಪಟ** (ನಾ). ಯುದ್ಧರಂಗದಲ್ಲಿ ಏಕಾಂಗಿಯಾಗಿ ಹೋರಾಡುವವನು ; ಚೌಪಟಮಲ್ಲ ; ಮಹಾವೀರ : ರಣಚೌಪಟ ಚತುರ್ಬಲದೊಳಗೆ ಹೊಕ್ಕನು (ಕುಮಾರದ್ರೋ. ೫-೬೦). [ರಣ$_2$ + ಚೌಪಟ (< ಚೌವಟ್ಟ)]

**ರಣಜವೊಟಿಲ್** (ನಾ). ಒಂದು ಊರಿನ ಹೆಸರು : ರಣಜವೊಟಿಲ ಬಯಲ × × × ರ. . . ದೇವಭೋಗವಮ್ಮಾಡಿಕೊಟ್ಟಂ (ಎಕ. XI, ಹೊಳಲ್ಕೆ. ೨೩-೪೦ ; 968). [ ರಣಜ$_?$ + ವೊಟಿಲ್ ]

**ರಣಜೆಟ್ಟಿಗ** (ನಾ). ಕಾಳಗದಲ್ಲಿ ಮಲ್ಲನಂತೆ ಇರುವವನು : ಗೋದಾಮೆಯಂತೆ ಬಗೆದ ಬಣ್ಣಮಪ್ಪ ರಣಜೆಟ್ಟಿಗರಿಂ. . . ಅತಿಭಯಂಕರಾಕಾರಮಪ್ಪುದು (ಕಾವ್ಯಸಾ. ೫೨೯ ಕೂದ್ರಕ). [ರಣ$_2$ + ಜೆಟ್ಟಿಗ (< ಜಟ್ಟಿಗ$_1$)]

**ರಣಜೇಯ** (ನಾ). ಕಾಳಗದಲ್ಲಿ ಸೋಲಿಸಬೇಕಾದವನು : ಜಡಮತಿಯತಿಪತೋಪಾಯಾ ಸಂಧೇಯನಲ್ತಮಂ ರಣಜೇಯಂ (ರಾಜಶೇ. ೬-೧೨೦). [ಸಂ.]

**ರಣಡೊಂಬಿಗ** (ನಾ). ಕಾಳಗದಲ್ಲಿ ಆಡಂಬರವನ್ನು ತೋರಿಸುವವನು ; ಯುದ್ಧದಲ್ಲಿ ವಿಜೃಂಭಿಸುವವನು : ಅಂಬುಜಾಕ್ಷನ ಸರಿಸದಲಿ ರಣಡೊಂಬಿಗನ ಕಂಡಮಮ ವಿಲಯಾಡಂಬರದಾಟೋಪದಲಿ ಕಿಡಿಗೆದರಿದನು ಕಲಿನೀಲ (ತೊರವೆ. ೬-೦೯-೫೦). [ರಣ$_2$ + ಡೊಂಬಿಗ$_2$]

**ರಣತೂರ್ಯ** (ನಾ). = ರಣಗಹಳೆ ೨ : ಒಂದೆಡೆ ವಲ್ಲಭೆಯುಂ ಮತ್ತೊಂದೆಡೆ ರಣತೂರ್ಯಘೋಷಮುಂ ಚೀರುತಿರಲ್ (ರ್ವಾಶಾ್ರಲೋ. ೦೭೯). [ಸಂ.]

**ರಣದವಕ** (ನಾ). ಕಾಳಗ ಮಾಡಬೇಕೆಂಬ ಆತುರ ; ಯುದ್ಧಾಪೇಕ್ಷೆ : ಅನುಸಾಲ್ವಕನ ಸೇನೆಯೊಪ್ಪೊಗದೊಳೆಲೆಯಾಗಿದ ಘಟಿಕೆಬಂಬಂತೆ ರಣದವಕ ಮೊಗದೊದಗಿತಂಬುಧಿಯ ತೆರೆಯಂತೆ (ಕೃ ಐಚಾ. ೦೨-೦೪).

[ರಣ$_2$ + ತವಕ$_1$]

**ರಣದವಕಿ** (ನಾ). ಕಾಳಗ ಮಾಡಬೇಕೆಂಬ ಆತುರವುಳ್ಳವನು : ರಣದವಕಿ ಕರ್ಣದ್ರೋಹಿ ಯಾವೆಡೆ ತೋರಿಸುತೋರಿಸು (ಕುವ್ಯಾ ಕ. ೦೪-೯).

[ರಣ$_2$ + ತವಕಿ]

**ರಣದವಕಿಗ** (ನಾ). = ರಣದವಕಿ : ತ್ರೈಭುವನ ಕಂಟಸುತಿರ್ದವ್ಯೆ ರಣದವಕಿಗರ ವಕ್ಕಡದ ಬೆಬ್ಬಾಳಿದ ಮಹಾಸವಕ (ಕೊರವಾ. ೯-೩-೧೨).

[ರಣ$_2$ + ತವಕಿಗ]

**ರಣದಿಟ್ಟ** (ನಾ). ಕಾಳಗದಲ್ಲಿ ದಿಟ್ಟನಾಗಿ ನಿಂತವನು : ಪಾರ್ಥಿವಜಾತಿಯಲ್ಲಿ ರಣದಿಟ್ಟರುಂಟೇ ನಿಮ್ಮ ಹೋಲಿಸಲು (ಕುವ್ಯಾ ದ್ರೋ. ೯-೦೦).

[ರಣ$_2$ + ದಿಟ್ಟ$_1$]

**ರಣದೀಕ್ಷಿತ** (ನಾ). ಯುದ್ಧಮಾಡಲು ಸಂಕಲ್ಪಮಾಡಿದವನು : ಭೂಪ ಸಂಗ್ರಾಮುಚರ್ಯಾವಚನಂಗಳನನ್ವಯಾಗತರುಂ ರಣದೀಕ್ಷಿತರುಮಪ್ಪ ವೀರ ಸಾಮಂತರೊಳ್ ಪಿರಿದು ಬೇಗಂ ನುಡಿಯುತ್ತುಮಿರ್ದು (ಕಂಪ್ರ ಕೃ. ೦೦-೫೯ ಪ).   [ಸಂ.]

**ರಣದೀಕ್ಷೆ** (ನಾ). ಕಾಳಗವನ್ನು ಮಾಡಬೇಕೆಂಬ ಸಂಕಲ್ಪ : ರಣದೀಕ್ಷೆಯನು ಕೈಕೊಂಡಮರರಿಪು . . . ಏಳಿದನು ಮಣಿರಥವ (ಕೊರವಾ. ೩-೯೭-೩೦).   [ಸಂ. ರಣದೀಕ್ಷಾ]

**ರಣದುರುಳತ್ವ** (ನಾ). ಯುದ್ಧದಲ್ಲಿ ಸೆಣಸಾಡುವ ಗುಣ : ತರಳನೆಂದಾನು ಕೈಗಾದುಬಿಟ್ಟಡೆ ರಣದುರುಳತ್ವ ನಿನಗೆ ಸಿದ್ಧಿಪುದೇ (ಪೋಷಕ. ೯೩-೩೦).   [ರಣ$_2$ + ದುರುಳತ್ವ]

**ರಣದೋಹಳ** (ನಾ). ಯುದ್ಧಮಾಡುವ ಆಸೆಯುಳ್ಳವನು : ರಣದೋಹಳನೆನಿಪ ಕೇಶವಾದಿತ್ಯಂಗಂ ಪ್ರಾಣತೇಶಂ ಜನಿಯಿಸಿದಂ (ಕಶಾಇ. XX. ೦೦೫-೩೦; 1146); ವಪ್ರವಪ್ಪಿಯಂ ತಳವೊಳಗಿರ್ದಿಬಾಗೆ ಪೊಸದಿಕ್ಕುವ ಸಿಂಗದ ಕೇಸರಂಗಳಂ ಸೆಳೆವಳವಂ ಸಮಂತು ತಳೆದಂ ರಣದೋಹಳನಾ ಕುಮಾರಕಂ (ಕಂಪ್ರ ಕೃ. ೬-೨೬).   [ಸಂ. ರಣದೋಹಲ]

**ರಣಧಾರಿ** (ನಾ). ಒಬ್ಬಾತನ ಹೆಸರು : ರಣಧಾರಿ ಲಿಖಿತ ( ಎಇ. IX. ೨೨-೦೬ ; ೩ವರು ೫೫).   [ ? ]

**ರಣಧೀರ** (ನಾ). = ರಣದಿಟ್ಟ : "ತೋರಹಪತ್ತನೆನೆ ತಾಂ ರಣಧೀರಂ" (ಛಾರಿ. ೩೯) ; ರಣಧೀರಂ ಸಾರ್ವಭೌಮಂ ನಿಷಧಪತಿ (ನಳಕಂ. ೦೯೯).

[ಸಂ.]

**ರಣಪಟಹ** (ನಾ). ಯುದ್ಧದಲ್ಲಿ ಬಾರಿಸುವ ತಮಟೆ,—ಹಲಗೆ : ರಣಪಟಹ ರವಂ ದಿಗ್ವಾರಣ ಕರ್ಣಾಭ್ಯರ್ಣಮಂ ಪಳಂಚಲೆಯೆ (ಶಂರಾಪಾ. ೦೦-೫೦).   [ಸಂ.]

**ರಣಪದ್ದು** 'ರಣಪರ್ದು' ನೋ.

**ರಣಪರ್ದು**, ರಣಪದ್ದು, ರಣಹದ್ದು (ನಾ). (ಹೆಣಗಳನ್ನು ತಿನ್ನುವ) ಒಂದು ಬಗೆಯ ದೊಡ್ಡ ಹದ್ದು : "ಕಂಕ: — ರಣಪರ್ದು" (ಶಾಕ್ಯ. ೯೦). **ರಣಪದ್ದು** : ಶರಘಾತೀರುಂಡ ರಣಪದ್ದು ಬಾವುಲಿ ಪಂಗ ಗರುಡ ಮೊದಲಾದ ಪರಿಪರಿಯಿಂದೊವರ್ದ ಭೀಕರವತುಳ ಖಗ ಮೃಗದ ನೆರವಿ (ಪಪಪೋ. ೮-೦೦). **ರಣಹದ್ದು** : ರಣಹದ್ದುಗಳು ಹಾರಾಡಿ ಮನದಲ್ಲಿ ಭೀತಿಯನ್ನು ಮೂಡಿಸಿದವು (ಸೂಶಿ).   [ ರಣ$_2$ + ಪರ್ದು ]

**ರಣಪಲಾಯನ** (ನಾ). ಕಾಳಗದಿಂದ ತಪ್ಪಿಸಿಕೊಂಡು ಓಡುವುದು ; ಯುದ್ಧದಿಂದ ಹಿಂದೆಗೆಯುವುದು : ಅಸುವ ತಡೆವರೆ ರಣಪಲಾಯನ ವೆಸವುದೇ ಕ್ಷತ್ರಿಯರಿಗತಿಸಾಹಸಿಕನಾದಡೆ ನಿಲ್ಲು (ಕುವ್ಯಾ ಶ. ೩-೩೬).   [ಸಂ.]

**ರಣಪಾರಗಾವುಂಡ** (ನಾ). ಒಬ್ಬಾತನ ಹೆಸರು : ರಣಪಾರಗಾವುಣ್ಡರುಂ ಅನ್ವವಾಸಲಿ ಉತ್ತಮಗಾವುಣ್ಡರುಂ (ಎಕ. II. ೩೫-೬ ; ಶು. 800).

[ ರಣಪಾರ ? + ಗಾವುಂಡ ]

**ರಣಬಲಿ** (ನಾ). ಯುದ್ಧಕ್ಕೆ ನೀಡುವ ಆಹುತಿ : ಪೆತ್ತ ನಿನ್ನನದೇಕೆ ರಣಬಲಿಗಿತ್ತನೋ ದುರ್ಯೋಧನನು (ತಿಪ್ಪುಸ್ತಿ. ೩-೯೦).   [ಸಂ.]

**ರಣಬಾಲಕ** (ನಾ). ಕಾಳಗದ ಅನುಭವವಿಲ್ಲದವನು ; ಯುದ್ಧನಿಪುಣನಲ್ಲದವನು : ರಣಬಾಲಕರಾ ಸಮಸ್ತಭೂಪಾಲಕಬಾಲಕರ್ ಕದನಕೇಳಿಗೆ ಮೆಚ್ಚುಗದಿಂದೊಡರ್ಚಿದರ್ (ಶಂರಾಪಾ. ೩-೯೭) ; ರಣಬಾಲ [ಶಾಶಾ. ೪]ಕ ನಪ್ಪ ನೀಂ ರಣಪರಿಣತವಯಸಸಪ್ಪನವನೀಪತಿ ನೀಂ (ಶಾಕ್ಯ ಕೃ. ೨-೭೭).

[ಸಂ.]

**ರಣಬಿನ್ನಾಣಿಗ** (ನಾ). ಕಾಳಗದಲ್ಲಿ ನಿಪುಣನಾದವನು : ರಣಬಿನ್ನಾಣಿಗರು ಜವಗುಂದಿ ಭಂಗದ ಕಾಣಲಾಯಿದೆ ಧರ್ಮಸುತ ಭೀಮಂಗೆ ತೋರಿಸಿದ (ಕುವ್ಯಾ ವಿ. ೭೦೩. ೫-೩೫).   [ ರಣ$_2$ + ಬಿನ್ನಾಣಿಗ ]

**ರಣಬಿಸಿಲು** (ನಾ). ಉಗ್ರವಾದ ಬಿಸಿಲು ; ಉರಿಯುವ ಬಿಸಿಲು : ಇಂಥ ರಣಬಿಸಿಲಿನಲ್ಲಿ ಸುಂದರಮ್ಮ ತನ್ನ ಮನೆಯ ಬಾಗಿಲು ತೆರೆದಿಟ್ಟೇ ಮಲಗಿದ್ದಳು (ಹಳ್ಳಿಹಾ. ೦) ; ಈ ರಣಬಿಸಿಲಿಗೇ ಹೊರಡಬೇಕೆ ? (ಮರಮಾ. ೬೦).   [ ರಣ$_2$ + ಬಿಸಿಲು (< ಬಿಸಿಲ್) ]

**ರಣಭೀತಿ** (ನಾ). ಕಾಳಗದ ಭಯ ; ಯುದ್ಧದ ಅಂಜಿಕೆ : ಅಂತಃಪುರದೊಳಲ್ಲಿರಲ್ಲಿ ಹರೆದುದು ಕೂಡೆ ರಣಭೀತಿ (ಕುವ್ಯಾ ಗ. ೪-೦೦).   [ಸಂ.]

**ರಣಭೂತ** (ನಾ). ಯುದ್ಧರಂಗದಲ್ಲಿರುವ ಪಿಶಾಚಿ : ಬಸಿವಾಯ ರಕುತದ ಲೋಡಿದವು ರಣಭೂತ ದೆಸೆದೆಸೆಗೆ (ಕುವ್ಯಾ ದ್ರೋ. ೦-೩೦).   [ಸಂ.]

**ರಣಭೂಮಿ** (ನಾ). ಯುದ್ಧಭೂಮಿ ; ರಣರಂಗ : ಪಾರ್ಥನ ತಲೆಯ ನಾಕ್ಷಣಕೆ ತಂದುದು ಸುದರ್ಶನಂ ಮಣಿಪುರದ ರಣಭೂಮಿಗೆ (ಕೃ ಐಚಾ. ೩೯-೬೪) ; ಈತನು . . . ರಣಭೂಮಿಯಲ್ಲಿ ಚಾಮುಂಡಾದೇವಿಯನ್ನು ಆರಾಧಿಸಿದನೆಂದು . . . ತಿಳಿದುಬರುತ್ತದೆ (ಸೊಕಂಶಿ. ೨೪).   [ಸಂ.]

**ರಣಭೇತಾಳ** (ನಾ). = ರಣಭೂತ : ಮೈ ನಿಮ್ಮಂತಹ ರಣಭೇತಾಳಗಳಿಗೆ ಮಾರಲು . . . ನಮ್ಮ ಗಂಡಸರು ಇನ್ನೂ ನಪುಂಸಕರಾಗಲಿಲ್ಲ ಗೊತ್ತಾಯ್ತಾ ? (ಹೊಸಕ್ಕಿ. ೩೦).   [ರಣ$_2$ + ಭೇತಾಳ$_0$ (< ಬೇತಾಳ)]

**ರಣಭೇರಿ** (ನಾ). ೧. ಯುದ್ಧದಲ್ಲಿ ಬಾರಿಸುವ ನಗಾರಿ,— ಭೇರಿ : ಉತ್ಸಾಹ ರಣಭೇರಿಗಳು ಮೊಳಗಿದವಸುರಸೇನೆಯಲಿ (ಕೊರವಾ. ೬-೩೭-೦೭) ; ಕಡಿದ ಮರದಿಂದ ರಣಭೇರಿಗಳನ್ನು ತಯಾರಿಸುತ್ತಿದ್ದರು (ಹಸುಹೊ. ೯೭). ೨. ಒಂದು ಬಗೆಯ ಸಸ್ಯ : ಕಾಡುತುಂಬೇಗಿಡ, ರಣಭೇರಿ (ವೃಕ್ಷ ಶಿ. ೩೦—೯೯೦).   [ಸಂ.]

**ರಣಭೈರವ** (ನಾ). ಕಾಳಗದಲ್ಲಿ ಭೈರವನಂತೆ ಇರುವವನು ; ಮಹಾಪರಾಕ್ರಮಿ : ಬವರ ಬಲಿದುದು ಬಳಿಕ ರಣಭೈರವರಘುಕ್ಷಿತಿಪತಿಗೆ (ಕೊರವಾ. ೬-೦೫-೩೦).   [ಸಂ.]

**ರಣಮಂಡಲ**, ರಣಮಂಡಳ (ನಾ). ೧. ಕಾಳಗಮಾಡುವ ಸ್ಥಳ ; ಯುದ್ಧರಂಗ: ರಣಮಂಡಲಕೆ ನಡೆತಂದಳಾ ಕಾಂತೆ (ಕೊರವಾ. ೬-೩೦-೮೭) ; ಮಿಡಿಮಿಡಿವ ಬಿಂಕದಿಂದಿಡಿವ ಕಲಿತನಕೆ ರಣಮಂಡಲಂ ಸಾಕೋಚಮೆನೆ ಬಂದು . . . ನಿಂದಾರ್ದುದಾ ಸೇನೆ (ಕೃ ಐಚಾ. ೦೨-೯). **ರಣಮಂಡಳ** : ೨. ರಾಜವಂಶದವರಿಗೆ ವಿದ್ಯೆಯನ್ನು ಕಲಿಸುವ ಸ್ಥಳ : ಅರಮನೆಗಿಂಬು ವೆತ್ತ ರಣಮಂಡಳಮಾ ರಣಮಂಡಳಕ್ಕೆ ಬಿತ್ತರಿಸಿದ ಬೀದಿ (ಅಪಂಕ್ಷ. ೦೦-೦೩).   [ಸಂ.]

**ರಣಮಂಡಳ** 'ರಣಮಂಡಲ' ನೋ.

**ರಣಮನ್ನೆಯ** (ನಾ). (?) : ಸುಂಕ ಸಾ[ಕ್ಷ]ವೀ ರಣಮಂನೆಯ ಮೊದಲಾದ ಸರ್ವಬಾಧೆ ಪರಿಹಾರ (ಕಶಾ. IV. ೫೯-೬೬; 1245). [ರಣ$_2$ + ಮನ್ನೆಯ$_1$]

**ರಣಮರಣ** (ನಾ). ಯುದ್ಧರಂಗದಲ್ಲಿ ಸಾಯುವುದು ; ವೀರೋಚಿತವಾದ ಸಾವು : ಕಲ[ಬಿರ್ದೀ]ಟ್ ಸಂದಿಱಿವ ತಮ್ಮೇಚಿಂಗೆ ಪೂಣ್ಬು ಜಾಱಿಯುಂ ಕೆಲಬರ್ ತಮ್ಮ ರಣಮರಣಮಂ ನಿಶ್ಚಯಿಸಿ ವೀರಸಂನ್ಯಾಸಕ್ಕೊಡರ್ಚೆ ನಿಲೆಯುಂ (ಪರ್ವಪಾ. ೯-೩೯ ವ). [ಸಂ.]

**ರಣಮುವ್ವರಿ** 'ರಣಮೌವರಿ' ನೋ.

**ರಣಮುಖ** (ನಾ). ಮುಂಚೂಣಿ; ಸೇನಾಮುಖ : ರಘುಪತಿಯ ಕೈಯಲಿ ರಣಮುಖದಲುಪಹತಿ ನಿನಗೆ ಬರಲಿ (ತೊರವ. ೧-೬-೪೦).

**ರಣಮುಖದುಟ್ಟ** = ಯುದ್ಧರಂಗದಲ್ಲಿ ದುಷ್ಟನಾದವನು; ಒಂದು ಬಿರುದು : ರಣಮುಖದುಟ್ಟನಾ ಮಗನ್ ಕರಪುರನ್ ಬಸ್ಸು ಬಲ್ಲದಾ ತುಬು ಗೊಳ್ (ಎಕ. X, ಮುಳಬಾ. ೯೨-೩; ಕ್ರಿ. 780?). [ಸಂ.]

**ರಣಮೂಢ** (ನಾ). ಯುದ್ಧಚಾತುರ್ಯವನ್ನು ತಿಳಿಯದವನು : ಎಲವೆಲವೊ ಮಾರುತಿಯುಳ್ಳಿಗಡ್ಡದ ಹರಿಪ್ರಲೆಯು ರಣಮೂಢ ಸಿಲುಕಿದೆಲಾ (ತುವ್ರಾ ರಾಸ್ತ್ರಾ ೭. ೦೩-೬೦). [ಸಂ.]

**ರಣಮೂರ್ಖಿ** (ನಾ). ಒಂದು ರಾಜವಂಶದ ಹೆಸರು : ರಣಮೂರ್ಖಿ ನೃಪಾಮ್ನಾಯದೊಳಾಯುವ ಮೆಯ್ಗಲಿ ಬಾಯಿಕನೆಂಬ ನೆಗಟ್ಟೆಯುಂ ಪ್ರಕಟಿಸಿದನ್ ( ಎಕ. II, ೦೩೯-೨ ; ಕ್ರಿ. 950 ) ; ರಿಪುಬಳಕ್ರಿತಾನ್ತಂ ರಣಮೂ[ರ್ಖ್ಖಿ] ವಂಶೋದ್ಭವಂ ಸಿಂಗನ ಬಂಟಂ ಶ್ರೀಮದಾಯ್ತುವರ್ಮ್ಮರಸಂ (ಸೌಇಇ. XI-i, ೬೨-೩ ; 1024).

**ರಣಮೂರ್ಖಿಕೇಸರಿ** = ರಣಮೂರ್ಖಿವಂಶದವರಲ್ಲಿ ಸಿಂಹದಂತಿರುವವನು ; ಒಂದು ಬಿರುದು : ಶ್ರೀಕಾನ್ತಾಕಾನ್ತಂ . . . ರಣಮೂರ್ಖ್ಖಿಕೇಸರಿ ಕವನಾದಿತ್ಯಂ (ಸೌಇಇ. XI-i, ೨೨-೬ ; 897). **ರಣಮೂರ್ಖಿಧವಳ** = ರಣಮೂರ್ಖಿ ವಂಶದವರಲ್ಲಿ ಶ್ರೇಷ್ಠನಾದವನು ; ಒಂದು ಬಿರುದು : ಶ್ರೀಕಾನ್ತಾಕಾನ್ತಂ ರಣಮೂರ್ಖ್ಖಿಧ[ವ]ಳಂ (ಸೌಇಇ. XI-i, ೨೨-೬ ; 897). [ಸಂ.]

**ರಣಮೌವರಿ**, ರಣಮುವ್ವರಿ (ನಾ). ಒಂದು ಬಗೆಯ ರಣವಾದ್ಯ : ಕೊಂಬು ರಣಮೌವರಿ ಮೃದಂಗಮು ಭೇರಿ ಕಹಳಾರವದ ರಭಸದಲಿ ಬಿರಿಯಲುಬುಜಭವಾಂಡ (ತೊರವ. ೬-೨೬-೨೬). **ರಣಮುವ್ವರಿ** : ದಿಗ್ವಾಮಿನಿಯ ಕರ್ಣಮಂ ಕಿವುಡುದೋರುತಿವೆ ರಣಮುವ್ವರಿ (ಹರಿಂಗ. ೬೮-೨).

[ರಣ$_2$ + ಮೌವರಿ (< ಮೌರಿ$_1$)]

**ರಣರಂಗ** (ನಾ). ಯುದ್ಧಮಾಡುವ ಸ್ಥಳ ; ಯುದ್ಧಭೂಮಿ ; ಕಳ : ಕಡಿದಾಡಲ್ ರಣರಂಗದೊಳ್ . . . ಪಡೆವಪ್ಪಲ್ಲದೆ ಬರ್ಪುದೇ (ತೋಮೇಶ. ೨೯) ; ಶ್ರೀಕೃಷ್ಣನು ಅವನನ್ನು ರಣರಂಗದಲ್ಲಿ ತಂದು ನಿಲ್ಲಿಸಿದನು (ಧರ್ಮಸಾ. ೦೦೯).

**ರಣರಂಗಧೀರ** = ಯುದ್ಧಭೂಮಿಯಲ್ಲಿ ವೀರನಾದವನು : ಹಾ ಮಗನೆ ರಣರಂಗಧೀರನೆ ಹಾ ಮದೀಯ ಕುಮಾರ ವೀರನೆ ಬಾ ಮಗನೆ (ತುವ್ರಾರಸ್ತ್ರಾ. ೯ ಸೂತವ). **ರಣರಂಗಸೀಱ, ರಣರಂಗಸೀರ** = ರಣರಂಗಕ್ಕೆ ಶೋಭೆ ತರುವವನು ; ಒಂದು ಬಿರುದು : ರಣರಂಗಸೀಱ ಪುಸಿವರ ಬಾಯುಂ ಸುಡುವ ಪಿಸುಣರ ಸೇಲ್ವ (ಎಕ. VII, ಶಿಕಾ೦. ೩-೨೩ ; 1061) ; ಸರ್ವ್ವಸ್ವಸೂಱೆಕಾಱ ರಣರಂಗಸೀರ ದಾಯಿಗ ಬೇಣ್ಟೆಕಾಱ (ಎಕ. VI, ಕಡೂರು. ೩೩-೯೯ ; 1336). **ರಣರಂಗಭೀಮ** = ಯುದ್ಧರಂಗದಲ್ಲಿ ಭಯಂಕರನಾಗಿರುವವನು ; ಒಂದು ಬಿರುದು : ಚಲದಂಕರಾವು ರಣರಂಗಭೀಮ ಕದನಪ್ರಚಂಡ (ಎಕ. II, ೩೬೦-೨೯; 1181). **ರಣರಂಗಭೈರವ** = ಕಾಳೆಗದಲ್ಲಿ ಭೈರವನಂತಿರುವವನು ; ಒಂದು ಬಿರುದು : ರಣರಂಗಭೈರವನುಭಯಬಳಸಂಘಟಕೀರ್ತಿಪ್ರತಾಪಂ (ಸೌಇಇ. XX, ೯೬-೩೪ ; 1072). **ರಣರಂಗಸಿಂಗ** = ಯುದ್ಧದಲ್ಲಿ ಸಿಂಹದಂತೆ ಇರುವವನು ; ಮಹಾಶೂರ : ರಣರಂಗಸಿಂಗವಿಜಯಿಾ (ಎಕ. II, ೩೯೮-೦೩ ; ೧೧ನೆಯ ಶ). **ರಣರಂಗಸಿಂಹ** = ರಣರಂಗಸಿಂಗ : ಅತಿಪ್ರಬಲ ರಣರಾಮನುಮೆನಿಸಿದ ರಣರಂಗಸಿಂಹನಿಂ (ಗದಾಯು. ೨-೭ ವ) [ಸಂ.]

**ರಣರಂಪ**, ರಣಾರಂಪ, ರಾಣಾರಂಪು (ನಾ). ದೊಡ್ಡಗಲಾಟೆ ; ಗದ್ದಲ ; ಕೋಲಾಹಲ : ಅವಳಿಗೆ ಸರಿಯಾಗಿ ನಡಕೊಂಡೆನೋ, ತಲೆ ಬೋಳಿಸಿಹೋಗುತ್ತೆ. ಇಲ್ಲವೋ ರಣರಂಪವಾಗುತ್ತೆ (ಪಡಾಳ. ೪೯); ಏನಪ್ಪಾ ಇದೆಲ್ಲಾ ರಣರಂಪ (ಕಂಜಕಂ. ೦೯೨). **ರಣಾರಂಪ** : ಇವೊತ್ತೆ ಆಗಬೇಕಾಗಿತ್ತೆ, ಈ ರಣಾರಂಪ ? (ಕಂಗಳ. ೦೩೯). **ರಾಣಾರಂಪು** : ಹಣ ಕೊಡೋದಿಲ್ಲಾಂತ ನೀನು ರಾಣಾರಂಪು ಮಾಡಿದೆ (ಸಂಪಕಂ. ೬೦).

[ರಣ$_2$ + ರಂಪ$_2$]

**ರಣರಣ** (ಅ). ಅತಿಯಾದ ತಾಪ ಅಥವಾ ತೀಕ್ಷ್ಣತೆಯನ್ನು ಸೂಚಿಸುವ ಒಂದು ಅನುಕರಣಾವ್ಯಯ : ಹೊರಗೆ ಬಿಸಿಲು ರಣರಣ ಉರಿಯುತ್ತಿತ್ತು (ಕಮಸಿ. ೯೩).

**ರಣರಣಕ** (ನಾ). ಅತಿಯಾದ ಕಾತರ ; ಉತ್ಕಂಠೆ : "ಉತ್ಕಳಿಕೆ ರಣರಣಕಮಾಯಲ್ಲಕಂ ವಿರಹಮುತ್ಕಂಠೆ . . . ಎನಲಾತುರಂ" (ಮಂಗರಾ. ೦೩೨-೨೯) ; ತರಳಾಕ್ಷಿಯನಾ ಕಾದಂಬರಿಯಂ ರಣರಣಕವಿಕಲಹೃದಯದಿ ನೋರುತಿರೆ ಚಿಂತಿಸುತ್ತಮಿರ್ದು (ಕಾದಂಬ. ೦೪೩). [ಸಂ.]

**ರಣರಣಿಕೆ** (ನಾ). = ರಣರಣಕ : ನಿನ್ನ ಜಗಜಟ್ಟಿತನವನ್ನು ಎಕ್ಕತುಳದಿಂದ ಸವಿಗೊಳ್ಳಬೇಕೆಂಬ ರಣರಣಿಕೆಯು ನನ್ನನ್ನೀ ವೀರತಾಣ್ಡವದಿಂದಾಡಿಸುತ್ತಿದೆ (ಮಂತ್ರಕ. ೬೩-೦೩). [< ರಣರಣಕ]

**ರಣರಭಸ** (ನಾ). ೧. ಯುದ್ಧವನ್ನು ಮಾಡಬೇಕೆಂಬ ಆವೇಶ : 'ರಣರಭಸಿಗ' ಪರಾ. ೨. ಯುದ್ಧದ ಬಿರುಸು, – ಜೋರು : ರಣರಭಸೋತ್ಕಟಂ ಧರೆ ಪೆಡಂ ಮಗುಟ್ದಂತೆ (ಅಜಪು. ೦೦-೬೯) ; ಕಲಹದುಬ್ಬರದ ರಣರಭಸ ಹುಟ್ಟಿಸಿತಜಾಂಡದ ಹಣೆಗೆ ಬೇನೆಯನು (ತೊರವ. ೬-೦೩-೩೩). [ಸಂ.]

**ರಣರಭಸಿಗ** (ನಾ). ಯುದ್ಧದಲ್ಲಿ ಆವೇಶವುಳ್ಳವನು : ಅಬ್ಬರಿಸಿದವು ರಣದ ಚೂಣಿಯಲುಬ್ಬುವಜಿ ಶತಕೋಟಿಸಂಖ್ಯೆಯಲುಬ್ಬರಿಸ ರಣರಭಸಿಗರ ಮುಖಸನ್ನಿವೇಶದಲಿ (ತೊರವ. ೬-೦೯-೦೯). [ರಣರಭಸ + – ಇಗ]

**ರಣರಸ** (ನಾ). ೧. ಯುದ್ಧೋತ್ಸಾಹ : ರಣರಸಮುಣ್ಮಿದತ್ತು ಕದಪಿಂ ರಣರಾಗಮೆ ಸೂಸಿದತ್ತು ವೀಕ್ಷಣದಿನೆನಲ್ ರಣಪ್ರತಿಭುದಿಂ ಕದಪಿಂದೊಗೆತರ್ಪ ಘರ್ಮವಾಃಕಣತತಿ (ಜಗಂ. ೦೩-೬೨). ೨. ಯುದ್ಧದ ಸ್ವಾರಸ್ಯ : ಕುರುಡಂಗೆ ರಣರಸವ ಬಿತ್ತರಿಸುವವನು (ಕುವ್ಯಾಗ. ೩-೩). [ಸಂ.]

**ರಣರಸಿಕ** (ನಾ). ಯುದ್ಧದಲ್ಲಿ ಉತ್ಸಾಹವುಳ್ಳವನು : ವಿಭೀಷಣಂ ರಣರಸಿಕನಾಗಿ ಪೊಕ್ಕಪುದುಂ (ಕಂರಾಮಾ. ೦೩-೦೯೬ ವ) ; ರಣರಸಿಕರಬ್ಬಾಡಿದರು ನೆಱೆ ಮೆಚ್ಚಲು ಸುರವ್ರಾತ (ತೊರವ. ೬-೨೩-೦೯). [ಸಂ.]

**ರಣರಹಸ್ಯ** (ನಾ). ಯುದ್ಧದ ಒಳಗುಟ್ಟು, – ಮರ್ಮ : ರಣರಹಸ್ಯಜ್ಞಾನಿಗಳು ಮಿಗೆ ಮಣಿವರಿಂದ್ರಿಯವಶಕೆ (ಕುವ್ಯಾಭೀ. ೬-೦೦); ನಿಶಾಚರರು . . . ರಣರಹಸ್ಯದ ರಸಿಕತನದುಬ್ಬಣವ ವಿದ್ಯಾಪ್ರೌಢಿಯಲಿ . . . ಹೊಯ್ದಾಡಿದರು (ತೊರವ. ೬-೩೦-೨೦). [ಸಂ.]

**ರಣರಾಗ** (ನಾ). ಕಾದಾಡಬೇಕೆಂಬ ಆಸಕ್ತಿ : ರಣರಸಮುಣ್ಮಿದತ್ತು ಕದಪಿಂ ರಣರಾಗಮೆ ಸೂಸಿದತ್ತು ವೀಕ್ಷಣದಿಂ (ಜಗಂ. ೦೩-೬೨). [ಸಂ.]

**ರಣರಾಮ** (ನಾ). ಯುದ್ಧದಲ್ಲಿ ಆಸಕ್ತಿಯುಳ್ಳವನು ; ಯುದ್ಧಾಸಕ್ತ : ಅತಿಪ್ರಬಲರಣರಾಮನುಮೆನಿಸಿದ ರಣರಂಗಸಿಂಹನಿಂ (ಗದಾಯು. ೨-೭ ವ).

[ಸಂ.]

**ರಣಲಂಪಟ** (ನಾ). ಯುದ್ಧದಲ್ಲಿ ಅತ್ಯಾಸಕ್ತಿಯುಳ್ಳವನು : ಅಧಟನೋ ರಣಲಂಪಟನೋ ಜನಾರ್ದನಂ (ಕಂರಾಮಾ. ೦೦-೬೨) ; ರಣಲಂಪಟನು ನಡೆಸಿದ ತೇರ ಸೂಠಿಯಲಿ (ಕೌರಾ. ೩೩-೬). [ಸಂ.]

**ರಣವರ** 'ರಣವಟ್ಟೆ[3]' ನೋ.

**ರಣವಸುಧೆ** (ನಾ). = ರಣಭೂಮಿ : ಕಾಕಪಕ್ಷವಿಸರದ ತಣ್ಪಂದಸುರಗಣ ಮಿಕ್ಕುರ್ವಿಮಿ ರಣವಸುಧೆಯೊಳೆಂದಮರರೊಸಗೆವಟ್ಟೆ[3] ವಾಜಿಪಿನಂ (ಜಗಚ. ೩-೬೯). [ಸಂ. ರಣವಸುಧಾ]

**ರಣವಟ್ಟೆ[3], ರಣವರೆ** (ನಾ). ಯುದ್ಧದಲ್ಲಿ ಬಾರಿಸುವ ಹರೆ.–ತಮ್ಮಟೆ : ನಿಡುಗರುಳುಗಳ ತೋರಣಗಟ್ಟಿ ರಣವಟ್ಟೆಗಳ ನಿನಾದದಲಿ . . . ಬೀಯಗರು ತಮ್ಮೊಳಗಾಗಿ ಕೊಡಗೂಸುಗಳ ಮದುವೆಯ ಮಾಡುತಿರ್ದರದೊಂದು ತಾಣದಲಿ (ಕೊರರಾ. ೬-೩೬-೯೧). **ರಣವರೆ :** ಆಲಿಸಿದನು . . . ಅಜಿಳ ವಾದ್ಯದಿ ಘೀಳಿಡುವ ರಥಸಗಳ ರಣವರೆ ಭೇರಿ ಶಂಖಗಳ (ಕೋಗಡು. ೨೦-೩). [ರಣ್$_2$ + ಪಟ್ಟೆ$^3_1$]

**ರಣವಾಜಿ** (ನಾ). ಯುದ್ಧದ ಕುದುರೆ; ಯುದ್ಧಾಶ್ವ : ಎತ್ತ ದುವ್ವಾಳಿ ಸುಪಡಾರಿಗಳತ್ತಲಾನೆಯು ಥಟ್ಟು ಕಾಲಾಳೊತ್ತರದ ರಣವಾಜಿ (ಕುವ್ಯಾಭಿ. ೫-೧೧) ; ಅವನ ದೇಶದ ತೀರದಲ್ಲಿ ಕಾಣಿಸಿಕೊಂಡ ನಾವಿಕರನ್ನೆಲ್ಲಾ ಅವನು ಕೊಂದು, ಅವರ ಮಾಂಸವನ್ನು ತನ್ನ ರಣವಾಜಿಗಳಿಗೆ ಕೊಡುತ್ತಿದ್ದನು (ವುಡಿಸ. ೯೬). [ಸಂ. ರಣವಾಜಿನ್]

**ರಣಮಾತು** (ನಾ). ಯುದ್ಧದಲ್ಲಿ ಉಭಯಪಕ್ಷದವರೂ ಪರಸ್ಪರ ಮೂದಲಿಸುತ್ತ ಆಡುವ ಮಾತು ; ಕಟಕಿ : ಮನದಲಂಕುರವಾಗಿ ಕಡೆಗಣ್ಣಿನಲಿ ಪಲ್ಲವವಾಗಿ ರಣಮಾತಿನಲಿ ಹೂತುದು ಕರ್ಣ ಪಾರ್ಥರ ರೋಷವಮಯ ಚೂತ (ಕುವ್ಯಾಕ. ೨೩-೧೧). [ರಣ್$_2$ + ಮಾತು$_1$]

**ರಣಪಾದಸಿದ್ಧಿ** (ನಾ). ಯುದ್ಧದಲ್ಲಿ ಗಳಿಸಬೇಕಾದ ಜಯ : ಎಮಗಿನ್ನೇನು ಗತಿ ರಣಪಾದಸಿದ್ಧಿಯದೆಂತು ಜಯಸಂಪಾದಕರು ನಮಗಾರು (ಕುವ್ಯಾಭೀ. ೨-೩೩). [ಸಂ.]

**ರಣವಾದ್ಯ** (ನಾ). ಯುದ್ಧದಲ್ಲಿ ಬಾಜಿಸುವ ವಾದ್ಯ ; ಸಮರವಾದ್ಯ : ನಳಿನಜಾಂಡದ ನೆತ್ತಿ ಬಿರಿಯಲು ಮೊಳಗಿದವು ರಣವಾದ್ಯತತಿ (ಕೊರರಾ. ೬-೦೩-೦೫). [ಸಂ.]

**ರಣವಿಜಯ** (ನಾ). ಯುದ್ಧದಲ್ಲಿ ಪಡೆದ ಅತಿಶಯವಾದ ಗೆಲುವು : ಹರಸಿ ಕುಜೇಗಳಸಿಕ್ಕದಡೆ ಗೋಚರಿಸದೇ ರಣವಿಜಯಸಿಧಿ ಹರಹರ ಎನುತ ಕರಗಿದನು ಕಡುಕರುಣದಲಿ ಬಲರಾಮ (ಕುವ್ಯಾಗ. ೬-೩). [ಸಂ.]

**ರಣವಿಶಾರದ** (ನಾ). ಯುದ್ಧದಲ್ಲಿ ನಿಪುಣನಾದವನು : ರಣವಿಶಾರದ ರಥಿರಲೇ ನೀವಣಕವೇತಕೆ ರಾಜಗುರುಗಳು ಸೆಣಸುವರೆ (ಕುವ್ಯಾಕ. ೩-೯). [ಸಂ.]

**ರಣವೀರ** (ನಾ). ಯುದ್ಧ ಮಾಡುವುದರಲ್ಲಿ ಶೂರನಾದವನು : ರಣವೀರಂ ಶುಂಭನಿಂ ಜಂಭನೆ (ಜಗಚ. ೦೫-೯೨). [ಸಂ.]

**ರಣವೀರ್ಯ** (ನಾ). ಹೋರಾಡುವುದರಲ್ಲಿರುವ ಶಕ್ತಿ ; ಯುದ್ಧಸಾಮರ್ಥ್ಯ : ನಿನ್ನ ರಣವೀರ್ಯವನ್ನೂ ದಾನಶೌರ್ಯವನ್ನೂ ನಾನು ಬಲ್ಲೆ (ವಶಚಾ. ೨೬೮). [ಸಂ.]

**ರಣವೀಳಯ** (ನಾ). ಯುದ್ಧಪ್ರಾರಂಭಕ್ಕೆ ಮೊದಲು ಯೋಧರಿಗೆ ಕೊಡುವ ತಾಂಬೂಲ : ಇಯಜ್ಞಸೇನರಿಗೆ ರಣವೀಳಯವನ್ನು ಕೊಡುತ್ತೇನೆ (ದಾಂಚೆ. ೦೦೯). [ರಣ್$_2$ + ವೀಳಯ (< ವೀಳೆಯ)]

**ರಣವೈದ್ಯ** (ನಾ). ಉಗ್ರವಾಗಿ ಚಿಕಿತ್ಸೆ ಮಾಡುವವನು : ಆ ರಣವೈದ್ಯನ ಹತ್ತಿರ ಚಿಕಿತ್ಸೆ ಮಾಡಿಸಿಕೊಂಡ ಮೇಲೆ ರೋಗ ಹೆಚ್ಚಾಯಿತು (ರೂಢಿ). [ಸಂ.]

**ರಣವ್ಯಸನಿ** (ನಾ). ಯುದ್ಧದಲ್ಲಿ ಅತ್ಯಾಸಕ್ತಿ ಇರುವವನು : ಅಸುರಪಡೆಯನನಿಲತನೂಜಂ ಸವ್ಯಾಪಸವ್ಯಮೆಚ್ಚು ರಣವ್ಯಸನಿ ಪಿಶಾಚಪಡೆಗೆ ಬಾಣಸುಗೆಯ್ದಂ (ಶಂರಾಪೂ. ೦೩-೦೩೦). [ಸಂ. ರಣವ್ಯಸನಿನ್]

**ರಣವ್ರಣಿತ** (ನಾ). ಯುದ್ಧದಲ್ಲಿ ಗಾಯಗಳನ್ನು ಹೊಂದಿರುವುದು : ಅಂತು ಮಾಡಿಸಿ ಬಟಿಯಂ ದುಸ್ಸಹರಣವ್ರಣಿತಮಾದ ಸೇನೆಯಂ ಸನ್ಮಾನವಾಹನಪುರಸ್ಸರಂ ಬೀಡಿಂಗೆ ಕಟಿಪ್ಪತ್ತಿರ್ಪನ್ನೆಗಂ (ಕಂಪ್ರಶ. ೧೧-೧೦೬ ವ). [ಸಂ.]

**ರಣಶಾಕಿಣಿ** (ನಾ). ಯುದ್ಧರಂಗದಲ್ಲಿ ಓಡಾಡುವ ಕ್ಷುದ್ರದೇವತೆ : ರಣಶಾಕಿಣಿಯರಜಪಟ್ಟಿಗೆಯ ರಕ್ತದಿ ತಣಿದು ಹರಸುತಿರೆ (ಕೌಶಿರಾ. ೩೨-೨೩). [ < ಸಂ. ರಣಶಾಕಿನೀ ]

**ರಣಶೂರ** (ನಾ). = ರಣವೀರ : ರಣಶೂರರಲ್ಲಿಯು ವಿಭೋಗಿಗಳಲ್ಲಿಯು ಚಾಗಿಪ್ಪಂದವಲ್ಲಿಯು ಎನೆ ಸಾರಮೆಂಬಿನಗಮಾ ಮಹಿ ಪೋಲ್ವುದು ಭೋಗಭೂಮಿಯಂ (ಪುಶ್ಚಕು. ೯-೧೬). [ಸಂ.]

**ರಣಸನ್ನಿ** (ನಾ). ತೀವ್ರವಾಗಿರುವ ಸನ್ನಿರೋಗ : ಗೋಪಾಲನಿಗೆ ರಣಸನ್ನಿಯಾಗಿ ನಾಲಿಗೆ ಒಳಕ್ಕೆ ಸೇದಿಕೊಂಡು ಹೋಯಿತು (ಮಾತುರಾ. ೦೦೯). [ರಣ್$_2$ + ಸನ್ನಿ]

**ರಣಸಾಗರ** (ನಾ). ಒಬ್ಬಾತನ ಹೆಸರು : ಸ್ವಸ್ತಿಶ್ರೀ ರಣಸಾಗರನಾಶಂ(ಸಂ)ಕಟದುಳ್ (ಎಇ. IX. ೦೬-೦; ೮ನೆಯ ೬೪). [ ? ]

**ರಣಸುಮ್ಮಾನ** (ನಾ). ಯುದ್ಧದ ಉತ್ಸಾಹ.— ಸಂಭ್ರಮ : ಏನ ಹೇಳುವೆನವರ ರಣಸುಮ್ಮಾನವನು (ಕುವ್ಯಾದ್ರೋ. ೦೫-೫೨) ; ಬೋಳವಿಸಿದನು ಸಕಲಸಮರಭಟಾಳಿಗಳ . . . ರಣಸುಮ್ಮಾನ [ಪಾಠಾಂ. ಸನ್ಮಾನ, ಸನ್ನಾಹ' ದುಬ್ಬಿನಲಿ (ತೊರರಾ. ೬-೨೦-೨೬). [ರಣ್$_2$ + ಸುಮ್ಮಾನ]

**ರಣಸ್ಥಾನ** (ನಾ). = ರಣರಂಗ : ರಣಸ್ಥಾನದೊಳೆನ್ನೆರಟ್ಟುಡಿವೆನೇ (ಶಂಕಥಾ. ೦೩-೯೦). [ಸಂ.]

**ರಣಹಂಬಲು** (ನಾ). ಯುದ್ಧಮಾಡಬೇಕೆಂಬ ಆಸಕ್ತಿ : ಮರುಳಂತೆ ದುಶ್ಶಾಸ ಮಷಿಗಂಡು ರಣಹಂಬಲು ಮರೆದು . . . ರಣಾಂಕಣದೊಳು (ತುರಂಗ. ೫೨-೨೨). [ ರಣ್$_2$ + ಹಂಬಲು(< ಪಂಬಲ್) ]

**ರಣಹಕ್ಕಲು** (ನಾ). ೧. ರಣಭೂಮಿ ; ಯುದ್ಧರಂಗ : ನಾವೆ ರಣಹಕ್ಕಲೊಳ್ ನಿನ್ನ ಜಯಿಸಿರ್ದುದುಂಟಾದರೆಮಗಕ್ಕು ಗಜಪುರದ ಸಿರಿ (ತುರಂಗ. ೬೫-೨೦). ೨. ಯುದ್ಧಾನಂತರ ಯುದ್ಧರಂಗದಲ್ಲಿ ಅಳಿದುಳಿದುದು : ತನ್ನಕ್ಕಳಂ ಸಾಲುಸಾಲ್ಗೊಂಡು ಬಿದ್ದಿರ್ದ ರಣಹಕ್ಕಲಂ ನೋಡಿ ಕಂಬನಿಮಿಡಿ (ತುರಂಗ. ೫೦-೫೦). [ ರಣ್$_2$ + ಹಕ್ಕಲು (< ಹಕ್ಕಲ್) ]

**ರಣಹದ್ದು** 'ರಣಪದ್ದು' ನೋ.

**ರಣಹೂಣಿಗ** (ನಾ). ಯುದ್ಧಮಾಡಬೇಕೆಂಬ ಛಲವುಳ್ಳವನು : ರಣಹೂಣಿಗರು ನಿಲಿ ಭೀಮ ಪಾರ್ಥರ ಕಾಣಬಹುದೋ ಕರೆಯೆನುತ ಗರ್ಜಿಸಿದನಾಚಾರ್ಯ (ಕುವ್ಯಾದ್ರೋ. ೧೬-೨೨). [ ರಣ್$_2$ + ಹೂಣಿಗ (< ಪೂಣಿಗ) ]

**ರಣಹೇಡಿ** (ನಾ). ಯುದ್ಧಕ್ಕೆ ಹೆದರುವವನು ; ಕಾಳಗಕ್ಕೆ ಅಂಜಿ ಓಡಿ ಹೋಗುವವನು : ದೌರ್ಜನ್ಯದೊಡನೆ ಹೆಚ್ಚಾಗಿ ಪರಾಕ್ರಮವಿರುವುದು. ನಿನ್ನಲ್ಲಿ ಅದೂ ಇಲ್ಲ ; ನೀನು ರಣಹೇಡಿ (ಗುರುಚ. ೯೯) ; ರಣಹೇಡಿ ಮನ ಹೇಡಿಗಳ ಕುಲದಿ ಜನಿಸಿದೆನು ಋಣಪಾಶ ಹರಿಯಲೆಂದು ! (ಕೃಪಾಕು. ೫-೧೦). [ ರಣ್$_2$ + ಹೇಡಿ (< ಪೇಡಿ$_1$) ]

**ರಣಹೇಡಿಗ** (ನಾ). = ರಣಹೇಡಿ : ಬೇರ ಬದುಕಿದು ಸುಡಲಿ ರಣಹೇಡಿಗನು ನೀನು (ಕೌಶಿರಾ. ೩೬-೦). [ರಣ್$_2$ + ಹೇಡಿಗ]

**ರಣಹೊಡೆ** (ಕ್ರಿ). ದೆವ್ವ, ಗ್ರಹ ಮೊದಲಾದುವು ಮೆಟ್ಟಿಕೊಳ್ಳು ; ಗರ ಬಡಿ : ಹಗಲು ಹೊತ್ತೇ ರಣಹೊಡೆದು ಮಣ್ಣುಮುಕ್ಕಬೇಕಾದೀತು (ಬೆಳುಮ. ೯೬) ; ಹೊಟ್ಟೆಕಿಚ್ಚಿನ ಪಾಪಕ್ಕೆ ಆ ಹೆಗ್ಗಡ್ತೀಗೆ ರಣಹೊಡೀತು ! (ಮರೆಮ. ೬೦). [ರಣ್$_2$ + ಹೊಡೆ$_1$ (< ಪೊಡೆ$_1$) ]

**ರಣಾಂಗಣ** (ನಾ). ಯುದ್ಧಭೂಮಿ ; ಸಮರಾಂಗಣ : ನಾಳೆಯು ರಣಾಂಗಣದೊಳ್ ನಡೆ ನೋಡುವಿರ್ ಮರುಳ್ವಡೆಯೊಡಗೂಡೆ ತಾಂಡವಮು

ನಾಡುವ ರಾವಣನಟ್ಟೆಯಾಟವುಂ (ಶಂರಾಪ್ರಾ. ೦೦-೨೩೩).

**ರಣಾಂಗಣಧುರೀಣ** =ಯುದ್ಧರಂಗದಲ್ಲಿ ಧೀರನಾದವನು ; ಒಂದು ಬಿರುದು : ಶಸ್ತ್ರಶಾಸ್ತ್ರಾದಿ ಸಕ್ಕಳಾಪಪ್ರವೀಣ ರಣಾಂಗಣಧುರೀಣ . . . ಅನೂನದಾನರವಿನಂದನ (ಕ್ರಿ.ಶ. XI-ii, ೦೦೯-೩೬; ಶಾ. ೨೪೮).

[ರಣ₂ + ಅಂಗಣ]

**ರಣಾಗಮಹೀನ** (ನಾ). ಯುದ್ಧನೀತಿಯಲ್ಲಿ ತಿಳಿವಳಿಕೆಯಿಲ್ಲದವನು : ಏನೆಲವೊ ರಾವಣ ರಣಾಗಮಹೀನನೇ ನೀನು (ತೊರರಾ. ೬-೪೯-೩). [ಸಂ.]

**ರಣಾಗ್ರ** (ನಾ). ಯುದ್ಧರಂಗದ ಮುಂಚೂಣಿ, — ಮುಂಭಾಗ : ಸೌಮಿತ್ರಿಯುಂ ರಾಮನುಂ ವಿರಥಮಾಡಿ ರಣಾಗ್ರದೊಳ್ ಪಿಡಿದು ತಂದಾಂ ಕೊಟ್ಟಪೆಂ ಸೀತೆಯುಂ (ಶಂರಾಪ್ರಾ. ೦೯-೦೦೯) ; ಸಿಂಧಸೆಳೆಗಳು ನಟ್ಟಡವಿ ಪವಡಿಸಿದ ತೆಜನಾದುದು ರಣಾಗ್ರದಲಿ (ಕುವ್ಯಾಭೀ. ೬-೬೪). [ಸಂ.]

**ರಣಾಜಿರ** (ನಾ). = ರಣರಂಗ : ರಣಶ್ರೀ ರಣಾಜಿರದೊಳ್ ಮಾಣದೆ ಪೊರ್ಮುವಂತೆ ಬೆಸಸಿಂ (ಶಂಶಾ. ೦೭-೯).[ಸಂ.]

**ರಣಾಜಿರಂಗ** (ನಾ).=ರಣಾಂಗಣ : ಆ ಸೈನ್ಯಮುದ್ಯಾನದಂತೆ ಮಹಾ ಗಜಾತಿಶೋಭಿತವುಂ ರಣಾಜಿರಂಗದಂತೆ ಮನೋಗಮನವಾಜಿರಂಜಿತವುಂ . . . ಎನಿಸಿ (ರಾಶಚ. ೬-೦೭ ವ). [ಸಂ.]

**ರಣಾನಕ** (ನಾ).=ರಣವಜ್ : ಅಕಾಲ ಘನಗರ್ಜನೆಯಂತೆ ಸಮಸ್ತದಿಕ್ತಟಂ ಪಿಡುಗುವಿನಂ ರಣಾನಕರವಂಗಳಸುಂಗೊಳೆ ಪರ್ವೆ (ಶಂಶಾ. ೦೩-೩೩) ; ಭೇರಿ ಪಟಹ ಮೃದಂಗ ತಂಬಟವೀ ರಣಾನಕಮುಖ್ಯನಾನಾವೀರವಟಿಗಳ ರಭಸದಲಿ ರಂಜಿಸಿದುದಾ ದುರ್ಗ (ತೊರರಾ. ೬-೭-೦೩). [ಸಂ.]

**ರಣಾನುರಾಗ** (ನಾ).=ರಣಹಂಬಲು : ವಿದ್ಯಾಧರು ಮುಂದೆ ನಡೆವ ನಳನ ಪಡೆಗೆ ರಣಾನುರಾಗದಿನಡ್ಡಂಬಂದು ನಿಲ್ವುದುಂ (ಶಂರಾಪ್ರಾ. ೧೨-೩೬ ವ) ; ಆ ನಿರಂತರಸರಳ ಸಾರವ ಸೋನೆ ಸದೆದುದು ಧರ್ಮಸುತನ ರಣಾನುರಾಗವ ತೂಳಿದುದು (ಕುವ್ಯಾಕ. ೩-೪೩). [ಸಂ.]

**ರಣಾರಂಪ** ' ರಣರಂಪ ' ನೋ.

**ರಣಾರಣೆ** (ಗು). ಅತಿಭಯಂಕರವಾದ : ರಣಾರಣೆ ಯುದ್ಧಮಾಡುತ್ತೇನೆ (ರಾಂಕ್. ೩೯೬). ' ಹಣಾಹಣಿ ' ನೋ. [< ರಣ₂]

**ರಣಾವನಿ** (ನಾ).=ರಣಭೂಮಿ : ರಕ್ತವಾರಿ ಬೆದೆಗೂಡಿಸೆ ಸಾರಿದೆ ಪರ್ವೆಣಂ ರಣಾವನಿತಲಮಿರ್ದುದಂಕುರಿತಮಾದವೊಲ್ (ಶಂಶಾವಾ. ೦೩-೯೯); ಪಾತಾಳ ದಾತ್ರಮಸುವಸ್ತ್ರಸಹಿತಂಶರಿಸಿದ್ದದಿಂ ಫಲುಗುಣಂ ಮಡಿದಿಹ ರಣಾವನಿಗೆ ಸಂಭ್ರಮದೊಳು (ಕೃಬಿಭಾ. ೨೯-೯೦). [ಸಂ.]

**ರಣಿಗ** (ನಾ). ಯುದ್ಧಮಾಡುವವನು : ಎತ್ತಿ ಬಂದರಿಯ ಬಲವನೋರ್ವನೆ ಪೊಕ್ಕು ಕತ್ತರಿಸುವೆನು ಶಿರಗಳ ಇತ್ತ ಪಾಲಿಸು ತಾಲಿಯನೆಂದು ರಣಿಗರ ಮುತ್ತ ನಂಜನು ಬಿನ್ನವಿಸೆ (ಶ್ಯಾಪಶ. ೦೩-೯). [ರಣ₂ + – ಇಗ]

**ರಣಿತ** (ಗು). ೧. ಶಬ್ದಮಾಡುವ; ಧ್ವನಿಮಾಡುವ : ಮೃದುಪದಂಗಳೊಳ್ ಕಳರವರಣಿತಮಣಿನೂಪುರಂಗಳಂ ತಂಡಿಸಿ (ಅದಿಪು. ೭-೦೦೬ ವ). (ನಾ). ೨. ಧ್ವನಿ ; ಶಬ್ದ : ನೂಪುರರಣಿತಕ್ಕಳಿಸಿ ಬರ್ಪಂಚೆವಿಂಡಿನಿಂಚರದೊಳಂ (ಕಾದಂಪೂ. ೬೬); ಪಾವ್ಕದ ರಣಿತವದ್ರಿಯನೊದೆದುದು (ಕುವ್ಯಾಗ. ೧-೬). [ಸಂ.]

**ರಣೋರ್ವಿ** (ನಾ). ರಣಭೂಮಿ ; ಕಳ : ಅಪಾರತೂರ್ಯಮಂ ಪೊಯಿಸಿ ಪಡೆಗಳೆರಡುಂ ರಣೋರ್ವಿಯಿಂದಂ ತಂತಮ್ಮ ಪುರಕ್ಕೆ ಪೋದುವು (ಶಂರಾಪ್ರಾ. ೧೩-೧೦೦). [ಸಂ. ರಣೋರ್ವೀ]

**ರತ** (ಗು). ೧. ಆಸಕ್ತ ; ಮಗ್ನ : ದ್ವಿಟ್ಟುರಧ್ವಂಸರತಕ್ರೋಧಂ . . . ರಕ್ಷಿಸುಗೆ ವಸುಧೆಯುಂ ಯುದ್ಧರಂಗತ್ರಿಣೇತ್ರಂ (ಜಗಂ. ೧-೩) ೨. ಸಂತೋಷಗೊಂಡ ; ತೃಪ್ತಿಗೊಂಡ. ೩. ಪ್ರೀತಿಸಿದ ; ಪ್ರೇಮಿಸಿದ. (ನಾ). ೪. ತತ್ಪರತೆ ; ಧ್ಯಾನ : ಸತತ ಈತನೆ ಮುಖ್ಯಗುರುವೆಂಬ ಶಿಳಿಯ ಅವನ ರತದಲ್ಲಿ ಇಪ್ಪಗೆ ವಜ್ರಪಂಜರ ಬರಣ (ಐಪಾಕ್ಕ. ೨೬-೩). ೫. ಹರ್ಷ ; ಸಂತೋಷ. ೬. ಸುರತ ; ಕೂಟ : "ರತಂ ಮೈಥುನಂ ಯಾಭವೆಂಸೆ ಕೂಟವಂದು" (ಮಂಗರಾ. ೯೬-೦೩) ; ನೆನೆದು ಮೊದಲಾದ ರತವನುವನೊಡ ಲೊಳ್ ಪುಳಕವನೆ ತಾಳ್ದ ತನ್ನಂಕದಚಲಸುತೆಯ ಮನವನಟಿದಪ್ಪಿ (ಜಪಪ. ೯-೬೩). [ಸಂ.]

**ರತಕೂಜಿತ** (ನಾ). ಸುರತಧ್ವನಿ ; ಸೀತ್ಕಾರ. [ಸಂ.]

**ರತಕೇಳಿ** (ನಾ). ಸಂಭೋಗ ; ರತಿಕ್ರೀಡೆ : ರತಕೇಳಿರಾಗವನಿತಂ ಸ್ತ್ರೀಪುಂ ವೃಜಕ್ಕೆಲ್ಲಂ (ಜಗಂ. ೨-೩). [ಸಂ.]

**ರತಕ್ರೀಡೆ** (ನಾ). = ರತಕೇಳಿ : ತನಪುತ್ರ್ಯಂತತೆ . . . ಮಯ್ದಾರದೊಳ್ ಬಿಬಿವಂ ದಿವಿಜಂ ಶ್ರೀಪ್ರಭೆಗಿತ್ತನಾಕೆ ದಿವಿಜಂಗಿತ್ತಳ್ ರತಿಕ್ರೀಡೆಯೋಳ್ (ಜಾಂತಿಪು. ೬-೩೬). [ಸಂ. ರತಕ್ರೀಡಾ]

**ರತಖಿನ್ನ** (ಗು). ಸುರತದಿಂದ ಬಳಲಿದ ; ಸಂಭೋಗದಿಂದ ಆಯಾಸಗೊಂಡ : ರತಖಿನ್ನಕಿನ್ನರೀಸನ್ನತೆಯುಂ ತಣ್ಣಲೆದು ಕಳೆದು ಸುಯ್ಯಿಂ ಸುರಭೀಕೃತವಾಗುತ್ತುಂ ಪ್ರತ್ಯುಪಕೃತಿವಡೆವುದು ತದುಪವನದ ಪಾವನ ಪವನಂ (ಶಂಪ್ರಪು. ೦೦-೯೨). [ಸಂ.]

**ರತಜಲ** (ನಾ). ಸಂಭೋಗದ್ರವ ; ಕಾಮಜಲ : ರತಿಸಮಯದೊಳೆ . . . ಶಂಖರವದ ಮಿಂತವೆನಿಸಲುಂಬಲ್ಪರತಜಲದ ಕೆಂಪನುಡುವತಿಚದುರಿನವಳೆ ಶಂಖಿಣಿ (ಜಸವ. ೨-೦೩). [ಸಂ.]

**ರತದೀಪಿಕೆ** (ನಾ). ರತಿಕಾಲದಲ್ಲಿ ಹತ್ತಿಸಿಟ್ಟ ಸಣ್ಣ ದೀಪ : ನಾಣ್ಚಿ ತಲೆಯಂ ತೆಗೆವಂತಿರೆ ಪಾತ್ರಮಧ್ಯದೊಳ್ ತೆಗೆದುಡುಗಿರ್ದುವೊಳ್ಪುಡಿಗಳಂ ರತದೀಪಿಕೆಗಳ್ ನಿಶಾಂತದೊಳ್ (ಲೀಲಾವ. ೩-೦೮). [ಸಂ. ರತದೀಪಿಕಾ]

**ರತನಿ** (ನಾ). ಮೊಳಕೈಯಿಂದ ಮುಚ್ಚಿದ ಅಂಗೈವರೆಗಿನ ಒಂದು ಅಳತೆ : ಏಳೋ ಎಂಟೋ ರತನಿಗಳ ಪ್ರಮಾಣದ ಸಲಗವು ಅಲ್ಲಿಗೆ ಬರುವುದು (ಬಂದ್ರಕ. ೬೮). [ < ಸಂ. ರತ್ನಿ ]

**ರತಲು** ' ರಾತಲು ' ನೋ.

**ರತಾಂತ** (ನಾ). ಸುರತದ ಅಂತ್ಯ ; ಸಂಭೋಗದ ಕೊನೆ : ಮನದಜಿಪಂ ಕಟಲ್ಪುವ ರತಾಂತ ಸುಯೋಪಯಿಂದೆ ನಿದ್ರೆಯಂ ನೆನೆಯದೆ ಪೋದುವಂತವರ್ಗೆ ಚಿತ್ರಜ ಕೇಳಿಗಳಿಂದೆ ಪೊಳ್ತುಗಳ್ (ಶಂಪ್ರಪು. ೬-೬೩) ; ಸಲಿಲಕೇಳಿಯುಮಂ ಸಹಿಉಟದೇಳ್ಗೆಯುಂ ತಳೆದಭಿಸಾರಿಕಾನಿಕರಮೊಪ್ಪಿದು ದಾತ್ತರತಾಂತಲೀಲೆಯೊಳ್ (ಗಿಂಕ. ೯-೬೬). [ಸಂ.]

**ರತಾಂಬು** (ನಾ).= ರತಜಲ : ನೆರೆಯಲ್ಕೆ ಪಪ್ಪಿಯೊಳ್ ಕೊಡನೊಡೆದಂತೆ ಗುಳ್ಳಿಸಿಟಿಗಂ ಸತಿಯರ್ಗೆ ರತಾಂಬು ಮರ್ಮದೊಳ್ (ಮನ್ಮಥಿ. ೩-೦೬). [ಸಂ.]

**ರತಾರ್ತ** (ನಾ). ರತಿಕ್ರೀಡೆಯ ಬಯಕೆಯುಳ್ಳ ವ್ಯಕ್ತಿ : ಎಳಲತೆವನೆಯಿನಿತೆನಿತುಂ . . . ಕೃತಕಾಚಳಮೆನಿತನಿತುಂ ರತಾರ್ತರೆಳಸಿರೆ ರಮ್ಯಂ (ಪುಕ್ಕಕು. ೨-೪೦). [ಸಂ.]

**ರತಾರ್ಥಿನಿ** (ನಾ). ಸಂಭೋಗದ ಬಯಕೆಯುಳ್ಳವಳು : "ವೃಷಸ್ಯಂತೀ, ರತಾರ್ಥಿನೀ — ಈ ೨ ಸುರತದಜಕೆಯವಳ್" (ಪರಾಯು. ೮೦-೩೩೦). [ಸಂ. ರತಾರ್ಥಿನೀ]

**ರತಿ₁** (ನಾ). ೧. ಸಂತೋಷ ; ಆನಂದ ; ಹರ್ಷ. ೨. ಪ್ರೀತಿ ; ಒಲವು ; ಆಸಕ್ತಿ : ಸಲ್ಲಲಿತರತಿಯಲ್ಲಿ ನಿಮ್ಮಯ ಮೆಲ್ಲಡಿಗಳಂ ಪೂಜಿಸುವ ಸಂಫುಲ್ಲಭಕ್ತಿಯನಿತ್ತು ಪರಿಪಾಲಿಸಿದೆ (ಬಸಪು. ೩೦-೬೨). ೩. ಹಂಬಲು ; ವ್ಯಾಮೋಹ : ನಿಮ್ಮ ನೋಡಿ ನೋಡಿ ಮನದಲ್ಲಿ ರತಿ ಹುಟ್ಟಿ ಸಿಮಿರ್ದುವೆನ್ನ ಕಳೆಗಳು (ಬಸವ. ೯೯೦) : ಕೃತಶರಾಪಾನ್ವಿತನಾ ಹಿಮಾಂಶು ಗುರುಪಿಂ ಗೋತ್ರಾಳಿಯಸ್ಥಾಂಗನಾರತಿಯಿಂ ಕೀಚಕನಂ ಬಕಾರಿ ಮುಜಿದಂ (ಸೋಮೇಶ. ೩೯). ೪. ಬಯಕೆ ; ಆಸೆ ; ಇಚ್ಛೆ : ಅನುದಿನಂ ಬಪ್ಪ

ತೆಱದಿಂ ಪುಷ್ಪದ ರತಿಯುಲಾ ಸಿದ್ಧಕುಲತಿಲಕನೆಯ್ದಿಂದು (ಸಿದ್ಧರಾ. ೪-೬೮). ೫. ಕೂಟ ; ಸುರತ ; ಸಂಭೋಗ : "ಸಂವೇಶನಂ . . . ರತಿಃ. ಸುರತಂ. ಮೋಹನಂ — ಈ ೭ ಸುರತಂ" (ಹಲಾಯು. ೯೩-೪೦೫) ; ಇಲ್ಲಿ ಮನುಜಸ್ತ್ರೀಯು ಮೇಳನವಲ್ಲಿ ಸುರನಾರಿಯರ ರತಿ (ಶಿವಾಗ. ೦-೨೧) ; ಸುಳಿಗಾಳಿ ನಿಲೆ ತೆರೆ ನಿಲುವಂತೆ ರತಿಯಾಟ ನಿಲೆ ನಿಂದುದೊಡನೆ ಮೈಯಾಟ (ಭರತ. ೪೦-೯೨). ೬. ಮನ್ಮಥನ ಹೆಂಡತಿ : "ಇಚ್ಚೆಗಾರ್ತಿಯೆಂದು ರತಿ" (ಕಬಿಗಾ. ೪೬-೧೪) ; ಸ್ಮರನ ಪೊಗೆಯಿಂದೆ ಪುದಿದಿರ್ದ ರತಿಯುವ್ವೋಲ್ಕಾಂತೆ ಕರಮೆ ಕಣ್ಗೆಸೆದಿರ್ದಳ್ (ಕಾದಂಪೂ. ೪೩). ೭. ಚಂದ್ರನ ಹದಿನಾರು ಕಳೆಗಳಲ್ಲಿ ಆರನೆಯದು : "ಅಮೃತಾ . . . ರತಿ . . . ಕಾಮದಾಯಿನಿಯೆಂಬ ಷೋಡಶಕಲಾಭರಿತನಾಗಿ (ವಿವೇಕ. ೨೧೬). ೮. [ಕಾವ್ಯವಿಜ್ಞಾ] ಸ್ಥಾಯಿಭಾವಗಳಲ್ಲಿ ಒಂದು ; "ರತಿಯೆಂದರೆ ಸ್ತ್ರೀಪುರುಷರಿಗೆ ಪರಸ್ಪರವಾಗಿರತಕ್ಕ ಪ್ರೀತಿ" (ಶಾರದಾ. ೩೪೪) : "ರತಿಃ. ಹಾಸಃ . . . ಶಮಃ — ಈ ೯ ಸ್ಥಾಯಿಭಾವಂಗಳ್" (ಹಲಾಯು. ೦೩-೯೦); ರತಿ ಹಾಸ . . . ಶಮೆಯೆಂಬ ಕ್ರಮದಿಂ ಶೃಂಗಾರಾದಿ ನವರಸಕ್ಕೆ ಬೀಜಭೂತಾತಂಗಳಾದ ಸ್ಥಾಯಿಭಾವಂಗಳೇ ದಕ್ಷಿಣಾದಿನಾಯಕಹೃದಯದಲ್ಲಿ ಸ್ಥಾಯಿಯಾಗಿರ್ದು (ವಿವೇಕ. ೨೨೭) ; ಮುಗಿಲ ಮಾರಿಗೆ ರಾಗರತಿಯು ನಂಜ ಪರಿತ್ತ (ಗಂ. ೬೯-೦). ೯. [ಛಂದ] ಅಂಶಗಣವಲ್ಲಿ ಒಂದು ; ಬ್ರಹ್ಮಗಣ : ಜಯಕೀರ್ತಿಯು 'ಬ್ರಹ್ಮ' 'ವಿಷ್ಣು' 'ರುದ್ರ' ಗಣಗಳ ಬದಲಾಗಿ 'ರತಿ' 'ಮದನ' 'ಶರ' ಗಣಗಳ ಹೆಸರಿನಲ್ಲಿ ಲಕ್ಷಣ ಹೇಳಿದ್ದಾನೆ (ಛಂದೋಽನು. ೦೩೨). [ಸಂ.]

**ರತಿ₂** (ನಾ). ೧. ರತ್ನಗಳನ್ನು ತೂಗಲು ಬಳಸುವ ಗುಲಗಂಜಿ ಮತ್ತು ಅದರ ತೂಕ : ಹವಳಕ್ಕೆ ಕಣಜ ಮುತ್ತಿಗೆ ಚವ ಪಚ್ಚೆಗೆ ರತಿ ವಜ್ರಕ್ಕೆ ಮಂಜಾಡಿ . . . ಯಿವು ತೂಗಿ ಮಾರುವಂತ ವಿವರಗಳು (ಶಾಸ್ತ್ರ. ೭೬-೧). ೨. ಹೊಳಪು ; ಕಾಂತಿ ; ಪ್ರಕಾಶ : ರತ್ನದ ಶಿಲೆಯೊಡೆದು ಪುಡಿಯಾದಲ್ಲಿ ರತಿಯಲ್ಲಿ ಅಡಗಿತ್ತೆಂಬುವನಱದಲ್ಲಿ ಪ್ರಾಣಲಿಂಗಿಯೆ ಪ್ರಾಣಲಿಂಗಸ್ಥಲ (ಮೋಳಮಾ. ೧೪೩-೫೪೭) ; ರತಿಯಿಂದ ರತ್ನ ಗತಿಯಿಂದ ವಾದ್ಯ (ಸಶವ-ಶ. ೭,೩೯೫-೬೮) ; ರತಿಯೆಂಬುದೆ ಪ್ರಾಣ ಘಟವೆಂಬುದೆ ಕಲ್ಲು (ಸಶವ-ಶ. ೭,೪೦೨-೪೪). ೩. (ಆಲಂ) ಸ್ವಲ್ಪ ; ಕೊಂಚ : ನನಗೆ ರತಿ ಮಾತ್ರವೂ ದುಃಖವಾಗುವುದಿಲ್ಲ (ತುಳಸಿ. ೦೨೫).

[← ಹಿಂ. ರತ್ತೀ./ಮರಾ. ರತಿ, ರತೀ./ಸಂ. ರಕ್ತಿಕಾ]

**ರತಿಕಲೆ, ರತಿಕಳೆ** (ನಾ). ಕಾಮಕಲೆ ; ಶೃಂಗಾರಕಲೆ : ರತಿಕಲಾಸುಪ್ರೌಢೆಯಲ್ಲದ ಸತಿಗೆ ರೂಪಿದ್ದೇನು (ಕೂರಾ. ೬-೯೫-೧೭). **ರತಿಕಳೆ** : ನಲ್ಲರೊಡನೊಂದಿ ಮಱಿದಿರೆ ರತಿಕಳಾಕೇಳಿಯಿಂದಂ . . . ಅಬಲೆಯರು ಕಣ್ಗೆಸೆದರು (ಹಕಶಾ. ೪-೩೭). [ಸಂ. ರತಿಕಲಾ]

**ರತಿಕಳೆ** ' ರತಿಕಲೆ ' ನೋ.

**ರತಿಕಾಂತ** (ನಾ). ರತಿಯ ಗಂಡ ; ಮನ್ಮಥ : ರತಿಕಾಂತನಸಿಯ ನುಣ್ಬೊಗರತಿಕಾಂತದ್ಯುತಿಯನಾಂತು ಚೆಲ್ವಿನೊಳಧಿಕಂ ಲತೆಯ ಮೊದಲ್ಗೆನೆ ರತಲೋಲತೆಯನಿನಂಗೀವುವವಳ ತೋಳ ಮೊದಲ್ಗಳ್ (ಜಗಪು. ೧೦-೩೦). [ಸಂ.]

**ರತಿಕಾತಿ** (ನಾ). ಪ್ರೀತಿಯನ್ನುಂಟುಮಾಡುವವಳು : ಆ ರತಿಕಾತಿಯವಳ ಲೋಚನವೆಂಬಾಱಡಿವಱಗಳೆಯ್ದಿಂದು ನೀಱನ ನಿಜವದನಾಂಬುಜದೊಳು ಕಾಲೂಱ ನಿಂದಾವು (ಕೃಶಂಶ. ೩-೭೮). [ರತಿ₁ + – ಕಾತ್ತಿ]

**ರತಿಕೇಳಿ** (ನಾ). = ರತಕೇಳಿ : ತೋಳ ಮೊದಲು ಪೊಕ್ಕುಳ ಮೊದಲು ಸ್ಥೂಲಜಘನವಿವು ಪೇಳುವುದೇನ್ ರತಿಕೇಳಿಯೊಳಗೆ ಚುಂಬಿಪ ತಾಣಂ (ಜವಶ. ೭-೨೫). [ಸಂ. ರತಿಕೇಲಿ]

**ರತಿಕ್ರೀಡೆ** (ನಾ). = ರತಕೇಳಿ : ತದ್ವಸವಾಲೆ ರತಿಕ್ರೀಡೆಗೆ ಮನೋಜ್ಞಮನುಕೂಲಮುಚಿತಂ (ಶೃಕೃತಿ. ೩-೫೪) ; ರತಿಕ್ರೀಡೆ ಎರಡು ಪ್ರಕಾರ. ಬಾಹ್ಯರತಿ ಆಭ್ಯಂತರ ರತಿ ಎಂದು (ಕಾಮಶಾ. ೨೨೧). [ಸಂ. ರತಿಕ್ರೀಡಾ]

**ರತಿಗಲೆ** (ನಾ). ರತಿಕ್ರೀಡೆಯಲ್ಲಿ ಉಂಟಾದ ನಖಕ್ಷತ ಮುಂತಾದ ಗುರುತು : ತನ್ನ ಮೈಯೊಳಪ ರತಿಗಲೆಯ ಬಿಡವೆಲ್ಲವನು ತೋಱ ಸ್ವಪ್ನದಿರವಂ ಪೇಳೆ (ಪ್ರಶರಾ. ೦೦-೪೪). [ರತಿ₁ + ಕಲೆ₂]

**ರತಿಗಾರ** (ನಾ). ಪ್ರೀತಿಸುವವನು ; ಪ್ರಿಯ ; ನಲ್ಲ : ನನ್ನ ಗಂಧದ ರತಿಗಾರ ರುಮ್ಮಾಲೆಲ್ಲ ಪರಿಮಳ, ರಾಯ ಯಾವಾಗ ಬರುತ್ತೀರಿ ? (ಹಳ್ಳಿಪಾ. ೫೪). [ರತಿ₁ + – ಗಾರ (< – ಕಾಱ)]

**ರತಿಗೃಹ** (ನಾ). ೧. ವಿಲಾಸಗೃಹ. ೨. ಸೂಳೆಯ ಮನೆ. ೩. ಯೋನಿ. [ಸಂ.]

**ರತಿಗೆಡು** (ಕ್ರಿ). ಆಸಕ್ತಿಯನ್ನು ಕಳೆದುಕೊಳ್ಳು ; ನಿಷ್ಠೆಯಿಲ್ಲವಾಗು : ವ್ರತವ ಮಾಡಿಕೊಂಡಲ್ಲಿ ರತಿಗೆಡದೆ ಕ್ಷೇತ್ರವಾಸಂಗಳಲ್ಲಿ ಜೇಡದೆ (ಸರ್ವ. ೦೬೯-೯೮೩) ; ಧೃತಿಬಿಡದೆ ರತಿಗೆಡದೆ ಭಕ್ತಿಸ್ಥಿತಿಯ ಮಱಿಯದೆ . . . ಸಂಪ್ರತಿಬಲಿದ ಸದ್ವೃತಿಯು ಸಮತೆಗೆ ಪುರಜನಂ ವಿಸ್ಮಯವಿದೆನುತಿರಲು (ಬಸಪು. ೩೬-೩೦). [ರತಿ₁ + ಕಡು₁]

**ರತಿಗೆಯ್, ರತಿಗೈ** (ಕ್ರಿ). ಸಂಭೋಗಿಸು ; ರತಿಕ್ರೀಡೆಯಾಡು : ಸೊಗಸಿಪಡೆ ರತಿಗೆಯ್ವು ಸೊಕ್ಕಿದಪಗಲದೊಳಪೊಕ್ಕು (ಬಸಪು. ೪೨-೦೫) ; ಶ್ಲಥೆ ಘನಂ ರತಿಗೆಯ್ಯಲತ್ಯುಚ್ಚರತಮೆನಿಸುವುದು (ಜವಶ. ೪-೩೪). **ರತಿಗೈ** : ಓರಂತೆ ವಿಟನೊಳು ಮಗ್ಗುಲ ರತಿಗೈವ ವಾರಾಂಗನೆಯರೊಪ್ಪಿದರು (ಕಂಸವಿ. ೭-೦೨೧). [ರತಿ₁ + ಕೆಯ್₁]

**ರತಿಗೇಹ** (ನಾ). ೧. ವಿಲಾಸಗೃಹ. ೨. ಸೂಳೆಯ ಮನೆ ; ವೇಶ್ಯಾಗೃಹ : ರತಿಗೇಹಂ ಹಾಸುಮಂಚಂ . . . ಮಾಱ್ಕಿಂ ವಿಟಗರ್ಭಿಮತವಾಂ ಕಾಮಸಾಮ್ರಾಜ್ಯದೊಳ್ಪಂ (ಸೂಕ್ತಿಸು. ೦೪-೨) ; ಮಿಂಚುವ ರನ್ನಗನ್ನಡಿ ವಿಲೇಪನ ಚಂದನವಾರಿ ಗಿಂಡಿ ಲಾಮಂಚವ ವೀಜನಂ ಪಲಸರಂ ಪಡಿಗಂ ರತಿಗೇಹಮೊಪ್ಪುಗುಂ (ಮನ್ಮಥ. ೦೦-೩). ೩. ಯೋನಿ. [ಸಂ.]

**ರತಿಗೈ** ' ರತಿಗೆಯ್ ' ನೋ.

**ರತಿಗೊಡು** (ಕ್ರಿ). = ರತಿಗೆಯ್ : ಪಿಡಿದೆರಡುಕೈಯೊಳಾ ತೊಡೆಯೆರಡ ನೊತ್ತಿ ರತಿಗೊಡಲದೇ ವೇಷ್ಟಿತಕರಣಂ (ಜವಶ. ೯-೧೮).

[ರತಿ₁ + ಕೊಡು₁]

**ರತಿತಂತ್ರ** (ನಾ). = ರತಿಕಲೆ : ಚಂಚಲನೇತ್ರೆ ಚತುರೆ ರತಿತಂತ್ರಕುಶಲೆ [ಪಾಠಾಂ. ದೇಳ್ಗೆ]ನಿಪುಣೆ . . . ಮಿಂಗಿನಾಡ ಹೆಣ್ಣು (ಜವಶ. ೬-೩೯). [ಸಂ.]

**ರತಿಪ** (ನಾ). ರತಿಯ ಗಂಡ ; ಮನ್ಮಥ : ಓರಂತೆ ರತಿಪನೆಸುವ ನಿಶಾತಮಾರ್ಗಣಹತಿಗೆ ಗುಱಿಯಾದೆನು (ಬಸಪು. ೪೦-೭). [ಸಂ.]

**ರತಿಪತಿ** (ನಾ). = ರತಿಪ : ರತಿಪತಿಗೆ ಮೂಲೋಕವಾವರಿಸುವ ರೂಪ್ಪ . . . ಕೊಟ್ಟ ಗುರುಮೂರ್ತಿ (ಹಕಶಾ. ೦-೧). [ಸಂ.]

**ರತಿಬಂಧ** (ನಾ). ೧. = ರತಿಕಲೆ : ಕ್ರೀಡಾಬಂಧ ರತಿಬಂಧಾದಿಗಳಿಂ ಸಂಗೀತಸಾಹಿತ್ಯಾದಿ ವಿದ್ಯಾಗೋಷ್ಠಿಗಳಿಂ ಮಲ್ಲಯುದ್ಧ ಲೀಲಾಯುದ್ಧಾದಿ ವಿಹಾರಗಳಿಂ (ವಿವೇಕ. ೨೦೩). ೨. ಸಂಭೋಗದಲ್ಲಿ ಅನ್ಯೋನ್ಯ ಉಪಲಗ್ನದ ಬೇರೆ ಬೇರೆ ವಿಧ ; ಚಿತ್ರರತಿಗಳಲ್ಲಿ ಒಂದು ಪ್ರಕಾರ. [ಸಂ.]

**ರತಿಯೆಱೆಯ** (ನಾ). = ರತಿಪ : ಆ ರತಿಯೆಱೆಯಂ ಪೂಜಿಪ ಕೆಂಗಲ್ಗರುವಿನ ತೆಱನೆನೆ ಯುವತಿ ಕಲಾವತಿ ಸಿರಿಯಿಂದಾ ಲಕ್ಷ್ಮಿಗೆ ಸವತಿ (ಜಯಶಾ. ೨-೪೬). [ರತಿ₁ + ಎಱೆಯ]

**ರತಿರಮಣ** (ನಾ). = ರತಿಪ : ಅತಿನಿಬಿಡಂಗಳ್ . . . ರತಿರಮಣಕುಂಭಿಕುಂಭಾಕೃತಿಗಳ್ ಕಳಶೋಪಮಂಗಳವಳ ಕುಚಂಗಳ್ (ಗದಾಯು. ೯-೫೭) ; ರತಿರಮಣನತಿಮೋದದಿಂದಮ್ಮೆಸೆಂಪಗಲದಿರ್ಕೆ (ಜವಶ. ೨-೧). [ಸಂ.]

**ರತಿರಸ** (ನಾ). ಕಾಮಾಸಕ್ತಿ : ನರಪಮುಖವಿಧುಬಿಂಬಂ ಸತಿಯ ಮನಃಕುಮುದವನುರು ರತಿರಸಮಂ ಬಿಡದಲರ್ಚಿಸಿತ್ತು ನಿತಾಂತಂ (ಶಾಂತಿ. ೬-೧೨೨) ; ರತಿರಸದಿಂ ಸೊರ್ಕಿ ನಿಮೀಳಿತಲೋಚನಪಕ್ಷ್ಮದಿಂ ತೊದಳ್ನುಡಿಯಿಂ ಸೂಯತಘರ್ಮಾಂಬುಗಳಿಂ ಮೂರ್ಛತೆಯಿಂ ತಾಳ್ದೊಪ್ಪುತಿರ್ದರಾ ದಂಪತಿ (ತ್ರಿಷ. ೦೬-೦೨೮). [ಸಂ.]

**ರತಿರಹಸ್ಯ** (ನಾ). ಕಾಮದ ಗುಟ್ಟು ; ಶೃಂಗಾರ ರಹಸ್ಯ : ಸ್ಮರರಾಗೋದ್ರೇಕಂ ವೀತರಾಗನಿರ್ದೆಡೆಯೊಳೇಕೆ ಪುಟ್ಟುಗುಮೆನೆ ತತ್ಪರತೆಯಿನಂತರ್ವರ್ತಿ‌ಯೊಳರಸನವೇಕ್ಷಿಸನೆ ರತಿರಹಸ್ಯೋತ್ಸವಮಂ (ಕೃಷ್ಣ. ೯-೦೦೯). [ಸಂ.]

**ರತಿರಾಗ** (ನಾ). = ರತಿರಸ : ಮಾಗಿಯ ದಿವಸು ಘನರತಿರಾಗವನುತ್ಸವದಿ ಮಾಡುಗೆ (ಮದ. ೩-೯); ರತಿರಾಗಾಮೃತವಾರ್ಧಿಯೊಳತನುಕ್ರೀಡಾನಿಮಗ್ನೆಯಾದಂತೆ (ಕೃಷ್ಣ. ೩-೦೦೯). [ಸಂ.]

**ರತಿರಾಗಂಬೆಱು** (ಕ್ರಿ). ಕಾಮಾಸಕ್ತಿಯನ್ನು ಹೊಂದು ; ಕಾಮಾತುರದಿಂದ ಕೂಡಿರು : ರತಿರಾಗಂಬೆತ್ತು ಕಾಂತಂ ತೆಗೆದು ಬಿಗಿದು ತಳ್ಕೈಸೆ (ರಾಜಶೇ. ೮-೬೯). [ರತಿರಾಗ + ಪೆಱು$_1$]

**ರತಿರಾಗಿ** (ನಾ). ಸಂಭೋಗದಲ್ಲಿ ಆಸಕ್ತಿಯುಳ್ಳವನು ; ಸುರತಾಸಕ್ತಿಯಿರುವವನು : ಉಜ್ವಲಯಶಂ ರತಿರಾಗಿ ಕಳಾವಿಭೂಷಣಂ. . . ಶುಚಿಯೆಂದೆನಿಪಂದಱಿ ನಾಗರೀಕನಂ (ಮುಕ್ತಿ. ೦೦-೩). [ಸಂ. ರತಿರಾಗಿನ್]

**ರತಿವೆರು** (ಕ್ರಿ). ಸಂತೋಷವನ್ನು ಹೊಂದು : ಆನಂದಪಡು : ನರ್ತನದ ಸತಿಯರೇಳ್ತಂದು. . . ತಾಳಮರ್ದಳೆಯುಪಾಂಗಂ ವೀಣೆಯು ಮುಖ್ಯಂಗಳನು ನುಡಿಸುತೇ ಜತೆಗೂಡಿ ಗಾನಸಂಗೀತಚಯದಿಂದೊಲಿದು ರತಿವೆತ್ತು ಭೂಪಾಳಿಯುಂ ಪಾಡೆ (ಶಬರ. ೦೯-೩೦).
[ರತಿ$_1$ + ಪೆರು$_1$ (< ಪೆಱು$_1$)]

**ರತಿಶಾಸ್ತ್ರ** (ನಾ). ಕಾಮಶಾಸ್ತ್ರ : ಲೀಲೆಯಿಂ ರತಿಶಾಸ್ತ್ರಮೂಲವಱಿದು (ಜಿವ. ೯-೨೨). [ಸಂ.]

**ರತಿಶ್ರಾಂತಿ** (ನಾ). ಸಂಭೋಗದಿಂದ ಉಂಟಾದ ಆಯಾಸ,- ದಣಿವು : ರತಿಶ್ರಾಂತಿನಿರ್ಯಲ್ಲಳನಾಸಿಶ್ವಾಸಪುಷ್ಪಪ್ರಸರದಗುರುಸೌರಭ್ಯಸಂದೋಹಭಾರಾಕಳಿತಂ. . . ಗಂಧವಾಹಂ (ಚಂದ್ರ. ೬-೯೩). [ಸಂ.]

**ರತಿಸು$_1$** (ಕ್ರಿ). ೧. ಗಮನಿಸು ; ಲಕ್ಷ್ಯವಿಡು : ನಿರ್ಮಳಮತಿಯನಂಗೀಕರಿಸಿ ಲಕ್ಷ್ಯವ ರತಿಸುತಿಹುದಾವಾಗಲು (ಸದ್ಗುರು. ೨-೩). ೨. ಕೂಡು ; ಭೋಗಿಸು : ಗೋತ್ರದೊಳ್ಪುಟ್ಟಿರ್ದ ಸತಿಗಳ ನೇತ್ರದಿಂ ನೋಡ್ಯಪರ ರತಿಸುವ ಮನುಜಮಾತ್ರನು ಮೂತ್ರರೋಗದಿ ಬಳಲಿ ಸಾಯುವನು (ಶಾಪಂಗ. ೨೦) ; ಇಂದೀವರಾಂಬಕ ನಿಂದಿಸದೆಮ್ಮಾನು ಮಂದಹಾಸದಿ ನೀನು ಹೊಂದಿ ರತಿಸಿಂದು (ಹಮತ. ೩೯). [ರತ + — ಇಸು$_3$]

**ರತಿಸು$_2$** (ಕ್ರಿ). ಮಾಡು ; ರಚಿಸು : ಮತ್ತೆ ಬಂದೊಮ್ಮೆ ಪೂಜೆಯ ರಚಿಸಿರ್ಪ ಸಾಕಿಂದಿಗೆ (ಶರಶ. ೬೨-೬೯). [ <ರಚಿಸು$_1$]

**ರತಿಸುಖ** (ನಾ). ಸಂಭೋಗದ ಆನಂದ ; ಕೂಟದ ಸುಖ : ವಧುವುಂ ತಾನುಂ ರತಿಸುಖ ಮಧುಸೇವಾಸುತ್ತರತ್ತ ಮೆಯ್ಮಱದಿರ್ದರ್ (ಶಂಕರ. ೧೩-೩೬) ; ತನ್ನಾಶ್ರಯದ ರತಿಸುಖವನು ತಾನುಂಬ ಊಟವನು ಬೇಱೆ ಮಕ್ಕೊಬ್ಬರ ಕೈಯಲ್ಲಿ ಮಾಡಿಸಬಹುದೆ (ಚಶವ. ೦೬೩). [ಸಂ.]

**ರತಿಸುಖವಡೆ** (ಕ್ರಿ). ಸಂಭೋಗಸುಖವನ್ನು ಪಡೆ ; ಸುರತದ ಆನಂದವನ್ನು ಹೊಂದು : ಒಂದಿನ ಪರಮಸುಂದರಿಯೆನ್ನ ಕನಸಿನೊಳ್ ಸಂದಿಸಿ ರತಿಸುಖವಡೆದು ಅಂದಿನಿಂದವಳ ಕಾಣದೆ ವಿಹಹವನಾಂತು ಕಂದಿದೆ (ಮೋಹತ. ೩೦-೦೬). [ರತಿಸುಖ + ಪಡೆ$_1$]

**ರತಿಸೌಖ್ಯ** (ನಾ). = ರತಿಸುಖ : ಚುಂಬಿಸಿ ತೋಳ ಮೊದಲೊಳುಗುರ್ಗಳ ನೆಳೆಯಿ ಮೃದುವಪ್ಪ ರತಿಸೌಖ್ಯಮಂ ಪಡೆವರು (ಜಿವ. ೬-೩೯). [ಸಂ.]

**ರತಿಸ್ರುತೆ** (ನಾ). = ರತಜಲ : ಇದನು ಬೆರಳ್ಗಳ ಕಂಡು ಗೋಕುಲಗುಡಿಸೆ ದ್ರವಿಪಳು ಮದನದ್ವಾರದ ಕಳೆಯು ಪದುಮದ ತೆರನು ರತಿಸ್ರುತೆಯೆಂಬ ಪೆಸರದಕೆ (ಕೆಕ್ಕಳೆ. ೦೦-೬೩). [ಸಂ. ರತಿಸ್ರುತ]

**ರತಿಹೀನ** (ನಾ). ರತಿಶಕ್ತಿಯಿಲ್ಲದವನು ; ನಪುಂಸಕ : ರತಿಹೀನಂ ಪೆಟವಂ ಕುಬ್ಜಂ ಮತಿವಂತಂ . . . ಸತಿಯುಂ ಕಾಯುಲ್ಕಿಶಿಷ್ಟಂ (ಮದ. ೬-೩೯). [ಸಂ.]

**ರತೀಧವ** (ನಾ). = ರತಿಪ : ಆಧಾರಗೆಯ್ದು ಕುಳ್ಳಿರಗೊಟ್ಟು ಕೇಳ್ದ ರತೀಧವ ಬಂದ ಸುದ್ದಿಯನು (ಮೋಹತ. ೩-೯೯). [ಸಂ.]

**ರತೀಶ** (ನಾ). = ರತಿಪ : ಘನವಿಪುಳವ್ರತೀಂದ್ರರ ತಪೋವಿಪಿನಂ ಬಯಲಪ್ಪಿನಂ ರತೀಶನ ಚತುರಂಗಸೇನೆ ನಡೆದತ್ತು ಧರಿತ್ರಿಗೆ ಚಿತ್ರಮಪ್ಪಿನಂ (ಗಂಶ. ೬-೬) ; ರತೀಶನ ತಂದೆಯುಂ ಬಿದಿ ರವಿ ಶಿಖಿಗಳಂ ಭಜಿಸಿ ಕರ್ಮಕ್ಕೆ ತಂದೆ ನಿನ್ನೊಡಲಂ (ಬಸವ. ೩-೬೦). [ಸಂ.]

**ರತುನ**, ರನ್ನ (ನಾ). ೧. ವಜ್ರ, ಮಾಣಿಕ್ಯ ಮುಂತಾದ ಬಹುಬೆಲೆಯುಳ್ಳ ಹರಳು,- ಮಣಿ : ಪಂಚರತುನದೊಳೆ ನೆಱೆದ ಪಸರದಿಂ ತೋರಣಂಗಳೊಳ್ ತೊಡರ್ದ ತಿಸರದಿಂ (ಕಂಠೀ. ೩-೨೨ ರಗಳೆ) ; ಕನಕಶಿಲೆ ಎನಿಸುವ ಪಾಷಾಣದಲ್ಲಿ ರತುನ ಪುಟ್ಟಲು (ಶೂರ್ಪಣ. ೨೬೩-೦೯) ; ಜಲಧಿತಲಪ ರತುನದಂತೆ . . . ಹೊಳೆಹೊಳೆವುದು ಚಿತ್ತವು (ಬಸವಗೀ. ೦೩-೮). **ರನ್ನ** : ೧. ಚೆಂಬೊನ್ನ ಪಟ್ಟವಣೆ ರನ್ನದ ಕನ್ನಡಿ (ಆದಿಪು. ೯-೩೩) ; ಸಾಣೆಯ ಮೇಲೆ ರನ್ನಗಳಟ್ಟು ಪಾಸೆದೊಪ್ಪಗಾಣಿಸಿ ಕುಡುವ ತೇಟಗರು (ಮೋಹತ. ೩-೨೬). ೨. ಕೆಂಪುಹರಳು ; ಮಾಣಿಕ್ಯ : "ಕೆಂಬರಲು ರನ್ನ ಕಿಸುಗಲ್ಲೆಂಬಿವು ರತ್ನಾಭಿಧಾನಂ" (ಕರ್ಣಾ. ೩೩). ೩. ಶ್ರೇಷ್ಠವಾದುದು : 'ರನ್ನೆ' ಪರಾ. ೪. 'ಗದಾಯುದ್ಧ' ಮತ್ತು 'ಅಜಿತನಾಥಪುರಾಣ' ಮುಂತಾದುವುಗಳನ್ನು ರಚಿಸಿದ ಕನ್ನಡದ ಒಬ್ಬ ಪ್ರಸಿದ್ಧಕವಿಯ ಹೆಸರು : ಕವಿಚಕ್ರವರ್ತಿವೆಸರೇಂ ರನ್ನಂಗೆ ಮೆಯ್ವೆತ್ತುದೋ (ಅಜಿತ.೦-೮೬) ; ಫಣಿಪತಿಯ ಫಣಾರತ್ನಮುಮಂ ರನ್ನನ ಕೃತಿರತ್ನಮುಮಂ ಪೇೞ್ ಪರೀಕ್ಷಿಪಂಗೆಂಟೆರ್ದೆಯೇ (ಗದಾಯು. ೧-೯೯). [<ಸಂ. ರತ್ನ]

**ರತುನದಾಲಿ**, ರನ್ನದಾಳಿ (ನಾ). ರತ್ನವನ್ನು ಕುಂದಣಿಸಿದ ತಾಳಿ: ನೇವಳದ ನಾಯಕಿಗೆ ರತುನದಾಲಿ [ಪಾಠಾಂ. ರತ್ನದಾಳಿ, ರನ್ನದಾಳಿ]ಯ ರಾಜಹಂಸೆಗೆ ಮಾಗಾಯ್ಗಳ ಮುಂಗೈಗೆ . . . ನಿಯಾಮಿಸಿ (ಗಂಶ. ೩-೯೦ ವ). **ರನ್ನದಾಳಿ** : ನೇಸಱ ಬಿಂಬಂ . . . ವಿಯತ್ತ್ರೀಬಾ ಸತಿಯ ರನ್ನದಾಳಿಯ ಮ್ಯೈಸಿರಿಯನೆ ಪೋಲ್ತು ಮಾಗಿಯೊಳ್ ಶೋಭಿಸುಗುಂ (ಉತ್ತರ. ೯-೨೩); ನುಣ್ಗೊರಲ್ಗೆ ರನ್ನದಾಳಿಯನಾಳಿಸಿಯುಂ . . . ಪಸದನಂಗೊಳಿಸಲ್ (ವೃಕವಿ. ೩-೦೩ ವ). [ರತುನ + ತಾಲಿ$_1$]

**ರತೆ** (ನಾ). ಸಂಭೋಗದಲ್ಲಿ ತೊಡಗಿರುವವಳು : " ರತೆಯೆನಲು ಸುರತೆಯುಕ್ಕುಂ " (ಪಂಗರಾ. ೮೯-೨). [ಸಂ. ರತಾ]

**ರತೋತ್ಕಂಠೆ** (ನಾ). ಸಂಭೋಗದಲ್ಲಿ ಉತ್ಸುಕತೆಯುಳ್ಳವಳು ; ಕಾಮಾತುರೆ : ಕೋಮಲೆಯುಂ ಕೋಟಚಟೂಕ್ತಿಯಿಂದೊಸೆಯಿಸುತ್ತಿರ್ದಂ ರತೋತ್ಕಂಠೆಯುಂ (ಚಂದ್ರ. ೬-೩೩). [ಸಂ. ರತೋತ್ಕಂಠಾ]

**ರತೋತ್ಸವ** (ನಾ). ಸಂಭೋಗದ ಸಂಭ್ರಮ : ಮಿಕ್ಕಮಂಡನಂ ಯುವತಿಜನಕ್ಕದೇವುದೊ ರತೋತ್ಸವಚಿಹ್ನಮೆ ದಿವ್ಯಮಂಡನಂ (ಶಗಪ. ೦೯-೦೦೦); ಅನವರತಂ ರತೋತ್ಸವದೊಳ್ಪಣ್ಮುವ ಘರ್ಮಜಲಂಗಳಿಂದೆ ಮಜ್ಜನಮನಶಿಪ್ರಿಯಾಧರಸುಧಾರಸಸೇವನೆಯಿಂದಮೂಟಮಂ... ನೆನೆಯದೆ ಪೋದುವಂತವರ್ಗೆ ಚಿತ್ರಜಕೇಳಿಗಳಿಂದೆ ಪೊಬ್ಬುಗಳ್ (ಚಂದ್ರ. ೬-೮೩)[ಸಂ.]

**ರತ್ತ** (ನಾ). ಒಬ್ಬಾತನ ಹೆಸರು: ಶ್ರೀರತ್ತ (ಎಕ. II. ೯೦೯. 800). [?]

**ರತ್ರೂಡಿ** (ನಾ). ಹಪ್ಪಳ ಮೊದಲಾದುವುಗಳನ್ನು ಲಟ್ಟಿಸುವ ಸಾಧನ ; ಲಟ್ಟಣಿಗೆ : ಹಪ್ಪಳ ಲಟ್ಟಿಸಬೇಕು. ರತ್ರೂಡಿ ಎಲ್ಲಿ ? (ರೂಢಿ). [ ? ]

**ರತ್ನ** (ನಾ). ೧. ವಜ್ರ, ಮಾಣಿಕ್ಯ, ಮರಕತ ಮುಂತಾದ ಬಹು ಬೆಲೆಯುಳ್ಳ ಮಣಿ ; ಅನರ್ಘ್ಯವಾದ ಹರಳು : ವಾರಿಧಿ ಮೈದೆಗೆದರೆ. ರತ್ನಂಗಳು ಕಾಣಬಹುದು (ರಸಕ. ೬೬೦); ಕೆಲವು ಅಮೂಲ್ಯವಾದ ಹರಳು ಕಲ್ಲುಗಳು ಕಣಿಗಳಲ್ಲಿ ದೊರೆಯುತ್ತವೆ. ಅವುಗಳಿಗೆ ರತ್ನಗಳು ಅನ್ನುತ್ತಾರೆ (ಪುಂಬಯು. ೯-೦೬೯). ೨. ಕೆಂಪುಹರಳು ; ಮಾಣಿಕ್ಯ : ಕೆಂಬರಲು ರನ್ನ ಸುಗಲ್ಲೆಂಬಿವು ರತ್ನಾಭಿಧಾನಂ '' (ಕಶಕಂ. ೩೩). ೩. ಅತ್ಯುತ್ತಮವಾದುದು ; ಶ್ರೇಷ್ಠವಾದುದು ; ಅಮೂಲ್ಯವಾದುದು : ''ಮಣಿಯುಂ ರತ್ನತ್ರಯಂ ಭಾಸುರತರಮಿವು ರತ್ನಾಷ್ಟಯಂ '' (ಶಾಪಾರ. ೦೩೩). ೪. ಸಮಾಸಗಳ ಕೊನೆಯಲ್ಲಿ ಶ್ರೇಷ್ಠ, ಪ್ರಮುಖ ಎಂಬರ್ಥವನ್ನು ಕೊಡುವ ಒಂದು ಪದ ; ಉದಾ : ನಾಯಕರತ್ನ, ಸ್ತ್ರೀರತ್ನ. ೫. ಕನ್ನಡದ ಒಬ್ಬ ಪ್ರಸಿದ್ಧ ಕವಿ; ರನ್ನ : ಶ್ರೀ ಕವಿರತ್ನ (ಎಕ. II. ೪೦; ಶು. ೨೨೦೧); ವಾಗ್ದೇವಿಯ ಭಂಡಾರದ ಮುದ್ರೆಯನೊಡೆದಂ ಸಾರಸ್ವತಮೆನಿಪ ಕವಿತೆಯೊಳ್ ಕವಿರತ್ನಂ (ಗದಾಯು. ೦-೩೯) ; ನಯದಿಂ ಪಂಪನೊಳಿಲ್ಲು ನಿರ್ಮಿಸಿದ ಪೊನ್ನಂ ಪ್ರೀತಿಯಿಂ ಪೇಳ್ದ ಭಕ್ತಿಯಿನಾ ರತ್ನಕವೀಶ್ವರಂ ಸಮೆದ ತತ್ಕಾವ್ಯತ್ರಯಕ್ಕಂ ಜಗತ್ತ್ರಯಮುಂ ಮುಂ ಬೆಲೆಯಾಗಿ ಪೋಯ್ತು (ಕಂದ್ರಕೃ. ೦.೬೬). ೬. [ಗಣಿತ] ಒಂಬತ್ತು ಎಂಬ ಸಂಖ್ಯೆಯ ಸಂಕೇತ : ರಸ ನಾಟ್ಯಂಗಂ ಗ್ರಹಣಾ ಪ್ರಪತಂ ನಿಧಿ ರತ್ನ ನವಮು ಮೊಂಭತ್ತೆನಿಕುಂ (ಪ್ರಕಶಾ. ೯-೯). [ಸಂ.]

**ರತ್ನಕಂಕಣ** (ನಾ). ರತ್ನಖಚಿತವಾದ ಬಳೆ,-ಕಡಗ : ದೇವಿಯ ವಿಗ್ರಹಕ್ಕೆ ಭಕ್ತರೊಬ್ಬರು ರತ್ನಕಂಕಣವನ್ನು ಅರ್ಪಿಸಿದ್ದಾರೆ (ಕೂಪ). ೨. [ಸಾಮುದ್ರಿ] ಹಸ್ತದಲ್ಲಿರುವ ಒಂದು ರೇಖೆಯ ಹೆಸರು : ಮಣಿಬಂಧದಲ್ಲಿ ರೇಖೆಯಿರಲು ರತ್ನಕಂಕಣವೆಂದು ನಾರದಾದಿ ಋಷಿಗಳು ಹೇಳುವರು (ಸಾಮುಂ. ೬೩-೩). [ಸಂ.]

**ರತ್ನಕಂಬಲ, ರತ್ನಕಂಬಳ** (ನಾ). ಬೆಲೆಬಾಳುವ ಕಂಬಳಿ ; ಅಮೂಲ್ಯವಾದ ಕಂಬಳಿ : ತನ್ನ ಬೆಳಗೆ ಬೆಳಗಾಗಿದ ರತ್ನಕಂಬಲಮನಾ ಧರಿತ್ರೀವಲ್ಲಭಂ ಮುಹುರ್ಮುಹುರಾಲೋಕನಕುತೂಹಳಚಿತ್ತನಾಗಿ ವಿಸ್ಮಯಂಬಟ್ಟು . . . ನುಡಿದಂ (ಸುಕುಮಾ. ೦೦-೦೦೫ ವ). **ರತ್ನಕಂಬಳ** : ನಿನ್ನ ರತ್ನಕಂಬಳಮುಂ ಪೊದೆದು ಮನೆಗೆ ಬಂದೊಡೆ (ವಡ್ಡಾರಾ. ೩೯-೬); ಬಿಳಿದಾದ ರತ್ನಕಂಬಳದಿಂದೆಯುಂ . . . ಪರಿಶೋಭಿತವಾಗಿ (ಭಾರತಂ. ೩೭-೨೬೩). [ಸಂ.]

**ರತ್ನಕಂಬಳ** ' ರತ್ನಕಂಬಲ ' ನೋ.

**ರತ್ನಕಂಬಳಿ** ' ರತ್ನಗಂಬಳಿ ' ನೋ.

**ರತ್ನಕನ್ನಡಿ** (ನಾ). ರತ್ನಖಚಿತವಾದ ಕನ್ನಡಿ : ಒಂದುದಿನಂ ರತ್ನಕನ್ನಡಿಯೊಳ್ ಮೊಗಮಂ ನೋಡುವಾಗಳ್ (ಧರ್ಮಪು. ೩೫).

[ ರತ್ನ + ಕನ್ನಡಿ$_1$ ]

**ರತ್ನಕರ್ಮ** (ನಾ). ರತ್ನಗಳನ್ನು ಕುಂದಣಿಸುವ ಕೆಲಸ : ಶಿಲಾಕರ್ಮ ರತ್ನಕರ್ಮ ಕಾಷ್ಠಕರ್ಮ ಚಿತ್ರಕರ್ಮ ಪತ್ರಕರ್ಮ ಪ್ರತಿಮಾಲಕ್ಷಣ ಸಮಸ್ತಹಸ್ತಕುಶಲತೆಯುಳ್ಳ ವಿಶ್ವಕರ್ಮನಿರ್ಮಿತಂ (ಎಕ. IV(R), ಕೃಕ್ಕಾ. ೬೬-೧೦; 1116). [ ಸಂ. ರತ್ನಕರ್ಮನ್ ]

**ರತ್ನಕುಂಡಲ** (ನಾ). ರತ್ನದ ಕರ್ಣಾಭರಣ ; ಮಣಿಕುಂಡಲ : ಇವು ರತ್ನಕುಂಡಲಂ ಜಿತರವಿಮಂಡಳಮಿವು ತುದಳ್ಕೆ ಯೋಗ್ಯಮೆ ನಿನಗೆ (ಅಂಪು. ೦೨-೦೦೭). [ಸಂ.]

**ರತ್ನಗಂಧಿ** (ನಾ). ಕೆಂಪು ಮತ್ತು ಹಳದಿಬಣ್ಣದ ಹೂವುಗಳನ್ನು ಬಿಡುವ ಒಂದು ಬಗೆಯ ಗಿಡ : ಲಕ್ಷ್ಮಿ . . . ರತ್ನಗಂಧಿಗಿಡದ ಬುಡದಲ್ಲಿ ಉಚ್ಚೆ ಹೊಯ್ದು ಬಿಟ್ಟಿದ್ದಾಳೆ ! (ಕಾಮೂರು. ೯೯೯) ; ಛತ್ರಿಯ ಹಾಗೆ ಹರಡಿಕೊಂಡಿರುವ ಛತ್ರಿಮರದ ಕೆಂಪುಬಣ್ಣದ ಹೂ. ಪಟ್ಟಣಗಳಲ್ಲಿ ರತ್ನಗಂಧಿಹೂ ಎನ್ನುವುದು ಇದನ್ನೇ (ಬೋರೇದೇ. ೬೪).

[ ಸಂ. ರತ್ನಗಂಧೀ ]

**ರತ್ನಗಂಬಳಿ, ರತ್ನಕಂಬಳಿ** (ನಾ). = ರತ್ನಕಂಬಲ : ಒರ್ವಂ ರತ್ನಂ ರತ್ನಾವೇಗ ನಮೂಲ್ಯಮಪ್ಪ ರತ್ನಗಂಬಳಿಯುಂ ಕೊಂಡು ಬಂದು (ಸುಕುಮಾ. ೦೦-೦೦೯ ವ); ಚಿನ್ನದ ಕಾಲ ಬೆಳ್ಳಿಯ ಕಾಲ ಮಂಚ ಸುವರ್ಣದಡ್ಡಣಿ ಸುಪ್ಪತಿಗೆ ರನ್ನವಿಟ್ಟರ ರತ್ನಗಂಬಳಿ ತಲೆಗಿಂಬ ಹೊನ್ನಾಂಬರನಿತ್ತ ಮಗಗೆ (ಪೋಹಕ. ೦೩-೦೭); ರತ್ನಗಂಬಳಿಗುಣ – ನಾನಾವರ್ಣದಿಂದ ವಿಚಿತ್ರವಾಗಿಯೂ, ಶೀತಪರವಾಗಿಯೂ ಕಂಬಳ ಶ್ರೇಷ್ಠವಾಗಿಯೂ ಇರುವುದು (ಸಕಕ್ಕೆ. ೬೭). **ರತ್ನಕಂಬಳಿ** : ರತ್ನಕಂಬಳಿಯುಂ ಮುಚ್ಚಾರತಿಯುರ ಕಯ್ಯೊಳಿಟ್ಟದಾಗಳ್ (ಸುಕುಮಾ. ೦೦-೦೦೮ ವ); ರತ್ನಕಂಬಳಿಗಳನ್ನು ಹಾಸುವ ಹಾಗೆ ಭೃತ್ಯರಿಗಾಜ್ಞಾಪಿಸಿ (ಕೃಪಾಕಾ. ೦೯೩). [ರತ್ನ + ಕಂಬಳಿ]

**ರತ್ನಗರ್ಭ** (ನಾ). ೧. ರತ್ನಗಳನ್ನು ತನ್ನ ಬಸಿರಿನಲ್ಲಿ ಹೊಂದಿರುವುದು : ಧರೆ ರತ್ನಗರ್ಭಮಾದುದು ಸುರರೆಲ್ಲಂ ಹರ್ಷಗರ್ಭರಾದರ್ (ಅಂಕೃ. ೬-೨೬). ೨. ತನ್ನ ಒಡಲಲ್ಲಿ ರತ್ನಗಳನ್ನುಳ್ಳದು ; ಸಮುದ್ರ : ದಡದಲ್ಲಿ ಕೂತು ಮೀನಮೇಷವೆಣಿಸುವವನಿಗೆ ರತ್ನಗರ್ಭದ ಮಹತ್ವ ತಿಳಿಯಲು ಹೇಗೆ ಸಾಧ್ಯ (ಜೀವಾತ್ಮ. ೬). ೩. ಕುಬೇರ. [ಸಂ.]

**ರತ್ನಗರ್ಭೆ** (ನಾ). ಹೊಟ್ಟೆಯಲ್ಲಿ ರತ್ನಗಳನ್ನು ಹೊಂದಿರುವವಳು; ಭೂಮಿ ; ವಸುಂಧರೆ : "ಭೂಃ . . . ರತ್ನಗರ್ಭಾ, ವಸುಂಧರಾ, ಧರಾ, ಆಧಾರಾ – ಈ ೩೭ ಭೂಮಿಯ ಪೆಸರ್" (ಹಲಾಯು. ೨೬-೦): ಈ ರತ್ನಗರ್ಭೆಯೊಳ್ ಸೀತಾರತ್ನಂ ಜನಿಸಿದ ಬಗೆಯೆಂತೆಂದುಮುಸಿರ್ವೆಂ (ಅದ್ಯುಕ. ೩-೩೦). [ಸಂ. ರತ್ನಗರ್ಭಾ]

**ರತ್ನತ್ರಯ** (ನಾ). ೧. [ಜೈನ] ಮೋಕ್ಷವನ್ನು ಪಡೆಯಲು ಸಾಧನವಾದ ಸಮ್ಯಕ್ ದೃಷ್ಟಿ, ಸಮ್ಯಕ್ಜ್ಞಾನ ಮತ್ತು ಸಮ್ಯಕ್ಚಾರಿತ್ರ ಎಂಬ ಮೂರು ತತ್ತ್ವಗಳು : ನಾಗಶ್ರೀಯುಂ ಭುಕ್ತಪ್ರತ್ಯಾಖ್ಯಾನವಿಧಿಯಿಂ ರತ್ನತ್ರಯಮುಮಂ ಸಾಧಿಸಿ ದೇವನಾಗಿ ಪುಟ್ಟಿದೊಳ್ (ವಡ್ಡಾರಾ. ೨೦-೨೦) ; ಸಮ್ಯಗ್ದರ್ಶನ, ಸಮ್ಯಕ್ಜ್ಞಾನ, ಸಮ್ಯಕ್ಚಾರಿತ್ರವೆಂಬ ರತ್ನತ್ರಯವು ಮೋಕ್ಷಮಾರ್ಗವು (ಹಿಂದಸಾ. ೮೭). ೨. [ಬೌದ್ಧ] ಬುದ್ಧ, ಧರ್ಮ ಮತ್ತು ಸಂಘ ಎಂಬ ಮೂರು ಅಂಗಗಳು : ಅವನು ರತ್ನತ್ರಯಗಳಿಗೆ ಶರಣು ಬಂದದ್ದರಿಂದ, ಮುಂದೆ ಅವನಿಗೆ ಒದಗಬೇಕಾಗಿದ್ದ ಅವೀಚೀನರಕ ಸದ್ಯಕ್ಕೆ ತಪ್ಪಿತು (ಹಣ್ಣುಮು. ೯೦). ೩. ಕನ್ನಡದಲ್ಲಿ ಪ್ರಸಿದ್ಧರಾದ ಪಂಪ, ಪೊನ್ನ, ರನ್ನರೆಂಬ ಮೂರು ಜನ ಜೈನ ಕವಿಶ್ರೇಷ್ಠರು : ಕವಿಜನರೊಳ್ ರತ್ನತ್ರಯ ಪವಿತ್ರಮೆನೆ ನೆಗಳ್ದ ಪಂಪನುಂ ಪೊನ್ನಿಗನುಂ ಕವಿರತ್ನನುಮೀ ಮೂವರ್ ಕವಿಗಳ್ ಜಿನಸಮಯದೀಪಕರ್ (ಅಜಿಕೃ. ೦೨-೩೯) ; ರತ್ನತ್ರಯರಲ್ಲಿ ಪೊನ್ನನು ಎರಡನೆಯವನು (ಕಸಾಕ. ೦೦೦). [ಸಂ.]

**ರತ್ನದರ್ಪಣ** (ನಾ). = ರತ್ನಕನ್ನಡಿ : ಆ ಕಪೋಲಗಳ ಕಾಂತಿಯು ರತ್ನದರ್ಪಣಕಾಂತಿಯನ್ನು ಮೀರಿಸುತ್ತಿವೆಯಲ್ಲ! (ಶಾಚಿತ್ರ. ೨೭) [ಸಂ.]

**ರತ್ನಧೇನುದಾನ** (ನಾ). ಷೋಡಶಮಹಾದಾನಗಳಲ್ಲಿ ಒಂದು ; ರತ್ನಖಚಿತವಾದ ಹಸುವಿನ ವಿಗ್ರಹವನ್ನು ದಾನಮಾಡುವುದು : (೧) ತುಲಾಪುರುಷದಾನ . . . (೧೫) ರತ್ನಧೇನುದಾನ, (೧೬) ಮಹಾಭೂತಘಟದಾನ ; ಈ ಮೇರೆಗೆ ಷೋಡಶಮಹಾದಾನಗಳನ್ನು . . . ಮಾಡಿ (ಮಹಾಸಂ. I. ೦೦೨). [ಸಂ.]

**ರತ್ನಪಟ್ಟ** (ನಾ). ೧. ಅಧಿಕಾರಸೂಚಕವಾಗಿ ಹಣೆಗೆ ಕಟ್ಟುವ ರತ್ನಖಚಿತವಾದ ಚಿನ್ನದ ಪಟ್ಟಿ : ವರಧರ್ಮ ಕುಮಾರಕನಂ ಕರೆಯಿಸಿ ರಾಜ್ಯಾಭಿಷೇಚನಂಗೆಯ್ದು ಜಗದ್ಗುರು ಕಟ್ಟಿ ರತ್ನಪಟ್ಟಮನಿರದಿತ್ತಂ ತನ್ನ ಸರಳ ರಾಜ್ಯಶ್ರೀಯುಂ (ಧಾರಪು. ೦೩-೩೯). ೨. [ಶಿಲ್ಪಶಾ] ರಾಜರೂ ದೇವತೆ

ಗಳೂ ಧರಿಸುವ ಶಿರೋವೇಷ್ಟನಗಳಲ್ಲಿ ಒಂದು ಬಗೆ ; ಈ ಶಿರೋವೇಷ್ಟನಗಳಲ್ಲಿ ಜಟಾ,ಮೌಳಿ ಮುಂತಾದ ಹನ್ನೆರಡು ವಿಧಾನಗಳನ್ನು ಅನುಸರಿಸುತ್ತಾರೆ. ಇವುಗಳಲ್ಲಿ ' ಪಟ್ಟ ' ಎಂಬುದು ಕೊನೆಯದು : ಇವುಗಳಲ್ಲಿ ಪಟ್ಟವೆಂಬುದು ಪತ್ರಪಟ್ಟ, ರತ್ನಪಟ್ಟ, ಪುಷ್ಪಪಟ್ಟ ಎಂದು ಮೂರು ಬಗೆಯಾಗಿದೆ (ಶಂಕರು. ೦). [ಸಂ.]

**ರತ್ನಪಡಿ** (ನಾ). ೧. ರತ್ನಗಳನ್ನು ಕುಂದಣಿಸಿದುದು : 'ರತ್ನಪಡಿನಗ' ಪರಾ. ೨. ರತ್ನಗಳನ್ನು ತೂಕ ಮಾಡಿ ಬೆಲೆಕಟ್ಟುವುದು. ೩. ರತ್ನಗಳನ್ನು ಮೆಟ್ಟಿರುವ ಒಡವೆ ಮುಂತಾದುವು : ಪಾಂಡವರು ತಮಗೆ ಹಂಚಿಕೆಯಲ್ಲಿ ಬಂದ ಒಡವೆಯಲ್ಲಿ ಚಿನ್ನ, ಬೆಳ್ಳಿ, ರತ್ನಪಡಿ ಮೊದಲಾದ ವಸ್ತುಗಳನ್ನು ಕೈಗೊಂಡು . . . ಹೋಗಿ (ಕೃವಾಅ. ೮೭) ; ರತ್ನಪಡಿಯ ಆಭರಣಗಳೂ . . . ದೊರೆತಿವೆ (ಶಾರಪ. ೩೬೯). [ರತ್ನ + ಪಡಿ₁? ]

**ರತ್ನಪಡಿನಗ** (ನಾ). ರತ್ನಗಳನ್ನು ಕುಂದಣಿಸಿರುವ ಒಡವೆ : ದೊಡ್ಡ ಮುತ್ತಿನ ಮೂಗುತಿ ಮುಂತಾದ ರತ್ನಪಡಿನಗಗಳನ್ನು ಅಲಮೇಲಮ್ಮನವರು ಕೊಟ್ಟು (ಮೈವಾಸ್ಮ. ೦೨೮) : ದೇವರ ಉತ್ಸವಕಾಲದಲ್ಲಿ ಅಲಮೇಲಮ್ಮನವರು ತಮ್ಮ ರತ್ನಪಡಿನಗಗಳನ್ನು ಕೊಡುತ್ತಿದ್ದರು (೭೭ಕಕ. ೨೯).
[ ರತ್ನಪಡಿ + ನಗ₁]

**ರತ್ನಪಡಿವರ್ತಕ** (ನಾ). ರತ್ನಾಭರಣಗಳ ವ್ಯಾಪಾರಿ : ಈ ಪಟ್ಟಣದಲ್ಲಿ ವಿಷ್ಣುದಾಸನೆಂಬ ರತ್ನಪಡಿವರ್ತಕನಿದ್ದಾನೆ (ರಾಕ್ಷಮು. ೯೪).
[ ರತ್ನಪಡಿ + ವರ್ತಕ ]

**ರತ್ನಪಡಿವ್ಯಾಪಾರ** (ನಾ). ರತ್ನದ ಆಭರಣಗಳನ್ನು ಮಾರುವುದು ; ರತ್ನಖಚಿತವಾದ ಒಡವೆಗಳ ಮಾರಾಟ : ಅವರ ವಂಶದವರು ತಲತಲಾಂತರದಿಂದ ರತ್ನಪಡಿವ್ಯಾಪಾರ ಮಾಡುತ್ತಿದ್ದಾರೆ (ರೂಢಿ).
[ ರತ್ನಪಡಿ + ವ್ಯಾಪಾರ ]

**ರತ್ನಪಡಿವ್ಯಾಪಾರಿ** (ನಾ). = ರತ್ನಪಡಿವರ್ತಕ : ಮುತ್ತಿನ ಗಲ್ಲಿ ರತ್ನಪಡಿವ್ಯಾಪಾರಿ ವರದಪ್ಪನಾಯಕನಿಗೆ ಅಪರೂಪಕ್ಕೊಂದು ಪುತ್ರರತ್ನ ಜನಿಸಿದೆ (ಹೇಮಕೂ. ೭) ; ರಾಜರ ಮೇಲೆ ರಾಜರು ರತ್ನಪಡಿವ್ಯಾಪಾರಿಗಳಾದ ವೈಶ್ಯರಂತೆ ಬಗೆಬಗೆಯ ರತ್ನಗಳನ್ನು ತಂದು ತಂದು ಕಾಣಿಕೆ ಒಪ್ಪಿಸಿದರು (ವತಭಾ. ೮೭). [ ರತ್ನಪಡಿ + ವ್ಯಾಪಾರಿ ]

**ರತ್ನಪಡಿಸಿಕೆ** (ನಾ). ಒಂದು ಬಗೆಯ ರತ್ನದ ಆಭರಣ (?) : ಚಾಮರಗಳು ಅಂದಿಗೆಗಳು ರತ್ನಪಡಿಸಿಕೆ ಮೊದಲಾದ ಭೂಷಣಗಳಿಂದ ಭೂಷಿತವಾದ ವೃಷಭವಾಗಿ (ಶಿವರ. ೨೦೩-೦೪). [ < ರತ್ನಪಡಿ ]

**ರತ್ನಪರೀಕ್ಷಕ** (ನಾ). ರತ್ನಗಳ ಗುಣದೋಷಗಳನ್ನು ಕಂಡುಹಿಡಿಯುವವನು : "ಬಗೆಯ ಮಾಣಿಕಚಟ್ಟನೆಂಬ ರತ್ನಪರೀಕ್ಷಕಗೆ ..." (ಕಶ್ಮಿಕ್ಕೈ. ೩೪) ; ರತ್ನಪರೀಕ್ಷಕ ತಾಂ ಕೃತಿರತ್ನಪರೀಕ್ಷಕನೆನೆಂದು ಫಣಿಪತಿಯ ಫಣಾರತ್ನಮುಮಂ ರನ್ನನ ಕೃತಿರತ್ನಮುಮಂ ಪೇಟಿಗ್ ಪರೀಕ್ಷಿಸಂಗೆ ಟಿರ್ದೆಯೇ (ಗದಾಯು. ೦-೪೪). [ಸಂ.]

**ರತ್ನಪರೀಕ್ಷೆ** (ನಾ). ಚೌಷಷ್ಟಿಕಲೆಗಳಲ್ಲಿ ಒಂದು ; ರತ್ನಗಳ ಗುಣಾವಗುಣಗಳನ್ನು ಕಂಡುಹಿಡಿಯುವ ವಿದ್ಯೆ : ಬಾಹುಬಲಿಗೆ ಕಾಮತಂತ್ರ ಸಾಮುದ್ರಿಕಾಯುರ್ವೇದ ಧನುರ್ವೇದ ಹಸ್ತ್ಯಶ್ವತಂತ್ರ ರತ್ನಪರೀಕ್ಷೆಗಳುಮಂ . . . ಉಪದೇಶಂಗೆಯ್ದಂ (ಆದಿಪು. ೬-೩೦ ವ) ; ರತ್ನಪರೀಕ್ಷೆ, ಅಶ್ವಪರೀಕ್ಷೆ . . . ವೈದ್ಯ ಮೊದಲಾದ ಅರವತ್ತುನಾಲ್ಕು ಕಲೆಗಳಿಗೂ ಆಗಮಶಾಸ್ತ್ರವು ಆಶ್ರಯವಾಗಿದೆ (ಶಾರಪ. ೬೦). [ ಸಂ. ರತ್ನಪರೀಕ್ಷಾ ]

**ರತ್ನಪ್ರಭೆ** (ನಾ). ೧. ಮಣಿಯ ಕಾಂತಿ, —ಪ್ರಕಾಶ. ೨. ಭೂಮಿ. ೩. [ಜೈನ]ಒಂದು ನರಕದ ಹೆಸರು : ನೀಂ ನಿಜಾಯುರವಸಾನದೊಳ್ ರತ್ನಪ್ರಭೆಯೆಂಬ ಮೊದಲ ನರಕದ ಪದಿಮೂಱುಮಿಂದ್ರಕಂಗಳೊಳಗೆ . . . ಪುಟ್ಟಿದೈ (ಶಾಂತಿಪು. ೭-೬೩ ವ). : ಅಧೋಲೋಕದಲ್ಲಿ (೧) ರತ್ನಪ್ರಭೆ . . . (೭) ಮಹಾತಮಪ್ರಭೆ ಎಂದು ಏಳು ನರಕಗಳು ಇರುತ್ತವೆ (ಜೈನಸ. ೪೪೭).
[ ಸಂ. ರತ್ನಪ್ರಭಾ ]

**ರತ್ನಮತಲ್ಲಿಕೆ** (ನಾ). ರತ್ನಗಳಲ್ಲಿ ಶ್ರೇಷ್ಠವಾದುದು : ನಿಲ್ಲೆನುತ ನಳಿನಾಕ್ಷನೈದಿದನುಲ್ಲಸಿತತಚ್ಚೂಡರತ್ನಮತಲ್ಲಿಕಾಗ್ರಹಣೈಕತತ್ಪರನಾಗಿ ಬೆಂಬಿಡದೆ (ಶಿಶಾಗ. ೧೦-೨೯-೩೮). [ ಸಂ. ರತ್ನಮತಲ್ಲಿಕಾ ]

**ರತ್ನಮಾಲೆ** (ನಾ). ರತ್ನಗಳಿಂದ ಕೂಡಿದ ಸರ ; ಮಣಿಮಾಲೆ.
[ ಸಂ. ರತ್ನಮಾಲಾ ]

**ರತ್ನಮುದ್ರಿಕೆ** (ನಾ). ರತ್ನಖಚಿತವಾದ ಉಂಗುರ : ತನ್ನ ಬೆರಲೊಳಿರ್ದನರ್ಘ್ಯಮಪ್ಪ ರತ್ನಮುದ್ರಿಕೆಯಂ ಪಿಡಿದಿರಿಮೆಂದು ಕೊಟ್ಟಂ (ಸುಕುಮಾ. ೩-೩ ವ) ; ಸರಳವಾದ ಬೆರಳುಗಳಲ್ಲಿ ರತ್ನಮುದ್ರಿಕೆಯು ಕಂಗೊಳಿಸುತ್ತದೆ (ಮಂಜುಳ. ೨೦). [ ಸಂ. ರತ್ನಮುದ್ರಿಕಾ ]

**ರತ್ನವಾವುಡ** (ನಾ). ರತ್ನಗಳನ್ನು ಅಳವಡಿಸಿದ ಬಟ್ಟೆ : ಸಿಂಗಾಡಿಗಳ ಸರಳ ಹೊದೆಯ ಬೊಗರಂಬುಗಳ ಪೊಂಗೆಜ್ಜೆಗಳ ರತ್ನವಾವುಡದ . . . ರಾಪುತರ್ ನಡೆಗೊಂಡರು (ಪಂಪ. ೧೦-೫೦). [ ರತ್ನ + ಪಾವುಡ₁ ]

**ರತ್ನಶಿಲೆ** (ನಾ). ರತ್ನದ (ದೊಡ್ಡ) ಹರಳು : "ರತ್ನಶಿಲೆಯೆನಲ್ ಮಣಿಶಿಲೆಯು" (ಮಂಗರಾ. ೩೦-೭) ; ಚಿಮ್ಮಿದುದು ಜಂಕೆಮರಿಯೊಂದು . . . ತಿರಿಕವಣೆಯಿಂ ಪಳಂಚುವ ರತ್ನಶಿಲೆಯಂತೆ (ರತ್ನಾಂಗ. ೩-೬೪).
[ ಸಂ. ರತ್ನಶಿಲಾ ]

**ರತ್ನಸಂಬಳಿಗೆ** (ನಾ). ರತ್ನಖಚಿತವಾದ ಕರಂಡಕ : ಧವಳಸರೋಜಾಕ್ಷ ತಾಸಲ್ಲದನ್ನರೊಳ್ ಜವಳಾಗದಂತೆ ವ್ಯಸಿಕದ ಕವಳವ ಕುಡುವಂತೆ ರತ್ನ ಸಂಬಳಿಗೆದಾಳ್ದವಳರ್ವಳತಿಸಮ್ಮುದದಿ (ಪೋಹಕ. ೯-೭).
[ ರತ್ನ + ಸಂಬಳಿಗೆ ]

**ರತ್ನಸಾನು** (ನಾ). ಮೇರುಪರ್ವತ : "ಮೇರುಃ . . . ರತ್ನಸಾನುಃ, ಸುರಾಲಯಃ — ಇ ಮೇರುಪರ್ವತದ ಹೆಸರುಗಳು" (ಸಿದ್ಧಾಂತಿ. ೨೨).
[ಸಂ.]

**ರತ್ನಾಂಗುಳೀಯ** (ನಾ). = ರತ್ನಮುದ್ರಿಕೆ : ಸುಬಳಮಹೀನಾಥನ ಕಯ್ಯ ಬೆರಲ ರತ್ನಾಂಗುಳೀಯಮುಮಂ ಮಱಿವೆಯೊಳತ್ತ ಬಿಸುಟ್ಟು (ಸುಕುಮಾ. ೩-೦೨). [ ಸಂ. ರತ್ನಾಂಗುಲೀಯ ]

**ರತ್ನಾಂಜಳಿ** (ನಾ). ಒಂದು ಬೊಗಸೆ ತುಂಬುವಷ್ಟು ರತ್ನ : ನೆತ್ತರ್ ಪೆರಸಿ ಪರೆದ ಮುತ್ತುಗಳು ತನ್ನ ಬರವಿಂಗೆ ವನದೇವತೆಯಿಟ್ಟ ರತ್ನಾಂಜಳಿಗಳಂತಿರೆ ಕಂಡು ಕಂಡು ಹಾರೈಸುತ್ತಂ (ಕಂಬಿರ. ೦೬-೨೩).
[<ಸಂ. ರತ್ನಾಂಜಲಿ]

**ರತ್ನಾಕರ** (ನಾ). ರತ್ನಗಳಿಗೆ ಆಶ್ರಯವಾದುದು ; ಸಮುದ್ರ : "ರತ್ನಾಕರಃ . . . ಸಮುದ್ರಃ — ಈ ೧೨ ಸಮುದ್ರಂ" (ಹಲಾಯು. ೦೦೭-೩೦) ; ಈ ರತ್ನಾಕರದೊಳ್ ಪುತ್ರಿಕೆಯೆನೆ ಬಟ್ಟಲಿಂತು ಬಾಬ್ದುದೆ ಚೋದ್ಯಂ (ಕಬಿರಾ. ೨ ೩೭) ; ಜಗತೀಪಲಯದಮಲಸೌಭಾಗ್ಯರತ್ನಾಕರಂ ಪೆರ್ಚನಿಂ ಮೇರೆವರಿಯೆ (ಕೃಬಿಜಾ. ೦-೧). [ಸಂ.]

**ರತ್ನಾತಪ** (ನಾ). ೧. ರತ್ನದ ಕಾಂತಿ ; ರತ್ನಪ್ರಭೆ. ೨. ರತ್ನಕಾಂತಿಯಿಂದ ಶೋಭಿಸುವಂಥದು : ಮಣಿಪ್ರಭಾಪ್ರೇಂಖಿತ ರಥ್ಯಾಮಂಡನಮಂ ಕಂಡಂ ಶ್ರೀಮಂಟಪಮಂ ವಿಚಿತ್ರರತ್ನಾತಪಮಂ (ಶಾದಂಪೂ. ೦೧೧೨).
[ಸಂ.]

**ರತ್ನಾರತಿ** (ನಾ). ತಟ್ಟೆಯಲ್ಲಿ ರತ್ನಗಳನ್ನು ತುಂಬಿ ಮಾಡುವ ಆರತಿ : ತುಳುಕಿದವು ರತ್ನಾರತಿಯ ಬೆಳಕುಗಳು (ಕುಮಾರ್ರೋ. ಓಂ೨. ಕಂ. ೨೬೭) ; ಹಸುಗರ್ಪೂಳ ಹರಿವಾಣಗಳೊಳು ತುಂಬಿ ರಂಜಿಸುವ ರತ್ನಾರತಿವೆಳಗಿ ಗಸಂ ಪಟ್ಟಾವಳಿ ಚಿತ್ರವಸ್ತ್ರವ ನಿವಳಿಸಿದರಚ್ಯುತನಂಘ್ರಿಗಳಲಿ (ಮೋಹಕ. ೯೨-೨೭).
[ ರತ್ನ + ಆರತಿ₁ ]

**ರತ್ನಾವಳಿ** (ನಾ). ೧. ಮುತ್ತಿನ ಹಾರ. ೨. ಶ್ರೀ ಹರ್ಷಕವಿಯು ರಚಿಸಿದ ಒಂದು ಪ್ರಸಿದ್ಧ ಸಂಸ್ಕೃತನಾಟಕ. ೩. [ಜೈನ] ಮೂವತ್ತು ಉಪವಾಸಗಳು ಮತ್ತು ಹತ್ತು ಪಾರಣೆಗಳನ್ನೊಳಗೊಂಡ ಒಂದು ವ್ರತ : ಪದ್ಮಾವತಿ ಎಂಬ ಕಂತಿಯರ ಬಳಿಯೊಳ್ ರತ್ನಾವಳಿಯೆಂಬ ವ್ರತವಂ ಮಾಡಿ ಆಯುರಂತ್ಯದೊಳ್ ತನುವಂ ತ್ಯಜಿಸಿ (ಭರತ. ೬-೩೦). [ ಸಂ. ರತ್ನಾವಲೀ ]

**ರತ್ನಾವಳಿತಪ** (ನಾ). = ರತ್ನಾವಳಿ ೩ : ಪ್ರಭಾವತಿಯುಂ ಪದ್ಮಾವತ್ಯಾರ್ಯಿಕಾ ಪಾದಮೂಲದೊಳ್ ಪಾಲಿಸಿದ ರತ್ನಾವಳಿತಪದೊಳಚ್ಯುತ ಕಲ್ಪದೊಳ್ ಪ್ರತೀಂದ್ರಪದವಿಯಂ ಪಡೆದಳ್ (ಆದಿಪು. ೩-೫೯ ವ) ; ಪ್ರಭಾವತಿಯುಂ . . . ರತ್ನಾವಳಿತಪದೊಳ್ನೆಗಳ್ದು ಅಚ್ಯುತಕಲ್ಪದೊಳು ಪ್ರತೀಂದ್ರನಾದೋಂ (ಶಾಪುಂಪು. ೨೦). [< ಸಂ. ರತ್ನಾವಲೀತಪ]

**ರತ್ನಿ** (ನಾ). ಉದ್ದವನ್ನು ಅಳೆಯುವ ಒಂದು ಮಾನ ; ಮೊಳಕೈಯ ತುದಿಯಿಂದ ಮುಚ್ಚಿದ ಅಂಗೈವರೆಗಿನ ಅಳತೆ : "ಒಡಿಕೆಯ್ದುದ ಮೊಟಿನಂ ರತ್ನಿಯೆಂಬುದು" (ಹಲಾಯು. ೬೬-೩೯೨); ದ್ವಾವಿಂಶತಿಸಾಗರೋಪಮಾಯುಷ್ಯನುಂ ತ್ರಿರತ್ನಿಪ್ರಮಾಣೋತ್ಸೇಧನುಂ . . . ಆಗಿ (ಶಾಪುಂಪು. ೩೯೫); ಅಲ್ಲಿಯ ದಿವಿಜರೆಲ್ಲಂ ಪಂಚರತ್ನಿಪ್ರಮಾಣರುಂ . . . ಅಪ್ಸರ್ (ಸುಕುಮಾ. ೦೦-೬೩ ವ). 'ಅರತ್ನಿ' ಹೋ. [ಸಂ.]

**ರತ್ಯಂಗ** (ನಾ). ಜನನೇಂದ್ರಿಯ ; ಗುಹ್ಯಾಂಗ. [ಸಂ.]

**ರತ್ಯಕ್ಷಿತಿ** (ನಾ). ಒಂದು ಸಂವತ್ಸರದ ಹೆಸರು; ರಕ್ತಾಕ್ಷಿ : ರತ್ಯಕ್ಷಿತಿಯಮ್ಮ ವರಿಷಾ ಪ್ರವರ್ತಿಸೆ (ಸೌಇ. XX. ೦೩-೪; ೨೦೪). [ ℙ ಇದು 'ರಕ್ತಾಕ್ಷಿ' ಎಂಬುದರ ಅಪಲಿಖಿತ ]

**ರಥ** (ನಾ). ೧. ಬಂಡಿ ; ವಾಹನ : "ಅನಃ, ಶತಾಂಗಃ, ಶಕಟಃ . . . ಕೂಬರೀ – ಈ ೯ ರಥಂ" (ಹಲಾಯು. ೬೩-೨೯೦). ೨. ಉತ್ಸವದಲ್ಲಿ ದೇವತಾವಿಗ್ರಹವನ್ನು ಕೂರಿಸಿ ಮೆರವಣಿಗೆ ಮಾಡುವ ಬಂಡಿ ; ತೇರು : ರಥ ಎಳೆದು ಪುಣ್ಯ ಪಡೆಯಲಿಕ್ಕೆ ಜನರು ಏಳುವದು ಬೀಳುವದನ್ನು ಕೂಡ ಲಕ್ಷಿಸದೆ . . . ರಥದ ಕಡೆಗೆ ಧಾವಿಸಿದರು (ಹೊಸಕ್ಷಿ. ೨೦೬) ; ಈ ತೋಟ್ಟಿಲಿನ ಭಾರ ತಡೆಯಲಿಕ್ಕೆ ಕೋಟೇಶ್ವರದ ರಥದ ಮಿಣಿಯೇ ಬೇಕು (ಮರಮ. ೧೨೦). 'ರಥೋತ್ಸವ' ಪರಾ. ೩. ಒಂದು ಬಗೆಯ ಯುದ್ಧಸಾಧನ ; ಚತುರಂಗಸೈನ್ಯದಲ್ಲಿ ಒಂದು: ಪೊಸಮಸೆಯಂಬುಗಳ್ ದೆಸೆಗಳಂ ಮುಸುಳ್ವನ್ನೆಗಮೆಯ್ದೆ ಪಾಯೆ ಪಾಯಿಸುವ ರಥಂಗಳ್ (ಕಂಕಾ. ೦೦-೬೩) ; ರಥಮಿಲ್ಲದೆಯುಂ ಜಂಘಾರಥದಿಂದೆ . . . ಪೃಥಿವೀಪತಿ ತಾನೆ ಕಾದಲುದ್ಯತನಾದಂ (ಗದಾಯು. ೭-೬೬) ; ರಥ ಮುಱಿದುವೈನೂಱು ತತ್ಸಾರಥಿಗಳಳಿದುದು ನೂಱು (ಕುವ್ಯಾಗ. ೦-೦೨). ೪. ಒಡಲು ; ದೇಹ. ೫. ದೇಹದ ಒಂದು ಅಂಗ, – ಭಾಗ. ೬. ಆನಂದ ; ಸಂತೋಷ. ೭. [ಕಾವ್ಯಮಿ] ಚಿತ್ರಕಾವ್ಯಬಂಧಗಳಲ್ಲಿ ಒಂದು : ರಥದ ಆಕಾರದಲ್ಲಿ ಬರೆಯುವ ಒಂದು ಪದ್ಯಬಂಧ: ಶರಶೂಲಚಾಪಚಕ್ರಾಸಿರೂಪಮಿಭ ರಥ ತುರಂಗಪದಗತಪಾತಂ ಮುರಜಂ ಗೋಮೂತ್ರಿಕೆ ಪುಷ್ಕರಮರ್ಧಭ್ರಮಣ ಸರ್ವತೋಭದ್ರಂಗಳ್ (ಕಾವ್ಯಾವ. ೩೬೯). ೮. [ವಾಸ್ತು] ಶಿಲ್ಪದಲ್ಲಿ ಒಂದು ಬಗೆ ; ರಥದ ಆಕಾರದಲ್ಲಿ ಕಟ್ಟಿದ ಒಂದು ಕಟ್ಟಡ : ಒಂದೇ ಬಂಡೆಯಲ್ಲಿ ಕೊರೆದ ದೇವಾಲಯಗಳು. ಇವುಗಳನ್ನು 'ರಥ' ವೆಂದು ಕರೆಯುವುದುಂಟು (ಭಾರದ. ೪೯೮). ೯. [ಗಣಿತ] ಇಪ್ಪತ್ತೊಂಬತ್ತು ಅಂಕಿಗಳಿರುವ ಒಂದು ದೊಡ್ಡ ಸಂಖ್ಯೆ : ಎಕ್ಕಂ, ದಾಹಂ . . . ರಥ, ಮಹಾರಥ . . . ಪರಿಮಿತ, ಮಹಾಪರಿಮಿತ ಈ ೪೦ ಸ್ಥಾನದ ಉಗ್ಗಡಣೆ (ವ್ಯವಹಾ. ೮-೨೬). [ಸಂ.]

**ರಥಂತರ** (ನಾ). ಶಿವನನ್ನು ಸ್ತೋತ್ರ ಮಾಡುವ ಸಾಮವೇದದ ಒಂದು ಭಾಗ : ಚತುರ್ಮುಖದಿಂ ರುದ್ರಸೂಕ್ತ ರಥಂತರಾದಿ ಮಂತ್ರವನೋದುವಬ್ಜಭವನಿಂ. . .ಪಂಪನಾಳ್ವ (ಶಂಶಂ. ೦-೭೪ ವ) ; ಆತನು ನಸುನಕ್ಕು, ರಥಂತರಸಾಮವನ್ನು ಹಾಡುತ್ತಾನೆ (ವಠದಾ. II, ೦೪೬೦). [ಸಂ.]

**ರಥಕಟ್ಯೆ** (ನಾ). ರಥಗಳ ಸಮೂಹ : "ರಥ[ಸಮುದಾಯಂ] ರಥ್ಯಾ ರಥಕಟ್ಯಾಭಿಖ್ಯಮೆಂದು ತಱಿಸಲ್ಗಱಿವಂ" (ವಸ್ತುಕೋ. ೯೭-೩೦). [ಸಂ. ರಥಕಟ್ಯಾ]

**ರಥಕಡ್ಯ** (ನಾ). = ರಥಕಟ್ಯೆ : "ರಥ್ಯಾ, ರಥಕಡ್ಯಾ – ೨ ರಥವ್ರಜಿ. ರಥಸಮೂಹಕ್ಕೆ ಹೆಸರುಗಳು" (ಸಿದ್ಧಾಂತಿ. ೨೩೩) ; ವಾಜಿವರ್ಗಮ ಪರ್ವಿಂ ರಥಕಡ್ಯದೊಡ್ಡಣದಿನೊಳ್ವಾಳೋಳಿಯಿಂ . . . ಸೇನಾಚಕ್ರಮೇನೊಪ್ಪಿತೋ (ಕೃಷ್ಣಕೃ. ೦೪-೪೬); ಬಂದನು . . . ನೃಪನು ಮಂದಿ ಕುದುರೆ ಗಜ ರಥಕಡ್ಯಗಳ ಸಂದಣಿಯೊಳು ಸೊಬಗಿಂದ (ಗೋಮಟೇ. ೦೦-೦೩). [ಸಂ. ರಥಕಡ್ಯಾ]

**ರಥಕಲ್ಪ** (ನಾ). ರಥವನ್ನು ನಡೆಸುವ ಸಾಮರ್ಥ್ಯ : ರಥಕಲ್ಪಮೆಂಬುದು ಕಲ್ಯಂಗೊಡವುಟ್ಟಿದುದು (ಕಂಶಶಾ. ೦೨-೦೦೩ ವ). [ಸಂ.]

**ರಥಕಾರ** (ನಾ). ೧. ರಥವನ್ನು ಮಾಡುವವನು ; ಬಡಗಿ : "ತ್ವಷ್ಟಾ. . . ರಥಕಾರಃ, ವರ್ಧಕೀ – ಈ ೫ ಬಡಗಿ" (ಹಲಾಯು. ೪೬-೪೩೩). ೨. ರಥವನ್ನು ನಡೆಸುವವನು; ಸಾರಥಿ : ನಡೆಸುವ ರಥಕಾರ ಪೋಗಲಾ ರಥ ಮಾಯೆಡೆಯೊಳು ನಿಲುವಂತೆ (ಕಂಶ್ರಕಾಂ. ೨೨-೦೨). [ಸಂ.]

**ರಥಗುಪ್ತಿ** (ನಾ). ಯುದ್ಧಸಮಯದಲ್ಲಿ ಸಂಘಟನೆಯಿಂದ ತಪ್ಪಿಸಿಕೊಳ್ಳಲು ರಥದ ಸುತ್ತಲೂ ರಚಿಸುವ ಲೋಹ ಅಥವಾ ಮರದ ಕಟಿಕಟೆ : "ರಥಗುಪ್ತಿ, ವರೂಥ ಎಂದು ಧೂಳುಮಾಱಿ, ಕಂಬುಗೆ ಎಂದೂ ಎಂಬರು" (ನಾಶಶ. ೬). [ಸಂ.]

**ರಥಗೋಪ** (ನಾ). = ರಥಗುಪ್ತಿ : "ಕಟ್ಟುವಂಜರಂ ರಥಗೋಪಮಕ್ಕು" (ಮಂಗರಾ. ೬೪-೨೩). [ಸಂ.]

**ರಥಗೋಪನ** (ನಾ). = ರಥಗುಪ್ತಿ : "ವರೂಥಃ ರಥಗೋಪನಂ–ಈ ೨ ರಥದ ಕಟ್ಟುವಂಜರ" (ಹಲಾಯು. ೭೪-೨೯೩). [ಸಂ.]

**ರಥಚಕ್ರ** (ನಾ). ೧. ರಥದ ಚಕ್ರ ; ಬಂಡಿಯ ಗಾಲಿ : ಧನಾದಿ ಸಂಪತ್ತುಗಳು ರಥಚಕ್ರದಂತೆ ಒಂದೆಡೆ ಸ್ಥಿರವಾಗಿ ನಿಲ್ಲದೆ ಒಬ್ಬನಿಂದ ಮತ್ತೊಬ್ಬನಿಗೆ ಹೋಗಿ ಸೇರುತ್ತದೆ (ಋಣ್ಯಾರ. ೩೦೭). ೨. [ನಾಟ್ಯ] ಒಂದು ಬಗೆಯ ಭೌಮಚಾರಿ ; ℙ "ಚತುರಸ್ರಸ್ಥಾನಕದಿಂದ . . . ನಿಂತುಕೊಂಡು ಮುಂದಕ್ಕೂ ಹಿಂದಕ್ಕೂ ಚಲಿಸುವುದು" (ಲಾಸ್ಯರಂ. ೩೨೦ ಗದ್ಯಾನುವಾದ) : ಪಸೆವ ರಥಚಕ್ರಮೊಳ್ಪಿಂ ಮಿಸುಪ ಪರಾವೃತ್ತತಲಮುಮಂ ನೂಪುರಮುಮಂ ಸಸಿಮುಖಿ ತಿರ್ಯಙ್ಮುಖಮುಂ ಪಸರಿಸುವ ಮರುಳಪೊಂಸ್ಪಿ ಕರಿಹಸ್ತಾಖ್ಯಂ (ಲಾಸ್ಯರಂ. ೭-೮). [ಸಂ.]

**ರಥಚರಣ** (ನಾ). ೧. ರಥದ ಗಾಲಿ. ೨. ಚಕ್ರಾಯುಧ : 'ರಥಚರಣಪಾಣಿ' ಪರಾ. ೩. ಚಕ್ರವಾಕ ಪಕ್ಷಿ ; ರಥಾಂಗ : ಸುರಪತಿಯ ಬೆಳ್ಕಡಿಯ ರಥಚರಣದ . . . ಪೆಸರ ಖಗಕುಳಂ ಕರಮೆಸೆಗುಂ (ರಾಜಶೇ. ೩-೬೦). [ಸಂ.]

**ರಥಚರಣಪಾಣಿ** (ನಾ). ಚಕ್ರಾಯುಧವನ್ನು ಹಿಡಿದಿರುವವನು ; ವಿಷ್ಣು : ರಥಚರಣಪಾಣಿ ಬಲಮುಂ ಮಥಿಯಿಸೆ ಜಂಭಾರಿಗಾಯ್ತು ಗೀರ್ವಾಣಪತಿ (ಜಗಚ.೦೩-೮೦) [ಸಂ.]

**ರಥಚೋದಕ** (ನಾ). ರಥವನ್ನು ನಡೆಸುವವನು ; ಸಾರಥಿ : "ರಥಚೋದಕನಕ್ಕುಂ ಸಾರಥಿ" (ವಸ್ತುಕೋ. ೯೭-೩೦) ; ರಥಂಗಳೊಂದೆಸೆಯೊಳುರುಳ್ದು ಕಿಡೆದುವು ನೋಡಾ ರಥಚೋದಕರೊಂದೆಸೆಯೊಳ್ ಪೃಥಾಸುತಪ್ರಥಿತಪೃಥುಗದಾಪ್ರಹರಣೆಯಿಂ (ಗದಾಯು. ೩-೬). [ಸಂ.]

**ರಥದ್ರು** (ನಾ). ಒಂದು ಬಗೆಯ ಮರ ; ಹುಲಿಗಿಲು ; ಹೊಂಗೆ : "ತಿನಿಶಃ, ಸ್ಯಂದನಃ, ನೇಮಿಃ, ರಥದ್ರುಃ . . . ಚಿತ್ರಕೃತ್ – ೭ ಹುಲಿಗಿಲ ಮರದ ಪೆಸರುಗಳು" (ಸಿದ್ಧಾಂತಿ. ೦೦೭). [ಸಂ.]

**ರಥದ್ರುಮ** (ನಾ). = ರಥದ್ರು : "ತಿನಿಶಂ ನೇಮಿ ತಾಂ ರಥದ್ರುಮ ವಕ್ಶ್ಯಂ" (ಶಬ್ದಮಣಿ. ೩೫-೧೫). [ಸಂ.]

**ರಥನೇಮಿ** (ನಾ). ರಥದ ಚಕ್ರದ ಹೊರಸುತ್ತು : ಉಲಿಯುವ ರಥನೇಮಿಗಳುಂ (ಜಗನ್ನಾಥ. ೧೦೨-೦೭೩). [ಸಂ.]

**ರಥಬೀದಿ** (ನಾ). ದೇವರ ವಿಗ್ರಹವಿರುವ ರಥವನ್ನು ಮೆರವಣಿಗೆಯಲ್ಲಿ ಕೊಂಡೊಯ್ಯುವ ದೊಡ್ಡ ರಸ್ತೆ ; ತೇರುಬೀದಿ : ಗುಡಿಯ ಮುಂದೆಯೇ ರಥಬೀದಿ (ದೇವತೆ. ೪೯). [ಸಂ.]

**ರಥಯುದ್ಧ** (ನಾ). ಉಭಯಪಕ್ಷದವರೂ ರಥದಲ್ಲಿದ್ದು ಕೊಂಡು ಮಾಡುವ ಕಾಳಗ : ನಿಮ್ಮಲ್ಲಿ ಯಾರಾದರೂ ನನ್ನೊಡನೆ ನೆಲದ ಮೇಲೆ ನಿಂತು ಗದಾಯುದ್ಧ ಮಾಡಲಿ . . . ರಥಯುದ್ಧಗಳು ಹಿಂದೆ ಎಷ್ಟೋ ಆದುವಲ್ಲ ! (ಶಲ್ಯ. ೭೦೬). [ಸಂ.]

**ರಥರೇಣು** (ನಾ). ಕ್ಷೇತ್ರಪ್ರಮಾಣದಲ್ಲಿ ಒಂದು ಅಳತೆ : ಎಂಟು ತ್ರುಟಿ ರೇಣುಗಳಿಂದ ಒಂದು ತ್ರಸರೇಣು, ಎಂಟು ತ್ರಸರೇಣುಗಳಿಂದ ಒಂದು ರಥರೇಣು (ಕೃಷಿ. ೭೦೬). [ಸಂ.]

**ರಥವಂಗಡ** (ನಾ). ರಥಗಳ ಸಮೂಹ : ಬಿಡದೆ ನೂಱೆಂಭತ್ತು ಪರಿಯಂತರದಿ ಸಾರಥಿಸಹಿತ ರಥವಂಗಡವ ವಿಂಗಡಿಸಿದನು ಸಂಗರರಂಗ ಮಧ್ಯದಲಿ (ಕುಮಾರ. ೩-೬-೪೬). [ರಥ + ವಂಗಡ]

**ರಥವಕ್ಕಿ** (ನಾ). ಚಕ್ರವಾಕಪಕ್ಷಿ : ಬಿಸರುಹ ರಥವಕ್ಕಿ ತಸ್ಕರ ಜಾರರ್ಗೆ ಬಿಸವಾದುದು ಶಶಿಕಿರಣ (ಕೋಗಿಲೆ. ೦೬-೩೨). [ರಥ + ಪಕ್ಕಿ]

**ರಥವಾಜಿ** (ನಾ). ರಥಕ್ಕೆ ಹೂಡುವ ಕುದುರೆ ; ತೇರಿನ ಅಶ್ವ : ರಥವಾಜಿಗಳೊಂದೆಸೆಯೊಳ್ ರಥಂಗಳೊಂದೆಸೆಯೊಳುರುಳ್ದು ಕೆಡೆದುವು (ಗದಾಯು. ೩-೩) ; ಆನೆಗಳಱಿ ಕೆಡೆದವು ಮುಗ್ಗಿದವು ರಥವಾಜಿಗಳು (ಕರ್ಣಾ.ಭ. ೧೩-೨). [ಸಂ. ರಥವಾಜಿನ್]

**ರಥವಾಹಕ** (ನಾ). ರಥವನ್ನು ಎಳೆಯುವಂಥದು ; ಕುದುರೆ : " ರಥದೊಳ್ ಪೂಡುವ ಹಯಮದು ರಥವಾಹಕ ರಥ್ಯ ನಾಮಧೇಯಂ" (ಶಬ್ದಮಣಿ. ೯೬-೨೬). [ಸಂ.]

**ರಥಶಾಲೆ** (ನಾ). ರಥವನ್ನು ನಿಲ್ಲಿಸುವ ಶಾಲೆ ; ತೇರುಮನೆ. [ಸಂ. ರಥಶಾಲಾ]

**ರಥಸಪ್ತಮಿ** (ನಾ). ಮಾಘಶುದ್ಧಸಪ್ತಮಿ ಮತ್ತು ಆ ದಿನದಂದು ಮಾಡುವ ಸೂರ್ಯಪೂಜೆ : ರಥಸಪ್ತಮಿಯ ಮಹತ್ತ್ವವನ್ನು ಶ್ರೀಕೃಷ್ಣ ಧರ್ಮರಾಜನಿಗೆ ಹೇಳಿದಂತೆ ಪೌರಾಣಿಕ ಕಥೆಯಿದೆ (ಭಾರತ್ನ. ೨೬೦). [ಸಂ. ರಥಸಪ್ತಮೀ]

**ರಥಹಯ** (ನಾ). = ರಥವಾಜಿ : "ವಾಹನಂ ಧೋರಣಂ ರಥಹಯಂ" (ಮಂಗರಾ. ೯೫-೨೫) : ರಥಹಯಮಂ ನಾಲ್ಕುಂಬಿಂ ರಥಮಂ ಮೂಱು ದಿಂದೆರಟ್ಟಣೆಯಿಂ ಸಾರಥಿಯಂ ಕೆಡೆಯಲ್ಕೆಚ್ಚಂ. (ಆಗಿ. ೭-೯೦). [ಸಂ.]

**ರಥಾಂಗ** (ನಾ). ೧. ರಥದ ಯಾವುದಾದರೂ ಒಂದು ಭಾಗ. ೨. ರಥದ ಚಕ್ರ ; ಬಂಡಿಯ ಗಾಲಿ : "ಚಕ್ರಂ, ರಥಾಂಗಂ — ಈ ೨ ಗಾಲಿ" (ಹಲಾಯು. ೬೩-೨೯೩). ೩. ಚಕ್ರಾಯುಧ : ಸದಾ ಹರಿಕರಭಾಸುರವಾಗಿ ಚಕ್ರಮೆನಿಸಿದ ಸುದರ್ಶನಾಂಗಂ ಪ್ರಸನ್ನಮಕ್ಕೆ (ರಕ್ಷಾ.ಕ. ೦-೯-೦೦) ; ರಥಾಂಗ ಪ್ರಭಾವದಿಂ ಮಾಯೆಂಗಿನಿಸುಂ ತೊಡರ್ ತೋರ್ದುದಿಲ್ಲಂ (ಅದ್ಭುತ. ೦೪-೦೬). ' ರಥಾಂಗಧರ ' ಪರಾ. ೪. ಚಕ್ರವಾಕ ; ಜಕ್ಕವಕ್ಕಿ : "ಕೋಕಃ, ಚಕ್ರಃ, ಚಕ್ರವಾಕಃ, ರಥಾಂಗಃ — ಈ ೪ ಜಕ್ಕವಕ್ಕಿ" (ಹಲಾಯು. ೪೦-೯೦); ಒಡೆ ತಮೋಬಳಂ . . . ರಥಾಂಗಯುಗಂಗಳ್ ಕೂಡೆ ಬಗೆ ಕೂಡೆ ನೇಸಱ್ ಮೂಡಿದುದು (ಶಂಕರಾ. ೩-೨೬). ೫. ಕುಂಬಾರನ ತಿಗುರಿ. [ಸಂ.]

**ರಥಾಂಗಧರ** (ನಾ). ೧. ಚಕ್ರವನ್ನು ಧರಿಸಿರುವವನು ; ಚಕ್ರಪಾಣಿ ; ವಿಷ್ಣು : ನಿಜರಥಮಂ ರಥಾಂಗಧರನಂ ಮುನ್ನಮೇಱಲ್ವೇೞ್ದು ಮೂಱು ಸೂಟರ್ ಬಲವಂದು ಪೊಡಮಟ್ಟು ರಥಮನೇಱಿ (ಶಂಕರಾ. ೦೦-೦೩೨ ವ). ೨. [ಜೈನ] ವಾಸುದೇವ : ಅಜಿತಸೇನ ರಥಾಂಗಧರಂ ಸಮಸ್ತಭೂಜನದ ಮನಕ್ಕೆ ತನ್ನೊಳನುರಾಗಮನಾವಗೆಮುಂಟುಮಾಡುವಂ. (ಚಂದ್ರಪ್ರ. ೭-೩೬). [ಸಂ.]

**ರಥಾಂಗಪಾಣಿ** (ನಾ). ೧. = ರಥಾಂಗಧರ ೧ : "ವಿಷ್ಣುಃ . . . ರಥಾಂಗಪಾಣಿಃ . . . ಗದಾಧರಃ — ಈ ೪೫ ನಾರಾಯಣನ ಪೆಸರ್" (ಹಲಾಯು. ೫-೨೩). ೨. = ರಥಾಂಗಧರ ೨ : ಪಂಚಮರಥಾಂಗ ಪಾಣಿಗೆ ಪಂಚಪುಕಳ್ಪ ಪ್ರಧಾನರಮೃತಾಯತಮಾದಿಂಚರದಿಂ ಬಿನ್ನವಿಸಿದರ್ (ಶಾಂತಿಪು. ೦೦-೯೩). [ಸಂ.]

**ರಥಾರೂಢ** (ನಾ). ರಥವನ್ನು ಏರಿದವನು: ಚಂಡನುದ್ದಂಡಕೋದಂಡಮಂ ಜೇವೊಡೆತಗೆಯ್ದು . . . ಕಯ್ವೀಸಿ ರಥಾರೂಢನಾಗಿ . . . ಮುಂದಕ್ಕೆ ಸಾಗಿದಾಗಳ್ (ಚಂದ್ರ.ರ. ೩-೪೨ ವ) ; ಬಾದಂ ರಥಾರೂಢನಾಗಿ . . . ರಘುನಂದನಂ (ಕೃಷ್ಣಾರ. ೨೦-೨೩). [ಸಂ.]

**ರಥಾರೋಹಣ** (ನಾ). ೧. ರಥವನ್ನು ಹತ್ತುವಿಕೆ : ರಥಾರೋಹಣ ಮಾಡಿದ್ದಲ್ಲಿ ಜನಗಳಿಗೆ ಮಹಾಮಂಗಳಕರವಾಗಿ . . . ಪಿತ್ತಕಾರಣವಾಗಿ ಅಗ್ನಿಯನ್ನುಂಟುಮಾಡಿ ದೇಹಧರ್ಮಗಳಿಗೂ, ಅಸ್ಥಿಗಳಿಗೂ ದುಃಖವನ್ನುಂಟು ಮಾಡುವುದು (ಸಶಸ್ತ್ರ. ೫೪). ೨. ಚೌಷಷ್ಟಿಕಲೆಗಳಲ್ಲಿ ಒಂದು; ರಥಕಲ್ಪ: ಶಕುನಜ್ಞಾನಂ ರಥಾರೋಹಣಂ ಸ್ಮರಮಂತ್ರಂ . . . ಎಂಬಿನಿತಱೊಳಂ ಬಲ್ಲರೆಲ್ಲರುಂ ಮೆಚ್ಚೆ ಪಡೆದನತಿಗೌಶಲಮಂ (ಪುಷ್ಪ.ಕ. ೪-೫೯). [ಸಂ.]

**ರಥಾರೋಹಣಂಗೈ** (ಕ್ರಿ). ರಥವನ್ನು ಹತ್ತು,–ಏರು : ತಾಮ್ರಧ್ವಜಂ ಕನಲ್ದುವನಿಯಂ ಸೇರಿ ಬಾಣತ್ರಯದೊಳಾತನಂ ಘಾತಿಸಿ ರಥಾರೋಹಣಂಗೈದನು (ಕೃಷ್ಣಾರ. ೨೫-೨೯). [ರಥಾರೋಹಣ + ಕೈ$_{1}$ (< ಕೆಯ್$_{1}$)]

**ರಥಾವರ್ತ** (ನಾ). [ಜೈನ] ವಿದ್ಯಾಧರರು ಮಾಡುವ ಒಂದು ಬಗೆಯ ಜಿನಪೂಜೆ : ವಿದ್ಯಾಧರವರ್ಮಾಟ್ಟ ರಥಾವರ್ತಮೆಂಬ ಪೂಜೆಯುಂ ಮಹಾ ಮಂಡಳೇಶ್ವರವರ್ಮಾಟ್ಟೆಂದ್ರಕೇತುವೆಂಬ ಪೂಜೆಯುಂ (ಸುಕುಮಾ. ೬-೨೫ ವ). [ಸಂ.]

**ರಥಿ** (ನಾ). ೧. ರಥವನ್ನು ಹತ್ತುವವನು : "ರಥೀ, ಸ್ಯಂದನಾರೋಹಃ – ಈ ೨ ರಥವನೇಱುವಾತಂ" (ಹಲಾಯು. ೬೫-೨೩೬). ೨. ರಥದಲ್ಲಿ ಕುಳಿತು ಯುದ್ಧಮಾಡುವವನು ; ರಥಿಗಳನಗ್ರಸ್ಥಿತಸಾರಥಿಗಳನಿಸೆ ಸೀರಪಾಣಿ ಸಲೆ ರಥದ ಮನೋರಥದೊಡನೆ ಮಡಿದರ್ . . . ಅರ್ಧರಥರ್ಕಳ್ (ಶಾಂತಿಪು. ೫-೦೨); ಬವರವೆಲ್ಲಿ ? ಏಕೆ ತಡವು ? ರಥಿಯದಾರು ಅರಿಪುದು ! (ಗಂ. ೯೩-೦೦). ೩. ರಥವನ್ನು ಹೊಂದಿರುವವನು. [ಸಂ. ರಥಿನ್]

**ರಥಿಕ** (ನಾ). ೧. = ರಥಿ ೨ : ''ಕಾಳೆಗದ ಬಂಡಿಯಂ ಹತ್ತಿ ಹೋಹಂ ರಥಿಕಂ'' (ಮಂಗರಾ. ೬೩-೨೬); ಗಜಾರೋಹಕರ ರಥಿಕಾವಳಿಯಬವರವ ರಂಗದಲಿ ಸಂವರಣೆಯೊಪ್ಪಿದವು (ಕರ್ಣಾ.ಭ. ೦೦-೦೩). ೨. = ರಥಿ ೩. [ಸಂ.]

**ರಥಿನಿ** (ನಾ). ರಥಗಳ ಸಮೂಹ : ರಥಯಾನಪಾತ್ರದಿಂ ಪರರಥಿನೀಜಳನಿಧಿಯ ಪಾರಮಂ ಸಲ್ವ . . . ಅತಿರಥಮಥನಂ ಕರ್ಣಧಾರನಲ್ಲನೆ ಕರ್ಣಂ (ಶಂಕರಾ. ೦೨-೫೦); ಬಂದುದು ರಥ್ಯಮಾತ್ರ ರಥಿನೀನೈಪಥ್ಯಶೋಭಾವಹಂ (ಚಂದ್ರಪ್ರ. ೦೦-೨೦). [ಸಂ. ರಥಿನೀ]

**ರಥಿನೀನಾಥ** (ನಾ). ರಥಸೈನ್ಯದ ಒಡೆಯ: ಎಣ್ಬರುಂ ದಿಗಧಿಪರ್ ತಂತಮ್ಮೊಳಗೊಳ್ಪನೊಲ್ದೀಯುತ್ತಿರ್ಕೆ ಕುಮಾರಲಕ್ಷ್ಮರಥಿನೀನಾಥಂಗತಿ ಪ್ರೀತಿಯಿಂ (ಜಾತಕಂ. ೨೪೦ ; 1230 ; ಎಕ. V, ಬೇಲೂರು. ೦೦೨–೫ ; 1220 ನೋ). [ಸಂ.]

**ರಥೋತ್ಸವ** (ನಾ). ರಥದಲ್ಲಿ ದೇವರನ್ನು ಕೂಡಿಸಿ ಮಾಡುವ ಉತ್ಸವ.–ಸಮಾರಂಭ : ನಿತ್ಯೋತ್ಸವ ಮೊದಲಾಗಿ ರಥೋತ್ಸವ

ಪರ್ಯಂತವಾದ ವಿಶೇಷೋತ್ಸವಾಚರಣೆಗಳಿಂದ ಪಂಡಿತರಿಗೂ ಪಾಮರರಿಗೂ . . . ಬೋಧಕವಾಗಿಯೂ ಇದೆ (ಶಾಕಿತ. ೬೨); ರೈತ . . . ಜಾತ್ರೆ ತೇರು ರಥೋತ್ಸವ ಭಂಡಿಹಬ್ಬ ಇವುಗಳಲ್ಲೆಲ್ಲ ಭಾಗಿಯಾಗಿ ತನ್ನ ಆತ್ಮದ ಹಸಿವನ್ನು ಸ್ವಲ್ಪವಾದರೂ ಆರಗಿಸಿಕೊಳ್ಳಲು ಪ್ರಯತ್ನಪಡುತ್ತಾನೆ (ಹೇಪಸಾಕೀ. ೨೬). [ಸಂ.]

**ರಥೋದ್ಧತ** (ನಾ). [ಛಂದ] ಪ್ರತಿಸಾಲಿನಲ್ಲಿಯೂ ಹನ್ನೊಂದು ಅಕ್ಷರಗಳಿರುವ ತ್ರಿಷ್ಟುಪ್ಪು ಛಂದಸ್ಸಿನ ಒಂದು ವೃತ್ತ : ಮಾರುತೇಷ್ಟ ದಿವಿಜಾಗ್ನಿಯುಂ ಲಗಂ ಸಾರೆಯಾಗೆ ರಸದಲ್ಲಿ ವಿಶ್ರಮಂ ದೂರಮಲ್ಲದಿರೆ ಕೇಳ್ರಥೋದ್ಧತೋದಾರನಾಮಮೆಸೆಗುಂ (ಛಂದೋಂಬು. ೨-೦೦೬); ರಂನರಂಲಗ ವಿರಲ್ ರಥೋದ್ಧತಂ (ಶ್ರೀಶಿ. ೫೦). [ಸಂ. ರಥೋದ್ಧತಾ]

**ರಥ್ಯ** (ನಾ). ರಥಕ್ಕೆ ಹೂಡುವ ಕುದುರೆ : "ರಥದೊಳ್ ಪೂಡುವ ಹಯ ಮುಮ ರಥವಾಹಕ ರಥ್ಯ ನಾಮಧೇಯಂ" (ವಸ್ತುಕೋ. ೬೬-೨೬). [ಸಂ.]

**ರಥ್ಯೆ** (ನಾ). ೧. ರಥಗಳು ಓಡಾಡುವ ದೊಡ್ಡ ಬೀದಿ ; ರಾಜಮಾರ್ಗ : "ಪ್ರತೋಲೀ, ವಿಶಿಖಾ, ರಥ್ಯಾ_ಈ ೩ ಬೀದಿ" (ಹಲಾಯು. ೯೮-೦೩೯) ; ಗಿರಿಶಿಖರಂಗಳೊಳ್ಪೆರದು ಸೌಧಗೃಹಂಗಳೊಳೊಂದಿ ರಥ್ಯೆಯೊಳ್ಪರಿದು . . . , ಪರ್ವಿದುವಿಂದುಮರೀಚಿಮಾಲೆಗಳ್ (ಕಾದಂಬ. ೪೨೧). ೨. ರಥಗಳ ಸಮೂಹ. [ಸಂ. ರಥ್ಯಾ]

**ರದ** (ನಾ). ೧. ಹರಿಯುವಿಕೆ ; ಸೀಳುವಿಕೆ. ೨. ಹಲ್ಲು; ದಂತ: "ದಶನಃ, ದ್ವಿಜಃ, ದಂತಃ, ರದಃ, ರದನಃ– ಈ ೫ ಪಲ್ (ಹಲ್ಲು)" (ಹಲಾಯು. ೬೬-೩೬೩); ಕಳಧೌತಚ್ಛವಿ ಕುಂದಕುಟ್ಮಲರದಂ ಬಾಲಪ್ರವಾಳೋಷ್ಠಂ . . ತಳೆದಂ ಸಾಶ್ಚರ್ಯಸೌಂದರ್ಯಮಂ (ಸಂಪ್ರಕು. ೯-೭). ೩. ಆನೆಯ ದಂತ,—ಕೋರೆ. [ಸಂ.]

**ರದಕ್ಷತ** (ನಾ). [ಕಾಮಶಾ] ಪ್ರಣಯಪರವಶರಾದ ಸ್ತ್ರೀಪುರುಷರು ರತಿಕ್ರೀಡೆಯ ಸಮಯದಲ್ಲಿ ಪರಸ್ಪರರ ಶರೀರಗಳಲ್ಲಿ ಮಾಡುವ ಹಲ್ಲಿನ ಕಚ್ಚು; ದಂತಕ್ಷತ : ತರದೆ ಬೆಸ್ನೊಳು ಪಯೋಧರದೊಳೆ ರದಕ್ಷತಂ ನೆರೆದಿರೆ ವರಾಹಚರ್ವಿತಂ (ಜನವ. ೭-೩೩); ಉರೋಜಮಂಡಲದ ನಖಿಕ್ಷತಕ್ಕಧರದೊಳ್ಪಲೆದೋರ್ಪ ರದಕ್ಷತಕ್ಕುರಸ್ಥಲದ ರಸಾರ್ದ್ರಕುಂಕುಮಮು ನಂಕಿಸಿ ಜಾಣ್ಮೆಗೆ ಪಾಣ್ಬೆಯೆಯ್ದಿದರ್ (ರಾಜಶೇ. ೦೨-೭). [ಸಂ.]

**ರದಗಜ** (ನಾ). ಕೋರೆಹಲ್ಲಿರುವ ಆನೆ : ಬೆಣ್ಣಗಳುವುದನೂರೊಳಗೆ ನೆಟಿ ಮಣ್ಣು ಮೆದ್ದುವ ರದಗಜಂಗಳ ಬಣ್ಣಗೆಯ ಚಿತ್ರವನು . . . ಕಂಡೆನು (ಜಿಕಾಗ. ೦೦-೩೨-೨೩). [ಸಂ.]

**ರದಚ್ಛದ** (ನಾ). ತುಟಿ ; ಅಧರ : ನಿರ್ಗಳಿತಸರಾಗಭಾವಮೆನಿಸಿತ್ತು ರದಚ್ಛದವಿಮಾಗಳಿಂದುಮಂಡಳಲಲಿತಾಸ್ಯ (ಸಂಪ್ರಕು. ೯-೭೬) ; ಪಡಪಡಿಸಿತ್ತು ನುಣ್ಣೊಡೆ ರದಚ್ಛದವಿರ್ಪುದುಗಿತ್ತು . . . ಮೃಗಾಯತಾಕ್ಷಿಯಾ (ರಾಜಶೇ. ೭-೬೩). [ಸಂ.]

**ರದನ** (ನಾ). ೧. ಹಲ್ಲು ; ದಂತ : "ದಶನಃ, ದ್ವಿಜಃ, ದಂತಃ, ರದಃ, ರದನಃ–ಈ ೫ ಪಲ್ (ಹಲ್ಲು)" (ಹಲಾಯು. ೬೬-೩೬೩) ; ಸುರಕರಿಗೆ ಮೊಗಂ ಮೂವತ್ತೆರಡಾದುವೆ ಬೇಚಿವೇಟಿ ಮೊಗದೊಳಗೆಂಟೆಂಟು ರದನ ಮೊಪ್ಪುಗುಂ (ಅಜಿತ. ೯-೨೦) ; ಪರಿವಡೆದ ರತ್ನದರ್ಪಣದಂತೆ ಪರವದನ ವಜ್ರಮಣಿಯಂತೆ ರದನ (ಶ್ರೀಂದಪು. ೯-೫). ೨. ಆನೆಯ ಕೋರೆ ; ಗಜದಂತ : "ವಿಷಾಣಃ, (ದಶನಃ) ರದನಃ – ಈ ೨ ಕೊಂಬು" (ಹಲಾಯು. ೩೯-೩೯) ; ಕದಳಿಯ ಮೂಲದೊಳಿಡು ಗಜಮದಮಂ . . . ಅದಱ ಫಲಂ ರದನಿರದನದಾಕೃತಿಯಕ್ಕುಂ (ಲೋಕೋಪಕಾ. ೬-೨೯). [ಸಂ.]

**ರದನಚ್ಛದ** (ನಾ). = ರದಚ್ಛದ : "ಒಪ್ಪಮಧರ ರದನಚ್ಛದಂ ಪೇಟಿ ತುಟಿಯಕ್ಕು" (ವಸ್ತುಕೋ. ೯೯-೯) ; ನಾಸಾಗ್ರದ ಮುತ್ತಿನ ಮಣಿ ರದನಚ್ಛದ ದೀಧಿತಿ ಪುದಿಯೆ ಕೆಂಪನಾಳ್ದವೊಲೆಸೆಗುಂ (ರಾಜಶೇ. ೦೨-೭೯). [ಸಂ.]

**ರದನಿ** (ನಾ). ಕೋರೆಗಳನ್ನುಳ್ಳದು ; ಆನೆ ; ದಂತಿ : "ದ್ವಿರದಂ . . . ಅನೇಕಪಂ ರದನಿ . . . ಸಿಂಧುರಂ" (ವಸ್ತುಕೋ. ೬೬-೬೦) ; ಮದನಮದ ರವನಿಯಂತಿರೆ . . . ಬಂದಾಮ (ಸುಕುಮಾ. ೯-೦೦೬) ; ರದನಿಗಳ ರೌದ್ರಾಹವಕೆ ಕೋವಿದನರೇ ಕೊಳ್ಳಿನುತ ಕರಿಗಳ ಕೆದಱಿದನು (ಕುವ್ಯಾಗ. ೧-೬೦).

[ ಸಂ. ರದನಿನ್]

**ರದನಿರಿಪು** (ನಾ). ಆನೆಯ ಶತ್ರು ; ಸಿಂಹ : ಕರ್ಕಿ ಪೃಷ್ಠಂ ರದನಿರಿಪುವೆರಂ ಕನ್ಯಕಾರಾಶಿಪಾರ್ಶ್ವಂ (ಶಾಕಿತ. ೫-೩). [ಸಂ.]

**ರದಬದಲಿ** (ನಾ). ಮಧ್ಯಸ್ಥಿಕೆ : ಮದುವೆಯ ಮಾತಿಗೆ ಪುಟ ಸಿಗುವುದರೊಳಗಾಗಿಯೇ ಸೀನಣ್ಣನ 'ರದಬದಲಿ'ಯಿಂದ ಮೆಡಿಕಲ್‌ಕಾಲೇಜ್ ಸೇರಲು ಅರ್ಜಿಮಾಡಿಬಿಟ್ಟೆ (ಬೀಕಣಿ. ೦೦).

[ ←ಮರಾ. ರದಬದಲ್, ರದಬದಲೀ ]

**ರದಿ** (ನಾ). =ರದನಿ : "ಮಾತಂಗಃ . . . ರದೀ, ಸಾಮೋದ್ಭವಃ, ಸಿಂಧುರಃ — ಈ ೧೪ ಆನೆಯ ಪೆಸರ್" (ಹಲಾಯು. ೩೬-೬೦). [ಸಂ. ರದಿನ್]

**ರದ್ದತಿ, ರದ್ದಿಯಾತಿ** (ನಾ). ವಜಾಮಾಡುವುದು ; ರದ್ದುಗೊಳಿಸುವುದು : "ರದ್ದುಮಾಡುವುದು ; ರದ್ದು ; ರದ್ದತಿ" (Abolition. ಕನ್ನಪ. ೦). **ರದ್ದಿಯಾತಿ** : ಇನಾಂ ರದ್ದಿಯಾತಿ ಕಾನೂನಿನ ದೆಸೆಯಿಂದ ಆತನ ಬಹುಭಾಗದ ಭೂಮಿ ರೈತರಿಗೆ ಹೋಗಬೇಕಾಗಿತ್ತು (ಸಂಜಕಂ. ೦೯೦); ಹಿಡುವಳಿ ರದ್ದಿಯಾತಿಯು ಗ್ರಾಮಸ್ಥನೆಯ ಇಸವಿಯ ಅಧಿನಿಯಮ (ಭಾರಾಪ. ೩೦೬). [ < ರದ್ದು₂ ]

**ರದ್ದಿ** (ಗು). ೧. ಕೆಲಸಕ್ಕೆ ಬಾರದ ; ನಿರುಪಯುಕ್ತವಾದ : ಅಟ್ಟದ ಮೇಲೆ ರದ್ದಿ ಸಾಮಾನುಗಳ ರಾಶಿಯಲ್ಲಿ ಬಿದ್ದಿರುವ ಕೊಡೆಗಳ ನೆನಪು ಏಕಾಏಕಿ ಒರುತ್ತದೆ (ಶೃಹಾರ. ೦೩) ; ರದ್ದಿಕಾಗದ ಕೊಳ್ಳುವವ ನಿಮ್ಮ ಪುಸ್ತಕಗಳನ್ನು ಕೊಂಡ (ಮುಗಿಳ. ೦೦೬). (ನಾ). ೨. ಕೆಲಸಕ್ಕೆ ಬಾರದ ವಸ್ತು : ಅವನ ಕೋಣೆಯಲ್ಲಿ ಬರೀ ರದ್ದಿ ತುಂಬಿದೆ (ರೂಢಿ). ೩. ನಿರುಪಯುಕ್ತವಾದ ಕಾಗದ : ರದ್ದಿ ಆಯುವ ಹುಡುಗರಿಗಾಗಿ ಬದುಕಲು ಉಪಯೋಗವಾಗುವಂಥ ತರಬೇತಿಶಾಲೆಯೊಂದನ್ನು ಈಚೆಗೆ ತೆಗೆದಿದ್ದಾರೆ (ರೂಢಿ).

[ ←ಹಿಂ. ಮರಾ. ರದ್ದೀ ]

ರದ್ದಿಯಾತಿ 'ರದ್ದತಿ' ನೋ.

**ರದ್ದು₁** (ನಾ). ಅರ್ಭಟ ; ಗದ್ದಲ ; ಕೋಲಾಹಲ : ರದ್ದಿಲಿ ನಾದದ ಘರ್ಜನೆ ಮೊರೆಯೆ (ತವಾಪ. ೦೫೮-೦೩) ; ಬದ್ಧಪುರುಷರ ಪೊತ್ತು ರೋದಿಸುತ ಬಹುರದ್ದಿನಿಂ ಪೋಗುತಿರೆ (ಕೋರಚ. ೫-೯೦).

[ ←ತೆಲು. ರದ್ದು, ರದ್ದಿ ]

**ರದ್ದು₂** (ನಾ). ತೆಗೆದುಹಾಕುವಿಕೆ ; ವಜಾಮಾಡುವಿಕೆ : ಇದೆಲ್ಲಾ ವಿವಾಹ ರದ್ದು ನೋಟೀಸು ಕೊಟ್ಟಿದ್ದರ ಹೊಟ್ಟೆಉರಿ ! (ಕಿ. ೬೦).

**ರದ್ದಾಗಿಸು** = ತೆಗೆದುಹಾಕುವಂತೆ ಮಾಡು ; ವಜಾಮಾಡು : ಆತನು ಕೂಡಲೆ ಅವನ್ನು ರದ್ದಾಗಿಸಿ . . . ಎಚ್ಚರಿಸಿದನು (ಗೂಂಪಕೊಕ. ೦೭ ಟಿಕ್ಕ). **ರದ್ದಾಗು** = ಇಲ್ಲವಾಗು ; ವಜಾ ಆಗು : ಭಗವದಿಚ್ಛೆಯಿದ್ದರೆ ಶಿಕ್ಷೆ ರದ್ದಾಗುತ್ತದೆ (ಪುವರು. ೨೫೬). **ರದ್ದು ಮಾಡು** = ತೆಗೆದುಹಾಕು ; ವಜಾಮಾಡು : ಆ ಪಾಠಶಾಲೆಯನ್ನು ರದ್ದುಮಾಡಿ ಆ ಮೇಷ್ಟರನ್ನು ಇಲ್ಲಿಗೆ ಕಳಿಸಿಕೊಟ್ಟರೆ ಸಾಕು (ರಂಗಳ. ೦೦೬) ; ಅವರ ಇಷ್ಟದಂತೆಯೇ ಅಂದಿನ ಕಚೇರಿಯನ್ನು ರದ್ದುಮಾಡಲಾಯಿತು (ಸಂಗೀತ. ೨೩).

[← ಅರ. ಹಿಂ. ರದ್ದ್ ; ಮರಾ. ರದ್, ರದ್ದ್]

**ರದ್ದುಗೊಳಿಸು** (ಕ್ರಿ). ತೆಗೆದುಹಾಕು ; ವಜಾಮಾಡು : ಭೋಜನಕೂಟದ ಕಾರ್ಯಕ್ರಮವನ್ನು ರದ್ದುಗೊಳಿಸಲಾಗುವುದಿಲ್ಲವೇ (ಅಕ್ರಮ. ೬೫); ದಂಡನೆಯ ಆಜ್ಞೆಯನ್ನು ರದ್ದುಗೊಳಿಸುವಂತೆ ಕೇಳಿಕೊಂಡರು (ರಾಜಪ. ೩೬).

[ರದ್ದು₂ + ಕೊಳ್₁ + — ಇಸು₃]

**ರದ್ದುಪಡಿಸು** (ಕ್ರಿ). = ರದ್ದುಗೊಳಿಸು : ಕೋರ್ಟಿನವರು ಡಿಸ್‌ಮಿಸ್ ಮಾಡಿರುವುದನ್ನು ರದ್ದುಪಡಿಸಿ ಹುಕುಂ ಮಾಡತಕ್ಕದ್ದು (ಗ್ರಾವಾಶ. ೨೮) ; ಖಾಸಗಿ ಒಡೆತನವನ್ನು ಪೂರ್ತಿಯಾಗಿ ರದ್ದುಪಡಿಸುವುದಕ್ಕೆ ಒಪ್ಪುವದಿಲ್ಲ (ಮಾವಾರ. ೦೯೩). [ರದ್ದು$_2$ + ಪಡಿಸು]

**ರನ್ನ** ' ರತುನ ' ನೋ.

**ರನ್ನಕನ್ನಡಿ** ' ರನ್ನಗನ್ನಡಿ ' ನೋ.

**ರನ್ನಕುಂಡಲ** ' ರನ್ನಗುಂಡಲ ' ನೋ.

**ರನ್ನಗಂಬಳಿ** (ನಾ). = ರತ್ನಕಂಬಲ : ರತ್ನಕಂಬಳ - ರನ್ನಗಂಬಳಿ (ಕಮಿತ. ೨೯೩ ಪ್ರಯೋ) ; ಜಡೆಮುಡಿಯನಳವಡಿಸಿ ತೋಱುವ ಮೃಡನ ಸೆಜ್ಜೆ ಸಿತಾಂಬರದ ಚೆಲುವುಡಿಗೆ ಹೊದೆದಿಪ ರನ್ನ[ಪಾಠಾಂ. ರತ್ನ]ಗಂಬಳಿ ತಾಮ್ರ ಕುಂಡಲವು (ಬಸವು. ೩-೨೬); ಸಂಬಳಿಗೆಯು ಸಂಚಿ ಮೊಗವಾವುದ ರನ್ನಗಂಬಳಿ ಹೊನ್ನ ಹಾವುಗೆಯು (ಮೋಹತ. ೨೪-೮). [ ರನ್ನ (< ರತುನ) + ಕಂಬಳಿ ]

**ರನ್ನಗಟ್ಟೆ** (ನಾ). ರತ್ನದಿಂದ ಮಾಡಿದ ಪಾತಿ,– ಮಡಿ : ವನದೊಳೆಸೆವ ವೃಕ್ಷವೃಕ್ಷಮೂಲಗಳೊಳು ಘನತರ ರನ್ನಗಟ್ಟೆಗಳು (ಅಂಜಕ. ೨-೫೬).
[ ರನ್ನ (< ರತುನ) + ಕಟ್ಟೆ$_1$ ]

**ರನ್ನಗಡಗ** (ನಾ). ರತ್ನಖಚಿತವಾದ ಬಳೆ : ಇಂತಪ್ಪ ಸಲ್ಗತೆಯಂ ಬಿತ್ತರಿಸಿ ದೊಡೆ ಅರಮನೆಯೊಳ್ ರನ್ನಗಡಗಮುಂ ಪೊನ್ನ ಕಂಠಿಕೆಯುಂ ಮೆಚ್ಚನೀವರ್ (ರಾಮಾಶ್ವ. ೫-೦೫). [ ರನ್ನ (< ರತುನ)+ಕಡಗ$_1$ ]

**ರನ್ನಗಣಿ** (ನಾ). ರತ್ನಗಳು ದೊರೆಯುವ ಸ್ಥಳ ; ರತ್ನದ ಗಣಿ : ಬೆಟ್ಟು ರನ್ನಗಣಿಯಿಂ ಕಾಡಾನೆಯಿಂ ಕಾಡು. . . ಒಪ್ಪೆ (ಮಲ್ಲಿಪು. ೨-೦೫); ಲೋಕನಾಥನ ಪುತ್ರ ಭರತೇಶ ರತ್ನಕರಾಕರ ರನ್ನಗಣಿಯೊಳು ಈ ಕುಮಾರ ರತ್ನಗಳು ಜನಿಸಿವೆ (ಭರತ. ೬೭-೨೫).
[ ರನ್ನ (< ರತುನ) + ಗಣಿ$_2$ (<ಕಣಿ$_6$) ]

**ರನ್ನಗನ್ನಡಿ, ರನ್ನಕನ್ನಡಿ** (ನಾ). ರತ್ನಖಚಿತವಾದ ಕನ್ನಡಿ : ರಂಜಿಪ ರನ್ನಗನ್ನಡಿ ರನ್ನವೆಸದ ಕಾಳಾಂಜಿ ಕರ್ಪೂರಕರಂಡ ಮಂಜುಳಗಂಧೋದಕ ಪಿಡಿದವರ್ಗಳು ಕಂಜಾಕ್ಷಿಯರೊಡನೆಯ್ದಿದರು (ಮೋಹತ. ೨೪-೦೦) ; ರನ್ನಗನ್ನಡಿಯಲ್ಲಿ ತನ್ನ ಪಡಿನೆಳಲೊಗೆಯೆ (ಕತ್ರ್ಯಾಗ. ೦೯-೫೦೭). **ರನ್ನಕನ್ನಡಿ** : ಶಶಿ ರವಿಗಳಂ ರನ್ನಕನ್ನಡಿಗಳೆಂದು ನಿಟ್ಟಿಸುವ . . . ವಿಷಮುಪ್ರಮಘಗಣಮೈದುತಿರ್ದುದು (ಕಬಿತ. ೪೦-೪೯).
[ ರನ್ನ (< ರತುನ) + ಕನ್ನಡಿ$_1$ ]

**ರನ್ನಗರು** (ನಾ). ರತ್ನದ ಗೊಂಬೆ : ರನ್ನಗರುವಿನಂತೆಸೆದಳಾ ತರುಣಿ (ಶ್ರೀಪಾಂ. ೪-೮೨) ; ಉನ್ನತವಹ ಸುರದಂಪತಿಗಳ ಬಲುರನ್ನಗರುಗಳಿಂದೆಸೆದುದು[ಪಾಠಾಂ. ರನ್ನೆಯರಿಂದತಿ ಮಿಗಲು] (ರಾಮಾಭಿ. ೬-೭).
[ ರನ್ನ (<ರತುನ) + ಕರು$_2$ ]

**ರನ್ನಗುಂಡಲ, ರನ್ನಕುಂಡಲ** (ನಾ). ರತ್ನದ ಕರ್ಣಾಭರಣ : ಜಯಸಿರಿಗೆ ಇಕ್ಕುವ ರನ್ನಗುಂಡಲದಂತೆ ಸಿಂಗಾಡಿಯುಕ್ಕಜೊಳೆಸೆದುದೇನೆಂಬೆ (ಕಂಪಪು. ೨೨-೦೦). **ರನ್ನಕುಂಡಲ** : ಕಿವುಡುತನ ತಪ್ಪೀತೇ ರನ್ನಕುಂಡಲದಿಂದ ? (ಮಂಕುಶ. ೭೩೨). [ ರನ್ನ (< ರತುನ) + ಕುಂಡಲ]

**ರನ್ನಗೊಂಡೆಯ** (ನಾ). ರತ್ನಖಚಿತವಾದ ಕುಚ್ಚು : ಕಂಡ ಕಡೆಗೆ ರನ್ನ ಗೊಂಡೆಯ ಮಾಣಿಕಪೆಂಡೆಯಗಳ ಕೆದಱಿದರು (ಭರತ. ೭೭-೦೦೯).
[ರನ್ನ (< ರತುನ) + ಗೊಂಡೆಯ]

**ರನ್ನಜಗಲಿ** (ನಾ). = ರನ್ನಗಟ್ಟೆ : ಪ್ರಕಟತರ ತರುಲತೆಗಳಂ ರನ್ನಜಗಲಿ ರಮ್ಯಕಸರಸಿಕೃತಕಾದ್ರಿಗಳ್ ತರತರದೊಳಿರಲ್ಕಳಂಕಕೇಳೀವನಂ ಮೆಱೆದುದು (ಕಬಪು. ೫-೫೦). [ರನ್ನ (<ರತುನ) + ಜಗಲಿ]

**ರನ್ನದಂಬಿಗೆ** (ನಾ). ರತ್ನಖಚಿತವಾದ ಚೆಂಬು : ನೆಱೆ ರನ್ನದಂಬಿಗೆಯೊಳು ದಿವ್ಯಜಲವನು ತರುಣಿಯೊರ್ವಳು ಸೂಸಲು (ಕಂಪಪು. ೨೨-೫೫).
[ರನ್ನ (< ರತುನ) + ತಂಬಿಗೆ (< ತಂಬುಗೆ)]

**ರನ್ನದಪ್ಪಲು** (ನಾ). ತಪ್ಪಲಲ್ಲಿ ರತ್ನಗಳನ್ನು ಹೊಂದಿರುವ ಪರ್ವತ ; ಮೇರು : "ಪೊಂಬೆಟ್ಟು ರನ್ನದಪ್ಪಲು ಸುರಗಿರಿ" (ಕಬ.ಮಂ. ೦೨).
[ರನ್ನ (< ರತುನ) + ತಪ್ಪಲು$_1$ (< ತಬ್ಬಿಲ್)]

**ರನ್ನದಲೆಗ** (ನಾ). ರತ್ನವನ್ನು ಹೆಡೆಯಲ್ಲಿ ಉಳ್ಳುದು ; ಸರ್ಪ.
**ರನ್ನದಲೆಗರ ಹಚ್ಚವಿಟ್ಟಯ್ಯ** = ಸರ್ಪವನ್ನು ಧರಿಸಿಕೊಂಡಿರುವವನು ; ನಾಗಭೂಷಣ ; ಶಿವ : ದೈನ್ಯವಾನುತ ಸ್ತೋತ್ರವಂ ಮಾಡೆ ರನ್ನದಲೆಗರ ಹಚ್ಚವಿಟ್ಟಯ್ಯ ನಗುತ ಬೊಧಿಸುತಲಿಂತೆಂದನು (ಪ್ರಭುಪು. ೪-೩೮). [ರನ್ನ (< ರತುನ) + ತಲೆ$_1$ + – ಗ$_2$]

**ರನ್ನದಾಳಿ** ' ರತುನದಾಲಿ ' ನೋ.

**ರನ್ನದುಟಿ** (ನಾ). ಮಾಣಿಕ್ಯದ ಬಣ್ಣದ ತುಟಿ ; ಕೆಂದುಟಿ: ಆಲವಣ್ದುಟಿಯ ಚೆಂದುಟಿಯ ಪೊಸಪವಳದುಟಿಯೊಳು ರನ್ನದುಟಿ ರಂಗುದುಟಿಗಳವರು . . . ಬರುತಿರ್ದರು (ಕಬಿತ. ೩೭-೪೫).
[ರನ್ನ (< ರತುನ) + ತುಟಿ]

**ರನ್ನದೆನೆ** (ನಾ). ರತ್ನಖಚಿತವಾದ ಕೋಟೆಯ ಮೇಲುಭಾಗ ; ಮಣಿಖಚಿತವಾದ ಬುರುಜು : ಗಗನಗತಿಶ್ರಮಮಂ ನೆಟ್ಟಗೆ ಕಳೆವರ್ ಖಚರರಜಿ ರನ್ನ[ದೆ]ನೆಗಳೋಳಿಗಳೊಳ್ (ಕುಸುಮಾ. ೨-೭೭) ; ಹೊಂಗೋಟೆ ಮೇಗಣ ರನ್ನದೆನೆಯ ಕಾಂತಿಯೆಳೆವಿಸಿಲಾಗಿದ್ದುದೈದಿದರವರು (ಭರತ. ೦೮-೦೦೭). [ ರನ್ನ ( < ರತುನ ) + ತೆನೆ$_1$ ]

**ರನ್ನದೊಟ್ಟಿಲ್, ರನ್ನದೊಟ್ಟಿಲು** (ನಾ). ರತ್ನಖಚಿತವಾದ ತೊಟ್ಟಿಲು; ಮಣಿಮಯವಾದ ತೊಟ್ಟಿಲು : ಗಿರಿಸುತೆಯನತಿಸ್ಫುಟಮಣಿಗಣಪ್ರಭಾಸಂಪುಟಮೆನಿಸುವ ರನ್ನದೊಟ್ಟಿಲೊಳಗಿರಿಸುತ್ತುಂ (ಗಿರಿಶ. ೩-೬೬). **ರನ್ನದೊಟ್ಟಿಲು** : ತರುಣನ ರನ್ನದೊಟ್ಟಿಲೊಳಿಟ್ಟು ಹರುಷದಿ ತರಳೆಯರುಗಳು ಪಾಡಿದರು (ಶ್ರೀಪಾಂ. ೨-೮೦).
[ ರನ್ನ ( < ರತುನ ) + ತೊಟ್ಟಿಲ್$_1$ ]

**ರನ್ನದೊಟ್ಟಿಲು** ' ರನ್ನದೊಟ್ಟಿಲ್ ' ನೋ.

**ರನ್ನದೊಡವು** (ನಾ). ರತ್ನಖಚಿತವಾದ ಒಡವೆ,– ಆಭರಣ : ಪರಿಪರಿಯ ರನ್ನದೊಡವಿನ ಬೆರಕೆಯ ಬೆಳಗಡರೆ (ಕನ್ನಕಾ. ೦೩೮) ; ರನ್ನದೊಡವನಿಟ್ಟು ರಮಣಿಯ ಕಣ್ಬೆಳಗುನ್ನತವಾಯ್ತು ಬೀದಿಯಲಿ (ಮೋಹತ. ೦೮-೩೩). [ ರನ್ನ ( < ರತುನ ) + ತೊಡವು ]

**ರನ್ನದೋರಣ** (ನಾ). ರತ್ನಖಚಿತವಾದ ತೋರಣ ; ಮಣಿಮಯವಾದ ತೋರಣ : ವರಕೇರಿ ತರತರದಲಿ ಬೆಡಗಿಂದ ಕರುಮಾಡ ರನ್ನದೋರಣವ ಸುಕಲಶದಿ ಪರಮವಿಭವವ ತಾಳ್ದಿಹುದು (ಪರ್ಣಶ. ೦-೪೧); ಹೊನ್ನ ಬಾಗಿಲುಗಳ ರನ್ನದೋರಣಗಳ ಪನ್ನೀರುಸಾದಿನಿಂದೆಸೆವಾ ಕನ್ನಡಿನೆಲದರಮನೆಯೊಳು ಪೊಕ್ಕು (ಭರತ. ೩-೬೬).
[ ರನ್ನ ( < ರತುನ ) + ತೋರಣ ]

**ರನ್ನಪುತ್ಥಳಿ** (ನಾ). ರತ್ನಖಚಿತವಾದ ಗೊಂಬೆ,— ವಿಗ್ರಹ : ರನ್ನಪುತ್ಥಳಿಗಳು ಜೀವಪಡೆದು ರತಿಬಿನ್ನಣದೊಳು ಕೂಡುವಂತೆ ಚೆನ್ನೆಚೆನ್ನರು ನೆರೆದರು (ಭರತ. ೪೦-೦೩೦). [ ರನ್ನ ( < ರತುನ ) + ಪುತ್ಥಳಿ ]

**ರನ್ನವಚ್ಚ** (ನಾ). ರತ್ನದ ಆಭರಣ ; ರತ್ನಖಚಿತವಾದ ಒಡವೆ : ಮಹೀಪಾಲಕಾಗ್ರಣಿ ರನ್ನವಚ್ಚಮನಾಂತು . . . ವಿವಾಹಮಂದಿರಕುಲ್ಲಸಲ್ಲೀಲೆ ವೆರ್ಚೆ ತೆರಳ್ದು (ಉದ್ಭಟ. ೮-೫೨) ; ಪಜ್ಜಳಿಸುವ ರನ್ನವಚ್ಚಂ . . . ತನಗೊಪ್ಪಿರೆ ಬಂದಳದೊಂದು ಲೀಲೆಯಿಂ (ರಾಜಶೇ. ೦೨-೬೨) ; ಆ ಕಾಂತೆಯರ್ . . . ನಿಚ್ಚದಲ್ಲವ ರನ್ನವಚ್ಚವಂ ತೆಗೆದಿಟ್ಟು . . . ಜಲಕೇಳಿಗೆ ಮೇಳವಿಸಿದರ್ (ರಾಮಾಶ್ವ. ೦೨೩-೧೦).
[ ರನ್ನ ( < ರತುನ ) + ವಚ್ಚ$_2$]

**ರನ್ನವಜ್ಜೆ** (ನಾ). ಮಾಣಿಕ್ಯದಂತೆ ಕೆಂಪಾದ ಪಾದ : ತಾವರೆವಜ್ಜೆಗಳ ತಳತಳಿಸುವ ರನ್ನವಜ್ಜೆಗಳ ನಳಿನನೇತ್ರೆಯರೊಡನೆಳ್ತರಲವಳಂದು ನೆಲೆವಾಡ ದೆಡೆಗೈದಿದಳು (ಶಾಂತಾನಾ. ೨೧-೯೩). [ರತ್ನ (<ರತುನ) + ವಜ್ಜೆ]

**ರನ್ನವಟ್ಟಿಗೆ** (ನಾ). ರತ್ನಖಚಿತವಾದ ಡಾಬು, — ಸೊಂಟಪಟ್ಟಿ : ಸುರಹೊನ್ನೆಯ ರನ್ನವಟ್ಟಿಗೆಯಿಂ ರಕ್ತಾಶೋಕರಚಿತ ರತ್ನಕಟಕದಿಂ . . . ಅಲಂಕರಿಸಿ (ಶಾರಂಸಾ. ೭೬೪) ; ಕುಮುದಂಗಳಿಂ ನೆಗೆದ ಜಂಘಾಕಾಂಡದಿಂ ರನ್ನವಟ್ಟಿಗೆಯಿಂ . . . ಬಗೆಯಂ ಬಲ್ಸೆಟಿಗೆಯ್ವ ಪುತ್ತಳಿಗಳಿಂ (ಎಕ. XI, ದಾವಣ. ೨೩-೭೭ ; 1224). [ ರನ್ನ ( < ರತುನ ) + ವಟ್ಟಿಗೆ ]

**ರನ್ನವಟ್ಟೆ** (ನಾ). = ರನ್ನವಟ್ಟಿಗೆ : ವೀರಘಂಟೆಯ ಪೊನ್ನ ಗುಬ್ಬಿಯ ರನ್ನವಟ್ಟೆಯ ಬೆನ್ನ ಚಮ್ಮಟಿಗೆಯ ಬಿಳಿಯ ಚವರದ . . . ಬಿರುದಿನ ಹರಿಗೆಕಾಱರ ಪರಿವೀಥಿಯೊಳಂ (ಗಿರಿ. ೩-೫೫ ವ) ; ವೀರಸಿರಿಯುಪ್ಪಿದ ತೋಳ್ಸುತ್ತಿನಿಪ ರನ್ನವಟ್ಟೆಯ ರುಕ್ಮಂಜದ ಮಂಜರಿವೊಲ್ ರಂಜಿಸಿದುದು ಪೊನ್ನಾಯುಗದ ಪೊನ್ನ ಬಜ್ಜರಿ ಕಟಿಯೊಳ್ (ಅಸಂಕ್ರ. ೬-೫೦).

[ ರನ್ನ ( < ರತುನ ) + ವಟ್ಟೆ₃ ]

**ರನ್ನವಡಲಿಗೆ** (ನಾ). ರತ್ನಖಚಿತವಾದ ಹರಿವಾಣ : ಆ ಬಾಣವನು ಅಂದು ಪೂಜಿಸಿ ರನ್ನವಡಲಿಗೆಯೊಳಗಿಟ್ಟು ಬಂದನು ಚಕ್ರಿಯಿದ್ದೆಡೆಗೆ (ಶ್ರೀಬಾಂ. ೦೩-೦೨೬).

[ ರನ್ನ ( < ರತುನ ) + ವಡಲಿಗೆ ( <ಪಡಲಗೆ ) ]

**ರನ್ನವಣಿ** (ನಾ). ರತ್ನದ ಹರಳು : "ರನ್ನವಣಿ — ರತ್ನಮಣಿ= ರತ್ನದ ಹರಳು " (ಶಬ್ದಕೋ. ೩೭) ; ರತ್ನಮಣಿ — ರನ್ನವಣಿ (ಕವಿತ. ೨೯೨ ಪ್ರಯೋ). [ ರನ್ನ ( < ರತುನ ) + ಮಣಿ₃ ]

**ರನ್ನವರದ** (ನಾ). ರತ್ನದ ವ್ಯಾಪಾರಿ; ರತ್ನಪಡಿವರ್ತಕ : ಬೆಲೆವಣಿ ಗಾಗರಮೆನೆ ತೋರ್ಪ ರನ್ನವರದರಂಗಡಿಯಿಂ . . . ಪುರಂ ಕಣ್ಗೆಂಬಾದುದು (ಲಾವಣ್ಯ. ೦೦೩-೯). [ರನ್ನ ( < ರತುನ) + ವರದ₁]

**ರನ್ನವರಲ್** (ನಾ). ಕೆಂಪುಹರಳು ; ಮಾಣಿಕ್ಯ: ''ಕೆಂಬರಲೆಂದು ರನ್ನವರ ಲೆಂದೆನಲ್ ಕಿಸುಗಲ್ಲು'' (ಶಬ್ದಮಂ. ೭೯). [ರನ್ನ (<ರತುನ) + ವರಲ್]

**ರನ್ನವಲ್ಲಕ್ಕಿ** (ನಾ). ರತ್ನಖಚಿತವಾದ ಪಲ್ಲಕ್ಕಿ : ಮುತ್ತಿನ ಸತ್ತಿಗೆ ಮುತ್ತಿನ ಹೊಗ್ಗಳೆ ಮುತ್ತು ಕೆತ್ತಿಸಿದುತ್ತಮರನ್ನವಲ್ಲಕ್ಕಿಯನಿತ್ತನವಳಿ ಗಸುರೇಂದ್ರ (ಶಾಂತಾನಾ. ೪೦-೪೦).

[ರನ್ನ (<ರತುನ) + ವಲ್ಲಕ್ಕಿ₁ (<ಪಲ್ಲಂಗ )]

**ರನ್ನವಲ್ಲಣ** (ನಾ). ರತ್ನಖಚಿತವಾದ ಜೀನು : ಸುರಧನು ರನ್ನವಲ್ಲಣದ ಮಾಳ್ಕೆಯೊಳೊಪ್ಪಿರೆ ಬಳ್ವಮಿಂಚು ವಿಸ್ಫುರಿತ ಖಲೀನದಂತಿರೆ ಘನಧ್ವನಿ ಹೇಷಿತಮಾಗೆ . . . ತೋಱಿತ್ ನೀಲತುರಗಂ (ಕಬಕಂ. ೨-೩೬).

[ರನ್ನ (< ರತುನ) + ವಲ್ಲಣ]

**ರನ್ನವಸರ** (ನಾ). ರತ್ನವ್ಯಾಪಾರಿಗಳ ಅಂಗಡಿಸಾಲು: ರತ್ನವ್ಯಾಪಾರಿಗಳ ಬೀದಿ : ಪೆಂಪಿನಿಂದೆರವನೆಯುಬ್ಬ ರನ್ನವಸರಂ ಗೆಲೆವಂದುದು ರೋಹ ಣಾದ್ರಿಯಂ (ಕಂಠಾಪಪಾ. ೦-೦೨೦); ದಾಳಿಂಬದ ಮರಗಳ್ ರನ್ನವಸರದಂತೆಸೆ ದಿರ್ಕುಂ (ಕಬ್ಬಿಗ. ೦೦೪) ; ಸ್ಮರಮಣಿಗಾಱ ಮಾಱುವ ರನ್ನವಸರದಂತುಱಿ ಮೞಿದಿಹರಂಗನೆಯರು (ಕಂವರಿ. ೬-೯೬). [ರನ್ನ (< ರತುನ) + ವಸರ]

**ರನ್ನವಸಿಱ್** (ನಾ). ೧. ರತ್ನಗಳನ್ನು ಹೊಂದಿರುವ ಗರ್ಭ. ೨. ರತ್ನಗಳನ್ನು ಹೊಂದಿರುವ ಬಸಿರುಳ್ಳದು : ಭೂಮಿ : ರನ್ನ ವಸಿರ್ಪಲವೊಗವೇಳ್ವಾಲಗೆಯನ್ನಿಲ್ಲದೆ ನಡೆವ ನೆರಲ್ಸರಿವುಮ್ಮಿನ್ನೀರ್ಗದಿಂ ಬಿಸುಗದಿರನೊಡಪ್ಪಿಡಿವವನೆಂಬೆಂಟು ನಿನ್ನಯ ಪರಿಜಾಂತು (ಆದ್ಯರೇ. ೦-೩೨).

**ರನ್ನವಸಿಱಳ್** = ರತ್ನವನ್ನು ಬಸಿರಿನಲ್ಲಿ ಹೊಂದಿರುವವಳು: ಭೂಮಿ : ರತ್ನಗರ್ಭೆ : ''ಎಳೆ . . . ರನ್ನವಸಿಱಳ್ ಭೂಮಿ'' (ಶಬ್ದ. ೫೫-೨೦೦). [ರನ್ನ (<ರತುನ) + ಬಸಿಱ್]

**ರನ್ನವಾಟ** (ನಾ). ರತ್ನಖಚಿತವಾದ ಗೃಹ, — ಭವನ : ಎಡೆಬಿಡದಿನ್ನು ಘೋಷಿಪ ವಿಬುಧ ಭೂಸುರ ರನ್ನವಾಟಗಳೆಸೆದವು (ದಿಕ್ಕಿತ್ರು. ೨೨-೨೮).

[ರನ್ನ (<ರತುನ) + ವಾಟ]

**ರನ್ನವಾವುಗೆ** (ನಾ). ರತ್ನಖಚಿತವಾದ ಪಾದುಕೆ : " ರನ್ನವಾವುಗೆ ಯೆಂದಂದಾದುದು ರತ್ನಪಾದುಕೆ " (ಕಬಿಸಂ. ೦೫೨) ; ಪುರಾಂತಕಂ ಮುಂಬರಿದು ಕೆಯ್ಗುಡೆ ವೃಷಭೇಂದ್ರನಿಂದವತರಿಸಿ ಕುಬೇರಂ ಸಾರ್ಚಿದ ರನ್ನವಾವುಗೆಯುಂ ಮೆಟ್ಟಿ (ಕಬಕಂ. ೫-೫೭ ವ) ; ಮುತ್ತಿನ ಸರವೆನ್ನ ರನ್ನವಾವುಗೆಗಳ ಸುತ್ತ ಲಂಬಣಮಾದುದಿಂದು (ಹರಿಬಿ. ೦-೪೨).

[ರನ್ನ (< ರತುಸ) + ಪಾವುಗೆ]

**ರನ್ನವಾಸಱ್** (ನಾ).ರತ್ನದ ಹಾಸುಗಲ್ಲು : ಕಂಡರವರು . . . ರನ್ನವಾಸಱ್ ಗಳಿಂದೆ ಶಶಿಕಾಂತಶಿಲೆಗಳ ಕಂದರಂಗಳಿಂದತಿಮನೋಹರವಾದ ಗಿರಿ ಯೊಂದನು (ತ್ರಿಖಭಾ. ೩-೦೩). [ರನ್ನ (< ರತುನ) + ಪಾಸಱ್]

**ರನ್ನವಿಟ್ಟರ** (ನಾ). ರತ್ನ ಖಚಿತವಾದ ಆಸನ ; ಮಣಿಪೀಠ : ಚಿನ್ನದ ಕಾಲ ಬೆಳ್ಳಿಯ ಕಾಲ ಮಂಚ ಸುವರ್ಣದಡ್ಡಣಿ ಸುಪ್ಪತಿಗೆ ರನ್ನವಿಟ್ಟರ ರತ್ನಗಂಬಳಿ . . . ಇತ್ತ ಮಗಗೆ (ಮೋಹಕ. ೦೫-೦೭).

[ರನ್ನ (< ರತುಸ) + ವಿಟ್ಟರ]

**ರನ್ನವೆಸ** (ನಾ). ರತ್ನವನ್ನು ಕುಂದಣಿಸುವಿಕೆ : ತನ್ನೊಲವಿಂ ತತ್ಪುತ್ರ ಕಳತ್ರಕೆ ರನ್ನವೆಸದ ಬಹುವಿಧ ಭೂಷಣಮಂ ಮನ್ನಿಸಿ ಕೊಟ್ಟಾ ದೇವನಮರ ಲೋಕಕ್ಕೆಯ್ದಿದಂ (ಜಯಕಾ. ೩-೭೨); ರನ್ನವೆಸದ ಕಾಳಾಂಜಿ ಕರ್ಪೂರಕರಂಡ ಮುಂಜುಳಗಂಧೋದಕವಿಡಿದವರ್ಗಳಪ್ಪ ಕಂಜಾಕ್ಷಿಯರೊಡನೆಯ್ದಿದರು (ಮೋಹಕ. ೨೪-೦೦). [ರನ್ನ (< ರತುನ) + ವೆಸ₁]

**ರನ್ನವೆಳಗು** (ನಾ). ರತ್ನದ ಹೊಳಪು,— ಕಾಂತಿ : ಹೊನ್ನ ಹಾವುಗೆಯ ರನ್ನವೆಳಗಂ ಕೀಳ್ಮಾಡಿ ನಕ್ಷತ್ರಮಾಲೆಯಂತೆ ನುಣ್ಬೆಳಗನಿಂಬ ಪದನಖಪ್ರಭೆ ಪೂವಲಿಗೆದಱ್ (ಗಿರಿ. ೫-೭೭ ವ) ; ಒಳಗಣ ರನ್ನವೆಳಗಲ್ಲದಿವು ತೊಡರ್ದಿಪ್ಪ ಕೆಂಬವಳಮಲ್ಲಿವು ಪಯೋನಿಧಿಯ ಕೆನೆಯೊಪ್ಪಮಲ್ಲದೆ ನೀರ್ಮೊಗೆಯಲಿಳಿವ ಮೇಘಂಗಳಲ್ಲೆನಿಸಿದುವು ಕಡಲೊಳು (ತ್ರಿಖಭಾ. ೬-೭).

[ರನ್ನ (< ರತುನ) + ಬೆಳಗು₂]

**ರನ್ನಸರ** (ನಾ). ರತ್ನದ ಹಾರ ; ಮಣಿಮಾಲೆ : ಪೊಸಲತೆಯಕ್ಕುಮಲ್ಲ ಲತೆಗೆತ್ತಣದೀ ಸವಿವಾತು ನೀಟ್ದ ರನ್ನಸರಮದಕ್ಕುಮಲ್ಲ ಸರಕೆತ್ತಣದೀ ನವಘರ್ಮಬಿಂದುಗಳ್ (ಆದ್ಯಪು. ೬-೪೦). [ರನ್ನ (<ರತುನ) + ಸರ₃]

**ರನ್ನು** (ನಾ). (ಕ್ರಿಕೆಟ್ ದಾಂಡುಗಾರರು ಗುರಿಗೋಲುಗಳ ಮಧ್ಯೆ ಪರಸ್ಪರ ಓಡಿ ಮಾಡುವ) ಗೆಲ್ಲಂಕದ ಓಟ: ಒಂದು ಗಂಟೆಯಲ್ಲಿ ಒಂದುನೂರುಐವತ್ತಕ್ಕೆ ಮೇಲ್ಪಟ್ಟು ರನ್ನುಗಳನ್ನು ಹೊಡೆದರು (ನಾಡಗೀ. ೦೫೦). [ ← ಇಂ. Run ]

**ರನ್ನೆ** (ನಾ). ಶ್ರೇಷ್ಠಳಾದವಳು : ಆ ಹೆಣ್ಗಳ ರನ್ನೆಗೆ ಪಲ್ಲವಕವ್ಯೂಹದೆರ್ದೆ ಯನಿಳ್ಕಳಿಗೊಂಡತಿ ರಾಜಿಸಿದವು ತಿವಳಿಗಳು (ಜಯಕಾ. ೩-೩೫); ಕಲಕೀರ ವಾಣಿಯರ್ಕಾಳಾಹಿವೇಣಿಯರ್ . . . ಕಳೆದುಳಿದ ರನ್ನೆಯರ್ (ತ್ರಿಖಭಾ. ೩೦-೩). [ರನ್ನ (< ರತುನ) + – ಎ₂]

**ರಪಣ, ರವಣ₁** (ನಾ). ೧. ಆಸ್ತಿ; ಐಶ್ವರ್ಯ : ಮಾಣಿಸಿದೊಡೆ ಮಾಣದೆ ರ[ಶಾಕಾಂ. ವ]ಪಣಮಂ ತೋಱಿಯುಮೊತ್ತೆಯನುಗ್ಗಡಿಸಿಯುಮಾಡಿಮೆನೆ (ಜಂಕಭಾ. ೭-೩ ವ); ಕೞಿಯುಂ ಕಂಡು ಕಟವೆಯುಂ ಬಿತ್ತುವಂತೆ ರಪಣಮಂ ಕಂಡು ಕಡನಂ ಕುಡುವಂತೆ (ಧರ್ಮಾಮೃ. ೦೪-೧೭೦). ೨. ಹಣ ; ಧನ : ವಚನಮಾತ್ರದ ರಪಣವಲಿ ರಚಿಸಿದನು ಗೋಧನಭೂಮಿದಾನವನು (ಕುವ್ಯಾಕ. ೯-೨೯); ಗುಪಿತದಿಂ ರಪಣವಿತ್ತೈದೆಂದು ಬೈದಂದು ಪೆರ್ಗಹಳೆ ಭೋರ್ಗರೆದವು (ಕರಕು. ೦೦-೦೨); ಸಾಲ ತೀರಿಸಲು ಅವನ ಬಳಿ ರಪಣವೂ ಇಲ್ಲದ್ದರಿಂದ, ಅವನ ಹೆಂಡತಿ ಮಕ್ಕಳನ್ನೂ ಆಸ್ತಿಪಾಸ್ತಿಗಳನ್ನೂ ಮಾರಿ ಸಾಲ

ತೀರಿಸತಕ್ಕದ್ದೆಂದು ಸಾರಿಗ ಆಜ್ಞೆಮಾಡಿದನು (ಕೃಷು. ೩೪೦). ೩. ರಕ್ಷಿಸುವ ಸಾಧನ; ಸಹಾಯಸಾಮಗ್ರಿ : ರಪಣವೇಕಲೆ ಹೂಹೆ ಭಟರಿಗೆ ವಿಪುಳ ಸಂಗ್ರಾಮದಲಿ ಭುಜವೇ ರಪಣವಲ್ಲೆ (ಶಿಶಾಗ. ೦೦-೯೯-೩೨); ರಪಣಗಳೇ ಕೆಲೆಹ ಹೂಹೆ ಭುಜರಪಣವು ಭಟಗಾಜಿಗಿಹೆ (ಜಾಡಜಾ. ೩೯). **ರಪಣ**$_1$ : ೨. ರಪಣಮಾದ ಜೂದುಗಾಣಿನಂತೆ ಮಗುಟ್ಟುಮಗುಟ್ಟುದ್ದಮಭ್ಯಾಸ ವಶದಿನಿನಿಯಳ ಕೂಟಮನೆ ಬಯಸಿ (ಶರ್ವಶೃ. ೬-೪ ಶ). ೪. ಜೂಜಿನಲ್ಲಿ ಒಡ್ಡುವ ಹಣ ; ಪಣ : ನೋಡುವರೆಡಗಣ್ಣ ಧಾಳದೊಳೆ ಹಾಸಗೆವಾಯೆ ಮನಂ ವಿಟರ್ಗೆ ಹೋದುವು ರಪಣಂ ಗುಣಕ್ಕವಳ ಜವ್ವನನೆತ್ತದೊಳಾರೊ ಸೋಲದರ್ (ಸೂಕ್ತಿಸು. ೬-೪೯೦) ; ಮಱುಜೂಜಂ ಕುಡವೇಟ್ಟುದಾಂ ರಪಣಮಂ ಬೇಟ್ಪೆಂತುಟಂ ತಂದೆನೆಂದೞಿಪಲ್ಕೆ (ಶಕಶಿ. ೬೩೯) ; ನಿಮಗೆ ಹರಿಬದೊಳೊಂದು ಮುಟ್ಟಿಗೆ ರಪಣವುಂಟೇ ಹಾಯ್ಕಿ ನಿಮ್ಮಾಟವನು ನೋಡುವೆನು (ಕುಮ್ಯಾಕೇ. ೨೯-೯೬). [ಇದು ಸಂಸ್ಕೃತದ 'ರೈ' ಮತ್ತು 'ಪಣ' ಎಂಬ ಎರಡು ಶಬ್ದಗಳು ಸೇರಿ ಆದ ಕೂಡುನುಡಿ ಇರಬಹುದು]

**ರಪರಪನೆ** ' ಜಪಜಪನೆ' ನೋ.

**ರಪಾಟ, ರಪಾಟಿ, ರಪಾಟೆ** (ನಾ). (ಉಕ) ವೇಗವಾದ ಓಟ ; ದೌಡು : ಎಲ್ಲಿಯೂ ಅವನ ಹೆಸರು ಕಾಣದಾಗಿತ್ತು. ಕೂಡಲೇ ಮೋರೆ ಬಾಗಿಸಿ ಕೊಂಡು ಸೈಕಲ್ಲು ತೆಗೆದುಕೊಂಡವನೇ 'ರಪಾಟ' ಹೊಡೆದನು (ಬೀಳಕ. ೩೬). **ರಪಾಟಿ** : ಮೂವರೂ ರಪಾಟ ಓಡಲಾರಂಭಿಸಿದರು (ಹೂಬಿ. ೨) ; ಒಂದು ಕಲ್ಲು ತೆಗೆದುಕೊಂಡು ಒಗೆ. ತಾನೇ ರಪಾಟ ಓಡುವುದು (ಹೊಂಬು. ೯). **ರಪಾಟೆ** : ಇಂದು ಬೇಟೆ. ನಾಳೆ ಕುದುರೆಯ ರಪಾಟೆ (ಕ್ರೀಸುಹ. ೬೩). [← ಹಿಂ. ರಪಟ್. ರಪಟ್ಟಾ; ಮರಾ. ರಪಾಟಾ]

**ರಪಾಟಿ** ' ರಪಾಟ ' ನೋ.

**ರಪಾಟೆ** ' ರಪಾಟ ' ನೋ.

**ರಪ್ಪಿಸು** (ಕ್ರಿ). (?) : ಜ್ಞಪ್ತಿಯಿಂ ರಾಗಾತಿರೇಕವಿಜ್ಞಾನದಿಂ ರಪ್ಪಿಸುವ ಸಿದ್ಧಾಂತವೇದಾಂತಮಂ ಜಱಿದು ಗುಪ್ತಕೋಟಿವಿಶೇಷಮಂತ್ರ ಬೀಜಾಕ್ಷರದಿ ಉಲ್ಪನೆಯಿದಂ ತನ್ನವಂ (ಅಂಗಪು. ೩೩-೩೦). [ ? + — ಇಸು ]

**ರಪ್ಪನೆ** (ಅ). ' ರಪ್ ' ಎಂಬ ಶಬ್ದದೊಡನೆ : ಭಾರಿತರು ಧರೆಗೆ ಮೂಲ ಕಳೆದುರುಳ್ದಂತೆ ರಪ್ಪನೆ ಬೀಳಲು (ಪಪಜಾ. ೧೮-೦೫).

[ರಪ್$_a$ + — ಅನೆ$_1$]

**ರಫು**$_1$ (ನಾ). ಹರಿದು ತೂತುಬಿದ್ದಿರುವ ಬಟ್ಟೆಗಳನ್ನು ದಾರದಿಂದ ಹೆಣೆದು ಜೋಡಿಸುವುದು : ಹಳತಾಗಿ ಚಿಂದಿಯಾಗುವೆನೆಂಬ ಬಟ್ಟೆಯನು ರಫುವಿನಲಿ ತೇಪೆಯಲಿ ಸರಿಮಾಡಲಾಗುವುದೆ? (ಪಪಜಾ. ೪-೦೩).

**ರಫುಮಾಡು** = "(ಉಣ್ಣೆ, ಮೊ. ದ) ಹೆಣಿಗೆಯಲ್ಲಿ ಬಿದ್ದಿರುವ ಕಂಡಿಯನ್ನು ಸೂಜಿಯಿಂದ ಬೇರೆ ಎಳೆಹಾಕಿ ಮುಚ್ಚು ; ರಫುಮಾಡು : ಎಳೆತುಂಬು" (Darn. ೨೦೪೩). **ರಫುಹಾಕು** = ರಫುಮಾಡು : ಹೋಗುವಾಗ ತೊಟ್ಟುಕೊಂಡಿದ್ದ ಬಟ್ಟೆ ಬದಲಾಯಿಸಿ, ದಿನದ ರಫು ಹಾಕಿದ ಮೂರುಮೊಳದ ಶೀರೆಯ ತುಂಡನ್ನು ಉಟ್ಟು (ಕೇನೋಶ. ೦೬).

[← ಅರ. ಹಿಂ. ಮರಾ. ರಫೂ; ಪಾರ. ರಫ್ ]

**ರಫೆ** ' ಚಿಪ್ಪೆ ' ನೋ.

**ರಫ್ತು** (ನಾ). ೧. ವ್ಯಾಪಾರಕ್ಕಾಗಿ ಸರಕನ್ನು ವಿದೇಶಕ್ಕೆ ಕಳುಹಿಸುವುದು ; ನಿರ್ಯಾತ : ಹತ್ತಿಯಲ್ಲಿ ಬಹುಭಾಗ ಇಂಗ್ಲೆಂಡ್. ಜಪಾನ್ . . . ಮುಂತಾದ ದೇಶಗಳಿಗೆ ರಫ್ತಾಗುವುದು (ಹಾಶ್ತ್ರ. ೯). ೨. ವ್ಯಾಪಾರಕ್ಕಾಗಿ ದೇಶದಿಂದ ಹೊರಕ್ಕೆ ಕಳಿಸುವ ಸರಕು.

**ರಫ್ತುಮಾಡು** = ಸರಕನ್ನು ದೇಶದಿಂದ ಹೊರಕ್ಕೆ ಕಳಿಸು ; ನಿರ್ಯಾತ ಮಾಡು : ಈ ನೀಲಿಯನ್ನು . . . ನಮ್ಮ ದೇಶಗಳಿಗೆ ರಫ್ತು ಮಾಡುತ್ತಾರೆ (ಶ್ರಬಾಇ. II, ೩೯). [←ಪಾರ. ಹಿಂ. ಮರಾ. ರಫ್ತ್]

**ರಫ್ತುವ್ಯಾಪಾರ** (ನಾ). ವಿದೇಶಗಳಿಗೆ ವಸ್ತುಗಳನ್ನು ಕಳಿಸಿ ಮಾಡುವ ವ್ಯಾಪಾರ ; ನಿರ್ಯಾತವ್ಯಾಪಾರ : ರಫ್ತುವ್ಯಾಪಾರದಿಂದ ದೇಶದೊಳಕ್ಕೆ ಹೆಚ್ಚು ನಿವ್ವಳಹಣ ಬರುವುದು (ಹಾಶ್ತ್ರ. ೦೪೬).

[ ರಫ್ತು + ವ್ಯಾಪಾರ ]

**ರಫ್ತುಸುಂಕ** (ನಾ). ವಿದೇಶಗಳಿಗೆ ಕಳಿಸುವ ವಸ್ತುಗಳ ಮೇಲೆ ಹಾಕುವ ಸುಂಕ : "ರಫ್ತುಸುಂಕ ; (ಸು)ನಿರ್ಯಾತಶುಲ್ಕ" (Export duty. ಶಕ್ತಿ. ೩೭). [ ರಫ್ತು + ಸುಂಕ$_1$ ]

**ರಬಟೆ** (ನಾ). (ಉಕ) ಅನಾವಶ್ಯಕವಾದ ಆಯಾಸ; ವ್ಯರ್ಥವಾದ ದಣಿವು : ಈಗ ಮಲಗು ಹೋಗು. ಒಂದು ಕಾಸು. ಇದೆಲ್ಲ ರಬಟೆ ತೊಗೊಂಡು ನೀನೇನು ಮಾಡೀ ! (ದಾಕೂಟಿ. ೬೩) ; ಇಷ್ಟು ಮಾತ್ರ ಹೇಳಬಲ್ಲೆ. ಈ ಅಡಿಗ ನಿನ್ನದು ಅಲ್ಲಾ ಅಂತ. ನಿನ್ನ ರಬಟೆ ನಾಲ್ಕುಮರುಷ ನನಗ ಗೊತ್ತಿಲ್ಲ ? (ಕಳ್ಳಕೃ. ೩೩). [ ← ಹಿಂ. ರಬಡ್; ಮರಾ. ರಾಬಡ್]

**ರಬಡೆ** (ನಾ). ಅಂಟಂಟಾಗುವಂತೆ ಅರೆದುಮಾಡಿದ ಲೇಪನದ್ರವ್ಯ; ಕಲ್ಕ : ಶುಂಠೀರಬಡೆಯನ್ನು ಮಾಡಿ ಅದನ್ನು ಬೆಚ್ಚಗೆ ಮಾಡಿಕೊಂಡು ಕೋಣೆಗೆ ನಡೆದಳು (ಪುತ್ರ. ಚಿ. ೬೨).

[ ← ಹಿಂ. ಮರಾ. ರಬಡೀ. ರಾಬಡೀ = ಗಟ್ಟಿಗೊಳಿಸಿದ ಹಾಲು]

**ರಬಾಬು, ರವಾಬು** (ನಾ). ಒಂದು ಬಗೆಯ ತಂತೀವಾದ್ಯ : ವೀಣಾ ರಬಾಬು ಸಾರಂಗಿ ಜಾಣರು ನುಡಿಸುವ ತಂಬುರ ಸ್ವರಗೇಳುತಾನಂದದಿ ಬಂದರೊಸೆದು (ಗೊಪುಸ್ತಕ. ೬-೦೦೬). **ರವಾಬು** : ರವಾಬು ಕಿನ್ನರಿ . . . ಕಾಲಕೀಯೆಂಬ ಮೂವತ್ತುಮೂಱು ತಂತೀವಾದ್ಯಂಗಳ್ (ಚಿದೇಶ. ೨೪೩).

[ ← ಅರ. ಹಿಂ. ಮರಾ. ರಬಾಬ್ ]

**ರಬ್ಬರು** (ನಾ). ೧. ಒಂದು ಬಗೆಯ ಮರ : ಮೊದಲು ರಬ್ಬರಿನ ಬೆಳೆಯುವಿಕೆಯು ದಕ್ಷಿಣ ಅಮೇರಿಕದ ಎಮೆಜಾನ್ ಕಾಡುಗಳಲ್ಲಿತ್ತು (ಬಾಂಶ್ರ. I, ೯೪). ೨. ರಬ್ಬರು ಮರದಿಂದ ಸುರಿಯುವ ರಸ ಮತ್ತು ಅದರಿಂದ ತಯಾರಿಸುವ ವಸ್ತು : ಈ ಮರಗಳಿಂದ ರಬ್ಬರನ್ನು ಸಂಗ್ರಹಿಸಿದರಾಯಿತು (ಬಾಂಶ್ರ. I. ೦೪೨); ರಬ್ಬರಿನ ಚೆಂಡುಗಳು . . . ಇನ್ನೂ ಏನೇನೊ ಸಾಮಾನುಗಳಿದ್ದವು (ಸ್ವರ್ಗಶಾ. ೯೦).

[ ← ಇಂ. Rubber ]

**ರಬ್ಬಳಿಕೆ** ' ರಬ್ಬಳಿಗೆ ' ನೋ.

**ರಬ್ಬಳಿಗೆ, ರಬ್ಬಳಿಕೆ** (ನಾ). ಜೋಳದಿಂದ ಮಾಡಿದ ಗಂಜಿ.–ಅಂಬಲಿ : ಎಮ್ಮ ಮನೆಯಲ್ಲಿ ಶಿವಪೂಜೆಗೆಯ್ದು ಮಾಡಿದ ರಬ್ಬಳಗೆಯನುಣಲೆಳ್ಳುಂ (ಬಾಳಶ. ೦೦-೩೩). **ರಬ್ಬಳಿಕೆ** : " ರಬ್ಬಳಿಕೆ = ದಸಾಳಗಂಜಿ " (ಪಾಠಕೋ. ೩೯). [ ? ]

**ರಬ್ಬಳೆ** (ನಾ). ಕೊಚ್ಚೆ; ರಾಡಿ : ರಬ್ಬಳೆಯ ನೀರುಮಂ ಶುಭ್ರವೆಸಗಲು (ಕ್ರೀಲಾಕ. ೪-೩೩). [ ← ಮರಾ. ರಬಡಾ ]

**ರಬ್ಬು** ' ಜಬ್ಬು ' ನೋ.

**ರಬ್ಬುದೋರು** (ಕ್ರಿ). ಆಡಂಬರವನ್ನು ತೋರಿಸು; ವೈಭವದಿಂದ ಮೆರೆ : ಹಬ್ಬಿತು ಗಗನ ಕೆಂಧೂಳು ಮುಸುಕಿ ಬಹ ಹಬ್ಬಿಸಗಳು ಪರಂಗಿಗಳೂ ರಬ್ಬುದೋರುತ ಅರಬ್ಬೆಗಳು ಭೂತಗಳಂತೆ ಗರ್ಭನಿರ್ಭೇದ ನೋಡುವರೇ (ಕಾಂಪಣ. ೩-೦೦).

[ ರಬ್ಬು (< ಜಬ್ಬು) + ತೋರು (< ತೋಱು) ]

**ರಭಸ** (ನಾ). ೧. ವೇಗ; ಜೋರು : ಕಲ್ಪಾಂತಶರಧಿಯ ರಭಸವಲ್ಲಿಯೆ ಕೇಳಲಾದುದು (ಕುಮ್ಯಾದ್ರೋ. ೨-೦೦) ; ಹೊಡೆವ ರಭಸದಲದ್ದಿಹೋಯಿತು ವಾದ್ಯನಿರ್ಘೋಷ (ಕುಶಿರಾ. ೩೬-೨೨) ; ಗಂಗಾನದಿ . . . ಭೂಮಿಗೆ ರಭಸದಿಂದ ಇಳಿದು (ಪತಂ. ೬). ೨. ಆರ್ಭಟ ; ಬೊಬ್ಬೆ : ಚೀಱದನು ಗಿರಿಗಳ ಬಿಸುಗೆ ಬಿಡೆ ನಡುವಿರುಳು ಕೋಳಾಹಳಿಸಿತಾ ರಭಸ (ಕುಮ್ಯಾಸ.೨-೯೩);

ಶರತರದ ಕೇರಿಗಳ ಭೂರಿಗಳ ಭೇರಿಗಳ ರಭಸದಿಂ ಪುರವೊಸೆದುದು (ಕಬಕ. ೫-೫). ೩. ಕೋಪ ; ಆಕ್ರೋಶ : ಅವನು ರಭಸದಿಂದ ಮಾತನಾಡಿದನು (ಲೋಕ). [ಸಂ.]

**ರಮ** (ನಾ). ೧. ಸಂತೋಷ : ಆನಂದ. ೨. ಹಿತಕರವಾದುದು ; ಸಂತೋಷದಾಯಕವಾದುದು : "ರಮಂ ರಮಣ್ಯಂ ರಮ್ಯಂ ರುಚಿರಂ ಪ್ರವೇಕಮೆನೆ ಸೌಮ್ಯಕ್ಕೆ ನಾಮಮುಕ್ಕುಂ" (ಶಬ್ದಮ. ೧೫೬-೨). ೩. ಹಿತವನ್ನುಂಟುಮಾಡುವವನು ; ಇನಿಯ; ನಲ್ಲ : ಅಜಾಂಡಮಂ ಪುದಿದು ಬರ್ಪ ದಶಾಸ್ಯನ ವಹ್ನಿಬಾಣಮುಂ ಜಯರಮಣೀರಮಂ ತವಿಸಿದಂ ಹರಿ ವಾರುಣದಿವ್ಯಬಾಣದಿಂ (ಕುಂದಚ. ೧೪-೧೬೦). ೪. ಗಂಡ; ಪತಿ. ೫. ಕಾಮ ; ಮನ್ಮಥ. [ಸಂ.]

**ರಮಜಾನ್** 'ರಮಜಾನು' ನೋ.

**ರಮಜಾನು**, ರಂಜಾನ್, ರಮಜಾನ್, ರಮ್ಜಾನು (ನಾ). ಅರಬ್ಬೀ ವರ್ಷದ ಒಂಬತ್ತನೆಯ ತಿಂಗಳು ಮತ್ತು ಆ ತಿಂಗಳಿನಲ್ಲಿ ಮುಸಲ್ಮಾನರು ಆಚರಿಸುವ ಉಪವಾಸದ ಹಬ್ಬ : ನಂದನಸಂವತ್ಸರದ ರಮಜಾನು ತಿಙ್ಗಳು (ಎಕ. IX. ಆನೇಕ. ೨-೦ ; 1652 ?). **ರಂಜಾನ್** : ರಂಜಾನ್‌ತಿಂಗಳನ್ನು ಉಪವಾಸದ ಹಬ್ಬವೆಂದು ಕರೆಯುತ್ತಾರೆ (ಲೋಕ). **ರಮಜಾನ್** : ರಮಜಾನ್‌ತಿಂಗಳು ಪೂರಾ ಮುಸಲ್ಮಾನರಿಗೆ ಉಪವಾಸ ವ್ರತದ ಸಮಯ (ಕಾಹಮ. ೦೯೯). **ರಮ್ಜಾನು** : ರಮ್ಜಾನು ತಿಂಗಳು (ರಾಜೇಂದ್ರ. ೭೯). [← ಅರ. ರಮಜಾನ್, ರಮಝಾನ್ ; ಪಾರ. ಹಿಂ. ಮರಾ. ರಮ್‌ಜಾನ್ ]

**ರಮಡೋಲು** ರಂಡೋಲು, ರಂಢೋಲು (ನಾ). ೧. ಒಂದು ಬಗೆಯ ದೊಡ್ಡ ಚರ್ಮವಾದ್ಯ (+) **ರಂಡೋಲು** : ೧. (ಎಕವ್ಯ. XVII. ೨೫). ೨. (ಆಲಂ) ದೊಡ್ಡದು ; ದಪ್ಪವಾದುದು : ತೆರೆದ ಕದ ತೋರಿಸಿತು ಎನ್ನ ಹರೆಯದ ಹೀರಬಂದಿರುವ ಕ್ರೂರಿಯನು– ಹೊಟ್ಟೆಯದು ರಂಡೋಲು, ಮೂಗು ತೆಂಗಿನಕಾಯಿ (ವಪ್ಪರ. ೫): ರಂಢೋಲು ೧. ಬಾಣ ಬಿರುಸು ರಂಢೋಲು ವಾದ್ಯ ! (ಹುಬ್ಬಹ. ೧೦). [ ← ಮರಾ. ರಮಢೋಲ್]

**ರಮಣ** (ನಾ). ೧. ಹಿತವನ್ನು ಉಂಟುಮಾಡುವಂತಹುದು ; ಆನಂದ ದಾಯಕವಾದುದು : "ರಮಣಾರ್ಥಂ ರಮಣೀಯಂ ರಾಮಣೀಯಕಂ" (ಕಕೂ. ೦೦೬) ; ಸುಮತಿಗಳು ಪರಮೇಶನೆಂದಡೆ ರಮಣದಿಂ ಪರಮಾತ್ಮ ನೆಂದಡೆ ವಿಮಳತ ಪರಬ್ರಹ್ಮವೆಂದೆಡೆ ಹರನ ನಾಮವಿವು (ಐಕಥ. ೫೫-೩೯). ೨. ವಿಲಾಸ ; ಲೀಲೆ : ಕ್ರೀಡೆ : ಪರಿಧಾವನ್ನಕ್ರಚಕ್ರಕ್ರಮಣ ರಮಣ ಸಂಜಾತಕಲ್ಲೋಳಮಾಲಾಸ್ಫುರದುದ್ಯತ್ಶೀಕರೌಘಸ್ಥಗಿತಗಗನದಿಗ್ಮಂಡಳಂ. . . ಶೋಭಿಕಂ . . . ರೌದ್ರಂ ಸಮುದ್ರಂ (ಎಕ. XI. ದಾವಣ. ೯೩–೯ ; 1164); ರಮಣ ನಿಟ್ಟಿಸಿ ಮುಗ್ಧೆ ಬಾರೆನುತ ಕುಸ್ತರಿಸಿ ರಮಣಮಂ ತೀರ್ಚಿ ಬೆಚ್ಚಂ ಪರಿದು ಸಂತೈಸಿ ರಮಣನಿರ್ವೇಡೆಗೆ ಕಳುಪಿದ (ವಂಕಾಚಾ. ೫-೨-೯೨). ೩. ನಲ್ಲ : ಪ್ರಿಯ : ಪ್ರಮದವನವಮಾದ್ಯದ್ಧ್ಯಾನೋದ್ಯಾನರಾಮಂ ರಮಣರಣ[ತ] ಗೋಷ್ಠೀಬಂಧಸಂಧಿಪ್ರಬಂಧಂ (ಕಬರಾ. ೩-೨೦೨). ೪. ಗಂಡ ; ಪತಿ : "ಕಾಂತಃ . . . ರಮಣಃ, ಪ್ರಾಣಾಧಿನಾಥಃ, ಅನುಕಃ– ಈ ೧೪ ಗಂಡಂ" (ಹಲಾಯು. ೬೨-೩೯೩) ; ರಮಣನಿರೆ ಪಾಣ್ಬನೊಳ್ಪತಿ ರಮಿಯಿಸಿದವಳುಂ ವೃಥಾನುವಾದದೆ ಫಳಮೇಂ ಕಮಳಿನಿ ದಿನಪತಿಗಲ್ಲದೆ ಸಮನಿಸಿ ದೋಷಾಕರಂಗೆ ಮೊಗಮಿತ್ರವಳೇ (ಅಪಂಚ. ೦೦-೯೦). ೫. ಕಾಮ; ಮನ್ಮಥ. ೬. ಕತ್ತೆ. [ಸಂ.]

**ರಮಣಿ** (ನಾ). ೧. ಸುಂದರಳಾದ ತರುಣಿ : ರಮಣಿಯ ಮುಖಕ್ಕೆ ಮಣಿಮುಕುರಮನೊಪ್ಪಿರೆ ತೋರ್ಪ ದಿವಿಜವಧು ಸಮ್ಮುಖದೊಳ್ ಹಿಮ ಕಿರಣಂಗಂ ರವಿಗಂ ಸಮನಿಪ ಪುಣ್ಣಮೆಯ ಸಂಜೆವೆಣ್ಬಿರೆ ಪೋಲ್ತಳ್ (ಜಗನ್ನಾ. ೧೦-೫೩೪). ೨. ಹೆಂಡತಿ ; ಪತ್ನಿ. ೩. ಹೆಂಗಸು ; ಸ್ತ್ರೀ : "ರಾಮಾ . . . ರಮಣೀ . . . ಯುವತಿಃ_ ಈ ೨೮ ಸ್ತ್ರೀಯರ್" (ಹಲಾಯು. ೭೯-೩೨೮); ಆರ ಸಿತೇಂದುಗಳತಿಬಳರಾಗಿ ಸಮದೊಳಿರೆ ರಮಣಿ ಪುಟ್ಟುಗಂ (ಜಾತಕ. ೩-೮೩) ; ೪. ನಲ್ಲೆ ; ಪ್ರಿಯೆ : "ವಲ್ಲಭನಾ ತನ್ನಲ್ಲಿ ರಮಿಸಲಿಚ್ಛೆಯುಳ್ಳವಳು ರಮಣಿಯೆನಿಸುಗು" (ಜಾತಿಲಾ. ೦೦೩) ; ರಂಡೆಯಾಸೆಗೆ ರಮಣಿಯಂದವ ಕೆಡಿಸಿದಂತಾಯ್ತು (ಕೌಶಿಕಾ. ೩೯-೩೦). [ ಸಂ. ರಮಣೀ]

**ರಮಣೀಯ** (ಗು). ೧. ಆನಂದವನ್ನುಂಟುಮಾಡುವ ; ಆಹ್ಲಾದಕರ ವಾದ : ಬಾಸಣಿಸುತಿರ್ಪುದು ಸಾರ್ಥತೆಯಂ ನಿಜಾಪ್ತೆಯೊಳ್ ನಿರೆ ಸುಗಂಧಿಮಂಡಳಮಿಳಾರಮಣೀರಮಣೀಯಕುಂಡಲಂ (ಚಂದ್ರಪ್ರ. ೩-೭೫) ; ರಮಣೀಯತರದೋಸ್ತಂಭಗಳನಗಲಿಸುತ ಶಿವಿರವಿಜೃಂಭಣನು ಮಣಿಮಯ ರಥದಿಂದಡರ್ದನಂಬರವ (ಕುರಣ. ೩-೨೬-೦೯) ೨. ಚೆಲುವಾದ ; ಮನೋಹರವಾದ ಚಿತ್ರದಲಿ ಚಿತ್ರಿಸುತ್ತಾ ಭಾವುಕರಮಣೀಯ ರಮಣಿಯಂ ಹೋಲಿಸಿದನಲ್ಲಿ (ಶಶ್ಯಾಂಗ. ೭೯-೨೦೨೮). (ನಾ). ೩. ಆನಂದ ದಾಯಕವಾದುದು. ೪. ಮನೋಹರವಾದುದು : ಆ ಜಲಪಾತದ ದೃಶ್ಯ ರಮಣೀಯವಾಗಿದೆ (ಲೋಕ). [ಸಂ.]

**ರಮಣೀಯತೆ** (ನಾ). ೧. ಅಂದ ; ಮನೋಹರತೆ : ಅಂತತಿರಮಣೀಯತೆಯನೊಳಕೊಂಡಖಿಳಜನಮನೋರಂಜನಮಾದ ಬೀದಿಗಳೊಳ್ (ಶಗಪ. ೨-೨೯ ವ). ೨. ಆನಂದವನ್ನುಂಟುಮಾಡುವಂತಹುದು: ಸುಖ ಕೊಡತಕ್ಕ ಅಂಶವು ಒಂದು ಇದೆ. ಇದನ್ನು ರಮಣೀಯತೆ ಎಂದು ಕರೆಯಬಹುದು (ಕೃಬಿ. ೦೬೯). [ಸಂ. ರಮಣೀಯತಾ]

**ರಮಣ್ಯ** (ಗು). ೧. ಸುಂದರವಾದ ; ರಮಣೀಯವಾದ. (ನಾ). ೨. =ರಮ ೧ ; "ರಮಂ ರಮಣ್ಯಂ ರಮ್ಯಂ ರುಚಿರಂ ಪ್ರವೇಕಮನೆ ಸೌಮ್ಯಕ್ಕೆ ನಾಮಮಕ್ಕುಂ" (ಶಬ್ದಮ. ೧೫೬-೨). [ಸಂ.]

**ರಮಲ** (ನಾ). ಕವಡೆ ಹಾಕಿ ಶುಭಾಶುಭಗಳನ್ನು ಹೇಳುವ ಫಲ ; ಜ್ಯೋತಿಷ : ಕನಸು, ಜ್ಯೋತಿಷ್ಯ, ಶಕುನ, ಮುಹೂರ್ತ, ರಮಲ, ದೈವಭಕ್ತಿ ಇತ್ಯಾದಿಗಳು ಒಂದೇ ಮೂಢಭ್ರಾಂತಿಮಾಲೆಯೊಳಗಿನ ಮಣಿಗಳು (ಐಕಾಶಂ. ೭೦). [←ಅರ. ಹಿಂ. ಮರಾ. ರಮಲ್]

**ರಮಲಜ್ಞ** (ನಾ). ರಮಲಶಾಸ್ತ್ರವನ್ನು ತಿಳಿದವನು : ರಮಲಜ್ಞನ ಕಡೆ ವಿಚಾರಣೆ ಆಯ್ತು (ಕಪಕ. ೩೩). [ರಮಲ + ಜ್ಞ]

**ರಮಾಧವ** (ನಾ). ೧. ಲಕ್ಷ್ಮೀಪತಿ ; ವಿಷ್ಣು : ಶಿವನಂತೆ ಗಂಗಾಹಿಮ ಕರಾವಹಂ ರಮಾಧವನಂತೆ ಗೋತ್ರೈಕಪಾಲಕಂ (ಕ್ಷಿಬಿಶಾ. ೬-೫).. ೨. [ಜೈನ] ವಾಸುದೇವ : ಅಗಲ್ದು ಪೋದನಧರಾಜನಿಳಾತಿಳಕಂ ರಮಾಧವಂ (ಕಕ್ಕಶ. ೦೩-೯೩). [ಸಂ.]

**ರಮಾರಮಣ** (ನಾ). = ರಮಾಧವ ೧ : ಮಾರಮಣ ಭೂರಮಣ ಪುರಂದರವಿಟ್ಠಲ ಸಾರ್ವಭೌಮ ರಮಾರಮಣ (ಪುರಂದ. ದಾ. ೨-೯೮-೬) ; ರಮಾರಮಣನಾಗಿ ಪ್ರಕಟತದ ಧರ್ಮಸಂತತಿಗಳಂ ಪಾಲಿಸುವ ಸುಕುಮಾರ ಮೂರ್ತಿಯಂ . . . ಎನಗೆ ತೋರಿಸಿದುದಿಲ್ಲ (ಕೃಬಿಶಾ. ೩೨-೩೯). [ಸಂ.]

**ರಮಾರಮಿ** (ಗು). ೧. ಎದ್ದು ಕಾಣುವ : ಢಾಳವಾದ, ರಮಾರಮಿರಂಗಿನ. ಹೊಸದಾಗಿ ಬಣ್ಣಬಳಿದ (Smart. ೩೦೪೩). (ನಾ). ೨. ಜಮೆ ಮತ್ತು ಖರ್ಚು ಸಮಾನವಾಗಿರುವುದು : ನಷ್ಟವಾಗದಿರುವುದು. ೩. ಎಲ್ಲಾ ವಿಧದಲ್ಲಿಯೂ ಒಂದೇ ಸಮನಾಗಿರುವುದು ; ಸಮತೆ [← ಮರಾ. ರಮಾರಮ, ರಮಾರಮಿ]

**ರಮಾವಲ್ಲಭ** (ನಾ). = ರಮಾಧವ ೧ : ಆ ವಿನುತಪಟ್ಟ ಸಟ್ಟ ರಮಾವಲ್ಲಭನಂ ವಧುವರಸಮ್ಮೆವೆರಸು ಸದ್ಭಾವದೆ ಪೂಜಿಸಿ (ಕೊಲ್ಹಾಪು. ೯-೨೬; 1147). [ಸಂ.]

**ರಮಿತ** (ಗು). ಆನಂದಗೊಳಿಸಲ್ಪಟ್ಟ ; ಹರ್ಷವನ್ನು ತಂದ : ಎಲ್ಲರುಂ ಕಾಂತಾರಮಿತಭೋಗಸಂಪದರ್ಕುಜರೆನಿಸರವನಿಳೆಯೊಳು (ಪ್ರಭುಲಿ. ೨-೦೦). [ಸಂ.]

**ರಮಿಯಿಸು** ' ರಮಿಸು ' ನೋ.

**ರಮಿಸು, ರಂಬಿಸು, ರಮಿಯಿಸು, ರಮ್ಮಿಸು** (ಕ್ರಿ). ೧. ಆನಂದಪಡು ; ಸುಖಿಸು : ಮೆರೆದುದು ವಿಷಯಮಧ್ಯೆ ರಾಜಧಾನಿ ಅಯೋಧ್ಯೆ, ರಮಿಸು ವಿಂದ್ರಿಯಸುಖದ ನಡುವಣಾತ್ಮಾನಂದದಂತೆ (ಕ್ರೀರಾಪಶಾ. ೬-೦೫೮) ; ಮೇರಿಯ ಪ್ರೇಮಸರೋವರದಲ್ಲಿ ರಮಿಸುವ ನಾರಾಯಣಮಾಸ್ತರರಿಗೆ ಹೊರಪ್ರಪಂಚದ ಅರಿವಿದೆಯೋ ? (ಕಾವೇಂ. ೬) ; ಇವನಲ್ಲಿ ಯೋಗಿಗಳು (ಆನಂದಿಸುವರು) ರಮಿಸುವರಾದುದರಿಂದ 'ರಾಮ' ಎಂಬ ಶಬ್ದವು ಬಂದಿದೆ (ಶಾರದ. ೯೯). ೨. ಪ್ರೀತಿಯಿಂದ ಸಮಾಧಾನಮಾಡು ; ಸಂತೈಸು : ಒಡಲುರಿಗೆ ಮೊರೆಯಿಡುವ ಕಡಲನು ಕಡುಪಿನೊಳು ಮುದ್ದಾಡಿ ರಮಿಸುವೆ (ಗಂ. ೫-೦೯) ; ಅವಳೊಪ್ಪದಿರಲು ಗಂಡು ಅನೇಕ ರೀತಿಯಿಂದ ರಮಿಸಿ ಸಮಾಧಾನ ಹೇಳುತ್ತದೆ (ಕನ್ನಜಾ. ೦೦೮) ; ಅವನನ್ನು ರಮಿಸಬೇಕಾದರೆ ನರಹರಿಗೆ ಸಾಕುಬೇಕಾಯಿತು (ಸಮುಕ್ರ. ೦೯೪) ; ಮಗನನ್ನು ಮುದ್ದಿಸಿ, ರಮಿಸಿ ಪೆಪ್ಪರ್‌ಮೆಂಟು ತಂದುಕೊಡುವುದಾಗಿ ಹೇಳಿ . . . ಹೊರಟ (ರೂಶಿಲ್ಪ. ೦೬೦). ೩. ಸಂಭೋಗಿಸು ; ಕ್ರೀಡಿಸು " ರಮಿಸು— ಕ್ರೀಡಾಯಾಂ " (ಕಮಧಾ) ; ಮಿಕ್ಕ ಹೊಲತಿಯರು ನೀವೆನೆ ನಿಮ್ಮ ಜವ್ವನದ ಸೊಕ್ಕು ರೂಪಿನ ಗಾಡಿ ಜಾಣತನದೊಪ್ಪವೇತಕ್ಕೆ ಯೋಗ್ಯಂ ರಮಿಸಿದವರುಂಟೆ ಶಿವಶಿವ (ಹಕಶಾ. ೬-೦೮) ; ಪುರುಷನೊಬ್ಬನಿರಲ್ಕೆ ಕಾಮಾತುರವಡಿಸಿ ನಿನ್ನಂ ರಮಿಸುವುದು ನೀತಿಯಲ್ಲೆನಸಗೆ (ಬಸವು. ೪೨-೩೨). ೪. ಆಸೆಪಡು ; ಕಾಮಿಸು : ಉದಿರ್ದಂಗದ ಬಾವನ್ನವುಡಿಯ ಸೊಗ ಸೊದವೆ ರಮಿಸಿದಾ ನವಸೌಗಂಧಿಕೆ ಪದೆದೆಳಗುವ ಪೊಸಪಜವೆಂಗಳ ಪಸುಳೆ ಯಿಂಚರಬೊಪ್ಪಿದುವು (ಜಯುಕಾ. ೪-೪). ೫. ಆನಂದವನ್ನುಂಟುಮಾಡು; ಸಂತೋಷಗೊಳಿಸು : ಬಿಲ್ಗೋಲಾಂತು ನಿಂದುದು ಬೇಡವೆಣ್ಗಳು ಕಣ್ಗೆ ರಮಿಸೆ (ಮೋಹತ. ೦೯-೮೦). **ರಂಬಿಸು :** ೨. ನಮ್ಮ ರಂಗ ಆಡಿದ ನೋಕುಳಿಯ ರಂಬಿಸಿ ಕರೆದು ಚುಂಬಿಸಿ ಒಗೆದನು ರಂಭೇರಿ ಗೋಕುಳಿಯ (ಪುರಂದ. ೫-೦೨೯ ಅಮುಕಲ್ಲಿ) ; ವನದೇವಿ ಮೆಲ್ಲಡಿಯಿಡುತ ತಾ ಬಂದು ಗಲ್ಲವ ಪಿಡಿದು ತೊಡೆಯೊಳಿಟ್ಟು ರಂಬಿಸಿ ಬಲ್ಲಿದನಾಗೆಂದು ಹರಸಿ (ಕಂಠ್ರಹಾ. ೦-೫೮) ; ನಂಬಿಸಿ ರಂಬಿಸಿ ಚುಂಬಿಸಿ ಎದೆಗೊಂಬಿ ಬಿಂಬೀಸಿ ಎದೆಯೊಳಗ ಅಂಧಾಂಗ (ಸಖೀಗೀ. ೫೧-೫) ; ಬಗೆಬಗೆಯಾಗಿ ರಂಬಿಸಿದೆ. ತಿಂಡಿ ಕೊಡುವೆನೆಂದು ಆಶ ಹಚ್ಚಿದೆ (ತಂಯುವಿ. ೦೯). ೪. ಗುಂಭೋಶಂಕರ ಎಂದು ರಂಬಿಸಿ ಕರೆವೆ (ಳಪಾಗಳ. ೪೨೨). **ರಮಿಯಿಸು :** ೧. ಸಮುದಿತಸಮಸ್ತ ಲೋಕಂ ರಮಿಯಿಸುವ ವನಾಂತಮಂತದುದ್ಯಾನವನಂ (ಪಶ್ಚುಕೋ. ೩೨-೦೩). ೩. ಅಲ್ಲಿಯೆ ತೊಡರ್ದಲ್ಲಿಯೆ ನಿಂದಲ್ಲಿಯೆ ರಮಿಯಿಸಿದಳಾಕೆ ಮರು[ದಾ] ತ್ಮಜನೊಳ್ (ಶಂತಶಾ. ೩-೦೯) ; ಕನಕಮಾಲಿಮಂ ಕೊಂಡು ಕಟ್ಟ ಕಟಿಯೊಳ್ ಪುರುಷಂ ರಮಿಯಿಸಿದಂದಾಕೆಗೆ ಗರ್ಭವಾಗದು (ಲೋಕೋಶ. ೯-೦೮೦). **ರಮ್ಮಿಸು :** ೧. ರಮ್ಮೆಯರೊಡಗೂಡಿ ರಮ್ಮಿಸುವ ಶ್ರೀಕೃಷ್ಣ (ಲಕ್ಷ್ಮೀಶೋ. ೮೦). ೨. ನಿಮ್ಮ ಹಾಗೆ ವಿದ್ಯಾರ್ಥಿಗಳ ಗದ್ದ ತುಟಿ ಹಿಡಿದು ರಮ್ಮಿಸುತ್ತಿರಲಿಲ್ಲ (ರಂಗರೋ. ೧೨೫). [ರಮ + —ಇಸು$_3$]

**ರಮೆ** (ನಾ). ೧. ಪತ್ನಿ ; ಹೆಂಡತಿ. ೨. ಲಕ್ಷ್ಮಿ : " ಇಂಗಡಲಣುಗಿ ರಮೆ ಯೆನಿಕ್ಕುಂ " (ಚತುಃಶಿ. ೦೧೩) ; ಇದನು ಕೇಳುವ ಸಜ್ಜನಂಗಳ ಸದನದಲಿ ರಮೆ ನೆಲಸುವಳು (ಕೌಶಿರಾ. ೨-೬೪). ೩. ಸಿರಿ ; ಸಂಪತ್ತು. ೪. ಶೋಭೆ : ತೇಜಸ್ಸು. ೫. ಸಂಭೋಗ ; ಕೂಟ : " ಕೂಡೆ ಭೋಗಿಪಲ್ಲಿ ರಮಾಭಿಧಾನಮಕ್ಕುಂ " (ಮಂಗರಾ. ೦೫೬-೬೪). ೬. ಹೆಣ್ಣು ; ಸ್ತ್ರೀ : " ಸ್ತ್ರೀಯುಂ ಸಂಭೋಗಮುಂ ಗೋವಿನಿಯಿನಿತು ರಮಾವಾಚಕಂ " (ಶಾಶಾರ. ೦೪೦). [ಸಂ. ರಮಾ]

**ರಮ್ಯ** (ಗು). ೧. ಚೆಲುವಾದ ; ಸುಂದರವಾದ. (ನಾ). ೨. ಅಂದ ವಾದುದು ; ಮನೋಹರವಾದುದು : ' ರಮ್ಮಿಡು ' ಪರಾ. [<ಪ್ರಾ. ರಮ್ಮ./ಸಂ. ರಮ್ಯ]

**ರಮ್ಮಜಾನು** ' ರಮಜಾನು ' ನೋ.

**ರಮ್ಮಿ** (ನಾ). ಇಸ್ಪೇಟು ಆಟದಲ್ಲಿ ಒಂದು ಬಗೆ : ಕೆಲಹೊತ್ತು ರಮ್ಮಿ ಯಾದರೂ ಆಡೋಣ (ಆಶೋಲೀ. ೦೨೮). [←ಇಂ. Rummy]

**ರಮ್ಮಿಡು** (ಕ್ರಿ). ಚೆಲುವಾಗು ; ಶೋಭಿಸು : ಹಮ್ಮಿನಿಂ ರಮ್ಮಿಡುವ ಮಕುಟವ ಚಿಮ್ಮಿದವು ಮುಮ್ಮುಖದಿ ಕವಚವ ನೆಮ್ಮಿದವು ದುಮ್ಮೆಸ್ಗಿ ಮಹಿಷಾಸುರನ ಶರಜಾಲ (ಅಂಬಿಶಾ. ೨೩-೨೩). [ರಮ್ಮ + ಇಡು$_1$]

**ರಮ್ಮಿಸು** ' ರಮಿಸು ' ನೋ.

**ರಮ್ಮೆ** (ನಾ). ೧. = ರಮೆ ೨ : ಒಮ್ಮಾನದಿಂದ ನೋಡೆನೆಂಬ ಭರದಿಂದ ರಮ್ಮೆ ಮುಖವ ತಗ್ಗಿಸಿ ನಾಚಿದಳು (ಪ್ರಾಂಶೀ. ೦೫೮-೬). ೨. ಸುಂದರ ಳಾದ ಸ್ತ್ರೀ—ತರುಣಿ : ರಮ್ಮೆಯರೊಡಗೂಡಿ ರಮ್ಮಿಸುವ ಶ್ರೀಕೃಷ್ಣ (ಲಕ್ಷ್ಮೀಶೋ. ೮೦).

**ರಮ್ಮೆಯರಸ** = ಲಕ್ಷ್ಮೀಪತಿ ; ವಿಷ್ಣು : ತಿಮ್ಮಯ್ಯಾ ನಿನ್ನ ಪಾದವ ಪಮ್ಮೈಸಿದೆನೊ ನಾನು ಸುಮ್ಮನಿರದಿರು ರಮ್ಮೆಯರಸಾ. (ತೀರ್ಥಮ. ೦೪೮) ; ಪರಮ್ಮಪುರುಷ ಪುರುಷೇಶ್ವರ ರಮ್ಮೆಯರಸ ರಾಗಾದಿ ದೂರಾ (ಮೋಕ್ಷರೀ. ೨೬-೨). [ < ರಮೆ ]

**ರಮ್ಯ** (ಗು). ೧. ಚೆಲುವಾದ ; ಸುಂದರವಾದ : ಅಕ್ಷಯಕೀರ್ತಿ . . . ರಮ್ಯಸುರಲೋಕಸುಕಕ್ಕೆ ಭಾಗಿ (ಎಕ. II. ೨೧-೪; ಸು. 700); ವಸಂತನಪೊಲ್ ಕರಮೆಸೆದಂ ರಮ್ಯಗಾತ್ರನಾ ಮುನಿಪುತ್ರಂ (ಶಾರಂಪು. ೬೨೬). ೨. ಸಂತೋಷದಾಯಕವಾದ. (ನಾ). ೩. ಚೆಲುವಾದುದು ; ಸುಂದರವಾದುದು : " ರಮಂ ರಮಣ್ಯಂ ರಮ್ಯ ರುಚಿರಂ ಪ್ರವೇಕಮೆನೆ ಸೌಮ್ಯಕ್ಕೆ ನಾಮಮಕ್ಕುಂ " (ಮಂಗರಾ. ೦೨೬-೨). [ಸಂ.]

**ರಮ್ಯಂಬಡೆ, ರಮ್ಯವಡೆ** (ಕ್ರಿ). ಚೆಲುವಾಗು ; ಸುಂದರವಾಗು : ಒಂದಾತ್ರಮಪಟದ ಸುರುಳ್ದೆಗೆಯುತ ಮುಖವಸ್ತ್ರವನು ಕಳೆಯಲ್ ಕುವರನ ಚೆಲ್ವಂ ಚಿತ್ರದ ನಳಿನವಿಲೋಚನೆ ನೋಡುವೆನೆನುತಂ ಗಳಿಲನೆ ಮುಸುಕಂ ತೆಗೆದಂದದಿನತಿರಮ್ಯಂಬಡೆಯಿತ್ತು (ಜಯುಕಾ. ೩-೬) ; **ರಮ್ಯವಡೆ :** ನಗರದೊಳು ಬಂದು ಕಂಡನು ಬಹು ರಮ್ಯವಡೆದಿರ್ದ ಭಾಗೀರಥಿಯ (ಮೋಹತ. ೬-೩೦). [ ರಮ್ಯ + ಪಡೆ$_1$ ]

**ರಮ್ಯತೆ** (ನಾ). ಚೆಲುವು ; ಸೌಂದರ್ಯ : ಹಳ್ಳಿಯ ಜೀವನದ ರಮ್ಯತೆ— ವಿಷಮತೆಗಳು . . . ವ್ಯಕ್ತವಾಗಿವೆ (ಸಮುಕ್ರ. ೮ ಪೀಠಿ). [ ಸಂ. ರಮ್ಯತಾ ]

**ರಮ್ಯತೆವಡೆ** (ಕ್ರಿ). ಚೆಲುವಾಗು ; ಶೋಭಿಸು : ಎಡಬಲದಲಿ ಸತ್ಯಭಾಮೆ ರುಕ್ಮಿಣಿಯ ಹೊಂದೊಡವಿನ ರತ್ನದೀಪ್ತಿಗಳ ಪಡೆದ ತಾಯೆಂಬಂತೆ ಕೌಸ್ತುಭ ರಮ್ಯತೆವಡೆದುದು ಹರಿಯುರಸ್ಥಳದಿ (ಮೋಹತ. ೦೫-೦೧). [ ರಮ್ಯತೆ + ಪಡೆ$_1$ ]

**ರಮ್ಯತ್ವ** (ನಾ). = ರಮ್ಯತೆ : " ರಾಮಣೀಯಕಂ ರಮ್ಯತ್ವಂ " (ಪಶ್ಚುಕೋ. ೦೦೬-೩೦). [ ಸಂ.]

**ರಮ್ಯವಡೆ** ' ರಮ್ಯಂಬಡೆ ' ನೋ.

**ರಯ್$_1$** (ನಾ). ವೇಗವನ್ನು ಸೂಚಿಸುವ ಒಂದು ಅನುಕರಣ ಶಬ್ದ : ' ರಯ್ಯನೆ ' ಪರಾ.

**ರಯ್$_2$** (ನಾ). ಸಂಪತ್ತು ; ಸಮೃದ್ಧಿ : ರಯ್‌ಗೆ ಕರೆದೊಯ್, ಓ ಅಗ್ನಿ ! (ಶ್ರೀರಾಪಶಾ. ೮೨೬-೦). [<ಸಂ. ರೈ ]

**ರಯ** (ನಾ). ೧. ವೇಗ ; ರಭಸ : " ರಯಂ ಜವಂ . . . ವಾಜ ಮೆನಲೋಟಮಕ್ಕು " (ಮಂಗರಾ. ೮೦-೦೨) ; ಜಲಪ್ಲವಾವಿಳ ವಿಲೋಳ

ವೀಚೀರಯಪ್ರದಾರಿತ್ರಕುಳಾಚಲೋದಧಿಪರೀತಮಾಗಿರ್ದ ಜಂಬೂದ್ವೀಪದೊಳ್ (ಕುಶನಾ. ೦-೫೦ ವ). ೨. ನೀರಿನ ಹರಿವು ; ಪ್ರವಾಹ : " ಓಘಃ, ಪ್ರವಾಹಃ . . . ರಯಃ — ಈ ೬ ತೊರೆಯ ಹರಿಹಂ " (ಕರಾಯು. ೦೦೦-೯೭) : ಹರನಂತೆ ಧನದಸಖ ನವರತ್ನದಂತೆ ಗುಣವಿರಚಿತ . . . ಸದ್ವರುಷದುತು ನಿಮ್ನಗಾರಯದಂತೆ ರಚಿತಾನುಕೂಲೆ (ಕಬ್ಬಿ. ೦೦-೫೭). [ಸಂ.]

**ರಯುಗ** (ನಾ). ವೇಗವಾಗಿ ಚಲಿಸುವುದು ; ಗಾಳಿ ; ಮಾರುತ. **ರಯುಗಸಖನೇತ್ರ** = ವಾಯುವಿನ ಮಿತ್ರನಾದ ಅಗ್ನಿಯನ್ನು ಕಣ್ಣಿನಲ್ಲಿ ಹೊಂದಿರುವವನು ; ಶಿವ : ರಯುಗಸಖನೇತ್ರನಂ ಪಂಚಶರದಿಂದೆಚ್ಚ ಮಾಯಣರಾಯನ ಸುಪ್ರತೀಕವೇ ದಿಗ್ಗಜ (ಶೃಂಖ. ೫-೦೦೩). [ಸಂ.]

**ರಯುಗಮನೆ** (ನಾ). ಚುರುಕಾದ ನಡಿಗೆಯುಳ್ಳವಳು : ಸತಿತಳು ಘಯಭಕ್ತಗೆ ರಯುಗಮನೆ (ಅಗ್ನಿಹಂ. ೭೦). [ ಸಂ. ರಯುಗಮನಾ ]

**ರಯುಪತಿ** (ನಾ). ಗಾಳಿಯ ಅಧಿದೇವತೆ ; ಮಾರುತ : ರಯುಪತಿಯುಂ ಧನಪತಿಯುಂ ಪಶುಪತಿಯುಮೆಂಬಿದಿಕ್ಪತಿಗಳ್ . . . ಇರ್ದರ್ (ಕನ್ನಕ. ೦೦-೬೦). ' ರಯುಗ ' ಪರಾ. [ಸಂ.]

**ರಯಿ** (ನಾ). ಸಂಪತ್ತು ; ಐಶ್ವರ್ಯ : " ರಯಿ (ರಯ್ಯ) — ರೈ = ಸಂಪತ್ತು " (ಕನ್ನಕೋ. ೩೭). [ ಸಂ. ]

**ರಯಿಸು**, ರೈಸು (ಕ್ರಿ). ಶೋಭಿಸು ; ರಂಜಿಸು : ಮತಂಗನೊಲವಿಂದೆ ಬಾಜಿಸುವ ಘನಮೃದಂತರ ಮೃದಂಗಗತಿ ರಯಿಸಲು (ಸೌಂದಕ. ೦-೯೦). **ರೈಸು** : ನಾಗ ಇಲ್ಲದ ಮನೆ ರೈಸುವುದೇ ಇಲ್ಲ (ಹಕಕ. ೦೦); ಮಕ್ಕಳು ಮನೆಯಲ್ಲಿ ಆಚೀಚೆ ಓಡಾಡದೆ ಹೋದರೆ ಏನೂ ರೈಸುವುದಿಲ್ಲ (ಮರಕು. ೦೦೩). [< ರಯ್ಯ + — ಇಸು$_3$]

**ರಯು** (ನಾ). = ರಯ ೧ : ಕರಿಯಂ ಪಿರಿಯ ಕುದುರೆಯುಂ ತೇರ್ವೆರಿಯುಂ ಪದಚರರಯಿಯುಂ ಕೊಂಡ . . . ಗಣವರಿಯರನಾಂ ತುತಿಪೆಂ (ಉದ್ಯರೇ. ೦-೦೯). [ಸಂ. ರಯ]

**ರಯ್ಯ** (ಗು). ೧. ಚೆಲುವಾದ ; ಸುಂದರವಾದ : ಉಲಿವ ಕಾಲುಂಗುರವನಾ ರಯ್ಯವಪ್ಪ ಮಂಟಿಗೆ ಕಿಱಿಯ ಪಿಲ್ಲಿಗಳನಾ ರಮಣಿಗೊಲ್ದಲಂಕರಿಸಿ (ಶದ್ಯರಾ. ೩. ೪೫). (ನಾ). ೨. ಅಂದವಾದುದು ; ಮನೋಹರವಾದುದು : ಇದರಂದಂ ಬಿಸಮಂದಂ . . . ಇದಱೊಳ್ ನಾಟಕಶಾಲೆ ರಯ್ಯಂ (ಶಂಶಾ. ೬-೩): ಜನಮಡದಿಯದು ಶ್ರೀರಂಗಪಟ್ಟಣ ಭಾಗ್ಯದೆಸಕದೊಳತಿರಯ್ಯವಾಗಿ (ಕಂಶಶ. ೫-೨). ' ರಯ್ಯಂಬಡೆ ' ಪರಾ. [< ಸಂ. ರಮ್ಯ]

**ರಯ್ಯಂಬಡೆ**. ರಯ್ಯವಡೆ (ಕ್ರಿ). ಚೆಲುವಾಗು ; ಸೊಗಸಾಗು : ನವರತ್ನರಂಜಿತಮಾಗಿ ರವಿಮಂಡಲಮಂ ಮಂದಮಾಡುವ ಸುವರ್ಣಕಳಶದರ್ಪಣಾಳಿಗಳಿಂ ರಯ್ಯಂಬಡೆದು (ಗಂಕ. ೦೦-೨೯ ವ). **ರಯ್ಯವಡೆ** : ಕಡೆಯಾಣಿ ಚಿನ್ನದ ಪ್ರತಿಮೆಗೆ ಹುಳಿಯನು ತೊಡೆದೊಪ್ಪವಿಕ್ಕಿದಂದದಲಿ . . . ರಯ್ಯವಡೆದಿರ್ದಳೀನ ಬಣ್ಣಿಸುವೆ (ವೋಕಕ. ೦೬-೨೦). [ರಯ್ಯ + ಪಡೆ$_1$]

**ರಯ್ಯನೆ** (ಅ). ವೇಗವಾಗಿ ; ಜೋರಾಗಿ : ನಸುನಗೆ ದಶನಪ್ರಭೆಯಿಂದ ಕೊಡಲಿ ಮಸೆ ಧವಳಿಸಿದಪ್ಪೊಲಯ್ಯು ರಯ್ಯನಾ ವೀಳಯಕೆ ನೀಡಿದಪ ಕಯ್ಯ (ಶಾದಂಖ. ೪೬೨); ಕಾನನಕರಿಯಂತೆ ಬಂದುದೆಲರೊಯ್ಯನೆ ರಯ್ಯನೆ ಪಾರಿದೇಶದಿಂ (ಅರ್ಣಿ. ೫-೯೮); ರಯ್ಯನೆ ಬರ್ಪ ಪಗೆಯ ಪೊಸತಣೆಗಳಂ ಪಿಂಡಿಸಿ (ರಾಮಾಕ. ೯೩-೫). [ರಯ್$_1$ + — ಅನೆ$_1$]

**ರಯ್ಯಪ** (ನಾ). ಒಬ್ಬಾತನ ಹೆಸರು : ಇದಕ್ಕೆ ಸಕ್ಕಿ ಮಂದಿರ ಬೂವಯ್ಯ ಬೆಳ್ಳನ ಆರಕಾಡಿ ಬಾರದರೆಜಿಯಪ್ಪ ಕಿದಟೆಯ ರಯ್ಯಪ (ಎಕ. IV, ಹುಣಸೂ. ೯೨-೦೨ ; ೯೭೦). [ರಯ್ಯ + ಅಪ (<ಅಪ್ಪ$_1$)]

**ರಯ್ಯರಲ್** (ನಾ). ಸುಂದರವಾದ ಹೂವು ; ಸೊಗಸಾದ ಪುಷ್ಪ : ಕೆಯ್ಯದ ಮುಗಿದಿರೆ ಪೂಜಿಸಿ ರಯ್ಯರಲಂ ಕೊಟ್ಟಸಭವನಂಬಾರಮಣಂ (ಅಬ್ಬಾರ. ೨-೦೯). [ ರಯ್ಯ + ಅರಲ್$_2$ ( < ಅಲರ್$_2$ ) ]

**ರಯ್ಯವಡೆ** ' ರಯ್ಯಂಬಡೆ ' ನೋ.

**ರಲ್ಲಕ** (ನಾ). ೧. ಉಣ್ಣೆಯಿಂದ ತಯಾರಾದುದು ; ಕಂಬಳಿ : "ಆವಿಕಃ, ಔರಭ್ರಃ, ರಲ್ಲಕಃ, ಊರ್ಣಾಯುಃ, ಕಂಬಳಃ— ಈ ೫ ಕಂಬಳಿ" (ಕರಾಯು. ೯೦-೩೯೭). ೨. ರೆಪ್ಪೆಯ ಕೂದಲು ; ಎವೆಗೂದಲು. ೩. ಒಂದು ಬಗೆಯ ಜಿಂಕೆ. [ಸಂ.]

**ರವ** (ನಾ). ಧ್ವನಿ ; ಶಬ್ದ : " ಘೋಷಮಾ ಶಬ್ದಮಾ ರವಂ " (ಮುಂಗರಾ. ೯-೭೦) ; ಚಾರುತರಯಜ್ಞವಿದ್ಯಾಪಾರಗರ ರವಂಗಳಂ . . . ನೆಗೆಟ್ದುದಾಹುತಿಧೂಮಂ (ಕಂಕಶಾ. ೬-೩೯) ; ವಿಮೋಹಮೃಗಮಂ ಮಿಥ್ಯಾಕಂದರದೊಳ್ ಬೆದಱಿಟ್ಟುವ ದುಂದುಭಿರವದಂತಿರೊಗೆಯೆ ಗಂಭೀರರವಂ (ಯಶೋ. ೯-೨೨). [ಸಂ.]

**ರವಂಗುಡು** (ಕ್ರಿ). ಧ್ವನಿಮಾಡು ; ಶಬ್ದಮಾಡು : ಕಲರುತಿಕಿಂಕಿಣೀಕಲಿತಕಾಂಚಿ ರವಂಗುಡೆ . . . ನೀಬಿ ಬಿಡದೇಳ್ದಳೊಯ್ಯನೆ ರಮ್ಯಹರ್ಮ್ಯಮಂ (ರಾಜಶೇ. ೭-೦೭). [ರವ + ಕುಡು$_1$ (<ಕೊಡು$_1$)]

**ರವಕುಳ**, ರೌಕುಳ (ನಾ). ೧. ಹಾಹಾಕಾರ ; ಆಕ್ರಂದನ ; ಬೊಬ್ಬೆ : ರವಕುಳವ ನಾನೇನ ಹೇಳುವೆನವನಿಪತಿಯಾ ಕರ್ಣ ಮೊದಲಾದವರ ರಾಣೀವಾಸ ಬಹಳಾಕ್ರಂದನಧ್ವನಿಯ (ಕುವ್ಯಾಕ. ೧-೬). **ರೌಕುಳ** : ೨. ಅವ್ಯವಸ್ಥೆ : ಚೆಲ್ಲಾಪಿಲ್ಲಿ : ಬಲುಸೆರಿಯ ನಾರಾಚಜಾಳದ ಮಳೆಯ ನೆತ್ತರ ಹೊನಲುಗಳ ರೌಕುಳದ ಮಳೆಗಾಲದಲಿ ಹುಟ್ಟಿತು ಭಟರ ಶೌರ್ಯಶಿಖಿ (ಕುವ್ಯಾದ್ರೋ. ೦೫-೨೯) ; ದಿಂಡುಗೆಡೆದುದು ನೆಲಕೆ ರಕ್ಕಸದಿಂಡೆಯನ ರೌಕುಳದ ರಕುತದ ಮುಂಡ (ತೊರರಾ. ೦-೦೦-೧೮). ೩. ಅತಿಶಯ ; ಆಧಿಕ್ಯ : ಜೋಲ್ದ ಖಂಡಗಳ ಮುಂಡಗಳ ಮುರಿಮೂಳೆವಿಂಡುಗಳ ಪೊಸಬಗೆಯ ಜೊಂಡುಗಳ ರೌಕುಳಂ ಕಂಗೆಸೆದುದು (ಕಬ್ಬಿ. ೨೬-೦೯). [←ಮರಾ. ರವಖಳ]

**ರವಕೆ** ' ಱವಿಕೆ ' ನೋ.

**ರವಣ**$_1$ ' ರಪಣ ' ನೋ.

**ರವಣ**$_2$ (ಗು). ೧. ಅಳುವ ; ರೋದಿಸುವ. ೨. ಹಾಸ್ಯಕರವಾದ ; ವಿನೋದಕರವಾದ. ೩. ಚಂಚಲವಾದ; ಅಸ್ಥಿರವಾದ. ೪. ಸುಡುವ; ಚುರುಕಾದ. (ನಾ). ೫. ಕೋಗಿಲೆ. ೬. ಒಂಟೆ : "ದಾಸೇರಕಃ . . . ಮಯಃ, ರವಣಃ, ಕರಭಃ, ಶೃಂಖಳಕಃ—ಈ ೭ ಒಟ್ಟೆ"(ಕರಾಯು. ೯೬-೦೨೫). [ಸಂ.]

**ರವಣೆ** ' ರವಳಿ ' ನೋ.

**ರವಣೆ** (ನಾ). ಧ್ವನಿ ; ನಾದ : ವಿವಿಧವೀಣಾವಾದ್ಯಕೋಮಲರವದ ಮಧುರಮೃದಂಗತತಿಗಳ ರವಣೆಗಳ . . . ಮೇಳವು ಮುತ್ತಿ ಮುಸುಕಿತು (ಕುವ್ಯಾಕ. ೦೨-೦೯) ; ಮೇಲುವಾದ್ಯದ ರವಣೆ ನಿಂದಿತ್ತು (ರಾಮಾಸಂ. ೨-೪-೯೩). [ಸಂ. ರವಣ]

**ರವದಿ** ' ರವದೆ ' ನೋ.

**ರವದೆ**, ರವದಿ (ನಾ). (ಉಕ) ಜೋಳ ಮುಂತಾದುವುಗಳ ಒಣಗಿದ ಗರಿ ; ಸೊಪ್ಪೆ : ಬರುಗಾಳಿಗೆ ಸಿಕ್ಕಿದ ರವದೆಯು ಮೇಲಕ್ಕೆ ಹಾರುವಂತೆ (ಶ್ರೀರಾಹ. ೩೦) ; ಗಾಳಿಗೆ ಹೊಲದಲ್ಲಿಯ ರವದೆ ಸಪ್ಪಳ ಮಾಡಿತು (ಕಮಗೋ. ೩೭). **ರವದಿ** : ಅವನಿಯೊಳು ಭಿಕ್ಷುಕಂ ರವದಿಗಿಂ ಬಲು ಹಗುರು (ಮುಕ್ಕಿ. ೯-೩) ; ರವದಿಯನ್ನೆತ್ತಿ ತುಟಿಹಚ್ಚುಕೂದಿದನು ನಾ (ಹರಿಗೀ. ೬೬-೦೮); ದುರ್ಧರಪರಿಸ್ಥಿತಿಗೆ ಸಿಕ್ಕ ರವದಿಯಂತ್ರ ಹಾರಾಡುವುದು ಜಯಂತನ ಸ್ಥಿತಿಯಾಗಿದೆ (ಜಯಂತ. ೫೪೩). [ ? ]

**ರವದೋಱು** (ಕ್ರಿ). ಧ್ವನಿ ಮಾಡು : ಹೇಳು : ದಿವಿಜಾಜಸನ್ನಿಧಯಾಪ ರಾಜನೆಯ್ತಂದನವಧಾನ ಸ್ವಾಮಿ ಪರಾಕು . . . ಎಂದು ರವದೋಱಿದರು ವೇತ್ರಧರರು (ಶಶಿ. ೩೬-೩೦). [ರವ + ತೋಱು]

**ರವನಿಸು** (ಕ್ರಿ). (ಜರಡಿಯಂತೆ) ತೂತಾಗು : ರಂಧ್ರಗಳಿಂದ ತುಂಬು : ದಿವಿಜರಿಪುಗಳ ಬಾಣವೃಷ್ಟಿಗೆ ದಿವಿಜನಿಕರವುಪಾಸ್ಮೃತತಿಯಲಿ ರವನಿಸಿತು ರವಿಮಧ್ಯ (ಕಥಾಗ. ೬-೧೦-೧೮).
[ರವನ್ಸ (ಕ್ರಿ ← ಮರಾ. ರವಳ) + — ಇಸು]

**ರವರವ** (ಗು). ಭಯಂಕರವಾದ ; ಘೋರವಾದ : ಈ ಧರ್ಮ್ಮವ ತೊಡದವ ರವರವನರಕದ ಕಡಲೊಳ್ ಕೆಡದವ (ಎಶಿ. VII. ಶಿಕಾ. ೬೯-೨೯; 1220). [< ಪ್ರಾ. ರಉರವ. / ಸಂ. ರೌರವ]

**ರವಸ** (ನಾ). ಆರ್ಭಟ : ರಭಸ: ಹೊಯಿಂದ ಭೇರಿಯ ನಾದ ಸಾಗಿಸ್ಮಲ್ಲಿಗೆ ಅದನಾರು ಬಲ್ಲರು ಸೇಧಿ ರವಸವ (ಬಸವಪು. ೨೪೦-೪೦೬). ಎರೆ ಧನುವ ರ್ಘೋಂಕರಿಸಿ ರವಸದಾ ದ್ರೋಣಮುಂಡಲವನು ದಿಕ್ತಟವನಳ್ಳಿರಿಯ ಪೂಡಿದರು ರಥವೆರಡೆ ಯುಕ್ತಿಯಿಂ ಗರುಡ ಹನುಮಂತರಂ ಸಿಂಧಕವನೆತ್ತಿದರು ಜೋಡಿಸಿದರೇರಿದರು ರಥವ ಪರಿಸಿವರಿವರು ಖಾಂಡವನಕ (ಕುಮಾರ. ೦೬-೨೭).
[< ಸಂ. ರಭಸ]

**ರವಸಂಗತಿ** (ನಾ). [ಸಂಗೀತ] ಸಪ್ತಸ್ವರಗಳ ಸಪ್ತಅವಸ್ಥೆಗಳಲ್ಲಿ ಒಂದು : ಸರಿಗಮಪಧನಿಯೆಂಬ ಸಪ್ತಸ್ವರಪ್ರಕೃತಿಗಳಿಂ ಅಂಕುರಸ್ಥಾಯಿ . . . ರವಸಂಗತಿ . . . ಮುಕ್ತಾಯಗಳೆಂಬ ಸಪ್ತಾವಸ್ಥೆಗಳಲ್ಲಿಯುಂ (ಶಿಶಿಕ. ೨೬೩). [ಸಂ.]

**ರವಳಿ**. ರವಣೆ (ನಾ). ೧. (ವಾದ್ಯ ಮುಂತಾದುವುಗಳ) ಧ್ವನಿ; ಘೋಷ; ಶಬ್ದ : ಪೊಯ್ಸಕ್ಕವದ್ದಳೆಯ ದನಿಯುಂ ಉದ್ದುವ ಜುಂಜಿಯ ರವಮುಂ ಬಾರಿಪ ಜಂಕರಮುಂ ರವಳಿಯುಂ ನೆರವೆ (ಅರ್ಜುನ. ೮-೭೫ ವ); ಆ ಪ್ರಹಸ್ತನು . . . ಎಱಗಿದನು ರವಿತನುಜ ಪ್ರಭಂಜನಸೂನುಮುಖ್ಯಮಹಾಪ್ರಚಂಡರ ಬಳಗಳಲಿ ಬಲುರವದ ರವಳಿಯಲಿ (ತೊರವೆ. ೬-೦೯-೪೩) ; ಕೋಟಿ ಖುರಪುಟ ರವಳಿಯಾಟ ಕೇಳುತಿದೆ (ಪ್ರಭುಲಿಂ. ೬೯-೧೯). ೨. ಒಂದು ಬಗೆಯ ರಣವಾದ್ಯ : ನರಸಾ ಬಹುಬಲಸಹಿತಲಾದೈತರಲು ರಭಸದ ರವಳಿಯಲಿ ಮಿಗೆಯುರವಣಿಸಿ ಹಯ ಸೇರಿತಂದು ತ್ರಿಗರ್ತದೇಶವನು (ಜೈಮಿ. ೩-೬೨) ; ಯುದ್ಧಶಿಬಿರಗಳಲ್ಲಿ ರವಳಿ ಎಂಬ ವಾದ್ಯವನ್ನು ಘೋಷಿಸುತ್ತಿದ್ದರು (ಕರ್ನಾ. ೨೬೯). ರವಣೆ : ೧. ಭೋರೆಂಬ ನಿಸ್ಸಾಳ ರವಣೆಯಿಂ (ಶಶಿ. ೨೬-೨೩). ೩. ಅಬ್ಬರ ; ಠೀವಿ : ಪ್ರತಿಶರಂಗಳ್ ಮಿಗೆ ಪೂಡಿ ರವಣೆಯೊಳ್ ರಾಮನೊಡನೀತೆಂದಳು (ಶಶಿ. ೪೦-೦).

**ರವಳಿಘೋಷಿಸು** = ರವಳಿ ಎಂಬ ರಣವಾದ್ಯವನ್ನು ಮೊಳಗಿಸಿ ಯುದ್ಧಕ್ಕೆ ಸೂಚನೆಯನ್ನು ಕೊಡು : ಆಗಳಿರ್ದುಂ ಬೀಡುಗಳೊಳಂ ಭೋರೆಂದಾರ್ದು ರವಳಿಘೋಷಿಸಿ ಕೊಳ್ವಿ ವೀಸಿದಾಗಳ್ (ಶಂಕರ. ೦೦-೪೩ ವ); ಸುಭಟಾಲಾಪಮನಾಲಿಸುವ ರವಳಿಘೋಷಿಸುವ ದಂದುಗದಿನಂದಿನಿರುಳಂ ಕಳೆಯೆ (ಶಂಕರ. ೦೩-೦೦ ವ) ; ದಳ್ಳಿಸಿದತ್ತೊ ವೀರರಸವಾರಿಧಿ ವಾತ ಮಹಾಪ್ರಘಾತದಿಂ ನಿಲ್ಲದೆಬ್ಬಿನಿಂ ರವಳಿಘೋಷಿಸೆ ಭೈರವವಾದುದಾ ರಣಂ (ಶೀಬು. ೦೦-೦೨೩). [< ಸಂ. ರವಣ/. ತೆಲು. ರವಳಿ, ರವಲಿ, ರವಾಳಿ]

**ರವಳಿಗೆ** (ನಾ). ಬಿದಿರಿನಿಂದ ಮಾಡಿದ ಬುಟ್ಟಿ : "ವಿದಲ— ರವಳಿಗೆ" (ಗಂಗಾಶ. ೨೬೯). [?./ಮರಾ, ರವಳೀ, ರೋವಳೀ]

**ರವಾನಿಸು** (ಕ್ರಿ). (ಮುಖ್ಯವಾಗಿ ಸರಕನ್ನು) ಸಾಗಿಸು ; ಕಳಿಸು : ಮಿಕ್ಕಿದ ಸರಕುಗಳನ್ನು ನಾವು ಇತರ ಕೇಂದ್ರಗಳಿಗೆ ರವಾನಿಸುತ್ತೇವೆ (ಕಾಂಡು. ೦೦೦) ; ಫಾರಮುಗಳು ತಯಾರ್ಮಾಡಿ ರವಾನಿಸಬೇಕು (ಗ್ರಾಮಾ. ೩) ; ಈತ ತನ್ನ ದಿವ್ಯಪ್ರೇಮಕ್ಕೆ ಕಟ್ಟುಬಿದ್ದು, ತಾನು ಕೈಹಿಡಿದ ವಳನ್ನು ಊರಿಗೆ ರವಾನಿಸಿದ (ಕುಂಠಿತ. ೦೫). [ರವಾನೆ + — ಇಸು]

**ರವಾನೆ** (ನಾ). ೧. (ವಸ್ತು ಮುಂತಾದುವನ್ನು) ಕಳುಹಿಸುವಿಕೆ : ಸಾಗಣೆ : ಮುಂದಕೆ ರವಾನೆ ಮಾಡಿ ಕಳುಹಿಸಿ ಕೊಡಲುಳವರು (ಪ್ರೇಮ. ೨೯೩೨. ೦೯-೨೬; 1704 ?); ಕಿಲ್ಲೇಕ ಹೋಗಿ ಬಿದ್ದರೆಂವರೆ ಸ್ವಾಧೀನಕ ಬರೋದಿಲ್ಲವೆಂದು ತಾಕೀದು ಮಾಡಿ ಆ ಕ್ಷಣವೇ ರವಾನೆ ಮಾಡಿದರು (ಮುದ್ರ. ೬೨-೦೦) ; ಪ್ರಾಣಿಗಳ ರವಾನೆಗಾಗಿಯೇ . . . ಬೇರೊಂದು ಬಂಡಿಯನ್ನು ಲಗತ್ತಿಸಬೇಕು (ಹಸುಹೊ. ೨೨೬). ೨. ಅಪ್ಪಣೆಚೀಟಿ ; ರಹದಾರಿ : (?).

**ರವಾನೆ ಆಗು, ರವಾನೆಯಾಗು** = (ವಸ್ತು ಮುಂತಾದುವು) ಕಳುಹಿಸಲ್ಪಡು: ಸಾಗಣೆಯಾಗು: ದೊಡ್ಡಮನುಷ್ಯರಿಗೆಲ್ಲರಿಗೂ ಅಚ್ಚು ಹಾಕಿದ ಲಗ್ನಪತ್ರಿಕೆಗಳು ಕ್ರಮವಾಗಿ ರವಾನೆ ಆದುವು (ಮುಹಾಲಂ. II. ೦೬೩) ; ಪ್ರಪಂಚದ ಎಲ್ಲ ಭಾಗಗಳಿಗೂ ಚಿನ್ನ ಮತ್ತು ಸಂಬಾರದ ವಸ್ತುಗಳು ರವಾನೆಯಾಗುತ್ತವೆ (ಕೃಷಿ. II, ೦೯).
[ ← ಪಾರ. ರವಾನಹ್ ; ಹಿಂ., ಮರಾ. ರವಾನಾ ]

**ರವಾನೆದಾರ** (ನಾ). ಸರಕುಗಳನ್ನು ಕಳುಹಿಸುವವನು ; ಸಾಗಣೆದಾರ: ಸರಕನ್ನು ರವಾನಿಸುವವನು ; ರವಾನೆದಾರ (Consignor. ಇಂಕೋ).
[ ರವಾನೆ + — ದಾರ ]

**ರವಾಬು** ' ರಬಾಬು ' ನೋ.

**ರವಾಳವಳ** (ನಾ). ಅಕ್ಕಸಾಲಿಗ (?) : ವಂಶಿಗಂಗೆ ಮತ್ತರುಂ ೧೨ ರವಾಳವಳ ಸಿಂಗಯ್ಯಂಗೆ ಮತ್ತರುಂ ೧೫ ಬರಿಯ ರವಾಳ[ವಳ](ಎಕ. XV. ೬೨-೨೦; 1054). [ ?./ಮರಾ. ರವಾಲೆ = ಅಕ್ಕಸಾಲಿಗನ ಒಂದು ಉಪಕರಣ ]

**ರವಿ** (ನಾ) ೧. ನೇಸರು ; ಸೂರ್ಯ : "ಆದಿತ್ಯಃ . . . ರವಿಃ, ಮಿಹಿರಃ . . . ತ್ರಯೀತನುಃ—ಈ ೪೭ ಆದಿತ್ಯನ ಪೆಸರ್" (ಶಬ್ದಮ. ೭-೩೩) : ರವಿಕಿರಣಾಳಿಗಳ್ ಧ್ವಜಪಟಾಳಿಯ ತಿಂತಿಣಿಯಿಂದಮುರ್ಚಲಾಱವೆ ರವಿವಾಜಿಗಳ್ ನೆಗೆದ ಪಾಂಸುಗಳಿಂ ದೆಸೆಗೆಟ್ಟು ಪೋಗಲಾಱವೆ ರವಿಬಿಂಬ ಮಂದೆಸೆಯಲಾಱದೆ ಪೆಂಪಿನ ತಿಣ್ಣನಾಂತ ಕೌರವಬಳದಂತು ಪೇರೆ ಪವಣ್ (ಸಂಕರ. ೦೦-೩೦) ; ರವಿಯಾಕಾಶಕೆ ಭೂಷಣಂ ರಜನಿಗಾ ಚಂದ್ರಂ ಮಹಾಭೂಷಣಂ (ತೋಟದ. ೩) ; ರವಿ ಕಾಣದ್ದನ್ನು ಕವಿ ಕಂಡ (ಗಾದೆ). ೨. ಪರ್ವತ ; ಬೆಟ್ಟ : "ಗಿರಿಯೊಳರ್ಕನೊಳು ಪ್ರೋಕ್ತದಿಂ ರವಿ" (ಶಂಗಣ. ೦೯೯-೨೩). ೩. ಎಕ್ಕದ ಗಿಡ : 'ರವಿದುಗ್ಧ' ಪರಾ. ೪. ಒಂದು ಬಗೆಯ ದಿವ್ಯ,—ಉಗ್ರಪರೀಕ್ಷೆ (?) : ಕೊಪ ರವಿ ತಂಡುಲವಗ್ನಿ ತಪ್ತಮಾಷಂ ಜಲವಿಷದೆಳಸಪ್ತದಿವ್ಯಮುಂ ವರ್ತಿಸುಗುಂ (ಸೌಇಇ. IX-i. ೦೩೩-೬೪; 1083) ; 'ಕೊಪ' (ಬಹುಶಃ 'ಕೋಶ' ವಿರಬೇಕು). ರವಿ, ತಂಡುಲ, ಅಗ್ನಿ, ತಪ್ತಮಾಷ, ಜಲ, ವಿಷ—ಇವೇ ಆ ಸಪ್ತದಿವ್ಯಗಳು (ಕನಾಂ. ೩೯೭). 'ದಿಬ್ಯ' ಪರಾ. ೫. [ಗಣಿತ] ಹನ್ನೆರಡು ಎಂಬ ಸಂಖ್ಯೆಯ ಸಂಕೇತ : "ರವಿಯೆನಲು ಹನ್ನೆರಡು" (ಶಂಗಣ. ೦೦೯-೮) ; ಪುರನಯನ ರವಿ ರಂಧ್ರಯುಗವ ಗೆಲಿದಾ ಮಹಿಮ (ಶ್ರೀಕರ. ೦೩-೦). ೬. [ಛಂದ]ಎರಡು ಲಘುಗಳ ಮಧ್ಯೆ ಒಂದು ಗುರುವು ಇರುವ ಒಂದು ಗಣದ ಹೆಸರು ; ಜಗಣ (⏑ – ⏑) : "ಗುರು ಮಧ್ಯದೊಳ್ ತೋಱಿ ರವಿಯಕ್ಕು" (ಶಂಗಣ. ೦೦೬-೨೦) ; ಧರಣಿ ಜಲಾಗ್ನಿ ಮರು ದ್ವ್ಯೋಮ ರವಿ ಶಶಾಂಕೇಂದ್ರನಿಲಯಮಿವು ಗಣದ ಪೆಸರ್ (ಛಂದೋಂಬು. ೦-೩೭). ೭. ಸಂಪತ್ತು ; ಐಶ್ವರ್ಯ (?) : ಕೂರ್ತು ಭೂವನಿತೆಗಿನ ಕುಲದ ನೃಪನೊಸಗೆಗಟ್ಟಿಸಿದ ಜೀವನಿಧಿವಸನದೊಡನೆಸೆವ ರವಿಯುಂಗುರವೊ . . . ವಿಚಾರಿಸೆ ಬೆತಂಗಮದರ್ ಕಣ್ಗೆ ಡ್ಡಮಾಯ್ತಾವರಿಸೆ ತೇಜವಗ್ಗದ ಮೇರು (ಕಾದಂ. ೦-೨೯). [ಸಂ.]

**ರವಿಕಯ್ಯ** (ನಾ). ಒಬ್ಬಾತನ ಹೆಸರು: ಸೂರ್ಯ್ಯಗ್ರಹಣದನ್ದು ಶ್ರೀಪೂರದು ರವಿಕಯ್ಯ ಮೊದಲಾಗಿ ಯಿಬ್ಬೂಪ್ಪೊ(ರ್ವ್ವ)ರುಂ ಮಹಾಜನದ ಕಾಲಂ

ಕಟಿಷ್ಟಿ (ಇಅ. XII, ೨೦೯-೨೦; 814). [ಈದು ಸಂಸ್ಕೃತದ 'ರವಿಕಾರ್ಜ' ಶಬ್ದದಿಂದ ಬಂದಿರಬಹುದು]

**ರವಿಕರಡಾಣ ?** (ನಾ). (?) : ಪುಷ್ಪ ಮೊದಲಾದ ನಂದನವನ ತೋಟಕೆ ಸಮರ್ಪಿಸಿದ ಪೊಲ ಗದೆ ತೋಟ ರವಿಕರಡಾಣ ಕಲ್ಲಸ್ಥಳ (ಎಕ. IX (s), ನೆಂಮಂ. ೩೦-೬; 1532). [ ? ]

**ರವಿಕಳಂಬ** (ನಾ). ಸೂರ್ಯನು ಅಭಿಮಾನಿದೇವತೆಯಾಗಿರುವ ಒಂದು ಬಗೆಯ ಬಾಣ, – ಮಂತ್ರಾಸ್ತ್ರ : ಫಲುಗುಣಂ ತಿಮಿರನಾಯಕವನು ಸೆಳೆದು ಮರಾಳಧ್ವಜನ ಸುತಂ ತೆಗೆದನುಜ್ಜ್ವಲರವಿಕಳಂಬಮಂ (ಕೃಪಿಭಾ. ೦೩-೦೫). [ಸಂ. ರವಿಕಲಂಬ]

**ರವಿಕಾಂತ** (ನಾ). ಬಿಸಿಲಿಗೆ ಕಿಡಿ ಸೂಸುವುದೆಂದು ನಂಬಲಾದ ಒಂದು ಬಗೆಯ ಶಿಲೆ ; ಸೂರ್ಯಕಾಂತ : "ಬಿಸುಗಲ್ಲೆನೆ ರವಿಕಾಂತಂ" (ಕಕಚು. ೦೦೦): ಇಂತಿಂತು ಮೆಚಿಯುತಿರ್ಪುವನಂತಂ ಘನತೇಜದಿಂದೆ . . . ರವಿಕಾಂತಮುಮಸ್ಕಾಂತಮಿಂದುಕಾಂತಂ ನಗದೊಳ್ (ಗಂಕ. ೦-೩೬); ಪರತೇಜಂ ತಗುಳ್ದೊಡೆ ಸಲೆ ತೋರ್ಪರವಂ ತಾಂ ಸ್ಪರ್ಶಾನುಕೂಲ ರವಿಕಾಂತಂಬೊಲ್ (ಶಾಕುಂತ. ೨೩-೯೨). [ಸಂ.]

**ರವಿಕಾಂತೋಪಲ** (ನಾ). = ರವಿಕಾಂತ : ರವಿರಶ್ಮಿಗಳಿಂ ಪುಟ್ಟಿಸಿ ರವಿಕಾಂತೋಪಲಕೃಶಾನುವಂ ಕೋಟ್ಬೈಗವಂ ದಿವಸದವಸಾನಸಮಯದೊಳವನಂಜಿಸುವೊಂದುಪಾಯಮುಂ ಪ್ರಜೆಗಿತ್ತಂ (ಶಂಶಾಪಾ. ೦-೬೩). [ಸಂ.]

**ರವಿಕಾಳಿ** (ನಾ). ಒಬ್ಬಾತನ ಹೆಸರು: ಮಾಡಿಸಿದೊಂ ರವಿಕಾಳಿ ಬೆಸಸೆ ಮಣಿನಾಗಂ (ಎಇ. XIII, ೦೯೯-೬; 888). [ ? ]

**ರವಿಕೆ** ' ಅವಿಕೆ ' ನೋ.

**ರವಿಚಂದ್ರಯ್ಯ** (ನಾ). ಒಬ್ಬಾತನ ಹೆಸರು: ರವಿಚನ್ದ್ರಯ್ಯನೆಲ್ಲಜಪಳ್ಳಿಯೊಳ್ಸವದಿತ್ಯಕ್ಕಗಳಿಂ ಪ್ರತಿಷ್ಠೆಗೆಯ್ದಂ (ಎಕ. VIII, ತೀರ್ಥಹ. ೨೭-೯; ೯೨೦). [ರವಿ + ಚಂದ್ರ$_2$ + ಅಯ್ಯ$_{61}$]

**ರವಿಜ** (ನಾ). ೧. ಸೂರ್ಯನ ಮಗ. ೨. ಕರ್ಣ: "ರವಿಜನೆನೆ ಕರ್ಣಂ" (ಮಂಗರಾ. ೬೩-೨) ; ರವಿಜ ಗುರುಸುತ ಶಲ್ಯ ಕಲಶೋದ್ಭವರು . . . ಅವನಿಪಾಲನ ಕಂಡರು (ಕುಮಾ.ಭಾ.೦-೨). ೩. ಸುಗ್ರೀವ: ತ್ರಿದಶರಾರಿತು ರವಿಜನಭಟನು ಹೊಗಳಿತುಭುಜಬಲ (ತೊರವೆ. ೩೭-೨೯). ೪. ಶನಿ : ರವಿಜನನುಕ್ರಮದೆ ಗುಣಿತೇಷ್ಟವಾರದಿಂ . . . ಸವನಿಸುಗುಂ ಸಂದ ಗು(ಕು)ಳಿಕನುದಯಮುಂ ನಿರುತಂ (ಲೋಕೋಪ. ೦-೨೬) ; ರವಿಜಂ [ಪಾಠಾಂ. ಇನಜಂ] ವೃಶ್ಚಿಕಸಂಸ್ಥನಾಗೆ ಚಪಲಾಂಗಂ ನಿರ್ದಯಂ (ಜಾತಕ. ೦೭-೩೩). ೫. ವಾಲಿ. ೬. ಯಮ. [ಸಂ.]

**ರವಿದುಗ್ಧ** (ನಾ). ಎಕ್ಕದ ಗಿಡದ ಹಾಲು : ರವಿದುಗ್ಧಂ ಪಾಂವದೆಚ್ಚ ವೃಂದುರದ ವಿಷ್ಟ ತಗರ ಕೋಡಿನ ಮಷಿಯಿಂಬವನೊರಸಿ ಕಾಸಿ ನೀರೂಡುವುದುಟೀಯುಂ ತೈಲತಕ್ರದೊಳ್ ಪವಿಯುಕ್ಕುಂ '(ಲೋಕೋಪ. ೫-೯೦). [ಸಂ.]

**ರವಿನಂದನ** (ನಾ). ೧. ಸೂರ್ಯನ ಮಗ. ೨. ಯಮ : ಧನಪತಿಯ ಸಿರಿ . . . ರವಿನಂದನನ ನಡವಳಿ ಧರೆಯ ಸ್ಥೈರಣೆಯಿನಿತು ದಶರಥ ಸಾರ್ವಭೌಮಂಗಲ್ಲದಿಲ್ಲ (ತೊರರಾ. ೦-೩-೨೬). ೩. ಸುಗ್ರೀವ. ೪. ಕರ್ಣ: ರವಿನಂದನನು ಗೆಲಿದನು ಧರ್ಮನಂದನನ (ಕುಮಾ.ಭಾ. ೦೦ ಸೂಚನೆ). [ಸಂ.]

**ರವಿಪತ್ರ** (ನಾ). ಒಂದು ಬಗೆಯ ಸಸ್ಯ ; ಎಕ್ಕದ ಗಿಡ: " ರುದ್ರಾ–ರುದ್ರಜಡೆ. ರವಿಪತ್ರ, ಕಾಡ ಹಾಗಲ" (ಚಿಕಂ. ೦೩೯). [ಸಂ.]

**ರವಿಪ್ರಭೆ** (ನಾ). [ಛಂದ] ಒಂದು ಅರ್ಧಸಮವೃತ್ತದ ಹೆಸರು: ಅಮರಸರೋರುಹಮಿತ್ರಗಣಂ ಶರಸಂಖ್ಯೆಯ ಮುಂದೆ ಲ ಗಂ ಸೋಮಗಣಂಗಳೆ ನಾಲ್ಕೆಡೆಯೊಳ್ ಬರೆ . . . ನಾಮವಿದಕ್ಕೆ ರವಿಪ್ರಭೆ (ಛಂದೋಂಬು. ೩. ೩. ೨೩೬). [ಸಂ. ರವಿಪ್ರಭಾ]

**ರವಿಬಿಂಬ** (ನಾ). ಸೂರ್ಯನ ಬಿಂಬ ; ಇನಮಂಡಲ : ರವಿಬಿಂಬದ್ಯುತಿಮೂರ್ತಿವೆತ್ತ ತೆಜದಿಂ ತೇಜೋಮಯಂ . . . ಯುವರಾಜಂ (ನಳಚಂ. ೨೭೦). [ಸಂ.]

**ರವಿಭಕ್ತ** (ನಾ). ಒಂದು ಬಗೆಯ ಔಷಧೀಸಸ್ಯ : ಇಂಗುಪಟಲಂ ರವಿಭಕ್ತನಪೂರ್ವಚಿತ್ರಕಂ ಜೀರಗೆಯುಪ್ಪು ಬೋಟಿತರವಿಂಗುಳಮಾಗುಳಿಚ(ಬ)ಂಗಳಂ ಯವಕ್ಷಾರಸಮೇತಮಿಕ್ಕುವುದು ವಾಜಿಗೆ ಸರ್ವರುಜಾಪಹಾರಕಂ (ಅಶ್ವಶಾ. ೭-೩೦). [ ? ]

**ರವಿಮಂಡಲ, ರವಿಮಂಡಳ** (ನಾ). = ರವಿಬಿಂಬ : ರವಿಮಂಡಲಂ ಪ್ರತೀಚೀಯುವತೀಕರ್ಣಾವತಂಸರಕ್ತೋತ್ಪಲದಂತೆವೊಲಿರೆ (ಕಾದಂಪೂ. ೫೦೦) ; ಪುಂಡರೀಕಾಕ್ಷನ ಉತ್ತಮಾಂಗದಲಿ ರವಿಮಂಡಲಗಳ ಪ್ರಭೆಯ ಮಸಳಿಸುತಿರೆ ಮುಕುಟ (ಕುರಂಗ. ಭಾ. ೯-೨೦-೨). **ರವಿಮಂಡಳ** : ರವಿಮಂಡಳಮುಮನೀತಳಕವತರಿಸಿತ್ತೆಂಬ ತೆಜದಿನಂಬರದಿಂದಂ ನವರತ್ನವಿಚಿತ ಮೆಂದೆನಿಸುವ ದಿವ್ಯವಿಮಾನವಿಂರದೆ ಬಂದುದು (ತ್ರಿಷಷ್ಟಿ. ೭-೦೦೬). [ಸಂ.]

**ರವಿಮಂಡಳ** ' ರವಿಮಂಡಲ ' ನೋ.

**ರವಿಮಾರ್ಗಣ** (ನಾ). = ರವಿಕಳಂಬ : ಸೆಳೆದು ಮೂಡಿಗೆಯಿಂದ ರವಿಕುಲತಿಲಕ ಹೂಡಿದನುಷ್ಣಕಿರಣಾಕಲಿತರವಿಮಾರ್ಗಣವ (ತೊರರಾ. ೬-೫೦-೨೦). [ಸಂ.]

**ರವಿವಾರ** (ನಾ). ಆದಿತ್ಯವಾರ; ಭಾನುವಾರ: ರವಿವಾರಮಾದಿಯಾಗಿಯ್ದೆ ವಿಶಾಖಿಪ್ರಮುಖಿತಾರೆಗಳ್ ನಾಲ್ಕುಂ ಸಂಘವಿಸಿದೊಡುತ್ಪಾತಂ ಮೃತ್ಯುವಧೆಯುಮಂ ವ್ಯತಾಖ್ಯಮೆಂಬಿವಕ್ಕುಂ ಯೋಗಂ (ಲೋಕೋಪ.೦-೦೬). [ಸಂ.]

**ರವಿಸಿದ್ಧಾಂತ** (ನಾ). [ಜ್ಯೋತಿ] ಸೌರಗಣನೆಯ ಮೂಲಕ ಗುಣಿಸಿ ಹೇಳುವ ಜ್ಯೋತಿಷ್ಯ ; ಸೂರ್ಯಸಿದ್ಧಾಂತ : ರವಿಸಿದ್ಧಾಂತಪಾಠಕ ರಷ್ಟಭಾಷಾಕವಿಗಮಕಿಗಳು ತಾರ್ಕಿಕರು ವಿವಿಧವಿದ್ವತ್ಸಭೆ ನೆಚಿಮದು (ಮೋಹತ. ೩-೯೦). [ಸಂ.]

**ರವಿಸು** (ಕ್ರಿ). ಧ್ವನಿಮಾಡು : ದನಿಗೈವ ಪಾರಿವೆದಂತಿರೆ ರವಿಸುವರ್ಕಂಠದೊಳ್ (ಕೃಪಿಭಾ. ೦೫-೯೬). [ರವ + – ಇಸು$_3$]

**ರವಿಸುತ** (ನಾ). ೧. ಸೂರ್ಯನ ಮಗ. ೨. ಕರ್ಣ : ಮುಳಿದಿರ್ಪೆಯೊ ಮೇಣ್ ಮಱುವಾತುಗುಡದೆ ರವಿಸುತ ಮಱುಸುಂದಿರ್ದಪೆಯೊ (ಗದಾಯು. ೫-೦೫) ; ರವಿಸುತನೊಂದು ನನ್ನಿ ಪವಮಾನತನೂಜನದೊಂದು ಬಲ್ಪು (ಎಕ. IV, ನಾಗಮಂ. ೯೭-೩೩ : 1199) ; ನೀಲಧ್ವಜನನುಜಿ ಘಾತಿಸಿ ರವಿಸುತನ ಸೂನುವಂ ಪರಿಭವಿಸಿ (ಕೃಪಿಭಾ. ೦೯-೫). ೩. ಸುಗ್ರೀವ : ರವಿಸುತಂ ನಮ್ಮೆರೆಯಂ ನಟ್ಟಿದನ್ ರವಿಕುಲದ ನಿಮ್ಮ ಕೆಳೆಯಂ ಬಯಸಿ ಬೇಡಿ! (ಶ್ರೀರಾಪಟ. ೨೮೯-೦೦೯). ೪. ಶನಿ. ೫. ಯಮ. [ಸಂ.]

**ರವಿಸುತೆ** (ನಾ). ಸೂರ್ಯನ ಮಗಳು ; . ಯಮುನೆ : ವರದಾಸಿಂಧು ಸರಸ್ವತೀರವಿಸುತಾಗೋದಾವರೀ . . . ಗಂಗಾಸಲಿಲಂಗಳಂ ಹಿಮಕರಸ್ವಚ್ಛಂಗಳಂ ತಂದರ್ (ಶಂಕಕಂ. ೨೨೩-೦೩). [ಸಂ. ರವಿಸುತಾ]

**ರವೆ** (ನಾ). ೧. ಗೋಧಿ, ಅಕ್ಕಿ ಮೊದಲಾದುವುಗಳ ಸಣ್ಣ ನುಚ್ಚು,– ತರಿ ; ಸೋಜಿ : ತುಪ್ಪದೊಳು ಹುರಿದು ಪಲತೆಜನಾಗಿ ಮಾಡಿಕೊಂಡ ದಚಿಕೊಂವಕೆ ಒಡೆಯ ರವೆಸಕ್ಕರೆಯನಿಕ್ಕುವುದು (ಸೂಪಶಾ. ೬-೦೫) ; ಸೇವಗೆಯ ಪಾಯ್ಸಕ್ಕೆ ಬೆಲ್ಲ ಮಾಡೆ ಒಕ್ಕೆ ರವೆ ಸ ೩ ಗೆ (ವೆ.ಶಂ. ೦೯೩೯. ೦೩-೫; 1516). ೨. ಯಾವುದಾದರೂ ವಸ್ತುವಿನ ಸಣ್ಣ ಭಾಗ ; ಪುಡಿ ; ಚೂರು ; ಕಣ : ಪುಡಿಗತ್ತುರಿಯ ರವದ ರವೆ (ರೀವಡ. ೩-೨೬). ೩. ಬಂದೂಕಿಗೆ ಹಾಕುವ ಚರೆ : ಒಂದು ರವೆಯೂ ಇಲ್ಲದೆ ಹೋಯಿತೆ ? ರವೆ ಇರುವ ತೋಟಿಯನ್ನು ಕೊಡಲೆ ? (ಬೀಚಿತಿ. ೬೦) ; ರವೆ, ಗುಂಡು ಹಾಕ್ಕೊಂಡು ಬಂದು ಅವರನ್ನು ಮೊನಿ ಮಾಡಾಕೆ ನಂಗೇನು ಹುಚ್ಚೇ ? (ಮಾಲವ. ೫೬೭).

ರವೆಯುಷ್ಟು = ಕೊಂಚ : ತೀರ ಅಲ್ಪ : ನಿನ್ನ ವಿಷಯದಲ್ಲಿ ನನಗೆ ರವೆಯುಷ್ಟಾದರೂ ಅನುಮಾನವಿಲ್ಲ (ರಾಜ. ೧೪) ; ತಮ್ಮದೇ ಆಳ್ವಿಕೆ ಇಲ್ಲಿ ನೆಲಸಬೇಕು ಎಂಬ ಆಕಾಂಕ್ಷೆ ಪ್ರಭುಗಳವರಿಗೆ ರವೆಯುಷ್ಟಾದರೂ ಇಲ್ಲ (ಸವಿ. ೬೯). [ದೇ.॥ ತಮಿ. ಇರವೈ ; ತುಳು. ರವೆ ; ತೆಲು. ರವ, ರವ್ವ./ ಹಿಂ. ಮರಾ. ರವಾ./ಪ್ರಾ. ರಯ./ಸಂ. ರಜಸ್]

**ರವೆಗಾಲು** (ನಾ). ಕುದುರೆಯ ಒಂದು ಬಗೆಯ ನಡಗೆ : ಮಡದ ಸನ್ನೆಗೆ ಕುಣಿದು ರವೆಗಾಲಿಡುತ [ಪಾಠಾಂ. ತಿರುಗಿತತಿವೇಗದಲಿ] ಜೋಡಣೆಯಿಂದ ಹಯವಡಿಗಡಿಗೆ ಚಿಮ್ಮಿತು ವಾಯುವೇಗದೊಳು (ನಳಚ. ೭-೩) ; ಉತ್ತಮ ವಾಜಿಯನು ತೊಲಗು ವೇಢೆಯ ರವೆಗಾಲು ಬಂಬೇರಿಯೊಳ್ಗಲಿದೇಜಿ ಮೆಚಿ್ಯುತರ್ತಿಯಲಿ (ಕಂಸವಿ. ೨೨-೯೪).

[← ತೆಲು. ರವಗಾಲು, ರವಾಲು]

**ರವೆಯ** (ನಾ). ನವರತ್ನಗಳಲ್ಲಿ ಒಂದು ; ವಜ್ರ: ಆ ನವರತ್ನದ ರವೆಯದ ಬಂದಿ ವಿರಾಜಿಸುತಿರ್ಪುವಲ್ಲಿ ಗಿರಿಜೆಯ ತೋಳೊಳ್ (ಗಿರಿಕ. ೩-೯೩); ರವೆಯದ ತೋಳ ಬಂದಿಯ ಕೊರಳ ತ್ರಿಸರದ ಬೆರಳ ಮುದ್ರಿಕೆಯ . . . ಸಖೀಜನ ಸಂದಣಿಸಿತಲ್ಲಿ (ಕುಮಾ.ರಾ. ೧೩-೩೨); ರಸುಮಿಪ ರವೆಯದ ಕಂಕಣ ಮಂಗಜವೆಸರಂ . . . ತಳೆದು ವಿರಾಜಿಸಿದ್ದುವು ಸುಕುಮಾರಿ ಸುಲೋಚನೆಗೆ (ಜಯನೃ. ೫-೨೩). [< ರವೆ]

**ರವೆಯಿಡ್ಲಿ** (ನಾ). ರವೆಯಿಂದ ಮಾಡಿದ ಇಡ್ಲಿ : ಬೆಳಗ್ಗೆ ತಿಂಡಿಗೆ ರವೆಯಿಡ್ಲಿ ಮಾಡಿದ್ದೆ (ರೂಢಿ). [ರವೆ + ಇಡ್ಲಿ ( < ಇಡ್ಡಲಿ ) ]

**ರವೆವುಂಡೆ** (ನಾ). ರವೆ ಮತ್ತು ಸಕ್ಕರೆಗಳಿಂದ ತಯಾರಿಸಿದ ಉಂಡೆ : ಏನು ಕೊಡಲಿ ಸಾರ್ . . . ಬೇಸನ್‌ಲಾಡು, ರವೆವುಂಡೆ (ಮಹಾಂ. ೪೬).

[ರವೆ + ಉಂಡೆ]

**ರಶನ** (ನಾ). ೧. ನಡುವಿಗೆ ಧರಿಸುವ ಪಟ್ಟಿ: ಡಾಬು : ದಿವಿಜಸ್ತ್ರೀ ಜಘನಾಭಿರಾಮರಶನಂ ದೇವಾಂಗನಾಪಾಂಗಕೈರವಚಂದ್ರಂ (ಸುಕುಮಾ. ೯-೩೫) ; ಕಟಿವಲಯದಿಂಪ್ರಧನು ರಶನದಿಂದೆಸೆದಂತೆ, ರಮಣೀಯ ರತ್ನಮಯ ಕಾಂಚನದ ಕಾಂಚಿಯಂ ತೊಟ್ಟು (ಚತ್ರಾಂಗ. ೦೯-೫೦೫). ೨. ಲಗಾಮು ; ಕಡಿವಾಣ. [ಸಂ. ರಶನಾ]

**ರಶೀತಿ, ರಶೀದಿ, ರಸೀತಿ, ರಸೀದಿ** (ನಾ). (ಹಣ ಮೊದಲಾದುವು) ತಲುಪಿದುದಕ್ಕಾಗಿ ಕೊಡುವ ಚೀಟಿ ; ಪಾವತಿಪತ್ರ; ಸಲ್ಲಿಕೆಚೀಟಿ : ಹಣ ತಲುಪಿದುದಕ್ಕೆ ಪತಾರದ ಒಡತಿಯಿಂದ ರಶೀತಿ ಬಂದಿರಲಿಲ್ಲ (ರಂಗವ. ೬೬); ರುಜುಹಾಕುವುದಕ್ಕೂ ಕೊಟ್ಟ ಕಂದಾಯದ ರಶೀತಿ ನೋಡುವುದಕ್ಕೂ ಬಂದರೆ ಸಾಕು (ಹುಟ್ಟಿಹ. ೬). **ರಶೀದಿ** : ಸರಕಾರಕ್ಕೆ ತೆಗೆದುಕೊಂಡು ರಶೀದಿಕೊಡುವ ಹಾಗು (ವ್ಯಾಂ. ೦೯೩೯, ೪೨-೦೦೫ ; 1826) ; ಅದನ್ನು ತೆಗೆದುಕೊಂಡು ರಶೀದಿ ಕೊಟ್ಟು (ರಾಕೇಂದ್ರ. ೬೬). **ರಸೀತಿ** : ಒಂದು ತುಂಡು ಚೀಟಿಯನ್ನು ರಸೀತಿಯಾಗಿ ಕೊಟ್ಟರೂ ಸಾಕು (ಪಾಗರ. ೬೯); ನೀವು ರೈತರಿಂದ ಕಂದಾಯ ತಕೊಂಡ್ರೂನೂ ರಸೀತಿ ಕೊಡದೆ . . . ಡಬ್ಬಲ್ ಕಂದಾಯ ವಸೂಲಿ ಮಾಡ್ಲಿಲ್ಲವಾ ? (ನಮ್ಮ. ೦೫). **ರಸೀದಿ** : ಪಾವತಿಯಾದ ಕೂಡಲೆ ಗ್ರಾಮ ಕೋರ್ಟಿನವರು ಅದಕ್ಕೆ ರಸೀದಿಯನ್ನು ಕೊಡತಕ್ಕದ್ದು (ಗ್ರಾಪಾ. ೩೯); ಮನೆಯ ಕರಣಿಕನು ರಸೀದಿಯನ್ನು ತಯಾರಿಸುತ್ತಿದ್ದನು (ಅಂ. ೩೭).

[ ←ಪಾರ. ಹಿಂ. ಮರಾ. ರಸೀದ್. / ಇಂ. Receipt]

**ರಶೀದಿ** ' ರಶೀತಿ ' ನೋ.

**ರಶ್ಮಿ** (ನಾ). ೧. ಕದಿರು; ಕಿರಣ : '' ರೋಚಿಃ . . . ರಶ್ಮಿಃ . . . ಗೋಃ– ಈ ೩೨ ರಶ್ಮಿಗಳ ಪೆಸರ್'' (ಹಲಾಯು. ೭-೩೪). ೨. ಕಾಂತಿ ; ಪ್ರಭೆ : ಫಣೀಂದ್ರಾಳಯದಿಂದಮುರ್ಚಿದ ಫಣಾಮಣಿಮಂಗಳರಶ್ಮಿಯೋ (ಕಂಪಾ. ೦-೯೬). ೩. ಕಡಿವಾಣ; ಲಗಾಮು : "ವಲ್ಗಾ, ರಶ್ಮಿಃ, ಕುಶಾ– ಈ ೩ ವಾಗೆ" (ಹಲಾಯು. ೬೩-೨೬೬). ೪. ಹಗ್ಗ ; ಪಾಶ; ಕಣ್ಣೆ : " ಯೋಕ್ತ್ರಂ, ರಶ್ಮಿಃ, ಆಬಂಧಃ – ಈ ೩ ಹಗ್ಗಂ " (ಹಲಾಯು. ೯೪-೪೨೦). ೫. ರೆಪ್ಪೆಯ ಕೂದಲು; ಎವೆಗೂದಲು. ೬. ತಿವಿಗೋಲು; ಅಂಕುಶ. ೭. ಚಬುಕ ; ಚಾಟಿ. [ಸಂ.]

**ರಶ್ಮಿಕಲಾಪ** (ನಾ). ಒಂದು ಬಗೆಯ ಹಾರ ; ಐವತ್ತುನಾಲ್ಕು ಎಳೆಗಳುಳ್ಳ ಮುತ್ತಿನ ಹಾರ : ವಿಜಯಚ್ಛಂದಹಾರದೇವಚ್ಛಂದಾರ್ಧಹಾರ ರಶ್ಮಿಕಲಾಪಗುಚ್ಛನಕ್ಷತ್ರಮಾಲಾರ್ಧಗುಚ್ಛ . . . ಎಂಬ ಪನ್ನೊಂದು ನಾನಾರತ್ನಸುವರ್ಣಪದಕವಿರಚನಾದಿಭೇದದಿಂ (ಆದಿಪು. ೬-೩೪ ವ). [ಸಂ.]

**ರಶ್ಮಿಶಿಕ್ಷ** (ನಾ). ಸೂರ್ಯನ ಕಿರಣಗಳು ಇರುವಾಗ ಮಾಡುವ (ಖಡ್ಗ ಮುಂತಾದ ಯಾವುದಾದರೂ) ಸಾಧನೆಯ ಮುಕ್ತಾಯಕಾಲದ ಶಿಕ್ಷಣ,– ಅಭ್ಯಾಸ : ಸಾಯಂಕಾಲದಲ್ಲಿ ಆರುಘಳಿಗೆ ಉಳ್ಳಂಥಾ ಕಾಲವು ಸಾಧನೆಗೋಸ್ಕರ ನಿರ್ಮಾಣವ ಮಾಡಲ್ಪಟ್ಟಿತು. ಸಾಧನೆಯ ಬಿಡುವ ಕಾಲವು ಸೂರ್ಯಕಿರಣ ಉಳ್ಳಂಥಾದು ರಶ್ಮಿಶಿಕ್ಷ ಯೆಂಬುದು (ಖಡ್ಗಚಿ. ೫-೫೨). [ಸಂ. ರಶ್ಮಿಶಿಕ್ಷಾ]

**ರಸ** (ನಾ). ೧. ಗಿಡ, ಮರ, ಕಬ್ಬು ಮುಂತಾದುವುಗಳ ದ್ರವ : ಕರ್ಬಿನ ರಸವೆಟ್ಟಿ ಜಾಗದ ಪೊಸರ್ (ಕುಶಚ. ೨-೪೦); ರಸವಿಳಿತ ದಂಟುಗಳ ಹಸು ಮೇಯಲೊಲ್ಲದು (ಸರ್ವಜ್ಞ. ೦೭೯೯). ೨. ಹೂವು, ಕಾಯಿ, ಹಣ್ಣು ಮುಂತಾದುವುಗಳಲ್ಲಿರುವ ಸಾರ : ದಳಿತ ಜಂಬೂಪಕ್ವಫಲರಸ ಲುಳಿತನವಮಕರಂದಮಾಧುರೀರ್ಝರನಿಪಾತದಲಿ . . . ಎಸೆದುದು ಗಜ ಪುರೋದ್ಯಾನ (ಕುಮಾ.ಉ. ೭-೨೭); ಮಾವಿನ ತನಿಪಣ್ಣ ರಸದಂತೆ . . . ಮಂಗರಸನೊಪ್ಪುವ ವಾಕ್ಯಗುಂಫನಂ ಭಾವಿಸಿದೊಡೆ (ಸಮ್ಯ. ೦-೦೦). ೩. ದ್ರವರೂಪವಾದ ಪದಾರ್ಥ : ನಾವು ತಿನ್ನುವ ಅನ್ನದ ರಸದಿಂದ ಮಾಂಸ ಹುಟ್ಟುತ್ತದೆ (ಪಾಂಚರಾ. ೯-೩೨). ೪. ನೀರು ; ಜಲ : ರಸರಸದ ಬಾವಿ ಮನೆಮನೆಗೆ ಬೇಜಿ (ಕಂಪಕಾ. ೪-೧೦ ಚಗಳ); ಪೊಸಕಲಶಮಾ ಯುತಿಯ ಕರದಲಿರಲದ ಕೊಂಡು ರಸಭರಣಗೈದು ಒಡಿದ್ದೆದಿಂ (ಪಂಕಾಪ. ೨-೨೩-೩೦). ೫. ಗಾಯದಿಂದ ಸುರಿಯುವ ಕೀವು ; ರಸಿಕೆ : (ಉಗುರು ಸುತ್ತಿಗೆ) ಮೆಟಸಿನ ಪುಡಿಯೊಳಗೆರ್ವೆಯ ತಿಳಿವಾಲಂ ಕಲಸಿ ಬಿಗಿದು ಕಟ್ಟುಗೆ ಬೆರಳಂ ಚಳಿಸಿದ ರಸದಿಂಬುಣ್ಗಳ ನಿಲಿಸದಿರದು (ರೋಗಶೋಚ. ೯-೦೭೯). ೬. ಹಾಲು, ತುಪ್ಪ, ಎಣ್ಣೆ ಮೊದಲಾದ ದ್ರವಪದಾರ್ಥ: 'ರಸಧಾನ್ಯ' ಪರಾ. ೭. ಅಮೃತ ; ಸುಧೆ : ಕೂಡಲ ಸಂಗನ ಶರಣರು ರಸದ ವಾರುಧಿಗಳು ಎಂತಿರ್ದರೇನಯ್ಯಾ (ಬಸವ. ೭೪೦). ೮. ದೇಹದಲ್ಲಿರುವ ಸಪ್ತಧಾತುಗಳಲ್ಲಿ ಒಂದು ; ವೀರ್ಯ ; ರೇತಸ್ಸು. ೯. ವಿಷ ; ನಂಜು: "ಬ್ರಹ್ಮಪುತ್ರಃ . . . ರಸಃ . . . ವಿಷಂ –ಈ ೯ ವಿಷಂ" (ಹಲಾಯು. ೦೦೬-೨೪). 'ರಸದಾನ' ಪರಾ. ೧೦. ಪಾದರಸ; ಪಾರದ : "ಪಾದರಂ ಚಪಲವೆಂನೆ ರಸವೆನಿಕ್ಕು" (ಹುಂಗಾ. ೯೭-೦೫) ; ಸಂಸಪ್ತಕನಿಕುರುಂಬದೊಳಗೊರ್ವರುಮಂ ಕಿಜಿವೀಟಲೀಯದೆ ರಸಮಂ ಕೊಲ್ವಂತೆಂತಾನುಂ ಕೊಂದು (ಗಂಕಥಾ. ೧೨-೦೨೦ ವ) ; ಉರಿಗೆ ರಸ ನಿಂದಾಗವೆ ರಸಸಿದ್ಧಿ ಎಂಬೆ (ವೋಳಪಾ. ೦೯-೭೬); ರಸಮಂ ನೀರೆ ಗೆತ್ತು ಮೊಗೆಯಲೆನ್ನ ಕರಯುಗಂಗಳ್ ಕೊಟಿತಟಿದು ಬೀಟಲಿರ್ದುವು (ಶೀರಾಪು. ೪-೯೦ ವ). ೧೧. ರಾಳ ; ಹಗಿನು. ೧೨. ಚಿನ್ನ ಮೊದಲಾದ ಲೋಹ. ೧೩. ರುಚಿ ; ಸವಿ ; ಸ್ವಾದು : ಕಯ್ಪೆಯುಣ್ಬರಂ ರಸಮೆ ಬಾರಿಕುಂ (ಶಾಂತಿಪು. ೬-೭೭) ; ರಸಮಂ ನಾಲಗೆ ಕವಿತಾರಸಮಂ ಕವಿ . . . ಅಱಿವನು (ಮಲ್ಲಿಪು. ೦-೨೯). ೧೪. ಆನಂದ ; ಸಂತೋಷ ; ಹರ್ಷ : ರಸದ ತೊಟಿ ಪರಿದುದಮರ್ದಿನ ಪೊಸಸೋನೆಯ ಸುರಿದುದೆಂಬಿನಂ ಮೇಟಿೂರ್ವಳ್ ಮಸುಪೆಸೆಯೆ ಪಾಡಿದಳ್ (ಸುಕುಮಾ. ೦೦-೨೩) ; ರಸದ ಮಟಿ ಕಜಿದವುದು ಸಾತಸದಿಂ ಮಾಣದೆ ರಸಾಯನದ ಕೂಪದೊಳೆಂಬೆಸಕದಿನುದಳಮೆಸವುದು ರಸಗೀತಂ (ರಚಾರಿಪು. ೪-೦೭೭). ೧೫. ಸಿಹಿ, ಹುಳಿ, ತೊಗರು,

ಕಹಿ ಮೊದಲಾದ ರುಚಿ : ರಸ—ತಿಕ್ತಕಟುಕಷಾಯಯಾವ್ಲ ಮಧುರಾಭಿಧಾನರಸಪಂಚಕವುಂ (ಕಲ್ಯ.ಕ್ರ. ೨೯೩). 'ಷಡ್ರಸ' ಪರಾ. ೧೭. [ದ್ವೈತ] ನಲವತ್ತುವಿಧವಾದ ಗುಣಗಳಲ್ಲಿ ಒಂದು : ರೂಪ, ರಸ, ಗಂಧ, ಸ್ಪರ್ಶ . . . ಸೌಭಾಗ್ಯವೆಂದು, ಸಾಮಾನ್ಯವಾಗಿ ನಲವತ್ತು ವಿಧ ಗುಣಗಳು (ಹಂದಶಾ. ೨೭೩). ೧೭. [ಕಾವ್ಯಮೀ] ಭಾವ, ವಿಭಾವ, ಸಂಚಾರಿಭಾವಗಳ ಸಂಯೋಗದಿಂದ ಆಗುವ ಆನಂದಾತ್ಮಕವಾದ ಚಿತ್ತವೃತ್ತಿ : ಶೃಂಗಾರ, ಹಾಸ್ಯ, ಕರುಣೆ, ರೌದ್ರ, ವೀರ, ಭಯಾನಕ, ಬೀಭತ್ಸ, ಅದ್ಭುತ ಮತ್ತು ಶಾಂತ ಎಂಬ ಒಂಬತ್ತು ರಸಗಳು: ನವವಿಧರಸಂಗಳಂ ಮನಕೆ ವರೆ ನಿರೂಪಿಸುವ ವಚನರಚನೆ ರಸವದ್ವಿಧಾಲಂಕಾರಂ ಕುಜಿತು ವಿಕಲ್ಪಿಸಿ ಕೋವಿರ್ದಂ (ಕವಿರಾ. ೩-೧೮೪) ; ರಸಮಿಲ್ಲದ ಕಾವ್ಯಂ ನೀರಸಂ (ರಸರ. ೧-೪) ; ವಿಸ್ಮಯವೇ ಪ್ರಧಾನವಾಗಿ ಮಿಕ್ಕ ಚಿತ್ತವೃತ್ತಿಗಳು ಅಪ್ರಧಾನವಾದಾಗ ಅದೇ ರಸವೆನ್ನಬಹುದು (ಭಾರಮೀ. ೪೦೩). ೧೮. [ಗಣಿತ] ಒಂಬತ್ತು ಎಂಬ ಸಂಖ್ಯೆಯ ಸಂಕೇತ: ರಸ ನಾಟ್ಯಾಂಗಂ ಗ್ರಹಣಂ ಪೊಸತು ನಿಧಿ ರತ್ನ ನವಮುಪೊಂಭತ್ತನಿಕುಂ (ವ್ಯವಹಾ. ೯-೯). ೧೯. ಆರು ಎಂಬ ಸಂಖ್ಯೆಯ ಸಂಕೇತ : "ಋತುರಸಖರಮುದಾಜಿ" (ಶುಂಗರಾ. ೦೦೩-೮) ; ಖರ . . . ರಸ . . . ೬ ಕ್ಕೆ ಪೆಸರು (ವ್ಯವಹಾ. ೦೦). [ಸಂ.]

**ರಸಋದ್ಧಿ** (ನಾ). [ಜೈನ] ತಪಸ್ಸಿನ ಸಾಧನೆಯಿಂದ ದೊರಕುವ ಒಂದು ಬಗೆಯ ಸಿದ್ಧಿ : ಆಸ್ಯವಿಷತ್ವಂ ದೃಷ್ಟಿವಿಷತ್ವಂ ಕ್ಷೀರಾಸ್ರವತ್ವಂ ಮಧ್ವಾಸ್ರವತ್ವಂ ಸರ್ಪಿರಾಸ್ರವತ್ವಮಮೃತಾಸ್ರವತ್ವಮೆಂದನೇಕಪ್ರಕಾರಷಟ್ಕಾರಮಾದ ರಸಋದ್ಧಿಯೊಳಂ . . . ನೆಱೆದು (ಚಂದ್ರಪು. ೦೯-೩೦ ವ). [ಸಂ.]

**ರಸಋಷಿ** (ನಾ). ರಸಾನಂದವನ್ನು ಉಂಟುಮಾಡುವ ಋಷಿ ; ಕವಿ ; ಪರಮಾನಂದವನ್ನು ನೀಡುವ ದ್ರಷ್ಟಾರ : ಪರೀಘರು . . . ತನ್ನ ಪಾಲಿನ ಕರ್ಮಫಲಗಳನ್ನು ಮುಚ್ಚದೆ ಮಾಜದೆ ಅಡಿ ಮಾಡಿ ಬೋಧಿಸುತ್ತಿದ್ದ ಒಬ್ಬ ರಸಋಷಿಯಾಗಿದ್ದರು (ಕಂೀಶ. ೬೨ ಕಲಿಕಾವ್ಯಸಂಕಲು) ; ರಸಋಷಿಗೆರಗುವೆನವರೆನ್ನನು ಕರುಣಿಸುತಿಹುದೆನ್ನ ಸ್ವೈಪ(ಇಂಕಾಕ. ೯-೬). [ಸಂ.]

**ರಸಂಗೊಳ್** (ಕ್ರಿ). ದ್ರವವನ್ನು ಪಡೆ : ಪುಂಡ್ರೇಕ್ಷುದಂಡಂಗಳಂ ಕಡಿಕಡಿದು ಯಂತ್ರಪೀಡನೆಯಿಂ ರಸಂಗೊಳ್ವ ತೆಱನುಮನಱಿಯೆ ಪೇೞ್ದು (ಅದಿಪು. ೬-೭೭ ವ). [ರಸ + ಕೊಳ್$_1$]

**ರಸಂದೆಗೆ** (ಕ್ರಿ). ನೀರು ಇಂಗಿ ಹೋಗು ; ಒಣಗು : ಸುಳಿವಾಗುಳಿಕೆಗಳ ರಸಂದೆಗೆದ ಜಿಹ್ವೆಯ ಚರ್ಮವನಿಗಳುದಿಸಿದ ವದನದ . . . ಬಿಗಿದ ಬೆಳಗಿನ ಚಿಂತೆಗಾಗರಂ ತಾನಾಗಿ (ಕಬ್ಬಿ. ೬-೩೪). [ರಸ + ತೆಗೆ$_1$]

**ರಸಂಬಡೆ** (ಕ್ರಿ). ನವರಸಗಳನ್ನು ಸೃಷ್ಟಿಸು, – ಚಿತ್ರಿಸು : ಸುಗತಿಗಳಂ ಸೂಸುವ ಮದ್ದಳೆಗರಿಂ ರೂಪುರೇಖೆ ರಸಂಬಡೆವ ನರ್ತನನಾಯಕಿಯರಿಂ (ಗಿರಿ.೨-೦೦೩ ವ). [ರಸ + ಪಡೆ$_1$]

**ರಸಂಬೋಗು** (ಕ್ರಿ). ರಸವಿಲ್ಲದಂತಾಗು ; ಒಣಗು : ರಸಂಬೋದ ಕಬ್ಬಿನಂತೆ ಪೇಡಿಯಪ್ಪರಸಿನ ಮಾತಿನಂತೆ (ಧರ್ಮಾಮೃ. ೯-೨೩). [ರಸ + ಪೋಗು$_1$ (< ಪೋ$_1$)]

**ರಸಕವಳ** (ನಾ). ರುಚಿಕರವಾದ ಭೋಜನ ; ಸವಿಯಾದ ಊಟ : ಗುರುಗಳ ಮನೆಯಲ್ಲಿ ಎರಡು ಹೊತ್ತೂ ರಸಕವಳ ಬಿದ್ದುಹೋಗುತ್ತಿತ್ತು (ರಾಗಿಹ. ೬೩) ; ಪೋಟು ಮಾಡಿದರೆ ರಸಕವಳ ತಪ್ಪದು ನಮಗೆ (ಅಂಕಮ. ೩೨-೦). [ಸಂ. ರಸಕವಲ]

**ರಸಕಸಿ, ರಸಕಸೆ, ರಸಖಸಿ, ರಸಗಸಿ** (ನಾ). ೧. ತಿಕ್ಕಾಟ ; ಮನಸ್ತಾಪ : ನಾರಾಯಣ ನಿನ್ನ ನಾಮದ ಸ್ಮರಣೆಯ ಸಾರಾಮೃತವೆನ್ನ ನಾಲಿಗ್ಗೆ ಬರಲಿ . . . ರಸಕಸಿ ಇರಲಿ ಹರುಷಿರಲಿ (ಪುರಂದ. ೦-೩೩-೨) ; ಅಸಮಸಮ ಬೇಡ, ರಸಕಸಿಯು ಬೇಡ, ಹೊಸ ರಸಿಕವೃತ್ತಿ ಬೇಕು (ಜ್ಞಾ.ರಾ. ೩೪-೦೩) ; ಮಾತುಮಾತಿಗೆ ಸಿಟ್ಟು, ಸೆಡವು, ರಂದಿ, ರಸಕಸಿ (ಹೊಸ್ತಿ. ೦೯೩). **ರಸಕಸೆ** : ೨. ಜಗಳ ; ಕಲಹ : ರಸಕಸೆಯನ್ನು ಮಾಡಬೇಡ ಸೋನಾ (ಕವಲು. ೦೩೭). **ರಸಖಸಿ** : ೨. ಯಾಕ ಹುಡಿಗಿ, ಅತ್ತೀ ಜೋಡಿ ರಸಖಸಿ ಮಾಡತೀಯಂತಲ್ಲಾ (ಸಂಪತ್ತಾಯ. ೦೩೪). **ರಸಗಸಿ** : ೨. ಹೀಂಗ ಮಾತುಮಾತಿಗೆ ರಸಗಸಿ ಮಾಡೋದೊಂದು ಕೆಟ್ಟಚಾಳೀನ ಅದ ಆಕೀಗೆ (ಚಾಂದಾಯ. ೩). [← ಮರಾ. ರಸಕಸ್, ರಸಘಸ್]

**ರಸಕಸೆ** 'ರಸಕಸಿ' ನೋ.

**ರಸಕಾವ್ಯ** (ನಾ). ನವರಸಭರಿತವಾದ ಕಾವ್ಯ : ಭರತಂ ಮಹಾತ್ಮನೆಸೆದನು . . . ರಸಕಾವ್ಯ ಸತ್ಕಲಾಭ್ಯಾಸದಭ್ಯಾತ್ಮದಲಿ (ಶ್ರೀಭಾಮ. ೫೬-೬೯೬). [ಸಂ.]

**ರಸಕೂಪ** (ನಾ). ಪಾದರಸದ ಬಾವಿ : ಇದು ಚಿತ್ರಂ ರಸಕೂಪದೊಳ್ ಪಲೆವಲಿನಿಂದಾಂ ಬಂದು ಪೊಕ್ಕಿರ್ಪುದೆತ್ತ . . . ಬಱಿದೊಂದಾಪತ್ತು ಪೆತ್ತಿರ್ಪುದೆತ್ತ (ಲೀಲಾಪ್ತ. ೪-೯೦). [ಸಂ.]

**ರಸಖಸಿ** 'ರಸಕಸಿ' ನೋ.

**ರಸಗಂದಾಯ** (ನಾ). ರುಚಿಕರವಾದ ಪದಾರ್ಥಗಳ ಮೂಲಕ ಕೊಡುವ ಕಂದಾಯ; ತೆರಿಗೆ: ದಾಳಿಂಬಫಲಸಿಮ್ಮಾವರನೇಱಲ್ ಮೊದಲಾದ ಫಳಕುಳಂಗಳಂ ಸೊಬಗುವಡೆದ ಸುರವಂ ಕೈಗೆಯ್ದು ಕಾಮಧೇನು ಕಲ್ಪವೃಕ್ಷಂಗಳತ್ತ ಪಾಲ್ಕುಪ್ಪ ಸಕ್ಕರೆಗಳ್ ಮೊದಲಾದ ರಸಗಂದಾಯಂಗಳಂ . . . ಉದ್ವಾಹಮಂದಿರಂ ಮೆಱೆದುದು (ಜಾಣಾಕ್ಯ. ೦-೬-೨೭ ವ). [ರಸ + ಕಂದಾಯ]

**ರಸಗತಜ್ವರ** (ನಾ). ದೇಹದ ದ್ರವರೂಪವಾದ ಧಾತುವಿನಲ್ಲಿ ಸೇರುವ ಜ್ವರ : ಬಹಳ ವಾತ ಶ್ಲೇಷ್ಮ ಉಂಟಾಗಿ, ಮೈಯಲ್ಲಿ ಭಾರ ಕಾಣಿಸಿ ದೇಹದಲ್ಲಿ ಉರಿದೋರಿ, ದೈನ್ಯವಾದ ಮಾತುಗಳುಂಟಾಗಿ, ಆಕಳಿಸುತ್ತ, ಬಾಯಿಯಲ್ಲಿ ಅರೋಚಕ ಪುಟ್ಟಿ, ವಾಂತಿಯಾಗುತ್ತ, ದಾಹವುಂಟಾಗಿರುವುದೇ ರಸಗತಜ್ವರವೆನಿಸಿಕೊಂಬುದು (ಸಕವೈ. ೯೯). [ಸಂ.]

**ರಸಗತ್ತಲೆ** 'ರಸೆಗತ್ತಲೆ' ನೋ.

**ರಸಗಬ್ಬ** (ನಾ). = ರಸಕಾವ್ಯ : ಇಂಚರದಿ ಸಂಗೀತರಸದಲಿ ಮಿಂಚು ಕವಿಗಳ ಪಲವು ರಸಗಬ್ಬವನು ಗಮಕದಲಿ ಉಂಚದಲಿ ಮೆಱೆದೋದಿ (ಸಾಳ್ವಭಾ. ೩೨-೩೯); 'ಕಾಲೂರ ಚೆಲುವೆ' . . . ಪೋಲೀಸರು ಲಂಚಗುಳಿತನದಿಂದ ಮಾಡುವ ಅನ್ಯಾಯ ಇತ್ಯಾದಿಗಳನ್ನು ರಮ್ಯವಾಗಿ ಚಿತ್ರಿಸುವ ರಸಗಬ್ಬ (ಕಾಲೂರ. ೦೦ ಪರಿಚ). [ರಸ + ಕಬ್ಬ$_1$]

**ರಸಗರ್ಭ** (ನಾ). ೧. ಕಾಡಿಗೆ ; ರಸಾಂಜನ : "ದಾರ್ವಿಕಾ ಕ್ವಾಥೋದ್ಭವಂ, ತುತ್ಥಂ, ರಸಾಂಜನಂ, ರಸಗರ್ಭಂ, ತಾರ್ಕ್ಷ್ಯಶೈಲಂ – ೬ ರಸಾಂಜನದ ಹೆಸರುಗಳು" (ನಿಘಂಟು. ೩೦೩). ೨. ಕೇಸರಿಬಣ್ಣದ ಪುಡಿ; ಸಿಂದೂರ. [ಸಂ.]

**ರಸಗವಳ** (ನಾ). = ರಸಕವಳ : ಶೃಂಗಾರ ಕರುಣ ವೀರರಸಗಳ ಸಂದರ್ಭೋಚಿತವಾಗಿ ಒಸರಿ ರಸಿಕರಿಗೆ ರಸಗವಳವಾಗಿದೆ (ಕಾಲೂರ.೦೦ ಪರಿಚ). [< ರಸಕವಳ]

**ರಸಗಸಿ** 'ರಸಕಸಿ' ನೋ.

**ರಸಗೀತ** (ನಾ). ರಸಭರಿತವಾದ ಹಾಡು ; ಇಂಪಾದ ಗೀತೆ : ರಸಗೀತಕ್ಕೆಡೆಗೊಟ್ಟು ತಾಳಲಯದೊಳ್ ನೇರ್ಪಟ್ಟು . . . ಬಾಜಿಸುತ್ತುಂ (ಸುಲ್ಲಪು. ೦೨-೭೬). [ಸಂ.]

**ರಸಗುಂಡು** (ನಾ). ಪಾದರಸವನ್ನು ಬಳಿದ, ಹೊಳೆಯುವ ಬಣ್ಣಬಣ್ಣದ ಗೋಳಾಕಾರದ ಗಾಜಿನ ಗುಂಡು ; ಗುಳಾಪು : ಮದುವೆಯ ಚಪ್ಪರಕ್ಕೆ ರಸಗುಂಡುಗಳನ್ನು ಕಟ್ಟಿ ಚೆನ್ನಾಗಿ ಅಲಂಕರಿಸಿದ್ದರು (ರೂಪ). [ರಸ + ಗುಂಡು]

**ರಸಗುಲ್ಲ** 'ರಸಗುಲ್ಲಾ' ನೋ.

**ರಸಗುಲ್ಲಾ**, ರಸಗುಲ್ಲ (ನಾ). ಹಾಲನ್ನು ಒಡೆಸಿ ಆದರ ಗರಣೆಯಿಂದ ಮಾಡುವ ಒಂದು ಬಗೆಯ ಸಿಹಿತಿಂಡಿ : ಕಲಕತ್ತೆಯಿಂದ ಒಂದು ಪಾತ್ರೆಯಲ್ಲಿ ಉತ್ತಮ ರಸಗುಲ್ಲಾ ತಂದಿದ್ದೆ (ಶ್ರೀಶಾಂತ. ೩೩); ಜನಪ್ರಿಯವಾದ ಮಿಠಾಯಿಯೆಂದರೆ 'ರಸಗುಲ್ಲ'. ಅದನ್ನು ಮೊದಲು ತಯಾರಿಸಿದವಳು ಒಬ್ಬ ಸೂಳೆಯಂತೆ (ಅನ್ನದಾ. ೦). **ರಸಗುಲ್ಲ** : ರಸಗುಲ್ಲ, ಮಸಾಲೆದೋಸೆ ಮಾಡಿದ್ದೀನಿ (ರೂಪಿ).

[← ಹಿಂ. ರಸ್‌ಗುಲ್ಲಾ; ಮರಾ. ರಸಗುಲ್ಲಾ, ರಸಗೋಲ್ಲಾ ]

**ರಸಗೆಡು** (ಕ್ರಿ). ಸಾರವಿಲ್ಲದಾಗು ; ನಿಸ್ಸತ್ತ್ವವಾಗು : ರಸಗೆಟ್ಟು ಹೋದ ವನಿತೆಯು ಹೋಹಾತ ಪಶುವಿನಿಂದತ್ತ (ಸರ್ವಜ್ಞ. ೦೭೬೯).

[ ರಸ + ಕೆಡು$_1$ ]

**ರಸಗೆಯ್**, ರಸಗೈ (ಕ್ರಿ). ೧. ದ್ರವವನ್ನಾಗಿ ಮಾಡು; ಕರಗಿಸು : ಕುಂದಣವನು ರಸಗೆಯ್ದೊಡಾಕ್ಷಣ ಕರುವಿಂದ ಬೇರ್ಪಡಿಸಿ ಪುತ್ಥಳಿಯ ತಂದಡರ್ಚಿದರು (ಶ್ರೀಪಕ. ೨೭–೫೮). **ರಸಗೈ** : ೨. ಸತ್ತ್ವವುಳ್ಳುದನ್ನಾಗಿ ಮಾಡು : ಬಗೆಬಗೆಯಾಟಿಕೆಗಳನು ಮಣ್ಣೊಳು ಮರದೊಳು ತಂದೆ ನಿರ್ಮಿಸುವವರು ರಸವನು ರಸ್ಗೈವವರು (ಶಂತಾಕ. ೦೦–೩೭).

[ ರಸ + ಕೆಯ್$_1$ ]

**ರಸಗೇಯ** (ನಾ). = ರಸಗೀತ: ರಸಗೇಯಂ ನಲಿಪೆರ್ಚಿದೇಕೆ ವಿತತಾತೋದ್ಯಸ್ವನಂ ಸೂಸದೇಕೆ (ಪುಲ್ಲಪು. ೯–೯); ರಸಗೇಯಂ ಭಾವನೃತ್ಯಂ ವಡೆಯ (ಕಾರ್ಕಳ. ೫–೧೦೦).   [ಸಂ.]

ರಸಗೈ 'ರಸಗೆಯ್' ನೋ.

**ರಸಗೋಲ್** (ನಾ). ಸಿಹಿಯಾದ ದ್ರವವನ್ನುಳ್ಳದು; ಕಬ್ಬು: ಕುಸುಮಾಸ್ತ್ರನೊಂದು ಕಬ್ಬಿನ ಬಿಲ್ಲಿನಿಂ ಲೋಕವಿಸರಮಂ ಕೊಂದು ಕೂಗುತಲಿಹನು . . . ರಸಗೋಲ್ಗಳಿನ್ನು ವೆಗ್ಗಳಮಿರಲು ಮಾರ ಗರ್ವಿಸಂಥಿಂತು ಮಾಳ್ಪನೊ (ಪಪುರಾ. ೯–೨೪).   [ರಸ + ಕೋಲ್$_1$]

**ರಸಗ್ರಹಣ** (ನಾ). ಕಾವ್ಯ, ನೃತ್ಯ ಮೊದಲಾದ ಕಲೆಗಳ ಸ್ವಾರಸ್ಯವನ್ನು ಗ್ರಹಿಸುವಿಕೆ : ಅರ್ಥವನ್ನು ವಿವರವಿವರವಾಗಿ ತಿಳಿದುಕೊಂಡು ರಸಗ್ರಹಣ ಮಾಡುವವನಿಗೆ ಇಂಥ ಕವನಗಳನ್ನು ಓದಿದಾಗ ಒಮ್ಮೆಲೆ ಅರ್ಥವಾಗುವುದಿಲ್ಲ (ಪದ್ಮಶ್ರೀ. ೯೩).   [ಸಂ.]

**ರಸಘಳಿಗೆ** (ನಾ). ಅತ್ಯಂತ ಆನಂದದ ಕಾಲ ; ಸಂತೋಷದ ಗಳಿಗೆ : ಮಕ್ಕಳ ಹಿಂದೆ ಮುದುಕರೂ ಹೊರಡುವ ರಸಘಳಿಗೆ ಅದು (ಅಶೋಕ. I, ೬೦೬).   [ರಸ + ಘಳಿಗೆ$_1$ (< ಗಳಿಗೆ)]

**ರಸಘುಟಿಕೆ** (ನಾ). ಪಾದರಸದಿಂದ ಮಾಡಿದ ಗುಳಿಗೆ, — ಮಾತ್ರೆ: ಮಂತ್ರ ತಂತ್ರ ಯಂತ್ರ ಬೇಳುವ ತಿಲಕ ತಿಗುರು ರಸಘ[ಘು]ಟಿಕೆ . . . ಮೊನೆಕಟ್ಟಿಂಬ ಕುವಿದ್ಯದಿಂ ಗೆಲುವೆನು (ಪ್ರಭುಲಿ. I, ೩೩೩).

[ಸಂ. ರಸಘುಟಿಕಾ]

**ರಸಚಿತ್ರ** (ನಾ). ೧. ದ್ರವರೂಪವಾದ ಬಣ್ಣಗಳಿಂದ ಬರೆದ ಚಿತ್ರ: ಚಿತ್ರಚಿತ್ರಾರ್ಧಚಿತ್ರಾಭಾಸವೆಂಬ ಮೂರುಂ ಪ್ರಕಾರಮುಮಂ ರಸಚಿತ್ರಧೂಳೀಚಿತ್ರದೋಷೆಯುಮಂ . . . ಪರಿಭಾವಿಸಿ ನೋಡಿ (ಪುಲ್ಲಪು. ೫–೯೨) ; ನಡೆಮತ್ತೆ ಸುಡಿವ ಪುತ್ರಿಕೆ ಮಿಡುಕುವ ರಸಚಿತ್ರದೆಸೆವ ಪೆಣ್ಣಂ ಬೊಲ್ಪಂ ಪಡೆದಳ್ (ಶಂಕ್ರಪು. ೫–೬೨೬); ರಸಚಿತ್ರಂ ರತ್ನಭೂಷಾವಳಿ ಮೃದುವಸನಶ್ರೇಣಿ ಮುಕ್ತಾತಪತ್ರಪ್ರಸರಂ (ಶಾಂತೀಶ. ೯–೯೦). ೨. ಕಾವ್ಯದಲ್ಲಿ ಆನಂದವನ್ನುಂಟುಮಾಡುವ ಸನ್ನಿವೇಶ ; ಸ್ವಾರಸ್ಯಕರವಾದ ಪ್ರಸಂಗ.   [ಸಂ.]

**ರಸಜ** (ನಾ). ೧. ಸಕ್ಕರೆ. ೨. ಕಾಕಂಬಿ. ೩. ರಕ್ತ. [ಸಂ.]

**ರಸಜೀವನ** (ನಾ). ಸಾರವತ್ತಾದ ಬಾಳು ; ಸೊಗಸಾದ ಜೀವನ : ರಸಜೀವನಕೆ ಏಗಿಲ್ ತಪಮಿಹುದೆ? (ಶ್ರೀರಾಮಾ. ೩೨–೧೨೬).   [ಸಂ.]

**ರಸಜ್ಞ** (ನಾ). ೧. ಸ್ವಾರಸ್ಯವನ್ನು ಬಲ್ಲವನು : ಭೋಗಂಗಳ್ . . . ಮನೋರಾಗಮನೊದವಿಸದವು ಹೃದ್ರೋಗಮನೊದವಿಸೆ ರಸಜ್ಞನನುಭವಿಸುಗುಮೇ (ಅನಂತ. ೩–೬೦); ಶ್ರೀಮದುದುಮಾಮಧುರಾಧರಸೋಮಕಳಾರಸರಸಜ್ಞ ರಸನಂ (ಜಾತಕೀ. ೩–೦). ೨. ಶೃಂಗಾರ, ಹಾಸ್ಯ ಮೊದಲಾದ ಕಾವ್ಯರಸಗಳನ್ನು ಬಲ್ಲವನು: ಒದವಿರ್ದ ಚಿತ್ರದಿಂ ತೋರ್ಪುದು ಭಾವಂ ಭಾವದಿಂದೆ ರಸಮುದಯಿಸುಗುಂ ವದನಮುಂ ಪ್ರಕಟಿಪುದಾ ವದನದೆ ರಸಮಿಂತಿದೆಂದು ತಿಳಿಗೆ ರಸಜ್ಞರ್ (ರಸರ. ೦–೩). ೩. ರಸವಿದ್ಯೆಗಳನ್ನು ಬಲ್ಲವನು ; ರಸವಾದಿ.   [ಸಂ.]

**ರಸಜ್ಞತೆ** (ನಾ). ೧. ರಸಾನುಭವವನ್ನು ತಿಳಿಯುವ ಶಕ್ತಿ; ಆನಂದವನ್ನು ಅರಿಯುವ ಚೈತನ್ಯ. ೨. ಕಾವ್ಯಶಕ್ತಿ. ೩. ರಸವಾದಜ್ಞಾನ. ೪. ರುಚಿಭೇದಜ್ಞಾನ. ೫. ತಾರತಮ್ಯಜ್ಞಾನ. [ಸಂ. ರಸಜ್ಞತಾ]

**ರಸಜ್ಞಾನಿ** (ನಾ). ರಸವಿದ್ಯೆಯನ್ನು ಬಲ್ಲವನು ; ರಸವಾದಿ: ಇನನುತ್ತರಾಯಣದೊಳನುದಿನಂ ರಸಜ್ಞಾನಿ ನೀರನೊಸೆವಂತೊಸೆದಂ (ಜಾಂಪಿ. ೦೦–೨೩).   [ಸಂ. ರಸಜ್ಞಾನಿನ್]

**ರಸಜ್ಞೆ** (ನಾ). ೧. ರಸಗಳನ್ನು ಅರಿಯುವ ಇಂದ್ರಿಯ ; ನಾಲಗೆ: "ರಸಜ್ಞ, ರಸನಾ, ಜಿಹ್ವಾ—ಈ ೩ ನಾಲಗೆ" (ಕರ್ನಾಪು. ೮೬–೩೩೭). ೨. ರಸವನ್ನು ಬಲ್ಲವಳು ; ರಸಿಕಳು.   [ಸಂ. ರಸಜ್ಞಾ]

**ರಸತಂತ್ರ** (ನಾ). ಕೀಳುಲೋಹಗಳನ್ನು ಚಿನ್ನವಾಗಿಸುವ ಕಲೆ; ರಸವಿದ್ಯೆ : ಮಾಟಮಂತ್ರವಿದ್ಯೆಯ ಒಂದು ಭಾಗ ರಸತಂತ್ರ (ಕೃಪಾಪ. I,೩೩೯). [ಸಂ.]

**ರಸತಪಸ್ಯೆ** (ನಾ). ರಸಾನುಭವಕ್ಕಾಗಿ ಮುಡಿಪಿಟ್ಟ ತಪಸ್ಸು : ವ್ಯಾಡಿಯಾಗಿರಲಿ ಬಾಳ್ವೆ, ಜಯಿಸುಗೆ ರಸತಪಸ್ಯೆ ; ದೊರೆಕೊಳುಗೆ ಚಿರಶಾಂತಿ (ಶ್ರೀರಾಮಾ. ೩–೦೭೯).   [ಸಂ. ರಸತಪಸ್ಯಾ]

**ರಸತವರ** (ನಾ). ಪಾದರಸ : (ದರ್ಪಣದ ಗಾಜಿಗೆ) ರಸತವರವನ್ನು ಲೇಪಿಸು (Quicksilver. ೩೦೪೩).   [ರಸ + ತವರ]

**ರಸತ್ತಾರುಗ ?** (ನಾ). (?) : ತೊತ್ತಬಿದುಂಬುವ ಮದೇಭಂಗಳುಮಂ ಮದೇಭಂಗಳನಾರ್ದು ಬಿಟ್ಟಿಕ್ಕುವ ನಿಷಾದಿಗ[ಳಂ]ಮಿ ಪೊರಜೆವಿಡಿದು ಕೊರಲ ಬಳೆಗಳೊಳ್ ಕಾಲ್ಗೋದು ಪರಿಯಿಸುವ ರಸತ್ತಾರುಗರುಮಂ[ಶಾಂತಿ. ಪರಿಯಿಸುವವರಸತ್ತಾರು ಗುರುಮಂ, ಪರಿಯಿಸುವಾರಸತ್ತಾರು ಗುರುಮಂ] ಆ ರಸತ್ತಾರುಗರಿಡುವಿಟ್ಟಿಯ ಪಿಡಿಕುತ್ತಿನ ಕಕ್ಕಡೆಯ ಕೋಳ್ಗೆ ಮರಪಟಲಂ ಪಾಯ್ದು ಕೆಡೆದಂ (ಶಂಕರಾ. ೦೨–೬೦ ವ) ; " ರಸತ್ತಾರುಗರುಮಂ — ಆನೆಯ ಮೇಲೆ ಕುಳಿತು ಯುದ್ಧಮಾಡುವವರನ್ನು (?)" (ಶಂಕರಾ. ೯೩೩).

[ ? ]

**ರಸತ್ವ** (ನಾ). ರಸಾನುಭವವುಂಟಾಗುವ ಅವಸ್ಥೆ : ಭಾವ ರಸತ್ವಕ್ಕೆ ಏರುವುದು ಎಂದರೆ ಪ್ರಾಣಮಯ ಮನೋಮಯಕ್ಕೇರುವುದು ಎಂದು ಅರ್ಥ (ಶಾಂತರ. ೦೯).   [ಸಂ.]

**ರಸದಂಬುಲ** (ನಾ). ರಸಭರಿತವಾದ ತಾಂಬೂಲ : ಪೊಳೆವ ಕೆಂಬಲ್ಲಿಗೆ ರಸದಂಬುಲವ ಮೆಲ್ಲಗೆ ಸಾರ್ಚಿ (ಶ್ರೀಪಕ. ೦೬–೫೯); ಬಿಂಬಾಧರದ ಸವಿಯ ತೋಟಿ ನೆಜೆ ರಸದಂಬುಲಗುಟುಕಿತ್ತು ಕೊಡೆ (ಶಂಕರ. ೯–೦೫೯).

[ರಸ + ತಂಬುಲ]

**ರಸದರ್ಶನ** (ನಾ). ರಸವನ್ನು ಕಾಣುವುದು, — ಅರಿಯುವುದು : ನವನವೋನ್ಮೇಷಿತಂ ನಿತ್ಯಚಿರನೂತನಂ ರಸದರ್ಶನಾಸ್ವಾದನಂಗೈವ ಸಹಜಕವಿ (ಶ್ರೀರಾಮಾ. ೩೭–೦೦೦).   [ಸಂ.]

ರಸದಾಡಿಮ (ನಾ). ಸಾರವತ್ತಾದ ದಾಳಿಂಬೆ : ರಸದಾಡಿಮದ ಬಿತ್ತುಮಂ ಪೊಸಮುತ್ತುಮಂ ಮುಕ್ಕುಳಿಸಿದಂತಪ್ಪ ವಿಬುಧವನಜವನಕಳಹಂಸನ ದಂತಪಂಕ್ತಿಗಳವ್ಯುತಕಿರಣನ ಕಾಂತಿಗಳನಿಳಿಸುವಂತಾದುವು (ಶಂಕರಾ. ೨–೫೯ ವ).   [ಸಂ.]

**ರಸದಾನ** (ನಾ). ೧. ದ್ರವವನ್ನು ಕೊಡುವಿಕೆ : (೯). ೨. ವಿಷಹಾಕುವುದು; ವಿಷಪ್ರಯೋಗ : ಪುರುಷವುಂ ಸಮುಕಟ್ಟುವವುಪ್ಪೊಡೆ ಪೊಕ್ಕಿಜಿಯಲಣ್ಮುವರಿಲ್ಲ ರಸದಾನಾದಿಗಳೊಳ್ ಛಿದ್ರಿಸುವವುಪ್ಪೊಡವರಾಪ್ತವಂತರುಂ ಬುದ್ಧಿವಂತರುಮಪ್ಪಾಗಿ ನೆಗಬ್ದರ್ (ಕಂಪಕಾ. ೬-೬೬ ಪ). ೩. ಆನಂದವನ್ನು ನೀಡುವುದು ; ರಸಾನುಭವವನ್ನು ಕೊಡುವುದು : ಕವಿಸೃಷ್ಟಿಯು ಈ ಸ್ನಾನ. ಈ ಪಾನ 'ಪಕ್ಷಿಕಾಶಿ'ಯು ರಸದಾನವಾಗಿದೆ (ಕಾಸಮಾ. ೦೦೦). [ಸಂ.]

**ರಸದಾಳಿ**, ರಸದಾಳೆ, ರಸ್ತಾಳೆ (ನಾ). ೧. ಒಂದು ಬಗೆಯ ಶ್ರೇಷ್ಠ ಜಾತಿಯ ಕಬ್ಬು : ರಸವತ್ತಾದ ಕಬ್ಬು : ರಸದಾಳಿ ದಾಳಿಂಬಂಗಳಂ ತವೆ ಬಾಲದಿಂದಲಿ ಕಿತ್ತೊರಸಿ ಹುಡಿಹುಡಿ ಮಾಡಿದನು ಹನುಮ (ತೊರಾ. ೦೦-೨೦): ರಸದಾಳಿಯಂತೆ ರಮಣಿಯರ ಚೆಂದುಟಿಯಂತೆ . . . ಅತಿರುಚಿಯ ಪಡೆದುದತಿರಸಿಕನತಿನಿಪುಣ ಮಂಗರಸನೊಪ್ಪುವ ವಾಕ್ಯಗುಂಫನು ಭಾವಿಸಿದೊಡೆ (ಸಮ್ಯ. ೦-೦೦) ; ಕಬ್ಬಿನ ಜಾತಿಗಳಲ್ಲಿ – ರಸದಾಳಿ, ರಾಮಗಬ್ಬು, ಕರಿಗಬ್ಬು . . . ಎಂದು ಅನೇಕವುಂಟು (ಮಾನಸಉ. ೩-೨೦೦). ೨. ಒಂದು ಬಗೆಯ ಶ್ರೇಷ್ಠ ಜಾತಿಯ ಬಾಳೆ : ನಂಜನಗೂಡಿನಲ್ಲಿ ರಸದಾಳಿಯನ್ನು ಹೆಚ್ಚಾಗಿ ಬೆಳೆಯುತ್ತಾರೆ (ರೂ). **ರಸದಾಳೆ** : ೧. 'ರಸದಾಳಿಕಬ್ಬು' ಪರಾ. **ರಸ್ತಾಳೆ** : ೧. ಬಾಳೆ ರಸ್ತಾಳೆ ದಾಳಿಂಬಂ ಮೊದಲಾದ ಫಲತರುಗಳಿಂ . . . ಬೆಳಗುವ ಧರ್ಮತೋಟಂ (ಶಾಸಗಿ. ೬೯). [ದೇ. ॥ ತೆಲು. ರಸದಾಳಿ, ರಸದಾಡಿ]

**ರಸದಾಳಿಂಬ** (ನಾ). = ರಸದಾಡಿಮ : ರಸದಾಳಿಂಬದ ಬೀಜಮುಂ ಕರ್ದುಕಲಾ ಸಾರಂ ಕರಂ ಸೃಕ್ವದೊಳ್ ಬಸಿಯಲ್ (ಉದ್ಭಟ. ೯-೨೬); ಫಲಭರದ ರಸದಾಳಿಂಬ ಖರ್ಜೂರಾಮ್ರ . . . ಮಧೂಕತರುನಿಕುರುಂಬಕದ ಸುರನಂದನ (ಕೊರಡಾ. ೦-೩-೪೦). [ರಸ + ದಾಳಿಂಬ]

**ರಸದಾಳಿಕಬ್ಬು** 'ರಸದಾಳಿಗರ್ವು' ನೋ.

**ರಸದಾಳಿಗಬ್ಬು** 'ರಸದಾಳಿಗರ್ವು' ನೋ.

**ರಸದಾಳಿಗರ್ವು**, ರಸದಾಳಿಕಬ್ಬು, ರಸದಾಳಿಗಬ್ಬು, ರಸದಾಳೆಕಬ್ಬು (ನಾ). = ರಸದಾಳಿ ೧ : ಇಕ್ಕೆಲದೊಳು ಕೊರ್ವಿ ನಳನಳಿಸಿ ನೀಳ್ದು ಬೆಳೆದ ರಸದಾಳಿಗರ್ವುಗಳ್ (ಕೃಮಿಜ. ೩-೩). **ರಸದಾಳಿಕಬ್ಬು** : ರಸದಾಳಿಕಬ್ಬಿನೊಳು ಹಿಂದುಮುಂದನೆ ತೆಗೆದು ಮಿಸುಪ ಮರಗಬ್ಬು ಕರಿಯ ಮರಗಬ್ಬಿನೊಳೊಸರ್ವ ರಸಮುಂ ಒಳಿದು (ಸೂಕಾ. ೨-೩೦) ; ರಸದಾಳಿ [ಪಾಠಾಂ. ಳೆ]ಕಬ್ಬು ಮೆಲಲೆಂದು ಹೋದರೆ ವಿಷವಾಗಿ ತೋರುತಿದೆ ಪ್ರಾರಬ್ಧಬಲದಿಂದ (ಪುರಂದ. ೨-೬೯-೬). **ರಸದಾಳಿಗಬ್ಬು** : ಚೆಂದಂಗಿನೆಳಗಾಯೊಡೆದು ರೆಷೋರೆಸೆವೊಸರ್ವ ಪೊನಲಿಂ ಕಡುವೆಳೆದ ರಸದಾಳಿಗಬ್ಬುಗಳು (ಕಾಳ್ಯಾ. ೦-೬೦) ; ರಸದಾಳಿಗಬ್ಬಿನ ರಸದೊಳಾ ನೃಪತಿ ವಿರಾಯಿಸುವಂದ ಮೆಚ್ಚಿನಂದಾ ಜನಸಾ (ಶರಾ. ೦೬-೭೬). **ರಸದಾಳೆಕಬ್ಬು** : ಆಲದ ಬೀಳು ಎಲಚಿ ಚಿಗುರು . . . ರಸದಾಳೆಕಬ್ಬು, ಇಪ್ಪೆಹೂವು ಇವುಗಳ ಕಷಾಯವಿಕ್ಕಿ ಸಕ್ಕರೆಗೂಡಿ ಸೇವಿಸೆ ದಾಹಜ್ವರ ಗುಣಮಕ್ಕುಂ (ಸಕಪ್ಪ. ೯೬). [ರಸದಾಳಿ + ಕರ್ವು$_1$]

**ರಸದಾಳಿವಿಲ್ಲ** (ನಾ). ರಸದಾಳಿಯ ಕಬ್ಬಿನ ಬಿಲ್ಲನ್ನು ಹಿಡಿದಿರುವವನು ; ಮನ್ಮಥ : ನಲ್ಲ ಕೊ ನಾಗರೀಕನೆ ಕೊಳ್ಳೊ ರಸದಾಳಿವಿಲ್ಲನ ರೂಪ ಕೊಳ್ಳಲವೋ (ಮೋಹತ. ೦೯-೯೬). [ರಸದಾಳಿವಿಲ್ಲು + –ಅ$_7$]

**ರಸದಾಳಿವಿಲ್ಲು** (ನಾ). ಮನ್ಮಥನ ಕಬ್ಬಿನ ಬಿಲ್ಲು : ಕಿವಿವರಂ ತೆಗೆದು ಸಮ್ಮೋದದಿಂದೆಸುವ ರಸದಾಳಿವಿಲ್ಲೋ ಎನಲ್ಕಾಗಳೆರೆವಚಿಯೊಗೆದುದು (ಶಬ್ದಾ. ೯-೭೩). [ರಸದಾಳಿ + ಬಿಲ್ಲು$_1$ (<ಬಿಲ್$_2$)]

**ರಸದಾಳೆ** 'ರಸದಾಳಿ' ನೋ.

**ರಸದಾಳೆಕಬ್ಬು** 'ರಸದಾಳಿಗರ್ವು' ನೋ.

**ರಸದು**, ರಸ್ತು (ನಾ). ಸೈನ್ಯಕ್ಕೆ ಸರಬರಾಜುಮಾಡುವ ಆಹಾರಧಾನ್ಯ : ಯೆರಡು ಕೋಟೆಗೆ ಇರುವ ರಸದು ತೆಗೆದುಕೊಂಡು ಹೊರಟು ಬಂದು ರಸ್ತು ಸಾಮಾನು ಸಾಗಿಸಿಕೊಂಡು (ರಾಕೆಂದ್ರ. ೨೩). **ರಸ್ತು** : ರಾಜೇಶ್ರೀ ದೊರೆಗಳ ರಸ್ತಿನ ಹಣವನುಯಿತ್ತಿ (ಎಕ. XI. ಹೊಳೆ. ೨೩-೩೭ ; 1665) ; ಜಕೀರಿ ರಸ್ತು ಮುಸ್ತೈದೆಗಳೊಳಪೊಗದಂತು ಕಂಡಿಕಣವೆ ಪಥಂಗಳಂ ಕಟ್ಟಿ (೯೯ಪ್ಪ. ೩-೯೯). [←ಪಾರ. ಹಿಂ. ಮರಾ. ರಸದ್]

**ರಸದುಂಬು** (ಕ್ರಿ). ರಸಭರಿತವಾಗಿರು : ಅವಳ ರಸದುಂಬಿದ ಚೆಂದುಟಿಗಳಿಗೆ ನನ್ನ ಒರಟುತುಟಿಗಳನ್ನು ತಗಲಿಸಿದೆ (ಹಾದಹು. ೦೦೩). [ರಸ + ತುಂಬು$_1$]

**ರಸದೃಷ್ಟಿ** (ನಾ). ಕವಿಯ ಸ್ವಾರಸ್ಯವಾದ ರೀತಿ.– ದೃಷ್ಟಿ : ಕೆಲ ಆಧ್ಯಾತ್ಮಿಕ ಸತ್ಯಗಳನ್ನು ರಸದೃಷ್ಟಿಯಿಂದ ಸೂಚಿಸುವ ವ್ಯಂಜಕತೆ (ಪದ್ಯಕಾ. ೦೦೭). [ಸಂ.]

**ರಸದೋಷ** (ನಾ). ೧. ಹೊಟ್ಟೆಯಲ್ಲಿ ನೀರು ತುಂಬಿಕೊಳ್ಳುವ ಒಂದು ಬಗೆಯ ರೋಗ : ಪದನಜಾದು ಮುನ್ನ ಹೇಮಂತವ ಪಿಂಡಮನಿಕ್ಕಿ ಗರ್ದುಗನಿಕ್ಕಾಗೆ ಬಟೀಯುಂ ತ್ರಿದಿಸಂ ತಾಂ ಲೇಪಂಗೆಯ್ಸಿದೊಡುಟೀಯುದೆ ಕಿಡುಗುಮುನಿತಜಿರೊಳ್ ರಸದೋಷಂ (ಅಶ್ವಶಾ. ೦೩-೨೯). ೨. [ಕಾವ್ಯಮೀ] ಕಾವ್ಯದೋಷಗಳಲ್ಲಿ ಒಂದು ; ರಸದಲ್ಲಿ ಉಂಟಾಗುವ ದೋಷ : 'ದೋಷ' ಗಳನ್ನು (೧) ಪದದೋಷ, (೨) ಅರ್ಥದೋಷ, (೩) ರಸದೋಷ ಎಂದು ಮೂರು ಭಾಗ ಮಾಡಬಹುದು (ಕೃಮಿಜ. ೨೨೬). [ಸಂ.]

**ರಸದ್ರವ್ಯ** (ನಾ). ರುಚಿಕರವಾದ ಪದಾರ್ಥ : ಸಹಪಂಕ್ತಿಯಲ್ಲಿ . . . ರಸದ್ರವ್ಯವ ಎಸಕದಿಂದ ಇಕ್ಕಿದಡೆ (ಸಕವ. I. ೯೩೦-೨೦) ; ವರ ಸುಹಸ್ತದಿ ಪಾಕಗೈದ ರಸದ್ರವ್ಯಮುಂ ನಿರುತನಾಂ ನಿತ್ಯ ಭುಂಜಿಪೆ (ನವಮೋ. ೯-೭೯). [ಸಂ.]

**ರಸಧರ್ಮ** (ನಾ). ರಸಾನುಭವವನ್ನು ಉಂಟುಮಾಡುವ ಗುಣ : ಇದನ್ನು ಮಮ್ಮಟ ಮುಂತಾದ ನವೀನಾಲಂಕಾರಿಕರು ಗ್ರಹಿಸಿ ಗುಣಗಳು 'ರಸಧರ್ಮ' ಗಳೆಂದು ನಿಷ್ಕರ್ಷಿಸಿದ್ದಾರೆ (ಕೃಮಿಜ. ೦೭೩). [ಸಂ.]

**ರಸಧಾತು** (ನಾ). ೧. ಪಾದರಸ ; ಪಾರಜ. ೨. ದೇಹದಲ್ಲಿರುವ ಸಪ್ತಧಾತುಗಳಲ್ಲೊಂದು : ಧಾತುಗಳು ರಸಧಾತು, ರಕ್ತಧಾತು, ಮಾಂಸಧಾತು . . . ಎಂದು ಏಳು ತೆರನಾಗಿವೆ (ಸಕಪ್ಪ. ೯೮). [ಸಂ.]

**ರಸಧಾನ್ಯ** (ನಾ). ದ್ರವಾಂಶವಿರುವ ಎಳ್ಳು, ಕಡಲೆಕಾಯಿಬೀಜ ಮುಂತಾದುವು : ಬಿಡುಗಡ ಮೂಗಳದ ಹೊಲದಲಿ ಪುಟ್ಟಿದಂತ್ತಾ ರಸಧಾನ್ಯ ಜೋಳ ನೆಲು ಮುಂತಾದ ಧಾನ್ಯ (ಸಾಇ. IX-ii, ೬೯೮-೦೯; 1652). [ಸಂ.]

**ರಸಧಾರೆ** (ನಾ). (ಹಣ್ಣಿನಲ್ಲಿರುವ) ದ್ರವದ ಧಾರೆ : ತನಿವಣ್ಣಂ . . . ಚಂಚುಪುಟದಿಂದಂ ಮೆಳ್ಚಿಸಿಂ ಸೀಳ್ದು ಸೀಯೆಸೆ ಸೋರ್ವ ರಸಧಾರೆಯುಂ ಸವಿದು (ಕಬಿಕಂ. ೨-೯೯). [ಸಂ. ರಸಧಾರಾ]

**ರಸಧಿ** (ನಾ). ಕಡಲು ; ಜಲಧಿ : ಸುಖದುಃಖಜನ್ಮಮೃತ್ಯುಗಳೆಲ್ಲಮೊಂದಾಗಿ ಮುಳುಗಿರ್ದುವೊಂದನಂತಾನಂದರಸಧಿಯುಲಿ (ಶತ್ರುಂಗ. ೪೦-೦೦೨೨). [ಸಂ.]

**ರಸಧ್ವನಿ** (ನಾ). [ಕಾವ್ಯಮೀ] ಐದು ವಿಧವಾದ ಧ್ವನಿಗಳಲ್ಲಿ ಒಂದು ; ರಸಾನುಭೂತಿಯನ್ನುಂಟು ಮಾಡುವ ಧ್ವನಿ : ರಸಗಂಗಾಧರಕಾರನು : "ಹೀಗೆ ಐದು ವಿಧವಾದ 'ಧ್ವನಿ' ಯಲ್ಲಿ 'ರಸಧ್ವನಿ' ಗೆ ಪರಮರಮಣೀಯತೆ " ಎಂದು ಹೇಳಿದ್ದಾನೆ (ಕೃಮಿಜ. ೦೭೯); ವಸ್ತುಧ್ವನಿ ಅಲಂಕಾರಧ್ವನಿಗಳೆರಡೂ ಪರ್ಯಂತದಲ್ಲಿ ರಸಧ್ವನಿಗೆ ಪೋಷಕವಾಗಬಹುದು (ಕಾರಮಿ. ೩೦೩). [ಸಂ.]

**ರಸನ** (ನಾ). ೧. ರುಚಿ ನೋಡುವಿಕೆ ; ಆಸ್ವಾದನೆ. ೨. ರುಚಿಯನ್ನು ನೋಡುವ ಅಂಗ ; ನಾಲಗೆ : ಸ್ಪರ್ಶನ ರಸನ ಘ್ರಾಣ ಚಕ್ಷು ಶ್ರೋತ್ರೇಂದ್ರಿಯಂಗಳ್ (ಸುಕುಮಾ. ೯-೭ ಪ) ; ರಸನದಿ ಕೇಳ್ವ ಕಾಂಬ ಅಜಿವ ಆಘ್ರಾಣ

ಸುವ ಆಸ್ವಾದಿಸುವ (ಪ್ರಕಂದ. ರಾ. ೩-೦೪೦-೨). ೩. ಕೂಗುವಿಕೆ; ಅಬ್ಬರ. [ಸಂ.]

**ರಸನಗೆ** (ನಾ). ಸ್ವಾರಸ್ಯವಾದ ನಗು : ರಸನಗೆಯೊಳೆನಗೆಯೆಂಬವೆಂತಿಹು ವೆಂಬುದು ನಸುನಗುತವಳು ಪಾಡಿದಳು (ಶರಶ. ೦೦-೩೦). [ರಸ + ನಗೆ]

**ರಸನತ್ವ** (ನಾ). ರುಚಿಯನ್ನು ಕಂಡುಹಿಡಿಯುವ ಶಕ್ತಿ : ಅವರ ಹೊಟ್ಟೆಹಸಿವಿನ ತೀವ್ರತೆಯಲ್ಲಿ ನಾಲಗೆಯ ರಸನತ್ವ ಮಂಕುಬಡಿದು ಹೋಗಿದ್ದಿರಬೇಕು (ಹಸುಹೊ. ೩೩೬). [ಸಂ.]

**ರಸನಾಂಚಲ** (ನಾ). ನಾಲಗೆಯ ತುದಿ ; ಜಿಹ್ವಾಗ್ರ : ತೊಳಗುವ ರಸ್ನ ದೊಟ್ಟಿಲೊಳ್ ಪಟ್ಟಿರಿಸುತ್ತೆ ಕುಮಾರನಂ ಮುಂದಂದಳೆದೆಳವೆಣ್ಗಳೊಲ್ದು ರಸನಾಂಚಲದೊಳ್ದನಿದೋಱ . . . ಜೋಯೆನುತೊಪ್ಪಿ ತೂಗಿದರ್ (ರಾಜಶೇ. ೪-೬೦). [ಸಂ.]

**ರಸನಾಗ್ರ** (ನಾ). = ರಸನಾಂಚಲ : ದ್ವಿಪಾರಿಗುಣ್ಮುವ ರಸನಾಗ್ರದಿಂ ಪುಲಿಗೆ ಕೈಯೆರಡಂ ನಿಮಿರ್ದೆತ್ತಿ ಪಂಥಿಗೊಪ್ಪುವ ಮೊಳಕೈಯ ತೋರ್ಪರ ರೆಬರ್ ಬಿಯದರ್ ಸಲೆ ಸನ್ನೆವೇಂಟೆಯೊಳ್ (ರಾಜಶೇ. ೩-೬೩). [ಸಂ.]

**ರಸನಾಮಕರ್ಮ** (ನಾ). [ಜೈನ] ತೊಂಬತ್ತುಮೂರು ಬಗೆಯ ನಾಮಕರ್ಮಗಳಲ್ಲಿ ಒಂದು ; ಸಿಹಿ, ಕಹಿ, ಕಾರ, ಒಗರು ಮತ್ತು ಹುಳಿ ಎಂಬ ಪ್ರಕೃತಿಗಳು : ರಸನಾಮಕರ್ಮಂ ಪಂಚವಿಧಮಕ್ಕುಂ ತಿಕ್ತ ಕಟುಕ ಕಷಾಯಾಂಬ್ಲಮಧುರನಾಮಕರ್ಮಂ (ಗೊಮ್ಮಸಾ. ೪-೦೦). [ಸಂ.]

**ರಸನಾಲಂಪಟ** (ನಾ). ಜಿಹ್ವಾಚಾಪಲ್ಯವುಳ್ಳವನು : ರಸನಾಲಂಪಟ ನಾಜ್ಯವಾಂಛಿತನಸಂತುಷ್ಟಂ ಸದಾಸರ್ವಭಕ್ಷ ಸಮಸ್ತಾಟವಿಭುಂಜಿತೋಗ್ರ ನೆನಿಪೀ ದಾವಾಗ್ನಿಯಂ ಕಾಲ್ಗಳಿಂ ಪೊಸೆದಂ (ಸೂಕ್ತಿಸು. ೦೦-೦೬೩). [ಸಂ.]

**ರಸನಿಮಿಷ** (ನಾ). ಅತ್ಯಂತ ಸಂತೋಷದ ಕಾಲ; ರಸವತ್ತಾದ ಗಳಿಗೆ: ತನ್ನ ಜೀವನದ ಅತ್ಯುತ್ತಮ ರಸನಿಮಿಷಗಳಲ್ಲಿ ತಾನು ಬಾಳುತ್ತಿದ್ದಂತೆ ಅವನಿಗೆ ಅನುಭವವಾಯಿತು (ಕೃಸರು. ೨೯೭). [ಸಂ.]

**ರಸನಿರೂಪಣೆ** (ನಾ). ರಸದ ಅಭಿವ್ಯಕ್ತಿ : ರಸನಿರೂಪಣೆಯಲ್ಲಿ ವಾಲ್ಮೀಕಿಯ ಶಕ್ತಿ ಅದ್ಭುತವಾದುದು (ಭಾರದ. ೯೨). [ಸಂ. ರಸನಿರೂಪಣ]

**ರಸನಿರ್ಮಿತಿ** (ನಾ). = ರಸನಿರೂಪಣೆ : ರಸನಿರ್ಮಿತಿಯಲ್ಲಿ ಕವಯಿತ್ರಿಯ ವ್ಯಕ್ತಿತ್ವಕ್ಕನುಗುಣವಾಗಿ ಅಲ್ಲಲ್ಲಿ ಭೇದಗಳು ಕಂಡು ಬರುತ್ತವೆ (ಕರ್ನಾಕ. ೩೩೯). [ಸಂ.]

**ರಸನಿಷ್ಪತ್ತಿ** (ನಾ). ರಸಾನುಭವವು ಉಂಟಾಗುವಿಕೆ ; ಕಾವ್ಯಾನಂದದ ಉತ್ಪತ್ತಿ : ವಿಭಾವಗಳು, ಅನುಭಾವಗಳು, ಸಂಚಾರಿ(ಭಾವ)ಗಳು ಇವುಗಳ ಸಂಯೋಗದಿಂದ ರಸನಿಷ್ಪತ್ತಿಯಾಗುವುದು (ಭಾರಮೀ. ೩೩೩). [ಸಂ.]

**ರಸನೆ** (ನಾ). ೧. ನಾಲಗೆ ; ಜಿಹ್ವೆ : "ರಸಜ್ಞಾ, ರಸನಾ, ಜಿಹ್ವಾ – ಈ ೩ ನಾಲಗೆ" (ಹಲಾಯು. ೬೭-೩೭೭) ; ರಸನಾಶಂಪಾಶತಂ ಸಂಚಳಿಸೆ ಪುದಿಯೆ ಫೂತ್ಕಾರಮಾರಾಂತಮಂ ದಳ್ಳಿಸೆ ವಹ್ನಿಜ್ವಾಲೆ (ಶಂಭಾಮಾ. ೩-೭೪). ೨. ಉಡೆನೂಲು ; ಮೇಖಲೆ : "ರಸನೆ ಮೇಖಲೆ ಕಾಂಚಿ ಸಪ್ತಕಿ ಕಳಾಪಿ ಸಾರಸಮೆನಲುಡಿದಾರಮಕ್ಕು" (ಮಂಗರಾ. ೦೦೦-೩೦) ; ದಿನಲಕ್ಷ್ಮೀ ರಸನೈಕಮಧ್ಯಮಣಿಯಾದಂ ಭಾಸ್ಕರಂ (ಕಾದಂಪೂ. ೬೨೯). [ಸಂ. ರಸನಾ]

**ರಸನೇಂದ್ರಿಯ** (ನಾ). ರುಚಿಯನ್ನು ಗ್ರಹಿಸುವ ಅಂಗ ; ನಾಲಗೆ : ರಸನೇಂದ್ರಿಯವಶದಿಂ ಸೈರಿಸಲಾಱದೆ ಗಾಳದೆರೆಗೆ ಪಾಯ್ದುಟುವ ಮೀನ ಸೂಾಯಮೆಂದೊಡಕ್ಕಟ ವಸುಮತಿಯೊಳ್ ಜಿಹ್ವೆ ಕಿಡಿಸದಾರಂ ಪದಪಿಂ (ಧರ್ಮಾಮೃ. ೩-೨೩) ; ರಸನೇಂದ್ರಿಯವಿಷಯದಿಂದೆ ಮತ್ಸ್ಯ ಕೆಡುವುದು ಜಾಲಗಾಱನ ಬಲೆಯಲ್ಲಿ (ಅಜಿಂತೇ. ೭-೪). [ಸಂ.]

**ರಸಪಂಚಕ**(ನಾ)೧. ಹಾಲು, ತುಪ್ಪ, ಜೇನು, ತೈಲ ಮತ್ತು ಮದ್ಯ ಎಂಬ ಐದು ಬಗೆಯ ರಸಗಳು : ನವರಸದೊಳ್ ಘೃತಾದಿ ರಸಪಂಚಕದೊಳ್ . . . ರಸಾಖ್ಯ ಸಂತತಂ (ಜಾಮರ. ೬೪). ೨. [ಜೈನ] ಮಧುರ, ಆಮ್ಲ, ಕಟು, ಕಷಾಯ ಮತ್ತು ತಿಕ್ತ ಎಂಬ ಐದು ರಸನಾಮ ಪ್ರಕೃತಿ : ಪೂರ್ವಶರೀರಬಂಧನಸಂಘಾತವರ್ಣರಸಪಂಚಕಸಂಸ್ಥಾನಸಂಹನನ ಪಂಚಷಟ್ಕಾಂಗೋಪಾಂಗದ್ವಿಕಂ (ಆದಿಪು. ೦೬-೯೯ ವ). 'ಪಂಚರಸ' ಪರಾ. [ಸಂ.]

**ರಸಪರವಶತೆ** (ನಾ). ಆನಂದದಲ್ಲಿ ಮುಳುಗುವಿಕೆ,– ತಲ್ಲೀನಗೊಳ್ಳುವಿಕೆ: ಮಾಯಾಮುರಳಿಯಿಂದ ಹೊರಹೊಮ್ಮುತ್ತಿದ್ದ ನಾದವ ಮಾಧುರ್ಯವು . . . ಮನಮೋಹಕವೂ ಆಗಿತ್ತು. ಅದರ ರಸಪರವಶತೆಯು ದೈವೀಕ ವಾಗಿತ್ತು (ಕಂಗೀಕ. ೬೭) ; ಮೂಲಸೌಂದರ್ಯವೇನಿದ್ದರೂ . . . ರಸಪರವಶತೆಗೆ ಸಂದ ಚಿತ್ತಕ್ಕೆ ವೇದ್ಯವಾಗುವ ಒಂದು ಅತೀಂದ್ರಿಯವಾದ ಆಧ್ಯಾತ್ಮಿಕಸತ್ಯ (ಸೌಂದಸ. ೩೬). [ಸಂ. ರಸಪರವಶತಾ]

**ರಸಪರಿತ್ಯಾಗ** (ನಾ). [ಜೈನ] ಆರು ಪ್ರಕಾರದ ಬಾಹ್ಯತಪಗಳಲ್ಲಿ ಒಂದು ; ತುಪ್ಪ, ಹಾಲು, ಎಣ್ಣೆ, ಬೆಲ್ಲ, ಸಕ್ಕರೆ, ಉಪ್ಪು ಮೊದಲಾದ ರಸಪದಾರ್ಥಗಳನ್ನು ಸೇವಿಸದೆ ಇರುವ ವ್ರತ : ಕ್ಷೀರ ದಧಿ ಘೃತ ಲವಣ ತೈಲಾದಿ ರಸಂಗಳಂ ಪರಿತ್ಯಾಗಂಗೆಯ್ವ ರಸಪರಿತ್ಯಾಗಂ ಎಂಬ ನಾಲ್ಕನೆಯ ತಪದೊಳಂ . . . ನೆಱೆದು (ಆದಿಪು. ೬-೩೦ ವ) ; ಕರಮೆ ಮುನಿ ದುಗ್ಧ ದಧ್ಯಾದಿ ರಸಂಗಳನೆಯ್ದೆ ತೊಱೆದು . . . ನಾಲ್ಕನೆಯ ರಸಪರಿತ್ಯಾಗವೆಂಬ ತಪಮಂ ತಳೆದಂ (ಚಂದ್ರಪ್ರ. ೦೦-೦೦). [ಸಂ.]

**ರಸಪಾಕ** (ನಾ). ರುಚಿಯಾದ ಅಡುಗೆ ; ಸವಿಯಾದ ಪಾಕ : ಕೂಗರಿ ಬದನೆ ಮೊದಲಾದ ಕಾಯ್ಗಳ ರಸಂಗಳ ತೆಗೆದು . . . ಪರಿಮಳಗೊಳಿ ಸಲದು ಪಾರ್ವತೀಮತದ ರಸಪಾಕ (ಸೂಶಾ. ೩-೪೧) : ನಗುವೊಂದು ರಸಪಾಕವಳುವೊಂದು ರಸಪಾಕ . . . ಬಗೆದೆರಡನುಂ ಭುಜಿಸು (ಮಂಕುತ. ೪೩೪). [ಸಂ.]

**ರಸಪುರಿ** (ನಾ). ಒಂದು ಬಗೆಯ ಮಾವು : ಮಾವಿನ ಹಣ್ಣುಗಳಲ್ಲಿ ರಸಪುರಿ, ಬಾದಾಮಿ ಮುಂತಾದ ಅನೇಕ ಜಾತಿಗಳಿವೆ (ಕಜಿ). 'ತೋತಾ ಪುರಿ' ಪರಾ. [ರಸ + ಪುರಿ₂]

**ರಸಪ್ರಕ್ರಿಯೆ** (ನಾ). = ರಸನಿಷ್ಪತ್ತಿ : ಇವರಲ್ಲಿ ಮುಖ್ಯವಾಗಿ ರಸಪ್ರಕ್ರಿಯೆ ಪ್ರತಿಪಾದಿತವಾಗಿದೆ (ಕೃಶಿವ. ೦೬೬). [ಸಂ. ರಸಪ್ರಕ್ರಿಯಾ]

**ರಸಫಲ** (ನಾ). ೧. ರಸ ತುಂಬಿರುವ ಹಣ್ಣು ; ಸಾರವತ್ತಾದ ಫಲ : ರಸಫಲ ಪಾಕಾದಿಗಳನೂ ಸರ್ವದ್ರವ್ಯಗಳನೂ ಷಡುರುಚಿ ಭಿನ್ನರುಚಿ ಮೊದಲಾದ ಜನಜೀವ ಜಿಹ್ವೆಯ ಕೈಯಲೂ ಲಿಂಗಜಿಹ್ವೆಗೆ ಅರ್ಪಿಸಲು ರಸಪ್ರಸಾದ (ಬಾಶಿ. ೪. ೦೦೬–೦೬೭). ೨. ತೆಂಗು. [ಸಂ.]

**ರಸಬಾಳೆ** 'ರಸವಾಟಿ³' ನೋ.

**ರಸಬೀಜ** (ನಾ). ಒಂದು ಬಗೆಯ ಸಸ್ಯ : ತಪಸಿ, ಕಾಲಾದ್ರಿ, ರಸಬೀಜ (ವೃಕ್ಷಶಿಗ. ೩೪-೬೭೯). [ಸಂ.]

**ರಸಬುರುಡೆ** (ನಾ). = ರಸಗುಂಡು : ನೆಲಕ್ಕೆಲ್ಲಾ ಅಮೃತಶಿಲೆಯು ಹಾಸಲ್ಪಟ್ಟಿದೆ. ಮೇಲುಗಡೆ ಕಂದೀಲುಗಳು ರಸಬುರುಡೆಗಳೂ . . . ಅಲಂಕರಿಸಲ್ಪಟ್ಟಿದೆ (ಶ್ರೀರಾಯ. ೦೬೬). [ರಸ + ಬುರುಡೆ]

**ರಸಭಂಗ** (ನಾ). ರಸಾನುಭವಕ್ಕೆ ಉಂಟಾಗುವ ಅಡ್ಡಿ : ರಸಭಂಗ ಭಯದಿನಿಂದ್ರಂ ಪೊಸತೊಂದಾ ದೊರೆಯ ಪಾತ್ರಮಂ ತಂದನುಸಂಧಿಸು ವುದುಂ (ಆದಿಪು. ೯-೮೨) ; ಆ ವೇಳೆಯಲ್ಲಿ ವಾಲೀಕಾರನೊಬ್ಬನು ಬಂದು . . . ರಸಭಂಗ ಮಾಡಿದನು (ರಂಗರೋ. ೭೭). [ಸಂ.]

**ರಸಭರಿತ** (ಗು)೧. ರುಚಿಕಟ್ಟಾದ ; ಸಾರವತ್ತಾದ : ರಸಭರಿತ ಖರ್ಜೂರ ಫಲ ಸಂಪ್ರಸರಭರಿತ ವನೆಸಗಿಯುಪವನವೆಸೆದುದೈ (ಸುವ್ಯಾಉ. ೭-೨೪) ; ರಸಭರಿತ ಖರ್ಜೂರ ಕುಜ ಮೆಲ್ಲಬಲ್ಲುದೆ (ಪ್ರಕಂದ. ೩-೦೪-೦). (ನಾ). ೨. ಸಾರವತ್ತಾದುದು. ೩. ಶೃಂಗಾರಾದಿ ನವರಸಗಳಿಂದ

ತುಂಬಿದುದು. ೨. ೩ : ರಸಭರಿತವಾಗಿ ಸತ್ಯವಿಶಾಪ್ಯಬಂಧದಂತೆ ಸಮಸ್ತಫಲಪೂರ್ಣವಾಗಿ ಸುಕೃತಾತ್ಮನಂತೆ ಪರದನಂತೊಪ್ಪುಗುಂ ಶಾಲಿಯ ವನಂ (ಶಬ್ದಾ. ೯-೦೩). [ಸಂ.]

**ರಸಭಸ್ಮ** (ನಾ). ಒಂದು ಬಗೆಯ ಔಷಧೀಭಸ್ಮ ; ಪಾದರಸದ ಬೂದಿ : ರಸವಂ ತೊಳೆದು ಶುದ್ಧಿಯಂ ಮಾಡಿ ಗಂಧಕದ ಚೂರ್ಣದಲ್ಲಿ ಜಳಕಮಾಡಿ, ಇಟ್ಟಿಗೆಯ ಸಂಪುಟವ ಮಾಡಿ, ಕುಳಿ ತೋಡಿ, ವಾಲುಕಾ ಯಂತ್ರದಲ್ಲಿ ಬೆರಣಿಯ ಕುಳಿಯಲ್ಲಿ ೪ ಜಾವ ಪುಟವಿಕ್ಕೆ ರಸಭಸ್ಮವಹುದು (ಏವೈ.ಶಿ. ೯೩). [ಸಂ.]

**ರಸಭಾವ** (ನಾ). ೧. ನೀರು ಇರುವಿಕೆ ; ದ್ರವದ ಅಸ್ತಿತ್ವ. ೨. ರಸಾನುಭವವನ್ನುಂಟುಮಾಡುವ ಚಿತ್ತವೃತ್ತಿ : ಮೃದುಪದ ಗತಿಯಿಂ ರಸಭಾವದ ಪೆರ್ಚಿಂ ಪಣ್ಯವನಿತೆಯೊಳ್ ಕೃತಿಸೌಂದರ್ಯದ ಚಾತುರ್ಯದ ಕಣಿಯೆನೆ ವಿದಗ್ಧಬುಧಜನದ ಮನವನಲೆಯಲೆವೇಡಾ (ಆದಿಪು. ೦-೦೩). ೧, ೨ : ಜಗದೇಕಜೀವನಸ್ಥಿತಿಯಿನ್ನತಿಪ್ರಸಾದಗುಣದಿಂ ರಸಭಾವವಿಳಾಸದಿಂ . . . ಸರಸ್ವತಿ ದಯೆಗೆಯ್ಗೆ (ಶಾಂತಿಪು. ೨). [ಸಂ.]

**ರಸಭೋಜ್ಯ** (ನಾ). ದ್ರವರೂಪದ ಆಹಾರ (?) : ರಸಭೋಜ್ಯದೊಳಂ ಮರಣಮುಮಂ ಸಂಪಾದಿಸುಗುಂ ವಾಜಿಗಳ್ಗೆ ಷಡ್ವಿಂಶತಿಯೊಳ್ (ಅಶ್ವಶಾ. ೩-೩೨). [ಸಂ.]

**ರಸಮಗ್ನ** (ನಾ). ಆನಂದದಲ್ಲಿ ಲೀನನಾದವನು : ಚತುರಕವಿ ಪೇಟೆ ರಸವತ್ಕೃತಿಯಿಂ ರಸಮಗ್ನನಾಗಿ ದುರ್ಜನನುಮದಂ ಸ್ತುತಿಯಿಸವೇಟ್ಟುದು (ಪಂಪ. ೦-೨೯). [ಸಂ.]

**ರಸಮಗ್ನತೆ** (ನಾ). ಆನಂದದಲ್ಲಿ ತಲ್ಲೀನವಾಗುವಿಕೆ : ಘನಾಗಮ ಲಕ್ಷ್ಮಿ ಕೇತಕೀಧವಳಕಟಾಕ್ಷೆ ಕಂಡು ರಸಮಗ್ನತೆಯಿಂ ಪುಳಕಾಂಕುರಂಗಳತ್ಯವಿರಳ ಮಾಗೆ ಕೊಟ್ಟಳೆಚಿರಪ್ರಭೆಯೆಂಬ ಸುವರ್ಣಮಾಲೆಯಂ (ಪಂಪಭಾ. ೯-೯೭).

[ ಸಂ. ರಸಮಗ್ನತಾ ]

**ರಸಮಟ್ಟ** (ನಾ). ವಸ್ತುಗಳ ಮಟ್ಟವನ್ನು ಕಂಡುಹಿಡಿಯಲು ಉಪಯೋಗಿಸುವ, ಪಾದರಸವನ್ನು ತುಂಬಿ ಮಾಡಿದ ಒಂದು ಸಾಧನ : ವಸ್ತುಗಳು ಸಮತಲವಾಗಿವೆಯೆ ಇಲ್ಲವೆ ಎಂಬುದನ್ನು ಪರೀಕ್ಷಿಸಲು ಉಪಯೋಗಿಸುವ ಒಂದು ಸಲಕರಣೆ ; ಮಟ್ಟಕೋಲು ; ಮೂಲೆಮಟ್ಟ ; (ರಸ)ಮಟ್ಟ (Level. ಇಂಕಪ). [ ರಸ + ಮಟ್ಟ$_1$ ]

**ರಸಮಾರ್ಗ** (ನಾ). ಶೃಂಗಾರಾದಿ ನವರಸಗಳನ್ನು ನಿರೂಪಿಸುವ ಕ್ರಮ,— ರೀತಿ : ವೀರಾದ್ಭುತಕರುಣಾಶೃಂಗಾರಭಯಾನಕ ಸರೌದ್ರ ಬೀಭತ್ಸಮಹಾಸಾರತರಹಾಸ್ಯಶಾಂತಾಧಾರನವವಿಧವಿಕಲ್ಪಮಾ ರಸಮಾರ್ಗಂ (ಕವಿರಾ. ೩-೦೮೮). [ಸಂ.]

**ರಸಮೂಲಿಕೆ** (ನಾ). ಒಂದು ಬಗೆಯ ಸಸ್ಯ : "ರೋಮಕಂದಃ — ರೋಮಕಂದರ ; ರಸಮೂಲಿಕೆ " (ಶಿಕಂ. ೦೯೦). [ ಸಂ. ರಸಮೂಲಿಕಾ ]

**ರಸಮೆಟ್ಟು** (ಕ್ರಿ). ರಸವು ತುಂಬಿರು ; ಸಾರದಿಂದ ಕೂಡಿರು : ಹಸನಾದ ಹಣ್ಣೀ ಮೊಸಳೆತೋಟಿ ಬಾರೆ ರಸಮೆಟ್ಟಿದೆಲೆಯ ಕೊಯಿಸೇನು (ಹಳ್ಳಿಯು. ೩೭). [ ರಸ + ಮೆಟ್ಟು$_1$ ]

**ರಸಯಿಸು** (ಕ್ರಿ). ( ? ) : ರಸಯಿಸಿರ್ದ ತುರಂಗಮುಮಂ ನೀರೂಡವ ಹರ್ನಿಶಮುಮಂ ಪ್ರಯೋಗಿಸುಗೆ ತಪ್ಪದೆ ಜಾವದೊಳಿರ್ಪತ್ತಯ್ದು ಹರೀತಕಿ ಯಾಗೆ ಸಂಧಿಸಿ (ಲೋಕೋಪ. ೯-೨೩೭). " ವಾಯುಕೊಳ್ " (ಲೋಕೋಪ. ಪೀಠ). [ ? ]

**ರಸಯೋನಿ** (ನಾ). ಬಿಳುಗಾರ ; ಟಂಕಣ. [ಸಂ.]

**ರಸರಸಾಯನ** (ನಾ). ಅತಿರುಚಿಯಾದ ರಸಾಯನ : ನಾಗಕನ್ಯೆಯರುಂ ತಾನುಂ ಮನಂಬುಗಿಸುವಂತೆ ಮಜ್ಜನಂಬುಗಿಸಿ ರಸರಸಾಯನಂಗಳನೂಡು ವಂತೆ ದಿವ್ಯಾಹಾರಂಗಳನೂಡಿ (ಶಂಶಬಾ. ೯-೦೬ ಪ); ದಿನದಿನದೊಳಿತ್ತಲು ರಸರಸಾಯನಮಂ ಬಸವನರನುನೆಯೊಳನುಭವಿಸಿ(ಬಸಪು. ೩೦-೩); ತನಿವಣ್ಣಗಳ ರಸರಸಾಯನ . . . ಪಾಲ್ಮೊಸರ್ಗಳಿವು ಬಗೆಗೊಳಿಸಿ(ಕೈವಲ್ಯಶಾ. ೬-೯೯). [ಸಂ.]

**ರಸರ್ಧಿ** (ನಾ). = ರಸನುದ್ಧಿ : ಆಸ್ಯವಿಷರುಂ ದೃಷ್ಟಿವಿಷರುಂ ಕ್ಷೀರಸ್ರಾವಿಗಳುಂ ಮಧುಸ್ರಾವಿಗಳುಂ ಸರ್ಪಿಃಸ್ರಾವಿಗಳುಂ ಅಮೃತಸ್ರಾವಿಗಳುಂ ಎಂದು ರಸರ್ಧಿಪ್ರಾಪ್ತಾಚಾರ್ಯರ್ ಆಱುತೆಱಂ (ತತ್ತ್ವಸೂ. ೦೭೯). [< ಸಂ. ರಸರ್ದ್ಧಿ]

**ರಸವಂತಿ** (ನಾ). ೧. ರಸವನ್ನು ಹೊಂದಿರುವುದು ; ಸಾರವತ್ತಾದುದು : ಯಾರ ಪುಣ್ಯ ಬೆಳೆಯಲೆದು . . . ಸತತ ಶ್ರಮಿಸಿದೆನೊ ಆ ರಸವಂತಿ ಈಗ ಬತ್ತಿ ಹೋಯಿತೆ ! (ಶಾಂತಲಾ. ೩೩೯). ೨. ಒಂದು ಬಗೆಯ ಔಷಧಿಮೂಲಿಕೆ : ೩೯೫. ರಸವಂತಿ ೩೯೬. ರಸಸಿಂಧೂರ (ಮುಂಬಾಪ್ಯಾ. ೦೭೩). [← ಹಿಂ. ಮರಾ. ರಸವಂತೀ]

**ರಸವಂತಿಕೆ** (ನಾ). ರಸಿಕತನ : ಮನೋಹರವಾಗಿ ಹೃದಯಂಗಮವಾಗು ವಂತಹ ವಿಶೇಷತರದ ರಸವಂತಿಕೆಯೂ ಇಲ್ಲ (ರಾಜಪ. ೬೨) ; ನನ್ನೀ ರೂಪು . . . ಐಶ್ವರ್ಯ ರಸವಂತಿಕೆ ಎಂಥ ಮಹಾಯೋಗಿಯ ದೃಢನಿಷ್ಠೆಯನ್ನೂ ಹುಡಿಗುಟ್ಟಬಲ್ಲುದು (ಶುಂಗಶ. ೬೨). [ರಸ + — ವಂತ + — ಇಕೆ]

**ರಸವಚ್ಚ** (ನಾ). ಚಿನ್ನದ ಆಭರಣ : ರಸವಚ್ಚಂಗಳ ಬಣ್ಣಗೆವೆಳಗಿನಿಂದೆ ಇಂದ್ರಧನುವಂ ಸಿರಿರಾಣಿಯ ಪೊಂಜೆಳೆಮೆಯ್ಯಿಂ ಮಿಂಚುವಳ್ಳಿಯನೊಳ ಕೊಂಡಸೆವಮುರ್ದುಂಡ ಕರ್ಪುರ್ಗಲಂತೆಯುಂ ತೋರ್ಕುಂ (ಜಗನ್ನಾ. ೦೨೩-೦೩). [ರಸ + ಪಚ್ಚ$_2$]

**ರಸವಣ್** (ನಾ). ರಸಭರಿತವಾದ ಹಣ್ಣು : ಸಾರವತ್ತಾದ ಫಲ : ಸೋರ್ವ ರಸವಣ್ಗಳಿಂ ತಾಳ್ದ ಚೂತಂ ತುದಿಗೆ ಪರ್ವಿದೆಳೆವಳ್ಳಿಯಿಂದೆಸೆವ ಪೂಗಂ . . . ನಾಡೆ ಸಾರ್ವಕಾಲಂ ಕುಂದವು (ಶಂಖ. ೦೦-೨೨). [ ರಸ + ಪಣ್$_3$]

**ರಸವಣೆ** (ನಾ). ಒಂದು ಬಗೆಯ ಮದ್ಯ : ರಸವಣೆಯನುಂಡ ಗೊರವಿತಿ ಪೊಸತಾಶೀರ್ವಾದವುಳ್ಳದೊಂದೆಂದಾಗಳ್ ಬಸಿಗಳ್ಳಿಂಗೆ ಮಹೇಶರ ಪಸಾದ ಸುರುಕವಡೆ ಕವಡೆ ಹರಿವೋ ಎಂದಳ್ ( ? ) (ಸೂಕ್ತಿಸು. ೦೩-೨೦). [ರಸ + < ಪಾಣ$_1$]

**ರಸವಣೆಗ** (ನಾ). ಮದ್ಯವನ್ನು ಕುಡಿಯುವವನು : ಇದೀದುದಕದಂತೆ ಹಾಲಿನ ನಱುಸೋನೆಯನುಂಡ ಬಣ್ಣದರಲ್ಗಳ ಸೊನೆಯಿಂ ತುಱುಕಿನ ಜೋಲುವ ತಿಳಿಗಳನೀಜಿಗಿದರಾ ಜನಮನಲುರೆ ಹೊಸರಸವಣಿಗರ್ ( ? ) (ಸೂಕ್ತಿಸು. ೦೩-೦೯). [ರಸವಣ + — ಗ$_2$]

**ರಸವತಿ** (ನಾ). ಅಡುಗೆಮನೆ ; ಪಾಕಶಾಲೆ : " ಪಾಕಸ್ಥಾನಂ, ರಸವತೀ, ಮಹಾನಸಂ — ಈ ೩ ಬಾಣಸಿನ ಮನೆ '' (ಕರ್ಣಾಟ. ೯೯-೦೯೦). [ಸಂ. ರಸವತೀ]

**ರಸವತ್ತು** (ನಾ). ರಸವುಳ್ಳುದು ; ರಸಭರಿತವಾದುದು : ಇದರಿಂದ ಒಳ್ಳೆ ರಸವತ್ತಾದ ಪಲಾವ್ ಆಗುತ್ತದೆ (ಪುರಿವಾ. ೩೭); ಗುರುಮೂರ್ತಿ . . . ರಸವತ್ತಾದ ಸಾಮಗ್ರಿ ತುಂಬಿದ ತಾಟು ಮುಂದೆ ಸರಿಸಿದ (ಶಾಪುಪಿ. ೨೯೩). [ಸಂ. ರಸವತ್]

**ರಸವದ್ಗೇಯ** (ನಾ). ಸಾರವತ್ತಾದ ಹಾಡು : ಲಲಿತಾಲಂಕರಣಪ್ರಸನ್ನ ರಸವದ್ಗೇಯಂಗಳೊಳ್ ಮಾಡುತುಂ ಮುಬುಗುತ್ತುಂ (ಆದಿಪು. ೦-೪೯). [ಸಂ.]

**ರಸವರ್ಗ** (ನಾ). ೧. ಆಹಾರಕ್ಕೆ ರುಚಿಕೊಡುವ ಮೆಣಸು, ಉಪ್ಪು ಮೊದಲಾದ ಪದಾರ್ಥ. ೨. ಚೆನ್ನಾಗಿ ಮಿಶ್ರಣ ಮಾಡಿದ ಗಾರೆ : ವಜ್ರಗಾರೆ. [ಸಂ.]

**ರಸವಶ** (ನಾ). ರಸಾನುಭವದಲ್ಲಿ ತನ್ಮಯನಾದವನು : ಕನ್ನಡವನೆ ಆಡಿ ಕನ್ನಡವನೆ ಹಾಡಿ ರಸವಶನಾದೆನೋ ರಂತೆ (ಇಂಚರ. ೬೯-೬೩); ದೇವರು

ರುಜುಮಾಡಿದನು : ರಸವಶನಾಗುತ ಕವಿ ಅದ ನೋಡಿದನು (ಶಕ್ಷಣ. ೨೭–೩೦). [ಸಂ.]

**ರಸವಸ್ತು** (ನಾ). ಸತ್ವವನ್ನು ನೀಡುವ ದ್ರವಪದಾರ್ಥ ; ಎಣ್ಣೆ : ರಸವಸ್ತುವನುಂಡು ಜ್ಯೋತಿ ತಾ ಪೋಪಾಗ ಪಣತಿಗೆ ಪೇಳದೆ ಹೋಯಿತು (ಪುರಂದ. ದಾ. ೩–೦೩೯–೪). [ಸಂ.]

**ರಸವಾದ** (ನಾ). ಒಂದು ಬಗೆಯ ಲೋಹವಿದ್ಯೆ ; ಕಬ್ಬಿಣ ಮುಂತಾದ ಕೀಳುಲೋಹಗಳನ್ನು ಚಿನ್ನವನ್ನಾಗಿ ಮಾರ್ಪಡಿಸುವ ವಿದ್ಯೆ : ಬಲಭದ್ರನೆಂಬ ಸಿದ್ಧನು . . . ಸಕಲಸಾಧನವಂ ಕೂಡಿ ರಸವಾದದಿಂದ ಸುವರ್ಣವಂ ಮಾಡಲು (ಶೃರಸೂ. I. ೩೨೭); ರಸವಾದದ (Alchemy) ಮಾತು ಮೊದಲು ಬಂದಿರುವುದು ಕ್ರಿ. ಪೂ. ೧೩೩ರಲ್ಲಿ ಚೀನದಲ್ಲಿ (ಶಿಲ್ಪಶಾ. ೯೯). [ಸಂ.]

**ರಸವಾದಕ** (ನಾ). ಲೋಹವಿದ್ಯೆಯನ್ನು ಬಲ್ಲವನು ; ಕಬ್ಬಿಣ ಮುಂತಾದ ಕೀಳುಲೋಹಗಳನ್ನು ಚಿನ್ನವನ್ನಾಗಿ ಮಾಡುವವನು: ಒರ್ವ ರಸವಾದಕನೆಂಬ ಬಿಚ್ಚುವನೀ ಬಾವಿಯೊಳಗಿಟ್ಟದು ನೀನೀ ರಸಮಂ ಮೊಗೆದು ಕೊಟ್ಟೊಡದಜ್ಜೊಳ್ ಮಾಡಿದ ಪೊನ್ನುಂ ನಿನಗಮೆನಗಂ ಸಮಭಾಗಮಕ್ಕುಮೆಂದೊಡೆ (ವಡ್ಡಾರಾ. ೦೮೭–೦೦). [ಸಂ.]

**ರಸವಾದಸಿದ್ಧ** (ನಾ). ರಸವಾದದಲ್ಲಿ ಸಿದ್ಧಿಯನ್ನು ಪಡೆದವನು : ಶಿವನು ರಸವಾದಸಿದ್ಧನೆಂಬ ಜಂಗಮವಾಗಿ ಬಂದು . . . ಪರುಷದ ಗಟ್ಟಿಯಿಂದ ಮುಟ್ಟಿಸಿ ಚಿನ್ನವ ಮಾಡಿ ಜಂಗಮಾರ್ಚನೆಯ ಮಾಡು ಎನಲು (ಶೃರಸೂ. I. ೩೪೪). [ಸಂ.]

**ರಸವಾದಸಿದ್ಧಿ** (ನಾ). ರಸವಾದದ ಪ್ರಯೋಗದಲ್ಲಿ ದೊರೆಯುವ ಸಾಧನೆ ; ರಸಸಿದ್ಧಿ : ಎನ್ನ ರಸವಾದಸಿದ್ಧಿಯಂ ನೋಡೀಗಳ್ ನಿನ್ನ ಮನೆಯೊಳಿರ್ದ ಬೆಳ್ಳಿ ತಾಮ್ರ ಸೂಚಿಗಳ್ ಮೊದಲಾದವಂ ತಂದು ಮುಂದೆ ಮಡಂಗೆಂದು ನುಡಿಯಲ್ (ಹಾರಿಶ್ಚ. ೩–೪–೧ ವ). [ಸಂ.]

**ರಸವಾದಿ** (ನಾ). = ರಸವಾದಕ : ಎಂದು ಬಿನ್ನಪಂಗೆಯ್ಯಲೊಡಂ ಬದ್ಧರಸನುಂ ಸಿದ್ಧರಸವೇದಸುಮಪ್ಪ ರಸವಾದಿಯಂತೆ ಜ್ವಳಸಜಟಿ ರಾಗಿಸಿ (ಶಾಂತಿಪು. ೩–೩೭ ವ); ಸೊಗಸ ಹುಟ್ಟಿಸಿ ಸುಲಿವ ರಸವಾದಿಗಳವರ ವಿಡಾಯಿಗಳ ನಂಬುಗೆಯು ಕೇವಣ ಪಾದುಕಾಜಿರ ಕರ್ಣ ನೋಡು (ಕುಮಾರವ್ಯಾ. ೧೭–೨೩). [ಸಂ. ರಸವಾದಿನ್]

**ರಸವಾಳಿ** ' ರಸವಾಟಿ[3] ' ನೋ.

**ರಸವಾಟಿ**[3], ರಸಬಾಳೆ, ರಸವಾಳಿ (ನಾ). ಒಂದು ಬಗೆಯ ಶ್ರೇಷ್ಠವಾದ ಬಾಳೆ : " ನೇಪಾಳೇಕ್ಷು ರಸವಾಟಿ[3] " (೬೩೦. ೯೭). **ರಸಬಾಳೆ** : ರಸಬಾಳೆ ಚಿರುಬಾಳೆ ತಸಬಾಳೆ ಕೆಂಬಾಳೆ ಪೊಂಬಾಳೆ ಕರ್ಪೂರ ಬಾಳೆ . . . ಮೊದಲಾದ ರಸ್ಯ ಸುಖಾರ್ಹ ಸಾರ್ವತ್ರಿಕಮಾದ ಫಲಂ (ಶಿವೇಶ. ೨೦೦); ಬಾಳೆಯ ಕುಲದಲ್ಲಿ ಗುಜರಾಥಿ, ರಸಬಾಳೆ . . . ಪಣೆಬಾಳೆ ಎಂದು ಈ ಪ್ರಕಾರ ಹಲವು ವಿಧ (ಕೃಷಿಶ್ರ. ೦೩೩); ನಂಜನಗೂಡಿನ ರಸಬಾಳೆ ಅತಿ ಪ್ರಸಿದ್ಧ (ರೂಢಿ). **ರಸವಾಳಿ** : ರಸವಾಳಿ ಪುಟವಾಳಿ ರಾಜವಾಳಿ ಸಕ್ಕರೆಯಿಸೆವಾ ದೇವಾಳಿ . . . ಮಂಜಿದುಪರ್ತಿಯಲಿ (ಕಂಪಿ. ೩–೯೭) ; ರಸವಾಳಿಹಣ್ಣನು ಒಸೆದು ಮೆಲುವಂತಾಯ್ತು (ಕನಕಾ. ೦೪–೦೦). [ರಸ + ಬಾಟಿ[3]]

**ರಸವಿಕಾರದೋಷ** (ನಾ). ಜೀರ್ಣರಸದಲ್ಲಿ ದೋಷವುಂಟಾಗುವ ಒಂದು ಬಗೆಯ ರೋಗ : ನೊರೆವೆರಸು ಲದ್ದಿ ಪೊಜಿಮಡೆ ತುರಗಂ ದಡವಡಿಸಿ ನಡೆಯಲಾಜದೆ ಕಾಲ್ಗಟ್ಟಿರೆ ರಸವಿಕಾರದೋಷಂ ತುರಗ ಮುಖಕ್ಕಕ್ಕುಂ (ಅಶ್ವಶಾ. ೦೩–೨೭). [ಸಂ.]

**ರಸವಿಜ್ಞಾನಿ** (ನಾ). ರಸಾಯನಶಾಸ್ತ್ರವನ್ನು ಬಲ್ಲವನು ; ರಸಶಾಸ್ತ್ರಜ್ಞ : ರಸವಿಜ್ಞಾನಿ ಕಾರ್ಕಾಫೋಡೆಲ್ ತನಗೆ ಸಿಕ್ಕಿದ ಕಲ್ಲಿನ ಚೂರನ್ನು ತೆಗೆದುಕೊಂಡು ಪ್ರಯೋಗಶಾಲೆಗೆ ಹಿಂತಿರುಗಿದನು (ಯೋರಪು. ೬೦). [ಸಂ. ರಸವಿಜ್ಞಾನಿನ್]

**ರಸವೃತ್ತಿ** (ನಾ). ನವರಸಗಳಿಂದ ಕೂಡಿದುದು; ರಸಮಯವಾದುದು : ರಸವೃತ್ತಿ ಸಭೆಗೆ ಪೋಷಪನರಸವೃತ್ತಿಯನೀಯೆ ವಿಭ್ರಮಂ ವಿಭ್ರಮವಂ ಷಸರಿಸೆ ವಿಲಾಸವತಿ ನರ್ತಿಸಿದಳ್ ಕಂದರ್ಪಸಾಯಕಂ ನರ್ತಿಪವೋಲ್ (ಮಲ್ಲಿಪು. ೬–೪೯) ; ನೆಣಿದೆಂಟುಮಾರ್ಚನೆಗಳಿಂ ರಸವೃತ್ತಿಯ ನೃತ್ತಮಂ ಪ್ರವರ್ತಿಸಿ (ಚಂದ್ರಪು. ೪–೬೪). [ಸಂ.]

**ರಸವ್ಯಂಗ್ಯ** (ನಾ). [ಕಾವ್ಯಮೀ] ರಸಾನುಭವಕ್ಕೆ ಸಹಕಾರಿಯಾದ ವ್ಯಂಗ್ಯ : ವಸ್ತು ರಸ ಅಲಂಕಾರಗಳು ವ್ಯಂಗ್ಯಗಳಾಗುವುವೆಂದೂ ಅವುಗಳಲ್ಲಿ ರಸವ್ಯಂಗ್ಯವೇ ಶ್ರೇಷ್ಠವೆಂದೂ ಸಿದ್ಧಾಂತಿಸಿದ ಮೇಲೆ . . . ಅದಕ್ಕೆ ಪ್ರಾಧಾನ್ಯವನ್ನು ಕೊಟ್ಟಂತೆಯೂ ತೋರುತ್ತದೆ (ಕವಿಶಿ. ೦೬೩). [ಸಂ.]

**ರಸಶಾಸ್ತ್ರ** (ನಾ). ೧. = ರಸವಾದ. ೨. [ಕಾವ್ಯಮೀ] ನವರಸಗಳನ್ನು ಕುರಿತ ಶಾಸ್ತ್ರ : ವಿಪ್ರಲಂಭ ವಿಟ ಪ್ರಸ್ತುತ ವೈಶಿಕಾದಿ ರಸಶಾಸ್ತ್ರೋದ್ಭೂತಸನ್ಮಾರ್ಗ ವೃತ್ತಿ ವಿಕಲ್ಪಂಗಳುಮಂ ಮನಂಗೊಳಿಸಿದಂ ಶೃಂಗಾರ ರತ್ನಾಕರಂ (ಶೃಂಗಾರ. ೦-೦೭). ೩. [ವಿಜ್ಞಾನ] ರಸಾಯನಶಾಸ್ತ್ರ : ' ರಸಶಾಸ್ತ್ರಜ್ಞ ' ಪರಾ. [ಸಂ.]

**ರಸಶಾಸ್ತ್ರಜ್ಞ** (ನಾ). ರಸಾಯನವಿಜ್ಞಾನವನ್ನು ಬಲ್ಲವನು : ರಸವಿಜ್ಞಾನಿ : ತಾವು ವಾಯುವಿನಲ್ಲಿ "ಆರ್ಗಾನ್" ಎಂಬ ಇನ್ನೊಂದು ಹೊಸ ಅನಿಲವು ಇದ್ದೇ ಇರಬೇಕೆಂದು ಹೇಳಿದಾಗ ಇಂಗ್ಲೆಂಡಿನ ರಸಶಾಸ್ತ್ರಜ್ಞರು (chemists) ತಮ್ಮನ್ನು ಧಿಕ್ಕರಿಸಿ ಅವಹೇಳನ ಮಾಡಿದರು (ಜಗಸಂ. ೪೭). [ಸಂ.]

**ರಸಶುದ್ಧಿ** (ನಾ). ಪಾದರಸವನ್ನು ಶುದ್ಧಿಗೊಳಿಸುವಿಕೆ. [ಸಂ.]

**ರಸಶೇಷ** (ನಾ). ವಿಷೂಚಿ ಎಂಬ ರೋಗದಲ್ಲಿ ಒಂದು ಬಗೆ : ಆ ವಿಷೂಚಿ ವಿಷೂಚಿಕೆಯೆಂದು, ಅಲಸಕವೆಂದು, ಅಜೀರ್ಣವೆಂದು, ವಿಳಂಬಿಕೆಯೆಂದು, ರಸಶೇಷವೆಂದು ಐದು ತೆಱನಾಗಿಹುದು (ವೈದ್ಯಶಾ. I. ೨೪೩); ಜೀರ್ಣಾಜೀರ್ಣದೊಡನೆ ಕೂಡಿಕೊಂಡಿರ್ದ ವಿಷೂಚಿಯು ರಸಶೇಷವೆನಿಸಿಕೊಂಬುದು (ಸಕವೈ. ೩೩೬). [ಸಂ.]

**ರಸಸಿಂಧೂರ** (ನಾ). ಪಾದರಸ ಮತ್ತು ಗಂಧಕಗಳ ಸಂಯೋಗದಿಂದ ಸಿದ್ಧವಾಗುವ ಒಂದು ಬಗೆಯ ರಾಸಾಯನಿಕ ವಸ್ತು : ರಸಸಿಂಧೂರ ವನ್ನೇ ಅವರು ಧರಿಸುವುದು (ಪೂಜಾಪ. ೦೩೩) ; ರಸವಂತಿ. . . ರಸಸಿಂಧೂರ (ಮುಂಬಿವ್ಯಾ. ೦೭೩). [ಸಂ.]

**ರಸಸಿದ್ಧ** (ನಾ). = ರಸವಾದಸಿದ್ಧ : ರಸಸಿದ್ಧನಿಟ್ಟ ಗುಳಿಗೆಯನನ್ನಕೊಯ್ಯಲಾ ನೊಸಲ ಬೆವರಂ ಪರುಷವೇದಿಯಂ ಮಾಡಿ (ಪಿಕ್ಕಪು. ೬–೩–೬೦); ಶಿವನು ರಸಸಿದ್ಧನೆಂಬಾಚಾರ್ಯನಾಗಿ ಬಂದು ರಸವಾದಸಿದ್ಧಿಯ ಕಲಿಸಿಹೆನೆನಲು (ಶೃರಸೂ. I. ೩೩೩) ; ಮುಟ್ಟಿದುದನೆಲ್ಲ ಚಿನ್ನ ಮಾಡಿದ ರಸಸಿದ್ಧರವರು (ಏಕ. ೬೬೦). [ಸಂ.]

**ರಸಸಿದ್ಧಿ** (ನಾ). ೧. ರಸವಾದದಲ್ಲಿ ದೊರೆತ ಸಾಧನೆ ; ರಸವಾದಸಿದ್ಧಿ : ಉರಿಗೆ ರಸ ನಿಂದಾಗವೆ ರಸಸಿದ್ಧಿ ಎಂಬೆ ಅಸಿಗೆ ಶರೀರ ನಿಂದಲ್ಲಿಯೆ ಕಾಯಸಿದ್ಧಿ ಎಂಬೆ (ಮೋಳಿಗೆ. ೦೯–೭೩) ; ಜಂಗಮದ ಪಾದೋದಕಮೆಂಬ ರಸಸಿದ್ಧಿ ನಮಗುಂಟು (ಶೃರಸೂ. I. ೩೩೩) ೨. ಕಾವ್ಯಾನಂದವನ್ನು ದೊರಕಿಸಿಕೊಳ್ಳುವುದು : ರಸಜೀವನಕೆ ಮಿಗಿಲ್ ತಪಮಿಹುದೆ ? ರಸಸಿದ್ಧಿಗಿಂ ಮಿಗಿಲೆ ಸಿದ್ಧಿ ? (ಶ್ರೀರಾಮಾ. ೩೨–೦೨೮). [ಸಂ.]

**ರಸಸೂತ್ರ** (ನಾ). [ಕಾವ್ಯಮೀ] ರಸಾನುಭವದ ವಿಚಾರವನ್ನು ತಿಳಿಸುವ ಸೂತ್ರರೂಪದ ನಿರೂಪಣೆ : ಭರತಾಚಾರ್ಯನು . . . ಉಸುರಿದ ರಸಸೂತ್ರವೇ ಇತ್ತೀಚಿನ ಕವಿಗಳಿಗೂ ಲಕ್ಷಣಕಾರರಿಗೂ ಅಮೃತಾನ್ನ

ವಾಗಿದೆ(ಕಾಹಿಂ. ೩) ; ಭರತಮುನಿಯ ರಸಸೂತ್ರದ ವಿಸ್ತಾರವಾದ ವ್ಯಾಖ್ಯಾನಗಳಿಂದ ಆ ವಿಚಾರ ಚರ್ಚಿತವಾಗಿದೆ (ಕಾಂದಕ. ೧೩೯). [ಸಂ.]

**ರಸಸ್ಥಾನ** (ನಾ). ಕಾವ್ಯದಲ್ಲಿ ಸ್ವಾರಸ್ಯವು ಅತಿಶಯವಾಗಿ ಇರುವ ಸ್ಥಳ,— ನೆಲೆ : ಪುರುದೇವನ ಚರಿತ್ರೆಯಲ್ಲಿ ಅಲ್ಲಲ್ಲಿ ಚೆಲುವಾದ ರಸಸ್ಥಾನಗಳಿರುತ್ತವೆ (ಕಸಾತ. ೯೦). [ಸಂ.]

**ರಸಸ್ಥಿತಿ** (ನಾ). ರಸಾನುಭವವಾಗುತ್ತಿರುವ ಆನಂದದ ಇರವು : ಕವಿಯ ರಸಸ್ಥಿತಿಯನ್ನೂ ಮೀರಿದ ಸಮರಸಸ್ಥಿತಿಯು ಅನುಭಾವಿಯದು (ರಹುಗಾ. ೧೦೦). [ಸಂ.]

**ರಸಸ್ಯಂದಿ** (ನಾ). ಸ್ವಾರಸ್ಯವನ್ನುಂಟುಮಾಡುವುದು ; ರಸಾನುಭವಕರವಾದುದು : ಅವಳ ವಚನಗಳಲ್ಲಿ ನಮುಭಯಗಳ ಕೊರತೆ ಕಂಡುಬಂದರೂ ಒಟ್ಟಿನಲ್ಲಿ ರಸಸ್ಯಂದಿಯಾದ . . . ನಿರ್ಮಾಣವಿದೆ (ಕಸಾತ. ೧೬೩). [ಸಂ. ರಸಸ್ಯಂದಿನ್]

**ರಸಹಾರಿ** (ನಾ). (ಸಂಬಾರ ಪದಾರ್ಥಗಳನ್ನು) ಅರೆಯುವ ಕಲ್ಲು ; ಅಮ್ಮಿಕಲ್ಲು : "ರಸಹಾರಿಯೆನಲಮ್ಮಿಕಲ್ಲಕ್ಕು" (ಮಂಗರಾ. ೬೦-೦೯). [ಸಂ. ರಸಹಾರಿನ್ = ದ್ರವವನ್ನು ಉತ್ಪತ್ತಿಮಾಡುವಿಕೆ]

**ರಸಹೀನ** (ನಾ). ರಸವಿಲ್ಲದುದು ; ಶುಷ್ಕವಾದುದು ; ರಸಹೀನಂಕೆಯ್ಗಳೊಳಂ ರಸಮಯಮಪ್ಪುದು ವಿಚಿತ್ರಮೋಂ ಕಾಣಲೊಡಂ . . . ಮುನೀಂದ್ರಚಂದ್ರನ ಮುಖಮುಂ (ಅವಂಪು. ೯-೦೦೦). [ಸಂ.]

**ರಸಾಂಜನ** (ನಾ). ೧. ಔಷಧವಾಗಿ ಬಳಕೆಯಾಗುವ ಒಂದು ಧಾತುವಿಶೇಷ; ಮೈಲುತುತ್ತ : ವನದಂತಿಯ ಪಂದಿಯ ಕೋಣನ ಬಸೆಯೊಳ್ ಮೊಲೆಯನೊರಸಿ ಕಟುವೆರಸು ರಸಾಂಜನಮಂ ನಸ್ಯಂಗೆಯ್ದೊಡೆ ಪಜಾಕ್ಷಿಯ ಮೊಲೆಗಳೊದವಿ ನಡುವಂ ಮುಚ್ಚುಗುಂ (ರೋಣಸೀಕ. ೯-೦೭೦) ; ಲಾಮಂಚ, ರಸಾಂಜನ, ಮುಡಿವಾಳ . . . ಸಕ್ಕರೆ ಸಹ ಚೂರ್ಣಿಸಿ ಹಾಕಿ ಸೇವಿಸೆ ಶಾಂತಿ ನಿಲ್ಗುಂ (ಸಕವ್ಯ. ೨೬೩). ೨. ಕಣ್ಕಪ್ಪು : ಕಾಡಿಗೆ : "ದಾರ್ವಿಕಾ, ಕ್ವಾಥೋದ್ಭವಂ, ತುತ್ಥಂ, ರಸಾಂಜನಂ, ರಸಗರ್ಭಂ, ತಾರ್ಕ್ಷ್ಯಶೈಲಂ— ೬ ರಸಾಂಜನದ ಹೆಸರುಗಳು" (ಸಿದ್ಧಾಂತಿ. ೩೦೩). [ಸಂ.]

**ರಸಾಗ್ರ** (ನಾ). ಹಾಲು, ಮೊಸರು ಮುಂತಾದ ದ್ರವಪದಾರ್ಥಗಳ ಮೇಲುಭಾಗದಲ್ಲಿ ಕಟ್ಟುವ ಕೆನೆ; ಮಂಡ : "ರಸಾಗ್ರಮಂತದು ಮಂಡಂ" (ವಸ್ತುಕೋ. ೯೨-೨). [ಸಂ.]

**ರಸಾತಲ**, ರಸಾತಳ (ನಾ). ಭೂಮಿಯ ಕೆಳಗಿರುವುದೆಂದು ಭಾವಿಸಲಾದ ಅತಳ, ವಿತಳ, ಸುತಳ, ರಸಾತಳ, ತಳಾತಳ, ಮಹಾತಳ ಮತ್ತು ಪಾತಾಳವೆಂಬ ಏಳುಲೋಕಗಳಲ್ಲಿ ಒಂದು : "ರಸಾತಲಮೆನಲ್ಕಧೋಭುವನಮೆಂದೆನಲು ಪಾತಾಳಲೋಕಕ್ಕೆ ನಾಮಂ" (ಮಂಗರಾ. ೧೯೩-೦); ಬಲಿಯಂ ಕಟ್ಟಿದನಾವನೀ ಧರಣಿಯಂ ವಿಕ್ರಾಂತದಿಂದಂ ರಸಾತಲದಿಂದೆತ್ತಿದನಾವಂ (ಹಂಕಥಾ. ೬-೪೦). **ರಸಾತಳ** : ಆ ಮಹಾರ್ಣವಂ . . . ರಸಾತಳದಂತೆ ವಿಷಧರನಿಷೇವ್ಯಮುಂ (ಆಗಪು. ೦-೯೯ ವ) ; ಶರಧಿಯ ಮಥಿಸಲು ಮಂದರಗಿರಿಯ ತಂದಿರಿಸಿ ರಸಾತಳಕಿಳಿಯೆ ಭರದಿಂದ ಕಮಠ ನೀನಾಗಿ ಬೆನ್ನೊಳು ಪೊತ್ತ ಸಿರಿಯಾಣ್ಮ (ಕರ್ನಾಕ. ೨೨೭). [ಸಂ.]

**ರಸಾತಳ** 'ರಸಾತಲ' ನೋ.

**ರಸಾತ್ಮಕ** (ನಾ). ಸಾರವತ್ತಾದುದು : ರಸಾತ್ಮಕವಾದ ವಾಕ್ಯವು ಕಾವ್ಯ (ಕಾರಿಮಾ. ೦೫೨ ೩೨೭); ರಸಾತ್ಮಕವಾದ ವಾಕ್ಯವೇ ಕಾವ್ಯ (ಕಾರರ. ೯೯೯). [ಸಂ.]

**ರಸಾತ್ಮಿಕೆ** (ನಾ). ರಸಿಕಳಾದ ಹೆಂಗಸು,— ಸ್ತ್ರೀ : ಭಾವಜೀವಿಯೂ ರಸಾತ್ಮಿಕೆಯೂ ಆದ ಮಹಾರಾಣಿ ಶಾಂತಲಾದೇವಿ . . . ನರ್ತಿಸುತ್ತಿದ್ದ ಶಿಲಾಪೀಠವಿದೆಂದು ನನ್ನ ಹೃದಯ ಹೇಳಿತು (ಶಾಂತಲಾ. iii. ೪೦೯). [ಸಂ. ರಸಾತ್ಮಿಕಾ]

**ರಸಾಧಿಭೂತೆ** (ನಾ). ಆನಂದಕ್ಕೆ ನೆಲೆಯಾದವಳು; ಸಂತೋಷದಾಯಕಿ: ಸುರಕ್ಷಿತಾಮರಪ್ರತೆ ರಸಾಧಿಭೂತೆ ರಮಣೀಯರಪಾರತಿಮುಖ್ಯಶಕ್ತಿವಿಖ್ಯಾತೆ . . . ಪಾಲಿಪುದೆನ್ನ (ರಾಜಕೇ. ೩-೦೩೪). [ಸಂ. ರಸಾಧಿಭೂತಾ]

**ರಸಾನಂದ** (ನಾ). ರಸಾನುಭವದಿಂದ ಆಗುವ ಆನಂದ : ದೃಶ್ಯದಲಿ . . . ಒಂದಾಗುವುದೆ ಪರಮರಸಿಕತೆ; ಅದಕೆ ಮಿಗಿಲಹ ರಸಾನಂದ ಮತ್ತೆ ಬೇರೊಂದಿಲ್ಲ! (ಪಕ್ಷಿಕಾ. ೬೪-೯೯); ಅದು, ಕೇವಲ ಭೋಗಿಸಬೇಕೆನ್ನುವ ರಸಾನಂದವಲ್ಲ; ಅದು ರಚಿಸಿ ನೋಡಬೇಕೆನ್ನುವ ರುಚಿರಾನಂದ (ಇತ್ಯ. ೯೦೩). [ಸಂ.]

**ರಸಾನುಭವ** (ನಾ). [ಕಾವ್ಯಮೀ] (ನವರಸಗಳಲ್ಲಿ ಯಾವುದಾದರೂ) ರಸವನ್ನು ಅನುಭವಿಸುವಿಕೆ ; ರಸಾಸ್ವಾದ : ಇವನಿಗೆ ರಸಾನುಭವ ಹೇಗೆ ಉಂಟಾಗುವುದು (ಕಾರಮಿ. ೩೩೭); ಅಭಿನಯಿಸುತ್ತಿರುವಾಗಲಾಗಲಿ ಆಮೇಲಾಗಲಿ ನಟನು ರಸಾನುಭವ ಮಾಡಿದರೆ ಅವನು ಆಗ ಸಾಮಾಜಿಕನಾಗುವನು (ಕೃಮಿ. ೦೯೯); ರಸಾನುಭವವು ರಸವದಲಂಕಾರ ಎಂಬ ಹೆಸರಿನಿಂದ ಅಲಂಕಾರಗಳಲ್ಲಿ ಮಧ್ಯ ಪ್ರವೇಶ ಪಡೆದಿತ್ತು (ಕಾಂದಕ. ೦೬೧). [ಸಂ.]

**ರಸಾನುಭೂತಿ** (ನಾ). = **ರಸಾನುಭವ** : ರಸಾನುಭೂತಿಯ ರಸಪಥವಲ್ಲದೆ ಸತ್ಯಕೆ ಗತಿಯಿಲ್ಲ ! (ಪಕ್ಷಿಕಾ. ೨೦-೭). [ಸಂ.]

**ರಸಾನ್ನ** (ನಾ). ರುಚಿಯಾದ ಅನ್ನ: ಸವಿಯಾದ ಆಹಾರ : ಕಾಗೆಗೆ ರಸಾನ್ನ ಮುಂದಿರಲಿಕ್ಕೆ ಹರಿವ ಕೀಟಕಂಗೆ ಸರಿವುದಲ್ಲದೆ ಮತ್ತೆ ಅದು ಸವಿಸಾರವ ಬಲ್ಲುದೆ (ಬಿರೇಶ್ಯ. ೩೨); ಪಂಚಭಕ್ಷ್ಯ ರಸಾನ್ನಯುತನೈವೇದ್ಯಮಂ ಸೌರಾಷ್ಟ್ರಪತಿಗಿತ್ತು (ಬಸವು. ೯೩-೨೦). [ಸಂ.]

**ರಸಾಭಾಸ** (ನಾ). ೧. [ಕಾವ್ಯಮೀ]ಕಾವ್ಯ ನಾಟಕಾದಿಗಳಲ್ಲಿ ಬರುವ ನವರಸಗಳಲ್ಲಿ, ಯಾವುದನ್ನೇ ಆಗಲಿ ಕವಿಯು ಪ್ರತಿಪಾದಿಸುವಾಗ ಉದ್ದೇಶಪೂರ್ವಕವಾಗಿ ಅಥವಾ ಪ್ರಮಾದದಿಂದ ತಲೆದೋರುವ ಅನೌಚಿತ್ಯಸನ್ನಿವೇಶ: ಇದುವುಮೇಕತ್ರಾನುರಾಗದಿಂ ರಸಾಭಾಸಮಪ್ಪುದು (ರಸರ. ೯-೨೩೯); ಸಾಮಾಜಿಕರಿಗೆ ಇದು ಅನುಚಿತ ಎಂಬ ಬುದ್ಧಿಯು ಉಂಟಾದರೆ ಆಗ ನಿಜವಾದ ರಸವು ಹುಟ್ಟದೆ ರಸದಂತೆ ತೋರುವ 'ರಸಾಭಾಸ'ವು ಉಂಟಾಗುವುದು (ಕೃಮಿ. ೨೦೯); ರಸವಲ್ಲದಿದ್ದರೂ ರಸದಂತೆ ತೋರತಕ್ಕದ್ದು, ರಸಸದೃಶವಾದದ್ದು ರಸಾಭಾಸ (ಕಾರಮಿ. ೪೨೯). ೨. (ಅಲಂ) ಅನುಚಿತವಾದುದು; ಔಚಿತ್ಯಮೀರಿದುದು; ರಸಭಂಗ : ನಡಿ ಗುರುಮೂರ್ತಿ ಇವಳು ಇನ್ನು ರಸಾಭಾಸ ಮಾಡಿಬಿಡುತ್ತಾಳೆ (ಮಾಕುವ. ೦೩೩). [ಸಂ.]

**ರಸಾಭಿನಯ** (ನಾ). ಆನಂದವನ್ನು ಕೊಡುವ ಅಭಿನಯ : ರಸಿಕರ್ಕಳೊಪ್ಪುವನ್ನಂ ರಸಾಭಿನಯಕೌಶಲಂಗಳೊಳ್ಪಿದುದೆನುತಾನುಸಿರೆ (ಜಾಕಂಕ. ೦-೨). [ಸಂ.]

**ರಸಾಭಿವ್ಯಂಜಕ** (ಗು). [ಕಾವ್ಯಮೀ] ನವರಸಗಳಲ್ಲಿ ಯಾವುದಾದರೂ ಭಾವವನ್ನು ಅಭಿವ್ಯಕ್ತಿಗೊಳಿಸುವ,— ವ್ಯಕ್ತಪಡಿಸುವ : ರಸಾಭಿವ್ಯಂಜಕ ಶಬ್ದಾರ್ಥಗಳು ಕೂಡ ಹೀಗೆ "ಮಧುರ", "ಮಧುರತರ", "ಮಧುರತಮ" ವಾಗಿರಬಹುದು (ಧ್ವನ್ಯಾಲೋ. ೬೦). [ಸಂ.]

**ರಸಾಭಿವ್ಯಂಜನ** (ನಾ). [ಕಾವ್ಯಮೀ] ನವರಸಗಳ ಅಭಿವ್ಯಕ್ತಿ : ಸಂಗೀತದಲ್ಲಿ ಯಾವ ಯಾವ ರಸಾಭಿವ್ಯಂಜನಶಕ್ತಿ ಇದೆ ಎನ್ನುವುದನ್ನೂ ಹೇಳಿದೆ (ಕಾಂದಕ. ೦೨೨). [ಸಂ.]

**ರಸಾಭಿವ್ಯಕ್ತಿ** (ನಾ). = ರಸಾಭಿವ್ಯಂಜನ : ಎಲ್ಲ ಕಲೆಗಳೂ ರಸಾಭಿವ್ಯಕ್ತಿಯನ್ನೇ ತಮ್ಮ ಗುರಿ ಎಂದು ಸಾರಿದುವು (ಕಾಂದಕ. ೦೨೨). [ಸಂ.]

**ರಸಾಯ** (ನಾ). ಸಿಹಿ ನೀರಿನಿಂದ ಕೂಡಿದುದು : ಮಣಿಯಲ್ಲದ ಕಲ್ ಜ್ಯೋತಿಸ್ತೃಣಮಲ್ಲದ **ಪುಲ್** ರಸಾಯಮಲ್ಲದ ಮಡು . . . ಇಲ್ಲ ತತ್ಪರಿಸರದೊಳ್ (ಕಂಪುಕಿ. ೦೦-೯೬). [ಸಂ. ರಸಾಯ್ಯ = ರುಚಿಯಾದ]

**ರಸಾಯನ** (ನಾ). ೧. ಹಿತವಾದುದು ; ಇನಿದಾದುದು ; ಅಪ್ಯಾಯಮಾನವಾದುದು : 'ಕರ್ಣರಸಾಯನ' ಪರಾ. ೨. ಮಧುರವಾದ ಪೇಯ ; ರುಚಿಕರವಾದ ಪಾನೀಯ : ಚೋಳನ ರಸಾಯನವನೊಲ್ಲದೆ ಚೆನ್ನನ ಅಂಬಳಿಕವನ್ನು ಉಂಡುದನ್ನು ವೇದವೂ ನಂಬ ಕೇಳಿದರಿಲ್ಲ ! (ಕೋಳಸ. ೨೭ ಕೃಪ್ಪಾ.ಸಟ). ೩. ಸಿಹಿ, ಖಾರ, ಹುಳಿ ಮೊದಲಾದ ಆರು ರಸಗಳ ಮಿಶ್ರಣ : "ಇವಂತು ಷಡುರಸಮುಕ್ಕು ಮಿವು ತಮ್ಮೊಳೊಂದೊಂದು ಬೆರಸಿ ತೋಱಿಲ್ ಸ್ವಾದು ರುಚಿ ರಸಾಯನ ಮೆನಿಕ್ಕುಂ" (ಸೂಶಾ. ೬೫-೩) ; ಊಳಿಗವನೆ ಮಾಳ್ಪ ಪೆಣ್ಗಳೊಡನೆ . . . ಕುಪ್ಪವನು ರಸಾಯನವನು ಪಣ್ಗಳನು ತರಂಗೊಳಲ್ಕೆ ಸಾಚರ್ಣತೆ (ಜಜ. ೬-೦೪). ೪. ಬಾಳೆಹಣ್ಣು, ಬೆಲ್ಲ ಮುಂತಾದುವುಗಳ ಮಿಶ್ರಣದಿಂದ ತಯಾರಿಸುವ ಒಂದು ಬಗೆಯ ಸಿಹಿಖಾದ್ಯ : ಮೊದಲು ಚಿಂತೂರವರು ಸೊಂಟಕ್ಕೆ ಟೌಲು ಬಿಗಿದು ಬಾಗಿ ಭಕ್ತಿಯಿಂದ ರಸಾಯನಕ್ಕೆ ಕೈ ಒಡ್ಡಿದರು (ಸೂಸುತ. ೦೫೬). ೫. ರಸವಾದ ; ರಸವಿದ್ಯೆ. ೬. ಮಜ್ಜಿಗೆ. ೭. ವಿಷ. ೮. ಬಾಲಮೆಣಸು ; ಹಿಪ್ಪಲಿ. ೯. ಗರುಡನ ಹೆಸರುಗಳಲ್ಲಿ ಒಂದು. ೧೦. [ ವೈದ್ಯಶಾ ] ಒಂದು ಬಗೆಯ ಪಾಕ : ರಸಾಯನ . . . ಸಿದ್ಧಲೇಪಾದಿ ವಸ್ತುಗಳನೇಕವಾಗಿ ಅಲ್ಲಿಯ ಶಿವಭಕ್ತರಿಗೆ ಸುಕೃತಾನುರೂಪದಿಂದಾನಂದಕರಗಳಾಗಿರ್ಪುವು (ಶಿತಕ. ೨೦೦) ; ಅಶ್ವಗಂಧಿರಸಾಯನ . . . ನಿತ್ಯವೂ ಸೇವನೆಯಂ ಮಾಡಲು ಕ್ಷಯರೋಗ ಮುಂತಾದ ಸಮಸ್ತವ್ಯಾಧಿ ಪರಿಹಾರವಹುದು (ಶಕ್ಷ. ೨೩೪) : ಔಷಧಿ, ರಸಾಯನಾದಿಗಳಲ್ಲಿ ಇವರು ಆ ಕಾಲದ ತಜ್ಞರಾಗಿದ್ದರು (ಕರ್ಣಟಿ. ೦೬). ೧೧. ಶಕ್ತಿ, ಉತ್ಸಾಹಗಳನ್ನು ಹೆಚ್ಚಿಸುವ ಒಂದು ಬಗೆಯ ಔಷಧದ ಮಿಶ್ರಣ : ಅಂದಿನ ಅನುಭವವು ಕಿಟ್ಟಿಯ ಮೈಯಲ್ಲಿ ರಸಾಯನವಾಗಿ ತಿಂಗಳುಗಳವರೆಗೆ ಹಚ್ಚಿಕೊಂಡು ಅನೇಕ ಚಿಕ್ಕಪುಟ್ಟ ಬದಲಾವಣೆಗಳನ್ನು ಮಾಡಿತು (ಗಜಿಜಾ. ೩೩). ೧೨. ಕ್ರಿಮಿರೇಚಕ ಔಷಧಿಯಾಗಿ ಬಳಸುವ ಒಂದು ಬಗೆಯ ಮೂಲಿಕೆ ; ವಿಡಂಗ. ೧೩. [ ವಿಜ್ಞಾನ ] ವಸ್ತುಗಳ ಗುಣ ಮತ್ತು ಧರ್ಮವನ್ನು ತಿಳಿಸುವ ವಿದ್ಯೆ,—ಶಾಸ್ತ್ರ : 'ರಸಾಯನಶಾಸ್ತ್ರ' ಪರಾ. [ಸಂ.]

**ರಸಾಯನಜ್ಞ** (ನಾ). ರಸಾಯನಶಾಸ್ತ್ರವನ್ನು ಬಲ್ಲವನು : ಇತ್ತೀಚೆಗೆ ರಸಾಯನಜ್ಞರು ಹುಟ್ಟಿಕೊಂಡು ಕೃತಕಚಿನ್ನ ತಯಾರಿಸುತ್ತಿರುವರಂತೆ (ಹಸುಕೊ. ೦೫). [ಸಂ.]

**ರಸಾಯನವಿಜ್ಞಾನ** (ನಾ). "ಮೂಲಧಾತುಗಳು, ಅವು ಸಂಯೋಗವಾಗುವ ನಿಯಮಗಳು, ಮತ್ತು ಅವು ಬೇರೆ ಬೇರೆ ಸ್ಥಿತಿಗಳಲ್ಲಿ ತೋರಿಸುವ ಚರ್ಯೆಗಳು, ಮೊ. ವಿಷಯಗಳನ್ನು ವಿಚಾರಮಾಡುವ ಶಾಸ್ತ್ರ" (Chemistry. ೩೮೪೩) : ಪುಸ್ತಕಗಳು ಭೌತವಿಜ್ಞಾನ, ರಸಾಯನವಿಜ್ಞಾನ . . . ಮೊದಲಾದುವುಗಳಿಗೆ ಸಂಬಂಧಿಸಿದುವು (ಶರಶ. IV. ಹುಹ್ನು). [ಸಂ.]

**ರಸಾಯನವಿಜ್ಞಾನಿ** (ನಾ). = ರಸಾಯನಜ್ಞ : "ರಸಾಯನವಿಜ್ಞಾನಿ. ಔಷಧವಸ್ತು ವ್ಯಾಪಾರಿ" (Chemist. ೩೮೪೩). [ಸಂ.]

**ರಸಾಯನಶಾಸ್ತ್ರ** (ನಾ). = ರಸಾಯನವಿಜ್ಞಾನ : ಭೌತಶಾಸ್ತ್ರ (Physics), ರಸಾಯನಶಾಸ್ತ್ರ (Chemistry) . . . ಖಗೋಳಶಾಸ್ತ್ರ (Astronomy) ಮುಂತಾದ ಭಾಗಗಳು ಈ ರೀತಿಯಲ್ಲಿ ಬೇರೆಬೇರೆಯಾದವು (ಭೌತಶಾ. ೦೨) ; ಮೊದಮೊದಲು ಜನರು ರಸಾಯನಶಾಸ್ತ್ರ ಓದಿದ್ದರೆ ಸಾಕೆಂದು ಭಾವಿಸಿದ್ದರು (ಜಜಾಕ. ೦೦೩). [ಸಂ.]

**ರಸಾರುಹ** (ನಾ). ಭೂಮಿಯಲ್ಲಿ ಹುಟ್ಟಿದುದು : ಮರ ಗಿಡ ಮೊದಲಾದ ಸಸ್ಯ : ಮತ್ತೊಂದು ಸುಮನಿಂತರಸಾಲರಸಾರುಹದ ಕೆಳಗೆ . . . ತದ್ಬಕಚಪುಷ್ಪಗಳನ್ನಧುದಿಂದು ತೋಱುಗುಂ (ಚಾಜತ. ೦೦-೨೪ ೮). [ಸಂ.]

**ರಸಾಲ, ರಸಾಳ** (ಗು). ೧. ಸವಿಯಾದ ; ಮಧುರವಾದ. (ನಾ). ೨. ಒಂದು ಬಗೆಯ ಮರ ಮತ್ತು ಅದರ ಹಣ್ಣು ; ಮಾವು : ಇದು ಪಿಕತುಂಡಖಂಡಿತಗಳಿತ ಸಕೋಶರಸಾಲಸಾಲಂ (ಕಾದಂಪೂ. ೬೨೨) ; ಗಣಪಂ . . . ಶಿವನಂ ಬಳಸಿ ಬಂದು ಪಣ್ಣೀವುದೆನೆ ಹರಿಸದಿಂ ಮಚ್ಚಿ ಗಜವದನಂ ಗೆಯ್ದಾ ರಸಾಲದ ಪಣ್ಣನಿತ್ತನಭವಂ (ಚಕೋಪು. ೦೦-೪೦) ; ಉರಿವ ಕಡು ಬೇಸಗೆಯ ಬಿಸಿಲಿಂದ ಬಳಲಿದ ಕೋಮಲರಸಾಲದಂತೆ (ಶಂಶ. ೦೨೦). ೩. ಕಬ್ಬು. ೪. ಒಂದು ಬಗೆಯ ಕಬ್ಬು ; ಪುಂಡ್ರಕ. ೫. ದ್ವೀಪದ ಹಲಸಿನ ಮರ. ೬. ಧೂಪದ ಮರ ; ಲೋಬಾನ. ೭. ಗೋದಿ. ೮. ಒಂದು ಬಗೆಯ ಇಲಿ. ರಸಾಳ : ೧. ಪುಣ್ಯಕಾರಕಕಥೆಗಳನ್ನೂ ಹೇಳುತ್ತಾ ನಿನ್ನ ರಸಾಳವಾಣಿಯಿಂದ ಅವರನ್ನು ಸಮಾಧಾನಪಡಿಸುತ್ತಾ ಹೋಗು (ಕುಳಸಿ. ೦೨೮). ೨. ರಸಾಳಪುಷ್ಪಮತ್ರೀಣೆ . . . ಸೊಗಯಿಸಲೆಸಗುಂ ತತ್ಪುರೋದ್ಯಾನವೆಂಬುದು (ಜಗು. ೨-೦೩) ; ಸಾಳ ರಸಾಳ . . . ಹಿಂತಾಳ ಮುಂಖ್ಯತರುಸಂತತಿಯಿಂ ವನಬೃಂದಮೊಪ್ಪುಗುಂ (ಯಾದಶಂ. ೦-೩೫). ೯. ರಸಿಕನಾದವನು ; ರಸಗ್ರಾಹಿ ; ರಸಜ್ಞ : ಒರಿದು ರಸಾಳನೆನಿಸುವ ಪುರಾಣಿಕಂ . . . ಪೇಳಲುದ್ಯತನಾದಂ (ಕೃಪು. ೦೬-೦೩). [ಸಂ.]

**ರಸಾಲಂಕಾರ** (ನಾ). [ಕಾವ್ಯಮೀ] ರಸಕ್ಕೆ ಅಂಗವಾದ ಅಲಂಕಾರ : "ರಸವತ್, ಪ್ರೇಯಃ . . . ಭಾವಶಬಳಂ ಎಂದು ರಸಾಲಂಕಾರಗಳೇಳುಂ (ಅಕ್ರಿ. ೦೪೦) ; ರಸಾಲಂಕಾರವಿಲ್ಲದ ಕೃತಿಯುದೇಸಿದ್ದೇನು ಫಲ (ಕೊರಂ. ೬-೦೫-೦೩) ; ನವೀನರ ಪಾಶದಲ್ಲಿ ರಸಕ್ಕೆ ಪ್ರಧಾನಸ್ಥಾನವೇ ಬಂದಿರುವುದರಿಂದ 'ರಸಾಲಂಕಾರಗಳು' ಉಪಮಾದಿ ಉಕ್ತಿವೈಚಿತ್ರ್ಯಗಳ ಜೊತೆಗೆ ಸೇರತಕ್ಕವುಗಳಲ್ಲ (ಕೃ ಶಿಶಿ. ೨೫೦). [ಸಂ.]

**ರಸಾಲೆ** (ನಾ). ಹದ ಮಾಡಿ, ಒಗ್ಗರಿಸಿದ ಮಜ್ಜಿಗೆ : "ರಸಾಲಾ, ಮಾರ್ಜಿತಾ – ೨ ಮೊಸರು ಕೈಗಡಿದು ಮಾಡಿದ ಮಜ್ಜಿಗೆ . . . ವಗ್ಗರಿಸಿದ ಸಂಬಾರದ ಮಜ್ಜಿಗೆ" (ಸಿಚ್ಚಂ. ೨೮೩). [ಸಂ. ರಸಾಲಾ]

**ರಸಾವೇಶ** (ನಾ). ನವರಸಗಳಲ್ಲಿ ಯಾವುದಾದರೂ ರಸದ ಆವಿರ್ಭಾವ ; ರಸಾನುಭವ : ಕಾವ್ಯನಂ ನಟನುಮಾತನ ರಸಾವೇಶ ನುಬಹಾಲಸ್ಯವೆಡೆಗೊಳಲು ತಪ್ಪುಗಳಿಲ್ಲದೆ ಕಾವ್ಯಕರ್ತೃ ತಪ್ಪುಮಿರೆ (ಶಕಗ. ೦-೨೩) ; ಕವಿಯ ರಸಾವೇಶದೆಡೆಯಲ್ಲಿ ತಾನಾಗಿ ಅಸ್ಕರ ಉಕ್ತಿಗಳು – ಪ್ರಯೋಗಗಳು ಬರಲು ಸಾಧ್ಯವಿದೆಯೆಂದು ಇಲ್ಲಿನ ಅಭಿಪ್ರಾಯವಾಗಿದೆ (ಸಂಶೋಧ. ೦೨೩). [ಸಂ.]

**ರಸಾಶ್ರಯ** (ನಾ). ೧. ನೀರಿಗೆ ಆಶ್ರಯವಾದುದು. ೨. ಕಾವ್ಯರಸಕ್ಕೆ ಆಶ್ರಯವಾದವನು ; ರಸಜ್ಞ. ೧, ೨ : ಕ್ಷಿತಿತಳದಂತೆ ರಸಾಶ್ರಯನ ತರ್ಕಸುಕವೀಂದ್ರಬೃಂದದಂತೆ ವಿಶೇಷಾನ್ವಿತನಂಬರದಂತೆ ಸದಾವೃತ ಸಂಬುಧಿಯಂತೆ ಪರಮಗಂಭೀರಗುಣಾಂ (ಸುಕುಮಾ. ೪-೬೨). [ಸಂ.]

**ರಸಾಸ್ವಾದ** (ನಾ). ರಸಾನುಭವವನ್ನು ಹೊಂದುವುದು ; ರಸವನ್ನು ಅನುಭವಿಸುವುದು : ಕಳಗೆಯಂ ಒಗೆಗೊಂಡ ರೂಪು ಕುಸುಮಾಮೋದಂ ರಸಾಸ್ವಾದಮುಗ್ಗಳಿಸುಪ್ಪಂಗಳಲಾಗಂ ತಳ್ತೊಯ್ಯ ಪಂಚೇಂದ್ರಿಯಂಗಳೊಳ್ . . . ತಣಿದಂ ಸುಖಾಂಬುನಿಧಿಯೊಳ್ (ಶಾಂತಿಪು. ೬-೦೨೬) ; ಮುಖಮಂಡಲಂ ಶಿವಸ್ತೋತ್ರ ಗೀತಾಮೃತರಸಾಸ್ವಾದ[ಶಾಶಾ. ರಸಾಕ್ಷರ]ಕ್ಕೆ ತೀವಿರ್ದ ರತ್ನ ಖಚಿತಮಾಣಿಕ್ಯ ಕರಂಡಗೆಯಂತಿರ್ದಪ್ಪುದು (ಶಂಶರ. ೪-೩೩) ; ಅತ್ಯುತ್ತಮ ಕಲಾವಿದ ತನ್ನ ಕೃತಿಯಲ್ಲಿ . . . ರಸಾಸ್ವಾದದಲ್ಲಿ ತಲ್ಲೀನವಾಗುವಂತಹ ಮನಸ್ಥಿತಿಯನ್ನು ಉಂಟು ಮಾಡಿ ಬಿಡುತ್ತಾನೆ (ಶೌಂದಕ. ೭೩). [ಸಂ.]

**ರಸಾಳ** ' ರಸಾಲ ' ನೋ.

**ರಾಜಬಾಳೆ** ' ರಾಜವಾಳೆ ' ನೋ.

**ರಾಜಬಿತ್ತರಿ** (ನಾ). ಅರಸನ ವಿಲಾಸಿನಿ : ಮುತ್ತಿಕೊಂಡಾ ರಾಜಬಿತ್ತರಿಯರು . . . ತೋರಲಾ ರಾಜಪೋಬಿಯರ್ ಧೀರರಾಗಿ ಪರದರಗಿಳಿಯಂ ಕುರಿತು ವಹಿಲದಿಂದ ಸರಸಸುಕುಮಾರ ಶುಕರಾಜ ಸಾರ್ವಭೌಮ ಯಾರು ನೀಂ ಬಂದ ಕಾರ್ಯವನ್ನರುಹು ಜೀಯಾ (ಶಗಂಧಿ. ೫೨-೫). [ ರಾಜ + ಬಿತ್ತರಿ₂ ]

**ರಾಜಬೀಜಿ** (ನಾ). = ರಾಜಪಿಂಡ : " ರಾಜಬೀಜೀ, ರಾಜವಂಶ್ಯಃ—೨ ರಾಜವಂಶದಲ್ಲಿ ಹುಟ್ಟಿದವರ ಹೆಸರುಗಳು; ರಾಜಪಿಂಡಿ, ಅರಸುಪಿಂಡಿ " (ಸಿದ್ಧಾಂತಿ. ೨೦೨). [ ಸಂ. ರಾಜಬೀಜಿನ್ ]

**ರಾಜಬೀದಿ** (ನಾ). ಮುಖ್ಯರಸ್ತೆ ; ಹೆದ್ದಾರಿ : ಮುಂದೆ ಕಂಬಿಯ ಕಂಚುಕಿಯರೊಲವಿಂದ ವಿಪ್ರರ ಮಂತ್ರಘೋಷಣೆಯಿಂದ ಬಂದರು ರಾಜಪುತ್ರರು ರಾಜಬೀದಿಯಲಿ (ಕೂರಣ. ೦-೦೬-೪೨) ; ದ್ವಾರಕನಾಥಭಟ್ಟನು ತನ್ನ ಮಗನಾದ ಹರಿಯನ್ನು ಕರಕೊಂಡು ರಾಜಬೀದಿಯಲ್ಲಿ ಹೋಗುತ್ತಿದ್ದನು (ಮುಂಬಯಿ. ೪-೦೫೬). [ ರಾಜ + ಬೀದಿ ]

**ರಾಜಬುರಿಹಣ್ಣು** (ನಾ). ಒಂದು ಬಗೆಯ ಹಣ್ಣು : ಗೋಮುಳ್ಳು, ರಾಜಬುರಿಹಣ್ಣು (ಮೈಕಿಗ. ೬೬-೦೬೬೦). [ರಾಜಬುರಿ₀ (P ←ಇಂ. Raspberry) + ಹಣ್ಣು (< ಪಣ್₃)]

**ರಾಜಬೋಯಿ**, ರಾಜಬೋವ (ನಾ). ಅರಸನ ಪಲ್ಲಕ್ಕಿಯನ್ನು ಹೊರುವವನು : ಅಂದಣವನ್ನು ಹೊತ್ತಿರುವವರು . . . ರಾಜಬೋಯಿಗಳು (ಶಂಗಳ. ೩೯). **ರಾಜಬೋವ :** ರಾಜಬೋವಂ ಚಂಡವಂಶವುಂ ತನಗಂಬ ವ್ಯಾಜದಿಂ ಮನೆಮನೆಗೆ ಬೇಡೆ ಕಲ್ಯಾಣದೊಳಗಾ ಜನಂ ಕುಡದಿರಲು (ಚಕಾಂ. ೩೨-೨೬). [ರಾಜ + ಬೋಯಿ ( < ಬೋಯ)]

**ರಾಜಬೋವ** ' ರಾಜಬೋಯಿ ' ನೋ.

**ರಾಜಬ್ರುವ** (ನಾ). ಅರಸನೆಂದು ಹೇಳಿಕೊಳ್ಳುವವನು ; ಹೆಸರಿಗೆ ಮಾತ್ರ ದೊರೆಯಾದವನು : ಸವನಿಸಿದ ಗರ್ವದಲಿ ರಾಜಬ್ರುವನು ಕಳುಹಿದನಿಂದು ಕರುಣಾರ್ಣವನೆ ನಿಮ್ಮಡಿಯಂಘ್ರಿಸನ್ನಿಧಿಗೆ (ಜಿಭಾಗ. ೦೦-೫೪-೯೯). [ಸಂ.]

**ರಾಜಭಕ್ತಿ** (ನಾ). ಅರಸನ ಮೇಲಿರುವ ಭಕ್ತಿ; ರಾಜನಿಷ್ಠೆ : ಅವರು ರಾಜಭಕ್ತಿಯನ್ನು ತೋರ್ಪಡಿಸಿದರೆ ಅವರಿಗೆ ನಗರದ ದಿವಾನಗಿರಿಯನ್ನು ಕೊಡಬಹುದು (ಥೌಲತ್. ೬೪). [ಸಂ.]

**ರಾಜಭತ್ತ** (ನಾ). = ರಾಜನೆಲ್ಲು : ಏಲಕ್ಕಿ, ರಾಜಭತ್ತದರಳು ಇವನ್ನು ಸಕ್ಕರೆಯೊಡನೆ ತಿನ್ನಲು ದಾಹವಡಗುವುದು (ಸಕವೈ. ಕಂ. ೪೬೩). [ ರಾಜ + ಭತ್ತ₁ (< ಬತ್ತ) ]

**ರಾಜಭವನ** (ನಾ). ಅರಸನ ನಿವಾಸ ; ಅರಮನೆ : ಮಹಾಮಕುಟಬದ್ಧಪರಿವೃತಂ ರಾಜಭವನಮಂ ಪೊಱಮಟ್ಟು (ಆದಿಪು. ೦೦-೦೪ ವ) ; ರಾಜಭವನದ ರಾಜಾಂಗಣಮಂ ಪೊಕ್ಕು (ಪುತ್ರಕೃ. ೮-೪೭ ವ). [ಸಂ.]

**ರಾಜಭಾಷೆ** (ನಾ). ಒಂದು ದೇಶದ ಅಧಿಕೃತವಾದ ಆಡಳಿತಭಾಷೆ : ಆಗ ರಾಜಭಾಷೆಯೊಂದು ಹಿಮಾಲಯದಿಂದ ರಾಮೇಶ್ವರದವರೆಗೂ ಸ್ವೇಚ್ಛೆಯಾಗಿ ಓಡಾಡುವುದು (ಕಲಶಾ. ೨) ; ಪರ್ಷಿಯನ್‌ಭಾಷೆ ಬಹುಕಾಲ ದೆಹಲಿಅರಸರ ರಾಜಭಾಷೆಯಾಗಿ ನಡೆದುಬಂದಿತು (ಭಾರದ. ೪೦೪). ' ರಾಜ್ಯಭಾಷೆ ' ಪರಾ. [ ಸಂ. ರಾಜಭಾಷಾ ]

**ರಾಜಭೋಗ** (ನಾ). ೧. ಅರಸನಿಗೆ ಯೋಗ್ಯವಾದ ಆಹಾರ ; ಶ್ರೇಷ್ಠವಾದ ಆಹಾರ : ಇದರಲ್ಲಿ ಅನ್ನ ಸಾರು ಇವೆ. ಅದೇ ನನಗೆ ರಾಜಭೋಗ (ಕೀಶ್ರಕೃ. ೯೨). ೨. ಅರಸರಿಗೆ ಯೋಗ್ಯವಾದ ಸುಖ ; ಶ್ರೇಷ್ಠವಾದ ಸುಖ. ೩. ಒಂದು ಬಗೆಯ ಬತ್ತ ಮತ್ತು ಅದರ ಅಕ್ಕಿ : ರಾಜಭೋಗ ಊಟಕ್ಕೆ ಚೆನ್ನಾಗಿರುತ್ತದೆ (ಲೂಢಿ). [ಸಂ.]

**ರಾಜಮಂಡಲ**, ರಾಜಮಂಡಳ (ನಾ). ೧. ದೊರೆಗಳ ಸಮೂಹ ; ಅರಸರ ಗುಂಪು : ಭಾರತೀಯರಾಜರಾದ ತಾವೇ ನಿಯೋಜಿಸಿದ ಯಾವದೇ ಸಂಯುಕ್ತರಾಜಮಂಡಲದ ಕೈಯಲ್ಲಿ . . . ಸಮರ್ಪಿಸಿ (ಶ್ರೀಅರ. ೫೬). ೨. ಚಂದ್ರಮಂಡಲ. **ರಾಜಮಂಡಳ :** ೧, ೨ : ರಿಪುರಾಜಮಂಡಳಂ ಕುಂದಿ ಪದ್ಮತೇಜದಿನದೊರ್ಮೆಯುಂ ಪೆರ್ಚಿದು ಭಾವಿಪೊಡೆಯ್ದಿ ಮಿತ್ರಮಂಡಳಮುಪಚಯಮುಮಂ ತಾಳ್ದುದಂತದುಚಿತಂ ಚಿತ್ರಂ (ಧನ್ಯಕು. ೩-೯). [ಸಂ.]

**ರಾಜಮಂಡಳ** ' ರಾಜಮಂಡಲ ' ನೋ.

**ರಾಜಮಂತ್ರ** (ನಾ). ಅರಸನು ಮಂತ್ರಿಗಳೊಡನೆ ಮಾಡುವ ಆಲೋಚನೆ ; ದೊರೆಯ ಮಂತ್ರಾಲೋಚನೆ : ರಾಯನನುಜರು ದುರುಳರುಚಿತಾನುಚಿತಗೇಡಿಗಳಿರುಳು ದೊರೆಗಳು . . . ಹರಿಯ ಬಲು ಹುಂಟಾದಡೆಯು ಧಿಕ್ಕರಿಸಬಾರದು ರಾಜಮಂತ್ರವನು (ಕುವ್ಯಾಉ. ೬-೦೯). [ಸಂ.]

**ರಾಜಮಂದಿರ** (ನಾ). = ರಾಜಭವನ : ಭರತೇಶ್ವರಚಕ್ರವರ್ತಿ ನಿಜಸ್ಥಪತಿರತ್ನವಿರಚಿತಮಣಿಮಯರಾಜಮಂದಿರಮಂ ಪುಗುವುದುಂ (ಆದಿಪು. ೦೨-೦ ವ); ಜಯರವದ ರಥಪದಾದಾರ ಮೆಱೆಯಲು ಬೀಳುಕೊಂಡನು ರಾಜಮಂದಿರವ (ಕುವ್ಯಾಉ. ೦-೪೪). [ಸಂ.]

**ರಾಜಮುಖ** (ನಾ). ರಾಜಸೂಯ ಯಾಗ : ನಿನ್ನ ಕೃಪೆಯಲಿ ರಾಜಮುಖ ನಿಷ್ಪನ್ನವಾದರೆ ಬೊಪ್ಪನಿಂದ್ರನ ಮನ್ನಣೆಯ ವೈಸೋಂಕಿನೋಲಗ ಸುಲಭವಹುದು (ಕುವ್ಯಾಸ. ೬-೦೯). ' ರಾಜಸೂಯ ' ಪರಾ. [ಸಂ.]

**ರಾಜಮನೆತನ** (ನಾ). = ರಾಜಕುಲ ೧ : ರಾಜಮನೆತನದಲ್ಲಿ ಜನ್ಮವೆತ್ತಿದರೂ . . . ಗಟ್ಟಿಮುಟ್ಟಾಗಿ ಬೆಳೆದನು (ಮಹಿಶ. ೬೪). [ರಾಜ + ಮನೆತನ]

**ರಾಜಮನ್ನಣೆ** (ನಾ). ೧. ದೊರೆಯಿಂದ ಬರುವ ಮಾನ್ಯತೆ ; ಅರಸನು ತೋರುವ ಗೌರವ : ಹಿಂದೆ ವೀಣೆ ಶೇಷಣ್ಣನವರು ತಮ್ಮ ಕೊನೆಗಾಲದವರೆಗೂ ಮೈಸೂರಿನ ಆಸ್ಥಾನವಿದ್ವಾಂಸರಾಗಿ ರಾಜಮನ್ನಣೆಗೆ ಪಾತ್ರರಾಗಿದ್ದರು (ಲೂಢಿ). ೨. ಅತಿಶಯವಾದ ಮನ್ನಣೆ ; ಶ್ರೇಷ್ಠಮರ್ಯಾದೆ : ರಾಜಮನ್ನಣೆಯುಂಟು ಭೀಮುವಿಗೆ ! (ಕಂದಹ. ೪೪). [ರಾಜ + ಮನ್ನಣೆ]

**ರಾಜಮಯ್ಯ** (ನಾ). ಒಬ್ಬಾತನ ಹೆಸರು : ರಾಜಮಯ್ಯನ ಮಗ ಭೀಮಯ್ಯ (ಎಕ. X. ಹಂಕಾವು. ೪೯-೯ ; 961). [ರಾಜ + ಅಮ (< ಅಮ್ಮ₁) + ಅಯ್ಯ₁]

**ರಾಜಮರಾಲ**, ರಾಜಮರಾಳ (ನಾ). ಶ್ರೇಷ್ಠವಾದ ಹಂಸ ; ಅರಸಂಚೆ : " ಕಾಲ್ಮೊಗಂ ಕೆಂಪುದೋಱೆ ರಾಜಮರಾಲಂ [ಶಬಾಂ. ೪೦] " (ಮುಂಗಾ. ೫೦-೭). **ರಾಜಮರಾಳ :** ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [ಸಂ.]

**ರಾಜಮರಾಳ** ' ರಾಜಮರಾಲ ' ನೋ.

**ರಾಜಮರ್ಯಾದೆ** (ನಾ). ೧. = ರಾಜಮನ್ನಣೆ ೧: ಕರವಯ್ಯನಿಗೆ . . . ಅದ್ದಣಿಗೆ ಮತ್ತು ಗದ್ದಿಗೆಗಳೆಂಬ ರಾಜಮರ್ಯಾದೆಗಳನ್ನೊಳಗೊಂಡು ಪುಲಿನಾಡ ಕೊಳತೂರನ್ನು ವೈಶ್ಯದತ್ತಿಯಾಗಿ ಕೊಟ್ಟನು (ಕೊಳಂಬ. ೪೪ c). ೨. = ರಾಜಮನ್ನಣೆ ೨: ಆ ಸಜ್ಜನರನ್ನು ಕಾಣಲು ಹೋದಾಗ ನಮ್ಮನ್ನು ರಾಜಮರ್ಯಾದೆಯಿಂದ ನೋಡಿಕೊಂಡರು (ಲೂಢಿ). [ಸಂ. ರಾಜಮರ್ಯಾದಾ]

**ರಾಜಮಲ್ಲ** (ನಾ). ಒಬ್ಬಾತನ ಹೆಸರು ; P ಗಂಗವಂಶದ ಒಬ್ಬ ಅರಸನ ಹೆಸರು : ರಾಜಮಲ್ಲಪೆರ್ಮ್ಮಾನಡಿಗಳ್ ಪ್ರಿಥುವೀರಾಜ್ಯಂಗೆಯೆ (ಎಕ. III. ತಂಜಪ. ೬೩-೪ ; 870). ' ರಾಚಮಲ್ಲ ' ಪರಾ. [ಸಂ.]

**ರಾಜಮಹಿಷಿ** (ನಾ). ಅರಸನ ಪಟ್ಟದ ರಾಣಿ ; ಮಹಾರಾಣಿ : ವಿಜಯ ರಾಜಮಹಿಷೀಮಾಯೂರಾತಪತ್ರಶಂಖಾವಹಸಂಕುಳಂಗಳಿಂದಂ . . . ಶೀವಿದ ಸಿಬಿಗೆಯೊಳ್ (ಆದಿಪು. ೧೪–೬೦ ವ); ಮಂದ್ರತಾರಗೀತಿಯ ಪವಣೊಪ್ಪೆ ರಾಜಮಹಿಷೀಸಭೆಯೊಳ್ ಕಡುಜಾಣೆಯುಂ ಪ್ರವೀಣೆಯುಮೆನೆ ವೀಣೆಯಂ ಪಿಡಿದಳ್ (ಶಾಂತಿಪು. ೯–೦೬೭). [ಸಂ. ರಾಜಮಹಿಷೀ]

**ರಾಜಮಾತೆ** (ನಾ). ಅರಸನ ತಾಯಿ : ರಾಮನು ಪಟ್ಟಕ್ಕೆ ಬಂದರೆ . . . ಕೌಸಲ್ಯೆ ರಾಜಮಾತೆಯಾಗುತ್ತಾಳೆ (ಜಾನಪದ. ೯೬೩) ; ರಾಜಮಾತೆಯವರ ಸಂತೋಷವಂತೂ ಹೇಳತೀರದಷ್ಟಾಗಿತ್ತು (ಶಾಂತಲಾ. ೬೯).

[ಸಂ. ರಾಜಮಾತಾ]

**ರಾಜಮಾನ** (ನಾ). ರಾಜನಿಂದ ಅಥವಾ ಸರಕಾರದಿಂದ ಅಧಿಕೃತವಾಗಿ ಗೊತ್ತುಪಡಿಸಲಾದ ಒಂದು ನಿರ್ದಿಷ್ಟ ಅಳತೆ : ಮಹಾಜನ ಪ್ರಜೆಯೂ ಸನ್ಮತದೆ ಕೊಟ್ಟದು ರಾಜಮಾನ ಅಯ್ವತ್ತು ಮತ್ತರ್ (ಶಾಸನ. IX–i, ೯೯–೭; ೬೫ಯು ೫೫) ; ಸರ್ವ ನಮಸ್ಯಮಾಗಿ ಬಿಟ್ಟ ಕರಿಯ ಕೈ ರಾಜಮಾನ ದೊಳಾಱು ಮತ್ತರ್ (ಶಾಸನ. XVIII, ೯೯–೪೭; ೧೦೧೦). [ಸಂ.]

**ರಾಜಮಾನ್ಯ** (ನಾ). ೧. ದೊರೆಯಿಂದ ಗೌರವಿಸಲ್ಪಟ್ಟವನು. ೨. ಗೌರವಾಸ್ಪದರನ್ನು ಕುರಿತು ಬರೆಯುವಾಗ ಅಥವಾ ಮಾತನಾಡುವಾಗ ಉಪಯೋಗಿಸುವ ಸಾಂಪ್ರದಾಯಿಕವಾದ ಮರ್ಯಾದೆಯ ಮಾತು : ರಾಜಮಾನ್ಯರಾಜಶ್ರೀ . . . . ಹೆಸರಿನ ಹಿಂದೆ ಜೋಡಿಸಿ ಬರೆಯುವ ಸಂಪ್ರದಾಯವುಂಟು (ಋುಂಬಯು. ೯–೬೯). ‘ರಾಜಶ್ರೀ’ ಹೋ. [ಸಂ.]

**ರಾಜಮಾರ್ಗ** (ನಾ). ೧. ದೊಡ್ಡ ರಸ್ತೆ ; ಮುಖ್ಯವಾದ ಮಾರ್ಗ ; ಹೆದ್ದಾರಿ : “ಘಂಟಾಪಥಃ, ಸಂಸರಣಂ—ಈ ೨ ರಾಜಮಾರ್ಗದ ಪೆಸರು. ೧೦೦ ಮಾರಳತೆಯ ಮಾರ್ಗವೆಂದೆಂಬರು” (ಅಭಿಧಾ. ೦೯೩) ; ಸಾರ್ವಭೌಮಂ . . . ಚಂಚತ್ಪಂಚರತ್ನತೋರಣಾಲಂಕೃತರಾಜಮಾರ್ಗದಿಂ ಬರ್ಪಾಗಳ್ (ಆದಿಪು. ೦೦–೦೯ ವ) ; ಲಲಿತಕಟಕದ ರಾಜಮಾರ್ಗದೊಳುಲಿವುತಾಡುವ ಭಕ್ತ ಗಣಸಂಕುಳದ ನಡುವೆ . . . ಶವವನೀಕ್ಷಿಸಿ (ಬಸವಪು. ೩೨–೦೨). ೨. ದೇಶದ ಮುಖ್ಯಪಟ್ಟಣಗಳಿಗೆ ಹೋಗುವ ದೊಡ್ಡರಸ್ತೆ ; ಬಾಟಾಮಾರ್ಗ ; ರಾಷ್ಟ್ರೀಯ ಹೆದ್ದಾರಿ. ೩. (ಅಲಂ) ಒಳ್ಳೆಯ ದಾರಿ ; ತಕ್ಕ ಉಪಾಯ : ಜನ ತುಂಬಿಸಲಿಕ್ಕೆ ಚರುವೇ ರಾಜಮಾರ್ಗ (ಕೃದ್ಯಪಿ. ೨೦೦) ; ಶಿಸ್ತಿನ ಹೆಸರಿನಲ್ಲಿ ಅದುಮಿ ಹಿಡಿಯುವುದು ಶಿಕ್ಷಣದೃಷ್ಟಿಯಿಂದ ಅಹಿತ. ಅಷ್ಟೇ ಅಲ್ಲ, ಅಪಾಯಕಾರಿ. ಅದರ ಬದಲು ಪ್ರಕಾಶಕ್ಕೆ ಅವಕಾಶ ಕಲ್ಪಿಸುವುದೇ ರಾಜಮಾರ್ಗ (ಶಿಕ್ಷಣ. ೩೨೨). [ಸಂ.]

**ರಾಜಮಾವು** (ನಾ). ಒಂದು ಬಗೆಯ ಉತ್ತಮ ಜಾತಿಯ ಮಾವು : “ಮಹಾರಾಜಚೂತಃ, ಮಹಾರಾಜಾಮ್ರಃ—ಈ ಯೆರಡುಂ ರಾಜಮಾವು” (ಒಸಧಿ. ೦೨೨). [ರಾಜ + ಮಾವು]

**ರಾಜಮಾಷ** (ನಾ). ಒಂದು ಬಗೆಯ ದ್ವಿದಳಧಾನ್ಯ ; ಉತ್ತಮಜಾತಿಯ ಅಲಸಂದೆ : “ಅಲಸಂದೆ ರಾಜಮಾಷಂ” (ವಸ್ತುಕೋ. ೯೩–೦೬) ; ಮಸೂರಿಕಾ ಕುಲತ್ಥಮುದ್ಗಮಾಷರಾಜಮಾಷಾಢಕೀನಿಷ್ಪಾವಚಣಕಕುಸುಂಭಕಾರ್ಪಾಸಸರ್ಷ ಪಜೀರಕಧಾನ್ಯಕಾದಿವಿವಿಧಧಾನ್ಯಭೇದಂಗಳುಂ (ಆದಿಪು. ೬–೭೨ ವ). [ಸಂ.]

**ರಾಜಮುಡಿ** (ನಾ). ದೊರೆಯು ಮಾಡಿಸಿದ ಕಿರೀಟ ; ೧೬೭೩–೧೭೦೪ ರಲ್ಲಿ ಮೈಸೂರನ್ನು ಆಳಿದ ರಾಜಒಡೆಯರು ಮೇಲುಕೋಟೆಯ ಚೆಲುವರಾಯಸ್ವಾಮಿ ದೇವರಿಗೆ ಮಾಡಿಸಿಕೊಟ್ಟ ರತ್ನಖಚಿತವಾದ ಚಿನ್ನದ ಕಿರೀಟ : ಮೇಲುಕೋಟೆ ಚಲುವರಾಯಸ್ವಾಮಿಯವರಿಗೆ ಅಮೂಲ್ಯ ರತ್ನಗಳಿಂದ ನೂತನವಾಗಿ ಮಾಡಿಸಿದ ವಯಿರಮುಡಿಯಂತಿರುವ ರಾಜ ಮುಡಿ ಎಂಬ ಕಿರೀಟವನ್ನು ಸಮರ್ಪಿಸಿ... ವಿಶೇಷೋತ್ಸವಗಳಲ್ಲಿ ರಾಜಮುಡಿ ಮಾತ್ರ ಹೋಗಿ ಬರುವಂತೆಯೂ, ನಿಬಂಧನೆ ಮಾಡಿ . . . ಒಪ್ಪಿಸಿದರು (ಮಹಾಪಂ. I, ೯೦) ; ವೈರಾಮುಡೀ ಚೆಲುವ ಒಳಗೇನ ಮಾಡೀಯೊ ರಾಜಮುಡೀಯಾ ಬೆಳಕಲ್ಲಿ ಚಲುವಯ್ಯ ವಾಲೇಗೆ ವಜ್ಜೂರ ಬಿಗಿಸ್ಯಾನೆ (ಹುಟ್ಟಿಪ. ೬೯). ‘ವೈರಮುಡಿ’ ಪರಾ. [ರಾಜ + ಮುಡಿ₂]

**ರಾಜಮುದ್ರೆ** (ನಾ). ಅರಸನ ಲಾಂಛನ, - ಮೊಹರು ; ಅರಸೊತ್ತಿಗೆಯ ಗುರುತು : ಸಮಸ್ತಪ್ರಜೆಯನ್ನು ಪರಿಪಾಲಿಸುತ ಚಂದದಿಂದಿಹುದೆನುತ ರಾಜಮುದ್ರೆಯನಿತ್ತು ಬೀಳ್ಕೊಡುತ (ಸವಸೋ. ೩೯–೬೨).

[ಸಂ. ರಾಜಮುದ್ರಾ]

**ರಾಜಮೋಡಿ** (ನಾ). ಅರಸನ ಪ್ರಭಾವ, — ವರ್ಚಸ್ಸು : ಸುಮ್ಮನಿರ್ದುದು ಜನ ಭರತಚಕ್ರೇಶನ ಸೊಮ್ಮಲ್ಲವೇ ರಾಜಮೋಡಿ (ಭರತ. ೦–೬೦) ; ರಾಜ ಮೋಡಿಯಿಂದೊಡಗೂಡಿ ಅಪ್ಪಳಿಸುವ ಸುಗಂಧರಾಯನ ಗಂಭೀರಧ್ವನಿ (ಸೌಗಂಧಿ. ೬೯೬–೦೨) ; ಅಲ್ಲಿಗೆ ಪುರೋಹಿತನುಂ ಬಂದು ಅಲಂಕಾರಯುಕ್ತನಾದ ರಾಜೇಂದ್ರನ ಮುಂಗಡೆಯೊಳ್ ನಿಂತು ಸೌಂದರ್ಯಾದಿ ರಾಜಮೋಡಿ ಗಳಂ ನೋಡಿದನು (ಕುರುಕ. ೦೬೬). [ರಾಜ + ಮೋಡಿ₁]

**ರಾಜಮೋಡಿಗ** (ನಾ). ಅರಸನ ವರ್ಚಸ್ಸುಳ್ಳವನು : ಅರುಹಪೂಜೆಯೊ ಮಧುಮೆಯೊ ಅಲ್ಲವಿದು ಸ್ವಯಂವರಕೆ ಕೂಡಿದ ಕೂಟದಂತೆ ನೆರಸೊಬಗಾಗಿದೆ ಹೇಳೆಂದನಜ್ಞೆಯುವ ಪರಿಯೊಳಾ ರಾಜಮೋಡಿಗನು (ಭರತ. ೩೩. ೯೦).

[ರಾಜಮೋಡಿ + — ಗ₂]

**ರಾಜಯಕ್ಷ್ಮ** (ನಾ). ತೀವ್ರತರವಾದ ಒಂದು ಬಗೆಯ ಕ್ಷಯರೋಗ : “ರಾಜಯಕ್ಷ್ಮಾ, ಕ್ಷಯಃ, ಶೋಷಃ — ಈ ೩ ಕ್ಷಯವ್ಯಾಧಿ” (ಅಭಿಧಾ. ೬೬–೯೯೯) ; ಅಳಿಯಂ ಪೂಗಣನೆನ್ನೀ ಮಗಳೆ ಚವಳೆ ಪುತ್ರಂ ಕರು ರಾಜಯಕ್ಷ್ಮಾಕುಳನೆನ್ನೈಶ್ವರ್ಯಮುಂ ನಿರ್ಜರರೆ ಕಪರ್ದಾ (ರಾಜಶೇ. ೦–೦೦೨). [ಸಂ.]

**ರಾಜಯೋಗ** (ನಾ). ೧. [ಯೋಗ] ನಾಲ್ಕು ಬಗೆಯ ಯೋಗಗಳಲ್ಲಿ ಒಂದು ; ಹಠಯೋಗದಿಂದ ಭಿನ್ನವಾದ, ಸುಲಭವಾಗಿ ಅಭ್ಯಾಸ ಮಾಡಬಹುದಾದ ಒಂದು ಬಗೆಯ ಯೋಗ : ಅಂತರ್ಬಾಹ್ಯದ ದೃಷ್ಟಿ ಮನಸ್ಸುಗಳ ಹೊಱಹೊಮ್ಮಲೀಯದೆ . . . ನಾದಬ್ರಹ್ಮಸಾಕ್ಷಾತ್ಕಾರವಂ ಕಂಡುಕೊಳ್ಳುವುದೆ ರಾಜಯೋಗ (ಶಿವಗೀ. ೩–೦೯) ; ಮಂತ್ರಯೋಗ ಲಯಯೋಗ ಹಠಯೋಗ ರಾಜಯೋಗವೆಂದು ಯೋಗಚತುರ್ವಿಧದೊಳಗೆ ಮೊದಲು ಮಂತ್ರಯೋಗದ ಭೇದವೆಂತೆಂದೊಡೆ (ಅನುಭವ. ೨೦೨–೩೨). ೨. [ಜ್ಯೋತಿ] ಜನ್ಮಕುಂಡಲಿಯಲ್ಲಿ ರಾಜತ್ವವನ್ನು ಸೂಚಿಸುವ ಗ್ರಹಗಳ ಕೂಟ : ಉದಯಾಸಿದಾಲಯಕ್ಕುಮಚಯಾಲಯದಲ್ಲಿ ಸಮಸ್ತ ಸೌಮ್ಯರೊಂದಿದೊಡತಿಧನ್ಯನೆಂಗುಂ . . . ಇದು ಮುಖ್ಯಮೆನಿಪ್ಪುದು ರಾಜಯೋಗದೊಳ್ (ಜಾತಕ. ೦೨–೩೩). ೩. [ವೈದ್ಯಶಾ] ಅತ್ಯುತ್ತಮ ವಾದ ಔಷಧ.

**ರಾಜಯೋಗ ಪಳದ್ಯ** = (ಅತ್ಯುತ್ತಮ ಔಷಧಿಗಳಂತೆ ಉಪಯೋಗ ವಾಗುವ ಪದಾರ್ಥಗಳಿಂದ ತಯಾರಿಸಿದ) ಒಂದು ಬಗೆಯ ಮೇಲೋಗರ : ಕೊತ್ತುಂಬ್ರಿ, ಓಮ, ಸಾಸಿವೆ, ಸೈಂಧವಲವಣ, ದಾಳಿಂಬದ ಕಾಯಿ, ನೆಲ್ಲಿಕಟ್ಟು, ಶುಂಠಿ, ಬಿಡುಲವಣ ಇಷ್ಟನ್ನೂ ಸಮಭಾಗ ಚೂರ್ಣಮಾಡಿ ಇರಿಸಿಕೊಂಡು ಹಸುವಿನ ಮಜ್ಜಿಗೆಯಲ್ಲಿ ಕದಡಿ ಪಳದ್ಯ ಕಾಸಿ ಊಟಮಾಡುವಾಗ ಮೊದಲು ಪಳದ್ಯವಂ ಬಿಟ್ಟುಕೊಂಡು ಉಣ್ಣಲು ಸಪ್ತಧಾತುವಿನಿಂದ ಹುಟ್ಟಿದಂಥಾ ವಾಯು ಕಿಡುಗು . . . ಇದು ರಾಜ ಯೋಗಪಳದ್ಯ, ಸಮಸ್ತ ವ್ಯಾಧಿಗಳಿಗೆಲ್ಲಾ ಒಳ್ಳೆಯದು (ಪಾಕ್ಪ. ೯೬).

[ಸಂ.]

**ರಾಜಯೋಗಿ** (ನಾ). ರಾಜಯೋಗವನ್ನು ಅಭ್ಯಾಸ ಮಾಡುವವನು : ಆ ತಾರಕಬ್ರಹ್ಮವನಭ್ಯಾಸಂಗೈವಾತನೆ ರಾಜಯೋಗಿ ನೋಡಾ (ಅನುಭವ. ೨೨೯–೬೬) ; ಇಲ್ಲಿರುವ ಯೋಗಿಗಳೆಂಬ ಮಾತಿಗೆ ರಾಜಯೋಗಿಗಳೆಂದೋ

ಅಥವಾ ಜ್ಞಾನಯೋಗಿಗಳೆಂದೋ ಅರ್ಥ (ಅವ್ಯಕ. ೦-೨ ಟೀಕು).
[ಸಂ. ರಾಜಯೋಗಿನ್]

**ರಾಜಯೋಗ್ಯ** (ನಾ). ದೊರೆಗೆ ಉಚಿತವಾದುದು; ಅರಸನಿಗೆ ಯೋಗ್ಯವಾದುದು, ತಕ್ಕುದು: ಅರೆಯಿಂಗಿ ಕಾದ ಹಾಲಂ ಮಾದಲದ ಹಣ್ಣನೆರಡಾಗಿ ಕೊಯ್ದು ಕುಸುರೆಯ ತೆಗೆದವಕೆ ತುಂಬಿ . . . ಮೆಣಸಿನ ಬಿಳಿಯ ಬೇಳೆಯಂ ಹಾಕಿದೋಗರ ರಾಜಯೋಗ್ಯ ಸೌಗಂಧಿಕಾಸಹಿತ ರುಚಿರೋಗರವೆನಿಸಿಕೊಂಬುದು (ಸೂಶಾ. ೩-೨೨) ; ಪಾಂಡುವಿಗೂ ಮಾದ್ರಿಗೂ ರಾಜಯೋಗ್ಯವಾದ ರೀತಿಯಲ್ಲಿ ಉತ್ತರಕ್ರಿಯೆಗಳು ನಡೆದುವು (ವಚಭಾ. ೦೫).
[ಸಂ.]

**ರಾಜಯ್ಯ** (ನಾ). ಒಬ್ಬಾತನ ಹೆಸರು : ಶ್ರೀರಾಜಯ್ಯಂ ಬರೆದಂ (ಎಕ. XI, ದಾವಣ. ೧೦೯-೦೯ ; 992). [ರಾಜ + ಅಯ್ಯ$_{1}$]

**ರಾಜರಸ್ತೆ** (ನಾ). = ರಾಜಮಾರ್ಗ ೧ : ಅವನ ಮನೆಯ ಮುಂದಿನ ರಾಜರಸ್ತೆಯು ಹೊತ್ತಾರೆಯ ತಂಗಾಳಿಯ ತಂಪಿನಿಂದ ಮರವಟ್ಟು ಹೋಗಿತ್ತು (ಮಡಿಸ. ೧) ; ವಾಹನಗಳಿಗೆ ಹೋಗಲು, ಬರಲು, ಹಾಗೇ ಜನರಿಗೆ ಬೇರೆ ಕಾಲ್ದಾರಿಗಳಿರುವ ಭವ್ಯವಾದ ರಾಜರಸ್ತೆ (ವಾಕ್ಸ್ವ. ೫೯).
[ರಾಜ + ರಸ್ತೆ]

**ರಾಜರಹಸ್ಯ** (ನಾ). ಅರಸನಿಗೆ ಅಥವಾ ರಾಜ್ಯಾಡಳಿತಕ್ಕೆ ಸಂಬಂಧಿಸಿದ ರಹಸ್ಯ : ಅರಸೊತ್ತಿಗೆಯ ಗುಟ್ಟು : ತನ್ನ ರಾಜರಹಸ್ಯವನ್ನು ತಿಳಿಯಬೇಕಾದ ಪ್ರಸಂಗವೂ ಆತನಿಗೆ ಬರದೆ ಹೋಗುವುದಿಲ್ಲ (ಐತ್ರ. XXX. ೩೬೮೯). [ಸಂ.]

**ರಾಜರಾಜ** (ನಾ). ೧. ಅರಸರಲ್ಲಿ ಶ್ರೇಷ್ಠನಾದವನು ; ಸಾಮ್ರಾಟ ; ಚಕ್ರವರ್ತಿ : ಆ ಮುನಿರಾಜಂ ಕರ್ಮಂಗಳಂ ಗಾಳಿಸಿದಂ ಈ ರಾಜರಾಜಂ ಷಟ್ಖಂಡಮಂಡಲಮಂ ಬಾಯ್ಕೇಳಿಸಿದಂ (ಆದಿಪು. ೬-೨೯ ವ) ; ರಾಜರಾಜಂ ನದೀತನೂಜನಂ ಮಾಣಿಸಿ . . . ನಿಜಾಗಮನವೃತ್ತಾಂತಮಂ ಸಮರಪರಿಚ್ಛೇದಮುಮನಱಿಪಿದೊಡೆ (ಗದಾಯು. ೫-೪೪ ವ). ೨. ಕುಬೇರ : "ಐಳಬಿಳಃ . . . ರಾಜರಾಜಃ, ಧನೀ, ಪುಣ್ಯಜನೇಶ್ವರಃ— ಈ ೧೭ ಕುಬೇರನ ಪೆಸರ್" (ಹಗಾಯು. ೦೯-೭೯); ರಾಜರಾಜಸುಮಿತ್ರ ಭಾಸ್ಕರರಾಜ ಪಾವಕನೇತ್ರ ಸುಮನಸರಾಜಸಂಸ್ತುತಪಾದ (ಶಂಕರಾ. ೦೫-೯೫). ೧, ೨ : ಅರಿರಾಯಗಿರಿವಜ್ರದಂಡನಘವನಕಾಲಸರಣ . . . ರಾಜರಾಜಂ ಮದೀಶಂ (ಭಾವತಂ. ೩-೩೫). ೩. ಚಂದ್ರ. ೧, ೨, ೩ : ಅರಿಕಾಮಧ್ವಂಸಿ ನಾಗಮೃಜಮಯಕಟಕಂ ರಾಜರಾಜಪ್ರತಿಷ್ಠಾನಿರತಂ . . . ರಕ್ಷಿಸುಗೆ ವಸುಧೆಯಂ ಯುದ್ಧರಂಗತ್ರಿಣೇತ್ರಂ (ಚಗಂ. ೦-೩). [ಸಂ.]

**ರಾಜರ್ಷಿ** (ನಾ). = ರಾಜಋಷಿ : ಬ್ರಹ್ಮಋಷಿಯಾದಡೊಳಗು ನಿರ್ಮಳವಪ್ಪುದಯ್ಯ ನೀಂ ರಾಜರ್ಷಿ ಕೋಪಿಸದೆ ಘಟ್ಟಿಸದೆ ಕೆಡೆನುಡಿಯದೆ ನಿಲಲೆಂತು ಬಲ್ಲೆ (ಹಕಾ. ೨-೩೨) : ರಾಜರ್ಷಿಯೂ ದೀರ್ಘದರ್ಶಿಯೂ ಸಮದರ್ಶಿ ತಾಂ . . . ಸಮಬುದ್ಧಿಯಿಂ ದರ್ಪದಿಂ ಪಾಲಿಸಿರ್ದನು ತನ್ನ ರಾಜ್ಯಮಂ (ಶ್ರೀರಾಮಾ. ೭-೦೭೯). [ಸಂ.]

**ರಾಜಲೀಲೆ** (ನಾ). ೧. ಅರಸನ ವಿಲಾಸ : ಅಂತು ನಿಜರಾಜಲೀಲೆಯಂತೆ ಜಲಕ್ರೀಡಾದ ರಾಜಲೀಲೆಯಂ ಸವಯೋವಯಸ್ಸ ರಾಜಲೋಕಪರಿವೃತಂ . . . ಅವಲೋಕಿಸುತ್ತುಮಿರ್ಪಲ್ಲಿ (ಚಿಕ್ಕ. ೦೩-೨೯ ವ). ೨. ಚಂದ್ರನ ವಿಲಾಸ ; ಬೆಳುದಿಂಗಳು. ೧, ೨ : ಸಮುಚ್ಛ್ರಿತಾನೇಕಮೇಘಡಂಬರಚಾರುತಾವಳಂಬಿಯಾಗಿಯುಂ ಪ್ರಕಟೀಕೃತರಾಜಲೀಲೋದಯಮಲ್ತು (ಚಂದ್ರಪ್ರ. ೯-೮೨ ವ) [ಸಂ. ರಾಜಲೀಲಾ]

**ರಾಜವಂಶ** (ನಾ). ೧. ಅರಸುಮನೆತನ ; ಅರಸುಕುಲ : ಆಂಧ್ರಭೃತ್ಯವೆಂಬ ರಾಜವಂಶವೊಂದು ಇತ್ತು (ದ್ರಾಪಿಟಿ. ೦೨೩). ೨. ಶ್ರೇಷ್ಠವಾದ ಬಿದಿರು ; ಒಳ್ಳೆಯ ಬಿದಿರು. ೧, ೨ : ಜಿತಧಾತ್ರೀಚಕ್ರಚಕ್ರಾಧಿಪನೃಪವರಬಲ್ಲಾಳ ಕೇಳ್ ನಿನ್ನೊಳಾಂತುದ್ಧತವೀರಾರಾತಿಯೂಥಂ ವಿಗತವಿಭವಮಾಗಿರ್ದಡಂ ರಕ್ಷಿಕುಂ ವಿಶ್ರುತನಾನಾವಾಹಿನೀಸಂಕುಲಪರಿಗತಶೋಭಾನುಕೂಲ್ಯಂ ಸದಾಸೇವಿತರಾಜದ್ರಾಜವಂಶಂ ಸಕಲಕವಿನಿಕಾಯಸ್ವನಾಕೀರ್ಣಕರ್ಣಂ (ಎಕ. VIII, ಸೊರಬ. ೦೯೦-೯ ; 1098); ಅತ್ಯುದ್ಧತರಾಜವಂಶವನಮಂ ನಿರ್ಮೂಲಿಸಲ್ ಪೋಪೆಂ (ಭುಕ್ಕ. ೫-೩). [ಸಂ.]

**ರಾಜವಂಶೀಯ** (ನಾ). ಅರಸುವಂಶಕ್ಕೆ ಸೇರಿದ ವ್ಯಕ್ತಿ ; ಅರಸುಮನೆತನದಲ್ಲಿ ಹುಟ್ಟಿದವನು : ಪಲ್ಲವರು ಎಲ್ಲಾ ದೃಷ್ಟಿಯಿಂದಲೂ ದಕ್ಷಿಣಭಾರತದ ರಾಜವಂಶೀಯರೆಂಬುದರಲ್ಲಿ ಸಂಶಯ ಕಾಣದು (ಪೊಳಂಬ. ೦೩).
[ಸಂ.]

**ರಾಜವಂಶ್ಯ** (ನಾ). = ರಾಜವಂಶೀಯ : "ರಾಜಬೀಜೀ, ರಾಜವಂಶ್ಯಃ — ೨ ರಾಜವಂಶದಲ್ಲಿ ಹುಟ್ಟಿದವನ ಹೆಸರುಗಳು, ರಾಜಪೆಂಡಿ, ಅರಸುಪೆಂಡಿ" (ಸಿದ್ಧಾಂತಿ. ೨೦೨). [ಸಂ.]

**ರಾಜವಟ** 'ರಾಜವಟ್ಟ' ನೋ.

**ರಾಜವಟ್ಟ**, ರಾಜವಟ (ನಾ). ರಾಜಕಾರ್ಯಗಳಲ್ಲಿ ಒಂದಾದ ಸಂಧಾನಕಾರ್ಯ : ರಾಯಭಾರ : ಕಟ್ಟಾಣಿಮುತ್ತ ಸೇರಿಪೊಲು ದೇಸಿಯ ರಾಜವಟ್ಟದ ಸವಿನುಡಿಗಳನ್ನು ಸೃಷ್ಟೀಶ್ವರಗೆ ಬಿನ್ನೈಸುತ (ಕಂಪ. ೯-೩೭); ಆತನ ಸಮೀಪಕ್ಕೆ ಕುಲೀನನಾಗಿಯೂ . . . ಪರಿಶುದ್ಧನಾಗಿಯೂ ಇರುವ ಒಬ್ಬನನ್ನು ರಾಜವಟ್ಟಕ್ಕೆ ಕಳುಹಿಸಬೇಕೆಂದು ನುಡಿಯಲು (ಕೃವಾಕ. ೭). **ರಾಜವಟ** : ಕಣ್ಣೂರ ಬೀಬಿ ಕಡೆ ನಾಲಕ್ಕುಸಾವಿರ ಮಾಪಿಳ್ಳೆರು ಸಹ . . . ರಾಜವಟ ನಡೆಸಿವಲ್ಲಿ (ರಾಜೇಂದ್ರ. ೬೩). [<ಸಂ. ರಾಜವೃತ್ತ]

**ರಾಜವತಿ** (ನಾ). ಹೆಸರಿಗೆ ಮಾತ್ರ ರಾಜನನ್ನು ಪಡೆದಿರುವ ಭೂಮಿ : ರಾಜವತಿಯಕ್ಕುಮಲ್ಲದೆ ರಾಜನ್ವತಿಯಾಗದಲ್ತೆ ಧರೆ ಮತ್ತೊರ್ವಂ ತೇಜಸ್ವಿ ಪೊಡರ್ಪೊಡದಱಿಂ ರಾಜನ್ವತಿ ಮಾಡು ಧರೆಯಂ ಧರಣೀಪತೀ (ಆದಿಪು. ೦೯-೨೦): ರಾಜವತಿಯಾಯ್ತು ರಿಪುವಹಿ ರಾಜನ್ವತಿಯಾಯ್ತು ತನ್ನ ಧರೆ (ಶಾಂತಿಪು. ೦೦-೦೦೨). 'ರಾಜನ್ವತಿ' ಪರಾ. [ಸಂ. ರಾಜವತೀ]

**ರಾಜವಶ್ಯ** (ನಾ). ೧. ಒಂದು ಬಗೆಯ ವಶೀಕರಣವಿದ್ಯೆ: (ಮಂತ್ರದಿಂದ) ಅರಸನನ್ನು ವಶಪಡಿಸಿಕೊಳ್ಳುವಿಕೆ ; ಅರಸನನ್ನು ಅಧೀನಮಾಡಿಕೊಳ್ಳುವಿಕೆ: (೬). ೩. (ಮಂತ್ರಕ್ಕೆ) ದೊರೆಯು ವಶವಾಗುವಿಕೆ ; ಅರಸನು ಅಧೀನವಾಗುವಿಕೆ : ಈ ಮಂತ್ರದಿಂ ಉತ್ತರಾಣಿಯ ಕಡ್ಡಿಯ ೨೧ ಸಾರಿ ಮಂತ್ರಿಸಿ ದಂತಧಾವನಮಾಡಿಕೊಳ್ಳಿ ರಾಜವಶ್ಯ (ವಿಷ್ಯಪಿ. ೨೦೦); ಕುಂಕುಮ ಶ್ರೀಗಂಧ. ಕರ್ಪೂರ ಇವಂ ಹಸುವಿನ ಹಾಲಿನಲ್ಲಿ ತೇದು ತಿಲಕವಿಡೆ ರಾಜವಶ್ಯ (ವಿಷ್ಯಪಿ. ೨೦೩). [ಸಂ.]

**ರಾಜವಸು** (ನಾ). ಚಂದ್ರನ ಬೆಳಕು,–ಕಾಂತಿ : ನಿಜಕರದಿಂದೆ ರಾಜವಸುವೆಲ್ಲಮನೊಯ್ಯನೆ ಕಳ್ದು ನೀಲನೀರಜನಿಯ ಬಾಯ ಮುದ್ರಿಸಿ ಭಿಸುಣ್ಣಿಡೆವೃಪ್ಪಳಿಸುತ್ತೆ (ರಾಜಶೇ. ೨೦-೨೦). [ಸಂ.]

**ರಾಜವಾಡೆ** (ನಾ). ಅರಸರು ಶ್ರೀಮಂತರು ವಾಸಿಸುವ ಭವ್ಯವಾದ ಗೃಹ: ಅರಮನೆ: ಪ್ರಾಸಾದ: ❡ ವಿಶೇಷವಾಗಿ ಮರಾಠಿಯ ಪೇಶ್ವೆಗಳು ವಾಸಿಸುತ್ತಿದ್ದ ಭವನಗಳಿಗೆ ಈ ಹೆಸರು ಬಳಕೆಯಾಗಿದೆ : ರಾಜವಾಡೆಯವರು ಮಾತ್ರ ಉಡಲು ಯೋಗ್ಯವಾದ ಚೀನಾಂಬರವನ್ನು ನೋಡುತ್ತ ಮೇಲಕ್ಕೆತ್ತಿದಾಗ ಕೆಳಗೆ ಒಂದು ಓಲೆ ಕಂಡಿತು (ಶಾಂತಲಾ. ೨೬); ಒಳಭಾಗವು ರಾಜವಾಡೆಯಂತೆ ಒಳ್ಳೇ ಭವ್ಯವಾಗಿದ್ದಿತು (ಅಂಬಿಕೆ. ೨೯).
ರಾಜ + ವಾಡೆ$_{2}$ (<ಬಾಡ)]

**ರಾಜವಾಹನ** (ನಾ). ಅರಸನ ಕುದುರೆ; ಪಟ್ಟದ ಕುದುರೆ : "ಪಂಚಪಲ್ಲವದ ವಾಜಿಯೆ ರಾಜವಾಹನಂ" (ಶಬ್ದಮಂ. ೪೨). [ಸಂ.]

**ರಾಜವಾಹ್ಯ** (ನಾ). ಅರಸನ ಆನೆ ; ಪಟ್ಟದ ಆನೆ: "ಔಪವಾಹ್ಯಃ, ರಾಜವಾಹ್ಯಃ –ಈ ೨ ಅರಸರೇಱುವ ಆನೆ" (ಹಲಾಯು. ೩೯-೭೦). [ಸಂ.]

**ರಾಜವಾಳೆ,** ರಾಜಬಾಳೆ (ನಾ). ಒಂದು ಬಗೆಯ ಉತ್ತಮಜಾತಿಯ ಬಾಳೆ : ರಸವಾಳೆ ಪುಟವಾಳೆ ರಾಜವಾಳೆ ಸಕ್ಕರೆಯೆಸೆವಾ ದೇವಾಳೆ . . . ಮೆಱೆದುವರ್ತಿಯುಂ (ಶಂಖ. ೩-೯೭). **ರಾಜಬಾಳೆ :** ಬಾಳೆಯಲ್ಲಿ ಅನೇಕ ಜಾತಿಗಳಿವೆ. ರಸಬಾಳೆ, ಚಂದ್ರಬಾಳೆ, ರಾಜಬಾಳೆ (ವೃಷು. ೩೭).
[ರಾಜ+ಬಾಳೆ₁ (<ಬಾಟಿ³) ]

**ರಾಜವಿಡ್ವರ** (ನಾ). ಅರಸನಿಂದ ಪ್ರಜೆಗಳಿಗೆ ಉಂಟಾಗುವ ಉಪದ್ರವ,–ಹಿಂಸೆ: (*). [ರಾಜ + ವಿಡ್ವರ]

**ರಾಜವಿದ್ಯೆ** (ನಾ). ಅರಸನಿಗೆ ಉಚಿತವಾದ ವಿದ್ಯೆ : ನೀನಾದಿರಾಜನ್ಯೆ ನಿನಗಾ ನಾಲ್ಕುಂ ರಾಜವಿದ್ಯೆ ಪುಟ್ಟಿದುವು (ಆದಿಪು. ೦೯-೨೦); ಅಮಲಸ್ವಭಾವನೊಳ್ ನಿತ್ಯಮಹತ್ವನೊಳತುಳಭೂಜವಿದ್ಯೆ [ಶಾಕಾಂ. ದ್ಯ]ಗಳನಿತುಂ ಕ್ರಮದೆ ಸಮನಿಸಿದುವಾತನೊಳಮಳಿನತಾರಾಳಿ ಗಗನದೊಳ್ ನೆಲಸುವವೊಲ್ (ಚಂದ್ರಪ್ರ. ೯-೩). [ಸಂ. ರಾಜವಿದ್ಯಾ]

**ರಾಜವೀಥಿ** (ನಾ). ದೊಡ್ಡ ರಸ್ತೆ; ರಾಜಮಾರ್ಗ: ವಿಶಾಲವೂ ಸುಂದರವೂ ಆದ ರಾಜವೀಥಿಗಳಲ್ಲಿ . . . ಆ ಬಂಡಿ ಮೆರವಣಿಗೆಯ ಗೃಹಾಭಿಮುಖವಾಗಿ ಸಾಗಿತ್ತು (ಭುವಕು. ೩೩೭). [ಸಂ.]

**ರಾಜವೀಧಿ** (ನಾ). =ರಾಜವೀಥಿ : ಅನೇಕವಿದ್ಯಾಧರರಾಜರಾಜದ್ರಾಜವೀಧೀವಿಸ್ತೀರ್ಣಮುಮಾಗಿ (ಆದಿಪು. ೦-೭೦ ವ). [ರಾಜ + ವೀಧಿ]

**ರಾಜವೃಕ್ಷ** (ನಾ). ಒಂದು ಬಗೆಯ ಸಸ್ಯ ; ಕಕ್ಕೆಯ ಗಿಡ : "ಆರಗ್ವಧಃ . . .ರಾಜವೃಕ್ಷಃ . . . ಕೃತಮಾಲಃ, ಸುವರ್ಣಕಃ_ಉ ಕಕ್ಕೇಗಿಡದ ಹೆಸರು" (ನಿಘಂಟು. ೦೦೭); ರಾಜವೃಕ್ಷದ ಸಮೀಪದೊಳಗೆರಲೆಗಾಂ ತುಳಿದ ನೆಲದ ಹಾವು ಇದೆ (ಶಾಶಕಂ. ೩-೦೦). [ಸಂ.]

**ರಾಜವೃತ್ತ** (ನಾ). ೧. ಅರಸನ ನಡವಳಿಕೆ,_ ವ್ಯವಹಾರ : ನ್ಯಾಯಾರ್ಜಿತವಿತ್ತಂ ಧರ್ಮಾಯತ್ತಮೆನಿಪ್ಪ ರಾಜವೃತ್ತಂ ತನಗೇಕಾಯತ್ತಮಾಗೆ ಧರೆಯಂ ಜೀಯೆನಿಸಿದನಿಂತುದಾತ್ತಚರಿತರುಮೊಳರೇ (ಶಂಖವು. ೨-೭೦). ೨. ಚಂದ್ರಬಿಂಬದ (ವೃದ್ಧಿ, ಕ್ಷಯಗಳ) ಸ್ವಭಾವ. ೧, ೨ : ವಸುವಂ ಸನ್ಮಾರ್ಗದೊಳಾರ್ಜಿಸುವಂ ವರ್ಧಿಸುವನೆಯ್ದೆ ರಕ್ಷಿಸದೀವಂ ನಿಸದಂ ವಿಬುಧರ್ಗದು ಭಾವಿಸೆ ಚಿತ್ರಂ ರಾಜವೃತ್ತಮಾಯ್ತುನ್ಯೂನಂ (ಧರ್ಮಾಪು. ೩-೯). [ಸಂ.]

**ರಾಜವೃಷಭ** (ನಾ). ಅರಸರಲ್ಲಿ ಶ್ರೇಷ್ಠನಾದವನು : ಉತ್ತಮನಾದ ದೊರೆ : ಮುನಿವೃಷಭಂಗೆ ಕೇವಲಜ್ಞಾನೋತ್ಪತ್ತಿಯಾದುದೀ ರಾಜವೃಷಭಂಗೆ ಸಕಲಸಾಮ್ರಾಜ್ಯಸಂಪತ್ತಿಯಾದುದು (ಆದಿಪು. ೬_೨೯ ವ). [ಸಂ.]

**ರಾಜವೈದ್ಯ** (ನಾ). ೧. ಅರಸನಿಗೆ ಚಿಕಿತ್ಸೆಮಾಡುವವನು : ಅರಮನೆಯ ವೈದ್ಯ : ರಾಜವೈದ್ಯನು ತಲೆತಗ್ಗಿಸಿ ನಿಂತಿದ್ದನು (ಮುಷಿ. ೦೮). ೨. ಅತ್ಯುತ್ತಮವಾದ ವೈದ್ಯವೃತ್ತಿ : (*). [ಸಂ.]

**ರಾಜವೊಟಲ್** (ನಾ). ಒಂದು ಊರಿನ ಹೆಸರು : ಮಾಗಟಿನಾಡ ರಾಜವೊಟಲ ಬೀಡಿನೊಳ್ ಸುಖಸಂಕಥಾವಿನೋದದೊಳ್ ಪ್ರಿಥುವೀರಾಜ್ಯಂಗೆಯ್ಯುತ್ತಮಿರೆ (ಎಕ. IV, ನಾಗಮಂ. ೫೦-೬; 972). [ರಾಜ + ವೊಟಲ್]

**ರಾಜಶಾಸನ** (ನಾ). ೧. ಅರಸನ ಅಪ್ಪಣೆ,– ಆಜ್ಞೆ : ಬಾದಂದರವರು ನಗರಕ್ಕೆ ದಯಮಾಡಿಸಿದ ಪಟ್ಟಮೊದಲನೆಯ ರಾಜಶಾಸನವು ಒಬ್ಬ ಮುಸಲ್ಮಾನ್‌ಸರದಾರನ ವಧೆಯೆಂಬುದು ದೊಡ್ಡ ಅಪಖ್ಯಾತಿ (ದೌಲತ್. ೭೬). ೨. ರಾಜ್ಯದ ಆಡಳಿತ,– ವ್ಯವಹಾರ : 'ರಾಜಶಾಸನಪಟು' ಪದ. [ಸಂ.]

**ರಾಜಶಾಸನಪಟು** (ನಾ). ರಾಜ್ಯದ ಆಡಳಿತ ಅಥವಾ ವ್ಯವಹಾರವನ್ನು ಚೆನ್ನಾಗಿ ತಿಳಿದುಕೊಂಡವನು ; ರಾಜನೀತಿಜ್ಞ : ಆಕೆ ಅನೇಕಾನೇಕ ನಾಮಾಂಕಿತರಾಜನೀತಿಜ್ಞರನ್ನೂ ಮುತ್ಸದ್ದಿಗಳನ್ನೂ ರಾಜಶಾಸನಪಟುಗಳನ್ನೂ ಹೆತ್ತಿದ್ದಾಳೆ (ಪುಹಾಪೋ. ೦೬೯). [ಸಂ.]

**ರಾಜಶುಕ** (ನಾ). ಅರಗಿಳಿ ; ರಾಜಕೀರ : ಮಿಡಿಯುಂ ಕರ್ದಂಕಿ ನಲಿದಾಡುವ ರಾಜಶುಕಂ . . . ಇಲ್ಲದುದಿಲ್ಲ ನಂದನಂ (ಜಗಂ. ೨-೧೦); ವರಕಂಠೀರವಮಧ್ಯೆ . . . ಸುಕೇಶಿ ರಾಜಶುಕಸಲ್ಲಾಪಾಂಗಶೃಂಗಾರೆ (ಹರಿಶ್ಚ. ೨-೭೨). [ಸಂ.]

**ರಾಜಶೂನ್ಯ** (ನಾ). ೧. (ರಾಜ್ಯದಲ್ಲಿ) ಅರಸನಿಲ್ಲದಿರುವುದು; ಅರಾಜಕತೆ. ೨. (ಆಕಾಶದಲ್ಲಿ) ಚಂದ್ರನಿಲ್ಲದಿರುವುದು ; ಕಗ್ಗತ್ತಲು. ೧, ೨ : ಅದು ಸಲೆ ರಾಜಶೂನ್ಯಮುರುರಾಜವಿಭಾಸಿಯೆ ನಾಂ ದ್ವಿಜಿಹ್ವಸಂಪದಮದು ಸಜ್ಜನಕ್ಕೆ ಶರಣಾಂ . . . ಎನೆ ಭೋಗವತೀಪುರಮೆನ್ನನೆಂತಃ ಪೋಲ್ವುದು ಚಿರಮೆಂದಧಃಕರಿಸುವಂತಿದೆ ಮೇಲೆನಿಸಿರ್ಪುದಾ ಪುರಂ (ಧರ್ಮಾಪು. ೯-೩೨). [ಸಂ.]

**ರಾಜಶೂಲೆ** (ನಾ). [ಅಶ್ವಶಾ] ಕುದುರೆಗೆ ಬರುವ ಒಂದು ಬಗೆಯ ತೀವ್ರತರವಾದ ರೋಗ : ತೋರಿದುವಾಗಿರೆ ನಡುಗಳ್ ನೇರಿದು ವಪ್ಪೆರಡು ರೇಖೆಗಳ್ ತಾಂ ಮೊದಲಾಕಾರದೊಳಿರೆ ನವವರುಷವಾ್ರರಂಭದೆ ವಾಜಿ ರಾಜಶೂಲೆಗೆ ಬೀಡುಂ (ಅಶ್ವಶಾ. ೩-೦೨). [ಸಂ. ರಾಜಶೂಲಾ]

**ರಾಜಶೇಖರ** (ನಾ). ೧. ಅರಸರಲ್ಲಿ ಶ್ರೇಷ್ಠನಾದವನು, _ಮುಖ್ಯನಾದವನು : ನಿಯೋಗಿಸಮಸ್ತರನು ಬೀಳ್ಕೊಟ್ಟು ವಿನಿಯೋಗಸ್ತರೋಲಗದಲ್ಲಿ ಎಸೆದನು ರಾಜಶೇಖರನು (ರಾಜ್ಞಪು. ೯೦-೨೭). ೨. (ಮುಡಿಯಲ್ಲಿ) ಚಂದ್ರನನ್ನು ಧರಿಸಿದವನು ; ಸೋಮಶೇಖರ ; ಶಿವ : ರಾಜಶೇಖರ ದಿವಿಜವಂದಿತಪಾದ . . . ಭೋಗಿರಾಜಭೂಷಣ . . . ಸಲಹೆಂದು ಹರಿ ಪೊಗಳ್ದನು (ಚಂಪ್ರ. ೦೬-೫೦) ; ಆ ಸಮಯದೊಳಾ ರಾಜಶೇಖರಂ ರಾಜಶೇಖರಪೂಜೆಗೆಯ್ದು ಯಥೋಚಿತಪ್ರಾತರಾಚಾರಮಂ ನಿರ್ವರ್ತಿಸಿ (ರಾಜಶೇ. ೬-೩೦ ವ). [ಸಂ.]

**ರಾಜಶ್ರಾವಿತ** (ನಾ). ಅರಸನಿಗೆ ತಿಳಿಸಿದುದು ; ದೊರೆಯ ಗಮನಕ್ಕೆ ತಂದುದು : ಅಮೋಘವರ್ಷದೇವರೊಳ್ ರಾಜಶ್ರಾವಿತಂ ಮಾಡಿ ತದನುಮತದಿಂದಿರ್ವ್ವರುಂ (ಎಕ. VI, ೦೦೯-೨೯ : 866); ರಾಜಶ್ರಾವಿತ[ಂಗಳ್ವೈ] ಶಾಖಮಾಸ ಶುಕ್ಲಪಕ್ಷಪುಣ್ಣಮೆ ದಿನ (ಕೌಇಶ. XI-i, ೦೩-೯ ; 896). [ಸಂ.]

**ರಾಜಶ್ರೀ** (ನಾ). ೧. ಅರಸನ ಐಶ್ವರ್ಯ. ೨. = ರಾಜಮಾನ್ಯ ೨ : ಕನ್ನಡದಲ್ಲಿ . . . ರಾಜಮಾನ್ಯ, ರಾಜಶ್ರೀ . . . ಹೆಸರಿನ ಹಿಂದೆ ಜೋಡಿಸಿ ಬರೆಯುವ ಸಂಪ್ರದಾಯವುಂಟು (ಮುಂಬಯ. ೯-೬೯). [ಸಂ.]

**ರಾಜಶ್ರೇಷ್ಠಿ** (ನಾ). ಪ್ರಧಾನನಾದ ಸೆಟ್ಟಿ : ವರ್ತಕಶ್ರೇಣಿಯ ಮುಖಂಡ : ಆ ಪೊಬಲೊಳ್ ರಾಜಶ್ರೇಷ್ಠಿ ಸಾಗರಸೇನಂಗಮಮೃತಮತಿಗಂ ಪುಟ್ಟಿದ ಪತ್ತನುಂ ನಂದಿಷೇಣನುಂ ಎಂಬರ್ . . . ಬರ್ವೆಡೆಯೊಳ್ (ಶಾಂತಿಪು. ೯-೯೦ ವ) ; ಸೆಟ್ಟಿವಟ್ಟಮಂ ಕಟ್ಟಿಸಿಕೊಂಡಲ್ಲಿಯೆ ರಾಜಶ್ರೇಷ್ಠಿಯಾಗಿ ಸುಖದೊಳಿರ್ಪನ್ನೆಗಂ (ಜೀವಸಂ. ೫೯-೦೮).
[ಸಂ. ರಾಜಶ್ರೇಷ್ಠಿನ್]

**ರಾಜಸ** (ಗು). ೧. ರಜೋಗುಣಕ್ಕೆ ಸಂಬಂಧಿಸಿದ ; ಕಾಮಕ್ರೋಧಗಳಿಂದ ಕೂಡಿದ : ಆರಸ ಕೇಳ್ವೆ ರಾಜಸಾಂತಃಕರಣವದು ಕಾಮ್ಯಕಸಿದ್ಧಿಸ್ಫುರಣೆಗೋಸುಗ ತಪವಲೇ ರಾಜ್ಯಾಭಿಲಾಷೆಯುಂ (ಶುಬ್ರಾಂ. ೩-೯) ; ಇಂದ್ರಿಯಗಳಿಗೆ ಯಾವುದು ಉಪಾದಾನಕಾರಣವೋ ಅದು ಸಾತ್ವಿಕಾಹಂಕಾರವೆಂದೂ . . . ಈ ಯೆರಡಕ್ಕೂ ಯಾವುದು ಅನುಗ್ರಾಹಕವೋ ಅದು ರಾಜಸಾಹಂಕಾರವೆಂದೂ ತಿಳಿಯಬಹುದು (ತತ್ತ್ವಕು. ೬). (ನಾ). ೨. ಕಾಮಕ್ರೋಧಗಳಿಂದ ಕೂಡಿದ ಗುಣ ; ರಜೋಗುಣ : ರಾಜಸ ಸಾತ್ವಿಕಮೆಂಬೀ ರಾಜಗುಣಂ ವಿಷವಿಷಾಪಹಾರಂಗಳವೊಲ್ ರಾಜಿಸೆ ವಿಷಮೋರಗನಂತೀ ಜಗತೀತಳಮನಾಂತನವನೀಕಾಂತಂ (ಜಗನ್ನಾ. ೩-೬) ; ಮನಸ್ಸನ್ನು ರಾಜಸಕ್ಕೆ ಒಪ್ಪಿಸಿ ಅವರು ಈ ಮೂಲಕ ನಿನ್ನನ್ನು ಶಿಕ್ಷಿಸುವುದಕ್ಕೆ

ಹೊರಟಿದ್ದಾರೆ (ರೂಠಕ. ೨೯೯). ೩. ರಜೋಗುಣವುಳ್ಳ ವ್ಯಕ್ತಿ : ಜೀವರಾಶಿಗಳ ದೇವಮನುಷ್ಯಾದಿ ಭೇದಗಳಿಂದ ಸಾತ್ವಿಕರು, ರಾಜಸರು, ತಾಮಸರೆಂಬ ಮೂರುವಿಧರಾಗಿ ಭಾಗಿಸಲ್ಪಟ್ಟಿರುವರು (ಹಸಾರ. ೧-೯ ವಿಶೇಷಾರ್ಥ). [ಸಂ.]

**ರಾಜಸದನ** (ನಾ). ಅರಸನ ನಿವಾಸ ; ಅರಮನೆ : "ಸೌಧಃ, ರಾಜಸದನಂ — ೨ ರಾಜಗೃಹದ ಹೆಸರು. ಅರಮನೆ, ರಾಜಯೋಗ್ಯವಾದ ಉಪ್ಪರಿಗೆ" (ಸಿದ್ಧಾಂತ. ೦೦೦); ರಾಜಸದನಸಂಸ್ಥೆಯಾಗಿಯುಂ ಶೂನ್ಯಾರಣ್ಯಸಂಸ್ಥೆಯಂತೆಯುಂ . . . ಇರ್ಪನೆಗಂ (ಚಂದ್ರಶೃ. ೩-೩೦ ವ) ; ರಾಜಸದನಕ್ಕೆ ಹೋಗುವೆನು (ಶಾಕುಂತ. ೬೬-೦೭). [ಸಂ.]

**ರಾಜಸಬುದ್ಧಿ** (ನಾ). ೧. ರಜೋಗುಣದಿಂದ ಕೂಡಿದ ಬುದ್ಧಿ. ೨. ರಜೋಗುಣದಿಂದ ಕೂಡಿದ ಬುದ್ಧಿಯುಳ್ಳವನು : ಎಮಗೆ ಜಯಮೇತಹುದು ರಾಜ್ಯಭ್ರುಮೆಯ ರಾಜಸಬುದ್ಧಿಗಳು ವಿಕ್ರಮವಿಹೀನರು ನಾವು (ಕುವ್ಯಾ.ಭೀ. ೭-೨೦). [ಸಂ.]

**ರಾಜಸಭೆ** (ನಾ). ದೊರೆಯ ಒಡ್ಡೋಲಗ ; ಅರಸನ ಆಸ್ಥಾನ : "ಆಸ್ಥಾನವೆಂಬುದು ರಾಜಸಭೆ" (ಹಲಾಯು. ೦೨೮-೯೩) ; ಅಂದು ಕೌರವನಾಯಿ ಸಭೆಯಲಿ ತಂದು ತೋಱಿದನುನ್ನತಿಯ ಬಳಿಕಿಂದು ಕೀಚಕ ಕುನ್ನಿಯೊದೆದನು ರಾಜಸಭೆಯೊಳಗೆ (ಕುವ್ಯಾ.ವಿ. ೩-೯೭). [ಸಂ. ರಾಜ್ಯಸಭಾ]

**ರಾಜಸರ್ಪ** (ನಾ). = ರಾಜಫಣಿ : "ರಾಜಸರ್ಪಃ, ಸರ್ಪಭುಕ್ — ಈ ಎರಡು ಅರವಾ(ಹಾ)ವು" (ಹಲಾಯು. ೦೦೭-೨೦). [ಸಂ.]

**ರಾಜಸರ್ಷಪ** (ನಾ). ಕರಿಯ ಸಾಸುವೆ : "ಆಸುರೀ, ರಾಜಿಕಾ, ರಾಜಸರ್ಷಪಃ — ಈ ಮೂಱು ರಾಯಸಾಸುವೆ" (ಹಲಾಯು. ೯೩-೯೩೭). [ಸಂ.]

**ರಾಜಸಿಕ** (ಗು). ೧. ರಜೋಗುಣದಿಂದ ಕೂಡಿದ : ನಮಗೆ ಚಿರಪರಿಚಿತವಾದ ಪ್ರಿಯವಾದ ಈ ರಾಜಸಿಕತುಮುಲಗಳ ನಡುವೆ ನಾವು ಮತ್ತೆ ಮೊದಲಿನಂತಾಗುತ್ತೇವೆ (ಶಂಕೀ. ೨). (ನಾ). ೨. ರಜೋಗುಣದಿಂದ ಕೂಡಿದುದು : ಎಲ್ಲ ವ್ಯಾಪಾರಗಳೂ ಈ ತ್ರಿಗುಣಕ್ರಿಯೆಗಳೇ. ಅವರಲ್ಲಿ ಹಲವು ಪ್ರಧಾನವಾಗಿ ಸಾತ್ವಿಕ, ಮತ್ತೆ ಹಲವು ಪ್ರಧಾನವಾಗಿ ರಾಜಸಿಕ ಅಥವಾ ತಾಮಸಿಕ (ಶ್ರೀಂದಕ. ೧೦೦). [ಸಂ.]

**ರಾಜಸುತ** (ನಾ). = ರಾಜಕುಮಾರ : ರಾಜಸುತಂ ಪಸಿದಂ ನೀರಡಿಸಿದೆ ನೆನಗಿವಲ್ಲದಲ್ಲಲ್ಲೆನ್ನಂ ಪಾರ್ಶ್ವಸಂ ಪಲವಂ (ಆದಿಪು. ೩-೬೮); ಇದಿರ್ಗೊಂಡು ಶ್ಲಾಘಿಸುತಾ ಭೂಪ ತನ್ನ ಪುರಕೆ ತಂದನಾ ಘನೋಜ್ಜ್ವಲರಾಜಸುತರ (ಶಠಕ. ೩೩-೯೯). [ಸಂ.]

**ರಾಜಸುತೆ** (ನಾ). = ರಾಜಕುಮಾರಿ : ರಾಜಾಂತರದಿಂದೆ ರಾಜಸುತೆಯುಂ ನಯದಿಂದವಳುಯ್ಯಲ್ (ಶಂಕರ. ೩-೩೭). [ಸಂ. ರಾಜಸುತಾ]

**ರಾಜಸೂಯ** (ನಾ). ಚಕ್ರವರ್ತಿಯು ಮಾಡುವ ಒಂದು ಬಗೆಯ ಯಾಗ : ೪ ವಾಜಪೇಯಯಜ್ಞವನ್ನು ಮಾಡಿಲ್ಲದ ರಾಜನಿಗೆ ಮಾತ್ರ ಈ ಯಜ್ಞ ಮಾಡುವ ಅಧಿಕಾರವುಂಟು. ಈ ಯಜ್ಞ ಮಾಡುವ ರಾಜನು ಸಾಮ್ರಾಟನಾಗುತ್ತಾನೆ : ಗಾಳುಗೊರವಂ ತಗುಳ್ಚಿ ಪಳಾಳಮನೇನೊಂದನಪ್ಪೊಡಂ ಗಟಿಪಿದೊಡಾ ಬೇಳು ನುಡಿಗೇಳ್ದು ಕಮ್ಮನೆ ಬೇಳಲ್ ನಿಮಗಂತು ರಾಜಸೂಯಂ ಮೊಗ್ಗೇ (ಶಂಕರ. ೬-೨೯) ; ಸ್ವರ್ಗಾಪವರ್ಗೈಕಕಾರಣವಪ್ಪಗ್ಗದ ರಾಜಸೂಯಮನೊಡರ್ಚಿಂ (ಜಗದ. ೧೬-೧೦) ; ವಿರಿಂಚಿಪ್ರಭವನನುಮತದಿಂದ ಧರಣೀವಿಭು ಮಹಾಕ್ರತು ರಾಜಸೂಯುವನೊಲಿದು ಕೈಕೊಂಡ (ಕುವ್ಯಾ.ಸ. ೧ ಸೂಚನೆ). 'ಅಶ್ವಮೇಧ' ಪರಾ. [ಸಂ.]

**ರಾಜಸೇವೆ** (ನಾ). ಅರಸನ ಸೇವೆ,_ಊಳಿಗ : ಸೆಣಸಿನಲಿ ಸಮದರ್ಶಿಗಳು ಧಾರುಣಿಪ ಪತಿಗಳು ರಾಜಸೇವಾಪ್ರಣಯಮಿಮಾಮಾಂಸಾದಿ ಮೂಢರು ನಮ್ಮ ಭಟರೆಂದ (ಕುವ್ಯಾ.ಭೀ. ೭-೦೦). [ಸಂ. ರಾಜಸೇವಾ]

**ರಾಜಸ್ವ** (ನಾ). ೧. ಅರಸನ ಆಸ್ತಿ. ೨. ರಾಜ್ಯದ ಹುಟ್ಟುವಳಿ. _ ಆದಾಯ : ಸಂಘಕ್ಕೂ ರಾಜ್ಯಗಳಿಗೂ ರಾಜಸ್ವಗಳ ಹಂಚಿಕೆ (ಭಾರಾಸ. ೦೩೨). [ಸಂ.]

**ರಾಜಸ್ವರ** (ನಾ). [ಸಂಗೀತ] ಒಂದು ರಾಗದ ಮುಖ್ಯವಾದ ಸ್ವರ; ಜೀವಸ್ವರ : ಒಂದು ರಾಗದ ಸ್ವರೂಪ ಪ್ರತ್ಯೇಕತೆ ಎತ್ತಿ ತೋರಲು ಯಾವ ಸ್ವರ ಪದೇಪದೇ ಉಪಯೋಗವಾಗುವುದೋ ಆ ಸ್ವರ, ವಾದಿಸ್ವರ . . . ವಾದಿಸ್ವರಗಳನ್ನು ರಾಜಸ್ವರಗಳೆಂದೂ ಸಂವಾದಿಸ್ವರಗಳನ್ನು ಮಂತ್ರಿಸ್ವರಗಳೆಂದೂ . . . ಕರೆಯುವ ವಾಡಿಕೆ (ಸಂಗೀತಂ. ೨೦). [ಸಂ.]

**ರಾಜಹಂಸ** (ನಾ). ೧. = ರಾಜಮರಾಲ : "ರಾಜಹಂಸಃ . . . ಕೆಂಪಾದ ಕಾಲುಗಳೂ ಮೂಗೂ ಉಳ್ಳ ಬಿಳಿಹಂಸೆ, ಅರಸಂಚೆ" (ಸಿದ್ಧಾಂತ. ೧೬೦) ; ಕುರುಕುಳಸರೋರಾಜಹಂಸನಲ್ಲಿಯ ರಾಜಹಂಸಿಗಳುಮಂ . . ಅತಿಕುತೂಹಲಂಬೆರಸು ನೋಡಿ (ಗದಾಯು. ೬-೦೩ ವ) ; ಮಹೋದ್ಧತರಾಜಹಂಸತೇಜದಿನೆಸೆದತ್ತು ರಾಜ್ಯವಿಭವಂ ಜಳದಾಗಮಚಕ್ರವರ್ತಿಯಾ (ಜಗದ. ೯-೩೩). ೨. ಅರಸರಲ್ಲಿ ಶ್ರೇಷ್ಠನಾದವನು ; ನೃಪೋತ್ತಮ : ಬಱಿಯನೆ ಬರೆ ಹಂಸೀಕುಳಮುಱಿದು ಸರೋವರಮನವಱ ಪುಟೀಲೋಳ್ ನಲಿವಂ ಸುಱಿಯಲ್ಕೆ ತಳರ್ದ ಹಂಸನನಿಱಿಪಿದನಾ ರಾಜಹಂಸನಬಳಾಳಿಯುತಂ (ಚಂದ್ರಪ್ರ. ೭-೦೯೭). ೩. ಸೂರ್ಯ. ೪. ಚಂದ್ರ. ೧, ೩, ೪ : ನಾರದನ ತೆಱದೆ ಸರದಿಂ ತಾರಾಪಥದಂತೆ ರಾಜಹಂಸಾನ್ವಿತದಿಂ ಕ್ಷೀರಾಬ್ಧಿಶಯನನುರಪ್ರವೊಲಾರಮೆಯಿಂ ತುಱುಗಿ ಪೊಱಪೊಱಲ್ ಸಾ(ಸೊ)ಗಯಿಸುಗುಂ (ಎಪ. XIV, ೨೬೦-೧೦ ; 1181). ೧, ೨, ೩, ೪ : ಜನನುತರಾಜಹಂಸನಮನಂ ಕಮಳಾವಸಥಂ ಕಳಾನಿಕೇತನನೆನಿಸಿರ್ದ . . . ಲೋಕಪಿತನೊಲ್ದು ಚತುರ್ಮುಖನೀಗೆ ರಾಗಮಂ (ಜಗದ. ೧-೨). ೨,೩,೪ : ಉರ್ವಿಯಂತೆ ನಭದಂತವಲಂಬಿತರಾಜಹಂಸವಾಮ್ರಾವಳಿಯಂತೆ ಕಾಮಿಜನದಂತೆ ಸಮುತ್ಕಳಿಕಾಕುಳಂ ಕೊಳಂ (ಪುಷ್ಪ. ೨-೩೩). [ಸಂ.]

**ರಾಜಹಂಸಿ** (ನಾ). ಶ್ರೇಷ್ಠವಾದ ಹೆಣ್ಣುಹಂಸಪಕ್ಷಿ ; ಹೆಣ್ಣಂಚೆ : ಪರಮಜಿನಜನನಿಗೊರ್ವಳ್ ಸುರವಧು ಕೊಡೆವಿಡಿದು ನಳಿನಿಯೊಡವೆಳೆದು ರಜಂಬೊರೆದು ಕೊಡೆಯೆಲೆಯ ಕೆಳಗಿರ್ದ ರಾಜಹಂಸಿಯ ವಿಳಾಸಮಂ ನೆನೆಯಿಸಿದಳ್ (ಶಾಂತಿಪು. ೯-೭೬೮) ; ಕುರುಕುಳಸರೋರಾಜಹಂಸನಲ್ಲಿಯ ರಾಜಹಂಸಿಗಳುಮಂ . . . ಅತಿಕುತೂಹಲಂಬೆರಸು ನೋಡಿ (ಗದಾಯು. ೬-೦೩ ವ). [ಸಂ. ರಾಜಹಂಸೀ]

**ರಾಜಹಂಸೆ** (ನಾ). = ರಾಜಹಂಸಿ : ಲೀಲಾಲಸಗಮನಮಂ ಗಜಗಮನೆಯುರ್ಗುಪದೇಶಂಗೆಯ್ವ ದೀವದ ರಾಜಹಂಸೆಗಳುಮಂ . . . ಕೊಟ್ಟು (ಆದಿಪು. ೯-೩೯ ವ). [ಸಂ. ರಾಜಹಂಸಾ]

**ರಾಜಹರ್ಮ್ಯ** (ನಾ). ದೊರೆಯ ನಿವಾಸ ; ಅರಮನೆ : ಈ ವಾತಾವರಣದಲ್ಲಿ ಒಮ್ಮೆ ಸುಳಿದು ಬಂದರೆ ಸಾಕು . . . ಯಾವುದೋ ಒಂದು ರಾಜಹರ್ಮ್ಯದಲ್ಲಿ – ಮಹಾದೇವಸ್ಥಾನದಲ್ಲಿ – ಸುಳಿದುಬಂದ ಭಾಸವಾಗುತ್ತದೆ (ಐಕಹ. II, ೯೩). [ಸಂ.]

**ರಾಜಹುಂಡಿ** (ನಾ). ಸರ್ಕಾರದ ಖಜಾನೆಯಿಂದ ಬರುವ ಹಣದ ಆದೇಶಪತ್ರ,— ಹುಂಡಿ : ಭಾರತಸರ್ಕಾರದಿಂದ ಸ್ವೀಕರಿಸಲಾದ ಎಲ್ಲ ರಾಜಸ್ವಗಳೂ ರಾಜಹುಂಡಿಗಳನ್ನು, ಸಾಲಗಳನ್ನು . . . ಸಂಚಿತವಾದ ಒಂದು ನಿಧಿಯಾಗಿ ಏರ್ಪಡಿಸತಕ್ಕುದು (ಭಾರಾಸ. ೦೩೦). [ರಾಜ + ಹುಂಡಿ$_1$]

**ರಾಜಹುಣ್ಣು** (ನಾ). ಒಂದು ಬಗೆಯ ಭಯಂಕರವಾದ ಹುಣ್ಣು ; ಬೆನ್ನುಫಣಿ : "ಕಟ್ಟಕುರು ; ಬೆನ್ನುಫಣಿ ; ರಾಜಹುಣ್ಣು, ನೆರಡಿರೋಗ" (Carbuncle. ಇಂಕಅ) ; ನವಾಬ್‌ಹೈದರಲ್ಲಿಖಾನರು ಬೆನ್ನಿನಲ್ಲಿ ರಾಜಹುಣ್ಣು ಎದ್ದು ಆರಕಾಡಿನಲ್ಲಿ ಮೃತರಾದರು (ರಾಜೇಂದ್ರ. ೨೮). [ರಾಜ + ಹುಣ್ಣು (<ಪುಣ್)]

**ರಾಜಾಂಗಣ** (ನಾ). ೧. ಅರಮನೆಯ ಅಂಗಳ : ವಿವಿಧಫಲಪ್ರಸೂನ ಪಲ್ಲವತತಿಯಿಂ ತೀವಿದ ರಾಜಾಂಗಣಮನಿಳಾವಂದ್ಯರ್ ಮೆಟ್ಟಲೊಲ್ಲದಲ್ಲಿಯೆ ನಿಂದರ್ (ಅಜಿ. ೦೫-೯). ೨. (ವಿಶಾಲವಾದ) ಅಂಗಳ: ಪಿಂಗಲಿ ಪೋದಗೆ ಪೊಜಸು ಬಕ್ರಂ ಗಿಡಿಗಂ ಗೂಗೆಯಾದಿಯಾದ ಖಗಂ ರಾಜಾಂಗಣ ದೊಳ್ ಚರಿಸುವೊತೆ ಸರಂಗೆಯ್ವಡೆ ತಡೆಯದಾ ಗೃಹಂ ಪಾಟಕ್ಕೆಂ (ಶೋಕೋತ. ೯-೬೩).

**ರಾಜಾಂಗಣದ ಊಟ** = ಉಡುಪಿಯ ಮಠದ ವಿಶಾಲವಾದ ಅಂಗಳದಲ್ಲಿ ಸೇರಿ ಮಾಡುವ ಭೂರಿಭೋಜನ,– ಭರ್ಜರಿಊಟ : ಬಿಮ್ಮಗೆ ಉಂಡು ತೇಗಬೇಕಾದರೆ ಮಧ್ವನವಮಿಊಟಕ್ಕೋ, ರಾಜಾಂಗಣದ ಊಟಕ್ಕೋ ಉಡುಪಿಗೇನೆ ಹೋಗಬೇಕು (ಮರಮ. ೯೯).

[ ರಾಜ + ಅಂಗಣ ]

**ರಾಜಾಂಗನೆ** (ನಾ). ರಾಜವಂಶದ ಸ್ತ್ರೀ ; ಅರಸುಮನೆತನದ ಹೆಣ್ಣು: ಸುದತಿಯರು ಹೊಚಮಂಟರೊಗ್ಗಿನ ಮೃದುಮೃದಂಗದ ಕಹಳೆಗಳು ಸಂಮದದ ಸೊಂಪಿನಲೆಸೆಯೆ ರಾಜಾಂಗನೆಯರನುಮಾಯ್ತು (ಕುಮಾ.ವಿ. ೯-೦೦).

[ಸಂ. ರಾಜಾಂಗನಾ]

**ರಾಜಾಂಗವಸ್ತ್ರ** (ನಾ). ಒಂದು ಬಗೆಯ ಶ್ರೇಷ್ಠವಾದ ಬಟ್ಟೆ : ಗಾಜು ನೋಟಕ್ಕೆ ಲೇಸು ಮೋಜು ಇರುಳಲಿ ಲೇಸು ರಾಜಾಂಗವಸ್ತ್ರ ಉಡ ಲೇಸು ಊಟಕ್ಕೆ ರಾಜಾನ್ನ ಲೇಸು (ಸರ್ವಜ್ಞ. ೦೦೬೫). [ಸಂ.]

**ರಾಜಾಜ್ಞೆ** (ನಾ). ದೊರೆಯ ಆದೇಶ ; ಅರಸನ ಅಪ್ಪಣೆ : ತಳೆದೇನಿ ರ್ದರೊ ತಮ್ಮ ತಮ್ಮ ತಲೆಯೊಳ್ ರಾಜಾಜ್ಞೆಯಂ ಮೂರ್ತಿಗೊಂಡಳನಂ ಬಂತಿರೆ ಭೂಪತಿಪ್ರಕರ ನಾನಾಮೌಳಿಮಾಣಿಕ್ಯಸಂಕುಳದೊಳ್ ಮಾರ್ಪೊಳೆ ವೃತ್ತವೊಯ್ಯನೆ ಬರುತ್ತಿರ್ದಳ್ ಪ್ರತೀಹಾರಿ (ಕಾದಂಪೂ. ೨೪) ; ಲಂಚ ವನ್ನು ತೆಗೆದುಕೊಳ್ಳುವುದನ್ನು ರಾಜಾಜ್ಞೆಯು ವಿರೋಧಿಸಿದ್ದಿತು (ಕಶಾ. ೩೪೫). [ ಸಂ. ರಾಜಾಜ್ಞಾ ]

**ರಾಜಾಣ** ' ರಾಜನ ' ನೋ.

**ರಾಜಾತಿಥ್ಯ** (ನಾ). ೧. ಅರಸನು ಮಾಡುವ ಅತಿಥಿಸತ್ಕಾರ. ೨. ರಾಜ ಯೋಗ್ಯವಾದ ಆತಿಥ್ಯ ; ಶ್ರೇಷ್ಠವಾದ ಆತಿಥ್ಯ : ಐದಾರುದಿನಗಳ ತನಕ ಒಗ್ಗಲಿ ಮತ್ತು ಭಟ್ಟರು ಮುದುಕನ ಮನೆಯಲ್ಲಿ ರಾಜಾತಿಥ್ಯವನ್ನು ಅನುಭವಿಸಬೇಕಾಯಿತು (ಕಂಬಹು. ೨೦). [ಸಂ.]

**ರಾಜಾದನ** (ನಾ). ೧. ಒಂದು ಬಗೆಯ ಬಾದಾಮಿಮರ : ಮೊರಟೆ ಮರ ; ಪ್ರಿಯಾಲ : " ರಾಜಾದನಂ, ಪ್ರಿಯಾಲಃ, ಸನ್ನಕದ್ರುಃ, ಧನುಃಪಟಃ – ೪ ಮೊರಟೀಗಿಡ, ಮೊರಟೇಗಿಡ " (ಸಿದ್ಧಾಂತಿ. ೦೦೯). ೨. ಒಂದು ಬಗೆಯ ದಪ್ಪ ಹಣ್ಣು ಬಿಡುವ ಮರ. ೩. ಒಂದು ಬಗೆಯ ಗಿಡ ; ಹಾಲೆ : '' ರಾಜಾದನಂ, ಫಲಾಧ್ಯಕ್ಷಂ, ಕ್ಷೀರಿಕಾ – ೩ ಹಾಲೇಗಿಡ, ಹಾಲುಬಳ್ಳಿ ಪೆಸರು'' (ಸಿದ್ಧಾಂತಿ. ೦೨೨). [ಸಂ.]

**ರಾಜಾದಾಯ** (ನಾ). ಅರಸನಿಗೆ ಸಲ್ಲಬೇಕಾದ ಆದಾಯ; ಕಂದಾಯ, ತೆರಿಗೆ ಮುಂತಾದುವು : ಮಿತಿಮೀರಿದ ರಾಜಾದಾಯವನ್ನು ಅನ್ಯಾಯ ವಾಗಿ ಕೇಶಮಲ್ಲನ ಮೇಲೆ ವಿಧಿಸಿ ಅವನ ಹಣದ ಬಹುಭಾಗವನ್ನು ಅಪಹರಿ ಸಿದ್ದನು (ಕಾಂತಲಾ. ೦೦೬) ; ರಾಜರೂ ಮಂತ್ರಿಯೂ ಇಬ್ಬರೂ ಸೇರಿ ರಾಜಾದಾಯವನ್ನು ಹೆಚ್ಚಿಸಲು ಅನೇಕ ಉಪಾಯಗಳನ್ನು ಯೋಚಿಸಿದರು (ಚಚಿ. ೯೩). [ಸಂ.]

**ರಾಜಾದೇಶ** (ನಾ). = ರಾಜಾಜ್ಞೆ : ದೂತನ ನುಡಿಯುಮಂ ರಾಜಾದೇಶಮುಮನವಧಾರಿಸಿ ಬಂದ ದೂತನಂ . . . ಪೋಗಲ್ವೇಟ್ಟು (ಅಜಿ. ೦೯-೩೦ ವ). [ಸಂ.]

ಮಂಗಳಂ ಜಯ ಮಂಗಳಂ . . . ರಾಜಿತ ಪುರಂದರವಿಟ್ಠ ರಾಜಾಧಿರಾಜ ಸರ್ವೇಶಗೆ (ಪುರಂದ. ೩-೦೩೬-೩). [ಸಂ.]

**ರಾಜಾಧ್ಯಕ್ಷ** (ನಾ). ಅರಸನ ಆಸ್ಥಾನದ ಹಿರಿಯ ಅಧಿಕಾರಿ ರಾಜಾಧ್ಯಕ್ಷ × ಳಪಿಟ್ಟಪ್ಪಯ್ಯನ × × × ಲಿಖಿತ (ಎಕ. VII ೩೦೦-೩೨ ; 1057) ; ಶ್ರೀಮನ್ ಮಹಾಪ್ರಧಾನಂ ರಾಜಾಧ್ಯ ವೆರ್ಗ್ಗಡೆ ಕನ್ನಡಸಂಧಿವಿಗ್ರಹಿ ದಂಡನಾಯಕಂ ಕಾಳಿಮರಸರ್ (ಕಇ 1092). [ ಸಂ. ]

**ರಾಜಾಧ್ವರ** (ನಾ). = ರಾಜಸೂಯ : ಪರಮಚೈಮಿನಿಕಣ್ವ ಗಳಾಗ್ನೀಧ್ರಾದಿ ರಾಜಾಧ್ವರನಿಯೋಗಿಗಳಾಯ್ತು ವೇದವ್ಯಾಸನ (ಕುಮಾ.ಸ. ೭-೨೬). [ಸಂ.]

**ರಾಜಾನ** ' ರಾಜನ ' ನೋ.

**ರಾಜಾನ್ನ** (ನಾ). ಒಂದು ಬಗೆಯ ಶ್ರೇಷ್ಠಜಾತಿಯ ಬತ್ತ ಅದರ ಅಕ್ಕಿ : "ಸಿತಶಾಲಿ ಕೆಂಗಟಿವೆ ಕಂಬತ್ತಿ ರಾಜಾನ್ನಂ" ೧೦೦-೪) ; ಮುಂದೆ ಮಂಡೈಸಿ ತಲೆಮುದ್ದವಾಗಿ ತುಱುಗಿ ಬ ರಾಜಿಸುವ ರಾಜಾನ್ನದ ಕುಸುಂಕುಱಕೊಳಗೆ . . . ನೆಗೆವ ಸುಟ್ಟು (ಅರಾವ. ೩-೭೨ ವ) ; ಬೀಗಿ ಬೆಳೆದು ನಭಕಡರ್ದೊಡೆ ದೇವರ್ಕಳ ಸವಿಗಾಣರ್ ಪೋಗಿ ಮಾಡುವುದೇನೆನುತ ಲಜ್ಜಿಸಿ ತಲೆವಾಗಿದ ರಾಜಾನ್ನ (ವೋಹಶ. ೨-೪೦).

**ರಾಜಾನ್ನದಕ್ಕಿ** = ರಾಜಾನ್ನವೆಂಬ ಬತ್ತದ ಅಕ್ಕಿ : ನಿವೇದ್ಯಕ್ಕೆ ರಾಜಾನ್ನದಕ್ಕಿ ಕೊಳಗ ಒಂದು (ಕಇ. ೭೯-೧೩-೪೦ ಉತ್ತಮದ ರಾಜಾನ್ನದಕ್ಕಿಯ ಬೋನವಂ ಮಾಡಿ ಇತ್ತು ೨೭-೦೫). [ಸಂ.]

**ರಾಜಾನ್ವಯ** (ನಾ). = ರಾಜಕುಲ ೧ : ಕೆಟ್ಟುದಿಂದ್ರಪ್ರಸ್ಥ ರುಟ್ಟು ಪೋದರು ನಾರ ಸೀರೆಯ ನಟ್ಟಡವಿ ಮನೆಯಾಯ್ತು ನ್ವಯದ ರಾಜರಿಗೆ (ಕುಮಾ.ವಿ. ೦-೦೯). [ಸಂ.]

**ರಾಜಾಪುರಿ** (ನಾ). ಒಂದು ಬಗೆಯ ಸಕ್ಕರೆ : ಪುಡಿಸಕ್ಕರೆಯ ರಾಜಾಪುರೀ, ಎಳಗುಡೀ, ಹುರಿಸಕ್ಕರೆ, ಮಗುದುಮ್ಮಿ ಎಂದ ತರವುಂಟು (ಮುಂಬಯು. ೩-೪೫). ' ರಾಯಪುರಿಸಕ್ಕರೆ ' ಪರಾ

**ರಾಜಾಭರಣ** (ನಾ). ಚಂದ್ರನನ್ನೇ ಆಭರಣವನ್ನಾಗಿ ಧರಿಸಿ ಚಂದ್ರಶೇಖರ ; ಶಿವ : ರಾಜಾಭರಣನೆ ಕೇಳಯ್ಯ ವಿರೂಪಾಕ್ಷಾ (ಸೀಂರ. ದೇ. ೩೮-೩). [ಸಂ.]

**ರಾಜಾಯತ್ತ** (ನಾ). ಪ್ರಭುಸಿದ್ಧಿಯ ಮೂರು ಬಗೆಗಳಲ್ಲಿ ಸಂಪೂರ್ಣವಾಗಿ ಅರಸನು ನಡೆಸುವ ಅಧಿಕಾರ; ನಿರಂಕುಶ ಪ್ರಭುಸಿದ್ಧಿಯನ್ನು ಅರ್ಥಶಾಸ್ತ್ರಕಾರರು ರಾಜಾಯತ್ತ, ಸಚಿ ಉಭಯಾಯತ್ತ ಎಂದು ಮೂರು ಬಗೆಯಾಗಿ ವಿಂಗಡಿಸುತ್ತಾರೆ ೪೭). ' ಸಚಿವಾಯತ್ತ' ಪರಾ. [ಸಂ.]

**ರಾಜಾರೂಪಾಯಿ** (ನಾ). ೧. ಹಿಂದಿನ ಮೈಸೂರುಅರಸ ದಲ್ಲಿದ್ದ ಒಂದು ಬಗೆಯ ನಾಣ್ಯ : (*). ೨. ಐದನೆಯ ಮುಖದ ಮುದ್ರೆಯಿದ್ದ ಒಂದು ಬೆಳ್ಳಿಯ ನಾಣ್ಯ : ವಸ ಲಯದಲ್ಲಿ ಇಂದೂ ರಾಜಾರೂಪಾಯಿಯು ಇರಬಹುದು (ರೂ

[< ರಾಜ + ರೂಪಾಯಿ]

**ರಾಜಾರೋಪ** (ನಾ). ಎಲ್ಲರಿಗೂ ತಿಳಿಯುವಂತಿರುವುದು : ಮರೆಯಿಲ್ಲದಿರುವುದು ; ಬಹಿರಂಗವಾಗಿರುವುದು.

**ರಾಜಾರೋಪವಾಗಿ** = ಎಲ್ಲರಿಗೂ ತಿಳಿಯುವಂತೆ ; ಬಹಿರ

ವಾಗಿಯೇ ಕೋಳಿಮಾಂಸ ಮತ್ತು ಹೋಟಲುತಿಂಡಿ ತಿನ್ನುತ್ತಿದ್ದರು (ಅಣಾರ. ೭). [ ←ಮರಾ. ರಾಜಾರೊಸ್, ರಾಜಾರೋಸ್, ರಾಜಾರೋಶ್, ರಾಜಾರೋಷ್]

**ರಾಜಾರ್ಹ** (ಗು). ೧. ಅರಸನಿಗೆ ಉಚಿತವಾದ : ರಾಜಯೋಗ್ಯವಾದ. (ನಾ). ೨. ಒಂದು ಬಗೆಯ ಸುಗಂಧದ ಮರ ; ಧೂಪದ ಮರ; ಅಗುರು : "ವಂಶಕಂ, ಅಗರು, ರಾಜಾರ್ಹಂ, ಲೋಹಂ, ಕ್ರಿಮಿಜಂ, ಜೋಂಗಕ– ೬ ಅಗರುಗಂಧ, ಶ್ವೇತಾಗರು" (ಸಿದ್ಧಾಂಶಿ. ೨೦೭). ೩. ಒಂದು ಬಗೆಯ ಶ್ರೇಷ್ಠಜಾತಿಯ ಬತ್ತ ; ರಾಜಾನ್ನ. ೪. ಕತ್ತಾಳೆ ಜಾತಿಗೆ ಸೇರಿದ ಒಂದು ಬಗೆಯ ಸಸ್ಯ. [ಸಂ.]

**ರಾಜಾಲಯ** (ನಾ). ದೊರೆಯ ನಿವಾಸ ; ಅರಮನೆ : ಜನನಿಯುಮಂ ಜನ್ಮಭೂಮಿಯುಮಂ ಕಂಡಾಗಿನಿವಿರದು ರಾಗೋದಯಮಾದೇವಿರಿದೆನುತುಂ ಬಂದು ರಾಜಾಲಯಮಂ ತೋಱಿ (ಚಂಶೇ. ೩–೧೧ ಪ) ; ಹೊಂಗೆಲಸದಲಿ ರಾಜಾಲಯವನನುಕರಿಸಿದರು ಕುಂತೀಕುಮಾರರಿಗೆ (ಕುವ್ಯಾಉ. ೧೧–೪೪).
[ಸಂ.]

**ರಾಜಾವರ್ತ** (ನಾ). ಚಿನ್ನದ ಹೊಳಪಿನ ಎಳೆಗಳುಳ್ಳ (ವಿಶೇಷವಾಗಿ ಕಂದುಬಣ್ಣದಿಂದ ಕೂಡಿದ) ಒಂದು ಬಗೆಯ ಹರಳು : "ರಾಜಾವರ್ತವೆಳೆಯ ನೀಲಕ್ಕೆ ಮೆಸರ್" (ಕಲ್ಯಾಕೈ. ೪೪); ದ್ರುಪದಂ ಪಚ್ಚೆಯ ನೆಲಗಟ್ಟನೊಳಂ ರಾಜಾವರ್ತದ ಕಂಬದೊಳಂ . . . ವಿವಾಹಗೇಹಮಂ ಸಮೆಯಿಸಿ (ಕಂಕಶಾ. ೩–೭೮ ಪ) ; ಪುಷ್ಯರಾಗ, ರಾಜಾವರ್ತ, ಆಡುಸೋಗೆ ಹೂವು . . . ಇವುಗಳಲ್ಲಿ ನಾಲಿಗೆಗೆ ಗಂಡೂಷವನ್ನು ಮಾಡಲು ಪಿತ್ತಜ್ವರ . . . ಗುಣವಾಗುವುವು (ಸಚಿವ್ಯ. ೬೩). [ಸಂ.]

**ರಾಜಾವರ್ತಿ** (ನಾ). =ರಾಜಾವರ್ತ : ನನ್ನ ರಾಜಾವರ್ತಿ ಕಲ್ಲಿನ ಪದಕ ಕಳೆದುಹೋಗಿದೆ (ರಜಾ). [<ಸಂ. ರಾಜಾವರ್ತ]

**ರಾಜಾವಳಿ** (ನಾ). ೧. ಅರಸರ ಸಮೂಹ. ೨. ಅರಸನ ವಂಶಾವಳಿಯ ನಿರೂಪಣೆ : ಚಾಳುಕ್ಯಚಕ್ರವರ್ತಿಗಳ ವಂಶದ ರಾಜ್ಯಂಗೆಯ್ದರಸುಗಳ ರಾಜಾವಳಿ ಮಂಗಳ (ಎಕ. XII, ೨೬೬–೧೦೭ ; 1077).
[ಸಂ. ರಾಜಾವಲಿ]

**ರಾಜಾಶ್ರಯ** (ನಾ). ದೊರೆಯ ಆಸರೆ ; ಅರಸನ ಆಶ್ರಯ : ಪೂಜಿಸದವರ್ಗೆ ಬೇಳ್ಪುದನಾ ಜನ್ಮದೊಳೀವ ದೆಯ್ವಮುಳ್ಳಡೆ ಬಳಿಯಂ ರಾಜಾಶ್ರಯಮೇವುದೊ (ಸಮುಪ. ೯–೯೦) ; ರಾಜಾಶ್ರಯವು ತಿಳಿದಷ್ಟು ಅನುಕೂಲವಾದುದಲ್ಲ (ಕಾರಿಡ. ೩೭೩). [ಸಂ.]

**ರಾಜಾಸ್ಥಾನ** (ನಾ). ೧. ರಾಜಸಭೆ : ಸ್ಮೃತಿಗಳ ಕಾಲದಲ್ಲಿ ರಾಜಾಸ್ಥಾನವೇ ನ್ಯಾಯಾಸ್ಥಾನವಾಗಿತ್ತು (ಕಾರಿಡ. ೫೬) ; ರಾಜಾಸ್ಥಾನಗಳ ಒಂದು ಸಮಗ್ರ ಚಿತ್ರವು ಎಲ್ಲಿಯೂ ದೊರೆಯದಿರುವುದು ದುರದೃಷ್ಟ (ಕಕಾಶ-೩೨೩). [ಸಂ.]

**ರಾಜಿ**₁ (ನಾ). ೧. ಸಾಲು ; ಓಳಿ ; ಪಂಕ್ತಿ : "ಆಳೀ(ಃ) . . . ವೀಥೀ, ರಾಜೀ(ಃ) — ಈ ೬ ಪಂತಿ" (ಹಲಾಯು. ೧೧೯–೬೬). ೨. ಗುಂಪು; ಸಮೂಹ ; ರಾಶಿ : ಜಲರುಹಬೀಜರಾಜಿಗಳನಾಱಿಪ ಪರ್ಣಕುಟೀರಕಂಗಳಂ ನಿಲಿಸುವ . . . ಅಕ್ಷಮಣಿಯಂ ಸಮೆಯೀ ವ್ಯವಸಾಯಮೆತ್ತಲುಂ (ಕಾದಂಪೂ. ೨೨೩) ; ಕೊಡಲಿ ಕುಜನವಮಹೀರಾಜಿಗೆ ಕೊಡಲಿ. . . ಕೊಡಲಿ ವೀರವನೆನುತಲಾತನ ಕೊಡಲಿಯಂ ಕೊಂಡಾಡಿದರು (ಐಕಪು. ೯–೦೯) ; ಸೋನ್ನತದೇಹ . . . ಭುಜದವರೆಗೆ ತೂರಿ ಹರಿದು ಬಂದಿರುವ ಕೇಶರಾಜಿ (ಚಾಂಕಲಾ. ೧೦೭). ೩. ಕರಿಯ ಸಾಸುವೆ. ೪. ಕಿರುನಾಲಗೆ. ೫. ಬಯಲು ; ಮೈದಾನ. ೬. ಮೈಮೇಲೆ ಪಟ್ಟೆಗಳುಳ್ಳ ಒಂದು ಬಗೆಯ ಹಾವು : ದರ್ವೀಕರ ಮಂಡಲ ರಾಜಿಗಳೆಂಬ ಮೂರು ತೆರನಾದ ಸರ್ಪವಿಷಗಳಲ್ಲಿ ಸಳಿಯ ಸಟ್ಟುಗದ ಬೇರ ನೀರಲ್ಲಿ ಅರದು ಕುಡಿಯಲು ವಿಷಹರ (ಐಕಶ. ೧೦–೯). ೭. [ಅಶ್ವಶಾ] ಕುದುರೆಯ ಮೈಮೇಲೆ ಇರುವ ಒಂದು ಬಗೆಯ ರೇಖೆ : ಮೂವತ್ತೆರಡುರೇಖೆಗಳ ನಡುವೆ ಕಾಣಿಸುವ ಇಪ್ಪತ್ತೈದು ಅಡ್ಡರೇಖೆಗಳಿಗೆ ರಾಜಿಗಳೆಂಬ ಹೆಸರು (ಅಶ್ವಶಾ. ೩೬–೧೨). [ಸಂ.]

**ರಾಜಿ**₂ 'ರಾಜೀ' ನೋ.

**ರಾಜಿಕ** (ಗು). ೧. ಅರಸನಿಗೆ ಸಂಬಂಧಿಸಿದ : (೬). (ನಾ). ೨. ಮುತ್ತಿಗೆ ; ಆಕ್ರಮಣ : ರಾಜ್ಯದ ಸರ್ವಸ್ವವೂ ಅರ್ವ ರಾಜಿಕವರ ಕಯ್ಗೆ ಬಿದ್ದು ಸೂರೆಯಾಗಲು . . . ಸಿದ್ಧವಾಗಿದೆ (ಬಲ್ಲಾಕ. ೪೪–೨೯) ; ೧೬೭೪ನೇ ಚಿತ್ರಭಾನು ಸಂ ೧೧ ದಲ್ಲಿ ಇನ್ನೊಂದು ರಾಜಿಕ ಸಂಭವಿಸಿತು (ಕಕ್ರಕಾ. ೬೩). ೩. ಕರಿಯ ಸಾಸುವೆ : "ಸರ್ಷಪವದಾ ರಾಜಿಕಂ ಸಾಸಿವೆಯೆನಿಕ್ಕು" (ಮಂಗರಾ. ೪೦–೬೩).
[←ಮರಾ. ರಾಜೀಕ./ಸಂ. ರಾಜಿಕಾ]

**ರಾಜಿಕೆ** (ನಾ). ೧. ಸಾಲು ; ಪಂಕ್ತಿ ; ಶ್ರೇಣಿ. ೨. ಬಯಲು ; ಮೈದಾನ. ೩. ಕರಿಯ ಸಾಸುವೆ : "ಸಾಸಿವೆ ರಾಜಿಕೆ ಸರ್ಷಪ ಸಾಸುರಿ" (ವಸ್ತುಕೋ. ೬೩–೦೯). [ಸಂ. ರಾಜಿಕಾ]

**ರಾಜಿಗೈ** (ಕ್ರಿ). ಒಪ್ಪಂದವಮಾಡಿಸು ; ಒಡಂಬಡಿಸು : ಸಮರವ್ಯಾಪವೆಮ್ಮೊಳಗೇಕೆ ರಾಜಿಗೈವುದಕೆ ನಿಜಜನರನಟ್ಟಿ (ಹಲಾಂಕು. ೫).
[ರಾಜಿ₂ (<ರಾಜೀ) + ಕೈ₁ (<ಕೆಯ್₁)]

**ರಾಜಿತ** (ಗು). ಶೋಭಿಸುವ ; ರಂಜಿಸುವ : ಸಭಾಸದನದಂತೆ ವೇತ್ರಾಸನಾಧಿಷ್ಠಿತರಾಜರಾಜಿತಮುಂ (ಚಂದ್ರಪ್ರ. ೫–೩೩ ಪ); ಮಾಣಿಕ್ಯಪ್ರಭಾರಾಜಿತಾಂಘ್ರಿಯುಗ . . . ಪಾಲಿಪುದೆನಗೆ ಚಾರುಮತಿಯಂ (ಕಲ್ಯಾಕೈ. ೦); ಭಾಜಿತ ದಿನಾಧಿಪಂ ರಾಜಿತ ಜನಾಧಿಪಂ . . . ಪೂಜಿಸಿದನೊಲ್ಮೆಯಿಂ (ರಾಜಶೇ. ೦೩–೫೦ ರಗಳೆ). [ಸಂ.]

**ರಾಜಿನಾಮೆ** 'ರಾಜೀನಾಮೆ' ನೋ.

**ರಾಜಿಲ, ರಾಜಿಳ** (ಗು). ೧. ಪಟ್ಟೆಗಳುಳ್ಳ ; ಗೆರೆಗಳಿರುವ. (ನಾ). ೨. (ಮೈಮೇಲೆ ಪಟ್ಟೆಗಳಿರುವ) ಒಂದು ಬಗೆಯ ನಿರ್ವಿಷವಾದ ಹಾವು ; ಒಳ್ಳೆ ; ನೀರುಹಾವು : ರಾಜಿಲಸರ್ಪದಿಂದಾವುಂಟಾದ ಮೊದಲ ವೇಗ ಮೈಮೇಲೆ ನರಗಳಯೇಳಿಸುವದು (ಖಶಾ. ೧೧–೨). ೩. ಎರಡುತಲೆಗಳುಳ್ಳ ಒಂದು ಬಗೆಯ ಹಾವು: "ರಾಜಿಲಃ, ಡುಂಡುಭಃ — ೨. ಎರಡುತಲೆಗಳುಳ್ಳ ಶಿಖಂಡಿಯೆಂಬ ಸರ್ಪಭೇದದ ಹೆಸರುಗಳು, ಎರಡು ತಲೆ ಉರಿಶಿಂಗಿ " (ಸಿದ್ಧಾಂಶಿ. ೭೨). ೪. ಆನೆ ; ಗಜ. **ರಾಜಿಳ** : ೨. "ರಾಜಿಳಃ, ಡುಂಡುಭಃ — ಈ ೨ ಒಳ್ಳೆ" (ಹಲಾಯು. ೦೦೬–೨೦). [ಸಂ.]

**ರಾಜಿಸು** (ಕ್ರಿ). ಶೋಭಿಸು ; ಕಂಗೊಳಿಸು : " ರಾಜಸು—ಶೋಭಾಯಾಂ " (ಶಮದಾ); ರಾಜಭವನದೊಳೆಸೆವ ಮಣಿತೋರಣಂಗಳಿಂ ರಾಜಿಸುವುವೆತ್ತಿದಾತಪವಾರಣಂಗಳಿಂ . . . ಕಣ್ಗೆಸೆದುದು ನರೇಂದ್ರಭವನಾಂಗಣಂ (ಅಜಪು. ೯–೭ ರಗಳೆ) ; ಕಂಡರಿಸಿದರೋ ಕಡೆದರೋ ಎನೆ ಗಿರಿರಾಜತನೂಜೆ ಪೂಜೆಯೊಳ್ ರಾಜಿಸುವಳ್ (ಗಿರಿಕ. ೩–೦೦೨) ; ಒಪ್ಪುವ ಕಾಡುಮಲ್ಲಿಗೆಯ ಬಳ್ಳಿವಾಡಮುಂ ರಾಜಿಸೆ (ರಾಜಶಾಸ್ತ್ರ. ೩೦–೦೯).

**ರಾರಾಜಿಸು** (ದ್ವಿರುಕ್ತಿ): ದಾನನಯಾಳಂಕಾರೆ ರಾರಾಜಿಸಿದಳಖಿಳ ವಿದ್ಯಾರ್ತ್ಥಿದೀನಾವಳೀನನ್ದಿನಿಯುಕ್ತಾ ದೇವಿ (ಎಕ. XVIII, ೨೬೩–೨೦; 1022); ದಂತದ್ಯುತಿ ರಾರಾಜಿಸಿ ಮುಖದಿನುಣ್ಕೆ ನುಡಿದಂ ಕೃಷ್ಣಂ (ಜಗಿಪ. ೦೦–೦೯); ರಂಗಧಾಮನ ರಾಣಿಗೆ ರಾರಾಜಿಪ ರಂಗನಾಯಕಿಗೆಜಿಗುವೆನು (ಹರಿಕ. ೨–೨).
[ರಾಜ್₀ (ಪ←ಸಂ. ರಾಜ್ = ಪ್ರಕಾಶಿಸು) + —ಇಸು₁]

**ರಾಜಿಳ** 'ರಾಜಿಲ' ನೋ.

**ರಾಜೀ, ರಾಜಿ**₂ (ನಾ). ೧. ಒಪ್ಪಂದ ; ಒಡಂಬಡಿಕೆ : ನಮ್ಮ ಭಾಷೆಯಲ್ಲಿ ತೀರ ಹೊಂದಿಕೊಂಡು ಹೋದ . . . ಶಬ್ದಗಳೆಂದರೆ . . .

ರಾಜೀ (ರಾಝಿ), ತಾರೀಫು (ಭಾಶಾಶಾ. ೦೬೬); ಇವನು ಹೋಗಿ ತಪ್ಪಾಯಿತೆಂದು ಬೇಡಿಕೊಂಡೊಡನೆಯೇ ಪುನಃ ರಾಜೀ (ರಾಸಕು. ೦೩). ರಾಜಿ₂: ೧. ಕಕ್ಷಿಗಾರರೇ ರಾಜಿಗೆ ಒಪ್ಪಿದರೆ ಅವರನ್ನು ಒಪ್ಪಿಸಬಹುದು ಎಂದಿದ್ದೆ (ಕಂದಕೋ. ೦೫೪). ೨. ಒಪ್ಪಿಗೆ ; ಸಮ್ಮತಿ ; ಕಬೂಲು : ಅದಕ್ಕೆ ನಿಮ್ಮ ರಾಜಿ ಇದೆಯೆ ? ನಿಮಗೆ ರಾಜಿ ಇರಲಿ, ಇಲ್ಲದಿರಲಿ ನಾನಂತೂ ರಾಜಿಯಾಗಿದ್ದೇನೆ (ಕಪುಳ. ೦೩೬). ೩. ಸ್ವಂತ ಇಚ್ಛೆ ; ಸ್ವಯಂಸಮ್ಮತಿ: ನಡಸಿಕೊಂಡು ಬಹಿರಿಯೆಂದು ನಮ್ಮ ರಾಜಿಯಿಂದ ಒಡಂಬಟ್ಟು ಕೊಟ್ಟ ಧರ್ಮಸಾಧನ (ಎಕ. XIV, ಶ್ರೀರಂಗ. ೨೬೦-೬೬ ; 1419); ಜೂಜವಾಡಿಯು ಸಕಲರಾಜ್ಯವನು ಪುಷ್ಕರಗೆ ರಾಜಿಯಿಂದಲಿ ಸೋತು (ಯುನಳ. ೮೪). ೪. ರಾಜೀನಾಮೆ : ಈಗಿನ ಕೆಲಸಕ್ಕೆ ರಾಜಿಯಿತ್ತರೆ ಮುಂದೆ ಕೆಲಸಮಾಡುವುದೆಲ್ಲಿ (ದೇಕಧು. ೦೬).

**ರಾಜಿಕಬೂಲಿ** = ಒಪ್ಪಂದ ; ಒಡಂಬಡಿಕೆ : ಜನರು ಅದನ್ನು ನೋಡಿ–ನಾವು ಕೇಡಿಗತನದೊಡನೆ ರಾಜಿಕಬೂಲಿ ಮಾಡಿಕೊಳ್ಳತಕ್ಕವರೆಂದು ಭಾವಿಸಿ, ನಮ್ಮ ಮಾತೆಲ್ಲ ಪೊಳ್ಳುಹರಟೆಯೆಂದುಕೊಂಡುಬಿಟ್ಟಾರು (ರಾಜ್ಯಶಾ. ೨೯೨). **ರಾಜೀ ಆಗು, ರಾಜಿಯಾಗು** = ೧. ಹಿಂದಿನ ವಿರೋಧವನ್ನು ಬಿಟ್ಟು ಸ್ನೇಹದಿಂದ ಒಪ್ಪಂದ ಮಾಡಿಕೊಳ್ಳು ; ಒಡಂಬಡು : ರೈತರು ರಾಜೀಆಗಿ ಹೇರಳವಾಗಿ ಭೂಮಿ ಸಾಗುವಳಿ ಮಾಡುತ್ತಾರೆ (ಮಹಾಶೆ. II. ೬೩). ೨. ಒಪ್ಪಂದವಾಗು ; ಒಡಂಬಡಿಕೆಯಾಗು : ಪಕ್ಷದ ನಾಯಕರು ಸ್ವಾತಂತ್ರ್ಯವಿಲ್ಲದೆ ಕೈಕಟ್ಟಿದವರಾಗಿ ಅಲ್ಲಿ ಬಂದು ಕುಳಿತರೆ ಅವರಲ್ಲಿ ರಾಜಿಯಾಗುವುದೆಲ್ಲಿ ? (ರಾಜ್ಯಶಾ. ೩೦೨). ೩. ಒಪ್ಪು ; ಸಮ್ಮತಿಸು : ಅದಕ್ಕೆ ನಿಮ್ಮ ರಾಜಿ ಇದೆಯೆ . . . ನಾನಂತೂ ರಾಜಿಯಾಗಿದ್ದೇನೆ (ಕಪುಳ. ೦೩೬). **ರಾಜೀಮಾಡಿಸು** = ಪರಸ್ಪರ ಒಪ್ಪಿಸು ; ಒಂದಾಗಿಗೂಡಿಸು ; ಒಡಂಬಡಿಸು : ನ್ಯಾಯಾಧೀಶರು ಗಂಡನಿಗೆ ಉಪದೇಶಮಾಡಿ ರಾಜೀಮಾಡಿಸಿದರಂತೆ (ಶತ್ರಿಶಾ. ೬).

[←ಅರ. ರಾಜೀ, ರಾಝಿ ; ಹಿಂ. ಮರಾ. ರಾಜೀ]

**ರಾಜೀನಾಮೆ**, ರಾಜಿನಾಮೆ (ನಾ). ೧. ಪರಸ್ಪರ ಒಪ್ಪಿಗೆಯಿಂದ ಬರೆದುಕೊಡುವ ಪತ್ರ ; ಒಪ್ಪಿಗೆಪತ್ರ ; ಒಡಂಬಡಿಕೆಯ ಪತ್ರ : (*). ೨. ಉದ್ಯೋಗ ಮೊದಲಾದುವುಗಳಿಂದ ಬಿಡುಗಡೆ ಮಾಡಬೇಕೆಂದು ಕೇಳಿ ತಾನೇ ಒಪ್ಪಿ ಬರೆದುಕೊಡುವ ಪತ್ರ : ಮಂಡಳಿಯ ಸಭಾಸದ ಕೆಲಸಕ್ಕೆ ನಾನು ಈಗ ರಾಜೀನಾಮೆಯನ್ನು ಕೊಡುತ್ತೇನೆ (ಪೋಹಿಶೀ. ೦೩೬) ; ತನ್ನ ಕೆಲಸಕ್ಕೆ ರಾಜೀನಾಮೆ ಕೊಟ್ಟುಬಿಟ್ಟ (ದುಂಬಿಕ. ೦೫೬). **ರಾಜಿನಾಮೆ** : ೨. ತನ್ನ ಕೆಲಸಕ್ಕೆ ರಾಜಿನಾಮೆಯಿತ್ತು . . . ಧೊಡ್ಡ ಚಳವಳವನ್ನು ಹೂಡಿದನು (ಜಗಸಂ. ೬೦) ; ನಾನು ಸೇನಾಪತಿಯ ಕೆಲಸಕ್ಕೆ ರಾಜಿನಾಮೆ ಕೊಡುತ್ತೇನೆ (ಮುಂದಾಶಿ. ೦೨೮).

[← ಪಾರ. ರಾಜೀನಾಮಹ್, ರಾಝಿನಾಮಾ ; ಹಿಂ. ಮರಾ. ರಾಜೀನಾಮಾ]

**ರಾಜೀವ** (ನಾ). ೧. ಕಮಲ ; ತಾವರೆ : "ಸಹಸ್ರಪತ್ರಂ . . . ರಾಜೀವಂ . . . ಪಂಕಜಂ – ಈ ೧೭ ತಾವರೆ" (ಹಲಾಯು. ೦೦೨-೫೮) ; ಬೆಳಗೆಲ್ಲಂ ಪೋಗೆ ವಿಯತ್ತಳದೊಳ್ ಬೆಳರ್ಗೆಂಪು ಪಸರಿಸುತ್ತಿರಲಪರಾಚಲಶಿಖರದತ್ತಲೊಯ್ಯನೆ ತಳರ್ದಂ ರಾಜೀವಜೀವಿತೇಶ್ವರನಾಗಳ್ (ಕಾದಂಶಾ. ೦೩೭) ; ಮೂರಪಲಿ ರಾಜೀವಗಂಧಸಮೀರಣನ ಸಂಭಾವನೆಗೆ ಸೊಗಸಿವಳು ಸತಿ (ಕುವ್ಯಾಶ. ೦೦-೦೫); ಪಾದರಿ ಸುರಗಿ ಸೇವಂತಿ ರಾಜೀವ ನಿರ್ಜರಸುಮಮಾಲೆ ಕಣ್ಗೆ ವಿರಾಜಿಸಿದುವು (ಪೋಹಕ. ೦೬-೦೬). ೨. ನೈದಿಲೆ ; ಕನ್ನೈದಿಲೆ. ೩. ಒಂದು ಬಗೆಯ ಮೀನು : " ಶಾಲಃ . . . ರಾಜೀವಃ, ಲೋಹಿತಃ, ಪಲ್ಲವಕಃ – ಈ ೬ ಮತ್ಸ್ಯದ ಭೇದಂಗಳ್" (ಹಲಾಯು. ೦೦೯-೫೭) ; ಪೆರ್ಚಿರ್ದಂದಧಿಕತರಸತ್ವದಿಂ ಸತ್ವದಿಂದುರ್ಚಿ ಮೆಯ್ಗೆರೆವ ರಾಜೀವಮಾಜೀವಮುಂ ಕರ್ಚಿ ಪಾಯ್ದುಡಂಗುವ ತರಂಗದಿಂ ರಂಗದಿಂದೆಟ್ಟಿ ಪೆರ್ಮೀನಿನಿಂದ . . . ಆ ಸಮುದ್ರಂ (ಶ್ರೀರಾಪು. ೩-೨೫). ೪. (ಮೈಮೇಲೆ ಪಟ್ಟೆಗಳಿರುವ) ಒಂದು ಬಗೆಯ ಜಿಂಕೆ. ೫. ಆನೆ ; ಗಜ. ೬. ಸಮೂಹ ; ಗುಂಪು. ೭. ತಲೆಯ ಕೂದಲು ; ಕೇಶರಾಶಿ. ೮. ನೀರು ; ಜಲ : "ಕೂದಲು ತಾವರೆಯುದಕ ಸಮೂಹ ನಾಲ್ಕು ರಾಜೀವಾಖ್ಯಂ" (ನಾವಾಕಂ. ೫೪). [ಸಂ.]

**ರಾಜೀವಪೀಠ** (ನಾ). ೧. ಕಮಲದ ಪೀಠ ; ತಾವರೆಯ ಆಸನ. ೨. ಕಮಲವನ್ನು ಪೀಠವಾಗಿ ಉಳ್ಳವನು ; ಬ್ರಹ್ಮ : ಶ್ರೀವನಿತೆಯರಸನೆ ವಿಮಲರಾಜೀವಪೀಠನ ಪಿತನೆ . . . ಕಾವುದಾನತಜನವ ಗದುಗಿನ ವೀರನಾರಯಣ (ಕುವ್ಯಾಶ. ೦-೦). [ಸಂ.]

**ರಾಜುಣ** ' ರಾಜನ ' ನೋ.

**ರಾಜುಳ್ಳಿ** (ನಾ). ಒಂದು ಬಗೆಯ ದಪ್ಪ ಈರುಳ್ಳಿ : " ರೋಚಕಃ – ಹೊಂಗೆ, ರಾಜುಳ್ಳಿ" (೬ಕಧ. ೦೪೦). 'ರಾಯುಳ್ಳಿ' ಪರಾ.

[ರಾಜ + ಉಳ್ಳಿ$_1$]

**ರಾಜೇಂದ್ರ** (ನಾ). ಚಕ್ರವರ್ತಿ ; ಮಹಾರಾಜ : ರಾಜೇಂದ್ರ ಚಿತ್ತೈಸೆಂದ ನಸುರೇಂದ್ರ (ಕೊರಶಾ. ೬-೩-೩೨) ; ಸೃಷ್ಟಿಯ ಶಕ್ತಿದೂತಸೆಂ, ರಾಜೇಂದ್ರ (ಶ್ರೀರಾಮಾ. ೦೩-೩೫೩). [ಸಂ.]

**ರಾಜೋಚಿತ** (ಗು). ಅರಸನಿಗೆ ಉಚಿತವಾದ ; ರಾಜಯೋಗ್ಯವಾದ : ಮಕ್ಕಳು ರಾಜೋಚಿತ ಅಲಂಕಾರದಲ್ಲಿ ಬಹಳ ಮುದ್ದಾಗಿ ಕಾಣುತ್ತಿದ್ದರು (ರೂಢಿ). [ಸಂ.]

**ರಾಜೋಪಚಾರ** (ನಾ). ೧. ಅರಸನಿಗೆ ಮಾಡುವ ಸೇವೆ–ಉಪಚಾರ : ಸುದತಿ ನೀ ಕೇಳು ಯಿಂತಧಿಕನಗರದ ಮಧ್ಯ . . . ಕುಧರಜಾರ್ಧಾಂಗ ಪರಮೇಶ್ವರನ ಭವನಮಿದೆ ರಾಜೋಪಚಾರದೊಡನೆ (ಸಪಪೋ. ೨-೬೨). ೨. ರಾಜೋಚಿತವಾದ ಉಪಚಾರ ; ಹೆಚ್ಚಿನ ಸೇವೆ : ರಾಜೋಪಚಾರಮನ್ನಿರ್ವ್ಯಾಜದೊಳಾನೆಸಗದಾವೆನೋ ಶಂಭುಗೆ (ವೃಕಾ. ೩೦-೨೦) : ಹೆಣ್ಣಿನವರು ವರನ ಕಡೆಯವರಿಗೆ ರಾಜೋಪಚಾರ ಮಾಡಿದರು (ರೂಢಿ). [ಸಂ.]

**ರಾಜ್ಞಿ** (ನಾ). ೧. ಅರಸಿ ; ರಾಣಿ : ರಾಜ್ಞೀಗರ್ಭದೊಳಿರ್ದಂ ತ್ರಿಜ್ಞಾನಸಮೇತನೆಂದು ಪೇಟ್ಪೆಡೆವೆ ದಲಭಿಜ್ಞಾರೇಖೆಗಳೆನಿಸಿ ಮನೋಜ್ಞತೆಯಂ ತ್ರಿವಳಿರೇಖೆ ತಳೆದೆಸೆದಿರ್ಕುಂ (ಶಂಪ್ರಶು. ೦೨-೨೫) ; ರಾಜ್ಞಿ, ಕುಸುಮ ಸುಖಿಮೊದಗಿತೀ ಮಾಮರಕೆ (ಶ್ರೀರಾಮಾ. ೦೪-೩೬೩). ೨. [ಸಂಗೀತ] ಒಂದು ರಾಗದ ಹೆಸರು : ನೀಲೋತ್ಪಲಿನಿ . . . ಗೀತಿ ರಾಜ್ಞಿ [ಪಾಠಾಂ. ರಯಿ] ತರಂಗಿಣಿ . . . ವಸಂತಬಂಗಾಳವೆಂಬಿಪ್ಪತ್ತೆರಡು ಕ್ರಿಯಾಂಗದಿಂದಾದ ರಾಗಂಗಳು (೬ವೀಳ. ೧೯೯). [ಸಂ. ರಾಜ್ಞೀ]

**ರಾಜ್ಞೀನಿವಾಸ** (ನಾ). ರಾಣಿಯ ನಿವಾಸಸ್ಥಾನ ; ಅಂತಃಪುರ : "ಅಂತಃಪುರಮೆನಿಕುಂ ಶುದ್ಧಾಂತಂ ರಾಜ್ಞೀನಿವಾಸಂ" (ವಸ್ತುಕೋ. ೪೮-೦೮) ; ರಾಜ್ಞೀನಿವಾಸದಂತೆ ಜರತ್ಕಂಚುಕಿಶತೋದಂಚಿತಮುಂ . . . ಆಗಿಯುಂ (ಶಂಪ್ರಶು. ೫-೫೨ ವ). [ಸಂ.]

**ರಾಜ್ಯ** (ನಾ). ೧. ಅರಸನ ಸಪ್ತಾಂಗಗಳಲ್ಲಿ ಒಂದು ; ದೊರೆಯ ಅಧಿಕಾರಕ್ಕೆ ಒಳಪಟ್ಟ ಭೂಮಿ ; ದೇಶ : "ನೆಲನೆಂದೆನೆ ರಾಜ್ಯಂ" (ಕಶಕಂ. ೨೫೪) ; ತಾವಿಲ್ಲದೆ ರಾಜ್ಯಮಂ ಪರಿಪಾಲಿಸುವೊರಾರುಮಿಲ್ಲ (ಪಮ್ಪಾರಾ. ೦೩೦-೨೫); ರಾಜ್ಯಕ್ಕಂ ತ್ರಿಭುವನಸಾಮ್ರಾಜ್ಯಕ್ಕಂ ಬಗೆಯೆ ಹಸ್ತಿಮಶಕಾಂತರಮೆಂದಿಜ್ಯಾಪುರಸ್ಸರಂ ಪ್ರವ್ರಜ್ಯಮನವಯವದೆ ಹಲಧರಂ ಧರಿಯಿಪುದುಂ (ಶಾಂತಿಪು. ೫-೬೨); ರಾಜ್ಯವೆಂದರೆ ಕೆಲವು ಮೂಲನಿಬಂಧನೆಗಳಿಗೆ ಅನುಸಾರವಾಗಿ ಒಟ್ಟುಗೂಡಿಕೊಂಡು ಬದುಕಲು ಒಡಂಬಟ್ಟಿರುವ ಜನರ ಸಂಘ ಅಥವಾ ಸಮಾಜ (ರಾಜ್ಯಶಾ. ೪೫). ೨. (ಭಾಷಾನುಗುಣವಾಗಿ) ವಿಂಗಡಿಸಲ್ಪಟ್ಟ ದೇಶದ ಭಾಗ ; ಪ್ರಾಂತ :

ಪ್ರತಿಯೊಂದು ರಾಜ್ಯಕ್ಕೂ ಒಬ್ಬೊಬ್ಬ ರಾಜ್ಯಪಾಲರು ಇರುತ್ತಾರೆ (೬೩೨). ೩. ಅರಸೊತ್ತಿಗೆ ; ದೊರೆತನ. ೪. ಆಡಳಿತ ; ಆಳ್ವಿಕೆ : ' ರಾಜ್ಯಂಗೆಯ್ ' ಪರಾ. [ಸಂ.]

**ರಾಜ್ಯಂಗೆಯ್**, ರಾಜ್ಯಂಗೈ (ಕ್ರಿ). ರಾಜ್ಯವನ್ನು ಆಳು ; ರಾಜ್ಯಭಾರ ಮಾಡು : ಆಡಳಿತ ನಡೆಸು : ಶ್ರೀಪುರುಷ ರಾಜ್ಯಂಗೆಯ್ಯುತ್ತಿರೆ (ಎಇ. XVI, ಸಿರಾ. ೧೨೩-೬; 788) ; ಸಮಸ್ತಂ ಪರಿವಾರಮೆಂಬ ಗುಣಸಂಘಾತಂಗಳಂ ತಾಳ್ದಿ ಪೆಂಪೆಸಕಂಬೆತ್ತಿರೆ ಸಂತಮಿಂತತಿಬಳಂ ರಾಜ್ಯಂಗೆಯುತ್ತಿರ್ದನಂ (ಆದಿಪು. ೧-೬೯); ಶ್ರೀಮತ್ತ್ರಿಭುವನಮಲ್ಲದೇವರು ಜಯಂತೀಪುರದ ನೆಲೆವೀಡಿನೊಳು ಸುಖಸಂಕಥಾವಿನೋದದಿಂ ರಾಜ್ಯಂಗೆಯ್ಯುತ್ತಮಿರೆ (ಕಇಆ. ೯೪-೩-೬; 1124). **ರಾಜ್ಯಂಗೈ** : ರಾಜರಾಜಾಧೀಶ ರಘುಕುಲ ರಾಜಪರಮೇಶ್ವರನು ನಿಮಿಕುಲರಾಜನಂದನೆ ಸಹಿತ ರಾಜ್ಯಂಗೈದನೊಲವಿನಲಿ (ತೊರರಾ. ೬-೫೫ ೩೨೪೫). [ರಾಜ್ಯ + ಕೆಯ್$_1$]

**ರಾಜ್ಯಂಗೈ** ' ರಾಜ್ಯಂಗೆಯ್ ' ನೋ.

**ರಾಜ್ಯಕ** (ನಾ). ರಾಜ್ಯವನ್ನು ಆಳುವವನು ; ಆಡಳಿತಗಾರ : ಪಾರಿಜಾತವ ಕಂಡು ನಿಡುಸುಯ್ಯುದ್ದ, ಪದಗಳಿಂ ಶೌರಿಕಥೆಯನು ಹೇಳಿದು ತೃಪ್ತನಹನು ಕವಿ ಊರಿನುದ್ಯಾನಕದ ತರಿಸಿ ಬೆಳಸುವ ಕಾರ್ಯಧೀರನಲ ರಾಜ್ಯಕನು (ಮುಂಕುಕ. ೪೭೩). [ಸಂ.]

**ರಾಜ್ಯಕಾರಿಯ** (ನಾ). ಆಡಳಿತದ ವ್ಯವಹಾರ,—ಕೆಲಸ : ಅತಿಬೇಗದಲಿ ರಾಜ್ಯಕಾರಿಯದಿರವ ಬಿನ್ನೈಸಿ ಕಳುಹಿದ (ಕಂಪಿ. ೧೦-೧೦೭). [< ಸಂ. ರಾಜ್ಯಕಾರ್ಯ]

**ರಾಜ್ಯಕಾರ್ಯ** (ನಾ). = ರಾಜ್ಯಕಾರಿಯ : ರಾಜ್ಯಕಾರ್ಯಗಳನ್ನು ಕುರಿತ ಪ್ಲಾನಕ್ಕೆ ರಾಜಮಾರ್ಗವಾವುದೂ ಇಲ್ಲ (ರಾಜ್ಯಂಗ. ೧೦೨). [ಸಂ.]

**ರಾಜ್ಯಕಾಲ** (ನಾ). ರಾಜ್ಯವಾಳುವ ಕಾಲ ; ಆಳ್ವಿಕೆಯ ಅವಧಿ : ಸಾರ ವಸ್ತುಗಳೊಳ್ ನಿಸರ್ಗದಿಂದೆ ತಾಂ ನಿರಾದರನಾಗಿ ಶುಭಭಾವನೆಯೊಳ್ ರಾಜ್ಯಕಾಲಮಂ ಸಲಿಸುತ್ತುಮಿರೆ (ಶಾಂತಿಪು. ೬-೧೦೭ ವ) ; ದಶಲಕ್ಷಪೂರ್ವ ಕುಮಾರಕಾಲಂ ಪೋಗೆ ರಾಜ್ಯಕಾಲದೊಳ್ ನಿಂದೇಕೋನತ್ರಿಂಶಲ್ಲಕ್ಷಪೂರ್ವಮುಂ ಪನ್ನೆರಡು ಪೂರ್ವಾಂಗಮುಂ ರಾಜ್ಯಕಾಲಂ ಪೋಗೆ (ಚಾಪುಂಪು. ೦೦೯). [ಸಂ.]

**ರಾಜ್ಯಕ್ಷೇತ್ರ** (ನಾ). ರಾಜ್ಯದ ಪ್ರದೇಶ ; ಆಡಳಿತದ ಸೀಮೆ : (೧) ಭಾರತವು ರಾಜ್ಯಗಳ ಒಂದು ಸಂಘವಾಗಿ ಇರತಕ್ಕುದು. (೨) ಅದರ ರಾಜ್ಯಗಳೂ ರಾಜ್ಯಕ್ಷೇತ್ರಗಳೂ ಮೊದಲನೆಯ ಅನುಸೂಚಿಯ . . . ರಾಜ್ಯಕ್ಷೇತ್ರಗಳೂ ಆಗಿರತಕ್ಕುದು (ಭಾರಾ. [illegible]). [ಸಂ.]

**ರಾಜ್ಯಚಿಹ್ನ** (ನಾ). ಅರಸೊತ್ತಿಗೆಯ ಗುರುತು ; ರಾಜಚಿಹ್ನೆ : ಬೆಳ್ಗೊಡೆ ಮೊದಲಾಗೊಡೆಯ ರಾಜ್ಯಚಿಹ್ನಂಗಳ್ ಮುಂದೆ ಪರಿಯೆ (ಪಶ್ಚಾರಾ. ೧೩೦-೨೦) ; ಕಂದಂಗೆ ರಾಜ್ಯಚಿಹ್ನಮನೊಂದೆರಡುಮನುಟಿಸಿ ಮಂದಿಗೆರೆದರ್ಥಮನಾ ಮಂದಾರಂ ಕಯ್ಯಿಂದಪೊಲೆಂದಿತ್ತೆಸಗುವನೊ ನೃಪತಿ ಜನನೋತ್ಸವಮಂ (ಪುಕ್ಕಪು. ೩-೯೦). [ಸಂ.]

**ರಾಜ್ಯಚಿಹ್ನೆ** (ನಾ). = ರಾಜ್ಯಚಿಹ್ನ : ಗುಡಿ, ಚಾಮರ, ಮೇಘಾಡಂಬರಾದಿಗಳು ರಾಜ್ಯಚಿಹ್ನೆಗಳೆಂದು ಒಂದು ಶಾಸನವು ತಿಳಿಸುತ್ತದೆ (ಕಶಾಅ. ೩೩೬). [ಸಂ. ರಾಜ್ಯಚಿಹ್ನ]

**ರಾಜ್ಯದಾಹ** (ನಾ). ರಾಜ್ಯವನ್ನು ಪಡೆಯಬೇಕೆಂಬ ಆತ್ಯಾಸೆ ; ರಾಜ್ಯಲಾಲಸೆ : ಈ ಆಕ್ರಮಣದಿಂದ, ಡಿಲ್ಲಿಸುಲ್ತಾನರ ರಾಜ್ಯದಾಹ ಹೆಚ್ಚಿತು (ಭಾರಠ. ೪೨೨). [ಸಂ.]

**ರಾಜ್ಯನೀತಿ** (ನಾ). ರಾಜ್ಯದ ಆಡಳಿತಕ್ಕೆ ಸಂಬಂಧಿಸಿದ ನೀತಿ, — ವ್ಯವಹಾರ : ರಾಜ್ಯಪಟ್ಟಂಗಟ್ಟಿ ಸಂಕ್ಷೇಪದಿಂ ರಾಜ್ಯನೀತಿಯನಿಂತೆಂದು ಕಲ್ಪಿಸಿದಂ (ಪಶ್ಚಾರಾ. ೦೪೪-೨೩). [ಸಂ.]

**ರಾಜ್ಯನೀತಿಜ್ಞ** (ನಾ). ರಾಜನೀತಿಯನ್ನು ಬಲ್ಲವನು ; ರಾಜನೀತಿಜ್ಞ : ರಾಜ್ಯಶಾಸನ ದೊಡ್ಡದೇ ? ಈ ಪ್ರಶ್ನೆಯನ್ನು ರಾಜ್ಯನೀತಿಜ್ಞರು ಬಹುವಾಗಿ ಚರ್ಚಿಸಿದ್ದಾರೆ (ರಾಜ್ಯಶಾ. ೩೨೫). [ಸಂ.]

**ರಾಜ್ಯಪಟ್ಟ** (ನಾ). ರಾಜಪದವಿ ಸೂಚಕವಾಗಿ ಹಣೆಗೆ ಕಟ್ಟುವ ಚಿನ್ನದ ಪಟ್ಟಿ,— ಲಲಾಟಪಟ್ಟ : ಅಭಿಷೇಕಪುರಸ್ಸರಂ ಸ್ಮರಂ ನಸುಬಿರಿದಿರ್ದ ಮಲ್ಲಿಗೆಗೆ ಕಟ್ಟಿದನಂಕದ ರಾಜ್ಯಪಟ್ಟಮಂ (ಶಾಂತಿಪು. ೬-೦೪೨). [ಸಂ.]

**ರಾಜ್ಯಪತ್ರ** (ನಾ). ಸರ್ಕಾರವು ಪ್ರಕಟಿಸುವ ಪತ್ರ ; ಗೆಜೆಟ್ಟು : ಬಹಳ ಶಕ್ತಿಯುಳ್ಳ ಕಾಗದವನ್ನು . . . ಸನ್ನದು- ರಾಜ್ಯಪತ್ರಗಳು, ಮೌಲ್ಯಚಲಾವಣೆಪತ್ರಗಳು. . .ಮುದ್ರಿಸುವುದಕ್ಕೆ ಉಪಯೋಗಿಸುವರು (ಮುದ್ರಿಕ. ೬೦). [ಸಂ.]

**ರಾಜ್ಯಪದ** (ನಾ). ಅರಸನ ಪದವಿ ; ಅರಸೊತ್ತಿಗೆ : ಸೀತೆಯ ತಂದವನ ತೋಟಿದರೆ ನಮಗದು ರಾಜ್ಯಪದವೆಂದ (ತೊರರಾ. ೩-೦೦-೪೪) ; ಆತನ ಕುಮಾರಂಗೆ ಪಟ್ಟಂಗಟ್ಟಿ ರಾಜ್ಯಪದದೊಳಿಟ್ಟು ಕಂಕ್ಷೆಗೊಂಡು . . . ತೆರಳ್ದಂ (ರಾಮಾಶ್ವ. ೩೩-೦೬). [ಸಂ.]

**ರಾಜ್ಯಪರಿಷತ್ತು** (ನಾ). ಸಂಸತ್ತಿನ ಒಂದು ಅಂಗ ; ಕೇಂದ್ರಸರ್ಕಾರದ ಒಂದು ಸಭೆ ; ರಾಜ್ಯಸಭೆ ; P ಸ್ವತಂತ್ರಭಾರತದ ಕೇಂದ್ರಸರ್ಕಾರದಲ್ಲಿ ' ರಾಜ್ಯಪರಿಷತ್ತು ' ಮತ್ತು ' ಲೋಕಸಭೆ ' ಎಂದು ಎರಡು ಸಭೆಗಳುಂಟು. ಇವು ಇಂಗ್ಲೀಷಿನ ' Upper-House ' ಮತ್ತು ' Lower-House ' ಎಂಬ ಪದಗಳಿಗೆ ಸಮಾನವಾದುವು : ಭಾರತ ಸಂಘಕ್ಕೆ, ರಾಷ್ಟ್ರಪತಿಯವರೂ ರಾಜ್ಯಪರಿಷತ್ತೆಂಬ ಹೆಸರಿನ ಒಂದು ಸದನವೂ ಲೋಕಸಭೆ ಎಂಬ ಹೆಸರಿನ ಒಂದು ಸದನವೂ ಸೇರಿರುವ ಒಂದು ಸಂಸತ್ತು ಇರತಕ್ಕುದು (ಸಂಧಾಪ. ೩೯). [ಸಂ. ರಾಜ್ಯಪರಿಷದ್]

**ರಾಜ್ಯಪಾಲ** (ನಾ). ಸ್ವತಂತ್ರಭಾರತದ ಕೇಂದ್ರಸರ್ಕಾರದಿಂದ ನೇಮಕಗೊಂಡ ಪ್ರತಿರಾಜ್ಯದ ಮುಖ್ಯಾಧಿಕಾರಿ : ಶ್ರೀಜಯಚಾಮರಾಜ ಒಡೆಯರವರು . . . ಅಖಂಡಕರ್ನಾಟಕಕ್ಕೆ ರಾಜ್ಯಪಾಲರಾಗಿ . . ಎಲ್ಲ ಕನ್ನಡಿಗರ ಸೌಖ್ಯವನ್ನು ನೋಡಿಕೊಳ್ಳುತ್ತಿದ್ದಾರೆ (ಮೈವಾಸು. ೨೦). [ಸಂ.]

**ರಾಜ್ಯಭರ** (ನಾ). ರಾಜ್ಯದ ಆಡಳಿತ, —ಆಳ್ವಿಕೆ : ಮಹಿತನಿಜೈಕರಾಜ್ಯಭರದೊಳ್ ನಿಲವೇಟ್ಟುದು ನೀಂ (ಶಾಂತಿಪು. ೧೧-೧೦೨); ಸಿಂಹಭೂಪತಿ [ಗೆ ಪ್ರಮಾ] ಸಾಮಂತರುಂ ಮಣ್ಡಳೇಶ್ವರರುಂ ತಪ್ಪೆ ಕಳ[ಲ್ದ][ರಾಜ್ಯ]ಭರಮಂ ಕೈಕೊಣ್ಡು (ಕಇಆ. ೩-೨-೬೯; 1058); ಆ ರಾಯಂ ಪೊಸಜವ್ವನದ ಮುದ್ದುಗುವರನೊಳ್ ರಾಜ್ಯಭರಮನೊಪ್ಪಿಸಿ ತಾಂ ತಪಸ್ಸಾಮ್ರಾಜ್ಯಮಂ ಸೂಜಿಗೊಂಡಾಳುತುಮಿರ್ದಂ (ರಾಮಾಶ್ವ. ೦೦೯-೩). [ಸಂ.]

**ರಾಜ್ಯಭಾರ** (ನಾ). ೧. ರಾಜ್ಯಾಡಳಿತದ ಹೊಣೆ,— ಜವಾಬ್ದಾರಿ. ೨. = ರಾಜ್ಯಭರ : ಅಂತು ಮೇಘನಾದಂ ತನ್ನ ಮಗಂ ಸಿಂಹನಾದಂಗೆ ರಾಜ್ಯಭಾರಮನಿತ್ತು ತಪೋಭಾರದೊಳ್ ತಾಂ ನಿಂದು (ಶಾಂತಿಪು. ೭-೧೬೭ವ); ಆತನ ತಾಯಿ . . . ಇರಿವನೊಳಂಬನ ರಾಜ್ಯಭಾರವನ್ನು ನಿರೀಕ್ಷಿಸುತ್ತಿದ್ದಳು (ಮೊಳಂಬ. ೫೩). [ಸಂ.]

**ರಾಜ್ಯಭಾಷೆ** (ನಾ). ರಾಜ್ಯದ ಅಧಿಕೃತಭಾಷೆ : ಒಡಂಬಟ್ಟಿರುವ ಜನಕ್ಕೆ ರಾಜ್ಯಭಾಷೆಯಲ್ಲಿ "ಪ್ರಜೆ" ಎಂದು ಹೆಸರು (ರಾಜ್ಯಶಾ. ೪೫). [ ಸಂ. ರಾಜ್ಯಭಾಷಾ. ]

**ರಾಜ್ಯಭ್ರಂಶ** (ನಾ). ರಾಜ್ಯವನ್ನು ಕಳೆದುಕೊಳ್ಳುವಿಕೆ; ರಾಜ್ಯಚ್ಯುತಿ : ಕ್ರೀಡುದೆಮಗೆ ವನಪ್ರವಾಸದ ಖೇದ . . . ಹೋದ ರಾಜ್ಯಭ್ರಂಶ ಬಹಳವಿಷಾದ ಬೀತುದು ನಿಮ್ಮ ಕಾರುಣ್ಯೋದಯವುಯಮಗಾಯ್ತಲಾ (ಕುವ್ಯಾಭಾ. ೦೦-೨೯). [ಸಂ.]

**ರಾಜ್ಯಭ್ರಷ್ಟ** (ನಾ). ರಾಜ್ಯದಿಂದ ಹೊರಹಾಕಲ್ಪಟ್ಟವನು ; ರಾಜ್ಯಚ್ಯುತ : ರಾಜ್ಯಭ್ರಷ್ಟಂಗೆ ತ್ಯಾಗಭೋಗವುಂಟೆ (ಸಕವ.ಸಂಪುI. ೩೦೦-೬೦);

ಮುಳಿದು ವಾಸಿಷ್ಠಮುನಿ ಕೊಟ್ಟ ಶಾಪದೊಳು ಕುಲವಳಿದು ರಾಜ್ಯಭ್ರಷ್ಟನಾಗಿ ಚಾಂಡಾಲತ್ವವಳವಟ್ಟು (ಹರಿಶ್ಚ. ೯-೩೯); ಹೈದರನು ರಾಜ್ಯಭ್ರಷ್ಟನಾದನೆಂಬ ಸಮಾಚಾರವನ್ನು ತಿಳುಹಿ . . . ಮರಾಟೆಯವರ ದಳವನ್ನು ಕಳುಹಿಸಿದನು (೭ಢಿಳ. ೯೯). [ಸಂ.]

**ರಾಜ್ಯಲೋಭ** (ನಾ). = ರಾಜ್ಯದಾಹ : ಮಣಿಯದೆ ರಾಜ್ಯಲೋಭವಶದಿಂ ಪುರುಷಾರ್ಥಮನೊಕ್ಕು ಪಾರ್ಥಿವಾಗ್ರಣಿಗಳನೇಕರುಂ ಜವನ ದಾಡೆಯೊಳಟ್ಟಿದರ್ (ಕೃಷ್ಣ. ೦೩-೭೪). [ಸಂ.]

**ರಾಜ್ಯವಿಚ್ಯುತ** (ನಾ). = ರಾಜ್ಯಭ್ರಷ್ಟ : ರಾಜ್ಯವಿಚ್ಯುತನಾದ ಚಕ್ರವರ್ತಿಯೆಂಬ ಕ್ಷುದ್ರದೇವತೆಯನ್ನು ಸೇವೆಮಾಡಿದುದರಿಂದ ನನ್ನ ತಂದೆಯು ಬಹುಕಷ್ಟಗಳನ್ನು ಅನುಭವಿಸಿರುವನು (ರಾಜಾಮು. ೯೬). [ಸಂ.]

**ರಾಜ್ಯವಿಭ್ರಂಶ** (ನಾ). = ರಾಜ್ಯಭ್ರಂಶ : ಚಿರಂತನಭವದ ಕಿಲ್ಬಿಷ ಕರ್ಮಪಾಕಪ್ರಪರ ದುರಿಯೋಧನನ ಸವ್ಯಪದೇಶಮಾತ್ರದಲಿ ಎಮಗೆ ರಚಿಸಿತು ರಾಜ್ಯವಿಭ್ರಂಶವನು (ಕುಮಾ.ಗ. ೦೦-೪೪). [ ಸಂ. ]

**ರಾಜ್ಯವ್ಯಸನ** (ನಾ). ಸಪ್ತವ್ಯಸನಗಳಲ್ಲಿ ಒಂದು : ರಾಜ್ಯದ ಚಿಂತೆ : ತನುವ್ಯಸನ ಮನೋವ್ಯಸನ ಧನವ್ಯಸನ ರಾಜ್ಯವ್ಯಸನ . . . ಸೇವಕವ್ಯಸನವೆಂಬ ಸಪ್ತವ್ಯಸನದಿಂ ಹಸಂಗೆಟ್ಟು (ಬಸವ. ೦೯೭); ರಾಜ್ಯವ್ಯಸನವೆತ್ತಿದಲ್ಲಿ ವಾಹನ ವಸ್ತ್ರಾಭರಣ ಅನುಲೇಪನ ತಾಂಬೂಲಂಗಳಂ ಬಯಸುತ್ತಿಹನು (ವಚನ. II. ೦೩೪). [ಸಂ.]

**ರಾಜ್ಯಶಾಸನ** (ನಾ). ರಾಜ್ಯದ ಆಡಳಿತಪಕ್ಷವು ಪ್ರಕಟಿಸುವ ಕಟ್ಟಳೆ,– ಆಜ್ಞೆ : ರಾಜ್ಯಶಾಸನಕ್ಕೆ ವಿಧೇಯನಾಗಿ ನಡೆದುಕೊಳ್ಳುವುದು (ರಾಜ್ಯಾಂಗ. ೧೩೦). [ಸಂ.]

**ರಾಜ್ಯಶಾಸ್ತ್ರ** (ನಾ). ರಾಜ್ಯದ ಆಡಳಿತವನ್ನು ವಿವರಿಸುವ ಶಾಸ್ತ್ರ ; ರಾಜನೀತಿಶಾಸ್ತ್ರ : ರಾಜ್ಯಶಾಸ್ತ್ರದ ವಿಷಯ ಮನಸ್ಸಿಗೆ ಬಂದಾಗಲೆಲ್ಲ ಅಲ್ಲಿ ತಂಬೂರಿಯ ತಂತಿಗಳಂತೆ ಸಮಾಂತರವುಳ್ಳ ಎರಡು ವಿಚಾರಸರಣಿಗಳು ನಾದಮಾಡುತ್ತಿರುತ್ತವೆ (ರಾಜ್ಯಶಾ. ೩೦೬). [ಸಂ.]

**ರಾಜ್ಯಶ್ರೀಕ** (ನಾ). ರಾಜ್ಯಸಂಪತ್ತುಳ್ಳವನು : ಅತುಳತಪಶ್ರೀಕರನನುನ್ನತರಾಜ್ಯಶ್ರೀಕನವಧಿದರ್ಶನನಂ . . . ನೃಪತಿ ಭಕ್ತಿಯಿಂ ವಂದಿಸಿದಂ (ಚಂದ್ರಪ್ರ. ೩-೭೦). [ಸಂ.]

**ರಾಜ್ಯಸಭೆ** (ನಾ). = ರಾಜ್ಯಪರಿಷತ್ತು : ಕೇಂದ್ರಸರ್ಕಾರದಲ್ಲಿರುವ ವಿವಿಧರಾಜ್ಯಗಳಿಂದ ಆಯ್ಕೆಯಾದ ಸದಸ್ಯರ ಸಭೆ ; ಪಾರ್ಲಿಮೆಂಟಿನ ಮೇಲ್ಮನೆ (Council of State. ಶಬ್ದಾ. ೨೬). [ಸಂ. ರಾಜ್ಯಸಭಾ]

**ರಾಜ್ಯಸಿರಿ** (ನಾ). ರಾಜ್ಯದ ಸಂಪತ್ತು : ಪೂತುರೇ ಋಣವೆಂಬುದೆಮ್ಮೈಯ್ದೆ ಧಾತು ಕಲಿ ಮೂದಲಿಸಿ ಕರೆದರೆ ರಾಜ್ಯಸಿರಿಯೇಕೆ (ಕುಮಾ.ದ್ರೋ. ೦೫-೨೫). [< ಸಂ. ರಾಜ್ಯಶ್ರೀ]

**ರಾಜ್ಯಸೂತ್ರ** (ನಾ). ಆಡಳಿತದ ಅಧಿಕಾರ : ಮೃಗೇಶವರ್ಮ ರವಿವರ್ಮರ ಆಳಿಕೆಗಳ ಮಧ್ಯದಲ್ಲಿ ರಾಜ್ಯಸೂತ್ರಗಳನ್ನು ವಹಿಸಿರಬೇಕು (ಕದಂಬ. ೦೪); ರಾಮಚಂದ್ರರಾಯನು ರಾಜ್ಯಸೂತ್ರವನ್ನು ಸ್ವಾಧೀನಪಡಿಸಿಕೊಂಡು ಕೆಲವು ದಿನಗಳಲ್ಲಿಯೇ ಖಜಾನೆಯನ್ನೂ ಬರಿದು ಮಾಡಿದನು (ಕುಮಾರರಾ. ೨). [ಸಂ.]

**ರಾಜ್ಯಾಂಗ** (ನಾ). ೧. ಆಡಳಿತಕ್ಕೆ ನೆರವಾಗುವ ರಾಜ, ಪ್ರಧಾನಿ, ಸ್ನೇಹಿತ, ಬೊಕ್ಕಸ, ನಾಡು, ಕೋಟೆ ಮತ್ತು ಸೈನ್ಯ ಎಂಬ ಏಳು ಅಂಗಗಳು ; ಇವುಗಳ ಜೊತೆಗೆ ಪೌರ ಮತ್ತು ಪುರೋಹಿತ ಎಂಬೆರಡನ್ನು ಸೇರಿಸಿ ಕಿಟೆಲ್ ಅವರು ರಾಜ್ಯಾಂಗಗಳು ಒಂಬತ್ತು ಎಂದು ಹೇಳಿದ್ದಾರೆ : ಗಬಗಬ ಸುರಿದುವು ಕಣ್ಬನಿ ಪಟಲೆಪ್ಪದ ರೂಪುಗಳ್ಗೆ ರಾಜ್ಯಾಂಗಂಗಳ್ ಕಟಕುಟಮಾಗಿರ್ದುವು ತತ್ತಟಿಗುದಿದುವು ಭವನದೀರ್ಘಿ ಕಾಜಪ್ಪಜಲಂಗಳ್ (ಶಾಂತಿಪು. ೩-೦೦೬). ೨. ರಾಜ್ಯದ ಆಡಳಿತ ವ್ಯವಸ್ಥೆ : ರಾಜತ್ವ . . . ಅನೇಕ ನಾಯಕಪ್ರಭುತ್ವ –ಹೀಗೆ ರಾಜ್ಯಾಂಗವು ನಾಲ್ಕಾರು ಮಾರ್ಪಾಟುಗಳನ್ನು ಪಡೆದು ಬೆಳೆದಿದೆ (ರಾಜ್ಯಾಂಗ. ೧೦೮). [ಸಂ.]

**ರಾಜ್ಯಾಂಗಸಪ್ತಕ** (ನಾ). = ರಾಜ್ಯಾಂಗ ೧ : ಆಳುವ ನರಪತಿಗಳ ಸ್ವಾಮ್ಯಮಾತ್ಯ ಬಂಧು ಕೋಶ ರಾಷ್ಟ್ರ ದುರ್ಗ ಬಲಂಗಳೆಂಬ ರಾಜ್ಯಾಂಗ ಸಪ್ತಕದಿಂ (ಶಿವತ. ೨೪೪). [ಸಂ.]

**ರಾಜ್ಯಾದಾಯ** (ನಾ). ರಾಜ್ಯದ ಉತ್ಪತ್ತಿ,– ಹುಟ್ಟುವಳಿ : ರಾಜ್ಯಾದಾಯಕ್ಕೆ ಸಂಬಂಧಪಟ್ಟ ಎಲ್ಲ ವಿಧಿಗಳೂ ಶಾಸನವೆಂದೇ ಎನ್ನಿಸಿಕೊಳ್ಳುತ್ತವೆ (ರಾಜ್ಯಾಂಗ. ೭೩). [ಸಂ.]

**ರಾಜ್ಯಾಧೀನ** (ಗು). ರಾಜ್ಯಾಡಳಿತದ ಕೈಕೆಳಗಿರುವ ; ಸರ್ಕಾರದ ಹತೋಟಿಯಲ್ಲಿರುವ : ಕೇವಲ ಧರ್ಮ, ಮೂಲವಂಶ . . . ಅವುಗಳಲ್ಲಿ ಯಾವುದೊಂದರ ಆಧಾರದ ಮೇಲೆ ಮಾತ್ರವೇ, ಯಾವನೊಬ್ಬ ನಾಗರಿಕನಿಗೆ ರಾಜ್ಯಾಧೀನ ನೌಕರಿಯ ಅಥವಾ ಹುದ್ದೆಯ ವಿಚಾರದಲ್ಲಿ ಅಪಾತ್ರತೆಯುಂಟಾಗತಕ್ಕುದಲ್ಲ (ಭಾರಸ. ೯). [ಸಂ.]

**ರಾಜ್ಯಾಧ್ವರ** (ನಾ). ರಾಜಸೂಯಯಾಗ : ಸಿರಿಯ ವಲ್ಲಭನೊಲಿದು ರಾಜ್ಯಾಧ್ವರವನಾನಲು ಕಾಲಭಾಗ್ಯದ ಭರವ ಬಣ್ಣಿಪನಾವ (ಕುಮಾಸಭಾ. ೪೪-೫೭). [ಸಂ.]

**ರಾಜ್ಯಾನುಷ್ಠಾನ** (ನಾ). ಆಡಳಿತದ ಕೆಲಸವನ್ನು ವಿಧಿವತ್ತಾಗಿ ನಡೆಸುವುದು ; ರಾಜಕಾರ್ಯನಿರ್ವಹಣೆ : ನೀನೆಮ್ಮಂ ವಿಚಾರಿದೆ ರಾಜ್ಯಾನುಷ್ಠಾನಮನೊಡಂಬಡು (ಆದಿಪು. ೪-೯೦); ಅಂತು ವಿಷಾದವಿಮುಖನಂ ರಾಜ್ಯಾನುಷ್ಠಾನಾಭಿಮುಖನುಮಾಗಿ (ಚಂದ್ರಪ್ರ. ೨-೬೦). [ಸಂ.]

**ರಾಜ್ಯಾಪಹಾರ** (ನಾ). ರಾಜ್ಯವನ್ನು ಕಿತ್ತುಕೊಳ್ಳುವುದು : ಏನ ನೆನೆದ್ಯ ಮಗನೆ ಕುಂತೀಸೂನುಗಳ ರಾಜ್ಯಾಪಹಾರದೊಳೇನು ಬುದ್ಧಿವಿಳಾಸ (ಕುಮಾ.ಸ. ೦೨-೫೮). [ಸಂ.]

**ರಾಜ್ಯಾಭಿಲಾಷೆ** (ನಾ). ರಾಜ್ಯವನ್ನು ಪಡೆಯಬೇಕೆಂಬ ಬಯಕೆ,– ಅಪೇಕ್ಷೆ : ನಿನ್ನ ಸುತರು ದೃಢೈಕಸತ್ಯರು ನುಡಿದ ಕಾಲವ ನೂಕಿದರು ರಾಜ್ಯಾಭಿಲಾಷೆಗೆ ನೆರಹಿದರು ಬಲವ (ಕುಮಾ.ಉ. ೫-೨೩). [ಸಂ. ರಾಜ್ಯಾಭಿಲಾಷಾ]

**ರಾಜ್ಯಾಭಿಷವಣ** (ನಾ). ರಾಜನಾಗುವವನಿಗೆ ಮಾಡುವ ಅಭಿಷೇಕ ; ಪಟ್ಟಾಭಿಷೇಕ : ರಾಜ್ಯಾಭಿಷವಣಭವನದಂತೆ ಪೂರ್ಣಕುಂಭೋಪಶೋಭಿತಮುಂ . . . ಭದ್ರಲಕ್ಷಣಲಕ್ಷಿತಮುಮಪ್ಪ ಪಟ್ಟವರ್ಧನಮನೇಱಿ (ಮಲ್ಲಿಪು. ೫-೩೫). [ಸಂ.]

**ರಾಜ್ಯಾಭಿಷೇಕ** (ನಾ). = ರಾಜ್ಯಾಭಿಷವಣ : ಅಂತು ಭುವನತ್ರಯಚೂಡಾಮಣಿಯ ರಾಜ್ಯಾಭಿಷೇಕದೊಸಗೆಯುಂ ನಾಭಿರಾಜಾದಿರಾಜಸಭೆಗಱಿಪಿ (ಆದಿಪು. ೯-೬೬ ವ). [ ಸಂ.]

**ರಾಜ್ಯಾಭ್ಯುದಯ** (ನಾ). ರಾಜ್ಯಾಡಳಿತ : ರಾಜ್ಯಭಾರ : ಶ್ರೀಮಚ್ಚಾಳುಕಪೆರ್ಮಾನಡಿದೇವರು ತತ್ಪುತ್ರಿ ಶ್ರೀಪಂಪಾದೇವಿಯರ ರಾಜ್ಯಾಭ್ಯುದಯದಂದು (ಎಕ. IV. ಹುಣಸೂ. ೫೦-೩ ; ೭೭೨). [ಸಂ.]

**ರಾಜ್ಯಾರ್ಹ** (ನಾ). ರಾಜ್ಯದ ಆಡಳಿತಕ್ಕೆ ಯೋಗ್ಯನಾದವನು ; ಅರಸುತನಕ್ಕೆ ಅರ್ಹನಾದವನು : ಅರಸಂಗಮರಸಿಯರ್ಗಂ . . . ಶರೀರ ಸಂಸ್ಕಾರವಿಧಿಯಂ ವಿಧಿಪೂರ್ವಕಂ ನಿರ್ವರ್ತಿಸಿ ರಾಜ್ಯಾರ್ಹನಪ್ಪಿಂದ್ರನ ಮಗನು ಚಂದ್ರನಂ ಧರಾಭಾರಧುರಂಧರಂ ಮಾಡಿದರ್ (ಶಾಂತಿಪು. ೩-೯೬ ವ). [ಸಂ.]

**ರಾಟ** (ನಾ). ಮಲ್ಲಯುದ್ಧದ ಒಂದು ಪಟ್ಟು : ಉರ್ಬಿನೊಳೆಱಗುವ ಸೂಕರ್ನನೆಯ ಸಿಗ್ಗವಕ್ಕೆ ಎರ್ದೆಯೊಡ್ಡಿ ಸೋಂಕದ ಮುನ್ನಮೆ ಒರ್ಮೆಯ್ಕೊಳೊಲೆದು ತಪ್ಪಿಸಿ ಎಡೆಗೆಡಪುವಂತೆ ಕೆಡಪಿ ಬೆನ್ನೇಱಿಯು [ಯುಂ] ರಾಟದೊಳ್ಪಗಿದು ತನ್ನ ಸಾದಕದ ಚಳಕಮಂ ಮೆಱೆಯಲ್ಕೆ (ಕಳಮ. ೦೬೫-೩). [ದೇ. ತೆಲು. ರಾಟ, ರಾಟವು]

**ರಾಟಣ** ' ಜಾಟಣ ' ನೋ.

**ರಾಟಣಪೂ** (ನಾ). ಒಂದು ಸ್ಥಳದ ಹೆಸರು (?): ರಾಟಣಪೂ ವಿನ್ನಿಪ್ಪತ್ತ್ರಯ್ಗಣ್ಡಗಂ ವತ್ತ ತೆಱುವೊದು (ಎಕ. XIV. ತಿರುಮ. ೨೩೩-೬; ಸು. 800). [ ? ]

**ರಾಟಣೆ** ' ಜಾಟಣ ' ನೋ.

**ರಾಟವಣಿ** ' ಜಾಟಣ ' ನೋ.

**ರಾಟವಾಳ** ' ಜಾಟಣ ' ನೋ.

**ರಾಟವಾಳೆ** ' ಜಾಟಣ ' ನೋ.

**ರಾಟಳ** ' ಜಾಟಣ ' ನೋ.

**ರಾಟಳಕ** (ನಾ). (ಕರಾ) ಬಟ್ಟೆಯನ್ನು ಸ್ವಚ್ಛಮಾಡಲು ಬಳಸುವ ಒಂದು ಬಗೆಯ ಕಾಯಿ ; ಅಂಟುವಾಳದ ಕಾಯಿ : ಬಟ್ಟೆಯನ್ನು ಬೆಳ್ಳಗೆ ಮಾಡಲು "ರಾಟಳಕ"ದ ಕಾಯನ್ನು ಉಪಯೋಗಿಸುತಿದ್ದವು (ರಾಂಶ್ರ. III. ೦೪೯೦). [ ? ]

**ರಾಟಾಣ** ' ಜಾಟಣ ' ನೋ.

**ರಾಟಾಲ** ' ಜಾಟಣ ' ನೋ.

**ರಾಟಾಳ** ' ಜಾಟಣ ' ನೋ.

**ರಾಟಾಳತೇರು** (ನಾ). ಒಂದು ಬಗೆಯ ರಥ ; ತಿರುಗಣೆ ತೇರು : ಎಡವಲಯ್ಯನ ತೇರು ಬಲದಲಮ್ಮನ ತೇರು ರಾಟಾಳತೇರು ಕೈತೇರು ಗೊಂಬೆತೇರು ಹರಿದೂ ನಂಜಯ್ನ ಎಡಬಲಕೆ (ಹ್ಯಾಯು. ೩೭).
[ರಾಟಾಳ (<ಜಾಟಣ) + ತೇರು₂ (<ತೇರ್₂)]

**ರಾಟೆ** (ನಾ). ತೊಂದರೆ ; ಉಪದ್ರವ ; ಹಿಂಸೆ : ಬೇಟೆಯೊಳು ರತನಾಗಿಹನಾತನ ರಾಟೆಗೆ ಮೃಗ ನಿಲ್ಲವಲ್ಲಿ (ಶರ್ಶರಿ. ೬-೪೬); ಬಹಳದಿವಸ ಪ್ರವಾಳಭಸ್ಮ ತಕ್ಕೊಳ್ಳಲು ಈ ರಾಟೆಯು ತಪ್ಪುವದು (ಶಿಶಧೀ. ೭೦). ' ರಾವಡಿ ' ಪರಾ. [ದೇ.॥ ತೆಲು. ರಾಟು]

**ರಾಟೆ** ' ಜಾಟ್ಟ ' ನೋ.

**ರಾಟೆವಾಳೆ** ' ಜಾಟಣ ' ನೋ.

**ರಾಡಿ** (ನಾ). ೧. ಕೆಸರು : ಬಗ್ಗಡ : ನಾಡೊಳು ಪರಿವ ನಿರ್ಮಲಜಲದೊಳು ಬಲುರಾಡಿ ಕೂಡಿ ಸಾಗಿ ಪೋಗುವಂತೆ (ವೋಕ್ಷಂ. ೬೩-೩); ರಾಡಿಯ ನೀರೊಳಗೆ ಘಟಕದ ಪುಡಿ ಚೆಲ್ಲಿದರೆ, ರಾಡಿಯು ತಳಕ್ಕೆ ಕೂಡ್ರುತ್ತದೆ (ಮುಂಜಯು. ೫-೦೬೦). ೨. ಮಂದವಾದ ದ್ರವ,- ರಸ : ದ್ರಾಕ್ಷೀ ಜೋಡೀ ಖಾರದ ರಾಡಿ ತುಸಾ ಉಳಸದ. ಹಸನ್ ಮಾಡಿ ಮಿಾಸೀ ಮಾತ್ರ ಒರಿಸಿಕೊಂಡು ಹೊರಗ ಬರಬೇಕು (ಹೂಸಂಶಾ. ೦೫); ಬಳ್ಳಿಯ ತೊಪ್ಪಲನ್ನು ಹರಿದು ಅದನ್ನು ಒಂದು ಕಲ್ಲಿನ ಮೇಲೆ ಗುಂಡಿನಿಂದ ಅರೆದು ರಾಡಿಯನ್ನು ಮಾಡಿ (ವೀಐವು. ೯೩). ೩. ಹೊಲಸು ; ಕೊಳಕು : ದೇಹದ ರಾಡಿಯ ತೊಳೆಕೋಳ . . . ಹೇಸಿ ನಿನ ಮಾರಿ ತೊಳೆಕೋಳ (ಳರ್ಪಾಕ. ೨೩೯). ೪. (ಆಲಂ) ರಂಪ ; ಗೊಂದಲ ; ರಾದ್ಧಾಂತ : ಇದೆಲ್ಲಾ ರಾಡಿ ಆ ಕೃಷ್ಣಾಜೀದೇ. ಮೊದಲಿಂದಲೂ ಅವಗೆ ನನ್ನ ಕಂಡರಾಗುವುದಿಲ್ಲ (೬೦೮೦. ೯೭); ನಮ್ಮ ಮನೆಯಾಗಿನ ರಾಡಿ – ಹೊಲಗೇರಿ ಹೊರಗ ಹೋಗೂದು ಬ್ಯಾಡಾ (ರೀಶಹ. II. ೩೩೨). ೫. ದುರುದ್ದೇಶ ; ಕೆಟ್ಟ ಭಾವನೆ : ನನ್ನ ಮಿದುಳಿನಲ್ಲಿಯ ರಾಡಿಯನ್ನು ತೊಳೆದು ಸ್ವಚ್ಛಮಾಡುವುದೇ ನನ್ನ ಮುಖ್ಯಉದ್ದೇಶ (ಮುಕ್ತ. ೯೨).

**ರಾಡಿಯಾಗು** = ಕೆಸರಾಗು ; ಬಗ್ಗಡವಾಗು : ಆದೇ ಬಿದ್ದ ಮಳೆಯಿಂದ ರಾಡಿಯಾದ . . . ನೀರನ್ನೂ ಕುಡಿಯಬಾರದು (ಅಶ್ವಾಂಗ. ೯೩); ಅವನ ಮುಖ, ತಲೆ, ಮೈಯೆಲ್ಲ ರಾಡಿಯಾಯಿತು (ಶಂಗಾಹ. ೭೦).

**ರಾಡಿಯಾಟ** = ಕೆಸರನ್ನು ಎರಚಿ ಆಡುವುದು : ವಿಷಮಸಂಸಾರಸಾಗರದಲ್ಲಿ ' ರಾಡಿಯಾಟ'ವನಾಡುತ್ತ . . . ಬಡಿದಾಡಿ (ಶೀಳಿವತಾ. ೦೨೬ ಕೃಶ್ಯಾಪಶ). [← ಮರಾ. ರಾಡ್, ರಾಡೀ, ರಾಹಡೀ./ತುಳು. ರಾಡಿ]

**ರಾಡು** (ನಾ). ೧. ಮುಖ್ಯದ್ವಾರದ ಮೇಲೆ ಅಡ್ಡಲಾಗಿ ಕಟ್ಟಿರುವ ಕಟ್ಟಡ,—ರಚನೆ : ಮೂಡಲ ಬಾಗಿಲ ರಾಡಿನಲ್ಲಿರುವ ಬಡಗ ಚಾರಿ ವೆಂಕಟಾಚಲನ ಕೊತ್ತಲದಲ್ಲಿ ೧ . . . ಮೈಸೂರುಬಾಗಿಲ ರಾಡಿನಲ್ಲಿ ಜಯವಿಜಯ ಕೊತ್ತಲಗಳಲ್ಲಿ ೨ . . . ಫಿರಂಗಿಗಳನ್ನಿರಿಸಿ (ಮಹಾಮಂ. I. ೦೦೩). ೨. ಬಾಗಿಲಿಗೆ ಅಡ್ಡಲಾಗಿ ಹಾಕುವ ಪಟ್ಟಿ ; ಅಗಳಿ : ಪಾರುಪತ್ತೆಗಾರನು ಬಾಗಿಲನ್ನು ಹಚ್ಚಿ ರಾಡು ಹಾಕಿದನು (ಕಂಗಾಳ್ಯ. ೫೩೩).
[?./ತೆಲು. ರಾಡು = ಸ್ತಂಭ./ಇಂ. Rod = ಕಂಬಿ, ಪಟ್ಟಿ]

**ರಾಡುಬಾಗಿಲು** (ನಾ). ಅಗಲವಾದ ಬಾಗಿಲು (?) : ಕಣವ ರಾಡು ಬಾಗಿಲ ಹತ್ತಿರಕ್ಕೆ ಹೋಗಿದ್ದ ಸಾಹುಕಾರ ಭದ್ರಪ್ಪನವರ ಕಾಲುಗಳ ಮೇಲೆ ಬಿದ್ದು (ರವಾಶ. ೬). [ರಾಡು₁ + ಬಾಗಿಲು (< ಬಾಗಿಲ್)]

**ರಾಣ** (ನಾ). ರಾಜ ; ದೊರೆ : ಕಂಕೆಯಬಾರದ ನನ್ನಪಯ್ಯರಾಣನ ತನೆ(ನ)ಯಂ ವಿವೇಕನಿಧಿ ಕತ್ತವಮಹೀಭುಜನೆಂಬ ಪೆಮ್ಮರ್ಗಂ (ಎಪ. XVI. ೪-೪೧ ; 978). [< ಪ್ರಾ. ರಾಣ./ಸಂ. ರಾಜನ್]

**ರಾಣತೆಱೆ**[3] (ನಾ). ರಾಜನಿಗೆ ಕೊಡಬೇಕಾದ ತೆರಿಗೆ : ಪಂಚಕಾರುಕ ರಾಣದೆಱೆಯುಂ ಶ್ರೀಮದ್ರಾಜಗುರುಲೋಕಾಭರಣಗುರುದೇವರ್ಗ್ಗೆ . . . ಬಿಟ್ಟ ಧರ್ಮ್ಮ (ಸೌಇಇ. IX-i. ೩೨೩-೫ ; 1107). [ರಾಣ + ತೆಱೆ₃]

**ರಾಣವೆ** ' ರಾಣುವೆ ' ನೋ.

**ರಾಣಾರಂಪು** ' ರಣರಂಪ ' ನೋ.

**ರಾಣಿ** (ನಾ). ರಾಜನ ಹೆಂಡತಿ ; ಅರಸಿ : ಭಾಗಿಯಬ್ಬೆರಾಣಿಗೆ ಸುತ್ × × × (ಎಪ. XVIII. ೧೬೬-೫೦ ; 1146) ; ಭೂಮಿಗೆ ಕಡುಚಾಣೆ ರಾಣಿರಮಣೀಯತೆಯುಂ ಪಡೆದಿರ್ದಳಾಕ್ಷಣಂ (ಶಾರಳು. ೬-೧೦೦); ರಾಣಿಯರ ನವರತ್ನದ ತೊಟ್ಟಿಗಳೆಹುಮರ್ತಿಯಲಿ (ಕೆಂಪಬಿ. ೬-೪೨).

**ರಾಣಿಯ ವಾಸ**=ಅರಸಿಯು ವಾಸಮಾಡುವ ಸ್ಥಳ ; ಅಂತಃಪುರ : ಈ ಬರ್ಪುದೇಂ ರಾಣಿಯ ವಾಸಂ ನೋಡಿಮೆಂಬಂತೆಸೆದುದು ಪಲವುಂ ತಂಡದಿಂ ಪೆಂಡವಾಸಂ (ಅರ್ಧ. ೧೦-೪೫) ; ಚಿತ್ರಮಂ ತಳೆದು ವಿಲಾಸಮಂ ಮೆಱೆವ ರಾಣಿಯ ವಾಸದ ಬಳ್ಳಿಮಾಡದುಜ್ವಳಮಣಿಭಿತ್ತಿ ಚೆಲ್ವನೊಳಕೊಂಡು (ಕಂಶಿವಶಾ. ೦-೦೨೮). [< ಪ್ರಾ. ರಾಣೀ./ಸಂ. ರಾಜ್ಞೀ]

**ರಾಣಿಕ** (ನಾ). ಹೊಂದಾಣಿಕೆ ; ಸಾಮಂಜಸ್ಯ : ರಾಜಸೂಯದ ಹೋಱಗೆ ನಿನ್ನದು ರಾಣಿಕವ ನಾನಱಿಯೆನೆಮ್ಮಭ್ರಾಭಿಮಾನಪ್ರಾಣದೊಡೆಯನಲೆ (ಕುವ್ಯಾಸ. ೨-೫೦) ; ಭೀಷ್ಮನ ವಾಣಿ ವಿಷವೈ ನಿನಗೆ ವಿದುರನು ರಾಣಿಕವ ನಿನ್ನಲ್ಲಿ ಬಲ್ಲನೆ (ಕುವ್ಯಾಸ. ೨೦-೦೨). [ ? ]

**ರಾಣಿಗವಲ್ಲ** (ನಾ). ಒಬ್ಬಾತನ ಹೆಸರು : ರಾಣಿಗವಲ್ಲಂ ಪಲರಂ ತಳ್ತಿಱಿದು ಸತ್ತು ಸುಗತಿಗೆ ಸನ್ದಂ (ಎಕ. VII. ಹೊನ್ನಾ. ೨೩-೪ ; 934). [ ? ]

**ರಾಣಿಗೆದ್ದಲು** (ನಾ). ಗೆದ್ದಲುಹುಳುಗಳಲ್ಲಿ ರಾಣಿಯಂತೆ ಇರುವ ಹುಳು ; ಮೊಟ್ಟೆಯಿಡುವ ಹುಳು ; ತಾಯಿಸಾಚಲು : ರಾಣಿಗೆದ್ದಲು (ತಾಯಿಸಾಚಲು) ಪ್ರತಿನಿಮಿಷ ಅರವತ್ತರಂತೆ ಲಕ್ಷಾಂತರ ಮೊಟ್ಟೆಗಳನ್ನಿಡುತ್ತದೆ (ಕೀಟಶಿ. ೦೦೬). [ರಾಣಿ + ಗೆದ್ದಲು (< ಗೆದಲ್)]

**ರಾಣಿಜೇನು** (ನಾ). ಜೇನುಹುಳುಗಳಲ್ಲಿ ರಾಣಿಯಂತೆ ಇರುವ ಹುಳು,- ಮೊಟ್ಟೆಯಿಡುವ ಹುಳು : ರಾಣಿಜೇನು ಮತ್ತು ಇರುವೆಗಳು ಬಾಯಿಯ 'ಫೆರೊಮೋನ್'ಗಳನ್ನು ಸ್ರವಿಸುತ್ತವೆ (ಕೀಟಶಿ. ೯೩).
[ರಾಣಿ + ಜೇನು₁ (< ಜೇನ್₁)]

**ರಾಣಿವಾಸ**, ರಾಣೀವಾಸ (ನಾ). ೧. ಅರಮನೆಯಲ್ಲಿ ರಾಣಿಯರೂ ಹೆಂಗಸರೂ ವಾಸಿಸುವ ಭಾಗ ; ಜನಾನಾ ; ಅಂತಃಪುರ : "ರಾಣಿವಾಸವೆ ಪೆಂಡವಾಸ" (ಕ್ಮುಕ್ತಿ. ೬೨) ; ಬಾಣಸಿನ ಮಜ್ಜನದ ರಾಣಿವಾಸದ ಮನೆಗಳುಮಂ (ಕಂಶಭಾ. ೫-೯೭ ಪ); ರಾಗಿಯೆನಿಪ್ಪವನ ರಾಣಿವಾಸದ ಕಾಪುಂ

. . . ಅತ್ಯಂತ ದುಃಖಮಂ ಪುಟ್ಟಿಸುಗುಂ (ರರ್ಜುನ. ೬-೦೦೨) ; ಕೀಚಕನು . . . ರಾಣಿವಾಸಕ್ಕೆ ಹೋದನು (ಶೀತಿಶಂ. IX, ೬). ೨. ಅಂತಃಪುರದಲ್ಲಿ ವಾಸಮಾಡುವ ಅರಸಿಯರು ಮುಂತಾದವರು : ಎಲೆ ದೇವ ನಿಮ್ಮ ತೊತ್ತಿರು ನೂರ್ವರುಂಟಲ್ಲಿ . . . ಎಂದು ತನ್ನಯ ರಾಣಿವಾಸಮುಂ ಕರೆಸುತ್ತ (ಇಹರ. ದೇ. ೩೫-೦೦) ; ಓವೊ ತಪೋವನವಧುಗಳ ಲಾವಣ್ಯಂ ರಾಣಿವಾಸಕರಿದೆನೆ ಪಡೆಯಲ್ಕೇವೇಳ್ದಪನು (ಶಾಕುಂತ. ೬-೦೭). ರಾಣೀವಾಸ: ೧. ಮಾಣಿಕ್ಯಸಿಂಹಾಸನದೊಳು ಕೃಷ್ಣ ಕುಳಿತು . . . ರಾಣೀವಾಸಕ್ಕೆ ವನವನೊಪ್ಪಿಸಿದ (ಪೋಹಕ. ೪-೩೬) ; ರಾವಣನ ರಾಣೀವಾಸವು ಬಲು ದೊಡ್ಡದು (ಶಾಕಿತ. ೯೯).

**ರಾಣಿವಾಸವಾಗು** = ಅಂತಃಪುರದವಳಾಗು ; ಅರಸಿಯಾಗು ; ರಾಣಿಯಾಗು : ಜನಕಮಹೀಶಸುತೆ ನಿನಗೆಂದು ಭವಬಾಣಾಸನದ ಭಾರಣೆಯ ಬಿಗುಹಿನ ಜಗುಳುದಲೆಯಿಂದ ದಾಶರಥಿಗಾ ರಮಣಿ ರಾಣೀವಾಸವಾದಳು (ತೊರರಾ. ೩-೭-೦೭). [ ರಾಣಿ + ವಾಸ$_2$ ]

**ರಾಣಿವೆ** ' ರಾಣುವೆ ' ನೋ.

**ರಾಣಿಸಾಲು** (ನಾ). ಇಸ್ಪೀಟುಆಟದಲ್ಲಿ ಒಂದು ಬಗೆ : ಯಾರೋ ಪರಸ್ಥಳದ ಜನ ; 'ರಾಣಿಸಾಲು' ಆಡುವುದಕ್ಕೆ ಬಂದಿದ್ದವರು (ಬೆಳುವು. ೩೩). [ ರಾಣಿ + ಸಾಲು$_2$ (< ಸಾಲ್$_2$) ]

**ರಾಣೀವಾಸ** ' ರಾಣಿವಾಸ ' ನೋ..

**ರಾಣುವೆ**, ರಾಣವೆ, ರಾಣಿವೆ, ರಾಣ್ಯ (ನಾ). ೧. ಪಡೆ ; ಸೈನ್ಯ ; ದಳ : " ರಾಣುವೆಯೆನೆ ಸೇನೆ " (ಭಾರತ. ೬೦) ; ಏಕಛತ್ರರಾಜನು ಹಲವು ಛತ್ರುವ ಕೊಟ್ಟು ರಾಣುವೆಗೆ ಹೊಲಬಿಗರ ಮಾಡಿದಂತೆ (ಕೃಶೋಗ. ೬೩) ; ರಾಮಚಂದ್ರದಣಾಯಕ್ಕರು ಸಮಸ್ತರಾಣುವೆ ಪ್ರಾರುಪಥ್ಯವನು ಚಿತ್ತಯಿಸಿ (ಶಾಂತಿ. IX-ii, ೯೬೦-೩ : 1465) ; ಪಿಲಾತನು ಯೇಸುವಿಗೆ ಮರಣಾಜ್ಞೆಯನ್ನು ವಿಧಿಸಿ ಅವನನ್ನು ರಾಣುವೆಯರಿಗೆ ಒಪ್ಪಿಸಿದನು (ಗೊರ್ಮೊ.ಶಾ. viii, ಮುನ್ನುಡಿ). ೨. ಪರಿವಾರ : ತನ್ನಿಂದ್ರಜಾಲದ ಮಹಿಮೆಗಿಹಿಮೆಯುಂ ನೋಡುವಂ ನಿನ್ನ ರಾಣುವೆಯೊಳುಳ್ಳಲ್ಲ ಬಲ್ಲವರ್ಗಳಂ ನಿಖಿಳಜನನಿಚಯಮುಂ ಬರಿಸು (ಶವ್ಯರಾ. ೯-೧೮). **ರಾಣವೆ**: ೧. ಸಕಲ ರಾವುತರಾಣವೆಯಂ ಕಳುಹಿಸಿ (ಶಾರಂಗ. ೦೩). **ರಾಣಿವೆ** : ೧. ಸಕಲ ರಾಣಿವೆ ಸಹಾ ಯದುರುಗೊಂಡು (ಯುವಳ. ೦೩೮). **ರಾಣ್ಯ** : ೧. ಭರದಿ ಮಾಡಲು ರಾಣ್ಯ ಕೈಕೊಂಡು ಪೊಗಳುವಕ್ಕರಿಗರ ಸಂದಣಿಯೊಳಗೆ (ಶ್ಯಾವತ. ೪೦-೨೩) ; ರಾಣ್ಯವೆಂದರೆ ಸೇನೆ ಎಂದು ಒಂದು ಕಡೆ ಪೋಲೀಸ್ ಅಥವಾ ಕಂದಾಚಾರದ ಸಿಬ್ಬಂದಿ ಎಂದು ಒಂದು ಕಡೆ ಅರ್ಥವಾಗಬಹುದು. ಆ ಕಾಲದಲ್ಲಿ ಎರಡು ಚಾಕರಿಯೂ ವಿಂಗಡಿಸಲ್ಪಡದೇ ಒಟ್ಟಿಗೇ ಸೇರಿಕೊಂಡಿರ ಬಹುದು (ಶಾಳಗಾ. ೯೬)..

**ರಾಣೀರು** = ಸೈನ್ಯದವರು ; ಪಡೆವಳರು : ಬಂದರು ರೈತರು ರಾಣೀರು ಗುರಿಕಾರರು (ಕರ್ನಾಕ. ೨೭೮).

[ದೇ.೩ ತಮಿ. ರಾಣುವ, ರಾಣು ; ಮಲ. ತೆಲು. ರಾಣುವ; ತುಳು. ರಾಣುವೆ, ರಾಣ್ಯ ]

**ರಾಣೆಯ** (ನಾ). ದೊರೆ ; ರಾಜ : ಸ್ವಸ್ತಿ ಪ್ರಥ್ವಿಯ ಬಲುಗಿದೇವರಾಣೆಯನು ನಾಗರಖಂಡನಾಡುಮಂ ಸುಖಸಂಕಥಾವಿನೋದದಿಂ ರಾಜ್ಯಂಗೆಯ್ಯುತಮಿರೆ (ಎಕ. VII (S), ೩೬೦-೨೦ ; 1175) ; ಶ್ರೀಮಂಡಳಿಕಮಹಾದೇವರಾಣೆಯರು (ಕೊಲ್ಲಾ.ಶಾ.೨೦-೨೮ ; 1278). [<ಪ್ರಾ. ರಾಣಯ]

**ರಾಣ್ಯ** ' ರಾಣುವೆ ' ನೋ.

**ರಾತಲು**, ರತ್ತಲು, ರಾತ್ತ್ಲು (ನಾ). ನಲುವತ್ತು ತೊಲಗಳ ಒಂದು ತೂಕ : ಇಂಗ್ರೇಜ ರಾತಲು ಎರಡಕ್ಕೆ ಪಣ್ಣುಸೇರು ಒಂದು (ರಾಜೇಂದ್ರ. ೦೨೯) ; ಒಬ್ಬ ಪ್ರಾಯಸ್ಥನ ಸಮತೂಕಆಹಾರವೆಂದರೆ . . . ೧೨ ಔನ್ಸಿನಿಂದ ಒಂದು ರಾತಲಿನವರೆಗೆ ಶರ್ಕರಪಿಷ್ಟಗಳು ಇರಬೇಕು (ಆರುಶಾ. ೬೦). **ರತಲು** : ಒಂದು ರತಲು ನಾಲ್ವತ್ತುರೂಪಾಯಿ ತೂಕವುಳ್ಳದ್ದು (ಮುಂಬಯಿ. ೬೦). **ರಾತ್ಲು** : ಒಂದು ಖಂಡಿತೂಕದ ಗೋಧಿಕಾಳನ್ನು ಬೆಳೆಯಿಸಲು ಸಾಧಾರಣ ೧೨ ರಾತ್ಲು ಸಾರಜನಕವೂ . . . ೧೨ ರಾತ್ಲು ಪೊಟೇಸಿಯಂ ಕ್ಷಾರವೂ ಬೇಕಾಗುವುದು (ಬಾಂಕ್ರ. II, ೬೯೩) ; ಒಂದು ರಾತ್ಲು ಭಾರದ ಸಾಮಾನು ಹೊರಲಿಕ್ಕೆ ಸುಮಾರು ೫೦ ರೂಪಾಯಿ ತಗಲುತ್ತದೆ (ವಿರಿವ್ಯ. ೦೪೧). [←ಅರ. ರತ್ಲ್ ; ಹಿಂ. ರಾತುಲ್ ; ಮರಾ. ರತಲ್, ರತ್ತಲ್./ಪೋರ್ಚು. Arratel]

**ರಾತಾರಾತ್ರಿ** ' ರಾತೋರಾತು ' ನೋ.

**ರಾತೀಪು** ' ರಾತೀಬು ' ನೋ.

**ರಾತೀಬು**, ರಾತೀಪು (ನಾ). ೧. ಪುಷ್ಟಿಕರವಾದ ಆಹಾರ; ಸತ್ತ್ವವುಳ್ಳ ಆಹಾರ : (+). ೨. (ಸಾಮಾನ್ಯವಾಗಿ) ದಿನನಿತ್ಯದ ಆಹಾರ : ಮನೆಯಲ್ಲಿ ರಾತೀಬಿಗೆ ಗತಿಯಿಲ್ಲ, ರತ್ನಪಡಿಯ ವ್ಯಾಪಾರ (ಗಾದೆ). **ರಾತೀಪು** : ೧. ಆಡು, ಕುರಿ ಮುಂತಾದ ರಾತೀಪಿನ ಸಾಮಾನು ಹೇರಳವಾಗಿ ತರಿಸಿ (ರಾಜೇಂದ್ರ. ೬೪). ೨. ಹುಟ್ಟಿಸಿದ ದೇವರು . . . ನನಗೂ ರಾತೀಪು ಕೊಟ್ಟ (ಶಂಗೂಂ. ೬೩) ; ಮೂರುದಿನಗಳಿಂದ ರಾತೀಪು ತಿನ್ನದೇ ಹಸಿದಿರುವೆ (ಶ್ರೀರಾಮು. ೦೯).

[←ಅರ. ಹಿಂ. ರಾತಿಬ್ ; ಮರಾ. ರತೀಬ್]

**ರಾತು** (ನಾ). ಹುಲುಸು ; ಸೊಂಪು : ರಾತಾಗಿ ಬೆಳೆದ ಮೆಣಸೀಯ ಮೆಳೆಯಲ್ಲಿ ಮೋಸಮಾಡಿದಳು ಗೆಣೆರಾತಿ (ಹಳ್ಳಿಯ. ೬೦). [ ? ]

**ರಾತೋರಾತ್** ' ರಾತೋರಾತು ' ನೋ.

**ರಾತೋರಾತು**, ರಾತಾರಾತ್ರಿ, ರಾತೋರಾತ್, ರಾತೋರಾತ್ರಿ, ರಾತ್ರಾರಾತ್ರಿ, ರಾತ್ರೋರಾತ್ರಿ (ಅ). ರಾತ್ರಿಯಲ್ಲಿಯೆ : ರಾತ್ರಿ ಮುಗಿಯುವುದರೊಳಗಾಗಿ : ತಿಮ್ಮಣ್ಣನಾಯಕನು ರಾತೋರಾತ್ರು ನಾಗತಿಯವರೊಡನೆ . . . ದುರ್ಗದ ಗುಡ್ಡಕ್ಕೆ ಬಂದನು (ಶಕ್ರಶಾ. ೬). **ರಾತಾರಾತ್ರಿ** : ಮುತ್ತಣ್ಣನು ಸಂಗಡಯಿದ್ದ ಕೊಡಗಜನ ಯಾವತ್ತು ತೆಗೆದುಕೊಂಡು ರಾತಾರಾತ್ರಿಯೇ ಕಣ್ಣೂರಿಗೆ ಹೊರಟುಹೋಗುವಲ್ಲಿ (ರಾಜೇಂದ್ರ. ೦೨). **ರಾತೋರಾತ್** : 'ರಾತೋರಾತ್' ಹೀಗೆ ಜಾತಕ ಹಿಡಿದು ಹೋಗುವ ಅವಸರ (ಮೂರುರಾ. ೨೨೦). **ರಾತೋರಾತ್ರಿ** : ತೆಂಗಿನ ಮಡಲಿನ ಸೂಟಿಯೊಂದನ್ನು ಉರಿಸಿಕೊಂಡು ರಾತೋರಾತ್ರಿ ಹೊರಟೆ ಬಿಟ್ಟಿದ್ದರು (ಜಗುಬ. ೬೦) ; ದ್ಯಾವಮ್ಮ ಇವತ್ತು ಬರೋದಿಲ್ಲ . . . ಅಂತ ಅವಳಣ್ಣ ತನಿಯ ಬಂದು ರಾತೋರಾತ್ರಿ ಹೇಳಿದ (ಹೊಸಕ್ಷಿ. ೪೮). **ರಾತ್ರಾರಾತ್ರಿ** : ಕಾಡಿನಲ್ಲಿ ಗುಟ್ಟಾಗಿ ರಾತ್ರಾರಾತ್ರಿ ಕುದುರೆಹಿಂಡನ್ನು ಮೇಯಿಸುವ ಸಲುವಾಗಿ ಅಟ್ಟಿಕೊಂಡು ಹೋಗುತ್ತಿದ್ದರು (ಕೃಷರು. ೨೯೩) ; ರಾತ್ರಾರಾತ್ರಿಯೇ ಆತ ಕನ್ನಾನೂರಿಗೆ ಹೋಗಿ . . . ಪೋರ್ಚುಗಲ್ಲಿಗೆ ತನ್ನ ಮರುಪ್ರಯಾಣವನ್ನು ಆರಂಭಿಸಿದನು (ಕೃವಾಇ. II, ೨೨೬). **ರಾತ್ರೋರಾತ್ರಿ** : ರಾತ್ರೋರಾತ್ರಿ ಯುದ್ಧಸಿದ್ಧತೆಗಳು ನಡೆದವು (ರೂಢಿ).

[←ಮರಾ. ರಾತೋರಾತ್, ರಾತೋರಾತೀ]

**ರಾತೋರಾತ್ರಿ** ' ರಾತೋರಾತು ' ನೋ.

**ರಾತ್ಕೃತ** (ನಾ). [ಕಾಮಶಾ] ರತಿಕ್ರೀಡೆಯ ಒಂದು ಧ್ವನಿ : ಸೀತ್ಕೃತಂ ಹೂಂಕೃತಂ . . . ರಣಿತ ಮೃದುರತಮಾಹತಂ ದೂತ್ಕೃತಂ ಶ್ವಸಿತ ಮುರುರಾತ್ಕೃತಂ [ಶಾಕಾಂ. ದಾತ್ಕೃತಂ, ಫಾತ್ಕೃತಿ] ಎನಿಪ್ಪೀ ಚಮತ್ಕೃತಿಯನಱಿದು ರಮಿಸುವನೆ ಚತುರಂ (ಜನವ. ೬-೫೦). [ಸಂ.]

**ರಾತ್ರಾರಾತ್ರಿ** ' ರಾತೋರಾತು ' ನೋ.

**ರಾತ್ರಿ** (ನಾ). ೧. ಇರುಳು ; ನಿಶೆ ; ರಜನಿ : "ತಮಾ . . . ಶ್ಯಾಮಾ, ರಾತ್ರಿಃ –ಈ ೧೯ ಇರುಳಿನ ಪೆಸರ್" (ಹಲಾಯು. ೦೬-೦೦೭) ; ಅಗ್ನಿಕುಂಡ

ದುಂ ದೇದೀಪ್ಯಮಾನಮಾದುದು . . . ರಾತ್ರಿಯಾಕಾಶದಲಿ ಕಾಣ್ಬೊಂದು ತಾರಾಗರ್ಭದಂತೆ (ಶ್ರೀಣಾಚು. ೦೦-೨೬೪). ೨. ಇರುಳಿನ ಕತ್ತಲೆ,— ಅಂಧಕಾರ. ೩. ಅರಿಸಿನ. [ಸಂ.]

**ರಾತ್ರಿಂಚರ** (ನಾ). ೧. ರಾಕ್ಷಸ : ನಡೆವಾಡದೊಳಗಿರ್ದ ರಾತ್ರಿಂಚರರ್ . . . ಎರಗಿ ಕಂಗೆಡಿಸಲ್ಕೆ (ಕೀಚರಾ. ೦೪-೩೪). 'ರಾತ್ರಿಂಚರಪತಿ' ಪರಾ. ೨. ಕಳ್ಳ. ೩. ಪಿಶಾಚಿ ; ದೆವ್ವ. ೪. ಕಾವಲುಗಾರ.

**ರಾತ್ರಿಂಚರಪತಿ** (ನಾ). ರಾಕ್ಷಸರ ಮುಖಂಡ; ನೈರುತಿ : ರಾತ್ರಿಂಚರಪತಿ ಸಿತಪಂಷ್ಟ್ರಾಂಪರಂ ಪಾಶಿಪಾರ್ಶ್ವೋರುಮಯೂಖಿಂ . . . ಬಳೆದು ಬಳಸಿ ದಂತಾಯ್ತು ಬೆಳ್ದಿಂಗಳೆತ್ತಂ (ರಾಜಶೇ. ೦೩-೯೨). [ಸಂ.]

**ರಾತ್ರಿಚರ** (ನಾ). ೧. ಇರುಳಿನಲ್ಲಿ ಓಡಾಡುವವನು ; ಕಳ್ಳ. ೨. ಪಿಶಾಚಿ ; ದೆವ್ವ. ೩. ನಿಶಾಚರ; ರಾಕ್ಷಸ : ಖಚರಸುರೋರಗನರ ರಾತ್ರಿಚರಚಮೂವಂದ್ಯ (ಪಶುರಿ. ೩-೩). ೪. ಕಾವಲುಗಾರ; ಪಹರಿ. [ಸಂ.]

**ರಾತ್ರಿಜ** (ನಾ). ಇರುಳಿನಲ್ಲಿ ಮೂಡುವುದು; ನಕ್ಷತ್ರ; ತಾರೆ. [ಸಂ.]

**ರಾತ್ರಿಜಲ** (ನಾ). ಮಂಜು ; ಕಾವಳ. [ಸಂ.]

**ರಾತ್ರಿಜಾಗರ** (ನಾ). ೧. ರಾತ್ರಿಯಲ್ಲಿ ಎಚ್ಚರವಾಗಿರುವಿಕೆ. ೨. ಇರುಳಿನಲ್ಲಿ ಎಚ್ಚರದಿಂದಿರುವ ಪ್ರಾಣಿ ; ನಾಯಿ : "ಕೌಳೇಯಕಂ ರಾತ್ರಿಜಾಗರಂ ಗ್ರಾಮಶಾರ್ದೂಲಂ . . . ನಾಯಿ " (ಮಂಗರಾ. ೩೩-೮). [ಸಂ.]

**ರಾತ್ರಿಜ್ವರ** (ನಾ). ರಾತ್ರಿಯಲ್ಲಿ ಮಾತ್ರ ಬರುವ ಒಂದು ಬಗೆಯ ಜ್ವರ: ವಿಷ್ಣುಕ್ರಾಂತಿ, ಶುಂಠಿ . . . ಸಮಭಾಗ ಕಷಾಯವಿಟ್ಟು ಕೊಡಲು ರಾತ್ರಿ ಜ್ವರಂ ಮಾಣ್ಗುಂ (ಕಳವೈ. ೦೦೩). [ಸಂ.]

**ರಾತ್ರಿನಾಡಿ** (ನಾ). ಶರೀರದ ಬಲಭಾಗದಲ್ಲಿರುವ ನಾಡಿ : ಸ್ತ್ರೀ ಪುರುಷ ನಾಡಿಗಳಿಗೆ ದಿವಾನಾಡಿಗಳೆಂತಲೂ ರಾತ್ರಿನಾಡಿಗಳೆಂತಲೂ ವ್ಯವಹಾರ ಉಂಟು (ಹಪಾರ. ೯-೩ ಪಾಶ್ವರ್ಯ). [ಸಂ.]

**ರಾತ್ರಿಭುಕ್ತವ್ರತಿಕ** (ನಾ). [ಜೈನ] ರಾತ್ರಿಯಲ್ಲಿ ಊಟಮಾಡದಿರುವ ವ್ರತಮಾಡುವವನು : ದಿವದೊಳ್ ಸುರತವ್ಯಾಪಾರವಿನೋದಮನನ್ನ ಪಾನಮಂ ರಾತ್ರಿಯೊಳಾಸೇವಿಸುವುದುಮನುಜಿಸುಗುವ ವಿವೇಕಿಯಾಣನೆಯ ರಾತ್ರಿಭುಕ್ತವ್ರತಿಕಂ (ಸುಕುಸುಮಾ. ೩-೩೦). [ಸಂ.]

**ರಾತ್ರಿಮಣಿ** (ನಾ). ೧. ಇರುಳಿನಲ್ಲಿ ರತ್ನದಂತಿರುವವನು : ಚಂದ್ರ. ೨. ಕರ್ಪೂರ. [ಸಂ.]

**ರಾತ್ರಿಯುದ್ಧ** (ನಾ). ಇರುಳಿನಲ್ಲಿ ನಡೆಯುವ ಕಾಳಗ : ಪ್ರಾಚೀನ ಕರ್ಣಾಟಕದಲ್ಲಿ . . . ರಾತ್ರಿಯುದ್ಧವು ಇರಲಿಲ್ಲವೆಂದೇ ಹೇಳಬಹುದು. ಆದರೂ ಒಂದೇ ಒಂದು ಶಾಸನದಲ್ಲಿ ಮಾತ್ರ ರಾತ್ರಿಯುದ್ಧಗಳು ('ಇರುಳ ಬವರ') ಬಹು ವಿರಳವಾಗಿಯಾದರೂ ನಡೆಯುತ್ತಿದ್ದುವೆಂಬುದಕ್ಕೆ ಸೂಚನೆ ಯಿದೆ (ಕರಾಅ. ೨೭೦). [ಸಂ.]

**ರಾತ್ರಿರಾಣಿ** (ನಾ). ಇರುಳಿನಲ್ಲಿ ಮಾತ್ರ ಅರಳಿ, ಸುವಾಸನೆಯನ್ನು ಬೀರುವ ಒಂದು ಬಗೆಯ ಹೂವು ಮತ್ತು ಅದರ ಗಿಡ : ಸೊಕ್ಕು ಜವ್ವನದ ರಾತ್ರಿರಾಣಿ ಮುಸುಗುಡಿಸಿ ಆಯ್ತು ಹಗಲು (ಸೂರ್ಯಪಾ. ೩೪-೦೪) ; ಬೆಳದಿಂಗಳಿರುಳಲ್ಲಿ ರಾತ್ರಿರಾಣಿಯ ಹೂವು ನಾಲ್ದೆಸೆಗು ಅಚ್ಚ ಸೌಸವ ಬೀರಿರೆ (ಕಾವಶೀ. ೦೩-೪೦೩). [ರಾತ್ರಿ + ರಾಣಿ]

**ರಾತ್ರಿವಿರಾಮ** (ನಾ). ಇರುಳು ಮುಗಿಯುವ ಕಾಲ ; ಮುಂಜಾವ : " ರಾತ್ರಿವಿರಾಮಂ ವ್ಯುಷ್ಟಂ " (ಪಸ್ತುಕೋ. ೦೩-೬). [ಸಂ.]

**ರಾತ್ರೀಚರ** (ನಾ). ನಿರರುತಿ ; ನಿರುತಿ : ದಿನಮಣಿಯ ಪುತ್ರನೇ ಪಾಪ ಪುಣ್ಯವಿಚಾರಕಂ ನೆಗಳ್ದ ರಾತ್ರೀಚರನೆ ಪಾದುಕಾಧಾರನೆನೆ ಶಿವಂ ವೈಭವ ದೊಳಿರುತಿರ್ದನು (ಶಿಪು. ೨೯-೩೪). [ಸಂ.]

**ರಾತ್ರೀಶ** (ನಾ). ರಾತ್ರಿಯ ಒಡೆಯ ; ಚಂದ್ರ : ದಿವಸೇಶ ರಾತ್ರೀಶಾ ಧಿಕಗ್ರಹತಾರಕಾವಳಿಯಧೀಶ ಸಕಲಮುನೀಶರುಂ . . . ನೆರೆದು (ಚಕಥ. ೨೮-೯೮) ; ಘೋರಾಂಧಕಾರರಕ್ಕಸನ ಪೆರ್ವಡೆಯ ಮೇಲ್ಮೋರಂತೆ ದಂಡೆತ್ತಿ ಬಹನೋ ರಾತ್ರೀಶನೆನೆ (ಪಪಮೋ. ೨೩-೩೪). [ಸಂ.]

**ರಾತ್ರೆ** (ನಾ). ರಾತ್ರಿ ; ಇರುಳು : ಚಿಕ್ಕದೇವರಾಜರು ರಾತ್ರೆ ಹಗಲು ಫವುಜು ಕಳುಹಿಸಿ (ರಾತೆಂಪ್ರ. ೪). 'ನಡುರಾತ್ರೆ' ಪರಾ. [< ಸಂ. ರಾತ್ರಿ]

**ರಾತ್ರೆರಾಣಿ** (ನಾ). = ರಾತ್ರಿರಾಣಿ : ಮನೆಯ ಮುಂದೆಯೇ ಸರ್ಪಗಳಿಗೆ ಪ್ರಿಯವಾದ ದೇವರ ಮುಡಿಗೆ ಅರ್ಹವಾದ ಶಾಮಸಪುಷ್ಪ – ರಾತ್ರೆರಾಣಿ (ಸಂಸ್ಕಾರ. ೦೭). [ರಾತ್ರೆ + ರಾಣಿ]

**ರಾತ್ರೋರಾತ್ರಿ** ' ರಾತೋರಾತು ' ನೋ.

**ರಾತ್ರ್ಯಂಧ** (ನಾ). ೧. ರಾತ್ರಿಯಲ್ಲಿ ಕಣ್ಣು ಕಾಣಿಸದವನು ; ಇರುಳು ಗಣ್ಣ : ಕೌಶಿಕಂಗಳ್ಗಂ ನಮಗ್ಂ ದುರ್ಧರಮಪ್ಪ ವೈರಮುಂಟಾಗಿಯುಂ ನಾವೆಲ್ಲರುಂ ರಾತ್ರ್ಯಂಧರುಮಪ್ಪುದೆಱಂ ಸಂಧಾನಮೆಂತುಮಪ್ಪಾಗಲರಿಯದು (ಪಂತಂ. ೨೨೦-೨೦). ೨. ರಾತ್ರಿಯಲ್ಲಿ ಕಣ್ಣು ಕಾಣಿಸದಿರುವ ಕಾಗೆ ಮುಂತಾದ ಪಕ್ಷಿ. 'ದಿವಸಾಂಧ' ಪರಾ. [ಸಂ.]

**ರಾತ್ಲು** ' ರಾತಲು ' ನೋ.

**ರಾದ್ಧ** (ಗು). ೧. ಒಲಿಸಿಕೊಂಡ. ೨. ಸಾಧಿಸಿಕೊಂಡ ; ಸಿದ್ಧಿಯನ್ನು ಪಡೆದ. ೩. ದೊರಕಿಸಿಕೊಂಡ ; ಪಡೆದ. [ಸಂ.]

**ರಾದ್ಧಾಂತ** (ನಾ). ೧. [ತರ್ಕಶಾ] ವಾದವಿವಾದಗಳ ನಿರ್ಣಯ ; ಸಿದ್ಧಾಂತ : " ಕೃತಾಂತಃ, ರಾದ್ಧಾಂತಃ, ಸಿದ್ಧಾಂತಃ, ಸಮಯಃ — ಈ ೪ ಸಿದ್ಧಾಂತದ ಪೆಸರು " (ಕಲಾಯು. ೩-೦೦) ; ತತ್ತ್ವಭಾವನೆಯುಂ ಧ್ಯಾನಮುಮೆಂದುಮೊದುವವರಾ ರಾದ್ಧಾಂತಮುಂ ತತ್ತ್ವಯೋಜನಮುಂ ತುಪ್ಪದ ಕಾದ ಪಾಲವೊಲದೇಂ ಸಂಭಿನ್ನಸಂಯೋಗಮೋ (ಶಾಂತಿಪು. ೬-೦೯೬); ಸಕಳಜೀವದಯಾಪರ ಜೈನಮಾರ್ಗರಾದ್ಧಾಂತಪಯೋಧಿಗಳ್ (ಎಕ. II. ೦೦೭-೦೦೭ ; 1123). ೨. (ಆಲಂ) ರಂಪ ; ಗೊಂದಲ ; ಕೋಲಾಹಲ ; ನಾಳೆ ನಿನ್ನಣ್ಣ ಬಂದಾಗ ರಾದ್ಧಾಂತ ಆಗಬಾರದು (ಮೃತ್ಯುರುದಾ. ೩೦೪); ಮನೆಯಲ್ಲಿ ಈ ಮಾತಿನಿಂದ ರಾದ್ಧಾಂತವಾಗುತ್ತದೆ (ಮುಕ್ತ್ಯಂ. ೩೭).

**ರಾದ್ಧಾಂತಚಕ್ರಾಧಿಪ**= ವಾದವಿವಾದ ಮಾಡುವುದರಲ್ಲಿ ಪ್ರಮುಖ ನಾದವನು ; ಒಂದು ಬಿರುದು : ಲೋಕಕ್ಕೆ ಸದ್ಗುರುವಾದಂ ನಯ ಕೀರ್ತಿದೇವಮುನಿಪಂ ರಾದ್ಧಾಂತಚಕ್ರಾಧಿಪಂ (ಎಕ. II. ೩೩-೯೦ ; 1176). **ರಾದ್ಧಾಂತಪಾರಗ** = ಸಿದ್ಧಾಂತದಲ್ಲಿ ಪರಿಶ್ರಮವುಳ್ಳವನು: ರಾದ್ಧಾಂತ ಪಾರಗಂ ಗುಣವೃದ್ಧಂ ಮಾರ್ಗಪ್ರಭಾವನಾರ್ಥದಿನಿರ್ದಂ (ಸಂಪ್ರತ್ಮ. ೯-೨೦). **ರಾದ್ಧಾಂತವಿದ** = ರಾದ್ಧಾಂತಪಾರಗ :_ ತತ್ತ್ವನಿರ್ಣಕ್ತ ರಾದ್ಧಾಂತ ವಿದಂ (ಸೌಇಇ. XX. ೩೦-೨೯ ; ೯). **ರಾದ್ಧಾಂತೇಶ** = ರಾದ್ಧಾಂತ ಚಕ್ರಾಧಿಪ : ತಪೋನಿಧಿ ಮುನಿಚಂದ್ರಬ್ರತಿಪನಖಿಳರಾದ್ಧಾಂತೇಶಂ (ಎಕ. VII. ಶಿವಮೊ. ೩೭-೩೩ ; 1115). [ಸಂ.]

**ರಾಧ** (ನಾ). ೧. ಅನುಗ್ರಹ ; ದಯೆ. ೨. ವೈಶಾಖಮಾಸ : '' ವೈಶಾಖಃ, ಮಾಧವಃ, ರಾಧಃ — ೩ ವೈಶಾಖಮಾಸದ ಹೆಸರುಗಳು" (ಸಿದ್ದ್ಯಂತಿ. ೯೦). ೩. ಏಳಿಗೆ ; ಅಭ್ಯುದಯ. [ಸಂ.]

**ರಾಧನ** (ನಾ). ೧. ಪ್ರಾಪ್ತಿ ; ಲಾಭ. ೨. ತಣಿವು ; ತೃಪ್ತಿ. ೩. ನೆರವೇರಿಕೆ. ೪. ಅನುಗ್ರಹ ಸಂಪಾದನೆ. ೫. ಸಾಧನೆ. [ಸಂ.]

**ರಾಧಾತನೂಜ** (ನಾ). ರಾಧೆಯ ಮಗ ; ಕರ್ಣ : ಗಂಗಾಸುಮಾರನ ಕಳಶಜನ ರಾಧಾತನೂಜನ ರಂಗಭೂಮಿಯಿದು (ಕುಮ್ಯಾಕ. ೩-೨೬). [ಸಂ.]

**ರಾಧೆ** (ನಾ). ೧. ಏಳಿಗೆ ; ಅಭ್ಯುದಯ. ೨. ಮಿಂಚು. ೩. ನೆಲ್ಲಿಗಿಡ. ೪. ವೈಶಾಖಮಾಸದ ಹುಣ್ಣಿಮೆ. ೫. ಕರ್ಣನ ಸಾಕುತಾಯಿ.:

ಬಾಳನಂ . . . ಎತ್ತಿಕೊಂಡು ಮನೆಗೆ ತಂದು ರಾಧೆಯೆಂಬ ತನ್ನ ನಲ್ಲಳ ಸೋಂಕಿಲೊಳ್ ಕೂಸನಿಟ್ಟೊಡೆ (ಶಂಕಥಾ. ೧-೯೭ ವ). ೬. ಶ್ರೀಕೃಷ್ಣನ ನೆಚ್ಚಿನ ಪ್ರೇಯಸಿಯಾದ ಒಬ್ಬ ಗೋಪಿಕಾಸ್ತ್ರೀ : ನೋಡುತಿರಲು ಒಳಗಣ್ಣನಿದಿರು ನೀ ಹೇಗೊ ರಾಧೆಯಾದೆ (ಕೃತಾ ಕು. ೨೭-೨೧). ೭. ಇಪ್ಪತ್ತೇಳು ನಕ್ಷತ್ರಗಳಲ್ಲಿ ಹದಿನಾರನೆಯದು; ವಿಶಾಖಾನಕ್ಷತ್ರ: " ರಾಧೆಯೆ ವಿಶಾಖೆ " (ಮಂಗರಾ. ೦೨-೭); ಚಾಗಿಯಂತೆ ನೆಱೆ ಕೊಟ್ಟಿಸ ದೊಪ್ಪಿತು ರಾಧೆಯಂತೆ ಸಂದಿಸಿ ಮಾಡಿ ಮೇಲೆ ಕೊಂಕಿದುದು (ಹುಕೋಶ. ೩-೭೬). [ಸಂ. ರಾಧಾ]

**ರಾಧೇಯ** (ನಾ). = ರಾಧಾತನೂಜ : ಕೊಳ್ಳೆಂದರಿದೀಡಾಡಿದನಿಂದ್ರಂಗೆ ಕವಚಮಂ ರಾಧೇಯಂ (ಶಂಕಥಾ. ೦-೦೦೦) ; ಮಱೆದಪ್ಪೊಡಂ ತೊದಳ ನುಡಿದಱಿಯನಪ್ಪುದಱಿಂ ಸತ್ಯರಾಧೇಯನುಂ . . . ಎನಿಸಿ (ಪುಕ್ಕಪು. ೦-೯೨ ವ). [ಸಂ.]

**ರಾಪ್**₁ (ನಾ). ಕಬ್ಬಿನ ರಸವನ್ನು ಹೆಚ್ಚಾಗಿ ಕುದಿಸಿ ಮಾಡಿದ ಪಾಕ : ಆ ರಸವನ್ನು ಕುಸು ಕುದಿಸಿದರೆ ಕಾಕವಿಯಾಗುವುದು, ಅದಕ್ಕೂ ಹೆಚ್ಚು ಕುದಿಸಿದರೆ ರಾಪವಾಗುವುದು (ಮುಂಬಯಿ. ೩-೯೩). [ ← ಹಿಂ. ಮರಾ. ರಾಬ್ ].

**ರಾಪ್ಪ**(ನಾ). ಒಬ್ಬಾತನ ಹೆಸರು : ಬಂಕೇಯಂಗೆ ಧರ್ಮ್ಮಮೆಕ್ಕಿಸ್ದು ಕುನ್ದಟ್ಟಿಯುಂ ರಾಪನುಮ್ಮಿಟ್ಟು (ಎಇ. VII, ೨೦೩-೦೦ ; 874). [ ? ]

**ರಾಪಣ** (ನಾ). (?) : ಆ ಪುರದ ತರದ ವಿಸ್ತರದ ಸೌಧೋತ್ಕರದ ಶ್ರೀಪುರದ ರಾಪಣದ ಸಿಂಗರದ ಮಂಗಳದ ಗೋಪುರದ ಮತ್ತವಾರಣದ ತೋರಣವ ಉಱೆ ಮೆಱೆವ ವೃಷಭಧ್ವಜಗಳು (ಗುಕಥ. ೦-೩೩). [ ? ]

**ರಾಪಮ್ಮ** (ನಾ). ಒಬ್ಬಾತನ ಹೆಸರು : ತದಸೂರಾ ಸಿಜ್ಗವಡ್ಡಗಿ ರಾಪಮ್ಮನ್ ಸಿಥಿವಾಳ್ಳ ಮಾಡಿದಾನ್ (ಸೌಇ. XX, ೬-೩; ಕು. ೩ನೆಯ ೪೩). [ ರಾಪ್₂ + ಅಮ್ಮ₁ ]

**ರಾಪಾಟ** (ನಾ). ಆರ್ಭಟ ; ಅಬ್ಬರ : ಅವರ ರಾಪಾಟ ಹೇಳತೀರದು (ರೂಢಿ). [ ರಾಪು + ಆಟ ]

**ರಾಪಾಡು** (ಕ್ರಿ). ಆರ್ಭಟಿಸು ; ಕೂಗಾಡು : ಅವನನುಂ ಖಂಡಿಸಲಡ ಹಾಯ್ದು ರಾಪಾಡಿ ಶಿರವನು ಕುಟ್ಟಿ ಮೇಣ್ ತೋರಣಕೆ ಕಟ್ಟಿದಂ ದಿಟ್ಟ ತನದಿಂ (ಪಶು. ೩೬-೯೭). [ ರಾಪು + ಆಡು₁ ]

**ರಾಪಿಸು** (ಕ್ರಿ). ಕಂಗೊಳಿಸು ; ಶೋಭಿಸು : ಅಂಗನೆಯ ರೂಪು ರಾಪಿಸುತಾ ಕಂಗಳಿಂವರೆದು ಕುಡಿವಳಂತೆ ವಾಲಗರಂಗದಿ ಬಂದು ನಿಂದಿಹಳು (ಸೌಂದರ. ೩-೨೯). [ ರಾಪು + -ಇಸು₃ ]

**ರಾಪು** (ನಾ). ೧. ದಿಗಿಲು ; ಅಂಜಿಕೆ ; ಭಯ : ' ರಾಪುಗೊಳ್ ' ಪರಾ. ೨. ಆರ್ಭಟ ; ಜೋರು : ಮಳೆಯ ರಾಪಿಗೆ ಮನುಷ್ಯರು ಹತ್ತಿರ ಸುಳಿಯದ ಹಾಗೆ ಮಾಡಿದ (ಮರಳು. ೯೦) ; ನಿನ್ನಪ್ಪನ ಬಾಯಿ ರಾಪಿಗೆ ಯಾರು ಹೆದರುತ್ತಾರೆ ? (ಮೂಕರುದಾ. ೯೭) ; ಆದರ ಬಾಯಿ ಕಟ್ಟಿಸಿ, ಕಣ್ಣಿಗೆ ಪೊಳೆ ಹೊಡೆದು 'ರಾಪು ನಿಲ್ಲಿಸುತ್ತೇನೆ' ಎಂದ ಇವರ ಹಮ್ಮು ಅಡಗಿತು ! (ಸ್ವಪ್ನಹೊ. ೨೭). ' ರಾಪಾಡು ' ಪರಾ. ೩. ಕಾಂತಿ ; ಶೋಭೆ : 'ರಾಪಿಸು', ' ರಾಪುದೋರು' ಪರಾ. ೪. ಸೊಕ್ಕು ; ಗರ್ವ ; ಜಂಭ: ಈ ಮೊಗೇರ ಮಕ್ಕಳಿಗೆ ರಾಪು ಹೆಚ್ಚಿಯೇ ಈ ವರ್ಷ ಕಡಲಿಗೆ ಬೈಗೆಮಿನು ಬಾರದೆ ಇದ್ದುದು (ಮರಳು. ೩೩೬).

**ರಾಪಾಗು** = ಭಯಪಡು ; ಗಾಬರಿಬೀಳು : ಕಾವುಗಾರರು ಬಿಟ್ಟು ಪೋದರು ಅವರೆಲ್ಲ ರಾಪಾಗಿ ಮನ ಬಂದ ಕಡೆಗೆ (ಕರಿಂ. ೩೯೭-೩).

**ರಾಪು ಮಾಡು** = ೧. ಗಾಬರಿಯನ್ನುಂಟುಮಾಡು ; ಹೆದರಿಸು : ರಾಪುಮಾಡದೆ ಬಿಡನು ಯಮನು (ಹಂಪಾ. ೭೬). ೨. ಜೀರ್ಣೋದ್ಧಾರಮಾಡು ; ಸರಿಪಡಿಸು : ಆ ಗ್ರಾಮವು ಪಿಲವಾಗಿಯಿರಲಾಗಿ ಆ ಗ್ರಾಮವನೂ ರಾಪುಮಾಡಿ ಆ ಗ್ರಾಮದ ಕುಂಟೆಯನೂ ಕಟ್ಟಿಸಿ (ಸೌಇ. IX-ii, ೯೭೪-೦೦ ; 1497). [ದೇ. ॥ ತುಳು. ತೆಲು. ರಾಪು]

**ರಾಪುಗೊಳ್** (ಕ್ರಿ). ಗಾಬರಿಯಾಗು ; ಹೆದರು : ಬಱಿಯ ಬಿಲ್ದನಿಗೆ ರಮಣನ ತಾಗಿತಂಬೆಂದು ನೆಱೆ ಮೋಹದಿಂ ಪೊರಳ್ದವು ಕೆಲವು ರಾಪು ಗೊಂಡೊಂದಿದಿನಿಯನನಗಲ್ದು ಮಱುಗಿ ಮದನಾಸ್ತ್ರದಿಂದಿರದೆ ಬಿದ್ದುವು ಕೆಲವು (ಕೃಪಿಲಾ. ೨೬-೩೦). [ ರಾಪು + ಕೊಳ್₁ ]

**ರಾಪುದೋರು** (ಕ್ರಿ). ಶೋಭಿಸು ; ಕಂಗೊಳಿಸು : ಈ ಪರಿಯಲಿ ರಾಪುದೋರುತ ಸಿಂಹಪೀಠದಿ ಕುಳಿತು ಸಂತಸದಿ (ಸೌಂದರ. ೨-೩); ರಾಪುದೋರುವ ಕನಕನೂಪುರಂದುಗೆಗಳ . . . ಇತ್ತು (ದೇವೀಕ್ಕ. ೨೪). [ ರಾಪು + ತೋರು (< ತೋಱು) ]

**ರಾಭಸಿಕ** (ಗು). ದುಡುಕಿನ ; ಆತುರದ : ಕಾಲೋಚಿತಸಂಧಿವಿಗ್ರಹದೊಳೊಂದಂ ಕಾರ್ಯಮಂ ಪ್ರಾಪ್ತಮಪ್ಪುದನಾಪ್ತೋಕ್ತಮನುಂತೆ ರಾಭಸಿಕ ವಾಕ್ಯಾತಕ್ಕೆ ಮೆಯ್ದುರ್ವುದೇ (ಶಾಂತಿಪು. ೩-೭೩). [ಸಂ.]

**ರಾಭಸಿಕವೃತ್ತಿ** (ನಾ). ದುಡುಕುತನ ; ಆತುರದ ಸ್ವಭಾವ : ಆ ಭವದೊಳ್ ತಾಯಾಗಿಯುಮಾ ಭವದೊಳ್ ತಂದೆಯಾಗಿಯುಂ ನೀನೆಮ್ಮಾ ರಾಭಸಿಕವೃತ್ತಿಯಂ ವಾಗ್ವ್ಯಭವದಿಂ ಕಳೆದು ಪೊರೆದೆಯ್ದುಮ್ಮನುಂದ್ಯಾ (ಶಾಂತಿಪು. ೬-೯೦). [ಸಂ.]

**ರಾಭೆಯ** (ನಾ). ಒಬ್ಬಾತನ ಹೆಸರು : ಮಾಱಿಯಾಂತರನೇಕರಂ ತವಿಸಿ ವಸ್ತುಗಳಂ ಮದವಾರಣಂಗಳಂ ಕಾನ್ತೆಯರಂ ತುರಂಗಚಯಮಂ ಪಿಡಿದಿತ್ತೊಡೆ ಮೆಚ್ಚಿ ರಾಭೆಯಂ ದನ್ತಿಯನಿತ್ತನಂತದುವೆ ಪೇಳದೆ ಕುಟ್ಟಿಗ ನಿನ್ನ ಗೆ[ಲ್ಲ]ಮಂ (ಸೌಇ. XX, ೦೬-೦೯ ; ೨೮೦). [ ? ]

**ರಾಮ** (ಗು). ೧. ಸಂತೋಷಗೊಳಿಸುವ ; ಆನಂದಕರವಾದ. ೨. ಮನೋಹರವಾದ ; ಸುಂದರವಾದ. ೩. ಕಪ್ಪಾದ ; ಕಪ್ಪನೆಯ : 'ರಾಮಧಾನ್ಯ' ಪರಾ. ೪. ಬಿಳಿಯ; ಬಿಳಿದಾದ : ' ರಾಮಗುಳ್ಳ', ' ರಾಮತುಳಸಿ' ಪರಾ. (ನಾ). ೫. ಮನೋಹರವಾದುದು ; ಸುಂದರವಾದುದು : ದಳಿತಾಬ್ಜಪ್ರಸರಂ ಸರಂ ಕುಸುಮಮಾಲಾರಾಮಮಾರಾಮಮಂ (ಜಗಿಪ. ೨-೨). ೬. ಕತ್ತಲೆಯ ಬಣ್ಣ ; ಕಪ್ಪು. ೭. ಬಿಳಿಯ ಬಣ್ಣ ; ಶ್ವೇತ ವರ್ಣ : "ಬೆಳದಜ್ಜಿಲ್ಲಿಯುಂ ಶುಚಿಯೆಂಬುದು, ರಾಮಮುಮೆಂಬುದು" (ಹಲಾಯು. ೦೩೪-೨೨). ೮. ಹಸುರು; ಹರಿದ್ವರ್ಣ : "ಶ್ಯಾಮಂ, ಶ್ಯಾಮಳಂ, ರಾಮಂ, ಪಾಲಾಶಂ, ಹರಿತಂ, ಹರಿತ್_ಈ ೬ ಪ(ಹ)ಸುರ್" (ಹಲಾಯು. ೧೨೦-೯೯). ೯. ಶುಚಿಯಾದುದು; ನಿರ್ಮಲವಾದುದು. ೧೦. ಸಂತೋಷ ; ಆನಂದ. ೧೧. ವಿಷ್ಣುವಿನ ಆರನೆಯ ಅವತಾರ : ಜಮದಗ್ನಿಯ ಮಗ ; ಪರಶುರಾಮ : ಕೂರಿ[ಸೆ] ಗುರುಶುಶ್ರೂಷೆಯೊಳಾ ರಾಮನನುಗ್ರಹಶುಪಾಟಿತ ರಿಪುವಂಶಾರಾಮನನಿಷುವಿದ್ಯಾಪಾರಗನೆನಿಸಿದುದು ಬಲ್ಮೆ ವೈಕರ್ತನನಾ (ಶಂಕಥಾ. ೦-೦೦೪) ; ಸಾಗರವ ಕಾಸರ ಸೆಣಸುವಂತಾಯ್ತೆಱೆಯುಬಹುದಿನ್ನೆನುತ ಕೊಡಲಿಯ ರಘುಡಿದನಾ ರಾಮ (ಕೊರಾ. ೦-೧೭-೦೦). ೧೨. ವಿಷ್ಣುವಿನ ಏಳನೆಯ ಅವತಾರ ; ದಶರಥನ ಮಗ ; ರಾಘವ : ರಾಮನಕಟ್ಟಾಹಸುಳೆ ಭಾರ್ಗವರಾಮನಗ್ಗದ ಜವನ ಜೂಜು (ಕೊರಾ. ೦-೦೭-೦೨) ; ರಾಮನೊಡಗೂಡಿ ಬಳೆದರು ಮೂವರನುಜರುಂ (ಶ್ರೀರಾಮಾ. ೦೯-೪೯೪) ; ರಾಮನಂತಹ ರಾಜನಿಲ್ಲ ಕಾಮನಂತಹ ಪುರುಷನಿಲ್ಲ (ಗಾದೆ). ೧೩. ವಿಷ್ಣುವಿನ ಎಂಟನೆಯ ಅವತಾರವಾದ ಕೃಷ್ಣನ ಅಣ್ಣ ; ಬಲರಾಮ ; ವಸುದೇವನ ಮಗ : "ಬಲದೇವಃ . . . ರಾಮಃ, ಕಾಮಪಾಲಃ . . . ಹಲಾಯುಧಃ_ಈ ೧೮ ಬಲದೇವನ ಪೆಸರ್" (ಹಲಾಯು. ೩-೩೦) ; ಒಲ್ದೀಕ್ಷಿಸಿದಂ ನಿಜಾಗ್ರಭವನಂ ದೈತ್ಯಾರಿ . . . ಪಿಜಯುನ್ನಂಗಾರಾಮನಂ ರಾಮನಂ (ಜಗಿಪ. ೪-೩೬). ೧೪. ವರುಣ :

ರಾಮೋತ್ಕಂಠೆ ' ಪರಾ. ೧೫. ಕುದುರೆ ; ಅಶ್ವ. ೧೬. ಒಂದು ಬಗೆಯ ಜಿಂಕೆ. ೧೭. ಪ್ರಿಯ ; ಇನಿಯ : ಅಭಿವರ್ಣಿಪೆಂ ರಣ ಯಶಶ್ಶ್ರೀರಾಮನಂ ಭೀಮನಂ (ಗದಾಯು. ೦-೩೨). ೧೮. [ವೀಶೈ] ಪಂಚಾಚಾರ್ಯರಲ್ಲಿ ಒಬ್ಬ : ಏಕೋರಾಮ : ರೇಣುಕ ರಾಮ ಪಂಡಿತ ಮಹಾಮರುಳಾರ್ಯರ . . . ಮಾಣದೆ ಬಣ್ಣಿಸುತ್ತಬಗಿ ಮೇಣ್ಪಡೆವೆಂ ಪರಮಾರ್ಥಸಿದ್ಧಿಯಂ (ರಾಶಶೀ. ೦-೦೬). [ಸಂ.]

**ರಾಮಕಲಿ** (ನಾ). [ಸಂಗೀತ] ಒಂದು ರಾಗದ ಹೆಸರು : ಪೂರ್ವಿರಾಗವು ರಕ್ತದ ಒತ್ತಡವನ್ನೂ ತಿಲಂಗ್, ಬಿಲಾವಲ್, ಮುಲ್ತಾನಿ, ರಾಮಕಲಿ ರಾಗ ಗಳು ಕ್ಷಯರೋಗವನ್ನೂ. . . ಗುಣಪಡಿಸುವುವೆಂಬ ಭಾವನೆ ಉತ್ತರ ಭಾರತದಲ್ಲಿದೆ (ಕಾರಿದ. ೩೪೪). [ಸಂ. ರಾಮಕಲೀ]

**ರಾಮಕ್ರಿಯೆ** (ನಾ). [ಸಂಗೀತ] ಒಂದು ರಾಗದ ಹೆಸರು : ಬಳಿಕ ಸಪ್ತಸ್ವರಾಗಂಗಳೊಳಗೆ ರಾಮಕ್ರಿಯೆ [ಪಾಠಾಂ. ರಾಮಕ್ರಿ] . . . ಮಧ್ಯ ಮಾವತಿಯೆಂಬ ಮೂವತ್ತಾಱುರಾಗಂಗಳು (ಎವೇಶ. ೨೩೪).
[ಸಂ. ರಾಮಕ್ರಿಯಾ]

**ರಾಮಕ್ರೀ** (ನಾ). [ಸಂಗೀತ] ಒಂದು ರಾಗದ ಹೆಸರು : ಲಲಿತಾ ಹರಿ ನಾಟ ರಾಮಕ್ರೀರಾಗ ತೋಡಿ ಮಕರಂದಿ ವಸಂತರಾಗಂ ಇವಾದಿಯಾದ ರಾಗಂಗಳಂ ಪಾಡುತ್ತಿರೆ (ಹಮ್ಮಿರ. ೨-೪೦). [ಸಂ.]

**ರಾಮಗಬ್ಬು** (ನಾ). ಒಂದು ಬಗೆಯ ಬಿಳಿಯ ಕಬ್ಬು : ಕಬ್ಬಿನ ಜಾತಿ ಗಳು—ರಸದಾಳಿ, ರಾಮಗಬ್ಬು, ಕರಿಗಬ್ಬು, ಬೆತ್ತಗಬ್ಬು . . . ಎಂದು ಅನೇಕವುಂಟು (ಮುಂಬಯು. ೩-೨೦೦). [ರಾಮ + ಕಬ್ಬು$_2$ (<ಕರ್ವು$_1$)]

**ರಾಮಗುಳ್ಳ** (ನಾ). ಒಂದು ಬಗೆಯ ಬಿಳಿಯ ಬದನೆ : ರಾಮಗುಳ್ಳ, ಕಿರೀಗುಳ್ಳ (ವೃಶಿಗ. ೬೧-೦೪೩೦) ; ಆಡುಸೋಗೆಯೆಲೆಯ ಕಡ್ಡಿ . . . ರಾಮಗುಳ್ಳ, ಶುಂಠಿ, ಕಟುಕರೋಹಿಣಿ ಇವುಗಳನ್ನು ಸಮಭಾಗ ಕಷಾಯ ಕಾಯಿಸಿಕೊಡಲು ಶ್ಲೇಷ್ಮಜ್ವರವು ಗುಣವಾಗುವುದು (ಸಶಪ್ರ. ೪೦).
[ರಾಮ + ಗುಳ್ಳ]

**ರಾಮಗೋಟು** (ನಾ). ಒಂದು ಬಗೆಯ ಸಸ್ಯ : ಏಂಡಿಕಾಯಿ, ರಾಮ ಗೋಟು (ವೃಶಿಗ. ೩೩-೨೦೦೪). [ ? ]

**ರಾಮಚ** (ನಾ). ಒಂದು ಬಗೆಯ ಔಷಧೀಸಸ್ಯ : ಪರ್ಪಾಟಕ, ರಾಮಚದ ಚೂರ್ಣ . . . ಸಕ್ಕರೆ ಸಹ ಕೊಡಲು, ಸಕಲಕ್ಷಯವ್ಯಾಧಿ . . . ಹರ (ಏವೈಪಿ. ೨೬). [ ? ]

**ರಾಮಚಂಗಿ** (ನಾ). ಒಂದು ಬಗೆಯ ಫಿರಂಗಿ,— ತೋಪು : ಹಿರಿಯ ತೋಪುಗಳು, ಸಣ್ಣ ತೋಪುಗಳು, ರಾಮಚಂಗಿಗಳು, ರಾಮಬಾಣಗಳು, ಮತಾಪುಗಳು. . . ರಣಗಾಡಿಗಳು ಮೊದಲಾದ ಯುದ್ಧೋಪಕರಣಗಳನ್ನೆಲ್ಲ ಎಣಿಸಿದುದಾಯಿತು (ಏಕ್ಕೆರು. ೦೨). [← ಹಿಂ. ರಾಮಚಂಗೀ]

**ರಾಮಚರಿತ** (ನಾ). ರಾಮನ ಕಥೆ : ರಾಮಚರಿತಾರ್ಥವನು ಕೇಳ್ದಪ ರಾಮನಿಗೆ ಸರಿಯಹನು ಜಗದೊಳು ರಾಮನಾಮದ ಮಹಿಮೆಯನು ಬಣ್ಣಿ ಸುವಡರಿದು (ತೊರರಾ. ೬-೩೩-೬೦ ಅಂತದ್ಯ). [ಸಂ.]

**ರಾಮಟಂಕಿ**, ರಾಮಟೆಂಕಿ (ನಾ). ರಾಮನ ಪಟ್ಟಾಭಿಷೇಕದ ಚಿತ್ರವಿರುವ ಒಂದು ಚಿನ್ನದ ನಾಣ್ಯ : ' ಶ್ರೀರಾಮಟಂಕೀವರಹ ' ಪರಾ. **ರಾಮಟೆಂಕಿ** : ರಾಮಟೆಂಕೀ ನಾಣ್ಯವು ಕಟಾಕಟಿ ನಾಲ್ಕು ತೊಲಿ ಇರುತ್ತಿತ್ತು (ಕರಾಗ. ೨೪೦). [ರಾಮ + ಟಂಕಿ$_2$]

**ರಾಮಟೆಂಕಿ** 'ರಾಮಟಂಕಿ' ನೋ.

**ರಾಮಠ** (ನಾ). ಇಂಗು ; ಹಿಂಗು : "ಹಿಂಗುಃ, ರಾಮಠಂ—ಈ ೨ ಹಿಂಗು" (ಶಬ್ದಾಯು. ೦೦೦-೪೬೩) ; ಎರಡುಳ್ಳಿ ಹಿಂಗು ನಿಂಬದ ತಿರುಳ್ಗಾಡಿನ ಬೆಣ್ಣೆ ಬೇವಿನೆಣ್ಣೆಯಂ ಬಿತ್ತರದಿಂ ಸೆಯ್ ನಿಲೆ ಕುದಿಯಿಸುಗೆ ರಾಮಠಕ್ಕೆಲ್ಲ ಮಿಂತಿದುಂ ಸಮನಕ್ಕುಂ (ಲೋಕೋಪ. ೭-೬೮). [ಸಂ.]

**ರಾಮಣೀಯಕ** (ಗು). ೧. ಸುಂದರವಾದ ; ರಮಣೀಯವಾದ ; ಚೆಲುವಾದ : ಸಂಧಿ ಮುಗಿದುದು ರಾಮಣೀಯಕ ರಾಮಕಥೆಯೊಳಗೆ (ಕೌಶಿರಾ. ೦೩-೪೪); ರಾಮಣೀಯಕ ರಾಶಿಗೆ ಪಶ್ಚಿಮರಂಗಧಾಮನಿಗಾನೇಱಿಗು ವೆನು (ಹದಿದ. ೦-೦). (ನಾ). ೨. ರಮಣೀಯವಾದುದು ; ಚೆಲುವಾದುದು : ವನ ರಾಮಣೀಯಕಂ, ಜಲ ರಾಮಣೀಯಕಂ (ಶ್ರೀರಾಪಟಾ. ೦೪೬-೩೨). [ಸಂ.]

**ರಾಮಣೀಯತೆ** (ನಾ). =ರಾಮಣೀಯಕ ೨ : ' ರಾಮಣೀಯತೆವೆಱು ' ಪರಾ. [ಸಂ. ರಾಮಣೀಯತಾ]

**ರಾಮಣೀಯತೆವೆಱು** (ಕ್ರಿ). ಸುಂದರವಾಗು ; ಚೆಲುವಾಗು : ರಾಮಣೀ ಯತೆವೆತ್ತ ಚೆಂದಳಿರ್ ಮಿಡಿಯಿಂದೆ ಮಾಮರ ಮನಗೊಳಿಸಿದುವು (ಪೋಶಕ. ೨೪-೪೪). [ರಾಮಣೀಯತೆ + ಪೆಱು$_1$]

**ರಾಮತುಳಸಿ** (ನಾ). ತುಳಸಿಯಲ್ಲಿ ಒಂದು ಬಗೆ; ಬಿಳಿತುಳಸಿ : (ವೃಶಿಗ. ೩೬-೦೦೪೬). ' ಕರಿತುಳಸಿ' ಪರಾ. [ಸಂ. ರಾಮತುಲಸೀ]

**ರಾಮದೂತ** (ನಾ). ೧. ರಾಮನ ಸೇವಕ : ರಾಮಧೂತನೆ ? ಎಲ್ಲಿ ? ಎಲ್ಲಿ ತೋರ್ ! (ಶ್ರೀರಾಪಟಾ. ೬೩೬-೦೬೭). ೨. ಹನುಮಂತ. ೩. ಕಪಿ ; ಕೋತಿ : ಈತನಂ ರಾಮದೂತನೆಂದು ಗೋಸಣೆಗಳೆದು ಪರಿಭ್ರಮಿಸಿ ಪೊಱ ಮಡಿಸಿ ಕಳೆಯಿಂ (ಶಂರಾಪಟಾ. ೦೦-೦೪೦ ವ). [ಸಂ.]

**ರಾಮಧಾನ್ಯ** (ನಾ). ಒಂದು ಬಗೆಯ ಕಪ್ಪನೆಯ ಧಾನ್ಯ ; ರಾಗಿ : ರಾಮಧಾನ್ಯದ ಕೃತಿಯನು . . . ಪೇಳುವೆನು (ರಾಮುಕ. ೩-೩). [ಸಂ.]

**ರಾಮನಡಿಕೆ** (ನಾ). ಒಂದು ಬಗೆಯ ಔಷಧೀಸಸ್ಯ : ರಾಮನಡಿಕೆ, ರಾಮಪತ್ರೆ (ವೃಶಿಗ. ೩೬-೦೦೦೭). [ ? ]

**ರಾಮನವಮಿ** (ನಾ). ಶ್ರೀರಾಮನು ಹುಟ್ಟಿದ ಚೈತ್ರಶುದ್ಧನವಮಿಯ ದಿನ ಮತ್ತು ಅಂದು ಆಚರಿಸುವ ಹಬ್ಬ : ರಾಮನವಮಿಯಲ್ಲಿ ರಾಮ ಭಕ್ತರು ಉಪವಾಸ ಮಾಡುವರು (ಭಾಹಬ್ಬ. ೬೨). [ಸಂ. ರಾಮನವಮೀ]

**ರಾಮನಾಥ** (ನಾ). ಶಿವ ; ಈಶ್ವರ : ರಾಮನಾಥನು ಸರ್ವಗತನೀ ರಾಮನಾಥನ ಭಕ್ತರನಘರು ರಾಮನಾಥನನರ್ಚಿಸಿದವರು ಪರಮಪಾವನರು (ಬಸಪು. ೩೦-೬೦). [ಸಂ.]

**ರಾಮಪಟ್ಟಿ** (ನಾ). ಒಂದು ಬಗೆಯ ಆಟ ; ತಿಳ್ಳಿಯಾಟ : ಸ್ಕೂಲಿನ ಸುತ್ತ ಓಡುವುದೋ, ಅಲ್ಲಿನ ಹುಣಸೇಮರದ ಕೆಳಗೆ ರಾಮಪಟ್ಟಿ ಆಡುವುದೋ ಅವನ ವಾಡಿಕೆ (ಶ್ಯಾಬಸ್ಕೀ. ೩). [ ? ]

**ರಾಮಪ್ರಿಯ** (ನಾ). ೧. ರಾಮನಿಗೆ ಪ್ರಿಯನಾದವನು : ಯದುಗಿರಿ ಯೊಳ್ ನೆಲಸಿದ ರಾಮಪ್ರಿಯಂಗೆ ಪ್ರಿಯತಮರೆನಿಸಿದ ರಾಮಾನುಜರಂ ಸನ್ನುತಿಸುವರ್ (ಗೀತಗೋ. ೪೬-೩ ವ). ೨. [ಸಂಗೀತ] ಒಂದು ರಾಗದ ಹೆಸರು : ರಾಮಪ್ರಿಯ . . . ಕರುಣಾರಸಪ್ರಧಾನರಾಗ, ರಕ್ತಿರಾಗ (ಸಂಗೀತಮ. ೦೬೩). [ಸಂ.]

**ರಾಮಫಲ** (ನಾ). ಒಂದು ಬಗೆಯ ಮರ ಮತ್ತು ಅದರ ಹಣ್ಣು : (ವೃಶಿಗ. ೭-೨೨). ' ಸೀತಾಫಲ ' ಪರಾ.
[ಸಂ./ತೆಲು. ರಾಮಫಲ, ರಾಮೂಫಲ]

**ರಾಮಬಾಣ** (ನಾ). ೧. ಶ್ರೀರಾಮಚಂದ್ರನು ಬಿಡುವ ಬಾಣ ; ರಾಮನು ಬಾಣವನ್ನು ಒಮ್ಮೆ ಪ್ರಯೋಗಿಸಿದರೆ ಅದು ತನ್ನ ಗುರಿ ಯನ್ನು ತಪ್ಪದೆ ಭೇದಿಸಿ ಮತ್ತೆ ಬತ್ತಳಿಕೆಗೆ ಹಿಂದಿರುಗಿ ಬರುವ ವಿಶಿಷ್ಟಶಕ್ತಿಯುಳ್ಳುದೆಂದು ಭಾವಿಸಲಾದ ಬಾಣ : ದಿವ್ಯಾಸ್ತ್ರದಿಂ ವಿರಥಂಮಾಡಿದನೇಟುಸೂಟ್ವರೆಗಮಾವಂ ರಾಮಬಾಣಕ್ಕೆ ನಿತ್ತರಿಪಂ (ಶಂರಾಪಟಾ. ೦೪-೬೧); ತರಿಹರಿಸಬಾರದಿಹ ರಾಮಬಾಣಂಗಳ್ಗಿದಿರುವ ಕಾಲಾಗ್ನಿ ಯಂತೆ (ಕೃಖಿಭಾ. ೨೦-೩೩); ರಾಮಬಾಣಕ್ಕೆ ಹುಸಿಯಿಲ್ಲ, ವಾಲಿಯ ಮೈಗೆ ಕಲೆಯಿಲ್ಲ (ಗಾದೆ). ೨. ಒಂದು ಬಗೆಯ ಯುದ್ಧೋಪಕರಣ ;

ರಾಮಚಂಗಿಗಳು, ರಾಮಬಾಣಗಳು, ಮತಾಪುಗಳು . . . ರಣಗಾಡಿಗಳು ಮೊದಲಾದ ಯುದ್ಧೋಪಕರಣಗಳನ್ನೆಲ್ಲ ಎಣಿಸಿದಂತಾಯಿತು (ಐಶ್ವರು. ೦೩). ೩. (ಆಲಂ) ನಿಶ್ಚಿತಫಲವನ್ನು ಕೊಡುವಂತಹುದು ; ವ್ಯರ್ಥವಲ್ಲದುದು : ಶ್ರೀ ಶಂಕರರ ಕಪಾಟದಲ್ಲಿನ ಔಷಧಗಳಲ್ಲಿ ಇದು ರಾಮಬಾಣದಂತಹುದು (ಕೀವಾತ್. ೩೦೦); ನಗಡಿಗೆ ರಾಮಬಾಣ ಯಾವುದೂ ಇಲ್ಲ (ಪಂಚರು. ೩೭). [ಸಂ.]

**ರಾಮರಕ್ಷೆ** (ನಾ). ೧. ಶ್ರೀರಾಮನನ್ನು ಕುರಿತ ಪ್ರಸಿದ್ಧವಾದ ಒಂದು ಸ್ತೋತ್ರ. ೨. (ಆಲಂ) ಏನೂ ಇಲ್ಲದಿರುವ ಸ್ಥಿತಿ : ಯಾರ ಮನೆಯಲ್ಲಿ ಹೊಕ್ಕು ನೋಡಿದರೂ 'ರಾಮರಕ್ಷೆ' (ಯಾದುನಾ. ೦೦೩); ಈಗೆಲ್ಲಾ ರಾಮರಕ್ಷೆಯಾಗಿ ಕೂತದ ಮನ್ಯಾಗ (ಕಿಡುಗು. ೯೦). [ಸಂ. ರಾಮರಕ್ಷಾ]

**ರಾಮರಗಡು** (ನಾ). ಹೆಚ್ಚಾದುದು ; ಪುಷ್ಕಳವಾದುದು : ಈ ಪಶುಪತಿ ಸಾಂಬಶಾಸ್ತ್ರಿಗಳ ಮನೇ ಊಟದ ಹಾಗೆ ರಾಮರಗಡಾದ ಊಟ . . . ಸಿಕ್ಕಿದರೆ (ವಜಾಬುನಾ. ೬೯) [←ಮರಾ ರಾಮರಗಡಾ, ರಾಮರಗಾಡಾ]

**ರಾಮರಸ** (ನಾ). ಭಂಗಿಸೊಪ್ಪಿನಿಂದ ತಯಾರಿಸುವ ಒಂದು ಬಗೆಯ ಮಾದಕಪಾನೀಯ : ಬಣ್ಣ ಒಳಿದುಕೊಳ್ಳುವುದಕ್ಕೆ ಮುಂಚೆ ನನ್ನ ಕೈಯಿಂದಲೇ ಅರ್ಧಸೇರು ರಾಮರಸ ಅರೆಸಿಕೊಂಡು ಕುಡಿದರು (ಗರುಡಾ. ೯೦); ಮಿರ್ಜಾಫರನು ಭಂಗಿ, ರಾಮರಸಗಳನ್ನು ಕುಡಿದು ನಿದ್ರೆ ಹೋಗುತ್ತಿದ್ದನು (ಐಂಕಪು. ೨೬೩). [ಸಂ.]

**ರಾಮರಸದಾಳಿ** (ನಾ). ಒಂದು ಬಗೆಯ ಬಿಳಿಯ ಕಬ್ಬು : ರಾಮರಸದಾಳಿಯನ್ನು ತೋಟಗಳಲ್ಲಿಯೂ ಬತ್ತದ ಭೂಮಿಯಲ್ಲಿಯೂ ಹಚ್ಚುವರು (ಕೃಷಿಗ. ೨೬೩). [ರಾಮ + ರಸದಾಳಿ]

**ರಾಮರಾಜ್ಯ** (ನಾ). ೧. ರಾಮನ ಆಳ್ವಿಕೆಯಲ್ಲಿದ್ದ ಸಾಮ್ರಾಜ್ಯ : ಸಿರಿಯ ವಲ್ಲಭನೊಲಿದು ರಾಜ್ಯಾಧ್ವರವನಾವಲು . . ಹರಸುತಿರ್ದುದು ರಾಮರಾಜ್ಯದೊಳಖಿಳಜನನಿವಹ (ಕಾಶಿರಾ. ೯೯-೩೭) ; ರಾಮರಾಜ್ಯದೊಳ ಕಾಲದ ಮರಣಮಿಲ್ಲಖಿಳಜೀವಿಗಳ್ಗೆ (ಕೈಮಿಣಿ. ೦೮-೦೩). ೨. (ಆಲಂ) ಯಾರಿಗೂ ಯಾವ ತೊಂದರೆಯೂ ಇಲ್ಲದೆ ಬಾಳುವ ರಾಜ್ಯ ; ಸುಖೀರಾಜ್ಯ : ಗಾಂಧೀಯುಗದಲ್ಲಿ 'ರಾಮರಾಜ್ಯ'ವೆಂಬುದಕ್ಕೆ 'ಸ್ವರಾಜ್ಯ' ಎಂಬ ಅರ್ಥವನ್ನು ದೇಶದ ದೊಡ್ಡವರು ಸಂಪಾದಿಸಿ ಕೊಟ್ಟಿದ್ದಾರೆ (ರಾಮರಾ. ೯ ಮುನ್ನುಡಿ). [ಸಂ.]

**ರಾಮರಾಯಿ** (ನಾ). (ಚಿತ್ರದುರ್ಗದ ಪಾಳೆಯಗಾರರಲ್ಲೊಬ್ಬನಾದ ರಾಮರಾಯನು ಚಲಾವಣೆಗೆ ತಂದ) ಒಂದು ಬಗೆಯ ಚಿನ್ನದ ನಾಣ್ಯ : ದುರ್ಗವು ಕೈವಶವಾದ ಮೇಲೆ ಈ ದೊರೆಯ ಬೊಕ್ಕಸದಲ್ಲಿದ್ದು ಹುಗಗಳ ಕೈಗೆ ಸಿಕ್ಕಿದ ನಾಣ್ಯಗಳ ವಿವರ . . . ೧ ದೇವರಾಯಿ ೧ ಕಲ್ಲು ಕುಂಟೆ ೧ ರಾಮರಾಯಿ (ಚಿತ್ರ ಶಾ. ೦೦೯). 'ಕಂಠೀರಾಯಿ', 'ದೇವರಾಯಿ' ಘರಾ. [ರಾಮರಾಯ$_0$ + — ಇ$_3$]

**ರಾಮವಚನ** (ನಾ). ೧. ರಾಮನ ಮಾತು,–ನುಡಿ : ಹನುಮನು. . . ರಾಮವಚನಾನುಗ್ರಹವು ವಿಶ್ರಮಿಸಲು ಕರ್ಣದಲಿ ನೃಪಪದತಾಮರಸಕಭಿನಮಿಸಿ ಬೀಳ್ಕೊಂಡನು ಸರಾಗದಲಿ (ತೊರರಾ. ೬-೯೭-೯೭). ೨. (ಆಲಂ) ತಪ್ಪದೆ ಪಾಲಿಸುವ ಮಾತು,–ಭಾಷೆ : ಇವತ್ತು ಏನು ಮಾಡಿದರೂ ಸಾವಿರಾರು ಹೊನ್ನು ಕೊಟ್ಟರೂ ಬರಲಾರೆ, ನಾಳೆ ಅವಶ್ಯವಾಗಿ ಬರುವೆನೆಂದು ರಾಮವಚನವನಿತ್ತಳು (ಶಂಕೀ. ೦೯). [ಸಂ.]

**ರಾಮಸೇವಕ** (ನಾ). = ರಾಮದೂತ ೧ : ರಾಮಸೇವಕನಾಗಿ ರಾವಣನ ಪುರವ ನಿರ್ಧೂಮವ ಮಾಡಿದೆ (ಪುರಂದ. ದಾ. ೦-೯೦-೦). [ಸಂ.]

**ರಾಮಾಂಗೆ** (ನಾ). ಸುಂದರವಾದ ದೇಹವನ್ನುಳ್ಳವಳು ; ಚೆಲುವೆ ; ಸುಂದರಿ : ವಿಕಚೇಂದೀವರವಕ್ತ್ರೆ ಸಸ್ಮರಕತಚ್ಛಾಯಾಂಗಿ ರಾಮಾಂಗೆ (ಸುಕುಮಾ. ೦-೮). [ಸಂ. ರಾಮಾಂಗಾ]

**ರಾಮಾನುಜ** (ನಾ). ೧. ಶ್ರೀರಾಮನ ತಮ್ಮ : ಅಜನು ಬಳಿಕ . . . ಆತ್ಮಜನು ಜನಿಸಿದನೀ ದಶಸ್ಯಂದನಮಹೀಪಾಲ . . . ಬಳಿಕೀ ರಾಮ ರಾಮಾನುಜರು ಮಕ್ಕಳು ನಾಲ್ವರೀತಂಗೆ (ತೊರರಾ. ೦-೦೬-೨೯). ೨. ಲಕ್ಷ್ಮಣ : ಬಳವದ್ವಿಕ್ರಾಂತದೊಳ್ . . . ಭೀಮಸೇನಂ . . . ಬಳವದ್ರಾಮಾನುಜಂ ಬಾಡಬಶಿಖಿಹನುಮಂ ವೈನತೇಯಂ ಸಮಂ ತನ್ನೊಳೆನಿಪ್ಪಂ (ಎಕ. VIII, ಸೊರಬ. ೦೩೮-೨೯; 1145); ಬೆರಗಾಗಿ ನೋಡುತಿರೆ ರಾಮಾನುಜಂ ಶಾಸ್ತ್ರವೇತ್ತನಾ ಯೋಗಸಿದ್ಧಂ ಪೇಳ್ದನಾತಂ ಗಾಂಜನೇಯಂ ಬ್ರಹ್ಮವಿಜ್ಞಾನಿ (ಶ್ರೀರಾಮಾ. ೭೨೯-೩೩೮). ೩. ಭರತ : ಪವಮಾನಜಂ . . . ಭರತಂಗೆ ತೋರಿಸಲ್ಕೆ . . . ರಾಮಾನುಜಂ ಕುಶಲ ಸಮ್ಮುಖಕ್ಕೈದಿ ನುಡಿಸಿದಂ (ಕೃಮಿಣಿ. ೨೦-೦೩). ೪. ಶತ್ರುಘ್ನ. ೫. ತ್ರಿಮತಗಳಲ್ಲಿ ಒಂದಾದ ವಿಶಿಷ್ಟಾದ್ವೈತಧರ್ಮವನ್ನು ಪ್ರತಿಪಾದಿಸಿದ ಹನ್ನೆರಡನೆಯ ಶತಮಾನದ ಯತಿ : ಶ್ರೀಮತೇ ರಾಮಾನುಜಾಯ ನಮಃ (ಎಕ. VIII (R), ಹೊಳೆ. ೩೯-೦; ಸು. 16ನೆಯ ಶ೮) ; ವಿಶಿಷ್ಟಾದ್ವೈತಸಿದ್ಧಾಂತವೆಂಬುದು ಶ್ರೀಮದ್ರಾಮಾನುಜಾಚಾರ್ಯರಿಂದ ಪ್ರಚಾರಕ್ಕೆ ಬಂದಿರುವುದು (ಹಿಂದಕಾ. ೨೩೦). ೬. ರಾಮಾನುಜಾಚಾರ್ಯರ ಅನುಯಾಯಿ.

ರಾಮಾನುಜಕೂಟ = ರಾಮಾನುಜರ ಅನುಯಾಯಿಗಳು ಸಾಮೂಹಿಕವಾಗಿ ಭೋಜನಮಾಡುವ ಛತ್ರ : ನಾಲು ಕಟ್ಟಿನ ಶ್ರೀರಾಮಾನುಜ ಕೂಟದಲೂ . . . ಶ್ರೀವೈಷ್ಣವರುಗಳಿಗೆ ಯುಕ್ತವ ಹಾಗೆ ಕಟ್ಟಳೆಯ ಮಾಡಿದೆವಾಗಿ . . . ರಾಮಾನುಜಕೂಟಕೆ ನಡಸಿಬಹುದು (ಸೌಇಇ. IX-ii, ೯೬೨-೯; 1467). [ಸಂ.]

**ರಾಮಾಭಿರಾಮೆ** (ನಾ). ಅತಿಚೆಲುವೆಯಾದವಳು ; ಅತ್ಯಂತ ಸುಂದರಿ : ಎಲೆಗೆ ರಾಮಾಭಿರಾಮೆ ! ಸುಗ್ರೀವೆ ! ನೀಲಕುಂತಳೆ ! ಕುಮುದನಯನೆ ! (ರಾಮಾಶ್ವ. ೦೯೮-೩). [ಸಂ. ರಾಮಾಭಿರಾಮಾ]

**ರಾಮಾಯಣ** (ನಾ). ೧. (ಶ್ರೀರಾಮ ಮತ್ತು ಸೀತೆಯರ ಚರಿತ್ರೆ ರಾಮ-ರಾವಣರ ಯುದ್ಧ ಮುಂತಾದ ವರ್ಣನೆಗಳನ್ನೊಳಗೊಂಡ) ಆದಿಕವಿ ವಾಲ್ಮೀಕಿಮಹರ್ಷಿಯಿಂದ ಸಂಸ್ಕೃತದಲ್ಲಿ ರಚಿತವಾದ ಮಹಾಕಾವ್ಯ: ತಿಣುಕಿದನು ಫಣಿರಾಯ ರಾಮಾಯಣದ ಕವಿಗಳ ಭಾರದಲಿ (ಕುವ್ಯಾಆ. ೦-೦೭); ವಾಲ್ಮೀಕಿ . . . ರಾಮಾಯಣವನೆಲ್ಲಮಂ ಕಂಡಂತೆ ಹಾಡಿದನೊ (ಶ್ರೀರಾಮಾ. ೩-೩೯); ರಾಮಾಯಣ ಶಬ್ದವು ರಾಮ ಮತ್ತು ಅಯನ ಎಂಬ ಎರಡು ಶಬ್ದಗಳ ಸಮಾಸವಾಗಿದೆ (ಭಾರದ. ೬೯) ; ಬೆಳತನಕ ರಾಮಾಯಣ ಕೇಳಿ ರಾಮನಿಗೆ ಸೀತೆಯೇನಾಗಬೇಕೆಂದ (ಗಾದೆ). ೨. (ಆಲಂ) ದೀರ್ಘವಾದ, ಬೇಸರ ತರುವ ಮಾತು; ಕಗ್ಗ : ನಿನ್ನ ರಾಮಾಯಣ ತೆಗೆಯಬೇಡ (ರೂಢಿ). ೩. ಜಗಳ : ಅವರ ಮನೆಯಲ್ಲಿ ಪ್ರತಿನಿತ್ಯವೂ ರಾಮಾಯಣ ತಪ್ಪಿದ್ದಿಲ್ಲ (ರೂಢಿ). [ಸಂ.]

**ರಾಮಾರಕ್ತ** (ನಾ). ತುಂಬ ರಕ್ತದಿಂದ ಕೂಡಿದುದು : ಬಸುವ ಅಣ್ಣನ ರಾಮಾರಕ್ತವಾದ ಕಳೇಬರವನ್ನು ಅವರಿಗೆ ತೋರಿಸಿದ (ಬಪಸಿ. ೯೦). [←ತುಳು. ರಾಮಾರಕ್ತ = ಅತಿಯಾದ ರಕ್ತಸ್ರಾವದಿಂದ ಕೂಡಿದ]

**ರಾಮಾವತಾರ** (ನಾ). ೧. ವಿಷ್ಣುವಿನ ಏಳನೆಯ ಅವತಾರ; ಶ್ರೀರಾಮಚಂದ್ರನ ಅವತಾರ : ವಿನುತ ರಾಮಾವತಾರದ ಪುಣ್ಯಶಕ್ತಿಯಿಂದೆ . . . ಕೀವಿದ ಮುಹಾಶರವನು . . . ಫಲುಗುಣನೆಚ್ಚನು (ಕೃಮಿಣಿ. ೦೩-೯೭). ೨. ರಾಮನ ಅವತಾರವನ್ನು ಎತ್ತಿದವನು,—ಅವತಾರ ಪುರುಷ : ಪೂಜಿಸನೆ ರಾಮಾವತಾರನು ಸೇತುವಿನೊಳಾ ರಾಮನಾಥನನು (ದಕಪು. ೩೯-೬೨). [ಸಂ.]

**ರಾಮಾಸ್ತ್ರ** (ನಾ). = ರಾಮಬಾಣ ೧ : ಔಕುವುದು ಬಲವೈದುವುದು ಸುರಲೋಕವನು ರಾಮಾಸ್ತ್ರದಲಿ (ತೊರರಾ. ೬-೩೫-೩೭). [ಸಂ.]

**ರಾಮಿ** (ನಾ)· ಒಂದು ಬಗೆಯ ಸಸ್ಯ : ರಾಮಿ (ರಾಮಿಟ)· – ಸಣ್ಣಗಿಡ. ತೊಪ್ಪಲವನ್ನು ನೀರೊಳಗೆ ಚೆಲ್ಲಿದರೆ ಮೀನುಗಳು ನಿಶ್ಚೇತನವಾಗುತ್ತವೆ (ಕಣಗಿ. ೯೭)· [ಸಂ. ರಾಮಿಾ]

**ರಾಮೆ** (ನಾ). ೧· ಹೆಂಗಸು; ಸ್ತ್ರೀ : "ರಾಮಾ, ವಾಮಾ . . . ವಶಾ, ಯುವತಿಃ – ಈ ೨೮ ಸ್ತ್ರೀಯರ್" (ಹಲಾಯು. ೬೯–೩೨೭)· ೨. ಹೆಂಡತಿ : ರಾಮಂ ಕಳಿಸಿದ ತೆಱದಿಂ ರಾಮೆಗೆ ಪುಸಿ ನುಡಿದು ರಥಮನೇಱಿಸಿಕೊಂಡಾ ಭೀಮಾಟವಿಯಿಂ . . . ಎಯ್ದಂದಂ (ಶಂರಾಶತ· ೦೫–೭೩)· ೩. ನಲ್ಲೆ; ಪ್ರಿಯೆ ; ಕಾದಲೆ : ಅರಸ ಸತಿಯೆಡೆಗೆಯ್ದಿ ರಾಮೆ ಪೇರಡವಿಯೊಳು ಶಿವನ ಭವನಕೆ ಹೋಗಿ ನೀ ಮಾಡಿದಾಚರಣೆಯೇನು . . . ಎನೆ (ಗುರುಶಾ· ೩–೦೯). ೪. ಲಕ್ಷ್ಮಿ : "ಶರಧಿಸುತೆ ರಾಮೆ ಗೋಮಿನಿ ಲಕ್ಷ್ಮಿ . . . ಮನ್ಮಥಮಾತೆಯೆನಲು ಸಿರಿಗಕ್ಕು ನಾಮಂ" (ಶುಂಗಿರಾ· ೬–೦೬). ೫. ಶಾಕಿನಿ, ಡಾಕಿನಿ ಮುಂತಾದ ಪಿಶಾಚಸ್ತ್ರೀ : ಪಱಿದ ಶಿರಂಗಳಿಂ ಕೆದಱಿ ಬಿರ್ದ್ದ ಗಜಂಗಳಿನಾಡುವಟ್ಟೆಯಿಂ ಸುಱಿದರುಣಾಂಬುವಂ ನಲಿವ ರಾಮೆಯರಿಂ ಪೆಣವತ್ತ ಸಾರ್ವ್ವ ಪೆಂಪೆಱೆಯರಿಂ . . . ಸಮರವಾಸುರ ಮಾದುದು (ಎಕ· VII, ಸಾಗರ· ೦೦೯–೩೯; 1042). [ಸಂ. ರಾಮಾ]

**ರಾಮೇಶ್ವರ** (ನಾ)· ೧· ದಕ್ಷಿಣಭಾರತದ ದಕ್ಷಿಣತುದಿಯಲ್ಲಿರುವ ಒಂದು ತೀರ್ಥಕ್ಷೇತ್ರ : ರಾಮೇಶ್ವರಕ್ಕೆ ಹೋದರೂ ಶನೀಶ್ವರ ಬಿಡದು (ಗಾದೆ)· ೨. ಈ ಕ್ಷೇತ್ರದಲ್ಲಿರುವ ಶಿವಲಿಂಗದ ಹೆಸರು: ದಾಸಿಮಯ್ಯಂ ಗಂದು ರಾಮೇಶ್ವರನು ಕದವಂ ತೆಱೆದನತಿಶಯಮುವು (ಬಸಪು· ೯೩–೯೬). [ಸಂ.]

**ರಾಮೋಜ** (ನಾ)· ಒಬ್ಬಾತನ ಹೆಸರು : × × × ರಾಮೋಜನ ಮಣ್ಣು ಕದಂಬರಸಾ ಮಾಡಿಕೊಟ್ಟ (ಎಕ· V, ಶುಂಂಶರಾ· ೨೬–೦೩; ಸು. 1000 ?).
[ರಾಮ + ಓಜ$_1$ (<ಒವರ್ಝ)]

**ರಾಮೋತ್ಕಂಠೆ** (ನಾ)· ೧· ರಾಮನಲ್ಲಿ ಉತ್ಸುಕತೆಯುಳ್ಳವಳು. ೨. ಜಲಾಭಿಮಾನಿದೇವತೆಯಾದ ವರುಣನಲ್ಲಿ ಉತ್ಸುಕತೆಯುಳ್ಳವಳು· ೧, ೨ : ಕುಲಭೂಭೃದ್ಭವೆ ಲಕ್ಷ್ಮಣಾಭಿನುತೆ ರಾಮೋತ್ಕಂಠೆ ವೈದೇಹಿ ಮಂಜುಲವೇಣೀ ರವಣೀಯೆ· · · ಕಕ್ಕೂಗಿಕುಂ ವಾಹಿನಿ ಸೀತೆ ಪೋಲ್ತು ಭುವನಪ್ರಖ್ಯಾತೆಯಂ ಸೀತೆಯಂ (ಕುಕೃಕ· ೨–೬).
[ಸಂ. ರಾಮೋತ್ಕಂಠಾ]

**ರಾಯ**, **ರಾವ್** (ನಾ). ೧· ಅರಸ ; ರಾಜ ; ದೊರೆ : ರಾಯೆಂಬೀ ಪೆಸರಿಲ್ಲದೆಂತು . . . ಭಾರ್ಗವಂ ಕೊಂದಂ (ಶಂಕಪಾ· ೦೨–೩೬); ಉಱಿದ ರಾಯರ ಕೊಡೆಗಳ್ ಆಣಿಂಬೆಯ ಕೊಡೆವೋಲ್ ಬೆಳ್ಗೊಡೆಗಳಾದುವು (ಕನ್ನಿಶಾ· ೩೦); ಆ ಯುಧಿಷ್ಠಿರಸಹಿತ ನೀನೇ ರಾಯನಾಗಿರು (ಕುವ್ಯಾಸ· ೦೨–೯೩). ೨. ಒಬ್ಬಾತನ ಹೆಸರು; ಚಾವುಂಡರಾಯ : ಗಂಡರ ಮುರುತಿಯೆನಿಸಿದ ಮಂಡಳಿಕರ ಮಂತ್ರಿ ಸಂಧಿವಿಗ್ರಹಿ ರಾಯಂ ಕೊಂಡಾಡಿ ಪೊರೆದು (ರಂಚೋಂಬು· ೧–೩೬) ; ಗಂಗರಾಜನಾ ಮುನ್ನಿನ ಗಂಗರ ರಾಯಂಗಂ ಸೂರ್ಮ್ಮಡಿ ಧನ್ಯನಲ್ತೇ (ಎಕ· II, ೬೩–೩೩; 1118). ೩. ಗಂಡಸರ ಹೆಸರಿನ ಕೊನೆಯಲ್ಲಿ 'ರಾಜ' ಎಂಬಂತೆ ಸೇರುವ ಶಬ್ದ : ಅ. ನ. ಕೃಷ್ಣರಾಯರು ಪ್ರಸಿದ್ಧ ಕಾದಂಬರಿಕಾರರು (ರೂಢಿ)· ೪. ಯಜಮಾನ ; ಒಡೆಯ : ಬರಬರುತ್ತ ರಾಯರ ಕುದುರೆ ಕತ್ತೆಯಾಯಿತು (ಗಾದೆ) ; ರಾಯರು ಮನೆಯಲ್ಲಿ ಇಲ್ಲ (ರೂಢಿ). ೫. ಸಮಾಸಪದಗಳ ಆದಿಯಲ್ಲಿ 'ಮಿಗಿಲಾದ', 'ಅತಿಶಯವಾದ', 'ದೊಡ್ಡ' ಎಂಬ ಅರ್ಥಗಳಲ್ಲಿ ಬಳಕೆಯಾಗುವ ಪದ : 'ರಾಯಂಚೆ' 'ರಾಯಗಿಡಿಗ' ಪರಾ. **ರಾವ್** : ೩. ದಿವಾನ್ ಮಾಧವರಾವ್ ರಸ್ತೆಯಲ್ಲಿ ನಮ್ಮ ಮನೆಯಿದೆ (ರೂಢಿ).

**ರಾಯಕಂದರ್ಪ** = ರಾಜರಲ್ಲಿ ಮನ್ಮಥನಂತಿರುವವನು ; ಒಂದು ಬಿರುದು : ರಾಯಕನ್ದರ್ಪ ಹೃದಯಪರಿತೋಷಕಾರಿಣಿ ರಾಯದಾಮೋದರಾನುರಾಗಪ್ರತ್ಯಕ್ಷ × × ಯೌವನವನವಸನ್ತಲಕ್ಷ್ಮಿ (ಶಾಇಇ· XX, ೯೩–೦೫; 1072). **ರಾಯಕೋಲಾಹಲ**, **ರಾಯಕೋಳಾಹಳ** = ರಾಜರಲ್ಲಿ ಕಲಕಲವನ್ನುಂಟುಮಾಡುವವನು ; ಒಂದು ಬಿರುದು : ರಾಯಕೋಲಾಹಲಂ, ಜವಾದಿಕೋಲಾಹಲಂ (ಕಪ್ರಾಶು· ೨೯೩ ಪ್ರಯೋ) ; ರಾಯದಲ್ಲಣ ರಾಯಕೋಳಾಹಳ . . . ಸ್ಥಿರಂಜೀವಯೆಂದು ಕೀರ್ತಿಸಿ (ಹಕಶಾ· ೬–೩); ದಟಮುಖಾದಿತ್ಯಂ ರಾಯಕೋಳಾಹಳಂ (ಕಮದ· ೦೭೪ ಪ್ರಯೋ). **ರಾಯಗಂಡರದಾವಣಿ** = ಶೂರರಾದ ರಾಜರನ್ನು ಬಾಧಿಸುವವನು ; ಒಂದು ಬಿರುದು : ಹುಸಿವರ ಶೂಲ ನಿಗಳಂಕಮಲ್ಲ ಚಲದಂಕರಾಮ ರಾಯಗಂಡರ ದಾವಣಿ (ಎಇ· XXVII, ೦೭೦–೦೯ ; 1256)· **ರಾಯಗಜಕೇಸರಿ** = ರಾಜರೆಂಬ ಆನೆಗಳಿಗೆ ಸಿಂಹದಂತಿರುವವನು ; ಒಂದು ಬಿರುದು : ಮೂರ್ಪ್ಪಡಿಭೀಮಂ ರಾಯಗಜಕೇಸರಿ ಗಂಡರೊಳ್ ಗಂಡ(ಡಂ) (ಇಇ· V· ೦೫–೯; 1019); ಮಱೆವೃತೆಚ್ಚಱುತವನಿಪತಿ ಕರೆ ತರುಣ ನಾವೆಡೆ ರಾಯಗಜಕೇಸರಿಯದಾವೆತೆ ಕಂದ ಬಾಯೆನುತಪ್ಪಿದನು ಬಯಲ (ಕುವ್ಯಾದ್ರೋ· ೬–೯). **ರಾಯಗಜಸಿಂಹ** = ರಾಯಗಜಕೇಸರಿ : ರಾಯಮುರಾರಿ ರಾಯಗಜಸಿಂಹಂ ಸೋಮಭೂಪಾಳಕಂ (ಕೂಕಾಶಾ· ೦೯–೦೦; 1176). **ರಾಯಘರಟ್ಟ** = (ಪರ)ರಾಜರನ್ನು ನಾಶಮಾಡುವವನು ; ಒಂದು ಬಿರುದು : ಈ ರಣಮದಾಂಧನ ತೊಟ್ಟುಳಿಕೆಯನು ಕೀಳ್ವ ರಾಯಘರಟ್ಟನಿಲ್ಲಾ ಎನುತ ತನ ಮಸಗಿತು ಭಟಸ್ತೋಮ (ಕುವ್ಯಾಕ·೨೦–೨). **ರಾಯಜಗರ್ಝಂಪಿ** = (ಪರ)ರಾಜರನ್ನು ಗೆದ್ದವನು ; ಒಂದು ಬಿರುದು : ಚೌವಣ ಸಹಸ್ರಬಾಹು ರಾಯಜಗರ್ಝಂಪಿ ಕೀರ್ತಿವಿದ್ಯಾಧರಂ (ಇಇ· V, ೧೩–೬ ; 1019). **ರಾಯಜರ್ಝುಳಪ್ಪ**, **ರಾಯಜಳಪ್ಪ** = (ಉದ್ಧಟರಾದ) ರಾಜರ ಮೇಲೆರಗಿ ಸೋಲಿಸುವವನು ; ಒಂದು ಬಿರುದು : ಸಾಮಾನ್ತಮಲ್ಲನೆಳೆಯೊಳ್ ಸೋಮೇಶ್ವರನನುಜನವಟರಾಯಜರ್ಝುಳಪ್ಪಂ (ಶಾಇಇ· XX, ೩೩–೬; 1082) ; ಸೌಭಾಗ್ಯಸದನೆ ರಾಯಜಳಪ್ಪ ಕಲ್ಪಾವನೀಜ ಸಮಾಲಿಂದ(ಗಿತ) ಜಂಗಮಲತೆ (ಎಇ· XXVIII· ೩೩–೬೯; ಸು. 1082). **ರಾಯದಲ್ಲಣ** = ರಾಜರನ್ನು ತಲ್ಲಣಗೊಳಿಸುವವನು ; ಒಂದು ಬಿರುದು : ರಾಯದಲ್ಲಣ ರಾಯಕೋಳಾಹಳ (ಹಕಶಾ· ೬–೩); ರಾಜಗೃಹಕೆ ವಿಡಾಯದಲಿ ಕತಿಪಯಬಲವು ಸಹ ರಾಯದಲ್ಲಣನೆಯ್ದಿ ಚಕ್ರಿಯ ಕಂಡು ವಸುದೇವ (ಸಾಳ್ವಭಾ· ೦೯–೨೨). **ರಾಯದಳದುಳಕಾಱ**, **ರಾಯದಳವುಳಕಾಱ** = (ಶತ್ರು)ರಾಜರ ಸೈನ್ಯವನ್ನು ಸೂರೆಮಾಡುವವನು ; ಒಂದು ಬಿರುದು : ರಾಯದಳದುಳಕಾಱ ಕೌರವರಾಯಸೇನಾಸೂಱೆಕಾಱನಜೇಯನೋ ಕಲಿಭೀಮ ಗೆಲಿದನು ಭಾನುನಂದನನ (ಕುವ್ಯಾಕ· ೦೨ ಸೂಚನೆ) ; ರಾಯರ್ಝುಳಪ್ಪ ರಾಯದಳವುಳಕಾಱ . . . ಸ್ಥಿರಂಜೀವಯೆಂದು ಕೀರ್ತಿಸಿ (ಹಕಶಾ· ೬–೩). **ರಾಯದಾಮೋದರ** = ರಾಯಮುರಾರಿ : ರಾಯದಾಮೋದರಾನುರಾಗಪ್ರತ್ಯಕ್ಷ (ಶಾಇಇ. XX, ೯೭–೦೩ ; 1072). **ರಾಯಮುನ್ನೀರಬಡವಾನಳ** = ರಾಜರೆಂಬ ಸಮುದ್ರಕ್ಕೆ ಬಡಬಾನಳದಂತಿರುವವನು; ಒಂದು ಬಿರುದು : ಶೌರ್ಯನಾರಾಯಣಂ ರಾಯಮುಂನೀರ ಬಡವಾನಳಂ ಚೌವಾಣ ಸಹಸ್ರಬಾಹು (ಇಇ· V, ೧೩–೬ ; 1019). **ರಾಯಮುರಾರಿ** = ರಾಜರಿಗೆ ಮುರಾರಿಯಂತಿರುವವನು; ಒಂದು ಬಿರುದು : ಪ್ರತಾಪ ಲಂಕೇಶ್ವರ ರಿಪುಮದನ ಮಹೇಶ್ವರ ರಾಯಮುರಾರಿ ಭುಜಬಳಮಲ್ಲ (ಕಇಇ· ೬೯–೦೨–೦೪; 1170)· **ರಾಯಸಿರಸಲ್ಲ** = (ಶತ್ರು)ರಾಜರಿಗೆ ಶೂಲದಂತಿರುವವನು; ಒಂದು ಬಿರುದು : ಗಿರಿದುರ್ಗಮಲ್ಲಂ ರಾಯಸಿರಸಲ್ಲಂ ಚಲದಂಕರಾಮಂ (ಎಕ· VI, ಕಂ೦೯· ೯೩–೩೦; 1196). [☞ ಸಂಸ್ಕೃತಕೋಶಗಳಲ್ಲಿ ಇದು 'ರಾಜನ್' ಶಬ್ದದ ತಪ್ಪುರೂಪವೆಂದು ಹೇಳಿದೆ./ಪ್ರಾ. ರಾಯ]

**ರಾಯಂಚೆ** (ನಾ). ಹಂಸಗಳಲ್ಲಿ ಶ್ರೇಷ್ಠವಾದುದು ; ರಾಜಹಂಸ; ಅರಸಂಚೆ : "ರಾಯಂಚೆಯೆನಲ್ ರಾಜಹಂಸಂ" (ಶಬಂ. ೬೯); ಚಾರು ದತ್ತನು ವನಜಷಂಡದ ಬಂಡುವಿಂಡಿನ ಕೂಡೆ ರಾಯಂಚೆ ಬನದದಿಂದೆಡೆ ಯಾಡುತಿಹ ಚೆಲುವನು. . . ಕಂಡು ಮೆಚ್ಚಿದನು (ಶಾಕ್ಕಷಾ. ೦೭-೦೨); ಪಾಂಡಿತ್ಯಮನೀಯೆ ಕಯ್ಯ ಗಿಳಿಗೊಲ್ದೈತಂದ ರಾಯಂಚೆಗೊಳ್ನಡೆಯಂ ಮೆಲ್ಲಡಿ ಬೀಟೆ ಬಂದು (ರಾಜಶೇ. ೭-೦೨). [ರಾಯ + ಅಂಚೆ₂]

**ರಾಯಕಟಕ** (ನಾ). ರಾಜನ ಸೈನ್ಯ; ಅರಸನ ಪಡೆ : ತಪ್ಪದೀ ಯುವ ರಾಜನಾಡಿದ ಕಪ್ಪುದೋಜದ ಮಾತು ಹನುಮಂಗುಪ್ಪರದ ಛಟರುಂಟೆ ನವಿಬ್ಬಾ ರಾಯಕಟಕದಲಿ (ಕೊರಣಾ. ೯-೦೨-೦೨).

**ರಾಯಕಟಕಪಿತಾಮಹ** = ರಾಜನ ಸೈನ್ಯಕ್ಕೆ ಅಜ್ಜನಂತಿರುವವನು ; ಭೀಷ್ಮ : ರಾಯಕಟಕಪಿತಾಮಹನ ತಲೆಬಾಯಾಲಭಿಷೇಕವನು ಕೌರವರಾಯ ಮಾಡಿಸಿ ಪತಿಕರಿಸಿದನು ಕುಂಭಸಂಭವನ (ಕುಮ್ಮಾದ್ರೋ. ೧ ಸೂಕಪ). **ರಾಯಕಟಕಾಚಾರ್ಯ** = ರಾಜಸೈನ್ಯದ ಆಚಾರ್ಯ ; ಸೇನಾಪತಿ; ದ್ರೋಣ : ರಾಯಟಕಾಚಾರ್ಯನಾ ಚಾಪಾಯುಧಾಗ್ರಣಿ ಮೋಹಿದನು ಪದ್ಮಾಯತವ್ಯೂಹವನು (ಕುಮ್ಮಾದ್ರೋ. ೯ ಸೂಕಪ). [ರಾಯ + ಕಟಕ₃]

**ರಾಯಕಲ್ಲು** (ನಾ). ಅರೆಯುವ ಕಲ್ಲು : ಅರೆವ ಗುಂಡ ದೇವರ ಜಗಲಿ ಯೊಳಿಟ್ಟು ಹರಿಗಳ ತಂದು ರಾಯಕಲ್ಲ ಮೇಲಿಟ್ಟ ಮಜ್ಜಿದೊಜಗಿದ್ದ ಮಕ್ಕಳ ಬಡಿದೆಬ್ಬಿಸಿ ಆಜಿಯದಂತೆ ಬೊಬ್ಬಿಡುವ. . . ಮಾಧವನ ಮಹಿಮೆ ಅಳವಲ್ಲವಾರಿಗೂ (ಪುರಂದ. ೩-೭೭-೩). [ರಾಯ₁ + ಕಲ್ಲು (<ಕಲ್₃)]

**ರಾಯಕುಮಾರ** (ನಾ). ರಾಜಕುಮಾರ; ಅರಸುಕುವರ.

**ರಾಯಕುಮಾರಚಮತ್ಕಾರ** = ರಾಜಕುಮಾರರಿಗೆ ತನ್ನ ಶೌರ್ಯದ ಚಮತ್ಕಾರವನ್ನು ತೋರಿಸುವವನು; ಒಂದು ಬಿರುದು: ವಿಜಯಲಕ್ಷ್ಮೀ ಮುಖದರ್ಪ್ಪಣಂ ರಾಯಕುಮಾರಚಮತ್ಕಾರಂ (ಶಾಇ. XX, ೧೦-೦೨; ೧೦೬೦). [ರಾಯ + ಕುಮಾರ]

**ರಾಯಕುವರ** (ನಾ). = ರಾಯಕುಮಾರ : ಎಲೆ ರಾಯಕುವರ ನೀನಾರ ಲಸಿಕೆಯಂ ನೋಡದೆನ್ನಸುವನೋವಿದೆ (ಉದ್ಭಟ. ೩-೩); ರಾಯಕುವರನ ಮರಣವಾರ್ತೆಯನಾ ಸುಭದ್ರಾದೇವಿ ಕೇಳಿದಳು (ಕುಮ್ಮಾದ್ರೋ. ೭-೧೧).

**ರಾಯಕುವರವಿಭಾಡ** = ರಾಜಕುಮಾರರನ್ನು ನಾಶಮಾಡುವವನು; ಒಂದು ಬಿರುದು : ರಾಯಕುವರವಿಭಾಡ ಬಂದನು ರಾಯಕಟಕಾಚಾರ್ಯ ಬಂದನು (ಕುಮ್ಮಾದ್ರೋ. ೬೦ಇ. ೯-೩೨ ಅಅಬ). [ರಾಯ + ಕುವರ₂]

**ರಾಯಗಜ್ಜ** (ನಾ). ರಾಜಕಾರ್ಯ : ಈ ರಾಯಗಜ್ಜದೊಳಾಂ ಪಡೆವಳ ನಪ್ಪೆಂ ಎನಗಪ್ಪಡೆ ಪೀಳಿಯುಮಂ ದಯೆಗೆಯ್ವುದು (ಜಕವ. ೦೩-೨೦). [ರಾಯ + ಕಜ್ಜ₁]

**ರಾಯಗರೀಟಿಸೀರೆ** (ನಾ). ಒಂದು ಬಗೆಯ ಸೀರೆ : ಪಂಕಜಮುಖಿವು ಮಿನಾಕ್ಷ ಮರಿವ ನೋಟ ಶಂಖಗೊರಳು ಗಿಳಿಮಾತು ಶಂಕಿಸಿ ರಾಯ ಗರೀಟಿಸೀರೆಯನುಟ್ಟು ನಿಶ್ಶಂಕನೋಲಗದಿ ನಿಂದಿಹಳು (ಸೌಂದಶಾ. ೩-೯೦). [ ? + ಸೀರೆ₂ ]

**ರಾಯಗಿಡಿಗ** (ನಾ). ಒಂದು ಬಗೆಯ ದೊಡ್ಡ ವಾದ್ಯ : ಗಜಬಿವಗ್ಗದ ಬೊಗ್ಗುಗಳ ದಿಗ್ಗಜವ ಸುಡಿಸುವ ರಾಯಗಿಡಿಗನ ವಿಜಯಬಲ ತೊಡ ರಿಕ್ಕಿತ್ಯೆ ಕಲ್ಪಾಂತಸಾಗರಕೆ (ಕುಮ್ಮಾಶ. ೨-೩) ; ತೂಳುವಬಿಗಳ ರಾಯ ಗಿಡಿಗನ ಘೋಳಘೋರದ ಘೋಷವವೆಸಿಯ ಸೀಳೆ ನಡೆದುದು ಸೇನೆ (ಕುಮ್ಮಾಶ. ೨-೨). [ರಾಯ + ಗಿಡಿಗ₀ (ಶ ← ತೆಲು. ಗಿಡಿಯ)]

**ರಾಯಗಿಡಿಬಿಡಿ** (ನಾ). = ರಾಯಗಿಡಿಗ : ಬೊಬ್ಬಿಡುವ ನಿಸ್ಸಾಳದ ಮಹಾರವ ರಾಯಗಿಡಿಬಿಡಿ [ಶಾಕಾಂ. ಗಿಡಬಿಡಿ]ಯಾ ಘುಡುಘುಡುಸ್ವರವೆಸೆಯ ಲಂಬರವೊಡೆದುದುಮೋಯೆಂಬಂತೆ ನಗರವನೊಡನೆ ಹೊಅವಂಟರು ನೃಪಾಲನ ಮಲ್ಲಸಂದೋಹ (ಕುಮ್ಮಾಶಿ. ೬೦ಇ. ೯-೦೮) ; ಡೌಡೆ ರಾಯಗಿಡಿಬಿಡಿ ಕಹಳೆ ಕಂಬು ಭೇರಿ ಮೃದಂಗ ಬೊಂಬುಳಿರವಂಗಳಿಂದಂಬುಜಭವಾಂಡವುದಿರೆ (ಕಂಠೀ. ೩೯-೨೮). [ರಾಯ + ಗಿಡಬಿಡಿ]

**ರಾಯಗಿಳಿ** (ನಾ). ಅರಗಿಳಿ ; ರಾಜಶುಕ : ಮಣಿಪಂಜರದೊಳು ರಾಯ ಗಿಳಿಯ ಹಸುಳೆ ಪಿರಿದುಂ ರಾಜಿಸುವಂದದಿಂ . . . ತೊಟ್ಟಿಲೋಳಿರಸುವುಗಂ ಬಳೆದಂ (ಜಿತುಣಾ. ೨-೬೨). [ರಾಯ + ಗಿಳಿ]

**ರಾಯಗುರಿಪು** (ನಾ). ರಾಜಚಿಹ್ನೆ ; ಅರಸನ ಲಾಂಛನ : ಐಹಿಕವಾದ ತಂತ್ರವನ್ನು ಎಲ್ಲಾ ವಾದ್ಯಗಳನ್ನೂ ಬಿರುದಾವಳಿಗಳನ್ನೂ ಮತ್ತಿನ ರಾಯ ಗುರಿಪುಗಳನ್ನೂ ನಿಲಿಸಿ (ಬಿರುಗಂ. ೦೨-೯). [ರಾಯ + ಕುರಿಪು (~ ಕುಜಿಪು)]

**ರಾಯಗುರು** (ನಾ). ರಾಜನ ಗುರು : ನಾಗಲಾಂಬಿಕೆ ಗಡ ವಿರಕ್ತೆ ಗಡ ರಾಯಗುರುವ ಬಲು ದಣಾಯಕ ಬಸವನಕ್ಕ ಗಡ ಗರ್ಭವುಂ ತಳೆದಳ್ಗಡೆಂ ಚಿತ್ರಂ (ತಪ್ಪು. ೯-೦೭). [ರಾಯ + ಗುರು₂]

**ರಾಯಗೆಂಪು** (ನಾ). ಗಾಢವಾದ ಕೆಂಪು ; ಅತಿಯಾದ ರಕ್ತವರ್ಣ : (ಅಂದಳದ ರಾಯಗೆಂಪಿನ ಮುಕಮಲ್ಲಿನ ಮೇಲ್ಪುಸುಕನ್ನೆತ್ತಿ ಸರಿಯಿಸುವಳು) (ಬಿರುಗಂ. ೨೮-೦). [ರಾಯ + ಕೆಂಪು₁]

**ರಾಯಗೆಲಸ** (ನಾ). ದೊಡ್ಡ ಕೆಲಸ ; ಮಹಾಕಾರ್ಯ : ನಮ್ಮ ಹೊಚ್ಚ ಹೊಸಗನ್ನಡದ ಗುಡಿಯನ್ನೇರಿಸುವ ರಾಯಗೆಲಸಕ್ಕೆ ಕೈನೀಡುತ್ತೀರೊ ? (ಪಡಾ. I, ೯೩೭). [ರಾಯ + ಕೆಲಸ]

**ರಾಯಗೋಪುರ** (ನಾ). ದೊಡ್ಡ ಗೋಪುರ : ರಾಯಗೋಪುರವನ್ನು ಹದ್ದು ಕೊಂಡುಹೋಯಿತೋ ? (ಗಾದೆ). [ರಾಯ + ಗೋಪುರ]

**ರಾಯಗೋಲು, ರಾಘೋಲು** (ನಾ). ಒಕ್ಕುವಾಗ ಕಣದಲ್ಲಿ ತೆನೆ, ಹುಲ್ಲು ಮೊದಲಾದುವುಗಳನ್ನು ಎಳೆಯಲು ಉಪಯೋಗಿಸುವ ಒಂದು ಸಾಧನ ; ಮೆರೆಕೋಲು : ರಾಯಗೋಲಿನಿಂದ ಕಣದಲ್ಲಿ ತೆನೆ ಎಳೆದುಕೊ (ಕೂಆ). **ರಾಘೋಲು** : ಸೆಳ್ಳು, ಜಂತಗುಂಟೆ, ರಾಘೋಲು ಮೊದಲಾದ ಉಪಕರಣಗಳನ್ನು ಹೊತ್ತು (ಕನ್ನಶಾ. ೧೩೭). [ರಾಯ + ಕೋಲು₁ (< ಕೋಲ್₁)]

**ರಾಯಗೋವಳ** (ನಾ). ದನ ಕಾಯುವವರ ಮುಖಂಡ : ರಾಯ ಗೋವಳಂಗೆ ಬಿನ್ನವಿಸುವರ್ (ನೀಕಗೋ. ೯೬-೦ ಪ). [ರಾಯ + ಗೋವಳ (< ಗೋವಾಳ)]

**ರಾಯಗೋಳಾಯ್ಲ** (ನಾ). ಶ್ರೇಷ್ಠನಾದ ಕುದುರೆಸವಾರ : ಉಮ್ಮತ್ತೂರ ಶ್ರೀವೀರ ಶ್ರೀಮಲ್ಲರಾಜಒಡೆಯ ರಾಯಗೋಳಾಯ್ಲನ ಕುಡುತೆಯಲ್ಲಿ ಪ್ರವೇಶ (ಬಿರುಗಂ. ೩೯-೦೨). [ರಾಯ + ಗೋಳಾಯ್ಲ (< ಗೋಬಾಯಿಲ)]

**ರಾಯಜಗಜಟ್ಟಿ** (ನಾ). ರಾಜನ ಪ್ರಖ್ಯಾತ ಜಟ್ಟಿ ; ಅರಸನ ಪ್ರಸಿದ್ಧ ನಾದ ಮಲ್ಲ : ರಾಯಜಗಜಟ್ಟಿಗಳು ರಿಪುಕುರುರಾಯ ಥಟ್ಟನೊಳಿಬರಿಗೆ ನಿನ್ನಾಯತದಿ ನಿಲುವಂಥವಗಾವೇನ ಹೇಳುವೆವು (ಕುಮ್ಮಾಕ. ೦೩-೦೦). [ರಾಯ + ಜಗಜಟ್ಟಿ]

**ರಾಯಜಗದಳ** (ನಾ). ಒಂದು ಬಗೆಯ ನಾಣ್ಯ : ಶ್ರೀಕೇಶವದೇವರಿಗಂ ಬ್ರಾಹ್ಮಣರಿಗಂ ಕ್ರಯದಾನವಾಗಿ ಕೊಟ್ಟುಕೊಂಡ ರಾಯಜಗದಳಂ ಗದ್ಯಾಣ ಅಯಿನೂಱುಹತ್ತು ಮತ್ತಂ (ಕಶಾ. II, ೦೬-೨೦; ೧೧೨೨). [ರಾಯ + ಜಗದಳ₁]

**ರಾಯದೆಂಕಣಿ** (ನಾ). ಒಂದು ಬಗೆಯ ಯುದ್ಧಸಾಧನ : ದೊಡ್ಡ ದೆಂಕಣಿ : ತೋಱಿದೆಡೆಗೆ ಸಿಡಿವ ಡೆಂಕಣಿ ರಾಯದೆಂಕಣಿಗಳ ಸಾಲು ಬಿಡ ದೊಪ್ಪಿದವು ದುರ್ಗದೊಳು (ಕುಂಠಾಂ. ೯೨-೩೯) ; ಗಗನದೊಳಿಟ್ಟಣಿಸಿದುವು ರಾಯದೆಂಕಣಿ ಕವಣೆಗಲ್ಲುಗಳು (ಪ್ರಭುಲಿ. ೨-೦೬). [ರಾಯ + ದೆಂಕಣಿ]

**ರಾಯುತನ** (ನಾ). ದೊರೆತನ ; ರಾಜತ್ವ : ರಾಯುತನವೆಮಗಿಂದ್ರ ಲೋಕದ ಲಾಯದಲಿ ದಿಟ (ಕುವ್ಯಾಕ. ೦೩-೯೩) ; ಶ್ರೀಮಂತರನ್ನು ಅವರ ರಾಯುತನದ ಹಾವುಗೆಯ ಮಂಗಳಕ್ಕೆ ಸೀಳಿಡುವುದಾಗಿಯೂ ಕೂಗಿ ಕಳಕಳ ಮಾಡಿದರು (ಒಗಠ. ೬೯-೨೦). [ ರಾಯ + — ತನ ]

**ರಾಯುತವಸಿ** ' ರಾಯದವಸಿ ' ನೋ.

**ರಾಯುಥಟ್ಟು** (ನಾ). = ರಾಯುಕಟಕ : ರಾಯುಕಟಕಾಚಾರ್ಯನೊಡ್ಡಿದ ರಾಯುಥಟ್ಟಿನೊಳರುಳು ಕೊಂದನು ವಾಯುತನಯನ ತನುಜನಗ್ಗದ ದೈತ್ಯಕೋಟಿಗಳ (ಕುವ್ಯಾದ್ರೋ. ೦೩ ಸೂಚನೆ). [ ರಾಯ + ಥಟ್ಟು₂ ]

**ರಾಯುದವಸಿ, ರಾಯುತವಸಿ** (ನಾ). ರಾಜಋಷಿ : ರಾಜರ್ಷಿ : ಅಗ್ರಜಂಗಾಂ ಬೞಿಯನಿರ್ಪನಂ ರಾಯುದವಸಿಯ ಕುವರಿಯಂ . . . ಸೀತೆಯನಣ್ಣನಾಣತಿಯಿಂ ಕಾಡೊಳ್ ಬಿಸುಡಲ್ಕೆ ಬದ್ಧನಾದಂ (ರಾಕಥಾ. ೨೬-೯). **ರಾಯುತವಸಿ** : ಆ ರಾಯುತವಸಿ ತನ್ನೊಳಿರ್ಪುದರ್ಕೆ ದೃಢ ಭಕ್ತಿಯಂ ಕಾಣುತೆ ಸಂತಸಂದಾಳ್ದು . . . ಜನಾರ್ದನಂ ತಾಂ ಪ್ರತ್ಯಕ್ಷನಾದಂ (ಅದ್ಭುತ. ೬-೦೩). [ ರಾಯು + ತವಸಿ ]

**ರಾಯುದಳ** (ನಾ). = ರಾಯುಕಟಕ : ಗಜದ ಬಳಿಯಲಿ ಸಂದಣಿಸಿದುದು ರಾಯುದಳ ಮಣಿರಥಾನಿಕಾಯದಲಿ (ಕುವ್ಯಾಕ. ೨-೧೦) ; ರಾಯು ರಘುಕುಲ ಸಾರ್ವಭೌಮಂಗೆ . . . ಅನುಪಮುರಾಯುದಳವನು ಕೋಟಿ ಮನ್ನಿಸಿ ಕೊಂಡನಾ ರವಿಜ (ತೊರರಾ. ೪-೬ ಸೂಚನೆ). [ ರಾಯು + ದಳ₂ (=ದಲ) ]

**ರಾಯುನಿಂಬೆ** (ನಾ). ಒಂದು ಬಗೆಯ ದೊಡ್ಡಜಾತಿಯ ನಿಂಬೆ : ಭರಮಾಹೆಗ್ಗಡೆ . . . ರಾಯುನಿಂಬೆಯ ಹಣ್ಣುಗಳನ್ನಿತ್ತು ತನ್ನ ಪರಿಚಯ ವನ್ನು ಹೇಳಿಕೊಂಡನು (ಸಠಾ. ೬೩). ' ಗಜನಿಂಬೆ ' ಪರಾ.

[ ರಾಯ + ನಿಂಬೆ ]

**ರಾಯುನೆಲ್ಲಿ** (ನಾ). ಒಂದು ಬಗೆಯ ದೊಡ್ಡಜಾತಿಯ ನೆಲ್ಲಿ; ಅರ ನೆಲ್ಲಿ : ಈಳೆ ಕಿತ್ತಳೆ ಹಲಸು ಬಕ್ಕವಲಸಿನ ಸಾಲುನೆಲ್ಲಿಯ ರಾಯುನೆಲ್ಲಿ (ರೇವಾಂಕು. ೬-೨೬೭) ; ಆನೆಯ ಮರಿಗಳು ಮುರಿದ ರಾಯುನೆಲ್ಲೀಮರದ ಕೊಗಟೆಯ ವಾಸನೆ ಬರುತ್ತದೆ (ಕುಂಂಬಯು. ೩-೩೮೩). [ ರಾಯ + ನೆಲ್ಲಿ ]

**ರಾಯುನೇರಿಲು** (ನಾ). ಒಂದು ಬಗೆಯ ದೊಡ್ಡಜಾತಿಯ ನೇರಿಳೆ ; ಅರನೇರಿಲು : ನೇರಿಲುಂ ರಾಯುನೇರಿಲು ಜಂಬುನೇರಿಲು ತೋರುತಿಹ ಹಿಪ್ಪಲಿಯ ನೇರಿಲುಂ (ಪಪಪೂ. ೨೯-೩೦).

[ ರಾಯು + ನೇರಿಲು ( < ನೇಱಲ್ ) ]

**ರಾಯುಪುಡಿಶರ್ಕರೆ** (ನಾ). = ರಾಯುಪುಡಿಸಕ್ಕರೆ : ಹಸುವಿನ ಹಾಲು ಚೆನ್ನಾಗಿ ಕಾಸಿ ರಾಯುಪುಡಿಶರ್ಕರೆ ಜೇನುತುಪ್ಪವೆರಸಿ ಸೇವಿಸೆ ಹೆಣ್ಣೆತ್ತರು ನಿಲುವುದು (ಸಳವ್ಯ. ೧೯೬). [ < ರಾಯುಪುರಿಸಕ್ಕರೆ ]

**ರಾಯುಪುಡಿಸಕ್ಕರೆ**, ರಾಯಿಪುಡಿಸಕ್ಕರೆ (ನಾ). ಒಂದು ಬಗೆಯ ಸಕ್ಕರೆ : ಚಿತ್ರಮೂಲ, ಬೆಳ್ಳುಳ್ಳಿ . . . ಜೀರಿಗೆ ಇವುಗಳನ್ನು ಸಮಭಾಗವಾಗಿ ಕಷಾಯುಮಿಕ್ಕಿ ಶೋಧಿಸಿಕೊಂಡು, ರಾಯುಪುಡಿಸಕ್ಕರೆ ಮತ್ತು ಹಸುವಿನ ತುಪ್ಪದಲ್ಲಿ ಪ್ರತಿಪಾಕವನಿಕ್ಕಿ ಕೊಡಲು ವಿಷಮಜ್ವರ ಗುಣವಾಗುವುದು (ಸಳವ್ಯ. ೦೦೩). **ರಾಯಿಪುಡಿಸಕ್ಕರೆ**: "ಶರ್ಕರಾ. ಸಿತಾ—೨ ತವರಾಜನೆಂಬ ಸಕ್ಕರೆ, ರಾಯಿಪುಡಿಸಕ್ಕರೆ" (ಸಿದ್ಯಾಂಕ. ೨೯೬). [ < ರಾಯುಪುರಿಸಕ್ಕರೆ ]

**ರಾಯುಪುರಿಸಕ್ಕರೆ** (ನಾ). ರಾಯುಪುರಿ ಎಂಬ ಊರಲ್ಲಿ ತಯಾರಾದ ಸಕ್ಕರೆ : ಇಪ್ಪು ಸೊಪ್ಪನ್ನು ಸಮಾನಂಗೊಂಡು ಅಕ್ಕಿಗಚ್ಚಿನಲ್ಲಿ ರಾಯ ಪುರಿಸಕ್ಕರೆ, ತುಪ್ಪದಲ್ಲಿ ಮೆಲ್ಲಲು ಗರ್ಭಕಟ್ಟುವುದು (ಶಿವ್ಯಶಿ. ೧೦೩).

**ರಾಯುಪುರಿಯ ಸಕ್ಕರೆ**=ರಾಯುಪುರಿಸಕ್ಕರೆ : ವಿಷ್ಣುಕ್ರಾಂತಿವರ್ಣವ . . . ಒಂದು ಪಾವು ರಾಯುಪುರಿಯ ಸಕ್ಕರೆಯಿಂದ ಕಲ್ಕಮಾಡಿ ಕೂಡ ಮೂಱುದಿನ ಕೊಳ್ಳಲು ದ್ವಂದ್ವಮೇಹ ನಾಶ (ಅಷ್ಟಶಿ. ೦೨೨). ' ರಾಯು ಪುಡಿಸಕ್ಕರೆ ' ಪರಾ. [ ← ಮರಾ. ರಾಯುಪುರೀಸಾಖರ್ ]

**ರಾಯುಪೌಜು** (ನಾ). = ರಾಯುಕಟಕ : ವಿಜಯವಾದ್ಯಗಳಬ್ಬರ ರಾಯುಪೌಜಲಿ ತ್ರಿಜಗಕ್ಕೆ ಭಯವ ಬೀಱಿದುವು (ಕಂಕಂ. ೦೩-೨೦).

[ ರಾಯ + ಪೌಜು ( < ಫೌಜು ) ]

**ರಾಯಬಿತ್ತರಿಗೆ** (ನಾ). ರಾಜಪೀಠ ; ಸಿಂಹಾಸನ : ಅವಳು ಮುಂದೆ ರಾಯಬಿತ್ತರಿಗೆಯನ್ನೇರಿದ ವಿಜಯನಾರಸಿಂಹನನ್ನು ಪಡೆದದ್ದರಿಂದ ವಂಶ ವೃಕ್ಷವನ್ನಡರಿದ ಅವನ ಜತೆಯಲ್ಲಿ ಇವಳೂ ಪ್ರಧಾನಳಾಗಿ ಕಂಡಳು (ಸಠಾ. V. ಕೃಶ್ಕಾಪಪ). [ ರಾಯ + ಬಿತ್ತರಿಗೆ₁ ]

**ರಾಯುಬೀದಿ** (ನಾ). ಮುಖ್ಯವಾದ ದಾರಿ ; ರಾಜಮಾರ್ಗ : "ರಾಯುಬೀದಿಯೆಂದುಂ ರಾಜಬೀದಿ" (ಕಕಾ. ೩೯-೩೦೩) ; ಕಣ್ಗೆಂಬಾದುದು ರಾಯು[ಹಾಕಾಂ.ಜ]ಬೀದಿ (ಕದ್ಯಕಾ. ೩೩) ; ರಾಯುಂಚೆ ಪೊಣರ್ವಕ್ಕಿ ಗಳೆಡೆಯಾಟದ ರಾಯುಬೀದಿಯೊ ತುಂಬಿಗಳ ಲಾಯುಮೊ ಪೇಳು (ಕುರಾಸಾಂ. ೨-೬೨). [ ರಾಯು + ಬೀದಿ ]

**ರಾಯುಬೊಗರಿ**(ನಾ). ಜೂಜಿನಂತೆ ಆಡುವ ಒಂದುಬಗೆಯ ಬುಗುರಿಯ ಆಟ : ಲೆತ್ತ, ಪಗಡೆ, ರಾಯುಬೊಗರಿ . . . ಮೊದಲಾದ ಜೂಜಿನಾಟ ಗಳನ್ನಾಡಿ (ಕಪಾರಿ. ೧೦೯). [ ರಾಯ + ಬೊಗರಿ ( < ಬವರಿ ) ]

**ರಾಯುಬೋರೆ** (ನಾ). ಒಂದು ಬಗೆಯ ದೊಡ್ಡ ಜಾತಿಯ ಬೋರೆ.— ಎಲಚಿ : " ರಾಜಕೋಲಃ— ರಾಯುಬೋರೆ, ಹೇರೀಚಲು" (೬ಕಧಿ. ೦೩೮); ಬೋರೆಯುರಬೋರೆ ಪುಳಿಬೋರೆ ಸೀಬೋರೆಯಿಂ ರಾಯುಬೋರೆಯು (ಪಪಪೂ. ೨೯-೩೦). [ ರಾಯ + ಬೋರೆ₂ ]

**ರಾಯುಭಾರ** (ನಾ). ೧. ರಾಜ್ಯಾಡಳಿತವನ್ನು ನಡೆಸುವುದು ; ರಾಜ್ಯಭಾರ : ರಾಜೇಂದ್ರನು ಸುಪ್ರಸಿದ್ಧರಾಯುಭಾರಕಾರ್ಯಧುರಂ ಧರತ್ವದೊಳ್ ದೀಕ್ಷಾಬದ್ಧನಾಗಿ (ಸೌಗಂಧಿ. ೬-೦೦). ೨. ದೂತಕಾರ್ಯ; ದೌತ್ಯ : ಶರಣದೇಹಿಕದೇವನೆಂಬೀ ಬಿರುದ ಮೆಱೆಯಲು ರಾಯಭಾರವ ಧರಿಸಿ ಕೌರವನರಮನೆಗೆ ನಡೆತಂದನಸುರಾರಿ (ಕುವ್ಯಾಉ. ೮ ಸೂಚನೆ) ; ಈತನ ರಾಯುಭಾರವು ಸಫಲವಾಯಿತು (ಕಂಕಾಪು. ೨೬).

[ < ಸಂ. ರಾಜ್ಯಭಾರ./ತೆಲು. ರಾಯಬಾರ, ರಾಯಭಾರ ]

**ರಾಯುಭಾರಿ** (ನಾ). ೧. ಪ್ರತಿನಿಧಿ ; ನಿಯೋಗಿ : ಜಯವರ್ಮಂ ಆದರದಿಂದಟ್ಟಿದ ರಾಯಭಾರಿ ದಮನಂ ಬಂದಿರ್ದಪಂ (ಕ್ಷತ್ರಕು. ೭-೩೬); ತ್ವರಿತದಿಂ ಬುದ್ಧಿವಂತರ ರಾಯುಭಾರಿಮುಖ್ಯರನು ಕಳುಪೆ (ಕೃಕಪೂ. I. ೦೩೬). ೨. ಒಂದು ರಾಷ್ಟ್ರದಿಂದ ಇನ್ನೊಂದು ರಾಷ್ಟ್ರಕ್ಕೆ ಕಳುಹಿಸ ಲ್ಪಟ್ಟ ನಿಯೋಗಿ,— ರಾಜದೂತ : ನೀವು ನಿಮ್ಮ ಮಂತ್ರಿಪದವಿಗೆ ರಾಜೀನಾಮೆಯನ್ನು. . . ಪರದೇಶದ ರಾಯುಭಾರಿಯಾಗಿ ನಿರ್ದೇಶಿಸಲ್ಪಡದೆ ಕೊಡಬೇಡಿರಿ (ರೂಕಸಂ. ೨೩) ; ಐರೋಪ್ಯನಾಡುಗಳ ಗಿಡಮರಗಳೂ ಇಲ್ಲಿಗೆ ರಾಯುಭಾರಿಗಳಂತೆ ಬಂದು ನೆಲಸಿದವು (ಶಾಕಗ. ೩, ಮುಮ್ಮುಖ).

[ರಾಯುಭಾರ + — ಇ₃. / ತುಳು. ರಾಯುಭಾರಿ; ತೆಲು. ರಾಯುಬಾರಿ, ರಾಯುಭಾರಿ]

**ರಾಯುಭಾರಿತನ** (ನಾ). = ರಾಯುಭಾರ ೨ : ಧನದನಗಂ ತನಗಟ್ಟಿದೊಡೆ ರಾಯುಭಾರಿತನಂ ಬಂದಂತಿರ್ಪುವಿದಱ ಕುಂಭೋಪಾಂತ ' ಥಳಥಳಿಸಿ ಬೆಳಗೆ ಕುಳಿಶಾಶ್ಮಂಗಳ್ (ಶಾಂತಿಪು. ೨-೦೦೩) ; ಆಕೆಯ ಪರವಾಗಿ ರಾಯುಭಾರಿತನ ವಹಿಸಿ ಬಂದಿರುವುದು ನಾನೇ(ವಾಕ್ಯಲ್ಯ. ೩೨೦). [ ರಾಯುಭಾರಿ + — ತನ ]

**ರಾಯುಭೇರಿ** (ನಾ). ದೊಡ್ಡದಾದ ಭೇರಿ ; ಭಾರಿಯಾದ ನಗಾರಿ : ಧ್ವನಿಗೈದುವನಿತಱೊಳಗೆ ರಾಯುಭೇರಿಗಳನುವಾದ ಚಿನ್ನಗಾಳೆಗಳು (ಕಂಕಂ. ೨೩-೦). [ ರಾಯ + ಭೇರಿ ]

**ರಾಯುಭೇರಿಗೆ** (ನಾ). = ರಾಯುಭೇರಿ : ಹಾಯಿ ಹರಿಗೋಲಾದ ರಾಯುಭೇರಿಗೆಸೂದೆ ರಾಯರಾ ಕಾಲಿಗೆ ಮುಳ್ಳೊತ್ತುವಾದ (ಕಜಾ. ೪-೩೨).

[ ರಾಯು + ಭೇರಿಗ್ಗೆ₀ (ಪ ←ತಮಿ. ಪೇರಿಕ್ಕೈ) ]

**ರಾಯಮನೆ** (ನಾ). ರಾಜನ ನಿವಾಸ ; ಅರಮನೆ : ಘನತರಭದ್ರ ಮಂಟಪಗಳಿಂದಾ ರಾಯಮನೆ ರಾರಾಜಿಸುತಿಹುದು (ಶಂರಾಸಾಂ. ೩-೩).
[ ರಾಯ + ಮನೆ ]

**ರಾಯಮನೆತನ** (ನಾ). ರಾಜಮನೆತನ ; ಅರಸುಕುಲ : ಆ 'ಮೊಸೆಗಾರ' ಎಂಬ ಬಿರುದೂ ಮಹೀಶೂರ ರಾಯಮನೆತನಕ್ಕೆ ಆಚಸ್ದ್ರಾರ್ಕವಾಗಿ ಸಲ್ಲತಕ್ಕದ್ದು (ಬಿರುಗಂ. ೪೦-೧). [ ರಾಯ + ಮನೆತನ ]

**ರಾಯಮನ್ನಣೆ** (ನಾ). ಅರಸನಿಗೆ ದೊರೆಯುವ ಗೌರವ ; ರಾಜಮನ್ನಣೆ : ಅಲ್ಲಿಯು ಪ್ರಜೆಗಳಾದರಂ ಮಿಗೆ ಮಾಡಿದ ರಾಯಮನ್ನಣೆಯಂ ಕಯ್ಕೊಂಡು (ಮಲಾಕ. ೬-೮೮ ದ). [ ರಾಯ + ಮನ್ನಣೆ ]

**ರಾಯಮಟಿಗೆ** (ನಾ). ಶ್ರೇಷ್ಠವಾದ ಸ್ಥಳ,— ಸ್ಥಾನ (?) : ನೆಟ್ಟನೆ ಜಂಬೂದ್ವೀಪಕ್ಕೆಟ್ಟಳ ಹಗರಟಗೆನಾಡು ನೊಸಲಾ ನೊಸಲಿಂಗಿಟ್ಟೆಸೆವ ತಿಲಕದಂತಿರೆ ಪಟ್ಟಣವಿದು ರಾಯಮಟಿಗೆ ಕಲುಕೆಟಿಯೆಸೆಗುಂ (ಸೌಇಇ. XX. ೨೦೨-೪೦ ; 1244). [ರಾಯ + ಮಟಿಗೆ]

**ರಾಯಮಾನ** (ನಾ). ರಾಜನಿಗೆ ಸಲ್ಲುವ ಆದಾಯ ; ರಾಜಾದಾಯ : ರಾಜ್ಯಾದಾಯವು ಷಡ್ಭಾಗವೆಂದು ಗೊತ್ತಾದ ನೆಲಗಂದಾಯದಿಂದಲೂ ಪೊಗದಿ, ನಿಕ್ಷೇಪ, ಶುಲ್ಕ, ದಂಡ ಮತ್ತು ಗಣಿಗಳ ರಾಯಮಾನಗಳಿಂದಲೂ ಉತ್ಪತ್ತಿಯಾಗುತ್ತಿತ್ತು (ಶಾಇಶ. ೬೩). [ರಾಯ + ಮಾನ]

**ರಾಯಮೂದಲೆ** (ನಾ). ಅಧಿಕವಾದ ತಿರಸ್ಕಾರ,—ಅವಹೇಳನ : ಆತನ ಪೆಣ್ಣಾಪಸಕ್ಕೆ ಕ್ಷಾತ್ರದ ರಾಯಮೂದಲೆಯನೊಡ್ಡಿ ವಿಡಂಬಿಸಿ ಕೆಣಕಿ . . . ಮಹಾಪರಾಧವನ್ನು ನೀನು ನಡೆಯಿಸಿದ್ದಪನಾದೆ (ಬಿರುಗಂ. ೩೯-೭). [ರಾಯ + ಮೂದಲೆ]

**ರಾಯಮೋಹರ** (ನಾ). = ರಾಯಕಟಕ : ಬಲವಲ್ಲಲ್ಲಿ ಭಯಗೊಳೆ ದ್ರೋಣ ಹೊಕ್ಕನು ರಾಯಮೋಹರಕ್ಕ (ಕುವ್ಯಾದ್ರೋ. ೨-೩೯) ; ಹೊಂತಕಾಟಿಗಳಾಗ ರಾಯಮೋಹರದಲಿ ಪಂತದೊಳೆಸೆದರುಬ್ಬಿಸಲಿ (ಕಂಬಿ. ೦೩-೨೦).
[ರಾಯ + ಮೋಹರ$_1$]

**ರಾಯರಾವುತ**, ರಾಯರಾವುತ್ತ, ರಾಯರಾವ್ತ (ನಾ). ಶ್ರೇಷ್ಠನಾದ ಕುದುರೆಸವಾರ : ಹಿರಿಯ ಮಲಧಾರಿಗಳು ಬಪ್ಪಾಗ ಮುಂದೆ ವೀರರ ಮಕುಟವರ್ಧನರ ರಾಯರಾವು[ಕಾಕಾಂ. ಹು]ತರ . . . ನಡುವೆ . . . ಚಂದ್ರಾದಿತ್ಯನಿರ್ದನು (ಸೋಪುಶ. ೪-೩೩) ; ಖುರ ಕುಣಿದಾಡೆ ಹೊಕ್ಕರು ರಾಯರಾವುತರು (ಕುವ್ಯಾದ್ರೋ. ೦೬-೨). **ರಾಯರಾವುತ್ತ** : ಗೆಲ್ಲಂಬಡೆದ ರದಟನಿಂ ರಾಯರಾವುತ್ತರಾಗಲ್ (ಶಬ್ದಶಾ. ೨೭೯). **ರಾಯರಾವ್ತ** : ವಾನಾಯುಜದ ಸಾಲೆಸೆದುದೊಜಗಿದ ರಾಯರಾವ್ತರ ಮಣಿಮಕುಟ ಮರಗೋಡನೋಲೈಸೆ (ಕುವ್ಯಾದ್ರೋ. ೦೭-೯). [ರಾಯ + ರಾವುತ]

**ರಾಯರಾವುತ್ತ** 'ರಾಯರಾವುತ' ನೋ.

**ರಾಯರಾವ್ತ** 'ರಾಯರಾವುತ' ನೋ.

**ರಾಯರಿಸಿ** (ನಾ). ರಾಜಋಷಿ ; ರಾಜರ್ಷಿ : ಈತನನಂತರಿಕ್ಷದೊಳ್ ಕರಗಳನೆತ್ತಿ ರಾಯರಿಸಿಯೆಂದುರೆ ಕೀರ್ತಿಪರಲ್ತೆ ಚಾರಣರ್ (ಚಾಕುಂಶ. ೨೭-೪೯). [ರಾಯ + ರಿಸಿ (< ಋಷಿ)]

**ರಾಯರೂವಾರಿ** (ನಾ). ಶಿಲ್ಪಿಗಳಲ್ಲಿ ಶ್ರೇಷ್ಠನಾದವನು : ಕಲ್ಯಾಣದ ರಾಯರೂವಾರಿ ಬಲ್ಲೋಜ ಕಂಡರಿಸಿದ ಸಾಸನ (ಸೌಇಇ. XX. ೨೦೨-೧೦೦ ; 1244). [ರಾಯ + ರೂವಾರಿ]

**ರಾಯರೇಖೆ** (ನಾ). ರಾಜನು ಮಾಡಿದ ಆಜ್ಞೆ ; ರಾಜಾಜ್ಞೆ : ರಾಯರೇಖೆಯ ಭಾವ್ಯರಾಲಿಸಿ ರಾಯಬಿಜ್ಜಣ ಬಸವಗುಂಲಿದುಪಾಯ ತಂತ್ರಾಲೋಡವಾದುದೆ ಭಾರ್ಯೆಯಗ್ರಜನ (ಬಸ್ಯ. ೭೬-೦). [ರಾಯ + ರೇಖೆ]

**ರಾಯಲ್$_1$** (ನಾ). ಮುದ್ರಣಕಾಗದದ ಒಂದು ಅಳತೆ; ಇಪ್ಪತ್ತುನಾಲ್ಕು ಅಂಗುಲ ಉದ್ದವೂ, ಹತ್ತೊಂಬತ್ತು ಅಂಗುಲ ಅಗಲವೂ ಇರುವ ಮುದ್ರಣದ ಕಾಗದ : ಮುದ್ರಣದಲ್ಲಿ ವಿಂಗಡಣೆ ಮಾಡುವಾಗ ಈ ಮುಂದಿನ ಪಟ್ಟಿಯನ್ನು ಅನುಸರಿಸುವುದು ಲೇಸು . . . ರಾಯಲ್, ಡೆಮ್ಮಿ, ಕ್ರೌನ್ (ಮುದ್ರ. ೨೭). [← ಇಂ. Royal]

**ರಾಯಲ್$_2$** (ನಾ). ಚಿತ್ರದುರ್ಗದ ಪಾಳೆಯಗಾರರ ಕಾಲದ ಒಂದು ಚಿನ್ನದ ನಾಣ್ಯ : ದುರ್ಗವು ಕೈವಶವಾದ ಮೇಲೆ ಈ ದೊರೆಯ ಬೊಕ್ಕಸದಲ್ಲಿದ್ದು ಹಗೆಗಳ ಕೈಗೆ ಸಿಕ್ಕಿದ ನಾಣ್ಯಗಳ ವಿವರ . . . ೧೦೨,೦೦೦ ರಾಯಲ್ (ತಕ್ರಶಾ. ೦೦೩). [ ? ]

**ರಾಯವಜೀರ** (ನಾ). ರಾಜನ ಮಂತ್ರಿ,—ಸಚಿವ : ರಾಯವಜೀರರೊಳ್ ರಾಣಾ ಜಗದೇವರಾಯರಸನಗ್ಗಳಂ (ತಕಪು. ೦೨-೦೯).
[ರಾಯ + ವಜೀರ]

**ರಾಯವತ್ತಳೆ** (ನಾ). ರಾಜನ ನಿರೂಪ ; ಅರಸನ ಅಪ್ಪಣೆ : ಶ್ರೀ ಬೆಟ್ಟದ ಚಾಮರಾಜಒಡೆಯರ ಬಳಿಗೆ ಈ ನಿರ್ಣಯವನ್ನು ರಾಯವತ್ತಳೆಯಟ್ಟಿ (ಬೆಟ್ಟಕ. ೨೦೩-೩). [ರಾಯ + ಪತ್ತಳೆ$_1$]

**ರಾಯವಾಡ** (ನಾ). ರಾಜನನ್ನು ಕುರಿತ ಸ್ತುತಿ,—ಹೊಗಳಿಕೆ : ಓದುವ ರಾಯವಾಡದುಗ್ಘಡಿಸುವ ಮಾಗಳಿಕದ ಚಪ್ಪರಿಸುವ ಪಡಿಯಜರ . . . ಕೈವಾರಿಗಳಾಡಂಬರವಮಳುಂಬವಾಗೆ (ಅಪಂಕೃ. ೦೦-೬೩ ವ). [ರಾಯ + ವಾಡ$_0$ (ಪ ← ಪ್ರಾ. ಪಾಢ = ಅಧ್ಯಯನ, ಶಾಸ್ತ್ರ)]

**ರಾಯವಾವುಡ** (ನಾ). ರಾಜನ ವಸ್ತ್ರ ; ಅರಸನು ಉಡುವ ಬಟ್ಟೆ : ಇದು ರಾಯವಾವುಡಂ ನೆಲೆಯಿದನೆಂತೋ ತಂದನಿಂದು ಸಬ್ಬವಕಾಟಂ (ಶಶಪ. ೬-೦೭೩). [ರಾಯ + ಪಾವುಡ$_1$]

**ರಾಯಶಿಲ್ಪಿ** (ನಾ). = ರಾಯರೂವಾರಿ : ರಾಯಶಿಲ್ಪಿ "ಅಪ್ಪಣೆ ಆದರೆ ಹೋಗಿ ಬರುತ್ತೇನೆ ಪ್ರಭು" ಎಂದನು (ಸತಿ. ೪೩). [ರಾಯ + ಶಿಲ್ಪಿ$_1$]

**ರಾಯಸ** (ನಾ). ೧. (ತಮ್ಮ ಪ್ರಜೆಗಳನ್ನು ಕುರಿತು ಗುರು, ರಾಜ ಮುಂತಾದ) ಹಿರಿಯರು ಬರೆಸುವ ಪತ್ರ ; ನಿರೂಪ : ಬಲ್ಲಾಳಿಗೆ ದ್ವಿವಿಜಾರಿ ರಾಯಸಂ ಬರೆಯಿಸುವಂ (ಅಪಂಕೃ. ೦೩-೯) ; ರಾಯನಾಯಚ್ಛಾವಸಾನದ ರಾಯಸವ ಬರೆಸಿದರು (ಕೊರಟಿ. ೨-೬-೧) ; ಆಡಳಿತವನ್ನು ನಡೆಸಲು . . . ಯಾವ ಭಾಷೆಯಲ್ಲಿ ರಾಯಸಗಳನ್ನು ಬರೆಯಬೇಕು ? (ಹುಕ್ಕಶ. ೨೮). ೨. (ರಾಜನ) ಆಜ್ಞೆ ; ಅಪ್ಪಣೆ ; ಕಟ್ಟಳೆ : ಊರೂರ್ಗೆ ಬೇಟಿಬೇಟಿರಿಲಿದು ರಾಯಸವಿತ್ತು ಹಾರೈಸುತರಸಾಳ್ಗಳೆಲ್ಲರ್ಗೆ ಬೆಸನಿತ್ತು (ಸಂಬಿರ. ೩-೯) ; ಯಿಾ ರಾಯಸದ ಮರ್ಯಾದೆಯ ಆ ಚಂದ್ರಗಿರಿಯ ಮಲ್ಲಿಕಾರ್ಜುನದೇವರಿಗೆ ಪೂರ್ವದಲು ಸಲುವಂತೆ . . . ಮಾಡಿಸಿಕೊಂಬುದು (ಸೌಇಇ. IX-ii. ೪೨೯-೪೦ : 1405) ; ರಾಯಸವೆಂಬುದು ರಾಯಗಲ್ಲದೆ ಮಿಕ್ಕ ನಾಯಕಮಕ್ಕಳಿಗುಂಟೆ (ಕುರಾಸಾಂ. ೦೦-೨೨). ೩. ಆಜ್ಞಾಪತ್ರಗಳನ್ನು ಬರೆಯುವ ಹಾಗೂ ಓದಿ ಹೇಳುವ ವೃತ್ತಿ : ಈ ಲಿಖಿತಪಚ್ಛರಿ . . . ವಾಚಿಸುವೆನೆಂದೆನುತ ರಾಯಸದ ಕಡುನಿಪುಣರು ನಿಲ್ಲದನಿಬರ್ ನೋಡಿ (ಅಕಾಂ. ೩೦-೪೭); ಕರಿಸಿ ರಾಯಸದ ಮಂತ್ರಿಗಳ . . . ದೊರೆಗಳಿಗೋಲೆಯ ಬರಿಸಿದ ಲಿಂಗರಾಜೇಂದ್ರ (ಕಂಪಶಿ. ೨೦-೩೩); ರಾಯಸದ ಶಕಟದಾಸನು ಅಮಾತ್ಯರಾಕ್ಷಸನ ಪ್ರೇರಣೆಗೆ ಒಳಗಾಗಿ . . . ತಂತ್ರಗಳನ್ನು ನಿತ್ಯವೂ ಹೂಡುತ್ತಿದ್ದ ಕಾರಣ (ರಾಕ್ಷಮು. ೨೩).

**ರಾಯಸದವ** = ರಾಯಸವನ್ನು ಬರೆಯುವ ಹಾಗೂ ಓದಿ ಹೇಳುವ ಕೆಲಸದವನು : ರಾಯಭಾರಿಗಳ ರಾಯಸದವರ ಕರಣಿಕರ ಜೋಯಿಸರ . . . ನಡುವೆವೊಡ್ಡೋಲಗಂಗೊಟ್ಟು ರಂಜಿಸುತ್ತಿರ್ದನು (ಸಮ್ಯಶಾ. ೨-೩) ; ಅಂತಸ್ತು ಗೌರವಗಳಿಗೆ ತಕ್ಕಂತೆ ಒಕ್ಕಣಿಸಿದ ಲಗ್ನದ ಓಲೆಗಳನ್ನು ಯೋಗ್ಯರಾದ ರಾಯಸದವರು, ಭಟರು ಒಯ್ದರು (ಶಾಂಕಲ. ೯೩). [ದೇ.೫ ತಮಿ. ಇರಾಯಚವಮ್, ರಾಯಚವಮ್; ತುಳು. ರಾಯಸ; ತೆಲು. ರಾಯಸ, ವ್ರಾಯಸ]

**ರಾಯಸನ್ನಿ** (ನಾ). ಸನ್ನಿಪಾತಜ್ವರದಲ್ಲಿ ಒಂದು ಬಗೆ ; ತೀವ್ರವಾದ ಸನ್ನಿ : ಕಿವುಡುಸನ್ನಿಯೆಂದರೆ ಸನ್ನಿಗಳೊಳಗೆ ರಾಯಸನ್ನಿಯಂತೆ (ವಿಶಿರಾ. I. ೯೩೯). [ರಾಯ + ಸನ್ನಿ]

**ರಾಯಸಭಾರಿ** (ನಾ). = ರಾಯಭಾರಿ ೨ : ಪಾಂಡವರ್ಗೆ ಪಾಗುಡಂಗಳಂ ಸಮಕಟ್ಟಿ ಸ್ವಕೀಯ ರಾಯಸಭಾ[ಪಾಠಾಂ. ಬಾ]ರಿಗಳಂ ಕಟಿುವುದುಂ (ಕುಮಾಕೀ. ೯-೦೨೭ ವ). [< ರಾಯಭಾರಿ]

**ರಾಯಸವಿದ್ಯೆ** (ನಾ). ರಾಯಸವನ್ನು ಬರೆಯುವ ಕಲೆ : ಚಿತ್ರಾರಿವಿದ್ಯೆ, ಸಿಪ್ಪರಿಗೆವಿದ್ಯೆ, ಪುಸ್ತಕದ ಲೇಖನವಿದ್ಯೆ, ರಾಯಸವಿದ್ಯೆ . . . ನಾನಾಭಾಷೆ ನಾನಾಸಂಜ್ಞೆಗಳನು ಅರಿತು (ವಿಶಿಕ. ೬). [ರಾಯಸ + ವಿದ್ಯೆ]

**ರಾಯಸಾಹಣಿ** (ನಾ). = ರಾಯರಾವುತ : ವಜ್ರದೇವನ ಡಿಂಗರಿಗ ರಾಯಸಾಹಣಿ ಸೋವಪಂ (ಇಎ. ೦೯೩೭, ಸಂಕಗಾರಿ. ೫-೩; ೭).
[ ರಾಯ + ಸಾಹಣಿ ]

**ರಾಯಸಿಗ** (ನಾ). ರಾಯಸವನ್ನು ಬರೆಯುವವನು : ರಾಯಸಿಗನಂ ಕರೆಯಿಸಿ ಪಲವುಂ ಗಡಿಗೋಂಟೆಗಳ ಬಲವುಂ ಪಯಣಪನ್ನದಂಗೆಯ್ಯು ದೆಂದು ರಾಯಸಂಗಳಂ ಕಳುಪಿ (ಚಕಂ. ೫-೭೬ ವ); ಅರಸನ ಕಣ್ಣಸ್ನೆಯಿಂ ರಾಯಸಿಗನವಂ ಕೊಂಡು (ಚಕವ. ೦೭-೦೭). [ರಾಯಸ + — ಇಗ]

**ರಾಯಸೂಯ** (ನಾ). ಚಕ್ರವರ್ತಿಯು ಮಾಡುವ ಯಾಗ : "ರಾಯ ಸೂಯಮಂ ಮಾಡಿದಾತನಂ ಸಾಮ್ರಾಟ್‌ಯೆಂಬುದು" (ಶಾಮಧು. ೭೦-೨೭೮).
[ < ರಾಜಸೂಯ ]

**ರಾಯಸೆಜ್ಜೆ** (ನಾ). ರಾಜನ ಹಾಸುಗೆ; ಅರಸನ ಶಯ್ಯೆ: ಮಹಾರಾಜ:– (ರಾಯಸೆಜ್ಜೆಯಲ್ಲಿ ಸ್ಥಿತನಾಗುವನು) (ಶಿಲ್ಪ. ೦೯-೦); ಶಾಂತಲಾದೇವಿ ರಾಯಸೆಜ್ಜೆಯ ಇನ್ನೊಂದು ಅಂಚಿನಲ್ಲಿ ಕುಳಿತಳು (ಸವಕ. ೯೩).
[ ರಾಯ + ಸೆಜ್ಜೆ₂ ]

**ರಾಯಸೊಮ್ಮು** (ನಾ). ರಾಜನ ಸಂಪತ್ತು; ಅರಸನ ಐಶ್ವರ್ಯ : [ಸ್ಥಾನ:_ಶ್ರೀರಂಗಪಟ್ಟಣ, ಅರಮನೆಯ ನೆಲಮಾಳಿಗೆ, ರಾಯಸೊಮ್ಮಿನ ಒಳಭಂಡಾರ] (ಮಂತ್ರಶ. ೦೦-೦). [ ರಾಯ + ಸೊಮ್ಮು₃]

**ರಾಯಿತ** (ನಾ). ತರಕಾರಿ ಮತ್ತು ಮೊಸರು ಬೆರಸಿ ಮಾಡುವ ಒಂದು ಬಗೆಯ ವ್ಯಂಜನಪದಾರ್ಥ : ಬೆಂಡೇಕಾಯಿ ರಾಯಿತವೂ ಅರುಚಿ ಯಾಯಿತು (ಕಾಬಿಸಾ. ೦೦೬). [←ಹಿಂ. ರಾಯತಾ; ಮರಾ. ರಾಯತೀ]

**ರಾಯಿಪುಡಿಸಕ್ಕರೆ** ' ರಾಯಪುಡಿಸಕ್ಕರೆ ' ನೋ.

**ರಾಯುಳ್ಳಿ** (ನಾ). ಒಂದು ಬಗೆಯ ದಪ್ಪ ಈರುಳ್ಳಿ : " ರಾಜ ಪ್ರಿಯಃ – ರಾಯುಳ್ಳಿ." (ಚಿತಂ. ೦೩೬); ರೊಟ್ಟಿ ಸಕ್ಕರೆ ತುಪ್ಪ ಬೆಲ್ಲ ಗೋಧುವೆ ತಣ್ಪಟ್ಟು ರಾಯುಳ್ಳಿಯ ಪಿನಿಯ ಒಟ್ಟಿಲು ಕವಳ ಕಿಣ್ಣಿಗಡದ ಮಾಂಸದ ರಾಸಿಯುಟ್ಟಣಿಸಿದವಂಗಡಿಯೊಳು (ಶಂಗಸಾಂ. ೯೨-೬೦). ' ರಾಜುಳ್ಳಿ ' ಪರಾ. [ ರಾಯ + ಉಳ್ಳಿ₁ ]

**ರಾಯ್ಕಂಗೆಯ್**, ರಾಯ್ಕಗೆಯ್ (ಕ್ರಿ). ರಾಜ್ಯಭಾರವಮಾಡು ; ಆಡಳಿತ ವನ್ನು ನಡೆಸು ; ಆಳು : ಬನವಾಸಿಪನ್ನಿಚ್ಛಾಸಿರಕೆ ಚಟ್ಟು ರಾಯ್ಕಂ ಗೆಯುತ್ತಿರೆ (ಎಕ. VIII. ಸೊರಬ. ೯೦೩-೭; 986). **ರಾಯ್ಕಗೆಯ್** : ಚಂದ್ರಾರ್ಕತಾರಂಬರಂ ರಾಯ್ಕಗೆಯುತ್ತಿರಲು (ಎಕ. V. ಹಾಸನ. ೦೬೦-೯; 1104). [ < ರಾಜ್ಯಂಗೆಯ್ ]

**ರಾಯ್ಕಗೆಯ್** ' ರಾಯ್ಕಂಗೆಯ್ ' ನೋ.

**ರಾರಾಜಿಸು** ' ರಾಜಿಸು ' ಪರಾ.

**ರಾಲ**, ರಾಳ (ನಾ). ೧. ಒಂದು ಬಗೆಯ ಮರ; ಅರಾಲ; ಸಜ್ಜರಸ : "ಸಸ್ಯಂ _ ರಾಲ, ಸಸಿ" (ಚಿತಂ. ೦೬೯). **ರಾಳ** : ೧. "ಸೌರಮೆಸಲ್ಪಾ ರಾಳಮೆನೆ ಸಜ್ಜುರಸಮುಕ್ಕು" (ಕುಂಗಣಾ. ೯೩-೯೨); ಕರೀಡಮಾರ, ರಾಳ (ವೈನಿ. ೬೦-೦೯೭೬). ೨. ರಾಲಮರದಿಂದ ದೊರಕುವ ಅಂಟು : ಇನ್ನು ಕೆಲವೊಂದು ವಿಶಿಷ್ಟವೃಕ್ಷಗಳಿಂದ ಅಂಟು, ರಾಳ, ಶೀಗೇಕಾಯಿ . . . ಕಾಯಿ ಮೊದಲಾದ ಉಪಯುಕ್ತವಸ್ತುಗಳು ದೊರೆಯುವವು (ಕಕವೃ. ೬-೦೯); ಲೋಲಲನಾಗರಮೋತಿ ಚಂದನ-ಕರ್ಪುರ ರಾಳ ಗುಗ್ಗುಳದ ದಶಾಂಗ (ಸಿದ್ಧ. ೦೯-೩). [ಸಂ.]

**ರಾವ್** ' ರಾಯ ' ನೋ.

**ರಾವ** (ನಾ). ೧. (ಪ್ರಾಣಿಗಳ) ಕೂಗು ; ಅರಚಾಟ : ನರಲ್ವ ರಾವದಂತೇಂ ಬಗೆಗೊಂಡುದೋ ಗುಡುಗು ಸೂಕಿಮರುತ್ಕೃತತೋವ ದೇಳ್ಗೆಯಿಂ (ರಾಜಶೇ. ೬-೦೦೩); ವಾಲಿ ದೆಸೆಗಳು ಬಿರಿಯ ರಾವದಲನು ಜನನು ತಿವಿದನು ಸರೋಷದಲಿ (ಅರಾಪಾ. ೯-೨-೩೦); ಹೆಬ್ಬುಲಿಯ . . . ಭಯಂಕರರಾವದ ಇದಿರು ನಾಯಿಯ ಬೊಗುಳು ನಗಣ್ಯವಾಗಿ ಬಿಟ್ಟಿತ್ತು (ಮರಿಮ. ೨೩೦). ೨. ಶಬ್ದ; ಧ್ವನಿ; ಸದ್ದು : ದಿಗ್ಭಿತ್ತಿವಿಭೇದಿ ಪೆರ್ಚೆ ಕದನಾನಕರಾವಮುಗುರ್ವಿನುರ್ವೆ ಪರ್ವುತ್ತಿರೆ (ಕಂಕಶಾ. ೯-೬೨); ಅಂಬುಧಿಯ ನಿರ್ಘೋಷಮಂ ಪಳಿವಂತೆ ಡಮರುಗದ ರಾವದೆಸೆಯ (ಲಕಂ. ೯-೪). [ಸಂ.]

**ರಾವಟಗೆ** (ನಾ). ಚಿಕ್ಕ ಡೇರೆ ; ಗುಡಾರ : ನವಾಬರು . . . ತಲೆ ದಿಂಬಿಗೆ ಶಾಲನ್ನೂ ಸಕಲಾತಿಯನ್ನೂ ತಾವು ಮಲಗಿದ್ದಂತೆಯೇ ಹೊದಿಸಿ, ಆ ರಾವಟಗೆಯನ್ನು ಕೊಯಿದು ಮತ್ತೊಂದು ಗುಡಾರಕ್ಕೆ ಹೋಗಿ (ಮಹಾವಂ. I. ೨೨೩). [ ← ಮರಾ. ರಾವಟೀ]

**ರಾವಡಿ** (ನಾ). ಉಪದ್ರವ ; ತೊಂದರೆ : ನೊಣ ರಣವ ಹೊಕ್ಕು ಶೋಣಿತವ ಭುಂಜಿಸುವಾಗ ಕೇಣಸರದ ಭಟರೆಲ್ಲರೂ ನೊಣದ ರಾವ[ಪಾಠಾಂ. ಟಾವು]ಡಿಗಂಜಿ ಹೇಳದೆ ಹೋದರು (ಮಭಾಪ. ೬೦-೫) ; ಬಡತನದ ರಾವಡಿಗೆಯಾಜಿದೆ ಕಡುಗಿ ಭೂಮಿಯ ತೊಳಲಿ ಬರುತವೆ (ಹಭಾದಮ. ೦೦-೦೬).
[← ತೆಲು. ರಾವಡಿ]

**ರಾವಣ** (ನಾ). ೧. ಗಟ್ಟಿಯಾದ ಕೂಗು ; ಗರ್ಜನೆ. ೨. ಗಟ್ಟಿ ಯಾಗಿ ಕೂಗುವವನು ; ಗರ್ಜಿಸುವವನು. ೩. ರಾಮನಿಂದ ಹತನಾದ ಲಂಕಾದ್ವೀಪದ ಒಬ್ಬ ರಾಕ್ಷಸರಾಜ : ಸೀತೆಯ ದೂಸಟಿಂ ದಟಿದ ರಾವಣನಂತಿರೆ ನೀನುಂ ಅಟಿಯಲಾಟಿಸಿದೈ (ಕಂಕಶಾ. ೯-೯೯) ; ರಾವಣನಂ ಜಗತ್ರಿತಯ ರಾವಣನಂ . . . ರಘುಪ್ರಭವರೂಪದೆ ಮರ್ದಿಸಿದೈ ಜನಾರ್ದನಾ (ಜಗಪಿ. ೦-೬೦) ; ರಾವಣನ ಹೊಟ್ಟೆಗೆ ಅರೆಕಾಸಿನ ಮಜ್ಜಿಗೆ (ಗಾದೆ). ೪. ಒಂದು ಬಗೆಯ ವೀಣೆ : ವಿಪಂಚಿಕೆ . . . ರಾವಣ . . . ಕಾಲಕೀಯೆಂಬ ಮೂವತ್ತುಮೂಱು ತಂತ್ರೀವಾದ್ಯಂಗಳಲ್ಲಿ (ವಿವೇಕ. ೨೩೭). [ಸಂ.]

**ರಾವಣಕರ** (ನಾ). [ಗಣಿತ] ಇಪ್ಪತ್ತು ಎಂಬ ಸಂಖ್ಯೆಯ ಸಂಕೇತ : ಕರಿ ದಿನಪ ರಾಜ ರಾವಣಕರ ಪರಿಸುಖ್ಯಾಕ್ಷರಂ ಪೊದಟ್ದಿಸೆಯ (ಲಡೊಂಬು. ೩-೨೫). [ಸಂ.]

**ರಾವಣವೀಣೆ** (ನಾ). = ರಾವಣ ೪ : ರಾವಣವೀಣೆಯ ರಂಜಕರಿಂ . . . ಒಪ್ಪಿದತ್ತಾ ಮಹಾಲಿಂಗದಾಸ್ಥಾನಂ (ಹರಿಶ್ಚಕ. ೬-೯೦ ವ); ತಂತ್ರೀವಾದ್ಯ ಕಳಾಮಹಿತನಾದ ಮಾದರಸ ರಾವಣವೀಣೆ . . . ಪಿನಾಕಿವೀಣೆ ಮೊದಲಾದ ಮೂವತ್ತೆರಡು ವೀಣೆಗಳನ್ನೂ . . . ಶ್ರುತಿಗೊಳಿಸಿ (ಶರಕ. ೨೬೫).
[ಸಂ. ರಾವಣವೀಣಾ]

**ರಾವಣಶಾಖಿ** (ನಾ). ಒಂದು ಬಗೆಯ ಸಸ್ಯ ; ಆಡುಸೋಗೆ : ಬಡಗಿ ಮಾಚಲದೇವಿಯ ಕುಲಜೆಯ ಮಾಡಿಹನೆಂದು ಹೊನ್ನ ಕಪಿಲೆಯ ರಾವಣ ಶಾಖಿದುಬ್ಬಿಪ್ಪದ ಹಾಲಿನಿಂದ ಕೋಣುಟ್ಟುಂಬವರನೇನೆಂಬೆ (ಬಸವ. ೩೬೯).
[ ? ]

**ರಾವಣಹಸ್ತ** (ನಾ). ಒಂದು ಬಗೆಯ ವೀಣೆ : ಸುಲಲಿತವಾಗೆ ವಸು ಗುಣರೂಪಜನಸ್ಸ್ವನಾಂಕಮಾಲೆಯಿಂ ಪಲತೆಱದಿಂ ರಸಂಬಡೆಯೆ ರಾವಣ

ಹಸ್ತದಿನಂದು ರಾವಣಂ ಅಂತು ನಿರ್ಭರಭಕ್ತಿಯಿಂ ಬಾಜಿಪಾಗಳ್ (ಶಂಠಾಪೂ. ೧೦-೦೬೭) ; ಪ್ರಾಚೀನಗ್ರಂಥಗಳು. ಕಿನ್ನರಿ . . . ರಾವಣಹಸ್ತ ಮುಂತಾಗಿ ನಾನಾರೀತಿಯ ವೀಣೆಗಳನ್ನು ನಮೂದಿಸುತ್ತವೆ (ಸಂಗೀಕಂ. ೩೦೦). [ಸಂ. ರಾವಣಹಸ್ತ]

**ರಾವಣಾರಿ** (ನಾ). ರಾವಣನ ಶತ್ರು ; ರಾಮ : ರಾವಣಾರಿಯ ಕಾಣಿಕೆಗೆ ಬಲುತೀವಿಯನು ತೋಱಿದನು ಸಾರುವ ಭಟ್ಟರೋಳಿಯಲಿ (ಕುವ್ಯಾಉ. ೬-೯೭) ; ರಾವಣಾರಿಯ ನಾಮ ಇದ್ದಲಿಗೆ ಸುಖಿಯುಂಡೆ (ತೊರಂದ. ಧಾ. ೩-೩೭-೫). [ಸಂ.]

**ರಾವಣಾಸುರ** (ನಾ). ಒಬ್ಬ ರಾಕ್ಷಸ ; ರಾವಣ : 'ರಾವಣಾಸುರ ಮಥನ' ಪರಾ. [ಸಂ.]

**ರಾವಣಾಸುರಮಥನ** (ನಾ). ರಾವಣನನ್ನು ನಾಶಮಾಡಿದವನು ; ರಾಮ : ರಾವಣಾಸುರಮಥನ . . . ರಾವುದಾನತಜನವ (ಕುವ್ಯಾಉ. ೦-೦). [ಸಂ.]

**ರಾವಣಿ** (ನಾ). ೧. ರಾವಣನ ಮಗ. ೨. ಇಂದ್ರಜಿತು : ರಾವಣಿಯ ಸಮರಂಗ ಕಂಗೆಡಿಸಿತ್ತು ಕಪಿಬಲವ (ತೊರಾ. ೦೯-೯೭) ; ಎತ್ತಿ ಬಾಹಾ ದಂಡವನು ನಭಕೊತ್ತಿ ಹಲುಗಳನಾಱಿನಿ ಲಯಮಿತ್ತು ಮೊಗನೆಱಿಗಿದನು ಮದದುಬ್ಬಿನಲಿ ರಾವಣಿಯ (ತೊರಾ. ೫-೬-೨೦). [ಸಂ.]

**ರಾವದಿ** (ನಾ). ಕುದುರೆಯ ಹೃದಯದ ಜಾಗ : ವಕ್ಷದ ಹೃದಯದೆಡೆಗೆ ರಾವದಿಯೆಂಬ ಪೆಸರಕ್ಕುಂ (ಅಶ್ವಶಾ. ೬೬-೦೯). [ ? ]

**ರಾವಬಹದ್ದೂರ್** (ನಾ). ಹಿಂದಿನ ಕಾಲದಲ್ಲಿ ಬ್ರಿಟಿಷ್ ಸರ್ಕಾರದವರು ಪ್ರಸಿದ್ಧರಾದ ಸಮಾಜಸೇವಕರಿಗೆ ಕೊಡುತ್ತಿದ್ದ ಒಂದು ಬಿರುದು: ರಾವಬಹದ್ದೂರ್ ತೋಟದಪ್ಪನವರು ಶ್ರೇಷ್ಠದಾನಿಗಳು (ರಾಪ). [←ಹಿಂ. ರಾವ್‌ಬಹಾದುರ್]

**ರಾವಲ್** (ನಾ). ರಜಪೂತರಾಜರಿಗೆ ಸಲ್ಲುತ್ತಿದ್ದ ಒಂದು ಬಿರುದು : ಟೆಹರಿಮಹಾರಾಜರವರಿಂದ ಕೊಡಲ್ಪಟ್ಟ "ರಾವಲ್" ಎಂಬ ಬಿರುದು ಅನೂಚಾನವಾಗಿ ನಡೆದು ಬಂದಿರುವುದು (ಗುಕುರ. ೩೦). [←ಹಿಂ. ರಾವಲ್./ಪಾಲಿ. ರಾಜುಲ್]

**ರಾವಸಾಬ್** 'ರಾವಸಾಹೇಬ' ನೋ.

**ರಾವಸಾಹೇಬ, ರಾವಸಾಬ್** (ನಾ). ಹಿರಿಯರನ್ನು ಗೌರವದಿಂದ ಸಂಬೋಧಿಸುವಾಗ ಬಳಸುವ ಒಂದು ಮಾತು: ಕೆಲವು ಹೊತ್ತಿನ ಮೇಲೆ ಪೇದೆ ತಾನಾಗಿ ನುಡಿದ__'ರಾವ ಸಾಹೇಬ' (ಶಲಿಂ. ೪೦). **ರಾವಸಾಬ್** : ಯಾವ ಕೆಲಸವಿದ್ದರೂ ಬಿಟ್ಟುಬರಲು ಹೇಳಿದ್ದಾರೆ ರಾವಸಾಬ್ ! (ರಂಗಕೋ. ೬೪). [←ಹಿಂ. ರಾವ್‌ಸಾಹಬ್]

**ರಾವಳಿಸು** (ಕ್ರಿ). ಅಬ್ಬರಿಸು ; ಆರ್ಭಟಿಸು : ಎಂಟುದಿಕ್ಕುಂ ಮುತ್ತಿ ರಾವಳಿಸಿ ಮುಳಿದಮ್ಮ ಗುಂಟಲಂ ಕೊಱೆಯಬೇಡ (ಬೀಕೃತ. ೩-೩೭-೪೪). [<ರವಳಿ + — ಇಸು$_3$./ ತೆಲು. ರವಳಿಂಚು]

**ರಾವಿ** (ನಾ). ಒಂದು ಬಗೆಯ ಮರ ; ಅರಳಿ: "ಬೋಧಿದ್ರುಮಃ . . . ಅಶ್ವತ್ಥಃ—ಇ ಅರಳೀಮರದ ಹೆಸರುಗಳು. ಅಶ್ವತ್ಥ, ರಾವಿಚೆಟ್ಟು" (ಸಿದ್ಧಾಂತ. ೦೦೩); ರಾವಿ — . . . . (ಅಶ್ವತ್ಥ) (ಶಾಸಗ. ೯). [←ತೆಲು. ರಾವಿ]

**ರಾವಿನಾಡು** (ನಾ). ಒಂದು ನಾಡಿನ ಹೆಸರು : ಬಯ್ದಕೂರ ರಾವಿನಾಡ ಮಾರ್ಯಮ್ಮ ಮಮ್ಮ ಗಣಪ ರಾಮ ತುಜುವನಿಕ್ಕಿಸಿ ಅಟ್ಟಿ ಸತ್ತನ್ (ಎಕ. X, ಮುಳಬಾ. ೨೦೩-೨; ೯೩೬). [ರಾವಿ$_1$ + ನಾಡು]

**ರಾವು$_1$** (ಕ್ರಿ). ಅಂಟಿಕೊಳ್ಳು ; ಹತ್ತಿಕೊಂಡಂತಿರು : ಅತನು . . . ನೆಲಕ್ಕೆ ರಾವಿ ಗಗನಕ್ಕೆ ನೆಗೆದು ಹಗೆಯ ಹೊಡೆತವನ್ನು ತಪ್ಪಿಸಿ ಖಡ್ಗದಿಂದ ಪ್ಪಳಿಸಿ ಥಾಲನ್ನೊಡ್ಡಿ ತಿವಿದು ರಿಪುಶಿರವನ್ನು ಇಳುಹಿದನು (ಕತ್ತಿಶ್ರ.೩೦); ಸುಭಗೆ ಅಡಗೆಯ ಮನೆಯ ಮೂಲೆಯಲ್ಲಿ ರಾವಿಕೊಂಡು ಕುಳಿತಿದ್ದಳು (ಗಂಗಾಶಾ. ೦೨೭) ; ಅವನು ಮನೆಯೊಳಗೆ ರಾವಿಕೊಂಡು ಕುಳಿತಿದ್ದ (ಕವಿತಾ. ೫೫). [?]

**ರಾವು$_2$** (ನಾ). ಒಂದು ಕೋಡಾಟದ ಮಾತು : ಹಳುಕೆ ಹಳುರೇ ರಾವು ರಾವುರೆಯೆಂದು ಖಳರುಲಿಯೆ (ತೊರಾ. ೩೨-೨೦); ರಾವು ಫಲುಗುಣಯೆನುತ ಪಾರ್ಥನ ಭಾವ ಕುಡಿಚಮ್ಮಟಿಗೆಯಲಿ ತುರಗಾವಳಿಯನದುಹಿದನು ಸುಳಿಸಿದ ಸಾಹವಕೆ ರಥವ (ಕುವ್ಯಾದ್ರೋ. ೯-೩೭).

**ರಾವು$_3$** (ನಾ). ೧. ನವಗ್ರಹಗಳಲ್ಲಿ ಎಂಟನೆಯ ಗ್ರಹ ; ರಾಹು :"ರಾವು (ರಾವು)—ರಾಹು=ಗ್ರಹವಿಶೇಷ" (ಶಬ್ದಕೋ. ೩೪) ; ನೆಱಿ ಮೊಗವೆಂಬ ಚಂದಿರ ರಾವಿನೊಳು ಸೇರಿ ಹಱಿವುದೆನುತ ಬಲುಬೆದಱಿ ಮಱಿಪೊಕ್ಕ ಕಿಱು ಮೆಱಿಯನು ಸೋಲಿಸುತಂದು ಮೆಱಿದುದವಳ ನುಣ್ಣೊಸಲು (ರಾಕುಶ. ೦೩-೫೫). ೨. ದೆವ್ವ; ಭೂತ : ಅವರ ಹಿರಿಯರು ನಂಬಿದ ರಾವು ಮತ್ತು ಕೀಳುದೆವ್ವಗಳು ಅವು (ಶದ್ಯಸ. ೨೭). ೩. ಅಬ್ಬರ; ಆಟೋಪ; ಉಗ್ರತೆ : ಪ್ಲೇಗಿನಮ್ಮನ ರಾವಿನ ಮುಂದ್ಯಾರು ನಿಲುವೋರು (ಕಹೂಕು. ೩೦). ೪. ಭಯಾನಕವಾದುದು : ಭೀಕರವಾದುದು : ಹಣವನ್ನು ತೆಗೆದರು: ಮೈ ಉಬ್ಬಿ ರಾವಾಗಿದೆ (ಕವಕ. ೩೪) ; ತಂದೆಯವರ ಸಿಟ್ಟಿನಿಂದ ರಾವಾದ ಮೋರೆ . . . ಮನಸ್ಸನ್ನು ಕಲಕಿದವು (ಅಶ್ವ. ೪೭). ೫. ಕೋಪ; ಸಿಟ್ಟು : ಜಮಾದಾರರ ಮುಖದ ಮೇಲೆ ರಾವಿನ ಕಳೆಯಿರಲಿಲ್ಲ (ಗಂಗಾಶಾ. ೦೩೫) ; ವಾಲೀಕಾರ ಮಲಪ್ಪ ದಾದಾನ ರಾವು ನೋಡಿ . . . ಎಂದು ಕೇಳಿದ (ಗ್ರಾಕಾಹು. ೬೭). ೬. (ಕರಾ) ಅತಿಯಾಸೆ; ಹಂಬಲ; ಬಯಕೆ. [< ಸಂ. ರಾಹು]

**ರಾವುಕನಡಿ** 'ರಾವುಗನ್ನಡಿ' ನೋ.

**ರಾವುಗಣ್ಣು** (ನಾ). ೧. ಭಯವನ್ನು ಹುಟ್ಟಿಸುವ ಕಣ್ಣು : ರೌದ್ರವಾದ ಕಣ್ಣು : ಗೌಡರ ಮನೆಗೆ ಬೇಗದಿ ಬೇಗ ಹಾಕಿ ರಾವುಗಣ್ಣಿನ ತುರುಕರ ಕಾವಲಿಟ್ಟು (ಜಾಕದ. ೦೨೦). ೨. ಕೆಟ್ಟ ನೋಟ : ಕ್ರೂರದೃಷ್ಟಿ : ಅವಳ ರಾವುಗಣ್ಣಿಗೆ ಬೀಳಬೇಡ (ರಾಪ). [ ರಾವು$_3$ + ಕಣ್ಣು (<ಕಣ್)]

**ರಾವುಗನ್ನಡಿ, ರಾವುಕನಡಿ** (ನಾ). ಸಣ್ಣವಸ್ತುವನ್ನು ದೊಡ್ಡದನ್ನಾಗಿ ಮಾಡಿ ತೋರಿಸುವ ಕನ್ನಡಿ ; ಭೂತಕನ್ನಡಿ : ಕಲಕಲವು ಲಿಪಿಗೆ ಬರೆದ ಅಕ್ಷರಗಳನ್ನು ರಾವುಗನ್ನಡಿ ಹಿಡಿದೇ ನೋಡಬೇಕು (ಕೃತಿಶಿ. ೦೩೭); ಉಬ್ಬಿದ ಭೂತಕನ್ನಡಿಗೆ . . . ಬದಲಾಗಿ ಹಳ್ಳವಾಗಿರುವ ರಾವುಗನ್ನಡಿ (Concave mirror)ಯನ್ನು ಉಪಯೋಗಿಸಿದನು (ವಿಜ್ಞಾಕ. ೪೪) . **ರಾವುಕನಡಿ:** ಅರಸು ರಾವುಕನಡಿಯ ಕಂಡು ದಕ್ಕೆಯ ಬಿಸುಡು (ಶಶಿರಾ. ೧. ೪೩೫). [ರಾವು$_3$ + ಕನ್ನಡಿ$_1$]

**ರಾವುಗಾಣು** (ಕ್ರಿ). ಅತಿಭಯಾನಕವಾಗು : ನಾಯಕನ ಅವ್ಯವಸ್ಥಿತ ಚಿತ್ತದಿಂದ ಆಡಳಿತದಲ್ಲಿ ಉಂಟಾದ ಗಲಭೆಯು ಆತನ ಪ್ರಥೆಯಿಂದ ರಾವುಗಂಡಿತು (ಕವಿಂತ. ೫೭). [ರಾವು$_3$ + ಕಾಣು (< ಕಾಣ್) ]

**ರಾವುಗೆಂಪು** (ನಾ). ಉಗ್ರವಾದ ಕೆಂಬಣ್ಣ ; ಅತಿರಕ್ತವರ್ಣ : ದಾಸವಾಳ, ಕಿಂಜಲ್ಕ ಮೊದಲಾದ ರಾವುಗೆಂಪು ಹೂಗಳನ್ನು ಒಯ್ದು ಅವಳ ಮುಂದೆ ಚೆಲ್ಲಿರಿ (ಕೃಹಾರ. ೦೨೩). [ರಾವು$_3$ + ಕೆಂಪು$_1$]

**ರಾವುಗೈ** (ನಾ). ಬಲಿಷ್ಠವಾದ ಕೈ : ಮರಕಾಲ ರಾವುಗೈಯಿಂದ ಆ ಹುಚ್ಚುಹೊಳೆಯನ್ನು, ತೋಳಿಯಿಂದ ಮರ್ದಿಸತೊಡಗಿದನು (ಶಿರಾಉ. ೦೬೫). [ರಾವು$_3$ + ಕೈ$_{12}$ (< ಕೆಯ್$_2$)]

**ರಾವುಗೋಲು** (ನಾ). ಕಮ್ಮಾರನು ಉಪಯೋಗಿಸುವ ಒಂದು ಬಗೆಯ ಉದ್ದವಾದ ಕಬ್ಬಿಣದ ಸಲಾಕೆ ; " ಲೋಹದ ಪಟ್ಟಿಯು ಒಂದಕ್ಕೊಂದಕ್ಕೆ ಅಂಟಿಕೊಳ್ಳುವುದಕ್ಕೆ ಬೇಕಾಗುವ ಕಾವಿದ ಹದವನ್ನು ಪರೀಕ್ಷಿಸುವ ಸಲಾಕೆ " (ಅಸಂಅ). [ರಾವು$_1$ + ಕೋಲು$_1$ (< ಕೋಲ್$_1$) ]

**ರಾವುತ**, ರಾಉತ, ರಾಉತ್ತ, ರಾವುತ್ತ, ರಾವ್ತ, ರಾಹುತ, ರಾಹುತ್ತ (ನಾ). ಕುದುರೆ ಸವಾರ; ಅಶ್ವಾರೋಹಿ : "ಘೋಟಾಯ್ಲನೆ ರಾವುತಂ" (ಶಶಬ. ೩೯); ರಾವುತನ ತಲೆ ಕುದುರೆಯ ಕಾಲು ಬಲ್ಲಹದ ಮೊನೆ ಅಲ್ಲಿಯೆ ಅಡಗಿತ್ತು (ಸಕಪ. ೪. II. ೩೩೩-೩೪); ತೆಪ್ಪವ ತೆಗೆವಂತೆ ತೆಗೆದೇಱಿ ರಾವುತ ರೊಪ್ಪದಿ ಬಂದರೋಲೈಸಿ (ಶಠಕ. ೨೩-೩೦); ಉಭಯಪಾರ್ಶ್ವದಲ್ಲಿಯೂ ರಾವುತರ ಪಹರೆ (ಶ್ರೀಣಾಯು. ೪೩). **ರಾಉತ :** ಸಿರಿಯಂಗರಾಉತರಿಗೆ ಖ ೩ ವೊಗಗೊಡಗೆ (ಎಕ. XIV. ಎಳಂದೂ. ೨೩-೦೫; ಸು. 1448). **ರಾಉತ್ತ. ರಾವುತ್ತ :** ರಾವುತ್ತರಂ ತಳ್ತಿಱಿದು (ಎಕ. VIII, ಸೊರಬ. ೨೨೩-೦೦; 1152 ?); ರಥಿಕರಿಗೆ ಮಾವಂತರಿಗೆ ಕಾಲಾಳಂಗೆ ರಾವುತ್ತರಿಗೆ ಕೊಡಿಸಿದನವರ ವರಿಗವರಂಗದಾಯುಧವ (ಕುಮಾರವ್ಯಾ. ೦೫-೨೦); ಪಡೆವಳ್ಳರ್ ರಾವುತ್ತರ್ ಸ್ವಾದಿಗಳ್ . . . ದಂಡೆತ್ತಿ ಪೋದರ್ (ರಾಮಾಶ್ವ. ೯೩-೨೯). **ರಾವ್ತ :** ಭಯದಿ ತೇಜಿಯನಿಳಿದು ರಾವ್ತರು ಕರವ ಮುಗಿದರು ಕೊರಳ ಸಲಹೆನುತ (ಕುಮಾರವ್ಯಾ. ೫-೦೪); ಮೊಱೆವ ಬೊಬ್ಬೆಗೆ ರಾವ್ತರಂ ಬಿಸುಟು ವಾಜಿಗಳ್ ಪರಿದಾಡಿದುವು (ನೆಮಿಪು. ೨೪-೨೪). **ರಾಹುತ :** "ಘೋಟಾಯ್ಲನೆನಲು ರಾಹುತ" (ಕವಿಕಂ. ೦೫೬); ಶ್ರೀಮನ್ಮಹಾವಡ್ಡವ್ಯವಹಾರಿ ಕುಲ್ಲ ಹಣ ರಾಹುತರುಂ (ಎಕ. V, ಹಾಸನ. ೦೯೯-೦೪; 1113 ?); ಮದಕರಿಯುಂ ಮಾಹುತನ ಕುದುರೆ ತಾ ರಾಹುತನ ಹದುಳವನಱಿದು ನಡೆವಂತೆ ಸೂಳೆ ತನಗೊದಗುವವರನಱಿಗು (ಸರ್ವಜ್ಞ. ೦೯೦೩). **ರಾಹುತ್ತ :** ಹೊಸ ಬಿರುದರ ಗಂಡೋರಾಯ ರಾಹುತ್ತಮಿಂಡಃ (ಎಕ. VII, ಶಿವಮೊ. ೯೩-೦೦೩; 1587).

**ರಾವುತರಾಯ**, **ರಾಉತರಾಯ**, **ರಾಉತ್ತರಾಯ**, **ರಾವುತ್ತರಾಯ**, **ರಾಹುತರಾಯ** = ಅಶ್ವಾರೋಹಿಗಳಲ್ಲಿ ಶ್ರೇಷ್ಠನಾದವನು ; ಒಂದು ಬಿರುದು : ಶ್ರೀಮನುಮಹಾಪ್ರಧಾನಿಯಿಮ್ಮಡಿರಾವುತರಾಯ ರಾಯಕುಮಾರ (ಎಕ. VII, ಶಿವಮೊ. ೩೦-೬ ; 1787); ಅರಸುಗಳವರ ಕಾರ್ಯಕ್ಕೆ ಕರ್ತರಾದ ರಾಉತರಾಯರು . . . ಕೊಟ ಗ್ರಾಮ (ಎಕ. XI, ದಾವಣ, ೦೯೯-೬; 1684 ?) ; ರಾಉತ್ತರಾಯರುಂ ಜವನಿಕೆ ನಾರಾಯಣರುಂ ಶ್ರಿ ರಾಮಕೃಷ್ಣಪದಪದ್ಮಾರಾಧಕರುಮಪ್ಪ ಶ್ರೀಮನುಮಹಾಪ್ರಧಾನಂ ಪೆರುಮಾಳೆದೇವ (ಎಕ. XI, ಚಿತ್ರದು. ೦೨-೦೩; 1286); ಸ್ವಸ್ತಿಪುರ ವರಾಧೀಶ್ವರ ಇಂಮಡಿರಾಉತ್ತರಾಯ ಶ್ರೀಪೆರುಮಾಳದಣ್ಣಾಯಕರ ಸುಪುತ್ರಂ (ಎಕ. XIV, ಗುಂಡ್ಲು ಪೇ. ೦೩೦-೯ ; 1310) ; ರಾವುತ್ತರಾಯುಂ (ಶಬ್ದಾನು. ೨೯೩ ಪ್ರಯೋ); ಶ್ರೀಸೋಮ ಶಿಲಾದೇಉ ರಾಹುತರಾಯ ಮಹಾಪಾತ್ರ ಅರಸುಗಳ ಕಾರ್ಯಕ್ಕೆ (ಎಕ. XIV, ಗುಂಡು ಪೇ. ೦೬೨-೩; 1540).

[←ಮರಾ. ರಾಉತ್, ರಾಊತ್, ರಾವುತ್./ತಮಿ. ರಾವುತ್ತ, ಇರಾವುತ್ತ; ತುಳು. ರಾವುತೆ, ರಾಹುತೆ ; ತೆಲು. ರವುತು, ರಾವುತು, ರಾವುತ್ತು, ರಾಹುತು, ರಾಹುತ್ತು]

**ರಾವುತಟ್ಟು** (ಕ್ರಿ). ದೆವ್ವ ಭೂತ ಮುಂತಾದುವುಗಳ ಬಾಧೆ ತಟ್ಟು : ಗರ ಬಡಿದಂತಾಗು : ಅವನ ಮುಖ ರಾವುತಟ್ಟಿದಂತಿತ್ತು (ರೂಢಿ). [ರಾವು$_3$ + ತಟ್ಟು$_1$]

**ರಾವುತಪಡೆ** (ನಾ). ಕುದುರೆಗಳ ಪಡೆ ; ಅಶ್ವಬಲ ; ಅಶ್ವಾರೋಹಿಗಳ ತಂಡ : ಕಡೆಮೊದಲಿಲ್ಲದೆ ಖಳರಾಯರಾವುತಪಡೆ ಬಿದ್ದುದಿತ್ತ ಮೇಣತ್ತ (ಮೋಹತ. ೪೦-೬೨). [ರಾವುತ + ಪಡೆ$_2$]

**ರಾವುತಪಾಯಿಕೆ** (ನಾ). ಕುದುರೆಸವಾರಿ ; ಅಶ್ವಾರೋಹ : ಕಾಟಣ್ಣನ ರಾವುತಪಾಯಿಕೆಯ ಸಘಾಟಿಕೆಯನು ಕಂಡು ಮೆಚ್ಚಿ ನೋಟಕರೊಲಿದು ಕೊಂಡಾಡಿದರು (ಕುಮಾರರಾಮಾ. ೦೩-೦೯). [ರಾವುತ + ಪಾಯಿಕೆ$_0$]

**ರಾವುತಿಕೆ** (ನಾ). = ರಾವುತಪಾಯಿಕೆ : ಆದರಿಸಿ ರಾವುತಿಕೆಯಾದುದ ಭೇದವಿಲ್ಲದೆ ಮಾಳ್ಪ ಹಯವನು ಸಾಧನೆಯ ಧನಪತಿಯ ದಿಕ್ಕಿಗೆ ಹೋಗದಿರಿ (ಸಂಶಶ. ೩-೫); ಕುದುರೆಯ ಹಿಡಿಯ ಹೇಳಿದರೆ ರಾವುತಿಕೆಯ ಮಾಡಿದರೆ ಒಪ್ಪುವರೇ (ಸಿದ್ಧೇಪ. ೫೬-೬); ನಿಡುವವಾಳಕೆ ತೇಜಿಯ ತೆಗೆದು ಲೀಲೆಯೊಳೊಂದೆರಳ್ಪೆದಿಯನೇಱಿ ನೃಪಾಲ ರಾವುತಿಕೆದೋಱಿದನು (ಶಠಕ. ೨೯-೨೨). [ರಾವುತ + — ಇಕೆ]

**ರಾವುತು** (ನಾ). ಮೆಚ್ಚುಗೆಯ ಒಂದು ಮಾತು ; ಕೊಂಡಾಟದ **ಒಂದು** ನುಡಿ : ಪೂತು ರಾವುತನೆ (ಎಕ. VI, ತರೀಕೆ. ೯೫-೨೯; 1196); ಅರರೆ **ರಾವುತು** ಜಾಗು ಸ್ವಾಮಿಯ ಹರಿಬಕೋಸುಗ ಹಗೆಯ ಹೊಯ್ದಿರಿ (ಕುಮಾರವ್ಯಾ. ೩-೪).

**ರಾವುತೆಗೆ** (ಕ್ರಿ). ದೆವ್ವ, ಗ್ರಹ ಮೊದಲಾದುವುಗಳ ಪೀಡೆಯನ್ನು ಮೈ ಮೇಲಿನಿಂದ ಬಿಡಿಸು,– ಓಡಿಸು : ಬಲಿಕೊಟ್ಟು ರಾವುತೆಗೆಯಬೇಕು (ರೂಢಿ). [ರಾವು$_3$ + ತೆಗೆ$_1$]

**ರಾವುತ್ತ** ' ರಾವುತ ' ನೋ.

**ರಾವುಬಡಿ** (ಕ್ರಿ). = ರಾವುತಟ್ಟು : ಅವನು ರಾವುಬಡಿದವನಂತೆ ಸುಮ್ಮನೆ ಕುಳಿತುಬಿಟ್ಟಿದ್ದ (ರೂಶಕ. ೦೯); ಅವರ ಮುಖಗಳು ರಾವುಬಡಿದಂತೆ ವಿಕಾರವಾಗಿ ಕಾಣುತ್ತಿದ್ದುವು (ಪುಸರು. ೩೦೦). [ರಾವು$_3$ + ಬಡಿ$_1$]

**ರಾವುಮುಖ** (ನಾ). ಗರಬಡಿದಂತಿರುವ ಮುಖ ; ಭಯದಿಂದ **ವಿಕಾರ** ವಾದ ಮುಖ : ಪ್ರೇತಕಳೆಯ ನಿನ್ನ ರಾವುಮುಖ ನೋಡಿ ಸಾವೆ **ಸತ್ತಿತೂ** ಏನೊ (ನಾದರೀ. ೪೦-೬). [ರಾವು$_3$ + ಮುಖ]

**ರಾವುಮೊಗ** (ನಾ). ಭಯಂಕರವಾದ ಮುಖ ; ಹೆದರಿಕೆಯನ್ನುಂಟು ಮಾಡುವಂಥ ಮುಖ : ಜಡೆಗಟ್ಟಿದ ಮೊರಟುಗುರುಳು – **ಕಿಸಿಬಾಯಿ**– ದೊಡ್ಡಹೊಟ್ಟೆ – ರಾವುಮೊಗಗಳಿಂದ ಅವನು ಯಮದೂತನಂತೆ **ಭೀಷಣ** ನಾಗಿದ್ದನು (ಶ್ರೀರಾಪ. ೫೪). [ರಾವು$_3$ + ಮೊಗ]

**ರಾವುರೆ** (ನಾ). ಕೊಂಡಾಟದ ಒಂದು ನುಡಿ : ರಾವುರೆ **ಅಮರನೀತಿ** ಪೂತುರೆ ಅಮರನೀತಿ (ಅಮರ. ದೇ. ೦೦೯-೫) ; ಎಲುವ ಗದೆಯಿಂ **ಹಿಟ್ಟು** ಗಸಿಟ್ಟೋ ಹಳುರೆ ಹಳುರೇ ರಾವು ರಾವುರೆಯೆಂದು ಖಳರುಲಿಯೆ (**ಕೌಶಿಪ.** ೩೨-೨೦).

**ರಾವುಹಿಡಿ** (ಕ್ರಿ). = ರಾವುತಟ್ಟು : ರಾವುಹಿಡಿದುಹೋಗಿದ್ದ **ಮುಖದಿಂದ** ಸುಂದರಮ್ಮ ಗೋಳಾಡುತ್ತ ಹೊರಕ್ಕೆ ಬಂದಳು (ಸಂಶಕ್ತ. ೨೨) ; **ಅವನು** ಅಬ್ಬರಿಸಿದರೆ ಯಾರಾದರೂ ತುಂಬಿದ ಬಸುರಿ ಇದ್ದರೆ **ರಾವುಹಿಡಿದು** ಹೋಗುತ್ತಿದ್ದಳು (ಪಮೂರು. ೩೦೩). [ ರಾವು$_3$ + ಹಿಡಿ$_1$ (<**ಪಿಡಿ$_1$**) ]

**ರಾವುಹೊಡೆ** (ಕ್ರಿ). = ರಾವುತಟ್ಟು : ಅವನ ಮೋರೆ **ರಾವುಹೊಡೆದಿತ್ತು** (ಸಮಸಾ. ೬೩೦) ; ಅವರ ಕೂಗಾಟಕ್ಕೆ ಓಣಿಗೆ ಓಣಿಯೇ **ರಾವುಹೊಡೆದಂತಾ** ಗಿತ್ತು (ಗಂಪಾಡು. ೨೩೨). [ರಾವು$_3$ + ಹೊಡೆ$_1$ (<ಪೊಡೆ$_1$) ]

**ರಾವುಳ** (ನಾ). ಒಂದು ಬಗೆಯ ತೆರಿಗೆ : ಐನೂರ್ವ್ವರಾಹು **ಮಲ್ಲೇಶ್ವ** ರಂಗೆ ಪೂಜೆಗೆ ಲೋಕಾಭರಣಮುನಿಗೊಲ್ಲು ಹೆಜ್ಜುಂಕ ರಾವುಳದ **ಪಾಗಮಿತ್ತ** ರಾಜೇಂದ್ರಾರ್ಕ್ಕ (ಸೌಇಇ. IX–i, ೩೯೦-೯; 1181). [ ? ]

**ರಾವ್ತ** ' ರಾವುತ ' ನೋ.

**ರಾಶಿ** (ನಾ). ೧. (ಧಾನ್ಯ ಮೊದಲಾದ ವಸ್ತುಗಳ) ಗುಪ್ಪೆ; **ಒಟ್ಟಿಲು :** "ಪುಂಜಃ, ರಾಶಿಃ, ಉತ್ಕರಃ, ಕೂಟಂ – ೪ ಧಾನ್ಯಾದಿಗಳ **ರಾಶಿ**" (ಸಿದ್ಧಾಂತ. ೦೬೬); ಕಾಳನು ತೂರುತ ರಾಶಿಯ ಹೇರುತ ಕುಣಿವರು ರೈತರು ಊರಲ್ಲಿ (ಕಕಪು. ೩-೬೭). ೨. ಗುಂಪು; ಸಮೂಹ : "ನಿಕರಃ. . . **ರಾಶಿಃ** . . . ಸ್ತೋಮಃ_ಈ ೩೯ ಸಮೂಹಂ" (ಹಲಾಯು. ೦೦೯-೦); ಮುದ್ರಿಸಿತು ಮಂಡೆಯುಂ ಕೆನ್ನವಿರ ರಾಶಿ (ಶ್ರೀರಾಮಾ. ೦೩-೩೯೨). ೩. ಹೆಚ್ಚು; **ಬಹಳ :** ರಾಶಿ ಅನ್ನ ಹಾಕಬೇಡ, ಎಷ್ಟು ಬೇಕೋ ಅಷ್ಟು ಹಾಕು (**ರೂಢಿ**). ೪. ಮಧ್ಯಮತರಗತಿಯಿಂದು: ' ರಾಶಿಚಿಕ್ಕಣಿ ' ಪರಾ. **೫. [ಶೈವ]** ಕಾಳಾಮುಖಿ ಮತ್ತು ಪಾಶುಪತಪಂಥದವರ ಹೆಸರಿನ **ಕೊನೆಯಲ್ಲಿ** ಸೇರುವ ಒಂದು ಪದ: ಶ್ರೀವಿದ್ಯಾರಾಶಿಪಂಡಿತ ದೇವರನ್ನು ಶಾಸನವೊಂದು ಸ್ತುತಿಸುತ್ತದೆ (ಕಶಾಅ. ೦೨೯). ೬. [ಜ್ಯೋತಿ] ಜ್ಯೋತಿಶ್ಚಕ್ರದಲ್ಲಿರುವ

ಮೇಷ, ವೃಷಭ, ಮಿಥುನ, ಕರ್ಕಾಟಕ, ಸಿಂಹ, ಕನ್ಯಾ, ತುಲಾ, ವೃಶ್ಚಿಕ, ಧನು, ಮಕರ, ಕುಂಭ ಮತ್ತು ಮೀನ ಎಂಬ ಹನ್ನೆರಡು ವಿಭಾಗಗಳು : ಧನು ಝಷಂ ಸುಂದರಿ ಮಿಥುನಂ ದ್ವಿಸ್ವಭಾವರಾಶಿಗಳೆನಿಕುಂ (ಜಾತಕ. ೧-೨೩); ಸೂರ್ಯ . . . ವರ್ಷದ ಹನ್ನೆರಡುತಿಂಗಳುಗಳಲ್ಲಿ ಹನ್ನೆರಡು ರಾಶಿಗಳಲ್ಲಿ ಇರುತ್ತಾನೆ (ಆಕಾಶ. ೯೩). ೭. [ಗಣಿತ] ಕೂಡುವುದು, ಗುಣಿಸುವುದು ಮೊದಲಾದ ಗಣಿತಪ್ರಕ್ರಿಯೆಗಳಲ್ಲಿಯ ಸಂಖ್ಯೆಗಳ ಗುಂಪು: ಸಂಖ್ಯಾನವು (ಗಣಿತವು) ಹತ್ತು ವಿಷಯಗಳನ್ನೊಳಗೊಳ್ಳುತ್ತದೆ : ಪರಿಕರ್ಮ, ವ್ಯವಹಾರ, ರಜ್ಜು, ರಾಶಿ, ಕಲಾಸವರ್ಣ, ಯಾವತ್‌ತಾವತ್, . . . ವರ್ಗವರ್ಗ ಮತ್ತು ವಿಕಲ್ಪ (ಗಣಿತ. ೨೦೦). 'ತ್ರೈರಾಶಿ', 'ಭಿನ್ನರಾಶಿ' ಪರಾ. [ಸಂ.]

**ರಾಶಿಕುಂಡಲಿ** (ನಾ). [ಜ್ಯೋತಿ] ನಿಶ್ಚಿತಕಾಲದಲ್ಲಿ ಗ್ರಹಗಳ ಗತಿಯನ್ನು ಗುರುತಿಸುವ ಹನ್ನೆರಡುಮನೆಗಳ ರೇಖಾಕೃತಿ : ಆ ಗ್ರಾಮದಲ್ಲಿ ಯಾರ ಮನೆಯಲ್ಲಿ ಮಗು ಹುಟ್ಟಿದರೂ ಶಾಸ್ತ್ರಿಗಳೇ ಅವರ ರಾಶಿಕುಂಡಲಿಯನ್ನು ಬರೆಯುವ ವಾಡಿಕೆ (ಕಿಶೋ). [ಸಂ. ರಾಶಿಕುಂಡಲೀ]

**ರಾಶಿಚಕ್ರ** (ನಾ). ೧. ಆಕಾಶದಲ್ಲಿ ಗ್ರಹಗಳು ಸಂಚರಿಸುವ ಮಂಡಲಾಕಾರವಾದ ಮಾರ್ಗ,–ಪಥ : ಆಕಾಶದಲ್ಲಿ ನಾವು, ಸೂರ್ಯ, ಚಂದ್ರ ಮತ್ತು ಇತರ ಗ್ರಹಗಳ ಚಲನವಲನಗಳನ್ನು ಗಮನಿಸುವಾಗ, ನಕ್ಷತ್ರಗಳ ನಡುವೆ ಯಾವುದೋ ಒಂದು ರಾಜಮಾರ್ಗವಿರಬೇಕು ಎಂದು ಭಾಸವಾಗುತ್ತದೆ . . . ಈ ರಾಜಮಾರ್ಗವನ್ನು ರಾಶಿಚಕ್ರ ಎಂದು ಕರೆದರು (ಆಕಾಶ. ೯೩).. ೨. = ರಾಶಿಕುಂಡಲಿ. [ಸಂ.]

**ರಾಶಿಚಿಕ್ಕಣಿ** (ನಾ). ಹೆಚ್ಚು ಬಲಿಯದ. ಹಾಗೂ ಅತಿ ಎಳೆಯದೂ ಅಲ್ಲದ ಅಡಕೆ : ಮಧ್ಯಮದರ್ಜೆಯ ಅಡಕೆ : ಅಡಿಕೆಗಳು . . . ಮಧ್ಯ ಎಳಸಾದರೆ ರಾಶಿಚಿಕ್ಕಣಿಯಾಗುವವು (ಕೃಷಿಕ್ರ. ೧೩೨). [ರಾಶಿ + ಚಿಕ್ಕಣಿ$_1$]

**ರಾಶಿಭವಿಷ್ಯ** (ನಾ). [ಜ್ಯೋತಿ] ವ್ಯಕ್ತಿಯ ಜನ್ಮರಾಶಿಯನ್ನು ನೋಡಿ ಹೇಳುವ ಭವಿಷ್ಯ: ಚಕ್ರಬಂಧದ ಒಗಟು, ರಾಶಿಭವಿಷ್ಯ, ಲೂಟಿ, ಲಾಟರಿ (ಸೂರ್ಯಶಾ. ೩೦-೭). [ಸಂ.]

**ರಾಶಿವಾಳ** (ನಾ). (?) : ಚೌರಾಸಿಲಕ್ಷಜೀವರಾಶಿಗಳಿಗೆ ರಾಶಿವಾಳ [ಪಾಠಾಂ. ರಾಸಿವಾಳ, ರಾಶಿವಾಳುಕ, ರಾಶಿವಾಳಕ]ತಾನಾಗಿ (ಶಿವಶಂ. ೩-೮). [ ? ]

**ರಾಶೀಶ** (ನಾ). [ಜ್ಯೋತಿ] ರಾಶಿಯ ಒಡೆಯ,– ಅಧಿಪತಿ : ಕ್ರಮದಿಂ ದ್ವಾದಶಭಾಗವೊಂದು ಗ್ರಹಕಕ್ಕುಂ . . . ಪ್ರಥಮಕ್ಕೆ ತತ್ಪ್ರಥಮ ರಾಶೀಶಂ (ಜಾತಕ. ೧-೨೭). [ಸಂ.]

**ರಾಶ್ನೆ**, ರಾಷ್ಮೆ, ರಾಸ್ಮೆ (ನಾ). ಒಂದು ಬಗೆಯ ವನಸ್ಪತಿ: "ನಾಕುಲಿ–ಈಶ್ವರಿ, ಸರ್ಪಾಕ್ಷಿ, ರಾಶ್ನೆ, ಕಾಡುವಿಟ್ಟು, ಓಪ್ಪಲಿ, ತುಳಸಿ" (ಓಷಂ. ೯೩). **ರಾಷ್ಮೆ** : ಬಿಲ್ವಪತ್ರೆಯ ಬೇರು ಆ ಹಣ್ಣಿನ ತಿರುಳು ಕಳ್ಳಂಗಡಲೆ ಜೊಳ್ಳಂಗಡಲೆ ಅಕಲಕರೆ ರಾಷ್ಮೆ ಸುಂಟಿ ಗಂಟುಪರಂಗಿಯಿವ ಕಷಾಯವನಿಟ್ಟು (ವಾತಶ. ೦೯-೭). **ರಾಸ್ನೆ** : "ಏಲಾಪರ್ಣೀ, ಸುವಹಾ, ರಾಸ್ನಾ, ಯುಕ್ತರಸಾ_ಈ ೪ ರಾಸ್ನೆ" (ನಾಶರಾ. ೦೦೦); ರಾಸ್ನೆ, ಅಮೃತವಳ್ಳಿ . . . ಕಷಾಯವ ಕಾಸಿ . . . ಕೊಡಿಸಲು ಸಂಧಿಕಸನ್ನಿವಾತ ಹರವಹುದು (ವೈದ್ಯಶಾ. I. ೩೩). [<ಸಂ. ರಾಸ್ನಾ]

**ರಾಷ್ಟ್ರ** (ನಾ). ೧. ಒಂದು ಆಡಳಿತದ ವ್ಯಾಪ್ತಿಗೆ ಒಳಪಟ್ಟ, ಅನೇಕ ರಾಜ್ಯಗಳ ಸಮುದಾಯ : ದೇಶ ; ನಾಡು : "ವಸುಮತೀಶರಿಗೆ ತಮಗೆಸಿತ್ತು ಮಹಿಯುಂಟಿದರ ಪೆಸರು ರಾಷ್ಟ್ರಂ" (ಮಂಗರಾ. ೫೩-೨); ರಾಜನಿಲ್ಲದ ರಾಷ್ಟ್ರವು ವಿನಾಶಹೊಂದುವುದು (ರಾಜ್ಯಾಂಗ. ೦೫). ೨. ಸಾಮ್ರಾಜ್ಯ: ಚಕ್ರಾಧಿಪತ್ಯ. ೩. ಒಂದು ದೇಶದ ಜನತೆ,– ಪ್ರಜಾವರ್ಗ. [ಸಂ.]

**ರಾಷ್ಟ್ರಕ** (ನಾ). ದೇಶದಲ್ಲಿರುವವನು ; ಪ್ರಜೆ : ಪ್ರಜೆಯೆಂದರೆ ಇಲ್ಲಿ ರಾಜ್ಯಕಾರ್ಯಸಮರ್ಥನಾದ ಪ್ರಜೆಯೆಂದು ಭಾವ. ಅಂಥ ಪ್ರಜಾವ್ಯಕ್ತಿಯೇ ರಾಷ್ಟ್ರಕ (ಸಿಟಿಸೆನ್) (ರಾಜ್ಯಾಂಗ. ೮೩೦). [ಸಂ.]

**ರಾಷ್ಟ್ರಕೂಟ** (ನಾ). ಕನ್ನಡನಾಡಿನ ಒಂದು ರಾಜವಂಶದ ಹೆಸರು: ಕುಂತಳ ದೇಶಮುಂ ಸಮರಧಾರಿಣಿಯಲ್ಲಿಯೆ ರಾಷ್ಟ್ರಕೂಟಭೂಕಾಂತರನೆಲ್ಲರಂ ನಿಜಭುಜಾಬಳದಿಂದವೆ ಕಾದಿ ಗೆಲ್ದು (ಕೊಲ್ಹಾಶಾ. ೯-೬; 1147) ; ರಾಷ್ಟ್ರಕೂಟದವರ ಭಾಷೆಯು ಕನ್ನಡವೇ ಆಗಿತ್ತು (ದಶಾಇ. ೯೦). [ಸಂ.]

**ರಾಷ್ಟ್ರಗೀತೆ** (ನಾ). ದೇಶದ ಹಿರಿಮೆಯನ್ನು ಸೂಚಿಸುವ ಸಂಕೇತವಾಗಿ ಆರಿಸಿಕೊಂಡಿರುವ ಒಂದು ಹಾಡು : ಠಾಕೂರರು . . . ಜನಗಣಮನ ಗೀತೆಯನ್ನು ರಚಿಸಿದರು. ಅದು ಸಾರ್ವಭೌಮಸ್ವತಂತ್ರಭಾರತದ ಗಣರಾಜ್ಯಗಳ ರಾಷ್ಟ್ರಗೀತೆಯೆಂದು ಸ್ವೀಕೃತವಾಗಿದೆ (ಠಾಕೂರಶಾ. ೬೬) ; ನಾಲ್ಕು ದಿಕ್ಕಿನಿಂದಲೂ ಕೇಳಿ ಬರುತ್ತಿತ್ತು ಭಾರತದ ರಾಷ್ಟ್ರಗೀತೆ (ಅತ್ಯಾರ್ಕ. ೦೯೨). [ಸಂ. ರಾಷ್ಟ್ರಗೀತಾ]

**ರಾಷ್ಟ್ರಧ್ವಜ** (ನಾ). ದೇಶದ ಸಂಕೇತವಾಗಿ ರಚಿಸಿಕೊಂಡಿರುವ ಬಾವುಟ: ತ್ರಿವರ್ಣರಾಷ್ಟ್ರಧ್ವಜವೇ ಭಾರತಮಾತೆಯ ಪವಿತ್ರಪ್ರತೀಕ (ರಾಷ್ಟ್ರಧ್ವ. ೦೯೨). [ಸಂ.]

**ರಾಷ್ಟ್ರಪಕ್ಷಿ** (ನಾ). ದೇಶದ ವಿಶಿಷ್ಟಸಂಕೇತವೆಂದು ಆಯ್ಕೆಯಾಗುವ ಪಕ್ಷಿ : ನವಿಲು ಈಗ ಭಾರತದ ರಾಷ್ಟ್ರಪಕ್ಷಿ (ಕವಿಕೋ. X, ೦೯೦). [ಸಂ. ರಾಷ್ಟ್ರಪಕ್ಷಿನ್]

**ರಾಷ್ಟ್ರಪತಿ** (ನಾ). ೧. ಚಕ್ರವರ್ತಿ; ಸಾಮ್ರಾಟ. ೨. ದೇಶದ ಒಡೆಯ; ನಾಡಿನ ಅಧಿಪತಿ : ರಾಷ್ಟ್ರಪತಿ ವಿಷಯಪತಿ ಗ್ರಾಮಕೂಟಕಾಯುಕ್ತಕನಿಯುಕ್ತಾಧಿಕಾರಿಕ ಮಹತ್ತರಾದಿ ಸಮೇತದಿಂ (ಎಇ. XII, ೨೯೩-೨೦೦; 1077); ನಿಮಗೆ ಅದಿನ್ನೂ ಹೊಸದಾಗಿರದಿದ್ದರೂ ರಾಷ್ಟ್ರಪತಿಯಾಗಿ ನಿವೇದಿಸುತ್ತೇನೆ (ವೀರಶಂ. ೯೩). ೩. ಭಾರತದ ಸಂವಿಧಾನದಂತೆ ಚುನಾಯಿತನಾದ ದೇಶದ ಅಧ್ಯಕ್ಷ; ದೇಶದ ಸರ್ವೋಚ್ಚ ಅಧಿಕಾರಿ : ಭಾರತಕ್ಕೆ ಒಬ್ಬರು ರಾಷ್ಟ್ರಪತಿಯವರು ಇರತಕ್ಕದು (ಭಾರಾಸ. ೨೬) ; "ಪ್ರೆಸಿಡೆಂಟ್" ಪದಕ್ಕೆ "ಪತಿ"—ರಾಷ್ಟ್ರಪತಿ ಎಂದು ಕೆಲವರು ಸಮಾನಪದ ಮಾಡಿಕೊಂಡಿದ್ದಾರೆ (ರಾಜ್ಯಾಂಗ. ೦೦೯ ಅ೨೬). [ಸಂ.]

**ರಾಷ್ಟ್ರಪ್ರಜ್ಞೆ** (ನಾ). 'ಇದು ನನ್ನ ದೇಶ' ಎಂಬ ಭಾವನೆ; ದೇಶಾಭಿಮಾನ : ರಾಷ್ಟ್ರಪ್ರಜ್ಞೆ, ವೈಜ್ಞಾನಿಕದೃಷ್ಟಿ . . . ನಮ್ಮಲ್ಲಿ ಜಾಗೃತವಾಗದಿದ್ದರೆ, ನಮ್ಮ ದೇಶ ಭಾರತವಾಗಿ ಬಹುದಿನ ಉಳಿಯುವುದೂ ಕಷ್ಟ ಎನ್ನಿಸುತ್ತದೆ (ಹೇಮಕೂ. ೨ ಮುಮ್ಮುಖ). [ಸಂ. ರಾಷ್ಟ್ರಪ್ರಜ್ಞಾ]

**ರಾಷ್ಟ್ರಸ್ವಾಮ್ಯ** (ನಾ). ದೇಶದ ಒಡೆತನ,–ಯಾಜಮಾನ್ಯ: ಪ್ರಜಾಪ್ರಭುತ್ವಕ್ರಮದಲ್ಲಿ ರಾಷ್ಟ್ರವೇ ಭೂಸ್ವಾಮಿಯಾಗುವುದು. ಆಗ ಉಭಯಪಕ್ಷದವರಿಗೂ ರಾಷ್ಟ್ರಸ್ವಾಮ್ಯವೇ ಲಕ್ಷ್ಯವಾಗುವುದು (ಭಾರಪ. ೩೬೧). [ಸಂ.]

**ರಾಷ್ಟ್ರಾಧ್ಯಕ್ಷ** (ನಾ). ದೇಶದ ಒಡೆಯ : ಅವನೇ ದೊರೆ ಅಥವಾ ರಾಜ ಅಥವಾ ರಾಷ್ಟ್ರಾಧ್ಯಕ್ಷ (ರಾಜ್ಯಶಾ. ೯೬). [ಸಂ.]

**ರಾಷ್ಟ್ರಾಭಿಮಾನ** (ನಾ). ದೇಶದ ಮೇಲಿನ ಮಮತೆ; ದೇಶಭಕ್ತಿ: ಇಟಲಿ, ಜರ್ಮನಿ . . . ಮುಂತಾದ ದೇಶಗಳು ಹೇಗೆ ತಮ್ಮ ರಾಷ್ಟ್ರಾಭಿಮಾನವನ್ನು . . . ಸಾಧಿಸಿಕೊಂಡವು ಎಂದು ಅರಿತು, ಉದ್ವೇಗಗೊಂಡರು (ಭಾರದ. ೯೨೭). [ಸಂ.]

**ರಾಷ್ಟ್ರಿಕ** (ಗು). ೧. ದೇಶಕ್ಕೆ ಸಂಬಂಧಿಸಿದ ; ದೇಶದ : ಕವಿಗಳು ಪಾರಮಾರ್ಥಿಕವಿಷಯಗಳಿಗಿಂತ ರಾಷ್ಟ್ರಿಕ, ಸಾಮಾಜಿಕ, ಚಾರಿತ್ರಿಕ ಮುಂತಾದ ಲೌಕಿಕಪ್ರಮೇಯಗಳಿಗೆ ಹೆಚ್ಚು ಗಮನಕೊಡುವರು (ಕಪು. ೩೪೮೯). (ನಾ). ೨. ರಾಷ್ಟ್ರದ ಹಕ್ಕುಬಾಧ್ಯತೆಯನ್ನು ಪಡೆದಿರುವವನು ; ಪೌರ ; ಪ್ರಜೆ. ೩. = ರಾಷ್ಟ್ರಕೂಟ : ಈ ರಾಷ್ಟ್ರಿಕರು ಅಥವಾ ರಾಷ್ಟ್ರಕೂಟರು

ಎಂಬವರೇ ಮಹಾರಾಷ್ಟ್ರರೆಂದು ಹೆಸರಿಟ್ಟುಕೊಂಡು ತಮ್ಮ ರಾಷ್ಟ್ರಕ್ಕೆ ಮಹಾರಾಷ್ಟ್ರವೆಂದು ಹೆಸರಿಟ್ಟರು (ಠಕ್ರಶಿ. ೦೯). ೪. ರಾಜ್ಯದ ಆಡಳಿತವನ್ನು ನಡೆಸುವವನು ; ರಾಜ್ಯಪಾಲ : ರಾಷ್ಟ್ರಿಕ ಅಥವಾ ಭೋಜಕ ಇವು ಮೂಲತಃ ಆಡಳಿತದ ಅಧಿಕಾರಕ್ಕೆ ಸಂಬಂಧಿಸಿದ ಪಾರಿಭಾಷಿಕಶಬ್ದಗಳು (ಕರ್ನಾಟಿ. ೧೩೭). [ಸಂ.]

**ರಾಷ್ಟ್ರಿಕೆ** (ನಾ). ಒಂದು ಬಗೆಯ ಮುಳ್ಳುಬದನೆಕಾಯಿ ; ಹೆಗ್ಗುಳ್ಳ : "ನಿದಿಗ್ಧಿಕಾ, ಸ್ಪೃಶೀ, ವ್ಯಾಘ್ರೀ, ಬೃಹತೀ . . . ರಾಷ್ಟ್ರಿಕಾ_೧೦ ಹೆಗ್ಗುಳ್ಳದ ಹೆಸರುಗಳು" (ಸಿದ್ಧಾಂತಿ. ೦೩೪). [ಸಂ. ರಾಷ್ಟ್ರಿಕಾ]

**ರಾಷ್ಟ್ರಿಯ** (ಗು). ೧. ದೇಶಕ್ಕೆ ಸಂಬಂಧಿಸಿದ. (ನಾ). ೨. ರಾಜನ ಭಾವಮೈದುನ,—ಶ್ಯಾಲಕ: "ರಾಷ್ಟ್ರಿಯಃ, ರಾಜ್ಯಃ, ಸ್ಯಾಲಃ—ಅರಸಿನ ಹೆಂಡತಿಯ ಒಡಹುಟ್ಟಿದವನ ಹೆಸರು" (ಸಿದ್ಧಾಂತಿ. ೬೦). [ಸಂ.]

**ರಾಷ್ಟ್ರೀಕರಣ** (ನಾ). (ಕೈಗಾರಿಕೆ ಇತ್ಯಾದಿಗಳನ್ನು) ದೇಶದ ಸ್ವಾಮ್ಯಕ್ಕೆ ಒಳಪಡಿಸುವುದು ; ಸರ್ಕಾರದ ಅಧೀನಕ್ಕೆ ತೆಗೆದುಕೊಳ್ಳುವುದು : ಕೈಗಾರಿಕೆಗಳ ರಾಷ್ಟ್ರೀಕರಣವಾದ ಮೇಲೂ ವಿಜ್ಞಾನದ ಮೇಲೆ ಹೆಚ್ಚಿನ ಪರಿಣಾಮವಾಗಿಲ್ಲ (ತಿರ್ಬ್ನಾ. ೦೯೨). [ಸಂ.]

**ರಾಷ್ಟ್ರೀಯ** (ಗು). ೧. = ರಾಷ್ಟ್ರಿಯ ೧ : ರಾಷ್ಟ್ರೀಯ ರಕ್ಷಣಾಬಲದವರು . . . ಹೆಚ್ಚಾಗಿ ಬೆಳೆಯಿರೆಂದು ಸ್ವಾವಲಂಬನೆಯ ಸಂದೇಶವನ್ನು ಸಾರುತ್ತಿರುವರು (ತರಶಿ. ೬೩). (ನಾ). ೨. = ರಾಷ್ಟ್ರಿಯ ೨ : ಆರ್ಯನೆ, ರಾಷ್ಟ್ರೀಯನಾದ ಮಿತ್ರಾವಸುವು ಮಹಾರಾಜನ ಸನ್ನಿಧಿಯಿಂದ ಇಲ್ಲಿಗೆ ನಮ್ಮನ್ನು ಕಳುಹಿಸಿ ಕೆಲವು ದಿವಸಗಳಾದುವು (ನಾಕುಂತ. ೮೦-೩). ೩. ರಾಜ ; ದೊರೆ. [ಸಂ.]

**ರಾಷ್ಟ್ರೀಯತೆ** (ನಾ). ೧.ಒಂದು ದೇಶದ ಜನರು ತಮ್ಮ ದೇಶದ ಒಟ್ಟು ಸತ್ವವನ್ನು ಕುರಿತು ಹೊಂದಿರುವ ಅಭಿಮಾನ ; ಒಟ್ಟು ದೇಶದ ಐಕ್ಯದ ಪರಿಭಾವನೆ : ಮಾಂಡಲಿಕ ಪ್ರಭುತ್ವಗಳನ್ನು ಅನುಭವಿಸಿ ರಾಷ್ಟ್ರೀಯತೆಯ ಉದಯವನ್ನು ಕಣ್ಣಾರೆ ಕಂಡು (ಪಶ್ಚಿಕಾ. ೦೩). ೨. " ಜನಾಂಗ ಲಕ್ಷಣ ; ರಾಷ್ಟ್ರೀಯತೆ . . . ಜನಾಂಗವಾಗಿರುವುದು ; ಒಂದು ಅಥವಾ ಹೆಚ್ಚಿನ ರಾಜಕೀಯ ರಾಷ್ಟ್ರಗಳ ಭಾಗವಾಗಿರುವ ಕುಲ " (Nationality. ೩೦೪೩). [ಸಂ. ರಾಷ್ಟ್ರೀಯತಾ]

**ರಾಷ್ಮೆ** ' ರಾಶ್ಮೆ ' ನೋ. [ಸಂ.]

**ರಾಸ** (ನಾ). ೧. ಶಬ್ದ : ಸದ್ದು. ೨. ಕೃಷ್ಣನು, ಗೋಪಿಯರು ಮತ್ತು ಗೋಪಾಲಕರ ಸಂಗಡ ಮಾಡಿದ ಒಂದು ಬಗೆಯ ನೃತ್ಯ : ಮೋಹನನೆನ್ನಂ ಮೋಹಿಸಿ ರಾಸಕೆ ಕರೆದಂತೆ (ಮಾಂದ೪. ೪೩-೨೦). 'ರಾಸಕ್ರೀಡೆ' ಪರ್ಯಾ. ೩. ನಾಟ್ಯ ; ಕುಣಿತ : ಸಂಜೆಯು ಬೀಸುತ್ತಿದ್ದ ಗಾಳಿಯಲ್ಲಿ ಪೈರುಪಚ್ಚೆಗಳ ಸಾಮೂಹಿಕರಾಸವು ಛಂದೋಬದ್ಧವಾಗಿ ನಡೆದಿತ್ತು (ದೂರಕ. ೬೪). [ಸಂ.]

**ರಾಸಕ** (ನಾ). [ಕಾವ್ಯಮೀ] ಹದಿನೆಂಟು ಬಗೆಯ ಉಪರೂಪಕಗಳಲ್ಲಿ ಒಂದು; ▶ ಒಂದು ಅಂಕದಿಂದೊಡಗೂಡಿದ ಇದರಲ್ಲಿ ಐದು ಪಾತ್ರಗಳಿದ್ದು, ನಾಯಿಕೆಯ ಪಾತ್ರವು ಮೇಲುಗೈಯಾಗಿದ್ದು ನಾಯಕನು ಮೂರ್ಖನಾಗಿರುತ್ತಾನೆ, ಸೂತ್ರಧಾರನಿರುವುದಿಲ್ಲ : ೧. ನಾಟಿಕಾ . . . ೯. ಪ್ರೇಂಖಣ. ೧೦. ರಾಸಕ . . . ಎಂದು ಉಪರೂಪಕಗಳು ಹದಿನೆಂಟು ವಿಧ (ಸಂಪಾಟಿ. ೩೨). [ಸಂ.]

**ರಾಸಕೇಳಿ** (ನಾ). ಕೃಷ್ಣನು ಗೋಪಿಕಾಸ್ತ್ರೀಯರ ಜೊತೆ ಆಡಿದ ಮಂಡಲಾಕಾರದ ನೃತ್ಯ : ಮೊಗಮೊಗದಲಿ ದೀಪಾವಳಿ ! ರಾಸಕೇಳಿ ! ರಾಸಕೇಳಿ ! (ಕೃತ್ತಿಂಪರ್ಕ. ೦೦-೧೯). [ಸಂ. ರಾಸಕೇಲಿ]

**ರಾಸಕ್ರೀಡೆ** (ನಾ). = ರಾಸ.೨ : ರಾಸಕ್ರೀಡೆಯನು ನಿಜವಲ್ಲಭೆಯರೊಡಗೂಡಿ ಲಕ್ಷ್ಮೀವಲ್ಲಭನು ತೊಡಗಿದನು (ಭಾಗ. ೧೦-೨೮-೨). [ಸಂ. ರಾಸಕ್ರೀಡಾ]

**ರಾಸಗೋಷ್ಠಿ** (ನಾ). = ರಾಸಕೇಳಿ : ಎಳನಗೆಯ ಸುಪ್ರೇಮವೀಕ್ಷಣದಲಸಗಮನದ ವಿಭ್ರಮದ ಹರಿ ಸಲಿಸಿದನು ಮನವನು ಸರಾಗದ ರಾಸಗೋಷ್ಠಿಯಲಿ (ಭಾಗ. ೧೦-೨೮-೩). [ಸಂ.ರಾಸಗೋಷ್ಠೀ]

**ರಾಸನ** (ನಾ). ೧. ಧ್ವನಿಮಾಡುವಿಕೆ. ೨. ಕತ್ತೆಯ ಕೂಗು : "ರಾಸಃ, ರಾಸುಃ, ರಾಸನಂ, ರಾಸನೀಯಂ, ರಾಸ್ಯಂ; ಈ ೫ ಕತ್ತೆಗೂಗು " (ಶಾಕ್ತ. ೦೨೧). [ಸಂ.]

**ರಾಸಭ** (ನಾ). ಕತ್ತೆ ; ಗಾರ್ದಭ : "ರಾಸಭಾಖ್ಯಾತಿ ಗರ್ದಭಂ" (ಚತು. ೪೫೯. ೮೯-೩೯) ; ರಾಗಿಸಿ ರಾಸಭನಿರದತಿವೇಗದಿನಾ ನರಿಯ ಪಿಂದುಳಿದನೆ ಬಂದಂ (ಶಂತಶಂ. ೨೮೩-೯) : ಮಹಾತಾಳವನಮಂ ಧೇನುಕನೆಂಬ ರಾಸಭರಾಕ್ಷಸಂ ಕಾದಿರ್ಪಂ (ಜಗಾ. ೪-೩೯ ವ). [ಸಂ.]

**ರಾಸಭಿ** (ನಾ). ಹೆಣ್ಣುಕತ್ತೆ : ಎನ್ನಿರ್ಪ ಕಾಡಿನೊಳಿರಿಸೆ ನಿಶ್ಚಿಂತರಾಗಿರ್ದ ರಾಸಭೀವಿಲಾಸಿನಿಯರ್ ತಮಗೊರ್ವ ಪುರುಷನಂ ತರವೇಟ್ಟುವೆಂದೆನ್ನಂ ತಾತಿಸುತ್ತಿರ್ದಪರ್ (ಶಂತಶಂ. ೨೮೩-೩). [ಸಂ. ರಾಸಭೀ]

**ರಾಸಮಯ್ಯ** (ನಾ). ಒಬ್ಬಾತನ ಹೆಸರು : ಪುಲಿನಾಡು ರಾಸಮಯ್ಯ ಹಲಿಯೂರರಸರಂ ದಣ್ಡುವೇಟಿಪ್ಡೊಡೆ (ಎ೪, X, ಶ್ರೀನಿವಾ. ೮೩-೪; ಸಂ. ೨೦೦). [ರಾಸ, + ಅಮ (< ಅಮ್ಮ$_1$) + ಅಯ್ಯ$_1$]

**ರಾಸಲೀಲೆ** (ನಾ). = ರಾಸಕೇಳಿ : ಕೃಷ್ಣಗೋಪಿಯರ ರಾಸಲೀಲೆಯಲ್ಲಿ ಗೋಪಿಯರು (ಜೀವಾತ್ಮ) ಕೃಷ್ಣ (ಪರಮಾತ್ಮ)ನನ್ನು ಸೇರಲು ಹಂಬಲಿಸುತ್ತಾರೆ (ಶಾರದ. ೩೪೯) ; ಕೋಲು ಕೋಲಿನ ಆಟ, ಕೂಡಿ ಕೊಳಲಿನ ಆಟ, ರಾಸಲೀಲೆಯ ಕೋಲ (ಅರಳು. ೪೩೬-೨). [ಸಂ. ರಾಸಲೀಲಾ]

**ರಾಸಾಯನಿಕ** (ಗು). ೧. [ವಿಜ್ಞಾನ]ರಸಾಯನವಿಜ್ಞಾನಕ್ಕೆ ಸಂಬಂಧಿಸಿದ, –ಸೇರಿದ. ೨. ರಸಾಯನವಿಜ್ಞಾನದ ಪ್ರಕ್ರಿಯೆಯಿಂದ ಸಿದ್ಧಪಡಿಸಿದ : ರಾಸಾಯನಿಕ ಗೊಬ್ಬರಗಳನ್ನೂ ನಮ್ಮ ದೇಶದಲ್ಲಿ ತಯಾರು ಮಾಡುವ ಪ್ರಯತ್ನ . . . ನಡೆದಿದೆ (ರಾಷ್ಟ್ರಶಾ. ೦೬೭). [ಸಂ.]

**ರಾಸಾಯನಿಕವಿದ್ಯೆ** (ನಾ). [ವಿಜ್ಞಾನ] ಮೂಲಧಾತುಗಳು, ಅವುಗಳ ಸಂಯೋಗ ಮೊದಲಾದ ವಿಷಯಗಳ ನಿಯಮಗಳಿಗೆ ಸಂಬಂಧಿಸಿದ ಶಾಸ್ತ್ರ; ರಸಾಯನಶಾಸ್ತ್ರ : ದೇವಾ, ನನ್ನನ್ನೇಕೆ ಹುಟ್ಟಿಸಿದೆ ? ಹುಟ್ಟಿಸಿದರೂ ನನ್ನಲ್ಲಿ ರಾಸಾಯನಿಕ ವಿದ್ಯೆಯನ್ನಾದರೂ ಏಕೆ ಹಾಕಿದೆ ? (ಕುಬ್ಜ. ೨೩೦). [ ಸಂ. ರಾಸಾಯನಿಕವಿದ್ಯಾ ]

**ರಾಸಿ$_1$** ' ರಾಸು$_1$ ' ನೋ.

**ರಾಸಿ$_2$** (ನಾ). ೧. = ರಾಶಿ ೧ : ಕುಬೇರನಳ್ಕಿ ತಂದೊಟ್ಟಿದ ಪೊನ್ನ ರಾಸಿಗಳನ್ನಿತ್ತು ಧರಾಮರರ್ಗೆ (ಗದಾಯು. ೨-೩೭); ಮಿಸುನಿಯ ಪೊಂಗಳುಂ . . . ಬಸವನ ಮನೆಯ ಮುಂದೆ ಸುರಿದು ರಾಶಿಯಾಗಿರೆ (ಬಸರ. ೦೨-೬೬); ಅಂಗಡಿಯೊಳು ಗೋಧಿ ಕಡಲೆ ನಾನಾಧಾನ್ಯಂಗಳ ರಾಸಿ ರಂಜಿಸಿತು (ಮೋಹತ. ೩-೨೦) ; ಜ್ಯೋತಿರ್ಲಿಂಗದಂತೆ ರಾರಾಜಿಸುವುದು ಆ ಜೋಳದ ರಾಸಿ (ಬೆಳುವ. ೨೩೬). ೨. = ರಾಶಿ ೬ : ಜ್ಯೋತಿಷ್ಕರಂ . . . ಬೆಸಗೊಳಲು ಅಪರಾಭಿಧಾನನಕ್ಷತ್ರರಾಶಿಯ ಗ್ರಹಕರಣಕೂಟಾದಿಗಳನು . . . ನಿಶ್ಚೈಸಲು (ನವಮೋ. ೦೩-೨೯). [< ಸಂ. ರಾಶಿ.]

**ರಾಸಿಕ್ಯ** (ನಾ). ರಸಿಕತನ : ಕಾಶ್ಮೀರದ ವಿಮುಕ್ತಪ್ರಕೃತಿಸೌಂದರ್ಯದ ನಿತಾಂತರಮಣೀಯತೆ, ನೂರಳ ಅನುರಕ್ತ ರಾಸಿಕ್ಯ ಎಲ್ಲವೂ ಸಂದಿಗ್ಧವಾಗಿದ್ದವು (ನೂರಜ. ೩೩) ; ಬಲ್ಲಾಳಕವಿ . . . ಭೋಜನ ರಾಸಿಕ್ಯ, ದಾನಶೂರತ್ವಗಳನ್ನು ಬಣ್ಣಿಸಿದ್ದು ಅಸತ್ಯವಲ್ಲ (ಸಾಂಗಾ. ೨೬). [ ಸಂ. ]

**ರಾಸಿಗೂಳು** (ನಾ). ೧.ಗುಡ್ಡೆ ಹಾಕಿರುವ ಅನ್ನ : ಸುತ್ತಳ ಪಳ್ಳಿಯ ಜನರು ವರುಷಗೊಂದು ಬಾರಿ ಬಿಜುಗೂಳ ಸುರಿಯಲು, ತಪಸಿಯಾಗಿ ರಾಸಿಗೂಳ ತಿಂದು . . . ಆ ಗ್ರಾಮಗಳಿಗೆ ಶಾಂತಿಯ ಮಾಡಿಕೊಂಡಿಪ್ಪನು (ಭೈರಸೂ. I, ೨೮೨) ೨. ಸಾಮಾನ್ಯವಾದ ಆಹಾರ : ರಾಸಿಗೂಳಲ್ಲ

ದಿವ್ಯಾಹಾರವದು ಶಕ್ತಿ ಸೂಸುವುದದಱಿಂದು ತುತ್ತ ಪೊಸರ ದಕ್ಕಿಸಬಲ್ಲನೆ (ಕರಿಶ. ೩೦-೧೧೧). [ರಾಸಿ₂ + ಕೊಳ್ಳು₂ ( < ಕೂಟು₁ ) ]

**ರಾಸಿಗೆಯ್**, ರಾಸಿಗೈ (ಕ್ರಿ). ಗುಡ್ಡೆಮಾಡು ; ರಾಶಿಹಾಕು : ಕಾಂಚೀರ ಮಹೀರುಹದ ಪಣ್ಗಳಂ . . . ತಿಱಿದು ತಂದು ಧನ್ವಂತರಿ ವಿಶ್ವಾನು ಲೋಮರ ಮುಂದೆ ರಾಸಿಗೆಯ್ವುದುಂ (ರಣಾಗಪು. ೨-೧೮೫). **ರಾಸಿಗೈ** : ನಿರ್ಮಳನಕ್ಷತ್ರಸಮಾಜಮಂ ನೆಗಟ್ದಲಂಪಿಂ ರಾಸಿಗೈದಂತೆ ಕಣ್ಗಳವಟ್ಟಂ ತುರುಕಾಂತಿಯುಂ ಪರವೃತಂ ಪ್ರೋತ್ತುಂಗತಾರಾಚಳಂ . . . ಕಣ್ಗೆಸೆದುವು (ಕಾದ್ಯಟಿ. ೦೨-೦೦೯). [ ರಾಸಿ₂ + ಕೆಯ್₁ ]

**ರಾಸಿಗೈ** 'ರಾಸಿಗೆಯ್' ನೋ.

**ರಾಸಿಗೊಳ್** (ಕ್ರಿ). ರಾಶಿಯಾಗು; ಒಟ್ಟಾಗು; ಕೂಡು : ಮಕರಂದ ಸಂದೋಹಮೊಂದೆಡೆಯೊಳ್ ರಾಸಿಗೊಂಡು ಪಾಸಾದಂತೆ ಮನೋಹರ ಮಾಗಿರ್ದ ಮೃದುತಳ್ಪಸಂಪುಟದೊಳಾ ಪುಣ್ಯಜೀವಂ ಬಂದು ನೆಲಸಿ (ಶರಿಪು. ೦೨-೪೨೮). [ ರಾಸಿ₂ + ಕೊಳ್₁ ]

**ರಾಸಿಹಬ್ಬ** (ನಾ). ಸುಗ್ಗಿಕಾಲದಲ್ಲಿ ಕಣದಲ್ಲಿಯ ರಾಶಿಯನ್ನು ಪೂಜೆಮಾಡುವ ಹಬ್ಬ : ನೀನಾದರೂ ಬಂದೆಯಲ್ಲ ರಾಸೀಹಬ್ಬಕ್ಕೆ ಸರಿಯಾಗಿ (ಶೆಲುಮ. ೨೩೭). [ ರಾಸಿ₂ + ಹಬ್ಬ ( <ಪರ್ಬ) ]

**ರಾಸು₁**. ರಾಸಿ₁ (ನಾ). ದನ ; ಜಾನುವಾರು : ರಾಸುಗಳ ಅತಿಕ್ರಮ ಪ್ರವೇಶದ ಆಕ್ಟನ್ನು ತಿದ್ದುಪಡಿ ಮಾಡಿದ ಕಾನೂನು (ಗ್ರಾಮಾಶ. ೧೦೩); ಐವತ್ತು ರಾಸು ಇರುತ್ತಾ ಇದ್ದವು (ತಂದಕೊ. ೩೦). **ರಾಸಿ₁** : 'ಗಿಡ್ಡರಾಸಿ' ಪರಾ. [ ? ]

**ರಾಸು₂** (ನಾ). ಅಸಲು ಮತ್ತು ಬಡ್ಡಿ ಕೂಡಿದ ಮೊತ್ತ : ಯಾವುದೂ ಅಸಲಿನ ಯಾವುದೋ ಬಡ್ಡಿದರದ ರಾಸುಗಳನ್ನು ಹಿಂಜಿ ತೆಗೆದು . . . ಅನೇಕರಿಗೆ ತಿಳಿಸಿಕೊಟ್ಟು ದಣಿದಿದ್ದೇನೆ (ಗಾಳಿಶ. ೦೬೭). [←ಮರಾ. ರಾಸ್]

**ರಾಸೆ** (ನಾ). = ರಾಸ ೨ : ರಾಸೆಯನರ್ಥಕೆ ತಡೆದವಳು ಹಾಡನು ಪಾಡಂಗೈದವಳು (ಗೋಕುಪ. ೪೨-೨೩). [ಸಂ. ರಾಸ]

**ರಾಸ್ತ** (ಗು). ೧. ಸರಿಯಾದ ; ಯೋಗ್ಯವಾದ ; ನ್ಯಾಯವಾದ : ಆಚಾರೆಪ್ಪ ರಾಸ್ತ ಮಾತ ಆಡಿದಿರಿ (ಮಣಶ. ೦೮) ; ನೀ ಏನ ಹೇಳಿದೆಲ್ಲ ಈ ಮಾತೂ ಇದಾ ನೋಡಿದು ರಾಸ್ತ ಮಾತು (ತಿದುಗು. ೪೯). (ನಾ). ೨. ಸಮರ್ಪಕವಾದುದು ; ಯೋಗ್ಯವಾದುದು : ನಾ ಹೇಳೂದು ರಾಸ್ತ ಐತಿಲ್ಲೋ (ಗ್ರಾಮಜಾಯು. ೨೫). [← ಪಾರ. ಹಿಂ. ಮರಾ. ರಾಸ್ತ]

**ರಾಸ್ತಿ** (ಗು). ೧. ಸರಿಯಾದ : 'ರಾಸ್ತಿತೂಕ' ಪರಾ. (ನಾ). ೨.ನಿಜ ; ಸತ್ಯ : ಶಾಸ್ತ್ರ ಶ್ರವಣಗಳಾದೆ ಶ್ರೌತಸ್ಮಾರ್ತಗಳಾದೆ ರಾಸ್ತಿ ಚಿದಾನಂದ ಅವಧೂತನಾದೆ (ಶರಾಪ. ೧೧೧-೭). [←ಹಿಂ. ಮರಾ. ರಾಸ್ತಿ]

**ರಾಸ್ತಿತೂಕ** (ನಾ). ಸರಿಯಾದ ತೂಕ : ತಾವು ಮಾಮಿಲತ್ತು ತಿಳಿಯುವಂಥಾದ್ದು ರಾಸ್ತಿತೂಕ ಮಾಡುವಂಥಾದ್ದು (ರಾಜೇಂದ್ರ. ೨೬೨). [ರಾಸ್ತಿ + ತೂಕ]

**ರಾಸ್ನೆ** (ನಾ). = ರಾಶ್ನೆ : "ಏಲಾಪರ್ಣೀ, ಸುವಹಾ, ರಾಸ್ನಾ, ಯುಕ್ತರಸಾ- ಈ ೪ ರಾಸ್ನೆ" (ವಾಶರಾ. ೦೦೦) : ಸರಳಂ ಕೋಷ್ಠಂ ಮಂಜಿಷ್ಠೆ ರಾಸ್ನೆ ಬೆಳ್ಳುಳ್ಳಿ ಸೈಂಧವಂ ತಗರಮಿವಂ ಕರಿಯಾಪಿನ ಸೊರೆವಾಲೊಳ್ ಬೆರಸಿ ಬಟ್ಟಿಕ್ಕಣ್ಣೆವೊಯ್ವುದು (ಅಶ್ವಶಾ. ೦೩-೩೭). [ಸಂ. ರಾಸ್ನಾ]

**ರಾಸ್ನೆ** 'ರಾಶ್ನೆ' ನೋ.

**ರಾಹ** (ನಾ). ವೇಗ ; ರಭಸ ; ಆರ್ಭಟೆ : ನಿಗುರ್ಗಿಡಿಗಳೇರಿಕೆಯ ರಾಹದಿಂ ಲಗಡ್ಗಳಂ ತಗಡೇಣ್ಗಳೆಂಬಂತೆ ಬೆಂಗೊಡದೆ (ಶರಕು. ೩೦-೯) ; ಬರಸೆಳೆದು ರಾಹದಿಂ ಶಿರಗಳಂ ಕೊರೆದು ಕೊರೆವೀಡಾಡಿ (ಶರಕು. ೩೭-೦೪).
[ಈ ಇದು 'ರಂಹಸ್' ಎಂಬುದರ ಅಪಭ್ರಷ್ಟವಿರಬಹುದು]

**ರಾಹು** (ನಾ). ೧. ಸಿಂಹಿಕೆ ಎಂಬ ರಾಕ್ಷಸಿಯ ಮಗ ; ಈ ಇವನೇ ನವಗ್ರಹಗಳಲ್ಲಿ ಒಬ್ಬ ಮತ್ತು ಸೂರ್ಯ, ಚಂದ್ರರನ್ನು ಗ್ರಹಣ ಕಾಲದಲ್ಲಿ ನುಂಗುತ್ತಾನೆ ಎಂಬ ಪ್ರತೀತಿಯಿದೆ: "ಭಾನುರಿಪು ಸಿಂಹಿಕಾ ಪ್ರಿಯಸೂನು . . . ವಿಧುಂತುದನಂತದು ತಾನಕ್ಕುಂ" (ಶಬ್ದಕೋ. ೦೩-೭೫); ಸುರಪತಿ ಶಿಖಿ ಯಮ ನೈರುತಿ . . . ರಾಹು ಮಂದೇಂದು ಚಂದ್ರನಂದನ ಗುರುಗಳ್ (ಶಾಕಶ. ೨-೦) ; ಶಶಿವಂಶದ ನಿಲವನು ರಾಹು ಗೆದ್ದುದ ಕಂಡು ಹಿರಿಯರು ಹೊಲಬುಗೆಟ್ಟರು (ಅಪಕಂ. ೪. ೦೮೪-೩೦೪) ; ರವಿ ಚಂದ್ರ ಬುಧ ನೀನೆ ರಾಹುಕೇತುವು ನೀನೆ (ಕೃಕಂತ. ೨-೨೬-೦). ೨. ಗ್ರಹಣ, ಉಲ್ಕಾಪಾತ, ಭೂಕಂಪ ಮೊದಲಾದ ಉತ್ಪಾತ. ೩. ಅಗ್ನಿ ; ಬೆಂಕಿ : "ಅನಲೋತ್ಪಾತಂ ಕರಾಳಂ ಗ್ರಹವಿವರಮಿವುಂ ರಾಹುವಕ್ಕುಂ" (ನಾವಾರ. ೭೭). [ಸಂ.]

**ರಾಹುಕಾಲ** (ನಾ). ರಾಹುವು ಅಭಿಮಾನಿದೇವತೆಯಾಗಿರುವ ಕಾಲ ; ಶುಭಕಾರ್ಯಗಳಿಗೆ ಪ್ರಶಸ್ತವಲ್ಲವೆಂದು ಪರಿಗಣಿಸಿರುವ, ಪ್ರತಿ ದಿನದ ಮೂರು ವಸಿಕ್ಕಾಲು ಗಳಿಗೆ ; ಅಶುಭಕಾಲ : ನಾವು ಇಲ್ಲಿಗೆ ರಾಹುಕಾಲದಲ್ಲಿ ಬಂದಂತಾಯಿತು (ಕೈಲಾಶ. ೩೮) ; ರಾಹುಕಾಲದಲ್ಲಿ ಶುಭ ಕಾರ್ಯವನ್ನು ಮಾಡಬಾರದು (ರೂಢಿ). [ಸಂ.]

**ರಾಹುಗ್ರಸ್ತ** (ನಾ). ರಾಹುವಿನಿಂದ ಹಿಡಿಯಲ್ಪಟ್ಟುದು, - ನುಂಗಲ್ಪಟ್ಟುದು : ಕೆಡೆದನಕಟಕಟ ಮದಮುದಿತ ರಾಹುಗ್ರಸ್ತವಾದ ತರಣೀಂದು ಬಿಂಬಂ ನೆಲಕೆ ಬೀಳ್ವಂದದೆ (ಹತಶಾ. ೦೨-೯) ; ರಾಹುಗ್ರಸ್ತವಾದಂದದಲಿ ಚಂಡಗಭಸ್ತಿಮಂಡಲವಿಳೆಗೆ ಕಾಣಿಸದಾಯ್ತು (ಕೊರಠಾ. ೬-೨೮-೩೭). [ಸಂ.]

**ರಾಹುಗ್ರಹಣ** (ನಾ). ಚಂದ್ರ, ಸೂರ್ಯರನ್ನು ರಾಹುವು ಹಿಡಿಯುವಿಕೆ ; ಉಪರಾಗ : ರವಿ ರಾಜರ್ . . . ರಾಹುಗ್ರಹಣಗಾಢಪೀಡಿತರಾದರ್ (ಹರಿಶ್ಚ. ೨-೩೩). [ಸಂ.]

**ರಾಹುಟಿ** (ನಾ). ಸಣ್ಣಗುಡಾರ; ಡೇರೆ; ತಂಬೂ : ದಾರಿಗುಂಟ ಚಿಕ್ಕಚಿಕ್ಕ ರಾಹುಟಿಗಳಿದ್ದು, ಪ್ರತಿಯೊಂದರಲ್ಲಿ ೨-೩ ಜನ ಶಿಪಾಯಿಗಳು ಇರುತ್ತಿದ್ದರು (ಹಂಶಾ. ೦೦೭); ಪ್ರಯಾಣೋಪಯುಕ್ತವಾದ ಡೇರೆ, ರಾಹುಟಿ ಮೊದಲಾದವುಗಳನ್ನು ತಕ್ಕೊಂಡು ಹೊರಟರು (ಮುಂಜಾಳ. ೦೭೫). [←ಹಿಂ. ರಾವಟೀ; ಮರಾ, ರಾವಟೀ, ರಾವ್ಹಟೀ, ರಾಹುಟೀ, ರಾಹೋಟೀ]

**ರಾಹುತ** 'ರಾವುತ' ನೋ.

**ರಾಹುತ್ತ** 'ರಾವುತ' ನೋ.

**ರಾಹುಸಂಸ್ಪರ್ಶ** (ನಾ). = ರಾಹುಗ್ರಹಣ : ಉಪರಾಗಃ, ಉಪಪ್ಲವಃ (ರಾಹುಸಂಸ್ಪರ್ಶ ಉಚ್ಯತೇ)-ಈ ೨ ಗ್ರಹಣದ ಪೆಸರ್ (ಹಲಾಯು. ೬-೪೦). [ಸಂ.]

**ರಾಳ** 'ರಾಲ' ನೋ.

**ರಾಳಕರ್ಪೂರ** (ನಾ). ಒಂದು ಬಗೆಯ ಕರ್ಪೂರ ; ಸಜ್ಜರಸದ ಕರ್ಪೂರ : ಚರ್ವಿಸಿ ವೀಳ್ಯಯೇಲವ ರಾಳಕರ್ಪೂರವಾ (ಶರಾಪು. ೩೬೫-೩೭). [ ರಾಳ (=ರಾಲ) + ಕರ್ಪೂರ ( < ಕಪ್ಪುರ) ]

**ರಾಳಧೂಪ** (ನಾ). ಒಂದು ಬಗೆಯ ಮರದ ರಸದಿಂದ ತಯಾರಿಸುವ ಸುಗಂಧದ್ರವ್ಯ ; ಲೋಬಾನ : ರಾಳಧೂಪ(ರಾಳ).- ಸುಂದರವಾದ ವೃಕ್ಷವು. ಇದರ ಅಂಟಿಗೆ ರಾಳವೆನ್ನುವರು. ಅದು ಔಷಧಕ್ಕೆ ಬರುತ್ತದೆ (ಕಭಾಗ. ೪೭). [ಸಂ. ರಾಲಧೂಪ]

**ರಾಳು** (ನಾ). (ಬೆಂಕಿಯನ್ನು ಸುಲಭವಾಗಿ ಹಿಡಿಯಬಲ್ಲ) ಸಾಲವೃಕ್ಷದ ಅಂಟು ; ಸಜ್ಜರಸ : ಕ್ಷಣಹೊತ್ತು ಮನಸ್ಸಿಟ್ಟು ನೋಡುವದೊಂದೇ ತಡ, ರಾಳಿನಂತೆ ಮದ್ದಿನ ಸ್ಫೋಟದಂತೆ ಒಮ್ಮೆಲೇ ಆ ವ್ಯಕ್ತಿಯಲ್ಲಿ ಮಹಾ ಜ್ವಾಲೆಯೋ ಏಳುವದು (ರಿಕ್ತಶಿ. ೯೯). [< ರಾಲ]

**ರಿ** (ನಾ). [ಸಂಗೀತ] ಸಪ್ತಸ್ವರಗಳಲ್ಲಿ ಎರಡನೆಯದು ; ಋಷಭ : "ಸಪ್ತಸ್ವರಂಗಳ್ . . . ಸರಿಗಮಪಧನಿಯೆಂಬವು" (ಶಬ್ದಗರಾ. ೨೩-೩) ;

ಸಪ್ತಸ್ವರಗಳು ಕ್ರಮವಾಗಿ ಸ, ರಿ, ಗ, ಮ, ಪ, ಧ, ನಿ ಎಂಬ ಸಂಕೇತಾಕ್ಷರಗಳಿಂದ ಪ್ರಯೋಗದಲ್ಲಿವೆ (ಸಂಗೀತಂ. ೦೫). [ಸಂ.]

**ರಿಂಕಿಸು** (ಕ್ರಿ). ಒತ್ತಿ ಹಿಡಿ ; ಅದುಮಿ ಹಿಡಿದುಕೊಳ್ಳು : ನಲ್ಲನೇ ಕೂಪದೊಳು ಬಿದ್ದಿರ್ದ ಪಣ್ಣ ನೀಂ . . . ಕಾಲಲ್ಲಿ ರಿಂಕಿಸಿ ಮೊಗನೂಱಿ ನೆಲವಂ ಮುಟ್ಟಿಯಲ್ಲಿಂದ ತರುವುದು (ಶ್ರೀಕರಾ. ೫-೨೬). [ರಿಂಕು + — ಇಸು$_3$]

**ರಿಂಕು** (ಕ್ರಿ). ಬಿಗಿಯಾಗಿ ಕಟ್ಟು ; ಒತ್ತಿ ಕಟ್ಟು : ಕುಂಕುಮಜಲವ ಹೊನ್ನಂಡೆಗಳೊಳು ತುಂಬಿ ಮುಂಕೊಂಡು ಹೊಯ್ದಾಡಲವಳ ರಿಂಕಿದ ಕುಚಯುಗ ಬಾಹುಮೂಲಂಗಳ ಕುಂಕುಮ ಜಗವ ಮೋಹಿಸಿತು (ಮೋಹಕ. ೦೪-೬೦) ; ಕೊಂಕುಗುರುಳುಗಳು ಕುಣಿದಾಡೆಯಲ್ಲಾಡೆ ಮಿಗೆ ರಿಂಕಿರ್ದ ಬಟ್ಟಮೊಲೆ ನಚ್ಚಣಿಸುತಿರ್ಪ ಮುಡಿಯಿಂ ಕುಸುಮ ಸೂಸೆ . . . ಬಳಲಿಕೆ ಗಳೆದಳೊಂದೆಸೆಯೊಳೊರ್ವ ನೀಱೆ (ರಾಜಶೇ. ೭-೪೦). [< ಇಱಂಕು]

**ರಿಂಖ** (ನಾ). ೧. ತೆವಳುವಿಕೆ ; ಸರಿಯುವಿಕೆ. ೨. ಕುಣಿಯುವಿಕೆ. ೩. ಕುದುರೆಯ ಗತಿಗಳಲ್ಲಿ ಒಂದು. ೪. ಕುದುರೆಯ ಗೊರಸು. ೫. ಮೋಸಗೊಳಿಸುವುದು. [ಸಂ.]

**ರಿಂಖಣ** (ನಾ). ೧. (ಮಕ್ಕಳು) ತೆವಳುವಿಕೆ ; ದೇಕುವಿಕೆ. ೨. ಋಜುಮಾರ್ಗವನ್ನು ಬಿಟ್ಟು ನಡೆಯುವುದು ; ದುರ್ವ್ಯವಹಾರ : "ರಿಂಖಣಂ, ಸ್ಖಲನಂ – ೨ ಜಾರುವದಕ್ಕಾದರೂ, ತಪ್ಪುವದಕ್ಕಾದರೂ ನ್ಯಾಯನಿರ್ಬಂಧದಿಂದ ಪಾರಿಹೋಗುವದಕ್ಕಾದರೂ ಹೆಸರುಗಳು" (ಸಿದ್ಧಾಂತಿ. ೬೯) ; ರಿಂಖಣದ ತೆಂಕಣರಾಯರ ಬಿಂಕವ ಮುಱಿದ ರಣಾಂಕದ ಬಿರುದಂಕು ಶ್ರೀಮದ್ಬಸವರಾಜದೇವರುಂ ಕಲ್ಯಾಣಪುರವರದೊಳೊಪ್ಪುತ್ತಿರೆ (ಹಮ್ಮೀರ. ೯-೯೫). ೩. ಸುತ್ತು ; ಬಳಸು : ' ರಿಂಖಣಂಗೊಳಿಸು ' ಪರಾ. [ಸಂ.]

**ರಿಂಖಣಂಗೊಳಿಸು** (ಕ್ರಿ). ಸುತ್ತು ; ಬಳಸುವಂತೆ ಮಾಡು : ವಾಲವಂ ಶಿರದಲಿ ರಿಂಖಣಂಗೊಳಿಸಿ ಕರ್ಣಗಳೆತ್ತಿ ನಿಮಿರ್ಚಿ . . . ಲಂಘಿಸಿದಂ (ಹನುಮ. ೨೦). [ರಿಂಖಣ + ಕೊಳ್$_1$ + — ಇಸು$_3$]

**ರಿಂಗಣ** (ನಾ). ೧. (ಸುತ್ತುತ್ತಾ ಮಾಡುವ) ಒಂದು ವಿಶಿಷ್ಟಬಗೆಯ ಕುಣಿತ — ನೃತ್ಯ : "ರಿಂಗಣಮೊಂದು ಕುಣಿಹಂ" (ಶಬ್ದಮ. ೬-೩೨೦) ; ಮಂಗಳದ ರಿಂಗಣ ಝಾಡಿಸಿತು ವೈವಾಹಮಂಟಪವ (ಕುಮಾರ. ೦೨-೦೫) ; ಮನವ ರಿಂಗಣದ ರಂಗಭೂಮಿಯನು ಅಗೆದು ಬಗೆದು (ಅರಳು. ೧೯೦-೧). ೨. ಚಟುವಟಿಕೆ ; ಚಲನೆ : ಅಣುವಿನಲಿ ಲಘುವಿನಲಿ . . . ವಶಿತ್ವದಲಿ ವೆಂಟಣಿಸಿ ರೇಚಕ ಪೂರಕದ ರಿಂಗಣವನಱಿವುದು ಯೋಗಸಿದ್ಧಿಗೆ ಲಕ್ಷಣವನು (ಕುಮಾರಾ. ೪-೯) ; ಆ ಕಪಿಗಳುಬ್ಬಟೆಯು ಕೂಲೆಯ ಸಪಿಣಾಕದಂಗದ ರಿಂಗಣದ ಲೋಕೈಕವೀರರ ಮುಂಡ ಕುಣಿದವು ಕೋಟಿ ಸಂಖ್ಯೆಯಲಿ (ಕೊರಡು. ೬-೪೨-೦೯) ; ನಮ್ಮ ರಿಂಗಣ ನಡದೇ ಇತ್ತು. ಆದರಿಂದ ಅವಳ ಬಯ್ಯುವಿಕೆಗೆ ಮತ್ತಷ್ಟು ಹುರುಪು ಬಂದಿತು (ಕಪಿಲೆ. ೯೬). ೩. = ರಿಂಖಣ ೧. [ಸಂ.]

**ರಿಂಗಣಂಗುಣಿ**, ರಿಂಗಣಕುಣಿ, ರಿಂಗಣಗುಣಿ (ಕ್ರಿ). ೧. (ಸುತ್ತುತ್ತಾ) ನೃತ್ಯಮಾಡು ; ಲಾಸ್ಯವಾಡು : ಮೇಗಣ್ಗೆ ನೂಂಕಿ ತೆಗೆದೆತ್ತಿ ಪಾಱಿಸಿ ಸೂರ್ಕಿ ಪೂಗೊಳಂಗಳೊಳ್ಪಿದೆ ರಿಂಗಣಂಗುಣಿವರ್ಕಿ (ಉದ್ಭಟ. ೦೦-೦೨೫) ; ಅಂತರಿಕ್ಷದೊಳ್ ನಾರದಂ ಜಡೆಗೆದಱಿ ರಿಂಗಣಂಗುಣಿವುತಿರಲು (ಜೈಮಿನಿ. ೧೨-೯೬) ; ಕೆಲರು ಮನಬಂದಂತೆ ರಿಂಗಣಂಗುಣಿವುತಿರೆ (ಜಾನಕೀ. ೦೫-೨೦).

**ರಿಂಗಣಕುಣಿ :** ೨. ಸುತ್ತು ; ತಿರುಗು : ಅಳವಿ ಮಿಗೆ ಕೌರವಚತುರ್ಬಲದೊಳಗೆ ರಿಂಗಣಕುಣಿವ ಖ್ಯಾತಿಯು ನಿಲ್ಲಿಸಿ . . . ಹೊಯಿದನು (ಕುಮಾರ. ೪೦. ೦೫೨). **ರಿಂಗಣಗುಣಿ :** ೧. ನಾರದ ರಿಂಗಣಗುಣಿದನು ನಲಿಯೆ ಮರುಳ್ಗಳ್ (ಶಿವಲೀ. ೨-೦೯) ; ರಿಂಗಣಗುಣಿದಾರ್ದು ಸಾರ್ದು ನಲಿವೆರ್ಚುವ . . . ಸಂಭ್ರಮಮಾದೇಂ ಬಗೆಗೊಂಡುದೊ ಪಾಂಡುಪುತ್ರನಾ (ಕವಿಕಂ. ೫-೩೬) ; ಅಂಗನೆಯರು ಆರತಿಯುತ್ತಿದರು ; ಯುವಕರು ರಿಂಗಣಗುಣಿವರು (ಕರಕ. ೬೭೬). ೨. ಚಿಕ್ಕಯ ಬಾಲ್ಯವು . . . ಅವಳ ಮನದಂಗಣದಲ್ಲಿ ರಿಂಗಣಗುಣಿಯತೊಡಗಿತು (ಶರಣ. II, ೬೪೨). [ ರಿಂಗಣ + ಕುಣಿ$_1$ ]

**ರಿಂಗಣಕುಣಿ** ' ರಿಂಗಣಂಗುಣಿ ' ನೋ.

**ರಿಂಗಣಗುಣಿ** ' ರಿಂಗಣಂಗುಣಿ ' ನೋ.

**ರಿಂಗಣಗುಣಿತ** (ನಾ). (ಸುತ್ತುತ್ತಾ) ಕುಣಿಯುವಿಕೆ; ನಾಟ್ಯವಾಡುವಿಕೆ : ಕ್ರಾಂತಿಯ ದಾರಿಯನ್ನು ನೋಡುತ್ತ ನಡೆದಿರುವ ರಿಂಗಣಗುಣಿತವನ್ನು ನಾವೂ ಕೂಡಿಕೊಳ್ಳುವೆವು (ಕ್ರಾಂತಿ. ೩೦).

**ರಿಂಗಣಗುಣಿತ ಹಾಕು** = ಸುತ್ತು; ತಿರುಗು : ನೂರಳ ಹೃದಯದಲ್ಲಿ ದುಃಖವು ರಿಂಗಣಗುಣಿತ ಹಾಕುತ್ತಲಿತ್ತು (ಪೂರಣ. ೫೬). [ ರಿಂಗಣ + ಕುಣಿತ ]

**ರಿಂಗಳ** (ನಾ). ತಿರುಗುವಿಕೆ; ಸುತ್ತುವಿಕೆ: ' ರಿಂಗಳಗುಣಿಸು ' ಪರಾ. [ < ರಿಂಗಣ ]

**ರಿಂಗಳಗುಣಿಸು** (ಕ್ರಿ). ಸುತ್ತಿಸು ; ತಿರುಗಿಸು : ರಣದಿ ಕುಬಿಬಿರಿದುಬ್ಬಿ ರಿಂಗಳಗುಣಿಸುತಕ್ಷಿಯೊಳಗ ಶರಭನು ತನಗೆ ಮಾರಾಂತಖಳಖಳನುರು ಚಾತುರಂಗವನು. . . ಸವರಿ (ಅಂಬಿಕಾ. ೨೬-೪೦). [ರಿಂಗಳ + ಕುಣಿಸು]

**ರಿಃಫ** (ನಾ). [ಜ್ಯೋತಿ] ಲಗ್ನದಿಂದ ಹನ್ನೆರಡನೆಯ ಸ್ಥಾನ : ಉದಯಕ್ಕೆಂಟಱೊಳಿಂದು ಕೂಡೆ ಸರುಜಂ . . . ರಿಃಫದೊಳಸತ್ಯಂ ವಾಮನೇತ್ರಾಂಧಕಂ (ಜಾತಕ. ೦೬ ೬). [ಸಂ.]

**ರಿಕಾಪು** ' ರಿಕಾಬು ' ನೋ.

**ರಿಕಾಬು**, ರಕಾಬು, ರಿಕಾಪು (ನಾ). ಕುದುರೆಯನ್ನು ಹತ್ತುವಾಗ ಕಾಲನ್ನಿಡಲು ಅನುಕೂಲವಾಗುವಂತೆ ಜೀನಿಗೆ ಅಳವಡಿಸಿರುವ ಬಳೆ; ಅಂಕವಣಿ : ಅಶ್ವರತ್ನದ ಆಭರಣದ ಲೆಕ್ಕ. . . ೨ ರಿಕಾಬು (ಎಕ. XIV. ಶಂಶಪ. ೨೪೩-೦೪೨; ಸು. 1847); ಕುದುರೆಯ ಪಂದ್ಯದಲ್ಲಿ ವಿಶ್ವಾಸ ರಿಕಾಬು_ಲಗಾಮು ಇಲ್ಲದೆ, ಬತ್ತಲೆಕುದುರೆ ಏರಿ ಒಂದು ಮೈಲಿನ ಶರ್ಯತ್ತನ್ನು ಗೆದ್ದಿದ್ದ (ರೀಷಹ. I. ೦೫). **ರಕಾಬು :** ನೀಲನು ತನ್ನ ಕುದುರೆಯನ್ನು ಒಮ್ಮೆಲೆ ಮುಂದೆ ನೂಕಿ ರಕಾಬಿನ ಮೇಲೆಯೇ ಎದ್ದುನಿಂತು ಕೈಯಲ್ಲಿಯ ಚೂರಿಯನ್ನು ಬಲವಾಗಿ ಬೀಸಿ ಒಗೆದನು (ಬಂಗಾಷ. ೬೩). **ರಿಕಾಪು :** ಕುದುರೆಯ ರಿಕಾಪು ಚಾಗಟೆಯ ಬಳ್ಳಿಯೊಂದಕ್ಕೆ ತೊಡಕಿಕೊಂಡಿತು (ಹುಂಜಾ. ೬) ; ಎರಡೇ ನಿಮಿಷಗಳಲ್ಲಿ ಜೀನುಹಾಕಿ ಹೊಟ್ಟೆಗೆ ಪಟ್ಟೆ ಬಿಗಿದ. ರಿಕಾಪು ಸರಿಮಾಡಿಕೊಂಡ (ರಜಾಂ. ೪೦). [ ←ಅರ. ರಕಾಬ್; ಪಾರ. ಹಿಂ. ರಿಕಾಬ್, ರಕಾಬ್; ಮರಾ. ರಿಕಬ್, ರಿಕಬೀ, ರಿಕಾಬೀ]

**ರಿಕಾಮಿ$_1$** (ಗು). ಖಾಲಿಯಾದ ; ಬರಿಯ : ಸತುವಿನಾ ರಿಕಾಮಿ ಡಬ್ಬಗಳು (ಮುಂಬಯಾ. ೦೩೯). [← ಮರಾ. ರಿಕಾಮ ]

**ರಿಕಾಮಿ$_2$** (ಅ). ನಿರರ್ಥಕವಾಗಿ ; ವ್ಯರ್ಥವಾಗಿ ; ಸುಮ್ಮನೆ : ಈ ಬಂಟನ್ನ ನಾ ಬಲ್ಲೆ. ರಿಕಾಮಿ ತೋಟತೋಟದ ಸುತ್ತ ತಿರಗತಾನು (ಜಾನಪ. ೯೬). [< ರಿಕಾಮಿ$_1$]

**ರಿಕ್ಕ$_1$** (ನಾ). ಒತ್ತಾಗಿರುವುದು ; ಇರುಕು : ಜನರೆಲ್ಲ ರಿಕ್ಕಾಗಿ ಕೂತಿದ್ದಾರೆ (ಅಪ್ಪ. ೦೦೩) ; ರಿಕ್ಕಾಗಿ ಬಿಗಿಯಾದ ಬಂಧನಗಳು ಬಹಳ ಹೊತ್ತು ಬಾಳವು (ಮುಕ್ತ. ೦೫೮). [< ರಿಂಕು]

**ರಿಕ್ಕ$_2$** 'ರಿಚೆ' ನೋ.

**ರಿಕ್ತ$_1$** (ಗು). ೧. ಬರಿದಾದ ; ಖಾಲಿಯಾದ : ರಿಕ್ತಕುಂಭಂ ವಿಲಾಪಿಪ ಭಗ್ನಾಂಗನ ಕುಷ್ಠಿಯಂ. . . ಧೂಮಮಂ ನಿಪುಣರ್ ಕಂಡರೆ ಪೋಗರ್ಕೆ (ಕೋಟಿಕ. ೬೮). ೨. ತಿರುಳಿಲ್ಲದ; ಬೆಲೆಯಿಲ್ಲದ. (ನಾ). ೩. ಶೂನ್ಯ ; ಬರಿದು : ತದಂತರ್ಗತರೋಮಂಗಳಂ ಪ್ರತಿಸಮಯಮೊಂದೊಂದಂ ಅಪಕರ್ಷಣಂ ಮಾಡಿದೊಡೆಂದಿಂಗೆ ರಿಕ್ತಮಕ್ಕುಂ (ಕಕ್ಷ್ಯ. ೦೬೫). ೪. ಹೀನ

ವಾದುದು ; ತುಚ್ಛವಾದುದು : "ರಿಕ್ತಂ, ತುಚ್ಛಂ, ಅಸಾರಂ, ಫಲ್ಗು, ವ್ಯರ್ಥಫಲಂ – ಈ ೫ ತುಚ್ಛಂ" (ಹಲಾಯು. ೦೨೮-೯೨) ; ಮೃಗಗಳ ಭಾಷೆ ಮನುಷ್ಯನ ಭಾಷೆಯ ಎದುರಿಗೆ ಹೇಗೆ ರಿಕ್ತವೆಂದು ಕಾಣುತ್ತದೆಯೋ ಹಾಗೆ ಮಾನವರ ಇಂದಿನ ಭಾಷೆಯನ್ನು ರಿಕ್ತವೆಂದೆನ್ನಿಸುವ ಒಂದು ಭಾಷೆಯನ್ನು ಊಹಿಸುವುದು ಕಷ್ಟವಲ್ಲ (ಮಮ್ಮಮ. ೨). ೫. ಬಡವ ; ದರಿದ್ರ. [ಸಂ.]

**ರಿಕ್ತ$_2$** (ನಾ). ಒಂದು ಬಗೆಯ ಸಸ್ಯ : ಕಾಡುಪಿಂಡಿ, ರಿಕ್ತಾ, ರಕ್ತಮರ (ವೃಶಿಗ. ೪೮-೯೬೭). [ ? ]

**ರಿಕ್ತಕ** (ನಾ). ಏನೂ ಇಲ್ಲದುದು ; ಬರಿದು : "ಶೂನ್ಯಂ . . . ರಿಕ್ತಕಂ— ೪ ಬರಿದಾದ ಮನೆ, ಮಡಿಕೆ, ಮುಂತಾದ್ದು" (ಸಿದ್ಧಾಂತಿ. ೪೩೮). [ಸಂ.]

**ರಿಕ್ತಗೊಳಿಸು** (ಕ್ರಿ). ಖಾಲಿ ಮಾಡು ; ತೆರವುಗೊಳಿಸು : ರಾಷ್ಟ್ರಪತಿಯವರು ಸಂಸತ್ತಿನ ಉಭಯಸದನಗಳಲ್ಲಿ ಯಾವುದೊಂದರಲ್ಲಾಗಲಿ ನಿರ್ವಾಚಿತರಾದರೆ . . . ಸದನದ ತಮ್ಮ ಸದಸ್ಯಸ್ಥಾನವನ್ನು ರಿಕ್ತಗೊಳಿಸಿದಂತೆ ಭಾವಿಸತಕ್ಕುದು (ಭಾರಾವ. ೨೯). [ರಿಕ್ತ$_1$ + ಕೊಳ್$_1$ + — ಇಸು$_3$]

**ರಿಕ್ತತೆ** (ನಾ). ೧. ಬರಿದಾಗಿರುವಿಕೆ ; ಶೂನ್ಯತೆ : ಸುತ್ತಣ ಈ ವಿಪುಲರಿಕ್ತತೆಯಲ್ಲಿ ಈ ಚಿತ್ರ ಎಷ್ಟು ಸಂಪೂರ್ಣವಾಗಿ, ಒಂದಾಗಿ, ನನಗೆ ಗೋಚರಿಸಿತು ! (ಸವಿಂರ. II, ೨೦೭). ೨. ದಾರಿದ್ರ್ಯ ; ಬಡತನ. [ಸಂ. ರಿಕ್ತತಾ]

**ರಿಕ್ತಪೂರ್ಣ** (ನಾ). [ನಾಟ್ಯ] ನೃತ್ಯದಲ್ಲಿಯ ನಾಲ್ಕು ಬಗೆಯ ಉದರ ಭೇದಗಳಲ್ಲಿ ಒಂದು : P "ಶ್ವಾಸರೋಗದಿಂದ [ಉಬ್ಬಸ] ಪೀಡಿತನಾದವನಿಗಿರುವಂತೆ ಹೊಟ್ಟೆಯನ್ನು ಒಳಕ್ಕೂ ಹೊರಕ್ಕೂ ಚಲಿಸುವುದು" (ಲಾಸ್ಯರಂ. ೨೬೨ ಗದ್ಯಾನುವಾದ) : ಕ್ಷಾಮ, ಖಲ್ವ, ಪೂರ್ಣ, ರಿಕ್ತಪೂರ್ಣ— ಈ ನಾಲ್ಕು ಉದರಭೇದಂಗಳ್ (ಲಾಸ್ಯರಂ. ೨-೦೪೩ ವ). [ಸಂ.]

**ರಿಕ್ತಹಸ್ತ** (ನಾ). ೧. ಬರಿಗೈ. ೨. ಬರಿಯ ಸೊಂಡಿಲು : ಕಾಣಿಮಾ ಕಾಡಾನೆ . . . ಬಾಯ್ಗೆ ಪುಗಿಸುತಿದೆ ರಿಕ್ತಹಸ್ತವನುಸಿರ ಬಿಸುಪಿಂಗೆ ಬಯಸಿ ! (ಶ್ರೀರಾಮಾ. ೨೦೨-೨೦೯). [ಸಂ.]

**ರಿಕ್ತೆ** (ನಾ). ೧. ಬಡವಿ ; ಅತಿದರಿದ್ರಳಾದವಳು. ೨. ಶುಭ ಕಾರ್ಯಗಳಿಗೆ ಪ್ರಶಸ್ತವಲ್ಲದ, ಶುಕ್ಲ ಮತ್ತು ಕೃಷ್ಣಪಕ್ಷಗಳಲ್ಲಿ ಬರುವ ಚತುರ್ಥಿ, ನವಮಿ, ಚತುರ್ದಶೀ ತಿಥಿಗಳು. [ಸಂ. ರಿಕ್ತಾ]

**ರಿಕ್ಥ** (ನಾ). ೧. ಪಿತ್ರಾರ್ಜಿತವಾಗಿ ಬಂದ ಆಸ್ತಿ ; ಸ್ವತ್ತು. ೨. ಧನ ; ಹಣ . "ದ್ರವ್ಯಂ . . . ರಿಕ್ಥಂ . . . ವಿಭವಃ—೧೩ ಧನದ ಪೆಸರುಗಳು" (ಸಿದ್ಧಾಂತಿ. ೪೦೨). ೩. ಬಂಗಾರ : ಚಿನ್ನ : "ರಿಕ್ಥ [ಪಾಠಾಂ. ತ್ತ]ಮಾ ಕನಕಂ ಹಿರಣ್ಯಮರ್ಥಂ" (ಮಂಗರಾ. ೦೬-೦೬). [ಸಂ.]

**ರಿಕ್ಷ** 'ರಿಕ್ಷೆ' ನೋ.

**ರಿಕ್ಷಾ** (ನಾ). ೧. ಮನುಷ್ಯನಿಂದ ನಡೆಸಲ್ಪಡುವ, ಎರಡು ಅಥವಾ ಮೂರು ಚಕ್ರಗಳುಳ್ಳ ವಾಹನ : ಅನಂತ . . . ರಿಕ್ಷಾದಲ್ಲಿ ಕೂತನು . . . ರಿಕ್ಷಾವಾಲನು ಕಾಲುಗಾಡಿ ತುಳಿಯಹತ್ತಿದನು (ಜೀವಾನ. ೫೫). ೨. ಯಂತ್ರಚಾಲಿತವಾದ, ಮೂರುಚಕ್ರಗಳುಳ್ಳ ವಾಹನ : ಬಸ್ಸೂ ರಿಕ್ಷಾ ಹತ್ತಿ ಓಡತಾರ (ಅರಳು. ೨೮೦-೦೬); ರಿಕ್ಷಾದಲ್ಲಿ ಕುಳಿತು ಮನೆಯ ಕಡೆಗೆ ಹೊರಟೆ (ರಜತ). [ ← ಇಂ. Riksha]

**ರಿಕ್ಷೆ**, ರಿಕ್ಷ (ನಾ). ನಕ್ಷತ್ರ; ತಾರೆ : ಗರ್ಭಂಗಟ್ಟು(ಟ್ಟಂ)ಗಂದಿನ ರಿಕ್ಷೆಯೊಳ್ (ಅಬ್ಬವು. ೭-೩). **ರಿಕ್ಷ** : "ರಿಕ್ಷಮುಂ . . . ಎಂಬ ಬಗೆ ನಕ್ಷತ್ರಂ" (ಪಸ್ತುಕೋ. ೦೪-೭೭). [< ಸಂ. ಋಕ್ಷ]

**ರಿಗ್ಗವಣೆ**. ರಿಗ್ಘವಣೆ (ನಾ). ೧. ಮದ್ದಳೆ ಮೊದಲಾದ ಚರ್ಮ ವಾದ್ಯಗಳನ್ನು ಬಾರಿಸುವುದರಲ್ಲಿಯ ಒಂದು ಕ್ರಮ ; ಗತಿ : ನಿನದತ್ಸಂಧ್ಯಾನಕಂ ರಿಗ್ಗವಣೆಯ ಪಟಿ ಪೂರ್ವಾಚಲಂ ತುಂಗರಂಗಂ ತನಗಾದತ್ತೆಂಬಿನಂ ನೀಲಿಯ ಜವನಿಕೆವೋಲ್ ಪಿಂಗೆ (ಚಂದ್ರಪು. ೬-೩೦); ಆಡಂಗುರಗಳೆಂಬ ರಿಗ್ಗವಣೆಯ ಪಟಿಗಗ್ಗಲಿಸುವ ನಗರನರ್ತಕಿಯರ ಚಿತ್ರದಂತಿರೆತ್ತುವ ತೋರಣದ (ಅನಂಪು. ೯-೫೯ ವ); ಮಲಪು ರಿಗ್ಗವಣೆ ಒಡ್ಡಾಸರ ಪಡಿಸಣ ಚಮತ್ಕಾರ . . . ಮೊದಲಾದ ವಾದ್ಯಪ್ರಬಂಧಂಗಳಲ್ಲಿ ತನ್ನ ಸೇರುವೆಯನಾರ್ಯವೃತ್ತ . . . ಬಾಜಿಸುತಿರ್ದಂ (ವಿರೂಪಾ. ೮೦ ವ). ೨. ಒಂದು ಬಗೆಯ ಚರ್ಮವಾದ್ಯ ; ಮೃದಂಗ : "ರಿಗ್ಗವಣೆಯೆನೆ ಮೃದಂಗಂ" (ಕಕುಶಿ. ೧೦೦). **ರಿಗ್ಘವಣೆ** : ೧. ಮದ್ದಳೆಗಂ ಮದ್ದಳೆಯುಂ . . . ಚಮತ್ಕಾರ ತುಡುಕು ರಿಗ್ಘವಣೆ ಪಹರಣೆಗಳೆಂಬ ನಾನಾಶಬ್ದಂಗಳಂ ಬಾಜಿಸಿ (ಧರ್ಮಾಶ. ೨-೨೩ ವ). [< ಸಂ. ರಿಗೋಣೀ]

**ರಿಗ್ಘವಣೆ** 'ರಿಗ್ಗವಣೆ' ನೋ.

**ರಿಚೆ**, ರಿಕ್ಕು$_2$, ರುಕ್ಕು$_1$ (ನಾ). ೧. ಆಶೀರ್ವಾದ ಮಂತ್ರ: ಮುಂದದೆಸೆದಿರ್ಪ ಬದ್ದವಣಮುದ್ದವಣಂ ರಿಚೆ [ಪಾಠಾಂ. ರಿಚ, ರಿಜೆ, ರುಚ] ಪಾಟವಾಟವೆತ್ತಿದ ಗುಡಿ ತೋರಣಂ (ಅರ್ಜನೀ. ೨-೩೯). 'ರಿಚೆವೇಟಿಸ್' ಪರಾ. **ರಿಕ್ಕು$_2$** : ೨. ವೇದಮಂತ್ರ ; ಋಕ್ಕು : "ರುಕ್ಕು (ರಿಕ್ಕು) – ಋಚ್(ಕ್) = ಕಿರಣ, ವೇದಮಂತ್ರ" (ಶಬ್ದಕೋ. ೩೮). **ರುಕ್ಕು$_1$** : ೨. ವೇದರುಕ್ಕಂ ಪೇಟ್ವಕ್ಷತೆಯನೀವುದುಂ (ರಪರ್ಣಮ್ಮ. ೦-೯೬). [< ಸಂ. ಋಜ್]

**ರಿಚೆವೇಟಿಸ್** (ಕ್ರಿ). ಆಶೀರ್ವಾದ ಮಂತ್ರವನ್ನು ಹೇಳು ; ವೇದಘೋಷ ಮಾಡು : ಅಂತು ಪೊಕ್ಕು ನೃಪಂಗೆ ರಿ[ಪಾಠಾಂ. ರು]ಚೆವೇಟ್ಟಕ್ಷತಂಗಳ ಕೊಟ್ಟು (ನೇಮಿಪು. ೦೦-೦೨೨ ವ). [ರಿಚೆ + ಪೇಟ್]

**ರಿಜಮಿಟದಾರ** (ನಾ). ಸೈನ್ಯದ ವಿಭಾಗಾಧಿಕಾರಿ ; ತುಕಡಿದಾರ : ಬಾಬುರಾವನ್ಮಾಲ ರಿಜಮಿಟದಾರ (ಎಕ. XIV, ಮಂಡ್ಯ. ೦೫೮. ೫; 1851). [ರಿಜಮಿಟ$_0$ (P ← ಇಂ. Regiment) + — ದಾರ$_4$]

**ರಿಜಿಸ್ಟರು** 'ರೆಜಿಸ್ಟರು' ನೋ.

**ರಿಜು** 'ಋಜು$_1$' ನೋ.

**ರಿಣ** 'ಋಣ' ನೋ.

**ರಿಣಗೂಳು** (ನಾ). ಹಂಗಿನ ಅನ್ನ : ಎಷ್ಟು ದಿನ ರಿಣಗೂಳನ್ನುಂಡುಕೊಂಡು ಇರುವುದು (ಜಳ. ೦೦); ಪರೀಕ್ಷಾ ನಾಪಾಸಾದಿ. ಮನ್ಯಾಗ ಕೂತು ರಿಣಗೂಳು ತಿಂತೀದಿ (ಅಸ್ಪಶಂ. ೧೯೮). [ರಿಣ (< ಋಣ) + ಕೂಳು$_2$ (< ಕೂಟ್$_1$)]

**ರಿಣಗೇಡಿ** (ನಾ). ಸಾಲವನ್ನು ತೀರಿಸದೆ ಇರುವವನು ; ಋಣದಲ್ಲಿರುವವನು : ವ್ರಣ ನೋಡಿ ಬಂದದರ ಮೇಲ್ಕೂತ ನೊಣದಂತೆ ರಿಣಗೇಡಿ ಜೀವವಿನ್ನೇಕೆ ಮಮತೆಯ ಚಿಂತೆ ? (ಸೂರ್ಯಪಾ. ೭೮-೦೨). [ರಿಣ (< ಋಣ) + ಕೇಡಿ$_1$]

**ರಿಣಸ್ಥ** (ನಾ). ಋಣವನ್ನು ಹೊಂದಿರುವವನು ; ಹಂಗಿಗ : ನೀನು ಲಿಂಗದ ರಿಣಸ್ಥನು. ನಾನು ನಿನ್ನ ರಿಣಸ್ಥನಾದೆನು (ಶೃಶಸೂ. I, ೦೯೦). [ರಿಣ (< ಋಣ) + — ಸ್ಥ]

**ರಿತುಗಾನ** (ನಾ). ಆಯಾ ಋತುಗಳಲ್ಲಿ ಹಾಡುವ ಗಾನ ; ಋತುಗಾನ : ನವನವ ರಿತುಗಾನವನವತರಿಸುವೆ (ಗೀಪಿಂ. ೪೬-೦). [ರಿತು (< ಋತು) + ಗಾನ]

**ರಿದ್ಧಿ**, ರುದ್ಧಿ (ನಾ). ೧. ಅಭಿವೃದ್ಧಿ : "ರಿದ್ಧಿ–ಋದ್ಧಿ = ಅಭಿವೃದ್ಧಿ" (ಶಬ್ದಕೋ. ೩೮); ಋದ್ಧಿ–ರಿದ್ಧಿ (ಕಬ್ಬಾಪು. ೦೫೯ ಪ್ರಯೋ). ೨. ಜನನದಿಂದಾಗುವ ಸೂತಕ ; ಪುರುಡು ; ವೃದ್ಧಿ : ನಮಗ್ಯಾರಿಗೂ ಹುಟ್ಟಿದ ರಿದ್ಧಿಸೂ ಇಲ್ಲ ; ಸತ್ತ ಸೂತಕನೂ ಇಲ್ಲ (ಹೂಸಂಶಾ. ೭೭). **ರುದ್ಧಿ** : ೧. ಶ್ರುತಕೇವಳಿಯುಮವಧಿಜ್ಞಾನಿ ಪಲವು ರುದ್ಧಿಗಳಿಂದಂ ಕೂಡಿದೊಂ (ವಡ್ಡಾರಾ. ೭೪ ಅ೩೬). [< ಪ್ರಾ. ರಿದ್ಧಿ./ಸಂ. ವೃದ್ಧಿ]

**ರಿಪಿ** (ನಾ). ೧. ಕಾಟ ; ಹಿಂಸೆ ; ಕಿರಿಕಿರಿ : 'ರಿಪಿಗೇಡಿ' ಪರಾ. ೨. ಕಾಟ ಕೊಡುವವನು ; ಉಪದ್ರವಕಾರಿ : ನಿನ್ನಿನ ದಿನ ನಾನೇ ಹೋಗಿದ್ದರೆ ಆ ರಿಪಿಯು ನನ್ನ ಬೆನ್ನಿಗೇ ಬೀಳುತ್ತಿದ್ದಿತಲ್ಲಾ ಎಂದು ನಡುಗಿದೆನು (ಕಾಳಗಾ. ೬೩).

ರಿಪಿರಿಪಿ (ದ್ವಿರುಕ್ತಿ) : ಸುಮ್ಮನೆ ಆಶೆ ತೋರಿಸಿ ರಿಪಿರಿಪಿ ಹಚ್ಚಿರುತ್ತಾನೆ ! (ಮೋಹಿನೀ. ೬೩). [ ← ಮರಾ. ರಿಪರಿಪ ]

**ರಿಪಿಗೇಡಿ** (ನಾ). ಕಾಟ ಕೊಡುವವನು ; ಉಪದ್ರವಕಾರಿ : ಮನಿಯಾಗ ರಿಪಿಗೇಡಿ ಆಡ ಹ್ವಾದಲ್ಲಿ ಕಿಡಿಗೇಡಿ ಬಾಳನ ಹ್ಯಾಂಗ ಸಂಬಸಲಿ ಹಡೆದವ್ವಾ (ಗರತಿ. ೯೦) ; ರಿಪಿಗೇಡಿ ! ಸಾಕುಮಾಡು ನಿನ್ನ ಬುಡುಬುಡುಕೀತನ (ಚತ್ರಕೃ. ೯೩). [ ರಿಪಿ + ಕೇಡಿ$_1$ ]

**ರಿಪಿಜಿಡ್ಡು** (ನಾ). ಜಿಪುಣತನ ; ಜಿಗುಟುಸ್ವಭಾವ : ಅಂಥ ಜಿಗಟು ರಿಪಿಜಿಡ್ಡು ಹುಡುಗರಿಗೆ ಕೂಡ . . . ಅವರ ಕೈಯಿಂದ ಒಂದು ಕಪರ್ದಕವನ್ನೂ ಉಚ್ಚಿಕೊಳ್ಳಲು ಸಾಧ್ಯವಾಗಿದ್ದಿಲ್ಲ (ಇಕ್ಷ್ವಾ. ೨೯೯). [ರಿಪಿ+ಜಿಡ್ಡು]

**ರಿಪೀಸು** (ನಾ). ಮರದ ಪಟ್ಟಿ,_ ತುಂಡು : ಮನೆಯ ರಿಪೀಸುಗಳಿಗೆ ಬೆಂಕಿ ತಗುಲಿತು (ರೂಢಿ). 'ರೀಪು' ಪರಾ.

[ ←ಇಂ. Reeper /ಮರಾ. ರೀಪ ]

**ರಿಪು** (ನಾ). ೧. ಹಗೆ; ಶತ್ರು : "ಅಭಿಯಾತಿಃ, ಅರಾತಿಃ, ಅಮಿತ್ರಂ, ರಿಪುಃ . . . ದ್ವಿಷತ್ — ಈ ೨೪ ಹಗೆ" (ಕರ್ಣಾಟ. ೭೩-೩೦೦); ಆ ಮಹೋಗ್ರರಿಪುಭೂಭುಜಶ್ರವಣ ಭೈರವಾಡಂಬರಂ . . . ಆದುದಾ ರವಿತನೂಭವಜ್ಯಾರವಂ (ಕಂಕಠಾ. ೦೨-೦೩೬); ಮಡದೀ ನೀಂ ಪಡೆವಾ ಸುತಂ ರಿಪುಬಮೂಸಂಹಾರವಂ ಹಾರವಂ ಪೊಡೆರಲ್ ಮಾಬ್ಕುಂ (ಜಗ. ೨-೬೫). ೨. [ಜ್ಯೋತಿ] ಲಗ್ನದಿಂದ ಆರನೆಯ ಸ್ಥಾನ ; ಶತ್ರುಸ್ಥಾನ : ತನಯಸ್ಥಾನದೊಳಾತ್ಮಮಂತ್ರಿ ರಿಪುವೊಳ್ ನಿಶ್ಯತ್ರು (ಜಾತಕ. ೦೬-೦೦).

ರಿಪುಕಟಕಭೈರವ = ಶತ್ರುಸೈನ್ಯಕ್ಕೆ ಭೈರವನಂತಿರುವವನು ; ಒಂದು ಬಿರುದು : ಭಟರ ತೆಗೆತೆಗೆ ಪಾರ್ಥನೋ ರಿಪುಕಟಕಭೈರವನೋ (ಕುಮಾ.ಭಾ. ೯-೦೯). ರಿಪುಕವಿದಲ್ಲಣ = ಶತ್ರುಕವಿಗಳನ್ನು ತಲ್ಲಣಗೊಳಿಸುವವನು ; ಒಂದು ಬಿರುದು : ಕಲ್ಲಿನಾಥನ ಭೃತ್ಯ ರಿಪುಕವಿದಲ್ಲಣಾಗ್ರಘರಟ್ಟ ಪಂಡಿತಮಲ್ಲಿಕಾರ್ಜುನ (ಕಂಕಠಾ. ೦-೦೯). ರಿಪುಗೋಧೂಮಘರಟ್ಟ = ಶತ್ರುವೆಂಬ ಗೋಧುಮೆಗೆ ಬೀಸುವ ಕಲ್ಲಿನಂತಿರುವವನು ; ಒಂದು ಬಿರುದು : ಮಟ್ಟಿವಿರದಾಂತ ಪಗೆವರ ಪಟ್ಟಂ ಪಾಜಿಸದೆ ಪೂಣ್ಣ ನೇ ವೈರಿದಿಶಾಪಟ್ಟಂ ರಿಪುಗೋಧೂಮಘರಟ್ಟಂ ಮಲಿದೇವನದಟರುಪ್ಪ ರಪಟ್ಟಂ (ಕೊಲ್ಹಾ.ಶಾ. ೦೩-೩೩ ; 1186). ರಿಪುಘಟಾಕೇಸರಿ = ಶತ್ರುವೆಂಬ ಆನೆಗೆ ಸಿಂಹದಂತಿರುವವನು ; ಒಂದು ಬಿರುದು : ವಾಣಸ್ಯನ್ವಯ ಪ್ರಭಾಕರಂ ರಿಪುಘಟಾಕೇಸರಿ (ಕಇಆ. ೭-೩-೨೬೨ ; 1062). ರಿಪುನೃಪತಿನಿಕ್ಷತ್ರ = ನಿಲ್ಲಲು ನೆಲೆಯಿಲ್ಲದಂತೆ ಶತ್ರುರಾಜರನ್ನು ನಾಶಪಡಿಸುವವನು ; ಒಂದು ಬಿರುದು : ಪರಿವಾರಚಿನ್ನಾಮಣಿ ಸುಜನಚೂಡಾಮಣಿ ರಿಪುನೃಪತಿನಿಕ್ಷತ್ರಂ ಗೋತ್ರಪವಿತ್ರಂ (ಎಕ. VII, ಶಿಕಾ. ೨೦-೦೯ ; 1032). ರಿಪುನೃಪಬಂದಿಕಾಬ = ಶತ್ರುರಾಜರನ್ನು ಸೆರೆಹಿಡಿಯುವವನು ; ಒಂದು ಬಿರುದು : ಇನನಂದನನು . . . ರಿಪುನೃಪಬಂದಿಕಾಬವಧಾರು ಧಿರುಪಯವೆಂದು ಕಳಕಳ ಗಜಬು ಮಿಗೆ ಕುರುಭೂಮಿಗೈತಂದ (ಕುಮಾ.ದ್ರೋ. ೨-೦೯). ರಿಪುಬಲದಿಶಾಪಟ=ಶತ್ರುಸೈನ್ಯವನ್ನು ಚೆಲ್ಲಾಪಿಲ್ಲಿ ಮಾಡುವವನು ; ಒಂದು ಬಿರುದು : ಗೆಲಿವನಹಿತಾನೀಕವನು ರಿಪುಬಲದಿಶಾಪಟ ಭೀಷ್ಮನು (ಕುಮಾ.ಭೀ. ೩-೨೪). ರಿಪುಭೀಕರ = ಶತ್ರುಗಳಿಗೆ ಭೀತಿಯನ್ನುಂಟುಮಾಡುವವನು ; ಒಂದು ಬಿರುದು : ರಾಜ್ಯಲಕ್ಷ್ಮೀನಿವಾಸನೆನೆ ನೆಗಟ್ದ ನಖರರಿಪುಭೀಕರಸೌಷ್ಠವಭುಜಬಲಂ . . . ಚಾವುಂಡನೃಪಂ (ಸೌಇಇ. XI-ii, ೦೦೯-೦೭ ; ಸಿ. 948). ರಿಪುಮಂಡಳಿಕಭೈರವ = ಶತ್ರುಮಾಂಡಲಿಕರಿಗೆ ಭೀಕರನಾದವನು ; ಒಂದು ಬಿರುದು : ಸುವರ್ಣಗರುಡಧ್ವಜಂ ಮಜಾಮಕಸಪ್ಪಸಿಂ ಅಯ್ಯನ ಸಿಂಗರಿಪುಮಂಡಳಿಕಭೈರವಂ . . . ಶ್ರೀಮದ್ವಿಜಯಾದಿತ್ಯದೇವರಸರು (ಕೊಲ್ಹಾ.ಶಾ. ೨೯-೩ ; ೪). ರಿಪುಮದನಮಹೇಶ್ವರ = ಶತ್ರುವೆಂಬ ಕಾಮನಿಗೆ ಈಶ್ವರನಂತಿರುವವನು ; ಒಂದು ಬಿರುದು : ಪ್ರತಾಪಲಂಕೇಶ್ವರ ರಿಪುಮದನಮಹೇಶ್ವರ ರಾಯಮುರಾರಿ ಭುಜಬಳಮಲ್ಲ (ಕಇಆ. ೭೯-೦೨_೦೯ ; 1170). ರಿಪುರಾಯಕಟಕಸೂರೆಕಾರ = ಶತ್ರುಸೈನ್ಯವನ್ನು ನಾಶಮಾಡುವವನು ; ಒಂದು ಬಿರುದು : ಸಹಜಮನೋಜರಿಪುರಾಯಕಟಕಸೂರೆಕಾರ (ಸೌಇಇ. XX, ೩೩-೦೫ ; 1082). ರಿಪುಸಂವರ್ತ = ಶತ್ರುಗಳನ್ನು ಪ್ರಳಯಕಾಲದಂತೆ ನಾಶಪಡಿಸುವವನು ; ಒಂದು ಬಿರುದು : ಎಲೆಲೆ ರಿಪುಸಂವರ್ತನೊಳು ಕೊಳುಗುಳಕೆ ವರ್ತಿಸಲರಿದೆನುತ ತಲ್ಲಳಿಸಿ ತೆತ್ತುದು ಮನವನವನೀಪಾಲಸಂದೋಹ (ಕುಮಾ.ದ್ರೋ. ೦೨-೦೦). ರಿಪುಸರ್ಪಗರುಡ = ಶತ್ರುವೆಂಬ ಹಾವಿಗೆ ಗರುಡನಂತಿರುವವನು ; ಒಂದು ಬಿರುದು : ಮಹಾಪ್ರಚಂಡದಂಡನಾಯಕವಿಭೂತಿಯ ನಪ್ಪುಕೆಯ್ದು ರಿಪುಸರ್ಪಗರುಡನೆನಿಸಿ ನೆಗಟ್ದ ಗೋವಿಂದನ ಮಗನಖಿಳಕಳಾವಿದಂ (ಕೊಲ್ಹಾ.ಶಾ. ೩-೦೭ ; 1079). ರಿಪುಹೃದಯಶಲ್ಯ = ಶತ್ರುಗಳ ಹೃದಯಕ್ಕೆ ಈಟಿಯಂತಿರುವವನು ; ಒಂದು ಬಿರುದು : ನಿರ್ಮಲಕೀರ್ತಿ ದೋಷಕಾನನದಾವ ನಮಿತದೇವಾ ಮಾಂಗಲ್ಯ ರಿಪುಹೃದಯಶಲ್ಯ ಲೋಕಖ್ಯಾತ . . . ಶಾಂತನಜೇಶ್ವರಾ (ಬಿಕ್ಕಿ.ಶಿ. ೬-೦೪-೨). [ಸಂ.]

**ರಿಪುಕುಲ**, ರಿಪುಕುಳ (ನಾ). ಹಗೆಗಳ ಸಮೂಹ : 'ರಿಪುಕುಲಾಂತಕ' ಪರಾ. **ರಿಪುಕುಳ** : ಉಭಯದೇಶೀಮನೋರಂಜನಂ ರಿಪುಕುಳಜಳಧರಪ್ರಭಂಜನ ನಾಮಾದಿ ಸಮಸ್ತಪ್ರಶಸ್ತಿಸಹಿತಂ (ಕಇಆ. ೦೦೩-೬-೦೯ ; 1076).

ರಿಪುಕುಲಮೃತ್ಯು=ಶತ್ರುಸಮೂಹಕ್ಕೆ ಯಮನಂತೆ ಇರುವವನು ; ಒಂದು ಬಿರುದು: ಸಿಂಧದ ಸತ್ತಿಗೆಯ ಸಾಲಿನಲಿ ರಿಪುಕುಲಮೃತ್ಯುವಾತನು ವೀರಗಂಗಾಸುತನು ನೋಡು (ಕುಮಾ.ವಿ. ೩-೩೬). [ಸಂ.]

**ರಿಪುಕುಲಾಂತಕ** (ನಾ). ಶತ್ರುವಂಶಕ್ಕೆ ಯಮಸದೃಶನಾದವನು : ಕಂದ ಬಾರೋ . . . ರಿಪುಕುಲಾಂತಕನಿಪುಣ ಮುಖದೋಟಿಸೊ (ಕುಮಾ.ದ್ರೋ. ೬-೨೦). [ಸಂ.]

**ರಿಪುಕುಳ** 'ರಿಪುಕುಲ' ನೋ.

**ರಿಪುಬಲ**, ರಿಪುಬಳ (ನಾ). ಹಗೆಗಳ ಪಡೆ : ಶತ್ರುಸೈನ್ಯ : ರಿಪುಬಲದುರ್ಯೋದನಮತಿವಿಪುಲಂ ಕ್ರೀಡೋಪಯೋಗ್ಯಮೆಂಬೆಡೆಯುಮನೀಕ್ಷಿಪುದೊಂದು ಪೊಟಲುಮಂ ನಡೆಯಿಪುದೀಗಳೆ ನಮ್ಮ ಕಟಕಮಂ (ಜಗ. ೯-೨೩); ಏನಿದದ್ಭುತವಿಂದಿನಾಹವದಾಸಕೆಯು ರಿಪುಬಲದ ಸಂಭ್ರಮ (ಕೂರಂ. ೬-೨೦-೩೩). **ರಿಪುಬಳ** : ರಿಪುಬಳಕಮಲಾಕರದುಮಂ ನೃಪದ್ವಿಪಂ ಮಿಕ್ಕು ಪೊಕ್ಕು ಕೀಲ್ತೆತ್ತಿತ್ತು (ರಾಜಶೇ. ೩-೬). [ಸಂ.]

**ರಿಪುಬಳ** 'ರಿಪುಬಲ' ನೋ.

**ರಿಪುಬ್ರಜೆ** (ನಾ). ಶತ್ರುಗಳ ಸಮೂಹ : ರಿಪುಬ್ರಜೆ ಮಂಡಳಮೆಯ್ದೆ ಸಾಕ್ಷಿ ಸಾಹಸಕೆ (ಸೌಇಇ. XX, ೯೬-೩೦; 1072). [< ರಿಪುವ್ರಜ]

**ರಿಪುಭಟ** (ನಾ). ಶತ್ರುಪಕ್ಷದ ವೀರ ; ಅರಿಭಟ : ವಿರಿಂಚಿಪಿತನೊಂದಂಚಿನಲಿ ರಿಪುಭಟನ ಸಾರಥಿಯ ಮುಚಿಸಿನನು (ಕೂರಂ. ೬-೯೦-೩೦). [ಸಂ.]

**ರಿಪುಮಥನ** (ನಾ). ಹಗೆಯ ನಾಶ ; ಶತ್ರುಸಂಹಾರ : ಕಥೆಯನಿದನಾಕೇಳಿದೆನು ಕಮಶಿಖಿಖವಾವವು ಹಿಂದಕಿವು ರಿಪುಮಥನವೆಂಟೇ ಹೇಳು (ಕೂರಂ. ೬-೩೯-೨೩). [ಸಂ.]

**ರಿಪುರಾಮಗಾಮುಂಡ** (ನಾ). ಒಬ್ಬಾತನ ಹೆಸರು : ಸಂಗಮದ ಪೃಥುವೀಗಾಮುಣ್ಡರುಂ ರಿಪುರಾಮಗಾಮುಣ್ಡನುಂ ಎನಿಬ್ಬರುಂ ನರಸಾಕ್ಷಿಯಾಗೆ

ಪಡೆದಾವರ್ (ಎಕ. VI (R)' ಶ್ರೀರಂಗ. ೬೬-೨೨; ಸು. ೬೦೦).
[ರಿಪು + ಗ್ರಾಮ + ಗಾವುಂಡ]

**ರಿಪುರಾಯ** (ನಾ). ಶತ್ರುರಾಜ : ಯಾದವಕುಳಕಮಳಕಳಿಕಾವಿಕಾಸ ರಿಪುರಾಯ ಗಳಗಾಳವಾಸ ಮಾಳವಮದಮಲ್ಲಂ (ಕಂಪ್ಯಾ. ಶಾ. ೦೬-೮; 1236); ಮುಱಿದುದ್ದೈ ರಿಪುರಾಯದಳ ಹಗೆ ಹಱಿದುದ್ದೈ ಕುರುಪತಿಗೆ (ಕಂಪ್ಯಾ.ಕ. ೪೦-೭). [ರಿಪು + ರಾಯ]

**ರಿಪುವಂಗಡಿಗ** (ನಾ). ಶತ್ರುಪಂಗಡಕ್ಕೆ ಸೇರಿದವನು; ಹಗೆಯ ಪಕ್ಷದವನು : ಹೋಗದಿರು ತಲೆಗೊಡುವೊಡಿದಿರಾಗೆನುತ ರಿಪುವಂಗಡಿಗರನು ಮೂದಲಿಸಿ (ಕಂಪ್ಯಾ.ಶಿ. ೬೦ಇ. ೩-೩೪). [ರಿಪು + ವಂಗಡ + – ಇಗ]

**ರಿಪುವ್ರಜ** (ನಾ). ಶತ್ರುಗಳ ಸಮೂಹ : ಅನ್ಯೋದಕಂ ಕಿಱಿದಾದಲ್ಲಿ ರಿಪುವ್ರಜಂಗಳೆಡೆಯೊಳ್ . . . ಇರ್ದೊಡೆ ಹಾನಿಯ್ಯ (ಸೋಮೇಕ. ೨೩).
[ಸಂ.]

**ರಿಪೇರಿ** (ನಾ). ಶಿಥಿಲವಾದ ಕಟ್ಟಡ, ಕೆಟ್ಟುಹೋದ ಯಂತ್ರ ಮೊದಲಾದುವನ್ನು ಸರಿಪಡಿಸುವಿಕೆ ; ದುರಸ್ತು : ಕೆರೆ ತೂಬು ವಗೈರೆ ರಿಪೇರಿ ಮಾಡತಕ್ಕದ್ದು (ಗ್ರಾಪಜಕ. ೦); ಆ ಕಟ್ಟಡಕ್ಕೆ ರಿಪೇರಿ ಆಗಿ ಎಷ್ಟೋ ವರ್ಷಗಳಾಗಿವೆ (ಸಂಗಕ. ೦೦೦). [←ಇಂ. Repair]

**ರಿಪೋರ್ಟು** (ನಾ). ಯಾವುದಾದರೊಂದು ಸಂಗತಿಯ ಬಗ್ಗೆ ಮಾಡಿದ ವರದಿ,–ವಿವರ : ಪ್ರತಿದಿನವೂ ನಡೆದ ವಿದ್ಯಮಾನಗಳನ್ನು ರಿಪೋರ್ಟು ಮಾಡುವುದು (ಕೃಷಾಪಂ. II. ೩೯); ಲಿಖಿತಮೂಲಕವಾದ ರಿಪೋರ್ಟುಗಳನ್ನು . . . ತಯಾರುಮಾಡಲು ಬದ್ಧರಾಗಿರಬೇಕು (ಗ್ರಾಪಜಕ. ೩).
[←ಇಂ. Report]

**ರಿಬು, ರಿಭು** (ನಾ). ದೇವತೆ ; ಅಮರ್ತ್ಯ : ಆ ರಿಬುಗಳ ಮೊತ್ತದಿನಿಂದ್ರಂ . . . ಸೊಗಯಿಸೆ (ಶಾಂತೀಶ್ವ. ೦-೨-೬೦ ಕಳೆ). **ರಿಭು** : ' ರಿಭುವಿಮಾನ' ಪರಾ. [<ಸಂ. ಋಭು]

**ರಿಬ್ಬನ್‌ಹುಲ್ಲು** (ನಾ). ಒಂದು ಬಗೆಯ ಹುಲ್ಲು : (ಕೃಷಿಇ. ೬೦-೦೨೨೦).
[ರಿಬ್ಬನ್ + ಹುಲ್ಲು (<ಪುಲ್)]

**ರಿಭು** ' ರಿಬು ' ನೋ.

**ರಿಭುವಿಮಾನ** (ನಾ). ದೇವವಿಮಾನ : ನೆಲ್ಲವತ್ತಿಯ ಜಿನಭವನಂ ರಿಭು ವಿಮಾನಮಂ ಪೋಲ್ತಿರ್ಕುಂ (ಎಕ. VII. ಶಿಕಾಪು. ೦೦-೯೯; 1085 ?).
[ರಿಭು (<ರಿಬು) + ವಿಮಾನ]

**ರಿಯಾಯತಿ**, ರಿಯಾಯಿತಿ, ರಿಯಾಯ್ತಿ (ನಾ). ೧. ತೆರಿಗೆ, ವ್ಯಾಪಾರದ ವಸ್ತು ಮೊದಲಾದುವುಗಳ ಮೇಲೆ ನೀಡುವ ಸೋಡಿ,–ವಟ್ಟ : ಸರಕಾರವು ಅಷ್ಟೊಂದು ರಿಯಾಯತಿಯನ್ನೂ ತೋರಿಸುವುದಿಲ್ಲ. ತೆರಿಗೆಯ ದರವೂ ಕಡಿಮೆಯಾಗಿರುವುದಿಲ್ಲ (ಬಿಕಸಂ. ೩೩). ೨. ದಯೆ ; ಕರುಣೆ : ಶರಣಾಗತನಾದ ಅಪರಾಧಿಗೆ ವಿಶೇಷವಾಗಿ ರಿಯಾಯತಿಯೂ ದೊರೆಯುತ್ತಿತ್ತು (ಹುಲ್ಲಿಕ. ೦೯). **ರಿಯಾಯಿತಿ** : ೧. ಇಂಡಿಯಾದಿಂದ ತಂದ ಅಥವಾ ಮುಂದೆ ತರುವ ಸಾಮಾನುಗಳ ಮೇಲೆ ಕೇವಲ ಐದರಷ್ಟು ಮಾತ್ರ ಸುಂಕ ಕೊಡಬಹುದೆಂಬ ರಿಯಾಯಿತಿಯೂ ದೊರೆಯಿತು (ಕೃಪಾ.II, ೨೨೪); ಅನುಭವಶಾಲೆಯ ಶುಲ್ಕ ದುಬಾರಿಯದಲ್ಲಿ ರಿಯಾಯಿತಿಯಿಲ್ಲ (ಇಂಜಾಕ. ೦೦೬-೨೯). ೨. ನಾನು ಬಹಳ ರಿಯಾಯಿತಿ ತೋರಿಸಿದ್ದೇನೆ (ಕಾಬಂಕಾಂ. ೦೪೯). **ರಿಯಾಯ್ತಿ** : ೨. ಯಾರಿಗೂ ಯಾವ ರಿಯಾಯ್ತಿಯೂ ಇರುವುದಿಲ್ಲ (ದೂಂಡಕ. ೦೬೩); ಅದೇನೋ ರಿಯಾಯ್ತಿಯಿಂದ ಮೂರು ವರ್ಷಗಳ ಶಿಕ್ಷೆ ಆರೇ ತಿಂಗಳಲ್ಲಿ ಸಿವೃತ್ತಿಯಾಗಿದೆ (ದೀಕಥು. ೬೩).
[←ಅರ. ರಿಆಯತ್ ; ಹಿಂ. ರಿಆಯತ್, ರಿಯಾಯತ್]

**ರಿಯಾಯಿತಿ** ' ರಿಯಾಯತಿ ' ನೋ.

**ರಿಯಾಯ್ತಿ** ' ರಿಯಾಯತಿ ' ನೋ.

**ರಿಯಾಸತ** ' ರಿಯಾಸತ್ತು ' ನೋ.

**ರಿಯಾಸತ್ತು**, ರಿಯಾಸತ (ನಾ). ಸಂಸ್ಥಾನ ; ರಾಜ್ಯ : ರಿಯಾಸತ್ತು ಗಳಲ್ಲಿಯೂ ಈ ವಿಧಾನವನ್ನು ಜಾರಿಗೆ ತರಲಾಗುವುದೆ ? (ದೂಂಡಕ. ೬೩). **ರಿಯಾಸತ** : ದಾಖಲ ರಿಯಾಸತ ಮೈಸೂರ (ಮೈಕಂ. ೦೮೨೯. ೯೪-೩; 1813). [← ಅರ. ಹಿಂ. ರಿಯಾಸತ್ ; ಮರಾ. ರಿಯಾಸತ್, ರಿಯಾಸತ್]

**ರಿರಂಸೆ** (ನಾ). ರಮಿಸುವ ಆಸೆ ; ಕಾಮತೃಷ್ಣೆ : ರಾಜಸುತೆಯೆನ್ನುತ ರಿರಂಸೆಯಿಂ ಭುಜಮಂಗೊಂಡು ಕೈವಿಡಿದು ಕಡೆಯೊಳತಿಹಿಂಸೆಗೊಳಗಾದೆ (ವಂಕಾಶಾ. ೨-೬-೯೭). [ಸಂ. ರಿರಂಸಾ]

**ರಿವಾಜು** (ನಾ). ಪದ್ಧತಿ ; ರೂಢಿ ; ರೀತಿ : ಮನೆಯ ರಿವಾಜಿನಂತೆ ಅವಳು ಘೋಷಾ ಪಾಲಿಸಬೇಕಾಗಿತ್ತು (ಗ್ರಾಮಜು. ೭೯); ಯುಗಾದಿಯ ಸಮಯ ಮಳೆ ಬರುವ ರಿವಾಜೇ ಇದೆ (ಮಂಕಮ. ೩೩).
[← ಅರ. ಹಿಂ. ಮರಾ. ರಿವಾಜ್]

**ರಿಷಭ**, ರಿಸಬ (ನಾ). ಬಸವ ; ವೃಷಭ : ಖ್ಯಾತರಾ ದ್ವಾದಶಾದಿತ್ಯರವರೊಳಗೆ ಪುರುಹೂತಶಚಿಯರ್ಗೆ ಮಿಷದು ಜಯಂತಂ ರಿ[ಶಾಕಾಂ. ಮೈ.ವ್ಯ] ಷಭರೋತು ಸಂಭಮಿಸಿದರ್ (ಕಚಖ. ೦೪-೯). **ರಿಸಬ** : ಋಷಭ _ ರಿಸಬ (ಕನ್ನಸು. ೦೩೯ ಕೃಯೋ). [< ಸಂ. ಋಷಭ]

**ರಿಷಿ** ' ಋಷಿ ' ನೋ.

**ರಿಷಿಗ** (ನಾ). ಒಬ್ಬಾತನ ಹೆಸರು (?) : ಕುಂದಿಗನೃಪಂ ಚಾವುಣ್ಣರಾಯ ಮುನ್ನತಶೌರ್ಯ್ಯಂ ವಿಭು ಮಾದಿಗಂ ರಿಷಿಗನನ್ನು ನಸ್ಪಮರ್ಯ್ಯಂ ಗುಣ ಸ್ತುತಿಗೆಯ್ದು (ಸೌಇಇ. XX, ೩೦-೦೩; 1044). [ ? ]

**ರಿಷಿಹಳ್ಳಿ** ' ಋಷಿವಳ್ಳಿ' ನೋ.

**ರಿಷ್ಟ** (ನಾ). ೧. ಅಪಾಯ ; ಕೇಡು. ೨. ಅಶುಭ ; ಅಮಂಗಳ : ಶಶಿ ರಿಷ್ಟಹರಂ (ಜಾತಕ. ೭-೪). ೩. ಪಾಪ; ಕಳಂಕ : "ಪಾಪದಲ್ಲಿಯುಂ ರಿಷ್ಟಮೆಂಬುದು" (ಶಬಾಮ. ೦೩೪-೦೬). ೪. ಅದೃಷ್ಟ; ಸುದೈವ : "ರಿಷ್ಟಂ–೧. ಕ್ಷೇಮ, ಅಶುಭ ಇಲ್ಲದೇ ಇರುವಿಕೆ" (ಸಿದ್ಯಾಂತಿ. ೩೬೨). [ಸಂ.]

**ರಿಷ್ಟಿ** (ನಾ). ೧. ಕತ್ತಿ; ಖಡ್ಗ : ''ಖಡ್ಗಃ, ನಿಸ್ತ್ರಿಂಶಃ, ಚಂದ್ರಹಾಸಃ, ಅಸಿಃ, ರಿಷ್ಟಿಃ . . . ಕೃಪಾಣಕಾ – ೯ ಖಡ್ಗದ ಹೆಸರು" (ಸಿದ್ಯಾಂತಿ. ೨೬೩). ೨. ಕೇಡು ; ಹಾನಿ. ೩. ದುರದೃಷ್ಟ. [ಸಂ.]

**ರಿಸಬ** 'ರಿಷಭ' ನೋ.

**ರಿಸಾಲು**, ರಿಸಾಲೆ (ನಾ). ಸಾಮಾನ್ಯವಾಗಿ ನೂರು ಕುದುರೆಗಳ ಪಡೆ : ' ರಿಸಾಲುದಾರ ' ಪರಾ. **ರಿಸಾಲೆ** : ಒಟ್ಟು ೫೧,೦೦೦ ಕುದುರೆಗಳು ಸೇರಿ ಒಂದೊಂದು ಸಾವಿರಕ್ಕೊಂದೊಂದು ರಿಸಾಲೆಯಂತೆ ವಿಭಾಗವಾಗಿ (ಮಹಾಪಂ. II, ೦೬); ಯಾವಾಗ ರಿಸಾಲೆಗಾಗಲಿ (ಅಶ್ವಸೇನೆ) ಅಥವಾ ಪದಾತಿಸೈನ್ಯಕ್ಕಾಗಲೀ ಆದೇಶ ದೊರಕುವುದೋ ಆಗ ಅವು ಸೂಚಿಸಿದ ಕಡೆ ಯುದ್ಧ ಮಾಡಬೇಕೆಂದೂ ನಿರ್ದೇಶಿಸಿದಳು (ದೂಂಡಕ. ೪೨೬).
[← ಅರ. ರಿಸಾಲ್; ಪಾರ. ರಿಸಾಲಹ್; ಹಿಂ. ಮರಾ. ರಿಸಾಲಾ]

**ರಿಸಾಲುದಾರ** ' ರಿಸಾಲ್ದಾರ್ ' ನೋ.

**ರಿಸಾಲೆ** ' ರಿಸಾಲು ' ನೋ.

**ರಿಸಾಲ್ದಾರ್**, ರಿಸಾಲುದಾರ, ರಿಸಾಲ್ದಾರ (ನಾ). ಅಶ್ವದಳದ ಅಧಿಪತಿ : (ಕೃಕಗ. II, ೩೬೦). **ರಿಸಾಲುದಾರ** : (೯). **ರಿಸಾಲ್ದಾರ** : ಈ ಸೇನೆಯ ಟೋಳಿಗಳು ರಿಸಾಲ್ದಾರರ ಕೈಕೆಳಗಿದ್ದವು (ಮಹಾಪಂ. II, ೯೭).
[← ಅರ. ಪಾರ. ಹಿಂ. ರಿಸಾಲ್‌ದಾರ್, ರಿಸಾಲೇದಾರ್; ಮರಾ. ರಿಸಾಲ್ದಾರ್]

**ರಿಸಾಲ್ದಾರ** 'ರಿಸಾಲ್ದಾರ್' ನೋ.

**ರಿಸಿ** 'ಋಷಿ' ನೋ.

**ರಿಸಿಕುವರಿ** (ನಾ). ಋಷಿಯ ಮಗಳು : ಚಟುಲಕಾಮೋದ್ದೀಪನದಿಂದೆ ಕಡುಧೂರ್ತವಟುಗಳು ರಿಸಿಕುವರಿಯರ ಬಟುವೊಲೆಗಳ ಕೈದುಡುಕಿದುದು ಕೇಳ್ದೆ ನಿಟಿಲಾಕ್ಷ ತಪವಿರ್ಪ ಬನದಿ (ಜೋಷಕ. ೬-೦೩).
[ರಿಸಿ (< ಋಷಿ) + ಕುವರಿ]

**ರಿಸಿವೆಣ್** (ನಾ). ಋಷಿಯ ಹೆಂಡತಿ; ಮುನಿಪತ್ನಿ: ತಾನೆ ಸೀತೆ ದೋಹದದಿನಡವಿಯ ರಿಸಿವೆಣ್ಗಳಂ ಕಾಣಲ್ಕೆಂದು ಬಯಸಿದಳ್ (ರಾಮಾಶ್ವ. ೨೬-೨೨).
[ರಿಸಿ (< ಋಷಿ) + ಪೆಣ್]

**ರೀಠಾ** (ನಾ). ಕರಂಜಮರದ ಒಂದು ಪ್ರಕಾರ : "ಮಂಗಲಃ – ರೀಠಾ. ಕರೆಂಜ, ಅರಳಿ, ಇಪ್ಪೆ" (ಓಷಧಿ. ೦೦೫). [ಸಂ.]

**ರೀಡರ್** (ನಾ). ೧. ಉಪಪ್ರಾಧ್ಯಾಪಕ ; ಪ್ರವಾಚಕ : ಅವರು ಕನ್ನಡ ರೀಡರ್ ಆಗಿದ್ದಾರೆ (ರೂಢಿ). ೨. ಪಾಠದ ಪುಸ್ತಕ; ಪಠ್ಯಪುಸ್ತಕ : ಕನ್ನಡ ಐದನೆಯ ರೀಡರ್‌ನಲ್ಲಿ ನಳನ ಕಥೆಯಿದೆ (ರೂಢಿ). [← ಇಂ. Reader]

**ರೀಢೆ** (ನಾ). ಅವಮಾನ; ಅವಜ್ಞೆ ; ತಿರಸ್ಕಾರ : "ಅವಗಣನಮವಜ್ಞಾನಮದವಹೇಳಂ ರೀಢೆ" (ಶಬ್ದಮಣಿ. ೦೧೨-೬). [ಸಂ. ರೀಢಾ]

**ರೀಣ** (ಗು). ಸ್ರವಿಸುವ ; ಸೋರುವ. [ಸಂ.]

**ರೀತಿ** (ನಾ). ೧. ಗಮನ; ಗತಿ. ೨. ನದಿಯ ಹರಿವು, — ಪ್ರವಾಹ. ೩. ಮಾರ್ಗ; ಪದ್ಧತಿ : ನಾನಾಜಾತಿನೀತಿಯ ರೀತಿಗಳ ವಿಸ್ತರಿಸಿ (ಗಣಿತ. ೦೯-೦). ೪. ಬಗೆ; ವಿಧ; ಕ್ರಮ : ಹೊಳಲು ಹೊಸರೀತಿಯಲಿ ಮಿಗೆ ಕಂಗೊಳಿಸುತಿರ್ದುದು (ತೊರೆರಾ. ೦-೯-೦೦) ; ರೀತಿ ತಿಳಿಯದವರೂ ಮಾತು ಬಲ್ಲ (ಗಾದೆ). ೫. ಆಚಾರ; ರೂಢಿ; ಸಂಪ್ರದಾಯ: "ಚರಿತಂ ರೀ[ಪಾಠಾಂ. ನೀ]ತಿ ಚಾರಿತ್ರಂ . . . ಆಚಾರಕಕ್ಕು ನಾಮಂ" (ರಂಗರಾ. ೬೪-೩); ಪರಕೀಯರ ರೀತಿ ಅನುಕರಣೀಯವಲ್ಲ (ರೂಢಿ). ೬. ಒಂದು ಬಗೆಯ ಲೋಹ ; ಹಿತ್ತಾಳೆ : "ಆರಕೂಟಃ, ರೀತಿಃ – ಈ ೨ ಹಿತ್ತಾಳೆ" (ಹಲಾಯು. ೨೯-೦೬). ೭. ಮೋರೆ ; ಗಡಿ ; ಎಲ್ಲೆ. ೮. ಕಬ್ಬಿಣ ಮುಂತಾದ ಲೋಹಗಳ ಜಂಗು,-ಕಿಟ್ಟ. ೯. ಸ್ವಭಾವ; ಗುಣ : ಅವನ ರೀತಿಯೇ ವಿಚಿತ್ರವಾಗಿದೆ (ರೂಢಿ). ೧೦. [ಕಾವ್ಯಮೀ] ಮಾಧುರ್ಯಾದಿ ಕಾವ್ಯಗುಣಗಳಿಂದ ಕೂಡಿದ ಪದಗಳ ಜೋಡಣೆ : ರೀತಿವಿನೂತವಸ್ತು ಕೃತಿಗೊಪ್ಪುವ ಪೆಂಪು . . . ರೀತಿಯೊಳೊಂದೆ ಪೇಟ್ವುದು ರಸಂ ಬಿಡೆ ಬಂಧುರಕಾವ್ಯಬಂಧಮಂ (ಕಾವ್ಯಾವ. ೬೮೦); ಹೊಸ ರೀತಿ ನೋಡಿದು (ಬಸವ. ೦-೨೬); ರೀತಿ ಅಥವಾ ಮಾರ್ಗವೆಂದರೆ 'ವಚನವಿನ್ಯಾಸಕ್ರಮ' (ಕನ್ನಡ. ೨೨೦). [ಸಂ.]

**ರೀತಿಕೆ** (ನಾ). ಹಿತ್ತಾಳೆ : "ರೀತಿಕೆ[ಪಾಠಾಂ. ರೀತಿ]ಯೆನಲು ಹಿತ್ತಾಳೆ" (ಮಂಗರಾ. ೩೦-೩) ; ಅಯ್ಯ ರೀತಿಕೆಯಲ್ಲಿ ಅಪರಂಜಿಯಾನಜಿಸುವರೆ (ಆದಪ. ೦೬-೨೯). [ ಸಂ. ರೀತಿಕಾ ]

**ರೀತಿಕೆಡು** ' ರೀತಿಗೆಡು ' ನೋ.

**ರೀತಿಗೆಡಿಸು** (ಕ್ರಿ). ಹಾಳುಮಾಡು ; ಚಾರಿತ್ರಪ್ಪಿಸು : ನಂಬಬೇಡ . . . ಪ್ರೀತಿಪಡಿಸಿ ಹಣವ ಸೆಳೆದು ರೀತಿಗೆಡಿಸಿ ಕಡೆಯಲವನ ಕೋತಿಯಂತೆ ಮಾಡಿಬಿಡುವ ಜಾತಿಕಾಜಿ ಹೆಂಗಳ (ಪುರಂದ. ೨-೦೬-೨) ; ಬೆಳೆಯುವ ಮಕ್ಕಳನ್ನು ಅತಿಯಾಗಿ ಮುದ್ದಿಸಿ, ರೀತಿಗೆಡಿಸದೆ ಅವುಗಳನ್ನು ಶಿಸ್ತಿನಿಂದ ಬೆಳೆಸುವುದು ತಾಯಿ ತಂದೆಗಳ ಮಹಾಕರ್ತವ್ಯವಾಗಿದೆ(ಗೃಹವಿ. ೧೩೨).
[ ರೀತಿಗೆಡು + — ಇಸು$_3$ ]

**ರೀತಿಗೆಡು**, ರೀತಿಕೆಡು (ಕ್ರಿ). ಹಾಳಾಗು ; ಚಾರಿತಪ್ಪು: ರೀತಿಗೆಡಿಸು ' ಪರಾ. **ರೀತಿಕೆಡು** : ನೀತಿಕೆಟ್ಟ ರೀತಿಕೆಟ್ಟ ನಾಯಿ (ಮೊಕ್ಷ. ೦೦).
[ ರೀತಿ + ಕೆಡು$_1$ ]

**ರೀತಿಗೌಳ** (ನಾ). [ಸಂಗೀತ] ಒಂದು ರಾಗದ ಹೆಸರು : ರೀತಿಗೌಳ :– ೨೨ನೇ ಮೇಳಕರ್ತ ಖರಹರಪ್ರಿಯದಲ್ಲಿ ಜನ್ಯ. ಉಪಾಂಗರಾಗ. ಘನರಾಗಗಳಲ್ಲೊಂದು(ಸಂಗೀತಂ. ೦೩೨). [ ಸಂ. ರೀತಿಗೌಲ ]

**ರೀತಿತಪ್ಪು** (ಕ್ರಿ). = ರೀತಿಗೆಡು : ಇವು ರೀತಿತಪ್ಪಿದಾಗಲೆಲ್ಲಾ ಕಾಣದಂತೆ ಅಸಡ್ಡೆ ಅಲಕ್ಷದಿಂದ ಇರಬಾರದು (ಗೃಹಪ. ೦೬೬). [ ರೀತಿ + ತಪ್ಪು$_1$ ]

**ರೀತಿಪುಷ್ಪ** (ನಾ). ಹಿತ್ತಾಳೆಭಸ್ಮದಿಂದ ತಯಾರಿಸಿದ ಕಣ್ಣಿನ ಅಂಜನ; ಕುಸುಮಾಂಜನ : "ರೀತಿಪುಷ್ಪಂ, ಪುಷ್ಪಕೇತುಃ, ಕುಸುಮಾಂಜನಂ – ೩ ಕುಸುಮಾಂಜನದ ಹೆಸರು" (ಶಿವ್ತ.ಆ. ೩೦೫). [ಸಂ.]

**ರೀತಿವಿಫಲ** (ನಾ). [ಕಾವ್ಯಮೀ] ಹದಿನೆಂಟು ಬಗೆಯ ಪದದೋಷಗಳಲ್ಲಿ ಒಂದು : ಅಪದಾರ್ಥಂ . . . ವಿಶ್ಲೇಷನಷ್ಟಸಮಾಸಂ ನಯನಾಶರೀತಿವಿಫಲಂ ದುರ್ಲಕ್ಷಣಂ . . . ಇವಿನಿಸುಂ ದೋಷಂಗಳಷ್ಟಾದಶ (ರುದ್ರೋಂಬು. ೦-೪೬ ಕಂದ). [ಸಂ.]

**ರೀಪು** (ನಾ). = ರಿಪೀಸು : ನಮ್ಮದು ಚಿಕ್ಕಮನೆ ; ಬಿದಿರಿನ ರೀಪು ಹೊಡೆದರೆ ಸಾಕು (ಮುಂಗಾರು. ೬೦) ; ಚಿಕ್ಕಪ್ಪನು ಹನ್ನೆರಡು ಕೋಲು ಹಲಗೆ, ಇಪ್ಪತ್ತು ಕೋಲು ರೀಪು, ಎರಡು ಸೇರು ಆಣಿ . . . ತರಿಸಿದ (ಜಳಕು. ೬). [ ← ಮರಾ. ರೀಪ ]

**ರೀಮು** (ನಾ). ಐನೂರು ಹಾಳೆಗಳಿರುವ ಕಾಗದದ ಕಟ್ಟು; ಇಪ್ಪತ್ತು ದಸ್ತು : ಬರೆಯುವ ಕಾಗದಗಳಾದರೆ . . . ೨೦ ಕ್ವಯರುಗಳಿಗೆ ಒಂದು ರೀಮನ್ನಾಗಿ ಕಟ್ಟುವರು (ವಾಣಿಜ್ಯ. II. ೮೨೫). [← ಇಂ. Ream]

**ರೀಲ್** ' ರೀಲು ' ನೋ.

**ರೀಲು**, ರೀಲ್ (ನಾ). ದಾರ, ತಂತಿ, ಚಲನಚಿತ್ರಪಟಲ ಮೊದಲಾದುವುಗಳನ್ನು ಸುತ್ತುವ ಸಲಕರಣೆ ; ಕಂಡಿಕೆ ; ಇಲ್ಲಿದೋ ಬೆಳ್ಳಕ್ಕಿಯ ಸಾಲು: ಹೊಸಯುಗದ ರೀಲು ! (ಜಂಕಪ. ೬೦-೪). **ರೀಲ್** : ಇದು ಮುಗಿಯುವ ಹೊತ್ತಿಗೆ ಎರಡು ರೀಲ್‌ಗಳು ಮುಗಿದಿರಬಹುದು (ಪಾಡಿಗೇ. ೦೩೦).

ರೀಲ್‌ಬಿಡು = (ಆಲಂ) ಸುಳ್ಳು ಹೇಳು; ಬುರುಡೆ ಹೊಡೆ : ನನ್ನ ಮುಂದೇನೇ ಇಷ್ಟು ರೀಲ್ ಬಿಡ್ತಾ ಇದ್ದೀಯಲ್ಲಾ (ರೂಢಿ).
[ ← ಇಂ. Reel ]

**ರುಂಡ** (ನಾ). ೧. ತಲೆಯಿಲ್ಲದ ದೇಹ ; ಮುಂಡ. ೨. ತಲೆಬುರುಡೆ ; ಶಿರಸ್ಸು : " ರುಂಡಮೆಂದು ಶಿರಂ " (ಶಬ್ದಮ. ೩೯-೨೬೪) ; ಧರಣಿ ಕಂಪಿಸೆ ಖಳನ ರುಂಡವು ಹೊರಳಿ ಬಂದುಗು ಹರಿಯ ಚರಣಕೆ (ಕೌರವ. ೨೬-೫೯) ; ಕಡಿವಡೆದ ರುಂಡಗಳ ಪೊನೆಗಣೆಯಿಡಿದಿರುವ ಮುಂಡಗಳ . . . ಕಂಡು (ತಿಮ್ಮಸ್ತೀ. ೩-೦೩); ರಣಕಾಳಿ ರುಂಡ ಮುಂಡಗಳ ಚೆಂಡಾಟವಾಡಿದಳಲ್ಲಿ (ಕಣ್ವಾಂಗ. ೬೨-೨೨೫೯). ೩. ಹೇಸರಗತ್ತೆ. [ಸಂ.]

**ರುಂಡಮಾಲೆ**, ರುಂಡಮಾಳೆ (ನಾ). ತಲೆಬುರುಡೆಗಳ ಹಾರ ; ಕರೋಟಿಮಾಲೆ : ದೇಹ ರುಂಡಮಾಲೆಯ ಸ್ಥಾನ ಕರ್ಣ ನಾಗೇಂದ್ರನ ಸ್ಥಾನ (ಬಸವ. ೯೪೪); ಕರುಳುದುಂಡೆಯ ರುಂಡಮಾಲೆಯ ಮರುಳುಗಳು ಕುಣಿದಾಡೆ (ಕೌರವ. ೪೪-೦೫) ; ಚಂಡಸುರಥನ ಶಿರವನು . . . ತರಿಸಿದನದಂ ರುಂಡಮಾಲೆಯ ತೊಡವಿಗೆ (ಕೃಷ್ಣಾ. ೦೪ ಸೂಕ್ತ). **ರುಂಡಮಾಳೆ** : ಅಂಭುಟರುಣ್ಡಮಾಳೆ ಪಳನಿಕ್ಕಿ ತದೀಯಕಪೋಳದೊಳ್ಪುದುಳ್ದಿರಸಿದ ನೆತ್ತರಂ ಸುಱಿದು ಕತ್ತಿಗೆಯಂ ಜಡಿಯುತ್ತೆ . . . ನರ್ತಿಸುವ ಭೈರವನೀ ರಣರಂಗಭೈರವ (ಕೌಶಿ. XX. ೬೬-೩೪ ; ?). [ಸಂ. ರುಂಡಮಾಲಾ]

**ರುಂಡಮಾಳೆ** ' ರುಂಡಮಾಲೆ ' ನೋ.

**ರುಂಡಾಭರಣ** (ನಾ). ತಲೆಬುರುಡೆಯ ಮಾಲೆಯನ್ನು ಆಭರಣವಾಗಿ ಧರಿಸಿದವನು : ರುಂಡಾಭರಣರು ಘನವೆಂಬೆನೆ ರುಂಡಾಭರಣರು ಘನವಲ್ಲ (ಅಕಂದೆ. ೩೩೯-೫೦). [ಸಂ.]

**ರುಂಡಿಕೆ** (ನಾ). ೧. ಯುದ್ಧರಂಗ. ೨. ದೂತಿ ಅಥವಾ ಕುಂಟಣಗಿತ್ತಿ. ೩. ಹೊಸ್ತಿಲು. ೪. ಅತಿಮಾನುಷ ಶಕ್ತಿ. [ಸಂ. ರುಂಡಿಕಾ]

**ರುಂಡಿಮಾರಮ್ಮ** (ನಾ). ಒಬ್ಬಾತನ ಹೆಸರು : ವಲ್ಲಭಗಾವುಂಡ್ನನುಂ ರುನ್ದಿವಚ್ಚರು ರುಣ್ಡಿಮಾರಮ್ಮನುಂ ಕಾದಳೂರ ಶ್ರೀವಿಕ್ರಮಗಾವುಂಡ್ನರುಂ (ಎಕ. II, ೩೩-೭ ; ಸು. 800). [ರುಂಡಿಮಾರ, + ಅಮ್ಮ₁]

**ರುಂದಿ** (ನಾ). ಅಡ್ಡಳತೆ ; ಅಗಲ : ಲಾಂಬಿಯ ಪಕ್ಕದ ಮೂಲೆಗಳ ನಿಶಾನಿಗಳನ್ನು ಹಿಡಿದು ಶಂಕು ಹತ್ತಿಸಿ ಯಾವ ಅಳತೆ ಬರುತ್ತದೆಯೋ ಅದನ್ನು ರುಂದಿಯೆಂದು ಹೇಳುವುದು (ಭೂಮಿತಿ. ೦೨).

[<ಪ್ರಾ. ರುಂದೀ./ಮರಾ. ರುಂದೀ]

**ರುಂದಿವಚ್ಚ** (ನಾ). ಒಬ್ಬಾತನ ಹೆಸರು : ವಲ್ಲಭಗಾವುಂಡರುಂ ರುನ್ದಿವಚ್ಚರು ರುಣ್ಡಿಮಾರಮ್ಮನುಂ (ಎಕ. II, ೩೩-೭ ; ಸು. 800). [ ? ]

**ರುಂದ್ರ** (ಗು). ೧. ವಿಸ್ತಾರವಾದ ; ವಿಶಾಲವಾದ : "ಬೃಹದುರು ರುಂದ್ರಂ ಪೃಥು ಗುರು ಮಹದ್ವಿಶಾಲಂ ವಿಶಂಕಟಂ ವಿಸ್ತೀರ್ಣಂ" (ಪಶ್ಸು.ಕೋ. ೦೦೭-೩೩) ; ವ್ಯಾಸಮುನೀಂದ್ರರುಂದ್ರವಚನವ್ಯಾಕೃತವಾರ್ಥಿಯ ನೀಸುವೆಂ (ಶಂಶಭಾ. ೧-೦೩) ; ಇದು . . . ಶ್ರೀಪಾದನಖಚಂದ್ರಸಾಂದ್ರ ರುಚಿರುಂದ್ರಚಂದ್ರಿಕಾಚಂಚತ್ಕೋರಾಯಮಾನ (ರಾಜಶೇ. ೨-೦೧೩ ಪ) ; ಪುಲಕಿಸಿತು ನಿಶ್ಶಬ್ದರುಂದ್ರದಂಡಕವನಂ ಕೂಡೆ ಪುಲಕಿಸುವಂತೆ (ಶ್ರೀರಾಮಾ. ೦೬೬-೯೬). ೨. ವ್ಯಾಪಕವಾದ ; ನಿಬಿಡವಾದ : ವಿಯಚ್ಚರಧರಣೀಶರತ್ನಮಕುಟಪ್ರಭೆಯಿಂ ದಶದಿಙ್ಮುಖಂಗಳುಂ ಭರಿತಮೆನಿಪ್ಪಿನಂ ನೆರೆದುದಾ ಧ್ವನಿಗಿಂಪ್ಪುನ ರುಂದ್ರಸೈನಿಕಂ (ಶಂರಾಮಾ. ೦೦-೦೯೯). [ಸಂ.]

**ರುಂಬಾಲ** 'ರುಮಾಲು₁' ನೋ.

**ರುಂಹರಿ** (ನಾ). ಭೂಮಿ ; ಇಳೆ : ಭಟಾವಳಿಯೊ ತ್ರಿಜಗದಳಿವಿನ ಯಮಪ್ರಸುಭಟಪ್ರಜವೊ ಪೊಗಳುವೆನೇನ ರುಂಹರಿ ರುಜೆಗೆ ಸಂದಳು ಧರಿಸಲಾಜದೆ ವೈರಿವಾಹಿನಿಯ (ಕುರಂಂ. ೬-೦೭-೦೨) ; ಹರಿಯಕ್ಷವಾಹಿನಿ ಹಂಸಸ್ವರೂಪೆ ರುಂಹರಿಯು ಭಾರವನು ಭೇದಿಸು (ರೇಶಂಕ್ರ. ೩೪). [ ? ]

**ರುಕ್‌ಸತು** (ನಾ). ಪರವಾನಿಗೆ ; ನಿರೂಪ : ಮಾವಿನಿಸಾಹೇಬರು . . . ಕೊಡಗಿನ ಮಹಾರಾಜರವರ ಸಂಗಡ ರುಕ್‌ಸತು ತೆಗೆದುಕೊಂಡು ತಲಚೇರಿಗೆ ಹೋದರು (ಕಾಕೇಂದ್ರ. ೦೦೦).

[←ಅರ. ರುಖ್ಸತ್ ; ಹಿಂ. ಮರಾ. ರುಖಸತ್]

**ರುಕುಮತೋರಣ** (ನಾ). ಚಿನ್ನದ ತೋರಣ ; ಸುವರ್ಣತೋರಣ : ಆ ರುಕುಮತೋರಣದ ಕಾಂತಿಗಳಿಂದ ರಂಜಿಸುವ ದ್ವಾರಕಾಪುರವರದ ಪೊಕ್ಕನುದಾರವೇಂಕಟನಾಥ ಕೃಷ್ಣನು (ಕಮ್ಮಾ. ೬-೦೩೨).

[<ಸಂ. ರುಕ್ಮತೋರಣ]

**ರುಕ್ಕು₁** 'ರಿಚೆ' ನೋ.

**ರುಕ್ಕು₂** (ನಾ). ೧. ಕಾಂತಿ ; ಪ್ರಭೆ : ಆ ನತಭೂಮಿಪಾಳಿಸಂಕುಳಮಣಿಮೌಳಿರುಕ್ಕುಪ್ರಸರಪೂಜಿತಪಾದಪಯೋಜಯುಗ್ಮಂ (ಕಾಸಿಕ. ೦೫; ಸು. 1370). ೨. ಕದಿರು ; ಕಿರಣ : "ರೋಚಿಃ . . . ರುಕ್ . . . ಗೌ — ಈ ೩೨ ರಶ್ಮಿಗಳ ಪೆಸರ್" (ಹಲಾಯು. ೭-೩೮). [<ಸಂ. ರುಚ್]

**ರುಕ್ಕು₃** (ನಾ). ರೋಗ ; ಜಡ್ಡು : "ರೋಗಃ, ರುಕ್ . . . ರುಜಾ — ಈ ೧೨ ವ್ಯಾಧಿ" (ಹಲಾಯು. ೯೬-೯೯೬). [<ಸಂ. ರುಜ್]

**ರುಕ್ಚಕ್ರ** (ನಾ). ಕಿರಣಗಳ ಸಮೂಹ : ಈತನೆ ಶಕ್ರನೆನಲ್ ಪಿಂಗದಂಗದುವಜ್ರದ ರುಕ್ಚಕ್ರಂ ದೆಸೆಯಂ ದಳ್ಪಿಸೆ ಚಕ್ರಮನಾಕ್ರಮಿಸಲೆಂದು ತಟಿಸಂದಿರ್ದಂ (ಶಂರಾಮಾ. ೦೯-೦೮೦). [ಸಂ.]

**ರುಕ್ಮ** (ಗು). ೧. ಹೊಳೆಯುವ ; ಪ್ರಕಾಶಿಸುವ. (ನಾ). ೨. ಚಿನ್ನ ; ಬಂಗಾರ : "ರೈ ರುಕ್ಮಮಷ್ಟಾಪದಂ . . . ಸ್ವರ್ಣಮೆನೆ ಪೊನ್ನಿಂಗೆ ನಾಮಮಮಕ್ಕುಂ" (ಮಂಗರಾ. ೩೦-೯) ; ರುಕ್ಮರಶ್ಮಿನೆಯುಂ ದೇಹದ ಕಾಂತಿಯೊಳ್ ನಿಟಿಸಿದರ್ (ಎಕ. VIII, ಸೊರಬ. ೦೯೬-೦೩ ; 1388). ೩. ಕಬ್ಬಿಣ. ೪. ಒಂದು ಬಗೆಯ ಕಾಡಿಗೆ. [ಸಂ.]

**ರುಕ್ಮಕ** (ನಾ). ಒಂದು ಬಗೆಯ ಪಕ್ಷಿ : ಆ ವನಂಗಳೊಳು ಶುಕ . . . ರುಕ್ಮಕ . . . ವಾಸಕ ಮೊದಲಾದ ಚಿತ್ರರೂಪಶಕ್ತಿಗಳುಳ್ಳ ಪಕ್ಷಿಕುಲಂಗಳುಂ (ಶಿವತ. ೨೦೨). [ಸಂ.]

**ರುಕ್ಮದಾನ** (ನಾ). ಚಿನ್ನವನ್ನು ದಾನಮಾಡುವುದು ; ಸುವರ್ಣದಾನ : ರುಕ್ಮಭೂಷಿತಗಾತ್ರನಾಶ್ರಿತರುಕ್ಮದಾನವಿನೋದಿಯಿಂತಾ ರುಕ್ಮವರ್ಣಾಂಬರನ ವಂಶವದಾಯ್ತು ವಿಖ್ಯಾತ (ಶಿಭಾಗ. ೦೦-೯೭-೩೩). [ಸಂ.]

**ರುಕ್ಮಾಂಗದ** (ನಾ). ೧. ಚಿನ್ನದ ತೋಳುಬಂದಿ : ಈತಂಗೆ . . . ಸೊಬಗುಸಿರಿಯ ನಳಿದೋಳ್ಗೆ ರುಕ್ಮಾಂಗದಮೆನೆ ಸಲ್ವ ರುಕ್ಮಾಂಗದನೆಂಬ ಸೀಮಂತಪುತ್ರನುಂಟು (ರಾಜಾಕ್ಯ. ೦೩೨-೨೦). ೨. ಒಬ್ಬ ರಾಜನ ಹೆಸರು. ೧, ೨ : ಈತಂಗೆ ರುಕ್ಮಾಂಗದನೆಂತೆಂತು ಹರಿಭಕ್ತಿಗಿಂಬಾಗಿ . . . ಸಲ್ವ ರುಕ್ಮಾಂಗದನೆಂಬ ಸೀಮಂತಪುತ್ರನುಂಟು (ರಾಜಾಕ್ಯ. ೦೩೨-೨೦). [ಸಂ.]

**ರುಕ್ಷ₁** (ನಾ). ೧. ಕರಡಿ : ರು[ಕಾಕಾಂ. ಖು]ಕ್ಷ ದಂತಿ ತರಕ್ಷು ಫಣಿ ಹರಿಯಕ್ಷ . . . ರಾಕ್ಷಸರೂಕ್ಷಭೀತಿಗಳು ಆ ಕ್ಷಣವಳಿದು (ಶಿಕೃ. ೬೦-೯೩) ; ಪಕ್ಷಿಗಳ ನುಣ್ಣಚಿ ಸೀದುದರಣ್ಯದಲ್ಲಿ ಸಂಗಡಿಸಿದ ರುಕ್ಷರೋಮತತಿ ಬೆಂದುದು ಬೇಸಗೆಯುಗ್ರಮೆಂತುಟೋ (ರಾಜಶೇ. ೫-೯೭). ೨. ನಕ್ಷತ್ರ ; ತಾರೆ : ಪುನರ್ವಸುರುಕ್ಷಂ (ಬರ್ಗವಾ. ೦೬-೯೭) ; ಮರುನ್ಮಾರ್ಗದಂತಿರೆ ಚಂಚತ್ಖಗರಾಜರುಕ್ಷಯುತಂ . . . ಗಹನಂ (ರಾಜಶೇ. ೫-೩೭).

[ < ಸಂ. ಋಕ್ಷ ]

**ರುಕ್ಷ₂** (ಗು). ೧. ಒರಟಾದ ; ಕಠಿಣವಾದ. ೨. ತೀಕ್ಷ್ಣರುಚಿಯ. (ನಾ). ೩. ಕಾಠಿಣ್ಯ ; ಒರಟು : ಮುಂದೇನು ಬೇಕು ? ಶ್ರೀಕಾಂತ ರುಕ್ಷವಾಗಿ ನುಡಿದ (ಮುಕ್ತ. ೦೯೨). ೪. ನಯವಿಲ್ಲದುದು ; ದೊರಗು : ಶರೀರವೆಲ್ಲ ಪರೆ ಬಂದಂತೆ ರುಕ್ಷವಾಗಿಯೂ ಮತ್ತು ಕಾಂತಿಹೀನವಾಗಿಯೂ ಕಾಣುವುದು (ಶ್ರಿಕೃಷ್ಣ. ೨೬). [ಸಂ.]

**ರುಖೋತ, ರುಖ್ವೋತ** (ನಾ). (ಉಕ) ಮದುವೆಯ ಹಿಂದಿನ ದಿನ ಹೆಣ್ಣಿನ ಕಡೆಯವರು ಗಂಡಿನ ಕಡೆಯವರಿಗೆ ಏರ್ಪಡಿಸುವ ಔತಣ ಮತ್ತು ಆ ಸಮಾರಂಭ : ಮೊದಲು ಎದುರುಗೊಳ್ಳುವುದು, ಆಮೇಲೆ ರುಖೋತವನ್ನು ಹಾಕುವುದೆಂದು ಬಹಳ ಚರ್ಚೆಯಾಗಿ ನಿರ್ಣಯವಾಯಿತು (ಕಶಂಕ. ೯). **ರುಖ್ವೋತ** : ರಾತ್ರಿ ಸುಳ್ಳೌತಣ ಮುಗಿದು ರುಖ್ವೋತ ಆಗೂ ತನಕಾ ಅಂದರ ಎರಡು ಘಂಟೆ ಆತು (ವೈಶಿ. ೯) ; ಹಿಂದಿನ ರಾತ್ರಿ, ಬೀಗರು ಬಂದು ಎದುರುಗೊಂಡು ಸುಳ್ಳೌತಣ ರುಖ್ವೋತ ಮುಗಿಯುವುದಕ್ಕೆ ರಾತ್ರಿ ಮೂರು ಹೊಡೆದುಹೋಗಿತ್ತು (ಸಾಭಿಲಾ. ೯೯).

[←ಮರಾ. ರುಖತ್, ರುಖವತ್]

**ರುಖ್ವೋತ** 'ರುಖೋತ' ನೋ.

**ರುಗ್ಣ** (ಗು). ೧. ಮುರಿದ ; ಒಡೆದ. ೨. ಬಾಯಿಲೆಯಿಂದ ಕೂಡಿದ ; ರೋಗದ : ಅವನು ನನ್ನ ರುಗ್ಣ ಶಾಲೆಯ ಸೇವೆಯಲ್ಲಿ ಬಹಳ ಸಹಾಯ ಮಾಡಿದ (ಭಾರತಿ. ೨೬). (ನಾ). ೩. ಕೆಟ್ಟುದು; ಹಾಳಾದುದು : "ಭಗ್ನಮೆನೆ ರುಗ್ಣಮೆನೆ . . . ಭಿನ್ನಮೆನೆ ಕಿಟ್ಟದು" (ಮಂಗರಾ. ೦೩೨-೨೬). ೪. ಮುರಿದುಹೋದುದು : "ರುಗ್ಣಂ, ಭಗ್ನಂ—೨ ಮುರಿದು ಹೋದದ್ದು" (ಸಿದ್ಧಾಂತಿ. ೪೯೭). ೫. ರೋಗಿ. [ಸಂ.]

**ರುಗ್ಣಗೃಹ** (ನಾ). ರೋಗಿಗಳಿಗೆ ಚಿಕಿತ್ಸೆ ಮಾಡುವ ಮನೆ ; ಚಿಕಿತ್ಸಾಲಯ ; ಆಸ್ಪತ್ರೆ : ರುಗ್ಣಗೃಹದ ಅವರ ಸಭೆಯಲ್ಲಿ . . . ಆನಂದ ಪ್ರವಾಹಕ್ಕೆ ತುಂಬ ತಡೆಯುಂಟಾಗುತ್ತಿತ್ತು (ಐಕ್ಯಕ. ೩೯೨). [ಸಂ.]

**ರುಗ್ಣತೆ** (ನಾ). ರೋಗ ; ಜಡ್ಡು ; ಬಾಯಿಲೆ : ಸಾಮಾಜಿಕ ರುಗ್ಣತೆಯನ್ನು ಕಳೆಯುವ ಇವರ ಹಾಸ್ಯ . . . ಬೆಳಗುವಂತಿರಲಿ (ಗರುಡಾ. ೭ ಮುನ್ನುಡಿ).

[ಸಂ. ರುಗ್ಣತಾ]

**ರುಗ್ಣಶಯ್ಯೆ** (ನಾ). ರೋಗದಿಂದ ಹಾಸುಗೆ ಹಿಡಿದಿರುವ ಸ್ಥಿತಿ : ಅಂತ್ಯದಲ್ಲಿ, ರುಗ್ಣಶಯ್ಯೆ ಇಲ್ಲದಿರುವುದು ಮಾನವಜನ್ಮಕ್ಕೆ ಒಂದು ಪೂರ್ವ ಪುಣ್ಯ (**ಜಾಂಕಲಾ. ೧೬೦**). [ಸಂ. ರುಗ್ಣಶಯ್ಯಾ]

**ರುಗ್ಣಾಲಯ** (ನಾ). =ರುಗ್ಣಗೃಹ : ರೋಗಿಗಳ ರುಗ್ಣಾಲಯದಲ್ಲಿ ತೋರಿ ಬರುವ ಶಾಂತತೆ ಅಲ್ಲಿ ಪಸರಿಸಿದ್ದಿತು (**ಕಾಂಚಿಪ. ೬೬**); ಅವಳು ರುಗ್ಣಾಲಯಕ್ಕೆ ಹಿಂದಿರುಗಿದಾಗ ದಾದಿಯ ಆಜ್ಞೆ ಕಾದಿತ್ತು (**ಶೃವರು. ೩೨೩**). [ಸಂ.]

**ರುಗ್ಣಾವಸ್ಥೆ** (ನಾ). ರೋಗದಿಂದ ನರಳುತ್ತಿರುವ ಸ್ಥಿತಿ : ರಾಜರೇ ಖುದ್ದಾಗಿ ಹೋಗಿ ರುಗ್ಣಾವಸ್ಥೆಯಲ್ಲಿದ್ದ ಮಲ್ಲಿಗಮ್ಮನನ್ನು ಕರೆಸಿಕೊಂಡು ಬಂದ ಸುದ್ದಿಯು ಅರಮನೆಯಲ್ಲಿ ಹರಡದೇ ಹೋಗಲಿಲ್ಲ (**ಶ್ರೀರಾಯ. ೧೦೩**); ಮತ್ಸರಾಗ್ನಿ ಆ ರುಗ್ಣಾವಸ್ಥೆಯಲ್ಲಿಯೂ ಹೊಗೆಯಾಡತೊಡಗಿತ್ತು (**ಮರಿಮ. ೬೮೭**). [ಸಂ. ರುಗ್ಣಾವಸ್ಥಾ]

**ರುಗ್ದಾಹ** (ನಾ). ಹದಿಮೂರು ಬಗೆಯ ಸನ್ನಿಪಾತಗಳಲ್ಲಿ ಒಂದು ; ಎಡೆಬಿಡದೆ ಬಾಯಾರುವ ಒಂದು ಬಗೆಯ ಸನ್ನಿಪಾತ : ತ್ರಯೋದಶ ಸನ್ನಿಪಾತವಾವುದೆಂದೊಡೆ :— ಸಂಧಿಗ, ಅಂತಕ, ರುಗ್ದಾ[**ಪಾಠಾಂ.** ಗ್ರಾ]ಹ, ಚಿತ್ತವಿಭ್ರಮ . . . ಪ್ರಳಾಪಗಳೆಂದು ಪದಿಮೂರು ತೆರನು (**ಕಳವೈ. ೧೩೦**). [ಸಂ.]

**ರುಗ್ವೇದ** (ನಾ). ಚತುರ್ವೇದಗಳಲ್ಲಿ ಒಂದು ; ಋಗ್ವೇದ : ' ರುಗ್ವೇದದೆರೆ' ಪರಾ. [< ಸಂ. ಋಗ್ವೇದ]

**ರುಗ್ವೇದದೆರೆ** (ನಾ). ಋಗ್ವೇದದ ಬೋಧನೆಗೆಂದು ಎತ್ತುತ್ತಿದ್ದ ತೆರಿಗೆ ; ಭಟ್ಟವೃತ್ತಿ : ವೇದಾಂತದೆರೆ ಮತ್ತ ೧೫ ಹರಳ್ಮತ್ತರು ೧೦ × × ರುಗ್ವೇದದೆರೆ ಮತ್ತ ೧೫ (**ಸೌಇ. XX, ೩೦೦-೦೭ ; 12ನೆಯ ಶತ**). [ರುಗ್ವೇದ + ತೆರೆ$_2$ (< ತೆಱೆ$_3$)]

**ರುಚ** (ನಾ). ೧. ಹೊಳಪು ; ಪ್ರಕಾಶ. ೨. ಕಿರಣ ; ರಶ್ಮಿ : "ರುಚಿ ದ್ಯುತಿ ಪ್ರಗ್ರಹಂ ದೀಪ್ತಿ ಘೃಷ್ಟಿ ರಶ್ಮಿ ರುಚಂ ಕಿರಣಂ" (**ಮಂಗರಾ. ೧೦-೩**). [ಸಂ. ರುಚ್, ರುಚಾ]

**ರುಚಕ** (ಗು). ೧. ಹಿತವಾದ ; ಮನಸ್ಸಿಗೆ ಒಗ್ಗುವ. ೨. ಜೀರ್ಣಕಾರಿಯಾದ ; ಜಠರೋತ್ತೇಜಕವಾದ. ೩. ತೀಕ್ಷ್ಣರುಚಿಯುಳ್ಳ ; ಕಟುರುಚಿಯ. ೪. ಮಂಗಳಕರವಾದ. (ನಾ). ೫. ಮಂಗಳದ್ರವ್ಯ. ೬. ಒಂದು ಬಗೆಯ ಉಪ್ಪು ; ಸೌವರ್ಚಲ : "ಸೌವರ್ಚಳಃ, ರುಚಕಕೆ —ಈ ೨ ಸೌವರ್ಚಳಂ" (**ಹಲಾಯು. ೧೧೧-೪೭೩**). ೭. ಒಂದು ಬಗೆಯ ಚಿನ್ನದ ಕಂಠಾಭರಣ. ೮. ಮಾಲೆ ; ಹಾರ. ೯. ಹಲ್ಲು ; ದಂತ. ೧೦. ಕುದುರೆಯ ಕುತ್ತಿಗೆಯ ಮೇಲಿನ ಕೂದಲು ; ಆಯಾಲು. ೧೧. ಉತ್ತರದ ಕಡೆ ಮಾತ್ರ ಮುಚ್ಚಿ, ಉಳಿದ ಮೂರು ಕಡೆಗಳಲ್ಲಿ ತೆರೆದ ಆವರಣಗಳಿರುವ ಒಂದು ಬಗೆಯ ಕಟ್ಟಡ. ೧೨. ಅಮೃತ ; ಸುಧೆ. ೧೩. ಒಂದು ಬಗೆಯ ಹಣ್ಣಿನ ಮರ ; ಮಾದಲ; ಮಾತುಲುಂಗ. ೧೪. ಬಿಡಲಿದ ವೃಷಭ. ೧೫. ನಿರ್ದಿಷ್ಟನಕ್ಷತ್ರರಾಶಿಯಲ್ಲಿ ಹುಟ್ಟಿದ, ಅಸಾಧಾರಣವಾದ ಐದುಗಣ್ಯಪುರುಷವರ್ಗಗಳಲ್ಲಿ ಒಂದು: ವರಾಹಮಿಹಿರನು ಮನುಷ್ಯರನ್ನು ಶರೀರದ ಅಳತೆ ಆಕಾರದ ಮೇಲೆ, ಐದು ಜಾತಿಗಳನ್ನಾಗಿ ವಿಂಗಡಿಸುತ್ತಾನೆ. ಹಂಸ, ಶಶ, ರುಚಕ, ಭದ್ರ, ಮಾಲವ್ಯ ಎಂಬುವೇ ಈ ಐದು ಜಾತಿಗಳು (**ಭಾರತ. ೫೦೭**). ೧೬. ಕೊರಳು ; ಕತ್ತು : "ಭೂಧರದಶನಾಮೃತಂ ಲವಣಭದ್ರ ಶಿರೋಧರ ಮಾತುಳಂಗವಾಭರಣಗಳೆಂಬಿವೈದೆ ರುಚ[**ಪಾಠಾಂ.** ಚಿ]ಕಾಹ್ವಯಂ" (**ನಾನಾರ. ೪೨**). ೧೭. [ಜೈನ] ಸುಮೇರುಪರ್ವತದ ಬಳಿ ಇರುವ ಒಂದು ಪರ್ವತ : ಪ್ರಾಗ್ದಿಗ್ದೇಶದ ಮೋಘಸುಪ್ರಬುದ್ಧ ರುಂದ್ರವಿಮಳರುಚಕ . . . ಸುಪ್ರತಿಷ್ಠವೆಂಬ ಕೂಟಾಷ್ಟಕಂಗಳೊಳ್ (**ಆದಿಪು. ೭-೩೮**) ; ತ್ರಿಕೂಟ . . . ಪತಂಗ ರುಚಕ . . . ನಿಷಧವೆಂಬೈದು ಗಿರಿಗಳ್ (**೬ವೇಳ. ೨೦೪**). ೧೮. ಅರುವತ್ತುಮೂರು ಇಂದ್ರಕಗಳಲ್ಲಿ ಒಂದು : ೧. ಋತು . . . ೧೫ ರುಚಕಂ . . . ೬೩ ಸರ್ವಾರ್ಥಸಿದ್ಧಿ ಎಂಬಿವು ಆನುಕ್ರಮದಿಂ ಅಱುವತ್ತುಮೂಱು ಇಂದ್ರಕಂಗಳ ಪೆಸರ್ಗಳ್ (**ಕತ್ರೈತ್ರ. ೨೦೩**). [ಸಂ.]

**ರುಚಕಾಯೋಗ** (ನಾ). [ಜ್ಯೋತಿ] ಶುಭವನ್ನುಂಟುಮಾಡುವ ಒಂದು ಯೋಗ, —ದೆಸೆ : ಕುಜನ ಚತುಃಷ್ಕೇಂದ್ರಂಗಳಲ್ಲಿ ಶುಭಗ್ರಹರಿರಲು ರುಚಕಾಯೋಗಂ ಯಿದರಿಂದಂ ಅಷ್ಟಾದಶವಿಧ ಧಾನ್ಯಲಾಭಮಕ್ಕು (**ಆಯುಬೀ. ೨೩-೧೦**). [ಸಂ.]

**ರುಚಿ** (ನಾ). ೧. ಕಾಂತಿ ; ಪ್ರಕಾಶ ; ತೇಜಸ್ಸು : ಸಂಧ್ಯಾಸಮಯಾತ್ತ ರಕ್ತರುಚಿ ಪಿಂಗೆ ಬಟಿಕ್ಕುದಯಾದ್ರಿಯೊಳ್ ಪದಂಗಾಸಿದ ಪೊನ ಪುಂಜಮವೊಲಿರ್ದುದು ಕಣ್ಗೆ ಹಿಮಾಂಶುಮಂಡಲಂ (**ಶಂಕರಾ. ೩-೬೦**); ಸುಧಾಂಶುರುಚಿಯಂತೆ . . . ಶಂಕರಂ . . . ಮೆಱೆವೃತಿರ್ದನು ದಿವ್ಯತೇಜದಲಿ (**ಶ್ರಕುಂರ. ೨-೦೩**). ' ರುಚಿವೀಱು ' ಪರಾ. ೨. ಕಿರಣ ; ರಶ್ಮಿ : "ರೋಚಿಃ . . . ಕಿರಣಃ, ರುಚಿಃ . . . ಗೌಃ — ಈ ೩೨ ರಶ್ಮಿಗಳ ಪೆಸರ್" (**ಹಲಾಯು. ೭-೩೬**). ೩. ಅಪೇಕ್ಷೆ ; ಬಯಕೆ : "ಇಚ್ಛೆ . . . ರುಚಿ ಕಾಮ ವಾಂಛೆ ಈಪ್ಸಿತವೆನಲು ಬಯಕೆ" (**ಮಂಗರಾ. ೧೨೬-೧೦**); ಸನ್ಮಾರ್ಗರುಚಿಪ್ರಸ್ಫೂರ್ತಿ ಚೆಲ್ವಾಗಿರೆ ಕರಮುದಯಂಗೊಂಬ ಬಾಲಾರ್ಕನಂ ಮದ್ವರಚೇತಃಪದ್ಮಿನಿಗಳ್ ಬಯಸಿದವೃದು (**ರಾಜಶೇ. ೩-೭೩**); ಕವರ್ಗಗಳಲ್ಲಿ ರುಚಿ ಹುಟ್ಟಿಸಬೇಕಾಗಿದೆ (**ಕೃಷ್ಣಾಧೀ. ೩೫**). ೪. ಸವಿ ; ಸ್ವಾದ : ತೆಂಗಿನ ತಿರುಳಂ ಪಿಪ್ಪಲಿಯ ನೀರೊಳರೆದದಸಿಂಬಾಗಿರೆ ಪಿಡಿದು ಕಳೆಯೆ ದುಗ್ಧಸ್ವರೂಪಮಂ ತಳೆದು ವಿಮಳರುಚಿಯಾಗಿರ್ಕುಂ (**ರೋಕೋಪ. ೬-೪೭**); ವಾಸಂತಿಯ ಮನಸ್ಸಿಗೆ ಸೊಗಸಿಲ್ಲ ; ಊಟದಲ್ಲಿ ರುಚಿಯಿಲ್ಲ (**ಶೀವರೋದ. ೧೧೧**) ; ತಾಯಿಗಿಂತ ಬಂಧುವಿಲ್ಲ, ಉಪ್ಪಿಗಿಂತ ರುಚಿಯಿಲ್ಲ (**ಗಾದೆ**). ೫. (ವಿಶೇಷ ಸಂದರ್ಭಗಳಲ್ಲಿ) ಉಪ್ಪು : ಸಾರಿಗೆ ರುಚಿ ಸಾಲದು (**ಕೂಡು**). ೬. ಒಂದು ಬಗೆಯ ಹುಲ್ಲು : "ಕಹಿಹುಲ್ಲು ರುಚಿಯುಕ್ಕು" (**ಮಂಗರಾ. ೩೩-೬**). ೭. ಒಂದು ಬಗೆಯ ಸಸ್ಯ : "ಸೊಂಡೆ ರುಚಿ ಚಿತ್ರರಟೆ ಸಿಂಹಿಕಾಖ್ಯಂ" (**ಮಂಗರಾ. ೩೯-೨೮**).

**ರುಚಿಯಾಗು** = ೧. ಕಾಂತಿಯಿಂದ ಕೂಡಿರು ; ರಂಗಾಗು : ಸುರಧನು ಪಾಟಳರುಚಿಯಾಗಿರೆ ಸಮರಂ ಪೀತವರ್ಣಮಾಗಿರೆ ವೈಶ್ವಾನರಭಯಂ (**ರೋಕೋಪ. ೪-೨೫**). ೨. ಸ್ವಾದುವಾಗು ; ಹಿತವಾಗು : ಕರಿದ ಆಹಾರ ರುಚಿಯಾಗಿರುತ್ತದೆ (**ಆಯುಶ್. ೬೯**). [ಸಂ.]

**ರುಚಿಕಟ್ಟು$_1$** (ಕ್ರಿ). ರುಚಿಯಾಗು ; ಸವಿಯಾಗು : ಸಾರಿಗೆ ಇಂಗಿನ ಒಗ್ಗರಣೆ ಹಾಕಿದರೆ ಅಡಿಗೆ ರುಚಿಕಟ್ಟುತ್ತದೆ (**ರೂಢಿ**). [ರುಚಿ + ಕಟ್ಟು$_1$]

**ರುಚಿಕಟ್ಟು$_2$** (ನಾ). ರುಚಿಯಾದುದು ; ಸವಿಯಾದುದು : ಬಾಳೆಯ ಹೂ ಹಾಗೂ ದಿಂಡಿನ ಪಲ್ಲೆ ರುಚಿಕಟ್ಟು (**ಸುಕ್ತಮು. ೬೦**) : ಬಹಾಳ ಬಹಾಳ ರುಚಿಕಟ್ಟು ! ಅಮೃತದ ಕೆನೆ ಇರ್ತದಂತಲ್ಲ, ಅದು ಇದರ ಮುಂದೆ ಸಕ್ಕಟ್ಟೆ ಸಪ್ಪೆ ! (**ಬೆಳುಮ. ೨೦೯**). [< ರುಚಿಕಟ್ಟು$_1$]

**ರುಚಿಕತ್ರಿ** (ನಾ). ಒಂದು ಬಗೆಯ ಸಸ್ಯ : ಆರದ್ರಿ, ದೊಡ್ಡನಾತದ ಗಿಡ, ಇಬಿನ್ನೆ, ರುಚಿಕತ್ರಿ (**ವೈಶಿಗ. ೧೫-೨೬೩**). [?]

**ರುಚಿಕರ** (ಗು). ೧. ಸ್ವಾದುವಾಗಿರುವ; ರುಚಿಕಟ್ಟಾದ. (ನಾ). ೨. ರುಚಿಕಟ್ಟಾದುದು ; ಸ್ವಾದುವಾದುದು : ತಿಳಲು ಬಲು ರುಚಿಕರವು (**ಮುಂಬಯ. ೪-೬೦**); ಅಟ್ಟ ಆಹಾರ ರುಚಿಕರವಾಗಿರುವುದು ಮಾತ್ರವಲ್ಲದೆ ಜೀರ್ಣಕಾರಿಯೂ ಆಗಿದೆ (**ಆಯುಶ್. ೯೯**). [ಸಂ.]

**ರುಚಿಕಾರ** (ನಾ). ರುಚಿಯನ್ನು ಕೊಡುವ ವಸ್ತು,—ಪದಾರ್ಥ : ಅನ್ನಾದಿ ರುಚಿಕಾರದೊಳು ಸಾಧನಾಖ್ಯಂ (**ಮಂಗರಾ. ೧೯೭-೩೭**). [ಸಂ.]

**ರುಚಿಕೆಡು** ' ರುಚಿಗೆಡು ' ನೋ.

**ರುಚಿಕೊಡು** ' ರುಚಿಗೊಡು ' ನೋ.

**ರುಚಿಗೆಡು**, ರುಚಿಕೆಡು (ಕ್ರಿ). ೧. ಸವಿಯಿಲ್ಲದಂತಾಗು; ಅರುಚಿಯಾಗು: ರುಚಿಗೆಡುದು . . . ಅಮಳ ಸುಭಾಷಿತರಸವು (ಇಂಶಾಕ. ೨೨೨-೧೦೦). ೨. ಕಾಂತಿಗುಂದು ; ತೇಜೋಹೀನವಾಗು : ಭವದಾನನಕ್ಕೆ ಸೋಲ್ತಾತ್ಮ ವಿಲಾಸಮನುಟಿಂದ ತೆಱದೆ ರುಚಿಗೆಟ್ಟು ದಿಗಂತವಿಲಂಬಿಬಿಂಬನಂಬುರುಹ ವೈರದಿಂದುಡುಪನುಡುಪನಾದಂತಾದು (ಶಾಂತಿಪು. ೩-೯೮). **ರುಚಿಕೆಡು** : ೧. ಈ ರೋಗದಿಂದಾಗಿ ಜೀರ್ಣಶಕ್ತಿಯ ಮೇಲೆ ಪರಿಣಾಮವಾಗುವುದು ; ರುಚಿಕೆಡುವುದು (ಅಡುಸ್. ೬೩). [ರುಚಿ + ಕೆಡು$_1$]

**ರುಚಿಗೆಯ್** (ಕ್ರಿ). ಸವಿನೋಡು ; ಆಸ್ವಾದಿಸು : ಉಚಿತವಱಿದು ಮಿಂಡಿವೆಣ್ಗಳು ನವರತ್ನಖಚಿತಭೂಷಣಹಸ್ತದಲಿ ರುಚಿವೆತ್ತು ಬಡಿಸಲ್ಕೆ ಶ್ರೀಕೃಷ್ಣರಾಯನು ರುಚಿಗೆಯ್ದು ಮೊಗವನೀಕ್ಷಿಸಿದ (ಮೋಹತ. ೦೯-೦೯).
[ರುಚಿ + ಕೆಯ್$_1$]

**ರುಚಿಗೊಡು**, ರುಚಿಕೊಡು (ಕ್ರಿ). ೧. ಸವಿಯಾಗು; ರುಚಿಯಾಗು : ಎಲ್ಲಿ ಕಡಲಿನ ಉಪ್ಪು ಎಲ್ಲಿ ಕಾಡಿನ ನೆಲ್ಲಿ ಸವಿಕೂಟ ಕೂಡಿಬಂದಲ್ಲಿ ನನ್ನಲ್ಲಿ ರುಚಿಗೊಡುವ ಕಂದ ಬಂದಿಲ್ಲಿ (ಗಂ. ೦೦೬-೦೨). **ರುಚಿಕೊಡು** : ೨. ರುಚಿಯೊದಗಿಸು : ಊಟಕ್ಕೆ ಉಪ್ಪಿನಕಾಯಿ ರುಚಿಕೊಡುತ್ತದೆ (ರೂಢಿ).
[ರುಚಿ + ಕೊಡು$_1$]

**ರುಚಿಗೊಳಿಸು** (ಕ್ರಿ). ಸವಿಯಾಗಿಸು ; ರುಚಿಯಾಗಿಸು : ಸ್ವಾತಂತ್ರ್ಯ ದುಪ್ಪು ಸಾಗರದವರೆಗೆ ಮುಟ್ಟಿಸುವ ಪಂಥ ತಳೆದ. ಅಂಥ ಉಪ್ಪಿನಲೆ ಜೀವ ರುಚಿಗೊಳಿಸಿ ಸಪ್ಪೆತನವ ಕಳೆದ (ಸೂರ್ಯಕಾ. ೦೩-೦೨).
[ರುಚಿ + ಕೊಳ್$_1$ + —ಇಸು$_3$]

**ರುಚಿತೋರು** 'ರುಚಿದೋಱು' ನೋ.

**ರುಚಿತ್ವ** (ನಾ). ೧. ರುಚಿಯಾಗಿರುವಿಕೆ ; ಸವಿ. ೨. ಕಾಂತಿಯಿಂದ ಕೂಡಿರುವುದು : ದ್ವಿಜಮುಖ್ಯವೃತ್ತಿ ಕೃಷ್ಣರುಚಿತ್ವಂ ಪೆಱದಿರೆ ಪುರೋಹಿತ ಬ್ರಾಹ್ಮಣನೆನಿಸಿದುದತನುನೃಪತಿಗೀ ಪರಪುಷ್ಟಂ (ಕಂದ್ರಪು. ೭-೬೯). [ಸಂ.]

**ರುಚಿದೋಱು**, ರುಚಿತೋರು (ಕ್ರಿ). ೧. ಹೊಳಪನ್ನು ತೋರು ; ಕಾಂತಿ ಬೀರು : ಕುವಲಯನೇತ್ರ ದಾಳಿಂಬದ ಬಿತ್ತಿನಂತೆಸೆವ ಕೆಂಬಲ್ಲ ರುಚಿದೋಱೆ ಬಿನ್ನವಿಸಿದಳು ಪೀತಾಂಬರಧರಗೆ ( ಮೋಹತ. ೦೩-೨೯ ). **ರುಚಿತೋರು** : ೨. ಸವಿಯಾಗು; ರುಚಿಕಾಣು : ರುಚಿತೋರದ ಊಟ ಉಂಡರೆಷ್ಟು ಬಿಟ್ಟರೆಷ್ಟು ? (ರೂಢಿ). [ರುಚಿ + ತೋಱು]

**ರುಚಿನೋಡು** (ಕ್ರಿ). ಪದಾರ್ಥದ ಸವಿಯು ಸರಿಯಾಗಿದೆಯೋ ಇಲ್ಲವೋ ಎಂದು ಪರೀಕ್ಷಿಸಲು ಸ್ವಲ್ಪ ಭಾಗವನ್ನು ತಿಂದು ನೋಡು : ಉತ್ತಮವಾದ ಫಲಗಳನ್ನು ನಿಮಗೋಸ್ಕರ ರುಚಿನೋಡಿ ಇರಿಸಿದ್ದೇನೆ (ಶೀತಾಸಂ. XV, ೨೧). [ರುಚಿ + ನೋಡು]

**ರುಚಿರ$_1$** (ನಾ). [ಛಂದ] ಒಂದು ವೃತ್ತದ ಹೆಸರು : ಅತಿಜಗತಿ ಛಂದಸ್ಸಿನಲ್ಲಿ ಹದಿಮೂರಕ್ಷರಪಾದವಾಗಿ ಹುಟ್ಟುವ ವೃತ್ತಗಳಲ್ಲಿ ಒಂದು : ದಿನೇಶ ಚಂದ್ರ ಪವನ ಭಾನು ರುದ್ರರೊಂದಿನಿಲ್ವುದುಂ . . . ರುಚಿರಮಿದಾಗಮೋಕ್ತಿಯಿಂ (ಛಂದೋಂಬು. ೨-೦೩೯). [ಸಂ. ರುಚಿರಾ]

**ರುಚಿರ$_2$** (ಗು). ೧. ಹೊಳೆಯುವ ; ಪ್ರಕಾಶಮಾನವಾದ : ಯತಿತತಿ ಚಕ್ರವರ್ತಿರುಚಿರಾಮಳಮೂರ್ತಿ . . . ಮಾಳ್ಕೆಮಗಿಷ್ಟಸಿದ್ಧಿಯಂ (ರಾಜಶೇ. ೦-೬). ೨. ಸುಂದರವಾದ ; ಚೆಲುವಾದ : ಆ ರುಚಿರವನಧಿಪರಿಯಂತ . . . ಒಪ್ಪುವುದು ಚಾರುತರಲಾಳದೇಶು (ಹತಾಶ. ೦-೩೯). ೩. ರುಚಿಯಾದ ; ಸವಿಯಾದ : ಪ್ರಿಯಕುಶಲಪೂರ್ವಕೋಚಿತ ನಮವಿನಯೋದಾರರುಚಿರವಚನಪ್ರಾಯಂ ಪ್ರಿಯತರಮೆಂಬುದು (ಕಬರಾ. ೩-೨೦೩). ೪. ಜೀರ್ಣಕಾರಿಯಾದ; ಜಠರೋತ್ತೇಜಕವಾದ. (ನಾ). ೫. ಸೌಂದರ್ಯ ; ಚೆಲುವು : "ಪ್ರಾಗ್ರ್ಯಂ . . . ಮನೋಹರಂ, ರುಚಿರಂ . . . ಪೇಶಲಂ —ಈ ೨೯ ಒಳ್ಪಿತು" (ಹಲಾಯು. ೦೦೯-೪). ೬. ಕೇಸರಿಬಣ್ಣ. ೭. ಕೆಂಪುಬಣ್ಣದ ಕುದುರೆ : ಅತ್ತಿಹಣ್ಣಿನ ವರ್ಣ ಉಳ್ಳ ಕುದುರೆಯು ರುಚಿರವೆಂದು ಪೇಳಲ್ಪಡುವುದು (ಶಾಗಾಂ. ೩೦೦-೦೯). [ಸಂ.]

**ರುಚಿರತೆ** (ನಾ). ಸೌಂದರ್ಯ ; ಚೆಲುವು : ಯಾವ ವಸ್ತು ಸುಂದರವಾಗಿದೆಯೋ ಅದರ ಮೊದಲ ಗುಣ ರುಚಿರತೆ (ಸೌಂದ. ೪೬).
[ಸಂ. ರುಚಿರತಾ]

**ರುಚಿರಾಮ** (ನಾ). ೧. ಪಾದರಸ ; ಪಾರದ : (+). ೨. ಕಣ್ಣು ; ನಯನ : (+). ೩. ಬಿಳಿದು ; ಶ್ವೇತ : " ಬಿಳಿದೆನಿಪ್ಪುದಂ ನುಡಿವಲ್ಲಿ [ಶಾಶಾ.ಶು]ಚಿರಾಮಮೆಂದೆಂಬುದು " (ಶಂಗರಾ. ೦೯೦-೦೦) ; " ಸಿತಂ ದೃಕ್ಸೂತಂ ರುಚಿರಾಮಮುಕ್ಯಂ" (ಶಾಪಾರ. ೦೩೨). [ಸಂ.]

**ರುಚಿರೆ** (ನಾ). ನಲ್ಲೆ ; ಕಾದಲೆ : ಪ್ರಿಯತಮೆ : " ಪ್ರಿಯತಮೆ ಸುಭಗೆ . . . ರುಚಿರೆ ವಲ್ಲಭೆ ತಾಂ" (ವಸ್ತುಕೋ. ೩೨-೩) . [ಸಂ. ರುಚಿರಾ]

**ರುಚಿವಡಿಸು** (ಕ್ರಿ). ರುಚಿಗೊಳಿಸು ; ಸವಿಗೊಳಿಸು : ನಿನ್ನ ಕರ್ಣಕೆ ಕಡುರುಚಿವಡಿಸುವ ಪೇಳಿ ಮೋಲ್ಗತೆಯ (ಮೋಹತ. ೦೯-೨).
[ರುಚಿ + ಪಡಿಸು]

**ರುಚಿವಡೆ** (ಕ್ರಿ). ರುಚಿಯಾಗು ; ಸವಿಯಾಗು : ಉಪ್ಪಿಲ್ಲದೆ ಕೇಳೊಕ್ಕಳ ತುಪ್ಪವನೆಱೆದುಣ್ಣೆನೆಂಬೊಡುಂಬುಣಸೇಂ ಸ್ವಾದಪ್ಪುದೆ ಸಹಜಂ ತನಗಿನಿಸಪ್ಪೊಡಮಿಲ್ಲದನ ಕವಿತೆ ರುಚಿವಡೆದಪುದೇ (ಧರ್ಮಾಮೃ. ೦-೩೦).
[ರುಚಿ + ಪಡೆ$_1$]

**ರುಚಿವೀಱು** (ಕ್ರಿ). ಕಾಂತಿಯನ್ನು ಬೀರು ; ಪ್ರಕಾಶಿಸು : ಪಸುರುಗಲ್ಗಳೆ ಬೆಳೆದ ರುಚಿವೀಱುವ ಗವಾಕ್ಷದಿ ತೊಳಪ ಬಹುರತ್ನಂಗಳ್ (ಕಾವ್ಯಾ. ೯-೩೦).
[ರುಚಿ + ಬೀಱು$_1$]

**ರುಚಿವೆಱು** (ಕ್ರಿ). ಕಾಂತಿಯನ್ನು ಹೊಂದು ; ಹೊಳಪನ್ನು ಪಡೆ : ತರುಣಮೃಣಾಲಗರ್ಭರುಚಿವೆತ್ತ ರಘೂದ್ವಹದೇಹದೀಪ್ತಿಮಂಜರಿಯನುಪಾಶ್ರಯಂಬಡೆದು (ಕಂರಾಮಾ. ೦೨-೦೩) ; ಉಚಿತವಱಿದು ಮಿಂಡಿವೆಣ್ಗಳು ನವರತ್ನಖಚಿತಭೂಷಣಹಸ್ತದಲಿ ರುಚಿವೆತ್ತು ಬಡಿಸಲ್ಕೆ ಶ್ರೀಕೃಷ್ಣರಾಯನು ರುಚಿಗೆಯ್ದು ಮೊಗವನೀಕ್ಷಿಸಿದ (ಮೋಹತ. ೦೯-೦೯). [ರುಚಿ + ಪೆಱು$_1$]

**ರುಚಿಸು** (ಕ್ರಿ). ೧. ರುಚಿಯಾಗು ; ಸ್ವಾದುವಾಗು : ಶ್ರೋತ್ರಂಗಳೇಕೆ ಆಲಿಸಬೇಡ ಎಂದಡೆ ಮಾಣವು ಜಿಹ್ವೆಯೇಕೆ ರುಚಿಸಬೇಡ ಎಂದಡೆ ಮಾಣವು (ಅವಚ. ೨೯-೯೬). ೨. ಆಸ್ವಾದಿಸು ; ತಿನ್ನು : ಜಿಹ್ವೆಯೊಳಗೆ ಜಿಹ್ವೆಯಿಂದ್ದೂ ರುಚಿಸಲೇಕಱಿಯರಯ್ಯಾ (ಬಸವ. ೯೦೬). ೩. ಹೊಳೆ ; ಪ್ರಕಾಶಿಸು : ರತುನರವಿ ರುಚಿಸಿದನು ಕೋಟೀರಕೋಟಿಕಿರಣಕಿರೀಟ ತಾನಾಗಿ (ಶ್ರೀರಾಮಾ. ೦೬೩-೩೬೬). ೪. ಇಷ್ಟಪಡು ; ಆಶಿಸು ; ಬಯಸು : ಪರಿಪೂರಿತಾಮೃತಕಿರಣರುಚಿಯಂ ರುಚಿಸುವ ಚಕೋರ ಸೇರಿ ಮರ್ಬಿಂಗೆಳಸುವುದೆ (ಬಸಪು. ೦೦-೦೦). ೫. ಮೆಚ್ಚಿಗೆಯಾಗು ; ಮನಸ್ಸಿಗೆ ಬರು,_ ಹಿಡಿಸು : ಉಚಿತವನು ನಾನಱಿಯೆ ಮಾರ್ಥಕರಚಿತನಿಜವನು ನುಡಿಯೆ ನಿನಗವು ರುಚಿಸವೇ ಮಾಣಲಿ (ಕುಮಾ.ಭಾ. ೦-೨೩) ; ಹುಡುಗರಿಗೆ ಈ ಸೂಚನೆ ಒಪ್ಪಿತವಾಯಿತು ; ಹುಡುಗಿಯರಿಗೆ ರುಚಿಸದಾಯಿತು (ಹಸುಹೂ. ೬೨). [ರುಚಿ + – ಇಸು$_3$]

**ರುಚ್ಯ** (ಗು). ೧. ಪ್ರಕಾಶಮಾನವಾದ ; ಹೊಳಪುಳ್ಳ. ೨. ಚೆಲುವಾದ ; ಸುಂದರವಾದ ; ಮನೋಹರವಾದ. ೩. ಸಂತೋಷಗೊಳಿಸುವ ; ಆಹ್ಲಾದಗೊಳಿಸುವ. ೪. ಹಸಿವನ್ನು ಉದ್ದೀಪನಗೊಳಿಸುವ. (ನಾ). ೫. ಹೊಳಪು ; ಕಾಂತಿ : " ರುಕ್ . . . ರುಚ್ಯಂ, ರೌಚ್ಯಂ, ಈ ೬ ಪೊಗರ್" (ಶಾಶ್ಯ. ೦೩೦). ೬. ಸುಂದರವಾದುದು ; ಮನೋಹರವಾದುದು : ಪ್ರಕಟಿಸುವುವಖಿಳಧಾನ್ಯಪ್ರಕರಂಗಳ್ . . . ಬೆಳೆವಕೃಷ್ಣಪಚ್ಯಂಗಳತುಳಫಳರುಚ್ಯಂಗಳ್ (ಶಕ್ತಿ.

೯-೦೩). ೭. ಗಂಡ ; ಪತಿ : "ಕಾಂತಃ , . . . ರುಚ್ಯಃ . . . ಅನುಕಃ — ಈ ೧೪ ಗಂಡಂ" (ಹಲಾಯು. ೬೬-೩೪೩). [ಸಂ.]

**ರುಜ** (ನಾ). ನಿರುತ ; ದಿಟ ; ಸತ್ಯ (?): ಇಜಿವ ಅಸಿ ನೋವ ಬಲ್ಲಡದೆ ಬೇಡುವಾತ ರುಜವ ಬಲ್ಲನೇ (ಬೋಳಬಸ. ೦೬-೬೯) ; ಸ್ಕಂದ ಕೇಳ್ ರುಜದಿಂ ಶಿವಪ್ರಸಾದದೊಳು ನೀಂ ಅಮ್ಮ ನಾಗಲೆಯೊಳುದಿಸು (ಶ್ರೀಕುಪು. ೩-೬೦). [ < ಋಜು, ]

**ರುಜಾಂಗ** (ನಾ). ಖಾಯಿಲೆಯವನು ; ವ್ಯಾಧಿಗ್ರಸ್ತ ; ರೋಗಿ: ಘನರುಜಾಂಗನ ಬಿಡುದಲೆಯು ರೋಧಿನಿಯನುಪ್ಪವಡಿಸುವ ಸಮಯ ದೋಳಿನಿಬರನು ಕಾಣ್ಬುದು ಮಹೀಶರಿಗಂಗವಲ್ಲ (ಕುವ್ಯಾಉ. ೩-೦೦೭). [ಸಂ.]

**ರುಜಾವು** (ನಾ). ತೆಳುವಾದ ಅರಳೆಯ ಗಾದಿ : ಗಾದಿ ರುಜಾವುಗಳ ಮೇಲೆ ಶಯನವನ್ನು ಮಾಡದೆ ಹುಲ್ಲುಚಾಪೆಯ ಮೇಲೆ ದೇಹವನ್ನು ಆವಶ್ಯಕವಾದ ವಿಶ್ರಾಂತಿಗಾಗಿ ಚಲ್ಲುವ ಪ್ರತಿಜ್ಞೆಯನ್ನು ಪ್ರತಾಪನು ಮಾಡಿದನು (ಚಿಅಂ. ೬೦). ' ರಜಾಯಿ ' ಪರಾ.

[ ← ಪಾರ. ಮರಾ. ರುಜಾಮಾ ]

**ರುಜಾರ್ತ** (ನಾ). ರೋಗಪೀಡಿತನಾದವನು: ಖರರುಜ್ಜಂದನನೊಂದಿವಂ ದುದಯದೊಳ್ ರೋಗಾನ್ವಿತಂ ಬಾಲ್ಯಕಾಲರುಜಾರ್ತಂ . . . ಅಕ್ಕುಂ (ಜಾತಕ. ೦೬-೦೪). [ಸಂ.]

**ರುಜಿನ** (ನಾ). ಖಾಯಿಲೆ ; ವ್ಯಾಧಿ ; ರೋಗ : ಅತಿವೈದ್ಯದಿಂದ ಹೊಸರುಜಿನಕಿಡೆಯಾದೀತೊ (ಪುಂಕುಶ. ೬೭೭). ' ರೋಗರುಜಿನ ' ಪರಾ.

[ < ಸಂ. ವೃಜಿನ = ಆಪತ್ತು, ಗಂಡಾಂತರ ]

**ರುಜು**$_1$, ರಿಜು (ಗು). ೧. ವಕ್ರವಲ್ಲದ ; ನೇರವಾದ : "ರುಜು (ರಿಜು) — ಋಜು = ನೇರ" (ಶಬ್ದಕೋ. '೩೬). (ನಾ). ೨. ನ್ಯಾಯವಾದುದು; ಸರಿಯಾದುದು : ನಿಜಕಾಂತನಿಲ್ಲದೊಡೆ . . . ಪ್ರಜೆಗಳಂ ಪಡೆದು ಸದ್ಗತಿಗೈದವೇಳ್ಪುದಿದು ರುಜುವಲ್ಲ (ಕೈಋಶಾ. ೨೭-೦೪); ಸಹಜವಾಗಿ ಸುಳಿವ ನಿಜಜಂಗಮವುದಾಚರಣೆ ರುಜುವೆಂದ ಗುರುವೆ ಕೃಪೆ ಯಾಗು (ಪ್ರಭಾರ. ೭೦-೨೩೩) ; ನೇರಾದ ರೀತಿ ರುಜು ಅವನ ನೀತಿ (ಕೃಶ್ಯಾ೦. ೪-೨). ೩. ಸರಳಸ್ವಭಾವದವನು; ಕಪಟವನ್ನರಿಯದವನು: ಎಂತೋ ಕಾಂತೆಯ ವರಸೀಮಂತಂ ಕೆಳೆಗೊಂಡುದಿರ್ಕಿಲದ ಕುಟಿಲಾಂತಃ ಕುಂತಳಮಂ ಸ್ನಿಗ್ಧಮೃದುತ್ವಂ ತೋಱಲ್ ಪೊಱಗೆ ರುಜುಗಳೇನಂ ಬಲ್ಲರ್ (ಕುಶ್ಮಪು. ೩-೩೩). ರಿಜು : ೨. ಋಜು — ರಿಜು (ಕವಿಮ. ೨೬೮ ಪ್ರಯೋ).

ರುಜುವಾಗು = ಪ್ರಾಮಾಣಿಕವಾಗು ; ಋಜುವಾಗು : ನೀವು ಈ ವಕ್ರವನ್ನು ಬಿಟ್ಟು ರುಜುವಾಗಿ ಇದ್ದರೆ ಸರಿ (ಶಿವರ. ೦೦೪-೦೪); ತ್ರಿಜಗವತಿಚಿತ್ರಮುಖಲಮದಿಲ್ಲಿ ನೆಲೆಗೊಂಡು ರುಜುವಾದುದೆನೆ ದೇವಶಿಲ್ಪಿ ಗಳ ಕರ್ಮವಂ ಭಜಿಸಿ ಮೆರೆದತ್ತು . . . ವೈವಾಹದುತ್ಸವಂ (ಮಹಾವಿ. ೨೩-೩೭). [ < ಸಂ. ಋಜು ]

**ರುಜು**$_2$ (ನಾ). ೧. ಸಹಿ ; ದಸ್ಕತ್ತು ; ಒಪ್ಪಿತ : ರುಜು ಶ್ರೀ ಕೃಷ್ಣ (ಪ್ರಅಂ.೦೪೪೨, ೭೩–೩೭ ; 1818) ; ಭಗವಂತಗಿರಿಗೋಸಾವಿ ರುಜುವೂ (ಎಕ. IX, ಬೆಂಗಳೂ. ೩-೨೩ ; 1855) ; ಕರುಣೀಕರುಗಳು ನಾಡಿಗರು ಗಳಿಂದಲೂ ರುಜುವು ಮಾಡಲ್ಪಟ್ಟ ನಂತರ . . . ರವಾನಿಸಬೇಕು (ಗ್ರಾಮಾಕ. ೬). ೨. ಆಧಾರ ; ಸಾಕ್ಷಿ ; ಪುರಾವೆ : (ಕೈಶಗ. ೪I, ೩೬೦).

ರುಜುಮಾಡು = ೧. ಸ್ವಹಸ್ತಾಕ್ಷರ ಹಾಕು ; ಸಹಿಮಾಡು : ನಿಮಗೆ ಅವಳ ವಿಚಾರವೆಲ್ಲಾ ಗೊತ್ತಿರುವಂತಿದೆ ; ಅದನ್ನು ಬರೆದು ರುಜು ಮಾಡಿಕೊಡುತ್ತೀರಾ ? (ಬಂಕಿಮು. ೦೨೦). ೨. ರುಜುವಾತು ಮಾಡು ; ಖಚಿತಪಡಿಸು : ಸಮುದ್ರದ ಮೇಲೆ ಬರುವ ಹಡಗವು ಭೂಮಿ ಗುಂಡಾಗಿಯಿರುವುದನ್ನು ರುಜುಮಾಡುತ್ತದೆ (ಅವಂಕ. ೪೦).

ರುಜುವಾಗು = ೧. ಸಹಿ ಹಾಕಲ್ಪಡು ; ದಸ್ಕತ್ತು ಮಾಡಲ್ಪಡು : ಸಾಹೇಬರ ರುಜುವಾಗಿದೆ (ರಂಗಕ. ೪). ೨. ರುಜುವಾತಾಗು ; ಸಾಬೀತಾಗು : ದೋಷ್ಣೆಯು ಮುನಿಯನದೇಡು ರುಜು ವಾಯಿತು (ಮುಖಬಸ. ೨೦೨). ರುಜುಹಾಕು = ಸಹಿಮಾಡು ; ರುಜು ಮಾಡು : ಸಂಧಿಗೆ ರುಜುಹಾಕಬೇಕೆಂದೂ ಗಾವುಮಾನಿಗೆ ಹೇಳಿ ಕಳುಹಿಸಿ ದನು (ಕ್ರಪಾ. II, ೨೩೪) ; ' ವಕಾಲತ್ತು ಫಾರಂ'ಗೆ ರುಜುಹಾಕಿ ಬಂದರು, ಕರಿಯಪ್ಪ, ತಿಪ್ಪಾರೆಡ್ಡಿ (ಕಂಚಿಕೋ. ೦೪೪).

[ ← ಅರ. ರುಜೂಅ ; ಮರಾ. ರುಜೂ ]

**ರುಜುಪಡಿಸು** (ಕ್ರಿ). ಯಾವುದಾದರೊಂದು ವಿಷಯವನ್ನು ಸಾಕ್ಷ್ಯಾಧಾರಗಳಿಂದ ಸಿದ್ಧಪಡಿಸು ; ರುಜುವಾತು ಮಾಡು : ಅವರು . . . ಜವ್ವನಿಕೆ ಹರಿಯದಲ್ಲಿಲ್ಲ; ಮನಸ್ಸಿನಲ್ಲಿದೆ ಎಂಬ ಹುರುಳನ್ನು ರುಜುಪಡಿಸಿದರು (ಜಗುಬಿ. ೪) ; ಅದನ್ನು ರುಜುಪಡಿಸುತ್ತೀರಾ ? (ಕಾವೇಂ. ೦೨೩).

[ರುಜು$_2$ + ಪಡಿಸು]

**ರುಜುಭಾವ** (ನಾ). ನೇರವಾದ ಸ್ವಭಾವ; ಸರಳತೆ : ಉತ್ತರಾಭಿಮುಖಂ ಪ್ರಸನ್ನಮುಖಂ ಪದ್ಮಾಸನಮನವಷ್ಟಂಭಿಸಿ ರುಜುಭಾವದಿಂ ಕುಳ್ಳಿರ್ದು (ರಾಜಕೇ. ೦೩-೪೩ ವ). [< ಸಂ. ಋಜುಭಾವ]

**ರುಜುರೋಹಿತ** (ನಾ). ಕೆಂಪಗೆ ನೇರವಾಗಿರುವ ಇಂದ್ರನ ಬಿಲ್ಲು : ಹರಿಯು ಹಳಚಿ ಗದಾಯುಧವವನೀಶ್ವರನ ಜಱಿದಜಗರನಿಂದ್ರನ ಪರಿಭವಿಸಿ ರುಜುರೋಹಿತವನಂತಕನ ಸದೆಬಡಿದು ಪರಿಘವನು . . . ಧರಿಸಿದತಿಬಲ ರಿರ್ದುದು (ಕೊರಂ. ೭-೦೦-೯). [< ಸಂ. ಋಜುರೋಹಿತ]

**ರುಜುವತ್ತು** ' ರುಜುವಾತು ' ನೋ.

**ರುಜುವಾತು**, ರುಜುವತ್ತು (ನಾ). ಸಾಕ್ಷ್ಯ; ಆಧಾರ : ಅವ ನಿಮ್ಮೂರಿಗೆ ಹೋದದ್ದಕ್ಕೆ ರುಜುವಾತು ಇದೆ (ಕಂಕಸಂ. ೦೪೪) ; ಅದನ್ನು ರುಜುವಾತು ಪಡಿಸುವುದು ಕಷ್ಟ (ಅನಾಥ. ೨೪) ; ರುಜುವಾತಿಗಾಗಿ ಮರದ ಪೆಟ್ಟಿಗೆ ಯನ್ನು ತಲೆಕೆಳಗು ಮಾಡಿ ತೋರಿಸಿದಳು (ಸ್ವಾಮಿಸ್ಮೇ. ೭೪). ರುಜುವತ್ತು: ಈಗಿರುವ ರುಜುವತ್ತೇ ಸಾಕು (ಕಂಪಿ. ೦೦೭).

[← ಅರ. ರುಜಅತ್; ಮರಾ. ರುಜುವಾತ್]

**ರುಜುವೆರು** (ಕ್ರಿ). ಸರಳಸ್ವಭಾವವನ್ನು ಹೊಂದು ; ಋಜುಭಾವ ದಿಂದಿರು : ಸಕಲದೇಶಮನಾಳ್ವ ನೃಪರೆಲ್ಲ ರುಜುವೆತ್ತು ಕಪ್ಪಮಂ ತೆತ್ತು ಬಾಳುವರು (ಪಪಪೋ. ೩-೨೭). [ರುಜು$_1$ + ಪೆರು$_1$ (< ಪೆಱು$_1$)]

**ರುಜೆ** (ನಾ). ೧. ಒಡೆದುದು ; ಮುರಿದುದು ; ಭಂಗವಾದುದು. ೨. ಖಾಯಿಲೆ ; ರೋಗ : " ರೋಗಃ . . . ರುಜಾ – ಈ ೧೨ ವ್ಯಾಧಿ " (ಹಲಾಯು. ೯೬-೪೪೬); ಇದು ದುಃಖಿಮೊ ರುಜೆಯೊ ಕಳವಳಮೊ ಪೇೞು (ಕಾದಂಪೂ. ೭೬೬) ; ರುಜೆಯಡಸಿ ಕೆಡೆದಿಹ ಹೊತ್ತು ರಂಭೆ ದೊರೆಕೊಂಡಲ್ಲಿ ಫಲವೇನು (ಹಕಶಾ. ೭-೮). ೩. ನೋವು ; ಬಾಧೆ. ೪. ಒಂದು ಬಗೆಯ ಮರ : ಸಿರಿಕಂಡಂ ರುಜೆ ಮಾಂಸಿ . . . ಎಂಬಿನಿತುಮಂ ಶೀತಾಂಬುವಿಂ ಪೂಸೆ (ಲೋಕೋಪ. ೯-೦೬೩). [ಸಂ. ರುಜಾ]

**ರುಡ್ಡುಗೋಲು** (ನಾ). (?) : ಶಿವನು ಹಱಕುಗಡ್ಡ, ಕೆದಱುಮೀಸೆ, ದೊಡ್ಡಕಚ್ಚೆ . . . ಕೈಯಲ್ಲಿ ರುಡ್ಡುಗೋಲು, ಹೆಗಲ ಮೇಲೆ ಕಂಬಳಿ, ನೊರೆವಾಯಿಕಿದ ಗಾವುಡಿಯಾಗಿ, ನಡುಪಟ್ಟಣದೊಳು ಬರುತ (ಭೈರಸೂ. I, ೨೦೩). [ರುಡ್ಡು ? + ಕೋಲು$_1$ (< ಕೋಲ್$_1$)]

**ರುಣ**, ರಿಣ (ನಾ). ೧. ಸಾಲ ; ಕಡ : ಗೋಣಿಮಾಱಿಗಳೊಳಗದ ಹಣರುಣವ ನೀಗಿದರು (ಕುವ್ಯಾಭೀ. ೮-೦೩) ; ಜೂಜಾಟಕೆ ಸೂಳೆಬೆಂಟಿಕೆ ರುಣದ ಸಂವಾಜ ಪೆರ್ಗುಡಿಗಳ ಚರ್ಚೆ . . . ಮಾಜದು ನಿತ್ಯಕೃತ್ಯದಲಿ (ಪೋಹತ. ೨೦-೨೭). ೨. (ಅಲಂ) ಹಂಗು : ಎಲ್ಲರ ಮುಂದೆ ಮೊಗ ಗೆಡಿಪ ರುಣದೊಳಗೆ ಸುಡುತಿರುವ ಚಿಂತೆ (ಕೃಕವ. ೦-೦೯-೨). **ರಿಣ** :

೨. ಅಖಿಳದಳಭಾರ ಬಿದ್ದುದು ಸಾತ್ಯಕಿಯ ಸುರನಾರಿಯರ ತೋಳಿನಲಿ ಕಾಬುದು ನೆಲನ ರಿಣ ಹಱಿದು (ಕುವ್ಯಾ.ಶ. ೩-೦೩) ; ಎಣ್ಣೆ ಬೆಣ್ಣೆಯ ರಿಣವು ಅನ್ನವಸ್ತ್ರದ ಋಣವು ಹೊನ್ನು ಹೆಣ್ಣಿನ ರಿಣ-ತೀರಿದಾಕ್ಷಣದಿ ಮಣ್ಣು ಪಾಲು (ಸರ್ವಜ್ಞ. ೯೬೩). ೩. ಉಪಕಾರ : ಯಾವ ಜನ್ಮದಲ್ಲಿನ್ನು ರಿಣವ ತೀರಿಸಲಿ (ಸೂರ್ಯಕಾ. ೭೮-೩). [< ಸಂ. ಋಣ]

**ರಣಪಾತಕ** (ನಾ). ಸಾಲ ತೀರಿಸದಿರುವುದರಿಂದಾದ ಪಾಪ; ಋಣದ ಪಾಪ : ಅಣು ಹೋಗಿ ಪರ್ವತವಾದರೂ ರಣಪಾತಕ ಬೆನ್ನು ಬಿಡದು (ಗಾದೆ). [< ಸಂ. ಋಣಪಾತಕ]

**ರಣಿ** (ನಾ). ಸಾಲವನ್ನು ತೀರಿಸದೆ ಇರುವ ವ್ಯಕ್ತಿ: 'ರಣಿತನ' ಪರಾ. [< ಸಂ. ಋಣಿನ್]

**ರಣಿತನ** (ನಾ). ಸಾಲಗಾರಿಕೆ : ಸಂಸಾರವಿಚಾರವನ್ನೂ ಧನಿಕನ ರಣಿತನದ ಗತಿಗಳನ್ನೂ (ಶೀಶರ. ೦-೦). [ರಣಿ + — ತನ]

**ರುತ** (ಗು). ೧. ಶಬ್ದ ಮಾಡಲ್ಪಟ್ಟ ; ಧ್ವನಿಮಾಡಿದ. ೨. ಪುಡಿ ಮಾಡಿದ ; ಮುರಿದ ; ಚೂರುಚೂರಾದ. (ನಾ). ೩. (ಪಶು, ಪಕ್ಷಿ ಮೊದಲಾದುವುಗಳ) ಧ್ವನಿ; ಕೂಗು : ತಟನೀವ್ಯೂಹದೊಳ್ ಪೂರವಾರಂ ವಿರಹಿವ್ರಾತಂ ಬಿಗುರ್ವರ್ಣಂತೊಡನೊಡನೆ ರುತಂ ಪರ್ವಿಸುತ್ತಿರ್ದುವೆತ್ತಂ (ಕಾದಂಬಾ. ೩೩೨); ಎನ್ನಿರವನಱಿಪುವೆನೆಂದು ಭಿನ್ನಸ್ವರದಿಂ ಸರಂಗೆಯ್ವುದು ಮುಳೂಕಂಗಳ್ ಕೇಳ್ದು ಕಾಕರುತಮುಪ್ಪುದೆಂದರಿಮರ್ದನಂಗಱಿಪುವುದುಂ (ಶಂಕಶಂ. ೨೪೯-೧೮). [ಸಂ.]

**ರುತಿ** (ನಾ). ೧. ಧ್ವನಿ : ಪಾಸಱಿ ಸಿಂಹಪೀಠಮಣೀನೀರುತಿ ಮಂಗಳಗೀತಿ (ಶಂಕಶಾ. ೬-೨೯); ಮಂಜೀರಕಂಕಣಕಿಂಕಿಣೀರುತಿ ಪೊಣ್ಮೆ (ಜಗನ್ನಿ.೩-೩೨); ಈ ಶಾಶ್ವತರುತಿಗೊಂದಿದ ಅಂದಂದಿನ ಸ್ಮೃತಿಯೋಲ್ (ಗತೇಶ. ೨೭-೦). ೨. ಮಾತು : ಸೊಗದಂತಕಿ ಸೆಳೆದೊಯ್ವುದು ಅದೊ! ನೇಹದ ರುತಿಯು ಇನಿವೇಟದ ಸೊಧೆಗಡೆದು ಸವಿದಾಡುವ ಸೈಗರೆದು (ಕಶಿಕಾ. ೬೩-೨). [ಸಂ.]

**ರುತು₁**, ರಿತು (ನಾ). ೧. ವಸಂತ, ಗ್ರೀಷ್ಮ ಮೊದಲಾದ ಆರು ಋತುಗಳು : "ಎರಡೆರಡು ಮಾಸಂ ಕೂಡಿದೊಡೆ ವಸಂತ, ಗ್ರೀಷ್ಮ, ಪ್ರಾವೃ(ಟ್)ಡ್, ಶರ(ದ್)ತ್, ಹೇಮಂತಃ, ಶಿಶಿರಃ – ಎಂದಾಱು ರುತುಗಳಕ್ಕುಂ" (ಹಲಾಯು. ೦೯-೦೦೩) ; ಈ ಪೊಱ್ತಿಂಗೀ ರುತುವಿಂಗೀ ಪಸದನಂ (ಶಂಕಶಾ. ೩-೪೩); ಪಸದನವಾವುದಾವ ರುತುವಿಂಗವುದೊಪ್ಪು ಗುಮಾವ ಪೊಟ್ಟದಾವೆಸಕದೊಳೊಂದುಗುಂ (ಗದಾಯು. ೦೦-೨೦ ಅವಶದ್ಧ). ೨. ಮುಟ್ಟು ; ರಜಸ್ಸು : 'ರುತುಕಾಲ' ಪರಾ. ೩. [ಗಣಿತ] ಆರು ಎಂಬ ಸಂಖ್ಯೆಯ ಸಂಕೇತ : ದ್ರವ್ಯ, ಋತು . . . ರುತು . . . ಇಂತಿನಿತುಂ ೬ಕ್ಕೆ ಪೆಸರು. (ವ್ಯವಹಾ. ೦೦). 'ರುತುವದನ' ಪರಾ. **ರಿತು** : ೧. ತಮ್ಮತಮ್ಮಂದಿನಂದಮನಾಱುಂ ರಿತು ಪತ್ತುವಿಟ್ಟು (ಶಾಂತಿಪು. ೯-೦೩೩) ; ಉಪೇಂದ್ರನ ವನಕೇಳಿಯ ಪದನಂ ಸಾರ್ದೋಲಗಕ್ಕೆ ರಿತುಗಳ್ ಬಂದಿರ್ಪುದನಱಿಪುಗುಂ . . . ಸುಮನೋಲತೆಗಳ್ (ವರ್ಧಕ. ೬-೬೬); ಸಕಲರಿತುವೊಳು ಪೂವ ಪಣ್ಣ ಮರವೇನು ? (ಗೀವಿಂ. ೨೮-೩೮).
[<ಸಂ. ಋತು]

**ರುತು₂** (ನಾ). = ರುತ ೩ : ಅವಿರವಿರೋಧಿ ಬಭ್ರು ರುತುಗಾನ ನಭಂಗಳು ಗೀತವಾಚಕಂ" (ಶಾಪಾರ. ೩೬). [<ಸಂ. ರುತ]

**ರುತುಕಾಲ** (ನಾ). ಮುಟ್ಟಾಗುವ ಕಾಲ ; ರಜೋದರ್ಶನದ ಸಮಯ: ರು[ಪಾಠಾಂ. ಋ]ತುಕಾಲವೇಬುದಱಿಕೆಯಿಲ್ಲ ಸತಿಯಳ (ಅಪ್ಪಯ್ಯ. ೨-೩೯).
[<ಸಂ. ಋತುಕಾಲ]

**ರುತುಕಾಲವಡೆ** (ಕ್ರಿ). ಮುಟ್ಟಾಗಂ ; ರಜಸ್ವಲೆಯಾಗು : ಮೊಡವಿಯ ಮೊಳೆಯನೊತ್ತುತ . . . ರುತುಕಾಲವಡೆದ ಪುಷ್ಪಿಣಿಯರೊಪ್ಪಿದರು (ಪೋಹತ. ೦೮-೩೨). [ರುತುಕಾಲ + ಪಡೆ₁]

**ರುತುವದನ** (ನಾ). ಆರುಮುಖಗಳನ್ನು ಹೊಂದಿರುವವನು; ಷಣ್ಮುಖ : ರುತುವದನನೆಚ್ಚ ಬಾಣಗಳ ಕತ್ತರಿಸಿ ಮನ್ಮಥ ನುಡಿದ (ನವಪೋ. ೩೦-೯೯).
[< ಸಂ. ಋತುವದನ]

**ರುದಂತಿ** (ನಾ). ಒಂದು ಬಗೆಯ ಸಸ್ಯ : ಶ್ರೀಗಂಧಂ ರುದಂತಿ ಜಟಾಮಾಂಸಿ . . . ಇವೆಲ್ಲಮುನುದಕದಲ್ಲರೆದು ಪೂಸಲ್ ಕಂಚುಕೆ . . . ಗಾಯದ ಪುಣ್ಗಳ್ ಇವೆಲ್ಲಂ ಮಾಣ್ಬುವು (ಲೋಕೋಪ. ೯-೦೬೩ ಟೀಕು) ; ನಲಿದು ಮಾಕ್ಷಿಕದೆ ಪಿಪ್ಪಲಿ ರುದಂತಿಗಳನೊಡೆಗಲಸಿ ಮಧುವಿಂವರೆದು (ಜವವ. ೦೩-೩೨). [ಸಂ. ರುದಂತೀ]

**ರುದಮಿತ್ರ** (ನಾ). ದುಃಖಕ್ಕೆ ಶತ್ರುವಾದವನು ; ದುಃಖನಿವಾರಕ : ಭಾಸ್ವತ್ರಯಿಯಾ ಸ್ತೋತ್ರವರಪಾತ್ರ ರುದ[ಪಾಠಾಂ.ತರು]ಮಿತ್ರ ಶರ್ವ ತ್ರಾಹಿ (ಉದ್ಭಟೇ. ೩-೩೬). [ಸಂ.]

**ರುದಾಕ** (ನಾ). ಒಂದು ಬಗೆಯ ವೃಕ್ಷ : ರುದ್ರಾಕ್ಷಿಮರ : ರುದಾಕ (ರುದ್ರಾಕ್ಷ)—ಬಹು ದೊಡ್ಡ ಮರ. ಇದರ ಬೀಜಗಳೇ ರುದ್ರಾಕ್ಷಮಣಿಗಳು (ಕಭಾಗ. ೯೭). [< ರುದ್ರಾಕ್ಷ]

**ರುದಿತ** (ಗು). ೧. ರೋದಿಸಿದ ; ಗೋಳಾಡಿದ ; ಅತ್ತ. (ನಾ). ೨. ಅಳುವುದು ; ರೋದಿಸುವುದು ; ರೋದನ : "ಕ್ರಂದಿತಂ, ರುದಿತಂ, ವಿಲಾಪಃ, ಪರಿದೇವನಂ – ಈ ೪ ಅೞ್ಕೆ" (ಹಲಾಯು. ೦೦೩-೦೭); ಅರಣ್ಯರುದಿತಂ ವಲವೆನ್ನೊಲವಿಂದುವಕ್ತ್ರೆಯಾ (ಶಂಕಶಾ. ೯-೭೯) ; ಕದನ ದೊಳ್ಪಡೆದ ವೃತ್ತಾಂತಮಂ ಪೇಳಲ್ಕೆ ರುದಿತದಿಂ ಕೈವೆರಲ್ಗಳನೊತ್ತಿ ಕೊಳುತೆ (ಜೈಮಿಭಾ. ೨೦-೦೯). [ಸಂ.]

**ರುದ್ದು** (ಕ್ರಿ). ಕುಟ್ಟು : ಕಡಗಿ ಜವದಿ ರುದ್ದಿ{ದ್ದಿ} ನಸುವಿಸಿಯಿಂದ ಬಡಿಸಿ ಘೃತವನ್ನೀಡೆ ಲಡ್ಡುಗೆಯನರ್ಪಿಸುವುದು (ಲಿಂಗಪು. ೬-೦೩).
[← ತೆಲು. ರುದ್ದು, ರುತ್ತು]

**ರುದ್ಧ** (ಗು). ೧. ತಡೆಯಲ್ಪಟ್ಟ : ಪ್ರತಿಬಂಧಿತ : ಶುದ್ಧತತ್ತ್ವಾಧಿಪತಿ ಶಿವನೆನಗೆ ಕರ್ತು ತದ್ರುದ್ಧಮಾರ್ಗದೊಳಾನು ಬಂಟಂ (ವೀಕ್ವಪು. ೯-೦೦-೯೨). ೨. ಆವರಿಸಿದ ; ಸುತ್ತಲ್ಪಟ್ಟ : "ವೇಷ್ಟಿತಂ, ವಲಯಿತಂ, ಸಂವೀತಂ, ರುದ್ಧಂ, ಆವೃತಂ— ೫ ಈಟಿನವರೆಗೆ ಅಡ್ಡವಾಗಿರುವಂತೆ ಸುತ್ತಿಕೊಳ್ಳಲ್ಪಟ್ಟದ್ದು" (ಸಿದ್ಧಾಂತಿ. ೪೯೭). ೩. ಮುಚ್ಚಿದ; ಹಾಕಿದ : ಸತ್ಯವಾದ ಪ್ರೇಮ ಭಾರತವಾಸಿಗಳ ಬಹುದಿನಗಳ ರುದ್ಧದ್ವಾರದಲ್ಲಿ ಯಾವ ಮುಹೂರ್ತದಲ್ಲಿ ಬಂದು ನಿಂತಿತೊ ಆ ಕ್ಷಣ ಅದು ತೆರೆದುಕೊಂಡಿತು (ವಿಜಿಂರ. I, ೩೦೭). (ನಾ). ೪. ತಡೆ ; ಅಡ್ಡಿ ; ಪ್ರತಿಬಂಧ : ಆಂ ಮಾಡುವ ರುದ್ಧದೊಳ್ಕಿಱಿದು ನಾಚುಗುವೋ ವಧು (ಕಾದಂಬ. ೬೩೩); ಸ್ವಭಾವತಃ ಆತನ ಮನಸ್ಸು ಶುದ್ಧವಿದ್ದುದರಿಂದ ಆತನ ಶ್ವಾಸಗತಿಯು ರುದ್ಧವಾಗಿ ಆತನಿಗೆ ಸಮಾಧಿಯು ಹತ್ತಿತು (ಕುಳಸೀ. ೪೮). [ಸಂ.]

**ರುದ್ಧನೇತ್ರ** (ನಾ). ಮುಚ್ಚಿದ ಕಣ್ಣು ; ತೆರೆಯದ ಕಣ್ಣು : ನನ್ನ ರುದ್ಧನೇತ್ರಗಳ ಮುಂದಿದ್ದ ಅಸೀಮ ಅಂಧಕಾರದ ಮಧ್ಯದಲ್ಲಿ ನಾನು ಏಕಾಕಿಯಾಗಿ ನಿಂತು . . . ಕೂಗಿಕೊಳ್ಳಹತ್ತಿದೆನು (ಇತ್ಯ.ಶ. ೨೦೩). [ಸಂ.]

**ರುದ್ಧಿ** 'ರಿದ್ಧಿ' ನೋ.

**ರುದ್ರ** (ಗು). ೧. ಭಯವನ್ನು ಹುಟ್ಟಿಸುವ ; ಭಯಂಕರವಾದ ; ಭೀಕರವಾದ : ನೋಡು ಬರುತಲಿರುವಳದೋ ರುದ್ರ ಭದ್ರಕಾಳಿಯು (ಶಾಂಕಷ. ೦೦-೦೮). (ನಾ). ೨. ಭಯವನ್ನು ಹುಟ್ಟಿಸುವವನು ; ಭೀಕರನಾದವನು. ೩. ತ್ರಿಮೂರ್ತಿಗಳಲ್ಲಿ ಒಬ್ಬ ; ಶಿವ : "ಈಶಾನಃ . . . ರುದ್ರ . . . ನೀಲಲೋಹಿತಃ — ಈ ೪೫ ಮಹಾ ದೇವರ ಪೆಸರ್" (ಹಲಾಯು. ೩-೦೨) ; ಕಾಳಾಗ್ನಿರುದ್ರನ ಮೇಳಾಪವನ ಱಿಯದವರು ಕಾಳುಬೇಳೆಯೆನುತಿಪ್ಪರಯ್ಯಾ (ಶಿವಶ. ೨೨೭); ಆ ರುದ್ರನ್, ಉರಿಗಣ್ಣನ್, ಅರ ನಚ್ಚಿಲ್ಲದನ್ . . . ಎನ್ನನ್, ಮರುಳ್ಗೊಳಿಸಿ

(ಅಕ್ಕಶ್ರಾ. ೦೮-೩೮೪). ೪. ಈಶಾನ್ಯದಿಕ್ಕಿನ ಪಾಲಕ : "ಇಂದ್ರಃ . . . ಧನದಃ , ರುದ್ರಃ — ಈ ೮ ಮೂಡಲ್ ಮೊದಲಾದೆಂಟುದೆಸೆಗಂ ಕ್ರಮದಿಂದೊಡೆಯರ್" (ಹಲಾಯು.೦೭—೦೦೦). ೫. (ಸೃಷ್ಟಿಯ ಆರಂಭದಲ್ಲಿ ಬ್ರಹ್ಮನ ಭ್ರೂಮಧ್ಯದಿಂದ ಹುಟ್ಟಿದವರೆನ್ನಲಾದ) ಹನ್ನೊಂದು ಜನ ಗಣದೇವತೆಗಳು ; ಏಕಾದಶರುದ್ರರು : ಸುರ ಮಹೀಜನರಾಜ ರುದ್ರರ ಚರಿತೆಗಳಿಗಿಮ್ಮಡಿಯೆನಿಸಿ ಸತ್ಪುರುಷನಿಲ್ಲಿಗೆ ಸಲಹ ಬಂದನು ಬಸವವಿಭುವೆನುತ (ಬಸಪು. ೫-೭೪); ೪೯ ಮರುತ್ತುಗಳು ೧೧ ರುದ್ರರು (ಹಸಾರ. ೫-೩೦ ತಾತ್ಪರ್ಯ). ೬. 'ಜಗನ್ನಾಥವಿಜಯ'ಎಂಬ ಕನ್ನಡಕಾವ್ಯವನ್ನು ಬರೆದ ಒಬ್ಬ ಕವಿಯ ಹೆಸರು : ವಾಣಿ ಬಂದು ಸಮಂತಿರ್ಕೆ ಸವೀನಸೌರಭದವೋಲ್ ಜಿಹ್ವಾಗ್ರದೊಳ್ ರುದ್ರನಾ. (ಜಗಾ. ೦-೬). ೭. ಯಜುರ್ವೇದದಲ್ಲಿ ಪ್ರಸಿದ್ಧವಾದ ಶತರುದ್ರೀಯವೆಂಬ ಹೆಸರುಳ್ಳ ಹನ್ನೊಂದು ಅನುವಾಕಗಳುಳ್ಳ ವೇದಭಾಗ : (ಕ). ೮. [ಗಣಿತ] ಹನ್ನೊಂದು ಎಂಬ ಸಂಖ್ಯೆಯ ಸಂಕೇತ : " ದಿಶಿ ಹತ್ತು ನಭ ಸೊನ್ನೆ ರುದ್ರರೆನೆ ಹನ್ನೊಂದು " (ಮುಂಗಣಿ. ೦೦೪-೮). ೯. [ಛಂದ] ಅಂಶಗಣದ ಒಂದು ಪ್ರಭೇದ : ನಾಲ್ಕು ಅಂಶಗಳ ಗಣ : ಎರಡುಂ ಮೂಱುಂ ನಾಲ್ಕುಂ ಗುರುವಿಂ ಪ್ರಸ್ತರಿಸಲ್ . . . ಸರಸಿಜಭವ ವಿಷ್ಣು ರುದ್ರ ಸಂಜ್ಞೆಗಳಕ್ಕುಂ.(ಛಂದೋಂಬು. ೫-೨೪೦); ಬ್ರಹ್ಮ, ವಿಷ್ಣು, ರುದ್ರ ಎಂಬ ಅಥವಾ ಎರಡು, ಮೂರು, ನಾಲ್ಕು ಅಂಶಗಳ ಗಣಗಳು ಹೋಗಿ . . . ಮೂರು ಗಣಗಳು ಉಳಿದುವು (ಕೈಪಿಪ. ೦೦೯). ೧೦. ಗುರುವಿನ ಸಂಕೇತ ; ದೀರ್ಘಾಕ್ಷರದ ಸಂಕೇತ. [ಸಂ.]

**ರುದ್ರಕಾಂತ** (ನಾ). [ವಾಸ್ತು] ಕಂಬದ ಪ್ರಭೇದಗಳಲ್ಲಿ ಒಂದು : ಶಿಲ್ಪಶಾಸ್ತ್ರಗಳಲ್ಲಿ ಬ್ರಹ್ಮಕಾಂತ, ವಿಷ್ಣುಕಾಂತ, ರುದ್ರಕಾಂತ ಇತ್ಯಾದಿ ಸ್ತಂಭಪ್ರಭೇದಗಳು ಉಕ್ತವಾಗಿವೆ (ಹೊಯ್ಸವಾ. ೨೭). [ಸಂ.]

**ರುದ್ರಕಾವ್ಯ** (ನಾ). ದುಃಖದಲ್ಲಿ ಕೊನೆಗೊಳ್ಳುವ ಕಾವ್ಯ; ದುರಂತ ಕಾವ್ಯ: ಒಂದು ರುದ್ರಕಾವ್ಯವನ್ನು ಓದಿದಾಗ ಸಹ ನಾವು ಆನಂದಪಡುತ್ತೇವೆ (ನವ್ಯಕಾ. ೫೬). [ಸಂ.]

**ರುದ್ರಗಂಟಿ** (ನಾ). ೧. ಒಂದು ಬಗೆಯ ಸಸ್ಯ ಮತ್ತು ಅದರ ಹೂವು : ರುದ್ರಗಂಟಿ ಜಾಜಿ . . .ಅಂಟುಗಳನ್ನು ಮಾಡಿ ಹಚ್ಚಬೇಕು (ಕೈಪಿತ್ರ. ೨೦೦); ರುದ್ರಗಂಟಿ ಮೂಸಿ ವಿಷ್ಣುಗಂಟಿ ಹಾಸಿ (ಗಂ. ೯೭-೩). ೨. ರುದ್ರಾಕ್ಷಿಯ ಚಿತ್ರದ ಅಂಚಿರುವ ಸೀರೆ ಅಥವಾ ಪಂಚೆ: ಆಕೆಯು ಉಟ್ಟಿರುವುದು ರುದ್ರಗಂಟಿ ಸೀರೆ (ರೂಢಿ). 'ವಿಷ್ಣುಗಂಟಿ' ಪರಾ. [ರುದ್ರ + ಕಂಟ್ಟ]

**ರುದ್ರಗಂಟು** (ನಾ). [ವೀಶೈ] ಶಿವದಾರದ ಎರಡು ತುದಿಗಳನ್ನೂ ಸೇರಿಸಿ ಹಾಕುವ ಗಂಟು : ಶಿವದಾರಕ್ಕೆ ರುದ್ರಗಂಟು ಹಾಕು (ರೂಢಿ). 'ಬ್ರಹ್ಮಗಂಟು' ಪರಾ. [ರುದ್ರ + ಗಂಟು]

**ರುದ್ರಗಣ** (ನಾ). ೧. ಪರಮೇಶ್ವರನ ಪರಿವಾರದಲ್ಲಿರುವ ಒಂದು ದೇವತಾಗಣ : ಆ ಕೈಲಾಸವೇ ಕಲ್ಯಾಣವಾಗಲಾ ಕಲ್ಯಾಣಕ್ಕೆ ಪ್ರಮಥ ಗಣಂಗಳ ರುದ್ರಗಣಂಗಳ ಅಮರಗಣಂಗಳ . . . ತಂದು ನೆರಹಿದಾತ ನಮ್ಮ ಬಸವಯ್ಯನು (ಶೀಲಸ.೪. ೬-೯); ರುದ್ರಲೋಕದ ರುದ್ರಗಣಂಗಳೆಲ್ಲರು ರುದ್ರಪದವೆಂಬ ಸಂಸಾರಕ್ಕೊಳಗಾದರು (ಅಪಶಂ. ೨೩೪-೦೦೬೨). ೨.[ಛಂದ] ಅಂಶಗಣದಲ್ಲಿ ಒಂದು ಬಗೆ ; ನಾಲ್ಕು ಅಂಶಗಳಿರುವ ಗಣ: ರುದ್ರ ಗಣಮೆಂತೆಂದೊಡೆ ಗಂಗಾಧೀಶಂ (ಛಂದೋಂಬು. ೫-೨೪೦ ಪ); ಬ್ರಹ್ಮಗಣ, ವಿಷ್ಣುಗಣ, ರುದ್ರಗಣ (ಕೈಪಿಪ. ೦೦೨). [ಸಂ.]

**ರುದ್ರಜಟೆ** (ನಾ). ಒಂದು ಬಗೆಯ ಬಳ್ಳಿ: "ಶಿವಾ—ರುದ್ರಜಟೆ, ಮುಡಿವಾಳ, ನಾಳಲು" (ಓಷಧಿ. ೧೬೪) ; ಪುಷ್ಯನಕ್ಷತ್ರದಲಿ ತಂದು ರುದ್ರ ಜಟೆಯುಂಬರನಣಲೀದಗಿಜು ಕಿವಿಯಲೂದೆ ಲಲನೆಯೊಲ್ವಳ್(ಜಪಪ. ೦೩-೪೩) ; ರುದಂತಿ ರುದ್ರಜಟೆ ಸಹದೇವಿ ಮಯೂರಶಿಖಿಯಿವಂ ಸರಿಗೂಡಿ ತಣ್ಣೀರಿಂದರೆದು ಮೈಗೆ ಪೂಸಿಕೊಳ್ಳೆ ಸಕಲಕಾರ್ಯವು ಸಿದ್ಧಿಯಹುದು (ಕಾಮಶಾ. ೨೭೭). [ಸಂ. ರುದ್ರಜಟಾ]

**ರುದ್ರಜಡೆ, ರುದ್ರಜೆಡೆ** (ನಾ). = ರುದ್ರಜಟೆ : "ರುದಾ—ರುದ್ರಜಡೆ" (ಓಷಧಿ. ೨೩೯). **ರುದ್ರಜೆಡೆ** : ತುಱುಚ,ನೀಲಿ, ರುದ್ರಜೆಡೆ ಇವ ಸಮಾನಂಗೊಂಡು ಸಹದೇವಿರಸದಲ್ಲಿ ಲೇಪವಂ ಮಾಡಿದುದು ಜ್ವರಹರ (ಬಿವ್ಯಪಿ. ೦೮೩). [<ಸಂ. ರುದ್ರಜಟಾ]

**ರುದ್ರಜೆಡೆ** ' ರುದ್ರಜಡೆ ' ನೋ.

**ರುದ್ರನಾಟಕ** (ನಾ). ದುಃಖದಲ್ಲಿ ಕೊನೆಗೊಳ್ಳುವ ನಾಟಕ ; ದುರಂತ ನಾಟಕ : ರುದ್ರನಾಟಕವು ಗಂಭೀರವಾದ, ಸ್ವಲ್ಪ ವಿಶಾಲವಾದ, ಸ್ವಸಂಪೂರ್ಣವಾದ ಕಾರ್ಯವೊಂದರ ಅನುಕರಣ (ಅಂಕಾ. ೨೪ ಪಿಅ೪); ರುದ್ರನಾಟಕದಂತೆ ನಗರದ ಜೀವನ, ನರನೆ ಈ ನಾಟಕಕಾರ (ಇಂಚಾಶ. ೦೦೮-೨೮). [ಸಂ.]

**ರುದ್ರನಾಟ್ಯ** (ನಾ). ಭಯಂಕರವಾದ ನೃತ್ಯ: ಉಗ್ರಮಾರುತನು ವಾತಾವರಣವನ್ನು ಅಲ್ಲೋಲಕಲ್ಲೋಲ ಮಾಡಿ . . . ಅಬ್ಬರದಿಂದ ರುದ್ರನಾಟ್ಯದಲ್ಲಿ ತಾನೆ ತಾನಾಗಿ ಮೈಮರೆತಿದ್ದನು (ಪಿಕಲು. ೦೭೪). [ಸಂ.]

**ರುದ್ರನಾಡಿ** (ನಾ). ದೇಹದಲ್ಲಿರುವ ನಾಡಿಗಳಲ್ಲಿ ಒಂದು; ಕಾಲು ಹರಡಿನ ಕೆಳಗಿರುವ ನಾಡಿ : ರೋಗಿಗಳಿಗೆ . . . ಕಾಲ ಹರಡಿನ ಕೆಳಗೆ ರುದ್ರನಾಡಿ ಕಾಣಿಸಿಕೊಳ್ಳದೆ ಇದ್ದರೆ ಆತನಿಗೆ ಆ ದಿನವೇ ಮರಣಮೆಂದರಿವುದು (ಸಕವ್ಯ. ೦೩). [ಸಂ. ರುದ್ರನಾಡೀ]

**ರುದ್ರನಾಯಕ** (ನಾ). ರುದ್ರನಾಟಕದ ನಾಯಕ ; ದುರಂತನಾಯಕ : ಸಂಪೂರ್ಣವಾಗಿ ನಿರ್ದೋಷಿಯಾದ ಪರಮಸದ್ಗುಣಿಯಾದ ವ್ಯಕ್ತಿಯು ರುದ್ರನಾಯಕನಾಗಲು ಸಾಧ್ಯವೇ (ಅಂಕಾ. ೦೭೮); ಇದು ನನ್ನ ಜೀವನದ ರುದ್ರನಾಟಕದ ಕೊನೆಯ ದೃಶ್ಯ, ನಾನೇ ಅದರ ರುದ್ರನಾಯಕ (ಬೀಳಕ. ೦೭೦). [ಸಂ.]

**ರುದ್ರಪುಷ್ಪ** (ನಾ). ಒಂದು ಬಗೆಯ ಸಸ್ಯ ಮತ್ತು ಅದರ ಹೂವು : ದಾಸವಾಳ :. "ರುದ್ರಪುಷ್ಪಂ, ಜಪಾ—ಈ ೨ ದಾಸವಣಂ" (ಹಲಾಯು. ೩೫-೫೪). [ಸಂ.]

**ರುದ್ರಬಾಣ** (ನಾ). ರುದ್ರಮಂತ್ರವನ್ನು ಅಭಿಮಂತ್ರಿಸಿ ಬಿಡುವ ಬಾಣ: ರವಿಕುಲಾನ್ವಯ ರುದ್ರಬಾಣವ ಬಿಡೆ ಪಿನಾಕಿಗಳು ಕವಿದುದಗಣಿತ ನಂದಿ ವಾಹನ ರವಿಯ ತೇಜದ ಭಾಳನೇತ್ರರು (ಕೌಶಿರಾ. ೪೦-೫೪). [ಸಂ.]

**ರುದ್ರಭೂಮಿ** (ನಾ). ರುದ್ರನು ವಾಸಮಾಡುವ ಸ್ಥಳ ; ಶ್ಮಶಾನ : ಆ ದೇಶದ ಪ್ರಾಣಿಗಳೆಲ್ಲರೂ ಮೃತರಾದರು ಅವರ ಸುಟ್ಟ ರುದ್ರಭೂಮಿಯಲ್ಲಿ ನಾ ನಿಮ್ಮ ನಡಸುವೆ (ಅಪಶಂ. ೫೩-೨೨೭); ಆ ದಿಗಂಬರಂ ಪಡುವೊಡೆ ರುದ್ರಭೂಮಿ ನಿಮಗಲ್ಲದೊಡೆ . . . ಎಮಗೇನನೆಂದವರ್ (ಹರಿಶ್ಚಂ. ೨೦); ಬೊಪ್ಪಣ ರುದ್ರಭೂಮಿಗೆ ಬಂದಾಗ ಚಿತೆ ಪ್ರಜ್ವಲಿಸುತ್ತಿತ್ತು (ಕಾಂತಲಾ. ೦೪೦). [ಸಂ.]

**ರುದ್ರರೂಪಕ** (ನಾ). = ರುದ್ರನಾಟಕ : ಒಂದು ರುದ್ರರೂಪಕವನ್ನು ಓದುವಾಗ ಭೀತಿಯೊಡನೆ ಶಾಂತಿಯೂ ಬೆರತುಕೊಂಡಿರುತ್ತದೆ(ಪಶ್ಚಕಾ. ೬೪); ಶ್ರೀಕಂಠಯ್ಯನವರು . . . ರನ್ನನ ಗದಾಯುದ್ಧವನ್ನು ರುದ್ರರೂಪಕವಾಗಿ ಪರಿವರ್ತಿಸಿದರು (ಪಿಶಾಪಿಂ. ೦೦೭). [ಸಂ.]

**ರುದ್ರವಾಸ** (ನಾ). [ಸಂಗೀತ] ಹದಿನೆಂಟು ಬಗೆಯ ಕೊಳಲುಗಳಲ್ಲಿ ಒಂದು ; ಮುಖರಂಧ್ರದಿಂದ ಧ್ವನಿರಂಧ್ರದವರೆಗೆ ಹನ್ನೊಂದು ಅಂಗುಲ ಅಂತರವಿರುವ ಕೊಳಲು : ಜಾತಿವಾಸ . . . ರುದ್ರವಾಸ . . . ಭುವನಾಧಿಪತಿವಾಸವೆಂಬ ಹದಿನೆಂಟು ತೆಱದ ವಾಸಂಗಳ ಲಕ್ಷಣವ ನಱಿದಾ ಜಾತಿ ಮುಖದ ಕಳೆಯ ಮಯಣಮಂ ಸ್ಥಿತುಮಾಡಿ (ಪಿಪೀಳ. ೦೪೦). [ರುದ್ರ + ವಾಸ$_1$]

**ರುದ್ರವೀಣೆ** (ನಾ). ಒಂದು ಬಗೆಯ ವೀಣೆ :ವೀಣೆ ರುದ್ರವೀಣೆ ತುಂಬುರ ವೀಣೆ ಕಿನ್ನರವೀಣೆ ಕೈಲಾಸವೀಣೆ ಮೊದಲಾದ ತಂತಿ ಕಟ್ಟಿ ನುಡಿವ ವಾದ್ಯ ವನಱಿವುದು (ಅರಕ. ೬-೧೩) ; ವಿಪಂಚಿಕೆ . . . ರುದ್ರವೀಣೆಯೆಂಬ ಇಪ್ಪತ್ತೆರಡು ತೆಱದ ತಂತ್ರೀವಾದ್ಯಕ್ರಮವೆಂಬುದು (ಬಿವೇಶ. ೨೩೬); ಯಾಕೊ ಕಾಣೆ ರುದ್ರವೀಣೆ ಮಿಡಿಯುತಿರ್ಪುದು (ಗಂ. ೧೧೫-೨).

[ಸಂ. ರುದ್ರವೀಣಾ]

**ರುದ್ರವೀರ್ಯ** (ನಾ). ೧. ಶಿವನ ರೇತಸ್ಸು : (*). ೨. ಪಾದರಸ ; ಪಾರಜ : (*). ೩. ಗಂಧಕ : (*). [ಸಂ.]

**ರುದ್ರಸಾವರ್ಣಿಕ** (ನಾ). ಹದಿನಾಲ್ಕುಮನುಗಳಲ್ಲಿ ಹನ್ನೆರಡನೆಯವನು: ಸ್ವಾಯಂಭುವ . . . ರುದ್ರಸಾವರ್ಣಿಕ . . . ಇಂದ್ರಸಾವರ್ಣಿಕರೆಂಬ ಹದಿನಾಲ್ಕು ಮನುಗಳೊಳಗೆ (ಬಿವೇಶ. ೨೧೪). [ಸಂ.]

**ರುದ್ರಸೂಕ್ತ** (ನಾ). ರುದ್ರನನ್ನು ಕುರಿತು ಪಠಿಸುವ ಋಗ್ವೇದದ ಮಂತ್ರ : ಚತುರ್ಮುಖದಿಂ ರುದ್ರಸೂಕ್ತರಥಂತರಾದಿಮಂತ್ರಮನೋದು ವಬ್ಜಭವನಿಂ . . . ಪೆಂಪನಾಳ್ದು (ಶಬಶಂ. ೧-೬೯ ವ). [ಸಂ.]

**ರುದ್ರಹೋಮ** (ನಾ). ರುದ್ರದೇವತೆಯ ಪ್ರೀತ್ಯರ್ಥವಾಗಿ ಮಾಡುವ ಯಜ್ಞ : ಮುರುಗಸೆಟ್ಟಿಯ ಮಗಂ ಬಸವಯ್ಯಂ ರುದ್ರಹೋಮಂಗೆಯ್ದು (ಎಕ. IV, ಹೆಗ್ಗಡ. ೧೬-೬; 1021). [ಸಂ.]

**ರುದ್ರಾಕ್ಷ** (ನಾ). ೧. ಒಂದು ಬಗೆಯ ಮರ ಮತ್ತು (ಜಪಮಾಲೆಗೆ ಉಪಯೋಗಿಸುವ) ಅದರ ಕಾಯಿ ; P ಇದು ರುದ್ರನ ಕಣ್ಣೀರಿನಿಂದ ಹುಟ್ಟಿತು ಎಂಬ ನಂಬಿಕೆಯಿದೆ : ನಂದನಾದ್ಯಾರಾಮಂಗಳೊಳು ರುದ್ರಾಕ್ಷ . . . ಶಿರೀಷ (ಬಿವೇಶ. ೨೦೧). ೨. [ವೀಶೈ] ಅಷ್ಟಾವರಣಗಳಲ್ಲಿ ಒಂದು ; ರುದ್ರಾಕ್ಷಮರದ ಬೀಜ ; P ಶೈವರು ಹಾಗೂ ವೀರಶೈವರು ಇದನ್ನು ಪವಿತ್ರವೆಂದು ದೇಹದಲ್ಲಿ ಧರಿಸುತ್ತಾರೆ : ಮಣಿಸು: ಕಾಳು ದೊಡ್ಡದಿರಬೇಕು, ಮೇಲಿನ ಹುರುಬುರುಕುತನ ಧಮ್ಮಾಗಿದ್ದು ರುದ್ರಾಕ್ಷದಂತೆ ಸ್ಪಷ್ಟಾಗಿರಬೇಕು (ಪುಂಬವ್ಯಾ. ೫೦). [ಸಂ.]

**ರುದ್ರಾಕ್ಷಹಲಸು** (ನಾ). ಒಂದು ಬಗೆಯ ಹಲಸು : ರುದ್ರಾಕ್ಷಹಲಸು ನೆಲಹಲಸು ಬಕ್ಕೆವಲಸು (ಬಿವೇಶ. ೨೦೦).

[ರುದ್ರಾಕ್ಷ + ಹಲಸು (< ಪಲಸು)]

**ರುದ್ರಾಕ್ಷಿ** (ನಾ). ೧. = ರುದ್ರಾಕ್ಷ ೧ : ಇರಲು. ರುದ್ರಾಕ್ಷಿಗಳ ಬೀಜವ ಹರನ ಉರಿಗಣ್ಣದನು ಧರಿಸಲು ದುರಿತನಿರ್ದಹ (ಬಸ್ವಪು. ೪೫-೬೯) ; ರುದ್ರಾಕ್ಷಿ ಅಮರದವಳ್ಳಿ . . . ಕಷಾಯುವಂ ಕಾಯಿಸಿ ಕುಡಿಯೆ ದಾಹಜ್ವರ ಪರಿಹಾರವಾಗುವುದು (ಸಕವೈ. ೬೩). ೨. =ರುದ್ರಾಕ್ಷ ೨ : ವಿಭೂತಿಯನೆ ಪೂಸಿ ರುದ್ರಾಕ್ಷಿಯನೆ ಕಟ್ಟಿ ಶಿವ ನಿರ್ಮೂಲವಿಲ್ಲದಂತೆ ಆಗಿರ್ದನಯ್ಯಾ (ಬಸವ. ೨೬೯) ; ಆ ಯಜ್ಞಂಗಳ ಫಲವು ರುದ್ರಾಕ್ಷಿಯ ಧರಿಸಿದಾಕ್ಷಣದಲ್ಲಿಯೇ ದೊರೆಕೊಂಬುದು ನೋಡಾ (ಅಬಂಧೇ. ೪೪-೨). [< ಸಂ. ರುದ್ರಾಕ್ಷ]

**ರುದ್ರಾಕ್ಷೆ** (ನಾ). ೧. = ರುದ್ರಾಕ್ಷ ೧ : "ಶಿವಾಕ್ಷಂ. – ರುದ್ರಾಕ್ಷೆ" (ಚಿತ್ರ. ೧೬೪). ೨. = ರುದ್ರಾಕ್ಷ ೨ : ವಿಭೂತಿಯುಮನುದ್ಧೂಳನಂ ಮಾಡಿ ಹರುಷದಿಂ ಪಾಡುತುಂ ರುದ್ರಾಕ್ಷೆ[ಪಾಠಾಂ. ಕ್ಷಿ]ಯಂ ಸೂಡಿ (ತಿರುರ. ದೇ. ೪-೧೧). [ಸಂ. ರುದ್ರಾಕ್ಷ]

**ರುದ್ರಾಟ್ಟಹಾಸ** (ನಾ). ೧. ಶಿವನ ನಗು : ಎಲೆ ತಾರಾಗಂ ಹರಂ ಕಣ್ಣಡೆ ೯ರಗಿದುದಂತಲ್ತು ರುದ್ರಾಟ್ಟಹಾಸಂ ಜಲವಾದತ್ತಲ್ತು . . . ಎಸೆಲ್ ಚೆಲ್ಲದಾಯ್ತು ಬ್ಜಪುಡಂ (ಕಾದಂಪೂ. ೬೩೪). ೨. ಭಯಂಕರವಾದ ನಗು ; ಭೀಕರವಾದ ಅಟ್ಟಹಾಸ : ಮೊರೆದುರುಳು, ರತ್ನಧಿಯೆ. ಉಲ್ಲೋಲ ಕಲ್ಲೋಲ ರುದ್ರಾಟ್ಟಹಾಸದಿಂ (ಚಿತ್ರಾಂಗ. ೬೫-೧೬೭೪).

[ರುದ್ರ + ಅಟ್ಟಹಾಸ]

**ರುದ್ರಾಣಿ** (ನಾ). ಪರಮೇಶ್ವರನ ಹೆಂಡತಿ ; ಪಾರ್ವತಿ : "ರುದ್ರಾಣೀ . . . ಗಿರಿಜಾ, ಮೇನಕಾತ್ಮಜಾ – ಈ ೨೧ ಗೌರೀದೇವಿಯ ಪೆಸರ್" (ಹಲಾಯು. ೪-೧೫) ; ರಾಣಿಯ ವಾಸದ ಪೊಸ ನೇರಾಣಿಯ ಮಾಡಂಗಳೊಳಗೆ ಕೆಯ್ಗೆಯ್ದಿರೆ ರುದ್ರಾಣಿ ವರುಣಾನಿ ನೆಗಟ್ದಿಂದ್ರಾಣಿಯೆನಲ್ಕಕ್ಕುಮಿಕ್ಕ ಮಹಿಷೀಬೃಂದಂ (ಶಾಂತಿಪು. ೧೧-೭೧). [ಸಂ. ರುದ್ರಾಣೀ]

**ರುದ್ರಾಭಿಷೇಕ** (ನಾ). ರುದ್ರಮಂತ್ರವನ್ನು ಪಠಿಸುತ್ತಾ ಶಿವಲಿಂಗಕ್ಕೆ ಮಾಡುವ ಅಭಿಷೇಕ : ಮಧ್ಯಾಹ್ನ ರುದ್ರಾಭಿಷೇಕ . . . ನೂರೆಂಟು ಆರತಿಯ ರಂಗಪೂಜೆ (ದೇವಹಂ. ೯). [ಸಂ.]

**ರುದ್ರಾವತಾರ** (ನಾ). ೧. ಶಿವನ ಅವತಾರ : ಭಾವಿಸುವಡೀತಲ್ಲದಿದ್ದಡೆ ಭೂವಳಯದೊಳಗುದಯಿಸಿದ ರುದ್ರಾವತಾರದ ದಿವ್ಯಮಹಿಮೆಯಿದೆಂತ ಮರ್ದಪುದು (ಬಸಪು. ೫೩-೬). ೨. ರುದ್ರನ ಅಂಶದಿಂದ ಹುಟ್ಟಿದವನು; ಅಶ್ವತ್ಥಾಮ ಮೊದಲಾದವರು : ಕಮಲಕುಲೋದ್ಭವ ಮಿಗೆ ವಿಷ್ಣುಮೂರ್ತಿ. ರುದ್ರಾವತಾರನಿಱಿವಬೆಡಂಗಂ (ಗದಾಯು. ೧-೧೪) ; ರುದ್ರಾವತಾರನು ವೀರಶೃಂಗಾರ (ಬಸಪು. ೬೧-೧) ; ಬಾರ, ಬೀರರ ಬೀರ, ದೈವಮನ್ ಲೆಕ್ಕಿಸದ ರುದ್ರಾವತಾರ ! (ಅಕ್ಷಕಾ. ೪-೬೦). ೩. ಭಯಂಕರವಾದ ರೂಪ : ರಣಹಲಗೆ ಸದ್ದಿನಲಿ ಜಿದ್ದು ಕಟ್ಟಿದ್ದಿರುವ ಜಡಿಮಳೆಯ ರುದ್ರಾವತಾರ ! (ನಲಿವು. ೧೪-೮) ; ಅವಳ ಚಿತ್ರಪಟಲದ ಮೇಲೆ ಅವಳ ಹಿಂದಿನ ಜೀವನವೆಲ್ಲ ಜೀವ ತಾಳಿ ರುದ್ರಾವತಾರದಿಂದ ಕುಣಿಯತೊಡಗಿತು (ಹಳ್ಳಿಹಾ. ೬೩).

ರುದ್ರಾವತಾರಜನಕ=ಅಶ್ವತ್ಥಾಮನ ತಂದೆ; ದ್ರೋಣ: ತ್ರೈಲೋಕ್ಯ ಧನುರ್ಧರನುಂ ರುದ್ರಾವತಾರಜನಕನುಂ . . . ಎನಿಸಿದ ಬಿಲ್ಲ ಜಾಣಂ ದ್ರೋಣನಟ್ಟಿನೊಳಂ (ಗದಾಯು. ೨-೧೧ ವ). [ಸಂ.]

**ರುಧಿರ** (ಗು). ೧. ಕೆಂಪಾದ : ರಕ್ತವರ್ಣದ. (ನಾ). ೨. ಕೆಂಪುಬಣ್ಣ : ರಕ್ತವರ್ಣ : ಬಾಳುಡಿ ಪಾಱಿ ಬೀಟೆ ಪಗಲುಳ್ಕದವೊಲ್ ರುಧಿರಂ ದಿಗಂತಮಂ ಮೇಳಿಸಿ ಕೊರ್ವಿ ಕಲ್ಪದವಸಾನದ ಸಂಜೆಮುಗಿಲ್ಗಳಂದಮಂ ಪಾಳಿಸೆ (ಶಂರಾಪೂ. ೧೩-೬೩). ೩. ನೆತ್ತರು; ರಕ್ತ : "ಕ್ಷತಜಂ . . . ರುಧಿರಂ . . . ರಕ್ತಂ — ಈ ೭ ನೆತ್ತರು" (ಹಲಾಯು. ೧೧೪-೧೧); ಅಧಿಕರಿಪುನೃಪತಿಬಳನವರುಧಿರಜಳಸ್ಫುರಿತರೌದ್ರಮಿಾ ಗದೆ ಪೆಸರಿಂ ರುಧಿರಮುಖಿಯೆಂಬುದು (ಶಂಪಭಾ. ೬-೫); ರುಧಿರಂ ಬಸಿಯೆ [ಪಾಠಾಂ. ಕಡುಮುಳಸಿಂದ] ಹೊಯ್ದು (ಹತಕಾ. ೭-೨೫); ರಾಮಾದಿಗಳುಮರಸುತ್ತ ಬಂದು ಕಂಡರು . . . ರುಧಿರಸಿಕ್ತಾಂಗನಂ, ಕ್ಲಾಂತ ಸುಗ್ರೀವನಂ (ತ್ರೀರಾಪೂ. ೩೧೭-೧೭೦). ೪. [ಜ್ಯೋತಿ] ಕುಜಗ್ರಹ ; ಅಂಗಾರಕ : ಹತ್ತನೆಯೊಳ್ ರುಧಿರಂ ನಾಲ್ಕನೆಯೊಳ್ ರವಿ ನಿಧನಂ ಮನುಜಂಗೆ ಲಗುಡಪಾತದಿನಕ್ಕುಂ (ಜಾತಕ. ೨೩-೧೧). [ಸಂ.]

**ರುಧಿರೆ** (ನಾ). ಒಂದು ಬಗೆಯ ಸಸ್ಯ; ಮದರಂಗಿ : "ರುಧಿರೆಯೆನೆ ಮಧುರಂಗಿ" (ಮಂಗರಾ. ೩೫-೧೫). [ಸಂ. ರುಧಿರ]

**ರುಧಿರೋದ್ಗಾರಿ** (ಗು). ೧. ರಕ್ತವನ್ನು ಕಾರುವ. (ನಾ). ೨. ಅರುವತ್ತು ಸಂವತ್ಸರಗಳಲ್ಲಿ ಐವತ್ತೇಳನೆಯದು : ೯ನೆಯ ರುಧಿರೋದ್ಗಾರಿ ಸಂವತ್ಸರದ ಪುಷ್ಯಸುದ್ಧ ೧೩ (ಕೊಲ್ಹಾಶಾ. ೪-೯ ; 1083) ; ಮತ್ತಮಾ ವರ್ಷವೇ ಪ್ರಭವ . . . ರುಧಿರೋದ್ಗಾರಿ . . . ಅಕ್ಷಯಮೆಂದಱುವತ್ತು ತೆಱನಾಗಿಹುದು (ಬಿವೇಶ. ೨೬೩). [ಸಂ. ರುಧಿರೋದ್ಗಾರಿನ್]

**ರುಪಾಯಿ** ' ರೂಪಾಯಿ ' ನೋ.

**ರುಬ್ಬು** (ಕ್ರಿ). ತಿರುವು ; ನುಣ್ಣೆಸು : ಆ ಶರಣ ಬೀದಿಲೀ ಬರುತ್ತಲಿರ್ದು ಜೋಳ ರುಬ್ಬುತಲಿಂದುವಂದನೆ ಓರ್ವಳಿರಲಾ ರುಬ್ಬುಕಲ್ಲೂ ಕಂಡು (ಕೊಲ್ಲಿಪಾ. ೧೪೧-೪); ಆಲದ ಮೊಗ್ಗು . . . ಅಕ್ಕಿ ಇವನ್ನು ರುಬ್ಬಿ ಅಂಬಲಿ ಕಾಯಿಸಿ ತುಪ್ಪ ಹಾಕಿಕೊಂಡು ಕುಡಿಯಲು ಮೂತ್ರ ಬಿಡುವುದು (ಸಕವೈ. ಪಂ. ೪೯೪). [ದೇ.॥ ತಮಿ. ರುಪ್ಪು; ತೆಲು. ರುಬ್ಬು]

**ರುಬ್ಬುಕಲ್ಲು** 'ರುಬ್ಬುಗಲ್ಲು' ನೋ.

**ರುಬ್ಬುಗಲ್ಲು**, ರುಬ್ಬುಕಲ್ಲು (ನಾ). ಒರಳಿನಲ್ಲಿ ಪದಾರ್ಥವನ್ನು ಹಾಕಿ ತಿರುವಲು ಬಳಸುವ ಗುಂಡಾದ ಕಲ್ಲು; ಗುಂಡುಕಲ್ಲು : ಅವನ ಕೈ ರುಬ್ಬುಗಲ್ಲನ್ನು ಉರುಳಿಸುತ್ತಿತ್ತು (ಮುಳ್ಳಿಹಾ. ೬೫). **ರುಬ್ಬುಕಲ್ಲು :** ಆ ಶರಣ ಬೀದಿಲೀ ಬರುತ್ತಲಿರ್ದು . . . ಆ ರುಬ್ಬುಕಲ್ಲೂ ಕಂಡು (ಕೊಲ್ಲಿಪಾ. ೦೧೦-೪). [ರುಬ್ಬು + ಕಲ್ಲು (< ಕಲ್$_3$)]

**ರುಬ್ಬುಗುಂಡು** (ನಾ). = ರುಬ್ಬುಗಲ್ಲು : ನಿಮ್ಮ ಶಿರಸ್ಸು ಎಂಬುದು ಹೇಗೆ ಬೇಕೋ ಹಾಗೆ ಹೊರಳಿಸಬಲ್ಲ ರುಬ್ಬುಗುಂಡಾಗಬೇಕು (ದೇಶಭ. ೬೨); ಹೃದಯವೋ ರುಬ್ಬುಗುಂಡೋ (ಕಂಠಿಪಾ. ೨೬-೩). [ರುಬ್ಬು + ಗುಂಡು]

**ರುಮಡಿ** (ನಾ). ಒಂದು ಬಗೆಯ ಮರ; ಔದುಂಬರವೃಕ್ಷ; ಅತ್ತಿಮರ : ಅತ್ತಿ (ಉಂಬರ, ರುಮಡಿ) :_ ಪ್ರಸಿದ್ಧ – ಕಟ್ಟಿಗೆ ಸಾಧಾರಣ ತರದ್ದು (ಶಭಾಗ. ೩೫). [← ಮರಾ. ರುಮಡ, ರುಂಬಡ]

**ರುಮಾಲಿ** (ನಾ). ಕಳ್ಳತನಕ್ಕಾಗಿ, ದೇಹವು ಒಳಗೆ ತೂರುವಂತೆ, ಮನೆಯ ಛಾವಣಿಯಲ್ಲಿ ರಂಧ್ರ ಕೊರೆದು ಇಳಿಯುವಿಕೆ : ಬಾಗಿಲಿನ ಹತ್ತಿರ ಗೋಡೆ ಕೊರೆದು ಒಳಸೇರುವುದಕ್ಕೆ "ಬಗಲಿ" ಪದ್ಧತಿಯೆಂದೂ, ಛಾವಣಿಯಿಂದಿಳಿಯುವುದಕ್ಕೆ "ರುಮಾಲಿ" ಪದ್ಧತಿಯೆಂದೂ ಕರೆಯುವ ರೂಢಿಯಿದೆ (ಬಂಗಾರ. ೦೫೦). [← ಮರಾ. ರುಮಾಲೀ]

**ರುಮಾಲು$_1$**, ರುಂಬಾಲ, ರುಮಾಲೆ, ರುಮ್ಮಾಲು, ರೂಮಾಲು, ರೂಮಾಲೆ (ನಾ). ತಲೆಗೆ ಸುತ್ತಿಕೊಳ್ಳುವ ಉದ್ದವಾದ ಬಟ್ಟೆ; ಪೇಟ ; ಮುಂಡಾಸು : ಚಿನ್ನದ ಸರಿಗೆರುಮಾಲು ಸುತ್ತಿ ಮಲ್ಲಿಗೆಯಂ ಮುಡಿದು (ಹುಪಳ. ೬೦); ರುಮಾಲುಗಳಂ ಕೈಗಳಿಂ ಸುಮಾನದೀದ ಪಿಡಿದು (ಶೌಗಂಂ. ೨೦೩-೨೦) ; ಹೊರಗೆ ಹೊರಟಾಗ ತಲೆಗೊಂದು ರುಮಾಲು (ರತ್ನಗೋ. ೫). **ರುಂಬಾಲ :** ನೀ ರುಂಬಾಲ ಸುತ್ತು (ಅಕೋಳ. ೦೬) ; ನಾಲ್ಕು ಬೆರಳು ಅಂಚಿನ ಜರತಿ ರುಂಬಾಲ (ಜಮುಂಗಾಕೃ. ೨೬). **ರುಮಾಲೆ :** ಗಂಡಸರು ತಲೆಗೊಂದು ರುಮಾಲೆಯನ್ನು ಬಿಗಿಯುವರು (ಬಾಂಶ್ರ. I. ೩೯೦). **ರುಮ್ಮಾಲು :** ಮಿಸುನಿಯ ಜರತಾರ ರುಮ್ಮಾಲು ಪೈರಣಿ ಪೊಸತಾದ ದುಪ್ಪಟದಿಂದ . . . ರಂಜಿಸಿದನು (ಕಂಪಶಿ. ೨೩-೯೦) ; ಛಾರಿಜರದ ವಾರಿ ರುಮ್ಮಾಲಾ ಸುತ್ತಿಕೊಂಡಾಂವಾ (ಸಂಗೀ. ೯೨-೩). **ರೂಮಾಲು :** ಜರೀಪೇಟ ರೂಮಾಲನ್ನು ಸುತ್ತಿಕೊಂಡು ಹಾಡುತ್ತಿರಲು (ಕಥಾಮಂ. IV. ೦೦). **ರೂಮಾಲೆ :** ಪೂಮಾಲೆ ಇಲ್ಲದಿದ್ದರೆ ರೂಮಾಲೆ ಬೇಡವೋ ? (ಗಾದೆ). [← ಪಾರ. ಹಿಂ. ರುಮಾಲ್, ರೂಮಾಲ್ ; ಮರಾ. ರುಮಾಲ್./ತಮಿ. ರುಮಾಲೈ, ಉರುಮಾಲೈ; ತುಳು. ರುಮಾಲ್; ತೆಲು. ರುಮಾಲು]

**ರುಮಾಲು$_2$** (ನಾ). ಒಂದು ಘನಅಡಿ ; ಒಂದು ಘನಪೂಟು : ಬಾವಿಯು ಆಳವನ್ನೆಲ್ಲ ಒಂದು ರುಮಾಲಿನಳತೆಯಷ್ಟು ಅಗಿದು ತೆಗೆದರೆ ಹತ್ತು ಆಣೆ ಯೆಂದವರು ತಿಳಿದಿದ್ದರು. ಆದರೆ ಒಂದು ರುಮಾಲೆಂದರೆ ಒಂದು ಘನಪೂಟು ಎಂದು ಲೆಕ್ಕವಿತ್ತು (ಸ್ಕಂತಿತ. ೩೩೯). [ ? ]

**ರುಮಾಲೆ** ' ರುಮಾಲು$_1$ ' ನೋ.

**ರುಮುಜುಮು** (ನಾ). ಒಂದು ಅನುಕರಣ ಪದ : ಜುಮ್‌ಜುಮು ರುಮುಜುಮು ಗುಂಗುಣು ದುಮುದುಮುನಾದದ ನದಿಯೊಂದು ನಡೆಧಾಂಗ (ಸಂಗೀ. ೩೦-೦೩).

**ರುಮುರುಮು** (ಅ). ವೇಗವಾಗಿ ಎಂಬರ್ಥವನ್ನು ಸೂಚಿಸುವ ಒಂದು ಅನುಕರಣಾವ್ಯಯ : ರುಮುರುಮು ಹೆಜ್ಜೆ ಇಡುತ್ತ ಶಿನ್ನನ ಮನೆಯತ್ತ ನಡೆಯಹತ್ತಿದ (ಮೂರುಬಾ. ೦೦) ; ಗಾಳಿ ರುಮುರುಮು ಬೀಸುತ್ತಿರುತ್ತದೆ (ಕುಕ್ಕುಕು. ೩೦).

**ರುಮೆ** (ನಾ). ಉಪ್ಪಿನ ಗಣಿ ; ಉಪ್ಪಿನ ಮೋಳೆ : "ಉಪ್ಪಿನ ಕಟ್ಟೆರು ಮನೆ (ರುಮಾ)ಯೆಂಬುದು" (ಹಲಾಯು. ೨೯-೦೫) ; ಪುಷ್ಪಾದಿ ರುಮೆಯ ನ್ನೆರದು ಲವಣವೆನಿಪಂತೆ (ಅಪಂಶಾ. ೯-೪-೭). [ಸಂ. ರುಮಾ]

**ರುಮ್ಮಾಲು** ' ರುಮಾಲು$_1$ ' ನೋ.

**ರುಮ್ಮು$_1$** (ಕ್ರಿ). ಸುತ್ತಾಡಿಸು ; ಶ್ರಮಪಡಿಸು (?) : ಗಾಣ ಹಾಕಿ ರುಮ್ಮಿದರ ಇದರ ಡುಬ್ಬ ಕಡಿಯಾಕ ಆಗದಿದ್ದರ ನನ್ನ ಹೆಸರಗೊಂಡ ಕರಿ ಬ್ಯಾಡಿರಿ (ಬಾಪಿಂ. ೦೫). [<ರುಬ್ಬು$_1$]

**ರುಮ್ಮು$_2$** (ನಾ). (ಉಕ) ಕುಂಟೆಯನ್ನು ಹಿಡಿಯಲು ಅನುಕೂಲಿಸುವಂತೆ ಅಳವಡಿಸಿರುವ ಹಿಡಿ,–ಹಿಡಿಕೆ : ರುಮ್ಮಿನ ಮೇಲೆ ಭಾರ ಹಾಕಿ ರಂಟೆ ಹೊಡೆಯಲಿ (ರೂಢಿ). [?./ಮರಾ. ರುಮಣೀ]

**ರುರು** (ನಾ). ೧. ಮೈಮೇಲೆ ಬಿಳಿಯ ಚುಕ್ಕೆಗಳಿರುವ ಒಂದು ಬಗೆಯ ಜಿಂಕೆ : "ಸಾರಂಗಃ . . . ರುರುಃ – ಈ ೪ ಸುರಂಗಂ" (ಹಲಾಯು. ೩೯-೭೭). ; ರುರುಗಣಮಿತ್ತಲಿತ್ತ ವಿಚರನ್ಮೃಗಸಂಕುಳಮಿತ್ತಲಿತ್ತ (ಶಾರಂಪೂ. ೦೫೭) ; ಕರಿ ರುರು ಹರಿಣ ಶಶಕ ಸಾರಂಗಮ ಮೊದಲಾದ ಮೃಗಂಗಳೊಡನೆ ಬದ್ಧವೈರಮಂ ಪತ್ತುವಿಟ್ಟು (ಶಂಕಶಂ. ೦೦೯-೨೦). ೨. ನಾಯಿ : 'ರುರುಪರಿಚಿತ' ಪರಾ. ೩. ಒಂದು ಬಗೆಯ ಕ್ರೂರ ಮೃಗ. [ಸಂ.]

**ರುರುಪರಿಚಿತ** (ಗು). ೧ ಜಿಂಕೆಗಳಿಂದ ಕೂಡಿರುವ. ೨. ನಾಯಿಗಳಿಂದ ಕೂಡಿರುವ. ೧, ೨ : ಆ ಮಹಾವನಂ . . . ಭೈರವಾವಳಿಯಂತೆ ರುರುಪರಿಚಿತಮುಂ ಪಿತಾಮಹಾನನದಂತೆ ಸಾಮಜಪದಾಭಿರಾಮಮುಂ (ಕಂದ್ರಪ್ರಭು. ೫-೩೨ ವ).   [ಸಂ.]

**ರುರುವಂತಿ** (ನಾ). ಒಂದು ಬಗೆಯ ಸಸ್ಯ ; ತೊಬರೆಗಿಡ : "ತುಂಬಿ ರುರುವಂತಿ ತಿಂದುಕಂ" (ಮುಂಗಿರಾ. ೩೫-೦೩). [ ? ]

**ರುರುವಕ್ತ್ರ** (ನಾ). ೧. ಜಿಂಕೆಯಂತೆ ಮುಖವುಳ್ಳವನು. ೨. ಶಿವ ಗಣಗಳಲ್ಲಿ ಒಬ್ಬ : ಪಯುಶ್ಚರವಕ್ತ್ರಂ ರುರುವಕ್ತ್ರನೆಂಬರೆಸೆದರ್ವಿಶ್ವೇಶ್ವರಾ ಸ್ಥಾನದೊಳ್ (ರಾಜಶೇ. ೦೪-೦೫೪). [ಸಂ.]

**ರುವತ್ಕೀರ** (ನಾ). ಧ್ವನಿಮಾಡುತ್ತಿರುವ ಗಿಳಿ : . ಅಗಲ್ದು ಪೋಗವು ರುವತ್ಕೀರಾಳಿ ಕೇದಾರದಿಂ (ಜಗಪಿ. ೨-೬). [ಸಂ.]

**ರುವರಿ** ' ರೂವಾರಿ' ನೋ.

**ರುವಾರಿ** ' ರೂವಾರಿ' ನೋ.

**ರುವಿ** 'ರುವ್ವಿ' ನೋ.

**ರುವ್ವಿ**, ರುವಿ (ನಾ). ಒಂದು ಸಣ್ಣ ನಾಣ್ಯ ; ದಮ್ಮಡಿ : ಕೊಂಡಾಡಿ ಬೇಡಿದ್ದರು ಕೊಡರೊಂದು ರುವ್ವಿಯನು [ ಪಾಠಾಂ. ಪೈಸವನು] (ಕೃಕಂದ. ೦-೨೯-೩) ; ಟೆಂಕೆ ೧ಕ್ಕೆ ೪ ದುಡ್ಡು ೧೬ ಸುಗಿಗಾಣಿ ೪ ಪೈಸಾ ೮ ಛಾಪ್ರಾ ಗಾಣಿ ೧೨ ಛಾರ್ಹಾಗಾಣಿ ೧ಕ್ಕೆ ದುಗ್ಗಾಣಿ ೨ ದುಡ್ಡಿಗೆ ೩ ರುವ್ವಿ (ಶಾಸ್ಕೃಕ. ೭೭-೨) ; ರುವ್ವಿ ಕೊಡದವ ರುಮಾಲು ಕೊಟ್ಟಾನೆ ? (ಗಾದೆ). **ರುವಿ :** ಒಂದು ದುಡ್ಡಿಗೆ ಮೂರು ರುವಿ (ಶಭಾಗ. ೨೯೦) ; ರುವಿ ದುಗ್ಗಾಣಿಯನ್ನು ಕೊಡಿಸಿ ಗಿರಾಕಿಯನ್ನು ಕಳುಹಿಸುವುದಕ್ಕೆ ಹತ್ತು ನಿಮಿಷ ಬೇಕಾಯ್ತು ಅಚ್ಚಯ್ಯನಿಗೆ (ದೇಪಹಂ. ೭೭).
[ದೇ.॥ ತುಳು. ರುವಿ, ರುಯಿ ; ತೆಲು. ರುವ್ವ]

**ರುಷವತ್ತು** 'ರುಷುವತ್ತು' ನೋ.

**ರುಷಿ**, ರಿಷಿ, ರಿಸಿ, ರುಸಿ (ನಾ). ತಪಸ್ಸುಮಾಡುವವನು ; ಮುನಿ : ಶ್ರಾವಕರಿಂ ರುಷಿಯರಿಂ ಕೃತಾರ್ಥರುಮೊಳರೇ (ಧರ್ಮಾಮೃ. ೦-೨೦೫) ; ಒಡನಂದಿನ ರುಷಿಗಳು ತಮ್ಮ ಪೆಸರಲಿ ಬಿಡದೆ ತೀರ್ಥವ ಕಲ್ಪಿಸಲು (ಕಂಕಪಿ. ೫-೩೭). **ರಿಷಿ :** ಶ್ರೀಮಾಸೇನಪ್ಪರಮಪ್ರಭಾವರಿಷಿಯರ್ (ಎಕ. II, ೨೭-೦ ; ಶ. 700) ; ಅಲ್ಲಿಯ ರಿಷಿಯರಾಸ್ ಚಿರಚ್ಛೇದಂಗೆಯ್ದು ಪಾತಕನಕ್ಕು (ಎಕ. X (S). ಶಕ್ರಿಪ. ೬೭-೨೪; 850). **ರಿಸಿ :** ನಾಡೊಳಗಿರ್ದ ರಿಸಿಯ

ರ್ಗಳ್ಗೆಲ್ಲಂ ಬಟಿಯುಟ್ಟಿ (ವಡ್ಡಾರಾ. ೬೬-೮); ರಿಸಿಗಳೊಳ್ ಆರೆಬರ್ ಒಂದೆಡೆಯೊಳ್ ಪಟುವಾತಂ ನುಡಿಯುತೆ ಜನ್ನದಾರವಮಂ ಪೊಸೆಯುತಿರ್ಪರ್ (ಅದ್ಭುತ. ೦-೯). **ರುಸಿ** : 'ರುಸಿವಳ್ಳಿ' ಪರಾ. [<ಸಂ. ಋಷಿ]

**ರುಷಿತ** (ಗು). ಕೋಪಗೊಂಡ ; ರೋಷಗೊಂಡ : ಸಿಂಜಿನಿಯ ಚಾಪಟಂಕೃತಿ, ಕಲಿಯ ಪೌರುಷದ ರುಷಿತರಾವಂ . . . ಕೇಳಿಸಿತು ಕಿವಿಗತಿ ಕಠೋರವಂ ! (ಚಿತ್ರಾಂಗ. ೬೨-೨೨೫೩). [ಸಂ.]

**ರುಷುವತ್ತು**, ರುಷವತ್ತು (ನಾ). ನ್ಯಾಯವಿರುದ್ಧವಾಗಿ ಪಡೆಯುವ ಅಥವಾ ಕೊಡುವ ಹಣ ; ಲಂಚ : ಕಕ್ಷಿಗಾರರಿಂದ ರುಷುವತ್ತಿಗೆ ಯತ್ನಪಟ್ಟರೆ ನಾನು ಮ್ಯಾಜಿಸ್ಟ್ರೇಟಾಗಿ ಗಮನಿಸಬೇಕಾಗುತ್ತೆ (ಕಲಿಪ. ೩೩೯); ನಮ್ಮ ಅಧಿಕಾರಿಗಳು ಯಾರೂ ಲಂಚ ರುಷುವತ್ತು ತೆಗೆದುಕೊಳ್ಳಕೂಡದು (ಶ್ರೀವಾಣಿ. II, ೪೬೦). **ರುಷವತ್ತು** : ಲಂಚ, 'ರುಷವತ್ತು' (Bribe. ೩೦೪೩). [ ←ಅರ. ಪಾರ. ಹಿಂ. ರಿಶ್ವತ್ ; ಮರಾ. ರುಶವತ್, ರುಶ್ವತ್, ರುಷ್ವತ್, ರಿಶ್ವತ್ ]

**ರುಷೆ** (ನಾ). ಕೋಪ ; ಸಿಟ್ಟು : ನೀಂ . . . ರುಷೆಯನಿಂತಾರೊಳಭಿನಯಿಸುತಿರುವೆ (ಶಾಕುಂ. ೯೩). [ ಸಂ. ರುಷಾ ]

**ರುಷ್ಟ** (ಗು). ೧. ಕೋಪಗೊಂಡ ; ಸಿಟ್ಟಿನಿಂದ ಕೂಡಿದ. (ನಾ). ೨. ಕೋಪ ; ಸಿಟ್ಟು. ೩. ಕೋಪಗೊಂಡ ವ್ಯಕ್ತಿ ; ಸಿಟ್ಟಾದ ವ್ಯಕ್ತಿ : ಪದಗರ್ಭವನ್ನು ಕೇಳಿದ ಪಂಡಿತರು ಒಡನೇ ರುಷ್ಟರಾದರು (ಕಥಾ. ೩೨೯) ; ಅವರ ಮಾತಿಗೆ ಸಾಧ್ವಿಯಾದ ಸೋಫಿಯಾಳು ರುಷ್ಟಳಾದಳು (ಸ್ತ್ರೀಲಿಬಿ. ೯೭). [ ಸಂ. ]

**ರುಷ್ಯ** (ನಾ). ಮೈಮೇಲೆ ಬಿಳಿಚುಕ್ಕೆಗಳುಳ್ಳ ಅಥವಾ ಬಿಳಿಬಣ್ಣದ ಪಾದಗಳುಳ್ಳ ಜಿಂಕೆ : "ಆ ರುಷ್ಯವುದು . . . ಸಾರಂಗಮುಕ್ಕು" (ಮಂಗರಾ. ೪೬-೦೦). [ <ಸಂ. ಋಶ್ಯ ]

**ರುಸಿ** ' ರುಷಿ ' ನೋ.

**ರುಸಿಪಳ್ಳಿ** ' ರುಸಿವಳ್ಳಿ ' ನೋ.

**ರುಸಿವಳ್ಳಿ**, ರಿಷಿಹಳ್ಳಿ, ರುಸಿಪಳ್ಳಿ (ನಾ). ಋಷಿಗಳು ವಾಸಿಸುವ ಸ್ಥಳ ; ಆಶ್ರಮ : ಈ ರುಸಿವಳ್ಳಿಯೊಳಾನವಿಚಾರದೆ ಋಷಿಸುತನನೊರ್ವನಂ ಕೊಂದೊಡೆ (ಶಂಖಕ್ಕೊ. ೨೬೯-೦೩). **ರಿಷಿಹಳ್ಳಿ** : ಬಸದಿಯ ವಸದಲಿ ಪಲವ ಮನೆಗಳ ಮಾಡಿಸಿ ರಿಷಿಹಳ್ಳಿಯೆಂದು ಪೆಸರನಿಟ್ಟು (ಎ.ಕ. ೦೯೩೨, ೦೩-೨೬ ; 1069). **ರುಸಿಪಳ್ಳಿ** : ಸಿಂಧುತೀರದ ರುಸಿ[ಶಾಶಾಂ. ಋಷಿ], ಪಳ್ಳಿಯೊಳ್ ಮೃಗಾಯಣನೆಂಬ ಮುನಿಗಂ ವಿಶಾಖೆಯೆಂಬ ಗೊರತಿಗಂ ಗೌತಮನೆಂಬ ಮಗನಾಗಿ ಪುಟ್ಟಿ (ಅರ್ಥನೇ. ೪-೦೨೭ ವ).

[ ರುಸಿ (<ರುಷಿ) + ಪಳ್ಳಿ$_1$ ]

**ರುಸುಂ**, ರುಸುಮು (ನಾ). ನಿಯಮಾನುಸಾರವಾಗಿ ಕೊಡುವ ಶುಲ್ಕ, ತೆರಿಗೆ ಮೊದಲಾದ ಹಣ : ದಿವಾನ್‌ಪೂರ್ಣಯ್ಯನವರಿಗೆ . . . ನಿವ್ವಳಹಣದಲ್ಲಿ ಶೇಕಡ ಅರ್ಧರೂಪಾಯಿಯಂತೆ ರುಸುಂ ಸಹ ಪಾವತಿಯಾಗುತ್ತಿತ್ತು (ಪುಹಾವಂ. II, ೩೩) ; ಅವರಿಗೆ ಕೊಡುವ ರುಸುಂ ಕ್ರಮಪಡಿಸಲ್ಪಡುವುದು (ಗ್ರಾಮಾಕ. ೮). **ರುಸುಮು** : ಫಸಲು ಕಟಾವಾದ ಕೂಡಲೆ ಧಾನ್ಯವು ಕಣದಲ್ಲಿ ಇದ್ದ ಹಾಗೆಯೇ ಬಾರಾಬಲೂತಿಯ ರುಸುಮುಗಳನ್ನು ತಗೆಯುತ್ತಿದ್ದರು (ಕಾಮಚಂ. ೩೪೦) ; ಒಂದು ಗಂಟೆಯ ಸಮಾರಂಭಕ್ಕೆ ಐವತ್ತುರೂಪಾಯಿಗಳ ರುಸುಮು ತೆಗೆದುಕೊಂಡ ಒಬ್ಬ ಪುರೋಹಿತ (ವಂಕಪ್ಪ. ೨೪೦). [ ←ಅರ. ರಸೂಮ್ ; ಹಿಂ. ರುಸೂಮ್, ರಸೂಮ್ ; ಮರಾ. ರುಸುಮ್, ರುಸೂಮ್ ]

**ರುಸುಮು** ' ರುಸುಂ ' ನೋ.

**ರುಸ್ತುಂ** (ಗು). ೧. ಸಮರ್ಥನಾದ ; ಗಟ್ಟಿಗನಾದ : ಕ್ಲಬ್ಬಿನ ರುಸ್ತುಂ ಆಟಗಾರರು (ಕಾಯಕ.೩೩). (ನಾ). ೨. ಸಮರ್ಥ; ಗಟ್ಟಿಗ: ಬಹಳ ರುಸ್ತುಂ ಕಾಣೋ, ನೀನು (ನಡೆದಾ. II, ೬೩೮).

[ ←ಅರ. ಹಿಂ. ರುಸ್ತಮ್ ; ಪಾರ. ಮರಾ. ರುಸ್ತುಮ್, ರುಸ್ತೂಮ್, ರುಸ್ತಮ್ ]

**ರುಹಾ** (ನಾ). ಗರಿಕೆ ; ದೂರ್ವೆ : "ದೂರ್ವಾ . . . ರುಹಾ, ಅನಂತಾ— ೬ ಗರಿಕೆಹುಲ್ಲಿನ ಪೆಸರುಗಳು" (ಸಿದ್ಧಾಂತ. ೦೪೯). [ ಸಂ. ರುಹಾ ]

**ರುಳಿ** ' ಲುಳ್ಳಿ$_2$ ' ನೋ.

**ರೂ**$_1$ (ನಾ). (ಪಾಠ, ಮಗ್ಗಿ ಮೊದಲಾದುವನ್ನು) ಕಂಠಪಾಠಮಾಡುವುದು ; ಉರು : (ಶ).

**ರೂಹಾಕು** = ಗಟ್ಟಿಮಾಡು ; ಉರುಹಾಕು : ಸಂಜೇ ಮುಂಚಾನೇ ಎಷ್ಟು ರೂಹಾಕಿದ್ರೂ ನನಗನಕಾ ಒಂದ ಕವಿತಾಯೇನ್ಪಾಠ ಮಾಡಲಿಕ್ಕ ಆಗತಿದ್ದಿಲ್ಲಾ (ಶಿಂಚಚು. ೪೨) ; ಮಾಸ್ತರರು . . . ಮಾತನ್ನು 'ರೂ' ಹಾಕುತ್ತಿದ್ದರು (ಗಂಗಾಸ. ೩೭). [← ತೆಲು. ರೂವು, ರುವ್ವು ]

**ರೂ**$_2$ (ನಾ). 'ರೂಪಾಯಿ' ಎಂಬುದರ ಸಂಕ್ಷಿಪ್ತರೂಪ : ಆ ಪುಸ್ತಕಕ್ಕೆ ಎರಡು ರೂ. ಹತ್ತು ಪೈಸೆ (ರಚಿ). [ < ರೂಪಾಯಿ ]

**ರೂಕ್ಷ** (ಗು). ೧. ಬಿರುಸಾದ ; ಒರಟಾದ ; ನುಣುಪಾಗಿರದ : ರೂಕ್ಷಕೇಶದ ಕಲಿಪುರುಷ ಸಾಕ್ಷಾತ್ಕರಿಸಿ (ತಿಮ್ಮಸ್ತ್ರೀ. ೦-೬೪); ಸಿಂಹಾಕೃತಿಯ ಮಹಾರೂಕ್ಷಶೈಲೋಪಮಂ ಭೀಮಕಾಯಂ ಕಠಿನಗಂಭೀರನಾ ಯೋಗಿ (ಶ್ರೀರಾಮಾ. ೦೪೩-೩೮). ೨. ಕಠಿಣವಾದ ; ಕ್ರೂರವಾದ. ೩. ತೀಕ್ಷ್ಣವಾದ : 'ರೂಕ್ಷದಾಹ' ಪರಾ. (ನಾ). ೪. ಕಾಠಿಣ್ಯ; ಗಡುಸುತನ : "ರೂಕ್ಷಮಾ ಮಸು ತೀಕ್ಷ್ಣಂ" (ಮಂಗರಾ. ೦೦-೨). ೫. ಕಠಿಣವಾದ ಮಾತು; ಒರಟುನುಡಿ : ರೂಕ್ಷವನು ನುಡಿಯುತಿಹೆ ಮಿತಿಮೀರಿ (ಶಾಸನಾ. ೭೭). ೬. ಕ್ರೂರನಾದವನು; ನಿರ್ದಯಿ : ಆ ಹಿರಣ್ಯಾಕ್ಷನಂ ದಿವಿಜಾಧೀಶ್ವರರೂಕ್ಷನಂ . . . ಕೊಂದು (ಜಗಪಿ. ೦-೩೭) ; ರೂಕ್ಷನಿಗೆ ಕಣ್ಣಳಲ್ಲದೆಯೆ ಬೇರೆ ಗುರಿ ಸಲ್ಲದಯ್ (ಶ್ರೀರಾಮಾ.೦೪೦-೦೩೭). ೭. ಸಿಡುಕು; ಕೋಪ : ಕತ್ತಲೆಯು ಭೀತಿಯನ್ನುಂಟುಮಾಡಿ ರೂಕ್ಷವನ್ನೂ ಎಚ್ಚರವನ್ನೂ ನಾಶಮಾಡುವುದು (ಸಕಪ್ಪ. ೩೬). [ಸಂ.]

**ರೂಕ್ಷಣ** (ಗು). ಕಠಿಣವಾದ : ಪೌರುಷದ ರೂಕ್ಷಣಧನುರ್ವಿದ್ಯೆಯಲ್ಲದೆಯೆ ಲಲನಾಸಹಜರತಿಕಲಾಭ್ಯಾಸವಿನಿತಿರದ ಆ ಚೈತ್ರವಾಹಿನಿ ಕಿರೀಟಿಯೆಡೆಗೈದಿದಳ್ (ಚಿತ್ರಾಂಗ. ೨೨-೬೦೦). [<ರೂಕ್ಷ]

**ರೂಕ್ಷತನ** (ನಾ). ಒರಟುತನ : ರೂಕ್ಷತನದಿಂದ ಕೂಡಿದ್ದೂ ಮೌಲಿಕ ತರತಮಜ್ಞಾನವಿಲ್ಲದ್ದೂ ಆದ ಉಚ್ಛೃಂಖಲತೆಯು ಅದಕ್ಕೆ ಸಲ್ಲುವುದಿಲ್ಲ (ವಂಕಪ್ಪ. ೦೦ ಹಿನ್ನುಡಿ). [ ರೂಕ್ಷ + — ತನ ]

**ರೂಕ್ಷತೆ** (ನಾ). = ರೂಕ್ಷತನ : ರೂಕ್ಷತಾವಿಕೃತಿಯಿಂ ಗುಜ್ಜುಮೆಯ್ಯಿಂ ಕುರೂಪಂಬೆತ್ತ ಶ್ರೀಗಂಧಕಾಷ್ಠವಕ್ರತೆಗಗ್ನಿಲಗ್ನದಿಂ, ಕೇಳ್, ರೂಪಶೂನ್ಯತೆಯೊದೆಗಲೇಂ ? (ಶ್ರೀರಾಮಾ. ೦೨೪-೩೩೫); ಒಂದು ಬಾಳಿನ ಬೆಳಸು ಸಂಯಮದ ರೂಕ್ಷತೆಯ ಶಾಂತಿಸೌಜನ್ಯವನು ರೂಢಿಸಿದ ನಿಮ್ಮಂಥ ಬದುಕು ಇನ್ನೆಂದು ಬಂದೀತು ಬುವಿಗೆ ?. (ಅಮಕಂ. ೨೦-೦೯).

[ ಸಂ. ರೂಕ್ಷತಾ ]

**ರೂಕ್ಷದಾಹ** (ನಾ). ತೀಕ್ಷ್ಣವಾದ ಉರಿ ; ಅತಿಯಾದ ಉರಿ : ರೂಕ್ಷದಾಹಗಳು ಶಮನವಾಗಿ ಸುವರ್ಣದಂತೆ ವರ್ಣ ಉಂಟಾದ ದೇಹವುಂಟಾಗಿ ಹೊಟ್ಟೆಯುಬ್ಬರವನ್ನು . . . ಪರಿಹರಿಸುವುದು (ಸಕಪ್ಪ. ೨೭). [ಸಂ.]

**ರೂಕ್ಷಾನಿಲ** (ನಾ). ಬಿರುಸಾದ ಗಾಳಿ; ಬಿರುಗಾಳಿ : ರೂಕ್ಷಾನಿಲಪಾತದಿಂ ತಪನತಾಪದಿನಂಬಿಕೆಗಗ್ಗಳಂ ಪರಿಮ್ಲಾನತೆಯುಕ್ಕುಂ (ಶಂರಾಪಿ. ೦೦-೦೨೮).

[ಸಂ.]

**ರೂಕ್ಷಾವರ್ತ** (ನಾ). ಒಂದು ಬಗೆಯ ರೋಗ : ತೊಡೆಯುಂ ಮೊಗಮುಂ ಕಾಲುಂ ಬಿಡದಾಡುವುದರ್ಕಬಿಂಬದತ್ತಲೆ ನೋಟ್ಟುಂ

ನಿಡುಸುಯ್ಯುಂ ಧಾತುಗಳುಂ ಕಿಡುಗುವಮತಿಪ್ರಬಲಮಾಗೆ ರೂಕ್ಷಾವರ್ತಂ (ಅಶ್ವಶಾ. ೧೧-೦೩). [ಸಂ.]

**ರೂಕ್ಷಾಳಕ** (ನಾ). ಒರಟಾದ ಮುಂಗುರುಳು : ಅತಿರಕ್ತಾಶೋಕದ ಸುತ್ತಿನೊಳಿರ್ದ ರೂಕ್ಷಾಳಕಂಗಳನೋಸರಿಸುತ್ತುಂ ಮೆಲ್ಲನೆ ಮೇಳಿಸಿ ಕನ್ನೆಯಂ (ಅಂಶು. ೩-೪೦). [ ಸಂ. ರೂಕ್ಷಾಲಕ ]

**ರೂಡಿ** (ನಾ). ೧. ಬಳಕೆ; ಚಾಲ್ತಿ : "ರೂಡಿ–ರೂಢಿ=ವಾಡಿಕೆ, ಪ್ರಸಿದ್ಧಿ" (ಕನ್ನಕೋ. ೩೮); ಹಾಗೆ ಇದ್ದ ಪಕ್ಷಕ್ಕೆ ನಮ್ಮಲ್ಲಿ ಹೊಸ ನಡತೆಗಳು ಎಂದಿಗೂ ರೂಡಿಯಲ್ಲಿ ಬರುತ್ತಿದ್ದಿಲ್ಲ (ಮುಂಬಯಿ. ೬. ೯–೦೬೬). ೨. ಹೆಸರುವಾಸಿ; ಪ್ರಸಿದ್ಧಿ : ಬಸಂತನೊಲ್ದೊಲಿಸಿ ಕಾಡುವ ರೂಡಿಯ ಬರ್ದುಬೆಂಡಿರಂ ನಿಲೆ ಸೆಱಗೆಯ್ವುಂ (ಕಬ್ಬಿಗ. ೩೭). [ < ಸಂ. ರೂಢಿ ]

**ರೂಡಿಸು** (ಕ್ರಿ). ೧. ಎಲ್ಲರಿಗೂ ಪರಿಚಿತವಾಗು,– ವಿದಿತವಾಗು : ಕ್ರೀಡಿಸುವನಾ ಪುರದ ರೂಡಿಸಿದ ಬೀದಿಯೊಳಿಕ್ಕೀಡದೆಲ್ಲೆಡೆಯೊಳಂ ಪಸುಳೆ ಪರಪುಟ್ಟನಾಗಿ (ಕೈಮಿಣಿ. ೨೮–೨೨). ೨. ಏಳಿಗೆಯಾಗು; ಅಭಿವೃದ್ಧಿಯನ್ನು ಹೊಂದು : ಪಾಡಿವದೆಳವೆಱೆ ಪುಣ್ಣಮಿವರೆಗಂ ರೂಡಿಸಿ ದಿನದಿನದಪ್ಪದೆ ಕಲೆಯೊಳ್ ಕೂಡಿ ಬಳೆದು (ಶಯುಕ್ತಿ. ೨-೬೩). ೩. ಕಲ್ಪಿಸು ; ಏರ್ಪಡಿಸು : ಮೋಡಿಯಱಿದು ದ್ವಾರದೊರೆಗಳ್ಗ ಮನೆಗಳ ರೂಡಿಸಿರ್ದನು ವಿಶ್ವಕರ್ಮ (ಭರತ. ೨೨–೬೩). ೪. (ಆಸ್ತಿ ಮುಂತಾದುವನ್ನು) ಗಳಿಸು ; ಸಂಪಾದಿಸು : ಆತ ಮನೆಬಾಗಿಲು ಚೆನ್ನಾಗಿ ರೂಡಿಸಿಕೊಂಡಿದ್ದಾನೆ (ರೂಢಿ). [ರೂಡಿ + –ಇಸು₃]

**ರೂಢ** (ಗು). ೧. ಹತ್ತಿದ ; ಏರಿದ. ೨. ಹುಟ್ಟಿದ ; ತಲೆದೋರಿದ. ೩. ಬೆಳೆದ ; ವೃದ್ಧಿಯಾದ. ೪. ದೊಡ್ಡ ; ಬೃಹತ್ತಾದ. ೫. ಎಲ್ಲರಿಗೂ ತಿಳಿದ,–ವಿದಿತವಾದ. ೬. ಪ್ರಸಿದ್ಧವಾದ ; ಖ್ಯಾತವಾದ. ೭. ಪದ್ಧತಿಯ ; ಬಳಕೆಯ. (ನಾ). ೮. [ವ್ಯಾಕ] ಪದಗಳಿಗೆ ಇರುವ ವಾಚ್ಯಾರ್ಥವಲ್ಲದ ಅರ್ಥ,– ಪ್ರಸಿದ್ಧವಾದ ಅರ್ಥ ಅವಯವಾರ್ಥವಿಲ್ಲದೆಯೂ . . . ಪ್ರಸಿದ್ಧವಾದರ್ಥವು ರೂಢವು (ಹೊಸಗ. ೦೬೦); ಪದಗಳ ವಿಭಾಗವನ್ನು ಯೋಗ, ರೂಢ, ಯೋಗರೂಢ ಮೊದಲಾದ ಭೇದಗಳಿಂದ ವಿಭಾಗಮಾಡುವರು (ಹಿಂದಶಾ. ೦೪೭). [ಸಂ.]

**ರೂಢಗೊಳಿಸು** (ಕ್ರಿ). ಬಳಕೆಗೆ ತರು ; ರೂಢಿಯಲ್ಲಿರುವಂತೆ ಮಾಡು : ಮೊದಲಿನ ಕನ್ನಡಕವಿಗಳೆಲ್ಲ ಜೈನರಾಗಿದ್ದುದರಿಂದ ಚಂಪೂರೂಪವನ್ನು ಕಲ್ಪಿಸಿ ಕನ್ನಡದಲ್ಲಿ ಅವರೇ ರೂಢಗೊಳಿಸಿದರೆಂದು ತೋರುತ್ತದೆ (ಕಪೂ. ೪೦). [ರೂಢ + ಕೊಳ್₁ + – ಇಸು₃]

**ರೂಢನಾಮ** (ನಾ). ೧. ರೂಢಿಯಿಂದ ಬಂದ ಹೆಸರು ; ಖ್ಯಾತನಾಮ: ಈ ನಾಡ ಪ್ರಭುಗಳೆಲ್ಲರಿಗೂ ಚಿಕ್ಕಪ್ಪಗೌಡರೆಂಬುದು ರೂಢನಾಮವಾಗಿತ್ತು (ನೆಳಲಿಂಬ. ೬೨). ೨. [ವ್ಯಾಕ] ನಾಮಪದದಲ್ಲಿ ಒಂದು ಬಗೆ ; ನಿಷ್ಪತ್ತಿಗೆ ಒಳಪಡದೆ, ರೂಢಿಯಿಂದ ಅರ್ಥವನ್ನು ಹೊಂದುವ ಪದ ; ಬಳಕೆಯಿಂದ ಅರ್ಥಪಡೆಯುವ ಪದ : ರೂಢನಾಮಮೆಂದುಂ, ಅನ್ವರ್ಥನಾಮಮೆಂದುಂ, ಅಂಕಿತನಾಮಮೆಂದುಂ, ನಾಮಂ ಮೂದೆಱನಾಗಿರ್ಪುದು (ಶಬ್ದ. ೭೭ ವೃತ್ತಿ) ; ಗಂಡಸು, ಹೆಂಗಸು, ನೆಲ . . . ಇವು ಆಯಾ ಪದಾರ್ಥಗಳಿಗೆ ಹಿಂದಿನಿಂದಲೂ ರೂಢಿಯಾಗಿ ಬಂದಿರುವ ಹೆಸರನ್ನು ಹೇಳುತ್ತವೆ. ಇಂಥ ನಾಮವಾಚಕಗಳಿಗೆ ರೂಢನಾಮಗಳೆಂದು ಹೆಸರು (ಮಧ್ಯಮ. ೨೩). [ಸಂ. ರೂಢನಾಮನ್]

**ರೂಢಬುದ್ಧಿ** (ನಾ). ವ್ಯಾವಹಾರಿಕ ಬುದ್ಧಿ ; ಸಹಜವಾದ ಅರಿವು : ಯಾವ ಮಾತು –ಸಂದರ್ಭಗಳಲ್ಲಿ ರೂಢಬುದ್ಧಿಗೆ ಅಶ್ಲೀಲತೆಯ ಧ್ವನಿಯು ಹುಟ್ಟಬಹುದೋ ಅಂಥ ಮಾತು . . . ಅವರದು (ವಿಶಾಮಂ. ೦೦೦). [ಸಂ.]

**ರೂಢಮೂಲ** (ಗು). ಬಹಳಕಾಲದಿಂದ ಬಳಕೆಯಲ್ಲಿರುವ; ಅನೂಚಾನವಾದ : ತರಗತಿಯ ಪಾಠಗಳೇ ಶಿಕ್ಷಣದ ಸರ್ವಸ್ವವೆಂದು ರೂಢಮೂಲವಾಗಿರುವ ಭಾವನೆ ಹೋಗಬೇಕು (ಶಿಕ್ಷದ. ೦೩೭). [ಸಂ.]

**ರೂಢಿ** (ನಾ). ೧. ಭೂಮಿ ; ಧರೆ : ರೂಢಿಗೆ ರೂಢಿವೆತ್ತಸೆವ ಬೆಳ್ವಲದೇಶಮನಾಳ್ದ ಗಂಗಪೆರ್ಮ್ಮಾನಡಿಗಳಿಂದಂ (ಎಇ. XV. ೩೪೦-೦೭ ; 1071) ; ಆವಿವೆನ್ನದೆ ರೂಢಿಯ ತಾಣಮೆಲ್ಲಮಂ ತೀರ್ಥಕರರ ಕೇವಳಿಗಳ ಮುನ್ನೆ ವಿಹಾರಿಸಿದೆಡೆಗಳಿವೆಲ್ಲವೆಂದು ವಂಬುವುದು (ಸಮುಕ. ೨–೬೩). ೨. ಲೋಕದ ಜನ ; ಜನತೆ : ವರಶಿಶುವ ನಲಿದಾಡಿಸುವ ರೂಢಿಯಿಲ್ಲೆಂದು ನೆಱೆ ನೊಂದು ಮಱುಗುವಳು (ಕೈಪಿಣಿ. ೨೮–೦೬). ೩. ಪ್ರಸಿದ್ಧಿ ; ಕೀರ್ತಿ : ಅಗ್ಗಳಿಸಿರ್ದ ರೂಢಿ ತನ್ನೊಳಮರ್ದ್ದಿರ್ಪ್ಪರೆ (ಎಕ. V. ಬೇಲೂರು. ೦೭–೩೬ ; 1136); ರೂಢಿಯೋಲೆಯಕಾಱನರ್ಜುನನಾಡ ಪತಿಕರಿಸುವನು ನೀನದ ನೋಡಿ ಸಂತಸಬಡು (ಕುಮಾವ್ಯ. ೯–೦೩). ೪. ವಾಡಿಕೆ ; ಬಳಕೆ ; ಅಭ್ಯಾಸ : ಸಕಳವ್ಯಾಕರಣಾರ್ಥಶಾಸ್ತ್ರ . . . ಶಕುನಾದಿ ಪ್ರೌಢಿಯೊಳ್ ರೂಢಿಯಾಯ್ತು ಕುಮಾರಂಗೆ (ಕುಸ್ವಕೃ. ೦೨–೬೯) ; ಇದು ರೂಢಿಯ ಮಾತು (ಶೀಪಾಕ್ಯ. ೦೬೦) ; ರೂಢಿ ಇಲ್ಲದ ಪದ ಹಾಡಿದರೆ ತಿಳಿದಾನೆ ? (ಗಾದೆ). ೫. [ಕಾವ್ಯಮೀ] ಶಬ್ದಗುಣಗಳಲ್ಲಿ ಒಂದು ; ಹೆಚ್ಚು ಪ್ರಚಾರದಲ್ಲಿರುವುದು : ಶ್ಲೇಷ, ಲಾಲಿತ್ಯ . . . ರೂಢಿ, ಯೌಗಿಕೀ – ಇವು ಏಳೂ 'ಶಬ್ದಗುಣ'ಗಳು (ಶೃಬಿಏ. ೨೩೨ ಅಡಿ). [ಸಂ.]

**ರೂಢಿತ** (ಗು). ಏರಿದ ; ಹತ್ತಿದ : ಉಮಾಕಾಂತೆಯು ಮಹೇಶ್ವರನು ಮಾನಿತೋನ್ನತ ದಿವ್ಯರತ್ನವಿಮಾನರೂಢಿತಯಾನರಾಗಿ ಸುಮಾನದಿಂ ಗಮನಿಸುತ (ಬಸವ. ೩೦-೨). [ಸಂ.]

**ರೂಢಿಪ** (ನಾ). ಭೂಮಿಯ ಒಡೆಯ ; ರಾಜ : ರೂಢಿಪ ದಾನಚಿಂತಾಮಣಿ ಜಯತೆಂದು ಪಾಡಿದರು (ಕಂಸವ. ೯–೯೦). [ಸಂ.]

**ರೂಢಿಪತಿ** (ನಾ). = ರೂಢಿಪ : ಅರಸನಂ ಕೊಲ್ವೆನೆಂದಾಯುಧವ ಭರದಲುಗಿದು ರೂಢಿಪತಿಯಂ ಪೊಯ್ವೆನೆಂದು ಬರೆ (ಕುರಂಗ. ೬೪–೪೨) ; ನಾಡೆಂಬ ದೇಹಕ್ಕೆ ರೂಢಿಪತಿಯೇ ಪ್ರಾಣ (ವಿಶಾಮಂ. ೨೦). [ಸಂ.]

**ರೂಢಿಮಾತು** (ನಾ). ಜನಬಳಕೆಯ ಮಾತು,– ನುಡಿ : ಗಾಡಿಕಾಱ ಕೃಷ್ಣ ನಿನ್ನ ಬೇಡಿಕೊಂಬೆ ಬಾರೋ ರೂಢಿಮಾತನಾಡಿ ಸರ್ವರೂಢಿಗೊಡೆಯ ಬಾರೋ (ಪುರಂದ. ದಾ. ೦–೬೦–೨). [ರೂಢಿ + ಮಾತು₁]

**ರೂಢಿಲಕ್ಷಣೆ** (ನಾ). [ಕಾವ್ಯಮೀ] ಲಕ್ಷಣಾವೃತ್ತಿಯಲ್ಲಿ ಒಂದು ವಿಧ ; ರೂಢಿಯಿಂದ ಬಂದ ವಾಚ್ಯಾರ್ಥವನ್ನು ತ್ಯಜಿಸಿ ಬೇರೆ ಅರ್ಥವನ್ನು ಹೇಳುವುದು : ಪ್ರಯೋಜನವಿರಹಿತವಾಗಿ ಪರಿಣಮಿಸಿದ ಇಂಥ ವ್ಯಾಪಾರವನ್ನು "ರೂಢಿಲಕ್ಷಣಾ" ಎಂದು ಕರೆಯುತ್ತಾರೆ. ಭಾಷಾಪಥದ ಉದ್ದಕ್ಕೂ ರೂಢಿಲಕ್ಷಣೆಯ ನಿದರ್ಶನಗಳು ಸಿಕ್ಕಿರುದಿವೆ (ಶಾರಮೀ. ೨೩೬). [ಸಂ. ರೂಢಿಲಕ್ಷಣಾ]

**ರೂಢಿವಡೆ** (ಕ್ರಿ). ೧. ಪ್ರಸಿದ್ಧಿಯನ್ನು ಪಡೆ ; ಹೆಸರುವಾಸಿಯಾಗು : ವೀರದೊಳುಕ್ಕಿ ಮಚ್ಚರಿಸಿ ಕೋಪದೆ ಜೈನನೆ ಕಾದಿ ಸತ್ತು ಮೈಲಾರನೆನಲ್ಕೆ ರೂಢಿವಡದಂ (ಸಮುಕ. ೨–೬೦) ; ರೂಢಿವಡೆದ ನೃಪಾಲಕರ ನೆಲೆಮಾಡ . . . ಚೆಲುವಿಕೆಯನೀವುವು ನೋಡುವರ ಕಂಗಳಿಗೆ (ಶಾಕ್ಯಶಾ. ೨–೯). ೨. ಅತಿಶಯವಾಗು : ರೀತಿ ನೂತನಮಾಗೆ ಗದ್ಯಪದ್ಯಕಾವ್ಯಕಲಾಪ್ರೌಢರೂಢಿವಡೆಯೆ ಮೆಱೆದಿರ್ದ ಸರಸಕವಿಗಳ ಸಂದಣಿಯೊಳಂ (ಗಂಕ. ೨–೦೦೩ ಪ). [ ರೂಢಿ + ಪಡೆ₁ ]

**ರೂಢಿವಿಡಿ** (ಕ್ರಿ). = ರೂಢಿವಡೆ ೨ : ನೋಡಲು ನರಜನ್ಮದೊಳಗಿಂತು ಸೊಬಗಿನ ರೂಢಿವಿಡಿದ ನೀಱರುಂಟೆ (ಕಂಸವ. ೯–೦೦೩). [ ರೂಢಿ + ಪಿಡಿ₁ ]

**ರೂಢಿವೆಱು** (ಕ್ರಿ). ಪ್ರಸಿದ್ಧಿಯನ್ನು ಹೊಂದು; ಕೀರ್ತಿಯನ್ನು ಪಡೆ : ಭಾಸುರಮೆನಿಸಿರ್ದ ದೇವನಿಳಯಂಗಳನೇಳಿಸಿ ರೂಢಿವೆತ್ತನುಂ ಪುರವಧುಗಾಸೆಗೆಯ್ಯೆ ಕೆಡುಗುಂ (ಸಮುಕ. ೩–೬೯) ; ಕೆಲವು ಸಕ್ಕದದ ಮಾಱುಲಿಂಗವುಂ

ರೂಢಿವೆತ್ತ ಕರ್ಣಾಟಕದೊಳ್ ನಿಲೆ (ಕವಿರ. ೦೩೩) ; ಆ ರೂಢಿವೆತ್ತ ಮಹಾಭಾರತದೊಳ್ . . . ಕಥೆಯೊಂದುಂಟು (ಹರಿಶ. ೨–೨೯).

[ ರೂಢಿ + ವೆಱು$_1$ ]

**ರೂಢಿಸು** (ಕ್ರಿ). ೧. ಹೆಚ್ಚಾಗು ; ಆಧಿಕ್ಯವನ್ನು ಹೊಂದು : ತಿರುಗುವ ಮೃಗಂಗಳ್ ದುಷ್ಟಮೃಗಮಲ್ಲಿ ವೃಕ್ಷಮೇ ಬೆಂದ ಕೊಱಡು ರೂಢಿಸುವ ಝಳಮಲೆವ ಬಿಱುಗಾಳಿ ಬಿಱುಬಿನಿಂ ಕಾಡುತಿಹ ಯಮದೂತರ್ (ಶಬ್ದ. ೩೬–೨೩). ೨. ಪ್ರಸಿದ್ಧಿಯಾಗು ; ಖ್ಯಾತಿಹೊಂದು : ರೂಢಿಸಿದ ಸರ್ವೋಹನಾಸ್ಪದ ಪಾಡಱಿದು ಕಲಿಪಾರ್ಥಗಿತ್ತನು (ಸಂಭಶ. ೨೭–೭). ೩. ನೆಲಸು ; ಇರು : ಸುಡುಗಾಡ ಬೂದಿಯನೊಂದು ಶುನಿ ಮೆಟ್ಟಿಯೋಡುತುಂ ಬೇಡವಣೆಯೊಳ್ ಬೂದಿ ಪೊರೆದ ಕಾಲೂಱಲಾ ಬೂದಿ ಬೇಡನ ಪಣೆಯೊಳು ರೂಢಿಸಿರೆ (ಬಕೋಳ. ೦೩–೦೦೩).

**ರೂಢಿಸಿಕೊಳ್ಳು**=ಒಗ್ಗಿಸಿಕೊಳ್ಳು; ಅಭ್ಯಾಸಮಾಡಿಕೊಳ್ಳು: ನಾನು ಲೇಖನ ಬರೆಯಲು ರೂಢಿಸಿಕೊಳ್ಳಲೇಬೇಕು (ಇಶ್ಯ. ೨೬೩); ಕಾಲಕ್ಕೊಪ್ಪುವ ತತ್ತ್ವದೃಷ್ಟಿಯನ್ನು ರೂಢಿಸಿಕೊಳ್ಳುವ ಯತ್ನ . . . ಕಂಡುಬಂದಿದೆ (ತ್ರಿದ. V. ಮುನ್ನುಡಿ). [ರೂಢಿ + – ಇಸು$_3$]

**ರೂಪ** (ನಾ). ೧. ಆಕಾರ ; ಆಕೃತಿ ; ಪರಿಜು : ವಿವರಿಸಲ್ ಸ್ಥೂಲವೆನಿಸುವ ದ್ರವ್ಯವೇ ರೂಪಮುವಿರತಂ ಪ್ರವಿವಿಕ್ತವೆನಿಪುದೇ ರುಚಿ (ಅಶಿಶಂ. ೩೩–೪೭) ; ರೂಪವಾಗಬಲ್ಲ ಅರೂಪವಾಗಬಲ್ಲ ರೂಪ ಅರೂಪವೆರಡೊಂವಾಗಬಲ್ಲ (ಪುರಂದ. ಸಾ. ೪–೦೪೦–೦) ; ಜಗತ್ತೆಂಬುದು ಅಸ್ತಿ (ಇದೆ), ಭಾತಿ (ತೋರುತ್ತದೆ), ಪ್ರಿಯ (ಬೇಕೆನಿಸುವುದು), ನಾಮ (ಹೆಸರು), ರೂಪ (ಆಕಾರ) ಈ ಐದಂಶಗಳನ್ನು ಕೂಡಿದೆ (ಅಮೃತ. ೭–೦೭ ಟೀಕು). ೨. ಚೆಲುವು ; ಸೌಂದರ್ಯ : ವಸ್ತುವಿನಲ್ಲಿ ಸೌಂದರ್ಯದ ಆವಿರ್ಭಾವಕ್ಕೆ ಅನುಕೂಲ ಸ್ಥಿತಿಯೊಂದು ಮಾತ್ರ ಇರಬೇಕಾಗುತ್ತದೆ. ಇದನ್ನು ರೂಪವೆಂದು ಕರೆಯಬಹುದು (ಪಶ್ಚಿಕಾ. ೬೬). ೩. ಬಣ್ಣ ; ವರ್ಣ. ೪. ಪಶು ; ಜಾನುವಾರು : "ಮೃಗಸಮೂಹಂ ವರ್ಣ ರೂಪಾಂಕಿತಂ" (ನಾಪಾಠ. ೦೨೦). ೫. ಐಶ್ವರ್ಯ; ಸಂಪತ್ತು : 'ರೂಪ' ವೆಂದರೆ ಐಶ್ವರ್ಯವೆಂದೂ ಅರ್ಥವಾಗುತ್ತದೆ (ಸೌಂದಯ. ೪೩ ಟಿಪ್ಪ). ೬. ಪರಮಾತ್ಮನ ದಿವ್ಯರೂಪವಾದ ದೇಹ : ರೂಪವೆಂದರೆ . . . ಪರಮಾತ್ಮನ ಶುದ್ಧ ಸತ್ತ್ವದ್ರವ್ಯಮಯವಾದ ದೇಹ (ಹಿಂವಾ. ೨೪೯). ೭. ಸ್ವಭಾವ ; ಸಹಜಗುಣ. ೮. ರೀತಿ ; ವಿಧ. ೯. ಪ್ರತಿಕೃತಿ ; ಪಡಿಯಚ್ಚು. ೧೦. [ಗಣಿತ] ಒಂದು ಎಂಬ ಸಂಖ್ಯೆಯ ಸಂಕೇತ: ರಸೆ ಧರೆ ಇಳೆ ರೂಪವೈಕವೊಂದಱ ನಾಮಂ (ವ್ಯವಗ. ೯). ೧೧. [ಕಾವ್ಯಮೀ] ದೃಶ್ಯಕಾವ್ಯ ; ರೂಪಕ. ೧೨. [ವ್ಯಾಕ] ಪ್ರಕೃತಿ ಅಥವಾ ಧಾತುಗಳಿಗೆ ಪ್ರತ್ಯಯವು ಸೇರಿ ಆಗುವ ಸ್ವರೂಪ: ಬೆಳ್, ಪೊಸ ಮೊದಲಾದ ಪ್ರಕೃತಿಗಳಿಗೆ ದು ತುಗಳು ಸೇರಿ ಬಿಳಿದು ಪೊಸತು ಮೊದಲಾದ ರೂಪಗಳು ಬಂದಿವೆ (ಕೃಶಿಬ. ೦೪). ೧೩. [ತರ್ಕಶಾ] ವೈಶೇಷಿಕದ ಇಪ್ಪತ್ತುನಾಲ್ಕು ಗುಣಗಳಲ್ಲಿ ಒಂದು.

[ಸಂ.]

**ರೂಪಂದಳೆ** (ಕ್ರಿ). ರೂಪವನ್ನು ತಾಳು ; ಆಕಾರವನ್ನು ಧರಿಸು : ಪಂಚೇಂದ್ರಿಯವೃತ್ತಿಗಳೆ ಬೇಱೆಬೇಱೆ ರೂಪಂದಳೆದುವೆನಿಪಂಗುಳಿಗಳಿಂ ಮನಂಗೊಳಿಸುವ ಕರಕಮಲಂಗಳಿಂ ಚಂದ್ರಾಪೀಡಂ ನೀಡೆ (ಕಾದಂಸಾ. ೩೮).

[ರೂಪ + ತಳೆ$_1$]

**ರೂಪಂಬೆಱು** (ಕ್ರಿ). ಚೆಲುವನ್ನು ಪಡೆ ; ಸುಂದರವಾಗು : ಗಿರಿಜೆಗುತ್ತರೋತ್ತರರೂಪಂಬೆತ್ತ ಘನಯೌವನಂ ಸಾರುತ್ತಿರ್ದಪುದು (ಗಿರಿಕ. ೪–೩೪).

[ರೂಪ + ಪೆಱು$_1$]

**ರೂಪಕ** (ನಾ). ೧. ಆಕಾರ ; ಪರಿಜು. ೨. ಚೆಲುವು ; ಸೌಂದರ್ಯ ೩. ಹೋಲಿಕೆ; ಸಾದೃಶ್ಯ : ನರನಾರೀಪರಿಚುಂಬಿರೂಪಕಮದೇನಿಂಬಾಯ್ತೊ ಬಂಧೂಕಬಂಧುರವೃಷ್ಟಾಧರದಿಂದಮುಟ್ಟಿ ಮಧುಗಳ್ . . . ವಿಡಂಬಿಸೆ (ಲೀಲಾವ. ೦೧–೬೮). ೪. ರೀತಿ ; ವಿಧ : ಆರ್ಯರು ತಮ್ಮ ಧರ್ಮಾಚರಣೆಯ ಪವಿತ್ರಪ್ರತೀಕವಾದ ಯಜ್ಞದ ರೂಪಕದಿಂದಲೇ ಪುರುಷನನ್ನು ಭಾವಿಸಿ ಸೃಷ್ಟಿಯನ್ನು ವರ್ಣಿಸಿರುವುದು ಆಶ್ಚರ್ಯವೇನೂ ಅಲ್ಲ (ಭಾರದ. ೨೭). ೫. ಒಂದು ರೂಪಾಯಿಯ ನಾಣ್ಯ. ೬. [ಕಾವ್ಯಮೀ] ಅಭಿನಯದ ಸಹಾಯದಿಂದ ಪ್ರದರ್ಶಿಸುವ ನಾಟಕ ಮುಂತಾದುವು ; ದೃಶ್ಯಕಾವ್ಯ : ಅಭಿನಯದ ಸಹಾಯದಿಂದ ಪ್ರದರ್ಶಿಸಲ್ಪಡಬಹುದಾದ ಕಾವ್ಯಗಳಿಗೆ ದೃಶ್ಯ (ಎಂದರೆ ನೋಡಬಹುದಾದ) ಕಾವ್ಯಗಳೆಂದೂ ರೂಪಕಗಳೆಂದೂ ಹೆಸರು (ಕೃಶಿಬ. ೨೦೩) ; ಪ್ರಾಚೀನ ಹಿಂದೂ ನಾಟಕವು ಅಂಗವಿನ್ಯಾಸ, ಭಂಗಿ, ವೇಷಭೂಷಣ, ನೃತ್ಯಗೀತಗಳ ಮೂಲಕ ನಿರ್ವಹಿಸಲ್ಪಡುತ್ತಿದ್ದ ಕಾರಣ, ಅದಕ್ಕೆ ರೂಪಕ ಎಂಬ ಹೆಸರೇ ಬಂತು (ಭಾರದ. ೩೪೯). ೭. ಅರ್ಥಾಲಂಕಾರಗಳಲ್ಲಿ ಒಂದು ; ಉಪಮಾನ, ಉಪಮೇಯ ವಸ್ತುಗಳನ್ನು ಒಂದರಂತೆ ಮತ್ತೊಂದು ಎಂದು ವರ್ಣಿಸದೆ ಒಂದು ಮತ್ತೊಂದು ಎಂದೇ ವರ್ಣಿಸುವುದು : ರೂಪಕಮೆಂಬುದು ಪೆಱವರ ರೂಪಾದಿಗುಣಂಗಳಾನಭೇದೋಕ್ತಿಗಳಿಂ ರೂಪಿಸುವುದಿಂತು ಬಾಹುಲತಾಪಾದಾಂಬುಜಮುಖೇಂದುನಯನನಾಳಿಗಳಿಂ (ಕವಿರಾ. ೩–೦೨) ; ಪ್ರತಿವಸ್ತೂಪಮೆ ಸಾಮ್ಯಪ್ರತೀತಿಯಿಂದಂ ಸಮಾನವಸ್ತುನ್ಯಸನಂ ಪ್ರತಿಪಾದಿಸುವುದಭೇದಾತ್ಮತೆಯಿಂದುಪಮೆಯನದಲ್ತೆ ರೂಪಕಮಕ್ಕುಂ (ಕಾವ್ಯಾವ. ೬೯೩). ೮. ಒಂದು ವಿಷಯವನ್ನು ಮನಸ್ಸಿಗೆ ನಾಟುವಂತೆ ಅದೇ ರೀತಿಯ ಮತ್ತೊಂದು ವಿಷಯದ ಮೂಲಕ ಹೇಳುವ ಕಥನ : ಈ ಹೊಸ ಅರ್ಥದಲ್ಲಿ 'ರೂಪಕ' ಎಂಬುದು ಇಂಗ್ಲಿಷಿನ 'ಎಲಿಗರಿ' (Allegory) ಎಂಬುದಕ್ಕೆ ಪರ್ಯಾಯವಾಗಿದೆ (ಶ್ರೀಕೃಶ್ರ. ೦೦೬). ೯. [ಸಂಗೀತ]ಒಂದು ಬಗೆಯ ತಾಳ : ಧ್ರುವ ಮಠ್ಯ ರೂಪಕ . . . ಎಂಬ ಸಪ್ತತಾಳಭೇದಂಗಳ್ (ಬಿವೇಕ. ೨೩೮); ಏಕತಾಳ ತ್ರಿಪುಟೆ ರೂಪಕ ಹೀಗೆ ಆರೆಂಟು ತಾಳಗಳನ್ನು . . . ಅನುಕರಿಸಬಹುದು (ಶಾಂಶ್ರ. II. ೯೮೦). "ಆತ್ಯಲಂಕಾರದೊಳು ನಾಟ್ಯದೊಳು ಧೂರ್ತನೊಳು ಕಾವ್ಯದೊಳು ತಾಳಮಾನದೊಳು ರೂಪಕಮೆಂಬ ನಾಮಮಕ್ಕುಂ" (ಮುಂಗರಾ. ೦೩೩–೬೨). [ಸಂ.]

**ರೂಪಕತಾಲ**, ರೂಪಕತಾಳ (ನಾ). = ರೂಪಕ ೯. **ರೂಪಕತಾಳ** : ಧ್ರುವತಾಳ, ಮಠ್ಯತಾಳ, ರೂಪಕತಾಳ . . . ಏಕತಾಳ ಇವೇ ಸೂಳಾದಿ ಸಪ್ತತಾಳಗಳು (ಸಂಗೀಶಂ. ೩೯); ಅಲ್ಲಿ ಪದ್ಯದಲ್ಲಿ ಬರುವ ಗಣಗಳು ಮೂರು ಮಾತ್ರೆಯವಾದರೆ ರೂಪಕತಾಳವಾಗುವುದು (ಸಂಕೋಶ. ೧೨೦). [ಸಂ.]

**ರೂಪಕತಾಳ** ' ರೂಪಕತಾಲ ' ನೋ.

**ರೂಪಕರೂಪಕ** (ನಾ). [ಕಾವ್ಯಮೀ]ರೂಪಕದಲ್ಲಿ ಒಂದು ಬಗೆ; ಒಂದು ರೂಪಕವನ್ನು ಮತ್ತೊಂದು ರೂಪಕವನ್ನಾಗಿ ಭಾವಿಸಿ ಅತಿಶಯತೆಯನ್ನುಂಟುಮಾಡುವುದು : ರೂಪಕರೂಪಕಕ್ಕೆ—ತರುಣಿಯ ಮುಖೇಂದುಕಮಲಾಕರದೊಳ್ ದೃಗ್ಗೋಳಕಾಂತಿ ನೀಳಾಬ್ಜಮಂಳಂಕರಿಸೆ ವಿಟರಾಹು ಭೃಂಗಂ ಬರೆ ಪೀರ್ದತ್ತಧರಚಂದ್ರಿಕಾಪರಿಮಳಮಂ (ಕಾವ್ಯಾವ. ೬೪೪).

[ಸಂ.]

**ರೂಪಕಾತಿಶಯೋಕ್ತಿ** (ನಾ). [ಕಾವ್ಯಮೀ] ಅರ್ಥಾಲಂಕಾರಗಳಲ್ಲಿ ಒಂದು ಬಗೆ : ಉಪಮಾನೋಪಮೇಯಗಳಲ್ಲಿ ಉಪಮೇಯವನ್ನು ಹೇಳದೆ ಇದ್ದರೂ ಅದು ಗಮ್ಯವಾಗಿ ಅದಕ್ಕೂ ಉಪಮಾನಕ್ಕೂ ಅಭೇದವು ಕಂಡುಬರುತ್ತಿದ್ದರೆ ಅದು ' ರೂಪಕಾತಿಶಯೋಕ್ತಿ ' (ಕೃಶಿಬ. ೨೬೬). [ಸಂ.]

**ರೂಪಕಾಪಹ್ನುತಿ** (ನಾ). [ಕಾವ್ಯಮೀ] ಅರ್ಥಾಲಂಕಾರಗಳಲ್ಲಿ ಒಂದು ಬಗೆ : ವದನಮಿದಲ್ತಂಬುರುಹಂ ಮದಲೋಲವಿಲೋಚನಂಗಳಲ್ಲಮಿವಳಿಗಳ್ ಮುದಮಲ್ಲಿದು ವಿಕಸನಮೆಂಬಿದನಿಂ[ಬೆ]ನೆ ಬಗೆಗೆ ರೂಪಕಾಪಹ್ನುತಿಯುಂ (ಕವಿರಾ. ೩–೨೪).

[ಸಂ.]

**ರೂಪಕಾಲಂಕಾರ** (ನಾ). = ರೂಪಕ ೭ : ಉಪಮಾನ ಉಪಮೇಯ ವಸ್ತುಗಳನ್ನು 'ಒಂದರಂತೆ ಮತ್ತೊಂದು ಇದೆ' ಎಂದು ಅವುಗಳ ಹೋಲಿಕೆ ಕಾಣುವಂತೆ ವರ್ಣಿಸದೆ 'ಒಂದು ಮತ್ತೊಂದೆಯೇ' ಎಂದು ವರ್ಣಿಸಿದರೆ ಅದು ರೂಪಕಾಲಂಕಾರವಾಗುತ್ತದೆ (ಕೃಶಿ. ೨೬೩). [ಸಂ.]

**ರೂಪಗೊಳಿಸು** (ಕ್ರಿ). ರೂಪಿಸು ; ರಚಿಸು : ದೇಶಾಂಗೀಕೃತವನ್ನು ರೂಪಗೊಳಿಸುವುದಕ್ಕಾಗಿ ಮಂತ್ರಿಸಂಪುಟ (ಡಾಕ್ಕಾ. ೩೬).

[ರೂಪ + ಕೊಳ್$_1$ + —ಇಸು$_3$]

**ರೂಪಗೊಳ್ಳು** (ಕ್ರಿ). ಆಕಾರವನ್ನು ತಾಳು; ರಚನೆಯಾಗು: ಈ ಸ್ವಭಾವ ಗುಣ ನಮ್ಮ ಜನದಲ್ಲಿ ರೂಪಗೊಂಡಿತ್ತು (ಡಾಕ್ಕಾ. ೦೩); ಗಿಡದ ಅರೈಕೆಯನ್ನು ಅನುಸರಿಸಿ ಕಾಯಿಗಳ ಗಾತ್ರ ರೂಪಗೊಳ್ಳುತ್ತೆ (ಕಪಟಿ. ೨೩).

[ರೂಪ + ಕೊಳ್ಳು$_1$ (< ಕೊಳ್$_1$)]

**ರೂಪಚಿತ್ರ** (ನಾ). [ಚಿತ್ರಶಾ] (ಮೂಲವಸ್ತುವಿನ) ಆಕಾರದ ಪ್ರತಿಕೃತಿ : ಈತನಕ ಯುರೋಪಿನ ಚಿತ್ರಕಾರರು ರೂಪಚಿತ್ರದ ಹಾದಿಯನ್ನು ಹಿಡಿದಿದ್ದರು (ಶಾಲಿಕ್ರ. II, ೬೨೬). [ಸಂ.]

**ರೂಪಜೀವನೆ** (ನಾ). ಸೌಂದರ್ಯದಿಂದ ಜನರನ್ನು ವಶಪಡಿಸಿಕೊಂಡು ಜೀವಿಸುವವಳು ; ಸೂಳೆ ; ವೇಶ್ಯೆ : "ರೂಪಿಣೀ, ರೂಪಜೀವನಾ, ಈ ೨ ಸೂಳೆ" (ಕಾಚಿಕ. ೨೯೦). [ಸಂ. ರೂಪಜೀವನಾ]

**ರೂಪಜೀವೆ**, ರೂಪುಜೀವೆ (ನಾ).= ರೂಪಜೀವನೆ : "ರೂಪಜೀವಾ, ವೇಶ್ಯಾ, ಗಣಿಕಾ, ಪಣ್ಯಾಂಗನಾ, ಕ್ಷುದ್ರಾ – ಈ ೫ ಸೂ(ಳ್)ಳೆ" (ಕಣಾಮು. ೬೦–೩೩೬); ಸೊಬಗಾಂತಿಕ್ಷುಚಾಪನಾಡುಂಬೊಲದಂತೆಸೆದಿಹ ವಲ್ಲಿ ರೂಪ[ಕಾಕಾಂ. ವು]ಜೀವೆಯರ ಕೇರಿಗಳು (ಡಾಪುಪು. ೩–೬೩). **ರೂಪುಜೀವೆ** : ದೂತಿಯರು ನೆಟ್ ಕಾಣುತಾ ರೂಪುಜೀವೆಗದ ತೋಟ್ (ಶ್ರೀಶಶಾ. ೯–೦೯). [< ಸಂ. ರೂಪಾಜೀವಾ]

**ರೂಪಣ** (ನಾ). ೧. ಆಕಾರವನ್ನು ಕೊಡುವಿಕೆ ; ರೂಪಿಸುವಿಕೆ. ೨. ಚಿತ್ರಣ ; ಚಿತ್ರಿಸುವಿಕೆ : ಈ ವ್ಯಕ್ತಿತ್ವದ ರೂಪಣದಲ್ಲಿ ಒಂದು ದಿವ್ಯ ಸಂಕಲ್ಪದ ಅಮೃತಸಂಸ್ಪರ್ಶವನ್ನು ಸ್ವಾಮಿದಾಸರು ಅನುಭವಿಸಿದ್ದರು (ಸವುಜೀ. ೦೦೬೭). ೩. ಹೇಳುವುದು; ತಿಳಿಸುವಿಕೆ. [ಸಂ.]

**ರೂಪದ್ವಿತ್ವ** (ನಾ). ಒಂದು ಪದವನ್ನು ಎರಡು ಸಲ ಹೇಳುವುದು; ದ್ವಿರುಕ್ತಿ: ಚಾಪಲ ವೀಪ್ಸಾಭೀಕ್ಷ್ಣ್ಯ ಸಮಿಪಾನುಕೃತಿ ಕ್ರಿಯಾಸಮಭಿಹಾರಾದಿ ಖ್ಯಾಪನೆಯೊಳ್ ಪದಕಕ್ಕುಂ ರೂಪದ್ವಿತ್ವಂ ಯಥಾಪ್ರಯೋಗಾನುಗತಂ (ಶಾಶ್ಯಾಕ. ೨೮೭). [ಸಂ.]

**ರೂಪಧಾರಿ** (ನಾ). ರೂಪವನ್ನು ಧರಿಸಿದವನು ; ಆಕಾರವನ್ನು ತಾಳಿರುವವನು : ಲಾವುಕ ಸಿಂಹ ಕೇಕಿ ವಾನರ ಮೃಗರೂಪಧಾರಿ ಸುರಕೋಟಿ ವಿನೋದದ ತೋಟಿಯೊಳ್ ಚರಾಚರಗುರುವಿಂಗೆ ಪೆಟ್ಟು ಗಳೆಯುತ್ತಿರೆ (ಶಾಂತಿಪು. ೦೦–೯೦). [ಸಂ. ರೂಪಧಾರಿನ್]

**ರೂಪನಿದಾನ** (ನಾ). ಚೆಲುವಿನ ಕಣಿಯಂತಿರುವವನು; ಸುಂದರ : ನೀರೊಳಗಳ್ಕಿದ ನೆವದಿಂದಾ ರೂಪನಿದಾನನಂ ಮೃಗಾಕ್ಷಿಯರಪ್ಪರ್ ಸಾರೆ ಬಿಡುತಂದು ಕೂಡಲ್ (ಶಾಂತಿಪು. ೬–೯೭). [ರೂಪ+ ನಿದಾನ$_1$]

**ರೂಪನಿಷ್ಪತ್ತಿ** (ನಾ). ೧. ಆಕಾರವು ಹುಟ್ಟುವಿಕೆ ; ರೂಪವು ಕಾಣಿಸುವಿಕೆ : ಸಾಮಾನ್ಯನಯನಗಳಿಗೆ ಬೇಕಾದುದು ಬರಿ ಬೆಳಕಲ್ಲ – ಕತ್ತಲು ಬೆಳಕಿನ ಸರಿಬೆರಿಕೆ. ಅಲ್ಲಿಯೆ ಸಾಮಾನ್ಯರಿಗೆ ರೂಪನಿಷ್ಪತ್ತಿ (ಶಾಹಿಶಿ. ೪೩). ೨. ಆಕಾರವನ್ನು ಚಿತ್ರಿಸುವಿಕೆ ; ಚಿತ್ರವನ್ನು ಬರೆಯುವಿಕೆ : ಅವನ ಕರ್ಮಕೌಶಲ್ಯವೆಲ್ಲವೂ ರೂಪನಿಷ್ಪತ್ತಿಯಲ್ಲಿ ತಲ್ಲೀನವಾಗಿತ್ತು (ಶಿರಾಕ. ೪೦). ೩. [ವ್ಯಾಕ] ಶಬ್ದಗಳು ಈಗಿನ ರೂಪವನ್ನು ಹೇಗೆ ಪಡೆದುವು ಎಂದು ಗುರುತಿಸುವುದು,—ನಿರೂಪಿಸುವುದು : ಹಿಂದಿನ ಪ್ರಕರಣಗಳಲ್ಲಿ ಪದಗಳ ರೂಪನಿಷ್ಪತ್ತಿಯನ್ನೂ ಅವುಗಳ ಪ್ರಯೋಗದ ಸಾಮಾನ್ಯಾಂಶಗಳಲ್ಲಿ ಕೆಲವನ್ನು ಹೇಳಿದೆ (ಕೃಶಿ. ೩೩); ಕೆಮ್ಮಣ್ಣು, ಕೇಸಕ್ಕಿ . . . ಇವುಗಳ ರೂಪ ನಿಷ್ಪತ್ತಿಯನ್ನು ದೊಡ್ಡ ವ್ಯಾಕರಣಗಳಿಂದ ತಿಳಿದುಕೊಳ್ಳಬೇಕು (ಪುಕ್ಕ ಪು. ೦೯೬). [ಸಂ.]

**ರೂಪಪರಾವರ್ತನ** (ನಾ). ರೂಪವನ್ನು ಬದಲಾಯಿಸಿಕೊಳ್ಳುವುದು ; ರೂಪಾಂತರ : ಅಜ್ಞಾತವಾಸಕ್ಕೆ ಚಿಂತಿಪೊಡಿನ್ನನ್ನವು ಕಾಣಮಿಲ್ಲದೆಟ ನುಂತಾರ್ಗಪ್ಪೊಡಂ ಮಿಕ್ಕ ರೂಪಪರಾವರ್ತನದಿಂ ವಿರಾಟಪುರವಂ ಪೊಕ್ಕೆರ್ದದಂ ನೀಗೆವೇ (ಶಂಕಶಾ. ೬–೩೦). [ಸಂ.]

**ರೂಪಪರಾವರ್ತನವಿದ್ಯೆ** (ನಾ). ಶರೀರಾಕೃತಿಯನ್ನು ಮಾರ್ಪಾಟು ಮಾಡುವ ವಿದ್ಯೆ ; ರೂಪವನ್ನು ಬದಲಾವಣೆ ಮಾಡುವ ವಿದ್ಯೆ : ರೂಪಪರಾವರ್ತನವಿದ್ಯೆಯಿಂ ತುರಗರೂಪಾದಂ ಚರಂ ಖೇಚರಂ (ಶಂಕಾಪಶಾ. ೯–೦೦೩) ; ತನಗೆ ವಶವಾಗಿದ್ದ ರೂಪಪರಾವರ್ತನವಿದ್ಯೆಯಿಂದ ನಾನಾ ರೂಪಗಳನ್ನು ಧರಿಸುವುದಲ್ಲದೆ . . . ಶತ್ರುಗಳನ್ನು ನಡುಗಿಸುತ್ತಾನೆ (ಸಂಶಿಂಂಡ. ೦೯೨). [ಸಂ. ರೂಪಪರಾವರ್ತನವಿದ್ಯಾ]

**ರೂಪಪರಾವರ್ತನೆ** (ನಾ). ಮಾರ್ಪಾಟು; ಬದಲಾವಣೆ; ರೂಪಾಂತರ: ಉದಾತ್ತಗುಣಸನ್ನಿಕರ್ಷದಿಂದ ಪ್ರಮಿತ್ಯೂಸನ ಪಾತ್ರದ ರೂಪಪರಾವರ್ತನೆ ಅದ್ಭುತವಾಗಿ ನಡೆದಿದೆ (ಖಿಪ್ರಶ್ರ. VI. ಮುಮ್ಮುಖ). [ಸಂ. ರೂಪಪರಾವರ್ತನ]

**ರೂಪಪಲ್ಲಟ** (ನಾ). [ವ್ಯಾಕ] ಪದದ ಒಂದು ರೂಪಕ್ಕೆ ಬದಲಾಗಿ ಮತ್ತೊಂದು ರೂಪವು ಬರುವುದು : ರೂಪಪಲ್ಲಟ – (i) ಕ್ರಿಯಾಪದದ ಒಂದು ರೂಪಕ್ಕೆ ಪ್ರತಿಯಾಗಿ ಮತ್ತೊಂದು ರೂಪವು ಕೆಲವು ವೇಳೆ ಬರುವುದುಂಟು (ಕೃಶಿ. ೩೯). [ಸಂ.]

**ರೂಪಪ್ರವೀಚಾರ** (ನಾ). [ಜೈನ] ದೇವವನಿತೆಯರ ಅವಲೋಕನ ಮಾತ್ರದಿಂದಲೇ ಇಂದ್ರಿಯಜನಿತ ಸುಖವನ್ನು ಹೊಂದುವ ಬ್ರಹ್ಮ, ಬ್ರಹ್ಮೋತ್ತರ, ಲಾಂತವ, ಕಾಪಿಷ್ಠಕಲ್ಪಗಳ ದೇವತಾವರ್ಗ : ಅಲ್ಲಿಯ ದಿವಿಜರೆಲ್ಲಂ . . . ರೂಪಪ್ರವೀಚಾರರಪ್ಪರ್ (ಸುಕುಪು. ೦೦–೩೩ ಪ). [< ಸಂ. ರೂಪಪ್ರವಿಚಾರ]

**ರೂಪಮದ** (ನಾ). ಎಂಟು ಬಗೆಯ ಮದಗಳಲ್ಲಿ ಒಂದು ; ತನ್ನ ರೂಪವೇ ಮಿಗಿಲಾದುದು ಎನ್ನುವ ಅಹಂಕಾರ : ಕುಲಮದವೊಂದು ರೂಪಮದವೊಂದು . . . ಅಲ್ಲದೆ ಬೇಟ್ ರಾಗಮುಗ್ಗಲಿಸಿದ ದೋಷದೃಷ್ಟಿ ವಿಷಯಾತುರರೇಂ ಗಡ ಮುಂದುಗಾಣ್ಬರೇ (ಶಂಕಾಪಶಾ. ೬–೦೯) ; ಅನ್ನಮದ ಅರ್ಥಮದ ಅಖಿಳವೈಭವದ ಮದ ಮುನ್ನ ಪ್ರಾಯದ ಮದವು ರೂಪಮದವು (ಶುರಂಪ. ಧಾ. ೨–೦೬–೦). 'ಅಷ್ಟಮದ' ಪರಾ. [ಸಂ.]

**ರೂಪರೇಖೆ** (ನಾ). (ಕಾರ್ಯ, ಯೋಜನೆ ಇತ್ಯಾದಿಗಳ) ಸ್ಥೂಲ ಆಕಾರ ; ಬಾಹ್ಯರೇಖೆ : ಇದರ ಪ್ರಾಚೀನತೆಯ, ಪೂರ್ವಸ್ಥಿತಿಯ ರೂಪರೇಖೆಗಳ ವಿವರಗಳು ಕತ್ತಲೆಯಲ್ಲಿ ಮುಳುಗಿಹೋಗಿರುವುದು (ಶ್ರಾಶಿಶಿ. ೪೦) ; ರಾಜ್ಯವ್ಯವಸ್ಥೆಯ ರೂಪರೇಖೆಯನ್ನು ಹಿಂದಿನ ಪ್ರಕರಣದಲ್ಲಿ ಕೊಂಚಮಟ್ಟಿಗೆ ನೋಡಿದ್ದಾಗಿದೆ (ಡಾಕ್ಕಾ. ೯೩). [ಸಂ. ರೂಪರೇಖಾ]

**ರೂಪರೇಷೆ** (ನಾ). = ರೂಪರೇಖೆ : ಸಂಸ್ಥೆಯ ಕಾರ್ಯಕಲಾಪಗಳ ರೂಪರೇಷೆಯು ನಿಶ್ಚಯಿಸಲ್ಪಟ್ಟಿತು (ಪುರುಉ. ೩ ಮುಮ್ಮುಖ); ಮುಂದಿನ ಕಾರ್ಯಕ್ರಮದ ರೂಪರೇಷೆಗಳನ್ನು ಹಾಕಿಕೊಂಡನು (ಐಂಗಾಹ. ೩೯).

[ಸಂ. ರೂಪರೇಖಾ]

**ರೂಪವಂತ** (ನಾ). ಚೆಲುವ ; ಸುಂದರ : ಅರಿಂದಮನು ಚಿತ್ರವನ್ನು ನೋಡಿ ರೂಪವಂತನೆಂದೂ . . . ಮನದಲ್ಲಿ ಸಿದ್ಧಾಂತವಮಾಡಿಕೊಂಡ ಬಳಿಕ . . . ಪರೀಕ್ಷಿಸಲಾರಂಭಿಸಿದನು (ಪಪ್ರಶೇ. ೬೦) ; ಮನ್ಮಥನಂತಹ ರೂಪವಂತನೂ ಅಭಿಮನ್ಯುವಿನಂತಹ ವೀರನೂ ಗುಣವಂತನೂ ಉದಾರಿಯೂ ಆದವನು ತನ್ನ ಕೈಹಿಡಿದನು (ಕಾಂಕಲಾ. ೨೦೬).

[< ಸಂ. ರೂಪವತ್]

**ರೂಪವತಿ** (ನಾ). ಚೆಲುವೆ ; ಸುಂದರಿ : "ಸುಂದರಿ ಸುತನು ರೂಪವತಿ" (ಪಮ್ಪ್ರಶೋ. ೩೨-೩) ; ರೂಪವತಿ ಶಾನೇ ಶತ್ರು ಗಂಡಂಗೆ ಮೇಣ್ ಪೊಂದಿಗಾ ಯವ್ವನೆ ಶತ್ರುವೈ (ಶೋಪುಶ. ೬೬) ; ವರವಚನೆ ಭಾವೆ ಸಿಂಗರಕಾರ್ತಿ ರೂಪ [ಪಾಠಾಂ. ವು]ವತಿ ಸುರತಪ್ರವೀಣೆ . . . ಕನ್ನಡಿತಿ (ಶಪವ. ೬-೯) ; ರೂಪವತಿಯಾದ ಒಂದು ಹುಡುಗಿ ಕೇರಿಯಲ್ಲಿರುವುದು ಅಪಾಯ (ದೇಪಹಂ. ೬೬). [ಸಂ. ರೂಪವತೀ]

**ರೂಪವಿಕ್ರಯಿ** (ನಾ). = ರೂಪಜೀವನೆ : ಜಯಂತ, ನಿನ್ನ ರೂಪಾ ರೂಪವಿಕ್ರಯಿಯೆಂದು ತಿಳಿಯುವೆಯಾ (ಜಯಂತ. ೨೦೯).
[ಸಂ. ರೂಪವಿಕ್ರಯಿಾ]

**ರೂಪವಿದ್ಯಾಧರ** (ನಾ). ಚೆಲುವಿನಲ್ಲಿ ದೇವತೆಯಂತೆ ಇರುವವನು ; ಬಹಳ ಸುಂದರನಾದವನು : ಓರ್ವಳ್ ವಿಮುಗ್ಧೆ ರೂಪವಿದ್ಯಾಧರನ ರೂಪಾತಿಶಯವಿಲೋಕನಮಾತ್ರದಿಂ . . . ಕಂಡು ವಿಸ್ಮಯಾಪನ್ನಮಾನಸೆ ಯಾಗಿ (ಸುಕುಮಾ. ೧೧-೦೯ ವ). [ಸಂ.]

**ರೂಪವಿದ್ಯಾಧರಿ** (ನಾ). ಚೆಲುವಿನಲ್ಲಿ ವಿದ್ಯಾಧರಸ್ತ್ರೀಯಂತೆ ಇರುವವಳು ; ಬಹಳ ಸುಂದರಿ : ವಿಶಿಷ್ಟಜನಕಾಮಧೇನು ಆಶ್ರಿತಜನ ಕಲ್ಪಲತೆ ರೂಪವಿದ್ಯಾಧರಿ ಕಲಿಕಾಲುಸರಸ್ವ[ತಿ] (ಸೌಇಇ. XX, ೨೩-೬; 1029); ಪದನಖಕೇಶಾಗ್ರಾಂಬರವೊದವಿದ ಮಾನಪ್ರಮಾಣಲಕ್ಷಣಮಂ [ತು][ವ್ವಿ]ದ ಚತುರಾಸ್ಯಂಗಂ ಬಾರದು ಬರೆಯಲ್ ರೂಪು ರೂಪವಿದ್ಯಾಧರಿಯ (ಸೌಇಇ. XX, ೯೯-೩೨; 1076 ?). [ಸಂ. ರೂಪವಿದ್ಯಾಧರೀ]

**ರೂಪವಿಹೀನ** (ನಾ). ರೂಪವಿಲ್ಲದ ವ್ಯಕ್ತಿ ; ಕುರೂಪಿ: ರೂಪವಿಹೀನರಂ ಕುಟಿಲಬುದ್ಧಿಗಳಂ . . . ನಿರ್ಮಿಸಿದುತ್ಕಟಚಿಂತೆಯಿಂದೆ ತತ್ಪಾಪಮಡಂಗಲೆಂದು ಪಡೆದಂ ದಮಯಂತಿಯನಬ್ಜಸಂಭವಂ (ನಳಚಂ. ೯೦). [ಸಂ.]

**ರೂಪವಿಹೀನೆ** (ನಾ). ರೂಪವಿಲ್ಲದವಳು ; ಕುರೂಪಿ : ರೂಪವಿಹೀನೆ ರೂಪಸಿಯೊಳಿರ್ದು ತನಗಿಲ್ಲದಾ ಚೆಲ್ವಿನಲಿ ಲೋಲಾಡಿದಳ್ (ಶ್ರೀಣಾಮ. ೨೩-೭೦೯). [ಸಂ. ರೂಪವಿಹೀನಾ]

**ರೂಪಸಾಧಾರಣ** (ನಾ). [ಸಂಗೀತ] ಒಂದು ರಾಗದ ಹೆಸರು : ನರ್ತಕಿ ಕಕುಭ ಷಡ್ಜಕೌಶಿಕ ಭ್ರಮಾಳ ಪಂಚಮಭ್ರಮಾಳ ಪಂಚಮಗಾಂಧಾರ ರೂಪಸಾಧಾರಣವೆಂಬೀಳು ರಾಗಂಗಳ್ (ವಿವೇಕ. ೦೯೬). [ಸಂ.]

**ರೂಪಸಿ** (ನಾ). ಚೆಲುವೆ ; ರೂಪವತಿ : ರೂಪವಿಹೀನೆ ರೂಪಸಿಯೊಳಿರ್ದು ತನಗಿಲ್ಲದಾ ಚೆಲ್ವಿನಲಿ ಲೋಲಾಡಿದಳ್ (ಶ್ರೀಣಾಮ. ೨೩-೭೦೯); ಆ ನಡುಗಡ್ಡೆಯ ಅಧಿರಾಣಿಯಿರಬೇಕು ಆ ಅಪೂರ್ವವಿಚಿತ್ರರೂಪಸಿ (ಸಿದಿಲ. ೩೬).

[ < ಸಂ. ರೂಪಸ್ವಿನೀ./ ತೆಲು. ರೂಪಸಿ./ಹಿಂ. ರೂಪಸೀ ]

**ರೂಪಸ್ಕಂಧ** (ನಾ). [ಬೌದ್ಧ] "ರೂಪಸ್ಕಂಧವೆಂದರೆ — ಕಣ್ಣು ಕಿವಿ ಮೂಗು ನಾಲಗೆ ದೇಹ ಎಂಬ ಐದು ಇಂದ್ರಿಯಗಳು" (ಹಿಂದಧಾ. ೨೯): ವಿಷಯದ ಆಕಾರವನ್ನು ಹೊಂದಿದ ಪ್ರವೃತ್ತಿವಿಜ್ಞಾನವಕ್ಕೂ ತಮ್ಮ ವಿಷಯಗಳಿಂದ ಸಹಿತಗಳಾದ ಇಂದ್ರಿಯಗಳಿಗೂ ರೂಪಸ್ಕಂಧವೆಂದು ಹೆಸರು (ಶಾತತ್ತ್ವ. ೨೦೬). [ಸಂ.]

**ರೂಪಸ್ತವ** (ನಾ). ಸೌಂದರ್ಯದ ಹೊಗಳಿಕೆ ; ರೂಪವನ್ನು ಕುರಿತ ಸ್ತುತಿ : ಫಣಿಪ್ರಭುಗಮೆತ್ತಮತ್ತಳಗಮಲ್ತೆ ರೂಪಸ್ತವಂ ಗುಣಸ್ತವ ಮುದಾತ್ತವೃತ್ತಭವದೀಯವಸ್ತುಸ್ತವಂ (ಆದಿಪು.೦೩-೯೦) ; ಶಚೀಪತಿಯುಂ . . . ಬಂದನೇಕವಸ್ತುಸ್ತವರೂಪಸ್ತವಗುಣಸ್ತವಂಗಳಿಂ ಸ್ತುತಿಯಿಸಿ (ಶಾಂತಿಪು. ೦೯-೯೯ ವ). 'ಗುಣಸ್ತವ', 'ವಸ್ತುಸ್ತವ' ಪರಾ. [ಸಂ.]

**ರೂಪಳಿ** 'ರೂಪಟು' ನೋ.

**ರೂಪಟು**, ರೂಪಳಿ, ರೂವಳಿ, ರೂವಟು (ಕ್ರಿ). ೧. ರೂಪವು ನಾಶವಾಗು ; ವಿರೂಪಗೊಳ್ಳು : ಇನರಥಹತಿಯಿಂ ನೆಗೆದ ಗಗನ ಧಾತುಸ್ಥಳಿರಜಂಗಳಿಂ ರೂಪಟುದತ್ತೆನೆ ಸಂಜೆ ಕೆಂಪನುಟುದಿರೆ (ಜಗಂ. ೦೬-೯೬); ಮಣ್ಮುಟು — ರೂಪಟುದ ಸಾವು (ಕವುದ. ಕಂ. ೦). ೨. ರೂಪವನ್ನು ನಾಶಗೊಳಿಸು ; ವಿರೂಪಗೊಳಿಸು : ಸಗ್ಗಮದು ಕಟುಪಿರ್ಪ ರೂಪಟುವ ಪೀಡೆಯನ್ . . . ಬಣ್ಣಿಸಿದ ನೀನಯ್, ನೀನಾರ್ಗೆ ಪೇಟಿಯಯ್ ? (ಬಿದ್ರಕ್ರ. ೩೧-೬೭೨). **ರೂಪಳಿ** : ೧. ತೊಸ್ಸುವಿಡಿ ದಾವರಿಸಿ ಒಪಳಿದಿಂತಿರುತ್ತಿರಲ್ (ಚಿತ್ರಶ. ೩೭-೩೬) ; ಉಟುರೂಪಳಿದಂ ರತಿರಾಜಂ (ಹರಿವಾರ. ೬-೩೦). **ರೂವಳಿ** : ೧. ಇರುಳ ಹಾವಸೆಯಂತೆ ರೂವಳಿದು ತೇಲುತಿವೆ . . . ಹೊಂಗೆ ಹಿಪ್ಪೆ (ಗಣೇಶ. ೨೯-೭). **ರೂವಟು** : ೧. ರೂವಟುಯೆ . . . ಸೂಕ್ಷ್ಮಸಾಂಪರಾಯಕ್ಷಪಕಂ ಭಾವತರವಾರಿಯಿಂದಷ್ಟಾವಿಂಶತಿ ಮೋಹಬಳಮನುನ್ಮೂಳಿಸಿದಂ (ಅಜಿತಪು. ೯-೦೦೬). [ ರೂಪು + ಅಟು$_1$ ]

**ರೂಪಾಂತರ** (ನಾ). ಬೇರೆಯ ಆಕಾರ, — ಸ್ವರೂಪ : ರೂಪಾಂತರ ಕೈಯ್ಕೊಂಡು ಭಾಸುರದಿಂ ತತ್ಪುರರಾಜನಂದು ಪಿರಿದೊಂದುತ್ಸಾಹಮಂ ಮಾಡಿದಂ (ಆದಿಪು. ೦೬-೩೨) ; ಕೋಟಕ್ಕಿ (ಕೋಡಿಗೆ), ನಾಟಕ್ಕಿ (ನಾಡಿಗೆ), ಇವುಗಳು ಸಮಾಸವಿಧಿಯಿಂದ ಡಕಾರಕ್ಕೆ ಟಕಾರವಾಗಿ ರೂಪಾಂತರವಾಗಿವೆ (ಶಬ್ದಶಾಂ. ೭೩). [ಸಂ.]

**ರೂಪಾಂತರಿಸು** (ಕ್ರಿ). ರೂಪವನ್ನು ಬದಲು ಮಾಡು ; ಬೇರೆಯ ರೂಪವನ್ನು ಕೊಡು : ಅನ್ಯಕವಿಗಳ ಗದ್ಯಪದ್ಯಗಳನ್ನು ಯಥಾರೀತಿ ತನ್ನ ಪದ್ಯರೂಪಕ್ಕೆ ರೂಪಾಂತರಿಸಿದಾಗ ಅದು ಅನುವಾದವೆನಿಸುವುದು (ಸಂಶೋಧ. ೦೨೭). [ರೂಪಾಂತರ + — ಇಸು$_3$]

**ರೂಪಾಜೀವೆ** (ನಾ). ತನ್ನ ಸೌಂದರ್ಯದಿಂದ ಜೀವಿಸುವವಳು ; ವೇಶ್ಯೆ : ಕುಂದ ಚಿತ್ರಮಾಲತಿಯ ಪುಷ್ಪಂಗಳಂ ಹರುಷದಿಂ ಸೂತ್ರದಿಂ ಕೊಯ್ದು ರೂಪಾಜೀವೆಗಳ ಮುಡಿಗೆ ಮುಡಿಸುವಂ ಮೋಹದಿಂದಂ (ಕ್ರಕುಕು. ೩-೭೩) ; ನಾನು ರೂಪಾಜೀವೆ, ಸೂಳೆ, ಬೆಲೆವೆಣ್ಣು, ವಾರ ವಿಲಾಸಿನಿ (ಮಂತ್ರಕ. ೩೩-೨೦). [ ಸಂ. ರೂಪಾಜೀವಾ ]

**ರೂಪಾಧಿಕ** (ನಾ). ಅತ್ಯಂತ ಸುಂದರನಾದವನು ; ಮಿಗಿಲಾದ ಚೆಲುವ : ರೂಹಿಸುವಲ್ಲಿ ರೂಪಾಧಿಕ ನೋಡುವಲ್ಲಿ ನೋಟ ಘನ (ಬಸವ. ೯೦೭) ; ಉನ್ನತನ ರೂಪಾಧಿಕನ ಸಂಪೂರ್ಣದಕ್ಷನನನ್ಯರೆನ್ನವರನ್ನದನ . . . ಪಡಿಹಾಚಿಕನ ಮಾಡುವುದು (ಕುವ್ಯಾ. ಉ. ೩-೯೯). [ಸಂ.]

**ರೂಪಾನು** (ಕ್ರಿ). ರೂಪವನ್ನು ತಾಳು ; ಆಕಾರವನ್ನು ಪಡೆ : ನೀ ಪಾಲಿಸಬೇಕು ನನಗೊರ್ವ ಕಂದರ್ಪರೂಪಾಂತ ವರಕುಮಾರಕನ (ಮೋಹತ. ೯-೨೦); ಎರಡು ರೂಪಾಂತೈರಾವತವೆಂದೆನೆ ಮೆಚುದುವು ಬಾಗಿಲಾನೆಗಳು (ಕಂವವ. ೭-೯೯). [ರೂಪು + ಆನು$_1$ (<ಆನ್$_1$) ]

**ರೂಪಾನುಪಾತ** (ನಾ). [ಜೈನ] ದೇಶವ್ರತಾತಿಚಾರಗಳಲ್ಲಿ ಒಂದು ; ತನ್ನ ರೂಪವನ್ನು ಬೇರೆಯವರಿಗೆ ತೋರಿಸುವುದು : ಕಪಟದೊಳೇಂ ಪ್ರೇಷಣಶಬ್ದಪುದ್ಗಲಕ್ಷೇಪಸಮುದಿತಾನಯನಂ ತಾಪಪಚಾರಂಗಳ್ ರೂಪಾನುಪಾತಮುಂ ಪ್ರವಿಂತದೇಶನಿಯಮವ್ರತದೊಳ್ (ಸುಕುಮಾ.೬-೦೯). [ಸಂ.]

**ರೂಪಾಯಿ**, ರುಪಾಯಿ (ನಾ). (ಭಾರತದಲ್ಲಿ ಹಿಂದೆ ಚಲಾವಣೆಯಲ್ಲಿದ್ದ ಹದಿನಾರಾಣೆಯ ಹಾಗೂ ಈಗಿನ ನೂರುಪೈಸೆಯ ಬೆಲೆಯುಳ್ಳ ಬೆಳ್ಳಿ ಮುಂತಾದ ಲೋಹಗಳ) ಒಂದು ನಾಣ್ಯ ಅಥವಾ ನೋಟು : ಖರ್ಚು ೪೦ ರೂಪಾಯಿ (ಎಕ. IX, ಕಾವಳ. ೯೦-೩೬; 1700) ; ಸನ್ ೧೮೪೦ರ ವರೆಗೆ ಹದನಾರುಪ್ರಕಾರದ ರೂಪಾಯಿಗಳು ನಡಿಯುತ್ತಿದ್ದವು (ಕಥಾಗ. ೨೮೦): ರೈತರು ಅಜ್ಜ ಮುತ್ತಜ್ಜರು ಹೂತಿಟ್ಟಿದ್ದ ರೂಪಾಯಿಗಳನ್ನು ಕೊಟ್ಟಿದ್ದರು (ಹುಬ್ಬಿಹ. ೩). **ರುಪಾಯಿ:** ಸುಬಾಚಾರಿ ಮಾಡಿದ ರುಪಾಯಿ ಮಡುವ ಪಂಚರಸಿಯ ಸಲಾಕೆ (ಮೈಕಂ. ೦೯೩೮, ೬೨-೦; 1726).

[ ←ಹಿಂ. ರುಪಯಾ; ಮರಾ. ರುಪಯಾ, ರುಪಾಯಾ. ಸಂ. ರೂಪ್ಯ ]

**ರೂಪಾರ**, ರೂವಾರ, ರೂಹಾರ (ನಾ). ೧. ಶಿಲ್ಪಿ : ಚಿತ್ರಕಾರ–ಚಿತ್ಕಾರ; ರೂಪಾಕಾರ–ರೂಪಾರ (ಕಪುದ. ೨೯೫ ಕ್ರಿಯೋ) ; ಸೌನ್ದರ್ಯತತ್ತ್ವಮವತರಿಸಿ ಕೊಳ್ವವನೊಲ್ವಿರ್ಪ ರೂಪಾರಂ ಮೆಯ್ಸಿರಿ ಬಣ್ಣವುರಂ ಬಾಳ್ಕೆಗಳೆನೊಪ್ಪಿಸಿಯದಂ ಕಾಣ್ಕೆ ಮಾಳ್ಕುಂ (ಸಂಕಥ. ೫೦-೬೯). **ರೂವಾರ** : ೧. "ರೂವಾರ(ರೂಪಾರ) ರೂಪಾಕಾರ, ರೂಪಕಾರ_ಶಿಲ್ಪಿ" (ಶಬ್ದಕೋ. ೩೯). ೨. ವಿಗ್ರಹ ; ಮೂರ್ತಿ : ತಳದಿಂ ಕಳಶಂಬರಮೊಂದಳವಿಯ ರೂವಾರಮೆನಿಸಿ ಬಹುರೂಪಿಣಿಯೊಳ್ . . . ಒಪ್ಪುವವು ನಾಡೆಯುಂ ಕರುಮಾಡಂ (ಅಜಪು. ೨-೨೦); ಕಾರ ಮಿಂಚಿನ ಬೊಂಬೆಯೊ ಅಮರ್ದಿನ ರೂವಾರಮೊ . . . ಎನಲಾ ನಾರಿ ಪಳಚ್ಚನೊಪ್ಪಿದಳು (ಶ್ರೀಪಾಂ. ೨-೫೨). **ರೂಹಾರ** : ೨. ಲತಾವಳಿಯ ವಿಳಸದ ಸರ್ವರೂಹಾರದ ಚಂದ್ರಿಕಾಮಂಟಪ (ಕೇಶಿರ. ೧೦೦-೨೨); ಪಚ್ಚೆಪವಳಂಗಳ ಸ್ತಂಭಗಳ ಶಶಿಕಾಂತಶಿಲೆಯ ತೊಲೆಯ ಕಡೆದ ರೂಹಾರಗಳಲೀಕ್ಷಿಸಲು (ಸೋಮಪುಕ. ೨-೨೦).

[<ಪ್ರಾ. ರೂಆರ./ಸಂ. ರೂಪಕಾರ]

**ರೂಪಿ** (ಗು). ೧. ರೂಪವುಳ್ಳ ; ಆಕಾರವನ್ನು ಹೊಂದಿರುವ. ೨. ಸುಂದರವಾದ ಆಕಾರವುಳ್ಳ. ೩. ಹೋಲಿಕೆಯುಳ್ಳ ; ಸಾಮ್ಯವಿರುವ. (ನಾ). ೪. ರೂಪವುಳ್ಳವಳು ; ಚೆಲುವೆ : ನೋಡುವುದೆ ಕಣ್ಣು . . . ಮುರುಕಿ ಕುಬ್ಜೆಯ ಡೊಂಕ ತಿದ್ದಿ ರೂಪಿಯ ಮಾಡಿ ಸೆಳಿಗಪಿಡಿಸಿಕೊಂಬನ (ಪುರಂದ. ಭಾ. ೪-೩೦-೫). [ಸಂ. ರೂಪಿನ್]

**ರೂಪಿಡು**, ರೂವಿಡು, ರೂಹಿಡು (ಕ್ರಿ). ೧. ತನ್ನ ರೂಪದಂತೆಯೇ ಕಾಣು ; ಹೋಲು : ಕಾಮಿನಿ . . . ಖಚರೀಜನಂಗಳೊಳ್ ರೂಪಿಡೆ ತನ್ನ ರೂಪೊಲಿದು ಪಾಡಿದಳಚ್ಯುತನಂಕಮಾಲೆಯಂ (ಜಗಪು. ೧೬-೧೧೪). ೨. ತನ್ನನ್ನು ಒಪ್ಪಿಸಿಕೊಳ್ಳು,_ಅರ್ಪಿಸಿಕೊಳ್ಳು : ಪಾಪಿ ಗಂಡನೆಯನ್ನ ಆಪತ್ತಿಗೊಡೆಯನೆಂಬಾಪೇಕ್ಷೆಯಲಿ ಬಂದು ನಿನಗೆ ರೂಪಿಟ್ಟೆ ದುಃಖವನೀ ಪರಿ ಮಾಳ್ಪರೆ (ಪಿಶಾಂ. ೪-೯೬). ೩. ಕೋಪವನ್ನು ಪ್ರಕಟಿಸು ; ರೇಗು ; ಕೆರಳು : "ರೂಪಿಡು_ಕ್ರೋಧನಿರ್ದೇಶೇ" (ಶಮದ) ; ಚಪ್ಪರಿಸು ರೂಪಿಡು ಕೂಪಿಡು ಕೂರ್ಪುದೋಟು ಪಾಟಿಗಿಯದೆ ಕೂರ್ಮೆ ಮಿಕ್ಕು ತಗೆ ತೊಂಗಲನಿಂಬೆನೆ ನೂಂಕು ಯುದ್ಧಮಂ (ಕಾವ್ಯಾವ. ೪೦೬); ಸೇನಾನಿಯುಮ ದಂತೆಯೇ ತಮ್ಮ ಹೆಗ್ಗಡೆಗೆ ವೀರವನ್ದನವನ್ನೊಪ್ಪಿಸಲಿಲ್ಲವೆಂದು ರೂಪಿಟ್ಟು ಹುಚ್ಚೆದ್ದು (ಮಂತ್ರಕ. ೬೩-೭). **ರೂವಿಡು** : ೪. ಆಕಾರವನ್ನು ಕೊಡು,– ನೀಡು : ರೂವಾರಿ ರೂವಿಟ್ಟ ಕಲ್ಲಲ್ಲ, ಮೂರ್ತಿಯಿದು ಎಂತೆಂದರಂತಾಗಬಲ್ಲ ಬಯಲಲ್ಲ (ಮಲಿದೇ. ೧೯–೧). **ರೂಹಿಡು** : ೧. ಚೆನ್ನೆ ನೀನಲ್ಲದೆ ಬಳಿಕಾರಿನ್ನು ದಿಟವಿದಿರಿಟ್ಟು ತೋಱಿಸಲನ್ಯರುಂಟೇ ರೂಹಿ[ಪಾಠಾಂ. ಕುಱುಹಿ]ಡಲು ನೆಱೆ ನೋಡು ನೀನೆನುತ ಕನ್ನಡಿಯ ತೋಱಿದಳೊಬ್ಬಳು (ಪ್ರಭುಲಿ. ४-೨೨). ೪. ಸರಸಿಜಭವ ಚದುರಿನೊಳು ಅರೆಕಾಣಿ ತಟ್ಟಿಲ್ಲದ ತ್ರಾಸಿನೊಳು ತೂಗಿ ಪರಿಕಿಸಿ ರೂಹಿಟ್ಟನಿವರ (ನಾಗಕು. ೬-೪೦). ೫. ಅಂದವಾಗಿ ಕಾಣು ; ಕಂಗೊಳಿಸು : ರೂಹಿಟ್ಟ ಮನ್ಮಥನಂತೆ ಬೆಳಗಿದನಖಿಳದಿಗುತ್ತಟವ (ಏಕಾಗ. ೧೧-೨೯-೯). [ರೂಪು + ಇಡು₁]

**ರೂಪಿಣಿ** (ನಾ). ೧. ಚೆಲುವೆ; ರೂಪವತಿ : ರೂಪಿಣಿಯರನುದಿನಂ . . . ಮುನಿತಿಲಕನ್ಯತಪ್ಪ ಪಥಮಂ ನಿರೀಕ್ಷಿಸುತಿರೆ (ವಂಕಾರಾ. ೧-೫-೪೩). ೨. ಸೂಳೆ : ವೇಶ್ಯೆ : "ರೂಪಿಣೀ, ರೂಪಜೀವನಾ, ಈ ೨ ಸೂಳೆ" (ಕಾಕಳ. ೨೯೦). [ಸಂ. ರೂಪಿಣೀ]

**ರೂಪಿತ** (ಗು). ೧. ಕಲ್ಪಿಸಿದ ; ಯೋಜಿಸಿದ. ೨. ಧರಿಸಿದ ; ತೊಡಿಸಿದ: ಶಿವಮಂತ್ರಾಭಿಮಂತ್ರಿತಭೂತಿ ರುದ್ರಾಕ್ಷಾದಿ ರೂಪಿ[ಪಾಠಾಂ. ಭೂಷಿ]ತಜಾತನಿರ್ಮಳಪಂಚಮುದ್ರಾಧಾರರಂ ಮಾಡಿ (ಬಸಪು. ೪೯-೪೦). (ನಾ). ೩. ರೂಪುಗೊಂಡುದು: ಕ್ರಿಯಾತ್ಮಕಶಿಕ್ಷಣಯೋಜನೆಯು ಪ್ರಪಂಚದಲ್ಲೇ ಶ್ರೇಷ್ಠಮೇಧಾವಿಯುವರಾದ ಮಹಾತ್ಮಾಗಾಂಧಿಯವರಿಂದ ರೂಪಿತವಾಯಿತು (ಕ್ರಿಯಾಶಿ. ೧೯೨); ಮಹಾಭಾರತವು ಇಂದು ನಮಗೆ ಉಪಲಬ್ಧವಿರುವ ರೀತಿಯಲ್ಲಿ ರೂಪಿತವಾದದ್ದು ಬಹುಶಃ ಕ್ರಿ. ಪೂ. ಐದನೆಯ ಮತ್ತು ಒಂದನೆಯ ಶತಮಾನದ ಅಂತರದಲ್ಲಿರಬಹುದು (ಭಾರದ. ೧೦೯). [ಸಂ.]

**ರೂಪಿಮಾ** (ನಾ). [ಭಾಷಾಶಾ] ಭಾಷೆಯ ಅರ್ಥವತ್ತಾದ ಚಿಕ್ಕಘಟಕ: ಮೂಲರೂಪಗಳನ್ನು ಸಾಧಿಸುವಲ್ಲಿ ಧ್ವನಿಮಾ, ರೂಪಿಮಾಗಳ ಪರಸ್ಪರ ಸಾದೃಶ್ಯವನ್ನು ಅರಿತುಕೊಳ್ಳುವುದರಲ್ಲಿ ಅತ್ಯಂತ ಪ್ರಯೋಜನವಾಗುವುದು (ಸುಪರ್ಣ. ೨೯೩). 'ಧ್ವನಿಮಾ', 'ಸ್ವನಿಮಾ' ಪರಾ. [ಸಂ.]

**ರೂಪಿಲಿ**, ರೂವಿಲಿ (ನಾ). ರೂಪವಿಲ್ಲದ ವ್ಯಕ್ತಿ ; ಕುರೂಪಿ : ಸೊಬಗಂ ಪುಟ್ಟಿನೆನೆಯುಂ ಆದಂ ರೂಪಿಲಿ ನಾಡೆ ಅಪ್ಸರಸ್ತ್ರೀಚಿಂತೆಯಿನಾಂ (ಸೌಪಂದ. ೧೧-೬). **ರೂವಿಲಿ** : ನಮ್ಮ ತಾಯ್ನುಡಿ . . . ತಾನಮಂಗಳೆಯೆನಿಸಿ ಹಿರಿಮೆಯ ನೀಗಿ ಹೆಸರನಳಿದು ರೂವಿಲಿಯಾಗಿ ಬನ್ನಪಡುತಿರಲು (ಗಡೀಶ. ४೦-೯). [ರೂಪು + — ಇಲಿ₃]

**ರೂಪಿಸು**, ರೂವಿಸು, ರೂಹಿಸು (ಕ್ರಿ). ೧. (ಚಿತ್ರ, ಶಿಲ್ಪ ಮೊದಲಾದುವುಗಳಂತೆ) ಆಕಾರವನ್ನು ಕೊಡು ; ರೂಪಕೊಡು : ಆವ ದೇವರುಮಾಗೆ ಬಯಲ ರೂಪಿಸಬಲ್ಲರೇ (ಪವಪೋ. ೭-೩೬); ನನ್ನೂರಿನ ಸುತ್ತಣ ಪ್ರದೇಶವನ್ನು, ಆಸಕ್ತಿಯಿಂದ ಅವಲೋಕಿಸಿ . . . ಚಿತ್ರವನ್ನು ರೂಪಿಸುವ ಕೆಲಸಕ್ಕೆ ಕೈಹಾಕಿದೆ (ಪನ್ನೂರು. ೧೩ ಪೀಠಿ). ೨. ಕಲ್ಪಿಸು ; ಯೋಚಿಸು : ನಾನು ನನ್ನ ಸಂಸಾರವನ್ನು ಹೇಗೆ ರೂಪಿಸುವೆನೆಂಬುದನ್ನು ನೋಡುವಿರಂತೆ (ಸ್ವಪ್ನ. ೩); ಇವನ್ನೆಲ್ಲಾ ಓದಿಕೊಂಡು, ನಾನು ನನ್ನ ಅಭಿಪ್ರಾಯವನ್ನು ರೂಪಿಸುತ್ತೇನೆಯೇ ? (೬೨ಖಿದ. ೧೧). ೩. ಹೇಳು ; ನಿರೂಪಿಸು : ರೂಪಕವೆಂಬುದು ಪೆಱವರ ರೂಪಾದಿಗುಣಂಗಳಾನಭೇದೋಕ್ತಿಗಳಿಂ ರೂಪಿಸುವುದು (ಕಲಿರಾ. ೩-೧೨); ರೂಪಿಸುವ ತನ್ನೀಶನಿಂದಾಲಾಪವಂ ಕೇಳದೆ (ಬಸಪು. ೬೦-೧೮); ಮುನಿ ರೂಪಿಸಿದ ಮಾತುಗಳೆನಗೆ ಸಾಮ್ಯವದಾಯ್ತು (ಜೀಪಂಶ. ೫-೩೯). ೪. ತಿಳಿ ; ಭಾವಿಸು : ಸತಿಯೋಪ ಶಿವನಂ ತನಯನೆಂದೇ ರೂಪಿಸುತ್ತು ಪಲಾಲಿಸುತ ಕೊಂಡಾಡುತಿರಲು (ಬಸಪು. ೧೫-೧೫); ಧ್ಯಾನಿಸುತೆ ಭಾವಿಸುತೆ ರೂಪಿಸುತೆ ಕಾಮಿಸಿದನಾ ಭೂಮಿಪಂ ತದ್ರೂಪಗುಣಹೃದಯರಂ (ಶ್ರೀರಾಮ. ೧೨-೩೦೦). ೫. ಸ್ಥಿರಪಡಿಸು: ನಾನಾಪುರಾಣಾಗಮನಿಗಮಸರ್ವಪ್ರಮಾಣದಲಿ ರೂಪಿಸಲು ಸಂಸಿದ್ಧವೆಂಬಾಲಾಪವಂ ಕೇಳ್ದು (ಬಸಪು. ೫೦-४೦). ೬. ಪ್ರದರ್ಶಿಸು ; ಕಾಣುವಂತೆ ಮಾಡು : ಎಲ್ಲ ವಿಕೃತಿಯ ತಳದ ವಾತ್ಸಲ್ಯದೃಷ್ಟಿಯನು ರೂಪಿಸುವೊಲು (ಮಲಿದೇ. ४೦-೯). ೭. ಉಂಟು ಮಾಡು : ಕೌರವ ಪಾಂಡವರ ವೈರಜೀವನ ಹಲವು ಪರಿಯಲ್ಲಿ ಮುಂದುವರಿದು ಅನೇಕ ವಿಷಘಟನೆಗಳನ್ನು ರೂಪಿಸಿತು (ಕಾವುಕ. ೧೧). ೮. ಸಿಟ್ಟಾಗು ; ಕೋಪಗೊಳ್ಳು ; ಕೆರಳು : ರೂಪಿಸುತ ಬಂದೇಱಿರೊಡನೆ ನಿರೂಪನಾಗಳೆ ಮಾಳ್ಪ ತರುಗಳ ರೂಪಿಸುತ ಬಂದೇಱಿರೊಡನೆ ನಿರೂಪನಾದಡೆಯು (ಬಸಪು. ೧೯-೫೦). **ರೂವಿಸು** : ೯. ಆಕಾರವನ್ನು ತಳೆ ; ರೂಪವನ್ನು ಹೊಂದು : ಭೂರವಮಂ ಭಟಂ ನಿಮಿರ್ದು ಕುತ್ತಿದೊಡುರ್ಚಿದ ಚಂಡಶಾಸನಂ ಚಾರಣದಾಸೆಯಿಂ ನುಸುಳ್ದು ಮುಜ್ಝುಟದೊಳ್ಮಗುಟ್ಟಿಕ್ಕಿವಟ್ಟಿಸ್ಪಪಾರಿಸೆ ಕಂಡ ಭೂರಣದೆ ರೂವಿಸಿದಂ ಪೊಯ್ಕೆ ಕಾಳವಟ್ಟದಿಂ ಪೋರಗದಿಂದೆ ಪೊಯ್ದನೆರಡುಂ ಸರಿವೋದವು ಲಾಗುಬೇಗದೊಳ್ (ಅಪಂಪು. ೧೧-೬೦). **ರೂಹಿಸು**: ೧.ಉರಿ ಕರ್ಪುರ ಸಂಯೋಗ ನಿಷ್ಪತ್ತಿಯಾದಲ್ಲಿ ಮರಳಿ ರೂಹಿ[ಪಾಠಾಂ. ಪಿ]ಸಿ ಹಿಡಿಯಲುಂಟೆ ಅಯ್ಯಾ (ಅಲಂಪೀ. ३४०-೫೬). ४. ನಿಜಲಿಂಗೈಕ್ಯನ ಉಪಮಿಸಲಿಲ್ಲ ಉಪಮಿಸಲಿಲ್ಲಾಗಿ ರೂಹಿಸಲಿಲ್ಲ ರೂಹಿಸಲಿಲ್ಲವಾಗಿ ಭಾವಿಸಲಿಲ್ಲ (ಅಪಚಂ. ೨೬೦-೦೨೬೨) ; ಆತ್ಮನಲ್ಲಿ ಮಲವು ಹುದುಗಿರ್ದ ಭೇದವ ತಿಳಿದು ರೂಹಿಸಿ ಹೇಳಬಲ್ಲಡೆ ಸಿದ್ಧಾಂತಿ ಎಂಬೆ (ಉಂಶಿ. ४. ೨೦೬-೨೮೬). ೬. ರವದ ಪೊರ್ಕುಳ ಗಂಟಿಯ ಮೋಹಿಸುವ ಮೊಗವಡದ ರೂಹಿಸುವ

ನೊಸಲ ಕನ್ನಡಿಯ . . . ತುರಂಗಬಲದೊಳ್ (೧೦೪. ೬-೫೫ ವ). ೧೦. ಕೆತ್ತು ; ಕಂಡರಿಸು : ಮರಮರದ ಮೇಲೆಲ್ಲ ಪ್ರೇಯಸಿಯ ಹೆಸರನ್ನು ರೂಹಿಸಿದ (ಪಶ್ಚಿ. ೨೨). ೧೧. ಕಾಣಿಸಿಕೊಳ್ಳು ; ಹುಟ್ಟು ; ಮೈದೋರು : ಸುರರು ಹೂಮಳೆಗಱೆದರಾಗಳು . . . ಗುರು ಗುಹೇಶ್ವರನಿಳೆಗೆ ರೂ[ಪಾಠಾಂ. ಮೋ]ಹಿಸಿ ಮೆಱೆದ ಕತದಿಂದೆ (ಪ್ರಭುಲಿಂ. ೬-೨೫) ; ಭೂಮಿಯ ತಿಣ್ಣವನು ತಿದ್ದಲಿಕೆ ಹರಿ ನರನಾಗಿ ರೂಹಿಸಿದ (ಕೊರಟಾ. ೬-೨-೨೦) ; ರೂಹಿಸಿತೊಂದು ದಿವ್ಯೋಪಾಯ (ಭರತ. ೫೦-೪೭). ೧೨. ನಿರ್ಮಿಸು ; ರಚಿಸು : ಕೇಡಿಗರೂ ಕೃತ್ರಿಮರಚನೆಯಲಿ ರೂಹಿ [ಪಾಠಾಂ. ಮಾಡಿ]ಸಿದರರಮನೆಯ (ಸಂಭಾಪ. ೨೦-೬೦). [ರೂಪು + -ಇಸು₃]

**ರೂಪು**, ರೂವ₁, ರೂವು, ರೂಹ, ರೂಹು (ನಾ). ೧. ಆಕಾರ ; ರೂಪ : ಬಾಲನುರವಣಿಸಿದನು ಮಸಗಿದ ಕಾಲರುದ್ರನ ರೂಪ ತಾಳ್ದನು ವೈರಿಸೇನೆಯಲಿ (ಕುಮಾರವ್ಯಾ. ದ್ರೋ. ೮-೨೭) ; ಅವರನಾಜಿಯಲಿ ಕೊಂದನೊಬ್ಬನ ಸೂಕರನ ರೂಪಿಂದಲೊಬ್ಬನ ನರಹರಿಯ ರೂಪಿಂದ ಲಕ್ಷ್ಮೀಕಾಂತನಹಿತ ಕೃತಾಂತನಾಜಿಯಲಿ (ಕೊರಟಾ. ೦-೮-೨೨). ೨. ಚೆಲುವು ; ಅಂದ ; ಸೊಗಸು : ಸ್ಮರನಂ ರೂಪಿನೊಳಿಂದ್ರನಂ ವಿಭವದೊಳ್ ಪೋ ಮೆಚ್ಚೆಂ (ಶಂಕರಾ. ೪-೩೮) ; ಊರಿಂಗೆ ದೊರೆ ರೂಪು ನಾರಿಂಗೆ ಗುಣ ರೂಪು ಚಾರು ಕೋಕಿಲೆಗೆ ಸ್ವರ ರೂಪು ರಾಜಂಗೆ ಧೀರತ್ವ ರೂಪು (ಸರ್ವಜ್ಞ. ೭೦೮). **ರೂವ₁** : ೧. ಧಾರಿಣಿಯೊಳು ಪೂಜೆಗೊಂಬನತಿಭಕ್ತರ ರೂವದೊಳು ನಿರಂತರಂ ಪರಮಶಿವಾಗಮಿಕರಿಗೆ (ಎಕ. VII, ಶಿಕಾರಿ. ೯೩-೦೩ ; 1422). **ರೂವು** : ೧. ಕುಳ್ಳಿರ್ದಂ ಸಿರಿಯುರಸಂ ಕಾರ ಮುಗಿಲ ರೂವೆಂಬಿನೆಗಂ (ಕಬ್ಬಿಗ. ೦೬೫) ; ರೂಪ – ರೂವು, ರೂವು (ಶಮತ. ೨೬೮ ಪ್ರಯೋ) ; ಹರಿಯುತ ದುಷ್ಕರನಿರಿಯಲೋಸುಗ ನರರ ರೂವಿಂ ರಾಮನಾಮವ ಧರಿಸಿ (ರಾಮಾಶ್ವ. ೦-೨-೩೫). **ರೂಹ** : ೧. ಬೆಟ್ಟಬಿಲ್ಲಯ್ಯನ ರೂಹಕ್ಕೆ ಒಟ್ಟಿ ಭಕ್ತನಾದನೆಂಬುವನ ಯುಕ್ತಿ ಮಳಲೊಟ್ಟೆಯಂತೆ ನ್ನೋಡಾ (ಸಿದ್ಧವ. ೬೨-೯೬೦) ; ಲಿಂಗಾರ್ಚನಂಗೆಯ್ದು ತಲ್ಲಿಂಗದಂಗದೊಳನಂಗಾರಿಯೆಚ್ಚ ರೂಹ ಕಂಡು (ಪ್ರಭುರಾ. ೭ ಸೊಪಪ). **ರೂಹು** : ೧. "ರೂಹೆಂಬುದು ರೂಪಂ" (ಶಬ್ದಸಂ. ೨೦೭) ; ರೂಹಿಲ್ಲದೊಡಂ ಕೆಲಬರ ಸಹಾಯದಿಂ ... ರೂಹಂ ಪಡೆದೇಕೆ ಮರುಳೆ ನೀಂ ವ್ಯಥೆಗಳೆವೈ (ರಘುಪ್ರ. ೩-೦೩೦); ಸಾವಿಲ್ಲದ ಕೇಡಿಲ್ಲದ ರೂಹಿಲ್ಲದ ಚಲುವಂಗಾನೊಲಿದೆ (ಮಹಾದೇ. ೮. ೦೨೨-೨೮೩); ಕಳಿತ ಹಲಾಹಳದ ಕಜ್ಜಾಯವೆನಿಸಿತು ರೂಹು . . . ಸುರಸತಿಯ (ಕುಮಾರವ್ಯಾ. ೮-೪೨).

**ರೂಪುಮಾಡಿಸು** = ಭೂಮಿಯನ್ನು ವ್ಯವಸಾಯಯೋಗ್ಯವನ್ನಾಗಿ ಮಾಡಿಸು : ದೊಡ್ಡೇರಿಯ ಕೆರ್ಱೆಯ ಕಟಿಸಿ ರೂಪು ಮಾಡಿಸಿದಕ್ಕೆ ಕೊಟ್ಟಗದೆ (ಎಕ. VII, ಶಿಕಾರಿ. ೪೬-೭; 1648 ?). **ರೂಪುಮಾಡು** = ರೂಪು ಮಾಡಿಸು : ತೋಟಗದ್ದೆಯನು ಮಾಡಿಸಿ ವ್ಯವಸಾಯದಿಂದ ರೂಪು ಮಾಡಿಕೊಂಡು (ಎಕ. XVI, ೨೨೬-೭೪; 1414); ಕೆಱೆಯ ಒಡವುಗಳನೂ ಕಟ್ಟಿ ರೂಪುಮಾಡಲಾಗಿ (ಎಕ. IX (8), ಹೊಸಕೋ. ೦೮೪-೧೮; 1433). [< ಪ್ರಾ. ರೂವ. / ಸಂ. ರೂಪ ]

**ರೂಪುಗರೆ**, ರೂಹುಗರೆ (ಕ್ರಿ). ೧. ಆಕಾರವು ಕಾಣದಂತಾಗು ; ಅದೃಶ್ಯವಾಗು : ಬ್ರಹ್ಮರಾಕ್ಷಸನವಳ ಮಾತಂ ನಂಬಿ . . . ರೂಪುಗರೆದು ಪೆಱಪೆಱಗನೆ ಬರುತಿರ್ದು (ಸುಕುಮಾ. ೭-೦೭ ವ); ಪೊಕ್ಕಳ್ ತ್ರಿದಶೋತ್ತಮೆ ರೂಪುಗರೆದು ಜನನೀಗೃಹಮಂ (ಆದಿಪು. ೫-೦೮). ೨. ಬೇರೆ ರೂಪವನ್ನು ಧರಿಸು ; ವೇಷ ಮರೆಸಿಕೊಳ್ಳು : ತನ್ನ ರೂಪುಗರೆದಿರುಳ್ ಪೊಟಲಿಲ್ಲವಂ ಕಳ್ದು ದಿವಸಕ್ಕೀ ಪಾಂಗಿನೊಳ್ ತೊನ್ನನಾಗಿರ್ಪೊಂ (ಶಬ್ದಮಣಿ. ೦೨೪-೯) ; ಭೀಮಸೇನಂ ಕೇಳ್ದವಂದಿರೊಡನೆ ರೂಪುಗರೆದು ಪೊಟಲಂ ಪೊಱಮಟ್ಟು . . . ಕೀಚಕನಿಕಾಯಧ್ವಂಸನಂ ಮಾಡಿದಂ (ಶಂಕರಾ. ೮-೭೯ ವ). **ರೂಹುಗರೆ** : ೨. ದ್ರೋಹಿಯನು ಗೆಲಲರಿದು . . . ರೂಹುಗರೆದಿಳೆಯುಮರರಂದದಲಾಹವವ ಬೇಡುವುದು ಕೊಲುವುದು (ಕಿಭಾಗ. ೧೦-೭೮-೩೯). [ರೂಪು + ಕರೆ₃]

**ರೂಪುಗಾಣ್** (ಕ್ರಿ). ೧. ಆಕಾರವನ್ನು ಕಾಣು; ರೂಪವನ್ನು ನೋಡು : ರೂಪಗಾಣುತಲಂತರಂಗದೊಳ್ ಸಂತಸ ವ್ಯಾಪಿಸೆ (ಮದೇಪು. ೨೦-೨೦). ೨. ಚೆಲುವನ್ನು ಕಾಣು ; ಸೌಂದರ್ಯವನ್ನು ನೋಡು : ಈ ಲೋಕದೊಳ್ ರೂಪುಗಾಣಲೊಡಂ ತೊಟ್ಟನೆ . . . ಎರ್ದೆಗೆಟ್ಟರಾರ್ (ಕಾದಂಪೂ. ೬೫೦). [ರೂಪು + ಕಾಣ್]

**ರೂಪುಗಾಣಿಸು**, ರೂಹುಗಾಣಿಸು (ಕ್ರಿ). ೧. ಆಕಾರವು ತೋರು,—ಕಾಣು : ತಾನರ್ಧತನುವಿನೊಳಾ ಗಿರಿಜೆ ಶಿವನೊಳು ಬೆರಸಿದಳೊ ರೂಪುಗಾಣಿಸದು (ಬಸವ. ೦೬-೫). **ರೂಹುಗಾಣಿಸು** : ೧. ರೂಹುಗಾಣಿಸದಂತೆ ವಿಪ್ರವೇಷವನಾಂತು . . . ಅವರಿರ್ವರುಂ ಮಯೂರಧ್ವಜನ ಪಟ್ಟಣಕೆ ನಡೆತಂದರು (ಜೈಮಿನಿ. ೨೬-೩). ೨. ರೂಪವನ್ನು ತೋರಿಸು,—ಪ್ರದರ್ಶಿಸು : ಕ್ಷೋಣಿಯೊಳಾತ್ಮೇಶ್ವರನ ದಿಟ್ಟಿಗೆ ರೂಹುಗಾಣಿಸಿ ಬಾಯಾಱಿಸುತೆ ಬಾಣತಿರೂಹಿಂದೆ ಬಂದಳು ಹರಿನೀಲವೇಣಿ (ಮೋಹತ. ೦೭-೪೭). [ರೂಪು + ಕಾಣಿಸು]

**ರೂಪುಗಿಡು** 'ರೂಪುಗೆಡು' ನೋ.

**ರೂಪುಗೂಡು** (ಕ್ರಿ). ರೂಪವನ್ನು ತಾಳು,—ಪಡೆ : ಲೋಹಸಂಗದಿಂದಗ್ನಿ ಬಡಿವಡೆದಂತೆ ರೂಪುಗೂಡಿದ ರುಚಿಯು ಸತ್ಕ್ರಿಯೆಯಿಂದರ್ಪಿಸಬೇಕು (ಅವಕಂ. ೨೫೭-೦೦೭೯). [ರೂಪು + ಕೂಡು₁]

**ರೂಪುಗೆಡು**, ರೂಪುಗಿಡು, ರೂವುಗಿಡು, ರೂಹುಗೆಡು (ಕ್ರಿ). ೧. ಆಕಾರವು ಕೆಟ್ಟುಹೋಗು ; ವಿಕಾರವಾಗು : ಕದನದೊಳಾದ್ರ್ಜೆ ಸಾರ್ದಿಸೆ ಮಹಾರಥರ್ . . . ಮಡಂ ಕಡಿವೋದುವು ಪಾಪೆ ರೂಪುಗೆಟ್ಟುದು (ಶಂಕರಮಾ. ೦೩-೭೯) ; ದೀಪಿಸುವ ಮಾಣಿಕ್ಯವಂ ಮಳಿನಾಪರಿಮಿತಪಟಂ ಮುಸುಕಿದಡೆ ರೂಪುಗೆಡುವುದೆ (ಬಸವ. ೫೭-೬೦). ೨. ರೂಪವು ಕಾಣದಾಗು ; ಮರೆಯಾಗು : ತರದಿಂ ಮೇಲೊಗೆದಿರ್ಪ ಬೀಲಿವಱೆಗಳ್ ತಳ್ತಾಗಸಂ ರೂಪುಗೆಟ್ಟರೆ (ಕಬ್ಬಿಗ. ೨೫೨). **ರೂಪುಗಿಡು** : ೧. ನೀಂ ಮೃಡನೊಳಿರ್ದಿರ್ಪ ರೂಪುಗಿಡುವಂದಿವು ಮಾಡಿದ ಮಾಟವಾವುದು (ಜಗಂ. ೦೮-೩೭). **ರೂವುಗಿಡು** : ೨. ರೂವು[ಪಾಠಾಂ. ಪೂಣ್ಕೆ]ಗಿಡೆ ತೆಂಬೆಲರಂಚೆಗಳೊಡ್ಡು ಪಾಱೆ (ಕಬ್ಬಿಗ. ೩೦೦). **ರೂಹುಗೆಡು** : ೧. ತ್ರಾಹಿ ಮದನಾಂತಕ . . . ಜಗತ್ರಯ ರೂಹುಗೆಡುತಿದೆ ದೇವ (ಕುಮಾರವ್ಯಾ. ಕ. ೭-೪೫). [ರೂಪು + ಕಿಡು₁]

**ರೂಪುಗೇಡು**, ರೂಹುಗೇಡು (ನಾ). ಕುರೂಪ ; ವಿಕಾರ ; ವಿಕೃತಿ : ಕಳವಳದಿಂದನ್ನೆಗಮಿಂದುಕಾಮಸೂರ್ಯರ್ ಜಗುಟ್ಟರ್ ಕಱೆ ರೂಪುಗೇಡು ನಿಡುಬವಣೆಗಳಿಂ (ಶಕಟ. ೩-೦೦). **ರೂಹುಗೇಡು** : ಎಂತೆನಗೆ ರೂಹುಗೇಡನ್ ತಂದತ್ತು ಎಂಬುದನ್. . . ಬಿತ್ತರಿಸುವೆನ್ (ಬದ್ಧಕ್ರ. ೩೪-೭೨೯). [ ರೂಪು + ಕೇಡು ]

**ರೂಪುಗೊಳ್**, ರೂಪುಗೊಳ್ಳು, ರೂಹುಗೊಳ್ (ಕ್ರಿ). ಆಕಾರವನ್ನು ಪಡೆ; ರೂಪವನ್ನು ತಾಳು : ಭಕ್ತಿಯೆ ಭವಸನ್ನಿಧಿಯಲ್ಲಿ ರೂಪುಗೊಂಡಂತಿರ್ದಳ್ (ಕಾದಂಪೂ. ೬೬೦); ಶಿವನಾ ರೂಪುಗೊಂಡೊಲಿದಿಹುದು ಚೋದ್ಯಮೆ (ಬಸವ. ೦೫-೦೭). **ರೂಪುಗೊಳ್ಳು** : ನಿರ್ದಿಷ್ಟರೀತಿಯಲ್ಲಿ ಪತ್ರವಿಷಯ ರೂಪುಗೊಳ್ಳಬೇಕು (ಶಿಕ್ಷತ. ೦೬೯); ಸಂಯುಕ್ತಜೀವಕಣದ ವಿಭಜನೆ ವಿಕಾಸದಿಂದ ನವಮಾಸದಲ್ಲಿ ಒಂದು ಮಗುವು ರೂಪುಗೊಳ್ಳುವುದು (ಗೃಹಪ. ೦೦೭). **ರೂಹುಗೊಳ್** : ಭವನ ನೇಹದ ಕಾಹು ರೂಹುಗೊಂಡೊಗೆವಂತೆ ಉದಯವಾದಂ ಶಿವನ ಸೌಂದರಾಧಿಪನಂದು (ಸೌಂದರ. ೦-೦೦೮); ಪರಿಮಳವೇ ರೂಹುಗೊಂಡು ಪುಷ್ಪವಾದಂತೆ (ಪೋಲೀಸಮಾ. ೬೪ ಪ್ರಸ್ತಾವನೆ). [ ರೂಪು + ಕೊಳ್₁ ]

**ರೂಪುಗೊಳ್ಳು** 'ರೂಪುಗೊಳ್' ನೋ.

**ರೂಪುಜೀವೆ** 'ರೂಪಜೀವೆ' ನೋ.

**ರೂಪುದಳೆ,** ರೂಹುದಳೆ (ಕ್ರಿ). = ರೂಪುಗೊಳ್ : ಆಂ ಭರದಿಂದೆ ನಿನ್ನಯ ಭುಜಬಲದೆಟ್ಟುರವಂ ಪರೀಕ್ಷಿಸಲ್ ಡಂಭದಿನೊಂದು ರೂಪು [ಪಾಠಾಂ. ಹು]ದಳೆದಿನ್ನೆವರಂ ಪೊಣರ್ದಿಕ್ಕುವಟ್ಟು ಕಂಡೆಂ (ಕಂಶ್ರಕೃ. ೫-೯೨). **ರೂಹುದಳೆ** : ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [ ರೂಪು + ತಳೆ$_1$ ]

**ರೂಪುದೋಱಿಸು** (ಕ್ರಿ). ಆಕಾರವನ್ನು ತೋರಿಸು; ಪ್ರತ್ಯಕ್ಷವಾಗು : ಎಡೆವಿಡದ ರೂಪುದೋಱಿಸುವ ಸಂಕಲ್ಪವಿಾಯಸಪ್ಪ ಯುವರಾಜನೆ ಮದೀಯ ವಿರಹಮರಣಭಯಹರಣನಪ್ಪುದಕ್ಕೆ ಕಾರಣಂ (ಕಾದಂಉ. ೩೦೭); ಪರಪುರುಷರು ರೂಪುದೋಱಿಸಿ ಸರಿವರಲ್ಲದೆಯೊಂದುಪಾವಿನೊಳಿರರು (ಜೀಸಂಕ. ೬-೨). [ ರೂಪುದೋಱು + — ಇಸು$_3$ ]

**ರೂಪುದೋಱು,** ರೂಹುದೋಱು (ಕ್ರಿ). = ರೂಪುದೋಱಿಸು : ರೂಪುದೋಱದೆ ಬಂದು ಸುಭಟನ ಚಾಪವನು ಖಂಡಿಸುವುದು (ಕುವ್ಯಾದ್ರೋ. ೬-೨೯); ಇಭಚರ್ಮಾಂಬರಮಣಿಯರಮುಮರ್ದಿಸೆಯೆ ರೂಪುದೋಱದ ನಾಗಳ್ (ವೃತವಿ. ೦೪-೦೦೬ ಪ). **ರೂಹುದೋಱು** : ಚತುರ್ಮುಖನಬ್ಜ ನೇತ್ರನೆಂದೊದವಿದತರ್ಕ್ಯರೆಂಬವರ್ಗೆ ಸುಂಟಿಸಬಾರದು ರೂಹುದೋಱ ಬಾರದು (ಜಂಪಾಶ. ೪೫); ಕಲಿಭೀಮ ಸಾತ್ಯಕಿ ರೂಹುದೋಱಿದರು (ಕುವ್ಯಾದ್ರೋ. ೨-೬೫). [ ರೂಪು + ತೋಱು ]

**ರೂಪುರೇಖೆ** (ನಾ). ಸ್ವರೂಪ; ಆಕಾರ : ನಮ್ಮ ಶಿಕ್ಷಣಕ್ಕೆ ಉಚಿತವೆನಿಸುವ ನೂತನ ತತ್ತ್ವದೃಷ್ಟಿಯ ರೂಪುರೇಖೆಗಳು (ಶಿಕ್ಷದ. ೧೭); ಖಿಲ್ಜಿಯ ರೂಪು ರೇಖೆಗಳುಳ್ಳ ಒಬ್ಬ ಯವನನು ಗೌಡದೇಶವನ್ನು ಜಯಿಸುವವನಾಗಿದ್ದನು (ಶಿಂಶಿಪು. ೦೫೨). [ ರೂಪು + ರೇಖೆ ]

**ರೂಪುವಡೆ,** ರೂಹುವಡೆ (ಕ್ರಿ). = ರೂಪುಗೊಳ್ : ಏಳ್ದಿದನಾಸನದೃಢತೆ ರೂಪುವಡೆದತ್ತೆನಲಿಂದ್ರಾಯುಧಮನಂದು ಚಂದ್ರಾಪೀಡಂ (ಕಾದಂಪೂ. ೪೬೪); ಕೇಳೀನಂದನ ನವಪುಷ್ಪಚಾಪನ ಬಂಡಾರದಂತೆ ರೂಪುವಡೆದು ಮೆಱೆದುದು (ಕಂಪವಿ. ೫-೦೦೦). **ರೂಹುವಡೆ** : ಮಂದರಾಗವೆ ರೂಹು ವಡೆದುದೆನೆ ಸಂಪ್ರೀತಿಯಿಂದೊಂದಿ ಚಲಿಸದಿರ್ದ (ಶಬ್ದಮಣಿ. ೩-೬೯). [ ರೂಪು + ಪಡೆ$_1$ ]

**ರೂಪುವಿಡಿ,** ರೂಹುವಿಡಿ (ಕ್ರಿ). ೧. ಚೆಲುವನ್ನು ಹೊಂದು; ಅಂದ ವಾಗು : ರೂಪುವಿಡಿದ ಹೊನ್ನ ಪುತ್ತಳಿಗಳ ಕಾಂತಿ ವ್ಯಾಪಿಸಿದುವು ಚೌದೆಸೆಯ (ಕಂಸವಿ. ೨೦-೨೬). **ರೂಹುವಿಡಿ** : ೨. ಆಕಾರವನ್ನು ತಾಳು; ರೂಪುದೋರು : ಮನಸಿನ ಭ್ರಮೆ ರೂಹುವಿಡಿದಲೆವುದು ಬಂದು ಕನಸಿನೊಳು (ಮದೀಶ್ರು. ೨೦-೦೯). [ ರೂಪು + ಪಿಡಿ$_1$ ]

**ರೂಪುವೆರು** 'ರೂಪುವೆಱು' ನೋ.

**ರೂಪುವೆಱು,** ರೂಪುವೆರು (ಕ್ರಿ). = ರೂಪುಗೊಳ್ : ಉರಿಗಣ್ಣನೊಗೆದ ಬೀರಂಬೆರಸೊದವಿದ ನಂಜು ರೂಪುವೆತ್ತವೊಲೇನೆಚ್ಚರಿಯಂ ಪುಟ್ಟಿಸಿದರೊ . . . ಬೀರಗಣೇಸರ್ (ಕನ್ನೇಲ. ೦೬೦). **ರೂಪುವೆರು** : ಶಾಂತಿಯೇ ಮನೆಯ ರೂಪುವೆತ್ತಿದೆಯೇ (ಸುವಸಂ. ೨). [ರೂಪು + ಪೆಱು$_1$]

**ರೂಪೋತ್ಕರ** (ನಾ). ರೂಪದಲ್ಲಿ ಮಿಗಿಲಾದವನು; ಅತ್ಯಂತ ಸುಂದರ ನಾದವನು: ಕಡುಸುಖಿ ಭೋಗಿ ರೂಪೋತ್ಕರನು ಧನಿಕನು ರಾಜಪೂಜ್ಯನು (ಕುವ್ಯಾಉ. ೩-೦೦೫). [ಸಂ.]

**ರೂಪ್ಯ** (ಗು). ೧. ಚೆಲುವಾದ ; ಸುಂದರವಾದ. ೨. ಮುದ್ರೆ ಯೊತ್ತಿದ ; ಠಸ್ಸೆ ಹಾಕಿದ. (ನಾ). ೩. ಬೆಳ್ಳಿ; ರಜತ : ''ರಜತಂ, ಕಳಧೌತಂ, ರೂಪ್ಯಂ, ತಾರಂ— ಈ ೪ ಬೆಳ್ಳಿ'' (ಪಣಾಯು. ೨೮-೦೬); ಜಗಕ್ಕಾಶ್ಚರ್ಯಮೈಶ್ವರ್ಯಮಾಮಸಥಂ ರೂಪ್ಯಮಹೀಧರೇಂದ್ರಂ (ಆದಿಪು. ೦-೬೯); ರೂಪ್ಯದ ಕುಪ್ಪಿಗೆಗಳೊಳಂ . . . ತೀವಿದನಿತಾನುಂ ತೆಱದ ಬಂಧುರ ಸುಗಂಧವಸ್ತುಸಂದೋಹಮಂ ಪಿಡಿದು (ಜಗಪು. ೬-೦೮೫). ೪. ಮುದ್ರಿಸಿದ ಬೆಳ್ಳಿ, ಚಿನ್ನ ಮುಂತಾದ ಲೋಹಗಳ ನಾಣ್ಯ; ರೂಪಾಯಿ: ''ರೂಪ್ಯಂ, ಆಹತಂ, ತದ್ವಯಂ—ಅರಸಿನ ಮುದ್ರೆ ಹೊಡಿ ಯಲ್ಪಟ್ಟ ಬೆಳ್ಳಿ ಭಂಗಾರದ ನಾಣ್ಯಗಳ ಪೆಸರು'' (ಸಿದ್ಧಾಂತ. ೩೦೩). [ಸಂ.]

**ರೂಬ್‌ರೂಬ್** 'ರೂಬುರೂಬು' ನೋ.

**ರೂಬರು** (ಅ). ಸಮ್ಮುಖದಲ್ಲಿ; ಎದುರಿನಲ್ಲಿ : ದಂಡನ್ನು ಕೂಡುಮಾಡಿ ಅವರ ರೂಬರು ಇಳಿದು ಲಡಾಯಿ ಕೊಡಬೇಕು (ಕತ್ರಹಾ. ೬೩). [←ಪಾರ. ರೂಬಾರೂ; ಹಿಂ. ರೂಬರೂ; ಮರಾ. ರೂಬರೂ. ರುಬರು]

**ರೂಬುರೂಬು,** ರೂಬ್‌ರೂಬ್ (ಅ). ಎದುರಿಗೆ; ಪ್ರತ್ಯಕ್ಷವಾಗಿ : ಈಗ ರೂಬುರೂಬು ಬಂದು ಇರುವಂಥಾ ಕಷ್ಟ ಪರಿಹರಿಸುವುದಕ್ಕೆ ಇದೇ ವೇಳ್ಯೇದು (ರಾಕೇಂದ್ರ. ೬೬). **ರೂಬ್‌ರೂಬ್** : ಗ್ರಾಮಾಧಿಕಾರಿಗಳು ತಾವೇ ರೂಬ್‌ರೂಬ್ ತಾಲ್ಲೂಕುಕಚೇರಿಗೆ ಹೋಗಲಾರದ ಪಕ್ಷದಲ್ಲಿ . . . ನಮೂದಿಸಬೇಕು (ಗ್ರಾಶಾಶ. ೬). [← ಮರಾ. ರುಬೇರೂಬ್].

**ರೂಮಾಲು** 'ರುಮಾಲು$_1$' ನೋ.

**ರೂಮಾಲೆ** 'ರುಮಾಲು$_1$' ನೋ.

**ರೂಯಿ** (ನಾ). ಬೀಜ ತೆಗೆದ ಹತ್ತಿ; ಅರಳೆ: ಕಾಳುಕಡಿ ರೂಯಿ ಅಂದರೆ ಅರಳೆ ಮತ್ತು ಕೆಲವು ಕಿರಾಣೀಜೀನಸುಗಳ ವ್ಯಾಪಾರಣೆಯು ಪತ್ರದೊಳ ಗಿಂದ . . . ಕಳುಹಿಸುತ್ತಿದ್ದವು (ಮುಂಬಿವ್ಯಾ. ೭೦). [ ← ಹಿಂ. ರುವಾ; ಮರಾ. ರೂಯ್, ರುಈ]

**ರೂಲು** (ನಾ). ೧. ನಿಯಮ ; ಶಾಸನ ; ಕಟ್ಟಳೆ: ಕಂದಾಯವನ್ನು ಕಟ್ಟಲೇಬೇಕೆಂದು ರೂಲಿದೆ (ರೂಶಿ). ೨. ಗೆರೆ; ಸಾಲು ; ರೇಖೆ : ಆ ಕಾಲದಲ್ಲಿ ಪಾವತಿಯಾದ ಐಟಂಗಳ ರೂಲಿನಲ್ಲಿ ಕಾರಣಗಳನ್ನು ಬರೆಯ ತಕ್ಕದ್ದು (ಗ್ರಾಪಶಾ. ೬). 'ರೂಲುದೊಣ್ಣೆ' ಪರಾ. [← ಇಂ. Rule]

**ರೂಲುದೊಣ್ಣೆ** (ನಾ). ಗೆರೆ ಹಾಕಲು ಉಪಯೋಗಿಸುವ ದುಂಡನೆಯ ಕೋಲು : ಗೆರೆ (ಹಾಕುವ) ಕಡ್ಡಿ, ಉರುಳೆ; ರೂಲುದೊಣ್ಣೆ (Ruler. ಇಂಕಶ). [ರೂಲು + ದೊಣ್ಣೆ$_1$]

**ರೂವ$_1$** 'ರೂಪು' ನೋ.

**ರೂವ$_2$** (ನಾ). ಕಂಡರಿಸುವವನು ; ಶಿಲ್ಪಿ (?): ಗುತ್ತಂ ರೂವಂಗೆ ಮಾಘಮಾಸದುಳ್ ಕೊಡುವೆದು (ಎಕ. XIV. ೦೧೦-೨೨; 725); ನಾಗಯಬ್ಬೆಯ ಮಗ ಮಾರೆಯ್ಯ ಕೊಟ್ಟೂರ ತುಱುಗೊಳಲಣ್ಗಿ ಸತ್ತ ಹೊನ್ನ ರೂವ (ಎಕ. XI, ಶಕ್ಕ್ಕೆ. ೯-೬; 974). [<ರೂವಾರಿ$_1$]

**ರೂವರಿ** 'ರೂವಾರಿ' ನೋ.

**ರೂವಳಿ** 'ರೂಪಟಿ' ನೋ.

**ರೂವಟಿ** 'ರೂಪಟಿ' ನೋ.

**ರೂವಾರ** 'ರೂಪಾರ' ನೋ.

**ರೂವಾರಿ,** ರುವರಿ, ರುವಾರಿ, ರೂವರಿ, ರೂಹರಿ (ನಾ). ವಿಗ್ರಹ, ಶಾಸನ ಮೊದಲಾದುವುಗಳನ್ನು ಕೆತ್ತುವವನು : ಖಣ್ಡಸ್ಫುಟಿತ ಮೊದ ಲಾಗೆಲ್ಲಾ ಬೆಸನುಮಂ ನಡೆಯಿಸುವ ರೂವಾರಿ ಮಚ್ಚೋಜಂಗೆ ಮತ್ತರ್ಪ್ಪ ನ್ನೆರಡು (ಶಶಿಇ. IX-i, ೦೦೨-೫೫ ; 1045); ಮಱಿಯಾನೆಯ ಸಿಸ್ಯ ಚಿಕ್ಕ ರೂವಾರಿ (ಪ್ರಶಂ. ೦೯೩೨, ೨೪-೦೦ ; 1226); ದಾಸೋಜ ಸಾಮಾನ್ಯನಲ್ಲ. ತುಂಬ ಹೆಸರಾದ ರೂವಾರಿ (ಸವಶಿ. ೪೭). **ರುವರಿ** : ಯಿ ರೂವ ಮಾಡಿದ ರುವರಿ ಬೋಗೋಜ (ಪ್ರಶಂ. ೦೯೩೨, ೨೩-೯; 1313). **ರುವಾರಿ** : ರುವಾರಿಯ ಉಳಿಯು ಬೆಳುಗಲ್ಲನ್ನು . . . ಚಮತ್ಕೃತಿ ಲಾಲಿತ್ಯಗಳಿಂದ ನಿರ್ಮಿಸಿದ ಕೆಲಸ (ಕಶಶಿ. ೦೦). **ರೂವರಿ** : ರೂವರಿ ಮಲ್ಲಿತಮ್ಮ (ಎಕ. XIV, ತಿರುಮ. ೦೭೫-೨೦; ಸು. 1208); ರೂವರಿ ಚಕ್ರವರ್ತಿ ಪಾಲೋಜ

(ಮುಂಬಿಶಾ. ೧೯೦೫, ೩೩೫-೬; ?). **ರೂಹರಿ :** ರೂಹರಿ ಬಮ್ಮೋಜನ ಮಗ ಸುರಿಯಾಚಾರಿ ಬರದ (ಎಶ. XII, ತಿಪ್ಟೂ. ೯-೪೯: 1187).
[< ಸಂ. ರೂಪಕಾರಿನ್]

**ರೂವಿಕ** (ನಾ). ಒಂದು ಊರಿನ ಹೆಸರು : ಯಾಪದ್ರೂವಿಕಗ್ರಾಮ (ಇಆ. VII, ೨೦೩, ೪೪-೬೨; ಸು. 10ನೆಯ ಶತ). [ ? ]

**ರೂವಿಡು** ' ರೂಪಿಡು ' ನೋ.

**ರೂವಿಲಿ** ' ರೂಪಿಲಿ ' ನೋ.

**ರೂವಿಲ್ಲ** (ನಾ). ಆಕಾರವಿಲ್ಲದವನು; ಮನ್ಮಥ : " ಅನಂಗನಲ್ಲಿ ರೂವಿಲ್ಲನ" (ಶಬ್ದಾದ. ೮೯). [ರೂವು (< ರೂಪು)+ಇಲ್$_1$+ — ಅ$_7$]

**ರೂವಿಸು** ' ರೂಪಿಸು ' ನೋ.

**ರೂವು** ' ರೂಪು ' ನೋ.

**ರೂವುಕ** (ನಾ). ಒಂದು ಬಗೆಯ ಸಸ್ಯ; ಹರಳು; ಔಡಲ. [ಸಂ.]

**ರೂವುಗಿಡು** ' ರೂಪುಗೆಡು ' ನೋ.

**ರೂಷಿತ** (ಗು). ೧. ಶೃಂಗರಿಸಿದ; ಅಲಂಕರಿಸಿದ. ೨. ಒರಟು ಮಾಡಿದ; ತರಕಲು ಮಾಡಿದ. ೩. ಪುಡಿಯನ್ನಾಗಿ ಮಾಡಿದ. ೪. ಲೇಪಿಸಿದ; ಬಳಿದ. ೫. ಆವರಿಸಿದ; ವ್ಯಾಪ್ತವಾದ. (ನಾ). ೬. ಮುಸುಕಿದುದು; ಆವೃತವಾದುದು: "ರೂಷಿತಂ, ಕುಂಠಿತಂ— ಈ ೨ ಮುಸುಕಿದುದು" (ಹಲಾಯು. ೦೨೬-೮೩). [ಸಂ.]

**ರೂಹ** ' ರೂಪು ' ನೋ.

**ರೂಹರಿ** ' ರೂವಾರಿ ' ನೋ.

**ರೂಹಾರ** ' ರೂಪಾರ ' ನೋ.

**ರೂಹಿಡು** ' ರೂಪಿಡು ' ನೋ.

**ರೂಹಿಸು** ' ರೂಪಿಸು ' ನೋ.

**ರೂಹು** ' ರೂಪು ' ನೋ.

**ರೂಹುಗರೆ** ' ರೂಪುಗರೆ ' ನೋ.

**ರೂಹುಗಳೆ** (ಕ್ರಿ). ರೂಪವು ಕೆಡು ; ಅಸ್ತವ್ಯಸ್ತಗೊಳ್ಳು : ರೂಹುಗಳೆ ದಿಟ್ಟಬಿವೆಗಳ ಕಾಳಿಕೆಯು ಮೋಟಿಯು ತಾಟಿದೊಡಲುಗಳ . . . ತರಳ ಹೃದಯದ ದೇವರಿಂದ್ರನನಬಿಸಿ ಕಂಡರು (ಕುವ್ಯಾಕ. ೬-೦೨).
[ರೂಹು (< ರೂಪು) + ಕಳೆ$_1$]

**ರೂಹುಗಾಣಿಸು** ' ರೂಪುಗಾಣಿಸು ' ನೋ.

**ರೂಹುಗೆಡಿಸು** (ಕ್ರಿ). (ಆಕಾರವನ್ನು) ಇಲ್ಲವಾಗಿಸು; ನೀಗು : ಜನನ ಮರಣಂಗಳಂ ರೂಹುಗೆಡಿಸಿದ್ಧ ಗುರುವೆ (ಕಂಪೀರ. ದೇ. ೨೪೪-೨೦); ಸ್ತ್ರೀ ಜನ್ಮವ ರೂಹುಗೆಡಿಸಿ ಮುಂದೆ ನೀನು ಹೋಹ ಮುಕ್ತಿಗೆ ನಾನು ಬರಬೇಕು (ಭರತ. ೩೯-೩೩). [ರೂಹುಗೆಡು (<ರೂಪುಗೆಡು)+—ಇಸು$_3$]

**ರೂಹುಗೆಡು** ' ರೂಪುಗೆಡು ' ನೋ.

**ರೂಹುಗೇಡು** ' ರೂಪುಗೇಡು ' ನೋ.

**ರೂಹುಗೊಳ್** ' ರೂಪುಗೊಳ್ ' ನೋ.

**ರೂಹುಗೊಳಿಸು** (ಕ್ರಿ). ರೂಪಿಸು; ರಚಿಸು : ಕಿನ್ನರಂ. . . ಬಿಂಕಂ ಬಡೆಯೆ ಮುಹಚಾರೆಯುಮಂ ಮಾಡಿ ರೂಢಿವಡೆದ ಮಧ್ಯಮಾದಿಯೆಂಬಾದಿ ರಾಗಮಂ ರೂಹುಗೊಳಿಪುದುಂ (ಶಾಂತೀಶ್ವ. ೦೬-೩೩ ವ).
[ರೂಹು (< ರೂಪು)+ಕೊಳ್$_1$+— ಇಸು$_3$]

**ರೂಹುದಳೆ** ' ರೂಪುದಳೆ ' ನೋ.

**ರೂಹುದೋಱು** ' ರೂಪುದೋಱು ' ನೋ.

**ರೂಹುವಡೆ** ' ರೂಪುವಡೆ ' ನೋ.

**ರೂಹುವಿಡಿ** ' ರೂಪುವಿಡಿ ' ನೋ.

**ರೆಂಕೆ** ' ಎಱಂಕೆ ' ನೋ.

**ರೆಂಚೆ** ' ಱಂಚೆ ' ನೋ.

**ರೆಂಜೆ** ' ರಂಜ ' ನೋ.

**ರೆಂಟೆ$_1$**, ರಂಟೆ (ನಾ). ಹೊಲವನ್ನು ಉಳಲು ಬಳಸುವ ನೇಗಿಲಿನಂಥ ಒಂದು ಬಗೆಯ ಸಾಧನ : ರೆಂ[ಶಾಶಾಂ. ರಂ]ಟೆಹೊಡೆದು ಬೆಳೆಸುವುದು ಹೊಟ್ಟೆಗಾಗಿ ಗೇಣುಬಟ್ಟೆಗಾಗಿ (ಕಪಕ. ೦೬೬-೪); ಅಂದು . . . ಬಂಡಿ, ರೆಂಟೆ, ಕುಂಟೆ ಮೊದಲಾದ ಸಾಮಗ್ರಿಗಳನ್ನೂ ತೊಳೆದು ಪೂಜೆಮಾಡುತ್ತಾರೆ (ಕಪ್ನಶಾ.೦೬೯). **ರಂಟೆ :** ಉಗೆಯ ರಂಟೆ, ಕಬ್ಬಿಣದ ರಂಟೆಗಳು ಉಪಯೋಗದಲ್ಲಿ ಬರಹತ್ತಿವೆ (ಮುಂಬಿಶೂ.೩೭); ಒಡೆಯರೇ ಮಾಡುತ್ತ ಬಂದ ಅನೇಕ ರಂಟೆಗಳ ಬೇಸಾಯ ಅಲ್ಲಿತ್ತು (ಶ್ರೀಚೂಕ್ರ. ೪೯). [ ? ]

**ರೆಂಟೆ$_2$** (ನಾ). ಒಂದು ಬಗೆಯ ಹೂವು : ಅವಿರಳಮಪ್ಪ ಮಲ್ಲಿಗೆಯ ಮೊಗ್ಗೆಯ ರಂಜಿಪ ರೆಂಟೆಯುಂ ಸುಧಾಂಶುವ ಪೊಳೆಪಂ ಪಗಲ್ ಪಸರಿ ಪಂಶುಕದುಟ್ಟುಡೆ ತೊಟ್ಟ ಕಂಚುಕಂ ವಿವಿಧಲತಾಂತಸಂತತಿಯಲಂಕರಣಂ ಸಿರಿಗಂಪಿನಂಪು ತನ್ನವಯವಶೋಭೆಯಿಂದೆ ಕಡುಶೋಭೆಯನಾಂತಿರಲೆಯ್ದೆ ವರ್ಣನಂ. (ಮಹಾವೀ. ೦೪-೨೨). [ ? ]

**ರೆಂಬೆ** (ನಾ). ಮರದ ಕೊಂಬೆ ; ಶಾಖೆ ; ಟಿಸಿಲು : ತಳೆದು ತಾಂ ಪಲಬಗೆಯ ಬಲುಗೊಂಬೆ ರೆಂಬೆಗಳನ್ನು (ಶರಶು. ೦೨-೬); ಹಿಗ್ಗಿದನು ಮನದೊಳಗೆ ರೆಂಬೆಯು ನೆಗ್ಗಿತನೆ ಕುಣಿದಾಡುತ (ರಾಪಾಸಂ. ೫-೨-೪೬); ಮಾಧವ ಮರದ ರೆಂಬೆಯ ಮೇಲೆ ಕುಳಿತಿದ್ದನು (ಶಂಶಾ. ೩೯).
[←ತೆಲು. ರೆಂಬ, ರೆಬ್ಬ, ರೆಮ್ಮ]

**ರೆಕ್ಕೆ** ' ಎಱಂಕೆ ' ನೋ.

**ರೆಕ್ಕೆಇರುವೆ** (ನಾ). ರೆಕ್ಕೆಗಳಿರುವ ಒಂದು ಜಾತಿಯ ಇರುವೆ : (*).
[ರೆಕ್ಕೆ (< ಎಱಂಕೆ)+ ಇರುವೆ$_1$ (< ಇಱುಂಪೆ)]

**ರೆಕ್ಕೆಹುಳು** (ನಾ). ರೆಕ್ಕೆಗಳಿರುವ ಒಂದು ಬಗೆಯ ಹುಳು; ಈಚಲು ಹುಳು : ಮಳೆಗಾಲದಲ್ಲಿ ಸಂಜೆಯಾದ ಕೂಡಲೆ ರೆಕ್ಕೆಹುಳುಗಳು ಬಂದು ಬಿಡುತ್ತವೆ (ರೂಢಿ). [ರೆಕ್ಕೆ (< ಎಱಂಕೆ)+ಹುಳು (<ಪುೞು)]

**ರೆಜಿಸ್ಟರು**, ರಿಜಿಸ್ಟರು (ನಾ). ನಿಗದಿಮಾಡಿದ ವಿವರಗಳನ್ನು ನಮೂದಿಸುವ ಪುಸ್ತಕ; ದಾಖಲೆಪುಸ್ತಕ : ಕೌಂಟರಿನಲ್ಲಿದ್ದ ರೆಜಿಸ್ಟರಿನಲ್ಲಿ ತನಗೆ ಸಂಬಂಧಪಟ್ಟ ವಿವರಗಳನ್ನು ಬರೆಯುತ್ತಿದ್ದಂತೆ . . . ಪ್ರಶ್ನಿಸುತ್ತಿದ್ದ (ಹೊಸಕ್ಷಿ. ೦೬೬). **ರಿಜಿಸ್ಟರು :** ಅವಳು ರಿಜಿಸ್ಟರಿನಲ್ಲಿ ಸಹಿ ಹಾಕಿದಳು (ರೂಢಿ). [← ಇಂ. Register]

**ರೆಟ್ಟೆ** ' ಱಟ್ಟೆ ' ನೋ.

**ರೆಡಿಯೂರ್** (ನಾ). ಒಂದು ಊರಿನ ಹೆಸರು : ಉದಕಪೂರ್ವ್ವಕನ್ ದತ್ತಃ ಅಸ್ಯ ತಟಾಕಸ್ಯ ರೆಡಿಯೂರ್ನ್ನಾಮಗ್ರಾಮಸ್ಯ ಕೇದಾರೇಷು (ವ್ಯಕಂ. ೧೯೦೬, ೦೨-೩೨; 540). [ ? ]

**ರೆಡ್ಡಿ**, ರಡ್ಡಿ (ನಾ). ೧. ಕರ್ನಾಟಕ ಮತ್ತು ಆಂಧ್ರಪ್ರದೇಶದ ಗಡಿಗಳಲ್ಲಿ ನೆಲಸಿರುವ, ವ್ಯವಸಾಯವೇ ಮುಖ್ಯಕಸುಬಾಗಿದ್ದು, ತೆಲುಗು ಭಾಷೆಯನ್ನಾಡುವ ಒಂದು ಜನಾಂಗ : (*). **ರಡ್ಡಿ :** ೧. ಕಾಮ ಹರಭಕ್ತನೋರ್ವಂ ರಡ್ಡಿಕುಲಭವಂ . . . ಹೇಮರಡ್ಡಿಯೆನಿಪ್ಪವಂ . . . ಸಂಸಾರಮಂ ಮಾಡುತಿರಲು (ಮಲ್ಲಿತ. ೨-೯); "ರಡ್ಡಿ "ಯೆಂಬ ಅಡ್ಡಹೆಸರು ಹೇಮನ ವಂಶದವರಿಗೆ ಬಿತ್ತು (ಕಹಾಗ. ೦೨೬). ೨. ಗ್ರಾಮಾಧಿಕಾರಿಗಳಲ್ಲಿ ಒಬ್ಬ ; ಪಟೇಲ : ಪಟೇಲನಿಗೆ . . . ರಡ್ಡಿ, ಹೆಗ್ಗಡೆ ಎಂತಲೂ ಹೆಸರುಂಟು (ಗ್ರಾಪಶಾ. ೦) ; ಗೌಡ, ನಾಯಕ, ರಡ್ಡಿ (ದೇಸಾಯಿ) ಎಂಬುವು ಬೇರೆಬೇರೆ ಪ್ರದೇಶಗಳಲ್ಲಿ ಅವರಿಗೆ ಸಲ್ಲುತ್ತಿದ್ದ ಹೆಸರುಗಳು (ಕರ್ನಾಪೂ. ೦೨೫).
[ದೇ.# ತಮಿ. ಇರಟ್ಟಿ, ರೆಟ್ಟಿ ; ತೆಲು. ರೆಡ್ಡಿ, ರಡ್ಡಿ]

**ರೆಪ್ಪು** ' ಱೆಪ್ಪು ' ನೋ.

**ರೆಪ್ಪೆ₁** ' ಱೆಪ್ಪೆ ' ನೋ.

**ರೆಪ್ಪೆ₂** (ನಾ). ಒಂದು ಬಗೆಯ ಸಸ್ಯ : ರೆಪ್ಪೆ, ತೊಟ್ಟಿಲ್ಲ (ವೃ.ಔ. ೦೬–೬೦೫). [?./ ತೆಲು. ರೆಪ್ಪಾಲ]

**ರೆಪ್ಪೆಬಡಿ** (ಕ್ರಿ). ಎವೆಯನ್ನು ಅಲುಗಾಡಿಸು ; ರೆಪ್ಪೆಹೊಡೆ : ನವ ಕುಮಾರನನ್ನು ರೆಪ್ಪೆಬಡಿಯದೆ . . . ನೋಡುತ್ತ ರಾಜಮೋಹಿನಿಯಾಗಿ ನಿಂತಳು (ಕಣಾಟಂ. ೯೦). [ರೆಪ್ಪೆ₁ (< ಱೆಪ್ಪೆ) + ಬಡಿ₁]

**ರೆಪ್ಪೆಹೊಡೆ** (ಕ್ರಿ). ೧. = ರೆಪ್ಪೆಬಡಿ : ಅವನು, ಅವಳನ್ನು ರೆಪ್ಪೆ ಹೊಡೆಯದ ಹಾಗೆ ನೋಡಿದ (ಲೂ). ೨. ಸೂಚಿಸು; ಸನ್ನೆಮಾಡು : ಅವಳು ಆ ಸಂಗತಿಯನ್ನು ಎಲ್ಲರ ಮುಂದೂ ಹೇಳಬೇಡವೆಂದು ರೆಪ್ಪೆ ಹೊಡೆದು ಸೂಚಿಸಿದಳು (ಲೂ).

[ ರೆಪ್ಪೆ₁ (< ಱೆಪ್ಪೆ) + ಹೊಡೆ₁ (< ಪೊಡೆ₁) ]

**ರೆವಡಿ** (ನಾ). ಒಬ್ಬಾತನ ಹೆಸರು : ಸ್ವಸ್ತಿಶ್ರೀ ಶಿಲೇಮುದ್ದರ ಮರ್ಮ್ಮಾರ್ನ್ ಸರ್ವ್ವಸಿದ್ಧಿ ಆಚಾರ್ಜ್ಯ(ರ್ಯ್ಯ)ರ ಚಟ್ಟರ ರೆವಡಿಒವಜ್ಜರ್ ತೆಂಕಣದಿಶೆ ಮಾಡಿದೊರ್ (ಎಇ. X. ೦೬೦–೪ ; ೬ನೆಯ ಶತ). [ ? ]

**ರೆವಡಿಬದ್ದ** (ನಾ). ಒಬ್ಬಾತನ ಹೆಸರು : ಪೆಸದೊರಾ ಮಗನ್ ರೆವಡಿ ಬದ್ದರಾಟದಾಳೆ ಕೊಮರಸಿಜ್ಜನ ದೇಗುಲವ ಆದಿತ್ಯಬಟಾರಗೆ ಕೊಟ್ಟುದು (ಎಇ. VII, ೨೪೬–೨ ; 732). [ ? ]

**ರೆವಿನ್ಯೂ, ರೆವೆನ್ಯು** (ನಾ). ತೆರಿಗೆ, ಸುಂಕ ಮುಂತಾದುವುಗಳಿಂದ ಬರುವ ಹುಟ್ಟುವಳಿ ; ರಾಜ್ಯಾದಾಯ : ಗ್ರಾಮಾಧಿಪತಿಗಳು ಸರ್ಕಾರದ ರೆವಿನ್ಯೂಬಾಬಿನಲ್ಲೆಲ್ಲಾ ಕಂದಾಯದ ಹಣದ ವಸೂಲಿಯು ಅತಿಮುಖ್ಯ ವಾದುದೆಂದು ತಿಳಿದಿರಬೇಕು (ಗ್ರಾ.ಪಾಠ. ೬೬). **ರೆವೆನ್ಯು** : ರೆವೆನ್ಯು . . . ಹುಟ್ಟುವಳಿ, ಆದಾಯ, ಆಯ, ಉತ್ಪತ್ತಿ (Revenue. ಇಂಕೋ).

[ ← ಇಂ. Revenue ]

**ರೆವೆನ್ಯು** ' ರೆವಿನ್ಯೂ ' ನೋ.

**ರೆಳ್ಳು** (ನಾ). ಒಂದು ಬಗೆಯ ಜೊಂಡು,— ಗಲಗು : "ರೆಳ್ಳು— ಗಲಗು" (ಶಾಶಕೋ. ೯೦). [ ← ತೆಲು. ರೆಲ್ಲು ಱೆಲ್ಲು ]

**ರೆಳ್ಳುಗುಸುವು** (ನಾ). ಒಂದು ಬಗೆಯ ಜೊಂಡು : "ಹುಲ್ಲುಮೆದೆ. . . ಸಣ್ಣಹುಲ್ಲು — ಈ ೪ ಜಾಬುಹುಲ್ಲು ಹೆಸರೆಂದು ಕೆಲವರನ್ನುವರು. ಆಂಧ್ರ ದಲ್ಲಿ ರೆಳ್ಳುಗುಸುವು" (ಸಿದ್ಧಾಂತಿ. ೦೫೦). [ ರೆಳ್ಳು + ಕಸುವು₁ ]

**ರೇಂಜರು** (ನಾ). ಅರಣ್ಯಗಳ ರಕ್ಷಣೆಯನ್ನು ನೋಡಿಕೊಳ್ಳುವವನು : ಇಷ್ಟು ಚಿಕ್ಕವಯಸ್ಸಿನಲ್ಲಿ ರೇಂಜರಾಗಿದ್ದೀರಿ (ಕೃಪಾಪ. ೫೯).

[ ← ಇಂ. Range. ]

**ರೇಂಜರುಗಿರಿ** (ನಾ). ಅರಣ್ಯಗಳನ್ನು ರಕ್ಷಿಸುವ ಅಧಿಕಾರ,— ಪದವಿ: ಮಂತ್ರಿತ್ವ ಮಾಡಲು ಹುಟ್ಟಿದವನು . . . " ರೇಂಜರುಗಿರಿ " ಯಿಂದಲೇ ತೃಪ್ತನಾಗಬೇಕಾಯಿತು (ಶುರಾಊ. ೩೦). [ರೇಂಜರು + — ಗಿರಿ₂]

**ರೇಕ** (ನಾ). ೧. ಸಂದೇಹ ; ಸಂಶಯ. ೨. ಕೀಳುಜಾತಿಯವನು. ೩. ಕಪ್ಪೆ. ೪. ಒಂದು ಬಗೆಯ ಮೀನು. ೫. ಭೇದಿ ; ವಿರೇಚನ.

[ ಸಂ. ]

**ರೇಕವಿಸರ** (ನಾ). ಒಂದು ಬಗೆಯ ಕಬ್ಬಿಣದ ಆಯುಧ : ಮಕರದಿಬ್ಬಿ ರೇಕವಿಸರ ಗೋವಿ ತುಪಾಕಿ ಮೊದಲಾದ ಆಯಸಯಂತ್ರಜಾಲಗಳು (ಕೃಪಾಪ. ೮೭). [ ? ]

**ರೇಕು** (ನಾ). ೧. ಚಿನ್ನ ಮುಂತಾದ ಲೋಹಗಳ ತೆಳುವಾದ ತಗಡು; ವರ್ತಿ : ದಪ್ಪಮಿಾನು, ಸಣ್ಣಮಿಾನು ಬೆಳ್ಳಿಯ ಚೂರುಗಳಂತೆ, ಚಿನ್ನದ ರೇಕುಗಳಂತೆ . . . ಮೇಲಕ್ಕೆ ಬರುತ್ತಿದ್ದವು (ಬಿಸ್ಲ.೪. ೭) ; ಚಂದ್ರನ ಬೆಳ್ಳಿ ಎಲೆಗಳ ಮೇಲೆ ರೇಕುಗಳನ್ನು ಚಿಮುಕಿಸಿದಂತೆ ಕಾಣುತ್ತಿತ್ತು (ಅಂಹ.೩. ೦೦೨). ೨. ಹೂವಿನ ಎಸಳು ; ಪಕಳೆ : ಹುವ್ವಿನ ರೇಕುಗಳಂ ಕರ್ಪೂರದ ಪುಡಿಯಂ ಶರಗಿನಿಂ ಸವರಿ (ಶಾಗಂ. ೦೭೬–೦೦) ; ಆ ಪುಷ್ಪ ಗಳಲ್ಲಿ ಒಂದಾದರೂ ಮುರಿದ ರೇಕಿನ . . . ಬಾಡಿದ ಪುಷ್ಪಗಳಿರಲಿಲ್ಲ (ಕಾಂತಲಾ. ೦೦೦). ೩. ಚಿನ್ನ ; ಬಂಗಾರ : ರಂಗನ್ನ ನೋಡೋಕೆ ರೇಕು ಮಾಣಿಕವೇಕೆ (ಹ್ಯಾ.ಪಾ. ೦೭).

[ ದೇ.॥ ತಮಿ. ಇರೇಕ್ಕು ; ತೆಲು. ರೇಕು, ಱೇಕು ]

**ರೇಕೆ, ರೇಖೆ** (ನಾ). ೧. ಗೆರೆ ; ಎಳೆ ; ರೇಖೆ : " ರೇಕೆ— ರೇಖಾ= ಗೆರೆ, ಗುರುತು " (ಕನ್ನಕೋ. ೩೬). ೨. ಒಂದು ಅಳತೆ : ಹೊಲಗದೆ ೧ ರೇಕೆ ಒಂದುವೆ ಎಱೆ ರೇಕೆ (ಎಕ. IX. ಮಾಗಡಿ. ೦೨–೩ ; 1692). ೩. ಹಸನುಮಾಡುವುದು ; ಶುದ್ಧಮಾಡುವುದು. **ರೇಖೆ** : ೪. ಕಂದಾಯ ; ತೆರಿಗೆ (?) : ರೇಖಾ ಪ್ರಮಾಣು ಗ ೨೪ (ಎಕ. VII. ಶಿವಮೊ. ೩–೦೩ ; 1671).

**ರೇಕೆಮಾಡು, ರೇಖೆಮಾಡು** = ಶುದ್ಧಮಾಡು ; ಹಸನು ಗೊಳಿಸು : ರೇಕೆ ಮಾಡಲಿಕ್ಕೆ ತಿಳಿಯದಿದ್ದರೆ ತೋಕೂರಿಗೆ ಹೋಗಲಿಕ್ಕೆ ತಿಳಿಯದೇ ? (ಗಾದೆ) ; ಪೈರನ್ನು ಕುಯಿದು ಒಟ್ಟಿ . . . ರೇಖೆಮಾಡಿ ಗುತ್ತಿಗೇದಾರರಿಗೆ ಕೊಡುತ್ತಿದ್ದರು (ಹುಟ್ಟಿ.ಹ. ೬೨). **ರೇಕೆಯಾಗು** = ಒಕ್ಕಣೆಯಾಗು ; ಹಸನಾಗು : ರಾಗಿ ರೇಕೆಯಾಗಿದೆ (ಲೂ).

[ < ಸಂ. ರೇಖಾ ]

**ರೇಖಾಂಶ** (ನಾ). [ಭೂಗೋಳ] ಭೂಮಂಡಲದ ಉತ್ತರಧ್ರುವ ದಿಂದ ದಕ್ಷಿಣಧ್ರುವಕ್ಕೆ, ಒಂದು ಅಂಶಕ್ಕೆ ಒಂದರಂತೆ ಮುನ್ನೂರು ಅರುವತ್ತುರೇಖೆಗಳನ್ನು ಎಳೆದಂತೆ ಭಾವಿಸಿರುವ ಉದ್ದ ರೇಖೆ; ಮಧ್ಯಾಹ್ನರೇಖೆ : ರೇಖಾಂಶ (Longitude) ಅಂದರೆ ಯಾವದಾ ದರೂ ಒಂದು ಮಧ್ಯಾಹ್ನರೇಖೆಯಿಂದ ಪೂರ್ವಕಡೆಯಲ್ಲಾಗಲಿ . . . ಅಥವಾ ಪಶ್ಚಿಮಕಡೆಯಲ್ಲಾಗಲಿ ಇರುವ ಒಂದು ಸ್ಥಳಕ್ಕೂ ಮತ್ತು ಮಧ್ಯಾಹ್ನರೇಖೆಗೂ ಮಧ್ಯದಲ್ಲಿರುವ ದೂರವು (ಭೂಗೋಳ. ೬); ಅಕ್ಷವೃತ್ತ ಗಳ ಮೇಲೆ ಪ್ರಥಮಯಾಮ್ಯೋತ್ತರದಿಂದ ಎಣಿಸಿದ ಅಂಶಗಳಿಗೆ ರೇಖಾಂಶ ಗಳೆಂತಲೂ ಅನ್ನುವರು (ಭುಂಬಿಯ. ೬–೬೩). 'ಅಕ್ಷಾಂಶ' ಪರಾ. [ಸಂ.]

**ರೇಖಾಕೃತಿ** (ನಾ). ಗೆರೆಗಳಿಂದ ಕೂಡಿದುದು ; ರೇಖಾಕಾರವಾದುದು: ಬ್ರಾಹ್ಮೀಲಿಪಿ ಹುಟ್ಟಿನ ಮಟ್ಟಿಗೂ ರೇಖಾಕೃತಿಯದು (ಸಂಕೋಶ. ೪). [ಸಂ.]

**ರೇಖಾಗಣಿತ** (ನಾ). [ಗಣಿತ] ಗೆರೆಗಳು, ಕ್ಷೇತ್ರಗಳು ಮತ್ತು ಘನಾಕೃತಿಗಳು ಮುಂತಾದುವುಗಳ ಲಕ್ಷಣಗಳು, ಪ್ರಮಾಣಸಂಬಂಧ ಗಳನ್ನು ತಿಳಿಸುವ ಶಾಸ್ತ್ರ; ಜಾಮಿಟ್ರಿ : ಭೂಮಿಯ ಅಳತೆಯಲ್ಲಿ ಮುಖ್ಯವಾಗಿ ತಿಳಿದಿರಬೇಕಾದ ರೇಖಾಗಣಿತ ಸಿದ್ಧಾಂತಗಳಾವವು ? (ಭೂಮಿ. ೯೭); ಈ ಪಿರಮಿಡ್ಡುಗಳನ್ನು ಕಟ್ಟಿದ ಶಿಲ್ಪಿಗಳಿಗೆ ರೇಖಾಗಣಿತದ ಜ್ಞಾನವು ತಕ್ಕಮಟ್ಟಿಗೆ ಚೆನ್ನಾಗಿಯೇ ಇದ್ದಿರಬೇಕು (ಗಹಹ. ೩). 'ಅಂಕಗಣಿತ', 'ಬೀಜಗಣಿತ' ಪರಾ. [ಸಂ.]

**ರೇಖಾಚಿತ್ರ** (ನಾ). ಗೆರೆಗಳಿಂದ ಬರೆದ ಚಿತ್ರ : ಮಧ್ಯಹಿಂದೂಸ್ಥಾನದ ವಿಂಧ್ಯಾಚಲದ ತೈಮುರುಬೆಟ್ಟದಲ್ಲಿ ಕೆಲವು ರೇಖಾಚಿತ್ರಗಳಿವೆ (ಭಾಶಕ. ೦೭).

[ಸಂ.]

**ರೇಖಾಮಾತ್ರ** (ಅ). ಒಂದು ಗೆರೆಯಷ್ಟು; ಸ್ವಲ್ಪಮಾತ್ರ : ಇದುವೆ ರೇಖಾಮಾತ್ರ ಸರ್ವಾಂಗದಲಿ ನಿನ್ನನು ಮುಟಿಯದಿರು (ಕುಮಾ.ಸ. ೦೦–೩೩).

[ < ಸಂ. ರೇಖಾಮಾತ್ರಂ ]

**ರೇಖಾಯಿಲ** (ನಾ). ರೇಖೆಗಳನ್ನು ಬಳಸಿ ಬರೆಯುವವನು (?) : ಅಕೂಲಪ್ರತ್ಯಯಕ್ಕೆ — ಗಾಥಾಯಿಲಂ, ರೇಖಾಯಿಲಂ (ಶಮದ. ೨೦೩ ವೃ.ಯೋ). [ < ರೇಖೆ + — ಆಯಿಲ₂ ]

**ರೇಖಾರೂಪ** (ನಾ). ಗೆರೆಗಳನ್ನು ಬಳಸಿ ಬರೆದ ನಕ್ಷೆ : ಮೂಲಭಾಷೆ ಯಿಂದ ಮೊದಲು ಪ್ರತ್ಯೇಕವಾದುದು ತೆಲುಗುಭಾಷೆಯೆಂದೂ, ಆಮೇಲೆ

ತಮಿಳು ಕನ್ನಡಗಳು ಕವಲೊಡೆದುವೆಂದೂ . . . ಹೇಳಬಹುದು. ಇದನ್ನೇ ರೇಖಾರೂಪವಾಗಿ ಹೀಗೆ ತೋರಿಸಬಹುದು (ಕೈಬಿ. ೩೦೩). [ಸಂ.]

**ರೇಖಾಶಾಸ್ತ್ರ** (ನಾ). = ರೇಖಾಗಣಿತ : ಸಂಖ್ಯಾಶಾಸ್ತ್ರವನ್ನು ಕಂಡುಹಿಡಿದ ಯಶಸ್ಸು ಭಾರತಕ್ಕೆ ಸಲ್ಲುತ್ತದೆ. ರೇಖಾಶಾಸ್ತ್ರದಲ್ಲಿ ಯವನರು ಪ್ರವೀಣರು (ಹಿಲ್ವಾ. ೬೨). [ಸಂ.]

**ರೇಖಿಕೆ** (ನಾ). ಗೆರೆ; ಗೀಟು : ಮಳಯಜರೇಣುಜಾಲಪರಿಪಾಂಡುರ ಮಾಯ್ತು ಕುಚದ್ವಯಂ ವಿಕಜ್ಜಳಕೃತರೇಖಿಕಾರಚನಮಾದುವು ಲೋಚನ ಯುಗ್ಮಂ (ಹರಿವ್ಯ. ೬-೭೭). [ಸಂ. ರೇಖಿಕಾ]

**ರೇಖಿಸು** (ಕ್ರಿ). ೧. ಗೆರೆಯನ್ನು ಎಳೆ; ಗೀಟುಹಾಕು : ಕಸ್ತೂರಿಯಿಂದನುಮಾಡಿದ ನೆಲದೊಳ್ ವೃತ್ತಪಯೋಧರೆಯೊರ್ವಳ್ ಸಂತಸವೆತ್ತು ಮಸೆದ ಕೂರುಗುರಿಂ ರೇಖಿಸಿ (ಜಗನ್ನಾ. ೬-೦೬). ೨. ಚಿತ್ರಿಸು : ಶಂಕರನು 'ನೆಲ–ಮುಗಿಲಿ'ನ ಮುಖಪುಟವನ್ನು ಸುಟಿಯಾಗಿ ರೇಖಿಸಿ ಕೊಟ್ಟನು (ಶಿಂಶು. XI, ಪವಳರು ೩೦). ೩. ಕಲ್ಪಿಸು ; ಯೋಜಿಸು : ಇವರು ತಮ್ಮ ನಾಟ್ಯಗಳಲ್ಲಿ ರೇಖಿಸುವ ರಂಗನಮೂನೆಗಳು . . . ಮಾಯಾಜಾಲವನ್ನು ಬೀಸುತ್ತವೆ (ಕಾರಥ. ೩೬೯) ; ಜಗದಾವ ವಸ್ತುವೂ ಇದರಾಸೆ ರೇಖಿಸದು (ಮಕೆರ. ೩೩-೬). [ರೇಖೆ + –ಇಸು₃]

**ರೇಖಿ** 'ರೇಕೆ' ನೋ.

**ರೇಖೆ** (ನಾ). ೧. ಗೆರೆ ; ಗೀಟು : "ಗೆಜ್ಜೆ ರೇಖೆಯುಕ್ಕು" (ಮಂಗರಾ. ೯೬-೦೬); ಬಿಜುಗಯ್ಯ ಕೂರುಗುರಿಂದ ಮೈಯೊಳು ತಾಗಲಿಜದು ರೇಖೆಗಳ ಮಾಡಿದನು (ಹಿತಾ. ೯-೩೩); ನಕ್ಷೆಯಲ್ಲಿ ಉತ್ತರದಿಂದ ದಕ್ಷಿಣಕ್ಕೆ ಎಳೆದಿರುವ ರೇಖೆಯು (ವೃತ್ತದ ವ್ಯಾಸವು) ಸರಿಯಾಗಿ ೧೮೦ ಡಿಗ್ರಿಗಳು (ನಕ್ಷತ್ರ. ೦೬). ೨. ಗಡಿಯನ್ನು ನಿರ್ಧರಿಸಲು, ಭೂಮಿಯನ್ನು ಅಳತೆಮಾಡಿ ಹಾಕಿರುವ ಗೆರೆ. ೩. ಹಸನುಮಾಡುವಿಕೆ : ಶುದ್ಧಗೊಳಿಸುವಿಕೆ : ಸಾಲಗಾರನು ಅಡಕೆ ಭತ್ತಗಳನ್ನು ರೇಖೆಮಾಡುತ್ತಿರುವುವನ್ನು . . . ನೋಡುತ್ತಾ ಇದ್ದರು. ಸಂಪೂರ್ಣ ರೇಖೆಯಾದೊಡನೆ ಕೋರ್ಟಿನಲ್ಲಿ ಅಮಲ್ದಾರ ದಾಖಲ್ಮಾಡಿಸುತ್ತಿದ್ದರು (ಕಂಹಪ. ೪೭). ೪. ನಿರ್ದೇಶನ ; ಸೂಚನೆ : ಘುಳುಘುಳಿಪ ಚೀತ್ಕಾರ ಕೋಳಾಹಳದ ಸೂತನ ರೇಖೆಯಲಿ ಭಟಕುಲಲಲಾಮನ ತೇರು ಬಂದುದು ತೀವಿದಸ್ತ್ರದಲಿ (ಕುವ್ಯಾದ್ರೋ. ೯-೩೦). ೫. ಅಂದ ; ಸೊಗಸು : ಬರಿಸುವುತ್ತಮದಿವ್ಯವಾಜಿಯನರಸ ಮೆಣಿವು ವೈಶ್ಯಜಾತಿಯ ತುರಗ ಕಣ್ಣಿಗೆ ರೇಖೆಯಲ್ಲದ ಸತ್ವಮೆಳ್ಳನಿತುಮುಗುಳಲಾರವು (ಅಂಕಿತ. ೯೬-೨೮). 'ರೇಖೆಗೊಳ್' ಪರಾ. ೬. ಲಾವಣ್ಯ ; ವಿಲಾಸ : ರೇಖೆ ನೃತ್ತದಿರವಂ ನೆನಪೊಂದಿರೆ ದೇಸೆಯಿಂ ಶ್ರಮಮಂ ಬೆರಸುವನೀ ಕುಮಾರನೊಸೆದಂದಿನ ನಂದನ ಕಂದನಂದದಿಂ (ಜಕಶ. ೯-೦೪೩). ೭. [ಅಶ್ವಶಾ] ಕುದುರೆಯ ಆರು ಬಗೆಯ ಲಕ್ಷಣಗಳಲ್ಲಿ ಒಂದು (?) : ಭಂಜಳಿ ಮುರಳಿ ರ್ನುಳಂಪಿ ವಾಹಿಣಿ ರೂಪು ರಂಜಿವ ರೇಖೆಮೆಂದೆಂಬ ಮಂಜುಳವಾದ ಷಡಂಗದೊಳಾ ಹಯ ರಂಜನೆವಡೆದುದು (ಶ್ರೀಶಾಂ. ೯-೦೨). ೮. ಕಂದಾಯ ; ತೆರಿಗೆ (?): ಶ್ರೀಭುವನಮಹಾದೇವಿ ಪಟ್ಟನ ಮೊಸುಕೂಳತ್ತೂರ ಗ್ರಾಮ ೧೫೦ ರೇಖೆ ಗ ೧೭.೨ (ಸೌಇಇ. IX – ii, ೯೬೬–೯ ; ಶು. 1472) ; ನಂದಿಗೇರಿಗ್ರಾಮ ೧೪೬ ರೇಖೆ ಗ ೮೦ (ಎಕ. VII, ಶಿವಮೊ. ೨–೬೩ ; 1641).

**ರೇಖೆಮಾಡಿಸು**=ಧಾನ್ಯವನ್ನು ಹಸನುಮಾಡಿಸು : ದೊರೆಗಳವರು ಒಂದು ವರ್ಷ ಆದ ಫಲವನ್ನು ರೇಖೆಮಾಡಿಸಿ . . . ಸಮವಾರು ಕೊಡುವಂತೆಯೂ ನಿಬಂಧನೆಮಾಡಿದರು (ಮಹಾಪಂ. I, ೦೦೬). **ರೇಖೆಮಾಡು** = ೧. ಬರೆ : ಈ ಕೆಳಗಿನ ಪಟ್ಟಿಯಲ್ಲಿ ಸೂಕ್ಷ್ಮವಾಗಿ ರೇಖೆಮಾಡಿದೆ (ರಾಜ್ಯಶಾ. ೩೩೩). ೨. ಹಸನುಮಾಡು : ರಾಗಿಯ ರೇಖೆಮಾಡು (ಅರ್ಥಾಶಿ. ೩೦-೩೦) ; ಸಾಲಗಾರನು ಅಡಕೆ ಭತ್ತಗಳನ್ನು ರೇಖೆಮಾಡುತ್ತಿರುವುದನ್ನು ಗೌಡರು . . . ನೋಡುತ್ತಾ ಇದ್ದರು (ಕಂಹಪ. ೪೭). **ರೇಖೆಯ ಕಾಲ** = ಒಕ್ಕಣೆ ಮಾಡುವ ಕಾಲ : ರೇಖೆಯ ಕಾಲದಲ್ಲಿ ಧಾನ್ಯವನ್ನು ಅಳೆಸಿ ರಾಜಾದಾಯವನ್ನು ಪ್ರತ್ಯೇಕಿಸಿಡಬೇಕು (ಳರಾ. ೩೬೬). [ಸಂ. ರೇಖಾ]

**ರೇಖೆಗೊಳ್** (ಕ್ರಿ). ಚೆಲುವಾಗು ; ಸುಂದರವಾಗು : ಬಳ್ವಳಬೆಳೆದಳಗೌಂಗಿನಂತೆ ಲೋಕದ ಚೆಲ್ವೆಲ್ಲಮನೊಳಕೊಂಡು ರೇಖೆಗೊಂಡ ಲಾಟೀಲಲಾಮನ ಪರಿಣದ್ಧಕಂಧರಂ (ಶಂಶಕಾ. ೨-೩೯೪). [ರೇಖೆ + ಕೊಳ್₁]

**ರೇಖೆಗೊಳಿಸು** (ಕ್ರಿ). ಗೆರೆಯನ್ನು ಬರೆ ; ಗೀಟು ಎಳೆ : ತುಜುಗಿವೆ ಗಪ್ಪು ಕವಲ್ತು ಕುಡಿಗೊಂಡುದೆನಿಸಿ ನಿಡುಗಣ್ಣಂಜನಮನೆರ್ಚಿ ಸೋಗೆಯಂ ರೇಖೆಗೊಳಿಸಿಯುಂ (ಪ್ರಶಂ. ೩-೦೫೪). [ರೇಖೆ+ಕೊಳ್₁+ –ಇಸು₃]

**ರೇಖೆದೆಗೆ** (ಕ್ರಿ). ಗೆರೆಯೆಳೆ ; ಗುರುತುಮಾಡು : ಮೊಲೆಯನುಗುರೊಳೌಂಕಿ ತೊಡೆಯನಲೆದು ರೇಖೆದೆಗೆದು ತುಟಿಯನೊಲಿದು ಸವಿವುತೊತ್ತಿ ತೋಳೊಳಪ್ಪಿ ಚುಂಬಿಸಿ (ಜಪಪ. ೩-೦೩). [ರೇಖೆ + ತೆಗೆ₁]

**ರೇಖೆದೋಱು** (ಕ್ರಿ). ೧. ಗೆರೆಯು ಕಾಣಿಸಿಕೊಳ್ಳು : ಪರನಾರಾಯಣನ ರಾಣಿಯರ ಪಾದದ ಹೊನ್ನ ಸರಪಳಿಯೆಳೆಯುತ್ತ ಬರಲು ವರನೀಲದ ನೆಲಗಟ್ಟಲ್ಲಿ ಪೊಂಬಳ್ಳಿವರೆದಂತೆ ರೇಖೆದೋಱುವುವು (ಪೂಲಹಕ. ೦೯-೨೬). ೨. ಚೆಲುವಾಗು ; ಸುಂದರವಾಗು : ತವರು ಗುಳಿಯಲ್ಲ ದೊಪ್ಪುವ ರೇಖೆದೋರ್ಪ ಪೊಂಬವಳ ಪೊಳ್ಳಿಗಳದಾತಂ ತಾಳ್ದಿಹ ಪವಣ್ಣಿಪ ಚಿತ್ರಸಂಭವಕೇತನಾಗ್ರಮುಳ್ಳವನಿಳಾತಳವನಾಳ್ವಂ (ಜಪಪ. ೦೦–೨೨). [ರೇಖೆ+ತೋಱು]

**ರೇಗಟ** 'ರಾಕಡಿ' ನೋ.

**ರೇಗಟಿ** 'ರಾಕಡಿ' ನೋ.

**ರೇಗಡ** 'ರೇಗಡೆ' ನೋ.

**ರೇಗಡಿ** 'ರೇಗಡೆ' ನೋ.

**ರೇಗಡೆ**, ರೇಗಡ, ರೇಗಡಿ (ನಾ). ವ್ಯವಸಾಯಕ್ಕೆ ಉತ್ತಮವಾದ ಒಂದು ಬಗೆಯ ಭೂಮಿ ; ಎರೆಭೂಮಿ : ರೇಗಡೆ ಪಾಳುಭೂಮಿಗೆ ತಮ್ಮ ಕೈಯಿಂದ . . . ಸಾಗುವಳಿ ಮಾಡುತ್ತೇನೆಂದು ದರಖಾಸ್ತು ಮಾಡಿದವರಿಗೆ ಕ್ರಯಕ್ಕೆ ಕೊಡಬೇಕಾದರೆ (ಕುಹಾಪಂ. II, ೬೨) ; ನೆಲದಲ್ಲಿ ಜಾತಿಗಳು : ರೇಗಡೆ, ಎರೆ, ಕರಲು (ಪಮ್ಯಕು. ೨೯೩). **ರೇಗಡ** : (ಕೃಶಗ. II, ೩೬೦). **ರೇಗಡೆ** : "ರೇಗಡಿನೆಲ– ಕರ್ಲುಭೂಮಿ" (ಜಾಪಕೋ. ೯೦). [ದೇ. ? ತಮಿ. ರೇಕಟ ; ತುಳು. ರೇಗಡ, ರೇಗಡಿ, ರೇವಡ, ರೇವಡಿ]

**ರೇಗಾಟ** (ನಾ). ಕೋಪದಿಂದ ಕೂಗಾಡುವಿಕೆ : ನಿಮ್ಮ ರೇಗಾಟಕ್ಕೆ ಯಾರೂ ಹೆದರುವುದಿಲ್ಲ (ರೂಢಿ). [ರೇಗು₁+ಆಟ]

**ರೇಗಾಡು** (ಕ್ರಿ). ಕೋಪದಿಂದ ಕೂಗಾಡು ; ಕೆರಳು : ನಾನೊಂದು ಹತ್ತು ನಿಮಿಷವಿದ್ದು ಹೋಗುತ್ತೇನೆ. ಇಲ್ಲವಾದರೆ ದೊಡ್ಡಮ್ಮ ರೇಗಾಡುತ್ತಾರೆ (ವಾತ್ಸಲ್ಯ. ೨೬೪); ಅವನು ಯುಕ್ತಾಯುಕ್ತವಿವೇಚನೆಯನ್ನು ಕಳೆದುಕೊಂಡು ಕಂಡಕಂಡವರ ಮೇಲೆಲ್ಲ ರೇಗಾಡತೊಡಗಿದನು (ರಾಜಕೂ. ೩೨). [ರೇಗು₂+ಆಡು₁]

**ರೇಗಿಸು** (ಕ್ರಿ). ೧. ಸಿಟ್ಟಿಗೇಳಿಸು ; ಕೆರಳಿಸು : ಕೇಸರಿಗಳನು ರೇಗಿಸುತ್ತಿರುವ ನರಪತಿ (ಶ್ರೀರಾಕ. ೩೪ ೬೦೩೪). ೨. ಹೆಚ್ಚುಮಾಡು ; ಉದ್ರೇಕಗೊಳಿಸು : ಆ ಸುದ್ದಿ ಒಮ್ಮೊಮ್ಮೆ ಅವನ ಮಾತ್ಸರ್ಯಾಗ್ನಿಯನ್ನು ರೇಗಿಸಿ, ಅವನ ಹೃದಯವನ್ನು ಹಿಂಡಿದರೂ . . . ಆಶಾಭಾವನೆ ತಾಳಿದನು (ಕುಸರು. ೦೬) ; ಆಹಾರವ್ಯತ್ಯಾಸಗಳಿಂದ ಈ ಇಸುಬು ಬರುವುದೆಂದು ತಿಳಿದು ಬಂದಿದೆ. ಔಷಧಿಯ ಮೇಲೆ ಔಷಧಿ ಹಾಕಿ ರೇಗಿಸದೆ ಮಗುವನ್ನು ಶುಚಿಯಾಗಿ ಇಟ್ಟುಕೊಂಡರೆ ಅದು ಸ್ವಲ್ಪ ಶಮನವಾಗುತ್ತದೆ (ಗೃಹಪ. ೦೯೯). [ರೇಗು₂+ –ಇಸು₃]

**ರೇಗು₁** (ಕ್ರಿ). ಕೋಪಗೊಳ್ಳು; ಕೆರಳು : ಮಕ್ಕಳು ಅತ್ತರೆ ತಾಯಂದಿರು ಆಗಾಗ ರೇಗುವುದುಂಟು (ಜೀವಾತ್ಮ. ೦೬೦) ; ನೀನು ರೇಗಿದಾಗ ನಾನು ಒಪ್ಪುವುದು ಅಂದರೇನು ? (ಬಿಹಾಶ. ೪೩).
[ದೇ.॥ ತಮಿ. ರೇಜ್ಜು ; ತುಳು. ರೇಗು ; ತೆಲು. ರೇಗು, ರೇವು./ ಮರಾ. ರೇಂಕಣೇ, ರೇಕಣೇ]

**ರೇಗು₂** (ನಾ). ಕೋಪ : ಸಿಟ್ಟು ; ಆಕ್ರೋಶ : ನನಗೆ ಬೆರಗೂ ಹುಟ್ಟಿತು, ರೇಗೂ ಇಟ್ಟಿತು (ಮುಂಗಾರು. ೬೬) ; ನನಗರಿವಿಲ್ಲದೆಯೇ ನಾನು ರೇಗಿನಿಂದ ಆಡಿದೆ (ಅಂಕೂ. ೦೩೩). [<ರೇಗು₁]

**ರೇಗು₃** (ನಾ). ಒಂದು ಬಗೆಯ ಮರ ಮತ್ತು ಅದರ ಹಣ್ಣು ; ಎಲಚಿ : "ಕುವಲಂ . . . ಕೋಲಂ—೫ ಯೆಳಚೀಹಣ್ಣು, ಬೋರೆ ಹಣ್ಣು, ರೇಗುವಂಡು" (ಸಿದ್ಧಾಂತಿ. ೦೨೦).
[ದೇ.॥ ತೆಲು. ರೇಗು ; ಕೋಲಾ. ರೇಂಗ ; ಪರ್ಜಿ. ರೇಗ ; ಗೊಂಡಿ. ರೇಂಗಾ, ರೇಂಗ]

**ರೇಗುಪ್ತಿ** (ನಾ). [ಸಂಗೀತ] ಒಂದು ರಾಗದ ಹೆಸರು : ರಾಗ ರೇಗುಪ್ತಿ, ಛಾಪುತಾಳ (ಹಮಮ. ೩೪) ; ಹಾಡುಗಳಿಗೆ ಕಾಂಬೋಧಿ, ಕಲ್ಯಾಣಿ. ರೇಗುಪ್ತಿ . . . ಆನಂದಭೈರವಿರಾಗಗಳೂ, ಆದಿ ಅಟತಾಳಗಳೂ ಸೂಚಿತವಾಗಿವೆ (ಯಕ್ಷಗಾ. ೩೬). [ಸಂ.]

**ರೇಚ** (ನಾ). ೧. ಉಸಿರನ್ನು ಹೊರಬಿಡುವುದು ; ನಿಶ್ವಾಸ. ೨. ಒಂದು ಬಗೆಯ ಗಿಡ : (ಕ). [ಸಂ.]

**ರೇಚಕ** (ನಾ). ೧. ಉಸಿರು ಬಿಡುವುದು ; ನಿಶ್ವಾಸ : 'ರೇಚಕವಾತ' ಪರಾ. ೨. ಭೇದಿಯಾಗಲು ಕೊಡುವ ಔಷಧ ಮುಂತಾದುವು ; ವಿರೇಚಕ : ಬಾಳೆಹಣ್ಣು ರೇಚಕವೆಂಬುದೇನೋ ನಿಜ. ಆದರೆ ಬೇನೆ ಬಿದ್ದಾಗ ಅದನ್ನು ಯಾರೂ ಕೊಡುವುದಿಲ್ಲ (ಜಾಬಿ. ೬೬). ೩. ಒಳಗಿನ ವಾಯುವನ್ನು ಹೊರಹಾಕುವ ಒಂದು ಬಗೆಯ ಸಲಕರಣೆ ; ನಿಷ್ಕಾಸನಾಳ : ಯಂತ್ರದ ರೇಚಕದಲ್ಲಿ (ಎಗ್ಸಾಸ್ಟ್) ವ್ಯರ್ಥವಾಗ ಬಹುದಾದ ಶಕ್ತಿಯನ್ನು ಬಳಸಿಕೊಂಡು . . . ಅತಿಪೂರಕಗಳನ್ನು ನಡೆಸು ವುದು ಮತ್ತೊಂದು ವಿಧಾನ (ಕವಿಕೋ. I, ೨೪೬). ೪. ಕಳಂಕ ; ದೋಷ : ಖೇಚರತ್ವದ ನಿಲವ ಭೂಚರರರಿವರೆ ವಾಚಾಳಿಗಳ ಮಾತು ಹೊಲ್ಲದು ಮನದೊಳು ರೇಚಕವಳಿಯದೆ ಹೋಳಿಯದು (ಸಿದ್ಧ. ೩೬-೨೩). ೫. [ಯೋಗ] ಮೂರು ಬಗೆಯ ಪ್ರಾಣಾಯಾಮದ ಅಂಗಗಳಲ್ಲಿ ಒಂದು ; ಮೂಗಿನ ಒಂದು ಹೊರಳೆಯಿಂದ ಉಸಿರನ್ನು ಹೊರ ಹಾಕುವುದು : "ನಾಸಿಕದಿ ಬಿಡುವಾನಿಲಂ ರೇಚಕಮೆನಿಕ್ಕು" (ಮುಂಗರಾ. ೦೬-೦೪) ; ವನರುಹವಿಷ್ಟರಂ ರುಚಿರರೇಚಕಪೂರಕಕುಂಭಕಕ್ರಿಯಾಮುನಮಿರೆ (ಗದಾಯು. ೦೬-೦೫); ರೇಚಕಪೂರಕದ ರಿಂಗಣವನರಿವುದು ಯೋಗಸಿದ್ಧಿಗೆ ಲಕ್ಷಣವನು (ಕುವ್ಯಾಅ. ೪-೯) ; ನಾಸಿಕಾಪುಟದಿಂದ ಪ್ರಾಣವಾಯುವನ್ನು . . . ಹೊರಗೆ ಬಿಡುವುದಕ್ಕೆ ರೇಚಕ ಎಂದು ಹೆಸರು (ಶಾತತ್ತ್ವ. ೩೩೭). 'ಪೂರಕ' ಪರಾ. ೬. [ನಾಟ್ಯ] ನೃತ್ಯದ ಒಂದು ಚಲನೆ : ಕರಣಂ ರೇಚಕಮಂಗಹಾರಮಿನಿತೆಂದೋದುತ್ತುಮಿರ್ಪೋದದತ್ತಿರಲ್ (ಆದಿಪು. ೭-೦೨೦); ಒಂದು ಅಂಗದ ವರ್ತುಲಾಕಾರಚಲನೆಗೆ 'ರೇಚಕ' ವೆಂದು ಹೆಸರು (ಅಭಾಪ್ರ. ೩೩). [ಸಂ.]

**ರೇಚಕಯಂತ್ರ** (ನಾ). ಒಳಗಿರುವ ಗಾಳಿಯನ್ನು ಹೊರಕ್ಕೆ ಹೊರಡಿಸುವ ಸಾಧನ; ಪಂಪು : "ರೇಚಕಯಂತ್ರ ; ಪೂರಕಯಂತ್ರ" (Pump. ಇಂಕಅ). [ಸಂ.]

**ರೇಚಕವಾತ** (ನಾ). ಉಸಿರಿನ ಗಾಳಿ : ಧಾತ್ರಿ ರೇಚಿಸುವ ರೇಚಕವಾತ ದಿನಭ್ರುದೊಡ್ಡುಗಳ್ ಝಾಳಿಸೆ (ಮುಹಾಪೀ. ೯-೦೦). [ಸಂ.]

**ರೇಚಕಾನಿಳಹತಿ** (ನಾ). ಉಸಿರಿನ ಗಾಳಿಯ ಹೊಡೆತ : ಮಿರ್ಪ ಪತಾಕೆಗಳೆತ್ತಿದ ಶಿಳಮೆನೆ ಜನಶಿಶುವ ರೇಚಕಾನಿಳಹತಿಯಿಂ ತಳರ್ದು ನಭೋಬ್ಧಿಯ ನೌಸಂಕುಳದಂತೊಡಿದುದು ಸುರವಿಮಾನವಿತಾನಂ (ಶಂಪ್ರ. ೦೨-೦೩೭). [ಸಂ. ರೇಚಕಾನಿಲಹತಿ ]

**ರೇಚನ** (ನಾ). ದೋಷವನ್ನು ಹೊರಹಾಕುವಿಕೆ : ನಾಚಿಕೆಯನಾಗಿವುವು ನಮ್ಮ ಸುಖದಾತುರದ ಯೋಚನೆಗಳವನು ಮರುವಗಲು ಪರಿಕಿಸಲು ಚಾಚಿದ್ದ ರಸನೆ ತಾನೊಳಸೇರಿಕೊಳ್ಳುವುದು ರೇಚನವದಾತ್ಮಕ್ಕೆ (ಮಂಕುತ. ೨೬೫). [ಸಂ.]

**ರೇಚನಿ** (ನಾ). ಒಂದು ಬಗೆಯ ಸಸ್ಯ : ಲಾಲ್‌ತಿಗಡೆ : "ಸರ್ವಾನು ಭೂತಿಃ . . . ರೇಚನೀ—೭ ಕೆಚ್ಚನೇ ತಿಗಡೆಯ ಹೆಸರುಗಳು" (ಸಿದ್ಧಾಂತಿ. ೦೫೭). [ ಸಂ. ರೇಚನೀ ]

**ರೇಚಯ್ಯ** (ನಾ). ಒಬ್ಬಾತನ ಹೆಸರು : ಪೃಥುವೀಪರಮೇಶ್ವರಮಹಾ ನಾಯ್ಗರ ರೇಚಯ್ಯನ ಮಗನ್ (ಎಕ. XV, ಹೊಳೆ. ೬೯-೩; ಸು. 950). [ ರೇಚ? + ಅಯ್ಯ₁ ]

**ರೇಚಿತ** (ಗು). ೧. ಬರಿದು ಮಾಡಿದ. (ನಾ). ೨. ಕುದುರೆಯ ಐದು ಬಗೆಯ ನಡಗೆಗಳಲ್ಲಿ ಒಂದು : ನೆಟ್ಟಗೆ ನಿಲ್ಲದೆ ಓಡುವುದು ರೇಚಿತವೆನಿಸಿಕೊಂಬುವುದು (ಅಶ್ವಶಾ. ೨೩-೨) ; ದೌರಿತಿಕ ಸ್ಕಂಧಿತ ಪ್ಲುತ ವಲ್ಗಿತ ಚಾರು ರೇಚಿತಗಳು (ಜ್ಞಾನಸ. ೪-೩೩). ೩. [ನಾಟ್ಯ] ಹಸ್ತ ಚಲನೆಗಳಲ್ಲಿ ಒಂದು ಬಗೆ ; P" ಪತಾಕಹಸ್ತಗಳೆರಡನ್ನು ಅಂಗೈ ಮೇಲಕ್ಕೆ ಮಾಡಿ ನೀಡುವುದು ಅಥವಾ ಹಂಸಪಕ್ಷಹಸ್ತಗಳೆರಡರ ಮುಂಗೈಗಳನ್ನು ಜಾಗ್ರತೆ ತಿರುಗಿಸುವುದು [ಚಲಿಸುವುದು]" (ಅಭಿನಯದರ್ಪಣ. ೨೪೯ ಗದ್ಯಾನುವಾದ) : ಅಂಗೈ ಮೇಗಾಗಿ ಪತಾಕಂಗಳ್ ಮೇಣ್ ಹಂಸಪಕ್ಷಮಾಗಿಯೆ ಬೇಗಂ ಪಿಂಗದೆ ಮುಂಗೈ ತಿರುಗಲ್ ಕಂಗೊಳಿಸುವ ರೇಚಿತಾಖ್ಯಹಸ್ತಮೆನಿಕ್ಕುಂ (ಅಭಿನವ. ೨-೩೩). ೪. ಕೊರಳನ್ನು ತಿರುಗಿಸುವ ಒಂದು ಪ್ರಕಾರ : ಸಮ, ನಿವೃತ್ತ, ವಲಿತ, ರೇಚಿತ, ಕುಂಚಿತ, ಅಂಚಿತ, ತ್ರ್ಯಸ್ರ, ನತ, ಉನ್ನತ — ಈ ಒಂಬತ್ತುಂ ಕೊರಲ ಭೇದಂಗಳ್ (ಅಭಿನವ. ೨-೦೦೪). ೫. ಮೂವತ್ತೆರಡು ಬಗೆಯ ಅಂಗ ಹಾರಗಳಲ್ಲಿ ಒಂದು: ಸ್ಥಿರಹಸ್ತ . . . ರೇಚಿತ . . . ಸ್ವಸ್ತಿಕರೇಚಿತ — ಈ ಮೂವತ್ತೆರಡು ಅಂಗಹಾರಂಗಳ ಪೆಸರು (ಅಭಿನವ. ೫-೬೪). [ಸಂ.]

**ರೇಚಿಸು** (ಕ್ರಿ). ೧. ಉಸಿರನ್ನು ಹೊರಕ್ಕೆ ಬಿಡು ; ನಿಶ್ವಾಸಿಸು : ಧಾತ್ರಿ ರೇಚಿಸುವ ರೇಚಕವಾತದಿನಭ್ರುದೊಡ್ಡುಗಳ್ ಝಾಳಿಸೆ (ಮುಹಾಪೀ. ೯-೦೦) : ಶರಣ ರೇಚಿಸುವಲ್ಲಿಯೇ ಪಂಚಾಕ್ಷರಂಗಳು ಎಡೆಯಾಡುತ್ತಿವೆ (ಶಿವವ. ೬೩-೩೨). ೨. [ಯೋಗ] ಪ್ರಾಣಾಯಾಮದಿಂದ ನಿರೋಧಿ ಸಿದ್ದ ವಾಯುವನ್ನು ಮೂಗಿನಿಂದ ಹೊರಕ್ಕೆ ಬಿಡು : ಪದ್ಮಾಸೀನ ನಾಗಿ . . . ಪ್ರಾಣವಾಯುವಂ ಪೂರಿಸುತೆ ಸಲ್ಲೀಲೆಯಿಂದವಂ ರೇಚಿಸುತೆ (ಶಬ್ದ್ಯಾ. ೨-೪೫). ೩. [ನಾಟ್ಯ] ಹಸ್ತಾಭಿನಯ ಮಾಡು : ಅರುಣ ಸರೋರುಹದಲರಂ ಮುರಿಮುರಿದೀಡಾಡುವಂತೆ ನಿಟ್ಟಿಸಿ ನೋಡಲ್ ಕರಮರಿದೆನೆ ಕರಮಿವು ಸಾಸಿರಮೆನೆ ರೇಚಿ [ಪಾಠಾಂ. ರಚಿಯಿ]ಸಿದಳಾಕಯಿಡಕಂ ಬಲಕಂ (ಲೀಲಾವ. ೪-೦೪೦). [ ರೇಚ + — ಇಸು₃ ]

**ರೇಜಿಗೆ** (ನಾ). ೧. ಹೊಲಸು ; ಕೊಳಕು : ರೇಜಿಗೆ ರೇಚನದಿಂದ ಆದದ್ದು. ಆರಂಭದ ಅರ್ಥ ಪಾಂತಿ. ಈಗ ಯಾವುದೇ ಹೊಲಸು (ಪಮ್ಮಹು. ೦೩೭). ೨. (ಆಲಂ) ರಂಪ ; ರಾದ್ಧಾಂತ; ರಗಳೆ : ಸುಮ್ಮನೆ ನಾವು ಇದನ್ನು ರೇಜಿಗೆ ಮಾಡಬಾರದು. ಕೆಡಿದರೆ ಇನ್ನೂ ಚಿಗುರೇ ಆಗುತ್ತೆ (ರೀಮುಕಾ. ೦೫೭); ಈಗ ನೋಡಿ ಮನೇಲೆಲ್ಲ ಜಗಳ. ಮೂರುಹೊತ್ತೂ ರೇಜಿಗೆ (ಕಾನೂರು. ೦೬೦). ೩. ಅಸಹ್ಯ ; ಜುಗುಪ್ಸೆ : ನನಗೆ ಅವರ ಮೇಲೂ ಅವರ ಮಾತು, ಕತೆ. ಆಚಾರಗಳ ಮೇಲೂ . . . ರೇಜಿಗೆಯಾಯ್ತು (ಹೊಸಕ್ಕ. ೦೦೬). [ ? ]

**ರೇಜಿಡು** (ಕ್ರಿ). ಸಾಲಾಗಿ ನಿಲ್ಲು ; ಸಾಲುಗಟ್ಟು : ಜನ ರೇಜಟ್ಟೈತಿ ನೋಡು ನಾಯಕರ ಮನಿಗೆ (ಜನಪಾ. ೯೬) ; ಅವರ ಮನಿ ಮಂದೆಲ್ಲ ರೇಜಿಟ್ಟಾಂಗ ಕಾಣತೈತಿ (ಅಮೂ. ೦೩). [ರೇಜು + ಇಡು₁]

**ರೇಜು** (ನಾ). (ಉಕ) ಸಾಲು; ಓಳಿ: 'ರೇಜಿಡು', 'ರೇಜುಗಟ್ಟು' ಪರಾ. [← ಮರಾ. ರೇಘ. / ಸಂ. ರೇಖಾ]

**ರೇಜುಗಟ್ಟು** (ಕ್ರಿ). = ರೇಜಿಡು : ಶೇಷಾಚಲದಿಂದ ಆಕಾಶರಾಜನ ಪಟ್ಟಣದವರೆಗೂ ಜನಸಮೂಹವು ರೇಜುಗಟ್ಟಿತು (ವೇಂಪಹಾ. ೦೦೦) ; ಜೇನುತುಪ್ಪ ತೀರುವ ತನಕ ಆ ಹಲಗೆಯ ಮೇಲೆ ಇರುವೆಯು ಸಾಲು ಒಂದೇ ಸಮನೆ ರೇಜುಗಟ್ಟಿತ್ತು (ಮುಂಬಿಮು. ೩-೮೩). [ರೇಜು + ಕಟ್ಟು₁]

**ರೇಡಿಯೋ** (ನಾ). ೧. ಆಕಾಶದಲ್ಲಿ ಕಳಿಸುವ ನಿಸ್ತಂತುಸಂಜ್ಞೆಗಳನ್ನು ಹಿಡಿಯುವ ಸಲಕರಣೆ : ರೇಡಿಯೋ ವಾಲ್ವಿನ ಒಳಗಡೆ ಏನಿದೆಯೆಂದು ತೋರಿಸುವ ಚಿತ್ರ (ಶಾಂಶ್ರ. III, ೦೩೯೩). ೨. ಆಕಾಶವಾಣಿ ; ಬಾನುಲಿ : ಇಂದು ರಾತ್ರಿ ಅವರ ರೇಡಿಯೋ ಭಾಷಣವಿದೆ (ಠಪ). [← ಇಂ. Radio]

**ರೇಣು** (ನಾ). ೧. ಹುಡಿ ; ಧೂಳು ; ಕಣ : "ಪಾಂಸುಃ, ಕ್ಷೋದಃ, ರೇಣುಃ . . . ರಜಃ—ಈ ೬ ಧೂಳಿ" (ಹಲಾಯು. ೭೩-೨೮೯) ; ಎಲರಲೆಪ ದಿಂದುರುಳ್ದು ಪರೆದೆಸೆವ ಕುಸುಮರೇಣುಗಳೊಳಂ (ಶಾಡಂಪು. ೯೭) ; ಅಣುರೇಣುಮಧ್ಯದಲ್ಲಿ ಗುಣಭರಿತ ನೀನೆಂದು ಮಣಿವುತಿಪ್ಪೆನಯ್ಯ (ದೇಪಾವ. ೩-೩) ; ಕೆಂದೂಳಿ ಸೋಂಕಿದ ಸಿರಿಮುಡಿಯ ಕುಡಿಮಿಾಸೆಯುಲಿ ಕೆಂಪಡರ್ದ ರೇಣುಗಳ . . . ದೇವನ ಬರವ ಕಂಡನು (ಶುವ್ಯಾ ಉ. ೬-೭). ೨. ಹೂವಿನಲ್ಲಿರುವ ಪುಡಿ; ಪರಾಗ. ೩. ಒಂದು ಅಳತೆಯ ಪ್ರಮಾಣ: ಅಣುವೆಂಟು ರೇಣುವು (ವ್ಯವಹಾ. ಅಪುಂಬಿಂಥ. I, ೬-೩೦). [ಸಂ.]

**ರೇಣುಕ₁** (ನಾ). ೧. ಒಂದು ಬಗೆಯ ಔಷಧದ್ರವ್ಯ ; ಭಸ್ಮಗಂಧಿ : "ದ್ವಿಜಾ, ಹರೇಣು ... ಭಸ್ಮಗಂಧಿನೀ ಈ ೬ ರೇಣುಕವೆಂಬ ಗಂಧದ್ರವ್ಯ" (ಪಾತಿಾ. ೦೦೦) ; ನವಫೃತದೊಳ್ ಕೊಡಸಿಗೆ ಸೈಂಧವ ರೇಣುಕ ಚಿತ್ರಮೂಲ ಪಾಣಿಜಪಿಂಗೆಂಬಿವನಿಕ್ಕಿ ಪಿಂಡಮಂ ಮಾಡುವುದು (ಅಶ್ವಶಾ. ೦೦ ೦೬) ; ಜಟಾಮಾಂಸಿ, ರೇಣುಕ, ಗಂಟುಭಾರಂಗಿ, ಅರಿಸಿನ (ವೃದ್ಧಶಾ. II. ೩೩). ೨. ಒಂದು ಬಗೆಯ ದ್ವಿದಳಧಾನ್ಯ ; ಬಟ್ಟಗಡಲೆ : ರೇಣುಕ (ಶಾಕಟೀಜ) (ಮುಂಬಿಮ್ಯಾ. ೦೭೯). 'ರೇಣುಕಬೀಜ' ಪರಾ. [ಸಂ. ರೇಣುಕಾ]

**ರೇಣುಕ₂** (ನಾ). ೧. ಒಬ್ಬ ಯಕ್ಷನ ಹೆಸರು. ೨. ಗಣಗಳಲ್ಲಿ ಒಬ್ಬ : ವೀರವೀರಕನಂದಿ ರೇಣುಕದಾರುಕರುವೃಷಮುಖ್ಯಭೃಂಗಿಯು ವೀರಭದ್ರಾದಿ ಪ್ರಮಥರೋಲೈಪ ಸಮಯದೊಳು (ಬಸಪು. ೦-೩೨). ೩. [ವೀಶೈ] ಪಂಚಾಚಾರ್ಯರಲ್ಲಿ ಒಬ್ಬ ; ಪಂಚಪೀಠಗಳಲ್ಲಿ ಒಂದಾದ ರಂಭಾಪುರೀ ವೀರಸಿಂಹಾಸನವನ್ನು ಸ್ಥಾಪಿಸಿದವನು : ರೇಣುಕ ರಾಮಪಂಡಿತ ಮಹಾಮರುಳಾರ್ಯರ . . . ಬಣ್ಣಿಸುತ್ತೆಱಗಿ ಮೇಣ್ಬಡೆವೆಂ ಪರಮಾರ್ಥಸಿದ್ಧಿಯಂ (ರಾಜಶೇ. ೦-೦೭). 'ದಾರುಕ' ಪರಾ. ೪. ಒಂದು ಸರ್ಪದ ಹೆಸರು : ಮಿತ್ರಾರಿ ರೇಣುಕನು ... ದಂಡಿಪಾದಾದ್ಯುರುತರದ ಕಿಲ್ಬಿಷದ ಫಣಿಗಳು ಲಕ್ಷಸಂಖ್ಯೆಯವು (ಬಸಪು. ೯೭-೨೬). ೫. ಒಂದು ಆನೆಯ ಹೆಸರು [ಸಂ.]

**ರೇಣುಕಪೀಠ** (ನಾ). [ವೀಶೈ] ಪಂಚಪೀಠಗಳಲ್ಲಿ ಒಂದು : ಬಾಳೆ ಹೊನ್ನೂರಿನಲ್ಲಿ ರೇಣುಕಪೀಠವಿದೆ (ಠಪ). [ಸಂ.]

**ರೇಣುಕಬೀಜ** (ನಾ). ಒಂದು ಬಗೆಯ ಔಷಧದ್ರವ್ಯ ; ಭಸ್ಮಗಂಧಿ : "ಕಪಿಲೆ – ರೇಣುಕಬೀಜ" (ಗಂಗಾಪು. ೭೦) ; ಸೈಂಧವಸಲವಣ, ರೇಣುಕ ಬೀಜ, ಇವಂ ಸಣ್ಣನಾಗಿ ಪುಡಿಮಾಡಿ ಆ ಕಷಾಯಕ್ಕೆ ಹಾಕಿ ಕೊಳ್ಳಲು ಬಾಣಂತಿಯರ ಸಕಲರೋಗಂಗಳು ಮಾಣುವುವು (ವಿಶ್ವವಿ. ೦೩೨). [ರೇಣುಕ₁ + ಬೀಜ]

**ರೇಣುಕಾನಂದನ** (ನಾ). ರೇಣುಕೆಯ ಮಗ ; ಪರಶುರಾಮ : ನಿಜಭುಜ ಶಕ್ತಿಯಂ ಪ್ರಕಟಂ ಮಾಡಲೆಂದು ರೇಣುಕಾನಂದನನಲ್ಲಿಗೆ ಪೋಗಿ (ಶಂಶರಾ. ೦-೦೦೩ ವ). [ಸಂ.]

**ರೇಣುಕೆ** (ನಾ). ೧. = ರೇಣುಕಬೀಜ : ಸಬ್ಬಸಿಗೆ, ರೇಣುಕೆ ಇವುಗಳ ಕಷಾಯವನಿಕ್ಕಿ ತೆಗೆದುಕೊಳ್ಳಲು ವಾತಜ್ವರಂ ಮಾಣ್ಗುಂ (ಸಕವೈ. ೬೩). ೨. ಜಮದಗ್ನಿಯ ಹೆಂಡತಿ; ಪರಶುರಾಮನ ತಾಯಿ : "ರೇಣುಕಾ= ಜಮದಗ್ನಿಯ ಹೆಂಡತಿ" (ಶಾಕಸ. ೩೩); ಒಲುಮೆಯವಳೆಂತಿರ್ದು ಗಂಡನ ತಲೆಯ ರೇಣುಕೆ ತಱಿಸಳೆ (ಮದೇಪು. ೨೭–೪೭). [ಸಂ. ರೇಣುಕಾ]

**ರೇಣುಕೇಶ** (ನಾ). =ರೇಣುಕ₂ ೩ : ಶಿವವಕ್ಷೋಭಸ್ಮರೇಣುಪ್ರಭವನೆನಿಸಿ ಮುಂ ರೇಣುಕೇಶಾಖ್ಯೆಯಂ ತಾಳ್ದು (ರಾಜಶೇ. ೦-೩೩). [ಸಂ.]

**ರೇಣುಕೇಶ್ವರ** (ನಾ). =ರೇಣುಕ₂ ೩ : ರೇಣುಕೇಶ್ವರಮಹಾಗುರು ಮಾಳ್ಕೆ ಮಗಿಪ್ಪಸಿದ್ಧಿಯಂ (ವೃಶಪ. ೦-೦೦). [ಸಂ.]

**ರೇತ** (ನಾ). ವೀರ್ಯ ; ಶುಕ್ಲ : "ಇಂದ್ರಿಯಮಂತೆ ಧಾತು ರೇತಂ ಶುಕ್ಲಂ" (ವಸ್ತುಕೋ. ೭೨-೩೦) ; ರೇತ ರಜಸ್ಸಿನಲ್ಲಿ ಜನಿತ ಆಧಿವ್ಯಾಧಿಯ ತವರುಮನೆ . . . ತನು (ವಚಸಂ. ೯೩-೭೨). [ಸಂ. ರೇತಸ್]

**ರೇತಯ್ಯ** (ನಾ). ಒಬ್ಬಾತನ ಹೆಸರು : ಶ್ರೀ ಪೆರ್ಗ್ಗಡೆ ರೇತಯ್ಯನ ವೇದ ಸಂಕಯ್ಯ (ಎಕ. II, ೯೭೭; ಸು. 1000). [ರೇತ ? + ಅಯ್ಯ₁]

**ರೇತಸ್ಸು** (ನಾ). ೧. = ರೇತ : ಮಲಮೂತ್ರನಿರೋಧದಿಂದಲೂ . . . ರೇತಸ್ಸು ಕ್ಷೀಣವಾಗುವುದು (ಸಕವೈ. ೨೯೭); ರಾಗವೆಂಬುದು ರೇತಸ್ಸಿಗೆ ಹೆಸರು (ಕಾಮಸಾ. ೨೯೨). ೨. ಪಾದರಸ; ಪಾರಜ. ೩. ನೀರು. [ಸಂ. ರೇತಸ್]

**ರೇಪಡಿಸು** (ಕ್ರಿ). (ಉಕ) ಎಣ್ಣೆ, ತುಪ್ಪ ಮೊದಲಾದ ಜಿಡ್ಡು ಪದಾರ್ಥ ಗಳನ್ನು ಸವರು—ಬಳಿ ; ಅವಳ ಸರ್ವಾಂಗಕ್ಕೆಲ್ಲವೂ ಅಗ್ನಿರಸವನ್ನು ರೇಪಡಿಸಿದಂತಾಗಿ ಕಣ್ಣ ಕೊನರುಗಳು ಉರಿಯ ಹತ್ತಿದ್ದವು (ರಕ್ತರ್ಥ. ೩೯೦). [ರೇಪಡ₀ (P ← ಮರಾ. ರೇಬಟಣೇ) + — ಇಸು₃]

**ರೇಫ** (ನಾ). ೧. 'ರ' ಎಂಬ ಅಕ್ಷರ : ಪಲ್ಲಟಿಪ ಡಕಾರದ ನೆಲೆಯುಳ್ಳ ಱಕಾರಂ ಱಕಾರದೊಳ್ ರೇಫಂ ತಾನೆಲ್ಲಿಯುಮಕ್ಕುಂ ಪದವಿಧಿಯಲ್ಲಿ ಪರಂ ವ್ಯಂಜನಾದಿಯಾಗಿರೆ ಬಹುಳಂ (ಶಾವ್ಯಾವ. ೨೯೭); ರೇಫ ಱಕಾರಂಗಳ ವರ್ಣಾವೃತ್ತಿಗೆ (ಕವಿಮ. ೦೯ ಕ್ರಿಯೋ); ಹಳಗನ್ನಡದಲ್ಲಿ ರೇಫಯುಕ್ತ ವಾಗಿದ್ದ ಒತ್ತಕ್ಷರಗಳು ಈಗ ಸಜಾತೀಯ ಸಂಯುಕ್ತವ್ಯಂಜನಗಳಾಗಿವೆ (ಕೈಪಿಡಿ. ೬). 'ಶಕಟರೇಫ' ಪರಾ. ೨. 'ರ' ಕಾರದ ಧ್ವನಿ, —ಶಬ್ದ. ೩. ಆಸಕ್ತಿ; ಒಲವು. ೪. ನೀಚ; ಅಧಮ : "ರೇಫ . . . ನಿಕೃಷ್ಟನೆನೆ ಕಷ್ಟನೆಂದೆಂಬವಗೆ ನಾಮಂ" (ಮುಂಗರಾ. ೬೭-೯). ೫. [ಛಂದ] ಅಕ್ಷರ ಗಣಗಳಲ್ಲಿ ಒಂದು; ರಗಣ (—∪—). [ಸಂ.]

**ರೇಫೆ** (ನಾ). =ರೇಫ ೧ : ರೇಫೆ ಪುಟ್ಟುವ ತಾಣಮಂ ಬೆಟ್ಟಿತ್ತಾಗುಚ್ಚರಿಸೆ ಱಕಾರಂ ಪುಟ್ಟುಗುಂ (ಕವಿಮ. ೦೨ ವೃತ್ತಿ). [ಸಂ. ರೇಫ]

**ರೇಭಣ** (ನಾ). ಆಕಳಿನ ಧ್ವನಿ; ಹಸುವಿನ ಕೂಗು. [ಸಂ.]

**ರೇಯ** (ನಾ). ಒಡೆಯ; ಪ್ರಭು : ಆದಿಮೂರುತಿ ಸಿರಿಹಯವದನ ರೇಯಾ (ಪಾಂಶೀ. ೬೩-೩); ಬಲವೈರಿನುತ ನಮ್ಮ ವಿಜಯವಿಠ್ಠಲರೇಯ . . . ನಮ್ಮ ಭಾರ ವಹಿಸುವ (ವಿದಾಕೃ. ೦೯-೩). [< ರಾಯ]

**ರೇಯೂರ್** (ನಾ). ಒಂದು ಊರಿನ ಹೆಸರು : ರೇಯೂರುನಾಮ ಗಾಮ [೬] (ಎಂ. VII, ೦೮೮-೦೩; ೮೮೮). [? + ಊರ್]

**ರೇರಿಹಾಣ** (ನಾ). ೧. ಶಿವ ; ಈಶ್ವರ. ೨. ಕಳ್ಳ; ತಸ್ಕರ. ೩. ಒಬ್ಬ ರಾಕ್ಷಸನ ಹೆಸರು. [ಸಂ.]

**ರೇಲ** (ನಾ). ಒಂದು ಬಗೆಯ ಮರ : ಶಮ್ಯಾಕ : (೬) [← ತೆಲು. ರೇಲ]

**ರೇಲು** ' ರೈಲು ' ನೋ.

**ರೇಲುವೆ** ' ರೈಲ್ವೆ ' ನೋ.

**ರೇವ** (ನಾ). ೧. ರೈವಂತನ ತಂದೆ. ೨. ನರ್ಮದಾ ನದಿ. ೩. ನೀಲಿಗಿಡ. [ಸಂ.]

**ರೇವಂತ** (ನಾ). ೧. ಸದ್ಯದ ಕಲ್ಪದ ಐದನೆಯ ಮನುವಿನ ಹೆಸರು. ೨. ಒಬ್ಬಾತನ ಹೆಸರು : ರೇವಂತನಡೆಗೌಡ ಸುರಿತಂಣ ಪಿರಿಯ ತಮ್ಮ ಗೌಡರು (ಎಕ. VII, ಶಿವಮೊ. ೧೦೪-೦೫ ; 950 ?) ; ವೈರಿಘರಟ್ಟ ವಿಶದ ಹಯಾರೂಢಪ್ರೌಢ ರೇವಂತ ಪರಬಳಕೃತ್ತಾಂತ (ಕಇಅ. ೦೩-೪-೮೪; 1093). ೩. ಒಬ್ಬ ರಾಜನ ಹೆಸರು : ಕಡುಗಲಿಗಳೇಟಾಟದಲಿ ಮಿಗೆ ರಘುಡಿ ಪವಾಡ ದೃಢಾಯತಿಕೆಗಿದು ಪಡಿಯ ನಳ ರೇವಂತರೆಂದುದು ರಾವುತಿಕೆಗಳಲಿ (ಕುವ್ಯಾಭಾ. ೭-೨). [ಸಂ.]

**ರೇವಡಿ**, **ಲೇವಡಿ**$_2$ (ನಾ). (ಉಕ) ಸಕ್ಕರೆ ಅಥವಾ ಬೆಲ್ಲದ ಪಾಕಕ್ಕೆ ಎಳ್ಳು ಹಾಕಿ ಮಾಡುವ ಒಂದು ಬಗೆಯ ಸಿಹಿತಿಂಡಿ : ಅವುಗು ಲಡ್ಡಗೆ ಬೆಲ್ಲ ಸವಿ ಮೂಜುಂಡೆಯು ರೇವಡಿಯು ಸವಿವಡೆ ತಜಿಗು ಭಾವಿಸುವಂತೆ ಚಕ್ಕುಲಿ (ಕರಜಾ. ೫-೧೦೨) ; ಅವಲಕ್ಕಿ ರೇವಡಿ ಬೆಂಡು ಬೆತ್ತಸ ಪುಟಾಣಿ ಮಕ್ಕಳ ಕಸಕೊಂಡು ಮುಕ್ಕಿತು ಮಂಗ (ಜನಗೀ. ೫೦). **ಲೇವಡಿ**$_2$ : ಲೇವಡೀ ರುಚಿ ಹಾವಾಡಿಗ ಬಲ್ಲನೇ ? (ಗಾದೆ).

[←ಹಿಂ. ಮರಾ. ರೇವಡೀ./ ತುಳು. ಲೇವಡ]

**ರೇವಡಿಗಾರ** (ನಾ). ರೇವಡಿಯೆಂಬ ತಿಂಡಿಯನ್ನು ಮಾರುವವನು : ಒಬ್ಬ ಒಕ್ಕಲಿಗ, ಬಳಿಕ ಒಬ್ಬ ರೇವಡಿಗಾರ ಬಂದರು (ಪಪವ. ೬೯).

[ರೇವಡಿ + — ಗಾರ (< — ಕಾಱ)]

**ರೇವಡಿಗಿಡ** (ನಾ). ಮುಳ್ಳುಗಳಿಂದ ಕೂಡಿರುವ ಒಂದು ಬಗೆಯ ಗಿಡ : (✝). [ರೇವಡಿ$_0$ (P← ತೆಲು. ರೇವಿಡಿ) + ಗಿಡ (< ಗಿಡು)]

**ರೇವಣನಾತ** (ನಾ). ಒಬ್ಬಾತನ ಹೆಸರು : ಆತನ ಸೂನು ದಾನಿ ತಾಂ [? ರೇ]ವಣನಾತನ್ (ಎಕ. XI. ಹಿರಿಯೂರು. ೭೪-೬ ; 968). [ ? ]

**ರೇವತಿ** (ನಾ). ೧. ಹಸು. ೨. ಬಲರಾಮನ ಹೆಂಡತಿ : "ರೇವತೀ . . . ಕೃಷ್ಣನಣ್ಣನ ಬಲಮನ ಹೆಂಡತಿಯುಂ" (ಶಾಶಕ. ೦೦೬) ; ರೈವತಕಂ ತಂದು ತನ್ನ ಮಗಳಂ ಕುಡಲ್ ಆ ರೇವತಿಯೊಳ್ ಬಲದೇವಂ ವೈವಾಹೋತ್ಸವದೆ ನೆರೆದು ಸುಖದಿಂದಿರ್ದಂ (ಜಗಪು. ೦೦-೨). ೩. [ಜ್ಯೋತಿ] ಇಪ್ಪತ್ತೇಳು ನಕ್ಷತ್ರರಾಶಿಗಳಲ್ಲಿ ಕೊನೆಯದು ಮತ್ತು ಆ ನಕ್ಷತ್ರದಲ್ಲಿ ಬರುವ ಮಳೆ : ರೇವತಿ ಪುಷ್ಯಮಶ್ವಿನಿ ಧನಿಷ್ಠೆ . . . ತಾರಾವಳಿಯುತ್ತಮಂ . . . ಚೌಲಕರ್ಮದೊಳ್ (ಲೋಕೋಪ. ೨-೩೦) ; ಅಶ್ವಿನಿ . . . ರೇವತಿಗಳೆಂಬಿಪ್ಪತ್ತೇಳು ತಾರೆಗಳ್ (ವಿವೇಕ. ೨೫೬) ; ಸೂರ್ಯನು ರೇವತೀತಾರೆಯನ್ನು ಸೇರಿದ ಕ್ಷಣವೇ ಮೇಷಸಂಕ್ರಮಣ (ಪಕ್ಷಶ್ರ. ೪೬). [ಸಂ. ರೇವತೀ]

**ರೇವದಾಸ** (ನಾ). ಒಬ್ಬಾತನ ಹೆಸರು : ರೇವದಾಸ ವೀಸೋತ್ತರ ದೀಕ್ಷಿತರರತಿಪದಸ್ಥರತಿಮಾರ್ಗ್ಗಸ್ಥರ್ (ಎಇ. XIII. ೩೩೦-೦೫ ; 929). [ಸಂ.]

**ರೇವಮಗಾವಿಗ** (ನಾ). ಒಬ್ಬಾತನ ಹೆಸರು : ಇದಕೆ ಸಕ್ಷಿ ರೇವಮಗಾವಿಗನು (ಎಕ. VIII. ಸೊರಬ. ೫೭೦-೩೦ ; 692). [ ? ]

**ರೇವಮ್ಮ** (ನಾ). ಒಬ್ಬಾತನ ಹೆಸರು : ಪಣ್ಣತರ ಸಿಂಹ ಶ್ರೀರೇವಮ್ಮನ ಅಣ್ಣನ್ × ಕ್ಕಿಗನ್ (ಎಕ. XVI, ತುಮಕೂ. ೬೨-೦೯ ; ಸು. 780).

[ರೇವ + ಅಮ್ಮ$_1$]

ರೇವಲ್ಚಿನ್ನಿ ' ರೇವಾಚಿನ್ನಿ ' ನೋ.

**ರೇವಾಚಿನ್ನಿ**, ರೇವಲ್ಚಿನ್ನಿ (ನಾ). ಒಂದು ಬಗೆಯ ಔಷಧೀಸಸ್ಯ : "ಚೀನಾ ಮತ್ತು ಟಿಬೆಟ್ಟುಗಳ ಒಂದು ಸಸ್ಯದ ಬೇರು ; ಇದರಿಂದ ಮಾಡಿದ ಭೇದಿಯೌಷಧ , ವಿರೇಚಕ ; ರೇವಲ್ಚಿನ್ನಿ, ರೇವಾಚಿನ್ನಿ" (Rhubarb. ಇಂಕಪ). ' ದಾಲಚಿನ್ನಿ ' ಪರಾ. **ರೇವಲ್ಚಿನ್ನಿ** : ರೇವಲ್ಚಿನ್ನಿ, ಮಡ್ಡಿ ಕರ್ಪೂರ, ಗಂಧದ ಮರ, ಏಲಕ್ಕಿ . . . ಇವು ಇಲ್ಲಿ ದೊರೆಯುವ ಸಾಮಾನುಗಳು (ಪ್ರವಾಇ. I. ೩೯೯). [← ಮರಾ. ರೇವಾಚಿನೀ, ರೇವಚಿನೀ]

**ರೇವು** (ನಾ). ಸಮುದ್ರದ ದಡದಲ್ಲಿ ಹಡಗುಗಳು ನಿಲ್ಲುವ ಸ್ಥಳ ; ಬಂದರು : ದೇಶದ ಸಮೀಪದಲ್ಲಿ ಹಡಗುಗಳು ಲಂಗರುಹಾಕುವ ಸ್ಥಳವು "ರೇವು" ಅಥವಾ "ಅಳಿವೆ" ಎಂದು ಕರೆಯಲ್ಪಡುತ್ತದೆ (ಭೂಗೋಳ. ೦೦); ಅವನು ರೇವಿಗೆ ಹೋಗಿ ನೌಕೆಯೊಂದನ್ನು ಸಿದ್ಧಪಡಿಸಿದ (ಹಾಪುತ್ಥ. ೪೫).

[ದೇ.॥ ತಮಿ. ತುಳು. ತೆಲು. ರೇವು]

**ರೇವುಕುಂಟೆ** (ನಾ). ಒಂದು ಸ್ಥಳದ ಹೆಸರು : ತೆಂಙ್ಕಣ ದೆಸೆ ಗುಡ್ಡೆಗಲ್ಲು ತುಮ್ಬುಕುಣ್ಟೆ ಪಾಮ್ಬುಳಕುಣ್ಟೆ (ಎಕ. XVI, ಶಿರಾ. ೩೬-೩೫; 878).

[ರೇವು ? + ಕುಂಟೆ$_3$]

**ರೇವುಪಟ್ಟಣ** (ನಾ). ಹಡಗುಗಳ ನಿಲ್ದಾಣವಿರುವ ಪಟ್ಟಣ ; ಬಂದರಿರುವ ನಗರ : ಭಾರತದೇಶದ ಹೆಚ್ಚು ವ್ಯಾಪಾರ ಬೊಂಬಾಯಿ, ಕಲ್ಕತ್ತ, ಕರಾಚಿ, ರಂಗೂನ್, ಮದರಾಸ್ — ಈ ಐದು ರೇವುಪಟ್ಟಣಗಳ ಮೂಲಕ ನಡೆಯುತ್ತದೆ (ಭೂಪಿಪ. ೩೬೩). [ರೇವು + ಪಟ್ಟಣ]

**ರೇವೆ**$_1$ (ನಾ). ೧. ಒಂದು ನದಿಯ ಹೆಸರು; ನರ್ಮದೆ: "ಮೇಖಳಕನ್ಯಾ, ನರ್ಮದಾ, ರೇವಾ — ಈ ೩ ನರ್ಮದೆ" (ಹಲಾಯು. ೦೦೦-೫೨). ೨. ನೀಲಿಗಿಡ. ೩. ರತಿ. [ಸಂ. ರೇವಾ]

**ರೇವೆ**$_2$ (ನಾ). ೧. ಸಣ್ಣ ಕಣ ; ಪುಡಿ : ಪೀಪಿನ ತಳಕ್ಕೆ ಉಳಿಯುವ ರೇವೆಯೋ ನೀಲಿಯು . . . ಆ ರೇವೆಯನ್ನು ತೆಗೆದು . . . ಬಿಸಿ ಮಾಡುತ್ತಾರೆ (ಮುಂಬಯು. ೪-೫೫). ೨. ಪ್ರವಾಹದಲ್ಲಿ ಕೊಚ್ಚಿಕೊಂಡು ಬರುವ ಮರಳು ; ಮೆಕ್ಕಲುಮಣ್ಣು : ಸಿಂಧು ಮತ್ತು ಗಂಗಾನದಿಗಳು ಹಿಮಾಲಯದಿಂದ ತಂದ ರೇವೆಯಿಂದ ಬೈಲುಸೀಮೆಯಾಯಿತೆಂದು ಕಂಡು ಬರುತ್ತದೆ (ಹಿಂದುಇ. ೨).

**ರೇವೆಯ ಭೂಮಿ** = ಮರಳುಮಿಶ್ರವಾದ ಭೂಮಿ ; ಮೆಕ್ಕಲು ಮಣ್ಣಿನ ಜಮೀನು : ರೇವೆಯ ಭೂಮಿ . . . ಸಾಗುಮಾಡಲಿಕ್ಕೆ ಸುಲಭವಾಗಿರುವುದು (ಸಸ್ಯಶಾ. ೦೨೬). [← ಮರಾ. ರೇವ]

**ರೇಶಿಮೆ** ' ರೇಶ್ಮೆ ' ನೋ.

**ರೇಶ್ಮೆ**, ರೇಶಿಮೆ, ರೇಷ್ಮೆ, ರೇಸಿಮೆ, ರೇಸ್ಮೆ (ನಾ). ೧. ಕೋಶದಲ್ಲಿ ವಾಸಿಸುವ ಒಂದು ಬಗೆಯ ಹುಳುವಿನಿಂದ ಉತ್ಪತ್ತಿಯಾಗುವ ಎಳೆ: 'ರೇಶ್ಮೆಬಟ್ಟೆ' ಪರಾ. ೨. ರೇಶ್ಮೆಯ ಎಳೆಯಿಂದ ತಯಾರಿಸಿದ ಬಟ್ಟೆ; ಪಟ್ಟೆವಸ್ತ್ರ : ಶ್ರೀಮನ್ನಾರಾಯಣನು ರೇಶ್ಮೆಯುಟ್ಟುಕೊಂಡು . . . ಮಲಗಿದ್ದಾನೆ (ದೇಕಪ್ಪ. ೧೦). **ರೇಶಿಮೆ** : ೨. ರೇಶಿಮೆ, ಮಣ್ಣುಪಾತ್ರೆ ಮುಂತಾದ ಜೀನಸುಗಳು ಚೀನದೇಶದಿಂದ ನಮ್ಮ ದೇಶಕ್ಕೆ ಬರುತ್ತವೆ (ಮುಂಬಯು. ೪-೦೫೫); ನೀರೊಡೆದ ಕಣ್ಣುಗಳನ್ನು ಉಟ್ಟ ರೇಶಿಮೆಯ ಮುಗುಟದಿಂದ ಒರಸಿಕೊಳ್ಳತೊಡಗಿದಳು (ಅಕೋಕ. ೨); ತನ್ನ ರೇಶಿಮೆಯ ಸೆರಗಿನ ತುದಿಯಿಂದ ನನ್ನ ಮುಖವನ್ನು ಮುಚ್ಚಿದಳು (ಕೃಜಸ. ೨). **ರೇಷ್ಮೆ** : ೧. ರೇಷ್ಮೆಯ ನಾರು ರೇಷ್ಮೆಯ ಹುಳುವಿನಿಂದ ಉತ್ಪತ್ತಿಯಾಗುತ್ತದೆ. ರೇಷ್ಮೆಹುಳು ಕಟ್ಟಿದ ಗೂಡಿನಿಂದ ತೆಗೆದ ದಾರವೇ ರೇಷ್ಮೆ ನಾರು (ಗೃಹವಿ. ೬೫). ೨. ರೇಷ್ಮೆಕಮ್ಚಿ ಲಗಾಮು ಸಹ (ಎಕ. XIV, ಪಂಜಸ. ೨೯೨—ಕೃಟಿ. ೦೪೨; 1847); ಮುನ್ನೂರುವರಹಗಳು ಮಾತ್ರವೇ ಅಲ್ಲ . . . ಅಪೂರ್ವವಾದ ರೇಷ್ಮೆದುಪ್ಪಟ, ಅದನ್ನೂ ಕೊಡುತ್ತೇನೆ (ಆರ್ಯಕ. ೫). **ರೇಸಿಮೆ** : ೧. ಉಪ್ಪುನೀರಿಳೆಸೊಪ್ಪು ಕೂಡ ತೆಳ್ಳನೆ ಬೆಳ್ಳನೆ ರೇಸಿಮೆನೂಲಾಗಿ ಮಾರ್ಪಾಟುಗೊಳುವುದು ನೋಡ (ಇಂಪಾಶ. ೦೩೩-೪೭). **ರೇಸ್ಮೆ** : ೨. ದಿವಿಜರೀಕ್ಷಿಸುವಂತೆ ರೇಸ್ಮೆನಿಡುದುಗುಲಮಂ ತೋಯಿಸುತೆ ರುಧಿರದೊಳ್ ನಿಂದಿರ್ದಂ (ಶರಕು. ೩೦-೫೩).

[← ಪಾರ. ಹಿಂ. ರೇಶಮ್; ಮರಾ. ರೇಶೀಮ್. / ಚೀನಿ. ರೇಶಮ್]

**ರೇಶ್ಮೆಬಟ್ಟೆ,** ರೇಷ್ಮೆಬಟ್ಟೆ (ನಾ). ರೇಶ್ಮೆನೂಲಿನಿಂದ ತಯಾರುಮಾಡಿದ ಬಟ್ಟೆ ; ಪಟ್ಟೆವಸ್ತ್ರ : ಹಳೆರೇಶ್ಮೆಬಟ್ಟೆಯ ತುಂಡು . . . ಫರ್ನಿಚರನ್ನು ಉಜ್ಜಿ ಪಾಲಿಷ್ ಮಾಡಲು ಬಹಳ ಅನುಕೂಲವಾಗಿರುತ್ತದೆ (ಗೃಹಪ. ೦೭೦). **ರೇಷ್ಮೆಬಟ್ಟೆ** : ರೇಷ್ಮೆಬಟ್ಟೆಗಳು ವೈಯನ್ನು ಶಾಖವಾಗಿಡುವುವು. ರೇಷ್ಮೆಬಟ್ಟೆಗಳು ಬಹಳ ನುಣುಪಾಗಿರುವುದರಿಂದ ಇವು ಬೇಗ ಕೊಳೆಯಾಗುವುದಿಲ್ಲ (ಗೃಹಪ. ೬೭). [ರೇಶ್ಮೆ + ಬಟ್ಟೆ]

**ರೇಷಣ** (ನಾ). ೧. ಅರಚುವುದು; ಅರ್ಭಟಿಸುವುದು. ೨. ಗೊಣಗುವುದು: "ರೇಷಃ, ರೇಷಣಂ, ರೇಷಣೇಯಂ, ಈ ೩. ಗೊಣಗು" (ಶಾಶಕ. ೦೨೦). ೩. ತೋಳದ ಕೂಗು; ಊಳು. ೪. ಗಾಯ. [ಸಂ.]

**ರೇಷನ್ನು** (ನಾ). ಒಬ್ಬ ಮನುಷ್ಯನಿಗೆ ನಿಗದಿಯಾಗಿ ಕೊಡುವ ಆಹಾರಪದಾರ್ಥಗಳ ಪ್ರಮಾಣ ; ಪಡಿತರ : ರೇಷನ್ನಿನಕ್ಕಿಯ ಚೀಲ ಬಂದಿತು ಕೈಗೆ (ಕಂಪ್ರಪಿ. ೩೫-೬೬). [←ಇಂ. Ration]

**ರೇಷಮಾನಿ** (ನಾ). = ರೇಶ್ಮೆ ೨: ಒಬ್ಬ ಸಂಗೀತಗಾರನು . . . ಕುತ್ತಿನಿ ಪಾಯಿಜಾಮಾ ಹಾಕಿಕೊಂಡು ರೇಷಮಾನಿ ಕೈವಸ್ತ್ರ ಸಹ ಬಹಳ ಡಬಡ್ಡಾಳಿಕೆಯಿಂದಹಾಡುತ್ತಿರಲು (ಕಥಾವಂ. VI, ೯). [<ರೇಶ್ಮೆ]

**ರೇಷೆ** (ನಾ). ಗೆರೆ; ರೇಖೆ: ಎರಡೂ ಸಂಸ್ಕೃತಿಯ ಪ್ರಗತಿಯು ಎಷ್ಟು ಸಮಾನಾಂತರರೇಷೆಯಲ್ಲಿ ಸಾಗಿತ್ತೆಂಬುದು ಇದರಿಂದ ವ್ಯಕ್ತವಾಗುತ್ತಿದೆ (ಕರ್ನಾಪೂ. ೬೮); ಒಡಲ ನೂಲಿನಿಂದ ನೇಯುವಂತೆ ಜೇಡ ಜಾಲಾ ತನ್ನ ದೈವರೇಷೆ ಬರೆಯುವಂತೆ ತಾನೆ ಭಾಲಾ (ನಾದಲೀ. ೬೫-೦೦). [ಸಂ. ರೇಷಾ]

**ರೇಷ್ಮೆ** 'ರೇಶ್ಮೆ' ನೋ.

**ರೇಷ್ಮೆಕಾಯಿಲೆ** (ನಾ). ಒಂದು ಬಗೆಯ ರೋಗ : ಅವರು ರೇಷ್ಮೆ ಕಾಯಿಲೆಯಿಂದ ಮೃತರಾಗಿದ್ದರು (ಕಾವೂರು. ೩೮). [ರೇಷ್ಮೆ + ಕಾಯಿಲೆ]

**ರೇಷ್ಮೆಜ್ವರ** (ನಾ). = ರೇಷ್ಮೆಕಾಯಿಲೆ: ನಾಳಸಂಕೋಲೆ, ಛಳಿಜ್ವರ, ರೇಷ್ಮೆಜ್ವರ, ಗಂಟಲುಬೇನೆಗಳಿಗೆ ಸಿದ್ದಣ್ಣನ ಮೂಲಿಕೆಗಳು ಸಿದ್ಧೌಷಧವಾಗಿದ್ದುವು (ಕಂಜಕಂ. ೩೪). [ರೇಷ್ಮೆ + ಜ್ವರ]

**ರೇಷ್ಮೆಬಟ್ಟೆ** 'ರೇಶ್ಮೆಬಟ್ಟೆ' ನೋ.

**ರೇಷ್ಮೆಸೀರೆ** (ನಾ). ರೇಶ್ಮೆದಾರದಿಂದ ನೆಯ್ದ ಸೀರೆ ; ಪಟ್ಟೆಸೀರೆ : ತರೋದೆ ಉಂಟಂತೆ. ಒಂದು ರೇಷ್ಮೆಸೀರೆ ತರೋದು ಬೇಡವೆ! (ನನ್ನೂರು. ೨೫೨). [ರೇಷ್ಮೆ (< ರೇಶ್ಮೆ) + ಸೀರೆ]

**ರೇಷ್ಮೆಹಿಪ್ಪಲಿಗಿಡ** (ನಾ). ರೇಶ್ಮೆಹುಳುಗಳು ತಿನ್ನುವ ಸೊಪ್ಪಿನ ಗಿಡ; ಉಪ್ಪುನೇರಳೆ: ಕಂಬಳಿಗಿಡ, ರೇಷ್ಮೆಹಿಪ್ಪಲಿಗಿಡ (ವೃಕಿಗಿ. ೩೩-೦೦೦೦). [ರೇಷ್ಮೆ (<ರೇಶ್ಮೆ) + ಹಿಪ್ಪಲಿ + ಗಿಡ (< ಗಿಡು)]

**ರೇಷ್ಮೆಹುಳು** (ನಾ). ರೇಶ್ಮೆಯನ್ನು ಉತ್ಪತ್ತಿ ಮಾಡುವ ಒಂದು ಬಗೆಯ ಹುಳು: "ಕೌಶೇಯಂ . . . ರೇಷ್ಮೆಹುಳು" (ಸಿದ್ಧಾಂತಿ. ೨೦೨); ರೇಷ್ಮೆಹುಳುಗಳನ್ನು ಮೊಟ್ಟಮೊದಲು ಚೀಣಾದೇಶದಲ್ಲಿ ರೇಷ್ಮೆಗಾಗಿ ಸಾಕಲು ಪ್ರಾರಂಭಿಸಿದರು (ಗೃಹಪ. ೬೩). [ರೇಷ್ಮೆ (<ರೇಶ್ಮೆ)+ಹುಳು (<ಪುಲು)]

**ರೇಸಿಮೆ** 'ರೇಶ್ಮೆ' ನೋ.

**ರೇಸು** (ನಾ). ಕುದುರೆಗಳೂ, ಕ್ರೀಡಾಪಟುಗಳೂ ಓಡುವ ಪಂದ್ಯದ ಓಟ : ಬೆಂಗಳೂರಿನಲ್ಲಿ ಕುದುರೆರೇಸು ನಡೆಯುತ್ತದೆ (ರೂಢಿ). [←ಇಂ. Race]

**ರೇಸ್ಮೆ** 'ರೇಶ್ಮೆ' ನೋ.

**ರೈ** (ನಾ). ೧. ದ್ರವ್ಯ ; ಸಂಪತ್ತು; ಐಶ್ವರ್ಯ : "ಧನಕನಕವಾಚಕಂ ರೈ ಶಬ್ದಂ" (ಪಸ್ತುಕೋ. ೦೨೩-೪೨); ಐಕಾರಕ್ಕೆ—ದೈಯೆಂದಂ ; ರೈಯೊದವಿತ್ತು (ಶಮದ. ೩೩ ಪ್ರಯೋ); ಸೌಂದರ್ಯದಿಂದಂಕಮಂ ರೈಯಂ ಕೈವಿಗೆ ಸಾರ್ಚಿ ಸಂತವಿಸಿದಾ ಗೋವಿಂದನಂ ವಂದಿಪೆಂ (ಐಕೃಗೋ. ೦-೦). ೨. ಚಿನ್ನ; ಸುವರ್ಣ: "ಗೈರಿಕಂ ... ಕಾಂಚನಂ ರೈ ರುಕ್ಮಮಷ್ಟಾಪದಂ . . . ಸ್ವರ್ಣವೆನೆ ಹೊನ್ನಿಂಗೆ ನಾಮಮುಕ್ಕುಂ" (ಮಂಗರಾ. ೪೦-೪); ಸಕಳಾರ್ಥಿವ್ರಾತಚೇತೋಮುದವುನವಮನವಮಲರೈಧಾರೆಯಿಂ . . . ಮಾಡಿ (ಕಂಪ್ರಕೃ. ೪-೬೪). [ಸಂ.]

**ರೈಟರು** (ನಾ). ಕರಣಿಕ ; ಗುಮಾಸ್ತ: ನಮ್ಮ ಕಚೇರಿಯಲ್ಲಿ ಇಬ್ಬರು ರೈಟರುಗಳಿದ್ದಾರೆ (ರೂಢಿ). [← ಇಂ. Writer]

**ರೈತ,** ರೈಹಿತ್ತ₂ (ನಾ). ಆರಂಬಮಾಡುವವನು ; ಒಕ್ಕಲಿಗ ; ವ್ಯವಸಾಯಗಾರ : ಸರಕಾರಕ್ಕೆ ರುಜು ಇಲ್ಲದೆ ರೈತನಾಗಬಾರದು ಅದೆಂತೆಂದೊಡೆ ಇಷ್ಟುಳ್ಳಾತನೇ ಪಾಪ್ಯಾರೈತ (ವಕಸಂ. ೬೦); ರೈತರು ಯೆಲ್ಲಾ ಬಿತ್ತಿ ಬೆಳೆದಾ ಧಾನ್ಯ (ಹುವಳ. ೦೦); ಎರಡು ವರ್ಷಗಳಿಂದಲೂ ಬರಗಾಲವು ಬಂದು ರೈತರು ದಣಿದಿದ್ದಾರೆ (ಶ್ರೀರಾಮು. ೦೬೬). **ರೈಹಿತ್ತ₂** : ಕಿಗ್ಗಟ್ಟುಹತ್ತುನಾಡುರೈಹಿತರು ತಂಮ ಭಕ್ತಿಯಿಂದ . . . ರಾಮೇಶ್ವರದೇವರ ದೇವಸ್ಥಾನವನ್ನು ಜೀರ್ಣೋದ್ಧಾರಮಾಡಿಸಿಯಿದ್ದಾರೆ (ಎಕ. I, ೦೦೬-೨; 1840). [← ಅರ. ರಈಯತ್ ; ಹಿಂ. ರಯ್ಯತ್, ರೈಯತ್; ಮರಾ. ರಯತ್, ರಯ್ಯತ್, ರೈಯತ್ /ಇಂ. Ryot]

**ರೈತಾಪಿ** (ನಾ). ೧. ಆರಂಬ ; ಬೇಸಾಯ : ಆದವಾನಿಸೀಮೆ ರೈತರ ಹಿಡಿತಂದು ಕೊಡಗಿನ ಸೀಮೆಯಲ್ಲಿ ರೈತಾಪಿಗೆ ಇಟ್ಟು (ರಾಕೇಂದ. ೦೭). ೨. ವ್ಯವಸಾಯಗಾರ: ಹೆಚ್ಚು ತರಕಾರಿ ಬೆಳೆಯಬೇಕೆಂಬ ಪ್ರಚಾರವನ್ನು ರೈತಾಪಿ ಜನರು ಸ್ವಾಗತಿಸುವುದರಲ್ಲಿ ಸಂದೇಹವಿಲ್ಲ (ಕರಪ. ೬೭); ರೈತಾಪಿ ಜನರು . . . ಬಾಧೆಪಡುವುದನ್ನೂ ನಿಲ್ಲಿಸುವುದಕ್ಕೆ ಈ ಸಹಕಾರಸಂಘಗಳು ಸ್ಥಾಪಿತವಾದವು (ಗೃಹಪ. ೦೯೯). [ < ರೈತ]

**ರೈದ** (ನಾ). ಐಶ್ವರ್ಯವನ್ನು ಕೊಡುವವನು ; ಕುಬೇರ : ಜಯಜಯವಿಚಿತ್ರಚಾರಿತ್ರ ರೈದನ ಮಿತ್ರ ಜಯಜಯ . . . ಗುರುಸಂಗಮೇಶಾ (ಶೃಕುಪ್ರ. ೬-೦೦೦). [ಸಂ.]

**ರೈಲು,** ರೇಲು (ನಾ). ೧. ಕಂಬಿ : ಹಳಿ : 'ರೈಲುಮಾರ್ಗ' ಪರಾ. ೨. ಆವಿ ಅಥವಾ ವಿದ್ಯುತ್ತಿನ ಸಹಾಯದಿಂದ ಕಂಬಿಗಳ ಮೇಲೆ ಚಲಿಸುವ ಗಾಡಿ ; ಟ್ರೈನು : ರೈಲಿನ ಉಪಯೋಗ ಎಲ್ಲಿಯವರೆವಿಗೆ ? ನಮ್ಮ ಸ್ಟೇಷನ್ ಸಿಕ್ಕುವವರೆವಿಗೆ (ಶಿವಾತ್ಕ. ೨೬೦). ಕಳುಹಿಸಿ ಕೊಟ್ಟಳು ಪತಿಯನು ರೈಲಿಗೆ (ಕಂಪ್ರಪಿ. ೨೩-೯೭). **ರೇಲು** : ೧. ನೀವು ನಿಲ್ಮನೆ ಮುಟ್ಟುವಲ್ಲಿ ರೇಲು ಹೋಯಿತೆಂಬುದು ಖಚಿತವಾಯಿತು (ಕೆಂಪಂಟಿ. ೦೦); ಆದಪ್ಪ ಮಾಸ್ತರರು . . . ಬೆಳಗಿನ ರೇಲಿಗೆ ಇಳಿದು . . . ಊರಿನ ಕಡೆಗೆ ನಡೆದರು (ಅಕೋಳ. ೨೯೬).

**ರೈಲು ಬಿಡು** = (ಆಲಂ) ಸುಳ್ಳುಹೇಳು ; ಬುರುಡೆ ಹೊಡೆ : ಚಾರ್ಲಿ ಚಾಪ್ಲಿನ್ ರೈಲುಬಿಟ್ಟ ಮೇಲೆ ರೈಲಿನಲ್ಲಿಯೂ ಕುಳಿತುಕೊಳ್ಳಬಾರದೆಂದು ನಿರ್ಧಾರ ಮಾಡಿತು ನನ್ನೂರಿನ ಮಹನೀಯರ ಮಂಡಳಿ (ನನ್ನೂರು. ೨೯). **ರೈಲು ಹತ್ತಿಸು** = (ಆಲಂ) ಪೂಸಿಮಾಡು; ಪುಸಲಾಯಿಸು : ಈಗ ಅವರಿಗೆ ತಮ್ಮ ಕೆಲಸವಾಗಬೇಕಾಗಿದೆ, ಅದಕ್ಕೇ ಅವನನ್ನು ರೈಲು ಹತ್ತಿಸುತ್ತಾ ಇದ್ದಾರೆ (ರೂಢಿ). [ ← ಇಂ. Rail ]

**ರೈಲುಚೆಂಬು,** ರೈಲುಚೊಂಬು (ನಾ). (ಪ್ರಯಾಣದಲ್ಲಿ ತೆಗೆದುಕೊಂಡು ಹೋಗಲು ಉಪಯೋಗಿಸುವ) ನೀರು ತುಳುಕದಂತೆ ತಿರುಪಿನ ಮುಚ್ಚಳವಿರುವ ಚೆಂಬು : ಅವಳು ಕೈಯಲ್ಲಿ ಒಂದು ಸಣ್ಣ ರೈಲುಚೆಂಬು ಹಿಡಿದಿದ್ದಳು (ಕಪಿಸಂ. ೦೨೦). **ರೈಲುಚೊಂಬು** : ಎರಡು ಟ್ರಂಕ್, ಬೆಡ್ಡಿಂಗ್, ರೈಲುಚೊಂಬು ಇಷ್ಟನ್ನೇ ಸಾಗಿಸಿಬಿಟ್ಟು (ರೂಪಕಸಂ. ೨). [ ರೈಲು + ಚೆಂಬು₁ ]

**ರೈಲುಚೊಂಬು** 'ರೈಲುಚೆಂಬು' ನೋ.

**ರೈಲುಮಾರ್ಗ** (ನಾ). ರೈಲುಗಾಡಿಯು ಚಲಿಸಲು ಉಕ್ಕಿನ ಕಂಬಿಗಳಿಂದ ನಿರ್ಮಿಸಿರುವ ರಸ್ತೆ : ನಿಟ್ಟೂರು : ಬೆಂಗಳೂರು – ಪೂನ ರೈಲು

ಮಾರ್ಗದಲ್ಲಿ ಹದಿಮೂರನೆಯ ನಿಲ್ದಾಣ (ಏಟ್ಯೂಶಾಂ. ೨).

[ ರೈಲು + ಮಾರ್ಗ ]

**ರೈಲ್ವೆ,** ರೇಲುವೆ (ನಾ). ರೈಲುಮಾರ್ಗ ಮತ್ತು ಅದಕ್ಕೆ ಸಂಬಂಧಿಸಿದ ಕಾರ್ಯಭಾರವನ್ನು ನಿರ್ವಹಿಸುವ ಇಲಾಖೆ : ರೈಲ್ವೆ ಕಂಪನಿಯ ಯಾ ಸ್ಥಳೀಯಾಧಿಕಾರಿಯು ನೌಕರನಿಗೆ ಸಲ್ಲಬೇಕಾದ ಸಂಬಳ (ಗ್ರಾಮಾಳ. ೩೫). **ರೇಲುವೆ :** ಎಷ್ಟೆಯು ಸೋರಹತ್ತಲು ರೇಲುವೆಕಂಪನಿಯವರು ತಕ್ಕೊಳ್ಳುವದಿಲ್ಲ (ಮುಂಬವ್ಯಾ. ೩೯ ಪ್ರಸ್ತಾವನೆ). [ ← ಇಂ. Railway ]

**ರೈವತ** (ನಾ). ೧. ಐಶ್ವರ್ಯವಂತ ; ಧನಿಕ. ೨. ಹದಿನಾಲ್ಕು ಮನುಗಳಲ್ಲಿ ಐದನೆಯವನು : ಸ್ವಾಯಂಭುವ ರೈವತ . . . ಇಂದ್ರಸಾವರ್ಣಿಕರೆಂಬ ಹದಿನಾಲ್ಕು ಮನುಗಳು (ಶಿವೇಳ.೨೦೪). ೩. ರೇವತೀ ನದಿಯ ಹತ್ತಿರದಲ್ಲಿರುವ ಒಂದು ಬೆಟ್ಟದ ಹೆಸರು : ಶ್ರೀವೃಕ್ಷಪನಸನಿವಹಮುಮಾವಿಷ್ಕೃತಕುಸುಮವಿಸರಮೆನೆ ಶಿಖರಿವನಂ ತೀವಿರೆ ಶಿಖಂಡಮಣಿಕಿರಣಾವಳಿಯಿಂ ಕಾಣಲಾಯ್ತು ರೈವತಶೈಲಂ (ಜಗಪ. ೧೬-೦). ೪. ಮೋಡ. ೫. ಶಿವ. ೬. ಒಬ್ಬ ರಾಜನ ಹೆಸರು. [ಸಂ.]

**ರೈವೃಷ್ಟಿ** (ನಾ). ಚಿನ್ನದ ಮಳೆ ; ಸುವರ್ಣವೃಷ್ಟಿ : ಧನದಂ ಕಾಂಚನ ಪಂಚರತ್ನಮಯಮಂ ರೈವೃಷ್ಟಿಯಂ ಮಾಡುವಲ್ಲಿ (ಆದಿಪು. ೭-೨೪) ; ಹೇಮಗರ್ಭಂ ವಸುಧಾಂತರ್ಭಾಗಮಾಗಿರ್ಪಿನೆಗಮನುದಿನಂ ಕೂಡೆ ರೈವೃಷ್ಟಿಯಂ ನಿರ್ಮಿಸಿಪಂ (ವರ್ಧಮಾ. ೦೦-೩೪). [ಸಂ.]

**ರೈಸು** ' ರಯಿಸು ' ನೋ.

**ರೈಸ್ತಂಭ** (ನಾ). ಚಿನ್ನದ ಕಂಬ ; ಸುವರ್ಣಸ್ತಂಭ : ತ್ರಿಭುವನಮಂಗಲ ತೋರಣನಿಭಮಂ ಪ್ರವಚನಮನೆಯ್ದೆ ರೈಸ್ತಂಭಸಮುಪ್ರಭರಂತರ್ನಿಭೃತೋನ್ನತವಿಭವರ್ ಭೂತಬಲಿ ಪುಷ್ಪದಂತಾಚಾರ್ಯರ್ (ಶಂಧ್ರಶ. ೦-೦೫). [ಸಂ.]

**ರೈಹಿತ$_1$** (ನಾ). ಲಕ್ಷ್ಮಿಗೆ ಹಿತನಾದವನು ; ನಾರಾಯಣ : ಭೀಮರೈಹಿತ ರೌದ್ರಸ್ತುತ ರಂಗ ಸಿರಿಧಾಮ ರಕ್ಷಿಸು (ಶಕಗಾಂ. ೭೭-೯೫).

[ಸಂ.]

**ರೈಹಿತ$_2$** ' ರೈತ ' ನೋ.

**ರೊಂಕಣೆ** (ನಾ). ಲೇಪನ ; ಗಿಲೀಟು ; ಒಪ್ಪ (?) : ಮಿಙುಗುವ ಮಿಂಚಿಗಿಂದಾಳಿಯಂ ಮಿಗೆ ರೊಂಕಣೆಯಿಕ್ಕುವಂತಿರಲ್ಕಜನಪಟ್ಟ್ರಪ ನಾಡ ಕಡುಸೀಙೆಯರಂ ನಡೆನೋಡಿ ಸೋಲದಿಂ ಮೆಚ್ಚುವುದು ರಂಭೆಯೂರ್ವಶಿ ತಿಲೋತ್ತಮೆ ಮೇನಕಿ ಮಂಜುಘೋಷೆಯೆಂಬಚ್ಚರೆಯ ದೇವಸೌಂದರಿಯರಂ ಚರಿಯಿಪ್ಪ ನಿಳಿಂಪಸಂಕುಳಂ (ಸೊಸ್ತಸು. ೪-೦೨೭).

[ ?. / ಸಂ. ರೋಕ = ಬೆಳಕು, ಕಾಂತಿ]

**ರೊಂಕೆ** ' ಜೌಂಕು ' ನೋ.

**ರೊಂಡಿ** (ನಾ). ಸೊಂಟದ ಕೆಳಗಿನ ಹಿಂಬದಿಯ ಭಾಗ ; ಕುಂಡೆ ; ಪಿರ್ರೆ : " ಕಟಿ – ರೊಂಡಿಯಲ್ಲಿ " (ಬಾಹಟೀ. ೨-೦-೭೭ ಪ); ದೇಹದಲ್ಲಿ ನಡುವಿನ ಕೆಳಗೆ ಎರಡುಪಕ್ಕಗಳಲ್ಲಿಯೂ ಚಾಚಿಕೊಂಡಿರುವ ಕಿಬ್ಬೊಟ್ಟೆಯ ಭಾಗ : ಟೊಂಕ ; ರೊಂಡಿ ; ಚಪ್ಪೆ ; ಕಟಿ (Hip. ೩೦೪೩).

[ದೇ.॥ ತೆಲು. ರೊಂಡಿ]

**ರೊಂಡೆ** (ನಾ). ಕೆಸರು ; ರಾಡಿ : " ರೊಂಡೆ = ಕೆಸರು " (ಶಾಪಕೋ. ೪೦); ಜಾಜಲಂಟಿದ ಕಾಲ ರೊಂಡೆ [ಪಾಠಾಂ. ಜೊಂಡೆ, ಜೊಂಪೆ] ಯನೂಙು ಬದ್ದಂಗಯ್ಯ ಕೆಸಙಂ ತೊಳಙುತಂ (ಬಸಪು. ೧೦-೮). ' ಜೊಂಪೆ ' ಪರಾ. [ ? ]

**ರೊಂದಿಬಗ್ಗ** (ನಾ). ನಾಡಾಡಿ ಜನ ; ಅಲ್ಪಜನ (?) : ಸಂದಿಯ ರೊಂದಿ ಬಗ್ಗರ ಸಮಕ್ಷದೊಳಿದ್ದುರಿದೆದ್ದು ದುರ್ಜನಂ ನಿಂದಿಸುತಿರ್ಪನುತ್ತಮರ ಕಾವ್ಯಮನಂತುಟು ದಲ್ ನಿರಂತರಂ ಹಂದಿಗೆ ಮಿಂದ ಕೆಸಙೊಗ್ಗುವುದಲ್ಲದೆ ತಣ್ಪನೀವ ಸಚ್ಚಂದನದಣ್ಪದೊಗ್ಗುವುದೆ (ಪಳಕಂ. ೬). [ ? ]

**ರೊಂಯ್** (ನಾ). ಒಂದು ಅನುಕರಣ ಶಬ್ದ : ಗಾಳಿಪಟ ರೊಂಯ್ ಎಂದು ಶಬ್ದ ಮಾಡುತ್ತಿದೆ (ರೂಢಿ)

**ರೊಕ** ' ರೊಕ್ಕ ' ನೋ.

**ರೊಕ್ಕ.** ರೊಕ, ರೊಖ, ರೊಖ್ಖ, ರೋಕ$_2$, ರೋಖ, ರೋಖು (ನಾ). (ಉಕ) ಬಳಸಲು ಸಿದ್ಧವಾಗಿರುವ ಹಣ ; ನಗದು ; ದುಡ್ಡು : ಮೆಟ್ಟಡಿಯ ಕೊಂಡ ರೊಕ್ಕವ ಕೊಡಿ (ಸಳವ. II. ೪೭೫-೫೨); ಅಕ್ಕಿಯರುಗಳುಯೆಂಬ ಹಣನಿಗೆ ರೊಕ್ಕವನು ತೆಗೆಯೆಂಬ ಹರದನು (ಕೌಶಿರಾ. ೧೦-೨೪) : ರೊಕ್ಕ ಎರಡಕ್ಕು ದುಃಖ ಕಾಣಕ್ಕ (ಪುರಂದ. ೨-೪೮ ಪಲ್ಲವಿ); ರೊಕ್ಕವಿಲ್ಲದ ಬಾಳ್ವೆ ಮಕ್ಕಳಿಲ್ಲದ ಮನೆಯು ಅಕ್ಕಙವಿರದ ತವರೂರು ಇವು ಮೂಙು ದುಕ್ಕ ಕಾಣಯ್ಯ (ಸರ್ವಜ್ಞ. ೦೬೯೨). **ರೊಕ :** ಗದೆಯ ಮೇಲೆ ರೊಕ ಭತವನೂ (ಶಾಇಪ. ೦೯೩೪, ಶೃಂಗಪೂರು. ೦೫೬-೦೪ ; 1419) ; ಬಂದ ಬಡಿಯ ರೊಕವನು ಆಗುಮಾಡಿ (ಎಕ. XIV. ಮಳವ. ೦೦೦–೦೮; 1604). **ರೊಖ :** ರೊಖ ಹಣವು ಮುಂಗಡವಾಗಿ ಕಳುಹಿಸಿ (ಮುಂಬವ್ಯಾ. ೨೩೯). **ರೊಖ್ಖ :** ರೊಖ್ಖವಂ ಗಳಿಸುವಡೆ ದುಃಖ ಮಗುಳಾ ಧನವ ರಕ್ಷಿಸುವಡತುಳದುಃಖಂ , . . ರೊಖ್ಖಕಂ ನೃಪ ಚೋರ ಬಾಧೆಗಳು ದಿನದಿನಂ ಮಿಕ್ಕುದು (ತುರಂಗ. ೪-೭). **ರೋಕ$_2$ :** ರೋಕರಕಮಿನಿಂದ ವ್ಯವಹಾರ ಮಾಡಿದರೆ . . . ತಕ್ಕೊಳ್ಳಲಾದೀತು (ಮುಂಬವ್ಯಾ. ೦೦ ಪ್ರಸ್ತಾವನೆ). **ರೋಖ :** ಇವತ್ತು ರೋಖ ನಾಳೆ ಉದ್ದರಿ (ಶಿವೋದ. ೨೨). **ರೋಖು:** ತಂದೆ ಗಳಿಸಿದ ರೋಖು ರೂಪಾಯಿಗಳನ್ನು ಬಡ್ಡಿಗೆ ಹಚ್ಚಿದ್ದರು (ಇಹ್ಕ. ೨೯೯) ; ಎಂಭತ್ತೈದು ರೋಖು ಎಣಿಸಿಕೊಟ್ಟೆವು (ಬೆಂಗಪ. ೦೨).

**ರೊಕ್ಕ ಮಾಡು** = ಹಣವನ್ನು ಸಂಪಾದಿಸು ; ಐಶ್ವರ್ಯವನ್ನು ಗಳಿಸು : ತಂಬುಲಿಗರ್ ಹುಟ್ಟಿದ ಧಾರಣೆಯಿಂ ರೊಕ್ಕಮಾಡಿ ಕುಡುವರ್ (ಮುಂಬರಾ. XII. ೦೫-೪೯ ; 1223) ; ಈ ವಿಶ್ವನಾಥ ರೊಕ್ಕಮಾಡಿದ ರೀತಿ ನನಗೆ ಗೊತ್ತಿಲ್ಲವೆ ? (ಮೂರುದಾ. ೭೦). [←ಹಿಂ. ರೋಕ್ ; ಮರಾ. ರೋಖ್./ತಮಿ. ಮಲ. ತುಳು. ತೆಲು.ರೊಕ್ಕ]

**ರೊಕ್ಕಮುಕ್ಕ** (ನಾ). ಹಣವನ್ನು ಕಬಳಿಸುವವನು : ಗಂಟುಗಳ್ಳ : ಪ್ರತಿಭೆಯ ಫಲವನ್ನು ನಾನು ಅನುಭವಿಸುವ ಮುಂಚೆಯೇ "ರೊಕ್ಕಮುಕ್ಕ" ಗಳು ಯಾರಾದರೂ ಅನುಭವಿಸಿಯಾರೆಂದು ಹೆದರಿಕೆ (ಪಂಟಿರು. ೦೯).

[ರೊಕ್ಕ + ಮುಕ್ಕ$_1$]

**ರೊಕ್ಕಸ್ತ** (ನಾ). ಹಣವುಳ್ಳವನು ; ಸಾಹುಕಾರ : "ರೊಕ್ಕಸ್ತ = ಸಿರಿವಂತ, ಸಾವುಕಾರ" (ಜಾಪಕೋ. ೪೦). ' ದುಡ್ಡಸ್ತ ' ಪರಾ.

[ರೊಕ್ಕ + — ಸ್ತ]

**ರೊಕ್ಕಿ** (ನಾ). ಒಂದು ಬಗೆಯ ಸಸ್ಯ ; ಲಕ್ಕಿಗಿಡ : "ಸಿಂಧುಕಃ, ಸಿಂಧುವಾರಃ, ಇಂದ್ರಸುರಸಃ, ನಿರ್ಗುಂಡಿಃ, ಇಂದ್ರಾಣೀ – ಈ ೫ ರೊಕ್ಕಿ " (ನಾಜರಾ. ೦೦೮). [< ಲೊಕ್ಕಿ]

**ರೊಖ** ' ರೊಕ್ಕ ' ನೋ.

**ರೊಖ್ಖ** 'ರೊಕ್ಕ' ನೋ.

**ರೊಚ್ಚು** ' ಉಚ್ಚೆ ' ನೋ.

**ರೊಚ್ಚುಗುಂಡಿ,** ರೊಚ್ಚೆಗುಂಡಿ (ನಾ). ಕೊಳಕು ನೀರು ನಿಲ್ಲುವ ಸ್ಥಳ : "ಬಚ್ಚಲು, ಚರಂಡಿ, ಪಾಯಖಾನೆ, ಮೊ. ಗಳಿಂದ ಬಂದ ರೊಚ್ಚಿನ ನೀರಿನಲ್ಲಿಯ ಘನಪದಾರ್ಥಗಳನ್ನು ತಡೆದಿಟ್ಟುಕೊಳ್ಳುವುದಕ್ಕಾಗಿ ಮಾಡಿದ ತೊಟ್ಟಿ : ರೊಚ್ಚುಗುಂಡಿ" (Cesspool. ೩೦೪೩). **ರೊಚ್ಚೆಗುಂಡಿ :** ರೊಚ್ಚೆಗುಂಡಿಯಲ್ಲಿ ನೀರು ನಿಂತು ನಾರುತ್ತಿದೆ (ರೂಢಿ).

[ರೊಚ್ಚು (<ಉಚ್ಚೆ) + ಗುಂಡಿ$_2$]

**ರೊಚ್ಚುಗೊಳ್ಳು** (ಕ್ರಿ). ಕೋಪಗೊಳ್ಳು ; ಸಿಟ್ಟಿಗೇಳು ; ರೇಗು : ಕಾರ್ಯಕ್ರಮಗಳ ಬಗೆಗೆ ಸ್ವಲ್ಪ ಭಿನ್ನಾಭಿಪ್ರಾಯವನ್ನು ಸೂಚಿಸಿದೊಡನೆ

ರೊಚ್ಚುಗೊಳ್ಳುವ . . . ಜನರು ಎಲ್ಲೆಲ್ಲೂ ತುಂಬಿದ್ದು (ಹುಕ್ಷತ್ರ. ೦೬).
[ರೊಚ್ಚು (<ಉಚ್ಚೆ) + ಕೊಳ್ಳು₁ (<ಕೊಳ್₁)]

**ರೊಚ್ಚಿ** 'ಉಚ್ಚೆ' ನೋ.

**ರೊಚ್ಚಿಗುಂಡಿ** 'ರೊಚ್ಚುಗುಂಡಿ' ನೋ.

**ರೊಚ್ಚಿಬ್ಬಿಸು** (ಕ್ರಿ). ಸಿಟ್ಟಿಗೇಳಿಸು ; ರೇಗಿಸು : ಜಗಳವ ತೆಗೆದು ರೊಚ್ಚಿಬ್ಬಿಸುವಿವಳೇನು ನಾರಿಯೊ ಮಾರಿಯೊ (ಚಂದ್ರಶೀ. ೦೮-೭೨).
[ರೊಚ್ಚು(<ಉಚ್ಚೆ) + ಎಬ್ಬಿಸು(<ಎಟ್ಬಿಸು)]

**ರೊಚ್ಚೇಳು** (ಕ್ರಿ). ಸಿಟ್ಟಿಗೇಳು ; ರೇಗು : ಹೆಂಡತಿ ಬರುತ್ತಲೇ, ಹೆತ್ತು ಸಾಕಿ ಸಲಹಿದ ತಾಯಿ ಇವನಿಗೆ ದೂರವಾದಳಲ್ಲ ಎಂದು ಅವಳ ಮನಸ್ಸು ರೊಚ್ಚೆದ್ದಿತ್ತು (ಹೊಸಕ್ಷಿ. ೨೦) ; ಹಟತೊಟ್ಟು ಕಚ್ಚಿ ಕೆಡಹುವೆನು ಕುಣಿತದೊಳು ಚೌಡನಿಗೆ ರೊಚ್ಚೆದ್ದು ಸಿಂಹ ಜಿಗಿದಂತೆ (ಕನ್ನಜಾ. ೨೯೦).
[ರೊಚ್ಚು (<ಉಚ್ಚೆ) + ಏಳು₁ (< ಏಟು₁)]

**ರೊಜ್ಜು** 'ಉಚ್ಚೆ' ನೋ.

**ರೊಟ್ಟಿ**, ರೋಟು₁(ನಾ). ೧. ರಾಗಿ, ಅಕ್ಕಿ, ಜೋಳ ಮೊದಲಾದುವುಗಳ ಹಿಟ್ಟು, ಉಪ್ಪು, ಕಾರ ಮುಂತಾದುವನ್ನು ನೀರಿನಲ್ಲಿ ಕಲಸಿ, ತಟ್ಟಿ, ಹಂಚಿನ ಮೇಲೆ ಬೇಯಿಸಿ ಮಾಡುವ ಒಂದು ಬಗೆಯ ತಿಂಡಿ : ರೊಟ್ಟಿಯುಂ ಮೆಲ್ವವನೊರ್ವನುಂಬುತತಿಯುಂ ಬಿಡದೀಂಟುವನೊರ್ವನುಂಟೆ (ಉದ್ಭಟ. ೦೧-೭೧) ; ದೋಸೆ ಕಜ್ಜಾಯ ರೊಟ್ಟಿ ಹೊಯಿಗಡುಬತಿರಸಂಗಳ್ (ಶಿಂಶು. ೯೭-೯೨) ; ಶಿವು . . . ರಾಗಿಯ ರೊಟ್ಟಿಯನ್ನು ತಿಂದುಕೊಂಡು ಒಂದುವಾರ ಇರಬಲ್ಲ (ರಾಮಾನ. ೦೦೫) ; ರೊಟ್ಟಿ ತೊಳೆದು ನೀರು ಕುಡಿದ ಹಾಗೆ (ಗಾದೆ). ೨. "ಅಕ್ಕೀಹಿಟ್ಟಿನೊಳಗೆ ಬೆಲ್ಲವನ್ನೂ ತುಪ್ಪವನ್ನೂ ಹಾಕಿ ಮಾಡಿದ ರೊಟ್ಟಿ, ಕಜ್ಜಾಯ" (ಗಂಗಾಮು. ೬.). ೩. ಬ್ರೆಡ್ಡು : ಬೇಕರಿಯಿಂದ ರೊಟ್ಟಿ ತಂದರು (ರೂಢಿ). **ರೋಟು₁** : ೩. ಮೂವ್ವರೂ ಕೂಡಿ ಚಹಾ ಮತ್ತು ರೋಟು ತೆಗೆದುಕೊಂಡೆವು (ಬಿರುಗಾ. ೦೨); ಆ ಜಾಗಿರ ವಾರ ಏಳೋದರಾಗ ರೋಟು ತರಿಸಿ ಇಡಬೇಕಂತೆ (ಭಾಗ್ಯಶ್ರೀ. ೯೧).
[ದೇ.॥ ತಮಿ. ಮಲ. ತುಳು. ಕೊಡ.ರೊಟ್ಟಿ: ತೆಲು. ರೊಟ್ಟೆ, ರೊಟ್ಟಿಯ./ಹಿಂ. ರೋಟೀ, ರೋಟಾ: ಮರಾ. ಗುಜ ರೋಟ್, ರೋಟಾ./ಪ್ರಾ. ರುಟ್ಟಿಯಾ, ರೋಟ್ಟ./ಸಂ. ರೋಟಿ, ರೋಟಿಕಾ]

**ರೊಟ್ಟೀಹಲಸು** (ನಾ). ಹಿಟ್ಟಿನಂತೆ ಮೃದುವಾದ ತಿರುಳುಳ್ಳ ಒಂದು ಬಗೆಯ ಹಲಸು : ದ್ವೀಪದ ಹಲಸು : ಸೀಮೆಹಲಸು, ದೀವಿಹಲಸು, ರೊಟ್ಟೀಹಲಸು (ವೃಕ್ಷಶಿ. ೬೦೭೦). [ರೊಟ್ಟಿ + ಹಲಸು (< ಪಲಸು)]

**ರೊಡ್ಡ**, ಲೊಡ್ಡ (ನಾ). ೧. ಎಡಗಡೆ ; ವಾಮಭಾಗ : 'ರೊಡ್ಡ ಕೆಯ್' ಪರಾ. ೨. ಎಡಗೈಯನ್ನೇ ಉಪಯೋಗಿಸಿ ಕೆಲಸ ಮಾಡುವವನು ; ಎಡಚ : "ರೊಡ್ಡ–ಎಡಪ" (ಜಾಪಕೋ. ೯೦). **ಲೊಡ್ಡ** : ೨. ಅವನೊಬ್ಬ ಲೊಡ್ಡ (ರೂಢಿ). [←ತೆಲು. ರೊಡ್ಡ, ಲೊಡ್ಡ]

**ರೊಡ್ಡಕೆಯ್**, ರೊಡ್ಡಗೈ (ನಾ). ಎಡಗೈ ; ವಾಮಹಸ್ತ : (೬). **ರೊಡ್ಡಗೈ** : ಎಡಗೈಯನ್ನೇ ಹೆಚ್ಚಾಗಿ ಉಪಯೋಗಿಸುವ ; ಎಡಚು; ರೊಡ್ಡಗೈಯ (Left handed. ಇಂಕನಿ). [ರೊಡ್ಡ + ಕೆಯ್₂]

**ರೊಡ್ಡಗೈ** 'ರೊಡ್ಡಕೆಯ್' ನೋ.

**ರೊಡ್ಡಿ** (ನಾ). ಒಂದು ಬಗೆಯ ಔಷಧೀಸಸ್ಯ ; ಕಾಕೋಲಿ : ರೊಡ್ಡಿ, ಹಾಲುರೊಡ್ಡಿ, ಮಂಜಿಷ್ಠೆ . . . ಚೂರ್ಣಿಸಿ (ವೈದ್ಯಸಾ I, ೪೦೫) ; ಸಿಪಿ ಹಾಲೆ, ರೊಡ್ಡಿ, ಹಾಲರೊಡ್ಡಿ . . . ಕಾಯಿಸಿ ಪಾಕದಲ್ಲಿಳಿಹಿ ಶರೀರಕ್ಕೆ ಲೇಪಿಸೆ ಪಿತ್ತಜ್ವರ, ಉನ್ಮಾದ, ಮೂರ್ಛೆ ಸಹ ಮಾಣುವುವು (ಸಕವೈ. ೯೫)
[←ಮರಾ. ರೋಡಾ]

**ರೊಣವೊಡೆಯ** (ನಾ). ಒಬ್ಬಾತನ ಹೆಸರು : ಏಚಿಸಾಳ್ಳೆಜಿದು ಬಿಟ್ಟಾರ್ ಕ[ನ್ನ]ರಸರುಟ್ ಇದರ್ಕೆ ಬಿವಾನಿಕಳಸಿ ವಾಳ್ಗಟ್ಟು ಕೊಟ್ಟೊದು ರೊಣವೊಡೆಯೊಗೆ ಕೊಟ್ಟರ್ (ಎಕ. XVI, ಕುಮುಕೂ. ೬೭-೭: 750). [ ? ]

**ರೊಣೆ** (ನಾ). ಒರಟಾದ ಮೈಗೂದಲು ; ರೋಮ : ಕೊಬ್ಬು ಕರಗಿ ಒಣಗ ಹತ್ತಿದ ಕಪ್ಪುರೊಣೆ ತುಂಬಿದ ಕೈರಟ್ಟೆಗಳು (ಮೂರುದಾ. ೦೭೯) ; ಮೋರೆಗೆ ಇಷ್ಟುದ್ದ ಕಪ್ಪು ಪೊತ್ತ–ಮೀಸೆಗಳು; ಕಪ್ಪು ಎದೆಯ ಮೇಲೆ ಕಪ್ಪು ರೊಣೆ (ಹೊಸಕ್ಷಿ. ೦೭೦). [ ? ]

**ರೊಪ್ಪ** 'ಒಪ್ಪ' ನೋ.

**ರೊಯ್** (ನಾ). ೧. ಒಂದು ಅನುಕರಣ ಶಬ್ದ : 'ರೊಯ್ಯನೆ' ಪರಾ. ೨. ಎಮ್ಮೆಯ ಕೂಗು : (೬).

**ರೊಯಿಲಿ** (ನಾ). "ಶತ್ರುಗಳ ಹಡಗನ್ನು ಹಿಡಿದೆಳೆದುಕೊಳ್ಳುವುದಕ್ಕಾಗಿ ಹಗ್ಗ ಕಟ್ಟಿ ಎಸೆಯುವ ಕಬ್ಬಿಣದ ಕೊಂಡಿಗಳುಳ್ಳ ಸಲಕರಣೆ, ಅನೇಕ ಕೊಂಡಿಗಳುಳ್ಳ ಸಣ್ಣಲಂಗರು, ಪಾತಾಳಗರಡಿ" (ಅಪಂನಾ).
[←ಮರಾ. ರೋಯಲೀ, ಲೋಯಲೀ]

**ರೊಯ್ಯನೆ** (ಅ). ಒಂದು ಅನುಕರಣಾವ್ಯಯ : ಗಾಳಿ ರೊಯ್ಯನೆ ಬೀಸುತ್ತಿದೆ (ರೂಢಿ). [ರೊಯ್ + –ಅನೆ₁]

**ರೊಷ್ಟು** (ನಾ). ೧. ಕಾಟ ; ಹಿಂಸೆ : ಆದರೂ ಹಸುವ ಕಟ್ಟುವುದೆ ಸರಿ ; ಇನ್ನೆಷ್ಟು ಹೇಳಿದರು ಎಮ್ಮೆಯೇ ರೊಷ್ಟು (ಸುಶೀಕ. ೩೩-೯); ಅರಮನೆಗೆ ಬಿಟ್ಟಿಮಡಕೆಗಳು ಬೇಕೆಂದು ತಗಾದಿ ಹಚ್ಚಿ ಬಹಳವಾಗಿ ರೊಷ್ಟುಮಾಡಿ ತೊಂದರೆಪಡಿಸಿದನು (ಕಥಾಮಂ. IV, ೩೦). ೨. "ಕೊಳೆ" (ಅಪಂನಾ).
[ದೇ.॥ ತಮಿ. ರೊಷ್ಟು; ತೆಲು. ರೊಷ್ಟು, ರೊಸ್ಟು]

**ರೊಳ್ಳಿ** (ನಾ). (ಉಕ) ನೆಪ; ಕಾರಣ; ಸೋಗು : ಭಟ್ಟರು ರೊಳ್ಳೀ ತೆಗೆದರು (ದಾಸಹು. ೬೭); ಏ ರಂಗ್ಯಾ, ನೀ ಏನಾರ ರೊಳ್ಳೀ ತಗೀಬ್ಯಾಡ (ಆಮೂ. ೯೯). [?./ತೆಲು. ರೊಲ್ಲು=ಪ್ರಲಾಪಿಸು]

**ರೋಂಕಿಸು** (ಕ್ರಿ). ಗರ್ಜನೆ ಮಾಡು ; ಆರ್ಭಟಿಸು : ಭಾನುಸುತ ಬಿಲ್ಗೊಂಡು ಸಮರಕಿನ್ನಾರೆನುತ ಪರಿದಾಡಿ ರೋಂಕಿಸುತ ಭಂಗವುಂ ಬರಿಸಿದನು ರಿಪುಬಲದೊಳು (ಕುರಂಗ. ೬೩-೧).
[ರೋಂಕು (< ಔಂಕು) + –ಇಸು₃]

**ರೋಂಕು** 'ಔಂಕು' ನೋ.

**ರೋಕ₁** (ನಾ). ೧. ತೂತು ; ರಂಧ್ರ : "ನಿಮ್ನಂ . . . ರಂಧ್ರಃ, ರೋಕಃ, ಕುಹರಃ, ದರಃ – ಈ ೧೫ ಕುಟಃ" (ಹಲಾಯು. ೦೦೩-೨) ; ಕುಹರಕರುವೆಯನಿಡುಕಿ ಛಿದ್ರಮಂ ಮುಚ್ಚಲಿಕ್ಕಳಸಲಾ ರೋಕಮನ್ನುಂ ಪೆರ್ಚೆ (ಶ್ರೀರಾಮಾ. ೭೭-೩೦೭). ೨. ಜಹಜು : ಹಡಗು. ೩. ಕಾಂತಿ ; ಪ್ರಕಾಶ. [ಸಂ.]

**ರೋಕ₂** 'ರೊಕ್ಕ' ನೋ.

**ರೋಕಡ**, ರೋಕಡಿ, ರೋಖಡಿ (ನಾ). ನಗದು ಹಣ : ರೊಕ್ಕ : ರೈಲುಪಾದಿ ಕಟ್ಟುವ ಮಜೂರರಿಗೆ ರೋಕಡ ಸಂಬಳ ದೊರೆಯಲು ಬಹಳ ಕಾಲ ಹಿಡಿಯಿತು (ಬಿಕಸಂ. ೨೦). **ರೋಕಡಿ** : ರೋಕಡಿಯ ಕೆಲಸ ಅಂದರೆ ಹಣ ಕೊಡುವುದು, ತಕ್ಕೊಂಬುವುದು (ಮುಂಬಾ. ೨೭೯). **ರೋಖಡಿ** : ರೋಖಡಿ ಮತ್ತು ಕರೆನ್ಸಿನೋಟುಗಳೂ ಇಲ್ಲವಂತಾಗಿದ್ದು ಉಳಿದ ಜಿನಸುಗಳೆಲ್ಲ ಇಟ್ಟಂತೆಯೇ ಇದ್ದವು (ಮೋಚಿ:ವ. ೦೩೦).
[ ← ಹಿಂ. ಮರಾ. ರೋಕಡ್]

**ರೋಕಡಿ** 'ರೋಕಡ' ನೋ.

**ರೋಕು** (ನಾ). ರೋಷ ; ಕ್ರೋಧ : ಭೂವರನ ಬೀಳ್ಕೊಂಡು ರೋಕಿನಿಂ ಮತಿ ಮಸಗಿ ಜೀವಾಳಮುಟ್ಟೈಪ್ಪರೊಡಗೊಂಡು (ಶರಕು. ೨೩-೨೦) ; ಆಕಾಶಕೇಶನುಂ . . . ರೋಕಿನಿಂದಾ ನಿಶಾಟನ ಕೊಲ್ಲಲುರಿಗಣ್ಣ ಛೀಕರದ ತೆರೆದನಹುದು (ವಂಕಾರಾ. ೩-೦೩-೦೭).
[← ಹಿಂ. ಮರಾ. ರೋಖ್./ಸಂ. ರೋಷ]

**ರೋಖ** ' ರೊಕ್ಕ ' ನೋ.

**ರೋಖಡಿ** ' ರೋಕಡ ' ನೋ.

**ರೋಖು** ' ರೊಕ್ಕ ' ನೋ.

**ರೋಗ** (ನಾ). ಆರೋಗ್ಯವಿಲ್ಲದಿರುವಿಕೆ ; ಖಾಯಿಲೆ ; ವ್ಯಾಧಿ : "ರೋಗಃ . . . ರುಜಾ – ಈ ೧೨ ವ್ಯಾಧಿ" (ಹಲಾಯು. ೯೦-೯೯೬) ; ದೇಹವನಲೆದುದಲ್ಲಿ ರೋಗದ ಕೀಳಿ ರೋಗದಿಂ ಪತ್ತೆಂಟು ದಿವಸಕಸುವೊಙಿ ಯಾಗಿ (ಬಸರ. ೩-೦೯೯) ; ರಾಗವೇ ಮೂಡಲು ಯೋಗವೇ ಬಡಗಲು ರೋಗವದು ಶುದ್ಧ ಪಡುವಲು ತೆಂಕಲು ಭೋಗದ ಬೀಡು (ಸರ್ವಜ್ಞ. ೦೬೦೩) ; ಉಗುಳಿ ಉಗುಳಿ ರೋಗ, ಬೊಗಳಿ ಬೊಗಳಿ ರಾಗ (ಗಾದೆ). [ಸಂ.]

**ರೋಗಂದ, ರೋಗಂಧ** (ನಾ). ಒಂದು ಬಗೆಯ ಅಂಟುದ್ರವ್ಯ : ಧೂಪದ ಮರ – ಬಹು ಸುಂದರವಾದ ಉನ್ನತವೃಕ್ಷವು . . . ಅಂಟಿನಿಂದ ರೋಗಂದವಾಗುತ್ತದೆ (ಕಶಾಗ. ೬೨) ; ಕಪ್ಪುರವು ಬಹಳ ದೊಡ್ಡ ಔಷಧಿಯಿದೆ. ಅದರಿಂದ ಒಂದು ತರದ ಮೇಲಾದ ರೋಗಂದವೂ ಆಗುತ್ತದೆ (ಮುಂಬಯಿ. ೪-೭೨). **ರೋಗಂಧ :** ಕಟ್ಟಿಗೆಗಳು ಹುಳ ಹತ್ತಿ ಕೆಡದ ಹಾಗೆ ಅವುಗಳಿಗೆ ಎಣ್ಣೆರೂಳ ಹುರಮಂಜನ್ನು ಕುದಿಸಿ ಹಚ್ಚಬೇಕು ಅಥವಾ ಡಾಂಬರವನ್ನಾಗಲಿ ರೋಗಂಧವನ್ನಾಗಲಿ ಹಚ್ಚಿದರೂ ಬರುತ್ತದೆ (ಕೃಷಿಶ್ರ. ೦೦೨). [← ಪಾರ: ರೌಗನ್, ರೌಘನ್; ಹಿಂ. ರೋಗನ್, ರೌಗನ್; ಮರಾ. ರೋಗಣ್]

**ರೋಗಂಧ** ' ರೋಗಂದ ' ನೋ.

**ರೋಗಗ್ರಾಹಿ** (ನಾ). ರೋಗಗ್ರಸ್ತನಾದವನು ; ವ್ಯಾಧಿಪೀಡಿತ : ರೋಗಗ್ರಾಹಿಗಳಿಗೆ ಮಾತ್ರ ಈ ಇಂಜಕ್ಷನ್‌ಗಳನ್ನು ಕೊಡಬೇಕು (ಕಂಠೀರ. ೨೬). [ಸಂ. ರೋಗಗ್ರಾಹಿನ್]

**ರೋಗಜೀವ** (ನಾ). ವ್ಯಾಧಿಗ್ರಸ್ತ ; ರೋಗಿ : ವೈದ್ಯ ಬಂದ ನೋಡಿ . . . ಧರ್ಮವೈದ್ಯನಿವ ಜಗಕೆಲ್ಲ ಒಬ್ಬನೆ ಮರ್ಮ ಬಲ್ಲ ರೋಗಜೀವಂಗಳ (ಶರಂತ. ದಾ. ೩-೦೯೨-೪). [ಸಂ.]

**ರೋಗಜ್ವರ** (ನಾ). ಒಂದು ಬಗೆಯ ಜ್ವರ : ಕಲ್ಯಾಣಘೃತ . . . ಸಂಬೆಕಾಯಿತೋರ ಒಂದು ಮಂಡಲ ಕೊಳ್ಳಲು ರೋಗಜ್ವರ, ಕಾಸರೋಗ . . . ಪರಿಹರವಹುದು (ಸಶಪ್ರ. ೦೩೯). [ಸಂ.]

**ರೋಗತಂಡುಲ** (ನಾ). ಒಂದು ಬಗೆಯ ಸಸ್ಯ; " ವಾಯುವಿಳಂಗ" (ಅಪನಾ). [ಸಂ.]

**ರೋಗನಿದಾನ** (ನಾ). ವ್ಯಾಧಿಯ ಲಕ್ಷಣಗಳಿಂದ ರೋಗವು ಇಂತಹುದೇ ಎಂದು ಕಂಡು ಹಿಡಿಯುವುದು : ವೀರರಾಜನು . . . ರೋಗನಿದಾನ ದಲ್ಲಿಯಾಗಲಿ ಚಿಕಿತ್ಸಾಕ್ರಮದಲ್ಲಿಯಾಗಲಿ ಇರುವ ಭಿನ್ನಾಭಿಪ್ರಾಯಗಳನ್ನು ಸೂಚಿಸಿದ್ದಾನೆ (ಸಕವ್ಯ. IX, ಪ್ರಸ್ತಾವನ) ; ರೋಗಕ್ಕೆ ಸರಿಯಾದ ರೋಗ ನಿದಾನ ಹುಡುಕಬೇಕು (ಹೊಸಕ್ಷ. ೨೯೩). [ಸಂ.]

**ರೋಗರಾಜ** (ನಾ). ರೋಗಗಳಲ್ಲಿ ಬಹು ದೊಡ್ಡ ರೋಗ ; ಕ್ಷಯ; ರಾಜಯಕ್ಷ್ಮ. [ಸಂ.]

**ರೋಗರುಜಿನ** (ನಾ). ರೋಗ ಮತ್ತು ಖಾಯಿಲೆ ; ಖಾಯಿಲೆಕಸಾಲೆ : ಎಲ್ಲ ಜಗವ ನುಂಗಿ ದಕ್ಕಿಸಿಕೊಂಡವಗೆ ಸಲ್ಲದು ರೋಗರುಜಿನವು (ಅಕ್ಕೀಹೋ. ೩೬); ಪ್ರಾಣಿಗಳ ರೋಗರುಜಿನಗಳನ್ನು ಗುಣಮಾಡಲು ಆಸ್ಪತ್ರೆಯನ್ನು ತೆರೆಯಲಾಗಿದ್ದಿತು (ಕತ್ಯಪ್ರಾ. ೩೦೯). [ರೋಗ + ರುಜಿನ]

**ರೋಗಹಾರಿ** (ಗು). ೧. ರೋಗವನ್ನು ನಿವಾರಿಸುವ; ಕಾಯಿಲೆಯನ್ನು ವಾಸಿಮಾಡುವ. (ನಾ). ೨. ರೋಗವನ್ನು ನಿವಾರಿಸುವವನು; ವೈದ್ಯ; ಡಾಕ್ಟರು : "ರೋಗಹಾರೀ . . . ವೈದ್ಯಃ, ಚಿಕಿತ್ಸಕಃ– ೫ ವೈದ್ಯನ ಹೆಸರುಗಳು" (ಸಿದ್ಧಾಂತಿ. ೦೬೪). [ಸಂ. ರೋಗಹಾರಿನ್]

**ರೋಗಾಣು** (ನಾ). ರೋಗಕ್ಕೆ ಕಾರಣವಾದ ಸೂಕ್ಷ್ಮಜೀವಿ : ಮಾನವನಿಗೆ ಬರಬಹುದಾದ ಕಾಯಿಲೆಗಳಲ್ಲಿ ಹೆಚ್ಚು ಕಾಯಿಲೆಗಳು ರೋಗಾಣುಗಳಿಂದ ಬರುತ್ತವೆ (ಕಂಠೀರ. VI, ಏಸ್ಸಿಫ); ಆಮಶಂಕೆ, ಕ್ಷಯ ಮೊದಲಾದ ರೋಗಗಳು ರೋಗಾಣುಗಳಿಂದ ಕೂಡಿದ ಆಹಾರ ಮತ್ತು ನೀರಿನ ಮೂಲಕ ಹರಡುವ ಸಂಭವವಿದೆ (ಆರುಶಾ. ೬೪). [ಸಂ.]

**ರೋಗಿ** (ನಾ). ಕಾಯಿಲೆಯಿಂದ ನರಳುತ್ತಿರುವವನು; ವ್ಯಾಧಿಗ್ರಸ್ತ: ಸಲೆ ನಮೆವ ರೋಗಿ ಬೇಗಂ ತಲೆಯೆತ್ತಲ್ಕಾಡಿ ನವೆವನನ್ಯರ ಮತದೊಳ್ (ಸಮಶ. ೩-೬೪); ಮುಕ್ಕುಳಿಸಿಸಿದಂ ರೋಗಿಯಿಂ ಬೆಜ್ಜಂ (ಶಬ್ದಾ.ಮ. ೩೪೦ ವ್ಯಾಖ್ಯಾ); ರೋಗಿ ಬಯಸಿದ್ದೂ ಹಾಲು ಅನ್ನ, ವೈದ್ಯ ಹೇಳಿದ್ದೂ ಹಾಲು ಅನ್ನ (ಗಾದೆ). [ಸಂ. ರೋಗಿನ್]

**ರೋಗಿತ** (ಗು). ೧. ರೋಗದಿಂದ ನರಳುತ್ತಿರುವ ; ಕಾಯಿಲೆಯ. ೨. (ನಾಯಿಯಂತೆ) ಹುಚ್ಚಾದ. [ಸಂ.]

**ರೋಗಿಷ್ಠ** (ನಾ). = ರೋಗಜೀವ : ರೋಗಿಷ್ಠನೂ ದಯಾಮಯಿಯೂ ಆದ ಅವರ ವಯಸ್ಸಿನ ಇನ್‌ಸ್ಪೆಕ್ಟರ್‌ನ ಸ್ಥಿತಿ ಅವೆಲ್ಲಕ್ಕಿಂತ ಭಯಾನಕ ವಾಗಿತ್ತು (ಕುಸರು. ೨೪೪).

**ರೋಗಿಷ್ಠವಾಗು** = ರೋಗಗ್ರಸ್ತವಾಗು : ಈ ತಾಪವು ಸಾಹಿತ್ಯಕ್ಕೆ ತಪಸ್ಸಿನಂತೆ ಫಲದಾಯಕವಾಗಿ ಪರಿಣಮಿಸಲು ಬಾರದಿದ್ದರೆ ಸಾಹಿತ್ಯವು ರೋಗಿಷ್ಠವಾಗುವುದು (ಕ್ರಹಿಂಧ. ೪೯). [ಸಂ.]

**ರೋಗುಟ್ಟು** (ಕ್ರಿ). 'ರೋ' ಎಂದು ಧ್ವನಿಮಾಡು: ನಿನ್ನನ್ನು ಎಷ್ಟೆಷ್ಟು ಸೇವಿಸಬೇಕೆಂದು ಆಶೆ ಇಟ್ಟುಕೊಂಡಿದ್ದೆ . . . ಎಂದು ರೋಗುಟ್ಟಿ ಅಳಹತ್ತಿದನು (ಜಮುಂತ. ೨೯೦) [ರೋ ? + ಕುಟ್ಟು₁]

**ರೋಚಕ** (ಗು). ೧. ತೇಜಸ್ಸುಳ್ಳ ; ಪ್ರಕಾಶಮಾನವಾದ. ೨. ಹಸಿವನ್ನುಂಟುಮಾಡುವ. ೩. ಹಿತಕರವಾದ ; ಸುಖಕರವಾದ: ರೋಚಕ ಅರೋಚಕವೆಂಬನ್ನಕ್ಕ ಪ್ರಸಾದಿಸ್ಥಲವಿಲ್ಲ (ಪೋ೯ವಚ. ೦೩೬-೫೨೩). ೪. ಜೀರ್ಣಕಾರಿಯಾದ ; ಪಚನಕಾರಿಯಾದ. ೫. ಪ್ರಿಯಕರವಾದ : ಖೇಚರರ ವರ್ತನಾಚಾರದೊಳ್ವರ್ತಿಸುವ ಶೌಚವಿರ್ಧ[ದ]ರೆನಿಪ ರೋಚಕ ಸಾಧುಜನರುಂಟು (ಏಕೋಕೃ. ೩-೩೦). (ನಾ). ೬. ಹಸಿವು ; ಕುಳ್ಪಿರ್ದನು . . . ನಿಖಿಳೇಂದ್ರಿಯದ ರೋಚಕ ಬಗಿಯಿ ಬೇಸಟಿನ ಬಿಸುಗುಂದಿಯ ಸುಯ್ಲಿನಲಿ (ಕುಪ್ರಾಶಿ. ೨೨-೦೩). [ಸಂ.]

**ರೋಚಕದ್ರವ್ಯ** (ನಾ). ರುಚಿಕರವಾದ ಪದಾರ್ಥ ; ಸವಿಯಾದ ವಸ್ತು : ಅಜ್ಜಿಯ ಸ್ವಹಸ್ತರಚಿತವಾದ ಉಪ್ಪಿನಕಾಯಿ, ಅಪ್ಪು ಸತ್ವ ಮೊದಲಾದ ರೋಚಕದ್ರವ್ಯಗಳನ್ನೆಲ್ಲ ಶೈಲೇಂದ್ರನು . . . ಕದ್ದು ತಿಂದು ತೀರಿಸಿಯೇ ಬಿಟ್ಟಿದ್ದಾನೆ (ಇಶ್ವಕ. ೨೯೩). [ಸಂ.]

**ರೋಚಕಿ** (ನಾ). ಆಸಕ್ತಿಯುಳ್ಳವನು ; ಇಷ್ಟವಿರುವವನು : ಅರೋಚಕಿಯ ಬಾಳಿನಲ್ಲಿ ? ರೋಚಕಿಯಿರಲಾವ ಪುಣ್ಯ ? (ತಂತನ. ೩೬-೦೭). [ಸಂ. ರೋಚಕಿನ್]

**ರೋಚನ** (ಗು). ೧. ಹೊಳೆಯುವ ; ಪ್ರಕಾಶಿಸುವ. ೨. ಸುಂದರವಾದ; ಚೆಲುವಾದ. ೩. ಹಸಿವನ್ನುಂಟುಮಾಡುವ ; ಜೀರ್ಣಕಾರಿಯಾದ. (ನಾ). ೪. ಜೀರ್ಣಕಾರಿಯಾದ ವಸ್ತು, ಪದಾರ್ಥ. ೫. ಒಂದು ಬಗೆಯ ಮರ ; ಕೆಂಪು ಬೂರುಗ ; ಶಾಲ್ಮಲಿ : " ರೋಚನಃ, ಕೂಟ ಶಾಲ್ಮಲೀ – ೨ ಕೆಚ್ಚನೆ ಎಲವದ ಪೆಸರು, ಬೆಟ್ಟಬೂರುಗ, ಕೆಂಪುಬೂರುಗ " (ಸಿದ್ಧಾಂತಿ. ೧೨೩). ೬. ಹಳದಿ ಬಣ್ಣದ ಒಂದು ಬಗೆಯ ಸುಗಂಧ ದ್ರವ್ಯ ; ಗೋರೋಚನ : ಅತಿಂಪಳರೋಚನಾರಚಿತತಿಳಕಮದು ನೊಸಲ ಕಣ್ಪೊಲೆಸೆದಿರೆ (ಕಾದಂಪೂ. ೪೦); ಸರೋರುಹತಂತು ರೋಚನಂ . . . ಪೂರ್ಣಕುಂಭಮೆಸೆದತ್ತು ವಿವಾಹಗೃಹಾಂತರಾಳದೊಳ್ (ರಾಜಶೇ. ೬-೦೦). [ಸಂ.]

**ರೋಚನಿ** (ನಾ). ಒಂದು ಬಗೆಯ ಸಸ್ಯ ಮತ್ತು ಅದರಿಂದ ತಯಾರಿಸಿದ ಔಷಧ : "ಕಾಂಪಿಲ್ಯಃ . . . ರೋಚನೀ – ಈ ಕಂಪಿಲ್ಲದ ಹೆಸರು, ರೋಚನೀಯೆಂಬುವ ಔಷಧಿ" (ಸಿದ್ಧಾಂತಿ. ೦೯೩). [ಸಂ. ರೋಚನೀ]

**ರೋಚಮಾನ** (ನಾ). ಕುದುರೆಯ ಕತ್ತಿನಲ್ಲಿರುವ ಸುಳಿ : "ಉರದಿಂದ ಮೇಲಿಪ್ಪ ಸುಟಿ ರೋ[ಪಾಠಾಂ. ಲೋ]ಚಮಾನ ನಡುಗೊರಲ ಸುಟಿ ದೇವಮಣಿ" (ಪಂಗರಾ. ೯೩–೨೦); ಕೊರಲೊಳ್ ಕಣ್ಗೆಸೆದೊಪ್ಪೆ ದೇವಮಣಿ ಮೇಣ್ ರೋಚಮಾನಂ ಪೊದಟ್ಟಿರೆ ಪೂರ್ವಾಂಗದ ದೋಷಮಂ . . . ಪಿಂಗುಗುಂ (ಲೋಕೋಪ. ೦೦–೯೪). [ಸಂ.]

**ರೋಚಿ** (ನಾ). ೧. ಬೆಳಕು ; ಕಾಂತಿ. ೨. ಕಿರಣ ; ರಶ್ಮಿ : "ರೋಚಿಃ . . . ವಿರೋಕಃ, ಗೌಃ – ಈ ೩೨ ರಶ್ಮಿಗಳ ಪೆಸರ್" (ಶಬ್ದಮ. ೭–೩೬); ಚಂಚಲ್ಲಸಚ್ಚಂದ್ರರೋಚಿರ್ಘಾವಳಿ ಮಾಡಿತ್ತು ತನ್ಮಂದರಮಹಿಧರಮುಕ್ಷೀರಧಾರಾಪ್ರವಾಹಂ (ಅಜಿಪು. ೪–೩೪); ಕಾಲಾನಲಾಕ್ಷಿ ಸ್ಫುರದ್ರೋಚಿರ್ಜಾಲಂ ಪೊಣ್ಮೆ (ರಾಜಶೇ. ೩–೯೯). [ಸಂ. ರೋಚಿಸ್]

**ರೋಚಿಮಂಡಲ** (ನಾ). ಕಾಂತಿಯ ಆವರಣ ; ತೇಜೋವಲಯ : ಮೂಡಣಾದ್ರಿಯ ಕೋಡುಗಲ್ಲಿನೆಡೆ ರುಚಿರರವಿರೋಚಿಮಂಡಲವಿಣಿಕಿ ಬರೆ (ತತ್ತ್ವಾಂಗ. ೩೦–೦೩೩೭). [ಸಂ.]

**ರೋಚಿಷ್ಣು** (ಗು). ೧. ಕಾಂತಿಯುತವಾದ ; ಪ್ರಕಾಶಮಾನವಾದ. ೨. ಅಲಂಕಾರಗೊಂಡ ; ಶೋಭಾಯಮಾನವಾದ : ಜಿಷ್ಣುವಂ ಸಾರೆ ಭಗದೇಹನಾದನುರೆ ರೋಚಿಷ್ಣು ಭೂಪಾಲರಂ ಸಾರಲವರಳಿದಿರ್ದರೆಂದಾ ಮಹಾಲಕ್ಷ್ಮಿಯು (ಜುರುಕ್ತಿ. ೦೭–೬). (ನಾ). ೩. ಕಾಂತಿ : ಪ್ರಕಾರ . ಕಾಂಚನರೋಚಿಷ್ಣುಗಳೆ ಮಿಕ್ಕ ಕುಲಧರರೆಲ್ಲಂ (ಶಂರಾಪಾ. ೦–೯೭). ೪. ಅಲಂಕರಿಸಿಕೊಂಡಿರುವವನು : "ವಿಭ್ರಾಟ್, ಭ್ರಾಜಿಷ್ಣುಃ, ರೋಚಿಷ್ಣು ೩ ಭೂಷಣಾದಿಗಳಿಂದ ಪ್ರಕಾಶಿಸುತ್ತಿರುವವನ ಹೆಸರುಗಳು" (ಸಿದ್ಧಾಂತಿ. ೧೯೮). [ಸಂ.]

**ರೋಚಿಸು** (ಕ್ರಿ). ೧. ಬೆಳಗು ; ಶೋಭಿಸು ; ರೋಚಿಸೆ ನಾನಾರಸಭಾವೋಚಿತ ಕರಣಾಂಗಹಾರಪಥದಲ್ಲಿ ಕೆಲರ್ ಸೂಚಿಸೆ ನಾಟ್ಯಮನಾಡಿದರ್ (ಪುಷ್ಪ. ೧೨–೯೭). ೨. ಇಷ್ಟಪಡು ; ಆಶಿಸು : ಯೋಚಿಸಿ ನೀನದುಕಾರಣವನುದಿನ ರೋಚಿಸದಿರು ಮರಣಕ್ಕೆ (ಜೋಗಾಂಪಿ. ೩–೨೭); ನಿಮ್ಮಡಿಯ ಮೇಲೆ ರೋಚಿಸಿತು ಮನ (ಪಿಶಾಗ. ೯–೨೩–೬). [ರೋಚನ + – ಇಸು$_3$]

**ರೋಜ$_1$** 'ರೋಜಾ$_1$' ನೋ.

**ರೋಜ$_2$**, ರೋಜಾ$_2$ (ನಾ). ೧. (ಸಾಮಾನ್ಯವಾಗಿ ತಿಳಿಗೆಂಪುಬಣ್ಣದ) ಸುವಾಸನೆಯ ಹೂವುಗಳನ್ನು ಬಿಡುವ ಒಂದು ಬಗೆಯ ಗಿಡ ಮತ್ತು ಅದರ ಹೂವು: ಗುಲಾಬಿ : ಮೇಜಿನ ಮೇಲೊಂದು ರೋಜದ ಹೂವು. ಹಿಂದೆಂದು ಕಾಣದ ಸೊಗಸಿನ ಹೂವು (ಪಾಂಚಲೀ. ೦೨–೦). **ರೋಜಾ$_2$** : ೨. ಗುಲಾಬಿ ಹೂವಿನಂತಹ ತಿಳಿಗೆಂಪುಬಣ್ಣ : ಚಿರಂಜೀವಿ . . . ರೋಜಾ ಬಣ್ಣದ ರೇಷ್ಮೆಯ ವಲ್ಲಿಯನ್ನು ಹೊದೆದಿರುವನು (ಪಠರಾ. I, ೩೩೬). [← ಇಂ. Rose]

**ರೋಜನಾಮಾ** 'ರೋಜುನಾಮು' ನೋ.

**ರೋಜಮಾರಿ** (ನಾ). ಸುವಾಸನೆಯ ಎಲೆಗಳುಳ್ಳ ಒಂದು ಬಗೆಯ ಸಸ್ಯ : (ವೃಕ್ಷಶಾ. ೨–೨೩).

[← ಇಂ. Rosemary./ ಮರಾ. ರೋಜ್‌ಮಾರೀ]

**ರೋಜಮೇಳ** (ನಾ). ಆಯಾದಿನದ ಆಯವ್ಯಯ ; ದಿನದ ಲೆಕ್ಕ : ಪಕ್ಕಾ ರೋಜಮೇಳ ಬರಿಯುವದು (ಮುಂಬಯಿ. ೨೭೯).

[ ← ಮರಾ. ರೋಜ್‌ಮೇಳ]

**ರೋಜಾ$_1$**. ರೋಜ$_1$ (ನಾ). ೧. ಮುಸಲ್ಮಾನರು ರಂಜಾನ್ ತಿಂಗಳಲ್ಲಿ ಕೈಗೊಳ್ಳುವ ಉಪವಾಸವ್ರತ. ೨. (?) : ಮಶೀದಿಯು ರೋಜಾ ಎಂಬುದರ ಪಶ್ಚಿಮಕ್ಕಿರುತ್ತದೆ (ಮುಂಬಯಿ. ೬–೦೦೪). **ರೋಜ$_1$** : (೬).

[ ← ಪಾರ. ರೋಜಾ, ರೋಜದ್ ; ಹಿಂ. ಮರಾ. ರೋಜಾ]

**ರೋಜಾ$_2$** 'ರೋಜ$_2$' ನೋ.

**ರೋಜಾಂಬರಿ** (ನಾ). ರೋಜಾಹೂವಿನ ಬಣ್ಣದ ಸ್ಫಟಿಕದ ಹೂವು : ಜಾಜಿಮಲ್ಲಿಗೆ ಪುಷ್ಪ ಸೂಜಿಮಲ್ಲಿಗೆ ದವನ ರೋಜಾಂಬರಿ ನಿತ್ಯಮಲ್ಲಿಗೆ (ಸಿದ್ಧಪು. ೦೬–೯೯). 'ನೀಲಾಂಬರ' ಪರಾ. [< ರೋಜ$_2$]

**ರೋಜಾಹೂವು** (ನಾ). ಸಾಮಾನ್ಯವಾಗಿ ತಿಳಿಗೆಂಪುಬಣ್ಣವನ್ನು ಹೊಂದಿರುವ, ಸುವಾಸನಾಯುಕ್ತವಾದ ಒಂದು ಬಗೆಯ ಹೂವು ; ಗುಲಾಬಿಯ ಹೂವು : ಫೋಟೋ ಮೇಲೆ ಇಟ್ಟಿದ್ದ ರೋಜಾಹೂವು ಎರಡು ದಿನವಾದರೂ ಬಾಡಿಲ್ಲ (ರೂಢಿ).

[ರೋಜಾ$_2$ ( < ರೋಜ$_2$) + ಹೂವು ( < ಪೂ$_2$) ]

**ರೋಜಿ** (ನಾ). ೧. ದಿನಭತ್ಯ : ಪಡಿ : (೬). ೨. ಕೆಲಸ; ಕಸುಬು ; ವೃತ್ತಿ : (೬). [ ← ಪಾರ. ಹಿಂ. ಮರಾ. ರೋಜೀ ]

**ರೋಜಿನ** (ಅ), ಪ್ರತಿದಿನ ; ದಿನವೂ : ಯಜಮಾನರು ರೋಜಿನ ಇಷ್ಟೊತ್ತಿಗೇ ಬತ್ತಿದ್ರು (ಅವಕಂ. ೯೩).

[ ← ಪಾರ. ರೋಜಾನಹ್ ; ಹಿಂ. ರೋಜಾನಾ ]

**ರೋಜು** (ನಾ). ೧. ದಿನ ; ನಿತ್ಯ : (೬). ೨. ಕೆಲಸ ; ಉದ್ಯೋಗ : (೬). ೩. ಕೂಲಿ ; ಸಂಬಳ : (ಜಾನಪೋ. ೪೦).

[ ← ಪಾರ. ಹಿಂ. ಮರಾ. ರೋಜ್ ]

**ರೋಜುಗಾರ** (ನಾ). ವೃತ್ತಿಯಲ್ಲಿರುವವನು ; ಕೆಲಸಗಾರ : (೬).

[ ← ಪಾರ. ಹಿಂ. ಮರಾ. ರೋಜ್‌ಗಾರೀ ]

**ರೋಜುಗಾರಿ** (ನಾ). ೧. ಕೂಲಿ ; ಮಜೂರಿ : (೬). ೨. ದಂಧೆ ; ಕೆಲಸ ; ಉದ್ಯೋಗ : (೬). [←ಪಾರ. ಹಿಂ. ಮರಾ. ರೋಜ್‌ಗಾರ್]

**ರೋಜುಗಾರಿಕೆ** (ನಾ). ಕೆಲಸ ; ದಂಧೆ : (೬). [ರೋಜುಗಾರ + – ಇಕೆ]

**ರೋಜುನಾಮು**, ರೋಜನಾಮಾ, ರೋಜುನಾಮೆ (ನಾ). ೧. ಪ್ರತಿದಿನದ ಕಾರ್ಯಕಲಾಪವನ್ನು ಬರೆದಿಡುವ ಪುಸ್ತಕ; ದಿನಚರಿ : (೬). ೨. ಆಯಾದಿನದ ಖರ್ಚನ್ನು ಬರೆದಿಡುವ ಪುಸ್ತಕ ; ಕಿರ್ದಿ : (೬). **ರೋಜನಾಮಾ** : ೧. ಬ್ರಹ್ಮಲಿಪಿ ರಾಯರ ಅದು. ಅದ್ದೇನು ರೋಜನಾಮಾ ಲಿಪೀನ ? (ಪಡುಮ. ೩೩). **ರೋಜುನಾಮೆ** : (ಅಪಂಪಾ). [ ←.ಪಾರ. ರೋಜ್‌ನಾಮಹ್ ; ಹಿಂ. ರೋಜ್‌ನಾಮಚಾ]

**ರೋಜುನಾಮೆ** 'ರೋಜುನಾಮು' ನೋ.

**ರೋಟರಿ**(ನಾ). ೧. ಸುರುಳಿಕಾಗದದಿಂದ ಮುದ್ರಿಸಬಹುದಾದ ಒಂದು ಬಗೆಯ ಮುದ್ರಣಯಂತ್ರ : 'ರೋಟರಿಯಂತ್ರ' ಪರಾ. ೨. "ಮಾನವ ಸೇವೆಯ ಉದ್ದೇಶದಿಂದ ಅಂತರರಾಷ್ಟ್ರೀಯ ಆಧಾರದ ಮೇಲೆ ಸ್ಥಾಪಿಸಿದ, ಹಲವು ಶಾಖೆಗಳುಳ್ಳ, ಒಂದು ವಿಶ್ವವ್ಯಾಪಕ ಸಂಘ" (Rotary. ೩೦೪೩). 'ರೋಟರಿಕ್ಲಬ್ಬು' ಪರಾ.

[ ← ಇಂ. Rotary ]

**ರೋಟರಿಕ್ಲಬ್ಬು** (ನಾ). = ರೋಟರಿ ೨ : ರೋಟರಿಕ್ಲಬ್ಬಿನಲ್ಲಿ ಇಂದು ಅವರ ಭಾಷಣವಿತ್ತು (ರೂಢಿ). [ರೋಟರಿ + ಕ್ಲಬ್ಬು]

**ರೋಟರಿಮುದ್ರಣ** (ನಾ). ರೋಟರಿಯಂತ್ರದಲ್ಲಿ ಮಾಡುವ ಮುದ್ರಣ : ಬಾಗಿದ ಸ್ಟೀರಿಯೋ ತಯಾರಿಕೆಯೂ ಸ್ವಲ್ಪಕಾಲದಲ್ಲೇ ಬಳಕೆಗೆ ಬಂದುದರಿಂದ ರೋಟರಿಮುದ್ರಣವು ಸಾಧ್ಯವಾಯಿತು (ಮುದ್ರಕ. ೯೯).

[ರೋಟರಿ + ಮುದ್ರಣ]

**ರೋಟರಿಯಂತ್ರ** (ನಾ). = ರೋಟರಿ ೧ : ಬಿಡಿಹಾಳೆಗಳನ್ನು ಉಡಿಸಿ ಮುದ್ರಿಸುವ ರೋಟರಿಯಂತ್ರಗಳೂ ಇವೆ (ಮುದ್ರಕ. ೯೬).

[ ರೋಟರಿ + ಯಂತ್ರ ]

**ರೋಟಿ** (ನಾ). ೧. ಸೆಳೆಯುವುದು; ಎಳೆಯುವುದು : "ರೋಟಿಃ- ಸೆಳೆ" (ಶಾಶಕ. ೦೩೦). ೨. ಗಿಡ, ಮರಗಳಿಂದ ಎಲೆ, ಕಾಯಿ, ಸೊಪ್ಪು ಮುಂತಾದುವುಗಳನ್ನು ಕೀಳಲು ಬಳಸುವ, ತುದಿಯಲ್ಲಿ ಕೊಕ್ಕೆ ಇರುವ ಕೋಲು ; ದೋಟಿ : ಅಡಿಗೆ ಸೊಪ್ಪು ಸೆಳೆಯಲು ರೋಟಿ ಬೇಕು (ರೂಢಿ). 'ರೋಟಿಗಳೆ' ಪರಾ. [ ? ]

**ರೋಟಿಗಳೆ** (ನಾ). = ರೋಟಿ ೨ : ಫಳಹರದ ಸೂತ್ರಿಕೆಗಳೊತ್ತುಗೆ ತಲೆಜವಳಿ ರೋಟಿಗಳೆ ವೇಟಿನ ಸೆಳೆವಲಗೆಯುಗ್ಗರಣೆ ತಿರುಜೆಯು ಮುರುಜೆ ಹೊರಜಗಳ (ಅಂಬಿಗ. ೨೯-೬). [ ರೋಟಿ + ಗಳೆ (< ಗಟಿ[3]) ]

**ರೋಟು₁** 'ರೊಟ್ಟಿ' ನೋ.

**ರೋಟು₂** 'ರೋಡು' ನೋ.

**ರೋಡಾಡಿಸು** 'ಱೋಡಾಡಿಸು' ನೋ.

**ರೋಡಾಡು** 'ಱೋಡಾಡು' ನೋ.

**ರೋಡಿಗ** 'ಱೋಡಗ' ನೋ.

**ರೋಡಿಸು** 'ಱೋಡಿಸು' ನೋ.

**ರೋಡು**, ರೋಟು₂ (ನಾ). ರಸ್ತೆ : ದಾರಿ: ಮಾರ್ಗ : ಅವರು ಮಾಗಡಿರೋಡಿನಲ್ಲಿ ಮನೆ ಮಾಡಿದ್ದಾರೆ (ರೂಢಿ). ರೋಟು₂ : ನಡುವೆ ಅಗಲವಾದ ಗಾಡಿರೋಟು ಹೋಗುತ್ತಿದ್ದುದರಿಂದ (ಪಟ್ಟಣ. ೧೩೬).

[ ← ಇಂ. Road ]

**ರೋಡೆಗ** 'ಱೋಡಗ' ನೋ.

**ರೋಣ** (ನಾ). ಒಂದು ಊರಿನ ಹೆಸರು ; ಈಗಿನ ಧಾರವಾಡ ಜಿಲ್ಲೆಯ ರೋಣ : ರೋಣದ ಮಹಾಜನಕೆ . . . ಕೊಟ್ಟು (ಎಇ. XIII. ೦೯೩-೭; 874) ; ರೋಣ[ದ] ಹನ್ನಿರ್ವ್ವಟು ಗದ್ಯಾಣಂ (ಇಅ. XII. ೨೩೬-೦೩ ; 971). [ ? ]

**ರೋಣುಗಲ್ಲು** (ನಾ). ತೆನೆಯಿಂದ ಕಾಳುಗಳನ್ನು ಬೇರ್ಪಡಿಸಲೂ ಗಾರೆ ಮೊದಲಾದುವನ್ನು ಪುಡಿಮಾಡಲೂ ಬಳಸುವ ದುಂಡನೆಯ ಕಲ್ಲನ್ನು ಅಳವಡಿಸಿದ ತಿರುಗುಯಂತ್ರ : ಒಂದು ಪಾಲು ಸುಣ್ಣಕ್ಕೆ ಮೂರು ಪಾಲು ಮರಳನ್ನು ಬೆರಸಿ ಸುಣ್ಣದ ಕಾಲುವೆಗಳಲ್ಲಿ ರೋಣುಗಲ್ಲಿಗೆ ಎತ್ತುಗಳನ್ನು ಕಟ್ಟಿ ಹಿಂದೆ ಅರೆಯುತ್ತಿದ್ದರು (ಶಿಲ್ಪಸಾ. ೨೯೦): ರೋಣು ಗಲ್ಲು ಹತ್ತುತ್ತಾನೆ. ಕಣಮಾಡುವಾಗ, ಎತ್ತುಗಳನ್ನು ತಾನೆ ಹೆಣೆಗೆ ಕಟ್ಟಿ . . . ಹಿಗ್ಗುತ್ತಾನೆ (ಬೆಳುವು. ೦೩೭). [ ರೋಣು₀ + ಕಲ್ಲು (< ಕಲ್[3]) ]

**ರೋಣುಹೊಡೆ** (ಕ್ರಿ). ರೋಣುಗಲ್ಲನ್ನು ತಿರುಗಿಸು : ಅವನು . . . ಕದರಿದ ಹುಲ್ಲಿನ ಮೇಲೆ ರೋಣುಹೊಡೆಯುವನು (ಬೆಳುವು. ೦೯೦).

[ ರೋಣು₀ + ಹೊಡೆ₁ ( < ಪೊಡೆ₁ ) ]

**ರೋಣೂರ್** (ನಾ). ಒಂದು ಊರಿನ ಹೆಸರು : ವೆಜ್ಜಪೆ × × ಅರಸರ್ ರೋಣೂರಾಳೆ × × ಸಗರ ಮಿಕ್ಕಾಣೆ (ಎಕ. X. ಶ್ರೀನಿವಾ. ೬೩-೩; ಸು. 765). [ ರೋಣು₀ + ಊರ್ ]

**ರೋತಿ** 'ರೋತೆ' ನೋ.

**ರೋತೆ**, ರೋತಿ (ನಾ). ೧. ಕೊಳಕು ; ಹೊಲಸು ; ಹೇಸಿಗೆ : ಪಕ್ಕದಲ್ಲಿ ಮಲಗಿದ್ದ ಗಂಡನ ರೋತೆಯನ್ನು ನೆನೆದು ಚಿಂತಿಸುತ್ತಾ ಮಲಗಿದ್ದಳು (ಮಲೆವು. ೨೬೩). ೨. ಅಸಹ್ಯ; ಜುಗುಪ್ಸೆ : ಇದೊ! ಶರಣಾದೆನು ! ನಾ ಸೋತೆ! ನುಂಗೆನ್ನನು ! ತಪ್ಪಲಿ ರೋತೆ ! (ಪಾಂಚಜ. ೩೯-೨೦). ೩. ಅಸಹ್ಯಕರನಾದವನು : ಗೌತಮನ ಸತಿಯರಿಗೆ ಗಜವಾಘ ನನು ಮೆಚ್ಚಿ ರೋತೆಯಾಗನೆ ಮುನ್ನ ಋಷಿಯ ಶಾಪದಲಿ (ಶಾರಂಗ. ೨೬). **ರೋತಿ** : ೧. ಉಸುರು ಕೊರಳಲ್ಲಿ ಸಿಕ್ಕಿ ತಿರುಗದೆ ಉಬ್ಬಸ ಬರ ಮರುವಾಗಿ ಕರ್ನ ಕಂಗಳ ರೋತಿಯು ಸೋರೆ (ಏಕಾಸು. ೩೦-೩).

[ ದೇ. ‖ ತಮಿ. ರೋಸ್ತ್ಯ: ತೆಲು. ರೋತ ]

**ರೋದನ** (ನಾ). ೧. ಅಳುವಿಕೆ; ಪ್ರಲಾಪ : "ಅಟ್ಕಿಯೆನೆ ರೋದನಂ" (ಸಂಶೀತ. ೭); ರೋದನದಿಂ ಸುತನ ಶಿರಶ್ಛೇದನದಟಲಾಱದಾಟುಗುಂ ರಿಪುರುಧಿರಾಸ್ವಾದನದಿಂ (ಶಂರಾಮಾ. ೯-೩೩); ಆ ರೋದನಕ್ಕುರೆ ಬೆರ್ಚಿ . . . ಶಾನಾಯೆಡೆಗೆ ಬರೆ (ಶ್ರೀರಾಮಾ. ೦೯-೩೦೦). ೨. ಕಣ್ಣೀರು ; ಕಂಬನಿ : "ಅಶ್ರು, ಬಾ(ಷ್ಪಂ)ಷ್ಪಂ, ರೋದಸಂ, ನಯನಜಳಂ, ಅಸ್ರಂ—ಈ ೫ ಕಣ್ಣ ನೀರ್" (ಹಲಾಯು. ೮೬-೩೬೩). [ಸಂ.]

**ರೋದನಿ** (ನಾ). ಒಂದು ಬಗೆಯ ವನಸ್ಪತಿ ; ಬಳ್ಳಿದುರುಚೆ : "ಯಾಸಃ . . . ರೋದನೀ, ಕಚ್ಛುರಾ . . . ದುರಾಲಭಾ—೧೦ ತೀಟಕ ಸಂಧಿ ಹೆಸರುಗಳು" (ಸಿದ್ಧಾಂತಿ. ೦೩೩). [ಸಂ. ರೋದನೀ]

**ರೋದನಿಸು** (ಕ್ರಿ). ಅಳು ; ಪ್ರಲಾಪಿಸು : ರಮಣನಗಲಿದನೆಂದು ರೋದನಿಸಿ ಮುಖಿ ಬಳಲಿ ಕಮಲ ನೆಟಿ[3] ನೊಂದು ಜೀವಿಸಲಾಱದಂತಿಹುವು (ಕಿಂತ. II. ೩೦೦ ಶಿವಾರ್ಕಪುರಾಣ). [ರೋದನ + —ಇಸು₃]

**ರೋದನೆ** (ನಾ). ರೋದನ ೧ : 'ರೋದನೆಗೆಯ್' ಪರಾ.

[ಸಂ. ರೋದನ]

**ರೋದನೆಗೆಯ್** (ಕ್ರಿ). ರೋದನಿಸು : ರೋದನೆಗೆಯ್ಯಲೇತಕೆ ಕೇಳು ಕೇಳು ತಳೋದರಿ (ವೋಃಹತ. ೨೦-೩೩). [ರೋದನೆ + ಕೆಯ್₁]

**ರೋದಸಿ** (ನಾ). ಆಕಾಶ ಮತ್ತು ಭೂಮಿ : "ದ್ಯಾವಾಭೂಮೀ, ರೋದಸ್ಯೌ, ರೋದಸೀ, ರೋಷಸೀ – ಈ ೪ ನೆಲನುಂ ಆಕಾಶದ ಪೆಸರ್" (ಹಲಾಯು. ೨೦-೧೨೦): ಪೂರಿಪ ಶಂಖಂಗಳ ಘನಘೋಷದ ಪೆರ್ಚುಗೆ ಬಳೆದುಟಿ[3] ತೀವಿತ್ತು ರೋಧ[ದ]ಸೀಮಂಡಲಮಂ (ತ್ರಿಷಷ್ಟಿ. ೦೯-೬೦).

[ಸಂ. ರೋದಸೀ]

**ರೋದಸ್ಥಳ** (ನಾ). ಸ್ವರ್ಗ : ಚರಾಚರಧಾತ್ರಿಯುನೆಯ್ದೆ ಸುತ್ತಿ ರೋದ ಸ್ಥಳಮಂ ಪಳಂಚಲೆವ ಭಂಗುರತುಂಗತರಂಗಸಂಗತ (ಶಾಸಕ. ೩೨-೮; 1138). [<ಸಂ. ರೋದಸ್ಥಲ]

**ರೋದಿಸು** (ಕ್ರಿ). = ರೋದನಿಸು : ಸಿತಕಂಜದಳನೇತ್ರೆಯು ಪೊಡೆಯೊಳಗಿರ್ದ ಸುತ ಪೊಱಮಟ್ಟ ರೋದಿಸುತ (ಮೋಹತ. ೦೭-೦೭) ; ಮಗನ ಮರಣವಾರ್ತೆಯನ್ನು ಅರಿತ ರಾಣಿ ರೋದಿಸಿದಳು (ಹಾಹುತ. ೩೦).

[ರೋದನ+—ಇಸು₃]

**ರೋದೋಂಗಣ** (ನಾ). ಆಕಾಶಪ್ರದೇಶ : ಗಗನಸ್ಥಳ : ಪಾಱುವ ಕೀರಮಾಲೆ ರೋದೋಂಗಣಮೆಂಬ ಪಟ್ಟಣದೊಳೊಪ್ಪುವ ಬೆಳ್ಳುಗಿಲೆಂಬ ಬಳ್ಳಿಮಾಡಂಗಳ ಪೊನ್ನ ಮಾಣಿಕದ ಪಚ್ಚೆಯ ತೋರಣದಂತೆ ರಂಜಿಕುಂ (ಜಗವ. ೪-೬೭). [<ಸಂ. ರೋದೋಂಗನ]

**ರೋದೋವಾತ** (ನಾ). ಆಕಾಶದಲ್ಲಿ ಬೀಸುತ್ತಿರುವ ಗಾಳಿ : ರೋದೋವಾತಮಂ ಕೇತುತತಿ ತೆಗೆಯೆ (ಚಂದ್ರಪ್ರ. ೦೦-೩೦). [ಸಂ.]

**ರೋದೋವಿವರ** (ನಾ). ಭೂಮಿ ಮತ್ತು ಆಕಾಶಗಳ ಮಧ್ಯದ ಪ್ರದೇಶ; ಗಗನಾಂತರ ; ಕ್ಷಿತಿಜ : ಪ್ರಚಂಡಪ್ರಳಯಘನಘಟಾರಾವದಿಂದಾರ್ದು ಬಾಣಾವಲಿಯಿಂದಂ ಪೂಟ[3] ರೋದೋವಿವರಮನೊದವಿತ್ತೊಂದು ಘೋರಾಂಧಕಾರಂ (ಶಂಶಭಾ. ೦೦-೦೪೯). [ಸಂ.]

**ರೋಧ** (ನಾ). ೧. ತಡೆಯುವುದು ; ನಿಲ್ಲಿಸುವುದು : ಒಂದು ತಂತಿಯ ಮೂಲಕ ವಿದ್ಯುತ್ಪ್ರವಾಹವು ಹರಿಯುವುದನ್ನು ತಡೆಗಟ್ಟುವ ಗುಣವು ಆ ತಂತಿಗೆ ಇರುತ್ತದೆ. ಈ ಗುಣಕ್ಕೆ ರೋಧವೆಂದು (Resistance) ಹೆಸರು (ಭೌತವಿ. ೨೪೭). ೨. ಹಿಡಿದುಕೊಳ್ಳುವುದು ; ಬಂಧಿಸುವುದು. ೩. ತಡೆ ; ಅಡ್ಡಿ. ೪. ನದಿಯ ತೀರ, -ದಡ : "ತೀರಂ ರೋಧಂ ತಟಂ ಪ್ರಪಾತಂ ಕೂಲಂ" (ವಸ್ತುಕೋ. ೨೪-೦೩); ರೋಧಮನ್ಯೆದೆ ನೀಳ್ದಿರಡುಮಂ ಪುದಿದೊಪ್ಪುವ ನಂದನಾಳಿಯುಗ್ರಾಧರಪಕ್ಷ್ಮಪಾಳಿ (ಚಂದ್ರಪ್ರ. ೦-೬೨).

[ಸಂ.]

**ರೋಧಕ** (ಗು). ೧. ತಡೆಯುವ ; ಅಡ್ಡಿಪಡಿಸುವ. (ನಾ). ೨. ತಡೆಯುವಂಥದು ; ಅಡ್ಡಿಪಡಿಸುವಂಥದು : ಕಾಜು — ರೇಶಿಮೆಗಳು ವಿದ್ಯುಲ್ಲತೆಯ ರೋಧಕಗಳುಂಟು (ಮುಂಬಯಿ. ೫-೨೦೩). [ಸಂ.]

**ರೋಧನ** (ನಾ). ೧. ತಡೆಯುವುದು ; ಅಡ್ಡಿಪಡಿಸುವುದು. ೨. [ಜ್ಯೋತಿ] ಬುಧಗ್ರಹ. [ಸಂ.]

**ರೋಧಸಿ** (ನಾ). ದಡಗಳನ್ನು ಹೊಂದಿರುವುದು ; ಹೊಳೆ ; ನದಿ : "ನದಿ ತರಂಗಿಣಿ . . . ರೋಧಸಿ ಸರಿತ್ತು . . . ತೊಱೆಗೆ ನಾಮಂ" (ಮಂಗರಾ. ೦೨೨-೦೦). [ಸಂ. ರೋಧಸೀ]

**ರೋಧಸ್ವಿನಿ** (ನಾ). ನದಿ ; ಹೊಳೆ : ದುರಿತವ್ರಾತಲತಾಕೃಪಾಣಿ ವಿಸರದ್ದುರ್ಬೋಧರೋಧಸ್ವಿನೀತರಣದ್ರೋಣಿ . . . ವಾಣಿ (ಕಂಪ್ರಕೃ. ೦-೦೨). [ಸಂ. ರೋಧಸ್ವಿನೀ]

**ರೋಧಿ** (ನಾ). ತಡೆಯುವವನು ; ಪ್ರತಿಬಂಧಿಸುವವನು. [ಸಂ. ರೋಧಿನ್]

**ರೋಧಿನಿ** (ನಾ). ತಡೆಯುವವಳು ; ಪ್ರತಿಬಂಧಿಸುವವಳು : ಅಂಗಹೀನನ ಪಂಗುಳಾಂಧಕನ ಘನರುಜಾಂಗನ ಬಡುದಲೆಯ ರೋಧಿನಿಯನುಪ್ಪವಡಿಸುವ ಸಮಯದೊಳಿನಿಬರನು ಕಾಣ್ಬುದು ಮಹೀಶರಿಗಂಗವಲ್ಲ (ಕುವ್ಯಾಉ. ೩-೦೦೭). [ಸಂ. ರೋಧಿನೀ]

**ರೋಧೋವಕ್ರಾ** (ನಾ). = ರೋಧಸಿ : "ಸಿಂಧುಃ . . . ರೋಧೋವಕ್ರಾ – ಈ ೨೧ ತೊಱೆ" (ಹಲಾಯು. ೦೦೦-೯೯). [ಸಂ. ರೋಧೋವಕ್ರಾ]

**ರೋಧ್ರು** (ನಾ). ೧. ಒಂದು ಬಗೆಯ ಮರ ; ಲೋಧ್ರ : " ರೋಧ್ರಂ ತಿಲ್ಲಂ" (ವಸ್ತುಕೋ. ೩೪-೮). ೨. ಪಾಪ. [ಸಂ.]

**ರೋಪ** (ನಾ). ೧. ಮೇಲಕ್ಕೆ ಏರಿಸುವುದು. ೨. ನಾಟಿಹಾಕುವುದು ; ನೆಡುವುದು. ೩. ಬಾಣ ; ಸರಳು : "ಕಂಕಪತ್ರಃ, ಶರಃ . . . ರೋಪಃ—ಈ ೧೬ ಅಂಬು " (ಹಲಾಯು. ೭೭-೩೦೨) ; ನಿಜಧನು ದನುಜಾರಾತಿಜಾತಾಧಿವಾಸಂ ನಿಜರೋಪಂ ವಿಶ್ವರೂಪಂ (ರಾಜಶೇ. ೦-೨). ೪. ತೂತು ; ರಂಧ್ರ. [ಸಂ.]

**ರೋಪಣ** (ನಾ). ಬಾಣ ; ಸರಳು : ಕೊಳದಿಂ ಕೂಪ ಪರಿಕಾಲಿಂದೆ ಪಲ್ಲವರೋಪಣನ ಲೀಲಾಸ್ಪದಂ ದಿಟವೆನಿಸಿ ರಾಜಿಪುದು (ಮರೇಕೃ. ೨-೨೬). [ಸಂ.]

**ರೋಪಣಾಸನ** (ನಾ). ಬಿಲ್ಲು ; ಶರಾಸನ : ಅರ್ಜುನಶಿಲೋಚ್ಚಯ ಸುರೋಪಣಾಸನಕೃತಂ ದುರ್ಜನಕ್ಷಣದಾಚರಾದ್ರಿ ಕುಲಕುಲಿಶ . . . ಸಂಗಮೇಶ್ವರ ರಕ್ಷಿಸೆನ್ನ ಸತತಂ (ತ್ರಿಶಾ. ೭-೦). [ಸಂ.]

**ರೋಪಿತ** (ಗು). ೧. ಬೆಳೆಸಲ್ಪಟ್ಟ. ೨. ನೆಟ್ಟ. [ಸಂ.]

**ರೋಪು, ರೋಫ್, ರೋಫು** (ನಾ). ಜೋರು ; ಜಬರ್ದಸ್ತು : ನಿನ್ನ ರೋಪು ನನ್ನ ಹತ್ತಿರ ತೋರಿಸಬೇಡ (ರೂಢಿ). **ರೋಫ್** : 'ನಿನ್ನ ತೀರಿಸಿಬಿಡ್ತಿನಿ' ಅಂತ ಗುಮಾನಿ 'ಖಾಲಿ ರೋಫ್' ಹಾಕಿದ್ದ (ನಮ್ಮೂರು. ೨೦೦). **ರೋಫು** : ನಿಮ್ಮ ಬೆಂಗಳೂರಿನ 'ರೋಫು' ಇಲ್ಲಿ ನಡೆಯೋದಿಲ್ಲ (ಹೊಸಮೇ. ೨೨೦).

[←ಅರ. ರುಅಬ್ ; ಹಿಂ. ರೋಬ್ ; ಮರಾ. ರೋಬ್, ರೂಆಬ್]

**ರೋಫ್** ' ರೋಪು ' ನೋ.

**ರೋಫು** ' ರೋಪು ' ನೋ.

**ರೋಮ** (ನಾ). ೧. ಮೈಮೇಲೆ ಬೆಳೆಯುವ ಕೂದಲು; ತನೂರುಹ : " ರೋಮನ್, ತನೂರುಹಂ – ಈ ೨ ಮೆಯ್ಯ ಕೂದಲ್ " (ಹಲಾಯು. ೮೬-೩೭೦) ; ಮೆಯ್ಯೊಳ್ ಸಮುದ್ಗತರೋಮಂ . . . ಎಸೆಯುತಿರ್ಪನ್ನಮಿಂತೆಂದರ್ (ಜಗಿ. ೩-೫). ೨. ಹಕ್ಕಿಯ ಗರಿ. [ಸಂ. ರೋಮನ್]

**ರೋಮಂಥ** (ನಾ). ೧. (ಹಸು ಮೊದಲಾದ ಪ್ರಾಣಿಗಳು) ತಿಂದ ಆಹಾರವನ್ನು ಮೆಲುಕು ಹಾಕುವಿಕೆ : ಮೃಗಸಂದೋಹರೋಮಂಥ ಫೇನೋದ್ಗತಬಿಂದುಸ್ಯಂದಿ ತೀಡಿತ್ತೆಸಗಿ ಸುರಭಿ ವೈಭಾತಿಕಂ ಮಾತರಿಶ್ವಂ (ಕಾದಂಪೂ. ೦೯೬) ; ಸರಳಲತಾಲಾಸ್ಯನಟಂ ಹರಿಣೀರೋಮಂಥಮಂಥರಂ ಲವಲೀಮರ್ಮರಮುಖರಂ ಕರಿಕರಶೀಕರಶೀತಳಮೆಸಗಿದತ್ತರಣ್ಯಸಮೀರಂ (ಮಲ್ಲಿಪು. ೦೦-೫೨). ೨. ಪುನರುಕ್ತಿ; ಪುನರಾವೃತ್ತಿ. [ಸಂ.]

**ರೋಮಂಥಿಸು** (ಕ್ರಿ). ಮೆಲುಕು ಹಾಕು : ರೋಮಂಥಿಸಿತು ರತಿರೋಮಹರ್ಷಣದಿ ಭಾವಜಪ್ರಾಣಪಶು (ಶ್ರೀರಾಮಪಟ್ಟಾ. ೨೦೬-೦೯೫).

[ರೋಮಂಥ + —ಇಸು₃]

**ರೋಮಂಬೊರೆ** (ಕ್ರಿ). ಕೂದಲನ್ನು ಹೊಂದು : ಆ ಚಂಡಾಲಕನ್ನಿಕೆ ರೋಮಂಬೊರೆದ ಪಂದೊಡಲ ಪಂಜರದೊಳಿಕ್ಕಿ (ಕಾದಂಉ. ೭೫೦).

[ರೋಮ + ಪೊರೆ₂]

**ರೋಮಕಂದ** (ನಾ). ಗೆಡ್ಡೆಗಳನ್ನು ಬಿಡುವ ಒಂದು ಬಗೆಯ ಸಸ್ಯ ; ವಾರಾಹಿ : " ರೋಮಕಂದಃ – ರೋಮಕಂದರ, ರಸಮೂಲಿಕೆ " (೬೫೦. ೦೪೦). [ಸಂ.]

**ರೋಮಕಂದರ** (ನಾ). = ರೋಮಕಂದ : " ಪರ್ವಮೂಲಾ – ರೋಮಕಂದರ, ಬೇನ " (೬೫ಧಿ. ೯೩). [< ಸಂ. ರೋಮಕಂದ]

**ರೋಮಕರ್ಣಕ** (ನಾ). ೧. ಕೂದಲು ತುಂಬಿದ ಕಿವಿಯುಳ್ಳುದು. ೨. ಮೊಲ. [ಸಂ.]

**ರೋಮಕಲವಣ** (ನಾ). ಒಂದು ಬಗೆಯ ಉಪ್ಪು : "ಉತ್ಕಂ—ರೋಮಕಲವಣಂ" (೬೫ಧಿ. ೦೫). [ಸಂ.]

**ರೋಮಕೂಪ** (ನಾ). ಕೂದಲು ಬೆಳೆಯುವ ರಂಧ್ರ : ಅನಂತಕೋಟಿ ಬ್ರಹ್ಮಾಂಡಗಳು ನಿಮ್ಮ ರೋಮಕೂಪದೊಳಗಡಗಿಪ್ಪವೆಂದರೆ ಬ್ರಹ್ಮ ವಿಷ್ಣು ರುದ್ರರಿವರೆಲ್ಲ ಒಂದು ಬ್ರಹ್ಮಾಂಡದೊಳಗಣ ಬಾಲಕರು (ಅರವ. ೨-೯) ; ಬಿಗಿದ ರಕುತದ ರೋಮಕೂಪದ ತೊಗಲ ಕೋಟೆಯ ನಂಬಿ (ಹಂಸಾ. ೯೯). [ಸಂ.]

**ರೋಮನಾಳ** (ನಾ). ಕೂದಲು ಬೆಳೆಯುವ ನಾಳ : ಸುಮಾನಾಸಿಜಂ . . . ಅನ್ನರಸಮಂ ಲೇಸಾಗಿ ಬಹು ರೋಮನಾಳಕ್ಕೆ ಹಂಚಿಕ್ಕಿ ಸಾಸದಿಂ ದಿಹುದು (ಶೀಕೃಪು. ೪-೨೦-೨೩). [ಸಂ. ರೋಮನಾಲ]

**ರೋಮಪುಳಕ** (ನಾ). ಸಂತೋಷ, ಭಯ ಮುಂತಾದುವುಗಳಿಂದ ಮೈಗೂದಲು ನಿಮಿರುವಿಕೆ : ಕದಡಿತೀ ಬಲ ರೋಮಪುಳಕವ ಹೊದೆದುದಾ ಬಲ . . . ನರನ ರಥ ಸುಳಿಯೆ (ಕುವ್ಯಾದ್ರೋ. ೩-೯೭). [ಸಂ. ರೋಮಪುಲಕ]

**ರೋಮರಂಧ್ರ** (ನಾ). = ರೋಮಕೂಪ : ಶರೀರದಲ್ಲಿ ೭೦ ಲಕ್ಷ ರೋಮರಂಧ್ರಗಳುಂಟೆಂದು ತಿಳಿಯುತ್ತದೆ (ಮುಂಬಯಿ. ೫-೦೬೯) ; ರೋಮರಂಧ್ರಗಳರಳೆ ಶತಕೋಟಿ ಕಣ್ಣುಗಳು ಆ ಮಹಾರೂಪ ಕಂಡಾ ಕಣಿಯನುಸಿರುವೆನು (ಗಂ. ೦೦-೦೭). [ಸಂ.]

**ರೋಮಲತೆ** (ನಾ). (ಹೊಕ್ಕುಳಿನಿಂದ ಮೇಲುಭಾಗದಲ್ಲಿ ಬೆಳೆಯುವ) ಕೂದಲಿನ ಸಾಲು : ಬಾಸೆ ಮೊಲೆ ಪೊಣರ್ವೆಟ್ಟು ರೋಮಲತೆ ಬಟ್ಟೆ ನಿತಂಬಮಿಜುಂಬು ನಾಭಿ ಕುತ್ತುಜುಗುಟಿ ಮಿಂಚುವೊಲ್ದೊಡೆ . . . ಆಗೆ ಮದನಾಟವಿಯಂತೆವೊಲೊಪ್ಪಿ ತೋಱಿದಳ್ (ಕಾವ್ಯಸಾ. ೬೦೨ ಕೂದ್ರಶ). [ಸಂ. ರೋಮಲತಾ]

**ರೋಮಶ** (ನಾ). ೧. ಮೈತುಂಬ ಕೂದಲುಳ್ಳುದು. ೨. ಕುರಿ. ೩. ಕಾಡುಹಂದಿ. ೪. ಒಬ್ಬ ಋಷಿಯ ಹೆಸರು : ಮಾರ್ಕಂಡೇಯ ರೋಮಶರ್ಪ್ರತ್ಯೇಕರಳಿವರ್ (ಕೈಐಭಾ. ೩೨-೩೦). ೫. ಗುಹ್ಯಾಂಗ. [ಸಂ.]

**ರೋಮಸ್ಖನ** (ನಾ). ಕುದುರೆಯ ಬಾಲದ ಬುಡ ; ಪೇಚಕ (?) : ಬಾಲದ ಕೆಟಗು ತಗರಿಯೆಂಬ ಪೆಸರಕ್ಕುಂ ಅದಱ ಕೆಲಂಗಳ್ಗೆ ವೃತ್ತಿಯೆಂಬ

ಪೆಸರಕ್ಕುಂ ವೃತ್ತಿಯಿಂ ಕೆಟಗೆ ರೋಮಸ್ಥ(ಸ್ವ)ನಮೆಂಬ ಪೆಸರಕ್ಕುಂ (ಅಕ್ಷಶಾ. ೯೯-೧೦). [ ? ]

**ರೋಮಹರುಷಿತೆ** (ನಾ). ಸಂತೋಷದಿಂದ ಪುಳಕಗೊಂಡವಳು : ಹಾ ಮಹಾದೇವೆಂದು ಪುಳಕಿತ ರೋಮಹರುಷಿತೆಯಾಗಿ. . . ಬಿನ್ನೈಸಿದಳು ಗಿರಿಜಾತೆ (ಕೂರಶಾ. ೦-೨-೦೦). [<ಸಂ. ರೋಮಹರ್ಷಿತಾ]

**ರೋಮಹರ್ಷ** (ನಾ). = ರೋಮಪುಳಕ : "ರೋಮಾಂ(ಕ)ಚಃ, ಪುಳಕಃ . . . ರೋಮಹರ್ಷಃ _ ಈ ೧೦ ರೋಮಾಂಚಂ" (ಹಲಾಯು. ೦೦೭-೨೯); ವಿಸ್ಮಯಂಬಡನೆ ಮಯಂ ಬೆರಲ್ಮಿಡಿಯನೇ ಸುರವರ್ಧಕಿ ರೋಮಹರ್ಷದೊಳ್ ತೊಡರನೆ ಚೀರಘಟ್ಟಿ (ಶಂಪ್ರಕೃ. ೦-೦೯೯) ; ನಯನಸಲಿಲದ ರೋಮಹರ್ಷದ ಸತ್ಯಭಾವದ ಭೂಮಿಪತಿ ಮೈಯಿಕ್ಕಿದನು ಮುನಿವರನ ಚರಣದಲಿ (ಕುವ್ಯಾಆ. ೪-೯). [ಸಂ.]

**ರೋಮಹರ್ಷಣ** (ಗು). ೧. ರೋಮಾಂಚನಗೊಳಿಸುವ. (ನಾ). ೨. = ರೋಮಪುಳಕ : ವಸುಧೆಯುದಿರಿತು ಮೇರುಶೈಲಮೆಲ್ಲಾಡಿದುದು ಬಸವಳಿದನಹಿ . . . ಆಹವಂ ಘೋರವಾದುದು ರೋಮಹರ್ಷಣದೊಳು (ಕೃವಿಶಾ. ೨೩-೨೩). [ಸಂ.]

**ರೋಮಹರ್ಷಿತ** (ನಾ). ಪುಳಕಿತನಾದವನು ; ರೋಮಾಂಚನಗೊಂಡವನು. [ಸಂ.]

**ರೋಮಾಂಗಿ** (ನಾ). ಮೈಮೇಲೆ ತುಂಬ ಕೂದಲುಳ್ಳವಳು : ವಾಮನೆ ವಿಕಳೆ ರೋಮಾಂಗಿ ಮಾರ್ಜಾಲಾಕ್ಷಿ ಕಪಿಲಕಚೆ ಶುನಕಯಾನೆ. . ಎನಿಪಂಗನೆಯರಿಂದ ಗತಾಯುಃ ಪುರುಷಂಗೆ (ಶೀವಂಶ. ೦೭-೬೦).
[ಸಂ. ರೋಮಾಂಗೀ (ರೋಮ + ಅಂಗ + — )]

**ರೋಮಾಂಚ** (ನಾ). ೧. ಮೈಗೂದಲು ನೆಟ್ಟಗೆ ನಿಲ್ಲುವಿಕೆ ; ಪುಳಕ ; ನವಿರು : " ರೋಮಾಂ(ಕ)ಚಃ . . . ರೋಮಹರ್ಷಃ — ಈ ೧೦ ರೋಮಾಂಚಂ" (ಹಲಾಯು. ೦೦೭-೨೯) ; ಶರೀರದೊಳೆತ್ತಂ ರೋಮಾಂಚಕಂಚುಕಂ[ಪಾಠಾಂ. ವಂ] ಮದಿರಾಮದವಾಗಿಸೆ ತೆಗಟ್ಟನಾಕೆಯ ನುಡಿಯೊಳ್ (ಕವಿರಾ. ೩-೯) ; ರೋಮಾಂಚಮನಾನಂದಾಶ್ರುವಂ ತಾಳ್ದಿದನಮಲಯಶಂ ಭಾರತೀಕರ್ಣಪೂರಂ (ಶಂರಾಮಾ. ೨-೭೭). ೨. [ಕಾವ್ಯವಿಮಾ]ಸಾತ್ವಿಕಭಾವಗಳಲ್ಲಿ ಒಂದು : ಸ್ತಂಭ ಸ್ವೇದ ರೋಮಾಂಚ . . . ಸಾತ್ವಿಕಭಾವಂಗಳ್ (ಬವೇಕ. ೨೨೭) ; ಮರವಟ್ಟಿರುವುದು, ರೋಮಾಂಚ ಮುಂತಾದ ಸಾತ್ವಿಕ ಭಾವಗಳು . . . ಚೇತನವನ್ನು ಧ್ವನಿಸುತ್ತವೆ (ಧ್ವನ್ಯಾಲೋ. ೭೯ ಅಡಿಟಿ).
[ಸಂ.]

**ರೋಮಾಂಚಕಾರಕ** (ಗು). ಮೈನವಿರೇಳಿಸುವ ; ಪುಳಕವನ್ನುಂಟುಮಾಡುವ : ಅದೊಂದು ರೋಮಾಂಚಕಾರಕ ದೃಶ್ಯ (ಅತ್ಯಾರ್ಕ. ೦೩೨).
[ಸಂ.]

**ರೋಮಾಂಚಕಾರಿ** (ನಾ). ರೋಮಾಂಚವನ್ನುಂಟುಮಾಡುವುದು ; ಪುಳಕ : ಕೊನೆಯ ವಾಕ್ಯದ ವಿಸ್ಮಯವಂತೂ ರೋಮಾಂಚಕಾರಿಯಾಗಿದೆ (ಕೂವ್ಯಕು. ೦೩೯). [ ಸಂ. ರೋಮಾಂಚಕಾರಿನ್ ]

**ರೋಮಾಂಚಗೊಳ್ಳು** (ಕ್ರಿ). ಮೈಗೂದಲು ನಿಮಿರಿ ನಿಲ್ಲು ; ರೋಮಾಂಚವಾಗು ; ಪುಳಕಪೊಂದು : ಈ ಮಾತನ್ನು ಕೇಳಿ ದಾರುಜನು ಹರ್ಷದಿಂದ ರೋಮಾಚಗೊಂಡು 'ಕೊಟ್ಟೆ' ಎಂದನು (ವಶಶಾ. ೯). [ ರೋಮಾಂಚ + ಕೊಳ್ಳು$_1$ (< ಕೊಳ್$_1$). ]

**ರೋಮಾಂಚತೆ** (ನಾ). = ರೋಮಾಂಚ ೧ : ಅಲರ್ದು ಕಡವಿನ ಮರಗಳ್ ಪರಿಗತರೋಮಾಂಚತೆಯಿಂ ದೊರೆಮಾಡಿದುದೆನ್ನ ತನುವುಮಂ ನೆಱೆ ತನ್ನೊಳ್ (ಶಂಪ್ರಕೃ. ೨-೯೯). [ಸಂ. ರೋಮಾಂಚತಾ]

**ರೋಮಾಂಚನ** (ನಾ). = ರೋಮಾಂಚ ೧ : ಹೂಗೊಂಚಲ ರೋಮಾಂಚನ ಪಡೆದೆ (ಕಲಾ೩೯೮. ೨೭. ೩). [ಸಂ.]

**ರೋಮಾಂಚನಗೊಳ್ಳು** (ಕ್ರಿ). = ರೋಮಾಂಚಗೊಳ್ಳು : ಮೈ ಕೂಡಾ ರೋಮಾಂಚನಗೊಂಡಿತು. ಶರೀರವೇ ಒಮ್ಮೆ ನಡುಗಿತು (ಕಂದಿಹು. ೦೩೩).
[ರೋಮಾಂಚನ + ಕೊಳ್ಳು$_1$ (<ಕೊಳ್$_1$)]

**ರೋಮಾಂಚನವೆಸಗು** (ಕ್ರಿ). = ರೋಮಾಂಚಗೊಳ್ಳು : ನಿಟ್ಟಿಸುವಳು ಚುಂಬಿಸುವಳು ಮೈ ಜುಮ್ಮೆಂದಟ್ಟೆ ರೋಮಾಂಚನವೆಸಗಿ ಉಟ್ಟುದು ಸರಿದು ಮದನಜಲ ನೆಱೆ ಪೊಱಮಟ್ಟುದು ನಾಣೆಡೆಯಿಂದ (ಕಂಪವಿ. ೯-೦೯೭).
[ರೋಮಾಂಚನ + ಎಸಗು$_1$]

**ರೋಮಾಂಚನಿಸು** (ಕ್ರಿ). = ರೋಮಾಂಚಗೊಳ್ಳು : ಮಿಂಚೆ ರೋಮಾಂಚನಿಸಿತೆಂಬವೋಲ್ ಮೊಗಕೆ ತುಳ್ಕಿದುದು ತೈಜಸಂ (ಶ್ರೀರಾಮಾ. ೩೯೯-೯೯೩).
[ರೋಮಾಂಚನ + -ಇಸು$_3$]

**ರೋಮಾಂಚವೇಳು** (ಕ್ರಿ). = ರೋಮಾಂಚಗೊಳ್ಳು : ಶಂಖಧ್ವನಿಯು ಮೇಲಿಂದ ಮೇಲೆ ಕಿವಿಗೆ ಬೀಳುತ್ತಲೇ ಇತ್ತು. ಅದನ್ನು ಕೇಳಿದಾಗ ನನ್ನ ಮೈ ರೋಮಾಂಚವೇಳುತ್ತಿತ್ತು (ವಕಭಾ. ೬೯).
[ರೋಮಾಂಚ + ಏಳ್$_1$ (< ಏೞ್$_1$)]

**ರೋಮಾಂಚಿತ** (ಗು). ೧. ಕೂದಲು ನೆಟ್ಟಗಾದ, - ನಿಮಿರಿದ. (ನಾ). ೨. = ರೋಮಾಂಚ ೧ : ಬರ್ಕನ ವಕ್ತೃತೆಯನ್ನು (speeches) ಓದಿದರೆ ಶರೀರವೆಲ್ಲಾ ರೋಮಾಂಚಿತವಾಗಿ ಮನಸ್ಸು ಉನ್ಮತ್ತವಾಗಿ ಹೋಗುತ್ತದೆ (ದೇಜೀಕಾ. ೩೦). [ಸಂ.]

**ರೋಮಾಳಿ** (ನಾ). ೧. = ರೋಮಲತೆ ; ಕರ್ಪೊಡವಿದ ರೋಮಾಳಿ ರಂಜಿಕುಂದೇವಕಿಯಾ (ಜಗವಿ. ೨-೯೦). ೨. = ರೋಮಾಂಚ ೧ : ಹೊಗರಿಡುವ ಹರುಷದಲಿ ರೋಮಾಳಿಗಳ ಗುಡಿಯಲಿ ತನ್ನ ನಿಳಯಕೆ ಮುಗುದೆ ಬಂದಳು (ಕುವ್ಯಾವಿ. ೩-೦೦೩). ೩. ಹೆಣೆದ ಕೂದಲು ; ಜಡೆ : ಕವಿಕುಲಪಾರಿಜಾತ ಸನ್ಮಂದಗಾಮಿನಿ ಸಿಂಹಿಕೇಯರೋಮಾಳಿಸದೃಶೆ (ಕಬಿಕೃ. ೦೦-೯೩). ೪. ಮೈನೆರೆದಿರುವ ಸ್ಥಿತಿ ; ಯೌವನದ ಆರಂಭಕಾಲ. [ಸಂ. ರೋಮಾಲೀ]

**ರೋಮಿ** (ಗು). ೧. ಕೂದಲುಗಳಿಂದ ತುಂಬಿದ ; ರೋಮದಿಂದ ಕೂಡಿದ. (ನಾ). ೨. ಒಂದು ಬಗೆಯ ಜಿಂಕೆ ; ಚಮರೀಮೃಗ : " ರೋಮಿ ಗೋಕರ್ಣಮೆನಲು ಚಮರಿಯ ಮೃಗಂ " (ಮಂಗರಾ. ೯೯-೦೦).
[ಸಂ. ರೋಮಿನ್]

**ರೋಮೋದ್ಗಮ** (ನಾ). = ರೋಮಾಂಚ ೧ : ಆನಂದಾಶ್ರುಬಿಂದು ಪ್ರತತಿ ಸುರಿಯೆ ರೋಮೋದ್ಗಮಂ ಕೂಡೆ ಪೊಣ್ಮುತ್ತಿರೆ (ಕಾದಂಪೂ. ೯೯೦); ಹೇಳಿದಳು ಚಿತ್ರೆ ಪಾರ್ಥಂಗೆ ರೋಮೋದ್ಗಮಂ ಸುಭವಿಸುವಂತೆ (ಜಶ್ಯಾಂಗ. ೯೭-೦೩೦೩). [ಸಂ.]

**ರೋರುವ** (ನಾ). ರುರು ಎಂಬ ಜಾತಿಗೆ ಸೇರಿದ ಒಂದು ಬಗೆಯ ಜಿಂಕೆ : ಈ ಕಾಂಡಕ್ಕೆ ಸುತ್ತಿರುವ ಸ್ನಾಯುವು ಗೋವಿನದೆ, ಮಹಿಷದ್ದೆ, ರೋರುವದ್ದೆ, ಅಥವಾ ಕೋತಿಯದೆ ? (ಬುದ್ಧಕ. ೬೦). [<ಸಂ. ರುರು]

**ರೋಲಂಬ** (ನಾ). ದುಂಬಿ ; ಭ್ರಮರ : " ಮಧುವ್ರತಃ . . . ರೋಲಂಬಃ, ಬಂಭರಃ— ೧೫ ತುಂಬಿಯ ಹೆಸರುಗಳು " (ನಿಘಂಟು. ೦೭೨); ಫಾಲಾಕ್ಷಪದಪದ್ಮಮಕರಂದರಸಪಾನರೋಲಂಬಸಮರೂಪ (ದುರಕೃ. ೩೩-೩೨).
[ಸಂ.]

**ರೋಲ್ಲ್ಯಾಱಕಿ** (ನಾ). ಒಂದು ಸ್ಥಳದ ಹೆಸರು : ರೋಲ್ಲ್ಯಾಱಕ್ಯುತ್ತರತಃ . . . ಉದಕಪೂರ್ವ್ವಕಂ ದತ್ತಃ (ಇಆ. VI. ೭೩-೦೩; 535).
[ ? ]

**ರೋವ** (ನಾ). = ರೋಮ ೧ : " ರೋವ _ ರೋಮ(ನ್) = ಕೂದಲು, ತುಪ್ಪುಳ " (ತದ್ಭಕೋ. ೩೮); ಮಕಾರಕ್ಕೆ ವಕಾರಂ — ಅಮರೀ — ಅವರಿ . . . ರೋಮ — ರೋವ (ಶಮದ. ೨೭೩ ಪ್ರಯೋ).
[<ಸಂ. ರೋಮನ್]

**ರೋಷ** (ನಾ). ಸಿಟ್ಟು ; ಕೋಪ : " ಕೋಪಃ, ಕ್ರೋಧಃ, ಅಮರ್ಷಃ, ರೋಷಃ, ಪ್ರತಿಘಃ – ಈ ೫ ಮುನಿಸು " (ಹಲಾಯು. ೫೯–೨೦೭); ಆಶೆ ಇಲ್ಲದಿಪ್ಪುದೇ ತಪ. ರೋಷವಿಲ್ಲದಿಪ್ಪುದೇ ಜಪ (ಉಂಶ. ೪. ೧೯೪–೨೬೩); ದುರುಳರಿಬ್ಬರಿಗಿತ್ತರತಿನಿಷ್ಠುರದ ಶಾಪವನಸುರವಂಶೋತ್ಕರದೊಳಗೆ ಸಂಭವಿಸಿ ನೀವೆಂದಧಿಕರೋಷದಲಿ (ತೊರರಾ. ೧–೬–೧೮): ದೋಷ ಮಾಡು ವವನಿಗೆ ರೋಷ ಬಹಳ (ಗಾದೆ). [ಸಂ.]

**ರೋಷಂದಟ್ಟು** (ಕ್ರಿ). ಕೋಪವುಂಟಾಗು ; ಸಿಟ್ಟುಬರು ; ಕ್ರೋಧ ಗೊಳ್ಳು : ಮಡದಿಯರ ಮನದಿ ರೋಷಂದಟ್ಟಿದೊಡೆ ಪ್ರಾಣ ಬಿಡುವರ್ಕೈ (ನವಮೋ. ೯–೩೭). [ರೋಷ + ತಟ್ಟು$_1$]

**ರೋಷಂಬಡೆ** (ಕ್ರಿ). ಕೋಪಗೊಳ್ಳು ; ರೇಗು : ಉಗ್ರರೋಷಂಬಡೆದು ಹೊಯ್ದನು ತೋರಣದ ಕಂಬದಲಿ ರಕ್ಕಸನ (ತೊರರಾ. ೫–೫–೨೯). [ರೋಷ + ಪಡೆ$_1$]

**ರೋಷಚ್ಯುತ** (ನಾ). ಕೋಪವನ್ನು ಬಿಟ್ಟವನು ; ಶಾಂತಚಿತ್ತ : ಯತಿಗಳಾದಿರಿ ನೀವು ರೋಷಚ್ಯುತರಲೇ ಬಳಿಕೇನು ಧರ್ಮಜ್ಞತೆಯ ನೆಲೆ ಗಳನಱಿದ ಮನವೆಱಗುವುದೆ ಕಾಳಗಕೆ (ಕುಮಾ ಉ. ೭–೨೦). [ಸಂ.]

**ರೋಷಣ** (ಗು). ೧. ಸಿಟ್ಟಿಗೆದ್ದ; ಕೋಪಗೊಂಡ. (ನಾ). ೨. ಸಿಟ್ಟು; ಕೋಪ : ''ರೋಷಣಂ, ರೋಷಣೀಯಂ, ಈ ೨ ರೋಸಂ'' (ಶಾಶಕ. ೨೬೯). ೩. ಕೋಪಗೊಳ್ಳುವವನು ; ಕೋಪಿಷ್ಠ : ''ಕೋಪನಃ, ಕ್ರೋಧನಃ, ಕ್ರೋಧೀ, ರೋಷಣಃ, ಅಮರ್ಷಣಃ – ಈ ೫ ಮುನಿವವಂ'' (ಹಲಾಯು. ೫೯–೨೦೩). [ಸಂ.]

**ರೋಷಣೆ** (ನಾ). ಕೋಪ ; ಸಿಟ್ಟು : ಚಿಂತೆ ರೋಷಣೆ ಮಾತ್ರ ಸಮಗುಣ ವಾಂತುವಲ್ಲಾ ಧಾತು ಬಲಗಳ ವೆಂತನಾಗೆಲೆಯಾತ್ಮ ರಕ್ಷಿಪ ದೇವನನವರತಾ (ಶರಾಮಾ. ೩೩೨–೯೫). [ಸಂ. ರೋಷಣ]

**ರೋಷಭೀಷಣ** (ನಾ). ಕೋಪದಿಂದ ಭಯಂಕರನಾದವನು : ರೋಷ ಭೀಷಣನಾಗಿ ಕಾರ್ದನ್ ಕಠೋರಮಂ (ಶ್ರೀರಾಮಾ. ೭೨–೯೯೯). [ಸಂ.]

**ರೋಷಸಿ** (ನಾ). ಭೂಮಿ ಮತ್ತು ಆಕಾಶ : ''ದ್ಯಾವಾಭೂಮಿ, ರೋದಸ್ಯೌ, ರೋದಸೀ, ರೋಷಸೀ – ಈ ೪ ನೆಲನುಂ ಆಕಾಶದ ಪೆಸರ್'' (ಹಲಾಯು. ೨೦–೦೨೦). [ಸಂ. ರೋಷಸೀ]

**ರೋಷಿ** (ಗು). ಕೆರಳಿದ ; ಕುಪಿತಗೊಂಡ : ಸೋದರನ ಧನುರ್ಗುಣಮಂ ಛೇದಿಸಿದಂ ರೋಷಿರಾವಣಂ (ಶಂರಾಮಾ. ೧೪–೦೫). [ಸಂ. ರೋಷಿನ್]

**ರೋಸ** (ನಾ). = ರೋಷ : ಚಕ್ಕಟಿದ ಮೊಲೆಗಳುಂ ಕೈಮಿಕ್ಕಂಕುರ ದುಗಿಯುಮಲೆಯ ಸೆಳೆಗೊಂಬು ನೊಸಲ್ಕೊಕ್ಕಳಕಮುಃಮಿನಿಯನ ರೋಸಕ್ಕೆಡೆಯಾಯ್ತುಪ್ಪೆ ತರುಣಿ ಕುರವಕತರುಮಂ (ಲೀರಾವ. ೧೩–೯೨) ; ಷಕಾರಕ್ಕೆ . . . ರೋಷ – ರೋಸ (ಶಮದ. ೨೫೩ ಪ್ರಯೋ).
[< ಸಂ. ರೋಷ]

**ರೋಸಿಕೆ, ರೋಸಿಗೆ** (ನಾ). ಜುಗುಪ್ಸೆ ; ಅಸಹ್ಯ : ಅಧ್ಯಾತ್ಮವನ್ನು ಚಿಂತಿಸಿ ಚಿಂತಿಸಿ ನಮ್ಮವರು ಬೇಸತ್ತಿದ್ದಾರೆ, ಇವರಿಗೆ ಆದರಲ್ಲಿ ರೋಸಿಕೆ ಯುಂಟಾಗಿದೆ (ಕಮಶಾಂ. ೯೦). **ರೋಸಿಗೆ** : ಷಡುರಥರೊಂದಾಗಿ ಕೊಂದೊಬ್ಬ ಹಸುಳೆಯ ಹೆಣದರು ರೋಸಿಗೆಗೊಳದೆ (ಅಭಿಶಾ. ೦೭). [ರೋಸು$_1$ + – ಇಕೆ]

**ರೋಸಿಗೆ** ' ರೋಸಿಕೆ ' ನೋ.

**ರೋಸು$_1$** (ಕ್ರಿ). ೧. ಬೇಸರಗೊಳ್ಳು ; ಜುಗುಪ್ಸೆಹೊಂದು : ಮನಸ್ಸು ರೋಸಿ ನುಡಿಯಿತು (ಏಕಾಂಗಿ. ೩). ೨. ಕೋಪಗೊಳ್ಳು ; ಸಿಟ್ಟಾಗು : ಸೋಸಿ ದೈತ್ಯರನೆಲ್ಲ ರೋಸಿ ಪ್ರಾಣವ ಕೊಂಡ ದೋಷತನವ ನಾನು ಹೇಳಲೆ (ಪುರಂದ. ಭಾ. ೨–೦೦೫–೭) ; ಸಾಸಿರಗಾವುದಕೈದಿ ತನ್ನಿಷ್ಟಾರ್ಥ ಕೈಸಾರುವ ಸಮಯದೊಳು ರೋಸಿ ಬಿಸುಟು ಮರಳುವ ತೆಜದೊಳು (ಕಣಕವ. ೦೦–೦೫) ; ರೋಸದವರ ಮೇಲೆ ರೋಸುವೆ (ಬುದ್ಧಕ. ೭೪). **ರೋಸಿಕೊಳ್ಳು** = ಹೇಸು : ಬೇಸರಪಡು : ನಾನು ನನ್ನ ಮೇಲೆಯೇ ರೋಸಿಕೊಂಡು ಆಕೆಯನ್ನು ಹಿಂಬಾಲಿಸಿದೆ (ಬಾಣಂ. ೨೦೬). **ರೋಸಿಬಿಡು** = ಕೋಪಗೊಳ್ಳು ; ಸಿಟ್ಟಾಗು : ಈ ಪ್ರಪಂಚವನ್ನು ಕಂಡು ಅಪ್ಪು ರೋಷ ಬಂತು. ರೋಸಿ ಬಿಟ್ಟು ಆ ಮಾತು ಆಡಿದೆ (ಸುವಕಂ. ೨೪). **ರೋಸಿಹೋಗು** = ರೋಸಿಕೊಳ್ಳು : ನನಗೂ ಜೀವ ರೋಸಿಹೋಗಿದೆ (ಪಾಪೋರಿ. ೨೨೪) ; ಶಾಂತಾಳ ಮನಸ್ಸು ರೋಸಿ ಹೋಯಿತು (ಮೂರುದಾ. ೦೭೦). [ದೇ. ೫ ತೆಲು. ರೋಯು]

**ರೋಸು$_2$** (ನಾ). ಕೊಳಕು ; ಹೇಸಿಗೆ : ''ರೋಸು – ಹೊಲಸು'' (ಜಾವಕೋ. ೪೦). [< ರೋಸು$_1$]

**ರೋಹಣ** (ನಾ). ೧. ಹತ್ತುವುದು; ಏರುವುದು. ೨. ಬೆಳೆಯುವುದು; ಏಳಿಗೆ: "ರುಟ್, ರುಹಂ, ರೋಹಣಂ, ರೋಹಣೀಯಂ–ಈ ೪ ಮೊಳಕೆ'' (ಶಾಶಕ. ೦೫೦). ೩. ಬಾಣ; ಅಂಬು. ೪. (ಸಿಂಹಳದಲ್ಲಿರುವ) ಒಂದು ಪರ್ವತ: ತಾರಾಚಳದೊಡನೆ ರೋಹಣಂ ಪೋರ್ದುದೆನಲ್ ವಾರಣ ದೊಡನೆ ಖಗಪ್ರಭುವಾ ರಣದೊಳ್ ಪೋರ್ದು (ಜಗಏ. ೦೩–೦೦೦); ಉರ್ವೀಧ್ರಂ ರೋಹಣಮು ಗಡಾರ್ವಣೆಸಲಱಿವರಣ್ಣ ತಜ್ಜನಪದಮಂ (ಶಂಪ್ರಶ. ೩–೧೦). [ಸಂ.]

**ರೋಹಣದ್ರುಮ** (ನಾ). ಗಂಧದ ಮರ; ಚಂದನವೃಕ್ಷ. [ಸಂ.]

**ರೋಹಿ** (ನಾ). ೧. ಸವಾರಿಮಾಡುವವನು; ಸವಾರ: ರೋಹಿ ಜಾಗ್ರತೆ ದಪ್ಪೆ ಯಾತ್ರೆ ಸುಖ ಸಾಗೀತೆ (ಮಂಕುತ. ೩೯೭). ೨. ಬೆಳೆಯುವುದು; ವೃದ್ಧಿ. ೩. ಒಂದು ಬಗೆಯ ಜಿಂಕೆ. ೪. ಒಂದು ಬಗೆಯ ಮರ: "ರೋಹೀ . . . ದಾಡಿಮಪುಷ್ಪಕಃ—ನಾಲ್ಕು ಮುಳ್ಳುಮುತ್ತುಗದ ಹೆಸರುಗಳು" (ಸಿದ್ಧಂತಿ. ೦೩೩). [ಸಂ.]

**ರೋಹಿಣ** (ಗು). ೧. ರೋಹಿಣೀನಕ್ಷತ್ರದಲ್ಲಿ ಹುಟ್ಟಿದ. (ನಾ). ೨. ವಿಷ್ಣು. ೩. ಒಂದು ಬಗೆಯ ಸಸ್ಯ; ಮುಳ್ಳುಮುತ್ತುಗ. [ಸಂ.]

**ರೋಹಿಣಿ** (ನಾ). ೧. ಹತ್ತುವುದು ; ಸವಾರಿ ಮಾಡುವುದು. ೨. ಶ್ರೀಗಂಧ; ಚಂದನ: ''ರೋಹಿಣಿ ಮಲಯಜಂ ಚಂದನಂ ಗಂಧಮೆಂದೆ ನಿಕ್ಕುಂ'' (ಮಂಗರಾ. ೯೯–೫೦). ೩. ಕೆಂಬಣ್ಣದ ಹಸು: "ರೋಹಿಣಿಯುನಡ್ವ ಯಜರ್ನಿ ವೃಷೆ ಗೋ ನ್ವೃಷಭ ವಾಹಿನಿಯೆನೆ ಹಸು" (ಮಂಗರಾ. ೫೩–೩). ೪. ದಕ್ಷಬ್ರಹ್ಮನ ಮಗಳು; ಚಂದ್ರನ ಹೆಂಡತಿ : ''ರೋಹಿಣೀ = ಚಂದ್ರನ ಹೆಂಡತಿ" (ಶಾಶಕ. ೦೫೦); ಕ್ಷಿತಿಗೆ ಲಕ್ಷ್ಮಿಗೆ ರೋಹಿಣಿಗೆ ಭಾರತಿಗೆ . . . ನೂಱುಮಡಿ . . . ಗಂಗಾಯಿ (ಬಸಪು. ೪–೩೦). ೫. ವಸುದೇವನ ಹೆಂಡತಿ; ಬಲರಾಮನ ತಾಯಿ: ಮಾಯಾದೇವಿ . . . ದೇವಿಯ ಗರ್ಭದರ್ಭಕನನತ್ತಲ್ ಗೋಕುಲಕ್ಕುಯ್ದು . . . ಯೋಜಿಸಿದಳಂತಾ ರೋಹಿಣೀಗರ್ಭದೊಳ್ (ಜಗಏ. ೨–೭೦). ೬. ಮೈನೆರೆದ ಹುಡುಗಿ. ೭. ಒಂದು ಬಗೆಯ ಸಸ್ಯ ; ಕಟುಕರೋಹಿಣಿ : "ಕಟುಃ, ಕಟುಂಭರಾ, ಅಶೋಕಾ, ರೋಹಿಣೀ . . . ಶಕುಲಾದನೀ–೯ ಕಟುಕರೋಹಿಣೀ ಹೆಸರು ಗಳು'' (ಸಿದ್ಧಂತಿ. ೦೭೦). ೮. ಒಂದು ಬಗೆಯ ಕಂಠರೋಗ: ಪಿತ್ತಾಧಿಕ್ಯ ದಿಂದ ಉಂಟಾಗಿ ಕೊರಳ ನರಗಳು ಬಿಗಿದು ಬಾಯಾಱಿಕೆ ತಾಪ, ಬಳಲಿಕೆಗಳ ಉಂಟುಮಾಡುವದು ರೋಹಿಣಿ ಎನಿಸಿಕೊಂಬ ಕಂಠರೋಗವೆಂದಱಿವುದು (ವೈದ್ಯಶಾ. II. ೦೦೭). ೯. [ಜ್ಯೋತಿ] ಇಪ್ಪತ್ತೇಳುನಕ್ಷತ್ರಗಳಲ್ಲಿ ನಾಲ್ಕನೆಯದು ಮತ್ತು ಆ ನಕ್ಷತ್ರದಲ್ಲಿ ಬರುವ ಮಳೆ : ಅಶ್ವಿನಿ ರೋಹಿಣಿಯುದಿತಿಯೆನಿಪ್ಪನಿತುಂ ನಕ್ಷತ್ರಮುತ್ತಮಂ ಪೊಸತನುಡಲ್ (ಲೋಕೋಪ. ೦–೦೨) ; ತಾವರೆಮರದ ಬದಣಿಕೆಯಂ ರೋಹಿಣಿನಕ್ಷತ್ರದಲ್ಲಿ ತಂದು ಮುಂಗೈಗೆ ಕಟ್ಟುವುದು (ಕಳವ. ೦೨೦) : ರೋಹಿಣಿ ಮೃಗಶಿರ . . . ಆಶ್ಲೇಷ ಈ ಆರು ಮಳೆಗಳಲ್ಲಿ ಮುಂಗಾರಿಯನ್ನು ಬಿತ್ತುವದು (ಕೃಷಿಶ್ರ. ೬೫) ;

ರೋಹಿಣಿ ಬಿತ್ತನೆ ರೋಗವಿಲ್ಲದ ತೆನೆ (ಗಾದೆ).

**ರೋಹಿಣ್ಯಾದಿಕಲ್ಕ** = ಕಟುಕರೋಹಿಣಿ ಮುಂತಾದುವುಗಳಿಂದ ಮಾಡಿದ ಒಂದು ಬಗೆಯ ಔಷಧದ್ರವ್ಯ: ರೋಹಿಣ್ಯಾದಿಕಲ್ಕ–ಕಟುಕ ರೋಹಿಣಿ, ಕೊತ್ತುಂಬರಿ . . . ಗೋರೋಜನ ಇವುಗಳನ್ನು ಸಮವಾಗಿ ಸೇರಿಸಿ, ಕಲ್ಕ ಮಾಡಿ ಸಹದೇವಿರಸವನ್ನು ಸೇರಿಸಿ ಕೊಟ್ಟಲ್ಲಿ ಸರ್ವಜ್ವರವು ಬಿಡುವುದು (ಸಳವ್ಯ. ೦೦೪). **ರೋಹಿಣ್ಯಾದಿಘೃತ** = ಕಟುಕರೋಹಿಣಿ ಮುಂತಾದುವನ್ನು ಹಾಕಿ ಮಾಡಿದ ಒಂದು ಬಗೆಯ ಔಷಧದ್ರವ್ಯ: ರೋಹಿಣ್ಯಾಧಿಘೃತ . . . ಕಟುಕರೋಹಿಣಿ ೫ ತೊಲಮಂ ಚೂರ್ಣವ ಮಾಡಿ ಹಾಕಿ ತೊಳಸಿ ಇರಿಸಿಕೊಂಡು ನಿತ್ಯವೂ ಸೇವಿಸಲು ಹಳೆಯ ಜ್ವರ ಗುಣಮಕ್ಕುಂ (ಸಳವ್ಯ. ೧೨೪). [ಸಂ. ರೋಹಿಣೀ]

**ರೋಹಿಣಿಸಂಧಿ** (ನಾ). ಕುದುರೆಯ ಒಂದು ಅಂಗ : ತ್ರಿಕದೆರಡುಂ ಕೆಲಕ್ಕಂ ರೋಹಿಣಿಸಂಧಿಯೆಂಬ ಪೆಸರಕ್ಕುಂ (ಅಶ್ವಶಾ. ೬೯–೬). [ರೋಹಿಣಿ₂ + ಸಂಧಿ]

**ರೋಹಿಣೀಪರಿಗತ** (ನಾ). ೧. ಕೆಂಪುಬಣ್ಣದ ಆಕಳಿನಿಂದ ಕೂಡಿದುದು. ೨. ರೋಹಿಣೀನಕ್ಷತ್ರದಿಂದ ಕೂಡಿದುದು. ೧, ೨ : ನೀಹಾರರುಕ್ಚಿತ್ತ ವೃತ್ತದವೊಲ್ ರಾಜಿತರೋಹಿಣೀಪರಿಗತಂ . . . ಪಂ ಚೆಲ್ವಾಯ್ತು ಗವಾಶ್ರಯಂ (ಲೀಲಾವ. ೫–೦೨೦). [ಸಂ.]

**ರೋಹಿಣೀವಲ್ಲಭ** (ನಾ). ಚಂದ್ರ : "ಇಂದುಃ . . . ರೋಹಿಣೀವಲ್ಲಭಃ . . . ದಾಕ್ಷಾಯಣೀರಮಣಃ– ಈ ೧೨ ಚಂದ್ರನ ಪೆಸರ್" (ಹಲಾಯು. ೬–೪೨). [ಸಂ.]

**ರೋಹಿತ** (ಗು). ೧. ಕೆಂಪಾದ ; ಕೆಂಪುಬಣ್ಣದಿಂದ ಕೂಡಿದ. (ನಾ). ೨. ಕೆಂಪುಬಣ್ಣ ; ರಕ್ತವರ್ಣ : "ಲೋಹಿತಃ, ರೋಹಿತಃ, ರಕ್ತಃ– ೩ ಕೆಂಪುಬಣ್ಣದ ಹೆಸರುಗಳು" (ಸಿದ್ಧಾಂತ. ೪೬). ೩. ನೆತ್ತರು; ರಕ್ತ: ಕಾಳೆಮ್ಮೆಯ ಕಟಿಯಲಾಗಿ ಹಾಲು ರೋಹಿತವಾಗಿ ಬದ್ದಿತ್ತು (ಪೋಳಿಪಾ. ೨೨೩–೭೭೭); ಏಳ್ತರುತಿರ್ದಪುದಿತ್ತ ನಿನ್ನ ಪೆರ್ಬಲಮುಡಿದಸ್ಥಿಯಿಂ ಸುರಿವ ರೋಹಿತದಿಂ (ರಾಜಶೇ. ೫–೦೦೯). ೪. ಒಂದು ಬಗೆಯ ಜಿಂಕೆ ; ಚಮರೀ ಮೃಗ : "ರೋಹಿತಃ, ಚಮರಃ –ಚೌರೀಬಾಲದ ಮೃಗ" (ಸಿದ್ಧಾಂತ. ೦೫೩). ೫. ಕುಂಕುಮಕೇಸರಿ. ೬. ಮನುಷ್ಯನ ಕಣ್ಣಿಗೆ ಕಾಣುವುದಿಲ್ಲ ವೆಂದೂ ನೆಟ್ಟಗಿರುವುದೆಂದೂ ನಂಬಲಾದ ಕಾಮನ ಬಿಲ್ಲು: "ಇಂದ್ರನ ಬಿಲ್ಲು ಋಜು(ವಾದುದು) ರೋಹಿತವೆಂಬುದು" (ಹಲಾಯು. ೦೦–೫೭). ೭. ಒಂದು ಬಗೆಯ ಕೆಂಬಣ್ಣದ ಮೀನು : "ರೋಹಿತಃ, ಮದ್ಗುರಃ –ಯಾವಾಗಲೂ ಮುಳುಗಿಕೊಂಡಿರುವ ಮೀನು, ಕೆಂಪುಮೀನು" (ಸಿದ್ಧಾಂತ. ೬೨); ಆಳದ ಮಡುವಿನೊಳಾಡುತಲಿದ್ದರು ತಾನು ನಿಗರ್ವಿ ರೋಹಿತನು ಉಂಗುಟಮಾತ್ರದ ನೀರಿನೊಳಿದ್ದರು ಶಫರಿ ತಾ ಫುರ್ಫುರಾಯತನು (ಅಂಶಾಶ. ೭೨–೪೯). [ಸಂ.]

**ರೋಹಿತಕ** (ನಾ). ಒಂದು ಬಗೆಯ ಮರ ; ಮುಳ್ಳುಮುತ್ತುಗ : "ರೋಹೀ, ರೋಹಿತಕಃ, ಪ್ಲೀಹಶತ್ರುಃ, ದಾಡಿಮಪುಷ್ಪಕಃ – ೪ ಮುಳ್ಳು ಮುತ್ತುಗದ ಹೆಸರುಗಳು" (ಸಿದ್ಧಾಂತ. ೦೨೩). [ಸಂ.]

**ರೋಹಿತಾಶ್ವ** (ನಾ). ೧. ಕೆಂಪುಕುದುರೆಗಳನ್ನುಳ್ಳವನು ; ಅಗ್ನಿ : "ಅಗ್ನಿಃ . . . ಅನಲಃ, ರೋಹಿತಾಶ್ವಃ . . . ಅಪ್ಪಿತ್ತಂ – ೩೪ ಅಗ್ನಿ ಹೋತ್ರನ ಹೆಸರುಗಳು" (ಸಿದ್ಧಾಂತ. ೨೩). ೨. ಹರಿಶ್ಚಂದ್ರನ ಮಗ; ಲೋಹಿತಾಶ್ವ : ರೋಹಿತಾಶ್ವನು ಮರಣಹೊಂದಿದಾಗ ಅವನ ತಾಯಿ ತಂದೆಗಳು ಹೇಡಿತನದಿಂದ ಅಗ್ನಿಪ್ರವೇಶಮಾಡಲು ಸಿದ್ಧರಾದರು (ಹಕಾ. ೨೯ ಪೀಠಿ). [ಸಂ.]

**ರೋಹಿಷ** (ನಾ). ೧. ಒಂದು ಬಗೆಯ ಸುವಾಸನೆಯ ಹುಲ್ಲು ; ಲಾಮಂಚ. ೨. ಒಂದು ಬಗೆಯ ಮೀನು. ೩. ಒಂದು ಬಗೆಯ ಜಿಂಕೆ. [ಸಂ.]

**ರೋಹಿಸು** (ಕ್ರಿ). ಮೇಲೆಬೀಳು ; ಆಕ್ರಮಿಸು : ಆ ಕಾಕರಾಸರುಮೆಬ್ಬಿದ ಪೆರ್ಗ್ಗಾಳ್ಗಳಿಯ ಕೋಟೆಯಾನ್ ರೋಹಿಸಿ (ಎಪಿ. VIII, ಸೊರಬ. ೦೦–೪; ಕ್ರಿ. ೮೦೦). [ರೋಹಣ + – ಇಸು₃]

**ರೋಹೀತಲ್ಲ** (ನಾ). ಒಂದು ಊರಿನ ಹೆಸರು : ತಸ್ಯ ಪೂರ್ವತಃ ರೋಹೀ ತಲ್ಲಗ್ರಾಮಃ (ಇಪಿ. XII, ೨೬೭–೫೪; ೯೭೩). [ ? ]

**ರೌಕುಳ** ' ರವಕುಳ ' ನೋ.

**ರೌಕುಳಿ** (ನಾ). ಚೆಲ್ಲಾಪಿಲ್ಲಿ ; ಅಸ್ತವ್ಯಸ್ತತೆ: ಆ ರೌಕುಳಿಯ ರಣದೊಳೆತ್ತ ತ್ತಲುಂ ಪರಿದಪಾರಶೋಣಿತನದಿಗಳ್ (ಶಬರಾ. ೦೭–೩೭). [<ರವಕುಳಿ]

**ರೌಚನಿಕ** (ಗು). ೧. ಹಳದಿಬಣ್ಣದ. (ನಾ). ೨. ಹಲ್ಲಿನ ಮೇಲಿನ ಕೊಳೆ. [ಸಂ.]

**ರೌಚ್ಯ** (ನಾ). ೧. ಕಾಂತಿ; ಹೊಳಪು: "ರುಕ್ . . . ರುಚ್ಯಂ, ರೌಚ್ಯಂ, ಈ ೬ ಪೊಗರ್" (ಅಭಿಧಾ. ೧೭೦). ೨. ಹದಿನಾಲ್ಕು ಮನುಗಳಲ್ಲಿ ಒಬ್ಬ: ರುದ್ರಸಾವರ್ಣಿಕ ರೌಚ್ಯ ಇಂದ್ರಸಾವರ್ಣಿಕರೆಂಬ ಹದಿನಾಲ್ಕು ಮನುಗಳ್ (ಬಿವೇಳ. ೨೦೪). [ಸಂ.]

**ರೌಡಿ** (ನಾ). ತುಂಟಃ ಪುಂಡ : ಆ ಹಳ್ಳಿಯಲ್ಲಿ ಅವನು ರೌಡಿರಂಗಣ್ಣ ನೆಂದೇ ಹೆಸರುವಾಸಿಯಾಗಿದ್ದಾನೆ (ರೂಢಿ). [←ಇಂ. Rowdy]

**ರೌಡು** (ನಾ). ಆರ್ಭಟ ; ಜೋರು (?) : ಈ ಸಾರಿ ಜಾತ್ರೀ ರೌಡು ಸ್ವಲ್ಪ ಹೆಚ್ಚು ಮಾಡಬೇಕಾಗೇದ (ತಿಮ್ಮಗು. ೪೫) ; ಲಗೂ ಹೋಗು ಎಂದು ರೌಡು ಮಾಡಿದನು (ಗಂಪಯು. ೧೬೬).

**ರೌಡಿಗೇಳು** = ಉದ್ರೇಕಗೊಳ್ಳು ; ಅಬ್ಬರಮಾಡು : ಅವರು ತುಸು ರೌಡಿಗೆದ್ದೇ ಮಾತಾಡಿದರು (ಗಂಪಯು. ೯೫). [ ? ]

**ರೌದ್ರ** (ಗು). ೧. ರುದ್ರನಿಗೆ ಸಂಬಂಧಿಸಿದ. ೨. ಭಯಂಕರವಾದ ; ಭೀಕರವಾದ : ಮಹಾಬೀಭತ್ಸಕುತ್ಸಿತೋತ್ಪತ್ತಿಸ್ಥಾನಂಗಳೊಳುತ್ಪನ್ನ ಕೃಷ್ಣನೀಲಕಪೋತಲೇಶ್ಯಾನುಬಂಧರೌದ್ರಪರಿಣಾಮಪರಿಣತರುಂ (ಸುಕುಮಾ. ೦೦–೪೦ ವ); ಹರುಷದಿಂ ಶಾಂತಿ ಸತ್ಯಂ ಭೂತದಯೆಗಳಂ ದೊರಕಿಸಿಯೆ ಕ್ರೋಧಾರ್ಥರೌದ್ರಮಿಥ್ಯಂಗಳಂ ಪರಿಹರಿಸಿ (ಹಕಾ. ೮–೦೭). (ನಾ). ೩. ಭಯಂಕರತೆ ; ಬೀಭತ್ಸ. ೪. ಕೋಪ ; ಕ್ರೋಧ. ೫. ಬಿಸಿಲು: " ಆತಪಃ , ರೌದ್ರಃ (ಕಥ್ಯತೇ) — ಈ ೨ ಬಿಸಿಲ್ " (ಹಲಾಯು. ೬–೪೦). ೬. ಒಂದು ಕ್ರೂರದೇವತೆ. ೭. ಅರುವತ್ತುನಾಲ್ಕು ಸಂವತ್ಸರಗಳಲ್ಲಿ ಐವತ್ತುನಾಲ್ಕನೆಯದು ; ರೌದ್ರಿ. ೮. [ಕಾವ್ಯಮೀ] ನವರಸಗಳಲ್ಲಿ ಒಂದು; ಕ್ರೋಧವೆಂಬ ಸ್ಥಾಯೀ ಭಾವದಿಂದ ಹುಟ್ಟುವ ರಸ: "ಶೃಂಗಾರಃ, ಹಾಸ್ಯಃ, ಕರುಣಃ, ರೌದ್ರಃ . . . ಶಾಂತಃ — ಈ ೯ ರಸಂಗಳ್ " (ಹಲಾಯು. ೦೭–೯೨); ಶೃಂಗಾರ ಹಾಸ್ಯ ಕರುಣ ರೌದ್ರ . . . ನವರಸಾವಸ್ಥೆ (ಬಿವೇಳ. ೨೨೭) ; ರೌದ್ರ– ಗದಾಯುದ್ಧದಲ್ಲಿ ಮತ್ತು ವೇಣೀಸಂಹಾರದಲ್ಲಿ ದುರ್ಯೋಧನ ಭೀಮರ ಆಟೋಪ ಬರುವ ಕಡೆಗಳು (ಕೃಬಿಡಿ. ೦೪೦). ೯. [ಜೈನ] ನಾಲ್ಕು ಬಗೆಯ ಧ್ಯಾನಗಳಲ್ಲಿ ಒಂದು : ಆರ್ತರೌದ್ರಧರ್ಮಶುಕ್ಲಾಭಿಧಾನಧ್ಯಾನಚತುಷ್ಟಯಮುಮಂ (ಸುಕುಮಾ. ೩–೩೯ ವ). [ಸಂ.]

**ರೌದ್ರಕ** (ನಾ). ಉಗ್ರತೆ ; ತೀಕ್ಷ್ಣತೆ : ಕುಶನೆ ಕೇಳಚ್ಚರಿಯ ಕಡಿದವು ರಸವನೆರಡಕ್ಷಿಗಳು ಲಕ್ಷ್ಮಣ ದಶಮುಖರ ಮೇಲಿಂದುಸೂರ್ಯರ ಶಾಂತ ರೌದ್ರಕದ (ತೊರರಾ. ೬–೨೫–೦). [ಸಂ.]

**ರೌದ್ರಕಾಲ** (ನಾ). ರಾತ್ರಿ ; ಇರುಳು : ಈ ರೌದ್ರಕಾಲದಲ್ಲಿ ರಾಕ್ಷಸರಿಗೆ ಬಲ ಹೆಚ್ಚಾಗುತ್ತದೆ (ವಕಬಾ. ೩೯). [ಸಂ.]

**ರೌದ್ರತೆ** (ನಾ). ಭಯಂಕರತೆ ; ಭೀಷಣತ್ವ : ನಂದೀಶ್ವರನ ಸರ್ವಜ್ಞತೆಯು ಭೃಂಗೀಶ್ವರನ ಶಿವ ಲಿಂಗೈಕಭಾವನೆ ವೀರಗಣವರನ ಪರಮ ರೌದ್ರತೆ (ಬಸವ. ೫೩–೫). [ಸಂ. ರೌದ್ರತಾ]

**ರೌದ್ರತೆವೆಱು** (ಕ್ರಿ). ಭಯಂಕರವಾಗು ; ಭೀಷಣತ್ವವನ್ನು ಹೊಂದು : ಪುಟ್ಟೆ ಸಮಸ್ತಧಾತ್ರಿಗೆ ಭಯಂ ನಿಟಲಾಕ್ಷ ಚತುರ್ಭುಜಾನ್ವಿತಂ ಪುಟ್ಟಿದ ಗರ್ವುರ್ ರಾವಣನ ರೌದ್ರತೆವೆತ್ತವತಾರವೀತನೊಂದೊಟ್ಟಜೆ (ಜಗಂ. ೭-೯೩). [ರೌದ್ರತೆ + ಪೆಱು₁]

**ರೌದ್ರದೃಷ್ಟಿ** (ನಾ). [ನಾಟ್ಯ] ಉಗ್ರತೆಯನ್ನು ಸೂಚಿಸುವ ನೋಟ ; "ಹುಬ್ಬನ್ನು ಗಂಟಿಕ್ಕಿ, ಕಣ್ಣನ್ನು ಕೆಂಪಗೆ ಮಾಡಿ ರೆಪ್ಪೆಬಡಿಯದೆ ನಟ್ಟ ದೃಷ್ಟಿಯಲ್ಲಿ ಆತುರದಿಂದ ನೋಡುವುದು" (ಅಭಿನಯದರ್ಪಣ. ೨೬೭ ಗದ್ಯಾನುವಾದ) : ಎವೆಪೊಯ್ಯದೆ ಕಡುಗೆಂಪಂ ಸವನಿಸಿ ನಟ್ಟಾಲಿಗೊಂಡು ಪುರ್ವಂ ಗಂಟಿಕ್ಕುವ ಭಾವದಿಂದೆ ನೋಡುವ ತವಕಂ ವಿಗೆ ರೌದ್ರದೃಷ್ಟಿ ಯೆನಿಕುಂ (ಅಭಿನಯ. ೩-೦೩). [ಸಂ.]

**ರೌದ್ರಧ್ಯಾನ** (ನಾ). = ರೌದ್ರ ೯ : ಬಹ್ವಾರಂಭಸುರಂಭರೌದ್ರಧ್ಯಾನ ಪರಿಣತಂ (ಆದಿಪು. ೨-೦೦ ವ) ; ಬಹ್ವಾರಂಭರೌದ್ರಧ್ಯಾನದಿನುಪಾರ್ಜಿತ ನರಕಾಯುಃಷ್ಯನಾಸನ್ನಮೃತ್ಯುವಾಗಿ (ಶಾಪುಂಪು. ೦೯). [ಸಂ.]

**ರೌದ್ರರತಿ** (ನಾ). ಉಗ್ರವಾದ ಸುರತ : ಅವಳು ಕೋಪದಿಂ ಕೆಂಗಣ್ಣಾಗಿ ಎವೆ ಇಕ್ಕದೆ ನೋಡುವಳು. ಅವನತ್ಯಂತ ಭಾವಿಸುವಳು . . . ನಖಕ್ಷತಂ ಗೈದು ಪೀಡಿಸಿ ಅವನ ಕೆಳಗಿಕ್ಕಿ ಮೇಲೇರಿ ಉಪರಿಸುರತಂಗೈವಳು. ಇದು ರೌದ್ರರತಿ (ಕಾಮಶಾ. ೨೪೬). [ಸಂ.]

**ರೌದ್ರರವ** (ನಾ). ಭಯಂಕರವಾದ ಶಬ್ದ,—ಅಬ್ಬರ : ರೌದ್ರರವಭಟ ಘಟಿತನಿಸ್ವನದ ಇಡಿದ ಧೂಳಿಯ ಧೂಮರಾಶಿಯು ಪಡೆ . . . ದಾವಾಗ್ನಿ ಯಂತಿರೆ ತೋಱಿತು (ಕುಮಾವ್ಯಾ. ೭-೩). [ಸಂ.]

**ರೌದ್ರರಸ** (ನಾ). = ರೌದ್ರ ೮ : ನೃಪತುಂಗದೇವ ಮಾರ್ಗೋತ್ಸವ ಮೂರ್ಜಿತೋಕ್ತಿಗಳಿಸಕ್ಕತಿರೌದ್ರರಸಂ ರಸಾವಹಂ (ಕವಿರಾ. ೨-೦೦೦) ; ಕ್ರೋಧಾತ್ಮಕವಾದ ರೌದ್ರರಸದಲ್ಲಿ ಹೃದಯಸಂವಾದವನ್ನು ಪಡೆಯುವುದು ತಾಮಸಪ್ರಕೃತಿಯವರಿಗೇ ಸಹಜವು (ಕಾರಶಾ. ೪೧೯). [ಸಂ.]

**ರೌದ್ರಾವತಾರ** (ನಾ). ಭಯಂಕರವಾದ ಅವತಾರ ; ಉಗ್ರವಾದ ರೂಪ : ನಿನ್ನನ್ನೂ ಸೀಳಿ ನಾಲ್ಕುಭಾಗ ಮಾಡಿ ನಾಲ್ಕುಬಾಗಿಲುಗಳಿಗೆ ಜೋತುಹಾಕುತ್ತೇನೆ ನೋಡು ಈಗ ಎಂದು ರೌದ್ರಾವತಾರ ತಾಳಿ . . . ಒಳಗೆ ಹೋದಳು (ಹಳ್ಳಿಕಾ. ೦೧೬) ; ಜನರು ಅವನ ರೌದ್ರಾವತಾರವನ್ನು ನೋಡಿ ಬೆಕ್ಕಂಬೆರಗಾಗುತ್ತಿದ್ದರು (ಪಪ್ಪೂರು. ೩೨). [ಸಂ.]

**ರೌದ್ರಾವಹ** (ನಾ). ಭಯವನ್ನುಂಟುಮಾಡುವುದು;ಭೀಕರತೆಯನ್ನುಂಟು ಮಾಡುವುದು : ದೇವ ಮದೇಭದಾಕೃತಿಯನಾಂತು ಕೃತಾಂತನೆ ಬಂದನೆಂಬ ರೌದ್ರಾವಹವಪ್ಪುದೊಂದು ಗಜಮೆತ್ತಣಿನಕ್ಕೆ ಪುರಕ್ಕೆ ಬಂದು (ಕಂಪ್ರಶ. ೯ ೬೭). [ಸಂ.]

**ರೌದ್ರಾಹವ** (ನಾ). ಭಯಂಕರವಾದ ಕಾಳಗ; ಭೀಕರವಾದ ಯುದ್ಧ : ಗದಾಯುದ್ಧಂ ಪರಿಚ್ಛಿನ್ನಮಿಂತು ದಿನಂಗಳ್ ಪದಿನೆಂಟಱಿಂ ಸಮೆದುದಾ ರೌದ್ರಾಹವಂ ಭಾರತಂ (ಗದಾಯು. ೯-೩೭) [ಸಂ.]

**ರೌದ್ರಿ** (ನಾ). ೧. ಭಯಂಕರಸ್ವರೂಪವನ್ನು ಹೊಂದಿರುವವಳು ; ದುರ್ಗೆ; ಪಾರ್ವತಿ : ಕ್ರೂರವಾತೆಯುರ, ರೌದ್ರಿಯುರ, ಕಟ್ಟುಗ್ರಮೆಜಗಿಂ, ತೀರಿಸಿಂ ನಿಮ್ಮ ಕೋಪಂಗಳನ್ (ಅಕ್ಕತಾ. ೩೯-೬೩೭) ; ಶಕ್ತಿಯು . . . ವಾಮಾ. ಜ್ಯೇಷ್ಠಾ. ರೌದ್ರೀ ಎಂಬ ಸಂಜ್ಞೆಗಳಿಂದಲೂ ಇರುತ್ತಾಳೆ (ಶಾರದ. ೨೨೨). ೨. ಅರುವತ್ತುಸಂವತ್ಸರಗಳಲ್ಲಿ ಐವತ್ತುನಾಲ್ಕನೆಯದು: ಪ್ರಭವ . . . ರೌದ್ರಿ . . . ಅಕ್ಷಯಮೆಂಬಱುವತ್ತು ತೆಱನಾಗಿಹುದು (ವಿವೇಕ. ೩೨೦). ೩. ಒಂದು ಬಗೆಯ ಬಳ್ಳಿ : "ರೌದ್ರಿಯೆನೆ ಕಣಬೆ" (ಮಂಗರಾ. ೯೯-೯೩). [ಸಂ. ರೌದ್ರೀ]

**ರೌದ್ರಿಕ** (ನಾ). ಭಯವನ್ನುಂಟುಮಾಡುವವನು : ಮೃತ್ಯುಧ್ಯಾನಪನೆ ಮಾಡುತಿರುವ ರೌದ್ರಿಕರ ನಡುವೆ ನಡೆದೆ (ಸೂರ್ದಾಸ. ೦೭-೩). [ಸಂ.]

**ರೌದ್ರೆ** (ನಾ). ೧. ಭಯಂಕರವಾಗಿರುವವಳು : ಕಡುವೇದನೆಯ ಕಳಕಳದ ಹಾಹಾರವದ ರೌದ್ರೆ ಸುಭದ್ರೆ ನಡೆತಂದು (ಕುಮಾವ್ಯಾದ್ರೋ. ೭-೦೩). ೨. ದುರ್ಗೆ : ಜಯ ರೌದ್ರೆ ಭೈರವಿ ವಿರೂಪಟ್ಟಹಾಸಿನಿ (ದೇಶೀಮ. ೯೦). [ಸಂ. ರೌದ್ರಾ]

**ರೌನಾಡು** (ನಾ). ಒಂದು ಪ್ರದೇಶದ ಹೆಸರು : ಅಯ್ಯಪ್ಪ ರೌನಾಡ ಪಕ್ಕದ ಭಾಗದ ತೋಂಟಮಾವಾ್ ಮೂಡಣ ಬಸದಿಗೆ ಕೊಟ್ಟರ್ (ಪ್ರಶಾಂ. ೦೯೦೯, III. ೭-೩ ; 800). [ ? + ನಾಡು]

**ರೌಪ್ಯ** (ಗು). ೧. ಬೆಳ್ಳಿಯಿಂದ ಮಾಡಿದ ; ರಜತದ. (ನಾ). ೨. ಒಂದು ಬಗೆಯ ಲೋಹ ; ಬೆಳ್ಳಿ ; ರಜತ : "ರೌಪ್ಯಮೆನೆ ಕಾರಮೆನೆ . . . ಬೆಳ್ಳಿಗಭಿಧಾನಮಕ್ಕುಂ" (ಮಂಗರಾ. ೩೦-೩) ; ಖೇಚರ ಕಾಂತೆಯು ಹಸ್ತದಿಂ ಕಟಲ್ವಿದ ನವರೌಪ್ಯಕುಂಭಮೆ . . . ಕಾಣಲಾದವು ದೆನಲ್ . . . ಪೊಳೆಯುತಿರ್ದುದು ಚಂಡಮರೀಚಿಮಂಡಲಂ (ಜಗಂ. ೪-೬೦) ; ಬೆಳಿಮಂಜು ತಾಂ ರೌಪ್ಯಧೂಳಿಯ ಸಾಂದ್ರಧೌತಧವಳವನೆರಚಿ ಮುಚ್ಚಿ ಮುಸುಕಿದುದು ಗಿರಿವನಭುವನಮಂ (ಶ್ರೀರಾಮಾ. ೦೯೯-೦೩೩). [ಸಂ.]

**ರೌಪ್ಯಾದ್ರಿ** (ನಾ). ಬೆಳ್ಳಿಯ ಬೆಟ್ಟ ; ರಜತಗಿರಿ : ಅರ್ಥಶಾಸ್ತ್ರೋದಾತ್ತಂ ದಂಡೋಪ[ನತ]ನೆನೆ ರೌಪ್ಯಾದ್ರಿ ಚೆಲ್ವಾದುದಾಗಳ್ (ಶಾಂತಿಪು. ೧೦-೩೦) ; ನಗಂ ತೊಟ್ಟನೆ ಚಂಚಚ್ಚಂದ್ರರೋಚಿರ್ಧವಳಮೆನಿಸಿ ರೌಪ್ಯಾದ್ರಿಯಂ ತಿರ್ದುದು (ಅಜಿಪು. ೪-೭೬). [ಸಂ.]

**ರೌಮಕ** (ಗು). ೧. ರೋಮದೇಶಕ್ಕೆ ಸಂಬಂಧಪಟ್ಟ,— ಸೇರಿದ. (ನಾ). ೨. ಅಜ್ಮೀರದ ಬಳಿಯಲ್ಲಿ ದೊರೆಯುವ ಒಂದು ಬಗೆಯ ಉಪ್ಪು : "ರೌಮಕಂ, ಬಸ್ತಕಂ'— ೨ ಸಾಭರದೇಶದಲ್ಲಿ (ರುಮ) ಎಂಬ ಗಣಿಯೊಳಗೆ ಹುಟ್ಟುವ ಉಪ್ಪು, ಚೌಳುಪ್ಪಿಗೆ ಹೆಸರುಗಳು" (ಸಿದ್ಧಾಂತಿ. ೨೬೩). [ ಸಂ. ]

**ರೌರವ** (ಗು). ೧. ರುರು ಎಂಬ ಜಿಂಕೆಯ ಚರ್ಮದಿಂದ ಮಾಡಿದ. ೨. ಭಯಂಕರವಾದ ; ಭೀಕರವಾದ. ೩. ಅಪ್ರಾಮಾಣಿಕತೆ ಯಿಂದ ಕೂಡಿದ ; ಮೋಸದ. (ನಾ). ೪. (ಚಿತ್ರವಿಚಿತ್ರ ಹಿಂಸೆಗಳನ್ನು ಕೊಡುವುದೆಂದು ಭಾವಿಸಲಾದ) ಭಯಂಕರವಾದ ನರಕಗಳಲ್ಲಿ ಒಂದು : "ತಪನಃ . . . ರೌರವಃ . . . ಕಾಲಸೂತ್ರಂ . . . ಆ ನರಕಭೇದಂಗಳ ಹೆಸರುಗಳು" (ಸಿದ್ಧಾಂತಿ. ೭೪) ; ಭಾರತದ ಕಥನಪ್ರಸಂಗವು . . . ಘೋರರೌರವವನ್ನು ಕೆಡಿಸುಗು ಕೇಳ್ದ ಸಜ್ಜನರ (ಕುಮಾವ್ಯಾ. ೦-೨೨) ; ರೌರವ . . . ಕಾಲಸೂತ್ರಗಳೆಂಬವೇ ಯೆಂಟು ನರಕಂಗಳು (ವಿವೇಕ. ೦೭೧). ೭. ಇಪ್ಪತ್ತೆಂಟು ಶಿವಾಗಮಗಳಲ್ಲಿ ಒಂದು : ಕಾಮಿಕ . . . ವೀರ, ರೌರವ, ಮಕುಟ . . . ವಾತುಲ ಗಳೆಂಬ ಇಪ್ಪತ್ತೆಂಟು ಶಿವಾಗಮಗಳು (ಶಾರದ. ೬೨). ೮. [ಜೈನ] ಹದಿಮೂರು ಇಂದ್ರಕಗಳಲ್ಲಿ ಒಂದು : ರೌರವ ಭ್ರಾಂತ . . . ವಿಕ್ರಾಂತಾಖ್ಯ ತ್ರಯೋದಶೇಂದ್ರಕ . . . ಬಿಲಂಗಳ್ (ತತ್ತ್ವಸೂ. ೦೨೦). [ ಸಂ. ]

**ರೌಸು** (ನಾ). ಆರ್ಭಟ ; ಅಬ್ಬರ : ರೌಸಿನಲ್ಲಿ ಯೋಗ್ಯಾಯೋಗ್ಯದ ವಿವೇಕವು ಅಳಿದು ಆವೇಶದ ಕೂಗು ಕೇಳಿಬರುತ್ತದೆ (ಹುಚ್ಚಪ್ಪ. ೦೩೭) ; ರೌಸಿನಿಂದ ಎದ್ದು ಕುಳಿತಳು (ಶರಶಂ. ೯೬). [← ಮರಾ. ರವಸ]

**ರೌಹಿಣ** (ಗು). ೧. ರೋಹಿಣೀನಕ್ಷತ್ರದಲ್ಲಿ ಹುಟ್ಟಿದ. (ನಾ). ೨. ಶ್ರೀಗಂಧದ ಮರ ; ಚಂದನವೃಕ್ಷ. ೩. ಅಗ್ನಿಯ ಹೆಸರುಗಳಲ್ಲಿ ಒಂದು. [ ಸಂ. ]

**ರೌಹಿಣೇಯ** (ನಾ). ೧. ರೋಹಿಣಿಯ ಮಗ ; ಬುಧ : "ರೌಹಿಣೇಯಃ, ಬುಧಃ, ಸೌಮ್ಯಃ, ಚಾಂದ್ರಮಸಾಯನಃ— ಈ ೪

ಬುಧನ ಪೆಸರ್ " (ಹರಿವಂ. ೯-೯೬) ; ನಮ್ಮ ದೇಶದಲ್ಲಿ ಈ ಗ್ರಹಕ್ಕೆ ಬುಧ, ರೌಹಿಣೇಯ (Rauhineya) ಎಂದು ನಾಮಕರಣ ಮಾಡಿದ್ದರು (ಅಕಾಶ. ೦೩). ೨. ವಸುದೇವನ ಹೆಂಡತಿಯಾದ ರೋಹಿಣಿಯ ಮಗ ; ಬಲರಾಮ : "ಬಲದೇವಃ . . . ರೌಹಿಣೇಯಃ . . . ಹಲಾಯುಧಃ— ಈ ೧೮ ಬಲದೇವನ ಪೆಸರ್ " (ಕಬಾಯು. ೬-೫೦) ; ರೌಹಿಣೇಯನಂ ಮಾಯಾವೇಷನಾಗಿ ಗೋಪನಪ್ಪ ಪ್ರಳಂಬನೊಡನೆ ಮಿಕ್ಕ ಗೋಪಾಲರೆಲ್ಲಂ ಗೋಪಾಲರೊಡನೆ ಗೆಡೆಯಾಗಿ (ಜಗ. ೯-೩೨ ಪ). ೩. ಒಂದು ಬಗೆಯ ರತ್ನ ; ಪಚ್ಚೆ; ಮರಕತ. ೪. ಕರು.

[ ಸಂ. ]

ರೌಹಿಷ (ನಾ). ೧. ಒಂದು ಬಗೆಯ ಜಿಂಕೆ : " ಸಾರಗ, ರೌಹಿಷಃ, ಬೆಟ್ಟಕುರಿ . . . ಪೃಷತಃ, ಚುಕ್ಕೆದುಪ್ಪಿ " (ಸಿದ್ಧಾಂತಿ. ೦೩೩). ೨. ಒಂದು ಬಗೆಯ ಹುಲ್ಲು ; ಕಾಚಿಹುಲ್ಲು : "ಕತ್ತೃಣಂ . . . ರೌಹಿಷಂ— ೬ ಕಾಚೀಹುಲ್ಲು " (ಸಿದ್ಧಾಂತಿ. ೦೫೦). ೩. ಒಂದು ಬಗೆಯ ಮೀನು: (೬). [ ಸಂ. ]

ರ್‍ಯಾಕಟಿ ' ರಾಕಡಿ ' ನೋ.

ರ್‍ಯಾಕಟೆ ' ರಾಕಡಿ ' ನೋ.

ರ್‍ಯಾಕಡೆ ' ರಾಕಡಿ ' ನೋ.

ರ್‍ಯಾಗಟೆ ' ರಾಕಡಿ ' ನೋ.

*

# ಲ

**ಲ** (ನಾ). ೧. ಕನ್ನಡ ವರ್ಣಮಾಲೆಯ ನಲವತ್ತೆಂಟನೆಯ ಅಕ್ಷರ; ಅವರ್ಗೀಯದ ಮೂರನೆಯ ವರ್ಣ ; ಲಕಾರ. ೨. [ಗಣಿತ] ಮೂರು ಎಂಬ ಸಂಖ್ಯೆಯ ಸಂಕೇತ : "ಗ ಡ ಬ ಲಂ ಮೂಱಕ್ಕ" (ಮಂಗರಾ. ೦೦೯-೦೦). ೩. [ಛಂದ] ಲಘು ಎಂಬುದರ ಸಂಕೇತ : "ಮಯರಸತಜಭನಂಲಗವೆನಿಪ್ಪಕ್ಷರಂ ಗಣಾಕ್ಷರಗಳಕ್ಕುಂ" (ಮಂಗರಾ. ೦೦೭-೦೯); ಮಯರಸತಜಭನಲಗವಿನಿಚಯವೆಂಬಿವು ನಿಯಮದಿಂ ಗಣಾಕ್ಷರಮಕ್ಕುಂ (ಛಂದೋಂಬು. ೦-೩೬).

**ಲಂಕ** (ನಾ). ಬಡಗಿ : ಲಂಕರೊಕ್ಕಲಲ್ಲಿ ಆಱುತಿಂಗಳ್ಗೆ ಮಾಣಿತಿವಿಗೆ ಮರವಿಯೆಂಬಿವೊನ್ದಕ್ಕುಂ ವರ್ಷಕ್ಕೆ ಮಂಚವೊನ್ದಕ್ಕುಂ (ಎ೩. XIX, ೩೩-೨೯; 1135) ; " ಬಡಿಗ, ಮರದ ಕೆಲಸ ಮಾಡುವವನು" (ಎ೩. XIX, ಪು. ೩೩ ಭಾಷಾಂತರ).

**ಲಂಕಿಗ** (ನಾ). ಲಂಕೆಯಲ್ಲಿ ವಾಸಿಸುವವನು ; ಲಂಕೆಯ ಪ್ರಜೆ : ಲಂಕೆಗಿನ್ ಸುಖಮೆಲ್ಲಿ? ಲಂಕೆಗಿನ್ ಶುಭಮೆಲ್ಲಿ? ಲಂಕಿಗರ್ ನಮಗೆ ನೆಮ್ಮದಿಯೆಲ್ಲಿ ? (ಶ್ರೀರಾಮಾ. ೯೬೩-೯೮೦). [ಲಂಕೆ + — ಇಗ]

**ಲಂಕಿಣಿ** (ನಾ). ೧. ಲಂಕೆಯ ಕಾವಲಿನ ರಾಕ್ಷಸಿ : ಹರಿತಂದಳಾ . . . ಮಹಾದ್ಭುತಘೋರರಕ್ಕಸಯುವತಿ ಲಂಕಿಣಿಯೆಂಬವಳು ರಕ್ಕಸಿಯರೊಡಗೂಡಿ (ಕೊರಟಾ. ೩-೨-೭) ; ಲಂಕಿಣಿಯನು ಕೊಂದು ಶಂಕೆಯಿಲ್ಲದೆ ನಾನು ಬಿಂಕದಿಂದಲಿ ಬಂದೆ (ಪುರಂದ. ೯-೭೮-೨). ೨. (ಆಲಂ) ದುಷ್ಟ ಹೆಂಗಸು; ಗಯ್ಯಾಳಿ : ಆ ಲಂಕಿಣಿಯ ಕಾಲು ಕಟ್ಟಿಕೊಳ್ಳುವ ಸ್ಥಿತಿ ನನಗೆ ಬಂತು (ಮಹಾಗ. ೯೦). ' ತಾಟಕಿ ' ಪರಾ. [< ಸಂ. ಲಂಕಾ]

**ಲಂಕಿಣಿವಿದ್ಯೆ** (ನಾ). (ಆಲಂ) ಘಾಟಿತನ ; ಕುಯುಕ್ತಿ : ಅವಳಿಗೇನು ಬಂದಿದೆ ರೋಗ ! ಲಂಕಿಣಿವಿದ್ಯೆ ಮಾಡಿದ್ದಾಳೆ (ಮಹಾಗ. ೦೬೮).

[ಲಂಕಿಣಿ + ವಿದ್ಯೆ]

**ಲಂಕೆ** (ನಾ). ೧. ಭಾರತದ ದಕ್ಷಿಣಕ್ಕಿರುವ ಒಂದು ದ್ವೀಪ ; ಸಿಂಹಳ; ಈಗಿನ ಸಿಲೋನು. ಇದರ ರಾಜಧಾನಿಗೆ ಲಂಕಾನಗರಿ ಎಂಬ ಹೆಸರಿತ್ತು : ಲಂಕೆಯ ಚೆಲ್ವಂ ನೋಡುತ್ತುಂ . . . ಅರಮನೆಯಂ ಪೊಕ್ಕಂ (ಕಂರಾಮಾ. ೦೯-೯೬); ರಾವಣಾಸುರ ಲಂಕೆಯಲಿ ಮತ್ಸ್ಯಾವತಾರಂ ಮತ್ಸ್ಯಕೇಶ್ವರದೇವರಂ ತಾ ನಿಲಿಸಿ ಭಜಿಸನೆ (ಬಸಪು. ೩೯-೬೨) ; ಅಂಕೆಯಿಲ್ಲದ ಕೋತಿ ಲಂಕೆ ಸುಟ್ಟಿತು (ಗಾದೆ). ೨. ಒಂದು ದ್ವೀಪಸಮುದಾಯದ ಹೆಸರು : ಗೋದಾವರೀನದಿಯು ಸಮುದ್ರಕ್ಕೆ ಸೇರುವ ಕಡೆ . . ಲಂಕೆಗಳು ಎಂದು ಕರೆಯಲ್ಪಡುವ ಅನೇಕ ದ್ವೀಪಗಳೂ . . . ಇವೆ (ಭೂಗೋಳ. ೬೦). [ಸಂ. ಲಂಕಾ]

**ಲಂಕೋಯಿಕೆ** (ನಾ). ಒಂದು ಬಗೆಯ ಸಸ್ಯ ; ಸ್ಪೃಕ್ಕೆಯೆಂಬ ಗಂಧದ್ರವ್ಯ ; ಸಂಕೇಬೇರು : "ಮರುನ್ಮಾಲಾ . . . ಲಘುಃ, ಸಮುದ್ರಾಂತಾ, ವಧೂಃ, ಕೋಟಿವರ್ಷಾ, ಲಂಕೋಯಿಕಾ—೧೦ ಸ್ಪೃಕ್ಕೆಯೆಂಬ ಗ್ರಂಧ್ಯದ್ರವ್ಯ, ಸಂಕೇಬೇರು" (ಸಿದ್ಧಾಂತಿ. ೦೯೩).

[ಸಂ. ಲಂಕೋಯಿಕಾ]

**ಲಂಗ** (ನಾ). ಹೆಣ್ಣುಮಕ್ಕಳ ಒಂದು ಉಡುಗೆ ; ಪಾವಡೆ : ಚಿಕ್ಕ ಮಕ್ಕಳು ಇಂಗ್ಲೀಷಿನವರಂತೆ ಷರಾಯಿ ಲಂಗಗಳನ್ನು ಹಾಕಿಕೊಳ್ಳುತ್ತಿದ್ದವು (ಹುಟ್ಟಿಹ. ೬) ; ನಿನ್ನ ಲಂಗ ಯಾರು ಹೊಲಿದದ್ದು ? (ದೀಕಿದ. ೦೦೦).

[← ಹಿಂ. ಮರಾ. ಲಹಂಗಾ]

**ಲಂಗಟ** ' ಲಂಗೋಟಿ ' ನೋ.

**ಲಂಗಡ**, ಲಂಗಡೆ (ನಾ). ಕಾಲಿನಲ್ಲಿ ಊನವುಳ್ಳವನು ; ಕುಂಟ : ಟೀಪುಸುಲ್ತಾನರ ಕಡೆಯಿಂದ ಲಂಗಡಾ ದಾಡಿಸೇಖ್‌ಯಿಮಾಮುಯೆಂಬ ಶಿಪಾದಾರನು (ರಾಜೇಂದ್ರ. ೮೭). **ಲಂಗಡೆ** : ವೆಂಕಟಕೃಷ್ಣ ಪಾಪ ಕೊಂಚ ಕುಂಟು. ತೀರ ಲಂಗಡೆ ಅಲ್ಲ (ಶಾಮಣ. ೦೩); ಕಾಲುಗೀಲು ಮುರಿದುಕೊಂಡು ಲಂಗಡೇ ಆಗೀರಿ (ಸಂಯುಕ್ತ. ೯೨). [←ಹಿಂ. ಮರಾ. ಲಂಗಡಾ]

**ಲಂಗಡೆ** ' ಲಂಗಡ ' ನೋ.

**ಲಂಗರಖಾನೆ** (ನಾ). ಬಡಬಗ್ಗರಿಗಾಗಿ ಇರುವ ತಂಗುಮನೆ.— ಅನ್ನಛತ್ರ : ಆರು ತಿಂಗಳಲ್ಲಿ ಮಸೀದಿಯು ತಯಾರಾಯಿತು. ಲಂಗರಖಾನೆಯ ಕಟ್ಟಡವೂ ಸಿದ್ಧವಾಯಿತು (ದೌಲತ್. ೨೯೦).

[ ← ಪಾರ. ಹಿಂ. ಮರಾ. ಲಂಗರ್‌ಖಾನಾ]

**ಲಂಗರು**. ನಂಗರು, ನಂಗಲ್ಲು (ನಾ). ಹಡಗನ್ನು ನಿಲ್ಲಿಸುವಾಗ ನೀರಿನಲ್ಲಿ ಇಳಿಬಿಡುವ ಭಾರವಾದ ಕಬ್ಬಿಣದ ಸಲಕರಣೆ; ಗುಂಡು ಮತ್ತು ಸರಪಳಿ : 'ಲಂಗರು' ಎಂಬುದು ಬಹಳ ಭಾರವಾದ ಕಬ್ಬಿಣದ ತೊಲೆ . . . ಹಡಗು ಗಾಳಿಗೆ ಕದಲದೆ ನಿಲ್ಲಬೇಕಾದ ಸಂದರ್ಭದಲ್ಲಿ ಅದನ್ನು ಸರಪಳಿಯಿಂದ ನೀರಿನಲ್ಲಿ ಬಿಟ್ಟು, ಅದು ನೆಲದ ಮೇಲೆ ಕುಳಿತುಕೊಳ್ಳುವಂತೆ ಮಾಡುವರು (ಗುಣಾ. ೬೩); ಅದು ಲಂಗರಿಲ್ಲದ ನೌಕೆ (ಹುಕಳ. ೪೯). **ನಂಗರು** : (ಕಿಸಂಗ್ರಾ. ೦೪೩). **ನಂಗಲ್ಲು** : "ನಂಗಲ್ಲು ಸ್ಥಾಪ್ಯಮುಕ್ಕ್ಯಂ" (ತುಂಗಾ. ೦೨೦-೯); ನಂಗಲ್ಲನಿಳುಹಿದ ಹಡಗು ನಿಲ್ವಂತೆ ರಥಾಂಗ ನಿಂದುದು ತೋಟ್ಟಸಲ್ಲಿ (ಶರತ. ೨೯-೩೦); ನಂಗಲ್ಲನಿಕ್ಕಿದ ಹಡಗಿನಂತಾ ರಥ ಕಂಗೊಳಿಸುತ ನಿಂದಿರಲು (ಗೋಮಟೇ. ೦೦-೬೬).

**ನಂಗರುಎತ್ತು** = ಲಂಗರನ್ನು ಎತ್ತು,—ತೂಗು: (ಕಿಸಂಗ್ರಾ. ೦೪೩). **ನಂಗರುಬಿಡು** = ಲಂಗರುಹಾಕು : (ಕಿಸಂಗ್ರಾ. ೦೪೩). **ನಂಗರುವಾಡೆ** = ಹಡಗನ್ನು ಲಂಗರು ಹಾಕಿ ನಿಲ್ಲಿಸುವ ಸ್ಥಳ : (ಕಿಸಂಗ್ರಾ. ೦೪೩). **ಲಂಗರುಹಾಕು**, **ನಂಗರುಹಾಕು** = ಹಡಗನ್ನು ನಿಲ್ಲಿಸಲು ಲಂಗರನ್ನು ನೀರಿನಲ್ಲಿ ಇಳಿಬಿಡು ; ಹಡಗನ್ನು ನಿಲ್ಲಿಸು : ಹರಿಕುಲಿಶನು . . . ಕಪ್ಪುಸಮುದ್ರವನ್ನು ದಾಟಿ ಆ ಪುರದ ಬಂದರಿನಲ್ಲಿ ಲಂಗರುಹಾಕಿದನು (ಕುಣಿಸ. ೯೬); ಹಡಗುಗಳು ಲಂಗರುಹಾಕುವ ಸ್ಥಳವು 'ರೇವು' ಅಥವಾ 'ಆಳವೆ' ಎಂದು ಕರೆಯಲ್ಪಡುತ್ತದೆ (ಭೂಗೋಳ. ೦೦).

[ ← ಪಾರ. ಹಿಂ. ಲಂಗರ್ : ಮರಾ. ಲಂಗರ್, ನಾಂಗರ್., ಇಂ. Anchor]

**ಲಂಗರುಸುಂಕ** (ನಾ). ಲಂಗರು ಹಾಕಿದ ಹಡಗುಗಳ ಮೇಲೆ ಹಾಕುವ ತೆರಿಗೆ : (Anchorage. ೩೦೪೩). [ಲಂಗರು + ಸುಂಕ$_1$]

**ಲಂಗಿಗ** (ನಾ). ಬಿದಿರಿನ ಗಳೆಯ ಮೇಲೆ ಕಸರತ್ತು ಮಾಡುವವನು; ದೊಂಬ : ಮೀಳಯ ಬಿದಿರ ಮೇಗೇಱಯಾಕಾಶದೊಳಾಡುವ ವಿದ್ಯಾಧರ ಲಂಗಿಗರ ಮನೆಯೊಳ್ ಪೆಣ್ಣಾಗಿ ತ್ತಿಯಾಗಿ ಪುಟ್ಟಿ (ವಡ್ಡಾರಾ. ೯-೨೬).

[< ಪ್ರಾ. ಲಂಖಿಗ. / ಸಂ. ಲಂಘಕ]

**ಲಂಗಿಸು** (ಕ್ರಿ). ನೆಗೆ; ಹಾರು; ಕುಪ್ಪಳಿಸು; ಜಿಗಿ : ತುಂಗಗಿರಿಶಿಖರದಿಂದಂ ಲಂಗಿಸಿ ಶೂದ್ರಕನ ಪೊಳೆವ ಸುರಿಗೆಯ ಮೊನೆಯೊಳ್ . . , ಪಾಯ್ದು ಬರ್ದುಂದು ಸಿಂಗಂ (ಕಾವ್ಯಸಾ. ೦೦೦೯ ಶೂದ್ರ೪) ; ಪೊಗೆ ಪುಗೆ ಕಣ್ಣಿಂ ಸಿಂಗಂಗಳಳುರೆ ಗರ್ಜಿಸಿ ಲಂಗಿಸಿ ಪುಡವುಡನೆ ಪುಟ್ಟಿ ಸತ್ತುವು ಪಲವುಂ (ಪಂಪಭಾ. ೩-೯೨); ಸಿಂಗಾಡಿಗಳ ತುಂಡಿಸಿ ನೇಜೆಯುಗಳ ಲಂಗಿಸಿ ಸೆಳೆಸೆಳೆದಿಡುತ (ಕಂಪವಿ. ೦೩-೯೬). [< ಲಂಘಿಸು]

**ಲಂಗು** (ನಾ). ಕಡಿವಾಣದ ಒಂದು ಭಾಗ ; ಕಡಿವಾಣ.

**ಲಂಗುಲಗಾಮು** = ೧. ಕುದುರೆ ಮತ್ತು ಒಂಟೆಗಳನ್ನು ಹತೋಟಿಯಲ್ಲಿಡಲು ಬಳಸುವ ಸಾಧನಗಳು; ಕಡಿವಾಣ, ಮತ್ತು ಕಡಿವಾಣ: ಸೊಗಸಾದ ಜೀನುಗಳನ್ನು ಮತ್ತು ಲಂಗುಲಗಾಮುಗಳನ್ನು ಹಾಕಿದ್ದ ಎರಡು ಒಂಟೆಗಳನ್ನೂ . . . ಅರ್ಪಿಸಿದೆ (ಶ್ರೀರಾಮ. II, ೯೪); ಇಂದ್ರಿಯಗಳ ಹಿಂದೆ ಮನಸ್ಸನ್ನು ಲಂಗುಲಗಾಮಿಲ್ಲದ ಕುದುರೆಯಂತೆ ಬಿಟ್ಟುಕೊಟ್ಟು (ವಾರಾಳ. ೦೦೬). ೨. (ಆಲಂ) ಕಟ್ಟು; ತಡೆ; ನಿರ್ಬಂಧ ; ಹಿಡಿತ : ನಿನ್ನ ಬಾಯಿಗೆ ಲಂಗುಲಗಾಮು ಏನೂ ಇಲ್ಲ (ರಂಗರೋ. ೦೮೦); ಅವರ ಕೋಪಕ್ಕೇನು ಲಂಗುಲಗಾಮೋ ಬೇಡವೆ ? (ಸ್ವಾಮಿಸ್ಮೃ. ೩೯). [< ಸಂ. ಲಂಖಿನೀ]

**ಲಂಗೂಟ** 'ಲಂಗೋಟಿ' ನೋ.

**ಲಂಗೋಟಿ**, ಲಂಗಟಿ, ಲಂಗೂಟಿ (ನಾ). (ಗಂಡಸು) ಗುಹ್ಯಾಂಗವನ್ನು ಮಾತ್ರ ಮುಚ್ಚುವಂತೆ ಧರಿಸುವ ಬಟ್ಟೆ ; ಕೌಪೀನ : ಪುಟಗೋಸಿ : ಲಂಗೋಟಿ ಬಲುಪೊಳ್ಳೆದಣ್ಣ ಒಬ್ಬರ್ಹಂಗಿಲ್ಲದೆ ಮಡಿಗೆ ಒದಗುವುದಣ್ಣ ಬಡವರಿಗಾಧಾರವಣ್ಣ ಈ ಲಂಗೋಟಿ ಬೈರಾಗಿಗಳ ಭಾಗ್ಯವಣ್ಣ (ಪುರಂದ. ೪-೯೯ ಪಲ್ಲವಿ) ; ಲಂಗೋಟಿ ಹಾಕಿದಿ ಕಂಗೆಟ್ಟು ಕೋಕದಿ (ಶಂಕ. ೬೩ ಕವಿಕಾವ್ಯಶಂಕರು) ; ಲಂಗೋಟಿಯ ಮೇಲೆಯೇ ಒಂದು ಸಣ್ಣ ರೇಶಿಮೆಯ ಮಡಿ ಉಟ್ಟುಕೊಂಡಿದ್ದ (ವೈಶಿ. ೦೯೩). **ಲಂಗಟಿ** : ಲಾಂಗೀ ಆರ ಸುತ್ತರೀ ಲಂಗಟಾ ಆರ ಲಪಾಡಿಸಿರಿ (ಸವುಜ. ೨೯೩) ; ಒಂದೂವರಿ ಗೇಣಾ ಲಂಗಟಾ ಸಿಗಿಸಿಕೊಂಡು . . . ಹೊರಟ್ರು (ತಿದುಗು. ೦೯). **ಲಂಗೂಟ** : ಲಂಗೂಟ ಹಾಕಿ ಬತ್ತಲೆಯಾಗಿ ಗುರ್ಜಿಯನ್ನು ಹೊರುವ ಹುಡುಗರು ಕೋಪಣ ಧರಿಸುವ ವಿರಕ್ತಮೂರ್ತಿಯನ್ನು ಚಿತ್ರಿಸದಿರವು. (ಕನ್ನಡಾ. ೦೩೯).

**ಲಂಗೋಟಿಗೆಳೆಯ** = ಚಿಕ್ಕಂದಿನ ಸ್ನೇಹಿತ : ಬಾಲ್ಯಮಿತ್ರ : ಲಂಗೋಟಿ ಗೆಳೆಯರೊಂದಿಗೆ ವಿಶ್ವಾಸದಿಂದ ಕಲಿಯುತ್ತಿದ್ದನು (ಭುವನ. ೩೨೬). **ಲಂಗೋಟಿಮಿತ್ರ** = ಲಂಗೋಟಿಗೆಳೆಯ : ಅಪರಿಚಿತರನ್ನು ಸಹ ಲಂಗೋಟಿಮಿತ್ರರಂತೆ ಮಾತನಾಡಿಸುತ್ತಾನೆ (ನಾಡಗೀ. ೯೦). **ಲಂಗೋಟಿಸ್ನೇಹಿತ** = ಲಂಗೋಟಿಗೆಳೆಯ : ಅವರಿಬ್ಬರೂ, ಲಂಗೋಟಿಸ್ನೇಹಿತರು (ರೂಢಿ). [← ಪಾರ. ಲಂಗೋಟೀ ; ಹಿಂ. ಲಂಗೋಟ್, ಲಂಗೋಟಾ, ಲಂಗೋಟೀ; ಮರಾ. ಲಂಗುಟಾ, ಲಂಗುಟೀ, ಲಂಗೋಟ್, ಲಂಗೋಟಾ, ಲಂಗೋಟೀ]

**ಲಂಘಕ** (ನಾ). = ಲಂಗಿಗ : ತನ್ನ ವಿದ್ಯೆಯನ್ನು ತೋರಿಸಲು ಬಯಸುವ ಲಂಘನು ನೆಲವನ್ನು ಅಗೆಯಿಸಿ, ಕಲ್ಲುಬಕ್ಕರೆಗಳನ್ನು ತೆಗೆಯಿಸಿ, ನೆಲವನ್ನು ಸಮಗೊಳಿಸಿ. ಮೃದುವಾದ ನೆಲದಲ್ಲಿ ತನ್ನ ವಿದ್ಯೆಯನ್ನು ತೋರಿಸುವನು (ಬುದ್ಧಕ. ಬುದ್ಧಂದ. ೯೩). [ಸಂ. / ಪಾಲಿ. ಲಂಘಕ]

**ಲಂಘನ** (ನಾ). ೧. ಹಾರುವಿಕೆ ; ನೆಗೆತ; ಜಿಗಿತ: 'ಲಂಘಿಸು' ಪರಾ. ೨. ಕುದುರೆಯ ಒಂದು ಬಗೆಯ ಓಟ;ನೆಗೆದು ನೆಗೆದು ಓಡುವುದು;ಪ್ಲುತ: ನೆಗೆನೆಗೆಯಿಸಿ ಓಡಿಸುವುದು ಲಂಘನವೆನಿಸಿಕೊಂಬುವುದು (ಅಶ್ವಶಾ. ೨೩-೦೦). ೩. ಮಿತಿಯನ್ನು ಮೀರುವುದು; ಹದ್ದು ಮೀರಿದ ವರ್ತನೆ. ೪. ಹತ್ತುವುದು; ಏರುವುದು. ೫ ಉಪವಾಸ ; ನಿರಾಹಾರ : ಲಂಘನವು ದೀಪನ ಪಾಚನಂಗಳನ್ನುಂಟುಮಾಡುವುದು (ಸಕವೈ. ೦೦೦) ; ಲಂಘನವು ಶೋಧನ, ಶಮನ ಎಂದು ಎರಡು ಪ್ರಕಾರವಾಗಿದೆ (ಆಂಗಾ. ೦೯೩). ೩, ೫ : ಭಸ್ತ ದ್ವೇಷಂ ಜಡಸಂಸಕ್ತಿ ಸದಾಚರಿತಲಂಘನಂ . . . ಕುಂದದ ಮುಕ್ತಜ್ವರನಂದದಿಂದಮರಸರೊಳೆಂದುಂ (ಚಂದ್ರಪು. ೦೦-೦೦೯).

**ಲಂಘನಮಾಡು** = ಲಂಘನಹಾಕು : ಅಜೀರ್ಣವಾದಾಗ ಲಂಘನ ಮಾಡಿದರೆ ಒಳ್ಳೆಯದು (ರೂಢಿ). **ಲಂಘನಹಾಕು** = ಉಪವಾಸವಿರು ; ನಿರಾಹಾರಿಯಾಗಿರು : ಎರಡು ದಿವಸ ಲಂಘನಹಾಕಿದರೆ ಸರಿಹೋಗುತ್ತೆ ಎಂದು ಅದನ್ನು ಮಾಡಿದೆ (ಮಹೋದಂ. ೭೯). [ಸಂ.]

**ಲಂಘನಂಗೆಯ್** (ಕ್ರಿ). ಉಪವಾಸವಿರು ; ನಿರಾಹಾರಿಯಾಗಿರು : ಗಜಮಸ್ತಕಮುಸ್ತಿಷ್ಕದಿನಜೀರ್ಣಮಾಯ್ತೆಂದು ಲಂಘನಂಗೆಯ್ದುವೊಲೇಂ ಗಜರಿಪು ಲಂಘಿಸಿದುದೊ (ಅಜಿತ. ೯-೨೬). [ಲಂಘನ + ಕೆಯ್$_1$]

**ಲಂಘನೀಯ** (ನಾ). ಮೀರಬೇಕಾದುದು : ತಿರಸ್ಕರಿಸಲು ಯೋಗ್ಯವಾದುದು : ಮುದುಗಣ್ಣ ಉಚಿತಮಂ ನುಡಿವುದು . . . ಉಚಿತಮಂ ಬಗೆಯದೆ ನುಡಿದೊಡಮವುಗೆ ಲಂಘನೀಯಮಪ್ಪೇಯಂ (ಕಾಂತಿಪು. ೦೦-೦೨೦). [ ಸಂ. ]

**ಲಂಘನೆ** (ನಾ). = ಲಂಘನ ೧ : ಅಡಿದೊಡರ್ವ ನಿಡುಜಡೆಯ ನಡುಬಳಸಿಯುಸುಗೊಳಿಸಿ ಜಡಿವಪೊಲೆಯನೊಡಂಬಡಿಸಿವೊಡನೆ ಲಂಘನೆಲಾಗು ಬಿಡುತೆಗಳ ಬರುಬನಿಂ (ಚಳಸ. ೯೬). [ ಸಂ. ಲಂಘನ ]

**ಲಂಘಿತ** (ಗು). ೧. ದಾಟಿದ; ಜಿಗಿದ. ೨. ಮೀರಿದ; ಅತಿಕ್ರಮಿಸಿದ. ೩. ತಿರಸ್ಕರಿಸಲ್ಪಟ್ಟ; ಅಲಕ್ಷಿಸಲ್ಪಟ್ಟ; ಅಪಮಾನಿತ. (ನಾ). ೪.

[ನಾಟ್ಯ] ಮೂವತ್ತೈದು ದೇಶೀಯಭೌಮಚಾರಿಗಳಲ್ಲೊಂದು; "ಒಂದು ಕಾಲನ್ನು ಖಂಡಸೂಚಿಸ್ಥಾನಕದಲ್ಲಿ [ಸ್ಥಾನಕ ೨೯] ನಿಲ್ಲಿಸಿ ಜಾಗ್ರತೆ ಇನ್ನೊಂದು ಕಾಲಿಂದ ದಾಟುವುದು" (ಅಭಿ.ರಂ. ೩೨೨ ಗದ್ಯಾನುವಾದ) : ಉರು ಖಂಡಸೂಚಿಕಾದಿ ನಿರುತೊಂದುಂ ಪಾದಮುದನೆ ಬೇಗಂ ಬೇಗಂ ಪಿರಿದುಂ ತೆಗೆವುತೆ ತದಿತರ ಚರಣದೆ ದಾಂಟಲ್ಕೆ ಲಂಘಿತಾಖ್ಯಮೆನಿಕ್ಕುಂ (ಅಭಿ.ರಂ. ೬-೭೯). ೫. [ಸಂಗೀತ] ಹಾಡುವಾಗ ಅನುಕ್ರಮವಾಗಿ ಉಚ್ಚರಿಸದೆ ಮಧ್ಯದ ಸ್ವರಗಳನ್ನು ಹಾರಿಸಿ ಹೇಳುವುದು : ಮಂದ್ರ ಮಧ್ಯಮ ತಾರವೆಂಬ ತ್ರಿವಿಧವೊಂದಲು ಚಾರವೆಂಬ ಲಯ ಲಂಕಿ[ಘಿ]ತಂಗಳು ನಿಮಿರ್ದಮರ್ದಿರಲು . . . ದೇಶೀಮಾರ್ಗವೆಸೆಯಲು (ಶಿಶು. ೦೯-೦೦); ಲಲಿತ ಗಾಢ ಮಿತಾಯಿ ಲಂಘಿತ ಕಾಕುಜಾಯನುಜಾಯಿ . . . ಬೆಡಂಗವುರೆ ಬಾಜಿಸುತೆ ಚಾರುವೀಣೆಯಂ (ವೃಷಭ. ೦೦-೯). [ಸಂ.]

**ಲಂಘಿಸು** (ಕ್ರಿ). ೧. ಹಾರು ; ಜಿಗಿ ; ನೆಗೆ : ಸಿಂಧುರಾರಾತಿಯನು ಜ್ವಾಳಿತನುವನಭ್ರಪಥದತ್ತ ಲಂ[ಘಾಂ. ೪೦]ಘಿಸಲ್ಕಿರ್ದುದಂ ಚಮೂಪತಿ ಕಂಡಂ (ಅಬಿ. ೦೬-೪೩); ಕೊಂಬಿನ ಮೇಲಣ ಮರ್ಕಟನಂತೆ ಲಂಘಿಸುವುದೆನ್ನ ಮನವು (ಬಸವ. ೩೨); ಹೊಯ್ದನು ಭೀಮ ಲಂಘಿಸಿ ಗಜದ ಮಸ್ತಕವ (ಕುಮಾ.ದ್ರೋ. ೩-೩೩). ೨. ದಾಟು; ಕ್ರಮಿಸು : ನಿನ್ನಾಜ್ಞೆಯಂತೆ ಗಗನಮನುನ್ನತಿಯಿಂ ದಾಂಟಿ ಪೆರ್ಜಿರ್ಗೆ ಲಂಘಿಸಲರಿದೆಂಬನ್ನೆಗ ಮೊಪ್ಪಿರ್ದುದು (ಅಬಿ. ೦೦-೩೭); ಜಲಧಿಯ ಲಂಘಿಸಿದವಗೆ ಜಯ ಮಂಗಲ (ಪುರಂದ. ೧-೨೨೯ ಪಲ್ಲವಿ). ೩. ಮೇಲ್ಮೀರು ; ಹತ್ತು; ಏರಿಹೋಗು : ತೊಲೆಗಳೊಳಗೆ ದಡಿಗಳ ಪೆಟ್ಟಿ ಲಂಘಿಪ ಬಲುಮೆಕಾರರ ಮೇಲೆ ನೂಕೆ . . . ತೊಟಿಕಿದರು ಜೀವಗಳನು (ಕಂಪರ. ೦೯-೭೦). ೪. ಮೀರು ; ಮೀರಿ ನಡೆ; ಅತಿಕ್ರಮಿಸು : ಲಂಘಿಸಿದೆಂ ನಿಮ್ಮಯ ಮಾತನೊರ್ಮೆಗಮಿದಾಜ್ಞಾಲಂಘನಂ ದೋಷಂ (ಗದಾಯು. ೬-೩).

[ ಲಂಘನ + — ಇಸು$_3$ ]

**ಲಂಘ್ಯ** (ಗು). ೧. ಹಾರಬೇಕಾದ; ಜಿಗಿಯಬೇಕಾದ. ೨. ಮೀರಲು ಸಾಧ್ಯವಾದ; ಅತಿಕ್ರಮಿಸಬಹುದಾದ. ೩. ತಿರಸ್ಕಾರಕ್ಕೆ ಯೋಗ್ಯವಾದ; ಅಲಕ್ಷ್ಯ ಮಾಡಬಹುದಾದ. [ಸಂ.]

**ಲಂಚ** (ನಾ). ಕಾರ್ಯಸಾಧನೆಗಾಗಿ ಅಕ್ರಮವಾಗಿ ಪಡೆಯುವ ಅಥವಾ ಕೊಡುವ ಹಣ, ವಸ್ತು ಮೊದಲಾದುವು; ರುಷುವತ್ತು : "ಲಂಚಃ, ಉತ್ಕೋಚಃ, ಉಪಾದಾನಂ, ಉಪಚಾರಃ, ಆಮಿಷಂ — ಈ ೫ ಲಂಚಂ" (ಕರಾಯು. ೭೦-೨೯೦); ಲಂಚಂ ಬೇಪ್ರ್ವ ಘಳಿಲೆನೆ ತಾಯ್ಗಂ ತಂಗೆಗವಳಿಪಿದವಂ ಲೆಕ್ಕವಿಡುವವಂ ವಾದಿಗಂ (ಶಾಸನ. IX-i, ೦೦೭-೨೬; 1050); ತನಿವಣ್ಣಂ ಲಂಚಮೀವೆಂ ಪುರುಳಿ ನಿನಗೆ (ಶಬ್ದ.ಕಾ. ೩೦೮); ಹವಣನಾರಯ್ದು ಲಂಚವುಂ ಮೊದಲೆ ಕೊಂಡು ಕಸವರ ಮನರಮನೆಯ ಭಂಡಾರಕೊದಗಿಸುವ . . . ರಾಜಮಂತ್ರಿಗಳ್ (ಕಂಪು.೭-೬).

**ಲಂಚತಿನ್ನು**=ಲಂಚವನ್ನು ಸ್ವೀಕರಿಸು : ಸಾವಿರ ಸಾವಿರ ಸಂಬಳ ಬರುತ್ತಿದ್ದರೂ ಅವರು ಲಂಚತಿನ್ನುವುದನ್ನು ಬಿಟ್ಟಿಲ್ಲ (ವಾಘೋಲಿ. ೦೦೦). **ಲಂಚಲಾವಣಿ** = ಲಂಚ ಮತ್ತು ಆ ಬಗೆಯ ಇತರ ಹಣ : ಸಾಲವನ್ನು ಕೊಟ್ಟವರಿಗೂ ತೆಗೆದುಕೊಂಡವರಿಗೂ ಶಿಕ್ಷೆಮಾಡಿ, ಜನಗಳಿಗೆ ಲಂಚಲಾವಣಿಗೆ ಆಸ್ಪದವಿಲ್ಲದಂತೆಯೂ . . . ಬಂದೋಬಸ್ತು ಮಾಡಿ ಬುದ್ಧಿ ಕಲಿಸಿದರು (ಮುಹಾವಂ. I, ೦೪೭) ; ನಿಮ್ಮ ನಿಮ್ಮ ಮರೆಮೋಸ ಲಂಚಲಾವಣಿಗಳ ಪ್ರಪಂಚವನ್ನೂ . . . ಸಂಗ್ರಹಿಸಿಕೊಂಡಿರುವೆವು (ಪಟ್ಟಿ. ೩೨-೨೬). **ಲಂಚಹಾಕು** = ಅಕ್ರಮವಾಗಿ ಹಣವನ್ನು ಕೊಡು : ಮಹಮ್ಮದಲ್ಲಿಖಾನನು ಮುರಾರಿರಾಯರಿಗೆ ಲಂಚಹಾಕಿ ಆತನ ಮುಖಾಂತ್ರ ಅರಶಿನವರ ಬಳಿಯಲ್ಲಿ ಕವುಲು ಮಾಡಿಕೊಂಡ ವಿವರ (ಹೈದರ. ೩೯).

**ಲಂಚಹೊಡೆ** = ಅಕ್ರಮವಾಗಿ ಹಣ ತೆಗೆದುಕೊಳ್ಳು : ಲಂಚಹೊಡೆಯುವುದರಲ್ಲಿ ಪಟಾಯಿತನಾಗಿಬಿಟ್ಟೆ (ವಾಘೋಲಿ. ೦೦೩).

[ಸಂ. ಲಂಚಾ./ಪ್ರಾ. ಲಂಚಾ]

**ಲಂಚಂಗುಳಿ**, ಲಂಚಗುಳಿ (ನಾ). ಲಂಚವನ್ನು ತೆಗೆದುಕೊಳ್ಳುವ ಸ್ವಭಾವವುಳ್ಳ ವ್ಯಕ್ತಿ ; ಕೈಯಾಸೆ ಮಾಡುವ ವ್ಯಕ್ತಿ : ಗುಳಿ ಪ್ರತ್ಯಯಕ್ಕೆ–ಆಟಂಗುಳಿ, ಸಾಲಂಗುಳಿ, ಲಂಚಂಗುಳಿ (ಶಮದ. ೨೦೨ ಪ್ರಯೋ) ; ಲಂಚಮಂ ಕೊಳ್ವಂ, ಲಂಚಂಗುಳಿ (ಶಬ್ದಾನು. ೪೦೪ ಪ್ರಯೋ). ಲಂಚಗುಳಿ : ಲಜ್ಜೆಯ ಲಂಚಗುಳಿಯ ನೋಟದ ತವಕಕಾರ್ತಿಯ . . . ಮನಮಂ ತನ್ನತ್ತ ಸೆಳೆದು (ಸಂಪರ. ೦೯-೪೬); ಇಂಚಿವೋಯಿತ್ತು ನಮ್ಮಯ ತೇಜವಿನ್ನೇನು ಲಂಚಗುಳಿಯಾದ ಶಿವ (ಸಿದ್ಧರಾ. ೯-೭೦); ಘಾತಿಸುವರೀ ಲಂಚಗುಳಿಯಂ (ಕೇಶರಾ. ೦೬-೨೦). [ಲಂಚ + — ಗುಳಿ$_3$ (< —ಕುಳಿ$_3$) ]

**ಲಂಚಂಗೊಡು**, ಲಂಚಕೊಡು (ಕ್ರಿ). ತನ್ನ ಕೆಲಸವನ್ನು ಸಾಧಿಸಿಕೊಳ್ಳಲು ಅಕ್ರಮವಾಗಿ ಹಣ, ವಸ್ತು ಮೊದಲಾದುವನ್ನು ಕೊಡು; ಕೈಯಾಸೆ ತೋರು : ಒಂದು ಕಂಕಣಮನಾಕೆಗೆ ಲಂಚಂಗೊಟ್ಟು ಬೆಸಗೊಂಡು (ಬಂಕಹ. ೨-೬ ವ). **ಲಂಚಕೊಡು** : ಆತ ಲಂಚ ಕೊಡುವಾಗ ಪೋಲಿಸರ ಕೈಗೆ ಸಿಕ್ಕಿಬಿದ್ದ (ರೂಢಿ). [ಲಂಚ + ಕೊಡು$_1$]

**ಲಂಚಂಗೊಳ್** (ಕ್ರಿ). ಅಕ್ರಮವಾಗಿ ಹಣ, ವಸ್ತು ಮೊದಲಾದುವನ್ನು ಸ್ವೀಕರಿಸು ; ಕೈಯಾಸೆ ಮಾಡು : ಅವನ ಕೆಯ್ಯೊಳು ಲಂಚಂಗೊಂಡ ನಕ್ಕುಮೆಂದು ಕಳ್ಳಂಗಂ ತಳಾರಿಂಗಂ ಕೆಳೆಸಂಕಲೆಯನಿಕ್ಕಿದಾಗಳ್ (ವಾಪುಂಕು. ೬೯) ; ರತಿರೂಪಂ ಲಂಚಂಗೊಂಡ ವಿಲಾಸದಿನೆಸೆದತ್ತಾ ರಾಣೀವಾಸ (ಜಯುಕಾ. ೨-೨). [ಲಂಚ + ಕೊಳ್$_1$]

**ಲಂಚಕೊಡು** ' ಲಂಚಂಗೊಡು ' ನೋ.

**ಲಂಚಕೋರ**, ಲಂಚಖೋರ (ನಾ). ಲಂಚವನ್ನು ತೆಗೆದುಕೊಳ್ಳುವವನು : ಬೇಕನ್ನನು ಲಂಚಕೋರನೆಂದೂ . . . ಯುಧಿಷ್ಠಿರನು ಸುಳ್ಳುಹೇಳಿದನೆಂದೂ, ಅರ್ಜುನ ಮಗನಿಗೆ ಸೋತನೆಂದೂ ಹೇಳಿದೆ (ಬಂಕಿಮು. ೦೯೯) ; ನೀನೆ ನನ್ನ ಲಂಚಕೋರನಾಗೂಂತ ಹೇಳಬಹುದೇ ? (ಪಪಾಲ. ೪೦). ಲಂಚಖೋರ : ನಮ್ಮಲ್ಲಿಯ ಅಧಿಕಾರಿಗಳಂತೆ ನನ್ನನ್ನೂ ಲಂಚಖೋರನೆಂದು ಎಣಿಸಿದ್ದಾರೆ (ಪಣ್ಣೊಂದ. ೦೩೩).

[ಲಂಚ + — ಕೋರ್$_3$./ಮರಾ. ಲಾಂಚಖೋರ್]

**ಲಂಚಕೋರಿ** (ನಾ). ಲಂಚವನ್ನು ತೆಗೆದುಕೊಳ್ಳುವವಳು ; ಕೈಯಾಸೆ ಮಾಡುವವಳು : ಬಡವಿ ಅವಳು. ಆದರೇನು ? ಸತ್ಯವಂತೆ. ಲಂಚಕೋರಿಯಲ್ಲ (ಹಾಗ. ೦೯). [ಲಂಚಕೋರ + — ಇ$_2$]

**ಲಂಚಖೋರ** ' ಲಂಚಕೋರ ' ನೋ.

**ಲಂಚಗ** (ನಾ). ಕೈಯಾಸೆಯಿಂದ ಜೀವಿಸುವವನು : ಲಂಚದಿಂ ಜೀವಿಸುವಂ ಲಂಚಗಂ, ಲಂಚವಣಿಗಂ (ಶಬ್ದಾನು. ೪೦೩ ಪ್ರಯೋ) ; ಲಂಚದಿಂದ ಬದುಕುವವನು ಲಂಚವಣಿಗನು, ಲಂಚಗನು (ಹೊಮಗ. ೩೬).

[ಲಂಚ + — ಗ$_2$]

**ಲಂಚಗಾರ** ' ಲಂಚಗಾಜಿ ' ನೋ.

**ಲಂಚಗಾರಿಕೆ** (ನಾ). ಅಕ್ರಮವಾಗಿ ಹಣ, ವಸ್ತು ಮೊದಲಾದುವನ್ನು ತೆಗೆದುಕೊಳ್ಳುವುದು; ಕೈಯಾಸೆಗೊಳಗಾಗುವುದು ; ಲಂಚಗುಳಿತನ: ಅವನು ತನ್ನ ಲಂಚಗಾರಿಕೆಯಿಂದ ಇದ್ದ ಕೆಲಸವನ್ನು ಕಳೆದುಕೊಂಡ (ರೂಢಿ). [ಲಂಚಗಾರ (< ಲಂಚಗಾಜಿ) + — ಇಕೆ]

**ಲಂಚಗಾಜಿ**, ಲಂಚಗಾರ (ನಾ). ಲಂಚವನ್ನು ತೆಗೆದುಕೊಳ್ಳುವವನು ; ಲಂಚಕೋರ : ಲಂಚಗಾಜನಂತೆ ನುಡಿಗೆಡಿಸದೆ [ಏಕಚಿತ್ತದಿಂ] ಕೇಳ್ದರಪ್ಪುಡೆ ಪೇಟ್ಟಪೆಂ (ಧರ್ಮಾಮೃ. ೦-೦೩೬). **ಲಂಚಗಾರ** : ' ಲಂಚಗಾರಿಕೆ ' ಪರಾ.

[ಲಂಚ + — ಕಾಜಿ]

**ಲಂಚಗಿ** (ನಾ). ಲಂಚದಿಂದ ಜೀವಿಸುವವಳು : ಬೂತುಗಿ, ಬೂತುಗಿತಿ; ಲಂಚಗಿ, ಲಂಚಗಿತಿ (ಶಬ್ದಮ. ೦೯೩ ಪ್ರಯೋ). [ಲಂಚಗ + – ಇ$_2$]

**ಲಂಚಗಿತಿ** (ನಾ). = ಲಂಚಗಿ : ಲಂಚಗಿ, ಲಂಚಗಿತಿ (ಶಬ್ದಮ. ೦೯೩ ಪ್ರಯೋ). [ಲಂಚಗ + – ಇತಿ$_1$ (< – ಇತ್ತಿ)]

**ಲಂಚಗುಂಡಿ** (ನಾ). = ಲಂಚಂಗುಳಿ : ಬೆವಕೂಫ್ ಲಂಚಗುಂಡಿ ಚಾಕರರು ಬಹಳ ಜನಯಿಧಾರೆ (ಹ್ಯದ. ೫೦). [< ಲಂಚಂಗುಳಿ]

**ಲಂಚಗುಳಿ** ' ಲಂಚಂಗುಳಿ ' ನೋ.

**ಲಂಚಗುಳಿತನ** (ನಾ). ಅಕ್ರಮವಾಗಿ ಹಣ, ವಸ್ತು ಮುಂತಾದುವನ್ನು ತೆಗೆದುಕೊಳ್ಳುವ ಸ್ವಭಾವ : ಪೋಲೀಸರು ಲಂಚಗುಳಿತನದಿಂದ ಮಾಡುವ ಅನ್ಯಾಯ (ಕಾಲೂರ. ೧೦ ಮುಮ್ಮು); ಸರಕಾರಿನೌಕರರಲ್ಲಿ ಲಂಚಗುಳಿತನ ಮಿತಿ ಮೀರಿ ನೆಲೆಯೂರಿದುದರಿಂದ ನಮ್ಮ ದಾರಿ ಸುಗಮವಾಯಿತು (ಕುರುಕಾ. ೧೫೦). [ಲಂಚಗುಳಿ (< ಲಂಚಂಗುಳಿ) + – ತನ]

**ಲಂಚನಿರೋಧ** (ನಾ). ಅಕ್ರಮವಾಗಿ ಹಣ ಮೊದಲಾದುವನ್ನು ಸ್ವೀಕರಿಸುವುದನ್ನು ತಡೆಗಟ್ಟುವಿಕೆ : " ಭ್ರಷ್ಟಾಚಾರನಿರೋಧ, ಲಂಚನಿರೋಧ " (Anticorruption. ಶಶ್ರಿಶ. ೫).
[ಲಂಚ + ನಿರೋಧ]

**ಲಂಚನಿರ್ಮೂಲನ** (ನಾ). ಅಕ್ರಮವಾಗಿ ಹಣವನ್ನು ಕೊಡುವ, ತೆಗೆದುಕೊಳ್ಳುವ ವ್ಯವಹಾರವನ್ನು ಕಿತ್ತುಹಾಕುವುದು ; ಭ್ರಷ್ಟಾಚಾರನಿವಾರಣೆ : ಪ್ರತಿಯೊಬ್ಬನೂ ಲಂಚಕ್ಕಾಗಿ ಬಾಯಿ ತೆರೆದು ಕೊಂಡಿರುವಾಗ ನನ್ನೊಬ್ಬನಿಂದ ಲಂಚನಿರ್ಮೂಲನ ಹೇಗೆ ತಾನೆ ಸಾಧ್ಯ ? (ತುಶರು. ೫೬೭). [ ಲಂಚ + ನಿರ್ಮೂಲನ ]

ಲಂಚಬಡಕ (ನಾ). = **ಲಂಚಕೋರ** : ಸುತ್ತಮುತ್ತಲಿನ ಸೀಮೆಯಲ್ಲೆಲ್ಲ ಆತ ಲಂಚಬಡಕ ಗೌಡನೆಂದು ಹೆಸರು ಪಡೆದಿದ್ದ (ಮುಮ್ಮು.ಹ. ೫೦).
[ಲಂಚ + – ಬಡಕ$_2$ ( < – ಬಡಿಕ$_2$ )]

ಲಂಚಬಡಕತನ (ನಾ). = ಲಂಚಗುಳಿತನ : ಲಂಚಬಡಕತನವು ದೇಶದಿಂದ ನಿರ್ನಾಮವಾಗಬೇಕೆಂದು ನ್ಯಾಯದೇವತೆಯು ಅಪೇಕ್ಷಿಸುತ್ತಲಿದ್ದಾಳೆ (ನ್ಯಾಶಂ. ೦೬). [ ಲಂಚಬಡಕ + – ತನ ]

**ಲಂಚವಣಿಗ** (ನಾ). = ಲಂಚಕೋರ : ವಣಿಗ ಪ್ರತ್ಯಯಕ್ಕೆ . . . ಲಂಚವಣಿಗಂ, ಸಾಲವಣಿಗಂ (ಶಮದ. ೨೦೭ ಪ್ರಯೋ) ; ಲಂಚದಿಂ ಜೀವಿಸುವಂ ಲಂಚಗಂ, ಲಂಚವಣಿಗಂ (ಶಬ್ದಮ. ೪೦೫ ಪ್ರಯೋ) ; ಒಲ್ಲೆ ನೊಲ್ಲೆನೀ ಲಂಚವಣಿಗರಂ (ರಾಮಾಶ್ವ. ೫೮–೨೦). [ ಲಂಚ + – ವಣಿಗ$_2$]

**ಲಂಚವೊಗು** (ಕ್ರಿ). ಲಂಚಕ್ಕೆ ಒಳಗಾಗು ; ಲಂಚವನ್ನು ಸ್ವೀಕರಿಸು : ಬಲ್ಲಿದಂ ಕೈಕೊಂಡ ಸತಿಯಂತೆ ಲಂಚವೊಕ್ಕರ್ದ ಪ್ರಧಾನನಂತೆ . . . ಚಿತ್ತದೊಳಾನಂದಂ ಬೆರಸಿರ್ಪುದು (ಧರ್ಮಾಮ್ಮ. ೯–೩). [ ಲಂಚ + ಪೊಗು ]

**ಲಂಜಿಕೆ** (ನಾ). ಸೂಳೆ ; ಬೆಲೆವೆಣ್ಣು ; ವೇಶ್ಯೆ : ಅದೇಂ ಲಂಜಿಕೆಯರ ಗುಂಜನ್ಮಣಿಮಂಜೀರಕಮಂಜುಸಿಂಜಿತಂ ರಂಜಿಸಿತೊ (ಅಜಿಪು. ೫–೪೨); ರಂಜಿಸಿದುದು ಕಡುಸೊಬಗಿಂ ಲಂಜಿಕೆಯರ ಬೀದಿ ಬೀಱುತಂ ಪರಿಮಳಮಂ (ಅದ್ಯಲಿ. ೦–೬೬).

**ಲಂಜಿಕಾಮದನಾಸ್ತ್ರ** = ಬೆಲೆವೆಣ್ಣುಗಳಿಗೆ ಕಾಮನ ಬಾಣದಂತಿರುವವನು ; ಸುಂದರಾಂಗ ; ಒಂದು ಬಿರುದು : ರಿಪುಪುಞ್ಜಕಞ್ಜವನಕೇಳೀಕುಞ್ಜರಂ ಲಞ್ಜಿಕಾಮದನಾಸ್ತ್ರಂ ಚಲದಂಕರಾಮ ನೃಪಲಕ್ಷ್ಮೀಲಕ್ಷ್ಮನಂ ಲಕ್ಷ್ಮಣಂ (ಎಕ. VII, ಶಿಕಾ. ೦೩೬–೨೪ ; 1068).
[ ಸಂ. ಲಂಜಿಕಾ ]

**ಲಂಜಿಗೇಸರ** (ನಾ). ಲಕ್ಷ್ಮೀಪತಿ ; ವಿಷ್ಣು (?) : ಲಂಜಿಗೇಸರಂ ದೇವರ್ಕೆ ಪೂನಿಜುವ ಮಾಲ(ಲಾ)ಕಾರರ್ಗ್ಗೆ (ಇಸಿ. X, ೬೦–೨ ; 578).
[ಲಂಜಿಗ$_0$ (p ← ಸಂ. ಲಂಜಾ = ಲಕ್ಷ್ಮಿ) + ಈಸರ]

**ಲಂಜೆ** (ನಾ). = ಲಂಜಿಕೆ : ಕಾಂಚಿಯ ಪಟ್ಟಣದಲಿ ಕಣಿಯ ಕೇಳಿರೊ ಅಲ್ಲಿ ಲಂಚೆ[ ಜೆ ]ಯರು ಕೆಡಿಸ್ಯಾರು ಕಣಿಯ ಕೇಳಿರೊ (ಎಬೀಕ. ೦೪೨–೪೦).
[ ಸಂ. ಲಂಜಾ ]

**ಲಂಟವಾಣಿ** 'ಲಂಟಾನಾ' ನೋ.

**ಲಂಟಾನ** 'ಲಂಟಾನಾ' ನೋ.

**ಲಂಟಾನಾ, ಲಂಟವಾಣಿ, ಲಂಟಾನ, ಲಂತಾನ, ಲಾಂಟನಾ** (ನಾ). ನೀರಿನ ಸೌಕರ್ಯವಿಲ್ಲದಿದ್ದರೂ ಪೊದೆಪೊದೆಯಾಗಿ ಬೆಳೆಯುವ, ಸಣ್ಣ ಹೂವುಗಳನ್ನು ಬಿಡುವ ಒಂದು ಬಗೆಯ ಸಸ್ಯ : ಲಂಟಾನಾ ಹೂಗೊಂಚಲು ನುಡಿಯಿತು (ಸುಶೀಕ. ೨೭–೦೩). **ಲಂಟವಾಣಿ** : ಲಂಟವಾಣಿಗಿಡ, ಹೇಸಿಗೆಹೂ ಕಾಡುಜೋಳ (ವ್ಯಶಿಗ. ೪೯–೯೬೮). **ಲಂಟಾನ** : ಪಾಳುದೇಗುಲದಲ್ಲಿ ಲಂಟಾನಪೊದೆಯಲ್ಲಿ ಸಾಗುತಿರಲು (ಕೋಗಿರಿ. ೪೫–೦೨) ; ನಮ್ಮ ನಿತ್ಯಜೀವನದಲ್ಲಿ ಅದರ ಪ್ರಭಾವ ಲಂಟಾನ ಬೆಳೆ ಹಾಗೆ ಹಬ್ಬಿದೆ (ನಾಡಿಗೆ. ೫೩). **ಲಂತಾನ** : ಲಂತಾನದಂತಹ ಸಣ್ಣ ಸಣ್ಣ ಪೊದೆ ಪೊದರುಗಳೂ ಮುಳ್ಳುಗಿಡಗಳೂ ಬೆಳೆದಿವೆ (ಚಾರಿಗ. ೪೬); ಸುತ್ತಲೂ ಲಂತಾನ ಪೊದೆ ಬೆಳೆದಿತ್ತು (ಹುಲಿಹಾ. ೦೮). **ಲಾಂಟನಾ**: ಮಲೆನಾಡಿನಲ್ಲಿ ಲಾಂಟನಾ ಇದ್ದಹಾಗೆ (ಶಂಗೂಲಿ. ೯೮). [← ಇಂ. Lantana]

**ಲಂಡ$_1$, ಲಂಡಿ$_1$, ಲಂಡು, ಲೆಂಡ, ಲೆಂಡು** (ಗು). ೧. ದುಷ್ಟತನದಿಂದ ಕೂಡಿದ ; ಕೆಟ್ಟತನದ : ' ಲಾಂಡವೇಶ್ ' ಪರಾ. ೨. ಮೋಟಾದ ; ಮೊಂಡಾದ ; ಗಿಡ್ಡವಾದ : ಲಂಡತೋಳಿನ ಬುಷ್‌ಕೋಟು ಅವನ ಮೊದಲಿನ ನೆಹರುಶರ್ಟನ್ನು ಓಡಿಸಿತ್ತು (ಚಾರಶಿ. ೦೦೯). (ನಾ). ೩. ನೀತಿ ನಿಯಮವಿಲ್ಲದವನು ; ದುಷ್ಟ ; ನೀಚ : " ಲಂಡ – ಲಡ್ಡ(ಟ್ಟ) = ಧೂರ್ತ, ಅಸಭ್ಯ" (ಶದ್ಯಕೋ. ೩೮) ; ಜಾರ ಚೋರ ಸಂದಣಿಗ ಲಂಡ ಭಂಡ ಚಾರ್ವಾಕ . . . ಇಂತಿವರಲ್ಲಿ . . . ನುಡಿದಡೆ ಆ ಭಕ್ತಂಗೆ ಭಕ್ತಿಯಿಲ್ಲ (ಪೋ೪ವಾ. ೨೭–೦೦೦) ; ಕಂಡ ನಾರಿಗಿಚ್ಛೈಸುವ ಲಂಡಗೆ ಪುರಾಣವೇಕೆ (ಪುರಂದ. ೦–೩೦–೫) ; ಪಂಡಿತನು ಭಂಡರೊಡನಾಡಿ ಅವ ಶುದ್ಧ ಲಂಡ ತಾನಕ್ಕು (ಸರ್ವಜ್ಞ. ೬೨೪). ೪. ಧರ್ಮಶ್ರದ್ಧೆಯಿಲ್ಲದವನು; ಪಾಷಂಡಿ : ಧರ್ಮದ ಸೋಗಿನಿಂದ ಸ್ವಾರ್ಥಸಾಧನಕ್ಕಾಗಿ ಮನಬಂದಂತೆ ನಡೆಯುವ ಲಂಡರ ಆಚರಣೆಯೆತ್ತ ? (ವಾರಿಶ. ೯) ; ಪಿಂಡ ಹಾಕಿದರೂ ಲಂಡ ಎನಿಸಿಕೊಳ್ಳೋದು ತಪ್ಪಲಿಲ್ಲ (ಗಾದೆ). ' ಧರ್ಮಲಂಡ ' ಪರಾ. ೫. ಒರಟ ; ಉದ್ಧತ : ಲಂಡರಹ ದಾನವರ ಕೊಲುವವಖಂಡ ವಿಕ್ರಮವೀರ ನರಹರಿ (ಕೋಗಿರು. ೨೭–೪೨). ೬. ತುಂಡಾದುದು ; ಮೋಟಾದುದು ; ಮೊಟಕಾದುದು : ಕೂದಲನ್ನು ಲಂಡವಾಗಿ ಕತ್ತರಿಸಿದ್ದರಿಂದ . . . ಅವು ಹೆಗಲ ಮೇಲೆ ಲೋಲಾಡುತ್ತಿದ್ದವು (ಹೇಮಂಶ. ೧೯೪). **ಲಂಡಿ$_1$** : ೩. ಕದನಮುಖದ ಕೈಕೊಂಡುಳಿವರಿಲ್ಲ ನಿನಗಾತನೊಳು ವೈರವೇ ಲಂಡಿ ಹೋಗೆಂದು ನೆರೆ ಜರೆಯೆ ಕೋಪಾಟೋಪದಿಂ ಖಡ್ಗಮಂ ಜಡಿದನು (ಲಕ್ಷ್ಮಭಾ. ೩–೩೦–೬೬) ; ತರಳರೆಂದುದ ಕೇಳಿ ಶ್ರೀಹರಿ ಮರಳಿ ಪೇಳಿದ ಲಂಡಿಗಳು ನೀವ್ ಬರಿದೆ ಪೊಗಳುವಿರಾಕೆಯನು (ಶಂದ್ರಾವ. ೯). **ಲಂಡು** : ೧. ಅನಾರ್ಜಿತವ ಮಾಡಿ ಕೆಡಿಸುವಂಥಾ ಲಂಡು ಪುಂಡರುಯಿದ್ದರೆ ವೀರಮಾಹೇಶ್ವರರು ಪೊಡೆಯರು ಭಕ್ತರು ವಿಚಾರಿಸಿಕೊಂಡು ಅಂಥಾ ಲಂಡು ಪುಂಡರ ತೆಗೆದು ಸತ್ಪುರುಷರ ಯಿರಿಸುವುದು (ಎಕ. XVI, ಚಕ್ಕಶಾ. ೦–೨೩ ; 1623). ೭. ನೀಚತನ ; ದುಷ್ಟತನ : ತೊಂಡುತೊಳಸಿಕ್ಕಸಿಕ್ಕ ವಂಚನೆ ಕುಹಕ ಜೂದು ಕುತ್ಸಿತ ಲಂಡು ಬಂಡು ದುರ್ಜನಮೆಂಬಿವೆಲ್ಲ ದುಷ್ಟಸ್ವಭಾವಂ ನೀವಿದಕ್ಕೇನ ಮಾಳ್ಪರಿ (ಸಮ್ಮಕಾ. ೬–೬೩). **ಲೆಂಡ** : ೧. ದಂಡಾಧೀಶ್ವರ ಬಂದ ಲೆಂಡಗಣವನಳಿದ (ಕೋಡಶ. ೩–೯). ೪. ದೀಗುವಿಡಿದು ಭಂಡರಾದ ಲೆಂಡರಿಗೇಕೋ ಲಿಂಗದ ಸುದ್ದಿ (ಪೋ೪ವಾ. ೦೮೪–೬೯೩); ಕೆಂಡುದ ಹೇಳಹೆನೆ ಸಮಯುಕ್ಕೆ

ದೂರ ಎನ್ನ ಇರವನಱಿಯರು ಲೆಂಡನೆಂಬರು ಸುಮ್ಮನಿದ್ದೇನೆ ಇವರೆನ್ನ ಅಱಿದು ಕಂಡುದ ನುಡಿವರು (ಬಸವ. ೬–೨೬). ೫. ಲೆಂ[ಶಾಸ್ತ್ರ. ಲಂ]ಡ ಪುಂಡರ ಕೂಡಿಕೊಂಡು ರಾಜ್ಯವ ನೀವಂಡಲೆವುದನೆಮ್ಮ ರಾಯ ಕಂಡು ಸೈರಿಸುವನೆ (ಕುಮಾರ. ೦೦-೦೬) ; ದಂಡವಗೋಳದಿರು ಧರ್ಮವ ಬಿಡದಿರು ಲೆಂಡ ಪುಂಡರ ಸೇರಿಸದಿರು (ಚಿತ್ರಾ. ೦೨-೯೦). ಲೆಂಡು : ೭. ಪೃಥುಲನಿಂದೆಯಗಳಿಂದೊಪ್ಪುವ ಲೆಂಡು ದುರ್ಮಾರ್ಗದುರ್ಗವ ಬಸವ ರಾಜೇಂದ್ರು ಕೊಂಡು (ಸಿಂಗಿರಾ. ೨೩-೨೦).

ಲಂಡಾಗು = ಗಿಡ್ಡವಾಗು : ನಾವೇ ಅವರಣ್ಣನಿಗೆ ಕೊಟ್ಟ ಧೋತರ ಅವರಿಗೆ ಲಂಡಾಗುತ್ತದೆ (ವೃ.ಪಿ. ೪೭). ಲಂಡೋಬಂಡೋ ಆಟ = ಲಂಡತನದಿಂದ ಆಡುವ ಆಟ ; ಭಂಡಾಟ : ಲಂಡೋಬಂಡೋ ಆಟ ಆಡಿ ಮೂರಾಬಟ್ಟೆ ಮನಿ ಆತಂತ (ಜೀವಂ. ೨೯-೦೩). [<ಸಂ. ಲಡ್ಡ]

**ಲಂಡ₂** (ನಾ). ಆನೆ, ಕುದುರೆ ಮುಂತಾದುವುಗಳ ಮಲ ; ಲದ್ದಿ ; ಸಗಣಿ : "ಲದ್ದಿಯೆನೆ. ಲಂಡಮುಕ್ಕುಂ" (ಪಂಗಿರಾ. ೪೭-೭) ; ಲಂಡ ದೊದವಿಂದಂ ತನ್ನದೀಕೂಲವಮಂ ಕದಡುತ್ತಿರ್ದುದು . . . ಕರೀಂದ್ರೋತ್ಕರಂ (ಸುಕ್ತಿ. ೦೦-೭೬) ; ಇಕ್ಕಿದ ಲಂಡದ ಬೆಂಕೆಯಿಂ ಕವಿವ ಕಟ್ಟದದೊಳ್ಳೊನ ಲೊಳ್ . . . ಸಂಯಮ್ಯಾಱದ ಪೆರ್ನೊರೆಯಿಂ . . . ಅಱಿದಂ ಕಾಡಾನೆ ಗಳಾಗಡೆ ಪೋದುದಂ (ಅನ್ನಾ.ಪ. ೬೨೬) ; ಪೊಡೆಯೊತ್ತೆ ಬಾಲಂ ನಿಮಿರೆ ಲಂಡಮನುರ್ಚುವಾಕಳಿಂ (ರಾಜಶೇ. ೪೩-೨೨). [ಸಂ.]

**ಲಂಡಂಗಿ** (ನಾ). ಅರ್ಧತೋಳಿನ ಅಂಗಿ ; ಗಿಡ್ಡತೋಳಿನ ಷರಟು : ಬರಿಯೊಂದು ಲಂಡಂಗಿಯ ಮೇಲೆ ಬೆಳದಿಂಗಳಲ್ಲಿ ಹೋಗಿಬಿಟ್ಟ (ಕಪಿ. ೩೨). [ಲಂಡ₁ + ಅಂಗಿ₂]

**ಲಂಡಗಚ್ಚೆ** (ನಾ). ಮೇಲಕ್ಕೆ ಎತ್ತಿ ಕಟ್ಟಿದ ಕಚ್ಚೆ : ರಾಯರು ಲಂಡಗಚ್ಚೆ ಹಾಕಿಕೊಂಡು ತೋಟದ ಕೆಲಸವನ್ನು ಪ್ರಾರಂಭಿಸಿದರು (ಜಾಪ). [ಲಂಡ₁ + ಕಚ್ಚೆ₁]

**ಲಂಡಚಣ್ಣ** (ನಾ). ಗಿಡ್ಡವಾದ ಚಲ್ಲಣ ; ಚಡ್ಡಿ ; ನಿಕ್ಕರು : ಅವನು ಲಂಡಚಣ್ಣ ಹಾಕಿರಬೇಕು (ವೃ.ಪಿ. ೬) ; ಕಚೇರಿಗೆ ಖಾಕೀ ಲಂಡಚಣ್ಣದ ಮೇಲೆ ಕಳಿಸಿದ ಆಕೆ ಈಗ ಬದಲಾಗುತ್ತಾಳೆಯೋ ? (ಗಂಜಾಯು. ೦೨೩). [ಲಂಡ₁ + ಚಣ್ಣ (<ಚಲ್ಲಣ)]

**ಲಂಡತನ**, ಲೆಂಡತನ (ನಾ). ಔದ್ಧತ್ಯ; ಉದ್ಧಟತನ: ಲಂಡತನದಲಿ ನಡೆವ ಭಂಡ ಹೊಲೆಯ (ಪುರಂದ. ೧-೦೭೬-೨) ; ಲಂಡತನದಿ ಕಾಳಗಕೊಡ್ಡಿದೊಡ್ಡನು ದ್ದಂಡಿಸಿ ಪುರಕೆ ಪೋಪವನ ಕಂಡು ಭಟರು ಪೋಗಬೇಡ ಬೇಡೆನೆ (ಸಂಕ್ರಸಾಂ. ೬-೭೪) ; ಕಂಡು ಸತಿಯಳ ಭ್ರಾಂತುಗೊಂಡು ಕಳವಳಿಸುತ್ತ ಚಂಡಭುಜಬಲನೆಂಥ ಲಂಡತನದಿಂದ (ಜಯಿಪ. ೯). ಲೆಂಡತನ: ಅಷ್ಟ ಮದಂಗಳ ವರ್ತನೆಯ ಲೆಂಡತನವ ನಷ್ಟವ ಮಾಡಿ (ವಚನಮೊ. ೦೯೩-೭೨೭ ಅರ್ಥ). [ಲಂಡ₁ + – ತನ]

**ಲಂಡಪಂಚೆ**, ಲಂಡಪಂಜೆ (ನಾ). ಮೋಟಾದ (ನೀರು)ಪಂಚೆ; ಗಿಡ್ಡವಾದ ಧೋತ್ರ : ಲಂಡಪಂಚೆ ಹಚ್ಚಿಕೊಂಡು . . . ಕ್ಷೌರ ಮಾಡಿಸಿಕೊಂಡು ಆಮೇಲೆ ಗೋಮಹಚ್ಚಿ ಇತ್ಯಾದಿ ಎಲ್ಲ ವಿಧಾನಗಳು ಆಗತಕ್ಕವು (ಮುಂಗಾರು. ೮೫). ಲಂಡಪಂಜೆ : ಅನಂತರ ನಮ್ಮ ಮಡಿಯ ಲಂಡಪಂಜೆ ಯನ್ನು ಇಳಿಸಿ . . . ಹಳೆಯ ತ್ಯಾಪೀ ಹಚ್ಚಿದ ಅಂಗಿ_ಚಣ್ಣದ ಚಿಲಖತ್ತು ಏರಿಸುತ್ತಿದ್ದೆವು (ದೀಪಕ. II, 1). [ಲಂಡ₁ + ಪಂಚೆ]

**ಲಂಡಪಂಜೆ** 'ಲಂಡಪಂಚೆ' ನೋ.

**ಲಂಡಪಾತಿ** (ನಾ). [ಅಶ್ವಶಾ] ಲದ್ದಿ ಹಾಕುವುದಕ್ಕೆ ಸಂಬಂಧಿಸಿದ ರೋಗ : ಮಾರ್ಜಾಲದ ಕಣ್ಣಂ ಪೋಲ್ವ ಕಣ್ಗಳುನ್ಮೀ(ಣ್ಮೀ)ಲಿತನೇತ್ರದ ಲಂಡಪಾ[ಶಾಸ್ತ್ರ. ನಾ]ತಿಯುಪ್ಪಾ ಕುದಿರೆಯದು ಗತಾಯುವಕ್ಕುಮೇಬಚ್ಚ ದೊಳಂ (ಅಶ್ವಶಾ. ೬–೬). [ಸಂ. ಲಂಡಪಾತಿನ್]

**ಲಂಡಪೆಣ್** 'ಲಂಡಪೆಣ್' ನೋ.

**ಲಂಡವೆಣ್**, ಲಂಡಪೆಣ್, ಲಂಡಹೆಣ್ಣು (ನಾ). ದುಷ್ಟಹೆಂಗಸು; ನೀಚ ಸ್ತ್ರೀ: ತೊಂಡುವೆಣ್ಗಳ ನೇಹದೊಡಕಿಗೆ ಸಿಲುಕದೆ ಲಂಡವೆಣ್ಗಳ ಶಾಲಿಸದೆ . . . ನಲ್ವೆಂಡಿರೊಡನೆ ಬೆರಸುವುದು (ಹರಿ. ~೪೬). ಲಂಡಪೆಣ್ : ಇಂತೆಂದು ಲಂಡಪೆಣ್ಗಳು ನುಡಿಯಲು , (ಕಂಕ. ೯೩-೯). ಲಂಡಹೆಣ್ಣು : ಸುಜ್ಞೆಯಿಂದಾಳಬೇಕಣ್ಣ ಗಂಡನಾಜ್ಞೆಯ ಮೀಱಿ ನಡೆವ ಲಂಡಹೆಣ್ಣ (ಶಿರಂದ. ೩-೦೯ ಅನುಕಲ್ಪಂ). [ಲಂಡ₁ + ಪೆಣ್]

**ಲಂಡಹೆಣ್ಣು** 'ಲಂಡವೆಣ್' ನೋ.

**ಲಂಡಿ₁** 'ಲಂಡ₁' ನೋ.

**ಲಂಡಿ₂** (ನಾ). ದುಷ್ಟೆ ; ನೀಚಸ್ತ್ರೀ : ಲಂಡಿಯರು ನಿರ್ಲಜ್ಜರಾ ಜಗಭಂಡೆಯರು . . . ಪಾತಕದ ರೂಪಿನ ಕೋಪಿಗಳು (ದೇವಪು. ೬-೦೩). [ಲಂಡ₁ + –ಇ₂]

**ಲಂಡು** 'ಲಂಡ₁' ನೋ.

**ಲಂಡೆ**, ಲೆಂಡೆ (ನಾ). = ಲಂಡಿ₂ : ಉಂಡಳೊಬ್ಬಳೆ ಮಗನ ಪಡೆದಳು ಲಂಡೆ ನಾವೇನುಳಿದರಲ್ಲರು ಹೆಂಡಿರಲ್ಲಾ (ಜಿಭಾಗ. ೬-೦೩-೨೬); ದುರಿತಗಣಕಂಜದಿಹ ಲಂಡೆಯರ್ದಿಂಡೆಯರ್ನರರ ಹೃದಯವ ಕೊಯ್ವ ಕತ್ತಿಗಳ್ ತಿತ್ತಿಗಳ್ (ಷಡಂ. ೨-೩೭) ; ಆ ಲಂಡೆಯರು ತಮ್ಮ ದುರ್ನಡತೆಯನ್ನು ಬಿಟ್ಟಿಲ್ಲ (ಕೃಪಾ. II, ೩೦೦). ಲೆಂಡೆ : ಗಂಡು ತನ್ನದು ಎಂದು ಲೆಂ[ಶಾಸ್ತ್ರ. ಲಂ]ಡೆ ಸುತನೆಂಬುವಳು ಖಿಂಡಪರಶುವಿನ ವರಪುತ್ರ ಆನು ನೆಱೆ ಕಂಡುದನೆ ನುಡಿದೆ (ಸರ್ವಜ್ಞ. ೦೩). [ಲಂಡ₁ + – ಎ₂]

**ಲಂತಾನ** 'ಲಂಟಾನಾ' ನೋ.

**ಲಂದಣ** 'ರಂದಣ' ನೋ.

**ಲಂದಣಗಿತ್ತಿ** 'ರಂದಣಗಿತ್ತಿ' ನೋ.

**ಲಂದಣಿಗ** 'ರಂದಣಿಗ' ನೋ.

**ಲಂಪಂಬೆಱು** (ಕ್ರಿ). ಮೇಲ್ಮೆಯನ್ನು ಪಡೆ. ಹಿರಿಮೆಯನ್ನು ಹೊಂದು : ಸಂಪದ್ವರ್ಮಾರ್ಥಕಾಮಾಂಬುರುಹ ವನಜಮಿತ್ರಂ ಧರಿತ್ರೀಸುವಕ್ತ್ರಂ ಲಂಪಂಬೆತ್ತೈದೆ ಕಣ್ಗೊಪ್ಪಿದುದು . . . ಪಂಪಾಕ್ಷೇತ್ರಂ (ಅಧ್ಯಟ. ೩-೩೪). [< ಲಂಪು + ಪೆಱು₁]

**ಲಂಪಟ** (ನಾ). ೧. ಯಾವುದಾದರೊಂದು ಚಟವುಳ್ಳವನು,–ಗೀಳುಹಿಡಿ ದವನು : "ಲೋಲುಪಂ ಲಾಲಸಂ ಲೋಲುಭಂ ಲಂಪಟಂ ಲೋಲ ನೆನಲಳಿಪುವವನಕ್ಕು" (ಪಂಗಿರಾ. ೬೯-೦೦) ; ಕರ್ಣನುಮಂದೀರ್ಣವೀರ ರಸಾಸ್ವಾದನಲಂಪಟನಾಗಿ . . . ಬಂದು ತಾಗಿದಾಗಳ್ (ಪಂಪಭಾ. ೦೨-೦೦೬ ವ); ಅಧರಪೀಯೂಷಲಂಪಟಜಿಹ್ವನೇತ್ರತ್ರಯನೆ(ಹ್ರಿಶರಾ. ೨-೪೨). ೨. ಕಾಮಾಸಕ್ತ ; ಕಾಮುಕ : ಅಟಮಟಗಂ ಗಾಳುವಿವಂ ಕುಟಿಲಂ ಲಂಪಟನೆನಿಪ್ಪವಂ ಮಾನಸನೇ (ಅನ್ನಾ.ಪ. ೩೬); ಕಾಮಾಂಧವಶನಾಗಿ ಲಂಪಟ ನೊರ್ವ ಮತಿಗೆಟ್ಟು ಮುಪ್ಪುದೊರೆ ಹೆಂಗುಸೊರ್ವಳ ಪದಕೆ ದಾಸನಾ ಗುರುಳಿದರೆ, ಪೂಜ್ಯನೀ ರಾಮಚಂದ್ರಂ ರಾಜ್ಯಮಂ ತ್ಯಜಿಸಿ ವಿಪಿನಾಂತರದ ವಾಸಮಂ ಕೈಕೊಳ್ವುದೇಕೆ? (ಶ್ರೀರಾಮಾ. ೯೦-೬೩). ೩. ಗೀಳು ; ಚಟ ; ಅತ್ಯಾಸಕ್ತಿ : ಪಂಚೇಂದ್ರಿಯಲಂಪಟದಿಂದಂ ಸುರನರರನೊಯ್ವುದೊಂದಾ ಶ್ಚರಿಯೇ (ಅದಿಪ. ೩೨-೨) ; ಹೀನಮಾನವರು ತಾವು ಬ್ರಹ್ಮವೆಂದು ಜಿಹ್ವೆ ಗುಹ್ಯೆ ಲಂಪಟದಲ್ಲಿ ಹೊಂದಿದುದ ನೋಡಿ ನಗುತಿದ್ದನು ನಮ್ಮ ಗುಹೇಶ್ವರಲಿಂಗನು (ಪ್ರಭುಶಾಂ. ೨೬). [ಸಂ.]

**ಲಂಪಟತನ** (ನಾ). ಅತಿಯಾದ ಆಸಕ್ತಿ, – ವ್ಯಾಮೋಹ ; ಲೋಲುಪ್ತಿ : ಜಂಗಮವೇ ಲಿಂಗವೆಂಬುದಕ್ಕೆ ಏನು ಗುಣ ಮನದ ಲಂಪಟತನ ಹಿಂಗದಾಗಿ ಒಡೆಯರ ಬರವಿಂಗೆ ಕುನ್ನಿ ಬಾಲ ಬಡಿವರೆ ವೆಚ್ಚವೇನು ಹತ್ತುವದು (ಬಸವ. ೨೦೬). [ಲಂಪಟ + – ತನ]

**ಲಂಪಟತೆ** (ನಾ). ವಿಷಯಲೋಲುಪತೆ ; ಕಾಮುಕತೆ : ದಿಟದಿಂದೊಲ್ದವರಂ ಲಂಪಟತೆಯಿನಮರ್ದಪ್ಪಿ ನೆರೆವ ನೆರೆವನಿತು ಸುಖಂ ಘಟಿಯಿಸದು ತವೆನ್ನೊಳ್ (ಚಂದ್ರಪ್ರ. ೪-೬೩). [ಸಂ. ಲಂಪಟತಾ]

**ಲಂಪಟತ್ವ** (ನಾ). ಅತ್ಯಾಸಕ್ತಿ ; ಅತಿಯಾಸೆ : ಇವರಚ್ಯುತಾಂಘ್ರಿದರ್ಶನಲಂಪಟತ್ವದಿಂದ . . . ಬಂದರ್ (ಕೈವಲ್ಯ. ೪-೬೦). [ಸಂ.]

**ಲಂಪಟೆ** (ನಾ). ಕಾಮಾಸಕ್ತಳಾದವಳು ; ವಿಷಯಲೋಲುಪಳಾದ ಸ್ತ್ರೀ : ವಿಟಗೋಷ್ಠಿಯೊಳ್ಭೋಗವುಂ ಬಯಸಿ ಕಾಮಲಂಪಟೆಯಾಗಿ ಮೇಣರ್ಥಮುಂ ಗಳಿಸಿ (ಕೈವಲ್ಯ. ೩-೩೬). [ಸಂ. ಲಂಪಟಾ]

**ಲಂಪಣ** 'ಲಂಪಳ' ನೋ.

**ಲಂಪಳ**, ಲಂಪಣ, ಲಂಬಳ$_1$ (ನಾ). ೧. ವಿಷಯಾಸಕ್ತ ; ಸುಖಲೋಲುಪ; ಕಾಮುಕ : ಒಂದೊಂದೆ ರಸದ ಸೋಲಮದೊಂದೊಂದನೆ ಕೊಲ್ಗೆ ಮೋಹೋ ಲಂಪಳ [ಪಾಠಾಂ. ಟ]ರಪ್ಪೆಮ್ಮಂದಿಗರಂ ಬಗೆವಂದದೆ ಕೊಂದಿಕ್ಕವೆ ಸಕಳವಿಷಯವಿಷಮವಿಷಂಗಳ್ (ಆದಿಪು. ೪-೬೩). **ಲಂಪಣ**: ೧. ಲಂಪಣನವೊಲೇನಾನುಮಲಂಪಿನ ಸಗೆನುಡಿಯು ನೆವದಿ ನೆಯ್ದಿಲ ಪೂವಿಂದಂ ಪೊಯ್ಯೆ ಮೂರ್ಛೆವೋದಳ್ (ಯಶೋಧ. ೨-೬೭). **ಲಂಬಳ$_1$**. ೧. "ಲಂಬಳ (ಲಂಬಾಳ) — ಲಂಪಟ = ಲೋಲುಪ" (ಶಬ್ದಕೋ. ೩೯). ೨. ವಿಷಯಾಸಕ್ತಿ ; ವಿಷಯಲೋಲುಪತೆ ; ಕಾಮುಕತೆ : ಲಂಪಟಶಬ್ದಕ್ಕಾದ ಲಂಬಳವೆಂಬುದುಂ ಅಟಕ್ಕ ಸಂದೇಹಂ (ಶಮದ. ೨೨ ಪ್ರಯೋ) ; ಪಳದಂ ಚೆಲ್ವಿಕೆಗೆತ್ತಿ ಪೊಚ್ಚಪೊಸತೊಂದಂ ಮಾಡಿ ಸಾಲ್ಪುರ್ವಿ ಲಂಪಳದಿಂ ತನ್ಮಯಮಪ್ಪವೋಲ್ ಕೊಳಿಸು (ಸಂಶಠ. ೩೦-೧೦೦). [<ಸಂ. ಲಂಪಟ]

ಲಂಪಳಿಕೆ (ನಾ). ವಿಷಯಾಸಕ್ತಿ ; ಮೋಹ ; ಲಂಪಟತನ : "ಲಂಪಳಿಗೆ(ಕೆ) — ಲಾಂಪಟ್ಯ = ಅತ್ಯಾಸಕ್ತಿ" (ಶಬ್ದಕೋ. ೩೦) ; ಬಿಸುಡಂ ಮುನ್ನಿನ ತನ್ನ ಲಂಪಳಿಕೆಯಂ (ಆದಿಪು. ೨-೪೩) ; ಅಶ್ವಗ್ರೀವನುಂ ರಾವಣನುಂ ಕೀಚಕನುಂ ದುಶ್ಶಾಸನನುಂ ಕಮಠನುಮೆಂದಿವರೆಲ್ಲರುಂ ಪರವನಿತಾಲಂಪಳಿಕೆಯಿಂ ಕೆಟ್ಟರ್ (ಪಾರ. ೩೦೨). [ಲಂಪಳ + — ಇಕೆ]

ಲಂಪು (ನಾ). ವೈಭವ ; ಆಡಂಬರ : "ಲಂಪೆನಲು ವಿಭವಂ" (ಕರ. ೯೯) ; ನಿಗುರ್ವ ಪೂಮಾಲೆಗಳ ಲಂಪಿಂದಲಂಪಿಂದೆ ಮಂಟಪಂ ಚೆಲ್ವಾದುದು (ಶಂಖ. ೩೬-೩೨). 'ಲಂಪಂಬೆಟ್ಟು' ಪರಾ. [<ಅಲಂಪು]

**ಲಂಬ** (ಗು). ೧. ಜೋಲುವ ; ನೇತಾಡುವ ; ತೂಗುತ್ತಿರುವ : ಉತ್ತುಂಗಪೀನನಿಜಾಂಸಾರ್ಪಿತ ಲಂಬಹಾರನವನಾ ಪಾಂಡ್ಯಂ (ಕಂಕಥಾ. ೩-೩೪) ; ಲಂಬೋಪರಂ ಲಂಬಕೂರ್ಚಕಲಾಪಂ ಸಿತಕಂಚುಕಂ ತ್ವರಿತದಿಂ ಬಂದಂ ಪ್ರತೀಹಾರಕಂ (ಕಂರಾಪು. ೨-೨). ೨. ದೊಡ್ಡದಾದ; ದಪ್ಪವಾದ: ತುಂಬಿತುಳುಕಾಡಿದಪುದಯ್ಯನ ಲಂಬಜಠರವಿದೆನುತ (ಬಸವ. ೩೯-೦೭). ೩. ಉದ್ದವಾದ ; ಎತ್ತರವಾದ : ದನಗಾಹಿಯು ಕರಿಯ ಕಂಬಳಿಯನ್ನು ತಲೆಯಿಂದ ಮೊಳಕಾಲ ತನಕ ಹೊತ್ತಿದ್ದನು . . . ಒಂದು ಲಂಬಕಟ್ಟಿಗೆಯ ಮೇಲೆ ಕಂಬಳಿಯನ್ನು ಹೊದಿಸಿದಂತೆ ತೋರುತ್ತಿತ್ತು (ರಶ್ರ. ೧೨). (ನಾ) ೪. ಉದ್ದಳತೆ : 'ಹೈಪೊಫ್ಯಾರಿಂಕ್ಸ್' ಇದು ಬಾಯಿಯ ತಳ ಅಥವಾ ಮುಂಬಾಯಿಯ ನಾಲಗೆಯಂತಹ ಲಂಬ (prolongation) (ಕೀಟಶ. ೬೨). ೫. ಬಾಗಿಲಿನ ಚೌಕಟ್ಟು ಮೊದಲಾದುವುಗಳ ಉದ್ದವಾದ ಪಟ್ಟಿ : " (ಬಾಗಿಲ ಚೌಕಟ್ಟು, ಗೋಡೆಯ ಹಲಗೆಸೇರುವೆ. ಮೊ.ಗಳಲ್ಲಿ) ನಿಲು, ಲಂಬ, — ಪಟ್ಟಿ, ಮರ" (stile. ಇಂಕಂ). ೬. [ರೇಖಾಗ] ಸಮತಲ ರೇಖೆಯ ಮೇಲೆ ಸಮಕೋನವಾಗುವಂತೆ ಎಳೆದ ಗೆರೆ : ಒಂದು ರೇಖೆಯು ಮತ್ತೊಂದು ರೇಖೆಯ ಬಳಿ ಬಂದು ಸೇರುವುದರಿಂದ ಎರಡು ಕೋನವಾಗುತ್ತ . . . ಹಾಗೆ ಸೇರುವಂತಾ ರೇಖೆಗೆ ಲಂಬಮೆಂಬ ಹೆಸರಾಗುವುದು (ಕೂಬಂಕ. ೧೦). ೭. ಒಂದು ಸ್ಥಳದ ಹೆಸರು : ವೀರನಾಯಕ ಬಲವಟ್ಬೆರಸು ಲಂಬದ ಕೋಟೆಯುಮನ್ ಕೆಡಿಸಿ (ಪ್ರಕಆ. ೧೯೨೩, ೬೨-೭; ೪). [ಸಂ.]

**ಲಂಬಕ** (ನಾ). ೧. ಒಂದು ಬಗೆಯ ಆಭರಣ : ಪ್ರತಿಮೆಗಳಿಗೆ . . . ಮುಖ್ಯವಾದ ಆಭರಣಗಳು_ಕೌಸ್ತುಭ, ಕುಂಡಲ, ಕಿರೀಟ, ಜಟಾಮುಕುಟ, ಲಂಬಕ, ಮೇಖಲಾ, ಕಟಕ ಮುಂತಾದುವು (ಶಾರದ. ೩೦೭). 'ಲಂಬಣ' ಪರಾ. ೨. ಗ್ರಂಥದ ಅಧ್ಯಾಯ, — ಪ್ರಕರಣ. [ಸಂ.]

**ಲಂಬಣ**, ಲಂಬಳ$_2$ (ನಾ). ೧. ಉದ್ದವಾದ ಒಂದು ಬಗೆಯ ಸರ : ನೆತ್ತಮನಾಡಿ ಭಾನುಮತಿ ಸೋಲ್ತೊಡೆ ಸೋಲಮನೀವುದೆಂದು ಕಾಡುತ್ತಿರೆ ಲಂಬಣಂ ಪಱಿಯೆ ಮುತ್ತಿನ ಕೇಡನೆ ನೋಡಿ ನೋಡಿ ಬಳ್ಕುತ್ತಿರೆ (ಪಂಪಭಾ. ೯-೬೯) ; ಲುಂಗದ ಲಂಬಣಂಗಳಿಂ ಚಂದನದ ವಂದನಮಾಲೆಗಳಿಂ . . . ತಣ್ಣನ ತಾಣಮುಮೆನಿಸಿರ್ಪ ಲತಾಮಂಟಪಮಂ ಪೊಕ್ಕು (ಕುಸುಮಾ. ೧೨-೦೩೭ ವ); ಮುತ್ತಿನ ಸರವೆನ್ನ ರನ್ನವಾವುಗೆಗಳ ಸುತ್ತ ಲಂಬಣವಾದುದಿಂದು (ಹರಿ. ೦-೪೨). ೨. ಕುಚ್ಚು ; ಗೊಂಡೆ : ಒಪ್ಪಿದುವು ಶಾದ್ವಲರತ್ನವಿತಾನದೊಳ್ಮನಂಗೋಳಸುವ ಪದ್ಮರಾಗಮಣಿಕೀಲಿತ ಲಂಬಣಜಾಲಮೆಂಬಿನಂ (ಮಲ್ಲಿಪು. ೨-೦೮) ; ಪಚ್ಚೆಯ ಚೆಂಬವಳದ ಲಂಬಣದಿಂ ಸಿಂಗರಿಸಿ . . . ನಟ್ಟ ಕಾವನ ಗೆಲ್ಲಗಂಬಮೆನೆ . . . ಕಣ್ಗೆಡ್ಡಮಾಗಿರ್ಪಂ ಕೌಂಗುದೋಂಟಂ (ರಾಮಾಶ್ವ. ೮-೨೨) **ಲಂಬಳ$_2$** : ೧. ಬರಗೆಲೆಯುಂ ಕೊಪ್ಪುಂ ನೂಪುರಮುಂ ಲಂಬಳ [ಪಾಠಾಂ. ಣ]ಮುಮಲ್ಲಿಮಲ್ಲಿಗೆಯ ಮುಗುಳ್ ಬರಿಮುಗುಳೆಂಬಿವು ತನಗಾಗಿರೆ ದೇಸೆಯ ಮಾಸರಿಕ್ಕೆಯುಂ ಪೊಸಯಿಸಿದಳ್ (ಶಾಂತಿಪು. ೮-೨೨) ; ಮುತ್ತಿನ ಲಂಬಳದ ಲೋವೆಗಳಕಾಂತಿಯ ಲಳಿಯ ಲಹರಿಯೊಳೆದ್ದನಮರಾರಿ (ಕುವ್ಯಾಸ. ೩-೨೯) : ಕನಕದ ಸಡಕು ಮಣಿಲಂಬಳದ ಹಯುಮಿಗೆ ಗುಡಿಯಿಱಿದು ಮೊಗವೆತ್ತಿನ್ನರ್ತಿಸಿತಸುರನಿದಿರಿನಲಿ (ಕೊರಾ. ೬-೨೯-೧೨). ೨. ಕೋಮಳಹರಿನೀಳಭಿತ್ತಿಗಳಿನೊಪ್ಪುವ ಮುತ್ತಿನ ಲಂಬಳಂಗಳಿಂ (ಬಾರಪು. ೬-೨).

[< ಸಂ. ಲಂಬನ]

**ಲಂಬಣಮಾಲೆ** (ನಾ). ಉದ್ದವಾದ ಸರ; ಜೋಮಾಲೆ : ರಂಭಾಸ್ತಂಭಂ ಕೇತಕಿ . . . ವಿಚಕಿಲ ಲಂಬಣಮಾಲೆಗಳು (ಶೈರಪು. ೫-೦೭); ಪಚ್ಚೆಯ ಕುಟ್ಟಿಮಸ್ಥಳಂ ಸುತ್ತಿಡಿದಿರ್ದ ಮಾಣಿಕದ ಲಂಬಣಮಾಲೆ (ರಾಜಶೇ. ೬-೨). [< ಸಂ. ಲಂಬನ ಮಾಲಾ]

**ಲಂಬಣಿಗೆ**, ಲಂಬಳಿಗೆ (ನಾ). = ಲಂಬಣಮಾಲೆ : "ಲಂಬನಂ. ಲಲಂತಿಕಾ — ಈ ೨ ಮುತ್ತಿನ ಲಂಬಣಿಗೆ" (ನಾಚರಾ. ೦೨೩) ; ಮಣಿಮಕುಟಂ ಶಿಖರಂ ಲಂಬಣಿಗೆಯ ಪೊಸಮುತ್ತು ನಿರ್ಝರಂ . . . ಆಗೆ ತದ್ಗಿರಿಗೆಣೆಯಾದಂ ತನ್ನ ಪೆಸರೊಳಂ ವಿಜಯಾರ್ಧಂ (ಆದಿಪು. ೦೭-೦೩). **ಲಂಬಳಿಗೆ** : ಮುತ್ತಿನ ಲಂಬಳಿಗೆಯಿಂ ಬೆಡಂಗುವಡೆಯೆ ಕಟ್ಟಿದ ಕಾಂಚಿಯಿಂ ಕಾಂಚೀಪದದೊಳಂಗಜಂಗೆ ಸಾಮ್ರಾಜ್ಯಪಟ್ಟಮಂ ಕಟ್ಟಿಯುಂ (ವರ್ಧಪು. ೭-೯ ವ). [< ಸಂ. ಲಂಬನಿಕಾ]

**ಲಂಬನ** (ನಾ). ೧. ಜೋಲಾಡುವುದು; ನೇತಾಡುವುದು : "ಲಂಬಿಃ. ಲಂಬನಂ, ಲಂಬನೀಯಂ-ಈ ೩ ನೇಲ್ಕೆ" (ಕಾಶಕ. ೦೦೪). ೨. ಉದ್ದವಾದ ಒಂದು ಬಗೆಯ ಸರ, — ಹಾರ : "ಲಂಬನಂ, ಲಲಂತಿಕಾ- ಈ ೨ ಮುತ್ತಿನ ಲಂಬಣಿಗೆ" (ನಾಚರಾ. ೦೨೩). ೩. [ಖಗೋಳ] ವೀಕ್ಷಣೆಯ ಸ್ಥಾನವನ್ನು ವ್ಯತ್ಯಾಸಮಾಡುವುದರಿಂದ ವೀಕ್ಷಿತ ವಸ್ತುವಿನ ಸ್ಥಾನವು ಬದಲಾವಣೆಯಾದಂತೆ ಕಂಡುಬರುವುದು : ವಸ್ತುಸ್ಥಾನಾಭಾಸ : 'ಲಂಬನ' ಎಂದರೆ ಭಿನ್ನದೃಷ್ಟಿ (ಜ್ಯೋತಿರ್. ೨೬೨); ದಶಜ್ಯಾ ವಿಧಾನ ಎಂಬುದಾಗಿ ಕರೆಯಲಾದ ಲಂಬನ (parallax) ವನ್ನು ಕಂಡುಹಿಡಿಯುವ ಮೊದಲನೆಯ ಆರ್ಯಭಟನ ಮಾರ್ಗವು ಮುಖ್ಯವಾಗಿ ಭಾರತೀಯವಿಧಾನ (ಶಕ್ತಸಾ. ೪೮೩). [ಸಂ.]

**ಲಂಬಹಸ್ತ** (ನಾ). ಕೆಳಗೆ ಇಳಿಬಿಟ್ಟ ಕೈ : ಪೂರ್ವದಲ್ಲಿ ಷಡ್ಭುಜನೃತ್ಯ ಮಾಡುವ ಕೃಷ್ಣ (ಅಭಯ, ಶಂಖ, ಸ್ವರ್ಗಹಸ್ತ, ಚಕ್ರ, ಲಂಬಹಸ್ತ, ದಾನ) (ಹೊಯ್ಸಳಾ. ೦೩೨). [ಸಂ.]

**ಲಂಬಳ₁** 'ಲಂಪಳ' ನೋ.

**ಲಂಬಳ₂** 'ಲಂಬಣ' ನೋ.

**ಲಂಬಳಿಗೆ** 'ಲಂಬಣಿಗೆ' ನೋ.

**ಲಂಬಾಡಿ,** ಲಂಬಾಣಿ, ಲಮಾಣಿ, ಲವಾಣ (ನಾ). ಒಂದು ಅಲೆಮಾರಿ ಜನಾಂಗ ಮತ್ತು ಆ ಜನಾಂಗಕ್ಕೆ ಸೇರಿದ ವ್ಯಕ್ತಿ : "ಲಂಬಾಡಿ (ಲಮ್ಮಾನಿ) — ಒಂದು ಕಾಡುಜನಾಂಗ" (ಜಾಪಕೋ. ೯೨). **ಲಂಬಾಣಿ :** 'ತಾಂಡೆ'ಯಿಂದಲಿ ಬರುವ ಲಂಬಾಣಿ ಹೆಂಗಸರ ಉಡುಪು ತೊಡಪೇನು (ಛಾಪಜೀ. ೩-೦). **ಲಮಾಣಿ :** ಹಾದಿ ಯೊಳಗ ಲಮಾಣಿ ತಾಂಡೆ ಇತ್ತು (ಇತಿಶ್ರೀ. ೩೯); ನಮ್ಮ ಊರ ಲಮಾಣ್ಯಾರು ಇದ್ದಾರ (ಗಂಪಾಯಿ. ೦೦೬). **ಲವಾಣ :** ಲವಾಣರು, ಇಲ್ಲವೆ ಲಂಬಾಡಿಗರು :– ಇವರು ವಾಡಿಕೆಯಾಗಿ ಅಡವಿಯ ಹತ್ತಿರ ಇಲ್ಲವೆ ಗುಡ್ಡದ ಮೇಲೆ ಇರುತ್ತಾರೆ (ಕಣಗಿ. ೦೦೩).
[ದೇ. ತಮಿ. ಲಮ್ಬಾಟಿ; ತುಳು. ಲಂಬಾಡಿ, ಲಂಬಾಣಿ; ತೆಲು. ಲಂಬಾಡಿ. / ಮರಾ. ಲಂಬಾಣ, ಲಮಾಣ]

**ಲಂಬಾಡಿಗ,** ಲಂಬಾಣಿಗ (ನಾ). = ಲಂಬಾಡಿ : ಲವಾಣರು, ಇವೆಲ್ಲ ಲಂಬಾಡಿಗರು.– ಇವರು ವಾಡಿಕೆಯಾಗಿ ಅಡವಿಯ ಹತ್ತಿರ ಇಲ್ಲವೆ ಗುಡ್ಡದ ಮೇಲೆ ಇರುತ್ತಾರೆ (ಕಣಗಿ. ೦೦೩). **ಲಂಬಾಣಿಗ :** ಎತ್ತುಗಳನ್ನು ಅದರ ಸಂಗಡ ಇದ್ದ ಲಂಬಾಣಿಗರನ್ನು ಸಹ ಹಿಡಿದುಕೊಂಡು ಬರುವಾಗ್ಯೆ (ಶಾಕೇಂಶ್ರ. ೪೩). [ಲಂಬಾಡಿ + – ಇಗ]

**ಲಂಬಾಣಿ** 'ಲಂಬಾಡಿ' ನೋ.

**ಲಂಬಾಣಿಗ** 'ಲಂಬಾಡಿಗ' ನೋ.

**ಲಂಬಾಳಕ** (ನಾ). ಜೋಲುವ ಮುಂಗುರುಳುಳ್ಳವನು : ಪ್ರಸಾರಿತ ಕಜ್ಜಲಂ ತಿಳಕವಿಳಸದ್ಭಾಳಂ . . . ತಳೆದಂ ಚೆಲ್ವಂ ಲಂಬಾಳಕಂ ನೃಪ ಬಾಲಕಂ (ಸುಭದ್ರ. ೪-೦೩೦). [ಸಂ. ಲಂಬಾಲಕ]

**ಲಂಬಿಕಾಯೋಗ** (ನಾ). [ಯೋಗ] ಯೋಗದ ಸಾಧನೆಗಳಲ್ಲಿ ಒಂದು ; ನಾಲಗೆಯನ್ನು ಬ್ರಹ್ಮರಂಧ್ರದ ಕುಹರಕ್ಕೆ ಒಯ್ಯುವುದು : ಬಹುಪ್ರಯಾಸಮಾದ ಲಂಬಿಕಾಯೋಗವೆನಿಸುವ ಬಾಹ್ಯಖೇಚರಿಯನವಲಂಬಿಸಿ ನಾಲಗೆಯನು ಛೇದಿಸುವ ವ್ಯಾಪಾರದಲಿ ತತ್ಪರರಾಗಿ ಕಪಾಲಕುಹರಾಂತ ರ್ಗತಮಾದ ಶ್ಲೇಷ್ಮರಸಾಸ್ವಾದನಮಂಮಾಳ್ಪ ಹಠಯೋಗಿಗಳಂ (ಶರಪಾ. ೩-೬೭) ; ಶಿವನು ಪ್ರಸನ್ನವಾಗದಿರಲು, ಲಂಬಿಕಾಯೋಗದಲ್ಲಿ ನಾಲಗೆಯ ಬ್ರಹ್ಮರಂಧ್ರಕೆ ನೀಡಿ . . . ಒಂದು ಕಾಲಲ್ಲಿ ನಿಂದು ಹತ್ತುಸಾವಿರವರುಷ ತಪವ ಮಾಡುವಾಗ (ಶ್ರೀರಕೂ. I, ೪೦) ; ಲಂಬಿಕಾಯೋಗದ ದಂಭದಿ ನುಡಿಬೇಡ ತುಂಬಿ ತುಳುಕಬೇಕು ಸರ್ವಾಂಗ (ಸಿದ್ಧಕೃ. ೩೭-೩). [ಸಂ.]

**ಲಂಬಿಕಾಯೋಗಿ** (ನಾ). ಲಂಬಿಕಾಯೋಗವನ್ನು ಸಾಧಿಸಿರುವವನು : ಮಥಿಸಿ ಮಸ್ತಕಮಧ್ಯಭಾಗಸ್ಥಿತದ ಚಂದ್ರಾಮೃತವ ಸೇವಿಸಿ ಸತತ ಸೊಕ್ಕಿದ ಲಂಬಿಕಾಯೋಗಿಗಳ ಪರಿಯಂತೆ (ಗಗತಾ. ೦೭-೩೭).
[ಸಂ. ಲಂಬಿಕಾಯೋಗಿನ್]

**ಲಂಬಿಕೆ** (ನಾ). ೧. ನೇತಾಡುವುದು; ತೂಗಾಡುವುದು. ೨. ಕಿರುನಾಲಗೆ : ಖಂಡಿಸಿದ ಕರಗಳಿಂ ಬಿಲ್ಲ ಹಿಡಿಯಬೇಕು ವದನದಿಂ ದೃಷ್ಟಿಯಿಲ್ಲದೆ ನಭವ ನೋಡಬೇಕು ಲಂಬಿಕೆಯರಿದು ಬೆಲ್ಲಮಂ ಮೆಲಲು ಬೇಕು (ಉಂಗುಕೃ. ೨೨-೦೩). ೩. ಕಿವಿಯ ಹಾಲೆ : "ಹಾಲೆ ಪತ್ರಾಶ್ರಯಂ ಲಂಬಿಕಾಖ್ಯಂ" (ಶುಂಗರಾ. ೯೪-೩). ೪. =ಲಂಬಿಕಾಯೋಗ: ಹಠಯೋಗ ಲಂಬಿಕೆಯೆಂದು . . . ಇದು ಪೂರ್ವನವನಾಥಸಿದ್ಧರ ಮತೋಕ್ತವೆಂದು ಕಾಪಾಲಿಕಾಚರಣೆ ಯನಾಚರಿಸುವರಲ್ಲ ಶರಣರು (ಅಪಕಂ. ೦೩೯-೬೨೪); ಲಂಬಿಕೆಯಿಂ ಸುಷುಮ್ನೆ ಯೊಳು ಜ್ಯೋತಿಯಂ ನಡಸಿ (ಸಿದ್ಧರಾ. ೯-೨೭). [ಸಂ. ಲಂಬಿಕಾ]

**ಲಂಬಿತ** (ಗು). ಜೋಲಾಡುವ ; ತೂಗಾಡುವ ; ಇಳಿಬಿದ್ದಿರುವ : ಧೃತದಂಡಂ ಚಾರುಚಂಪಕಚ್ಛಾಯಂ ಲಂಬಿತಕೂರ್ಚಂ (ಜಾತಕ. ೦೯-೩೭); ಲಲನೆ ಶಯನಿಸುವವಮಳಪುಷ್ಪ ಕನಿಳಯಲಂಬಿತರತ್ನಮಾಲಾಕಲಿತಮಣಿಗಣ ದೀಪವಿಭ್ರಮಕಾಂತಿಯಗ್ಗಳಿಸೆ (ಜಶಕೃ. ೦೨-೦೯). [ಸಂ.]

**ಲಂಬಿಸು** (ಕ್ರಿ). ೧. ತೂಗಾಡು ; ಜೋಲಾಡು : ಸೋರ್ಮುಡಿ ಲಂಬಿಸೆ ಕರ್ಣಪೂರಿತೋತ್ಪಲವೊಲೆದಾಡೆ ಗಟ್ಟಿಗಳನಂದು ಮಗುಳ್ಚಿದರಿಂದುವಕ್ತ್ರೆಯರ್ (೧೦೪. ೨-೪೦) ; ಲಂಬಿಸುವ ಫಲಭರದ ರಸದಾಳಿಂಬ ಖರ್ಜೂರಾಮ್ರಕದಳಿಕದಂಬ (ಕೊರಂತ. ೦-೩-೪೦) ; ಲಂಬಿಸುವಲರ್ಮುಡಿಗಳ ಶಿರಂಗಳಿಂ ಬಾಗಿ ಲಕ್ಷ್ಮೀಪತಿಗೆ ವಂದಿಸಿದರು (ಕೃಬಿಂಭಾ. ೬-೦೩). ೨. ಹೆಚ್ಚು ; ವೃದ್ಧಿಯಾಗು : ಲಂಬಿಸಿತು ಭಯತಿಮಿರ ಶೋಕಾಡಂಬರದ ಡಾವರ ವಿವೇಕವ ಚುಂಬಿಸಿತು (ಕುವ್ಯಾಗ. ೪-೦೯) ; ಚಿಗುರಿದುದು ದುರ್ವಾರ್ತೆಲತೆ ನಿಜನಗರದಲಿ ಲಂಬಿಸಿತು ಕರ್ಣದೊಳಾ ಕಕುತ್ಸ್ಥಜನ (ತೊರಂತ. ೧-೩-೩); ರಂಭೆ ಮುಖವು ಬಿಳಿದಾಗಿ ಸುಜಠರವು ಲಂಬಿಸೆ (ಅಭ್ಯಂಬ. ೨-೪೦). ೩. ದೊಡ್ಡದನ್ನಾಗಿ ಮಾಡು ; ಬೆಳೆಸು ; ಹೆಚ್ಚಿಸು : ಕ್ಷಯದ ವೇಗವನ್ನು ನಿರೋಧಿಸಿ ಜೀವಮಾನವನ್ನು ಲಂಬಿಸುವುದು ಸಾಧ್ಯವ (ಆರೋಗ್ಯ. ೦೬೦); ಯಾವುದೊಂದು ವಿಷಯವಾಗಲಿ ಅತಿಯಾಗಿ ಲಂಬಿಸಿರ ಬಾರದು (ಶಿಕ್ಷದ. ೨೬೬). ೪. ಮೈಚಾಚು ; ಒರಗು ; ಮಲಗು : ತುದಿಮಿರವನೂಱಿ ನವಾಯಿ ಮಿಗಲರೆನೋಟದಾಲಿಯ ಮಿಡುಕದ ವಿಲಾಸದ ಲಾಯದಲಿ ಲಂಬಿಸಿದವೊಲು ವಾನಾಯುಜದ ಸಾಲೆಸೆದುದು (ಕುವ್ಯಾಕೃರ. ೦೬-೯). [ಲಂಬನ + – ಇಸು₃]

**ಲಂಬು** (ಗು). ೧. ಉದ್ದನೆಯ ; ಉದ್ದವಾದ. (ನಾ). ೨. ಉದ್ದಳತೆ: "ಲಂಬು (ಲಾಂಬು) = ಲಂಬ" (ತದ್ಭಕೋ. ೩೯). ೩. ಉದ್ದವಾಗಿರು ವವನು ; ಎತ್ತರವಾಗಿರುವ ವ್ಯಕ್ತಿ : ಅವನೇನು ಆರೂವರೆ ಅಡಿ ಉದ್ದದ ಲಂಬುವಂತೆ (ಕ್ರಿಪರು. ೦೦೧). [←ಹಿಂ. ಲಂಬೂ. / ಸಂ. ಲಂಬ]

**ಲಂಬೂಷ** (ನಾ). ಏಳು ಎಳೆಗಳ ಸರ,–ಕಂಠಹಾರ : ತಾರಾತರಲಮುಕ್ತಾ ಫಲಲಂಬಲಂಬೂಷಭೂಷಿತಮುಮಮಲಂಬಿತ ಸುರಭಿಕುಸುಮದಾಮಾಕೀರ್ಣ ಮುಂ . . . ಅಪ್ಪ ಶ್ರೀಮಂಟಪಮಂ ವಿರಚಿಸಿ (ಆದಿಪು. ೬-೩೬ ಪ); ಪಾಂಡುಕಶಿಲಾತಲೋಪರಿಮಂಡಪಲಂಬೂಷ ಲಂಬಮಂದನಮಾಲಾಮಂಡನ ಲತಾಂತಪರಿಮಳಮಂಡಳಿತ ಮದಾಳಿಗೀತ ಮಂದಸಮೀರಂ (ಅಜಿಪು. ೩-೯೬).
[<ಸಂ. ಲಂಬೂಷಾ]

**ಲಂಬೋದರ** (ನಾ). ೧. ದೊಡ್ಡಹೊಟ್ಟೆಯವನು ; ಡೊಳ್ಳು ಹೊಟ್ಟೆಯವನು : ಧವಲೋತ್ತರೀಯವಸನಂ ಲಂಬೋದರಂ ಲಂಬಕೂರ್ಚ ಕಲಾಪಂ . . . ಬಂದಂ ಪ್ರತೀಹಾರಕಂ (ಶಂರಾಮಾ. ೨-೨) ; ಆಜಾನು ಬಾಹುಗಳುಳ್ಳ ಲಂಬೋದರಸ್ವರೂಪಿಯಾದ ಭವ್ಯತರುಣನೊಬ್ಬನು ನಿಂತು ಕೊಂಡಿದ್ದನು (ಕಳ್ಳಕಾ. ೩೨). ೨. ಹೊಟ್ಟೆಬಾಕ ; ತಿಂಡಿಪೋತ : (ಕ). ೩. ಗಣೇಶ ; ಬೆನಕ ; ವಿನಾಯಕ : ''ಹೇರಂಬಃ, ಲಂಬೋದರಃ . . . ವಿಘ್ನರಾಜಃ — ಈ ೯ ಬೆನಕನ ಪೆಸರ್'' (ಅಜಾಯು. ೪-೦೯) ; ಕರಿಗೊರಳ ತನ್ನ ಕಂಠದಲಿ ಲಂಬೋದರನ ತ್ವರಿತ ಪುಟ್ಟಿಸಿ (ಶ್ರೀಶರಾ. ೦-೦೦) ; ಲಂಬೋದರಗೇತಕೆ ತರಳೋದರೆ ಕುಂಭಶಿರಂಗೇತಕೆ ಬಿಂಬಾಧರೆ (ಗಣೇಶ. ೩-೦೨೦). [ಸಂ.]

**ಲಂಬೋದರಿ** (ನಾ). ೧. ದೊಡ್ಡ ಹೊಟ್ಟೆಯುಳ್ಳವಳು. ೨. ಒಬ್ಬ ರಾಕ್ಷಸಿಯ ಹೆಸರು : ರೋಷದಿಂದೊದಱಿದಳ್ ಮತ್ತೂರ್ವಳಸುರಿ ಲಂಬೋದರಿ ನಿಶಾಚರಿ ಮಹಾಭಯಂಕರಿ (ಕೃಬಿಭಾ. ೦೬-೩೩).
[ಸಂ. ಲಂಬೋದರೀ]

**ಲಂಭ** (ನಾ). ೧. ಪಡೆಯುವುದು ; ದೊರಕಿಸಿಕೊಳ್ಳುವುದು. ೨. ಪ್ರಾಪ್ತಿ ; ಸಿದ್ಧಿ : ವಿವಿಧವಿಭವಶೋಭಾರಂಭಲಂಭಪ್ರಲಂಭೋದ್ಭವ ವಿಹಿತವಿವಾಹೋತ್ಸಾಹಸಾಕಲ್ಯಕಲ್ಪಂ . . . ಸಮುದಿತಸೇವಾರಾತಿವೃತ್ತಾಂತ ವೃತ್ತಂ (ಕಬರಾ. ೩-೨೦೨). ೩. [ಸಂಗೀತ] ಒಂದು ಬಗೆಯ ಗೀತ ಪ್ರಬಂಧ : ಏಲಾ, ಢೇಂಕೀ, ಝೊಂಬಡ, ಲಂಭ, ರಾಸಕ . . . ಲೋಲೀ, ಢೊಲ್ಲರೀ, ದಂತೀ — ಈ ಇಪ್ಪತ್ತೆರಡು ಪ್ರಬಂಧಗಳೂ ತಾರಾವಳೀ ಜಾತಿಯುವೆಂದು ಪ್ರಸಿದ್ಧವಾಗಿವೆ (ಜಕುಶ್ರ: ೬೩). [ಸಂ.]

**ಲಂಭನ** (ನಾ). = ಲಂಭ ೧ : ಭಾವೇಂದ್ರಿಯಂ ದ್ವಿವಿಧಂ ಜ್ಞಾನಾವರಣ ಕ್ಷಯೋಪಶಮವಿಶೇಷಮಪ್ಪ ಲಂಭನಂ ಲಬ್ಧಿ (ತತ್ತ್ವಸೂ. ೯೬). [ಸಂ.]

**ಲಕಚ** 'ಲಕ್ಕಚಣ' ನೋ.

**ಲಕಪರಾಲಿ** (ನಾ). ಒಂದು ಊರಿನ ಹೆಸರು : ಅಸ್ತೆ ಬನ್ದು ಬೆಳೆ ಕೆಱೆಯ ಪಡುವಣಕಡೆಯಿಂ ಅಸ್ತೆ ಬನ್ದು ಲಕಪರಾಲಿಯ ಮೂಡಣ ದೇಲಿಯಿಂ (ಎಕ. III, ನಂಜನ. ೦೪೯-೦೯ ; 915 ?). [ ? ]

**ಲಕಮುಕ** 'ಲಕುಮುಕಿ' ನೋ.

**ಲಕಲಕ** (ನಾ). ಹೊಳೆಯುವುದನ್ನು ಸೂಚಿಸುವ ಒಂದು ಅನುಕರಣ ಪದ : ಪಾತ್ರೆ ಪರಡಿಗಳನ್ನೆಲ್ಲ ಹುಣಸೇಹಣ್ಣಿನಿಂದ ತಿಕ್ಕಿ ಲಕಲಕ ಮಾಡಿದಳು (ಮುಕ್ತಿದ. ೨೩) ; ಎಲೆಯ ಮೇಲ್ಮೈಯು ಲಕಲಕ ಹೊಳೆಯುವ ಕೆಂಪುಬಣ್ಣದ್ದಿರುತ್ತದೆ (ಮುಂಬರು. ೯-೬೦).

**ಲಕಲಕನೆ** (ಅ). ಕಾಂತಿಯಿಂದ ಹೊಳೆಯುವಂತೆ ಎಂಬರ್ಥವನ್ನು ಸೂಚಿಸುವ ಒಂದು ಅನುಕರಣಾವ್ಯಯ : ಹಲವರು ಬಿಂದಿಗೆ ಕೊಡಗಳನ್ನು ಲಕಲಕನೆ ತಿಕ್ಕುತ್ತಿದ್ದಾರೆ (ಶಲಸಂ. ೯).

[ಲಕಲಕ + - ಅನ್ನು₁]

**ಲಕಲಕಿಸು** (ಕ್ರಿ). ಕಾಂತಿಯಿಂದ ಬೆಳಗು ; ಥಳಥಳಿಸು ; ಮಿಂಚು : ಕಪ್ಪುದ್ರಾಕ್ಷಿಯಲ್ಲಿ ನಕ್ಷತ್ರಗಳನ್ನು ಸೆರೆಹಿಡಿದಿಟ್ಟಂತೆ ಲಕಲಕಿಸುವ ಕಣ್ಣುಗಳು (ಕೆಂಪಾ. ೬೩) ; ಬೆಳ್ಳಿಯ ಭಾಂಡಿಗಳು ಎಲ್ಲ ಕಡೆಗೆ ಲಕಲಕಿಸುತ್ತವೆ (ಅಶ್ವ. ೯೩). [ಲಕಲಕ + - ಇಸು₃]

**ಲಕಲಿ** 'ಲೊಕ್ಕ₁' ನೋ.

**ಲಕಾರ** (ನಾ). 'ಲ' ಎಂಬ ಅಕ್ಷರ : ವಿಕಲ್ಪಂ ಕ್ಷಳನಿಲ್ಲದಿಲ್ಲ ಸಂಸ್ಕೃತದೊಳಾ ಲಕಾರಕ್ಕೆ ಪೇಟ್ಟಿನೆದಱಿಂ ಕ್ಷಳನಂ (ಶಮದ. ೩). [ಸಂ.]

**ಲಕುಚ** (ನಾ). ೧. ಗಜನಿಂಬೆ : "ಲಕುಚಃ, ಲಿಕುಚಃ, ಡಹುಃ — ೩ ಗಜನಿಂಬೇ ಹೆಸರುಗಳು" (ಸಿದ್ಧಾಂತ. ೦೨೩). ೨. ಬೇಲ ; ಕಪಿತ್ಥ : "ಲಿಕುಚಂ [ಲಕುಚಂ] ಕಪಿತ್ಥಮಱೆಗೆ ದಧಿತ್ಥಂ" (ಅಸ್ತುಕೋ. ೩೩-೩). ೩. ಒಂದು ಬಗೆಯ ಕಾಡುಹಲಸು. [ಸಂ.]

**ಲಕುಟ** (ನಾ). ಬಡಿಗೆ ; ದೊಣ್ಣೆ ; ಕೋಲು : "ವೈಣವಃ, ಲಕುಟಃ . . . ಯಷ್ಟಿಃ — ಈ ೫ ಕೋಲ್" (ಹಲಾಯು. ೦೨೦-೯೦) ; ಲಕುಟ ಯಷ್ಟ್ಯಾದಿವಿಧಿಯನುಪದೇಶಂಗೆಯ್ದಾತಂ ಕ್ಷೇಮಂಧರನೆಂಬ ಪೆಸರಂ ಪಡೆದಂ (ಆಪು. ೬-೫೬ ವ) ; ಅರಸಂ ಮುಳಿದು ಲಕುಟ ತಾಟ(ಡ)ನಪೂರ್ವಕಮಾ ಶುನಕನಂ ಕಳೆದಂ (ಜಾಪುಂಪು. ೯೩೩) ; ಗಳಿತಾಶ್ರು ವಿಷಣ್ಣನೆಣ್ಣೆವೂಸಿದನತಿ ರಕ್ತವಸ್ತ್ರಕುಸುಮಂ ಲಕುಟಾಜಿನಪಾಶಹಸ್ತಂ (ಲೋಕೋಪ. ೦೦-೩). [ಸಂ.]

**ಲಕುಮಿ**, ಲಕ್ಕಿ₂, ಲಕ್ಷುಮಿ, ಲಚ್ಚಿ, ಲಚ್ಛಿ (ನಾ). ೧. ಐಶ್ವರ್ಯ ; ಸಂಪತ್ತು. ೨. ವಿಷ್ಣುವಿನ ಹೆಂಡತಿ ; ಲಕ್ಷ್ಮಿ : "ಲಕುಮಿ ಲಕ್ಷ್ಮಿಯೆನಿಕ್ಕುಂ" (ಶಬ್ದಸಂ. ೨೬) ; ನಂದಿವರ್ಮನಂಗನೆ ಭೂನಾರಿಗೆ ರತಿಗರುನ್ಧತಿದೇವಿಗೆ ಲಕುಮಿಸಾರಿಗೆ ಪಡಿಯೆನೆ ಭೂನುತೆ ತಾ ಚಾಕಣಬ್ಬೆ ಕಾಂತಾರತ್ನ (ಸೌಇಇ. XX, ೦೦೩-೨೬ ; 1146) ; ಲಕ್ಷ್ಮೀ — ಲಕುಮಿ, ಶಬ್ದ — ಸಬುದ (ಶಮದ. ೨೩೯ ಪ್ರಯೋ). ೧, ೨ : ದೇಹಕಾಂತಿಗೆ ಮುಳಿದ ತರಣಿಸತಿಯ ಓಡಿದು ಕಾಹನಿಟ್ಟನುಜೆ ಲಕುಮಿಯನೊಳಗೆ ತುಂಬಿ ರಾಜಂಗೆ ಕೈಸೆಕೆಯ ತೋಱುವೆನೆನುತ್ತೆ . . . ಇನನುದಯಗಿರಿಯನಡರ್ದಂ (ಶಾಶಚ. ೬-೩೯). ೩. ಶೋಭೆ ; ಕಾಂತಿ : ನಿನಗೆ ತಾನೆಲೆ ದೇವ ವಲ್ಲಭೆಯೆನಿಸುವಡೆ ಕೀಳೀ ದ್ರುಮವ ನಡೆ ಮನಕೆ ಬಾರದಡೆಂದಳಪಗತವದನ ಲಕುಮಿಯಲಿ (ಸಿಭಾಗ. ೦೦-೭೦-೩೪). ಲಕ್ಕಿ₂ : ೨. "ಲಕುಮಿ (ಲಚ್ಚಿ, ಲಕ್ಕಿ)ಲಕ್ಷ್ಮೀ = ಶ್ರೀದೇವಿ" . (ಕರ್ಣಕೋ. ೩೮). ಲಕ್ಷುಮಿ : ಒಳ್ಳಿತೀ ಶಕುನಫಲವೆಲ್ಲ ನಮಗೆ ಲಕ್ಷುಮಿವಲ್ಲಭನ ಸೇವೆ ದೊರಕೊಂಬುದೇ ರಮಣಿ (ಪುರಂದ. ೩-೮೦ ಪಲ್ಲವಿ). ಲಚ್ಚಿ : ೨. "ಲಕ್ಷ್ಮೀ-ಲಚ್ಚಿ" (ಕವಿಪ. ೦೬೦ ಪ್ರಯೋ). ೪. ಒಬ್ಬಾಕೆಯ ಹೆಸರು : ಬಂಮರಸಂಗಂ ಲಚ್ಚಿಯಬರಸಿಗಂ ಪುಟ್ಟಿದ (ಎಕ. VIII, ಸಾಗರ. ೦೩-೦೩ ; 1218). ಲಚ್ಛಿ : ೫. [ಜೈನ] ಊರ್ಧ್ವಲೋಕದ ಒಂಬತ್ತು ಅನುದ್ದಿಶ ವಿಮಾನಗಳಲ್ಲಿ ಒಂದು : ನವಗ್ರೈವೇಯಕಂಗಳೊಳಮಲ್ಲಿಂ ಮೇಗಣ ಲಚ್ಛಿ ಮಹಾಲಚ್ಛಿ ಮಾಳಿನಿ ವೈರೆ ವೈರೋಚನೆ ಸೋಮೆ ಸೋಮರೂಪೆ ಅಂಕೆ ಪಳಿಕೆ ಅಯಿಚ್ಛಿಯೆಂಬ ನವಾನುದ್ದಿಸೆಗಳೊಳಂ (ವಡ್ಡಾರಾ. ೯೬-೩೦).

[< ಸಂ. ಲಕ್ಷ್ಮೀ./ಪ್ರಾ. ಲಚ್ಛಿ]

**ಲಕುಮುಕಿ**, ಲಕಮುಕ (ನಾ). ೧. ಜಾಲಗಾರನ ಹಕ್ಕಿ; ಮಿಂಚುಳ್ಳಿ: (ಕ). ೨. ಟಿಟ್ಟಿಭ ಪಕ್ಷಿ : "ಟಿಟ್ಟಿಭಕಃ, ಲಕುಮುಕೀ ಹಕ್ಕಿ" (ಸಿದ್ಧಾಂತ. ೧೬೩). ಲಕಮುಕ : (ಕ). [ ←ತೆಲು. ಲಕುಮುಕಿ ]

**ಲಕುಲೀಶ** (ನಾ). ೧. ಒಂದು ಶೈವಪಂಥದ ಪ್ರವರ್ತಕನಾದ ಒಬ್ಬ ಮಹಾಪುರುಷ : ಆಯೆಂಬ ವರ್ಣವೈಶ್ವರ್ಯಮಂ ವರ್ಧಿಪುದು ಲಾಯೆಂಬ ವರ್ಣ ಲಕುಲೀಶಗಣಪದಮಕ್ಕು . . . ನಂಬಿಯಲ್ಲಮಪ್ರಭುವೆಂಬ ಮಂತ್ರಾಮೃತವ ಸೇವಿಸಿ (ಪ್ರಭುಪು. ೯-೩೨). 'ಲಕುಲೀಶಪಾಶುಪತ' ಪರಾ. ೨. ಶೈವ ಧರ್ಮದ ಒಂದು ಪ್ರಭೇದ ; ಲಕುಲೀಶನಿಂದ ಸ್ಥಾಪಿಸಲ್ಪಟ್ಟ ಪಂಥ : ಕಾಳಾಮುಖ, ಲಕುಲೀಶ, ಮಾಹೇಶ್ವರ . . . ಇವೇ ಮೊದಲಾದವು ಶಿವಭಕ್ತಿಪಂಥದ ಮುಖ್ಯಪ್ರಭೇದಗಳು (ಶಾರದ. ೩೦೬). [ಸಂ.]

**ಲಕುಲೀಶಪಾಶುಪತ**, ಲಕುಳೀಶಪಾಶುಪತ (ನಾ). ಶೈವಧರ್ಮದಲ್ಲಿ ಒಂದು ಪಂಥ ; ಲಾಕುಳಶೈವಪಂಥ : ಕ್ರಿ.ಶ. ಏಳನೇ ಶತಮಾನದಿಂದಲಾದರೂ ಲಕುಲೀಶಪಾಶುಪತವೆಂಬ ಶೈವಧರ್ಮ ಪ್ರಚಾರದಲ್ಲಿತ್ತು (ಕೊಪ್ಪಳ. ೮ ಟಿಪ್ಪಣಿ). ಲಕುಳೀಶಪಾಶುಪತ : ಈ ಲಕುಳೀಶಪಾಶುಪತ ಶೈವಪಂಥವು ಪ್ರವರ್ತಿತವಾದುದು ಕ್ರಿ. ಪೂ. ೨ನೇ ಶತಕದಲ್ಲಿಯೆಂದು . . . ಅಭಿಪ್ರಾಯಪಡುವರು (ಶಿಶಗ್ರ. ೨ ಪೀಠಿಕೆ). [ಸಂ.]

**ಲಕುಳ** (ನಾ). ಮುಂಗುಸಿ ; ನಕುಲ : ನರಿ ನವಿಲು ಲ[ಪಾಠಾಂ.ನ]ಕುಳ ವಾಯಸಂಗಳು ತಿರ್ದೆ ಶುಭಶಕುನಂಗಳು (ಶಿವೇಶ. ೦೨೩). [< ಸಂ. ನಕುಲ]

**ಲಕುಳೀಶಪಾಶುಪತ** 'ಲಕುಲೀಶಪಾಶುಪತ' ನೋ.

**ಲಕೋಟ** 'ಲಗಾಟ' ನೋ.

**ಲಕೋಟೆ₁**, ಲಕ್ಕೋಟೆ₁ (ನಾ). ೧. ಪತ್ರವನ್ನು ಇಟ್ಟು (ಅಂಟಿಸಿ) ಕಳುಹಿಸುವ ಕಾಗದದ ಸಣ್ಣ ಚೀಲ; ಪಾಕೀಟು ; ಸಣ್ಣ ಕವರು : ಅವಳು ಲಕೋಟೆಯೊಳಗಿನ ಕಾಗದವನ್ನು ಹೊರಗೆ ತೆಗೆಯುತ್ತ ನುಡಿದಳು (ಹೇಮಂತ. ೩೬೦); ಫೋಟೋವನ್ನು ಲಕೋಟೆಯಿಂದ ತುಸು ಹೊರಗೆಳೆದು ತೀವ್ರಾಸಕ್ತಿಯಿಂದ ನೋಡುತ್ತಿದ್ದಳು (ಪುಪರು. ೩೨೩). ೨. ಅಂಟಿಸಿದ ಅಥವಾ ಅಂಟಿಸದೆ ಮುಚ್ಚಿರುವ ಅಂಚೆಯ ಪತ್ರ : ಅಂಚೆಯವನು ಒಂದು ಲಕೋಟೆಯನ್ನಿತ್ತು ತೆರಳಿದನು (ಸುಂದರ. ೬೩); ಲಕೋಟೆಯೊಂದವನ್ನು ಹೆಕ್ಕಿ ಎಲ್ಲಿಂದ ಬಂದುದೆಂದು ಮುದ್ರೆ ನೋಡಿದೆ (ಮುಂಗಾರು. ೦೬). ಲಕ್ಕೋಟೆ₁: ೧. ಲಕ್ಕೋಟೆಯನ್ನು ಒಡೆದು ನೋಡಿದೆ (ಶಬರೀ. ೯೬); ಪತ್ರಗಳನ್ನು ಒಂದು ಲಕ್ಕೋಟೆಯಲ್ಲಿಟ್ಟು ತಲೆಚೀಟಿ ಹಚ್ಚಿದಳು (ಸ್ವಾತಂತ್ರ್ಯ. ೦೯೦). [←ಹಿಂ. ಲಫೋಟಾ; ಮರಾ. ಲಫೋಟಾ, ಲಾಫೋಟಾ]

**ಲಕೋಟೆ₂** · ಲಕ್ಕೋಟೆ₂ (ನಾ). ಒಂದು ಬಗೆಯ ಹಣ್ಣು (೬).
**ಲಕ್ಕೋಟೆ₂** : (ವ್ಯಕಿಗ. ೩೪-೬೬೭). [ ? ]

**ಲಕೋಟೆಹೋಳಿಗೆ** (ನಾ). ಲಕೋಟೆಯ ಆಕಾರದಲ್ಲಿ ಮಡಿಸಿ ಮಾಡಿದ ಒಂದು ಬಗೆಯ ಹೋಳಿಗೆ : (೬).
[ಲಕೋಟೆ₁ + ಹೋಳಿಗೆ₁ ( < ಪೋಳಿಗೆ₁)]

**ಲಕ್ಕ₁**, ಲಕ್ಕ₃, ಲಕ್ಕ, ಲಖ್ಖ₁, ಲಖ್ಖೆ, ಲಚ್ಚ₁, ಲಾಖ (ನಾ). ಒಂದು ಸಂಖ್ಯೆ ; ನೂರುಸಾವಿರ ; ಲಕ್ಷ: "ಲಕ್ಷದೊಳೆ ಲಕ್ಕಂ" (ಕರ್ಣಾಕ. ೩೯) ; ಚತುರಶ್ತಂ ಮೂಱುಂಯೋಜನದಳವಿಯ ಸಭಾಮಂಟಪಮನೊಂದುಲಕ್ಕ ರಕ್ಕಸವಡೆಯಿಂ ಪೊತ್ತು ತರಿಸಿ (ಕಂಶಿಪ. ೬-೩ ವ) ; ನೂಱು ಕರಿಘಟೆ ಲಕ್ಕ ಪಾಯದಳ (ಕುವ್ಯಾ. ೪. ೨-೯); ಲಕ್ಕಧನಮಿರಲು ಕಿಡುಗುಂ ಚಿಕ್ಕಂದಿನ ವಿದ್ಯೆ ಪೊರೆಗು (ಕಶಿ. ೩-೧೯೭). **ಲಕ್ಕ₂** : ಮೂಱುಲಕ್ಕ ದೇವಿಯರಪ್ಪರಸಿಯರ್ಕಳುಂ (ವಡ್ಡಾರಾ. ೯೩-೧೯); ಒಂದೊತ್ತಿಂ ನಡೆಯಿಸುವುದ ದೊಂದೊಂದಱ ಲಯಕೆ ಲಕ್ಕಿತಿಱನಾಡುವುದೇನೆಂದೋಂ ಬಣ್ಣಿಸುವುದೊ ಸುರಸುಂದರಿಯ ವಿಲಾಸವಿಭ್ರಮಭ್ರೂಲತೆಯಂ (ಅಂಕ. ೯-೩೭); ಮಾರ್ಪಡೆ ಸರಲೊಂದಱಿಂ ಕಿಡೆಯೆ ಲಕ್ಕಿಯ ಲೆಕ್ಕದಿನೆಚ್ಚ ನರ್ಜುನಂ (ನೇಬಿಪು. ೦೦-೦೯೯). **ಲಕ್ಕ** : ಕಲ್ಯಾಣದ ನೆಲೆವೀಡಿನೊಳು ಸಪ್ತಾರ್ಧಲಕ್ಕಭೂಮಿಯಂ ದುಷ್ಟನಿಗ್ರಹಂ ಶಿಷ್ಟಪ್ರತಿಪಾಲನಂಗೆಯ್ಯುತ್ತಂ . . . ರಾಜ್ಯಂಗೆಯ್ಯುತ್ತಿರೆ (ಎಕ. VI, ಕಡೂರು. ೩೭-೮ ; 1187 ?). **ಲಖ್ಖ₁** : ವಡ್ಡರಾವುಳದ ಸುಂಕ ಲಖ್ಖಕ್ಕೆ ಅಱುವಣ ಮುಪ್ಪಾಗದೊಳಗೆ ಶ್ರೀಸ್ವಯಂಭುಕಲಿದೇವಸ್ವಾಮಿದೇವರ ಗ್ರಾಸನದ ಸತ್ರಕ್ಕೆ ಬಿಟ್ಟ ಪಾಗವೊಂದು (ಕಾಇಇ. IX–i, ೨೦೦–೨೦; 1122). **ಲಖ್ಖೆ** : ತ್ರೈಲೋಕ್ಯಮಲ್ಲ ವಿಕ್ರಮಾದಿತ್ಯದೇವರು ಸಪ್ತಾರ್ಧಲಖ್ಖೆ ಪ್ರಿಥ್ವಿಯನಾಚಂದ್ರಾರ್ಕತಾರಂಬರಂ . . . ರಾಜ್ಯಂಗೆಯ್ಯುತ್ತಿರೆ (ಎಕ. VI, ತರೀಕೆ. ೬೩-೪ ; 1173). **ಲಚ್ಚ₁** : ಪೊನ್ನೊಡೆಯಂ ಲಚ್ಚದ ಪೊನ್ನೊಡೆಯಂ ಗಡ ಶತಲಕ್ಷದ ಪೊನ್ನೊಟ್ಟಿಲ ನಾನೀಮೆಂ (ಉಧ್ಯಬೀ. ೨-೨೬). **ಲಾಖ** : ಸಂಭಾವಿತರು ಲಾಖ ಮಂದ್ಯಾಗ ಒಬ್ಬಾವ ಇದ್ದರ ಇರಬೇಕು (ಗ್ರಾಪಾದು. ೦೨೩).

**ಲಕ್ಕಲಕ್ಕ**, ಲಚ್ಚಾಳಚ್ಚ (ದ್ವಿರುಕ್ತಿ) : ಲಕ್ಕಲಕ್ಕಕ್ಕೆ ನೆರೆದಭವಭಕ್ತರ ನಡುವೆ (ಏಕರ. ೦೦–೦೦೭) ; ಲಕ್ಕಲಕ್ಕದಲಿ ಕಿಕ್ಕಿರಿದಿರೆ ಜೇಂಬುಳು ಮೋಹಿಸಿ ದುಂಬಿ (ಕೋಗಿಲೆ. ೯೭-೨೦) ; ಲಚ್ಚಾಳಚ್ಚ ಕುದುರೆಯಂ ಗಜರಥವ ಪೊಸ್ತಾಗಿ ಜೋಡಿಸಲ್ಕೇಮಿಸುತ ಕೈದುಗಳ ಮಸ್ತಾಗಿ ಪೊಸದಾದುದಂ ತರಿಸಿ (ಕುರಂಗ. ೩೬-೪೩). **ಲಕ್ಕಮುಕ್ಕ**=ಲಕ್ಷಾಂತರ ಹಣವನ್ನುಳ್ಳ ಮೂರ್ಖ ; ಸಿರಿವಂತನಾಗಿರುವ ದಡ್ಡ : ಅಕ್ಕೊ ಬರುವ ಸೊಕ್ಕಿ ಮೆರೆವ ಲಕ್ಕಮುಕ್ಕ, ಏನೆ ಇರಲಿ ; ಅರಿತು ಕಣ್ಣ, ಹರಿವರಣ್ಣ — ಬೆಪ್ಪ, ಬಜಲಾ, ಏನೆ ಇರಲಿ (ಇಂಗೀತ. ೩೭-೦೬). [<ಪ್ರಾ. ಲಕ್ಖ / ಸಂ. ಲಕ್ಷ]

**ಲಕ್ಕ₂**, ಲಕ್ಕು, ಲಚ್ಚ₂, ಲೆಕ್ಕ₁ (ನಾ). ೧. ಗಮನ ; ಲಕ್ಷ್ಯ : 'ಲಕ್ಕಿಸು' ಪರಾ. ೨. ವ್ಯಾಖ್ಯೆ ಅಥವಾ ವಿವರಣೆಗಳಿಂದ ಹೇಳಲ್ಪಟ್ಟುದು ; ಲಕ್ಷಣಕ್ಕೆ ಉದಾಹರಣೆಯಾದುದು ; ದೃಷ್ಟಾಂತ : ಸಕ್ಕದದಿಂ ಲಕ್ಕಣಮುಂ ಲಕ್ಕಮುನೊಳ್ಗನ್ನಡಂಗಳಿಂ ವಿವರಿಸಿದು (ಅಕ್ರಶ. ೦-೦೪).
**ಲಕ್ಕು** : ೧. ಗ್ಯಾಲಿರಿಯೊನಿಗೆ ವಿದ್ಯಾಭ್ಯಾಸದ ಲಕ್ಕು ಬಹಳ (ಪುಂಂಬಿದು. ೩-೨೨೨) ; ಆದರೆ ಈಗ ನಿನ್ನ ಲಕ್ಕಿಲ್ಲ ಹೊರಗೆಯೇ ಇದೆ (ಕವಚ. ೨) ; ಕುವುದೆಯ ಮೇಲೆ ಅವನ ಲಕ್ಕಂತೆ (ಕನಕ. ೩೭). **ಲಚ್ಚ₂** : ೩. ಗುರುತು ; ಚಿಹ್ನೆ : ಇದು ನಿಚ್ಚಂ ತನ್ನ ಲಚ್ಚಂ ಮಿಱತರುವನಿಪೀ ವಾಂಛೆಯಿಂ ಚಂದ್ರುಮಂ ಸೂಸಿದಪಂ ಪೀಯೂಷಮಂ (ಕವಿಚ. III, ೨೦೯, ಹಿರಣ್ಯಗರ್ಭನ ಸರಸ್ವತೀಶೃಂಗಾರ). **ಲೆಕ್ಕ₁** : ೧. ಅವನಿಗೆ ಹಿರಿಯರನ್ನು ಕಂಡರೆ ಲೆಕ್ಕವೇ ಇಲ್ಲ (ರೂಢಿ). 'ಲಕ್ಷ₁', 'ಲಕ್ಕಿಸು₁' ಪರಾ.
[< ಪ್ರಾ. ಲಕ್ಖ / ಸಂ. ಲಕ್ಷ್ಯ]

**ಲಕ್ಕ₃** (ನಾ). ಅರಗು ; ಲಾಕ್ಷೆ : ಲಕ್ಕವ ತಂದಗ್ನಿಮುಖದಲ್ಲಿ ಇಟ್ಟಂತೆ ಉಕ್ಕುವ ಹೊಳೆಯೊಳು ಪೊಕ್ಕು ಮುಣಗಿದಂತೆ (ಏಕಾಸು. ೯೦-೪).
[ < ಪ್ರಾ. ಲಕ್ಖ, ಲಕ್ಖಾ / ಸಂ. ಲಾಕ್ಷಾ]

**ಲಕ್ಕ₄**, ಲಖ್ಖ₂ (ಗು). ೧. (ಉಕ) ಸುಂದರವಾದ ; ಚೆನ್ನಾದ ; ಶೋಭೆಯಿಂದ ಕೂಡಿದ : ಏನು ರಾಯರೇ, ಲಕ್ಕ ಬೆಳದಿಂಗಳು ನೋಡಿ ಗೊಂಬೆಯ ಹಾಗೆ ಮಲಗಿಬಿಟ್ಟಿದ್ದಿರೇನು (ಕಾರುಹ. ೭). (ನಾ). ೨. ಸುಂದರವಾದುದು ; ಒಳ್ಳೆಯದು : ನಾ ಮಾಡಿದ್ದೆಲ್ಲ . . . ಪಾಡ, ನಾ ಮಾಡಿದ್ದೆಲ್ಲಾ ಲಕ್ಕ . . . ಎಂದು ತುಳಜಾ ಅವನನ್ನಣಕಿಸುತ್ತಾಳೆ (ಏನಸ. ೬೭). **ಲಖ್ಖ₂** : ೨. ಲಖ್ಖದ ಈ ನಿವಾಂತ ಜಾಗಾ ನನ್ನ ಕೆಲಸಕ್ಕ (ಪಾಧಾ. ೪೬).
**ಲಕ್ಕಾಗು** = ಚೆನ್ನಾಗು ; ಒಳ್ಳೆಯದಾಗು : ನಿಮ್ಮ ಪ್ರಕೃತಿ ಬಹಳ ಲಕ್ಕಾಗಿದೆ, ಗುರುತು ಸಹ ಹತ್ತುವಂತಿಲ್ಲ (ಸಂಕವು. ४೨).
[← ಮರಾ. ಲಕ್ಕ, ಲಕ್ಖ, ಲಖ್ಖ]

**ಲಕ್ಕಂಬಡೆ** (ಕ್ರಿ). ಲಕ್ಷ ಬೆಲೆಯನ್ನು ಹೊಂದು ; ಲಕ್ಷ ಹೊನ್ನಿನ ಬೆಲೆಬಾಳು : ತೊಡವೆನಗಪ್ಪೊಡೆ ಲಕ್ಕಂಬಡೆವವು ಪಲವೊಳವು ನಂಬೆಯಪ್ಪೊಡೆ ನೋಡೀಗಡೆ (ರರ್ವಾವ್ಯ. ೨-೦೨೦). [ಲಕ್ಕ₁ + ಪಡೆ₁]

**ಲಕ್ಕಗೆಯ್** (ಕ್ರಿ). ಲಕ್ಷವನ್ನಾಗಿ ಮಾಡು ; ಲಕ್ಷಸಂಖ್ಯೆಗೆ ಏರಿಸು : ಸಾಸಿರಪೊಂಗೆಯ್ಯು ಚಿಃ ಕಾಸಟಮೆಂದೊಂದುಲಕ್ಕಗೆಯ್ವುದಿದರ್ಕಂ ಮಾಸರ ಮುಂಡಲೇದಧಿಕವಿಳಾಸದಿನುಡಲಕ್ಕಿ ನೆಱೆಯೆ ಬಿಯಮುಂ ಮೆಱೆದಂ (ಕಂಕಶಾ. ೩-೪೪). [ಲಕ್ಕ₁ + ಕೆಯ್₁]

**ಲಕ್ಕಚಣ**, ಲಕಚೆ (ನಾ). ಒಂದು ಬಗೆಯ ಸಾಧನ,—ಸಣ್ಣ ಆಯುಧ; ಬಾಣ : "ಲಕಚಂ ಲಕ್ಕಚಣಮೆಂದೆನಿಕ್ಕುಂ" (ಮಂಗರಾ. ೦೦೩-೯) ; ಸುಲಿಪಲ್ಲಂ ಮೆಱೆವೈ ಪರಲಲನೆಯರ್ಗೆಂದಿಕ್ಕುಱಿಂದೆ ಕೀಱ್ದರ್ ಪಲ್ಲಂ ಸಲೆ ಕಣ್ಣಂ ಕಿತ್ತುವೆಯೆಂದು ಲಕ್ಕಚಣದಿಂದೆ ಮಿಱಿಟೆ ಕಳೆವರ್ ಕಣ್ಣಂ (ಶಾರ್ಕ್ಕಿ. ೬-೯೦). **ಲಕಚೆ** : ಮೇಲಿನ 'ಮಂಗರಾ ' ಪ್ರಯೋಗವನ್ನು ನೋಡಿ. [ಲಕ್ಕ? + < ಚಣ]

**ಲಕ್ಕಡಿ** (ನಾ). ಮರದ ದಿಮ್ಮಿ : 'ಲಕ್ಕಡಿಕೋಟೆ' ಪರಾ.
[ ← ಹಿಂ. ಲಕಡೀ. / ಸಂ. ಲಕುಟ. / ಪ್ರಾ. ಲಕ್ಕುಡ ]

**ಲಕ್ಕಡಿಕೋಟೆ** (ನಾ). ಭಾರವಾದ ಮರದ ದಿಮ್ಮಿಗಳನ್ನು ನಿಲ್ಲಿಸಿ ಕಟ್ಟಿದ ಕೋಟೆ,— ಮರದ ದಿಮ್ಮಿಗಳಿಂದಾದ ದುರ್ಗ : ಅಲ್ಲಲ್ಲಿ ಲಕ್ಕಡಿಕೋಟೆಗಳ ಹಾಕಿ ಠಾಣ್ಯ ಇಟ್ಟುಕೊಂಡು . . . ಬರುತ್ತಾರೆ (ಹಾಕೇಂದ್ರ. ೪೦). [ ಲಕ್ಕಡಿ + ಕೋಟೆ₁ ( < ಕೋಂಟೆ ) ]

**ಲಕ್ಕಣ**, ಲಚ್ಚಣ₁, ಲಚ್ಛಣ (ನಾ). ೧. ಗುರುತು,—ಚಿಹ್ನೆ : "ಲಕ್ಕಣಮೆನೆ ಲಕ್ಷಣ" (ಕಬಿಕಂ. ೧೦೬); ಬೂದಿ ಜೆಡೆ ಲಕ್ಕಣಂ ತಪಕಾದುವೆರಟಿಕ್ಕೊಡಂ ಶರಾಸನಂ ಕವಚಮಿವೆಂತಾದುವೊ (ಕಂಕಶಾ. ೬-೯೨). ೨. ಒಂದು ವಸ್ತು ಇಲ್ಲವೆ ಸಂಗತಿಯ ವಿಶಿಷ್ಟವಾದ ಗುಣದ ನಿರೂಪಣೆ ; ವ್ಯಾಖ್ಯೆ; ಸೂತ್ರ : ಏಳೆಯ ಲಕ್ಕಣ [ಪಾಠಾಂ. ಲಕ್ಷಣ]ಮುಂ ಪೇಟ್ವೆಂ (ಛಂದೋಂಬು. ೩-೨೩೦); ಸಕ್ಕದದ ತದ್ಭವಂಗಳ ಲಕ್ಕಣಮುಂ ಕನ್ನಡಕ್ಕೆ ಲಕ್ಷಿಸಿ ಪೇಟ್ವೆಂ (ಕಮದ. ೨೩೩); ಸಕ್ಕದದಿಂ ಲಕ್ಕಣಮುಂ ಲಕ್ಕಮುನೊಳ್ಗನ್ನಡಂಗಳಿಂ ವಿವರಿಸಿದಂ (ಅಕ್ರಶ. ೦-೦೪). ೩. ದುರ್ಯೋಧನನ ಮಗ; ಲಕ್ಷಣಕುಮಾರ : ಲಕ್ಕಣಂ ಮೊದಲಾಗೆ ನೂರ್ವರ್ ಮಕ್ಕಳುಂ ಸುತ್ತಿಱಿದು ಬಳಸಿ ಬರೆ (ಕಂಕಶಾ. ೦೦-೨೭ ವ). ೪. [ಕಾವ್ಯಮೀ] ಕಾವ್ಯದ ಸೌಂದರ್ಯವನ್ನು ಹೆಚ್ಚಿಸುವ ಗುಣ,— ಲಕ್ಷಣ : ಪುರುಳುಂ ಲಕ್ಕಣಮುಂ ಮೆಯ್ಸಿರಿಯುಂ ತಳ್ತಸೆಯೆ ಪೇಟ್ದ ಕಬ್ಬಂ (ಕಬ್ಬಿಗಕಾ. ೬); ರಸಮೊಸರೆ, ಲಕ್ಕಣಂ ಮಿಕ್ಕಿರೆ, ಎಡೆಯೆಡೆಯೊಳ್ ಸಕ್ಕದದ ನಲ್ನುಡಿ ಮೆಱೆಯೆ, ತಿರುಳ್ಗನ್ನಡದೊಳೆ ಕತೆಯನುಸಿರ್ವೆಂ (ಆದಿಪುರಾ. ೬-೦೬). **ಲಚ್ಚಣ₁** : ೧. "ಲಚ್ಚಣಮೆಂದು ಲಕ್ಷಣದೊಳಂ"

(ಕರ್ಣಾಟಕ. ೮೩-೩೩); ''ಲಕ್ಷಣಕ್ಕೆ ಲಚ್ಚಣಮೆನಿಪ್ಪುದು'' (ಶಶರ. ೦೨೯).
೫. [ನಾಟ್ಯ]ಹತ್ತು ಬಗೆಯ ನೃತ್ಯಭೇದಗಳಲ್ಲಿ ಒಂದು : ತಾಂಡವ ನಾಂಟ್ಯ ನೃತ್ಯ ಲಾಸ್ಯ ಗುಂಡಿಲ ಪೆಕ್ಕಣ ಲಚ್ಚಣ. . . ದಶವಿಧಪಾತ್ರಂಗಳಂ ತೋಱಿ ರಂಜಿಸುವ ನರ್ತನ ನರ್ತಕಿಯರಿಂ (ಧೃರಪು. ೩-೩೫). **ಲಚ್ಚಣ: ೫.** ತಾಂಡವ ನಾಟ್ಯ ನೃತ್ತ ಲಾಸ್ಯ ಗುಂಡಿಲ ಪೆಕ್ಕಣ ಲಚ್ಚಣ ಅಪರಿಪಾತ್ರ ಸುಪಾತ್ರ ಸರ್ವತೋಭದ್ರವೆಂಬ ದಶವಿಧಪಾತ್ರಂಗಳಂ (ಐವೇಶ. ೨೩೯).
[ < ಸಂ. ಲಕ್ಷಣ ]

ಲಕ್ಕಣಿಕೆ ' **ಲೆಕ್ಕಣಿಕೆ** ' ನೋ.

ಲಕ್ಕರಿ ' **ಲಪ್ಕರು** ' ನೋ.

ಲಕ್ಕಲಿ ' **ಲೊಕ್ಕ$_1$** ' ನೋ.

ಲಕ್ಕಾ (ನಾ). ಪಾರಿವಾಳಗಳಲ್ಲಿ ಒಂದು ಜಾತಿ : ಲಕ್ಕಾ ಎಂಬ ಪಾರಿವಾಳಗಳು (ಮುಂಬಯಿ. ೩-೦೦೦). [ ← ಅರ. ಪಾರ. ಹಿಂ. ಲಕ್ಕಾ ]

ಲಕ್ಕಿ$_1$ ' **ಲೊಕ್ಕ$_1$** ' ನೋ.

ಲಕ್ಕಿ$_2$ ' ಲಕುಮಿ ' ನೋ.

ಲಕ್ಕಿಗಿಡ, **ಲಕ್ಕಿಲಿಗಿಡ** (ನಾ). ಒಂದು ಬಗೆಯ ಔಷಧೀಸಸ್ಯ; ಲೊಕ್ಕಿ : '' ಸಿಂಧುಕಃ . . . ಇಂದ್ರಾಣಿಃ—ವಾವಿಲೀಗಿಡದ ಹೆಸರುಗಳು; ಲಕ್ಕಿ: ಗಿಡ '' (ನಿಘಂಟು. ೦೨೭); ಎಕ್ಕ ಎಲಚಿಯು ಲಕ್ಕಿಗಿಡಗಳು ಸೊಕ್ಕಿ ಮೆರೆವಾಸೀಗೆಮರಗಳು (ಗೋಹಾಡು. ೨-೬);**ಲಕ್ಕಿಲಿಗಿಡ** : '' ಲಕ್ಕಿಲಿಗಿಡ, ನೆಕ್ಕಿ. . . ವಾಮಿ, ಭೂತವೇಷಿ '' (ಸಸ್ಯಶಾ. ೦೩೩); ಲಕ್ಕಿಲಿಗಿಡ, ನೆಕ್ಕಿ (ವೃಕ್ಷಶಾ. ೬೬-೦೩೯೯). [ ಲಕ್ಕಿ$_1$ (< ಲೊಕ್ಕ$_1$) + ಗಿಡ (< ಗಿಡು) ]

ಲಕ್ಕಿಮುಷ್ಟಿ (ನಾ). (ಉಕ) ಒಂದು ಬಗೆಯ ಜೂಜಾಟ; '' ರೊಕ್ಕದಾಟ '' (ಜಾನಕೋ. ೪೦) : ಲಕ್ಕಿಮುಷ್ಟಿ ಆಡಿ ಆಸ್ತಿ ಕಳಕೊಂಡ (ರೂಢಿ).
[ ಲಕ್ಕಿ$_2$ (< ಲಕುಮಿ) + ಮುಷ್ಟಿ$_2$ ]

ಲಕ್ಕಿಲಿ ' **ಲೊಕ್ಕ$_1$** ' ನೋ.

ಲಕ್ಕಿಲಿಗಿಡ ' ಲಕ್ಕಿಗಿಡ ' ನೋ.

ಲಕ್ಕಿಸು, **ಲೆಕ್ಕಿಸು$_1$** (ಕ್ರಿ). ಗಮನ ಕೊಡು; ಲಕ್ಷಿಸು : ಹೂಳಿದನು ಮುರವೈರಿ ಸಾಸಿರಕೋಲುಗಳ ಬಾಯೊಳಗೆ ಲಕ್ಕಿಸದಾಳವಾಡುತ ದನುಜನೆಂದನು ಮಂದಹಾಸದಲಿ (ಕರ್ಣಾಟಕ. ೨೩-೬೦). **ಲೆಕ್ಕಿಸು$_1$** : ಅನೇಕ ಶೀಲಗುಣದೊಪ್ಪಿದೊರಿಂತು ಲೆಕ್ಕಿಸದುವವ್ ನೆನೆಗೆನ್ದೊರು ಮುನಿಯಿಂದಳ್ತಪಚ್ಚಲೆಮೋನ್ತು ತಾವವ್ ತಮಗೆ ವ್ಯುತ್ತ್ಯವರವಾನಱಿದಂ (ಎಕ. II. ೧೧೩-೧; ಶ. ೭೦೦) ; ಮನೆನೆಳಲಂ ನೆನೆಯದೆ ಅರ್ಥಮಂ ಲೆಕ್ಕಿಸದೆ ವೃತ್ತಿಯಂ ವಿಚಾರಿಸದೆ . . . ಬಾಗೆವಾಡಿಯಿಂ ಪೊಱಮಟ್ಟು (ಬಸರ. ೨-೯೩); ರಾವುತ ಪಾಯಕರ ಲೆಕ್ಕಿಸದೆಕ್ಕಲ ಖನ್ನೋಜಿಗಳಾ ರಕ್ಕಸನಿದಿರೊಳೊಪ್ಪಿದರು (ಕುಮಾರಾ. ೦೬-೯೯). [ಲಕ್ಕ$_2$ + –ಇಸು$_3$]

ಲಕ್ಕು ' **ಲಕ್ಕ$_2$** ' ನೋ.

ಲಕ್ಕೆ$_1$ ' **ಲೊಕ್ಕಿ$_1$** ' ನೋ.

ಲಕ್ಕೆ$_2$ ' **ಲಕ್ಕ$_1$** ' ನೋ.

ಲಕ್ಕೆ$_3$ (**ನಾ**). ಗುರಿ; ಉದ್ದೇಶ (?): ವನಧಿಯ ನೀಳ್ದ ಪೆರ್ದೆರಗಳೀ ನೆಲನಂ ಕವಿದಪ್ಪುವೀಗಳೆಂಬಿನಮತಿವೇಗದಿಂ ಪರಿವ ಪಾಱುವ ಲಕ್ಕೆಯನೊಡ್ಡುವೊಳ್ಪು ತನ್ನನೆ ನಡೆ ನೋಡಿಸುತ್ತುಮಿರೆ ಜಾಯಿಲವೊಂದೆರಡೆಂದು ತೋಱಿ ನೆಟ್ಟನೆ ಪದಿನೆಂಟುಕೋಟಿವರೆಗಂ ತಳರ್ದತ್ತು ತುರಂಗಸಾಧನಂ (ಆದಿಪು. ೧೧-೩೦).
[<ಲಕ್ಷ್ಯ ?]

ಲಕ್ಕೋಟೆ$_1$ ' ಲಕೋಟೆ$_1$ ' ನೋ.

ಲಕ್ಕೋಟೆ$_2$ ' ಲಕೋಟೆ$_2$ ' ನೋ.

ಲಕ್ಖ ' **ಲಕ್ಕ$_1$** ' ನೋ.

ಲಕ್ಖಗಡುಗೆ, **ಲಖಗಡುಗೆ** (ನಾ). **ದೇವರಿಗೆ ಲಕ್ಷ ಗಡಿಗೆಗಳ ನೀರಿನಿಂದ** ಮಾಡುವ ಅಭಿಷೇಕ ; ಲಕ್ಷಕುಂಭಾಭಿಷೇಕ : ಶ್ರೀಮತು ಕಲಿದೇವರ್ಗೆ ಪ್ರತಿವರ್ಷಂ ಲಕ್ಖಖಗಡುಗೆನಿಮಿತ್ತವಾಗಿಯಲ್ಲಿಯಗ್ರ್ರವಾಣಿಯಂ ತಹರು ನಾಲ್ವರು (ಸೌಇಇ. IX-i. ೨೩೩-೧೩ ; 1148). **ಲಖಗಡುಗೆ** : ಸಮಸ್ತ ಸಿವಸ್ಥಾನಂಗಳಿಗೆ ಲಖಗಡುಗೆ ನಂದಾದೀವಿಗೆಗಂ ಸುಂಕಪನ್ನಾಯ ಸರ್ವಬಾಧೆಪರಿಹಾರವಾಗಿ . ... ಧಾರಾಪೂರ್ವ್ವಕಂ ಮಾಡಿ ಬಿಟ್ಟ ದತ್ತಿ (ಎಕ. VI. ಕಡೂರು. ೦೩೯-೩; 1206).
[ಲಕ್ಖ (<ಲಕ್ಕ$_1$) + ಗಡುಗೆ (< ಗಡಿಗೆ) ]

**ಲಕ್ವ** (ನಾ). ಶರೀರದ ಒಂದು ಭಾಗವು ನಿಷ್ಕ್ರಿಯವಾಗುವ ಒಂದು ಬಗೆಯ ರೋಗ ; ಅರ್ಧಾಂಗವಾಯು ; ಪಾರ್ಶ್ವವಾಯು : ಮೃದುತಾಳಿಗೆಗೆ ಲಕ್ವ (Paralysis) ಹೊಡೆದಾಗ ನುಂಗಿದ ಆಹಾರ ಮೂಗಿನ ಮೂಲಕ ಹೊರಬರುತ್ತದೆ (ಕಿಂರೋ. ೦೯); ವಿಧಿ ಅವನಿಗೆ ಲಕ್ವ ಹೊಡಿಸಿ, ಪ್ರಾಣಾನ ಕಿತ್ತುಕೊಂಡುಹೋಯಿತು (ಕಂಗೂ. ೦೩).
ಲಕ್ವಬಡಿ = ಅರ್ಧಾಂಗವಾಯುವುಂಟಾಗು ; ಪಾರ್ಶ್ವವಾಯು ಬರು: ಅವನ ಕ್ರಿಯಾಪಟುತ್ವಕ್ಕೇ ಲಕ್ವಬಡಿದ ಹಾಗಾಯಿತು (ಮುರಿಮು. ೩೬೪). **ಲಕ್ವಹೊಡೆ** = ಲಕ್ವಬಡಿ : ಅವರಿಗೆ ಲಕ್ವ ಹೊಡೆದು ಆಸ್ಪತ್ರೆ ಸೇರಿದ್ದಾರೆ (ರೂಢಿ). [← ಅರ. ಹಿಂ. ಲಕವಾ ; ಮರಾ. ಲಕವಾ, ಲಖವಾ]

**ಲಕ್ಷ$_1$**, ಲಕ್ಷೆ (ನಾ). ಗಮನ ; ಧ್ಯಾಸ ; ಲಕ್ಷ್ಯ : ಸಮುದ್ರತಳದಲ್ಲಿ ನಡೆಯುವ ಕೆಲವು ಮಹತ್ಕಾರ್ಯಗಳು ನಿಮ್ಮ ಲಕ್ಷಕ್ಕೆ ಬರದೆ ಇರಲಾರವು (ಮುಂಬಯಿ. ೬-೨೦೯); ಈ ಎಲ್ಲಾ ಪ್ರಕಾರಗಳು ಲಕ್ಷದಲ್ಲಿಡುವುದು ಅವಶ್ಯಕವದೆ (ಮುಂಬಯಾ. ೯. ಪ್ರಸ್ತಾವನೆ); ನಿರ್ಜನವಾದ ಬೀದಿಯಲ್ಲಿ ಅದು ಬಹುಶಃ ಯಾರ ಲಕ್ಷಕ್ಕೂ ಬರಲಿಕ್ಕಿಲ್ಲ (ಹೊಸಕ್ಕ. ೨೦೦). ' ಲಕ್ಷಗೊಡು ' ಪರಾ. **ಲಕ್ಷೆ** : ತನ್ನ ಮಗಳನುಪೇಕ್ಷಿಸದಿರೆಂದು ಕಟ್ಟಮ್ಮಾಡಿ ತರುಣಿಯರನಾಕ್ಷಣವೆ ಕಳುಹಿಸಿ ಯಯಾತಿ ಸಂಗಡ ಶುಕ್ರ ಮರಳಿದನು ನಿಜನಿಲಯಕೆ ಲಕ್ಷೆ[ಪಾಠಾಂ. ಕ್ಷಿ]ಯನ್ನಿವರ ಮೇಲಿಟ್ಟು (ತುರಂಗ. ೯-೩೦). 'ಲಕ್ಕ$_2$ ' ಪರಾ. [< ಸಂ. ಲಕ್ಷ್ಯ]

ಲಕ್ಷ$_2$ (ನಾ). ೧. ಒಂದು ಸಂಖ್ಯೆ ; ನೂರುಸಾವಿರ : ಚತುರಶೀತಿಲಕ್ಷಪೂರ್ವಾನಪವರ್ತ್ಯಾಯುಷ್ಯನುಮಪ್ರತಿಹತಶಾಸನನುಮಾಗಿ(ಆದಿಪು: ೧೩-೩೮); ಕೆಟಗಶೀತ ಸಹಸ್ರೋತ್ತರಲಕ್ಷಯೋಜನಬಾಹುಲ್ಯಮನಪ್ಪಾತು ರತ್ನಪ್ರಭೆಯೆಂಬ ಪೃಥ್ವಿಯಿರ್ಕುಂ (ತ್ರಿಲೋಕಸಾ. ೦೦-೪೦ ವ); ಲಕ್ಷ ಸಂಖ್ಯೆಯ ಹಿರಣ್ಯವ ತಂದು (ಬಸವ. ೭೦೩) ; ಏಳು ಲಕ್ಷವೆ ಲಕ್ಷ . . . ವಚನಗಳ ಹೇಳಿದನು ಕೇಳೊ (ಸರ್ವಜ್ಞ. ೨೪); ತುಂಬಿತ್ತೊಡನೆ ವನದೇಶವಂ ಲಕ್ಷಪಕ್ಷಿಯುಲಿ (ಶ್ರೀರಾಮಾ. ೩೦-೦೦೩); ಲಕ್ಷವಾದರೂ ಭಿಕ್ಷೆ ಬೇಡಬಾರದು (ಗಾದೆ). ೨. ಗುರುತು ; ಚಿಹ್ನೆ : ಉಕ್ಷವರಲಕ್ಷ ವಿಜಿತಾಕ್ಷ ಮದದಕ್ಷ ಮಖಶಿಕ್ಷ . . . ಜಯಸಿದ್ಧನಂಜ (ಗುರುಚಾ. ೭-೧). ೩. ತೋರಿಕೆ ; ನಟನೆ. ೪. ಕಪಟ ; ಮೋಸ. ೫. ಗುರಿ ; ಧ್ಯೇಯ : "ಲಕ್ಷ್ಯಂ, ಲಕ್ಷಂ, ಶರವ್ಯಂ— ೩ ಗುರಿಯ ಹೆಸರು ; ಗುರಿಯ ಗುರ್ತು" (ನಿಘಂಟು. ೨೬೪). ೬. ಮುತ್ತು ; ಮೌಕ್ತಿಕ.
**ಲಕ್ಷಗಟ್ಟಲೆ**, **ಲಕ್ಷಗಟ್ಲೆ** = ಲಕ್ಷಾಂತರ ; ಬಹಳ : ರಾಮಾಯಣದಲ್ಲಿ ಲಕ್ಷಗಟ್ಟಲೆಯ ರಾಕ್ಷಸರ ಆಕಾರಗಳು ಬಹುಘೋರವಾಗಿಯೂ, ವಿಚಿತ್ರವಾಗಿಯೂ ಇದ್ದುವೆಂದು ವರ್ಣಿಸಲಾಗಿದೆ (ಜಾರದ. ೬೬) ; ಅಲ್ಲಿ ನಡೆಯುವ ಜಾತ್ರೆಗೆ ಲಕ್ಷಗಟ್ಲೆಯಲ್ಲಿ ಜನ ಸೇರುತ್ತಾರೆ (ರೂಢಿ). **ಲಕ್ಷದೀಪಾರಾಧನೆ** = ದೀಪಾವಳಿಯಲ್ಲಿ ಲಕ್ಷದೀಪಗಳನ್ನು ಹಚ್ಚಿಟ್ಟು ಮಾಡುವ ಪೂಜೆ,— ಉತ್ಸವ : ಲಕ್ಷದೀಪಾರಾಧನೆಯ ಹಬ್ಬವೆಂದು ಲಕ್ಷಾಧಿಪತಿ ಮಹಾತ್ಮರ ಮುಂದೆ ಬಂದು ಲಕ್ಷಲಕ್ಷಾಂತರದಿ ಹರಸುವೆವು ಬೇಡಿ (ಕವಿಕ. ೦೩-೦೭). ಲಕ್ಷಾನುಲಕ್ಷ = ಅನೇಕ ಲಕ್ಷ ; ಲಕ್ಷಗಟ್ಟಲೆ: ಒಂದು ಭಾರೀ ದೂರದರ್ಶಕದ ಮೂಲಕ ಲಕ್ಷಾನುಲಕ್ಷ ನಕ್ಷತ್ರಗಳನ್ನು

ನೋಡಬಹುದು (ಅಕಾಶ. ೩೨). ಲಕ್ಷಾವಧಿ=ಲಕ್ಷಗಟ್ಟಲೆ : ಅನ್ಯಪತ್ರಿಕೆಗಳು ಲಕ್ಷಾವಧಿ ಓದುಗರ ಕೈಗಳಿಗೆ ಹೋಗುತ್ತವೆ (೬೦ಬಿರ. ೮). ಲಕ್ಷೋಪಲಕ್ಷ =ಲಕ್ಷಾನುಲಕ್ಷ : ಕತ್ತಿಯು ಏಟಿಗೆ ಸಿಕ್ಕಿ ಸತ್ತವರನು ಲಕ್ಷೋಪಲಕ್ಷ ವೆನ್ನುವರು (೩೦ಕಾಶ. ೨೩೮-೪೦). [ಸಂ.]

**ಲಕ್ಷಕ** (ಗು). ೧. ಗುರುತಿಸುವ ; ಸೂಚಿಸುವ. (ನಾ). ೨. [ಕಾವ್ಯವಿ] ಲಕ್ಷ್ಯಾರ್ಥವನ್ನು ಕೊಡುವ ಶಬ್ದ : ಅರ್ಥವು ಮುಖ್ಯವಾಗಿ ವಾಚ್ಯ, ಲಕ್ಷ್ಯ, ವ್ಯಂಗ್ಯವೆಂದು ಮೂರು ವಿಧ ; ಈ ಅರ್ಥಗಳನ್ನು ಕೊಡುವ ಶಬ್ದಗಳಿಗೆ (ಕ್ರಮವಾಗಿ) ವಾಚಕ, ಲಕ್ಷಕ, ವ್ಯಂಜಕಗಳೆಂದೂ . . . ಹೆಸರು (ಕೈಪಿಡಿ. ೦೭೭) ; ವಾಚ್ಯಾರ್ಥಕ್ಕೆ ಬಾಧೆ ತಟ್ಟಿದಾಗ ಮಾತ್ರ ಲಕ್ಷಣಾವೃತ್ತಿಗೆ ಪ್ರವೃತ್ತಿಯುಂಟಾಗಿ ಲಕ್ಷ್ಯಾರ್ಥವು ಗೋಚರವಾಗುತ್ತದೆ. ಇದನ್ನು ತಿಳಿಸುವ ಶಬ್ದಕ್ಕೆ 'ಲಾಕ್ಷಣಿಕ' ಅಥವಾ 'ಲಕ್ಷಕ' ಎಂದು ಹೆಸರು (ಭಾರತೀಕಾ. ೨೭೩). [ಸಂ.]

**ಲಕ್ಷಕೊಡು** 'ಲಕ್ಷಗೊಡು' ನೋ.

**ಲಕ್ಷಗೊಡು**, ಲಕ್ಷಕೊಡು (ಕ್ರಿ). ಗಮನ ಕೊಡು : ಲಕ್ಷಿಸು : ಆಕಾಶವನ್ನು ನೋಡಿ ಹವೆಯಲ್ಲಿ ಮಾಸಿ, ಪ್ರಕೃತಿಯ ಪ್ರಕೋಪಗಳೇನಾದರೂ ತೋರುವವೋ ಎಂದು ಲಕ್ಷಗೊಡುತ್ತಿದ್ದನು (ಬಂಗಾಹ. ೩೩). **ಲಕ್ಷಕೊಡು** : ಹಿರಿಯರ ಮಾತಿಗೆ ಲಕ್ಷಕೊಡದೆ ಹುಡುಗ ಹಾಳಾದ (ರೂಢಿ). [ಲಕ್ಷ$_1$ + ಕೊಡು$_1$]

**ಲಕ್ಷಣ$_1$** (ನಾ). ೧. ಗುರುತು ; ಚಿಹ್ನೆ ; ಕುರುಹು : "ಚಿಹ್ನಂ ಲಾಂಛನಂ ಕಳಂಕಂ ಲಕ್ಷಣಂ ಲಕ್ಷ್ಯಮುಕಮದು" (ಖುಂಗರಾ. ೦೧-೩) ; ಜಂಗಮಸ್ಥಳಕ್ಕೆ ಲಕ್ಷಣವಾವುದೆಂದರೆ ಹೇಳಿಹೆ ಕೇಳಿರಣ್ಣ (ಅವಶಂ. ೦೦೪-೪೭೦) ; ಲಕ್ಷಣವೆಂದರೆ ಆಯಾ ವಸ್ತುಗಳಲ್ಲಿರುವ ಮುಖ್ಯವಾದ ಸಾಧಾರಣವಲ್ಲದ ಧರ್ಮಗಳು, ಗುರುತುಗಳು (ಹಿಂದಶಾ. ೨೨೦) ; ನೀನಂತೂ ಇಲ್ಲಿಂದ ಬೇಗ ಅಲ್ಲಾಡುವ ಲಕ್ಷಣ ಕಾಣಲಿಲ್ಲ (ಇಕೃಶ. ೨೦೩). ೨. ವಿಶಿಷ್ಟವಾದ ಗುಣ. ೩. ಚಂದ್ರನಲ್ಲಿರುವ ಕಪ್ಪು,— ಕಳಂಕ : "ಮೃಗ . . . ಲಕ್ಷ್ಮ, ಲಕ್ಷಣಂ, ಕಳಂಕಃ . . . ಈ ೮ ಚಂದ್ರಮಂಡಲದ ನಡುವಣ ಕರ್ಪು" (ಹಲಾಯು. ೯-೯೩). ೪. (ಮೈಮೇಲಿನ) ಒಳ್ಳೆಯ ಗುರುತು,— ಶುಭಚಿಹ್ನೆ : ಪಟ್ಟವ ಕಟ್ಟಿದ ಬಳಿಕ ಲಕ್ಷಣವನೆಣಿಸುವರೆ (ಬಸವ. ೦೩೮) ; ನಿಮ್ಮ ಮಗನಿಗೆ ಯೋಗಪುರುಷನ ಲಕ್ಷಣಗಳಿವೆ (ಶಂಗಾಳ. ೪). ೫. (ರೋಗದ) ಸೂಚನೆ ; (ಕಾಯಿಲೆಯ) ಚಿಹ್ನೆ : ಲಕ್ಷಣವೆಂಬುದು ಹುಟ್ಟಿದ ರೋಗದ ವ್ಯಕ್ತಲಕ್ಷಣ (ಸಳವ್ಯ. ೨೦) ; ಅಬಾಧಿತತ್ವ ಕಡಿಮೆಯಾದಾಗ ರೋಗ ತಗುಲಿದರೆ ರೋಗದ ಲಕ್ಷಣಗಳು ಕಾಣಬರುತ್ತವೆ (ಕಂಠೀ. ೩). ೬. ಚೆಲುವು ; ಅಂದ ; ಸೌಂದರ್ಯ: ಲಕ್ಷಣಕ್ಕಮನುರೂಪಮಾದ ವ್ಯಂಜನಕ್ಕಂ ಹಾವಕ್ಕನುರೂಪಮಾದ ಪೆಣ್ಬಾವಕ್ಕಂ . . . ಬೆಕ್ಕಸಂಬಟ್ಟು (ಶಾಂತಿಪು. ೩-೩೩ ವ) ; ಕಣ್ಣು ಮೂಗಿನಿಂದ ಲಕ್ಷಣವಾಗಿದ್ದಳಾದರೂ ಮೈಬಣ್ಣ ಸ್ವಲ್ಪ ಕಪ್ಪು (ಪಾಥೇಂ. ೦೪೪). ೭. ಒಂದು ವಸ್ತು ಇಲ್ಲವೆ ಸಂಗತಿಯ ವಿಶಿಷ್ಟಗುಣಗಳ ಸೂತ್ರಬದ್ಧವಾದ ನಿರೂಪಣೆ ; ವ್ಯಾಖ್ಯೆ : ನೆಲಸಿದ ಕಾವ್ಯಂ ಕಾವ್ಯಕ್ಕೆ ಲಕ್ಷಣಂ ಸತತಮೆಂದೆ ಪಟ್ಟಗನ್ನಡಮಂ ಪೊಲಗೆಡಿಸಿ ನುಡಿವರಾಗಮ ಬಲಹೀನರ್ (ಕವಿರಾ. ೦-೪೮) ; ಕಂದಕ್ಕೆ ಲಕ್ಷಣಮಂ ಪೇೞ್ವೆಂ (ಛಂದೋಂಬು. ೪-೨೭೦); ತಮ್ಮಾಯತವ ತಮ್ಮಾರುಭಟೆಯನು ಲಕ್ಷ್ಯಲಕ್ಷಣಭೇದಭಂಗಿಗಳ ಸಾರತರಕೋದಂಡಪಂಡಿತರಾರಯಿಕೆಯಲಿ ತಿಙಿಬಿ ನಿಂದರು (ಕುವ್ಯಾಶ. ೨೦-೨೭) ; ಸಂಗೀತದಲ್ಲಿ ಲಕ್ಷ್ಯಕ್ಕೂ ಲಕ್ಷಣಕ್ಕೂ ಭಿನ್ನಾಭಿಪ್ರಾಯವಿದ್ದೇಯಿದೆ (ಭಾರತ. ೩೭೭). ೮. ನೋಟ; ದರ್ಶನ : "ನಿಭಾಳನಂ . . . ಲಕ್ಷಣಂ, ದರ್ಶನಂ, ದೃಷ್ಟಿಃ, ದ್ಯೋತನಂ —ಈ ೮ ನೋಟಂ" (ಹಲಾಯು. ೯೩-೪೦೨) ; "ಲಕ್ಷಣಂ ದರ್ಶನಂ ಧ್ಯಾನಮುಮವಲೋಕನಂ ನೋಟಮಕ್ಕು" (ಮಂಗರಾ. ೯೩-೨). ೯. ಗುರಿ; ಉದ್ದೇಶ; ಆಶಯ; ಧ್ಯೇಯ. ೧೦. ದುರ್ಯೋಧನನ ಮಗ ಕೌರವೇಶ್ವರಂ . . . ತನ್ನ ಮಗನಪ್ಪ ಲಕ್ಷಣಕುಮಾರನಂ ನೆನೆದು ಮನ್ಯೂದ್ಗತಕಂಠನಾಗಿ ತದಾಸನ್ನಪ್ರದೇಶದೊಳ್ ತನ್ನ ಕುಮಾರನಂ ಕಂಡು (ಗದಾಯು. ೯-೩೪ ವ) ; ನಿನ್ನಯ ಬಸಿಱ ಸೀಳಿಯೆ ತೆಗೆವೆವೆಮ್ಮಯ ಸುಖನನೆನುತಾ ಲಕ್ಷಣಾದಿಗಳು ತೆಗೆದೆಸುತ ನೂಱಿಕ್ಕಿದರು (ಕುವ್ಯಾದ್ರೋ. ೩-೭೩). ೧೧. = ಲಕ್ಷಣಾವೃತ್ತಿ : ಅಭಿಧಾ, ಲಕ್ಷಣಾ, ವ್ಯಂಜನವೇ ಮುಂತಾದ ಶಬ್ದಶಕ್ತಿಯನ್ನು ಈ ಕಾಲದ ಯಾವ ಕವಿಯೂ ಕಣ್ಣೆತ್ತಿ ನೋಡಲಿಲ್ಲ (ಭಾರತ. ೯೭೩). ೧೨. [ಜೈನ] ಪಾರಿವ್ರಾಜ್ಯಲಕ್ಷಣಗಳನ್ನು ತಿಳಿಸುವ ಇಪ್ಪತ್ತೇಳು ಸೂತ್ರಪದಗಳಲ್ಲಿ ಒಂದು : ಲಕ್ಷಣಮೆಂಬುದು ಪರಮಲಕ್ಷಣಧರನಪ್ಪ ಜನಪತಿಯುನಾಶ್ರಯಿಸಿ ತನ್ನ ದೇಹಲಕ್ಷಣಮನಪಮಾನಂಗೆಯ್ದು ತಪದೊಳ್ ನೆಗೞ್ದೊಡೆ ದಿವ್ಯಲಕ್ಷಣ ವಿಜಯಲಕ್ಷಣ ಪರಮಲಕ್ಷಣಂಗಳಂ ಪಡೆಯಲಕ್ಕುಂ (ಚಾವುಂಪು. ೨೨೪). ೧೩. ಅಷ್ಟಾಂಗನಿಮಿತ್ತಗಳಲ್ಲಿ ಒಂದು : ನೆಱೆಯಱಿದೆನಂತರಿಕ್ಷಸ್ವರಭೌಮವ್ಯಂಜನಾಂಗಛಿನ್ನಸ್ವಪ್ನೋದ್ಧುರಲಕ್ಷಣಮೆಂದೇ ಬಿತ್ತರಿಪಷ್ಟಾಂಗದ ನಿಮಿತ್ತಶಾಸ್ತ್ರಾವಳಿಯಂ (ಶಾಂತೀಶ್ವ. ೩-೩೪). 'ನಿಮಿತ್ತ', 'ಲಕ್ಷಣನಿಮಿತ್ತ' ಪರಾ. ೧೪. [ಯೋಗ] ಸಮಾಧಿಸ್ಥಿತಿಗೆ ಕಾರಣವಾಗುವ ಚಿತ್ತಪರಿಣಾಮ : ನಿರೋಧ, ಸಮಾಧಿ, ಏಕಾಗ್ರತಾ ಎಂಬ ಮೂರು ವಿಧವಾದ ಚಿತ್ತಸ್ಥಿತಿಗಳು ಧರ್ಮ, ಲಕ್ಷಣ, ಅವಸ್ಥಾ ಎಂಬ ಸೂಕ್ಷ್ಮಸ್ಥೂಲರೂಪವಾದ ಚಿತ್ತಪರಿಣಾಮಗಳೆನ್ನಲ್ಪಡುವುವು . . . ಭೂತ ವರ್ತಮಾನ ಭವಿಷ್ಯತ್ ಎಂಬ ಕಾಲಭೇದದಿಂದ ತಿಳಿಯಲ್ಪಡುವ ಪರಿಣಾಮವು ಲಕ್ಷಣಪರಿಣಾಮ (ಹಿಂದಶಾ. ೦೦೩). [ಸಂ.]

**ಲಕ್ಷಣ$_2$** (ನಾ). (ಉಕ) ಉಗುರು ತೆಗೆಯುವ ಸಾಧನ : ಲಕ್ಷಣವನ್ನು ಉಪಯೋಗಿಸುವವನಿಗೆ ಬಹಳ ಜಾಣ್ಮೆ ಇರಬೇಕಾಗುತ್ತದೆ (ರೂಢಿ). [ ? ]

**ಲಕ್ಷಣಂಬಿಡಿ** (ಕ್ರಿ). ಉದ್ದೇಶವನ್ನು ಅನುಸರಿಸು ; ಸೂತ್ರಬದ್ಧವಾಗು : ದಕ್ಷಿಣದೊಳಕ್ಷೀಣರವದಿಂ ಲಕ್ಷಣಂಬಿಡಿದು ಚತುರ್ಮುಖದಿಂ . . . ಮಂತ್ರಮನೋದುವಬ್ಜಭವನಿಂ (ಕಬಿಕಂ. ೦-೭೪ ವ). [ಲಕ್ಷಣ$_1$ + ಬಿಡಿ$_1$]

**ಲಕ್ಷಣಗೇಡಿ** (ನಾ). ಶುಭಚಿಹ್ನೆಗಳಿಲ್ಲದ ವ್ಯಕ್ತಿ : ಲಕ್ಷಣಗೇಡಿ ಹತ್ತಳೇ ಲೆಕ್ಕವಿಲ್ಲದ ಮಕ್ಕಳ (ಗಾದೆ). [ಲಕ್ಷಣ$_1$ + ಕೇಡಿ$_1$]

**ಲಕ್ಷಣಗ್ರಂಥ** (ನಾ). (ಭಾಷೆ, ಕಾವ್ಯ ಮುಂತಾದುವುಗಳ) ಲಕ್ಷಣಗಳನ್ನು ಪ್ರತಿಪಾದಿಸುವ ಗ್ರಂಥ ; ಅಲಂಕಾರಶಾಸ್ತ್ರ, ವ್ಯಾಕರಣ ಇತ್ಯಾದಿ : ಕವಿರಾಜಮಾರ್ಗವು . . . ಅಲಂಕಾರಶಾಸ್ತ್ರಕ್ಕೆ ಸಂಬಂಧಪಟ್ಟ ಲಕ್ಷಣಗ್ರಂಥ (ಕವಿರಾ. ೦ ಪೀಠಿ); ಈ ಕಾಲದಲ್ಲಿ ಸಾಹಿತ್ಯಾಚಾರ್ಯರು ಲಕ್ಷಣಗ್ರಂಥಗಳನ್ನು ಅನೇಕವಾಗಿ ರಚಿಸಿದರು (ಭಾರತ. ೯೭೩). [ಸಂ.]

**ಲಕ್ಷಣದೋಷ** (ನಾ). [ತರ್ಕಶಾ] ಒಂದು ವಸ್ತು ಇಲ್ಲವೆ ಸಂಗತಿಯ ವಿಶಿಷ್ಟಗುಣಗಳ ನಿರೂಪಣೆಯಲ್ಲಿ ಉಂಟಾಗುವ ಕೊರತೆ, ನ್ಯೂನತೆ: ಇದರಲ್ಲಿ ಅವ್ಯಾಪ್ತಿ, ಅತಿವ್ಯಾಪ್ತಿ, ಅಸಂಭವ, ಆತ್ಮಾಶ್ರಯ ಮತ್ತು ಅನ್ಯೋನ್ಯಾಶ್ರಯಗಳೆಂಬ ಐದು ವಿಧಗಳಿವೆ . 'ದೋಷ' ಪರಾ. [ಸಂ.]

**ಲಕ್ಷಣನಿಮಿತ್ತ** (ನಾ). = ಲಕ್ಷಣ$_1$ ೧೩ : ಅಂತರಿಕ್ಷನಿಮಿತ್ತ ಭೌಮನಿಮಿತ್ತ . . . ಲಕ್ಷಣನಿಮಿತ್ತ ಛಿನ್ನನಿಮಿತ್ತ ಸ್ವಪ್ನನಿಮಿತ್ತ ಎಂದಿವಷ್ಟಾಂಗನಿಮಿತ್ತಮೆಂಬುದು . . . ಶರೀರದ ಹಲ ಕುಲಿಶ . . . ಶ್ರೀವತ್ಸ ಚಕ್ರ ಅನಲ ಕುಂಭ ಎಂಬ ದ್ವಾತ್ರಿಂಶತ್ ಶುಭಲಕ್ಷಣಂಗಳಂ ನೋಡಿ ಶುಭಾಶುಭಂಗಳಂ ಪೇೞ್ವುದು ಲಕ್ಷಣನಿಮಿತ್ತಮೆಂಬುದು (ಕಸಾರ. ೩೭೭). [ಸಂ.]

**ಲಕ್ಷಣವಂತ** (ನಾ). ೧. ಶುಭಚಿಹ್ನೆಗಳಿಂದ ಕೂಡಿದವನು ; ಅದೃಷ್ಟವಂತ. ೨. ಚೆಲುವ ; ಸುಂದರ : ಹುಡುಗನು **ಲಕ್ಷಣವಂತನೆಂದು ಅವನ ಮನಸ್ಸಿಗೆ ಹೋಯಿತು** (ಬಾಗ್ಯಲ. ೦೦೨). [<ಸಂ. ಲಕ್ಷಣವತ್]

**ಲಕ್ಷಣವಂತೆ** (ನಾ). ಚೆಲುವೆ ; ಸುಂದರಿ : ಆ ಹುಡುಗಿ ತುಂಬ ಲಕ್ಷಣ ವಂತೆ (ರೂಢಿ). [ಲಕ್ಷಣವಂತ + – ಎ₂]

**ಲಕ್ಷಣವಿಧಿ** (ನಾ). ವ್ಯಾಖ್ಯೆಯ ನಿಯಮ ; ಲಕ್ಷಣದಲ್ಲಿ ಹೇಳಿರುವ ಕ್ರಮ : ಕೂಷ್ಮಾಂಡದ ಷತ್ವಕ್ಕಂ ಬಿಂದುಗಮುಂದಯಿಸುಗುಂ ಲೋಪ ವೃತ್ತಿ ಲಕ್ಷಣವಿಧಿಯಿಂ (ಶಮದ. ೨೯೪). [ಸಂ.]

**ಲಕ್ಷಣಶಾಸ್ತ್ರ** (ನಾ). ದೈಹಿಕಚಿಹ್ನೆಗಳಿಂದ ಮನುಷ್ಯರ ಮತ್ತು ಪ್ರಾಣಿ ಗಳ ಸ್ವಭಾವ, ಯೋಗ್ಯತೆಗಳನ್ನು ತಿಳಿದು ಹೇಳುವ ಶಾಸ್ತ್ರ : ಅಕ್ಷರ ಲೆಕ್ಕ ಗಂಧರ್ವ ಜ್ಯೋತಿಷ್ಯ . . . ಸಾಮುದ್ರಿಕಶಾಸ್ತ್ರ ಲಕ್ಷಣಶಾಸ್ತ್ರ ಅಶ್ವಪರೀಕ್ಷೆ ಗಜಶಿಕ್ಷೆ . . . ಇವೆಲ್ಲವ ಕಲಿತಡೇನೋ (ಮುಡಿಮಾ. ೪೩-೬೦). [ಸಂ.]

**ಲಕ್ಷಣಾವೃತ್ತಿ** (ನಾ). [ಕಾವ್ಯಮೀ] "ಶಬ್ದದ ವಾಚ್ಯಾರ್ಥವು ಸನ್ನಿ ವೇಶಕ್ಕೆ ಹೊಂದದಿದ್ದಲ್ಲಿ, ಹೊಂದಿಕೆಯಾಗುವಂತೆ ಅದನ್ನು ಸರಿ ಪಡಿಸಿ ಅರ್ಥ ಕೊಡುವ ಮತ್ತೊಂದು ವೃತ್ತಿ ಕೆಲಸ ಮಾಡುತ್ತದೆ ; ಇದಕ್ಕೆ ಲಕ್ಷಣಾವೃತ್ತಿಯೆಂದೂ, ಇದರಿಂದ ಬರುವ ಅರ್ಥಕ್ಕೆ ಲಕ್ಷ್ಯಾರ್ಥವೆಂದೂ ಹೆಸರು" (ಕಾರಿವಾ. ೪೮) : ಅರ್ಥವು ಮುಖ್ಯವಾಗಿ ವಾಚ್ಯ, ಲಕ್ಷ್ಯ, ವ್ಯಂಗ್ಯವೆಂದು ಮೂರುವಿಧ ; ಈ ಅರ್ಥಗಳನ್ನು ಕೊಡುವ ಶಬ್ದಗಳಿಗೆ (ಕ್ರಮವಾಗಿ) ವಾಚಕ, ಲಕ್ಷಕ, ವ್ಯಂಜಕಗಳೆಂದೂ ಅವುಗಳಲ್ಲಿ ರುವ ಸಾಮರ್ಥ್ಯಕ್ಕೆ (ಅಥವಾ ವೃತ್ತಿಗೆ – ಕ್ರಮವಾಗಿ) ಅಭಿಧಾವೃತ್ತಿ, ಲಕ್ಷಣಾವೃತ್ತಿ, ವ್ಯಂಜನಾವೃತ್ತಿ ಎಂದೂ ಹೆಸರು (ಕೃವಿವ. ೦೬೬). [ಸಂ.]

**ಲಕ್ಷಣಾವ್ಯಾಪಾರ** (ನಾ). = ಲಕ್ಷಣಾವೃತ್ತಿ : ಶಬ್ದವು ಮುಖ್ಯವಾದ ವೃತ್ತಿಯನ್ನು ( = ಅಭಿಧಾವ್ಯಾಪಾರವನ್ನು) ಬಿಟ್ಟು ಗುಣವೃತ್ತಿಯಿಂದ ( = ಲಕ್ಷಣಾವ್ಯಾಪಾರದಿಂದ ) ಅರ್ಥವನ್ನು ಬೋಧಿಸುವುದಕ್ಕೆ ಒಂದು ಪ್ರಯೋಜನವೇ ಕಾರಣವಾಗಿರುವುದಷ್ಟೆ (ಧ್ವನ್ಯಾಲೋ. ೪೬). [ಸಂ.]

**ಲಕ್ಷಣೆ** (ನಾ). = ಲಕ್ಷಣಾವೃತ್ತಿ : ವಾಚ್ಯ ಲಕ್ಷ್ಯದ ತೆಱನದಾವುದು ಲಕ್ಷಣೆ ಯಲವಕ್ಕೈಕ್ಯವೆಂತಹುದು (ಅಮೃತ. ೩-೦೯) : ಅರ್ಥಪ್ರಕರಣ ಮೊದ ಲಾದವುಗಳಿಂದ ಶಕ್ಯಾರ್ಥವ ಹೇಳಕೂಡದೆ ಶಕ್ಯಾರ್ಥ ಸಂಬಂಧವುಳ್ಳದನ್ನು ಹೇಳಿದರೆ, ಅದು ಲಕ್ಷಣೆ (ಹೊಮಗ. ೦೬೦) ; ಈ ಉಕ್ತಿಯಲ್ಲಿ ಲಕ್ಷಣೆಯ ಚಮತ್ಕಾರವಿದೆ (ಶ್ರೀಕೃಕೃ. ೩). [ಸಂ. ಲಕ್ಷಣಾ]

**ಲಕ್ಷವರಾಳಿ** (ನಾ). [ಸಂಗೀತ] ಏಳು ಬಗೆಯ ಮಿಶ್ರರಾಗಗಳಲ್ಲಿ ಒಂದು : ಶೋಕವರಾಳಿ ವಸಂತವರಾಳಿ ಜೋಗಿವರಾಳಿ. . . ಲಕ್ಷವರಾಳಿ ನಾಗವರಾಳಿಯೆಂಬ ವರಾಳೀಸಪ್ತಕಮೇ ಶುದ್ಧವರಾಳಿಗೆ ಮಿಶ್ರಂಗಳ್ (ಬವೀಳ. ೨೩೫). [ಲಕ್ಷ₁ + ವರಾಳಿ]

**ಲಕ್ಷಾಂತರ** (ನಾ). ಲಕ್ಷಗಟ್ಟಲೆ ; ಬಹಳ : ಯುದ್ಧಕ್ಕೆ ಹೋದ ಲಕ್ಷಾಂತರ ಸೈನಿಕರ ಪೈಕಿ ಸಾವಿರಾರುಜನ ಗೈರುಹಾಜರಿ ಆಗಿಬಿಟ್ಟಿದ್ದಾರೆ (ವೀಕಯೋ. ೯೬). [ಸಂ.]

**ಲಕ್ಷಾಧಿಕಾರಿ** (ನಾ). ಲಕ್ಷಸಂಖ್ಯೆಯ ಸಂಪತ್ತಿನ ಒಡೆಯ: ಲಕ್ಷಾಧೀಶ್ವರ: ದುರದೃಷ್ಟದಿಂದ ಲಕ್ಷಾಧಿಕಾರಿಯಾಗಿದ್ದವನು ದರಿದ್ರನಾದನು (ರೂಢಿ). [ಸಂ. ಲಕ್ಷಾ ಧಿಕಾರಿನ್]

**ಲಕ್ಷಾಧಿಪತಿ** (ನಾ). = ಲಕ್ಷಾಧಿಕಾರಿ : ಲಕ್ಷಾಧಿಪತಿ ಮಹಾತ್ಮರ ಮುಂದ ಬಂದು ಲಕ್ಷಲಕ್ಷಾಂತರದಿ ಹರಸುವೆವು ಬೇಡ (ಶಂಕೃ. ೦೫-೦೮). [ಸಂ.]

**ಲಕ್ಷಾಧೀಶ್ವರ** (ನಾ). = ಲಕ್ಷಾಧಿಕಾರಿ : ಅವನೊಬ್ಬ ಲಕ್ಷಾಧೀಶ್ವರ (ಕುವರು. ೩೦೦). [ಸಂ.]

**ಲಕ್ಷಿತ** (ಗು). ೧. ಲಕ್ಷಣಗಳಿಂದ ಕೂಡಿದ ; ಕುರುಹುಗಳನ್ನುಳ್ಳ. ೨. ಗಮನಕ್ಕೆ ಬಂದ : ಗಮನಿಸಿದ; ಗ್ರಹಿಸಲಾದ. ೩. ಗುರಿ ಯಾಗಿಟ್ಟುಕೊಂಡ. (ನಾ). ೪. ಲಕ್ಷಣಗಳಿಂದ ಕೂಡಿದುದು; ಚಿಹ್ನೆಗಳಿಂದ ಕೂಡಿದುದು : ಪೂರ್ವಾಪರವಿಷಯವಿವಿಕ್ತಾರ್ಥವ್ಯಂಜನ ಯೋಗಸಂಕ್ರಮಣಲಕ್ಷಣಲಕ್ಷಿತಮಪ್ಪ [ಪಾಠಾಂ. ಲಕ್ಷಣಮಪ್ಪ] . . . ಶುಕ್ಲ ಧ್ಯಾನದೊಳ್ (ಆದಿಪು. ೬-೩೪ ವ) ; ಅಕ್ಷೂಣಲಕ್ಷಣಲಕ್ಷಿತಂಗಳಪ್ಪ ಪುತ್ರನಂಗ ಪ್ರತ್ಯಂಗಂಗಳಂ ನೀಡುಂ ಭಾವಿಸಿ ನೋಡಿ (ಚಂದ್ರಪ್ರ. ೩-೦೦೨ ವ) ; ತಾಪತ್ರಯದ ಲಕ್ಷಣಲಕ್ಷಿತವನಱಿದು . . . ನಡವಂಗರಿದೆನಿಸುವುದದಾವುದೈ (ಶಿವಾನು. ೪-೬೦). [ಸಂ.]

**ಲಕ್ಷಿಸು** (ಕ್ರಿ). ೧. ಗುರಿಯಿಡು : ನನೆಗಣೆಯಂ ತೊಟ್ಟು . . . ಕೇಣಮನಿಂಬಿಟ್ಟು ಕಲಹಮನೊಡಂಬಟ್ಟು ಭಾಳಾಕ್ಷನಂ ಲಕ್ಷಿಸಿ ನೋಡಿ (ಗಿರಿಜಾ. ೬-೨೬ ವ). ೨. ಹೊಂದಿಸು ; ಅಳವಡಿಸು : ಸಕ್ಕದದ ತದ್ಭವಂಗಳ ಲಕ್ಷ್ಮಣಮಂ ಕನ್ನಡಕ್ಕೆ ಲಕ್ಷಿಸಿ ಪೇಟ್ವೆಂ (ಶಮದ. ೨೫೩). ೩. ಗಮನಿಸು ; ಲಕ್ಷ್ಯಕ್ಕೆ ತೆಗೆದುಕೊಳ್ಳು ; ಪರಿಗಣಿಸು : ತದಾಸ್ಯದ ಗಂಧದಂತೆ ತದ್ಗಂಧಮೆಂದು ಲಕ್ಷಿಸುಗವಳ್ (ರಾಜಶೇಖ. ೦೦-೫೪) ; ರಚಿತಮಾಯ ವಿಮಾಯ ಮಾಯಾನಿಚಿತ ಮಾಯಾಧಾರ . . . ಲಕ್ಷಿಸಿ ಕರುಣಿಸುವುದು (ಶಿವಾಕಿ. ೬೦೩. ೬-೪೦) ; ಸೇನರೂ ಸಹ ಅವಶ್ಯವಿದ್ದಾಗ ಅಷ್ಟೇ ಅವಳೊಂದಿಗೆ ಕೂಡಿರುತ್ತಾರೆಂಬುದನ್ನಾದರೂ ನೀವು ಲಕ್ಷಿಸಿ ರುವಿರೋ ? (ಹೇಮಂತ. ೩೯೯). [<ಲಕ್ಷ್ಯ + – ಇಸು₃]

**ಲಕ್ಷುಮಿ** 'ಲಕುಮಿ' ನೋ.

**ಲಕ್ಷೆ** 'ಲಕ್ಷ₁' ನೋ.

**ಲಕ್ಷ್ಮ** (ನಾ). ೧. ಗುರುತು ; ಚಿಹ್ನೆ ; ಕುರುಹು : "ಅಭಿಜ್ಞಾನಚಿಹ್ನ ಲಾಂಛನ ಲಕ್ಷ್ಮಾಖ್ಯಂ" (ಪಶ್ವಕೋ. ೦೨-೬೯). ೨. ಚಂದ್ರನಲ್ಲಿರುವ ಕಳಂಕ ; —ಕರೆ : "ಮೃಗಃ . . . ಲಕ್ಷ್ಮ, ಲಕ್ಷಣಂ, ಕಳಂಕಃ . . . ಈ ೨ ಚಂದ್ರಮಂಡಲದ ನಡುವಣ ಕರ್ಪು" (ಹಲಾಯು. ೯-೯೫) ; ನಗೆಯೆಂಬೀ ನೆವದೆ ಬೆಳಗೀ ಮೊಗಮೆಂಬೀ ನೆವದೆ ಶಿಂಗಳೊಳಗೆಸೆದಾದಂ ಸೊಗಯಿಸಿ ತೋರ್ಕುಂ ಲೋಚನಯುಗಮೆಂಬೀ ನೆವದೆ ಲಕ್ಷ್ಮಮೆನೆ ತದ್ವ್ಯಾಜಂ (ಶಬರ. ೩-೨೬) ; ತೆಳ್ಪಂ ತಾಳ್ದ ಚಂದ್ರೋಪಳಮಮಳಶರತ್ಪೂರ್ಣಶುಭ್ರಾಂ ಶುಮಂ ಸಂತಸದಿಂದಂತಲ್ಲಿ ಪಟ್ಟಿರ್ದರಲೆವಱ ಲಸಲ್ಲಕ್ಷ್ಮಮಂ ಪೋಲ್ತು (ಕುಶ್ಚಕು. ೩-೬೬) ; ಚಂದ್ರಮಧ್ಯವಟಪತ್ರದಲ್ಲಿ ಲಕ್ಷ್ಮೇಂದ್ರನಿರ್ಪನೆನೆ ಲಕ್ಷ್ಮ [ಪಾಠಾಂ. ಕ್ಷ್ಮಕ] ಮೊಪ್ಪುಗುಂ (ಅಜಿತ. ೦೦-೬೨). ೩. ಮುಖ್ಯ ವಾದುದು ; ಪ್ರಮುಖವಾದುದು. [ಸಂ. ಲಕ್ಷ್ಮನ್]

**ಲಕ್ಷ್ಮಣ** (ನಾ). ೧. ಗುರುತುಳ್ಳುದು ; ಚಿಹ್ನೆಯುಳ್ಳುದು. ೨. ಶುಭ ಲಕ್ಷಣದಿಂದ ಕೂಡಿದವನು ; ಭಾಗ್ಯಶಾಲಿ ; ಸುದೈವಿ. ೩. ಒಂದು ಬಗೆಯ ಪಕ್ಷಿ ; ಸಾರಸ. ೪. ದಶರಥನ ಮಗ ; ರಾಮನ ತಮ್ಮ ; ಸೌಮಿತ್ರಿ : ವಿದ್ಯುದಂಗಂ . . . ರಾಮಂಗಂ ಲಕ್ಷ್ಮಣಂಗಮಾನತನಾದಂ (ಶಂರಾಪು. ೬-೬೫) ; ಧರಣಿಜೆಯ ಬಿಱುನುಡಿಗೆ ಲಕ್ಷ್ಮಣ ತೆರಳಿದನಭಿಸಂಧಿ ಯಲಿ ಸೀತಾತರುಣಿಯನು ಕದ್ದೊಯ್ದನಡವಿಯಲಾ ದಶಗ್ರೀವ (ಕೊರಶಾ. ೩-೯ ಸೂಕ್ತ) ; ಹಿಂದೆ ಶೂರ್ಪಣಖಿ ಲಕ್ಷ್ಮಣನನಂಡಲೆದು ಪಡೆದಂದಮಂ ನೆನೆದು (ಕೃಬಿಶಾ. ೦೬-೦೪). [ಸಂ.]

**ಲಕ್ಷ್ಮಣಕಂದ** (ನಾ). ಒಂದು ಬಗೆಯ ಗಡ್ಡೆ : "ಮಂಜಿಷ್ಠಾ—ಮಂಜಿಷ್ಠೆ, ಲಕ್ಷ್ಮಣಕಂದ" (೬ಶಧಿ. ೦೦೬). [<ಸಂ. ಲಕ್ಷ್ಮಣಾಕ್ಷಂದ]

**ಲಕ್ಷ್ಮಣೆ** (ನಾ). ಹೆಣ್ಣು ಸಾರಸಪಕ್ಷಿ : "ಸಾರಸಾ, ಲಕ್ಷ್ಮಣಾ—ಈ ೨ ಸಾರಸಿ" (ಹಲಾಯು. ೪೦-೯೦) ; "ಲಕ್ಷ್ಮಣಾ. ಸಾರಸಸ್ಯ ಯೋಷಿತ್_ ಹೆಣ್ಣುಜಲಪಕ್ಷಿ" (ಸಿದ್ಧಾಂತಿ. ೦೬೦). [ಸಂ. ಲಕ್ಷ್ಮಣಾ]

**ಲಕ್ಷ್ಮಿ** (ನಾ). ೧. ಸಂಪತ್ತು ; ಐಶ್ವರ್ಯ ; ಭಾಗ್ಯ. ೨. ಸುದೈವ ; ಅದೃಷ್ಟ. ೩. ಏಳಿಗೆ ; ಅಭಿವೃದ್ಧಿ ; ಯಶಸ್ಸು. ೪. ಚೆಲುವು ; ಶೋಭೆ ; ಸೌಂದರ್ಯ : "ಲಕ್ಷ್ಮೀ, ಶ್ರೀ, ಕಾಂತಿ, ವಿಭ್ರಮ ಮೆಂಬಿವು ಶೋಭೆಯಲ್ಲಿಯುಂ ವರ್ತಿಸುಗುಂ" (ಹಲಾಯು. ೦೩೫-೨೬) ; ಲಕ್ಷ್ಮಿ ಮತ್ತು ಶ್ರೀ ಎಂಬ ಎರಡು ಪದಗಳೂ ಸೌಂದರ್ಯವೆಂಬ ಅರ್ಥದಲ್ಲಿ

ಪ್ರಯೋಗದಲ್ಲಿವೆ (ಸೌಂದ. ೪೪). ೫. ಐಶ್ವರ್ಯ ಮತ್ತು ಸೌಂದರ್ಯಗಳ ಅಧಿದೇವತೆ ; ವಿಷ್ಣುವಿನ ಹೆಂಡತಿ : '' ಶರಧಿಸುತೆ ರಾಮೆ ಗೋವಿಂದ ಲಕ್ಷ್ಮಿ ಪದ್ಮಮಂದಿರೆ . . . ಮನ್ಮಥಮಾತೆಯೆನಲು ಸಿರಿಗಕ್ಕು ನಾಮಂ '' (ಮಂಗರಾ. ೬-೧೯) ; ತಕ್ಕೆಡೆಯೊಳ್ ಕಡೆಗಣಿಸುವ ನೃಪವಿಡಂಬಿಮಿವು ಲಕ್ಷ್ಮಿ ನಿನ್ನ ದೂಸಱೆನಲ್ಕೇ (ಗದಾಯು. ೯-೮) ; ಆದಿಶಕ್ತಿಯ ಮಗ ವಿಷ್ಣು ಅವನ ಅರ್ಧಾಂಗಿ ಲಕ್ಷ್ಮಿ (ಚಿಪ. ೯೩೦) ; ಭಾಗ್ಯದ ಲಕ್ಷ್ಮೀ ಬಾರಮ್ಮಾ ನಮ್ಮಮ್ಮ ನೀ ಸೌಭಾಗ್ಯದ ಲಕ್ಷ್ಮೀ ಬಾರಮ್ಮ (ಪುರಂದ. ೧-೨೦೦ ಪಲ್ಲವಿ). ೬. ಒಂದು ಬಗೆಯ ಸಸ್ಯ : ಕರಿಯ ಉಗುನಿ : ಶ್ರಿಯೆಯಱಿಮ ಲಕ್ಷ್ಮಿಯುಂ ಪೆಣ್ ಮಯೂರಶಿಖೆಯುಂ ಪಯೋನ್ವಿತಂ ಕುಡಿಗಾಜ್ಯಪ್ರಯಾತಂ ಪೆಣ್ಣಿಂಬಿನೆ ಲಕ್ಷ್ಮಿಯ ಬೇರಂ ನಸ್ಯಮೆಱಿಗೆ ಗರ್ಭಿಣಿಯಕ್ಕುಂ (ಲೋಕೋಪ. ೯-೧೬೭) ; ತಿಗಡೆ ವರಾಹಸೋಕೆ ಕಱಿದಂ(ದೇ)ಗು . . . ಲಕ್ಷ್ಮಿಯೆಂಬ ಗಿಡು ಪುಟ್ಟಿದ ತಾಣಮನೊಳ್ಳಿತಾಗಿ ನೀಂ ಬಗೆಯ ವಱಿಂದೆ ತಂಕೆರಡು ಕಯ್ಯಿರಲತ್ತ ಗುಟ್ಟಿಂದು ಧಾರೆ ಬೇಗೊಗೆಗು (ಅಶ್ವಶಾ. ೧೦-೬೩). ೭. ಒಂದು ಬಗೆಯ ಗಂಧದ್ರವ್ಯ : '' ಯೋಗ್ಯ, ವೃದ್ಧಿ, ಸಿದ್ಧಿ, ಲಕ್ಷ್ಮಿ – ವೃದ್ಧಿಯೆಂಬ ಗಂಧದ್ರವ್ಯಂ '' (ನಾಚರಾ. ೮). ೮. ಅರಿಶಿನ. ೯. ಒಬ್ಬಾಕೆಯ ಹೆಸರು : ವಿಷ್ಣುಮಹೀಶಂ ನೆಲೆ ತಾನೆ ವಿಷ್ಣುವೆನಿಪಂ ಲಕ್ಷ್ಮೀವಧೂವಲ್ಲಭಂ (ಎಕ. V. ಅರಸೀ. ೬೨-೧೭ ; 1117). ೧೦. [ಸಂಗೀತ] ಇಪ್ಪತ್ತಾರು ಆರ್ಯಾಭೇದಗಳಲ್ಲಿ ಒಂದು : ಲಕ್ಷ್ಮೀ ಮೊದಲಾದ ಇಪ್ಪತ್ತಾರು ಆರ್ಯಾಭೇದಗಳನ್ನು (ಸಂಗೀತ)ರತ್ನಾಕರದಲ್ಲಿ ಹೇಳಿದೆ (ಛಂಶಾ. ೦೦೫).

**ಲಕ್ಷ್ಮೀಕಾಸು** = ಲಕ್ಷ್ಮಿಯ ಚಿತ್ರವಿರುವ ಕಾಸು : ಲಕ್ಷ್ಮೀಕಾಸುಗಳನ್ನು ಪೋಣಿಸಿದ ಸರವನ್ನು ಆಭರಣವಾಗಿ ಧರಿಸುತ್ತಾರೆ (ಪ್ರಾಂ).
**ಲಕ್ಷ್ಮೀಚೇಳು** = ಜರಿ ; ಸಾವಿರಕಾಲು ಚೇಳು : ಲಕ್ಷ್ಮೀಚೇಳು ಕಂಡರೆ ತುಂಬ ಅದೃಷ್ಟವೆಂದು ಅನೇಕರ ನಂಬಿಕೆ ಇದೆ (ಪ್ರಾಂ). [ಸಂ. ಲಕ್ಷ್ಮೀ]

**ಲಕ್ಷ್ಮೀಕಟಾಕ್ಷ** (ನಾ). ಲಕ್ಷ್ಮಿಯ ಕೃಪೆ ; ಸೌಭಾಗ್ಯ : ಶ್ವೇತಚಾಮರವನ್ನುಪಯೋಗಿಸುವುದರಿಂದ . . . ಲಕ್ಷ್ಮೀಕಟಾಕ್ಷಕ್ಕೆ ಆವಾಸಸ್ಥಾನವಾಗಿ . . . ಚಂದ್ರನಿಗೆ ಸಮಾನವಾದ ಬಿಳುಪು ಉಂಟಾಗುವುದು (ಶಿಲ್ಪ. ೫೬). [ಸಂ.]

**ಲಕ್ಷ್ಮೀಕಾಂತ** (ನಾ). ಲಕ್ಷ್ಮಿಯ ಪತಿ ; ವಿಷ್ಣು : ಇಂತು ರಮೆಯ ಮನೋರಥಂಗಳ ಸಂತಸಮನೀವುತ್ತ ಲಕ್ಷ್ಮೀಕಾಂತನೆಸೆದಿರೆ (ಭಾಶಿಪ. ೪೪-೫೬); ಮುಂದೆ ಸುರಪುರದ ಲಕ್ಷ್ಮೀಕಾಂತನಾವ ತೆಱದಿಂದ ಪರಿಹರಿಸುವನೊ ತನ್ನ ಶರಣಾಗತರನೊಂದುಪಾಯದೊಳುಳುಹದಿರನೆಂದು ಧೈರ್ಯಮಂ ತಾಳ್ದಿರಿಂದ್ರಾದಿ ಸುರರು (ಕೃಬಂಥಾ. ೯-೩೪). [ಸಂ.]

**ಲಕ್ಷ್ಮೀಧವ** (ನಾ). = ಲಕ್ಷ್ಮೀಕಾಂತ : ಲಕ್ಷ್ಮೀಧವನ ಕಳುಹಿದನಿತ್ತ ಬೀಳ್ಕೊಟ್ಟನು ಸುಯೋಧನನ (ಕುವ್ಯಾಉ. ೧೦-೪೦). [ಸಂ.]

**ಲಕ್ಷ್ಮೀನೀಡ** (ನಾ). ಲಕ್ಷ್ಮಿಯ ವಾಸಸ್ಥಳ ; ಸುಖಸಂಪತ್ತುಗಳ ಆಶ್ರಯಸ್ಥಾನ : ಆ ನಾಡೆಂಬ ಸರೋವರಕ್ಕೆ ವಿಕಸತ್ಪಂಕೇಜಮೆಂಬಂತೆ ಲಕ್ಷ್ಮೀನೀಡಂ ಭುವನೋನ್ನತಂ . . . ಕಾಕಂದಿನಾಮಂ ಪುರಂ (ಪುಷ್ಪ. ೯-೦೪). [ಸಂ.]

**ಲಕ್ಷ್ಮೀಪತಿ** (ನಾ). ೧. = ಲಕ್ಷ್ಮೀಕಾಂತ : ನಿಜಸೈನಿಕವನಲ್ಲಿ ಬಿಡಿಸಿದಂ ದೇವಪುರ ಲಕ್ಷ್ಮೀಪತಿಯ ಮೈದುನಂ ಮುಂದದೊಳು (ಕೃಬಂಥಾ. ೯-೯೪). ೨. ಸಿರಿವಂತ; ಧನಿಕ : ಲಕ್ಷ್ಮೀಪುತ್ರರೂ ಲಕ್ಷ್ಮೀಪತಿಗಳೂ ಸಾಹಿತ್ಯದ ಕಡೆಗೆ ತಮ್ಮ ದೃಷ್ಟಿಯನ್ನು ತಿರುವಬೇಕು (ರಾಮಬಾ. ೪೭). [ಸಂ.]

**ಲಕ್ಷ್ಮೀಪುತ್ರ** (ನಾ). ೧. ಲಕ್ಷ್ಮಿಯ ಮಗ ; ಕಾಮ ; ಮನ್ಮಥ. ೨. ಐಶ್ವರ್ಯವಂತ ; ಧನಿಕ : ಲಕ್ಷ್ಮೀಪುತ್ರರೂ. ಲಕ್ಷ್ಮೀಪತಿಗಳೂ ಸಾಹಿತ್ಯದ ಕಡೆಗೆ ತಮ್ಮ ದೃಷ್ಟಿಯನ್ನು ತಿರುವಬೇಕು (ರಾಮಬಾ. ೪೭) ; ಊರ ಹೊರಗೆ, ಊರಿಗೆ ತಾಗಿಕೊಂಡು, ಲಕ್ಷ್ಮೀಪುತ್ರರಾದ ಬಿರ್ಲಾ ಮನೆತನದವರು ಕಟ್ಟಿಸಿದೊಂದು ದೇವಾಲಯವಿದೆ (ಅಂಬು. ೪೩). [ಸಂ.]

**ಲಕ್ಷ್ಮೀರಮಣ** (ನಾ). = ಲಕ್ಷ್ಮೀಕಾಂತ : ಒಸೆಲನಸಿತಂ ಮಾಡಿದಂದಿನ ಕಮಟಸಗ್ಗದ ಹಾಳಹಳನಿಂತಡಸಿ ಬಂದಾದೆನುತ್ತ ಲಕ್ಷ್ಮೀರಮಣಸಳುಕಿದನು (ದಸಪ. ೫೮-೬೨) ; ಎಳನಗೆಯ ಬೆಳ್ದಿಂಗಳಂ ಪಸರಿಸುವ ದೇವಪುರ ಲಕ್ಷ್ಮೀರಮಣನಾಸ್ಯಚಂದ್ರನಾನಂದಮಂ ಸಮಾಗೀಯಲಿ (ಕೃಬಂಥಾ. ೧-೧). [ಸಂ.]

**ಲಕ್ಷ್ಮೀಲೋಲ** (ನಾ). = ಲಕ್ಷ್ಮೀಕಾಂತ : ಲಕ್ಷ್ಮೀಲೋಲನಾಜ್ಞೆಯಲಿವರು ಬಲಿದರು ತಮ್ಮ ಪೋಸರವ (ಕುವ್ಯಾಭೀ. ೬-೧) ; ಜೀಯ ಚಕ್ರಿಯೆ ಪೀತವಾಸ ಲಕ್ಷ್ಮೀಲೋಲ . . . ಬಿಡಿಸು ಸಂಸಾರಪಾಶದಿಂದೆನ್ನನು (ಕೃಬಂಥಾ. ೦೩-೨೮). [ಸಂ.]

**ಲಕ್ಷ್ಮೀವಲ್ಲಭ** (ನಾ). = ಲಕ್ಷ್ಮೀಕಾಂತ : ಅವ್ಯಾಕ್ಷನಂ . . . ಲಕ್ಷ್ಮೀವಲ್ಲಭಂ ಗೆತ್ತಿರ್ದಾ ಗಗನಚ್ಯುತದ ದೇವಮಂಡಪಮನಿನ್‌ ಸಾಲ್ದತ್ತು ಹೇಮಾಚಲಂ (ಜಗಾ. ೧-೨೫). [ಸಂ.]

**ಲಕ್ಷ್ಮೀಶ** (ನಾ). ೧. ಲಕ್ಷ್ಮಿಯ ಒಡೆಯ ; ವಿಷ್ಣು : ಮಂಗಳಂ ಜಯ ಮಂಗಳಂ . . . ಕ್ಷೀರಸಾಗರವಾಸಿ ಲಕ್ಷ್ಮೀಶಗೆ (ಪುರಂದ. ೫-೦೫೮-೨); ವಿರಚಿಸಿದಂ . . . ಹೃದ್ವನಜದೊಳ್ದೇವಪುರದ ಲಕ್ಷ್ಮೀಶನ ಪದದ್ವಯವನಾವಗಂ ಧ್ಯಾನಿಸುವರಡಿಗಳಂ ಸದ್ವಿನಯದಿಂ ಭಜಿಪ ಬಲ್ಪಿಂದ (ಕೃಬಂಥಾ. ೧-೧೧). ೨. ಕನ್ನಡದಲ್ಲಿ ಜೈಮಿನಿಭಾರತವನ್ನು ರಚಿಸಿದ ಕವಿ : ವಿರಚಿಸಿದಂ . . . ಅಣ್ಣಮಾಂಕನ ಸುತಂ ಸದ್ವಿನುತಕರ್ಣಾಟಕವಿಚೂತವನಚೈತ್ರ ಲಕ್ಷ್ಮೀಶನೆಂಬೊರ್ವನು (ಕೃಬಂಥಾ. ೧-೧೧). ೩. [ಸಂಗೀತ] ಒಂದು ತಾಳದ ಹೆಸರು : ವರಾಳಿರಾಗದ ಇವರ ವರ್ಣವೂ, ೧೦೮ ತಾಳಗಳಲ್ಲಿ ಒಂದಾದ ಲಕ್ಷ್ಮೀಶತಾಳದ ಶಿಲ್ಪನವೂ ಉತ್ಕೃಷ್ಟಕೃತಿಗಳು (ಸಂಗೀತ. ೫೫). [ಸಂ.]

**ಲಕ್ಷ್ಯ** (ಗು). ೧. ಗುರುತಿಸಲ್ಪಡುವ. ೨. ಲಕ್ಷಣಕ್ಕೆ ವಿಷಯವಾದ : ವ್ಯಾಖ್ಯೆಯಿಂದ ಹೇಳಲ್ಪಡುವ. ೩. ಗುರಿಯಿಡಬೇಕಾದ; ಉದ್ದೇಶಿಸತಕ್ಕ. ೪. ಗಮನಿಸಬೇಕಾದ ; ಗಣನೀಯ. ೫. ವಿಶಿಷ್ಟವಾದ ಗುಣದಿಂದ ಕೂಡಿದ. ೬. ವಿವರಿಸಬೇಕಾದ. ೭. ಪರ್ಯಾಯವಾಗಿ ಸೂಚಿಸುವ. (ನಾ). ೮. ಗುರುತು ; ಚಿಹ್ನೆ. ೯. ಗುರಿ ; ಧ್ಯೇಯ; ಉದ್ದೇಶ : "ಶರವ್ಯ [ನಿಮಿತ್ತ] ವೇಧ್ಯಮಂತದು ಲಕ್ಷ್ಯಂ" (ಪಶ್ಚಕೋ. ೯೫-೦೯) ; ನೆರೆದಿನಿಬರುಮಿಾ ಲಕ್ಷ್ಯಮನಿರದಕ್ಕಟ ಸರದ ತಗೆಯಲಾರ್ತಿರುಮಿಲ್ಲಾ (ರೇಶರಾ. ೨-೫೨) ; ಸ್ಮರಶರಸಂಧಾನಕ್ಕಂಬುರುಹೇಕ್ಷಣೆ ಲಕ್ಷ್ಯಮಾಗೆ (ಶಾಂತಿಪು. ೯-೮೨) ; ತಮ್ಮಾರುಭಟೆಯನು ಲಕ್ಷ್ಯಲಕ್ಷಣ ಭೇದಭಂಗಿಗಳ ಸಾರತರ ಕೋದಂಡಪಂಡಿತರಾರಯಿಕೆಯಲಿ ತಱುಬಿ ನಿಂದರು (ಕುವ್ಯಾಕ. ೨೧-೨೬). ೧೦. ಲಕ್ಷಣಕ್ಕೆ ಉದಾಹರಣೆಯಾದುದು ; ದೃಷ್ಟಾಂತ ; ನಿದರ್ಶನ : ಪ್ರಸ್ತುತಮೆಂಬುವಳಂಕೃತಿ ವಿಸ್ತರಮಿಂತಕ್ಕುಮದಱ ಲಕ್ಷ್ಯವಿಭಾಗಂ (ಕವಿರಾ. ೩-೦೩೯); ತಾಂಡವಕ್ಕೆ ಲಕ್ಷ್ಯಮಿದೆಂಬಂತಿರೆ ದೇವಮನುಜಸಭೆಗಚ್ಚರಿ ಬೆಚ್ಚರೆ ದಿವಿಜನಾಯಕಂ ನರ್ತಿಸಿದಂ (ಪುಲ್ಲಿಪು. ೦೩-೪೨) : ಗುಣವರ್ಮ ಶ್ರೀವಿಜಯರ ಪೊನ್ನನ ಪಂಪನ ಸುಜನೋತ್ತಂಸನ ಸುಮಾರ್ಗಮಿದಱೊಳೆ ಲಕ್ಷ್ಯಂ (ಕಬುದ. ೫ ಶಿಲೆ೪). ೧೧. ಗಮನ ; ಧ್ಯಾಸ ; ಅವಧಾನ : ಈ ನಿಯಮಗಳನ್ನು ಲಕ್ಷ್ಯದಲ್ಲಿಟ್ಟುಕೊಂಡು ನಡೆಯುವವನಿಗೆ ಬಹುತರ ರೋಗಗಳು ಬರಲಿಕ್ಕಿಲ್ಲ (ಶುಂಠಿಯ. ೪-೨೫); ಒಂದು ಕೊಂಬೆಯುಳ್ಳ ದೊಡ್ಡ ಕರಿಯ ಮರದ ಕೊರಡು ಅವನ ಲಕ್ಷ್ಯವನ್ನು ಎಳೆಯಿತು (ಮಲೆವಾ. ೪೪). ೧೨. ತೋರಿಕೆ ; ಕಪಟ ; ಮೋಸ : ಲಕ್ಷದೀಪಾರಾಧನೆಯ ಹಬ್ಬವೆಂದು ಲಕ್ಷಾಧಿಪತಿಮಹಾತ್ಮರ ಮುಂದೆ ಬಂದು ಲಕ್ಷಲಕ್ಷಾಂತರದಿ ಹರಸುವೆವು ಬೇಡಿ. ಲಕ್ಷ್ಯವೇನುಂ ಬೇಡ ; ಮಾನವೊಲಿದು

ನೀಡಿ (ಕುಮಾ. ೧೩-೩). ೧೩. ಪಾತ, ಲಕ್ಷ್ಯ, ಶೀಘ್ರ, ಘಾತ ಮತ್ತು ಬಹುವೇಗವೆಂಬ ಐದು ಬಗೆಯ ಬಾಣಪ್ರಯೋಗಗಳಲ್ಲಿ ಒಂದು : ಪಾತಂ ಲಕ್ಷ್ಯಂ ಶೀಘ್ರಂ ಘಾತಂ ಬಹುವೇಗಮೆಂಬಿವಯ್ದುಂ...ನೊಳಂತೀತನ ದೊರೆಯಿಲ್ಲೆನಿಸಿದುದಾತನ ಬಿಲ್ಬಲ್ಮೆ ಸುರರಿನಂಬರತಲದೊಳ್ (ಶಾಂತಿಪು. ೧೨-೦೯೩). ೧೪. ಒಂದು ಸಂಖ್ಯೆ: ನೂರುಸಾವಿರ ; ಲಕ್ಷ. ೧೫. [ಕಾವ್ಯಮಿ] ಲಕ್ಷಣಾವೃತ್ತಿಯಿಂದ ಸೂಚಿತವಾಗುವ ಅರ್ಥ : ಅರ್ಥವು ಮುಖ್ಯವಾಗಿ ವಾಚ್ಯ, ಲಕ್ಷ್ಯ, ವ್ಯಂಗ್ಯವೆಂದು ಮೂರು ವಿಧ (ಕೃಶಿಪಿ. ೦೭೭) ; ಲಕ್ಷಣೆಯೆಂಬ ವೃತ್ತಿಯಿಂದ ತೋರುವರ್ಥವು ಲಕ್ಷ್ಯವು (ಕೂಪಸಂ. ೧೭೦).

ಲಕ್ಷ್ಯಕ್ಕೆ ತರು = ಗಮನಕ್ಕೆ ತರು : ಆ ವಿಚಾರವನ್ನು ಅವನ ಲಕ್ಷ್ಯಕ್ಕೆ ತಂದರು (ರೂಢಿ). ಲಕ್ಷ್ಯಕ್ಕೆ ಬರು = ಗಮನಕ್ಕೆ ಬರು ; ಮನಸ್ಸಿಗೆ ಬರು : ಹಿರಿಯರ ಬುದ್ಧಿಮಾತು ಅವನ ಲಕ್ಷ್ಯಕ್ಕೆ ಬರಲಿಲ್ಲ (ರೂಢಿ). [ಸಂ.]

**ಲಕ್ಷ್ಯಕೊಡು** 'ಲಕ್ಷ್ಯಗೊಡು' ನೋ.

**ಲಕ್ಷ್ಯಗೊಡು, ಲಕ್ಷ್ಯಕೊಡು** (ಕ್ರಿ). ಗಮನ ಕೊಡು ; ಮನಸ್ಸಿಗೆ ತಂದು ಕೊಳ್ಳು : ಕರಗಿದಂತಃಕರಣದಲ್ಲಿಯೆ ಎರಕಹೊಯ್ದರಿ ನನ್ನನೆ ಹೋದ ಹೋದೆಡೆ ಲಕ್ಷಲಕ್ಷದಿ ಲಕ್ಷ್ಯಗೊಟ್ಟರಿ ಸುಮ್ಮನೆ (ತಂಶು. ೩೨-೦೦) ; ಅತ್ತ ಕಡೆಗೆ ಹೆಚ್ಚಾಗಿ ಲಕ್ಷ್ಯಗೊಡದವನಂತೆ . . . ನೋಡುವುದರಲ್ಲಿ ತಲ್ಲೀನನಾಗಿದ್ದನು (ಅಂಜಿಕೆ. ೨೩). **ಲಕ್ಷ್ಯಕೊಡು** : ಅವನ ಎಲೆಗಳ ಕಡೆಗೇ ಲಕ್ಷ್ಯ ಕೊಟ್ಟರೂ ತನ್ನ ಆಟವನ್ನು ಸಹ ಬಹಳ ಎಚ್ಚರಿಕೆಯಿಂದ ಆಡುತ್ತಿದ್ದನು (ಬಂಗಾರಕ. ೩೨). [ಲಕ್ಷ್ಯ + ಕೊಡು$_1$]

**ಲಕ್ಷ್ಯಚ್ಯುತ** (ನಾ). ಗುರಿ ತಪ್ಪಿದವನು : "ಲಕ್ಷ್ಯಚ್ಯುತಂ ತಪ್ಪಲೆಚ್ಚನಕ್ಕು" (ಮಂಗರಾ. ೬೬-೩೩). [ಸಂ.]

**ಲಕ್ಷ್ಯಭಾವ** (ನಾ). ಉದ್ದೇಶಿಸಿದ ಗುರಿ ; ಮುಟ್ಟಬಯಸಿದ ಸ್ಥಳ : ಬಸವಣ್ಣ ಸಂಗಮಕ್ಕೆ ಚೆನ್ನಬಸವಣ್ಣ ಉಳುವಿಗೆ ಪ್ರಭು ಕದಳಿಗೆ ಮಿಕ್ಕಾದ ಪ್ರಮಥರೆಲ್ಲರೂ ತಮ್ಮತಮ್ಮ ಲಕ್ಷ್ಯಭಾವಕ್ಕೆ ಮುಕ್ತಿಯನೆಯ್ದಿಹರು (ವಚನರು. ೦೦೪-೯೯೬). [ಸಂ.]

**ಲಕ್ಷ್ಯಲಕ್ಷಿತ** (ನಾ). ಗುರಿಗೆ ಸರಿಯಾಗಿ ಹೊಡೆಯುವವನು; ಗುರಿಯನ್ನು ಭೇದಿಸುವವನು : "ಲಕ್ಷ್ಯಲಕ್ಷಿತನೆನಲು ತಾಗಲೆಸುವವನಕ್ಕು" (ಮಂಗರಾ. ೬೬-೩೩). [ಸಂ.]

**ಲಕ್ಷ್ಯವಿಡು** (ಕ್ರಿ). ಗಮನ ಕೊಡು ; ಎಚ್ಚರವಹಿಸು : ಗುಡಿಸುವಾಗಲೂ ಮೂಲೆಗಳ ಕಡೆಗೆ ಲಕ್ಷ್ಯವಿಟ್ಟುಕೊಳ್ಳುವುದಕ್ಕೆ ಮರೆಯಬಾರದು (ಆರುಶಾ. ೩೯). [ಲಕ್ಷ್ಯ$_6$ + ಇಡು$_1$]

**ಲಕ್ಷ್ಯಸಿದ್ಧಿ** (ನಾ). ೧. ಗುರಿಯನ್ನು ಮುಟ್ಟುವುದು ; ಉದ್ದೇಶ ಸಾಫಲ್ಯ : ಗುರು ಲಕ್ಷ್ಯಸಿದ್ಧಿಯಿಲ್ಲೆನೆ ಪರಿವಂಬಂ ಪರಿದು ಓಡಿದು ಬೇಗಂ ತರ್ಪಂತಿರೆ . . . ಮರುತ್ಸುತಂ ಪರಿದಂ (ಗದಾಯು. ೬-೨೯) ; ನಿಯಮಿಸುವರ್ ತ್ರಿವಿಧಧನುಃಪ್ರಯೋಗದೊಳ್ ದೃಷ್ಟಿಮುಷ್ಟಿ ಶರಸಂಧಾನಕ್ರಿಯೆ ಲಕ್ಷ್ಯಸಿದ್ಧಿ ನಿಜಶಿಕ್ಷೆಯನನುಪಮಮಾಗೆ ಚತುರಚಾಪಾಚಾರ್ಯರ್ (ಕೃಕೃಕೃ. ೨-೩೯). ೨. ಉದಾಹರಣೆಗಳಿಂದ ಸಿದ್ಧವಾಗುವಿಕೆ ; ನಿದರ್ಶನಗಳಿಂದ ಸಿದ್ಧಮಾಡಿ ತೋರಿಸುವಿಕೆ : ಧಾತುಗಳವು ನಾನಾರ್ಥೋಪೇತಂಗಳ್ ಲಕ್ಷ್ಯಸಿದ್ಧಿವಿಡಿದುವನಜಾಜು . . . ಪೂರಿಸುಗೆ (ಕರ್ಣಾಟ. ೨೩೦). [ಸಂ.]

**ಲಕ್ಷ್ಯಾರ್ಥ** (ನಾ). [ಕಾವ್ಯಮಿ] "ಒಂದೊಂದು ಕಡೆ ಶಬ್ದದ ವಾಚ್ಯಾರ್ಥವು ಸನ್ನಿವೇಶಕ್ಕೆ ಹೊಂದದಿದ್ದಲ್ಲಿ, ಹೊಂದಿಕೆಯಾಗುವಂತೆ ಅದನ್ನು ಸರಿಪಡಿಸಿ ಅರ್ಥಕೊಡುವ ಮತ್ತೊಂದು ವೃತ್ತಿ ಕೆಲಸ ಮಾಡುತ್ತದೆ ; ಇದಕ್ಕೆ ಲಕ್ಷಣಾವೃತ್ತಿಯೆಂದೂ ಇದರಿಂದ ಬರುವ ಅರ್ಥಕ್ಕೆ ಲಕ್ಷ್ಯಾರ್ಥವೆಂದೂ ಹೆಸರು" (ಭಾ. ೨. ೯೬) ; ಬೇರೆ ಅರ್ಥಗಳು ವಾಚ್ಯಾರ್ಥಗಳಿಂದ 'ಸೂಚ್ಯ'ವಾಗಿ ಲಕ್ಷ್ಯಾರ್ಥವೆನಿಸುವುವು (ಕೃಶಿಪಿ. ೦೭೭). [ಸಂ.]

**ಲಕ್ಷ್ಯ** (ನಾ). ಗುರಿಯಾಗಿ ಬಳಸುವ ಸಾಧನ; ಗುರಿಹಲಗೆ : ಅದು ಹೋಗಿ ಒಂದು ಗಟ್ಟಿಯಾಗಿರುವ ಗುರಿಯನ್ನು (Target) ಹೊಡೆದು, ಅಲ್ಲಿಯೇ ಕೆಳಗೆ ಬೀಳುವುದೆಂದು ಊಹಿಸುವ . . . ಗುಂಡು ಹೊಡೆದಲ್ಲಿ ಲಕ್ಷ್ಯವು ಬಿಸಿಯಾಗುತ್ತದೆ (ಎಕ್ಸರೇ. ೨೯). [ಸಂ. ಲಕ್ಷ್ಯ]

**ಲಖಿಗಡುಗೆ** 'ಲಕ್ಕಗಡುಗೆ' ನೋ.

**ಲಖ್ಖ$_1$** 'ಲಕ್ಕ$_1$' ನೋ.

**ಲಖ್ಖ$_2$** 'ಲಕ್ಕ$_4$' ನೋ.

**ಲಖ್ಖಣಿ** (ನಾ). ಒಂದು ಬಗೆಯ ಸೈನ್ಯ (?) : ತುರಗದಳ ಪದಾತಿಬಲ ಬಿಲ್ಲಿನ ಲಖ್ಖಣಿ ವಗ್ಗಸೇನೆ ಬಹುವಡೆಯಿಂ ಬೆಳಗವತ್ತಿಯ ಕೋಟೆಯ ಮುತ್ತಿ ಪತ್ತಿ ಧುರದೊಳು ಬಲಿಗೌಡನ ಸುತ್ತಿ . . . ತಳ್ತಿಱಿದು (ಎಪಿಕಂ. ೦೯೯೨. ೬೬-೬ ; 1166). [ಲಖ್ಖ$_1$ + ಅಣಿ$_3$]

**ಲಖ್ಖೆ** 'ಲಕ್ಕ$_1$' ನೋ.

**ಲಗಕ್ರಿಯೆ** (ನಾ). [ಛಂದ] ಷಟ್ಪ್ರತ್ಯಯಗಳಲ್ಲಿ ಒಂದು ; ಒಂದು ಛಂದಸ್ಸಿನಲ್ಲಿ ಯಾವುದೇ ಒಂದು ನಿರ್ದಿಷ್ಟವಾದ ವೃತ್ತವು ಎಷ್ಟನೆಯದು ಎಂಬುದನ್ನು ಕಂಡುಹಿಡಿಯುವ ವಿಧಾನ : ಏಕದ್ವ್ಯಾದಿ ಲಗಕ್ರಿಯೆಯಿಂತಕ್ಕುಂ . . . ಈ ಪ್ರತ್ಯಯವು ಯಾವುದಾದರೊಂದು ಛಂದಸ್ಸಿನಲ್ಲಿ ಒಂದು ಲಘುವಿರುವ ವೃತ್ತವೆಷ್ಟು ? ಎರಡು ಲಘುವಿರುವ ವೃತ್ತವೆಷ್ಟು? ಎಂಬ ಒಂದು ಎರಡು ಮೊದಲಾದ ಲಘುಗಳಿರುವ ವೃತ್ತಗಳ ಲೆಕ್ಕವನ್ನು ತಿಳಿಸುತ್ತದೆ (ಛಂದೋಂಬು. ೬-೪). 'ಷಟ್ಪ್ರತ್ಯಯ' ಪರಾ. [ಸಂ. ಲಗಕ್ರಿಯಾ]

**ಲಗಡ$_1$** 'ಲಗಡು' ನೋ.

**ಲಗಡ$_2$, ಲಗಡಿ, ಲಗುಡಿ** (ನಾ). ೧. ಹೊಡೆತ ; ಪೆಟ್ಟು : 'ಲಗಡಿಸು' ಪರಾ. ೨. ಮಲ್ಲಯುದ್ಧದ ಒಂದು ಪಟ್ಟು : ಮುಷ್ಟಿ ಕಮ್ಮರಿ ಮುಹುಡಂ ಜವತ್ನವಡಿ ಪಾಸಗೆ ಕಕ್ಕವಡುಮ್ಮುಹುಗ್ಗಮಂತರಲಗಡಂ . . . ಪಟ್ಟಿ ಕತ್ತರೆಗಳನಿಪ್ಪ ಜಟ್ಟಿಗರ ಬಿನ್ನಣಮೊಪ್ಪೆ ಕಡಂಗಿ ಕಾದಿದರ್ (ತ್ರಿಶ. ೨೬-೦೯). **ಲಗಡಿ** : ೨. ತಳಹತ್ತದಲಿ ತವಕಿಸುವ ಲಗಡಿಯಲಿ ಲಟಕಟಿಸುವಂತರಲಗಡಿಯಲಿ ಲಾಲಿಸುವ . . . ಬಿನ್ನಾಣದಲಿ ಹಣಗಿದರು (ಕುವ್ಯಾಕ. ೦೯-೯೩) ; ಸೆಳೆದು ಶಿರ್ರನೆ ತಿರುಗಿ ಲಗಡಿಯ ಲುಳಿಯ ಪಯಪಾಡಿನಲಿ ನೆಲಕಪ್ಪಳಿಸಿದೊಡೆ (ಅಕ್ರೂ. ೬-೬೮). **ಲಗುಡಿ** : ೩. ಕೋಲು ; ದೊಣ್ಣೆ : 'ಲಗುಡಿಗ' ಪರಾ. ೪. ಕೋಲುಕಾರ ; ವೇತ್ರಧರ : ಪೂಜೆ ಲಗುಡಿ ಭಾಯಿಪಯ್ಯ ಲಗುಡಿಗರ ಧುರ್ಯವಾಗಿ ತಮ್ಮ ಕಟಿಯಂ ಬಿಟ್ಟು ನರಸಿಂಘಯ್ಯನ ಮಗ ಸೋಮನಾಥಯ್ಯನು (ಶಾಇಇ. IX-i. ೦೦೬-೦೯ ; 1050). [< ಸಂ. ಲಗುಡ]

**ಲಗಡಿ** 'ಲಗಡ$_2$' ನೋ.

**ಲಗಡಿಸು** (ಕ್ರಿ). ೧. ಹೊಡೆ ; ಬಾರಿಸು ; ಲಗಾಯಿಸು : (?). ೨. ಮಲ್ಲಯುದ್ಧದಲ್ಲಿ ಲಗಡವೆಂಬ ಪಟ್ಟನ್ನು ಹಾಕು : ಬಿಗಿವ ಬಿಡಿಸುವ ಬಿಡಿಸಿದಾಕ್ಷಣ ಕೆಗೆವ . . . ಬಗಿವ ಬಳಸುವ ಬಂಧಗತಿಯಲಿ ಲಗಡಿಸುವ ಲೋಕೈಕವೀರರು ಹೊಕ್ಕು ಹಣಗಿದರು (ಕುವ್ಯಾಕ. ೬-೨೮) ; ಹೊಗುವ ಹೊಳಕುವ ಬಗಿವ ಬಾಗುವ ಲಗಡಿಸುವ ಲಾಗುಗಳ (ಅಂಬಿಕಾ. ೦೬-೨೨). [ಲಗಡ$_2$ + — ಇಸು$_3$]

**ಲಗಡು, ರಗಡ, ಲಗಡ$_1$, ಲಗಡೆ, ಲಗುಡ$_1$** (ನಾ). ಒಂದು ಮಾಂಸ ಭಕ್ಷಕ ಪಕ್ಷಿ ; ಗಿಡುಗ ; ಡೇಗೆ : ಒಬ್ಬರ ಕಂಡೊಬ್ಬರ ಮನದೊಳು ಕ್ರೋಧ ಹಬ್ಬಿತು ದೊರೆ ದೊರೆಗಳಿಗೆ ಕಬ್ಬಕ್ಕಿ ಗಿಳಿವಿಂಡು ಲಗಡು ಸಾಳುವ ನಾನು ತಬ್ಬಿಕೊಂಬರೆ ಬರುವಂತೆ (ಅಕುಶಾಂ. ೨-೦೦) ; ಲಗಡಿನಂತೆಱಗಿ

ಲಾಗಿಸುವ ಹೋರಾಟದ ವಿಗತಮಲ್ಲರುಗಳೊಬ್ಬದರು (ಸಂಪ. ೨೦-೯೩); ಪಕ್ಷಿಗಳ ಗೂಡು ಗುಂಪುಗಳ ಗುಯರ್ಗಡುವ ಗಿಡುಗ ಲಗಡು ಬಿಜ್ಜುಗಳಂ (ಸಗಂ. ೩೦-೭). **ರಗಡ** : ರಗಡನೆತ್ತಲು ರಾಯಗುಲಗೀಜಗಖಿಗಾವಳ ಯೆತ್ತ ಸಿಂಹದ ನೆಗೆತಮೆತ್ತಲು ಹರಿಣಪೋತಮದೆತ್ತ ಮಕಿಸಲು (ಶಂಶಾ. ೯೦-೨೦). **ಲಗಡ$_1$** : ಕುಕ್ಕುಭ ಲಗಡ ಸಲೆ ಕೂಕುಟಿಗ . . . ಕಬ್ಬಕ್ಕಿ ತುಬ್ಬಕ್ಕಿಗಳ ನೋಡಿದವು (ಮದೀಕೃ. ೩-೯); ಎರಗುವ ಲಗಡ ನಂದದೊಳಮರಸುಭಟರ ತಗುಲಿ ಮೊಗದೋರಿದವು ಬೆನ್ನಿಂ ಬೋಳೆಯಂಬುಗಳು (ಶಂಶಾ. ೦೭-೯). **ಲಗಡೆ** : ಲಗಡೆ ರಣಹದ್ದು ಸುಳಿವ ಕಾಳಿಂಗ ಹಂಸ ಚಕೋರನ ಬಳಗವೊಪ್ಪಿತು ವನದೊಳು (ಗೋಹಾಡು. ೩-೦೨). **ಲಗುಡ$_1$** : ಗಿಡುಗ ಲಗುಡ [ಶಾಶಂ. ಗಡು]ಗಳೆಸೆಯಲಲ್ಲಿ ವನಚರರಿಂದೆ ವನವೆುಸೆದುದು (ಕಬಕೃ. ೫೩-೨೨).

[ದೇ.॥ ತೆಲು. ಲಗುಡು./ಹಿಂ. ಮರಾ. ಲಗಡ್]

**ಲಗಡೆ** 'ಲಗಡು' ನೋ.

**ಲಗತ** (ನಾ). ಲಯಬದ್ಧವಾದ ಕುಣಿತ, —ನೃತ್ಯ : ಪುಗಿಸೆಳಸಂಜೆಯೊಳ್ ಸುಟಿವ ಪಾರಿವಮಂ ಸಖಿ ಗೂಡಿನೊಳ್ ಮಯೂರಿಗೆ ಲಗತಂಗಳಂ ಕಲಿಸು (ಲೀಲಾವ. ೦೯-೦೦೯). [< ಸಂ. ಲಯಗತ ?]

**ಲಗತಿಡು** (ಕ್ರಿ). ಜೋಡಿಸು ; ಸೇರಿಸು ; ಹೊಂದಿಸು : ಈ ಎಲ್ಲ ಖಲಮಗಳಿಗೆ ಬೇಕಾದ ಪುರಾವೆಯನ್ನು ಇಲ್ಲಿ ಲಗತಿಟ್ಟು ಕಳಿಸಿದೆ (ಜಪಾ. ೬೩). [ಲಗತು (<ಲಗತ್ತು)+ಇಡು$_1$]

**ಲಗತು** 'ಲಗತ್ತು' ನೋ.

**ಲಗತ್ತಿಸು** (ಕ್ರಿ). =ಲಗತಿಡು : ಒಂದು ಛಾಯಾಗ್ರಾಹಕಯಂತ್ರವನ್ನು ದೂರದರ್ಶಕಕ್ಕೆ ಲಗತ್ತಿಸಿ ಛಾಯಾಚಿತ್ರ ಹಿಡಿದರೆ ಲೆಕ್ಕವಿಲ್ಲದಷ್ಟು ನಕ್ಷತ್ರಗಳನ್ನು ನೋಡಬಹುದು (ಆಕಾಶ. ೩೨); ನಿರೂಪದ ನಕಲೊಂದನ್ನು ಈ ಕಾಗದದೊಡನೆ ಲಗತ್ತಿಸಿದ್ದೇನೆ (ತ್ರಿವರು. ೩೬೯).

[ಲಗತ್ತು + -ಇಸು$_3$]

**ಲಗತ್ತು**, ಲಗತು (ನಾ). ೧. ಜೋಡಣೆ ; ಹೊಂದಿಕೆ ; ಸೇರಿಕೆ : ಅದಾ ನಮ್ಮ ಅಳಿಯನಿಗೂ ನಿಮಗೂ ಲಗತ್ತು. ಇನ್ನು ಕಾಸೀಮಂದ್ಯಾ ಕರೀಮಂದು ಯಾವುದೂ ಸಂಬಂಧ ಇಲ್ಲ (ಸಾರುದಾ. ೦೦೯). **ಲಗತು** : ೨. ಹತ್ತಿರ ; ಸಮೀಪ : ಇಲ್ಲೆ ಲಗತಿನಾಗ ಇರತಾರು (ಜನಾ. ೯೯).

**ಲಗತ್ತಾಗು**=ಹೊಂದಿಕೆಯಾಗು ; ಜೋಡಣೆಯಾಗು ; ಸೇರಿಕೆಯಾಗು : ಆ ನೌಕರಿಗೆ ಪುರಾವಿನಲ್ಲಿ ಲಗತ್ತಾಗಿದ್ದ ಕೆಲಸಗಳು ಈಗ ಮಾಡಲ್ಪಡುತ್ತಿರಲಿ (ಗ್ರಾಮಶ. ೬೯). [←ಮರಾ. ಲಗತ್]

**ಲಗರಗೋಲು** (ನಾ). ನಂದಿಕೋಲು (?) : ವೃಷಭನಾಟಕ್ಕೆ ಲಗರಗೋಲನಿತ್ತು ನೀವು ಪಶುಪತಿಯ ಮುಂದಣ ಎಸೆವ ಅಸಾದಿಗಳೀವೆಂದು ಶೀಲವ ಬಸವಣ್ಣನಿಟ್ಟು ಬೆರಸಿದ (ಬಸ್ವರಾ. ೯-೪೦).

[?+ಕೋಲು$_1$(<ಕೋಲ್$_1$)]

**ಲಗಳ** 'ಲಗಳೆ' ನೋ.

**ಲಗಳಚಣ್ಣ** (ನಾ). ಸಡಿಲವಾದ ಚಲ್ಲಣ, - ಪಾಯಿಜಾಮಾ : (೪).

[ಲಗಳ$_1$+ಚಣ್ಣ (<ಚಲ್ಲಣ)]

**ಲಗಳೆ**, ಲಗಳ (ನಾ). ನೀರು ಮೊದಲಾದ ದ್ರವಪದಾರ್ಥಗಳನ್ನು ತುಂಬುವ ದೊಡ್ಡ ಚರ್ಮದ ಚೀಲ ; ಪಕಾಲಿ : ಹೊಗೆಯ ಕುಡಿದೆಲೆಯನಗಿವ ಬಾಯತ್ ಸಿಂದಿಯ ಲಗಳೆಯಂತಿಹುದು (ಸರ್ವಜ್ಞ. ೦೩೦೬); ಶಿಶುನಾಳಧೀಶನ ದಿವ್ಯಜ್ಞಾನದ ಲಗಳೆ ಹೊತ್ತು ತಿರುಗುವ ಕಾಯಕವು ತನ್ನದು (ಶಂಶಿ. ೭೯ ಶಿಶುನಾಳ ಶಂಕರು). 'ಸಗ್ಗಳೆ' ಪರಾ. **ಲಗಳ** : ಎರಡೆರಡು ಮೂರುಮೂರು ಮೈಲಿನ ಮೇಲಿಂದ ಲಗಳಗಳಲ್ಲಿ ಇಲ್ಲವೆ ಧಕ್ಕಡಿಗಳಲ್ಲಿ ನೀರು ತರುತ್ತಿರುತ್ತಾರೆ (ಶಾಶ. ೨೩೩). [?]

**ಲಗಾಟ**, ಲಕೋಟಿ, ಲಗಾಟ$_1$, ಲಘಾಟಿ (ನಾ). ೧. ತಲೆ ಕೆಳಗು ಮಾಡಿ, ಕಾಲು ಮೇಲು ಮಾಡಿ ನೆಗೆದು ಮತ್ತೆ ನಿಲ್ಲುವುದು; ಲಾಗ; ಪಲ್ಟಿ : ಲಖಿತಲಲಾಟದೋರದಿರಲೇಗೈವೆ ಎಷ್ಟು ಲಗಾಟವ ಹೊಡೆವೆ (ಜಂತಾಶ. ೦೭೦-೯೦). ೨. (ಆಲಂ) ಅನುತ್ತೀರ್ಣ; ನಪಾಸು; ಫೇಲು: ಮ್ಯಾಟ್ರಿಕ್‌ಪರೀಕ್ಷೆಯಲ್ಲಿ ಪ್ರಥಮ ಲಗಾಟವಾದ ಮೇಲೆ . . . ಕಾನಾದರೂ ಶಾಲೆಯ ಲಾಯಿಫ್‌ಮೆಂಬರ ಎಂಬಂತೆ ವಸಂತ ವರ್ತಿಸತೊಡಗಿದನು (ಗಂಪೂದು. ೬೦). **ಲಕೋಟಿ** : ೧. ರಣಸೂರಬಾಬೂಸಾಹೇಬ ಹೊಡೆದ ಲಕೋಟಿ ಆದ ಸುಮಾರ (ಕೃಬಂಶ. ೬೩). **ಲಗಾಟ$_1$**. **ಲಘಾಟಿ**: ೧. ಲಗು ಬೇರಣ್ಣಾ ಲಗುಬೇರಾ ಚಲ್ ಲಘಾಟಿ ಕೊರವರು ಬರುತಾರೆ (ಹುಟ್ಟಿಹ. ೯೬).

**ಲಗಾಟಹಾಕು**, **ಲಗಾಟಿಹಾಕು**=೧. ಲಾಗಹಾಕು ; ಪಲ್ಟಿಹೊಡೆ. ೨. (ಆಲಂ) ಸಾಯು ; ಮರಣಹೊಂದು : ಅವಳಾದರೋ ತುಂಬ ಮುದುಕಿ, ಯಾವಾಗ ಲಗಾಟಹಾಕುತ್ತಾಳೆ ಎಂಬುದನ್ನು ತಿಳಿಯಲು ಅಸಾಧ್ಯ (ಶಿದೋಣಿ. ೨). ೩. ಅಯಶಸ್ವಿಯಾಗು; ಅನುತ್ತೀರ್ಣವಾಗು; ನಪಾಸಾಗು: ಕನ್ನಡ ನಾಲ್ಕನೆ ಇಯತ್ತೆಯಲ್ಲೇ ಮೂರುಸರತಿ ಲಗಾಟ ಹಾಕಿ ಸಾಲೆ ಬಿಟ್ಟು ಈಗ ಅಂಗಡಿಯಲ್ಲಿ ಕೂಡ್ರುತ್ತಾನೆ (ಮೂರುದಾ. ೨೩೪). **ಲಗಾಟಹೊಡೆ**, **ಲಗಾಟಿಹೊಡೆ**=ಲಗಾಟಹಾಕು ೧ : ಗಿಮಿ ಗಿಮಿ ಹಸಿರು ಹುಲ್ಲ ಮೇಲೆ ಲಗಾಟಹೊಡೆಯಬೇಕೆಂದೆನಿಸಿತು (ವಿಶಮನ. ೯೩) ; ಮಂದೀ ಕುಂಬೀ ಮ್ಯಾಲ ಏಟ ದಿನಾ ಲಗಾಟಹೊಡೆಯೋದು ? (ಶಾಶಂ. ೯೯).

[≤ ಲಾಗು$_1$ + ಆಟ]

**ಲಗಾಟ$_1$** 'ಲಗಾಟ' ನೋ.

**ಲಗಾಟ$_2$** (ನಾ). ಜಗಳಗಂಟಿ ಹಾಗೂ ದುಷ್ಟಳಾದ ಹೆಂಗಸು : (೪)[?]

**ಲಗಾಡಿ** (ನಾ). ಕೇಡು ; ನಾಶ ; ನಷ್ಟ : 'ಲಗಾಡಿತೆಗೆ' ಪರಾ.

[←ತುಳು. ಲಗಾಡ್, ಲಗಾಡಿ]

**ಲಗಾಡಿತೆಗೆ** (ಕ್ರಿ). ಹಾಳುಮಾಡು : ನಾಶಮಾಡು : ಕಳೆ : ಆಸ್ತಿ ಹಣಗಳನ್ನು ಲಗಾಡಿತೆಗೆಯಲು ಏನೇನು ಬೇಕೋ ಅದಕ್ಕೆ ತಕ್ಕ ಬರವಣಿಗೆ ಹೇಳಿಕೊಡುತ್ತಿದ್ದರು (ಹುಮುಖ. ೦೭); ನಮ್ಮ ಮಾಧವನು ಇದ್ದುದನ್ನು ಲಗಾಡಿತೆಗೆದ ಮೇಲೆ . . . ಎಲ್ಲವನ್ನು ಹಂಚಿಕೊಟ್ಟೆ (ಶಾರುದಾ. ೦೬೩); ಬೂದಿಕಟ್ಟೆದೇವರು ಸುಟ್ಟು ಲಗಾಡಿತೆಗೆದ (ಹುಳಿಕ್ಕ. ೯೯). [ಲಗಾಡಿ+ತೆಗೆ$_1$]

**ಲಗಾಮು** (ನಾ). ೧. ಕುದುರೆಯನ್ನು ಹಿಡಿತದಲ್ಲಿಟ್ಟುಕೊಳ್ಳಲು, ಅದರ ಬಾಯಲ್ಲಿ ಸಿಕ್ಕಿಸುವ ಕಬ್ಬಿಣದ ತುಂಡು ಮತ್ತು ಅದಕ್ಕೆ ಕಟ್ಟುವ ಚರ್ಮದ ಪಟ್ಟಿ; ವಾಘೆ : ತಡಿ ಸುಖಾಸನ ಸುಗತಿ ಪೊಯಾಪುತೆ ಜನಾಖಿ ಲಗಾಮು . . . ಮಣಿಲಂಬಳದ ಹಯ ಮಿಗೆ ಗುಡಿಯಿಜಿದು ಪೊಗವೆತ್ತಿ ನರ್ತಿಸಿತಸುರನಿದಿರಿನಲಿ (ಕೊರರಾ. ೬-೨೯-೦೨); ರಥದ ಅಲಂಕಾರಕ್ಕೆ . . . ೪ ಬೆಳ್ಳಿಮುಲಾಮಿನ ಲಗಾಮು ಸಾರಥಿ ಕುದುರೆಗೆ (ಎಶಿ. XIV, ಮಂಶನ. ೨೯೨-ಕೃಟಿ,೦೯೨ ; 1847); ಅದರ ಲಗಾಮಿಗೆ ಕೈಹಾಕಲು ಅದು ಗರ್ರನೆ ತಿರುಗಿ ಹಿಂಗಾಲು ಜಾಡಿಸಿ ಕೊಸರಿಕೊಂಡು ಓಡಿ ಹೋಯಿತು (ಹುಂಜಯ. ೯-೬೯); ತುಂಟುಕುದುರೆಗೆ ಗಂಟುಲಗಾಮು (ಗಾದೆ). ೨. (ಆಲಂ) ಅಂಕೆ; ಹತೋಟಿ; ಹಿಡಿತ; ನಿರ್ಬಂಧ : ಈಗವನ ಬುದ್ಧಿಗೆ ಲಗಾಮು ಇಲ್ಲದಾಗಿದೆ (ತ್ಯಾಗಜು. ೭೦); "ನಿನ್ನ ನಾಲಗೇಗೆ ಲಗಾಮು ಐತಾ ?" "ನೀವು ಅಕ್ತೀರಾ, ಲಗಾಮು ?" (ಕಂಗಾ. ೦೯೯).

[←ಪಾರ. ಹಿಂ. ಮರಾ. ಲಗಾಮ್]

**ಲಗಾಯಿಸು** (ಕ್ರಿ). ೧. ಕೂಡಿಸು; ಜೋಡಿಸು; ಸೇರಿಸು : (೪). ೨. (ಆಲಂ) ಹೊಡೆ; ಬಾರಿಸು; ಪೆಟ್ಟುಕೊಡು : ಹೆಚ್ಚು ಮಾತನಾಡಿದರೆ ಒಂದು ಲಗಾಯಿಸುತ್ತೇನೆ ನೋಡು (ರೂಢಿ). ೩. ತಿನ್ನು; ನುಂಗು : ಸೀಬೆಯ ಹಣ್ಣು ಕೊಡುತ್ತಾನೆ. ಲಗಾಯಿಸು (ಪಡಿದಾ. I ೩೨೩). ೪. ಒತ್ತಿ ಹೇಳು ; ಗಟ್ಟಿಯಾಗಿ ಉಚ್ಚರಿಸು : ಹಲೊ ಎನ್ನುವಲ್ಲಿ 'ಲ'ವತ್ತು

ಲಗಾಯಿಸಿ ಕೂಗಿದ್ದು ಜೋಡಿದಾರರಿಗೆ ಅನುಕೂಲವಾಯಿತ್ತು (ಕಪಮಹ. ೯೯).
[ಲಗಾ₀ (P ← ಹಿಂ. ಲಗಾನಾ) + –ಇಸು₁./ತುಳು. ಲಗಾಸ್]

**ಲಗಾವು** (ನಾ). ಸೇರುವಿಕೆ ; ಹೊಂದಿಕೆ ; ಲಗತ್ತು₁ : ಗ್ರಾಮನೌಕರಿಗೆ ಅಥವಾ ನೌಕರಿಗಳಿಗೆ ಲಗಾವಾಗಬೇಕಾದುದಿಲ್ಲವೆಂದು ಸರ್ಕಾರಿ ಗೆಜೆಟ್ಟಿನಲ್ಲಿ . . . ಸರ್ಕಾರದವರು ವಿನಾಯಿಸಬಹುದು (ಗ್ರಾಮಾಳ. ೬೩).

**ಲಗಾವಾಗು** = ಸರಿಹೊಂದು ; ಹೊಂದಿಕೆಯಾಗು : ಸೀತೆಗೂ ಕೂಡ ಅದೇ ಪ್ರಶ್ನೋತ್ತರ ಲಗಾವಾಗದಿದ್ದೀತೇ ? (ಮುಂಕೆಶ್ರ. ೨೩೦).
[← ಹಿಂ. ಮರಾ. ಲಗಾವ್]

**ಲಗಿಮ** (ನಾ). ೧. ಅಲ್ಪತೆ; ಲಘುತ್ವ. ೨. ಅಲ್ಪನಾದವನು ; ಹೀನ : ಸುಗುಣ ಗುಣಗಳನೆಣಿಸಿ ಸಂತೋಷಗೊಳುವಂತೆ ಲಗಿಮನರಿವನೆ (ವಿಂಶಾರಾ. ೪-೦೪-೬). [< ಸಂ. ಲಘಿಮನ್]

**ಲಗಿಸು** (ಕ್ರಿ). ಯೋಜಿಸು ; ಸಿದ್ಧಪಡಿಸು (?) : ಕಾಳಗಾವುಣ್ಣನ ತಮ್ಮ ಲೆಂಕರಾಯನಂ ಕರೆದು ವಿಷ್ಣುವರ್ದ್ಧನ ಹೊಯ್ಸಳದೇವಂ ಮುಂಗೊಳುವಾಯದ ಕಾಳಗಕ ಲಗಿಸಿ ಬೆಸಂಬೇಳೆ ಲೆಂಕರಾಯಂ ಮಾಡಿದ ಪರಾಕ್ರಮೋನ್ನತಿಯಂದೆಂತೆಂದಡ (ಎಕ. V. ಬೇಲೂರು. ೨೦೨-೭; 1138).
[P ಇದು 'ಲಾಗಿಸು' ಎಂಬುದರ ಅಪಲಿಖಿತವಿರಬಹುದು]

**ಲಗು₁**, ಲಗೂ₁ (ನಾ). ೧. ಹಗುರ; ಭಾರವಿಲ್ಲದುದು : "ಲಗು–ಲಘು = ಶೀಘ್ರ, ಹಗುರ" (ಕರ್ನ್ಯಕೋ. ೩೬). 'ಲಗುಗೆಯ್' ಪರಾ. ೨. ಸರಳವಾದುದು; ಸುಲಭವಾದುದು : ಲಗುವಿಂ ಪಾಡಲುವಾಯ್ದು ನಾಳ್ನುಡಿಗಳಂ ಲಾಲಿತ್ಯದಿಂ . . . ಆಗಿಸುವನೊರ್ವಂ ಕಬ್ಬಿಗಂ (ಕಂಕಕ. ೩೩-೪). ೩. ಅವಸರ; ತ್ವರೆ. ೪. ಚೇತರಿಸಿಕೊಳ್ಳುವಿಕೆ ; ಆರೋಗ್ಯ ಸುಧಾರಿಸುವಿಕೆ : (೬). ಲಗೂ₁ : ೩. 'ಲಗೂನೆ' ಪರಾ.

**ಲಗುಬಿಗಿ** = ಸರಳತೆ ಮತ್ತು ಬಿಗುಮಾನ.—ಕಾಠಿಣ್ಯ : ಮೊದಲನೆಯ ಪತ್ರವು ನಮ್ಮ ಲಗುಬಿಗಿಯನ್ನು ನೋಡುವ ಪತ್ರ (ಶ್ರೀಅಡು.೦೯೩).
**ಲಗುಬಿಗು** = ಲಗುಬಿಗಿ : ಮೊದಲು ಲಗುಬಿಗು ನೋಡಿಕೊಂಡು ಆಮೇಲೆ ಕೆಲಸ ಮಾಡಬೇಕು (ಜೂಠ). **ಲಗುಮಾಡು** = ಅವಸರ ಪಡು ; ತ್ವರೆಮಾಡು : ಒಲ್ಲೆ ನಾ ಭಾವಣ್ಣ, ಸಣ್ಣವನಿದ್ದು ನೀ ಲಗುಮಾಡದೆ (ಜಾಹುಜಾ. ೩೨-೨೨). [< ಸಂ. ಲಘು]

**ಲಗು₂**, ಲಗೂ₂ (ಅ). ಬೇಗನೆ ; ಶೀಘ್ರವಾಗಿ : ಅದಷ್ಟು ಲಗು ಬಳಸದಿದ್ದರೆ ಹಳಸಿ, ಹದಗೆಟ್ಟು, ಹಾಳಾಗಿ ಹೋಗಬಹುದು (ಕಾನಾರ. ೦೦೩); ಒಂದಿನಿತು ಲಗು ನಡಿ (ಕಂಡುಬಿ. ೩೨). **ಲಗೂ₂** : ಏನು ಗೌಡ್ರು, ಎಷ್ಟು ಲಗೂ ಬಂದ್ರಿ (ಬಂಕೆಕು. ೦೩) ; ಅದಷ್ಟು ಲಗೂ ತಿಳಿಸೋದು ನಿನಗೂ ಹಿತ (ಕಂಂ. ೩೦).

ಲಗುಲಗು, ಲಗೂಲಗೂ (ದ್ವಿರುಕ್ತಿ) : ನೂರಾಎಂಟು ಸಾರೆ . . . ಎಂದೆನ್ನಬೇಕು. ಬಹಳ ಲಗುಲಗು (ಕುಂಹಿಂ. ೨೭) ; ಹೋಗರಿ . . . ಲಗೂಲಗೂ ಮಾಡಿಕೊಂಡು ಬರ್ರಿ (ಧಕಂ. ೩೬). [< ಲಗು₁]

**ಲಗುಗೆಯ್** (ಕ್ರಿ). (ಅಲಂ) ಹಗುರವಾಗಿ ಭಾವಿಸು; ಕಡೆಗಣಿಸು ; ಉಪೇಕ್ಷಿಸು : ಲಗುಗೆಯ್ಯುವೆನ್ನ ಬಿನ್ನಪವ ಲಾಲಿಪುದೆಂದು ಸುಗುಣಾಂಗೆ ಬಿನ್ನಯಿಸಿದಳು (ವೋಕಂಕ. ೬-೨೩). [ಲಗು₁ + ಕೆಯ್₁]

**ಲಗುಡ₁** ' ಲಗಡು ' ನೋ.

**ಲಗುಡ₂** (ನಾ). ದೊಣ್ಣೆ ; ಬಡಿಗೆ : "ಲಗುಡ – ಲಕುಟ = ದೊಣ್ಣೆ" (ಕರ್ನ್ಯಕೋ. ೩೪); ನೇವಾಪಿ ವ್ಯಾಯಾಮಲಗುಡವ ಹಿಡಿಯರಿ ಮಾನವರೆಚ್ಚರಿಕೆ (ಬ್ರಹ್ಮಕ. ೨೨೦) ; ಮೊದಮೊದಲು ಮೊನಚಾದ ಲಗುಡ (ಕೋಲು)ದಿಂದ ಭೂಮಿಯಲ್ಲಿ ಹಳ್ಳ ಕಡಿತ್ತಿ ಕಾಳನ್ನು ಬಿತ್ತಲಾಯಿತು (ಕಾಕಂ. ೧ ಮುಮ್ಮು).
[ಸಂ.]

**ಲಗುಡತಾಡನೆ** (ನಾ). ದೊಣ್ಣೆಯ ಪೆಟ್ಟು ; ಕೋಲಿನ ಹೊಡೆತ. — ಪೆಟ್ಟು; ಜೋಳದ ಕಟ್ಟಂ ನೀರಂಬಲಿಯುಂ ಪ್ರತಿದಿನಂ ಕುಡುವುದದು ಹೆಚ್ಚು ಕಡಮೆಯಾಗೆ ಲಗುಡತಾಡನೆಯಂ ಪಡೆವೆನೆಂದು ನಿಯಮಿಸೆ (ರಾಜಾವ. ೬೨).
[ಸಂ. ಲಗುಡತಾಡನ]

**ಲಗುಡಪಾತ** (ನಾ). = ಲಗುಡತಾಡನೆ : ನಾಲ್ಕನೆಯೊಳ್ ರವಿ ನಿಧನಂ ಮನುಜಂಗೆ ಲಗುಡಪಾತದಿನಕ್ಕುಂ (ಜಾಕಂ. ೨೬-೦೦). [ಸಂ.]

**ಲಗುಡಿ** ' ಲಗಡು₂ ' ನೋ.

**ಲಗುಡಿಗ** (ನಾ). ಕೋಲುಕಾರ ; ವೇತ್ರಧರ ; ಒನ್ದು ಪೊಲ್ ಲಗುಡಿ ಭಾಯಿಪಯ್ಯ ಲಗುಡಿಗರ ಧರ್ಮ್ಮವಾಗಿ ತಮ್ಮ ತೆಱೆಯಂ ಬಿಟ್ಟ ನರಸಿಂಘಯ್ಯನ ಮಗ ಸೋಮನಾಥಯ್ಯನು (ಎಕಇ. IX–i. ೦೦೭-೦೯ ; 1050).
[ಲಗುಡಿ (<. ಲಗಡು₂) + — ಗ₂]

**ಲಗುಣೆ** (ನಾ). ಮಲ್ಲಯುದ್ಧದ ಒಂದು ಪಟ್ಟು: ಪಾಯಕರ ದಂಡೆಯಲಿ ಲಗುಣೆಯು ಲಾಯಿಯೊಳಗೆ ನವಾಯಿ ಬಿನ್ನಾಣದಲಿ . . . ಆಯುತವನ ಜಾದಿಹನೆ ಮಲ್ಲನೆಂ (ಕುಮ್ಮಾ. ಸ. ಶ್ರಿ. ೦-೬೩). ' ಲಗಡು₂ ' ಪರಾ.
[ಸಂ. ಲಗುಡ]

**ಲಗುನ**, ಲಗ್ಗ₁ (ನಾ). ೧. ಮದುವೆ : "ಲಗುನಮನೆ ಲಗ್ನಮಕ್ಕುಂ" (ಕಕಂ. ೯೮) ; ಮಾಯದ ಕೈಯಲ್ಲಿ ಓಲೆ ಕಂಠವ ಕೊಟ್ಟರೆ ಲಗುನವಿಗುನವ ಬರೆಯಿತ್ತು ನೋಡಾ (ಅವಕ. ೯-೩೬) ; ಲಗ್ನ – ಲಗುನ, ಲಕ್ಷ್ಮಣ – ಲಕುಮಣ (ಕಮರ. ೨೩೯ ಕ್ರಿಯೋ). ೨. ಶುಭಮುಹೂರ್ತ : ದಶರಥ ಜನಪನಲ್ಲಿ ಪಯಣ ಲಗುನದೊಳನುವಿನಿಂ ಪೊರಮಟ್ಟನುರೆ ಸಾಕೇತಪುರಿಗಾಗಿ (ರಾಮಾಹಂ. ೦-೩-೦). ಲಗ್ಗ₁ : ೧. ಕೊಂಡುದಿಲ್ಲ ಕೊಟ್ಟುದಿಲ್ಲ ಲಗ್ಗವಿಲ್ಲ ವಿಲಗ್ಗವಿಲ್ಲ (ಬಸವ. ೪. ೦೨೦೯). ೩. ಸಂಬಂಧ ; ಸಂಪರ್ಕ : ಯಿ ಹೊಂನು ಭತ್ತವಲ್ಲದೆ ಮತ್ತಾವ ಸೀಮೆ ಸಿದ್ಧಾಯದ ಹೊಂನು ಭತ್ತದ ಲಗ್ಗವಿಲ್ಲ (ಎಕಇ. IX–ii. ೯೬೦-೨೨ ; 1465) ; ಮಾಯೆಯ ಲಗ್ಗವನು ಪರಿಹರಿಸಿದೆನು ಸುಖಿಯಾದೆ ನಾನು (ಶರಾಗ. ೦೦-೩೬-೩೬) ; ಶರಣರ ದ್ವಿತಯಾಕ್ಷರವ ಲಗ್ಗವನಾಂತ ಚರಣಾನ್ವಿತ ಕೃಷ್ಣ ಜಯತು (ಮೋಹತ. ೯೦-೦೬). [< ಸಂ. ಲಗ್ನ]

**ಲಗುನಿ** (ನಾ). ಅನುರಕ್ತೆ : ಜಗವಂದ್ಯಗೆ ಬೇಟವ ಮಾಡಿದೆ . . . ಗಗನಗಿರಿಯ ಮೇಲಿರ್ದಹನೆಂದಡೆ ಲಗುನಿಯಾಗಿ ನಾನಜಿಸುತ ಬಂದೆನು ಅಘಹರ ಕರುಣಿಸು ನಿಪುಣಾನೊಲಿದೆನು (ಮಹಾರಿ. ೩. ೯೬-೨೩೩).
[ಲಗುನ + — ಇ₂]

**ಲಗುಬಗೆ** (ನಾ). ಅವಸರ ; ಆತುರ ; ತ್ವರೆ : ಎಂಥ ಲಗುಬಗೆಯಿಂದ ಕಣ್ಮರೆ ಸಂದೆಯೋ (ಕಾವುಜಾ. ೯೯-೨) ; ಲಗುಬಗೆಯಿಂದ ಊಟ ತೀರಿಸಿಕೊಂಡು ಕೋಟು ಟೊಪ್ಪಿಗೆ ಹಾಕಿಕೊಂಡು ಹೊರಟೆ (ಮುಂಗಾಳು. ೯೩).
[ಲಗು₁ + ಬಗೆ₃./ತುಳು. ಲಗಬಗ./ಮರಾ. ಲಗ್‌ಬಗ್]

**ಲಗುಬದರಿ** (ನಾ). ಒಂದು ಬಗೆಯ ಸಸ್ಯ: "ಮಧುರಃ – ಬೀಯವರೆ, ಲಗುಬದರಿ, ಕೆಂಗಬ್ಬು" (೬ಕಂ. ೦೦೯). [< ಸಂ. ಲಘುಬದರೀ]

**ಲಗೂ₁** ' ಲಗು₁ ' ನೋ.

**ಲಗೂ₂** ' ಲಗು₂ ' ನೋ.

**ಲಗೂನೆ** (ಅ). ಬೇಗನೆ ; ಶೀಘ್ರವಾಗಿ ; ತಟ್ಟನೆ ; ಬಸ್ಸು ಬೇಗ ಸಿಕ್ಕಿತು. ಹಾಗಾಗಿ ಲಗೂನೆ ಬರುವುದಕ್ಕಾಯಿತ್ತು (ಕರ್ನ್ಯಸ. ೨೩೯); ಬಡವರ ಮದುವೆ ಲಗೂನೆ ಹ್ಯಾಂಗ ಆದೀತು ಹೇಳು ? (ಧಕಂ. ೨೦).
[ಲಗೂ₁ (< ಲಗು₁) + – ಅನೆ₁]

**ಲಗೋರಿ** (ನಾ). ಒಂದು ಬಗೆಯ ಲಗ್ಗೆ ಚೆಂಡಾಟ : ಓಣಿಯ ಹುಡುಗರು ಆಟದ ಬಯಲಿನಲ್ಲಿ ಕೂಡಿದರು. ಲಗೋರಿಆಟ ಆಡಲು ಸಿದ್ಧಯಿಸಿದರು (ಕಕಪ. ೯-೯೭). ' ಲಗ್ಗೆ ' ಪರಾ.
[← ಮರಾ. ಲಗೋರೀ]

**ಲಗ್ಗ₁** ' ಲಗುನ ' ನೋ.

**ಲಗ್ಗ₂** ' ಲಗ್ಗೆ ' ನೋ.

**ಲಗ್ಗಿಕ, ಲಗ್ಗಿಗ** (ನಾ). ಲಗ್ನವನ್ನು ಹೇಳುವವನು ; ಜ್ಯೋತಿಷಿ ; ನೈಮಿತ್ತಿಕ : "ಲಗ್ಗಿಕರ್ ಲಾಗ್ನಿಕರ್ಗಳ್" (ಶಬ್ದಾ. ೪೭) ; ನತ್ವಕ್ಕೆ ಗತ್ವಂ-ಅಗ್ನಿ-ಅಗ್ಗಿ ; ಲಾಗ್ನಿಕ-ಲಗ್ಗಿಕ, ಲಗ್ಗಿಗ (ಶಬ್ದ. ೨೬೬ ವೃತ್ತಿ). **ಲಗ್ಗಿಗ :** ಅರಯುತ್ತ ಲಗ್ಗಿಗರುಸಿರಲು ಕೇಳುತ್ತ್ತವಗಲಾಗೆ (ಶಮಾ. ೨-೬೦) ; ಲಾಗ್ನಿಕ-ಲಗ್ಗಿಗ (ಶಬ್ದಾನು. ೧೬೦ ವೃತ್ತಿ). [<ಸಂ. ಲಾಗ್ನಿಕ]

**ಲಗ್ಗಿಗ** ' ಲಗ್ಗಿಕ ' ನೋ.

**ಲಗ್ಗಿಸು** (ಕ್ರಿ). ಮುತ್ತಿಗೆ ಹಾಕು ; ಆಕ್ರಮಣ ಮಾಡು : ಸುರಕುಲಂ . . . ನಡೆತಂದು ಪರಿದು ನೆರೆದು ಮುಂಗುಡಿಗೆಡದೆ ಸಂಗರಭೂಮಿಯೊಳೊಡ್ಡಿ ನಿಂದೆಡ್ಡವಾಗಿ ಲಗ್ಗಿಸಿ ಮೊಗ್ಗರಿಸುತ್ತೊಗ್ಗುಗೆಡದೆ ನಡೆಗೋಂಟೆಯಂತೆ ನೆಲೆವೆರ್ಚಿ ನಿಂದು (೧೦೪. ೩-೩೩ ವ).

[ಲಗ್ಗೆ + - ಇಸು₃]

**ಲಗ್ಗೆ, ಲಗ್ಗ₂, ಲೆಗ್ಗೆ** (ನಾ). ೧. ಮುತ್ತಿಗೆ : ದಾಳಿ ; ಆಕ್ರಮಣ : "ಲಗ್ಗೆಯ ದಾಳಿಯೆನಿಕ್ಕುಂ" (ಧಾರಾ. ೧೭) : ಮೆಯ್ವೆತ್ತಿ ಲಗ್ಗೆಯಂ ಮೂಱುಪ್ಪಳ್ಗಳಂ ದುರ್ಗದವರ್ಗಳ್ ಸುಗರ್ಮಾಡೆ ನಾಡೆಯುಂ ಸಿಗ್ಗಾಗಿ ಲಗ್ಗೆಯಂ ತೆಗೆಸಿ (ಶಾಕ್ಯಕ. ೬-೦೪೦ ವ) ; ಮೊದಲ ಲಗ್ಗೆಗೆ ಮಹಾಬಲ ಸಾವಿರತೇರು ನೆಗ್ಗಿದವೊಂದುನಿಮಿಷದಲಿ (ಕುಮಾರ. ೬-೪೯) ; ತುಡುಕಿ ಲಗ್ಗೆಯನೇಱೆದು ವಜ್ರೇರರ್ಗ ಕಡುಗಲಿ ಖಾನ ಬೆಸಸಿದ (ಕಂಪಿ. ೦೪-೪೩). ೨. ಕೋಲಾಹಲ ; ಗದ್ದಲ ; ಗಲಭೆ : ಲಗ್ಗೆಯ ರವವ ನಿಲಿಸಿದನುಳಿ ಘನಗಂಭೀರನಾದದಲಿ (ಕುಮಾರ. ೧೭-೩) ; ಲಗ್ಗೆ ಮಸಗಿತು ಕೂಡೆ ರಕ್ಕಸ ಮೊಗ್ಗರದ ಮುಂಬಿನಲಿ (ತೊರವೆ. ೬-೨೦-೩೦). ೩. ಆರ್ಭಟ : ನೊರೆ ಬುದುಬುದವನೊಡೆಗಲಸಿ ಕದಡಿ ಕಂಗಳವಟ್ಟು ಲಹರಿಗಳ ಲಗ್ಗೆಯಿಂದೆಸೆವ ನದಿಯೊಪ್ಪವನದೇವೊಗಳ್ವೆನು (ಹರಿ. ೧೦-೨೯). ೪. (ಆಕ್ರಮಣದ ಸಮಯದಲ್ಲಿ ಬಾರಿಸುವ) ಹಲವು ವಾದ್ಯಗಳ ಮೇಳ : "ಮೊಟಗೆ ಬಹುವಾದ್ಯಮದು ಲಗ್ಗೆಯಕ್ಕುಂ" (ಮಂಗರಾ. ೬೩-೨೭) : ತಂಬಟದ ಸೂಳಿನ ಲಗ್ಗೆಯೆಡವಿಡದೆ ಚೀಱಿದವು (ಹರಿ. ೩-೦೯) ; ಉಲಿವ ಕೈವಾರಿಗಳ ಲಗ್ಗೆಯ ಬಲಿವ ತಂಬಟಕೋಟಿಗಳ . . . ಅಬ್ಬರಣೆ ಮಿಗೆ ಕೈಕೊಂಡ ರಥಿಬಳರು (ಕುಮಾರ. ೯-೩೬) ; ಕಿತ್ತಿರಿಯ ತಂಬಟದ ಲಗ್ಗೆಯ . . . ಭಾರಿಯ ಘೋರಘೋಷದಲಿ (ತೊರವೆ. ೩-೭-೩) ; ಹೆಗ್ಗಡಲ ತೆರೆಯಂತೆ ಮೊಳಗುವ ಲಗ್ಗೆಗಳಲೋರಂತೆ ಸುಭಟರ . . . ಸಿಂಹನಾದದಲಿ (ಶಬರ. ೧೦-೩೨-೪೬). ೫. ಮಲ್ಲಿಯುದ್ಧದ ಒಂದು ಪಟ್ಟು.—ವರಸೆ : ಉಬ್ಬಸಮಾದ ತೋರಹತ್ತಕ್ಕೆ ತಗುಳ್ದು ಪತ್ತಿಸುವ ಮಾನ್ಯೆಗೋಳಮೆನಿಪ್ಪ ಡೊಕ್ಕರಕ್ಕೆಕ್ಕಿದ ವಪ್ರಲೇಪಮೆನೆ ಪತ್ತುವ ಲಗ್ಗೆಗೆ ಮಾರಿಯೊಳ್ ಮೊಗಂಬೊಕ್ಕವೊಲಾಗೆ ಬೆರ್ಚಿದನವಂ ಕುಪರಂಗೆನಸುಂ ನಿಯುದ್ಧದೊಳ್ (ಕಂಪ್ರತಿ. ೩-೬೦). ೬. ಚೆಂಡಾಟದಲ್ಲಿ ಚೆಂಡನ್ನು ಎಸೆಯಲು ಇಟ್ಟಿರುವ ಗುರಿಹಲಗೆ : ವಿರಹಿಜನದೆರ್ದೆಯ ಲಗ್ಗೆಯನಿಡುವ ಮನಸಿಜನ ಕರದ ಪಹೌಕ್ತಿಕದ ಸೆಂಡೋ (ಕನ್ನಕಿ. ೦-೩೯) ; ಪರಪೂಜೆಯನಾಂತು ಮೆಱೆವ ಮುತ್ತಿನ ಚೆಂಡು ಬರಬೇಕದು ಲಗ್ಗೆಯೆಡೆಗೆ (ಕುಮಾರ. ೬೦-೩) : ಗುಂಡಾದ ಮುತ್ತಿನ ಚೆಂಡು ಉದಯಗಿರಿಯೆಂಬ ಲಗ್ಗೆಯಂ ತಾಗಿ ಪುಟ ಹಾರಿಯದುರೇರಿ ಬರುವುದೊಯೆಂಬಂತೆ (ಕೌಗಂ. ೦೪೩-೦೩). ೭. ಪೇರಿಸಿ ಇಟ್ಟುದು ; ರಾಶಿ : ಸಣ್ಣಸೇವಗೆಯ ಮದೆ . . . ದೋಸೆಯ ಲಗ್ಗೆ ಬೆಲ್ಲಗಾರಿಗೆಯ ಬಣಬೆ (ಕನ್ನಕಿ. ೭-೨೮). ೮. ಒಂದು ಬಗೆಯ ಚೆಂಡಾಟ ; ಲಗೋರಿ : ಬೊಗರಿ ಗದುಗು ಸಡುಗುಡು ಲಗ್ಗೆ ಹಿಡಿಗವಡೆ ಮೊದಲಾದ ಆಟಪಾಟಗಳು ಪ್ರಸಿದ್ಧವಾಗಿದ್ದುವು (ಕಂಕುಂಡ. ೧೩೨). ೯. ಗುಂಪು ; ಸಮೂಹ : ಮಱುದಿನ ತನ್ನ ಮಂತ್ರಿಯು ಮುಂದುಮಾಡೆಲ್ಲರ ಕೂಡೆ ಬಂದ ಪೆಂಗಳಗೆ ಖೇಚರಮಂತ್ರಿಗುಱಿಕವಿತ್ತೊಂದೆ ಲಗ್ಗೆಯೊಳು ಕಳುಹಿದ (ಭಕ್ತ. ೩೭-೦೨೩). ' ಲಾಗ₁ ' ಪರ್ಯಾ. ಲಗ್ಗ₂ : ೫. ಕಳಂಬೊಕ್ಕು . . . ನಾಲ್ಕುಂ ಸ್ಥಾನದೊಳಂ ಮೂಱುಂ ಲಗ್ಗದೊಳ್ ಐದುಂ ಡೊಕ್ಕರದೊಳಂ ಎಣ್ಬತ್ತುನಾಲ್ಕು ಬಿನ್ನಣದೊಳಂ ಪಲತೆಱದ ಪಾತುಗಳೊಳಂ ನೆರೆದು (ಕಂಪ್ರತಿ. ೩-೭೭ ವ). **ಲೆಗ್ಗೆ :** ೧. ತೊಡಗಿದರೊಂದು ಲೆಗ್ಗೆಗೆ ವಿಶೇಷವಿರೋಧ ನಿರೋಧಗಾಢದಿಂ (ಹರಿಶ್ಚ. ೩-೯೭) ; ಗಿರಿದುರ್ಗದಿಂದ ಲೆಗ್ಗೆಯೊಳರಿವರ್ಗಮನಿಱಿವಲೆಳಸಿ ದಿವ್ಯಮೆನಿಪ್ಪಾ ಗಿರಿದುರ್ಗಮಂ ನೇಱಿಸಿದಂ ನರಪತಿಯುಪ್ರತಿಮವೀರಚಿಕದೇವೇಂದ್ರಂ (ಚಿಕ್ಕ. ೬೩-೩). ೧೦. ಜಗಳ : ಕದನ.

**ಲಗ್ಗೆನುಗ್ಗು** = ಮುತ್ತಿಗೆ ಹಾಕು ; ಆಕ್ರಮಣ ಮಾಡು : ಪಾಗಿಯ ಮಂಜು ಲಂಕೆಯಂ ಸುತ್ತಿದುದು ಮುತ್ತಿದುದು, ಲಗ್ಗೆನುಗ್ಗೊಳಹೊಕ್ಕು ನುಂಗಿನುದಪಿಲದ್ಯಗ್ನಿಪಯುಮಂ (ಕ್ರೀರಾಮ. ೪೭೪-೦೨). **ಲಗ್ಗೆಬೀಳು** = ಲಗ್ಗೆನುಗ್ಗು : ಲಗ್ಗೆಬಿದ್ದ ಕೋಟೆಯ ಒಳಗಿನ ಜನರಿಗೂ – ಹೊರಗಿನವರನ್ನು ತೊಂದರೆಗೀಡುಮಾಡುವುದಕ್ಕೆ ಅನೇಕ ತರದ ಸಾಧನ–ಸಲಕರಣೆಗಳಿರುವುವು (ಕರ್ನಾಟ. ೫). **ಲಗ್ಗೆಮಾಡು** = ಲಗ್ಗೆನುಗ್ಗು : ಲಗ್ಗೆಮಾಡಿದ ಪರುಣನ ಸುತಶತಗಳೊಗ್ಗೊಡೆಯದೆ ತಮತಮಗೆ ಉಗ್ರದೊಳಸು ತೊಡವರಲು ವಿಭೀಷಣ ಭಾರ್ಗವನಂತಿದಿರಾಗಿ (ಅಂಶ. ೭-೧೭೩). **ಲಗ್ಗೆಯಾಟ** = ಲಗ್ಗೆ ಚೆಂಡಿನ ಆಟ: ಕುಮಾರರಾಮನೂ ಆತನ ಸಂಗಡಿಗರೂ ಲಗ್ಗೆಯಾಟವನ್ನು ಆಡುತ್ತಿರುವರೆಂದು ತಿಳಿಸಿದ್ದಳು (ಕುಮಾರಾ. ೦೦೧). **ಲಗ್ಗೆಯಿಕ್ಕು** = ಲಗ್ಗೆನುಗ್ಗು : ಕೋಟೆಗೆ ಲಗ್ಗೆಯಿಕ್ಕಿದರು (ಕರ್ನಾಟ. ೦೪೨). **ಲಗ್ಗೆಯೇರು** = ಲಗ್ಗೆನುಗ್ಗು : ಎರಡು ಕಡೆಯಲ್ಲಿಯೂ ಲಗ್ಗೆಯೇರಿ ಬರುತಲಿರುವ ಆ ಶತ್ರುಜನಗಳು ಅರಿಯಿಡದಂತೆ . . . ಮಾಡಿದರು (ಮಹಾಪಂ. I. ೩೪) : ಆತನ ಪಡೆ ಲಗ್ಗೆಯೇರಲು ತೊಡಗಿತ್ತು (ಕುಮಾರಾ. ೭೩). **ಲಗ್ಗೆಹತ್ತು, ಲೆಗ್ಗೆಹತ್ತು** = ೧. ಲಗ್ಗೆನುಗ್ಗು : ರಂಗಪಟ್ಟಣಕ್ಕೆ ಲಗ್ಗೆಹತ್ತುತಿದಾರೆಂಬ ವರ್ತಮಾನ ತಿಳಿಯಿತು (ಚಿತ್ರ. ೩) : ಶೌರ್ಯದಿಂದ ಕಾದಿದರೂ ಶತ್ರುಗಳು ಲಗ್ಗೆಹತ್ತುವುದನ್ನು ನಿಲ್ಲಿಸಲಾಗದೆ ಹೋಯಿತು (೭೭೪. ೪೨). ೨. ಜಗಳವುಂಟಾಗು ; ವಿರೋಧವುಂಟಾಗು : ರೂಪಚಂದನಿಗೂ ದಯಾವತಿಗೂ ಲೆಗ್ಗೆಹತ್ತಿರುವುದು ಗಜೇಂದ್ರಸಿಂಹನಿಗೆ ಗೊತ್ತಾಗಿತ್ತು (ಜಲಜಾ. ೦೩೨). **ಲಗ್ಗೆಹಾಕು** = ಲಗ್ಗೆನುಗ್ಗು : ತರೀಕೆರೆ ದಂಡು ಬಂದು ರಂಗ ಪಟ್ಟಣಕ್ಕೆ ಲಗ್ಗೆಹಾಕಿದ್ದ (ಚಿತ್ರ. III. ಅಧ್ಯಾಯ ೦). **ಲಗ್ಗೆಹೂಡು** = ಲಗ್ಗೆನುಗ್ಗು : ಇವನು ಪಡಸಾಲೆಯಲ್ಲಿ ಕುಳಿತಾಗ ಸ್ನೇಹಿತರು ಬಾಗಿಲ ಬಳಿ ಲಗ್ಗೆಹೂಡಿ . . . ಸನ್ನೆ ಮಾಡುತ್ತಿದ್ದರು (ಗಂಡುಗಲಿ. ೪೩).

[< ಸಂ. ಲಂಘನ]

**ಲಗ್ಗೆಗೆಯ್** (ಕ್ರಿ). ಮುತ್ತು ; ದಾಳಿಮಾಡು ; ಲಗ್ಗೆಯಿಕ್ಕು : ತುರಗಾಧಿರೂಢರ್ . . . ಉತ್ಪಾತಾಸಿಚ್ಛುರಿತಭುಜಪರಿಘರೊಂದೊರ್ವರ ಸೆಣಸಿಂ ಲಗ್ಗೆಗೆಯ್ದು ಪಾಯಿಸೆ ಜವದಿಂ (ಜಗಂಪು. ೪-೦೩) : ಅಱಿಯೊಡಲೆಂಬ ಮಣ್ಣ ಮಱೆಗೋಟೆಯೊಳಿಂದ್ರಿಯದುಃಪರಿಗ್ರಹಂಗಳನೊಳಕೊಂಡು ಜೀವನಿಲಲ್ತಾರ್ತಪ ನಾಳೆಯ ಲಗ್ಗೆಗೆಯ್ದು ತೊತ್ತಳದುಳಿದಿಪ್ಪನುದ್ದವರಿಯಿಂ ಜವಂ (ಸಮಯ. ೧೩-೪೩). [ಲಗ್ಗೆ + ಕೆಯ್₁]

**ಲಗ್ಗೆಚಂಡು** ' ಲಗ್ಗೆಸೆಂಡು ' ನೋ.

**ಲಗ್ಗೆಚೆಂಡು** ' ಲಗ್ಗೆಸೆಂಡು ' ನೋ.

**ಲಗ್ಗೆಢಂಬಟ** (ನಾ). ಆಕ್ರಮಣದ ಸಮಯದಲ್ಲಿ ಬಾರಿಸುವ ತಮಟೆಗಳ ಸಮೂಹ : ಇಕ್ಕೆಲದ ರಾವುತರ ತೇರಿನ ತೆಕ್ಕೆಗಳ ಗಜಘಟೆಯ ಕಾಲಾಳ್ಕಿಜದ ನಿಸ್ಸಾಳಸೂಳಿನ ಲಗ್ಗೆದಂಬಟದ (ಕುಮಾರ. ೯-೨೩) ; ಸಂತಪಿಸಿತಾ ಸೇನೆ ಕುರುಬಲ ಕಂತುಹರನುದ್ಯೋಗವಾಗೆ ನಿರಂತರದ ನಿಸ್ಸಾಳಸೂಳಿನ

ಲಗ್ಗದಂಬಟದ (ಕಾವ್ಯಾ. ೨೦-೧೫). 'ಲಗ್ಗವಟಿ' ಪರ್ಯಾ.
[ ಲಗ್ಗ + ತಂಬಟ ]

**ಲಗ್ಗದೋಟು** (ಕ್ರಿ). ಗದ್ದಲ ಹೆಚ್ಚು; ಗಲಭೆಯಾಗು : ಅಚ್ಚಂ ಕೊಂಡು ಕವದೆಯಂ ತೂಗಿಯುನಿತ್ತಂದುಟಿ ಕೈಚಳಕಂ ಮಿಗೆ ಚೆಂದಮೆನಲ್ ಲಗ್ಗದೋಟಲಾಡುತ್ತಿರ್ದರ್ (ದಕಸು. ೬-೩೩). [ ಲಗ್ಗ + ತೋಟು ]

**ಲಗ್ಗಮಣೆ** (ನಾ). ೧. ಚೆಂಡನ್ನು ಎಸೆಯುವ ಗುರಿಹಲಗೆ : ಲಗ್ಗಮಣೆ ಚೆಂಡು ತರಲು ಹೊರಟಿದ್ದವನು . . . ಮನೆಯೊಳಗೆ ಓಡಿದನು (ಪುರಿಮ. ೨೯೦). ೨. ಗುರಿಹಲಗೆಗೆ ಚೆಂಡನ್ನು ಎಸೆಯುವ ಆಟ : ಬನ್ರೋ ಲಗ್ಗಮಣೆ ಆಡಾನ (ಪುರಿಮ. ೨೯೦). [ ಲಗ್ಗ + ಮಣೆ ]

**ಲಗ್ಗವರಿಗೆ** (ನಾ). (ದಾಳಿಗೆ ನುಗ್ಗುವಾಗ) ಆತ್ಮರಕ್ಷಣೆಗಾಗಿ ಬಳಸುವ ಗುರಾಣಿ,-ಢಾಲು : ತಕ್ಕವರಿಗೆ ಲಗ್ಗವರಿಗೆಯಿಂದೆಯ್ದಂದೆಕ್ಕೆಕ್ಕೆಯಿಂ ಪಟುಭಟರು ಹೊಕ್ಕು ಹೊಯ್ದಾಡಿ (ಕುಮಾರಾಮ. ೦೨-೬೭).
[ ಲಗ್ಗ + ವರಿಗೆ ]

**ಲಗ್ಗವಲ್ಲೆ** (ನಾ). = ಲಗ್ಗಮಣೆ ೧ : ಬಳಕಾಡುವ ಚೆಂಡು ಲಗ್ಗವಲ್ಲೆಗಳ ತಂದಿಳುಪಲುಳಿಗದ ಬೋಳಕರು (ಕುಮಾರಾಮ. ೩೦-೬೭).
[ ಲಗ್ಗ + ವಲ್ಲೆ$_2$ ]

**ಲಗ್ಗವಟಿ** (ನಾ). = ಲಗ್ಗದಂಬಟ : ಅನೇಕದುರ್ಗಸಾಧನಪರಿಕರಂ ಗಳ್ವೆರಸು ನಡೆದು ಘೋರ್ಗರೆವ ಲಗ್ಗವಟಿಗಳ್ ಮೊಟಗೆ ಸುತ್ತಿ ಮುತ್ತಿ (ಶಾಸ. ೭-೯೬ ಪ); ಲಗ್ಗವಟಿಗಳಿಗಮವು ವ್ಯಾನದ ಸುಗ್ಗಿಯಾಯಿತು (ಕಾವ್ಯಾಲೀ. ೬-೩೩); ಲಗ್ಗವಟಿ ಮೊಳಗಿದವು ನಿಜಬಲದೊಳ್ (ಕೃಷ್ಣರಾ. ೦೩-೯೩). [ ಲಗ್ಗ + ವಟಿ$_1$ ]

**ಲಗ್ಗವಿಡಿ** (ಕ್ರಿ). ಮುತ್ತಿಗೆ ಹಾಕು ; ಆಕ್ರಮಣ ಮಾಡು : ಗೊಂಡ ದುರ್ಗಕ್ಕೆ ಚಿಪ್ಪರದಿಂ ಮುತ್ತಿ ಪೊದಳ್ದು ಲಗ್ಗವಿಡಿದಾತ್ಮಾಧೀನಮಂ ಮಾಡಿ (ಶ್ರೀರಾಮ. ೨-೩೯). [ ಲಗ್ಗ + ಪಿಡಿ$_1$ ]

**ಲಗ್ಗಸೂಳು** (ನಾ). ಅನೇಕ ವಾದ್ಯಗಳ ಜೋರಾದ ಧ್ವನಿ : ನಡುಗಿತ ವನಿಯುಪಾಂಡವಿರ್ವರವೊಡೆಯಲವನಿಯು ಲಗ್ಗಸೂಳಿನ ಹೊಡೆಗುಳಿನೊಳ್ಬುರಿಪವು ನಿಸ್ಸಾಳಕೋಟಿಗಳು (ಕಾವ್ಯಾಕಾ. ೦೦-೩೯).
[ ಲಗ್ಗ + ಸೂಳ್$_3$ ( < ಸೂಳ್$_2$ ) ]

**ಲಗ್ಗಸೆಂಡು**, ಲಗ್ಗಚಂಡು, ಲಗ್ಗಚೆಂಡು (ನಾ). ೧. ಗುರಿಹಲಗೆಗೆ ಚೆಂಡನ್ನು ಎಸೆದು ಆಡುವ ಆಟ : ಬಿಡದೆ ಶಿವದ್ರೋಹಿಗಳಂ ಪಡಲಿಡುವೊಡೆ ತಾಳ್ದ ಲಗ್ಗಸೆಂಡೆಂಬಿನೆಗಂ ನಿಡುಗಣ್ಣ ಗಾಡಿಕಾರ್ತಿಯ ಮಡಮಾವು ವೃತ್ತತೆಯಿನೊಪ್ಪ ಕಣ್ಗೊಳಿಸಿರ್ದಂ (ಬಸವ. ೯-೯). **ಲಗ್ಗಚಂಡು** : ೧. ಲಗ್ಗಚಂಡನು ಬುಗುರಿ ಗುಡುಗಾಲಂಕಿ ಘನ ಜೂಜಂಗಳಾಡೆ (ಶಿವಂಗ. ೩) ; ಜತಿಜನರ ಕಲ್ಲೆರ್ದೆಯ ಲಗ್ಗಗಳನೂ . . . ಬರ್ಗೆಯದಲ್ಲದೆ ಬಿಜವೆಂಬ ಮಾಳ್ಕೆಯಿಂ ಲಗ್ಗಚಂಡಾಡುತಿರ್ದರು ಪಂಥದಿ (ಶರಪೋ. ೦೭-೩೭). **ಲಗ್ಗಚೆಂಡು** : ೨. ಗುರಿಹಲಗೆಗೆ ಎಸೆದು ಆಡುವ ಚೆಂಡು : ನೀವೆಲ್ಲಾ ಕಣಕ್ಕೆ ಹೋಗ್ರೋ, ನಾ ಲಗ್ಗಚೆಂಡು, ಮಣೆ ಹುಡುಕಿ ತರ್ತೀನಿ (ಪುರಿಮ. ೨೯೦). [ ಲಗ್ಗ + ಸೆಂಡು ]

**ಲಗ್ನ** (ಗು). ೧. ಸೇರಿದ; ಕೂಡಿದ : ತತ್ಕಮಳಾನನಕಂಟಕಲಗ್ನವಾದ ನಾದವೊಲುಡುಗುತ್ತುಮಾತ್ಮಕರಮಂ ರವಿ ಪೊರ್ದಿದನಸ್ತಶೈಲಮಂ (ಶಂಕರಾ. ೯-೯೬). ೨. ಅಂಟಿದ ; ನಾಟಿದ. ೩. ಸಂಬಂಧಿಸಿದ ; ಹೊಂದಿಕೊಂಡ. ೪. ನಾಟಿಕೆಗೊಂಡ. ೫. ಬಳಸಿದ; ಉಪಯೋಗಿಸಿದ. ೬. ಮಂಗಳಕರವಾದ; ಪ್ರಶಸ್ತವಾದ. ೭. ಆಸಕ್ತಿಯುಳ್ಳ; ತತ್ಪರವಾದ. (ನಾ). ೮. ಮುಹೂರ್ತ; ನಿಶ್ಚಿತವಾದ ಕಾಲ : ಸಾವ ಲಗ್ನವು ಸನಿಯ ಬಂದುದು (ಕೌಶಿಕಾ. ೨೩-೯೩). ೯. ಶುಭಕೆಲಸವನ್ನು ಮಾಡಲು ಮಂಗಳಕರವೆಂದು ಗೊತ್ತುಪಡಿಸುವ ಗಳಿಗೆ; ಶುಭಮುಹೂರ್ತ : ನೈಮಿತ್ತಿಕನಂ ಬರಿಸಿ ತದಾತನಮುಮಂತ್ಯಂತ ನೂತನಮುಮಪ್ಪುದೋದು ಲಗ್ನಮಂ ಪೇಟುಮೆಂಬುದುಂ (ಶಾಂತಿಪು. ೩-೩೬೩); ಲಗ್ನವೆಲ್ಲಿಯದೊ ವಿಘ್ನವೆಲ್ಲಿಯದೊ ಸಂಗಯ್ಯಾ (ಬಸವ. ೯೭೦). ೧೦. ಮದುವೆ; ವಿವಾಹ : ಸುರರ ಸೇನಾಧಿಪ ಕಾನಾದರು ಗುಹನಿಗೆ ಲಗ್ನವಾಗಿಲ್ಲವಾಹ! (೨೦ಕಾಶ. ೦೬೦-೯೯); ನಿಮ್ಮ ಲಗ್ನ ಆಗೇದೇನು (ಅತಿಮಾ. ೨೯). ೧೧. ಮದಿಸಿದ ಆನೆ ; ಮದಗಜ: "ಲಗ್ನಃ. ಪ್ರಭಿನ್ನಃ. ಮತ್ತಃ – ಈ ೩ ಮದದಾನೆ" (ಹಲಾಯು. ೩೬-೬೬); "ಲಗ್ನಂ ಪ್ರಭಿನ್ನಂ ಮತ್ತಮೆನೆ ಮದಗಜಂ" (ಮಂಗರಾ. ೯೬-೩). ೧೨. ರಾಜನನ್ನು ನಿದ್ದೆಯಿಂದೆಬ್ಬಿಸುವ ಸ್ತೋತ್ರಪಾಠಕ,-ಸ್ವಸ್ತಿವಾಚಕ. ೧೩. [ಜ್ಯೋತಿ] ಒಂದು ದಿನದ ಹನ್ನೆರಡನೆಯ ಒಂದು ಭಾಗ. ೧೪. ಸೂರ್ಯ ಅಥವಾ ಗ್ರಹಗಳ ಉದಯ. ೧೫. ಸೂರ್ಯನು ಯಾವುದೇ ರಾಶಿಯನ್ನು ಪ್ರವೇಶಿಸುವ ಕಾಲ,-ಸಮಯ; ಮೇಷವೇ ಮೊದಲಾದ ರಾಶಿಯ ಉದಯ: "ಪರಿವಿಡಿದು ಮೇಷಾದಿಗಳು ಲಗ್ನಮೆನಿಕುಂ" (ಮಂಗರಾ. ೨೦-೩) ; "ಯಾವ ಕಾಲದಲ್ಲಿ ಯಾವ ರಾಶಿ ಉದಿಸುತ್ತೋ ಆಗ ಅದು ಲಗ್ನವಹುದು" (ಸಿದ್ಧಾಂತಿ. ೩೨). ಕನಕನಿರೆ ಲಗ್ನದೊಳ್ ಕ್ಷತಶನು (ಜಾತಕ. ೦೮-೯). ೧೬. ಹನ್ನೆರಡು ರಾಶಿಗಳ ಆಕೃತಿ,-ಆಕಾರ.

**ಲಗ್ನವಾಗು** = ಮದುವೆಯಾಗು ; ವಿವಾಹವಾಗು : ಭಾರತೀಯ ವಿದ್ಯಾರ್ಥಿಗಳು ಆಂಗ್ಲಕನ್ನೆಯರನ್ನು ಏಕೆ ಲಗ್ನವಾಗುತ್ತಾರೆ ? (ಸಮಾಜ. ೬೦೦). [ಸಂ].

**ಲಗ್ನಂಬಡೆ** (ಕ್ರಿ). ಮಗ್ನವಾಗು; ಆಸಕ್ತವಾಗು: ರಾಜೀವ ಲೋಚನಕ್ಕಿರವದೊಳು ಕೂರುಗುರ್ಗೇದಗೆಯೆಸಳೊಳು ನೃಪತಿಯ ಚಾರುನಯನಮತಿಲಗ್ನಂ ಬಡೆದುವು ಬಂಡುಣಿಪಟಿಯಂತೆ (ಶಬರ. ೩-೦೪). [ಲಗ್ನ + ಪಡೆ$_1$]

**ಲಗ್ನಕ** (ನಾ). ಹೊಣೆಗಾರ; ಜಾಮೀನಾದವನು : "ಪ್ರತಿಭೂಃ, ಲಗ್ನಕಃ – ಈ ೨ ಹೊಣೆ(ಗಾರ)" (ಹಲಾಯು. ೬೨-೨೨೫); "ಲಗ್ನಕಃ, ಪ್ರತಿಭೂಃ – ೨ ಹೊಣೆಗಾರ, ಜಾಮೀನ್‌ದಾರ" (ಸಿದ್ಧಾಂತಿ. ೩೦೯). [ಸಂ.]

**ಲಗ್ನಕಾಲ** (ನಾ). ಶುಭಕಾರ್ಯಗಳನ್ನು ನೆರವೇರಿಸಲು ಒಳ್ಳೆಯದೆಂದು ನಿಶ್ಚಯ ಮಾಡಿದ ಸಮಯ ; ಶುಭಮುಹೂರ್ತ: ಲಗ್ನಕಾಲಕ್ಕೆ ವಿಘ್ನ ಮಾಡಬಾರದು (ಗಾದೆ). [ಸಂ].

**ಲಗ್ನಪತ್ರಿಕೆ** (ನಾ). ೧. ಮದುವೆ, ಮುಂಜಿ ಮುಂತಾದ ಶುಭಕಾರ್ಯಗಳಿಗೆ ಆಮಂತ್ರಿಸುವ ಪತ್ರ,-ಆಹ್ವಾನಪತ್ರಿಕೆ,– ಕರೆಯೋಲೆ : ನಂಟರಿಗೆಲ್ಲ ಲಗ್ನಪತ್ರಿಕೆಗಳನ್ನು ಕಳುಹಿಸಿಬಿಡಿ (ಕಪಿ. ೯೯); ಕವರು ಬಿಚ್ಚಿ ನೋಡಿದೆ : ಲಗ್ನಪತ್ರಿಕೆ (ರಾಮಚಂ. ೬೯). ೨. ಮದುವೆಯ ದಿನ, ಮುಹೂರ್ತಗಳನ್ನು ನಿಶ್ಚಯಿಸಿ ಕರೆಯೋಲೆಯನ್ನು ಸಿದ್ಧಪಡಿಸುವ ಸಮಾರಂಭ; ನಿಶ್ಚಿತಾರ್ಥ: ಅವರ ಮನೆಯಲ್ಲಿ ಈಹೊತ್ತು ಲಗ್ನಪತ್ರಿಕೆ (ರೂಢಿ). [ಸಂ. ಲಗ್ನಪತ್ರಿಕಾ]

**ಲಗ್ನಾಧಿಪತಿ** (ನಾ). ೧. [ಜ್ಯೋತಿ] ಆಯಾ ರಾಶಿಗೆ ಮುಖ್ಯಸ್ಥಾನದಲ್ಲಿರುವ ಗ್ರಹ; ಉದಾಹರಣೆಗೆ–ಕನ್ಯಾರಾಶಿಗೆ ಬುಧ, ಧನೂರಾಶಿಗೆ ಗುರು ಲಗ್ನಾಧಿಪತಿಗಳು. ೨. ಎಲ್ಲರ ಮದುವೆಯನ್ನು ನಿಷ್ಕರ್ಷೆ ಮಾಡುವ ಅಧಿಕಾರಿ; ಬ್ರಹ್ಮ : ಈ ಮೊದಲು ಲಗ್ನಾಧಿಪತಿಯಾದ ಬ್ರಹ್ಮನು ಎಂದೂ ನನ್ನ ಲಲಾಟಪಟ್ಟದಲ್ಲಿ ಬಂದು ಕುಳಿತಿರದಿದ್ದರೂ ಒಮ್ಮೆ ನನ್ನ ಮಾನಸಪದ್ಮದಲ್ಲಿ ಕುಳಿತಿದ್ದನು (ಇತ್ಯ. ೯೬೯). [ಸಂ].

**ಲಗ್ನಾಹ** (ನಾ). ಮದುವೆ, ಮುಂಜಿ ಮುಂತಾದ ಶುಭಕಾರ್ಯಗಳನ್ನು ಮಾಡಲು ಗೊತ್ತುಪಡಿಸಿದ ದಿನ,-ದಿವಸ: ಉದ್ವಾಹಲಗ್ನಾಹಮುಂ ಭೋಂಕೆನೆ ಸಾರ್ತಂದಿರ್ದುದೇನುಂ ತಡೆದಿರಲಿಡೆಯಿಲ್ಲ (ಸಂಧ್ರಶ. ೬-೯೩). [ಸಂ.]

**ಲಗ್ನಿಗ** (ನಾ). ಮದುವೆ, ಮುಂಜಿ ಮೊದಲಾದ ಶುಭಕಾರ್ಯಗಳಿಗೆ ಮುಹೂರ್ತವನ್ನು ನಿಶ್ಚಯಿಸಿ ಹೇಳುವವನು ; ಜ್ಯೋತಿಷಿ : ಸಮಯದ ವಿವರವರಿದು ಲಗ್ನಿಗರು ನವಕಾಂಚನಘಟದೊಳು ಘಟಿಕಾಪಾತ್ರ ವನಿರಿಸಿದರೊಲವಿಂದ (ಶ್ರೀಪಾರಿ. ೦೦-೩೨). [ಲಗ್ನ + – ಇಗ]

**ಲಗ್ನಿಸು** (ಕ್ರಿ). ಸಂಬಂಧಿಸು; ಸೇರು; ಬೆರೆ; ಲೀನವಾಗು: ಭಗ್ನದುರಾತ್ಮಗೆ ಸುಪ್ರಭೆ ಸುಜ್ಞಾನ ಲಗ್ನಿಸಲೆರಡೊಂದೆ ರೂಪು (ಶರಶ. ೬೬-೯೬). [ಲಗ್ನ + – ಇಸು]

**ಲಘಾಟ** 'ಲಗಾಟ' ನೋ.

**ಲಘಿಮ** (ನಾ). ೧. ಹಗುರವಾಗಿರುವಿಕೆ; ಲಘುವಾಗಿರುವಿಕೆ; ಭಾರ ವಿಲ್ಲದಿರುವಿಕೆ. ೨. ಸಣ್ಣತನ ; ಅಲ್ಪತೆ. ೩. ಕೀಳುತನ ; ಕ್ಷುದ್ರತೆ. ೪. ವಿಚಾರಹೀನತೆ ; ಗಾಂಭೀರ್ಯವಿಲ್ಲದಿರುವಿಕೆ ೫. ವಿಚಾರಶೂನ್ಯನಾದವನು ; ಅವಿವೇಕಿ : ಕಾಮಿನೀವಶನಾದ ನಾವನಾಗಲಿ ಮನೋಭ್ರಾಮಕತ್ವದಿ ತೊಳಲಿ ಲಘಿಮನಪ್ಪಂತೆ (ವಿಂಶಾರಾ. ೨-೬-೩೪). ೬. [ಯೋಗ] ಅಷ್ಟಸಿದ್ಧಿಗಳಲ್ಲಿ ಒಂದು ; ಇಚ್ಛೆಸಿದಾಗ ದೇಹವನ್ನು ಅತ್ಯಂತ ಹಗುರವಾಗಿಸಿಕೊಳ್ಳಬಲ್ಲ ಶಕ್ತಿ : ಅಣಿಮವೆಂಬುದದು ತಾನೊಂದು . . . ಮತ್ತೆ ಆರಿ ಲಘಿಮವ್ರದುವೆ ನಾಲುಕು (ಜ್ಞಾನಸಿಂ. ೨೦-೪೨) ; ಇಂಥಾ ದೃಢಭಕ್ತಿಯಿಂದ ಅಣಿಮ, ಮಹಿಮ, ಲಘಿಮ, ಗರಿಮ, ಪ್ರಾಪ್ತಿ, ಪ್ರಾಕಾಮ್ಯ, ಈಶತ್ವ, ವಶಿತ್ವಗಳೆಂಬ ಅಷ್ಟೈಶ್ವರ್ಯಂಗಳನ್ನು ಹೊಂದಿದರು (ಪುರಾಶಿ. ೦೩೨). [ಸಂ. ಲಘಿಮನ್]

**ಲಘಿಮೆ** (ನಾ). ೧. = ಲಘಿಮ ೧. ೨. ಸಣ್ಣದಾಗಿರುವಿಕೆ; ಚಿಕ್ಕದಾಗಿರುವಿಕೆ. ೩. ಕೀಳುತನ; ಅಲ್ಪತೆ. ೪. ವಿಚಾರಹೀನತೆ. ೫. = ಲಘಿಮ ೬ : " ಅಣಿಮ ಲಘಿಮೆಗಳೆನಲ್ಕಷ್ಟಸಿದ್ಧಿಗಳಕ್ಕು " (ಮಂಗರಾ. ೦೩೪-೩೩) ; ಅಣಿಮಾ ಗರಿಮಾ ಮಹಿಮಾ ಲಘಿಮಾ ಪ್ರಾಪ್ತಿ ಪ್ರಾಕಾಮ್ಯ ಈಶತ್ವ ವಶಿತ್ವವೆಂಬಷ್ಟಗುಣ ಮಣಿಭೂಷಿತನುಮಾಗಿ (ಶ್ರಾವಣ. ೧೦೯) ; ಮಹಾಮೇರುಪರ್ವತಕ್ಕೆ ಸಮಾನವಾದ ಶರೀರಮುಳ್ಳಾತನಂ ಮೇಲಕ್ಕೆ ನೆಗಹುವ ಕೃತ್ಯದಲ್ಲಿ ಪರಮಾಣುವಿಗೆ ಸದೃಶವಹುದೇ ಲಘಿಮೆ (ಎವೀಶ. ೨೯೦). [ಸಂ. ಲಘಿಮನ್]

**ಲಘಿಷ್ಠ** (ಗು). ೧. ಬಹಳ ಹಗುರವಾದ. ೨. ಎಲ್ಲಕ್ಕಿಂತ ಸಣ್ಣದಾದ; ಕನಿಷ್ಠಗಾತ್ರದ. ೩. ಅತ್ಯಂತ ವೇಗವುಳ್ಳ ; ಚುರುಕಾದ. [ಸಂ.]

**ಲಘು** (ಗು). ೧. ಹಗುರವಾದ ; ಭಾರವಿಲ್ಲದ : ತೂಕವಿಲ್ಲದ. ೨. ಸುಲಭವಾದ ; ಸರಳವಾದ. ೩. ಸಣ್ಣದಾಗಿರುವ : ಚಿಕ್ಕದಾದ. ೪. ದೀರ್ಘವಲ್ಲದ ; ಹ್ರಸ್ವವಾದ ೫. ಅಲ್ಪವಾದ ; ತುಚ್ಛವಾದ : ಅತೀವಜಘನ್ಯಶರೀರಮಂ ಕೈಕೊಂಡು ಪುಟ್ಟಿ ಮತ್ತಮಾ ಯೆಡೆಯೊಳ್ ಪಲವುಂ ಸೂಟ್ ಲಘುಜನ್ಮಾವಗಾಹದಿಂ ಪುಟ್ಟಿ ಸತ್ತು (ಶುಕಶುಮಾ. ೬-೬ ಪ). ೬. ದುರ್ಬಲವಾದ ; ಬಲಹೀನವಾದ. ೭. ಸತ್ತ್ವರಹಿತವಾದ ; ನಿಸ್ಸಾರವಾದ. ೮. ಮನೋಹರವಾದ ; ಸುಂದರವಾದ. ೯. ಮೃದುವಾದ ; ನಯವಾದ. ೧೦. ವೇಗವಾದ ; ಶೀಘ್ರವಾದ : ಲಘುಲಕ್ಷಸುಟಿಯೊಳೊದಗಿ ಪೊಕ್ಕು ಪೊಡದಿಜಾದೊಗೆದು ಸಂಗ್ರಾಮಮುಖದೊಳು ಬಗೆಗುಂದಿಸುವವನು ಶತ್ರುಗಳ ಭೈರವರಾಜ ನಿಗದಾವನಾಂಪ (ಭೈರವೇ. ೩-೦೦). (ನಾ). ೧೧. ಮುಖ್ಯವಲ್ಲದುದು ; ಕ್ಷುಲ್ಲಕವಾದುದು ; ತುಚ್ಛವಾದುದು : ಅಧಿಕಸತ್ವಗುಣ್ಯ ಕಾಗ್ರಣಿಗಾ ನೃಪಂಗೆ ಮನದೊಳ್ ತೃಣವಲ್ಲಘುವಾದುದಾವಗಂ ಸ್ತ್ರೈಣಸುಖಂ (ಕಾದಂಪೂ. ೦೯) ; ಗುರುವ ಲಘುವನು ಉತ್ತಮಾಧಮವೆರಡ ಸರಿಗಾಂಬ ವರ ಮಧ್ಯದ ಪಿರಿಯನೇಗುವ ಹೇಮ ಗುಂಜೆಗೆ ಸರಿಯೆನಿಪ್ಪಂತೆ (ಕೌಶಿರಾ. ೨೩-೦೦) ; ಲಘುವೆಣಿಸಿ ಗುರುವಾಯ್ತಲಾ ! (ಶ್ರೀರಾಮಪಾ. ೨೪೯-೩೭೦). ೧೨. ದೀರ್ಘವಲ್ಲದುದು ; ಸಂಕ್ಷಿಪ್ತವಾದುದು ; ಹ್ರಸ್ವವಾದುದು : ಮಾತುಗಳು ಯಾವತ್ತೂ ತೀರ ಲಘುವಾಗಿ ಇರಲಿ (ರೂಪಕಸಂ. ೨೨). ೧೩. ವೇಗ ; ಶೀಘ್ರತೆ : " ಲಘು ಶೀಘ್ರಂ " (ವಸ್ತುಕೋ. ೦೦೩-೦೩). ೧೪. ಗಾಳಿಯ ನಡೆ ; ವಾಯುವಿನ ವೇಗ. ೧೫. ನಿಸ್ಸಾರವಾದುದು. ೧೬. ದೀನತೆ ; ದೈನ್ಯ. ೧೭. ಸುಂದರವಾದುದು. ೧೮. ಒಂದು ಬಗೆಯ ಸುಗಂಧದ್ರವ್ಯ ; ಅಗುರು : "ಕರ ಶೀಘ್ರದಲಿ ಮನೋಜ್ಞ ನಿಸ್ಸಾರದಲಿ ಮರುತಗತಿಯಲಿ ಅಗರಿನಲಿ ಲಘುವೆನಿಕ್ಕು" (ಮಂಗರಾ. ೦೩೯-೬೯) ; "ವಾಯುಚಾರಂ ದೈನ್ಯಂ ನಿಸ್ಸಾರಮುಂ ಶೀಘ್ರಮುಮಗುರು ಮನೋಜ್ಞಂ ಲಘೂವಾಕ್ಯಮಕ್ಕುಂ" (ಪಾಪಾರ. ೦೪೬). ೧೯. ಕೈಚಳಕ ; ಲಾಘವ : 'ಲಘುದೋರು' ಪರಾ. ೨೦. ಗದಾಯುದ್ಧದ ಒಂದು ವರಸೆ. – ಪಟ್ಟು : ಬವರಿ ಮತ್ತೆಯ್ದೇದ್ಗತಿ ವಿಲಂಘನ . . . ನವವಿದ್ರಾವಣ ಲಘುವಿನ್ಯಸ್ತವೆಂಬೀ ವಿಪರದಲಿ ಕಾದಿದರು ಕೌತುಕವೆನಲು ಸುರನಿಕರ (ಕುಮಾ.ಗ. ೬-೨೩). ೨೧. ಆರೋಗ್ಯ ; ಸ್ವಾಸ್ಥ್ಯ : ಬರಿದೆ ದೇಹಕ್ಕೆ ಲಘುವಿಲ್ಲವೆಂದು ಮೂರು ನಾಲ್ಕುದಿನ ಹೋಗದೆ ಇದ್ದು (ಶಿಶ್ರೀಆ. ೦೨೨). ೨೨. ಲಾಮಂಚ ; " ಕರೇಬಾಳದ ಬೇರು " (ಸೊಗಾಮ. ೨೬೬). ೨೩. [ಛಂದ] ಒಂದು ಮಾತ್ರೆಯ ಅವಧಿಯಲ್ಲಿ ಉಚ್ಚರಿಸುವ ಅಕ್ಷರ ; ಹ್ರಸ್ವಾಕ್ಷರ : ಬರೆದಯ್ದಂ ಲೆಕ್ಕಮನಾದರದಿಂ ಗುರುಲಘುವಿಭೇದಮಂ ಭಾವಿಸು ನೀಂ ಗುರು ಮುಂತೆ ಕೊಂಕಿ ಕೋಡುವ ಬರೆ ಪಿಂತಣ ನೈತನಪ್ಪ ಬರೆ ಲಘು ಕೆಳದ (ಛಂದೋಂಬು. ೦-೩೩) ; ಮೊದಲು ಕೊನೆಗಳಲ್ಲಿ ಲಘುವೂ ಮಧ್ಯದಲ್ಲಿ ಗುರುವೂ ಇದ್ದರೆ ಜಗಣವೆಂದು ಸ್ಮೃತಿಸಿದೆ (ಕಕುಪ್ರ. ೬೩). ೨೪. [ಸಂಗೀತ] ತಾಳದ ಆರು ಅಂಗಗಳಲ್ಲಿ ಒಂದು : ಪಂಚಸ್ವರದಲಿ ಲಘುವಿಡಿದೊಪ್ಪೆ . . . ಪಂಪನಾಟಕಭೇದವ ವಾಚಿಸುತ್ತ (ಪ್ರಕಾಂಡ. ೩-೦೪೪-೩) ; ಝಂಪೆಟತಾಲದಲ್ಲಿ ಎರಡೆರಡು ಅಕ್ಷರ(ಕಾಲ)ಗಳ ಎರಡು ದ್ರುತಗಳೂ ನಂತರ ನಾಲ್ಕಕ್ಷರಪ್ರಮಾಣದ ಒಂದು ಲಘುವೂ ಇವೆಯೆಂದು ತಿಳಿಯಬೇಕು (ಕಕುಪ್ರ. ೨೮). 'ಷಡಂಗ' ಪರಾ. ೨೫. [ನಾಟ್ಯ] ನೃತ್ಯದ ಒಳಭೇದಗಳಲ್ಲಿ ಒಂದು ; ವಿಷಮ, ವಿಕಟ, ಲಘುವೆಂಬ ಮೂರು ನೃತ್ತಗಳಲ್ಲಿ ಒಂದು : " ಅಂಚಿತ ಮೊದಲಾದ ಅಲ್ಪ ಕರಣಗಳನ್ನು ಮಾಡುವುದು ಲಘುನೃತ್ತವು" (ಭಾಸ್ಕರಂ. ೨೦೯ ಗದ್ಯಾಶಾ ವಾದ) : ಒವವಿದ ನೃತ್ತಂ ತ್ರಿವಿಧಾಖ್ಯದೆ ರಂಜಿಪುದೆಯ್ದೆ ವಿಷಮ ವಿಕಟಂ ಲಘುವೆಂದುದಯಿಪುದು . . . ಅಂಚಿತ ಮೊದಲಾಗಿರುವಲ್ಪಕರಣಮಂ ಕೀಳ್ ವಿರಚಿಸುವುದು ಲಘುವೆನಿಪ್ಪ ಪೆಸರಂ ಪಡೆಗುಂ (ಭಾಸ್ಕರಂ. ೦-೬೬). ೨೬. [ಜೈನ] ಎಂಟು ಬಗೆಯ ಸ್ಪರ್ಶನಾಮಕರ್ಮಗಳಲ್ಲಿ ಒಂದು : ಸ್ಪರ್ಶನಾಮಕರ್ಮಮಷ್ಟವಿಧಮಕ್ಕುಂ ಕರ್ಕಶಮೃದುಗುರುಲಘುರೂಕ್ಷ ಸ್ನಿಗ್ಧಶೀತೋಷ್ಣ ಸ್ಪರ್ಶನಾಮಕರ್ಮಮೆಂದಿಂತು (ಗೊಮ್ಮಸಾ. ೪-೦೦). 'ನಾಮಕರ್ಮಪ್ರಕೃತಿ' ಪರಾ.

ಲಘುವಾಗು = ಗೌರವವನ್ನು ಕಳೆದುಕೊಳ್ಳು ; ಅಲ್ಪವಾಗು : ಎನ್ನವರಂ ಲಘುವಾಗದಿರ್ಪನೋ ಅನ್ಯಗಮಿಯಾಗಲಯೆಡೆಯನಾಂ ತೊಲಗಿ ರ್ಪುದು ಕಜ್ಜಂ (ಕಾದಂಪೂ. ೬೩೨). [ಸಂ.]

**ಲಘುಕರಿ** (ನಾ). [ಜೈನ] ಒಂದು ವಿದ್ಯೆಯ ಹೆಸರು : ಪ್ರಜ್ಞಪ್ತಿ . . . ಪರ್ಣಲಘು ಲಘುಕರಿ . . . ಆಭೋಗಿನಿಯೆಂಬಿವು ಮೊದಲಾಗೆ ಕುಲವಿದ್ಯೆ ಜಾತಿವಿದ್ಯೆ ಸಾಧಿತವಿದ್ಯೆಗಳೊಳ್ ಸಂಪನ್ನನಾಗಿರ್ದು (ಕಾಪುಂಕ. ೦೯೩). [ಸಂ.]

**ಲಘುಕಾವ್ಯ** (ನಾ). ಸಣ್ಣಕಾವ್ಯ ; ಖಂಡಕಾವ್ಯ : ಕಬ್ಬಿಗರ ಕಾವವೇನೂ ಒಂದು ಮಹಾಕಾವ್ಯವಲ್ಲ. ಅದೊಂದು ಲಘುಕಾವ್ಯ (ಕಾಚಿಸ. ೦೦೩). [ಸಂ.]

F-73

**ಲಘುಕೃತಿ** (ನಾ). ಸಣ್ಣಗ್ರಂಥ : ಕವಿಗಳು . . . ದೀರ್ಘಪುರಾಣಗಳ ಬದಲಾಗಿ ಲಘುಕೃತಿಗಳನ್ನು ರಚಿಸುವರೆಂದೂ . . . ಸೂಚಿಸಿದ್ದ ಲಕ್ಷಣಗಳಿಗೆ ಈ ಪದ್ಯಪುಸ್ತಕವು ಲಕ್ಷ್ಯವಾಗಿದೆ (ಕಂಪು. ೩೭೦೪). [ಸಂ.]

**ಲಘುಗೀತ** (ನಾ). ಶಾಸ್ತ್ರೀಯವಾದ ರಾಗ, ತಾಳಗಳಿಂದ ಭಿನ್ನವಾದ ಹಾಡು : ನವೀನಸಮಾಸಗಳು ಲಘುಗೀತಗಳಂತೆ ಸುಂದರವಾಗಿವೆ (ಪದ್ಮಶಾ. ೨೮). [ಸಂ.]

**ಲಘುಟಿಪ್ಪಣಿ** (ನಾ). ಚಿಕ್ಕವಿವರಣೆ ; ಸಣ್ಣಟೀಕೆ : ಮನಸ್ಸಿನ ವಿಷಯವಾಗಿ ಶಾಕ್ತದೃಷ್ಟಿಯನ್ನು ಕುರಿತ ಒಂದು ಲಘುಟಿಪ್ಪಣಿ ಇಲ್ಲಿ ಅಪ್ರಸಕ್ತವಾಗುವುದಿಲ್ಲ (ಶಕ್ತಶಾ. ೪೪೩). [ಸಂ. ಲಘುಟಿಪ್ಪಣೀ]

**ಲಘುತೆ** (ನಾ). ೧. ಭಾರವಿಲ್ಲದಿರುವಿಕೆ ; ಹಗುರವಾಗಿರುವಿಕೆ : "ಲಾಘವಮದು ಲಘುತೆ" (ಪಸ್ತುಕೋ. ೦೦೩-೨೯). ೨. ಚಟುವಟಿಕೆ ; ಪಟುತ್ವ : ಕೃಷ್ಣ ಸಾಹಿತ್ಯಪ್ರೇಮಿಯಲ್ಲ ; ವಿಹಾರಪ್ರೇಮಿ. ಜೀವನದ ಲಘುತೆ ಅವನಲ್ಲಿ ತುಂಬಿ ಚೆಲ್ಲುವಷ್ಟಿದೆ (ಮೊಕವು. ೨೭). ೩. ದೀರ್ಘವಲ್ಲದುದು : ಸಂಕ್ಷಿಪ್ತವಾದುದು. [ಸಂ. ಲಘುತಾ]

**ಲಘುತ್ವ** (ನಾ). ೧. ಹಗುರವಾಗಿರುವಿಕೆ : ಭಾರವಿಲ್ಲದಿರುವಿಕೆ : ರೂಪ . . . ದ್ರವತ್ವ, ಲಘುತ್ವ, ಮೃದುತ್ವ, ಕಠಿನತ್ವ . . . ಸೌಭಾಗ್ಯವೆಂದು, ಸಾಮಾನ್ಯವಾಗಿ ನಲವತ್ತುವಿಧ ಗುಣಗಳು (ಹಿಂದಶಾ. ೨೭೩). ೨. ಸಣ್ಣದಾಗಿರುವಿಕೆ. ೩. ಕೀಳುತನ ; ಕ್ಷುದ್ರತನ. ೪. ಹುಡುಗಾಟ ; ಗಂಭೀರರಾಹಿತ್ಯ. ೫. ವೇಗ ; ಶೀಘ್ರತೆ. ೬. ಅಗೌರವ ; ಅಪಮರ್ಯಾದೆ. ೭. ಅನುಕೂಲ ; ಸೌಲಭ್ಯ. [ಸಂ.]

**ಲಘುದೋರು** (ಕ್ರಿ). ಕೈಚಳಕವನ್ನು ತೋರು ; ಲಾಘವವನ್ನು ತೋರು : ಸೆಣಸಿ ಮುಂಬರಿದು ಲಘುದೋರಿ ತಪ್ಪಿಸುತ (ಪಪಮೋ. ೨೪-೩೮). [ಲಘು + ತೋರು ( < ತೋಱು ) ]

**ಲಘುದೋಷ** (ನಾ). [ಛಂದ] ಗುರುವಿರಬೇಕಾದ ಕಡೆಯಲ್ಲಿ ಲಘುವನ್ನಿಡುವುದರಿಂದಾಗುವ ದೋಷ : ಕವೀಶರಾರ್ಪಂತು ಪಿಂಗಿಸುಗೆ ಕಾವ್ಯದಿನಾ ಲಘುದೋಷಮುಂ (ಕವಿರಾ. ೦-೦೨೯). [ಸಂ.]

**ಲಘುನೃತ್ತ** (ನಾ). = ಲಘು ೨೫ : ಅಂಚಿತ ಮೊದಲಾದ ಅಲ್ಪಕರಣಗಳನ್ನು ಮಾಡುವುದು ಲಘುನೃತ್ತವು (ಶಾಸ್ತ್ರಂ. ೨೦೯ ಗದ್ಯಪುವಾದ). [ಸಂ.]

**ಲಘುಪಾಳಿ** (ನಾ). ವೇಗದ ಕ್ರಮ ; ಶೀಘ್ರವಿಧಾನ : ಕಲಿತರು ನಿಮ್ಮ ಪೂರ್ವನೃಪಾಲಕರು ಸರಹಸ್ಯಸಾಂಗೋಪಾಂಗವಿದ್ಯೆಗಳ ಸ್ಥೂಲದಲಿ ಸೂಕ್ಷ್ಮದಲಿ ಬಹಳವಿಶಾಲದಲಿ ಸಂಕೋಚದಲಿ ಲಘುಪಾಳಿಯಲಿ ಪಾರದಲಿ ವಿವಿಧಾನುಪ್ರಯೋಗದಲಿ (ಕುವ್ಯಾಶ. ೭-೦). [ಲಘು + ಪಾಳಿ₃ ( < ಪಾಱು₃)]

**ಲಘುಪುಟ** (ನಾ). ಸ್ವಲ್ಪಮಾತ್ರ ಬೇಯಿಸುವುದು : ಹೆಮ್ಮರದ ತೊಕ್ಕನ್ನು . . . ಇಡಿದು ಮುದ್ದೆಯ ಮಾಡಿ . . . ಲಘುಪುಟವಿಟ್ಟು ಬೆವರಿಸಿ ತೆಗೆದು (ಶಕವ್ಯ. ೩೦೦). [ಸಂ.]

**ಲಘುಪ್ರಹಸನ** (ನಾ). ದೀರ್ಘವಲ್ಲದ ನಗೆನಾಟಕ; ಸಣ್ಣ ಪ್ರಹಸನ : ಫ್ರೆಂಚ್‌ನಾಟಕಮಂದಿರದಲ್ಲಿ ಲಘುಪ್ರಹಸನಗಳನ್ನು ನೋಡಿ ಬಂದು . . . ಪ್ರೋತ್ಸಾಹ ನೀಡುತ್ತಿದ್ದರು (ಪುಸರು. ೬೦). [ಸಂ.]

**ಲಘುಬದರಿ** (ನಾ). ಒಂದು ಬಗೆಯ ಸಸ್ಯ; ಸಣ್ಣಬೋರೆ : ಎಲಚಿ : "ಬಹುಕಂಟಃ – ಲಘುಬದರಿ" (ಹಿಕಧ. ೦೦೩). [ಸಂ. ಲಘುಬದರೀ]

**ಲಘುಲಯ** (ನಾ). ಒಂದು ಬಗೆಯ ಸುವಾಸನೆಯ ಬೇರು ; ಲಾಮಂಚ : ಮುಡಿವಾಳ : "ಉಶೀರಂ . . . ಲಘುಲಯಂ . . . ಲಾಮಂಚದ ಹೆಸರುಗಳು" (ಸಿದ್ಧಂಶ. ೦೩೦). [ಸಂ.]

**ಲಘುಶಂಕೆ** (ನಾ). ಮೂತ್ರವಿಸರ್ಜನೆ. [ಸಂ. ಲಘುಶಂಕಾ]

**ಲಘುಶರೀರಿ** (ನಾ). ಚಟುವಟಿಕೆಯಿಂದ ಕೂಡಿದವನು : ಪ್ರಾಯದ ಜಿಂಕೆಗಳಂತೆ ಲಘುಶರೀರಿಗಳಾಗಿ ಇಬ್ಬರೂ ಎದ್ದು . . . ಪರ್ವತದ ಸಾನುಪ್ರದೇಶದ ಕಡೆ ತಿರುಗಿದರು (ಯೋಗಕ್ಕ. ೬೩). [ಸಂ. ಲಘುಶರೀರಿನ್]

**ಲಘುಸಂಗೀತ** (ನಾ). ಶಾಸ್ತ್ರೀಯಸಂಗೀತಕ್ಕಿಂತ ಭಿನ್ನವಾದ, ಆಧುನಿಕ ಕವನ ಮುಂತಾದುವುಗಳ ಮನೋರಂಜಕವಾದ ಹಾಡುಗಾರಿಕೆ : ಈಚಿನ ದಿನಗಳಲ್ಲಿ ಶಾಸ್ತ್ರೀಯಸಂಗೀತಕ್ಕಿಂತ ಲಘುಸಂಗೀತದ ಕಡೆಗೆ ಹೆಚ್ಚು ಜನರ ಒಲವು ಕಾಣುತ್ತಿದೆ (ರೂಢಿ). [ಸಂ.]

**ಲಘುಹಸ್ತ** (ನಾ). ೧. ಕೈಚಳಕವುಳ್ಳವನು ; ಕರಕೌಶಲವುಳ್ಳವನು. ೨. ವೇಗವಾಗಿ ಬಾಣಪ್ರಯೋಗ ಮಾಡಬಲ್ಲವನು ; ನುರಿತ ಬಿಲ್ಲುಗಾರ : "ಲಘುಹಸ್ತಃ, ಶೀಘ್ರವೇಧೀ – ಈ ೨ ಶೀಘ್ರವಿಸುವಾತಂ" (ಹಲಾಯು. ೬೭-೩೧೭). [ಸಂ.]

**ಲಘೂಕರಣ** (ನಾ). ಹಗುರ ಮಾಡುವುದು; ಕಡಮೆಯಾಗಿಸುವುದು : ಯಾವ ವ್ಯಕ್ತಿಯ ಮೇಲಿನ ದಂಡವನ್ನಾದರೂ ಕ್ಷಮಾಮಾಡುವ . . . ಪರಿಹಾರಮಾಡುವ ಅಥವಾ ಲಘೂಕರಣ ಮಾಡುವ ಶಕ್ತಿಯು ರಾಷ್ಟ್ರಪತಿಯವರಿಗಿರತಕ್ಕದ್ದು (ಶಾರಾಪ. ೩೩). [ಸಂ.]

**ಲಘೂಪಧೆ** (ನಾ). [ವ್ಯಾಕ] ಯಾವುದಾದರೂ ಶಬ್ದದ ಕೊನೆಯ ಅಕ್ಷರದ ಹಿಂದಿನ ಅಕ್ಷರವು ಲಘುವಾಗಿರುವ ಶಬ್ದ,-ಪದ : ಗದವಜಕಾರುವಿದಿರಿರೆ ಪದಮಧ್ಯಂ ವಿಷಯಮಾಗನೇಕಾಕ್ಷರದೊಳ್ ಪುದಿಯೆ ಲಘೂಪಧೆ ಕೆಲಕೆಲವೊಡವಿರ್ಕುಂ ರಾಂತಳಾಂತಮುವು ಶಿಥಿಲತೆಯುಂ (ಶಮಾದ. ೪೩). [ಸಂ. ಲಘೂಪಧಾ]

**ಲಘೂಪಾಗಮ** (ನಾ). = ಲಘುದೋಷ : ಬೇಗಮಾ ಲಘುಗಳಲ್ಲದ ತಾಣದೊಳಂ ಲಘೂಪಾಗಮಕ್ರಮದೆ ನಂಬುಗೆ ಲಾಘವದೋಷಮುಂ (ಕವಿರಾ. ೦-೦೨೭). [ಸಂ.]

**ಲಚಂಡ, ಲಚಾಂಡ** (ನಾ). ೧. (ಉಕ) ಗೋಜು ; ಸಿಕ್ಕು : ತೊಡಕು : ಏನೂ 'ಲಚಂಡ'ವಿಲ್ಲದ ವಿರಕ್ತ ಸುಂದರಕ್ಕ. ಆಕೆಯ ಕಣ್ಣಲ್ಲಿ ಈ ಪರಿ ಮಹಾಪೂರವೇ! (ವ್ಯಶಿ. ೩೨೪) ; ನಿನಗೆ ಯಾರು ಹೇಳಿದ್ದು ಎರಡನೆಯವರ ಲಚಂಡ ಸಂಭಾಳಿಸುವದು ! (ಸ್ವಪ್ನ. ೪೦೪). **ಲಚಾಂಡ** : ೨. ಗೋಳು ; ಸಂಕಟ : ಇಲ್ಲಿಯ ಲಚಾಂಡ ಯಾರು ನೋಡಬೇಕು ? (ದೀಪಹ. I. ೨೦೨). [←ಮರಾ. ಲಚಂಡ್, ಲಚಾಂಡ್]

**ಲಚಾಂಡ** 'ಲಚಂಡ' ನೋ.

**ಲಚ್ಚ₁** 'ಲಕ್ಕ₁' ನೋ.

**ಲಚ್ಚ₂** 'ಲಕ್ಕ₂' ನೋ.

**ಲಚ್ಚಣ₁** 'ಲಕ್ಕಣ' ನೋ.

**ಲಚ್ಚಣ₂, ಲಚ್ಚಣೆ₂** (ನಾ). ೧. ಗುರುತು; ಚಿಹ್ನೆ ; ಲಕ್ಷಣ : "ಲಚ್ಚಣವೆನೆ ಲಾಂಛನಮದು" (ಚಶಬ್ದ. ೨೯) ; ಅಲ್ಲಿ ವಲ್ಲಭೆಯೊಳಿರದಿಲ್ಲದೆ ನೆರಮುವನೀ ಲಚ್ಚಣಮೆ ಪೇಟ್ಟುವಿಲ್ಲಿ ಸಂದೆಗದೋವುದು (ಲೀಲಾವ. ೦೦-೯೭ ವ) ; ಬಿಂದುಲೋಪಕ್ಕೆ . . . ಲಾಂಛನ-ಲಚ್ಚಣ (ಶಮುರ. ೨೮೩ ಪ್ರಯೋ) ; ಹಿರಿಯ ಲಚ್ಚಣದ ಮೊಯ್ಯೆಕಟ್ಟು (ಶದ್ಯಗಾ. ೪-೩೨). ೨. ಕಾಳನ್ನು ರಾಶಿಮಾಡಿದ ಮೇಲೆ ರಾಶಿಯ ಸುತ್ತಲೂ ಹಾಕುವ ಗೆರೆ, – ರೇಖೆ : ನಿಮ್ಮ ಶರಣನು ಲಚ್ಚಣವಳಿಯದೆ ರಾಸಿಯನಳೆವನು (ಅವಸ. ೧೯೭-೮೩೩) ; ರಾಶಿಗಿಕ್ಕಿದ ಲಚ್ಚಣ ರಾಶಿಯ ಕೊಳಬಲ್ಲುದೇನೋ ಮೂಢ ರಾಶಿಯ ಒಡೆಯನಲ್ಲದೆ ಆ ಪರಿಯಲ್ಲಿ ಈ ಲಿಂಗವು ಜಂಗಮದ ಮುದ್ರೆ ಎಂದು ತಿಳಿ (ಶನ್ಯವ. ೦೦-೮). **ಲಚ್ಚಣೆ₂** : ೨. ಸುರರುಣಸಿ ಗಜನೆಂಬ ಪಾಮರಂ ಬೆಳಸಿದುರುತರದ ರಾಜಾನ್ನರಾಶಿಯ ಲಚ್ಚಣೆಯೊ . . . ಎನಲು ಮೆರೆದುದಾ ಪರಿವೇಷವಮೃತದೊಬ್ಬುಳಿಯ ಕೋ (ಶೇರಮ. ೭-೩೭). 'ಲಕ್ಕಣ' ಪರಾ. [<ಸಂ. ಲಾಂಛನ]

**ಲಚ್ಚಣಗಂಬ** (ನಾ). ಸಂಕೇತವಾಗಿ ನೆಟ್ಟ ಕಂಬ ; ಗುರುತಿನ ಕಂಬ : ಎಂಟುವಾನೆಗಳುಂ ತಱತಱನಪ್ಪನಂ ಜಯದ ಲಚ್ಚಣಗಂಬದೊಳುದ್ದಿ ಕೊಳುವೃವಾವೞವೆ ವಿಷ್ಣುವಿಕ್ರಮದುಪಕ್ರಮಮಂ (ಎ೯. V. ಶೇಯೂರು. ೦೭೦-೦೬ ; 1160). [ಲಚ್ಚಣ$_2$+ಕಂಬ$_1$ (<ಕಂಭ)]

**ಲಚ್ಚಣಿಸು** (ಕ್ರಿ). ೧. ಗುರುತಿಸು ; ಗುರುತುಮಾಡು : ಕೇಳುತವೆ ಕಂಬನಿಗಳೊಸರಿದವಾಲಿಗಳಲೋರಂತೆ . . . ಬೀಳುತಿರಲಾ ಮುಂದೆ ಬಹಳ ವಿಶಾಲಭೋಗಸ್ಥಾನವೆಂಬುದನಾಲಿಸುತ ಲಚ್ಚಣಿಸಿ ತೋಱಿಸುವಂತೆ ಬಂದುಗಳು (ಶಶಾಗ. ೦೦-೨೩-೬೩). ೨. (ಕಾವ್ಯದ) ಲಕ್ಷಣಕ್ಕೆ ಹೊಂದಿಸು : ಹಲಗೆ ಬಳಪದಿಂದ ಬರಿಸದಂದದಿ ಪ್ರಾಸ ನೆಲೆಮಾಡಿ ತಿದ್ದಿ ಲಚ್ಚಣಿಸಿ ಬಲಿದು ಪದನ ಮಾಡಿ ಪೇಳ್ದನಾವಡೆ (ಚಿಶಾಂ. ೦-೦೩). [ಲಚ್ಚಣ$_1$ (<ಲಕ್ಕಣ)+—ಇಸು$_2$]

**ಲಚ್ಚಣೆ$_1$** (ನಾ). ಸಾರಸ ಪಕ್ಷಿ : ಪಾಡುವ ಸಾಳಗಂ ಲಳಿಯೊಳಾಡುವ ಲಚ್ಚಣೆ[ಣೆ] (೪ಶಾಬ. ೧೮). [<ಸಂ. ಲಕ್ಷ್ಮಣಾ]

**ಲಚ್ಚಣೆ$_2$** 'ಲಚ್ಚಣ$_2$' ನೋ.

**ಲಚ್ಚಿ** 'ಲಕುಮಿ' ನೋ.

**ಲಚ್ಚಿಸು** (ಕ್ರಿ). ಗುರುತುಮಾಡು ; ಗುರುತಿಸು : ಸಿರೆಗಳ್ ಪರ್ವಿರೆ ತುಱಿಯುಂ ಕಿರಕುಂ ದುಷ್ಟವ್ರಣಂಗಳುಂ ಕುಂದದಪಂದಿರ ತನುಗಳ್ ಪಾಪದ ಫಲದ ರಾಶಿಗಳ್ ಲಚ್ಚಿಸಿರ್ಪ ತೆಱದಿಂದಿರ್ಕುಂ (ಶರ್ಧ್ರ. ೦೦-೩೭). [ಲಚ್ಚ$_2$ (<ಲಕ್ಕ$_2$)+—ಇಸು$_3$]

**ಲಚ್ಛಣ** 'ಲಕ್ಕಣ' ನೋ.

**ಲಚ್ಛಿ** 'ಲಕುಮಿ' ನೋ.

**ಲಜ್ಜರಿಕೆ** (ನಾ). ಮುಟ್ಟಿದರೆ ಮುದುರಿಕೊಳ್ಳುವ ಎಲೆಗಳುಳ್ಳ ಒಂದು ಬಗೆಯ ಗಿಡ ; ಮುಟ್ಟಿದರೆ ಮುನಿ : ಮೊ(ಮೊ)ರಕೆಯ ಬೂದಿಯಂ ಗರುಗದಾ ರಸಮುಪ್ಪವನೊ(ನ)ಟ್ಟಗಲ್ಲ ಲಜ್ಜರಿಕೆ ಸರೋಜನಂ . . . ತಿಲತೈಲದೊಳಟ್ಟು ಪೂಸುಗೆ (ಲೋಕೋಪ. ೯-೨೦೬) ; ವಿವಿಧಶಸ್ತ್ರದ ಘಾಯದೊಳ್ . . . ಹೊನ್ನಗನ್ನೆಯತಕ್ಕ ಸಂಭವಿಸೆ ಲಜ್ಜರಿ[ಶಾಕಾಂ. ೮] ಕಾಖ್ಯಮುಂ . . . ಇವಱೊಳಾವುದನಾದೊಡಂ ತೊಡೆಗೆ (ಖಪರ. ೨-೨೦೩). 'ಲಜ್ಜಾವತಿ' ಪರಾ. [ಸಂ. ಲಜ್ಜರಿಕಾ]

**ಲಜ್ಜಾಲು, ಲಜ್ಜಾಳು** (ಗು). ೧. ನಾಚಿಕೆಯ ಸ್ವಭಾವದ ; ಸಂಕೋಚ ಪ್ರವೃತ್ತಿಯ. (ನಾ). ೨. ನಾಚಿಕೆಯ ಸ್ವಭಾವದ ವ್ಯಕ್ತಿ; ಸಂಕೋಚ ಸ್ವಭಾವದತನು : "ಲಜ್ಜಾಶೀಲಂ ಲಜ್ಜಾಲು" (ಶಸ್ತ್ರಕೋ. ೬೯-೭೬). ೩. = ಲಜ್ಜರಿಕೆ. **ಲಜ್ಜಾಳು** : ೨. ನಾನು ಅತ್ಯಂತ ಲಜ್ಜಾಳುವಾದ ಮನುಷ್ಯ (ಇಶ್ರ೯. ೯೬೨). [ಸಂ.]

**ಲಜ್ಜಾವತಿ** (ನಾ). ೧. ನಾಚಿಕೆಯ ಸ್ವಭಾವದವಳು. ೨. = ಲಜ್ಜರಿಕೆ : ಮುಟ್ಟಿದರೆ ಮುನಿ, ಮುಡುಗುದಾವರೆ, ನಾಚಿಕೆಗಿಡ, ಲಜ್ಜಾವತಿ (ಪ್ರಶಿಗ. ೩೯-೧೦೬೯) ; ನನ್ನ ತೋಟದಲ್ಲಿ ಲಜ್ಜಾವತಿ ಬಳ್ಳಿ (ಜೋಸಕ್ಷ. ೭೭). [ಸಂ. ಲಜ್ಜಾವತೀ]

**ಲಜ್ಜಾವಿಹೀನ** (ನಾ). ನಾಚಿಕೆಯಿಲ್ಲದವನು; ನಾಚಿಕೆಗೇಡಿ ; ನಿರ್ಲಜ್ಜ : "ನಾಣಲಿಯನಲ್ಕೆ ಲಜ್ಜಾವಿಹೀನಂ" (ಕಾಕೆ. ೩೮). [ಸಂ.]

**ಲಜ್ಜಾವಿಹೀನತ್ವ** (ನಾ). ನಾಚಿಕೆಯಿಲ್ಲದಿರುವಿಕೆ ; ಭಂಡತನ : "ಲಜ್ಜಾವಿಹೀನತ್ವದೊಳ್ ಬಂಡು" (ಕಬ್ಬಮಂ. ೯೯). [ಸಂ.]

**ಲಜ್ಜಾಶೀಲ** (ನಾ). ೧. ನಾಚಿಕೆಯ ಸ್ವಭಾವ ; ಸಂಕೋಚಪ್ರವೃತ್ತಿ. ೨. ನಾಚಿಕೆಯ ಸ್ವಭಾವದ ವ್ಯಕ್ತಿ ; ಸಂಕೋಚಸ್ವಭಾವದವನು : "ಲಜ್ಜಾಶೀಲಂ ಲಜ್ಜಾಲು" (ಶಸ್ತ್ರಕೋ. ೬೯-೬) ; [ಸಂ.]

**ಲಜ್ಜಾಹೀನ** (ನಾ). ನಾಚಿಕೆಯಿಲ್ಲದ ವ್ಯಕ್ತಿ ; ಭಂಡ : ನಾನು . . . ಲಜ್ಜಾಹೀನರಾದ ನವೀನಸುಂದರಿಯರನ್ನು ಕುರಿತು ಬರೆಯುವುದಿಲ್ಲ [ಸಂ.]

**ಲಜ್ಜಾಳು** 'ಲಜ್ಜಾಲು' ನೋ.

**ಲಜ್ಜಿಕೆ** (ನಾ). ನಾಚಿಕೆಯನ್ನುಂಟುಮಾಡುವಂಥದು ; ಲಜ್ಜಾಸ್ಪದವಾದುದು : ನನ್ನ ಪ್ರಣಯವನ್ನು ಜನ್ಮವನ್ನು ಸರ್ವಸ್ವವನ್ನೂ ಸಾರ್ಥಕ ಮಾಡಿಕೊಳ್ಳುವುದು ಲಜ್ಜಿಕೆಯ ಅನ್ಯಾಯದ ಅಕ್ರಮದ ದ್ರೋಹದ ಅಕಾರ್ಯವೆ ? (ಪಶ್ಚಿಂ. ೨೩-೨). [ಲಜ್ಜೆ + — ಇಕೆ]

**ಲಜ್ಜಿತ** (ಗು). ೧. ನಾಚಿಕೆಪಟ್ಟುಕೊಂಡ ; ಲಜ್ಜೆಗೊಳಗಾದ. ೨. ಅವಮಾನಗೊಂಡ ; ಅಪಮಾನವನ್ನು ಹೊಂದಿದ. (ನಾ). ೩. ನಾಚಿಕೆಗೊಂಡವನು : ಸಂಕೋಚ ಹೊಂದಿದವನು : ಪ್ರಜೇಶ್ವರನು ವಿಸ್ಮಿತನಾಗಿ, ಲಜ್ಜಿತನಾಗಿ . . . ಸ್ವಲ್ಪ ಭಯಪಟ್ಟವನೂ ಆದನು (ದೇವೀಚ೯. ೧೨೯). ೪. ಅವಮಾನಗೊಂಡ ವ್ಯಕ್ತಿ; ಅಪಮಾನ ಹೊಂದಿದವನು : ಲಜ್ಜಿತನಾಗಿ ತಿರುಗಿದನನುವರದಲೀ ಕರ್ಣನು (ಕುವ್ಯಾದ್ರೋ. ೬-೨೩). ೫. [ನಾಟ್ಯ] ಇಪ್ಪತ್ತು ಸಂಚಾರಿದೃಷ್ಟಿಗಳಲ್ಲಿ ಒಂದು ; ಲಜ್ಜೆಯನ್ನು ವ್ಯಕ್ತಪಡಿಸುವ ನೋಟ; "ರೆಪ್ಪೆಗಳನ್ನು ಮೇಲಕ್ಕೂ ಕೆಳಕ್ಕೂ ಚಲಿಸುತ್ತಾ ಕೆಳಗೆ ನೋಡುವುದು" (ದಾಕ್ಷರಂ. ೨೬೯ ಗದ್ಯಾನುವಾದ) : "ಲಜ್ಜಿತ — ನೆಲನಂ ನೋಡುತೆ ಕಣ್ಣೆವೆಯಲಸದೆ ಮೇಲ್ನೋಡಿ ಬಾಗೆ ಲಜ್ಜೆಯೆನಿಕ್ಕುಂ (ದಾಕ್ಷರಂ. ೩-೨೯). [ಸಂ.]

**ಲಜ್ಜಿತೆ** (ನಾ). ನಾಚಿಕೊಂಡವಳು ; ಸಂಕೋಚಗೊಂಡವಳು : ಆಗಸುತ ಬೆಱಗಾಗುತ್ತೆ ಸಂವರಿಸಿಕೊಳುತೆ ವಲ್ಕಲವಸನಾಭೋಗಮನತಿಲಜ್ಜಿತೆ ತಲೆವಾಗಿದಳನುರಾಗವೇಱ ಪುಳಕಿಸುತಿರ್ದಳ್ (ಗಂ೯. ೦೦-೨). [ಸಂ. ಲಜ್ಜಿತಾ]

**ಲಜ್ಜಿಸು** (ಕ್ರಿ). ೧. ನಾಚಿಕೊಳ್ಳು ; ಸಂಕೋಚಪಟ್ಟುಕೊಳ್ಳು : ನಿಜರೂಪಸ್ತುತಿಗೆ ಲಜ್ಜಿಸಿ ಕೇಳದಂತೆ ಪೋಗೆ (ಕಾದಂಪೂ. ೭೭೮) ; ತಾನೇ ಧರಣಿಪತಿ ನಳನೆನಲು ಲಜ್ಜಿಸಿ ಶಿರವ ನಸುಬಾಗಿದಳು (ನಳಚ. ೩-೯೩) ; ವಲ್ಲಭೆಯ ನುಡಿಗೆ ಲಜ್ಜಿಸಿ ಮನಂ ಕಂದೆ ಕಣ್ಣಾಲಿಗಳ್ ಕೆಂಪಡರೆ (ಕೃಶಾ. ೬-೩೯). ೨. ನಾಚಿಕೆಪಡಿಸು ; ನಾಚಿಕೊಳ್ಳುವಂತೆ ಮಾಡು : ಸಜ್ಜನಸ್ತುತಿಗೆಯ್ಯಲಾತ್ಮಸ್ತುತಿಯುಕ್ಕು ಮಜ್ಜೀವಪರಾಗಿ ಕುಜನರ ಲಜ್ಜಿಸಿ ನಿಂದಿಪೊಡಿಪು ಪುಣ್ಯಕಥೆ (ತ್ರಿಶು. ೦-೦೮). [ಲಜ್ಜೆ + —ಇಸು$_3$]

**ಲಜ್ಜೆ** (ನಾ). ೧. ನಾಚಿಕೆ ; ಸಂಕೋಚ: "ವ್ರೀಡೆ ಲಜ್ಜೆಯೆನೆ ಮಂದಾಕ್ಷಂ" (ವಸ್ತುಕೋ. ೧೦೯-೦೯) ; ಕಾಮಿಗುಂಟೆ ಲಜ್ಜೆ ನಾಚಿಕೆ (ದಸಪ. ೩೦೬): ಪಿಂದಣ ಸೋಲಮಂ ಮಱೆದು ಲಜ್ಜೆಯನೊಲ್ಲದೆ ಮತ್ತೆ ಬಂದನೇ ಪಂದೆ ಗಳೋಜಂ (ಪಶಚ. ೨-೨೩). ೨. ಅವಮಾನ ; ಅಪಮಾನ : ಲಜ್ಜೆಯಿಂ ತಲೆವಾಗಿ ತೋರ್ಪ ತದೀಯ ದೇಶಿಕನಂದಮಂ . . . ನಿಟ್ಟಿಸಿ (ಉದ್ಭಟ. ೩-೦೦೯) ; ನಾರೀವೃಂದ . . . ಗೊಳ್ಳೆಂದು ನಕ್ಕುದು ನೊಂದು ತಲೆವಾಗಿದನು ಲಜ್ಜೆಯಲಿ (ಕುವ್ಯಾಸ. ೦೨-೩೭). ೩. [ಕಾವ್ಯಮೀ] ಮೂವತ್ತುಮೂರು ಸಂಚಾರಿಭಾವಗಳಲ್ಲಿ ಒಂದು : ಮತಿನಿರ್ವೇದಾವಹಿತ್ಥಶ್ರಮ . . . ಅಪಸ್ಮಾರ ಲಜ್ಜಾ ವಿಷಾದಸ್ಥಿತಿ ಚಿತ್ತಭ್ರಂಶ ಮೋಹಾಮಯಕೃತಿಗಳಿವಿಂತೆಯ್ದೆ ಸಂಚಾರಿಭಾವಂ (ಕಾವ್ಯಾಸ. ೭೯೩) ; ಮತಿ ಲಜ್ಜೆ ಆವೇಗ ಶಂಕೆ . . .ಅಪಸ್ಮಾರವೆಂಬ ಮೂವತ್ತುಮೂಱು ಸಂಚಾರೀಭಾವಂಗಳಿಂ ಪರಿವರ್ಧಿಸಿ (ಶಿವೇಶ. ೦೮೦). [ಸಂ. ಲಜ್ಜಾ]

**ಲಜ್ಜೆಕಾತಿ** (ನಾ). ನಾಚಿಕೆಯ ಸ್ವಭಾವದವಳು ; ಲಜ್ಜಾಶೀಲೆ : ಮಾನಭೂಷಣೆ ಲಜ್ಜೆಕಾತಿ ಸೌಜನ್ಯನಿಧಾನೆ ಗಂಭೀರೆ ಸುಶೀಲೆ (ಶರಶ. ೯೩-೬೯). [ಲಜ್ಜೆ +— ಕಾತಿ$_5$]

**ಲಜ್ಜೆಗಾ** (ಕ್ರಿ). ನಾಚಿಕೆಯಿಂದಿರು ; ಸಂಕೋಚವನ್ನು ಉಳಿಸಿಕೊಳ್ಳು: ಸುತ್ತಲುಂ ಸುಜನಮಿರೆಯುಂ ವಿಚಾರಿಸೆನೆ ಮುಃಖದೊಳಕ್ಕನಿರಲ್ಕೆ ಲಜ್ಜೆಗಾಯೆನೆ ಗುರುಗಳ್ಗೆ ಬೆಳ್ಕಱೆನೆ ಚೇಟಕಿಯರ್ನೆರೆದಿರ್ದರೆಂಬದಂ ನೆನೆಯೆನೆ ಕೆಟ್ಟೆನೇನನಿರದಿಂತುಟು ವಿಭ್ರಮದಿಂದೊಡರ್ಚಿದಂ (ಕಾದಂಜ. ೭೭). [ಲಜ್ಜೆ + ಕಾ$_1$]

**ಲಜ್ಜೆಗೆಡು** (ಕ್ರಿ). ನಾಚಿಕೆ ಇಲ್ಲವಾಗು ; ನಿರ್ಲಜ್ಜೆಯಿಂದ ವರ್ತಿಸು : ತೊಟ್ಟನೆ ಲಜ್ಜೆಗೆಟ್ಟುಜೀವುಗೆಟ್ಟೆನ್ನಂತೆ ಕಣ್ಗೆಟ್ಟು ಪೇಟಕೂಲವಿಂದಿಂತೆರ್ದೆಗೆಟ್ಟರಾರ್ (ಶಾರಂಭೂ. ೬೫೦); ಲಜ್ಜೆಗೆಟ್ಟ ಪೆಣ್ಗಳಂತೆ ಮೇಲ್ವಾಯ್ವ ಪೆರ್ಬುಲಿವಿಂಡಿಂ (ರಪಾರ್ಶ್ವ. ೩-೫೩) ; ಲಜ್ಜೆಗೆಟ್ಟಾದರೂ ಲಿಂಗವನೊಲಿಸುವೆ (ಐಪ. ೪೯೬). [ಲಜ್ಜೆ + ಕೆಡು$_1$]

**ಲಜ್ಜೆಗೇಡಿ** (ನಾ). ನಾಚಿಕೆಗೇಡಿ ; ನಿರ್ಲಜ್ಜ : 'ಲಜ್ಜೆಗೇಡಿತನ' ಪರಾ. [ಲಜ್ಜೆ + ಕೇಡಿ$_1$]

**ಲಜ್ಜೆಗೇಡಿತನ** (ನಾ). ನಾಚಿಕೆಯಿಲ್ಲದಿರುವಿಕೆ ; ನಿರ್ಲಜ್ಜತೆ : ನನ್ನ ಲಜ್ಜೆಗೇಡಿತನವನ್ನು ಮನ್ನಿಸಬೇಕು (ಶರೀಪ. ೬೯). [ಲಜ್ಜೆಗೇಡಿ + —ತನ]

**ಲಜ್ಜೆಗೇಡು** (ನಾ). ೧. ನಾಚಿಕೆಗೇಡು ; ನಾಚಿಕೆಯಿಲ್ಲದಿರುವುದು. ೨. ಅವಮಾನಾಸ್ಪದವಾದುದು ; ಅಪಮರ್ಯಾದೆಯಿಂದ ಕೂಡಿದುದು : ಅಜ್ಜಯಿಲ್ಲದ ಮನೆಯು ಮಜ್ಜಿಗಿಲ್ಲದ ಊಟ ಕೊಜ್ಜೆಯುರಿಲ್ಲದರ ಮನೆಯು ಇವು ಮೂರು ಲಜ್ಜೆಗೇಡು (ಸರ್ವಜ್ಞ. ೬೫೦).
[ ಲಜ್ಜೆ + ಕೇಡು ]

**ಲಜ್ಜೆಗೊಳ್ಳು** (ಕ್ರಿ). ನಾಚಿಕೊಳ್ಳು ; ಸಂಕೋಚಪಡು ; ಕೃತ್ತಿಕಾಪುಂಜವು ಲಜ್ಜೆಗೊಂಡಂತೆ ಅಡಗಿಕೊಂಡಿರುವುದು (ಕನ್ನಡಿರ್. ೩೪).
[ಲಜ್ಜೆ + ಕೊಳ್ಳು$_1$ ( < ಕೊಳ್$_1$) ]

**ಲಜ್ಜೆಪಡು** (ಕ್ರಿ). = ಲಜ್ಜೆಗೊಳ್ಳು: ಎಲೆ ಮಗಳೆ, ಒಂದು ಮುಹೂರ್ತ ಲಜ್ಜೆಪಡದಿರು (ಶಾಕುಂತ. ೬೬-೭) ; ತನ್ನ ವೃತ್ತಿ ಕೀಳಾದುದೆಂದು ಭಾವಿಸಿಕೊಂಡು ಲಜ್ಜೆಪಡಬಹುದೆಂಬ ಕಲ್ಪನೆ ಸರ್ವಸಾಧಾರಣವಾದುದು (ಕ್ಷಪರು. ೧೯೭). [ಲಜ್ಜೆ + ಪಡು$_1$]

**ಲಜ್ಜೆಯೇಱು** (ಕ್ರಿ). ನಾಚಿಕೆಯನ್ನು ಹೊಂದು ; ಸಂಕೋಚವನ್ನು ತಾಳು : ಗಣಕರು ಲೆಕ್ಕಿಸಲಾಱದೆ ಬೆಱಗಾಗೆ ಪರಸಮಯಿಗಳ ಮೊಗಂ ಬೆಳ್ಪೇಱೆ ಬಿಜ್ಜಳನ ಮೊಗಂ ಲಜ್ಜೆಯೇಱೆ ಶರಣರ ಮೊಗಂಗಳು ಹರುಷವೇಱೆ (ಬಸರ. ೬-೦೨೬). [ಲಜ್ಜೆ + ಏಱು$_1$ ( < ಏಱ್$_1$) ]

**ಲಜ್ಜೆವೆರಸು** (ಕ್ರಿ). ನಾಚಿಕೆಯಿಂದ ಕೂಡಿರು ; ಸಂಕೋಚಗೊಳ್ಳು : ಕುವರನಂ ಧಟ್ಟಿಸಿ ಮರಾಳಧ್ವಜಂ ಕೇಳ್ವೊಡಡಿಗಿಟ್ಟ ದಿಟ್ಟಿಯಿಂದಂಜುತೊಯ್ಯನೆ ಲಜ್ಜೆವೆರಸಿ ಬಿನ್ನೈಸಿದನವಂ ಪಿತಂಗೆ (ಜೈಮಿನಿ. ೦೦-೨೬) ; ಸಪ್ತಾತಿಸತಿಯರಿನಿಯರ ಸನ್ನಿಧಿಯೊಳು ಲಜ್ಜೆವೆರಸಿ ರಂಜಿಪುದು (ಜಂಬ. ೩-೩೯). [ಲಜ್ಜೆ + ಬೆರಸು$_1$ ( < ಬೆರೆಯಿಸು ) ]

**ಲಟಕ್** (ನಾ). ಒಂದು ಅನುಕರಣ ಶಬ್ದ : ಕೈಯಲ್ಲಿಯ ಪೆನ್ನನ್ನು ಕೆಳಗಿಟ್ಟು ಕೈಯ ಬೊಟ್ಟು ಲಟಕ್ಕನಿಸಿಕೊಂಡರು (ಅಮೂ. ೬ ಹಸ್ಸಿಕ).

**ಲಟಕಟ** (ನಾ). ಬಳಲಿಕೆ; ಆಯಾಸ : "ಲ[ಶಾಕಾಂ.ಅ]ಟಕಟಮೊಂದೊಡೆ ಬಳಲಿಕೆ" (ಶಾರಭ. ೫೦). 'ಲಟಕಟಿಸು' ಪರಾ.

**ಲಟಕಟಿಸು** (ಕ್ರಿ). ೧. ಬಳಲು ; ಆಯಾಸಗೊಳ್ಳು : ಗಾಸಿಯಾದನು ಪವನಸುತನೆಳ್ಳನು ವಿಡುಕದು ಬಾಲ ಊರ್ಧ್ವಶ್ವಾಸಲಹರಿಯಲಡಿಗಡಿಗೆ ಲಟಕಟಿಸಿದನು ಭೀಮ (ಕುಮಾರ. ೦೦-೦೮) ; ಖಂಡೆಯವನುರೆ ರಘುಡಿದು ಕಿಟಿ ಲಟಕಟಿಸೆ ಘಾತಿಸಲು (ಅಮರಾ. ೦-೯-೨೯). ೨. ಆತುರಪಡು ; ತವಕಿಸು ; ಹಾತೊರೆ : ತದ್ವಾದಿಗುತ್ತರೀಗುಡಲೆಂದು ಲಟಕಟಿಪ ಸಮಯದಲ್ಲಿ (ಪದ್ಮರಾ. ೦೦-೬) ; ಘಟ ಬೀಳಲವೆಳಿದ್ದ ಬಳಿಗೆ ಬಂದಪೆನೆಂದು ಲಟಕಟಿಸಿದನು ಕುಮಾರ (ಚೋಹಕ. ೩೦-೨೩) ; ದನುಜರಾರ್ಭಟಿಸಿದರ್ ಜಯಕೆ ಲಟಕಟಿಸಿದರ್ (ಶಿವ. ೦೬-೦೦) ; ಲಟಕಟಿಪ ಸಮರಲಂಪಟರ ಭುಜಗಳ ಹೊಯ್ಲು (ಜೈಮಿನಿ. ೯-೦೬). ೩. ಉದ್ರೇಕಗೊಳ್ಳು ; ಉದ್ದೀಪನಗೊಳ್ಳು : ಉಕ್ಕಿದಾ ಕಿವಿವೇಟ ಕಣ್ಬೇಟಕ್ಕೆ ತಂದುದು ಕಂಗಳೀಕೆಯ ಮುಕ್ಕುಳಿಸಿ ಮೈಸೋಂಕಿನಲಿ ಲಟಕಟಿಸಿದುದು ಹೃದಯ (ಕುಮಾರ. ೧೩-೫೬); ನಿಟಿಲನೇತ್ರನ ಕೋಪಶಿಖಿ ಲಟಕಟಿಸುವಂತಿರೆ ಸಿಕ್ಕಿತಳಲಿಗೆ ಹೆಚ್ಚಿದತಿ ಬಲದಟವಿಯನು ಸವಱಿದುದು ಪಾರ್ಥನಾವೂರಶರಜಾಲ (ಕುಮಾರ್ದ್ರೋ. ೫-೬೦). ೪. ಅಬ್ಬರಿಸು : ಆರ್ಭಟವಮಾಡು : ಸಂತೈಸಿಕೊಂಡಟವಮಟಿಸಿ ಗದೆಯಲಿ ಹೊಯ್ದು ... ಹೆಚ್ಚಿದನೌಕಿ ಬೊಬ್ಬಿಡುತ ಘಟದ ಕಂತುಕ ದಂತೆ ಫಣಿ ಲಟಕಟಿಸಲೌಕಿತು ಗಿಡಗನೆಱೆಯ ಘಟದ ಗಿಳಿಯಂದದಲಿ ಗಿಱಿ ಗಿಱಿಗುಟ್ಟಿದನು ಭೀಮ (ಕುಮಾರ. ೦೩-೩೯) ; ಪಟಪಡಿಂಡಿಮವಾದ್ಯ ಮುರಿತಾಪ ಭೇರಿತಂಬಟದಮಾವಿಗಳಾದಿಯಲಿ ಲಟಕಟಿಸುವ ನಾನಾವಾದ್ಯ ಸಕಲದಿಕ್ತಟ ಬಿರಿವಂತೆ ಗರ್ಜಿಸಿತು (ಪೋಹಕ. ೩೭-೯). ೫. ಹೀಗಳೆ ; ಕೀಳುಮಾಡು : ಮಱಘನವನತಿಗಳೆದು ಬಿಂಬವ ಲಟಕಟಿಸಿ . . . ಕುಟಿಲ ಕುಂತಳೆಯು ಧರವತಿಶಯದಿಂದಲೊಪ್ಪಿದುದು (ಕೋಗಿಯ. ೦೩-೩೭). ೬. ತಗ್ಗು ; ಕಡಮೆಯಾಗು : ಝಳದ ಲಳಿ ಲಟಕಟಿಸೆ ಮಾರ್ಗಸ್ಖಲಿತ ಪೇದಸ್ವೇದಬಿಂದುಗಳೊಳಸರಿಯೆ ರೋಮಾಳಿ ಚಾಳಿಸೆ . . . ಭಾಪೆನುತ ಘುಲ್ಲವಿಸಿದನು ಭೀಮ (ಕುಮಾರ. ೦೦-೯೯). [ಲಟಕಟ + — ಇಸು$_3$]

**ಲಟಕರಿಸು** (ಕ್ರಿ). ಲಟಲಟವೆಂದು ಸದ್ದುಮಾಡು : ಲಟಲಟಾ ಲಟಲಟಾ ಲಟಕರಿಸಿ ವನಜಜಾಂಡ . . . ಬಿಚ್ಚುತಿರಲು (ಏಕಾಕ್ಷ. ೬೫-೯).
[ ಲಟಕರಣ$_0$ + — ಇಸು$_3$ ]

**ಲಟಕಾಯಿಸು** (ಕ್ರಿ). ತೂಗುಹಾಕು; ನೇತುಹಾಕು : ಮಾಧವನ . . . ಚಿತ್ರ ಅವನ ಬಲಪಾರ್ಶ್ವದಲ್ಲಿ ಕಟ್ಟಿಗೆಯ ಫಳಿಗೆ ಲಟಕಾಯಿಸಿತ್ತು (ಬೀಚಿಕ. I. ೧೫೬). [ ಲಟಕಾ$_0$ (P ← ಹಿಂ. ಲಟಕನಾ, ಲಟಕಾನಾ; ಮರಾ. ಲಟಕಣೇ ) + — ಇಸು$_3$ ]

**ಲಟಕಿ** 'ನೆಟ್ಟಿಕೆ' ನೋ.

**ಲಟಕಿಮುರಿ** 'ನೆಟ್ಟಿಗೆಮುರಿ' ನೋ.

**ಲಟಕು** 'ನೆಟ್ಟಿಕೆ' ನೋ.

**ಲಟಕುಮುರಿ** 'ನೆಟ್ಟಿಗೆಮುರಿ' ನೋ.

**ಲಟಕ್ಕು** 'ನೆಟ್ಟಿಕೆ' ನೋ.

**ಲಟಪಟ** (ನಾ). ಒಂದು ಅನುಕರಣ ಶಬ್ದ : ಕೈಕಾಲು ಸತ್ತು ಹೋಗಿ ಲಟಪಟ ನಡುಗುತ್ತವೆ (ಬುಂಜಯ. ೯-೪೦); ಜಾತಿಕುದುರೆಗಳು ಮೆಲ್ಲನೆ ಘೂಂಕರಿಸುತ್ತ ಓಟ ಕಿತ್ತುವು ; ಅವುಗಳ ಗೊರಸು ಕಲ್ಲಿಗೆ ತಗುಲಿ ಲಟಪಟ ಧ್ವನಿ ಹೊರಹೊಮ್ಮುತ್ತಿತ್ತು (ಜಪರು. ೩೩೬).

**ಲಟಪಟ** (ಅ). ಒಮ್ಮೊಂದೊಮ್ಮೆಲೆ; ಇದ್ದಕ್ಕಿದ್ದಂತೆ : ಎತಱ ಕಟಪಟ ಒಂದಿನ ಹೋಗುತಿದ್ದೆ ಲಟಪಟ (ಜನಪ. ೨-೫೨ ಕಲ್ಲಿ).

**ಲಟಪಟಿ** (ನಾ). ಒಂದು ಅನುಕರಣ ಶಬ್ದ : ಓತು ಲಟಪಟಿ ಶಬ್ದಗಳ ಬಲ್ಲೆನೆಂದೆನುತೆ ಚಾತುರ್ಯದಿಂದೆ ಕೆಲ ಶಬ್ದಗಳ ಗಂಟಿಕ್ಕಿ (ತತಿಂ. ೦-೨೦).

**ಲಟಲಟ** (ನಾ). ಒಂದು ಅನುಕರಣ ಶಬ್ದ : ಲಟಲಟಾ ಲಟಲಟಾ ಲಟಕರಿಸಿ ವನಜಜಾಂಡ . . . ಬಿಚ್ಚುತಿರಲು (ಏಕಾಕ್ಷ. ೬೫-೯); ನೆಲದ ಲಟಲಟ ಮುರಿಯೆ ಮೆಟ್ಟುವ ಪಡಂಭೂತಗಳೆಲ್ಲಿವೆ ? (ಕೃಷ್ಣ. ೨೯-೧). 'ಲಟಲಟನೆ', 'ಲಟಲಟಿಸು' ಪರಾ.

**ಲಟಲಟನೆ** (ಅ). ಲಟಲಟ ಎಂದು ಸದ್ದಾಗುವಂತೆ : ಕಟ್ಟಿದ ಲಿಂಗವ ಬಿಟ್ಟು ಬೆಟ್ಟದ ಲಿಂಗಕ್ಕೆ ಹೋಗಿ ಪೊಟ್ಟಡಿಯಾಗಿ ಬೀಳುವ ಲೊಟ್ಟೆಮೂಳನ ಕಂಡಡೆ ಮೆಟ್ಟಿದ್ದ ಎಡಪಾದರಕ್ಷೆಯ ಕಗೊಂಡು ಲಟಲಟನೆ ಹೊಡಿ (ವಕಾ. I. ೩೨೪-೦೨); ಲಟಲಟನೆ ಲಟಿಗೆಹೊಡೆಯುತಲಿಹುವು ಮೊಗ್ಗೆಗಳು (ಕರುಣ್ಯ. ೯೩-೦೩). [ ಲಟಲಟ + — ಅನೆ$_1$ ]

**ಲಟಲಟಿಸು** (ಕ್ರಿ). ೧. ತವಕಿಸು ; ಆತುರಪಡು : ನೆಱನತ್ತಿ ಬೈವ ಪುರುಡಿಪ ಜಱಿಯುವ ಒರಿದಲಸೆ ಕೂಡ ಲಟಲಟಿಸುವ ಮೇಲ್ಪರಿಯದೆ ಸೋಂಕುವ ಕೂರದೊಡೆಱಗುವ ವಿಟನೆಗ್ಗನಲ್ತೆ (ಮರಿ. ೦೦-೯೬); ಮಟ್ಟು ನೋಡುವ ದೃಷ್ಟಿಯೆವೆಯಿಕ್ಕ ಲಟಲಟಿಸುತಿರೆ ಚಿತ್ತ (ಸೌಂದರ. ೨-೫೫); ಕಟಕದೊಳದ್ದಾನೆಕುದುರೆ ಬೆದಱಿ ಲಟಲಟಿಸುತತ್ತಿತ್ತಲೋಡಿದುವು

(ಶರಕ. ೩೯-೩೬). ೨. ಹಿಂಸೆಪಡು : ತೊಂದರೆಗೊಳಗಾಗು : ಹಸಿವು ನೀರಡಿಕೆಯಿಂ ಲಟಲಟಸುತಿಹ ಬಾಧೆ (ಶೀಕೃತ. ೯-೨೫-೩). ೩. ಉತ್ಸಾಹದಿಂದ ಮುನ್ನುಗ್ಗು : ಪುಟಚಂಡಿನಂತೆ ಲಂಘಿಸುತಾಗೊಳ ಹೊಕ್ಕು ಪಟುವಾದ ಶೌರ್ಯದೇಳ್ಗೆಯಲಿ ಲಟಲಟಿಸುತ ಕಾಲಾಳ ಖಂಡಿಸು ತುತ್ಕಟದಲಿ ಕಲಿಯೇಚು ಮೆಚಿ³ದ (ಕಂಕಾ. ೦೮-೦೬೨). ೪. ಚೂರು ಚೂರಾಗು; ಛಿನ್ನಛಿನ್ನವಾಗು : ನಟಿಸಿ ಮೇಗೆತ್ತಿ ಕುಕ್ಕುಟಿಸಿ ನೆಲನಂ ಟೊಣೆದು ಹಲಗೆಯೊತ್ತಿನೊಳಸಿಲುನು ಲಟಲ[ಪಾಠಾಂ. ಕ]ಟಿಸಲಿಕ್ಕ ವಾಮಾಂಗ ಕುಸಿಯಲು (ಕೋಶುಕ. ೩-೦೬). [ ಲಟಲಟ + — ಇಸು₃ ]

**ಲಟಹ** (ನಾ). ಸೊಗಸು ; ಸೌಂದರ್ಯ : ಪಟಿ³ಯುಂ ಪೊಯ್ಲ್ಲುಯೊಸೆದು ರಾಗಿಸಿ ತ್ರಿದಂಡಮನೆತ್ತಿ ಸೋರ್ಕಿದ ಪ್ರಜೆವೆರಸು ಲಟಹದಿಂದಾಡಿದೊಂ (ಪಶ್ಚಾರಾ. ೦೯೦-೦೩); ಲಟಹ[ಪಾಠಾಂ. ನ]ಯುತಂಗಳ್ ದುಗ್ಧಚ್ಛಟೋಜ್ಜ್ವಲಂಗಳ್ ತದಮರಚಮರರುಹಂಗಳ್ (ಅಂಕ. ೭-೩೦) ; ಆ ತರಳಾಪಾಂಗ ವಿಲಾಸಮಾ ಲಟಹಮಾ ಲಾವಣ್ಯಮಾ ಪುಣ್ಯಮಾ ದರಹಾಸಾಮೃತಮೇಂ ಮನಂಗೊಳಿಸಿತೋ (ಗದಾಯು. ೭-೩೦). [ಸಂ.]

**ಲಟಾಪಟ** (ನಾ). ಹೊಡೆದಾಟ ; ಗುದ್ದಾಟ : ನನಗೂ ಅವನಿಗೂ ಒಮ್ಮೆ ಆಗಿತ್ತು ಲಟಾಪಟ (ಪೀಠಾ. ೯) ; ಗಂಡ_ಹೆಂಡತಿ, ಮಾವ–ಅಳಿಯ ಇವರಿಗೆ ಲಟಾಪಟ ಜಗಳಗಳಾದದ್ದುಂಟು (ಪಂಹಾಸ. ೨೯) ; ದೊಣ್ಣೆಗಳ ಲಟಾಪಟಿ ಶಬ್ದ ಮುಂತಾಗಿ ಬಹಳ ಗದ್ದಲವು ಹತ್ತಿತು (ಕೀಂಕ. ೦೩೯). [ ← ಹಿಂ. ಮರಾ. ಲಟಾಪಟೀ]

**ಲಟ** (ನಾ). ಒಂದು ಬಗೆಯ ಭಕ್ಷ್ಯ : ಭಾಗ್ಯಪುರದ ಚೆನ್ನಿಗರಾಯಗೆ ಮಾಡಿದ ಸೇವೆ . . . ತುಪ್ಪದ ಲಟ ಬೆಲ್ಲದ ಕರ್ಜ್ಜಾಯ ೧೦ ತಾಂಬೂಲಕೆ ಅಡಕೆಯ ಹೋಳು ೧೦ (ಎಕ. XI, ಹೊಳೆ. ೦೦೩-೦೮ ; 1556). [?]

**ಲಟಿಕಿ** 'ನೆಟ್ಟಿಕೆ' ನೋ.

**ಲಟಿಕಿಹೊಡೆ**. ಲಟಿಗೆಹೊಡೆ (ಕ್ರಿ). ಚಿಟಿಕೆಹಾಕು : ನಾನು . . . ಹೇಳಿದರೆ ನಿನ್ನ ಬಾಯಿ ತಾನೇ ಮುಚ್ಚುವುದು (ಲಟಿಕಿಹೊಡೆಯುವಳು) (ಕಾದಪ್ತ. ೩೩) : (ಅಕಳಿಸಿ ಲಟಿಕಿಹೊಡೆದು) ಕಾಲಾಯತಸ್ಮೈನಮಃ ! (ಹೊಸಂಕಾ. ೯೦). **ಲಟಿಗೆಹೊಡೆ** : ಲಟಿಗೆಹೊಡೆದು ಮೇಜು ಗುದ್ದಿ . . . ಒಮ್ಮೆಲೆ ನನ್ನನ್ನು ಮಾತನಾಡಿಸಿದ (ಗಾಳಿ. ೨೦) ; ಲಟಲಟನೆ ಲಟಿಗೆ ಹೊಡೆಯುತಲಿಹವು ಮೊಗ್ಗೆಗಳು (ಕರುಣಾ. ೯೩-೦೩).
[ಲಟಿಕಿ ( < ನೆಟ್ಟಿಕೆ) + ಹೊಡೆ₁ (< ಪೊಡೆ₁)]

**ಲಟಿಕೆ** 'ನೆಟ್ಟಿಕೆ' ನೋ.

**ಲಟಿಕೆಮುರಿ** 'ನೆಟ್ಟಿಗೆಮುರಿ' ನೋ.

**ಲಟಿಗೆ** 'ನೆಟ್ಟಿಕೆ' ನೋ.

**ಲಟಿಗೆಮುರಿ** 'ನೆಟ್ಟಿಗೆಮುರಿ' ನೋ.

**ಲಟಿಗೆಹೊಡೆ** 'ಲಟಿಕಿಹೊಡೆ' ನೋ.

**ಲಟುಕಿಕೆ** (ನಾ). ಒಂದು ಬಗೆಯ ಪಕ್ಷಿ : ಚಿಕ್ಕಹಕ್ಕಿಯಾದ ಲಟುಕಿಕೆ ಕೂಡ ತನ್ನ ಗೂಡಿನಲ್ಲಿ ಬೇಕಾದುದನ್ನು ಹೇಳಬಲ್ಲುದು (ಬುದ್ಧ. ೯೦).
[<ಸಂ. ಲಟ್ವಾಕಾ ?]

**ಲಟುಕು** (ನಾ). ಸೊಗಸು ; ಸೌಂದರ್ಯ : ಸಾಮಾನ್ಯವಾಗಿ ಅಂಥ ಲಟುಕು ಅವರ ಸ್ವಂತದ್ದಾಗಿರುವುದು (ಸುಶ್ರೀ. ೬೨). [< ಸಂ. ಲಟಹ]

**ಲಟ್ಟ₁** (ನಾ). ದುಷ್ಟ ; ನೀಚ ; ಧೂರ್ತ : "ಲಂಡ — ಲಡ್ಡ(ಟ್ಟ) = ಧೂರ್ತ, ಅಸಭ್ಯ" (ಕಪ್ಯಕೋ. ೩೯). [ಸಂ.]

**ಲಟ್ಟ₂** 'ಲತ್ತ' ನೋ.

**ಲಟ್ಟಣಿಗೆ** (ನಾ). ೧. ಚಪಾತಿ, ಹಪ್ಪಳ ಮುಂತಾದುವನ್ನು ಲಟ್ಟಿಸುವ (ಮರದ) ಉರುಳೆಯಂಥ ಸಾಧನ ; ರತ್ತೋಡಿ ; ಲತ್ತೋಡಿ ; ಲತ್ತೆಗಣೆ : ಹಿಟ್ಟಿನ ಕೊಟ್ಟರೆ ಭಟ್ಟರು ರೊಟ್ಟಿಯ ಥಟ್ಟನೆ ಸುಟ್ಟು ಕೊಟ್ಟಾರು ಹಿಟ್ಟಿಲ್ಲದಿದ್ದರೆ ಕುಟ್ಟಿ ಲಟ್ಟಣಿಗೆಯ ಥಟ್ಟನೆ ಸಿಟ್ಟಿಗೆದ್ದಾರು (ಸಂಪ್ರತಿ. ೦೩-೩೨) : ಲಟ್ಟಣಿಗೆ : ೧೦" ಉದ್ದವಿರಬೇಕು (ಅಡುಗೆ. ೩೪). ೨. ಮುದ್ರಣಯಂತ್ರದಲ್ಲಿ ಜೋಡಿಸಿದ ಅಚ್ಚಿನ ಮೊಳೆಗಳಿಗೆ ಮಸಿಯನ್ನು ಹಚ್ಚುವ ಉರುಳುಕಂಬಿ ; ಉರುಳೆ : ಅಕ್ಷರಗಳೆಲ್ಲ ಆ ಕಲ್ಲ ಮೇಲೆ ಮೂಡುತ್ತವೆ . . . ಅದರ ಮೇಲೆ ಮಸೀ ಹಚ್ಚುವ ಲಟ್ಟಣಿಗೆಯನ್ನು ಆಡಿಸಿ, ಮೇಲೆ ಬಿಳೇ ಕಾಗದವನ್ನು ಹಾಕಿ ಒತ್ತಿದ ಕೂಡಲೆ ಅದರ ಮೇಲಿನ ಆ ಕಾಗದದ ಮೇಲೆ ಮೂಡುತ್ತವೆ (ಮುಂಬಯಿ. ೯-೨೦೩). [?./ಮರಾ. ಲಾಟಣೇ, ಲಾಟಣೇ]

**ಲಟ್ಟನೆ** (ಅ). ಕೂಡಲೆ ಎಂಬರ್ಥವನ್ನು ಸೂಚಿಸುವ ಒಂದು ಅನುಕರಣಾವ್ಯಯ : ಉದಾರ ಹುದ್ದರಿಗಳ ಲೆಕ್ಕಪತ್ರವನ್ನು ಲಟ್ಟನೆ ಗೋಡೆಗೆ ನೇತುಹಾಕಿದ ಹಾಟಿಯ ಮೇಲೆ ಹಚ್ಚಿಡುವ (ಮುಂಗಾರು. ೩೬); ಅದರ ವಾಸನೆ ನಿನಗೆ ಲಟ್ಟನೇ ಬಡೀತದ (ದೀಕಹ. II. ೬೩). [ಲಟ್₀ + – ಅನೆ₁]

**ಲಟ್ಟಲೂರ್**. ಲತ್ತಲೂರ್ (ನಾ). ಒಂದು ಊರಿನ ಹೆಸರು ; P ಈಗಿನ ಮಹಾರಾಷ್ಟ್ರದಲ್ಲಿರುವ ಲಾತೂರ್ : ಲಟ್ಟಲೂರ ಪುರಪರಮೇಶ್ವರಂ ಶ್ರೀನೃಪತುಙ್ಗನಾಮಾಂಕಿತ ಲಕ್ಷ್ಮೀವಲ್ಲಭೇಂದ್ರಂ (ಇಎ. XII. ೨೦೮-೦೩; 814). **ಲತ್ತಲೂರ್** : ಲತ್ತಲೂರ್ ಪುರವರೇಶ್ವರರು (ಇಎ. XIX. ೦೮೮-೯; 962).
[ ? + ಊರ್]

**ಲಟ್ಟವಾಡ** (ನಾ). ಒಂದು ಊರಿನ ಹೆಸರು : ಬಧಮಾಳಿದ್ವಾದಶಸ್ಥಾನ್ಸ್ಥ: ಲಟ್ಟವಾದೊ(ಡೋ)ನಾಮಗ್ರಾಮಃ ತ್ರಿ(ತ್ಯ)ತೀಯಃ (ಇಆ. VII. ೨೦೯-೮೯ ; ಶ. 10ನೆಯ ಶತ). [ಲಟ್ಟ₀ + ವಾಡ ( <ಬಾಡ) ]

**ಲಟ್ಟಿಸು** (ಕ್ರಿ). (ಚಪಾತಿ, ಹಪ್ಪಳ ಮೊದಲಾದುವನ್ನು ಮಾಡಲು) ಹಿಟ್ಟಿನ ಉಂಡೆಯನ್ನು ಲಟ್ಟಣಿಗೆಯಿಂದ ಒತ್ತಿ ತೆಳ್ಳಗೆ ಮಾಡು : ಮೊನ್ನೆ ಬೇಸಗೆಯಲ್ಲಿ ಲಟ್ಟಿಸಿದ ಹಪ್ಪಳ, ಇಟ್ಟ ಸಂಡಿಗೆ, ತುಂಬಿಟ್ಟ ಉಪ್ಪಿನಕಾಯಿಭರಣಿ ಎಲ್ಲ ತೆರೆದಿತು (ಸಂಕು. ೦೬-೭); ಭವಾನಿಯು ಹಪ್ಪಳವನ್ನು ಲಟ್ಟಿಸುತ್ತಾ ಮಾಲಿನಿಯೊಡನೆ ಹರಟೆ ಹೊಡೆಯುತ್ತಲಿದ್ದಳು (ಮೊಗ್ಗು. ೨೯). [ಲಟ್ಟ₀ (P ← ಮರಾ. ಲಾಟಣೇ) + – ಇಸು₃]

**ಲಟ್ಟಿ₁** (ನಾ). ೧. ನಾಲಗೆಯಿಂದ ಮಾಡುವ ಒಂದು ಶಬ್ದ,– ಧ್ವನಿ ; ಚಪ್ಪರಣೆ; ಲೊಟ್ಟೆ : ಆನೆ ಮುಂದಕ್ಕೆ ಹೊರಟಿತು . . . ಹಯಾತನು ಲಟ್ಟೀ ಹಾಕುತ್ತಲೇ ಇದ್ದ (ಕಂಗಾಳ. ೨೬೨). ೨. ವ್ಯರ್ಥವಾದುದು ; ನಿಷ್ಪ್ರಯೋಜಕವಾದುದು : 'ಲಟ್ಟಿಕಾರ' ಪರಾ.

**ಲಟ್ಟಿಹಾಕು** = ನಾಲಗೆಯಿಂದ ಶಬ್ದ ಮಾಡು ; ಚಪ್ಪರಿಸು : ಹಯಾತನು ಕಪ್ಪಗಳಾಚೆ ನಿಂತು ಲಟ್ಟಿಹಾಕಿದನು (ಕಂಗಾಳ. ೨೯೩).

**ಲಟ್ಟಿ₂** (ನಾ). ಎಳೆಯ ಬಿದಿರು; ಕಳಿಲೆ : ಎಳಮಾವಿನ ಮಿಡಿ ಮಾಗುಳ ಮೆಣಸಿನ ಕರೆ ಬೆತ್ತ ಲಟ್ಟಿಯಾಳೆಯ ಗೊಲೆಯಿಂದಳವಟ್ಟಿರೆ ಲಾವಣಕಂಗಳ ನಿಕ್ಕಿದರಾಗಳಟ್ಟಿಯಿಂದಂಗನೆಯರ್ (ಸುಕುಮಾ. ೦೦-೩೦). 'ಬಿತ್ತರಟ್ಟಿ' ನೋ.

**ಲಟ್ಟಿ₃** (ನಾ). ಕೆಟ್ಟ ಹೆಂಗಸು ; ದುಷ್ಟೆ : ದಿಟ್ಟೆಯರು ಕುಟಿಲೆಯರು ಕುಹಕದ ಘಟ್ಟಿಯರು ಲಟ್ಟಿ[ಪಾಠಾಂ. ಮಟ್ಟಿ]ಯರು (ಬಸವ. ೯೦-೩೬).
[ ಸಂ. 'ಲಟ್ವಾ]

**ಲಟ್ಟಿಕಾರ** (ನಾ). ನಿಷ್ಪ್ರಯೋಜಕ ವ್ಯಕ್ತಿ : ಲುಬ್ಧಗುಣದಿಂದ ತೂಟ್ಟು ಋಣವನ್ನುಂಗುವರು . . . ಲಟ್ಟಿಕಾರರನೇರಿ ಘನ ಘಳಿಸಿ ಧರ್ಮಕ್ಕೆ ಥಟ್ಟನೆ ಪದಗುವರು (ಉದ್ಯೋಗ. ೭-೯೦-೦೨). [ಲಟ್ಟಿ₁ + –ಕಾರ₁ ( < –ಕಾಱ)]

**ಲಟ್ಟಿಕಾರಿಕೆ** (ನಾ). ವ್ಯರ್ಥವಾದುದು ; ತಿರುಳಿಲ್ಲದುದು ; ಸತ್ವವಿಲ್ಲದುದು : ಹೊಟ್ಟೆಯ ಹೊರುವರು ಲಟ್ಟಿಕಾರಿಕೆಯ ಮಾತಾಡಿ ಜಗದೊಳು ಸಿಟ್ಟಲಿ ಮೆರವರು ಪ್ರಜ್ಞಾನಿ (ಉದ್ಯೋಗ. ೭-೯೬-೦೦).
[ಲಟ್ಟಿಕಾರ + – ಇಕೆ]

**ಲಠ**, ಲಟ್ಟ₂ (ಗು). ೧. ದಪ್ಪವಾದ ; ಸ್ಥೂಲವಾದ : ಈಗ ಯಜಮಾನನಾಗಿದ್ದಾನೆ. ಈ ಲಠ ಹೊಟ್ಟೆಯುವ (ಶಾರಥಿ. ೬೯). (ನಾ). ೨. ದಪ್ಪ; ಸ್ಥೂಲ : ಅಬ್ಬಾ ಎಷ್ಟು ಲಠ–ಆನೆಯಂತಿದ್ದಾಳಲ್ಲ (ಕೈಶಿ. ೪); ಎರಡು ದಿನದಾಗ ಎಷ್ಟ ಲಠ ಆಗೀನಿ ನೋಡ್ರಿ (ಕೃಷಿ. ೦೯೯). ೩. ಲಾಠಿ; ದೊಣ್ಣೆ : ಲಠ ಹಿಡಿದ ಪೋಲೀಸಿನವನು ಗಸ್ತು ತಿರುಗುತ್ತಿದ್ದನು (ರೂಢಿ). **ಲಟ್ಟ₂** : ೩. ಅವರುಗಳ ಕೈಯಲ್ಲಿ ಹಣವುಟ್ಟದ ಲಟ್ಟಗಳಿದ್ದುವು (ಶೆಂಗಾಳ್ಕ. ೯೯೬). [← ಹಿಂ. ಲಟ್ಠಾ; ಮರಾ. ಲಠ]

**ಲಡತ್ತು** (ನಾ). ಕುಸ್ತಿ; ಜಟ್ಟಿಕಾಳಗ; ಮಲ್ಲಯುದ್ಧ : ನನ್ನ ಎದುರಿಗೆ ಅವರನ್ನು ಲಡತ್ತು ಮಾಡಿಸುತ್ತಿದ್ದರು (ಕೆಂಪಿ. ೦೯೦).
[← ಹಿಂ. ಲಡಂತ್]

**ಲಡಾಯ** ' ಲಡಾಯಿ ' ನೋ.

**ಲಡಾಯಿ**, ಲಡಾಯು, ಲಢಾಯಿ (ನಾ). ಯುದ್ಧ; ಕಾಳಗ : ಆಯುತದ ರಣರಾಜಕವ ನೋಡ್ದು ಭೀಮನ ಲಡಾಯಿಯುಂಪರಿದು ಗುರು ಪಹಿಲದಿಂ ಬರುತಲು (ತುರಂಗ. ೩೩–೩೬); ಚಿತ್ರಗಲ್ಲ ಪಾಳೆಗಾರನು ಶೀರ್ಯದವರ ಮೇಲೆ ಲಡಾಯಿಗೆ ಬಂದಲ್ಲಿ (ಕೃಚರಿ. ೨೯); ಬಡಾಯಿ ಬಲ್ಲವನು ಲಡಾಯಿ ಬಲ್ಲನೇ ? (ಗಾದೆ). **ಲಡಾಯು** : ಪೇರಳ ಲಡಾಯುವಾಗಿ ಅವರ ಕಡೇ ಸುಮಾರು ೧೫೦೦ ಜನ ಪರಿಯಂತ್ರ ಮೃತವಾಗಿ (ರಾಜೇಂದ್ರ. ೬); ಇಬ್ಬರಿಗೂ ಪದ್ಧತಿಯಂತೆ ಬೈಗುಳದ ಒಂದು ಲಡಾಯುವೇ ನಡೆದುಹೋಯ್ತು (ತುಳಿಚು. ೯೩೦). **ಲಢಾಯಿ** : ಊವವನೊಡನೆ ಏಕೆ ಲಢಾಯಿ ? (ಅರಳು. ೦೩೯–೦೧). [← ಹಿಂ. ಲಡಾಈ ; ಮರಾ. ಲಡಾಈ, ಲಢಾಈ]

**ಲಡಿ** (ನಾ). ದಾರ ಮುಂತಾದುವುಗಳ ನೀಳವಾದ ಮತ್ತು ಸಡಿಲವಾದ ಸುರುಳಿ, –ಸರ : ನಿದ್ದೆಗೆಟ್ಟು ದಾರದ ಲಡಿಗಳನ್ನು ಅಳೆದರು . . . ದಾರ ಕಡಿಮೆಯಿರುವುದರಿಂದ ಲಡಿಗಳನ್ನೆಲ್ಲ ನಿರಾಕರಿಸಬೇಕೆಂದು ದಾದಾಭಾಯಿ ಅಭಿಪ್ರಾಯಪಟ್ಟರು (ಜ್ಯೋತಿ. ೬); ಗೂಡುಗಳನ್ನು ಸಂಗ್ರಹಿಸಿ, ಹಬೆಯಲ್ಲಿ ಇವನ್ನು ಬೇಯಿಸಿ ತುಂಡಾಗದ ಸಿಲ್ಕ್‌ನಾರನ್ನು ಲಡಿಗಳನ್ನಾಗಿ ಸುತ್ತುತ್ತಾರೆ (ಗೃಹವಿ. ೬೬). [← ಹಿಂ. ಮರಾ. ಲಡ್, ಲಡೀ]

**ಲಡ್ಡ** (ನಾ). ದುಷ್ಟ; ನೀಚ; ಧೂರ್ತ : " ಲಂಡ–ಲಡ್ಡ(ಟ್ಟ) = ಧೂರ್ತ, ಅಸಭ್ಯ " (ಕರ್ನಾಟಕ. ೩೮). [ಸಂ.]

**ಲಡ್ಡಿ** ' ಲೊಡ್ಡು ' ನೋ.

**ಲಡ್ಡಿಕೆ** ' ಲಡ್ಡುಗೆ ' ನೋ.

**ಲಡ್ಡಿಗೆ** ' ಲಡ್ಡುಗೆ ' ನೋ.

**ಲಡ್ಡು₁** ' ಲೊಡ್ಡು ' ನೋ.

**ಲಡ್ಡು₂** (ನಾ). ಒಂದು ಬಗೆಯ ಸಿಹಿತಿನಿಸು ; ಲಾಡು : ಮನಕಕ್ಕರ ತೋರುವ ಬುಂದೆಗಳು ಕರದಿಕ್ಕಿದ ಜಿಲ್ಬಿಲಿ ಲಡ್ಡುಗಳು (ಜನಗ. ೯೬) ; ಲಡ್ಡು ತಿನ್ನುತ್ತೀಯಾ ? (ರುಜಾಹ. ೦೮). ' ಲಾಡು ' ಪರಾ.
[ಸಂ./ಹಿಂ. ಲಡ್ಡೂ ; ಮರಾ. ಲಡ್ಡು]

**ಲಡ್ಡುಕ** (ನಾ). = ಲಡ್ಡು₂ : ಲಡ್ಡುಕ ಪೂಪ ಗಾರಿಗೆ ಮುಂತಾದ ಪಲವು ಭಕ್ಷ್ಯಗಳ . . . ನೈವೇದ್ಯವೆತ್ತಿದನು (ಶಾಂತೀಶ. ೯–೯೯). [ಸಂ.]

**ಲಡ್ಡುಗ** ' ಲಡ್ಡುಗೆ ' ನೋ.

**ಲಡ್ಡುಗೆ**, ಲಡ್ಡಿಕೆ, ಲಡ್ಡಿಗೆ, ಲಡ್ಡುಗ (ನಾ). = ಲಡ್ಡು₂ : ಪಲವುಂ ತೆರದ ಲಡ್ಡುಗೆಗಳ್ ಮಂಡಗೆಗಳುಂ ಮೊದಲಾಗೊಡೆಯ ಪಲವುಂ ಭಕ್ಷ್ಯರೂಪಂಗಳುಮಂ ಕೊಂಡು (ಪಡ್ಮರಾ. ೦೬–೦೩) ; ಪಿಷದ ಲಡ್ಡುಗೆಯ ನಿಕ್ಕಿಯುಂ . . . ಗೆಲಲಾಬಿದೆ (ಶಂಕರಾ. ೨–೩೨ ಪ) ; ಹೂರಿಗೆಯ ಲಡ್ಡುಗೆಯ ಬಟ್ಟಂಗಳಲ್ಲಲ್ಲಿ (ಬಸವ. ೬–೦೦) ; ಮುಗಿಲ ಬೆನಕಗೆ ಲಡ್ಡುಗೆಗಳಾದವು ಸಮಸ್ತಗ್ರಹಸುತಾರೆಗಳು (ಕುಮಾರ. ೦೯–೦೬). **ಲಡ್ಡಿಕೆ** : ಸಡ್ಡಕನಿಗಿಂತ ನೆಂಟನಿಲ್ಲ, ಲಡ್ಡಿಕೆಗಿಂತ ಕಜ್ಜಾಯವಿಲ್ಲ (ಗಾದೆ). **ಲಡ್ಡಿಗೆ** : ಪಿಷದ ಲಡ್ಡಿಗೆ ಮೆದ್ದಿತು ಕೂಸು (ಕುರಂದ. ೦–೦೯–೨) ; ಲಡ್ಡಿ[ಪಾಠಾಂ. ಡ್ಡು]ಗೆಯ ಬಿಚ್ಚೋರಿಗೆಗಳಂ ಬಡ್ಡಿಸಿದರಂಗನೆಯರು (ಸುರೇಖ. ೦೬–೨೯); ತರಗು ಲಡ್ಡಿಗೆಗೆ ಡೊಳ್ಳು ಗಣಪತಿಯೇ ಶ್ರೇಷ್ಠ (ಗಾದೆ). **ಲಡ್ಡುಗ** : ವರದ ಪಾಶಾಂಕುಶಕ ಲಡ್ಡುಗದಿಂದೆ ಕರಪೆಸೆವ . . . ಗಣನಾಥ ಕರುಣಿಸು ಮತಿಗೆ ಮಂಗಳವ (ಅಕ್ರೂರ. ೦–೪). [< ಸಂ. ಲಡ್ಡುಕ]

**ಲಡ್ಡುಮರ** ' ಲೊಡ್ಡುಮರ ' ನೋ.

**ಲಢಾಯಿ** ' ಲಡಾಯಿ ' ನೋ.

**ಲತಾಂಗ** (ನಾ). ೧. ಬಳ್ಳಿಯಂತೆ ಬಳುಕುವ ಕೋಮಲವಾದ ಶರೀರ : ಕುಡಿಹುಬ್ಬು ಸಿಂಗಾಡಿಯೋಲ್ ಹೊಳೆವ ಹೊಂಬಣ್ಣದ ಲತಾಂಗ (ಕ್ರಿತರಂ. ೩–೨೬) ; ಮಾಲೆಗಾರ್ತಿಯರ . . . ಲತಾಂಗಮಂ ತಾಗಿ, ಬೀಗಿ, ದಕ್ಷಿಣಾನಿಲನೆಂತಿರೆ ಪಶ್ಚಿಮಾನಿಲಂ ಮೈದೋಱಲೊಡಂ (ಅವಂತಿ. ೨–೨೩). ೨. [ಜೈನ] ದೀರ್ಘವಾದ ಕಾಲದ ಒಂದು ಅವಧಿ, –ಮಾನ : ಎಂಬತ್ತುನಾಲ್ಕುಲಕ್ಷ ಗುಣಿತಕ್ರಮದಿಂದ . . . ಲತಾಂಗ ಮತ್ತು ಲತಾ, ಮಹಾಲತಾಂಗ ಮತ್ತು ಮಹಾಲತಾ ಎಂಬವು ಕ್ರಮದಿಂದ ಆಗುತ್ತವೆ (ಜೈಪತ. ೩೦೬). [ಸಂ.]

**ಲತಾಂಗಿ**, ಲತಾಂಗಿ (ನಾ). ೧. ಬಳ್ಳಿಯಂತೆ ಕೋಮಲವಾದ ಶರೀರವುಳ್ಳವಳು ; ಸುಂದರ ಸ್ತ್ರೀ : ನೀಳನೀರಜವನಂಗಳ ಚೆಲ್ವುಗಳೆಂಬುವಾ ಲತಾಂಗಿಯ ಕಡೆಗಣ್ಣ ಬೆಳ್ಪುಗಳ ಸಿಲ್ಕಿದ ಸಿಲ್ಕಿನ ಸಿಲ್ಕಿವಲ್ಲವೇ (ಶಂಕರಾ. ೪–೬೦) ; ತಲ್ಲತಾಂಗಿಯು ನಾಮವಣ್ಣಲದೇವಿ (ಪತಿ. ೯೮–೪) ; ಬಂದೆತ್ತಿದರು ರಾಘವಪ್ರಾಣೆಯಂ . . . ಲಂಕಾಲತಾಂಗಿಯರ್ (ತ್ರೀರಾಮ. ೩೨೨–೬೬). ೨. [ಸಂಗೀತ] ಒಂದು ರಾಗದ ಹೆಸರು : ಅವರು ಹಾಡಿದ ಲತಾಂಗಿರಾಗದ ಕೀರ್ತನೆ ತುಂಬ ಸೊಗಸಾಗಿತ್ತು (ರೂಢಿ). **ಲತಾಂಗಿ** : ೧. ಪಕ್ಕ ಸೋವ ಲತಾಂಗೀಜನದೊಂದು ಮೆಲ್ಲುಲಿಪ್ಪುಮಂ ಕೇಳ್ದು (ಜಗಪ. ೨–೬). [ ಸಂ. ಲತಾಂಗೀ (ಲತಾ + ಅಂಗ + –) ]

**ಲತಾಂತ** (ನಾ). ಹೂವು ; ಪುಷ್ಪ : ವಿಕಸಲ್ಲತಾಂತಮಂಜರಿ ಫಲದೇಟಿಗೆಯುಂ ನೆಱೆಯೆ ಪೇಟ್ವಪೋಲ್ (ಜಾದೆವು. ೩೯೬) : ವಿತ್ರಯಿಪರ್ ಸತಿಯರ್ ಲತಾಂತಮಂ (ಜಗಪ. ೨–೨೯) ; ಅಂತೆಲೆಗೆ ಪುದುಗಿರ್ದ ಪಱಿಮಳದೊಳೊಪ್ಪುವ ಲತಾಂತಕುಟ್ಮಲದಂತೆ (ಕೃಷ್ಣಾ. ೦೬–೦೯).
[ಸಂ.]

**ಲತಾಕರ** (ನಾ). [ನಾಟ್ಯ] ಮೂವತ್ತು ವಿಧವಾದ ನೃತ್ತಹಸ್ತಗಳಲ್ಲಿ ಒಂದು ; ೞ "ಪತಾಕ ಅಥವಾ ತ್ರಿಪತಾಕಹಸ್ತಗಳೆರಡನ್ನು ಜೋತು ಬಿಟ್ಟು ಅಡ್ಡಲಾಗಿ ನೀಡುವುದು " (ಅಸ್ತ್ರರಂ. ೨೫೦ ಗದ್ಯಾನುವಾದ) : ಚತುರಸ್ರ, ಉದ್ವೃತ್ತ . . . ಕೇಶಬಂಧ, ಲತಾಕರ, ಕರಿಹಸ್ತ . . . ವಲಿತ, ಲಲಿತ—ಈ ಮೂವತ್ತು ನೃತ್ತಹಸ್ತಂಗಳ್ (ಅಸ್ತ್ರರಂ. ೨–೯೯ ಪ).
[ಸಂ.]

**ಲತಾಕ್ಷೇಪ** (ನಾ). [ನಾಟ್ಯ] ಮೂವತ್ತೈದು ಬಗೆಯ ದೇಶೀಯ ಭೌಮಚಾರಿಗಳಲ್ಲಿ ಒಂದು ; ೞ "ಕಾಲನ್ನು ಹಿಂದಕ್ಕಿರಿಸಿ ಪುನಃ ಮುಂದಕ್ಕೆ ನೀಡಿ ನೆಲವನ್ನು ಕುಟ್ಟುವುದು" (ಅಸ್ತ್ರರಂ. ೬೨೩ ಗದ್ಯಾನುವಾದ): ಧುರಿಕಂ ವಿಸ್ತರಿಪ ನಿಕುಟ್ಟನಂ ಲತಾಕ್ಷೇಪಾಖ್ಯಂ (ಅಸ್ತ್ರರಂ. ೬–೦೨).
[ಸಂ.]

**ಲತಾಗೃಹ** (ನಾ). ಬಳ್ಳಿಮಾಡ ; ಲತಾಮಂಟಪ : ಲತಾಗೃಹದೊಳ್ಪು ಮಲ್ಲಿಕಾಕುಸುಮದ ಬೆಳ್ಪು . . . ತಮಾಳದ ಸುರ್ವು ಸುತ್ತಲುಂ (ಸುಕುಮಾ. ೯–೯೮) : ವನಲತಾಗೃಹಂಗಳೊಳ್ ವಿಶ್ರಮಿಸುತ್ತೆ (ಸುಕೃತ. ೬–೯೮ ಪ). [ಸಂ.]

**ಲತಾಡ** (ನಾ). ಹಿಂಸೆ ; ಕಾಟ ; ತೊಂದರೆ : ಇಬ್ಬರೂ ನನ್ನದು ತನ್ನದು ಎಂದು ಮಗುವನ್ನು ಎಳೆದಾಡಿದರು. ಆ ಹಸುಳೆಯು ಈ ಲತಾಡವನ್ನು

ಸಹಿಸಲಾರದೆ ಗಟ್ಟಿಯಾಗಿ ಅತ್ತಿತು (ಸೀತಿವಿಂ. ೫, ೦೯).
[← ಹಿಂ. ಲತಾಡ್]

**ಲತಾಬಂಧ** (ನಾ). ಜಟ್ಟಿಕಾಳಗದ ಒಂದು ವರಸೆ : ಮಲ್ಲಯುದ್ಧದ ಒಂದು ಪಟ್ಟು : ಉರೋಬಂಧಂ ಲತಾಬಂಧಮುಜ್ಜ್ವಳಶಾಖಾಚರಬಂಧಂ .ಚಮತ್ಕರಿಸೆ ನಾನಾಕೌಶಲಂದೋಱಿದರ್ (ಶಬಶಂ. ೪-೭೫). [ಸಂ.]

**ಲತಾಲೀಢ** (ನಾ). ಬಳ್ಳಿಗಳಿಂದ ಆವರಿಸಿದುದು : ಲತಾಮಂಟಪ : ಪುರಮೆಲ್ಲಂ ಮಾಡದಿಂದಲ್ಲಿಯ ಪುರವನಮೆಲ್ಲಂ ಲತಾಲೀಢದಿಂ ಗೋಪುರ ಮೆಲ್ಲಂ ಚೈತ್ಯಗೇಹಂಗಳಿಂ . . . ರಂಜಿಸೆ (ಪುಣ್ಯಶ. ೨-೩). [ಸಂ.]

**ಲತಾವೃಶ್ಚಿಕ** (ನಾ).[ನಾಟ್ಯ] ನೂರೆಂಟು ಕರಣಗಳಲ್ಲಿ ಒಂದು; "ಒಂದು ಕಾಲನ್ನು ಚೇಳಿನ ಬಾಲದಂತೆ ಹಿಂದಕ್ಕೆತ್ತಿ ಎಡಗೈಯನ್ನು ಲತಾ ಹಸ್ತದಲ್ಲಿ ಹಿಡಿಯುವುದು. ವಿ–ಆಕಾಶದಿಂದ ಬೀಳುವುದನ್ನು ಅಭಿನಯಿಸುವಾಗ" (ಲಾಸ್ಯರಂ. ೨೯೭ ಗದ್ಯಾನುವಾದ) : ವೃಶ್ಚಿಕರೇಚಿತ ಲತಾವೃಶ್ಚಿಕ . . . ಗಂಗಾವತರಣ — ಈ ನೂಱೆಂಟು ಕರಣಂಗಳ್ (ಲಾಸ್ಯರಂ. ೪-೪೨ ವ). [ಸಂ.]

**ಲತಾವೇಷ್ಟನ** (ನಾ). [ಕಾಮಶಾ] ಹನ್ನೆರಡು ಬಗೆಯ ಆಲಿಂಗನಗಳಲ್ಲಿ ಒಂದು : ಪುಷ್ಕರ ವಿವಿಧಕ . . . ಲತಾವೇಷ್ಟನ . . . ಎಂಬ ದ್ವಾದಶ ವಿಧಾಲಿಂಗನಂಗಳಿಂ (ವಿವೇಕ. ೨೨೯) ; ನಿಂದಿರ್ದ ಪುರುಷನಂ ಸ್ತ್ರೀಯರು ಮರನನು ಬಳ್ಳಿ ಹ್ಯಾಗೆ ಹತ್ತುವುದೋ ಹಾಗೆ . . . ಪುರುಷನಂ ಬಾಗಿಸು ವಳು. ಇದು ಲತಾವೇಷ್ಟನವೆಂಬ ಆಲಿಂಗನ (ಕಾಮಶಾ. ೨೨೨). [ಸಂ.]

**ಲತಿಕಾಗೃಹ** (ನಾ). = ಲತಾಗೃಹ : ಓರೊರ್ವರ್ ಸುರಭಿಪರಿಮಳೋದ್ಗಾರಿಸ್ಮೇರಕುಸುಮಮಂಜರೀನಿಕರಭರವಿನತಲತಿಕಾಗೃಹಂಗಳೊಳ್ ಭ್ರಮರ ಮಿಥುನದಂತೆ ಪುಷ್ಪಾಪಚಯದಿಂ ಭ್ರಮಿಸಿಯುಂ (ಚಂಪ್ರಶ. ೩-೨೮ ವ). [ಸಂ.]

**ಲತಿಕೆ** (ನಾ). ಸಣ್ಣ ಬಳ್ಳಿ ; ಹಂಬು : ಲತಿಕಾಲಾಸ್ಯೋಪದೇಶವ್ಯಸನಿ . . . ಚಂಚಚ್ಚಂಚರೀಕಂ (ಕಾದಂಪೂ. ೦೪೭) ; ಚಲುವ ಕಣ್ಣಾಪನಂಬಕಂಗಳ ತಳಿರ್ವ ಲತಿಕೆಗಳೋ (ಬಸಪು. ೦೮-೬೪). [ಸಂ. ಲತಿಕಾ]

**ಲತೆ**, ಳತೆ (ನಾ). ೧. ಹಬ್ಬುವ ಸಸ್ಯ ; ಬಳ್ಳಿ ; ಹಂಬು : "ಲತಾ, ಪ್ರತಾನಿನೀ, ವಲ್ಲೀ, ವ್ರತತೀ, ಪ್ರತತಿಃ — ಈ ೫ ಬಳ್ಳಿ" (ಹಲಾಯು. ೩೦-೨೭) ; ಮಡಲ್ತು ಪೂತ ಲತೆಗಳ್ ಕೆಯ್ಗಳ್[ಪೂ]ನೀಡಲ್ಕರ್ಘ್ಯಮನೀವಂತೆವೊಲಾದುದು (ಶಂಶಭಾ. ೭-೭೭) ; ಲತೆಗಳ ಜನ್ಮಭೂಮಿ ಪುಳಿನಂಗಳ ಪೆರ್ಗಣಿ . . . ಸಾಲ ತಣ್ಣೆಲ ತಾಯ್ಮನೆ ತಾನೆನಿಸಿರ್ದುದಾ ವನಂ (ಕುಸುವಶಾ. ೦೦-೧೭೯) ; ಕುಸುಮಕಿಸಲಯಲತಾಶೋಭಿತದ ರಮಣೀಯಗಂಧಬಂಧುರದೇವಕಾನನ (ಶ್ರೀರಾಪಶಾ. ೦೦-೨೭೯). ☞ ಸುಕುಮಾರವಾದುದು ಎಂಬ ಅರ್ಥದಲ್ಲಿ ಕೆಲವು ಮರಗಳ ಹೆಸರುಗಳ ಕೊನೆಗೂ ಈ ಶಬ್ದ ಸೇರಿ ಬರುವುದುಂಟು. ಉದಾಹರಣೆಗೆ—'ಕಲ್ಪಲತೆ', 'ಚೂತಲತೆ'. ೨. ಕೊಂಬೆ ; ರೆಂಬೆ : "ಶಾಖಾ. ಲತಾ . . . ೨ ಕೊಂಬೆಗಳ ಹೆಸರುಗಳು, ರೆಂಬೆಗಳು" (ಸಿದ್ಧಾಂತಿ. ೧೦೨). ೩. ಒಂದು ಬಗೆಯ ಸಸ್ಯ ; ಪ್ರಿಯಂಗು : "ಶ್ಯಾಮಾ, ಮಹಿಲಾಹ್ವಯಾ, ಲತಾ . . . ಪ್ರಿಯಕಃ — ೧೨ ಪ್ರೇಂಕಣ ಗಿಡದ ಹೆಸರು ; ಪ್ರಿಯಂಗು ಪ್ರಸಿದ್ಧವಾದದ್ದು" (ಸಿದ್ಧಾಂತಿ. ೦೨೪). ೪. ಒಂದು ಬಗೆಯ ಗಂಧದ್ರವ್ಯ ; ಸ್ಪೃಕ್ಕೆ : "ಮರುನ್ಮಾಲಾ, ಪಿಶುನಾ, ಸ್ಪೃಕ್ಕಾ, ದೇವೀ, ಲತಾ . . . ಲಂಕೋಪಿಕಾ—೧೦ ಸ್ಪೃಕ್ಕೆಯೆಂಬ ಗ್ರಂಧ್ಯದ್ರವ್ಯ ; ಸಂಕೇಬೇರು" (ಸಿದ್ಧರಾ. ೦೪೩). ೫. ಕಂಗೊಂಗೆ ಗಿಡ ; ಮಿಂಚುಬಳ್ಳಿಗಿಡ : "ಪಾರಾವತಾಂಘ್ರೀಃ, ಕಟಭೀಃ, ಪಣ್ಯಾ, ಜ್ಯೋತಿಷ್ಮತೀ, ಲತಾ — ೫ ಕಂಗೊಂಗೇಗಿಡ, ಕಂಗೊಂದೀಗಿಡ, ಮಿಂಚು ಬಳ್ಳೀಗಿಡ" (ಸಿದ್ಧಾಂತಿ. ೦೪೭). ೬. ಒಂದು ಬಗೆಯ ಬಳ್ಳಿ ; ತೊಟ್ಟಿ : "ಗೃಹಭೇದ ಲತೆಯೊಳು ತೊಟ್ಟಿ" (ಶಬ್ದಮಂ. ೯೦). ೭. [ಜ್ಯೈನ] ಒಂದು ಕಾಲಗಣನೆ : ಎಂಬತ್ತುನಾಲ್ಕುಲಕ್ಷ ಗುಣಿತಕ್ರಮದಿಂದ . . . ಲತಾಂಗ ಮತ್ತು ಲತಾ . . . ಎಂಬಿವು ಕ್ರಮದಿಂದ ಆಗುತ್ತವೆ (ಜೈಪಶ. ೩೦೭). ೮. [ನಾಟ್ಯ] ನೃತ್ತಹಸ್ತಗಳಲ್ಲಿ ಒಂದು : ಈ ಕೆಳಗೆ ಹೇಳಿರುವ ಹಸ್ತಗಳು ನೃತ್ತಹಸ್ತಗಳು — ಚತುರಸ್ರ, ಉದ್ವೃತ್ತ . . . ಕೇಶಬಂಧ, ಲತಾ, ಕರಿಹಸ್ತ (ಅಭಾನ್ಯ. ೪೯). ಳತೆ : ೧. ಕಂದಳಿಗೊರ್ಗಂ ಚಲ ಚೆಲ್ಲಣಂ ಪ್ರವಾಳಳತೆಯ ಬಾಲಗಚ್ಚೆ (ಲೀರಾವ. ೦೦-೭೫). 'ಳತಾಂಗಿ' ಪರಾ. [ಸಂ. ಲತಾ]

**ಲತೆಯಿಱ್** (ಕ್ರಿ). (ಎಲೆಯಂತೆ) ತೆಳ್ಳಗೆ ಒತ್ತು.— ಲಟ್ಟಿಸು : ಹಿಟ್ಟಿಯ ಹಿಟ್ಟನೊತ್ತಿ ಲತೆಯಿಱಿದೆರಡು ಬಟ್ಟಲ ನಡುವೆಯಿರಿಸಿ ಯೆರಡ ಅಂಚುಗಳ ಮುರಿದು (ಸೂಶಶಾ. ೦-೧೦) ; ಗೋದುವೆಯ ಹದನಾಗಿ ಹಿಟ್ಟು ಮಾಡಿ ಎಣ್ಣೆಯೊಳು ಕಲಸಿ ಹಪ್ಪಳದಂತೆ ಲತೆಯಿಱಿದು(ಸೂಶಶಾ. ೦-೪೫).
[ಲತೆ + ಇಱ್$_1$]

**ಲತೆವನೆ** (ನಾ). = ಲತಾಗೃಹ : ಲತೆವನೆಯೊಳಗಣ ತಣ್ಪುಟ್ಟಲ ತಾಣ ದೊಳ್ ಕುಸುಮದೆಸಟ ಪಸೆಯಂ ಸೀತಾಪತಿಗೆ ಸಮೆದಂ ಸುಮಿತ್ರಾಸುತಂ (ಕುರಾವಶಾ. ೬-೩) ; ಕಾಂತೆಯನೆಯ್ದೆ ಪಸದನಂಗೊಳಿಸಿ ಲತೆವನೆಯೊಳಿರಿಸಿ (ಸಾಳ್ವಭಾ. ೨೭-೪). [ಲತೆ + ಮನೆ]

**ಲತ್ತ** 'ನೆತ್ತ$_1$' ನೋ.

**ಲತ್ತಲೂರ್** 'ಲಟ್ಟಲೂರ್' ನೋ.

**ಲತ್ತಾಪ್ರಹಾರ** (ನಾ).ಕಾಲಿನಿಂದ ಒದೆಯುವಿಕೆ; ಒದೆತ: ಅವನ ರಥವನ್ನು ಮುರಿದು ಸಾರಥಿಯನ್ನು ಕೊಂದು ಅವನ ಎದೆಗೆ ಲತ್ತಾಪ್ರಹಾರ ಮಾಡಿದನು (ಕುಳಸೀ. ೩೧೦) ; ಈ ಅತ್ತಿಮರದ ಕಟ್ಟಿಗೆಯ ಕದವು ನಿನ್ನ ಲತ್ತಾಪ್ರಹಾರಕ್ಕೆ ಮುರಿಯುವುದೆ? (ಅಂಬಿಕೆ. ೦೩೪). [< ಲತ್ತೆ + ಪ್ರಹಾರ]

**ಲತ್ತೆ**, ಲಾತ, ಲಾತು (ನಾ). ೧. = ಲತ್ತಾಪ್ರಹಾರ : ನಿನಗೂ ಲತ್ತೆ ಬೀಳಲಿಕ್ಕಿಲ್ಲ (ಮುಂಬಯು. ೩-೭೩) ; ಅಂದು ಅವನಿಗೆ ಮನೆಯಲೆರಡು ಲತ್ತೆಗಳು ಬಿದ್ದವು (ದಾಸಹು. ೦೦) ; ಕುದುರೆಗೆ ಇಷಾರೆ, ಕತ್ತೆಗೆ ಲತ್ತೆ (ಗಾದೆ). **ಲಾತ** : ೨. ಏಟು ; ಹೊಡೆತ ; ಪೆಟ್ಟು : ಒಂದು ದಿನ ತಪ್ಪಿಸಿ ಕೊಂಡರೆ ಮಾರನೆಯ ದಿನ ಆರಾರು ಲಾತಗಳು (ಸ್ವಾಬಿಸ್ಕೇ. ೧೪೭) ; ಯಾವಾಗಲೂ ಮುಟ್ಟಿ ನೋಡಿಕೊಳ್ಳುವಂಥ ಲಾತ ಕೊಡುತ್ತೇನೆ (ಭೃಪರು. ೪೩೭); ನಾಲ್ಕು ಲಾತ ಬಿಗಿದು ಇವನಿಗೆ ಬುದ್ಧಿ ಕಲಿಸೋದು (ಹೊಸಕ್ಷ. ೦೦೫). **ಲಾತು** : ೨. ಮಗು ಆದರೆ ಎರಡು ಲಾತು ಬಿಗಿದು ಬುದ್ಧಿ ಕಲಿಸಬಹುದು (ಬೀಮಶಾ. ೦೫೭). ೩. (ಆಲಂ) ಮೋಸ ; ದಗಾ : ನಿನ್ನನ್ನು ನೋಡಿದರೆ ಮನೆಗೆ ಲಾತು ಕೊಟ್ಟು ಬಂದವಳೆಂದು ತೋರುತ್ತದೆ (ಕದಂಬ. ೭೪).

**ಲತ್ತೆತಿನ್ನು**=ಒದೆಯಿಸಿಕೊಳ್ಳು : ಲತ್ತೆ ತಿಂದ ತಿಂಮನ ನೆತ್ತಿಯಿಂದ ರಕ್ತ ಸುರಿಯುತ್ತಿದ್ದರೂ . . . ಸುಮ್ಮನೆ ಕುಳಿತಿದ್ದನು (ತಿಂಮಕ. ೬೦). **ಲತ್ತೆಹೊಡೆ**=೧. ತ್ಯಜಿಸು ; ಬಿಡು : ತನ್ನ ನೌಕರಿಗೆ ಲತ್ತೆಹೊಡೆದು ಅವರೊಂದಿಗೆ ಹೋಗಿಬಿಡೋಣ ಎಂದೆನಿಸುತ್ತಿತ್ತು (ಮೊಶಪು. ೦೦೭). ೨. (ಆಲಂ) ಕೆಡುಕಾಗು; ದುರದೃಷ್ಟ ಒದಗು; ಗ್ರಹಚಾರ ಬಡಿ : ಅವನಿಗೆ ಲತ್ತೆ ಹೊಡೆಯಿತು (ರೂಢಿ).

[<ಪ್ರಾ. ಲತ್ತಾ, ಲತ್ತಿಆ./ಹಿಂ. ಲತ್ತೀ, ಲಾತ್; ಮರಾ. ಲತ್ತಾ, ಲಾತ್, ಲಾಥ್]

**ಲತ್ತೆಗುಣಿ** (ನಾ). ಲಟ್ಟಿಸಲು ಬಳಸುವ ಸಾಧನ ; ಲಟ್ಟಣಿಗೆ; "ಲಟ್ಟಿಸುವ ಉಳಕ" (ಜಾವಕೋ. ೪೨). [?]

**ಲತ್ವ** (ನಾ). = ಲಕಾರ : ದ ದಪಂಗಳ ಪರಮಾಗೆ . . . ಕೊಲ್ ಸಲ್‌ಗಳ ಲತ್ವಕ್ಕಂ ನಕಾರಾದೇಶಂ (ಕವುದ. ೨೩ ವೃತ್ತಿ); ಶ್ಲೋಕದ ಲತ್ವಕ್ಕೆ ದುರ್ಜನ ರೆಮರೊಳು ಲೋಪವೆ ಸಂಭವಿಸುವುದು(ಇಂಶಾಕ. ೨೦೫-೭೭). [ಸಂ].

**ಲದ್ದಿ** (ನಾ). ಆನೆ, ಕುದುರೆ, ಕತ್ತೆ, ಒಂಟೆ ಮೊದಲಾದುವುಗಳ ಮಲ :

"ಲದ್ದಿಯೆನೆ ಲಂಡಮಕ್ಕುಂ" (ಮಂಗರಾ. ೪೭-೭); ಕರಮೂಮದೊಳೊಂದಿ ಲದ್ದಿ ಪೋಪೊಡಮದು ಶೂಲೆಯೆಂದಱಿದು ವಾಜಿಗೆ ಪಿಪ್ಪಲಿ ಶುಂಠಿ ಸೈಂಧವಂ ಗಿಡಿವುದು ಮೂಗಿನೊಳ್ (ಲೋಕೋಪ. ೯-೨೨೭); ಇದ್ದು ಉಣ ದಿಪ್ಪ ಬಾಯೊಳಗೆ ಕತ್ತೆಯ ಲದ್ದೆ [ದ್ದಿ]ಯೇ ಬೀಳ್ಗು (ಸರ್ವಜ್ಞ. ೬೫೪); ವೃದ್ಧಿ ದುಡಿಮೆಯ ಹಾಗೆ ಶುದ್ಧಿ ವಿವಾಹದ ಹಾಗೆ ಲದ್ದಿ ಆಹಾರದ ಹಾಗೆ (ಇಂಜಾಪ. ೬೨-೯೯). [<ಪ್ರಾ. ಲದ್ದೀ]

**ಲದ್ದಿಗುತ್ತ** (ನಾ). ದನಕರುಗಳಿಗೆ ಬರುವ ಒಂದು ಬಗೆಯ ರೋಗ ; ಲದ್ದಿಗೆ ಸಂಬಂಧಿಸಿದ ರೋಗ : ಅನುಲೋಮವಾಗಿ ವಾಜಿಗೆ ಜನಿಯಿಸೆ ಬಲಮೆರ್ದೆಯು ಲದ್ದಿಗುತ್ತಂ ಪಿರಿದಪ್ಪಿನಮಲ್ಲಿ ಕಜ್ಜಿ ಗಟ್ಟುವುವನುನಯದಿಂ ಕುಡುಗೆಣ್ಣೆಯುಂ ನವರಸಮಂ (ಅಶ್ವಶಾ. ೭-೨೭). [ಲದ್ದಿ+ಕುತ್ತ]

**ಲದ್ದಿಬೇನೆ** (ನಾ). = ಲದ್ದಿಗುತ್ತ : ಕುದುರೆಗಳಿಗೂ ದನಗಳಿಗೂ ಬರುವ ಸಾಂಕ್ರಾಮಿಕರೋಗವಾದ 'ಆಂತ್ರಾಕ್ಸ್' (ಲದ್ದಿಬೇನೆ, ಗಂಟ್ಲುಕಟ್ಟು) ಎಂಬುದು ಲಂಡನ್ನಿನಲ್ಲಿ . . . ಅಂಟಿಕೊಂಡ ವಿಷಯವು ಬಹಳ ವಿಚಿತ್ರವಾಗಿರುವುದು (ವಿಜ್ಞಾ. ಪ. ೨೨೪). [ಲದ್ದಿ+ಬೇನೆ]

**ಲದ್ದು, ಲದ್ದೆ** (ನಾ). ಹೊರೆ ; ಹೇರು ; ಭಾರ : ಕಟ್ಟಿಗೆಯ ರಾಶಿಗೆ ೧ ರೂಪಾಯಿ ; ಒಂದು ಎತ್ತಿನ ಲದ್ದಿಗೆ ಒಂದಾಣೆ, ಗಂಡಸಿನ ತಲೆಹೊರೆಗೆ ೧ ದುಡ್ಡು (ಕಥಾಗ. ೩೪). **ಲದ್ದೆ** : ಈತನೇ ಒಕ್ಕಲಿಗ ಮುದ್ದಯ್ಯ ನೆಂಬಾತನೀತನೇ ಲದ್ದೆಯಾ ಸೋಮಯ್ಯನೆಂಬಾತನು (ಚೆಂಶಿಪು. ೫೭-೫೬) ; ಚನ್ನಯ್ಯಗಳು ಲದ್ದೆಯ ಹುಲ್ಲು ಸೋಮಯ್ಯಗಳು ಬಡತನದಲ್ಲಿ ಶಿವನೊಳು ಬೆರಸಲಿಲ್ಲವೆ (ಸುಜಾರ. ೯೭-೭).

[←ಹಿಂ. ಲಾದಿ, ಲದಾವ್ ; ಮರಾ. ಲಾದಾ]

**ಲದ್ದೆ** 'ಲದ್ದು' ನೋ.

**ಲಪಟಾಯಿಸು** (ಕ್ರಿ). ಪರರ ವಸ್ತುವನ್ನು ಸ್ವಾಧೀನಪಡಿಸಿಕೊಳ್ಳು.– **ಎತ್ತಿ ಹಾಕು** : ವಿಷ್ಣು, ಲಕ್ಷ್ಮಿ, ಕೌಸ್ತುಭ ಮುಂತಾದ ಅನರ್ಘ್ಯರತ್ನಗಳನ್ನೆಲ್ಲಾ ತಾನೇ ಲಪಟಾಯಿಸಿ, ಏನೂ ತಿಳಿಯದ ಈಶ್ವರನಿಗೆ ವಿಷವನ್ನು ಕುಡಿಸಿಬಿಟ್ಟನು (ಶಿವರಾ. ೬೦); ಸಾಮಾನ್ಯಜನರ ಆಸ್ತಿಪಾಸ್ತಿಗಳನ್ನು ಲಪಟಾಯಿಸಿಕೊಂಡಿದ್ದ (ಭುವರು. ೪೯೭).

[?+—ಇಸು₃. / ತೆಲು. ಲಪಟಾಯಿಂಚು, ಲಪ್ಪಾಯಿಂಚು]

**ಲಪನ** (ನಾ). ೧. ಮಾತನಾಡುವುದು; ನುಡಿಯುವುದು. ೨. ಮುಖ; ವದನ : "ವದನಮಾನನಮಾಸ್ಯಂ . . . ಲಪನಂ ವಕ್ತ್ರಂ ಮೊಗಕ್ಕೆ ನಾಮಂ" (ವಸ್ತುಕೋ. ೬೬-೦೩); ಲಪನಂ ಕಾರುಣ್ಯಮಂ ಕನ್ನಡಿಪೆ (ಅರ್ಧನೇ. ೦-೨೦); ಮತ್ತೊಂದು ದೆಸೆಗೆ ಲಪನವನ್ನೆದೆ ತಿರುಪಲಾ ಠಾವಿಗೈದ್ದಿ (ಪಿಶ್ವಪು. ೪-೨-೭೦). [ಸಂ.]

**ಲಪಾಡಿಸು** (ಕ್ರಿ). ಸುತ್ತು; ಕಟ್ಟು : ಝುಗಾ ಆರ ಹಾಕರೀ ! ಲುಂಗೀ ಆರ ಸುತ್ತರೀ; ಲಂಗಟಾ ಆರ ಲಪಾಡಸರಿ! (ನವಜೀ. ೨೪೫).

[ಲಪಾಡು₀ (← ಹಿಂ. ಲಪೇಟನಾ)+—ಇಸು₃]

**ಲಪಿತ** (ನಾ). ೧. ಮಾತಾಡಿದುದು; ಹೇಳಿದುದು : "ಉಕ್ತಂ, ಭಾಷಿತಂ, ಉದಿತಂ, ಜಲ್ಪಿತಂ, ಆಖ್ಯಾತಂ, ಅಭಿಹಿತಂ, ಲಪಿತಂ—೭ ಹೇಳಲ್ಪಟ್ಟದ್ದು ನುಡಿಯಲ್ಪಟ್ಟದ್ದು" (ಸಿದ್ಧಾಂತಿ. ೩೫೨). ೨. ಮಾತು; ನುಡಿ. [ಸಂ.]

**ಲಪಿಸು** (ಕ್ರಿ). ಹೇಳು; ನುಡಿ : ಜಿಪ್ಪೆಯನ್ನುಲುಗಿ ಮಾಳ್ಪ ಜಪವೆ ರಸನಾಧಿಕಂ ಮೌನದಿಂ ಚಿತ್ತದೊಳ್ ಲಪಿಸುವುದೆ ಮಾನಸಿಕಂ (ವಂಕಾರಾ. ೨-೦೩-೩೪). [ಲಪನ+—ಇಸು₃]

**ಲಪೇಟ**, ಲಪ್ಪಟ್ಟೆ, ಲಪ್ಪಾಟಿ (ನಾ). (ತಲೆಗೆ ಅಥವಾ ಸೊಂಟಕ್ಕೆ) **ಸುತ್ತಿಕೊಳ್ಳುವ** ಬಟ್ಟೆ : ಸಣ್ಣ ಪಂಚೆಯೊಂದನ್ನು ಲಪೇಟಿಯಂತೆ ಅಡ್ಡ ಸುತ್ತಿಕೊಂಡಿದ್ದ (ಹುಚ್ಚುಮು. ೬೦). **ಲಪ್ಪಟ್ಟೆ** : ತಲೆಗೆ ಒಂದು ಲಪ್ಪಟ್ಟೆ ಕಟ್ಟಿ ಹೊರಟೇ ಬಿಟ್ಟರು (ರೂಪಿ). **ಲಪ್ಪಾಟಿ** : ಕೇಶವರಾಯನು ತಲೆಗೆ ಲಪ್ಪಾಟಿಯನ್ನು ಸುತ್ತಿ . . . ಎದುರಿಗೆ ಬರುತ್ತಿದ್ದ ದಾಸಪ್ಪನನ್ನು ಕಂಡನು (ಕಥಪಿ. ೫). [ ← ಹಿಂ. ಮರಾ. ಲಪೇಟಾ]

**ಲಪ್ಪಟ್ಟೆ** 'ಲಪೇಟಿ' ನೋ.

**ಲಪ್ಪಾಟಿ** 'ಲಪೇಟಿ' ನೋ.

**ಲಫಂಗ** (ನಾ). ಪುಂಡ ; ದುರಾಚಾರಿ : ಹೋದಲ್ಲೆಲ್ಲ ತನ್ನ ಚರಿತ್ರ ಹೀನತೆಯನ್ನು ಪ್ರದರ್ಶನಕ್ಕಿಡುವ ಲಫಂಗ (ವಾತ್ಸಲ್ಯ. ೩೨೩); ಊರಾಗಿನ ಲಫಂಗರದು ಬೆಂಬಲ ಆದ (ದೀಪಶ. II, ೦೦೬).

[← ಪಾರ. ಲಫಂಗ್; ಹಿಂ. ಮರಾ. ಲಫಂಗಾ]

**ಲಫಂಗಗಿರಿ** (ನಾ). ಪುಂಡತನ; ದುರಾಚಾರ : ಅವರ ಲಫಂಗಗಿರಿಯ ವಿಷಯ ಮಾತ್ರ ಸುಳ್ಳೇನೂ ಆಗಲಾರದು ! (ಖಂಡ. ೦೦೦).

[ಲಫಂಗ+—ಗಿರಿ₂]

**ಲಬಕ್** (ನಾ). ಒಂದು ಅನುಕರಣ ಶಬ್ದ : ಅವನು ಕಲ್ಲುಸಕ್ಕರೆಚೂರನ್ನು ಲಬಕ್ ಎಂದು ಬಾಯಿಗೆ ಹಾಕಿಕೊಂಡು ಬಿಟ್ಟನು (ರೂಪಿ).

**ಲಬಲಬ** (ನಾ). ಬಾಯಿ ಬಡಿದುಕೊಳ್ಳುವುದನ್ನು ಸೂಚಿಸುವ ಒಂದು ಅನುಕರಣ ಶಬ್ದ : ಲಬಲಬ ಬಾಯಿ ಬಡಿದುಕೊಂಡರು (ರೂಪಿ). 'ಲಬಲಬಿಸು' ಪರಾ.

**ಲಬಲಬನೆ** (ಅ). ಬಾಯಿ ಬಡಿದುಕೊಳ್ಳುವುದನ್ನು ಸೂಚಿಸುವ ಒಂದು ಅನುಕರಣಾವ್ಯಯ : ಲಬಲಬನೆ ಬಾಯಿ ಬಡಿದುಕೊಂಡೂ ಎದೆ ಗುದ್ದಿಕೊಂಡೂ ಕೇರಿಯೆಲ್ಲಾ ನೆರೆಯುವಂತೆ ಗೋಳು ಹೊಯ್ದು ಕೊಂಡಿದ್ದಳು (ಮರಳಿಮ. ೪೦೩). [ಲಬಲಬ+—ಅನೆ₁]

**ಲಬಲಬಿಸು** (ಕ್ರಿ). ಲಬಲಬ ಎಂದು ಬಾಯಿಬಡಿದುಕೊಳ್ಳು : ಅವನ ಅಪ್ಪ . . . ಯಾರಾದರೂ ಸತ್ತರೆ ಬಾಯಿ ಬಡಿದುಕೊಳ್ಳುವಂತೆ ಲಬಲಬಿಸಿದ್ದರು (ಮರಳಿಮ. ೩೩೭). [ಲಬಲಬ+—ಇಸು₃]

**ಲಬಾಡ** (ನಾ). ಸುಳ್ಳುಗಾರ ; ಅಸತ್ಯವನ್ನಾಡುವವನು : ಏನೋ ಲಬಾಡಾ, ನಾನು ತಿಂದದ್ದು ಯಾವಾಗ ? (ಸ್ವಪ್ನತಿ. ೨೫೯).

[←ಹಿಂ. ಲಬಡಾ, ಲಬರಾ; ಮರಾ. ಲಬಾಡ್]

**ಲಬಾಡಿ** 'ಲಬಾಡು' ನೋ.

**ಲಬಾಡು, ಲಬಾಡಿ** (ನಾ). ೧. ಮೋಸ ; ಕಪಟ ; ವಂಚನೆ : ಇನ್ನು ಮುಂದೂ ಲೂಟಿ ಲಬಾಡು ಮಾಡದೆ, ಅಪ್ಪಣೆ ಪ್ರಕಾರ ನಡ ಕೊಳ್ಳುತ್ತೇನೆ (ರಾಜೇಂದ್ರ. ೦೯೩). **ಲಬಾಡಿ** : ೧. ಜೀನಸುಗಳು ಲಬಾಡಿ ಯಿಂದ ಅಂದರೆ ಖೊಟ್ಟಿತನದಿಂದ ತುಂಬಿದ್ದಾದರೆ ಆವಾಗಲೆ ತಿಳಿದು ಬರುವುದು (ಮುಂಬಿವ್ಯಾ. ೪೨). ೨. ಸುಳ್ಳು ; ಸಟೆ ; ಅಸತ್ಯ : ಲಬಾಡಿ ಬಿಲ್‌ಕುಲ್ ಕೇಳಬೇಡ (ವೋಹಿಪೀ. ೪೦).

[←ಹಿಂ. ಮರಾ. ಲಬಾಡ್, ಲಬಾಡೀ]

**ಲಬುಧ** (ಗು). ದೊರಕಿದ : ಈಡಗೂರ ದೇವೀಲಬುಧವರಪ್ರಸಾದಮೃಗ ಮದಾಮೋದಯರ್ (ಎಕ. XII, ತಿಪಟೂ. ೦೦೯-೨೦ ; 1130) ; ಜಯನ್ತೀ ಮದು(ಧು)ಕೇಶ್ವರದೇವರ (ವ)ಲಬುಧವರಪ್ರಸಾದಂ ಸಹಜಮೃಗಮದಾ ಮೋದಂ (ಎಇ. XXVII, ೦೬೦-೦೫ ; 1256). [<ಸಂ. ಲಬ್ಧ]

**ಲಬೋಲಬೋ** (ನಾ). = ಲಬಲಬ : ಬೀದೀಲಿ ನಿಂತುಕೊಂಡು ಲಬೋ ಲಬೋ ಅಂತ . . . ಕೂಗೋದು (ತುಂಗಭ. ೩೦).

**ಲಬ್ಧ** (ಗು). ೧. ದೊರಕಿದ ; ಪ್ರಾಪ್ತವಾದ : ಸ್ವಪಕ್ಷ ಸ್ಥಾಪನೆಗೆಯ್ದು ಸನ್ಮಾರ್ಗ ಪ್ರಕಾಶನದಿಂ ಮಾರ್ಗಪ್ರಭಾವನೆಯುಂ ಮಾಡಿ ಸಭಾಸದರಿಂ ಲಬ್ಧಪ್ರಶಂಸನಾಗಿ (ಆರಾಕ. ೨-೨೨೭). (ನಾ). ೨. ಪಡೆದುದು ; ಪ್ರಾಪ್ತಿ; ಫಲ : ಅಲಬ್ಧಲಾಭಂ ಲಬ್ಧಪರಿರಕ್ಷಣಂ ರಕ್ಷಿತವಿವರ್ಧನಂ (ಪಂಪಭಾ. ೬. ೨೦-೦೬) ; ವ್ರೀಹಿಯುಂ ನೆರವುತ್ತೊಯ್ಯನೆ ಮಾಱುಗೆಂಟನೆಯ ತಿಂಗಳ್ಗಿಂ ದಿದಂ ಮಾಱಿಸಲ್ ನಿರುತಂ ಲಬ್ಧಮನೆಟ್ಟನೆಂದುದೆ ನಯಂ . ಶ್ರೀ ಆಟ್ಟ

ಕಂದರ್ಪನಾ (ಅಭ್ಯಸು. ೬–೩೨). ೩. ಸಂಭಾವಿತ ; ಯೋಗ್ಯ : "ಅಭಿಜಾತಂ ತಾಂ ಲಬ್ಧನುಮಭಿವಿನುತಕುಳಪ್ರಸೂತನಂ" (ಪಸ್ತು ಕೋ. ೧೨೯–೬೬). ೪. [ಗಣಿತ] ಲೆಕ್ಕಾಚಾರದ ಪ್ರಕ್ರಿಯೆಗಳ ಮೂಲಕ ಬರುವ ಉತ್ತರ,—ಮೊತ್ತ : ಅರ್ಧನವಾಂಶಂಗಳಿನಾಯುವನ್ನಟಿದು ಭಾಗಂಗೊಂಡು ನೂಱಿಂಟಱಿಂದೆ, . . . ಪೆತ್ತಾ ಲಬ್ಧಮಂ ನೋಡೆ (ಶಾಕಟ. ೬–೬) ; ಗುಣಿಸಿ ಬಂದ ಲಬ್ಧ (ಶಾಸ್ತ್ರ. ೦–೯). [ಸಂ.]

**ಲಬ್ಧವರ್ಣ** (ನಾ). ಅಕ್ಷರಗಳನ್ನು ಕಲಿತವನು; ಪಂಡಿತ; ವಿದ್ವಾಂಸ : "ಧೀರ:, ಧೀಮಾನ್, ಲಬ್ಧವರ್ಣ: . . . ಮತಿಮಾನ್—ಈ ೨೮ ವಿದ್ವಾಂಸರ್" (ಹಲಾಯು. ೫೫–೦೬೬). [ಸಂ.]

**ಲಬ್ಧಿ** (ನಾ). ೧. ದೊರಕಿದುದು ; ಪ್ರಾಪ್ತಿ. ೨. ಗಳಿಕೆ ; ಸಂಪಾದನೆ. ೩. ಲಾಭ ; ಫಾಯಿದೆ ; ನಫೆ : ಮೊದಲುಗೆಟ್ಟಿಹ ಹರದ ಕಾಬನೆ ಲಬ್ಧಿಯನು ಮತಿಬಲಿತ ಹೋಗೆಂದ (ಕುಮಾರ. ೬–೫–೫೬). ೪. = ಲಬ್ಧ ೪. ೫. [ಜೈನ] "ಮೋಕ್ಷ ಪೂರ್ವಜ್ಞಾನ" (ಶಂರಾಪು. ೯–೦೫ ವ ಅವತಾರ): ಎಮ್ಮಂ ಕಂಡ ದೊಸಱಿಂ ಕರ್ಮಬಂಧಂ ಶಿಥಿಲವಾದುದೆಂಪದಱ ಮನೋವಿಷಾದಮಂ ಕಳೆವದರ್ಕೆ ಲಬ್ಧಿ ದೊರೆಕೊಂಡುದು (ಶಂರಾಪು. ೯–೦೫ ವ) ; ಲಬ್ಧಿವಶದಿಂದೆ ಸಂಸಾರಾಬ್ಧಿಯ ನಾನೀಸಲೆಂದು ಬಗೆದು (ಚಾರ್ತ್ರಕೆ. ೪–೬೫). ಯಾವುದೊಂದು ವಸ್ತುವನ್ನು ಅದರೊಡನೆ ಸಂಬಂಧವಿರುವ ಯಾವುದೊಂದು ವಿಷಯದ ಸಹಾಯದಿಂದ ನಿರ್ದೇಶಿಸುವುದು ಲಬ್ಧಿಯೆನಿಸುವುದು (ಕೈಪಿಡಿ. VIII. ಉಪೋದ್ಘಾತ). 'ಪಂಚಲಬ್ಧಿ' ಪರಾ. [ಸಂ.]

**ಲಬ್ಧಿಗ್ರಹಣ** (ನಾ). [ಜೈನ] ಲಬ್ಧಿಯನ್ನು ಪಡೆಯುವಿಕೆ ; ಸಮ್ಯಕ್ತ್ವಜ್ಞಾನಸಂಪಾದನೆ : ಜಿನದೀಕ್ಷಾಗ್ರಹಮಂ ಪಡೆದಳ್ ಲಬ್ಧಿಗ್ರಹಣದಿನೊಳ್ಪುವಡೆವುದೊಂದಚ್ಚರಿಯೇ (ಶಂರಾಪು. ೨–೩೩). [ಸಂ.]

**ಲಬ್ಧಿಚತುಷ್ಟಯ** (ನಾ). [ಜೈನ] ಕ್ಷಯೋಪಶಮ, ವಿಶುದ್ಧಿ, ದೇಶನಾ ಮತ್ತು ಪ್ರಾಯೋಗ್ಯಗಳೆಂಬ ನಾಲ್ಕು ಬಗೆಯ ಲಬ್ಧಿಗಳು : ಅವು ಲಬ್ಧಿಚತುಷ್ಟಯಮೆಂಬನಿಸದ್ದದೆ ದುರಿತವಶದೆ ಬಹುವಿಧದುಃಖಾರ್ಣವದೊಳಗಟ್ಟಿರೆ (ಜೀಷಂ. ೩೭೬). [ಸಂ.]

**ಲಬ್ಧಿತ್ರಯ** (ನಾ). [ಜೈನ] ಕಾಲ, ಕರಣ ಮತ್ತು ಉಪಶಮ ಎಂಬ ಮೂರು ಬಗೆಯ ಲಬ್ಧಿಗಳು : ಅಂತು ತನಗೆ ಕಾಲಲಬ್ಧಿಯುಂ ಕರಣಲಬ್ಧಿಯುಂ ಮುಪಶಮಲಬ್ಧಿಯುಮೆಂಬ ಲಬ್ಧಿತ್ರಯಂ ದೊರಕೊಳೆ (ಆದಿಪು. ೩–೦ ವ). [ಸಂ.]

**ಲಬ್ಧಿಬಧಿರಸಮ** (ನಾ). [ಜೈನ] ಹುಟ್ಟುಕಿವುಡನಂತೆ ಮತ್ತೇನನ್ನೂ ಕೇಳದೆ ಜಿನೋಪದಿಷ್ಟತತ್ತ್ವವನ್ನು ಮಾತ್ರ ಏಕಚಿತ್ತದಿಂದ ಗ್ರಹಣ ಮಾಡುವವನು : ಲಬ್ಧಿಬಧಿರಸಮನೆಂಬೊಂ ಸಾಱುಂಗಿ ಕಿವುಡನಂತೆ ಕೋಟಿಗೆಯ್ಯದೆ ತನ್ನ ಮನೋಭಿಲಷಿತಮಪ್ಪರ್ಥಮಂ ಕೇಳ್ದು ಕೈಕೊಳ್ಗು (ಚಾವುಂಪು. ೬). [ಸಂ.]

**ಲಬ್ಧಿಬುದ್ಧ** (ನಾ). [ಜೈನ] ಜ್ಞಾನಪ್ರಾಪ್ತನಾದವನು; ಸಮ್ಯಕ್‌ಜ್ಞಾನಿ : ಅನುಕೂಲಕನುಮನಾಲಸ್ಯನುಮನವಕಾರ್ಯನುಂ ಲಬ್ಧಿಬುದ್ಧಸದೃಶನುಂ (ಆದಿಪು. ೦೦–೩ ವ). [ಸಂ.]

**ಲಬ್ಧೋಪದೇಶ** (ನಾ). ಉಪದೇಶ ಹೊಂದಿದವನು : ನೀರ ಪೋಗಕಾಲ್ಗೆ ಜಗಲೊಡಂ ಕೇವಲಜ್ಞಾನಮಕ್ಕುಮೆಂದು ಬೆಸಸಿದೊಡೆ ಲಬ್ಧೋಪದೇಶನಾಗಿ . . . ಬಂದೆಱಗಿ (ಆದಿಪು. ೦೯–೦೯೩ ವ). [ಸಂ.]

**ಲಬ್ಬ** 'ಲಬ್ಬೆ₁' ನೋ.

**ಲಬ್ಬೆ₁**, ಲಬ್ಬಿ (ನಾ). ಮೂಲತಃ ಅರಬ್ಬನಾಗಿದ್ದು ತಮಿಳು ಮಾತನಾಡುವ ಮಹಮದೀಯ ವ್ಯಕ್ತಿ : "ಮುಸಲ್ಮಾನರ ಒಂದು ಪಂಗಡ ; ತೊಗಲು ಹದಮಾಡುವವರು" (ಜಾಪಕೋ. ೪೨) : ಇಬ್ಬರೂ ಮಾಪಿಳ್ಳೆ ಲಬ್ಬೆ ಬ್ಯಾರಿ ಮೊದಲಾದ ಮಲೆಯಾಳಿಗಳು ಉಡುವಂತೆ . . . ಅಡ್ಡಪಂಚೆ ಸುತ್ತಿ, ಉದ್ದುದ್ದ ಬನೀನು ಹಾಕಿದ್ದರು (ಮಲೆಮ. ೪೩೨). ಲಬ್ಬೆ : ಕ್ರಿ.ಶ. ಏಳನೆಯ ಶತಮಾನದ ಹೊತ್ತಿಗೆ ಮುಸ್ಲಿಮರು ಹೆಚ್ಚು ಸಂಖ್ಯೆಯಲ್ಲಿ ಮಲಬಾರಿನಲ್ಲಿ ನೆಲಸಿದ್ದರೆಂದು ಮಾಪ್ಪಿಳಗಳಲ್ಲೂ ಲಬ್ಬೆಗಳಲ್ಲೂ ಐತಿಹ್ಯವಿದೆ (ಕಾಠದ. ೩೨೫). [ ?./ ತಮಿ. ಲಪ್ಪೈ ; ತುಳು. ಲಬ್ಬೆ ; ತೆಲು. ಲಬ್ಬಿ]

**ಲಬ್ಬೆ₂** (ನಾ). ಕೂಗು ; ಬೊಬ್ಬೆ : ಈ ಭಯಂಕರದೃಶ್ಯವನ್ನು ನೋಡಿ ಹೌಹಾರಿ ಒಂದೇ ಸಮನೇ ಲಬ್ಬೆ ಇಡತೊಡಗಿದನು (ಪಶು. ೬೬). 'ಲಬಲಬ' ಪರಾ. [ ? ]

**ಲಭಿಸು** (ಕ್ರಿ). ಪ್ರಾಪ್ತವಾಗು; ಉಂಟಾಗು : ಕಾಲಕಾಲದಲ್ಲಿ ನೆನದಕಾರ್ಯ ಲಭಿಸುವದಕ್ಕೆ ಪ್ರತ್ಯಕ್ಷ ಪರೋಕ್ಷಗಳಲ್ಲಿ ನಿದರ್ಶನ ಉಂಟಾಗುತ್ತಿರಲು (ಕೌಗಂಧಿ. ೨೩೦–೬) ; ಸಾಹಸಂ ಲಭಿಸಿತೆಂದುರ್ಕಿಹದಿಸುರಿದೆದ್ದು, ಕಾಳೆಗಂಗೊಡೆ ಮಸಂಮಾಡಿ (ಚನ್ನಾಂಗ. ೬೯–೨೦೯೩). [ಲಭನ್ತ + – ಇಸು₂]

**ಲಭ್ಯ** (ಗು). ೧. ಹೊಂದಬಹುದಾದ ; ಪಡೆಯಬಹುದಾದ. ೨. ಉಚಿತವಾದ ; ತಕ್ಕುದಾದ. ೩. ತಿಳಿಯಲಾಗುವ ; ಗ್ರಹಿಸಲಾಗುವ. (ನಾ). ೪. ದೊರೆತುದು ; ಪ್ರಾಪ್ತಿ : ಯಾವ ಸಂಖ್ಯೆಯನೇನು ಸೊನ್ನೆಯಿಂ ಗುಣಿಸಿದರೆ ಲಭ್ಯ ಸೊನ್ನೆ (ಶಾಂತಿ. ೯೬–೯). ೫. ದೊರಕುವಂಥವನು : 'ನಿಶ್ಚಲವಾದ ಅಪೇಕ್ಷೆಯಿಂದ ಯತ್ನ ಮಾಡಿದರೆ ಎಂತಹ ಕನಿಷ್ಠಜೀವಕ್ಕೂ ದೇವನು ಲಭ್ಯನೆಂಬುದನ್ನು ನಾವು ಮನಗಾಣಬೇಕು (ಧರ್ಮಸಾ. ೯೫). ೬. ಅದೃಷ್ಟ : ಸಂತೋಷಪಡುವುದಕ್ಕೆ ಅವನಿಗೆ ಲಭ್ಯವಿಲ್ಲ (ಕಂಪ). [ಸಂ.]

**ಲಮಾಣಿ** 'ಲಂಬಾಡಿ' ನೋ.

**ಲಯ** (ನಾ). ೧. ಅಂಟಿಕೊಂಡಿರುವುದು ; ಅನುಸರಿಸುವುದು. ೨. ಅಡಗುವಿಕೆ ; ಗುಪ್ತವಾಗಿರುವಿಕೆ. ೩. ಹಾಳು ; ಕೇಡು ; ನಾಶ : ಯುಧಿಷ್ಠಿರಂ ಕೊಟ್ಟ ನನ್ನಿಯ ಬಲದೊಳ್ ತನಗೆ ಲಯಮಿಲ್ಲಮುದನಱಿದು ಮೇಗಿಲ್ಲದ ಗೊಡ್ಡಾಟಮಾಡಲ್ ಬಗೆದು (ಪಂಪಭಾ. ೬–೪ ವ); ಈ ಹೊತ್ತಿನಲಿ ಧರ್ಮಸ್ಥಿತಿಗೆ ಲಯವಿಲ್ಲ (ಕುಮ್ಮಾರ. ೦೬–೨). ೪. ಪ್ರಳಯ : ರಾಗರಂಜನೆಯ ಉತ್ಪತ್ತಿ ಸ್ಥಿತಿ ಲಯ ನಿನಗೆಂದಾದುವು (ಬಸವ. ೪೬೬); ಹರಿ ಹರ ನಳಿನಭವರಾರಾಜ್ಞೆಯಿಂ ಲಯ ಸೃಷ್ಟಿಗೈಯುವರು (ಗಗಶಾ. ೦೨–೨೯); ಲಯವಾದ ಮೇಲೆ ಭಯವೇನು ? (ಗಾದೆ). ೫. ತನ್ಮಯತೆ; ಲೀನವಾಗುವಿಕೆ; ತಾದಾತ್ಮ್ಯ : ತಂಗೆಮ್ಮ ಲಯ ಬೇಕು ಶಿವನ ನೆನವಲ್ಲಿ (ಸಿದ್ಧ. ೦–೬೬); ನಾವು ಮಾಡುವ ಕೆಲಸ ಕಲೆಯಾಗಬೇಕಾದರೆ ಅದರಲ್ಲಿ ಮುಖ್ಯವಾದ ಒಂದು ವಿಶಿಷ್ಟಧರ್ಮವಿರಬೇಕು, ಅದನ್ನು ನಾವು ಲಯವೆಂದು ಕರೆಯಬಹುದು (ಸಾಹಿತ. ೯). ೬. ವಿಶ್ರಮಿಸುವ ಸ್ಥಳ ; ತಂಗುದಾಣ. ೭. ಒರಗುವಿಕೆ ; ನಿದ್ರಿಸುವಿಕೆ : ಲಯವೆಂದರೆ ನಿದ್ರಾಬಾಹಣ (ಕಿಕ್ಸ. ೨೨–೦). ೮. ಗತಿ ; ಗಮನ : ಲಯದಿಂ ಮೆಲ್ಪಿಂಪೆಡಂಗಂ ಪಡೆವ ತುರಗದಿಂ (ಆದಿಪು. ೦೦–೪೫). ೯. [ಸಂಗೀತ] ತಾಳ. ತಾಳಗಳ ನಡುವೆ ಬರುವ ಸಮಾನವಾದ ಕಾಲಪ್ರಮಾಣ: ದ್ರುತ, ಮಧ್ಯಮ ಮತ್ತು ವಿಲಂಬಿತ ಎಂದು ಇವು ಮೂರು ಬಗೆ : "ಹೊತ್ತು ಕ್ರಿಯಾಪ್ರಮಾಣಂ ತಾಳಮೆನಿಕು ಸಮಮೆತ್ತಲ್ಲಿ ಲಯಮೆನಿಕ್ಕು" (ಶೃಂಗಾರ. ೨೫–೬); ಒಂದೊತ್ತಂ ನಡೆಯಿಸುವುದದೆಂದೊಂದಱ ಲಯಕೆ ಲಕ್ಕ ತೆಱನಾಡುವುದೇನೆಂದೋಂ ಬಣ್ಣಿಸುವುದೊ ಸುರಸೌಂದರಿಯ ವಿಲಾಸವಿಭ್ರಮಭ್ರೂಲತೆಯಂ (ಆದಿಪು. ೯–೩೩); ಸಂಗೀತದ ಆಧಾರಸ್ತಂಭಗಳು ನಾದ ಮತ್ತು ಲಯ (ಕಾಠದ. ೩೩೫). ೧೦. [ಛಂದ] ಛಂದೋಬದ್ಧವಾದ ಗಣಗಳ ನಡುವೆ ಬರುವ ಸಮಾನವಾದ ಕಾಲಪ್ರಮಾಣದ ನಡೆ : ಛಂದಸ್ಸಿನ ಜೀವಾಳ ಲಯ ; ಲಯವನ್ನು ರೂಪಿಸತಕ್ಕವು

ಗಣಗಳು (ಸವಾರಿಶೀ. ೦೫೭). ೧೧. = ಲಯಯೋಗ : ಮಂತ್ರ ಲಯ ಹಠ ರಾಜವೆಂಬ ನಾಲ್ಕು ಯೋಗಭೇದಂಗಳು (ವಿವೇಕ. ೦೨೯); ಯೋಗ ಮಾರ್ಗದ ಪ್ರಭೇದಗಳು ಹಠ, ಮಂತ್ರ, ಲಯ, ರಾಜ ಎಂದು ನಾಲ್ಕು ಬಗೆಯಾಗಿವೆ (ಭಾರವ. ೦೫೩). [ಸಂ.]

**ಲಯಂಗಿಡು** (ಕ್ರಿ). [ಸಂಗೀತ] ಕಾಲಪ್ರಮಾಣವು ಕೆಡು : ಲಯಂಗಿಡ ದೊಡನುಲಿವುವು ಬೆರಲ ಕೊರಲ ನಾಲಗೆಯುಲಿಗಳ್ (ಕಾವ್ಯಸಾ. ೬೩೯ ಕೂದ್ರ೯). [ಲಯ + ಕಿಡು (< ಕೆಡು$_1$) ]

**ಲಯಕರ್ತೃ** (ನಾ). ನಾಶವನ್ನುಂಟುಮಾಡುವವನು ; ಪ್ರಳಯಕಾರಿ: ಲಯಕರ್ತೃ ಹರನೆಂದು ನುಡಿವ ವಾದಿಗಳನನುನಯದೆ ಬಾಧಿಸುತೆ (ಅರಾಜ. ೦-೦-೬೨); ಈಶ್ವರನು ಲಯಕರ್ತೃವಾದುದರಿಂದ ಈ ರುದ್ರದೇವ ರಿಂದೊಗೆದ ಈ ಜ್ವರವು ಕಾಲಮೃತ್ಯುರೂಪವಾಗಿ ಒಪ್ಪುತ್ತದೆ (ಸಕಪ್ಪ. ೬೦). [ಸಂ.]

**ಲಯಕರ್ಮಿ** (ನಾ). ಹಾಳುಮಾಡುವವನು ; ನಾಶಗೊಳಿಸುವವನು : ಕಾಣ್, ಗಿರಿಜೆ . . . ಕುಂಭಕರ್ಣಮಹೋಗ್ರಸಂಗ್ರಾಮಮಂ. ಪ್ರಿಯಂ ಲಯಮೂರ್ತಿಗೆನಗಿವಂ ಲಯಕರ್ಮಿ (ಶ್ರೀರಾಮಾ. ೬೭೯-೨೨). [ ಸಂ. ಲಯಕರ್ಮಿನ್ ]

**ಲಯಕಾಲ** (ನಾ). ಪ್ರಳಯಕಾಲ : ನಿನ್ನಂ ಹಿಡಿಂಬಾಂತಕಂ ಲಯ ಕಾಲಾಂತಕನಂತೆ ಕೊಲ್ಲದಿರಂ (ಗದಾಯು. ೯-೬೬); ಮಾಧವನ ಸೂತ್ರದ ಯಂತ್ರವಿದು ಲಯಕಾಲ ನಮಗೇದ (ಕುಮಾರವ್ಯಾಸ. ೦೬-೨೨). [ಸಂ.]

**ಲಯಕೃತಾಂತ** (ನಾ). ಪ್ರಳಯಕಾಲದ ಯಮ : ಕುಂಭಕರ್ಣ ಸ್ತೋಮವೆನಲದೆ ಲಯಕೃತಾಂತನ ಕ್ರೂರಪರಿವಾರ (ಕುಮಾ.ಭಾ. ೨-೦೩). [ಸಂ.]

**ಲಯಗತಿ** (ನಾ). ೧. ಒಳ್ಳೆಯ ನಡೆಗೆ,–ಗಮನ : ತರದೊಳುಡುಗಿರ್ದ ಬಾಲಂ ಕೊರಲುನ್ನತವಕ್ಷಮೆಸೆವ ಲಯಗತಿ ಶುಭದಂ (ಅಶ್ವಶಾ. ೩-೩೯). ೨. ಹಾಡುಗಾರಿಕೆಯ ಲಯ : ಕ್ರೀಡಾಸರಸಿಯೊಳಳಿಗಳ್ ಪಾಡುವ ಲಯಗತಿಗೆ ಕೃತಕಗಿರಿಯೊಳ್ ನವಿಲೆಳ್ದಾಡುವುದಂ ಪಥಿಕರ್ ನಡೆ ನೋಡುವರ್ (ವರ್ಧಪು. ೨-೨೨). [ಸಂ.]

**ಲಯಗ್ರಾಹಿ** (ನಾ). [ಛಂದ] ಒಂದು ಅಕ್ಷರವೃತ್ತದ ಹೆಸರು; 'ಭಜಸನಭಜಸನಭಯ' ಎಂಬ ಗಣವಿನ್ಯಾಸವಿದ್ದು ೧೧, ೧೮ ಮತ್ತು ೨೫ನೆಯ ಅಕ್ಷರಗಳ ಸ್ಥಾನವಲ್ಲಿ ದ್ವಿತೀಯಾಕ್ಷರಪ್ರಾಸ ಪುನರಾವರ್ತಿಸುತ್ತದೆ : ವ್ಯೋಮಂ ನಭೋಕಾಶವಿಹಾಯದ್ವಯಂಗಳ್ ಶಾಮೊಂದಿರಲ್ಕಾಂಭೋಜನೇತ್ರೇ ನಾಮಂ ಲಯಗ್ರಾಹಿಯೆಂದಾಯ್ತು (ಛಂದೋಂಬು. ೨-೦೨೪). [ ಸಂ. ಲಯಗ್ರಾಹಿನ್ ]

**ಲಯತ್ರಯ** (ನಾ). [ಸಂಗೀತ] ಸಂಗೀತ, ನಾಟ್ಯಗಳಲ್ಲಿ ಮತ್ತು ವಾದ್ಯಗಳನ್ನು ನುಡಿಸುವಲ್ಲಿ ಬರುವ ದ್ರುತ, ವಿಲಂಬಿತ ಮತ್ತು ಮಧ್ಯಮವೆಂಬ ಮೂರು ಲಯಗಳು : ಹೃದ್ಯವಾದ್ಯವಿಶೇಷಂಗಳೊಳ್ . . . ದ್ರುತವಿಲಂಬಿತಮಧ್ಯಮವೆಂಬ ಲಯತ್ರಯದೊಳಂ . . . ನೆಱೆದು (ಅಜಪು. ೫-೩೨ ವ). [ಸಂ.]

**ಲಯದೂರ** (ನಾ). ನಾಶವಿಲ್ಲದವನು ; ಪ್ರಳಯಕ್ಕೆ ದೂರವಾದವನು: ಲಯದೂರಂಗೆ ಲಯಾನ್ವಿತರ್ ಸತತ . . . ತೋಣೆಯೆ ಪೇಳ್ (ವೃಷಾ. ೩೭-೭೯). [ಸಂ.]

**ಲಯನ** (ನಾ). ೧. ಅಂಟಿಕೊಂಡಿರುವುದು ; ಹೊಂದಿಕೊಂಡಿರುವುದು. ೨. ಒರಗಿಕೊಳ್ಳುವಿಕೆ ; ವಿಶ್ರಾಂತಿ. ೩. ವಿಶ್ರಮಿಸುವ ಸ್ಥಳ : ತಂಗುದಾಣ. [ಸಂ.]

**ಲಯಬದ್ಧ** (ಗು). ೧. ಲಯಕ್ಕೆ ಹೊಂದಿಕೊಂಡಿರುವ : ಅದು ಲಯಬದ್ಧ ಆವಿಷ್ಕಾರ ಅಥವಾ ಅಭಿವ್ಯಕ್ತಿ (ಕಲ್ಯಾಣ. ೦೦೩). (ನಾ). ೨. ಲಯಕ್ಕೆ ಹೊಂದಿಕೊಂಡಿರುವುದು : ಸಂಗೀತರಚನೆಗಳು ಒಂದು ರಾಗದ ಕೆಲವು ಅಂಶಗಳನ್ನು ಲಯಬದ್ಧವಾಗಿ ತೋರುತ್ತವೆ (ಸಂಗೀತ. ೨). [ಸಂ.]

**ಲಯಮಿತ್ತು** (ನಾ). ಪ್ರಳಯಕಾಲದ ಮೃತ್ಯು : ಲಯಮಿತ್ತು ಮೊಗ ನೆಗಹಿದನೊ ಮದದುಬ್ಬಿನಲಿ (ಕುರಾಣಾ. ೫-೬-೨೦). [ ಲಯ + ಮಿತ್ತು (<ಮಿಱು$_3$) ]

**ಲಯಮೂರ್ತಿ** (ನಾ). ಪ್ರಳಯವನ್ನುಂಟುಮಾಡುವವನು : ಶಿವ : ಕಾಣ್, ಗಿರಿಜೆ . . . ಕುಂಭಕರ್ಣಮಹೋಗ್ರಸಂಗ್ರಾಮಮಂ. ಪ್ರಿಯಂ ಲಯಮೂರ್ತಿಗೆನಗಿವಂ ಲಯಕರ್ಮಿ (ಶ್ರೀರಾಮಾ. ೬೭೯-೨೨). [ಸಂ.]

**ಲಯಯೋಗ** (ನಾ). [ಯೋಗ] ಮಂತ್ರಯೋಗ, ಹಠಯೋಗ, ರಾಜಯೋಗ ಮತ್ತು ಲಯಯೋಗಗಳೆಂಬ ನಾಲ್ಕು ವಿಧವಾದ ಯೋಗಗಳಲ್ಲಿ ಒಂದು ; ಸಾಂಪ್ರದಾಯಿಕವಾದ ಯೋಗಸಾಧನೆ ಗಳಲ್ಲಿ ಮನಸ್ಸನ್ನು ಲಯಗೊಳಿಸುವಿಕೆ ; ಮನಸ್ಸು ಮತ್ತು ಪ್ರಾಣ ವಾಯುಗಳು ಪರಸ್ಪರ ಲೀನವಾಗುವುದು : ಮಂತ್ರಯೋಗ ಹಠಯೋಗ ಲಯಯೋಗ ಜ್ಞಾನಯೋಗ ಇವು ಮೊದಲಾದ ಎಲ್ಲ ಯೋಗ ವನಱಿದು (ಶನ್ನವ. ೦೦೮-೨) ; ಈಡಾ ಪಿಂಗಳೆಯಲ್ಲಿ ತುಂಬಿ ಸೂಸುವ ಹಂಸರೂಪವಾದ ಪ್ರಕೃತಿಪ್ರಾಣವಾಯುವನು ಸೋಹಂಭಾವದಿಂದೆ . . . ಮನೋಮಾರುತಂಗಳೊಳಗೂಡಿ ಲಯಿಸುವುದೆ ಲಯಯೋಗ (ಪ್ರಭುಲಿಂಗಲೀ. ೨೦೩-೫೩). [ಸಂ.]

**ಲಯಯೋಗಿ** (ನಾ). ಲಯಯೋಗವನ್ನು ಆಚರಿಸುವವನು : ಲಯ ಯೋಗಿಗಳ ರೀತಿ ಬೇರೆ. ಇವರು ಅಲ್ಪತೃಪ್ತರಲ್ಲ (ಶಾಹಿಜೀ. ೦೦). [ಸಂ, ಲಯಯೋಗಿನ್]

**ಲಯವಡಿಸು** (ಕ್ರಿ). ಪ್ರಳಯವನ್ನುಂಟುಮಾಡು : ನಯನಯುಗದಿಂ ಜಗವ ಪೊರೆದು, ನಿಟಿಲಾಕ್ಷಿಯಿಂ ಲಯವಡಿಸುವುದದೇನು ಶಿವಯೋಗಲೀಲೆ? (ಮಂಕುತಿ. ೬೦೩). [ ಲಯವಡು + – ಇಸು$_3$ ]

**ಲಯವಡು** (ಕ್ರಿ). ನಾಶವಾಗು ; ಪ್ರಳಯವಾಗು : ‹ ಲಯವಡಿಸು ಪರಾ. [ ಲಯ + ಪಡು$_1$ ]

**ಲಯವಾದ್ಯ** (ನಾ). [ಸಂಗೀತ] ಲಯಕ್ಕಾಗಿ ಬಳಸುವ ವಾದ್ಯ : "ಭೂಮಿದುಂದುಭಿ" ಎಂಬ ಲಯವಾದ್ಯವನ್ನು ಅವರು ಸೃಷ್ಟಿಸಿಕೊಂಡ ರೆಂದು ತಿಳಿದು ಬಂದಿದೆ (ಸಂಗೀತಂ. ೨೨). [ಸಂ.]

**ಲಯವಿನ್ಯಾಸ** (ನಾ). [ಸಂಗೀತ] ಲಯದ ಕ್ರಮ, –ಗತಿ : ಈ ತೊಡಕಾದ ತಾಳದಲ್ಲಿ ಪಲ್ಲವಿಯನ್ನು ಹಾಡುವ ಯಾವ ಗಾಯಕನಿಗೇ ಆಗಲಿ ಲಯವಿನ್ಯಾಸದಲ್ಲಿ ಮಹತ್ತರ ಪ್ರತಿಭೆಯಿರಲೇ ಬೇಕು (ಸಂಗೀತ. ೭). [ಸಂ.]

**ಲಯವಿಹೀನ** (ನಾ). ನಾಶವಿಲ್ಲದವನು ; ಚ್ಯುತಿಯಿಲ್ಲದವನು : ಜಯ ಜಗತ್ರಯನಾಥ . . . ಲಯವಿಹೀನ ಮಹೇಶ (ಕುಮಾ.ಶ. ೬-೯೩). [ಸಂ.]

**ಲಯಸಮಯ** (ನಾ). ಪ್ರಳಯಕಾಲ : "ಲಯಸಮಯಂ . . . ಮಹಾ ಪ್ರಳಯಮೆಂಬುದದು ಸಂವರ್ತಂ" (ಶಬ್ದಕೋ. ೦೭-೦೭) : ಲಯಸಮಯಂ ಜಗಕ್ಕೆ ಪೆಱಿತಾವುದೊ ರಾವಣನುಗ್ರಕೋಪವಹ್ನಿಯೆ ವಿಲಯಾನಿಲಂ ಮುಳಿಸೆ ಕಲ್ಪವಿರಾಮಂ (ಕಂರಾಮಾ. ೦೯-೦೬೦) : ಲಯಸಮಯತಾಂಡವಪ್ರಳಯ ನಾಟ್ಯಾಶಂಕಿಗಳ್ ಕುದಿದು ಘೀಂಕರಿಸಿ ಗದಗದಿಸಿದುವು ಚಕಿತ ದಿಗುದಂತಿ ! (ಶ್ರೀರಾಮಾ. ೬೬೬-೯೫೯). [ಸಂ.]

**ಲಯಾಂತಕ** (ಗು). ೧. ಪ್ರಳಯಕಾಲದ : ಲಯಾಂತಕಘೋಷಭೀಷಣಂ ಪುರದೊಳಗುಣ್ಮಿದತ್ತು ಭಯವಿಹ್ವಲಪೌರಕೃತಂ ಮಹಾರುತಂ (ಕಂದ್ರಕೃ. ೯-೯೫). (ನಾ). ೨. ಪ್ರಳಯಕಾಲದ ಯಮ : ಪೊಡವಟ್ಟ ಲಯಾಂತಕ ತ್ರಿಶೂಲೋಪಮ ಭೀಷಣಭ್ರುಕುಟಿ ಮುನ್ನಮ ರೌದ್ರಗದಾ ಯುಧಂಬರಂ ಪೋಪ ಭುಜಾರ್ಗಳಂ ರಿಪುಗಳ ಗ್ರಹ ಮಾದುದು

ಭೀಮಸೇನನಾ (ಕಂಕಥಾ. ೭-೬). [ಸಂ.]

**ಲಯಾಗ್ನಿ** (ನಾ). ಪ್ರಳಯಾಗ್ನಿ : ಕಾನನದುರ್ಗಕ್ಕೆ ಮಹಾದವಾಗ್ನಿ ಜಲದುರ್ಗಕ್ಕುರ್ವಿದೌರ್ವಾಗ್ನಿ ಧಾನ್ಯನದುರ್ಗಕ್ಕೆ ಬೃಹಲ್ಲಯಾಗ್ನಿಯೆನೆ. ... ನೃಪಸುತಂ ವಿಕ್ರಾಂತಮಂ ತೋಱಿದಂ (ಕೃಷ್ಣಕೃ. ೩-೩೦); ಮಗ್ನನಾದನೆ ಕಪೀಂದ್ರಂ ಮಹಾಸುರಲಯಾಗ್ನಿಯೊಳ್ ? (ಶ್ರೀರಾಮಪ. ೬೯೦-೬೬). [ಸಂ.]

**ಲಯಿಸು** (ಕ್ರಿ). ೧. ನಾಶವಾಡು : ಹಗೆಬಲಬಲ ಮುನ್ನೂಱುಪದ್ಮವ . . . . ಲಯಿಸಿದನೆಂದು ರಘುರಾಮ (ಕೌಶಿಕಾ. ೪೭ ಸೂಚನ) ; ಇನಿತಿಲ್ಲದಂತೆ ಲಯಿಸುವ ತೇಜನನು . . . ಒರವೆನಾಲಿಸು (ಹರಿಭೋ. ೩-೦೬-೦). ೨. ಲೀನವಾಗು ; ಮಗ್ನವಾಗು ; ತಲ್ಲೀನವಾಗು : ಅಜ್ಞಾನವೆಂಬ ಬೀಜದಲ್ಲಿ ಮನಸ್ಸು ಲಯಿಸುತ್ತದೆ (ಶಾರದ. ೨೪೬) : ಈ ಚಿತ್ತವೃತ್ತಿಗಳು ಅಥವಾ ಭಾವಗಳು ಆತನ ಆತ್ಮ ಅಥವಾ ಹೃದಯಸಮುದ್ರದಲ್ಲಿದ್ದು ಅಲ್ಲೇ ಲಯಿಸಿ ಹೋಗುವ ತರಂಗಗಳು (ಕಾವ್ಯಕು. ೮೦).

[ಲಯ + – ಇಸು]

**ಲಯೋತ್ತರ** (ನಾ). [ಛಂದ] ಮಾತ್ರಾ — ವರ್ಣ ಮಿಶ್ರವೃತ್ತಗಳಲ್ಲಿ ಒಂದು ; ಇದರಲ್ಲಿ ಕೆಲವು ಪ್ರಭೇದಗಳು ಇವೆ. ಉತ್ಸವವೃತ್ತ ಮತ್ತು ರಮಣಾವೃತ್ತದ ಪಾದಗಳನ್ನು ಬೆರಸಿ ಇದರ ಪ್ರಭೇದಗಳನ್ನು ಕಲ್ಪಿಸಲಾಗುತ್ತದೆ. ಜಯಕೀರ್ತಿಯು ಲಯೋತ್ತರವೃತ್ತದ ಮೊದಲನೆಯ ಪ್ರಭೇದದಲ್ಲಿ ಉತ್ಸವದ ಒಂದು ಪಾದ+ರಮಾದ ಒಂದು ಪಾದ ಬರುತ್ತದೆ. ಉದಾಹರಣೆಗೆ — ೨ ಗಲ/ನಗಣ, ಗ+ಜಗಣ, ೨ ಗಲ/ನಗಣ, ಗ. [ಸಂ.]

**ಲರಿಲರಿ** (ನಾ). ಒಂದು ಅನುಕರಣ ಶಬ್ದ : ತಿಂದರು ಶವಗಳ ಲರಿಲರಿ ಕಡಿದು (ಶಾಂತೀಶ. ೭೦-೬).

**ಲಲಂತಿಕೆ** (ನಾ). ಒಂದು ಬಗೆಯ ಸರ : ಉದ್ದವಾಗಿರುವ ಕಂಠಹಾರ: "ಏಕಾವಳಿ ಸರಿಗೆ ಸುವರ್ಣಕಳಿತಂ ಲಂಬನಂ ಲಲಂತಿಕೆ ಮುಕ್ತಾನೀಕಂ. . . ನಕ್ಷತ್ರಮಾಲೆಯೆನಿಕುಂ ಪೆಸರಿಂ" (ಪಟ್ಟುಕೋ. ೬೩-೯). [ಸಂ. ಲಲಂತಿಕಾ]

**ಲಲನ** (ನಾ). ೧. ಆಟವಾಡುವುದು; ವಿನೋದವಾಡುವುದು ; ಕ್ರೀಡೆ. ೨. ನಾಲಗೆಯನ್ನು ಚಾಚುವುದು.— ಜೋಲುಬಿಡುವುದು. ೩. ಗಂಡ ; ಪತಿ : ಎನ್ನ ಲಲನನಂ ಪಶ್ಚಿಮಸಮುದ್ರಕ್ಕೆಳಿಪಿದಿರಿನೀವೆನುತ ದಿನಸತಿ ಸಲೆ ಕರಂ ಮುಗಿದಿಹವೊಲು ಕರಂ ಮುಗಿದವಬ್ಜಾಳಿ (ಚಿತ್ರಪು. ೦೦-೪೩) ; ಲಲನನಂ ತೋಱಿದು ಬಹುಬುದ್ಧಿಯಿಂದಿರ್ಪಳುಜ್ವಲ ಕುಂಭದೊಳು ಸೂಳೆ (ಶೀಕೃಕೃ. ೪-೨೦-೨೨). [ಸಂ.]

**ಲಲನೆ, ಲಳನೆ** (ನಾ). ೧. ಹೆಂಗಸು ; ಹೆಣ್ಣು ; ಸ್ತ್ರೀ : "ಪ್ರಮದೆ ನಿತಂಬಿನಿ . . . ಮನೋರಮೆ ಲಲನೆ ಕಾಂತೆ ಎಂದಿಂತು ಮತ್ತಮಬಲಾವಿಶೇಷ [ಮುಂ॥ ಕಾಮು]ಕ್ಕುಂ" (ಪಟ್ಟುಕೋ. ೩೩-೨) ; ಲಲನಾಮುಖೇಂದು ಲಾವಣ್ಯಲೀಲೆಯುಂ ಪಡೆದ ಬಣ್ಣದಿಂ ಕಂಪಿಂದೇನಲೆದುದೊ ವೈತಿಕದಂತಿರೆ ಕುಸುಮಮಂಜರಿಯುಮಂ ಕಾಶ್ಮೀರಂ (ಅಜಿಪು. ೦೦-೦೨೪) ; ಲಲನೆಯ ಬಾಸೆಯು ಕರ್ಪೇಂ ಗೆಲೆವಂದುದೊ ವಿಷ್ಣು ಗರ್ಭದೊಳ್ಕೆಲಸಲೊಡಂ (ಅಶಂಪು. ೦೨-೬೪); ಈ ಲಲನೆಯ ಸೌಂದರ್ಯಂ ಸೋಲಿಸಿದುದು ಗಡ ಮದೀಯ ಮನವಂ (ರಾಜಶೇ. ೭-೬೦). ೨. ಹೆಂಡತಿ ; ಪತ್ನಿ : ಪುರುಷನ ಒಲವಿಲ್ಲದ ಲಲನೆಯಂತೆ ಆಗಿದ್ದೆನಯ್ಯಾ (ಬಸವ. ೨೬೪); ಮಲುಹನಂ ಕಾಮಬಾಣದಿ ನೊಂದು . . . ಲಲನೆಯಂ ಕಾಣದಲ್ಲದೆ ಉಳಿಯನೆಂದವಳ ಗೃಹಕೆ ಬರುತಿರಲು (ಪ್ರಭುಲಿಂಗ. ೪-೨೯). ೩. ನಾಲಗೆ. **ಲಳನೆ** : ೧. ಲಳನಾ ಭೂಷಣಾವೀಕೆ ಭೂಷಣಾಕೆ ಭೂಪಾಲಕ್ಷ್ಮಿಯಂ ಮಾಟ್ಟುದು (ಜಗು. ೦೦-೦೦೬); ಲಳ[ಶಾಕಂ. ಲ]ನೆ ಮನೋಭವಾಂಬುದದ ಮಾಟಿಯುವೋಲ್ವದನಿತ್ತು ವಹಾಣ . . . ರತಾಂತಮಂತಲಘುತರೋಪಶಾಂತ ಘನಕಾಲದ ಲೀಲೆಯು

ನಾಂತುದಾವಗಂ (ಕಾವ್ಯಸಾ. ೦೦-೬೪) ; ಲಳನಾಧಮ್ಮಿಲ್ಲಮಾಲಾಕುಸುಮ ಪರಿಮಳಾಮೋದಿ . . . ಸಮೀರಂ (ಕೃಷ್ಣಕೃ. ೬-೦೦೬). [ಸಂ. ಲಲನಾ]

**ಲಲಾಟ** (ನಾ). ೧. ಹಣೆ ; ನೊಸಲು : "ನಿಟಿಲಂ ಭಾಳಮಳಿಕಮಱಿಗೆ ಲಲಾಟಂ" (ಪಟ್ಟುಕೋ. ೭೦-೦೬) ; ಸಹಜಮನೋಜನ ಲಲಾಟ[ಂ] ಪಟ್ಟಂ ಗಟ್ಟಿದ ನೊಸಲ್ಗೆ ಲಕ್ಷಣಮನಱಸಲ್ವೇಡೆಂಬಂತಾದುದು (ಕಂಕಥಾ. ೨-೩೯೭); ಲಲಾಟದಲ್ಲಿ ವಿಭೂತಿಯ ಬರೆಯಲಿಕೆ ಪಾಪ ಪಲ್ಲಟವಾಗದೆ (ಬಸವ. ೭೩) ; ಲಿಖಿತ ಲಲಾಟದೊಳಿರದಿರಲೇಗೈವೆ ಎಷ್ಟು ಲಗ್ಗಾಟವ ಹೊಡವೆ (ತಂಶಾತ. ೦೬೦-೯೦). ೨. [ಕಾಮಶಾ] ಆಲಿಂಗನಗಳಲ್ಲಿ ಒಂದು ಬಗೆ : ಸ್ತ್ರೀಯ ಮುಖದಿಂ ತನ್ನ ಮುಖಮಂ ಕಂಗಳಿಗೆ ಕಂಗಳಂ ಹಣೆಗೆ ಹಣೆಯಿಂದೊತ್ತರಿಸುತ್ತ ಆಲಿಂಗನಂಗೆಯ್ವುದು ಇದು ಲಲಾಟವೆಂಬಾಲಿಂಗನ (ಕಾಮಸೂ. ೨೨೪). [ಸಂ.]

**ಲಲಾಟಕ** (ನಾ). ೧. ಹಣೆ ; ನೊಸಲು. ೨. [ಕಾಮಶಾ]ಆಲಿಂಗನಗಳಲ್ಲಿ ಒಂದು ಬಗೆ : ಮುಸುಡು ಮುಸುಡೊಳು ನೊಸಲು ನೊಸಲೊಳಿದೆಯೆದೆಯೊಳಗೆ ಉಸಿರುಸಿರೊಳೊಂದಿ ಬೇಱಿಲ್ಲದಂತೆ ಸಸಿನೆ ತಳ್ಕವರ್ದಪ್ಪಿ ದಸಿಯಳಸಿಯನ ದೆಸೆಯೊಳಿಸೆವುದು ಲಲಾಟಕಮಿದಪ್ಪುದಬಲೆ (೩೩ಪ.೭-೦೪) ; ಪುಷ್ಕರ . . . ಲಲಾಟಕವೆಂಬ ದ್ವಾದಶವಿಧಾಲಿಂಗನಂಗಳಂ (ಏಮಿಳ. ೨೨೪). [ಸಂ.]

**ಲಲಾಟನೇತ್ರ** (ನಾ). ೧. ಹಣೆಯಲ್ಲಿರುವ ಕಣ್ಣು; ಹಣೆಗಣ್ಣು: ಮುಳಿಸು ಲಲಾಟನೇತ್ರ ಶಿಖಿ ಮೆಚ್ಚೆ ವಿನೂತರಸಪ್ರಸಾದಂ (ಕಂಕಥಾ.೦-೨) ; ಸ್ಮರಶಿಖಿಲಲಾಟನೇತ್ರಸ್ಫುರದುರುಹುತವಹನಿಸೆಯ್ದು ಬೇವುತ್ತಿರ್ದಾ ಸ್ಮರನ ಪೊಗೆಯಿಂದ ಪುದಿದಿರ್ದ ರತಿಯವೋಲ್ ಕಾಂತೆ ಕರಮೆ ಕಣ್ಗೆಸೆದಿರ್ದಳ್ (ಸುರಂಪು. ೪೬). ೨. ಹಣೆಯಲ್ಲಿ ಕಣ್ಣುಳ್ಳವನು; ಹಣೆಗಣ್ಣ ; ಶಿವ: ಲಲಾಟನೇತ್ರ ನಾಗಸೂತ್ರ ವಿಶ್ವಜೈತ್ರ . . . ಪಾಹಿಮಾಂ ಮಹೇಶ್ವರಾ (ಶಾಂತಾಸ್ಕ. ೨-೩-೨೮). [ಸಂ.]

**ಲಲಾಟಪಟ್ಟ** (ನಾ). ೧. ಹಣೆ : ನಿಜಾನುಜಸಹಿತಮಿದಿರ್ವಂದು ಧರಾತಳನಿಪ್ಪ ಲಲಾಟಪಟ್ಟಂ ಸಾಷ್ಟಾಂಗವೆಱಗಿ ಪೊದಮಟ್ಟು ತದೀಯಾಶೀರ್ವಾದಮನಾಂತು (ಕಂಕಥಾ. ೭-೩೯ ಪ) ; ಮಹೀತಳಾಶ್ಲಿಷ್ಟಲಲಾಟಪಟ್ಟನೆಱಗಿ ಪೊದಮಟ್ಟು (ಶಾಂತಿಪು. ೩-೩೦ ಪ). ೨. ಹಣೆಪಟ್ಟಿ : ಈಗಲಾದರೆ 'tourist' ಎಂಬ ಲಲಾಟಪಟ್ಟವನ್ನು ಧರಿಸಿ ಪ್ರೇಕ್ಷಕಸಮುದಾಯವನ್ನು ತುಂಬಿಕೊಂಡು ಅನೇಕ ಬಸ್ಸುಗಳು ಸಂಚರಿಸುತ್ತವೆ (ಪಂಬರು. ೦೦೩). ೩. ಒಂದು ಬಗೆಯ ಆಭರಣ; ಹಣೆಗೆ ಕಟ್ಟುವ ಅಲಂಕಾರದ ಪಟ್ಟಿ : ಸುಜನೈಕಮಿತ್ರ ಅಭಿಮಾನಮನ್ಮಥ ವಿಭವಪುರಂದರ ಸರಸ್ವತೀಗಣಲಲಾಟಪಟ್ಟ ಕನ್ನಕ್ಕೈರ ದಿಶಾಪಟ್ಟ ವಾಜಿಕುಳಾಂಬರದ್ಯುಮಣಿ (ಶಾಶಾ. XX, ೬೯-೦೪ ; 1107). [ಸಂ.]

**ಲಲಾಟರೇಖೆ** (ನಾ). ೧. ಆಯುಷ್ಯವನ್ನು ಸೂಚಿಸುವ ಹಣೆಯ ಮೇಲಿನ ರೇಖೆ. ೨. ಹಣೆಯ ಬರಹ ; ಅದೃಷ್ಟ : ದೊರೆಗಳು ಎನ್ನಿಸಿಕೊಂಡವರೆಲ್ಲರಿಗೂ ಈ ಭಾಗದಲ್ಲಿ ಲಲಾಟರೇಖೆಯು ಏಕರೀತಿಯಾಗಿ ದಯೋ (ಶಾಮರಾ. ೬೨). [ಸಂ. ಲಲಾಟರೇಖಾ]

**ಲಲಾಟಲಿಖಿತ** (ನಾ). = ಲಲಾಟರೇಖೆ ೨: ಲಲಾಟಲಿಖಿತ ಬರೆದ ಬಳಿಕ ಪಲ್ಲಟವ ಮಾಡಬಾರದು (ಬಸವ. ೩೬): ಲಲಾಟಲಿಖಿತವಾದ ವಿಧಿಯಿಚ್ಛೆಯಂತ ನಡೆಯುವುದು ನನ್ನ ಕರ್ತವ್ಯ (ಭೂಪರು. ೨೯೯). [ಸಂ.]

**ಲಲಾಟಲೋಚನ** (ನಾ). ಹಣೆಯಲ್ಲಿ ಕಣ್ಣುಳ್ಳವನು; ಹಣೆಗಣ್ಣ ; ಶಿವ: ಜಯಂತೀಮಧುಕೇಶ್ವರದೇವಲಬ್ಧವರಪ್ರಸಾದಂ ಮೃಗಮದಾಮೋದಾ ತ್ರಿಯಕ್ಷಕ್ಷುಮಾಕ್ಷಸಂಭವ ಚತುರಾಶೀತಿನಗರಾಧಿಷ್ಠಿತ ಲಲಾಟಲೋಚನಾ (ಶಾಶಾ.XX, ೬೬-೬; 1118); ಲಲಾಟಲೋಚನನ ಮಹಿಮೆಯ ಪೇಳು ತಿರಲಿಂದು (ಶೀಕೃಕೃ. ೪-೩-೪೦). [ಸಂ.]

**ಲಲಾಟಶೂನ್ಯ** (ನಾ). ಹಣೆಯ ಮೇಲೆ ತನ್ನ ಧರ್ಮದ ಚಿಹ್ನೆಯನ್ನು ಧರಿಸದೆ ಇರುವವನು; ಹಾಳುಹಣೆಯುಳ್ಳವನು : (+). [ಸಂ.]

**ಲಲಾಟಾಕ್ಷ** (ನಾ). = ಲಲಾಟಲೋಚನ : ಪಾಲಿತಾಖಿಲಸುಮನಸೇ ವಿಧುಮೌಲಿ . . . ಲಲಾಟಾಕ್ಷ ಪ್ರತಿಮ ಬಸವಾಯತೇ ಜಯತು (ಬಸಪು. ೬೦-೯೯). [ಸಂ.]

**ಲಲಾಟಿಕೆ** (ನಾ). ೧. ಮುಂದಲೆಯಲ್ಲಿ ಧರಿಸುವ ಒಂದು ಬಗೆಯ ಆಭರಣ ; ಬೈತಲೆಮಣಿ. ೨. ಮುಂದಲೆಯಲ್ಲಿ ಧರಿಸುವ ಹೂವಿನ ಕುಚ್ಚು : "ಮಾಲೆಯುಂ ಚಂಡಿಕೆಯೊಳಿಕ್ಕೆ ಪುಭುಷ್ಪಕಂ ಮುಂದಲೆಯ ಲಲೆವುವ ಲಲಾಟಿಕಾಖ್ಯಂ" (ಮಂಗರಾ. ೯೬-೨೦). ೩. ಹಣೆಯ ಮೇಲೆ ಚಂದನ ಮೊದಲಾದ ಸುಗಂಧದ್ರವ್ಯಗಳಿಂದ ಇಡುವ ಗುರುತು ; ತಿಲಕ; ಬೊಟ್ಟು : "ತಿಳಕಂ ತಮಾಳಪತ್ರಂ . . . ಲಲಾಟಿಕಾ — ಈ ೬ ಬೊಟ್ಟು" (ಹಲಾಯು. ೯೯-೪೬೭) ; ಅನಂಗರಚಿತಚಂದನಲಲಾಟಿಕಾ ತ್ರಿಪುಂಡ್ರನುಂ (ಸಾರಂಪು. ೯೦೦). [ ಸಂ. ಲಲಾಟಿಕಾ ]

**ಲಲಾಟೇಕ್ಷಣ** (ನಾ). = ಲಲಾಟಲೋಚನ : ಶಿವಲಿಂಗಾಂತಃಸ್ಥನಾದಂ ವಿಯತ್ತ್ರಿಪುರಾರಣ್ಯದವಾಗ್ನಿ ಹಂಪೆಯ ವಿರೂಪಾಕ್ಷ ಲಲಾಟೇಕ್ಷಣಂ (ಸಂಬರ. ೬ ಸೂತ್ರ). [ಸಂ.]

**ಲಲಾಮ** (ನಾ). ೧. ಮುಂದಲೆಯ ಆಭರಣ ; ಬೈತಲೆಮಣಿ : ಆ ವತ್ಸವಿಷಯಂ . . . ಭೂಲಲನಾವದನಲಲಾಮಮೆಂಬಿನಂ ಸೊಗಯಿಸುಗುಂ (ಸುಕುಮಾ. ೧-೬೦); ಈ ಭೂಕಾಂತೆಗೆ ಲಲಾಮಮೆಂಬಂತೆ . . . ಒಪ್ಪುವುದಹಿಚ್ಛತ್ರಪುರಂ (ರಾಮಾಶ್ವ. ೩೩-೧೦). ೨. =ಲಲಾಟಿಕೆ ೩ : ಕಟಕಳ ಕಾಂಚಿಯಿಂದೆ . . . ನಿಟಲಂ ಲಲಾಮದಿಂ ನಿಟಲದಿನಾ ಲಲಾಮಮುಮ ಲಂಕರಿಸಿರ್ದುವೆಸುತ್ತೆ ನೋಡಿದರ್ (ಕಂದ್ರಪು. ೬-೬೭). ೩. ಗುರುತು; ಚಿಹ್ನೆ. ೪. ಬಾವುಟ ; ಪತಾಕೆ. ೫. ಬಾಲ. ೬. ಹೆಚ್ಚುಗಾರಿಕೆ; ಹಿರಿಮೆ. ೭. ಕೊಂಬು ; ಕೋಡು ; ಶೃಂಗ. ೮. ಕುದುರೆ. ೯. ಮಂಗಳಕರವಾದ ಗುರುತು; ಶುಭಲಕ್ಷಣ. ೧೦. ತಿಲಕಪ್ರಾಯವಾದುದು; ಶ್ರೇಷ್ಠವಾದುದು ; P ಸಮಾಸದ ಕೊನೆಯಲ್ಲಿ ಈ ಅರ್ಥ ಬಳಕೆಯಾಗುತ್ತದೆ : ಸಕಲಕ್ಷತ್ರಕುಲಪೂಜ್ಯನಮಳಚರಿತ್ರಂ ಪ್ರೋದ್ದಾಮಸೋಮವಂಶಲಲಾಮಂ (ಕಂಜಾಪ. ೧-೬೦); ಗುರುಕುಲ ಲಲಾಮನಂ ಕಂಡನು (ಶಾಕುಂ. ೨-೨೩). ೧೧. ಒಡೆಯ; ಸ್ವಾಮಿ : ಅಪವರ್ಗಸಂಪದ್ವಿಳಾಸಿನೀಲಲಾಮನುಂ (ತ್ರಿಷ. ೧೦-೬೨ ವ). ೧೨. ಚೆಲುವು; ಸೌಂದರ್ಯ. ೧೩. ಸರಸ್ವತಿ. ೧೪. ಲಕ್ಷ್ಮಿ. ೧೫. ಬಸವ; ವೃಷಭ. ೧೬. ಸೂರ್ಯ. ೧೭. ಚಂದ್ರ. ೧೮. ತುದಿ; ಅಗ್ರ. ೧೯. ಕಿರಣ; ರಶ್ಮಿ. ೨೦. ಕೆಂಪುಬಣ್ಣ. ೨೧. ಅರಗು; ಅಲತಗೆ. ೨೨. ಬಿಳಿದು; ಶ್ವೇತವರ್ಣ. ೨೩. ಆಟ; ಕ್ರೀಡೆ. ೨೪. ನಾದ; ಸ್ವರ. ೨೫. ಮುಖ್ಯನಾದವನು; ಪ್ರಧಾನವ್ಯಕ್ತಿ : "ತಿಲಕದಲಿ ಹೆಮ್ಮೆಯಲಿ ಕೋಡಿನಲಿ ಮುಖ್ಯನಲಿ ಅಲತಗೆಯೊಳಾಭರಣದಲಿ ಪತಾಕೆಯಲಿ ಸೀಳ್ದಲೆವ ಬಾಲದಲಿ ವಾಜಿಗಳಲಿ ಲಲಾಮವೆಂದೆಂಬ ನಿಜನಾಮಮುಮಕ್ಕುಂ" (ಮಂಗರಾ. ೦೯೬-೩೪); "ಭಾರತಿ ಗೋಮಿನಿ ವೃಷಭ ತುಂಗ ತುರಂಗ ಪತಂಗ ಶೃಂಗ ಶೃಂಗಾರ ವಿಭೂಷಣಾಂಶು ಧವಳಾಗ್ರ ಸಲಕ್ಷಣ ವಾಳ ಕೇಳಿ ಚಂದ್ರಾರುಣ ಶ್ರೇಷ್ಠನಾದ ತಿಲಕ ಧ್ವಜಮಿಂತು ಲಲಾಮಶಬ್ದಂ" (ನಾನಾರ. ೨೬). [ಸಂ.]

**ಲಲಾಮಕ** (ನಾ). ಮುಂದಲೆಯಲ್ಲಿ ಧರಿಸುವ ಹೂವಿನ ಕುಚ್ಚು : "ಮುಂದಲೆಯ ಹೂ ಲಲಾಮಕಮೆಂಬುದು" (ಹಲಾಯು. ೯೦-೩೯೯). [ಸಂ.]

**ಲಲಾಮೆ** (ನಾ). ೧. ತಿಲಕಪ್ರಾಯಳಾದವಳು; ಶ್ರೇಷ್ಠಳಾದವಳು : ಆಗಳಾತನಂತಃಪುರಸೀಮಂತಿನೀ ಲಲಾಮೆಯಪ್ಪನಂಗಪುಷ್ಪ . . . ಸುಗ್ರೀವನ ಸಂತೋಷದೊಳಾದ ಮನೋರಾಗಮುಮನಪ್ಪುಕೆಯ್ಯೆ (ಕಂರಾಮಾ. ೧೦-೩೨ವ). ೨. (?) : ಮಹಿಷಾಸುರನಂತೆ ಸೂಲದೊಳ್ ನೊಂದು ನರಳ್ವ ಕಳ್ಳರಿಂ ಬೊಂತಿಯಂತೆ ದಕ್ಕಿನೊಳಿರ್ದ ಪಂದಲೆಗಳಿಂ ಬಂದಿಕಾಱನಂತೆ ತೆಱಪುವಾರ್ದು ಓಡಿವ ಶಾಕಿನಿಯರಿಂ ಮೃಗಯಾಪತಿಯಂತೆ ಕೀಲಾಲಜಲ್ಲದೊಳೋಲಾಡುವ ಲಲಾಮೆಯರಿಂ (?) ಸೋಂಬನಂ ಮೆಚ್ಚಿ ಬೇಱೂರ್ಗೆ ಪೋದ ಸೂಳೆಯುಂತುಯ್ಯಲಾಡುವ ರಣದೇವತೆಯರಿಂದತಿಭಯಂಕರಾಕಾರಮಪ್ಪುದು (ಕಾವ್ಯಸಾ. ೩೨೯ ಕಂದ್ರ೪). [<ಸಂ. ಲಲಾಮಾ]

**ಲಲಿತ, ಲಳಿತ** (ಗು). ೧. ವಿನೋದದ ; ಲೀಲೆಯ. ೨. ಚೆಲುವಾದ ; ಸುಂದರವಾದ ; ಮನೋಹರವಾದ : ಲಲಿತಮುಖಸರಸಿಜಂ . . . ನಿಶ್ಚಳತನು ನಡೆ ನೋಡೆ ಭರತರಾಜಂ ಸೋಲ್ತಂ (ಆದಿಪು. ೦೪-೦೦೫) ; ಲಲಿತಾನನಾಂಬುಜಮಲರ್ದೆಸೆದುದು ಮಂದಹಾಸದಿಂ ಮುರಹರನಾ (ಜಗ೦. ೪-೪೨); ಜಲರಸಾನಲಮರುದ್ಗಗನರವಿಸೋಮಾತ್ಮ ಲಲಿತಕಾಯಂ (ಶ್ರೀಕರಾ. ೨-೦). ೩. ಕೋಮಲವಾದ; ಮೃದುವಾದ : ಲಲಿತಕಿಸಲಯಮೆ ಬಾಸಂ ಮಲರಕ್ಷತಮಳಿರುತಿ ಶ್ರುತಿ ಸ್ವರಮಾಗಲ್ ಸಲೆ ಕಂತುವಿನ ಪುರೋಹಿತಕುಲಮೆನಿಸಿತು ಬನದ ಬಾಲಚೂತವ್ರಾತಂ (ಸುಸುಮಾ. ೨-೬೩) ; ಲಲಿತಮೃಣಾಳದಿಂ ತಣಿದು ತಣ್ಪುಳಿನಸ್ಥಳದೊಳ್ನಿಜೇಚ್ಛೆಯಿಂ ನಲಿವ ಮರಾಳದೊಳ್ನಡೆಯನು . . . ಕಲಲೆಂದು ಬರ್ಪುದು ತದೀಯ ಬನಕ್ಕಬಲಾಕದಂಬಕಂ (ಶಾಂತೀಶ್ವ. ೦೩-೮೪೯). (ನಾ). ೪. ಚೇಷ್ಟೆ ; ಆಟ ; ಕ್ರೀಡೆ. ೫. ಸ್ತ್ರೀಯ ಶೃಂಗಾರಭಾವಗಳಲ್ಲಿ ಒಂದು : "ಹೇಳಾ ವಿಳಾಸ ವಿಭ್ರಮ ಲೀಳಾ ಬಿಬ್ಬೋಕ ಲಲಿತ ಹಾವಾಖ್ಯಂಗಳ್ . .. ಶೃಂಗಾರಭಾವಸಂಭೂತಂಗಳ್" (ಮತ್ಸ್ಯಕೋ. ೬೩-೨೨) : "ಹೇಳಾ, ವಿಳಾಸಃ ... ಲಲಿತಂ, ವಿಭ್ರಮಃ- ಇವು ಮೊದಲಾದುವು ಸ್ತ್ರೀಯರ ಭಾವಂಗಳ್" (ಹಲಾಯು. ೧೫-೮೯). ೬. ಮನೋಹರವಾದುದು ; ಆಕರ್ಷಕವಾದುದು : ಬೀಸುವ ಧವಳ ಚಾಮರಂಗಳ್ . . . ಎಸೆದುವತಿಲಲಿತಂಗಳ್ (ಕಸ್ಸಪು. ೫-೦೭). ೭. ಚೆಲುವು ; ಸೌಂದರ್ಯ. ೮. ಮೃದುತನ ; ನಯ ; ಮಾರ್ದವತೆ. ೯. ಸರಳತೆ ; ಮುಗ್ಧತೆ. ೧೦. ಲಲಿತಾಗಮದ ನಾಲ್ಕು ಭೇದಗಳಲ್ಲಿ ಒಂದು : ಲಲಿತ ಲಲಿತೋತ್ತರ ಕೌಮಾರತಂತ್ರ ವಿಘ್ನೇಶ್ವರಾಗಮವೆಂದು ಲಲಿತಾಗಮದ ನಾಲ್ಕು ಭೇದಂಗಳು (ಶಿವತ. ೬೦). ೧೧. ಒಂದು ಬಗೆಯ ಸಸ್ಯ : "ಹಸ್ಯಗಣೆ ಲಲಿತವಕ್ಕು" (ಮಂಗರಾ. ೪೭-೦೯). ೧೨. [ನಾಟ್ಯ] ಮೂವತ್ತು ಬಗೆಯ ನೃತ್ತ ಹಸ್ತಗಳಲ್ಲಿ ಒಂದು ; "ಅಲಪಲ್ಲವ ಹಸ್ತಗಳೆರಡನ್ನು ತಲೆಯ ಹತ್ತಿರ ಮೇಲೆ ಹಿಡಿಯುವುದು" (ಶಾಸ್ತ್ರಂ. ಗದ್ಯಾನುವಾದ. ೨೫೫) : ಲಲಿತಮೆನಿಪ್ಪೀ ಹಸ್ತಂ ನೆಲೆಗೊಳ್ಗುಂ ಭರತದಲ್ಲಿ ಮೂವತ್ತೆಂದುಂ (ಶಾಸ್ತ್ರಂ. ೨-೪೪). ೧೩. ನೃತ್ಯದ ಮೂವತ್ತಾರು ಬಗೆಯ ಸಂಚಾರೀಭಾವದೃಷ್ಟಿಗಳಲ್ಲಿ ಒಂದು ; "ಮುಗುಳ್ನಗೆಯಿಂದ ಕೂಡಿ ಅನುರಾಗ ಹೆಚ್ಚುವಂತೆ ಹುಬ್ಬು ಹಾರಿಸುತ್ತಾ ಕಡೆಗಣ್ಣಿನಿಂದ ನೆಲವನ್ನು ನೋಡುವುದು ; ವಿ — ಹೆಂಗಸರ ವಿಲಾಸವನ್ನು ಅಭಿನಯಿಸುವಾಗ" (ಶಾಸ್ತ್ರಂ. ೨೬೦ ಗದ್ಯಾನುವಾದ) : ನೆಲನಂ ನೋಡುವಪಾಂಗಂ ಚಲಿಸುವ ಭ್ರೂ ಮಂ[ದ]ಹಾಸಮುಂಗಜನುರ್ಬಂ ಗೆಲೆ ಮಾಳ್ಪ ನೋಟಮೊಪ್ಪಲ್ ಜಲಜಾಕ್ಷೀ ಲಲಿತಮೆಂಬ ಪೆಸರಂ ಪಡೆಗುಂ (ಶಾಸ್ತ್ರಂ. ೪-೩೪). ೧೪. [ಛಂದ] ಒಂದು ಅಕ್ಷರ ವೃತ್ತದ ಹೆಸರು ; P ಇದರಲ್ಲಿ ಎರಡು ಬಗೆಗಳಿವೆ. 'ಸನಭನಜನನಯ' ಎಂಬ ವಿನ್ಯಾಸದ್ದು ಒಂದು. 'ಭಜಸನ ಭಜಸನಭಯ' ಎಂಬ ವಿನ್ಯಾಸವಿದ್ದು, ೧೦, ೧೮ನೆಯ ಅಕ್ಷರಗಳು ಪ್ರಾಸಾಕ್ಷರದ ಆವೃತ್ತಿಯಾಗಿರುವುದು ಮತ್ತೊಂದು : ಲಲಿತಾಕ್ಷರ ಪದರಚನೆಗಳಿಂದಂ ಪರೆದುದು ಲಲಿತಂ (ಛಂದೋಂಬು. ೨-೦೯೦). ೩, ೧೪ : ಹರಿಣೀ ಮತ್ತೇಭ ವಿಕ್ರೀಡಿತ ಲಲಿತ ಮಯೂರಾನ್ವಿತಂ . . . ನಭಮಂ ಪೋಲ್ತು ಚೆಲ್ವಾಯ್ತರಣ್ಯಂ (ರಾಜಶೇ. ೫-೬೫). ೧೫. ರಗಳೆ ಛಂದಸ್ಸಿನಲ್ಲಿ ಒಂದು ಬಗೆ : ಪಾದವೊಂದಕ್ಕೆ ಐದು ಮಾತ್ರೆಯ ಗಣವು ನಾಲ್ಕಿರಲು ಲಲಿತರಗಳೆಯಾಗುವುದು (ಛಂ೩೦.೯೯).

೧೬. [ಸಂಗೀತ] ಒಂದು ರಾಗದ ಹೆಸರು: ನಾದರಾಮಕ್ರಿಯಾ . . . ಗೌಲ, ಲಲಿತ, ಗುರ್ಜರೀ ಗುಂಡಕ್ರಿಯಾ, ಮಲಹರಿಯೆಂಬುದು, ... ಆದ್ಯರ್ದೇಶಿಕಾರಾಗ (ಕಸುಕ್ಕ. ೦೨೪). **ಲಳಿತ** : ೧. ಲಳಿತ ಲತಾಂಗಭಂಗಿಯ ಬೆಡಂಗಿಯರಿರ್ಕ್ಕುವ ಚಾಮಗುಳಿ ಸಂಚಳಿಸದ ಚಿತ್ರಕಾಂತಿ ನಿಮಿರುತ್ತಿರಲ್ (ಕಾಂತೀಶ. ೦೩-೦೨). ೨. ಲಳಿತನಿಜರೂಪವಿಭ್ರಮವಿಳಾಸಮಂ ದರ್ಶಿಸೆಯೆ ಬಂದರ್ . . . ಜವ್ವನೆಯರ್ (ಜಗ. ೯-೧೨೦); ಲಳಿತತರಂಗಂ ಒಳ್ನುಡಿ ಲಸತ್ಪುಳಿನಸ್ಥಳ ಸತ್ಕಟೀತಟಂ . . . ಎನಿಪ್ಪ ವಿಯತ್ತರಂಗಿಣೀಲಳನೆ (ರಜಸು. ೬-೦೦೬). ೩. ಲಳಿತತಮಾಳಲತಾಕೋಮಳೆ (ಪಂಪಭಾ. ೦-೬೯); ಲಳಿತ ವಿಳಾಸ ವಿಭ್ರಮ ಕಳಾವತಿಯರ್ (ಪುಷ್ಪದ. ೭-೩೭). ೧೭. [ನಾಟ್ಯ] ಒಂದು ಬಗೆಯ ನೃತ್ಯ : ಅಳಿನಿನದದ ಮದಕೋಕಿಳಕಳನಿನದದ ಜತಿಯೊಳಭಿನಯಂ ನೆಗಬ್ದಿನೆಗಂ ಲಳಿತಮನೇನಾಡಿಸಿದನೊ ಮಳಯಜಾನಿಳನರ್ತಕಂ ಲತಾನರ್ತಕಿಯಂ (ಆದಿಪು. ೦೦-೯೦). [ಸಂ.]

**ಲಲಿತಕಲೆ** (ನಾ). ಮನಸ್ಸಿಗೆ ಆನಂದವನ್ನುಂಟುಮಾಡುವ ಕಾವ್ಯ, ಸಂಗೀತ, ಚಿತ್ರ, ಶಿಲ್ಪ ಮುಂತಾದ ಕಲೆಗಳು : ಲಲಿತಕಲೆಗಳಲ್ಲಿ ಈ ತತ್ವದ ಅನುಷ್ಠಾನವನ್ನು ಕಾಣುತ್ತೇವೆ (ಬಾಕಲ. ೪೦೪) ; ವೈವಿಧ್ಯದ ಅಧ್ಯಯನ ಯೋಜನೆಗಳನ್ನು ಅವರು ಸಲಹೆ ಮಾಡಿರುವರು. ಅವುಗಳಲ್ಲಿ . . . ಲಲಿತಕಲೆ . . . ಇವು ಮುಖ್ಯವಾದುವು (ಕನ್ನಡ. ೦೯೩). [ಸಂ. ಲಲಿತಕಲಾ]

**ಲಲಿತತೆ**, ಲಳಿತತೆ (ನಾ). ಲಾವಣ್ಯ ; ಸೊಬಗು: 'ಲಲಿತತವೆಡು' ಪರಾ. **ಲಳಿತತೆ** : ಶ್ರೀಯಂ ಶ್ರೀಕಲ್ಲಿನಾಥಂ ಕುಡುಗೆ . . . ಗೌರೀಜಾಯಾಕಾಯಾನುಷಂಗಾಕಳಿತಲಳಿತತಾಪ್ಯೋಲ್ಲಸದ್ವಾಮಭಾಗಂ (ಎಕ. XXI. ೦೨-೩; 1260). [ಸಂ. ಲಲಿತತಾ]

**ಲಲಿತತೆವೆಡು** (ಕ್ರಿ). ಸೊಬಗನ್ನು ಪಡೆ ; ಲಾವಣ್ಯವನ್ನು ಹೊಂದು: ಲಲಿತತವೆತ್ತು ಕೊಂಕಿ ಪರಿದೊಪ್ಪದೊಳೊಂದಿರೆ ಪುರ್ವು ಚಾಪಮಂ . . . ಪೋಲ್ತಿರೆ (ರಮಾಶ್ವ. ೭-೦೯೭). [ಲಲಿತತೆ+ಪೆಡು]

**ಲಲಿತಪದ** (ನಾ). ೧. ಮೃದುವಾದ ಶಬ್ದ ; ಕೋಮಲವಾದ ಪದ: ಲಲಿತಪದಂ ಪ್ರಸನ್ನಕವಿತಾಗುಣಮಿಲ್ಲದೆ ಮಾಣ್ದು ಪೇಟ್ದ ಬೆಳ್ಗಳ ಕೃತಿಬಂಧಮುಂ ಬರೆ[ಪ]ಕಾಜರ ಕೈಗಳ ಕೇಡು ನುಣ್ಣನಪ್ಪಳಕದ ಕೇಡು (ಕುಕಬಾ. ೦-೦೨). ೨. [ಛಂದ] ಒಂದು ಅಕ್ಷರವೃತ್ತದ ಹೆಸರು ; ಪಾದವೊಂದಕ್ಕೆ ಹನ್ನೆರಡು ಅಕ್ಷರಗಳಿರುವ, ಜಗತೀಛಂದಸ್ಸಿನ ಒಂದು ವೃತ್ತ : ಕುಲಿಶಧರಾರ್ಕಯುಗಂಗಳ ಮುಂದಾ ಜಲಗಣಮೊಪ್ಪಿರೆ ಬಂದು ವಿರಾಮಂ ಕುಲಗಿರಿಯೊಳ್ನಿಲೆ ನಾಕಿಗನಿಂದು ಲಲಿತಪದಂ ಪೆಸರಿಂ ಲಲಿತಾಂಗೀ (ಛಂದೋಂಬು. ೨-೦೩೩). [ಸಂ.]

**ಲಲಿತಭ್ರೂಕ** (ನಾ). ಮನೋಹರವಾದ ಹುಬ್ಬುಗಳುಳ್ಳವನು; ಸುಂದರವಾದ ಭ್ರೂವಿನ್ಯಾಸವುಳ್ಳವನು : ಶ್ರೀ ಕಮಳಲೋಚನಂ . . . ಲಲಿತಭ್ರೂಕಂ . . . ಊರ್ಧ್ವತಿರ್ದಂ ಕೊಳಲಂ (ಜಗ. ೩-೦). [ಸಂ.]

**ಲಲಿತಸ್ತರಣ** (ನಾ). ಮೃದುವಾದ ತಲ್ಪ,—ಹಾಸಿಗೆ : ಚಿತ್ರಾವಳಿಯ ಮೇಲ್ಕಟ್ಟಿನಲಿ ಲಲಿತಸ್ತರಣಮಧ್ಯದಲಿ ಹೊಳೆಹೊಳೆವ ನವರತ್ನಭೂಷಣ ಕಳಿತಕಾಯನ ಕಂಡು ರೋಷಪ್ರಳಯಭೈರವರೂಪನೊದೆದನು ವಾಮಪಾದದಲಿ (ಕುಮ್ವಾಗ. ೯-೨೮). [ಸಂ.]

**ಲಲಿತಾಂಗ**, ಲಳಿತಾಂಗ (ನಾ). ೧. ಸುಂದರವಾದ ದೇಹ ; ಚೆಲುವಾದ ಶರೀರ : ಲಲಿತಾಂಗ ಕನಕಾವದಾತಮಲರ್ಗಣ್ ನೀಲೋತ್ಪಲಚ್ಛಾಯೆ (ಆಪು. ೨-೯೩) ; ಲಲಿತಾಂಗಂ ಲತೆ ಕೆಂದಳಂ ತಳಿರಲರ್ ಕಣ್ಗಳ್ ಕುರುಳ್ ಭೃಂಗಸಂಕುಲಂ . . . ಎನಲ್ಕೆ ನಿಂದು . . . ಕಣ್ಗೊಪ್ಪಿದರ್ ಕಾಂತೆಯರ್ (ಕಾಂತೀಶ. ೯-೦೨) ; ರಾಜಲಕ್ಷಣದ ಚೆಲ್ವಿಡಿದ ಲಲಿತಾಂಗದಿಂ ಕುಶಲವರ್ಕುಶಲವರ್ಧನರಾಗಿ ರಂಜಿಸಿದರು (ಕೃ ಐಜಾ. ೦೯-೩೦). ೨. ಕೋಮಲವಾದ ಶರೀರ : ಲಲಿತಾಂಗದ ಬೆಮರ್ವನಿಗಳನೆಲೆದಾಜಿಪ ಕೀರಕುಳದೆಱಂಕೆಯ ಕಡುದಣ್ಣೆಲರ್ಗೆಳಸಿ ಪಕ್ಕಿ ಸೋಯದೆ ಕೆಲಬರ್ ಪಾಪುರಿಯರವರ ಬರವನೆ ಪಾರ್ವರ್ (ಪುಷ್ಪದ. ೩-೦೯). ೩. ರೂಪವಂತ ; ಚೆಲುವ : ಲಲಿತಾಂಗ [ನಂಗ]ವಿಷಯಾಧೀಶಂ ಸುರಸ್ತ್ರೀಜನೋದಾತ್ತಪ್ರಾರ್ಥಿತಯೌವನಂ (ಕಾಂತೀಶ. ೩-೦೩೩). **ಲಳಿತಾಂಗ** : ೧. ಲಳಿತಾಂಗದ್ಯೋತಿಯಿಂ ಭೂವಳಯಮನೊಳಕೊಂಡಿರ್ದ್ದಳ್ (ಶಾಸ. XX, ೯೯-೨೯ ; 1076). [ಸಂ.]

**ಲಲಿತಾಂಗಿ** (ನಾ). ಸುಂದರವಾದ ದೇಹವುಳ್ಳವಳು ; ಚೆಲುವೆ : ಲಲಿತಾಂಗಿ ಮೆಲ್ಲಮೆಲ್ಲನೆ ನಳಿತೋಳಂ ಬೀಸೆ ವಿಸುಗುವಸಿಯುಂಗುಗಳ ಸುತ್ತೆಳಗು ನಿಮಿರ್ದಸೆದುವು (ಕಾರಂಥು. ೩೦೭) ; ಲಲಿತಾಂಗಿಯರ ಕರತಳದ ವಿಮಲಕಲಶೋದಕವನೊಲಿದೀಂಟುತಿರ್ದೊಡಂ ಮನ ತಣಿಯದು (ಕೃ ಐಜಾ. ೩-೦೦). [ಸಂ. ಲಲಿತಾಂಗೀ]

**ಲಲಿತಾಕಾರ**, ಲಳಿತಾಕಾರ (ನಾ). ಸುಂದರವಾದ ಆಕಾರ; ಮನೋಹರವಾದ ರೂಪ : ಲಲಿತಾಕಾರನುಂದೀಯ ನಾಡೆ ನಯನಕ್ಕಾನಂದಮಂ (ಶಂಕಾಪು. ೬-೦೬೨) ; ಲಲಿತಾಕಾರದ ರಾಜಪುತ್ರನತಿಯಿಂದ . . . ಒಪ್ಪಿರ್ದುದೊಡ್ಡೋಲಗಂ (ಸುಕುಮಾ. ೩-೮೬). **ಲಳಿತಾಕಾರ** : ಲಳಿತಾಕಾರಂ ವಿಭವಂ ಬೆಳಗುವ ಲಾವಣ್ಯಮೆಸೆಯೆ ಬಂದರ್ . . . ಕೋಮಲೆಯರ್ (ಜಗ. ೪-೦೨೯). [ಸಂ.]

**ಲಲಿತೆ**, ಲಳಿತೆ (ನಾ). ೧. ಹೆಂಗಸು ; ಸ್ತ್ರೀ. ೨. ಸ್ವೇಚ್ಛಾಚಾರಿಯಾದ ಹೆಂಗಸು ; ಸ್ವೈರಿಣಿ. ೩. ವಿಲಾಸಿನಿ ; ಸುಂದರಿ : ಲಲಿತೆಯ ಮುಖೇಂದುಬಿಂಬದ ಬೆಳಗಿನೊಳಿರದಗಿದು ಪೆಜತೆಗೆದು ತಮೋಬಳವಿರ್ದು ದೇಬಿನಂ ಕಣ್ಗೊಳಿಸುಗುಮಮಕೆಯಿ ವಿನೀಳಕಬರೀಭಾರಂ (ಸುಕುಮಾ. ೯-೫೯). ೪. ದುರ್ಗೆಯ ಒಂದು ಹೆಸರು. ೫. [ಕಾವ್ಯಮೀ] ಒಂದು ಅನುಪ್ರಾಸದ ಹೆಸರು : ಸೌಷ್ಠವಗುಣಸಮನ್ವಿತಂ ಲಲಿತವೃತ್ತಿಯಿಂ ಲಲಿತೆಯೆಂಬ ವೃತ್ತಿಯುದಕ್ಕುಂ (ಕಾವ್ಯಾವ. ೩೬೪). ೬. ಒಂದು ಅಲಂಕಾರದ ಹೆಸರು : ಪ್ರಸ್ತುತ ವರ್ಣಿಸದೆ ಪ್ರತಿಬಿಂಬರೂಪದ ಪ್ರಸ್ತುತವ ವರ್ಣಿಸೆ ಲಲಿತೆಯು (ಕುವಲ. ೦೨೪). ೭. = ಲಲಿತ ೧೫ : ಇಪ್ಪತ್ತು ಮಾತ್ರೆ ಲಲಿತೆಗೆ ಬಪ್ಪುದು ಪದಿನಾಜು ಪಕಾತ್ರೆ ಮುಂದಾನಿಲಕಂ ತಪ್ಪದುವುತ್ಸಾಹಕ್ಕುಜಿಯೊಪ್ಪುವುದಿಪ್ಪತ್ತುನಾಲ್ಕು ಮಾತ್ರೆಗಳುಲೇ (ಛಂದೋಂಬು. ೩-೨೨೨ ಅವತ). ೮. [ಸಂಗೀತ] ಒಂದು ರಾಗದ ಹೆಸರು : ಕೌಶಿಕಿ ವೇಳಾವಳಿ . . . ಲಲಿತೆ . . . ಶಯಸೋದರಿಯೆಂಬ ಮೂವತ್ತುನಾಲ್ಕುರಾಗಂಗಳೇ ಭಾಷಾಂಗದಿಂದ ಪುಟ್ಟಿದವು (ಶಿವೀಕ. ೨೩೩). **ಲಳಿತೆ** : ೮. ಚಾರುವೀಣೆಯ ಬಾಜಿಸುತ್ತ ಲಳಿತೆಯ ಪಾಡೆ (ಗುರುಬಾ. ೬-೩೦). [ಸಂ. ಲಲಿತಾ]

**ಲಲಿತೋಚ್ಚ್ಯುತ** (ನಾ). [ಸಂಗೀತ] ಇಪ್ಪತ್ತೆರಡು ಶ್ರುತಿಗಮಕಗಳಲ್ಲಿ ಒಂದು : ಸ್ಫುರಿತ . . . ಲಲಿತೋಚ್ಚ್ಯುತ [ಶಾಪಾಂ. ಚ್ಯುದ] . . . ಕೋಮಲವೆಂಬ ಯಿಪ್ಪತ್ತೆರಡು ಶ್ರುತಿಗಮಕಂಗಳು (ಶಿವೀಕ. ೦೯೬). [ಸಂ.]

**ಲಲಿತೋತ್ತರ** (ನಾ). ಲಲಿತಾಗಮದ ನಾಲ್ಕುಭೇದಗಳಲ್ಲಿ ಒಂದು : ಲಲಿತ ಲಲಿತೋತ್ತರ ಕೌಮಾರತಂತ್ರ ವಿಘ್ನೇಶ್ವರಾಗಮವೆಂದು ಲಲಿತಾಗಮದ ನಾಲ್ಕು ಭೇದಂಗಳು (ಶಿವೀ. ೩೩). [ಸಂ.]

**ಲಲ್ಲಯಿಸು**, ಲಲ್ಲೈಸು (ಕ್ರಿ). ಮುದ್ದಿಸು ; ರಮಿಸು ; ಪ್ರೀತಿಸು : ಎರವ ಪುರಲ್ದ ಲಲ್ಲಯಿಪ ಕಾಲ್ವಿಡಿವೆಂಬುದನಿಂಬುಕೆಯ್ವಳಂಕರಣವಿಳಾಸಮಂ ಮೆಚ್ಚಿವ ಮೇಳಿಸುವಂದಿನ ರೂಪು ಶಾಸನಂಬರೆದುದು (ಅಧಿಪು. ೩-೯೭) ; ನುಡಿದು ಕಾತರಿಸದೆ ಕೂಡೆ ಲಲ್ಲಯಿಸದೆ . . . ಬದ್ದೆಯನೊಲಿಪನಾವಂ (ಸುಕುಮಾ. ೭-೦೩) ; ಮೆಲ್ಲನೆ ಮೇಳಿಸಿ ಮರ್ಬುವ ಲಲ್ಲಯಿಸುವ ಪೆಜರನಟ್ಟಿ ದೂಜುವ . . . ಮುನಿಯಲ್ಲಿ ಜನೋಕ್ತಿಯನೆ

ಕೇಳಲಾಗದು ಚತುರಂ (ಧರ್ಮಾಮೃ. ೬-೨೦೩). **ಲಲ್ಲೈಸು :** ಕುಡದಿರ್ ಪೊರಿಗಣೆಯನೆನಿತುಂ ಲಲ್ಲೈಸಿದೊಡಂ (ಶಂಶತಾ. ೯-೬೬); ಕಡುಮುಳಿದ ನಲ್ಲನಂ ಕಾಲ್ವಿಡಿದುಂ ಲಲ್ಲೈಸಿ . . . ತಿಳಿಪಲ್ (ಶೃಂಗಾರ. ೨-೬); ಮೆಲ್ಲದೆ ರಾಗವ ಹರಿಯಿಸಿ ನಿಂದು ಲಲ್ಲೈಸುವನೀ ಧರಣಿಯನಿಂದು (ಹರಿ. ೬೬-೨).

[ ಲಲ್ಲೆ + - ಇಸು$_3$ ]

**ಲಲ್ಲೆ** (ನಾ). ೧. ಮುದ್ದು : ಪ್ರೀತಿ : "ಲಲ್ಲೆಯೆಂದಕ್ಕು ಮುದ್ದಿಂಗೆ ಪೆಸರು" (ಕಬ್ಬಿ.ವಂ. ೬೬); ಲಾಲಿಸಿ ಕೇಳ್ವರ ಕಿವಿಗೋಪವಳಾಡಿದ ಲಲ್ಲೆಯೆನೆ ಅನುರಾಗದಿ ಲಿಖಿಸುವೆನು (ಜಯಶಾ. ೦-೨೫); ಮಾತಿನಲ್ಲಿ ಲಲ್ಲೆ[ಪಾಠಾಂ. ಲೀಲೆ] ಮನದಲ್ಲಿ ಘಾತಕತನವುಳ್ಳವನ ಕನಿಷ್ಠನೆಂಬರು (ಅಜಂಚೆ. ೯೯-೨೫). ೨. ವಿನೋದ ; ಸರಸ : ಲಲಿತಾಂಗನಂ ಮನಂಗೊಳಿಸುವರಿಚ್ಚೆ ಕಾರ್ತನದ ಲಲ್ಲೆಯು ಸಗ್ಗದ ದೇಸಿಕಾರ್ತಿಯರ್ (ಅಜಿತ. ೨-೬೦); ತಮ್ಮ ಲಲ್ಲೆ ಕುಣಿತಗಳಲ್ಲಿ, ಪುಷ್ಪಾಪಚಯದಲ್ಲಿ, ಜಲಕ್ರೀಡೆಯಲ್ಲಿ, ಯಾರನ್ನು ಲೆಕ್ಕಿಸದೆ . . . ನುಗ್ಗುತ್ತಾರೆ (ಕಾವ್ಯಸ. ೬೩).

**ಲಲ್ಲೆಯಾಡು** = ಮುದ್ದಾಡು : ಬಾಲಸೂರ್ಯನ ಬಂಗಾರ ಕಿರಣಗಳು ಆಗಳೇ ಜಾಜ—ಗುಲಾಬಿ ಬಳ್ಳಿಗಳ ಮೇಲೆಲ್ಲ ಲಲ್ಲೆಯಾಡುತ್ತ ಲಿದ್ದವು (ಹಾದುಹು. ೦೦೩). **ಲಲ್ಲೆ ಹಾಕು** = ವಿನೋದಪಡು ; ಸಂತೋಷಪಡು : ಕಂಡವರ ಮಕ್ಕಳನ್ನು ಭಾವಿಗೆ ತಳ್ಳಿ ಅವು ತೇಲಿ ಮುಳುಗುವುದನ್ನು ನೋಡಿ ಲಲ್ಲೆ ಹಾಕುವ ಗುಣವಿಲ್ಲ (ಕಾಂಪೂಶ. ೦೦). **ಲಲ್ಲೆಹೊಡೆ** = ಸರಸವಾಗಿ ಮಾತನಾಡು ; ಚಕ್ಕಂದವಾಡು : ಅವಳೂ ಅವನೊಡನೆ ಲಲ್ಲೆ ಹೊಡೆಯುತ್ತಿದ್ದಳು (ಮಹಾತ್ಮಾ. ೦೯); ಓಣಿಯಲ್ಲಿಯೋ ಪಡಸಾಲೆಯಲ್ಲಿಯೋ . . . ನಿಂತು ಅವರು ಲಲ್ಲೆ ಹೊಡೆಯುತ್ತಿದ್ದರು (ಕುವರು. ೫೭).

[ದೇ.೩ ತುಳು. ಲಲ್ಲೆ. ಲಲ್ಲ; ತೆಲು. ಲಲಿ]

**ಲಲ್ಲೆಗಣ್ಣು** (ನಾ). ಪ್ರೀತಿಯನ್ನು ಸೂಸುವ ಕಣ್ಣು : ನಿಡುಗಣ್ಣ ಹುಲ್ಲೆಗಣ್ಣವರೆಸಳ್ಗಣ್ಣ ಲಲ್ಲೆಗಣ್ಣವರ್ ನಗೆನೋಟದ ತೋರ ಧಮ್ಮಿಲ್ಲೆ ಯುರೆಯ್ದುತೊಗ್ಗಿನಲಿ (ಮೋಹತ. ೨೯-೦೩).

[ ಲಲ್ಲೆ + ಕಣ್ಣು (< ಕಣ್) ]

**ಲಲ್ಲೆಗರೆ** ' ಲಲ್ಲೆಗಱೆ ' ನೋ.

**ಲಲ್ಲೆಗಱೆ**, ಲಲ್ಲೆಗರೆ (ಕ್ರಿ). ೧. ಪ್ರೀತಿಯ ಮಾತನ್ನು ಆಡು ; ರಮಿಸು : ಮುದ್ದಿಸು : ವಲ್ಲಭನಿದ್ದಾನೆಂದು ಲಲ್ಲೆಗಱೆಯ ಬೇಡ (ಸಿದ್ಧವ. ೪. ೦೦೩-೬); ರುಗುಮಿಣಿ ಮುಸಿಯೆ ಪುಂಡರೀಕಾಕ್ಷನಾಕೆಯ ಚರಣದಲ್ಲಿ ನೊಸಲಂ ಚಾಚಿ ಲಲ್ಲೆಗಱೆಯೆ (ಹರಿಶಾ. ೨೬-೦೦); ರನ್ನಗಲ್ಲೆ ಡೆಯ ಪಲ್ಲ ನಲ್ವಾಸಿನೊಳ್ ಚೆಲ್ವಿಂ ನಲ್ಲಳ್ಪರಸು ನಿಲ್ಲದೆ ಕುಳ್ಳಿರ್ದು ಮೆಲ್ಲ ಮೆಲ್ಲನೆ ಲಲ್ಲೆಗಱೆವ (ರಾಮಾಶ್ವ. ೬೬-೩). **ಲಲ್ಲೆಗರೆ :** ೧. "ನಾನೇ ಚಿನ್ನಮರಿ" ಎಂದು ಪೈದಿ ಬುಸೋವ್‌ಕಿನ್ ಲಲ್ಲೆಗರೆದನು (ಕುವರು. ೫೩೬). ೨. ಸರಸವಾಡು ; ಚಕ್ಕಂದವಾಡು : ಕೊಂಚ ಸಲುಗೆ ಕೊಟ್ಟೆಯೋ ಲಲ್ಲೆಗರೆಯೋಕೆ ಬರುತ್ತವೆ (ಹೂವುಹ. ೦೨೦). [ಲಲ್ಲೆ + ಕಱೆ$_1$]

**ಲಲ್ಲೆಗಾರಿಕೆ** (ನಾ). ಪ್ರೀತಿಯನ್ನು ತೋರಿಸುವುದು ; ಪ್ರಣಯ : ವೆಟತೀತಿ — ಲಲ್ಲೆಗಾರಿಕೆಯನಾಡಿದಪನೆಂಬುದು (ಕಾಶಿ. ೦೬).

[ಲಲ್ಲೆ + - ಕಾರ$_1$ (< - ಕಾಱ) + - ಇಕೆ]

**ಲಲ್ಲೆಗಾರ್ತಿ** (ನಾ). ಸರಸವಾಡುವವಳು ; ಚೆಲ್ಲಾಟದ ಹೆಣ್ಣು: ಬೆಳತಿಗೆ ಗಣ್ಣ ಬೆಡಂಗಿ ಲೋಲಾಪಾಂಗದ ಲಲ್ಲೆಗಾರ್ತಿ ಕುಡುಪುರ್ವುಗಳ ಕುಶಲೆ (ಉದ್ಭಟ. ೫-೪೩ ೫). [ಲಲ್ಲೆ + - ಕಾಱ + - ತಿ$_1$ ( < - ಇತ್ತಿ) ]

**ಲಲ್ಲೆಗೆಯ್**, ಲಲ್ಲೆಗೈ (ಕ್ರಿ). = ಲಲ್ಲೆಗಱೆ ೧ : ಲಲ್ಲೆಗೆಯ್ದು ಲಲ್ಲೆಗ ಮಱೆದಿರ್ದೊಡೆ (ಶಂಶತಾ. ೪-೦೦೬); ಪಕ್ಕಮಂ ಬಿಚ್ಚಿ ಲಲ್ಲೆಗೆಯ್ದು [ಪಾಠಾಂ. ಗಱೆದ]ತ್ತು ಪಾರಿವಂ ಪಾರಿವದೊಳ್ (ಗಿರಿ. ೨-೫೩) ಲಲ್ಲೆಗೆಯ್ಯುತ್ತೆ ದೈನ್ಯಂದೋಱಿ (ಶಬ್ದಶಾ. ೬-೩೦). **ಲಲ್ಲೆಗೈ :** ಗಲ್ಲ ಮನೊಲ್ದೊಲಿದೆತ್ತಿ ಮುದ್ದಿಪಳ್ ಮಾಣವೆ ಲಲ್ಲೆಗೈವಳ್ (ಉದ್ಭಟ. ೬-೦೨೫); ಲಲ್ಲೆಗೈದೊಲವನಾಣ್ಮಂಗೆ ಕಾಣಿಸಿದಳು (ತ್ರಿಬಿಶಾ. ೦೦-೨೨); ಬೀಸು ವಿಱಿಸಲುಂ ಸೂಸುವ ಸೋನೆಯುಂ ಸೈರಿಸದೆ ಪಕ್ಕಿಯೊಳೆ ಪಟ್ಟು, ಕಣಸಂ ಲಲ್ಲೆಗೈದು (ರಾಮಾಶ್ವ. ೩-೨೬). [ಲಲ್ಲೆ + ಕೆಯ್$_1$]

**ಲಲ್ಲೆಗೈ** ' ಲಲ್ಲೆಗೆಯ್ ' ನೋ.

**ಲಲ್ಲೆನುಡಿ** (ನಾ). ಪ್ರೀತಿಯ ಮಾತು ; ಮುದ್ದುಮಾತು ; ಸರಸ ಸಲ್ಲಾಪ : ಗದ್ಗದತ್ವಂ ಪಡೆದಿರ್ಪ ಲಲ್ಲೆನುಡಿ ಲೀಲೆಯನೀಯೆ (ಉದ್ಭಟ. ೬-೦೦೬); ಎಸೆವಂಗಪರಿಮಳಂಗಳ ನಾಸಿಕದಿನೀಂಟಿ . . . ಕರ್ಣಂಗಳೊಳು ಲಲ್ಲೆನುಡಿಯನಿದುಗೇಳಿ . . . ಸುರತವನೆಸಗಲು (ಕಾವಶಂ. ೩-೩೦); ಸವಿ ಲಲ್ಲೆನುಡಿಗೆ ಲವಲವಿಪ ನಾಲಗೆ ಕೊಟಕಿ ಕಾತರಿಸಿ ಮಿಡುಮಿಡುಕಲೊಸರ್ವ ನಾಣೆಡೆ (ಚಿದಿತು. ೦೯-೩೨). [ಲಲ್ಲೆ + ನುಡಿ$_2$]

**ಲಲ್ಲೆಮಾತು** ' ಲಲ್ಲೆವಾತು ' ನೋ.

**ಲಲ್ಲೆವಾತು**, ಲಲ್ಲೆಮಾತು (ನಾ). = ಲಲ್ಲೆನುಡಿ : ಲಲ್ಲೆವಾತಿಂ ಗಲ್ಲವ ಪಿಡಿದು ಪುಷ್ಪಪರಿಮಳದಂತೆ ನಾ ನೀನುಭಯವಿಲ್ಲದಂತೆ ಕೂಡೆನ್ನ ಪ್ರಾಣೇಶನೇ (ಶಿನವ. ೨-೦); ಹಲವು ಪರಿಯಲಿ ಲಲ್ಲೆವಾತಿನಲಲದು ರಾಮನ ಕೋಮಲಾಂಘ್ರಿಯೊಳಿಳುಹಿದಳು ಮೂರ್ಧ್ನಿಯನು (ತೊರರಾ. ೩-೬-೩೩); ಜತೆಗೊಂಡು ಸಾರ್ದು ಇನಿವೊಟ್ಟುಂ ಲಲ್ಲೆವಾತಿನ ಸೊಲ್ಲ ಸೊಗದೊಳಿರ್ದು (ರಾಮಾಶ್ವ. ೬೦-೨೬). **ಲಲ್ಲೆಮಾತು :** ಲೇಸು ಹಾಸು ನೋಟವಾಭರಣ ಆಲಿಂಗನ ವಸ್ತ್ರ ಚುಂಬನವಾರೋಗಣೆ ಲಲ್ಲೆಮಾತು ತಾಂಬೂಲ ಲವ ಲವಿಕೆಯೆ ಅನುಲೇಪನವೆನಗೆ (ಮಹಾದೇ. ೪. ೦೦೩-೨೬೬). [ಲಲ್ಲೆ + ಮಾತು$_1$]

**ಲಲ್ಲೈಸು** ' ಲಲ್ಲಯಿಸು ' ನೋ.

**ಲವ** (ನಾ). ೧. ಕೀಳುವುದು. ೨. ಕಟಾವು. ೩. ಸಂಗ್ರಹಿಸುವುದು; ಒಟ್ಟುಗೂಡಿಸುವುದು. ೪. ಅಲ್ಪ; ಸ್ವಲ್ಪ; ಲೇಶ : "ಅಣು ಸೂಕ್ಷ್ಮಂ ಲೇಶಂ ತುಟಿ ಕಣಂ ಲವಂ . . . ಅಣಮೆ ಕಿಱಿವಪ್ಪುದೆಮು ತಾಂ" (ವಸ್ತುಕೋ. ೦೦೬-೫೬); ಬೆದಬೆದ ಬೆಂದ ಜೀವಕ್ಕಂತಾನುಂ ಕ್ಷಯೋಪಶಮ ನಿಮಿತ್ತದಿಂ ಸದ್ಧರ್ಮಾಮೃತ ಲವಂ ದೊರೆಕೊಂಡುದಪ್ಪೊಡೆ (ಸುಕುಮಾ. ೫-೩೫ ಪ); ತನ್ನಲ್ಲಿ ರಾಜಸಂ ತಾಮಸಂ ಸಾತ್ತ್ವಿಕಗುಣಂ ಲವಮಿಲ್ಲದಂತೆ ಲಯವಪ್ಪುವು (ಲಶಿಶಂ. ೫೪-೬). ೫. ನೀರಿನ ತುಂತುರು,–ಹನಿ : ನಗೇಂದ್ರೋಪಕಂಠಂಗಳೊಳ್ ನಿರ್ಝರವುಂ ಮಾಡುತ್ತುಮುದ್ಯಲ್ಲವ ನಿವಹವೆ ದೇವೇಂದ್ರಲೋಕಕ್ಕಮುತ್ಕಾದರಮುಂ ಮಾಡುತ್ತುಮೇನಾಱಿಸಿ ದುದೊ ದಿವಿಜವ್ರಾತಮಂ ಗಂಧತೋಯಂ (ಆದಿಪು. ೬-೦೦೩). ' ಲವೋದ್ಗಮ ' ಪರಾ. ೬. ಸಣ್ಣ ತುಣುಕು,–ಭಾಗ,– ತುಂಡು. ೭. ಉಣ್ಣೆ; ತುಪ್ಪುಳು. ೮. ಆಟ; ಕೇಳಿ. ೯. ಸ್ವಲ್ಪಕಾಲದ ಅವಧಿ ; ಅತ್ಯಲ್ಪಕಾಲ : ಕಾಲಮದು . . . ತ್ರುಟಿ ಲವಮುಖ್ಯಕಾಲಂಗಳಿಂದೆ ತಾನ ಖಿಲಮಾಗೆಸೆದಿರ್ಪುದು (ಅರಾಶ. ೩-೪-೬); ಒಮ್ಮೆ ಕಣ್ಣವೆಯನಿಕ್ಕುವನಿತರ ನಾಲ್ಕು ಭಾಗೆಯೊಳಗೊಂದು ಭಾಗವೇ ತ್ರುಟಿಯೆನಿಸುಗುಮದೇ ಎರಡಾಗ ಲೊಂದು ಲವವೆನಿಸುಗು (ವಿವೇಕ. ೨೬೦). ೧೦. ಶ್ರೀರಾಮನ ಅವಳಿ ಮಕ್ಕಳಲ್ಲಿ ಒಬ್ಬ : ಲವನ ಬಲಕ್ಕೆ ರಾಘವಬಲಂ ಪೆಱಪಿಂಗೆ ಕಡಂಗಿ ರಾಘವಂ ಲವನೊಳಿದಿರ್ಚೆ . . . , ಆವನಾಹವದೊಳಿದಿರ್ಚಿ ಜೀವಿಸುವವಂ ಲವನಂ ಜವನಂ ಮಹೀಭುಜಂ (ಕಂರಾಮಾ. ೦೬-೦೦); ಕಂಡನರ್ಚಿತ ಸುವಾಜಿಯುಂ ವೀರಲವನು (ತ್ರಿಬಿಶಾ. ೨೦-೫). ೧೧. ಒಂದು ಬಗೆಯ ಪಕ್ಷಿ; ಲಾವಕ್ಕಿ; ಪುರಲೆಹಕ್ಕಿ. ೧೨. ಲವಂಗ. ೧೩. ಒಂದು ಬಗೆಯ ಸುವಾಸನೆಯ ಬೀಜ: ಜಾಯಿಕಾಯಿ. ೧೪. ಒಂದು ಬಗೆಯ ಮೂಲಿಕೆ: ಲಾವಂಚದ ಬೇರು. ೧೫. [ಕಾವ್ಯಮೀ] ಒಂದು ಕಾವ್ಯಾಲಂಕಾರ ; ಲವ ರೂಪ ವಿಕೃತಮಂ ಮುಚ್ಚುವುದು ಲವಂ ರಾಜಸುತೆಯನೀಕ್ಷಿಸಿ ಮೆಯ್ಯೋ

ಉವ ಪುಳಕವುನಟುವರ್ಗಿಂತು ವಿಟುಂ ವನದತುಳ ಶೀತಪವನನಿನೆಂದಂ (ಉದಯಾ. ೪೪).

**ಲವಲವ$_1$** (ದ್ವಿರುಕ್ತಿ) : ವ್ಯುತ್ಕ್ಕ ತಾಂ ಬಂದು . . . ನಿತ್ಯ ನಿನ್ನಸುವ ಲವಲವ ಓರುತಲಿ ದೀರ್ಘಹತ್ಯೆಯಲಿ ಹರುಷಿಪಳೊ (ಮುಂಕುಳ. ೦೮೦).

**ಲವಲೇಶ** = ಸ್ವಲ್ಪ : ತೀರ ಅಲ್ಪ ; ಕೊಂಚ : ಲವಕುಶತಾತ ಲಂಕಾಧೀಶಸಂಹಾರ ಲವಲೇಶದೋಷವಿದೂರ (ಕತಸಾಂ. ೭೦-೭೦) ; ಲವಲೇಶವಾದರೂ ಹೊಟ್ಟೆಯ ಕಿಚ್ಚಿನ ಕಿಡಿ ಕಾರದಂಥ ಶೀತಲರು (ಇಂಪಾತ. ೨೨-೯೬). [ಸಂ.]

**ಲವಂ** (ಅ). ಸ್ವಲ್ಪವೂ : ಅದರ್ಕಾ ಲವಂ ಲವಂ ಬೆರ್ಚದೆ . . . ಲಕ್ಷ್ಮಣನ ಧನುವಂ ಮುಟಿದಂ (ರಾಮಾಶ್ವ. ೦೫೯-೦೬). [ಸಂ.]

**ಲವಂಗ** (ನಾ). ೧. ಒಂದು ಬಗೆಯ ಮರ ಮತ್ತು ಅದರಲ್ಲಿ ಬಿಡುವ ಸುವಾಸನೆಯುಳ್ಳ ಒಂದು ಸಂಬಾರಪದಾರ್ಥ ; ದೇವಕುಸುಮ : ಲವಂಗಂ ನಾಗೋರ್ವೀರುಹಕುಸುಮಮಲ್ಲಂ ಮೆಣಸು ಸೈಂಧವ ಬೆಲ್ಲಂ . . . ಕೂಡಿ (ಲೋಕೋಪ. ೬-೫೪) ; ಲಂಗ ಲವಂಗ[ಪಾಠಾಂ. ವಿಳಂಗ]ಗಳ ಸೊಂಪೊಗೆವ ಸಕಲ ಸುರದ್ರುಮಾಳಿಯನು (ತೊರರಾ. ೫-೪-೭) ; ಶುಂಠಿ, ಹಿಪ್ಪಲಿ, ಮೆಣಸು . . . ಬೆಳ್ಳುಳ್ಳಿ, ಲವಂಗ, ಅರಿಸಿನ . . . ಇವಿಷ್ಟನ್ನೂ ಸಮಭಾಗವಾಗಿ ಬಿಸಿನೀರಿಂದರೆದು ಕೊಡಲು ಶೀತಜ್ವರ ಪರಿಹಾರವಕ್ಕುಂ (ಸಳವೈ. ೬೩). ೨. ದಾಲಚಿನ್ನಿ: 'ಲವಂಗಚೆಕ್ಕೆ', 'ಲವಂಗಪಟ್ಟೆ' ಪರಾ. [ಸಂ.]

**ಲವಂಗಚೂರು** (ನಾ). ಲವಂಗದ ಆಕಾರಕ್ಕೆ ಕತ್ತರಿಸಿ, ಬೇಯಿಸಿ ಒಣಗಿಸಿದ ಒಂದು ಬಗೆಯ ಅಡಕೆ : ಚತುರ್ಭಾಗ, ಕೊರಪ್ಪ, ಲವಂಗಚೂರು, ಮೋಡಿ, ಅಣ್ಣಾವಾರ, ದೇಶಾವಾರ ಎಂದು ಬೇರೆ ಬೇರೆ ರಾಶಿಗಳನ್ನು ಮಾಡುತ್ತಾರೆ (ಕೃಷಿಶ್ರ. ೦೫೨). [ಲವಂಗ + ಚೂರು$_3$]

**ಲವಂಗಚೆಕ್ಕೆ** (ನಾ). ಸಂಬಾರವಸ್ತುವಾಗಿ ಬಳಸುವ, ಸುವಾಸನೆಯಿಂದ ಕೂಡಿದ ಒಂದು ಬಗೆಯ ಮರದ ತೊಗಟೆ ; ದಾಲ್ಚಿನ್ನಿ : ಲವಂಗ ಚೆಕ್ಕೆ, ದಾಲ್ಚಿನ್ನಿ, ಕರ್ಕಟುಲ್ಲ (ವೈಶಿಗ. ೨೦-೩೯೨).

[ ಲವಂಗ + ಚೆಕ್ಕೆ (<ಸೆಕ್ಕೆ$_1$) ]

**ಲವಂಗತಿಗುಡು** (ನಾ). = ಲವಂಗಚೆಕ್ಕೆ : "ವಸಂ . . . ಲವಂಗ ತಿಗುಡು" (೬ಪಂ. ೦೪೪). [ಲವಂಗ + ತಿಗುಡು$_1$]

**ಲವಂಗತೊಕ್ಕು** (ನಾ). = ಲವಂಗಚೆಕ್ಕೆ : "ತ್ವಚಂ—ಲವಂಗತೊಕ್ಕು" (ಬಾಹಟಿ. ೨-೨-೬೦ವ) ; ಮಗ್ಗಾರೆಸೊಪ್ಪು ಜಾಯಿಕಾಯಿ ಯಾಲಕ್ಕಿ ಲವಂಗತೊಕ್ಕು ಲವಂಗಪತ್ರ (ಕಾಮಶಾ. ೨೬೪). [ಲವಂಗ + ತೊಕ್ಕು$_2$]

**ಲವಂಗಪಟ್ಟೆ** (ನಾ). = ಲವಂಗಚೆಕ್ಕೆ : ಕಾಫಿ, ಅಕ್ಕಿ . . . ಲವಂಗಪಟ್ಟೆ ಸಿಂಕೋನಾ ಮುಖ್ಯವಾಗಿ ಬೆಳೆಯಾಗುತ್ತವೆ (ಭೂಗೋಳ. ೯೬) ; ಕ್ರಿ. ಪೂ. ೧೫ನೆಯ ಶತಮಾನದ ಈಜಿಪ್ಟ್ ಶಿಲಾಶಾಸನಗಳಲ್ಲಿ ಕಂಡುಬರುವ ಲವಂಗ ಪಟ್ಟೆ ಅಥವಾ ದಾಲ್ಚಿನ್ನಿ ಮಲಬಾರಿನಲ್ಲಿ ಉತ್ಪನ್ನವಾಗುವ ವಸ್ತುವನ್ನೇ ಪ್ರಾಯಶಃ ಸೂಚಿಸುತ್ತದೆ (ದಲಾಇ. ೩೨). [ಲವಂಗ + ಪಟ್ಟೆ$_1$]

**ಲವಂಗಪತ್ರೆ** (ನಾ). ಸುವಾಸನೆಯಿಂದ ಕೂಡಿದ, ದಾಲ್ಚಿನ್ನಿ ಜಾತಿಗೆ ಸೇರಿದ ಒಂದು ಗಿಡದ ಎಲೆ ; "ತೇಜಪತ್ರ" (ಶಂಧಿಶ. ೨೬೦): ಏಲಕ್ಕಿ, ಲವಂಗಚಕ್ಕೆ, ಲವಂಗಪತ್ರ . . . ತೆಗೆದುಕೊಳ್ಳೆ . . . ಪೈತ್ಯಜ್ವರಂ ಮಾಣ್ಗುಂ (ಸಳವೈ. ೭೭). [ಸಂ. ಲವಂಗಪತ್ರ]

**ಲವಕುಟ** (ನಾ). ಬಹಳ ಚಿಕ್ಕದಾದ ಮಣ್ಣಿನ ಪಾತ್ರೆ ; ಮಣ್ಣಿನ ಕುರುಳಿ : "ಕರಗಳಂತಿಗೆಯೆನಲು ಕೈಗಡಿಗೆ ಲವಕುಟಂ ಕುರುಳಿಯುಕ್ಕು" (ಮುಂಗರಾ. ೬೨-೨೪). 'ಕುರುಳಿ$_1$' ಪರಾ. [ಸಂ.]

**ಲವಡ** 'ಲವುಡ' ನೋ.

**ಲವಡಿ** 'ಲೌಡಿ$_2$' ನೋ.

**ಲವಣ** (ನಾ). ೧. ಉಪ್ಪು ; ಕ್ಷಾರ : "ಲವಣಂ ಸಮುದ್ರಜಂ ಕಲ್ಲುಪ್ಪೆನಿಕ್ಕು" (ಮುಂಗರಾ. ೪೩-೪೦) ; ನರಡಿಯೆಂದಡಿದದನೊಡೆದೊರಸು ವುಳು ಪುಳಿಯೊಳಂ ಲವಣದೊಳಂ (ಲೋಕೋಪ. ೯-೨೦೮). ೨. ಷಡ್ರಸ ಗಳಲ್ಲಿ ಒಂದು ; ಉಪ್ಪಿನ ರುಚಿ ; "ತುವರಂ ತಿಕ್ತಂ ಮಧುರಂ ಲವಣಂ ಕಟುಕಾರಮೆಂದು ರಸಮಾಱು ತೆಱಂ" (ವಸ್ತುಕೋ. ೯೪-೦೫). ೩. ರಾಸಾಯನಿಕ ಲವಣ ; ಸೈಂಧವ : "ಲವಣಂ ಸೈಂಧವಮುಂ" (ವಸ್ತುಕೋ. ೦೩೪-೯೯). ೪. ಮನೋಹರವಾದುದು ; ಸುಂದರ ವಾದುದು ; ಚೆಲುವಾದಂದು: 'ಲವಣಿಕೆ' ಪರಾ. ೫. ಶತ್ರುಘ್ನ ನಿಂದ ಹತನಾದ ಒಬ್ಬ ರಾಕ್ಷಸನ ಹೆಸರು : 'ಲವಣಾಸುರ' ಪರಾ. ೬. ಒಂದು ಬಗೆಯ ತೆರಿಗೆ ; ಉಪ್ಪಿನ ತೆರಿಗೆ: ಮಗ್ಗತೆಱೆ ಹೊಗೆದೆಱೆ ಲವಣ ಪಣ್ಣುಕಾರುಕ (ಎಕ. IX. ಕನ್ನಕ. ೬೬-೦೪ ; 1288). [ಸಂ.]

**ಲವಣಜಲಧಿ** (ನಾ). ಉಪ್ಪುನೀರಿನ ಸಮುದ್ರ, ಕಡಲು : ನಿಜವಿಜಯವರೂಥಮೊಂದೆಱೊಳೆ ನುಗುಟ್ಟು ಲವಣಜಲಧಿಯುಂ ಪೊಕ್ಕು (ಆದಿಪು. ೦೪-೫೩ವ). [ಸಂ.]

**ಲವಣತೆ** (ನಾ). ಉಪ್ಪಿನ ಅಂಶ ; ಕ್ಷಾರತ್ವ : ನದೀಮುಖಗಳ ಸಮೀಪದಲ್ಲಿ ಅಥವ ಅನೇಕ ನದಿಗಳು ಬಂದು ಬೀಳುವ, ಭೂಪ್ರದೇಶಗಳು ಬಳಸಿದ ಸಮುದ್ರಗಳಲ್ಲಿ . . . ಲವಣತೆ ಬಹಳ ಕಡಿಮೆ (ಭೂಲಿಬೆ. ೯೫). [ಸಂ. ಲವಣತಾ]

**ಲವಣಾಸುರ** (ನಾ). = ಲವಣ ೫ : ಲವಣಾಸುರಂ ಕಾಳಗದೊಳೀತನಿಂದಳಿ ದನಾ ಬಾಲಕರ ತೋಳ ಬಲ್ಪೆಂತೋ (ಜೈಮಿಭಾ. ೨೦-೩೫). [ಸಂ.]

**ಲವಣಿ$_1$, ನವಣಿ$_1$, ಲಹಣಿ$_1$** (ನಾ). ೧. ಕಾಂತಿ ; ಶೋಭೆ ; ಮೆರುಗು : ಕವಿವವರುಣಾಂಶುಗಳ ಲಹರಿಯ ಲವಣಿ ಲಾವಣಿಗೆಯಲಿ ನೀಲಚ್ಛವಿಯ ದೀಧಿತಿ ರಝಳಪಿಸಿತೆ ದೆಸೆದೆಸೆಯ ಭಿತ್ತಿಗಳ (ಕುಮ್ಯಾಸ. ೦೩-೨೬) ; ಪೊಳೆವ ಮಿಂಚಿನ ಲವಣಿ[ಪಾಠಾಂ. ಅೞವಿ]ಯನು ಮೈಗಳಲಿ . . . ತೋಱಿದರು ಭರದಿ (ಸಾಳ್ವಭಾ. ೨೨-೬೯). ನವಣಿ$_1$ : ೨. ಮನೋಹರತೆ ; ಅಂದ ; ಸೊಗಸು : ಕೋಮಳಿಕೆ ಕೊಂಕುವಡೆಯೆ ಕೊಂಕು ಬಿಂಕಂಬಡೆಯೆ ಬಿಂಕಂ ಲುಳಿವಡೆಯೆ ಲುಳಿ ನವಣಿ ವಡೆಯೆ ನವಣಿ ಬಹುವಿಕೆವಡೆಯೆ ಬಹುವಿಧದ ವಹಣಿಯ ಮಾರಚಿತ್ರದ ಗತಿಗಳೊಳ್ ಮೆಱೆದು (ಅನಂಪು. ೨-೨೮ವ). ಲಹಣಿ$_1$ : ೧. ನಡುವೆ ಪರಿಮಳದ ನಾವೆಯೆಂತಡ್ಡಮಿರ್ದ ನಾಸಿಕಮಂ ದಾಂಟಲಾಱದುಭಯಪಕ್ಷದಿಂ ಸುತ್ತಿ ಬಪ್ಪಾಸೆಯೊಳು ಬಟ್ಟೆಗೊಡುವುದೆಂದು ಕರ್ಣಾವತಂಸದಳಂಗೇ ಲಹಣಿಶ್ರೀಗೆ ಮೌಕ್ತಿಕಾವತಂಸಕಿರಣಚ್ಛಲದಿಂ ಚಾಮರವನಿಕ್ಕುವಂತೆ ಗಂಡ ಮಂಡಲದೊಳು ಮಾರ್ಪೊಳೆವ ಕರ್ಣಪಾಲಿಕೆಗಳ (ಬಸರ. ೦೨-೯೪). [ < ಸಂ. ಲವಣಾ ]

**ಲವಣಿ$_2$, ನವಣಿ$_2$, ಲವಣೆ, ಲಹಣಿ$_2$, ಲಾವಣಿ$_2$** (ನಾ). ೧. ಯುದ್ಧದ ಒಂದು ವರಸೆ,– ಚಳಕ: ಸಂಯೋಧನ ಕವಿದು ನಾಭಿಗೆ ತೋಱಿ ಜಂಘೆಗೆ ಹೂಡಿ ರಝಳಪದಲಿ ಲವಣಿಯಲಿ ಲಳಿಯೆದ್ದು ಹೊಯ್ದನು ಪವನಜನ ಭುಜಶಿರವ (ಕುಮ್ಯಾಗ. ೭-೩೫) ; ಕೇಳ್ಕೆ ಲವನೆ ಲವಣಿಯ ಲಾಗು ಬೇಱೆವರ (ತೊರರಾ. ೭-೨೫-೦೮); ವಜ್ರದ ಬಂಧುರದ ಗದೆಗಳಲಿ ಲವಣಿಯ ಬಂಧಪಲಿ ಬಿಡದೊಡನೆ ಬಡಿದಾಡಿದರು ಜಡಿತೆಯಲಿ (ಅಂಬಿಶಾ. ೦೫-೦೨). ೨. [ಸಂಗೀತ] ಹಾಡುವಿಕೆಯ ಒಂದು ಸೊಗಸು; ಜಟಿಲವಲ್ಲದ ಗೇಯಸೌಂದರ್ಯವು ಪ್ರಸನ್ನವಾಗಿ ಸರಳರೂಪದಲ್ಲಿ ಪ್ರಕಟ ಗೊಳ್ಳುವಂಥ ಒಂದು ಠಾಯೆ,– ರಾಗದ ಅವಯವ. ಕೆಲವರು ಸಂಸ್ಕೃತದ 'ನವನ'ಶಬ್ದಕ್ಕೆ ಇದು ಸಂಬಂಧಿಸಿದೆಯೆಂದು ಹೇಳು ತ್ತಾರೆ : ಸ್ಥಾಯಿಯನಾರೋಹಿಯನವರೋಹಿಣಿಯನೋಯರವಂ

ಸಂಚಾರಿ ಬಜಾವಣೆ ಠಾಯೆ ಲವಣಿ ಪಹಳಿಕೆ ಡಾಳಂಗಳಕಾರಪರಂಪರೆಯ . . . ಚತುರ್ವಿಧ ದಂಡಿಯ ಗಾಯಕಿ ರಸಿಕಮನೋದಾಯಕಿ ಪಾಡಿದಳತಿ ಚದುರಿಂದ (ತಯುಶಾ. ೦೪-೯೩). ೩. [ನಾಟ್ಯ] ದೇಶೀನೃತ್ಯದ ಒಂದು ರೀತಿ : ನಟನ ತಾಂಡವ ನಾಟ್ಯ ಪಟುನೃತ್ಯ ಲಾಸ್ಯದುತ್ಕಟ ನೇರ್ಪ ತಿರುಪುರುಲವಣಿ (ಭೈರವೇ. ೦-೩೯೯) ; ಪದತಳದೊಳ್ ತಾಳಮಂ ಬೀಸರಂ ಬೋಗಲೀಯದೆ ಸೆೞ್ವಿಡಿದು ರೂಪು ನೇರು ಲಾಗು ಲವಣಿಯಡಪು ತಿರುಪು ಕೈಮುಟ್ ಕಳಾಸ ಕೂಟಮಾನಂಗಳಂ ಸಂಗಳಿಸಿ . . . ತೋರ್ಪ ನರ್ತಕಿಯರಿಂ (ರಾಜಶೇ. ೩-೦೯ ವ). ನವಣಿ₂ : ೧. ಪಹಿಲತನಂ ಪದಗತಿಯಿಂ ಬಹುವಿಕೆ ಕೈ ಮಾಟ್ಬ ನವಣಿಯಿಂ . . . ಅಹಮಂಹಮಿಕೆ ಮಿಕ್ಕು ಮೆೞ್ದು ವಿರ್ವರ ಮೆಯ್ಯೊಳ್ (ಅನಂಪು. ೦೦-೩೯). ಲವಣೆ : ೧. ಚಲದಿಂದಲೋರೋರ್ವರಚ್ಚಾಡಿದರ್ವರ್ಯ್ಯ ಲವಣೆ ಮಿಗೆ ಚಮತ್ಕೃತಿಯೊಳು (ಶೋರಾಸು. ೬-೭). ಲಹಣಿ₂ : ೨. ಇಂಪಂ ಕೞ್ವ ಸುಧಾರಸಗಾನಂ ನಾನಾರಸದ ಲಹಣಿಯ ರೂಪುವಡೆಯೆ ಪಾಡುವ ಗಾಯಕರೊಳಂ (ಗಂಕ. ೨-೦೦೩ ವ). ಲಾವಣಿ₂ : ೨. ಗಳೆಯೋಸರಿಸಲು ಮುಂದಳದೊಳು ಥಮ್ಮನೆ ಉಳಿಯಲೊದಗಿ ಪೊಸೆದೋೞ್ ಕಳೆದು ಲಾವಣಿಯೊಳಾಗಳೆ ಹೊಕ್ಕನೆದೆ ಪೋೞ್ಗಳೆವಂತೆ (ಭೈರವೇ. ೩-೧೩).

[ ?. / ಸಂ. ಲವಣೀ./ ಮರಾ. ಲವಣೀ = ಬಾಗಿರುವಿಕೆ ]

**ಲವಣಿಕೆ** (ನಾ). ರಮ್ಯತೆ ; ಮನೋಹರತೆ : ಕಾಲೇಳುಗೆಯ ಲವಣಿಕೆ ಕೋಟೆಕೆಯ ಶುದ್ಧ ಬಾಲದದರು ಮನದೆಸಕ ಮೇಲು ಹಗುರದಿಂದವೆ ಹಮವಾ ಭೂಪಾಲನ ಮನವ ಮೆಚ್ಚಿಸಿತು (ಶ್ರೀಶಾಂ. ೯-೦೦).

[ಲವಣ + — ಇಕೆ]

**ಲವಣಿಸಾರ** (ನಾ). ೧. ಯುದ್ಧದ ಒಂದು ಚಾಕಚಕ್ಯತೆ : ಲವಣಿ ಸಾರದೊಳ್ ಸುಣ್ಣುವ ಮಲ್ಲನನಾರ್ಕಿ ಪಿಡಿದು ಸುತ್ತಿ (ಗಂಕ. ೨-೦೦೩ ವ). ೨. ಯುದ್ಧದ ವರಸೆಗಳ ಚಾಕಚಕ್ಯತೆಗಳನ್ನು ಬಲ್ಲವನು ; ಯುದ್ಧ ನಿಪುಣ : ಬಲಿದ ದಂಡೆಯ ಮಸೆಯ ಬಯಸಿಕೆ ಲಾಳಿಯ ಮೈಗಳ ಲವಣಿಸಾರರು ಕೊಳುಗಿಡಿಯ ಖಂಡೆಯದ ಖಣಿಕಟಲೆಸೆಯೆ ಕಾದಿದರು (ಕುಮಾರವ್ಯಾ. ೦೪-೬).

[ಲವಣಿ₂ + ಸಾರ₂]

**ಲವಣಿಸು₁** (ಕ್ರಿ). ಉಪ್ಪುಹಾಕು ; ಉಪ್ಪನ್ನು ಸೇರಿಸು : ನೀಳವಾಗು ತ್ರರಿಸಿ ಲವಣಿಸುತ ಪಚನಿಸುತ (ರಂಗಪು. ೮-೩೭). [ಲವಣ + — ಇಸು₃]

**ಲವಣಿಸು₂** (ಕ್ರಿ). ಬೆಳಕು ಸೂಸು ; ಕಾಂತಿಯು ಹೊರಹೊಮ್ಮು : ಆಗ್ನೇಯವನು ಹೂಡಿದನು . . . ವಾಯು ಪಡಿಬಲವಾಗೆ ಕಿಡಿಗಳ ಬಾಯಿಧಾರೆಯ ಹೊದಟಿ ಕಬರ್ಿಗೆ ಲಾಯದಲಿ ಲವಣಿಸುವ ದಳ್ಳುರಿದಿರುಳ [ಪಾಠಾಂ. ರಾಯದಳದಲಿ ಮೋಹಿಸಿತು ದಳ್ಳುರಿಯು] ಚೂಣಿಯಲಿ (ಕುಮಾಭಾ. ೨೩-೩೦).

[ಲವಣಿ₁ + — ಇಸು₃]

**ಲವಣಿಸು₃** (ಕ್ರಿ). ಕಾಳಗದಲ್ಲಿ ಸುತ್ತಿ ತಿರುಗಿ ಚಮತ್ಕಾರದಿಂದ ಹೋರಾಡು : ಬಿರುದಿನಂಕದ ಭಟರು ಭೋರೆಂದು ಬೊಬ್ಬೆಗೈದು ಲಾಗಿಸಿ ಲವಣಿಸಿ ವಂಚಿಸಿ . . . ಹಿಮ್ಮೆಟ್ಟಿ ಬೊಗರಿದಿರಾಗಿ ಮುತ್ತಿ ಕಾದುವಲ್ಲಿ (ದಶಾವ. ೩-೦೪೭ ವ).

[ಲವಣಿ₂ + — ಇಸು₃]

**ಲವಣೆ** 'ಲವಣಿ₂' ನೋ.

**ಲವಣೋತ್ತಮ** (ನಾ). ೧. ನದಿ ಅಥವಾ ಗಣಿಯ ಉಪ್ಪು ; ಸೈಂಧವ: "ಸಿಂಧೂತ್ಥಂ . . . ಲವಣೋತ್ತಮಂ—ಈ ೪ ಸೈಂಧವಂ" (ಹಲಾಯು. ೧೦೦-೯೩೦) ; " ಲವಣೋತ್ತಮಂ ಮಾಣಿಮಂತಂ ಸೈಂಧವಂ" (ಮಂಗರಾ. ೩೦-೭). ೨. ಪೆಟ್ಲುಪ್ಪು : (ಕ).

[ಸಂ.]

**ಲವಣೋದ** (ನಾ). ಉಪ್ಪುನೀರಿನ ಕಡಲು : "ಲವಣೋದಃ . . . ಉಪ್ಪುನೀರಿನ ಕಡಲು" (ಸಿದ್ಧಾಂತಿ. ೬೩).

[ಸಂ.]

**ಲವಣೋದಕ** (ನಾ). ೧. ಉಪ್ಪುನೀರು. ೨. ಸಮುದ್ರ. [ಸಂ.]

**ಲವಣೋದಧಿ** (ನಾ). = ಲವಣೋದ : ದ್ವಾದಶರಾಜಕವೆಂಬುದ ನೋದುಗಳೊಳ್ ಕೇಳಲಾದುದಲ್ಲದೆ ಕಾಣಲ್ಕಾದುದೆ ಲವಣೋದಧಿವೃತ ಮೇದಿನಿಯೊಳ್ ದೇವ ನಿನ್ನ ಪೆಸರೆಸೆವೆಡೆಯೊಳ್ (ಆದಿಪು. ೦೪-೦೯). [ಸಂ.]

**ಲವನ** (ನಾ). ೧. ಕೊಯ್ಯುವಿಕೆ : " ಲವಃ, ಅಭಿಲಾವಃ, ಲವನಂ—೩ ಹೊಲಗದ್ದೆ ಮುಂತಾದ ಬೆಳೆಗಳನ್ನು ಕುಯ್ಯುವಿಕೆ, ಭೇದಿಸುವಿಕೆ" (ಸಿದ್ಧಾಂತಿ. ೩೬೩). ೨. ಕೊಯ್ಯುವ ಸಾಧನ; ಕುಡುಗೋಲು. [ಸಂ.]

**ಲವಲವ₁** ' ಲವ ' ಪರಾ.

**ಲವಲವ₂** (ನಾ). ೧. ಉತ್ಸುಕತೆ; ಆತುರ; ತವಕ: 'ಲವಲವಿಕೆ' ಪರಾ. ೨. ಆಸೆ ; ಹಂಬಲ : ' ಲವಲವಿಕೆ ', ' ಲವಲವಿಸು ' ಪರಾ.

[←ಮರಾ. ಲವಲವ]

**ಲವಲವಿ** (ನಾ). ಉತ್ಸಾಹ: ಲವಕುಶತಾತ . . . ಲವಣಾಸುರಾಂತಕಪ್ರಿಯ ಲಕ್ಷ್ಮೀಪತಿ ನಿನ್ನೊಲವೆ ಲವಲವಿಯೆನಿಸುವುದು (ಕಕಶಾಂ. ೭೩-೭೦).

[<ಲವಲವ₂]

**ಲವಲವಿಕೆ** (ನಾ). ೧. ಉತ್ಸಾಹ ; ಹುರುಪು : ಒಲವಿಲ್ಲದ ಭಕ್ತಿ, ಲವಲವಿಕೆಯಿಲ್ಲದ ಪೂಜೆ . . . ಹುಲುಸರವಿಯಿಂದ ಕರಕಷ್ಟ (ದೇದಾವ. ೨೦-೩೬) ; ಲವಲವಿಕೆಯಲಿ ಕಾದಬೇಕೆಮ್ಮವನಿಯನು ಕೈಕೊಳಲುಬೇಕು (ಕುಮಾರವಿ. ೩-೩೯) ; ಬೇಸಗೆಯ ದಿನಗಳ ಲವಲವಿಕೆ ನನ್ನಲ್ಲಿ ಮೂಡಿತು (ಕಾರೆಮ. ೬೬). ೨. ಹಂಬಲ ; ಆಸಕ್ತಿ : ಈ ವಿಷಯವನ್ನು ಪೂರ್ಣ ಅರಿಯಬೇಕೆಂಬ ಲವಲವಿಕೆಯಿಂದ ಒಲ್ದಾ ಕೇಳಿದಳು (ಕೀಮೋಡ. ೨೦).

[ಲವಲವ₂ + — ಇಕೆ]

**ಲವಲವಿಸು** (ಕ್ರಿ). ೧. ಉತ್ಸುಕವಾಗು ; ತವಕಪಡು ; ಆತುರಗೊಳ್ಳು : ಕೈ ಶಿವಪೂಜೆಗೆ ಲವಲವಿಸುತ್ತಿರೆ ತನ್ನಂ ಮಱೆವುತೆ ಪರವಶನಾಗಲ್ (ಶೃಂಗೀರ. ಪ. ೪೯೯—೨೩) ; ತವರೂರ ವಿಭವಕೆ ಕಿವಿಗೊಟ್ಟ ಹೆಂಗಳು ಲವಲವಿಸುವರಲ್ತೆ (ಶರಜ. ೩೯-೦೯) ; ಹರೆಯದಲಿ ಲವಲವಿಸಿ ನಾ ಕಲಿಯಲೆಂದೆ ಬಲ್ಲವರ ಸಂತರೆಲ್ಲರ ಬಳಿಗೆ ಸಂದೆ (ಗಿಳಿಬಿಂ. ೦೦೯-೦೮). ೨. ಹಂಬಲಿಸು ; ಬಯಸು : ಲವಲವಿಸುವ ನೋಟಂ ಕತ್ತುವ ತೋಳ್ ಕಂಪಿಸುವ ಹಸ್ತಂ (ಗಂಕ. ೩-೨೭) ; ತರುಣಿಯರಧರಪಾನರುಚಿಗೆ ಲವಲವಿಸಿದುದು ಜಿಹ್ವೆ (ಸೌಂದಪು. ೯-೩) ; ಅಂತು ಕುಳ್ಳಿರ್ದು ಲವಲವಿಸಿ ನೋಡಿ (ದಶಾವ. ೬-೨೩ ವ). ೩. (ಅಲಂ) ಒದ್ದಾಡು ; ಹೊರಳಾಡು: ನಾ ತಿವಿದ ಖಡ್ಗಕೆ ಸರಸ ಮೈ ಲವಲವಿಸಲಡಿ ಮೇಲಾಗಿ ಹೊರಳ್ದರೆ ಧನ್ಯ ತಾನೆಂದ (ಕುಮಾಕ. ೯-೯೦). [ಲವಲವ₂ + — ಇಸು₃]

**ಲವಲಿ, ಲವಳಿ** (ನಾ). ೧. ಒಂದು ಬಗೆಯ ಬಳ್ಳಿ : ಕಕುಭಾಶೋಕ ಕದಂಬ ಲುಂಗ ಲವಲೀಭೂಜಾರ್ಜುನಾನೋಕಹಪ್ರಕರಂ (ಶಂಕಭಾ. ೩-೮೦) ; ಚಂಪಕ ಲವಲೀ ನಾಗಂ ವಕುಳ ಪಾಟಳಾಶ್ವತ್ಥವ್ರಾತಂ (ಸುಕುಮಾ. ೦೦-೩೩ ರಗಳೆ) ; ಮುಚುಕುಂದ ಕುಂದೆ ಲವಲೀ ಹರಿಚಂದನ (ಸೌಇಶಾ. XX. ೨೩೭-೦೩ ; 1155) ; ಮತ್ತಕೋಕಿಲೆಗಳು ಲವಲಿಯ ವಿಕಸಿತಪಲ್ಲವದೊಳಗೆ ಮುಳುಗಿ ಮಕರಂದವನ್ನು ಹೀರುತ್ತಿದ್ದವು (ಬಾಣಕ. ೬೯). ೨. "ಕಾಚು ಮರ" (ಆದಿಪು. ಕೋಶ) : ತೀರಸ್ಥ ಲವಂಗ ಚೂತ ಲವಲೀಪುಷ್ಪಾಸವಾಸ್ವಾದಿತಾಲಿಯುತೋನ್ಮಾದೆಯ (ಆದಿಪು. ೦-೩೯). ೩. "ಅರನೆಲ್ಲಿ" (ಆದಿಪು. ಕೋಶ) : ಏಲಾಲವಂಗಲವಲೀವೇಲಾವನಭೂಮಿಯೊಳ್ (ಆದಿಪು. ೦೩-೨) ; ಸರಳ ಲತಾಲಾಸ್ಯನಟಂ ಹರಿಣೀರೋಮಂಥಬಂಧುರಂ ಲವಲೀಮರ್ಮರಮುಖರಂ ಕರಿಕರಶೀಕರಶೀತಳಮೆಸಗಿದತ್ತರಣ್ಯಂ ಸಮೀರಂ (ಶಂರಾವಾ. ೬-೦೦೩). ೪. ಒಂದು ಬಗೆಯ ಸಸ್ಯ ; ಅದಿರ್ಗಂತಿ : "ಲವಲಿಃ, ಲವಲೀ—ಈ ೨ ಅದುರ್ಗಂತಿ" (ಕಾಕಶ. ೨೯೩). ಲವಳಿ : ೨. ಸಾಳ ತಾಟಿ ಲವಳೀ ಹಿಂತಾಳ ನಾಳೀ . . . ಕೋಳ ನಿಚುಳಾಕ್ಷೋಣಾಂಗಳಿಂದೊಪ್ಪುಗುಂ (ವರ್ಧಮಾ. ೩-೯೬).

[ಸಂ. ಲವಲೀ]

**ಲವಲಿಕೆ** (ನಾ). = ಲವಲವಿಕೆ : ಪುಲಿ ನೀರುಣುತಿರೆ ಪಾಯ್ದುಕ್ಕಲವಂದಿ ತದೀಯ ವಿಪುಳಗಳ ವಿಗಳದಸೃಗ್ಜಲದಿಂ ಬಗರಗೆ ಶೀವಿದೊಡೆ ಲವಲಿಕೆಯು ನೂಡಿ ಪೋದುದು (ಲೀಲಾವ. ೬-೯೭).

[ಽ ಇದು ಛಂದಸ್ಸಿಗಾಗಿ ಮಾಡಿಕೊಂಡ ರೂಪವಿರಬಹುದು]

**ಲವಳಿ** 'ಲವಲಿ' ನೋ.

**ಲವಳಿಗೆ** (ನಾ). ಬಿಲ್ಲಿನ ಹಗ್ಗ; ನಾರಿ: ಬಳಿಕಾ ರವಿಸುತನು ಬಲವಂದು ಬಿಲ್ಲಿನ ಲವಳಿಗೆಯ ನೇವರಿಸಿ ರವಿಮಂಡಲಕೆ ಕೈಮುಗಿದ (ಕಂಭಕ. ೦೯-೩೧). [?]

**ಲವಾಜಮೆ**, ಲವಾಜಮ್ಮು (ನಾ). ೧. ಪರಿಕರ ; ಸಾಧನಸಾಮಗ್ರಿ; ಆವಶ್ಯಕವಸ್ತು : ಶಯನಮಂಟಪಕ್ಕೆ ಲವಾಜಮೆಸಹಿತವಾಗಿ ಚಪ್ಪರಗಾಲು ಮಂಚವನ್ನು ಸೇವಾರ್ಥವಾಗಿ ಒಪ್ಪಿಸಿರುತ್ತಾರೆ (ಶಾಸನ. ೨೬೯); ಇವನ್ನು ಕಡಿದು ತಿನ್ನುವವರಿಗೆ ತಕ್ಕ ಲವಾಜಮೆ ಬೇಡವೆ? (ಕಳಪಿ. ೦೦೦). ೨. ಪರಿವಾರ; ಪರಿಜನ : ಅರಮನೆಯಿಂದ ಪುರೋಹಿತರ ಮನೆಗೆ ಸಕಲಸಾಮಗ್ರಿಗಳೂ ಲವಾಜಮೆ ಕಳುಹಿಸಲ್ಪಟ್ಟಿತು (ಶ್ರೀರಾಮ. ೬೦). **ಲವಾಜಮ್ಮು**: ೨. ಅವರ ಸಂಗಾಟ ಅವರ ಲವಾಜಮ್ಮೂ ಬಂದಿತ್ತು (ಕವಿಕ. ೪).

[←ಅರ. ಲವಾಜಿಮ್ ; ಹಿಂ. ಲವಾಜಮಾ, ಲವಾಜಿಮಾ ; ಮರಾ. ಲವಾಜಮಾ]

**ಲವಾಜಮ್ಮು** 'ಲವಾಜಮೆ' ನೋ.

**ಲವಿತ್ರ** (ನಾ). ಕೊಯ್ಯುವ ಸಾಧನ ; ಕುಡುಗೋಲು : "ಲವಿತ್ರಂ ದಾತ್ರಂ–ಈ ೨ ಕುಡುಗೋಲ್" (ಹಲಾಯು. ೯೯-೯೨೩) ; ಅವರ ಮಿತ್ರತ್ವ ವೆಂಬುದು ಜನ್ಮತರುಲವಿತ್ರವೆ ಆಗಬಾರದು (ಸಿದ್ಧವ. ೬೬-೩೩೨) ; ಉತ್ತಮ ಕೃಪಾಪಾತ್ರನಧಿಕಜ್ಞಾನನೇತ್ರನಘವಲ್ಲೀಲವಿತ್ರನೆನಿಪ . . . ಮಾಯಿದೇವ (ಶದ್ಮರಾ. ೨-೬೨); ಕಡಹ ಲವಿತ್ರದೊಳ್ಕೊಯಿದು ಸೀಳಿದರೀಗ ಬಿಡವು ಸದ್ಗುಣವನು (ಕಂಪರ. ೩-೯೩). [ಸಂ.]

**ಲವುಡ**, ಲವಡ (ನಾ). ಪುರುಷನ ಜನನೇಂದ್ರಿಯ ; ಶಿಶ್ನ : (೬) **ಲವಡ** : (೬). [←ಮರಾ. ಲವಡಾ; ಹಿಂ. ಲೌಡಾ]

**ಲವುಡಿ**$_1$, ಲೌಡಿ$_1$, ಲೌಡೆ (ನಾ). ಒಂದು ಬಗೆಯ ಕಬ್ಬಿಣದ ಆಯುಧ–ದೊಣ್ಣೆಯಂಥ ಸಾಧನ : ತಡಯುವ ಲವುಡಿಯು ಚಾವುಡಿಯ ಬಾವುಲಿಯ ಬಲ್ಲಾಳ್ಗಳ ಮುಂದೆತ್ತಿದ ಪರಿಪರಿಯ ಪರಾಕಾವಳಿಯ (ಗಿರಿಕ. ೬-೫೫೪); ಭಾರಾಂಕ ಲವುಡಿಯು ಗವಿಯ ಗರುವರು ನೂಕಿದರು ತೇಜಿಗಳನೋಜೆಯಲಿ (ಕುಮಾರರಾ. ೯-೩೦) ; ಸುರಗಿಯಲಿ ಲವುಡಿಯಲಿ ಮುಸಲದಲಾ ಕೃಪಾಣದಲಿ ಪೂತು ಮಝರೆನುತರಮಸಿಸಲಿಟ್ಟಾಡಿದರು (ಕೋಣಗರು. ೨೦-೨೩). **ಲೌಡಿ**$_1$ : ಹೊಡೆವ ಲೌಡಿಗಳೊತ್ತಿ ನೆತ್ತಿಯ ಬಿಡುಮಿದುಳ ಕೆದರ್ದುದವ (ಕುಮಾರರಾ. ೯-೩೯) ; ಪೊಡೆದನು ಲೌಡಿಯಿಂ ತಲೆಯು ಮಿದುಳ ಖಂಡ ಕಡಗೆ ಚೆಲ್ಲಲು ರಾವುತರನು (ಕಂಠೀರಾ. ೯೦-೨೯). **ಲೌಡೆ** : ಪೇಡರಸು ಬೆನ್ನೀಯೆ ನೆತ್ತಿಯ ಬೀಡ ಬಿರಿಯಲು ಬಿದ್ದ ಲೌಡಿಗಳೀಡಿಗಾದವಾಜಿಚಾತುರಂಗದ ಚಪಳ ಚೂಣಿಯಲಿ (ಕುಮಾರ. ೦೦-೦೦). [< ಪ್ರಾ. ಲಉಡ. / ಸಂ. ಲಗುಡ]

**ಲವುಡಿ**$_2$ 'ಲೌಡಿ$_2$' ನೋ.

**ಲವುಡಿಮಗ** 'ಲೌಡಿಮಗ' ನೋ.

**ಲಶೋದ್ಗಮ** (ನಾ). ಸಿಡಿದ ಸಣ್ಣ ಹನಿ,–ತುಂತುರು : ತಣಿಯಂಬೊ ದೇವಲೋಕ ಸುಖಸಾಗರಮಂ ತವೆ ಪೀರ್ದುವಾಗಳೇಂ ತಣಿವೂ ಮನುಷ್ಯ ಕೀಟಕಸುಖಾಂಬುಲವೋದ್ಗಮದೊಳ್ ವಿಚಾರಿಸಲ್ ಗಣದಮಿದೊಂದು ಮಿಲ್ಲ (ಅಂತ. ೩-೬೦). [ಸಂ.]

**ಲಶುನ** (ನಾ). ಬೆಳ್ಳುಳ್ಳಿ : "ಲಶುನಂ ಗೃಂಜನ" (ವಸ್ತುಕೋ. ೩೭-೨೭); ಲಶುನಂ ನಿಂಬಫಳಂ ಹಿಂಗು ಶುಂಠಿ (ಲೋಕೋಪ. ೭-೬೦); ಕಸ್ತೂರಿಯೊಡನೆ ನಿಟ್ಟು ಕುಟ್ಟಿ ತೆಗೆದಟ್ಟರು ಲಶುನಕೆ ಸೌರಭ ಬರದು (ಜಂಪಾಶ. ೨೨೦-೯೯). [ಸಂ.]

**ಲಷ್ಕರ್** 'ಲಷ್ಕರು' ನೋ.

**ಲಷ್ಕರಿ** 'ಲಷ್ಕರು' ನೋ.

**ಲಷ್ಕರು**, ಲಕ್ಕರಿ, ಲಷ್ಕರ್, ಲಷ್ಕರಿ, ಲಸಿಕರಿ, ಲಸುಕರಿ (ನಾ). ೧. ಸೈನ್ಯ ; ದಳ: ನಾಳೆ ಬರುವ ಬಳ್ಳಾರಿ ಲಷ್ಕರ ಸರಬರಾಯಿಯಂ ತುಸ ಪುಕಸಿರಿಲ್ಲದಂತೆಸಗ ಪೇಳು (ಅಕಾರಿ. ೩೦-೪೯). ೨. ಸೈನ್ಯವನ್ನಿಟ್ಟಿರುವ ಸ್ಥಳ ; ದಂಡುಪ್ರದೇಶ; ಕಂಟೋನ್ಮೆಂಟು : ಪೂರ್ವಕ್ಕೆ ಇದ್ದ ಬೆಟ್ಟ ಗುಡ್ಡಗಳ ಶ್ರೇಣಿಯು ಲಷ್ಕರಿನಿಂದ ಸುಮಾರು ಎರಡು ಮೈಲಿ ದೂರವಿದ್ದಿತು (ಪುರಾಣಿ. ೯೩೩); ಈ ಮ್ಯಾರಿಗೆಲ್ಲಾ ಬಂದೋಬಸ್ತು ಮಾಡಿದರು ಶಿವಾಯಿ ಲಷ್ಕರು ಕುಚು ಮಾಡೀ ರತ್ನಗೇರಿಯಿಂದಾ ಯೆರಡು ಮಜಲ್ಲು ಮಾಡಿ (ಸಂದಿಕ. ೩೩-೦೯). **ಲಕ್ಕರಿ** : ೧. ಅಂಬರಖಾನನ ಬಳಿಯ ಲಕ್ಕರಿಗಳ ಕುಂಬುಳಿಕ್ಕೆಕ್ಕೆ ಸಂದಾಗ ಒಂಭತ್ತುಸಾವಿರ ಮಡಿದುದು ರಣದಲ್ಲಿ (ಕಂಪರ. ೦೩-೬೯). **ಲಷ್ಕರ್** : ೧. ಬೆಂಗಳೂರಿನಲ್ಲಿ ಬ್ರಿಟಿಷ್ ಸರ್ಕಾರದವರು ಸ್ಥಾಪಿಸಿದ ಲಷ್ಕರ್ ಸ್ಥಾನಕ್ಕೆ . . . ಒದಗಿಸಿಕೊಟ್ಟರು (ಮಹಾಪಂ. II, ೯೪). ೨. "ಸೇನೆಯ ದಳಗಳಿಗೆ ಗೊತ್ತುಮಾಡಿರುವ ವಾಸಸ್ಥಾನ; ಸೈನ್ಯಾವಾಸ. (ಇಂಡಿಯಾದಲ್ಲಿ) ಸೈನ್ಯವನ್ನಿಟ್ಟಿರುವ ಪಟ್ಟಣ ಅಥವಾ ಪಟ್ಟಣದ ಭಾಗ: 'ಲಷ್ಕರ್'; ದಂಡು" (Cantonment. ೨೦೪೩). **ಲಷ್ಕರಿ** : ೧. ಜೀವನದಲ್ಲಿ ಸಾಹಸವೊಂದೇ ಸುಖ ಕೊಡುವುದರಿಂದ ಕೊನೆಗೆ ಲಷ್ಕರೀ ಸೇರಬೇಕೆಂದು ಬಯಸುತ್ತೇನೆ (ಮೇದಿನಿ. ೦೬೬); ಸುಶೀಲ ರಾಯನು ಲಷ್ಕರೀ ಸುಭೇದಾರನಿರುತ್ತಾನೆ (ಮೋಹಿನೀ. ೬೦). **ಲಸಿಕರಿ**: ೧. ಹಸುರು ನಿಸಾನಿ ಶಮನಕಾಲ ನಗಾರಿ ಲಸಿಕರಿಗಳು ಸುತ್ತ ಬಳಸಿ (ಕೌಂಡವಾ. ೬-೬೯). **ಲಸುಕರಿ** : ೧. 'ಲಸುಕರಿತನ' ಪದ್ಯಾ.

[←ಪಾರ. ಮರಾ. ಲಷ್ಕರ್; ಹಿಂ. ಲಷ್ಕರ್, ಲಶ್ಕರೀ]

**ಲಸಿಕರಿ** 'ಲಷ್ಕರು' ನೋ.

**ಲಸಿಕೆ**, ರಸಿಕೆ, ರಸಿಗೆ, ರಸುಗೆ (ನಾ). ೧. ಸಾಂಕ್ರಾಮಿಕರೋಗಗಳ ತಡೆಗಾಗಿ ಬಳಸುವ ಔಷಧಿದ್ರವ ; ಸಿಡುಬು ಮೊದಲಾದುವುಗಳ ತಡೆಗೆ ಲಸಿಕೆಗಳ ಪ್ರಯೋಗ, ಕಾಯಿಲೆ ಬಂದಾಗ ಅತಿ ಬೇಗ ಅದನ್ನು ಗುರುತಿಸಿ ತಕ್ಕ ಚಿಕಿತ್ಸೆ ಕೊಡುವುದೇ ಮುಂತಾದ ಕ್ರಮಗಳು ಸಾಂಕ್ರಾಮಿಕ ರೋಗಗಳ ಗತಿಯನ್ನೇ ಬದಲಿಸಿವೆ (ಕೆಂಡೋ. VI, ಜನ್ಮಹ). **ರಸಿಕೆ**: ೧. ರಸಿಕೆ (serum) ಮನುಷ್ಯನನ್ನು ೧೨೫ ವರ್ಷಗಳ ವರೆಗೆ ಬದುಕಿಸುವುದಂತೆ (ಪ್ರತ್ಯಕ್ಷ. ೬೩). ೨. ಗಾಯ ಮೊದಲಾದುವುಗಳಿಂದ ಸೋರುವ ನೀರು; ಕೀವು : ಕುಷ್ಠ ಬಲಿತರೆ . . . ರಸಿಕೆ ಸುರಿಯುತ್ತಿಹುದು (ವೈದ್ಯಶಾ. I, ೩೯೭); ಆಕಳ ಕೆಚ್ಚಲಿನ ಮೇಲಿನ ಹುಣ್ಣಿನ ರಸಿಕೆಯು ಕೈಗೆ ಹತ್ತಿ ಮೈಲಿ ಎದ್ದು ಹೋಗಿರುತ್ತವೆ (ಮುಂಬಯಿ. ೯-೨೦೭). **ರಸಿಗೆ** : ೨. ಕೀವಿಂ ಕೊಬೆಯಿಂ ಮಹಾರಸಿಗೆಯಿಂ ಪೊಂಗಿರ್ದ ಪುಣ್ (ರಘುರಾಮ. ೯-೬೯); ಬಸಿದಪ್ಪುದು ಮೆಯ್ಯು ಕೀವೂ ರಸಿಗೆಯುಂ (ಯಶೋಧ. ೩-೬೨). ೩. ಕಬ್ಬಿನ ಹಾಲಿನ ಪಾಕ; ಕಾಕಂಬಿ : "ರಸಿಗೆ–ರಸಿಕಾ=ಕಬ್ಬಿನ ರಸ. ಕೀವು" (ಕನ್ನಕೋ. ೩೪). **ರಸುಗೆ** : ೨. ಪುಣ್ಣಳ ಬಾಯಿಂ ಪಡುಕೆನಾರ್ವ ರಸುಗೆಗಳೊಸರ್ಗಂ (ಚಾವಚ. ೨೦-೯). [<ಸಂ. ಲಸೀಕಾ = ದ್ರವ, ರಸ]

**ಲಸಿತ** (ಗು). ೧. ಕಾಣಿಸಿಕೊಂಡ ; ಬೆಳಕಿಗೆ ಬಂದ. ೨. ಹೊಳೆಯುವ; ಪ್ರಕಾಶಿಸುವ : ಲಸಿತಭಸಿತೋಜ್ವಲಗಾತ್ರಂಸ್ಥಾಣು ನೊಸಲಕಣ್ದೋರ್ದುದ ಪೋಲ್ (ಕಂಠೀರವಿ. ೩-೦೦೬); ಬೆಳ್ಳಿಗಿಲಾಗಸದಂತಿರೆ ಭಸಿತೋದ್ಧೂಳಿತ ಲಸಿತ ಲಲಾಟಂ ಕಣ್ಗೊಳಿಸೆ (ರಾಜಶೇಖ. ೯೦-೦೬). [ಸಂ.]

**ಲಸುಕರಿ** 'ಲಷ್ಕರು' ನೋ.

**ಲಸುಕರಿತನ** (ನಾ). ಸೈನ್ಯಾಧಿಪತ್ಯ: ಒರಿದು ಸಂತೋಷದೆ ಪಾತಶ್ಯಾವು ಖಾನಗೆ ಸರಿ ಲಸುಕರಿತನವಿತ್ತು . . . ಹೋಗೆಂದ (ಕಂಪರ. ೧೧-೬).

[ಲಸುಕರಿ (<ಲಷ್ಕರು) + –ತನ]

**ಲಸುನ,** ಲಸೋನ (ನಾ). ಬೆಳ್ಳುಳ್ಳಿ : ಲಸುನಂ ತುಂಬುರ್ವ ಪಾತ್ರಂ (ಜಾಪ್ರಾಶ. ೬೯). **ಲಸೋನ :** "ಉಳ್ಳಿ ಗೃಂಜನಂ ಲಶುನಂ ಲಸೋನಂ ಪಲಾಂಡುವಕ್ಕುಂ" (ಮಂಗರಾ. ೯-೦೬). [<ಪ್ರಾ. ಲಸುಣ./ಸಂ. ಲಶುನ]

**ಲಸೋನ** ' ಲಸುನ ' ನೋ.

**ಲಸ್ತಕ** (ನಾ). ಬಿಲ್ಲಿನ ಮಧ್ಯಭಾಗ ; ಬಿಲ್ಲನ್ನು ಕೈಯಲ್ಲಿ ಹಿಡಿಯುವ ಸ್ಥಳ : "ಲಸ್ತಕಃ, ಧನುರ್ಮಧ್ಯಂ—ಬಿಲ್ಲಿನ ನಡುವಿಗೆ ಹೆಸರು. ಕೋದಂಡದ ಮಧ್ಯಪ್ರದೇಶ ; ಬಿಲ್ಲಿನ ಕೈಪಿಡಿಯ ಸ್ಥಳ" (ಸಿದ್ಧಾಂತ. ೬೪). [ಸಂ.]

**ಲಸ್ತಕಿ** (ನಾ). ಬಿಲ್ಲು. [ಸಂ. ಲಸ್ತಕಿನ್]

**ಲಹಣ$_1$** ' ಲವಣ$_1$ ' ನೋ.

**ಲಹಣ$_2$** ' ಲವಣ$_2$ ' ನೋ.

**ಲಹಣಗೊಡು** (ಕ್ರಿ). [ಸಂಗೀತ] ಸೊಗಸನ್ನುಂಟುಮಾಡು : ಗತಿಗೊಡುವ ಮದ್ದಳೆಯ ಲಹಣಗೊಡುವ ಅವುಜದ ದೆಕ್ಕಳಂಗೊಡುವ ಕರಡೆಯ (ಸುಬಿಶ. ೦೦೭-೦). [ಲಹಣ$_2$ (< ಲವಣ$_2$) + ಕೊಡು$_1$]

**ಲಹರಿ** (ನಾ). ೧. ಅಲೆ ; ತೆರೆ ; ತರಂಗ : ಮಂದಮಂದಂ ಕೀಡಿತಾಲೋಲಗಂಗಾಲಲಿತಲಹರಿ ಕಾಸಾರಸಾರಂ ಸಮೀರಂ (ಆದಿಪು. ೭-೨೫); ಅನುರಾಗರಸದ ಲಹರಿಯೊಳು ಏಗ್ಗೈವೆನೆಂಬುದನಱಿಯದವನಿಗಿದಿರಾಗಿ ನಿಟ್ಟಿಸಿ ನಿಂದಿಹಳು (ಹರಿಶ. ೭-೯೦); ಕಾವ್ಯಕರುಣಾರಸದ ಲಹರಿಯ . . . ಲಸದ್ರೂಪಂ ಮೆರೆಯುದಿಹುದೆ? (ಶ್ರೀರಾಮಾ.೦೦೫-೯೮). ೨. ದೊಡ್ಡ ಅಲೆ, ತೆರೆ : "ಊರ್ಮಿಃ . . . ಕಲ್ಲೋಳಃ, ಲಹರೀ — ಈ ೫ ಪೆರ್ದೆರೆ" (ಹಲಾಯು. ೦೦೬-೩೦). ೩. ಮನಸ್ಸಿಗೆ ಒಮ್ಮೆಲೇ ಉಂಟಾಗುವ ಇಚ್ಛೆ,-ಒಲವು : ಯಾರಿಗೆ ಯಾವಾಗ ಲಹರಿಯೋ ಆಗ ಬರುತ್ತಾರೆ ಹೋಗುತ್ತಾರೆ (ಇತ್ಯಶ. ೩೦೭); ಆತನ ಲಹರಿಯು ಯಾವ ಕಾಲಕ್ಕೆ ಎತ್ತ ಕಡೆ ಹೊರಳೀತೆಂಬುದರ ಭರವಸೆಯೇ ಇರಲಿಲ್ಲ (ಕಂದುಕು. ೩); ಯಾರಿಗೂ ಪಾಠಪ್ರವಚನದ ಲಹರಿ ಬಂದಿರಲಿಲ್ಲ (ದೂರಕ. ೩೦). ೪. ಉಲ್ಲಾಸ ; ಸಂತೋಷ : ಕೇವಲ ಲಹರಿಗಾಗಿ ರೇ. . . ಪುಸ್ತಕವೊಂದನ್ನು ಪ್ರಕಟಿಸಿದನು (ತತ್ವಶ. ೯). ೫. ಒಂದು ಬಗೆಯ ಮಾದಕಪದಾರ್ಥ : ಹುರಿದ ಹೊಸ ಭಂಗಿ ಹದಗೆಯ್ದು ಪಿನಿಕೂಟದೊಳ್ ಬೆರೆದಮಲ್ ಜಾಯಿಕಾಯ್ ಪತ್ರ ಕಸಕಸೆಯೆಂಬ ತರತರದೊಳೆಸೆವ ಲಹರಿಗಳುಮೆಲ್ಲಾ ಪಕ್ಷಿಮೃಗಕುಲದ ಮಾಂಸಂಗಳು (ಕಬಿಪು. ೯೭-೯೫). ೬. ಅಮಲು ; ಗುಂಗು : ಒಳ್ಳೆಯಲ್ಲಿ ದೋಷ ಬಂಗಿನುಗ್ಗೆಯಲ್ಲಿ ಲಹರಿ ಉಳ್ಳಿಯಲ್ಲಿ ದುರ್ಗಂಧ (ಬಲಿಪ್ಪ. ೬೯); ಮಣ್ಣೆಂಬ ಘಟದ ಮಧ್ಯದಲ್ಲಿ ಹೊನ್ನೆಂಬ ಸುರೆ ಹುಟ್ಟಿತ್ತು ಹೆಣ್ಣೆಂಬ ಬಟ್ಟಲಲ್ಲಿ ಅಂತು ಈಂಟಲಾಗಿ ಲಹರಿ ತಲೆಗೇಱಿತ್ತು (ಸವಚವ. ೧೯೨-೭೯೭). [ಸಂ. ಲಹರೀ./ಹಿಂ. ಮರಾ. ಲಹರ್]

**ಲಹರಿಕೆ** (ನಾ). ಅಲೆ : ತೆರೆ ; ತರಂಗ : "ಭಂಗಂ ಲಹರಿಕೆ ವೀಚಿ ತರಂಗಂ ಲಳಿಯೆಂಬಿವೂರ್ಮಿಪರ್ಯಾಯಂಗಳ್" (ಪತ್ತುಕೋ. ೨೨-೩) ; ನಾನಾಜಲಚರನಿಕರಾಸ್ಫಾಳನಪ್ರೋಜ್ಜಲತ್ಪ್ರಚ್ಛದನಚ್ಛನ್ನಚ್ಛಟಾಪ್ರಕ್ಷುಭಿತಲಹರಿಕಾ ಸ್ಫಾರ ರೌದ್ರಂ ಸಮುದ್ರಂ (ಕಾವ್ಯಸಾ. ೬೯ ಕೂದ್ರ೪) ; ಸೊಗಯಿಸುವ. . . ಲಲಿತಗಂಗಾನದೀಲಹರಿಕಾತಲ್ಪದೊಳ್ (ಆದಿಪು.೭-೦೬೯). [ಸಂ. ಲಹರಿಕಾ]

**ಲಳಗಿ** ' ನಳಿಗೆ ' ನೋ.

**ಲಳನೆ** ' ಲಲನೆ ' ನೋ.

**ಲಳಿ** (ನಾ). ೧. ರಭಸ; ತೀವ್ರತೆ; ಆವೇಗ : ಭಾರಿಯ ಭೂರಿ ಕೋಪಾನಳನ ಲಳಿಯ ತಗ್ಗಿಸುವೆನೆನುತ (ಕುಮಾಶ. ೦೨-೦೨); ಬುದ್ಬುದದ ಜಲಜಂತುಜಾಲ್ಪದ ಲಳಿಯ ಉಳಿಯ ಲಹರಿಗಳ ವಿಸ್ತರದ ಪರಗಂಗೆಯಂ ಕಂಡಳು (ಕೃಪಿಬಾ. ೯-೨೩). ೨. ಚಾಕಚಕ್ಯತೆ; ಚುರುಕು : ಶರಸಂಧಾನ ಸತ್ತ್ವ ಸಾಹಸ ಲಕ್ಷ್ಯ ಲಳಿ ಲಾಘವಗಳಿಂದೆ (ಕೃಪಿಬಾ. ೨೭-೦೫). ೩. ಕೌಶಲ್ಯ ; ನೈಪುಣ್ಯ ; ಚಮತ್ಕಾರ : ಸುಸ್ವರಂ ಲಳಿ ಲುಳಿ . . . ಸಂಗಳಿಸೆ ಸುಕಂಠ ಪಾಡಿ ಪುದಿದಳ್ ಮುದಮಂ ನರನಾಥಚಿತ್ತದೊಳ್ (ಕುಸುಮಾ. ೦-೩೭) ; ಕರಿಗಳಟ್ಟೆಯುನೆಳೆವ ರಕ್ತದ ಹೊನಲ ಮುಂಡದ ಲಳಿಯ ನಾಟ್ಯದಲೆಸೆದುದ್ಯೆ ಬೀಭತ್ಸ ರೌದ್ರದಲಿ (ಕುಮಾಶ. ೦೫-೨೭). ೪. ಕಾಂತಿ ; ಪ್ರಭೆ : "ತೊಳಗು ಬೆಳಗೆನೆ ಕಾಂತಿ ಲಳಿ" (ಸಂಕೀಪ. ೨೫) ; ಸಿಡಕಿನ ಸೊಸಕದ ಲಂಬಳದ ಲಳಿಗಳ ಲಹರಿಯಲಿ ರಂಜಿಸಿದುದು (ಕೂರರಾ. ೦-೭-೦೯). ೫. ಅಲೆ; ತೆರೆ: "ಭಂಗಂ ಲಹರಿಕೆ ವೀಚಿ ತರಂಗಂ ಲಳಿಯೆಂಬ ವೂರ್ಮಿಪರ್ಯಾಯಂಗಳ್" (ಪತ್ತುಕೋ. ೨೨-೩). [ ? ]

**ಲಳಿಗೆ** ' ನಳಿಗೆ ' ನೋ.

**ಲಳಿತ** ' ಲಲಿತ ' ನೋ.

**ಲಳಿತತೆ** ' ಲಲಿತತೆ ' ನೋ.

**ಲಳಿತಾಂಗ** ' ಲಲಿತಾಂಗ ' ನೋ.

**ಲಳಿತಾಕಾರ** ' ಲಲಿತಾಕಾರ ' ನೋ.

**ಲಳಿತೆ** ' ಲಲಿತೆ ' ನೋ.

**ಲಳಿಮಸಗು** (ಕ್ರಿ). ೧. (ಅಲೆಗಳು) ಉಕ್ಕು,-ಉಕ್ಕೇರು : ಒಸರಿದುದು ಶಶಿಕಾಂತಶಿಲೆ ಧವಳಿಸಿದುದಂಬರವಂಬುನಿಧಿ ಲಳಿ ಮಸಗಿದುದು (ಕೂರರಾ. ೫-೩-೯). ೨. ರಭಸಗೊಳ್ಳು ; ಉದ್ವೇಗಗೊಳ್ಳು : ಎಸೆದುದಾ ಮಣಿಖಚಿತಕಿರಣಪ್ರಸರಮುದ್ರಿಕೆ ಪೂತ್ಕರಿಸಿ ಲಳಿಮಸಗಿದಹಿಪನ ಪೆಡೆಮಣಿಯ ವೊಲು (ಕೂರರಾ. ೯-೬-೦೭). [ಲಳಿ+ಮಸಗು$_1$]

**ಲಳಿಯೇಳು** (ಕ್ರಿ). ರಭಸಗೊಳ್ಳು ; ಉದ್ವೇಗ ಹೊಂದು : ಲಾಗಿಸುತ ಲಳಿಯೆದ್ದು ಭೀಮನ ತಾಗಿಸಿದನವನೀಶನು (ಕುಮ್ಯಾಗ. ೭-೨೦) ; ವಿಗಡ ಬಸವಂ ಮಸಗಿ ಲಳಿಯೆದ್ದು ತತ್ಕ್ಷಣಂ ಚಿಗಿಯಲ್ ತೊಡರ್ದ ದಾಮಂಗಳೆಲ್ಲಂ ಪಱಿದವು (ಕಬಿಪು. ೯೯-೦೬) ; ಕಡುಪಾಂತ ಕಾಲಾಳ್ಗಳೊಡಲಳಿಯೆ ಲಳಿಯೆದ್ದು ಪಡೆಯನುಱಿ ಕೊಂದವು (ಕೃಪಿಬಾ. ೨೨-೨೦). [ಲಳಿ+ಏಳು$_1$ (<ಏೞು$_1$)]

**ಲಾಂಗಲ** (ನಾ). ೧. ನೇಗಿಲು ; ಹಲ : "ಹಲಂ, ಲಾಂಗಲಂ, ಸೀರಃ— ಈ ೩ ನೇಗಿಲ್" (ಹಲಾಯು. ೯೯-೯೨೦) ; ಪಿಂಗಾಕ್ಷನ ವಕ್ಷಸ್ಥಳಮಂ ತನ್ನ ಗದಾಲಾಂಗಲದಿಂದಿರ್ಬಗಿಯಾಗಿ ಪೋಟ್ಟು (ಗದಾಯು. ೬-೦೬೫) ; ಶರಧಿ ತೆರೆಯಿಂದೆ ನೂಂಕಲ್ : . . ಒಂದು ಪೆಟ್ಟಿಗೆ ಪೊಳಲ್ಕಿರದೆ ಲಾಂಗಲಕೆ ಸಿಲ್ಕಿತು (ದಶಾವ. ೬-೦೦೬). ೨. ಒಂದು ಬಗೆಯ ಆಯುಧ : ಬರಲೀಯದೆಂದು ಲಾಂಗಲ ಶರಂಗಳಂ ಪಿಡಿದು ಪವನನಂದನನಿರ್ದಂ (ಸಂರಾಶೂ. ೦೯-೦೬೦) ; ತಣಿಪುವೆಂ ಮುಸಲಮನೀ ಲಾಂಗಲಮಂ (ಜಗಿಬಿ. ೦೫-೫೨). ೩. ಒಂದು ಬಗೆಯ ಮರ ; ತಾಳೆ. ೪. [ಜೈನ] ಅರುವತ್ತು ಮೂರು ಇಂದ್ರಕಗಳಲ್ಲಿ ಒಂದು : ೧. ಋತು . . . ೩೬. ಲಾಂಗಲಂ . . . ೬೩ ಸರ್ವಾರ್ಥಸಿದ್ಧಿ—ಎಂಬಿವು ಅನುಕ್ರಮದಿಂ ಅಱುವತ್ತುಮೂಱು ಇಂದ್ರಕಂಗಳ ಪೆಸರ್ಗಳ್ (ತತ್ತ್ವಸೂ. ೨೦೩). 'ಲಾಂತವ' ಪರಾ. [ಸಂ.]

**ಲಾಂಗಲಗತಿ** (ನಾ). [ಜೈನ] ಸಂಸಾರಿಜೀವದ ಇಷುಗತಿ, ಪಾಣಿಮುಕ್ತಗತಿ, ಲಾಂಗಲಗತಿ, ಗೋಮೂತ್ರಗತಿಗಳೆಂಬ ನಾಲ್ಕು ಗತಿಗಳಲ್ಲಿ ಒಂದು ; ನೇಗಿಲಿನಿಂದ ಉತ್ತಾಗ ನೆಲದ ಮೇಲೆ ಮೂಡುವ ಎರಡು ರೇಖೆಯಂಥ ಗತಿ,—ಗಮನ : ಸಂಸಾರಿಜೀವಕ್ಕೆ . . . ಹಲದ ಪೋಲ್ ಎರಡು ವಕ್ರಮನುಳ್ಳ ಲಾಂಗಲಗತಿಯುಂ . . . ಗೋಮೂತ್ರಗತಿಯುಂ ಎಂದು ಗತಿ ನಾಲ್ಕುತೆಱಂ (ತತ್ತ್ವಸೂ. ೦೦೦). [ಸಂ.]

**ಲಾಂಗಲದಂಡ** (ನಾ). ನೇಗಿಲಿಗೆ ಜೋಡಿಸುವ ಉದ್ದವಾದ ಮರ; ಈಸು : "ಈಷಾ, ಲಾಂಗಲದಂಡಃ – ೨ ಈಚಿನ ಹೆಸರು; ಈಚುಕೋಲು" (ಸಿದ್ಧಾಂತ. ೨೭೬). [ಸಂ.]

**ಲಾಂಗಲಹಸ್ತ** (ನಾ). ೧. ನೇಗಿಲನ್ನು ಕೈಯಲ್ಲಿ ಹಿಡಿದಿರುವವನು, ಹಲಾಯುಧಧಾರಿ. ೨. [ಜೈನ] ಲಾಂಗಲವೆಂಬ ಆಯುಧವನ್ನು ಉಳ್ಳವನು; ಬಲದೇವ : ಭದ್ರಾಸನದೊಳ್ ಕುಳ್ಳಿರೆ ಲಾಂಗಲಹಸ್ತಂ ವಿದ್ಯಾಧರ ರಾಜದೂತನ ಮೊಗಮಂ ನೋಡಿ (ಶಾಂತಿಪು. ೨-೧೬೪). [ಸಂ.]

**ಲಾಂಗಲಿ$_1$, ಲಾಂಗಳಿ** (ನಾ). ೧. ನೇಗಿಲನ್ನು ಆಯುಧವನ್ನಾಗಿ ಹೊಂದಿದವನು; ಬಲರಾಮ : ಅರುಣಾಧರಪಾಂಡುರದಶನರುಚಿಗಳಾ ನನದಿನೊಗೆಯೆ ಲಾಂಗಲಿ ನುಡಿದು (ಜಗ. ೦೮-೩೦). ೨. ಒಂದು ಬಗೆಯ ಔಷಧೀಸಸ್ಯ; ಕೋಳಿಕುಟುಮನ ಗಿಡ : "ಲಾಂಗಲೀ, ಲಾಂಗಲಿಕೀ, ಅಗ್ನಿಶಿಖಾ – ಕೊಲುಕುಟುಗನ ಗಿಡದ ಹೆಸರುಗಳು" (ಸಿದ್ಧಾಂತಿ. ೧೩೯) ; ಒಳಗಂಬುಡಿದಿರ್ದೊಡೆ ಲಾಂಗಲಿಯಂ ತಂದು . . . ಪುಣ್ಣ ಬಾಯೊಳೆ ವಿಳೇಪನಂಗೆಯ್ದೊಡಾ ಸರಲ್ ಪೋಪುವಾಡುಗುಂ (ಲೋಕೋಪ. ೯-೦೩೪). ೩. ತೆಂಗಿನ ಮರ : "ನಾಳಿಕೇರಃ, ಲಾಂಗಲೀ– ತೆಂಗಿನ ಮರದ ಹೆಸರುಗಳು" (ಸಿದ್ಧಾಂತಿ. ೧೫೩). ೪. ಹಾವು ; ಸರ್ಪ. **ಲಾಂಗಳಿ** : ೨. ತಿಳತ್ತೈಳದೊಳ್ . . . ಲಾಂಗಳಿಯೆಂಬಿವನಟ್ಟೊಂದಿರೆ . . . ಪುಣ್ಗಳ್ ಕಿಡುಗುಂ (ಲೋಕೋಪ. ೯-೩೯). [ಸಂ. ಲಾಂಗಲಿನ್]

**ಲಾಂಗಲಿ$_2$** (ನಾ). ನೀರುಹಿಪ್ಪಲಿ : "ಲಾಂಗಲೀ, ಶಾರದೀ, ತೋಯಪಿಪ್ಪಲೀ, ಶಕುಲಾದನೀ – ನೀರುಹಿಪ್ಪಲೀ ಹೆಸರುಗಳು" (ಸಿದ್ಧಾಂತಿ. ೦೩೭).
[ ಸಂ. ಲಾಂಗಲೀ ]

**ಲಾಂಗಲಿಕ** (ಗು). ೧. ನೇಗಿಲಿಗೆ ಸಂಬಂಧಿಸಿದ. (ನಾ). ೨. ಒಂದು ಬಗೆಯ ವಿಷ; ಸ್ಥಾವರವಿಷ. [ಸಂ.]

**ಲಾಂಗಲಿಕಿ** (ನಾ). = ಲಾಂಗಲಿ$_1$ ೨ : "ಲಾಂಗಲೀ, ಲಾಂಗಲಿಕೀ, ಅಗ್ನಿಶಿಖಾ – ಕೊಲುಕುಟುಗನ ಗಿಡದ ಹೆಸರುಗಳು" (ಸಿದ್ಧಾಂತಿ. ೦೩೯).
[ ಸಂ. ಲಾಂಗಲಿಕೀ ]

**ಲಾಂಗಳಿ** 'ಲಾಂಗಲಿ$_1$' ನೋ.

**ಲಾಂಗುಲಿಕ** (ನಾ). ಲಾಂಗೂಲವನ್ನುಳ್ಳವನು; ಬಾಲವನ್ನು ಹೊಂದಿದವನು : ಅಲ್ಲಿ . . . ಏಕಪಾದರುಂ ಲಾಂಗುಲಿಕರುಂ ವಿಷಾಣಿಗಳುಂ ಅಭಾಷಕರುಂ ಅಪ್ಪರ್ (ಕಣ್ಕ್ರ. ೦೯೬). [ < ಸಂ. ಲಾಂಗೂಲಿಕ ]

**ಲಾಂಗೂಲ** (ನಾ). ಬಾಲ ; ಪುಚ್ಛ : "ಲೋಮಪುಚ್ಛಂ, ಲಾಂಗೂಲಂ, ವಾಲಹಸ್ತಃ, ವಾಳಧಿಃ – ಈ ೪ ಬಾಲಂ" (ಕರಾಯು. ೭೨-೨೩೭); ಚಮರೀಲೋಲಲಾಂಗೂಲಮಾಲಾವಳಿವಿಕ್ಷೇಪಂಗಳಿಂ (ಹಂಶಶಾ. ೪-೦೪); ತುಂಗಶೃಂಗಗಳಿಂದ ಭೂಮಿಯ ಮುಟ್ಟುವ ಲಾಂಗೂಲದಿಂ ಕೊರ್ಬಿ ಬೆಳೆದು ಸಿಂಗರವಾದ ಓಲಿನಿಂದೆಸೆವ ವೃಷಪುಂಗವನೆಯ್ದೊಂದುದು (ಹಂಶ್ರಶಾಂ. ೨-೩೩).

**ಲಾಂಗೂಲಚಾಲನ** = ೧. ಬಾಲವನ್ನು ಅಲ್ಲಾಡಿಸುವುದು ; ಬಾಲ ಬಡಿಯುವಿಕೆ. ೨. (ಆಲಂ) ಇನ್ನೊಬ್ಬರು ಹೇಳಿದ್ದಕ್ಕೆಲ್ಲಾ ಹೂಗುಟ್ಟುವಿಕೆ ; ಬಾಲಬಡಿಕತನ : ಲಾಂಗೂಲಚಾಲನದ ಅಧಃಪತನಕ್ಕಿಳಿಯುವ . . . ಆಟವನ್ನು ಎಲ್ಲಿ ಕಲಿತೆ ? (ರಳ್ರ್ಯ. .೦೨೩); ಭಾಸ್ಕರನ ಲಾಂಗೂಲಚಾಲನ ವೃತ್ತಿ ಒಮ್ಮೊಮ್ಮೆ ಮೋಹಿನಿಯಲ್ಲಿ ಆತ್ಮಾಭಿಮಾನವನ್ನು ಕೆರಳಿಸುತ್ತಿತ್ತು (ಳಮುಹ. ೦೩೪). [ಸಂ.]

**ಲಾಂಗೂಲಕರ್ತನ** (ನಾ). ಒಂದು ನರಕದ ಹೆಸರು : ಲಾಂಗೂಲಕರ್ತನ ಕಾಳಪತ್ರಪಾಟನ . . . ಮೋಹಸಭ್ರಂಶವೆಂಬೈದು ಮಂತ್ರಿನರಕಂಗಳಿಂ (ಐಪೀಳ. ೦೪೦). [ಸಂ.]

**ಲಾಂಛನ** (ನಾ). ೧. ಗುರುತು ; ಚಿಹ್ನೆ ; ಮುದ್ರೆ : "ಚಿಹ್ನಂ ಲಾಂಛನಂ ಕಳಂಕಂ" (ಬಾಂಗರಾ. ೦೨-೩) ; ಕಮಲಮಾಲಾಚಕ್ರವಸ್ತ್ರಗಜಲಾಂಛನಮಪ್ಪ ದಶವಿಧದಿನೆಸೆದು (ಆಪು. ೭-೨೦೪) ; ಲಾಂಛನವ ಕಂಡು ನಂಬುವೆ ಅವರಂತರಂಗವ ನೀವೇ ಬಲ್ಲಿರಿ (ಅಕಪ. ೪೦೦) ; ಹಣೆಯ ಮೇಲಿನ ಲಾಂಛನದಿಂದ ಅವರಿಗೆ ಉಂಟಾಗಿರುವುದೆಂಬುದನ್ನು ತಿಳಿದು (ಳಳಹಂ. ೯೭). ೨. ಜಾತಿ, ಮತ, ಪಂಥ, ಸಂಪ್ರದಾಯಗಳ ಗುರುತನ್ನು ಸೂಚಿಸುವ, ಹಣೆಯ ಮೇಲೆ ಇಡುವ ಗುರುತು ಮುಂತಾದುದು. ೩. (ಚಂದ್ರಬಿಂಬದ ಮೇಲಿರುವ) ಕಲೆ ; ಮಚ್ಚೆ ; ಕಪ್ಪು : "ಮೃಗಃ . . . ಲಾಂಛನಂ, ಲಕ್ಷ್ಮ, ಲಕ್ಷಣಂ, ಕಳಂಕಃ — ಈ ೮ ಚಂದ್ರಮಂಡಲದ ನಡುವಣ ಕರ್ಪು" (ಕರಾಯು. ೯-೪೩). ೪. ಕಳಂಕ ; ಅಪಮಾನಕರವಾದುದು : ಪ್ರತ್ಯಕ್ಷ ರಾಜಧಾನಿಯಲ್ಲಿ ಈ ಪ್ರಕಾರ ಕಳವಾಗುವುದು ಬಹಳ ಲಾಂಛನದ ಮಾತು (ಮುಂಬಯು. ೪-೨೦); ಅದೆಂತಹ ದುಷ್ಟಲಾಂಛನವು ನನ್ನನ್ನು ಅಂಟಿಕೊಂಡು ಬಿಟ್ಟಿತು ! (ಕಹಿ. ೯೮). [ಸಂ.]

**ಲಾಂಛನಾಸ್ಪದ** (ನಾ). ಅಪಮಾನಕರವಾದುದು; ಲಜ್ಜಾಸ್ಪದವಾದುದು: ಸಂಪ್ರದಾಯದಂತೆ ಹೆಣ್ಣನ್ನು ನೋಡಲಿಕ್ಕೆ ಹೋಗದೆ ಲಗ್ನವಾಗುವುದು ಅವನಿಗೆ ಲಾಂಛನಾಸ್ಪದವೆನಿಸಿತು (ಕಮುಶ. ೪೨); ಇದು ನನಗೂ, ತಮಗೂ ಕೂಡಿಯೇ ಲಾಂಛನಾಸ್ಪದವು (ಅಂಜಳ. ೦೩೩). [ಸಂ.]

**ಲಾಂಛಿತ** (ಗು). ಗುರುತುಳ್ಳ ; ಚಿಹ್ನೆಯುಳ್ಳ ; ಲಕ್ಷಣವುಳ್ಳ : ಕನಕಪತ್ರಲತಾಲಾಂಛಿತಗದಾದಂಡಮಂ ಕೊಂಡು . . . ನಡೆಗೊಂಡು (ಕಂಶಶಾ. ೦೩-೭೦೪). [ಸಂ.]

**ಲಾಂಟಾನಾ** 'ಲಂಟಾನಾ' ನೋ.

**ಲಾಂತ** (ನಾ). 'ಲ' ಎಂಬ ವರ್ಣದಿಂದ ಕೊನೆಗೊಳ್ಳುವ ಪದ: "ಲಾಂತಕ್ಕೆ—ಅಂಡಲೆ. ಅಸನ್ನಪೀಡನೇ (ತೊಂದರೆ ಪಡಿಸು)" (ಕಮುಧಾ). [ಸಂ.]

**ಲಾಂತವ** (ನಾ). ೧. [ಜೈನ] ಹದಿನಾರು ಕಲ್ಪಗಳಲ್ಲಿ ಒಂದು : ಲಾಂತವ ಕಾಪಿಷ್ಠದೊಳೋರಂತಿರೆ ಪದಿನಾಲ್ಕು ಮತ್ತಮುಳಿದಿರ್ದವರೊಳ್ ಭ್ರಾಂತೇನೆರಡಧಿಕಂ (ಶಾಕ್ಷ್ಯಪು. ೩-೭೩) ; ಲಾಂತವ ಕಾಪಿತ್ಥಂಗಳೊಳಿಂತೊಳ ಮಯ್ವತ್ತುಸಾಸಿರಂ ಜಿನಗೇಹಂ (ಶಾಕ್ಷ್ಯಪು. ೦೩-೦೬). ೨. ಅರುವತ್ತು ಮೂರು ಇಂದ್ರಕಗಳಲ್ಲಿ ಒಂದು : ೧. ಋತು . . . ೪೪. ಲಾಂತವಂ . . . ೬೩. ಸರ್ವಾರ್ಥಸಿದ್ಧಿ—ಎಂಬಿವು ಅನುಕ್ರಮದಿಂ ಅಱುವತ್ತುಮೂಱು ಇಂದ್ರಕಂಗಳ ಪೆಸರ್ಗಳ್ (ಕಣ್ಕ್ರ. ೨೦೩). [ಸಂ.]

**ಲಾಂದರ, ಲಾಂದ್ರ, ಲಾಟನ, ಲಾಟಾನು, ಲಾಟೀನು** (ನಾ). ಗಾಳಿ ತಾಗದಂತೆ ಗಾಜಿನ ಆವರಣವುಳ್ಳ, ಎಲ್ಲಿಗಾದರೂ ಒಯ್ಯಲು ಅನುಕೂಲವಾಗುವಂತೆ ಹಿಡಿಕೆಯುಳ್ಳ ದೀಪ : ಕಂದೀಲು : ನಸುಳಿ ಬರುವ ಬೆಳದಿಂಗಳ ಮಂಜಲ್ಲಿ ಮಂಕಾದ ಬೆಳಕಿನ ಲಾಂದರದಲ್ಲಿ (ಶಂಗೀತ. ೦೯-೬) ; ಒಂದು ಲಾಂದರವನ್ನು ನನ್ನ ಕೈಗೆ ಕೊಟ್ಟು . . . ಹೋಟೆಲಿನ ಮಾಲೀಕ ಜಾರಿದನು (ಶಂಟಿಲು. ೪೯). **ಲಾಂದ್ರ** : ಲಾಂದ್ರ ಹತ್ತಿಕೊಂಡಿತು (ಮುಖಪು. ೮) ; ಲಾಂದ್ರದಲ್ಲಿ ದೀಪವು ನಿರ್ಮಲವಾಗಿ ಕಂಡಂತೆ ಬೋಕಿಯಲ್ಲಿ ನಿರ್ಮಲವಾಗಿ ಕಾಣುವದೇ ? (ಕೃಶಿಕ್ರ. ೨೪೦). **ಲಾಟನ** : ಕಾಮಾಕ್ಷಿ ಒಳಗಿನಿಂದ ಲಾಟನವೊಂದನ್ನು ಹಚ್ಚಿ ತಂದಳು (ಮುಖರುದಾ. ೩೪) ; ಕೈಯೊಳಗ ಲಾಟನ ಒಯ್ಯತೀರಿ (ಅಕೋಳ. ೦೪೩). **ಲಾಟಾನು** : ಕೊಠಡಿಯಲ್ಲಿದ್ದ ಲಾಟಾನಿನಲ್ಲಿ ಎಣ್ಣೆಯಿರಲಿಲ್ಲ (ಬೀಗಾಳ. ೪೨); ಲಾಟಾನಿನ ಮಂದಪ್ರಕಾಶದಲ್ಲಿ . . . ಮುಖಗಳು ಸ್ಪಷ್ಟವಾಗಿ ಕಾಣುತ್ತಿದ್ದುವು (ಹುರಿ. ೩). **ಲಾಟೀನು** : ಲಾಟೀನು ಬೆಳಕಿನಲ್ಲಿ ಓದೋಕಾದರೆ ಓದು (ಅಂದಪ. ೦೬) ; ಕೈಯಲ್ಲಿದ್ದ ಲಾಟೀನನ್ನು ಬಿಸಾಡಿ ಕಾಲಿಗೆ ಬುದ್ಧಿ ಹೇಳದೆ (ಕವ್ಯಕ. ೦೯೭). [←ಪೋರ್ಚ್. Lanterna / ಇಂ. Lantern. / ತಮಿ. ಲಾನ್ತರ್; ತುಳು. ಲಾಂಟನ್, ಲಾಂದರ್]

**ಲಾಂದ್ರ** 'ಲಾಂದರ' ನೋ.

**ಲಾಂಪಟ್ಯ** (ನಾ). ಅತ್ಯಾಸಕ್ತಿ ; ಗೀಳು ; ಲಂಪಟತನ : ಸಂಪಗೆಯ ಪೆಂಪಮರ್ದ ಜೊಂಪದಲಂಪಿನಿಂಪಿನ ಲಾಂಪಟ್ಯದಿಂ ತಾಂ ಪಱಿದು ತಣಿಯುಂಡು ರ್ಝೇಂಕರಿಸಿ ಚೀಟ್ಬಲರ್ವಕ್ಕೆಪಱಗಳನೆತ್ತಿ ತೆಗೆದು (ಅದ್ಯಟಿ. ೦-೬೪೪). [ಸಂ.]

**ಲಾಂಬಿ** (ನಾ). ೧. ಉದ್ದ ; ಉದ್ದಳತೆ ; ನೀಳ : ಈ ಒಂದೊಂದು ಕೊಂಡಿಯೂ ೨ ಅಡಿ ಲಾಂಬಿ ಇರುವುದು (ಕೊಬಿಅ. ೯). ೨. (ಪ್ರಮಾಣ ಅಥವಾ ಸಮರ್ಥನೆಗಾಗಿ ಇಟ್ಟುಕೊಳ್ಳುವ) ಆಧಾರರೇಖೆ : ಭೂಮಿಯನ್ನು ಅಳೆಯ ಮೊದಲಿಟ್ಟವನು ಆ ಭೂಮಿಯಲ್ಲಿ ಅಳತೆಯ ಸೌಕರ್ಯಕ್ಕಾಗಿ ಒಂದು ಸರಳರೇಖೆಯನ್ನಾಗಿ ಯಾವುದನ್ನು ಕಲ್ಪಿಸಿಕೊಳ್ಳುತ್ತಾನೋ ಅಂತಹ ಸರಳರೇಖೆಯನ್ನು ಆಧಾರರೇಖೆ ಅಥವಾ ಲಾಂಬಿಯೆಂದು ಹೇಳುವುದು (ಕೊಬಿಅ. ೦೨). ೩. ಉದ್ದವಾಗಿರುವ ಮರದ ತುಂಡು ; ದಿಮ್ಮಿ. [ ←ಮರಾ. ಲಂಬೀ, ಲಾಂಬೀ ; ಹಿಂ. ಲಂಬಾಈ ]

**ಲಾಕ, ಲಾಕು** (ನಾ). ದೋಣ್ಣೆ ; ಬಡಿಗೆ : "ಲಾಕಮೆಂದು ಲಾಕುಳಂ" (ಕಕಶಾ. ೭೦-೬೦೯). **ಲಾಕು** : "ಲಾಕೆಂದೆನೆ ಲಾಕುಳಕ್ಕೆ ಪೆಸರು" (ಕವಿಕ. ೨೯೭). [ <ಲಾಕುಲ ]

**ಲಾಕಪ್ಪು** (ನಾ). ಸೆರೆಮನೆ ; ಜೈಲು : ಇಬ್ಬರನ್ನೂ ಕೋಳ ಹಾಕಿ ತೀರ್ಥಹಳ್ಳಿ ಲಾಕಪ್ಪಿಗೆ ಕರೆದುಕೊಂಡು ಹೋದರು (ಮಲೆಮ. ೬೦೩).
[← ಇಂ. Lock-up]

**ಲಾಕು** ' ಲಾಕ ' ನೋ.

**ಲಾಕುಲ, ಲಾಕುಳ, ಲಾಗುಳ** (ನಾ). ೧. ಲಕುಲೀಶನೆಂಬುವನಿಂದ ಸ್ಥಾಪಿತವಾದ ಶೈವಮತದ ಒಂದು ಪಂಗಡ ಮತ್ತು ಆ ಪಂಗಡಕ್ಕೆ ಸೇರಿದ ವ್ಯಕ್ತಿ : ಶೈವಾಗಮಗಳು ಒಂದೊಂದು ಬಾರಿ ಶೈವಮತವನ್ನು . . . ಸೋಮಸಿದ್ಧಾಂತ ಮತ್ತು ಲಾಕುಲ ಎಂದೂ . . . ವಿಂಗಡಿಸುತ್ತವೆ (ಕಕ್ಕಿ. ೦೨೩). **ಲಾಕುಳ** : ೧. ಗಾನಗರ ಲಾಕುಳರ ಚನಿವಾಲರ (ಸಿದ್ಧಕಾ. ೦೩-೩೭). ೨. ದೋಣ್ಣೆ ; ಬಡಿಗೆ : ವಲ್ಲಭಧ್ವಜವೆಂಬ ಲಾಕುಳದ ಕೋಲ ತುದಿಯಲ್ಲಿ (ಕಬಿಪು. ೦೦-೩೨). ೩. ಸಂನ್ಯಾಸಿಗಳು ಉಪಯೋಗಿಸುವ ದಂಡ ; ಯೋಗದಂಡ : ಅಚಳಿತವೇ ಖರ್ಪರ ಅಪ್ರಮಾಣವೇ ಲಾಕುಳ (ಅವಕಂ. ೬೩-೩೭೯); ಯೋಗಪಟ್ಟಂ ಮೃಗದ ಸದಜಿನಂ ವಲ್ಕಲಂ ಲಾಕುಳಂ ಮಂಜುಳಮಂದಸ್ಮೇರವಕ್ತ್ರಂ ಮಿಸುಗೆ ಚರಿಯಿಪರ್ ತಪ್ಪಲೊಳ್ ತಾಪಸೇಂದ್ರರ್ (ರಾಜಶೇ. ೦-೦೩೨). **ಲಾಗುಳ** : ೨. "ಲಾಗುಳ (ಲಾಕುಳ) — ಲಕುಟ (ಲಗುಡ) = ಬಡಿಗೆ, ಯೋಗದಂಡ" (ಕದ್ಯಕೋ. ೩೯). ೩. ನಿನ್ನೀ ಜಡೆಯುಂ ತೊವಲುಂ ಪಾವಿನ ತೊಡವುಂ ಲಾಗುಳಮುಮದ್ದುಮೇಂ ಬಂದಪುದೇ (ಕಬ್ಬಿಕಾ. ೨೯೭). [< ಸಂ. ಲಕುಟ]

**ಲಾಕುಲಾಗಮ, ಲಾಕುಳಾಗಮ** (ನಾ). ಲಕುಲೀಶನೆಂಬುವನಿಂದ ಸ್ಥಾಪಿತವಾದ ಆಗಮ : ಲಕುಲೀಶನಲ್ಲಿ . . . ಮತ್ತು ಅವನ ಬೋಧನೆಗಳನ್ನೊಳಗೊಂಡಿರಬಹುದಾದ ಲಾಕುಲಾಗಮದಲ್ಲಿ ಪರಮಭಕ್ತಿ ಎದ್ದು ಕಾಣುತ್ತದೆ (ಕೊಪ್ಕಕು. ೦). **ಲಾಕುಳಾಗಮ** : ಅನೇಕ ದಾನವಿನೋದರುಂ ಲಾಕುಳಾಗಮಾಭರಣರುಂ ಸಮಸ್ತಶಾಸ್ತ್ರಾಗಮವಿಚಾರಚಾರುಚತುರರುಂ (ಎಕ. VII, ಶಿಕಾ. ೦೨೩-೭೨; 1159). [ಲಾಕುಲ + ಆಗಮ]

**ಲಾಕುಳ** 'ಲಾಕುಲ' ನೋ.

**ಲಾಕುಳಾಗಮ** ' ಲಾಕುಲಾಗಮ ' ನೋ.

**ಲಾಕ್ಷ** (ನಾ). ಒಂದು ಬಗೆಯ ಕೆಂಪುದ್ರವ್ಯ ; ಅರಗು ; ಅಲತಗೆ : "ಲಾಕ್ಷಮದರಗು" (ಮಂಗರಾ. ೯೩-೯೨) ; "ಲಾಕ್ಷಕೃಶಾನುಧಾತ್ರಿಧರಕಾಷ್ಠಗಳೆಂಬಿವು ಕೀಲಕಾಷ್ಟಯಂ" (ವಾಕಾರ. ೦೭೨). [ಸಂ. ಲಾಕ್ಷಾ ]

**ಲಾಕ್ಷಣಿಕ** (ಗು). ೧. ಲಕ್ಷಣಗಳನ್ನು ಬಲ್ಲ : ಶಾಸ್ತ್ರಜ್ಞಾನವಿರುವ : ಲಾಕ್ಷಣಿಕ ಕವಿಮಾರ್ಗದೊಳೆ ಸಂದು (ಕಬ್ಬಿಮೂ. ೭೯). ೨. ಸಾಂಕೇತಿಕ ಅರ್ಥವನ್ನು ಸೂಚಿಸುವ; ಆಲಂಕಾರಿಕವಾದ : ಭಕ್ತಿಯೆಂದರೆ ಕೇವಲ 'ಉಪಚಾರ' (ಅಥವಾ ಗೌಣ ಮತ್ತು ಲಾಕ್ಷಣಿಕಪದಪ್ರಯೋಗ) (ಧ್ವನ್ಯಾಲೋ. ೯೭) ; ಅಲ್ಲಲ್ಲಿ ಅನೇಕ ಲೇಖನಗಳನ್ನು . . . ಪತ್ರಿಕೆಗಳಿಗೆ ಬರೆಯುತ್ತಿದ್ದರೂ ಲಾಕ್ಷಣಿಕ (Feature) ಬರಹಗಳು ವಿಸಾಸಶೀದುದು ಜಯಂತಿಯಲ್ಲಿಯೆ (ಶ್ರೀರಂಗ. ೦೩೦). (ನಾ). ೩. ಕಾವ್ಯಲಕ್ಷಣಗಳನ್ನು ಬಲ್ಲವನು ; ಕಾವ್ಯ ಶಾಸ್ತ್ರಜ್ಞ : ಧ್ವನಿ ಎಂಬುವನ್ನು ಲಾಕ್ಷಣಿಕರು ಮೊದಲೀದ ಅರಿತಿದ್ದರೂ ಅದನ್ನು ಪ್ರಧಾನವಾಗಿ ಪ್ರತಿಪಾದಿಸಿದವನು ಆನಂದವರ್ಧನ (ಧ್ವನ್ಯಾಲೋ. VI, ಮುನ್ನುಡಿ) ; ಇದರಲ್ಲಿಯ ಅಭಿಪ್ರಾಯಗಳು ಹೆಚ್ಚಾಗಿ ದಂಡಿ ಮುಂತಾದ ಪ್ರಾಚೀನಲಾಕ್ಷಣಿಕರ ಅಭಿಪ್ರಾಯಗಳೆಂದು ತಿಳಿಯುತ್ತದೆ (ಕಶಾಕ. ೩೩). ೪. [ಕಾವ್ಯಮಿ] ಲಕ್ಷ್ಯಾರ್ಥವನ್ನು ಹೊಂದಿರುವ ಶಬ್ದ : ವೈಖರೀರೂಪ ಶಬ್ದಸಮೂಹವೇ ವಾಚಕವೆಂದು ಲಾಕ್ಷಣಿಕಮೆಂದು ವ್ಯಂಜಕಮೆಂದು ತ್ರಿವಿಧಮಾಗಿಹುದು . . . ಅನ್ಯಾರ್ಥಮಂ ಲಕ್ಷಿಪ ಶಬ್ದಾದಿಕವೇ ಲಾಕ್ಷಣಿಕಶಬ್ದವೆನಿಸುವುದು (ಶಿವೇಕ. ೦೯೩) ; ವಾಚ್ಯಾರ್ಥಕ್ಕೆ ಬಾಧೆ ತಟ್ಟಿದಾಗ ಮಾತ್ರ ಲಕ್ಷಣಾವೃತ್ತಿಗೆ ಪ್ರವೃತ್ತಿಯುಂಟಾಗಿ ಲಕ್ಷ್ಯಾರ್ಥವು ಗೋಚರವಾಗುತ್ತದೆ ; ಇದನ್ನು ತಿಳಿಸುವ ಶಬ್ದಕ್ಕೆ "ಲಾಕ್ಷಣಿಕ" ಅಥವಾ "ಲಕ್ಷಕ" ಎಂದು ಹೆಸರು (ಭಾರಮಿಶಾ. ೨೬೩).
[ಸಂ.]

**ಲಾಕ್ಷಣ್ಯ** (ನಾ). ಲಕ್ಷಣಗಳಿಂದ ಕೂಡಿದುದು; ಚಿಹ್ನೆ ಅಥವಾ ಗುರುತಿಗೆ ಸಂಬಂಧಿಸಿದುದು. [ಸಂ.]

**ಲಾಕ್ಷಾಗೃಹ** (ನಾ). ಅರಗಿನ ಮನೆ : ಲಾಕ್ಷಾಗೃಹೋಗ್ರಾಗ್ನಿ[ಯಾ]ನನದೊಳ್ ಮಟ್ಟಿಗ್ದರ್ (ಕಂಶಕಾ. ೩-೩೨). [ಸಂ.]

**ಲಾಕ್ಷಾದ್ರವ** (ನಾ). ಅರಗಿನ ರಸ : "ಅಲತಗೆ ಜತು ಲಾಕ್ಷಾದ್ರವವಲಕ್ತಕಂ ಯಾವಮಿವು ಸಮಾನಾರ್ಥಂ" (ಚತುಕೋ. ೭೭-೦೩) ; ಲಾಕ್ಷಾದ್ರವಾದಿಕಾರಿತ ಮಾಯಾರುಣಜಲಪರಿಪೂರ್ಣವಾಪಿಯುಂ ಸಮೆಯಿಸಿದೊಡೆ (ಆದಿಪು. ೨-೦೯೭); ರಕ್ತಮಂ ಪೋಲ್ವ ಲಾಕ್ಷಾದ್ರವದೊಳು ಬೊಡ್ಡಣಬಾವಿಯಂ ತೀವಿದೊಡೆ (ಶಾವುಂಪು. ೦೯). [ಸಂ.]

**ಲಾಕ್ಷಾಪ್ರದೀಪ** (ನಾ). ಒಂದು ನರಕದ ಹೆಸರು : ಲಾಕ್ಷಾಪ್ರದೀಪ . . . ಕ್ರಿಮಿಕುಲಗಳೆಂಬವೇ ಯೆಂಟು ರಾಜನರಕಂಗಳು (ಶಿವೇಕ. ೦೭೯). [ಸಂ.]

**ಲಾಕ್ಷಾಪ್ರಸಾದನ** (ನಾ). ಒಂದು ಬಗೆಯ ಮರ ; ಕೆಂಪು ಅರಗಿನ ಮರ : "ಕ್ರಮುಕಃ, ಪಟ್ಟಿಕಾಖ್ಯಂ, ಪಟ್ಟಿ, ಲಾಕ್ಷಾಪ್ರಸಾದನಃ— ಳ ಕೆಂಪುಅರಗಿನ ಗಿಡ, ಕೆಂಪುಜಾಲಾರೀಗಿಡ, ಪಚಕದ ಮರವೆಂದು ಕೆಲವರೆನ್ನುವರು" (ಸಿದ್ಧಾಂತಿ. ೦೩೦). [ಸಂ.]

**ಲಾಕ್ಷಾಮುದ್ರೆ** (ನಾ). ಅರಗಿನ ಮುದ್ರೆ : ನವಲಾಕ್ಷಾಮುದ್ರೆಯನೊಡೆದ ಮಧುರಿಪುದುಂ (ಸುಕುಮಾ. ೦೦-೦೦೩). [ಸಂ. ಲಾಕ್ಷಾಮುದ್ರಾ]

**ಲಾಕ್ಷಾರಸ** (ನಾ). = ಲಾಕ್ಷಾದ್ರವ : ಪೆಜಿರಜಿಯದಂತು ಕರುವಿಡುಲಾಕ್ಷಾರಸಾದಿಗಳಿಂ ಸಪ್ತಧಾತುಗಳಿಂ ಪಡೆದು ವರ್ಣಕ್ರಮಂಗೈಯೆ (ಶಂರಾಪಮ. ೩-೨೩೪). [ಸಂ.]

**ಲಾಕ್ಷೆ** (ನಾ). = ಲಾಕ್ಷ : "ಜತು, ಯಾವಕಃ, ಲಾಕ್ಷಾ—ಈ ೩ ಅರಗು" (ಹಲಾಯು. ೯೦-೯೦೦) ; ಕೃಷ್ಣಾಗರು ಶ್ರೀಗಂಧ ಲಾಕ್ಷಾ . . . ಕರ್ಪೂರಮೆಂಬ ದಶಾಂಗಗಳಿಂ (ಶಿವೇಕ. ೦೦೩) ; ಮತ್ತಮದೊಂದು ವೃಕ್ಷಮಿರದಿತ್ತುದು ಕಾನಡಿಯೂಡೆ ಲಾಕ್ಷೆಯುಂ (ಶಾಕುಂತ. ೩೦-೬೩). [ಸಂ. ಲಾಕ್ಷಾ]

**ಲಾಖ** 'ಲಕ್ಕ$_1$' ನೋ.

**ಲಾಖಿ** (ನಾ). ಕಡುಗೆಂಪುಬಣ್ಣ ; ಅರಗಿನ ಬಣ್ಣ : (*). [←ಹಿಂ. ಲಾಖೀ]

**ಲಾಗ$_1$** ' ಲಾಗು$_1$ ' ನೋ.

**ಲಾಗ$_2$** ' ಲಾಗು$_2$ ' ನೋ.

**ಲಾಗರು** (ನಾ). ನಿಶ್ಶಕ್ತವಾದುದು ; ದುರ್ಬಲವಾದುದು : ದಂಡಿನಲ್ಲಿ ಇರುವಂಥಾ ಸಾಮಾನು ಹೇರುವ ಎತ್ತು, ಗಾಡಿಯೆತ್ತು ಸಹ ಬಹಳ ಲಾಗರಾಗಿ ಇದೆ. ಇದರಿಂದ ಕೆಲಸ ಸಾಗುವದಿಲ್ಲಾ (ರಾಕೇಂದ್ರ. ೦೯೩).
[←ಪಾರ. ಹಿಂ. ಲಾಗರ್]

**ಲಾಗವಡು**, ಲಾಗವಾಡು, ಲಾಗುವಡು, ಲಾಗುವಾಡು, ಲಾಗೋಡು (ನಾ). ೧. (ವ್ಯವಸಾಯದ) ಖರ್ಚು ; ವೆಚ್ಚ : •ನಿರೂಪ ಸೂಚಿತವಾದ ಪ್ರಕಾರ ಲಾಗವಡು ಮುಟ್ಟಿಸಿ (ಕುಹಾಶಂ. II. ೭೩) ; ದನಕರು ಗಳಿಗೆ ನೀರು, ಮೇವು ಕೊಡುವ ಏರ್ಪಾಟನ್ನು ಮಾಡುವರಲ್ಲದೆ . ಅದಕ್ಕಾಗಿ ತಗಲುವ ಲಾಗವಡನ್ನು ಆಯಾಯ ಕಾಲಕ್ಕನುಗುಣವಾಗಿ . . . ನಿರ್ಧರಿಸು ವರು (ಗ್ರಾಪಾಳ. ೦೬೯). **ಲಾಗವಾಡು** : ೧. "ಲಾಗವಾಡು = ವರ್ಷದ ಖರ್ಚು" (ಕಾವಕೋ. ೯೨). **ಲಾಗುವಡು** : ೧. ಯಿನ್ನೂರುಐವತ್ತು ವರಹದ ವರಿಗು ಲಾಗುವಡು (ಎಕ. XI, ಹಿಂದಯೂ. ೩೬-೦೦ ; 1633?). **ಲಾಗುವಾಡು** : ೧. ಪ್ರಯಾಣದ ವೆಚ್ಚ, ಊಟ, ತಿಂಡಿ ಗಳ ವೆಚ್ಚ-ಬೇರೆ ಲಾಗುವಾಡು ಖರ್ಚುಗಳು, ಎಲ್ಲ ನನ್ನ ಲೆಕ್ಕಕ್ಕೆ ! (ಭೂಪುಕೀ. ೨೨). **ಲಾಗೋಡು** : ೧. (ನೂರು) ೧೦೦ ರೂಪಾಯಿ ಲಾಗೋಡಾಗುತ್ತೆ (ಕಂಪ. ೩೬೦) ; ಇಂತಹ ಗೊಬ್ಬರದಲ್ಲಿ ಲಾಗೋಡು ಕಡಮೆ, ಸ್ವಲ್ಪ ಹೆಚ್ಚು ಕಾಲ ಬೇಕಾಗುತ್ತದೆ (ಕಕ. ೯). ೨. ಗೊಬ್ಬರ : ಈ ಸಲದ ಮಳೆ ಬೀಳುವ ಮೊದಲೇ ಹೊಲಕ್ಕೆ ಲಾಗೋಡು ಹೊಡೆಯಬೇಕು (ಬೂಶ). [← ಮರಾ. ಲಾಗವಡ./ತೆಲು. ಲಾಗುಬಡಿ]

**ಲಾಗವಾಡು** 'ಲಾಗವಡು' ನೋ.

**ಲಾಗಾಯತು$_1$**, ಲಾಗಾಯತ್ತು, ಲಾಗಾಯಿತು$_1$, ಲಾಗಾಯ್ತು$_1$ (ನಾ). ಮೊದಲು ; ಪ್ರಾರಂಭ : ಇಂಗ್ಲೆಂಡಿನಲ್ಲಿ ಲಾಗಾಯತಿನಿಂದ ಶ್ರೀಮಂತ ಸಭೆಯೊಂದು . . . ಪಾರ್ಲಿಮೆಂಟಿನ ಅಂಗವಾಗಿ ಬೆಳೆದುಕೊಂಡು ಬಂದಿರು ವುದು (ರಾಜ್ಯಶಾ. ೩೯೯). **ಲಾಗಾಯತ್ತು** : ಲಾಗಾಯತ್ತಿನಿಂದ ಹಂಗೇನೇ ನಡೆದುಕೊಂಡು ಬಂದದೆ (ಸಾಹೇಬ್. ೯೩೩). **ಲಾಗಾಯಿತು$_1$** : ಲಾಗಾ ಯಿತಿನಿಂದಲೂ ಸಾಗುವಳಿ ಮಾಡುತ್ತಿದ್ದ ಒಕ್ಕಲಿಗರಿಗೆ ಗುತ್ತಿಗೆಗೆ ಕೊಟ್ಟು ಮಾಡಿಸುತ್ತಾರೆ (ಕಂಪ. ೦೫೩). **ಲಾಗಾಯ್ತು$_1$** : ಲಾಗಾಯ್ತಿನಿಂದ ನಿಮ್ಮನೇ ಬೀದೀಲೆ ಇದ್ದೇನೆ, ಸಾರ್ (ಪುಷೋಕಂ. ೭೭) ; ಪುಲ್ಲಯ್ಯನಿಗೂ ನಮಗೂ ಲಾಗಾಯ್ತಿನಿಂದ ವ್ಯಾಜ್ಯ (ಪುಯಾತ್ರೆ. ೫೦). [< ಲಾಗಾಯತು$_2$]

**ಲಾಗಾಯತು$_2$**, ಲಾಗಾಯಿತು$_2$, ಲಾಗಾಯ್ತು$_2$ (ಅ). ೧. ಮೊದಲಿ ನಿಂದ; ಪ್ರಾರಂಭದಿಂದ: ಈ ಲಾಗಾಯತು ೧೮೩೧ನೇ ಇಸವಿಯವರಿಗೂ ಮಹಾರಾಜರವರೇ ಸ್ವಂತವಾಗಿ ರಾಜ್ಯಭಾರ ಮಾಡಿದರು (ಕಾಮಪಂ. ೩೩೬) ; ಹೋದ ಜುಲಾಯಿತಿಂಗಳು ಲಾಗಾಯತು ಯುದ್ಧಕ್ಕೆ ತಯಾರು ಮಾಡು ವುದಕ್ಕಾಗಿ (ರಾಕೇಂದ್ರ. ೦೫೭). **ಲಾಗಾಯಿತು$_2$** : ೧. ಮೊಕದ್ದಮೆಯ ಕಾರೀಖಿನ ಲಾಗಾಯಿತು ಹಣವು ವಾಪಸ್ಸಾಗುವ ತಾರೀಖಿನ ವರೆಗೆ (ಗ್ರಾಪಾಳ. ೩೩). ೨. ಹೊತ್ತಿನಿಂದ ; ಸಮಯದಿಂದ : ೧೮೮೫ರ ಲಾಗಾಯಿತು ಬೊಂಬಾಯಿಯಲ್ಲಿ ಅನೇಕ ಕಾರ್ಖಾನೆಗಳು ಏರ್ಪಟ್ಟುದ ರಿಂದ (ಶಾಗ್ರ. ೯೦) ; ಮುಂಜಾನೆ ಸುದ್ದಿ ತಿಳಿದ ಲಾಗಾಯಿತು ಬಹಳ ಕಾತರಳಾಗಿ ಬಿಟ್ಟಿದ್ದಾಳೆ (ಸಾಹೇಬ್. ೨೨೭). **ಲಾಗಾಯ್ತು$_2$** : ೨. ಇಲ್ಲಿಂದ ಹೋದ ಲಾಗಾಯ್ತು ಅವಳ (ನಿರ್ಮಲೆಯ) ಮೇಲೆ ಕಣ್ಣಿಟ್ಟಿದ್ದೆ (ಪುರುಷಾ. ೨೭೯) ; ವರುಷವರುಷಗಳ ಲಾಗಾಯ್ತು ನಾನು ಜೀವ ಹಿಡಿದು ಕೊಂಡಿರುವುದು ಅಷ್ಟರ ಸಲುವಾಗಿಯೇ ಮಗೂ (ಹಳ್ಳಿಹಾ. ೦೦೨).

[ ← ಅರ. ಹಿಂ. ಲಗಾಯತ್]

**ಲಾಗಾಯತ್ತು** 'ಲಾಗಾಯತು$_1$' ನೋ.

**ಲಾಗಾಯಿತು$_1$** 'ಲಾಗಾಯತು$_1$' ನೋ.

**ಲಾಗಾಯಿತು$_2$** 'ಲಾಗಾಯತು$_2$' ನೋ.

**ಲಾಗಾಯ್ತು$_1$** 'ಲಾಗಾಯತು$_1$' ನೋ.

**ಲಾಗಾಯ್ತು$_2$** 'ಲಾಗಾಯತು$_2$' ನೋ.

**ಲಾಗಿಸು$_1$**, ಲಾಘಿಸು$_1$ (ಕ್ರಿ). ೧. ಹಾರು ; ನೆಗೆ ; ಜಿಗಿ : ಭಯವಡಗಿ ರಾಯನಲ್ಲಿಗೆ ಮೆಲ್ಲಮೆಲ್ಲನುಪಾಯಗತಿ ಪಲ್ಲವಿಸಲುಪ್ಪರಘಾಯದಲಿ ಲಾಗಿಸುವ ಪಾರ್ಥನ ಕಂಡುದಖಿಳಜನ (ಕುವ್ಯಾಕ. ೦೭-೨); ಲಾಗಿಸಿ ನಭಕುಪ್ಪ ರಿಸುವ ಬಂದಿದಿರಾಗಿ ನಿಲ್ಲುವ ಭೂತದಂತೆ (ವೀರಭಕ. ೦೦-೬೮) ; ಕುವಳಯ ಕುಟ್ಮಳಾವಳಿಯ ಪರ್ಗಳೆಯುಂ ನೆಗೆದೇಱ ಲಾಗಿಸುತ್ತೆ (ರಾಜಶೇ. ೨-೭೨). ೨. ನೆಗೆಯಿಸು ;ಹಾರಿಸು ; ಚಿಮ್ಮಿಸು : ಸೀಗುರಿಸುವುರಿವಿಷದ ಲೋಳೆಯ ಲಾಗಿಸುವ ನಾಲಗೆಯ . . . ಹಾವ್ ತುಡುಕಿದವು ಥಟ್ಟನಲಿ (ಕುವ್ಯಾಕ. ೨೩-೩೯) ; ಮನೆಮನೆ ತೋಟವ ಅಡಿಮೇಲಾಗಿಸಿ ತೆಂಗನು ಲಾಗಿಸಿ ಅಡಕೆಯ ಬಾಗಿಸಿ (ಕಂಶ. ೨೬-೦೦). ೩. ಎಳೆ ; ಜಗ್ಗು : ಕೀಚಕನು ಬೆನ್ನಟ್ಟಿ ತುರುಬನ್ನು ಹಿಡಿದು ಲಾಗಿಸಲು ಆ ರಾಜಪುತ್ರಿಯು ಭೂಮಿಯಲ್ಲಿ ಬಿದ್ದಳು (ಕೃಪಾಶಿ. ೨೯). **ಲಾಘಿಸು$_1$** : ೧. ಕಟಿಕಟಕ ಕವಿಕವಿದು ನಾಲ್ದೆಸೆಯ ಗಿರಿತರುನಿವಹಗಳ ಲಾಘಿಸುತ ಕಂಠೀರವರವದೊಳೈತಂದರು (ಅಹಂರಾ. ೫-೬-೫). [ಲಾಗು$_1$ + – ಇಸು$_3$]

**ಲಾಗಿಸು$_2$** (ಕ್ರಿ). ೧. ಯೋಜಿಸು ; ಎಸೆಕೆ ಹಾಕು : ವೇಗದಲಿ ಸನ್ನದ್ಧ ಚಾಪದಲಾಗ ಪಾರ್ಥನು ಬರುತ ಮನದಲಿ ಲಾಗಿಸುತ ತಾನೊಂದ ನೆನೆದನು (ಸಂಭಪ. ೦೬-೨೫). ೨. ಒದಗು ; ಉಂಟಾಗು : ಸಮಬುದ್ಧಿ ಮೆಲ್ಲನೆ ಲಾಗಿಸುವುದಿರುತಿರುತಲೀ ಪರಿ ಚಿತ್ತಶುದ್ಧಿಯಲಿ (ಶ್ರೀಬೋ. ೦೩-೯೩). ೩. ಒದಗಿಸು : ಲಾಗಿಸುತಿರ್ದುವು ಸುಜ್ಞಾನಸುಖಗಳು ಯೋಗದ ಸಿರಿಯನು (ಭರತ. ೯-೫). ೪. ಹೊಡೆ ; ಬಡಿ ; ತಾಟಿಸು : ದೂರಕೆ ಸಿಡಿದ ಗದೆಯನು ತುಡುಕಿ ನೃಪತಿಯು ತೊಡೆಗೆ ಲಾಗಿಸಿದ (ಕುವ್ಯಾಗ. ೭-೯೯) ; ಲಗೆಡಿನಂತೆಬಗೆ ಲಾಗಿಸುವ ಹೋರಾಟದ ವಿಗಡಮಲ್ಲರು ಗಳೊಪ್ಪಿದರು (ಕಂಪಡಿ. ೨೦-೯೩). 'ಲಗಾಯಿಸು' ಪರಾ.

[ಲಾಗು$_3$ + – ಇಸು$_3$]

**ಲಾಗು$_1$**, ಲಾಗ$_1$ (ನಾ). ೧. ನೆಗೆಯುವಿಕೆ ; ಲಂಘನ : " ವೆಗ್ಗಳ ಲಂಘನಂಗಳೊಳು ಲಾಗು " (ಶಬ್ದಮಂ. ೯೩); ತೋಹಿನ ಶಬರನಂತೆ ಲಾಗಿನ ವ್ಯಾಘ್ರದಂತೆ ಆಡುವ ವಿಧಾನದಂತೆ ಇಂತೀ ವೇಷ ಸಹಜ (ವೀರಭಶಾ. ೩೯-೦೯೦) ; ಗಜಗಮನ ಅಹಿಯ ಸರಸಂಧಾನ ಮಯೂರನ ಶಯನ ಮಾರ್ಜಾಲನ ಧ್ಯಾನ ಕಂಠೀರವನ ಲಾಗು . . . ಇಂತೀ ನಾನಾ ಗುಣಂಗಳ ಲಕ್ಷ್ಯಾಲಕ್ಷಿತವಂ ತಿಳಿದು (ಸರ್ವಶ. ೦೩೯-೬೯೩). ೨. ಪಲ್ಟಿ : ಕುರುಡಡೊಂಬನ ಲಾಗುಗಳಂತೆ ಕಡೆಯೊಳು ನರಕಗತಿಗೆ ಕೆಡಿಸಿದುದು (ಪರ್ಣಶ. ೩-೯೯). ೩. ಮಲ್ಲಯುದ್ಧದ ಒಂದು ಪಟ್ಟು,-ವರಸೆ : ಒಂದೆರಡು ಲಾಗಿನಲಿ ನಿಮ್ಮನು ಹಿಂದುಮುಂದನು ಮಾಡದುಳಿವನೆ ಎಂದು ದಾನವ ಗದೆಯ ತಿರುಹುತ ಮುಂದೆ ಹರಿತಂದ (ಕೌಶಿರಾ. ೨೫-೯೦): ಭುಜಗಳನು ಹೊಯ್ದು ಘಲ್ಲಿಸುತ್ತಿದಿರಾಗಿ . . . ಆವದಿರು ಲವಣಿ ಲಾಗು ಮುರಿ ಮೊದಲ ಬಗೆಯಿಂದ ಹೆಣಗುತ್ತಿರ್ದರು (ಐಕ್ಯತ. ೨-೦೨-೯೦). ೪. [ನಾಟ್ಯ] ನೃತ್ಯದ ಒಂದು ಭಂಗಿ : ನಿಲವಿನ ರೇಖೆ ರೇಖೆಗಳಿಮ್ಮು ಶರೀರದ ಲಾಗು ಲಾಗಿನೊಳ್ ನೆಲಸಿದ ರೂಪು . . . ಭಾವವಳಿಮ್ಮುರೆ ನರ್ತಕಿ ನಾಡೆ ನರ್ತಿಪಳ್ (ರಮಾಶ. ೨-೨೯); ಪದತಳದೊಳ್ ತಾಳಮಂ ಬೀಸರಂಬೋಗಲೀಯದೆ ಸೆಱಿವಿಡಿದು ರೂಪು ನೇರು ಲಾಗು ಲವಣಿಯುವು . . . ಕೂಟಮಾನಂಗಳಂ ಸಂಗಳಿಸಿ ರಸಭಾವಂದಪ್ಪದೆ . . . ಚತುರ್ವಿಧ ನರ್ತನಮಂ ಚತುರಜನ ಮೆಚ್ಚುವಂತೆ ತೋರ್ಪ ನರ್ತಕಿಯರಿಂ (ರಾಜಶೇ. ೫-೦೯ ವ). ೫. [ಸಂಗೀತ] ಹಾಡುವಿಕೆಯ ಒಂದು ಸೊಗಸು : ವಳಿ ಲಾಗು ನೋಗು ಪಸರಂ ಏರಿ ಪಾಂಗು ಬೆಡಂಗು ಭಂಗಿ ಸಂಗಳಿಸೆ ಸುಕಂಠೆ ಪಾಡಿ ಪುದಿದಳ್ ಮುದಮಂ ನರನಾಥಚಿತ್ತದೊಳ್ (ಕುಮುದ. ೦-೩೭). 'ಲವಣಿ' ಪರಾ. **ಲಾಗ$_1$** : ೧. ಧರೆಗೆ ಕಾಲಿಡದೊಂದು ಲಾಗ ಲಾಗಿಸಿತಲ್ಲಿಗೆರಡಾಱುಯೋಜನವಾಯ್ತು (ಭರತ. ೨೯-೯೩). ೨. ಹುಲಿ ಕರಡಿಗಳಿಂದ ಸಾವು ಮಾಡಿಸಬೇಕು ಹೊಡಿ ಮೂರು ಲಾಗವೆನಬೇಕು (ತಂಶಾಶ. ೦೦೯-೯೯) ; ಚಿತ್ರವಿಚಿತ್ರವಾದ ಲಾಗಗಳು

ಹಾಕುವುದನ್ನು ನಾನು ಅನೇಕ ಸಾರಿ ಕಂಡಿದ್ದೇನೆ (ಗಂಶ್ರ. ೬೨). ೪. ಅಂಬಾವರನ ಮುಂದೆ ಇಬ್ಬಾವ ಭಾವಪ್ರೇರಕ ತಿರುಪು ಲಾಗಗಳು ಸಂಭ್ರಮಂಬಡೆ ಸ್ತ್ರೀಯು ನರ್ತನವ ಕೇಳಿಕೆಯು ನಿತ್ಯ ಕೇಳಿಸುವಾತನು (ಗುರುಚಾ. ೭-೭೦). ' ಲಗ್ಗೆ ' ಪರಾ.

**ಲಾಗಹಾಕು** = ೧. ತಲೆಕೆಳಗು ಮಾಡಿ ನೆಗೆ; ಪಲ್ಟಿಹೊಡೆ: ಬೇಗ ತಿರ್ರನೆ ತಿರುಗಿ, ಸರ್ರನೆ ಲಾಗ ಹಾಕಿದ ಡೊಂಬನು (ಕಂಥು. ೩೯-೭); ಪಾರಿವಾಳ ಹಾರುವಾಗ ಲಾಗ ಹಾಕುವುದು (ಕಲೆಕೋ. I. ೭೧೦); ಲಾಗ ಹಾಕೋಣ ಎಂದು ಆಸೆಯಾಯಿತು (ಶಾರೆಮ. ೦೨೦). ೨. (ಅಲಂ) ಪ್ರಯತ್ನಮಾಡು: ಕಷ್ಟಪಡು: ವರ್ಷವೆಲ್ಲಾ ಲಾಗಹಾಕಿ ತಲೆ ಕೆಡಿಸಿಕೊಂಡು ಹಗಲೂ ರಾತ್ರಿ ಓದಿ, ಓದಿ (ಬಾಗಿಸ. ೦೦೨). ೩. ಅನುತ್ತೀರ್ಣನಾಗು; ಸೋಲು; ನಪಾಸಾಗು: ಪರೀಕ್ಷೆಯಲ್ಲಿ ಲಾಗಹಾಕಿದ್ದ ವಿದ್ಯಾರ್ಥಿ (ಪಾಂಗೇ. ೦೯೦); ಬಿ.ಎ. ಯಲ್ಲಿ ಎರಡನೆಯ ವರ್ಷ ಲಾಗ ಹಾಕಿ ಮೂರನೆಯ ದಂಡಯಾತ್ರೆಗೆ ಸಿದ್ಧನಾಗುತ್ತಿದ್ದ (ಅಂಕೂ. ೯೮); ಅವರಲ್ಲಿ ಬಹುಮಂದಿ ಎಸ್. ಎಸ್. ಎಲ್. ಸಿ. ಪರೀಕ್ಷೆಯಲ್ಲಿ ಲಾಗ ಹಾಕಿ ಬಂದವರೇ (ರವೀಶ್ರೀ. ೯೮). **ಲಾಗಹೊಡೆ** = ೧. ನೆಗೆ; ಜಿಗಿ; ಹಾರು: ಡೊಂಕ ಮಾರಿಯ ಹನುಮ ... ಲಂಕಾಕ ಲಾಗ ಹೊಡೆದಾನೊ (ಕನ್ನಜಾ. ೦೦). ೨. ಬಹಳ ಪ್ರಯತ್ನ ಮಾಡು: ಕಾಮಣ್ಣ ಎಂಥ ಲಾಗಹೊಡೆದರೂ ಸಹ ಜನರು ಗೌಡನ ಕಡೆ ಹೋಗುವುದನ್ನು ನಿಲ್ಲಿಸಿರಲಿಲ್ಲ (ಮುದ್ದುಹ. ೩೦). ೩. ಸಾಯು; ಮರಣ ಹೊಂದು: ಅವಳಿಗಾದರೂ ವಯಸ್ಸು ಬಹಳಾಗಿದೆ. ಯಾವಾಗ ಲಾಗಹೊಡೆಯುವಳೋ ಎಂಬುದು ತಿಳಿಯುವುದಿಲ್ಲ (ಸಿರೋಚಿ. ೦೪).

[ದೇ.॥ ತೆಲು. ಲಾಗು./ಸಂ. ಲಂಘನ]

**ಲಾಗು₂**. ಲಾಗ್ಗು. ಲಾಘು (ನಾ). ೧. ರಭಸ; ತೀವ್ರತೆ: ಕುಸುಮಂಗಳಂ ಲಾಗಿನಿಂ ತಿರಿವ ಪಸುಗೂಸುಗಳ್ ... ದಾರಿಯಿಂ ತೋಱಲ್ಕೆ (ಶಾಸೋಥು. ೩-೩೦); ತನಿಗಿಡಿಯು ದಳ್ಳುರಿಯ ನಾಲಿಗೆ ... ಕಡುಲಾಗಿನಲಿ ಲಂಬಿಸಿ ಚುಂಬಿಸಿದುದುರಿ ಲಲಿತನಂದನವ (ಕುಪ್ಪಾಕ. ೨೦-೨೭); ಸರಳ ಹಿಡಿವುದ ಬಿಡುವ ಲಾಗುವ ಸುರರಿಗುಪಮಿಸಲರಿದು (ಗೌಶಿಂ. ೩೩-೨೭). ೨. ಚಳಕ; ಕೌಶಲ; ಚಾತುರ್ಯ: ಲಾಗಿಂದ ಕಲ್ಲುಕೋಳಿಯುಂ ತಾ ಕೂಗೀತು (ಕಾಂಸಂ. ೩೦); ನಮ್ಮ ಲಾಗಿನ ಧುರವು ತಾನಿದು ದಿಟ್ಟನಹೆಯೋ ಪಾರ್ಥ (ಕುಪ್ಪಾದ್ರೋ. ೯-೯೭); ಮಗನೆ ಕೇಳ್ಕೆ ಲವನೆ ಲವಣೆಯ ಲಾಗು ಬೇಱಾವರ (ಕೊರಡಾ. ೭ ೨೩-೦೮). ೩. ಆಧಿಕ್ಯ; ಅತಿಶಯತೆ; ಹೆಚ್ಚಳ: ಬೇಗದಲಿ ಪರಸಿದ್ಧಿಯ ಲಾಗಿನಲಿ ಕಾಳುವನು ಮೆಚ್ಚಿಸುತ (ಸಂಭಕ. ೬-೨); ಇವನ ... ಕಪಟಪಾರಿಗಭೇದ್ಯ ಬೊಮ್ಮನ ವರದ ಲಾಗಿನಲಿ (ಗೌಶಿಂ. ೨೭-೦೪). ೪. ಹಗುರ; ಸರಳ; ಸುಲಭ: ಈ ಪ್ರಶ್ನೆಯು ನಿನಗೆ ಲಾಗಲ್ಲಾಯೆಂದು (ಬರೇಶ್ವ. ೭೭); ಬೆಳೆಯ ಹೇಳೆನಗೆ ಲಾಗಾಗೆ ಹೊಂಗೊಡುವೆನೇಳೆಂಟುದಿನಕೆಂದನು (ಹರಿಶ. ೦೦-೭); ಲಾಗಿನಿಂದಲಿ ಗುರುಗುಹೇಶ್ವರನಾಗಳೆನ್ನನು ನುಡಿಸಿದೊಡೆ ನುಡಿವಾಗುಹಾಡಿಯ ಪೇಳ್ವೆನು (ಶ್ರಕುಂಲ. ೦-೯). ೫. ಗುರಿ; ಲಕ್ಷ್ಯ; ಧ್ಯೇಯ; ಉದ್ದೇಶ: ಆದುವ ಆಟ ತಪ್ಪಿ ... ಮತ್ತೆ ಆ ಲಾಗು ಬಂದಿತ್ತೆಂಬ ದಿಮ್ಮು ಮನುಜರುಗಳಿಗೆ ಹೇಳುವುದುಂಟೇ (ಮೋಕವಾ. ೯೯-೭೩೦); ಭವಭವಂಗಳಲಿ ತೊಳಲಿ ಬಳಲುವ ಜೀವಭಾವದೊಳುಳುವುದಾವುದು ಲಾಗು ಮೂಢರ ಬಳಕೆಗಾವಂಜುವೆವು (ಕುಪ್ಪಾಶೀ. ೩-೪೦). **ಲಾಗ್ಗು** : ೬. ತ್ವರೆ; ಶೀಘ್ರತೆ: ಮಾಯಾವಾದನು ಲಾಗದಲಿ ಕಳದಾಟಿಗೆ ... ಸನ್ನೆ ಮಾಡುತ ಕೈಗಳಿಂದಾ ಹುಡುಗಿಗೆ (ಕುಥು. ೪೦-೨೩). ೭. ಮೋಸ; ಕಪಟ; ವಂಚನೆ (?): ಎನ್ನ ಒಡಲ ಹೊರೆದನೆಂದು ಹೋದ ಠಾವಿನಲ್ಲಿ ಒಗರವನಿಕ್ಕುವ ಲಾಗಿನ ಶೀಲವಂತರ ಮನದ ಭೇದವ ನೀವೆ ಬಲ್ಲಿರಿ (ಕವಾಕಿ. ೦೩೭). **ಲಾಘು** : ೨. ಡೊಂಬ ಗಣೆಯನೇರುತಾನೆ ಆವನು ಕಂಬ ಮುರಿದು ಲಾಘು ತಪ್ಪಿ (ಕಾಂಸಂ. ೯).

**ಲಾಗುವೇಗ**, **ಲಾಗುಬೇಗೆ** = ಅತಿಶಯವಾದ ಕೈಚಳಕ,— ಕೌಶಲ: ಕರ್ಣನ ಲಾಗುವೇಗವನೇನನೆಂಬೆನು ಚಾಪತಂತ್ರದಲಿ (ಕುಪ್ಪಾಕ. ೨೩-೩೯); ಅನಲಾಂಬಕ ಪರಿಸವಲಿ ಘನ ಲಾಗುವೇಗದಿ ಜೋಡಿಸಿ ನಂದಿವಾಹನವೇಱಿವನಾಹವಕೆ (ಮೋಹಕ. ೩೭-೪೭); ಪೊಯ್ಯೆ ಕಾಳವಟ್ಟುದಿ ಪೋರಗವಿಂದೆ ಪೊಯ್ದು ನೆರತುಂ ಸರಿವೋದವು ಲಾಗುಬೇಗದೊಳ್ (ಅಸಂಥು. ೦೧-೭೦). [ < ಸಂ. ಲಾಘವ ]

**ಲಾಗು₃** (ನಾ). ೧. ಹೊಂದಿಕೆ; ಸೇರುವಿಕೆ; ಲಗತ್ತು: ಈ ಭಾಗದಲ್ಲಿರುವ ನಿಯಮಗಳು ಕೆಲವು ಜನರಿಗೆ ಲಾಗು ಇರುತ್ತವೆ ಮತ್ತು ಕೆಲವರಿಗೆ ಲಾಗು ಇರುವುದಿಲ್ಲ (೩೨೦ಬಾ. ೩೪ ಕೃಶ್ಯಾವಿನ); ಇದಕ್ಕೆ ಯಾವ ಕಾಯದೆ ಲಾಗೂ ಆಗಾಣಲ್ಲಾ (ರಕ್ತರ್. ೦೨೦). ೨. (ಅಲಂ) ಹೊಡೆತ; ತಾಡನೆ: ಹಗಲಿರುಳೆನ್ನದೆ ಹೊಡೆಯುವ ಜಡಿಮಳೆ ಬಡಿಕೋಲ್ಮಿಂಚಿನ ಲಾಗುಗಳು (ಪಕ್ಷಿ. ೨೦-೩). [ < ಲಗಾವು./ಮರಾ. ಲಾಗೂ ]

**ಲಾಗುಕಾಱ** (ನಾ). ಚತುರ: ಭೇದದ ಗುರು ಚೋದ್ಯದ ಶಿಷ್ಯ ಇಂತೀ ಲಾಗುಕಾಱರನೊಲ್ಲ ಆತುರವೈರಿ ಮಾರೇಶ್ವರಾ (ಸಗಿಮೂ. ೪. ೪೨೨-೦೨೦೯); ತೆಗೆದೆಚ್ಚು ಗರುಡಿಯ ಲಾಗುಕಾಱನ ರಥವ ಮುಱಿದನು (ಕುಪ್ಪಾದ್ರೋ. ಕಂ. ೨೯೦). [ ಲಾಗು₂ + -ಕಾಱ ]

**ಲಾಗುವಡು** ' ಲಾಗವಡು ' ನೋ.

**ಲಾಗುವಾಡು** ' ಲಾಗವಡು ' ನೋ.

**ಲಾಗುಳ** ' ಲಾಕುಲ ' ನೋ.

**ಲಾಗೊತ್ತು** (ಕ್ರಿ). ಕಾರ್ಯೋನ್ಮುಖಗೊಳಿಸು: ತೊಡಗಿಸು; ನಿಯೋಜಿಸು: ಅಡಿಯನಾರೈದುಯ್ದು ಹಕ್ಕೆಯಿಕ್ಕೆಯನಱಿವ ಗಿಡುಗನಂ ಲಾಗೊತ್ತಿ ಸಲಗೆಯಂಟಿಂ ಸಿಲುಕೆ ... ತೋಱಿದರು ಬೇಂಟೆಯಂ (ಅಶಿಂ. ೨೪-೦೭). [ ಲಾಗು₂ + ಒತ್ತು₁ ]

**ಲಾಗೋಡು** 'ಲಾಗವಡು' ನೋ.

**ಲಾಘು** 'ಲಾಗು₂' ನೋ.

**ಲಾಘವ** (ನಾ). ೧. ಚಿಕ್ಕದಾಗಿರುವುದು: ಪುಟ್ಟದಾಗಿರುವುದು. ೨. ಹಗುರವಾಗಿರುವಿಕೆ; ಲಘುತ್ವ: "ಲಾಘವಮದು ಲಘುತೆ" (ವಸ್ತುಕೋ. ೦೦೩-೨೯); ಹಿಂದಿನ ಕಾವ್ಯಗೌರವಗಳಿಗೆ ಲೋಪಗಳುಂಟಾಗಿ, ಎಲ್ಲವರಲ್ಲಿಯೂ ಲಾಘವ ಹೆಡೆಯೆತ್ತಿದೆ (ಬೀರಯೋ. VII, ಮುಪ್ಪುಡಿ). ೩. ಕೀಳುತನ; ಕ್ಷುದ್ರತೆ; ಸಣ್ಣತನ: ಲಾಘವದಿಂದಿರುವುದು ರಣಧೀರನಿಗೆ ಸಹನೆಯಾಗದೆ, ಅವನು ಅವರಿಗೆ ಬುದ್ಧಿ ಕಲಿಸಿದ (ಸಂಕಶ. ೦೦೩). ೪. ಕೀಳಾದುದು; ಕ್ಷುಲ್ಲಕವಾದುದು; ಹೀನವಾದುದು: ಕೈಕೆ ಬೇಡೆ ಧರೆಯಂ ತೃಣದಿಂ ಲಾಘವಮೆನೆ ಬಗೆದೀಗುಂ ರಾಘವನೌದಾರ್ಯತುಂಗನೀಯದುದುಂಟೇ (ಕಂರಾಮಾ. ೬-೦೦೯); ಕಾಮಧೇನುವನ್ನೆ ಮನದಲ್ಲಿ ಕಟ್ಟಿಕೊಂಡು ಉಚ್ಚೈಶ್ರವಾಶ್ವವನ್ನೆ ಲಾಘವದೊಳಿರಿಸಿ ದೇವಗಜವನ್ನೆ ಕೀರ್ತಿಯೊಳು ಬೆರಸಿಕೊಂಡು (ಸೌಗಂಧಿ. ೦-೨). ೫. ಸೌಲಭ್ಯ; ಅನುಕೂಲ. ೬. ವೇಗ; ತ್ವರಿತತೆ; ಶೀಘ್ರತೆ. ೭. ಕೌಶಲ; ಚಳಕ; ಪಟುತ್ವ: ಚದುರ್ಪಾಣಿ ಲಾಘವ ಪಂಥಪಾಡುಗಳನಱಿದು ಬಿನ್ನಾಣದಿಂ ಗಾಯಗಾಣಿಸಿದರು (ಕೈಬಿಚಾ. ೨೨-೭); ಲಾಘವದಲ್ಲಿ ಪಾಂಡಿತ್ಯದಲ್ಲಿ ಪಟುತರದಲ್ಲಿ ಪರಾಕ್ರಮದಲ್ಲಿ ಭೀಮನ ಸರಿ ದಾರು ಇಲ್ಲ (ಕಾತ್ಯಾಶಿ. ೦೩-೩); ಕತ್ತಿ ಗುರಾಣಿಗಳನ್ನು ತೆಗೆದುಕೊಂಡು ಲಾಘವ, ಸೌಷ್ಠವ, ಸೊಗಸು, ಸ್ಥೈರ್ಯ, ಹಿಡಿತ ಮುಂತಾದವುಗಳನ್ನು ಪ್ರದರ್ಶಿಸಿದರು (ವಜೂ. ೨೩). [ಸಂ.]

**ಲಾಘವದೋಷ** (ನಾ). [ಛಂದ] ಲಘುವಲ್ಲದ ಕಡೆಗಳಲ್ಲಿ ಲಘುವನ್ನು ಬಳಸುವ ಒಂದು ದೋಷ: ಆಗಳುಂ ಗುರುಗಳಲ್ಲದ ತಾಣದೊಳಂ ಗುರುವೊದ್ಯೋಗದಿಂ ಬಗೆಗೆ **ಗೌರವದೋಷ**ಮಿದೆಂಬುದಂ ಬೇಗವಾ

ಲಘುಗಳೆಲ್ಲದ ಕಾಣದೊಳಂ ಲಘೂಪಾಗಮಕ್ರಮದೆ ನಂಬುಗೆ ಲಾಘವ ದೋಷಮುಂ (ಕಾಂ. ೦-೦೩೭). [ಸಂ.]

**ಲಾಳಿಸು$_1$** ' ಲಾಗಿಸು$_1$ ' ನೋ.

**ಲಾಳಿಸು$_2$** (ಕ್ರಿ). ಕೀಳುಮಾಡು ; ಕಡೆಗಣಿಸು : ನೀಲೋತ್ಪಲದ ದಳವ ಲಾಳಿಸುವ ಸುಂದರಾಂಬಕದ . . . ಸೊಬಗಿ (ಗುರುಚ. ೦೬-೯೦).

[< ಲಾಘವ + -ಇಸು$_1$]

**ಲಾಚಾರ್** ' ಲಾಚಾರು ' ನೋ.

**ಲಾಚಾರಿ** ' ಲಾಚಾರು ' ನೋ.

**ಲಾಚಾರು**, ನಾಚಾಲ್ಯ, ಲಾಚಾರ್, ಲಾಚಾರಿ (ಗು). ೧. ಸತ್ತ್ವಹೀನವಾದ; ದುರ್ಬಲವಾದ ! ಈ ಲಾಚಾರು ವೈರಿನಿಂದ ಏನು ಬೆಳೆ ಸಿಕ್ಕೀತು? (ಕೂಕ). (ನಾ). ೨. ಅಸಹಾಯಕವಾದುದು : ಬಲಹೀನವಾದುದು : ತನ್ನ ಜೋರು ಇಲಾಜು ಯೇನೂ ನಡೆಯದೆ ಲಾಚಾರಾಗಿ . . . ತಿರುಗುತ್ತ ಇದ್ದಲ್ಲಿ (ಲಾಕೇಂದ್ರ. ೨೯); ಕುರ್ಕನುಗುರು ಬಗೆದಿದ್ದ ಕಣ್ಣಿನ ಗಾಯದ ದೆಸೆಯಿಂದ . . ಹುಲಿಯು, ಲಾಚಾರಾಗಿದ್ದರೂ . . . ಬೇಟೆಯಾಡಿ (ಕುಲಚು. ೩೭). **ನಾಚಾಲ್ಯ** : ೩. ನಿಶ್ಶಕ್ತ ; ಬಲಹೀನನಾದವನು ; ಈಗ ತಿನ್ನುವುದು ಕುಡಿಯುವುದು ಎಲ್ಲಾ ಬಿಟ್ಟು ನಾಚಾಲ್ರಾಗಿದ್ದಾರೆ (ಪಮ್ಮರು. ೩೨). **ಲಾಚಾರ್**: ೩. ಹುಡುಗ ಯಾಕೋ ಲಾಚಾರ್ ಆಗಿದ್ದಂಗೆ ಕಾಣ್ತಾನೆ (ಬಃಜುಣ. ೦೭೩). **ಲಾಚಾರಿ** : ೧. ತುಂಬಾ ಲಾಚಾರಿ ಮನುಷ್ಯ. (ಕಂಬಜಾ. ೦೦೭). ೪. ಅಸಹಾಯಕತೆ ; ದುರ್ಬಲತೆ : ಈ ಕೊಲೆಗಾರರದೆ ಲಾಚಾರಿಯಿಂದ . . . ಇಕ್ಕಟ್ಟಾದ ಗ್ರಾಮಗಳಿಗೆ ಬಾರದೆ . . . ರೈತರ ಮನೆಮಾರು ಲೂಟಿ ಮಾಡಿ ಬೆಂಕಿ ಹಾಕುತ್ತ ಇದ್ದನು (ಲಾಕೇಂದ್ರ. ೩೯).

[←ಹಿಂ. ಮರಾ. ಲಾಚಾರ್, ಲಾಚಾರೀ]

**ಲಾಜ$_1$** (ನಾ). ೧. ನೆನೆಸಿದ ಅಕ್ಕಿ. ೨. ಅಕ್ಷತೆ : 'ಲಾಜಾರೋಪ' ಪರಾ. ೩. ಹುರಿದು ಅರಳಿಸಿದ ಕಾಳು ; ಬತ್ತದ ಅರಳು ; ಅವಲು : "ಅರಳು ಲಾಜಾಖ್ಯೆಯಕ್ಕು" (ಚುಂಗರಾ. ೦೦೦-೬); ತಪ್ತಾಯಃಕಟಾಹಪತಿತ ಲಾಜಃಪುಂಜದಂತೆ . . . ಸಿಡಿಲ್ದು (ಆಶ್ವ. ೦೦-೩೩೮) ; ಪುಷ್ಪಗಳಿಂ ಕೂಡಿದ ಲಾಜಗಳಿಂ ಪೂಜಿತನಾಗಿ (ತೌಗಂಂ. ೨೬೩-೦೩). ೪. ಒಂದು ಬಗೆಯ ಸಸ್ಯ: "ಲಾಕ್ಷಾವೃಕ್ಷಃ—ಲಾಜ, ಕೋಶ ಮಾವು" (ಬಿಹಂ. ೦೯೩).

**ಲಾಜಾವರುಷ**=ಅರಳನ್ನು ಸೂಸುವಿಕೆ : ಅರಳಿನ ಮಳೆ : ವೀರ ಭುಜದಿಗೆ ಸುರಿವ ಲಾಜಾವರುಷದಂತಿರೆ ಮುತ್ತುಗಳೆಸೆದವು (ಕುವ್ಯಾ. ೩೭.೯-೮೯).

**ಲಾಜಾವರ್ಷ**=ಲಾಜಾವರುಷ : ಪೌರಜನದ ಸೂಸುವ ಲಾಜಾವರ್ಷಮುಮಂ ಕುಸುಮವರ್ಷಮುಮನಾಂತುಕೊಳುತ್ತುಂ (ಆದಿಪು. ೯-೨೩ ವ).

[ಸಂ.]

**ಲಾಜ$_2$** (ನಾ). ತಕ್ಷಣ; ಬೇಗ; ಒಂದು ಕ್ಷಣ : ಒಂದೇ ಒಂದು ಲಾಜ ದಾರಿ ತಪ್ಪಿ ಹೋಗಿದ್ದುವು ಎಂಬುದಾಗಿ ಮತ್ತೊಬ್ಬಳು ಹೆಂಗಸು ನುಡಿದಳು (ಭುಜು. ೨೫೭); ಎಲ್ಲ ಲಾಜದಲ್ಲಿ ನಡೆಸುಬುಡ್ತೀನಿ (ಸರ್ಕಜು. ೦೭೩). [ ? ]

**ಲಾಜಕ** (ನಾ).=ಲಾಜ$_1$ ೨: ತಳಿವ ಲಾಜಕಮೆತ್ತುಪ ಪುಷ್ಪಮಾಲೆ ನೀಡುವ ನವಮಾತುಳುಂಗಫಲಮೆಂಬಿವನಚ್ಯುತನೊಲ್ದು ಕಾಣ್ಬುದಂ (ಜಗು. ೬-೨).

[ಸಂ.]

**ಲಾಜಾಂಜಲಿ**, ಲಾಜಾಂಜಳಿ (ನಾ). ೧. ಬತ್ತದ ಅರಳಿನಿಂದ ತುಂಬಿದ ಬೊಗಸೆ. ೨. = ಲಾಜ$_1$ ೨ : ಲತಾಂಗಿಯುಸೂಸುವ ಕುಸುಮ ಮಿಶ್ರಲಾಜಾಂಜಲಿಗಳ್ (ಆದಂಪು. ೯೬೩); ಬಟುಯುಂ ಪುರೋಹಿತಾದೇಶದಿಂ ಹೋಮಾಗ್ನಿಯುಂ ಪ್ರದಕ್ಷಿಣಂಗೈದು ಲಾಜಾಂಜಲಿಯನಿಕ್ಕಿ ಬಂದೊಂದೆ ಪಸೆಯೊಳ್ ಕುಳ್ಳಿರ್ದಂ (ಚಂದ್ರಪು. ೬-೭೬ ವ). **ಲಾಜಾಂಜಳಿ** : ೧. ದಿಕ್ಕನ್ಯಕೆಯರ ಸೂಸುವ ಲಾಜಾಂಜಳಿ[ಪಾಠಾಂ. ಲಿ] ನಿಚಯಮೆನಿಸುವ ಮದಕರಿಕರಶೀಕರಮುಮಂ (ಆದಿಪು. ೦೩-೪೯ವ) ; ಸೂಸುವ ಲಾಜಾಂಜಳಿಗಳ ಸೇಸೆಯು ಸಿದ್ಧಾರ್ಥದೊದವಿನಿಂ (ವರ್ಧಮಾ. ೬-೯೨). [ಸಂ.]

**ಲಾಜಾಂಜಳಿ** ' ಲಾಜಾಂಜಲಿ ' ನೋ.

**ಲಾಜಾಕ್ಷತೆ** (ನಾ).=ಲಾಜ$_1$ ೨ : ಬಟ್ಟಲು ವೀಳ್ಯ ವಿಶಿಷ್ಟ ಲಾಜಾಕ್ಷತೆ ಪುಟ್ಟ ಕದಳಿ ಬೆಲ್ಲ ಕತ್ತುರಿಗಳಿಂದ ಕೃಷ್ಣರಾಯನ ಮುಂದಿಟ್ಟು ಸಮರ್ಪಿಸಿ (ಭುರಂಜ. ೯-೯೨-೯). [ಸಂ. ಲಾಜಾಕ್ಷತಾ]

**ಲಾಜಾರೋಪ** (ನಾ). ಅಕ್ಷತೆಯನ್ನು ಎರಚುವುದು, —ಸೂಸುವುದು : ಸಭೆಯಲ್ಲಿದ್ದವರೆಲ್ಲರೂ ದೊರೆಗಳ ಮೇಲೆ ಲಾಜಾರೋಪ ಮಾಡಿ ತಮ್ಮ ಸಂತೋಷವನ್ನೂ ಶುಭಾಶಯವನ್ನೂ ವ್ಯಕ್ತಪಡಿಸಿದರು (ಕೃಸ್ಥಸೂ. ೦೯೯).

[ಸಂ.]

**ಲಾಜಾಹುತಿ** (ನಾ). ಅರಳಿನಿಂದ ಮಾಡುವ ಹೋಮ ; ಅಗ್ನಿಗೆ ಅರಳನ್ನು ಅರ್ಪಿಸುವುದು : ಪುರೋಹಿತರು ವಧುಗೇಗೆ ಈ ಅರ್ಥ ಬರುವ ಮಂತ್ರಗಳನ್ನು ಹೇಳಿಸಿ ಅಗ್ನಿಗೆ ಲಾಜಾಹುತಿಯನ್ನು ಮೂರಾವರ್ತಿ ಮಾಡಿಸಿದರು (ಶಾಂಕಣ. ೦೦೦). ' ಲಾಜಾಹೋಮ ' ಪರಾ.

[ಸಂ.]

**ಲಾಜಾಹೋಮ** (ನಾ). ಮದುವೆಯಲ್ಲಿ ಮಾಡುವ ಒಂದು ವಿಧಿ ; ವಧೂವರರು ಇಬ್ಬರೂ ಬೊಗಸೆಗಳನ್ನು ಕೂಡಿಸಿ ಅರಳುಗಳನ್ನು ಅಗ್ನಿಗೆ ಹೋಮ ಮಾಡುವುದು : ಲಾಜಾಹೋಮಂ ರಾಜಸಲಾ ಜಲರುಹಪತ್ರನೇತ್ರೆ . . . ಉದ್ಭಟರಾಜನ ಬಲದಿಂದೆಡಕ್ಕೆ ಬಂದಳ್ಮದದಿಂ (ಅಧ್ಯಲಿ. ೬-೬೯) ; ಹಾರುಮರುಚ್ಚರಿಸುವ ಅಗ್ನಿಹೋತ್ರಪ್ರಕಾರದಿಂದ ಅವನು ವಧುವನ್ನು ಕೈಹಿಡಿದ. ಲಾಜಾಹೋಮವಾಯಿತು (ಏದುಕ. ೫೩).

[ಸಂ.]

**ಲಾಜು** (ನಾ).=ಲಾಜ$_1$ ೨ : ಲಾಜೆಸಿಂದಭಿಷೇಕವ ಜನಾರಾಜನಿಗಾಜನೇಂದುವಸೂನು ಮಾಡೆ (ಜ್ಞಾಪಶ. ೬-೭೭). [<ಸಂ. ಲಾಜ]

**ಲಾಜೆ** (ನಾ).=ಲಾಜ$_1$ ೩ : "ಅರಳಾಗಿ ಪುರಿದ ಧಾನ್ಯೋತ್ಕರಮಂತವೆ ಲಾಜೆ" (ಶಬ್ದಕೋ. ೯೩-೦೦) ; ಓಜೆಯೊಳ್ ಲಾಜೆಯನಗ್ನಿಕುಂಡದೊಳ್ ಸುರಿದು (ಜಂಜಾ. ೩-೭೩ ವ) ; ಅರಲ ಸರಂಗಳಂ ಸವೆವ ಲಾಜೆಯನೆ ಈಚೆಯೊಳಾಯ್ದು . . . ನೀಚೆಯರದೇನೆಸ್ಗಿರ್ದರೊ ಮಂಟಪಾಗ್ರದೊಳ್ (ಲಾಕಸೀ. ೬-೭). [ಸಂ. ಲಾಜಾ]

**ಲಾಟ** (ನಾ). ೧. ಒಂದು ನಾಡು ಮತ್ತು ಅಲ್ಲಿಯ ಜನರ ಹೆಸರು; ಈಗಿನ ಗುಜರಾತು ರಾಜ್ಯ : ಇದು ಲಾಟಬಲಂ (ಆದಿಪು. ೦೩-೯೩೫) ; ಲಾಟ ಭೋಟಕ ಗೌಳ ಪಾರ್ಶ್ವ . . . ಸಕಲದೇಶಾಧೀಶಸಮುದಯಸ್ಥಿತ ಸೇತುಮಹಾಸಿಂಧುಪ್ರವಾಹ ಪರಾಕು (ಯಾದಕಂ. ೩-೦೫) ; ನಖಕ್ಷತ ದಂತಕ್ಷತಂಗಳಿಂ ಬಹು ದ್ರಾವಿಸುವಳು . . . ಇವಳು ಲಾಟದೇಶದ ಸ್ತ್ರೀ (ಕಾಕುಶಾ. ೨೦೯). ೨. ಲಾಟದೇಶದ ಭಾಷೆ : "ಲಾಟಕ ಲಾಟಮುದಟ ನುಡಿ ಲಾಟೀಯು" (ಸಂಕೀಪ. ೨೦). ೩. (ಬಟ್ಟೆ, ಆಭರಣ ಇತ್ಯಾದಿಗಳು) ಹಳೆಯದಾದುದು ; ಹರಿದು ಹೋದುದು ; ಹಾಳಾದುದು. ೪. ಮಲ್ಲಯುದ್ಧದ ಒಂದು ಪಟ್ಟು : ಕೊಂತಮಾರವು ಲಾಟ ಡೊಕ್ಕರ. . . ತುಳಿಲ ವಿಂದಾಣದಲಿ ಹರಿ ಕಾದಿ ಬಳಲಿಸಿದ (ಕಾವ್ಯಜಾ. ೨೨-೭೩). [ಸಂ.]

**ಲಾಟಕ** (ನಾ). ೧. ಲಾಟದೇಶಕ್ಕೆ ಸಂಬಂಧಿಸಿದುದು. ೨. = **ಲಾಟ ೪**: ಕೊಂತಮಾರಿಯು ಲಾಟಕಾ ಕೋದಂತೆ ಉತ್ತರ ಡೊಕ್ಕರವು ನೆಜ ಕೊಂತ ಮಹರವು ಲಾಟ ಡೊಕ್ಕರ . . . ತುಳಿಲ ವಿಂದಾಣದಲಿ ಹರಿ ಕಾದಿ ಬಳಲಿಸಿದ (ಕಾವ್ಯಜಾ. ೨೨-೭೩). [ಸಂ.]

**ಲಾಟನ** 'ಲಾಂದರ' ನೋ.

**ಲಾಟರಿ** (ನಾ). "ಹಣ ಕೊಟ್ಟು ಪಡೆದ 'ಟಿಕೆಟ್ಟು' ಚೀಟಿಗಳ ಮೂಲಕ, ಕೆಲವರಿಗೆ ಕೇವಲ ಅದೃಷ್ಟದಿಂದ ಬಹುಮಾನ ದೊರೆಯುವಂತೆ

ಏರ್ಪಡಿಸಿದ ಅದೃಷ್ಟದ ಆಯ್ಕೆ" (Lottery. ಇಂಕೋ): ಯಾವನೋ ದಾರಿಯಲ್ಲಿ ಲಾಟರಿಯಿಟ್ಟುಕೊಂಡಿದ್ದ . . . ನಾನೂ ಒಂದಾಣೆ ಹಾಕಿದೆ. ಎರಡು ವೆಸ್ಟರ್‌ಮೆಂಟ್ ಬಂತು (ಹಿಶಾ. ೯); ಮದುವೆಯೆಂಬುದು ಒಂದು ಲಾಟರಿ ಎಂದು ಉತ್ತರ ಕೊಡುತ್ತಾನೆ (ಬಂಕವು. ೧೧).

[ ← ಇಂ. Lottery ]

**ಲಾಟರಿಹೊಡೆ₁** (ಕ್ರಿ). ಅದೃಷ್ಟಪರೀಕ್ಷೆಯಲ್ಲಿ ಜಯ ದೊರಕು; ಲಾಟರಿಯಲ್ಲಿ ಬಹುಮಾನವು ಬರು : ಅವನಿಗೆ ಲಾಟರಿಹೊಡೆದು ಇದ್ದಕ್ಕಿದ್ದಂತೆ ಲಕ್ಷಾಧಿಪತಿಯಾದನು (ಕೂ). [ ಲಾಟರಿ + ಹೊಡೆ₁ (< ಪೊಯ್₁) ]

**ಲಾಟರಿಹೊಡೆ₂** (ಕ್ರಿ). ೧. (ಕೆಲಸವಿಲ್ಲದೆ) ವ್ಯರ್ಥವಾಗಿ ಅಲೆ.–ತಿರುಗು : ಎರಡುವರ್ಷಕಾಲ ಉದ್ಯೋಗವಿಲ್ಲದೆ ಲಾಟರಿಹೊಡೆದು ಪತ್ರಿಕೋದ್ಯಮಕ್ಕೆ ಆತ ಧುಮುಕಿದಂದಿನಿಂದ . . . ಅವನನ್ನು ಬಲ್ಲೆ (ಜನುಜಿ. ೧೯). ೨. ತೊಳಲಾಡು ; ಬವಣೆಪಡು : ಅವನಿಗೆ ಕೊಟ್ಟು ನನ್ನ ಕಣ್ಣು ಮುಂದೆ ಅವಳು ಊಟಕ್ಕಿಲ್ಲದೆ ಲಾಟರಿಹೊಡೆಯುವುದನ್ನು ನೋಡುವುದಿಲ್ಲ (ಜಾಂಕ. ೭೬). [ಲಾಟರಿ₀ (?← ಇಂ. Loiter) + ಹೊಡೆ₁(< ಪೊಯ್₁) ]

**ಲಾಟಾನು** ' ಲಾಂದರ ' ನೋ.

**ಲಾಟ** (ನಾ). [ಕಾವ್ಯಮೀ] ವೈದರ್ಭಿ, ಗೌಡಿ, ಪಾಂಚಾಲಿ ಹಾಗೂ ಲಾಟಿ ಎಂಬ ಕಾವ್ಯದ ನಾಲ್ಕು ಬಗೆಯ ರೀತಿಗಳಲ್ಲಿ ಒಂದು : ಇವುಗಳ ಜೊತೆಗೆ 'ಲಾಟ'ಯನ್ನು ಸೇರಿಸಿ ರೀತಿಗಳು ನಾಲ್ಕೆಂದೂ . . ಹೇಳುತ್ತಾರೆ (ಕ್ಕಾಶಿ. ೨೨೦). [ ಸಂ. ಲಾಟೀ ]

**ಲಾಟೀನು** ' ಲಾಂದರ ' ನೋ.

**ಲಾಟು** (ನಾ). ಜನ ಅಥವಾ ವಸ್ತುಗಳ ತಂಡ,–ಮೊತ್ತ : ಮಾನು ಹ್ಯಾಗೆ ಕೊಡುತ್ತಿ ? ಲಾಟ(Lot)ಗೆ ಹೇಗೆ? (ಹೊಸಕ್ಕ. ೩೦).

**ಲಾಟುಲಾಟು** (ದ್ವಿರುಕ್ತಿ): ಮಾರ್ಕೆಟ್ಟನಲ್ಲಿ ತರಕಾರಿ ಲಾಟುಲಾಟಾಗಿ ಬಂದು ಬಿದ್ದಿವೆ (ಕೂ). [ ← ಇಂ. Lot ]

**ಲಾಠಿ, ಲಾತಿ** (ನಾ). ಬಡಿಗೆ; ದೊಣ್ಣೆ; ದಂಡ : ನಿನಗೆ ಲಾಠಿ ತಿರುವಲು ಬರುತ್ತದೆಯೊ? (ಕೊಕಶಾ. ೬೬); ಕೋವಿ ಲಾಠಿಗಳನ್ನು ಧರಿಸಿದ ಪೋಲೀಸ್ ಪಡೆ ಹಳ್ಳಿಗೆ ಬಂತು (ಕರುಣಾ. ೦೨೦) ; ಪ್ರತಿಯೊಬ್ಬರ ಕೈಯಲ್ಲೂ ಒಂದೊಂದು ಲಾಠಿ (ಸ್ವಾತಂತ್ರ್ಯ. ೯). **ಲಾತಿ** : ಬ್ರಿಟಿಶರ ಲಾತಿಪ್ರಹಾರಗಳು ಅವರನ್ನು ವಂಚಿಸದಾಯಿತು (ಬಾಂತ್ರ. III. ೬೦೭).

**ಲಾಠೀಚಾರ್ಜು** = ಲಾಠಿಹಲ್ಲೆ : ಮುಖಂಡರ ಬಂಧನ . . . ಲಾಠೀಚಾರ್ಜು ಗೋಳೀಬಾರ್ . . . ಫಾಸೀ . . . ಘೋರ ಘೋರ ಶಿಕ್ಷೆಗಳು (ಅಗ್ನಿ. ೯). [< ಪ್ರಾ. ಲಟ್ಠಿ./ಹಿಂ. ಮರಾ. ಲಾಠೀ]

**ಲಾಠಿಹಲ್ಲೆ** (ನಾ). ದೊಣ್ಣೆ ಬೀಸಿ ಗುಂಪನ್ನು ಚದುರಿಸುವುದು : ಸ್ತ್ರೀಯರ ಮೇಲೆಯೂ ಲಾಠಿಹಲ್ಲೆಗಳಾಗುತ್ತಿದ್ದವು (ಕಾಂಗ್ರೆಸ್. ೨೩). [ಲಾಠಿ + ಹಲ್ಲೆ₁ (< ಹಲ್ಲಾ) ]

**ಲಾಡ₁** ' ಲಾಳ₂ ' ನೋ.

**ಲಾಡ₂** ' ನಾಲ್ಲ₂ ' ನೋ.

**ಲಾಡಿ₁** ' ಲಾಳಿ₁ ' ನೋ.

**ಲಾಡಿ₂** (ನಾ). ಲಾಟದೇಶದವನು : ಅಖಂಡೈಶ್ವರ್ಯದಿಂದೊಪ್ಪಿದ ಗುಜರಾತಿಯರು ಕಾಯತರು ಗೋಸಾವಿಯರು ಲಾಡಿಯರು (ಕೌಗಿಂ. ೦೩೩–೦). [ < ಲಾಡ₁ ]

**ಲಾಡಿ₃** (ನಾ). ೧. ನೀಳಪಟ್ಟಿ ; ಕಸೆ ; ದಾರ : "ಲಾಡೀ— ಚಲ್ಲಣದ ಕಶೆ " (ಕಾಶಕ್. ೨೩೯) ; ಈ ಪರ್ಯಾಯಗಳಿಗೆ ಕಾಣಿಸುವ ತೆರಪು ಗಳಿರುವುದಿಲ್ಲ . . . ಇವನ್ನು ಬೆನ್ನಿನ ಹಿಂಭಾಗದಲ್ಲಿ ಲಾಡಿಯಿಂದ ಕಟ್ಟು ತ್ತಾರೆ (ಕ್ರಶಾಜಿ. I. ೩೩೬). ೨. ಹಗ್ಗ ; ಹುರಿ : ಲಾಡಿಯ ಲಗಾಮನ್ನು ಹಿಡಿದಿದ್ದ ಅವರ ಕೈಗಳಲ್ಲಿ ಪವಿತ್ರದ ಉಂಗುರಗಳು ಹೊಳೆ ಯುತ್ತಿದ್ದವು (ಕಕಥಾ. ೦) ; ಅವನ್ನು ಕೂಡಲೆ ಲಾಡಿಗಳ ಮೂಲಕ ಮೋಟರನ್ನು ಜೋಡಿಸುವಲ್ಲಿಗೆ ಕಳುಹುವರು (ಬಾಂತ್ರ. I. ೯೦೩). ೩. ತೆಳುವಾಗಿ ಉದ್ದಕ್ಕೆ ಲಾಡಿಯಾಕಾರದ ಒಂದು ಬಗೆಯ ಹುಳು; ಕರುಳಿನ ಹುಳು : "ಲಾಡಿಯಂತಿರುವ (ಕರುಳಿನಲ್ಲಿಯ ಜಂತು) : ಲಾಡಿಜಂತು" (Cestoid. ಇಂಕೋ) ; ಲಾಡಿಹುಳುಗಳ ವರ್ಗದಲ್ಲಿ ದೇಹವು ಚಪ್ಪಟೆಯಾಗಿ ಲಾಡಿಯಂತೆ ಉದ್ದವಾಗಿರುತ್ತದೆ (ಪ್ರಾಣಿಶಾ. ೦೩೩).
[← ಹಿಂ. ನಾಡಾ; ಮರಾ. ನಾಡಾ, ನಾಡೀ. / ಪ್ರಾ. ಣಾಡ./ಸಂ. ನಾಡೀ]

**ಲಾಡು** (ನಾ). ಒಂದು ಬಗೆಯ ಸಿಹಿಭಕ್ಷ್ಯ; ಲಡ್ಡು : ವಡೆ ಅತಿರಸ ಲಾಡು ಸೇವಿಗೆ ಪರಮಾನ್ನ (ಸಂಪ್ರಾಶ. ೬) : ಶಿವ . . . ಲಾಡು ಸಮಾರಾಧನೆಗೆ ಒಂದು ದಿನವಾದರೂ ತಪ್ಪಿಸಿಕೊಳ್ಳುವ ಮನುಷ್ಯನಲ್ಲ (ರಾಷಕಾ. ೦೦೩): ಚಿರೋಟಿ, ಲಾಡು, ಮತ್ತೊಂದು ಸಿಹಿ ದವ್ರೋಟು (ಸಂಗಾ. ೩೯). [ ← ಹಿಂ. ಲಾಡೂ, ಲಡ್ಡೂ ; ಮರಾ. ಲಾಡು./ತಮಿ. ಲಾಡು. /ಸಂ. ಲಡ್ಡು]

**ಲಾತ** ' ಲತ್ತೆ ' ನೋ.

**ಲಾತಕೋಲು** (ನಾ). ಏಟು ಕೊಡುವ ಕೋಲು : ಬಡಿಗೋಲು : ಮೇಲೆ ಮಿಳ್ಳುವಿನ ದಾಡೆಯಂ ಕೀಳುತಂ ಲಾತಕೋಲಂತೆ ತಿರುವುವ ಮಹಾಮೇರುಮಂದರ ಸುಕೀಲಕಂಗಳ ಕಂತುಕಕ್ರೀಡೆಯಾಡುವ . . . ಓರ್ವಂ (ಶಿಕ್ಕ್ಮು. ೯–೬–೨೩): ಪಿರಿಯ ಮಿಳ್ಳುವಿನ ದಾಡೆಗಳನಲುಗಿಸಿ ಕಿಳ್ತು ಭರದಿಂದೆ ಲಾತಕೋಲಂತೆ ತಿರುಗಿಪನೊರ್ವನುರು ಮೇರು ಮಂದ ರಾದ್ರಿಗಳ ಪೊಡೆಚೆಂಡಾಡುವಂ ಸಂತತಂ ಮುದದೊಳು (ಅರಾಕ. ೩–೦೩–೯).
[ ಲಾತ (< ಲತ್ತೆ) + ಕೋಲು₁ ( < ಕೋಲ್₁) ]

**ಲಾತಿ** 'ಲಾಠಿ' ನೋ.

**ಲಾತು** 'ಲತ್ತೆ' ನೋ.

**ಲಾಪ** (ನಾ). ಸಂಭಾಷಣೆ; ಆಲಾಪ : ಓಲಗದೊಳ್ ಕುಳ್ಳಿರಿಸಿ ಲಾಪಮಂ ಪರವಯೋಗೀಂದ್ರನೊಡನಾರಂಭಿಸುತ್ತಿಂದ ಶಕ್ರ ನಗುತ (ಕರಪಾ. ೬).
[ಸಂ.]

**ಲಾಪಿಸು** (ಕ್ರಿ). ಹೇಳು; ತಿಳಿಸು : ಒಲ್ಲದಕುಪಾಯವನು ಲಾಪಿಸುವನು (ದೇವಾಂತ. ೨–೩೮). [ ಲಾಪ + — ಇಸು₃ ]

**ಲಾಭ** (ನಾ). ೧. ದೊರಕಿದುದು ; ಪ್ರಾಪ್ತಿ: "ಲಭ್, ಲಬ್ಧಿ: . . . ಲಭ:, ಲಾಭ:, ಈ ೯ ಹಡೆತಂ" (ಕಾಶಕ್. ೦೩೦): ಲೋಭವೇಕೋ ಭಕ್ತಿಯು ಲಾಭವ ಬಯಸುವಂಗೆ (ಬಸವ. ೦೦೬). ೨. (ವ್ಯಾಪಾರದಲ್ಲಿ) ಖರ್ಚು ಕಳೆದು ಬರುವ ಫಾಯಿದೆ,– ನಫೆ : "ಉಟ್ಟದುದು — ಬಿಟ್ಟುದು . . . ಲಾಭವಾದುದು" (ಕಶುದ. ಕಂ. ೦) ; ವ್ಯಾಪಾರ ಮಾಡುವಾಗ ಖರ್ಚೆಲ್ಲಾ ಕಳೆದು ಬಳಿ ಉಳಿಯುವ ಹಣವೇ ಲಾಭ (ಗ್ರಹಾ. ೦೯೪): ಲಾಭವಿಲ್ಲದೆ ಸೆಟ್ಟಿ ಹಳ್ಳಿಗೆ ಹೋಗ (ಗಾದೆ). ೩. ಪ್ರಯೋಜನ : ಈ ಸಂಸಾರದಲ್ಲಿ ವಿನಯದಿಂದ ಬಹಳ ದೊಡ್ಡ ಲಾಭ ವಾಗುವುದು (ಮುಂಬಾಯಿ. ೯–೭೩). [ಸಂ.]

**ಲಾಭಂಬೆಚು** (ಕ್ರಿ). (ವ್ಯಾಪಾರದಲ್ಲಿ) ಖರ್ಚುಮಾಡಿದುದಕ್ಕಿಂತ ಹೆಚ್ಚು ಹಣವನ್ನು ಪಡೆ; ಆದಾಯವನ್ನು ಪಡೆ : ಮಂವರದಂತೆ ಧೈರ್ಯಂ ಬೆರಸು ಲಾಭಂಬೆತ್ತ ಪರವನಂತುತ್ಸಾಹಂಬೆರಸು . . . ದೃಢಚಿತ್ತ ದಿಂದಿರ್ದು (ಶಬ್ದಾರ್ಥಾಮ್ಮ. ೦–೦೩೩). [ ಲಾಭ + ಪೆಱು₁ ]

**ಲಾಭಕ** (ನಾ). ೧. ನಫೆ; ಫಾಯಿದೆ. ೨. ಲಾಭವನ್ನು ಪಡೆದವನು; "ಲಭಕ:, ಲಾಭಕ:, ಲಭಮಾನ:, ಈ ೩ ಹಡೆವಂ" (ಕಾಶಕ್. ೦೩೦). [ಸಂ.]

**ಲಾಭಕರ** (ಗು). ೧. ಲಾಭವನ್ನುಂಟುಮಾಡುವ; ಲಾಭದಾಯಕವಾದ. (ನಾ). ೨. ಪ್ರಯೋಜನಕಾರಿಯಾದುದು : ವೈಯುಕ್ತಿಕವಾಗಿಯೂ ತನಗೂ ಮತ್ತು ತನ್ನ ಮಗಳಿಗೂ ಲಾಭಕರವಾಗಿರುವಾಗ, ಎರೆ ನುಂಗಿ

ಗಾಳಕ್ಕೆ ಸಿಕ್ಕಿದ ಮೀನನ್ನು ದಡಕ್ಕೆಳೆಯದೆ ಬಿಡುವಷ್ಟು ಎಗ್ಗನಾಗಿರಲಿಲ್ಲ ಅವನು (ಮಲಕು. ೭೭೦). [ಸಂ.]

**ಲಾಭಗವಳಿಗೆ** (ನಾ). (ವೀಳೆಯದೆಲೆಯ ಕಟ್ಟುಗಳ ಮೇಲೆ ಹಾಕುವ) ಒಂದು ಬಗೆಯ ತೆರಿಗೆ : ಪೇಜುಂಗೆ ಲಾಭಗವಳಿಗೆ ಯಣ್ಣುನೂಱುಲೆಯುಮಂ ತಲೆವೊಱೆಗೆ ಲಾಭಗವಳಿಗೆಯು ನಾಲ್ನೂಱೆಲೆಯುಮಂ . . . ಸಾಸಿರ್ವರ್ಬಿಟ್ಟಾರ್ (ಎ೩. XVIII. ೦೯೨-೩೯ : 1184).

[ ಲಾಭ + ಕವಳಿಗೆ₃ ]

**ಲಾಭದಾಯಕ** (ಗು). ೧. ಲಾಭವನ್ನುಂಟುಮಾಡುವ. (ನಾ). ೨. ಲಾಭಕರವಾದುದು : ತರಕಾರಿ ಬೆಳೆಯುವುದು ಮೋಹದ ಅಷ್ಟಕಸುಬು ಮಾತ್ರವಲ್ಲದೆ ಲಾಭದಾಯಕವೂ ಆಗಿದೆ (ಅರುಣ. ೦೨೬) ; ಬಂದ ಹಣ ಲಾಭದಾಯಕವಾಗುತ್ತಿರಲಿಲ್ಲ. (ಬರುಹ. ೦೯೯). [ಸಂ.]

**ಲಾಭಬಡಕ**, ಲಾಭಬುಡುಕ (ನಾ). ಹೆಚ್ಚು ಲಾಭವನ್ನು ಪಡೆಯಲು ಪ್ರಯತ್ನಿಸುವವನು : ಲಾಭಬಡಕರಿಗೆ ಇಂದು ಒಳ್ಳೆಯ ಸುವರ್ಣಸಂಧಿ ಬಂದೊದಗಿತು (ಕುರುಕ್ಷೇ. ೦೫೦). **ಲಾಭಬಡುಕ** : ಕೆಲವರು ಲಾಭಬಡುಕ ಕಂಟ್ರಾಕ್ಟರುಗಳಿಂದಲೂ, ದಲ್ಲಾಳಿಗಳಿಂದಲೂ . . . ಹೇರಳವಾಗಿ ಹಣವನ್ನು ಸಂಗ್ರಹಿಸಿ (ಕಂಜಕಂ. ೦೯೬).

[ ಲಾಭ + -ಬಡಕ₂ (< -ಬಡಕ₂) ]

**ಲಾಭಬಡುಕ** 'ಲಾಭಬಡಕ' ನೋ.

**ಲಾಭಸೆರೆ** (ನಾ). (?) : ಗೇಣಿದಾರರು ಗೇಣಿಯನ್ನು ಕೊಡುವುದರ ಜೊತೆಗೆ ತರಕಾರಿ, ತರಪಡಿ, ತಳರಾಸಿ, ಮೇಲ್ಗೊಳಗ, ಲಾಭಸೆರೆ ಮುಂತಾದ ಮರ್ಯಾದೆಗಳನ್ನೂ ಭೂಮಾಲೀಕರಿಗೆ ಕೊಡಬೇಕಾಗಿತ್ತು (ಕಂಜಕಂ. ೦೧).

[ ಲಾಭ + ಸೆರೆ₇ ]

**ಲಾಭಾಂತರಾಯ** (ನಾ). [ಜೈನ] ಅಂತರಾಯಪಂಚಕಗಳಲ್ಲಿ ಒಂದು; ಲಾಭವನ್ನು ಸಂಪಾದಿಸಬೇಕೆಂದಿದ್ದರೂ ಅದು ಸಿಗದಂತೆ ಮಾಡುವ ಕರ್ಮಪ್ರಕೃತಿ : ಲಾಭಾಂತರಾಯ : ಲಾಭವನ್ನು ಸಂಪಾದಿಸುವ ಬಯಕೆ ಇದ್ದರೂ ಸಿಗದಿರುವುದು. (ಕ್ರಪಥ. ೩೭೭). 'ಅಂತರಾಯಪಂಚಕ' ಪರಾ. [ಸಂ.]

**ಲಾಮ** 'ಲಾಮಾ' ನೋ.

**ಲಾಮಂಚ**, ಲಾಮಚ, ಲಾಮಚ್ಚ, ಲಾಮಚ್ಛ, ಲಾಮಜ್ಜ, ಲಾಮಜ್ಜೆ, ಲಾವಂಚ, ಲಾವಂಚಿ (ನಾ). ಒಂದು ಬಗೆಯ ಸುವಾಸನೆಯ ಬೇರುಳ್ಳ ಹುಲ್ಲು ; ಬಾಳದ ಬೇರು : "ಬಾಳಮಾ ಹ್ರೀಬೇರವೆನಲು ಲಾಮಂಚವಮುಕ್ಕು" (ಮಂಗರಾ. ೩೯-೨೯) ; ಪೊಸ ಲಾಮಂಚವ ತೆ[ಕೇ]ರ್ಗಳಲಂಪಿಂ ಸಸಿವರ್ಣವೇದಿಕೆಗಳ ಕಪುಸೊಂಪಿಂ (ಅಭ್ಯಟಿ. ೩-೦೫); ಕುಂಚ ಸತ್ತಕನಕ ದಂಡಿಗೆ ಚಮರಗಳು ಲಾಮಂಚ ಬಿಜ್ಜಣ ದಾಲವಟ್ಟ ಕಾಂಚನ ಸೌಖ್ಯ ಸಗ್ಗಳೆ ಗಿಂಡಿವಣ್ಗಳು ಚಂಚಲಾಕ್ಷಿಯೊಳ್ಗಿದಿದರು (ಕೋಹಕ. ೨೯-೯). **ಲಾಮಚ** : "ಜತ್ವಕ್ಕೆ ಚತ್ವಂ — ಲಾಮಜ್ಜ — ಲಾಮಚ್ಚ, ಲಾಮಚ" (ಶಮದ. ೨೮೩ ಶೃಯೋ) ; ಲಾಮಚದ ನೆರಕೆ ಗಜಪೂವುಗಳ ಹೊದಕೆ ಪಚ್ಚೆಗಪ್ಪುರವಾಳೆಗಳ ಕಂಬದಮರ್ದ ಮುಡಿವಾಳ ಗಟ್ಟು (ಶಬ್ದ್ರಾ. ೬-೬) ; ಲಾಮಚವು ಮುಡಿವಾಳ ಪಚ್ಚೆಯ ಚಾಮರಂಗಳು (ಅಕ್ಕೃಶ. ೦೯-೩೩). **ಲಾಮಚ್ಚ** : "ಲಾಮಜ್ಜ [ಶಾಕಾಂ. ಮಂಚ] ದಿರವೆ ಕೊಳವೇರೆಸಿಕ್ಕುಂ" (ಕಬ್ಕೃ. ೨೦). **ಲಾಮಚ್ಛ** : "ಕಾಕ್ಷಿಕಾ — ಲಾಮಚ್ಛ, ಒ(ಪೊ)ಗರು (ಜು)ಮಣ್ಣು" (ಒಪಥಿ. ೨೯). **ಲಾಮಜ್ಜ** : "ಶ್ವೇತವಾಲುಕಂ — ಲಾಮಜ್ಜ" (ಒಪಥಿ. ೦೭೦). **ಲಾಮಜ್ಜೆ** : "ಇಷ್ಟಕಾಪಥಂ — ಲಾಮಜ್ಜೆ" (ಒಪಥಿ. ೦೯). **ಲಾವಂಚ** : ಕಂಪಿನ ಮೊಲ್ಲೆ ಮಲ್ಲಿಗೆ ಪದ್ಮ ಲಾವಂಚ ತಂಪೆನುತಿರ್ದರಲ್ಲಲ್ಲಿ (ಶರಶ. ೯೭-೨೩) ; ಯಾವ ಲಾವಂಚದ ಬೀಸಣಿಗೆ . . . ತಂಪಿಡಿದೀತು ? (ಚಾಂಕ್ರ. II. ೦೦೬೦).

**ಲಾವಂಚಿ** : ಕಬ್ಬು, ನಸೇ, ಲಾವಂಚಿ, ಕಾಶಿ (ಶಮ್ಮಟ. ೨೬೯).

[ < ಪ್ರಾ. ಲಾಮಂಜಯ, ಲಾಮಂಜ. / ಸಂ. ಲಾಮಜ್ಜಕ ]

**ಲಾಮಚ** 'ಲಾಮಂಚ' ನೋ.

**ಲಾಮಚ್ಚ** 'ಲಾಮಂಚ' ನೋ.

**ಲಾಮಚ್ಛ** 'ಲಾಮಂಚ' ನೋ.

**ಲಾಮಜ್ಜ** 'ಲಾಮಂಚ' ನೋ.

**ಲಾಮಜ್ಜಕ** (ನಾ). = ಲಾಮಂಚ : "ಉಶೀರಂ, ಅಭಯಂ . . . ಲಾಮಜ್ಜಕಂ, ಲಘು, ಲಯಂ, ಅವದಾಹಂ, ಇಷ್ಟಕಾಪಥಂ—೧೦ . . . ಲಾಮಂಚದ ಹೆಸರು" (ಸಿದ್ಧಾಂಕ. ೦೫೦). [ಸಂ.]

**ಲಾಮಜ್ಜೆ** 'ಲಾಮಂಚ' ನೋ.

**ಲಾಮಾ**, ಲಾಮ (ನಾ). [ಬೌದ್ಧ] ಧರ್ಮಗುರು : ಬೌದ್ಧಧರ್ಮದ ಮುಖ್ಯ ಆಚಾರ್ಯನಾದ ಲಾಮಾ ಎಂಬುವನು ಇರುತ್ತಾನೆ (ಜಂಬಿಜ. ೯-೨೦೯). **ಲಾಮ** : ನೂತನಪ್ರವರ್ತಕರಾದ ಗುರುಗಳು 'ಲಾಮ' ಎಂದು ಕರೆಯಲ್ಪಡುತ್ತಾರೆ. ಮಹಾಲಾಮನು ಬುದ್ಧನ ಅವತಾರವೆಂದು . . . ಭಾವಿಸೋಣವಾಗಿದೆ (ಭೂಗೋಳ. ೦೨೦).

[← ನೇಪಾಳಿ. ಲಾಮಾ ; ಟಿಬೆಟಿಯನ್. ಬ್ಲಾಮ]

**ಲಾಮಾಪಂಥ** (ನಾ). ಬೌದ್ಧರ ಒಂದು ಪಂಥ,—ಪಂಗಡ : ಪದ್ಮಸಂಭವ ತಾಂತ್ರಿಕಬೌದ್ಧಮತದ ಆಚಾರ್ಯನಾಗಿದ್ದು . . . ಲಾಮಾ ಪಂಥವನ್ನು ಆರಂಭಿಸಿದ (ಶಾಕಪ. ೩೯೭). [ಲಾಮಾ+ಪಂಥ]

**ಲಾಯ** (ನಾ). ಕುದುರೆಗಳನ್ನು ಕಟ್ಟುವ ಕೊಟ್ಟಿಗೆ ; ಅಶ್ವಶಾಲೆ ; ತಬೇಲಿ : "ಲಾಯ:_ಕುದುರೆಯ ಮನೆ" (ಕಾಕಕ್ಕ. ೦೭೬) ; ಲಾಯದ ಅಶ್ವ ನೀರನೊಡಗೂಡಿತ್ತು (ಮರುಹ. ೩೭) ; ಲಾಯದೊಳಗುತ್ತಮದ ತೇಜಿಯನಾಯ್ದು ಹೂಡಿದ ರಥಕೆ (ವಶಪ. ೬-೨೯) ; ಒಬ್ಬನು ಕುದುರೆಗಳನ್ನು ಲಾಯದಲ್ಲಿ ತಂದು ಕಟ್ಟಿದನು (ಪಂಕಾಶ. ೦೦); ಅರಸನ ಕುದುರೆ ಲಾಯದಲ್ಲೇ ಮುಪ್ಪಾಯಿತು (ಗಾದೆ).

[? ./ ತಮಿ. ಮಲ. ತುಳು. ತೆಲು. ಲಾಯ]

**ಲಾಯಖ್** 'ಲಾಯಕ್ಕು' ನೋ.

**ಲಾಯಕು** 'ಲಾಯಕ್ಕು' ನೋ.

**ಲಾಯಕ್ಕು**, ಲಾಯಖ್, ಲಾಯಕು, ಲಾಯಖು, ಲಾಯಖ್ಖು (ನಾ). ೧. ಯೋಗ್ಯವಾದುದು ; ಅರ್ಹವಾದುದು : ಒಂದು ರೀತಿಯಿಂದ ಸುದ್ದಿಗಳು ಹಬ್ಬುವುದು ಲಾಯಕ್ಕು (ಬಿದುಜ. ೨). ೨. ಯೋಗ್ಯವ್ಯಕ್ತಿ ; ಅರ್ಹನಾದವನು: ಶ್ರೀಧರನು . . . ಆ ಹುಡುಗಿಗೆ ಸುತರಾಂ ಲಾಯಕ್ಕಲ್ಲ (ಶಿವರಾ. ೦೦೯) ; ಹೌದಾ ಹೊರೋಕೆ ನೀನು ಲಾಯಕ್ಕು (ಅಷ್ಟಕೂ. ೭೩) ; ಸೇವೆಗೆ ಲಾಯಕ್ಕು ಆಗಿದ್ದೀ (ರಂಗಕ್. ೨೯೨). **ಲಾಯಖ್** : ೧. ಮಳಿಕತ್ತೆ ಲಾಯಖ್ಖಾಗಿಲ್ಲ, ಕುಂಟುತ್ತದೆ (ಹಸುಹೂ. ೩೨೦). **ಲಾಯಕು** : ೧. ಎತ್ತುಗಳು ಗಿಡ್ಡರಾಸಿ ಆಗಿ ಗಾಡಿ ಎಳೆಯುವ ಲಾಯಕು ಅಲ್ಲ (ರಾತೇಂದ್ರ. ೩೯). **ಲಾಯಖು** : ೧. ಸಾಗುವಳಿ ಲಾಯಖು ಭೂಮಿ (ಭೂಜಂಬ. ೩೯) ; ತಮಿಳು, ತೆಲುಗು ಸಿನೇಮಾನೇ ಅವರಿಗೆ ಲಾಯಖು (ಹಷ್ಟ್ರಂದ. ೩೭). ೨. ಚಿಕ್ಕಪುಟ್ಟ ಕಳವು ಮೊಕದ್ದಮೆಗಳನ್ನು ಹಿಡಿದು ವಿಚಾರಿಸಲು ಲಾಯಖಾಗಿರುತ್ತಾನೆ (ಗ್ರಾಪಕಾಶ.೭೦). **ಲಾಯಖ್ಖು** : ೧. ಕೇವಲ ಗುಮಾಸ್ತರ ವರ್ಗವನ್ನು ಉತ್ಪತ್ತಿ ಮಾಡುವುದಕ್ಕೆ ಲಾಯಖ್ಖಾದ ಶಿಕ್ಷೆ (ಭೂರಾಜ. ೦೬೩) ; ಇದು ಅದಕ್ಕಿಂತ ಪಸಂದಾಗಿದೆ. ಲಾಯಖ್ಖಾಗಿ ಬಳುಕ್ತದೆ. ಎಂದು ಬಗಳಿಗೆ ಕೊಟ್ಟರು (ಮಲಮ. ೩೩೬).

[← ಅರ. ಲಾಇಕ್ ; ಹಿಂ. ಲಾಯಕ್ ; ಮರಾ. ಲಾಯಕ್, ಲಾಯಖ್]

**ಲಾಯಖು** 'ಲಾಯಕ್ಕು' ನೋ.

**ಲಾಯಖ್ಖು** 'ಲಾಯಕ್ಕು' ನೋ.

**ಲಾಯುಗುದುರೆ** (ನಾ). ಲಾಯದಲ್ಲಿರುವ ಕುದುರೆ : ಮತ್ತಗಜ ಮದ ವೇಱ ಕಂಭವ ಕಿತ್ತುದುಪ್ಪರಿಗೆಯು ಮುಱಿದುದಾ ಲಾಯುಗುದುರೆಗಳಾ ತುಕ್ಕಿದುದು (ಜೈಭಾ. ೨೨-೫೨). [ಲಾಯ + ಕುದುರೆ]

**ಲಾಯರ್** 'ಲಾಯರು' ನೋ.

**ಲಾಯರಿ** (ನಾ). ವಕೀಲವೃತ್ತಿ ; ವಕಾಲತ್ತು : ಈ ಸಲದ ಲಾಯರಿ ಪರೀಕ್ಷೆಗೆ ಅವನು ಕುಳಿತಿದ್ದ (ರಜಿ). [< ಲಾಯರು]

**ಲಾಯರಿಕೆ** (ನಾ). ವಕೀಲನಾಗಿರುವಿಕೆ ; ವಕೀಲಿವೃತ್ತಿ : ಸೀತಾ ರಾಮು ನೋಡಲು ಗಡುಸಾಗಿದ್ದರೂ ಸ್ವಭಾವ ಮಾತ್ರ ಬಹಳ ಮೃದು . . . ಅದರಿಂದಲೇ ಇರಬೇಕು ಲಾಯರಿಕೆಯಲ್ಲಿ ಅಷ್ಟಾಗಿ ಹೆಸರು ಬರಲಿಲ್ಲ (ಅಂಜೂ. ೬೬). [ಲಾಯರು + – ಇಕೆ]

**ಲಾಯರು**, ಲಾಯರ್ (ನಾ). ನ್ಯಾಯವಾದಿ ; ವಕೀಲ : ಮೃದುಸ್ವಭಾವದ ಜನರು ಲಾಯರುಗಳಾದರೆ ಕಕ್ಷಿಗಾರರಿಗೆ ಕೈಲಾಸವೇ ಗತಿ ! (ಅಂಜೂ. ೬೬). **ಲಾಯರ್** : ಈಗ ಮೈಸೂರಿಗೆ ಬಂದು ಲಾಯರ್ ಆಗಿರಲು ಪ್ರಯತ್ನಿಸುತ್ತಿದ್ದ (ಅಂಜೂ. ೬೬). [← ಇಂ. Lawyer]

**ಲಾಯವಳ್ಳ** (ನಾ). ಲಾಯದ ಸೇವಕ : ಈ ಲಾಯದಿಂ ಮೀಱ ಬಂದತ್ತರರೇ ಕರ್ಗೊಳೇಡಗಂ ಭೋಯೆನುತೆ ಪೆಱಗೆ ಸಾರ್ತರ್ಪನಂ ಲಾಯ ವಳ್ಳರ್ (ಚಿತ್ರಗೋ. ೨೦-೩೯). [ಲಾಯ + – ವಳ್ಳ (< – ವಳ)]

**ಲಾಯಿ** (ನಾ). ವರಸೆ (?) : ಘಾಯದಲಿ ಸಲೆ ಚೊಕ್ಕಯದಲು ಪಾಯ ಕರ ದಂಡೆಯಲಿ ಲಗುಡೆಯ ಲಾಯಿಯೊಳಗೆ ನವಾಯಿ ಬಿನ್ನಾಣದಲಿ ಬೇಸಱದೆ ಸ್ಥಾಯಿಯಲಿ ಸಂಚರಿಯಲೀಯದಲ್ಪಾಯಿಯಲಿ ಬಂಧದ ವಿನೋದ ದಲಾಯತನವನಱದಿಹನೆ ಮಲ್ಲನು ರಾಯ ಕೇಳೆಂದ (ಕುಮಾ.ಭಾ. ೬೦೩. ೦-೫೩). [ ? ]

**ಲಾರಣಾ** (ನಾ). (?) : ಮಾರ್ಗದಲ್ಲಿ ಅವರನ್ನೆಲ್ಲಾ ಲೂಟೀಮಾಡಿ ಭರತರ್ಪು ಕುದುರೆ ಪೈಕಿ ಕೆಲವೂ ತಮ್ಮ ಕಡೆ ಲಾರಣಾ ಬರಸಿಕೊಂಡು . . . ಕೋಟೆಯಲ್ಲಿಯಿದ್ದ ಫವುಜನೆಲ್ಲಾ ತೆಗೆದು ಕಡತನಾಳು ಕೆಂಗಾಳು ಬೋರೆ ಮೇಲೆ ಯಿಳಿಸಿದರು (ಕೃದಶ. ೫೯). [ ? ]

**ಲಾರಿ** (ನಾ). ಸಾಮಾನು, ಸರಂಜಾಮುಗಳನ್ನು ಸಾಗಿಸುವ ಒಂದು ಬಗೆಯ ಮೋಟಾರು ವಾಹನ : ಲಾರಿಯಲಿ ಇದನು ಸಾಗಿಸಿ ಇಳಿಸಿ ಬಾಗಿಲಲಿ ಹಣ ಸಂದಿತೆಂದು ತೆರಳಿದನು ಸಂತುಷ್ಟಿಯಲಿ (ಬೀಚಪು. ೬೦–೦೩); ದೊಡ್ಡದೊಂದು ಲಾರಿ ಬಂದು ನಿಂತಿತು (ಕೆಳ್ತರಜ. ೩೯) ; ಘಾಟಿಯು ದಾರಿಯು ಲಾರಿಯ ನಡುಸುವುದು (ಕಂಠ್ರಪೀ. ೦೦೮–೨೯). [← ಇಂ. Lorry]

**ಲಾಲ್** (ನಾ). ೧. ಕೆಂಪುಬಣ್ಣ ; ಕೆಂಬಣ್ಣ. ೨. ಕಂದುಬಣ್ಣದ ಮೈ ಹಾಗೂ ಕೆಂಬಣ್ಣದ ಎದೆ ಇರುವ ಒಂದು ಬಗೆಯ ಹಕ್ಕಿ : ಚಿಕ್ಕ ಹಕ್ಕಿಗಳಲ್ಲಿ ಹೂಗುಬ್ಬಿಗಳ ಸಾಲಿಗೆ ಸೇರುವ "ಲಾಲ್" ನಮ್ಮಲ್ಲಿ ಅತಿ ಪ್ರಿಯವಾದ ಹಕ್ಕಿ (ಜಾಂಕ್ರ. III, ೦೯೩೬).

**ಲಾಲ್‍ತರಕಾರಿ** = ಮಾಂಸ : ಮುಖ್ಯವಾಗಿ ಅವನಿಗೆ ಬೇಕಾದುದು ಲಾಲ್‍ತರಕಾರಿ (ಪಷ್ಕೃರು. ೨೨೦). [← ಪಾರ. ಹಿಂ. ಮರಾ. ಲಾಲ್]

**ಲಾಲ್‍ತಿಗಡೆ** (ನಾ). ಒಂದು ಬಗೆಯ ತಿಗಡೆ ; ಕೆಂಪು ತಿಗಡೆ : "ಸರಳಾ, ಶ್ರಿಪುಟಾ . . . ಭೇದಿಯಾಗುವ ಲಾಲ್‍ತಿಗಡೆ" (ಸಿದ್ಧಾಂತಿ. ೦೫೬).

[ಲಾಲ್ + ತಿಗಡೆ]

**ಲಾಲ್‍ಬಾಗ್**, ಲಾಲಬಾಗು (ನಾ). ಉದ್ಯಾನವನ ; ತೋಟ : "ಆಕ್ರೀಡಃ, ಉದ್ಯಾನಂ . . . ಅರಸುಗಳಿಂದ ಹಾಕಿಸಲ್ಪಟ್ಟಿರುವ ಊರು ಹೊರಗಣ ತೋಟ, ಲಾಲ್‍ಬಾಗ್" (ಸಿದ್ಧಾಂತಿ. ೦೦೦) ; ಲಾಲ್‍ಬಾಗಿನಿಂದ ದವಲತ್ತುಬಾಗು . . . ಪ್ರಾರಂಭಮಾಡಿಸಿದರು (ರಾಜೇಂದ್ರ. ೯೨). **ಲಾಲಬಾಗು** : ಸರ್ವಮಾನ್ಯವಂ ಪಡೆದು ಒರಿಯ ಕೆಱೆಯ ಕೆಳಗೆ ಲಾಲಬಾಗಿನ ಹಾನೀರಲ್ಲಿ ಬಿಟ್ಟುದಕ ತೋಂಟ (ಎಪಿಕ. IX-i, ೨೬೬–೬೯ ; ೧೧೬೦) ; 'ಚಿಕ್ಕಲಾಲ್‍ಬಾಗ್' ಎಂದು ಯಾರು ಹೆಸರಿಟ್ಟರೋ, ಏಕೆ ಇಟ್ಟರೋ ತಿಳಿಯದು, ಬೆಂಗಳೂರಿಗೆಲ್ಲ ಹೆಮ್ಮೆಯ ಉದ್ಯಾನವಾದ ಲಾಲ ಬಾಗಿಗೂ ಇದಕ್ಕೂ ಒಂದು ವಿಷಯದಲ್ಲೂ ಹೋಲಿಕೆಯಿಲ್ಲ (ಪ್ರಾಂತ. ೫೦). [ಲಾಲ್ + ಬಾಗ್]

**ಲಾಲ** (ನಾ). ಒಂದು ಬಗೆಯ ಅಳಲೆ : "ಸಜ್ಜರಸ – ಲಾಲ" (೬ಪಂ. ೦೬೪). [ಸಂ. ಲಾಲಾ]

**ಲಾಲಂಕಿ** (ನಾ). ಒಂದು ಬಗೆಯ ಆಟ (?) : ಒಂದುದಿವಸಂ ಬ್ರಾಹ್ಮಣರ ಪುತ್ರರೊಳಗೆ ಬಸವಂ ಸಂತೋಷದಿಂದೆ ಲಾಲಂಕಿಯಾಡಲು ಪೂರ್ವ ಭ್ರಾಂತನುಂ ಮಹೋರ್ವನಂ ಬಾವಿಯೊಳು ನೂಂಕಿಯುಂತು ಕೆಡಪುವರೆ ಬಸವರಸರೇ ಎಂದಷ್ಟುಮುಂದಿವನ ಮೇಲಿಕ್ಕಲು (ಕ್ರಬಪು. ೬–೭೬). [?]

**ಲಾಲಂಗಿ** (ನಾ). [ಸಂಗೀತ] ಠಾಯಗಳಲ್ಲಿ ಒಂದು ಪ್ರಭೇದ ; ರಾಗಾ ಲಾಪನೆಯ ಒಂದು ಪ್ರಕಾರ : ಗಮಕಂ ಗಾರವಂಬಡೆಯೆ ಗಹಗಹಿಕೆ ಗೊಂಡಂ ಗೊಂಡಿ ಚಡಂ ಬಾಹಟಂ ಲಾಲಂಗಿ ತನ್ನೆವಣೆ ನಿಸ್ಸರಣೆ ರಂಗರಕ್ತಿ ಬೇಗವಣೆತು . . . ಕಮ್ಮಣೆ ಪೆಸರಂ ಬೆಡಂಗುವಡೆಯೆ ಪಾಡುತ್ತಿರೆಯುಂ (ಶಾಂತೀಶ್ವ. ೦೬–೬೬ ವ). [ ? ]

**ಲಾಲಣೆ** (ನಾ). (?) : ನೂಕದರೊಳ್ಪಾಗೆ ಪಾಲ ಮಣಯೊಳ್ ಪರಿಸಾ ಮೇಲುಂ ವಿಷಮಗಳಿದ್ದಪೆ ಮೂಲದೊಳಂ ದ್ವಿಗುಣಗಾಣೆ ಅದನಂ ಮತ್ತಾ ಪಾಲಿಂ ಮೂಱನು ಕೂಡಿಸು ಲಾಲಣೆಯೊಳ್ಗುಣಿಸೆ ಚೌಪಮಣೆ ಯೊಳ್ಪರಿಸಾ (ಚಾಕ್ಸರ. ೬೮–೨). [ ? ]

**ಲಾಲನೆ** (ನಾ). ೧. ಅಕ್ಕರೆಯನ್ನು ತೋರಿಸುವುದು; ಮುದ್ದಾಡುವುದು; ಮುದ್ದಾಟ : ಬಾಲಕನ ಲೀಲೆಯಂ ಕಂಡು ಹಿಗ್ಗುವಳೊಮ್ಮೆ ಲಾಲನೆಗಳಿಲ್ಲೆಂದಳಲ್ದು ಮಱುಗುವಳೊಮ್ಮೆ (ಕೃಬಿಥಾ. ೨೮–೦೯) ; ಪಾಲನೆ ಇಲ್ಲದಿದ್ದರೆ ಲಾಲನೆಗೆ ಕಡಿಮೆಯೇ ? (ಗಾರ). ೨. (ರಕ್ಷಣೆಯಲ್ಲಿರುವ ಕಾಡೆಮ್ಮೆಗಳ) ಗುಂಪು (?): ಕಂಡ ಮೃಗ ಮೈದೆಗೆಯದಿಕ್ಕೆಯ ಹಿಂಡು ಹೊಳಹಿನ ಹುಲಿಯ ಮೇಕೆಯ ಮಿಂಡವಂದಿಯ ಲಾವಣಿಗೆಯ ಲುಲಾಯ ಲಾಲನೆಯ ತೊಂಡುವೊಲನ ತೊಡಂಕು ನವಿಲಿನ ಖಂಡೆಯದ ಪೊಳನೆಡದ ಖಡ್ಗದ ಹಿಂಡುಗಳ ತೋಱಿಸುವೆನು (ಕುಮಾ.ಭಾ. ೦೩–೦೮). [ಸಂ. ಲಾಲನ]

**ಲಾಲಬಂದಿ** 'ನಾಲಬಂದಿ' ನೋ.

**ಲಾಲಬಾಗು** 'ಲಾಲ್‍ಬಾಗ್' ನೋ.

**ಲಾಲಸ** (ನಾ). ೧. ಅತಿಯಾದ ಆಸೆ,—ಬಯಕೆ : "ಲಾಲಸಾ, ಮಹಾನ್ಸ್ಪೃಹಾ —ಹೆಚ್ಚಾದ ಅಪೇಕ್ಷೆಗೆ ಹೆಸರು" (ಸಿದ್ಧಾಂತಿ. ೬೬) ; ಮಾತುಗಳ್ ಮದನ ರಾಗೋನ್ಮಾದವಂ ಬೀಱೆ ಬಾಹುಗಳಾಲಿಂಗನಲಾಲಸಂಗಳೆನೆ ಧೈರ್ಯಂ ಗೆಟ್ಟು ಮೇಲ್ವಾಯ್ದು ಚೇಷ್ಟೆಗೆ ಪೌಲಸ್ತ್ಯನುಮೊತ್ತುಗೊಟ್ಟನೆನಲಾಜಿಂ ದರ್ಪಕಂ ದಂಡಿಸಂ (ಪಂಪರಾ. ೯–೦೯೮). ೨. ಅತಿಯಾದ ಅಪೇಕ್ಷೆ ಯುಳ್ಳವನು : "ಲೋಲುಭಂ, ಲೋಲುಪಂ, ಲೋಲಂ, ಲಾಲಸಂ, ಲಂಪಟಂ—ಈ ೫ ಅಳಿಪುವವಂ" (ಪಂಪಯು. ೫೮–೦೯೮); ಶ್ರೀರಾಮಚಂದ್ರ ದರ್ಶನಲಾಲಸರ್. . . ಕಾಣಿಸಿಕೊಂಡರ್ (ರಾಮಾಶ್ವ. ೦೬–೮); ಅತ್ಯಲ್ಪ ಸಂಖ್ಯೆಯ ಜನ ಅತಿಧನಿಕರಾಗಿ ಭೋಗಭಾಗ್ಯಗಳಲ್ಲಿ ಲಾಲಸರಾಗಿರುವುದು ಅನ್ಯಾಯ (ಹಪಕ್ರ. ೨೦೮). [ಸಂ.]

**ಲಾಲಸಕ** (ನಾ). = ಲಾಲಸ ೨ : "ಲೋಲುಪನಭಿಲಾಷುಕನತಿಲಾಲಸಕಂ ಗೃಧ್ನು ಲಂಪಟಂ ಲುಬ್ಧನವಂ" (ಪಸ್ತುಕೋ. ೯೯–೬). [ಸಂ.]

**ಲಾಲಸೆ** (ನಾ). ೧. ಅತಿಯಾಸೆ; ಉತ್ಕಟವಾದ ಇಚ್ಛೆ; ಔತ್ಸುಕ್ಯ : ಎಲ್ಲಿ ಸೌಂದರ್ಯವಿರುವದೋ ಅಲ್ಲಿ ಲಾಲಸೆಯು ಸುತ್ತುವರೆದಿರುತ್ತದೆ (ಜೀಬುಂಕ. ೫೯೬); ನಮ್ಮ ಪ್ರೇಮವು ಶುದ್ಧ . . . ಅದರಲ್ಲಿ ಲಾಲಸೆ ಇಲ್ಲ (ಶ್ರಶಾಕ. ೦೯೦). ೨. ಗರ್ಭಿಣಿಯ ಆಸೆ,—ಬಯಕೆ : "ದೋಹಳಂ,

ದೌಹೃದಂ. ಶ್ರದ್ಧಾ. ಲಾಲಸಾ—ಈ ೪ ಬಯಕೆ" (ಶಲಾಋಷು. ೬೨-೪೪೪). [ಸಂ.]

**ಲಾಲಾಂಬು** (ನಾ). ಜೊಲ್ಲು : ಕರಿಕರಶೀಕರಮದಜಳ ತುರಂಗಲಾಲಾಂಬು ಸೇಕದಿಂದಬುದ್ಬುದಿರ್ಪ ರಜಂ ನರೇಂದ್ರಚಾಮರಮರುದ್ವಿಘಟಿತಿಯಿಂ ತೆರಳ್ದು ತೂಳ್ದತ್ತು (ಆಪು. ೦೦-೩೬). [ಸಂ.]

**ಲಾಲಾಗ್ರಂಥಿ** (ನಾ). ಜೊಲ್ಲು ಉತ್ಪತ್ತಿಯಾಗುವ ಗ್ರಂಥಿ,-ಕೋಶ : ಪಚನಕ್ಕೆ ಸಂಬಂಧಿಸಿದ ಕಿಣ್ವಗಳನ್ನು. ಲಾಲಾಗ್ರಂಥಿಗಳು . . . ಸ್ರವಿಸುತ್ತವೆ (೬೮೪. ೨೯). [ಸಂ.]

**ಲಾಲಾಜಲ**, ಲಾಲಾಜಳ, ಲಾಳಾಜಳ (ನಾ). = ಲಾಲಾಂಬು : ಖಲೀನ ಸ್ಖಲನಭವಬಹುಳಲಾಲಾಜಲಪೂಗುತಿರೆ ತುರಗರತ್ನಮೆಸೆದತ್ತಾಗಳ್ (೫ಾಂಪು. ೪೩೪); ಮೋಹವಲ್ಲರಿ ಪಸರಿಸಿ ಪರ್ವಿದುದು ಸುತರ ಲಾಲಾಜಲದಿಂ (ಶಂರಾಮಾ. ೩-೦೩೯); ಗಜಗಳ ಮದಧಾರಾಜಲದ ಮತ್ತು ಕುದುರೆಗಳ ಲಾಲಾಜಲದ ಪ್ರವಾಹವು . . . ಅನವರತವಾಗಿ ಹರಿಯುತ್ತಿತ್ತು (೪೬೪. ೯೩). **ಲಾಲಾಜಳ** : ಗಜಮದಧಾರಾಜಳದ ಹಯಂಗಳ ಲಾಲಾಜಳದ ಪೊನಲ್ (ಎಕ. VII. ಶಿಕಾ. ೦೦೦-೦೩; 1129). **ಲಾಳಾಜಳ**: ಘಟ್ಟಿಸಿದ ಕೇಟ ಘಟ್ಟಣೆಯೊಳ್ ಪೊಟ್ಟಗೊಡೆದ ತಾಳುಗೆಗಳ ರುಧಿರಜಲ ದೊಳ್ ಬೆರಸಿ ಪದೆಂಪನಾಳ್ದ ಜಾತ್ಯಶ್ವದ ಲಾಳಾಜಳದೊಳಂ (ಶಂಕಥಾ. ೦೦-೭೦ ವ); ಹಯಲಾಳಾಜಳಮುಂ ಮದೇಭಮದಮೂತ್ರಾ ಸಾರಮುಂ. . . ಮೊಟ್ಟಿಸಿ (ಪುಕ್ಕ. ೩-೯೩). [ಸಂ.]

**ಲಾಲಾಜಳ** 'ಲಾಲಾಜಲ' ನೋ.

**ಲಾಲಾಟ** (ಗು). ೧. ಹಣೆಯಲ್ಲಿರುವ : ಭವಲಾಲಾಟವಿಲೋಚನಾಗ್ನಿ ಶಿಖೆಯಿಂ ಬೆಂದು (ಶಂಕಥಾ. ೭-೨೪). (ನಾ). ೨. ಹಣೆ; ನೊಸಲು. [ಸಂ.]

**ಲಾಲಾಟಿಕ** (ನಾ). ೧. ಒಡೆಯನ ಮುಖವನ್ನು ನೋಡಿಯೇ ಅವನ ಅಭಿಪ್ರಾಯವನ್ನು ತಿಳಿದುಕೊಳ್ಳುವವನು. ೨. ಕೊಟ್ಟ ಕೆಲಸವನ್ನು ಮಾಡಲು ಅಸಮರ್ಥನಾದವನು : "ಲಾಲಾಟಿಕಃ. ಪ್ರಭೋರ್ಭಾವ ದರ್ಶೀ—ಅರಸಿನ ತಾತ್ಪರ್ಯವನ್ನು ತಿಳಿದವನು. ಕಾರ್ಯಾಕ್ಷಮಃ. ಕೆಲಸವನ್ನು ನಿರ್ವಹಿಸಲಾರದ ಅಸಮರ್ಥನು — ೨ಕ್ಕೂ ಹೆಸರು" (ಸಿದ್ಧಾಂತ. ೩೭೩). [ಸಂ. ಲಾರಾಟಿಕ]

**ಲಾಲಾರಸ** (ನಾ). = ಲಾಲಾಂಬು : "ಜೊಲ್ಲು. ಲಾಲಾ(ರಸ). ಉಗುಳು. ಬಾಯಿನೀರು" (Saliva. ೨೦೫೬). [ಸಂ.]

**ಲಾಲಿ**$_1$ (ನಾ). ಮಕ್ಕಳನ್ನು ಮಲಗಿಸುವಾಗ ಹಾಡುವ ಹಾಡು: ಜೋಗುಳ : ಲಾಲಿ ಲಾಲಿ ರಂಗಯ್ಯಗೆ ಲಾಲಿ ಲಾಲಿ (ಪುರಂದ. ೩-೨೦೪ ಕೃತಿ): ಲಾಲಿ ಮಿಸುನಿಯ ಬೊಂಬೆರನ್ನವೆ ಲಾಲಿ ಲಾಲೀಯೆಂದು ತೂಗಿದರಾಳೆಕನ್ನೆಯರು (೩ಸಹ. ೩೨-೧೧) ; ಜಗದಂಬೆ ತೊಡೆಯಲ್ಲಿ ಲಾಲಿ ಕೇಳುತ್ತ ಸೊಗನಿದ್ದೆಗೊಂಡವನು ಬರುವನೇ ಇತ್ತ ? (೯೩ತ. ೪೬-೦೩). 'ಲಾಲಿಪದ' ಪರಾ. [ದೇ.॥ ತಮಿ. ತೆಲು. ಲಾಲಿ]

**ಲಾಲಿ**$_2$ 'ಲಾಳಿ$_1$' ನೋ.

**ಲಾಲಿತ**. ಲಾಳಿತ (ಗು). ೧. ಮಮತೆಯಿಂದ ಕೂಡಿದ ; ಪ್ರೀತಿಯ : ಲಾಲಿತಾಸ್ಯವೆ ಮಮತೆ ತೊಳಗುವ ಲೋಲಲೋಚನಮಬುಹುಕುಚಹು ಸಮೇಳವಾಗಿಹ ಗಿರಿಜೆ ಮೆಚ್ಚಿದಳು ಶಂಕರಾಂಕವಲಿ (ಕೃಶು. ೨-೦೦). ೨. ಪ್ರೀತಿಯಿಂದ ಪೋಷಿಸಿದ,-ರಕ್ಷಿಸಿದ,-ಸಾಕಿದ : ಲಾಲಿತೋತ್ತಮ ವಾಜಿಗಳು ತೊಂಬತ್ತುಸಾವಿರವು (ಬಸವು. ೩-೦೩). (ನಾ). ೩. ಒಲವು; ಪ್ರೀತಿ: ಅನುರಾಗ. ೪. ಆನಂದ; ಸಂತೋಷ: 'ಲಾಲಿಸು' ಹೋ. **ಲಾಳಿತ** : ೫. ಪ್ರೀತಿಯಿಂದ 'ಸಾಕಿದುದು,-ಪೋಷಿಸಲ್ಪಟ್ಟುದು : ಲಾಳಿತವಾಗಿ ತನ್ನ ನಡೆಯಿಂ ನಡೆಗಲ್ತೊಡವರ್ಪ ಕೇಳಿಹಂಸಾಳಿಯ ಬೆನ್ನೊಳ್ಪೆದೆ ನಡೆಯಲ್ ಬಸವುಲ್ಲದೆ ನಿಂದು (ಜಗಪ. ೨-೯೩). [ಸಂ.]

**ಲಾಲಿತ್ಯ** (ನಾ). ೧. ಚೆಲುವು ; ಸೌಂದರ್ಯ. ೨. ಮಾಧುರ್ಯ ; ಇಂಪು : ಸರಸಪದಶಯ್ಯಾದೃಢವ್ಯಾಕರಣಯುತ ಲಾಲಿತ್ಯನಿಯಮಾಕ್ಷರ ಸುಲಕ್ಷಣಭಾವಮಾಗಿರೆ ರಚಿಸುವೆಂ ಕೃತಿಯ (ಬಸವು. ೦-೦೯); ಸಂಗೀತವು . . . ಕೇವಲ ಲಾಲಿತ್ಯದೆಡೆಗೆ ವಾಲಿದಂತಿವೆ (ಶಾರದ. ೫೯೬). ೩. [ಕಾವ್ಯಮೀ] ಶಬ್ದಗುಣಗಳಲ್ಲಿ ಒಂದು : ಶ್ಲೇಷ, ಲಾಲಿತ್ಯ . . . ಯೌಗಿಕ ಇವು ಏಳೂ 'ಶಬ್ದಗುಣಗಳು' (ಕೃಶಿ. ೨೩೨ ೮೩೮). [ಸಂ.]

**ಲಾಲಿಪದ** (ನಾ). = ಲಾಲಿ$_1$ : ತಾಯಿಯ ಇಂಪಾದ ಲಾಲಿಪದವನ್ನು ಕೇಳುತ್ತಾ ಮಗು ಮಲಗಿತು (೮೩). [ಲಾಲಿ$_1$ + ಪದ$_2$]

**ಲಾಲಿಸು** (ಕ್ರಿ). ೧. ಅಕ್ಕರೆಯನ್ನು ತೋರಿಸು ; ಮುದ್ದಾಡು : ಪಶುಗಳ್ ಕಪ್ಪುರಮೃಗಂಗಳ್ . . . ಪ್ರಜೆಗಳುಂ ತಾವೆಲ್ಲರುಂ ತಮ್ಮಯಾ ಶಿಶುವಂ ಲಾಲಿಸದಿರ್ಪರೇ (ಸೋಮೇಶ. ೯೦) ; ಪುಳಕಿಸುತೆ ಕಂಪಿಸುತೆ ಬೀಳ್ಕೊಂಡನಕ್ಕಜಿಂ ಲಾಲಿಸುತ್ತಾಲಿಸುತೆ (ಬಸ. ೩-೮); ಯಾವಾಗಲೂ ಅದನ್ನು ಎತ್ತಿಕೊಂಡೇ ಇರುತ್ತಾ ಲಾಲಿಸುತ್ತಿದ್ದಳು (ವಾಮಗು. ೦೨೨). ೨. ಪೋಷಿಸಲ್ಪಡು ; **ಆರೈಕೆ ಹೋದು** : ಅಂದಳವನೇರಿಕೊಂಡು ತಿರುಗಾಡುವುದರಿಂದ ಆಯುಸ್ಸು ಹೆಚ್ಚಿ. . . ಕೀರ್ತಿಯಿಂದ ಲಾಲಿಸಲ್ಪಟ್ಟು ಬಹುಸಿದ್ಧಿಕರವಾಗಿರುವುದು (೩ಶಪ. ೩೫). ೩. (ಕಿವಿಗೊಟ್ಟು) ಕೇಳು ; ಆಲಿಸು : ಆಲಿಸೆನ್ನ ಬಿನ್ನಪವ ಲಾಲಿಸೆನ್ನ ಬಿನ್ನಪವ (ಮಹಾದೇ. ೩. ೩೭-೪೦); ಒರೆಯೆ ಲಾಲಿಸಲೋದುತಿರ್ದುದು ಕರಣಸಂದೋಹ (೯೦೩ಾ. ೪೪-೩೦); ದಯುವಿಟ್ಟು ನನ್ನ ಮಾತುಗಳನ್ನು ಲಾಲಿಸು (ಅರ್ಜು೯. ೩೯). ೪. ಸಂತೋಷಿಸು : ಮುದ್ದಳಿಯು ಗತಿಗೆ ಜಘನಗಳೆದ್ದಾಡಲು ನಗುತ ಕಂಡು ಲಾಲಿಪರಲ್ಲದೆ ಪದ್ಯ ಪದ ಕಾವ್ಯದರ್ಥವ ದೊಡ್ಡೆಗರೆಂ ಬಲ್ಲರ್ (೩೬೩ಾ. ೩೩). [ಲಾಲನೆ + —ಇಸು$_3$]

**ಲಾಲಿಹಾಡು** (ನಾ). = ಲಾಲಿ$_1$ : ತೆಲುಗರ ಜನಪದಸಾಹಿತ್ಯ ತುಂಬಿದ ಸಾಹಿತ್ಯವಾಗಿದೆ. ಲಾಲಿಹಾಡುಗಳು . . . ಸುಗ್ಗಿಯ ಹಾಡುಗಳು ಅಪಾರವಾಗಿವೆ (೩೮೮ದ. ೪೦೩). [ಲಾಲಿ$_1$ + ಹಾಡು$_2$ (< ಪಾಡು$_3$)]

**ಲಾಲೆ**, ಲಾಳೆ (ನಾ). = ಲಾಲಾಂಬು : "ಸ್ಯನಿಕಾ. ಸ್ಯಂದನೀ. ಲಾಲಾ—೩ ಬಾಯಜೊಲ್ಲು" (ಸಿದ್ಧಾಂತ. ೦೩೩) ; "ಲಾಲಾ = ಜೊಲ್ಲು" (೫೫೫. ೨೭೦). **ಲಾಳೆ** : ಕೂರೆಪೊಡೆ ಬೆಟ್ಟುಗಳ್ ಬರಿವುವೊಣ್ಮುವ ಲಾಳೆಯ ಲೋಳೆಗಳ್ ಪೊಸಲ್ವರಿವುವು (ಶಂಕಥಾ. ೪-೦೦೦) ; ಸಿಂಬುಳ್. ಸಿಳ್ಳುಗಟ್ಟ್ ಲೋಳೆ ಲಾಳೆ ಸರಸ್ಸೂತ್ರಜಳಂ (ಪುಕ್ಕ. ೦೩-೪೯). [ಸಂ. ಲಾಲಾ]

**ಲಾಲ್ಯ** (ನಾ). ಅಕ್ಕರೆ ; ಪ್ರೀತಿ : ಕುಲ್ಯವಾದ್ಯರ ಲಾಲ್ಯವನಘರ ತಾಲ್ಯ ಪಕ್ಷಯುಮೂಲ್ಯವಭವಸ್ಥಾಲ್ಯಮಹ ಕೈವಲ್ಯವೀ ನಿರ್ವಾಲ್ಯವೆನಲೆಸೆದು (ಜಶ. ೪೩-೩೩). [ಸಂ.]

**ಲಾವ** (ಗು). ೧. ಕತ್ತರಿಸುವ ; ತುಂಡುಮಾಡುವ. (ನಾ). ೨. ಒಂದು ಬಗೆಯ ಪಕ್ಷಿ ; ಲಾವುಗೆ ; ಪುರಲೆ : "ಲಾವಃ. ಲಾವಿಗೆ ಹಕ್ಕಿ . . . ಸಿಡಿಮಿಡಿಪಕ್ಕಿ—ಈ ೧೩ ಶಬ್ದಗಳೂ ಪಕ್ಷಿಭೇದಗಳಿಗೆ ಬೇರೆಬೇರೆ ಹೆಸರುಗಳು" (ಸಿದ್ಧಾಂತ. ೦೩೩); ಮರಾಳ ಲಾವ ಚಾತಕ ಬಕ ಖಂಜನ ದ್ರುಪದಿ ಘೂಟ ನಿಶಾಟನ ಪತ್ರಿಕಂಕ ವರ್ತಕ ಕುರರೀಪ್ಲವಪ್ರಕರದಿಂದೆ ವಿರಾಜಿಕುಮುನ್ನತಂ ವನಂ (ಹರಿಶ್ಚಂ. ೪-೬೨) ; ಪಿಳಿಪಿಳಿರ್ ಪಿಳಿಲೆಂದು ಲಾವಂಗಳುಬ್ಬಿದುವು (ಶಶು. ೪-೪೩). [ಸಂ.]

**ಲಾವಂಚ** 'ಲಾಮಂಚ' ನೋ.

**ಲಾವಂಚಿ** 'ಲಾಮಂಚ' ನೋ.

**ಲಾವಕ** (ನಾ). ೧. ಕತ್ತರಿಸುವವನು; ಕಡಿಯುವವನು. ೨. ಚಾಡಿ ಹೇಳುವವನು; ಪಿಸುಣ: ಲಾವಕರ ನುಡಿಗೇಳಿ ನಡೆದರೆ ಭೂವಳಯ ದೇಶಾಧಿಪತ್ಯದ ಠಾವು ಕೆಡುವುದು (೪ಬ್ರಾಹ್ಮ. ೬೦೩. ೦-೪೩); ಹರನ ಭಕ್ತರ ಮಹಾತ್ಮೆಯನರಿಯದೀ ಲಾವಕರ ಮಾತಗೇಳಿ ತಗಸಿದ ಭೂರಿದುರ್ಭಾವ

ದುರವಣೆಯ ನೋಡಲು (ಸಿಂಗಣಾ. ೨೨–೩೪) ; ಲಾವಕರು ಬಿಜ್ಜಳನೊಳಿಂ ತೆಂದು ಪೇಳ್ದರು (ಶ್ರಬುಕ್ಕು. ೯–೨೭). ೩. ಕೆಡುಕ ; ದುಷ್ಟ : ಅರಸಿಗುಂಪ ಹತಿಯನೊದವಿಸಿದ ಲಾವಕನು ಕುಲಕೋಟಿಸಹಿತ ಮಹೀವಲಯದಲ್ಲಿ ಲಯುವನೆಯ್ದಿಯೆ ಜೀವಿಸುತ್ತಿಹನು (ಜೀವಂಕ. ೯–೬೩); ಕೃಷ್ಣ . . . ಲಾವಕರ ಕೊಲಗಿಸೋ (ವೋಕ್ಷರು. ೨೨–೦); ಗಾವಿಲಗೆ ಭಾಗ್ಯವಾದೊಡೆ ಲಾವಕಂಗೆ ರುಷ್ಟದುಷ್ಟದುರ್ಜನರ್ಗಲ್ಲದೆ ಭಾವಕರಿಂಗೊಲಿದೀವನೆ (ಜೀತಸಾ. ೨೩೫). ೪. ಒಂದು ಬಗೆಯ ಹಕ್ಕಿ; ಲಾವುಗೆ: "ಕಾರಂಡವ ಲಾವಕ ಜೀವಂಜೀವಕ ಶಾರಿಕಾದಿಗಳ್ ವಿಹಗಜಾತಿಯಕ್ಕುಂ" (ವಸ್ತುಕೋ. ೯೩–೨೦) ; ಹಾರಜೆ ಗವುಜು ಲಾವಕ ಗುಬ್ಬಿ ಸಾಳುವ (ಪನ್ನಗಾ.೯–೮೭). ೫. ಹಾವನ್ನು ಹಿಡಿದು ಆಡಿಸುವವನು; ಹಾವಾಡಿಗ; "ಪಾವಡಿಗ" (ಶಶುಃ. ೬. 1, ೫೮). [ಸಂ.]

**ಲಾವಕು ?** (ನಾ). (?): ಸುಕವಿಪಿಕನಿಕರಶೀತ ಸಹಕಾರನಂದನಂ ನಿಜ ವಿಜಯಭುಜಾಸಿ ಲತಾಸತ್ಪರ್ಕೀನರ್ತನವಿನೋದಲಾವಕುಂ ಕುನಾಗಿಲ [ಕೋ]ಟಾಟ[ವೀ]ದಾವಪಾವಕಂ . . . ರಾಜಾದಿತ್ಯರಸರ್ (ಕಶಿ. ೨೦–೭–೦೭; 1083). [ ? ]

**ಲಾವಕ್ಕಿ** (ನಾ). = ಲಾವಕ ೪ : ಗಿಡಗವನ್ನು ನೋಡಿ ಲಾವಕ್ಕಿಗಳ ಹಿಂಡು ಅಡಗಿಕೊಳ್ಳುವಂತೆ (ಕುಳಸೀ. ೬೧) ; ಕವುಜಗಹಕ್ಕಿಯ ಜಾತಿಯ, ಒಳ್ಳೆಯ ಆಹಾರವೆಂದೆಣಿಸುವ, ಒಂದು ಬಗೆಯ ಪ್ರವಾಸಪಕ್ಷಿ; ಲಾವಕ್ಕಿ; ಪುರಲಿಹಕ್ಕಿ (Quail. ೩೦೯೩). [ಲಾವ + ಹಕ್ಕಿ (< ಪಕ್ಕಿ). / ತುಳು. ಲಾವಕ್ಕಿ]

**ಲಾವಗ** ' ಲಾವಗೆ ' ನೋ.

**ಲಾವಗೆ, ಲಾವಗ, ಲಾವಿಗ, ಲಾವಿಗೆ, ಲಾವುಕ, ಲಾವುಗೆ** (ನಾ). ೧. ಒಂದು ಬಗೆಯ ಪಕ್ಷಿ ; ಪುರಲೆ : ಮಂದಪಾಲನೆಂಬ ಮುನಿಗವೊಂದು ಲಾವಗೆಗಂ ಪುಟ್ಟಿದ ನಾಲ್ಕುಂ ಲಾವಗೆಗಳಗ್ನಿಸೂಕ್ತಂಗಳನೋದುತ್ತುಮದಿರ ದದಿರಂ ಬರೆ (ಪಂಪಭಾ. ೫–೦೦೦ ವ); ತಗರು ಕೋಟಗಳಂ ಲಾವಗೆಗಳನೆಸೆವೆ ಮ್ಮೆವೋರಿಯಂ ಪಾಪಿಷ್ಠರ್ ಮಿಗೆ ಬಸನದಿಂದೆ ಪೋರಿಪರ್ (ಸಮಚ. ೫–೦೫); ಅರಗಿಳಿ ಪಾರಿವಂ ಕುರರಿ ಲಾವಗೆಯನ್ಯಭೃತಂ (ಗಂಳ. ೦–೭೪). **ಲಾವಗ:** ೧. 'ಕರಿಲಾವಗ', 'ಕೆಂಪುಲಾವಗ' ಪರಾ. ೨. ಹಾವಾಡಿಗ : "ಲಾವಗ — ಲಾವಕ = ಹಾವಾಡಿಗ" (ತತ್ವಕೋ. ೩೨). **ಲಾವಿಗ :** ೧. ಲಾವಿಗನ ಹಕ್ಕಿಗಳೂ . . . ಅವನು ಹೇಳಿದಂತೆ ಶಿಕಾರಿ ಮಾಡಿಕೊಂಡು ಅವನ ಪ್ರೀತಿಗೆ ಪಾತ್ರವಾಗಿದ್ದವು (ಮುಗಮೊಂ. ೨೫). **ಲಾವಿಗೆ :** ೧. ಗಿಳಿಗಳಾ ಕುಳುವ ಲಾವಿಗೆ ಪುರುಳಿಯೆಜಿಲಾವಿಗೆ . . . ಹೊಡೆಗಳೆಂಬ ಪಕ್ಕಿಗಳು (ಶಾಳ್ಮಾ. ೫–೨೦) ; ಅರಿರಾಯಲಾವಿಗೆಗೊಡ್ಡಿದ ಬಲೆಯೆನೆ (ಕಳಳ. ೦–೫೩) ; ಹದ್ದು ಬಿಗಿವಿಡಿದ ಲಾವಗೆಯಂತೆ (ಗೂಳಿಸ್ವಾ. ೦೦–೨೪೪). **ಲಾವುಕ :** ೧. ಇದೆ ಚಳತಲಾವುಕಸ್ವನಂ . . . ಇದೆ ಕಪಿಂಜಲನಿನದಂ (ಕಾದಂಪೂ. ೦೫೩) ; ಶುಕ . . . ಲಾವುಕ . . . ಪಕ್ಷಿಕುಲಂಗಳುಂ (ಪವೇಳ. ೨೦೨). ೩. ಚಾಡಿ ಹೇಳುವವನು ; ಪಿಸುಣ : ದಸಿಯಂದಿಜಾಯಿಬ್ ಮಿಗೆ ಲಾವುಕನಂ (ಜೀವಸಂ. ೦೫೦–೩೩); ಲಾವುಕರ ನುಡಿಗೇಳಿ ಕೊಲಿಸದೆ ಕಾವುದೊಳ್ಳಿತು (ಅಕ್ರೂ ಚ. ೭–೭೬). **ಲಾವುಗೆ :** ೧. " ಲಾವುಗೆ ಕಪಿಂಜಲಮೆನಿಕ್ಕು " (ಮಂಗರಾ. ೫೨–೦೦); ಕೋಗಿಲೆ ಚಾದಗೆ ಪೋದಗೆ . . . ಬಲಾಕೆ ಲಾವುಗೆ ಸೇನು (ಕಾವ್ಯಸಾ. ೦೦೪೯ ಸೂತ್ರ೪); ಲಾವುಗೆಯುಂಕೆ ಕೊರಸುಂ ಮೊದಲಾಗೊಪೆಯ ಪಕ್ಷಿಜಾತಿಗಳಂ ಬಲೆಯ ನೊಡ್ಡಿ ಪಿಡಿದು (ಪಮ್ಮಾರಾ. ೦೫೦–೩) ; ಲಾವುಗೆಯ ಕಂಠದಬ್ಬರದಲ್ಲೆವಡಿ ಮಾಡಿ (ಪಪಾ. ೩–೩೬). [< ಸಂ. ಲಾವಕ. / ಪ್ರಾ. ಲಾವಗ]

**ಲಾವಣ$_1$** (ನಾ). ಸೈನಿಕರ ಪಟ್ಟಿ ; ಸಿಪಾಯಿಗಳ ಯಾದಿ : ಜಡನೆಂಬ ನುಡಿ ಶರಧಿಯೊಳುಂಟು ಭಂಗವೆಂದೊಡೆ ತೆರೆಯೊಳಗಾದಂತಹುದೂ ವಡಸೆ ಕಠಿಣವೆನಲಿಡಿದ ಲಾವಣದೊಳನುಡಿಯಲ್ಲದನ್ಯತವಿಲ್ಲ (ಅಮುಸಾಂ. ೦–೫೪); ಕೃಷ್ಣರಾಯನು ರಾಜ್ಯವಾಳುತ್ತಿರುವಾಗ ನೂರಾಳು ನೂರುಕುದುರೆ ಲಾವಣಕ್ಕೆ ಶೇರದೆ ಇರುವ ದಿವಸ ಒಂದಾದರೂ ಇಲ್ಲ (ಕಥಾಮಂ. IV. ೭೪). [ದೇ.॥ ತಮಿ. ಇಲಾವಣ ; ಮಲ. ತೆಲು. ಲಾವಣ]

**ಲಾವಣ$_2$** (ಗು). ೧. ಉಪ್ಪಿನಿಂದ ಕೂಡಿದ. (ನಾ). ೨. ಉಪ್ಪು. [ಸಂ.]

**ಲಾವಣಿ$_1$, ಲಾವಳಿ** (ನಾ). ಜನಪದಹಾಡುಗಳ ಒಂದು ಪ್ರಕಾರ : ' ಲಾವಣಿಯೆಂಬುದು ಗರಡಿಯವರು ಹಾಡುವ ಹಾಡು ' ಎಂದು ಜನ ಸಾಮಾನ್ಯದ ಅಭಿಪ್ರಾಯ (ಕರ್ನಾಸಂ. ೨೦); ಹೆಂಗಸರ ಹಾಡುಗಳಲ್ಲಿಯೂ ಲಾವಣಿಗಳಲ್ಲಿಯೂ ಈ ಛಂದಸ್ಸಿನ ತಳಹದಿಯನ್ನೂ ರೂಪಾಂತರಗಳನ್ನೂ ಗುರುತಿಸಬಹುದು (ಕೃಶಿಪಿ. ೦೦೭) ; ಲಾವಣಿಗಳನ್ನು ಹಾಡಿದರು (ಹಮ್ಮಿ. ೭೩). **ಲಾವಳಿ :** ಲಘುಗಳ ಮಿಳಿತವ ಮಾಡಿ ಕೊನೆಯಲಿ ಗುರುಗಳ ಹೂಡಿ ಅರ್ಥದ ಸಾರವ ನೋಡಿ . . . ಲಾವಳಿ ಕೃತಿಗಳ ಪಾಡಿ (ಛಂದಸ್ಸು. ೫–೦೭). [←ಹಿಂ. ಲಾವನಿ, ಲಾವನೀ ; ಮರಾ. ಲಾವಣೀ. / ತಮಿ. ಲಾವಣಿ ; ತುಳು. ಲಾವಣಿ, ಲಾವಣ್]

**ಲಾವಣಿ$_2$** ' ಲವಣಿ$_2$ ' ನೋ.

**ಲಾವಣಿ$_3$** (ನಾ). ಭೂಮಿಯ ಒಡೆಯನಿಗೆ ರೈತರು ಸಾಗುವಳಿಗಾಗಿ ಕೊಡುವ ಹಣ ; ಗುತ್ತಿಗೆಹಣ ; ಗೇಣಿ : ಹೊಲಗಳನ್ನೂ ಲಾವಣಿಗೆ ರೈತರಿಗೆ ಬಿಟ್ಟುಕೊಟ್ಟು (ಗಂಮಾಯು. ೯) ; ಒಮ್ಮೆ ಲಾವಣಿಯ ವಸೂಲಿಗೆ ನರಹರಿಯು ಗಂಗೇಲೂರಿಗೆ ಹೋಗುವ ಪ್ರಸಂಗ ಬಂದಿತು (ಸಮುಜ. ೦೯೦) ; ವಸೂಲಾದ ಹಣದ ಮೇಲೆ ಪ್ರತಿಗ್ರಾಮಕ್ಕೂ ಒಂದೆರಡು ರೂಪಾಯಿಯೂ ಸಲ್ಲುತ್ತಿತ್ತು. ಇದಕ್ಕೆ ಲಾಣಿ (ಲಾವಣಿ) ಎಂದು ಹೆಸರು (ಶಾಳಗಾ. ೦೨). 'ಲಾವಣಿಪದ್ಧತಿ' ಪರಾ. [←ಮರಾ. ಲಾವಣೀ=ಜಮೀನನ್ನು ಬೆಳೆಯಲು ಯೋಗ್ಯವನ್ನಾಗಿ ಮಾಡುವುದು. / ತೆಲು. ಲಾವಣಿ=ಹುಲ್ಲುಗಾವಲಿನಲ್ಲಿ ಪಶುಗಳನ್ನು ಮೇಯಿಸುವುದಕ್ಕಾಗಿ ಕೊಡುವ ಮುಂಗಡ ಹಣ]

**ಲಾವಣಿ$_4$** (ನಾ). ೧. ಗುಂಪು ; ಸಮೂಹ ; ಸಂದಣಿ : "ಬಂಬಲ್ . . . ಲಾವಣಿ . . . ಗೊಂದಣಿ (ಉಂದಲ್) — ಈ ೪೦ ಸಮೂಹಂ" (ಕಶಸಾ. ೫೭–೨೨೨) ; ತರ್ಗಳ ಲಾವಣಿಯೊಯೆಳವಳ್ಳಿಬಳಗವೊ[ಪಾಠಾಂ. ಲಾವಣಿಗೆಯೊ ಎಳೆವಳ್ಳಿಯ ಬಳಗವೊ] (ಸೂಡಿಸೋ. ೩–೫೦). ೨. ಹೊಂದಿಸುವಿಕೆ ; ಅಳವಡಿಸುವಿಕೆ : 'ಲಾವಣಿಸು' ಪರಾ. [ ? ]

**ಲಾವಣಿ$_5$** (ನಾ). ಒಂದು ಬಗೆಯ ಔಷಧೀಸಸ್ಯ : "ಲಾಜಾ (ಜಲಾ)— ಹಿಪ್ಪಲಿ, ಲಾವಣಿ, ಎಸಗ" (೭ಶಂ. ೦೯೩). [ ? ]

**ಲಾವಣಿಕ** (ಗು). ೧. ಸುಂದರವಾದ (ನಾ). ೨. ಉಪ್ಪಿನಿಂದ ಕೂಡಿದುದು : "ಲವಣದಿಂ ಲಾವಣಿಕಂ" (ವಸ್ತುಕೋ. ೯೪–೦೨). ೩. ಉಪ್ಪಿನಕಾಯಿ : ಎಳಮಾವಿನ ಮಿಡಿ ಮಾಗುಳಿ ಮೆಣಸಿನ ಕರ ಬೆತ್ತಲಟ್ಟೆಯಿಳೆಯ ಗೊಲೆಯಿಂದಳವಟ್ಟಿರೆ ಲಾವಣ[ಣಿ]ಕಂಗಳನಿಕ್ಕಿದರಾಗಳಟ್ಟಿಯಿಂದಂಗನೆಯರ್ (ಸುಕುಮಾ. ೦೦–೩೦). [ಸಂ.]

**ಲಾವಣಿಕಾರ** ' ಲಾವಣಿಗಾರ ' ನೋ.

**ಲಾವಣಿಗಾರ, ಲಾವಣಿಕಾರ** (ನಾ). ಲಾವಣಿಯನ್ನು ರಚಿಸುವವನು : 'ಮರ್ಘುಮಾ' (ಲಾವಣಿಗಾರರ ಎರಡು ಗುಂಪುಗಳೂ ಸೇರಿ ಹಾಡುವುದಕ್ಕೆ ಕುಳಿತುಕೊಳ್ಳುವ ಸಭೆ) (ಕರ್ನಾಸಂ. ೨೪). **ಲಾವಣಿಕಾರ :** ಹಾಡಬಲ್ಲ ಲಾವಣಿಕಾರನು ಹುಟ್ಟಿಕೊಂಡಂತೆಲ್ಲ ಅವೂ ಹೊಸಹೊಸ ರೂಪಗಳನ್ನು ತಾಳುತ್ತವೆ (ಕರ್ನಾಸಂ. ೨೫). P ಈ ಜನಪದಹಾಡುಗಾರಿಕೆಯ ಪದ್ಧತಿಯಲ್ಲಿ ಎಷ್ಟೋ ಜನರು ಆಶುಲಾವಣಿಗಳನ್ನು ರಚಿಸುವವರೂ ಹಿಂದೆ ಇದ್ದರು. [ ಲಾವಣಿ$_1$ + – ಕಾರ$_1$ (< – ಕಾಜ) ]

**ಲಾವಣಿಗೆ$_1$** (ನಾ). ಉಪ್ಪಿನ ಕಾಯಿ : ಸೋವಿಗೆ ಲಾವಣಿಗೆ ಘೃತಪೂರಂ . . . ಲಡ್ಡುಗೆ ಮಂಡಗೆ ಮೊದಲಾಗೊಡೆಯ ಪದಿನೆಂಟುಂ ತೆಜದ ಭಕ್ಷ್ಯರೂಪಂಗಳುಮಂ . . . ಒಡ್ಡಿಸಿ (ಪಮ್ಮಾರಾ. ೭೬–೦೭).
[ < ಸಂ. ಲಾವಣಿಕ]

**ಲಾವಣಿಗೆ$_2$**, ಲಾವಳಿಗೆ (ನಾ). ೧. ಗುಂಪು ; ಸಮೂಹ ; ಸಂದಣಿ : "ಲಾವಣಿಗೆವೋಳಿಯು ಸಮೂಹ" (ಕಬ್ಬಿಗ. ೭೦); ಭೂಪಾಳಿಗಳ ರತ್ನಪ್ರಭೆಯ ಲಹರಿಯ ಲಾವಣಿಗೆ ಮಿಗಿಲು (ಕುಮಾರ. ೭-೨೭); ಬೆಳ್ದಿಂಗಳ ಹಕ್ಕಿಯ ಹಸುಳೆಗಳ ಲಾವಣಿಗೆಯ ಮುಸುಕಿದವೋಲ್ . . . ಕುವರನ ಲಾವಣ್ಯಾಂಗ ಮನಡದರ್ಪವು ಪುರಸತಿಯರ ಕಣ್ಗಳ ಬೆಳಗು (ಜಯುಕಾ. ೦೦-೩೫). ೨. ಆಕ್ರಮಣ; ಮುತ್ತಿಗೆ ; ದಾಳಿ : ಪುರವರದಷ್ಟದಿಕ್ಕಿನೊಳೆಡೆವಿಡದೆ ಇಟ್ಟರು ಲಾವಣಿಗೆಯನಾದೀಶ್ವರ ಬಿಟ್ಟಹ ರಣಭೂಮಿಯೊಳು (ತ್ರಿಶಾಂ. ೦೮-೨೦೦); ಲಾವಣಿಗೆಯನೊಡೆಹಾಯಿಸಿದನಿದಿರಾದ ರಾವುತರನು ಕೆಡಹಿದನು (ಕುಂದಕಾಂ. ೯೩-೪೦) ; ಅವರ ವಿಘಾತಿಯ ಲಾವಣಿಗೆಗೆ ಅದ್ರಿಗಳು ಬಿರಿದುವು (ರಾಜಶೇ. ೨೯). ೩. ಸಂಬಂಧ : ಗೋಜು : ನಾವು ವೃದ್ಧರು ಬಿರುದುಗಿರುದಿನ ಲಾವಣಿಗೆ ನಮಗೇಕೆ (ಕುಮಾರವ್ಯಾ. ೯-೪೦). ೪. ಹಿಡಿತ ; ವಶ ; ಅಧೀನ : ಆಕೆಯಾಕ್ಷಣ ಶಿರವರಿದ ಹಯಕಿದಿರು ಕುಳ್ಳಿರೆ ನಗ್ನೆ ತಾನಾಗಿ ನಿರುತ ಲಾವಣಿಗೆಯಲಿ ಹೊಕ್ಕಿರೆ ಸುರಪತಿಯು ಹಯದಲ್ಲಿ ವಸಿಸಿದ ನೆರೆದನೈ ತನ್ನಾತ್ಮಸತಿಯಳ ಯಜ್ಞಕಾಲದಲಿ (ಸಂಕಶ. ೪-೨೩) ; ಆವನಜೀವನು ಶರಣಸಂಜೀವನನೆ ತಮಗೆಂತು ಕೆಂಗಳ ಲಾವಣಿಗೆಗೊಳಗಾದೆಯೆಂದನು (ಶಿಭಾಗ. ೬-೩-೯); ಅವಂ ಲಾವಣಿಗೆಯೊಳ್ ತಪ್ಪದೀವ ಕೈಜೀತದೊಳಂ (ಕಳವು. ೧೯-೦೮). ೫. ಒಂದು ಬಗೆಯ ತೆರಿಗೆ : ತಲೆವೊಜಿಗೆ ೩೦೦ ಲಾವಣಿಗೆ ಪೊಕ್ಕಲ್ದೆಟಿ (ಎ೩. XVI, ೩೪-೯೦; 1102); ಅರಸುವೇಟಿಂಗೆ ಮುನ್ನನ್ನಡವ ಪಾಗಮಲ್ಲದೆ ಮತ್ತೊಂದು ಪಾಗಮುಂ ಲಾವಣಿಗೆಯು ಪಣಮುಂ . . . ಬಿಟ್ಟನ್ (ಸೌಇಇ. IX-i, ೦೫೨-೨೯ ; 1105). ೬. (?): ರಸಭಂಡವೈಪು . . . ದೆಶೆದಿಕ್ಕಿನ ಕಾಲ್ನಡೆ ಯಬಾವತ್ತಾಬುಕೋಟೆ ಹೊಸಲಾವಣಿಗೆ ತಿದ್ದುವ ಸುಂಕ ಸುಸರ (ಶಿವಗೀ. ೦೮೯-೯೯೭). **ಲಾವಳಿಗೆ** : ೧. ರಾವಣನ ಪುರದೊಳಗೆ ಹೊಕ್ಕು ಕಪೀಂದ್ರರುರವಣಿಸಿ ಸಾವ ಸಲಿಸಿದರೊಕ್ಕಲಿಕ್ಕಿ ಸುರಾವಳಿಗೆ ಸಂತೋಷ ದೊಟ್ಟಿಲು ಲಾವಳಿ[ಪಾಠಾಂ. ಣಿ]ಗೆದೋಟದರು ದಾಜೀದರಸುಚಿತದ ಫಲವ (ಶಿಭಾಗ. ೯-೦೦-೩೦). [ಲಾವಣಿ$_4$ + -ಗೆ]

**ಲಾವಣಿಗೊಳು** ' ಲಾವಣಿಗೆಗೊಳ್ಳು ' ನೋ.

**ಲಾವಣಿಗೊಳ್ಳು**, ಲಾವಣಿಗೆಗೊಳು (ಕ್ರಿ). ೧. ಒಟ್ಟಾಗು ; ಒಂದುಗೂಡು; ಸೇರು : ಭೂಪ ನಿನ್ನಯ ಶಕುನಿಭಾವನೋರ್ವಂ ಕರಿತುರಗ ಪಂಕ್ತಿಗಳಿಂವ ಲಾವಣಿಗೆಗೊಂಡು ವಿಗಡಿಸಿದಂ ಐನೂರುಗಜವೊಂದು ಸಾವಿರ ಹಯ (ತುರಂಗ. ೭೪-೯). ೨. ಆಕ್ರಮಣ ಮಾಡು; ಮುತ್ತು : ಕಮಲವನವನು ಲೋಚನಲಿ ಲಾವಣಿಗೆಗೊಂಡನು ಭೀಮ ನಿಮಿಷದಲಿ (ಕುಮಾರ. ೦೦-೩೭). ೩. ಹಿಡಿತಕ್ಕೆ ಸಿಕ್ಕಿಸಿಕೊಳ್ಳು ; ವಶಪಡಿಸಿಕೊಳ್ಳು : ಅತಿರಥರ ಲಾವಣಿಗೆಗೊಂಡನು ಕರ್ಣ (ಕುಮಾರ. ೬-೨೮); ಹರಿಲೀಲೆ ಮಿಗೆ ಲಾವಣಿಗೆಗೊಂಡುದು ಲೋಕಜನಮನವ (ಶಿಭಾಗ. ೦೦-೨೩-೭). **ಲಾವಣಿಗೊಳು** : ೪. ಹಿಡಿತಕ್ಕೆ ಸಿಕ್ಕು ; ವಶವಾಗು : ಲಾವಣಿಗೊಳಲಲಸಿ ಯಮುನಸು ಜೀವಿಗಳು ಜಡರಾಯ್ತು (ಕುಮಾರ. ೦೯-೨೮). [ಲಾವಣಿಗೆ$_2$+ಕೊಳ್ಳು$_1$ (<ಕೊಳ್$_1$)]

**ಲಾವಣಿಪದ್ಧತಿ** (ನಾ). ಭೂಮಿಯನ್ನು ಗೇಣಿಗೆ ಕೊಡುವ ಪದ್ಧತಿ; ಗುತ್ತಿಗೆ ಪದ್ಧತಿ : ಪಾಲಾವ ಒಂದು ಮಾರದೊಳಗಾಗಿಯೇ ಜ್ಞಾನ ಶಂಕರರು . . . ಲಾವಣಿಪದ್ಧತಿ ಕಿತ್ತಿಹಾಕುವ ಸಿದ್ಧತೆಯಲ್ಲಿ ತೊಡಗಿದರು (ಪ್ರೇಮಾಕ್ರ. ೯೯). [ ಲಾವಣಿ$_3$ + ಪದ್ಧತಿ ]

**ಲಾವಣಿಸು** (ಕ್ರಿ). ಸೇರಿಸು; ಹೊಂದಿಸು; ಅಳವಡಿಸು : ಮಂದರನಗ ನಿಭಾಂಗನ ವಜ್ರಮಯಪಕ್ಕಗಳ ಪಡಿಮುಖದೊಳಗೆ ಲಾವಣಿಸಿದನು ಖಂಡೆಯವ (ಕೂರಿರಾ. ೩-೦೦-೦೯); ಆಯುಧಮುಖದ ಶಿಖಿ ತಮಹೃದಯ ದಾಮಿಷಹವಿಗೆ ಹದಿರಿಕ್ಕುವದ ನೋಡೆನುತ ಹೊದಬುಗೈಗಳಲೆತ್ತಿ ಲಾವಣಿಸಿದನು (ಕಜಿರಾ. ೭-೯೯-೩೭). [ ಲಾವಣಿ$_4$ + -ಇಸು$_3$ ]

**ಲಾವಣ್ಯ$_1$** (ನಾ). ೧. ಉಪ್ಪಾಗಿರುವುದು; ಉಪ್ಪಿನ ರುಚಿಯುಳ್ಳುದು : ಲಾವಣ್ಯ = 'ಉಪ್ಪಿನ ರುಚಿಯಿಂದ ಕೂಡಿರುವಿಕೆ' ಮುಖ್ಯಾರ್ಥ; 'ಪೃಥ್ಯತ್ವ' ರೂಢಿಮೂಲವಾದ ಲಕ್ಷ್ಯಾರ್ಥ (ಕೃಷ್ಣಾರೋ. ೯೩). ೨. ಚೆಲುವು; ಸೌಂದರ್ಯ : ಲಾವಣ್ಯಂ ಲಯಮಾಯ್ತು (ಗಂಕ. ೬-೭೨). ೧, ೨ : ಶ್ರೀವನಿತಾಪ್ರಸವದಿನಾ ಲಾವಣ್ಯದಿನತಿಗಭೀರಭಾವದೆ ನೀನಿಂತಾ ವಾರಿಧಿಯುಂ ಪೋಲ್ವೆ (ಕುರಾ. ೩-೯೦); ಕಮಲಸಂಭವನಂತೆವೋಲ್ ಸರಸ್ವತಿಯರಸನೆಂಬ ಪೆಸರಂ ಪಡೆದು ಲೋಕಮಟೀಯಿ . . . ಲಾವಣ್ಯ ಲೀಲೆಯಿಂದೆಸೆದಬ್ಜಭವನಲ್ಲ ಸಕಲಭುವನಾಶ್ರಯಂ ತಾನೆನಿಸುತರ್ಣವಂ ಕಣ್ಗೊಳಿಪುದು (ಶ್ರೀರಾಶ. ೩-೨೭). ೩. ಸೊಬಗು; ಒನಪು; ಒಯ್ಯಾರ: ಲಜ್ಜೆ ಬಿಂಬಿಸೆ ಲಾವಣ್ಯದೊಳೊಯ್ಯನೆ ಪಜ್ಜೆಯಿಡುವುದು ಭಾವೆಯರು (ಹರಿಶ. ೬-೩೭). [ ಸಂ. ]

**ಲಾವಣ್ಯಂದಳೆ** (ಕ್ರಿ). ಚೆಲುವನ್ನು ಪಡೆ; ಅಂದವಾಗು : ನೃಪವರಸೂನು ಹಿಂಗದೆ ಲಾವಣ್ಯಂದಳೆದೆಸೆದುತ್ತುಂಗಪಯೋಧರಯುಗಳೆಯು ಬಸಿಜೊಳು . . . ಬಳೆದು (ಜಯುಕಾ. ೨-೩೮). [ ಲಾವಣ್ಯ + ತಳೆ$_1$ ]

**ಲಾವಣ್ಯವತಿ** (ನಾ). ಚೆಲುವೆ ; ಸುಂದರಿ ; ಅಂದಗಾತಿ : ಲಾವಣ್ಯವತಿಯರುಂ ನಾನಾವಾಹನದಿಂದಮಿಟ್ಟಿದು ಮೋಹನವಿದ್ಯಾದೇವತೆಯರಂತೆ (ಪುಲ್ಲಶು. ೫-೯೨); ಪ್ರವಹಿಸೆ ಕಪೋಲದಲಿ ಲವಣಾಶ್ರುಬಿಂದುತತಿ ನದಿ ಹರಿಯುವಂತೆ ಕಡಲಿಂಗೆ ಲಾವಣ್ಯವತಿ ನಡೆದಳ್ ಲವಣಸಿಂಧುತಟಕೆ (ಕಿತ್ತೂರಂಗ. ೭೭-೦೮೦೦). [ ಸಂ. ಲಾವಣ್ಯವತೀ ]

**ಲಾವನ** (ನಾ). ಒಂದು ಬಗೆಯ ಕತ್ತರಿಸುವ ಆಯುಧ ; ಕುಡುಗೋಲು; ಮಚ್ಚುಗತ್ತಿ : ಬಿಲ್ಲು ತೀರು . . . ಲಾವನ . . . ಪೇಟಕ ಮುಂತಾದ . . . ಸಾಧನವಿಶೇಷಂಗಳಿಂ (ಶಿವತ. ೨೭೩).

[ < ಸಂ. ಲವನ ]

**ಲಾವಳಿ** ' ಲಾವಣಿ$_1$ ' ನೋ.

**ಲಾವಳಿಗೆ** ' ಲಾವಣಿಗೆ$_2$ ' ನೋ.

**ಲಾವಾ** (ನಾ). ಜ್ವಾಲಾಮುಖಿಯಿಂದ ಪ್ರವಹಿಸುವ ರಸ ; ಶಿಲಾರಸ : ದಕ್ಷಿಣಭಾಗದ ನೆಲದಲ್ಲಿ ಲಾವಾ ಹೆಪ್ಪುಗಟ್ಟಿ ಉಂಟಾದ ಬಂಡೆಗಳೇ ಅಧಿಕ (ಅಭೂಶ. ೨೭೭) ; ಅತ್ಯಪ್ರಬಯಕೆಯ ಲಾವಾರಸ ಬುಗ್ಗೆಯಾಗಿ ಕಾರುತ್ತದೆ (ಶಂಖಂತ. ೦೦೩); ಅವನ ಲೇಖನ ಲಾವಾರಸದಲ್ಲಿ ಅದ್ದಿದಂತೆ ಇರುತ್ತಿತ್ತು (ತಾವಾದ. ೦೮). [ ← ಇಂ. Lava ]

**ಲಾವಿಗ** ' ಲಾವಗೆ ' ನೋ.

**ಲಾವಿಗೆ** ' ಲಾವಗೆ ' ನೋ.

**ಲಾವುಕ** ' ಲಾವಗೆ ' ನೋ.

**ಲಾವುಕೋವು** (ನಾ). ಕಪಟ ; ವಂಚನೆ : ಆ ವೈಶ್ಯವಲ್ಲಭ ಸಮುಪ್ರದತ್ತನೊಳು ತನಗಾವಗಂ ಸ್ನೇಹಮಾದುದರಿಂದ ದಾಕ್ಷಿಣ್ಯಭಾವಯುತನವಗೊಂದು ಲಾವುಕೋವಂ ಮಾಡಲೀಸದಿಂತೆನುತುಸಿರ್ದನು (ಸಮ್ಯಕ್. ೦೦-೭).

[ ? ]

**ಲಾವುಗೆ** ' ಲಾವಗೆ ' ನೋ.

**ಲಾಸ** (ನಾ). ಕುಣಿತ ; ನೃತ್ಯ : ಹಂಸನಿಲ್ಲದ ಸರಸಿ ಬಲುವಿದ್ವಾಂಸರಿಲ್ಲದ ಸಭೆ . . . ಪರಭೃತವಿಲ್ಲದುದ್ಯಾನ ಲಾಸವಿಲ್ಲದ ಗಾನ . . . ನೆರೆಯದು (ಕೌಶರಾ. ೦-೨೮). [ಸಂ.]

**ಲಾಸಕ** (ನಾ). ೧. ನೆಗೆಯುವವನು ; ಜಿಗಿಯುವವನು. ೨. ಕುಣಿಯುವವನು ; ನರ್ತಕ. [ಸಂ.]

**ಲಾಸಕಿ** (ನಾ). ಕುಣಿಯುವವಳು ; ನೃತ್ಯಗಾತಿ : "ನರ್ತಕೀ, ಲಾಸಕೀ— ೨ ಕುಣಿಯುವ ನಾಟ್ಯಗಾತಿಯ ಹೆಸರುಗಳು" (ಸಿದ್ಧಾಂತಿ. ೫೯) ; ಸತಿ . . .

ಅಂಗಜಲಾಸ್ಯಲೀಲೆಯುಂ ಕ್ಷಿತಿಪನ ಚಿತ್ತವೃತ್ತಿಗುಪದೇಶಿಪ ಲಾಸಕಿಯುಂತೆ ತೋಱಿದಳ್ (ಕಂಪ್ರಶ. ೩-೯೩). [ಸಂ. ಲಾಸಕೀ]

**ಲಾಸಿ** (ನಾ). ೧. ಅಲ್ಲಿಂದ ಇಲ್ಲಿಗೆ ಚಲಿಸುವುದು. ೨. ಕುಣಿತ ; ನೃತ್ಯ. [ಸಂ. ಲಾಸಿನ್]

**ಲಾಸಿಕೆ** (ನಾ). = ಲಾಸಕಿ : "ನರ್ತಿಕೆ ಲಾಸಿಕೆಯುಂಬಳಕ್ಕ್" (ಶಬ್ದಮಣಿ. ೬೪-೭೫) ; ಕಣ್ಗೊಳಿಸಿದಳಿಂದುಕಾಂತವಣಿವಂಗಳರಂಗದೊಳಬ್ಜನಾಳವಂ ಸೆಳೆವಿಡಿದಂಗಜನ್ಮಜಯಲಕ್ಷ್ಮಿಯ ಲಾಸಿಕೆಯಿವಾಕೆಯೆಂಬಿನಂ (ಶುಕ್ಲಶ. ೪-೩೨) ; ನರ್ತಿಸುತ್ತಿರ್ಪ ಮರುತ್ಸುದತಿಯರ್ಗಿಂದ್ರನ ಹೃತ್ಪದ್ಮದೊಳಾಡುವ ಭಕ್ತಿ ಲಕ್ಷ್ಮಿ ಲಾಸಿಕೆಯುತ್ಕ್ಯಂ (ಕಂಪ್ರಶ. ೦೨-೭೦). [ಸಂ. ಲಾಸಿಕಾ]

**ಲಾಸ್ಯ** (ನಾ). ೧. ಕುಣಿಯುವುದು ; ನರ್ತಿಸುವುದು. ೨. ಕುಣಿತ ; ನೃತ್ಯ : ರಾಮನೇರ್ದನು ಬಂಡೆಯುಂ, ಲಾಸ್ಯವುಂ ತೊಡಗಿ (ಶ್ರೀರಾಮಪ. ೩೫-೨೭೯). ೩. [ನಾಟ್ಯ] ಗಾಯನ ಮತ್ತು ವಾದ್ಯದಿಂದೊಡಗೂಡಿದ ನೃತ್ಯ. ೪. ಶೃಂಗಾರ ಮೊದಲಾದ ಭಾವಗಳನ್ನು ತೋರಿಸುವ ನಾಟ್ಯ,— ನರ್ತನ : "ನೃತ್ಯಂ, ತಾಂಡವಂ, ಲಾಸ್ಯಂ – ಈ ೩ ನಾಟ್ಯಮೆಂಬುದು" (ಹಲಾಯು. ೦೭-೯೩) ; ಸುತ್ರಾಮನಂದಿಂತು ತಾಂಡವಲಾಸ್ಯಂಗಳ ಚೆಲ್ವನೊರ್ನೆಯೆ ತದೀಯಾಸ್ಥಾನದೊಳ್ ತೋಱಿದಂ (ಆದಿಪು. ೭-೦೨೩); ಆ ಶಿವವನುಪಮತವುಂ ಪಡೆದಾ ಶಿವೆ ಭರತಂಗೆ ಮಧುರನಾಟ್ಯಕ್ರಮದಾ ವ್ಯಸಿರಿಯನೊರೆಯಲಾದುದು ಭಾಸುರತರಮಪ್ಪ ಲಾಸ್ಯನಾಮಂ ಜಗದೊಳ್ (ಲಾಸ್ಯರ. ೦-೦೩) ; ನೀಱ್ ಮಱೆದಳ್ ಲೀಲಾಲಸಲ್ಲಾಸ್ಯಮು (ರಾಜಶೇ. ೦೨-೭೨). ℗ ಪಾರ್ವತಿಯಿಂದ ಕಲ್ಪಿತವಾದುದೆನ್ನಲಾದ ಲಾಸ್ಯವು ಸೌಕುಮಾರ್ಯವಾದ ಅಂಗವಿನ್ಯಾಸಗಳಿಂದ ಕೂಡಿದ್ದು, ಶಿವನ ಮತ್ತು ಅವನ ಗಣಗಳ ಉಗ್ರವಾದ ನಾಟ್ಯಕ್ಕೆ ವಿರುದ್ಧವಾದುದಾಗಿದೆ. ೫. ಕುಣಿಯುವವನು ; ನರ್ತಕ. 'ತಾಂಡವ' ಪರಾ.

**ಲಾಸ್ಯವಾಡು** = ಕುಣಿ; ನಾಟ್ಯವಾಡು: ಅವನ ಮುಖದಲ್ಲಿ ನಗೆಯು ಲಾಸ್ಯವಾಡುತ್ತಿತ್ತು (ಮಶೇ. ೯೩) ; ಗೆಜ್ಜೆನಾದದಿ ಲಾಸ್ಯವಾಡುತ ತಣಿಸಿ ಕುಣಿಸುವೆ ರಸಿಕನ (ಕಂಪ್ರದಾ. ೩೭-೭). [ಸಂ.]

**ಲಾಸ್ಯಾಂಗ** (ನಾ). [ನಾಟ್ಯ] ಗೇಯಪದ, ಸ್ಥಿತಪಾಠ್ಯ, ಆಸೀನ (ಪಾಠ್ಯ), ಪುಷ್ಪಗಂಡಿಕಾ, ಪ್ರಚ್ಛೇದಕ, ತ್ರಿಗೂಢಕ, ಸೈಂಧವ, ದ್ವಿಗೂಢಕ, ಉತ್ತಮೋತ್ತಮಕ ಮತ್ತು ಉಕ್ತಪ್ರತ್ಯುಕ್ತ ಎಂಬ ನಾಟ್ಯದ ಹತ್ತು ಭೇದಗಳು : ಭಾಣ . . . ಮುಖನಿರ್ವಹಣಸಂಧಿಗಳೂ, ಹತ್ತು ಲಾಸ್ಯಾಂಗಗಳೂ ಪ್ರಾಯಿಕವಾಗಿ ಭಾರತೀವೃತ್ತಿಯೂ ಇರುತ್ತವೆ (ಕಂಶಾಟಿ. ೩೦). [ಸಂ.]

**ಲಾಹರಿ** (ನಾ). ಚಳಕ ; ಕೌಶಲ : ಅಚ್ಚಿನಲ್ಲಿ ಬೇಟದಱಿವು ದೃಷ್ಟವಾಯಿತ್ತು ಮನವಚ್ಚಿ ಕೊಟ್ಟ ಲಿಂಗ ಹೃತ್ಕಮಲವಲ್ಲಿ ನಟ್ಟುದಿಲ್ಲಾ ದೃಷ್ಟ ತಾನಾದಲ್ಲದೆ ಇದಿರಿಗೆ ದೃಷ್ಟವ ಕಟ್ಟಬಾರದು ಕಟ್ಟಿಕೊಂಡ ಮತ್ತೆ ಗುಱಿಯನೆಚ್ಚ ಕೈಯ ಲಾಹರಿಯಂತಿರಬೇಕು (ಮೋಳಿಮ. ೦೩೩-೩೭೪).

[ < ಲಹರಿ ]

**ಲಾಹಿರಿ** (ನಾ). ಮದ ; ಮತ್ತು ; ಮತ್ತತೆ : ಕುಲವು ಕುಕುವರನಿಂದ ಶೀಲವಾ ದೇಶಾಂತರಗಳಿಂದ ಲಕ್ಷ್ಮಿ ಲಾಹಿರಿಗಳಿಂದ . . . ಕೆಡುವುದು (ಕಶಿಂ. ೦೩-೦೭). [ ← ತೆಲು. ಲಾಹಿರಿ, ಲಾಹಿರೀ ]

**ಲಾಹಿರಿಗೊಳ್** (ಕ್ರಿ). ಮದಿಸು : ಉರವ ಸಿಗಿದಾ ರಕುತವನು ಸುರಿಸುರಿದು ಲಾಹಿರಿಗೊಂಡು ಮದವದ್ವಿರದಗಳ ಚಂದದಲಿ ತರುಬಿದರಾ ಕಪಿವ್ರಜವ (ತಸಂರಾ. ೬-೭-೦೮). [ಲಾಹಿರಿ + ಕೊಳ್$_1$]

**ಲಾಳ$_1$** (ನಾ). ೧. ಕೊಳವೆ ; ನಳಿಗೆ : (+). ೨. ಲೇಖನಿಗಳನ್ನು ಮಾಡಲು ಬಳಸುವ, ಟೊಳ್ಳಾಗಿರುವ ಒಂದು ಬಗೆಯ ಗಲಗು,– ಬೆತ್ತ : "ಲಾಳ – ನಾಳ" (ಕದ್ಯಕೋ. ೩೯) ; ಸೆಗ್ಗಳ್ಳಂಗಡಲೇ ಬೇರು . . . ಲಾಳದ ಬೇರು, ನಾಗಕೇಸರ ಇವಿಷ್ಟನೂ ಪ್ರತ್ಯೇಕ ಎರಡು ವರಹ ತೂಕ ಆಡಿನ ಹಾಲಿನಿಂದ ಅರೆದು ಕುಡಿಯ ಕೊಡಿಸಲು ಶ್ಲೇಷ್ಮಯುಕ್ತವಾದ ಯೋನಿ ಶುದ್ಧವಹುದು (ವೈದ್ಯಶಾ. II, ೪೦) ; ಒಂದು ತರದ ಲಾಳದ ಕಡ್ಡಿ ಬೆಳೆಯುತ್ತದೆ. ಈ ಕಡ್ಡಿಗಳಿಂದ ಮೀನು ಹಿಡಿಯುವ ದೋಣಿಗಳನ್ನು ಮಾಡುತ್ತಾರೆ (ಕೃಷಾತ. II, ೦೨೮) ; ನದಿಯ ಇಬ್ಬದಿಯ ಮೇಲೂ ಲಾಳದ ಕಡ್ಡಿಗಳು ಹುಚ್ಚು ಹುಚ್ಚಾಗಿ ಬೆಳೆದು . . . ತಲೆದೂಗುತ್ತಿದ್ದವು (ಹುಗಸಾಂ. ೪೪).

**ಲಾಳದ ಕಡ್ಡಿ** = ಲಾಳದಿಂದ ಮಾಡಿದ ಲೇಖನಿ : ಕಂಟ, ಸೀಸಗಡ್ಡಿ ಕುಂಚಗಳು, ಲಾಳದ ಕಡ್ಡಿ ಮತ್ತು ಮರಗಡ್ಡಿ (Wooden pens)ಗಳನ್ನು ಒಳಗೊಳ್ಳುತ್ತದೆ (ಶಾರಶ. ೦೮). [<ಸಂ. ನಾಲ]

**ಲಾಳ$_2$, ಲಾಡ$_1$, ಲಾಟ** (ನಾ). ೧. ಒಂದು ದೇಶದ ಹೆಸರು : ℗ ಈಗಿನ ಗುಜರಾತು : "ಲಾಟಃ—ಲಾಳಂ, ನಾಡು" (ಶಬ್ದ. ೦೩) ; ಆ ವಿಭುವಾಹವಮಲ್ಲ ಮಹೀವಲ್ಲಭನಲ್ಲಿ ಪಡೆದನುರುತರನಿಜವಿದ್ಯಾವಿಭವದಿಂದ ಮೆಚ್ಚಿಸಿ ಭೂವಿನುತಂ ಲಾಳಸಂಧಿವಿಗ್ರಹಪದವಂ (ಎಕ. XII, ೨೮೦-೦೭೭; 1077) ; ಲಾಳ ಚೋಳ ವರಾಳ ಯವ ಬಂಗಾಳ . . . ಧರಣೀಪಾಲತತಿ ಸಂದಣಿಸಿದಂದು (ಕೊರರಾ. ೦-೭-೦೮). ೨. ಲಾಳದೇಶಕ್ಕೆ ಸೇರಿದವನು : ಓಡಿದ ಲಾಳಂ ಕಿವಿವಿಡಿದಾಡಿದ ಚೋಳಂ (ಎಕ. VII, ಶಿಕಾಂ. ೦೭೭-೨೦ ; 1114). **ಲಾಡ$_1$** : ೧. "ಲಾಡಃ = ನಾಡು" (ಶಬ್ದ. ೨೩೪). ೨. ಕರಸಣ್ಣಗಳ ನೆಯ್ವ ಚೇಡರಂ ಲಾಡರಂ ಪರಿಮಳದ ಪೂವಿನಾ ಮಾಲೆಗಾಱರ ನೀಲಿಗಾಱರಾ ಪಸರಮೆಸಗಿಗಂ (ಗುರುಚ. ೦-೩೪) ; ಬಿಳಿದಂ ನೇಯ್ವ ಜಾಡರುಂ ಲಾಡರುಂ (ಕರಕೋ. ೨-೪೭) . **ಲಾಟ** : ೧. "ಲಾಟಕೆ ಲಾಟಂ" (ಕಂಕಲ. ೨೦). ೨. ತಱಿಸಿಂದು ಲಾಟರೊಳ್ ತ[ಳ್ತ]ಱಿದೇಱಂ ಪೇಟೆ ಕೇಳ್ದು (ಕಂಕಶಾ. ೦-೩೩). 'ಲಾಟಬಾಸೆಗ' ಪರಾ.

**ಲಾಳ ಕೊಂಡೆಯುಕಾಱ** = ಲಾಳರನ್ನು ಸದೆಬಡಿಯುವವನು : ಶ್ರೀಮನ್ಮಹಾಪ್ರಧಾನಂ ಸೇನಾಧಿಪತಿ ಲಾಳಕೊಂಡೆಯುಕಾಱರಧಿಷ್ಠಾಯಕ ನಾಗ ಸಾಹಣಾಧಿಪತಿ . . . ಪ್ರತಿಪಾಳಿಸುತ್ತಮಿರ್ದ್ದ (ಎಕ. IX-i, ೨೭೭-೨೩ ; 1184). [<ಸಂ. ಲಾಟ]

**ಲಾಳ$_3$** 'ನಾಲ$_3$' ನೋ.

**ಲಾಳಕ$_1$** (ನಾ). ಕುದುರೆ, ದನ ಮುಂತಾದುವುಗಳ ಗೊರಸಿಗೆ ಲಾಳ ಹೊಡೆಯುವವನು : ಗಾಣಿಗರ್ ಚಿಪ್ಪಿಗರ್ ಮುಚ್ಚಿಗರ್ ಲಾಳಕರ್ ಸಾಣಿಗರ್ . . . ಬರುತಿರ್ದರು (ಕರಶ. ೪೭-೪೦).

[ಲಾಳ$_3$ (<ನಾಲ$_3$) + – ಕ$_2$]

**ಲಾಳಕ$_2$** (ನಾ). (?) : ಅದರ ಸೊಪ್ಪಿನಲ್ಲಿ ಕಟ್ಟಿ, ಕಟ್ಟ ಅಭ್ರಕದ ಮೇಲೆ ಪಡಗಿ ಲಾಳಕದ ಗುಳಿಗೆ ಹುಟಮಾಡಿ ಅದರಲ್ಲಿ ಇಟ್ಟು (ಗಂರತ್ನ. ೩-೪).

[ ? ]

**ಲಾಳಕಟ್ಟು** 'ನಾಲಕಟ್ಟು' ನೋ.

**ಲಾಳಗಾರ** 'ನಾಲಗಾರ' ನೋ.

**ಲಾಳಗುಂಡಿಗೆ** 'ಲಾಳವಿಂಡಿಗೆ' ನೋ.

**ಲಾಳಗುಡಿಗೆ** 'ಲಾಳವಿಂಡಿಗೆ' ನೋ.

**ಲಾಳಬಂದಿ** 'ನಾಲಬಂದಿ' ನೋ.

**ಲಾಳಬುಂಡಿಗೆ** 'ಲಾಳವಿಂಡಿಗೆ' ನೋ.

**ಲಾಳಲಿಪಿ** (ನಾ). ಲಾಟದೇಶದ ಭಾಷೆಯ ಲಿಪಿ : ತೆಲುಗಲಿಪಿ . . . ಲಾ [ಶುಕಾಂ. ೪೭] ಳಲಿಪಿ ಮೊದಲಾದ ಹಲವು ಲಿಪಿಗಳನೋದಬಲ್ಲಗ್ಗಳದ ಕರಣಕರಂ ಕರೆಸಿ (ದಸಶ. ೩-೩೩). [ಲಾಳ$_2$+ಲಿಪಿ]

**ಲಾಳವಂಡಿಗೆ** 'ಲಾಳವಿಂಡಿಗೆ' ನೋ.

**ಲಾಳವಟ್ಟೆ** (ನಾ). ಲಾಳದ ಕಡ್ಡಿಯ ಸೀಳು,–ಪಟ್ಟೆ : ಪುರವರದೊಳೆಡೆ ವಿಡಲಿಲ್ಲದಾಯಿಕ್ಷುಕೋದಂಡನಲರ್ಗಣೆಯುನಿಟ್ಟು ಮತ್ತಾಯಗ್ಗಾಣಸು ಪುರಜನಂಗಳೆರ್ದೆಯಂ ಲಾಳವಟ್ಟೆಯುಪ್ಪಂತಿರೆಸೂವಾ ಕಾಯಜನ ಕೋಳಾಹಳವನು ಕಂಡು (ಸಮ್ಮ. ೪–೩೦); ಲಾಳವಟ್ಟೆಯ ಮಾಡಿದುವಾನೆಯೊಡಲನು . . . ಆ ಕಣೆಗಳು (ಚೇಂಬಸ. ೨೯–೧೩೯) ; ಬಿಲ್ಲವರೆಚ್ಚ ಶರಗಳಿಂದಿಟ್ಟಣಿಸುತಲೆಯ್ತಂದು ತಟ್ಟುರ್ಚೆ ರಿಪುಗಳ ಪೇರುರಗಳ ಲಾಳವಟ್ಟೆಯ ಮಾಡಿದವಾಗ (ಸಂಕ್ರಸಾಂ. ೬–೩೫). [ಲಾಳ$_1$+ವಟ್ಟೆ$_1$]

**ಲಾಳವಾಟೆ** (ನಾ). =ಲಾಳವಟ್ಟೆ : ಲಾಳವಾಟೆಗಳಾದವಾನೆಯ ಹಾಳುವಡಲುಗಳು (ಜಜಿಮ. ೭೪–೯). [< ಲಾಳವಟ್ಟೆ]

**ಲಾಳವಿಂಡಿಗೆ, ಲಾಳಗುಂಡಿಗೆ, ಲಾಳಗುಡಿಗೆ, ಲಾಳಮುಂಡಿಗೆ, ಲಾಳವಂಡಿಗೆ, ಲಾಳವುಂಡಿಗೆ** (ನಾ). ೧. ಬಾಗಿಲನ್ನು ಮುಚ್ಚಿ ಭದ್ರಪಡಿಸಲು, ಅಡ್ಡಲಾಗಿ ಹಾಕುವ (ಮರದ) ಪಟ್ಟಿ : ಅಗುಳಿ : ತಾಳು : "ಪರಿಘಃ, ಪರಿಘಾತನಃ- ೨ ಲಾಳವಿಂಡಿಗೆ" (ಚಿರಾಯು. ೭೬–೩೨೦); ದಿಶಾಧಿಪರ್ ದಿಗಿಭಸಂಹತಿಯಂ ಮನಮೊಲ್ದು ಪಾರಿಸಲಿಕ್ಕಿದ ಲಾಳವಿಂಡಿಗೆಯ [ಮಾ]ಟ್ಕೆಯೊಳಿರ್ದುದು ವಿಂಧ್ಯಪರ್ವತಂ (ನರ್ಗಮ. ೦೬–೫); ತಂದನ್ ಮನದ ವೇಗದಿ ಬಾಗಿಲುಕ್ಕಿನ ಲಾಳವಿಂಡಿಗೆಯ (ಸೌಂದ. ೩೩–೩೬); ಜವನರಮನೆಯ ಮುಂಬಾಗಿಲ್ಗೆ ಲಾಳವಿಂಡಿಗೆಯುಂ ಸಮೆವೆನು (ರಾಮಾಶ್ವ. ೯೨–೨). ೨. (ಜಾಗಟೆಯನ್ನು ಬಡಿಯುವ) ದಂಡ,– ಕೋಲು : ಒಂದೆಡೆ ಜಾಗಟೆಯನ್ನು ನೇತುಹಾಕಿದ್ದಾರೆ. ಅದನ್ನು ಬಾರಿಸುವ ಕಿರಿಯ ಲಾಳವಿಂಡಿಗೆಯೂ ಪಕ್ಕದಲ್ಲಿದೆ (ಕಂಪ್ರಸ. ೨೦೯–೪). **ಲಾಳಗುಂಡಿಗೆ** : ೧. ಮಗದಿಗೆ ಲಾಳಗುಂಡಿಗೆ ಸ್ವಾಮಿಪಂಚಕರ ಗಂಡ (ಎಕ. VII, ಶಿಕಮೊ. ೭೬–೦೪; 1291). **ಲಾಳಗುಡಿಗೆ** : ೧. ಶರಣಾಗತ ವಜ್ರಪಂಜರರುಂ ಗಡಿಗೆ ಲಾಳಗುಡಿಗೆ ಬಂಧುಜನಬಾಂಧವರುಂ (ಎಕ. XI, ಹೊಳಲ್ಕೆ. ೦೦೩–೫; 1681 ?). **ಲಾಳಮುಂಡಿಗೆ** : ೧. ಹರಿನೀಲದಿಂದಲೆಸವ ಲಾಳಮುಂಡಿಗೆ ವರಕುಲಿಶದ ಬಲುಮೊಳೆಯಿಂ ಪಿರಿದು ರಂಜಿಪ ದ್ವಾರವಟ್ಟದ ಮಹಿಮೆಯನೊರೆವಡಿನ್ನಾರಳವಹುದು (ಅಂಜಕ. ೪–೦೨) ; ಹುಲಿಮುಖದಂಕ ವಜ್ರದ ಕಂಬದಾಳೇರಿ ಬಲು ಲಾಳಮುಂಡಿಗೆ (ಸೌಂದರ. ೫–೩೨). **ಲಾಳವಂಡಿಗೆ** : ೧. ಮಾರುತಿ ಕಡುಹಿನಲಿ ಭುಗುಭುಗಿಪ ಭಾರಿಯ ಕಿಡಿಗೆದರಿ ನೋಡಿದನು ಬಾಗಿಲ ಲಾಳವಂ[ಪಾಠಾಂ. ವಿಂ]ಡಿಗೆಯ (ಸಂಪ್ರಭಾಸ. ೦೫–೩೬); ಲಾಳವಂ [ಪಾಠಾಂ. ವಿಂ]ಡಿಗೆಗಳಲಿ ಬಂಡಿಯ ಗಾಲಿಗಳ ಗಾಡಣೆಗಳಲಿ . . . ರಕ್ಕಸಭಟರಿಗಕ್ಕಜವಾದುದಾ ದುರ್ಗ (ತೊರೆರಾ. ೬–೭–೦೪) **ಲಾಳವುಂಡಿಗೆ** : ೧. ರಿಪುಬಲವನಸಿಯಿಟ್ಟರೆದವಿಭ ಬರಿಕೈಯ ಬಾರಿಯ ಲಾಳವುಂಡಿಗೆಯ ಸರಿಸಗುಂಡಿಸೊಳೊಂದನೊಂದಿಟ್ಟೊರಸಿದವು (ಸಂಪ್ರಭಾ. ೪–೬೦); ಪೊಸ ಬೀಗ ಬಾಗಿಲು ಲಾಳವುಂ [ಪಾಠಾಂ. ಮುಂ]ಡಿಗೆ ಕಣ್ಗೆಸೆದವು ಕುಮ್ಮಟದೊಳಗೆ (ಸಂಪಾಣ. ೩೭–೫೨). [ಲಾಳ$_1$ + ಬಂಡಿಗೆ]

**ಲಾಳವುಂಡಿಗೆ** 'ಲಾಳವಿಂಡಿಗೆ' ನೋ.

**ಲಾಳವ್ಯವಹಾರಿ** (ನಾ). ಲಾಳದೇಶದ ವ್ಯಾಪಾರಿ : ಪರಶುರಾಮ ನಾಯಕ ಪೊಮ್ಮಣನಾಯಕ ಅಮ್ಮುಗಿ ನಾಯಕ ಪ್ರಮುಖರಪ್ಪ ಸಮಸ್ತಲಾಳವ್ಯವಹಾರಿಗಳುಂ (ಎಕ. XII, ೨೦–೯೯ ; 1204). [ಲಾಳ$_2$ + ವ್ಯವಹಾರಿ]

**ಲಾಳಾಜಳ** 'ಲಾಲಾಜಲ' ನೋ.

**ಲಾಳಿ$_1$, ಲಾಡಿ$_1$, ಲಾಲಿ$_2$** (ನಾ). ೧. ಒಂದು ಬಗೆಯ ಗಲಗು,–ಬೆತ್ತ : "ವೀರಣಂ. ವೀರತರಂ- ೨ ಮರಕಬ್ಬಿನ ಪೆಸರುಗಳು. ಕೆಲವರು ಲಾಳೀಕಡಿಯನ್ನುವರು" (ಸಿದ್ಧಾಂಶ. ೦೫೦). ೨. ಬಟ್ಟೆಯನ್ನು ನೇಯಲು ನೇಯ್ಗೆಯವನು ಉಪಯೋಗಿಸುವ ಒಂದು ಸಾಧನ; ನಾಳಿ: ಸೀರೆಯ ನೆಯ್ಯುವಾತನ ಕೈಯ ಲಾಳಿ ನುಂಗಿತ್ತ ಕಂಡೆ (ಬೋಳಬಮ. ೦೦೭–೪೨೭) ; ಹರುಗಣ ಗೂಟ ಠವಣೆಗೋಲು ಲಾಳಿಯು . . . ನಾಲಿಗೆಗೂಟವನಿದೊಂದುಳಿಯದ ಕಟ್ಟಿದನು (ಅಮುಸಾಂ. ೫–೬); ತರದೆ ಕೊಂಬಿನ ಲಾಳಿಯ ಮುಟ್ಟಿಸದೆ ರುಚಿರತರವಾದ ಪೊದಕೆಯಂ ನೆಯ್ದುಕೊಳ್ಳು (ಪಾಕೋಪ. ೨–೬೦). ೩. ಇಕ್ಕುಳ; ತಂಡಸ : "ಇಕ್ಕುಟಂ ಲಾಳಿ ತಂಡಸಂ ಗಾರಿಕಾಖ್ಯಂ" (ಮಂಗರಾ. ೧೦೩–೫). ೪. ಒಂದು ಬಗೆಯ ಆಯುಧ : ಭೋಂಕನೆ ಮಿಡಿವ ಲಾಳಿಯ ಬಿಲ್ಲು ಪೆಟಲ್ಗಳ ಸಂಕುಲವಿರ್ದುದು (ಬೋಜಕ. ೨೦–೯) ; ಬೇಡರ 'ಲಾಳಿ'ಯನ್ನು ಅನೇಕರು ನೋಡಿರಬಹುದು. ಹಾಗೆಯೆ ಸಿಡಿದಾಡುವ ಒಂದು ಇಬ್ಬದಿಮೊನೆಯ ಜಡವಾದ ಚಕ್ರ ಆಯುಧವಿದು (ಕರ್ನಾಟಕ. ೫೭). **ಲಾಡಿ$_1$** : ೨. ಎಂಥೆಂಥ ಎಂಜಿನ್ ಮಾಡಿ ಇರಿಸಿದಾನೆ . . . ಬೇಲು ಬಿಚ್ಚುವುದಕ್ಕೊಂದು ಹಬೇನ ಹತೋಟಿಯಲ್ಲಿಡುವುದಕ್ಕೊಂದು, ಲಾಡಿ ತಯಾರಿಸುವುದಕ್ಕೊಂದು ನೂಲುವುದಕ್ಕನಲವತ್ತೆಂಟು (ಸಂಗೂಂ. ೩೭). **ಲಾಲಿ$_2$** : ೨. ಈ ಬತ್ತಿಗಳ ಮರದ ಲಾಲಿ (Bobbins)ಗಳಿಗೆ ಸುತ್ತಲ್ಪಡುವುವು (ಜಾಂಕ್ರ. I. ೪೦೭).

**ಲಾಳಿ ಆಡಿಸು**=೧. ನೇಯು : ಅವನು ಪಾತ್ರಗಳನ್ನೂ ಘಟನೆಗಳನ್ನೂ ಎರಡುಕಥೆಗಳ ಮಧ್ಯೆ ಲಾಳಿಆಡಿಸಿದಂತೆ ಆಡಿಸಿ ಅವುಗಳನ್ನು ಹಾಸುಹೊಕ್ಕಾಗಿ ನೆಯ್ದಿದ್ದಾನೆ (ಸಂಪಾಟ. ೦೦೭). ೨. (ಆಲಂ) ಅಲ್ಲಿಂದಿಲ್ಲಿಗೆ ಓಡಾಡಿಸು ; ಅಲೆಸು : ನನ್ನನ್ನು ಲಾಳಿಆಡಿಸಬೇಡ (ರೂಢಿ). [< ಸಂ. ನಾಲೀ]

**ಲಾಳಿ$_2$** (ನಾ). ಲಾಟದೇಶದವಳು : "ಲಾಟ-ಲಾಳಿ[ಪಾಠಾಂ. ಟಿ]" (ಚತುರಾ. ೯೩). [ಲಾಳ$_2$ + – ಇ$_2$]

**ಲಾಳಿಕೆ** (ನಾ). ಬಾಯಿ ಕಿರಿದಾದ ಪಾತ್ರೆಗೆ ದ್ರವವಸ್ತುಗಳನ್ನು ಹಾಕಲು ಬಳಸುವ, ಅಗಲ ಕಿರಿದಾಗುತ್ತಾ ಹೋಗುವ ಕೊಳವೆ; ಬುದ್ಧಿವಂತ ಪನ್ನಾಲೆ : ಗಾಜಿನ ಪಾತ್ರೆಯಲ್ಲಿರುವ ನೀರಿಗೂ ಲಾಳಿಕೆಯಲ್ಲಿರುವ ದ್ರಾ[illegible] ಣಕ್ಕೂ ಒಂದು ತೆಳುವಾದ ಪೊರೆಯಿದೆ (ಸಸ್ಯಶಾ. ೬೭) ; ಲಾಳಿಕೆಯಂ (ಫನ್ನಲ್) ಅಗಲ ಕಿರಿದಾಗುತ್ತ ಹೋಗುವ ಕೊಳ್ಗ (ಸಂಕೋ. I. ೩೨೫); ತ[illegible] ಕೆಳಗೆ ಮಾಡಿ ಮಲಗಿಸಿ ಮೂಗಿನಲ್ಲೊಂದು ಲಾಳಿಕೆ ಇಟ್ಟರ[illegible] (ಹುಕ್ಕುಹು. ೨೯). [< ಸಂ. ನಾಲಿಕಾ]

**ಲಾಳಿಕೋಲು** (ನಾ). ಒಂದು ಬಗೆಯ ಆಯುಧ : ತುರುಕಸಿಂಗಾ[illegible] ಬೇಡೆಯ ಲಾಳಿಕೋಲ ನಿಷ್ಠುರವಾಕ್ಯದಾಳ್ಗಳೊಗ್ಗಿನೊಳು ಚುರುಚುರನೆಯ್[illegible] ಕೈಮುಗಿದು (ಶರಶ. ೨೨–೩೭). [ಲಾಳಿ$_1$ + ಕೋಲು$_1$ (< ಕೋಲ್$_1$)]

**ಲಾಳಿತ** 'ಲಾಲಿತ' ನೋ.

**ಲಾಳಿತೆ** (ನಾ). ಸಂತೋಷ;ಲಾಳಿತೆಯ ರಮಣೀಯರಸಗಳ ಸೂಳು ನುಡಿಗಳ . . . ಕಥೆಗಳನೊಲಿದು ಬಣ್ಣಿಸುವೆ (ಸೌಂದರ. ೦–೩). [< ಸಂ. ಲಾಲಿತ[illegible]]

**ಲಾಳೆ** 'ಲಾಲೆ' ನೋ.

**ಲಾಟ** 'ಲಾಳ$_2$' ನೋ.

**ಲಾಟಬಾಸೆಗ** (ನಾ). ಲಾಳದೇಶ ಭಾಷೆಯನ್ನು ಆಡುವವನು : ಲಾಟಂ = ಲಾಟಂ; ಲಾಟಭಾಷಿಕಂ = ಲಾಟಬಾಸೆಗಂ (ಕಮಿದ. ೨೦ ಪ್ರಯೋ).

[ಲಾಟ (<ಲಾಳ$_2$) + ಬಾಸೆ$_3$ + – ಗ$_2$]

**ಲಿಂಗ** (ನಾ). ೧. ಚಿಹ್ನೆ ; ಗುರುತು: ಶಿರಸ್ಸೆಂಬ ಸ್ಥಾನಾಷ್ಟಕದಲ್ಲಿ ಪ್ರಾ[illegible] ವಾಯುಸಂಬಂಧಮಾಗಲಲ್ಲಿ ಪುಟ್ಟುವ ಅರ್ಣ ವರ್ಣ ಬೀಜ ಲಿಂ[illegible] ಮಾತೃಕೆ ಶುದ್ಧಗೆಯೆಂಬ ಪರ್ಯಾಯ ಸಂಜ್ಞೆ (ಶಿವಕ. ೦೭೦); ಶ್ರುತಿ ಎಂದ[illegible] ಬಾಯಿಬಿಟ್ಟು ಹೇಳುವ ಶಬ್ದವು ; ಲಿಂಗವೆಂದರೆ ಅದೆಂದು ತಿಳಿಸುವ ವಿಶೇಷ[illegible] ರೂಪವಾದ ಗುರುತು (ಬ್ರಹ್ಮಶಾ. ೨೦೨ ೦೩೬) ; ಭಾರತೀಯಮೂರ್ತಿಶಿಲ್ಪ[illegible] ಹೆಗ್ಗುರುತು, ಅದರಲ್ಲಿನ ಚಿಹ್ನೆ, ಲಿಂಗ ಅಥವಾ ಸಂಜ್ಞೆ (Symbolism) (ಕಾರದ.೩೦೬). ೨. ಗಂಡಸಿನ ಜನನೇಂದ್ರಿಯ: "ಶಿಶ್ನಃ, ಶೇಫಃ, ಮೇಢ್ರ[illegible] ಲಿಂಗಂ, ಮೇಹನಂ, ಶೇಫಸ್–ಈ ೬ ಶೇಫಂ" (ಚಿರಾಯು. ೯೫–೩೭೦)

ಲಿಂಗಂ ಬೆನ್ ಜಂಘಾಯುಗಳಂಗಳುಮೆಂಬೀ ಪ್ರದೇಶಮಿವು ನಾಲ್ಕುಂ ಹ್ರಸ್ವಂಗಳೆನೆ . . . ನಿಧಿಪುರುಷಂ (ಲೋಕೋಪ. ೧೦-೯೭). ೩. ಸ್ತ್ರೀ ಅಥವಾ ಪುರುಷಚಿಹ್ನೆ : ಈ ನಿಯಮವನ್ನು ಲಿಂಗಭೇದವಿಲ್ಲದೆ ಅನುಸರಿಸಬೇಕು (ಲೂ೨). ೪. ದೇವಸ್ಥಾನಗಳಲ್ಲಿ ಪ್ರತಿಷ್ಠಾಪಿಸುವ ಶಿವನ ಪ್ರತೀಕವಾದ ಮೂರ್ತಿ ; ಸ್ಥಾವರಲಿಂಗ ; ವರಸಂಗ ಲಿಂಗ ಶರಣಾಗು (ಬಸವ. ೩-೬೬) ; ನಮ್ಮೂರ ದೇವಸ್ಥಾನದಲ್ಲಿ ಈ ದಿನ ಲಿಂಗದ ಪ್ರತಿಷ್ಠಾಪನೆ ಇದೆ (ಲೂ೨). ೫. [ವೀಶೈ] ಮೈಮೇಲೆ ಧರಿಸುವ ಶಿವನ ಒಂದು ಪ್ರತೀಕ; ಇಷ್ಟಲಿಂಗ: ಹೊತ್ತಾರೆ ಎದ್ದು ಅಗ್ಘವಣಿ ಪತ್ರೆಯ ತಂದು ಹೊತ್ತು ಹೋಗದ ಮುನ್ನ ಪೂಜಿಸು ಲಿಂಗವ (ಬಸವ. ೦೭೨) ; ಲಿಂಗನಿಜಸದ್ಭಾವದೊಳು ಮನಂ ಮುಳುಗಿ (೦೩೩೩. ೦-೩) ; ಲಿಂಗಕ್ಕೆ ಕಡೆಯಲ್ಲಿ ಲಿಂಗಿಲ್ಲದೆಡೆಯಲ್ಲಿ ಲಿಂಗದೊಳು ಜಗವು ಅಡಗಿಹುದು ಲಿಂಗವನು ಹಿಂಗಿದವರುಂಟೆ (ಸರ್ವಜ್ಞ. ೦೦೭). ೬. [ತರ್ಕಶಾ] ಪ್ರಮಾಣ ; ಪುರಾವೆ : 'ಅನುಮಾನ'ದಲ್ಲಿ ಸಾಧಕವಾದ ' ಲಿಂಗ 'ಕ್ಕಿರುವ ವರ್ತನೆಯನ್ನೇ ವ್ಯಂಜಕತ್ವದಲ್ಲಿಯೂ ನೋಡಬಹುದು (ಕೃಷ್ಣಕೋ. ೨೦೨). ೭. [ವ್ಯಾಕ] ಪುಂ. ಸ್ತ್ರೀ. ನಪುಂಸಕಗಳ ಸೂಚನೆ : ನೀನಱಿ ಕರ್ಣಾಟಕದೊಳ್ ಪೀನಂ ಸ್ತ್ರೀ ಪುಂ ನಪುಂಸಕೋಭಯ ಪುಂ ಸ್ತ್ರೀ ಸ್ತ್ರೀನಪ್ಸಮಸ್ತವಾಚ್ಯಾನ್ಯೂನಾವ್ಯಯಮೆಂದು ಲಿಂಗಮೊಂಬತ್ತು ತೆಱಂ (ಶಬ್ದ. ೬೬); ಲಿಂಗವೆಷ್ಟು ವಿಧವು ? ಪುಲ್ಲಿಂಗವೆಂತಲೂ ಸ್ತ್ರೀಲಿಂಗವೆಂತಲೂ ನಪುಂಸಕಲಿಂಗವೆಂತಲೂ ಮೂರು ವಿಧವಾಗಿರುವದು (ಹೊಸಗ. ೩೩). ೮. ಯಾವುದೇ ಪ್ರತ್ಯಯ ಮೊದಲಾದುವುಗಳು ಸೇರದೆ ಇರುವ ಶಬ್ದದ ಮೂಲರೂಪ ; ಪ್ರಾತಿಪದಿಕ : ಕ್ರಿಯೆಯಂ ನುಡಿಯದುದು ವಿಭಕ್ತಿಯನಿಲ್ಲದುದರ್ಥಮುಳ್ಳುದಂತದು ಲಿಂಗಂ (ಶಬ್ದ. ೭೨) ; ಧಾತು ಪ್ರತ್ಯಯಾಂತಗಳಲ್ಲದ ಅರ್ಥವುಳ್ಳ ಶಬ್ದಗಳು ಲಿಂಗವೆಂದು ಹೇಳಲ್ಪಡುತ್ತದೆ (ಹೊಸಗ. ೩೯). "ಅನುಮಾನದೊಳು ಮುಷ್ಕದೊಳು ಪ್ರಕೃತಿಯೊಳು ಶೈವಮೂರ್ತಿಯೊಳು ಲಿಂಗಮಕ್ಕುಂ " (ಮಂಗರಾ. ೦೩೦-೩೦).

**ಲಿಂಗದ ಕಲ್ಲು**=ಲಿಂಗಮುದ್ರೆಯಿರುವ ಕಲ್ಲು : ನಾಲ್ಕುಂ ದೆಸೆಯೊಳು [ಳ್] ನಟ್ಟ ಲಿಂಗದ ಕಲ್ಲುಗಳು[ಳ್] (ಕೂಲ್ಲ್ ೩೬. ೦೩-೭೮; 1186). **ಲಿಂಗದ ಕಾಯಿ** = ಶಿವಲಿಂಗವನ್ನಿಡುವ ಕರಡಿಗೆ; ಬೌಕ : ಅವರು ಲಿಂಗದ ಕಾಯನ್ನು ಕೊರಳಲ್ಲಿ ಹಾಕಿದ್ದಾರೆ (ಲೂ೨). **ಲಿಂಗದ ಬೀರ, ಲಿಂಗದ ವೀರ** = ವೀರಭದ್ರನ ಖಡ್ಗ ಹೇಳುವ ಕಾಯಕದವನು; ಪುರವಂತ : ಲಿಂಗದ ಬೀರರು ಖಡ್ಗ ಹೇಳುತ್ತಾರೆ (ಲೂ೨) ; ಲಿಂಗದ ವೀರರ ಕುಣಿತ. ಗಡ್ಡುಗರಕುಣಿತ . . . ಗಮನಾರ್ಹ ನೃತ್ಯಗಳು (ಜಾಕೋ. I, ೭೦೯). [ಸಂ.]

**ಲಿಂಗಕಲ್ಲು** (ನಾ). ಲಿಂಗದ ಮುದ್ರೆಯುಳ್ಳ ಗಡಿಕಲ್ಲು : ಬಡಗಲು ಬಟ್ಟೆಯ ನಟ್ಟ ಲಿಂಗಕಲ್ಲು (ಎಪಿ. XIII, ೦೭೨-೯೦; 1055).
[ಲಿಂಗ + ಕಲ್ಲು (< ಕಲ್$_3$)]

**ಲಿಂಗಕಾಣಿಕೆ** (ನಾ). ಒಂದು ಬಗೆಯ ತೆರಿಗೆ : ಯಿವಿರ್‍ಗೆ ಚಪರಕಾಣಿಕೆಯಿಲ್ಲ ಮರ್‍ಕಾಣಿಕೆಯಿಲ್ಲ ಡೊಂಬಕಾಣಿಕೆಯಿಲ ಲಿಂಗಕಾಣಿಕೆಯಿಲ (ಎಪಿ. XVI. ಗುಬ್ಬಿ. ೭೯-೩೩ ; ೯). [ಲಿಂಗ + ಕಾಣಿಕೆ (< ಕಾಣ್ಕೆ)]

**ಲಿಂಗಗ್ರಾಹಕ** (ನಾ). ಶಿವತತ್ತ್ವವನ್ನು ಅರ್ಥಮಾಡಿಕೊಂಡವನು,— ತಿಳಿದವನು : ಶಿವಲಿಂಗಾರ್ಚನಾತಿಸ್ನೇಹದೊಳು ಕುಳ್ಳಿರ್ದ ಲಿಂಗಗ್ರಾಹಕಂ ಬಸವಣ್ಣನಿಹ ಸದ್ಭಾವಮಂ ನೋಡಿ (ಬಸವ. ೩೩-೯೩). [ಸಂ.]

**ಲಿಂಗಜ** (ನಾ). ೧. ಇಂದ್ರಿಯ ಮೂಲಕವಾಗಿ ಬಂದ ಜ್ಞಾನ : ಶ್ರುತಭೇದಂ ತದ್ಭೇದದ್ವಿತಯಂ ಲಿಂಗಜಮುಮಾವಗಂ ಶಬ್ದಜಮುಂ ಅಲ್ಲಿ ಲಿಂಗಜಮನೇಕಭೇದಮನಂಗೀಕರಿಸಿರ್ಕುಮಾವಗಂ (ಚಂದ್ರಪ್ರ. ೦೪-೯೩). ೨. ಲಿಂಗಾಯತ : ತೋರದಂತಿನ್ನೆರೆಲ್ಲಂಗೋಸರಿಸಿದ ಲಿಂಗಜರನೇ ವಿಸ್ತಾರಗೈವ ಪ್ರಧಾನಿಬಸವನು ಕೇಳಿ ಸದ್ಬುಧರು (ಬಸ್ತ. ೬-೨೨). [ಸಂ.]

**ಲಿಂಗತತ್ತ್ವ** (ನಾ). ಶಿವಲಿಂಗದ ವಿಚಾರವನ್ನು ತಿಳಿಸುವ ತತ್ತ್ವ; ಶಿವತತ್ತ್ವ: ಹೀಗೆ ೨೫ ತತ್ತ್ವಗಳು ಲಿಂಗೈಕ್ಯವಾದಲ್ಲಿ ಆ ಲಿಂಗತತ್ತ್ವಗಳು ಹನ್ನೊಂದು ತಾವು ಪರಸ್ಪರ ಕೂಡಿಕೊಂಡು ಹೋಗುವುವು (ಶಿವಾಕೋ. ೨೭). [ಸಂ.]

**ಲಿಂಗತನು** (ನಾ). ೧. [ವೀಶೈ] ಸೂಕ್ಷ್ಮಶರೀರ : ಲಿಂಗತನುಚಿಚ್ಛಾಯೆಯೊಳು ತಾ ಸಂಗಿಸಿ (ಅಮ್ಮಕ. ೩-೦೭). ೨. ದೇಹದಲ್ಲಿ ಇಷ್ಟಲಿಂಗವನ್ನು ಧರಿಸಿರುವವನು ; ಲಿಂಗಧಾರಿ : ಅಹಂಕಾರಕ್ಕೆ ಎಡೆಗುಡದೆ ಲಿಂಗತನುವಾಗಿರಬೇಕು (ಬಸವ. ೬೦೦). [ಸಂ.]

**ಲಿಂಗತೊಂಡೆ** (ನಾ). ಒಂದು ಬಗೆಯ ತೊಂಡೆಯ ಗಿಡ : ಲಿಂಗತೊಂಡೆ, ಶಿವಲಿಂಗಿ (ವೃಕ್ಷಶಿ. ೦೯-೨೩೯). [ಲಿಂಗ + ತೊಂಡೆ$_1$./ತೆಲು. ಲಿಂಗದೊಂಡ]

**ಲಿಂಗತ್ರಯ** (ನಾ). ೧. [ವೀಶೈ] ಇಷ್ಟ, ಪ್ರಾಣ ಮತ್ತು ಭಾವ ಎಂಬ ಮೂರು ಲಿಂಗಗಳು : ಇಷ್ಟಪ್ರಾಣ ಭಾವಗಳೆಂಬ ಲಿಂಗತ್ರಯಗಳನು ನೆಲೆಗೊಳಿಸಿ (ಅಷ್ಟಾವ. ೦); ಇಷ್ಟ ಪ್ರಾಣ ಭಾವವೆಂಬ ಲಿಂಗತ್ರಯಂಗಳಂ ಕಳೆದು (ಅಕ್ಕಪ್ರ. ೬೦-೩೯೪). ೨. [ವ್ಯಾಕ] ಪುಲ್ಲಿಂಗ, ಸ್ತ್ರೀಲಿಂಗ ಮತ್ತು ನಪುಂಸಕಲಿಂಗ ಎಂಬ ಮೂರು ಬಗೆಯ ಲಿಂಗಗಳು : ಅವ್ಯಯಲಿಂಗಂ ಸಪ್ತವಿಭಕ್ತಿಗಂ ಲಿಂಗತ್ರಯಕ್ಕಂ ವಚನತ್ರಯಕ್ಕಂ ಸರಿಯಾಗಿರ್ದ ತೆಱದಿನರ್ಥಮಂ ಕುಡುಗುಂ (ಶಬ್ದ. ೯೦ ವೃತ್ತಿ). [ಸಂ.]

**ಲಿಂಗದಾಹ** (ನಾ). ಉರಿಮೂತ್ರರೋಗ : ಅಯಿಲೇಯಾದಿ ಚೂರ್ಣ . . . ಆ ಚೂರ್ಣಮಂ ಸಕ್ಕರೆಗೂಡಿ ಹಸುವಿನ ಹಾಲಿನಲ್ಲಿ ಸೇವಿಸಲು . . . ಕಾಮಾಲೆ, ಶಿರೋದಾಹ, ಲಿಂಗದಾಹ ಪರಿಹರಮಕ್ಕುಂ (ಸಳವೈ. ೦೯೭) [ಸಂ.]

**ಲಿಂಗದೀಕ್ಷೆ** (ನಾ). ಇಷ್ಟಲಿಂಗವನ್ನು ಧರಿಸುವ ದೀಕ್ಷೆ : ಕಾಳಾಮುಖರು ಈ ಹೊಸ ವೀರಶೈವಪಂಥದಲ್ಲಿ ಲಿಂಗದೀಕ್ಷೆ. ಶಿಕ್ಷೆಗಳಿಗೆ ಗುರುಗಳಾಗಿ ಜಂಗಮರೆಂದು ಕರೆಸಿಕೊಂಡರು (ಕೋಲಂಬ. ೦೩೯). [ಸಂ. ಲಿಂಗದೀಕ್ಷಾ]

**ಲಿಂಗದೂರ** (ನಾ). ಲಿಂಗತನುವಲ್ಲದವನು : ತನ್ನ ಅನುವ ತಾನಱಿಯದೆ ಬಂದುಂಬ ಜಂಗಮದಲ್ಲಿ ಅಂಗವನಱಿಸುವ ಲಿಂಗದೂರರಿಗೇಕೆ ಜಂಗಮಭಕ್ತಿ (ಷಟ್ಸ್ಥಲ. ೨೭-೦೦೯). [ಸಂ.]

**ಲಿಂಗದೆರಿಗೆ** (ನಾ). ಒಂದು ಬಗೆಯ ತೆರಿಗೆ : ಕನಗೊಂಡನಹಳ ಗ್ರಾಮದಲಿ ಲಿಂಗ [ಧಾ] ರಿಗಳು ಕೊಡುವಂಥ ಲಿಂಗದೆರಿಗೆಯನು ಸಮರ್ಪಣೆವಾಡಿ (ಸೌಇಇ. IX-ii, ೭೭೬-೮೩; 1550). [ಲಿಂಗ + ತೆರಿಗೆ$_3$ (<ತೆಱಿಗೆ)]

**ಲಿಂಗದೆಱೆ** (ನಾ). = ಲಿಂಗದೆರಿಗೆ : ಕೊಟೂರಸೀಮೆಯೊಳಗಣ ಬಾಗುಳಿಯ ನಾಯಿಂದರಿಗೆ ಕಾಣಿಕೆ ಕಡಾಯ ಬಿಟಿ ಕೊಟಣ ಬತೆಱೆ ಲಿಂಗದೆಱೆ ವಿನೂಯಿಲಾ (ಸೌಇಇ. IX-ii, ೭೨೨-೦೯; 1547). [ಲಿಂಗ + ತೆಱೆ$_3$]

**ಲಿಂಗದೇಹ** (ನಾ). ಸೂಕ್ಷ್ಮಶರೀರ : ಲಿಂಗದೇಹವ ಹೊದ್ದಿದಂತಿಹ ಸಂಗವದಱಿಳಗಿಲ್ಲ (ಅಮ್ಮಕ. ೩-೦೯); ಒಬ್ಬೊಬ್ಬ ಜೀವನಿಗೂ ದೇಹಾವರಣಗಳುಂಟು. ಅವಾವುವೆಂದರೆ, ಮೊದಲು ಜೀವನ ಸ್ವರೂಪದೇಹ, ಎರಡನೆಯದು ಲಿಂಗದೇಹ (ಹಣದ. ೩-೭ ಪಠೇತಾರ್ಥ). ' ಲಿಂಗಶರೀರ ' ಪರ್ಯಾ. [ಸಂ.]

**ಲಿಂಗದೇಹಿ** (ನಾ). ಲಿಂಗದೇಹವನ್ನುಳ್ಳವನು ; ಸೂಕ್ಷ್ಮಶರೀರಿ : ದೇಹಗುಣಗಳಳಿದು ಲಿಂಗದೇಹಿಯಾದ ಶರಣನು ಬಾಹಿರಂಗದ ಬಳಕೆ ಮಾಯಾಮೋಹವನ್ನು ಜಱಿದನು (ಅಶಸಂ. ೨೯೦-೦೩೦೭).
[ಸಂ. ಲಿಂಗದೇಹಿನ್]

**ಲಿಂಗಧರ** (ನಾ). ಇಷ್ಟಲಿಂಗವನ್ನು ಧರಿಸಿದವನು ; ಲಿಂಗವಂತ ; ವೀರಶೈವ : ಆನೆಗೊಂದಿಯ ಕಾಡವೀರನೆಂಬ ಲಿಂಗಧರ[ನೂ] . . . ಕೊಡುವಂಥ ಲಿಂಗದೆರಿಗೆ (ಸೌಇಇ. IX-ii, ೭೭೬-೦೦; 1550); ಲಿಂಗಧರಾಧರಪ್ರತತಿ ಲಿಂಗಮಹೀರುಹಪಂಕ್ತಿ ಲಿಂಗತೀರ್ಥಂಗಳ ರಾಜಿ . . . ಕಣ್ಗೆಸೆದಿರ್ದುದು (ಪ್ರಭುಲಿ. ೦೦-೨೩). [ಸಂ.]

**ಲಿಂಗಧಾರಕ** (ನಾ). = ಲಿಂಗಧರ : ನಿರತಿಶಯಮುಕ್ತಾಪ್ರೀಸಕಂಥಾವರಣ ಶರಣರು ಕಕ್ಷಕರತಳಸುರುಚಿರೋರಸ್ಥಳಕಲಿತಶಿವಲಿಂಗಧಾರಕರು (ಬಸಪು. ೫೬-೫೦); ಗುರುಕಾರುಣ್ಯ ಹೊಂದಿದವನು ಯಾವಾಗಲು ಲಿಂಗಧಾರಕನಾಗಿರತಕ್ಕದ್ದು (ದೇವಾವ. ೦೭-೨೦ ವಿವರಣೆ). [ಸಂ.]

**ಲಿಂಗಧಾರಣ** (ನಾ). [ವೀಶೈ] ದೀಕ್ಷಾಪೂರ್ವಕವಾಗಿ ಇಷ್ಟಲಿಂಗವನ್ನು ಕಟ್ಟುವುದು,— ಧರಿಸುವುದು : ಭಕ್ತನು ಲಿಂಗಧಾರಣವಾಡಿದ ಬಳಿಕ ತನ್ನನ್ನು ನಾನಾದಿಕ್ಕಿಗೆ ಒಯ್ಯುವ ತತ್ವಗಳ ಸಮುದಾಯವನ್ನು ನಿವಾರಣೆ ಮಾಡಬೇಕು (ದೇವಾವ. ೦೫-೨೦ ವಿವರಣೆ) : ದೀಕ್ಷೆಯನ್ನು ಹೊಂದದವನು ಲಿಂಗಧಾರಣಕ್ಕೆ ಅರ್ಹನಲ್ಲ (ಶಾರದ. ೨೯೯). [ಸಂ.]

**ಲಿಂಗಧಾರಣೆ** (ನಾ). = ಲಿಂಗಧಾರಣ : ಲಿಂಗಧಾರಣೆಯಾದ ಬಳಿಕ ಆ ಲಿಂಗವೇ ಭಕ್ತನಿಗೆ ಗುರುಸ್ವರೂಪವು (ದೇವಾವ. ೦೫-೨೦. ವಿವರಣೆ).
[ಸಂ. ಲಿಂಗಧಾರಣ]

**ಲಿಂಗಧಾರಿ** (ನಾ).೧. = ಲಿಂಗಧರ : ಅವರಿವರೆಂಬ ನುಡಿಸಲ್ಲರೊಂದೇ ಲಿಂಗಧಾರಿಗಳೇಕಕೂಟದಲಿ (ಬಸ್ತು. ೯೭-೨೭) ; ಲಿಂಗವನ್ನು ತನ್ನ ಹಸ್ತದಲ್ಲಿರಿಸಿ . . . ಧ್ಯಾನಯುಕ್ತನಾಗಿರುವದು ಲಿಂಗಧಾರಿಯ ಕರ್ತವ್ಯ (ದೇವಾವ. ೦೪-೨೦ ವಿವರಣೆ) ; ಪಾಶುಪತಯೋಗಚಿಹ್ನೆಗಳುಳ್ಳವನೇ ಲಿಂಗಧಾರಿಯೂ, ಇವರೇ ಲಿಂಗಿಗಳು ಎಂದು . . . ಕಾಳಾಮುಖರ ಬಗ್ಗೆ ಹೇಳಿದೆ (ಶೈವಸಂಪ್ರ. ೦೩೯). ೨. ಒಂದು ಬಗೆಯ ಮರ : (ಕೋಣನ ಕೊಂಬುಮರ, ಲಿಂಗಧಾರಿ, ಅಂಬಾರಿಹೊಡೆ (ವೃಕ್ಷರಿ. ೭೫-೦೩೬೯). [ಸಂ. ಲಿಂಗಧಾರಿನ್]

**ಲಿಂಗಪತ್ರಿಕೆ** (ನಾ). (?) : ಮೊದಲ ಪದನಪಭ್ರಂಶಕ್ಕೆ ಬಾರದೆ ಉತ್ತರಪದಂ ತದ್ಭವವಾದ ಸಮಾಸಕ್ಕೆ . . . ಪಾದಶೃಂಖಲೆ —ಪಾದಸಂಕಲೆ, ಲಿಂಗಪತ್ರಿಕೆ—ಲಿಂಗವತ್ತಿಗೆ (ಶಮದ. ನ. ೩೦೪ ವೃಯೋ). [?]

**ಲಿಂಗಪಥ** (ನಾ). [ವೀಶೈ] ಲಿಂಗೈಕ್ಯಸಾಧನೆಯ ದಾರಿ; ಮೋಕ್ಷಮಾರ್ಗ: ಎನಗೆ ಗುರುಪಥವ ತೋರಿದವರಾರು ಲಿಂಗಪಥವ ತೋರಿದವರಾರು (ಬಸವ. ೯೩೨): ಲಿಂಗಪಥದಲ್ಲಿ ನಡೆಸಿ ಮಹಾಲಿಂಗಪದದಲ್ಲಿ ನಿಲಿಸುವಾತ ಜಂಗಮ (ಮೋಳಿಗೆ. ೦೦೦ ಪ್ರಸ್ತಾವನೆ). [ಸಂ.]

**ಲಿಂಗಪ್ರತಿಷ್ಠೆ** (ನಾ). (ಪೂಜೆಗಾಗಿ ದೇವಸ್ಥಾನ ಮೊದಲಾದೆಡೆಗಳಲ್ಲಿ) ಶಿವಲಿಂಗವನ್ನು ಸ್ಥಾಪಿಸುವಿಕೆ : ಕಲ್ಲ ಮನೆಯ ಮಾಡಿ ಕಲ್ಲ ದೇವರ ಮಾಡಿ ಆ ಕಲ್ಲು ಕಲ್ಲ ಮೇಲೆ ಕೆಡೆದರೆ ದೇವರೆತ್ತ ಹೋದರೋ ಲಿಂಗಪ್ರತಿಷ್ಠೆಯ ಮಾಡಿದವಂಗೆ ನಾಯಕನರಕ (ಅವಶಂ. ೫೦-೨೦೨).
[ಸಂ. ಲಿಂಗಪ್ರತಿಷ್ಠಾ]

**ಲಿಂಗಪ್ರಸಾದ** (ನಾ). ಈಶ್ವರಲಿಂಗಕ್ಕೆ ಅರ್ಪಿಸಿದ ನೈವೇದ್ಯ : ಲಿಂಗಪ್ರಸಾದವನುಂಡು ಅನ್ಯದೈವಂಗಳ ಕೊಂಡಾಡುವವರ ನಮ್ಮ ಕೂಡಲಸಂಗಮದೇವನು ಆ ಭಂಡರಿಗೆ ಮಾಡಿದ ಹುಳುಗೊಂಡವನು (ಬಸವ. ೭೦೭): ಅಸಮಭಕ್ತಪ್ರಾಣನಿಧಿ ಕರವೊಸೆದು ಕೈಕೈಯಿಂದವಾರೋಗಿಸುತಿರಲ್ ತ್ರಿಸಂಧಿಯಲಿ ಲಿಂಗಪ್ರಸಾದವನು (ಬಸಪು. ೩೪-೦೨). [ಸಂ.]

**ಲಿಂಗಪ್ರಸಾದಿ** (ನಾ). [ವೀಶೈ] ಲಿಂಗಪ್ರಸಾದವನ್ನು ಪಡೆದವನು : ಆಧಿಯಿಲ್ಲದಿದ್ದಡೆ ಲಿಂಗಪ್ರಸಾದಿಯೆಂಬೆ ವ್ಯಾಧಿಯಿಲ್ಲದಿದ್ದಡೆ ಜಂಗಮಪ್ರಸಾದಿಯೆಂಬೆ (ಅವಶಂ. ೫೯-೦೭೭) ; ಲಿಂಗಪ್ರಸಾದಿಗಳಲ್ಲದವರ ಸಂಗಭಂಗವೆಂದುದು ಗುರುವಚನ (ಬಸವ. ೭೯೦). [ಸಂ. ಲಿಂಗಪ್ರಸಾದಿನ್]

**ಲಿಂಗಪ್ರಾಣಿ** (ನಾ). [ವೀಶೈ] ಲಿಂಗವೇ ಪ್ರಾಣವಾದವನು : ಪೂರ್ವಬೀಜವಾಯುಪ್ರಾಣಿಯಲ್ಲ ಲಿಂಗಪ್ರಾಣಿಯೂ ಶರಣನು (ಬಸವ. ೭೭೫) : ಎನ್ನ ದೇಹೇಂದ್ರಿಯ ಮನಃಪ್ರಾಣಾದಿಗಳು ಲಿಂಗದ ಸತಿಯರಾಗಿ ಲಿಂಗಕ್ಕೆಂದೆ ಬಯಸಿ ಲಿಂಗಪ್ರಾಣಿಗಳಾದ ಕಾರಣ ಲಿಂಗಕ್ಕೆಂದೆ ಕೈಕೊಂಡೆನು (ಬಸವ. ೨೦-೫೬). [ಸಂ. ಲಿಂಗಪ್ರಾಣಿನ್]

**ಲಿಂಗಮುಖ** (ನಾ). [ವೀಶೈ] "ಲಿಂಗಸ್ಥಾನಗಳೂ ಲಿಂಗಸ್ವರೂಪಗಳೂ ಆದ ನಾಸಿಕ, ಜಿಹ್ವೆ, ನೇತ್ರ, ತ್ವಕ್ಕು, ಶ್ರೋತ್ರವೆಂಬ ಜ್ಞಾನೇಂದ್ರಿಯಂಗಳು ಮತ್ತು ಗುದ, ಗುಹ್ಯ, ಪಾದ, ಪಾಣಿ, ವಾಕ್ಕುಗಳೆಂಬ ಕರ್ಮೇಂದ್ರಿಯಂಗಳು ಲಿಂಗಮುಖಗಳೂ ಆಗಿರುವುವು" (ಶಿವಾನು. ೯೯): ನರಜನ್ಮದಲ್ಲಿ ಹುಟ್ಟಿ ಲಿಂಗಮುಖವನರಿಯದೆ ಉದಮದ ಸೊಕ್ಕಿ ತಲೆಗೇರಿತ್ತ ಅಯ್ಯಾ (ಬಸವ. ೫೬೬). [ಸಂ.]

**ಲಿಂಗಮುದ್ರೆ** (ನಾ). ('ಇದು ದೇವರಿಗೆ ಸೇರಿದುದು' ಎಂದು ತೋರಿಸಲು ಎತ್ತು, ಕಲ್ಲು ಮೊದಲಾದುವುಗಳ ಮೇಲೆ ಒತ್ತುವ ಅಥವಾ ಮುದ್ರಿಸುವ) ಲಿಂಗದ ಗುರುತು,— ಚಿಹ್ನೆ : ಬೀದಿಯ ಬಸವಂಗೆ ದೇಗುಲದ ಪಶುವಿಂಗೆ ಹುಟ್ಟಿದ ಕರುಹೋರಿಗಳು. ಬಸವಗಳಪ್ಪವೆ ಲಿಂಗಮುದ್ರೆಯನೊತ್ತದನ್ನಕ್ಕರ (ಚನ್ನಬ.ವ. ೦೯೨-೯೨೯) ; ಲಿಂಗಮುದ್ರೆಯ ಸೀಮೆಯ ಮೃತ್ತಿಕೆ ಮರ ಕಲ್ಲು ಮುಂತಾದ ಮತ್ತಾವ ಗುಣಂಗಳೆಲ್ಲವೂ ಲಿಂಗಧಾರಣದ ಸೀಮೆಯಾಗಿ (ಬಲೀಶ. ೭೯) : ಸ್ವತಃ ಇಳಕಲ್ಲ ಮಹಾಂತಸ್ವಾಮಿಗಳವರೇ . . . ಲಿಂಗಮುದ್ರೆಗಳನ್ನು ಸ್ಥಾಪಿಸಿದರು (ಶರಣ. ೬೨೯)

**ಲಿಂಗಮುದ್ರೆಕಲ್ಲು, ಲಿಂಗಮುದ್ರೆಯ ಕಲ್ಲು** = ಲಿಂಗದ ಚಿಹ್ನೆಯುಳ್ಳ (ಗಡಿ)ಕಲ್ಲು : ಹೊಲ ಮಾಡಿಬಿಟ್ಟು ನಾಲ್ಕುಮೂಲೆಗೂ ನಾಲ್ಕು ಲಿಂಗಮುದ್ರೆಕಲ್ಲು ನಡಿಸಿ ಕಾವುಕಟ್ಟು ಮಾಡಿಸಿಬಿಡು (ಶಿಲಾಶಾ. ೯೯) ; ಆ ಶಾಸನಿಗರು ಆ ದೇವಗ್ರ್ಗಯಂಗಡಿಗೆ ಲಿಂಗಮುದ್ರೆಯ ಕಲ್ಲ ನಡಿಸಿಕೊಟ್ಟರ್ (ಎ೩. XIX. ೨೫-೫೪; 1245) : ಬಾಣೇಶ್ವರದೇವರ ಲಿಂಗಭೋಗರಂಗಭೋಗಕ್ಕೆ ಬಯನಾಡೊಳಗಣ ಬಾಣೂರನು ಹುಲಿಕಲ್ಲನು ಲಿಂಗಮುದ್ರೆಯ ಕಲ್ಲ ಹಾಕಿ ಕೊಟ್ಟೆಲು (ಎಕ. III (R), ಹೆಗ್ಗಡ. ೦೯೩-೦೭ ; 1497). **ಲಿಂಗಮುದ್ರೆಬಸವೆ** = ಲಿಂಗಮುದ್ರೆಯನ್ನು ಒತ್ತಿರುವ ಬಸವ : (ಶ್ರಾಂತರ್. ೫೯೭). **ಲಿಂಗಮುದ್ರೆವಳಯ** = ಲಿಂಗಮುದ್ರೆಯ ಕಲ್ಲುಗಳನ್ನು ನೆಟ್ಟಿರುವ ಗಡಿಯ ಪ್ರದೇಶ : ಆ ಪುರದ ಚತುರ್ಸೀಮೆಗೆ ಲಿಂಗಮುದ್ರೆವಳಯ ಶಾಸನವ ಹಾಕಿಸಿ (ಎಕ. XVI. ೫೯ಶಾ. ೯೩-೦೭; 1529). [ಸಂ. ಲಿಂಗಮುದ್ರಾ]

**ಲಿಂಗಮೆಣಸು** (ನಾ). ಮೆಣಸಿನಲ್ಲಿ ಒಂದು ಬಗೆ: ಲಿಂಗಮೆಣಸು ಗುರುಗು (ವೃಕ್ಷರಿ. ೨೦-೩೭೫). [ಲಿಂಗ + ಮೆಣಸು (< ಮೆಟಸು)]

**ಲಿಂಗರೋಗ** (ನಾ). ಮೋಹರೋಗ; ಪರಂಗಿರೋಗ : ಕ್ರಮುಕಮನಕ್ಕೆ ಫಲತ್ರಯದ ಮಸಿಯನಕ್ಕಣಿಲೆಯುಂ ರಸಾಂಜನಮುಮನಕ್ಕೆ ಮಾನುಷ್ಯಕಪಾಲಮನಕ್ಕೆ ಮೊಕ್ಕಳಂ ಪೂಸೆ ಲಿಂಗರೋಗಂ ಕಿಡುಗುಂ (ಲೋಕೋಪ. ೯-೦೩೯). [ಸಂ.]

**ಲಿಂಗವಂತ** (ನಾ). [ವೀಶೈ] ಇಷ್ಟಲಿಂಗವನ್ನು ಧರಿಸಿರುವವನು : ಲಿಂಗವಂತನ ಸನ್ನಿಧಿಯಿಂದ ಹಿಂದಣ ದುಸ್ಸಂಗ ಕೆಡುವುದು (ಬಸವ. ೦೫೦); ಅರಳೆಲೆಯುರಸಂ ಮಾಗಾಯ್ಗಳ ಮಲ್ಲಳಿಗಾಜಿಂ ಹೊಂಗತಗದ ಲಿಂಗವಂತಂ (ಬಸರ. ೦೦-೦೧೫); ಲಿಂಗಭಾವರು ಲಿಂಗಜೀವರು ಲಿಂಗವಂತರು ಲಿಂಗಶಾಂತರು (ಬಸಪು. ೬-೯೯). [ಸಂ. ಲಿಂಗವತ್]

**ಲಿಂಗವತ್ತಿಗೆ** (ನಾ). (?): "ವಾಳೆ(ಲಾಳೆ) = ಲಿಂಗವತ್ತಿಗೆ" (ಕಮದ. ೫೦. ೨); "ಲಾಳೆಯೆನೆ ಲಿಂಗವತ್ತಿಗೆ" (ಕಣಾಕಾ. ೩೪) ; "ಲಿಂಗವೆತ್ತಿಗೆಗೆ ಲಾಳೆಂಬುದು" (ಕದ್ದಿಕ. ೮೦). [< ಲಿಂಗಪತ್ರಿಕೆ]

**ಲಿಂಗವರ್ಜಿತ** (ನಾ). [ವೀಶೈ] ಇಷ್ಟಲಿಂಗವನ್ನು ತ್ಯಜಿಸಿದವನು : ಸರ್ವಸಂಸಾರ ಕಾರಣಭಕ್ತಿಗವ್ಯನಂ ನಿರ್ವಿಕಾರನ ಲಿಂಗವರ್ಜಿತನುದಾರನಂ ಸರ್ವಾಂಗ ವೊಂದಿ ಮಂದಿಸುಪೇ‌ಲ ಲಿಂಗದೊಳಗಿರ್ವನಂ ಕುಜಿತೆಂದನು (ವೀಶಪು. ೭-೦-೩೫). [ಸಂ.]

**ಲಿಂಗವಿಕಾರಿ** (ನಾ). [ವೀಶೈ] ಲಿಂಗಾಭಿಮಾನಕ್ಕೆ ಒಳಗಾದವನು : ಇಷ್ಟಲಿಂಗಾಭಿಮಾನಿ : ಲಿಂಗವಿಕಾರಿಗೆ ಅಂಗವಿಕಾರವೆಂಬುದಿಲ್ಲ ಜಂಗಮವಿಕಾರಿಗೆ ಧನವಿಕಾರವೆಂಬುದಿಲ್ಲ (ಬಸವ. ೭೯೫). [ಸಂ. ಲಿಂಗವಿಕಾರಿನ್]

**ಲಿಂಗವಿವಕ್ಷೆ** (ನಾ). [ವ್ಯಾಕ] ಲಿಂಗದ ವಿಷಯವನ್ನು ನಿರ್ಧರಿಸುವುದು : ಪುಲ್ಲಿಂಗ, ಸ್ತ್ರೀಲಿಂಗ ಅಥವಾ ನಪುಂಸಕಲಿಂಗವೇ ಎಂದು ನಿರ್ಧರಿಸುವುದು : ಅರ್ಥಾನುಸಾರಿಯಾಗಿ ಲಿಂಗವಿವಕ್ಷೆ ಮಾಡುವುದು ಎಲ್ಲ ದ್ರಾವಿಡ ಭಾಷೆಗಳ ವೈಶಿಷ್ಟ್ಯವಾಗಿದೆ (ಭಾಶಾಶಾ. ೨೬೪) : ಸರ್ವನಾಮಗಳಲ್ಲಿ ಲಿಂಗ ನಿರ್ದೇಶನ ಕಾಣಿಸಿದರೂ ಅದು ಲಿಂಗವಿವಕ್ಷೆಗೆ ಸಂಬಂಧಪಡದ ವಿಚಾರ (ದ್ರಾಶಾ. ೨೩೬). [ಸಂ. ಲಿಂಗವಿವಕ್ಷಾ]

**ಲಿಂಗವೀರ** (ನಾ). ವೀರಭದ್ರನ ಸ್ತೋತ್ರವನ್ನು ಹೇಳುವ ಕಾಯಕದವನು : ಲಿಂಗದ ಬೀರ : ಮೆರಸಿ ನಂದೀಧ್ವಜವ ಕರದಿಯು ಮೊರವಿ ನೊಳಗೀ ಲಿಂಗವೀರರ ಸರವಿಯೊಳಗವಗ್ಗೈದ ಖಡ್ಗವ ಹೊಗಳಸುತ ಪುರದಿ (ಬಜ್ಞಕೃ. ೯೨-೩). [ಸಂ.]

**ಲಿಂಗವೃತ್ತಿ** (ನಾ). ಧರ್ಮದ ಹೆಸರಿನಲ್ಲಿ ಸ್ವಾರ್ಥವನ್ನು ಸಾಧಿಸಿಕೊಳ್ಳುವವನು ; ತಪಸ್ವಿಯ ವೇಷ ಧರಿಸಿಕೊಂಡು ಹೊಟ್ಟೆಹೊರೆಯುವವನು ; ಆಷಾಢಭೂತಿ : "ಧರ್ಮಧ್ವಜಿ. ಲಿಂಗವೃತ್ತಿ ಈ ೨ ತಪೋವೇಷಗೊಂಡವಂ" (ಹಲಾಯು. ೬೭-೨೩೦). [ಸಂ.]

**ಲಿಂಗವ್ಯಭಿಚಾರ** (ನಾ). ಪುಲ್ಲಿಂಗ, ಸ್ತ್ರೀಲಿಂಗ ಅಥವಾ ನಪುಂಸಕಲಿಂಗಗಳನ್ನು ವ್ಯತ್ಯಾಸಮಾಡಿ ಹೇಳುವುದು : ಲಿಂಗಸಂಖ್ಯಾಸಾಧನಾದಿ ವ್ಯಭಿಚಾರನಿವೃತ್ತಿಯಿಂ ಶಬ್ದಾನುಗತಾರ್ಥಮಂ ಕೆಯ್ಕೊಳ್ವುದು ಶಬ್ದನಯಂ ಪುಷ್ಯಸ್ತಾರಕಾನಕ್ಷತ್ರಮೆಂಬುದು ಲಿಂಗವ್ಯಭಿಚಾರಂ (ತತ್ತ್ವಸೂ. ೬೩). [ಸಂ.]

**ಲಿಂಗವ್ಯವಸ್ಥೆ** (ನಾ). [ವ್ಯಾಕ] ಪುಂ. ಸ್ತ್ರೀ. ನಪುಂಸಕಲಿಂಗಗಳನ್ನು ಉಪಯೋಗಿಸುವ ನಿಯಮ, –ಕಟ್ಟುಪಾಡು : ಭಾಷೆಗೆ ಲಿಂಗವ್ಯವಸ್ಥೆ ಒಂದು ಬಗೆಯ ಅನುರೂಪತೆಯನ್ನು ತಂದುಕೊಡುತ್ತದೆ (ದ್ರಾಶಾ. ೨೪೭). [ಸಂ. ಲಿಂಗವ್ಯವಸ್ಥಾ]

**ಲಿಂಗವ್ಯಸನಿ** (ನಾ). [ವೀಶೈ] ಲಿಂಗವನ್ನು ಕುರಿತು ಚಿಂತಿಸುವವನು; ಶಿವಧ್ಯಾನಿ : ದುರ್ವ್ಯಸನಿ ದುರಾಚಾರಿಯೆಂದೆನಿಸದಿರಯ್ಯಾ ಎನ್ನ ಲಿಂಗವ್ಯಸನಿ ಜಂಗಮಪ್ರೇಮಿಯೆಂದೆನಿಸಯ್ಯಾ (ಬಸವ. ೨೬೨) ; ಎಲ್ಲವನು ಹಿಂಗಿಸಿ ತಾ ಲಿಂಗವ್ಯಸನಿಯಾಗಬಲ್ಲಡೆ ಮುಂದೆ ಮಹಾಮಂಗಳದ ಬೆಳಗು ಕಾಣಿಪುದು (ಲಿಂಗಪ. ೨-೬). [ಸಂ. ಲಿಂಗವ್ಯಸನಿನ್]

**ಲಿಂಗವ್ಯಾಧಿ** (ನಾ). = ಲಿಂಗರೋಗ : ರೋಹಿಣೀಧವನುಗ್ರಗ್ರಹಯುಕ್ತನಾಗಿ ನಿಲೆ ಲಿಂಗವ್ಯಾಧಿಯಿಂ ಬರ್ದುಗುಂ (ಶಾತಶ. ೨೧-೧೧). [ಸಂ.]

**ಲಿಂಗಶರಣ** (ನಾ). [ವೀಶೈ] ಲಿಂಗಕ್ಕೆ ಶರಣಾದವನು : ಶಿವಭಕ್ತ : ಲಿಂಗಶರಣನ ಪಂಚೇಂದ್ರಿಯಂಗಳಂ ಲಿಂಗಮುಖವಾಗಿ ನಿಂದು ಮನ ಸಹಿತ ಪಂಚವಿಷಯಂಗಳುಬಿಲಸುಖಂಗಳ ಲಿಂಗಾರ್ಪಿತದಿಂದ ಚರಿಸುತ್ತ (ಅದವ. ೨೩-೬೦). [ಸಂ.]

**ಲಿಂಗಶರೀರ** (ನಾ). =ಲಿಂಗದೇಹ: ಭೂತಂಗಳೈದು ಬುದ್ಧಿ ಚಿತ್ತಂಗಳೆರಡು ಇಂತೇಳಂ ಬಿಟ್ಟು ಉಳಿದ ಪದಿನೇಳ್ತತ್ತ್ವಂಗಳ್ ಕೂಡಿ ಸೂಕ್ಷ್ಮಶರೀರ ಮಾದುದು ಅದಕ್ಕೆ ಲಿಂಗಶರೀರಮೆಂದು ಪೆಸರುಂಟು (ಮನೋವಿ. ೩-೩೧) : ಬುದ್ಧಿ ಮೊದಲಾಗಿ ತನ್ಮಾತ್ರೆಗಳ ಪರ್ಯಂತ ಹದಿನೆಂಟು ತತ್ತ್ವಗಳು ಪ್ರತಿ ಪ್ರಾಣಿಗೂ ಲಿಂಗಶರೀರವಾಗಬೇಕಾಗಿರುವುದು (ಹಿಂದಶಾ. ೩೭). [ಸಂ.]

**ಲಿಂಗಶರೀರಿ** (ನಾ). = ಲಿಂಗಧರ : ನಳಿನಪತ್ರೇಕ್ಷಣನ ಓಲಗಶಾಲೆಗೆ ಸಲುವರೆ ಲಿಂಗಶರೀರಿಗಳು (ಕುರಂದ. ದಾ. ೩-೧೩೩-೧). [ಸಂ. ಲಿಂಗಶರೀರಿನ್]

**ಲಿಂಗಶುದ್ಧಿ** (ನಾ). ಐದು ಬಗೆಯ ಶುದ್ಧಿಗಳಲ್ಲಿ ಒಂದು ; ಲಿಂಗ ಪೀಠವನ್ನು ನೀರಿನಿಂದ ತೊಳೆಯುವುದು : ಆತ್ಮಶುದ್ಧಿ ಸ್ಥಾನಶುದ್ಧಿ ದ್ರವ್ಯಶುದ್ಧಿ ಲಿಂಗಶುದ್ಧಿ ಮಂತ್ರಶುದ್ಧಿಯೆಂಬ ಪಂಚಶುದ್ಧಿಗಳಂ ವಿಸ್ತರಿಸುವಡಲ್ಲಿ . . . ಲಿಂಗಪೀಠಮಂ ವಾರಿಯಿಂ ಪ್ರಕ್ಷಾಲನಂಗೈವುದೇ ಲಿಂಗಶುದ್ಧಿಯೆನಿಸುವುದು (ಶಿವೇಶ. ೯೨). [ಸಂ.]

**ಲಿಂಗಸಲಾಖೆ** (ನಾ). ಲಿಂಗದ ಗುರುತುಳ್ಳ ಸಲಾಕೆ, –ಸರಳು (?) : × × × ಗಮಹಾದೇವಿಯರುಂ ಸ್ವರ್ಗ್ಗಗಾಮಿಗಳಾದಡಂ . . . ಶ್ರೀಪರ್ವ್ವತಕ್ಕಟ್ಟಿ ಪಾತಾಳಗಂಗೆಯ × × × ಇಟ್ಟಳಲ್ಲಿ ಸಲಕ್ಷಣಮಪ್ಪ ಲಿಂಗಸಲಾಖೆಗಳಂ ತರಿಸಿ (ಎಕ. VI. ಕಡೂರು. ೦೩೭–೩೩; 1191). [ಲಿಂಗ+ಸಲಾಖೆ (<ಸಲಗೆ$_2$)]

**ಲಿಂಗಸಾರಾಯ** (ನಾ). [ವೀಶೈ] ಲಿಂಗತತ್ತ್ವವನ್ನು ಅರಿತವನು; ಶರಣ: ಅಸಂಬಂಧ ಸಂಬಂಧವಾಯಿತ್ತು ಲಿಂಗಸಾರಾಯರ ಸನ್ಮತದಿಂದ (ಬಸವ. ೬೯೩). [ಲಿಂಗ + ಸಾರಾಯ$_2$]

**ಲಿಂಗಸ್ಥಲ**, ಲಿಂಗಸ್ಥಳ (ನಾ). [ವೀಶೈ] ನೂರೊಂದು ಸ್ಥಲಗಳಲ್ಲಿಯ ಒಂದು ವಿಭಾಗ: ಶಿವತತ್ತ್ವವು ಸ್ವಶಕ್ತಿಯ ಸ್ಫುರಣೆಯಿಂದ ತಾಳಿದ ಎರಡು ಪ್ರಕಾರಗಳಲ್ಲಿ ಒಂದು : ಸಹಸ್ರಮೂಲಮಂತ್ರಮಂ ಜಪಿಸುತ್ತು ಲಿಂಗಸ್ಥಲಕ್ಕೆ . . . ಪ್ರಾಣಪ್ರತಿಷ್ಠೆಯಂ ಮಾಡಿ (ಶಿವೇಶ. ೦೦೦) ; ಸ್ಥಲ ತತ್ತ್ವವು ತನ್ನ ವಿಮರ್ಶಶಕ್ತಿಯ ಕ್ಷೋಭೆಯಿಂದ (ಚಲನದಿಂದ) ಲಿಂಗಸ್ಥಲವೆಂದೂ ಅಂಗಸ್ಥಲವೆಂದೂ ಎರಡುವಿಧ (ಶಿವಾಸಿ. ೧೦-೨೨); ಲಿಂಗಸ್ಥಲವು ಭಾವಲಿಂಗ. ಪ್ರಾಣಲಿಂಗ, ಇಷ್ಟಲಿಂಗ ಎಂದು ಮೂರು ವಿಧವಾಯಿತು (ಚಾರಿದ. ೨೩೩). **ಲಿಂಗಸ್ಥಳ** : ಆದಿಯಲ್ಲಿ ಶಿವಬೀಜವಲ್ಲದವರಿಗೆ ವೇದ್ಯವಾಗದು ಶಿವಜ್ಞಾನ ಶಿವಭಕ್ತಿ ಲಿಂಗಸ್ಥಳವಳವಡದು (ಬಸವ. ೬೩೬). 'ಅಂಗಸ್ಥಲ' ಪರಾ. [ಸಂ.]

**ಲಿಂಗಸ್ಥಳ** 'ಲಿಂಗಸ್ಥಲ' ನೋ.

**ಲಿಂಗಸ್ವಾಯತ** (ನಾ). [ವೀಶೈ] ಲಿಂಗವನ್ನು ಬ್ರಹ್ಮರಂಧ್ರಪ್ರದೇಶದಲ್ಲಿ ಇರಿಸಿಕೊಳ್ಳುವುದು : ಲಿಂಗಭಾವದ ಸಾಕ್ಷಾತ್ಕಾರ : ಬ್ರಹ್ಮರಂಧ್ರದಲ್ಲಿ ಲಿಂಗಸ್ವಾಯತೆ ಭ್ರೂಮಧ್ಯದಲ್ಲಿ ಜಂಗಮಸ್ವಾಯತ (ಅವಶಂ. ೯೭-೨೦೦);ಆ ಗುರುವಿತ್ತ ಲಿಂಗವನೇ ಶಿಷ್ಯನು ಸಾವಧಾನದಿಂದುತ್ತಮಾಂಗಾದಿ ಸ್ಥಾನಂಗಳಲ್ಲಿ ಧರಿಸುವುದೇ ಲಿಂಗಸ್ವಾಯತವೆನಿಸುವುದು (ಶಿವೇಶ. ೦೦೨). 'ಜಂಗಮಸ್ವಾಯತ' ಪರಾ. [ಲಿಂಗ + ಸ್ವಾಯತ]

**ಲಿಂಗಾಚಾರ** (ನಾ). [ವೀಶೈ] ಪಂಚಾಚಾರಗಳಲ್ಲಿ ಒಂದು : ಗುರುವು ಅನುಗ್ರಹಿಸಿದ ಲಿಂಗಕ್ಕಲ್ಲದೆ ಬೇರೆ ಲಿಂಗ ಸೇವೆಯನ್ನು ಸಲ್ಲಿಸದಿರುವುದು : ಲಿಂಗಾಚಾರ ಸದಾಚಾರ ಭೃತ್ಯಾಚಾರ ಶಿವಾಚಾರ ಗಣಾಚಾರವೆಂಬ ಪಂಚಾಚಾರನಿಷ್ಠನಾಗಿ . . . ಇರ್ಪಾತನೇ ವೀರಶೈವನಪ್ಪಂ (ಶಿವೇಶ. ೯೭): ಸದಾಚಾರ ಲಿಂಗಾಚಾರ . . . ಭೃತ್ಯಾಚಾರವೆಂಬ ಪಂಚಾಚಾರಂಗಳಳವಟ್ಟು (ಅಬಂದೆ. ೯೭-೯೦). 'ಪಂಚಾಚಾರ' ಪರಾ. [ಸಂ.]

**ಲಿಂಗಾಣು** (ನಾ). ಲಿಂಗದಿಂದ ಉತ್ಪತ್ತಿಯಾಗುವ ಅಣು : ವೀರ್ಯ : ಮಳೆಗಾಲದಲ್ಲಿ ಒಂದೆರಡು ತಿಂಗಳ ಮಟ್ಟಿಗೆ ಜೀವದಿಂದಿದ್ದು ಒಂದು ಸಲ ಲಿಂಗಾಣುಗಳನ್ನು ಉತ್ಪತ್ತಿಮಾಡಿ . . . ಅಳಿಯುವಂಥದ್ದು (ಹಸುಷೂ. ೦೯೦). [ಸಂ.]

**ಲಿಂಗಾತ್ಮಕ** (ನಾ). ಲಿಂಗದಲ್ಲಿ ಸೇರಿಕೊಂಡಿರುವವನು,– ಲೀನವಾಗಿರುವವನು : ಲಿಂಗಮಯ ನಿರ್ಲಿಂಗ ತೇಜೋಲಿಂಗ ಲಿಂಗಾತ್ಮಕ ಸದಾಶಿವಲಿಂಗ ನಿರ್ಮಳಲಿಂಗ ಲಿಂಗಸ್ಥಿತ ಮಹಾಲಿಂಗ. . .ಕರುಣಿಸುವುದು (ಶೂನ್ಯಾಸ. ೬-೮೬). [ಸಂ.]

**ಲಿಂಗಾಯತ**, ಲಿಂಗಾಯಿತ, ಲಿಂಗಾಯ್ತ (ನಾ). ೧. [ವೀಶೈ] ಗುರುವು ಶಿಷ್ಯನಿಗೆ ಕೊಡುವ ಇಷ್ಟಲಿಂಗವನ್ನು, ಶಿಷ್ಯನಿಗೆ ಪೂಜಿಸಿ ತೋರಿಸುವುದು : ಮಾರಂಗಕ್ರೀಯ ಸಂಪಾದಿಸಿ ಲಿಂಗಾಯತ ಸ್ವಾಯತವಾಗಿ ಒಳಹೊಜಗೆನ್ನದೆ ವೇಧಿಸಿಕೊಳಲು ಮಾಜಿದ ಕ್ರೀಯೆಂದೆನಿಸಿತ್ತು (ಶಿವಗ. ೦೦೨-೩೩೦): ಆಚಾರ್ಯಂ ತಾನು ಶಿಷ್ಯಂಗೆ ಕೊಡಲ್ಕಕ್ಕ ಲಿಂಗವನರ್ಚಿಸಿ ಶಿಷ್ಯನಂ ನೋಡಿಸುವುದೇ ಲಿಂಗಾಯತವೆನಿಸುವುದು (ಶಿವೇಶ. ೦೦೨) ; ಆಚಾರ್ಯನು ತಾನು ಶಿಷ್ಯನಿಗೆ ಕೊಡತಕ್ಕ ಲಿಂಗವನ್ನು ಪೂಜಿಸಿ ಶಿಷ್ಯನಿಂದ ನೋಡಿಸುವುದೇ ಲಿಂಗಾಯತವೆನಿಸುವುದು (ಅಶ್ಟಾವ. ೧). ೨. ಇಷ್ಟಲಿಂಗವನ್ನು ಧರಿಸಿದವನು ; ಲಿಂಗವಂತ : ವೀರಶೈವ : ಲಿಂಗಾಯತರಿಗೆ

ಕ್ಕವೆರಂತಲೂ. ಹೆಸರುಂಟು (ಶಬ್ದಾಗ. ೯೦). **ಲಿಂಗಾಯಿತ** : ೨.
ಗ. ೩೩೩). **ಲಿಂಗಾಯ್ತು** : (೩). [ಲಿಂಗ + ಆಯುತ]
**ಯಿತ** 'ಲಿಂಗಾಯತ' ನೋ.
**ಯ್ತು** 'ಲಿಂಗಾಯತ' ನೋ.
**ರಾಧನೆ** (ನಾ). [ವೀಶೈ] ಇಷ್ಟಲಿಂಗವನ್ನು ಪೂಜಿಸುವುದು :
ಗಾರಾಧನೆಯ ಮಾಡುವೆ ಜಂಗಮಾರಾಧನೆಯ ಮಾಡುವೆ (ಬಸವ. ೭೦೬).
[ಸಂ. ಲಿಂಗಾರಾಧನ]
**ರ್ಚನೆ** (ನಾ). = ಲಿಂಗಾರಾಧನೆ : ನಾನು ಬೆವಹಾರವ ಮಾಡುವೆ
ಯ್ಯಾ ಲಿಂಗಾರ್ಚನೆಗೆಂದು (ಬಸವ. ೭೦೬); ನಿತ್ಯಲಿಂಗಾರ್ಚನೆಗೆ ನಡೆತಂದು
ತಸಂಬಡುತೆ ಹರನಾಲಯಕ್ಕೈದ್ತುಂದು (ಹರಿಹರ. ರೇ. ೪-೭) ; ಲಿಂಗಾ
ನೆಯಿಂದ ಜಂಗಮಾರ್ಚನೆಯಧಿಕ (ಅಖಂಡೇ. ೭೦-೯೨).
[ಸಂ. ಲಿಂಗಾರ್ಚನ]
**ರ್ಪಿತ** (ಗು). ೧. ಲಿಂಗಕ್ಕೆ ಅರ್ಪಿಸಿದ, – ನೀಡಿದ : ಲಿಂಗಾರ್ಪಿತ
ಪದೊಳ್ಭವಂಗರ್ಪಿತಮಾಗದೀದನೆ ಬೆರಸಿದೆಯೊ ಮಹಾಲಿಂಗ
ವಿಧೋದಕಮಂ ಪಿಂಗದೆ ನೀನೊಂದುಗೆಯ್ದೆಯೋ ಮಹಿಪಿಂಡಂ (ವೃಷ.
-೦೬). (ನಾ) ೨. ಆಹಾರಪದಾರ್ಥ ಮುಂತಾದುವನ್ನು
ಂಗಕ್ಕೆ ಅರ್ಪಿಸುವುದು, – ನೀಡುವುದು : ಆವ ಪದಾರ್ಥವಾದರೇನು
ನಿದ್ದಡೆಗೆ ಬಂದುದ ಲಿಂಗಾರ್ಪಿತವ ಮಾಡಿ ಭೋಗಿಸುವುದೆ ಆಚಾರ
ಸವ. ೭೭೪). [ಸಂ.]
**ವತಾರ** (ನಾ). ೧. [ವೀಶೈ] ಶಿವನು ಲಿಂಗದ ಅವತಾರವನ್ನು
ರಿಸುವುದು; ಶಿವನು ಲಿಂಗರೂಪವನ್ನು ತಾಳುವುದು. ೨. ಶರಣ;
ವಭಕ್ತ : ಮಂಗಳದ ಲಿಂಗಾವತಾರರ ಸಂಗದಿಂ ಮಡಿವಳಸು ಭಕ್ತಿ
ರಂಗಮುಖಿಮೆಯುನಜೀಬುಲಾಜದೆ ಪಲವುರೂಪುಗಳ ಧರಿಸಿ (ಬಸವು.
-೩೮). [ಸಂ.]
(ನಾ). ೧. ಸಂನ್ಯಾಸಿನಿ ; ಯೋಗಿನಿ : ವಿರಕ್ತೆ : ವ್ಯಾಧಿಯುತ
ಳಂ ಲಲನೆ ಮರುಳ್ಗೊಂಡಳೊಳಂ ಲಿಂಗಿಯೊಳಂ . . . ನೆರೆದೊಡ
ಗುವಪಾಯುಂ ಶ್ರೀಯುಂ (ಮರಹ. ೯-೪) ; ಸೂಳೆ ರಂಡೆ ಕೊಡಗೂಸು
ನತ್ತು ಲಿಂಗಿ ದೇವತೆ ತಿರ್ಯಗ್ಜಾತಿ ಕೀಳ್ಜಾರೆಯೆಂಬಿವರೊಡಲಾಗೊಡೆಯು
ಯರೊಳು (ರತ್ನಾ. ೩-೬ ಪ) , ೨. ಒಂದು ಬಗೆಯ ಗಿಡ;
ಲಿಂಗಿಯೆನಲ್ಕೆರಡೆ" (ಮಂಗರಾ. ೯೯-೯೨).
[< ಸಂ. ಲಿಂಗಿನೀ]
(ನಾ). ೧. ಯತಿ ; ಮುನಿ ; ಋಷಿ : ಬ್ರಾಹ್ಮಣರಂ ಲಿಂಗಿಗಳಂ
ಲಿ ಪುಣ್ಯದಿನಂಗಳೊಳಳದವರ್ಗಳಪ್ಪರಿಂತಿದನಳದರ್ (ಎಪಿ. XVI, ೩೯-೯೦;
07) ; ಜೈನ ಭೈರವ ಬುದ್ಧ ಲಿಂಗಿಗಳು ವಿವಿಧವರ್ಣಾಶ್ರಮಸುಧರ್ಮ
ವಹರಣಸಪ್ಪರು . . . ಒಪಗಿದರಸಂಖ್ಯಾತ (ಕುಮಾ. ಅ. ೦೨-೨೨);
ಂಗಿಯುಪ್ಪುದಂ ಹಲ್ಲುಹೋಪುದಂ . . . ಇಂತಪ್ಪ ದುಸ್ವಪ್ನಂಗಳಂ
ಂಡೊಡೆ ಸಾವರು (ಅವೀ. ೦೩೯). ೨. [ವೀಶೈ] ಇಷ್ಟಲಿಂಗವನ್ನು
ರಿಸಿರುವವನು ; ಲಿಂಗಧಾರಿ : ಶಿವಜ್ಞಾನ ಸಂಪನ್ನನಾದ ಜ್ಯೋತಿ
ರ್ಮಯಲಿಂಗಿಗೆ ಅಂಗವುಂಟೆ (ವಚನ.೭೦). [ಸಂ. ಲಿಂಗಿನ್]
ಗ (ನಾ). [ವೀಶೈ] ಇಷ್ಟಲಿಂಗವನ್ನು ಹೊಂದಿರುವವನು ;
ಂಗಧಾರಿ ; ಲಿಂಗವಂತ : ಸರ್ವಾಂಗಲಿಂಗಿಗನೆಂದು ಮಂಗಳಾತ್ಮಕ
ರು ನುಡಿದ (ಅಭ್ಯೂಂ.೨-೯೬). [ಲಿಂಗ + — ಇಗ]
ನಿ (ನಾ). [ವೀಶೈ] ಸಂನ್ಯಾಸಿನಿ ; ಯೋಗಿನಿ : ಬಹುವ್ಯಸನಿ ಲಿಂಗಿನಿ
. . . ಬೆಳೆವೆಣ್ ಮುದುಗುಂಟಣಿ ದೈವಕಾರ್ತಿ ನಾಪಿತೆ ಕಥವೇಳ್ವ

**ಲಿಂಗೈಕನಿಷ್ಠ** (ನಾ). [ವೀಶೈ] ಇಷ್ಟಲಿಂಗದಲ್ಲಿ ಏಕನಿಷ್ಠೆಯುಳ್ಳವನು : ಲಿಂಗೈಕನಿಷ್ಠನೆನಿಸುವ ಭೃಂಗೀಶಂ ಶಕ್ತಿಯುಕ್ತವೆಂನಿಪೀಶನ ವಾಮಾಂಗ ಮನೆ ಪಿಂಗುತೆಂ ಬಲದಂಗಕೆ ಬಲಗೆಯ್ಯೋಳಾಗಿ ಭಜಸಿದನಲ್ತೇ (ವೃಷ. ೩೭-೩೨). [ಸಂ.]

**ಲಿಂಗೈಕ್ಯ** (ನಾ). ೧. ಲಿಂಗದಲ್ಲಿ ಐಕ್ಯನಾಗುವುದು. ೨. [ವೀಶೈ] ಮರಣ ಹೊಂದಿದ ವ್ಯಕ್ತಿ ; ಶಿವೈಕ್ಯ : ಲಿಂಗದಲ್ಲಿ ಐಕ್ಯನಾದವನು : ಕೂಡಲಸಂಗನ ಶರಣರಲ್ಲಿ ಅಚ್ಚಲಿಂಗೈಕ್ಯಂಗೆ ತೊತ್ತಾಗಿಹುದಯ್ಯಾ (ಬಸವ. ೦೩೩) ; ನಿರುಪಮನಿರಾಳನು ನೋಡಾ ಲಿಂಗೈಕ್ಯನು (ಅಖಂಡೇ. ೩೦೬-೩). [ಸಂ.]

**ಲಿಂಗೋದಕ** (ನಾ). [ವೀಶೈ] ಇಷ್ಟಲಿಂಗಕ್ಕೆ ಅಭಿಷೇಕಮಾಡಿದ ನೀರು: ಲಿಂಗದೇವನ ಮುಟ್ಟಿ ಮಜ್ಜನಕ್ಕೆರೆವ ಕೈಯಲು ವಿಪ್ರನ ಕಾಲ ತೊಳೆವರೆ ಲಿಂಗೋದಕ ಹೃದಯದಲ್ಲಿ ವಿಪ್ರನ ಕಾಲ ತೊಳೆದ ನೀರು ಮಂಡೆಯ ಮೇಲೆ (ಬಸವ. ೩೯೯) : ಪಾದದಲ್ಲಿ ಪಾದೋದಕ ಆ ಪಾದತೀರ್ಥವನ್ನು ಲಿಂಗಕ್ಕೆ ಮಜ್ಜನಕ್ಕೆರೆಯಬೇಕೆಂಬ ಇಚ್ಛೆ ಹುಟ್ಟಿದಲ್ಲಿ ಲಿಂಗೋದಕ ಮಜ್ಜನಕ್ಕೆರೆದಲ್ಲಿ ಮಜ್ಜನೋದಕ (ಕರ್ಣಾ. ೦೩೭). [ಸಂ.]

**ಲಿಂಗೋದ್ಭವ** (ನಾ). ೧. ಲಿಂಗದ ಉದ್ಭವ, – ಹುಟ್ಟುವಿಕೆ : ಪರಮ ಸುಜ್ಞಾನನಿಧಿನಂದೀಶ್ವರಂಗಮುಲಕರಕಮಲಮಂ ಮುಗಿದು ಕೊಂಡಾಡಿ ಚಿತ್ತಸುಸ್ಥಿರನಾಗಿ ಲಿಂಗೋದ್ಭವದ ನಿರೂಪಣವನು ಸನತ್ಕುಮಾರಂ ಕೇಳಲು (ಏಕಾಂ. ೯-೧). ೨. "ಅಯೋನಿಜ, ಶಿವಕೃಪೆಯಿಂದ ಜನಿಸಿದವನು" (ಕೆರಾ. ೨೯-೭). [ಸಂ.]

**ಲಿಂಗೋಪಾಸನೆ** (ನಾ). [ವೀಶೈ] ಇಷ್ಟಲಿಂಗವನ್ನು ಉಪಾಸನೆ ಮಾಡುವುದು ; ಲಿಂಗಪೂಜೆ : ಷಟ್‌ಸ್ಥಲಮಾರ್ಗವು ವೀರಶೈವರ ಲಿಂಗೋಪಾಸನೆಗಾಗಿ ಯುಕ್ತಿಯುಕ್ತವಾಗಿ ಕಲ್ಪಿಸಿದ ಸಾಧನಮಾರ್ಗವು (ಶಿವಾಸೂ. iv. ಪ್ರಸ್ತಾವನೆ). [ಸಂ. ಲಿಂಗೋಪಾಸನ]

**ಲಿಂಬಿ** 'ನಿಂಬೆ' ನೋ.

**ಲಿಂಬೆ** 'ನಿಂಬೆ' ನೋ.

**ಲಿಕಿತ** (ನಾ). ಬರಹ ; ಬರವಣಿಗೆ : ಪಲ್ಲವಾಚಾರಿ ಲಿಕಿತಂ (ಎಕ. II. ೨೦-೩; ಸು. 700) ; ದಿನಕರಯ್ಯಶೆಟ್ಟಿಯ ಲಿಕಿತಂ (ಎಕ. IV. ಎಳಂದೂ. ೨೩-೦೫ ; ಸು. 925 ?). [< ಸಂ. ಲಿಖಿತ]

**ಲಿಕಲಿಕಿ** (ನಾ). ೧. (ಉಪಕರಣಗಳ ಕೀಲು ಮುಂತಾದುವು ಹಳೆಯದಾಗುವುದರಿಂದಾಗುವ) ಸಡಿಲ ; ಅಳ್ಳಕ : ಸಾಮ್ರಾಜ್ಯಕೋಟೆಯ ಭದ್ರಕೀಲುಗಳು ಲಿಕಿಲಿಕಿಯಾಗುತ್ತಿದ್ದವು (ರಕ್ತರ. ೦೨೨): ಮೊಗಲ ರಾಜ್ಯದ ಕೀಲುಗಳು ಸಡಿಲಿಹೋಗಿ, ರಾಜ್ಯವು ಲಿಕಿಲಿಕಿಯಾಯಿತು (ರಾಣಾರಾ. ೦೬); ಮೋಟಾರು ೪ ಮೈಲಿ ದೂರದಲ್ಲಿ ಬರುತ್ತಿದ್ದರೂ ಶಬ್ದವಾಗುವಷ್ಟು ಅವು ಲಿಕಿಲಿಕಿಯಾಗಿದ್ದರೆ ಅಂತಹ ಮೋಟಾರಿಗೆ ಹಾರನ್ ಇದ್ದರೆ ಅದನ್ನು ತೆಗೆಯಿಸಿ ಹಾಕುತ್ತೇನೆ (ನಾಡಗೀ. ೭೭). ೨. ಶಿಥಿಲ ; ಜರ್ಜರಿತ: ಕಲ್ಪವೃಕ್ಷವನ್ನು ಸಮೂಲ ಕಿತ್ತು ಒಗೆದಂತೆ ಅರಸನ ಸರ್ವಾಂಗಗಳು ಲಿಕಿಲಿಕಿಯಾದವು (ತುಳಸೀ. ೦೦೬) ; ಅವನ ಮೈಯೆಲ್ಲ ಲಿಕಿಲಿಕಿಯಾಗಿತ್ತು (ಎರಡ. ೯೭) ; ಅದರ ಮೇಲಿಂದ ಬಿದ್ದದ್ದರಿಂದ ನನ್ನ ಮೈಯೆಲ್ಲವು ಲಿಕಿಲಿಕಿಯಾಗಿವೆ (ಕನ್ನಸ. ೦೪). [← ಮರಾ. ಲಿಕಿಲಿಕೀ ]

**ಲಿಕುಚ** (ನಾ). ೧. ಈಳೆಜಾತಿಗೆ ಸೇರಿದ ಒಂದು ಬಗೆಯ ಮರ ಮತ್ತು ಅದರ ಹಣ್ಣು; ಗಜನಿಂಬೆ : "ಲಕುಚಃ, ಲಿಕುಚಃ, ಡಹುಃ_೩ ಗಜನಿಂಬೇ ಹೆಸರುಗಳು" (ನಿಘಂ.೦೩. ೦೨೩); ವಕುಳ ಪಾಟಳಾಶ್ವತ್ಥಬ್ರಾತಂ ಲಿಕುಚ ನಾಳಿಕೇರದ್ರುಮಜಾತಂ (ಸುಕುಮಾ. ೦೦-೩೩ ರಗಳೆ); ಬಲ್ಲೂ ವಿಸ

ಭಾಳಾಕ್ಷನೆಂದರ್ಚಿಸುತ್ತೆ (ರಾಶತ. ೬-೫೦). ೨. ಒಂದು ಬಗೆಯ ಮರ ಮತ್ತು ಅದರ ಹಣ್ಣು; ಬೇಲ; ಬೆಲ್ಲವತ್ತ: "ಲಿಕುಚಂ (ಲಕುಚಂ) ಕಪಿತ್ಥ ಮಾಱುಗೆ ದಧಿತ್ಥಂ" (ಶಸ್ತ್ರಕೋ. ೬೩-೫); ಒರ್ವಳ್ ಲಿಕುಚಕುಚದ ನಸೆಗಾರ್ತಿ ಕಣ್ಣಮಿರೆ . . . ಕುಪ್ಪಸಮಂ ಸಡಿಲ್ಚಿದಳ್ (ರಾಮಾಶ್ವ. ೦೨೩-೦೨). [ಸಂ.]

**ಲಿಕ್ಷೆ** (ನಾ). ೧. ಹೇನಿನ ಮೊಟ್ಟೆ ; ಸೀರು : ಮತ್ಕುಣದಂಶಮಶಕ ಲಿಕ್ಷಾಯೂಕಪಿಪೀಲಿಕಾದೇಹಿಕಂ (ಕತ್ತ್ರಕ್ರ ೯೬). ೨. ದೂರವನ್ನು ಅಳೆಯುವ ಒಂದು ಮಾನ: ಆ ತ್ರಸರೇಣುಗಳೆಂಟಾಗಲೊಂದು ವಾಲಾಗ್ರವೆನಿಸುಗುಂ ಆ ವಾಲಾಗ್ರವೆಂಟಾಗಲೊಂದು ಲಿಕ್ಷೆಯೆನಿಸುಗುಂ (ಶಿವೇಶ. ೨೩೯). [ಸಂ. ಲಿಕ್ಷಾ]

**ಲಿಖನ** (ನಾ). ೧. ಬರೆಯುವಿಕೆ: 'ಲಿಖಿಸು' ಪರಾ. ೨. ಬರೆದುದು: ಬರವಣಿಗೆ ; ಬರಹ. ೩. ಬರೆದ ಆಧಾರ ಪತ್ರ ; ದಾಖಲೆ. [ಸಂ.]

**ಲಿಖಾವಟ್ಟು** (ನಾ). ೧. ಬರವಣಿಗೆ. ೨. ಲಿಖಿತ ದಾಖಲೆ.—ಪತ್ರ : ಈ ಕಾಯಿದೆಯಲ್ಲಿ ಹೊಸದೇನೂ ಇಲ್ಲ. ಇದುವರೆಗೆ ಲಿಖಾವಟ್ಟಿನಲ್ಲಿ ಇಲ್ಲದ್ದಕ್ಕೆ ಈಗ ಲೇಖನರೂಪವನ್ನು ಕೊಟ್ಟಿದೆ (ಬಂಕಿಮ. ೩೫೯); ಪ್ರಾಚೀನ ಕಾಲದ ಶಾಸನಗಳು ಮತ್ತಿತರ ಲಿಖಾವಟ್ಟುಗಳನ್ನೆಲ್ಲಾ . . . ಸಂಪಾದಿಸಿದ್ದು ಚೊಕ್ಕವಾಗಿ ಇಂಗ್ಲಿಷ್‌ಲಿಪಿಯಲ್ಲಿ ಮುದ್ರಣವಾಗಿವೆ (ಶಾಶ್ವ.ವಿ. ೯೬೫). [←ಹಿಂ. ಮರಾ. ಲಿಖಾವಟ್]

**ಲಿಖಾವಟ್ಟುದಾರ** (ನಾ). ಬರವಣಿಗೆಗಾರ; ಲಿಪಿಗಾರ : ಅನೇಕ ಗ್ರಾಮಗಳಲ್ಲಿ ಕೆಲಸಕ್ಕೆ ಬಾರದ ಲಿಖಾವಟ್ಟುದಾರರಲ್ಲದ ಪಟೇಲರುಗಳಿದ್ದರು (೯೦ಪ. ೦೬೬). [ಲಿಖಾವಟ್ಟು + — ದಾರ₄]

**ಲಿಖಿಚ್ಚು** 'ಲಿಖಿಸು' ನೋ.

**ಲಿಖಿತ** (ಗು).೧. ಬರೆದ: ಪರಲಿಖಿತಪಪ್ಪೋಲೆಯೊಂದಂಬರದೊಳ್ದರ್ದಿಕಸ್ಮಿಕಂ ಭೂವರನ ಸಮ್ಮುಖದಲ್ಲಿ ಬೀಳಲು (ಬಸವು. ೫-೫೨): ನಮಗೆ ದೊರೆತಿರುವ ಪ್ರಾಚೀನ ಲಿಖಿತದಾಖಲೆಗಳು ಕ್ರಿ. ಪೂ. ೪ನೆಯ ಶತಮಾನಕ್ಕಿಂತ ಹಿಂದಿನವಾಗುವುದಿಲ್ಲ (ಭಾರಪ. ೯). ೨. ಕೊರೆದ ; ಕಂಡರಿಸಿದ. (ನಾ). ೩. ಬರೆದುದು : ಬರಹ: ಶಿರದ ಲಿಖಿತವ ಕಂಡು ಮರುಳುತಂಡಗಳು ಓದಿ ನೋಡಲು (ಬಸವ. ೫೩೯) ; ನಿಮ್ಮ ಲಿಖಿತವನಿಂದು ಕಾಣಿಸಿದಿರೇ (ಸಂಬರ. ೭-೭೦). ೪. ಬರೆದ ದಾಖಲೆ: ಕಡತ : ನಾಲ್ಕನೆಯ ಲಿಖಿತದಲ್ಲಿ ಮಂಗರಸರ ಪೂರ್ವಜರ ವಿವರಗಳನ್ನು ಹೇಳಲಾಗಿದೆ (ಕುಮಾಕಾಂ. ೦೬). ೫. ಸ್ಮೃತಿಯನ್ನು ಬರೆದ ಒಬ್ಬ ಋಷಿಯ ಹೆಸರು : ಅಜ್ಞಾನಿ ದ್ವಿಜಾಧಮಂ ತಾನಾದೆನೀ ದ್ರೋಹಕೆಂದು ಲಿಖಿತಂ ನುಡಿದನು (ಕೃಬಾಶಾ. ೦೨-೨). [ಸಂ.]

**ಲಿಖಿಸು. ಲಿಖಿಚ್ಚು** (ಕ್ರಿ). ಬರೆ ; ಲೇಖಿಸು: ಬರೆದಂ = (ವೃತ್ತಿಯಂ) ಲಿಖಿಸಿದಂ (ಶಮದ. ಟೀಕೆ. ೬ ೭೬೯); ಪಂಚಾಕ್ಷರಿಯನಕ್ಷರವಾಗಿ ಲಿಖಿಸುತ್ತ (ಬಸವು. ೫೩-೭೩) : ಮುಖಿಮುದ್ರೈವತ್ತುನಾಲ್ಕಕ್ಷಿ ನೂಱೆಂಟರಲ್ ಲಿಖಿಸಿರ್ದ ಪ್ರತಿಮೆಯುಂದದಿ ಬೆಱಗುವಟ್ಟು ಷಣ್ಮುಖನ ಮುಗ್ಧಸುಭಾವಮಂ ಕಂಡು (ಶಬ್ದ. ೯-೦). **ಲಿಖಿಚ್ಚು** : ಶ್ರೀಮತ್‌ನ್ಧರ್ಮಮ್ಮ ಚನ್ದ್ರಧರಾರ್ಣವಮ್ ಲಿಖಿಚ್ಚಿದೋನ್ ದಿವ್ಯಭಾಷಾಕಲನ್ (ಎಕ. XVI, ಶಾಶ್ವಗ. ೦೨-೯; ಸು. 754). [ಲಿಖನ + — ಇಸು₃]

**ಲಿಗಾಡ. ಲಿಗಾಡಿ. ಲಿಗಾಡು** (ನಾ). (ಉಕ) ೧. ಒತ್ತಾಯ; ನಿರ್ಬಂಧ: ಈ ಶೆಟ್ಟಿಯು ನಿನ್ನ ಮೇಲೆ ಲಿಗಾಡ ಹಾಕಿ ತೆಗೆದುಕೊಂಡನೋ (೯ಶಾವಂ. IV. ೮೩). **ಲಿಗಾಡಿ** : ೨. ಗೋಜು; ಉಸಾಬರಿ; ಗೊಡವೆ : ನಡೆದಾದರೂ ಹೋಗಬಹುದು. ನಿಮ್ಮ 'ಲಿಗಾಡಿ' ಬೇಡ (೫ರ೭. ೨೭). **ಲಿಗಾಡು**: ೨. ಈ ಪ್ರಾಣಿಗೆ ಸಮಾಧಾನವೆಂಬುದೇ ಇರಲಿಲ್ಲ. ಒಂದಿಲ್ಲ ಒಂದು ಲಿಗಾಡು ಬೇಕಾಗುತ್ತಿತ್ತು (ಬೇ೫ಹ. II. ೦೦೭). ೩. ನಷ್ಟಕ್ಕಾಗಿ ಕೊಡುವ ಪರಿಹಾರ : (೬). [← ಮರಾ. ಲಿಗಾಡ್]

**ಲಿಗಾಡಿ** 'ಲಿಗಾಡ' ನೋ.

**ಲಿಗಾಡು** 'ಲಿಗಾಡ' ನೋ.

**ಲಿಪಿ** (ನಾ). ೧. ಮೆತ್ತುವಿಕೆ : ಬಳಿಯುವಿಕೆ. ೨. ಬರೆಯುವಿಕೆ ; ಲೇಖಿಸುವಿಕೆ. ೩. ಅಕ್ಷರ : "ಲಿಪಿಯೆಂಬುದು ಚಿತ್ರದ ಬರಹಮುಂ, ಅಕ್ಷರದ ಬರಹಮುಂ" (ಹಲಾಯು. ೧೨೦-೯೩); ತೆಲುಗಲಿಪಿ ನಾಗರದ ಲಿಪಿ ಗ್ರಂಥಲಿಪಿ ಹಳೆಗನ್ನಡದ ಲಿಪಿ ದ್ರಾವಿಳಲಿಪಿಯು ಪಾರಿಸಲಿಪಿಯು ಲಾಳಲಿಪಿ ಮೊದಲಾದ ಹಲವು ಲಿಪಿಗಳನೋದಬಲ್ಲಗ್ಗಳದ ಕರಣಿಕರಂ ಕರೆಸಿ (ಬಸವು. ೫-೫೩): ಅಕ್ಷರಗಳನ್ನು ಕಣ್ಣಿಗೆ ಗೋಚರಿಸುವಂತೆ ಮಾಡಲು ನಿಶ್ಚಿತವಾಗಿರುವ ಸಂಕೇತಗಳು ಅಥವಾ ಚಿಹ್ನೆಗಳು ಲಿಪಿಗಳೆನಿಸುತ್ತವೆ (ಸಂಕೋಶ. ೧). ೪. ಬರವಣಿಗೆ : ಕೈಬರಹ ; ಹಸ್ತಾಕ್ಷರ : ಪಂಕ್ತಿಭೇದ ಲಿಪಿಗಳೊಳ್ . . . ಅಕ್ಕುಮಲ್ಲದೆ ಜನಪದದ ಜನಂಗಳೊಳಲ್ಲ (೫ಗಪ. ೨-೦ ವ). ೫. ಹಣೆಬರಹ ; ವಿಧಿಲಿಖಿತ : 'ಲಿಪಿಕರ್ತೃ' ಪರಾ. ೬. [ತರ್ಕಶಾ] ಹನ್ನೆರಡು ಬಗೆಯ ಪ್ರಮಾಣಗಳಲ್ಲಿ ಒಂದು ; ಯಥಾರ್ಥಜ್ಞಾನದ ಲಿಖಿತಪ್ರಮಾಣ.– ಸಾಧನ : ಪ್ರಮಾಣವು ಪ್ರತ್ಯಕ್ಷ. ಅನುಮಾನ. ಉಪಮಾನ. ಶಬ್ದ. ಅರ್ಥಾಪತ್ತಿ. ಅನುಪಲಬ್ಧಿ, ಸಂಭವ. ಐತಿಹ್ಯ, ಲಿಪಿ. ಲೋಕಪ್ರಸಿದ್ಧಿ. ಚೇಷ್ಟೆ. ಪ್ರಾತಿಭ ಎಂದು ಹನ್ನೆರಡು ವಿಧ (೬೦ದಶಾ. ೦೩೩). [ಸಂ.]

**ಲಿಪಿಕ** (ನಾ). ಬರೆಯುವವನು ; ಲೇಖಕ : "ಲಿಪಿಕನೆನೆ ಗ್ರಂಥಲೇಖಕಂ" (ಮಂಗರಾ. ೦೦೭-೦೭). [ಸಂ.]

**ಲಿಪಿಕರ** (ನಾ). ೧. ಸುಣ್ಣ, ಬಣ್ಣ ಬಳಿಯುವವನು. ೨. ಬರೆಯುವವನು : ಲೇಖಕ : "ಲೇಖಕಃ, ಲಿಪಿಕರಃ ... ಈ ೨ ಲೇಖಕಂ" (ಹಲಾಯು. ೯೭-೪೩೨). ೩. ಕೆತ್ತನೆ ಕೆಲಸ ಮಾಡುವವನು : ಶಿಲ್ಪಿ. [ಸಂ.]

**ಲಿಪಿಕರ್ತೃ** (ನಾ). ಹಣೆಬರಹವನ್ನು ಬರೆಯುವವನು; ಬ್ರಹ್ಮ : ಲಿಪಿಕರ್ತೃವಿನ ಮಾನಸಪುತ್ರ ಮತ್ಕರ್ಮವಿಪಿನಕುಠಾರ ನೀ ಬಂದ ಗುಪಿತ ಪೇಳು (ಮೋಹಕ. ೦೨-೩). [ ಲಿಪಿ+ಕರ್ತೃ (< ಕರ್ತಾರ) ]

**ಲಿಪಿಕಾರ** (ನಾ). =ಲಿಪಿಕರ ೨ :"ಲಿಪಿಕಾರಂ ಲೇಖಕಂ" (ಶಸ್ತ್ರಕೋ. ೬೦-೫೯); ವೀರನಾರಾಯಣನೆ ಕವಿ ಲಿಪಿಕಾರ ಕುಮಾರವ್ಯಾಸ (ಕುವ್ಯಾಭ. ೦-೭); ಲಿಪಿಕಾರ ಎಂಬುದು 'ಲೇಖಕ'ಕ್ಕಿಂತ ಈಚಿನ ಕಾಲದ ಶಬ್ದವೆಂದು ಹೇಳುತ್ತಾರೆ (೯ನ್ನಸಂ. ೯೭). [ಸಂ.]

**ಲಿಪಿಗಲ್ಲು** (ನಾ). ಲಿಪಿಯನ್ನು ಕೊರೆದ ಕಲ್ಲು ; ಶಿಲಾಶಾಸನ : ಶ್ರೀ ಲೋಕಪಾಲೇಶ್ವರ ಕಮ್ಮಾರೆ ಒಳಿ (ಪಟ್ಟದ ಕಲ್ಲಿನ ವಿರೂಪಾಕ್ಷನ ಗುಡಿಯ ಪ್ರಾಕಾರದಲ್ಲಿಟ್ಟ ಲಿಪಿಗಲ್ಲು ಕ್ರಿ. ಶ. ಎಂಟನೆಯ ಶತಮಾನ) (ಕುಳಾ. ೨೭೫). [ ಲಿಪಿ+ಕಲ್ಲು (< ಕಲ್₃) ]

**ಲಿಪಿಗಾರ** (ನಾ). = ಲಿಪಿಕರ ೨ : ಈಕ್ಷಿಸದೆ ಭಕ್ತಿಪ್ರಭೆಯ ವಿರಜಾಕ್ಷಿಯಿಂ ಕೃತುಪುರದೊಡೆಯನಧೋಕ್ಷಜನ ನೀ ವಿಶ್ವಕವಿಗವಗೆಂತು ಲಿಪಿಗಾರ ? (೧೯ವಿಂ. ೯೭-೪); ಅತ್ತಿಮಬ್ಬೆ ನೂರಾರು ಜನ ಲಿಪಿಗಾರರನ್ನು ಕರೆಸಿದಳು (ದಾನಚಿ. ೦೭೩). [< ಸಂ. ಲಿಪಿಕಾರ]

**ಲಿಪಿಜ್ಞ** (ನಾ). ಬರವಣಿಗೆಯನ್ನು ಬಲ್ಲವನು : ತಿಳಿದವನ ಮತಿವಿದನ ಭಾಷಾವಳಿಲಿಪಿಜ್ಞನ ಸಾಕ್ಷರನ . . . ಸಂಧಿವಿಗ್ರಹರೆನಿಸಬೇಕು (ಕುವ್ಯಾಉ. ೩-೮೯). [ಸಂ.]

**ಲಿಪಿವಿಜ್ಞಾನ** (ನಾ). ಪ್ರಾಚೀನ ಕಾಲದ ಲಿಪಿ ಮತ್ತು ಅದರ ಬೆಳವಣಿಗೆಗೆ ಸಂಬಂಧಿಸಿದ ವಿಜ್ಞಾನ–ಶಾಸ್ತ್ರ ; ಅಕ್ಷರಶಾಸ್ತ್ರ : ಇತ್ತೀಚಿನ ಮುಂದೆ ಶಾಸನ ವಿಜ್ಞಾನ (Epigraphy) ಮತ್ತು ಲಿಪಿವಿಜ್ಞಾನ (Palaeography)ಗಳು ಪ್ರತ್ಯೇಕ ಶಾಖೆಗಳಾಗಿ ಬೆಳೆಯತೊಡಗಿದುವು (ಪ್ರಾಪಿಶಿ. ೫೯). [ಸಂ.]

**ಲಿಪಿವಿಧಾನ** (ನಾ). ಅಕ್ಷರಗಳನ್ನು ಬರೆಯುವ ಕ್ರಮ : ಸೇವಾಧರ್ಮೋಚಿತಮೆನಿಸುವಸಿಕರ್ಮಮುಮನೇಕ ಲಿಪಿವಿಧಾನಾಧೀನಮಪ್ಪ ಮಷಿಯುಮಂ . . . ಪಡೆದು (ಆದಿಪು. ೮-೬೪ ವ). [ಸಂ.]

**ಲಿಪಿಶಾಲೆ** (ನಾ). ಬರಹವನ್ನು ಹೇಳಿಕೊಡುವ ಶಾಲೆ; ಲಿಪಿಯನ್ನು ಕಲಿಸುವ ಶಾಲೆ : ಮಹಾವಗ್ಗದಲ್ಲಿ ಸಿದ್ಧಾರ್ಥನು ವಿದ್ಯಾರ್ಥಿಯಾಗಿ ಚಂದನಫಲಕವನ್ನೂ ಸುವರ್ಣಶಲಾಕೆಯನ್ನೂ ಹಿಡಿದು ಲಿಪಿಶಾಲೆಗೆ ಹೋಗುತ್ತಿದ್ದ ವರ್ಣನೆಯಿದೆ (ಭಾಶಾಇ. ೦೦೦). [ಸಂ. ಲಿಪಿಶಾಲಾ]

**ಲಿಪಿಶಾಸ್ತ್ರ** (ನಾ). =ಲಿಪಿವಿಜ್ಞಾನ : ಭಿನ್ನಲಿಪಿರೂಪಗಳ . . . ಪ್ರತಿಗಳು ದೊರೆತಾಗ ಲಿಪಿಶಾಸ್ತ್ರವನ್ನು ಚೆನ್ನಾಗಿ ಅಭ್ಯಾಸಮಾಡಬೇಕಾಗುತ್ತದೆ (ಕನ್ನಸಂ. ೯೩). [ಸಂ.]

**ಲಿಪಿಶಾಸ್ತ್ರಜ್ಞ** (ನಾ). ಲಿಪಿವಿಜ್ಞಾನವನ್ನು ಶಾಸ್ತ್ರೀಯವಾಗಿ ಅಭ್ಯಾಸ ಮಾಡಿದವನು : ಕನ್ನಡಲಿಪಿಯು ಬೆಳವಣಿಗೆಯು ರಾಷ್ಟ್ರಕೂಟರ ಕಾಲದಲ್ಲಿ ಒಂದು ವಿಶಿಷ್ಟಹಂತವನ್ನು ಮುಟ್ಟಿದೆಯೆಂದು ಲಿಪಿಶಾಸ್ತ್ರಜ್ಞರು ಹೇಳಿದ್ದಾರೆ (ನೊಳಂಬ. ೯೦). [ಸಂ.]

**ಲಿಪಿಸಂಖ್ಯಾನಸಂಗ್ರಹ** (ನಾ). [ಜೈನ] ಐವತ್ತುಮೂರು ಗರ್ಭಾನ್ವಯ ಕ್ರಿಯೆಗಳಲ್ಲಿ ಒಂದು : ಅನ್ನಪ್ರಾಶನವ್ಯುಷ್ಟಿಕೇಶವಾಪಲಿಪಿಸಂಖ್ಯಾನಸಂಗ್ರಹೋಪನಯನವ್ರತಚರ್ಯಾವ್ರತ . . . ಎಂಬಯ್ವತ್ತುಮೂಱು ಗರ್ಭಾದಿ ನಿರ್ವಾಣಪರ್ಯಂತಂಗಳಪ್ಪ ಗರ್ಭಾನ್ವಯಕ್ರಿಯೆಗಳುಂ (ಆದಿಪು. ೦೩-೦೩ ವ) ; ಲಿಪಿಸಂಖ್ಯಾನಸಂಗ್ರಹಮುಂ ಉಪನೀತಿಯುಂ . . . ಅಪ್ಪಯ್ವತ್ತುಮೂಱು ಗರ್ಭಾನ್ವಯಕ್ರಿಯೆಯೊಳ್ (ಶಾಪುಂ. ೨೦೨). [ಸಂ.]

**ಲಿಪಿಸಾದೃಶ್ಯ** (ನಾ). ಅಕ್ಷರಗಳು ಒಂದೇ ರೀತಿಯಾಗಿ ಇರುವಿಕೆ ; ಅಕ್ಷರ ಸಾದೃಶ್ಯ : 'ಚಿಕುರ' ಎಂಬುದಕ್ಕೆ ಅರ್ಥವಾಗದೆ ಯಾವನೋ ಪ್ರತಿಕಾರ ಅದನ್ನು 'ಚತುರ' ಎಂದು ಭ್ರಮಿಸಿರಬೇಕು, ಲಿಪಿಸಾದೃಶ್ಯ ಕಾರಣವಾಗಿ (ಕನ್ನಸಂ. ೦೯೯). [ಸಂ.]

**ಲಿಪಿಸು** (ಕ್ರಿ). ಬರೆ ; ಲೇಖಿಸು : ಇದಕ್ಕೆ ತಪ್ಪದಂತೆ ಹಣೆಯೊಳಾ ಬ್ರಹ್ಮನೇ ಲಿಪಿಸಿರುವ ಹಾಗೂ . . . ತೋರುತ್ತಾ ಇದ್ದೀತು (ಸಕಪ್ಪ. ೬). [ಲಿಪಿ + — ಇಸು]

**ಲಿಪಿಸುಧಾರಣೆ** (ನಾ). ಲಿಪಿಯ ಸಂಸ್ಕರಣ; ಅಕ್ಷರಗಳಿಗೆ ಸಂಬಂಧಿಸಿದ ಬೆಳವಣಿಗೆ,—ಮಾರ್ಪಾಟು : ಕನ್ನಡದ ಈಗಿನ ಲಿಪಿಯನ್ನು ಲಿಪಿಯಂತ್ರಕ್ಕೂ . . . ಹೊಂದಿಸುವ ದೃಷ್ಟಿಯಿಂದ ಲಿಪಿಸುಧಾರಣೆಯ ಬಗೆಗೆ ಕೆಲವು ಪ್ರಯತ್ನಗಳೂ ನಡೆದಿವೆ (ಸಂಕೋಧ. ೩). [ಸಂ. ಲಿಪಿಸುಧಾರಣಾ]

**ಲಿಪ್ತ** (ಗು). ೧. ಬಳಿದ : ಸವರಿದ ; ಹಚ್ಚಿದ : ಸದಸದ್ವೇದನೀಯ ಪ್ರಕೃತಿಗೆ ಮಧುಲಿಪ್ತಖಡ್ಗಧಾರೆಯವೋಲ್ ಸುಖಾಸುಖದಾಯಕತ್ವಂ ಸ್ವಭಾವಂ (ಕರ್ಮಪ್ರ. ೨೯೦). ೨. ಮಲಿನವಾದ ; ಮಾಸಿದ. ೩. ವಿಷವನ್ನು ಬೆರಸಿದ. ೪. ತಿಂದ ; ಕಬಳಿಸಿದ. (ನಾ). ೫. ಬಳಿದುದು : "ದಿಗ್ಧಂ, ಲಿಪ್ತಂ – ೨ ಬಳಿಯಲ್ಪಟ್ಟದ್ದು" (ಸಿದ್ಧಾಂತಿ. ೪೯೭). ೬. ವಿಷವನ್ನು ಲೇಪಿಸಿದ ಬಾಣ : "ದಿಗ್ಧಃ, ಲಿಪ್ತಃ – ೨ ವಿಷಾಕ್ತ – ನಂಜು ಪೂಸಿದ ಕೋಲು, ವಿಷ ಬಳಿಯಲ್ಪಟ್ಟ ಸರಳು, ವಿಷಬಾಣ " (ಸಿದ್ಧಾಂತಿ. ೨೬೩). ೭. ತಿಂದುದು : "ಭಕ್ಷಿತಂ, ಚರ್ವಿತಂ, ಲಿಪ್ತಂ . . . ಭುಕ್ತಂ – ೧೪ ಭುಜಿಸಲ್ಪಟ್ಟದ್ದು" (ಸಿದ್ಧಾಂತಿ. ೪೩೨). [ಸಂ.]

**ಲಿಪ್ಯಂತರ** (ನಾ). ಬೇರೆ ಭಾಷೆಯ ಅಕ್ಷರ; ಬೇರೆಯ ಲಿಪಿ : 'ಲಿಪ್ಯಂತರಗೊಳ್ಳು' ಪರಾ. [ಸಂ.]

**ಲಿಪ್ಯಂತರಗೊಳಿಸು** (ಕ್ರಿ). ಬೇರೆ ಭಾಷೆಯ ಲಿಪಿಯಲ್ಲಿ ಬರೆ : ಅವುಗಳನ್ನು ಅನುವಾದಿಸುವ ಅಥವಾ ಲಿಪ್ಯಂತರಗೊಳಿಸಬೇಕಾದ ಅಗತ್ಯವೂ ಇಲ್ಲ (ಕ್ರೀಕಶ್ರ. ೬೪). [ಲಿಪ್ಯಂತರ+ಕೊಳು (<ಕೊಳ್$_1$) + — ಇಸು$_3$]

**ಲಿಪ್ಯಂತರಗೊಳ್ಳು** (ಕ್ರಿ). ಬೇರೆ ಭಾಷೆಯ ಲಿಪಿಯಲ್ಲಿ ಬರೆಯಲ್ಪಡು : ಇವು ಟಿಬೆಟನ್‌ಭಾಷೆಗೋ ಅಥವಾ ಚೈನೀಭಾಷೆಗೋ ಅನುವಾದಿತವಾಗಿವೆ ಇಲ್ಲವೆ ಲಿಪ್ಯಂತರಗೊಂಡಿವೆ (ಭಾರಹ. ೩೮). [ಲಿಪ್ಯಂತರ+ಕೊಳ್ಳು$_{v1}$ (<ಕೊಳ್$_1$)]

**ಲಿಪ್ಸು** (ಗು). ೧. ಪಡೆಯಬೇಕೆಂಬ ಆಸೆಯುಳ್ಳ. (ನಾ). ೨. ಆಸೆಪಡುವವನು: "ತೃಷಕಃ, ಗರ್ಧನಃ, ಗೃಧ್ನುಃ, ಲಿಪ್ಸುಃ, ಲುಬ್ಧಃ, ಅಭಿಲಾಷುಕಃ – ಈ ೬ ಕಾಂಕ್ಷಿತಂ" (ಹಲಾಯು. ೬೦-೨೦೮). [ಸಂ.]

**ಲಿಪ್ಸೆ** (ನಾ). ಆಸೆ ; ಕಾಂಕ್ಷೆ : "ತೃಷ್ಣಾಃ, ಅಭಿಲಾಷಾ, ಲಿಪ್ಸಾ, ಆಶಾ, ಧನಾಯಾ, ಗರ್ಧನಾ – ಈ ೬ ಕಾಂಕ್ಷೆ" (ಹಲಾಯು. ೬೦-೨೦೯). [ಸಂ. ಲಿಪ್ಸಾ]

**ಲಿಫಾಪೆ** 'ಲಿಫಾಫೆ' ನೋ.

**ಲಿಫಾಫೆ**, ಲಿಫಾಪೆ (ನಾ). ಲಕೋಟೆ : ಹುಜೂರುಖಜಾನೆಯಿಂದ ಬಂದ ಸರಾಫ . . . ಈ ದರ್ಶನಹುಂಡಿಯ ಲಿಫಾಫೆಯನ್ನು ತೋರಿಸಿದರು (ಅಜೂಬ. ೮). **ಲಿಫಾಪೆ** : (ಕಸಂಗ್ರ. ೦೦೦). [←ಅರ. ಹಿಂ. ಲಿಫಾಫಾ; ಮರಾ. ಲಿಫಾಫಾ, ಲಿಫಾಪಾ]

**ಲಿಬಿ** (ನಾ). ಅಕ್ಷರ; ಬರಹ : ಅಶೋಕನ ಶಾಸನಗಳಲ್ಲಿ ಲಿಪಿ, ಲಿಬಿ, ದಿಪಿ ಎಂಬ ಸಮಾನಾರ್ಥಕಶಬ್ದಗಳಿವೆಯೆಂದೂ, ದಿಪಿ ಎಂಬುದು ಪುರಾತನ ಪಾರಸೀ ಭಾಷೆಗೆ ಸೇರಿದ್ದೆಂದೂ . . . ತಿಳಿದುಬರುತ್ತದೆ (ಕನ್ನಸಂ. ೪೬). [ಸಂ.]

**ಲಿಬಿಕಾರ** (ನಾ). ಬರೆಯುವವನು ; ಲಿಪಿಕಾರ : ಕ್ರಿ.ಪೂ. ನಾಲ್ಕನೆಯ ಶತಮಾನಕ್ಕಾಗಲೇ ಲೇಖಕವೃತ್ತಿಯವನನ್ನು ಲಿಪಿಕಾರ ಅಥವಾ ಲಿಬಿಕಾರ ಎಂದು ಕರೆದಿದೆ (ಭಾರಹ. ೦೮). [ಸಂ.]

**ಲಿಬಿಲಿಬಿ** (ನಾ). ಸಂಕಟ, ತಳಮಳ ಮುಂತಾದುವನ್ನು ಸೂಚಿಸುವ ಒಂದು ಅನುಕರಣ ಶಬ್ದ : ರಂಗನಾಥ ಸಾಯುವಾಗ ಹಣವನ್ನೂ ದುಶ್ಚಟಗಳನ್ನೂ ಬಿಟ್ಟು ಹೋಗಲಾರದೆ ಲಿಬಿಲಿಬಿ ಒದ್ದಾಡಿ, ಸಾಯಲಾರದೆ ಸಾಯುತ್ತಾನೆ (ಶಂಕಶಂ. ೨೦೩). 'ವಿಲಿವಿಲಿ' ನೋ.

**ಲಿಲಾವು** (ನಾ). (ಉಕ) ಹರಾಜು ; ಏಲಂ : ಬೆಳಗಾದರೆ ಹಣ ಕಟ್ಟಬೇಕು, ಇಲ್ಲವೆ ಹೊಲಮನೆಗಳ ಲಿಲಾವಿಗೆ ಸಿದ್ಧರಾಗಬೇಕು (ಕರ್ತ. ೭೩೮); ಸರಕಾರದವರು ಜೇನ ತುಪ್ಪ ಜಮೆಮಾಡುವ ಹಕ್ಕು ಪ್ರತಿವರ್ಷ ಲಿಲಾವಿನಿಂದ ಮಾರುವರು (ಕಥಾಗ. ೬೬). [← ಮರಾ. ಲಿಲಾವ್, ನಿಲಾವ್]

**ಲಿಲಾವುದಾರ** (ನಾ). ಹರಾಜು ಹಾಕುವವನು : ವಕ್ತಾರ ಹಾಗೂ ಲಿಲಾವುದಾರ ಇವರಲ್ಲಿ ಅಂತರವಿರುವುದೇ ಕ್ವಚಿತ (ಶ್ರಮಾಕೋ. ೯೩). [ಲಿಲಾವು + – ದಾರ$_4$]

**ಲಿವಿ$_1$** (ನಾ). = ಲಿಬಿ : " ಲಿಪಿಯುಂ ಲಿಭಿ[ವಿ] ಲಿಖಿತಾಕ್ಷರಾಳಿನ್ಯಾಸಂ" (ವಸ್ತುಕೋ. ೬೦-೫೯). [ಸಂ.]

**ಲಿವಿ$_2$** (ನಾ). ಹಗುರ ; ಲಘು : ಈ ದಿವಸ ನನ್ನ ದೇಹವು ಬಹು ಲಿವಿಯಾಗಿದೆ . . . ಹೊರಗೆ ಸ್ವಲ್ಪ ತಿರುಗಾಡಿ ಅಂಗಗಳು ಲಿವಿಯಾಗಿ ಆಡುವಂತೆ ಕೆಲಸವನ್ನು ಮಾಡಿದ ಹೊರತು ನಾವು ತಿಂದ ಅನ್ನ ಜೀರ್ಣಕ್ಕೆ ಬರುವುದಿಲ್ಲ (ಶೀಶಿಬಂ. I, ೨೯). [← ತೆಲು. ಲಿವ. / ಮರಾ. ಲಿವಣಾ=ಬಗ್ಗುವ, ಮಣಿಯುವ]

**ಲಿವಿಸಾಧನೆ** (ನಾ). ದೇಹವನ್ನು ಹಗುರ ಮಾಡಿಕೊಂಡು ಗಳೆಯ ಮೇಲೆ ಲಾಗ ಮುಂತಾದುವನ್ನು ಹಾಕುವುದು ; ದೊಂಬರಾಟ : ಎರಡನೆಯದಾದ "ಅಸ್ತ್ರವಿದ್ಯೆ"ಯಲ್ಲಿ ಪುರಾತನಕಾಲದ ಲಿವಿಸಾಧನೆ (Acrobatics)ಯನ್ನು ಕಾಣಬಹುದು (ಅಭಾನ್ನ. ೯೯) ; ದೊಂಬರಾಟ ; ಲಿವಿಸಾಧನೆ (Acrobatics. ೩೦೪೩). [ಲಿವಿ+ಸಾಧನೆ]

**ಲಿಸ್** (ನಾ). ಆಯಾಸ ಅಥವಾ ದುಃಖದಿಂದ ಹೊರಹೊಮ್ಮುವ ಉದ್ಗಾರ : ಎಲುಬುಗಳ ಸಂತತವರ್ಷದಲ್ಲಿಯೂ ಲಿಸ್ಸನ್ನದೆ, ಬೆಂಕಿಗೆ ಕೈಹಾಕಿ (ಗ್ರಾಮಾಯ. ೨೨೮) : ಗೊಡ್ಡದೊಡ್ಡ ಗಾಯಗಳಾದರೆಯೇ

ಕಣ್ಣಿರೆದು ನೋಡಲಾರದವರು, 'ಲಿಸ್' ಎನ್ನಲಾರದವರು ಈ ಸಣ್ಣಪುಟ್ಟ ಗಾಯಗಳಿಗೆ ಹೆದರಿಯಾರೆ ? (ಬವಸಿ. ೨೮).

**ಲಿಸುಗುಟ್ಟು** (ಕ್ರಿ). (ಉಕ) 'ಲಿಸ್' ಎಂದು ಶಬ್ದ ಮಾಡು : ಇಳಿಯ ಲಿಕ್ಕೆಂದು ಎದ್ದಾಗ . . . ಅವ್ವ ಲಿಸುಗುಟ್ಟಿದಳು (ವೃ.ಶಿ. ೮೪) ; ಗೌಡರು ಧೋತರದ ಶೆರಗಿನಿಂದ ತುಟಿ ಬಾಯಿ ಒರೆಸಿಕೊಳ್ಳುತ್ತ ಲಿಸುಗುಡುತ್ತ ಬರುತ್ತಾರೆ (ಶತರಾ. I. ೨೬೪). [< ಲಿಸ್ + ಕುಟ್ಟು₁]

**ಲಿಸ್ಟು** (ನಾ). ಹೆಸರು ಮೊದಲಾದುವನ್ನು ಬರೆದಿರುವ ಪಟ್ಟಿ ; ಯಾದಿ : ಪ್ರತಿತಿಂಗಳೂ ಅಂಗಡಿಯಿಂದ ಸಾಮಾನುಗಳನ್ನು ತರುವ ಮೊದಲು ಲಿಸ್ಟು ತಯಾರಿಸುವುದು ಒಳ್ಳೆಯ ಅಭ್ಯಾಸ (ರೂಢಿ).

[ ← ಇಂ. List ]

**ಲೀಟರು**(ನಾ). ದ್ರವಪದಾರ್ಥಗಳನ್ನು ಅಳೆಯುವ ಒಂದು ಅಳತೆ : ಒಂದು ಲೀಟರು ಎಳ್ಳೆಣ್ಣೆಗೆ ನಲವತ್ತೈದುರೂಪಾಯಿಗಳಾಗಿವೆ (ರೂಢಿ).

[← ಇಂ. Litre]

**ಲೀಢ** (ಗು). ತಿಂದ ; ರುಚಿನೋಡಿದ. [ಸಂ.]

**ಲೀಢೆ** (ನಾ). ಕಡೆಗಣಿಸುವುದು : ತಿರಸ್ಕಾರ; ಅವಹೇಳನ : "ಹೇಳಾ, ಅವಹೇಳಾ, ಲೀಢಾ, ಅವಜ್ಞಾ, ಅವಲೀಢಾ —ಈ ೫ ಅವಜ್ಞೆ" (ಕರಾಯು. ೦೦೬-೩೦). [ಸಂ. ಲೀಢಾ]

**ಲೀನ** (ಗು). ೧. ಅಂಟಿಕೊಂಡ ; ಹತ್ತಿಕೊಂಡ. ೨. ಕರಗಿದ. ೩. ಆಸಕ್ತನಾದ; ಮಗ್ನವಾದ. ೪. ಅಡಗಿದ. ೫. ಕಣ್ಮರೆಯಾದ; ಅಗಲಿದ. (ನಾ). ೬. ಯಾವುದಾದರೊಂದು ವಿಷಯದಲ್ಲಿ ಮಗ್ನನಾದವನು,-ಮುಳುಗಿದವನು: ಸುಖದುಃಖಗಳಲ್ಲಿ ಪದೇಪದೇ ಲೀನನಾಗಿ ತನ್ನನ್ನು ತಾನು ಮರೆತುಬಿಡುತ್ತಿದ್ದನು (ಮಂಕಿಶಾ. ೬); ವಾಲ್ಮೀಕಿ ವ್ಯಾಸರು ತಮ್ಮ ಕೃತಿಗಳಲ್ಲಿ . . . ಲೀನರಾಗಿ ಹೋಗಿದ್ದಾರೆ (ಶಾಕಗೀ. ೨). ೭. ಒಂದೇ ವಿಷಯದಲ್ಲಿ ಮುಳುಗುವಿಕೆ; ತಲ್ಲೀನವಾಗುವಿಕೆ: ವಿಜ್ಞಾನಿಗಳು ತಂಡೋಪತಂಡವಾಗಿ ಭೌತಘಟನೆಗಳ ವಿಮರ್ಶೆಯಲ್ಲಿ ಲೀನವಾಗಿದ್ದಾರೆ (ಶೀವಾಕ್ಯ. ೦೦೬). ೮. [ಸಂಗೀತ] ಗಮಕದಲ್ಲಿ ಒಂದು ಬಗೆ : ಕಂಪಿತ . . . ಲೀನ . . . ಆಹತಮೆಂಬೇಳು ದೇಶೀಗಮಕಂಗಳು (ಬವೀಳ. ೨೩೨) ; ಶಾರ್ಙ್ಗದೇವನ ಪಂಚದಶವಿಧ ಗಮಕಗಳು ಹೀಗಿವೆ . . . ಲೀನ – ಹಿಂದಿನ ಸ್ವರವೊಂದು ಮುಂದಿನ ಸ್ವರದಲ್ಲಿ ಮೃದುವಾಗಿಯೂ ನಿಧಾನವಾಗಿಯೂ ಐಕ್ಯವಾಗುವುದು (ಸಂಗೀಶಂ. ೨೬). ೯. [ನಾಟ್ಯ] ನೂರೆಂಟು ಕರಣಗಳಲ್ಲಿ ಒಂದು : ಎರಡುಂ ಕೈಗಳನೂರ್ಧ್ವಮಂಡಲದಿನೊಳ್ಪಂ ಬೆತ್ತು ತದ್ವಕ್ಷದೊಳ್ ಕರಯುಗ್ಮಂಗಳನಂಜಲೀಕೃತಿಯುನೊಲ್ದುಂ [ಮಾಡಿ] ನೀಹಂಚಿತೋತ್ಕರಮೊಂಬೊಂದು ಶಿರಸ್ಸಿನೊಳ್ ಮುಡುಪಿನೊಳ್ ಸ್ಥಿತಿಟ್ಟು ಕೊಂಕಲ್ ಕೊರಲ್ ಕರಣಂ ಲೀನಮೆನಿಪ್ಪ ಚೆಲ್ವ ಪೆಸರಂ ತಾಳ್ದತ್ತು (ಶಾಸ್ತ್ರರಂ. ೪-೪೪). [ಸಂ.]

**ಲೀನತೆ** (ನಾ). ೧. ಆಸಕ್ತವಾಗಿರುವಿಕೆ; ಮಗ್ನತೆ. ೨. ಕರಗುವಿಕೆ ; ಐಕ್ಯತೆ. [ಸಂ. ಲೀನತಾ]

**ಲೀಯ** (ಗು). ೧. ಕೂಡಿಹೋದ; ಬೆರೆತ; ಒಂದಾದ. (ನಾ). ೨. ಬೆರೆಯುವಿಕೆ ; ಐಕ್ಯ : ಮನ ದಾಸೋಹಕ್ಕೆ ಲೀಯವಹಂತೆ ಮಾಡು (ಬಸವ. ೪೨೬) : ಸಾಗರವನ್ನು ಸೇರಿ ಅದರಲ್ಲಿ ಲೀಯವಾಗಿ ಅದರಲ್ಲಿ ಹರಿದಾಡುವ ನದಿಗೆ ... ಬೇರೆ ಗತಿಯುಂಟೇ? (ಮೋಳವಾ. ೩೭ ಪ್ರಸ್ತಾವನೆ).

[< ಸಂ. ಲೀನ]

**ಲೀಲಾಂದೋಳ** (ನಾ). ವಿನೋದವಿಹಾರದಲ್ಲಿ ಬಳಸುವ ಉಯ್ಯಾಲೆ : ಲೀಳಾವನದೊಳೆ ವಿಹರಿಪ ಲೀಳಾಸರದೊಳಗೆ ಮೂಡಿ ಮುಳುಗುವ ಲೀಲಾಂದೋಳಮನೇಱುವ ಲೀಲಾಕೇಳಿಗಳೆ ವಿಲಾಸಕೇಳಿಗಳ್ ನೃಪಸತಿಯಾ (ಅಜಿತ. ೩-೯). [ಸಂ. ಲೀಲಾಂದೋಲ]

**ಲೀಲಾಜಲಾಶಯ** (ನಾ). ಜಲಕ್ರೀಡೆಗಾಗಿ ನಿರ್ಮಿಸಿದ ಕೊಳ, ತಟಾಕ : ನಾನಾಭವನವಿನ್ಯಾಸೋದ್ಯಾನಲೀಲಾಜಲಾಶಯಂಗಳುಮಂ . . . ಮಾಡಿ (ಅಜಿತ. ೬-೭೩ ವ). [ಸಂ.]

**ಲೀಲಾದೀರ್ಘ** (ನಾ). [ಸಂಗೀತ] ಇಪ್ಪತ್ತೆರಡು ಶ್ರುತಿಗಮಕಗಳಲ್ಲಿ ಒಂದು ಬಗೆ : ಸ್ಫುರಿತ . . . ಲೀಲಾದೀರ್ಘ [ಪಾಠಾಂ. ಲೀಲೋದ್ದೀರ್ಘ] . . . ಕೋಮಲವೆಂಬವಿಪ್ಪತ್ತೆರಡೇ ಶ್ರುತಿಗಮಕಂಗಳು (ಬವೀಳ. ೧೮೬).

[ ಸಂ. ]

**ಲೀಲಾಭಾವಿ** (ನಾ). ಆಟವಾಡುವ ಮನಸ್ಸುಳ್ಳವನು ; ಕ್ರೀಡಾಮನಸ್ಕ : ಲೀಲಾಭಾವಿಯಾಗಿ ಏಕೆ ಬಂದೆನೆಂಬುದನರಿದು ಸಾಕಾರದ ನೀತಿಯ ನಿರ್ಣಯವ ಕಂಡು ಏತರಿಂದ ತಿಳಿವು ಇನ್ನೇತರಿಂದ ಉಳಿವು ಈ ಉಭಯದ ನೀತಿಯಲ್ಲಿ ನಿಮ್ಮ ಮೇಲಪ್ಪ ಠಾಣವನರಿಯಬೇಕು (ಮೋಳವಾ. ೩೦-೨೦೩). [ ಸಂ. ಲೀಲಾಭಾವಿನ್ ]

**ಲೀಲಾಯಿತ** (ನಾ). ಆಟ; ವಿನೋದ; ಕ್ರೀಡೆ : ಆದಿಪುರುಷಂ . . . ತುಱುಗಾದಂ ಲೀಲಾಯಿತಂ ಸ್ವಯಂಪ್ರಭುಗುಚಿತಂ (ಆಗಿಪು. ೩-೬೪). [ಸಂ.]

**ಲೀಲಾಯುದ್ಧ** (ನಾ). ವಿನೋದದ ಯುದ್ಧ; ಹುಸಿಕಾಳಗ : ಮಲ್ಲಯುದ್ಧ ಲೀಲಾಯುದ್ಧಾದಿ ವಿಹಾರಗಳಿಂ (ಬವೀಳ. ೨೦೩). [ಸಂ.]

**ಲೀಲಾರಥ** (ನಾ). ವಿಲಾಸಕ್ಕೆ ಉಪಯೋಗಿಸುವ ತೇರು : ತನ್ನ ಲೀಲಾರಥದೊಳೆ ಲವಣಾಂಭೋಧಿಯಂ ದಾಂಟಿ (ಅಜಿತ. ೦೨-೦೨೬).

[ ಸಂ. ]

**ಲೀಲಾವತಿ**, ಲೀಳಾವತಿ (ನಾ). ೧. ವಿನೋದಾಸಕ್ತಳಾದ ಹೆಂಗಸು: ಹಾಸ್ಯದಲ್ಲಿ ನಿರತಳಾದವಳು. ೨. ಚೆಲುವೆ ; ಸುಂದರಿ. ೩. ನೇಮಿಚಂದ್ರನೆಂಬ ಕವಿಯು ಬರೆದ ಒಂದು ಕನ್ನಡ ಚಂಪೂಕಾವ್ಯ ಮತ್ತು ಅದರ ಕಥಾನಾಯಕಿಯ ಹೆಸರು : ಅತಿಚತುರಸ್ತ್ರೀಯರು ಮತಿಚತುರಕವಿಗಳುಂ ಕೇಳ್ದೊಲವಿಂ ಬಾಯ್ಯಂ ಬಿಡುತಿರೆ ಕರ್ಣರಸಾಯನ ಮೆನೆ ಪೇಟ್ವೆನೆಸೆಯೆ ಲೀಲಾವತಿಯಂ (ಲೀಲಾವ. ೦-೬೪) ; ಲೀಲಾವತಿ ಪತಿಯಾಪ್ಪಾಲೋಲತೆಯಿಂದೊಸೆದು ದೇವಿಯಂ ಪೂಜಿಸಿದಳ್ (ಲೀಲಾವ. ೦೦-೬). ೪. ಭಾಸ್ಕರಾಚಾರ್ಯನೆಂಬುವನಿಂದ ರಚಿತವಾದ ಗಣಿತಶಾಸ್ತ್ರ ಗ್ರಂಥ. **ಲೀಳಾವತಿ** : ೩. ಲೀಳಾವತಿ ಲೀಳಾವತಿ ಬಾಳೆಯೆ ಬಂಧುಪ್ರಿಯೇ ನಿಜಪ್ರಿಯಸಖಿಯರ್ ಕೇಳ ಕಳವಳದೊಳಟ್ಟಿದಪರ್ (ಲೀಲಾವ. ೦೦-೭೭). [ ಸಂ. ಲೀಲಾವತೀ ]

**ಲೀಲಾಳಕ** (ನಾ). ಅಲುಗಾಡುವ ಮುಂಗುರುಳು : ಮುನಿಚರಣಕಮಲದೊಳ್ ನಿಜವಿನತಶಿರಃಪದ್ಮವಿನುತ ಲೀಲಾಳಕಭೃಂಗನಿಕಾಯಮೆಱಗಿ ತುಱುಗಿರೆ (ಸುಕುಮಾ. ೮-೭೭). [ ಸಂ. ಲೀಲಾಲಕ ]

**ಲೀಲೆ**, ಲೀಳೆ (ನಾ). ೧. ಆನಂದ : ಲೀಲೆಯಿಂದುಡಿಸಿ ದಿವ್ಯವಸ್ತ್ರಮಂ . . . ಪೂಮಾಲೆಯುಂ ಮುಡಿಯಿಸುತ್ತುಮರ್ತಿಯಿಂ (ರವರ್ಮಾಪು. ೩-೯); ಲೀಲೆಯೆಂದರೆ ಸ್ವಾರ್ಥವಾಗಲಿ ಪರಾರ್ಥವಾಗಲಿ ಬೇರೊಂದು ಪ್ರಯೋಜನವನ್ನು ಉದ್ದೇಶಿಸದೆ ತಾನೇ ಪ್ರಯೋಜನರೂಪವಾದ ಸಂತೋಷವ್ಯಾಪಾರ (ಹಿಂದಶಾ. ೭೩). ೨. ಆಟ ; ಕ್ರೀಡೆ ; ವಿನೋದ : ಲೀಲೆಯೊಳೆ ಮಳಲ ಜಗಲಿಯ ಮೇಲೆ ಸರೋಜಾತಸಖಿಗೆ ಮಿಗಿಲೆನಿಸುವ ಸಲ್ಲೀಲೆಯ ತೇಜೋಧಿಕನಂ ಬಾಲಕನಂ ನಲಿಯುತಿರ್ದನಂ ಕಂಡು (ರವರ್ಮಾಪು. ೦೦-೦೪೬) ; ಪಾಲುಗಡಲಲಿ ಫಣಿಯ ಮಂಚದ ಮೇಲೆ ಪವಡಿಸಿ ಪರಮನೆನಿಸಿದ ಲೀಲೆಯೆತ್ತಲು ಮನುಜಭಾವದ ನಟನೆ ತಾನೆತ್ತ (ಕೌಶಿರಾ. ೪೩-೪೩); ಚಿಮ್ಮಿ ನೆಗೆಯುವ ತೊರೆಯ ಲೀಲೆಯ ಮನೋಹರತೆ (ಶತ್ರುಂಗ. ೨೯-೬೦೪). ೩. ಸ್ತ್ರೀಯ ಒಂದು ಬಗೆಯ ಶೃಂಗಾರಭಾವ; ವಿಲಾಸ; ಬೆಡಗು : "ಹೇಳಾ, ವಿಳಾಸಃ, ಬಿಬ್ಬೋಕಃ, ಲೀಲಾ, ಲಲಿತಂ, ವಿಭ್ರಮಃ — ಇವು ಮೊದಲಾದುವು ಸ್ತ್ರೀಯರ ಬಾವಂಗಳ್"

(ಹರಿಚರಿ. ೧೩-೮೯) ೪. ಚೆಲುವು : ಸೌಂದರ್ಯ : ಕಿಸಲಯಲೀಲೆಯ ಪೋಲ್ವುದು ಅಧರವು ಬಹುಸುಖ ನಿನ್ನ ಸಮ್ಮುಖವು (ಇಂಕಾಶ. ೯೩-೩೨), ೫. ಸರಾಗ ; ಸುಲಭ ; ಹಗುರ : ವಿರಾಟರಾಜನಗರಂ ವಲ್ಲೂರಿವೆಲ್ಲಂ ಭುಜಾಬಲದಿಂ ಲೀಲೆಯ ಸಾಧ್ಯವಾದುದೆಣೆಯಾವ್ರ್ವಿಷ್ಣುಕ್ಷಮಾಪಾಳನೊಳ್ (ಎಕ. V, ಅರಸೀ. ೦-೦೦ ; 1169). ಲೀಳೆ : ೧. ಲೀಳೆಯನಪ್ಪುಕೆಯ್ದು ನಯನೋತ್ಸವಮಂ ದಯ್ಗೆಯ್ದು ಗಾಡಿಯಿಂದೇಳಿಸಿ ಕಾಮಕಲ್ಪ ಲತೆಯಂ ಪರಿಪೂರ್ಣಕಳಾವಿಳಾಸದಿಂದೇಳಿಸಿ ಚಾರುಚಂದ್ರಕಲೆಯಂ ನೆಲೆ ವೆರ್ಚಿಸಿದಳ್ (ಶಂಕಾಪು. ೯-೩೨). ೨. ಲೀಳೆಯೊಳೆ ತಾಮೆ ನಡೆಪಿದ ಕೇಳೀವನಲತೆಗಳಂ ನಿರೀಕ್ಷಿಸಿ ಸುಯ್ದಾವಾಳವಳಯಂಗಳಂ ಭ್ರಮರಾಳಕಿಯರ್ ಬಾಷ್ಪವಾರಿಯಿಂ ಪೂರಿಸಿದರ್ (ಶಿಕೃತ. ೦೩-೯೯).

ಲೀಲಾಜಾಲವಾಗಿ = ಅತಿಸುಲಭವಾಗಿ; ನಿರಾಯಾಸವಾಗಿ : ಚಿತ್ರ ಗಳನ್ನು ಲೀಲಾಜಾಲವಾಗಿ ಚಿತ್ರಿಸುತ್ತಿದ್ದ, ಕಳ್ಳಕಲಾವಿದನೊಬ್ಬ ! (ಕುಗಹೂಂ. ೯೪); ಯಾರೊಡನೆಯೂ ಬಾಯಿಬಿಡದ ನಾನು ನಿನ್ನ ಬಳಿ ಲೀಲಾಜಾಲವಾಗಿ ಮಾತನಾಡಿದ್ದೇನೆ (ಗೋಕುರ. ೬೨). [ಸಂ. ಲೀಲಾ]

**ಲೀಲೆಗಾತಿ** (ನಾ). ವಿಲಾಸವತಿ ; ಬೆಡಗಿ : ಲೀಲೆಗಾತಿಯರ ಮಸ್ತಕದಲಿ ಮೆರೆವ ಪೂಮಾಲೆ (ಮೋಹತ. ೨೦-೨); ಶೈಲಪದ್ಮದ ಬಟ್ಟಮಾವುಗೆಗಳನು ಪೊಂಬಾಳೆಯ ನಿಡುಚವರಗಳಾ ಲೀಲೆಗಾತಿಯರೊಯ್ಯುತಿರೆ ದಕ್ಷಿಣಾಂಕ ನಿಂದಾಲೋಕಿಸುತಿರ್ದನಿನಿಸು (ಭರತ. ೯೬-೯೩). [ಲೀಲೆ + —ಕಾತಿ$_3$]

**ಲೀಲೆಗಾರ್ತಿ** (ನಾ). = ಲೀಲೆಗಾತಿ : ಲೀಲೆಗಾರ್ತಿಯರಚ್ಯುತನಾಜ್ಞೆ ಯಿಂದ ಪೆರ್ಗಾಲ ಹೊಂದೂಂಬನು ನೆಗಹೆ ಕೀಲಣೆಗೆಯ್ದ ಸುವರ್ಣವೇಶಂಡ ಶುಂಡಾಲದೆ ಸುರಿದುದು ಸಲಿಲ (ಮೋಹತ. ೦೯-೩೫).

[ಲೀಲೆಗಾಱ + —ತಿ$_1$ (< —ಇತ್ತಿ)]

**ಲೀಲೆಗಾಱ** (ನಾ). ವಿಲಾಸಿ; ರಸಿಕ : ಬಾಲೆಯರುಗಳು ಬೊಬ್ಬಿಡಲು ಗೋಪುರದಗ್ರಶಾಲೆಯ ರೋದನಗೇಳಿ ಲೀಲೆಗಾಱನ ಕೊಲ್ವುದಿಲ್ಲೆಂದು ದುಃಖದ ಶೀಲೆಗೆ ಮಾತನಟ್ಟಿದನು (ಮೋಹತ. ೩೫-೩೨).

[ಲೀಲೆ + —ಕಾಱ]

**ಲೀಲೆಗೆಡು** (ಕ್ರಿ). ಸಂತೋಷವನ್ನು ಕಳೆದುಕೊಳ್ಳು; ಆನಂದವಿಲ್ಲ ದಾಗು : ಪಾರ್ಥನು ಲೀಲೆಗೆಟ್ಟು ದ್ವಾರವತಿಯನು ಪೊಕ್ಕು . . . ಅಱುಹಿದನು ಸರ್ವರಿಗೆ (ತಿಮ್ಮಭಾ. ೩-೦). [ಲೀಲೆ + ಕೆಡು$_1$]

**ಲೀಲೆದೋಱು** (ಕ್ರಿ). ವಿನೋದವನ್ನು ಸೂಸು,— ತೋರಿಸು : ಆ ಸಕಲನಿಃಕಲತತ್ತ್ವವೆ ತನ್ನ ಶಕ್ತಿಸಮರಸಸಂಭಾಷಣೆಯಿಂದ ಲೀಲೆದೋಱ ಲಾಗಿ ತಾನೇ ಗುರುವಾದ(ಶತಸಂ. ೩೯೦-೨೯). [ಲೀಲೆ + ತೋಱು]

**ಲೀಲೆವಡೆ** (ಕ್ರಿ). ಸೊಗಸಾಗು; ಚೆಲುವನ್ನು ಹೊಂದು ; ಸುಂದರವಾಗಿ ಕಾಣು : ಸಿವಿಗೆ ತಟಿಮಱುಗಲೊಡನಿಕ್ಕುವ ಕುಂಚಂ ಲೀಲೆವಡೆಯೆ (ಅದಿಪು. ೦೦-೩೯) ; ವಿಚಕಿಲಮುಕುಲಮಾಲೆಯಂತೆ ಕುಚತಟದೊಳ್ ಕಂಠಮಾಲೆ ಲೀಲೆವಡೆಯೆ (ರಾಜಶೇ. ೫-೦೯ ವ). [ಲೀಲೆ + ಪಡೆ$_1$]

**ಲೀಳಾವತಿ** 'ಲೀಲಾವತಿ' ನೋ.

**ಲೀಳೆ** 'ಲೀಲೆ' ನೋ.

**ಲುಂಗ** (ನಾ). ಒಂದು ಬಗೆಯ ಮರ ಮತ್ತು ಅದರ ಹಣ್ಣು; ಮಾದಲ ; ಮಾತುಲುಂಗ : ಕಕುಭಾಶೋಕಕದಂಬಲುಂಗಲವಲೀ ಭೂಜಾರ್ಜುನಾನೋಕಹಪ್ರಕರಂ (ಸುಕುಮಾ. ೫-೯೦) ; ತುಲಸಿಯ ಲುಂಗ ಕಷಾಯದ ಜಲದೊಳ್ ಗೋವನಧಿಕಬೂದಿಯ ಜಲದೊಳ್ ಕಟವೆಯ ಸಮನಿಸು ತಾಂ ಮೊಸರೊಳೆ ಮೇಣ್ ಕಲಸಿದೊಡೆ ಪಲವು ದಿವಸಂ ನಿಲ್ಕುಂ (ಲೋಕೋಪ. ೬-೩); ವಟಕುಟಜ ಲವಂಗ ಲುಂಗ ಮಾತುಲುಂಗ . . . ಬಿಲ್ವಾಶ್ವತ್ಥಾದಿ ವೃಕ್ಷಂಗಳು ಸುಮನಸಭರಿತವಾಗಿ ಶೋಭಿಸುತಲಿತ್ತು (ಕುಮಾ. ೯೬). [ಸಂ.]

**ಲುಂಗಿ** (ನಾ). ಗಂಡಸರು ಸೊಂಟಕ್ಕೆ ಸುತ್ತಿಕೊಳ್ಳುವ ನಾಲ್ಕು ಮೊಳದ ವಸ್ತ್ರ; ಲಪಾಟಿ : ಅಲ್ಲಿ ಎಲ್ಲರೂ ಲುಂಗಿ ಸುತ್ತುತ್ತಾರೆ (ಕುಂಹಿಂ. ೨೦) ; ಪಚ್ಚೆಗೆ ಮುಖಕ್ಕೆ ಚಿತ್ರವಿಚಿತ್ರ ಬಣ್ಣ ಬರೆದು ಒಂದು ಲುಂಗಿಯನ್ನು ಉಡಿಸಿ (ಮೇದಿಹ. ೦೦೦). [ ←ಪಾರ. ಹಿಂ. ಮರಾ. ಲುಂಗೀ].

**ಲುಂಚನ** (ನಾ). ಕೀಳುವುದು ; ಕಿತ್ತು ತೆಗೆಯುವುದು : ಕೇಶಲುಂಚ ನಾನಶನಾತಪಸ್ಥಾನಾದಿ ಶರೀರಪೀಡಾಕರಮಪ್ಪ ತಪೋನುಷ್ಠಾನದೊಳಂ (ಕಕ್ರ. ೨೬೦). [ಸಂ.]

**ಲುಂಚೆ** (ನಾ). ಒಂದು ಬಗೆಯ ಮರ ; "ಹೆಂಡ ಇಳಿಸುವ ಮರ" (ಶ್ರಶಬ್ದ) : ಕರಿಯ ಸೀಗೆಯ ತಾಳ ಲುಂಚೆಯಿಂಚಲ ಸಕಲತರು ಧಾನ್ಯದಿಂದಾದ ಮದ್ಯಮಂ ಕುಡಿಕುಡಿದು ಮರುತಹತಿಯಿಂದ ಚಾಂಡಾಳಿ ಸುವ ಚಿತ್ತೈಯನರಸ ನೋಡುತ ಬಂದನು (ಹಕಗ. ಹಂ. ೨೦೦). [ ? ]

**ಲುಂಟಾಕ$_1$** (ನಾ). ೧. ಕದಿಯುವುದು ; ಅಪಹರಣ: "ಲುಂಟಾಕಮೆನಲಲ್ಲಿ ನೆಗಪುವುದಕ್ಕುಂ" (ಕಚಕ. ೭೩). ೨. ಕದಿಯುವವನು ; ಕಳ್ಳ; ತಸ್ಕರ : ಗೆಂಟಲಾಱುತ ಸೋರಿ ಬರಿದಂಗದಲಿ ರಕ್ತ ಟೆಂಟಣಿಸುತ ಪೋಗಿ ಪೊಗಲು ಎಂಟಂಗವೆಲ್ಲ ಕತ್ತರಿಸಿ ಬೀಳಲು ಬೀಳ್ವ ಲುಂಟಾಕ ವೈತರಣಿಯೊಳು (ಚರೇಶ. ೬-೯೬). ೩. ಕಾಗೆ. [ಸಂ.]

**ಲುಂಟಾಕ$_2$** (ನಾ). ಎರಡು ಬೆಟ್ಟಗಳ ಮಧ್ಯದ ಪ್ರದೇಶ: "ಲುಂಟಾಕ = ಗುಡ್ಡದ ಭೂಮಿ" (ಗುಂಪೋ. ೦೦೭) ; ''ಲುಂಟಾಕಮೆನಲೆರಡು ಬೆಟ್ಟಗಳ ಮಧ್ಯಕೆ ಪೆಸರ್" (ಕಶರ. ೯೬). [?]

**ಲುಂಟಾಕಿನಿ** (ನಾ). ನಿವಾರಿಸುವವಳು ; ಹೋಗಲಾಡಿಸುವವಳು : ಪರಿಪೂತನಾಕಿನೀ ಪಾಪಲುಂಟಾಕಿನೀ ಸುರಭಿದವಲೋಕಿನೀ ಪೂರ್ವಮಂದಾ ಕಿನಿಯೆನುತಿರ್ದರು (ವೀಕೃಶು. ೩-೨೩-೭೯). [ಸಂ. ಲುಂಟಾಕಿನೀ]

**ಲುಂಠನ** (ನಾ). ದರೋಡೆ ; ಲೂಟಿ : ಮಹಮ್ಮದನ ಸೈನ್ಯದಲ್ಲಿ ಹೆಚ್ಚು ಹೆಚ್ಚಾಗಿ ಲುಂಠನಪ್ರಿಯರು ಬಂದು ಸೇರಿಕೊಂಡರು (ಭಾಇಶ್ರ. ೩೦೭).

[ಸಂ.]

**ಲುಂಠನಕಾರಿ** (ನಾ). ಸುಲಿಗೆಮಾಡುವವನು ; ದರೋಡೆಗಾರ; ಕಳ್ಳ : ಅವನು ಅಷ್ಟಿಷ್ಟು ದಂಡನ್ನು ಕಟ್ಟಿಕೊಂಡು ಲುಂಠನಕಾರಿಯಾಗಿ . . . ಪ್ರಸಿದ್ಧಿಗೆ ಬಂದನು (ಕಗದ್ಯ. II, ೨೬); ಕೃಷಿಜೀವಿಗಳೂ, ಶಿಲ್ಪೋಪಜೀವಿ ಗಳೂ, ವರ್ತಕರೂ ದುರ್ವೃತ್ತರಾದ ಲುಂಠನಕಾರಿಗಳ ಕೃಪಾಧೀನರಾದರು (ಅಯೇಕ. ೦೯೦). [ಸಂ. ಲುಂಠನಕಾರಿನ್]

**ಲುಂಠಾಕ** (ನಾ). ೧. = ಲುಂಠನಕಾರಿ. ೨. ನಾಶಮಾಡುವವನು: ನಿನ್ನಂಶಾಂಶದವತಾರಮೂರ್ತಿಯಿಂ ಲೋಕಲುಂಠಾಕರನಾವ ಪದದೊಳ್ ಮಡಿಯಿಸಲ್ವೇಡಿರ್ದಪುದವರವರಸಂತಂತೆ ಮಡಿಯಿಪುದು (ಜಗಪ. ೬-೬೩ ವ).

[ಸಂ.]

**ಲುಂಠಿಸು** (ಕ್ರಿ). ೧. ಸೂರೆಮಾಡು ; ಕೊಳ್ಳೆಹೊಡೆ : ವೀರಭದ್ರದುರ್ಗದ ನೆರವಿಂ ಗೆಂಟಿಪ ಡೆಂಕಣಿಕೋಂಟೆಯನಂಟಿಸಿಯಾ ರಾಯಗೋಂಟೆಯಂ ಲುಂಠಿಸಿದಂ (ಕಳಪ. ೨-೦೨೯). ೨. ನಾಶಮಾಡು: ರವಣಗೆಯ್ದವನ ಕಂಠವ ಲುಂಠಿಸಿದ ಕಂಠೀರವಮೂರ್ತಿಗಾನೆರಗುವೆನು (ಕಕಾಂ. ೭೦-೫೯).

[ಲುಂಠನ + —ಇಸು$_1$]

**ಲುಂದು$_1$** (ಕ್ರಿ). ೧. ಮಲಗು : ಇರುಳ್ ಕಳ್ಳರ್ ಮಂದಾಕಿಯ ಲುಂದಿದ[ಪಾಠಾಂ. ನಿದ್ರೆಗೆಯ್ದ] ಮನೆಯೊಳ್ ಕನ್ನಮಿಕ್ಕಿದೊಡೆ (ಶಬ್ದಾಶಾ. ೦೯-೨) : ಕಾರ್ತಿಕಮಾಸದ ಪುಣ್ಣಮಿಯಂದು ಸುಖದಿಂದೆ ಲುಂದಿರ್ದಂ [ಪಾಠಾಂ. ಉಂದಿರ್ದ್ದಂ, ಪಟ್ಟಿರ್ದಂ, ಪಟ್ಟಿರ್ದೊಂ] (ಶಬ್ದಾಶಾ. ೨೬-೭). ೨. ಸಂಭೋಗಿಸು : ಮೇಲ್ವಾಯ್ದು ಮೇವೈಸಿಯುಂ ಬರಿದುಂ ಲುಂದುವ ಬೇಟದೊಂದು ಸುಸಿಲುಂ ನೋಯಿಕ್ಕುಮಾಱಕ್ಕುಮುಗ್ಗಲಿಕ್ಕುಂ (ಅದಿಪು. ೦೨-೨೯). 'ಮಱಲುಂದು' ಪರಾ.

**ಲುಂದುಪೋವರಿಗೆ**=ಮಲಗುವ ಕೋಣೆ; ಶಯ್ಯಾಗೃಹ: ಸರ್ವರುಜಾಪಹಾರಮೆಂಬ ಹಾರಂ ಸಂತತಿಯಿಂ ವಾಮರಥಂಗೆ ಬಂದುದಂ ವಾಮರಥಂ ಕರುವಾಡದೇಟನೆಯ ನೆಲೆಯೊಳ್ ತನ್ನ ಲುಂದುಪೋವರಿಗೆಯ [ಶಾಶಾಂ. ಪವಡಿಪೋವರಿಯುಲ್] ಪುಡಿಕೆಯೊಳಿಟ್ಟು (ವಡ್ಡಾರಾ. ೦೨೩-೯).

**ಲುಂದು₂** (ನಾ).೧. ಮಲಗುವಿಕೆ. ೨. ಸಂಭೋಗ: ಬಳಸುವ ಬೇಟದೊಳ್ ಮೊಳೆಪ ಗೊಟ್ಟೆಯೊಳೇರೆಲೆವೋದ ಲುಂದಿನೊಳ್ ಬಳೆದ ವಿಯೋಗದೊಳ್ . . . ಗೊಲೆಗೊಂಡ ಬೇಟಂ (ಅರಿಪು. ೦೨-೨೦); ಅಮರ್ದಿನ ಧಾರೆಯಂತೆ ನುಡಿಯಿಂಪಮರ್ದಂ ತಳಿದಂತೆ ಸೋಂಕಿನಿಂಪಮರ್ದಿನ ಪೂರದಂತೆ ಪದದಿಂಪಮರ್ದಂ ಕುಡಿವಂತೆ ಲುಂದಿನಿಂಪಮರ್ದೊಡಮೇನಗಲ್ಕೆ ಮುಳಿಸಂಬೆರಡುಂ ಗಡ ಕಾಳಕೂಟಮಾಗಮರ್ದಿನ ಕಾಳಕೂಟದೊಡವುಟ್ಟಿದಳೆಂದಪೆನೆನ್ನ ನಲ್ಲಳಂ (ಅರಿಪು. ೦೨-೨೭). [< ಲುಂದು₁]

**ಲುಂಬಾಳಕಾರಿ** (ನಾ). ಒಂದು ಬಿರುದು (?) : ಸಕಳಸಾಮಂತಲಕ್ಷ್ಮೀಕಾಂತಲಂಬಲುಂಬಾಳಕಾರಿನಿಲುಂ ಬೀರಚಂದ್ರಿಕಾಚಂದನತಿಳಕ (ಎಕ. VI. ಕಡೂರು. ೩೫-೪೭ ; 1136). [ ? ]

**ಲುಕಸಾನ** 'ಲುಕ್ಸಾನು' ನೋ.

**ಲುಕಸಾನು** 'ಲುಕ್ಸಾನು' ನೋ.

**ಲುಕಸಾನೆ** 'ಲುಕ್ಸಾನು' ನೋ.

**ಲುಕುಸಾನು** 'ಲುಕ್ಸಾನು' ನೋ.

**ಲುಕ್ಸಾನ** ' ಲುಕ್ಸಾನು ' ನೋ.

**ಲುಕ್ಸಾನು,** ನುಕಸಾನಿ, ನುಕಸಾನು, ನುಕ್ಸಾನು, ಲುಕಸಾನ, ಲುಕಸಾನು, ಲುಕಸಾನೆ, ಲುಕುಸಾನು, ಲುಕ್ಸಾನ (ನಾ). ನಷ್ಟ ; ಹಾನಿ : ತಮಗೆ ಬಹಳ ಲುಕ್ಸಾನು ಆಯಿತು (ರಾಶೇಂದ್ರ. ೬೪). **ನುಕಸಾನಿ :** ಹೀಗೆ ಮಾಡೋಣದರಿಂದ ಸುಮ್ಮನೆ ನುಕಸಾನಿ ಆಗುವ ಸಂಭವವಿರುತ್ತದೆ (ಮುಂಬಿಪ್ರ. ೩೩). **ನುಕಸಾನು :** ಸರಕಾರೀಕಂದಾಯದಲ್ಲಿ ಶೇಕಡಾ ಮೂವತ್ತರಂತೆ ಸರಕಾರಕ್ಕೆ ನುಕಸಾನು ಬಂತು (ಕಡಾಗ. ೩೬೭). **ನುಕ್ಸಾನು:** ವ್ಯಾಪಾರದಲ್ಲಿ ಬಹಳ ನುಕ್ಸಾನು ಆಯಿತು (ರೂಢಿ). **ಲುಕಸಾನ :** ಇದರ ದೆಸೆಯಿಂದ ವರ್ತಕರಿಗೆ ಲುಕಸಾನವಾಗಿ ಬಹಳೇ ಖೇದವಾಗುತ್ತದೆ (ಮುಂಬಿಪ್ರ. ೭ ಪ್ರಸ್ತಾವನೆ). **ಲುಕಸಾನು :** ಐಂದಾ ಸಾಗುವಳಿ ಆಗತಕ ಲುಕಸಾನು (ಮ್ಯಾಆರ್. ೦೯೩೮, ೨೦-೯; 1817); ಇದರ ಲುಕಸಾನು ಸರ್ವನಾಶ (ಹಿಂದ. I. ೪೯೪). **ಲುಕಸಾನೆ :** ಶಿರಪಣಿಂದ ಯಾವನಾದರೊಬ್ಬನಿಗೆ ಲುಕಸಾನೆಯಾಗಿದ್ದರೆ, ಆ ಲುಕಸಾನೆ ಹೊಂದಿದವನು . . . ಫಿರ್ಯಾದಿ ಮಾಡಬಹುದಾಗಿತ್ತು (ಇಂಗ್ಲಂಡ. ೩೫). **ಲುಕುಸಾನು :** " ಲುಕುಸಾನು _ ನುಕುಸಾನು, ಹಾನಿ" (ಶಾವಕೋ. ೪೩). **ಲುಕ್ಸಾನ :** ವಿಷ್ಯಯದ ಲಾಭ ಲುಕ್ಸಾನವನೆ ಬಲ್ಲನು (ಶದಾವ. ೦೫೫-೭).

[ ←ಅರ. ನುಕ್ಸಾನ್; ಹಿಂ. ಮರಾ. ಲುಕ್‌ಸಾನ್, ನುಕ್‌ಸಾನ್]

**ಲುಚ್ಚ** ' ಲುಚ್ಚಾ ' ನೋ.

**ಲುಚ್ಚತನ** ' ಲುಚ್ಚಾತನ ' ನೋ.

**ಲುಚ್ಚಾ,** ಲುಚ್ಚ, ಲುಚ್ಛಾ (ಗು). ೧. ಕೀಳಾದ ; ಯೋಗ್ಯವಲ್ಲದ ; ಅಲ್ಪ ; ಹೀನ : ಈ ಲುಚ್ಚಾ ಸೂಳೆಮಗನ ಮಾತು ನಂಬಿಕೊಂಡಲ್ಲೇ ಈಗೆಲ್ಲಾ ರಾಮರಕ್ಷಿಯಾಗಿ ಕೂತೇದ (ತಿಮ್ಮ. ೪೦); ಲುಚ್ಚಾಜನರ ಸಹವಾಸ ಮಾಡಿ ಆತ ಹಾಳಾದ (ರೂಢಿ). (ನಾ). ೨. ದುರಾಚಾರಿ ; ದುಷ್ಟ ; ದುರ್ವ್ಯಸನಿ : ಭುಜನೀಮಹಮ್ಮದನೂ ಟಿರಂಗಜೇಬನೂ ಲುಚ್ಚಾಗಳು ದುಷ್ಟರು ಅಂತ ಬೈತಾನೆ (ಸ್ವಾಮಿಸ್ಮೀ. ೦೩೦). **ಲುಚ್ಚ :** ೧. ಅವಳು ರಂಗಭೂಮಿಯ ಮೇಲೆ ಬಂದಾಗ ತನ್ನ ಪಕ್ಷದವರು ಲುಚ್ಚಮಾತುಗಳನ್ನಾಡಿ ಚಪ್ಪರಿಸಿದಾಗ ತಾನು ಗದರಿಸಲಿಲ್ಲವೆ? (ರಂಗಪ. ೫). ೨. ಇಚ್ಛಾಗಳಗಾತಿ ತಾಯಮ್ಮ ಇದ್ದಾಗ ಲುಚ್ಚವರ ಸಂಗ ನಮಗೇನು (ತಬ್ಬಲಿ. ೭೩); ಮೈಗಳ್ಳ, ಕಳ್ಳ, ಲುಚ್ಚನೆಂಬ ಪದವಿಗಳೇ ಅವನಿಗೆ ದೊರೆತವು (ಕಪಿಂಬ. ೫೭). **ಲುಚ್ಛಾ :** ೧. ಗಂಧರ್ವಭಾಷೆಯಲ್ಲಿ ಆಡದ ' ಲುಚ್ಛಾ' ಮಾತುಗಳಿಲ್ಲ (ಶಾಂಪ್ರವು. ೨೭); ಲುಚ್ಛಾ ಜನ ನೀವು (ಶಾಹೇಶ್. ೪೪೪).

[← ಪಾರ. ಹಿಂ. ಮರಾ. ಲುಚ್ಚಾ]

**ಲುಚ್ಚಾಗಿರಿ** (ನಾ). ಅಲ್ಪತನ ; ಕೀಳುತನ : ಈ ಸಣ್ಣ ವಿಚಾರಕ್ಕೆ ಲುಚ್ಚಾಗಿರಿ ತೋರಿಸಬೇಡ (ರೂಢಿ). [ಲುಚ್ಚಾ + —ಗಿರಿ₂]

**ಲುಚ್ಚಾತನ,** ಲುಚ್ಚತನ (ನಾ). ೧. ಕೀಳುತನ ; ಹೀನಬುದ್ಧಿ : ಅವನ ಲುಚ್ಚಾತನದಿಂದಾಗಿ ಅವನ ನೆಂಟರಿಷ್ಟರೆಲ್ಲ ದೂರವಾದರು (ರೂಢಿ). ೨. ಪೋಕರಿತನ ; ಸ್ವೇಚ್ಛಾಚಾರ : (ಕ). **ಲುಚ್ಚತನ :** ೧. ವಿನೋದ ಮಾಡಿದರೆ . . . ವಿನೋದ ! ವಿಕೃತಕಾಮ ! ಲುಚ್ಚತನ ! (ರಂಗಪ. ೦೭೩). [ಲುಚ್ಚಾ + —ತನ]

**ಲುಚ್ಛಾ** ' ಲುಚ್ಚಾ ' ನೋ.

**ಲುಟಾಯಿಸು** (ಕ್ರಿ). ಲೂಟಿ ಮಾಡು ; ಕೊಳ್ಳೆಹೊಡೆ ; ದೋಚು : ನಿಮ್ಮ ಸೀಮೆ ಯಾವತ್ತೂ ಲುಟಾಯಿಸಿ, ಆಕ್ರಮಿಸಿಕೊಳ್ಳುತ್ತೇವೆ (ರಾಶೇಂದ್ರ. ೪೩) ; ವರ್ತಕರಿಂದ ತೆರಿಗೆಗಳನ್ನು ಎತ್ತುತ್ತಲೂ . . . ಅವರ ಭಂಡಸಾಲೆಗಳನ್ನು ಲುಟಾಯಿಸುತ್ತಲೂ ಇದ್ದರು (ದಕಹ. ೦೯).

[ಲುಟಾ₀ (p ← ಹಿಂ. ಲುಟನಾ = ಲೂಟಿಯಾಗು) + — ಇಸು₃]

**ಲುಟುಲುಟು** (ನಾ). ಒಂದು ಅನುಕರಣ ಶಬ್ದ : ಅಡವಿಯಿಂದ ಮನೆಗೆ ಹೋಗುವಾಗ ಲುಟುಲುಟು ಹೆಜ್ಜೆಹಾಕುವ ಆಕಳ ಕರುವಿನಂತೆ ನೀನು ಹೀಗೇಕೆ ಓಡತೊಡಗಿದ್ದೀಯೆ (ಕುಗಸೋ. ೦೪೭) ; ಲುಟುಲುಟು ಹೆಜ್ಜೆ ಹಾಕುತ್ತ ಸಮೀಪದ ಪುಸ್ತಕದ ಅಂಗಡಿಯಲ್ಲಿ ಕುಳಿತು . . . ಪತ್ರ ಬರೆದು ಬೀದಿಯ ಮಗ್ಗುಲಲ್ಲಿರುವ ಟಪಾಲುಡಬ್ಬಿಯಲ್ಲಿ ಒಗೆದುಬಿಟ್ಟ (ಮುಕ್ತ್ಯರ-೭೯).

**ಲುಠನ** (ನಾ). ೧. ಹೊರಳುವಿಕೆ ; ತಿರುಗುವಿಕೆ. ೨. ತಿರುಗುಮುರುಗು ; ತಲೆಕೆಳಗು. [ಸಂ.]

**ಲುಠಿತ** (ಗು). ೧. ಹೊರಳಿದ ; ತಿರುಗಿದ. (ನಾ). ೨. ಹೊರಳಾಡುವ ಕುದುರೆ : "ಉಪಾವೃತ್ತಃ, ಲುಠಿತಃ — ೨ . . . ನೆಲದಲ್ಲಿ ಬಾರಿಬಾರಿಗೂ ಬಿದ್ದು ಹೊರಳಾಡಿದ ಕುದುರೆಯ ಹೆಸರು" (ಸಿದ್ಧಾಂತ. ೨೫೦). [ಸಂ.]

**ಲುಪ್ತ** (ಗು). ೧. ಬಿಟ್ಟ ; ತಿರಸ್ಕರಿಸಿದ. ೨. ಕರಗಿದ. ೩. ಕಾಣದೆ ಹೋದ ; ಮರೆಯಾದ : ಗುಣಲುಪ್ತಪ್ರಮುಮಚಿತ್ತಂ ಪ್ರಳಯದೂರಂ . . . ವಿಕಲ್ಪಿತನು (ಬಸವು. ೯-೩). ೪. ಕಳವು ಮಾಡಿದ ; ದೋಚಿದ. ೫. ಇಲ್ಲವಾದ ; ಲೋಪವಾದ : ' ಲುಪ್ತೋಪಮೆ ' ಪರಾ. (ನಾ). ೬. ಕೊರತೆ ; ಕುಂದು ; ಊನ : ಕ್ಲಪ್ತಮೆನಿಸುವ ರಾಜಭೋಜ್ಯದೊಳಗಾವುದಂ ಲುಪ್ತಮಾಗದವೊಲಾರೋಗಣೆಯನ್ನೆದೆ ಲೋಲುಪ್ತಿಯಿಂ ಮಾಡುತಿರ್ದಂ (ಕೃಹಿಬಾ. ೭-೪೫). ೭. ಮರೆಯಾಗುವಿಕೆ ; ಕಾಣದಾಗುವಿಕೆ ; ಅದೃಶ್ಯ : ನಾನಾಸಂಪ್ರದಾಯಗಳು ಲುಪ್ತವಾಗಿವೆ (ಮುಕ್ಕಾರ. ೦೨೦ ೩೬೮೪) ; ಲುಪ್ತವಾದ ಭಾರತೀಯಕ್ಷಾತ್ರತೇಜವನ್ನು ಮರಳಿ ಪ್ರಖರಗೊಳಿಸುವ ಉದ್ದೇಶವಿರಲಿಕ್ಕೆ ಬೇಕು (ಕರ್ನಾಟ. ೪೨೪). ೮. ಕಳವುಮಾಲು; ಕದ್ದ ವಸ್ತು : "ಅಪಹೃತಂ, ಲುಪ್ತಂ— ಈ ೨ ಕಳ್ಳೊಡವೆ'' (ಚಲಾಯು. ೫೭-೦೯೪). [ಸಂ.]

**ಲುಪ್ತಪಿಂಡ** (ನಾ). ಪಿಂಡಪ್ರದಾನಕ್ಕೆ ಯಾರೂ ಇಲ್ಲದಿರುವವನು,— ವಾರಸುದಾರನಿಲ್ಲದವನು : ನೀನು ಲುಪ್ತಪಿಂಡ ಆಗಿ ಸಾಯಿ (ಗಂಪತಾಯಿ. ೦೦೭). [ಸಂ.]

**ಲುಪ್ತಿ** (ನಾ). ಇಲ್ಲದಾಗುವಿಕೆ ; ಕಾಣದಾಗುವಿಕೆ : ವ್ಯಕ್ತಿ ಲುಪ್ತಿಗಳು ಮಾನವಪ್ರಕೃತಿಯ ಯಾವ ನಿಗೂಢವಾದ ವಿಶೇಷತೆಯೊಡನೆ ಸಂಬಂಧವಾದವು ಎಂಬುದನ್ನು . . . ನಿರ್ಣಯಮಪಾಡಲಾಗಿಲ್ಲ (ಹಿಂದ. II. ೨೦).

[<ಲುಪ್ತ]

**ಲುಪ್ತೋಪಮೆ** (ನಾ). [ಕಾವ್ಯಮೀ] ಉಪಮೆಯಲ್ಲಿ ಒಂದು ಬಗೆ ; " ಉಪಮಾನ ಉಪಮೇಯ ಸಾಧಾರಣಧರ್ಮ ವಾಚಕ ಶಬ್ದ ಇವುಗಳಲ್ಲಿ ಒಂದಾದರೂ ಕೆಲವಾದರೂ ಸ್ಪಷ್ಟವಾಗಿ ಉಕ್ತವಾಗದಿರುವ ಸಾದೃಶ್ಯಕ್ಕೆ ಲುಪ್ತೋಪಮೆಯೆಂದು ಹೆಸರು " (ಕೃಶಬ್ದ. ೨೫೭) : ಉಪಮೇಯಂ ಉಪಮಾನಂ ಸಮಾನಧರ್ಮಂ ಉಪಮಾವಾಚಕಪದಂ ಎಂಬೀ ನಾಲ್ಕುಱೊಳ್ ಒಂದನಾದೊಡಮೆರಡನಾದೊಡಂ ಮೂಱನಾದೊಡಂ ಪೇೞದಿರೆ ಲುಪ್ತೋಪಮೆಯೆನಿಪುದು (ಅಪ್ರತಿ. ೩೪). [ಸಂ.ಲುಪ್ತೋಪಮಾ]

**ಲುಬ್ಧ** (ಗು). ೧. ಆಸೆಯುಳ್ಳ ; ಬಯಕೆಯುಳ್ಳ. ೨. ಅತಿಯಾಸೆಯ ; ಲೋಭತನದ : ದಾನಂ ದುರ್ಬಲಲುಬ್ಧಪ್ರಸ್ತುತಂ(ಶಾಂತಿಪು.೩-೯೩ ವ). (ನಾ). ೩. ಅತಿಯಾಸೆಯುಳ್ಳವನು ; ಲೋಭಿ ; ಜಿಪುಣ : "ತೃಷಕಃ, ಗರ್ಧನಃ, ಗೃಧ್ನುಃ, ಲಿಪ್ಸುಃ, ಲುಬ್ಧಃ, ಅಭಿಲಾಷುಕಃ — ಈ ೬ ಕಾಂಕ್ಷಿತಂ" (ಹಲಾಯು. ೬೦-೨೦೬) ; ಚನ್ನಮಾದೊಡಂ ಗುಣಮಿಲ್ಲದಾತಂಗೆ ಲುಬ್ಧನ ಧನದಂತೆ ವಿಫಲಮಕ್ಕು (ಪುದತಿ. ೦೦-೨೪) : ಡಿಂಗಿರಾತ ಬಲಗುಪ್ತರು ಅತಿಲುಬ್ಧರು (ರಾಜ್ಞಪು. ೫೨). ೪. ಬೇಟೆಗಾರ; ಬೇಡ. [ಸಂ.]

**ಲುಬ್ಧಕ** (ನಾ). ೧. ಅತಿಯಾಸೆಯುಳ್ಳವನು ; ಲೋಭಿ ; ಜಿಪುಣ. ೨. ಬೇಟೆಗಾರ ; ಬೇಡ : " ಮೃಗಯುಃ, ಲುಬ್ಧಕಃ, ವ್ಯಾಧಃ, ವಾಗುರಿಕಃ – ಈ ೪ ಮಾವುಲಿಗಂ " (ಹಲಾಯು. ೬೬-೯೪೨) ; ಲುಬ್ಧಕಾರಣ್ಯಚರಪುಲಿಂದಶಬರಾದಿಪರಿರಕ್ಷಿತಾಂತರಾಲದೇಶಂಗಳುಂ (ಆದಿಪು. ೬-೬೩ ವ) ; ವನಮರ್ದಿರ್ದನೊ . . . ಕಟ್ಟಿಲೆಯ ಮೊತ್ತಮಿದೆಂಬನಮೊರ್ವ ಲುಬ್ಧಕಂ (ಪುಷ್ಪದಂ. ೫-೯೪). ೩. [ಜ್ಯೋತಿ] ಇಪ್ಪತ್ತೇಳು ನಕ್ಷತ್ರಗಳಲ್ಲಿ ಆರನೆಯದು ; ಆರ್ದ್ರ : " ಆರ್ದ್ರಾ, ಲುಬ್ಧಕಃ — ಈ ೨ ಆರ್ದ್ರ (ನಕ್ಷತ್ರದ ಪೆಸರ್)" (ಹಲಾಯು. ೯-೯೪) ; " ಕೃಪಣಂ ಶಾಬರರಾರ್ದ್ರ ಲುಬ್ಧಕಮೆನಿಕ್ಕುಂ" (ನಾನಾರ. ೧೨೬). [ಸಂ.]

**ಲುಬ್ಧತ್ವ** (ನಾ). ಅತಿಯಾಸೆ ; ಜಿಪುಣತನ. [ಸಂ.]

**ಲುಲಾಯ** (ನಾ). ಕೋಣ : "ಮಹಿಷಃ, ಸೈರಿಭಃ, ರಕ್ತಾಕ್ಷಃ, ಕಾಸರಃ, ಲುಲಾಯಃ – ಈ ೫ ಕೋಣಂ" (ಹಲಾಯು. ೬೯-೭೯); ಭೀಕರತರಮಾಯ್ತುಭಂವಿಲಯಕಾಲಕರಾಳಲುಲಾಯಸನ್ನಿಭಂ (ಚಂದ್ರಪ್ರ. ೧೦-೯೬) ; ಪೃಥುಳಕಂಧರ ಮೃಗಲುಲಾಯ ರಿತುಮಹಿಷೆಗಳ ನಡುವಿರ್ದುದು (ಪಶಾ. ೫-೩೯). [ಸಂ.]

**ಲುಲಾಯಚ್ಛವಿಕ** (ನಾ). ಕೋಣದ ಬಣ್ಣವುಳ್ಳುದು ; ಅತಿಕಪ್ಪು : ದಹನಬಹಳಧೂಮಂ ಯಮೋಚ್ಚೈಃರ್ಲುಲಾಯಚ್ಛವಿಕಂ ಕೃಷ್ಣಾದ ಕಾಯದ್ಯುತಿ . . . ಪರ್ಬಿತ್ತಿನೆ ದೆಸೆದೆಸೆಯಂ ಮುರ್ಬ್ಬು ಪರ್ಬಿತ್ತುಗುರ್ಬಿಂ (ಲೀಲಾವ. ೧೦-೨೭). [ಸಂ.]

**ಲುಲಿತ**, ಲುಳಿತ (ಗು). ೧. ಅಲುಗಾಡಿದ ; ಅಲ್ಲಾಡಿದ ; ಕಂಪಿಸಿದ. ೨. ಕೆದರಿದ ; ಅಸ್ತವ್ಯಸ್ತಗೊಂಡ. ೩. ಚಿಮುಕಿಸಿದ ; ಸಿಂಪಡಿಸಿದ. ೪. ತೊಟ್ಟಿಕ್ಕಿದ ; ಹನಿಸಿದ : ಮನ್ಯುಗದ್ಗದಕಂಠೆಯುಮಶ್ರುಜಲಲುಲಿತಲೋಚನೆಯುಮಾದ ಜಾನಕಿಗೆ ಹನುಮನಿಂತೆಂದಂ (ಪಂಪಾರಾಮಾ. ೧೦-೧೦೦ ವ) ; ಲುಲಿತಜಲಲವಲಲಿತನವಜಲರುಹದಳವಿಸರಲಸಿತವಿಮಳಮರಾಳಾವಳಿಕಲಿತ . . . ಮಂದಮಾರುತಮಹಿತಂ (ರಾಜಶೇ. ೦೦-೬೩). ೫. ಚೆಲುವಾದ ; ಅಂದವಾದ : ಲಲಿತಮಾಗೆಸೆವ ಭಾವಳಿಯ ಪಾತ್ರಂ ಮಾಡಿ ಲುಲಿತವಿಷಯುಪದಾರ್ಥನಿಕರಮಂ ಬೈತದಱೊಳೊಲವಿನಿಂ ಪ್ರಾಣಲಿಂಗಕ್ಕೆ ಕೊಟ್ಟಾ ಪ್ರಸಾದಮನುಂಡು (ಅರಾತ. ೦-೦-೦೦೦). **ಲುಳಿತ** : ಎ. ನಂದನಾವಳಿಗಳಂ ಬಳಸಿರ್ಪ ಮದಾಳಿಸಂಕುಲಂಗಳ್ ವಿಷಯಾಂಗನಾಲುಳಿತಕುಂತಳದಂತೊಪ್ಪೊಲೊಪ್ಪಿ ತೋಱುಗುಂ (ಶಂಕರಾ. ೦-೫೩) ; ಸುವರ್ಣಕುಂಭಯುಮಳಮಂ ತರಳತರತರಂಗಲುಳಿತ ಲಲಿತಫೇನಪಿಂಡಮಂ (ಶರ್ಧಪಖ. ೦೦-೫೪ ರಗಳೆ). ೨. ಚಿತ್ರರಥನಂದನೆ ತುರಗಖುರಲುಳಿತ . ಧೂಳೀಧೂಸರಮಪ್ಪ ಭವದ್ಗಮನಮಾರ್ಗಮಂ ನೋಡುತ್ತಮಿರ್ದ್ದ (ಕಾದಂಬ. ೨೦೦). ೩. ಮಲಯಜರಸಲುಳಿತ ನಳಿನೀದಳಾವಕುಂಠಿತಮಾದ ಮೆಲ್ಲೆರ್ದೆಯೊಳಮೋರೊರ್ವ ಕಳವಳಿಸಿ (ಕಾದಂಬ. ೯೨೬). ೪. ಆನಂದಬಾಷ್ಪಜಲಲುಳಿತನೇತ್ರನಾಗಿ (ಜಗ. ೩-೨೩ವ) ; ಪ್ರಮೋದಬಾಷ್ಪಜಲಲುಳಿತನಯನಪಾಳೀನನುಮಾಗಿ (ಚಂದ್ರಪ್ರ. ೨-೦೦೬). (ನಾ). ೬. ಅಲ್ಲಾಡುವುದು ; ಅಲುಗಾಟ ; ಕಂಪನ : "ಪ್ರೇಂಖೋಳಿತಂ, ತರಳಿತಂ, ಪ್ರೇಂಖಿತಂ, ಲುಳಿತಂ –ಈ ೪ ಅಲ್ಲಾಡುವುದು" (ಹಲಾಯು. ೦೨೩-೭೦). [ಸಂ.]

**ಲುಲಿತಕುಂತಲೆ** (ನಾ). ಅಲುಗಾಡುವ ಮುಂಗುರುಳುಳ್ಳವಳು : ಸ್ಖಲಿತಗತಿ ಲುಲಿತಕುಂತಲೆ ವಲಿತಸುಜಗ್ರೀವೆ ಮಗುಟ್ದು ನೋಡಿದಳೊರ್ವಳ್ (ಆದಿಪು. ೯-೭೬). [ಸಂ. ಲುಲಿತಕುಂತಲಾ]

**ಲುಲಿತಾಳಕಿ**, ಲುಳಿತಾಳಕಿ (ನಾ). = ಲುಲಿತಕುಂತಲೆ : ಅವಳೊಲ್ಲುಡೆಗೆನರಿಯದಿನಿತಿನಿತಂ ಪಳಿಯಲೀಯದಂತೀವುದು ಮನಮಂ ಕಾಣ್ಬುದು ವಿಟಂ ಸ್ಥಿರನಾಗಿ ಲುಲಿತಾಳಕಿ (ಪುದತಿ. ೦೦-೯೬). **ಲುಳಿತಾಳಕಿ** : ಅಳವಿಗಳೆದೆನ್ನ ಮನದುಮ್ಮಳದಿಂ ಪರಿಣತನೆನಿಪ್ಪ ನೈಮಿತ್ತಿಕನಂ ಲುಳಿತಾಳಕಿ ಬೆಸಗೊಳೆ (ಮಲ್ಲಿಪು. ೯-೨೬) ; ಪೂತವನಮಂ ಲುಳಿತಾಳಕಿ ಎಂದು ನೋಡಿದಳ್ (ಪಾರ್ಶ್ವ. ೨-೩೨೬). [< ಸಂ. ಲುಲಿತಾಲಕಾ]

**ಲುಲ್ಲಿ** (ನಾ). ಒಂದು ಬಗೆಯ ಸಣ್ಣಹುಳು : ಸಮುದ್ರದೊಳಗೆ ಲುಲ್ಲಿಯಂತೆ ಮೃದುಶರೀರವುಳ್ಳದ್ದೊಂದು ಜಂತುವಿರುತ್ತದೆ (ಮುಂಬಯಿ. ೫-೨೯). [ ? ]

**ಲುಳಿ**$_1$ (ನಾ). ೧. ರಭಸ ; ವೇಗ : ಮುಂತೆಯ್ದುವ ಕೆಳೆಯಂ ಕೀಳಿನ [ದ] ಲುಗುವ ಡಮರುವನಗ್ಗಿಸಿ ಕೊಡಹುವ . . . ಕೆಂಭಟಿ ನೆರೆದುವು ಬಲದೊಳಗೆ (ಶೀಲೇಶ. ೨-೨೬) ; ಲುಳಿಯ ಬಿಲುವಿದ್ಯಾಚಮತ್ಕೃತಿಯುಳವು ಗರುಡಿಯೊಳಲ್ಲದೀ ರಿಪುಬಲಕೆ ತೋಱಿಸಬಹುದೆ (ಕುಮಾ,ರಾ. ೩-೫) ; ಉರುಕೇಶಬಂಧನಂ ವಿಟಜನಕೆ ಬಂಧನಂ ಕರದ ಲುಳಿ ಕಾಮನಾಟಕಕೆ ಲಳಿ ಲುಳಿ (ಸಮ್ಯಕ್. ೬-೦೩). ೨. ಕಾಂತಿ ; ಹೊಳಪು : ಬಲಿದಿಂಗಲೀಕ ಸುವರ್ಣರೇಖೆಗಳೆ ಲುಳಿಯ ಹಂಗನ ಗಱಿಯ ಬಿಗುಹಿನ ಹಿಳುಕುಗಳ ಹೊಗರಂಬು ಕವಿದವು (ಕುಮಾ,ದ್ರೋ. ೫-೦೩) ; ಸುಳಿವ ಹಸ್ತದ ಜಾತಿ ಭಾವದ ಬಳಿಯಲಾಡುವ ನೋಟ ನೋಟದ ಲುಳಿಯಮೊಲು ತೆಗೆದತ್ತ ತಿರುಗುವ ಕೊರಳು (ಕೃಷ್ಣಶೀ. ೪-೫೬). ೩. ಚುರುಕುತನ ; ಲವಲವಿಕೆ : ಈ ಬಲ್ಮೆಯಾ ಲುಳಿಯಾ ಬಿನ್ನಣಾ . . . ಶ್ರೀಚಿಕದೇವನೊಳ್ ಮೆಱೆಗುಂ (ಚಿಕ. ೪-೦೪೬).

**ಲುಳಿ**$_2$, ರುಳಿ (ನಾ). ಕಾಲಿಗೆ ಧರಿಸುವ ಒಂದು ಬಗೆಯ ಆಭರಣ : ಕಡಗ ಪೆಂಡೆಯ ಕಾಲುಲುಳಿಯ ಮೃಡಶರಣರಿಗುಳಿವುದೆ ಇತ್ತು ರುದ್ರಾಣಿ (ಅಮರಗಾಂ. ೭-೭೯) ; ಪದಕದ ಲುಳಿಯು ರವೆಯದ ಕಂಕಣದ . . . ಪೆಣ್ಗಳ ತಂಡವೆಳಸಿದುದಾರತಿವಿಡಿದು (ಕುರಾಸಾ. ೪೦-೭೭) ; ಭೂರಿಕುಮಾರರುಂಟೆಮಗೆ ಪದಕದಂತೆ ಹಾರದಂದದಿ ಲುಳಿಯಂತೆ (ಕಶೀ. ೯೭-೩೦). **ರುಳಿ** : ಕನ್ಯಾಶಿರೋಮಣಿಯ ಚರಣಗಳಿಗೆಯಂದುಗೆ ಗೆಜ್ಜೆ ರುಳಿದೊಡರನಿಟ್ಟರೊಲಿದು (ಪವಮೋ. ೨೩-೯೨) ; ಕಾಲ ಸರ್ಪಣಿ ರುಳಿ . . . ಜೋಮಾಲಿಗಳು ಇಂಥ ಮೇಲಾಭರಣನಿಟ್ಟು ಲೋಲ್ಯಾಡುತಲಿ ಚೆಲ್ವ ಬಾಲೆಯರು ಬರುವ ವಿಶಾಲವೇನೆಂಬೆನೊ (ಜನಗೀ. ೪೪). [← ಮರಾ. ರುಳೀ]

**ಲುಳಿತ** ' ಲುಲಿತ ' ನೋ.

**ಲುಳಿತಾಲಕ**, ಲುಲಿತಾಳಕ (ನಾ). ಅಲುಗಾಡುವ ಮುಂಗುರುಳು : ಪದದಿಂದಾ ಲುಳಿತಾಲಕಂಬರೆಗ[ಮಂ]ಗೋಪಾಂಗಮಂ ಪಂಚರತ್ನದಿನಂ

ಗೋಚಿತಮಾಗೆ ನಿರ್ಮಿಸಿ (ಶಾಸ. ೫೦-೦೩-೩೬; 1117). **ಉಳಿತಾಳಕ** : ಉಳಿತಾಳಕಜಾಳಮಂ ಕೊಡಂಕೆಗೆ ತೆಗೆದೇಱೆ ನೋಂಕೆ . . . ಒಟ್ಟಿದರಂದು ಕಾಂತೆಯರ್ (ಶಾದಂಕೃ. ೬೦) ; ಸುರಸುಂದರಿಯರ್ನೆಡತಂದರಂದು ಸುಯ್ಗೊಗೆದಳಿವಲೆ ತಮ್ಮ ಉಳಿತಾಳಕದೊಳ್ತಡವಾದುದೆಂಬಿನಂ (ಧರ್ಮಪು. ೦೯-೨೬೬). [ಸಂ. ಉಲಿತಾಲಕ]

**ಉಳಿತಾಳಕ** ' ಉಲಿತಾಲಕ ' ನೋ.

**ಉಳಿತಾಳಕಿ** ' ಉಲಿತಾಲಕಿ ' ನೋ.

**ಉಳಿದಾರ** (ನಾ). ಒಂದು ಬಗೆಯ ಆಭರಣ : ಉಳಿದಾರ ಮುಂಗೈಯ ಮುರಿ ಪೆಂಡೆಯ ತೋಳ ಬಳೆ. . . ಮೆಱೆಯೆ ಬಂಟರ ನೋಡಿ ಕಳುಹಿದ ನಂದು ಕಗ್ಗೊಲೆಗೆ (ಕುಮಾರಾ. ೩೬-೯೩) ; ಉಳಿದಾರ ಕಂಠಿಕೆ ಖಡೆಯ ಪೊಂಗಲು ಹೊನ್ನ ಬಳೆಯುತ್ತರಿಗೆ ಚೆನ್ನಸರವ ಕಳುಪು (ಕುಮಾರಾ. ೧೨-೨೪). [ಉಳಿ$_1$ + ದಾರ$_1$]

**ಉಳಿಮನ** (ನಾ). ೧. ಚುರುಕಾದ ಮನಸ್ಸು. ೨. ಆಸಕ್ತವಾದ ಮನಸ್ಸು : ಹಲವು ವಿಧದರ್ಚನೆಗಳಿಂದಿಷ್ಟಲಿಂಗವಂ ಉಳಿಮನದಿ ಪೂಜಿಸಲು ಮೆಚ್ಚಿದಂ ಗೌರೀಶ (ಚೆಪ್ರಾ. ೦೩-೦೮) ; ನಳಿನರಿಪುಶಾಲಿಯಿದಿ ರೊಳ್ ತೋಱೆ ಕಾಣುತಂ ಉಳಿಮನದಿ ಮೆಯ್ಯಿಕ್ಕಿ ಭಕ್ತಿಯಿಂ ತುತಿಸುತಂ (ಚೆಪ್ರಾ. ೨೪-೨೬). [ಉಳಿ$_1$ + ಮನ]

**ಉಳಿಯಂಬು** (ನಾ). ವೇಗವಾಗಿ ಚಲಿಸುವ ಬಾಣ : ಅರಸ ಚಿತ್ರವಿಸು . . . ಉಳಿಯಂಬು ಕಣಗಲ ಸರಳುಗೂಡಿಪ್ಪತ್ತು ಸಾವಿರವೆರಡುಸಾವಿರ ವೊಳೆದವೀ ಸಾರಾಚನಿಕರದಲಿ (ಕುಮ್ಯಾಳ. ೦೩-೨೦) [ಉಳಿ$_1$ + ಅಂಬು$_2$]

**ಉಳಿಯಾಣ** (ನಾ). ರತ್ನದ ಒಂದು ಬಗೆಯ ದೋಷ (?) : ಆ ಮೂಱಿರೊಳ್ ಬೇಱೆ ಬೇಱೆ ಅಕ್ಕರಿಂ ಧರಿಸಿದವರಿಗೆ ಫಲವ ಪೇಳುವೆಂ ಕರ್ಕರಕೆ ಭಿನ್ನವೆಂದೊಡದು ಹುಟ್ಟಿದುದೆಂದು ಅಕ್ಕಜದ ಮೊರಬು ಉಳಿ ಯಾಣ ಸುನುನಗಳೆಂದು ಪುಟದೋಷಮೆಂದಿರ್ಪುದು (ರತ್ನಶಾ. ೯-೩). [ ? ]

**ಉಳಿವಡಿಸು** (ಕ್ರಿ). ವೇಗಗೊಳಿಸು : ಕಮಲಜನೇಱಿದನ ರಥವ . . . ತುರಗಪ್ರಸರವನು ಬೋಳೈಸಿ ರಥವನು ದೆಸೆದೆಸೆಗೆ ಹೊಳೆಸಿದನು ಉಳಿವಡಿ ಸಿದ ಮಹಾರಥವ (ಕುಮ್ಯಾಳ. ೭-೦೯). [ಉಳಿ$_1$ + ಪಡಿಸು]

**ಉಳಿವಡೆ** (ಕ್ರಿ). ೧. ವೇಗಗೊಳಿಸು : ರಭಸಗೊಳಿಸು : ತುರಗವನು ಬೋಳಯಿಸಿ ವಾಘೆಯ ತಿರುಹಿ . . . ಕೃಷ್ಣ ಪಾರ್ಥನ ರಥವ ಉಳಿವಡೆದ (ಕುಮ್ಯಾಳ. ೩-೨) ; ಬಳಿಕ ಶಾರ್ಙ್ಗ ಮಹಾಧನುವನುಜ್ವಲಿತ ವೂರ್ವಿಯು ನೀವಿ ಬೆರಳಲಿ ಉಳಿವಡೆದು ಬರಸೆಳೆದು ಹೂಡಿದನಾ ಮಹಾಶರವ (ತೊರವೆ. ೬-೫೦-೯೩). ೨. ಚುರುಕುತನವನ್ನು ಹೊಂದು : ಕೊಂಕು ಬಿಂಕಂಬಡೆಯೆ ಬಿಂಕಂ ಉಳಿವಡೆಯೆ ಉಳಿ ನಾವಣೆವಡೆಯೆ ಮೆಱೆದು (ಅಪಂಶು. ೨-೨೪೪). [ಉಳಿ$_1$ + ಪಡೆ$_1$]

**ಉಳಿವಡಿಸು** (ಕ್ರಿ). ವೇಗಗೊಳಿಸು : ವಾಘೆಯ ಕೊಂಡು ತುರಗವ ತಿರುಹಿ ಉಳಿವಡಿಸುತ್ತ ಪಾರ್ಥಗೆ ಮಾಱಿಯನು ಬೀಸಿ . . . ಎಂದನು ನಗುತ ಮುರವೈರಿ (ಕುಮ್ಯಾಳ. ೩-೯೨). [ಉಳಿವಡೆ + —ಇಸು$_3$]

**ಉಳಿವೆರು** 'ಉಳಿವೆಱು' ನೋ.

**ಉಳಿವೆಱು, ಉಳಿವೆರು** (ಕ್ರಿ). ೧. ಕಾಂತಿಯನ್ನು ಪಡೆ ; ಹೊಳಪಾಗು: ನಳನಪತ್ರಾಯತೇಕ್ಷಣೆಯಂಗದೇಶದೊಳ್ ಪುಳಿ[ಶಾಶಾ. ಬೆಳ]ಸಿದ ಲಾವಣ್ಯ ವನದ ಉಳಿವೆತ್ತು ರತಿಕಾಮ ದೇವರಾಡುವ ಕಾಸುಗಂಳಿಯನೆ ಹೊಕ್ಕು ಳೊಪ್ಪಿದುದು (ಶೋಚಶ. ೨೩-೦೯). **ಉಳಿವೆರು** : ೨. ವೇಗವನ್ನು ಹೊಂದು : ಸಡಗರಿಸಿ ಮೆಯ್ಮಳಿಗೊಂಡು ಉಳಿವೆತ್ತು ನೆಗೆದರ್ದರ್ (ಸಂಶಕ. ೨೩-೩). [ಉಳಿ$_1$ + ಪೆಱು$_1$]

**ಲೂಟಿ** (ನಾ). ಕೊಳ್ಳೆ ಹೊಡೆಯುವುದು ; ಸುಲಿಗೆ ; ದರೋಡೆ : ಕದನದೆ ಮುಱಿದಿಕ್ಕಿ ಖಳರಾಯನ ಶಸ್ತ್ರಸದನವ ಹೊಕ್ಕು ಲೂಟಿಯಲಿ ಹದ ವಿಲ್ಲು ಕೋಲ್ಗಳ ಕೈಕೊಂಡು ಬತ್ತೀಸಾಯುಧನಾಗಿ ಪೊಱಮಟ್ಟು ಬಂದ (ಶೋಚಶ. ೦೨-೯೦) ; ಈ ಪುರದೊಳು ಪ್ರಜೆ ಉಳುವಿಲ್ಲ ಲೂಟಿಯು ಬಲುಹ ನೇನೆಂಬೆ (ಚಕೀ. ೨೬೨-೦) ; ಇವರ ಲೂಟಿ, ದರೋಡೆಗಳೆ ಜನತೆಯ ಭೀತಿಗೆ ಮುಖ್ಯ ಕಾರಣವಾಗಿತ್ತು (ಪ್ರಾವಿ. ೦೬೩).

**ಲೂಟಿ ಮಾಡಿಸು** = ಕೊಳ್ಳೆ ಹೊಡೆಯಿಸು ; ಸೂರೆ ಮಾಡಿಸು : ನಿಮ್ಮ ತಂಗಿಯರು ತಮ್ಮಂದಿರು . . . ಬೇಕಾದಾಗ ಕರೆಸಿಕೊಳ್ಳುತ್ತೀರಿ, ಮನೆಯೆಲ್ಲ ಲೂಟಿ ಮಾಡಿಸುತ್ತೀರಿ (ಮುಹಾಗ. ೯೬). **ಲೂಟಿ ಮಾಡು** = ಕೊಳ್ಳೆ ಹೊಡೆ ; ಸೂರೆ ಮಾಡು ; ಸುಲಿ : ತೋಟಿಯಿಂದೊಳಪೊಕ್ಕು ಪುರಗಳೊಳಗೆ ಬಲು ಬೇಟೆಯ ನಾಯ ಪಿಡಿವರು ಲೂಟಿ ಮಾಡುವರು (ಕುಮಾರಾ. ೦೦-೩) ; ಶತ್ರುಗಳು ದೇಶದ ಮೇಲೆ ನುಗ್ಗಿ ದೇಶವನ್ನೆಲ್ಲಾ ಸುಟ್ಟು ಲೂಟಿ ಮಾಡುತ್ತಿದ್ದರು (ಶಾಶ್ವತ. ೨). **ಲೂಟಿಯಾಗು** = ಕೊಳ್ಳೆ ಹೋಗು ; ಸೂರೆಯಾಗು ; ಸುಲಿಗೆಯಾಗು : ಪಕ್ಕದ ಹಳ್ಳಿ ಲೂಟಿಯಾಯಿತು (ಅರಾಕ. ೯೬). **ಲೂಟಿಯಾಡು** = ಲೂಟಿ ಮಾಡು : ಕೇರಿಕೇರಿಯೊಳು ಪರಿದು ಲೂಟಿಯಾಡಿದರೂರು [ಶಾಶಾ. ಮಾಡುತಲೂರು] ಕಿಚ್ಚಿನ ಬೀಡಾಯ್ತು (ಕುಮಾರಾ. ೦೦-೯೬) ; ನೀನಾರ ಗಂಡನಂ ಲೂಟಿಯಾಡಲ್ಬಂದೆ ಎಂದು ಚೇಲಾಗ್ರವಂ ಪಿಡಿದೆಳೆಯಲು (ಕೇತಮು. ೮-೨೬). [← ಹಿಂ. ಲೂಟ್, ಲೂಟ; ಮರಾ. ಲೂಟ್]

**ಲೂಟಿಸು** (ಕ್ರಿ). ಕೊಳ್ಳೆಹೊಡೆ ; ದೋಚು ; ಲೂಟಿಮಾಡು : ಮೇಣಾ ವಧೂಟಿಯರು ಲೂಟಿಸಿದರಖಿಲವಿಟಚಿತ್ತಧನವಂ (ಕಶಿ. II, ೯೬೯ ಕರುಕೆ) ; ಬಾರಲೆ ವಿಶಾಲಾಕ್ಷಿ ನಿನಗಹಿತಪತ್ನಿಯಾಗಾರವಂ ಲೂಟಿಸು (ಜನಮು. ೬-೨೩); ಹೈದರೆಲ್ಲಿ ಖಾನರು ನಾಜರುಜಂಗರ ಖಜಾನೆ ದ್ರವ್ಯವೆಲ್ಲ ದಿಕ್ಕಾ ಪಾಲಿಗೆ ಲೂಟಿಸಿ ಕೊಂಡ ಹೋಗುವರಲ್ಲಿ ಕೆಲವರನ್ನು ಹೊಡೆದು (ಕೃದಶ. ೨೬). [ಲೂಟಿ + —ಇಸು$_3$]

**ಲೂತಿ, ನೂತಿ$_2$** (ನಾ). ೧. ಒಂದು ಬಗೆಯ ಗುಹ್ಯರೋಗ ; ಗುಹ್ಯ ವ್ರಣ ; ಭಗಂದರ : " ಲೂತಿ [ಶಾಶಾ. ಲೂಕಿ, ವೂರಿ]ಯೆನಲಾಸನದ ಪುಣ್ಣಕ್ಕು " (ಮಂಗರಾ. ೦೦೯-೩) ; ಸರ್ಪ ಮಿಗಿಲೆಂಬಹಂಕಾರೀಕನ್ನೆಯ್ಯ ಲೂತಿಯು ಹುಣ್ಣನುಳ್ಳಾತನು (ಬಿಕ್ಕೆಶು. ೯-೨೨-೬೦) ; ಪ್ರೀತಿಯಿಂದ ನೀತಿ ಹುಟ್ಟುವುದು ಲೂತಿಯಿಂದ ಗಜ್ಜಿ ಹುಟ್ಟುವುದು (ಗಾದೆ). **ನೂತಿ$_2$**: ೧.ಬಾಳೆ ಹೂವು, ಹುರುಳಿ, ಗೇರ ಹರಳು ಇವೆಲ್ಲಟ್ಟು ಇಳುಹಿ, ಗೇರ ಹರಳು ಮೆಲಲು ನೂತಿ ಮಾಣ್ಗುಂ (ಶಿಪ್ರಪಿ. ೬೩) ; ನಾಡೀವ್ರಣವೇ ನೂತಿ ಎನಿಸಿ ಕೊಂಬುದು (ವೈದ್ಯಶಾ. II, ೦೨೩); ಎಳೇ ನೀಲಿ. . ನೂತಿ, ಬಾಯಿಹುಣ್ಣು ಗಂಟಲುಹುಣ್ಣು, ಕಾವುಗಣ್ಣುಗಳಿಗೆ ಇದು ಸಂಜೀವನ (ಐಕ. ೯). ೨. ಒಂದು ಬಗೆಯ ರೋಗ : ' ಕಣ್ಣುನೂತಿ ' ಪರಾ.
[<ಸಂ. ಲೂತಾ = ಚರ್ಮರೋಗ /ತುಳು. ಲೂತಿ = ಚರ್ಮರೋಗ]

**ಲೂತೆ** (ನಾ). ೧. ಜೇಡರ ಹುಳು ; "ಲೂತಾಪ್ಯಯಮೂರ್ಣನಾಭಂ" (ಶಮ್ದಮ. ೯೦-೬) ; ಭದ್ರಾಂಗನೆಂದೆಂಬವನ ಮೇಲೊಂದು ಲೂತೆಯು ಡರಲ್ಕಾ ಮುನಿಯ ಶಿಷ್ಯನಾಲೋಕಿಸುತ್ತೆ ಕೌಶಲ್ಯನೇಡೆಂಬಾತನದಸೆಳೆದು ಕಡೆಗೆ ಹಾಯ್ಕೆ (ಸಿದ್ಧೇಶು. ೦೨-೦೮). ೨. ಇರುವೆ. ೩. (ಜೇಡರ ಹುಳುವಿನ ಎಂಜಲಿನ ಸಂಪರ್ಕದಿಂದ ಉಂಟಾಗುವ) ಒಂದು ಬಗೆಯ ಚರ್ಮರೋಗ: (*). [ಸಂ. ಲೂತಾ]

**ಲೂನ** (ಗು). ೧. ಕತ್ತರಿಸಿದ ; ಕಡಿದ : ಐರಾವತಕರಲೂನಸಲ್ಲಕೀಶಬಳ ಮುಮುಪ್ಪುದಯಗಿರಿಯಿಂ ಸೊಗಯಿಸುವ ಮೂಡಣದೆಸೆಗೆ ವಂದು (ಶಂಕಶಾ. ೯-೦೩ ವ); ಏನ ಹೇಳುವೆನುಭಯಬಲದಲಿ ಲೂನನಿವಹದ ಹಯವ ನಡೆಗೆಡೆವಾನೆಗಳ ಹೊದಱಿದ್ದು ಮುಗ್ಗಿದ ರಥದ ವಾಜಿಗಳ (ಕುಮ್ಯಾಳ. ೬-೩). (ನಾ). ೨. ಕತ್ತರಿಸಿದುದು ; ತುಂಡುಮಾಡಿದುದು : "ದಾತಂ ಲೂನಂ ದಿತಮಱಿಗೆ". (ಶಮ್ದಮ. ೦೦೬-೯೯). ೩. ಕೊಯ್ದುದು;

ಕಟಾವಾದುದು : "ಲೂನಂ ಕೊಯ್ಲು [ಪಾಠಾಂ. ಕೋಯಲು]" (ಶುಂಗರಾ. ೦೦೯-೨). ೪. ಬಾಲ. [ಸಂ.]

**ಲೂನವಕ್ಷ** (ನಾ). ಕತ್ತರಿಸಿಕೊಂಡುದರಿಂದುಂಟಾದ ಗುರುತನ್ನು ಎದೆಯಲ್ಲಿ ಹೊಂದಿರುವವನು ; ಹಿಂದಿನ ಕಾಲದಲ್ಲಿ ವೇಳೆವಾಳಿಗಳು, ಗರುಡರು ಮುಂತಾದವರು ತಮ್ಮ ಒಡೆಯರ ಸೇವೆಗೆ ತಮ್ಮನ್ನು ಒಪ್ಪಿಸಿಕೊಂಡುದರ ಸೂಚನೆಯಾಗಿ ಹರಿತವಾದ ಆಯುಧದಿಂದ ತಮ್ಮ ಎದೆಯ ಮೇಲೆ ಒಂದು ಗುರುತನ್ನು ಮಾಡಿಕೊಳ್ಳುತಿದ್ದರು : ನೃಪಾಲರ ಮಗನೊ ಮೊಮ್ಮನೊ ನೀನವರ ಬಾಂಧವನೊ ಭೃತ್ಯನೊ ನೂ[ಲೂ]ನವಕ್ಷ [ಪಾಠಾಂ. ಪಕ್ಷ]ನೊ ಬೆರಳ ಬದೆಗನೊ (ಕುಮ್ಯಾ.ಶ. ೨-೭೨). [ಸಂ. ಲೂನವಕ್ಷ]

**ಲೆಂಕ** (ನಾ). ೧. ತನ್ನ ಒಡೆಯನ ಸಲುವಾಗಿ ಪ್ರಾಣಾರ್ಪಣೆಯನ್ನು ಮಾಡುವ ನಿಷ್ಠಾವಂತನಾದ ಆಳು ; ಆಪ್ತ ಸೇವಕ : ಕರ್ಣನ ಲೆಂಕಂ ಪ್ರಾತಿಕಾಮಿಯೆಂಬನುಮಂ . . . ಪೇಟ್ಕೊಡೆ (ಪಂಪಭಾ. ೭-೯ ವ) ; ತತ್ಪಾದಪದ್ಮೋಪಜೀವಿ ಲೆಂಕ ಬೇಣಯ್ಯಂ (ಸೌಇಇ. XI-i, ೩೦-೦೩; 1005) ; ಓಡುವಾತ ಲೆಂಕನಲ್ಲ ಬೇಡುವಾತ ಭಕ್ತನಲ್ಲ (ಬಸವ. ೯೯೦). ಸ್ವಾಮಿ ನಿಮ್ಮಡಿಯ ಲೆಂಕರ ಪುರವು ಲೆಂಕನೆನಗೀ ಮಾತದೇಕೆ (ತರಂಪ. ೩-೨೨). ೨. ಕಿಂಕರ ; ಭಕ್ತ. ಲೆಂಕನಾಗಲಿ ಕಿಂಕರನಾಗಲಿ ಶರಣನಾಗಲಿ ಸಕಳೇಶ್ವರದೇವರಾರ ಮನದಲ್ಲಿ ಹೋಗಿದ್ದಾನೆಂದಱಿಯಬಾರದು (ಸಕಳೇ. ೦೦-೯೩) ; ಲೆಂಕರ ಬಗೆದಾವರೆಯೊಳ್ ಬಿಂಕದೆ ನೆಲಸಿರ್ಪ ದೇವಂ (ಶಾಸಂ. II, ೩) ; ಇಂಥ ಲೆಂಕನ್ನ ದೇವರು ಕೈ ಬಿಡೋದಿಲ್ಲ (ಸಕರಾ. ೦೮೯).

[ ದೇ. ತುಳು. ಲೆಂಕೆ ; ತೆಲು. ಲೆಂಕ, ಲೇಕ ]

**ಲೆಂಕತನ** (ನಾ). ದಾಸತ್ವ ; ಸೇವಕತನ : ನಿಮ್ಮ ಅಂಕೆಗೆ ರಘುಂಕೆಗೆ ಶಂಕಿಸಿದೆನಾದರೆ ಎನ್ನ ಲೆಂಕತನಕ್ಕೆ ಹಾನಿ (ಬಸವ. ೭೨೮). [ಲೆಂಕ + – ತನ]

**ಲೆಂಕದಂಡ** (ನಾ). ಲೆಂಕರ ವರ್ಗದ ಜನರಿಗೆ ಅಧಿಕಾರಿಯಾದವನು : ಸೇವಕರ ಮುಖ್ಯಸ್ಥ (?) : ಪ್ರಧಾನರುಂ ಪರಿಚಾರಕರುಂ ಪೆರ್ಗಡೆಗಳುಂ ಲೆಂಕದಂಡರುಂ ಸಾಮಂತರುಂ . . . ಪೆರ್ಚಿ ಪೋಗುಮೆಯ್ಯಱಿಯದಂತೆ ರಾಗಿಸಿ ತಮ್ಮೊಳಿಂತೆಂದರ್ (ರಘುನಮ್ಮಾ. ೯-೨೦೩). [ಲೆಂಕ + ದಂಡ]

**ಲೆಂಕವಳಿ, ಲೆಂಕವಾಳಿ** (ನಾ). = ಲೆಂಕತನ : ಲೆಂಕವಳಿಯೊಳು ವೀರತನಂ ತನಗೆನಿಸಿ ಬೀ[ರ] ಡೊಂಗಿನ ಬಸವಂ ಕೊಟ್ಟು ಪಡೆದ[ಂ] ಸಗ್ಗದ ಸುಖವನು (ಮ್ಯಆಂ. ೦೯೯೩, ೩೩-೩ ; 1217). **ಲೆಂಕವಾಳಿ** : ಕನ್ನೆಯನಾಯಕಂ ಭಯಂಕರ ಗರುಡಂಗೆ ಮಾರ್ಮಲೆದು ಹೊಯ್ದುಮರ್ದಪ್ಪಿ ನಿಮಿರ್ಚಿ ತೋಱಿದು ಬಿರುದರ ಗೋವನುರ್ವರಗ ಸೋಮನೃಪಾಳನ : ಲೆಂಕವಾಳಿಯುಂ (ಎಕ. IV, ಕೃಶ್ನರಾ. ೯-೪೨ ; 1257). [ಲೆಂಕ + – ವಳಿ₃]

**ಲೆಂಕವಾಳ** (ನಾ). = ಲೆಂಕ ೧ : ಲಿಂಗೋಪಜೀವಿಗಳುಂ ಮಾಸವಾಳರುಂ ಲೆಂಕವಾಳರುಂ . . . ಈಯುವಸರ್ಪಿಣಿಯೊಳಾಚಾರ್ಯರ್ಕಲ್ಪಿಸಿದ ನಿರವದ್ಯಚರಿತರಪ್ಪ ಪಂಚಮಜಾತಿಯುಂ ಕಥಂ ಚಿದ್ದಾನಂಗೊಡಲು ಯೋಗ್ಯರಕ್ಕುಂ (ಜಿನಾರ.೩೨೦). [ಲೆಂಕ + – ವಾಳ₃ (<–ವಳ)]

**ಲೆಂಕವಾಳಿ** 'ಲೆಂಕವಳಿ' ನೋ.

**ಲೆಂಕಿ₁, ಲೆಂಗಿ** (ನಾ). ೧. ಸೇವಕಿ ; ದಾಸಿ : ಲೆಂಕದಂಡರುಂ ಸಾಮಂತರುಂ ಪೌರರುಂ ಲೆಂಕಿಯರುಂ . . . ರಾಗಿಸಿ ತಮ್ಮೊಳಿಂತೆಂದರ್ (ರಘುನಮ್ಮಾ. ೯-೨೦೩). ೨. (ಸ್ವಾಮಿನಿಷ್ಠನಾದ) ಸೇವಕನ ಹೆಂಡತಿ : ಲೆಂಕರೊಡನೆ ಸಹಗಮನ ಮಾಡಲು ಲೆಂಕಿಯರು ಸಿದ್ಧರಾಗುತ್ತಿದ್ದರು (ಕನಾಶಿ. ೩೦೦). **ಲೆಂಗಿ** : ೧. ಒಕ್ಕುದ ಮಿಕ್ಕುದನುಂಡು ಕಿವಿವಿಡಿದಾಡುವೆ ಶರಣರ ಮನೆಯ ಲೆಂಗಿಯು ಡಿಂಗರಿಗ ನಾನು (ಬಸವ. ೯೭೦). [ಲೆಂಕ + –ಇ₂]

**ಲೆಂಕಿ₂, ಲೇಕಿ** (ನಾ). ೧. ಒಂದು ಬಗೆಯ ಧಾನ್ಯ : ಚೆಣಗ ಲೆಂಕಿ ಬಟ್ಟಗಡಲಿ ಕರಿ ಹೆಸರು ಮೊದಲಾದವುಗಳನ್ನು ಕೂಡಿಸಿ ಬಿತ್ತಬೇಕು (ಕೃಷಿಶ. ೬೦). **ಲೇಕಿ** : ೨. ನೆಲದ ಮೇಲೆ ಬಿದ್ದಿರುವ ಕಾಳು. – ಧಾನ್ಯ : 'ಲೇಕಿಗೆ' ಪರಾ. [← ತೆಲು. ಲೇಕಿ]

**ಲೆಂಕಿತಿ** (ನಾ). ೧. ಸೇವಕಿ; ದಾಸಿ: "ಅಸಿಕ್ನಿ ಎಂಬುದು ಲೆಂಕಿತಿ" (ಹಲಾಯು. ೩೦-೩೩೭). ೨. = ಲೆಂಕಿ₁ ೨ : ಲಖೆಯ ನಾಯಕಂ ತಂನ ಹೆಂಡತಿ ಗಂಗಾದೇವಿಯುಂ ಅಯ್ವರು ಲೆಂಕರು ಮೂವರು ಲೆಂಕಿತಿಯರುವೆರಸಿ ಬಾಸೆಯಂ ಪೂರೈಯ್ಸಿದನು (ಎಕ. VI (R), ಕೃಶ್ನರಾ. ೬೯-೩೭ ; 1291).

[ಲೆಂಕ + – ಇತಿ₁ (<–ಇತ್ತಿ)]

**ಲೆಂಕೆ** (ನಾ). ಸೇವಕಿ ; ದಾಸಿ : ಲೆಂಕೆಯನೊಕ್ಕಲಿಕ್ಕುವವೊಲಟ್ಟಿಱಿ ಲಂಕೆಯನೊಕ್ಕಲಿಕ್ಕಿ ಕೀಟಿಸ್ಕಿಂ ಕಡುಪಿಂ ತ್ರಿಕೂಟಗಿರಿಯಂ (ಪಂಂರಾಮಾ. ೦೦-೩೩). [ಲೆಂಕ + – ಎ₂]

**ಲೆಂಗಣೆ** (ನಾ). ಜಿಗಿತ ; ಹಾರುವಿಕೆ : ಮೃಗದ ಲೆಂಗಣೆ ಸೋಗೆಯಾಟದ ಸೊಗಸುಗಳನ್ನು ನೋಡುತ (ಕಂಪ. ೨೦-೧೦). [< ಲಂಘನೆ]

**ಲೆಂಗಿ** 'ಲೆಂಕಿ₁' ನೋ.

**ಲೆಂಡ** 'ಲಂಡ₁' ನೋ.

**ಲೆಂಡತನ** 'ಲಂಡತನ' ನೋ.

**ಲೆಂಡು** 'ಲಂಡ₁' ನೋ.

**ಲೆಂಡೆ** 'ಲಂಡೆ' ನೋ.

**ಲೆಕ್ಕ₁** 'ಲಕ್ಕ₂' ನೋ.

**ಲೆಕ್ಕ₂, ಲೆಖ್ಖ** (ನಾ). ೧. ಎಣಿಸುವುದು; ಗಣನೆ : ನುಡಿಯಲಕ್ಕುಮೆ ಪೂಗಳ ಲೆಕ್ಕಮಂ (ಆದಿಪು. ೦೦-೦೦೩); ಕ್ಷಿತಿಯಂ ಶೋಧಿಸಲಕ್ಕು ವೀಚಿಗಳ ಲೆಕ್ಕಂ ಮಾಡಲಕ್ಕು . . . ಸತಿಯಾ ಚಿತ್ತವಭೇದ್ಯವೈ (ಸೋಮೇಶ. ೬೦); ಕರ್ಣ ದ್ರೋಣರ ತಱುವಾಯ ಲೆಕ್ಕಕ್ಕೆ ಸಂದನೈ (ಕುಮ್ಯಾ.ಶ. ೨೦-೩೩); ಸರೆ ಚಿತ್ರಗುಪ್ತರ ಲೆಕ್ಕವ ಟಿಕ್ಕರಿಗೆಳೆದು ಲೆಕ್ಕದೆ ಶೂರರೆನಿಪ ಲಾಳಿಯಲಿ ವಾಚಿಸುತಿಹ ಕರಣಿಕಕುಲತಿಲಕರ ಗೃಹವಿರುತಿಹುವು (ಕಂಪ. ೭-೯೯). ೨. ಸಂಖ್ಯೆ; ಅಂಕಿ : "ಅಂಕೆ ಸಂಖ್ಯೆಯಿನೆ ಲೆಕ್ಕಮಕ್ಕು" (ಶುಂಗರಾ. ೦೦೯-೦೦); ಗುಣಾರ್ಣವನಂಬು ಲಕ್ಕ ಲೆಕ್ಕದೆ ಕೊಳೆ (ಪಂಪಭಾ. ೯-೨೦); ಬರೆದೆಯ್ದೆ ಲೆಕ್ಕಮನಾದರದಿಂ ಗುರುಲಘುವಿಭೇದಮಂ ಭಾವಿಸು ನೀಂ (ಛಂದೋಂಬು. ೧-೩೩); ಪಟ್ಟಣದ ಧರ್ಮ್ಮಕ್ಕೇತಕ್ಕೆ ಬಿಟ್ಟ ಮತ್ತರು ಪನ್ನೆರಡು ಲೆಕ್ಕದೊಳಂ ೧೨ (ಸೌಇಇ. IX-i, ೦೩೦-೦೯; 1070); ಕುದುರೆಯ ಗಜ ರಥವ ಭೂಪಾಲರಳಿದುಳಿದವರ ಲೆಕ್ಕವನೈದೆ ವಿಸ್ತರಿಸಿ (ಕುಮ್ಯಾ.ಶ. ೧-೦೭). ೩. ಅಂಕಗಳಿಂದ ಮಾಡುವ ಗಣಿತ; ಅಂಕಗಣಿತ : ತರ್ಕವ್ಯಾಕರಣಾಗಮ ಕಾವ್ಯ ಛಂದಸ್ಸು ಲೆಕ್ಕವಾದಿಯ ವಿದ್ಯೆ (ರಾಜಾಬ. ೦-೩೩); ಒಬ್ಬ ಹುಡುಗ ಪುಸ್ತಕದಲ್ಲಿನ ಲೆಕ್ಕಗಳನ್ನು ಮಾಡುವುದನ್ನು ಬಾಯಿಪಾಠ ಮಾಡಿದ್ದನು (ಶ್ರೀರ. ೨). ೪. ಆಯವ್ಯಯ; ಜಮಾಖರ್ಚು : ಲೆಕ್ಕಗಳನ್ನು ಬರೆಯುವ ಪ್ರವೃತ್ತಿಯಿರುವ ತರುಣನನ್ನು ವ್ಯವಸಾಯ ಮಾಡುವಂತೆ ನಿಯೋಜಿಸುವುದು ಯುಕ್ತವಲ್ಲ (ಕ್ರಿಯಾಶಿ. ೯೩). ೫. ವ್ಯವಹಾರದಲ್ಲಿ ಬರೆದಿಡುವ ಕೊಳುಕೊಡೆಯ ಗಣನೆ, –ಆಯವ್ಯಯದ ಗಣನೆ : ಎಲ್ಲಾ ಕರಣಂಗಳಂ ಕರೆಯಿಸಿ ಭಂಡಾರದ ಲೆಕ್ಕಮಂ ನೋಡಿ (ಬಸರ. ೯-೯೯) ೬. ಪರಿಗಣನೆ : ಪೊಟ್ಟಳಿಸಿ ನೆಗಟ್ತೆಗಾಟಿಸುವ ದುಷ್ಟವಿಯುಂ ಕವಿಯೆಂಬ ಲೆಕ್ಕಮೋ (ಪಂಪಭಾ. ೦-೦೨) ; ತಾಮೆ ತಮ್ಮ ಮನದೊಳ್ ಸರ್ವಜ್ಞರೆಂದಿರ್ಪ ಕಬ್ಬಿಗರುಂ ಕಬ್ಬಿಗರೆಂಬ ಲೆಕ್ಕದೊಳಗೇಂ ಭೂಭೃತ್ಸಭಾಭೂಷಣಂ (ಅರ್ಜವೀ. ೦-೩೩) ; ಲೆಕ್ಕದಲ್ಲಿ ನೀ ಮೊದಲು ಮಾಡಿದ್ದಲ್ಲದೆ ಒಮ್ಮಾನಕ್ಕೆ ವೆಗ್ಗಳವಾಗಿ ಕೊಡುವರುಂಟೆ (ಪುರಂದ. ೩-೦೩೯-೩). ೭. ಲೆಕ್ಕಾಚಾರ; ವ್ಯವಹಾರ : ಲೆಕ್ಕದಲ್ಲಿ ಲೋಪಿತವಾದ ವರಿಗೇಕೆ ಅಜಾತನ ಸುದ್ದಿ (ಬೋಳಶಾ. ೦೨-೯೯). ೮. (ಅಲಂ) ಅಭಿಪ್ರಾಯ; ಅನಿಸಿಕೆ : ಬೆಸಗೊಳ್ಳ ಗುಣಾರ್ಣವನ ಲೆಕ್ಕ [ಪಾಠಾಂ. ಬಿಂಕ]ಮಂ

ಪೊಕ್ಕಮುಮಂ (ಶಂಕಶಾ. ೨-೩೩) : ಯುಧಿಷ್ಠಿರನಟಮಟಿಸಿ ತಾ ಚುಕ್ಕಿಗಿಕ್ಕುವ ಲೆಕ್ಕ ಲೇಸಾಯ್ತು (ಶುವ್ಯಾದ್ರೋ. ೨-೭೬). ಲೆಖ್ಖ : ೧. ಕ್ಷೋಣಿಯೊಳ್ಪುಗೆಗೊಳ್ವ ಲೆಖ್ಖಗಳೆಲ್ಲಮುಜ್ವಳಿಪೊಂದಜೊಳ್ ಮೇಣತಂಗಿದವೊಲ್ (ಅಧ್ಯಟ. ೩-೦೨೯). ೪. ಲೆಖ್ಖದ ಪಟ್ಟಿಗಳು ತೀವ್ರ ಕಳೆಹಿಸಲಿಕ್ಕೆ ಕೆಲವು ಅಡಚಣೆಗಳಿರುತ್ತವೆ (ಮುಂಬವ್ಯಾ. ೨೯ ಕ್ರಸ್ತ್ರಪ). ೮. ಆ ಲೆಖ್ಖದಿಂದ ಎಲ್ಲಾ ಕೆಟ್ಟು ಹಾಳಾಯಿತು (ಶಾಲಿಮ. ೦೭).

**ಲೆಕ್ಕಕೊಡು, ಲೆಕ್ಕಾಕೊಡು** = ಮಾಡಿದ ಖರ್ಚಿಗೆ ವಿವರವನ್ನು ನೀಡು. –ಕೊಡು : ದೇವರಿಗೆ ಅದರ ಲೆಕ್ಕ ಕೊಡಬೇಕಾದೀತು (ಮುಂಬಯು. ೩-೦೮೯); ಯಾರು ಅಡಿ ಅಟಕಾವು ಮಾಡಿ ನಡಸದೆ ಸುಂಕವ ಲೆಕ್ಕಾಕೊಟ್ಟು (ಎಕ. XVI. ೫೪ಪಾ. ೯೦-೨೭; 1802). **ಲೆಕ್ಕದಾಳು** = ಎಣಿಕೆಗೆ ಮಾತ್ರ ಇರುವ ಆಳು ; ಕೆಲಸಕ್ಕೆ ಬಾರದವನು : ತುಳಿಲಾಳ್ಗಳಲ್ಲದೆ ರಾಮನ ಮೆಯ್ಗಾವಲೊಳಗಿಲ್ಲ ಲೆಕ್ಕದಾಳುಗಳು (ಶುರಾಶಾಂ. ೯-೦೮). **ಲೆಕ್ಕಪಕ್ಕ, ಲೆಕ್ಕಪೊಕ್ಕ** = ಗಣಿತ, ವ್ಯವಹಾರ ಮುಂತಾದುವು : ಲೆಕ್ಕಪಕ್ಕವನಱಿತು ಲೋಕದ ಮಕ್ಕಳಿಗೆ ಮಿಗಿಲಾಗಬೇಕು (ಕ್ರಹಾಕ. ೭-೦೯); ಲೆಕ್ಕಪಕ್ಕಂಗಿಡಲ್ ಕಿಕ್ಕಿರಿದು ಪೊಯ್ದಾಡಿದರ್ (ತ್ರೀಲಾವಾ. ೩೭೦-೯೭); ಸರಕಾರದಿಂದ ಬಿಟ್ಟುಕೊಡುವಂಥಾ ಶೀಮೆ ಲೆಕ್ಕಪೊಕ್ಕವನ್ನು ಬರೆಸಿ (ರಾಶೀಲಿದ್ರ. ೦೨೨). **ಲೆಕ್ಕಬಿಡಿಸು** = ಸಮಸ್ಯೆಯನ್ನು ಬಿಡಿಸು : ಸನ್ಯಾಸಿಯು . . . ಏಕಾಗ್ರಮನಸ್ಕನಾಗಿ ಲೆಕ್ಕಬಿಡಿಸುತ್ತಿದ್ದನು (ಇಪ್ತಕ. ೩೯೦). **ಲೆಕ್ಕ ಮಾಡು** = ಗಣನೆ ಮಾಡು ; ಎಣಿಸು : ರಾಜಣ್ಣ ಲೆಕ್ಕ ಮಾಡುವ ವಿಧಾನವನ್ನೆಲ್ಲಾ ತಿಳಿಸಿ ಮೇಲೆ ಬಂದ (ಮರೀ. ೫೮) ; ಸ್ವತಂತ್ರವಾಗಿ ಲೆಕ್ಕಮಾಡುತ್ತಿರುವಾಗ ಎಲ್ಲಿ ತಪ್ಪಿರುವವೆಂಬುದನ್ನು . . . ಗಮನ ಕೊಟ್ಟಿಲ್ಲ (ಶಿಕ್ಷದ. ೨೭೭). **ಲೆಕ್ಕಹಾಕು** = ೧. ಲೆಕ್ಕವನ್ನು ಮಾಡು ; ಎಣಿಕೆಹಾಕು : ಒಂದುದಿನಕ್ಕೆ ಎಷ್ಟಾಗುವುದೆಂದು ಲೆಕ್ಕಹಾಕಿ ಅದಕ್ಕೆ ಸರಿಯಾಗಿ ನೀವು ಕೊಂಡುಕೊಳ್ಳುವ ಆಹಾರಗಳನ್ನು ನಿಶ್ಚಯಿಸಬೇಕು (ಅಡುಶಾ. ೦೨೩) ; ಅಲ್ಲಿ ಕೂತು ಶಾಂತವಾಗಿ ತಮ್ಮ ಲಾಭ ನಷ್ಟಗಳನ್ನು ಲೆಕ್ಕಹಾಕುತ್ತಿದ್ದರು (ಪಗಹೊ. ೦೦೭). ೨. ಯೋಚಿಸು ; ಊಹಿಸು : ಶಂಕರಪ್ಪ ಲೆಕ್ಕಹಾಕಿದವನಂತೆ ಹೇಳಿದ (ಮಪಿಕ. ೩); ದೇವರಾಜಒಡೆಯರನ್ನು ಸಿಂಹಾಸನದಿಂದ ಕದಲಿಸುವ ಸಮಯ ಸಮೀಪಿಸಿತೆಂದು ಪಂಡಿತನು ಲೆಕ್ಕ ಹಾಕಿದ್ದ (ಶರೀಪ. ೨೨೩).

[<ಸಂ. ಲೇಖ್ಯ. / ಪ್ರಾ. ಲೇಕ್ಖ. / ತುಳು. ಲೆಖ್ಖ ; ತೆಲು. ಲೆಕ್ಕ]

**ಲೆಕ್ಕಂಗೊಳ್, ಲೆಕ್ಕಗೊಳು** (ಕ್ರಿ). ೧. ಲೆಕ್ಕ ಮಾಡು ; ಎಣಿಕೆ ಮಾಡು: ಶಾರ್ದೂಲಾಭೀಲವನಂಗಳೊಳ್ ತಿರಿಪಿದೀಯುರ್ಕೊಂದೆ ಲೆಕ್ಕಂಗೊಳಲ್ ಕಾಲಂ ಸಾಲವೆ (ಶಂಕಶಾ. ೯-೨೨) ; ಲೆಕ್ಕಂಗೊಳೆ ಕೊಂಗಬಲಂ ಲಕ್ಕಂಬರ ಮೀರ್ದುವೆಂಬರ್ (ಕಳಿ: ೩-೩೩) ; ಸಂದಾ ಮುನ್ನರ ದೇಗುಲಂಗಳೆನಿತೋ ಲೆಕ್ಕಂಗೊಳಲ್ಬರ್ಕುಮೇ (ಬ್ಯಶಾಮ. ೨-೦೦೦). **ಲೆಕ್ಕಗೊಳು** : ೨. (ಅಲು) ಭಾವಿಸು ; ವಿಚಾರಿಸು : ಸಿಕ್ಕಿದರು ತಮಗೆಂದು ಮನದೊಳು ಲೆಕ್ಕಗೊಳಲಿಲ್ಲ (ಬಸಕ್ಷ. ೮೦-೭೭). [ಲೆಕ್ಕ$_2$ + ಕೊಳ್$_1$]

**ಲೆಕ್ಕಗೊಳು** ' ಲೆಕ್ಕಂಗೊಳ್ ' ನೋ.

**ಲೆಕ್ಕಣಿ, ಲೇಖಣಿ** (ನಾ). ಮಸಿಯಲ್ಲಿ ಅದ್ದಿಕೊಂಡು ಬರೆಯುವ ಚೂಪಾದ ತುದಿಯುಳ್ಳ ಒಂದು ಸಾಧನ; ಲೇಖನಿ; ಟಾಕು (ಉಕ): "ಲೆಕ್ಕಣಿ(ಲೇಖಣಿ)_ಲೇಖನೀ" (ಕದ್ಯಕೋ. ೩೯) ; ಕೆಂಗರಿಗನುದಿರ್ಗರಿಯ ನೆಲರ ಸೀಗುರಿಯಿಂದು ಮರೆತದಂ ಬರೆಯೆ ಲೆಕ್ಕಣಿ ಎಸಗುವನ್ನ (ಗೀಬಂ. ೨೯-೬೨) : ಅವರು ಯಾವ ಶಿಕ್ಷಕನ ಬಗ್ಗೆಯೂ ಲೆಕ್ಕಣಿ ಎತ್ತಿದವರಲ್ಲ (ರಂಗಶೋ. ೬೦). **ಲೇಖಣಿ** : ಹೆಚ್ಚು ಕಡಿಮೆ ಇಂದಿನ ದಬ್ಬಳದಂತೆ ಇದ್ದುದನ್ನು ಲೇಖಣಿಯಾಗಿ ಬಳಸುತ್ತಿದ್ದರು (ಪ್ರಾಶಿ. ೫೯) ; ಬರೆಯುವ ಕಾಲದಲ್ಲಿ ನನ್ನ ಲೇಖಣಿ ನಿಲ್ಲಲಾರದು (ಪ್ಯಾಶ. ೨). [ಸಂ. ಲೇಖನೀ]

**ಲೆಕ್ಕಣಿಕೆ, ಲಕ್ಕಣಿಕೆ** (ನಾ). ೧. =ಲೆಕ್ಕಣಿ : ತರಲಾಪಾಂಗವಿಲಾಸಸ್ಫುರಿತಮೆ ಲೆಕ್ಕಣಿಕೆಯಾಗೆ ನಲ್ಲಳ್ ಮುನ್ನಂ ಬರೆದತನುಚರಿತವಿನಾಗಳ್ ಬರೆದಂತಿರ್ದಪುದು ಮನ್ಮನಃಪುಸ್ತಕದೊಳ್ (ಅಂಕ್ಷ. ೯-೦೯) ; ಧರೆ ಹಲಗೆ ವೃದ್ಧಿಯಾದುದು ಧರಣಿಯ ಮೇಲಿರ್ದ ಮರನೆ ಲೆಕ್ಕಣಿಕೆ (ಧಂದೋಂಬ. ೦-೩೦ ೩೨೮) ; ಶರವೊಂದಂ ತೆಗೆದು ನಿಜೋದರದಿಂ ಲೆಕ್ಕಣಿಕೆ ಮಾಡಿ ಗಜಮದ ಮಸಿಯುಂ ತರಿಸಿ ಪತಾಕಾಪಟದೊಳ್ ಬರೆದಟ್ಟಿದನಂಧನೃಪತಿಗಾ ಸಿಂಧುಸುತಂ (ಗದಾಯು. ೬-೨) ; ಮಸಿಯಲ್ಲಿ ಬರೆಯುವುದಕ್ಕಾಗಿ ಲೆಕ್ಕಣಿಕೆಯನ್ನು ಬಳಸುತ್ತಿದ್ದರು (ಕವ್ನಸಂ. ೯೪). ೨. ಚಿತ್ರ ಬರೆಯುವ ಸಾಧನ ; ಕುಂಚ : "ಈಷಿಕಾ, ತೂಲಿಕಾ–೨ ಚಿತ್ರ ಬರೆಯುವ ಲೆಕ್ಕಣಿಕೆ" (ಸಿದ್ಧಾಂತ. ೩೦೭). **ಲಕ್ಕಣಿಕೆ** : ೨. ಲಕ್ಕಣಿಕೆಯ ಪಿಡಿದೊಸೆದು ಚಿತ್ರಿಗ ಕಣ್ಣಿಕ್ಕಿ ಬರೆವ ಗಂಡುರೂಪ (ಶುರಾಶಾಂ. ೨೩-೬); ಬಟ್ಟತರ ಮಸಿಯಾಗುಳ್ಳಿಯ ಲಕ್ಕಣಿಕೆ ಬಿಳಿಯ ಪತ್ರಂಗಳನು ಪಿಡಿದು (ಪಪಶೋ. ೨೭-೦೯).

[<ಸಂ. ಲೇಖನಿಕಾ]

**ಲೆಕ್ಕತಪಾಸಿಗ** (ನಾ). ಲೆಕ್ಕವನ್ನು ಪರಿಶೀಲಿಸುವವನು : ಲೆಕ್ಕಪರೀಕ್ಷಕ : ಪ್ರತಿವರುಷವೂ ಲೆಕ್ಕತಪಾಸಿಗರಿಂದ ಎಲ್ಲ ಲೆಕ್ಕಪತ್ರಗಳ ಶೋಧನೆ ನಡೆಯುತ್ತಿತ್ತು (ಕವಲು. ೫೪); ಲೆಕ್ಕತಪಾಸಿಗರದೊಂದು ವರ್ಗವೆ ನಿರ್ಮಾಣವಾಗಹತ್ತಿದೆ (ಶಕ್ಯಶಿ. ೬೨). [ಲೆಕ್ಕ$_2$ + ತಪಾಸು + —ಇಗ]

**ಲೆಕ್ಕಪತ್ರ** (ನಾ). = ಲೆಕ್ಕ ೫ : ಒಡೆಯರು ಆ ಲೆಕ್ಕಪತ್ರದ ಆಯವ್ಯಯ ಪತ್ರಕದ ಇಲ್ಲವೆ ಲೆಕ್ಕಗಳನ್ನಿಟ್ಟ ಪುಸ್ತಕಗಳ ಬೇಕಾದ ಭಾಗವನ್ನು ನೋಡ ಬಯಸಿದರೂ . . . ಒದಗಿಸಿಕೊಡುವಂತಿರಬೇಕು (ಶಕ್ಯಶಿ. ೬೨); ಲೆಕ್ಕಪತ್ರಗಳ ಗೊಂದಲದಿಂದ ಪಾರಾದ ಮೇಲೆ ಮನಸ್ಸು ಶಾಂತಿಯನ್ನು ಬಯಸುತ್ತಿತ್ತು (ಮುರೀ. ೨೮). [ಲೆಕ್ಕ$_2$ + ಪತ್ರ]

**ಲೆಕ್ಕಪರೀಕ್ಷಕ** (ನಾ). = ಲೆಕ್ಕತಪಾಸಿಗ : " ಕರಣಿಕ, ಲೆಕ್ಕಿಗ . . . ಲೆಕ್ಕಪರೀಕ್ಷಕ " (Accountant. ಇಂಕನ್ನ). [ಲೆಕ್ಕ$_2$ + ಪರೀಕ್ಷಕ]

**ಲೆಕ್ಕಮಿಡು, ಲೆಕ್ಕವಿಡು** (ಕ್ರಿ). ೧. ಗಣನೆ ಮಾಡು ; ಎಣಿಕೆಹಾಕು : ಅನಿತಿನಿತೆಂದು ಲೆಕ್ಕಮಿ[ಶಾಶಾಂ.ವಿ]ಡಲಾನಱಿಯೆಂ ಬನಮಂ ಲತಾನಿಕೇತನ ಕೃತಕಾದ್ರಿಯಂ ಪುಳಿನಮಂ ಕೊಳನಂ (ಮಲ್ಲಿಕ್ಷ. ೨-೯೯) ; ಅಲ್ಲಿಯ ಸಾರಮಪ್ಪ ಬೆಳಸಂ . . . ಲೆಕ್ಕಮಿಡಲ್ಕಣಮಾಱದಂತು ಮತ್ತೆಲ್ಲಮನೆಯ್ದೆ ಲೆಕ್ಕಿಸಿದೊಡಂ ಮನೆಗೆಯ್ದಿಸಲಾಱದಂತವಂ (ಶಾರಕ್ಷ. ೯-೦೮). **ಲೆಕ್ಕವಿಡು** : ೨. ಲೆಕ್ಕವನ್ನು ಬರೆ ; ಲೆಕ್ಕಾಚಾರವನ್ನು ಲಿಖಿತದ ಮೂಲಕ ಇರಿಸಿಕೊಳ್ಳು : ಅಂಗಡಿಗಳಲ್ಲಿ ಲೆಕ್ಕವಿಟ್ಟುಕೊಂಡು ಸಾಮಾನುಗಳನ್ನು ಕೊಳ್ಳುತ್ತಾ ಹೋಗುವುದೇನೋ ಸುಲಭ (ಅಡುಶಾ. ೦೨೩).

[ಲೆಕ್ಕ$_2$ + ಇಡು$_1$]

**ಲೆಕ್ಕವಣಿಗೆ** (ನಾ). ಲೆಕ್ಕದ ವಿವರ ; ಲೆಕ್ಕಾಚಾರ : ತಂದೊಡಮೆಯ್ಯಂ ದಿದಿರೊಳ್ ಪಿಡಿದಂಗಜಂಗೆ ಲೆಕ್ಕವಣಿಗೆದೋಱುವಂತೆಸೆದು ತೋಱಿದುವಂದಿನ ಬಂದ ಮಾವುಗಳ್ (ಅಕ್ಷ. ೬-೨೯). [ಲೆಕ್ಕ + – ವಣಿಗೆ]

**ಲೆಕ್ಕವಲಗೆ** (ನಾ). ಲೆಕ್ಕ ಬರೆಯುವ ಹಲಗೆ,— ಫಲಕ : ಅದಱಿಂದೊಳಗೆ ಪೂರ್ವಾಪರದಿಗ್ಭಾಗದ ಸಮಭೂತಳಪ್ರದೇಶದೊಳಪೂರ್ವಶಿಲ್ಪಿಕೃತಮಪ್ಪ ಲೆಕ್ಕವಲಗೆಯಂ ಕಾಡಿಗೆಯೊಳ್ ಪುಟ್ಟಿಸಿ ಪೊಟ್ಟಿಗವಡಕಿಯೊಳೊರಸಿದಂತೆ ಮಿಂಚೆ . . . ವಾಹಳಿಗಳ್ ಮನೋಹರಂ (ಶಾಂತಿಕ್ಷ. ೯-೦೪೩ ವ).

[ಲೆಕ್ಕ$_1$ + ಪಲಗೆ]

**ಲೆಕ್ಕವಿಡು** ' ಲೆಕ್ಕಮಿಡು ' ನೋ.

**ಲೆಕ್ಕಾಚಾರ, ಲೆಕ್ಕಾಚಾರ, ಲೆಖ್ಖಾಚಾರ** (ನಾ). ೧. ಎಣಿಸುವುದು ; ಲೆಕ್ಕಮಾಡುವುದು : ನಮ್ಮ ನಮ್ಮ ಜಮ – ಖರ್ಚಿನ ಪುಸ್ತಕದಲ್ಲಿ ಲೆಕ್ಕಾಚಾರ ಸರಿದೂಗಿರುತ್ತದೆ ! (ಶೀಕಹೋ. ೫೭) ; " ಕೊಳ್ಳುವುದಕ್ಕೆ ೧೦,೦೦೦, ರಿಪೇರಿಕೆಲಸಕ್ಕೆ ೧೦,೦೦೦ " ಎಂದು ಏಜೆಂಟ್ ಹೇಳಿದಾಗ

ಆ ಲೆಕ್ಕಾಚಾರ ಸರಿಯಾಗಿಯೇ ಕಂಡಿತು (ಯೋಠವು. ೨೪). ೨. ನಿಶ್ಚಿತವಾದುದು; ನಿಖರವಾದುದು : ಕಾಲೋಚಿತಸನ್ಮಾರ್ಗದಲ್ಲಿ ನಡೆದವರಿಗೆ ಒಳ್ಳೆಯ ಫಲವು ದೊರೆಯುವುದು ಲೆಕ್ಕಾಚಾರ (ಹುಕ್ಷಕ್ರ. ೦೪೨) ; ಅವನು ಆಡುವ ಮಾತೆಲ್ಲ ಲೆಕ್ಕಾಚಾರದ ಮಾತು (ರೂಢಿ). **ಲೆಕ್ಖಾಚಾರ** : ೨. ನಮ್ಮ ಗ್ರಾಮದ ಹಣ ಲೆಕ್ಖಾಚಾರ ಪ್ರಕಾರ ಕೊಡಿಯಂತ ಕೇಳಿದಲ್ಲಿ (ಎಕ. VIII, ತಾಗರ. ೪೬–೦೫; 1646 ?). **ಲೆಖ್ಖಾಚಾರ** : ೧. ಅವನು ತನ್ನ ಲೆಖ್ಖಾಚಾರದಿಂದ ಕ್ರಿ. ಪೂ. ೫೮೫ರಲ್ಲಿ ನಡೆದ ಗ್ರಹಣ ಒಂದನ್ನು ಕುರಿತು ಭವಿಷ್ಯ ನುಡಿದಿದ್ದನಂತೆ (ಶಕ್ಕಶಾ. ೪).

**ಲೆಕ್ಕಾಚಾರಮಾಡು, ಲೆಖ್ಖಾಚಾರಮಾಡು** = ೧. ಎಣಿಸು ; ಲೆಕ್ಕಮಾಡು : ಅಯನವಲನ(Angle of Position)ವನ್ನು ಲೆಕ್ಕಾಚಾರ ಮಾಡಲು ಅವನು ಅದನ್ನು ಉಪಯೋಗಿಸಿದ್ದಾನೆ (ಶಕ್ಕಶಾ. ೪೬೭). ೨. ಪೂರ್ವಾಪರವನ್ನು ಪರಿಶೀಲಿಸು ; ಆಲೋಚಿಸು : ಮಗನಿಗೆ ಮದುವೆ ಮಾಡಬೇಕೆಂದು ಯೋಚಿಸಿದರೆ ತಮಗೆ ಪತ್ತಿರವ ನೆಂಟೂ ಗಂಟೂ ಉಳಿಯುವುದನ್ನೆಲ್ಲಾ ಲೆಖ್ಖಾಚಾರಮಾಡಿ ಆಮೇಲೆ ಜೋಯಿಸರಲ್ಲಿ ಹೆಸರು ಬಲ ಕೇಳುವರು (ಹುಬ್ಬಹ. ೦೦). **ಲೆಕ್ಕಾಚಾರಹಾಕು** = ಆಲೋಚಿಸು; ಯೋಚಿಸು : ಎಂದುಕೊಂಡಳು ತನ್ನಲ್ಲೇ, ಮನಸ್ಸಿನಲ್ಲಿ ಏನೇನೋ ಲೆಕ್ಕಾಚಾರ ಹಾಕಿಕೊಳ್ಳುತ್ತ (ಹೊಸಕ್ಷಿ. ೦೭). [ಲೆಕ್ಕ₂ + ಆಚಾರ]

**ಲೆಕ್ಕ** 'ಲೊಕ್ಕ₁' ನೋ.

**ಲೆಕ್ಕಿಗ** (ನಾ). ೧. ಲೆಕ್ಕ ಬರೆಯುವವನು ; ಕರಣಿಕ : ಲೆಕ್ಕಿಗಂ ನಡೆ ನಡೆದು ಕರಣಸಾಲೆಗೆ ಬಂದು ಕುಳ್ಳಿರ್ದು (ಬಸರ. ೫-೬೦); ಜೋಯಿಸಿಗಂ, ಲೆಕ್ಕಿಗಂ (ಕಬುಡ. ೦೪೭ ಪ್ರಯೋ) ; ಆ ಕಿರಾತನು ತನ್ನ ಕೆಳದಿಗೂಡಿಯ ಲಾಗವರ ಎಳದೊಯಿದರಿಸಲಾಗೆಮಾಧರ್ಮಗುಪ್ತರ್ದರು ತಳು ಮಾಡದಾಗ ಲೆಕ್ಕಿಗರು (ಪಪ್ಪಶಾ. ೦೨-೩೦) ; ಆ ಸಂಸ್ಥೆಯ **ಲೆಕ್ಕಿಗರು** ಈ ಎರಡೇ ವರುಷಗಳ ಅಂಕಿಗಳನ್ನಿಟ್ಟದ್ದಾರೆ (ತಳ್ಳಿ. ೬೦). ೨. ಜೋಯಿಸ ; ಜ್ಯೋತಿಷಿ : "ಕಲತೆ=ಜೀವಿಗಳ ಆಯುಷ್ಯಮಂ ಎಣಿಸಿದಪಂ . . . ಲೆಕ್ಕಿಗಂ" (ಕಾಕಳ್ಳ. ೦೦೪).

**ಲೆಕ್ಕಿಗರ ಪಿರಿಯ** = ಕರಣಿಕರಲ್ಲಿ ಶ್ರೇಷ್ಠನಾದವನು : ಲೆಕ್ಕಿಗರ ಪಿರಿಯನೆನಿಪಾಂಡಯ್ಯಂ (ಕಬ್ಬಶಾ. ೯). **ಲೆಕ್ಕಿಗರರಸ**=ಲೆಕ್ಕಿಗರ ಪಿರಿಯ : ಒಪ್ಪುವ ಲೆಕ್ಕಿಗರರಸನೊಗೆದನೆಸೆವಾಂತಯ್ಯಂ (ಕಬ್ಬಶಾ. ೦೦) ; ಲೆಕ್ಕಿಗರರಸನಂತೆ ಇವನು ! ಕರಣಿಕಾಗ್ರಣಿಯಂತೆ ! (ಕುಂಗಶ. ೦೯).

[ಲೆಕ್ಕ₂ + – ಇಗ]

**ಲೆಕ್ಕಿಸು₁** 'ಲಕ್ಕಿಸು' ನೋ.

**ಲೆಕ್ಕಿಸು₂** (ಕ್ರಿ). ಎಣಿಕೆ ಮಾಡು ; ಲೆಕ್ಕ ಹಾಕು : "ಎಣ್ಣನೆ ಲೆಕ್ಕಿಪುದುಂ" (ರಪ್ಪಕಂ. ೬) ; ಮೇಣಲಸದೆ ಲೆಕ್ಕಿಸುತುಂ ಸೆಳ್ಳಿಲೆಯಂ ಪೆಸರ್ಗೊಂಡು ಪಜಿದೊಡಾದುವು ಕಿಡುಗುಂ (ರೋಕೋಚ. ೯–೨೬) ; ಗಣಕರು ಲೆಕ್ಕಿಸಲಾಜದ ಬೆಜಗಾಗೆ (ಬಸರ. ೮–೦೨೬) ; ಲೆಕ್ಕಿಪರಾರು ಕಲ್ಲರೆಗಳ (ವೋಹಶ. ೦೯-೭೪). [ಲೆಕ್ಕ₂ + – ಇಸು₂]

**ಲೆಕ್ಖಾಚಾರ** 'ಲೆಕ್ಕಾಚಾರ' ನೋ.

**ಲೆಖ್ಖ** 'ಲೆಕ್ಕ₂' ನೋ.

**ಲೆಖ್ಖತನಿಖೆ** (ನಾ). ಲೆಕ್ಕದ ಪರಿಶೀಲನೆ,—ತಪಾಸಣೆ : ಭಾರತದ ಹಣಕಾಸಿನ ಆಡಳಿತಾಧಿಕಾರ – (Controller) ಮತ್ತು ಲೆಖ್ಖತನಿಖೆ ಅಧಿಕಾರಿ . . . ಇವರ ಅಧಿಕಾರ . . . ಈ ಎಲ್ಲ ವಿಷಯಗಳ ಮೇಲೆ ರಾಜ್ಯಾಂಗ ರಚನೆಯಾಗಿದೆ (ಒಳ್ಳಿಶ. ೦೨೬). [ಲೆಖ್ಖ (< ಲೆಕ್ಕ₂) + ತನಿಖೆ]

**ಲೆಖ್ಖಾಚಾರ** 'ಲೆಕ್ಕಾಚಾರ' ನೋ.

**ಲೆಗ್ಗ** 'ಲಗ್ಗ' ನೋ.

**ಲೆಟಗೆ** 'ನೆಟ್ಟಿಕೆ' ನೋ.

**ಲೆಡ್ಜರ್** (ನಾ). ೧. ವ್ಯಾಪಾರ, ವ್ಯವಹಾರಗಳ ಲೇವಾದೇವಿಯ ಲೆಕ್ಕಗಳನ್ನು ಬರೆದಿಡುವ ಪುಸ್ತಕ ; ಮುಖ್ಯಲೆಕ್ಕದ ಪುಸ್ತಕ ; ವರ್ಗ ; ಹಣಕಾಸಿನ ದಾಖಲೆ : ಲೆಡ್ಜರ್ ಬರೆಯುವ ಅವಾಂತರದಲ್ಲಿ ಕಾಗದವನ್ನು ಒಡೆದು ಓದಿಕೊಂಡ (ಕಾಯಿಳ. ೦೭). ೨. ಒಂದು ಬಗೆಯ ಅಳತೆಯ ಕಾಗದ : ಯಂತ್ರದಲ್ಲಿ ಕಾಗದವನ್ನು ತಯಾರಿಸುವಾಗ 'ಸೈಜ್' ಅನ್ನು ಸೇರಿಸಿ ಬಾಂಡ್, ಲೆಡ್ಜರ್, ಇಂಡೆಕ್ಸ್ ಮೊದಲಾದ ಕಾಗದಗಳನ್ನು ತಯಾರಿಸುವರು (ಮುದ್ರಳ. ೬೦). [← ಇಂ. Ledger]

**ಲೆತ್ತ** 'ನೆತ್ತ₁' ನೋ.

**ಲೆಪ್ಪ** (ನಾ). ೧. ಬಳಿಯುವಿಕೆ ; ಲೇಪನ : "ಲೆಪ್ಪ ಮೊದಲಾಗುಳ್ಳ ಕೆಲಸಮುಂ (ಹ)ಪುಸ್ತಕರ್ಮ ಎಂಬುದು" (ಹಲಾಯು. ೯೭-೪೩೭) ; ಲೆಪ್ಪದ ಬೊಂಬೆಯನೆರಕಂಬೊಯ್ದೊಪ್ಪಂಬೂಸಿದ ಪುತ್ತಟಿಯಂ ಬೇಱಾಗಿ ತೋಱುಗುಮಲ್ತೆ (ರಾಜಶೇಖ. ೦೦-೦೯). ೨. ಬಳಿಯುವ ದ್ರವ; ಲೇಪನ ಸಾಮಗ್ರಿ : "ಲೆಪ್ಪಮೆನೆ ಲೇಪ್ಯಂ" (ಕಲಿ. ೯೬); ಇಲ್ಲಿಯ ಚಿತ್ರದ ಲೆಪ್ಪದ ಕಾಷ್ಠಕರ್ಮದ ರೂಪುಗಳೊಳೆಲ್ಲಂ (ವಡ್ಡರಾ. ೩೩-೭); ಇರುಳ ಲೆಪ್ಪವ ತೊಡೆದ ಕಾಳೋರಗನ ಮನೆಯೊ (ಹಕಶಾ. ೫-೦೭); ಒಪ್ಪಗೆಟ್ಟಾಱುದರುಶನದ ಗತಿ ಮಿತಿವಿಡಿಯ ಲೆಪ್ಪದಲಿ ಸವೆವ ಬಹುಭಾಷಿಯಲ್ಲ (ಶಿವಗೀ. ೫೯-೨೭೫). ೩. ವಿಗ್ರಹಾದಿಗಳನ್ನು ಮಾಡಲು ಉಪಯೋಗಿಸುವ ಎರಕ : ರುಕ್ಮಿಣೀ ರಮಣಿ ಲೆಪ್ಪದ ಕಲ್ಲ ಪೆಣ್ಣ ರೂಪೆನೆ ಮರವಟ್ಟಳ್ (ಜಗಸಿ. ೦೦-೭೬); ಒಪ್ಪಿದಳ್ ಲೆಪ್ಪದ ಕರುವಿನವೊಲ್ (ದಕಳು. ೬-೯೨). ೪. ಮಣ್ಣು, ಮೇಣ, ಎರಕ ಮೊದಲಾದುವುಗಳಿಂದ ಮಾಡಿದ ಗೊಂಬೆ,—ಪ್ರತಿಮೆ : ಸಹಜಮಪ್ಪ ಕಾಂತಿಯೊಳೊಪ್ಪಱುಡೆದು ಲೆಪ್ಪದಂತಿರ್ದ ಮಗನಂ ಗೆಂಟಿನೊಳೆ ಕಂಡು (ಶಾಂತಿಪು. ೬೭೨); ಇದು ಭೂಪನ ರೂಪಿದು ಲೆಪ್ಪದ ರೂಪೆನಲೆಂತುಮಱಿಯಲರಿದು (ಶಂಕರಪು. ೩-೨೬); ಲೆಪ್ಪದುರಗನ ಹಿಡಿವಡೇತಕೆ ಗರುಡಮಂತ್ರವು (ಕುವ್ಯಾದ್ರೋ. ೪-೩೪); ಸುರಗಿಯಿಂದಾ ಲೆಪ್ಪದರಸನ ಉರವನಿಱಿದಿಂಟದಳು ಮಿಗೆ ನೆತ್ತರನು (ಶಾಕ್ಕಭಾ. ೦೯-೪೯). ೫. (ಆಲಂ) ಸಂಬಂಧ : ಇಂತೀ ಜೀವದ ದೃಷ್ಟವ ಕಡು ಎನಗಿದೆತ್ತಳ ಸರ್ವಜೀವದಯ ಈ ರಕ್ತದ ಲೆಪ್ಪವ ಬಿಡಿಸಾ ಕಲ್ಲು ಮಣ್ಣು ಮರನಂತೆ (ಶರಣ. ೩೫-೨೯೨). [< ಪ್ರಾ. ಲೇಪ್ಪ. / ಸಂ. ಲೇಪ್ಯ]

**ಲೆಪ್ಪಗಾಱ** (ನಾ). ಲೇಪಿಸುವವನು ; ಬಳಿಯುವವನು : "ಲೇಪಕಃ ಪಳಗಂಚಃ—ಈ ೨ ಲೆಪ್ಪಗಾಱಂ" (ಹಲಾಯು. ೯೭-೪೩೭).

[ಲೆಪ್ಪ + – ಕಾಱ]

**ಲೆಪ್ಯಾಹಾರ** (ನಾ). [ಜೈನ] ಜೈನಾಗಮದಲ್ಲಿ ಹೇಳಿರುವ ಕರ್ಮಾಹಾರ, ನೋಕರ್ಮಾಹಾರ, ಕಬಳಾಹಾರ, ಲೇಪ್ಯಾಹಾರ, ಓಜಾಹಾರ ಮತ್ತು ಮಾನಸಾಹಾರ ಎಂಬ ಆರುಬಗೆಯ ಆಹಾರದ ಪ್ರಕಾರಗಳಲ್ಲಿ ಒಂದು: ವೃಕ್ಷಂಗಳ್ಗೆ ಲೆಪ್ಯಾಹಾರಮಕ್ಕುಂ (ಕ್ರಾಪಶಾ. ೭೨-೬) ; ಈ ಗಾಥಾ ಸೂತ್ರನಿರೂಪಿತಕ್ರಮದಿಂ ನೋಕರ್ಮಾಹಾರಮುಂ ಕರ್ಮಾಹಾರಮುಂ ಕಬಳಾಹಾರಮುಂ ಲೆಪ್ಯಾಹಾರಮುಂ ಓಜಾಹಾರಮುಂ ಮಾನಸಾಹಾರಮುಮೆಂದಕ್ಕುಂ . . . ಏಕೇಂದ್ರಿಯನಿಕಾಯಕ್ಕೆ ಲೆಪ್ಯಾಹಾರಮಕ್ಕುಂ (ಕಸಾರ. ೫೦೦). [< ಸಂ. ಲೇಪ್ಯಾಹಾರ ]

**ಲೇ** (ಅ). ಸಂಬೋಧನಾರ್ಥಕ ಅವ್ಯಯ : ಇನ್ನೇನು ಮಾಡಲಿ, ಲೇ (ಪಪ್ಪಶ. ೦೦೨). [ < ಎಲೆ₂ ]

**ಲೇಕಿ** 'ಲೆಂಕಿ₂' ನೋ.

**ಲೇಕಿಗ** (ನಾ). (ನೆಲದ ಮೇಲೆ ಬಿದ್ದಿರುವ) ಕಾಳನ್ನು ಆರಿಸಿಕೊಂಡು ತಿನ್ನುವವನು ; (ನೆಲದ ಮೇಲೆ ಬಿದ್ದಿರುವ) ಧಾನ್ಯವನ್ನು ಆರಿಸಿಕೊಂಡು ಜೀವಿಸುವವನು : ನಿನ್ನ ಪಾಕಶಾಲೆಯಲ್ಲಿ ಬಿದ್ದ ಕಾಳ ರಾಶಿ ತಿಂಬ ಲೇಕಿಗನು (ಶಿಕ್ಷೋಚು. ೩೦-೦). [ಲೇಕಿ (< ಲೆಂಕಿ₂) + – ಗ₂]

**ಲೇಖ** (ನಾ). ೧. ಬರಹದ ದಾಖಲೆ : ಬರಹ ; ಅವರ ಕೈಯೊಳು ಕೊಟ್ಟು ಲೇಖಾರ್ಥವನಱಿದು ನೀವನಿಬರುಂ ಹೇಳುವುದೆನಲು (ಶಾಕು. ೩-೩೯); ಮರ ಸುಲಭವಾಗಿ ಒಡೆದು ಹೋಗುವುದರಿಂದಲೂ ಗೆದ್ದಲು ಮುಂತಾದ ಕೀಟಗಳಿಗೆ ತುತ್ತಾಗುವುದರಿಂದಲೂ ದೀರ್ಘಕಾಲ ಇರಬೇಕಾದ ಯಾವ ಲೇಖಕ್ಕೂ ಅದನ್ನು ಭಾರತೀಯರು ಉಪಯೋಗಿಸಲಿಲ್ಲ ವೆಂದು ತೋರುತ್ತದೆ (ಕನ್ನಸಂ. ೬೭). ೨. ಕ್ರಮವರಿತು ವಿಷಯವನ್ನು ಪ್ರತಿಪಾದಿಸುವ ಬರವಣಿಗೆ : ಲೇಖನ : ಹೀಗೆ ಈ ಎಲ್ಲ ಸಂಗತಿಗಳನ್ನು ಒಟ್ಟುಗೂಡಿಸಿ ಅವಳೊಂದು ಲೇಖ ಬರೆದಳು (ಇಕ್ಕೆ. ೨೩೦); ವೈಜ್ಞಾನಿಕ ವಿಷಯದ ಲೇಖಗಳಿಗೆ ಮೂಲಸ್ಥಾನವೆಂದರೆ ' ಪ್ರಬುದ್ಧಕರ್ಣಾಟಕ ' (ಸುವರ್ಣ. ೨೦೬) ೩. ಬರವಣಿಗೆ ಅಥವಾ ಚಿತ್ರಲೇಖನಕ್ಕೆ ಉಪ ಯೋಗಿಸುವ ಹಲಗೆ,–ಲೇಖನ ವಸ್ತು : "ಲೇಖಮೆನ್ನಲಳಕಮುದಕ್ಕುಂ" (ಶಬ್ದಕ. ೦೦೭). ೪. ದೇವತೆ : "ಆದಿತ್ಯ . . . ಲೇಖ, ಸುಪರ್ವಾ . . . ದೈವತಂ – ಈ ೨೦ ದೇವರ್ಕಳ ಪೆಸರ್"(ಹಲಾಯು. ೨-೪).

ಲೇಖವಲ್ಲಭ ' ಪರಾ. [ ಸಂ. ]

**ಲೇಖಕ** (ನಾ). ೧. ಬರೆಯುವವನು; ಲಿಪಿಕಾರ : "ಲೇಖಕ, ಲಿಪಿಕರ – ಈ ೨ ಲೇಖಕಂ" (ಹಲಾಯು. ೯೬-೯೩೨) ; ಚರಣಂಗಳ್ನಾಲ್ಕುಮೆಯ್ದಿಳಂ ಪರಿಕಿಸೆ ಕರ್ತನಂತೆ ಕವಿಗೆ ಲೇಖಕನಪ್ಪಂಗಿರದಕ್ಕುಮುಪಾಯಂಗಳ್ ಚರಣಾಂತ್ಯ ದೊಳೋದುವಂಗೆ ದುಷ್ಕರಮಕ್ಕುಂ (ಛಂದೋಂಬು. ೦-೪೪ ಅಹರ್ಡ ೦೭); ಪ್ರತಿಯೊಂದು ಪಂಚಾಯಿತಿಯಲ್ಲಿಯೂ ಗಣಕ, ಲೇಖಕ ಮತ್ತು ಸಾಕ್ಷ ಪಾಲ ಎಂಬ ಮೂವರನ್ನು ನೇಮಿಸಿರುತ್ತಿದ್ದರು (ಭಾರವ. ೩೭). ೨. ಸಾಹಿತ್ಯದ ಯಾವುದಾದರೂ ಪ್ರಕಾರವನ್ನು ಬರೆಯುವವನು; ಬರಹಗಾರ; ಗ್ರಂಥಕರ್ತ : ಇಷ್ಟು ಅನುಕೂಲವಾದ ರಾಜಮಾರ್ಗ ದೊರೆತ ಮೇಲೆ ಲೇಖಕರು ಉಳಿದ ಪ್ರಯೋಗಗಳ ಹವ್ಯಾಸವನ್ನು ಬಿಟ್ಟು ಬಿಟ್ಟರು (ಪಠರಾ. II. ೦೨೬೪). ಓದುಗನಿಗೆ ಲೇಖಕನ ಅನುಭವದ ಆನಂದವೂ ಉಂಟಾಗುತ್ತದೆ (ಸ್ವ.ಶಿ. ೪).

**ಲೇಖಕಗಿರಿವಜ್ರ** = ಲಿಪಿಕಾರರೆಂಬ ಬೆಟ್ಟಕ್ಕೆ ವಜ್ರಾಯುಧ ದಂತಿರುವವನು : ಒಂದು ಬಿರುದು : ಬಿರುದ ಲೇಖಕಗಿರಿವಜ್ರಂ ನಾಗದೇವನ ಲಿಖಿತಂ (ಕಶಿ. ೭೦-೨-೦೦೩: 1056). [ ಸಂ. ]

**ಲೇಖಕಿ** (ನಾ). ಸಾಹಿತ್ಯದ ಯಾವುದಾದರೂ ಪ್ರಕಾರವನ್ನು ಬರೆಯು ವವಳು,–ರಚಿಸುವವಳು : ರಚನೆಯ ಪ್ರಥಮ ಪ್ರಯತ್ನದ ದೃಷ್ಟಿ ಯಿಂದ ಲೇಖಕಿಯ ಉದ್ಯಮ ಹೊಗಳತಕ್ಕಂತಹದೇ ಸರಿ (ಇಕ್ಕೆ. ೨೩೨). [ ಲೇಖಕ + – ಇ ]

**ಲೇಖಣಿ** ' ಲೆಕ್ಕಣಿ ' ನೋ.

**ಲೇಖನ** (ನಾ). ೧. ಬರಹ; ಬರವಣಿಗೆ : "ಅಕ್ಷರಂ ಲಿಪಿ ಲೇಖನಂ ಬರಹಂ" (ಚುಂಗರಾ. ೦೦೭-೦೬). ೨. = ಲೇಖ ೨ : ಅನೇಕ ಪ್ರಬಂಧ ಗಳನ್ನೂ ಲೇಖನಗಳನ್ನೂ ಪ್ರಕಟಿಸಿವರು (ಸಸ್ಕೆ. ೯೦); ಶಕುಂತಲೆಯ ವಿಷಯದಲ್ಲಿ ಗಮನಾರ್ಹವೆನಿಸಿದ ಕೆಲವಂಶಗಳನ್ನು ವಿವೇಚಿಸುವುದೇ ಈ ಲೇಖನದ ಉದ್ದೇಶ (ಶರ್ಮಿಷ್ಠಾ. ೬೭). ೩. ತಾಳೆಗರಿ. [ಸಂ.]

**ಲೇಖನಕಲೆ** (ನಾ). ಅಕ್ಷರವನ್ನು ಸುಂದರವಾಗಿ ಬರೆಯುವಿಕೆ: ಲಿಪಿಶಾಸ್ತ್ರ : ಲೇಖನಕಲೆಯನ್ನು (calligrapny) ಕಲಿಸುವ ಶಾಲೆಗಳೂ ಇದ್ದುವು (ಕನ್ನಸಂ. ೨೦). [ ಸಂ. ಲೇಖನಕಲಾ ]

**ಲೇಖನಪದ್ಧತಿ** (ನಾ). (ಯೋಚಿಸಿದ ವಿಚಾರಗಳನ್ನು) ಬರಹದಲ್ಲಿ ಮೂಡಿಸುವ ಪದ್ಧತಿ : ಪಠನಪದ್ಧತಿ (Oral transmission)ಯಿಂದ ಲೇಖನಪದ್ಧತಿಗೆ (Written transmission) ಆದ ಈ ಪರಿವರ್ತನೆ ಕ್ರಮಕ್ರಮೇಣ ನಡೆದಿರಬೇಕು (ಭಾರಶ. ೨೪). [ಸಂ.]

**ಲೇಖನಶಾಲೆ** (ನಾ). ಬರವಣಿಗೆಯ ಕೋಣೆ : ಸಂನ್ಯಾಸಿ ಲಿಪಿಕಾರರು ತಮ್ಮ ಕೊಠಡಿಯಲ್ಲಿ ಅಥವಾ ಕೋಣೆಯಲ್ಲಿ ಕುಳಿತು ಹಸ್ತಪ್ರತಿ ಗಳನ್ನು ಬರೆಯುತ್ತಿರಲಿಲ್ಲ . . . ಇವರಿಗೆ ಮಠದಲ್ಲಿ ಪ್ರತ್ಯೇಕವಾದ ಕೊಠಡಿಯೊಂದಿತ್ತು; ಅದನ್ನು ಲೇಖನಶಾಲೆ (scriptorium) ಎಂದು ಕರೆಯುತ್ತಿದ್ದರು (ಕನ್ನಸಂ. ೩೦). [ ಸಂ. ಲೇಖನಶಾಲಾ ]

**ಲೇಖನಸಾಮಗ್ರಿ** (ನಾ). ಬರೆಯಲು ಬೇಕಾಗುವ ಲೇಖನಿ, ಮಸಿ, ಕಾಗದ ಮೊದಲಾದ ವಸ್ತುಗಳು : ಎಲೌ ಸಖಿಯರೆ, ಒಂದು ಗೀತಿಯನ್ನು ಆಲೋಚಿಸಿರುವೆನು ; ಲೇಖನಸಾಮಗ್ರಿ ಸಮೀಪದಲ್ಲಿಲ್ಲವಲ್ಲ ? (ಶಾಕುಂತ. ೩೯-೩). [ಸಂ. ಲೇಖನಸಾಮಗ್ರೀ]

**ಲೇಖನಿ** (ನಾ). = ಲೆಕ್ಕಣಿ : ಬಿಳಿಯ ಕಾಗದ ಹೃದಯ ಬಾಯಿ ಕಲಮು ದಾನಿ ನಾಲಿಗೆ ಎಂಬೋದು ಲೇಖನಿಯು (ತ್ರಿಲಂದ. ೨-೦೩-೨) ; ಹರನೊರೆದ ತೆಱದಿ ಭಕ್ತರ ಚರಿತಗಳನುಸುರುತಿರಲೊರ್ವ ಮಾಹೇಶನಲ್ಲವೆನೆ ಕೋಪದಿಂ ಮವಿರೂಪಾಕ್ಷನಂ ಲೇಖನಿಯೊಳೆಟ್ಟು ಶಿವ ಮತ್ತೆ ಪೇಳ್ದಂತುಸುರಲು (ಗುರುಚಾ. ೦೩-೨೭) ; ರಾಯನ ಕತ್ತಿಯಲ್ಲಿಲ್ಲದ ಬಿಸಿಯು ಪೆದ್ದನ್ನನ ಲೇಖನಿ ಯಲ್ಲಿ ಆವೇಶಗೊಂಡಿದೆ (ಸಾಹಿತ್ಯ. ೯೦). [ಸಂ. ಲೇಖನೀ]

**ಲೇಖರಿ** (ನಾ). = ಲೇಖಕ ೧ : ತಪ್ಪಿರೆ ತಿದ್ದಲ್ಬಲ್ಲಂ ಒಪ್ಪುವ ಪಳೆಗವಿ ಗಳಸಿರ್ದ ಕನ್ನ(ಡ)ಗಬ್ಬದಿ ತಿಪ್ಪಣಾಖ್ಯಂ ಲೇಖರಿಯಪ್ಪಂ ಸೇನಾನಿ ದೇವರಾಯನಿಕಟದೊಳ್ (ವಾಂಣ್ಯ. III. ೩೬೩ ಕ್ರಿ.ಶ.೧೪೩೪). [←ತೆಲು. ಲೇಖರಿ]

**ಲೇಖಲಿಪಿ** (ನಾ). ಒಂದು ಬಗೆಯ ಲಿಪಿ : ಚಕ್ರಲಿಪಿ ಲೇಖಲಿಪಿ ದರ್ಪಣ ಲಿಪಿ . . . ಯಿಾ ಅಗಣಿತಲಿಪಿಗಳನೋದಲಱಿಯದೆ . . . ಕಳಕಳಗೊಳು ತಿದ್ದರು ವಿದ್ವಾಂಸರುಗಳೆಲ್ಲ (ಚಾಸ್ಕರ. ೭೭-೩). [ಸಂ.]

**ಲೇಖವಲ್ಲಭ** (ನಾ). ದೇವತೆಗಳ ಒಡೆಯ ; ಇಂದ್ರ : ಕೂಲಿ ಸೂಡಿದ ಪುಷ್ಪಮಾಲೆಯಂ ಮರ್ವಾಸಲೋಲಮುನಿ ಕುಡೆ ಸಿತವ್ಯಾಲಕುಂಭ ಕೃಟ್ಯೊಡಾ ಲೇಖವಲ್ಲಭಸ್ಥೂಲಭಾಗ್ಯಂ ಪೋದ ಕಾಲದೊಳು (ಚಾವಶ. ೩-೦೪). [ಸಂ.]

**ಲೇಖವಾರ್ತೆ** (ನಾ). ಬರಹದಲ್ಲಿರುವ ಸುದ್ದಿ ; ಪತ್ರದ ಅಭಿಪ್ರಾಯ : ಬಾಹುಬಲಿಕುಮಾರನಲ್ಲಿಗಮಾ ಸ್ಥಿತಿಯೊಳೋಲೆಯುಮಂ ದೂತರುಮನಟ್ಟ ದೊಡೆ ಲೇಖವಾರ್ತಾಕರ್ಣನದೊಳತಿಕುಪಿತನುಂ ಸಮರಸನ್ನದ್ಧನುಪಾಗಿ (ಚಾವುಂಪು. ೪೬) ; ಸೀತೆಯಲ್ಲಿಗೆ ದೂತರನಟ್ಟುವುದೆಂಬ ಲೇಖವಾರ್ತೆಯಂ ಕೇಳ್ದು (ಚಾವುಂಪು. ೩೦೩). [ಸಂ. ಲೇಖವಾರ್ತಾ]

**ಲೇಖವಾಹ** (ನಾ). ಪತ್ರಗಳನ್ನು ಒಯ್ಯುವವನು ; ಪತ್ರವಾಹಕ : ಓಲೆಕಾರ : "ಲೇಖವಾಹಂ ದೂತಂ" (ಚಸ್ತು ಕಶ. ೬೦-೩೮) ; ಅಂದಿದಿರೊಳೆ ಲೇಖವಾಹನಿವಹಂ ಬರೆ ಕಂಡನಿಳಾಧಿನಾಯಕಂ (ಆದಿಪು. ೬೩೬) ; ಉಡೆದೋಲುಂ ಪಣೆಕಟ್ಟುಂ ಮಡಮೋಱಿಸಿ ಮೆಟ್ಟಿದೆಕ್ಕವಡಮುಂ ಕೆಯ್ಯೊಳ್ ಪಿಡಿದಿರ್ದ ಕುಂಚಮುಂ ತನಗೊಡಂಬಡಂಬಡೆಯೆ ಲೇಖವಾಹಾಕೃತಿಯೊಳ್ (ವರ್ಧಮಾ. ೨-೯೩). [ಸಂ.]

**ಲೇಖವಾಹಕ** (ನಾ). = ಲೇಖವಾಹ : ಲೇಖವಾಹಕರ್ ತ್ವರಿತಗತಿ ಸಮೇತಂ ರಾಜಾಧಿರಾಜಂಗೆ ಕೃತಪ್ರಣಾಮರಾಗಿ (ಆದಿಪು. ೬೩೪) ; ಜನಕಂ ದಶರಥನಲ್ಲಿಗೆ ಲೇಖವಾಹಕರನಟ್ಟಿ (ಕಂಠಾಪುಮಾ. ೪-೯೨ ವ) ; ಲೇಖವಾಹಕರಂ ಶತಮುಖನಲ್ಲಿಗೆ ಕಟಿಪುವುದುಂ (ಕಂಪ್ರಕ್ಕೃ. ೦೩-೪೫ ವ). [ಸಂ.]

**ಲೇಖವಾಹನ** (ನಾ). = ಲೇಖವಾಹ : ಲೇಖವಾಹನಂ ಚಂದ್ರವಾಹನಂ ಗುತ್ಸಾಹದಿಂ ವಾರ್ತೆಯಂ ಪೇಳ್ವುದುಂ (ಸುಕುಮಾ. ೭-೩ ವ). [ಸಂ.]

**ಲೇಖಾಧುನಿ** (ನಾ). ಸುರನದಿ ; ದೇವಗಂಗೆ (?) : ನರನಾಥ ನೋಡಿ ಲೇಖಾಧುನಿಯ ಸಂತಸಂಬೆರೆದು ಸೌಮಿತ್ರಿಯಂ ಕರವೆಂದನಿರುಳಿರುವವರರೆ ಈ ತಾಣಮತಿರಮ್ಯಕರವಾಗಿದೆಕೊ ನೋಡು ತೀರದ ಬನವನು (ರಾಮಾಶ್ವ. ೨-೦೬-೦). [<ಲೇಖ+ಧುನಿ]

**ಲೇಖಿಕೆ** (ನಾ). = ಲೇಖಕಿ : ಅವಳು ಲೇಖಿಕೆ, ಕವಯಿತ್ರಿ, ಭಾಷಣಕಾರ್ತಿ –ಹೀಗೆಲ್ಲ ಆಗಬೇಕೆಂದು ಅವರು ಆ ದಿಸೆಯಲ್ಲಿ ಯಾವಾಗಲೂ ಯತ್ನಿಸುತ್ತಿದ್ದರು (ಸ್ಮೃತಿ. ೨೮೯). [ಸಂ. ಲೇಖಿಕಾ]

**ಲೇಖಿತ** (ಗು). ಬರೆಯಲ್ಪಟ್ಟ ; ಬರೆದ. [ಸಂ.]

**ಲೇಖಿಸು** (ಕ್ರಿ). ೧. ಬರೆ ; ಲೇಖನ ಮಾಡು. ೨. ಬರೆಯಿಸು : ಹರನಿಂದಧಿಕ ಹರಿಯೆ ಸರ್ವೋತ್ಕೃಷ್ಟನೆಂದಾಗ ಮಂದಮತಿ ವ್ಯಾಸಪತ್ರಿಕೆಯ ಲೇಖಿಸಿ ಪೊಳಲ ಬಾಗಿಲೊಳ್ಕಟ್ಟಿಸಿದನು (ಚಕುತ. ೩-೪-೨೪). ೩. ಚಿತ್ರಿಸು : ತೋಳಿನೊಳೊಜಿಗಿದಿನಿಯಳ ಕರ್ಣಪೂರದೊಳೆಯ ಕಸ್ತೂರಿರಸವ ನನೆಮೊನೆಯಿಂದ ಲೇಖಿಸಿದ (ಕಾವ್ಯಸಾ. ೦೬-೦). [ಲೇಖನ + – ಇಸು₃]

**ಲೇಖೀ** (ಗು). ಬರವಣಿಗೆಯಲ್ಲಿರುವ : ಮಹಾಲಕರಿಯ ಲೇಖೀ ಪರವಾನೆಯನ್ನು ಪಡೆಯದೆ ಯಾರೂ ಕಡಿಯಲಾಗದು (ಕಭಾಗ. ಕಂ. ೧೪).

[← ಮರಾ. ಲೇಖೀ ]

**ಲೇಖೀದಾಖಲೆ** (ನಾ) ಲಿಖಿತ ದಾಖಲೆ : ನಮ್ಮ ಪ್ರತಿಯೊಂದು ಕೆಲಸಕ್ಕೂ ಲೇಖೀದಾಖಲೆ ಬೇಕು (ಇಂಭ್ರಸಾ. ೦೨೦). [ಲೇಖೀ + ದಾಖಲೆ]

**ಲೇಖೀಹೊಣೆ** (ನಾ). ಲಿಖಿತದ ಮೂಲಕ ಕೊಡುವ ಜಾಮೀನು: ಚೆಕ್ಕಿನ ರಕಮು ವಸೂಲಿಮಾಡುವ ಬ್ಯಾಂಕಿನವರು ಅದರ ಲೇಖೀಹೊಣೆಯನ್ನು ತೆಗೆದುಕೊಂಡರೆ ಚೆಕ್ಕಿನ ಹಣವನ್ನು ಕೊಡಬಲ್ಲವು (ಬ್ಯಾಂಕಶ್ಯ. ೬೦).

[ಲೇಖೀ + ಹೊಣೆ (<ಪೊಣ್ಮೆ)]

**ಲೇಖೆ** (ನಾ). ೧. ಬರೆಯುವುದು ; ಬರವಣಿಗೆ. ೨. ಪತ್ರ ; ಕಾಗದ: ಜಟಿಲನಾಯನಾರರು . . . ನಂಬಿಯಾರೂರರ ವಿವಾಹಕ್ಕೆ ಬರುವಂತೆ ಶುಭಲೇಖೆಗಳನ್ನು ಕಳುಹಿಸಿದರು (ಪುರಾಪಿ. ೨೩). ೩. ಗೆರೆ ; ಸಾಲು ; ಪಂಕ್ತಿ : ಕಡುಗರಿದಪ್ಪ ಲೇಖೆಯದು ಕಾಳಿಕೆ (ರೂಕಪುಕ. ೦೦-೮೦) ; ಬಹುಧೂಮಲೇಖೆ ನಿಮಿರ್ದುವು ಮಿಹಿರಾಧ್ವದೊಳಾಂಜನೇಯನೊಡರಿಸೆ ಲಂಕಾದಹನಂ (ಕಂಠಾಪಾ. ೦೦-೦೪೩) ; ಡೊಂಕು ಲೇಖೆಗಳೆಲ್ಲ ಚೆಲುವಿನಂಕೆಗೆ ಸಂದು (ಹಚರ. ೦೦). 'ಧೂಮಲೇಖೆ' ಪರಾ. ೪. ಚಂದ್ರಬಿಂಬದ ರೇಖೆ. [ಸಂ. ಲೇಖಾ]

**ಲೇಖ್ಯ** (ನಾ). ಬರೆದುದು ; ಪತ್ರ ; ಕಾಗದ : "ಓಲೆ ಪತ್ರಮದು ಲೇಖ್ಯಮಕ್ಕು" (ಮಂಗರಾ. ೦೦೩-೦೩) ; ವ್ಯವಹಾರಕಾಂಡದಲ್ಲಿ . . . ಸಾಕ್ಷ್ಯ, ಲೇಖ್ಯ, ದಿವ್ಯ . . . ಪ್ರಕೀರ್ಣ ಎಂಬ ೨೫ ಪ್ರಕರಣಗಳಿವೆ (ಬಾಕರ. ೬೨). [ಸಂ.]

**ಲೇಖ್ಯದೋಷ** (ನಾ). ಬರವಣಿಗೆಯ ತಪ್ಪು – ದೋಷ : ಅಕಾಂತಿ, ವ್ಯಾಘಾತ (=ಅರ್ಥವಿರೋಧ), ಪುನರುಕ್ತ, ಅಪಶಬ್ದ, ಸಂಪ್ಲವ (= ಕೆಟ್ಟಜೋಡಣೆ) – ಇವು ಲೇಖ್ಯದೋಷಗಳು (ಕಶಾಅ. ೪೩). [ಸಂ.]

**ಲೇಜಯ** 'ನೇಜಯ' ನೋ.

**ಲೇಟು** (ನಾ). ತಡ ; ನಿಧಾನ ; ವಿಳಂಬ : ಗಾಡಿ ಎಷ್ಟು ದಿನ ಲೇಟು ? (ಜಾತಿಗೇ. ೯೦). [ ← ಇಂ. Late ]

**ಲೇಣದೇಣ** 'ಲೇನದೇನೆ' ನೋ.

**ಲೇಣೆ** (ನಾ). ಸಾಲ ; ಕಡ : ಸರ್ಕಾರದ ಉದ್ದೇಶಗಳಿಗಾಗಿ ಸಮ್ರಾಟರ ಸ್ವಾಧೀನದಲ್ಲಿಟ್ಟಿದ್ದ ಎಲ್ಲ ಸ್ವತ್ತೂ, ಆಸ್ತಿಯ ರೂಪದ ಲೇಣೆಗಳೂ . . . ರಾಜ್ಯದ ವಶದಲ್ಲಿ ನೆಲಸತಕ್ಕುದು (ಕಾರಾವ.೦೬೪). 'ದೇಣೆ', 'ಲೇಣೆದೇಣೆ' ಪರಾ. [← ಹಿಂ. ಲೇನಾ]

**ಲೇಣೆದೇಣೆ** 'ಲೇನೆದೇನೆ' ನೋ.

**ಲೇನು** (ನಾ). ಓಣಿ ; ಗಲ್ಲಿ; ಸಂದಿ : ಆ ರೋಡಿನ ಒಂದು ಲೇನಿನೊಳಗೆ ತಿರುಗಿದನು (ಕಾಚರೂ. ೪೬). [← ಇಂ. Lane]

**ಲೇನೆದೇನೆ, ಲೇಣ್ಣದೇಣ, ಲೇಣೆದೇಣೆ** (ನಾ). (ಸಾಮಾನ್ಯವಾಗಿ ಹಣವನ್ನು) ಸಾಲ ತೆಗೆದುಕೊಳ್ಳುವ ಮತ್ತು ಕೊಡುವ ವ್ಯವಹಾರ ; ಲೇವಾದೇವಿ : "ಲೇನೆದೇನೆ" ವ್ಯವಹಾರದ ನಿರ್ಭಾಗ್ಯರನ್ನೆಲ್ಲಾ ಜೀವನ್ನ ಅಲ್ಲಿಗೆ ಹಿಡಿದು ತರುತ್ತಿದ್ದ (ಪಾಪುಪ. ೦೦೬). **ಲೇಣದೇಣ** : ಆಯಾ ದಿನ ಲೇಣದೇಣ ಎಲ್ಲಾ ಫೈಸಲ್ ಮಾಡಿಬಿಡುತ್ತೇನೆ (ರಂಗಿ. ೦೬೨). **ಲೇಣೆದೇಣೆ:** ಬ್ಯಾಂಕುಗಳಂತೆ ತಮ್ಮ ಲೇಣೆದೇಣೆ ಪರಿಸ್ಥಿತಿಯನ್ನು ಪ್ರಕಟಿಸುವುದಿಲ್ಲ(ಹಣತ್ರ. ೩೦೮) ; ತಮ್ಮ ಸ್ಥಿರ ಚರಆಸ್ತಿಭೂಮಿಕಾಣಿ ಲೇಣೆದೇಣೆಗಳ ವಿವರವಿತ್ತು (ಪಾಪುಪ. ೨). 'ದೇಣಾಲೇಣ' ಪರಾ.

[←ಹಿಂ. ಲೇನಾದೇನಾ ; ಮರಾ. ಲೇಣದೇಣ]

**ಲೇಪ** (ನಾ). ೧. ಹಚ್ಚುವಿಕೆ ; ಸವರುವಿಕೆ : ನೇಪಾಳದ ಬೀಜಮಂ ಗಿರಿಕರ್ಣಿಕೆಯ ರಸದಿಂ ಮರ್ದಿಸಿ ನಾಭಿಗೆ ಲೇಪವ ಮಾಡೆ ಶೀಘ್ರವಿರೇಕಮಕ್ಕು (ಗಳವೈ. ೭೦೪). ೨. ಮುಲಾಮು, ಗಿಲೀಟು, ಸುಣ್ಣ ಮುಂತಾದ ಲೇಪನ ವಸ್ತು : ಕಂದುಬಣ್ಣಕ್ಕೆ ಚಿನ್ನದ ಲೇಪಕೊಟ್ಟಂತೆ ರಂಜಿಸುತ್ತಿತ್ತು (ಕಕತು. ೬-೨೭) ; ಹುಣ್ಣ ಬೇನೆಗೆ ಲೇಪ ಹಚ್ಚಿಸಲೊ ? ಉಪ್ಪಿಡಲೊ ? (ಹಪ್ಸರ. ೨೨-೩). ೩. ಅಂಟಿಕೊಂಡಿರುವ ವಸ್ತು : ಮಿಾಪರೇ ಪೋಪರೇ ಪಾಪವೇನದು ಕೆಸಜಿ ಮಿಾಪರೆ ಮೈಯ ಮಲ ಪೋಪುದಾ ಪಾಪ ಲೇಪವಾಗಿಕ್ಕು (ಸರ್ವಜ್ಞ. ೯೦೪). ೪. ಕೊಳೆ ; ಕೊಳಕು : ಜ್ಞಾನಕ್ಕೆ ಲೇಪವಾದವನಿರವು ತುಪ್ಪದ ನಂಜಿದ ಬತ್ತಿಯಂತೆ (ಷೋಕರೂ. ೯-೦೦). ೫. ಊಟ ; ಆಹಾರ : "ಲೇಪಃ . . . ನ್ಯಾದಃ —೭ ಭೋಜನದ ಹೆಸರುಗಳು" (ಸಿದ್ಧಾಂತಿ. ೨೯೦). ೬. (ಆಲಂ) ಸಂಬಂಧ ; ಗೊಡವೆ : ಈಶ್ವರನೊಬ್ಬನಿದ್ದರೆ . . . ಜಗದ್ವ್ಯವಹಾರದಲ್ಲಿ ಅವನಿಗೆ ಆಸಕ್ತಿಯಾಗಲಿ ಲೇಪವಾಗಲಿ ಇದೆಯೆಂದು ನಿರೀಕ್ಷಿಸಲಾಗುವುದಿಲ್ಲ (ಪುಸ್ತಾರ. ೯ ಶೀರಕ).

**ಲೇಪಮಾಡು** = ಬಳಿ ; ಹಚ್ಚು ; ಲೇಪಿಸು : ಶ್ರೀತೊಳಸಿಯನ್ನೂ ಸುಗ್ಗೆಬೇರನ್ನೂ ಮಜ್ಜಿಗೆಯಿಂದರೆದು ಲೇಪವಮಾಡೆ ಶೀತಜ್ವರಂ ಪಾಣ್ಗುಂ (ಗಳವೈ. ೬೦). **ಲೇಪಹಾಕು** = ೧. ಮುಲಾಮು ಇತ್ಯಾದಿಯನ್ನು ಬಳಿ. – ಸವರು : ತಲೆ ಒಡೆದವನೂ ಸಮ ಲೇಪಹಾಕಿದವನೂ ಸಮ (ಗಾದೆ). ೨. (ಆಲಂ) ಸಂತೈಸು ; ಸಮಾಧಾನಮಾಡು : ಹೆಂಡತಿ ಅವನ ನೊಂದ ಮನಸ್ಸಿಗೆ ಲೇಪಹಾಕಿದಳು (ಯೋಧಕ್ಕ. ೨೬). [ಸಂ.]

**ಲೇಪಕ** (ನಾ). ೧. ಬಳಿಯುವವನು ; ಲೇಪಿಸುವವನು : "ಲೇಪಕಃ, ಪಳಗಂಡಃ – ಈ ೨ ಲಿಪ್ಪಗಾಜಂ" (ಹಲಾಯು. ೯೬-೪೩೬). ೨. ಅಚ್ಚು ತಯಾರಿಸುವವನು ; ಮಾದರಿಯನ್ನು ಮಾಡುವವನು. [ಸಂ.]

**ಲೇಪನ** (ನಾ). ೧. = ಲೇಪ ೧ : "ಲೇಪನಮೆನಲ್ ಪೂಸುವುದೆನಿಕ್ಕು" (ಮಂಗರಾ. ೦೦೦-೨೩) ; ಉಪಚರಿತಲೇಪನಾಲಂಕಾರನುಂ . . . ಆಗಿ (ಕಾದಂಪೂ. ೭೯) ; ದ್ರಾವಕವನ್ನು ಗಂಟಲೊಳಕ್ಕೆ ಲೇಪನ ಮಾಡಿಸಿಕೊಂಡೆ (ಹಂಟರು. ೯). ೨. =ಲೇಪ ೨. [ಸಂ.]

**ಲೇಪಾಳ₁** 'ನೇಪಾಲ₁' ನೋ.

**ಲೇಪಾಳ₂** (ನಾ). ಒಂದು ದೇಶದ ಹೆಸರು ; ನೇಪಾಳ : 'ಲೇಪಾಳಿಗ' ಪರಾ. [< ಸಂ. ನೇಪಾಲ]

**ಲೇಪಾಳಿಗ** (ನಾ). ನೇಪಾಳದೇಶದವನು : 'ಲೇಪಾಳಿಗಿತಿ' ಪರಾ.

[ಲೇಪಾಳ₂ + — ಇಗ]

**ಲೇಪಾಳಿಗಿತಿ** (ನಾ). ನೇಪಾಳ ದೇಶದವಳು : ಇತಿಗೆ . . . ಕನ್ನಡಿಗಿತಿ, ಲೇಪಾಳಿಗಿತಿ [ಶಾಶಾ. ೪೩] (ಶಮದ. ೨೦೯ ಪ್ರಯೋ).

[ಲೇಪಾಳಿಗ + — ಇತಿ₁ (< — ಇತ್ತಿ)]

**ಲೇಪಿ** (ನಾ). ಲೇಪಿಸಿಕೊಂಡುದು ; ಬಳಿದುಕೊಂಡುದು : ಅವನೀಶ ಕೇಳ್ ಘೃತಂ ಪೊರೆಪ ಕೈ ಜಡ್ಡಹುದು ಸವಿಯನರಿಯದು ರಸಜ್ಞಂ ಲೇಪಿಯಲ್ಲದಿನಿದರಿಯುವಂತಾಟಪ್ಪೆಯಯ್ಯ (ಜೈಭಾ. ೬-೦೩).

[ಸಂ. ಲೇಪಿನ್]

**ಲೇಪಿತ** (ಗು). ೧. ಬಳಿದ; ಸವರಿದ: ಆಗ ಇವನು ಸೋತು ಧೂಳು ರಕ್ತ ಯಶಸ್ಸಿನಿಂದ ಲೇಪಿತನಾಗಿ ಬರುತ್ತಾನೆ (ಮಲಿಷಾ. ೦೯) (ನಾ). ೨.(ಆಲಂ) ಅಪಯಶಸ್ಸನ್ನು ಹೊಂದಿರುವುದು; ಅಪಕೀರ್ತಿಯುನ್ನು ಹೊಂದಿರುವುದು(?): ಲೆಕ್ಕದಲ್ಲಿ ಲೇಪಿತವಾದವರಿಗೇಕೆ ಅಜಾತನ ಸುದ್ದಿ (ಪೋಳಜಾ. ೦೨-೪೪). [ಸಂ.]

**ಲೇಪಿಸು** (ಕ್ರಿ). ೧. ಬಳಿಯಲ್ಪಡು; ಲೇಪನ ಹೊಂದು: ಆಗಸವೆಲ್ಲಂ ಸುಧೆಯಿಂದೆ ಲೇಪಿಸಿದುದು . . . ದೆಸೆಯೆಲ್ಲಂ ಚಂದನಾಸಾರದಿಂ ಮುಸುಕಿತ್ತೆಂಬಿನಮೊಂದು ಬೆಳ್ಪೆಳಗು ಪರ್ವಿತ್ತೆಯ್ದೆ ರೋದೋಂತರಮಂ (ಆದಿಪು. ೦೦೩). ೨. ಬಳಿ; ಸವರು: ನಾನು ಪರಿಮಳವ ಲೇಪಿಸುವುದಕ್ಕೆ ಮುನ್ನವೇ ಜಂಗಮಕ್ಕೆ ಸುಗಂಧದ್ರವ್ಯಗಳ ಲೇಪಿಸುವೆ (ಮಹಾದೇ. ೪. ೬೩-೦೮೩); ಉಬ್ಬಿದ ಸ್ಥಳಕ್ಕೆ ಅರಿಷಣಬೇರನ್ನು ತೇದು ಲೇಪಿಸಿದಳು (ಕಂಗ. ೦೯). ೩. ಅಂಟು; ಹತ್ತಿಕೊಳ್ಳು: ಲೋಪವಾದರು ಸರಿಯೆ ಕರ್ಮಜ ಪಾಪಪುಣ್ಯಗಳೆರಡು ನಿನ್ನನು ಲೇಪಿಸವು (ಜಾರ. ೨೯-೦೦). [ಲೇಪನ + – ಇಸು]

**ಲೇಪು** (ನಾ). ಅರಳೆ ತುಂಬಿ ಮಾಡಿದ ತೆಳ್ಳನೆಯ ಗಾದಿ: ಬಲದೇವ ಮಂತ್ರಿ ತನ್ನ ಬಾಲೆಯಳಿಗಿತ್ತ ಬಹುತೆಳಿತ ಹೇಮದ ಮಂಚ ಲೇಪು ಮುಸ್ತೈದ (ಶರೀ. ೦೯೬-೩); ಮಲಗಿಬಿಡೋಣ ಮತ್ತನೆ ಲೇಪಿನ ಮೇಲೆ (ತಿನಾಂ. ೨೬); ಹಂಸತೂಲಿಕಾತಲ್ಪ ಎಂದರೆ . . . ಹತ್ತಿಗೆ ಬದಲಾಗಿ ಅದನ್ನು ಉಪಯೋಗಿಸಿ ತುಂಬಿ ಹೊಲಿದ ಲೇಪು (ಸಾಹಿಕ. ೩೬).

[← ಮರಾ. ಲೇಪ್. / ತೆಲು. ಲೇಪು]

**ಲೇಪ್ಯ** (ಗು). ೧. ಬಳಿದ; ಲೇಪಿಸಿದ. (ನಾ). ೨. ಬಳಿಯುವ ವಸ್ತು; ಲೆಪ್ಪ: "ಲೆಪ್ಪಕ್ಕೆ ಲೇಪ್ಯ" (ಕಬಿಕಂ. ೨೬೯). [ಸಂ.]

**ಲೇಲಿಹಾನ** (ನಾ). ೧. ಹಾವು; ಸರ್ಪ: ಈ ಕರ್ಮಾಡುವಿನೊಳ್ ಕಾಳಿಯಮಹಾಸರ್ಪನಿರ್ಪಂ . . . ಈ ಸಮುದ್ದಾಮಧೂಮಸ್ತೋಮಮಾ ಲೇಲಿಹಾನನಾಭೀಲಹಾಳಾಹಳೋದ್ದಾಮಧೂಮಸ್ತೋಮಂ (ಜಗ. ೩-೬೦೫). ೨. ಶಿವ. [ಸಂ.]

**ಲೇಲೆ** (ನಾ). (ಕರಾ) ಒಂದು ಅನುಕರಣ ಶಬ್ದ: ಬೆಳ್ಳಿ "ಲೇ ಲೇಲ್" ಎಂದು ಹಾಡತೊಡಗಿದಳು (ತೋಕುದು. ೯).

**ಲೇಲೆಹಾಕು** = (ಕುಣಿತದ ತಾಳಕ್ಕೆ ಸರಿಯಾಗಿ) 'ಲೇ ಲೇ' ಎಂದು ಹೇಳು: ನಾವು ಹೊಲೆಯರು ನಾಲ್ಕು ಲೇಲೆಹಾಕಿ ಇವತ್ತಾದರೂ ಸ್ವಲ್ಪ ಕುಣಿಯುತ್ತೇವೆ (ದಂಬಿನಾ. ೦೩).

[← ತುಳು. ಲೇಲೆ = ಹೊಲೆಯರ ಒಂದು ಬಗೆಯ ಕುಣಿತ]

**ಲೇವಡಿ**₁ (ನಾ). ಗೇಲಿ; ಅಣಕ; ಕುಚೋದ್ಯ: ಈ ರಂಪ ಲೇವಡಿ ನೋಡ್ದೊ (ಹುಬ್ಬಕ. ೦೬೦); ಲೇವಡಿ ಬೇರೆ ಮಾಡ್ತೀಳೆ? (ಬಿವಕಂ. ೬೦)

**ಲೇವಡಿಮಾಡು** = ಗೇಲಿಮಾಡು; ಅಣಕಿಸು: ಹೊಸಬೇಷ್ವರು ಅವನನ್ನು ಲೇವಡಿಮಾಡುದುದರಿಂದ ಅವರ ಪ್ರಾಣ ಆಗಿಹೋಗುವುದರಲ್ಲೇ ಇತ್ತಂತೆ (ಸ್ವಾ.ಬಿನ್ಸಿ. ೮). **ಲೇವಡಿಯೆಬ್ಬಿಸು, ಲೇವಡಿಎಬ್ಬಿಸು** = ಲೇವಡಿಮಾಡು: ಧರಣಯ್ಯನ ಗೆಳೆಯರು ಅವನನ್ನು . . . ಲೇವಡಿಯೆಬ್ಬಿಸುತ್ತಿದ್ದರು (ಮರಿ. ೨೬); ನಿನ್ನ ಉಲಿತವನ್ನು ಕೇಳಿದ ಕಾರಿ ಲೇವಡಿಎಬ್ಬಿಸಿದ (ಪಪಂ. II. ೦೦೯೦).

[← ತೆಲು. ಲೇವಡಿ = ದಾರಿದ್ರ್ಯ, ಕಷ್ಟ. / ಮರಾ. ರೇವಡೀ = ಫಜೀತಿ]

**ಲೇವಡಿ**₂ 'ರೇವಡಿ' ನೋ.

**ಲೇವಣ** 'ನೇವಳ' ನೋ.

**ಲೇವಳ** 'ನೇವಳ' ನೋ.

**ಲೇವಾದೇವಿ** (ನಾ). ಹಣವನ್ನು ಕೊಡುಕೊಳ್ಳುವ ವ್ಯವಹಾರ; ಹಣದ ಕೊಡುಕೊಳೆಯ ವ್ಯವಹಾರ: ಕಕ್ಷಿಗಾರರಲ್ಲಿ ಪರಸ್ಪರ ಲೇವಾದೇವಿ ನಡೆಯುತ್ತಿದ್ದಲ್ಲಿ . . . ಮೂರು ವರ್ಷಗಳು (ಗ್ರಾಶಾಕ. ೦೬೬); ಸಾಲಿಗರು ಲೇವಾದೇವಿಯ ಫೈಸಲಾತಿ ಕ್ರಮಗಳಿಗೆ ಅವನನ್ನೇ ನೇಮಿಸಿದರು (ದಾದಾಕ. ೯೦).

**ಲೇವಾದೇವಿ ಪತ್ರ**=ಹಣವನ್ನು ತೆಗೆದುಕೊಳ್ಳುವ ಮತ್ತು ಕೊಡುವ ವ್ಯವಹಾರದ ಪತ್ರ: ಲೋಹವನ್ನೂ ನಾಣ್ಯವನ್ನೂ ಬೆಲೆಯನ್ನೂ ಕೊಂಡು ತರುವ ಸಾಲಪತ್ರ, ಲೇವಾದೇವಿಪತ್ರಗಳೂ ಇರುವವು (ಹಶಕ್ರ. ೨೯).

[← ಹಿಂ. ಲೇವಾದೇಈ]

**ಲೇವೆ** (ನಾ). (ಕುದುರೆಯ ತಲೆಗೆ ಅಲಂಕರಿಸುವ) ಒಂದು ಬಗೆಯ ಅಲಂಕಾರ ಸಾಧನ; ತುರಾಯಿ: ಪಸುವಟ್ಟೆಯೆಪೆವ ಪೊಸಲೇವೆಯಾ ಮುಯ್ವಣ್ಣ ಕಿಸುಗಲ್ಲ ಕೀಲಣೆಯ ಮೊಗಮುಟ್ಟೆ . . . ತದ್ವಾಜಿಯಾಕಾಶದೊಳ್ಕುಸುಮಬಾಣನ ರಥದ ಗಿಳಿಯಂತೆ ವಿಜಯಾರ್ಧಗಿರಿಯ ಬಸದಿಗೆ ಪಾಱಿತು (ನಪ್ಪುಕ. ೦೦-೬೨); ಕುದುರೆಗಳ ಜೀನ ಹಲ್ಲಣ ಲೇ[ಪಾಠಾಂ. ತೀ]ವೆ ಕಬ್ಬಿ ಕಂದದ ಹಕ್ಕರಿಕೆ ಚಬುಕು ಮೊಗರಂಬ ವಾಘೆಗಳ್ (ಕಬಿಕ್ಷಿ. ೯೬-೪೪); "ಹೊಲಿದು ಸಿದ್ಧಮಾಡಿದ ಆಸನ" (ಕಬಿಕ್ಷಿ. ೯೦೬೩).

[ದೇ.॥ ತುಳು. ಲೇವೆ; ತೆಲು. ಲೇವ]

**ಲೇಶ** (ನಾ). ೧. ತುಂಡು; ಚೂರು. ೨. ತೀರ ಸ್ವಲ್ಪ; ಅಲ್ಪ; ಕೊಂಚ: "ಅಣು ಸೂಕ್ಷ್ಮಂ ಲೇಶಂ ತ್ರುಟಿ ಕಣಂ ಲವಂ" (ವಸ್ತುಕೋ. ೦೦೬-೩೬); ಉದರವೈರಾಗ್ಯವಿದು ನಮ್ಮ ಪದುಮನಾಭನಲ್ಲಿ ಲೇಶಭಕುತಿಯಿಲ್ಲ (ಪುರಂದ. ೨-೨೫ ಪಲ್ಲವಿ); ಸುಖಲೇಶಮುಂ ಸುಳಿಯದುಧಿತಿಕರಿನಕ್ಕೆ, ರಾಜಪುತ್ರಿ, ಲತಾಂಗಿ, ನಿನ್ನನೆಂತೊಯ್ದುಪೆನ್ ಪೇಳ್? (ಶ್ರೀರಾಮಪು. ೯೯-೩೦೫). ೩. ಕಿರಿದು; ಚಿಕ್ಕದು: "ಸೂಕ್ಷ್ಮಃ, ಲೇಶಃ, ಲವಃ . . . ತ್ರುಟಿಃ _ ಈ ೧೫ ಕಿಱಿದು" (ಹಲಾದು. ೦೦೯-೩). ೪. [ಕಾವ್ಯಮಿ] ಒಂದು ಬಗೆಯ ಅಲಂಕಾರ; ಗುಣದಲ್ಲಿ ಸ್ವಲ್ಪ ಅವಗುಣವನ್ನೂ ದೋಷದಲ್ಲಿ ಸ್ವಲ್ಪ ಗುಣಾಂಶವನ್ನೂ ಸೇರಿಸಿ ವರ್ಣಿಸುವುದು: ಗುಣದೊಳಮಱಿಪುದುದಿನಿಸುಮಗುಣಮಂ ದೋಷದೊಳಮಿನಿಸು ಗುಣಮಂ ತಂದಿರ್ದೆಣಿಸುವುದು ಲೇಶಮೆಂಬುದು (ಕಾರಾ. ೩-೦೬೦); ಗುಣಮನೆ ತರ್ಪುದು ದೋಷದ ಗಣನೆಗೆ ದೋಷಮುಮಂ ಇನಿಸು ಗುಣಗಣನೆಗೆ ತಂದೊಣರ್ಪುದು ಲೇಶಂ (ಕಾವ್ಯಾವ. ೬೩೯). [ಸಂ.]

**ಲೇಶಾಲಂಕಾರ** (ನಾ). = ಲೇಶ ೪: ಮರಳಿ ಗುಣದಲಿ ದೋಷ ದೋಷದಲಿ ಗುಣ ತೋಱೆ ಹರುಷದಿ ಲೇಶಾಲಂಕಾರ (ಕುವಂ. ೦೩೪). [ಸಂ.]

**ಲೇಶ್ಯ** (ನಾ). ೧. = ಲೇಶ್ಯೆ ೨: ಪರಮಾಯುವಿಂದವಧಿಯಿಂ ಸಾಮರ್ಥ್ಯದಿಂ ಲೇಶ್ಯದಿಂ[ಪಾಠಾಂ. ಶ್ಯೆಯಿಂ] . . . ಅಮರತ್ವಂ ಹೇಯ ಮಾದೇಯುಮೇ (ಪುಣ್ಯಾ. ೦೩-೦೨೨); ಅಂತರಾತ್ಮನ ಸಹಜಜ್ಞಾನ ಸ್ಫೂರ್ತಿಯು ಕೆಲವು ವೇಳೆ ವಿಚಿತ್ರವಾದ ಸೌಂದರ್ಯವನ್ನು ಹೊಳಪನ್ನು ಉಳ್ಳುದಾಗಿಯೂ ಕೆಲವುವೇಳೆ ವಿಕಾರವಾದ ಲೇಶ್ಯಗಳಿಂದ ಎಳೆಯಲ್ಪಟ್ಟಂತಾಗಿಯೂ ಆಂದೋಲನಗೊಳ್ಳುವುದು (ಶ್ರವಿಂಧ. ೦೩೪). ೨. [ಗಣಿತ] ಆರು ಎಂಬ ಸಂಖ್ಯೆಯ ಸಂಕೇತ: ಅರಿಷಡ್ವರ್ಗಾದ್ರ ಲೇಶ್ಯ ಜೀವಂ ದ್ರವ್ಯಂ . . . ಆಱಱ ನಾಮಂ (ವ್ಯವಹಾ. ೯-೬). [ಸಂ.]

**ಲೇಶ್ಯಾವಿಶುದ್ಧಿ** (ನಾ). [ಜೈನ] "ಲೇಶ್ಯೆಯು ಹೆಚ್ಚು ಹೆಚ್ಚು ಮಂದವಾಗುತ್ತ ಹೋಗಿ ಅದು ಇಲ್ಲವಾಯಿತೆಂದರೆ ಅದು ಲೇಶ್ಯಾವಿಶುದ್ಧಿ. ಹದಿನಾಲ್ಕನೆಯ ಗುಣಸ್ಥಾನದಲ್ಲಿ ಲೇಶ್ಯೆಯು ಸಂಪೂರ್ಣ ನಷ್ಟವಾಗಿರುತ್ತದೆ. ಆ ಸ್ಥಿತಿಯೇ ಲೇಶ್ಯಾವಿಶುದ್ಧಿ" (ಅಜಿತ. ಕೈಪ ಶಾಂಕಾಶಿಕ ಶಬ್ದಕೋಶ): ಜ್ಞಾನಾದಿ ಪರಿಣಾಮಂಗಳೊಳ್ ನಿರತಿಶಯ ಲೇಶ್ಯಾವಿಶುದ್ಧಿಯಿಂ ತಾಳ್ದಿ (ಅಜಿತ. ೦೦-೦೯ ವ). [ಸಂ.]

**ಲೇಶ್ಯಾಶುದ್ಧಿ** (ನಾ). = ಲೇಶ್ಯಾವಿಶುದ್ಧಿ: ಅಂದು ಪೊಣಿಗಣೊಳಗಣೆರಡುಂ ಲೇಶ್ಯಾಶುದ್ಧಿಯಿಂ ತಾಳ್ದಿ (ಶಾಂತಿಪು. ೯-೩೩ ವ). [ಸಂ.]

**ಲೇಶ್ಯೆ** (ನಾ). ೧. ಬೆಳಕು; ಕಾಂತಿ. ೨. [ಜೈನ] "ಆತ್ಮವು ಯಾವುದರ ಮುಖಾಂತರ ಪುಣ್ಯ, ಪಾಪಗಳಿಗೆ ಅಧೀನವಾಗುವುದೋ ಅದಕ್ಕೆ ಲೇಶ್ಯಾ ಎಂದು ಹೇಳುವರು" (ಜೈವಕ. ೨೯೬): ಗತಿ ಮೆಯ್ವೇತ್ರ ಕಷಾಯಲಿಂಗತತಿ ಮಿಥ್ಯಾದರ್ಶನಜ್ಞಾನವಾಪ್ರತಿಮಾಸಂಯತೆ ತಾನಸಿದ್ಧತೆ ನಿಕಾಂತಂ ಲೇಶ್ಯೆಯೆಂದಿರ್ಪತೊಂದುತೆಱ (ಸುಕುಮಾ. ೬೦-೭); ಲೇಶ್ಯಾನುವಾದದಿಂ ಆಱುಲೇಶ್ಯದವರ್ಗಂ ಮೂಱುಸಮ್ಯಕ್ತ್ವಮುಮಕ್ಕುಂ (ತತ್ವಾರ್ಥ. ೦೨). [ಸಂ. ಲೇಶ್ಯಾ]

**ಲೇಸಯ್ಯ** (ನಾ). ಒಬ್ಬಾತನ ಹೆಸರು: ನೆಗಟ್ದ ಗುಣಾಂಕ ಮಾರ್ಬಲ ಧೀರಂ ಶ್ರೀಮತ್‌ಲೇಸಯ್ಯ (ಎಕ. V, ಹಸ್ಸನ. ೨೭೭-೦೨; 971).

[ಲೇಸು$_1$ + ಅಯ್ಯ$_1$]

**ಲೇಸಿಗ** (ನಾ). ಹಿತವಾದುದನ್ನು ಬಯಸುವವನು; ಒಳ್ಳೆಯದನ್ನು ಹಾರೈಸುವವನು: ಪಶು ಸಾವುತ್ತ ತನ್ನ ಶಿಶುವಿಂಗೆ ಏನ ಗಳಿಸಿ ಕೊಟ್ಟಿತ್ತು . . . ಆರು ಸತ್ತರೂ ಲೇಸಿಗರಿಲ್ಲ ತಮ್ಮತಮ್ಮಷ್ಟಕ್ಕೆ ಲೇಸಿಗರೆಲ್ಲರೂ (ಸರ್ವಜ್ಞ. ೦೬-೯೭). [ಲೇಸು$_1$ + — ಇಗ]

**ಲೇಸು$_1$** (ನಾ). ೧. ಒಳ್ಳೆಯದು; ಹಿತವಾದುದು: ನಿಮ್ಮಡಿ ಕೊಲೆ ಸಾವುದು ಲೇಸಲ್ತೆ (ಶಂಕರಾ. ೦೦-೩೦); ಲೇಸ ಕಂಡು ಮನ ಬಯಸಿ ಬಯಸಿ ಆಸೆ ಮಾಡಿದೊಡಿಲ್ಲ (ಬಸವ. ೨೩); ಕರ್ಣಂಗೆ ಸಾವಿನ ಸುಖಗಳೇ ಲೇಸೆನುತ ಕೈಕೊಂಡೆಚ್ಚನಾ ಭೀಮ (ಕುಮಾವ್ಯಾ. ೦೩-೩೩). ೨. ಮಂಗಳಕರವಾದುದು; ಶುಭಕರವಾದುದು; ಶ್ರೇಯಸ್ಸು: ಕಿಡದ ವಿಧಾನವನುಳ್ಳ ಇವು ಲೇಸುಗಳ್ಗೆ ಬಟ್ಟೆಯೆನಿಸುವುದು (ಶಂಕರ. ೬೩-೧); ದೇವರ್ಕಳಂ ತುಂಬಿಯುಂ ತಿಳಿಯಲ್ ಸ್ವಪ್ನದಿ ಲೇಸಲ್ತೆ (ಸೋಮೇಶ. ೬೯). ೩. ದೃಢವಾದುದು: ಇರೆ ಶುಭಗ್ರಹಮಾ ಮರಂ ಲೇಸಕ್ಕುಂ (ಜಾತಕ. ೯-೦೭). ೪. ಶುಭಕಾರ್ಯ; ಮಂಗಳಕಾರ್ಯ: ಮದುವೆ ಮುಂಜಿ ಮೊದಲಾದ ಲೇಸುಗಳಲ್ಲಿ ಶೇಷನ ವಾಲಗಕ್ಕೆ ಒಂದು ವೈಭವದ ಸ್ಥಾನವೇ ಇತ್ತು (ಕಂಬಳಿ. ೦೨). ೫. ಉತ್ತಮವಾದುದು; ಶ್ರೇಷ್ಠವಾದುದು: "ನಿಗರ, ನೆಟ್ಟೆ . . . ಲೇಸು, ಒಳ್ಪು, ಕಣ್ಗೆವಂದುದು, ಪರಿವಡೆದುದು — ಈ ೧೪ ಮನೋಹರಂ" (ಶಬ್ದಮ. ೩೩-೨೦೦); ಎನ್ನಾಳ್ವ ಮಂಡಳಂಗಳೊಳ್ ಪುಟ್ಟಿದ ಲೇಸ[ಪಾಠಾಂ. ದೊಳ್ಗಿತ]ಪ್ಪ ವಸ್ತುವಾರ್ಗಕ್ಕುಂ (ವಡ್ಡಾರಾ. ೦೦೩-೨೯). ೬. (ಸಂಭೋಗದ)ಸುಖ; ಸಂತೋಷ: ಭಾಷೆಗೆ ತಪ್ಪಿದ ಬಂಟ ಲೇಸಿಗೆ ಪೊದಗದ ಸ್ತ್ರೀ ವ್ರತದ ದೆಸೆಯನಱಿಯದ ಆಚಾರ . . . ಘಾಸಿಯಾಯಿತಂತಾಯಿತ್ತು (ಬಸವ. ೦೬): ಬೇಟದೊಳ್ ಬರಿದು ಕೂಟದೊಳರಲ್ದು ಲೇಸಿನೊಳ್ ವಾಸನೆವಡೆದು (ಅನಂತಪು. ೨-೨೦ ವ); ಲೇಸುದಟ್ಟಿದ ಮನ ಹೊಸಮೋಹ ಮತ್ತವರಾ ಸೆಜ್ಜೆವನೆಯೊಳು ಮಾಳ್ಪ ಲೇಸನವರೆ ಬಲ್ಲರ್ (ಭರತ. ೯೨-೦೫೨). ೭. ಒಳ್ಳೆಯ ಕೆಲಸ; ಪುಣ್ಯಕಾರ್ಯ: ಹಿಂದಿನ ಜನುಮದಲಿ ಎಂದೋ ಲೇಸನು ಮಾಡಿ ಇಂದು ನಿಮ್ಮಡಿಗೆ ಎಱಗಿದೆನು (ಸರ್ವಜ್ಞ. ೦೦೭).

**ಲೇಸುಲೇಸು** (ದ್ವಿರುಕ್ತಿ): ಲೇಸುಲೇಸಿದು ತಮ್ಮನಾಡಿದ ಭಾಷೆ ಬಾಹಿರವಾಗಬೇಡ (ಕುಮಾವ್ಯಾ. ೦೭-೦೦); ಲೇಸು, ಲೇಸು! ನೀರಿಳಿಯದ ಗಂಟಲೊಳ್ ಕಡುಬು ತುಱುಕಿದಂತಾಯ್ತು (ರಾಜಶೇ. ೬-೮). **ಲೇಸನಾಡು** = ಒಳ್ಳೆಯದನ್ನು ಹೇಳು: ಲೇಸನಾಡಿದೆ ಕರ್ಣ ನಿನಗಿನ್ನೈಸಲೇ ಸಾರಥಿಯ ಕೊಡಿತ (ಕುಮಾವ್ಯಾ. ೩-೯). **ಲೇಸಲ್ಲರ್** = ಅಹಿತರು; ಶತ್ರುಗಳು: ಲೇಸಲ್ಲರ್ಗಿದೇ ಮಂತಣಂ (ಕೃಷ್ಣಾ. ೦೬೯). **ಲೇಸಾಗು** = ೧. ಒಳ್ಳೆಯದಾಗು; ಸರಿಯಾಗು; ಹಿತವಾಗು: ನುಡಿದೆನೆ ಪ್ಪೊಡೆ ಲೇಸಾಗಿ ನುಡಿಯಲ್ಕೆ ಬಲ್ಲುದೇ ಗಿಳಿ (ಜಾಂಬವ. ೬೩೦); ಸಭೆ ಮೆಚ್ಚಿ ಲೇಸಾಯ್ತೆನುತ್ತಮಿರೆ (ತಿರುರ. ದೇ. ೨೦-೩); ಕೊರ್ತುರ್ ನೀನವಗೆಂದುದು ಲೇಸಾಯ್ತು (ಕೌಶಿಕಾ. ೨೩-೦೯). ೨. ಚೆನ್ನಾಗು; ಸೊಗಸಾಗು: ಲೇಸಾಗಿ ತುಲಸಿಯ ಮಾಲೆಯ ಧರಿಸಿದ ವಾಸುದೇವನು ಬಂದ ಕಾಣಿರೇನೆ (ಪುರಂದ. ೧-೦೪೦-೩); ಈಶ ನಿಮಗತ್ಯಧಿಕಸುಖವ ಕೊಡಲೆಂದು ಲೇಸಾಗಿ ಹರಸಿದೆವು ಬಾಲಕರು ಬಂದು (ಕುಶ. ೦೫-೦).

[ದೇ.॥ ತುಳು. ಲೇಸು, ಲೇಸ್; ತೆಲು. ಲೆಸ್ಸ]

**ಲೇಸು$_2$** (ನಾ). "ಬೂಟ್ಸು, ಮೊ. ಗಳ ಎದುರುಬದುರಿನ ಅಂಚುಗಳನ್ನು, ಗುಂಡುರಂಧ್ರಗಳ ಅಥವಾ ಕೊಕ್ಕೆಗಳ ಮೂಲಕ, ಒಟ್ಟಿಗೆ ಬಿಗಿಯುವ ಹುರಿ ಅಥವಾ ತೊಗಲಿನ ದಾರ. ಬಟ್ಟೆ, ಅಂಗಿ, ಮೊ. ಗಳ ಅಲಂಕಾರಕ್ಕಾಗಿ ಉಪಯೋಗಿಸುವ ಹೆಣಿಗೆಯ ಪಟ್ಟಿ (ಸಾ. ಜರತಾರಿಯದು); ಕಲಾಬತು; ನಾರು, ಹತ್ತಿ, ಉಣ್ಣೆ, ರೇಷ್ಮೆ, ಲೋಹ—ಇವುಗಳಿಂದ ಮಾಡಿದ ದಾರದಿಂದ ಚಿತ್ರರಚನೆಯಾಗಿ ಹೆಣೆದು ಮಾಡಿದ ಸೂಕ್ಷ್ಮರಚನೆಯ ಅಲಂಕಾರದ ಪಟ್ಟಿ" (Lace. ೩೦೪೩): ಮನೆಯಿಂದ ಹೊರಡುವ ಮುನ್ನ ನನ್ನ ಮಗಳೊಬ್ಬಳು ಲೇಸಿಗೂ . . . ಮಗನೊಬ್ಬನು ಪೆನ್ಸಿಲಿಗೂ ಪುಸ್ತಕಕ್ಕೂ ಹೇಳಿರುತ್ತಾನೆ (ಪಾಡಿಗೇ. ೦೬೯); ನಾನು ರೈತಹೆಂಗಸರಿಂದ ಲೇಸು ಕೊಂಡ್ಕೋತೀನಿ (ಕಾಡು. ೩೯೩). [←ಇಂ. Lace]

**ಲೇಸುಗಾತಿ** (ನಾ). ಸುಖವನ್ನು ಬಯಸುವವಳು: ನಾಲಗೆಯೊಳಗಿಲ್ಲ ನಿನ್ನೆದೆಯೊಳಗೆ ವಿಶಾಲಾಕ್ಷಿಯಿದ್ದು ನೀನೆನ್ನ ಬಾಳಿಸುತಿದ್ದೆಯ ಶಕ್ಕರ ದೇವಯೆಂದಾ ಲೇಸುಗಾತಿಯೊತ್ತಿದಳು (ಭರತ. ೩೭-೮೦). [ಲೇಸು$_1$ + — ಕಾತಿ]

**ಲೇಸುಗಾಱ** (ನಾ). ಸುಖವನ್ನು ಬಯಸುವವನು: ಲಲನೆಯರಯ್ಯಂದಿರೆಲ್ಲರನೇಳಿಸಿ ಕಳುಹಿದನಾ ಲೇಸುಗಾಱ (ಭರತ. ೩೨-೬೪); ಕಾಳಗವುಂಟು ಮಿತ್ತದ ಯುದ್ಧ ಬೇಡ ಕೇಳ್ಮೇಲಾದ ಮೃದುಲಯುದ್ಧವನು ತೋಳ ಬಲ್ಪೆಯೊಳೆ ನೀವಿಬ್ಬರು ಮಾಳ್ಪುದೆಂದಾ ಲೇಸುಗಾಱರಾಡಿದರು (ಭರತ. ೩೦-೦೩).

[ಲೇಸು$_1$ + — ಕಾಱ]

**ಲೇಸುಗೆಯ್** (ಕ್ರಿ). ಒಳ್ಳೆಯದನ್ನು ಮಾಡು; ಹಿತವಾದುದನ್ನು ಆಚರಿಸು: ಕಂಡು ಗೆಂಟಱಿಕೊಳೆ ಪೊಸಪಟ್ಟು ಮೆಲ್ಲನೆ ನೀಡೆ ಲೇಸುಗೆಯ್ದೆಯೆಂದೆನ್ನಂ ಕರತಲದೊಳ್ ತಳೆದು (ಜಾಂಬವ. ೭೪೮); ಆ ಸುರೋತ್ತಮಂ ಸಂತಸದಿಂದೆ ಭಕ್ತಿವೆರಸಾಗಳೆ ಪೂಜಿಸಿ ಲೇಸುಗೆಯ್ದನಿನ್ನಂತುಟೆ ತನ್ನನೀಂದ್ರ ಕೃತಮುಂ ಮಱೆದಂದು ಕೃತಘ್ನನಾಗನೇ (ಸುಕುಮಾ. ೯-೩೦).

[ಲೇಸು$_1$ + ಕೆಯ್$_1$]

**ಲೇಸುದಟ್ಟು** (ಕ್ರಿ). ಸುಖವ ಬಯಕೆಯಾಗು: ಲೇಸುದಟ್ಟಿದ ಮನ ಹೊಸಮೋಹ ಮತ್ತವರಾ ಸೆಜ್ಜೆವನೆಯೊಳು ಮಾಳ್ಪ ಲೇಸನವರೆ ಬಲ್ಲರ್ (ಭರತ. ೯೨-೦೫೨). [ಲೇಸು$_1$ + ತಟ್ಟು$_1$]

**ಲೇಹ** (ನಾ). ೧. ನೆಕ್ಕುವುದು: 'ಲೇಹಂಗೈ' ಪರಾ. ೨. [ವೈದ್ಯಶಾ] ಕೆಲವು ಔಷಧೀಯಗುಣವುಳ್ಳ ವಸ್ತುಗಳನ್ನು ಹೆಚ್ಚು ಗಟ್ಟಿಯೂಗಿ ಅಥವಾ ಹೆಚ್ಚು ನೀರಾಗಿ ಆಗದಂತೆ ಪಾಕಮಾಡಿದ, ನೆಕ್ಕಿ ತಿನ್ನಬಹುದಾದ ಔಷಧವಸ್ತು: ಚೂರ್ಣ, ಘೃತ, ತೈಲ, ಆಸವ, ಲೇಹ ಇವುಗಳನ್ನು ಮಾಡುವಾಗ ಚಂದನವನ್ನು ಹೇಳಿದ್ದರೆ . . . ಉಪಯೋಗಿಸಬೇಕು (ಸಶಪ್ರ. XII, ಶ್ರೀಗಂಧ); ಎಲೆ, ಬೇರು ಮತ್ತು ಹೂಗಳನ್ನು ಸೇರಿಸಿ ಮಾಡಿದ ಕಹಿಯಾದ ಲೇಹ ಹೊಟ್ಟೆಯಲ್ಲಿರುವ ಜಂತುಹುಳುಗಳನ್ನು ನಾಶಮಾಡುವುದು (ಸಚಿಕೋ. I, ೭೨೯). [ಸಂ.]

**ಲೇಹಂಗೈ** (ಕ್ರಿ). ನಾಲಗೆಯಿಂದ ನೆಕ್ಕು: ಪುಲ್ಲೆಗಳ್ಕಡು . . . ಬಾಲಕನಂಘ್ರಿಪಲ್ಲವದ ರುಧಿರಮಂ ಕುಡಿನಾಲಗೆಗಳಿಂದೆ ಸೊಗಸೆ ಲೇಹಂ [ಪಾಠಾಂ. ಪಂ]ಗೈದುವು(ಕೃಮಿಬಾ. ೨೬-೩೭). [ಲೇಹ + ಗೈ (<ಕೆಯ್$_1$)]

**ಲೇಹಕ** (ನಾ). ಬರಹಗಾರ; ಲೇಖಕ: ಲೇಖಕ ಎಂಬುದು ಸಂಸ್ಕೃತದಲ್ಲಿ ತುಂಬ ಹಳೆಯ ಶಬ್ದ, ಲೇಹಕ ಎಂಬುದು ಅದರ ತದ್ಭವ (ಶಬ್ದಸಂ. ೯೭). [< ಸಂ. ಲೇಖಕ]

**ಲೇಹಿನಿ** (ನಾ). [ನಾಟ್ಯ] ನಾಲಗೆಯ ಆರು ಬಗೆಯ ಚಲನೆಗಳಲ್ಲಿ ಒಂದು : ℗ "ನಾಲಗೆಯಿಂದ ತುಟಿ ಮತ್ತು ಹಲ್ಲುಗಳನ್ನು ಸೋಂಕಿಸಿ ರುಚಿ ನೋಡುವುದು" (ಭಾಸ್ಕರಂ. ೨೬೮ ಗದ್ಯಾನುವಾದ) : ಮಿಗೆ ಖುಜ್ಜಂ . . . ಲೇಹಿನಿಯೆಂದುಂ ನಗೆಮೊಗವಳೆ ಜಿಹ್ವೆಯಾಟಭೇದ ದಿನೆಸೆಗುಂ (ಭಾಸ್ಕರಂ. ೩-೯೪). [ಸಂ. ಲೇಹಿನೀ]

**ಲೇಹಿಸು** (ಕ್ರಿ). ನೆಕ್ಕು : ನಿಜನಾಸಾಗ್ರದ ಮಧುಬಿಂದುವಿಗಿರದುತ್ಸವಿಸಿ ಲೇಹಿಸುವವನಂತೇಕೆ ವೃಥಾ ಯುಮಗಾಹುತಿಯಹೆ (ಹೋಗಾಂಬಿ. ೪-೩೭). [ಲೇಹ + – ಇಸು₃]

**ಲೇಹ್ಯ** (ಗು). ೧. ನೆಕ್ಕಬೇಕಾದ. (ನಾ). ೨. ನೆಕ್ಕಿ ತಿನ್ನಬೇಕಾದುದು : ಭೋಜ್ಯ ಭಕ್ಷ್ಯಂ ಪೇಯ ಲಲಿತ ಲೇಹ್ಯಂ ಚೋಷ್ಯ ಪಿಚ್ಛಿಲ ಷಡ್ರಸಗಳಂ ವಿಳಸವನುಗುಣದ ರುಚಿಯುಂ ಮೇಲೆಯುಱುವವರ ಚರಣಾಂಬುಜಕೆ ಶರಣು (ಬಸವಂ. ೩೯-೨೮) ; ಲೇಹ್ಯವೆಂದರೆ ನಾಲಿಗೆಯಿಂದ ಚಪ್ಪರಿಸಿ ನುಂಗುವುದು (ಶಬರ. ೯-೨ ಶಬ್ದಾರ್ಥ). ೩. = ಲೇಹ ೨: ಬಿಲ್ವಾದಿಲೇಹ್ಯ . . . ತೆಗೆದುಕೊಳ್ಳಲು ಸಮಸ್ತ ಪೈತ್ಯವ್ಯಾಧಿ, ಅಂತರ್ಗತ ಜ್ವರ, ಕ್ಷಯರೋಗ, ಪಾಂಡುಕಾಮಾಲೆ ಮುಂತಾದುವೆಲ್ಲವು ಪರಿಹರವಾಕ್ಕುಂ (ಸಕವ್ಯ. ೦೩೩). [ಸಂ.]

**ಲೇಹ್ಯದ್ರವ್ಯ** (ನಾ). ಲೇಹ್ಯ ಮಾಡಲು ಬಳಸುವ ಸಾಮಗ್ರಿ : ಲೇಹ್ಯ ದ್ರವ್ಯಪ್ರಮಾಣವನ್ನು ಹೇಳಿರದಿದ್ದರೆ ಚೂರ್ಣಕ್ಕೆ ನಾಲ್ಕರಷ್ಟು ತೂಕ ಸಕ್ಕರೆಯನ್ನು . . . ಮಿಶ್ರ ಮಾಡಿ ಅಳಿಸಬೇಕು (ಸಕವ್ಯ. XIII. ಪ್ರಸ್ತಾವನೆ). [ಸಂ.]

**ಲೇಹ್ಯಪಾಕ** (ನಾ). ಲೇಹ್ಯದ ಹದ, – ಪಕ್ವತೆ : ಲಾಮಂಚ . . . ಕರಿಜೀರಿಗೆ – ಇವು ಪ್ರತ್ಯೇಕ ಗದ್ಯಾಣ ೪ ತೂಕವಂ ಚೂರ್ಣವ ಮಾಡಿ ಪಾಕದಲ್ಲಿ ಹಾಕಿ ಲೇಹ್ಯಪಾಕವಾಗಿ ಅಟ್ಟು . . . ಭಕ್ಷಿಸಿದರೆ . . . ಪೈತ್ಯರೋಗ ಸಹ ಗುಣವಾಕ್ಕುಂ (ಸಕವ್ಯ. ೦೩೪). [ಸಂ.]

**ಲೈಂಗ** (ಗು). ಲಿಂಗಕ್ಕೆ ಸೇರಿದ, – ಸಂಬಂಧಿಸಿದ : 'ಲೈಂಗಪುರಾಣ' ಪರಾ. [ಸಂ.]

**ಲೈಂಗಪುರಾಣ** (ನಾ). ಹದಿನೆಂಟು ಮಹಾಪುರಾಣಗಳಲ್ಲಿ ಒಂದು : ಬ್ರಹ್ಮಪುರಾಣ . . . ಲೈಂಗ[ಪಾಠಾಂ. ಗ್ಯ]ಪುರಾಣ . . . ಬ್ರಹ್ಮಾಂಡ ಪುರಾಣವೆಂಬವೇ . . . ಹದಿನೆಂಟು ಮೂಲಪುರಾಣಂಗಳ್ (ಶಿವೇಶ. ೬). [ಸಂ.]

**ಲೈಂಗಿ** (ನಾ). ಲಿಂಗದ ಸಂಬಂಧವುಳ್ಳವನು ; ಲಿಂಗವಂತ : ಲಿಂಗ ಮೆಂದು ಅರ್ಚಿಸಿ ಸಂಗವನಱಿಯದ ಲೈಂಗಿಗಳಗೆಲ್ಲಿಯದೋ ಶಿವಲಿಂಗಪೂಜೆ (ಶೂನ್ಯಸಂ. ೩೨-೨೦೭) ; ಈತನುಚ್ಚಿಷ್ಟವನೆ ಕೊಂಡೀ ಭೂತನಾಥಂ ವಿಧಿ ನಿಷೇಧಾತೀತನಾದಂ ಲಿಂಗವೀತನ ಲೈಂಗಿ[ಪಾಠಾಂ. ಲಿಂಗಿ] ತಾನಾಗಿ(ಬಸವ. ೦೬-೯೪). [ಲೈಂಗ + – ಇ₃]

**ಲೈಂಗಿಕ** (ನಾ). ಸ್ತ್ರೀ, ಪುರುಷ ಲಿಂಗಕ್ಕೆ ಸಂಬಂಧಿಸಿದುದು : ಕೀಟಗಳಲ್ಲಿ ಸಂತಾನೋತ್ಪತ್ತಿ ಲೈಂಗಿಕ (ಕೀಟಲೆ. ೯೪). [ಸಂ.]

**ಲೈಸನ್ಸು** (ನಾ). ಅನುಮತಿ ; ರಹದಾರಿ : ಮೂರು ತಿಂಗಳ ಲೈಸನ್ಸು ಪಡೆದುಕೊಂಡು (ಕಾಬಂಗಾ. ೬). [← ಇಂ. Licence]

**ಲೊಂಚು** (ನಾ). ಕೀಳುವಿಕೆ (?) : ಮುಳ್ಳಿಗಿಡು ಲೊಂಚುಗೊಳಲ್ಕೆ ಚುಂಚು ತಾವರಿಸಿದ ಶಂಕೆ ಭೋಂಕನೆ ನೆಳಲ್ಗಿಗಿದ್ದಾಟ್ಟಪದನಿಕ್ಕೆ (ಎಇ. XVI, ೩೩೬-೪೦ ; ೧೦೭೬). [< ಲೋಚು ?]

**ಲೊಕಶಿದಿ**, **ಲೊಕಶಿರಿ** (ನಾ). ಆನೆಗೆ ತೊಡಿಸುವ ಅಲಂಕಾರಗಳಲ್ಲಿ ಒಂದು (?) :ಆನೆಗೆ ಹಳದೀಬನಾತಿನ ಬಬ್ರೀ ಜೂಲು ರೇಶ್ಮೆ ಜಾಲರು ಸಹ ೧ ಬದಸ್ತೂರು ಲೊಕಶಿದಿ ೧ ಕತ್ತಿಗೆ ಕಟ್ಟುವ ಪಟ್ಟೆ ಬದಸ್ತೂರು ೧ ಸಹಾ (ಎಕ. XIV. ಸಂಪಾಪ. ೨೧೨-ಪುಟ ೦೫೨; 1847). **ಲೊಕಶಿರಿ** : ಆನೆಗೆ ಸಾದಾಬನಾತಿನ ಜೂಲು ೧ ಲೊಕಶಿರಿ ೧ (ಎಕ. XIV. ಸಂಪಾಪ. ೨೧೨-ಪುಟ ೦೫೨; 1847). [ ? ]

**ಲೊಕಶಿರಿ** 'ಲೊಕಶಿದಿ' ನೋ.

**ಲೊಕ್ಕಿ₁**, ನೆಕ್ಕಿ, ಲಕಲಿ, ಲಕ್ಕಲಿ, ಲಕ್ಕಿ₁, ಲಕ್ಕಿಲಿ, ಲಕ್ಕೆ₁ (ನಾ). (ಕಟುವಾದ ವಾಸನೆಯುಳ್ಳ, ಪೊದೆಯಾಗಿ ಬೆಳೆಯುವ) ಒಂದು ಬಗೆಯ ಔಷಧೀಸಸ್ಯ ; ಸಿಂಧುವಾರ: "ನಿರ್ಗುಂಡೀ, ಸಿಂಧುವಾರ — ಈ ➚ ಲೊಕ್ಕಿ" (ಹಲಾಯು. ೩೩-೯೭) ; ಉರಗನಿವಾಸಂ ಲೊಕ್ಕಿಯ ಪೊರೆಯೊಳ್ ಸವನಿಸಿ ದೊಡದಱ ತೆಂಕಣ ದೆಸೆಯೊಳ್ ಪುರುಷದ್ವಿತಯದೊಳಕ್ಕುಂ ಕರತ್ರಯದಾಂತರದಿನುಗುಟ ಸುಸ್ವಾದುಜಳಂ (ಲೋಕೋಪ. ೩-೦೬) ; ಪೊಂಬುರ್ಚ್ಚದ ಲೊಕ್ಕಿಯ ಮರದಲ್ಲೆಲಸಿ ಲೊಕ್ಕಿಯುಬ್ಬೆಯೆಂಬೆರಡನೆಯ ಪೆಸರಂ ತಾಳ್ದಿ (ಎಕ. VIII, ಸಗರ. ೩೩-೦೨; 1077); ಮಿಗೆ ಸೊಕ್ಕುಗಂಪನೀಳಿವ ಉಸುರನು ನಗೆಮೊಗದೊಳು ತೀವಿ ಸೊಗಸಲೂಡಿ ಮಗುಳೇಱಿಸಿದರು ಲೊಕ್ಕಿಯ ನಿಮ್ಮಜಾತಿಯು ಬಗೆಗೆ ತಹುದು ಪ್ರಿಯ ಕೊರ್ತರ (ಸೊಬಗಿನೋ. ೩-೩೦). "ಕರಿಲೊಕ್ಕಿ' ಪರಾ. **ನೆಕ್ಕಿ**: "ಲಕ್ಕಿಲಿಗಿಡ, ನೆಕ್ಕಿ . . . ವಾಮಿ, ಭೂತವೇಷಿ" (ಸಸ್ಯಶಿ. ೦೦೫) ; ಮನೆ ನೆಕ್ಕಿ ನಿಡಿಲು ಹಾಡಿ ಹಕ್ಕಲು (ಕೌಇಂ. ೦೯೬೨, ೩೦೯-೮೫ 1336); ತಾ ಕೊಂಡು ಬಾಳು ನೀರು ತೋಟ ಮನೆ ಮಕ್ಕಿ ಮ[ರ] ನೆಕ್ಕಿ ನಿಡಲು . . . ನೀರನೆಱದು ಬಿಟ್ಟನು (ಕೌಇ. IX-ii, ೪೦೭-೩೦ ; 1364). **ಲಕಲಿ** : ಕಾಶಿತುಂಬಿ ಲಕಲಿ . . . ಸೂರ್ಯಕಾಂತಿಪುಷ್ಪಗಳು (ಸಿದ್ಧಕೃ. ೦೮-೮೨). **ಲಕ್ಕಲಿ** : (ಎಸವ್ಯ. II, ೬). **ಲಕ್ಕಿ₁** : "ನಿರ್ಗುಂಡಿಯೆನೆ ಸಿಂಧುವಾರ ವೆನಲಿಂದ್ರಾಣಿಯೆನೆ ಲಕ್ಕಿ [ಪಾಠಾಂ. ಲೊಕ್ಕಿ]ಯಕ್ಕು" (ಬಂಗರಾ. ೩೪-೦೨) ; ಹುಲಿಗಿಲ ಬೇರ್ತವಸದ ತಿಗುಡು ಲಕ್ಕಿ ಕದಸಿಗೆಯ ಬೇರ್ ಮರುಂಗುಳಿಯೊಳಗ್ಗಳಿಸಿರೆ (ಕಲ್ಯಾಣ. ೯-೨೨) ; ಲಕ್ಕಿ:— ಈ ಸೊಪ್ಪಿನ ರಸ ಹರಳ ಎಣ್ಣೆಯಲ್ಲಿ ತೆಗೆದುಕೊಳ್ಳೆ ಮಹೋದರ ವಾಣ್ಗಂ (ಬಿಮ್ಮಿ. ೬); ಅಲ್ಲಲ್ಲಿ ಸೀಗೆ, ಲಕ್ಕಿ, ಕೆಂಜಿಗೆ . . . ಕರ್ಜಿ ಇತ್ಯಾದಿ ಪೊದೆಗಳು ಬೆಳೆದುಕೊಂಡಿದ್ದುವು (ಮಲೆಮ. ೩೩೨). 'ಕರ್ಲಕ್ಕಿ' ಪರಾ. **ಲಕ್ಕಿಲಿ** : "ಶೇಫಾಲಿಕಾ . . . ಕರೀಹುವ್ವುಗಳುಳ್ಳ ಲಕ್ಕಿಲಿ, ಕರೀಲಕ್ಕಿಲಿ" (ಸಿದ್ಧಾಂತಿ. ೦೫೮). **ಲಕ್ಕೆ₁** : (ಶಂಡಶ. ೦೯೩).
[ದ್ರಾ. ೩ ತಮಿ. ಮಲ. ನೊಚ್ಚಿ ; ತುಳು. ನೆಕ್ಕಿ, ಲಕ್ಕಿ ; ತೆಲು. ಲೊಕ್ಕಿ, ನೊಚ್ಚಿಲಿ]

**ಲೊಕ್ಕಿ₂** (ನಾ). ಒಂದು ಊರಿನ ಹೆಸರು ; ℗ ಈಗಿನ ಧಾರವಾಡ ಜಿಲ್ಲೆಯ ಲಕ್ಕುಂಡಿ : ಲೊಕ್ಕಿ ಪೊಗದ್ಯಾಣವೆಪ್ಪತ್ತು ಅಂಕದೊಳು (ಕೌಇ. XV, ೦-೨೦ ; 1059). 'ಲೊಕ್ಕಿಗುಂಡಿ' ಪರಾ.

**ಲೊಕ್ಕಿಯ ಗದ್ಯಾಣ** = ಲೊಕ್ಕಿಗುಂಡಿಯಲ್ಲಿ ಟಂಕಿಸಿದ ಗದ್ಯಾಣ : ಬಡ್ಡಿಯಿಂದಕ್ಷಯವಾಗಿ ಕೊಟ್ಟ ಲೊಕ್ಕಿಯ ಗದ್ಯಾಣಂ (ಎಕ. VII, ಶಿಕಾಪು. ೯೨-೩೬ ; 1113). **ಲೊಕ್ಕಿಯಚ್ಚು** = ಲೊಕ್ಕಿಗುಂಡಿಯ ಗದ್ಯಾಣವನ್ನು ತಯಾರಿಸುತ್ತಿದ್ದ ಅಚ್ಚು : ದೇವರ್ಗ್ಗೆ ಬಿಟ್ಟ ಹೊಸ ಲೊಕ್ಕಿಯಚ್ಚಿನ ಗದ್ಯಾಣ ಹತ್ತು (ಕೌಇ. XV, ೨೨-೩೪ ; 1142). **ಲೊಕ್ಕಿಯ ಪೊನ್**, **ಲೊಕ್ಕಿಯ ಹೊನ್** = ಲೊಕ್ಕಿಯ ಗದ್ಯಾಣ : ಶ್ರೀಸ್ವಾಮಿದೇವರ ನವಿಲಚ್ಚಿನ ಪೊನ್ನಂ ಲೊಕ್ಕಿಯ ಪೊನ್ನಾಣಿಯುಂ(೦)ಮಾ ಪೊನ್ನ ತೂಕಮುವಾಗಿ ಪೊಯ್ದು ಸಲಿಸುವರು (ಕೌಇ. IX-i, ೦೬೪-೨೫; 1098) ; ಸೋಮೇಸ್ವರ ಭಟ್ಟರ್ಗ್ಗೆ ಪಾದಪೂಜೆಯಯ್ವತ್ತುಗದ್ಯಾಣ ಲೊಕ್ಕಿಯ ಪೊನ್ನ ಕೊಟ್ಟು . . . ಸರ್ಬ್ಬಬಾಧಾಪರಿಹಾರವಾಗಿ ಬಿಟ್ಟ ಗಟ್ಟಿ (ಕೌಇ. XX, ೦೦೦-೪೩ ; 1129) ; ಲಕ್ಕಿಕ್ಕಿಪ್ಪತ್ತೆರಡಂ ಲೊಕ್ಕಿಯ ಹೊನ್ನಂಗೆ ಸಾವಿರಕ್ಕಂ ಬೆಲೆ (ಕ್ಷತ್ರಚೂ. ಉಪಸಂಹಾರ).
[℗ ಇದು 'ಲೊಕ್ಕಿಗುಂಡಿ' ಎನ್ನುವುದರ ಸಂಕ್ಷಿಪ್ತರೂಪ]

**ಲೊಕ್ಕಿಗ** (ನಾ). ಒಂದು ಬಗೆಯ ಹಕ್ಕಿ : ಲೊ[ಪಾಠಾಂ.ಗೊ]ಕ್ಕಿಗನು ಹುಡಿಕೀಲು ಹಾಲ್ವಕ್ಕಿ ಕೋಗಿಲೆ ಕೋಟದೇವನ ಕುಕ್ಕುಮಾಯಿಯ ಕೆಂಡವಕ್ಕಿಗಳವಱಿಯೊಪ್ಪಿದುದು (ಸಾಳ್ವಭಾ. ೩-೨೨). [ ? ]

**ಲೊಕ್ಕಿಗದ್ಯಾಣ** (ನಾ). ಲೊಕ್ಕಿಗುಂಡಿಯಲ್ಲಿ ಟಂಕಿಸಿದ ಗದ್ಯಾಣ : ವರ್ಷಕ್ಕೆ ಪಣವೃದ್ಧಿಯ ಲೆಕ್ಕದೆ ಕೊಟ್ಟ ಲೊಕ್ಕಿಗದ್ಯಾಣಂ ನೂಱಿಪ್ಪತ್ತು (ಎಷ. XII. ೯೯-೮೪; 1112). [ಲೊಕ್ಕಿ$_2$+ಗದ್ಯಾಣ]

**ಲೊಕ್ಕಿಗುಂಡಿ** (ನಾ). = ಲೊಕ್ಕಿ$_2$ : ಎಸೆದುವಸದಳಂ ಲೊಕ್ಕಿಗುಣ್ಡೀ ಪುರೋಬ್ಬೀಪತಿ ಚಂಚದ್ರತ್ನಕೋಟಿಸ್ಫುರಿತಮುಕುಟಸಂಭಾಸಜ್ಜೈನಾಧಿವಾಸಂ (ಸೌಇಇ. XI-i. ೫೨-೯೯ ; 1008). [ಲೊಕ್ಕಿ$_2$+ಗುಂಡಿ]

**ಲೊಕ್ಕಿಯಬೆ** 'ಲೊಕ್ಕಿಯಬ್ಬೆ' ನೋ.

**ಲೊಕ್ಕಿಯಬ್ಬೆ**, ಲೊಕ್ಕಿಯಬೆ (ನಾ). [ಜೈನ] ಪದ್ಮಾವತಿ ಎಂಬ ಯಕ್ಷಿಯ ಹೆಸರು : ಪದ್ಮಾವತೀದೇವಿ . . . ಲೊಕ್ಕಿಯ ಮರದಲ್ಲೆಲಸಿ ಲೊಕ್ಕಿಯಬ್ಬೆಯೆಂಬೆರಡನೆಯ ಪೆಸರಂ ತಾಳ್ದಿ (ಎಕ. VIII. ನಗರ. ೩೫-೦೨; 1077) ; ಪದ್ಮಾವತಿಯು ಲೊಕ್ಕಿ ಎಂಬ ಮರದಲ್ಲಿದ್ದುದರಿಂದ ಅವಳಿಗೆ ಲೊಕ್ಕಿಯಬ್ಬೆ ಎಂಬ ಪರ್ಯಾಯನಾಮವೂ ಇತ್ತು (ಕನಾಶ. ೦೦೦). **ಲೊಕ್ಕಿಯಬೆ** : ಲೊಕ್ಕಿಯಬೆಯುಂ ಜಿನಗೇಹಮಂ ಮಾಡಿದಂ ಧರೆಯೆಲ್ಲಂ ಪೊಗಳ್ವನ್ನೆಗಂ. . . ಅವನಿಪಾಳಕಂ (ಎಕ. VII. ಶಿಕಮೊ. ೦೦೯-೧೦; 950 ?). [ಲೊಕ್ಕಿ$_1$ + ಅಬ್ಬೆ$_1$]

**ಲೊಚ** (ನಾ). ಒಂದು ಅನುಕರಣ ಶಬ್ದ: 'ಲೊಚಗರೆ', 'ಲೊಚಗುಟ್ಟು' ಪರಾ.

**ಲೊಚಲೊಚ** (ದ್ವಿರುಕ್ತಿ) : ನಾಯಿಗಳು ಬೆಕ್ಕುಗಳ ಹಾಗೆ ತುದಿನಾಲಗೆಯಿಂದ ಲೊಚಲೊಚ ನೀರು ಕುಡಿಯುತ್ತವೆ (ಮುಂಬಯಿ. ೩-೯೦).

**ಲೊಚಕ್** (ನಾ). ಒಂದು ಅನುಕರಣ ಶಬ್ದ. 'ಲೊಚಕು' ಪರಾ.

**ಲೊಚಕು** (ಕ್ರಿ). = ಲೊಚಗುಟ್ಟು : ಗವರುತಿವೆ ಹುಲಿಯಂತೆ, ಲೊಚಕುತಿದೆ ಹಲ್ಲಿ (ಗೀಪಂ. ೦೦೬-೦೨). [ < ಲೊಚಕ್]

**ಲೊಚಗರೆ** (ಕ್ರಿ). 'ಲೊಚ್' ಎಂದು ಶಬ್ದಮಾಡು : ನಮ್ಮ ವೃತ್ತಾಂತವನ್ನೆಲ್ಲಾ ಹೇಳಿದೆ. ಅವರೆಲ್ಲರೂ ಲೊಚಗರೆದರು (ತಂಗಾಳ್. ೦೦೩). [ಲೊಚ + ಕರೆ$_1$]

**ಲೊಚಗುಟ್ಟು** (ಕ್ರಿ). ಬಾಯಿಂದ 'ಲೊಚ' ಎಂದು ಶಬ್ದಮಾಡು : ಕೊಕ್ಕರೆಯಂತೆ ತಲೆಯಾಡಿಸಿ ಅವಳದೇ ಆದ ವಿಶೇಷರೀತಿಯಲ್ಲಿ ಲೊಚಗುಟ್ಟಿದಳು (ಹೂಸಕ್ಕಿ. ೭೯) ; ಹಲ್ಲಿ ಲೊಚಗುಟ್ಟಿತು (ವಠಬಿಂ. ೦೦೦-೦೮). [ಲೊಚ + ಕುಟ್ಟು$_1$]

**ಲೊಚ್ಚು** (ನಾ). ಒಂದು ಅನುಕರಣ ಶಬ್ದ : 'ಲೊಚ್ಚುಗರೆ' ಪರಾ.

**ಲೊಚ್ಚುಗರೆ** (ಕ್ರಿ). = ಲೊಚಗುಟ್ಟು : ಬಾಯಿಂದ ಲೊಚ್ಚುಗರೆಯುತ (ಸೌಗಂಧಿ. ೨೬೯-೦). [ಲೊಚ್ಚು + ಕರೆ$_1$]

**ಲೊಟ** (ನಾ). ಒಂದು ಅನುಕರಣ ಶಬ್ದ : 'ಲೊಟಗುಟ್ಟು' ಪರಾ.

**ಲೊಟಲೊಟ** (ದ್ವಿರುಕ್ತಿ) : ಲೊಟಲೊಟ ಶಬ್ದ ಮಾಡಬೇಡ (ರೂಢಿ).

**ಲೊಟಕ್** (ನಾ). ಒಂದು ಅನುಕರಣ ಶಬ್ದ : ಲೊಟಕ್ ಎಂದು ಆ ಮರದ ಕೊಂಬೆ ಮುರಿಯಿತು (ರೂಢಿ).

**ಲೊಟಕಲು** (ನಾ). 'ಲೊಟಲೊಟ' ಎಂದು ಮಾತನಾಡುವಿಕೆ ; ವಟಗುಟ್ಟುವಿಕೆ : ಆ ಮುದುಕಿಯ ಲೊಟಕಲು ಕೇಳಲಾಗುವುದಿಲ್ಲ (ರೂಢಿ). [ಲೊಟಕು + — ಅಲು (< —ಅಲ್$_1$)]

**ಲೊಟಕು**, ಲೊಟಗು (ಕ್ರಿ). ವಟಗುಟ್ಟು ; ಗೊಣಗು : ಸೋರುವ ಮನೆಯೂ ಲೊಟಕುವ ಗಂಡನೂ ಸರಿ (ಗಾದೆ). **ಲೊಟಗು** : ನಮ್ಮ ತಂದೆಯು ಮೇಲೆ ನಮ್ಮಮ್ಮ ಲೊಟಗುತ್ತಿದ್ದರು (ದೂರಕ. ೨೬೯). [ < ಲೊಟ ]

**ಲೊಟಕೆ** (ನಾ). ನಾಲಗೆಯಿಂದ ಮಾಡುವ ಒಂದು ಬಗೆಯ ಶಬ್ದ : ಉಪ್ಪಿನಕಾಯನ್ನು ಲೊಟಕೆ ಹಾಕುತ್ತ ತಿಂದಳು (ರೂಢಿ).

**ಲೊಟಗು** 'ಲೊಟಕು' ನೋ.

**ಲೊಟಗುಟ್ಟು** (ಕ್ರಿ). = ಲೊಟಕು : ಹಳಬರೇ ಹೀಗೆ ಏನಾದರೂ ಲೊಟಗುಟುತ್ತಲೇ ಇರೋದು (ಹುಚ್ಚುಹ. ೦೬೬). [ಲೊಟ + ಕುಟ್ಟು$_1$]

**ಲೊಟಗೆ** (ನಾ). ನಾಲಗೆಯಿಂದ ಮಾಡುವ ಒಂದು ಬಗೆಯ ಶಬ್ದ : "ಸವಿದರೆ ಈ ಮಾವಿನವನ್ನು ಸವಿಯಬೇಕು" ಎಂದು ದೊಡ್ಡದಾಗಿ ಲೊಟಗೆ ಹಾಕಿದ (ಹಸುಹೊ. ೦೯).

**ಲೊಟನಪ್ಪಾರಿವಾಳ** , ನೊಟನಪಾರಿವಾಳ (ನಾ). (ನೆಲದ ಮೇಲೆ ಹೊರಳಾಡುವ) ಒಂದು ಬಗೆಯ ಪಾರಿವಾಳ : "ಪಾರಾವತೇಷು ವಿಲುಠನ್ = ಲೊಟನಪ್ಪಾರಿವಾಳ" (ಶಾಕುಂಂದಾ. ೩೭ ೮೮೯). **ನೊಟನಪಾರಿವಾಳ** : ನೊಟನ ನೊಟನಪಾರಿವಾಳ, ಜುಟ್ಟನು ಧರಿಸಿಹವು (ಹಿಂಂಧ. II. ೩೭೧). 'ಲೋಟಾ' ಪರಾ.

[ಲೊಟನ್$_0$ ($p$ ← ಸಂ. ಲುಠನ) + ಪಾರಿವಾಳ$_1$]

**ಲೊಟಪಟ** (ನಾ). ಖಾಲಿಯಾದುದು, ನಿರರ್ಥಕವಾದುದು ಎಂಬರ್ಥವನ್ನು ಸೂಚಿಸುವ ಒಂದು ಅನುಕರಣ ಶಬ್ದ : (೬).

**ಲೊಟಪಾಟ** (ನಾ). = ಲೊಟಪಟ : ಲೊಟಪಾಟ ಸಂಸಾರದೊಳಗೆ ಸಿಲುಕಿ ನಾ ವಿಠಲ ನಿನ್ನ ಧ್ಯಾನವ ಮಱೆತೆನಯ್ಯ (ಪುರಂಪ. ೨-೦೨ ಪಲ್ಲವಿ).

**ಲೊಟಲೊಟನೆ** (ಅ). 'ಲೊಟಲೊಟ' ಎಂಬ ಶಬ್ದವನ್ನು ಸೂಚಿಸುವ ಒಂದು ಅನುಕರಣಾವ್ಯಯ : ಆ ಮರದ ಕೊಂಬೆ ಲೊಟಲೊಟನೆ ಮುರಿದು ಬಿತ್ತು (ರೂಢಿ). [ < ಲೊಟ + — ಅನೆ$_1$ ]

**ಲೊಟವಿಟ** (ನಾ). = ಲೊಟಪಟ : ಲೊಟವಿಟ ಸಂಸಾರ ಹೇಯವೆನ್ನು (ಮೋಕ್ಷಬಿಂ. ೯೯-೩).

**ಲೊಟ್ಟಾಲೊಟ್ಟಿ** (ನಾ). ಒಂದು ಅನುಕರಣ ಶಬ್ದ : ಬಿಟ್ಟ ಸೂಟಿಯಲರಿನೃಪಾಲರ ಮುಟ್ಟಿ ಪಾದದಲಿಸುತ್ತ ಮೋಹಿದ ಥಟ್ಟನೊಡೆಹಾಯ್ದುಹಿತ ಬಲದೊಳಗಾನೆವರಿದು ಪಿಟ್ಟುಗುಟ್ಟುತ ಪೆಣನ ಲೊಟ್ಟಾಲೊಟ್ಟಿ [ಪಾಠಾಂ. ನೊಟ್ಟಲೊಳೊಟ್ಟಿ, ವಟ್ಟಾವಟ್ಟಿ] ಮಸಗಲು ಕಳನ ಚೌಕದಲಟ್ಟಿಯಾಡಿಸ ಜಲ್ಲಡವ ರಾವುತನು (ಕುವ್ಯಾಆ. ೩-೦೦೯) ; ಮೆಟ್ಟಿ ಸೀಳಿದು ಹಾಯ್ಕಿದಾಡೆಯ ಕೊಟ್ಟು ಮೋಱೆಯನೊಲೆದು ಹರಿವರೆಯಟ್ಟಿ ಹಿಡಿದಪ್ಪಳಿಸಿ ಜೋದರನಂಘ್ರಿಯಿಂದರೆದು ಇಟ್ಟು ಕೆಡಹಲು ಹೆಣನ ಲೊಟ್ಟಾಲೊಟ್ಟಿ [ಪಾಠಾಂ. ಅಟ್ಟಿಗಳೊಟ್ಟಿ, ಮೊಟ್ಟಲೊಳೊಟ್ಟಿ] ಮಸಗಿತು ತುರಗನರರಥ ವಿಟ್ಟಣಿಸೆ ಸವಱಿವವು ದಂತಿವ್ರಾತವುಭಯದೊಳು (ಕುವ್ಯಾಛೀ. ೯-೭೬).

[ ? ]

**ಲೊಟ್ಟಿ** (ನಾ). ೧. ಹೆಂಡ ; ಮದ್ಯ : 'ಲೊಟ್ಟಿಗ', 'ಲೊಟ್ಟಿಗುಡಿಹಿ' ಪರಾ. ೨. ಮರದಿಂದ ಹೆಂಡವನ್ನು ಇಳಿಸಲು ಬಳಸುವ ಮಣ್ಣಿನ ಸಣ್ಣ ಮಡಕೆ. [ದೇ.॥ ತಮಿ. ಕಲು. ಲೊಟ್ಟಿ]

**ಲೊಟ್ಟಿಗ** (ನಾ). ಮಣ್ಣಿನ ಮಡಕೆಯಲ್ಲಿ ಮದ್ಯಪಾನಮಾಡುವವನು ; (ಎಕಪು. XVII. ೯). [ಲೊಟ್ಟಿ + — ಗ$_2$]

**ಲೊಟ್ಟಿಗುಡಿಹಿ** (ನಾ). = ಲೊಟ್ಟಿಗ (?) : ಕಟ್ಟಿದ್ದ ಮಣ್ಣಿಗೂ ನೆಟ್ಟಿದ್ದ ಕಲ್ಲಿಗೂ ಕಟ್ಟಿದ್ದ ಲಿಂಗವಡಿಯಾಗಿ ಬೀಳುವ ಲೊಟ್ಟಿಗುಡಿಹಿಗಳನೇನೆಂಬೆನಯ್ಯಾ ಕಲಿದೇವರ ದೇವಾ (ಬಸವಾ. ೨೨-೨೮). [ಲೊಟ್ಟಿ + ಕುಡಿಹಿ]

**ಲೊಟ್ಟಿಮೂಳ** (ನಾ). = ಲೊಟ್ಟಿಗ (?) : ಕಟ್ಟಿದ ಲಿಂಗವ ಬಿಟ್ಟು ಬೆಟ್ಟದ ಲಿಂಗಕ್ಕೆ ಹೋಗಿ ಹೊಟ್ಟೆಬಡಿಯಾಗಿ ಬೀಳುವ ಲೊಟ್ಟಿಮೂಳನ ಕಂಡಡೆ ಮೆಟ್ಟಿದ್ದ ಎಡಪಾದರಕ್ಷೆಯ ತಗೊಂಡು ಲಟಲಟನೆ ಹೊಡಿ (ಚಕಾ. I. ೩೨೮). [ಲೊಟ್ಟಿ + ಮೂಳ$_1$ (< ಮೂಳ)]

**ಲೊಟ್ಟೆ₁** (ನಾ). ನಾಲಗೆಯಿಂದ ಮಾಡುವ ಒಂದು ಬಗೆಯ ಶಬ್ದ : ಲೊಟ್ಟೆಯಲ್ಲಿ ಗಟ್ಟಿಗನಾದರೂ ಕೊಟ್ಟ ವಿನಹಾ ಬಿಡುವುದಿಲ್ಲ (ಗಾದೆ)

**ಲೊಟ್ಟೆಹಾಕು** = ನಾಲಗೆಯಿಂದ ಶಬ್ದ ಮಾಡು : ಅವರು ಲೊಟ್ಟೆ ಹಾಕಿಕೊಂಡು ಎತ್ತುಗಳನ್ನು ಓಡಿಸಿದರು (ಕೂಶ). **ಲೊಟ್ಟೆಹೊಡೆ** = ಲೊಟ್ಟೆಹಾಕು : ಗಾಡಿ ಹೊಡೆಯುವವ ಲೊಟ್ಟೆಹೊಡೆಯುವಂತೆ ಆಯ್ತು (ಜುಕೋಕಂ. ೯೦) ; ದುಬಾರಿ ಬಡ್ಡಿಗಾರನ ಕಡೆ ಕಣ್ಣು ಮಿಟುಕಿಸಿ ಲೊಟ್ಟೆ ಹೊಡೆದನು (ವಗಹೊ. ೦೩೨).

**ಲೊಟ್ಟೆ₂** (ನಾ). ೧. ಹುರುಳಿಲ್ಲದುದು ; ವ್ಯರ್ಥವಾದುದು : ಹೀಗೆ ಹುಡುಗಿಯನ್ನು ಬಿಟ್ಟುಕೊಂಡಿರುವುದು ಅಶ್ರೇಯಸ್ಕರ, ಪೂರ್ವಾಚಾರಕ್ಕೆ ವಿರುದ್ಧ, ಬ್ರಾಹ್ಮಣಮತಕ್ಕೆ ಸರಿಯಾದ್ದಲ್ಲ – ಹೀಗೆಯೇ ಏನೇನೋ ಲೊಟ್ಟೆ, ಲಸ್ಕು ಇದೆಯಲ್ಲ (ಇಂದು. ೯೬). ೨. ಸುಳ್ಳು ; ಸಟೆ : ಹಾಗೆ ಹೀಗೆ ಎಂದು ಕಂಡಾಪಟ್ಟೆ ಲೊಟ್ಟೆಹೊಡೆದರು (ಗಂಗಾವ. ೦೬೭).

**ಲೊಟ್ಟೆಲೊಸಕು, ಲೊಟ್ಟುಲೊಸಕು** = ಕೆಲಸಕ್ಕೆ ಬಾರದುದು ಎಂಬುದನ್ನು ಸೂಚಿಸಲು ಬಳಸುವ ಮಾತು : ಲೊಟ್ಟೆಲೊಸಕು ಅಂತ ನೂರೆಂಟು ಹೇಳಿದರು (ಕಂಗೂಶ. ೦೦೯); ಬಾಬು ನಿಮ್ಮ ಚಿಕ್ಕಮ್ಮಣ್ಣಿಯವರಿಗೆ ಏನಾಗಬೇಕು ? ಲೊಟ್ಟುಲೊಸಕೂ (ಶಾಹೇಬ್. ೨೫೦).

[ದೇ.॥ ತಮಿ. ಲೊಟ್ಟೈ ; ಮಲ. ಲೊಟ್ಟ ; ತುಳು. ಲೊಟ್ಟೆ]

**ಲೊಟ್ಟೆ₃** (ನಾ). (?): ದೇಗುಲ, ಲೊಟ್ಟೆ, ಕಟ್ಟೋಗರ (ಅಕ್ರಶು. ೦೨೯) : ಕಟ್ಟಿನ ಕೆಳಗೆ ಲೊಟ್ಟೆಯ ಶ್ರೀಧರಕ್ರವಿನ್ನರು (ಇಎ. ೦೯೯೬, ಶಾಶುಗ. ೨೯೯–೨೯; ?). [ ? ]

**ಲೊಡಕ** (ನಾ). ೧. ವ್ಯರ್ಥವಾದುದು : ಲೊಡಕ ಲೊಡಕ ಜಿಹ್ವರ ಕೆಟ್ಟಸಂಸಾರವು ನೋಡಮ್ಮವ್ವ (ಪುರಂದ. ೫–೦೦೦ ಕಲ್ಲಶ). (ಗು). ೨. ವ್ಯರ್ಥವಾದ : ಲೊಡಕಸಂಸಾರವು ನಮ್ಮೆಲ್ಲರ ಗತಿರಹಿತ ಮಾಡುವ ಲೊಡಲೊಟ್ಟೆವ್ವ (ಪುರಂದ. ೫–೦೦೦ ಅಮುಕಲ್ಲಶ). [ ? ]

**ಲೊಡಕಜಿಹ್ವ** (ನಾ). ಹರಟೆ ಹೊಡೆಯುವ ನಾಲಗೆಯವನು : ಲೊಡಕ ಲೊಡಕಜಿಹ್ವರ ಕೆಟ್ಟಸಂಸಾರವು ನೋಡಮ್ಮವ್ವ (ಪುರಂದ. ೫–೦೦೦ ಕಲ್ಲಶ). [ಲೊಡಕ + ಜಿಹ್ವ]

**ಲೊಡಲೊಟ್ಟೆ** 'ಲೊಳಲೊಟ್ಟೆ' ನೋ.

**ಲೊಡಲೊಡ** (ನಾ). ಒಂದು ಅನುಕರಣ ಶಬ್ದ : ಲೊಡಲೊಡ ಎಂದು ಮಾತನಾಡಬೇಡ (ಕೂಶ).

**ಲೊಡ್ಡ** 'ರೊಡ್ಡ' ನೋ.

**ಲೊಡ್ಡು, ಲಡ್ಡಿ, ಲಡ್ಡು₁** (ನಾ). ೧. ನಿಸ್ಸಾರವಾದುದು ; ಪೊಳ್ಳು ; ಜಳ್ಳು : 'ಲೊಡ್ಡುಮರ' ಪರಾ. **ಲಡ್ಡಿ** : ೧. ಹಸಿಯ ಕಟ್ಟಿಗೆಗಳು ನೀರೊಳಗೆ ಇರುವುದರಿಂದ ಲಡ್ಡಿ ಹಾಯದೆ ಕಚ್ಚನಂತೆ ಆಗಿ ಇರುವುವು (ಶ್ಯಶಕ್ರ. ೧೦೨). **ಲಡ್ಡು₁** : ೨. ನಿಸ್ಸಾರವಾದ ಜೊಂಡು ಹುಲ್ಲು : ಗದ್ದೆಗಳಲ್ಲೆಲ್ಲಾ ಲಡ್ಡು ಮತ್ತು ವಡಕೆ ಬೆಳೆದುಕೊಂಡಿತ್ತು (ಕಮ್ಮಕು. ೨೭೦). ೩. (ಅಲಂ) ಪೊಳ್ಳುತನ ; ದೌರ್ಬಲ್ಯ : ಈ ದುಡ್ಡಿದ್ದವರ ಲಡ್ಡು ಹರಿಯೋ ದಿನಾ ಇನ್ನೇನೂ ದೂರಿಲ್ಲಾ (ಶಂಕಹು. ೦೬೬). (ಗು). ೪. ಪೊಳ್ಳಾದ ; ಜಳ್ಳಾದ : ಅದೊಂದು ಹಳೆಯ ಲಡ್ಡುಪೆಟ್ಟಿಗೆ (ಮೂಕಜ್ಜಿ. ೯೨) ; ಹೀಗೆ ನಡೆಯುವ ಲಡ್ಡು ಯಂತ್ರ ಯಾವಾಗ ಮುರಿದು ಬಿದ್ದರೂ ಆಶ್ಚರ್ಯವಿಲ್ಲ (ಮುಪಹಾರ. ೨೬೬). ೫. ನಿಸ್ಸತ್ತ್ವನಾದ ; ದುರ್ಬಲನಾದ : ನಿಮ್ಮ ತಂದೇನೂ ಲಡ್ಡ ಮನುಷ್ಯ ಅಲ್ಲ (ಗಂಟೂರು. ೨೭೦).

**ಲೊಡ್ಡಾಗು, ಲಡ್ಡಾಗು** = ಪೊಳ್ಳಾಗು ; ನಿಸ್ಸಾರವಾಗು : ಮರದಲ್ಲಿರುವ ನೀರು ವಿನಾಶಕರವಾದ ಏಕಾಣುಜೀವಿಗಳಿಗೂ ಅಣಬೆಗಳಿಗೂ ಆಹಾರವಾಗಿ ಮರವು ಲೊಡ್ಡಾಗುತ್ತದೆ (ಶಿರೃವಾ. ೨೮೦) ; ತೋಟದ ಸಾರ ದಾಟುವಾಗ ಅಡಿಕೆಮರಗಳು ತುಂಬ ಲಡ್ಡಾಗಿದ್ದುದರಿಂದ ಬಳುಕಿದವು (ಜಾಕ್ಷ್ಮ. ೧೨೫). **ಲೊಡ್ಡು ಮಾಡು** = ಪೊಳ್ಳುಮಾಡು ; ಟೊಳ್ಳುಮಾಡು : ಅಂಥ ಪದಾರ್ಥವನ್ನು . . . ಒಳಗಿನಿಂದ ಕುಟ್ಟಿ ತಿಂದು ಲೊಡ್ಡು ಮಾಡುತ್ತಲೇ ಇರುತ್ತದೆ (ಬಂಕಿಹು. ೩೨೫). **ಲೊಡ್ಡು ಹಿಡಿ** = ಪೊಳ್ಳಾಗು ; ಟೊಳ್ಳಾಗು : ಸಾಮಾನುಗಳು ಮೂಲೆ ಮೂಲೆಯಲ್ಲಿಯೂ ಧೂಳು ತುಂಬಿ ಲೊಡ್ಡುಹಿಡಿದು ಬಿದ್ದಿದ್ದರೆ, ಅದಕ್ಕೆ ಏನೂ ಅರ್ಥವಿರಲಿಲ್ಲ (ಶಬಂಧ. II. ೧).

**ಲೊಡ್ಡುಗಿನಮರ** (ನಾ). ಒಂದು ಬಗೆಯ ಮರ : ಬಲಲೊಡ್ಡಿ, ಬುಡಿಗಾನೆ, ಲೊಡ್ಡುಗಿನಮರ (ವೃಷಿಗ. ೭೩–೦೯೯೦). [ ? + ಮರ₁]

**ಲೊಡ್ಡುಮರ, ಲಡ್ಡುಮರ** (ನಾ). ಪೊಳ್ಳಾದ ಮರ; ಜಳ್ಳು ಮರ : ಹಳೇಕಾಲದ ಲೊಡ್ಡುಮರ ಅದು (ಶಳುಹು. ೦೭೩). **ಲಡ್ಡುಮರ** : ಈ ಸಲ ಬಂದ ಬಿರುಗಾಳಿಗೆ ಲಡ್ಡುಮರಗಳೆಲ್ಲ ಮುರಿದು ಬಿದ್ದವು (ಕೂಶ). [ಲೊಡ್ಡು + ಮರ₁]

**ಲೊದಡಿ** 'ಲೊದಳೆ' ನೋ.

**ಲೊದಳೆ, ಲೊದಡಿ** (ನಾ). ೧. ಜೊಲ್ಲು ; ಲಾಲಾರಸ : ಸುರಿವ ಬೆಮರಿನ ಬಾಯಲೊದಳೆ[ಪಾಠಾಂ. ಬಾಯ ಲೋಳೆ]ಯ . . . ಕುದುರೆ ಬೀಱಿತು ಭಯವನಹಿತರಿಗೆ (ಕೊರಥಾ. ೩–೩೦–೩೩). ೨. ಜಿಗುಟಾದ ಮುದ್ದೆ : ತಬದೊಳ್ ತೆಕ್ಕೆಗೊಂಡ ನುಣ್ಮದುಳ ಲೊದಳೆಯಂ ಮೆಟ್ಟಿ (ಶಾಂತೀಶ್ವ. ೯–೦೦೯ ವ). **ಲೊದಡಿ** : ೨. ರಾಯಸಾಹೇಬರು ವೇದನೆಯಿಂದ ನರಳಿದರು. ಕೆಮ್ಮು ಬಂತು. ಬಾಯಿಂದ ನೆತ್ತರ ಲೊದಡಿ ಬಿದ್ದಿತು (ಶ್ರೀಪಶ್ರಿ. ೨೦೦), ೩. ಕಫ ; ಶ್ಲೇಷ್ಮ : ಮುದುಕನು ಕೆಮ್ಮಿ ಕಾರಿಕೊಂಡು ಬಹು ಪ್ರಯಾಸದಿಂದ ಲೊದಡಿಯನ್ನುಗುಳಿ ಕುಳಿತುಕೊಂಡು ಕೇಳಿದನು (ಕುಬಳ. ೦೦). 'ಲೋಳೆ' ಪರಾ.

**ಲೊಲ್ಲೊಟ್ಟೆ** 'ಲೊಳಲೊಟ್ಟೆ' ನೋ.

**ಲೊಳ್** (ನಾ). ಒಂದು ಅನುಕರಣ ಶಬ್ದ : ಲೊಳ್ ಎಂದು ನಾಯಿ ಬಗುಳಿತು (ಕೂಶ).

**ಲೊಳ** (ನಾ). ಬರಿದಾಗಿರುವುದನ್ನು ಸೂಚಿಸುವ ಒಂದು ಅನುಕರಣ ಶಬ್ದ : 'ಲೊಳಲೊಟ್ಟೆ' ಪರಾ.

**ಲೊಳಲೊಟ್ಟೆ, ಲೊಡಲೊಟ್ಟೆ, ಲೊಲ್ಲೊಟ್ಟೆ** (ನಾ). ಪ್ರಯೋಜನವಿಲ್ಲದುದು ; ನಿಷ್ಪ್ರಯೋಜಕವಾದುದು ; ವ್ಯರ್ಥ : ಲೊಳಲೊಟ್ಟೆ ಎಲ್ಲಾ ಲೊಳಲೊಟ್ಟೆ (ಪುರಂದ. ೦–೦೦೦ ಕಲ್ಲಶ). **ಲೊಡಲೊಟ್ಟೆ** : ಲೊಡಕ ಸಂಸಾರವು ನಮ್ಮೆಲ್ಲರ ಗತಿರಹಿತ ಮಾಡುವ ಲೊಡಲೊಟ್ಟೆವ್ವ (ಪುರಂದ. ೫–೦೦೦ ಅಮುಕಲ್ಲಶ). **ಲೊಲ್ಲೊಟ್ಟೆ** : ಇವಳಿಗೆ ಸಹಾಯ ಲೊಲ್ಲೊಟ್ಟೆಯೆಂದು ಬೇರೆ ಕೆಲವರು (ವಾಗ್ಮೀಶ. ೨೯೦) ; ಊರಿಗೆ ಹಬ್ಬವಾದರೆ ನಾಯಿಗೆ ಲೊಲ್ಲೊಟ್ಟೆ (ಗಾದೆ). [ಲೊಳ + ಲೊಟ್ಟೆ₂. / ತಮಿ. ಲೊಟಲೊಟ್ಟೈ]

**ಲೋಕ** (ನಾ). ೧. ಸೃಷ್ಟಿಯಲ್ಲಿ ಕಾಣುವ ಭೂಮಿ, ಆಕಾಶ, ಸಮುದ್ರಗಳ ಎಲ್ಲ ಭಾಗಗಳು ಸೇರಿದ ಭಾಗ ; ವಿಶ್ವ ; ಪ್ರಪಂಚ ; ಜಗತ್ತು : "ಭುವನಂ, ವಿಷ್ಟಪಂ, ಲೋಕಃ, ಜಗತ್ – ಈ ೪ ಜಗದ ಪೆಸರ್" (ಕಶಾಡು. ೨೨–೦೩೩) ; ಹುಟ್ಟೆಂದು ಲೋಕದಲ್ಲಿ ಹುಟ್ಟಿಸಿ ಇಳಿಯ ಬಿಟ್ಟೊಡೆ ನಿಮ್ಮ ನಗುವರಯ್ಯಾ (ಬಸವ. ೬೩) ; ಲೋಕವಿವನ ಮನೆ, ಲೋಕದುದ್ಧಾರಣವೆ ಮನೆವಾರ್ತೆ (ಗೊರೂಶಾ. ೨–೯೨). ೨. ಭೂಮಿ ; ಮರ್ತ್ಯಲೋಕ : ಲೋಕದೊಳಾಂ ಕಾಣದರಿಲ್ಲೀ ಕುತ್ತಂ ಪೊರ್ದಿನಮೆವ ಮಾನಿಸರಂ ಕೇಳಿ . . . ಕಂಡಱಿಯೆಂ (ಧರ್ಮಾಮೃ. ೪–೯೦) ; ನಂಬಲಱಿಯರೀ ಲೋಕದ ಮನುಜರು (ಬಸವ. ೦೦೬) ; ಲೋಕದೊಳಗೆಲ್ಲ ಕಂಡುದನು ನುಡಿದು ತಾನೇಕವಾಗಿಹನು (ಸರ್ವಜ್ಞ. ೦೬). ೩. (ಸಾಮಾನ್ಯ) ಜನ; ಪ್ರಜೆ ; ಜನತೆ : "ಜನಃ, ಲೋಕಃ, ಪ್ರಜಾ — ಈ ೩ ಪ್ರಜೆ"

(ಕಂಡುಬ. ೯೭-೦೩೯). ೪. ಮನುಷ್ಯಸಮುದಾಯ ; ಮಾನವಕುಲ : ಲೋಕಕ್ಕೆದರ್ಥಶಾಸ್ತ್ರದ ಟೀಕೆನಿಸಿದ ತನ್ನ ನುಡಿ ಮನಂಗೊಳಿಸೆ (ಕಂಕಥಾ. ೯-೦೯) ; ಲೋಕದ ಡೊಂಕ ನೀವೇಕೆ ತಿದ್ದುವಿರಿ (ಬಸವ. ೦೩೯) ; ತಂದೆಯನು ಜಜಿಸುವ ಮಗ ಹೊಲ್ಲ ಲೋಕಕ್ಕೆ ಬಂಧನವೆ ಹೊಲ್ಲ (ಸರ್ವಜ್ಞ. ೬೯೮). ೫. ಲೋಕದ ವ್ಯವಹಾರ,– ನಡವಳಿಕೆ : ಲೋಕ ಬಲ್ಲವರಿಗೆ ಪ್ರತ್ಯೇಕವಾಗಿ ಹೇಳಬೇಕಾಗಿಲ್ಲವಷ್ಟೆ (ಸಂಟಿರು. ೯೭). ೬. ನೋಡುವುದು ; ನೋಟ. ೭. ಭೂಮಿಯೂ ಸೇರಿದಂತೆ ಮೇಲೆ ಏಳು ಮತ್ತು ಕೆಳಗೆ ಏಳು ಎಂದು ಕಲ್ಪಿಸಿರುವ ಜಗತ್ತು : ಆತನವಯವವೆಲ್ಲವೀ ಸತ್ಯಾದಿ ಲೋಕಗಳು (ಅಪ್ಪುಕ. ೩-೨೩); ಲೋಕಗಳು ೧೪ ಇವೆ. ಅತಲ, ವಿತಲ, ಸುತಲ, ತಲಾತಲ, ಮಹಾತಲ, ರಸಾತಲ, ಪಾತಾಳ ಈ ಏಳು ಕೆಳಗಿನ ಲೋಕಗಳು. ಭೂಲೋಕ, ಭುವರ್ಲೋಕ, ಸುವರ್ಲೋಕ, ಮಹರ್ಲೋಕ, ಜನೋಲೋಕ, ತಪೋಲೋಕ, ಸತ್ಯಲೋಕ— ಈ ಏಳು ಮೇಲಿನ ಲೋಕಗಳು (ಅಪ್ಪುಕ. ೩-೨೩ ಟಿಪ್ಪು). 'ಚತುರ್ದಶಲೋಕ' ಪರಾ. ೮. [ಗಣಿತ] ಮೂರು ಎಂಬ ಸಂಖ್ಯೆಯ ಸಂಕೇತ : ಹರನಯನವಹ್ನಿ. . . ಲೋಕಮಲತ್ರಿತಯುಂ . . . ಮೂಱಱ ನಾಮಂ (ವ್ಯವಹಾ. ೯). ೯. ಏಳು ಎಂಬ ಸಂಖ್ಯೆಯ ಸಂಕೇತ. ೧೦. ಹದಿನಾಲ್ಕು ಎಂಬ ಸಂಖ್ಯೆಯ ಸಂಕೇತ.

**ಲೋಕರ್** = (ಸಾಮಾನ್ಯ)ಜನ : ಲೋಕರಂತೆ ನೀ ಮೃತ್ತಿಕೆ ಮೆದ್ದುತಾ ಕೋಪಿಸೆ ಜನನಿಯು (ಭರಂದ. ೦-೯೭-೩) ; ಲೋಕರ್ಗೆ ಸಂದೇಹಸಲ್ಲ (ವ್ಯಕುಂಶ. ೯-೩೩). **ಲೋಕಶಿಖಾಮಣಿ** = ಜಗತ್ತಿನಲ್ಲಿ ಶ್ರೇಷ್ಠನಾದವನು ; ಒಂದು ಬಿರುದು : ಶ್ರೀಕೊಪಣಪುರವರೇಶ್ವರ ಲೋಕಶಿಖಾಮಣಿ ವಿಯಚ್ಚರಾನ್ವಯತಿಳಕಂ (ಶಾಇಷ. XX; ೭೦-೨೭; ೧೧೦೯). [ಸಂ.]

**ಲೋಕಕಂಟಕ** (ನಾ). ಜಗತ್ತಿಗೆ ಕೇಡು ಮಾಡುವವನು : ತಾಮಸರ್ ಲೋಕಕಂಟಕರಾಗೆ ರಕ್ಕಸರೆನಿಸಿ ಮಱುಮೆಯ್ಯೊಳೊಗೆದು . . . ತಿರೆಗೆ ಪೈಜೆಯಾದರ್ (ಚಾಪಚ್ಚ. ೦೦೯-೨೯). [ಸಂ.]

**ಲೋಕಕರ್ತೃ** (ನಾ). ಜಗತ್ತನ್ನು ಸೃಷ್ಟಿಸಿದವನು : ಲೋಕಕರ್ತಂ ನಾನೆ ಈತಂ ಲೋಕಪಾವನಮೂರ್ತಿ ಕಾರಣ ಲೋಕಶಿಕ್ಷಕ ನಾನೆ ಈತನು ಲೋಕರಕ್ಷಕನು (ಬಸವ. ೩೦-೯೦). [ಸಂ. ಲೋಕಕರ್ತೃ]

**ಲೋಕಕಲ್ಯಾಣ** (ನಾ). ಜಗದ ಕ್ಷೇಮ ; ಜಗತ್ತಿನ ಕಲ್ಯಾಣ : ಆತ್ಮಕಲ್ಯಾಣದಂತೆಯೆ ಲೋಕಕಲ್ಯಾಣವೂ ಈತನ ವ್ಯವಹಾರಗಳ ಧ್ಯೇಯವಾಗಿರಬೇಕು (ಜುಗ್ಮಕ. ೯೦ ಪಿ೯೯). [ಸಂ.]

**ಲೋಕಗತಿ** (ನಾ). ಜಗತ್ತಿನ ನಡೆ ; ವಿಶ್ವದ ವ್ಯವಹಾರ : ಲೋಕಗತಿ ಮಾಯಾವಿಲಾಸ ವಿವೇಕಿಗಳಿಗಿದು ಬಯಲು ಫಲುಗುಣ ಸಾಕು ಗರ್ವವ ಬೀಳುಕೊಡು (ಕುಮ್ಮಾರ. ೩-೩೯). [ಸಂ.]

**ಲೋಕಗಾಳ್ಯ** (ನಾ). ಒಬ್ಬಾತನ ಹೆಸರು ; ಲೋಕಗಾಳ್ಯರ್ಪೂಸವುರಂಬ್ರಮ್ಮದೆಂ ಕೊಟ್ಟು (ವ್ಯಾ೮೦. ೦೯೯೩. ೦೦-೩; ಸು. ೬೩ಯು ೬೬). [ ? ]

**ಲೋಕಗುರು** (ನಾ). ೧. ಜಗತ್ತಿಗೆ ಗುರುವಿನಂತಿರುವವನು ; ಪರಮಾತ್ಮ : ಲೋಕಗುರು ಶಂಖಚಕ್ರಗದಾಕರನತಿಶಯುಚತುರ್ಭುಜಂ (ಕಂಕಥಾ. ೯-೩೦). ೨. ವಿಶ್ವದ ಗುರು ; ಮಹಾತ್ಮ : ಮನ್ಮನೋಮಂದಿರಕೆ ಓ ಲೋಕಗುರುಗಳೆಲ್ಲ ಬನ್ನಿ (ಅಗ್ನಿಹಂ. ೯-೨). [ಸಂ.]

**ಲೋಕಚಕ್ಷು** (ನಾ). ಜಗತ್ತಿಗೆ ಕಣ್ಣಾದವನು ; ನೇಸರು ; ಸೂರ್ಯ. [ಸಂ. ಲೋಕಚಕ್ಷುಸ್]

**ಲೋಕಚೂಡಾಮಣಿ** (ನಾ). ಜಗತ್ತಿನಲ್ಲಿ ಶ್ರೇಷ್ಠನಾದವನು : ಸುಖಸಾಧ್ಯೂತಸಂ ಲೋಕಚೂಡಾಮಣಿಯುಂ . . . ಪರಮಬ್ರಹ್ಮಸದೃಕ್ಷಂದಂ (೮೦ತ. ೦೭-೩೦). [ಸಂ.]

**ಲೋಕಜನನಿ** (ನಾ). ಜಗತ್ತಿನ ತಾಯಿ ; ಲೋಕಮಾತೆ ; ಲಕ್ಷ್ಮಿ : "ಇಂದಿರಾ . . . ಲೋಕಜನನೀ, ಕ್ಷೀರಸಾಗರಕನ್ಯಕಾ – ಈ ಲಕ್ಷ್ಮಿಯ ಹೆಸರುಗಳು" (ಸಿದ್ಧಾಂತಿ. ೦೬). [ಸಂ. ಲೋಕಜನನೀ]

**ಲೋಕಜಿತ್ತು** (ನಾ). ೧. ಜಗತ್ತನ್ನು ಗೆದ್ದವನು ; ವಿಶ್ವವನ್ನು ಜಯಿಸಿದವನು. ೨. ಋಷಿ ; ಸಂನ್ಯಾಸಿ. ೩. ಬುದ್ಧ : "ಬುದ್ಧಂ . . . ಲೋಕಜಿದ್ಧನಿ ಸಮಂತಭದ್ರನೆನಲ್ಕೆ ಬೌದ್ಧಂ" (ಮುಂಗಡಾ. ೭-೩೩). [ಸಂ. ಲೋಕಜಿತ್]

**ಲೋಕಜ್ಞ** (ನಾ). ಭೂಲೋಕದ ರೀತಿನೀತಿಗಳನ್ನು ಅರಿತವನು: ತಮ್ಮ ಮಾಱಿನೆಯ ಭವದ ಜನ್ಮಜನಕಮೋಹಂ ಕಾರಣವಾಗಿ ನಿಮ್ಮಡಿಯಂ ಕಾಣಲ್ ಬಂದು ಲೋಕಜ್ಞರುಂ ಸೇವಾವಿಚಕ್ಷಣರುಮಪ್ಪುದಱಿಂದಂ . . . ಅದೃಶ್ಯರಾಗಿ ನೋಡುತ್ತುಮಿರ್ದರ್ (ಶಾಂತಿಪು. ೯-೩೩ ವ). [ಸಂ.]

**ಲೋಕಟಿಗ** (ನಾ). ಒಬ್ಬಾತನ ಹೆಸರು: ಆತನ ವೇಳೆ ಬಡಗೊಣ್ಣದ ಲೋಕಟಿಗನರಸಂಗೆ ಪುತ್ರನಿಮಿತ್ತಂ ಕಾರಣಮಾಗಿ ಹುಯ್ಯಗಣ್ಣದಬ್ಬೆಗೆ ತಲೆಯಂ ಪರಿಸಿ (ಎಕ. VIII, ಸೊರಬ. ೯೭೯-೩ ;೯೯೧). [ ? ]

**ಲೋಕಟೆ** (ನಾ). ಒಬ್ಬಾತನ ಹೆಸರು : ರತ್ನಕ್ಷಿತಿಯುಮ್ಮ ಮಹಿಷಾ ಪ್ರವರ್ತಿಸೆ ಲೋಕಟೆ ಬನವಸೆ[ಪ]ನ್ನಿಚ್ಛಾಸಿರಮುಮನಾಳೆ (ಶಾಇಷ. XX, ೬೩-೩ ; ೯೦೬). [ ? ]

**ಲೋಕತಂತ್ರ** (ನಾ). ೧. ಜಗತ್ತಿನ ವ್ಯವಹಾರ : ವಿಶ್ವದ ನಡವಳಿಕೆ : ನಾವು ವನವಾಸಿಗಳಾದರೂ ಲೋಕತಂತ್ರವನ್ನೆಲ್ಲಾ ಬಲ್ಲೆವು(ಶಾಕುಂತ.೩೭-೯). ೨. ಪ್ರಜೆಗಳು ಸಾಕ್ಷಾತ್ತಾಗಿ ಅಥವಾ ಪ್ರತಿನಿಧಿಗಳ ಮೂಲಕ ನಡೆಸುವ ರಾಜ್ಯಭಾರ : ಪ್ರಜಾಪ್ರಭುತ್ವ : "ಪ್ರಜಾಪ್ರಭುತ್ವ, ಜನತಂತ್ರ, ಲೋಕತಂತ್ರ" (Democracy. ಶಬ್ದಶಿ. ೩೦). [ಸಂ.]

**ಲೋಕದೂರ** (ನಾ). ಜಗತ್ತಿನ ವ್ಯವಹಾರದಿಂದ ದೂರವಾದುದು ; ಜಗತ್ತಿನ ಸಂಬಂಧವನ್ನು ಕಳೆದುಕೊಂಡುದು : ರಸಾನುಭವ ಲೋಕಾತಿಶಯ, ಲೋಕೋತ್ತರ ಎಂದರೆ ಲೋಕದೂರವಾಗಲೀ ಲೋಕಭಿನ್ನವಾಗಲೀ ಅಲ್ಲ (ಕಾಂದ್ಶ. ೨೦). [ಸಂ.]

**ಲೋಕಧರ್ಮ** (ನಾ). ಜನತೆಯ ನಡೆ ; ಲೋಕಾಚಾರ ; ಜನರೂಢಿ : ಲೋಕಧರ್ಮದ ರಚಣೆ ರಚಿಸುವುದ್ಯಸರೇ ನಮಗಿಹುದು ಮತವಲ್ಲದೊಡೆ ಮಾಣಲಿನುತ್ತ ಮುರಿದೆದ್ದ (ಕುಮ್ಮಾಭಾ. ೨೩-೦೯) ; ಲೋಕದ ನಡವಳಿಕೆಯನ್ನು ಅನುಸರಿಸಿ ಗದ್ಯದಲ್ಲಿ ಮಾತನಾಡುವುದು, ಸ್ವಾಭಾವಿಕವಾಗಿ ನಡೆದಾಡುವುದು ಇವೆಲ್ಲಾ 'ಲೋಕಧರ್ಮ' (ಕೃಶಿಶಿ. ೨೦೭ ಟಿಪ್ಪಣಿ). [ಸಂ.]

**ಲೋಕಧರ್ಮಿ** (ನಾ). [ನಾಟ್ಯ] ಎರಡು ಬಗೆಯ ನಾಟ್ಯಸಂಪ್ರದಾಯಗಳಲ್ಲಿ ಒಂದು : ಲೋಕಧರ್ಮಿ ನಾಟ್ಯಧರ್ಮಿಯೆಂಬೆರಡುಂ ಧರ್ಮಿಯುಮಂ . . . ನೆಱೆಯೆ ತೋಱೆ (ಅಜಿತ. ೩-೩೦ ವ). 'ಧರ್ಮಿ' ಪರಾ. [ಸಂ. ಲೋಕಧರ್ಮಿನ್]

**ಲೋಕನಯನ** (ನಾ). ಲೋಕಕ್ಕೆ ಕಣ್ಣಿನಂತಿರುವವನು ; ಸೂರ್ಯ : ಶ್ರೀಕರದ ತತ್ಸರೋವರಮಹೀ[ನೀ]ಕ್ಷಿಸಿ ರತಿ ಲೋಕನಯನದ ತಾಪವಡಸಿ . . . ಸುಯ್ದಾನದೊಡನೆ (ಪಪದೇಅ. ೯-೩೩). [ಸಂ.]

**ಲೋಕನಾಥ** (ನಾ). ೧. ಜಗತ್ತಿನ ಒಡೆಯ ; ವಿಶ್ವದ ಪ್ರಭು : ಸಭೆಯೊಳ್ ದೇವನಿಕಾಯಮೊಪ್ಪುತ್ತಿರೆ ಬಂದಂ ಲೋಕನಾಥಂ ಸ್ವಯಂಪ್ರಭತೀರ್ಥೇಶ್ವರಂ (ಶಾಂತಿಪು. ೦-೯೦). ೨. ಬ್ರಹ್ಮ. ೩. ವಿಷ್ಣು : ಲೋಕನಾಥನ ನೆಸೆಯೋ ಮನುಜಾ (ಭರಂದ. ಧಾ. ೩-೦೦೭ ಅಮುಶಲ್ಲಿ): ೪. ಶಿವ : ಆ ಕುಲಂಗಳ ಮಾತವೇತಕೆ ಲೋಕನಾಥಪ್ರೋಕ್ತವಾದ ಪ್ರಾಕಟದ ಜಾತಿಗಳವು ಅಷ್ಟಾದಶಂಗಳು (ಬಸವ.೩೩-೨೦). ೫. ಬುದ್ಧ. ೬. ರಾಜ ; ದೊರೆ. [ಸಂ.]

**ಲೋಕನಾಥರಸ** (ನಾ). [ವೈದ್ಯಶಾ] ಒಂದು ಬಗೆಯ ಔಷಧೀತೈಲ : ಪಾವಟಬೀಜ, ಬಿಳಿಕರ್ಣಿಕೆಬೀಜ . . . ಮರ್ದಿಸಿ ಕಹಿಸೋರೆಕಾಯಲ್ಲಿ

ತುಂಬಿ ಬಿಸಿಲಲ್ಲಿ ಇಟ್ಟಿದ್ದರೆ ತೈಲ ಬರುವುದು . . . ಈ ತೈಲದ ಹೆಸರು ಲೋಕನಾಥರಸ (ಸಕಲ್ಯ. ಕಠ.೯೭೦ ।). [ಸಂ.]

**ಲೋಕನಾಯಕ** (ನಾ). ೧. = ಲೋಕನಾಥ ೧ : ಲೋಕನಾಯಕ ಸಿರಿಪುರಂದರವಿಠಲನ ಸಾಕಾರವಾದಂಥ ಪರಮಭಾಗವತರು (ಪುರಂದ. ದಾ. ೪-೦೩-೩). ೨.=ಲೋಕನಾಥ ೪ : ನಾಕು ಬಾಗಿಲ ನಡುವೆ ಏಕಾಕಿ ನಿಂತಿಹನು ತೂಕುಳ್ಳ ಕೈಲಾಸಮಂದಿರದಿ ಶಿವಸಿದ್ಧ ಲೋಕನಾಯಕನ ಲೀಲೆಯಲಿ (ಸಿದ್ಧ ಪು. ೬-೬೭). [ಸಂ.]

**ಲೋಕನಿಷ್ಠ** (ನಾ). ಜಗತ್ತಿಗೆ ಸಂಬಂಧಪಟ್ಟುದು; ಲೌಕಿಕವಾದುದು : ಕಲೆ ಸತ್ಯವನ್ನು ಪ್ರಕಟಿಸುತ್ತದೆ ಎಂದರೆ ಅದು . . . ಲೋಕನಿಷ್ಠವೇ ಅಥವಾ ಲೋಕಾತೀತವೇ—ಈ ಬಗೆಯ ಹಲವು ಸಮಸ್ಯೆಗಳು ಏಳುತ್ತವೆ (ಸೌಂದಸ. ೯೦). [ಸಂ.]

**ಲೋಕನೇತ್ರ** (ನಾ). ೧.=ಲೋಕನಯನ: ಲೋಕನೇತ್ರನ ಕುಲೋದ್ಭವ ಕುಮಾರರ್ಕಳಂ . . . ಆಲೋಕಿಪರು (ಕಾವಸಂ. ೬-೦೩); ನಿಜನೇತ್ರಂ ಲೋಕನೇತ್ರಂ . . . ನಿಜರಮಣಿ ಜಗನ್ಮಂಡಳೀಮಹಿತೆ ನಿಚ್ಚಂ . . . ನಿಜಮಾದಂ ಸುಪ್ರಮೋದಂ ಕುಡುಗೆಮಗತುಳಶ್ರೀಯುಮಂ ಶೈಲಜೇಶಂ (ರಾಜಶೇ. ೦-೨). ೨. ಚಂದ್ರ : (೪). [ಸಂ.]

**ಲೋಕಪತಿ** (ನಾ). ಜಿನ ; ತೀರ್ಥಂಕರ : ಲೋಕಪತಿಗಿಟ್ಟನನುಸ್ಮೃತ ಮಾತ್ರಪಾಪವಿಚ್ಛೇದನಮುಂ ಜಗತ್ಪ್ರಥಮಮಂಗಳಮುಂ ಹರಿ ಶಾಂತಿನಾಮ್ರಮಂ (ಶಾಂತಿಪು. ೦೨-೬೯). [ಸಂ.]

**ಲೋಕಪಾಲ** (ನಾ). ೧. ಜಗತ್ತನ್ನು ಪಾಲಿಸುವವನು; ವಿಶ್ವವನ್ನು ಕಾಪಾಡುವವನು: 'ಲೋಕಪಾಲತ್ವ' ಪರಾ. ೨. ದಿಕ್ಕನ್ನು ಕಾಯುವವನು; ದಿಕ್ಪಾಲ : ನಾಲ್ವರ್ ಲೋಕಪಾಲರುಂ . . . ಅಱುವತ್ತುಮೂವರ್ ವಲ್ಲಭೆಯರುಂ ತನಗೆ ಪ್ರಸಿದ್ಧಮಾಗೆ (ಶಾಂತಿಪು. ೯-೧೦೦ ವ); ಹರಿಯಿಲ್ಲದ ಪವನಾಧ್ವಂ ಹರಿಯಿಲ್ಲದ ಲೋಕಪಾಲಪರಿಷದ್ವಲಯಂ ಹರಿಯಿಲ್ಲದ ಕಾಂತಾರಂ ಹರಿ ನೀನಿಲ್ಲದ ಮದೀಯಗೋಕುಲಮುಫಲಂ (ಜಗಂ. ೩-೯೩). ೩. ಅರಸ ; ರಾಜ: " ರಾಜಾ . . . ಲೋಕಪಾಲಃ—ಈ ೧೨ ಅರಸು" (ಶಬ್ದಮ. ೬೯-೨೬೬); ಹರುಷಸಂಕಲಿತಮಹುದೀ ಲೋಕಪಾಲರಂ ಪಡೆದಖಿಳಭೋಗಂಗಳಂ ಚುಂಬಿಸಿ . . . ಸತತಪೋರಾಜ್ಯಪಾಲನೆಗೆ ಗಮಿಸುವುದೆ ಸದ್ಧರ್ಮವು (ಶಂಕರಾ. ೨-೧೦-೦೦). [ಸಂ.]

**ಲೋಕಪಾಲಕ** (ನಾ).= ಲೋಕಪಾಲ ೨ : ಇಂದ್ರ ಅಗ್ನಿ . . . ಚಂದ್ರ ಈ ಪದಿಂಬರು ಲೋಕಪಾಲಕರಿಂದಂ (ಶ್ರೀತಾ. ೬-೯). [ಸಂ.]

**ಲೋಕಪಾಲತ್ವ** (ನಾ). ಜಗತ್ತನ್ನು ಪಾಲಿಸುವಿಕೆ ; ವಿಶ್ವದ ಅಧಿಕಾರ : ಅವನಿಗೆ ಅಮರತ್ವ, ಧನಪತಿತ್ವ, ಲೋಕಪಾಲತ್ವ . . . ಇವುಗಳನ್ನು ಕೊಟ್ಟನು (ವಕಥಾ. ೯೦೪). [ಸಂ.]

**ಲೋಕಪಾವನ** (ನಾ). ಜಗತ್ತನ್ನು ಪವಿತ್ರಗೊಳಿಸುವಂಥದು: ಲೋಕಪಾವನವೆನಿಸಿ ಹರಿವ ಕಾವೇರಿಯಿಂ (ತಿರುಕ. ದೀ. ೨-೩). [ಸಂ.]

**ಲೋಕಪಿತ** (ನಾ). ಜಗತ್ತಿನ ತಂದೆ; ಪ್ರಜಾಪತಿ; ಬ್ರಹ್ಮ: ಲೋಕಪಿತನೊಲ್ದು ಚತುರ್ಮುಖನೀಗೆ ರಾಗಮಂ (ಜಗಂ. ೧-೨). [<ಸಂ. ಲೋಕಪಿತೃ]

**ಲೋಕಪೂರಣ** (ನಾ). [ಜೈನ] "ಕೇವಲಿಗಳ ಆತ್ಮವು ಭೂಮಂಡಲದ ಹಾಯುತ್ರಯದೊಡನೆ ಲೋಕವನ್ನೆಲ್ಲ ವ್ಯಾಪಿಸುವುದು" (ಜೈಪಕೋ. ೨೨೧). 'ಲೋಕಪೂರಣಕ್ರಿಯೆ' ಪರಾ. [ಸಂ.]

**ಲೋಕಪೂರಣಕ್ರಿಯೆ** (ನಾ). = ಲೋಕಪೂರಣ : ತದನಂತರಕ್ಷಣದೊಳ್ ವ್ಯಾಪ್ತಸಪ್ತಘನರಜ್ಜುಪ್ರಮಾಣಾಶೇಷಜಗತ್ಪ್ರದೇಶಲೋಕಪೂರಣಕ್ರಿಯಾಪರಿಸಮಾಪ್ತಿಯಂ ಮಾಡಿ (ಆದಿಪು. ೦೬-೯೯ವ) ; ದಂಡಕವಾಟಪ್ರತರ ಲೋಕಪೂರಣಕ್ರಿಯೆಗಳಂ ಪ್ರತಿಸಮಯಂ ಪ್ರಯೋಗಿಸಿ (ಶಂರಾವಾ. ೦೬-೬೯ವ). [ಸಂ. ಲೋಕಪೂರಣಕ್ರಿಯಾ]

**ಲೋಕಪ್ರತೀತ** (ಗು). ಜಗತ್ಪ್ರಸಿದ್ಧವಾದ ; ವಿಶ್ವವಿಖ್ಯಾತವಾದ : ಲೋಕಪ್ರತೀತ ಸುಭಗವಿವೇಕಾಳಾಪಂ ಪ್ರಸನ್ನಮದಳವಿಂತಕ್ಕುಂ (ಕಾವ್ಯಾ. ೨-೬೩). [ಸಂ.]

**ಲೋಕಪ್ರತೀತಿ** (ನಾ). ಜಗತ್ಪ್ರಸಿದ್ಧವಾದುದು : ನಯವಿದುದಿತ ಯುಕ್ತಿವ್ಯಕ್ತಿಲೋಕಪ್ರತೀತ್ಯಾಶ್ರಯಸಕಳಕಳಾಲೀಲಾಕರಾಲ್ಪೋಪಜಲ್ಪಂ (ಕಾವ್ಯಾ. ೩-೨೧೩). [ಸಂ.]

**ಲೋಕಪ್ರಸಿದ್ಧ** (ನಾ). = ಲೋಕಪ್ರತೀತಿ : ಶ್ರವಣಬೆಳಗೊಳ ಲೋಕಪ್ರಸಿದ್ಧವಾದುದು (ರೂಢಿ). [ಸಂ.]

**ಲೋಕಪ್ರಸಿದ್ಧಿ** (ನಾ). ೧. ಜಗತ್ತಿನಲ್ಲಿ ವ್ಯಾಪಿಸಿದ ಕೀರ್ತಿ ; ವಿಶ್ವದಲ್ಲಿ ಹರಡಿದ ಯಶಸ್ಸು : ಲೋಕರೂಢಿ= ಲೋಕಪ್ರಸಿದ್ಧಿ (ಕಮಕ. ೪. ೨೩೨ ಟೀಕು); ಅದರಂತಹುದೆಷ್ಟೊ ಆಗಲೇಬೇಕಲ್ಲ ಲೋಕಪ್ರಸಿದ್ಧಿಯ ಜಯದಲಿ ಎಂದ (ಜಂಗೀಕ. ೩೩-೨೯). ೨. ಜನಬಳಕೆಯಲ್ಲಿರುವುದು ; ಲೋಕಾಚಾರ : ಲೋಕಪ್ರಸಿದ್ಧಿಗೆ ವಿರುದ್ಧವಾದುದು (ಕೃಬಿಡಾ. ೨೨೬). ೩. [ತರ್ಕಶಾ] ಹನ್ನೆರಡು ವಿಧವಾದ ಪ್ರಮಾಣಗಳಲ್ಲಿ ಒಂದು : ಪ್ರಮಾಣವು ಪ್ರತ್ಯಕ್ಷ . . . ಲಿಪಿ, ಲೋಕಪ್ರಸಿದ್ಧಿ, ಚೇಷ್ಟೆ, ಪ್ರಾತಿಭ ಎಂದು ಹನ್ನೆರಡು ವಿಧವೆಂದು ಕೆಲವರು ಹೇಳುತ್ತಾರೆ (ಹಿಂದಶಾ. ೦೩೩). [ಸಂ.]

**ಲೋಕಬಾಂಧವ** (ನಾ). ಜಗತ್ತಿಗೆ ಬಂಧುವಾದವನು ; ಸೂರ್ಯ : ಮಹಾಲಯದ ವಿಷವನಿಕ್ಕಿದರಂ ಸಲಹಿದೆ ಮತ್ತಾ ಲೋಕಬಾಂಧವನ ಪಲ್ಗಳೆದೆ (ಶರ್ವಗ. ೦೩-೦೨); ಲೋಕಬಾಂಧವನುದಯಿಸುವಾಗಲುಪ್ಪವಡಿಸುತಲಾ ಕುಮಾರರು ನಿತ್ಯಕೃತ್ಯಂಗಳಂ ರಚಿಸಿ (ಕಾವಸಂ. ೬-೦೩). [ಸಂ.]

**ಲೋಕಬಿಂದುಪೂರ್ವ** (ನಾ). [ಜೈನ] ಆಗಮಗಳ ಹದಿನಾಲ್ಕು ಪೂರ್ವಗಳಲ್ಲಿ ಒಂದು ಬಗೆ; ಮೋಕ್ಷಸಾಧನೆಗೆ ಯೋಗ್ಯವಾದ ಕ್ರಿಯೆಗಳ ವರ್ಣನಾಶಾಸ್ತ್ರ ; ಜಗತ್ತಿನ ತಿಳಿವಳಿಕೆ: ಪೂರ್ವಗಳು ಜೈನ ಶಾಸ್ತ್ರವಿಭಾಗಗಳಾಗಿವೆ. (೧) ಉತ್ಪಾದನಾಪೂರ್ವ . . . (೧೪) ಲೋಕಬಿಂದುಪೂರ್ವ (ಲೋಕದ ತಿಳಿವಳಿಕೆ) (ಜೈಪಕ. ೯೯೯). 'ಚತುರ್ದಶಪೂರ್ವ' ಪರಾ. [ಸಂ.]

**ಲೋಕಬೆಟ್ಟು** (ನಾ). (?) : ಪಾಂಡೆನಾಡ ಬಂಗಮಂಜು[ವ] ಮೊದಲಾದ ಹಿರಿಯರು ಲೋಕಬೆಟ್ಟೆಂಬ ಬಾಳಿಕೆಯನು ಬಾಳಿ ಬಂದಲ್ಲಿ (ಸೌಇಇ. IX- ii, ೯೬೦-೦೨; 1465). [ ? ]

**ಲೋಕಬ್ಬೆ** (ನಾ). ಒಬ್ಬಾತನ ಹೆಸರು : ತಮ್ಮ ಲೋಕಬ್ಬೆಬಿಟ್ಟ × ದಗಟ್ಟ ಕನ್ನಿ ಬಾಚನಯ್ (ಮೈಶಾಸಂ. ೦೯೨೩, ೩೨-೬; ?). [ ? ]

**ಲೋಕಭಿನ್ನ** (ನಾ). ಜಗತ್ತಿನಿಂದ ಬೇರೆಯಾದುದು ; ವಿಶ್ವಕ್ಕೆ ಸೇರದುದು : ರಸಾನುಭವ ಲೋಕಾತಿಶಯ, ಲೋಕೋತ್ತರ ಎಂದರೆ ಲೋಕದೂರವಾಗಲೀ ಲೋಕಭಿನ್ನವಾಗಲೀ ಅಲ್ಲ (ಸೌಂದಸ. ೨೦). [ಸಂ.]

**ಲೋಕಮತ** (ನಾ). ಜನರ ಅಭಿಪ್ರಾಯ,—ಮತ : " ಜನಸಾಮಾನ್ಯರಲ್ಲಿ ರೂಢಿಯಾಗಿರುವ ಮತ. ನೈತಿಕವಿಷಯಗಳ ಮೇಲಿನ ಅಭಿಪ್ರಾಯ : ಜನಾಭಿಪ್ರಾಯ; ಲೋಕಮತ " (Opinion. ಇಂಕಿ). [ಸಂ.]

**ಲೋಕಮರ್ಯಾದೆ** (ನಾ). ಜಗತ್ತಿನ ನಡತೆಯ ಇತಿ ಮಿತಿ ; ಲೋಕಾಚಾರ ; ಲೋಕರೂಢಿ.—ಸಂಪ್ರದಾಯ : ಯಾರೂ ಲೋಕಮರ್ಯಾದೆಯನ್ನು ಮೀರಬಾರದು (ರೂಢಿ). [ಸಂ. ಲೋಕಮರ್ಯಾದಾ]

**ಲೋಕಮಾತೆ** (ನಾ). ಜಗತ್ತಿನ ತಾಯಿ ; ಜಗಜ್ಜನನಿ ; ಲಕ್ಷ್ಮಿ : " ಲೋಕಮಾತೆ ಮನ್ಮಥಮಾತೆಯೆನಲು ಸಿರಿಗಕ್ಕ ನಾಮಂ " (ಮುಂಗಣ. ೬-೦೯); ಒಜಲೆಗಳು ದಳ್ಳುರಿಯ ಕಿಚ್ಚಿಂಗೆಜಗಬಲ್ಲುವೆ ದನುಜ ಕಂಗಳ ತೆಱೆದು ನೋಡಲು ಬಹುದೆ ಸೀತೆಯ ಲೋಕಮಾತೆಯನು (ತೊರವೆರಾ. ೯೩-೫೦). [ಸಂ. ಲೋಕಮಾತಾ]

**ಲೋಕಮಾನ್ಯ** (ನಾ). ಜನರಿಂದ ಮಾನ್ಯತೆ ಪಡೆದವನು ; ಜನರಿಗೆ ಪೂಜ್ಯನಾದವನು : ಲೋಕಮಾನ್ಯನು ಕರ್ಣ (ಕುಪ್ರಾ. ೪. ೬೨–೬೦). [ಸಂ.]

**ಲೋಕಮಿತ್ರ** (ನಾ). = **ಲೋಕಬಾಂಧವ** : ನಿಜಪತ್ನಿಯುಗಲಿ ಕೋಟಲೆಗೊಂಬವಂ ಮುನ್ನದಾರೆಂದೊಡೇ ಲೋಕಮಿತ್ರಾಸ್ತಮಯದಲ್ಲಿ . ಬಂಧುಶ್ರಿತಾನೀಕಕ್ಕೆಯಪಾಲಯವನೀಯದಾತಂ (ಶೀಕೃತ. ೯–೨೨–೬೦). [ಸಂ.]

**ಲೋಕಮೂಢ** (ನಾ). [ಜೈನ] ಲೋಕಮೂಢ, ದೇವತಾಮೂಢ, ಪಾಷಂಡಿಮೂಢವೆಂಬ ಮೂಢತ್ರಯಗಳಲ್ಲಿ ಒಂದು ; ★ "ಎಲ್ಲಾ ಸ್ಥಳಗಳೂ ಸಮಾನವೆಂಬುದನ್ನು ಮರೆತು ಗಂಗಾಸ್ನಾನಾದಿಗಳಿಂದ ಪಾಪಪರಿಹಾರವಾಗುವುದೆಂಬ, ಮರಳು ಕಲ್ಲುಗಳನ್ನು ರಾಶಿ ಮಾಡುವುದು, ಬೆಂಕಿಯಲ್ಲಿ ಬೀಳುವುದು ಮುಂತಾದ ಮಿಥ್ಯಾ ನಂಬಿಕೆ" (ಕೈಶಬ್ದ. ೨೨೦) : ಲೋಕಮೂಢಮುಂ ದೇವತಾಮೂಢಮುಂ ಪಾಷಂಡಿಮೂಢಮುಂ ಎಂದು ಮೂಢಂ ತ್ರಿವಿಧಮಕ್ಕು (ಶಸಾರ. ೯೭೯). [ಸಂ.]

**ಲೋಕಮೂಢತ್ವ** (ನಾ). = **ಲೋಕಮೂಢ** : ಮತ್ತಂ ಲೌಕಿಕ ಪಾರಮಾರ್ಥಿಕ ಹೇಯೋಪಾದೇಯ ತತ್ವಪರಿಜ್ಞಾನರಹಿತರನೇಕಪ್ರಾಣಿರ್ಬ್ ಲೋಕಪ್ರವಾಹದಿಂ ಬಂದ ಧರ್ಮಕರ್ಮಾನುಷ್ಠಾನಮಂ ಮಾಳ್ಪುದದುಂ ಲೋಕಮೂಢತ್ವಮೆಂಬುದು (ಶಸಾರ. ೯೬೦). [ಸಂ.]

**ಲೋಕಯಾತ್ರೆ** (ನಾ). ೧. ಪ್ರಪಂಚದ ಬೇರೆ ಬೇರೆ ಭಾಗಗಳಲ್ಲಿ ಪ್ರವಾಸಮಾಡುವುದು ; ಜಗತ್ತನ್ನು ಸುತ್ತುವುದು : ಗಾಲಿಯೊಂದೇ ರಥಕೆ ಜೋಡಾಗಿ ಪೂಡುವೊಡೆ ಸಾಲದೇಳೇ ಹಯಂ ನಡೆಸುವೊಡೆ ಸಾರಥಿಗೆ ಕಾಲಿಲ್ಲ ಲೋಕಯಾತ್ರೆಯನೊಲ್ಲೆನೆಂದೊಡಾಗದೆ ತನಗೆ ತಿರುಗಲೇಕೆ (ಕೈಬಡ. ೨೬–೨೬). ೨. **ಲೋಕಾಚಾರ** ; ಲೋಕರೂಢಿ : ಸಮಕೊಂಡ ಪುಣ್ಯಮುಂ ಪಾಪಮುಮಿಲ್ಲದೊಡಾಳ್ದನಾಳ್ ಸರೋಗನರೋಗಂ ಶ್ರಮರಹಿತಂ ಕ್ಲೇಶಕೃತಶ್ರಮನೆಂಬೀ ಲೋಕಯಾತ್ರೆ ಕಿಡದೆ ಮಹಾತ್ಮಾ (ಶಾಂತಿಪು. ೬–೦೯೦). ೩. ಪ್ರಪಂಚದಲ್ಲಿರುವ ಬಾಳು ; ಇಹದ ಬದುಕು : ಈ ಜೀವನಕ್ರಮವು . . . ಲೋಕಯಾತ್ರೆಯನ್ನು ನಡೆಸುತ್ತಿದ್ದ ಪ್ರಾಚೀನ ಭಾರತೀಯರೆಲ್ಲರ ಧರ್ಮವಾಗಿದ್ದಿತು (ಭಾರಶ. ೯೯೬).

[ಸಂ. ಲೋಕಯಾತ್ರಾ]

**ಲೋಕಯ್ಯ** (ನಾ). ಒಬ್ಬಾತನ ಹೆಸರು : [ನಾ]ಗವ[ರ್ಮ್ಮ ಸಿ]ಡಯನೂರನಾಳುತ್ತಿರೆ(ಯು) ಲೋಕಯ್ಯಂ ತು × × × ಲ್ಲಿ ಗಾಮುಂಡ ಗೆ ಅವುತಮ(೦)ಪ್ಪಿಟ್ಟ (ಶೌಇ. XX, ೦೭–೯ ; ೨೦೪) ; ಕೊಪರಸಿಯು ಚಿಂಪಯ್ಯನುಂ ಲೋಕಯ್ಯನುಂ ಕೊಟ್ಟಾರದ ಮಾರಪ್ಪಲಿಯುಂ (ಎಕ. XII, ಸಿರಾ. ೨೮–೩೦ ; ೯೪೩). [ಲೋಕ+ಅಯ್ಯ]

**ಲೋಕರಕ್ಷಕ** (ನಾ). ೧. ಜಗತ್ತನ್ನು ಕಾಪಾಡುವವನು : ಲೋಕಕರ್ತಂ ನಾನೆ ಈತಂ ಲೋಕಪಾವನಮೂರ್ತಿ ಕಾರಣ ಲೋಕಶಿಕ್ಷಕ ನಾನೆ ಈತನು ಲೋಕರಕ್ಷಕನು (ಚಾತು. ೦೦–೪೦). ೨. ಜಗತ್ತನ್ನು ಕಾಪಾಡುವಂತಹುದು : "ಅಧ್ಯಾತ್ಮತೇಜೋಬಲಂ ಬಲಂ" ಎಂದು ಘೋಷಿಸಿ . . . ಲೋಕನಾಶಕವಲ್ಲದೆ ಪೂರ್ಣವಾಗಿ ಲೋಕರಕ್ಷಕ ಎಂದು ಇಂದಿನ ಯುಗದಲ್ಲಿ ಅದರ ಸತ್ಯಸ್ಥಾಪನೆ ಮಾಡಿದ ಗಾಂಧಿ ಭರತಖಂಡದ ಪ್ರಾಚೀನ ಸಂಸ್ಕೃತಿಯ ಪ್ರತೀಕ (ಮನ್ವಾರ. ೦೩೦ ಬಿ೩೪). [ಸಂ.]

**ಲೋಕರೂಢಿ** (ನಾ). ಜನಸಾಮಾನ್ಯರ ಪದ್ಧತಿ.– ಸಂಪ್ರದಾಯ : ಈಕ್ಷಿಸಿ ಶಿಕ್ಷಾಸೂತ್ರದ ಲಕ್ಷಣಮಂ ಲೋಕರೂಢಿ ಕಿಡದವೊಲರ್ಜುವರ್ ಲಕ್ಷಿಪುದು ನುಡಿಗಳೊಳ್ ಬಹುಳಾಕ್ಷೇಪಣಮಿಲ್ಲದಿರೆಯುಮವುಯದ ಕೆಲವಂ (ಶಬ್ದ. ೨೩೨) ; ಬಿಷ್ಟಳ ಎಂದು ಅವನ ಮಾತಾಪಿತೃಹನ ಹೆಸರಿಕ್ಕಿದುದು ಲೋಕರೂಢಿಗೆ ವಿಹಿತವಾಗಿದೆ (ಶಾರಕಾ. ೭೪). [ಸಂ.]

**ಲೋಕಲುಂಟಾಕ** (ನಾ). ಜಗತ್ತಿಗೆ ತೊಂದರೆ ಕೊಡುವವನು : ಲೋಕಲುಂಟಾ[ಕಾಂ.ರಾ]ಕರಸಂಖ್ಯಾತರ್ ಕಿರಾತರ್ ನೆರೆದು ನಿಖಿಲ ಭೂತಕ್ರಮಂ ಸೂರೆಗೊಂಡರ್ (ಶಂರಾಕಾ. ೯–೬೩) ; ರಣಮೇರು ಲೋಕಲುಂಟಾಕನಿಷ್ಠಾಘತಾಪಹರವರ್ಷಣಮೇಘನುದಾತ್ತರಾಘವಂ (ಶಂರಾಕಾ. ೩–೬೨). [ಸಂ.]

**ಲೋಕವಟ್ಟ** (ನಾ). ವಿಶ್ವದ ಸ್ವಾಮಿತ್ವ.– ಅಧಿಕಾರ (?) : ಎಜಗಿದ ಜನಕ್ಕೆ ಪೊಂಪುಗಿಲಿಜಗಿದವೊಲು ಲೋಕವಟ್ಟಮನೆ ಪೊಂಮುಳಿಯಂ ಕಟಿಪನುಜದಜಗದಹಿತಂಗೆಜಗದ ಬಜಿಸಿಡಿಲೆನಿಪ್ಪನೆಟೆಯಂಗನೃಪಂ (ಎಕ. VI, ಕಡೂರು. ೦೬೯–೨೩; 1173). [ಲೋಕ+ಪಟ್ಟ]

**ಲೋಕವಶ್ಯ** (ಗು). ೧. ಜಗತ್ತನ್ನು ವಶಪಡಿಸಿಕೊಳ್ಳುವ. (ನಾ). ೨. ಪ್ರಪಂಚದ ಜನರನ್ನು ವಶಪಡಿಸಿಕೊಳ್ಳುವುದು.– ಜನರ ವಶೀಕರಣ : ಲೋಕವಶ್ಯದ ತಿಲಕವೊ ಜಗದೇಕರತ್ನವೊ . . . ಚಿತ್ರಪಾಯನ್ನೂರ್ವಶಿಯ ಬರವು (ಕುಪ್ರಾ. ೬–೩) ; ಆ ಬೇರಂ . . . ಮಂತ್ರಿಸಿ ಮುಖಮಂ ಪೂಸೆ ಲೋಕವಶ್ಯ (ವಿಶ್ವ. ೨) ; ಲೋಕವಶ್ಯಕೆ ಮದ್ದು ಏಕಾಕಿ ಹೋಬೇಲು . . . ಮಿಕ್ಕೆಲ್ಲ ಕಾಕುಮದ್ದೆಂದ (ಸರ್ವಜ್ಞ. ೦೭೯೩). ೩. ಇತರರನ್ನು ತಮ್ಮ ಇಚ್ಛಾನುಸಾರವಾಗಿ ನಡೆಸಿಕೊಳ್ಳುವ ಶಕ್ತಿ.–ವಿದ್ಯೆ. [ಸಂ.]

**ಲೋಕವಾದ** (ನಾ). ಜನರಾಡುವ ಮಾತು ; ಜನಶ್ರುತಿ: "ಕಿಂವದಂತೀ, ಜನಶ್ರುತಿಃ, ಕೌಲೀನಂ, ಲೋಕವಾದಃ — ಈ ೪ ಜನವಾರ್ತೆ" (ಶಬ್ದಮ. ೨೪–೦೯೩): ಓದುಗಲಿಸುವರೊಲಿದು ಪೊಗಳಿದೊಡಾವೋದುಗಲಿ ಪೆರೋದುಗಳು ಮೇದಿನಿಯೊಳು ಮೇಲೆನಿಪವೆಂಬುದು ಲೋಕವಾದವ್ಯಸಲೆ (ಶಿಶ. ೦–೨೪). [ ಸಂ. ]

**ಲೋಕವಾರ್ತೆ** (ನಾ). = **ಲೋಕವಾದ** : ಪರಮದಯಾಗುಣಂ ನಯನದೊಳ್ . . . ಧೃತಮೌನತೆ ಲೋಕವಾರ್ತೆಯೊಳ್ ದೊರೆವಡೆದೊಪ್ಪೆ ಸಂಚರಿಮುಗೀಗಜಿಪಂ ಸಲೆ ಸರ್ವಸಾಧುಗಳ್ (ಅಪಂಪು. ೦–೩); ಜಾತಿದಿಂದರಿದವರು ಪ್ರಪಥಖ್ಯಾತಿಯಲಿ ಕರೆದಪರು ಸರ್ವಜನಾತನನು ಬಸವಣ್ಣನೆಂಬರು ಲೋಕವಾರ್ತೆಯಲಿ (ಬಸಪು. ೩೩–೨೯).

[ಸಂ. ಲೋಕವಾರ್ತಾ]

**ಲೋಕವಿಖ್ಯಾತ** (ನಾ). ಜಗತ್ಪ್ರಸಿದ್ಧವಾದುದು ; ದುಷ್ಟರ ದೌಷ್ಟ್ಯವು ಲೋಕವಿಖ್ಯಾತವು ತಿಳಿವುದು ಸುಲಭ ದುಷ್ಟರನು (೨೦ಜಾತ. ೦೭೬–೬೯). [ ಸಂ. ]

**ಲೋಕವಿಮೂಢ** (ನಾ). = **ಲೋಕಮೂಢ** : ನದಿ ವಾರ್ಧಿಗಳಂ ಪಿಪಾವುದುಮದಿರದೆ ಶಸ್ತ್ರಾಗ್ನಿ ಗಿರಿಗಳಂ ಪಾಯ್ವುದುಮಿಂತಿದು ಲೋಕವಿಮೂಢಂ ಮುದದಿಂದಂ ರಾಶಿಮಾಳ್ಪುದುಂ ಕಲು ಮಣಲಂ (ಶಸಾರ. ೯೬೦). [ ಸಂ. ]

**ಲೋಕವಿರುದ್ಧ** (ನಾ). ೧. ಜನಸಾಮಾನ್ಯರ ಪದ್ಧತಿಗೆ ವಿರೋಧವಾದುದು; ಲೋಕರೂಢಿಗೆ ವಿರುದ್ಧವಾದುದು : ಯಾರೇ ಆಗಲಿ ಲೋಕವಿರುದ್ಧವಾಗಿ ನಡೆಯಬಾರದು (ರೂಢ). ೨. [ಕಾವ್ಯಮೀ] ಒಂದಂ ಬಗೆಯ ವಾಕ್ಯದೋಷ ; ★ ಲೋಕಪ್ರಸಿದ್ಧಿಗೆ ವಿರುದ್ಧವಾದುದು : ಲೋಕಮದರ್ಥ್ಯಾರ್ಥೋಪಮಧ್ಯಾಕಾಂಕ್ಷಿತಭೇದರೂಪದಿಂ ಮೂಜಕ್ಕುಂ ಲೋಕವಿರುದ್ಧಂ (ಕಲಾ. ೦–೦೦೯); ಕಾಲ ಸ್ವಭಾವ ದೇಶ ಸಮಾಲಕ್ಷಿತವಸ್ತುರೂಪವಿಪರೀತಮವಂತಾ ಲೋ[ಕಾಶಂ. ಕೋ]ಕವಿರುದ್ಧಂ (ಕಾವ್ಯಾವ. ೯೩೦). [ಸಂ.]

**ಲೋಕವಿರೋಧಿ** (ನಾ). ಜನರ ವಿರೋಧಕ್ಕೆ ಒಳಗಾದವನು : ನ್ಯಾಯನಿಷ್ಠುರಿ ದಾಕ್ಷಿಣ್ಯಪರನು ನಾನಲ್ಲ ಲೋಕವಿರೋಧಿ ಶರಣನಾರಿಗಂಜುವನಲ್ಲ (ಬಸವ. ೭೩೩); ಖಂಡಿತವಾದಿ ಲೋಕವಿರೋಧಿ (ಗಾದೆ).

[ ಸಂ. ಲೋಕವಿರೋಧಿನ್ ]

**ಲೋಕವ್ಯವಹಾರ** (ನಾ). ಪ್ರಪಂಚದ ನಡತೆ,_ ಆಚಾರ,_ ನಡವಳಿಕೆ; ಅಲಂಕೃತನಾಗಿಯುಂ ನಿಸರ್ಗಸುಂದರನಪ್ಪುದಱಿಂದಮಲಂಕಾರಕ್ಕೆ ತಾನಲಂಕಾರಮಾದೊಡಂ ಲೋಕವ್ಯವಹಾರಾಪೇಕ್ಷೆಯಿಂ ಪ್ರಸಾಧಿತಂ ಮಾಡಿ (ಶಾಂತಿಪು. ೧೧-೩೮ ವ); ಕವಿಮಾರ್ಗಗತಸಮಾಸಮನವನಿನ್ನುೞಿಪನಿತನೆಬ್ದೆ ಪೇೞ್ದಿಂ ಲೋಕವ್ಯವಹಾರದಿಂದಂ (ಶಬ್ದ. ೧೯೬); ಲೋಕವ್ಯವಹಾರವನ್ನು ಚೆನ್ನಾಗಿ ತಿಳಿದಿರುವ ನೀವೇ . . . ಹೇಳಿದ ಮೇಲೆ ಇನ್ನು ನಾವು ಆಡತಕ್ಕುದೇನು ? (ಶಾಕುಂತ. ೬೬-೨೦). [ಸಂ.]

**ಲೋಕಸಂಗ್ರಹ** (ನಾ). ಜನರನ್ನು ಪರಸ್ಪರ ಹತ್ತಿರ ತರುವುದರ ಮೂಲಕ, ಜನತೆಗೆ ಮಾಡುವ ಸಹಾಯ ; ವಿಶ್ವಕಲ್ಯಾಣ : ಭಾರತೀಯ ರಾಜ್ಯಶಾಸ್ತ್ರದ ಅಂತಿಮಗುರಿ . . . ಲೋಕಸಂಗ್ರಹ (ಭಾರದ. ೩೭೩) ; ಭಕ್ತರು ಲೋಕಸಂಗ್ರಹಕಾರ್ಯದಲ್ಲಿ ತುಂಬ ನೆರವು ನೀಡಿದ್ದಾರೆ (ಧರ್ಮಗಾ. ೧೩೦). [ಸಂ.]

**ಲೋಕಸಂರಕ್ಷಕ** (ನಾ). ಜಗತ್ತನ್ನು ಕಾಪಾಡುವವನು ; ಪರಮಾತ್ಮ : ಲೋಕಸಂರಕ್ಷಕ ಅಸುರಸಂಹಾರಕ ಲೋಕೇಶ ಪುರಂದರವಿಠ್ಠಲ (ಪುರಂದ. ಧಾ. ೩-೮೭-೬). [ಸಂ.]

**ಲೋಕಸಂರಕ್ಷಣ** (ನಾ). ಜಗತ್ತನ್ನು ಕಾಪಾಡುವುದು ; ವಿಶ್ವದ ಸಂರಕ್ಷಣೆ : ಲೋಕಸಂರಕ್ಷಣಾಧಿಕಾರವು ವಿಶ್ರಾಂತಿಯಿಲ್ಲದುದು (ಶಾಕುಂತ. ೬೦-೧೯). [ಸಂ.]

**ಲೋಕಸಭೆ** (ನಾ). ಕೇಂದ್ರಸಂಸತ್ತಿನ ಉಭಯಸಭೆಗಳಲ್ಲಿ ಒಂದು ; ಜನರಿಂದ ನೇರವಾಗಿ ಚುನಾಯಿತರಾದ ಸದಸ್ಯರ ಸಭೆ : ಭಾರತ ಸಂಘಕ್ಕೆ ರಾಷ್ಟ್ರಪತಿಯವರೂ ರಾಜ್ಯಪರಿಷತ್ತೆಂಬ ಹೆಸರಿನ ಒಂದು ಸದನವೂ ಲೋಕಸಭೆ ಎಂಬ ಹೆಸರಿನ ಒಂದು ಸದನವೂ ಸೇರಿರುವ ಒಂದು ಸಂಸತ್ತು ಇರತಕ್ಕುದು (ಭಾರಾಸ. ೩೯). [ಸಂ. ಲೋಕಸಭಾ]

**ಲೋಕಸಾಕ್ಷಿ** (ನಾ). ೧. ಜಗತ್ಸಾಕ್ಷಿ; ವಿಶ್ವಸಾಕ್ಷಿ. ೨. ಬ್ರಹ್ಮ. ೩. ಅಗ್ನಿ. [ಸಂ. ಲೋಕಸಾಕ್ಷಿನ್]

**ಲೋಕಸೇವಾಆಯೋಗ** (ನಾ). ಸಾರ್ವಜನಿಕಸೇವೆ ಸಲ್ಲಿಸಲು ಸರ್ಕಾರವು ನೇಮಿಸಿರುವ, ಕೆಲವು ಸದಸ್ಯರನ್ನೊಳಗೊಂಡ ಒಂದು ಸಮಿತಿ, — ಮಂಡಳಿ : ರಾಜ್ಯದ ಲೋಕಸೇವಾಆಯೋಗದೊಡನೆ . . . ವಿಧಾಯಕ ಮಾಡಬಹುದು (ಭಾರಾಸ. ೦೨೩). [ಸಂ.]

**ಲೋಕಸೇವೆ** (ನಾ). ಸಾರ್ವಜನಿಕರಿಗೆ ಸೇವೆ ಸಲ್ಲಿಸುವುದು; ಜನಸೇವೆ: "ಸಾರ್ವಜನಿಕರ ಸೇವೆ; ಸರ್ಕಾರಿ ನೌಕರಿ ; (ಪಾಂ) ಲೋಕಸೇವೆ" (Public service· ಪತ್ರಿಕಾ. ೬೬) ; ರಾಜ್ಯದ ಲೋಕಸೇವಾವ್ಯವಸ್ಥೆಯಲ್ಲಿ ನ್ಯಾಯಪಾಲಿಕೆಯನ್ನು . . . ಜರುಗಿಸತಕ್ಕುದು (ಭಾರಾಸ. ೨೩). [ಸಂ. ಲೋಕಸೇವಾ]

**ಲೋಕಸ್ತುತೆ** (ನಾ). ಜಗತ್ತಿನಿಂದ ಹೊಗಳಿಸಿಕೊಂಡವಳು ; ವಿಶ್ವಮಾನ್ಯೆಯಾದವಳು: ಲೋಕಸ್ತುತೆ ಮಣಿಕನಕಪತಾಕೆಯನರ್ಚಿಸುವೆನೆನೆಯೆ ನಿನ್ನೀ ನಿಲಯಪ್ರಾಕಾರಮಂ (ಲೀಲಾವ. ೭-೪೨). [ಸಂ. ಲೋಕಸ್ತುತಾ]

**ಲೋಕಹಿತ** (ನಾ). ೧. ಜನಹಿತ ; ವಿಶ್ವಕಲ್ಯಾಣ : ಲೋಕಹಿತಾಚರಣಕಳಾನೀಕಪ್ರಯುತಂಗೆ ಯತಿಗೆ ದಾನವನಿರದುಪ್ರೇಕಿಸೆ ಮಾಡುವ ಪೀಡೆ ಸುಧಾಕರನಂ ರಾಹು ಪೀಡಿಪುದನನುಕರಿಕುಂ (ಪಾರ್ಶ್ವಪು. ೦೩-೦೨೦) ; ಸಾಹಸಿಗಳ ಲಕ್ಷಣವೇ ಅದು ತಾಯಿ. ಅದರಲ್ಲಿಯೂ ಲೋಕಹಿತದ ದೃಷ್ಟಿ ಇದ್ದರಾಯಿತು (ಸವತಿ. ೧೩). ೨. ಜಗತ್ತಿಗೆ ಒಳ್ಳೆಯದನ್ನು ಮಾಡುವವನು : ಮಹಿಶಂ ರಕ್ಷಿಪ ಧರ್ಮಸಂತತಿನಿಮಿತ್ತಂ ರಾಜ್ಯಮಂ ತಾಳ್ದಿ ನಿಸ್ಪೃಹನಾಗಿರ್ಪವೊಲಿರ್ದನಿನ್ನೆವಧಮಾಗಳ್ ದ್ರೋಹ ದುರ್ಮೋಹ ನಿಗ್ರಹನಿಷ್ಠಾಗ್ರಹನಾದ ಲೋಕಹಿತರಾರೆಲ್ಲಂವದಿಂ ನೀಂ ಬರಂ (ಧನ್ಯಕು. ೦೩-೬೩). [ಸಂ.]

**ಲೋಕಾಂತ** (ನಾ). ೧. ಜಗತ್ತಿನ ಕೊನೆ ; ವಿಶ್ವದ ತುದಿ. ೨. ಯಾರು ಬೇಕಾದರೂ ಇರಬಹುದಾದ ಸ್ಥಳ ; ಸಾರ್ವಜನಿಕ ಜಾಗ : ಏಕಾಂತದ ಸಾವಿವು ಲೋಕಾಂತವದೇಕೋ (ವಚನಸಂ. ೦೦೯-೪೬) ; 'ಲೋಕಾಂತ'ಕ್ಕಿಂತ ಏಕಾಂತ ಅವರಿಗೆ ಹೆಚ್ಚು ಸೇರುತ್ತಿತ್ತು (ಮೋಚಿಮಾ. ೯೩ ಪ್ರಸ್ತಾವನೆ). ೩. ಎಲ್ಲರಿಗೂ ತಿಳಿದ ವಿಷಯ ; ಜಗಜ್ಜಾಹೀರಾದುದು ; ಸಾರ್ವಜನಿಕವಾದುದು : ಏಕಾಂತರಾಮನನಂತತೇಜೋಮಹಿಮೆಯದು ಲೋಕಾಂತವಾಯಿತ್ತೀ ಚತುರ್ದಶಭುವನಮಧ್ಯದಲಿ (ಬಸವ. ೩೨-೪೩) ; ಒಬ್ಬನಱಿದರೆ ಸ್ವಾಂತ ಇಬ್ಬರಲಿ ಏಕಾಂತ ಇಬ್ಬರಿಂದೊಬ್ಬನಱಿದು ಬೇಱೊಬ್ಬನಿಂ ಹಬ್ಬಿ ಲೋಕಾಂತ (ಸರ್ವಜ್ಞ. ೦೩೩೯) ; ಇಬ್ಬರಿದ್ದರೆ ಏಕಾಂತ, ಮೂವರಿದ್ದರೆ ಲೋಕಾಂತ (ಗಾದೆ). [ಸಂ.]

**ಲೋಕಾಂತರ** (ನಾ). ಬೇರೊಂದು ಲೋಕ ; ಪರಲೋಕ ; ಇನ್ನೊಂದು ಜಗತ್ತು : " ಪರಲೋಕಮುಜಿಗೆ ಲೋಕಾಂತರಮಕ್ಕು" (ವಸ್ತುಕೋ. ೩೯-೪೬) ; ಇಳೆಯ ಭೋಗದ ದೃಷ್ಟಿ ತೀರಿದ ಬಳಿಕ ಲೋಕಾಂತರವನೆಯ್ದುವರು (ಕುವ್ಯಾಉ. ೪-೧೮) ; ದೇಹಾತ್ಮಗಳೆರಡೂ . . . ಅವರವರ ಕರ್ಮಾನುಗುಣವಾಗಿ ಲೋಕಾಂತರಗಳಲ್ಲಿ ಸಂಚರಿಸುವವರಾಗಿಯೂ ಇದ್ದಾರೆ (ಜುಣ್ಯಾಕ. ೨೮೦). [ಸಂ.]

**ಲೋಕಾಂತರಿತ** (ನಾ). ಬೇರೆ ಲೋಕಕ್ಕೆ ಹೋದವನು ; ನಿಧನ ಹೊಂದಿದವನು ; ಮರಣ ಹೊಂದಿದವನು : ಪ್ರೇಮಪುತಿ . . . ಇನಿತನ್ಯಾಯಮನಾನೆ ಮಾಡಿದೆನೆನ್ನ ಮಗನ ಮೇಲೆ ದೋಷಮಾವುದು ಮಿಲ್ಲೆಂದು ಲೋಕಾಂತರಿತನಾದಂ (ಸುಕುಶಂ. ೦೬೯-೩) ; ಸೋಮಶರ್ಮಂ ಲೋಕಾಂತರಿತ[ನಾದ]ನೆಂಬುದನತಿಬಲಮಹಾರಾಜಂ ಕೇಳ್ದು . . . ಪಿರಿದುಂ ಕಟ್ಟುಕಡೆದು (ಸುಕುಮಾ. ೨-೧೧೫). [ಸಂ.]

**ಲೋಕಾಂತಿಕ** (ನಾ). [ಜೈನ] ಬ್ರಹ್ಮಲೋಕದಲ್ಲಿ ವಾಸಿಸುವ ದೇವತೆಗಳ ಒಂದು ಪಂಗಡ : ಬ್ರಹ್ಮಲೋಕನಿಳಯರಪ್ಪ ಲೋಕಾಂತಿಕರುಂ ದಕ್ಷಿಣೇಂದ್ರರುಂ . . . ಮುಕ್ತಿವಧೂವಿವಾಹಮಲ್ಲದೆ ವಧೂವಿವಾಹಮನೊಲ್ಲರ್ (ಶಾಂತಿಪು. ೦೨-೪೩ವ). [ಸಂ.]

**ಲೋಕಾಂತಿಕದೇವ** (ನಾ). = ಲೋಕಾಂತಿಕ : ಎಣ್ಬರುಂ ಲೋಕಾಂತಿಕದೇವರ್ ಬಂದು (ಆದಿಪು. ೯-೧೦ವ) ; ಲೋಕಾಂತಿಕದೇವರ್ ಪರಲೋಕಪ್ರಿಯರಲ್ಲದಂದು ಮುಂ ಬಾರದರೊಲ್ದೀಕೆ ಜಿನಂ ಪರಹಿತಮಂ ಸ್ವೀಕರಿಪುದುಮದನೆ ನುಡಿದು ದೃಢಮೆನಿಸಿದವರ್ (ಪಾರ್ಶ್ವಪು. ೦೩-೬೩). [ಸಂ.]

**ಲೋಕಾಕಾರ** (ನಾ). [ಜೈನ] ಲೋಕದ ಆಕಾರ,_ರೂಪು : ಲೋಕಾಕಾರಮನಭಿನಯಿಪಾಕಾರಂ ನೆಗೞ್ದೆ ನಿಂದು ವೈಶಾಖಸ್ಥಾನಾಕಾರದೊಳ್ . . . ಚೆಲ್ವಂ ಪಡೆವಂ (ಆದಿಪು. ೭-೧೧೬). [ಸಂ.]

**ಲೋಕಾಕಾರಕಥನ** (ನಾ). [ಜೈನ] ಅಧೋಲೋಕ, ಮಧ್ಯಲೋಕ ಮತ್ತು ಊರ್ಧ್ವಲೋಕಗಳ ವರ್ಣನೆ : ಲೋಕಾಕಾರಕಥನಮುಂ ದೇಶನಿವೇಶೋಪದೇಶಮುಂ . . . ಅವಯವಂಗಳೆಂಟಕ್ಕುಂ (ಆದಿಪು. ೦-೪೨ ವ). [ಸಂ.]

**ಲೋಕಾಕಾಶ** (ನಾ). ೧. ಆಕಾಶ. ೨. [ಜೈನ] ಲೋಕಾಕಾಶ ಮತ್ತು ಅಲೋಕಾಕಾಶ ಎಂಬ ಎರಡು ಬಗೆಯ ಆಕಾಶಗಳಲ್ಲಿ ಒಂದು ; ಜೀವ, ಪುದ್ಗಲಕಾಯ, ಧರ್ಮ, ಅಧರ್ಮ ಇತ್ಯಾದಿ ದ್ರವ್ಯಗಳನ್ನು ಹೊಂದಿರುವ, ಲೋಕಗಳನ್ನು ಒಳಗೊಂಡ ಆಕಾಶಪ್ರದೇಶ : ಲೋಕಾಕಾಶಪ್ರದೇಶಪ್ರಮಾಣಪರಿಮಾಣಮುಮಸ್ಮದಾದ್ಯನುಮೇಯಮುಂ ಸರ್ವಜ್ಞಪ್ರತ್ಯಕ್ಷಗೋಚರಮಪ್ಪುದು ಮುಖ್ಯಕಾಲಂ (ಆದಿಪು. ೬-೪೮); ಈ ದ್ರವ್ಯಗಳಿರುವ ಸ್ಥಾನಕ್ಕೆ ಲೋಕಾಕಾಶವೆಂದೂ, ಬರಿಯ ಆಕಾಶದ್ರವ್ಯವಿರುವ ಸ್ಥಳಕ್ಕೆ ಅಲೋಕಾಕಾಶವೆಂದೂ ಹೆಸರು (ಭಾರದ. ೦೮೬). ' ಅಲೋಕಾಕಾಶ ' ನೋಡಿ. [ಸಂ.]

**ಲೋಕಾಖ್ಯಾನ** (ನಾ). [ಜೈನ] ಲೋಕದ ಆಕಾರ ವರ್ಣನೆ : ಪುರಾಣ ಕಥೆಗಳೊಳು ಲೋಕಾಖ್ಯಾನಮುಂ ದೇಶಾಖ್ಯಾನಮುಂ . . . ಫಲಾಖ್ಯಾನ ಮುಮೆಂದಷ್ಟವಿಧವರ್ಣನಮಕ್ಕುಂ ಅಲ್ಲಿ ಲೋಕಾಖ್ಯಾನಮೆಂಬುದನಂತಾ ನಂತಮಪ್ಪಾಕಾಶಬಹುಮಧ್ಯಪ್ರದೇಶದೊಳಸಂಖ್ಯಾತಾತ್ಮಪ್ರದೇಶಾತ್ಮಕಮಾಗಿ . . . ಕುಲಾಚಳ ಸಿದ್ಧಾಲಯ ವಿಮಾನಾದಿಗಳಾಧಾರಭೂತಮಪ್ಪುದಂ ಪೇಳ್ವುದು (ಕಾಪುಂಕ. ೧೨). 'ದೇಶಾಖ್ಯಾನ' ಪರಾ. [ಸಂ.]

**ಲೋಕಾಚಾರ** (ನಾ). ಜಗತ್ತಿನ ರೂಢಿ, –ಸಂಪ್ರದಾಯ : ವೀರಶೈವನ ಬಗೆಯುದಂತೆನಲು ಲಾಲಿಸಾ ಗೌರಿ ಲೋಕಾಚಾರವರ್ಜಿತಂ ಭಾವಿಸಲುದಾರ ಲೋಕಾಲೋಕಪರಿಹರಂ ತಿಥಿಲಗ್ನ ನಕ್ಷತ್ರಯೋಗಕರಣಂ (ಬಸವ. ೭–೬–೭). [ಸಂ.]

**ಲೋಕಾನುಗ್ರಹ** (ನಾ). ಜಗತ್ತಿಗೆ ಕರುಣೆ ತೋರಿಸುವುದು : ಲೋಕಾನುಗ್ರಹಶಾಸ್ತ್ರಾನೀಕಮನುರುಪುಣ್ಯನದಿಗಳಂ ಶ್ರುತಿತತಿಯಂ ನೀಕರಿಸಿ ಶೈವಜನಮನನೇಕಾಂಗದಿ ನಿಂದಿಸುತ್ತಮಿರ್ಪರ್ ಸವಣರ್ (ತ್ರಿಕೂ. ೩೨–೧೧); ಪೂಜ್ಯರಾದ ಕಣ್ವರು ಲೋಕಾನುಗ್ರಹಾರ್ಥವಾಗಿ ಕ್ಷೇಮದಿಂದಿರುವರೆ ? (ಶಾಕುಂತ. ೬೫–೨೭). [ಸಂ.]

**ಲೋಕಾನುಪ್ರೇಕ್ಷೆ** (ನಾ). [ಜೈನ] ಹನ್ನೆರಡು ಬಗೆಯ ಅನುಪ್ರೇಕ್ಷೆಗಳಲ್ಲಿ ಒಂದು : ಲೋಕತ್ರಯದ ತುತ್ತತುದಿಯೊಳು , ಸಿದ್ಧಕ್ಷೇತ್ರಮಕ್ಕುಂ ಅಲ್ಲಿಗೆ ಪೋಪಡೆ ಸಕಲಕರ್ಮಕ್ಷಯಂಗೆಯ್ದೊಡಲ್ಲದೆ ಪೋಗಲ್ಬಾರದೆಂದು ಕರ್ಮನಿರ್ಮೂಳಕ್ಕಾರ್ಥಂ ನಿರ್ಮಲಶರ್ಮಾತ್ಮಕಾತ್ಮತತ್ತ್ವಮಂ ಭಾವಿಸುವುದು. ಲೋಕಾನುಪ್ರೇಕ್ಷೆ (ಧ್ಯಾವಶಾ. ೧೯೭–೩) ; ಲೋಕಾನುಪ್ರೇಕ್ಷೆ–ಲೋಕವೆಂಬುದು ಎಷ್ಟು ದೊಡ್ಡದು, ಅದರಲ್ಲಿರುವ ಜೀವಗಳು ಯಾವ ಯಾವುವು ? ಇದು ಸಾದಿಯೋ ಅನಾದಿಯೋ ಮೊದಲಾದುವನ್ನು ಭಾವಿಸುವುದು (ಕ್ಷನರ. ೮೩). 'ದ್ವಾದಶಾನುಪ್ರೇಕ್ಷೆ' ಪರಾ. [ಸಂ. ಲೋಕಾನುಪ್ರೇಕ್ಷಾ]

**ಲೋಕಾನುಭವ** (ನಾ). ಪ್ರಪಂಚದ ಬಗ್ಗೆ ಇರುವ ಜ್ಞಾನ ; ಲೋಕದ ಆಗುಹೋಗುಗಳಿಂದ ಬರುವ ತಿಳಿವಳಿಕೆ : ಲೋಕಾನುಭವ ಏನೇನೂ ಸಾಲದು (ಮೂಕಜ್ಜಿ. ೯). [ಸಂ.]

**ಲೋಕಾಪವಾದ** (ನಾ). ಜನರಿಂದ ಬರುವ ದೂರು, — ಅಪವಾದ ; ಜನರು ಮಾಡುವ ನಿಂದೆ, — ಹೀಯಾಳಿಕೆ : ಲೋಕಾಪವಾದಕ ಪರಾಧಿಯಲ್ಲದ ತನ್ನನು ತರಣಿಕುಲಸಂಭವಂ ಬಿಟ್ಟನೆಂದೀ ವನದೊಳಿರಿಸಿ ಪೋದಂ ಸುಮಿತ್ರಾತ್ಮಜಂ (ಜೈಮಿಭಾ. ೧೯–೪೦) ; ಲೋಕಾಪವಾದಕ್ಕೆ ಹೆದರಬೇಕು (ಶೀತಿಶಂ. XI, ೨೦). [ಸಂ.]

**ಲೋಕಾಭಿರಾಮ** (ಗು). ೧. ಜನರಲ್ಲಿ ಪರಸ್ಪರ ಪ್ರೀತಿಯನ್ನು ಬೆಳೆಸುವ ; ಜನರ ಮನವೊಲಿಸುವಂಥ ; ಜನರಂಜಕವಾದ. (ನಾ). ೨. ಯಾವ ಉದ್ದೇಶವೂ ಇಲ್ಲದುದು : ಸ್ವಾಭಾವಿಕವಾದುದು ; ಸಹಜವಾದುದು : ಈ ಬಗೆಯ ಮಾತುಗಳು ಎಷ್ಟೋ ಸಲ. ಕೇವಲ ಲೋಕಾಭಿರಾಮದ, ಅನಿಸಿಕೆಯ ಮಾತುಗಳಾಗಿರುತ್ತವೆ (ವಿಮರ್ಶೆ. ೩೧) ; ಮದುವೆ ಯಾತಕ್ಕೆ ಮಾಡಿಕೊಳ್ಳಲಿಲ್ಲ ಎಂದು ಲೋಕಾಭಿರಾಮವಾಗಿ ಕೇಳಲು (ಕಥಾಪುಂ. IV, ೧೫). [ಸಂ.]

**ಲೋಕಾಯತ** (ಗು). ೧. ನಾಸ್ತಿಕತೆಯಿಂದ ಕೂಡಿದ. (ನಾ). ೨. ನಾಸ್ತಿಕತೆ; ನಿರೀಶ್ವರ ವಾದ; ಚಾರ್ವಾಕ ಮತ : ಲೋಕಾಯತವೆನಿಸಿದ ಚಾರ್ವಾಕೋಕ್ತಿಯಸಹಿತಶಕ್ತಿಯಂ ಭೇದಿಸುವಂ . . . ಜಿನಚಂದ್ರಭೂಭುಜಂ (ಶಾಂತಿಪು. ೬–೧೩೫) ; ವೈದಿಕಸಿದ್ಧಾಂತಕ್ಕೂ ಲೋಕಾಯತವೆಂಬ ಚಾರ್ವಾಕ ಸಿದ್ಧಾಂತಕ್ಕೂ ವ್ಯತ್ಯಾಸವಿಲ್ಲ (ಹಿಂದಶಾ. ೧೫೩). ೩. ನಾಸ್ತಿಕ ; ನಿರೀಶ್ವರ ವಾದಿ ; ಚಾರ್ವಾಕ : ತಗೆಯಲ್ ಜೈಮಿನಿ . . . ಬಿಡಲ್ಬುಗೆ ಲೋಕಾಯತನೆಯ್ದೆ ಸಾಂಖ್ಯನಡಸಲ್ಕಮ್ಮುಮ್ಮ ಷಟ್ತರ್ಕವೀಧಿಗಳೊಳ್ ತೂಳ್ದಿತು ಗೋಪನಂದಿದಿಗಿಭಪ್ರೋದ್ಭಾಸಿಗಂಧದ್ವಿಪಂ (ಎಕ. V, ಚನ್ನರಾ. ೧೯೯–೪೦ : 1094) ; ಇಂತಪ್ಪನರ್ಘ್ಯಮಂ ಭಕ್ತರ್ಗೆ ಕೆಯ್ಯಾರೆ ಕೊಡಲಿಲ್ಲ . . . ಲೋಕಾಯತರ್ಗೆ ಸಾರುತಲಿರ್ದಪುದಕಟ (ಬಸರ. ೫–೧೪೪) ; ನಿರೀಶ್ವರವಾದಿಗಳಾದ ಲೋಕಾಯತರು ಇಂದ್ರಿಯಗಳನ್ನೇ ಆತ್ಮವೆನ್ನುತ್ತಾರೆ (ಅಪ್ಪಕ. ೩–೪೭ ಟೀಕು). [ಸಂ.]

**ಲೋಕಾಯತದರ್ಶನ** (ನಾ). = ಲೋಕಾಯತ ೨ : ಸ್ಫೂರ್ತ ಚೇತಸ್ಸಿನ . . . ಗುರಿ ಲೋಕಾಯತದರ್ಶನವೂ ಅಲ್ಲ, ಸ್ಫೂರ್ತಪ್ರಾಣಸಿದ್ಧಿ ದರ್ಶನವೂ ಅಲ್ಲ ಅಥವಾ ದೂರಸ್ಥವೂ ಪ್ರತ್ಯೇಕವೂ ಆದ ಆಧ್ಯಾತ್ಮಿಕತೆಯೂ ಅಲ್ಲ (ನವ್ಯಕಾ. ೧೧೪). [ಸಂ.]

**ಲೋಕಾಯತಮತ** (ನಾ). ನಾಸ್ತಿಕತೆ ; ಚಾರ್ವಾಕಮತ : ಚಾರ್ವಾಕ ದರ್ಶನವು . . . ಲೋಕದಲ್ಲಿ ಹರಡಿರುವುದರಿಂದ ಇದನ್ನು ಲೋಕಾಯತ ಮತ ಎಂದು ಕರೆಯುತ್ತಾರೆ (ಹಿಂದಶಾ. ೧೦). [ಸಂ.]

**ಲೋಕಾಯತವಾದಿ** (ನಾ). = ಲೋಕಾಯತ ೩ : ಲೋಕಾಯತ ವಾದಿಯಂತೆ ಅಸಾಧಿತಗುರುಮತನಂ (ಚಂದ್ರಪು. ೯–೪೨ ವ).

[ಸಂ. ಲೋಕಾಯತವಾದಿನ್]

**ಲೋಕಾಯತಿಕ** (ನಾ). ೧. ನಾಸ್ತಿಕತೆ; ನಿರೀಶ್ವರವಾದ; ಚಾರ್ವಾಕ ಮತ ; P "ಇದು ಚಾರ್ವಾಕಮತದ ಮತ್ತೊಂದು ಹೆಸರು. ಇದರಲ್ಲಿ ದೇಹವೇ ಆತ್ಮವೆಂದೂ, ಪರಲೋಕವಿಲ್ಲವೆಂದೂ ಪಾಪ ಪುಣ್ಯಗಳಿಲ್ಲವೆಂದೂ ಇಂದ್ರಿಯಇಚ್ಛೆಯನ್ನೇ ತೃಪ್ತಿಪಡಿಸುವುದು ಸುಖವೆಂದೂ ಬಗೆಯುವ ವಿಚಾರಗಳಿರುತ್ತವೆ. ಇದಕ್ಕೆ ಬೃಹಸ್ಪತಿ ಮತವೆಂದು ಮತ್ತೊಂದು ಹೆಸರು ಇದೆ" (ಆದಿಪು. ಕೈವಲ್ಯಾಂಥಾಶಿಕ ಶಬ್ದಕೋಶ) : ಮಹಾಮತಿ ಸಂಭಿನ್ನಮತಿ ಶತಮತಿಗಳ್ ಲೋಕಾಯತಿಕ ಯೋಗಾಚಾರ ಮಾಧ್ಯಮಿಕ ಮತವಿಕ್ಷಾಭಿಧಾಯಿಗಳ್ ಜೀವಾಭಾವಮನೆ ಪಿಡಿಯುಚ್ಚುವಿಡಿದು (ಆದಿಪು. ೨-೬ ವ). ೨. ಚಾರ್ವಾಕಮತಕ್ಕೆ ಸೇರಿದ ವ್ಯಕ್ತಿ ; ನಾಸ್ತಿಕ ; ನಿರೀಶ್ವರ ವಾದಿ : ಚೈತನ್ಯದಿಂದ ಕೂಡಿರುವ ದೇಹವೇ ಆತ್ಮನು ಎಂದು ಸಾಮಾನ್ಯಜನರೂ ಲೋಕಾಯತಿಕರೂ ತಿಳಿದು ಕೊಂಡಿರುವರು (ಬ್ರಹ್ಮಸೂ. ೨೫).

[ಸಂ.]

**ಲೋಕಾಯ್ತವೊಟಿಲ್** (ನಾ). ಒಂದು ಊರಿನ ಹೆಸರು : ಕೂರವಾಡಿ ಮೂನೂಱಿರ ಬಳಿಯ ಲೋಕಾಯ್ತವೊಟಿಲುಂ ಗುಣ್ಡೋಜಿಕೊಳ್ ಇಪ್ಪತ್ತ ನಾಲ್ಕು ಮತ್ತರ್ಕ್ಕರಿಯ ಕೆಯ್ಯುಂ . . . ಕೊಟ್ಟರ್ (ಎಕ. XI, ಹೊಳಲ್ಕ. ೨೩-೧೯ : 968). [ಲೋಕಾಯ್ತ? + ಪೊಟಿಲ್ ]

**ಲೋಕಾರೂಢಿ** (ನಾ). = ಲೋಕರೂಢಿ : ಲೋಕಾರೂಢಿಯಾಗಿ ಈಗಿನ ಕಾಲದ ಮದುವೆ ಮುಂಜಿ ವಿಚಾರಗಳಲ್ಲಿ ಚರ್ಚೆ ಮಾಡುತ್ತಾ ಇದ್ದರು (ಶಾಗವ. ೨) ; ಅದು . . . ಲೋಕಾರೂಢಿಯ ಮಾತಾಗಿ ಹೋಗಿತ್ತು (ಪುನರು. ೪೬೩). P ಇದು ಅಶುದ್ಧರೂಪವಾದರೂ ಪ್ರಯೋಗದಲ್ಲಿ ಅಂಗೀಕೃತವಾಗಿದೆ. [< ಲೋಕರೂಢಿ]

**ಲೋಕಾಲೋಕ** (ನಾ). ಭೂಮಿಯನ್ನು ಗೋಡೆಯಂತೆ ಸುತ್ತುಗಟ್ಟಿ ಅವ್ಯಕ್ತಲೋಕದ ಕತ್ತಲೆಯಿಂದ ಬೇರ್ಪಡಿಸುವುದೆಂದು ಭಾವಿಸಲಾದ , ಪೌರಾಣಿಕಪರ್ವತ ಶ್ರೇಣಿ ; ಚಕ್ರವಾಳ : ಪರಮಾಗಮ ಮೂರ್ತಿ ಚರಾಚರಲೋಕಾಲೋಕಸಂಪ್ರದಾಯಿನಿ ವಿಬುಧೋತ್ಕರ ಮಾನಸಾಬ್ಜವಾಸಿನಿ ಸರಸ್ವತೀದೇವಿ ವರದೆಯಕ್ಕೆಮಗೆಂದುಂ (ಕಾವ್ಯಾವ. ೨ ಟೀಕು) ; ತರಣಿ ಲೋಕಾಲೋಕಪರ್ವತಾಗ್ರಮನಿಂತು ತಿರುಗುವಂ (ಕಾವತಂ. ೬–೧೧). 'ಚಕ್ರವಾಡಿಕೆ' ಪರಾ. [ಸಂ.]

**ಲೋಕಿಗ** (ನಾ). ಜಗತ್ತಿನಲ್ಲಿರುವವನು ; ಮಾನವ ; ಸಾಮಾನ್ಯ ಮನುಷ್ಯ : ಮದ್ವಚನಮನತಿಕ್ರಮಿಸಿ ನಡೆಯದಿರಲೀ ಲೋಕಿಗರ್ ನಾಕಿಗರ್ ಭಯದೊಳು (ತವಕು. ೪೦-೧೫) ; ಲೋಕಿಗರ ಮನದ ಕತ್ತಲೆಯ

ನೋಡಿಸಲೆಂದು ಒಳ್ಪನದಿ ನೀ ಪಿಡಿದ ಪಂಜು (ಕಗದ್ಯ. ೬೩).
[ಲೋಕ + –ಇಗ]

**ಲೋಕೇಶ** (ನಾ). ೧. ಜಗತ್ತಿನ ಒಡೆಯ. ೨. ಬ್ರಹ್ಮ. ೩. ವಿಷ್ಣು : ಲೋಕಸಂರಕ್ಷಕ ಅಸುರಸಂಹಾರಕ ಲೋಕೇಶ ಪುರಂದರ ವಿಠ್ಠಲ (ಪುರಂದ. ರಾ. ೩-೮೬-೩). ೪. ಶಿವ. ೫. ಜಿನ ; ತೀರ್ಥಂಕರ : ಸುರ ವಿಜ್ಞಾನೋಪಯೋಗಂ ಸುರಪತಿಗುಪವಿಷ್ಟಾಸನಾಕಂಪದಿಂದಂ ಬರೆ ಕಂಡೈರಾ ಮಹಾದೇವಿಯರುದರದೊಳಂ ಬರ್ಪ ಲೋಕೇಶನಂ (ಶಾಂತಿಪು. ೯-೦೬). [ಸಂ.]

**ಲೋಕೈಕಚಕ್ಷು** (ನಾ). ಜಗತ್ತಿಗೆಲ್ಲ ಒಂದೇ ಕಣ್ಣಿನಂತಿರುವವನು ; ಸೂರ್ಯ : ಲೋಕೈಕಚಕ್ಷು ನವಕಮಲಾಕರಬಾಂಧವನನೇಕದಿತಿಸುತ ಸಮರಾ[ನೀ]ಕಭಯಂಕರನೆರಡು ವನೀಕಂಗಳನಡರೆ ನೋಡುವಂತುದಯಿಸಿದಂ (ಕಂಕಶಾ. ೦೦-೩೦). [ಸಂ. ಲೋಕೈಕಚಕ್ಷುಸ್]

**ಲೋಕೈಕವೀರ** (ನಾ). ಜಗತ್ತಿಗೆಲ್ಲ ಒಬ್ಬನೇ ವೀರ ; ಮಹಾಶೂರ : ನೂಕಿ ಕವಿದುದು ಮಂದಿ ಮಧ್ಯದೊಳೀಕ ಮೆಲ್ಲನೆ ಬರುತಲಾ ಲೋಕೈಕ ವೀರನ ಕಂಡಲಾ ಬಾಣಸಿನ ಬಾಗಿಲಲ್ಲಿ (ಕಬ್ಬಾ.ಶಿ. ೩-೦೦೯) ; ಕುರುವಂಶ ಶರಧಿಯ ಸುಧಾಸೂತಿ ಲೋಕೈಕವೀರನಾವಾವನು ಕೇಳ್ದರಿಯೆಯಾ ? (ಕಪ್ಪಾಂಗ. ೩೭-೦೦೦೯). [ಸಂ.]

**ಲೋಕೋಕ್ತಿ** (ನಾ). ೧. ಪ್ರಸಿದ್ಧವಾದ ಮಾತು ; ಗಾದೆ ; ನಾಣ್ಣುಡಿ : ಮುಕ್ತಿಯೊಳಾದ ನಂಬುಗೆ ಮನಂಬುಗದಲ್ಪಸುಖಾಶಿಗೆಂಬ ಲೋಕೋಕ್ತಿಯಿಂ (ಶಾಂತಿಪು. ೦-೬೮); "ಮಾನವನು ತನ್ನ ನಡತೆಯಿಂದ ತಾನೆ ಹಾಳಾದ" ಎಂಬುದು ಒಂದು ಲೋಕೋಕ್ತಿ (ಜೀವಾತ್ಮ. ೨೨೬) ; 'ಮಿಷ್ಟಾನ್ನಮಿತರೇ ಜನಾಃ' ಎಂಬುದು ಲೋಕೋಕ್ತಿ (ಖಿಂರ., II, ೨೩೯). ೨. ಜನಸಾಮಾನ್ಯರ ಮಾತು,—ನುಡಿ. [ಸಂ.]

**ಲೋಕೋತ್ತರ** (ಗು). ೧. ಜಗತ್ತಿನಲ್ಲಿಯೆ ಮಿಗಿಲಾದ : ವಿಶ್ವದಲ್ಲಿ ಅತಿಶಯವಾದ : ಪಿರಿದುಂ ಸಮಾಸವಾಗಿರೆ ವಿರಚಿಸುವುದು ತಾನದೋಜ ಮಕ್ಕುಂ ಲೋಕೋತ್ತರವರ್ಣನಂ ವಿಶೇಷಣ ಪರಪ್ರಕರ್ಷೋಕ್ತಿಯುಕ್ತ ಮಪ್ಪುದುದಾರಂ (ಕಾವ್ಯಾವ. ೩೦೩). (ನಾ). ೨. ಅಸಾಧಾರಣವಾದುದು; ಅಸಾಮಾನ್ಯವಾದುದು : ಮೊಗಕ್ಕೆ ಮೆಯ್ಯೆತ್ತ ಬೆಮರ್ ಮನಂಗೊಳಿಸೆ ಭೂಪತಿಯಂ ಬೆಸವೇಟ್ಪಗುರ್ವು ಲೋಕೋತ್ತರವಾಗೆ ವೀರಭಟನೇಂ ಪೂಣ್ದಾನೋ (ಶಾಂತಿಪು. ೩-೬೮) ; ಮಾಟ್ಪುದಾತ್ಮಹಿತಂ ತಾನಿದು ದುರ್ಗ ಸಿಂಹನ ಮತಂ ಲೋಕೋತ್ತರಂ ಧಾತ್ರಿಯೊಳ್ (ಶಂಶಕಂ. ೦೯೯-೦೯); ರಮಣೀಯವೆಂದರೆ ಲೋಕೋತ್ತರವಾದ ಆನಂದವನ್ನುಂಟುಮಾಡ ತಕ್ಕುದ್ದು (ಕಾರಶಿಶಾ. ೩೯೦). ೩. ಜಗತ್ತಿನಲ್ಲಿ ಶ್ರೇಷ್ಠನಾದವನು,—ಮಿಗಿಲಾದವನು : ಅತುಳತಪಃಶೀಲಮಂ ಮಾಡೆ ಲೋಕೋತ್ತರ ರಾಚಾರ್ಯರೆಮ್ಮಂ ನಿಯಮಿಸುಗೆ ನಿಜಾನುಗ್ರಹಪ್ರೌಢಿಯಿಂದಂ (ಪುಷ್ಪಕೃ. ೦-೩); ನನಗೆ ಲೋಕೋತ್ತರನಾದ ಒಬ್ಬ ಮಗನಾಗಬೇಕು (ಶಕಶಾ. ೦೩). [ಸಂ.]

**ಲೋಕೋದ್ಧಾರ** (ನಾ). ಜಗತ್ತನ್ನು ಮೇಲಕ್ಕೆತ್ತುವುದು ; ವಿಶ್ವವನ್ನು ರಕ್ಷಿಸುವುದು : ಲೋಕೋದ್ಧಾರದ ವ್ಯಸ್ಥಿಯಿಲ್ಲದೆ, ತಾವು ಅಮರರಾಗಬೇಕು ಎಂಬ ಉದ್ದೇಶದಿಂದ ಅಮೃತಮಂಥನ ಮಾಡಿದರು (ಶಕಂಶಾ. ೦೬೦). [ಸಂ.]

**ಲೋಕೋಪಕಾರ** (ನಾ). ೧. ಜನಕ್ಕೆ ಉಪಕಾರ ಮಾಡುವುದು ; ಲೋಕಕ್ಕೆ ಹಿತವನ್ನುಂಟುಮಾಡುವುದು : ಅತಿ ಕುಶಲಜ ಲೀಲಾಚಾರ ಲೋಕೋಪಕಾರೋದಿತ ಪರಮಗುಣೈಕೋದಾರ ಧೀರಾಧಿಕಾರಂ (ಕಂಗಾ. ೩-೨೦೯); ಯೌವನ ಕೂಡೆ ಲೋಕೋಪಕಾರವೆ ಕೈವಲ್ಯವಹುದು (ಮೋಹಕ. ೩-೩೬); ಸುತನೆ ತಿಳಿ ಲೋಕೋಪಕಾರಕೆ ಹಿತದಿ ಜನಿಸಿದೆವು (ಗಗಶಾ. ೯-೯೯). ೨. ಚಾವುಂಡರಾಯನೆಂಬ ಕವಿಯು ಬರೆದ ಒಂದು ಪ್ರಾಚೀನ ಕನ್ನಡಗ್ರಂಥದ ಹೆಸರು. ೧. ೨ : ಮೇದಿನಿಯುಪಕಾರಂ ಕಲಿಪೋದುಗಳೆನಿತೊಳವಲ್ಲಿ ನೆಲಸಿರ್ದು ಬುಧೋಪಾದೇಯವಮಾದ ದೋಷಜಾ ನಾದುದಿದು ಲೋಕೋಪಕಾರಮೆಂನನ್ವರ್ಥಂ (ಲೋಕೋಪ. ೦-೨೬ ಟೀಕೆ). [ಸಂ.]

**ಲೋಕೋಪಕಾರಕ** (ಗು). ಜಗತ್ತಿಗೆ ಉಪಕಾರ ಮಾಡುವ ; ವಿಶ್ವಕ್ಕೆ ಹಿತವನ್ನುಂಟುಮಾಡುವ. [ಸಂ.]

**ಲೋಕೋಪಚಾರ** (ನಾ). ಲೌಕಿಕನು ಮಾಡುವ ಉಪಚಾರ,– ಸೇವೆ : ಲೋಕೋಪಚಾರಕ್ಕೆ ಮಜ್ಜನಕ್ಕೆಳಿವೆನಪ್ಪಾ ಮನದ ತಾಮಸ ಬಿಡದು ಮನದ ಕಪಟ ಬಿಡದಪ್ಪಾ (ಬಸವ. ೨೬೦). [ಸಂ.]

**ಲೋಕೋಪಯೋಗಿ** (ಗು). ಸಾರ್ವಜನಿಕರಿಗೆ ಉಪಯೋಗಕರವಾದ,– ಬಳಕೆಗೆ ಬರುವ : 'ಲೋಕೋಪಯೋಗಿ ಇಲಾಖೆ' ಪರಾ. [ಸಂ. ಲೋಕೋಪಯೋಗಿನ್]

**ಲೋಕೋಪಯೋಗಿ ಇಲಾಖೆ** (ನಾ). ಸಾರ್ವಜನಿಕರಿಗೆ ಉಪಯುಕ್ತವಾದ ಕಾರ್ಯವನ್ನು ಮಾಡುವ ಇಲಾಖೆ ; ಮರಾಮಂತ್ತು ಇಲಾಖೆ : ಇಂದು ವಿಧಾನಸಭೆಯಲ್ಲಿ ಲೋಕೋಪಯೋಗಿ ಇಲಾಖೆಯ ಬೇಡಿಕೆಗಳ ಮೇಲಿನ ಚರ್ಚೆ ನಡೆದಿದೆ (ಕೂ೦). [ಲೋಕೋಪಯೋಗಿ + ಇಲಾಖೆ]

**ಲೋಗ** (ನಾ). ೧. ಜಗತ್ತಿನಲ್ಲಿರುವ ಜನ. ೨. ಬೇರೆಯವನು ; ಅನ್ಯ ; ಪರಕೀಯ : ನರಪಂಗೆಂತೆಂದೊಡಂ ಲೋಗನೆ ಗಡ ಜನನೀಭ್ರಾತೃ (ಪುಷ್ಪಕೃ. ೬-೪) ; ನೀ ಬೇಟೆಗೆ ಲೋಗನೆ ಕಂಡ (ಕಬ್ಬಾದ್ರೋ. ೦-೨೩) ; ಇವಂ ತನ್ನವನಿವಂ ಲೋಗನೆನ್ನದೆ ನಯಂಜಡಿದು . . . ಅರಸುಗೆಯ್ಯು ತ್ತುಮಿರ್ಕುಂ (ಪುರಾಣ. ೦೦-೬೨). ೩. ಸಾಮಾನ್ಯಮನುಷ್ಯ ; ನಾಡಾಡಿ; ಎಗ್ಗ : ಲೋಗ–ಲೋಕ=ಜನ. ಸಾಮಾನ್ಯ ವ್ಯಕ್ತಿ" (ಶಕ್ರಕೋ. ೩೯) ; ಲೋಗನಾದೆನು ನಿನ್ನ ಚರಣಕೆ ಬೇಗೆಯಿನು ಬರಿಸಿದೆನು (ಶಿಭಾಗ. ೦-೦೩-೨೦).

**ಲೋಗರ್, ಲೋಗರು** (ಬಹುವ) : ರಸಿಗೆ ಸುರಿಯೆ ನೊಳವುಗಳ್ ಮುಸುಕಿಕೊಂಡು ತಿನೆ ಪೇಸಿದನಾಗಿ ಲೋಗರ ಮನೆಗಳೊಳ್ ಭೈಕ್ಷಮಂ ಬೇಡಿ (ಶಬ್ದಾ.ರಾ. ೦೨೨-೨೯); ಲೋಗರ ವಸ್ತುವಂ ಕೊಳಲಾಗದು (ಶಂಶಕಂ. ೬೯-೦೯); ಲೋಗರ ಮನೆಯ ಬಾಗಿಲ ಕಾಯ್ದುಕೊಂಡಿಪ್ಪವು ಕೆಲವು ದೈವಂಗಳು (ಬಸವ, ೫೫೩); ಮೋಡಿಗೊಳದೆ ಲೋಗರುಚಿತವೆನಲೊಯ್ಯನೊಯ್ಯನೆಯನು ವಾಗಿ ನುಡಿವುದು (ಹರಿ. ೯-೦೦). [< ಸಂ. ಲೋಕ]

**ಲೋಗು** (ಕ್ರಿ). ಹಿಂಜರಿ ; ಹಿಮ್ಮೆಟ್ಟು : ರಾವಣನ ಬರಹೇಳು ರಣಸಂಭಾವನೆಗೆ ಲೋಗಿದಡೆ ಸೀತಾದೇವಿಯಂ ತಂದಿತ್ತು ಬದುಕೆಂದೆನುತಲರುಹೆಂದ (ಅಸಂರಾ. ೩-೬-೦೩); ಮೈದೆಗೆಯ ಮರಣ ಸನ್ನಿಹಿತ ರಣಕೊದಗಿದರೆ ಕೈದು ಗಳಗಳಶನಮತಿದೂರಪಂಥಾನಗರಿಗೈದಲೊಂದೆಡೆಯ ಮುಂಗಡೆಯ ಶತ್ರುಗಳಿಂಗೆ ಲೋಗಿದಪಕೀರ್ತಿಯಹುದು (ವೆಂಕಶಾ. ೬-೨೬-೩೩). [←ತೆಲು. ಲೋಗು]

**ಲೋಗೇಶ್ವರ** (ನಾ). "ಲೋಯಿಸರ (?)" (ಶಿಂಹು. ಕೋಶ) : ಶರಸಂಧಾನ ಕ್ರಿಯೆಯಿಂದೆರಡುಂದೆಸೆಗೆಸುತಮಂತೆ ಪರಿಯಿಸಿ ಲೋಗೇಸ್ವರದೊಳಗೆ ಬಂಡಿವರಿವಂತಿರೆ ಚಕ್ರವ್ಯೂಹದೊಳಗೆ ಪರಿದತ್ತು ರಥಂ (ಶಿಂಹು. ೦೨-೦೨). [< ಲೋಯಿಸರ?]

**ಲೋಚಕ** (ನಾ). ೧. ದಡ್ಡಮನುಷ್ಯ ; ಮೂರ್ಖ. ೨. ಕಣ್ಣಿನ ಪಾಪೆ,–ಹಾಹೆ. ೩. ದೀಪದ ಮಸಿ ; ಕಾಡಿಗೆ. ೪. ಮಾಂಸದ ಗರಣೆ. ೫. ಹಾವಿನ ಪೊರೆ. ೬. ಹೆಂಗಸರು ಹಣೆಯಲ್ಲಿ ಧರಿಸುವ ಆಭರಣ; ಹಣೆಬೊಟ್ಟು. ೭. ಒಂದು ಬಗೆಯ ಕಿವಿಯ ಆಭರಣ. ೮. ಬಾಳೆಗಿಡ. ೯. ಕಪ್ಪು ಅಥವಾ ನೀಲವರ್ಣದ ಉಡುಪು. ೧೦. ಬಿಲ್ಲಿನ ಹಗ್ಗ; ಹೆದೆ. ೧೧. ಸುಕ್ಕುಗಟ್ಟಿದ ಚರ್ಮ. [ಸಂ.]

**ಲೋಚನ** (ಗು). ೧. ಹೊಳೆಯುವ; ಪ್ರಕಾಶಿಸುವ. ೨. ಕಾಣಿಸುವ; ಗೋಚರಿಸುವ. (ನಾ). ೩. ಕಾಣುವಂತೆ ಮಾಡುವ ಅಂಗ ; ಕಣ್ಣು; ನಯನ : "ದೃಕ್, ದೃಷ್ಟಿಃ, ನೇತ್ರಂ, ಲೋಚನಂ . . . ಅಕ್ಷಿ—ಈ ೯ ಕಣ್" (ಶಬ್ದಮ. ೯೬-೭೬೩) ; ಕಳಕಂಠಲೋಚನಚ್ಛವಿವಿಳಾಸಮಂ ತಳೆದ ನೀಲ ಪಾಟಳ ಜಂಬೂಫಲಾಳಿಯಂ (ಕಾದಂಬ. ೯೬) ; ಬಗೆ ಮಾಜಿ ಲೋಚನದೊಳೊಗೆವ ಸುಖಜಲ (ಹಕಾ. ೩-೭೦) ; ಕಾಚು ವೀಳಯಕಂಬು ಲೋಚನಾಂಜನಕಂಬು (ಸರ್ವಜ್ಞ. ೨೬೩). ೪. ದೃಶ್ಯ ; ನೋಟ. ೫. [ಗಣಿತ] ಎರಡು ಎಂಬ ಸಂಖ್ಯೆಯ ಸಂಕೇತ : ಯಮಳ, ಲೋಚನ, ದಂಪತಿ ಇಂತಿನಿತುಂ ೨ಕ್ಕೆ ಪೆಸರು (ಶ್ರೀಪತಿ. ೧೧). [ಸಂ.]

**ಲೋಚನಜಲ, ಲೋಚನಜಳ** (ನಾ). ಕಣ್ಣೀರು ; ಕಂಬನಿ ; ಅಶ್ರು. **ಲೋಚನಜಳ** : ಲೋಚನಜಳನಿಪತನಭಯುಸಾಚೀಕೃತವದನೆ ವಿಮುಖ ವಿಧಿಯಂ ತೋರ್ಪಂತೆ (ಲೀಲಾವ. ೭-೯೪). [ಸಂ.]

**ಲೋಚನಜಳ** 'ಲೋಚನಜಲ' ನೋ.

**ಲೋಚನವಾರಿ** (ನಾ). = ಲೋಚನಜಲ : ಬಸವಯ್ಯಂ ಪ್ರಳಾಪಿಸು ತೊಂದನೊಂದಂ ಕಿನ್ನರನ ಗುಣವೃಂದಮಂ ನೆನೆನೆನೆದು ಲೋಚನವಾರಿಯುಲಿ ನನೆದು (ಬಸವ. ೩೭-೮) ; ಹೃದಯಶಿಖಿಯುಜ್ಜಳಿ ತಳಿತು ಲೋಚನವಾರಿ ತುಳುಕಿತು (ಕುಮಾರವ್ಯಾ. ೭-೮). [ಸಂ.]

**ಲೋಚನಶ್ರುತಿಪ** (ನಾ). ಸರ್ಪಗಳ ಅಧಿಪತಿ : ಆದಿಶೇಷ : ಕ್ರತುಭುಜರ ಸುಡಲು ಗರಳವನುಗುಳ್ವ ಲೋಚನಶ್ರುತಿಪ [ಪಾಠಾಂ. ಲೋಚನದ ಶ್ರುತಿಪ] ನಂತಚಲಾವೃತತ್ವದಿಂ . . . ಒಪ್ಪಿತು ಸಮುದ್ರಂ (ಭಾಭಾಸಂ. ೧-೨೩). [ಸಂ.]

**ಲೋಚನಾಂಬು** (ನಾ). = ಲೋಚನಜಲ : ಲೋಚನಾಂಬುಗಳುಕ್ಕಿದವು ಕಳವಳಿಸಿದವು ಕರಣೇಂದ್ರಿಯಾದಿಗಳು (ಕುಮಾರವ್ಯಾ. ೨೦-೫೩). [ಸಂ.]

**ಲೋಚನಾಂಶು** (ನಾ). ಕಣ್ಣಿನ ಕಾಂತಿ : ನಡು ನಡಪಿತ್ತು ತನ್ನನೆನೆ ಮೆಯ್ ಬಡವಾದುದು ಲೋಚನಾಂಶುಗಳ್ ಬಿಡೆ ತೊಡರ್ದಂತೆ ಗಂಡ ಯುಗಳಂ ಬಿಳಿದಾದುದು (ಚಂದ್ರಪ್ರ. ೩-೦೨೪) ; ಲೋಚನಾಂಶು ಸೆಳೆಮಿಂಚು (ರಾಜಶೇ. ೧೪-೯೭). [ಸಂ.]

**ಲೋಚಮಸ್ತಕ** (ನಾ). ಒಂದು ಬಗೆಯ ಸಸ್ಯ ಮತ್ತು ಅದರ ಕಾಳು; ಓಮ: "ಖರಾಶ್ವಾ, ಕಾರವೀ . . . ಲೋಚಮಸ್ತಕಃ—೫ ಓಮದ ಹೆಸರುಗಳು" (ನಿಘಂಟು. ೦೩೨) ; "ಕಲ್ಲಿಕೆಹೂ . . . ಮಯೂರಶಿಖಿ, ಲೋಚಮಸ್ತಕ, ಹೊರೆಯೊಸುಸುವ" (ಸಸ್ಯ. ೩೦). [ಸಂ.]

**ಲೋಚು** (ನಾ). ೧. [ಜೈನ] ಮುನಿಧರ್ಮಗಳಲ್ಲಿ ಒಂದು ; ತನ್ನ ತಲೆಯ ಮತ್ತು ಮುಖದ ಕೂದಲನ್ನು ತಾನೇ ಕಿತ್ತು ತೆಗೆಯುವುದು ಅಥವಾ ಬೇರೆಯವರಿಂದ ಕೀಳಿಸಿಕೊಳ್ಳುವುದು ; ಲುಂಚನಕ್ರಿಯೆ : ಲೋಚಿಂಗಾಱದೆ ತಪಮಂ ಕೊಳಲಂಜಿ ಮೆಲ್ಲನಲ್ಲಿಂ ಜಗುಳ್ದುಪೋಗಿ ತಲೆಯಂ ಬೋಳಿಸಿಕೊಂಡು ಬ್ರಹ್ಮಚಾರಿವೇಷಮಂ ಕೈಕೊಂಡು (ವಡ್ಡಾರಾಧನೆ. ೭-೫೫); ಮುನಿಕುವರರು ಬಿಟ್ಟ ವಸ್ತ್ರಾಭರಣ ಲೋಚನ ಕೇಶಗಳನೊಯ್ದು ಸುರರು ವನಧಿಯೊಳಿಂಬಿಟ್ಟರು (ಕಕಂ. ೭೦-೦೦೯). ೨. ಲುಂಚನಕ್ರಿಯೆಯ ಸಂದರ್ಭದಲ್ಲಿ ನಡೆಸುವ ಸಮಾರಂಭ—ಉತ್ಸವ : ಜಿನುಗುಮತಿಗಳ ಸಿದ್ಧ ಸಾಧಕ ಮುನಿಗಳೆಂಬವದಿರುಗಳನು ನಾ ಮುನಿದು ಕಚ್ಚುಟ ಕಂತೆ ಬತ್ತಲೆ ಬೋಳು ಜಡೆ ಲೋಚು ಅನಶನವ್ರತ ನಾರುಬೇರೆಂಬನಿತಱಲಿ ದಂಡಿಸುವೆ ನಾ (ಪ್ರಭುಲಿಂ. ೭-೫೭) ; ತನುವೆರವೆಂಬುದ ದೃಢಮಾಳ್ಪುದಕೆ ಲೋಚು (ಕಕಂ. ೭೦-೯೪) ; ಲೋಚು ಮುಗಿದ ಮೇಲೆ ಜಿನಗಂಧೋದಕ ವನ್ನು ಮುನಿಯ ತಲೆಗೆಲ್ಲ ಸವರಿದರು (ದಾಪಸಂ. ೦). ೩. ತಲೆಯ ಕೂದಲು,—ಕೇಶ(?): ಅಱಿವೇ ಗುರು ಆಚಾರವೆ ಶಿಷ್ಯ ಜ್ಞಾನವೇ ಲಿಂಗ ಪರಿಣಾಮವೇ ತಪ ಸಮತೆ ಎಂಬುದೇ ಯೋಗ ನೋಡಾ ಈಸುವನಱಿಯದೆ ಲೋಚು ಬೋಳಾದರೇನು ಮಹಾಲಿಂಗ ಕಲ್ಲೇಶ್ವರದೇವರು ನಗುವರು (ವಚಸಂ. ೦೯೭-೫೨) ; ಲೋಚು ಬೋಳಾಗಿ ಜಡೆಗಟ್ಟಿ ದೆಸೆದೆಸಗಳಂ ತಿರುಗಿ ಭಿಕ್ಷಾಂದೇಹಿಯಾದ ಸಂದೇಹಿಗಳ ಶಿವನೊಲ್ಲನು (ಶಿವಗೀ. ೩೩-೨೬೦).

[ಸಂ. ಲುಂಚ್]

**ಲೋಚುಗೆಯ್** (ಕ್ರಿ). ಜಿನದೀಕ್ಷೆ ಕೈಕೊಂಡವರ ಕೂದಲನ್ನು ಕೀಳು : ಲೋಚುಮಾಡು : ದೇವತೆಗಳ್ ಮಾಡಿದಾಹಾರಮಂ ರಿಸಿಯರ್ಗೆ ಚರಿಗೆಮಾಡಲಾಗದೆಂದು ಬಾರಿಸಿಯವರ್ಗೆ ಲೋಚುಗೆಯ್ದು ಬ್ರತಂಗಳ ನೇಱಿಸಿ (ವಡ್ಡಾರಾ. ೯೦-೨೪) ; ಲೋಚುಗೆಯ್ದುಂಕಕಾಱಂಗೆ . . . ಪಂಚ ಮಹಾವ್ರತಂಗಳನೇಱಿಸಿ (ಬಿಂಹಂ. ೦೦-೩೦ ಪ) ; ಬೆಳುವಲ್ಲ ಮಲಿನ ದೇಹದ ಲೋಚುಗೆಯ್ದ ಬೋಳ್ದಲೆಯ . . . ಜಿನಗುರುಗಳು (ಸೌಂದರ. ೦೨-೬೮). [ಲೋಚು+ಕೆಯ್₁]

**ಲೋಟ** 'ಲೋಟಾ₁' ನೋ.

**ಲೋಟಕ** (ನಾ). ತುಳಿಯುವವನು ; ಮೆಟ್ಟುವವನು : "ಲೋಟಕಃ, ಲೋಟಮಾನಃ, ಈ ೨ ತುಳಿವಂ" (ಕಾಶ್ಯ. ೦೩೦). [ಸಂ.]

**ಲೋಟನ** (ನಾ). ೧. ಉರುಳುವಿಕೆ ; ಬೀಳುವಿಕೆ : 'ಲೋಟಿಸು' ಪರಾ. ೨. ತುಳಿಯುವಿಕೆ ; ತುಳಿತ : "ಲುಟ್ . . . ಲೋಟುಃ, ಲೋಟನಂ, ಲೋಟನೀಯಂ, ಈ ೬ ತುಳಿ" (ಕಾಶ್ಯ. ೦೩೦). [ಸಂ.]

**ಲೋಟಾ₁, ಲೋಟ, ಲೋಟೆ** (ನಾ). ಮಣ್ಣು ಅಥವಾ ಲೋಹದ ಸಣ್ಣ ಕುಡಿಯುವ ಪಾತ್ರೆ : ಅವನ ಫಲಾರವೆಂದರೆ ಲೋಟಾ ನೀರು (ಕಾಮ್ಯ. ೦೯) ; ನಮ್ಮ ಲೋಟಾಗಳಲ್ಲಿ ಮತ್ತೊಂದು ಸಲ ಕಾಫಿಯನ್ನು ಬಗ್ಗಿಸಿದಳು (ಪಡಿದಾ. II. ೯೬೮). **ಲೋಟ** : ಪಕ್ಕದ ಸ್ಟೂಲಿನ ಮೇಲೆ ಹೊಳಪಿನ ಕಂಚಿನ ಕೂಜ, ಲೋಟ (ರಂಗಳ. ೬೦) ; ಅವನ ಹಾಸಿಗೆಯ ಪಕ್ಕದಲ್ಲಿ ಒಂದು ಚಂಬು, ಅದರ ಪಕ್ಕದಲ್ಲಿ ಒಂದು ಲೋಟವಿತ್ತು (ಹೂಹಣ್ಣು. ೩). **ಲೋಟೆ** : ಒಂದು ಲೋಟೆ ಬಾಯಾರಿಕೆಯನ್ನು ತಾನೇ ತಂದು ಕೊಟ್ಟನು (ಶುಂಗಾರು. ೬೪). [←ಅರ. ಹಿಂ. ಮರಾ. ಲೋಟಾ]

**ಲೋಟಾ₂** (ನಾ). ಒಂದು ಬಗೆಯ ಪಾರಿವಾಳ : ಲೋಟಾ ಎಂಬ ಪಾರಿವಾಳಗಳು ನೆಲದ ಮೇಲೆ ಉರುಳುತ್ತ ಹೋಗುತ್ತವೆ (ಪುಂಡಿಯು. ೩-೧೦೦). [?]

**ಲೋಟಿಸು** (ಕ್ರಿ). ಉರುಳಿಸು ; ಕೆಡವು ; ಬೀಳಿಸು : ಅಗಡಿಯಲಿ ಲೋಟಿಸಿ ನಿರಂತರ ಲಗಡಿಯಲಿ ಲಾಗಿಸಿ . . . ಹೆಣಗಿದರು (ಕುಮಾರವ್ಯಾ. ೨-೯೯); ವಿಗಡರದ ಲೆಕ್ಕಿಸದೆ ಲೋಟಿಸಿ ಮುಗುಚಿದರು (ಕುಮಾರವ್ಯಾ. ೦೨-೩೮). [ಲೋಟನ+ — ಇಸು₃]

**ಲೋಟು** (ನಾ). (?) : ಜಯಗೋಪಕನ್ಯಕಾಕಾಮುಕಲೆ ಶಾಸ್ತ್ರಪ್ರಭಿಲೋಟಿ ನೊಳು ತ್ರಿವಳಿಕುಕ್ಷ ಜಯುವನಧಿದಕ್ಷಾ (ಶ್ರೀಕೃಷಾ. ೦). [?]

**ಲೋಟೆ** 'ಲೋಟಾ₁' ನೋ.

**ಲೋಡನ** (ನಾ). ೧. ಕದಡುವಿಕೆ ; ಕಲಕುವಿಕೆ ; ಮಥನ. ೨. ಪ್ರಚೋದನೆ. [ಸಂ.]

**ಲೋಡಿಗೆ** (ನಾ). ಒರಗಿಕೊಂಡು ಕೂತುಕೊಳ್ಳಲು, ಅರಳೆ ಮೊದಲಾದುವನ್ನು ತುಂಬಿ ಮಾಡಿದ ಮೃದುವಾದ ದಿಂಬು : ಬಳಿಯ ಚೌರಿಯ ಹೊಱೆಯ ಚಿತ್ರಾವಳಿವಿಧಾನದ ಹಾಸುಗಳ ಹೊಂಬಳಿಯ ತೆರೆಸೀರೆಗಳ ಛತ್ರ ವ್ಯಜನ ಸೀಗುರಿಯ ಹೊಳೆವ ಪಟ್ಟೆಯ ಲೋಡಿಗೆಯ . . . ಸುವರ್ಣಾವಳಿಯ ದಿಂಡುಗಳೊಟ್ಟಿದವು (ಕುಮಾರವ್ಯಾ.ಗ. ೪-೦೪).

[< ಲೋಡು₁]

**ಲೋಡು₁** (ನಾ). = ಲೋಡಿಗೆ : ಒಱಗಿಕೊಂಬುದಕೆ ಲೋಡಾಗಲು ಮತ್ತೊಂದು ಮಿಱುಗುವ ಗದ್ದುಗೆಯಾಗೆ (ಜಾಪಕ. ೫೩-೪೮) ; ಪಾಸಿನೊಳ್ ನೀಳಮಾದೊಂದು ಲೋಡಂ ಮಲಂಗಿಸಿ. . .ಪೊದೆಯಿಸಿ (ಕಳಶ. ೯-೩೪); ಕನ್ನಡೀಮಹಲಿನಲ್ಲಿ ರತ್ನನಿಯ ಗಾದಿಯ ಮೇಲೆ ಲೋಡಿಗೆ ಆತುಕೊಂಡು

ಕುಳಿತರು (ಪಂಚತಂ. ೦೦).

[ ದೇ. ೩ ತುಳು. ತೆಲು. ಲೋಡು. / ಮರಾ. ಲೋಡ. ಲೋಢ ]

**ಲೋಡು₂** (ನಾ). ವ್ಯಾಯಾಮ ಮಾಡುವುದಕ್ಕಾಗಿ ಕೈಯಲ್ಲಿ ಹಿಡಿದು ತಿರುಗಿಸುವ ಮರದ ಭಾರವಾದ ಸಾಧನ : ಗರುಡಿವನೆಯಂ ಪೊಕ್ಕು . . . ತಿರುಹುತ್ತ ಲೋಡು ನಿಡುಸಾಣಾಂಗಳ (ಶರಸು. ೯-೦೦) ; ಕೈಗಳಿಂದ ತಿರಿಗಿಸಲ್ಪಟ್ಟಂಥಾ ಶಿರಸ್ಸಿನ ಸುತ್ತಲು ತಿರಿಗಿಸುವದರಿಂದ ಪುಷ್ಟವಂಥಾ. ತೋರನಾಗಿಯಿದ್ದಂಥಾ ಅದಕೆ ಲೋಡುಯೆಂಬ ಹೆಸರು (ಜತ್ವಬೀ. ೨-೩೦) ; ಗರಡಿಮನೆಗೆ ಗಂಭೀರ ಹೋಗವ್ನೆ ಗಂಧದ ಲೋಡ ತಿರುಗುವ ದೊರೆಮಗನಿಗೆ ಮಗಳ ಕೊಡಬೇಕು (ಜಾನ್ಪದ. ೫೩).

[ ದೇ. ೩ ತೆಲು. ಲೋಡಿ. ಲೋಡೀ]

**ಲೋಡು₃** (ನಾ). ಹೊರೆ; ಹೇರು : 'ಫೈಲ್' 'ವ್ಯಾಗನ್' 'ಲೋಡು' ಬರೆದುಕೊಂಡರು (ಅರಮೋ. ೨೦); ಗಾಡಿಗೆ ಲೋಡು ಜಾಸ್ತಿಯಾಗಿದೆ (ಆಡು).   [ ← ಇಂ. Load ]

**ಲೋಣ** (ನಾ). ಒಂದು ಬಗೆಯ ಉಪ್ಪು: "ಲವಣೋತ್ಥಂ, ಲವಣಾರಂ– ಈಯಿರಡು ಲೋಣ, ಲವಣ" (ಚಿತ್ರ. ೦೧೨).

[ < ಪ್ರಾ. ಲೋಣ. / ಸಂ. ಲವಣ ]

**ಲೋಣಾರ** (ನಾ). ಉಪ್ಪು ಮಾಡುವವನು; ಉಪ್ಪಾರ : ಲೋಣಾರರು:– ಇವರ ಜನ್ಮಭಾಷೆ ಕನ್ನಡ . . . ಸೋರುಪ್ಪು ಮಾಡಿ ಮಾರುವರು (ಕಳಗಿ. ೦೬೬).   [← ಮರಾ. ಲೋಣಾರ. / ಸಂ. ಲವಣಕಾರ ]

**ಲೋಣಿಕೆ** (ನಾ). ಒಂದು ಬಗೆಯ ಸಸ್ಯ; ಪುಳ್ಳಂಪುರಿಚೆ : "ಆ ಲೋಣಿಕೆ ಕ್ಷುಲ್ಲಕಾಮ್ಲಿ ಪುಳ್ಳಂಪುಣಿಸೆ" (ಶಬ್ದಗಣ. ೪೨-೩೯).   [ಸಂ.]

**ಲೋಧ್ರ** (ನಾ). ಒಂದು ಬಗೆಯ ಮರ : "ಗಾಲವಃ, ಶಾಂಬರಃ, ಲೋಧ್ರಃ . . . ವರ್ಜಾರ್ಜನಃ — ಈ ೬ ಲೋಧ್ರಗಿಡದ ಹೆಸರು. ಇದು ಜಾಲಾರಿಮರದಲ್ಲಿ ಭೇದ, ಅರಗಿನ ಮರ" (ನಿಘಂಶಿ. ೦೦೯); ಚೂತಾವನೀ ಜಾತ ಲೋಧ್ರಲವಂಗಪ್ರಕರಪ್ರವಾಳರುಚಿತಂ . . . ಕನ್ನೋಗಿಸುಗುಂ (ಕಾದಂಪೂ. ೨೦೩) ; ಜಾಜಿ ಬಕುಳಂ ತುಂಬೆ ಲೋಧ್ರವಗ್ಗಳಗುಳ್ಳ ಕಣಗಿಲುಮಶೋಕೆಯುನ್ನತ್ತ (ಜೀಕ್ಕೃ. ೬-೦೦-೦೬) ; ಹಿಪ್ಪಲಿ, ಲೋಧ್ರ, ಭದ್ರಮುಷ್ಟೆ. . .ಕೊಡಲು ಪ್ರಳಯಾಗ್ನಿಗೆ ಸಮಾನವಾದ ಉಷ್ಣಜ್ವರವೂ ತಾಪಜ್ವರ ಕಡುಜ್ವರಗಳೂ ಸಹ ಮಾಣುವುವು (ಸಕಶ್ಯ. ೭೮).

[ಸಂ.]

**ಲೋಧ್ರಪುಷ್ಪ** (ನಾ). ಒಂದು ಬಗೆಯ ಮರ ; ಇಪ್ಪೆ; ಮಧೂಕ : "ಇಪ್ಪೆ ಮಧುಕಂ ಲೋಧ್ರಪುಷ್ಪ ಗುಡಪುಷ್ಪಮಕ್ಕುಂ" (ಶಬ್ದಗಣ. ೪೨-೩೪).

[ಸಂ.]

**ಲೋಪ** (ನಾ). ೧. ಚೂರುಮಾಡುವುದು ; ಒಡೆಯುವುದು. ೨. ಹಾಳುಮಾಡುವಿಕೆ ; ನಾಶ. ೩. ಸುಲಿಗೆಮಾಡುವುದು ; ಕೊಳ್ಳೆ. ೪. ಇಲ್ಲದಾಗುವುದು : ಸ್ವರಮಿರೆ ಪರದೊಳ್ ಪೂರ್ವಸ್ವರಲೋಪಂ (ಶಾಬ್ದಾಶ. ೬೨) ; ದಕಾರದೆಡೆಗೆ ಒರಿಪುಂ ಲೋಪಂ (ಶಬ್ದಮ.೯೭); ಇಲ್ಲಿಯೂ ರೇಫ ಲೋಪವಾಗಿವೆಯೆಂದು ತಿಳಿಸುವದು (ಬ್ರಾಶಿಶಿ. ೯೭). ೫. ಕೊರತೆ ; ಊನ : ಚಾಪದಂಶವ ಹೊಂದಿ ಶನಿ ಇರೆ ಪಾಪ ಚಂದ್ರನ ರಕ್ಷಣೆಯು ತಾ ಲೋಪವಿಲ್ಲದೆ ತಾಳಿರಲು ಹನ್ನೊಂದು ವರುಷ (ಜಾತಕ್ಕ. ೨-೦೩); ಲೋಪವೇನೂ ಇಲ್ಲ, ದೀಪಕೆ ಮಾತ್ರ ಬಗೆಯಿಲ್ಲ (ಗಾದೆ). ೬. [ವ್ಯಾಕ] ಕನ್ನಡದ ಲೋಪ, ಆಗಮ ಮತ್ತು ಆದೇಶಗಳೆಂಬ ಸಂಧಿಗಳಲ್ಲಿ ಮೊದಲನೆಯದು ; ಸ್ವರದ ಮುಂದೆ ಸ್ವರ ಬಂದರೆ ಹಿಂದಿನ ಸ್ವರ ಬಿಟ್ಟುಹೋಗುವುದು : ಸ್ವರಮಿದಿರೊಳಿರೆ ವಿಭಕ್ತಿ ಸ್ವರಕಂ ಪ್ರಕೃತಿಸ್ವರಕಮುಕ್ಕುಂ ಲೋಪಂ (ಶಮದ. ೬೨) 'ಲೋಪಸಂಧಿ' ಪರಾ.

ಲೋಪದೋಷ — ಕುಂದು ಮತ್ತು ಕೊರತೆ ; ಅಂಕುಡೊಂಕು : ಪ್ರಜಾಪ್ರಭುತ್ವದಲ್ಲಿ ಎಷ್ಟೇ ಲೋಪದೋಷಗಳಿದ್ದರೂ ಅದು ಸರ್ವಾಧಿಕಾರ ಪ್ರಭುತ್ವಕ್ಕಿಂತ ಸಾವಿರಪಾಲು ಮೇಲು (ಪಂಜಪಂ. ೦೫೩).   [ಸಂ.]

**ಲೋಪಂಬೊರ್ದು** (ಕ್ರಿ). ಲೋಪವನ್ನು ಹೊಂದು ; ಇಲ್ಲದಂತಾಗು : ಇರ್ದುದನೞಿಯದೆ ನಯದಿಂ ಪೊರ್ದುವುದಾಗಮಮುಮದೆಯ್ದೆ ಪೋಪುವು ಲೋಪಂಬೊರ್ದಿ ವಿಭಕ್ತಿಯ ಬೞಿವಿಡಿದು (ಶಮದ. ೦೬೩).

[ಲೋಪ + ಪೊರ್ದು₁]

**ಲೋಪಗೈಸು** (ಕ್ರಿ). ಇಲ್ಲದಂತೆ ಮಾಡು ; ಅಳಿಸು : ದೀಪ ದಿವದಲಿ ಕಂಡರಾದಡೆ ಲೋಪಗೈಸುವರಾಕ್ಷಣ (ಷಡಾರ. ೦೬-೨೭).

[ಲೋಪ + ಕೈಸು (< ಕೆಯ್ಯು₁)]

**ಲೋಪಪ್ರವೃತ್ತಿ** (ನಾ). ಬಿಟ್ಟುಹೋಗುವಿಕೆ ; ಇಲ್ಲವಾಗುವಿಕೆ : ವಿದಿತಂ ದಾಡಿಮು ಕೂಷ್ಮಾಂಡದ ಮತ್ತ ಸ್ಥಾನದಲ್ಲಿ ಬತ್ವಂ ಕೂಷ್ಮಾಂಡದ ಷತ್ವಕ್ಕಂ ಬಿಂದುಗಮುಂದೆಯಿಸುಗುಂ ಲೋಪಪ್ರವೃತ್ತಿ ಲಕ್ಷಣವಿಧಿಯಿಂ (ಶಮದ. ೨೬೪).

[ಸಂ.]

**ಲೋಪಸಂಧಿ** (ನಾ). = ಲೋಪ ೬ : ಸ್ವರದ ಮುಂದೆ ಸ್ವರವು ಬಂದರೆ ಸಾಮಾನ್ಯವಾಗಿ ಹಿಂದಿನ ಸ್ವರವು ಬಿಟ್ಟುಹೋಗುತ್ತದೆ. ಹೀಗೆ ವರ್ಣವು ಬಿಟ್ಟು ಹೋಗುವುದಕ್ಕೆ ಲೋಪವೆಂದೂ ಈ ಸಂಧಿಗೆ ಲೋಪಸಂಧಿಯೆಂದೂ ಹೆಸರು (ಹುಠ್ಯಕು. ೦೭).   [ಸಂ.]

**ಲೋಪಿಸು** (ಕ್ರಿ). ಬಿಡು ; ಕಳೆ ; ತೆಗೆದುಹಾಕು : ತಪನಪ್ರತಾಪಮಂ ಲೋಪಿಪ ನಾಲ್ವತ್ತೆಂಟುಕೋಟಿ ಪಟಯುಗೆಯೆಸೆಗುಂ (ಪಾರ್ಶ್ವತ್ತು. ೬-೬೦); ಎಲ್ಲಿಯುಮಾಮಂತ್ರಣದೊಳ್ ಬಲ್ಲರ್ ಪ್ರಥಮೈಕವಚನಮಂ ಲೋಪಿಸುವರ್ (ಶಮದ. ೦೨೩); ಪಾಪವಾಸನೆಯನು ಪುಣ್ಯವಾಸನೆಯಿಂದ ಲೋಪಿಸಿ ತನ್ನೊಳು ನಿಂದು (ಶರಶ. ೦೭-೬೬).   [ಲೋಪ + —ಇಸು₁]

**ಲೋಪ್ತ್ರ** (ನಾ). ಕದ್ದ ವಸ್ತು ; ಕಳವಿನ ಮಾಲು : "ಲೋಪ್ತ್ರಮೆನೆ ಕಳವಿನೊಡವೆ" (ಶಬ್ದಗಣ. ೬೭-೩).   [ಸಂ.]

**ಲೋಬ** (ನಾ). ೧. ಅತಿಯಾಸೆ ; ಕೃಪಣತೆ : ಲೋಭ – ಲೋಬ (ಶಮದ. ೨೩೩ ಪ್ರಯೋ). ೨. ಅತಿಯಾಸೆಯುಳ್ಳವನು ; ಕೃಪಣ : ಲೋಭಿ : ಹುಸಿವನ ಮಾತುಗುಟ್ಟದಿರು ಲೋಬನ ಮಾತನಡಂಗಿಸಾಜಿಯೊಳ್ಕುಸಿವನ ಮಾತುಗೇಳದಿರು (ಕಶಿ. I. ೨೩-೯೭ ; 1186).

[ < ಸಂ. ಲೋಭ]

**ಲೋಬಾನ, ಲೋಭಾನ** (ನಾ). ಸುಗಂಧ ದ್ರವ್ಯದಂತೆ ಬಳಸುವ ಒಂದು ಬಗೆಯ ಮರದ ಅಂಟು ; ತುರುಷ್ಕ : ಲೋಬಾನ ಚಂದನ ಗಾಡಿನೊಳ್ಪೊಂದಿ ಮತ್ತೇಭಂಗಳಿರೆ ಕಂಡರವರು (ಸೋಮಶ. ೦೯-೨೦) ; ಕನ್ನಡದಲ್ಲಿ ಲೋಬಾನ ಎಂತಲೂ ಹಾಲುಮಡ್ಡಿ ಎಂತಲೂ ಕರೆಯುತ್ತಾರೆ (ಪ್ರಜಾಶ. I. ೯೯ ೫೬೩) ; ಕಾಯಿ ಒಡೆದು ಲೋಬಾನ ಹಾಕಿದ್ದ (ಮಲೆಮ. ೩೭). ಲೋಭಾನ : ಲೋಭಾನ [ಧೂಪದಿಂ] [ದೊತ್ತರಿಸಿ] (ಸೂಕಶಾ. ೩-೦೩) ; ಕೋಣೆಯಲ್ಲಿ ಲೋಭಾನವು ವಿಶೇಷವಾಗಿ ಸುಡಲ್ಪಟ್ಟದ್ದರಿಂದ ಅದರ ವಾಸನೆಯು ಕೋಣೆಯ ತುಂಬ ಇಡಿಗಿತ್ತು (ಶಶ್ವಶಿ. ೦೦೨) ; ಲೋಭಾನದ ಹೊಗೆಯನ್ನು ಹಾಕಿದ್ದಾರೆ (ದೌರ್ಕ್. ೦೬೦).

[←ಅರ. ಹಿಂ. ಲೋಬಾನ ; ಮರಾ. ಲೋಬಾನ, ಲೋಭಾನ]

**ಲೋಭ** (ನಾ). ೧. ಅತಿಯಾಸೆ ; ದುರಾಸೆ : ಅನ್ಯತಂ ಲೋಭಂ ಭಯಮೆಂಬಿನಿತುಂ ನೀನಿರ್ದ ನಾಡೊಳಿರ್ಕುಮೆ ರವಿನಂದನ (ಗದಾಯು. ೩-೦೭) ; ಕಾಮ, ಕ್ರೋಧ, ಲೋಭ, ಮೋಹ, ಮದ, ಮಾತ್ಸರ್ಯ ಎಂಬ ಆರು ಶತ್ರುಗಳನ್ನು (ಅಮ್ಮಶ. ೦-೨೨ ೮೬೩) ; ಲೋಭ ನಡಸಿ ನಡಸಿ ಭೋಗ ಕೆಡಿಸಿಕೊಂಡ (ಗಾದೆ). ೨. ಜಿಪುಣತನ; ಕೃಪಣತನ: ಕೊಡೆಯನೀಯನೆ ಲೋಭವೇ ಕರಸ (ಹರಿಶ.೩-೦೩). ೩. ಜಿಪುಣ; ಕೃಪಣ:

'ಕಡುಲೋಭ' ಪರಾ. ೪. (ಉಕ) ಪ್ರೀತಿ ; ವಾತ್ಸಲ್ಯ ; ಅಕ್ಕರೆ : ಅಣ್ಣಾ ಹೋಗಿಬರುತ್ತೇನೆ. ಲೋಭವಿರಲಿ (ಹುಂಜಾರು. ೪-೦೭) ; ತಂಗೀ ಇನ್ನು ನಾನು ಹೋಗಿ ಬರುತ್ತೇನವ್ವಾ. ಲೋಭವಿರಲಿ (ಉಡಾಕ. ೯೭). ೫. [ಜೈನ] ಐದು ಬಗೆಯ ಅಂತರಾಯಕರ್ಮಗಳಲ್ಲಿ ಒಂದು : ಅಂತರಾಯಕರ್ಮಂ ಪಂಚವಿಧಮಕ್ಕುಂ ದಾನ ಲೋಭ ಭೋಗೋಪಭೋಗವೀರ್ಯಾಂತರಾಯಕರ್ಮಮೆಂದು (ಗೊಮ್ಮ.ಜಾ.೪-೪). 'ಅಂತರಾಯಪಂಚಕ' ಪರಾ. [ಸಂ.]

**ಲೋಭಕ** (ಗು). ಲೋಭದಿಂದ ಕೂಡಿದ ; ಕೃಪಣತನದಿಂದ ಕೂಡಿದ : ಮಮ್ಮಲಮಱುಗುತ್ತುಮಿರ್ಪ ಕಡುಲೋಭಕದಾನಗುಣಂಗಳಂ ಪಳಂಚಿ (ಆಕ್ಷ. ೬೨-೦೭). [ಸಂ.]

**ಲೋಭಾನ** 'ಲೋಬಾನ' ನೋ.

**ಲೋಭಿ** (ನಾ). ಕೃಪಣ ; ಜಿಪುಣ : "ಕದರ್ಯಃ . . . ಮಿತಂಪಚಃ—ಈ ೫ ಲೋಭಿ" (ಕಣಾಯು. ೫೭-೦೯೨); ರವಿ ಚಾಪಕ್ಷೇತ್ರದೊಳ್ ನಿಂದೊಡೆ ಧನಪತಿ . . . ಮಕರದೊಳಿರೆ ಮೂರ್ಖಂ ಖಳಂ ಲೋಭಿ (ಜಾತಕ. ೦೭-೦೭); ಭೋಗಿಗೆ ಲೋಭಿಗೆ ಯೋಗಂ ತ್ಯಾಗಂ ಹಿತವಾಗದು (ಹರಿಶ್ಚ. ೨-೫); ಪಾಟಿಗೆ ಪರವಾಯು, ಲೋಭಿಗೆ ಚರಾಯು (ಗಾದೆ). [ಸಂ.]

**ಲೋಭಿಗಲಿ** (ನಾ). ಜಿಪುಣನಾದ ಬಂಟ : ಮಾರ್ಗವಿಾಯದ ಬದಿರಿದ ಲೋಭಿಗಲಿಗಳುಮಂ ನೊಂದು ಪಲ್ಗಿರಿದೋಡುವ ಪುಣ್ಣಲಿಗಳುಮಂ . . . ನೋಡಿ (ಗದಾಯು. ೯-೩೪ ಠ). [ಲೋಭಿ + ಕಲಿ]

**ಲೋಭಿತನ** (ನಾ). ಜಿಪುಣತನ ; ಕೃಪಣತ್ವ : (೬). [ಲೋಭಿ + —ತನ]

**ಲೋಭಿಸು** (ಕ್ರಿ). ಅತಿಯಾಸೆಪಡು : ನಿತ್ಯತ್ವಂಬೆತ್ತ ಪಾಂಗಿಂ ಪಳಿವ ಮುಳಿವ ಕಾಮಿಪ್ಪ ಕೋಪಿಪ್ಪ ಲೋಭಿಪ್ಪತ್ಯಂತಂ ಗರ್ವಿಪನ್ನೀ ಮನಕೆ ಪರಮವೈರಾಗ್ಯಮಂ ಕೊಟ್ಟು . . . ರಕ್ಷಿಪ್ಪುದೆನ್ನಂ (ಕಶಾಶ. ೦೩). [ಲೋಭ+—ಇಸು]

**ಲೋಮ** (ನಾ). ೧. ಮನುಷ್ಯ ಅಥವಾ ಯಾವುದೇ ಪ್ರಾಣಿಯ ಮೈಗೂದಲು ; ರೋಮ : "ಲೋಮಮೆನೆ ಮೆಯ್ಯ ಕೂದಲಕ್ಕುಂ" (ಹುಂಗಣ. ೯೯-೫); "ತನೂರುಹಂ, ರೋಮ, ಲೋಮ_ ೩ ಮೈಯೊಳಗೆ, ಹುಟ್ಟಿದ ಕೂದಲು ಹೆಸರುಗಳು. ವೈಗೂದಲು" (ಸಿಜ್ಞಾಂ. ೦೯೭). ೨. ಕೂದಲಿನಂತಿರುವ ಸಣ್ಣ ಬೇರು : ನಿಜವಾದ ಬೇರುಗಳಿಲ್ಲದಿದ್ದರೂ ಅವಕ್ಕೆ ಬದಲಾಗಿ ಹುಟ್ಟಿರುವ ಲೋಮಗಳ ಸಹಾಯದಿಂದ . . . ತನ್ನ ಆಹಾರದ ಪರ್ಯಾಟನ್ನು ತಾನೇ ನಿರ್ವಹಿಸಿಕೊಳ್ಳುತ್ತದೆ (ಹಸುಹೂ. ೦೯೦). ೩. ಬಾಲ ; ಪುಚ್ಛ. ೪. ಒಂದು ಬಗೆಯ ಸಸ್ಯ : "ಲೋಮ ಕರ್ಕಟಕಂ" (ಹುಂಗಣ. ೯೦-೩೪). [ಸಂ.]

**ಲೋಮಕ** (ನಾ). ಒಂದು ಬಗೆಯ ಸಸ್ಯ ; ತೊರೆಗಣಗಿಲು : "ತೊರೆಗಣಗಿಲಾ ಲೋಮಕಂ" (ಹುಂಗಣ. ೩೪-೦೦). [ಸಂ.]

**ಲೋಮನಾಳ** (ನಾ). ಕೂದಲಿನಷ್ಟು ಸೂಕ್ಷ್ಮವಾದ (ರಕ್ತ)ನಾಳ: ರೋಗಾಣುಗಳು ಲೋಮನಾಳಗಳಲ್ಲಿ ಸೇರಿಕೊಂಡು ರಕ್ತಚಲನೆಗೆ ಅಡ್ಡಿ ಮಾಡುವುದರಿಂದ ಈ ಚುಕ್ಕೆಗಳು ಕಾಣಿಸಿಕೊಳ್ಳುತ್ತವೆ (ಕಂಠರೋ. ೬೦); ಸೆಲ್ಯುಲೋಸನ್ನು ರಸಾಯನಿಕವಸ್ತುಗಳಲ್ಲಿ ಕರಗಿಸಿ ತಯಾರಿಸಿದ ದ್ರವವನ್ನು ಲೋಮನಾಳ (capillaries)ಗಳ ಮೂಲಕ ಹಾಯಿಸಿ ಹೊರ ಹೊರಟ ಎಳೆಗಳನ್ನು ಆರಿಸಿ ಹದಗೊಳಿಸಿದ ಪದಾರ್ಥವೇ ರೆಯಾನ್ ಎಳೆಗಳು (ಗೃಕಶಿ. ೬೦). [ಸಂ. ಲೋಮನಾಲ]

**ಲೋಮಶ** (ಗು). ೧. ಕೂದಲಿನಿಂದ ತುಂಬಿರುವ; ರೋಮದಿಂದ ಕೂಡಿರುವ. (ನಾ). ೨. ಕೂದಲಿನಿಂದ ತುಂಬಿರುವ ಪ್ರಾಣಿ : ಲೋಮಶ ಎಂದರೆ ತುಂಬ ಕೂದಲು ಬೆಳೆದ ಪ್ರಾಣಿ ಎಂದು ಅರ್ಥ (ಜಾನಪ್ರ. ೯೨). ೩. ಒಬ್ಬ ಋಷಿಯ ಹೆಸರು; ರೋಮಶ : ಕಳುಹಿದನು ಲೋಮಶನನವನೀತಳಕೆ ಸುರಪತಿ (ಕುಭ್ಯಾಅ. ೯-೨). [ಸಂ.]

**ಲೋಮಶೆ** (ನಾ). ೧. ಒಂದು ಬಗೆಯ ಔಷಧೀಮೂಲಿಕೆ ; ಸುಗಂಧ ಮಾಂಸಿ ; ಜಟಾಮಾಂಸಿ ; "ಜಟಿಲೆ, ಜಟಮಾಂಸಿ, ಸುಗಂಧಮಾಂಸಿ" (ಸಸ್ಯಶಿ. ೯೫). ೨. ನರಿ. ೩. ಕೋತಿ. [ಸಂ. ಲೋಮಶಾ]

**ಲೋಮಹರ್ಷ** (ನಾ). ಅತಿಯಾದ ಸಂತೋಷ, ಭಯ ಮುಂತಾದುವುಗಳಿಂದ ಮೈಗೂದಲು ನೆಟ್ಟಗಾಗುವುದು, —ಮೈನವಿರೇಳುವುದು. 'ರೋಮಹರ್ಷ' ಪರಾ. [ಸಂ.]

**ಲೋಮಹರ್ಷಣ** (ನಾ). ೧. = ಲೋಮಹರ್ಷ. ೨. ಅತಿಯಾದ ಸಂತೋಷ, ಭಯ ಮುಂತಾದುವು ಮೈಗೂದಲನ್ನು ನೆಟ್ಟಗಾಗುವಂತೆ ಮಾಡುವುದು; ರೋಮಾಂಚಗೊಳಿಸುವುದು. 'ರೋಮಹರ್ಷಣ' ಪರಾ. [ಸಂ.]

**ಲೋಮಿ** (ನಾ). ಕುದುರೆಯ ಗೊರಸಿಗೆ ಹಾಕುವ (ಚಿನ್ನ ಅಥವಾ ಬೆಳ್ಳಿಯ) ಬಳೆ : "ವಳಯಂ ಲೋಮಿಪೆಸರಕ್ಕು" (ಹುಂಗಣ. ೬೦-೦೩). [ ? ]

**ಲೋಮಿಕೆ** (ನಾ). ಒಂದು ಬಗೆಯ ಸಸ್ಯ ; ಬೆಂಡೆ : "ಲೋಮಿಕೆಯೆಸಲ್ ಬೆಂಡೆ" (ಹುಂಗಣ. ೯೫-೯೭). [ ? ]

**ಲೋಯಿಸರ** ' ಲೋಳಿಸರ ' ನೋ.

**ಲೋಲ, ಲೋಳ** (ಗು). ೧. ಅತ್ತಿತ್ತ ಅಲುಗಾಡುವ, – ಚಲಿಸುವ ; ಚಂಚಲವಾದ : ಚಮರೀಲೋಲಲಾಂಗೂಲಮಾಲಾವಲಿವಿಕ್ಷೇಪಂಗಳಿಂ ತಚ್ಚಮುರರುಹ ಮಹಾಶೋಭೆ ಕೈಗಣ್ಗೆ (ಕಂಜಾ. ೪-೦೪) ; ಮಹೀಭುಜನ ಮೆಯ್ಸಿರಿಯಂ ಸಜಿಗೆಯ್ಯ ತತ್ಸರೋಜಾನನೆ ತನ್ನ ಲೋಲನಯನೋತ್ಪಲ ಮಾಲೆ ನೃಪಂಗೆ ಮಾಲೆಯಂ ತಾನೊಸೆದಿಕ್ಕಿದಳ್ (ಕಂಜಾಚಾ. ೩-೪೪). ೨. ಅಸ್ಥಿರಪ್ರಕಾಶದ ; ಮಿಣುಕುವ : ಲೋಲತಾರೆಗಳೆಸೆವಿರುಳಿನ ಮೊಗವನು ರಾಗದಿಂದೆಳೆಯ ಚಂದ್ರಮನು (ಕಂಜಾಕ. ೦೦೦-೯೦). (ನಾ). ೩. ಅಲ್ಲಾಡುವುದು; ಚಲಿಸುವುದು ; ಅಲುಗಾಟ : " ಲೋಲಂ, ಚಪಳಂ . . . ಸಂಚಳಂ—ಈ ೧೦ ಸಂಚಳಂ " (ಹಣಾಯು. ೦೦೫ ೦೦). ೪. ಪ್ರೀತಿ ; ಅಕ್ಕರೆ : ಬಾಲನ ಹಿಗ್ಗವ ಕಂಡು ಲೋಲದಿ ಎತಿಕೊಂಡು ತಲೆ ಮೇಲೆ ಕೈಯ ತಿರುವುತ' ಮಲ್ಲಯ್ಯ ಬಾಲಸಿದ್ದನಿಗೆ ಮುದ್ದಿಟ್ಟನು (ಸಿದ್ಧಕ. ೩-೬೦). ೫. ಆಟವಾಡುವವನು ; ಕ್ರೀಡಾಸಕ್ತ : ಬಾಲನಾ ಲೀಲೆಯನು ಹೇಳಲಿನ್ನೇನು ನಾ ? ಲೋಲ ಹಿಡಿಹಿಡಿದೆಳೆವ ಮುಂಗುರುಳ (ಸುಭ. ೪-೫). ೬. ವಿಷಯಲಂಪಟ; ಕಾಮುಕ : ಲೋಲಂಗೀ ವಿಹಗಂಗೀ ಬಾಲೆಯನೀ ಮುಗ್ಧೆಯಂ ವಿಚಾರಿಸದೆಯುಂ . . . ಕವುದೆ (ಕಾದಂಕಾ. ೬೯). ೭. ಪ್ರೀತಿಯುಳ್ಳವನು : ಲೋಲ ಪುರಂದರವಿಠ್ಠಲ (ಪುರಂದ. ಪಾ. ೩-೦೦೯-೩ ). ' ಸಿರಿಲೋಲ ' ಪರಾ. **ಲೋಳ** : ೧. ಲೋಳ ಕಟಾಕ್ಷ ತೀಕ್ಷ್ಣಶರದಿಂ ತೆಗೆದಿಚ್ಚೆಗೆ ಸಲ್ವ ಮೇಳದಿಂ ಮೇಳಿಸಿ ಕೇಳಿಯಂ ( ಚಾರ್ವಾಕ. ೦೦-೬೫ ) ; ಲೋಳತರಂಗರಾಜಿತಮಿಯತ್ತಟನೀತಟಚಾರು ಕಲ್ಪಭೂಜಾಳಿಯ ಬೀಡಲೆಂದೆನೆ (ಕುಸುಹಾ. ೨-೯೯). ೩. "ಲೋಳಂ ಚಲಮುಂ" (ಹಸ್ತಕೋ. ೦೨೯-೬೬). [ಸಂ.]

**ಲೋಲಂಗಿತ** (ನಾ). [ಸಂಗೀತ] ಒಂದು ಬಗೆಯ ಗತಿ (?): ಕಮ್ಮವಣೆ ಲೋಲಂಗಿತ ನುತಶುದ್ಧಸಾಳಂಗ ಸಂಕೀರ್ಣಮುಂ ಯಥೋಚಿತತಾರ ಮಧುರ ಮಂದ್ರಂಗಳಿಂ ಹಾಡಿ (ಹಕಣ. ೭-೩). [ಸಂ.]

**ಲೋಲಂಬ, ಲೋಳಂಬ** (ನಾ). ತುಂಬಿಗಳಲ್ಲಿ ಒಂದು ಬಗೆ ; ದೊಡ್ಡ ದುಂಬಿ: ಲೋಲಂಬ ಕಟಕ (ಲೀಹಹ. ೩೬-೦೦). **ಲೋಳಂಬ** : ಅಂಬುರುಹ ಲೋಳಂಬ [ಜಾಹಂ. ರೋಲಂಬ] ಮತ್ಸ್ಯಕಚ್ಛಪ ವಾರಿಕಂಬುಶೀಕರ ಚಕ್ರವಾಕಶೈವಾಲಕಾದಂಬಗಂಭೀರ ಸೈಕತ ಮೃಣಾಳಂಗಳಿಂ ತಮಗಮಯ ವಂಗಳಾಗೆ (ಕೃಷಿಹಾ. ೯-೨೫). [ಸಂ.]

**ಲೋಲಂಬಕದಂಬ** (ನಾ). ೧. ದುಂಬಿಗಳ ಗುಂಪು : ಭ್ರಮರಗಳ ಸಮೂಹ. ೨. ದುಂಬಿಗಳಿಂದ ಆವರಿಸಲ್ಪಟ್ಟವನು : ವಿಲಿಪ್ತಯಕ್ಷಕರ್ದಮಾಮೋದಾಕೃಷ್ಟವನಕುಸುಮಾಲೋಲಲೋಲಂಬಕದಂಬನುಂ . . . ಬರ್ಪಾಗಳ್ (ಚಂದ್ರಪ್ರ. ೭-೯೪ ವ). [ಸಂ.]

**ಲೋಲಕ್** 'ಲೋಲಾಕು' ನೋ.

**ಲೋಲಕ** (ನಾ). ಅತ್ತಿತ್ತ ತೂಗಾಡುವ ವಸ್ತು : ಆ ಬಳ್ಳಿಗಳ ಕೆಳಭಾಗದಲ್ಲಿ ತ್ರಿಕೋನಾಕೃತಿಯಾದ ಲೋಲಕಗಳು ಜೋತಾಡುತ್ತಿರುತ್ತವೆ (ಕುಂಐದು. ೬-೯೩); ಆಗಿನ ಕಾಲದಲ್ಲಿ ಗಡಿಯಾರಗಳಿಗೆ ಪೆಂಡುಲಮ್ (Pendulum) ಅಥವಾ ಲೋಲಕಗಳನ್ನು ಉಪಯೋಗಿಸುತ್ತಿರಲಿಲ್ಲ (ಭೌತಶ. ೨೬). [ಸಂ.]

**ಲೋಲಕ್ಕು** 'ಲೋಲಾಕು' ನೋ.

**ಲೋಲಚಿಬುಕ** (ನಾ). [ನಾಟ್ಯ] ಎಂಟು ಬಗೆಯ ಚಿಬುಕಭೇದಗಳಲ್ಲಿ ಒಂದು ; ☞ "ಅಗಿಯುವಾಗ ಮಾಡುವಂತೆ ಗಡ್ಡವನ್ನು ಅಡ್ಡಲಾಗಿ ಚಲಿಸುವುದು" (ಅಸ್ಕಿರಂ. ೨೬೦ ಗದ್ಯಾನುವಾದ) : ನೆಗಳ್ದಗಿವ ಸಮಯದೊಳ್ ಪೆಚ್ಚುಗೆಯಂ ಚಲಿಸಲ್ಕೆ ಲೋಲಚಿಬುಕಮೆನಿಕ್ಕುಂ (ಅಸ್ಕಿರಂ. ೪-೦೦೨). [ಸಂ.]

**ಲೋಲಜ್ಞಾನ** (ನಾ). ಹತ್ತು ಸಾತ್ವಿಕಲಕ್ಷಣಗಳಲ್ಲಿ ಒಂದು ; ಅಸ್ಥಿರಜ್ಞಾನ : ಚಂಚಲತೆ : ಹೇಳ್ವ ಕೇಳ್ವಾತ್ಮೀಕದಶವನು ಬಾಲಬುದ್ಧಿಯು ಓದು ಸಹಜ ಸಂಧೇಳಿಸುತಲಿಹುದೆರಡು ಸತ್ಯವೆಯೆಂಬದದು ಮೂರು ಲೋಲಜ್ಞಾನವು ನಾಲ್ಕು (ಜ್ಞಾಸಿಂ. ೨೬-೪). [ಸಂ.]

**ಲೋಲತೆ, ಲೋಳತೆ** (ನಾ). ೧. ಅಲುಗಾಟ ; ಚಂಚಲತೆ. ೨. ಆಸೆ ; ಬಯಕೆ : ಲೋಲತೆಯಿಂದೀಕ್ಷಿಪ ಗಣಿಕಾಲಿಯಪಾಂಗತ್ರಿವರ್ಣರುಚಿಗಳ್ ನೀಳ್ದೆಂ ಲೀಲೆಯಿನಾವಗತುವೊ ಮುತ್ತಿನ ನೀಲದ ಮಾಣಿಕದ ತೋರಣಂಗಳ ತೆಜದಿಂ (ಚಂದ್ರಪ್ರ. ೦೦-೪): ಲೋಲತೆಯಂ ಸುರಾಗದ ಸುರಾಗದ ಪೂವನುದಿರ್ಚುತಂ ಲತಾಜಾಳಕಜಾಳಕಂಗಳನೆಬಿಬ್ಬುತವಳ್ಳಿದಭ್ರುದಭ್ರುವುಂ ಚಾಳಿಸುತುಂ (ಶಾಸ್ತ್ರಪು. ೦೦-೬೬). **ಲೋಳತೆ:** ೨. ರೋಳತೆಯಿಂದೆ ಪುಷ್ಪವತಿಯಂ ಮಧುಭಾಜನೆಯಂ . . . ಸಲೆ ಸೋಂಕುತಿರ್ಪಂ (ಕುಸುಜು. ೦೦-೦೬೯). [ಸಂ. ಲೋಲತಾ]

**ಲೋಲಲೋಚನೆ** (ನಾ). ಚಂಚಲವಾದ ಕಣ್ಣುಗಳನ್ನುಳ್ಳವಳು ; ಚೆಲುವೆ : ಪಾಲು ಸಕ್ಕರೆ ಅಮೃತಾನ್ನವ ನೀನುಂಡು ಲೋಲಲೋಚನೆಯರೊಳಗದ ಮೇಲಾದ ಸಿರಿ (ಹಂಸಾಂ. ೪-೩೯) ; ನಿನ್ನ ಚೆಂದುಟಿಗಳಿಂ ಕೇಳಲಾಟವೆನದುಂ, ಲೋಲಲೋಚನೆ (ಶಬ್ದಾಂಗ. ೩೭-೦೦೦೬).

[ ಸಂ. ಲೋಲಲೋಚನಾ (ಲೋಲ + ಲೋಚನ + —) ]

**ಲೋಲಾಕು, ಲೋಲಕ್, ಲೋಲಕ್ಕು** (ನಾ). (ಲೋಲಕದಂತೆ ಅಲುಗಾಡುತ್ತಿರುವ) ಒಂದು ಬಗೆಯ ಕಿವಿಯ ಆಭರಣ: ತೂಗುಬಿಟ್ಟ ಎರಡು ಬಿಲ್ಲಿನಾಕಾರದ ಲೋಲಾಕುಗಳು ! (ಅಂಹೂ. ೯) ; ಕಿವಿಯಿಂದ ಚಿನ್ನದ ಲೋಲಾಕು ನೇತಾಡುತ್ತಿರುತ್ತವೆ (ಪ್ರಬಾ. II, ೩೩೦). **ಲೋಲಕ್:** ಸೊಟ್ಟಬೈತಲೆಯ ಲೋಲಕ್ ಥಳುಕಿನ ಬಳುಕುನಡುವಿನ ಜಾರ್ಜೆಟ್‌ಸೀರೆಯ ಬೆಡಗಿನ ಚೆಲುವೆ (ಜುಜಾಗ. ೨೫). **ಲೋಲಕ್ಕು :** ಬಳೆಗಳು, ಲೋಲಕ್ಕುಗಳು, ಜುಮುಕಿ . . .ಇತ್ಯಾದಿ (ಳಕೀಯ. I, ೬೨೦). [<ಸಂ. ಲೋಲಕ]

**ಲೋಲಾಕ್ಷಿ** (ನಾ). = ಲೋಲಲೋಚನೆ : ಲೋಲಾಕ್ಷಿಯರ್ಕೈದುತ್ತಿರಸಾಲಿಟ್ಟವರಳಕಗಂಧಕೊಡನೈತರುತಂ ರೋಲಂಬಮಾಲೆ ಮೇಲದು ನೀಲದನಡೆತೋರಣಂಬೊಲೇನೊಪ್ಪಿದುದೋ (ಅಜಿತ. ೨-೦೦೪). [ಸಂ. ಲೋಲಾಕ್ಷೀ]

**ಲೋಲಾಡಿಸು** (ಕ್ರಿ). (ನೀರಿನಲ್ಲಿ) ಮುಳುಗಾಡಿಸು : ಓಲಾಡಿಸು : ಪರಿಪರಿಯಲುಂಡುಣಿಸಿ ಸುಖಸಾಗರದಿ ಲೋಲಾಡಿಸುವ ಮಂಗಳಚರಿತಚಿನ್ಮಯಗಾತ್ರ (ಹರಿ. ೨-೦೫) ; ತನ್ನ ಪ್ರಜೆಗಳನ್ನು ಸರ್ವಕಾಲಕ್ಕೂ ಸಂತೋಷದ ಸಾಗರದಲ್ಲಿ ಲೋಲಾಡಿಸುತ್ತಾನೆ (ಕುಂಗಾಥೆ. ೬೦).

[ಲೋಲಾಡು + —ಇಸು₃]

**ಲೋಲಾಡು** (ಕ್ರಿ). ೧. ಅಲುಗಾಡು ; ಅಲ್ಲಾಡು ; ಚಲಿಸು : ಕೂದಲನ್ನು ಲಂಡವಾಗಿ ಕತ್ತರಿಸಿದ್ದರಿಂದ ಗೊಂಡುಗೊಂಡಾಗಿ ಅವು ಹೆಗಲ ಮೇಲೆ ಲೋಲಾಡುತ್ತಿದ್ದವು (ಹೇಮೂಕ. ೦೯೪). ೨. ಮುಳುಗಾಡು ; ಓಲಾಡು : ಎಲೆ ಶಿರವೆ ನೀನಧೋಕ್ಷಜನ ಶ್ರೀಚರಣದ ಜಲರುಹದೊಳಗಳಿಯಂತೆ ಲೋಲಾಡು (ಹರಿಂದ. ಧಾ. ೩-೬೦-೩) ; ಪರಮಾನಂದಪಯೋನಿಧಿಯಲ್ಲಿ ಓಲಾಡಿ ತೇಲಾಡಿ ಲೋಲಾಡಬೇಕೆಂಬ ಅವರು . . . ಶಂಭುಲಿಂಗನ ಬೆಟ್ಟವನ್ನು ಆಶ್ರಯಿಸುತ್ತಾರೆ (ಶರಶ. ೩೯೦) ; ಅವಳು ಆನಂದಸಾಗರದಲ್ಲಿ ಲೋಲಾಡಹತ್ತಿದಳು (ಸಿದ್ಧಂಬು. ೦೨೦). ೩. ಸುಖಿಸು ; ಚಕ್ಕಂದವಾಡು : ಮಿಂಡನ್ನ ಕೂಡಿ ಲೋಲಾಡುತಿಹಳು (ಹರಿಂದ. ೦-೦೯೯-೩) ; ಶಾಲಿವನಗಳಲ್ಲಿ ಕುಳಿತು ಲೋಲಾಡುವ ಈ ಹಕ್ಕಿಗಳನ್ನು 'ಸೋಗಯ್ಯಲ್' ನಾರಿಯರ ಬಳಗ ಬೇರೆ ಬೇಕು (ಗಾಳಿಗು. ೭೬).

[ಲೋಲ + ಆಡು₁]

**ಲೋಲಾಪಾಂಗ** (ನಾ). ಚಂಚಲವಾದ ಕಡೆಗಣ್ಣು : ಲೋಲಾಪಾಂಗದಲ್ಲಿ ಕ್ರೂರವಾದದರ ಕಟಾಕ್ಷವು ಮೇಘಗಳ ಮಧ್ಯದಲ್ಲಿ ಕಣ್ಗೊಳಿಸುವ ವಿದ್ಯುದ್ದಾಮವೋ ಎಂಬಂತಿರುವುದು (ಳಕಾಳಿಂ. ೪೫). [ಸಂ.]

**ಲೋಲಾಪಾಂಗೆ** (ನಾ). ಚಂಚಲವಾದ ಕಡೆಗಣ್ಣುಗಳನ್ನುಳ್ಳವಳು ; ಸುಂದರಿ: ಯಜ್ಞನೆಯ್ದಿದನುತ್ತುಂಗತರಂಗೆಯುಂ ಶಫರಲೋಲಾಪಾಂಗೆಯುಂ ಗಂಗೆಯುಂ (ಚಂಶಶಂ. ೨೫೫-೦೬). [ಸಂ. ಲೋಲಾಪಾಂಗಾ]

**ಲೋಲಾಪ್ತಿ** 'ಲೋಲುಪ್ತಿ' ನೋ.

**ಲೋಲಾಸನ** (ನಾ). [ಯೋಗ] ಆಸನಗಳಲ್ಲಿ ಒಂದು ಬಗೆ : ಮುಖ್ಯವಾದ ಕೆಲವು ಆಸನಗಳು . . . ೧೦ ಲೋಲಾಸನ (ಅರಶ. ೦೬೬). [ಸಂ.]

**ಲೋಲಿತ, ಲೋಳಿತ** (ಗು). ೧. ಅತ್ತಿತ್ತ ಅಲುಗಾಡುವ,– ಚಲಿಸುವ,– ಅಲ್ಲಾಡುವ. (ನಾ). ೨. ಚಂಚಲಮನಸ್ಸಿನವನು : ಜೀವಸರ್ವೇಂದ್ರಿಯಂಗಳಲ್ಲಿ ಲೋಲಿತನಾಗದೆ (ಪೋಳಪವ. ೦೨೯-೪೪೮). ೩. [ನಾಟ್ಯ] ಶಿರೋಭೇದಗಳಲ್ಲಿ ಒಂದು ; ☞ "ಹೆದರಿದಂತೆ ಮಬ್ಬುದೃಷ್ಟಿಯಿಂದ ಕೂಡಿ ತಲೆಯನ್ನು ಎಲ್ಲ ದಿಕ್ಕಿಗೂ ಆಡಿಸುವುದು" (ಅಸ್ಕಿರಂ. ೨೨೨ ಗದ್ಯಾನುವಾದ) : ಬೆದಱಿದವೊಲೆಂಟುದಿಕ್ಕಿಂಗೊದಗದೆ ಚಲಿಸಲ್ಕೆ ಶಿರಮದೇ ಲೋಲಿತಂ (ಅಸ್ಕಿರಂ. ೦-೬೫). **ಲೋಳಿತ :** ೩. ಕರಮೊಂದು ರೇಚಿತದೆ ಬಿತ್ತರಿಸಲ್ಕಿಂತನ್ಯಹಸ್ತಮುಲಪಲ್ಲವದಿಂಗೆರೆ ವಕ್ಷದಲ್ಲಿ ಮತ್ತಂ ಶಿರಮದು ಲೋಳಿತದ ತೆಱದೊಳೆರಡುಂ ಕೆಲದೊಳ್ (ಅಸ್ಕಿರಂ. ೪-೦೬೨).

[ಸಂ.]

**ಲೋಲು** (ನಾ). ೧. ಕಾಮುಕತನ ; ಲಂಪಟತ್ವ. ೨. ಮೋಜು ; ಮಜ : ಅವನ ಲೋಲು ಹೇಳತೀರದು (ಲೋಕ). ೩. ತೂಗಾಟ ; ಎಳೆತ ; ಸೆಳೆತ : ಅಮಲಿನ ಲೋಲಿನಲ್ಲಿ ಗಾಢನಿದ್ರೆ ಹೋದರು (ಶಾಂಕಲ. ೨೨೮). ೪. ಹಣೆಯಲ್ಲಿ ತೂಗಾಡುವಂತೆ ಕಟ್ಟುವ ಒಂದು ಬಗೆಯ ಆಭರಣ ; ಬೈತಲೆಮಣಿ : ಲತೆಗಳೆನುವ ನಾರಿಯರ ಪಣೆಯೊಳಿರುವ ಮುತ್ತಿನ ಬಟ್ಟನ ಕೆಂಪುರತ್ನದ ಲೋಲುಗಳೊ ಯೆಂಬಂತೆ (ಶ್ರೀಗಂ. ೪೬೮-೨೦). [< ಸಂ. ಲೋಲ]

**ಲೋಲುಪ** (ಗು). ೧. ಅತಿಯಾಸೆಯಿಂದ ಕೂಡಿದ ; ಅಳಿಯಾಸೆಯ : ಜೀವನೋಪಾಯಮುಮಂ ಪಾಲಿಪುದೆ ಬೆಸನಮುದಱಿಂ ಲೋಲುಪ ಮನದಲಿ × × × (ಶಾಇ. XX, ೬೦-೩೦; ಸು. 1108). (ನಾ). ೨. ಅತಿಯಾಸೆಯುಳ್ಳವನು : ಲಂಪಟ : "ಲೋಲುಭಂ, ಲೋಲುಪಂ . . . ಲಂಪಟಂ — ಈ ೫ ಅಳಿಪುವವಂ" (ಶಬ್ದಮ. ೩೯-೦೯೮). ೩. ಹೆಚ್ಚಿನ ಆಸಕ್ತಿಯುಳ್ಳವನು ; ಆಸಕ್ತ : ನೃಪನೀತಂ ತುರಗ

